# ‘ಚಂಪೂ ನುಡಿಗನ್ನಡಿ’ ಸ್ವರೂಪ

ಕನ್ನಡಕ್ಕೆ ಅಭಿಜಾತ ಭಾಷೆಯ ಸ್ಥಾನ ದೊರೆತಿರುವುದರಿಂದಾಗಿ, ಅಭಿಜಾತ ಕನ್ನಡದ ಅಧ್ಯಯನಕ್ಕೆ ಅಪಾರ ಸಾಧ್ಯತೆಗಳೂ, ಅವಕಾಶಗಳು ಉಂಟಾಗುವ ಸೂಚನೆಗಳಿವೆ. ಅಭಿಜಾತ ಕನ್ನಡವೆಂದರೆ ಹಳಗನ್ನಡವೇ ಆದುದರಿಂದ, ಯುವಪೀಳಿಗೆಯು ಅದನ್ನು ಅಭ್ಯಾಸ ಮಾಡುವ ಆವಶ್ಯಕತೆ ಇಂದು ಎಂದಿಗಿಂತ ಹೆಚ್ಚಾಗಿದೆ. ಹಳಗನ್ನಡ ಅಧ್ಯಯನದ ಮೊದಲ ನೆಲೆಯಲ್ಲಿ ಒಂದಷ್ಟು ಅಧ್ಯಯನ ಪರಿಕರಗಳು ಸಿದ್ಧಗೊಳ್ಳಬೇಕಾಗಿರುವುದರಿಂದ, ಆರಂಭಿಕ ಹಂತದ ವಿದ್ಯಾರ್ಥಿಗಳಿಗೂ ಅಸಕ್ತರಿಗೂ ಶಬ್ದಾರ್ಥದ ತೊಡಕನ್ನು ನಿವಾರಿಸುವತ್ತ ಇದೊಂದು ನಮ್ರ ಪ್ರಯತ್ನ. ಹೀಗಾಗಿ ಇದು ಕುರಿತಿರುವುದು ಅಂಥವರನ್ನೇ ಹೊರತು ವಿದ್ವಾಂಸರನ್ನಲ್ಲ. ಜೊತೆಗೆ ಇದು ಶಾಸ್ತ್ರೋಕ್ತವಾಗಿ ರಚಿತವಾದ ನಿಘಂಟಲ್ಲ, ಆ ಕಾರಣದಿಂದಲೇ ಇದಕ್ಕೆ ಉಪಶೀರ್ಷಿಕೆಯಾಗಿ ‘ಹಳಗನ್ನಡ ಶಬ್ದಾರ್ಥ ಸಂಕಲನ’ ಎಂಬ ಹೆಸರನ್ನು ಕೊಟ್ಟಿರುವುದು.

ಹಳಗನ್ನಡದ ಸಾಹಿತ್ಯ ಧಾರೆಯು ಚಂಪೂ ಪ್ರಕಾರದಲ್ಲಿ ಹೊಮ್ಮಿರುವುದರಿಂದ ಈ ಶಬ್ದಾರ್ಥಸಂಕಲನವು ‘ಚಂಪೂ ನುಡಿಗನ್ನಡಿ’ ಆಗಿದೆ. ಈ ಧಾರೆಯು ನಿರಂತರವಾಗಿ ಪಂಪನಿಂದ ಹರಿಹರನವರೆಗೂ ಹರಿದು ಬಂತು; ಹೀಗಾಗಿ ಆ ಇಬ್ಬರು ಕವಿಗಳ ನಡುವಣ ಕಾಲದ ಮುಖ್ಯ ಕೃತಿಗಳನ್ನೆಲ್ಲ ಶಬ್ದ ಸಂಕಲನಕ್ಕೆ ಬಳಸಿಕೊಳ್ಳಲಾಗಿದೆ. ಆನಂತರವೂ ಆಯಾ ಕಾಲದ ಮುಖ್ಯ ಧಾರೆಗೆ ಆನುಷಂಗಿಕವಾಗಿ ಚಂಪೂ ಕಾವ್ಯಗಳು ಬಂದವು. ಹೀಗಾಗಿ ಹರಿಹರನಿಂದ ಷಡಕ್ಷರದೇವನವರೆಗಿನ ಅವಧಿಯ ಚಂಪೂ ಕೃತಿಗಳಲ್ಲಿ ಮುಖ್ಯವಾದ ಕೆಲವಷ್ಟನ್ನೇ ಗಮನಿಸಲಾಗಿದೆ.

ಚಂಪೂ ಕಾವ್ಯಪ್ರಕಾರದ ಜೊತೆಗೆ ಈ ಕಾಲದ ಸೃಜನಶೀಲ ಕೃತಿಗಳಿಗಳಲ್ಲಿ ಕೆಲವು ಗದ್ಯದಲ್ಲಿಯೂ ಮೂಡಿಬಂದವು. ಜೊತೆಗೆ ಕನ್ನಡ ಬರವಣಿಗೆಯು ಸೃಜನಶೀಲ ಬರವಣಿಗೆಗಷ್ಟೇ ಸೀಮಿತಗೊಂಡಿರಲಿಲ್ಲ, ಅನೇಕ ಶಾಸ್ತ್ರಗ್ರಂಥಗಳು ಹೊರಬಂದುವು. ಹೀಗಾಗಿ ಆ ಕಾಲದ ಬರವಣಿಗೆಯ ಮಾದರಿಯು ಈ ಮೂರೂ ಕಡೆಗಳಲ್ಲಿ ದೊರಕುತ್ತವೆ. ಆದುದರಿಂದಲೇ ಆ ಅವಧಿಯ ಗದ್ಯಕೃತಿಗಳ ಜೊತೆಗೆ ಪ್ರಮುಖ ಶಾಸ್ತ್ರಕೃತಿಗಳನ್ನೂ ಶಬ್ದಸಂಕಲನಕ್ಕೆ ಬಳಸಿಕೊಳ್ಳಲಾಗಿದೆ. ಆದರೆ ಶಾಸ್ತ್ರಕೃತಿಗಳಲ್ಲಿನ ಸಾಮಾನ್ಯ ಶಬ್ದಗಳನ್ನಷ್ಟೇ ತೆಗೆದುಕೊಳ್ಳಲಾಗಿದೆಯೇ ಹೊರತು, ಪಾರಿಭಾಷಿಕ ಶಬ್ದಗಳ ವಿವರಣೆ ಇಲ್ಲಿಲ್ಲ.

ಉಲ್ಲೇಖಗಳಿಗೆ ಒಂದು ಅರ್ಥಕ್ಕೆ ಒಂದರಂತೆ ಪ್ರಯೋಗಗಳನ್ನೂ ನೀಡಲಾಗಿದೆ. ವಿವಿಧ ಅರ್ಥಗಳಿರುವೆಡೆಯಲ್ಲಿ ಒಂದೊಂದು ಅರ್ಥಚ್ಛಾಯೆಗೂ ಪ್ರತ್ಯೇಕ ಪ್ರಯೋಗಗಳನ್ನು ನೀಡಲಾಗಿದೆ.

ಈ ಶಬ್ದಾರ್ಥಸಂಕಲನದಲ್ಲಿ ಸೇರ್ಪಡೆಯಾಗಿರುವ ಎಲ್ಲವೂ ಸ್ವತಂತ್ರ ಉಲ್ಲೇಖಗಳೇ: ಮುಖ್ಯ ಉಲ್ಲೇಖ, ಉಪ ಉಲ್ಲೇಖ ಎಂಬ ವ್ಯತ್ಯಾಸವಿಲ್ಲ. ಬಿಡಿ ಪದಗಳು, ಕೂಡುಪದಗಳು, ವಿಶೇಷಣಗಳಂತಹ ಸಾಧಿತ ರೂಪಗಳು, ಪ್ರತ್ಯಯಸಹಿತವಾದ ನುಡಿಗಟ್ಟುಗಳೂ ಅಕರಾದಿಯಾಗಿ ಇಲ್ಲಿ ಪವಣಿತವಾಗಿವೆ. ಕನ್ನಡದಲ್ಲಿ ಬಳಕೆಯಾಗುವ ಎಲ್ಲ ಪದಗಳೂ ಕನ್ನಡ ಪದಗಳೇ ಆದುದರಿಂದಾಗಿ, ದೇಸಿ ಮತ್ತು ಅನ್ಯಭಾಷಾಮೂಲದ ಪದಗಳೆಂಬ ವಿಭಜನೆಯಾಗಲೀ ಉಲ್ಲೇಖವಾಗಲೀ ಇಲ್ಲಿಲ್ಲ. ಅಲ್ಲದೆ, ಪದಗಳ ಬಗೆಗಳನ್ನೂ ಇಲ್ಲಿ ಉಲ್ಲೇಖಿಸಿಲ್ಲ. ಈ ಹಂತದ ಅಭ್ಯಾಸಿಗಳಿಗೆ ಅದರ ತಕ್ಕಮಟ್ಟಿಗಿನ ಪ್ರವೇಶವಿರುವುದೆಂದು ನಂಬಲಾಗಿರುವುದರಿಂದ ಈ ಕ್ರಮವನ್ನು ಅನುಸರಿಸಲಾಗಿದೆ.

ಪ್ರತಿ ಕೃತಿಯ ಒಂದು ಮುದ್ರಣವನ್ನು ಮಾತ್ರ ಗಮನಿಸಿದ್ದರೂ, ಪಂಪಭಾರತ ಮತ್ತು ಆದಿಪುರಾಣಗಳ ಸಂದರ್ಭದಲ್ಲಿ ಎರಡೆರಡು ಸಂಪಾದನೆಗಳನ್ನು ಗಮನಿಸಿಲಾಗಿದೆ; ಅಲ್ಲದೆ ಪಂಪಭಾರತದ ಮಟ್ಟಿಗೆ ಡಿ.ಎಲ್.ಎನ್. ಅವರ ‘ಪಂಪಭಾರತ ದೀಪಿಕೆ’ಯನ್ನೂ ಗಮನಿಸಿದೆ. ಜೊತೆಗೆ, ವಿವಿಧ ವಿದ್ವಾಂಸರು ಬೇರೆ ಬೇರೆ ಕಡೆಗಳಲ್ಲಿ ನಡೆಸಿರುವ ಬಿಡಿಪದ್ಯಗಳ ಪಾಠಚರ್ಚೆಯನ್ನು ಗಮನಿಸಿ ಸೂಕ್ತವೆನಿಸಿದ ಪಾಠಗಳನ್ನೂ ಅಂಗೀಕರಿಸಿದೆ.

ಬೇರೆ ಅರ್ಥಗಳಿವೆಯೆಂಬುದು ಸ್ಪಷ್ಟವಾಗಿದ್ದರೂ ನಾವು ಗಮನಿಸಿದ ಕೃತಿಗಳಲ್ಲಿ ಆ ಅರ್ಥಗಳಲ್ಲಿ ಪ್ರಯೋಗವಾಗದೆಡೆಗಳಲ್ಲಿ, ಸಿಕ್ಕಿದ ಪ್ರಯೋಗದ ಅರ್ಥಗಳನ್ನು ನೀಡಲಾಗಿದೆಯೇ ವಿನಾ ಪ್ರಯೋಗ ದೊರಕದ ಅರ್ಥಗಳನ್ನು ಉಲ್ಲೇಖಿಸಿಲ್ಲ

ಇದರ ರಚನೆಯಲ್ಲಿ ಗಮನಿಸಲಾದ ಕೃತಿಗಳಲ್ಲಿ ಬರುವ ಸಂಸ್ಕೃತ ಉಲ್ಲೇಖಗಳಿಗೆ ಅರ್ಥಗಳನ್ನು ವಿವರಿಸಲಾಗಿದೆ ಮತ್ತು ಅವುಗಳು ಉಲ್ಲೇಖಗೊಂಡ ಎಡೆಯನ್ನು ದಾಖಲಿಸಲಾಗಿದೆ. ಪಾಠಾಂತರಗಳಿರುವೆಡೆಯಲ್ಲಿ ಅವುಗಳನ್ನು ಗಮನಿಸಿಲ್ಲ; ಕೃತಿಗಳ ಸಂಪಾದಕರು ಒಪ್ಪಿ ಒಡಲಲ್ಲಿ ಸೇರಿಸಿರುವ ಪಾಠಗಳನ್ನೇ ನೀಡಲಾಗಿದೆ. ಅರ್ಥ ತಿಳಿಯದ ಅಥವಾ ಸಂದಿಗ್ಧವಾದ ಉಲ್ಲೇಖಗಳ ಮುಂದೆ ಪ್ರಶ್ನಾರ್ಥಕ ಚಿಹ್ನೆಯನ್ನು ಸಂಪಾದಕರು ಬಳಸಿದ್ದರೆ ಅಂಥವನ್ನು ಕೈಬಿಡಲಾಗಿದೆ.

ಒಂದೇ ಶಬ್ದದ ಅಲ್ಪಸ್ವಲ್ಪ ವ್ಯತ್ಯಾಸವಿರುವ ರೂಪಗಳನ್ನೂ ಇದರಲ್ಲಿ ಬೇರೆ ಬೇರೆಯಾಗಿಯೇ ಅಕಾರಾದಿಯಾಗಿ ಜೋಡಿಸಲಾಗಿದೆ. ಹೀಗಾಗಿ 'ಲ'ಯುಕ್ತವಾದ ಸಂಸ್ಕೃತಮೂಲದ ಪದವೊಂದರ ಕ್ಷಳಯುಕ್ತ ರೂಪವೂ ತನ್ನ ಸರದಿಯಲ್ಲಿ ಬರುತ್ತದೆಯೇ ವಿನಾ ಎರಡೂ ಒಟ್ಟಿಗೆ ಅಲ್ಲ. ಹಾಗೆಯೇ ಪದಮಧ್ಯದ ಸ್ವರವ್ಯತ್ಯಾಸವುಳ್ಳ 'ಉಸಿರ್ 'ಉಸುರ್' ಎಂಬಂತಹ ಒಂದೇ ಶಬ್ದದ ವಿವಿಧ ರೂಪಗಳು ಬೇರೆ ಬೇರೆಯ ಉಲ್ಲೇಖಗಳಾಗಿಯೇ ಬಂದಿವೆ. ಆದರೆ ಒಂದೇ ರೂಪಕ್ಕೆ ವಿವಿಧ ಅರ್ಥಗಳಿರುವ ಕಡೆಗಳಲ್ಲಿ ಒಂದೇ ಉಲ್ಲೇಖದಡಿಯಲ್ಲಿ ವಿವಿಧ ಅರ್ಥಗಳನ್ನು ಕೊಡಲಾಗಿದೆ. ಅರ್ಥದ ಅನುಕ್ರಮಣಿಕೆಯಲ್ಲಿ ಯಾವುದೇ ನಿರ್ದಿಷ್ಟ ಕ್ರಮವನ್ನು ಅನುಸರಿಸಿಲ್ಲ.

ಸಂಖ್ಯಾವಿಶಿಷ್ಟ ಶಬ್ದಗಳ ಅರ್ಥಗಳನ್ನು ಕೊಡುವಾಗ, ಅಲ್ಲಿನ ಪ್ರಭೇದಗಳ ವಿವರವನ್ನೂ ನೀಡಲಾಗಿದೆ. ಉದಾಹರಣೆಗೆ, 'ತ್ರಿಷಷ್ಟಿಶಲಾಕಾಪುರುಷರು' ಎಂಬ ಉಲ್ಲೇಖದಡಿ, ಕೇವಲ ಅರುವತ್ತಮೂರು ಎಂದಷ್ಟನ್ನೇ ಹೇಳದೆ, ಆ ಅರುವತ್ತುಮೂವರ ಹೆಸರುಗಳನ್ನೂ ನೀಡಲಾಗಿದೆ. ಬಹುತೇಕ ಸಂಖ್ಯಾವಿಶಿಷ್ಟ ಶಬ್ದಗಳೆಡೆ ಈ ಕ್ರಮವನ್ನು ಅನುಸರಿಸಲಾಗಿದೆ.

ಶಬ್ದಗಳ ಅರ್ಥನಿರ್ಣಯಕ್ಕೆ ಆಯಾ ಗ್ರಂಥಗಳಲ್ಲಿನ ಶಬ್ದಾರ್ಥಕೋಶಗಳೊಂದಿಗೆ, ಕನ್ನಡ ಸಾಹಿತ್ಯ ಪರಿಷತ್ತಿನ ದೊಡ್ಡ ನಿಘಂಟಿನ ಹಾಗೂ ಕೆಲವು ಸಂಸ್ಕೃತ ನಿಘಂಟುಗಳ ನೆರವು ಪಡೆದಿದೆಯಲ್ಲದೆ, ವಿದ್ವಾಂಸರು ವಿವಿಧೆಡೆಗಳಲ್ಲಿ ನಡೆಸಿರುವ ಶಬ್ದಾರ್ಥ ಚರ್ಚೆಗಳನ್ನೂ ಗಮನಿಸಲಾಗಿದೆ; ಹಾಗೆಯೇ ಕೆಲವು ಭಾಗಗಳ ಪಾಠಪರಿಷ್ಕರಣೆಯ ಬಗೆಗಿನ ಚರ್ಚೆಗಳನ್ನು ಗಮನಿಸಿ ಸೂಕ್ತವಾದ ಶಬ್ದಸ್ವರೂಪಗಳನ್ನೂ ಅಳವಡಿಸಿಕೊಳ್ಳಲಾಗಿದೆ

====

**'ಚಂಪೂ ನುಡಿಗನ್ನಡಿ'** ಹಳಗನ್ನಡ ಶಬ್ದಾರ್ಥಸಂಕಲನದಲ್ಲಿ ಈ ಕೆಳಕಂಡ ಕೃತಿಗಳಿಂದ ಶಬ್ದಸಂಕಲನ ಮಾಡಲಾಗಿದೆ

**ಕನ್ನಡ ವಿಶ್ವವಿದ್ಯಾಲಯ, ಹಂಪಿಯು ೨೦೦೮ ರಲ್ಲಿ ಹೊರತಂದ**
**ಸಮಗ್ರ ಜೈನ ಸಾಹಿತ ಮಾಲೆಯ ಸಂಪುಟಗಳು:**

| **ಕೃತಿಯ ಹೆಸರು** | **ಕೃತಿಕಾರ** | **ಕಾಲ** | **ಸಂಪಾದಕರು** | **ಪ್ರಕಟಣೆಯ ವಿವರ** | **ಸಂಕೇತ** |
|---|---|---|---|---|---|
| ಆದಿಪುರಾಣ | ಪಂಪ | ಕ್ರಿಶ ೯೪೨ | ಟಿ.ವಿ. ವೆಂಕಟಾಚಲಶಾಸ್ತ್ರೀ | (ಸಂಪುಟ ೧) | **ಆದಿಪು** |
| ಪಂಪಭಾರತ | ಪಂಪ | ಕ್ರಿಶ ೯೪೨ | ಟಿ.ವಿ. ವೆಂಕಟಾಚಲಶಾಸ್ತ್ರೀ | (ಸಂಪುಟ ೧) | **ಪಂಪಭಾ** |
| ಚಾವುಂಡರಾಯ ಪುರಾಣ | ಚಾವುಂಡರಾ | ಕ್ರಿಶ ೯೭೮ | ಕಮಲಾ ಹಂಪನಾ | (ಸಂಪುಟ ೨) | **ಚಾವುಂಡಪು** |
| ಶಾಂತಿಪುರಾಣ | ಪೊನ್ನ | ಕ್ರಿಶ ೯೫೦ | ಹಂಪ ನಾಗರಾಜಯ್ಯ | (ಸಂಪುಟ ೩) | **ಶಾಂತಿಪು** |
| ಶಾಂತೀಶ್ವರಪುರಾಣ | ಕಮಲಭವ | ಕ್ರಿಶ ೧೨೬೫ | ಹಂಪ ನಾಗರಾಜಯ್ಯ | (ಸಂಪುಟ ೩) | **ಶಾಂತೀಶ್ವಪು** |
| ರನ್ನ ನಿಘಂಟು | ರನ್ನ | ಕ್ರಿಶ ೯೯೩ | ಹಂಪ ನಾಗರಾಜಯ್ಯ | (ಸಂಪುಟ ೪) | **ರನ್ನನಿಘಂಟು** |
| ಅಭಿಧಾನ ವಸ್ತುಕೋಶ | ನಾಗವರ್ಮ | ಕ್ರಿಶ ೧೧೫೦ | ಮಲ್ಲೇಪುರಂ ವೆಂಕಟೇಶ | (ಸಂಪುಟ ೫) | **ಅಭಿಧಾವ** |
| ಸುಕುಮಾರ ಚರಿತೆ | ಶಾಂತಿನಾಥ | ಕ್ರಿಶ ೧೦೬೮ | ಪಿ.ವಿ. ನಾರಾಯಣ | (ಸಂಪುಟ ೬) | **ಸುಕುಮಾಚ** |
| ಕಬ್ಬಿಗರ ಕಾವ | ಆಂಡಯ್ಯ | ಕ್ರಿಶ ೧೨೩೫ | ಪಿ.ವಿ. ನಾರಾಯಣ | (ಸಂಪುಟ ೬) | **ಕಬ್ಬಿಗಕಾ** |
| ಮಲ್ಲಿನಾಥಪುರಾಣ | ನಾಗಚಂದ್ರ | ಕ್ರಿಶ ೧೧೦೦ | ಶಾಂತಿನಾಥ ದಿಬ್ಬದ | (ಸಂಪುಟ ೭) | **ಮಲ್ಲಿನಾಪು** |
| ಧರ್ಮಾಮೃತ | ನಯಸೇನ | ಕ್ರಿಶ ೧೧೧೨ | ಎಸ್.ಪಿ. ಪಾಟೀಲ | (ಸಂಪುಟ ೮) | **ಧರ್ಮಾಮೃ** |
| ಸಮಯ ಪರೀಕ್ಷೆ | ಬ್ರಹ್ಮಶಿವ | ಕ್ರಿಶ ೧೧೫೦ | ಟಿ.ವಿ. ವೆಂಕಟಾಚಲಶಾಸ್ತ್ರೀ | (ಸಂಪುಟ ೯) | **ಸಮಯಪ** |
| ಧರ್ಮಪರೀಕ್ಷೆ | ವೃತ್ತವಿಲಾಸ | ಕ್ರಿಶ ೧೩೬೦ | ಕೆ. ರಾಘವೇಂದ್ರರಾವ್ | (ಸಂಪುಟ ೯) | **ಧರ್ಮಪ** |
| ಲೀಲಾವತಿ | ನೇಮಿಚಂದ್ರ | ಕ್ರಿಶ ೧೧೭೦ | ದೇ. ಜವರೇಗೌಡ | (ಸಂಪುಟ ೧೦) | **ಲೀಲಾವತಿ** |
| ಅರ್ಧನೇಮಿ ಪುರಾಣ | ನೇಮಿಚಂದ್ರ | ಕ್ರಿಶ ೧೧೭೦ | ದೇ. ಜವರೇಗೌಡ | (ಸಂಪುಟ ೧೦) | **ನೇಮಿನಾಪು** |
| ಜೀವಸಂಬೋಧನಂ | ಬಂಧುವರ್ಮ | ಕ್ರಿಶ ೧೨೦೦ | ಬಿ.ಎಸ್. ಸಣ್ಣಯ್ಯ | (ಸಂಪುಟ ೧೧) | **ಜೀವಸಂ** |
| ಹರಿವಂಶಾಭ್ಯುದಯ | ಬಂಧುವರ್ಮ | ಕ್ರಿಶ ೧೨೦೦ | ಬಿ.ಎಸ್. ಸಣ್ಣಯ್ಯ | (ಸಂಪುಟ ೧೧) | **ಹರಿವಂಶ** |
| ಚಂದ್ರಪ್ರಭ ಪುರಾಣ | ಅಗ್ಗಳ | ಕ್ರಿಶ ೧೧೮೯ | ಜಿ.ಜಿ. ಮಂಜುನಾಥನ್ | (ಸಂಪುಟ ೧೨) | **ಚಂದ್ರಪ್ರಪು** |
| ವರ್ಧಮಾನಪುರಾಣ | ಆಚಣ್ಣ | ಕ್ರಿಶ ೧೧೯೫ | ಜಿ.ಜಿ. ಮಂಜುನಾಥನ್ | (ಸಂಪುಟ ೧೨) | **ಆಚವರ್ಧ** |
| ಯಶೋಧರ ಚರಿತೆ | ಜನ್ನ | ಕ್ರಿಶ ೧೨೨೯ | ಸಿ.ಪಿ. ಕೃಷ್ಣಕುಮಾರ್ | (ಸಂಪುಟ ೧೩) | **ಯಶೋಧಚ** |
| ಅನಂತನಾಥ ಪುರಾಣ | ಜನ್ನ | ಕ್ರಿಶ ೧೨೨೯ | ಸಿ.ಪಿ. ಕೃಷ್ಣಕುಮಾರ್ | (ಸಂಪುಟ ೧೩) | **ಅನಂತಪು** |
| ಅನುಭವಮುಕುರಂ | ಜನ್ನ | ಕ್ರಿಶ ೧೨೨೯ | ಸಿ.ಪಿ. ಕೃಷ್ಣಕುಮಾರ್ | (ಸಂಪುಟ ೧೩) | **ಅನುಭವ** |
| ಪುಷ್ಪದಂತ ಪುರಾಣ | ಗುಣವರ್ಮ ೨ | ಕ್ರಿಶ ೧೨೧೫ | ವೈ.ಸಿ. ಭಾನುಮತಿ | (ಸಂಪುಟ ೧೪) | **ಪುಷ್ಪದಂಪು** |
| ಪಾರ್ಶ್ವನಾಥ ಪುರಾಣ | ಗುಣವರ್ಮ ೨ | ಕ್ರಿಶ ೧೨೧೫ | ವೈ.ಸಿ. ಭಾನುಮತಿ | (ಸಂಪುಟ ೧೪) | **ಪಾರ್ಶ್ವನಾಪು** |
| ಧರ್ಮನಾಥ ಪುರಾಣ | ಬಾಹುಬಲಿ | ಕ್ರಿಶ ೧೩೫೨ | ಎನ್. ಬಸವಾರಾಧ್ಯ | (ಸಂಪುಟ ೧೫) | **ಧರ್ಮಬಾಹು** |
| ಧರ್ಮನಾಥ ಪುರಾಣ | ಮಧುರ | ಕ್ರಿಶ ೧೩೮೫ | ಎನ್. ಬಸವಾರಾಧ್ಯ | (ಸಂಪುಟ ೧೫) | **ಧರ್ಮಮಧು** |

**ಚಂಪೂ ಕೃತಿಗಳ ಬಿಡಿ ಪ್ರಕಟಣೆಗಳು:**

| | | | | | |
|---|---|---|---|---|---|
| ಆದಿಪುರಾಣಂ | ಪಂಪ | ಕ್ರಿಶ ೯೪೨ | ಕೆ.ಎಲ್. ನರಸಿಂಹಶಾಸ್ತ್ರಿ | ಕನ್ನಡಸಾಪ (೨೦೦೪) | **ಆದಿಪು** ನರಸಿಂ |
| ಪಂಪಭಾರತ | ಪಂಪ | ಕ್ರಿಶ ೯೪೨ | | ಕನ್ನಡ ಸಾಪ (೧೯೭೩) | **ಪಂಪಭಾ**ಪರಿಷತ್ತು |
| ಕರ್ನಾಟಕ ಕಾದಂಬರಿ | ನಾಗವರ್ಮ ೧ | ಕ್ರಿಶ ೯೯೦ | ಹ.ವೆ. ನಾರಾಯಣಶಾಸ್ತ್ರೀ | ಕನ್ನಡ ಸಾಪ (೧೯೭೭) | **ಕಾದಂಬ** |
| ಕಾದಂಬರೀ ಸಂಗ್ರಹ | ನಾಗವರ್ಮ ೧ | ಕ್ರಿಶ ೯೯೦ | ಟಿ.ಎಸ್. ವೆಂಕಣ್ಣಯ್ಯ | ಮೈಸೂರು ವಿವಿ (೧೯೬೯) | **ಕಾದಂಸಂ** |
| ಅಜಿತಪುರಾಣ | ರನ್ನ | ಕ್ರಿಶ ೯೯೩ | ಬಿ.ಎಸ್. ಸಣ್ಣಯ್ಯ<br>ರಾಮೇಗೌಡ | ಕನ್ನಡ ಸಾ ಪ (೨೦೦೪) | **ಅಜಿತಪು** |
| ಸಾಹಸಭೀಮ ವಿಜಯಂ | ರನ್ನ | ಕ್ರಿಶ ೯೯೩ | ಆರ್.ವಿ. ಕುಲಕರ್ಣಿ | ಕನ್ನಡ ಸಾ ಪ (೨೦೦೪) | **ಗದಾಯು** |
| ವರ್ಧಮಾನಪುರಾಣ | ನಾಗವರ್ಮ೨ | ಕ್ರಿಶ ೧೦೪೨ | ಬಿ.ಸ್. ಸಣ್ಣಯ್ಯ | ಕಅಸಂ, ಮೈಸೂರು(೧೯೭೪) | **ವರ್ಧಮಾಪು** |
| ಕರ್ನಾಟಕ ಪಂಚತಂತ್ರ | ದುರ್ಗಸಿಂಹ | ಕ್ರಿಶ ೧೦೨೫ | ಪಿ.ವಿ. ನಾರಾಯಣ | ಕನ್ನಡ ಪುಸ್ತಕ ಪ್ರಾಧಿಕಾರ(೨೦೧೧ | **ಪಂಚತಂತ್ರ** |
| ರಾಮಚಂದ್ರಚರಿತಪುರಾಣ | ನಾಗಚಂದ್ರ | ಕ್ರಿಶ ೧೧೧೦ | | ಕನ್ನಡ ಸಾ ಪ (೧೯೭೬) | **ಪಂಪರಾ** |
| ನೇಮಿನಾಥ ಪುರಾಣಂ | ಕರ್ಣಪಾರ್ಯ<br>ಸಂಪುಟ ೧, ೨ | ಕ್ರಿಶ ೧೧೪೦ | ಹಂಪ ನಾಗರಾಜಯ್ಯ<br>ಆರ್. ವಿ.ಕುಲಕರ್ಣಿ | ಕನ್ನಡ ಸಾ ಪ (೨೦೦೪) | **ಕರ್ಣನೇಮಿ** |
| ಜಗನ್ನಾಥ ವಿಜಯಂ | ರುದ್ರಭಟ್ಟ | ಕ್ರಿಶ ೧೧೮೫ | ಎಂ.ಆರ್. ವರದಾಚಾರ್ಯ | ಕನ್ನಡ ಸಾ ಪ (೧೯೭೬) | **ಜಗನ್ನಾವಿ** |
| ಕುಸುಮಾವಳೀ ಕಾವ್ಯಂ | ದೇವಕವಿ | ಕ್ರಿಶ ೧೨೦೦ | ಕಡಬದ ನಂಜುಂಡಶಾಸ್ತ್ರೀ | ಕನ್ನಡ ಸಾ ಪ (೨೦೦೫) | **ಕುಸುಮಾಕಾ** |
| ಗಿರಿಜಾ ಕಲ್ಯಾಣ | ಹರಿಹರ | ಕ್ರಿಶ ೧೨೨೦ | ಎಂ.ಎಸ್. ಸುಂಕಾಪುರ | ಕರ್ನಾಟಕ ವಿವಿ (೧೯೭೭) | **ಗಿರಿಜಾಕ** |
| ಉದ್ಭಟಕಾವ್ಯಂ | ಸೋಮರಾಜ | ಕ್ರಿಶ ೧೨೨೫ | ಎಸ್. ವಿದ್ಯಾಶಂಕರ | ಕನ್ನಡ ಸಾ ಪ (೨೦೦೧) | **ಉದ್ಭಟಕಾ** |

| | | | | | |
|---|---|---|---|---|---|
| ಪುಣ್ಯಾಸ್ರವ | ನಾಗರಾಜ | ಕ್ರಿಶ ೧೩೩೧ | ದೇ. ಜವರೇಗೌಡ | ಕಅಸಂ, ಮೈಸೂರುವಿವಿ(೧೯೭೭) | **ಪುಣ್ಯಾಸ್ರ** |
| ತ್ರಿಷಷ್ಟಿ ಪುರಾತನ ಚಾರಿತ್ರಂ | ಸುರಂಗ | ಕ್ರಿಶ ೧೫೦೦ | ಆರ್.ಸಿ ಹಿರೇಮಠ | ಕರ್ನಾಟಕ ವಿವಿ (೧೯೬೬) | **ತ್ರಿಷಷ್ಟಿಪು** |
| ರಾಜಶೇಖರ ವಿಳಾಸಂ | ಷಡಕ್ಷರದೇವ | ಕ್ರಿಶ ೧೬೫೫ | ಆರ್.ಸಿ ಹಿರೇಮಠ<br>ಎಂ.ಎಸ್. ಸುಂಕಾಪುರ | ಕರ್ನಾಟಕ ವಿವಿ (೧೯೬೮) | **ರಾಜಶೇವಿ** |
| ಶಬರಶಂಕರ ವಿಳಾಸಂ | ಷಡಕ್ಷರದೇವ | ಕ್ರಿಶ ೧೬೫೫ | ಶಿ.ಶಿ. ಬಸವನಾಳ | ಸಾಹಿತ್ಯ ಸಮಿತಿ (೧೯೪೦) | **ಶಬಶಂವಿ** |

**ಹಳಗನ್ನಡಯುಗದ ಗದ್ಯಕೃತಿ:**

| | | | | | |
|---|---|---|---|---|---|
| ವಡ್ಡಾರಾಧನೆ | ಶಿವಕೋಟಿ | ಕ್ರಿಶ ೧೧೦೦ | ಡಿ.ಎಲ್. ನರಸಿಂಹಾಚಾರ್ | ಶಾರದಾ ಮಂದಿರ (೧೯೭೦) | **ವಡ್ಡಾರಾ** |

**ಹಳಗನ್ನಡ ಅವಧಿಯ ಶಾಸ್ತ್ರಗ್ರಂಥಗಳು:**

| | | | | | |
|---|---|---|---|---|---|
| ಕವಿರಾಜ ಮಾರ್ಗಂ | ಶ್ರೀವಿಜಯ | ಕ್ರಿಶ ೯೫೦ | ಎಂ.ವಿ. ಸೀತಾರಾಮಯ್ಯ | ಬಿಎಂಶ್ರೀ ಪ್ರತಿಷ್ಠಾನ (೧೯೯೪) | **ಕವಿರಾಮಾ** |
| ಕಾವ್ಯಾವಲೋಕನ | ನಾಗವರ್ಮ ೧ | ಕ್ರಿಶ ೯೯೦ | ಎಚ್. ದೇವೀರಪ್ಪ | ಕನ್ನಡ ಸಾ ಪ (೨೦೦೪) | **ಕಾವ್ಯಾವಲೋ** |
| ಲೋಕೋಪಕಾರಂ | ಚಾವುಂಡರಾಯ | ಕ್ರಿಶ ೧೧೫೦ | ಎಚ್. ಶೇಷಯ್ಯಂಗಾರ್ | ಕನ್ನಡ ಸಾ ಪ (೨೦೦೨ | **ಲೋಕೋಪಕಾ** |
| ಸೂಕ್ತಿಸುಧಾರ್ಣವಂ | ಮಲ್ಲಿಕಾರ್ಜುನ | ಕ್ರಿಶ ೧೨೫೦ | ಎನ್. ಅನಂತರಂಗಾಚಾರ್ | ಕನ್ನಡ ಸಾ ಪ (೨೦೦೪) | **ಸೂಕ್ತಿಸುಧಾ** |
| ಶಬ್ದಮಣಿದರ್ಪಣ | ಕೇಶಿರಾಜ | ಕ್ರಿಶ ೧೨೭೫ | ಡಿ.ಎಲ್. ನರಸಿಂಹಾಚಾರ್ | ಶಾರದಾ ಮಂದಿರ (೧೯೬೮) | **ಶಬ್ದಮದ** |

=====

**ಸೂಚನೆ:** ಪ್ರಯೋಗಗಳ ಆಕರಗಳನ್ನು ಉಲ್ಲೇಖಿಸುವಾಗ ಬಳಸಿರುವ ಅಂಕಿಗಳಲ್ಲಿ ಮೊದಲನೆಯದು, ಕಾವ್ಯಗಳಲ್ಲಿಯಾದರೆ, ಆಶ್ವಾಸ, ಸಂಧಿ, ಆಧಿಕಾರ, ಅವತಾರ ಮುಂತಾದ ವಿಭಾಗಗಳನ್ನೂ, ಎರಡನೆಯದು ಪದ್ಯಸಂಖ್ಯೆಯನ್ನೂ ನಿರ್ದೇಶಿಸುತ್ತವೆ; ಗದ್ಯಕೃತಿಗಳಲ್ಲಾದರೆ, ಪು ಪುಟವನ್ನೂ, ಸಾ ಸಾಲು ಎಂಬುದನ್ನೂ ಸೂಚಿಸುತ್ತವೆ; ಮಿಕ್ಕೆಡೆ ವಿಭಾಗ, ಉಪವಿಭಾಗ ಮತ್ತು ಪದ್ಯಸಂಖ್ಯೆಯನ್ನು ತೋರಿಸುತ್ತವೆ. ಪದ್ಯಸಂಖ್ಯೆಯ ಕೊನೆಯ ವ ಎಂಬುದು ಆ ಪದ್ಯವಾದ ನಂತರ ಬರುವ ವಚನ ಎಂಬ ಅರ್ಥವನ್ನು ನಿರ್ದೇಶಿಸುತ್ತದೆ.

# ಅ

**ಅಂಕ** – ಗುರುತು (ತನ್ನಂಕದೊಂದುಗ್ರಸಾಯಕದಿಂ ನಾಯಕರಂ ಪಡಲ್ವಡಿಸುತುಂ: **ಪಂಪಭಾ,** ೧. ೭೪); ಪ್ರಸಿದ್ಧ (ಅಂಕದ ಕಲಿ ಕುರುವಂಶ ಶಶಾಂಕನೆ: **ಗದಾಯು,** ೭. ೨); ತೊಡೆ (ಜಗತ್ತ್ರಿತಯಪತಿಯಂ ತ್ರಿದಶಪತಿಯ ನೀಡಿದ ಕೇಯೂರರಶ್ಮಿರಂಜಿತ ಭುಜಯುಗಳಕ್ಕೆ ನೀಡಿದಾಗಳ್ .. .. ನಿಜಾಂಕಮನೇಜೆಸಿದಂ: **ಆದಿಪು,** ೭. ೪೮ ವ); ದ್ವಂದ್ವಯುದ್ಧ (ದೇವರೆಲ್ಲರುಮಂಬರತಳದೊಳಿರ್ದಂಕಮಂ ನೋಟ್ಟಿಂತೆ ನೋಡೆ: **ಪಂಪಭಾ,** ೮. ೨೧ ವ); ಪರಿಣಾಮಕಾರಿ, ಸತ್ವ (ಬಲಮರ್ದನೆ ಅಂಕದೌಷಧಂ: **ರನ್ನ ನಿಘಂಟು,** ೪)

**ಅಂಕಂಗುಡು** – ಓಡಲು ಕುದುರೆಗೆ ಸೂಚನೆ ಕೊಡು (ಅಂಕಂಗುಡಲೊಡಮದು ನಿಶ್ಶಂಕಂ ಪನ್ನೆರಡು ಯೋಜನಂ ಪಾಜಿದುದು: **ಶಾಂತಿಪು,** ೧೧. ೪೧ ವ)

**ಅಂಕಂಗೊಳ್** – ಅಂಕಂಗುಡು (ದಕ್ಷಿಣಚರಣದಿಂ ಅಂಕಂಗೊಂಡು ಭೋಂಕನೆಡೆದ ಕೊಸೆಯಂ ತೆಗೆದು: **ನೇಮಿಪು,** ೪. ೧೦೪ ವ)

**ಅಂಕಕಾರ್ತಿ** – ಅಂಕಕಾತಿ, ವೀರನಾರಿ (ಕಲಿಯೆನೆ ನೆಗಟ್ದಳ್ ಕಸವರಗಲಿಯೆನೆ ಗುಣದಂಕಕಾರ್ತಿ ಮೊನೆಯೊಳ್ ಮನೆಯೊಳ್: **ಅಜಿತಪು,** ೧. ೬೫)

**ಅಂಕಕಾಱ** – ಅಂಕವೆಂಬ ದ್ವಂದ್ವಯುದ್ಧ ಮಾಡುವವನು, ವೃತ್ತಿವೀರ (ನುಡಿಯಲಜಿಯದ ಅಂಕಕಾಱಂ ಆಕಾಶಮಂ ನೋಡಿದನೆಂಬಂತೆ: **ಧರ್ಮಾಮೃ,** ೯. ೮೨ ವ)

**ಅಂಕಚಾರಣೆ** – ವ್ಯಕ್ತಿ ಅಥವಾ ಪದಾರ್ಥದ ವಿಶೇಷ ಲಕ್ಷಣಗಳನ್ನು ಹೇಳುವುದು (ಅಂಕಚಾರಣೆಗಳೊಳಂ ಸಂತಂ ಪೇಟ್ಗೆ ಉಟಿದಾವೆಡೆಯಂತರದೊಳಂ ಆಗದು ಎಂದಂ ಅತಿಶಯಧವಳಂ: **ಕವಿರಾಮಾ,** ೨. ೨೯)

**ಅಂಕಣೆ** – ರಿಕಾಪು (ಜಾತ್ಯಶ್ವಂಗಳಂ ವಳಯಮಂ ಸೋಂಕದಂಕಣೆಯ ಹಂಗಿಲ್ಲದೆ ಭೋಂಕನೇಱೆ: **ಗಿರಿಜಾಕ,** ೬. ೫೫ ವ)

**ಅಂಕತಳ** – ತೊಡೆಯ ಮೇಲ್ಭಾಗ (ತದಂಗನಾ ಅಂಕತಳದೊಳ್ ಬಾಲಾರ್ಕನಂ ಪೋಲ್ತು ಭಾಸುರತೇಜೋಧಿಕನಪ್ಪ ಬಾಳಂ: **ಆದಿಪು,** ೭. ೪೪)

**ಅಂಕದಂಬು** – ಹೆಸರುವಾಸಿಯಾದ ಬಾಣ (ಅಂಕದಂಬೆತ್ತಲುಂ ತುಱುಗಿ ನಡುವಿನಂ ಸಾರ್ದು ಸಾರ್ದಚ್ಚೆಚ್ಚು ಕಾದಿದರ್: **ಪಂಪಭಾ,** ೧೩. ೩೯)

**ಅಂಕದ ವಸ್ತು** – ಅಮೂಲ್ಯವಾದ ವಸ್ತು (ಮಿತ್ರಂ ಧನಂ ಧಾತ್ರಿ ಕಿಂಕರರ್ ಎಂಬ ಅಂಕದ ವಸ್ತುವಂ ಪಡೆಗೆ: **ಪಂಚತಂತ್ರ,** ೪೪೧)

**ಅಂಕದೌಷಧ** – ವೀರ್ಯಪುಷ್ಟಿಯ ಔಷಧ, ಪರಿಣಾಮಕಾರಿ ಔಷಧ (ಬಲಮರ್ದನೆ ಅಂಕದೌಷಧಂ: **ರನ್ನ ನಿಘಂಟು,** ೪)

**ಅಂಕಮಾಲೆ** – ಬಿರುದಾವಳಿ (ಸ್ಮರನ ಬಿರುದಿನಂಕಮಾಲೆಯನೋದದರಗಿಳಿಗಳಿಲ್ಲ: **ಪಂಪರಾ,** ೧. ೧೦೭ ವ)

**ಅಂಕವಣಿ** – ರಿಕಾಪು (ಉಂಗುಟಮಂ ಅಂಕವಣಿಗೆ ಕರಾಂಗುಳಿಯಂ ಸ್ಕಂಧಸಂಧಿಗುಯ್ದು ಏಱಿದಂ ಉತ್ತುಂಗ ತುರಂಗಮಂ: **ಪಂಪರಾ,** ೪. ೧೨೦)

**ಅಂಕವಣೆ** – ಕುದುರೆಯ ರಿಕಾಪು (ಅನ್ನೆಗಂ ನಕುಳನುಮಂಕವಣೆಯುಂ ಬಾಳುಂ ಬಾರುಂ ಚಮ್ಮಟಿಗೆಯನುಮಂ: **ಪಂಪಭಾ,** ೮. ೫೪ ವ)

**ಅಂಕಿತ** – ಕುದುರೆಯ ಓಟದ ಒಂದು ಬಗೆ (ಬಿಂಕಂಬಡೆದುದು ವಿಕ್ರಮಂ ಅಂಕಿತಂ ಉಪಕಂಠಂ ಉಪಜಂ ಉಪಜಿನಮೆಂಬಯ್ದುಂ: **ಮಲ್ಲಿನಾಪು,** ೯. ೨೩)

**ಅಂಕಿಸು** – ಅಧೀನ ಮಾಡಿಕೊ (ಈ ಯತಿವರ್ತಿಯಂ ವಶವರ್ತಿ ಮಾಡಲುಂ ಅಂಕುಶಮಿಲ್ಲದಂಕಿಸಲುಂ ನಿನಗೆ ತೀರ್ವುದು: **ನೇಮಿನಾಪು,** ೫. ೧೧೫ ವ); ತೋರ್ಪಡಿಸು (ಬಳವೈರಿಯೊಳ್ ನೀಲಾಚಲಂಗಳ್ ಸಾಲಿಟ್ಟುವೆಂಬ ಬಿಂಕಮಂ ಅಂಕಿಸಿ ಕಣ್ಗೆ ವಂದ ಗಂಧಸಿಂಧುರಸಮೂಹದಿಂ: **ರಾಜಶೇವಿ,** ೬. ೧೧ ವ)

**ಅಂಕು** – ಸೊಟ್ಟಗಾಗು (ತಾಱಿದ ಅಂಕಿದ ನಱುಂಕಿದ ಕೊಂಬು ಒಣಗಿರ್ದ ಪೊಟ್ಟೆವೋದ ಒಱಗಿದ ವೃಕ್ಷದಿಂದ ಅಱಿವುದು ಆಯೆಡೆಯೊಳ್ ಜಳಮಾಗದೆಂಬುದಂ: **ಲೋಕೋಪಕಾ,** ೫. ೪)

**ಅಂಕುರ** – ಮೊಳಕೆ, ಚಿಗುರು (ಮಾವಿನಂಕುರಮನೆ ಕರ್ಚಿ ಬಿಚ್ಚಳಿಪ ಕೋಗಿಲೆ: **ಪಂಪಭಾ,** ೫. ೧೧)

**ಅಂಕುರವೃದ್ಧಿ** – ಮೊಳಕೆಯ ಬೆಳವಣಿಗೆ (ಉದಕವೃದ್ಧಿಯೊಳ್ ಅಂಕುರವೃದ್ಧಿಯೆಂತಂತೆ ಸಹಕಾರಿಕಾರಣಂ: **ಆದಿಪು,** ೨. ೧೦ ವ)

**ಅಂಕುರಿಸು** – ಮೊಳಕೆಯೊಡೆ (ಇಳೆಯೊಳಂದಂಕುರಿಸಿ ಹರಿತ್ಕುಳದೊಳ್ ವರ್ಧಿಸಿಯೆ ನೀಳ್ದು: **ಗದಾಯು,** ೧೦. ೭); ಉಂಟಾಗು (ತೆಂಬೆಲರಲೆಪದ ಪೂಲತೆಯೆಂಬಿನಮಂಕುರಿಸೆ ಪುಳಕಂ: **ಶಾಂತಿಪು,** ೧೦. ೩); ನವಿರೇಳು (ಬೇಟದೊಳ್ ಬಿರಿವೊಡಲೊಯ್ಯನಂಕುರಿಸೆ: **ಪಂಪಭಾ,** ೫. ೧೪)

**ಅಂಕುಶ** – ಆನೆಯನ್ನು ನಿಯಂತ್ರಿಸುವ ಆಯುಧ, ಸೃಣಿ (ಅಂಕುಶಮಕ್ಕುಂ ಸೃಣಿ: **ಅಭಿಧಾವ,** ೧. ೧೪. ೩೬)

**ಅಂಕುಸ** – ಅಂಕುಶ (ಆರಂಕುಸಮಿಟ್ಟೊಡಂ ನೆನೆವುದೆನ್ನ ಮನಂ ವನವಾಸಿ ದೇಶಮಂ: **ಪಂಪಭಾ,** ೪. ೩೦); ನಿಯಾಮಕ (ಪಾಣ್ಬರಂಕುಸಂ ಅಮ್ಮನ ಗಂಧವಾರಣಂ ಪಡೆಮೆಚ್ಚೆಗಂಡಂ: **ಪಂಪಭಾ,** ೧. ೧೪೮ ವ)

**ಅಂಕೂರ** – ಅಂಕುರ (ಅಂಕುರಂ ಅಂಕೂರಂ: **ಅಭಿಧಾವ,** ೧. ೭. ೪)

**ಅಂಕುಶಗತಚಾರಣ** – ಅಂಕುಶದಿಂದ ಆನೆಯನ್ನು ನಡೆಸು (ಅಂಕುಶಗತ ವಾರಣಯಾತಮೆಂಬುದದು; **ಅಭಿಧಾನ,** ೧. ೩. ೩೭)

**ಅಂಕುಸವಿಡು** – ಅಡ್ಡಿಮಾಡು (ಆರಂಕುಸವಿಟ್ಟೊಡಂ ನೆನವುದೆನ್ನ ಮನಂ ವನವಾಸಿ ದೇಶಮಂ: **ಪಂಪಭಾ,** ೪. ೩೦)

**ಅಂಕೆ** – ಅಭಿಪ್ರಾಯ (ಮಡಸೋಂಕಿಂ ಮನದಂಕೆಯಂ ತಿಳಿದು: **ಕುಸುಮಾಕಾ,** ೮. ೭೬)

**ಅಂಕೆಗೆಯ್** – ಗುರುತುಮಾಡು (ಸರಳತಳಾಂಗುಳಿತ್ರಿತಯದಿಂ ಫಳವಕ್ತ್ರದೊಳಂಕೆಗೆಯ್ದು: **ಕುಸುಮಾಕಾ,** ೯. ೨೬)

**ಅಂಗ** – ದೇಹ (ದೇವ ಮತ್ ನಯನದೊಳ್ ನಯನಂ ಕರದೊಳ್ ಕರಾಬ್ಜಂ ಅಂಗದೊಳ್ ಎಸೆವ ಅಂಗಯಷ್ಟಿ:

**ಕಾದಂಸಂ,** ೬. ೪); ಪ್ರಕಾರ (ಆ ವಜ್ರಪಾತದಿಂ ಮೇಲೇವೇಟ್ಟಿಪೆಂ ಅರಿದು ಪೇಟಲುಂ ಕೇಳಲುಂ ಇನ್ನುಂ ಆವ ಅಂಗಂ ಎನಲ್ಕೆ ಆಶ್ಚರ್ಯಮಾವಹಂ ಒಂದಾದುದು ಆಗಳ್ ಅದನುಸಿರ್ದಪ್ಪೆಂ: **ಕಾದಂಸಂ,** ೪. ೧೦೨); ಒಂದು ದೇಶದ ಹೆಸರು (ನೀನಿಲ್ಲದೆ ಇವೆಲ್ಲಂ ಒಳವೆ ಅಂಗ ಅಧಿಪತೀ: **ಗದಾಯು,** ೫. ೨೦); [ಜೈನ] ಜೈನಾಗಮದ ಒಂದು ವಿಭಾಗ (ಅಂತು ಜೈನದೀಕ್ಷೆಯಂ ಕೈಕೊಂಡು ಗುರುವಿನನುಮತದಿಂ ದ್ವಾದಶಾಂಗ ಚತುರ್ದಶಪೂರ್ವಂಗಳಂ ಕಲ್ತು: **ಆದಿಪು,** ೧೪. ೧೩೯ ವ); ದೇಹದ ಭಾಗ (ಅಂಗಿಯ ಅಂಗದೊಳೆಲ್ಲಂ ತೀವಿರ್ಪಂ ಭೂತಚತುಷ್ಟಾವಯವದಿಂ ಅನ್ಯಂ ಆತ್ಮನಂ ಕಂಡಟೆಯೆಂ: **ಯಶೋಧಚ,** ೪. ೧೭)

**ಅಂಗಂಬಡೆ** – ಆಕಾರ ಧರಿಸು (ಶೃಂಗಾರಲಕ್ಷ್ಮಿಯಂಗಂ ಬಡೆದನೇಕರೂಪದಿಂ ನಿಂದಂತೆ: **ಶಬರಶಂ,** ೧.೭೯ ವ)

**ಅಂಗಘಟನ** – ಮೈಕಟ್ಟು (ಅಸಮಾಸ್ತ್ರನ ಅಂಗಘಟನಂ ಅದು ಅಸದೃಶಂ ಈ ವಿಭುವಿನಂಗಘಟನಕ್ಕೆ ಎನೆ: **ಕರ್ಣನೇಮಿ,** ೫. ೪)

**ಅಂಗಚಿತ್ತ** – ಪಾರಿತೋಷಕ (ನರೇಂದ್ರಂ ರಾಜಲೋಕಮಂ ವಿಸರ್ಜಿಸಿ ತನ್ನ ವಂಶವರ್ಧನೆಗಂಗಚಿತ್ತಮನಿತ್ತು: **ಕಾದಂಬ,** ೨. ೮೬ ವ)

**ಅಂಗಚ್ಛವಿ** – ದೇಹಕಾಂತಿ (ಪಿಳುಕಂ ಬೇಡಿತೆಗೆ ಸಲಹಲಿತ್ತೊಡೆ ಗೂಡಿನೊಳದು ಬಳೆದು ತಳೆದುದಂಗಚ್ಛವಿಯಂ: **ಯಶೋಧಚ,** ೩. ೩೬)

**ಅಂಗಜ** – ಮನ್ಮಥ (ನೆಗಟ್ದೇ ಕರ್ಪೂರ ಕಾಳಾಗರು ಮಳಯಮಹೀಜಂಗಳ್ ಏಳಾಲತಾಳೀ ಸ್ಥಗಿತಂಗಳ್ ಕಣ್ಗೆವಂದಿರ್ದುವಂ ಇವನೆ ವಲಂ ಕೊಂಬುಗೊಂಡ ಅಂಗಜಂ .. .. ಎಚ್ಚು ಮೆಚ್ಚಂ ಸಲಿಸುವಂ: **ಪಂಪಭಾ,** ೪. ೨೩)

**ಅಂಗಜ ಮಹೀಶ** – ಕಾಮರಾಜ, ಮನ್ಮಥ ರಾಜ (ಬೇಟದೊಳೆನ್ನಂ ಅಂಗಮಹೀಶನ ಬಾಣಕೆ ಗೂಡುಮಾಡಿ ತಾಂ ಕೂಟದಲಂಪಿನಿಂಪಂ ಇನಿಸಂ ಮಿಗೆ ತೋಱಿದೊಡೆ ಎಂತು ಸೈರಿಪೆಂ: **ಉದ್ಭಟಕಾ,** ೧೦. ೬೪)

**ಅಂಗಜಾಗಮ** – ಕಾಮಶಾಸ್ತ್ರ (ಕಲ್ತಾದೊಡಂ ಇಂದು ದ್ಯುತಿಗುಲ್ಲಸದಿಂದೊಸರ್ವುದು ಅಂಗಜಾಮಗಮದ ಒಳ್ಪಂ: **ಉದ್ಭಟಕಾ,** ೧೦. ೮೧)

**ಅಂಗಜಾವ** – ಪಹರೆ, ಸರದಿ ಕಾವಲು (ಸುರಭಿಶರನಂಗಜಾವಂ ಗರಟಿಗೆ ಮೆಯ್ಯಾಗ್ಗಪು ಮೆಱೆಯೆ ಬಿಡದೋಲಗಿಪರ್: **ಯಶೋಧಚ,** ೨. ೪)

**ಅಂಗಡಿಸೂಱೆ** – ಅಂಗಡಿಯನ್ನು ಸೂರೆಮಾಡುವುದು (ಕಲಪಿಕನಾಯಕರ್ಗೆ ಪೊಸಮಾಂಗೊನರಂಗಡಿ ಸೂಱೆಯಂ ಶುಕಾವಲಿಯ ಪದಾತಿಗಿತ್ತು: **ಅನಂತಪು,** ೬. ೮೫)

**ಅಂಗಣ** – ಅಂಗಳ (ನಿಚ್ಚಲಿ ಕಾರಿರುಳೊಳ್ ಪೊಱಪಚ್ಚಮಂ ಉಟ್ಟಿರ್ದು ಇಱುಂಕಿ ಕಕ್ಷದೊಳ್ ಆ ಪಾಟಚ್ಚರ ಭಯದಿಂದುಟ್ಟು ಪಟಚ್ಚರಮಂ ಮನೆಗೆ ವಂದು ನಿಂದು ಅಂಗಣದೊಳ್: **ಶಾಂತಿಪು,** ೬. ೬೫); ಮನೆಗೆ ಸೇರಿದ ಬಯಲು (ಮನೆಯಂಗಳದೊಳ್ ಮನಮೊಸೆದಾಡುವ ಮಕ್ಕಳ ವಿನೋದಮಂ ಕಾಣ್ಬ ದಿವಸಮೆಂದಾದಪುದೋ: **ಸುಕುಮಾಚ,** ೯. ೧೦೧)

**ಅಂಗಣವಲಯ** – ಅಂಗಳದ ಸುತ್ತು, ಆವರಣ (ಅಂಗಣಕ್ಕೆ: ಅಂಗಣವಲಯ, ಅಂಗಣವಾವಿ, ಅಂಗಣವೆಟ್ಟು: **ಶಬ್ದಮದ,** ೩೧೩, ಪ್ರ)

**ಅಂಗಣವಾವಿ** – ಅಂಗಣದಲ್ಲಿನ ಬಾವಿ (ಅಂಗಣವಾವಿಯೆಂದಚ್ಚಗನ್ನಡ ಸಮಾಸಮುಂಟು: **ಶಬ್ದಮದ,** ೨೯೨ ವೃತ್ತಿ)

**ಅಂಗಣವೆಟ್ಟು** – ಅಂಗಳದಲ್ಲಿನ ಆಟದ ಬೆಟ್ಟ (ಅಂಗಣಕ್ಕೆ – ಅಂಗಣವಲಯಂ, ಅಂಗಣವಾವಿ, ಅಂಗಣವೆಟ್ಟು: **ಶಬ್ದಮದ,** ೩೧ ಪ್ರ)

**ಅಂಗದ** – ಭುಜಕೀರ್ತಿ, ತೋಳಬಂದಿ (ಫಣಾಮಣಿಯುಂ ಮಣಿಕುಂಡಲ ಅಂಗದಪ್ರಮುಖವಿಭೂಷಣಮುಂ ನಿಜಾಂಗರುಚಿಯೊಳ್ ಪೆಣೆದಿರೆ: **ಆದಿಪು,** ೯. ೧೧೦)

**ಅಂಗಭವ** – ಮಗ (ಅಂಗಭವ ಕೋಮಲಾಂಗ ಆಲಿಂಗನಸುಖ ದೊರೆಗೆ ವಾರದಲ್ತೆ ಕುಳಿರ್ ಕೋಟ್ಟಿಂಗಡಲೊಳ್ ಮುಲುಗಿದೊಡಂ ತಿಂಗಳ ತಣ್ಗದಿರ ಜೊಂಪದೊಳ್ ನೆಲಸಿದೊಡಂ: **ಮಲ್ಲಿನಾಪು,** ೩, ೯೭)

**ಅಂಗಯಷ್ಟಿ** – ಯಷ್ಟಿ[ಕೋಲು]ಯಂತೆ ತೆಳ್ಳಗಿರುವ ದೇಹ (ಪದೆಪಿನ ಮಾತುಗಳ್ ಪಲವುಮಂ ಬಿಡದಾಡಿದೊಡಲ್ಲಿ ಬರ್ಪುದಾವುದು ಗಡ ದೇವ ಮತ್ ನಯನದೊಳ್ ನಯನಂ ಕರದೊಳ್ ಕರಾಬ್ಜಂ ಅಂಗದೊಳ್ ಎಸೆವ ಅಂಗಯಷ್ಟಿ: **ಕಾದಂಸಂ,** ೬. ೪)

**ಅಂಗಯ್ಸು** – ಸ್ವೀಕರಿಸು (ನೀನಿಂ ಮನಮೊಲ್ದು ಅದಂ ಅಂಗಯ್ಸು ಎನಲ್ ಅನುನಯದಿಂದಂದು ತಾಳ್ದಿದಂ ಬಹುವಿದ್ಯೆಗಳಂ: **ಕರ್ಣನೇಮಿ,** ೪. ೪)

**ಅಂಗರಕ್ಕೆ** – [ಅಂಗರಕ್ಷಾ] ಮೈಗಾವಲ ಭಟ (ಅಂಗರಕ್ಕರ ನೆರದೊಳ್ .. .. ಬರೆ ನೃಪಾಂಗನೆಯರ್ಕಳ್: **ಶಾಂತಿಪು,** ೧೦. ೧೪೮); ಮೈಯ ರಕ್ಷಣೆಯ ವಸ್ತು, ಕವಚ (ಸಂಗರಕ್ಕೆ ತಾನಂಗರಕ್ಕೆ ರಘುಜಂಗೆಂಬಂತೆ: **ಪಂಪರಾ,** ೧೪. ೩೭)

**ಅಂಗರಕ್ಷಾವಳಿ** – ರಾಜನ ಮೈಗಾವಲ ದಳ (ವಿಷಯ ಗೃಹಾಮಾತ್ಯ ದಂಡಾಧಿನಾಥಾವಳಿ ಧರ್ಮಾಧ್ಯಕ್ಷ ಕೋಶಾಧಿಪ ತಳವರ ಹಾಸ್ಯಾದಿ ತಂತ್ರಾಳಿಪಾಳಾವಳಿ ರಾಜಶ್ರೇಷ್ಠಿ ಸೇನಾಪರಿಕರಣ ಪುರೋಧೋಧಿಕಾರ ಅಂಗರಕ್ಷಾವಳಿ ಮುಖ್ಯಂಬೆತ್ತ ಬಾಹತ್ತರದೆಸಕದ ನಾನಾ ನಿಯೋಗಿಪ್ರತಾನಂ: **ಶಾಂತೀಶ್ವಪು,** ೧೫. ೯೦)

**ಅಂಗರವೋಳಿಗೆ** – [ಅಂಗಾರಸ್ಫೋಟಿಕಾ] ಕೆಂಡದ ಮೇಲೆ ಸುಟ್ಟ ರೊಟ್ಟಿ (ಪೊಂಗಿರ್ದಂಗರವೋಳಿಗೆಯಂ ಗರಗರನಪ್ಪ ತುಪ್ಪಮಂ: **ಪಾರ್ಶ್ವನಾಪು,** ೮. ೫೬)

**ಅಂಗರಾಗ** – ಮೈಗೆ ಹಚ್ಚಿಕೊಳ್ಳುವ ಪರಿಮಳದ್ರವ್ಯ (ಮಱುದೆವಸಂ ಲತಾಲಲಿತೆ ಕೀಚಕನಲ್ಲಿಗೆ ಕಾಮನೊಂದು ಸೆಱೆಯೆನಿಪ ಅಂಗರಾಗಮಂ ಇಳೇಶ್ವರವಲ್ಲಭೆಯಟ್ಟಲ್ ಉಯ್ದೊಡೆ: **ಪಂಪಭಾ,** ೮. ೭೩)

**ಅಂಗರೋಚಿ** – ದೇಹಕಾಂತಿ (ನಿರ್ಮಳಿನ ಅಂಗರೋಚಿ ಜಳಮಂ ಲುಳಿತಾಳಕಂ ಉನ್ಮದಾಳಿಯಂ .. .. ಪೋಲೆ: **ಆಚವರ್ಧ,** ೨. ೧೧)

**ಅಂಗಹಾರ** – ನೃತ್ಯ, ನಟನೆಯ ಮುದ್ರೆ (ಭರತಾಗಮದೊಳ್ ಮೂವತ್ತೆರಡನೆ ನೆಗಟ್ದಂಗಹಾರಮುಂ: **ಆದಿಪು,** ೯. ೨೯)

**ಅಂಗಾಧಿಪತಿ** – ಕರ್ಣ (ನೀನುಳ್ಳೊಡೆ ಉಂಟು ರಾಜ್ಯಂ ನೀನುಳ್ಳೊಡೆ ಪಟ್ಟಮುಂಟು ಬೆಳ್ಗೊಡೆಯುಂಟಯ್ ನೀನುಳ್ಳೊಡೆ ಉಂಟು ಪೀಟಿಗೆ ನೀನಿಲ್ಲದೆ ಇವೆಲ್ಲಂ ಒಳವೆ ಅಂಗಾಧಿಪತೀ: **ಗದಾಯು,** ೫. ೨೦)

**ಅಂಗಾರ** – ಕೆಂಡ (ಎಂದು ಪೊಗಟ್ಟು ಮುಂದೆ ಧಗಧಗಿಪ ಧೂಪಾಂಗಾರದೊಳ್ಮಂಡಿಸಲೆಂದು ಓಹಿಲದೇವಂ ಉದ್ಯತನಾಗಿ: **ಉದ್ಭಟಕಾ,** ೧೧. ೧೨೨ ವ)

**ಅಂಗಾರವಲ್ಲಿ** – ಕೊಡಸಿಗೆ ಎಂಬ ಒಂದು ಬಗೆಯ ಸಸ್ಯ (ಅಂಗಾರವಲ್ಲಿ ಕೊಡಸಿಗೆ: **ಅಭಿಧಾವ,** ೧. ೮. ೨೭)

**ಅಂಗಾಲ್** – ಕಾಲ ಅಡಿ, ಪಾದದ ಕೆಳಭಾಗ (ಅಂಗಾಲೊಳ್ ಮುಳ್ ನಡೆಯುಂ ತಾನೆಂತು ಮಱುಗುವನಂತು: **ಸಮಯಪ,** ೫. ೬)

**ಅಂಗಿ** – ಅಂಗಗಳುಳ್ಳುದು – ದೇಹ, ಶರೀರ (ಅಂಗಿಯ ಅಂಗದೊಳೆಲ್ಲಂ ತೀವಿರ್ಪಂ ಭೂತಚತುಷ್ಟಾವಯವದಿಂ ಅನ್ಯಂ ಆತ್ಮನಂ ಕಂಡಱಿಯೆಂ: **ಯಶೋಧಚ,** ೪. ೧೭)

**ಅಂಗಿಕೆ** – ಅಂಗಿ, ಕವಚ (ಮುತ್ತಿನ ಸರಮಂ ತನ್ನ ಕೊರಲೊಳ್ ಕೋದರಸಂಗೆ ಪೂವಿನ ಅಂಗಿಕೆಯಂ ತುಡಿಸಿ: **ಲೀಲಾವತಿ,** ೧೦. ೯೭ ವ)

**ಅಂಗುಟ** – ಕಾಲಿನ ಹೆಬ್ಬೆರಳು (ತಪೋಬಲವೃದ್ಧಿಯಿಂದಾ ಪರ್ವತಮನೆಡದ ಪಾದದಂಗುಟದ ಕೊನೆಯಿಂದೊಯ್ಯನೆ ಒತ್ತುವುದುಂ: **ಪುಣ್ಯಾಸ್ರ:** ೫. ೫೬ ವ)

**ಅಂಗುಲಿಕ್ರಿಯೆ** – ಬೆರಳಿನಿಂದ ಮಾಡುವ ಕೆಲಸ (ಬೆರಂಟು – ಅಂಗುಲಿಕ್ರಿಯಾಯಾಂ: **ಶಬ್ದಮದ, ಧಾ ೨೫೫**)

**ಅಂಗುಲಿಪ್ರಹರಣ** – ಬೆರಳಿಂದ ಹೊಡೆಯುವುದು (ಅಣೆ – ಅಂಗುಲಿಪ್ರಹರಣೇ: **ಶಬ್ದಮದ, ಧಾ.** ೩೬೭)

**ಅಂಗುಲೀ** – ಬೆರಳು (ಗೌರೀಪಾದಾಂಗುಲೀ ಕೋರಕಂ ಎಸೆವ ಕರಂ ಪಲ್ಲವಂ: **ಗಿರಿಜಾಕ,** ೧. ೨)

**ಅಂಗುಲೀಯ** – ಉಂಗುರ (ರತ್ನಾಂಗುಲೀಯಮಂ ಅಂಗುಳಿಯಿಂದುರ್ಚಿ ಬಿರ್ದುದನಱಿಯದೆ ಗಂಧಾಕ್ಷತ ಕುಸಮತಾಂಬೂಲ ಸ್ರಗ್ವಿಳಾಸಾಲಂಕೃತನಾಗಿ: **ಸುಕುಮಾಚ,** ೩. ೪ ವ)

**ಅಂಗುಳ್** – ಕಿರುನಾಲಗೆಯ ಪ್ರದೇಶ (ಅಂಗುಳ್ಮುಟ್ಟಿದೆ ಜಗಮಂ ನುಂಗುವ ಲಯಕಾಲಕಾಲನಾರಭಟೆಯುಂ: **ಜಗನ್ನಾವಿ,** ೧೨. ೪೮)

**ಅಂಗುಳಿ** – ಆನೆಯ ಸೊಂಡಿಲ ತುದಿ (ಮೃದುದೀರ್ಘವಿಸ್ತೃತ ಅಂಗುಳಿಯುಂ .. .. ಸಪ್ತದ್ವಾಸ್ಥಿತನುವುಮಪ್ಪ ವಿಜಯ ಪರ್ವತಗಜೇಂದ್ರಂ ಬಂದು ಮುಂದೆ ನಿಲ್ವುದುಂ: **ಆದಿಪು,** ೧೨. ೫೬ ವ); ಬೆರಳು (ಬಗೆ ಮತ್ತೊಂದೆನೆಯುಂ ಗೆಯ್ಯೊಗಂ ಇತ್ತೊಂದೆನೆಯುಂ ಅಂಗುಳೀ ನಖಚಯಕಾಂತಿಗಳಂ ಅವಟಯ್ಸಿ ಸಲೆ ಪಾಸಗಯದೆಸೆದೆಸೆ ಪೊರಳ್ಚಿದಂ ಮತ್ತೊರ್ವಂ: **ಶಾಂತಿಪು,** ೫. ೧೦೫)

**ಅಂಗುಳೀಯಕ** – ಉಂಗುರ (ಪೂರ್ಣಹಸ್ತಾಕೃತಿಯಿಂ ಮಧುಬಿಂದು ಪೂರ್ಣಮೆಸದುದು ಮಧುಕರ ನೀಲಾಂಗುಳೀಯಕಂ ಕೋಕನದಂ: **ಮಲ್ಲಿನಾಪು,** ೫. ೩)

**ಅಂಗೆಯ್** – ಅಂಗೈ, ಕರತಲ (ತಾನಂಗೆಯ್ಯ ಪದ್ಮದಿಂ ಚರಣಂಗಳ ಪದ್ಮದಿಂದೆ ಗಿರಿಸುತೆಯೆಸೆದಳ್: **ಗಿರಿಜಾಕ,** ೩.೫೮)

**ಅಂಗೈಸು** – ಹವಣಿಸು (ಸುರಿವ ಮುತ್ತುಗಳಂ ಕಾರ ಮುಂಬನಿಯ ತಂದಲೆಂದು ಬಂದು ನುಂಗಲಂಗೈಸುವ ಚಾದಗೆಯ ಮಱಿಗಳುಮಂ; **ಕಬ್ಬಿಗಕಾ,** ೧೮೧ ವ)

**ಅಂಗೋದ್ಭೂತ** – ಮನ್ಮಥ (ಶೃಂಗಾರಾಮೃತವಾರ್ಧಿಜಾತೆ .. .. ಸಂದ ಅಂಗೋದ್ಭೂತನಗಣ್ಯ ಪುಣ್ಯನಿಧಿ: **ಕರ್ಣನೇಮಿ,** ೮. ೯೫)

**ಅಂಘ್ರಿಪ** – ಮರ (ಮೇರುಮಹೀಜಾತಂ ಪಾರಿಜಾತ ಅಂಘ್ರಿಪೋತ್ಕರಂ ಅಶ್ಮಬ್ರಜಂ ಪಯಃಪ್ರಸರಮುಂ ಚಿಂತಾಮಣಿ: **ಶಾಂತೀಶ್ವಪು,** ೧೪. ೮೯)

**ಅಂಚಂ** – ಅಂಕೆ, ಭಯ (ಅಂಚಮೆನಲ್ಕಂಜಿಕೆ: **ರನ್ನನಿಘಂಟು,** ೫)

**ಅಂಚಳ** – ಅಂಚು, ಸೆರಗು (ತಾಂಬೂಲಾಂಚಳಮುಮಂ ಚರಣಾಗ್ರದಿಂ ನೂಂಕಿ ಚಂದ್ರಾಪೀಡಂ ನೆಲದೊಳ್ ಕುಳ್ಳಿರೆ: **ಕಾದಂಸಂ,** ೨. ೪೩ ವ)

**ಅಂಚಿತ** – ಅಲಂಕೃತ (ಮುಂದೊಂದೆಡೆಯೊಳ್ ಇಡಿಕೆಗೊಂಡು ಕಣ್ಗೊಳಿಪ ಪಣ್ಗೊಂಚಲ ಸಂಚಯದಿಂದ ಅಂಚಿತಮಾಗಿರ್ದ ಗೋಸ್ತನೀ ಲತಾಮಂಡಪದ ಸಲ್ಲಲಿತ ಪಲ್ಲವಾಸ್ತರಣದೊಳ್: **ಶಾಂತೀಶ್ವಪು,** ೧೧. ೬೮ ವ); ಪ್ರಸಿದ್ಧವಾದ (ಅಂಚಿತ ದೇವತಾಭವನಸಂಕುಳದಿಂ ಗಣಿಕಾನಿವಾಸದಿಂ .. .. ಒಪ್ಪುಗುಂ ಕ್ರೌಂಚಪುರಂ: **ಪಂಚತಂತ್ರ,** ೧೨೪)

**ಅಂಚಿರ** – ಅಸ್ಥಿರ, ಚಂಚಲ (ಪೊಸನನೆಯೊಳ್ ಪಸುರ್ಪಲರೊಳಂಚಿರಮಲ್ಲದ ಬೆಳ್ಪು: **ಆದಿಪು,** ೧. ೬೬)

**ಅಂಚೆ** – ವಸ್ತ್ರ (ಅರುಣಾಂಬುಜದುಳ್ಳಲರೆಸಳ್ಗಳಂಚೆಯೊಳ್ ಸಂಚಲಿಸದೆ: **ಮಲ್ಲಿನಾಪು,** ೩. ४೩); ಹಂಸ (ಕಡವಿನ ಕಂಪು ಅಡಂಗಿದುದು ಜಾದಿಯ ಕಂಪು ಒದವಿತ್ತು ಸೋಗೆಯ ಉರ್ಕು ಉಡುಗಿದುದು ಅಂಚೆಯುರ್ಕು ಮೊಸತಾಯ್ತು: **ಪಂಪಭಾ,** ೭. ೬೯); ಕೊನೆಯ ಭಾಗ (ಮಿಂಚಿನಂಚೆವೆರಸು ಕಾರ್ಮುಗಿಲ ಬಿಟಲು ಕಾಲೂಱಿದಂತೆ: **ಅನಂತಪು,** ೨. ೨೯ ವ)

**ಅಂಚೆವಱಿ** – ಹಂಸದ ಮರಿ (ಪಾಡುವ ಪಱಮೆಗಳಿಂದೊಲ್ದಾಡುವ ಮುದ್ದಂಚೆವಱಿಗಳಿಂ: **ರಾಜಶೇವಿ,** ೧೨. ೨೩)

**ಅಂಚೆವಾಳತಿ** – ಬಾಣಂತಿ ಹಂಸ (ಮಱಿಯಂಚೆಯ ಮುದ್ದುಗೆಯ್ತುಮುಮನಂಚೆವಾಳತಿಯಾ ಮಱಿಯೊಳಾದ ಎಱಕಮುಮಂ: **ಮಲ್ಲಿನಾಪು,** ४. ೧೩ ವ)

**ಅಂಚೆವಿಂಡು** – ಹಂಸದ ಹಿಂಡು (ರಮಣಿಯರ ನೂಪುರರಣಿತಕ್ಕೆಳಸಿ ಬರ್ಪ ಅಂಚೆವಿಂಡಿನಿಂಚರದೊಳಂ: **ಕಾದಂಬ,** ೧. ೫೮ ವ)

**ಅಂಜನ** – ಕಾಡಿಗೆ (ಆ ರಥದೊಳ್ ಒಡಂಬಡೆ ಪೂಡಿದ ನಾಲ್ನೂಱು ಗೊಂಕುಱುಗಟ್ಟಿಯುಂ ಅಂಬರಸ್ಥಲಮನಡರ್ವ ಗೃಧ್ರಧ್ವಜಮುಂ ಅಂಜನಪುಂಜದಂತಾಗಿ: **ಪಂಪಭಾ,** ೧೨. ೭ ವ); ಲೇಪನ

**ಅಂಜನಚೋರ** – ಅಂಜನ ಹಚ್ಚಿಕೊಂಡು ಕಳ್ಳತನ ಮಾಡುವವನು (ಅಂಜನಚೋರಂ ಘುಟಿಕಾಪ್ರಯೋಗದಿಂದೃಶ್ಯ ರೂಪದಿಂ ಪೋಗಿ ಕಳ್ದು ತಂದು: **ಧರ್ಮಾಮೃ,** ೨. ೭೫ ವ)

**ಅಂಜನದಿಕ್** – ಪಶ್ಚಿಮ (ಅಂತು ಅಂಜನದಿಕ್ ಕುಂಜರದಂತೆ ಬರುತಿರ್ಪುದುಂ: **ಪಂಪರಾ,** ೮. ೩೮ ವ)

**ಅಂಜನಸಿದ್ಧ** – ಅಂಜನ ಹಚ್ಚಿಕೊಂಡು ಅದ್ಭುತ ಕೆಲಸ ಮಾಡುವವನು (ಕೊಂದಂ ಕೊಲ್ವಂತೆ ರಸಮನಂಜನಸಿದ್ಧಂ: **ಶಬ್ದಮದ,** ೨೪೮ ಪ್ರ)

**ಅಂಜನಾತನಯ** – ಆಂಜನೇಯ (ಪತಿಹಿತಂ ಅಂಜನಾತನಯಂ ಆ ಪವನಾತ್ಮಜನಿಂ ಖಗೇಶ್ವರಂ ಪತಿಹಿತಂ ಆ ಮರುತ್ತನಯನಿಂ ಖಗರಾಜಂ ಅರ್ಕನಂದನಂ ಪತಿಹಿತಂ: **ಪಂಚತಂತ್ರ,** ೪೪೭)

**ಅಂಜನಿಸು** – ತಿರಸ್ಕರಿಸು (ತರಳಮುಕ್ತಾವತಂಸಪ್ರಭಾ ಪಲ್ಲವಮಾಕಾರಂ ಸ್ಮರಾಕಾರಮಂ ಅಂಜನಿಸೆ: **ಪಂಪರಾ,** ೨. ೩)

**ಅಂಜನೆ** – ಹನುಮಂತನ ತಾಯಿ; [ಜೈನ] ಒಂದು ನರಕದ ಹೆಸರು (ಅಂಜನೆಯೆಂಬ ಪೆಸರ ಪಂಕಪ್ರಭೆಯೆಂಬ ನಾಲ್ಕನೆಯ ನರಕಮಿರ್ದುದು: **ಅಜಿತಪು,** ೧೧. ೬ ವ)

**ಅಂಜಮೆ** – ಅಂಜಿಕೆ (ಸಾಧಕನ ಮರುಳಾಟದಂತೆ, ವೀರನಂಜಮೆಯಂತೆ: **ಧರ್ಮಾಮೃ,** ೮. ೫೭ ವ)

**ಅಂಜಮೆಗುಡು** – ಹೆದರಿಕೆಯನ್ನು ಹೋಗಲಾಡಿಸು (ಜನಮಂ ನೀಮಂಜಲಿಂ ಎಂದಜೀವಂ ಅರ್ವಿನಮಂಜನೆಗೊಟ್ಟಜೆದು ನಿಜೆಸಿದಂ: **ಆದಿಪು,** ೬. ೬೧)

**ಅಂಜಲ್** – ಹೆದರಬೇಡ[ಡಿ] (ಸುತಾರೆಯಂ ಅಂಜಲಂಜಲ್ ಎಂದು ಮಂಡಲಾಗ್ರಮಂಡಿತ ದೋರ್ದಂಡರೆಂ ಆಗಿ ಪೋಗಿ ಪಗೆವನೊಳ್ ತಡೆಯದೆ ತಾಗುವ ಎಮ್ಮ ರಭಸಮಂ ಕೇಳ್ದು: **ಶಾಂತಿಪು,** ೬. ೩೩ ವ)

**ಅಂಜಲಿ** – ಬೊಗಸೆ (ವಿನಯದೊಳೆ ಮತ್ತಂ ಅಂದೊಯ್ಯನೆ ನಿರ್ಝರವಾರಿಯಂ ನಿಜ ಅಂಜಲಿಯಿಂ ತಂದು ಅನುವಿಸಿ ವದನಪ್ರಕ್ಷಾಳನಮಂ ಮಾಡಿಸಿದಂ ಅಂದು ಚಂದ್ರಾಪೀಡಂ: **ಕಾದಂಸಂ,** ೪. ೧೨೪)

**ಅಂಜಿಸು** – ಹೆದರಿಸು (ಪೊಸ ಕಾರೊಳಿಂತು ಬೆಳ್ಪಗೆ ಪಥಿಕಾಜನಮಂಜಿಸುವಂತಿರೆ: **ಕವಿರಾಮಾ,** ೧. ೧೨೪)

**ಅಂಜು** – ಹೆದರು, ಭಯಪಡು (ಅಂಜು – ಭಯೇ: **ಶಬ್ದಮದ–** ಧಾ ೨೨೫)

**ಅಂಜುಮೆ** – ಅಂಜಿಕೆ (ಚಲದಿನೆಱಗಿಸಲಿರೆ ಭರತಂಗೆಱಕಮ್ ಅಂಜುಮೆಯಲ್ತೇ: **ಆದಿಪು,** ೧೪. ೭೫)

**ಅಂಜುಳಿ** – [ಅಂಜಲಿ] ಬೊಗಸೆ (ನೃಪಂ ಅತಿವ್ಯಗ್ರನಾಗಿ ಮುಖಪ್ರಕ್ಷಾಳನಾರ್ಥಂ ಪೇರಡವಿಯೊಳ್ ಅಂಜುಳಿಯಿಂ ಜಲಮಂ ತಂದು .. .. ಎಱೆಯೆ: **ಕಾದಂಸಂ,** ೩. ೪೫ ವ)

**ಅಂಟಿಸುಂಟಿ** – ಒಂದು ಬೈಗುಳ (ಬೆರಳ್ಗಡಿಕೆಯರಂಟಿಸುಂಟಿ ಸುಡು ಪಂಜೆಗಳೆಂಜಲ ಹಂಜೆಯೆಂದು ಬಯ್ದೊಡನೆತ್ತಿದರ್: **ಅನಂತಪು,** ೮. ೩೧)

**ಅಂಟಿಸು** – ಮೆತ್ತು (ಕಂಪಿಪೊಡಲಂಟಿಪ ಧೂಳಿಯೊಱಲ್ವ ನಿಸ್ವನಂ: **ಉದ್ಭಟಕಾ,** ೪. ೫೯)

**ಅಂಟು** – ಮುಟ್ಟು; ಜತೆಗೂಡು (ನಿಚಿತ ಮುದದಿಂದೆ ಮುಖಶಶಿರುಚಿಯಂ ಬಿಡದಂಟಿ ಸವಿವೆಂದಗಲದೆ ಸಾರ್ದ ಚಕೋರಂ: **ಉದ್ಭಟಕಾ,** ೬. ೧೦೭)

**ಅಂಟುಗೊಳ್** – ಅಂಟಿಕೊ; ನಾಟು (ಬಾಸೆಯೊಳಂಟುಗೊಂಡ ಕಣ್ ತಿವಳಿಯೊಳಂ ಸಿಲ್ಕಿ ಪೋಗಲಾರ್ತುವಿಲ್ಲ: **ಕಬ್ಬಿಗಕಾ,** ೭೮); ಆಶ್ರಯಿಸು (ನೀರ್ದಾಣಮನಂಟುಗೊಂಡಂದಟರಾಗಳೆ ಬಾಯ್ವಿಡೆ: **ಕಬ್ಬಿಗಕಾ,** ೧೯೪)

**ಅಂಡಜ** – ಮೊಟ್ಟೆಯಿಂದ ಹುಟ್ಟಿದ್ದು (ಫಣಿವಿಹಗಾದ್ಯವೆಲ್ಲಂ ಅಂಡಜಂ: **ಅಭಿಧಾವ,** ೧. ೩. ೪); ಹಕ್ಕಿ (ಖಗ ಅಂಡಜಂ ಪತತ್ರಿ ಪತಂಗಂವಿಕಿರಂ ಪಕ್ಷಿ: **ಅಭಿಧಾವ,** ೧. ೯. ೯)

**ಅಂಡಲೆ** – ಪೀಡಿಸು (ತಮ್ಮಂ ಅಂಡಲೆದು ಬಂಬಣ ಬಾಡಿಸಿ ಬಿಡದೆ ಕಸುಗಾಯ್ದು: **ಆಚವರ್ಧ,** ೬. ೨೩ ವ); ಕಾಟ (ವಿಯೋಗಿಗೇಂ ಮಾಡದೆ ಪೋಕುಮೇ ಮದನನಂಡಲೆಯಂ ನಗನಂದನನಂಗಳೊಳ್; **ಶಬರಶಂ,** ೧. ೫೨)

**ಅಂಡಲೆವಡೆ** – ತೊಂದರೆಗೆ ಗುರಿಯಾಗು (ಪರದಾರಾಸಕ್ತನಿಂದಂಡಲೆವಡೆದುದು ತಾನೆಂದು ಕೈಲಾಸಧಾತ್ರೀಧರಮಂ ನಿತ್ಯಂ ನಗುತ್ತಿರ್ದಪುದೆನೆ: **ಕುಸುಮಾಕಾ,** ೨. ೮೬)

**ಅಂಡುಗೊಳ್** – ಹತ್ತಿರ ಹೋಗು (ಮೇಖಳಾಕಳಿತ ರುಚಿರ ಲುಳಿತಾಧರಪಲ್ಲವೆ ನೋಟ್ಟಿ ದಂಡುಗಳೊಳಂಡುಗೊಂಡು ಸೊರ್ಕಿದಾನೆ ಬಪಂತೆ ಬಂದು: **ಪಂಪಭಾ,** ೪. ೩೬ ವ); ಆಶ್ರಯಿಸು (ಕುಪ್ಪಳಿಸಿ ತುಱುಗಿ ಪರ್ವಿದ ಱೊಪ್ಪವನಿರದಂಡುಗೊಂಡು ಪಂದಿಯ ಬಟೆಯೊಳ್: **ಗಿರಿಜಾಕ,** ೧. ೧೦೩)

**ಅಂಡೆ** – ಕೊಳವಿ (ಮುಳುಂಗಿ ಮೂಡಿ ಪೊಳೆದಾ ಪೊನ್ನಂಡೆಯಿಂ ಪೊಯ್ದು ಬಾಯ್ದಿರದೀಸಾಡಿ .. .. ಅಂಬುಕೇಳಿವಡೆದರ್ ಪಂಕೇಜಾಕ್ಷಿಯರ್: **ರಾಜಶೇವಿ,** ೧೦. ೭೨)

**ಅಂತ** – ಗಡಿ, ಸೀಮೆ (ದೇವಮಾತೃಕ ಸಾಧಾರಣಾನೂಪ ಜಾಂಗಳಭೇದಂಗಳುಮನಂತಪಾಳಪಾಳಿತದುರ್ಗಪರಿವೃತ ಅಂತಗಳುಂ: **ಆದಿಪು,** ೮. ೬೩ ವ)

**ಅಂತಃಕಳಂಕ** – ಒಳಗಿನ ಕಳಂಕ (ಕಿಡಿಸುಗುಮಂತಃಕಳಂಕ ನೃಪಮಂಡಲಮುಮಂ ತಡೆಯದೆ ತಮಸ್ಸ್ವಭಾವಂ: **ಕವಿರಾಮಾ,** ೩. ೧೪೮)

**ಅಂತಃಕೃತ** – ಒಳಗೊಂಡ (ನಭೋಮಂಡಳದಂತಂತಃಕೃತ ಭುವನಂ ನಟನಂತೆ ದಿಟಂ ಪ್ರಬಳನಕ್ರಮಕರಸಮೇತಂ: **ಚಂದ್ರಪ್ರಪು,** ೫. ೪೦)

**ಅಂತಃಪುರದಾಸೇರಕ** – ಅಂತಃಪುರದ ದಾಸೀಪುತ್ರ (ಅಂತಃಪುರದಾಸೇರಕನನೇಜೆ ಕಿಂಚಿದಾಕುಂಚಿತಾಗ್ರ ತರ್ಜನೀನಿಶಿತಾಂಕುಶಂ ಅಂತಃಪುರಪ್ರಮದವನವಿಷ್ಟನಾಗಿ: **ಆದಿಪು,** ೮. ೪೧ ವ)

**ಅಂತಃಪ್ರತಿಹಾರಿ** – ಅಂತಃಪುರದ ದ್ವಾರಪಾಲಕ (ವಿಚಿತ್ರವೇತ್ರಲತಾಶೋಭಿತತಳಕಮಳೆಯರ್ ಅಂತಃಪ್ರತಿಹಾರಿಯರಾದರ್ ಅಮರಕಾಂತೆಯರರೆಬರ್: **ಆದಿಪು,** ೭. ೧೪)

**ಅಂತಃಸ್ಫಾರಿತ** – ಒಳಗೇ ವಿಕಾಸಗೊಂಡ (ಮನೋಜಲೀಲೆಯಂ ಅವಕರ್ಣಿಸಿ ಕರ್ಣಾಂತವಿಶ್ರಾಂತ ಲೋಚನಂಗಳ್ ಅಂತಃಸ್ಫಾರಿತಂಗಳಾಗೆ ದಿಗವಲೋಕನಂಗೆಯ್ದು: **ಮಲ್ಲಿನಾಪು,** ೮. ೯ ವ)

**ಅಂತಕ** – ಯಮ (ನಡೆ ಸುರಪತಿ ನಡೆ ಪಾವಕಂ ನಡೆ ಅಂತಕ ನಡೆ ನೃವಾಹ: **ಗಿರಿಜಾಕ,** ೬. ೯೦)

**ಅಂತಕದಿಕ್** – ದಕ್ಷಿಣದಿಕ್ಕು (ತೀಡುತಿರ್ದುದು ಇಂತನುಪಮ ಮನ್ಮಥಾಗ್ನಿಬಳ ಕಾರಣಂ ಅಂತಕದಿಕ್‌ಸಮೀರಣಂ: **ಕುಸುಮಾಕಾ,** ೫. ೫೨)

**ಅಂತಕವೈರಿ** – ಯಮನ ಶತ್ರು, ಶಿವ ; ಜಿನ (ಅಂತಕನ ಸಾಮ್ಯಮನಂತಕವೈರಿಯಲ್ಲದುಂತಮರ ಮನುಷ್ಯರಾರ್ಪರೇ ನಿರಾಕರಿಸಲ್: **ಶಾಂತಿಪು,** ೭. ೭೮)

**ಅಂತಪಾಳ** – ಗಡಿಕಾಪಿನವರು (ದೇವಮಾತೃಕ ಸಾಧಾರಣಾನೂಪ ಜಾಂಗಳಭೇದಂಗಳುಮಂ ಅಂತಪಾಳಪಾಳಿತದುರ್ಗಪರಿವೃತ ಅಂತಗಳುಂ: **ಆದಿಪು,** ೮. ೬೩ ವ)

**ಅಂತಪ್ಪ** – ಅಂತಹ, ಹಾಗಿರುವ (ಅಂಜನಪುಂಜದಂತಪ್ಪ ಮೆಯ್ಯುಂ ಸಿಡಿಲಡೆಸಿದಂತಪ್ಪ ದಾಡೆಯುಂ: **ಪಂಪಭಾ,** ೮. ೪೨ ವ)

**ಅಂತರ** – ವ್ಯತ್ಯಾಸ, ಭೇದ (ಕರಿಗಂ ಪರಮಾಣುಗಂ ಽತರಮಾವುದೊ ನಿಮಗಮುಸುರವೈರಿಗಮೇ ನಂತರಮಂತೇ: **ಪಂಪಭಾ,** ೧೦. ೭); ನಡುವಣ ರಂಧ್ರ (ಗವಾಕ್ಷಜಾಳಾಂತರಂಗಳಿಂದಂ ದಿಶಾವಲೋಕನಂ ಗೆಯ್ಯುತ್ತಿರ್ಪನ್ನೆಗಂ: **ವಡ್ಡಾರಾ,** ಪು.೯೩. ಸಾ.೯); ಮೇರೆ, ಎಲ್ಲೆ (ಮೇರುವೆ ಮಂದಿರೆಯುಂ ಬೀರದ ಬಿಯದಂತರಕ್ಕೆ ಕಿಱಿದೆಂದು ಚಿಂತಿಪ ಪ್ರಿಯಗಳ್ಗಂ: **ಪಂಪಭಾ,** ೧. ೪೮); ಸಂಗೀತದ ಒಂದು ಪರಿಭಾಷೆ (ಸಾಮಾನಿಕ ಜನತತಿ ಚೇತೋಮಂ ಪ್ರಾಸಾದಿಕ ಅಂತರ ಆಕ್ಷೇಪಕ ವಿನಿಷ್ಕಾಮಪ್ರವೇಶ ಗಾನರಸಾಮೃತಂ ಎಸೆಗುಂ ಧ್ರುವಪ್ರಯೋಗಾನುಗತಂ: **ಅಜಿತಪು,** ೫. ೧೦)

**ಅಂತರಂಗ** – ಮನಸ್ಸು, ಹೃದಯ (ನುಡಿಸಿದನೆನ್ನಂ ನಲ್ಲಂ ಬಿಡಿಸಿದನೆನ್ನಂತರಂತರಂಗದನುತಾಪಮನೊಲ್ದುಡಿಸಿದಂ ಒಳ್ಪುಡೆಯಂ: **ಕವಿರಾಮಾ,** ೩. ೨೩೪)

**ಅಂತರಂಗತಪ** – [ಜೈನ] ಪ್ರಾಯಶ್ಚಿತ್ತ ವಿನಯ, ವೈಯಾವೃತ್ಯ, ಸ್ವಾಧ್ಯಾಯ, ವ್ಯುತ್ಸರ್ಗ, ಮತ್ತು ಧ್ಯಾನ ಎಂಬ ಆರು ಪ್ರಕಾರಗಳುಳ್ಳ ತಪಸ್ಸು (ಅಂತರಂಗತಪಮುಂ ತಮಗೆಯ್ದೆ ಮಹಾತ್ಮರೆಯ್ದಿದರ್ ಚಾರಣರ್ದ್ಧಿಯಂ: **ಕರ್ಣನೇಮಿ,** ೨. ೧೦)

**ಅಂತರಸ್ಥ** – ಒಳಗಿರುವ (ಕ್ಷೀರನೀರಪ್ಲವಾಂತರಸ್ಥಂ ಪೋಲ್ತಂ ಕನಕರುಚಿಯಿಂದಮಾ ಪಳಿಕಿನ ಕೊಡನೊಳಗಿರ್ದ ನಂದದೀವಿಗೆಯಿರವಂ: **ಶಾಂತಿಪು,** ೧೦. ೪೨)

**ಅಂತರಾಂತರ** – ನಡುನಡುವೆ (ಆ ಜಂಬೂದ್ವೀಪದ ನಟ್ಟ ನಡುವೆ .. .. ಅಂತರಾಂತರ ನಿರಂತರ ಕಾಂತ ಸೋಮ ಯಮ ವರುಣ ಕುಬೇರ ಪ್ರಮುಖ ಲೋಕಪಾಲಾಭಿಯೋಗ್ಯ ದಿಗ್ಗಜೇಂದ್ರದೇವ ವಿಹಾರ ಪ್ರಾಸಾದಾಭಿರಾಮಮೂ: **ಆದಿಪು,** ೧. ೪೯ ವ)

**ಅಂತರಾಯ** – ಅಡ್ಡಿ (ವೈಶಂಪಾಯನ ವೃತ್ತಾಂತಂ ಅಂತರಾಯ ಹೇತುವಾದುದಱಿಂ ನೀಂ ತಡೆಯದೆ ಬಂದು ಎಮ್ಮ ಮನೋರಥಕ್ಕೆ ಸಾಫಲ್ಯಮಂ ಸಂದಿಪುದು: **ಕಾದಂಸಂ,** ೬. ೩೭ ವ); [ಜೈನ] ಮೋಕ್ಷಸಂಪಾದನೆಗೆ ಬರುವ ಅಡ್ಡಿ (ಅಧ್ಯಯನಾಂತರಾಯಮಂ ಮಾಡಲೆಂದವರೋದುವ ಆವಾಸದೊಳ್ ಸಂಕ್ಲೇಷಮಾಗೆ: **ಆದಿಪು,** ೩. ೩೮ ವ)

**ಅಂತರಾಯಪಂಚಕ** – [ಜೈನ] ದಾನಾಂತರಾಯ, ಲಾಭಾಂತರಾಯ, ಭೋಗಾಂತರಾಯ, ಉಪಭೋಗಾಂತರಾಯ, ವೀರ್ಯಾಂತರಾಯ – ಎಂಬ ಐದು ವಿಘ್ನಗಳು (ಅಂತರಾಯಮುಂ ದಾನಲೋಭ ಭೋಗೋಪಭೋಗ ವೀರ್ಯಾಂತರಾಯ ಪ್ರಕಾರದಿಂ ಪಂಚವಿಧಮಕ್ಕುಂ: **ಶಾಂತಿಪು,** ೧೨. ೧೧ ವ)

**ಅಂತರಾಳ** – ಒಳಭಾಗ (ರಾಜಹಂಸ ಪಾರಾವತ ಮಿಥುನಂಗಳ್ ಉತ್ತುಂಗ ಪ್ರಾಸಾದಶಿಖರ ಮಣಿಗವಾಕ್ಷ ಅಂತರಾಳ ವಿವಿಧ ಗೃಹಾಂತರಗತಂಗಳಾದುವು: **ಪಂಪಭಾ** ಪರಿಷತ್ತು, ೪. ೪೯ ವ)

**ಅಂತರಿಕ್ಷ** – ಆಕಾಶ (ಸಮಸ್ತ ಸುರಗಣಂ ನೆರೆದು ಬಂದಂತರ್ಹಿತರೂಪದಿಂದಂತರಿಕ್ಷದೊಳ್: **ಜಗನ್ನಾವಿ,** ೨. ೯೫ ವ)

**ಅಂತರಿತ** – ಬೇರ್ಪಡಿಸಲ್ಪಟ್ಟ (ಲಕ್ಷಯೋಜನಾಂತರದೊಳ್ ಒಂದೊಂದೋರೊಂದು ರಜ್ಜುಪ್ರಮಾಣಾಂತರಿತಂಗಳಕ್ಕುಂ: **ಶಾಂತಿಪು,** ೭. ೮೪ ವ)

**ಅಂತರಿತೆ** – ದೂರಗೊಂಡವಳು (ಆತ್ಮವಲ್ಲಭ ಅಂತರಿತೆಯಂ ಎನ್ನಂ ಅಣ್ಣ ಬೆಸಗೊಳ್ವುದೆ ಪೇೞ್ವೆನೆ ತತ್ಪ್ರಪಂಚಮಂ: **ಕಾದಂಸಂ,** ೩. ೪೭)

**ಅಂತರಿಸು** – ಮರೆಯಾಗು (ಕಿಱಿದು ಪೊೞ್ತು ಶೋಕಾನುಬಂಧದೊಳ್ ಕೋಪಾನುಬಂಧಮಂ ಸಮರಾನುಬಂಧಮಂತರಿಸಿರ್ದು: **ಗದಾಯು,** ೪. ೧೩ ವ) ತಡಮಾಡು (ಕೆಲದ ನೆಲದರಸುಮಕ್ಕಳನಲಂಘ್ಯಬಲರಂ ತಗುಳ್ದು ಕಳೆದೊಂದೆಡೆಯೊಳ್ ನೆಲೆವೀಡು ಮಾಡಿ ನಿಮ್ಮಂ ಬಲಭದ್ರಂ ತರಿಸದನಿಸಂತರಿಸುವನೇ: **ಪಂಪರಾ,** ೬. ೧೭೩)

**ಅಂತರೀಪ** – ದ್ವೀಪ, ನಡುಗಡ್ಡೆ (ಕರಟಿ ವ್ಯೂಹಾಂತರೀಪಂ ತುರಗಬಲತರಂಗಂ .. .. ಸೈನ್ಯಾರ್ಣವಂ: **ಜಗನ್ನಾವಿ.** ೧೬. ೬೯)

**ಅಂತರೀಯ** – ಉಡುಪು, ಸೊಂಟದ ಕೆಳಗೆ ಉಡುವ ವಸ್ತ್ರ (ಗಂಗಾತರಂಗತರಳ ದುಕೂಲ ವಸನಾಂತರೋತ್ತರೀಯಂ: **ಶಾಂತಿಪು,** ೭. ೧೩ ವ)

**ಅಂತರೀಯೋತ್ತರೀಯ** – ಸೆರಗು ಮತ್ತು ಉತ್ತರೀಯ (ನಾಭಿವಿಲಂಬಮಾನಲಂಬಸ್ತನವಿಸ್ರಸ್ತ ಅಂತರೀಯೋತ್ತರೀಯ ವೃದ್ಧಧಾತ್ರೀನರ್ತನನಿರೀಕ್ಷಣಜನತಾಜನಿತಹಾಸನಿವಾಸಮುಂ: **ಆದಿಪು,** ೮. ೩೫ ವ)

**ಅಂತರ್ಗತ** – ಒಳಕ್ಕೆ ಹೋದ (ಇವಳ್ ಪರಪುರುಷಾಪೇಕ್ಷಣಿಯಕ್ಕುಂ ಎನಿತುಂ ಅಂತರ್ಗತದೊಳ್: **ಸುಕುಮಾಚ,** ೭. ೨೦)

**ಅಂತರ್ಗತ ಕೇವಲಿ** – ಒಳಸೇರಿರುವ ಅಂದರೆ ಲೀನವಾದ ಕೇವಲಜ್ಞಾನವುಳ್ಳವನು (ಧರ್ಮಧ್ಯಾನ ಶುಕ್ಲಧ್ಯಾನಂಗಳಂ ಜಾನಿಸಿ ಸಕಳ ಕರ್ಮಂಗಳಂ ಕಿಡಿಸಿ ಅಂತರ್ಗತ ಕೇವಲಿಯಾಗಿ ಮೋಕ್ಷಕ್ಕೆವೋದರ್: ವಡ್ಡಾರಾ, ಪು ೭೨, ಸಾ ೧೯)

**ಅಂತರ್ಗತಭೇದ** – ಒಳಗಣ ವ್ಯತ್ಯಾಸ (ಮುಂತಣ ಲಕ್ಷಣಲಕ್ಷ್ಯಯುಗಾಂತರ್ಗತಭೇದಮಕ್ಕುಮಾ ವ್ಯತಿರೇಕಂ: **ಕವಿರಾಮಾ,** ೩. ೩೮)

**ಅಂತರ್ಗತಸ್ವನ** – ಒಳಗೇ ಹುದುಗಿದ ಧ್ವನಿ (ಮಿನುಕು – ಅಂತರ್ಗತಸ್ವನೇ: **ಶಬ್ದಮದ, ಧಾ.** ೬೪)

**ಅಂತರ್ಜ್ಯೋತಿ** – ಒಳಗಿನ ಬೆಳಕು (ಪಳುಕುಗೊಡದೊಳಗೆ ಪೊಱಗುಜ್ವಳಿಪಂತರ್ಜ್ಯೋತಿಯಂತಿರೆ: **ರಾಜಶೇವಿ,** ೧೩. ೫೫)

**ಅಂತರ್ದೃಷ್ಟಿ** – ತನ್ನ ಒಳಗನ್ನು ಪರಿಶೀಲಿಸಿಕೊಳ್ಳುವ ದೃಷ್ಟಿ (ಪರಮಬ್ರಹ್ಮಶರೀರಪುಷ್ಟಿ ಜನತಾಂತರ್ದೃಷ್ಟಿ ಕೈವಲ್ಯಬೋಧರಮಾ ಮೌಕ್ತಿಕಹಾರಯಷ್ಟಿ: **ಪಂಪರಾ,** ೧. ೬)

**ಅಂತರ್ದ್ವೀಪ** – ದ್ವೀಪದ ಒಳಭಾಗ (ಉಭಯನದೀ ಸಂಗಮಮಪ್ಪ ಮಧ್ಯಪ್ರದೇಶಂ ಅಂತರ್ದ್ವೀಪಮೆಂಬುದಕ್ಕುಂ: **ಪಂಚತಂತ್ರ,** ೨೯೭ ವ)

**ಅಂತರ್ಧಿ** – ಅಡಗಿಕೊಳ್ಳುವುದು, ಅಂತರ್ಧಾನ (ಪೃಥ್ವೀಪಾಲ ಭೂಪಾಲಂ ಭವದೀಯ ದೇಶಾಸನ್ನ ಸ್ಥಿತಂಗಳಪ್ಪ ಪನ್ನೆರಡುಂ ಮಂಡಲಂಗಳೊಳಂತರ್ಧಿಯುಂ ಮಿತ್ರದ್ವಿತಯದೊಳ್ ಕೃತ್ರಿಮ ಮಿತ್ರನುಂ .. .. ಆಗಿರ್ಪಂ: **ಚಂದ್ರಪ್ರಭ,** ೯. ೧೧೭ ವ)

**ಅಂತರ್ಬಹೀರೂಪ** – ಒಳಗಿನ ಮತ್ತು ಹೊರಗಿನ ಆಕಾರ (ಆವುದಂತರ್ಬಹೀರೂಪಂ ವಿಶದದರ್ಶನಾವಗಮ್ಯಂ ಅದೆಲ್ಲಮಸತ್ಯಾವಭಾಸಿ: **ಆದಿಪು,** ೨. ೯ ವ)

**ಅಂತರ್ಭೇದ** – ಒಳಗಿನ ಭೇದ, ಭಿನ್ನಾಭಿಪ್ರಾಯ (ಕ್ಷೀರಗುಡಾದ್ಯಂತರ ರಸಾಂತರ ಜಾತ್ಯಂತರಮಪ್ಪಂತನಂತ ಭೇದಂ: **ಕವಿರಾಮಾ,** ೨. ೯೫); ಅಂತಃಕಲಹ (ಅಂತರ್ಭೇದದೊಳಂತು ಛಿದ್ರಿಸಿದರಾ ಗಾಂಗೇಯರಂ: **ಪಂಪಭಾ,** ೧೨. ೪೭)

**ಅಂತರ್ಭ್ರಮ** – ತೊಳಲಾಟ (ನಿತಂಬಸ್ಥಳದೊಳ್ ಅಂತರ್ಭ್ರಮಮೆಂಬುದು ಗಂಭೀರನಾಭಿಯೊಳ್ ಉನ್ಮಾರ್ಗವೃತ್ತಿಯೆಂಬುದು: **ವರ್ಧಮಾಪು,** ೮. ೨೪ ವ)

**ಅಂತರ್ಮಂಡಲಸಾಧನ** – ಒಳದೇಶ [ಅಂತರಂಗ]ವನ್ನು ಸ್ವಾಧೀನಪಡಿಸಿಕೊಳ್ಳುವ ಕಾರ್ಯ (ನಿನಗರಸ ಬಹಿರ್ಮಂಡಲಮನೆ ಸಮಱಲ್ಕಿನಿತು ಬರಿಸಮುಂ ಪೋದುವು ಕೇಳಿನಿಸಂತರ್ಮಂಡಲಸಾಧನಮುಂಟೆಂಸಱಿಪಿದುದುಮನಿನ್ನಱಿ ಪುವೆವೇ: **ಆದಿಪು,** ೧೪. ೧೫)

**ಅಂತರ್ಮಲ** – ಒಳಗಿನ ಕೊಳೆ (ಅಂತರ್ಮಲಮಂ ಕರ್ಚಿದೊಡಾನೀ ನೆಲಕಲ್ಲಂ ಪಾವನೀಯಚರಿತನೆನಾದೆಂ: **ಕವಿರಾಮಾ,** ೨. ೬೭)

**ಅಂತರ್ಮಲಿನ** – ಒಳಗೆ ಕಲ್ಮಷವುಳ್ಳ (ಸರಿದಧಿಪತಿಯಂ ದೋಷಾಕರನಂತರ್ಮಲಿನನಾಗಿಯುಂ ಪೆರ್ಚಿಸುಗುಂ: **ಕವಿರಾಮಾ,** ೩. ૩૫)

**ಅಂತರ್ಮುಖ** – ಒಳಮುಖವಾದ ಮನಸ್ಸು (ಬದ್ಧಪಲ್ಯಂಕಾಸನಂ ಪೂರ್ವಾಭಿಮುಖನುಮಂತರ್ಮುಖನುಮಾಗಿ; **ಮಲ್ಲಿನಾಪು,** ೧೩. ೧೪೦ ವ)

**ಅಂತರ್ಮುಖತೆ** – ಆತ್ಮಚಿಂತನೆ ಮಾಡುವುದು (ಅಂತರ್ಮುಖತೆಗಭಿಮುಖಂ ಮಾಟ್ಟುಪಾಧ್ಯಾಯರೆಮ್ಮಂ: **ಚಂದ್ರಪ್ರಭ,** ೧. ೪)

**ಅಂತರ್ಮುಹೂರ್ತ** – [ಜೈನ] ಒಂದು ಮುಹೂರ್ತಕ್ಕಿಂತ ಕಡಿಮೆಯಾದ ಕಾಲ (ಸಮಯಂ ಕುಂದೆ ಮುಹೂರ್ತದೊಳಮೋಘಮಂತರ್ಮುಹೂರ್ತಮಕ್ಕುಂ: **ಪಂಪರಾ,** ೧. ೫೧); ತುಂಬ ಕಿರಿದಾದ ಕಾಲಮಾನ (ನಾನಾವಿಧವಿನೋದಂಗಳಿನಂತರ್ವತ್ನಿಗೆ ನವಮಾಸಂಗಳಂತ ರ್ಮುಹೂರ್ತಂಗಳಾಗಿ ಪೋಗೆ: **ಸುಕುಮಾಚ,** ೧೦. ೨೫ ವ)

**ಅಂತರ್ಲೀನ** – ಒಳಗೆ ಲೀನವಾದ (ನೆರ್ಗು – ಅಂತರ್ಲೀನೇ, **ಶಬ್ದಮದ**–ಧಾ ೧೨೭)

**ಅಂತರ್ವಂಶಿಕ** – ರಾಣಿವಾಸದ ಮೇಲ್ವಿಚಾರಕ (ಮಂಡಳಿಕ ಮಹಾಸಾಮಂತ ಮಂತ್ರಿಪ್ರಧಾನ ಪುರೋಹಿತ ಅಂತರ್ವಂಶಿಕಾದಿ ಪರಿವಾರ ಪರಿವೃತಂ: **ಆದಿಪು,** ೨. ೨ ವ)

**ಅಂತರ್ವಣ** – ಕಾಡಿನ ಮಧ್ಯದಲ್ಲಿರುವ (ವಜ್ರವೇದಿಕೋತ್ತುಂಗ ತೋರಣದ್ವಾರದ ಅಂತರ್ವಣ ತುಂಗ ಕುಜಂಗಳ ನೆಟಿಲ್ಗಳೊಳ್: **ಆದಿಪು,** ೧೨. ೬೮ ವ)

**ಅಂತರ್ವನ** – ಅಂತರ್ವಣ (ಅಲ್ಲಿಯೆ ವಿರಾಜಿತಾಮರೇಶ್ವರ ಅಂತರ್ವನಂಗಳಪ್ಪ ನಂದನ ವನಂಗಳೊಳ್, **ಶಾಂತಿಪು,** ೨. ೯೧ ವ)

**ಅಂತರ್ವತ್ನಿ** – ಬಸುರಿಯಾದ ಹೆಂಗಸು (ತರುಣಿಯನಂತರ್ವತ್ನಿಯಂ ಅರಣ್ಯದೊಳ್ ಬಿಸುಡವೇಳಟ್ಟೊಡೀ ಬೆಸನಂ ಕಾಪುರುಷನೇನೇಗೊಂಡೆಂ ಕಿಂಕರಭಾವದಿಂ: **ಪಂಪರಾ,** ೧೫. ೭೬)

**ಅಂತರ್ವರ್ತಿ** – ಒಳಗೆ ನೆಲಸಿರುವ (ತನ್ನೊಡನೆಯ ಬಲಮೆಲ್ಲಮಂ ಪಡುವಣ ಸೋಪಾನಂಗಳಿಂದಂ ಬೆಂಕೆ ಭೋಂಕನಳುರದಂತು ಬೇಗಂ ಮ್ಲೇಚ್ಛಖಂಡಾಂತರ್ವರ್ತಿಯಾಗೆ ಮುನ್ನಂ ಕಳಿಪಿ: **ಆದಿಪು,** ೧೩. ೩೫ ವ)

**ಅಂತರ್ವಂಶಿಕ** – ರಾಣಿವಾಸದ ಮುಖ್ಯಸ್ಥ (ಆಸ್ಥಾನಮಂಡಪದೊಳ್ ಅತಿಪ್ರಚಂಡಮಂಡಳಿಕ ಮಹಾಸಾಮಂತ ಮಂತ್ರಿಪ್ರಧಾನಪುರೋಹಿತ ಅಂತರ್ವಂಶಿಕಾ ಪರಿವಾರಪರಿವೃತಂ: **ಆದಿಪು,** ೨. ೨ ವ)

**ಅಂತರ್ವಾಂಶಿಕ** – ವ್ಯಾಯಾಮಶಾಲೆಯ ಮುಖ್ಯಸ್ಥ (ಧರಾಧೀಶ್ವರಂ ಆಸ್ಥಾನಭೂಮಿಯೊಳ್ ಅನಂತಸಾಮಂತಮಂತ್ರಿಪುರೋಹಿತ ಅಂತರ್ವಾಂಶಿಕ ಶ್ರೀಕರಣ ಸೇನಾನಾಯಕ ಸಂಧಿವಿಗ್ರಹಿ ಪ್ರಮುಖ ನಿಖಿಲ ಪರಿವಾರಪರಿವೃತನಾಗಿ: **ಪಂಚತಂತ್ರ,** ೬೬ ವ)

**ಅಂತರ್ಹಿತರೂಪ** – ಅದೃಶ್ಯರೂಪ (ದೇವಕಿಯ ಸಮೀಪದೊಳ್ ಅಂದು ಏಕಾಂತಸಮಯದೊಳ್ ಸಮಸ್ತ ಸುರಗಣಂ ಬಂದು ನೆರೆದು ಅಂತರ್ಹಿತರೂಪದಿಂದ ಅಂತರಿಕ್ಷದೊಳ್: **ಜಗನ್ನಾವಿ,** ೨. ೯೫ ವ)

**ಅಂತವಾಸ** – ಊರಿನ ಹತ್ತಿರದ ಶಿಬಿರ (ಅಮರ್ದಿನ ಕಡಲೊಳಗಿರ್ಪಂತಿರ್ದನಂತವಾಸದೊಳಾಗಳ್: **ಆದಿಪು,** ೧೧. ೨೮)

**ಅಂತವುರ** – ಅಂತಃಪುರ (ನಿನ್ನಂತವುರದ ಕಾಂತೆಯರಂ ನೋಡದೆ ನುಡಿಯದದಿಂಬುಕೆಯ್ಯದೆ: **ಪಂಪರಾ,** ೧೪. ೧೯೩)

**ಅಂತಶ್ಶೂನ್ಯ** – ಮನಸ್ಸು ಶೂನ್ಯವಾಗಿರುವ (ಎನಿತೆನಿತಂ ಕಲಿಸಿದೊಡಂತನಿತನಿತುಂ ನೈಜಭಾವಮಕ್ಕುಂ ನೃಪನಂದನ ನೆಂತುಮಂತು ಕರ್ಕಶತನುವಂತಶ್ಶೂನ್ಯಮಕ್ಕುಮುನ್ನತವಂಶಂ: **ಗದಾಯು,** ೩. ೫೮)

**ಅಂತಸ್ತಮಃಪಟ** – ಒಳಗಿನ ಕತ್ತಲೆಯ ತೆರೆ, ಅಜ್ಞಾನದ ತೆರೆ (ತನ್ಮುನಿ ಧರ್ಮವೃದ್ಧಿ ನಿಮಗೆಂದಾ ನಾಲ್ವರಂತಸ್ತಮಃಪಟಮಂ ಪಿಂಗಿಸಿ ಭೋಗ ಭೂಮಿಜರ ಕಣ್ಗಾಗಲ್ ನಭೋಮಾರ್ಗ ಪರ್ಯಟನಮಂ ಶಿಕ್ಷಿಸಿ ಪೋದರ್: **ಶಾಂತಿಪು,** ೭. ೯)

**ಅಂತಱಿಂ** – ಆದ್ದರಿಂದ (ಕುಯೋನಿಯೊಳ್ ತಿರಿದು ಪೋದುವು ಕಾಲಮಂತಱಿಂ ಪುಟ್ಟದೆ ಪೊಂದದಿರ್ಪ ಬಗೆಯಂ ಬಗೆದಂದು ಕೃತಾರ್ಥನಾಗೆನೇ: **ಸುಕುಮಾಚ,** ೧೧. ೮೨; ಆ ಕಾರಣದಿಂದ (ಅಂತಱಿಂದವರನಾ ಪೊಟಲೊಳ್ ಕಾಣ್ಬಂತು ಚಿಂತಿಸುಪಾಯಮಂ: **ಶಬ್ದಮದ, ೧೦೦** ಪ್ರಯೋಗ ೩)

**ಅಂತಿಕ** – ಸನಿಹ, ಹತ್ತಿರ (ಕಂಸಂ ನಿಜಾಂತಿಕದೊಳಿರ್ದ ಮಂತ್ರಿಗಳ್ಗಾ ವೃತ್ತಾಂತಮಂ ಪೇೞ್ವುದುಂ: **ಜಗನ್ನಾವಿ,** ೨. ೪೪ ವ)

**ಅಂತಿಕೆ** – ಅಡಿಗೆಯ ಒಲೆ (ಅಂತಿಕೆಯೆನೆ ಅಧಿಶ್ರಯಣಿಯೆನಿಪ್ಪುದಕ್ಕುಂ: **ಅಭಿಧಾವ,** ೧. ೧೦. ೩೦)

**ಅಂತಿರೆ** – ಆ ರೀತಿಯಲ್ಲಿ (ಮೃಗಪಶುಶಕುನಗಣಂಗೊಳಗಣಿತ ನಿಜಜಾತಿ ಜನಿತ ಭಾಷೆಗಳೆಂದುಂ ನೆಗಟ್ದಂತಿರೆ: **ಕವಿರಾಮಾ,** ೧. ೭); ಹೋಲಿಸುವ ಮಾತು (ಉಪಮಾನಾರ್ಥದೊಳಿವು ವರ್ತಿಪುವಂತಿರೆಯಂತೆಯಂತೆವೊಲ್ವೋಲ್ಗಳ್: **ಶಬ್ದಮದ,** ೩೩೩)

**ಅಂತು** – ಹಾಗೆ (ಅಂತು ಕಂಡು ಮನಂಗೊಂಡೆತ್ತಿಕೊಂಡು ಮನೆಗೆ ತಂದು: **ಪಂಪಭಾ,** ೧. ೯೬ ವ); ಕೊನೆ, ತುದಿ, ಪರಮಾವಧಿ (ವನಾಭ್ಯಂತರಮಂ ತೊಟಲೆ ಮನಕ್ಕೆ ಅಂತು ಇಲ್ಲದ ಮುದಮನುಂಟುಮಾಡಿದುದು ಬನಂ: **ಆದಿಪು,** ೧೧. ೮೩)

**ಅಂತುವರಂ** – ಕೊನೆಯವರೆಗೆ (ಭುವನೇಶ್ವರ ನಿಜರೂಪಸ್ತವ ವಸ್ತುಸ್ತವ ಗುಣಸ್ತವಳನಂತುವರಂ ಬಣ್ಣಿಸಲಮರೇಂದ್ರ ವಾಸುಕಿ ಪ್ರಭುಗಳಾರ್ತರಿಲ್ಲೆನ್ನಳವೇ: **ಆದಿಪು,** ೧೦. ೫೨)

**ಅಂತುಟು** – ಅಷ್ಟು (ಅವನೀವಂತುಟಂ ಈಯದಂತುಟಂ ಅದಟನದಂ ಬಲ್ಲಂತು ಕಾಲ್ಗುತ್ತಿ ನೋಡು: **ಪಂಪಭಾ,** ೯. ೨೬); ಹಾಗೆ (ಭಟಸಂಘಕ್ಕದಟೆಂತುಟಂತುಟೆ ಮುಖಾಂಭೋಜಕ್ಕೆ ಮೂಗೆಂತುಟಂತುಟೆ: **ಧರ್ಮಾಮೃ,** ೧. ೬೮)

**ಅಂತುಟೊಂದು** — ಅನಿತೊಂದು, ಅಷ್ಟೊಂದು (ಅಂತುಟೊಂದು ನೋಟದ ತೆಱನಂತುಟೊಂದು ಪರಿರಂಭದ: **ಜಗನ್ನಾವಿ,** ೧೧. ೫೭)

**ಅಂತೆ** – ಹಾಗೆ, ಆ ರೀತಿಯಲ್ಲಿ (ಅಂತು ಕ್ಷೇಮಂಕರಂ ದುರಿತಾರಿ ಸೈನ್ಯಮಂ ಬೆಂಕೊಳಲ್ ಬಗೆವಂತೆ: **ಶಾಂತಿಪು,** ೮. ೧೧೭ ವ); ಸುಮ್ಮನೆ, ಬರಿದೆ (ಕುತ್ತಕ್ಕೆ ಮರ್ದನಿಕ್ಕದೆ ಕುತ್ತಂ ಪೋಗೆಂದೊಡಂತೆ ಪೋಕುಮೇ: **ಸಮಯಪ,** ೧೧. ೯೪); ಹೋಲಿಕೆಯನ್ನು ತೋರಿಸುವ ಪದ (ಬಸಂತದೊಳ್ ಕಕಳಿಕೆಗರ್ಚಿದ ಕೋಗಿಲೆಯಂತೆ: **ಆದಿಪು,** ೨. ೯)

**ಅಂತೆಗೆಯ್** – ಅದೇ ರೀತಿ ಮಾಡು (ಎಂಬುದುಂ ಅಂತೆಗಯ್ವೆನೆಂದು ಪೋಗಿ: **ಜಗನ್ನಾವಿ,** ೭. ೪ ವ)

**ಅಂತೆವೊಲ್** – ಅದರಂತೆ, ಹೋಲಿಕೆಯ ಪದ (ಕೃಶಾನುವ ನೆಟಿಲಳುರುವಂತೆವೊಲ್ ಕನ್ನಡಿಯಂ: **ಆದಿಪು,** ೭. ೩೨)

**ಅಂತೆವೋಲ್** – ಅಂತೆವೊಲ್ (ಪಗಲುತ್ಪಲಲಕ್ಷ್ಮಿಯಂತೆವೋಲ್ ಕೊರಗುತುಂ: **ಜಗನ್ನಾವಿ,** ೧೬. ೧೨೯)

**ಅಂತೇವಾಸಿ** – ಶಿಷ್ಯ (ಆತಂಗೆ ಬಲಿ ಶಿಖಿಗಳೆಂಬ ಇರ್ವರ್ ಅಂತೇವಾಸಿಗಳಾದರ್: **ಪಂಪರಾ,** ೧೦. ೯೫ ವ); ಚಂಡಾಲ

**ಅಂತ್ರ** – ಕರುಳು (ಕಡುಪಿಂ ಪೊಯ್ಯೆ ಶಿರೋಜ ಮೆಯ್ಯ ಹಯಣಂ ದುಪ್ಪೋಡಿಯಾಗಲ್ ಜವಂಗಿಡದೆ ಆ ವಾಘೆಯ ಗಾಢದಿಂ ಹಯಮಂ ಅಂತ್ರಾನೀಕದಿಂ ಸುತ್ತಿ: **ಶಾಂತೀಶ್ವಪು,** ೮. ೮೨)

**ಅಂದ** – ಚೆಲುವು (ಜವ್ವನದ ವಿಳಾಸದಂದದ ಬೆಡಂಗಿನ ಪೆಂಡಿರೆ ಪೆಂಡಿರ್: **ಪಂಪಭಾ,** ೪. ೮೫); ರೀತಿ (ಇದಱಂದಂ ಬಿಸವಂದಂಮಿಂತಿದಮರೇಂದ್ರಾವಾಸದೊಂದಂದಂ: **ಆದಿಪು,** ೪. ೫)

**ಅಂದಂಗೊಳಿಸು** – ಸುಂದರವಾಗಿ ಕಾಣುವಂತೆ ಮಾಡು (ನೀಲರತ್ನದ ಕಡೆಯಮಂ ಪದಾಗ್ರದೊಳಂದಂಗೊಳಿಸಿಯುಂ: **ರಾಜಶೇವಿ,** ೧೩. ೫೯ ವ)

**ಅಂದಂಬಡೆ** – ಸುಂದರವಾಗು (ಅಂದಂಬಡೆದ ಮೊಗ ಸುಟಿಗುರುಳ್ ಸೋರ್ಮುಡಿ: **ಗದಾಯು,** ೮. ೨೧)

**ಅಂದಂಬೆಱು** – ಅಂದಂಬಡೆ (ನಿನ್ನನಾ ಕೋಮಳೆಯಂದಂಬೆತ್ತಸುತ್ತುಂಗುರುಳಳವಡಿಸಲ್: **ಆದಿಪು,** ೪. ೨೧)

**ಅಂದಚಂದಂಗೆಡೆ** – ಬಣ್ಣದ ಮಾತಾಡು, ತಳುಕಿನ ಮಾತಾಡು (ಬೂತಿನವೋಲ್ ಅಂದಚಂದಂಗೆಡೆವರ್ ಧೂರ್ತರ್: **ಸಮಯಪ,** ೧೩. ೨೦)

**ಅಂದಣ** – ಕಣ್ಣಿನ ಪೊರೆ (ಅರೆದಜಮೂತ್ರದೊಳೊಂದಿರೆ ಸುರದಾರುಮನೆಚ್ಚದಂದು ಮೇಣೇಟುದಿನಂ ಸುರಭಿಯ ಜಳದೊಳ್ ಭಾವಿಸಿ ಹರೀತಕಿಯನೆಚ್ಚೊಡಂದಂದಣಂಗಳ್ ಕಿಡುಗುಂ: **ಲೋಕೋಪ,** ೯. ೭೫); ಪಲ್ಲಕ್ಕಿ, ಮೇನೆ (ನಡೆಮಾಡಂ ನಡೆಗೊಪ್ಪುವಶ್ವಪತಿ ಚೆಂಬೊನ್ನದಂದಣಂ ವಾಜಿ ಪೆರ್ವಿಡಿ ಪೇರಾನೆ ಸುಖಾಸನಂ ತುಱುಗೆ ಬಂದರ್ ಗಾಯಕರ್ ವಾದಕರ್: **ಮಲ್ಲಿನಾಪು,** ೫. ೬೦)

**ಅಂದಳ** – ಪಲ್ಲಕ್ಕಿ (ರಾಣಿಯವಾಸದಂದಳಕೆ ದಡ್ಡಿ ಮುಸುಂಕುಮದುಂಟು: **ಪಾರ್ಶ್ವನಾಪು,** ೮. ೯೩)

**ಅಂದಳಸತ್ತಿಗೆ** – ಪಲ್ಲಕ್ಕಿ ಮತ್ತು ಛತ್ರಿ (ಎರಡು ಪದಂಗಳಪಭ್ರಂಶಕ್ಕೆ: ಆಂದೋಳಛತ್ರಿಕೆ - ಅಂದಳಸತ್ತಿಗೆ: **ಶಬ್ದಮದ.** ೩೦೪ ಪ್ರ)

**ಅಂದು** – ಆ ಸಂದರ್ಭದಲ್ಲಿ (ಅಂತು ಮಾಡಲಾಱದಂದು ತಪಂಬಡುವೆ'ನೆಂದು ವಸುಭಾಗಭಟ್ಟಂ .. .. ನುಡಿವುದುಂ: **ಪಂಚತಂತ್ರ,** ೭೦ ವ); ಆ ದಿನ (ದಿವಾಕರನಂದಿಂ ದಕ್ಷಿಣೋತ್ತರಾಯಣನಾದಂ: **ಗಿರಿಜಾಕ,** ೧. ೫೩)

**ಅಂದುಗೆ** – ಅಂದಿಗೆ, ನೂಪುರ, ಕಾಲ್ಗಡಗ (ಕಟಿಲೆಂದು ಮಜ್ಜಿಗೆಯುಂ ಅಂದುಗೆಯುಂ ಅಕ್ಕುಂ: **ಶಬ್ದಮದ,** ೨೯ ಪ್ರ ೨); ಆನೆ ಕಾಲು ಕಟ್ಟುವ ಲೋಹದ ಸರಪಳಿ (ತೆಮಳ್ದು ಕುಪ್ಪಳಿಸುವ ಅಂದುಗೆಯ ತೊಡರ ಬನಲ್ಲಿಗೆ ಬಲ್ಲುಲಿಗಂ: **ಅನಂತಪು,** ೨. ೨೯ ವ)

**ಅಂಧಕದ್ವಿಷ** – ಅಂಧಕನ ಶತ್ರು, ಈಶ್ವರ (ಆತಂಗೆ ಅಮರಾಪಗೆ ಮೆಚ್ಚಿ ಪಾಯ್ವುದುಂ ಗಗನದಿಂ ಅಂಧಕದ್ವಿಷಜಟಾಟವಿಯೊಳ್ ಬಟೆಕಾದ ಶೈಳದೊಳ್ ಸೊಗಯಿಸೆ ಪಾಯ್ದುದು: **ಪಂಪಭಾ,** ೪. ೧೩)

**ಅಂಧಕಪಾಷಾಣ** – ಲೋಹಾಂಶವಿಲ್ಲದ ಕಲ್ಲು (ನೀರೊಳ್ ಬೆಣ್ಣೆಯಱಸುವಂತಂಧಕಪಾಷಾಣದೊಳ್ ಪೊನ್ನನಱಸುವಂತಕ್ಕುಂ: **ಚಾವುಂರಾಪು,** ೩೯೧)

**ಅಂಧತಮಸ** – ಗಾಢವಾದ ಕತ್ತಲೆ (ನಿರಂತರಮಾ ಭೂಪನೊಳಿರ್ದುದಂಧತಮಸಂ: **ಶಾಂತಿಪು,** ೧೦. ೧೫೩)

**ಅಂಧನೃಪ** – ಕುರುಡು ರಾಜ, ಧೃತರಾಷ್ಟ್ರ (ಮನದೊಳ್ ತ್ರೈಭುವನಮಂ ಆಳ್ದನಿತುವರಂ ತನಗೆ ಸಂತಸಂ ಪೆರ್ಚಿಯುಂ ಅಂದು ಇನಿಸು ಅಂಧನೃಪಂ ತನ್ನಯ ಜನದೊಳ್ ಕೆಲನಜೆಯೆ ಕೃತಕಶೋಕಂಗೆಯ್ದಂ: **ಪಂಪಭಾ,** ೩. ೮)

**ಅಂಧಯಷ್ಟಿ** – ಕುರುಡನ ಊರೆಗೋಲು (ಎಮಗೆ ಅಂಧಯಷ್ಟಿಯಾಗಿರ್ದ ಮಗನೆ ನೀನುಳ್ದೊಡೆ ಎಲ್ಲಂ ಒಳವು ಎಂದಿರೆ ನಿನ್ನುಮನಿರಿಸದೆ ಕುರುವಂಶಾನಿಮಿತ್ತರಿಪು ಪಾಶಪಾಣಿ ಸವಿನೋಡಿದನೇ: **ಗದಾಯು,** ೩. ೭೬)

**ಅಂಧರಾಣ್ಣಂದನ** – (ಅಂಧರಾಜ್+ನಂದನ) ಕುರುಡ ರಾಜನ ಮಗ, ದುರ್ಯೋಧನ (ಅಂದರಾಣ್ಣಂದನನಲ್ಲದುಂತು

ತಲೆಯುರ್ಚುಗುಮೇ ರಣರಂಗಭೂಮಿಯೊಳ್: **ಪಂಪಭಾ,** ೧೩. ೭೫)

**ಅಂಧಲಾವುಕನ್ಯಾಯ –** ಕುರುಡನಿಗೆ ಲಾವಿಗೆ ಸಿಕ್ಕಿದಂತಹ ಅನಿರೀಕ್ಷಿತ ಘಟನೆ (ಅಂಧಲಾವುಕನ್ಯಾಯದೆ ಭಾವಮೊಂದೆರಡು ಲೇಸೆನೆ ಪೇೞ್ದುಱಿದಿರ್ಪುದೊಪ್ಪಮೇ: **ಚಂದ್ರಪ್ರಪು,** ೧. ೪೮)

**ಅಂಪು –** ಅಣ್ಪು, ಅನುಲೇಪನ (ಮುಡಿಯುಸುವ ಅಣ್ಪನಿಕ್ಕುವ ಅಡಿಯೊಡುವ ಕನ್ನಡಿದೋರ್ಪ: **ಆಚವರ್ಧ,** ೫. ೪೪)

**ಅಂಬಕ –** ಕಣ್ಣು (ಅಂಬಕ ಅಂಬುಕಣಮನಿಕ್ಕಿದಳ್ ಮದನಮೋಹಾಸುರಮೆಂಬಂತೆವೋಲ್: **ಲೀಲಾವತಿ,** ೨. ೫೪)

**ಅಂಬರ –** ಆಕಾಶ (ಆ ರಥದೊಳ್ ಒಡಂಬಡೆ ಪೂಡಿದ ನಾಲ್ನೂಱು ಗೊಂಕುಱುಗಟ್ಟೆಯುಂ ಅಂಬರಸ್ಥಲಮನಡರ್ವ ಗೃಧ್ರಧ್ವಜಮುಂ ಅಂಜನಪುಂಜದಂತಾಗಿ: **ಪಂಪಭಾ,** ೧೨. ೭ ವ)

**ಅಂಬರಗಾಳಿ –** ಅರಳೆಯ ಚಕ್ರ (ಮೊಲಂಗಳ ಬಿಕ್ಕು ಪೂತಿವೆತ್ತ ಅಂಬರಗಾಳಿ ಜೇನ್ ಪುಣಿಸೆವಣ್: **ರಾಜಶೇವಿ,** ೫. ೧೧೪)

**ಅಂಬರಚರ –** ಖೇಚರ (ಆಂ ಅಂಬರಚರನಾದಂದು ನಾಲ್ವರೊಳಲ್ಲಿ ಮೂವರುಂ ಮಂತ್ರಿಗಳಂತೇನಾದರ್: **ಆದಿಪು,** ೫. ೭೪)

**ಅಂಬರಚಾರಣ –** [ಜೈನ] ಆಕಾಶಗಾಮಿಯಾದ ಮುನಿ (ನಾಲ್ವರ ಭವಾವಳಿಯಂ ಬೆಸೆಸಿಂ ಎಂಬುದುಂ ಅಂಬರಚಾರಣರ್ ಇಂತೆಂದರ್: **ಚಾವುಂಪು,** ಮ. ೧೮೦, ಸಾ. ೫)

**ಅಂಬರತರಂಗಿಣಿ –** ಗಂಗೆ (ಅಂಬರತರಂಗಿಣಿ ಪುಳಿನಮನೇಱುವ ಹಂಸನಂತೆ ಶಯ್ಯಾಧವಳ ಪ್ರಾಸಾದಮಂ ಏಱಿದನರಸಂ: **ಯಶೋಧಚ,** ೨. ೧೮)

**ಅಂಬರತಲ –** ಆಕಾಶ (ಬದ್ದವಣದ ಪಱೆಗಳ್ ಕಿವಿ ಸದ್ದಂಗಿಡೆ ಮೊಟಗೆ ದೇವದುಂದುಭಿರವಂ ಒಂದು ಉದ್ದಾನಿ ನೆಗೞೆ ಮುಗುಳ ಅಲರ ಒದ್ದೆ ಕರಂ ಸಿದ್ಧಮಾದುದು ಅಂಬರತಲದೊಳ್: **ಪಂಪಭಾ,** ೧೨. ೨೧೮)

**ಅಂಬರಧುನಿ –** ಆಕಾಶಗಂಗೆ (ಖರರುಚಿಬಿಂಬಂ ಅಂಬರಧುನೀ ತರುಣಾಂಬುಜದಂತೆ ತೋಱೆ: **ರಾಜಶೇವಿ,** ೬. ೪೩)

**ಅಂಬರಪಟಳ –** ಆಕಾಶದ ಮೇಲ್ಭಾವಣಿ (ಘಟೆಯ ದೞದ ಉಲಿವು ಲಯಘನಘಟೆಗಳ ಮೊೞಗೆನಿಸೆ ಪೊಟ್ಟಗೆ ಒಡೆದತ್ತು ರಟತ್ ಪಟು ಪಟಹ ಶಂಖ ಭೇರಿಯ ಚಟುಳಿತದಿಂದ ಅತಳಪಟಂ ಅಂಬರಪಟಳಂ: **ಪಂಪಭಾ,** ೧೦. ೬೭)

**ಅಂಬರಮಣಿ –** ಸೂರ್ಯ (ಅಂಬರಮಣಿ ಮುೞುಗಿದಂ .. .. ಅಂಬರಹರಿ ಪೊದೆಯಲ್ ಪೀತಾಂಬರಮಂ ತೆಗೆದನೆನಿಸೆ ಸಂಧ್ಯಾರಾಗಂ; **ಲೀಲಾವತಿ,** ೧೦. ೨೦)

**ಅಂಬರವೇಶ್ಮ –** ಉಪ್ಪರಿಗೆ (ಒಪ್ಪುವುವಲ್ಲಿ ಶಸ್ತ್ರಕುಟಿ ಕೋಶಾಗಾರಂ ಏಕಾಂತಮಂದಿರಂ ಅಭ್ಯಾಸನಿಕೇತನಂ ಪಚನಧಾಮಂ ಸ್ನಾನಸದ್ಮಂ ಮನೋಹರ ಶಯ್ಯಾವಸಥಂ ವಿಭೂಷಣಗೃಹಂ ದೇವಾರ್ಚನಾವಾಸಂ ಅಂಬರವೇಶ್ಮಂ ವರ ಭೋಜನೌಕಂ ಅವರೋಧಸ್ತ್ರೀನಿವಾಸಾಸ್ಪದಂ: **ಶಾಂತೀಶ್ವಪು,** ೧. ೧೩೭)

**ಅಂಬರಶಿರೋರುಹ –** ವ್ಯೋಮಕೇಶ, ಶಿವ (ಅಂಬರಶಿರೋರುಹ ದಿಗಂಬರ ರಮಾವರ ಕಳಂಬ ರಿವಿಜಾತಹರ: **ರಾಜಶೇವಿ,** ೧೩. ೫೪)

**ಅಬರಾಂಬರ –** ದಿಗಂಬರ ಯತಿ (ಒರೊರ್ವರೆ ವಿಹರಿಪುದಂ ಬಿಸುಟು ಅಂಬರಾಂಬರರ್ ತಮ್ಮ ಸಮುದಯಂಬೆರಸಿರ್ಪರ್: **ಆದಿಪು,** ೧೫. ೩೨)

**ಅಂಬರೀಷ –** ಕಾವಲಿ (ಕಾವಲಿಯದು ಜಿರೀಷಾಭಿಧಾನಂ ಭ್ರಷ್ಟಥಂಬರೀಷಂ: **ಅಭಿಧಾವ,** ೧. ೧೦. ೩೦)

**ಅಂಬಲಿ –** ಹಿಟ್ಟಿನಿಂದ ಮಾಡಿದ ಗಂಜಿ (ಜೊಲ್ಲೆಯರ್ ಗಲ್ಲೆಯಂಬಲಿಯಂತೆ ನೆಲನಂ ಪತ್ತೆ: **ಧರ್ಮಾಮೃ,** ೨.೪೧ ವ)

**ಅಂಬಶ್ವರಪತಾಕ –** ಕಾಮ (ಅಂಬಶ್ವರಪತಾಕಪಿತ ನುತ ನಿಶ್ಚಳ ಸೋಮೇಶನೊಲ್ದು ಪಾಲಿಕೆ ನಮ್ಮಂ: **ತ್ರಿಷಷ್ಟಿಪು,** ೫೪. ೧)

**ಅಂಬಳಿಕಿ –** ಅಂಬೆಗಾಲಿಡು (ನಾಲ್ಕುಂ ಕಾಲಿಂ ಬಲವಂದಪಳೆಂಬಂತಂಬಿಕೆಯಂಬಳಿಕಿ ಆಡುವಳ್: **ಗಿರಿಜಾಕ,** ೩. ೭೨)

**ಅಂಬಳಿಕ್ಕು –** ಅಂಬೆಗಾಲಿಡು (ಮತ್ತೆ ಕೆಲವು ದಿವಸದಿಂ ಅಂಬಳಿಕ್ಕ ಆಡುವಂದು ಕೂಸಂ ಮಿಸಿಸಿ .. .. ಪೊರಸಿನ ಮೇಲೆ ಪಟ್ಟಿರಿಸಿಆಗಳ್: **ಹರಿವಂಶ,** ೬. ೯ ವ)

**ಅಂಬಾಚರಿ –** [ಜೈನ] ಹಿಂದಿನ ಜನ್ಮದಲ್ಲಿ ಒಬ್ಬ ವ್ಯಕ್ತಿಯ ತಾಯಾಗಿದ್ದು, ಈಗ ಬೇರೊಂದು ಪ್ರಾಣಿಯಾಗಿ ಹುಟ್ಟಿರುವ ಹೆಣ್ಣುಜೀವಿ (ಅರಸನುಮಾಗಳೆ ನೆತ್ತದ ಭರದಿಂ ಕೊಳ್ಳೆನುತುಮಿಕ್ಕೆ ನವಿಲಂ ಕೊಳ್ಳೆಂದರೆಗೆತ್ತು ಪಿಡಿದುದಂಬಾಚರಿ ಕುಕ್ಕುರಿ ನೊಂದು ಬೀೞ್ವ ನಂದನಚರನಂ: **ಯಶೋದಚ,** ೩. ೪೨)

**ಅಂಬಿಕಾಜನ –** ತಾಯಂದಿರು (ಪರನಾರೀಜನಂ ಅಂಬಿಕಾಜನಕೆ .. .. ಸಾಮ್ಯಸ್ಥಾನಂ ಎಂದಿಂತು ಕೊಕ್ಕರಿಪಂ ಸನ್ನುತ ಮುಕ್ತಿಲಕ್ಷ್ಮಿಯೊಲವಂ ಪೆತ್ತಲ್ಲದೇಂ ಮಾಣ್ಬನೇ: **ಸಮಯಪ,** ೫. ೬೯)

**ಅಂಬಿಕೆ –** ತಾಯಿ (ಅಂಬಿಕೆ ಸರಸ್ವತಿ ಮತ್ ಮುಖಪದ್ಮರಂಗದ ಏಟ್ಗೆಯಂ ಎಡೆಗೊಂಡು ಕೊಂಡುಕೊನೆದು ಈಗೆ ಅರಿಗಂಗೆ ವಿಶುದ್ಧಬುದ್ಧಿಯಂ: **ಪಂಪಭಾ,** ೧. ೫); ಪಾರ್ವತಿ (ಕಪೋಳದೊಳ್ ಕೋಪಂ ಪುರ್ಬಿನೊಳ್ ಅಜಿವು ಬುದ್ಧಿಯೊಳ್ ಭಾವನೆ ಚಿತ್ತದೊಳ್ ಅಮರ್ದುವು ಅಂಬಿಕೆಗೆ ಯೌವನದೊಳ್: **ಗಿರಿಜಾಕ,** ೪. ೧೪)

**ಅಂಬಿಕ್ಕು –** ಬಾಣಬಿಡು (ಅಂಬುಜನಾಭಂ ನರಂಗೆ ಪೇೞ್ವಂದು ಎನಸುಂ ಇಂಬಿನೆ ಕೇಳ್ವಾಗಳ್ ತಾನಂಬಿಕ್ಕಲ್ ಮಱೆದನಕ್ಕುಮೇ: **ಸಮಯಪ,** ೧೦. ೧೬೨)

**ಅಂಬಿಗ –** ದೋಣಿ ನಡೆಸುವವನು (ನಡುಗಡಲೊಳ್ ಪಱುಗೋಲಂ ನಡೆಯಿಸುವಂಬಿಗನಂತೆ: **ಧರ್ಮಾಮೃ,** ೬.. ೧೪೭ ವ); ಬೆಸ್ತ (ಪಿಂದೆ ಕಡಂಗಿ ತೇರನೆಸೆಗೆಂಬನನಂಬಿಗಂ ಆಜಿರಂಗದೊಳ್ ಮುಂದೆ ಸಮಾನನಾಗಿ ಬೆಸದಿರ್ಪವನುಂ ತುಱುಕಾಱನಾಗೆ: **ಪಂಪಭಾ,** ೧೨. ೯೪)

**ಅಂಬಿಯ –** ಅಂಬಿಗ (ಕಳಿಂದನಂದನೆಯ ತಟದೊಳ್ ಅಂಬಿಯದ ಪೊರ್ದುಗೆಯಿಂ ಪೊೞೆಯೊಳಿರ್ದಳ್: **ಕರ್ಣನೇಮಿ,** ೧೪. ೯ ವ)

**ಅಂಬಿರಿವಿಟ್ಟು ಪಾಯ್ –** ಪ್ರವಾಹವಾಗಿ ಹರಿ (ಸುರಿವ ಬಿಸುನೆತ್ತರ ಸರಿಯೊಳಮಂಬಿನ ಸರಿಯೊಳಂಬಿರಿವಿಟ್ಟು ಪಾಯ್ವ ಮದಗಜಂಗಳ ಮದಜಲದೊಳಂ: **ಪಂಪಭಾ,** ೧೦. ೭೦ ವ)

**ಅಂಬಿರಿವಿಟ್ಟೊಗೆ** – ಧಾರೆಯಾಗಿ ಚಿಮ್ಮು (ಅಂಬರಕೆ ನೆಗೆವ ತಲೆಯಿಂ ಅಂಬಿರಿವಿಟ್ಟೊಗೆವ ರಕ್ತಧಾರೆಯೆ: **ಕರ್ಣನೇಮಿ,** ೧೨. ೧೫೭)

**ಅಂಬಿರಿವಿಡು** – ಧಾರೆಯಾಗಿ ಸುರಿ (ಅಂಬಿರಿವಿಡೆ ಭೋಂಕನೆ ನಯನಾಂಬುಗಳ್: **ಪಂಪರಾ,** ೬. ೪೯)

**ಅಂಬು** – ನೀರು (ಸಲಿಲಂ ಜೀವನಂ ಅಂಬು: **ಅಭಿಧಾವ,** ೧. ೪. ೧); ಬಾಣ (ತಪಕೆ ಬಿಲ್ಲುಮಂಬುಂ ದೊರೆಯೇ: **ಪಂಪಭಾ,** ೮. ೩); ಒಣಗು (ಅಂಬು – ಶೋಷಣೇ ಶರೇ ಚ: **ಶಬ್ದಮದ,** ಧಾ ೪೭೩)

**ಅಂಬುಕಣ** – ನೀರ ಹನಿ (ಪನಿಪುಲ್ಲಂಬುಕಣಂಗಳಂ ಕೆದಱುತುಂ ಕೋಕಂಗಳೊಳ್ ರಾಗಮಂ ನನೆವೊಯ್ದು ಉಣ್ಮಿಸುತುಂ ಪತತ್ರಿಗಳೊಳಗಿರ್ಪಾ ತೂಂಕಡಂ ನೂಂಕುತುಂ ತಣ್ಣನೆ ತೀಡಿತ್ತೆನಸುಂ ಪ್ರಭಾತಮಯ ಪ್ರೋದ್ಭೂತ ಶೀತಾನಿಳಂ: **ಶಾಂತೀಶ್ವಪು,** ೧೧. ೯೪)

**ಅಂಬುಕೊಳ್** – ಬಾಣ ಚುಚ್ಚಿಕೊ (ಕೃಷ್ಣಂ ಕಡೆಯೊಳ್ ಪದತಳಮಂ ಅಂಬುಕೊಳೆ ಪೊಂದಿದನೆಂಬರ್: **ಸಮಯಪ,** ೮. ೧೫೫)

**ಅಂಬುಖಾತಿಕೆ** – ನೀರು ತುಂಬಿದ ಕಂದಕ (ವಿಳಸನವಿದಗ್ಧಖೇಚರನಿಳಿಂಪದಂಪತಿಂ ಅಂಬುಖಾತಿಕೆ ರಯ್ಯಂ: **ಆದಿಪು,** ೧೦.೨೬)

**ಅಂಬುಗಂಡಿ** – ಶತ್ರುಗಳಿಗೆ ಕಾಣದಂತೆ ಕೋಟೆಯ ಮೇಲಿಂದ ಬಾಣ ಬಿಡುವ ಕಂಡಿ (ಇಡಿಸುವ ಡೆಂಕಣಕ್ಕೆ ನೆಲವಾಟಿಗೆ ಕೊತ್ತಳದಂಬುಗಂಡಿಯಿಂದುಡುಗದೆ ಪಾಯ್ವ ಕೂರ್ಗಣೆಗೆ: **ಚಂದ್ರಪ್ರಪು,** ೫. ೧೦೬)

**ಅಂಬುಗಾಣಿಸು** – ಬಾಣಪ್ರಯೋಗಿಸು (ಬಲದೇವನನುಮತದೊಳ್ ಪೆಱಗಂ ತಗುಳ್ವ ಯಾದವಬಲವಂ ಉಂಟಪ್ಪೊಡೆ ಆದನಂಬುಗಾಣಿಸಲ್ ನೀನೆ ಸಾಲ್ವಯ್: **ಪಂಪಭಾ,** ೫. ೨೦ ವ)

**ಅಂಬುಚರ** – ಮೀನು (ಅಂಬುಜಚರಮೆಲ್ಲಂ ಬೇಗೆಗೊಂಡತ್ತು ಬಾಂಬೊಳೆ ಬತ್ತಿತ್ತು .. .. ಆ ಗ್ರೀಷ್ಮದೊಳ್: **ರಾಜಶೇವಿ,** ೫. ೩೬)

**ಅಂಬುಜ** – ತಾವರೆ (ತದೀಯ ಅಂಬುಜಪದಮಂ ತನ್ನ ಶಿರೋಂಬುಜದಿಂದ ಅರ್ಚಿಸಲ್ ಪರಿಚ್ಛೇದಿಸಿದಂ: **ಯಶೋಧಚ,** ೪. ೫೩)

**ಅಂಬುಜನಿಳಯೆ** – ಲಕ್ಷ್ಮಿ (ನಿಂದ ಶಿಲೆ ತಪನತಪ್ತಮಿದೆಂದು ಅಂಬುಜನಿಳಯೆ ಪದ್ಮವಿಷ್ಟರಮಂ .. .. ಪಡೆದು ಪದೆಪಂ ಮೆರೆದಳ್: **ಆದಿಪು,** ೯. ೮೫)

**ಅಂಬುಜಮಿತ್ರಜಾ[ಜೆ]** – ಯಮುನಾ ನದಿ (ಅಂಬುಜಮಿತ್ರಜಾಂಬು ಪರಿಮಿಶ್ರಿತಶೋಣನದೀಪ್ರವಾಹಂ ಎಂದೆಂಬ ಬೆಡಂಗಂ ಅಂಬರಚರಾಕ್ಷಿಗೆ ಬೀಜಿದುದು ಆ ರಣೋರ್ವಿಯೊಳ್: **ರಾಜಶೇವಿ,** ೬.. ೭೪)

**ಅಂಬುಜವಿಷ್ಟರ** – ಬ್ರಹ್ಮ (ಆಕೆಯ ರೂಪಿನೇೞ್ಗೆಗಂಡು ಅಜೆದನುರ್ಕಿನಿಂ ಹರಿಹರಾಂಬುಜವಿಷ್ಟರರ್ಗೆ ಎಂಬಿನಂ: **ಕರ್ಣನೇಮಿ,** ೯. ೭೦)

**ಅಂಬುಜಸೂನು** – ಬ್ರಹ್ಮ (ಕನಕನಂದಿಮುನೀಂದ್ರನ ಹೃದ್ಯಮಪ್ಪ ವಿದ್ಯಾವಳಿಯಂ ಪವಣ್ಗೊಳಿಪೊಡೆ ಅಂಬುಜಸೂನುಗೆ ಅಳುಂಬಮಾವಗಂ: **ಶಾಂತೀಶ್ವಪು,** ೧. ೨೨)

**ಅಂಬುಜಾಸನ** – ಬ್ರಹ್ಮ (ಇನಕರಪಾತಭೀತ ಪಥಿಕಶ್ರಮ ಸಂಹರಣಾರ್ಥಂ ಅಂಬುಜಾಸನಂ ಒಸೆದಿಟ್ಟ ತಣ್ಣೆಟಿಲ ಸೋಲದ ಸಾಲೆಯೆನಲ್: **ಶಾಂತೀಶ್ವಪು,** ೧೩. ೧೩೦)

**ಅಂಬುದ** – ಮೋಡ (ಅಂತು ನೀಲ ಅಂಬುದ ಶ್ಯಾಮನುಂ ಕನಕಪಿಂಗಳಜಟಾಬಂಧಕಳಾಪನುಂ.. .. ಆಗಿ: ಪ<ಂಪಭಾ, ೧. ೬೯ ವ)

**ಅಂಬುದಧ್ವನಿ** – ಮೋಡದ ಸದ್ದು, ಗುಡುಗು (ಅಂಬುಜಧ್ವನಿಗೆ ಪೆರ್ಚಿದ ಮತ್ತ ಮಯೂರದಂತೆ: **ಶಾಂತಿಪು,** ೫. ೩೬)

**ಅಂಬುದನಿನದ** – ಅಂಬುದಧ್ವನಿ (ಅಂಬುದನಿಂ ಅದಾಡಂಬರಮಂಬರದೊಳಳುಂಬಮಾಗಳೆಸೆದಪುದೆನೆ: **ಸುಕುಮಾಚ,** ೧೧. ೩೯); ಗುಡುಗಿನಂತೆ ಗಂಭೀರಧ್ವನಿಯುಳ್ಳ ವ್ಯಕ್ತಿ (ಅಂಬುದನಿನದತಂದ್ರಂ ಇಂದ್ರನಾ ಜಿನಚಂದ್ರಂ: **ಶಾಂತಿಪು,** ೫. ೧೨)

**ಅಂಬುದಮಾರ್ಗ** – ಮೋಡಗಳ ದಾರಿ, ಆಕಾಶ (ದಿವಿಜಗಜಮಂಬುದಮಾರ್ಗಕ್ಕೊಗೆದುದೊಗೆವ ರಜತಾದ್ರಿಯವೋಲ್: **ಶಾಂತಿಪು,** ೧೦. ೨೫)

**ಅಂಬುದಸಮಯ** – ಅಂಬುದರ್ತು (ಜನ್ಮಾಭಿಷೇಕ ಮಂಗಳ ಸಮಯಂ ಅಂಬುದಸಮಯಂ ಸಮನಿಸೆ ಮಾಡಿದುದು ಆಖಂಡಲ ಶಿಖಂಡಿ ತಾಂಡವವಿಧಿಯಂ: **ಅಜಿತಪು,** ೫. ೭)

**ಅಂಬುದಾಗಮ** – ಮೋಡಗಳು ಆಗಮಿಸುವ ಕಾಲ, ಮಳೆಗಾಲ (ಅಂಬುದಾಗಮದ ಕೋಗಿಲೆಯಂತಿರೆ ಮೂಗುವಟ್ಟು: **ಆದಿಪು,** ೩. ೨೬)

**ಅಂಬುದಾಭ** – ಮೋಡಕ್ಕೆ ಸಮನಾದ (ದಾರುದಾರುಣನಂ ದಾನವಾರಿವಾರಿತಲೋಕನಂ ಬಾರ ಬಾರಣಮಂ ನೋಡಾಸಾರಸಾರಾಂಬುದಾಭಮಂ: **ಕವಿರಾಮಾ,** ೨. ೧೩೦)

**ಅಂಬುದುಡು** – [ಅಂಬು+ತುಡು] ಬಾಣ ಹೂಡು (ನದೀಪುತ್ರಂಗೆ ಪೇೞಾರ್ ಚಲಂಬಟ್ಟುಂ ಮಾರ್ಮಲೆದು ಅಂಬುದೊಟ್ಟುಮುೞಿವರ್ ಸಂಗ್ರಾಮರಂಗಾಗ್ರದೊಳ್: **ಪಂಪಭಾ,** ೧೦. ೧೧೭)

**ಅಂಬುಧರ** – ಮೋಡ (ಘನಂ ಅಂಬುಧರಂ ಸೌದಾಮಿನಿ : **ಅಭಿಧಾವ,** ೧. ೧. ೫೮)

**ಅಂಬುಧರಕಾಲ** – ಮಳೆಗಾಲ (ಇಂದೆನಿತಾನುಂ ಅಂಬುಧರಕಾಲದ ಕಾಳದಿರುಳ್ಗಳೆಲ್ಲವೇಂ ನಿಂದುವೋ ಗಟ್ಟಿಗೊಂಡು ಎನೆ .. .. ಭಯಂಕರಮಾದುದು .. .. ಅಂದಿನ ಕಾರಿರುಳ್: **ಜಗನ್ನಾವಿ,** ೩. ೭)

**ಅಂಬುನಿಧಿ** – ಸಮುದ್ರ (ಎನಿತಾನುಂ ಅಂಬುನಿಧಿಗಳನನೇಕನಾಂಕಗಳಲ್ಲಿ ಕುಡಿದುಂ ಪೋಯ್ತಿಲ್ಲೆನಗೆ ನರಭೋಗಂ: **ಆದಿಪು,** ೯. ೫೭)

**ಅಂಬುನೆಲೆ** – ಬಾಣ ಹೂಡುವಷ್ಟು ದೂರದ ಜಾಗ (ಅಂಬುನೆಲೆಯಲ್ಲಿ ನಿಂದಿರ್ದಂಬುಜನಾಭಂ ನರಂಗೆ ಪೇೞ್ವಂದು: **ಸಮಯಪ,** ೧೦. ೧೬೨)

**ಅಂಬುಪಾಯಿ** – ನೀರನ್ನು ಕುಡಿಯುವ (ವಿವಿಧಮೂಲ ಪಲಾಶಿಗಳುಂ ಸರೋವರ ನದೀನಿರ್ಝರ ಅಂಬುಪಾಯಿಗಳುಮಾಗಿ: **ಆದಿಪು,** ೯. ೯೩ ವ)

**ಅಂಬುರುಟ್ಪೀಠ** – ತಾವರೆಯ ಪೀಠ (ಅಮರ್ಚುತ್ತಂಬುರುಟ್ಪೀಠಮಂ .. .. ಶರದಂಭೋಜಿನಿ ಮಾಡಿದಳ್ ಸತ್ಕಾರಮಂ: **ರಾಜಶೇವಿ,** ೫. ೧೦)

**ಅಂಬುರುಹ** – ನೀರಿನಲ್ಲಿ ಹುಟ್ಟಿದ್ದು, ತಾವರೆ (ವದನಮಿದಲ್ತು ಅಂಬುರುಹಂ: **ಕವಿರಾಮಾ,** ೩. ೨೪)

**ಅಂಬುರುಹಮಿತ್ರ** – ಅಂಬುರುಹಸಖ (ಅಂಬುರುಹಮಿತ್ರ ಬಿಂಬಾಡಂಬರಮಂ ಮಿಕ್ಕು ಚಕ್ರಮಿರೆ ಕೆಲದೊಳ್ ಪೀತಾಂಬರಂ ಈಕ್ಷಿಸಿದಂ ನೀಲಾಂಬರನ ಮುಖಾರವಿಂದಮಂ ಮುದದಿಂದಂ: **ಶಾಂತೀಶ್ವಪು,** ೮. ೧೧೫)

**ಅಂಬುರುಹೇಕ್ಷಣೆ** – ಕಮಲನಯನೆ (ಸ್ಮರಶರಸಂಧಾನಕ್ಕೆ ಅಂಬುರುಹೇಕ್ಷಣೆ ಲಕ್ಷ್ಯಮಾಗೆ: **ಶಾಂತಿಪು,** ೮. ೮೨)

**ಅಂಬುಳು** – ಒಂದು ರೀತಿಯ ಹುಣ್ಣು (ಅಂಬುಳುವಾದೊಡೆ ಷಣ್ಮುಖನೆಂಬರ್ ಸೀವಳಿಗೆಯಾಗೆ ಮಾರಿಯ ಹುಣ್ಣೆಂಬರ್: **ಸಮಯಪ,** ೯. ೨೫)

**ಅಂಬುವೀಡು** – ಬಾಣಪ್ರಯೋಗ; ಬಾಣ ಹೋಗುವಷ್ಟು ದೂರ (ಶಶಿಪ್ರಭಾಪ್ರಿಯನ ರಥಕ್ಕಾಗಿ ಬೇಗನೆ ಬಂದಂಬುವೀಡಿನೊಳ್ ನಿಂದು ವಿದ್ಯಾಧರರ್ ಯುದ್ಧಸನ್ನದ್ಧರಾಗಿ: **ಚಂದ್ರಪ್ರಪು,** ೬. ೩೮ ವ)

**ಅಂಬೆಗಲಿಸು** – ಅಂಬೆಗಾಲಿಡು (ಆನೆಯ ಮಱಿಯಯಂತೆವೊಲಂಬೆಗಲಿಸಿ ನಡೆದಂ ಕೃಷ್ಣಂ: **ನೇಮಿನಾಪು,** ೭. ೭೫)

**ಅಂಬೆಗಾಲಿಕ್ಕು** – ಅಂಬೆಗಲಿಸು (ಅಂಬೆಗಾಲಿಕ್ಕುವ ಪದದೊಳ್ ಸಿಂಹಶಿಶುವೊಲೆಸೆದಂ ಕೃಷ್ಣಂ: **ಜಗನ್ನಾವಿ,** ೩. ೩೫)

**ಅಂಬೇಱು** – ಬಾಣದ ಹೊಡೆತ (ಒಡವಂದಂಕದ ಕೌರವರ್ ದ್ರುಪದನಂಬೇಱಿಂಗೆ ಮೆಯ್ಯೊಡ್ಡದೊಡ್ಡೊಡೆದೋಡುತ್ತಿರೆ: **ಪಂಪಭಾ,** ೨. ೬೨); ಬಿಲ್ಗಾಳಗ (ಅಂಬೇಱಿಂಗಾಂತರಂ ತತ್ತಱದಱಿದು ಭುಜಾಗರ್ವಮಂ ಬಿಟ್ಟು ಬಾಯ್ವಿಟ್ಟು: **ಪಂಪರಾ,** ೪. ೫೦)

**ಅಂಭಃಕಣ** – ನೀರಿನ ಹನಿ (ಕಳಧೌತಕಳಶಮುಖ ನಿರ್ಗಳದಮೃತಾಂಭಃ ಕಣೌಘಂ ಆಯತವಕ್ಷಸ್ಥಳದಲ್ಲಿ ಕಂಠಿಕಾಶ್ರೀವಿಳಾಸದಿಂದೆಸೆದುದು ಅಜಿತತೀರ್ಥೇಶ್ವರನಾ: **ಅಜಿತಪು,** ೪. ೫೬)

**ಅಂಭಃಕುಂಭೀನ** – ನೀರಾನೆ (ಅಂಭಃಕುಂಭೀನ ಕುಂಭೀನಸ ಮಕರ .. .. ಚಳನ್ಮೀನಫೇನಪ್ರತಾನಂ ಶುಂಭದ್ಗಂಭೀರಮಂ ರಂಜಿಸಿದುದು ದತ್ತೇಂದ್ರಭದ್ರಂ ಸಮುದ್ರಂ: **ರಾಜಶೇವಿ,** ೧. ೯೦)

**ಅಂಭಃಖಾತಿಕೆ** – ನೀರಿನ ಕಂದಕ (ಧೂಳೀಶಾಳಮಾನಸ್ತಂಭ ಅಂಭಃಖಾತಿಕಾವಲ್ಲೀಮನೋಪವನಪತಾಕಾವನಿಕಲ್ಪಭೂರುಹ: **ಆದಿಪು,** ೧೦. ೫೨ ವ)

**ಅಂಭಃಪೂರ** – ನೀರಿನ ಪ್ರವಾಹ (ಕೈಯ ಕರವಾಳ್ ಬೀೞ್ತರ್ಪಿನಂ ವಕ್ತ್ರರಂಧ್ರಂಗಳ್ ಕಾಱುವಿನಂ ಕದುಷ್ಣರುಧಿರಾಂಭಃಪೂರಮಂ ಪೊಯ್ದು: **ಪಂಪರಾ,** ೮. ೨೫)

**ಅಂಭಃಪ್ಲವ** – ಅಂಭಃಪೂರ (ಮಧ್ಯಂದಿನದ ಬಿಱುವಿಸಿಲ್ ತಾಗೆ ಬೆನ್ನಂ ಭರಂಗೊಡೆಳಸುತ್ತಂ ಪಲ್ವಲಾಂಭಃಪ್ಲವದೆ ಮುಳುಗಿ: **ರಾಜಶೇವಿ,** ೫. ೭೮)

**ಅಂಭಶ್ಚರ** – ಮೊಸಳೆ (ಹರನೆೞ್ತಂ ಯಕ್ಷನೇಳಂ ಪವನನೆರಲೆಯಂ ಸಾಗರಾವಾಸಂ ಅಂಭಶ್ಚರಮಂ ನೈಋತ್ಯನಾಳಂ: **ನೇಮಿನಾಪು,** ೬. ೫೬)

**ಅಂಭಸ** – ನೀರು (ನೀರಂ ಶರಂ .. .. ಅಂಭಸ .. .. ನೀರ್ಗೆ ಪೆಸರಂ: **ಅಭಿಧಾವ,** ೧. ೪. ೧)

**ಅಂಭೋಜನಾಭ** – ಹೊಕ್ಕುಳಲ್ಲಿ ತಾವರೆಯುಳ್ಳವನು, ವಿಷ್ಣು (ರಸೆಯೊಳ್ ಕಾಲಾಗ್ನಿರುದ್ರಂ ಜಲಶಯನದೊಳ್ ಅಂಭೋಜನಾಭಂ ಮೊದಲ್ದು ಆಗಸದಿಂ ಸುತ್ತಿರ್ದ ಅಜಾಂಡೋದರದೊಳ್ ಅಜಂ ಅಡಂಗಿರ್ಪವೋಲ್; **ಪಂಪಭಾ,** ೮. ೮೬)

**ಅಂಭೋಜಷಂಡ** – ಕಮಲದ ಗುಂಪು (ನಿಖಿಳ ವಿನೇಯಾಗ್ರಗಣ್ಯೈಕಚೂಡಾಮಣಿ ಧರ್ಮಾಂಭೋಜಷಂಡ ದ್ಯುಮಣಿ ಬುಧಜನಪ್ರೀಣನ ಅಗ್ರೇಸರ ಗ್ರಾಮಣಿಯಾದಂ: **ಅಜಿತಪು,** ೧೨. ೧೫); ಕೊಳ

**ಅಂಭೋಜಿನಿ** – ತಾವರೆ (ಪರಮಧರ್ಮಾಂಭೋಜಿನೀ ಸೂರ್ಯರಾದ ಆಚಾರ್ಯರ್ ದಯೆಯಿಂ ಕಟಿಲ್ಚುಗೆ ಮದೀಯ ಸ್ವಂಖುದಿಂ ಧ್ವಾಂತಮಂ: **ಅನಂತಪು,** ೧. ೩)

**ಅಂಭೋದ** – ಮೋಡ (ಆದಿತ್ಯಂ ಮಸುಳ್ವನ್ನೆಗಂ ಧ್ವಜಘಟಾಟೋಪಂಗಳಿಂದಂ ಲಯಾಂಭೋದಂಗಳ್ ಕವಿವಂತೆವೋಲ್ ಕವಿವುದುಂ ಕಾಲ್ಗಾಪು ಕಾಲ್ಗಾಪಿನೊಳ್ ಜೋದರ್ ಜೋದರೊಳ್ .. .. ಅಗುರ್ವಪ್ಪನ್ನೆಗಂ: **ಪಂಪಭಾ,** ೧೦. ೯೩)

**ಅಂಭೋದಕಾಲ** – ಮಳೆಗಾಲ (ಬಂದುದು ಬಹುಳ ತಟಿ ಜಾಲಂ ಅಂಭೋದಕಾಲಂ: **ಕಾದಂಬ,** ೮. ೧೩)

**ಅಂಭೋದಪಥ** – ಆಕಾಶ (ಸುರಾಸುರರಂಭೋದಪಥಕ್ಕಳಂಕರಣ ಮಾಗುಯ್ದರ್: **ಆದಿಪು,** ೯. ೭೩)

**ಅಂಭೋದಮಾರ್ಗ** – ಆಕಾಶ (ಅಂಭೋದಮಾರ್ಗಂ ಪೊಸತೆ ತೊಳೆದುದೀಗಳ್ ಪಾಲೊಳೆಂಬಂತು: **ಆದಿಪು,** ೮. ೩೫)

**ಅಂಭೋದರಸ್ತನಿತ** – ಗುಡುಗು (ಆ ಸಮರಸನ್ನಾಹ ಭೇರೀನಿನಾದಮಂಭೋಭಾರಗಂಭೀರ ಅಂಭೋದರಸ್ತನಿತ ಬಹುಸ್ನಿಗ್ಧಂಗಳಪ್ಪ ಮದಸ್ತಂಭೇರಮ ಬೃಂಹಿತಂಗಳಿಂದಂ: **ಆದಿಪು,** ೧೪. ೮೬ ವ)

**ಅಂಭೋದಾಧ್ವ** – ಆಕಾಶ (ಶುಷ್ಕ ಪತ್ರ ಪಟ ವೀರುತ್ ಘಾಸಕಾರ್ಪಾಸಸಂತ್ರಿಕಜಾಲಂ ಬಲಿಭುಗ್ಬಲಂ ನಡೆದುದು ಅಂಭೋಧಾಧ್ವದೊಳ್ ರಾಗದಿಂ: **ಪಂಚತಂತ್ರ,** ೩೭೬)

**ಅಂಭೋಧಿಪಥ** – ಸಮುದ್ರಮಾರ್ಗ (ಕೇತನಚಂಚಲಾಂಚಳ ನಿಚಯದಿಂದಂ ಅಂಭೋಧಿಪಥಮುಂ ಅತಿಚಕಿತವಿದ್ವಿಷ್ಟದೃಷ್ಟಿ ಪಥಮುಂ ನಿರವಕಾಶಮಾಗೆಯುಂ: **ಆದಿಪು,** ೧೩. ೭೭ ವ)

**ಅಂಭೋನಿಧಿ** – ಸಮುದ್ರ (ಶ್ರೀದಿವ್ಯಕಾಂತಾಜನಂ ತೊಡವು ಎಂಬೊಂದುಮಂ ಆ ಸುರಾಸುರರಿಂ ಆ ಗೋವಿಂದನಿಂ ಮುನ್ನೆ ಕೋಳ್ಪಡೆದು ಅಂಭೋನಿಧಿಯಂತೆ ಬಂದು ನೆಗಟ್ದು ಇಂದ್ರಪ್ರಸ್ಥಮಂ ಧರ್ಮಜಂ: **ಪಂಪಭಾ,** ೪. ೯)

**ಅಂಭೋರಾಶಿ** – ಸಮುದ್ರ (ಆ ಯತಿಗೆ ಪುಟ್ಟಿದತ್ತು ತಮಸ್ಸಂಹಾರಕಂ ಅಮೃತಂ ಮಥಿತಾಂಭೋರಾಶಿಗೆ ಪುಟ್ಟುವಂತೆ ಕೇವಲಬೋಧಂ: **ನೇಮಿನಾಪು,** ೪. ೧೧೧)

**ಅಂಭೋರುಹ** – ತಾವರೆ (ಪೊಸತಲರ್ವಂಭೋರುಹದೊಳ್ ಮುಸುಂಬು ಮುಟುಗುವಿನಮೆಱಗಿ ಗಂಧಮನಾಘ್ರಾಣಿಸುತಂ: **ಅಜಿತಪು,** ೬. ೬೬)

**ಅಂಭೋರುಹವನ** – ತಾವರೆ ಕೊಳ (ಮರಂಗಳಂ ಕಲ್ಗಳಂ ಅಂಭೋತುಹವನಮಂ ಭಕ್ತಿಯಿಂ ಓರಂತೆ ಅರ್ಚಿಸುತ್ತುಮಿರ್ಪರ್ ಮೂಢರ್: **ಸಮಯಪ,** ೯. ೮೨)

**ಅಂಶು** – ಕಿರಣ (ಇದಱ ಅಭ್ರಂಕಷಕೂಟಕೋಟಿಗಳೊಳಿರ್ದ ಅಂಭೋಜಷಂಡಂಗಳಂ ಮುದಿದು ಉಷ್ಣಾಂಶುವಿಂ ಊರ್ಧ್ವಗಾಂಶುನಿವಹಂ ಮೆಯ್ಯಿಟ್ಟಲರ್ಚುತ್ತುಮಿರ್ಪುದು: **ಪಂಪಭಾ,** ೪. ೨೨)

**ಅಂಶುಕ** – ಬಿಳಿಯ ಬಟ್ಟೆ (ಲಳಿತೋತ್ಸವಧ್ವಜಾಂಶುಕವಿಳಸನಮಂ ಮುಂದೆ ನಿನಗೆ ತೋರ್ಪಂತಿರೆ ಕಣ್ಗೊಳಿಸಿರ್ದುದು ನೋಡ ಹಿಮಾಚಳಶಿಖರದ ಮೇಲೆ ಪಾಯ್ವ ಗಂಗಾಸ್ರೋತಂ: **ಪಂಪಭಾ,** ೭. ೭೩); ಉತ್ತರೀಯ (ಧವಳ ವಸನಂಗಳೊಳ್ .. .. ತಾಂ ಅಂಶುಕ ಆಖ್ಯಾನವದಂ ಕೆಲರ್ ಉತ್ತರೀಯವಾಚಿಯುಂ ಎಂಬರ್: **ಅಭಿಧಾವ,** ೪. ೧. ೧೩೨); ಆಕಾಶ (ಅಂಬರಂ ಅಂಶುಕಮುಂ ಸುರಾಧ್ವಮುಂ: **ಅಭಿಧಾವ,** ೪. ೧. ೧೯)

**ಅಂಶುಕಧ್ವಜ** – ಬಟ್ಟೆಯ ಬಾವುಟ (ಸಂಛನ್ನವಂದನಮಾಲಾಲಲಿತ ಅಂಶುಕಧ್ವಜವಿಳಾಸಾಕೀರ್ಣಮಂ ಮೆಚ್ಚಿ: **ಆದಿಪು,** ೧೪. ೧೪೯)

**ಅಂಶುಮಾಲಿ** – ಸೂರ್ಯ (ಚಂದ್ರಕಲಾಕಲಾಪಮಂ ಕಾಲದೊಳ್ ಅಂಶುಮಾಲಿ ತೆಗೆದೀಂಟುವವನೆಂಬುದು ಅಸತ್ಯಂ: **ಕಾದಂಬ,** ೫. ೩೨)

**ಅಂಶುಶೀತ** – ತಂಪಾದ ಕಿರಣ (ವಿಧುಸಂಜಾತ ಅಂಶೂಶೀತಂ ವಿಸ್ಮಮರಶಿಶಿರಂ ವ್ಯೋಮಗಂಗಾತುಷಾರಂ: **ಉದ್ಭಟಕಾ,** ೧. ೨)

**ಅಂಸ** – (ಆನೆಯ) ಹೆಗಲು (ವಿಪುಲೋಪತಾಂಸನುಂ ಸಮಪಾರ್ಶ್ವನುಂ: **ಅಜಿತಪು,** ೪. ೨೦ ವ); ಭುಜ (ಉನ್ನತಾಂಸಂ ಅರುಣೋಂಭೋಜಸ್ಫುರತ್ಪಾಣಿ ರಂಜಿತರಂಭೋರು ಬೆಡಂಗುವೀಱೆ: **ರಾಜಶೇವಿ,** ೪. ೮೨)

**ಅಂಹಃ** – ಪಾಪ (ಚಾರುವಿಧಾಗ್ನಿಕಾರ್ಯಪ್ರಾರಂಭ ಮಹಾದ್ವಿಜನ್ಮಘೋಷದಿಂ ಅಂಹೋದೂರಮುಂ ಅವನಿತಳ ಅಳಂಕಾರಂ ಸಂಸಾರಸಾರಗಂಗಾದ್ವಾರಂ: **ಪಂಪಭಾ,** ೪.೧೫)

**ಅಂಹೋಭಾರ** – ಪಾಪಭಾರ (ವಸುಂಧರೆಯ ಅನ್ಯಾಯ ಪಥವರ್ತಿ ನಿಚಿತ ಅಂಹೋಭಾರಮಂ ನೀಗುಗುಂ: **ಆಚವರ್ಧ,** ೭. ೬೩)

**ಅಃಕಡ** – ಗರಡಿಮನೆ (ಎತ್ತಿ ಬಿಸುಡುವ ಬಿಸುಡಲ್ ಮರಳ್ದೆದ್ದು ಕೆಡಪಿ ಬಿಡದಬ್ಬರಿಸುವ ಕಲಿಮಲ್ಲರಿಂದಂ ಅಃಕಡಮೆಸೆಗುಂ: **ತ್ರಿಷಷ್ಟಿಪು,** ೧೭. ೧೪)

**ಅಕಂಪಿತಶರೀರ** – ನಡುಗದ, ದೃಢವಾದ ಮೈಯುಳ್ಳ (ಪರಮಯೋಗಿಯಿರ್ಪಂದದಿಂದಕಂಪಿತಶರೀರನಿರ್ದುದು ಜಲಾಶಯೋಪಾಂತದೊಳ್ ಬಕಂ: **ಪಂಪರಾ,** ೭. ೯೧)

**ಅಕಟ** – ಅಯ್ಯೋ ಎಂಬ ಅರ್ಥದ ಉದ್ಗಾರ (ಆಯೆಡೆಗೆ ಬಂದನಕಟೆಂದು ತಡವರಿಸಿ: **ಧರ್ಮಾಮೃ,** ೨. ೩೪ ವ)

**ಅಕರ್ಣಹೃದಯ** – ಕಿವಿ ಮತ್ತು ಹೃದಯಗಳಿಲ್ಲದ; ಹಾವಿನ ಹೃದಯವುಳ್ಳ (ಕವಿತಾವಿಷಯಂ ಕಠಿಣಹೃದಯನಪ್ಪ ಜಡಾತ್ಮಂಗೀವುದೋ: **ಮಲ್ಲಿನಾಪು,** ೧. ೩೬)

**ಅಕರ್ತೃಕ** – ಕರ್ತೃವಿಲ್ಲದ, ಸೃಷ್ಟಿಸಿದವನಿಲ್ಲದ (ಲೋಕಪ್ರಕಾರಮೆಂತೆಂದದೊಡೆ ಅದಕರ್ತೃಕಂ ಅದಹಂಕೃತಂ ಅದೂರ್ಧ್ವಂ ಅಧ್ಯಾಧೋಭೇದದಿನಿರ್ಪುದು: **ಅನಂತಪು,** ೧. ೬೬ ವ)

**ಅಕಾಂಡ** – ಅಕಾಲ (ಸುತ್ತಿದ ಪೆಂಡವಾಸದೆಳವೆಂಡಿರ ಲೋಲಕಟಾಕ್ಷಮಾಲೆ ದಿಗ್ಭಿತ್ತಿಗೆ ಅಕಾಂಡ ಕಾಂಡಪಟಮಂ ಕುಡೆ: **ಮಲ್ಲಿನಾಪು,** ೫. ೭೧)

**ಅಕಾಂಡಜಳದ** – ಅನಿರೀಕ್ಷಿತ ಮೋಡ (ಕೆಲದ ಪುಂಡರೀಕದೊಳ್ ಮಂಡಳಿಸಿದ ಮರಾಳಮಂಡಳಿಗಕಾಂಡಜಳದ ಮಂಡಳ ಶಂಕೆಯಂ ಭೋಂಕನಾಗಿಸಿ: **ರಾಜಶೇವಿ,** ೨. ೭೬ ವ)

**ಅಕಾಂಡತಾಂಡವ** – ಪಾಂಡಿತ್ಯದ ಅನವಶ್ಯಕ ಪ್ರದರ್ಶನ (ಅಕಾಂಡತಾಂಡವಾರಂಭಶೌಂಡ ಶಿಖಂಡಿಮಂಡಳಮುಮಂ: **ಆದಿಪು,** ೪. ೫೪ ವ)

**ಅಕಾಂಡಪ್ರಳಯ** – ಅಕಾಲದಲ್ಲುಂಟಾದ ಪ್ರಳಯ (ಸಮುದ್ಯತ್ ರಜತಗಿರಿ ತಟ ಸ್ಫಷ್ಟ ಸಂಶ್ಲಿಷ್ಟ ಮೌರ್ವೀನಿನದಂ ಪರ್ವಿತ್ತು ಅಕಾಂಡಪ್ರಳಯ ಘನಘಟಾಟೋಪ ಗಂಭೀರನಾದಂ: **ಪಂಪಭಾ,** ೧೨. ೧೩೭)

**ಅಕಾಮಿಕ** – ಇಚ್ಛೆಯಿಲ್ಲದ ವ್ಯಕ್ತಿ (ಸಕಳಪರಿಗ್ರಹಮಂ ಬಿಟ್ಟಕಾಮಿಕಂ ಯೋಗಯುಕ್ತನೆನಿಪಂ: **ಸಮಯಪ,** ೮. ೧೭೯)

**ಅಕಾರಣಂ** – ಕಾರಣವಿಲ್ಲದೆ (ನಿಮಗಿಂತು ಸಾವುಂ ಏತೆಱದಿನಕಾರಣಂ ನೆಱೆಯೆ ಸಂಭವಿಸಿರ್ದುದೋ ಕುಂಭಸಂಭವಾ: **ಗದಾಯು,** ೪. ೪೯)

**ಅಕಾಲ** – ನಿಗದಿತ ಕಾಲದಲ್ಲಿ ಅಲ್ಲದ್ದು (ಆಕಸ್ಮಿಕ ನೃಪ ಕರುಣೋದಯಕ್ಕಂ ಅಕಾಲತರುಫಲಕ್ಕಂ ವಿಬುಧಾನೀಕಂ ಬೆರ್ಚುಗುಂ ಅಬುಧನದೇಕಿರ್ಕ್ಕಿಮೊ ಗೂಗೆವೊಂಗುವೊಂಗದೆ ರಜದಿಂ: **ಶಾಂತಿಪು,** ೨. ೩೫)

**ಅಕಾಲವೃಷ್ಟಿ** – ಕಾಲವಲ್ಲದ ಕಾಲದಲ್ಲಾಗುವ ಮಳೆ (ಉನ್ನತ ಕುಕ್ಕುಟೇಶ್ವರ ಜಿನೇಶ್ವರನಂ ಜಿನಭಕ್ತೆ ಪೋಗಿ ಕಾಣ್ಬನ್ನೆಗಂ .. .. ಅತ್ತಿಮಬ್ಬೆಗೆ ಪಥಶ್ರಮಮಾದುದು ಅಕಾಲವೃಷ್ಟಿ: **ಅಜಿತಪು,** ೧. ೬೦)

**ಅಕಿಂಚನ** – ಬಡವ, ದರಿದ್ರ (ಸಂಚಿತರತ್ನತ್ರಯರಾಗಿಯುಂ ಆಕಿಂಚನರೆನಿಸಿಯುಂ: **ಕರ್ಣನೇಮಿ,** ೧. ೭೫ ವ)

**ಅಕುಂಠತರ** – ಅತ್ಯಧಿಕವಾದ (ವೈಕುಂಠಂ ಪರೆಯಲ್ ಪಟಹದ ಅಕುಂಠತರ ಧ್ವಾನಂ ಅಖಿಳ ಕಾಷ್ಠಾಂತರಮಂ: **ಕರ್ಣನೇಮಿ,** ೮. ೩)

**ಅಕುಪ್ಯ** – ಚಿನ್ನ ಬೆಳ್ಳಿಗಳು (ರೂಪ್ಯಂ ಸುವರ್ಣಮೆರಡುಂ ಅಕುಪ್ಯಮಕ್ಕುಂ ಮತ್ತದೆ ಹಿರಣ್ಯಮೆಂಬುದುವಕ್ಕುಂ: **ಅಭಿಧಾವ,** ೧. ೬. ೧೧)

**ಅಕೂಪಾರ** – ಸಮುದ್ರ (ರತಿರತ್ನ (ಈ ಬಹಳ ರತ್ನದ್ಯೋತಿ ವಿಖ್ಯಾತಶೈವ ಅಕೂಪರ ಶಶಾಂಕಮಂಡಳಿ ಕಳಾಸಸ್ಯಾವಳೀಧಾತ್ರಿ .. .. ಕಣ್ಗೊಪ್ಪಿದಳ್: **ರಾಜಶೇವಿ,** ೩. ೧೩);

**ಅಕೂಬಾರ** – ಸಮುದ್ರ (ರಾಜದಕೂಬಾರಾವೃತಧರಿತ್ರಿಯೀ ಕೃತಿರತ್ನಕ್ಕೇ ಬೆಲೆಯೆನಿಸಿದುದೆನೆ: **ಲೀಲಾವತಿ:** ೧೪. ೧೪೬);

**ಅಕೃಷ್ಟಪಚ್ಯ** – ಬೇಸಾಯವಿಲ್ಲದೆ ಬೆಳೆ ಕೊಡುವ ಭೂಮಿ (ಕಲ್ಪವೃಕ್ಷಪರಿಕ್ಷಯದೊಳ್ ಪ್ರಜಾಜೀವನೋಪಾಯ ಹೇತುಗಳಕೃಷ್ಟಪಚ್ಯಂಗಳಾಗಿ: **ಆದಿಪು,** ೬. ೭೨ ವ)

**ಅಕ್ಕ** – ಹಿರಿಯ ಸಹೋದರಿ (ತಮ್ಮಕ್ಕನತ್ತಿಮಬ್ಬೆಯಲ್ಲಿಗೆ ಗುಂಡಮಬ್ಬೆ ಬಂದು: **ಅಜಿತಪು:** ೧. ೪೬ ವ); ಹಿರಿಯ ಹೆಂಗಸು ಎಂಬ ಗೌರವ ಸಂಬೋಧನೆ (ಗಾಂಧಾರಿವೆಸರ ಅಕ್ಕಂಗಳು ತಾಂ: **ಪುಣ್ಯಾಸ್ರ,** ೨. ೪೭)

**ಅಕ್ಕಜ** – ಬೆರಗು, ವಿಸ್ಮಯ (ಮಕ್ಕಳು ಪುಟ್ಟಿದ ಪದದೊಳು ಬೆಕ್ಕಸವಟ್ಟಿರ್ದ ಮರ್ತ್ಯರಂ ಕಂಡಾಗಳ್ ಚೆಕ್ಕನೆಯವರ ಹೃದಯದೊಳಿರ್ದಕ್ಕಜಮಂ ಕಳೆದು ಕೀರ್ತಿಯಂ ಪ್ರಕಟಿಸಿದಂ: **ಪುಣ್ಯಾಸ್ರ,** ೧೦. ೧೦); ಪ್ರೀತಿ (ದ್ವಿಜನಿಕರಂ ಧೌತವನಕ್ಕಜದಿಂ ಮೇಲ್ಪಡಿದು ಪೋದುದೀಕ್ಷಿಸೆ ಭೂಪಂ: **ನಳಚಂಪು,** ೫. ೨೯)

**ಅಕ್ಕಟ** – ವಿಷಾದಸೂಚಕ ಉದ್ಗಾರ (ಅರಗಿನ ಮನೆಯೊಳ್ ಪಾಂಡವರುರುದಟ್ಟಿದರಕ್ಕಟಯ್ಯೋ: **ಪಂಪಭಾ,** ೬. ೭)

**ಅಕ್ಕಟಿಕೆ** – ಉತ್ಕಟವಾದ ಆಸೆ (ಒಕ್ಕಲನೆಂತುಂ ರಕ್ಷಿಸುವಕ್ಕಟಿಕೆಯನುಳ್ಳ ಭೂಮಿಪಾಲಂ ತಲೆಮಟ್ಟೊಕ್ಕಲ 'ಕೆಯ್ಗಳಿಗೆಱಗುವ ಪಕ್ಕಿಗಳಂ ಕವಣೆಗೊಂಡು ಕಾಯಲ್ವೇೞ್ಕುಂ: **ಸಮಯಪ,** ೧೪. ೮೨)

**ಅಕ್ಕರ** – ಅಕ್ಷರ, ವರ್ಣ (ನೋಡುವೊಡಂದಕ್ಕರಮದು ಮಾಡುವೊಡುಚ್ಚರಣೆಗರಿದು: **ಗಿರಿಜಾಕ,** ೧. ೩೨); ವಿದ್ಯೆ (ಕಬ್ಬಿಗಳ್ಗೆರೆಂದು ಕೂಸಾಡಿಸಬಾರದಕ್ಕರ ರಾಜ್ಯದೊಳೀ ಕವಿಚಕ್ರವರ್ತಿಯಾ: **ಶಾಂತಿಪು,** ೧೨. ೭೭); ಬರವಣಿಗೆ (ಕಂಡರಿಸಿ ಕಲ್ಲೊಳಿಟ್ಟಕ್ಕರಮುಮೆಂಬಿನೆಗಮೆಸುದುದು: **ಅಜಿತಪು,** ೧೨. ೨೫)

**ಅಕ್ಕರಗೊಟ್ಟಿ** – ವಿದ್ವಾಂಸರ ಮೇಳ (ಅಕ್ಕರಗೊಟ್ಟಿಯುಂ ಚದುರರೊಳ್ವಾತುಂ: **ಪಂಪಭಾ,** ೪. ೩೧)

**ಅಕ್ಕರಜಾಣ** – ಪಂಡಿತ (ಲೋಕಕ್ಕನುರಾಗಮಂ ಜನಿಯಿಸಣ್ಣಿ ಮನೋಮುದದಿಂದಮೆಂದು ಸಂದಕ್ಕರಜಾಣರಾಗ್ರಹಿಸೆ: **ಆಚವರ್ಧ,** ೧. ೨೩)

**ಅಕ್ಕರಿಗ** – ಅಕ್ಷರ ಕಲಿತವನು, ವಿದ್ವಾಂಸ (ಕಂಡೊಡನಾಡಿದ ಅಕ್ಕರಿಗಂ ಅಕ್ಕರಿಗಂ ಗೆಡೆಗೊಂಡ ಪಂಡಿತಂ ಪಂಡಿತನೆಯ್ದೆ ಕಲ್ತ ಚದುರಂ ಚದುರಂ: **ಶಾಂತಿಪು,** ೧೨. ೭೮)

**ಅಕ್ಕಸಾಲೆ** – ಚಿನ್ನ ಬೆಳ್ಳಿ ಕೆಲಸ ಮಾಡುವವನು (ಅಕ್ಕಸಾಲೆಯವಗೆ ಭಂಗಾರಮಂ .. .. ಕೊಟ್ಟೊಡವಂ ಭಂಗಾರಮಂ ಮಾಡಿಕುಡದೆಡೆಯಾಡಿಸಿದನೆನೆ: **ಧರ್ಮಪ,** ೬. ೧೪ ವ)

**ಅಕ್ಕುಱುಗಂಪು** – ಹಿತಕರವಾದ ಸುಗಂಧ (ಓರಂದದಿಂದ ಅಕ್ಕುಱುಗಂಪಂ ನಾಸಿಕಕ್ಕೆ ಒಂದಿಸುತೆನಸುಂ ಮೆಯ್ಗೆ ಸೈಪಂ ಸಮಂತೆಳ್ಚೆಸುತ್ತುಂ ತೀಡುತಿರ್ದತ್ತವರ್ಗೆ ಅನುಚರನಂತೆ ಆ ವನಾಂತಸ್ಸಮೀರಂ: **ಶಾಂತೀಶ್ವಪು,** ೫. ೧೩೮)

**ಅಕ್ಕುಱುಗುಟುಕು** – ಅಕ್ಕರೆಯಿಂದ ಊಡುವ ಗುಟುಕು (ವಿಹಗಮಂಗಳಕ್ಕುಱುಗುಟುಂ ಕೊಳಲ್ಕಿರದೆ ಪಾಜಿದುವೆಣ್ದೆಸೆಗಂ ಪ್ರಭಾತಕಾಲದೊಳ್: **ಶಾಂತೀಶ್ವಪು,** ೧೧. ೯೭)

**ಅಕ್ಕಿ** – ಬತ್ತದೊಳಗಿನ ಬೆಳ್ಳನೆ ಕಾಳು (ನಮಗಕ್ಕಿಗೊಟ್ಟು ಮಡಗೂೞುಣ್ಬಂದಮಂ ಪೋಲದೇ: **ಆದಿಪು,** ೧೪. ೩೨)

**ಅಕ್ಕಿಸು** – ಜೀರ್ಣಿಸು (ಕಾಯ್ಪಿನುಗ್ರತೆಯಿಂ ಆತಪಂ ಆ ತಪನೀಯದೀಧೀತಿಪ್ರಸರಮಂ ಅಕ್ಕಿಸಲ್ ನೆಱೆಯದೆ ಇಂತು ಮಗುಳ್ಚಿದುದು ಎಂಬಿನಂ: **ಶಾಂತೀಶ್ವಪು,** ೧೧. ೩)

**ಅಕ್ಕು** – ಲಾಭ; ಸಂಪತ್ತು (ಸಿರಿಗಿಂಬಾಗಿರೆ ಬಾಗಿಲೊಳ್ ಬೋಜಗನೀಗಳ್ ಸಂದು ನಿಂದಿರ್ದಪಂ ಕರೆ ನಿಮ್ಮಕ್ಕನಕ್ಕು: **ಕುಸುಮಾ,** ೧೪. ೧೫೪); ಜೀರ್ಣವಾಗು [<ಅಟ್ಟು] (ಪರಿಕಿಸುವೊಡೆ ನಾಯ್ಗೆ ನೆಯ್ಯಕ್ಕುಗುಮೇ: **ಸಮಯಪ,** ೪. ೩೯)

**ಅಕ್ಕುಳಿಸು** – ಒಳಹೋದ (ಬಟಿಲ್ದ ಮೆಯ್ಯಕ್ಕುಳಿಸಿರ್ದ ಪೆರ್ಬಸಿಱ್: **ಲೀಲಾವತಿ,** ೬. ೬೮); ಭಯ (ಅಕ್ಕುಳಿಸು – ನಿಮ್ಮ ಕುಕ್ಷೌ ಭಯೇಚ: **ಶಬ್ದಮದ,** ಧಾ **೭೫೬**)

**ಅಕ್ಕೆ** – ಅಟ್ಕೆ, ದುಃಖ (ನಾಳೆ ದೇವಕಿಯಕ್ಕೆಯನಖ್ಖಡದೊಳೆ ದೇವರ ಕಿವಿಗೆಯ್ದಿಸುವೆಂ: **ನೇಮಿನಾಪು,** ೮. ೬೧ ವ)

**ಅಕ್ಕೆಬೊಟ್ಟು** – ಹಣೆಯ ಮೇಲಿನ ಬೊಟ್ಟು (ನೊಸಲಕ್ಕೆಬೊಟ್ಟೆ ಬೈತಲೆಯೆಳೆಮುತ್ತೆ ಬಾ: **ಧರ್ಮಮಧು,** ೧. ೭೫)

**ಅಕ್ಕುಂದಲೆ** – ರಭಸ (ಮತ್ತಂ ಉರ್ಕಿಂದ ಅಕ್ಕುಂದಲೆವಾಯ್ದು ತಾನುಂ ಮಿಂಡುಗಳುಂ ನೆರೆದು ಪಿಡಿದು: **ಧರ್ಮಾಮೃ,** ೨. ೧೩ ವ)

**ಅಕ್ಖಡ** – ಕುಸ್ತಿ ಮಾಡುವ ಸ್ಥಳ, ಅಖಾಡ (ಮತ್ತಂ ಮಲೆತು ನಿಂದು ಅಕ್ಖಡದೊಳ್ ಪೊಕ್ಕು ಬಾಹಪ್ಪಳಿಸಿ: **ಗಿರಿಜಾಕ,** ೨. ೧೦೫ ವ)

**ಅಕ್ಲಿಷ್ಟ** – ಕಠಿಣವಲ್ಲದ (ಶ್ಲಿಷ್ಟಂ ಅಕ್ಲಿಷ್ಟಂ ಅರ್ಥಂ ಸುಗಮಂ ಭಾವಂ ಪ್ರಸನ್ನಂ .. .. ಎಂದೀ ಜಗಮೆಲ್ಲಂ ಮೆಚ್ಚೆ: **ಮಲ್ಲಿನಾಪು,** ೧. ೪೩)

**ಅಕ್ಲೇಶ** – ಕಷ್ಟಪಡದೆ (ಇವಂ ಕಪಿಲನೆಂಬೊಂ ಏಕಸಂಧಿಯಪ್ಪುದಱೆಂ ನಾನುಂ ಮತ್ತಿನ ಮತ್ತನಯರ್ಕಳಂ ಓದಿಸೆ ಮತ್ತಿವಂ ಅಕ್ಲೇಶದಿಂ ಶ್ರುತಿ ಸ್ಮೃತಿ ಶಾಸ್ತ್ರೋಪಾತ್ರಮುಖನಾಗೆ: **ಶಾಂತಿಪು,** ೬. ೬೨ ವ ಮತ್ತು ೬೩)

**ಅಕ್ಷ** – ರಥದ ಅಚ್ಚು (ವಿನೂತ್ನ ಕೀಲ್ ವರಯುಗಂ ಉನ್ನತ ಅಕ್ಷಂ ಉರುಕೂಬರಂ ಊರ್ಜಿತ ಮತ್ತವಾರಣಂ: **ತ್ರಿಷಷ್ಟಿಪು,** ೨೪, ೨೫೧); ಜಪಮಣಿ (ಅಕ್ಷಮಣಿಯಂ ಸಮೆವ ವ್ಯವಸಾಯಮೆತ್ತಲುಂ: **ಕಾದಂಸಂ,** ೧. ೭೧)

**ಅಕ್ಷಕ್ರೀಡೆ** – ಪಗಡೆ ಆಟ (ತನಗೆ ಸಾವಂ ಸಮಕಟ್ಟುವಂತೆ ಪಿಂಗಾಕ್ಷಂ ಅಕ್ಷಕ್ರೀಡೆಯಂ ಶಕುನಿಯೊಳ್ ಸಮಕಟ್ಟಿ: **ಪಂಪಭಾ,** ೬. ೬೯ ವ)

**ಅಕ್ಷತ** – ಹೊಟ್ಟು ತೆಗೆಯದ ಧಾನ್ಯ (ಅಕ್ಷತಮದು ನಿಸ್ತುಷಮಾದ ಸಿಂಬಿ ಧಅನ್ಯಮದಕ್ಕುಂ: ಅಭಿಧಾ, ೧. ೧೬. ೨೧)

**ಅಕ್ಷಧೂರ್ತ** – ಜೂಜಿನಲ್ಲಿ ಮೋಸಮಾಡುವವನು (ಅಕ್ಷಧೂರ್ತನೆಂಬೊಂಗೆ ಸಾಸಿರ ದೀನಾರಮಂ ಸೋಲ್ತು: **ವಡ್ಡಾರಾ,** ಪು ೧೪, ಸಾ. ೩)

**ಅಕ್ಷಫಲ** – ತಾರೆಯ ಕಾಯಿ (ಅಂದಿನ ಮನುಜರಕ್ಷಫಲದನಿತೆನಿಪ ರಸಾಯನಮೆರಡು ದಿವಸಕ್ಕುಣ್ಬರ್: **ಪಂಪರಾ,** ೧. ೬೨)

**ಅಕ್ಷಮ** – ಅಸಮರ್ಥ (ಇತ್ತ ಸಕಲಕಾರ್ಯ ಅಕ್ಷಮಂ ಅಪ್ಪ ತಿರ್ಯಕ್ ಜಾತಿಯೊಳ್ ಬಿಟ್ಟು ಚಿಂತಾಪೀಡಿತನಾಗಿ: **ಕಾದಂಸಂ,** ೮. ೮ ವ)

**ಅಕ್ಷಮಣಿ** – ಜಪಸರದ ಮಣಿ (ಸಮಿತ್ಕುಶಮಂ ತರವೋಪ ಧೌತವಲ್ಕಲಮಂ ಅಲುಂಬುವ ಅಕ್ಷಮಣಿಯಂ ಸಮೆವೀ ವ್ಯವಸಾಯಮೆತ್ತಲುಂ: **ಕಾದಂಸಂ,** ೧. ೭೧)

**ಅಕ್ಷಮಾಲೆ** – ಜಪಸರ (ಬೆರಲೊಳ್ ಬೀಣೆಯ ತಂತಿಗಳ್ ಒರಸಿದ ಕೆಂಗಲೆಗಳ್ ಅಕ್ಷಮಾಲೆಯೊಳ್ ಎಸೆದಂತಿರೆ ಮೊಸೆಯೆ ಮುತ್ತು ಪವಳಂ ಬೆರಸಿದವೊಲಾಯ್ತು ಚೆನ್ನ ತಪಸಿಯ ಕೆಯ್ಯೊಳ್: **ಪಂಪಭಾ,** ೬. ೧೦)

**ಅಕ್ಷಯ** – ನಾಶವಿಲ್ಲದ, ಶಿವ (ಕೆಡುವ ತನುವಿಂದ ಅಕ್ಷಯನ ಒಡಲಂ ಪುಗುವೊಡೆ ಕೃತಾರ್ಥನಾದೆಂ: **ತ್ರಿಷಷ್ಟಿಪು,** ೧೦. ೫೭)

**ಅಕ್ಷಯತೃತೀಯೆ** – ಅಕ್ಕತದಿಗೆ; [ಜೈನ] ಶ್ರೇಯಾಂಸನು ಆದಿ ತೀರ್ಥಂಕರನಿಗೆ ಅಹಾರದಾನ ಮಾಡಿದ ಪುಣ್ಯದಿನ (ಅಕ್ಷಯದಾನಂ ನಿಮಗಕ್ಕಕ್ಷುಣ್ಣಮಿದೆಂದು ಪರಮ ಮುನಿ ಪರಸೆ ಬಟಿಕ್ಕಕ್ಷಯತೃತೀಯೆಯಿಂದಖಿಲಕ್ಷಿತಿಗಂ ನೆಗಟ್ದುದಲ್ತೆ ತತ್ಪುಣ್ಯದಿನಂ: **ಆದಿಪು,** ೧೦. ೬)

**ಅಕ್ಷಯದಾನ** – ಆಹಾರವಿತ್ತವರಿಗೆ ಜೈನ ಮುನಿಗಳು ಮಾಡುವ ಆಶೀರ್ವಾದ (ಅವರ್ ಸಂಯಮಸಂರಕ್ಷಣಾರ್ಥಮಪ್ಪ ಕಾಯಸ್ಥಿತಿಯಂ ನಿರ್ವರ್ತಿಸಿ ಕೈಗೆತ್ತಿಕೊಂಡು ಅಕ್ಷಯದಾನಮೆಂಬುದುಂ: **ಪಂಪರಾ,** ೧ ವ)

**ಅಕ್ಷಯಬೋಧ** – ನಾಶವಿಲ್ಲದ ಜ್ಞಾನ; ತೀರ್ಥಂಕರ (ತಜ್ಜನಕೆ ನಿನ್ನ ನುಡಿ ಸೋಪಾನಂ ತಾನಾದುದು

ಕೈವಲ್ಯಸುಧಾನಿಳಯಾಗ್ರಾರುರುಕ್ಷಗನಕ್ಷಯಬೋಧಾ: **ಚಂದ್ರಪ್ರಪು,** ೯. ೩೧)

**ಅಕ್ಷಯಸಮಯ** – ನಿರಂತರ ಕಾಲ (ನಯವಿನಿಮಯ ನಾನಾಮಂತ್ರದೂತಪ್ರಯಾಣಾಕ್ಷಯ ಸಮಯವಿಳಾಸೋಲ್ಲಾಸಿ ಸಂಗ್ರಾಮಿತಾಂಗಂ: **ಕವಿರಾಮಾ,** ೩. ೨೧೩)

**ಅಕ್ಷಯಸೌಖ್ಯ** – ನಿರಂತರ ಸುಖ (ಮಾಡುವುದೆಮಗಕ್ಷಯಸೌಖ್ಯಾನಂತಮೋಕ್ಷಲಕ್ಷ್ಮೀಕಾಂತ: **ಸುಕುಮಾಚ,** ೪. ೫೩)

**ಅಕ್ಷರ** – ನಾಶವಿಲ್ಲದ (ಅಕ್ಷರಸದ್ಧರ್ಮಕಳೇವರಂ ಮೃಡಮತಾಂಭೋರಾಶಿರಾಕಾಸುಧಾಕರಂ ಆದ್ಯಂ ವೃಷಭೇಶ್ವರಂ ಸಲಹುಗೆ: **ಶಬರಶಂ,** ೧. ೪)

**ಅಕ್ಷರಕೇವಳಿ** – ಒಂದು ವಿದ್ಯೆ (ವಿಹಗದಂತೆ ಖೇಚಕ್ರಮಂ ವರ್ತಿಸಿ ಮತ್ತಮಕ್ಷರಕೇವಳಿ ದೂತಚೇಷ್ಟೆ ಮೊದಲಾಗಿರಲಾ ಬಿಚ್ಚುವಂ ವಿದ್ಯೆಗಳೋಳೆಲ್ಲಮೊಚ್ಚತಂ ನೋಡಿದೊಡೆ: **ಸುಕುಮಾಚ,** ೩. ೬ ವ)

**ಅಕ್ಷರಮಾಲಿಕೆ** – ಜಪಸರ (ಸರಿಗೆಯೊಳ್ ಸಮೆದ ಅಕ್ಷರಮಾಲಿಕೆ ಪೊನ್ನ ಮುಂಜಿ ತೊಳಪ್ಪ ಕಪ್ಪುರದ ಭಸ್ಮಜಿರಜಸ್ತ್ರಿಪುಂಡ್ರಕಮೊಪ್ಪೆ: **ಪಂಪಭಾ,** ೬. ೮)

**ಅಕ್ಷರರೇಖೆ** – ಬರಹ (ಆವಲೊಳ್ವಸಿಱ ವಳಿರೇಖೆಗೆಟ್ಟುವು ನೊಸಲಕ್ಷರರೇಖೆಯೊಡನೆ ಮಧುರಾದಿಪನಾ: **ನೇಮಿನಾಪು:** ೭. ೩೮)

**ಅಕ್ಷವಲಯ** – ಜಪಸರ (ವನಿತೆಯ ಮೌಕ್ತಿಕಾಕ್ಷವಲಯಂ ಕೊರಲೊಳ್ ಕರಮೊಪ್ಪಿ ತೋಱುಗುಂ: **ಕಾದಂಸಂ,** ೩. ೨೭)

**ಅಕ್ಷಸೂತ್ರ** – ಜಪಸರ (ಪರಶುಫಳ ಅಕ್ಷಸೂತ್ರ ವರದೋಚಿತಚಿಹ್ನ ಚತುರ್ಭುಜಂ ಮನೋಹರ ವೃಷಲಾಂಛನಂ: **ಆದಿಪು,** ೧. ೮)

**ಅಕ್ಷಾವಳಿ** – ಜಪಸರ (ಬಾಗಿಲೊಳ್ ಅಕ್ಷಾವಳಿಯಂ ಬೇಡಲ್ಕೆ ಬಂದು ನಿಂದಿರ್ದಪನೆಂದು ಪೇೞ್ವುದುಂ: **ಕಾದಂಸಂ,** ೪. ೪೫ ವ)

**ಅಕ್ಷಿತಾರಕ** – ಕಣ್ಣಿನ ಪಾಪೆ (ಕನೀನಿಕಾ ನಾಮಂ ಅಕ್ಷಿತಾರಕಮಕ್ಕುಂ: **ಅಭಿಧಾವ,** ೧. ೧೨. ೧೭)

**ಅಕ್ಷಿವಿಕ್ಷೇಪ** – ಕಣ್ಣ ನೋಟ ಬೀರುವುದು (ಪೊಳೆಯುತ್ತಿರ್ಪ ಅಕ್ಷಿವಿಕ್ಷೇಪದ ಪೊಳಪುಗಳಿಂ ಆನನಶ್ರೀವಿಲಾಸಂಗಳಿಂ ಅಂಗೋಪಾಂಗದೊಳ್ ಸಂಗಳಿಸುವ ಪಲವುಂ ಭಂಗಿಯಿಂ: **ಆದಿಪು,** ೧೧. ೧೩೯)

**ಅಕ್ಷಿಪಕ್ಷ್ಮವಿಕ್ಷೇಪಣ** – ಕಣ್ಣ ರೆಪ್ಪೆ ಮಿಟುಕಿಸುವುದು (ನೋೞ್ಪವರ್ಗೆ ಅಕ್ಷಿಪಕ್ಷ್ಮವಿಕ್ಷೇಪಣಮೊಂದೆ ಮಾಡುವುದವಳ್ ಮನುಜಾಂಗಾಂಗನೆಯೆಂಬ ಭೇದಮಂ: **ಆದಿಪು,** ೩. ೨೦)

**ಅಕ್ಷುಣ್ಣ** – ತಡೆಯಿಲ್ಲದೆ, ಕಡಿಮೆಯಿಲ್ಲದ (ಅಕ್ಷಯದಾನಂ ನಿಮಗಕ್ಕಕ್ಷುಣ್ಣಮಿದೆಂದು ಪರಮ ಮುನಿ ಪರಸೆ ಬೞಿಕ್ಕಕ್ಷಯತೃತೀಯೆಯಿಂದಖಿಲಕ್ಷಿತಿಗಂ ನೆಗೞ್ದುದಲ್ತೆ ತತ್ಪುಣ್ಯದಿನಂ: **ಆದಿಪು,** ೧೦. ೬)

**ಅಕ್ಷೂಣ** – ಕಡಿಮೆಯಿಲ್ಲದ, ಬಲಿಷ್ಠ (ಇಳಾಭಾರಕ್ಷಮಾಕ್ಷೂಣನಂ ಅಂತು ಸರ್ವಲಕ್ಷಣಸಂಪೂರ್ಣನಪ್ಪ ಮಗನನಮೋಘಂ ಪಡೆದೆಂ: **ಪಂಪಭಾ,** ೧. ೧೩೪ ವ)

**ಅಕ್ಷೋಹಿಣಿ** – ಅಕ್ಷೌಹಿಣಿ; ೨೧೮೭೦ ಆನೆ, ೨೧೮೭೦ ರಥ, ೬೫೬೧೦ ಕುದುರೆ ಮತ್ತು ೧೦೯೩೫೦ ಪದಾತಿಯಿರುವ ಸೈನ್ಯ; **ಪಂಪಭಾರತ** ದಲ್ಲಿ ಹೇಳಿರುವ ಸಂಖ್ಯೆ ಹೀಗಿದೆ: ೯೦೦೦ ಆನೆ, ೯೦೦೦೦೦ ರಥ, ೯೦೦೦೦೦೦೦ ಕುದುರೆ ಮತ್ತು ೯೦೦೦೦೦೦೦೦೦ ಕಾಲಾಳುಗಳ ಸೈನ್ಯ (**ಪಂಪಭಾ,** ೯. ೯೫)

**ಅಕ್ಷೌಹಿಣಿ** – ಅಕ್ಷೋಹಿಣಿ (ಒಂದು ಆನೆ, ಒಂದು ರಥ, ಮೂರು ಕುದುರೆ ಮತ್ತು ಐದು ಕಾಲಾಳುಗಳು ಒಂದು ಪತ್ತಿ; ಮೂರು ಪತ್ತಿಗಳು ಒಂದು ಸೇನಾಮುಖ; ಅವು ಮೂರು ಸೇರಿದರೆ ಒಂದು ಗುಲ್ಮ; ಮೂರು ಗುಲ್ಮಗಳು ಒಂದುಗಣ: ಮೂರು ಗಣಗಳು ಒಂದು ವಾಹಿನಿ; ಅಂಥವು ಮೂರು ಪೃತನ: ಮೂರು ಪೃತನೆಗಳು ಒಂದು ಚಮೂ: ಮೂರು ಚಮೂಗಳು ಅನೀಕಿನಿ; ಹತ್ತು ಅನಿಖಿನಿಗಳು ಸೇರಿದರೆ ಒಂದು ಅಕ್ಷೌಹಿಣಿ (ಒಂದು ಸಾಮಜಂ ಒಂದು ತೇರ್ ಮೂಱಶ್ವಂ ಎಯ್ದು ಕಾಲಾಳ್ಗಳ್ ಪತ್ತಿಯಕ್ಕುಂ ಸಂದ ಪತ್ತಿ ಮೂಱಾಗೆ ಸೇನಾಮುಖಂ ಆ ಮೂಱು ಗುಲ್ಮಂ ಮೂಱು ಗುಲ್ಮಕ್ಕೊಂದು ಗಣಂ ಅವು ಮೂಱು ವಾಹಿನಿ ತತ್ತ್ರಯಂ ಪೃತನಾರ್ಖ್ಯೆಯೆ ಪೃತನೆಗಳ್ ಮೂಱಿೊಂದಿ ತೋಱೆ ಚಮೂ ಅದು ಮೂಱು ಅನೀಕಿನಿ ಪತ್ತು ಅನೀಕಿನಿ ಅಕ್ಷೌಹಿಣಿಯೆನಿಕ್ಕುಂ: **ಅಭಿಧಾವ,** ೧. ೧೪. ೮)

**ಅಖಂಡಿತಂ** – ಕತ್ತರಿಸದ, ಪೂರ್ಣವಾದ (ಏನಖಂಡಿತಮೋ ಶೌರ್ಯಗುಣೋನ್ನತಿ ರಾಜರಾಜನಾ: **ಪಂಪಭಾ,** ೧೩. ೬೫)

**ಅಖರ್ವ** – ಅತಿಶಯವಾದ (ಪಗಲ್ ಕಡುಕೊರ್ವಂ ಪಡೆದಿರ್ಪಿನಂ ರಘುತನೂಜಾಖರ್ವ ಚಾತುರ್ಬಲಂ: **ಪಂಪರಾ,** ೧೨. ೩೨)

**ಅಖಲ್ಯ** – ಹೇಡಿ (ಶಲ್ಯಂ ಸತ್ತಿಂಬೞಿಯಮಖಲ್ಯಂ ಕೊಳದೊಳಗೆ ಪೊಕ್ಕು: **ಗದಾಯು,** ೭. ೨೪); ಅಪ್ರಯೋಜಕ (ಇವಂದಿರಂ ಪರಿಹರಿಸಿಂ ಅಯೋಗ್ಯರಂ ಅಖಲ್ಯರಂ ನಿರ್ಗುಣರಂ: **ಸುಕುಮಾಚ,** ೨. ೧೮)

**ಅಗ** – ಬೆಟ್ಟ (ರಾವಣಂ ಅಗಮಂ ವಿದ್ಯಾದೇವತೆಗಳ ಬಲದಿನೆತ್ತಿದಂ: **ಪಂಪರಾ,** ೧೧. ೧೭); ಮರ (ಮಾರ್ಗಸ್ಥಿತ ಚಂದನ ಅಗಗತನಾಗಪೀತಶೇಷಂ ಧರಾತಲಕಾನಂದಮಂ ಒಂದಿಸುತ್ತೆ ಸುಳಿದಂ ಮತ್ತಲ್ಲಿ ಮಂದಾನಿಲಂ: **ರಾಜಶೇವಿ,** ೯. ೪೫)

**ಅಗಚರ** – ಬೇಡ (ಕರದಿಂದೆ ಕಾಲನೆಂಬ ಅಗಚರಂ ಅಂಬರ ಭೂಮಿಯಿಂದೆ ನೂಂಕಲ್ ಕೆಡೆದಾವರ ಮಧುಘೃತಮೆಂಬಂತಿರೆ ನೆಱೆ ಬಿರ್ದುದು ಪಶ್ಚಿಮಾಬ್ಧಿಯೊಳ್ ಇನಬಿಂಬಂ: **ತ್ರಿಷಷ್ಟಿಪು,** ೨೭, ೧೦೦)

**ಅಗಚೂಡ** – ಬೆಟ್ಟದ ಶಿಖರ (ಅಗಚೂಡದಲ್ಲಿ ನಿಣದಿರ್ದು ಸಮಂತಿರೆ ತಾರಗೆಯಂ ವಿದ್ಯಾಧರಿಯರ್ ಮುತ್ತೆಂದು ತೆಗೆದು ತುಡಲವ್ವಳಿಪರ್: **ಗಿರಿಜಾಕ,** ೧. ೫೪)

**ಅಗಡು** – ಒರಟು (ಅಗಡಿನ ಪೆಂಡಿರೊಳ್ ವ್ಯವಹಾರಮಲ್ಲದೆ ಬೇಟಮಿಲ್ಲೆಂದ ನಿರ್ಗೇಡಿ ಬೊಜಗಂಗೆ, **ಲೀಲಾವತಿ,** ೨. ೯೩ ವ) ತುಂಟತನ, ದುಷ್ಟತನ

**ಅಗಣ್ಯ** – ಅಪಾರವಾದ (ಅಂತು ಉಭಯಬಲಂಗಳೊಳಂ ವೀರಜನಜನಿತಾಳಾಪಂಗಳ್ ನೆಗೞೆ ವಿಕ್ರಮಾರ್ಜುನಂ ಅನಂತನುಂ ತಾನುಂ ಜಲಕ್ಕನಿರೆ ಪಲ್ಲಂ ಸುಲಿದು ಅಗಣ್ಯಪುಣ್ಯ ತೀರ್ಥೋದಕಂಗಳಂ ಮಿಂದು ಮಂಗಳವಸದನಂಗೊಂಡು: **ಪಂಪಭಾ,** ೧೦. ೪೬ ವ); ಗಣ್ಯನಲ್ಲದವನು (ಪೞಗಾಂಪರ ನುಡಿ ಮುತ್ತುಂ ಮೆಱಸುಂಗೋದುದಕ್ಕೆ ಭಾಷ್ಯಮಂ ಒರ್ವಂ ಕೞೆಯೋದಿದಾತನಲ್ಲದೆ ಬೞಿವೞಿಯಿಂ ಬಂದು ಬರೆಯಲಾಗದು ಅಗಣ್ಯಂ: **ಶಾಂತಿಪು,** ೧೦. ೧೮೧)

**ಅಗದ** – ಔಷಧಿ (ಭೇಷಜಂ ಔಷಧಂ ಅಗದಂ: **ಅಭಿಧಾವ,** ೧. ೧೨. ೪೨)

**ಅಗಧರ** – ಬೆಟ್ಟವನ್ನು ಎತ್ತಿದವನು, ಕೃಷ್ಣ, ವಿಷ್ಣು (ಜಗದಾಧಾರಕನ್ಶೈ ನೀಗಧರ ನಿನ್ನಂಘ್ರಿಭಾರಮಂ ಕ್ಷೀಣಬಲೋರಗನೆಂತು ಸೈರಿಪಂ: **ಜಗನ್ನಾವಿ,** ೩. ೧೧೦)

**ಅಗಪಡು** – ಸಿಕ್ಕಿಹಾಕಿಕೊ (ನರನೊಳ್ ಮುನ್ನಗಪಟ್ಟುದೊಂದಟಲೊಳಾಂ ಕೈಳಾಸಶೈಳೇಶನಂ ಪಿರಿದುಂ ಭಕ್ತಿಯೊಳರ್ಚಿಸುತ್ತುಮಿರೆ: **ಪಂಪಭಾ,** ೧೧. ೯೮)

**ಅಗಪತಿ** – ಪರ್ವತರಾಜ (ಅಗಪತಿ ಲಕ್ಷ್ಮೀನೂಪುರಮರಸಂ ಜ್ವಲನಜಟಿ ವಿರಾಜಿಪಂ ಅದಱೊಳ್: **ಆಚವರ್ಧ,** ೩. ೬೦)

**ಅಗರು** – ಸುಗಂಧದ ಮರ (ಅಗರುವ ಮೆಚ್ಚು ಅಚ್ಚ ಸಿರಿಕಂಡದೊಳಗ್ಗಲಿಸಿತ್ತು.. ಬಸಂತಮಾಸದೊಳ್: **ಪಂಪಭಾ,** ೫. ೩೦)

**ಅಗರ್ಹಿತ** – ನಿಂದ್ಯವಲ್ಲದ (ಮಿಗೆ ದುಷ್ಕಾರ್ಯಂಗಳೊಳಗರ್ಹಿತ ಪ್ರಾಯಮಕ್ಕುಮಾ ಶ್ರುತಿಕಷ್ಟಂ: **ಕವಿರಾಮಾ,** ೧. ೬೭)

**ಅಗಲ್** – ಬಿಟ್ಟು ಹೋಗು, ತೊರೆದುಹೋಗು (ಸಂಪ್ರೀತಿಯಿನಾವನನಗಲಳ್ ನೀತಿನಿರಂತರನುದಾರನಾ ನೃಪತುಂಗಂ: **ಕವಿರಾಮಾ,** ೧. ೧); ಊಟದ ತಟ್ಟೆ; ತಳಿಗೆ (ಅಗಲೊಳಗಿಕ್ಕಿದೊಳ್ಳುಣಿಸು ಅಮೇಧ್ಯಮುಂ ಎಂಜಲುಮಪ್ಪುದು: **ಅಜಿತಪು,** ೨. ೫೧)

**ಅಗಲ** – ಒಂದು ವಸ್ತುವಿನ ಅಡ್ಡಳತೆ (ಅದರಗಲಮೊಂದು ಯೋಜನಂ: **ಆದಿಪು,** ೧೦. ೨೭)

**ಅಗಲಂ** – ವಿಸ್ತಾರವಾಗಿ (ಕೂಟಂ ಕೊಂಡು ಬಂದು ಕೆಯ್ಯೊಳ್ ಅಗಲಮಂ ಅಱಿಸಿ ಕಾಣದೆ; **ವಡ್ಡಾರಾ,** ಪು ೧೫೨, ಸಾ. ೨೧

**ಅಗಲಂಬೆಱು** – ಹರಹನ್ನು ಪಡೆ, ವಿಶಾಲವಾಗು (ಇಂತಗಲಂಬೆತ್ತು ಮಹತ್ವಮಂ ತಳೆದು ಬಂದೆಟ್ಟಿಂದನಬ್ಜೇಕ್ಷಣಂ: **ಜಗನ್ನಾವಿ,** ೧೫. ೮೦)

**ಅಗಲಿತು** – ಅಗಲವಾದ (ತಣ್ಣಿತ್ತು, ಗುಂಡಿತ್ತು, ಅಗಲಿತ್ತು: **ಶಬ್ದಮದ,** ೮೭ ಪ್ರ)

**ಅಗಲಿತ್ತು** – ವಿಸ್ತಾರ (ಪುಸಿ ನಸುವಂಚನೆ ನೋರ್ಪು ಅಸಿದು ಅಗಲಿತು ತಕ್ಕು ದಕ್ಕು ಪಗೆ ಕೆಯ್ಬಗೆ ಕೆಯ್ ಕುಸುರಿ ನುಸುಳೆಂಬ ಕೇಣದ ಕುಸುರಿಯಂ ಅಱಿದು ಇಱಿದು ಮೆಱೆದು ಉಱಿದ ಅರೆಬರ್: **ಪಂಪಭಾ,** ೧೦. ೮೧)

**ಅಗಲಿಸು** – ಬೇರೆ ಮಾಡು (ಪ್ರಪ್ರದೇಶಾನುಭಾಗ ಬಂಧಸ್ಥಾನಂಗಳೊಳಗಲಿಸಿ: **ಸುಕುಮಾಚ,** ೬. ೬. ವ)

**ಅಗಲುರ** – ಹರವಾದ ಎದೆ (ಮೃಗಮದದ ಪುಳಿಂಚುಗಳ್ ಪನಿತ್ತಿರಲೆಡೆಯಾದ ಅಗಲುರಮನೆನಗೆ ಪಡೆದಜಂ ಒಗಸುಮಲ್ಲು ಎಲಗೆ ನಿನ್ನನೆನಗೆಯೆ ಒಡೆದಂ: **ಪಂಪಭಾ,** ೮. ೬೭)

**ಅಗಲೆ** – ಅಗಲವಾಗುವಂತೆ; ದೂರಾಗುವಂತೆ (ತಲೆಯಂ ಬಾಗಿ ದೂರದೊಳ್ ಪೊಡವಟ್ಟು ಕೆಲಕ್ಕೆ ಪೋಗಲಮ್ಮದಗಲೆ ಕುಳ್ಳಿರ್ದ ಚಂದ್ರಾಪೀಡನ ಮೊಗಮಂ ನೋಡಿ: **ಕಾದಂಬ,** ೮. ೧೩೩ ವ)

**ಅಗಲೆತ್ತು** – [ಅಗಲ್+ಎತ್ತು] ಊಟದ ತಟ್ಟೆಯನ್ನು ಎತ್ತಿಕೊ (ಬೋನಮೆತ್ತುವಗಲೆತ್ತುವ ದೇವವಿಳಾಸಿನೀಜನಂ: **ಮಲ್ಲಿನಾಪು,** ೧೧. ೫೬)

**ಅಗಲೆವೋಗು** – ದೂರ ಹೋಗು (ಅಗಲೆವೋದ ಹಂಸನನಱಸಲ್ ಪದದೆಳಸುವ ಪೆಣ್ಣಂಚೆ: **ಪಂಪಭಾ,** ೫. ೫೬)

**ಅಗಲೊಗೆ** – ಹರಡಿಕೊಳ್ಳುವಂತೆ ಎಸೆ (ಒಗೆದೊಗೆದು ಮುರಿದು ಜಗುನೆಯೊಳಗಲೊಗೆದುಂ ಪಿಂಡುತಿರ್ಪ ರಜಕನಂ: **ನೇಮಿನಾಪು,** ೮. ೭೬)

**ಅಗಲೊತ್ತು** – ಹರವಾಗಿ ಒತ್ತು (ಸುರಿಗೆಯೊಳುರಮಂ ಬಿಕ್ಕನೆ ಬಿರಿಯಿಱಿದು ಬರಿಯನಗಲೊತ್ತಿ ಮನಂ ಕೊಕ್ಕರೊಸದೆ: **ಪಂಪಭಾ,** ೧೨. ೧೫೩)

**ಅಗಲ್ಕೆ** – ಅಗಲಿಕೆ, ಬೇರ್ಪಡುವಿಕೆ, ವಿಯೋಗ (ನಿನ್ನ ಅಗಲ್ವ ಅಗಲ್ಕೆಯಂ ಪ್ರಾಣದಗಲ್ಕೆಯುಂ ಸಮಂ: **ಆದಿಪು,** ೧೨. ೩೬)

**ಅಗಲ್ಕೆಗಿಚ್ಚು** – ವಿಯೋಗದ ಬೆಂಕಿ; ವಿರಹಜ್ವಾಲೆ (ಬಳಸಿದುದು .. . ಚಕ್ರಯುಗಂಗಳಗಲ್ಕೆಗಿಚ್ಚು.. .. ಸಂಜೆಯ ಕೆಂಪು ಲೋಕಮಮಂ: **ಚಂದ್ರಪ್ರಪು,** ೮. ೪)

**ಅಗಲ್ಕೆವೆಱು** – ವಿಯೋಗ ಹೊಂದು (ಬಲ್ಮುಳಿಸಿಂದಮಗಲ್ಕೆವೆತ್ತ ನಲ್ಲರ ಬಗೆ ಬಳ್ಕೆ: **ಕಬ್ಬಿಗಕಾ,** ೩೦೦)

**ಅಗಲ್ಚು** – ನಿವಾರಿಸು (ಮನಃಕ್ಷತಮಂ ಮನದಿಂದಗಲ್ಚಿದಳ್: **ಸುಕುಮಾಚ,** ೭. ೯); ಬೇರ್ಪಡಿಸು (ಕುರುಪತಿಯಿಂದಂ ಮುನ್ನಂ ತ್ವತ್ಪತಿಯಿಂದಂ ನಿನ್ನನಗಲ್ಚಲ್ಕೆ ಕಪಟಗೋಪಂ ಪ್ರಭುವೇ: **ಗದಾಯು,** ೯. ೧೪); ವಿಯೋಗ (ನೀರಜದ ಮುಚ್ಚು ರಥಾಂದಗಲ್ಚು ಜಾರೆಯರ್ಗೊದವಿದ ಬೆಚ್ಚು: **ಸೂಕ್ತಿಸು,** ೮. ೨೨೪); ಅಗಲಗೊಳಿಸು (ಕರಗಸಂಗಳಿಂದಂ ಮರನಂ ಪೋಟ್ವಂತೆ ಕೆಯ್ಯಂ ಕಾಲನಗಲ್ಚಿ ಪಿಡಿದಡಸಿ ಕಟ್ಟಿ: **ವಡ್ಡಾರಾ,**. ಪು. ೧೨೭. ಸಾ. ೧೫)

**ಅಗಲ್ತರ್** – ದೂರ ಹೋಗು, ಅಗಲು (ಬರಿಗಂಡಂ ಪಿಣಿಲೇಟಿ ರೋಮಮುಡಿದಿರ್ಬೆನ್ನಾಗೆ ಮುಂಗಾಲಗಲ್ತರೆ .. .. ಭೀಕರಂ ಸೊಗಯಿಸಿತ್ತುತ್ಕೇಕರಂ ಸೂಕರಂ: **ಚಂದ್ರಪ್ರಪು,** ೫. ೬೦)

**ಅಗವಡು** – [ಅಗಂ+ಪಡು] ಒಳಗೆ ಬೀಳು, ಸೆರೆಸಿಕ್ಕು (ಪುಣ್ಯಪಾಪಖಳರಿರ್ದಪರಂತವರ್ಗೇಕೆ ಪಕ್ಕುಗೊಟ್ಟು ಅಗವಡುತಿರ್ಪೆ; **ಸಮಯಪ,** ೧೫. ೧೦೦)

**ಅಗಸುತೆ** – ಪಾರ್ವತಿ (ರಾಗದಿಂ ಅಗಸುತೆಯೊಳ್ ಸಂಭೋಗಿಸುತಿಪ್ಪಲ್ಲಿಗೆ ಅಗನಿ ಬರೆ: **ಸಮಯಪ,** ೮. ೫೪)

**ಅಗಸೆ** – ಒಂದು ಬಗೆಯ ಗಿಡ (ಅಗಸೆಯ ಮರಕ್ಕೆ ತೊನಸೆ ಮಱೆದುಂಬಿಯೆಂಬಂತೆ: **ಧರ್ಮಾಮೃ,** ೭. ೧೫೨ ವ)

**ಅಗಸೆವೂಗೊಂಬು** – ಅಗಸೆಯ ಹೂವಿನಂತಹ ಕೊಂಬು (ಪೊದಳ್ದಗಸೆವೂಗೊಂಬೊಪ್ಪೆ ಕೋಟ್ಟುಟ್ಟಿ ಪೆರ್ನೊರೆ ಸೂಸುತ್ತಿರೆ: **ಚಂದ್ರಪ್ರಪು,** ೫. ೬೦)

**ಅಗಟ್** – ಕಂದಕ (ಈಂಟುಜಳಧಿಯೆನಿಪ ಅಗಟ ನೀಳ್ಪಿನಿಂ: **ಪಂಪಭಾ,** ೩. ೨೨); ತೋಡು, ಅಗೆ (ಕಱುಪಿಂ ಬಿಡದೆ ಅಗುಳ್ದವ ಆ ಮುಟ್ಟಂ ಕಂಡರೆ ಎರವಂ: **ಸಮಯಪ,** ೫. ೧೭)

**ಅಗಟ್ತೆ** – ತೋಡುವುದು, ಅಗೆತ (ಒಂದರ್ಥಕ್ಕೆ: ಅಗಟ್ತೆಯೆಂದು ಖನನಂ: **ಶಬ್ದಮದ,** ೩೩ ವೃತ್ತಿ ೧); ಕಂದಕ (ಪದ್ಮಸಂಭವನ ನೆಗಟ್ತೆ ಪೂರ್ವದ ಪೊಗಟ್ತೆ ಕುದುರ್ಗದಗಟ್ತೆ: **ಸೂಕ್ತಿಸು,** ೨. ೩೭)

**ಅಗಾರಣ್ಯ** – ಬೆಟ್ಟಗಾಡು (ಅಲ್ಲಿಂ ಪೋಱಮಟ್ಟು ಮುನ್ನ ಧನಮಂ ಬಯ್ತಿದರ್ ಅಗಾರಣ್ಯದೊಳ್: **ಆದಿಪು,** ೫. ೪)

**ಅಗಾಹಿತರತ್ನ** – [ಅಗ+ಅಹಿತ=ಇಂದ್ರ] ಇಂದ್ರನೀಲಮಣಿ (ಚೆಲ್ಗಲದ ಸಾಂದ್ರಕಜ್ಜಲಲಲಾಮಂ ಅಗಾಹಿತರತ್ನಭೂಷಣಂ: **ಶಬಶಂವಿ,** ೩. ೧೧)

**ಅಗಿ** – ನಡುಗು, ಹೆದರು (ಕಿಡುವೊಡಲ ಕಿಡುವ ರಾಜ್ಯದ ಪಡೆಮಾತುಗೊಳಲ್ಕಮೆನ್ನ ಮೆಯ್ಯಗಿದಪುದು: **ಆದಿಪು,** ೧೪. ೧೨೭); ಹಲ್ಲಿನಿಂದ ಅರೆ (ಕೆಲಕೆಲವು ನಾಯ್ಗಳುರ್ಕಿ ತೊಲಗದೆ ಪಾಯ್ದಗಿದು ತೆಗೆದು ತಿನೆಯುಂ: **ಧರ್ಮಾಮೃ,** ೩. ೪೭); ಅಲುಗಾಡು, ತತ್ತರಿಸು (ಇವನನಾನಿಸುವೆಂ ಮೆಯ್ಯಗಿವಂತೆನುತುಂ ನನೆಯಂಬುಗಳಿಂ ಮದನಂ ಮಹೀಶಮದನನೆಚ್ಚಂ: **ಕುಸುಮಾವ,** ೧೧. ೧೧೧)

**ಅಗಿನಿ** – (ಅಗ್ನಿ) ಕಿಚ್ಚು (ಗಗನಮೆನಿಪ್ಪ ಪಾಳ್ವೊಲದೊಳ್ ಅರ್ಕಸಮುದ್ಧೃತಿಗೆಯ್ದು ಸಂಜೆಯೆಂಬ ಅಗಿನಿಯನಿಟ್ಟು ಮರ್ಬೆನಿಪ ಗೊಬ್ಬರವಂ ತಳಿದು: **ರಾಜಶೇವಿ,** ೧೧. ೬೮)

**ಅಗಿಬಿಗಿ** – ಸಡಗರ, ಸಂಭ್ರಮ (ಆ ಗಂಧೋದಕ ಕತಿಪಯ ಭಾಗಮನೆಲೆಮುಟ್ಟ ಮೆಗಣಿಂ ಮೇಗೆಯೆ ಕೊಳ್ವಾಗಡಿನ ಮುಕುಟೊಳ್ ತಳಿವಾಗಿನಗಿಬಿಗು ತಗುಳ್ದುದಮರೇಶ್ವರರೊಳ್: **ಶಾಂತಿಪು,** ೧೦. ೫೪)

**ಅಗಿಲ್** – ಸುಗಂಧದ ಮರ (ಚಿಲ್ಲವಗಿಲಂಬಟೆ ಕರಂಜ ಪಿಚುಮಂದ: **ಉದ್ಭಟಕಾ,** ೨. ೪೨)

**ಅಗುಂತಿ** – ಆಧಿಕ್ಯ, ಅತಿಶಯತೆ (ಆದಿತ್ಯನ ತೇಜದಗುಂತಿಯುಮಂ: **ಪಂಪಭಾ,** ೧೪. ೬೫)

**ಅಗುಂದಲೆ** – ಅತಿಶಯ (ಪರಕೆಗೆ ಕೊಟ್ಟ ಪಂದಲೆಯಗುಂದಲೆಯಾದುದು ಬೀರರಣ್ಮಿನಾ: **ನೇಮಿನಾಪು,** ೫. ೩೧); ದೊಡ್ಡದು (ಅಗುಂದಲೆಯೆಂದು ಪಿರಿದು: **ಶಬ್ದಮದ,** ಪ್ರಸಾ, ೧); ಅತಿಶಯ (ಮೂಲೋಕಕ್ಕೆ ಪೆಂಪಿಂದ ಅಗುಂದಲೆಯಾಗಿರ್ದುದು ದೇವದಂಪತಿರತಶ್ರೀಸುಂದರಂ ಮಂದರಂ: **ಆದಿಪು,** ೧. ೫೦)

**ಅಗುಂದಲೆಮಾಡು** – ಹೆಚ್ಚಿಸು (ಲಾವಣ್ಯರಸದ ತಂದಲನಗುಂದಲೆಮಾಡೆಯುಂ: **ಪಂಪರಾ,** ೩. ೬೭ ವ)

**ಅಗುಂದಲೆವಡೆ** – ಅಧಿಕವಾಗು (ಪಾಕಂ ಲೋಕೋತ್ತರವೆನಿಸೆ ಶಯ್ಯೆ ರಯ್ಯಮಾಗೆ ಬಂಧಮಗುಂದಲೆವಡೆಯೆ: **ರಾಜಶೇವಿ,** ೫. ೧೯ ವ)

**ಅಗುಂದಲೆವೋಗು** – ಅಧಿಕವಾಗಿ ಹೋಗು (ಕೊಳದೊಂದು ಭಾಗಕ್ಕೆ ನೀರೆಲ್ಲಮಗುಂದಲೆವೋಗೆ: **ಶಾಂತಿಪು,** ೮. ೩೮ ವ)

**ಅಗುರ್** – ಅತಿಶಯವಾಗು, ಅಧಿಕವಾಗು (ಒಡ್ಡಿದ ಮೇಘಸಮೂಹದಂತೆ ನಂಟರ ಕಡುಗೂರ್ಮೆ ಪಣ್ತ ಮರನಂತೆ ವಿಳಾಸದಗುರ್ತ ಮೈಮೆಯುಬ್ಬರಂ: **ಧರ್ಮಾಮೃ,** ೫. ೧೧)

**ಅಗುರು** – ಅಗಿಲ್, ಒಂದು ಸುಗಂಧದ ಮರ (ತೆಗಪಿ ಮೊದಲಲ್ಲಿ ಮತ್ಸ್ಯಾಂಬು ಗವಾಮಿಷಮಗುರು ಪಿಂಡಿಯೆಂಬಿನಿತುವನುಕ್ಕಿಸೆ: **ಲೋಕೋಪ,** ೬. ೩೪): **'–'** ಗುರು ಅಲ್ಲದ ಅಂದರೆ ಲಘು ಅಕ್ಷರ (ಜಟಿಕುಳರೇಫಾಂತಕ್ಕೊಗೆಗುಂ ಶಿಥಿಲತ್ವಂ ಅಗುರುಪೂರ್ವಸ್ಥಿತಿಯಿಂ: **ಶಬ್ದಮದ,** ೫೪)

**ಅಗುರ್ಚು** – ಮೇಲಕ್ಕೇಳು (ಅಗುರುವ ಧೂಪಧೂಮಲತೆಯೆಂದು ಅಸಿತಾಹಿಗೆ ಸಾರ್ವ: **ಕಾದಂಬ,** ೫. ೧೧೪)

**ಅಗುರ್ಬಿಸು** – ಸಂಕೋಚಗೊಳ್ಳು (ಎನ್ನ ಮೈ ಮತ್ತಹಸ್ತಿಗೆ ಪಕ್ಕಾದ ಗುಬ್ಬಿಯ ಮೆಯ್ಯಂತಗುರ್ಬಿಸಿದಪ್ಪುದು: **ಶಾಂತಿಪು,** ೩. ೬೦ ವ);

**ಅಗುರ್ಬು** – ಭಯ (ಅಂತು ನೂರ್ವರೊಳ್ ಒರ್ವನ ಅಗುರ್ಬು ಪರ್ಬೆ ಪರಕಲಿಸೆ: **ಪಂಪಭಾ,** ೧. ೧೩೧ ವ); ಸಾಹಸ (ಮದಧಾರಾಜಳಸಾರದಿಂದುರ್ಬಿದ ಅಗುರ್ಬಂ ತಾಳ್ದಿ ನಿಂದೂರ್ಜಿತ ಜಯಗಜಮಂ ರಾಗದಿಂದೇಜೆದಂ: **ಆದಿಪು,** ೧೨. ೬೧)

**ಅಗುರ್ಬುವಡೆ** – ಭಯಂಕರವಾಗು (ಕಡುಮುಳಿಸೆಂಬ ಕಿಚ್ಚಿನ ಕರ್ಬೊಗೆಯಂತಗುರ್ಬುವಡೆದು ನೊಸಲೊಳ್ ಗಂಟಿಕ್ಕಿದ ಪುರ್ಬುಗಳುಂ: **ಕಬ್ಬಿಗಕಾ,** ೩೧೦)

**ಅಗುರ್ವಾಗು** – ಭಯವನ್ನುಂಟುಮಾಡುವಂತಿರು (ತೋಳೆಂಟು ಅಗುರ್ವಾಗಿರೆ ಬಣ್ಣಂ ಪೊನ್ನ ಬಣ್ಣಕ್ಕೆಣೆಯೆನೆ: **ಆದಿಪು,** ೧. ೭)

**ಅಗುರ್ವಿಸು** – ಭಯಪಡಿಸು (ನೆತ್ತಿಗಳಿಂ ನಿಮಿರ್ದಿರ್ದ ಬಳ್ಳಿಗಳ್ವಿಡಿದು ವಿಷೋರಗಪ್ರತತಿ ನೋಟ್ಪೊಡಗುರ್ವಿಸೆ ಸುಯ್ವ ಸುಯ್ಗಳಿಂ: **ಆದಿಪು,** ೧೪. ೧೪೦); ಹೆದರು (ನೆಱೆದೆಚ್ಚೆಚ್ಚೋರಣದೊಳ್ ಚೇಕಿತ್ಸನನಾರುಮಗುರ್ವಿಸೆ ಘಟೋದ್ಭವಂ ತಱೆದಾರ್ದಂ: **ಪಂಪಭಾ,** ೧೧. ೬೦); ವಿಜೃಂಭಿಸು (ದೆಸೆಯಂ ತೆಕ್ಕನೆ ತೀವಿ ಪರ್ಬಿ ಗಗನಂ ಕೂಡಿಟ್ಟವೊಲ್ ನೀಳ್ದಗುರ್ವಿಸೆ ಬಾಹುಭ್ರಮಿತಾಭ್ರ ವಿಭ್ರಮಗದಂ: **ಗದಾಯು,** ೬. ೩೩)

**ಅಗುರ್ವು** – ಭಯಂಕರತೆ, ಉಗ್ರತೆ (ಕಟ್ಟಲಿಸಿ ಕರಂಗಿದ ಬಲ್ಲಡವಿ ಕಣ್ಗೆ ಪಡೆದುದಗುರ್ವಂ: **ಪಂಪರಾ,** ೭. ೧೧೪); ಸಾಹಸ (ಈಶಂಗೆ ಬೂತಟ್ಟುವಗುರ್ವಂ ತೋಱೆದಪ್ಪೆಂ: **ಜಗನ್ನಾವಿ,** ೧೩. ೩೮); ಅದ್ಭುತ, ಬೆರಗು (ವಾರಿಧಿಯೆ ಗಗನಮಂ ಮುಟ್ಟೆ ನಿಂದಂತಗುರ್ವಿಂದಾಂ ಚೆಲ್ವಾಯ್ತು ಚಕ್ರಿದ್ವಿಪಘಟೆ: **ಆದಿಪು,** ೧೪. ೯೨); ಹೆಚ್ಚಳ, ಆಧಿಕ್ಯ (ಸಲೆ ನಿಲೆ ಬೇವ ಗುಗ್ಗುಳದ ಕರ್ವೊಗೆಯಿಂದಮಗುರ್ವನಾಳ್ದ ಕತ್ತಲಿಸುವ ಚಂಡಿಕಾಭವನದೊಳ್: **ಕಾದಂಬ,** ೨. ೬೫)

**ಅಗುರ್ವುಗಿಡು** – ಶಕ್ತಿಯುಡುಗು, ಸತ್ವಗುಂದು (ಆನೆಯುಮಗುರ್ವುಗಿಡುಗುಮದಾನಂ: **ಶಾಂತಿಪು,** ೨. ೩೩)

**ಅಗುರ್ವುಗೊಳ್** – ಹೆದರು (ಷಟ್ಖಂಡಭೂಮಂಡಳಂ ನಿಮಿರ್ದಾಜ್ಞಾಪ್ರಸರಕ್ಕಗುರ್ವುಗೊಳೆಯುಂ: **ಆದಿಪು,** ೧೫. ೪)

**ಅಗುರ್ವುವಡೆ** – ಅತಿಶಯಗೊಳ್ಳು (ಅತಿಪ್ರಬಳ ಬಲಮನಾತನ ಮೇಲಟ್ಟಲದನೆಬ್ಬಟ್ಟಿ ಕಳೆದಗುರ್ವುವಡೆದ ಮಹಾಬಳದಿನುರ್ವಿ: **ಕರ್ಣನೇಮಿ,** ೫. ೭೮ ವ)

**ಅಗುರ್ವುವೆಱು** – ಅಗುರ್ವುವಡೆ (ಅಗುರ್ವುವೆತ್ತ ಮುಳಿಸಿಂ ಕೊಲೆಯಿಂದಘಮೋಹಬಂಧಮಾದುದು: **ಸಮಯಪ,** ೧೫. ೧೦೨)

**ಅಗುಳ್** – ಅನ್ನದ ಅಗುಳು (ಕುಕ್ಕುಟಗುದಿವಲ್ಲಿ ಕೊಟ್ಟುಗ್ದಿಯೆ ಮೇಗೆ ಸಿಡಿಲ್ದ ಅಗುಳಂತೆ: **ಪಂಪಭಾ,** ೧೧. ೧೫೩); ನೆಲವನ್ನು ಅಗೆ (ಅಗುಳ್ದು ತುದಿಗೊಂಬಿನೊಳ್ ಮೆಲ್ಲಗೆ ಪೊತ್ತು ಅಭಿಷೇಕ ಮೃತಿಕೆಯಂ ಒಡಸಂದತ್ತು: **ಕಾದಂಬ,** ೧. ೧೭೫)

**ಅಗುಟ್** – ಅಗೆ, ತೋಡು (ಘನಾಘನನಿನಾದದಿಂ ಬೃಂಹಿತಂಗೆಯ್ವ ವಿಜಯಗಜಮಂ ನೆಲನಂ ಪೊಕ್ಕಡಂಗಿದ ಪಗೆವರಂ ಅಗುಟ್ದು ಕೊಲ್ವುದಂ ಉದಾಹರಿಸುವಂತೆ: **ಪಂಪಭಾ,** ೯. ೯೫ ವ); ಚುಚ್ಚು (ಕಠಿನಭೂಮಿಯೊಳ್ ನಡೆದೊಡೆ ಕಿಱುಗಲ್ಗಳುಂ ಪೆಟ್ಟೆಗಳುಂ ಅಗುಟ್ದು ಪುಗುಳೊಡೆದು ಪೊಱಮಟ್ಟು: **ವಡ್ಡಾರಾ,** ಪು ೨೯, ಸಾ ೧೦); ಮುಳುಗು (ಅಗಟ್, ಅಗುಟ್ –.. .. ಜಲನಿಮಜ್ಜನೇ:

**ಶಬ್ದಮದ** ಧಾ ೯೦೯); ಕಂದಕ (ಕೈಲಾಸಮಂ ಬಳಸೆಯುಂ ಅಗುಟ್ಟಿಳುಮಂ ಮಾಡುತ್ತಿರ್ಪನ್ನೆಗಂ: **ಅಜಿತಪು,** ೧೦. ೧೦. ವ); ಬೆಂದ ಅಕ್ಕಿ ಕಾಳು (ಒಂದು ವರ್ಷದಾರಂಭಕ್ಕಾಱದೆ ಸಾವನ್ನೆವರಂ ಎಂಜಲಗುಟಿನಾಯ್ದುಂಬೊಕ್ಕಲ ಮಗನುಂ: **ಧರ್ಮಾಮೃ,** ೭. ೧೫೩ ವ)

**ಅಗುಟಿಸು** – ಅಗೆಯಿಸು, ತೋಡಿಸು (ಅಗುಟಿಸು –ಖನನೇ: **ಶಬ್ದಮದ,** ಧಾ ೮೯); (ನೀರೆಸೆವಂತಗುಟಿಸುವುದು ಕೂಪ ಸರೋವರ ದೀರ್ಘಿಕಾ ತಟಾಕಂಗಳುಮಂ: **ಲೋಕೋಪ,** ೫. ೩)

**ಅಗುಟೂಟ** – ಅನ್ನಪ್ರಾಶನ (ಅವಯೋಗಮಾಗದಿರೆ ಮಾಟ್ಕಿಗುಟೂಟಮನಂತದುತ್ತಮಂ: **ಲೋಕೋಪ,** ೨. ೨೯)

**ಅಗುಟೂಡು** – ಅನ್ನಪ್ರಾಶನ ಮಾಡು (ಮಾಸಷಟ್ಕಂ ಪೋಗೆ ಪೂಜಾವಿಧಿಪೂರ್ವಕಂ ಯಥಾಕ್ರಮದಿನಗುಟೂಡುವುದು: **ಚಾವುಂಡಪು,** ೬೧)

**ಅಗುಟ್ಟು** – ಮುಳುಗಿಸು, ಅದ್ದು (ಅಗುಟ್ಟು – ಜಲಾಶಯಮಗ್ನೇ: **ಶಬ್ದಮದ,** ಧಾ ೧೬೧)

**ಅಗೆ** – ಮೊಳಕೆ, ಅಂಕುರ (ತಾರಗೆಗಳಗೆಗಳಂತಿರೆ ತಾರಾಪಥದೊಳ್ ನಿರಂತರಂ ತುಱುಗಿರೆ: **ಆದಿಪು,** ೬. ೫೪); ಸಸಿ (ಭೂತಲದೊಳ್ ನಾಂಟಿದ ಬೇಂಟಮೆಂಬಗೆಗೆ ನೀರ್ವೊಯ್ದಂತೆ: **ಲೀಲಾವತಿ,** ೬. ೧೨೯); ತೋಡು

**ಅಗೆಯನಿಡು** – ಸಸಿಯ ಒಟ್ಟಿಲು ಹಾಕು (ಸುರಭೂರುಹದ ಅಗೆಯನಿಡಲ್ ಪರಿಜನದಭಿಜನದ ಗೇಹದೊಳ್ ಬಯಸಿದಳ್ ಆ ಸರಸಿಜವಾಣಿ ಗರ್ಭಸ್ಥನ ಪರಮೌದಾರ್ಯ ಪ್ರಭಾವಮಂ ಪ್ರಕಟಿಪವೊಲ್: **ಮಲ್ಲಿನಾಪು,** ೪. ೬೯)

**ಅಗೆಯಿಕ್ಕು** – ಸಸಿಯ ಒಟ್ಟಿಲನ್ನು ಹಾಕು (ಅಗೆಯಿಕ್ಕುಗೆ ಪುಣಿಸೆಯ ಬೀಜಗಳನವಂ ಕಿಟ್ಟು ನಾಂಟಿ; **ಲೋಕೋಪ,** ೬. ೩೬)

**ಅಗೆಯೆತ್ತು** – ಮೊಳಕೆ ಕೀಳು (ಅಗೆಯೆತ್ತುತ್ತಬ್ಜಿನೀ ನಾರಿಗೆ ಮಣಿಗಣಮಂ ಸೂಸುತಂ (**ಕುಸುಮಾಕಾ,** ೧. ೧೦೪); ಸಂಪೂರ್ಣವಾಗಿ ನಾಶಮಾಡು (ಅಂತು ಪಗೆಯನಗೆಯೆತ್ತಿ ಕಳೆದು: **ಪಂಪರಾ,** ೧೦. ೧೩೨)

**ಅಗೆಯೆಟ್ಟುಪೋಗು** – ಸಂಪೂರ್ಣ ನಾಶವಾಗು (ಚಕೋರ ಕೋಟಿಗಳ ಮನೋಮುದಮಂ ಕರಗುವಂದಮಂ ಒಂದಿದುಪಲಂಗಳಾನಗೆಯಗೆಯೆಟ್ಟು ಪೋಗಲಗಲ್ ಅನುಗೆಯ್ದುದು: **ಕುಸುಮಾಕಾ,** ೪. ೬೬)

**ಅಗೆವೊಯ್** – [ನಾಟಿಗಾಗಿ] ಬೀಜ ಬಿತ್ತು (ಅತಿಸೇವ್ಯದಿವ್ಯ ಭಾಷಾಲತೆಗೆ ಅಗೆವೊಯ್ದರ್ಥಬೀಜದೆಳೆಮೊಳೆಯಂತೇಂ: **ಪುಷ್ಪದಂದಪು,** ೧೨. ೬೩)

**ಅಗೆವೋಗು** – ಮೊಳಕೆ ಒಡೆ (ಅಗೆವೋದಂತಿರ್ಪ ಪೂರ್ವಶ್ರುತ ವಚನಸುಧಸಾರದಿಂ ಕಂಟಕಂಗಳ್ ನೆಗೆಯಲ್: **ಕಾದಂಬ,** ೨. ೮೩)

**ಅಗೌಕಸ** – ಮರವೇ ಮನೆಯಾಗಿ ಉಳ್ಳದ್ದು, ಕೋತಿ (ಶರಭನಿಭಾರಿ ಸೈರಿಭಮಿಭಂ ಬನವಂದಿತರಕ್ಷು ಖಡ್ಗಿ ಶಂಬರ ಮೃಗ ಮೇಷಮೇಣಜಭೇದನಮೃಕ್ಷಮಗೌಕಸಂ ಮೊಲಂ: **ಶಬರಶಂ,** ೩. ೩೪)

**ಅಗ್ಗ** – ಶ್ರೇಷ್ಠ (ನಿಮ್ಮೊಳಗ್ಗದ ಪರಶುಧರಂ ಪೊಣರ್ದು ತಾನದಂದೇನಾದಂ: **ಪಂಪಭಾ,** ೧೦. ೭); ಅಸೀಮ ಶಕ್ತಿ (ಮದನಂಗೆ ಚೈತ್ರನಲರಗ್ಗದ ಕೂರಲಗಾಗೆ: **ಕುಸುಮಾಕಾ,** ೯. ೫೮); ತುದಿ (ದೇವಕುಲೇಂದ್ರನುಪ್ಪರಿಗೆಯಗ್ಗದ ಕಾಂಚನ ಕುಂಭದಂತೆ ಚೆಲ್ವಾವರಿಸಿರ್ಪಿನಂ: **ಉದ್ಭಟಕಾ,** ೧೧. ೮); ಇನ್ನಷ್ಟು ತೀವ್ರ (ನಸಿಗನೊಳಗ್ಗದ ನಸಿಗಂ: **ಸಮಯಪ,** ೭. ೩೦)

**ಅಗ್ಗಂಬೆಱು** – [ಅಗ್ಗಂ+ಪೆಱು] ಶ್ರೇಷ್ಠವಾಗು (ಇವಳ ಮುಖಮೆಂಬಗ್ಗಂಬೆತ್ತಿರ್ದಪೆಂಪಿನ ಚಕ್ರದಿಂದಿವಳ ನಳಿತೋಳೆಂಬೀ ತೀವ್ರಾಸಿಯಿಂ ಸ್ಮರನಂಜಿಪಂ: **ಧರ್ಮಾಮೃ,** ೩. ೩೪)

**ಅಗ್ಗಂಮಾಡು** – ದೊಡ್ಡದು ಮಾಡು (ಎಲ್ಲ ತೆಱದಿಂ ತಮ್ಮೆಗ್ಗನಗ್ಗಂ ಮಾಡಿ ಬಂದ ಬರವುಮಂ ನೋಡಿ: **ಆಚವರ್ಧ,** ೯. ೪೩ ವ)

**ಅಗ್ಗರಣೆ** – ಹಗ್ಗ (ಆ ಮಹಾ ಮದೇಭಂ .. .. ನೆಲದ ನಾಲಗೆಯಂ ಕೀಟ್ವಂತೆ ಬಾಳ್ಗಂಬಮಂ ಕಿಟ್ಟು ಅಗ್ಗರಣೆಯಂ ನುರ್ಗುಮಾಡಿ: **ಚಂದ್ರಪ್ರಪು,** ೯. ೧೦೧ ವ)

**ಅಗ್ಗಯಿಲೆ** – ಅಗ್ಗಾಯತಿ (ಬಚ್ಚರ ದೂಸಿಗರ ನಿಯೋಗಿಗಳ ಅಗ್ಗಯಿಲೆಯಪ್ಪ ಸೂಳೆಯರ ಸಾಮಂತರ ಕಸವರಂಗಳೆಲ್ಲಮಂ ಕಳ್ದು: **ವಡ್ಡಾರಾ,** ಪು. ೧೨೩. ಸಾ.೫)

**ಅಗ್ಗಲ** – ಅಧಿಕ, ಅತಿಶಯ (ಮೈಮೆಯ ಮಾನಸಿಕ್ಕೆ ಅಗ್ಗಲದ ಪೊಗಟ್ಟಿ ತನ್ನದೆನೆ ಪೆಂಪು ಮನೋಹರಿಗಲ್ಲದಕ್ಕುಮೇ: **ಆದಿಪು,** ೧. ೭೨)

**ಅಗ್ಗಲಂ** – ಹೆಚ್ಚಾಗಿ (ಅಗ್ಗಲಮೆಸೆದತ್ತು ದಿಗ್ವಲಯದಂತೆ ನಿಶಾಂತದೊಳಂಗನಾಜನಂ: **ಅಜಿತಪು,** ೬. ೬೪)

**ಅಗ್ಗಲಿಸು** – ಹೆಚ್ಚಿಸು (ತನಗೆ ಅಗ್ಗಲಿಸಿದಲಂಪಂ ಕುಡೆ ಪೊಸತಲರ್ದಂಕುರಿಸಿರ್ದ ಕಲ್ಪಲತೆಯನೆ ಪೋಲ್ತಳ್: **ಆದಿಪು,** ೭. ೪೭); ಹೆಚ್ಚಾಗು (ಭೂರುಹಂ ಕುಸುಮಶೋಭೆಯೊಳ್ ಅಗ್ಗಲಿಸಿರ್ದವೊಲ್ ಮನೋಹರಮೆನಿಸಿತ್ತು: **ಆದಿಪು,** ೮. ೪); ಪ್ರಬಲವಾಗು (ಕುಲಜರಂ ಉದ್ಧತರಂ ಭುಜಬಲಯುತರಂ ಹಿತರಂ ಈ ಸಭಾಮಧ್ಯದೊಳ್ ಅಗ್ಗಲಿಸಿದ ಮದದಿಂ ನಾಲಗೆ ಕುಲಮಂ ತುಬ್ಬುವವೊಲ್ ಉಱದೆ ನೀಂ ಕೆಡೆನುಡಿವೈ: **ಪಂಪಭಾ,** ೧೦. ೨೦); ಸಂತಸಪಡು (ಕುಲಟೆಯರೊಳ್ ನೆರೆದು .. .. ಅಗ್ಗಲಿಪವರ್ಗೆ ಅದೆಂದುಂ ನಿಲಲಱಿಯವು ಮೋಕ್ಷದಾಯಕಂ ಸಚ್ಚರಿತಂ: **ಸಮಯಪ,** ೫. ೭೩); ವ್ಯಾಪಿಸು (ಅಗ್ಗಳದ ವೈಷ್ಣವಮೋಹಮೆ ನಿನ್ನೊಳ್ ಅಗ್ಗಲಿಸಿದುದಕ್ಕುಂ: **ಪಂಪಭಾ,** ೯. ೪೪)

**ಅಗ್ಗವಳ** – ಒಬ್ಬ ಅಧಿಕಾರಿ (ಪಡಿಯಱರ ಪಡೆವಳರ ಅಗ್ಗವಳರ ಕಬ್ಬಿಗರ .. .. ಅಂದಣದ ಗೊಂದಣಂ .. .. ತಿಂತಿಣಿಗೊಂಡು: **ಅನಂತಪು,** ೬. ೯೪ ವ)

**ಅಗ್ಗಳ** – ಅತಿಶಯ, ಅಧಿಕ (ಅವಱಿಂದ ಅಗ್ಗಳಮೆನೆ ನೆಗಟ್ದಾ ಬಾಹುಬಲಿಯನೆಂತೆಱಗಿಸುವೆಂ: **ಆದಿಪು,** ೧೪. ೪೧)

**ಅಗ್ಗಳಗಣ್** – ಹೆಚ್ಚಾದ [ಮೂರನೆಯ] ಕಣ್ಣು, ವಿಶೇಷ ದೃಷ್ಟಿ (ತೋಱಿದನೆಱಕದೆ ಹರಿಗಂಗೆ ರುದ್ರಂ ಅಗ್ಗಳಗಣ್ಣಂ:, **ಪಂಪಭಾ,** ೮. ೨೩)

**ಅಗ್ಗಳವಸ್ತು** – ಶ್ರೇಷ್ಠ ವಸ್ತು (ಒಳ್ಳಿತಪ್ಪ ಅಗ್ಗಳವಸ್ತುವೆಲ್ಲಂ ಪೃಥ್ವಿಯನಾಳ್ವೊಂಗಕ್ಕುಂ: **ವಡ್ಡಾರಾ,** ಪು. ೧೧೫. ಸಾ. ೨೬ ಮತ್ತು ಪು. ೧೧೬. ಸಾ. ೧)

**ಅಗ್ಗಿವಳೆದೆಣ್ಣೆ** – ಕಾದ ಎಣ್ಣೆ, ಉರಿಯುವ ಎಣ್ಣೆ (ಬಳೆದು ವಿಷಾಗ್ನಿಯಗ್ಗಿವಳೆದೆಣ್ಣೆಯೊಳೆಟ್ಟುರಿವಗ್ನಿಯಂತೆ ನೀರೊಳಗುರಿದೇಟಿ: **ನೇಮಿನಾಪು,** ೮. ೪೦)

**ಅಗ್ಗಳಿಕೆ** – ಅತಿಶಯತೆ, ಮಹಿಮೆ (ಆ ಸಂಖ್ಯೆಯೊಳ್ತಾತ್ಪರ್ಯಗೆಯ್ವನ್ನವೆಂಬ ಅಗ್ಗಳಿಕೆಯಿಂ ಎಸೆದತ್ತು ಏಕರಜ್ಜುಪ್ರಮಾಣಂ ತಿರ್ಯಗ್ಲೋಕಂ: **ಆದಿಪು,** ೧. ೪೮)

**ಅಗ್ಗಳಿಕ್ಕೆ** – ಅಗ್ಗಳಿಕೆ (ನಿಜಾನುಜರ್ ನೆರಪಿದೊಂದೈಶ್ವರ್ಯದಿಂ ರಾಜಸೂಯಮಂ ಇಂದು ಅಗ್ಗಳಿಕ್ಕೆಯ ಮಖಂ ತಾನೆಂಬಿನಂ: **ಪಂಪಭಾ,** ೬. ೬೬)

**ಅಗ್ಗಳಿಸು** – ಹೆಚ್ಚಾಗು (ಲಳನೆಯರಾತನಂ ಬಯಸಿ ನೋಡಲೊಡಂ ಮದನಾಗ್ನಿದಾಹಂ ಅಗ್ಗಳಿಸದೆ ಮಾಣದು: **ಲೀಲಾವತಿ,** ೧. ೯೬)

**ಅಗ್ಗಳೆ** – ಹೆಚ್ಚು ಹಣ ಕೀಳುವ ಸೂಳೆ (ಒಂದು ದಿನಂ ನೀಂ ತಳ್ವಿದೊಡಂದಸುವಿಂಗುಪಟಳಂ ಮನಃಪ್ರಿಯ ಕೇಳೇನೆಂದಜೆಯೆನೆನಗೆ ನಿಕ್ಕುವಮೆಂದಣಕಿಸಿ ಧನಮನುಗಿವಳಗ್ಗಳೆ ಧರೆಯೊಳ್: **ಉದ್ಭಟಕಾ,** ೧೦. ೬೫)

**ಅಗ್ಗಟೆ** – ಚಿಲಕ (ಕ್ಷಳಕ್ಕೆ: ಅರ್ಗಳಂ–ಅಗ್ಗಟೆ: **ಶಬ್ದಮದ,** ೩೧, ವೃತ್ತಿ, ಪ್ರಯೋಗ); ಅತಿಶಯ (ಸುಟಿವ ತುರಂಗವಾಹಳಿಯ ಪೂವಲಿಯೊಳ್ ಪೊರೆದಂಕದಾನೆಯಗ್ಗಟೆಯ ಮದಾಂಬುಕರ್ದಮದೊಳರ್ದು: **ಅನಂತಪು,** ೩. ೧೬)

**ಅಗ್ಗಾಯತಿ** – ಹೆಚ್ಚು ಹಣ ತೆಗೆದುಕೊಳ್ಳುವ ಸೂಳೆ (ಅಗ್ಗಾಯತಿಯಪ್ಪ ಸೂಳೆಗಂ ಕುಡಲಿಲ್ಲದೆ ಬಡಬೊಜಂಗಂ ಪಟೆದು ಸಾಮಾನ್ಯದ ಭೇದವಾದಿಗಳಂ ಪೊಗಟ್ಟಂತೆ: **ಧರ್ಮಾಮೃ;** ೮. ೪೬ ವ)

**ಅಗ್ಗಾಯಿಲೆ** – ಅಗ್ಗಾಯತಿ (ಸಗ್ಗದ ಅಗ್ಗಾಯಿಲೆಯರ್ ಅರಸನಂ ಮೆಚ್ಚಿಸಲ್ಕಾರ್ತು: **ಪುಷ್ಪದಂಪು,** ೧೩. ೯೨);

**ಅಗ್ಗಿ** – [ಅಗ್ನಿ] ಬೆಂಕಿ (ಕೆಳಗಣ ನಕಾರಂ ಗಕಾರಮಾದುದರ್ಕೆ ಅಗ್ನಿ–ಅಗ್ಗಿ, ಲಾಗ್ನಿಕಂ ಲಗಿಗ್ಗಂ: **ಶಬ್ದಮದ, ೨೮೦, ಪ್ರಯೋಗ)**

**ಅಗ್ಗಿಕೊಂಡ** – ಕೆಂಡದ ಗುಂಡಿ (ವಿರೋಧಿಯ ಬರ್ಪ ಬಟ್ಟೆಯೊಳ್ ಮೋಹದಿನೆಯ್ದೆ ನಿರ್ಮಿಸಿದಳಲ್ ಅದ್ಭುತಮಾಗಿರಲಗ್ಗಿಕೊಂಡಮಂ: **ಕರ್ಣನೇಮಿ,** ೭. ೧೯)

**ಅಗ್ಗಿಮೊಗ** – [ಅಗ್ನಿಮುಖ] ದೇವತೆ (ನಲ್ಲೊಗಮಂ ಅಗ್ಗಿಮೊಗರ್ಗೆ ಸಮಂತು ಬೆಳ್ಪಸಂದಳೆದು ಎಸೆದಿರ್ದ ಬಾನ್ನವಿರಂ ಒಳ್ವರಿಜಂ ತಳೆದೊಪಿ ತೋಱಿದಂ: **ಶಬರಶಂ,** ೫. ೯)

**ಅಗ್ಗಿವೆಗಡು** – ಬೆಂಕಿಯ ಭಯ (ತದುಕಿನ ಮರದ ಮುಟಿಗೆಗಣ್ಣೊಳೊಗೆದ ಪಗಿನೊಳಗಿವೆಗಡಿಂ ಕಾಲ್ದೊಡರ್ದು ಮಿಡುಕಿ: **ಚಂದ್ರಪ್ರಪು,** ೫. ೬೫ ವ)

**ಅಗ್ಗಿಸು** – ನಾಶಪಡಿಸು (ಸೊವಡಿಂಗಂ ಅಗ್ಗಿಸಿ ತುಂಬಿವೆರಸು ಕೂಂಕಿ ಬಂಕಿ ಬಿಟ್ಟಿ ಕುವಳಯಾಪೀಡನಂ: **ನೇಮಿನಾಪು,** ೮. ೮೫ ವ)

**ಅಗ್ಗು** – ನಾಶವಾಗು (ಉಳಿತವಿಳಾಸಂ ಅಗ್ಗಿ ದಿನನಾಥ ವಿಯೋಗದೊಳ್ ಆದ ಅವಸ್ಥೆ ಅಗ್ಗಳಿಸಿರೆ ಕಂಡು ತಾಂ ನಲವಿನಿಂ ನಗುತಂ ನೆಲೆವೆರ್ಚಿ ರಂಜಿಪುತ್ತಳಿನಿಗೆ ಕೋಪದಿಂ ಪುದಿದು ಪಲ್ಮೊಱೆವಂದಮಾಯ್ತು ಕುಟ್ಮಳಿತ ಸರೋರುಹೋದರಗತ ಉನ್ಮದ ಭೃಂಗಝುಣತ್ಕೃತಸ್ವನಂ: **ಶಾಂತೀಶ್ವಪು,** ೧೧. ೧೦)

**ಅಗ್ನಿ** – ಬೆಂಕಿ (ಸಪ್ತಾರ್ಚಿ ಕೃಶಾನುವಗ್ನಿ ವಹನಂ: **ಅಭಿದಾವ,** ೧. ೩೯)

**ಅಗ್ನಿತ್ರಯ** – ಮೂರು ಬಗೆಯ ಬೆಂಕಿಗಳು (ಶರೀರ ಸಂಸ್ಕಾರಾದಿ ಗಾರ್ಹಪತ್ಯ ದಕ್ಷಿಣಾಗ್ನ್ಯಾಹವನೀಯವೆಂಬ ಪೆಸರಂ ಪಡೆದ ಅಗ್ನಿತ್ರಯಗಳೊಳ್: **ಆದಿಪು,** ೧೫. ೮೬ ವ)

**ಅಗ್ನಿಪುತ್ರಿ** – ಬೆಂಕಿಯ ಮಗಳು, ದ್ರೌಪದಿ (ನೀನಗ್ನಿಪುತ್ರಿಯ್ಯೆ ಪವಮಾನತನೂಭವನೆನಾನಣಂ ಕೂಡೆ: **ಗದಾಯು,** ೧. ೬೬)

**ಅಗ್ನಿಪ್ರವೇಶ** – ಬೆಂಕಿಯನ್ನು ಹುಗುವುದು (ಮೇಘವರ್ಣಂ ಎನಗೆ ಇನಿತು ಅವತೆಯಂ ಮಾಡಿದಂ ಈ ಪರಾಭವಮಂ ಅಗ್ನಿಪ್ರವೇಶಂಗೆಯ್ದು ನೀಗಿ: **ಪಂಚತಂತ್ರ,** ೩೫೪ ವ)

**ಅಗ್ನಿಮಂಥನ** – ನೆರುವಲ್ ಎಂಬ ಗಿಡ (ಅಗ್ನಿಮಂಥನ ನೆಱುವಲ್: **ಅಭಿದಾವ,** ೮. ೨೭)

**ಅಗ್ನಿಮಿತ್ರ** – ಗಾಳಿ (ಕಲಿ ಮೂಕವರಾಹನಗ್ನಿಮಿತ್ರನ ಹರಿಣಂ ವಿನಾಯಕನ ಮೂಷಕ .. .. ನಾಯಿಗರಿವಲ್ಲದವು ನಾಯಿಗೆ ಸಾಹಸಮಲ್ಲದೇವನಾ: **ಸೂಕ್ತಿಸುಧಾ,** ೩. ೧೨೩)

**ಅಗ್ನಿಶೌಚವಸ್ತ್ರ** – ಉಬ್ಬೆಗೆ ಹಾಕಿ ಶುಚಿಮಾಡಿದ ಬಟ್ಟೆ (ನಿರ್ಮಳಮಪ್ಪುದು ಲಾವಣ್ಯಂ ನಳಿನಾನನೆಗೆ ಅಗ್ನಿಶೌಚವಸ್ತ್ರದ ತೆಱದಿಂ; **ಕಾದಂಬ,** ೮. ೪೧)

**ಅಗ್ನಿಸಾಕ್ಷಿ** – ಅಗ್ನಿಯನ್ನು ಸಾಕ್ಷಿಯಾಗಿರಿಸಿಕೊಳ್ಳುವುದು (ಪುರೋಹಿತನಂ ಇದಿರ್ಗೊಂಡಗ್ನಿಸಾಕ್ಷಿಯೊಳ್ ಜ್ಯೋತಿಃಪ್ರಭೆಯಂ ಯಥೋಕ್ತವಿಧಿಪೂರ್ವಕಂ ಕಂಡು: **ಶಾಂತಿಪು,** ೬. ೧೨ ವ)

**ಅಗ್ನಿಸ್ತಂಭ** – ಬೆಂಕಿಯು ಸುಡದಂತೆ ಮಾಡುವ ವಿದ್ಯೆ, ಮಂತ್ರ (ಅದೆಂತು ಹರಿಯಿರ್ದಪನೀ ಹೃದಯಾಗ್ನಿಯೊಳಗ್ನಿಸ್ತಂಭದ ವಿದ್ಯೆಯನೀಗಳಿಂತು ಕಲ್ತನೋ ಸಖಿಯೇ: **ಜಗನ್ನಾವಿ,** ೧೧. ೪೮)

**ಅಗ್ನೀಧ್ರ** – ಯಜ್ಞಾಗ್ನಿಯನ್ನು ಪ್ರಜ್ವಲನ ಮಾಡುವವನು (ವ್ಯಾಸ ಕಶ್ಯಪ ವಿಶ್ವಾಮಿತ್ರ ಭರದ್ವಾಜ ಬ್ರಹ್ಮ ಅಧ್ವರ್ಯ ಅಗ್ನೀಧ್ರರ ಮೈತ್ರಾವರುಣ ಅಗ್ನಿಪರಿಚಾರ: **ಪಂಪಭಾ,** ೬. ೩೩ ವ)

**ಅಗ್ರ** – ತಲೆ (ಶಿರಂ ಅಗ್ರಂ: **ಅಭಿಧಾವ,** ೩. ೧. ೨೫); ಮುಂಭಾಗ (ಅಂಕಮದಾದಿ ಪುರೋಂಶವಿಟಂಕಂಗಳೊಳಂ ಅಗ್ರ ಶಬ್ದಮಂ ನಿಗದಿಸುರ್. **ಅಭಿಧಾವ,** ೩. ೧. ೭೭); ತುದಿ (ವಿಟಕಂಗಳೊಳ್ ಅಗ್ರಶಬ್ದಮಂ ನಿಗದಿಸುವರ್: **ಅಭಿಧಾವ,** ೩. ೧. ೭೭)

**ಅಗ್ರಕಾರ್ಯ** – ಮೊದಲ ಕೆಲಸ, ಮುಖ್ಯ ಕೆಲಸ (ಕೇಳದತಿಹಿತರ ವಚನಮನಾಲೋಚಿಸದಗ್ರಕಾರ್ಯಮಂ ವ್ಯಗ್ರತೆಯಂ ತಾಳಿ: **ರಾಜಶೇವಿ,** ೧೩. ೯)

**ಅಗ್ರಜ** – ಹಿರಿಯವನು, ಅಣ್ಣ (ಅಗ್ರಜಂ ಜ್ಯೇಷ್ಠಮ ಜ್ಯಾಯಂ ಎನಿಕ್ಕುಂ: **ಅಭಿಧಾವ,** ೧. ೧೧. ೧೯)

**ಅಗ್ರಜನ್ಮ** – ಬ್ರಾಹ್ಮಣ (ಆತಂಗೆ ಧಾರ್ಮಿಕರಪ್ಪ ಅಗ್ರಜನ್ಮರೆಲ್ಲಂ ಸೋಮಸೂರ್ಯಗ್ರಹಣಾದಿ ಪುಣ್ಯತಿಥಿಗಳೊಳ್ ಭಕ್ತಿಪೂರ್ವಕಂ ಸುವರ್ಣದಾನಮಂ ಕುಡೆ: **ಪಂಚತಂತ್ರ,** ೧೨೪ ವ)

**ಅಗ್ರಜಾತ** – ಅಣ್ಣ (ಎನಗೆ ಅಭಿವಂದಿತಾರ್ಥರ್ ಅವಧಾರಿಸು ಚಿತ್ತದೊಳ್ ಅಗ್ರಜಾತ ನೀಂ ಮುನಿಯದೆ ಪಾಂಡುನಂದನರ್ಗೆ ಬಾಡಮನಯ್ದನೆ ಬೇಡೆ: **ಗದಾಯು,** ೭. ೫೯)

**ಅಗ್ರಣಿ** – ಮುಂದಾಳು, ಸೇನಾಧಿಪತಿ (ಅಗ್ರೇಸರಂ ಪುರಸ್ಸರಂ ಅಗ್ರಣಿ ಮುಖ್ಯಂ .. .. ಚಮೂಪತಿಯಕ್ಕುಂ: **ಅಭಿಧಾವ,** ೧. ೧೪. ೯)

**ಅಗ್ರಪದಾತಿ** – ಮುಂಗಡೆಯ ಕಾಲಾಳುಪಡೆ (ಈತನ ಯಾನದೊಳ್ ಅಗ್ರಪದಾತಿ ಪದೋದ್ಧೂತಧೂಳಿ ಸಾಮಂತಶಿಖಾವಿನೂತನಮಣಿ: **ಶಾಂತಿಪು,** ೫. ೧೧)

**ಅಗ್ರಪಲ್ಲವ** – ಆನೆಯ ತುದಿಬಾಲ (ಶಿಖರಿತರಂಗಿತ ಚತುರಂಗುಳ ಅಗ್ರಪಲ್ಲವನಿವಸನಂ: **ಆದಿಪು,** ೧೩. ೪೫. ವ)

**ಅಗ್ರಪುತ್ರ** – ಹಿರಿಯ ಮಗ (ತಪಕ್ಕೆ ಪೋಪ ಪದದೊಳ್ ತನ್ನಗ್ರಪುತ್ರಂ ಕ್ರಮಂಬಿಡಿದಿರ್ದಂ: **ಆದಿಪು,** ೨. ೩೭ ವ)

**ಅಗ್ರಪೂಜೆ** – ಮೊದಲ ಗೌರವ (ಪೇಟಿಮೀ ಸಭೆಯೊಳ್ ಅಗ್ರಪೂಜೆಗಾರ್ ತಕ್ಕರ್: **ಪಂಪಭಾ,** ೬. ೪೦ ವ)

**ಅಗ್ರಭವ** – ಅಗ್ರಜ, ಅಣ್ಣ (ಒಲ್ದೀಕ್ಷಿಸಿದಂ ನಿಜಾಗ್ರಭವನಂ ದೈತ್ಯಾರಿ: **ಜಗನ್ನಾವಿ,** ೪. ೫೮)

**ಅಗ್ರಮಹಿಷಿ** – ಪಟ್ಟದ ರಾಣಿ (ತನ್ನಗ್ರಮಹಿಷಿಯ ಮನಮನಾಱೆ ನುಡಿದು ಪಂಡಿತೆಯಂ .. .. ಮನಂಗೆಲ್ವುದೆಂದು ನಿಯೋಜಿಸಿ ಪೋದಂ: **ಆದಿಪು,** ೩. ೨೬ ವ)

**ಅಗ್ರಸುತ** – ಹಿರಿಯ ಮಗ (ಅವರೊಳಗ್ರಸುತಂ ವಿದ್ಯಾನಿಧಿ ಮಲ್ಲಪಂ: **ಅಜಿತಪು,** ೧. ೨೬)

**ಅಗ್ರಹಸ್ತ** – ಸೊಂಡಿಲ ತುದಿ (ಘನಸಾರ ಸರಳಚಂದನವನ ಮೃದುಪಲ್ಲವಮಂ ಅಗ್ರಹಸ್ತದೆ ಕೊಂಡೊಯ್ಯನೆ ಬೀಸೆ ಚೆಲ್ವುವಡೆದದು ಜಿನಂಗೆ ಚಾಮರವಿಕ್ಕುವಂತಮರಗಜಂ: **ಆದಿಪು,** ೭. ೭೧)

**ಅಗ್ರಾಮ್ಯತೆ** – ಗ್ರಾಮ್ಯವಲ್ಲದ್ದು, ಸುಸಂಸ್ಕೃತತೆ (ಇದು ಸೌಂದರ್ಯಗುಣಪ್ರಕಾಶಂ ಇದು ತಾನಗ್ರಾಮ್ಯತಾಧನಂ: **ಕಾವ್ಯಾವಲೋ,** ಪ. ೯೮)

**ಅಗ್ರಾಸನ** – ಅಗ್ರಹಾರ, ಬ್ರಾಹ್ಮಣರಿಗೆ ದಾನ ಕೊಟ್ಟ ಭೂಮಿ (ನಿಮಗೆ ದಾರಿದ್ರ್ಯಮೋಕ್ಷಮಕ್ಕುಂ ಷಷ್ಟಿಗ್ರಾಮಸಮನ್ವಿತಮಪ್ಪ ಅಗ್ರಾಸನಮರಸನಂ ಬೇಡಿಕೊಂಡೊಡೆ: **ವಡ್ಡಾರಾ,** ಪು ೧೮೫, ಸಾ. ೭); ಬ್ರಾಹ್ಮಣರ ಊಟದ ಶಾಲೆ (ಅಗ್ರಾಸನದೊಳುಣಲೆಂದು ಬಂದು ಮಣೆಯನೇಱೆದ್ದೊನಂ ಇಂತೆಂದಂ: **ವಡ್ಡಾರಾ,** ಪು. ೧೮೫, ಸಾ. ೨೫)

**ಅಗ್ರಿಮ** – ಮೊದಲಿಗ (ಅಂತು ಉಗ್ರೋಗ್ರತರ ಸಮಗ್ರಸಾಮಗ್ರಿವೆರಸು ವಿಗ್ರಹೋದಗ್ರಭೂಪ ಅಗ್ರಿಮಂ ಕತಿಪಯ ಪ್ರಯಣಂಗಳಿಂ ಭದ್ರಾವತೀಪುರಮನೆಯ್ದಿ: **ಪುಷ್ಪದಂಪು,** ೮. ೪೫ ವ)

**ಅಗ್ಲಪಿತ** – ಕುಗ್ಗದ (ಅಪರಾಜಿತಂಗೆ ಸಂದ ಅಗ್ಲಪಿತಮನಂಗೆ ಉಪಚಿತ ಅರ್ಥಶಾಸ್ತ್ರಂಗೆ: **ಕರ್ಣನೇಮಿ,** ೨. ೧೨)

**ಅಘ** – ಪಾಪ (ದುರಿತಂ ಪಾಪಂ ಅಧರ್ಮಸ್ವರೂಪಂ ಅಘಂ: **ಅಭಿಧಾವ,** ೧. ೩. ೧೨); ನೋವು (ದುರಘಕುಳಮೆನಿಪ ನಿರಮಯನಿಯದೆಯ್ದಿಪ ನಿರಯದೂತಿ ನಿದ್ರಾಮಿಷದಿಂದ ಇರದುಯ್ವಂತಿರೆ ನಿದ್ರಾಭರದಿಂದ ಅತ್ಯಯಮನೆಯ್ದಿದಂ ಚಕ್ರಧರಂ: **ಶಾಂತೀಶ್ವಪು,** ೫. ೨೨)

**ಅಘಕರ್ದಮ** – ಪಾಪವೆಂಬ ಕೆಸರು (ಚಾರು ಚರಿತ್ರ ತೀರ್ಥಜಲದಿಂದೆ ಅಘಕರ್ದಮಮಂ ಕಟಿಲ್ಚಿ: **ಮಲ್ಲಿನಾಪು,** ೧. ೧೭)

**ಅಘಚ್ಛಿದ** – ಪಾಪವನ್ನು ಹೋಗಲಾಡಿಸುವ (ತ್ರಿಜಗದಘಚ್ಛಿದಂ ತ್ರಿಜಗದೀಶನುತಂ ಕಥೆ ಶಾಂತಿನಾಥನಾ: **ಶಾಂತಿಪು,** ೧೨. ೫೫)

**ಅಘಜನ** – ಪಾಪಿಗಳು (ಮಿಥ್ಯೆಯನೆ ತಿಳಿಪಲಾರ್ಗಂ ತಥ್ಯಮೆ ಮುಗ್ಧೆಯರ ಪಾಮರಿಯುಂ ಅಘಜನತತಿಯುಂ: **ಲೀಲಾವತಿ,** ೧೪. ೫೦)

**ಅಘಜಾಳ** – ಪಾಪರಾಶಿ (ಅಘಜಾಳಸಂತಾಪಮಂ ಕಳೆಗುಂ ಸಂಸ್ಕೃತಿಮಾತ್ರದಿಂದೆ ಮನುಜಂಗೆ: **ಲೀಲಾವತಿ,** ೩. ೮೧)

**ಅಘಟಮಾನ** – ನಡೆಯದ (ನಿನ್ನೆಂದಂತುಟೆ ಮೋಕ್ಷಕ್ಕೆನ್ನಿರ್ಪಿರವು ಅಘಟಮಾನವೈಹಿಕದ ತೋಡರ್ಪೆನ್ನಿರವಿನೊಳುಂಟಜೆಪದೆ ನಿನ್ನಂ ಪುಸಿಯಾಡಿ: **ಪಂಪಭಾ.** ೮. ೪)

**ಅಘತಮ** – ಪಾಪವೆಂಬ ಕತ್ತಲೆ (ಮುನಿಪದನಖದೀಪ್ತಿಶರಚ್ಚಂದ್ರಿಕೆ ದರ್ಶನವಿಶುದ್ಧಿಯಂ ಮಾಡುಗೆ ಅಘತಮೋವಿಘಟನಮಂ: **ಮಲ್ಲಿನಾಪು,** ೧. ೧೨)

**ಅಘಪಾಂಸು** – ಪಾಪವೆಂಬ ಧೂಳು (ಸಮಂತಭದ್ರಖ್ಯಾತರ ಪದಪಾಂಸು ಕಿಡಿಸುಗೆ ಅಘಪಾಂಸುಗಳಂ: **ಮಲ್ಲಿನಾಪು,** ೧. ೧೩)

**ಅಘಪಡು** – ನೋವನ್ನನುಭವಿಸು (ಪೊಡವಿಯಡಿಯೆತ್ತ ಪೊಕ್ಕು ಅಘಪಡುವುದಿದೆತ್ತ .. .. ಏಂ ವಿಚಿತ್ರವೋ ಸಂಸಾರಂ: **ಹರಿವಂಶ,** ೪. ೨೮)

**ಅಘಮರ್ಷಣ** – ಆಚಮನ, ಪಾಪನಿವಾರಕ ಮಂತ್ರ (ಯಾಮುನಾಜಲಮಂ ಪೊಕ್ಕು ಅಘಮರ್ಷಣಂ ಮುಳುಗಿದಂತಿರ್ದಂ ಪುರೋಭಾಗದೊಳ್: **ಪಂಪರಾ,** ೭. ೧೧೭)

**ಅಘವಡು** – ಅಘಪಡು (ಅವರಘವಟ್ಟಿರವಂ ತಿಳಿದು ವಿಭೀಷಣನಱೆಪಿ ರಾಮ ಲಕ್ಷ್ಮೀಧರರ್ಗೆ: **ಪಂಪರಾ,** ೧೩. ೧೪೮)

**ಅಘವಟ್ಟಂ** – ಪಾಪಮಾಡಿದವನು (ಮುನಿ ನೇತ್ರೇಂದ್ರಿಯ ಲೋಭದಿಂದಂ ಅಂದು ಅಘವಟ್ಟಂ: **ಪಂಪರಾ,** ೪. ೮೫)

**ಅಘವಿಘಟನ** – ಪಾಪಕ್ಷಯ (ಅಮರಪಟಹಧ್ವನಿಗಳ್ ಮೊಟಗಿದುವೌದಾರಿಕತನು ನೇಱಲಂತಿರೆ ನೆಲಕೆ ವಂದುದಘವಿಘಟನದಿಂ: **ಶಾಂತಿಪು,** ೧೨. ೩೩)

**ಅಘವಿಘಾತ** – ಪಾಪನಾಶ (ಅಘವಿಘಾತಾರ್ಥಮುದ್ಧತಾಭಿನಯಪ್ರಾಯಮುಂ ಆರಭಟೀ ವೃತ್ತಿಯುಂ: **ಆದಿಪು,** ೭. ೧೧೫ ವ)

**ಅಘಹರ** – ಪಾಪನಾಶಕ (ತೊಱೆದು ಪರೀಷಹತತಿಯಂ ಪಱೆವಱೆಯಾದ ಒಡಲಂ ಆತ್ಮನಿರಪೇಕ್ಷತೆಯಿಂ ನಿಱೆಸಿ ದುರಿತಾರಿಯೊಡಮಡಿದೆಱೆವಿಡಿದು ಅಘಹರಂ ಅಚ್ಯುತೇಂದ್ರನೆನಾದಂ: **ಶಾಂತಿಪು,** ೭. ೮೪)

**ಅಘಹರಣ** – ಅಘಹರ (ವಿಮಳ ಗಂಗಾಸ್ನಾನಂ ಮನುಜಂಗೆ ಅಘಹರಣಂ: **ಸಮಯಪ,** ೩. ೩೨)

**ಅಘಾಟ** – ಅತಿಶಯ, ಅದ್ಭುತ (ಮಹೀಭುಜನೆಯ್ದಿದಂ ಫಳವಿನಮ್ರಮಹೀಜಸಹಸ್ರ ಅಘಾಟಮನುತ್ಪಳಖೇಟಮಂ: **ಆದಿಪು,** ೪. ೫೮)

**ಅಘಾಟಶುದ್ಧಿ** – ಸೀಮೆಯ ಪರಿಷ್ಕಾರ (ಮರ್ಯಾದಾವಿಪ್ರಪತ್ತಿಯಿಂದಮೂಳ್ವಾರ್ಯಜನಕ್ಕೆ ಅಘಾಟಶುದ್ಧಿಯಂ ಮಾಡಿ: **ಆದಿಪು,** ೬. ೫೭ ವ)

**ಅಘಾತಿಕರ್ಮ** – [ಜೈನ] ಜೀವದ ಅನಂತಜ್ಞಾನಾದಿ ಗುಣಗಳನ್ನು ನಾಶ ಮಾಡದ ವೇದನೀಯ, ಆಯು, ನಾಮ, ಗೋತ್ರ ಎಂಬ ನಾಲ್ಕು ಕರ್ಮಗಳು (ಅರ್ಹದ್ದಾಸಕೇವಳಿಗಳುಂ ವಿಹಾರಿಸಿ ಬಂದು ಗಂಧಮಾದನನಗದೊಳ್ ಅಘಾತಿಕರ್ಮ ನಿರ್ಮೂಳನಂಗೆಯ್ದು: **ಕರ್ಣನೇಮಿ,** ೨. ೧೬ ವ)

**ಅಘಾರಾತಿ** – ಪಾಪವೆಂಬ ಶತ್ರು (ಅಘಾರಾತಿಯಂ ಅಶ್ರಮದಿಂ ಗೆಲಲಿವೆ ಸಾಲ್ಗುಂ ಣಮೋರಹಂತಾಣವೆನಿಸಿದ ಅಕ್ಕರಮೇಟುಂ: **ಸಮಯಪ,** ೧. ೯೭)

**ಅಘಾರಿ** – ಪಾಪದ ಶತ್ರು (ಅಮಿತಕೀರ್ತಿ ಕೇವಳಿಯಂ ಬಂಧಿಸಿ ಮದ್ಭವಪದ್ಧತಿಯಂ ಬೆಸಗೊಳೆ ಬೆಸಸಿದನಘಾರಿ ದಿವ್ಯಧ್ವನಿಯಿಂ: **ಶಾಂತಿಪು,** ೬. ೮೫)

**ಅಚರ** – ಚಲನವಿಲ್ಲದ, ಜಡವಾದ, ನಿರ್ಜೀವ (ಚರಮಚರವೆಂಬ ಜಗದಂತರದೊಳ್ ಖಳನೆಲ್ಲಿ ಪೊಕ್ಕೊಡಂ .. .. .ಕೊಲ್ಲದಿರೆಂ: **ಗದಾಯು,** ೬. ೨೨)

**ಅಚಲ** – ಬೆಟ್ಟ (ವಿಶ್ವ ಅಚಲ ಚಕ್ರೇಶತ್ವಮಂ ತಾಳ್ದಿದುದು ಅಖಿಳ ಧರಾರಮ್ಯಕೈಮಾಚಳಂ: **ಪಂಪಭಾ,** ೪. ೧೪)

**ಅಚಳ** – ಬೆಟ್ಟ (ಬಳಿಕ್ಕ ಅಚಳಂ ಕಿಟ್ಟು ಏಟುದಿನಂ ಪೊತ್ತಿರ್ದಂ ಕಾಳಾಹಿಯಂ ಎಯ್ದೆ ಕಾಯ್ದು ಕೊಂದಂ ನದಿಯೊಳ್: **ಕರ್ಣನೇಮಿ,** ೧೧. ೪೦)

**ಅಚಿರಂ** – ಕೂಡಲೆ (ವಿದಳಿತ ವದನ ಪಯೋಜರ್ ಪದೆದು ಅಚಿರಂ ಖಚರರಿರ್ವರ್ ಅವನತರಾದರ್: **ನೇಮಿನಾಪು,** ೫. ೧೧೫)

**ಅಚಿರಪ್ರಭೆ** – ಕ್ಷಣಿಕವಾದ ಬೆಳಕು, ಮಿಂಚು (ಅಚಿರಪ್ರಭೆಯುಂ ಪೆಂಡಿರ ಶುಚಿತ್ವಮುಂ ಕ್ಷಣದಿನಗ್ಗಳಂನಿಲ್ಕುಮೆ ಪೇಟ್: **ಪಂಪರಾ,** ೯. ೧೬೧)

**ಅಚಿರರುಚಿಸಂಚಳ** – ಮಿಂಚಿನ ಕಾಂತಿಯಂತೆ ಚಂಚಲವಾದ (ಭೂತಳರಾಜ್ಯವಿಮೋಹಂ ಅಚಿರರುಚಿಸಂಚಳಂ ಇಂತಳವುಗಿಡಿಸಿದುದು ಮನುಕುಳತಿಳಕನುಮಂ: **ಆದಿಪು,** ೧೪. ೧೨೧)

**ಅಚಿರಾಂಶು** – ಅಚಿರಪ್ರಭೆ (ಪೆರೆಯಿಕ್ಕಿ ಪೋದುವಚಿರಾಂಶು ರಸನಘನಕಾಲವಿಷಧರಂಗಳ್ ಗಗನೋದರಗಹ್ವರದೊಳೆನಲ್ ತರತರದಿಂ ಪಸರಿಸಿದುವಂದು ಬಿಳಿಯ ಮುಗಿಲ್ಗಳ್: **ಪಂಪರಾ,** ೭. ೧೬೪)

**ಅಚಿರರುಚಿ** – ಮಿಂಚು (ಸುರಚಾಪಾಟೋಪಮೆಂತು ಅಂತೆ ಅಚಿರರುಚಿಯದೆಂತು ಅಂತೆ: **ಕರ್ಣನೇಮಿ,** ೨. ೫೭)

**ಅಚ್ಚ** – ಶುದ್ಧ (ಮಹೀಶಂ ತೆಗೆದೆಚ್ಚನಚ್ಚ ಬಿಸುನೆತ್ತರ ಸುಟ್ಟುರೆ ಸೂಸುವನ್ನೆಗಂ: **ಪಂಪಭಾ,** ೧೦. ೯೮); ಇಂದ್ರಿಯ (ಅಂಡಲೆಗೆಯ್ವೆಂಬುದು ಜೋಗಿಗಳಚ್ಚಂಗಳ ಮಗ್ಗಿಸುವೆಡೆಯೊಳ್: **ಉದ್ಭಟಕಾ,** ೨. ೧೩)

**ಅಚ್ಚಂಬೊಯ್** – ಪುಟವಿಡು, ಶುದ್ಧಿಗೊಳಿಸು (ತಚ್ಛೋಳಾವನಿಪಪ್ರಭೂತದೇಸಕಂ ತನ್ನುರ್ವರಾಮಂಲಕ್ಕೆ ಅಚ್ಚಂಬೊಯ್ದಪರಂಜಿಯಾದುದಹಿತವ್ರಾತಕ್ಕೆ ಕಿರ್ಚಾದುದು: **ಉದ್ಭಟಕಾ,** ೧೨. ೭೩)

**ಅಚ್ಚಗಂಪು** – ಬೆರಕೆಯಿಲ್ಲದ ಸುವಾಸನೆ (ಬಿಡದೆಸೆಪಲರಿಂದಂ ಪೊಣ್ಮುತಿರ್ಪಚ್ಚಗಂಪಂ: **ಕಬ್ಬಿಗಕಾ,** ೨೩೫)

**ಅಚ್ಚಗಡೆ** – ಸುಂದರವಾದ ರಂಗೋಲಿ (ಕರ್ಪೂರಪಾಳಿ ಪ್ರದೀಪದಿನೆತ್ತಂ ಬಿಡುಮುತ್ತಿನಚ್ಚಗಡೆಯಿಂ ಮಂದಾರ ಪುಷ್ಪೋಪಹಾರದಿಂ: **ಶಾಂತಿಪು,** ೭. ೩೬)

**ಅಚ್ಚಗನ್ನಡ** – ಶುದ್ಧಗನ್ನಡ (ಅಚ್ಚಗನ್ನಡಂ ಬಿಗಿವೊಂದಿರೆ ಕಬ್ಬಿಗರಕಾವನೊಲವಿಂದೊರೆದೆಂ: **ಕಬ್ಬಿಗಕಾ,** ೧೬)

**ಅಚ್ಚಗಱುಂಕೆ** – ಕೋಮಲವಾದ ಗರಿಕೆ, ದೂರ್ವೆ (ಅಚ್ಚಗಱುಂಕೆಯನಾಯ್ದು ಮೆಯ್ದು ತಳ್ತೊಲವಿನೊಳಿರ್ಪ: **ಶಾಂತೀಶ್ವಪು,** ೧೩. ೧೪೮)

**ಅಚ್ಚಗಱುಕೆ** – ಅಚ್ಚಗಱುಂಕೆ (ಫಲಮಕ್ಷತ ಕಮಲಾಕ್ಷತಂ ಅಲರ್ ಅಚ್ಚಗಱುಕೆ ಮಂಗಳದ್ರವ್ಯಂಗಳ್: **ಅಜಿತಪು,** ೪. ೪೦)

**ಅಚ್ಚಗೆಂಡ** – ನಿಗಿನಿಗಿ ಕೆಂಡ (ಮೇಳಿಸಿ ಜೀವಾವಳಿಗಳ ತಾಳಿಸುವರನಚ್ಚಗೆಂಡದೊಳ್ ಕಾವಲಿಯೊಳ್ ತಾಳಿಸುವರ್: **ಸುಕುಮಾಚ,** ೧೧. ೪೬)

**ಅಚ್ಚಗೊಂಡ** – ನಿಗಿನಿಗಿಸುವ ಕೆಂಡದ ಕೊಂಡ (ಕರ್ವಿನ ಗಾಣದೊಳ್ ಮಱುಗುವಾಣದೊಳೆಣ್ಣೆಯ ಕುಂಡದೊಳ್ ಕನಲ್ದುರ್ವಿಸುವಚ್ಚಗೊಂಡದೊಳಗುರ್ವಿಸೆ ಸೀಳಿಸಿ ಮಾಣದಿಕ್ಕೆ ಪೋಟ್ಟಿರ್ದಗಿಮಾಡಿ ತಾಳಿಸೆ: **ಶಾಂತಿಪು,** ೭. ೯೫)

**ಅಚ್ಚಜೌವನೆ** – ಹೊಸ ಹರಯದವಳು (ನೀರೆಱೆವಚ್ಚಜೌವನೆಯ ಮೇಲುದು ಮೆಲ್ಲನೆ ಜಾಱೆ: **ರಾಜಶೇವಿ,** ೨. ೨೬)

**ಅಚ್ಚದಾವರೆ** – ಸುಂದರವಾದ ತಾವರೆ (ನುಣ್ಣೊಗಮಿರದಚ್ಚದಾವರೆಯ ಮೆಯ್ಸಿರಿಯಿಂ ಪಿಡಿದೆತ್ತೆ: **ಕಬ್ಬಿಗಕಾ,** ೪೦)

**ಅಚ್ಚದಿಂಗಳ್** – ನಿರ್ಮಲವಾದ ಚಂದ್ರ, ಬೆಳುದಿಂಗಳು (ನುಣ್ಣೊಗವಚ್ಚದಿಂಗಳಂ ಸಂದಿಸೆ: **ಕಬ್ಬಿಗಕಾ,** ೧೩೦)

**ಅಚ್ಚದುಗುಲ** – ನಿರ್ಮಲವಾದ ರೇಷ್ಮೆ ಬಟ್ಟೆ (ಕಂಗೊಳಿಪ ಅಚ್ಚದುಗುಲದಿಂ ತೆಱೆವಿಡಿದರ್: **ಉದ್ಭಟಕಾ,** ೮. ೫೬)

**ಅಚ್ಚದೊವರಿ** – ಶುದ್ಧವಾದ ತೊಗರಿ (ತಕಾರ ತೃತೀಯತೆಗೆ: ಅಚ್ಚತುವರಿ–ಅಚ್ಚದೊವರಿ: **ಶಬ್ದಮದ,** ೩೦೮ ಪ್ರ)

**ಅಚ್ಚನೆ** – ಸ್ವಚ್ಛವಾಗಿ (ಅಚ್ಚನೆ ಬರ್ಪ ಎಲರ್ ಕುರುಳ ಕುಂಕುಮಧೂಳಿಯನೆತ್ತಿ ಸುತ್ತಲುಂ ಕೆಚ್ಚನೆಯಾದ ಕೌಮುದಿಯನೇನೆಸೆದಿರ್ದುದೊ; **ಲೀಲಾವತಿ,** ೧೦. ೬೮)

**ಅಚ್ಚನನೆ** – ಶುದ್ಧವಾದ ಹೂ (ಕೊಳದಿಂ ಮಜ್ಜನಕಾರ್ಯಮಚ್ಚನನೆಯಿಂ ಭೂಷಾವಿರೋಹಂ ಫಾಲಾವಳಿಯಿಂ ಭೋಜನಕೃತ್ಯಂ: **ಅಜಿತಪು,** ೨. ೧೫)

**ಅಚ್ಚನೆ** – ಚೆನ್ನಾಗಿ, ಸುಂದರವಾಗಿ (ಅಚ್ಚನೆ ಬರ್ಪೆಲರ್ ಕುರುಳ ಕುಂಕುಮ ಧೂಳಿಯನೆತ್ತಿ ಸುತ್ತಲುಂ ಕೆಚ್ಚನೆಯಾದ ಕೌಮುದಿಯದೇನೆಸೆದಿರ್ದಿದೊ: **ಲೀಲಾವತಿ,** ೧೦. ೬೮)

**ಅಚ್ಚಬಿಳಿದು** – ಅಪ್ಪಟ ಬಿಳಿಯ ಬಣ್ಣವುಳ್ಳ (ಅಚ್ಚಬಿಳಿದೆಂಬಿನಮುಟ್ಟ ದುಕೂಲಮನಚ್ಚಗಂಪಿನ ಸಿರಿಕಂಡದಣ್ಪು: **ನೇಮಿನಾಪು,** ೨. ೧೪)

**ಅಚ್ಚಬೆಳಂತಿಗೆ** – ಪೂರ್ಣ ಬಿಳಿಪು (ತೊಳಪಚ್ಚ ಬೆಳಂತಿಗೆಯೋಲೆಯಚ್ಚಮುತ್ತಿನ ತೊಡವಚ್ಚಮಲ್ಲಿಗೆಯ ಸೋರ್ಮುಡಿ: **ನೇಮಿನಾಪು,** ೨.೧೪)

**ಅಚ್ಚಬೆಳ್ದಿಂಗಳ್** – ಬೆಳ್ಳಂ ಬೆಳುದಿಂಗಳು (ಜಲಕ್ಕನಾವಚ್ಚ ಬೆಳ್ದಿಂಗಳೊಳ್: **ಶಾಂತಿಪು,** ೮. ೭೨ ವ)

**ಅಚ್ಚಮಲ್ಲಿಗೆ** – ಬಿಳಿಯ ಮಲ್ಲಿಗೆ ಹೂ (ತೊಡವಚ್ಚಮಲ್ಲಿಗೆಯ ಸೋರ್ಮುಡಿ: **ನೇಮಿನಾಪು,** ೨.೧೪)

**ಅಚ್ಚಮಿಂಚು** – ಶುಭ್ರ ಹೊಳಪು (ಅಚ್ಚಮಿಂಚಿನ ಸುಲಿಪಲ್ಗಳ್ ಅಚ್ಚಬಿಳಿದೆಂಬುನಂ ಉಟ್ಟ ದುಕೂಲಂ: **ನೇಮಿನಾಪು,** ೨.೧೪)

**ಅಚ್ಚಮುತ್ತು** – ಶುಭ್ರಕಾಂತಿಯುಳ್ಳ ಮುತ್ತು (ಅಚ್ಚಮುತ್ತಿನ ತೊಡವು: **ನೇಮಿನಾಪು,** ೨.೧೪)

**ಅಚ್ಚರಸಿ** – [ಅಪ್ಸರಸಿ] ಅಪ್ಸರೆ (ಪೂತ ಜಂಗಮಲತೆಗಳಂತೆಱಗಿ ತನ್ನ ಮುಂದೆ ಬಂದಾಡುವಚ್ಚರಸಿಯರುಮಂ: **ಆದಿಪು,** ೨. ೬೫ ವ)

**ಅಚ್ಚರಸೆ** – ಅಪ್ಸರೆ (ಉಗ್ರಗ್ರಾಹಸ್ವರೂಪದೊಳಿರ್ದ ಅಚ್ಚರಸೆಯರಂ ವಿಶಾಪೆಯರ್ಮಾಡಿ: **ಪಂಪಭಾ,** ೪, ೨೦ ವ)

**ಅಚ್ಚರಿ** – ಅಪ್ಸರೆ (ಉದಧಿಯ ತೋಱಿಮುತ್ತೆನಿಸೆ ತಾರಗೆ ಶೀತಮರೀಚಿಶಂಕದಂದನಿರೆ ನೀರ ಮೇಲೆ ನಲಿವ ಅಚ್ಚರಿಯರ್ ಜಲಮಾನುಷೀಪ್ರಕರದನಿರೆ: **ಮಲ್ಲಿನಾಪು,** ೧೨. ೧೦೬); ಆಶ್ಚರ್ಯ (ಸಚ್ಚರಿತ್ರದೆ ನಡೆದಂದುರಿಗೊಡ್ಡಿದ ಅರಗಿನಂತಿರೆ ಕರಗುವುದಚ್ಚರಿಯೆ ನರರ ನೆರಪಿನ ಮಾತಂ: **ಸಮಯಪ,** ೬. ೨೫)

**ಅಚ್ಚರಿವಡು** – ಆಶ್ಚರ್ಯಹೊಂದು (ಆ ರೂಪಿಂಗಚ್ಚರಿವಡುತಿರ್ದ ನೃಪರೂಪಚಂದ್ರನಂ ನೋಡಿ: **ಕಾದಂಬ,** ಪೂ ೧೫?)

**ಅಚ್ಚರಿಸಿ** – ಅಪ್ಸರೆ (ಪದ್ಮಾವತಿ ಮೊದಲ ನಾಕದೊಳ್ ಅಚ್ಚರಿಸಿಯಾದಳ್: **ಶಾಂತಿಪು,** ೬. ೮೬ ವ)

**ಅಚ್ಚರಿವಡೆ** – ಆಶ್ಚರ್ಯಪಡು (ಪಾವಿನ ಪಚ್ಚದಿನಚ್ಚರಿವಡೆದ ಜೋಗಿಣಿಯಂತಿರ್ಪಳ್: **ಕಬ್ಬಿಗಕಾ,** ३೧೫)

**ಅಚ್ಚರಿವೀಱು** – ಅಚ್ಚರಿಯುಂಟುಮಾಡು (ಗೌರೀಶನೊಪ್ಪಿರ್ದಂ ಅಚ್ಚರಿವೀಱುತ್ತಖಿಳರ್ಗೆ ಸಂತತ ಕೃಪಾರತ್ನಾಕರಂ ಶಂಕರಂ: **ಶಬಶಂವಿ,** ೫. ೫೮)

**ಅಚ್ಚರಿವೆಱು** – ಅಚ್ಚರಿಗೊಳಿಸು (ಆ ಲಲಿತಾಂಗಿ ಬೆಚ್ಚನುಸಿರ್ದಚ್ಚರಿವೆತ್ತಿರೆ ಮೂರ್ಛೆವೋಪುದುಂ: **ಆದಿಪು,** ३. ೨३)

**ಅಚ್ಚರೆ** – ಅಪ್ಸರೆ (ನಚ್ಚಣಿ ನರ್ತಿಸಿದಳ್ ಇಚ್ಚೆಯಱಿದಚ್ಚರೆಯಱಿಯದಚ್ಚರಿ: **ಸುಕುಮಾಚ,** ೧೦. ೨೨)

**ಅಚ್ಚವಳಿಕು** – [ಅಚ್ಚ+ಪಳಿಕು] ಶುಭ್ರ ಸ್ಫಟಿಕ (ಎರಡು ಪದಂಗಳಪಭ್ರಂಶಕ್ಕೆ – ಅಚ್ಛಸ್ಫಟಿಕಂ–ಅಚ್ಚವಳಿಕು: **ಶಬ್ದಮದ,** ३೦೪ ಪ್ರ)

**ಅಚ್ಚವೂ** – ಹೊಸ ಹೂ (ತುಂಬಿಗಳಚ್ಚವೂಗಳಿಂ ದೂಸರಮಾದ ಚೊಲ್ಲೆಯದ ಕಂಪಿನೊಳೋಕುಳಿಯಾಡೆ: **ಕಬ್ಬಿಗಕಾ,** ೯೧)

**ಅಚ್ಚವೆಳಗು** – ಶುಭ್ರವಾದ ಬೆಳಕು (ಬಿಸಲಂ ಪೊಂಗಳಸಂಗಳ ಅಚ್ಚವೆಳಗಿಂ ತಳ್ಪೈಸುತುಂ .. .. ದೇವಕುಳಂ .. .. ಅಲ್ಲಿರ್ಪುದವ್ಯಾಕುಳಂ: **ಲೀಲಾವತಿ,** ೭. ೬)

**ಅಚ್ಚವೆಳ್ದಿಂಗಳ್** – ಶುಭ್ರ ಬೆಳುದಿಂಗಳು (ತನ್ನ ಜಸದಂತೆ ಪಸರಿಸಿದಚ್ಚವೆಳ್ದಿಂಗಳಂ: **ಪಂಪಭಾ,** ४. ೬೯ ವ)

**ಅಚ್ಚಸಿರಿಕಂಡ** – ಅಚ್ಚ ಶ್ರೀಗಂಧ (ಅಗರುವ ಮೆಚ್ಚು ಅಚ್ಚ ಸಿರಿಕಂಡದೊಳ್ ಅಗ್ಗಲಿಸಿತ್ತು ಸೂಡುಶಯ್ಯೆಗಳ ಬಯಕ್ಕೆ ಜೊಂಪಲರ್ದವು ಪಾಸುಗಳೊಳ್ ನೆಲಸಿತ್ತು ಪೂತ ಗೊಜ್ಜಗೆಗಳ ಸಿಂದುರಂಗಳೊಳಗೆ ಓಗರಗಂಪನೆ ಬೀಱುತ; **ಪಂಪಭಾ,** ೫. ३೦)

**ಅಚ್ಚಸೊಗ** – ಶುದ್ಧ ಸುಖ (ಹೆಱೆಸೂಡಿದನಚ್ಚಸೊಗದ ಮೊಳೆ ಬೆಳೆಯುತ್ತಂ: **ಗಿರಿಜಾಕ,** ३. ३೬)

**ಅಚ್ಚಟೆ** – ಅಂದಗೆಡು (ಭರದಿಂ ಬಂದಚ್ಚಟೆಯದೆ ಸಿರಿಮಂಚದ ಮೇಲೆ ಲೀಲೆ ಮಿಕ್ಕಾದರದಿ: **ಗಿರಿಜಾಕ,** ४. ೧३४)

**ಅಚ್ಚಾಂಬು** – ಶುದ್ಧ ನೀರು (ಅಚ್ಚಾಂಬುವೊಲ್ ಚುಂಬಿಸುವ ಕಣಿಶಮಂ ಕರ್ಚಿ .. .. ತುಂಡಾಗ್ರಮಂ ಮಾರ್ದೊಡೆದುದು ಧೃತ ಜಂಬಾಲಮಂ ಬಾಲಕೀರಂ: **ಲೀಲಾವತಿ,** ೫. ೫४)

**ಅಚ್ಚಾಡಿಸು** – ಸುತ್ತಾಡಿಸು (ತನಿವಣ್ಗಳನಾಂತೆಸೆವೀಳೆಯೋಳಿ ಅಚ್ಚಾಡಿಪುದಾಪುರೋವನದೊಳ್ ನಡೆ ನೋಟ್ಪರ ಕಣ್ಗಳಂ: **ಕುಸುಮಾಕಾ,** ೨. ೬೫)

**ಅಚ್ಚಾನೆ** – ಶ್ರೇಷ್ಠವಾದ ಆನೆ (ಪ್ರಕೃತಿಸ್ವರ ಲೋಪಕ್ಕೆ: ಅಚ್ಚ+ ಆನೆ =ಅಚ್ಚಾನೆ, **ಶಬ್ದಮದ,** ೬೨ ಪ್ರ)

**ಅಚ್ಚಿ** – [ಅಕ್ಷಿ] ಕಣ್ಣು (ಉಚ್ಚವದಿಂ ದಸಿಯಂ ತೆಗೆದಚ್ಚಿಗೆ ಗೋಚರಿಸದ್ಯೆದಲಾ ಲುಬ್ಧಕನಂದುಚ್ಚ ಮಹಿಮೆಯನೆ ಕಂಡು: **ಉದ್ಭಟಕಾ,** ೧೧. ೧೧೧)

**ಅಚ್ಚಿಗ** – ದುಃಖ (ನಲ್ಲಳಗಲ್ಕೆಯಿಂಮಾದವಟಿಲ್ ಅಚ್ಚಿಗಂ ಮಱುಕಮೆಂಬಿವಱಿಂದೆ ಕನಲ್ದು: **ಆದಿಪು,** ೧೨. ೨३); ಪರಿಶ್ರಮ (ಕಿಚ್ಚೆಟ್ಟಿ ಬಟಿಕೆ ನಂದಿಸಲಚ್ಚಿಗದಿಂ ಬಾವಿದೋಡುವಂತಿರೆ ಕಣ್ಣಂ ಮುಚ್ಚಿ ಜಪಿಯಿಸುವೆ: **ಪಂಪರಾ,** ೧४. ೧೦೦); ಕೇಡು, ಆಪತ್ತು (ಬಂದುದೆತ್ತಣ ಅಚ್ಚಿಗಂ ಎಮಗೆಂದು ಬಾಯಟಿವ ಭೀರುಗಳಬ್ಬರಮಾದುದುಬ್ಬರಂ: **ಚಂದ್ರಪ್ರಪು,** ೯. ೮೫); ಉತ್ಸಾಹ (ಬಲವರಲಾಟಿಸುತ್ತಿರೆ ಪದಂ ಪದಪಿಂ ನಡೆ ನೋಡಲೆಂದು ಕಣ್ಮಲರೆಳಸುತ್ತಿರೆ .. .. ರಸಜ್ಞೆ ಕೀರ್ತಿಸಲೊಡರ್ಚಿರೆ ಚಚ್ಚರಮಚ್ಚಿಗಂ ಪೊದಳ್ದಲರೆ: **ರಾಜಶೇವಿ,** ೧४. ೯४); ರೀತಿ (ಎನ್ನೆಂದ ಮಾತನಂತಿಂತೆನ್ನದೆ ತಡೆದಿರದೆ ಕೂಡುವಚ್ಚಿಗಮಂ ಕೇಳ್: **ಧರ್ಮಾಮೃ,** ೨. ೧೨३)

**ಅಚ್ಚಿಗಂಗೊಳ್** – ತುಂಬ ದುಃಖಪಡು (ಅಚಳಿತಧೈರ್ಯನ ಮನಮಂ ಚಳಿಯಿಸಲಾಱದೆ ಅಚ್ಚರಸೆಯರ್ ಅಚ್ಚಿಗಂಗೊಂಡಂತಾಗೆಯುಂ: **ಪಂಪಭಾ,** ೭. ೯४ ವ); ಅಚ್ಚರಿಗೊಳಿಸು (ಆಕೆಯ ಬೆಡಂಗು ಮೂಱುಂ ಲೋಕಮನೆಱಗಿಸುಗುಂ ಅಚ್ಚಿಗಂಗೊಳ್ಳದಿರಿಂ; **ಹರಿವಂಶ,** ೧೧. ೧४)

**ಅಚ್ಚಿಗಂಗೊಳಿಸು** – ಕಷ್ಟಕ್ಕೀಡುಮಾಡು (ತುಚ್ಛ ಪರಿಚ್ಛದರುಚ್ಚವಿಗ್ರಹಮನೆತ್ತಿಕೊಡು ನಿಚ್ಚಗಾಳೆಗದೊಳ್ ಅಚ್ಚಿಗಂಗೊಳಿಸಿ: **ಅಜಿತಪು,** ೯. ३४ ವ)

**ಅಚ್ಚಿಗಂಬಡಿಸು** – ತುಂಬ ವ್ಯಥೆಪಡು (ಎನ್ನ ಪಗೆಯೆನಿಸಿರ್ದ ವನಜನಾಭಂ ಮತ್ತೊಂದು ತಾಣದೊಳ್ ಪುಟ್ಟಿದಂ ಕೆಮ್ಮನೆ ನಿಮ್ಮನಚ್ಚಿಗಂಬಡಿಸಿದೆನೆಂದು ಚಾಟುವಚನಂಗಳಂ ಮೆಱೆದು: **ಜಗನ್ನಾವಿ,** ३. ೨೨ ವ)

**ಅಚ್ಚಿಗೊಳಿಸು** – ಆಕರ್ಷಿಸು (ಪೊಚ್ಚಪೊಸಗಂಪಮರ್ದ ಚಂದನಕುಜಂಗಳಿಂ ಅಚ್ಚಿಗೊಳಿಸುವನಂತತಿಲಕದ ಕುಜಗಳಿಂ: **ಉದ್ಭಟಕಾ,** ३. ೯३)

**ಅಚ್ಚಿದ** – ಅಚ್ಚೊತ್ತಿದ (ನೆಲೆಯಾಂದೆಯಂ ಅಚ್ಚಿದವೋಲ್ ಎಲೆ ಮಿಡುಕದೆ ನೆನೆಯುತಿರ್ದಿರೇನಂ ಮನದೊಳ್: **ಯಶೋಧಚ,** ४. ೧೫)

**ಅಚ್ಚಿಮುಗುಳ್ಚು** – ಕಣ್ಣುಮುಚ್ಚು (ಅಚ್ಚರಿಯರೊಳ್ ಅರಗಿಣಿಯರೊಳ್ ಅಚ್ಚಿಮುಗುಳ್ಚುವ ವಿಳಾಸಮಂ: **ರಾಜಶೇವಿ,** ೧೨. ೯೦)

**ಅಚ್ಚಿಱಿ** – ಮುದ್ರೆಯೊತ್ತು (ಮಾಣದೆ ಮೋದೆ ಶೋಕದಚ್ಚಿಱಿದವೊಲಿರ್ದ ಬಾಸುಟಿನೊಳಟ್ಟಿ ಕನಲ್ದು ಬಟಲ್ದು ಜೋಲ್ದ ಮೆಯ್: **ಪಂಪಭಾ,** ೧४. ೫); ಎರಕಹೊಯ್ (ಉಲಿವ ವಿಮಾನ ಕಿಂಕಿಣಿಯ ಮೆಲ್ಲುಲಿಗಳ್ ಕಿವಿಗೆಯ್ದಿ ಮಟ್ಟಿಗದಗ್ಗಲಿಸೆ ತಗುಳ್ವ ಗೇಯರಸವಚ್ಚಿಱಿದಂತಿರೆ ಬೆಚ್ಚು ಚಿತ್ತದೊಳ್ ನಿಲೆ: **ಶಾಂತಿಪು,** ೯. ೬೮); ಹೊಂದಿಕೆಯಾಗು (ಪೊದಳ್ದು ನೀಳ್ದುದೀರ್ವರ ಸಮಶೀಲಮಚ್ಚಿಱಿದುದಿರ್ವರ ನಚ್ಚಿನೊಡಂಬಡೇಂ ಭವಾಂತರಗತ ಮೋಹಬಂಧಬಲಮೋ ಬಲದೇವ ವಾಸುದೇವನಾ: **ಶಾಂತಿಪು,** ೧. ೭೯)

**ಅಚ್ಚು** – [ಅಕ್ಷ] ಎರಕ ಹೊಯ್ದ ವಸ್ತು (ಶೋಭಿಸಿದಂ ಕುಮಾರನಾನಂದದಿತರೂಪನಂದೆಸೆಯೆ ತಂದೆಯೊಳಚ್ಚಿನೊಳ್ ಒತ್ತಿದಂತೆವೋಲ್: **ಆದಿಪು,** ೮. ४३); ವಿಗ್ರಹ (ದೈವದ

ಬಣ್ಣಮುಮನಚ್ಚುಮಂ ಕಳ್ಳರ್ ಕೊಂಡೊಯ್ವಲ್ಲಿ ಕಾಯಲಾಱದ ದೈವಂಗಳ್: **ಸಮಯಪ,** ೯. ೧೦೪); ಬಂಡಿಯ ಇರಚಿ (ಉಡಿದಿರ್ದೆಚ್ಚುೞಿವೀಸು ತಟ್ಟಿದ ನೊಗಂ ಜೀಱಿಟ್ಟು ಚಕ್ರಂ: **ಪಂಪಭಾ,** ೧೦. ೯೧); ಬಂಡಿಗಾಲಿಯ ಅಚ್ಚು (ಮಿನುಗುವ ಕೊಂಬಿನಚ್ಚು ಕಿಱುಗೊಂಬಿನ ತಳ್ತರಗೀಲ್ ಕವಲ್ತ ಕೊಂಬಿನ ಮಡವಡ್ಡವಂದ ನಳಿಗೊಂಬಿನ ಪತ್ತುಗೆ ಜೋಲ್ವ ಬಳ್ಳಿಗೊಂಬಿನ ಬಲೆ ತೋರಗೊಂಬಿನ ನೊಗಂ ನಿಡುಗೊಂಬಿನ ಮೂಂಕು ಕಣ್ಗೆ ಚೆಲ್ವೆನೆ ನಡೆತಂದುವಂದು ಅಸುಗೆಯೆಂಬ ನೆಗಟ್ತೆಯ ತೇರ್ಗಳೆತ್ತಲುಂ: **ಕಬ್ಬಿಗಕಾ,** ೧೬೭)

**ಅಚ್ಚುಕತನ** – ಸಡಗರ (ನಿಜಸ್ವಾಮಿಯಂ ಮೆಚ್ಚಿಪ ಅಚ್ಚುಕತನದಿನಳವಿಯಿಲ್ಲದ ದುಸ್ಸಹ ಮಹಾಬ್ರತಾಯುಧಮಂ ತಳೆದು ನಿಲ್ವುದುಂ: **ಆಚವರ್ಧ**: ೧೦. ೪೦ ವ)

**ಅಚ್ಚುಡಿ** – ಎರಕ ಹೊಯ್ದಂತೆ ಒಂದಾಗು (ದೊರೆವಡೆರ್ದುರ್ದಿರ್ವರ ಮನೋರಥಂ .. .. ಅಚ್ಚುಡಿದಿರ್ದುದಿರ್ವರ ಮಚ್ಚು: **ಶಾಂತಿಪು,** ೧. ೭೯)

**ಅಚ್ಚುವಿಡಿ** – ಎರಕ ಹೊಯ್ದ ರೂಪನ್ನು ತಾಳು (ಅಚ್ಚುವಿಡಿವಡಂ ಬಿಂದುವಿಡಿವಡಂ ನೀನಱಿವೈ: **ವರ್ಧಮಾಪು,** ೪. ೧೩)

**ಅಚ್ಚುಳಕೋಲ್** – ಬಾರುಕೋಲು (ಕಱ್ಱನೆ ಕರಿಯವರಾಗಳೆ ಸಱ್ಱನೆ ಪರಿತಂದು ಮಾಣದಚ್ಚುಳಕೋಲಿಂ ತಿಱ್ಱನೆ ತಿರಿಪಿ ದುರಾತ್ಮರ್ ಚುಱ್ಱನೆ ಕೆನ್ನೆತ್ತರೊಗೆಯೆ ತೊಲಗದೆ ಬಡಿದರ್: **ಧರ್ಮಾಮೃ,** ೩. ೯೭)

**ಅಚ್ಚುಳಾಯ್ತ** – ಸೇವಕ (ಪರಿವ ಕರೆವೆಱೆವ ಸೂಱಾಯ್ತರ ಸೂಱುಗಳ್ ತುಱುಂಗಿಚ್ಚುಳಾಯ್ತರ ಕಳಕಳರವದಿಂ: **ಸುಕುಮಾಚ,** ೧೦. ೨೫)

**ಅಚ್ಚುಳಾಯಿಲ** – ಸೇವಕ (ಸಿಂಹರಥ ಮಹಾರಾಜಂ ಮುನಿದು ಅಚ್ಚುಳಾಯಿಲರಂ ಬರವೇೞ್ದೀ ಚಪಳೆಯಂ ಸಾಯೆ ಮೋದಿಯೆಂಬುದುಂ: **ಧರ್ಮಾಮೃ,** ೯. ೯೬ ವ)

**ಅಚ್ಚೆ** – ಒಂದು ಬಗೆಯ ಮೀನು (ಕಿಱುಮೀನ್ ಕೆಂಗಱಿಯಚ್ಚೆ ಕುಚ್ಚಲತಿಕಂ .. .. ಬಣ್ಣಮೀನೆನಿಪಿವೆಲ್ಲಂ ಬಿಳ್ದುವಾ ತಾಣದೊಳ್: **ರಾಜಶೇವಿ** ೫. ೧೧೫)

**ಅಚ್ಚೊತ್ತು** – ಎರಕ ಹೊಯ್ (ನಿನ್ನೊಳಚ್ಚೊತ್ತಿದನ್ನರುಂ ಮಱೆದು ಪತ್ತಿಸಿದನ್ನರುಮಪ್ಪೊರಯ್ಯೊರ್ವರ್ ಮಕ್ಕಳ್ವೆರಸು: **ಶಾಂತಿಪು,** ೭. ೧೦೩ ವ); ಅಂಕಿತ ಹಾಕು (ಪತ್ತುವಿಡೆ ಮೂರ್ಛೆ ಮುನಿಸಚ್ಚೊತ್ತಿದವೋಲ್ ಮನದಿನಗಲದಿರೆ: **ಪಂಪರಾ,** ೧೪. ೭೦);

**ಅಚ್ಛಂದ** – ಛಂದಸ್ಸು ಕೆಟ್ಟಿರುವ (ಚ್ಯುತಯಾಥಾಸಂಖ್ಯಂ ವ್ಯವಹಿತಮಚ್ಛಂದ ವಿಸಂಧಿಕಂ ನೇಯಾರ್ಥಂ: **ಕವಿರಾಮಾ,** ೧. ೬೮)

**ಅಚ್ಛಭಲ್ಲ** – ಕರಡಿ (ಅಹಿಯ ವಿಷವಹ್ನಿ ನೆಗವಹಿಗೃಹಮಂ ಪೀರ್ದುರ್ಚುವಚ್ಛಭಲ್ಲನ ಬಾಯಂ ದಹಿಯಿಸಿ ಪಾಪೀ ಪಾಪೇನ ಹನ್ಯತೇ ಎಂಬ ನುಡಿಯನೇಂ ನಡೆಯಿಸಿತೋ: **ನೇಮಿನಾಪು,** ೫. ೮೫)

**ಅಚ್ಛಾಂಬು** – ಶುದ್ಧವಾದ ನೀರು (ವನಕುಸುಮಸ್ತಬಕದ ನೆಟಿಲಿನಿಸಚ್ಛಾಂಬುವಿನೊಳೆಸೆಯೆ: **ಆದಿಪು,** ೧೧. ೬೨)

**ಅಚ್ಛಾಯ** – ನೆರಳಿಲ್ಲದ್ದು (ಆ ಜಿನೇಶ್ವರಂ ಅನಂತಚತುಷ್ಟಯೈಶ್ವರ್ಯಸಮೇತನುಂ ಸಮಪ್ರಸಿದ್ಧನಖಕೇಶತ್ವ ವಿರಾಜಮಾನನುಂ ಚತುರಾಸ್ಯನುಂ ಅಚ್ಛಾಯಂ ಅಕ್ಷಿಸ್ಪಂದವ್ಯಪೇತನುಂ: **ಸುಕುಮಾಚ,** ೮. ೭೯ ವ)

**ಅಚ್ಛೋದ** – ಒಂದು ಸರೋವರದ ಹೆಸರು (ಕಂಗೊಳಿಪಚ್ಛೋದ ಸರಸಿಗೆ ಜನನಿವೆರಸು ನಡೆತಂದು ನೋಟ್ಪಲ್ಲಿ: **ಕಾದಂಬ,** ೫. ೧೧ ವ)

**ಅಚ್ಛೋದಕ** – (ಅಚ್ಛ+ಉದಕ) ನಿರ್ಮಲವಾದ ನೀರು; ತಿಳಿನೀರು (ಕರಿಯೂಥಪತಿಗಳೆರಡುಂ ಸರಸೀಜಳಮಂ ವಿಳಾಸದಿಂ ಪುಗುವವೊಲಾದರದಿಂದೆ ಪೊಕ್ಕು ತುಳುಕಿದ ಅರವಿಂದರಜಃಪಿಶಂಗಿತಾಚ್ಛೋದಕಮಂ: **ಆದಿಪು,** ೧೪. ೧೦೬)

**ಅಚ್ಯುತ** – ನಾಶವಿಲ್ಲದ, ವಿಷ್ಣು (ಅಶೇಷದೈತ್ಯವಿದ್ರಾವಣನೀಗೆ ದುರ್ಗವಿಭುಗೆ ಅಚ್ಯುತಂ ಅಚ್ಯುತಸೌಖ್ಯಕೋಟಿಯಂ **ಪಂಚತಂತ್ರ,** ೧. ೧)

**ಅಚ್ಯುತಕಲ್ಪ** – [ಜೈನ] ಆ ಹೆಸರಿನ ಹದಿನಾರನೆಯ ಸ್ವರ್ಗ (ಸೌಧರ್ಮ ಈಶಾನ ಸನತ್ಕುಮಾರ ಮಾಹೇಂದ್ರ ಬ್ರಹ್ಮ ಬ್ರಹ್ಮೋತ್ತರ ಲಾಂತವ ಕಾಪಿಷ್ಠ ಶುಕ್ರ ಮಹಾಶುಕ್ರ ಶತಾರ ಸಹಸ್ರಾರ ಆನತ ಪ್ರಾಣತ ಅರಣ್ಯ ಅಚ್ಯುತಮೆಂಬ ಪದಿನಾಱುಂ ಕಲ್ಪಂಗಳೊಳಂ: **ವಡ್ಡಾರಾ,** ಪು ೯೭, ಸಾ ೨೬)

**ಅಚ್ಯುತಪ್ರಾಂತರ** – [ಜೈನ] ಅಚ್ಯುತಕಲ್ಪ (ಸಮಾಧಿವಡೆದು ಶುಭೋದಯದಿಂ ಪೊಕ್ಕರ್ ಅಚ್ಯುತಪ್ರಾತಂರಮಂ: **ಕರ್ಣನೇಮಿ,** ೧೪. ೧೨೪)

**ಅಚ್ಯುತಸೌಖ್ಯ** – ಶಾಶ್ವತಸುಖ (ಅಶೇಷದೈತ್ಯವಿದ್ರಾವಣನೀಗೆ ದುರ್ಗವಿಭುಗೆ ಅಚ್ಯುತಂ ಅಚ್ಯುತಸೌಖ್ಯ ಕೋಟಿಯಂ **ಪಂಚತಂತ್ರ,** ೧. ೧)

**ಅಚ್ಯುತೇಂದ್ರ** – [ಜೈನ] ಅಚ್ಯುತಕಲ್ಪದ ಇಂದ್ರ (ಅಚ್ಯುತೇಂದ್ರನೊಡನೆ ನಿಜಪೂಜಾವಿಳಾಸಮಂ ಮೆಱೆಯಲೆಂದು ಪೋಗಿ: **ಆದಿಪು,** ೨. ೭೭ ವ)

**ಅಜ** – ಹುಟ್ಟು ಇಲ್ಲದ (ದೇವಕಿ ಗೋಪಿಗಂ ಆ ವಸುದೇವಂಗಂ ಪುಟ್ಟಿ ದೇವಕಿಸುತನಾದಂ .. .. ಇದುವೆ ಸಿದ್ಧಂ ಅಜನೆಂತಾದಂ: **ಸಮಯಪ,** ೮. ೧೫೪); ಬ್ರಹ್ಮ (ಕೊಂದೆನ್ನ ಮಗನಂ ಇಂ ಭಯದಿಂದಂ ರಸೆವೊಕ್ಕುಂ ಅಜನ ಗುಂಡಿಗೆವೊಕ್ಕುಂ ಮಂದರಧರನ ಈ ಪೊರ್ಕುೞ ಪೊಂದಾವರೆವೊಕ್ಕು ಮೇಣವಂ ಬರ್ದುಕುವನೇ: **ಪಂಪಭಾ,** ೧೧. ೧೨೧); ಕೃಷ್ಣ (ಜಯದ್ರಥಂ ಇಕ್ಕುೞದು ಆರೊಳಂ ತೊಡಂಕವೇಡ ಎನುತುಂ ಅಜಂ ಮರುಜ್ಜವದೆ ಚೋದಿಸೆ: **ಪಂಪಭಾ,** ೧೧. ೧೪೫); ಆಡು (ಅಜಂ ಮೇಷಂ: **ಅಭಿಧಾವ,** ೧. ೧೫. ೧)

**ಅಜಕುಕ್ಷಿ** – ಆಡಿನ ಹೊಟ್ಟೆಯಂತೆ ತೆಳ್ಳಗಿನ ಹೊಟ್ಟೆಯಿರುವ (ಮಹಾವ್ಯೂಢೋರಸ್ಕನುಂ ವಿಪುಳೋಪಚಿಂತಾಂಸನುಂ ಸಮಪಾರ್ಶ್ವನುಂ ಅಜಕುಕ್ಷಿಯುಂ ಗೋಧೋತ್ರಿಷ್ಟನುಂ: **ಆದಿಪು,** ೧೨. ೫೬ ವ)

**ಅಜಗರ** – ಹೋತವನ್ನು ನುಂಗುವಂಥದು, ಹೆಬ್ಬಾವು (ನುಂಗೆ ಜರದಜಗರಂ ತನ್ವಂಗಿ ತಪಸ್ವಿನಿ ಸಮಾಧಿ ಸಮನಿಸೆ: **ಪಂಪರಾ,** ೧೪. ೫೭)

**ಅಜಗರ್ಭಿಣಿ** – ಗಬ್ಬವಾದ ಆಡು (ಮಹೀವಲ್ಲಭನುಂ ಬೇಂಟೆಯೊಳ್ ಅಡಗಿಲ್ಲದೆ ಬರುತೆಚ್ಚಿದಂ ಅಜಗರ್ಭಿಣಿಯಂ: **ಯಶೋಧಚ,** ೪೩. ೫೫)

**ಅಜನಿಸು** – ಕೀಳ್ಮಾಡು, ತಿರಸ್ಕರಿಸು (ಎನ್ನಿಂದ ಅಜನಿಸಿ ನುಡಿಯಿಸಿದುವು ಅಹಿದ್ವಜನೋವದೆ ಮುನ್ನೆ ನೆಗಟ್ಟಿ ದುಶ್ಚರಿತಂಗಳ್: **ಪಂಪಭಾ,** ೯. ೨೧)

**ಅಜನ್ಮೆ** – ಜನ್ಮರಹಿತಳು (ಕುಮುದದಳ ದೀರ್ಘಲೋಚನೆಯಾಗಿಯುಂ ಅಂಧೆಯಂತೆಯುಂ ಪವಿತ್ರ ಪಾರ್ಥಿವಕುಲಪ್ರಸೂತೆಯಾಗಿಯುಂ ಅಜನ್ಮೆಯಂತೆಯುಂ ತನ್ನಂ ಬಗೆದು: **ಚಂದ್ರಪ್ರಪು,** ೩. ೫೦ ವ)

**ಅಜಪಾಳಿ** – ಆಡುಗಳನ್ನು ಸಾಕುವವನು (ಅಜಾಜೀವಂ ಅಜಪಾಳಿ: **ಅಭಿಧಾವ,** ೧. ೧೧. ೮೩)

**ಅಜಪೋತ** – ಆಡಿನ ಮರಿ (ಆ ವಿಪ್ರಘೋಷಣಂ ಸ್ಮೃತಿಗಾವಹನವಿಧಾನಮಾದವೋಲ್ ಅಜಪೋತಂ ಭಾವಿಸಿದುದು: **ಯಶೋಧಚ,** ೩. ೬೧)

**ಅಜರ** – ನಿರ್ಜರ, ಕೃಷ್ಣ (ಅದು ವಿಲಯಾದ್ರಿಯ ಕಿಡಿಗಳನುಗುಬುತ್ತುಮೆಯ್ದೆವರ್ಪುದುಮಿದಿರಂ ನಡೆದ ಅಜರಂ ಉರದಿನಾಂತೊಡೆ: **ಪಂಪಭಾ,** ೧೧, ೭೭); ಜಿನ (ಶಾಂತಿನಾಥಂ ಮಿಥ್ಯಾಡಂಬರ ವಿಘಾತಿ ಘಾತಿಕದಂಬಕ ತರುಗಹನದಹನನೆನೆ ನೆಗಟ್ದಜರಂ: **ಶಾಂತಿಪು,** ೧೨. ೨೬)

**ಅಜಸ್ರಂ** – ಸದಾ ಕಾಲ (ನಿರಂತರಂ ಅಜಸ್ರಂ ಎನೆ ತಾಂ ನಿತ್ಯಂ: **ಅಭಿಧಾವ,** ೨. ೧. ೬೭)

**ಅಜಾಂಡ** – ಬ್ರಹ್ಮಾಂಡ (ಪುಟುವಾನಸನೆಂಬನಜಾಂಡಮೆಂಬತ್ತಿಯ ಪಣ್ಣೊಳಿರ್ಪ ಪುಟುವಲ್ಲದೆ ಮಾನಸನೇ: **ಪಂಪಭಾ,** ೫. ೭೫)

**ಅಜಾಕೃಪಾಣೀಯ** – ಮೇಕೆ ಬರುವುದೂ, ಕತ್ತಿ ಬೀಳುವುದೂ ಒಂದಾಗಿ ಮೇಕೆ ಸಾಯುವಂತಹ ಆಕಸ್ಮಿಕ (ವೇಧಸ್ಸಂಕಲ್ಪಂ ದುರ್ಬೋಧಮಿವಂ ನಿಟ್ವೆಯಿಂ ನಿರೋಧಿಸಿ ತನುವಂ ಸಾಧಿಸಿದೊಡೀ ಕೃಪಾಣಮೆ ಬಾಧಾಕರಮಾಯ್ತು ಅಜಾಕೃಪಾಣೀಯದವೋಲ್: **ಪಂಪರಾ,** ೯. ೨೫)

**ಅಜಾಜಿ** – ಜೀರಿಗೆ (ಅಜಾಜಿ ಜೀರಕಂ: **ಅಭಿಧಾವ,** ೧. ೮. ೩೩)

**ಅಜಾಜೀವ** – ಆಡುಗಳನ್ನು ಸಾಕುವವನು (ಅಜಾಜೀವಂ ಅಜಪಾಳಿ: **ಅಭಿಧಾವ,** ೧. ೧೧. ೮೩)

**ಅಜಾತ** – ಹುಟ್ಟದಿರುವ (ಭವಹರನಪ್ಪೊಡೆ ಅಜಾತಂ: **ಸಮಯಪ,** ೮. ೬೬): ಕೃಷ್ಣ (ನಿಜಮತಮನೆನಗೆ ಮೀಱಲ್ಕಜಾತ ದೊರೆಯಲ್ಲಂ: **ಪಂಪಭಾ,** ೯. ೨೧); ಜಿನ (ಪಾಪೇಭಕಂಠೀರವನುಂ ಶ್ರೀವಿಜಯನುಮಜಾತನ ಪಾದಪಯೋಜಯುಗಳಕ್ಕೆರಗಿ: **ಶಾಂತಿಪು,** ೬. ೪೧ ವ)

**ಅಜಾತಪೂರ್ವ** – ಹಿಂದೆಂದೂ ಹುಟ್ಟದಂತಹ, (ಒರ್ಮೊದಲೊಳೆ ಬಿಲ್ಲುಂಬೆಱಗುಮಾಗಿ ಸತಿ ಚೋದ್ಯಂಬಟ್ಟಳಜಾತಪೂರ್ವ ವಿಸ್ಮಯದಿಂದಂ: **ಶಾಂತಿಪು,** ೧೦. ೭)

**ಅಜಾತಶತ್ರು** – ಶತ್ರುವೇ ಹುಟ್ಟದವನು, ಧರ್ಮರಾಯ (ಆ ಮಾತಿಂಗಜಾತಶತ್ರುವೆನಿಸಿದ ಧರ್ಮಪುತ್ರಂ ಕನಲ್ದು: **ಜಗನ್ನಾವಿ,** ೧೭. ೨೯ ವ)

**ಅಜಾನೇಯ** – ಒಳ್ಳೆಯ ತಳಿಯ ಕುದುರೆ (ಶುಭಲಕ್ಷಣಲಕ್ಷಿತಂಗಳಪ್ಪಜಾನೇಯ ಕಾಂಭೋಜ ವಾಜಿರಾಜಿಗಳೊಳ್: **ಪಂಪಭಾ,** ೨, ೨೯ ವ)

**ಅಜಿತ** – ಜಯಿಸಲಸಾಧ್ಯನಾದವನು, ಕೃಷ್ಣ (ಧರ್ಮರಾಜಂ ರಾಜರಾಜನಲ್ಲಿಗೆ ನಿರ್ವ್ಯಾಜದಿಂ ದಿತಿಜಕುಳ ವಿಜಯಿಯಪ್ಪಜಿತನನೆ ದೂತಕಾರ್ಯಕ್ಕಟ್ಟಿದೊಡೆ: **ಪಂಪಭಾ,** ೯. ೨೬ ವ); [ಜೈನ] ಎರಡನೆಯ ತೀರ್ಥಂಕರನಾದ ಅಜಿತನಾಥ (ಆ ದಿವಿಜೇಂದ್ರಂಗಾದುದು ಗೀತವಾದ್ಯ ನೃತ್ಯಪ್ರಸಂಗಂ ಅಜಿತನ ಕೆಲದೊಳ್: **ಅಜಿನಾಪು,** ೫. ೮೩)

**ಅಜಿನ** – ಚರ್ಮ (ತ್ವಚಂ ಅಜಿನಂ ಆಸ್ಯಗ್ಧರೆ ಕೃತ್ತಿ ಧರ್ಮಮೆನೆ ತೋಲ್: **ಅಭಿಧಾವ,** ೧. ೧೨. ೨೮)

**ಅಜಿನಾಂಬರ** – ಅಜಿನವನ್ನೇ ಉಟ್ಟವನು, ಶಿವ (ಪಿಂಗಳ ಜಟಾಭಾರನಹಿರಾಜನಫದೂರ ಸಮದೇಭಾಸುರಾಜಿನಾಂಬರ ದಿಗಂಬರ ಶಂಬರಾರಿ ಮದನವೈರಿ ಶೂರಿ: **ಉದ್ಭಟಕಾ,** ೭. ೧೩)

**ಅಜಿರ** – ಅಂಗಳ (ಸಂಗರಾಜಿರದೊಳ್ ಕೌರವರೆಂಬ ಕಾಕಕುಳಕ್ಕೆನ್ನೀಯೊಂದೆ ಬಿಲ್ ಸಾಲದೇ: **ಪಂಪಭಾ,** ೧೨. ೧೩೫); ಶರೀರ (ಭವ್ಯ ಅಜಿರ ಕಲ್ಪಲತಾವಿಭ್ರಾಜಿತೆಯಂ ಪೊಗಟ ದಾನಚಿಂತಾಮಣಿಯಂ: **ಅಜಿತಪು,** ೧. ೬೯)

**ಅಜಿಹ್ಮ** – ವಕ್ರವಲ್ಲದ, ನೇರಸ್ವಭಾವದ (ಭೂಜಾಂಗವೃತ್ತಿಯಂ ಬಿಸುಟಾ ಜಗದಧಿಪಂಗೆ ವೈತಸಾವಳಿ ಪರಿವಂದಾ ಜಳಕೆಱಗುವವೋಲ್ ನಯಭಾಜನರೆಱಗಿದರಜಿಹ್ಮರೆನಿಸಿದ ಸುಹ್ಮರ್: **ಶಾಂತಿಪು,** ೧೦. ೧೫೯)

**ಅಜೀವ** – [ಜೈನ] ಏಳು ತತ್ವಗಳಲ್ಲಿ ಎರಡನೆಯದು (ತೋರ್ಪಿನಂ ಜೀವಮಜೀವಮೆಂಬ ಅಖಿಲವಸ್ತುಗಳುಂ: **ಪಂಪರಾ,** ೧೬. ೬೮)

**ಅಜೀವತತ್ವ** – [ಜೈನ] ಅಜೀವ (ಚೇತನಾರಹಿತಮಜೀವತತ್ತ್ವಂ ಅದು ಗತಿಸ್ಥಿತ್ಯವಗಾಹ ಶರೀರಾದಿ ವರ್ತನಾಹೇತು ಧರ್ಮಾಧರ್ಮಾಕಾಶ ಪುದ್ಗಲಕಾಲಭೇದದಿಂ ಪಂಚವಿಧಂ: **ಆದಿಪು,** ೧೦. ೬೧ ವ)

**ಅಜೀವರತ್ನ** – [ಜೈನ] ಚಕ್ರವರ್ತಿಗಳಿಗೆ ಸಹಜವಾಗಿ ಒದಗುವ ಹದಿನಾಲ್ಕು ರತ್ನಗಳಲ್ಲಿ ಒಂದು (ಆ ಚಕ್ರರತ್ನದ ಬಟಿಯೊಳ್ ಸಂಗಳಿಸಿದ ವಿಳಸತ್ಛತ್ರ ಚರ್ಮ ಮಣಿ ಕಾಕಿಣೀ ಖಡ್ಗ ದಂಡಂಗಳೆಂಬ ..ಆಱುಂ ಅಜೀವರತ್ನಂಗಳುಮಂ .. .. ಏೞುಂ ಜೀವರತ್ನಂಗಳುಮಂ .. .. ಪೂಜೆಗೆಯ್ದು: **ಶಾಂತೀಶ್ವಪು,** ೧೨. ೩ ವ)

**ಅಜೆ** – ಹೆಣ್ಣು ಮೇಕೆ (ಸತ್ತು ಪೊಕ್ಕುದಜೆಯೊಳ್ ಜೀವಂ: **ಯಶೋಧಚ,** ೩. ೫೪)

**ಅಜೇಯ** – ಗೆಲ್ಲಲಾಗದ (ಅಜೇಯ ಪೋಲ್ಗುಮಾ ಮತ್ತಗಜಂ ವಾರಿಜನಾಭನಂ: **ಕವಿರಾಮಾ,** ೨. ೧೩೨)

**ಅಜ್ಜ** – [ಆರ್ಯ] ತಂದೆ ಅಥವಾ ತಾಯಿಯ ತಂದೆ (ತನಯಂ ತಾಯ್ ತಂದೆ ತಮ್ಮಂ ಕೆಳೆಯಂ ಅಳಿಯಂ ಆಳ್ವಜ್ಜಂ ಎಮ್ಮಜ್ಜಂ ಇಷ್ಟಾಂಗನೆಯೆಂದು: **ಆದಿಪು,** ೩. ೫೫); ಹಿರಿಯ (ತನಗೆ ಸಮವಪ್ಪವಂ ಪೊಣರ್ದನೆ ಕಾದುವುದಜ್ಜನಪ್ಪನವಂಗೆಱಗುವುದು: **ಕಬ್ಬಿಕಾ,** ೨೨೯); ಅಂತಃಪುರದ ಕಾವಲುಗಾರ (ಕ್ಷಮಿಯಿಪುದಂದೆರೆದಜ್ಜರಂ ಗುಜ್ಜರುಮಂ: **ಅಜಿತಪು,** ೬. ೧೦೯)

**ಅಜ್ಜಗಾಪು** – ಹಿರಿಯರ ಕಾವಲು, ರಕ್ಷೆ (ಚತುರುದಧಿ ಮೇಖಲಾಲಂಕೃತ ವಸುಧಾದೇವಿಗೆ ಅಜ್ಜಗಾಪಿನವರ್ ದಿಕ್ಪತಿಗಳೆನೆ: **ಪಂಪರಾ,** ೨. ೩೯)

**ಅಜ್ಜಗೆ** – ಇರವಂತಿಗೆ (ಸಜ್ಜುಕದ ಚಳಿಕಿಗೆಜ್ಜಗೆಯ ಪಜ್ಜಳಿಪ ಬಜ್ಜರದ ಬಾಪುರಿಯ: **ರಾಜಶೇವಿ,** ೯. ೨೪೦);

**ಅಜ್ಜಪಜ್ಜ** – ವಂಶದ ಹಿರಿಯರು, ಪೂರ್ವಿಕರು (ಉಭಯಕುಲ ವಿಶುದ್ಧರ್ ನ್ಯಾಯವಂತರ್ ಜಿತಾತ್ಮರ್ ಪ್ರಭುಗಳ್ ಅಧಿಕಪುಣ್ಯರ್ ಮುನ್ನೆ ನಿಮ್ಮಜ್ಜಪಜ್ಜರ್: **ಶಾಂತಿಪು,** ೩. ೭೬)

**ಅಜ್ಜಿ** – ತಂದೆ ಅಥವಾ ತಾಯಿಯ ತಾಯಿ (ಮಗಳಕ್ಕಂ ತಾಯ್ ನಾದಿನಿ ಸೊಸೆ ಮದವಳ್ಳಜ್ಜಿ ಮುತ್ತಬ್ಬೆ ಮತ್ತತ್ತಿಗೆ ಕೂಸಿತ್ತೆಯೆಂಬೀ ಮೊಱೆಯ ವನಿತೆಯರ್: **ಶಾಂತಿಪು,** ೬.

೮೭): ಜೈನ ಸನ್ಯಾಸಿನಿ (ನಾರಿಯರ್ ಅಜ್ಜಿಯ ರೂಪಂ ವೈರಾಗ್ಯದೆ ಕೊಂಡುಂ ಎಲ್ಲಿಯುಂ ತಮ್ಮವರಂ ಕೂರೆ ತಿರಿತಮದು ರಕ್ಷಿಪರ್: **ಸಮಯಪ,** ೫. ೧೧೨)

**ಅಜ್ಜಿಕಾ–** ಅರನಾಳ (ಮಿಗೆ ರಂಜಿಸುವ ಅರನಾಳ ಅಜ್ಜಿಕಾಭಿಖ್ಯಾನಂ: **ಅಭಿಧಾವ,** ೧. ೧೬. ೪)

**ಅಜ್ಜಿಕೆ** – ಜೈನ ಸನ್ಯಾಸಿನಿ (ಮೂಱುಲಕ್ಕೆಯುಮಿರ್ಪತ್ತು ಸಾಸಿರ್ವರಜ್ಜಿಕೆಯರುಮಂ: **ಅಜಿತಪು,** ೮. ೨೫ ವ)

**ಅಜ್ಜುಗೆ** – ಇರವಂತಿಗೆ (ಗುಂಜೆ ನುಗ್ಗೆ ಅಜ್ಜುಗೆಯೆಂಬಿಂತಿಜೆಂದವರ್ಕೆ ಬೇವಿನ ತೊವರಂ ತೆಗಪಿದೊಡೆ ಕೈಪೆಗೆಟ್ಟಿನಿದಕ್ಕುಂ: **ಲೋಕೋಪ,** ೮. ೨೫)

**ಅಜ್ಞ –** ತಿಳಿಯದವನು, ಮೂರ್ಖ (ಕವಿತಾಪ್ರೌಢನೆ ಸೋಲ್ವವೊಲ್ ಕೃತಿಯೊಳಜ್ಞ ಸೋಲ್ವನೇ: **ಜಗನ್ನಾವಿ,** ೧. ೧೩)

**ಅಜ್ಞತ್ವ –** ತಿಳಿಯದಿರುವಿಕೆ (ಅನಂತ ನಿನಗಿಂತಜ್ಞತ್ವಮೇನಕ್ಕುಮೇ: **ಜಗನ್ನಾವಿ,** ೪. ೫೬)

**ಅಜ್ಞಾತ** – ತಿಳಿಯದ (ಭುವನಖ್ಯಾತಮೆನಿಪ್ಪ ನಿನ್ನ ಚರಿತಂ ಪೇೞಾರ್ಗಮಜ್ಞಾತಮೇ: **ಪಂಪರಾ,** ೧೬. ೨೫)

**ಅಜ್ಞಾನ** – ಜ್ಞಾನರಾಹಿತ್ಯ (ಅಜ್ಞಾನೋತ್ಕಟಮದನರಮನೆಯ ಬಾಗಿಲೊಳ್ ಬಂದಿರ್ದಂ: **ಶಾಂತಿಪು,** ೮. ೧೨೬)

**ಅಜ್ಞಾನತ್ರಯ** – [ಜೈನ] ಕುಮತಿ, ಕುಶ್ರುತ, ವಿಭಂಗ ಎಂಬ ಮೂರು ಬಗೆಯ ಅಜ್ಞಾನಗಳು (ಅಜ್ಞಾನತ್ರಯರಹಿತರ್ ತ್ರಿಜ್ಞಾನಧರರ್ ವಿದೇಹದಿಂ ಬಂದಧಿಕಪ್ರಜ್ಞರ್ ಪುಟ್ಟುವರ್: **ಪಂಪರಾ,** ೧. ೬೯)

**ಅಟನಿ –** ಬಿಲ್ಲಿನ ಕೊಪ್ಪು (ಅಟನಿ ಕೊಪ್ಪು ಅಱೆಗೆ: **ಅಭಿಧಾವ,** ೧. ೧೪. ೧೩)

**ಅಟಮಟ** – ಆತುರ (ಪಣಮಿಲ್ಲದೆ ಅಟಮಟಿಸುವ ಬಣಗುಗಳಂ ನೆವವನಿಟ್ಟು ಬಿಟ್ಟು: **ಉದ್ಭಟಕಾ,** ೧೦. ೬೬)

**ಅಟಮಟಿಗ** – ಸುಳ್ಳುಗಾರ (ಅನೃತದಲ್ಲಿ: ಅಟಮಟಿಗಂ, ಚಾಮರಿಗಂ, ಮಾಳಿಗಂ, ಪುಸಿಗಂ: **ಶಬ್ದಮದ,** ೨೦೮, ಕ್ರಮಪ್ರಯೋಗ, ೩); ಮೋಸಗಾರ (ಅಟಮಟಿಗಂ ದಿಟಕ್ಕೆನೆ ಕರಂ ಬಳೆದಂ ಮನದಂತೆ ವಾಮನಂ; **ನೇಮಿನಾಪು,** ೬. ೨೪)

**ಅಟವಿ** – ಅಡವಿ, ಕಾಡು (ಆ ವಧುವಂ ಮೆಲ್ಲನಿಟೆಪಿ ರೌದ್ರಮೃಗಂಗಳ್ಗಾಗರಮೆನಿಪದೊಂದು ಮಹಾವಿಷಮಂ ಅಟವಿಯೊಳ್ ಇರಿಸಿ ಪೋದತ್ತಾಗಳ್: **ಪಂಪರಾ,** ೧೪. ೫೪)

**ಅಟವೀಸಂಭವ** – ತಾನಾಗಿ ಬೆಳೆಯುವ ಕಾಡು ಗೋಧಿ ನವಣೆಗಳಂತಹ ಕಾಡುಧಾನ್ಯ (ಅಟವೀಸಂಭವಮದೆ ಗವೇಧುಕಂ ನೀವಾರಂ: **ಅಭಿಧಾವ,** ೧. ೧೬. ೧೯)

**ಅಟವ್ಯ** – ಅರಣ್ಯ ಪ್ರದೇಶ (ಸಂದ ಲಾವಕನ ನಿಯೋಗದಂತತೊಗೆದ ಬೊಬ್ಬುಲಿ ಪರ್ವಿದಟವ್ಯಮದ್ಭುತಂ: **ಪುಣ್ಯಾಸ್ರ,** ೧. ೯೩)

**ಅಟ್ಟ** – ಮನೆಯ ಚಾವಣಿಯ ಕೆಳಗಿನ ಸಾಮಾನುಗಳಿರಿಸುವ ಅಂತಸ್ತು (ಕೋಡಗವೇಱದೇ ಮರನನಟ್ಟವನೇಱದೆ ಬೆಕ್ಕು: **ಸೂಕ್ತಿಸು,** ೧೭. ೨೩); ಪುರಗೋಪುರ (ಪುರಗೋಪುರಮಕ್ಕುಂ ಅಟ್ಟಂ ಅಟ್ಟಾಳಂ: **ಅಭಿಧಾವ,** ೧. ೧೦. ೬); ಅಂಗಡಿ (ಮನೋಭವನ ವಿದ್ಯೆ ಮನೋಜನ ಅಟ್ಟಂ ಇಕ್ಷುಚಾಪನ ಧನು ಮೀನಕೇತನನ ಕೇತನಂ: **ಸುಕುಮಾಚ,** ೫. ೫೪)

**ಅಟ್ಟಕಟಿ –** ಸ್ನಾನದಲ್ಲಿ ಕೊಳೆ ಹೋಗಲು ಹಾಕಿಕೊಳ್ಳುವ ಬಿಸಿಯ ಗಂಜಿ (ಅವರ್ಗೆಲ್ಲಂ ನೀರನಿಡಿಸಿ ತಲೆಯಂ ಪೂಸಿಸಿಯೊಲ್ಲಣಿಗೆಯನುಡಿಸಿ ತಲೆಯೊಳಟ್ಟಕಟಿಯಂ ಪೊಯ್ದಾಗಳ್, **ವಡ್ಡಾರಾ,** ಪು. ೧೮. ಸಾ ೨೪)

**ಅಟ್ಟಗವಲ್** – ಮರದ ಎತ್ತರವಾದ ಕವಲುಕೊಂಬೆ (ಅಟ್ಟಕ್ಕೆ – ಅಟ್ಟಹಾಸ, ಅಟ್ಟವಡಿ, ಅಟ್ಟಗವಲ್: **ಶಬ್ದಮದ,** ೩೧೩ ಪ್ರ)

**ಅಟ್ಟಟ್ಟಿ** – ನಿಯೋಗ, ದೂತ (ಅಟ್ಟಲೆವೇೞ್ಪುದೊರ್ಮೆಗೆ ವಿಭೀಷಣನಲ್ಲಿಗೆ ನಮ್ಮ ನಣ್ಪಿನಟ್ಟಟ್ಟಿಯ ಮಾತನಟ್ಟಿದೊಡೆ ದೇವಿಯನಾತಂ ಮಾತಂಗೇಳ್ದು ಬಿಟ್ಟಟ್ಟಿಗುಂ: **ಪಂಪರಾ,** ೧೧. ೨೩)

**ಅಟ್ಟಟ್ಟಿಯಟ್ಟು** – ದೂತನನ್ನು ಕಳುಹಿಸು (ಪ್ರಮದವನದೊಳಗೆ ಸೆಱೆಯಿಟ್ಟು ಮತ್ತಂ ಅಟ್ಟಟ್ಟಿಯಟ್ಟುತಿರ್ದಪನುಚಿತ ಕ್ರಮಮಂ ಕಾಮುಕರಱಿವರೆ: **ಪಂಪರಾ,** ೧೧. ೮೨)

**ಅಟ್ಟತಾಳ** – ಏಳು ಬಗೆಯ ತಾಳಕ್ರಮಗಳಲ್ಲಿ ಒಂದು (ಧ್ರುವ ಮಟ್ಠೆಯಂ ಪಡಿಮಟ್ಠೆಯಂ ಅಟ್ಟತಾಳ ಎಕ್ಕತಾಳ ರೂಪಕಂ ರಚ್ಚೆಯ ಎಂಬ ಏೞುಂ ತೆಱದ ತಾಳಕ್ರಮದಿಂದ: **ಧರ್ಮಾಪ,** ೨. ೨೦ ವ)

**ಅಟ್ಟಲೆ –** ಕೋಟೆಯ ಮೇಲಿನ ಶಸ್ತ್ರಗಳ ಹಾಗೂ ಕಾವಲುಗಾರನ ಕೊಠಡಿ (ಬಲವದ್ವಜ್ರಕವಾಟಮರ್ದೆಗಟ್ಟಾಟಂ ರಿಪುಶ್ರೇಣಿಗೆ ಅಟ್ಟಲೆಮಾಕಟ್ಟಲೆವೈರಿವೀರರಸಮಂ ತೂಗಲ್: **ಪುಷ್ಪದಂಪು,** ೯. ೨೬)

**ಅಟ್ಟವಣೆಕೋಲ್** – ಪುಸ್ತಕವಿರಿಸುವ ಪೀಠ, ವ್ಯಾಸಪೀಠ (ಇರ್ದನಟ್ಟವಣೆಕೋಲ್ಗಳ ಮೇಲೆಸೆದಿರ್ದ ವೀರಸಿದ್ಧಾಂತದ ಶಾಸನಂಬರೆದ ಪೊತ್ತಗೆಯಂತಮರಾಪಗಾತ್ಮಜಂ: **ಪಂಪಭಾ,** ೧೧. ೪೬)

**ಅಟ್ಟಹಾಸ** – ಗಟ್ಟಿಯಾದ ನಗು (ಎಲೆ ತಾರಾಗಂ ಹರಂ ಕಣ್ಣಿಡೆ ಕರಗಿದುದಂತಲ್ತು ರುದ್ರಾಟ್ಟಹಾಸಂ ಜಲಮಾದತ್ತು: **ಕಾದಂಸಂ,** ೩. ೧೨)

**ಅಟ್ಟಳೆ** – ಕೋಟೆಯ ಬುರುಜು (ಎರಡೆರಡು ಅಟ್ಟಳೆಗೆ ತರಂತರದಿಂದೊಂದೊಂದು ಗೋಪುರಂ: **ಆದಿಪು,** ೬. ೧೦೬); ಕೋಟೆಯ ಮೇಲಿನ ಶಸ್ತ್ರಗಳ ಹಾಗೂ ಕಾವಲುಗಾರನ ಕೊಠಡಿ (ಪಾತಾಳಮನೆಯ್ದಿದ ಖಾತಂ ಸುರಪುರಮನೆಯ್ದಿದಟ್ಟಳೆ ಪೆಂಪುದ್ಯೋತಿಸೆ: **ಅಜಿತಪು,** ೨. ೧೬)

**ಅಟ್ಟಾಲ** – ಕೋಟೆಯ ಬುರುಜು (ಆಕಾಶಾಂತಮನೆಯ್ದೆ ನೀಳ್ದ ವಿಕಟ ಅಟ್ಟಾಲಂಗಳೊಳ್: **ಆದಿಪು,** ೬. ೧೦೪);

**ಅಟ್ಟಾಳಕ** – ಅಟ್ಟಲೆ (ನೆಗೆದ ಅಟ್ಟಾಳಕಜಾಲದ ಸೊಗಯಿಪ ಹರಿನೀಳ ಚೂಳಿಕಾವಳಿಯೊಳ್ ತಾರಗೆಗಳ್ ತುಱುಂಗಿ ಮಿಱುಗುವುವು ಅಗಲದೆ ತೆತ್ತಿಸಿದ ಮುತ್ತುಗಳ ಮೊತ್ತದವೋಲ್: **ಶಾಂತೀಶ್ವಪು,** ೧೩. ೧೫೩)

**ಅಟ್ಟಾಸುರ** – ಅತಿ ಭಯಂಕರ (ಸ್ಥಿರಬದ್ಧಮತ್ಸರರ್ ಭೀಕರಬದ್ಧಭ್ರುಕುಟಿಘಟಿತರ್ ಅದ್ಭುತರ್ ಅಟ್ಟಾಸುರರ್ ಅಧಿಕಕೋಪ ಪಾಟಲಪರುಷೇಕ್ಷಣರ್ ಎನಿಸಿ ದೃಷ್ಟಿಯುದ್ಧಂಗೆಯ್ದರ್: **ಗದಾಯು,** ೮. ೨)

**ಅಟ್ಟಾಳಕ** – ಬುರುಜು (ಅಳಕಾಪುರಕ್ಕಂ ಅಮರಾವತಿಗಂ ನಾಡೆಯುಂ ಅಧಿಕಮೆನಲ್ ಮಣಿ ಮಾಡ ಪ್ರಾಕಾರ ಗೋಪುರ ಅಟ್ಟಾಳಕಮಂ: **ಪಂಪರಾ,** ೭. ೧೨೮)

**ಅಟ್ಟಿ ಕೊಟಿಕೆ ನಾಱು** – ತಡೆಯಲಾಗದಂತೆ ಕೆಟ್ಟ ವಾಸನೆ ಹರಡು (ಜಲಧಿಯೊಳು ಕಪ್ಪೆ ಸತ್ತೊಡೆ ಜಲಧಿಯ ನೀರೆಲ್ಲಮಟ್ಟಿ ಕೊಟಿಕೆ ನಾಱ್ಗುದೆ: **ಧರ್ಮಾಮೃ,** ೬. ೧೬೮)

**ಅಟ್ಟಿ ತಿನ್** – ಹಿಂಬಾಲಿಸಿ ಹಿಂಸಿಸು (ಮಗಳೇ ನೀನಿಲ್ಲದೆ ಮನೆ ಬಂಗೆವಂದೆನಗಟ್ಟಿ ತಿಂಬ ಪಟುವಾದುದು: **ಧರ್ಮಾಮೃ,** ೩. ೧೩೫); ಅಟ್ಟಿಸಿಕೊಂಡು ಹೋಗಿ ಕೊಲ್ಲು (ನಿಮ್ಮ ಕುಲಂಗಳಾಂತು ಮಾರ್ಮಲೆವನನಟ್ಟಿ ತಿಂಬುವೇ: **ಪಂಪಭಾ,** ೧೦. ೨೧)

**ಅಟ್ಟಿಸು** – ಕಳಿಸು (ಲೇಸಾಗಿ ಬೆಂದ ಬಾಡಂ ಬಾಸಣಿಸಿಟ್ಟು ಅದನೆ ಅಮೃತಮತಿಗೆ ಅಟ್ಟಿಸಿದಂ: **ಯಶೋಧಚ,** ೩. ೭೦)

**ಅಟ್ಟು** – ಬೆನ್ನು ಹತ್ತು (ಎಚ್ಚರನಂಬಟ್ಟುವಿನಂ: **ಪಂಪಭಾ,** ೧೦. ೭೪): ಓಡಿಸು (ಕಟ್ಟಿಲೆಯನಟ್ಟುವುದಯಾದಿತ್ಯಪ್ರಕಾಶದಿಂದಟ್ಟಿ ಮುಟ್ಟಿ: **ಆಚವರ್ಧ,** ೨. ೪೮ ವ); ಕಳಿಸಿಕೊಡು (ಅಟ್ಟಲೆವೇಟ್ಟಿನವರ್ಗೆ ಶಾಸನಹರರಂ: **ಆದಿಪು,** ೧೪. ೩೦); ಅಂಟಿಕೊಳ್ಳು (ಲಲನೆಯರೊಲ್ಲದೊಡಂ ಸಿರಿ ತೊಲಗಿದೊಡಂ ಪೋಗದಟ್ಟಿ ಕುತ್ತಂ ತನ್ನೊಳ್ ನೆಲಸಿದೊಡಮಂತು ಮುನ್ನಿನ ಕೊಲೆಯಲೆದಪುದು: **ಧರ್ಮಾಮೃ,** ೬. ೮೯); ಅಟ್ಟ (ಅವಱ ಮೇಗಣಟ್ಟುಗಳೊಳಿಟ್ಟ ಜೇನಪುಟ್ಟಿಗಳಂ ಅನುಕರಿಸುವ ಅತಿರೌದ್ರ ಬೀಭತ್ಸಕುತ್ಸಿತ ಸ್ಥಾನಂಗಳೊಳ್: **ಆದಿಪು,** ೫. ೮೩ ವ); ಬೇಯಿಸು, ಅಡುಗೆ ಮಾಡು (ಕೆಲದಟ್ಟಿಗಳಿಂ ಅಟ್ಟಲೆನಿಸೆ ವಿಕಚಾಬ್ಜಂಗಳ್ ಕೊನೆದೆಸೆದುದು ರಾಜಹಂಸನ ಔತಣದೆಡೆವೋಲ್: **ರಾಜಶೇವಿ,** ೧೨. ೨೨)

**ಅಟ್ಟುಂಗರೆ** – ಒಂದು ಬಗೆಯ ಆಟ (ಹರಿವರಿ ಪಾಱುಂಬಳೆ ಮರಗೆರಸಿ ಕುಳಿಲ್ಸೆಂಡು ಬಟ್ಟು ತಿಱಿಕಲ್ಲು ಅಟ್ಟುಂಗರೆ ಹೊಣೆಗುಂಡು ಎಂಬಿವಂ: **ಜಗನ್ನಾವಿ,** ೪. ೪೪)

**ಅಟ್ಟುಂಜಗಳ** – ಬಿಡದೆ ಮಾಡುವ ಜಗಳ (ಜಕಾರಕ್ಕೆ: ತೂಗುಂಜೊಡರ್, ಅಟ್ಟುಂಜಗಳಂ, ಕಟ್ಟುಂಜುರಿಗೆ: **ಶಬ್ದಮದ,** ೧೮೧, ಪ್ರ ೫)

**ಅಟ್ಟುಂಬರಿ** – ಬೆಂಬತ್ತಿ ಹೋಗು (ಚುಂಬನಮಪ್ಪು ಚಪ್ಪರಣೆ ಬೇಡುವ ಬಕ್ಕುಡಿ ಕಾಯ್ದು ಕೂಡುವಟ್ಟುಂಬರಿಯೆಂಬಿವಾಗೆ: **ನೇಮಿನಾಪು,** ೫. ೭೧)

**ಅಟ್ಟುಂಬರಿಗೊಳ್** – ಅಟ್ಟುಂಬರಿ (ಕಾಮನಂಬಂಬಂ ಅಟ್ಟುಂಬರಿಗಡೆಟ್ಟೆಟ್ಟಿತೋ: **ಜಗನ್ನಾವಿ,** ೧೦. ೭೮)

**ಅಟ್ಟುಂಬರಿವರಿ** – ಜೋರಾಗಿ ಹರಿ (ಕಳಿಂಗಮಂಡಲದೊಳ್ ಮಡುಗಟ್ಟಿ ನಿಂದು ಮಹಾರಾಷ್ಟ್ರಮಂಡಳದೊಳ್ ಅಟ್ಟುಂಬರಿವರಿದು ಮಳಯಮಂಡಲದೊಳ್ ವೇಳೆಗೊಂಡು ನೆಲಸಿ: **ಅನಂತಪು,** ೧೪. ೪೭ ವ)

**ಅಟ್ಟುಂಬೆಸ** – ಹೇಳಿ ಮಾಡಿಸುವ ಕೆಲಸ (ದೇವವಾರವಧೂವರ್ಗದ ಮೆಚ್ಚ ಮೆಚ್ಚಿ ಬೆಸಕೆಯ್ವಟ್ಟುಂಬೆಸಂ: **ಅನಂತಪು,** ೪. ೧೩೪)

**ಅಟ್ಟುಪಡು** – ಅಟ್ಟಿಸಿಕೊಂಡು ಬರುವ ಕ್ರಿಯೆಗೆ ಒಳಗಾಗು (ನಾಯ್ಗಳಿಂದಂ ಅಟ್ಟುಪಟ್ಟ ಪೆಣ್ಮೊಲನಂತೆ ಭಯಮನೆಡಗಲಸಿ: **ಶಾಂತಿನಾಪು,** ೭. ೯೧ ವ)

**ಅಟ್ಟುವೆಱು** – ಅಟ್ಟುಪಡು (ಮತ್ತಮೊಂದೆಡೆಯೊಳ್ ಪಟುವಟಿಯ ಬೇಟದ ತೋಟಿಯಂ ತೊಡರ್ದಟ್ಟುವೆತ್ತ ಪೊಲವುಲ್ಲೆಯಳ್ಳೆವಿಳ್ಳೆಯಾದ: **ಆದಿಪು,** ೨೮. ವ)

**ಅಟ್ಟೆ** – ಮುಂಡ, ತಲೆಯಿಲ್ಲದ ದೇಹ (ಇನ್ನುಂ ತಲೆ ಮತ್ತಮಟ್ಟೆಗಳ ಮೇಲಿರ್ದಪ್ಪುವು: **ಪಂಪಭಾ,** ೭. ೧೪)

**ಅಟ್ಟೆಯಾಟ** – ತಲೆ ಕತ್ತರಿಸಿದಾಗ ಅದು ದೇಹದಿಂದ ಬೇರ್ಪಟ್ಟು ಕುಣಿದಾಡುವ ಪರಿ (ನಾಳೆಯ ರಣಾಂಗಣದೊಳ್ ನಡೆ ನೋಡುವಿರ್ ಮರುಳ್ವಡೆಯೊಡಗೂಡೆ ತಾಂಡವಮನಾಡುವ ರಾವಣನಟ್ಟೆಯಾಟವಂ: **ಪಂಪರಾ,** ೧೦. ೨೩೩)

**ಅಟ್ಟೆಯಿಡು** – ಮೈ ಚಾಚು (ತೆಱಪಂ ನಿಟ್ಟಿಸಿ ಪೊಕ್ಕು ಪಾಯ್ದುಲಿವ ಘೋಟಕಾಯ್ಲರ್ಕಳಿಂ ವಾಜಿ ಕುಕ್ಕುಟಿಸುತ್ತಿರ್ಪಿನಂ ಅಟ್ಟೆಯಿಟ್ಟಳತೆವಾಱುತ್ತಿರ್ಪಿನಂ: **ಅನಂನಾಪು,** ೧೪. ೪)

**ಅಡಂಗಾಯ್ತ** – ಕೋಟೆಯನ್ನು ರಕ್ಷಿಸುವವನು (ಅರಮನೆಯೊಳಗೆ ಪುಗುವ ಪೊಱಮಡುವ ಝಳಂಬಾಯ್ತರ ಸೂಟಕಾಯ್ತರ ಕಲ್ಲಾಯ್ತರ ಅಡಂಗಾಯ್ತರಚ್ಚುಳಾಯ್ತರ ರಭಸಂ: **ಶಬ್ದಮದ,** ೨೦೯ ಪ್ರ ೨)

**ಅಡಂಗಿಸು** – ಮರೆಮಾಚು, ಬಚ್ಚಿಡು (ಅವರೊಳೊರ್ವನಾಮೂವರುಮಂ ಬಂಚಿಸಿಬಿಟ್ಟು ನೋಡಿಯೊಂದು ಪೊಟ್ಟಣಮನಡಂಗಿಸಿರ್ಪುದುಂ: **ಸುಕುಮಾಚ,** ೭. ೮ ವ); ನಾಶಮಾಡು (ಜಿನಪದಸ್ನೇಹಮೆಂಬ ದಂಡಿಂ ವೇದನೀಯವೆಂಬ ಗಡಿಯ ನಾಯಕರನಡಂಗಿಸದೆ: **ಧರ್ಮಾಮೃ,** ೭. ೫೫ ವ)

**ಅಡಂಗು** – ಬಚ್ಚಿಟ್ಟುಕೋ (ಅಡಗು – ಗೋಪನೇ: **ಶಬ್ದಮದ,** ಧಾ ೮೧); ಹಿಂದಕ್ಕೆ ಸರಿ (ಕರ್ಪಿಂ ಸಮಸಂದೊಡಲಲರ್ದ ಮೂಗಡಂಗಿದ ಗಲ್ಲಂ: **ಧರ್ಮಾಮೃ,** ೭. ೧೪೯); ಶಮನವಾಗು (ಈಗಳಡಂಗಿತೆಮ್ಮ ಹೃದ್ರೋಗಮನೇಕಮಂಗಳ ಪರಂಪರೆಗಳ್ ದೊರೆಕೊಂಡುವೀಗಳ್: **ಪಂಪಭಾ,** ೭ ೬೦); ಹತೋಟಿಗೆ ಬರು (ಕಷ್ಟಮೀಯದೆ ಚಪ್ಪರಿಸುವ ಮಂಡಳಿಕರುಮಂ ಅಡಂಗದಾಟವಿಕರುಮಂ: **ಪಂಪಭಾ,** ೪. ೮೨ ವ)

**ಅಡಂಗುಱುಚಾಟ** – ಕಣ್ಣುಮುಚ್ಚಾಲೆಯಾಟ (ಆಡುವ ಕುರಂಗವಡಂಗುಱುಚಾಟಮಂ ಪ್ರಿಯರ್ಗೆಗೆಯಿಪಂಗಜನ್ಮನ ಬೆಸಂಬಡೆದಂತೆ ಲತಾಗೃಹಂಗಳೊಳ್: **ಸೂಕ್ತಿಸು,** ೧೧. ೭೪)

**ಅಡಂಗುಱುಚಾಡು** – ಕಣ್ಣುಮುಚ್ಚಾಲೆಯಾಡು (ಸಂಕಲ್ಪಜನ್ಮಜಂಗಮಲತಾಂಗಿ ಸಂಭೋಗಲೋಭದಿಂ ಅಡಂಗುಱುಚಾಡಿ ಕಾಡಿದ ಚಂದನಲತಾಮಂದಿರಮಂ: **ಪಂಪರಾ,** ೯. ೧೨೦ ವ)

**ಅಡಂಗೆಡೆ** – ಅಡ್ಡಲಾಗಿ ಬೀಳು (ಭೂಧರೋತ್ಕರಮಿರದೆಯ್ದೆ ಬೇರ್ಕೊಱೆದಡಂಗೆಡೆಯುತ್ತಿರೆ: **ಕುಸುಮಾಕಾ,** ೬. ೩೧)

**ಅಡಂಗೊತ್ತು** – ಶಮನಗೊಳಿಸು (ಅಱೆವುಳ್ಳಂ ರುಜೆ ಪೆರ್ಚಿ ತೀರ್ಚುವೊಡದಂ ಮರ್ದಿಂದದಡಂಗೊತ್ತಿದಂದುಱೆಬೇಗಂ ತೊಱೆಯೆಂಬುದು: **ಜೀವಸಂ,** ೧೧. ೧೪)

**ಅಡಕ** – ಹತೋಟಿ, ಸಂಯಮ (ಓವಿ ಜೀವಮಂ ಅಡಕಂಬೆರಸುಯ್ದು ಸಮಿತಿಯೊಳ್ ಮುನಿ ನೆಗಟ್ದಂ: **ಆದಿಪು,** ೬. ೨೮)

**ಅಡಕವಂತ** – ವಿಧೇಯ (ಪಱುಗೋಲನೇಱೆದನಂತಡಕಮುಳ್ಳವಂ ರಾಜಸೇವಕನಂತಡಕವಂತನುಮಪ್ಪುದು: **ಧರ್ಮಾಮೃ,** ೫. ೬೪ ವ)

**ಅಡಕಿಲ್** – ಪೇರಿಸಿಡುವುದು (ಅಡಕಿಲ ಮಡಕೆಗಳೆಂಟುಂ ಬೆಡಂಗು ನಿಲೆ ನೆಲವುವಿಡಿದು ನಿಲ್ವಂತೆ: **ಶಾಂತಿಪು,** ೧೨. ೫೧); ರಾಶಿ (ಎಲ್ವಿನ ಪರ್ವತಂ ಕರುಳ್ಪಿಣಿಲ ಪೊದಳ್ಕೆ ಡುಂಡದ ಅಡಕಿಲ್ ನರದುರ್ಬು: **ಜಗನ್ನಾವಿ,** ೭. ೮೪)

**ಅಡಕಿಲಿಡು** – ಪೇರಿಸು (ಸೊಡರ್ಗುಡಿಯಗೆಯಂ ಪಚ್ಚೆಯ ಪಡಲಗೆಗಳೊಳಡಕಿಲಿಟ್ಟು ರತಿ ಪೊಯ್ದುವೊಲೇಂ ಜಡಿದುದೊ ಸಂಪಗೆ ನನೆಯಂ: **ಅನಂತಪು,** ೬. ೭೯)

**ಅಡಕಿಲ್ಕೂಟ** – ಪೇರಿಸಿಟ್ಟ ಬೆಟ್ಟದ ಶಿಖರಗಳು (ಗಂಡಶೈಲಮಡಕಿಲ್ಕೂಟಂ .. .. ರಯ್ಯಮಾ ಬೆಟ್ಟದೊಳ್: **ಸೂಕ್ತಿಸುಧಾ,** ೩. ೨)

**ಅಡಕಿಲ್ಗಿರಿ** – ಪೇರಿಸಿದ ಬೆಟ್ಟಗಳು (ಕಪಿವ್ರಜಂ ಪರಿದು ಬೆಟ್ಟುಗಳಂ ನೆಱೆ ಕಿಳ್ತು ನೆತ್ತಿಯೊಳ್ ಸಂದಿದಿ ಮೂಱುನಾಲ್ಕನಡಕಿಲ್ಗಿರಿಯಾಗಿರೆ ಪೊತ್ತು ಬೇಗದಿಂ ತಂದು ಸಮುದ್ರಮಂ ಕಟ್ಟಿದರ್: **ಧರ್ಮಪ,** ೮. ೨೨)

**ಅಡಕಿಲ್ಗೊಡೆ** – ಪೇರಿಸಿದ ಕೊಡೆಗಳು (ಕಡುಚೆಲ್ವತನಕ್ಕೆ ಅಡಕಿಲ್ಗೊಡೆವಿಡಿದಂತಳಿಗಳೋಳಿ ಮುಡಿಯಲರ್ಗಂಪಿಗೆ ಎಡೆವಿಡದೆ ಮೇಲೆ ತುಱುಗಿರೆ: **ಶಾಂತೀಶ್ವಪು,** ೧೦. ೬೮)

**ಅಡಕಿಲ್ಗೊಳ್** – ಪೇರಿಸಿರು (ಕನ್ಯಕಾಸಂಕುಳಂ ಅಂದು ಅಡಕಿಲ್ಗೊಂಡೊಪ್ಪುವ ಕೌಳುಡೆಯಿಂ ಸೊಗಯಿಸುವ ಪಾಸಿನೊಳ್; **ಕಾದಂಬ,** ೬. ೧೦೪); ಒತ್ತೊತ್ತಾಗಿರು (ಕಡೆಗಡೆಯೊಳಡಕಿಲಗೊಂಡು ನೋಡುವ ಜನಂಗಳ ಅಧರಬಂಧೂಕದ ನಾಸಿಕಾಚಂಪಕದ ನಯನಕುವಳಯದ: **ಆಚವರ್ಧ,** ೯. ४३ ವ)

**ಅಡಕಿಲ್ಜವ್ವನ** – ಏರುಂಜವ್ವನ (ಪಡೆದಂ ಪದ್ಮಜನೆಂತೊ ಭೂಷಣಕೆ ಭೂಷಾಲಕ್ಷ್ಮಿಯಂ ಜವ್ವನಕ್ಕಡಲ್ಜವ್ವನಮಂ ವಿರಾಜಿಸುವ ಲಾವಣ್ಯಕ್ಕೆ ಲಾವಣ್ಯಮಂ; **ಜಗನ್ನಾವಿ,** ೧೦. ೭೧)

**ಅಡಕಿಲ್ವಾಸು** – ಒತ್ತಾಗಿ ತುಂಬಿದ ಹಾಸಿಗೆ (ಸಜ್ಜೆವನೆಯ ಸಿರಿಮಂಚದ ಹಂಸತೂಳದಡಕಿಲ್ವಾಸಿನೊಳ್ ಭರದಿಂ ನೆರೆವಾಗಳ್; **ಗಿರಿಜಾಕ,** ೪. ೧೪೮ ವ)

**ಅಡಕಿಲ್ವಣ್** – ದೊಡ್ಡ ಹುಣ್ಣು (ಉರದಡಕಿಲ್ವಣ್ಣಂ ಕರ್ದುಕಿರದಧರದ ಪುಣ್ಗೆ ವಾಯ್ದು ಮೀಂಗಗಿದು ತಳೋದರಿಯನೆಯ್ದುವಿನಮಾ ಸರೋವರಂ ಕದಡೆ ದೆಸೆದೆಸೆವರಿದಳ್: **ಶಾಂತಿಪು,** ೮. ४४)

**ಅಡಕಿಲ್ವೆಸರ್** – ಒಂದರ ಮೇಲೊಂದು ಪೇರಿಸಿಕೊಂಡ ಹೆಸರು (ಧರೆಯಂ ಕುಡುವಂದೆನಗಂ ಗುರು ತನಗಂ ರಾಜನಾಮಮಂ ಕೊಟ್ಟೊಡೆ ನೋಡಿರೆ ತನಗೀಗಳ್ ರಾಜಾಧಿರಾಜನೆಂದಿಟ್ಟುಕೊಂಡನಡಕಿಲ್ವೆಸರಂ: **ಆದಿಪು,** ೧४. ೭೮)

**ಅಡಕಿಲ್ವೊಂದು** – ಒಂದರ ಮೇಲೊಂದು ಇರಿಸು (ಬಿಂದುವನುಸ್ವಾರಂ ತಾನೆಂದಕ್ಕುಂ ಸೊನ್ನೆ ಮುತ್ತುವೋಲ್ ವೃತ್ತತೆಯಿಂ ಸಂದಿರ್ಪುದಂತದು ಅಡಕಿಲ್ವೊಂದಿರೆ ಮಣಿಗೊಪ್ಪುವವೋಲ್ ವಿಸರ್ಗಮೆನಿಕ್ಕುಂ: **ಶಬ್ದಮದ,** ೨೧)

**ಅಡಕು** – ತುಂಬು, ಹೇರು (ಹರಿ ಕರವಿನ್ಯಾಮಸಂಗಳ್ ನುಡಿಯಂ ಅಡಕುವಂತಿರೆ ನುಡಿದಂ: **ಪಂಪಭಾ,** ೯. ३४)

**ಅಡಕೆ** – ಕೌಂಗು, ಕ್ರಮುಕ (ಅವಱ ಮೇಲಿರ್ದೆಲೆಯಡಕೆಯುಮಂ: **ಪಂಪಭಾ,** ೫. ४೭ ವ)

**ಅಡಕೆಗೇಣಿಸು** – (ಅಡಕೆಗೆ+ಎಣಿಸು), ಕ್ಷುಲ್ಲಕವಾಗಿ ಕಾಣು (ಆ ಭಾರತಿಯ ವಿದ್ಯಾ ಗುಣಕ್ಕೊಂದಡಕೆಗಮೆಣಿಸಲ್, **ನೇಮಿನಾಪು,** ೩. ४)

**ಅಡಗಿಂಡೆ** – ಮಾಂಸದ ಮುದ್ದೆ (ನೆಲದೊಳ್ ಬಿಟ್ಟಡಗಿಂಡೆಯಾಗೆ ನೆಱನಂ ನಟ್ಟುರ್ಚಿದ ಉಗ್ರಾಯುಧಾವಲಿಯಿಂದ ಉರ್ವಿಸುವ ಇಂದ್ರಜಾಲಿಗನವೋಲ್ ಜೋಲ್ದುಂ: **ಶಾಂತಿಪು,** ೭. ೮೯)

**ಅಡಗಿಂಡೆಯಾಡು** – ಮಾಂಸದ ಮುದ್ದೆಗಳನ್ನು ಎಸೆದಾಡು (ಬಳರಿಗೆ ಕೊಂಡು ಪೋಗಿ ಕುಱಿಯಂ ತಱಿದಲ್ಲಿಯೆ ತಿಂದು ಪೀರ್ದು ಕಳ್ಗಲನಡಂಗಿಡೆಯಾಡುವರೆ ಮೆಚ್ಚುವರ್: **ಸಮಯಪ,** ೧೩. ४೬)

**ಅಡಗು** – ಮಾಂಸ (ಪಲಲಂ ಪಿಶಿತಂ ಕ್ರವ್ಯಂ ಪಲಂ ಆಮಿಷ ಅಡಗು ಜಾಂಗಲಾಖ್ಯಂ ಮಾಂಸಂ: **ಅಭಿಧಾವ,** ೧. ೧೨. ೩೦); ಬಜ್ಜೆಟ್ಟುಕೋ (ಎನ್ನೊಡವುಟ್ಟಿದರುಂ ತಂದೆಯುಮಡಗಿರ್ದರ್ ಖಳಕೃತಾಂತದಂತಾಂತರದೊಳ್: **ಆದಿಪು,** ३. ३४)

**ಅಡಗುತಿನ್** – ಮಾಂಸವನ್ನು ತಿನ್ನು (ಅಸುರನಸುರಂ ಮಸಗಿ ಕೊಂದಡಗುತಿಂಬ ಬಳಾರಿ: **ಸಮಯಪ,** ೯. ೧೧೨)

**ಅಡದಿನ್** – ಅಡಗನ್ನು ತಿನ್ನು (ಮರುಳ್ಗಳಡದಿಂಬುತ್ಸಾಹದೆ ಪಲ್ಲಂ ಮಸೆದವು: **ಜಗನ್ನಾವಿ,** ೭. ४೮)

**ಅಡಪ** – ಎಲೆಯಡಕೆಯ ಚೀಲ (ಚಾಮರದಡಪದ ಡವಕೆಯ ಕನ್ನಡಿಯ ಪರಿಚಾರಿಕೆಯರುಮಂ: **ಆದಿಪು,** ३. २३ ವ)

**ಅಡಪದವ** – ಎಲೆಯಡಕೆ ಸಂಚಿಯನ್ನು ಹಿಡಿದವನು (ದಂಡಾಧಿಪರ್ ಮಾಂಡಳಿಕರ್ ಅಧಿಕಸಾಮಂತರ್ ಅಂತರ್ನಿಯುಕ್ತರ್ ಬಗೆಕಾಱರ್ ಗಾಯಕರ್ ಪಾಠಕರ್ ಅಡಪದವರ್: **ಅನಂತಪು,** ೨. ೨೬)

**ಅಡಪಂಬಿಡಿ** – ಎಲೆಯಡಿಕೆ ಚೀಲವನ್ನು ಹಿಡಿದುಕೊ (ಅಜಿತತೀರ್ಥಕರ್ತುಗೆ ಕುಂಚಂಬಿಡಿದಿರ್ಪ ಕೆಲದೊಳ್ ಅಡಪಂಬಿಡಿದೊರ್ಪಸುರೇಂದ್ರನಾಯಕರ್ ಸೊಗಯಿಸಿದರ್: **ಅಜಿತಪು,** ೫. ೭४)

**ಅಡಪವಳ** – ಎಲೆಯಡಿಕೆ ಚೀಲ ಹಿಡಿಯುವವನು (ಸಚಿವನೆಯ್ದಿದದನಶ್ರುಲೇಖನೆಂಬಡವಳಂ: **ಕುಸುಮಾಕಾ,** ೧೨. ೯)

**ಅಡಪವಳಿತಿ** – ಅಡಪಗಿತ್ತಿ (ವಸುಧಾಧೀಶನ ಪರಮಪ್ರಸಾದಭಾಗಿನಿಯಂ ಅಡಪವಳಿತಿಯನವಧಾರಿಸು: **ಕಾದಂಸಂ,** ೫. ೯೦)

**ಅಡಪವಳ್ತಿ** – ಅಡಪಗಿತ್ತಿ (ಚಾಪಳೆಯಪ್ಪಡಪವಳ್ತಿ ನುಡಿದ ನುಡಿಗೆ ಪೊಡವೀಶಂ ಮೆಚ್ಚುತ್ತುಂ: **ಶಾಂತೀಶ್ವಪು,** ೧೦. ೯೫ ವ)

**ಅಡಪವಳ್ಳ** – ಎಲೆಯಡಿಕೆ ಚೀಲ ಹಿಡಿಯುವವನು (ಅಡಪವಳ್ಳಂ ನೀಡಿದ ಆರ್ದ್ರ ಪೂಗೀಫಲಂಗಳುಮಂ ಕರ್ಪೂರ ನಾಗವಲ್ಲೀ ಧವಲ ಲಲಿತಂಗಳುಮಂ: **ಸುಕುಮಾಚ,** ೧೧. ३२ ವ)

**ಅಡಪು** – ನಾಟ್ಯದ ಒಂದು ಭಂಗಿ (ರೂಪು ನೇರು ಲಾಗು ಲವಣಿಯಡಪು ತಿರುಪು ಕೈಮಱೆ ಕಳಾಸ ಕೂಟಮಾನಂಗಳಂ ಸಗಳಿಸಿ: **ರಾಜಶೇವಿ,** ೫. ೧೯ ವ)

**ಅಡರ್** – ಮೇಲಕ್ಕೆ ಹತ್ತು (ಅಡರ್ – ಆರೋಹಣೇ: **ಶಬ್ದಮದ,** ಧಾ ೫೩೬)

**ಅಡರಿಗೊಳ್** – ನೀರಲ್ಲಿ ತೇಲುವ ಎಣ್ಣೆಯನ್ನು ತೆಗೆದುಕೊ (ಪರಿಪಕ್ವ ಬಿಲ್ವಬೀಜಮನರೆದೆಣ್ಣೆಯೊಳಿಕ್ಕಿ ನೆಟಿಲೊಳೊಣಗಿಸಿ ಜಲದಿಂದಡರಿಗೊಂಡು: **ಲೋಕೋಪ,** ೭. ೨೫)

**ಅಡರಿಸು** – ಮೇಲಕ್ಕೆ ಹತ್ತಿಸು (ವಿಕಟಕೂಟ ಶಾಲ್ಮಲಿಗಳನಡಿಗಡಿಗಡರಿಸುತ್ತುಂ: **ಅಜಿತಪು,** ೧೧. ೧೦ ವ)

**ಅಡರು** – ವ್ಯಾಪಿಸು (ಅಡರಿ ಕಟಾಕ್ಷಚಂದ್ರಿಕೆ ಪಳಂಚೆ ಗವಾಕ್ಷದ ಚಂದ್ರಕಾಂತದಿಂದುಡುಗದೆ ಸೋರ್ವ ನೀರ್ವನಿಗಳ್: **ಮಲ್ಲಿನಾಪು,** ೨. ೫೫)

**ಅಡರ್ಪು** – ಆಧಾರ (ಕಳೆಗೆ ಕುಲಭವನಮುಮಂ ಪ್ರತಾಪಕ್ಕಡರ್ಪುಮಾಗಿ ಬಳೆವನ್ನೆಗಂ: **ಆದಿಪು,** ೬. ೨೨ ವ); ಆಶ್ರಯ (ಜಾಣ್ತನಕ್ಕೆ ಎಱವಟ್ಟು ಒಳ್ನುಡಿಗೆ ಆಣ್ಮಂ ಆಯತಿಗೆ ಅಡರ್ಪು .. .. ಸತ್ಯಕ್ಕೆ ಅಧಿಷ್ಠಾನಂ ಎಂದಜಿತಂ ಕೈಮಿಗೆ ಕೂರ್ತು ಕೀರ್ತಿಸುವುದು ಉರ್ವೀಮಂಡಲಂ ದುರ್ಗನಂ: **ಪಂಚತಂತ್ರ,** ೫೨); ಉತ್ಸಾಹ (ಬಿಡದೆಚ್ಚು ಸರಲ್ ತವೆ ಮನದಡರ್ಪು ತವದುರ್ವಿ ಮೈಯೊಳಿರ್ದಂಬಂ ಕೈಯಿಡುಗದೆ ಕಿಟ್ಟೆಚ್ಚರ್: **ಚಂದ್ರಪ್ರಪು,** ೧೦. ೭೭); ಉಂಟಾಗು (ರೋಮಾಂಚನಂಗಳುಂ ಸಂಜನಿಸೆ ಬಗೆಗೆ ಅಡರ್ಪಾಗೆ ಕೌತೂಹಲಂ: **ರಾಜಶೇವಿ,** ೩. ೧೧೩)

**ಅಡರ್ಪುಗುಡು** – ಆಶ್ರಯ ನೀಡು (ಸೆಳ್ಪುಗುರ್ಗಳ ಬಳ್ಳಿವೆಳಗಿಂಗೆ ಚಂದ್ರಕಳೆಯ ಕವಳಿಗೆಯನಡರ್ಪುಗುಡುವಂತೆಯುಂ: **ಅನಂತಪು,** ೮. ೭ ವ)

**ಅಡರ್ಪುಮಾಡು** – ಆಶ್ರಯವಾಗಿಸು (ಪಾಡುವೆಕ್ಕಲಗಾಣರ ಸಂಮಾವಣೆಯ ಗೀತಲತಿಕೆಗೆ ಸಮುಚಿತೋತ್ತರಂಗಳಂ ಅಡರ್ಪುಮಾಡಿ ಬಳಯಿಸುತ್ತುಂ: **ಆಚವರ್ಧ,** ೯. ೪೩ ವ)

**ಅಡವಿ** – ಕಾಡು (ಆವಡವಿಗಳೊಳ್ ಪಣ್ವಲಮಾವಗಮೊಳವು: **ಪಂಪಭಾ,** ೭. ೪೬)

**ಅಡವೊಡ್ಡು** – ಅಡ್ಡಲಾಗಿ ಒಡ್ಡು (ಬಿಸಿಲ್ಗೆ ಮೈಯ್ಯನಡವೊಡ್ಡಿ ತದೀಯ ತಟಮಗಳಲ್ಲಿಯಿಂಬಿಲ ಕಡುಗೊಂಬುಗಳ್ ತುಱುಗಿ ಬಿರ್ದುವೊಲಿರ್ದುವು: **ಶಾಂತೀಶ್ವಪು,** ೧೨. ೮೪)

**ಅಡಸಿ ಕಟ್ಟು** – ಬಿಗಿಯಾಗಿ ಕಟ್ಟು (ಪಾವುಗಳಂ ಕೊಳಿಸಿ ಮಹಾಗ್ರಾವಮಂ ಉಱದೆ ಅಡಸಿ ಕಟ್ಟಿ ಕೊರಲೊಳ್ ಗಂಗಾದೇವಿಯ ಮಡುವಿನೊಳ್ ಅಟ್ಟಿದರ್ ಏವಯಿಸದೆ ತಮ್ಮ ಕುಲಮಂ ಅಡಿಗಟ್ಟುವವೋಲ್: **ಪಂಪಭಾ,** ೨. ೩೨)

**ಅಡಸು** – ಒತ್ತಾಗಿ ಸೇರಿಸು (ಸಾಸಿವೆ ಲೋಯಿಸರದ ತಿರುಳೆಂಬಿವನಟ್ಟಡಸಿ ಬಿಗಿತಾಗಿ ಕಟ್ಟಲ್: **ಲೋಕೋಪ,** ೯. ೧೩೨); ತುರುಕು (ತೆಂಗಿನ ಪೊಸ ನೇಣಿಂದಱುದಿಂಗಳ್ವರಮಡಸಿ ಕಂಬಿಯಿಂ ಕಟ್ಟಿದೊಡಂ: **ಧರ್ಮಾಮೃ,** ೨. ೫೮); ಮೇಲೆ ಬೀಳು (ಇಡಿದಡರೆ ಕಾಯ್ತ ಚೂತಮನಡಸಿ ಸಿಡಿಲ್ ಪೊಯ್ದುದೆನಿಸೆ: **ಆದಿಪು,** ೩. ೩೪); ಉಂಟಾಗು (ಕೇಡಡಸಿದೊಡಂಬಗೆಯಂ ಕೂಡದು: **ಕವಿರಾಮಾ,** ೧. ೭೩); ರಭಸದಿಂದ ನುಗ್ಗು (ಜಂಬೂವೃಕ್ಷದ ಕೆಲದೊಳಡಸಿ ರಸದ ತೊಱೆ ಪರಿವಂತೆ: **ಪಂಪಭಾ,** ೬. ೩೦ ವ); ಗಟ್ಟಿ, ಬಿಗಿ (ಪೊಡೆಯೆ ಕಡಿವಡೆದ ರುಂಡಮಂ ಎಡಗೈಯಿಂದಂ ಅಡಸಿ ಪಿಡಿದು: **ರಾಜಶೇವಿ,** ೬. ೫೨)

**ಅಡಹಡಿಸು** – ತ್ವರೆಮಾಡು, ಆತುರಪಡು (ನಿಲಲೆಡೆಯಿಲ್ಲದೆ ಅಡಹಡಿಸಿ ಸುಡುಮಿಡುವಂದು ನಡನಡ ನಡುಗಿ: **ಅಜಿತಪು,** ೧೧. ೧೦ ವ); ಮುನ್ನುಗ್ಗು (ಅಳ್ಕದೆ ಬೆಚ್ಚದೆ ಬೆದಱದೆ ಬೆಳ್ಕುತ್ತು ಅಡಹಡಿಸಿ ಕುಸಿದು ಕುಂದಿರದೆ ಕೊರಲ್ಮುಟ್ಟೆ ಪರಿವುದಕದೊಳ್ ಮನಮುಟ್ಟದೆ .. .. ದಿಗಂಬರನಿರ್ದಂ: **ಸುಕುಮಾಚ,** ೪. ೧೦); ತವಕಿಸು (ಪೋಗಲಡಹಡಿಸಿ ಮಿತ್ರಸಮಾಗಮಮಂ ಬಯಸಿ ನಳಿನಿ ತಿಳಿಗೊಳದಿಂದ ಮೇಗಣ್ಗೆ ಒಗೆದಂತೆ: **ಮಲ್ಲಿನಾಪು,** ೭. ೭೦)

**ಅಡಾಯುಧ** – ಒಂದು ಬಗೆಯ ಕತ್ತಿ (ದೀಪದೇಣ ನುಡಿಯಲ್ಲಿ ಅಡಾಯುಧಂ ಅಡ್ಡಣಂ ಸೊಡರ್ಗಿದಗಂ ಎನಿಪ್ಪವಂ ಪಿಡಿದು: **ರಾಜಶೇವಿ,** ೫. ೫೨)

**ಅಡಿ** – ಪಾದ (ತಿಳಿಪಲಡಿಗೆಱಗಿದೋಪನ ತಳಂಗಳಾ ತೀಟದಿಂ ಪದಂಗಳೊಳೊಗೆದ ಪುಳಕಚಯಂಗಳ್, **ಕವಿರಾಮಾ,** ೩. ೧೧೮); ಪಾದತಳ (ಪಾದತಳಮದು ಅಡಿ: **ಅಭಿಧಾವ,** ೧. ೧೨. ೨)

**ಅಡಿಗಡಿಗೆ** – ಹೆಜ್ಜೆಹೆಜ್ಜೆಗೆ (ಜೀವನಿಕರಮಂ ರಕ್ಷಿಸದಿರ್ದಡೆ ಪಾಪಮಕ್ಕುಮೆಂದೆಂದಡಿಗಡಿಗಾರೈದು ನೋಡಿ ನಡೆವಂ ಜೈನಂ: **ಸಮಯಪ,** ೫. ೭); ಮತ್ತೆ ಮತ್ತೆ (ವನಜಮುಖಿ ಪಿರಿದುಮನುರಾಗದಿಂದಡಿಗಡಿಗೆ ಸೊಗಯಿಸಿದಳಾಗ ಮೊಗರಾಗದಿಂ: **ಆದಿಪು,** ೭. ೨೭ ರಗಳೆ)

**ಅಡಿಗಲ್** – ಬಡಿಯಲು ಇರಿಸಿಕೊಂಡ ಕಲ್ಲು (ಹದನೇಱೆ ಕಾಯ್ದುರಿವ ಲೋಹದ ಬಟ್ಟಂ ನಿಜೆಸಿ ಹೇವಣಿಗಂ ಅಗಡಿಲ್ಲ ಅಗ್ರದೊಳಿಕ್ಕುಳಿಂದೆ ಪಿಡಿದು: **ಧರ್ಮಪ,** ೭. ೪೩);

**ಅಡಿಗಲ್ಲಿಕ್ಕು** – ತಳಹದಿ ಹಾಕು (ಕುಳಿಶಾವಳಿಗಳಿನಮರ್ದಿಂ ತೊಳೆದಡಿಗಲ್ಲಿಕ್ಕಿ ಬೆಳ್ಳಿಯಿಟ್ಟಿಗೆಯಿಂ ಚೌಪಳಿಯಿಕ್ಕಿದಂತೆ: **ಶಾಂತಿಪು,** ೧೦. ೨೯)

**ಅಡಿಗಟ್ಟು** – ತಳದಲ್ಲಿ ಮುಳುಗಿಸು (ಪಾವುಗಳಂ ಕೊಳಿಸಿ ಮಹಾಗ್ರಾವಮಂ ಉಱದೆ ಅಡಸಿ ಕಟ್ಟಿ ಕೊರಲೊಳ್ ಗಂಗಾದೇವಿಯ ಮಡುವಿನೊಳ್ ಅಟ್ಟಿದರ್ ಏವಯಿಸದೆ ತಮ್ಮ ಕುಲಮಂ ಅಡಿಗಟ್ಟುವವೋಲ್: **ಪಂಪಭಾ,** ೨. ೩೨)

**ಅಡಿಗಾಣ್** – ಗುಟ್ಟು ತಿಳಿ (ಆಯುಃಪ್ರಮಾಣದಡಿಗಾಣಲೊಡಂ ಮಱುಗುವುದಂಗಜಶರದಿಂ ತುಱುಗುವುದೆನೆ ದೇವಗತಿಯೊಳೇಂ ಸುಖಮುಂಟೆ: **ಅಜಿತಪು,** ೨. ೭೨); ದರ್ಶಿಸು (ದೇವರಡಿಗಂಡು ಕಪ್ಪಮನೀವರ್ ಚಪ್ಪನ್ನ ದೇಶದರಸರ್: **ರಾಜಶೇವಿ,** ೫. ೧೨೭)

**ಅಡಿಗಿಕ್ಕು** – ನಾಶಮಾಡು (ಮೊದಲೊಳ್ ನೀನೆಮಗೆ ನುಡಿದ ತೆಱದಿಂದಡಿಗಿಕ್ಕಿದೆ ಕಂಸನಂ: **ಜಗನ್ನಾವಿ,** ೬. ೮೭)

**ಅಡಿಗಿಡು** – ನಡಿಗೆ ಕೆಡು (ಬಿಡೆ ಬೀಸಿದೊಡೆನೆ ಬೀಸಿ ನಿಮಿರ್ದಡಿ ಕಾಲಿಟ್ಟಡಿಗಿಡೆ ನಿಘಾತದಿಂ ಪೊಯ್ದೊಡಣ್ಮಿ ಕಾದಿದರ್ ಕಡುಗಲಿಗಳ್; **ಗದಾಯು,** ೮. ೯); ಆಧಾರ ತಪ್ಪು (ಬೊದಿಲ್ಲೆನೆ ಬಿಟ್ಟಿತ್ತಡಿಗಿಡೆ ಕೂರ್ಮನ ಬೆನ್ನಂದೊಡೆದು ಸಿಡಿಲ್ದೊಡನೆ ನುಚ್ಚುನೂಱಪ್ಪಿನೆಗಂ: **ಪಂಪಭಾ,** ೧೦. ೭೦)

**ಅಡಿಗುಟ್ಟು** – ಕಾಲನ್ನು ಒತ್ತು (ಕಮಳವದನೆಗೆ ನೀಡಿ ಡವಕೆಯಂ ಕೆಲ ಕೆಲರ್ ಕುಮುದದಳನಯನಯುಗಗೆ ಆಡಿಗುಟ್ಟಿ ಕೆಲಕೆಲರ್: **ಆಚವರ್ಧ,** ೧೩. ೫೨); ಕುಣಿ (ದೇವವನಿತೆಯರೆ ಪರಿವಿಡಿಯೊಳ್ ಅಡಿಗುಟ್ಟೆಯುಂ: **ಆದಿಪು,** ೨೭ ರಗಳೆ)

**ಅಡಿಗೆ** – ಆಹಾರ ಬೇಯಿಸುವುದು, ಪಾಕಕ್ರಿಯೆ (ಪಸಿದೆನೆಂದಾಗಳಡಿಗೆಯಂ ಮಾಡಿ ಉಣಲಿಕೆಂದು ಎನ್ನ ಪೆಂಡತಿಗೆ ಪೇಳ್ದು: **ಧರ್ಮಪ,** ೯. ೨೩ ವ)

**ಅಡಿಗೊತ್ತು** – ಕೆಳಕ್ಕೆ ಅದುಮು (ಬಿರುದರಂ ಒತ್ತಿ ಬೀರರಂ ಅಡಂಗಿಸಿ ಕೊಂಕಿಗರಂ ಕಟಿಲ್ಚಿ ಚೆನ್ನರಂ ಅಡಿಗೊತ್ತಿ ಮಂಡಳಿಕರಂ ಬೆಸಕಯ್ಸಿ .. .. ಮಾಡಿರೆ ರಾಜಸೂಯಮಂ: **ಪಂಪಭಾ,** ೭. ೧೮)

**ಅಡಿಗೊಳ್** – ಹೆಜ್ಜೆ ಹಾಕು, ದಾಪುಗಾಲು ಹಾಕು (ಅಡಿಗೊಳ್ವ ಪೆರ್ಮರೆ .. .. ಎತ್ತಲುಂ ನೆಱೆದಿರೆ ಕಾಡೊಳ್: **ರಾಜಶೇವಿ,** ೫. ೮೩)

**ಅಡಿದಳಿರ್** – ಚಿಗುರಿನಂತೆ ಕೋಮಲವಾದ ಪಾದ (ಅಡಿದಳಿರ್ಗೆ ಧರಾವಲಯಂ ಕಡುವೆಟ್ಟಿತ್ತಾಗೆ ನಡೆಯಲಱಿಯದೆ ಮನುಜರ್ ಸೆಡೆಯೆ: **ಪಂಪರಾ,** ೧. ೭೬)

**ಅಡಿಮಂಚಿಕೆ** – ಕೆಳಮಂಚ (ಸಿಸಿರಮನೆ ಪಿಡಿದು ಪರಕೆಗೆಬಸಂತನಲರ್ವೋದ ಮಾವಿನಡಿಮಂಚಿಕೆಯೊಳ್ ಕುಸುರಿದಱಿದದಡಗಿನಂತಿರೆವೊಲೆಸುದುವು ತದ್ವನದೊಳಿರ್ದ ಮುತ್ತದ ಮುಗುಳ್ಗಳ್: **ಯಶೋಧಚ,** ೧. ೩೭)

**ಅಡಿಮಾಡು** – ಕೀಳಾಗಿಸು (ತೊಡೆ ರಂಭಾಮದಮಂ ಮಿಗೆ ತೊಡೆದುದು ನುಣ್ಪಿಂದಮೆಂಬ ಪುರುಡಿಂ ತಾನಡಿಮಾಡಿದುದುರು ರಂಭಾವಿಡಂಬಮಂ ವಿತತನೃತ್ಯದೊಳ್ ನರ್ತಕಿಯಾ: **ರಾಜಶೇವಿ,** ೧೨. ೮೫)

**ಅಡಿಮಿಡುಕು** – ಹೆಜ್ಜೆಯನ್ನು ಅಲುಗಿಸು (ಮೋಹದಿಂದಾ ಪೊನ್ನಂ ತಡೆಯದೆ ನೋಡುತ್ತಿರ್ಪವೊಲ್ ಅಡಿಮಿಡುಕದೆ ನಿಂದು: **ಧರ್ಮಾಮೃ,** ೭. ೧೭)

**ಅಡಿಮೊದಲ್** – ಅಡಿಯ ತಳಭಾಗ (ವಾಮಪದನಖರುಚಿ ಕಾಂಚನಹರಿಪೀಠಮುಮಂ ಮುತ್ತಿನ ಪೀಠಮಿದೆನಿಸಿತು ಅವನಿಪತಿಯ ಅಡಿಮೊದಲೊಳ್: **ಶಾಂತಿಪು,** ೭. ೪೭)

**ಅಡಿಯಿಡು** – ಹೆಜ್ಜೆಯಿಡು; ಮುಂದುವರಿ (ಅತ್ತಿತ್ತಡಿಯಿಡದೆ ಲಕ್ಷ್ಮಿ ತಳಬವೆಳಗದಳ್: **ಗದಾಯು,** ೯. ೧೩)

**ಅಡಿಯೂಟ** – ಪಾದಲೇಪನ (ಕನ್ನಡಿಯ ಪಡಿಯಱಿಕೆಯ ಕೊಡೆಯ ಡವಕೆಯಡಪದಡಿಯೂಟದ ಪಡಿವೆಸಕ್ಕೆ ಬೆಸಸಿದಂ: **ಅನಂತಪು,** ೪. ೭೬ ವ)

**ಅಡಿಯೂಡು** – ಅಂಗಾಲಿಗೆ ಲೇಪನ ಮಾಡು, ಅಂಗಾಲು ತಿಕ್ಕು (ಇಂಬಿನೊಳಡಿಯೂಡುವ ಸಖಿಯಂ ಬಾರಿಸಿ ತೆಗೆದು: **ಶಾಂತಿಪು,** ೬. ೭); ಪಾದಗಳಿಗೆ ಲೇಪಿಸು (ಅಡಿಗೂಡಲ್ಕಲತಗೆಯಂ ತುಡಲ್ಕೆ ತುಡುಗೆಯಂ ಉಡಲ್ಕೆ ದಿವ್ಯಾಂಬರಮಂ: **ಆದಿಪು,** ೭. ೧೧)

**ಅಡಿಯೆತ್ತು** – ಹೆಜ್ಜೆ ಇಡು, ಹೊರಡು (ಪೆರ್ಜಸಮನೆ ಪಿಡಿದೆನ್ನನೆ ರಣದೊಳಟೆವೆನಿರದಡಿಯೆತ್ತಿಂ: **ಪಂಪಭಾ,** ೯. ೮೭)

**ಅಡಿವಜ್ಜೆ** – ಹೆಜ್ಜೆಯ ಗುರುತು (ಅನ್ನೆಗಮರಸನಡಿವಜ್ಜೆಯಂ ನೋಡುತ್ತಂ: **ವಡ್ಡಾರಾ,** ಪು. ೧೧೧, ಸಾ ೧೦)

**ಅಡಿವಣಲ್** – (ಅಡಿ+ಮಣಲ್] ಕೆಳಗಿನ ಮರಳು (ಪ್ರದಿನೀ ಸರ್ವಾಂಬುವಂ ಪೀರ್ದನಿತನಡಿವಣಲ್ಗಾಗಿಸುತ್ತುಂ ಮರುತ್ಪಾದಂಗಳೊತ್ತೆ: **ಶಾಂತೀಶ್ವಪು,** ೧೨. ೧೯)

**ಅಡಿವಣಿಗೆ** – ಕೆಸರಿನ ಹೆಜ್ಜೆಯ ಗುರುತು (ಅಡಿವಣಿಗೆಯೆಂದು ಕೆಸಱೊಳಾದ ಪಜ್ಜೆ: **ಶಬ್ದಮದ,** ಪ್ರಸಾ ೩)

**ಅಡಿವಿಡಿ** – [ಅಡಿ+ಪಿಡಿ] ಕೆಳಗಿನಿಂದ ಆರಂಭಿಸು (ಅಡಿವಿಡಿದಿಟ್ಟ ಪುತ್ತುಗಳ ನೆತ್ತಿಗಳಿಂ ನಿಮಿರ್ದಿರ್ದ ಬಳ್ಳಿಗಳ್: **ಆದಿಪು,** ೧೪. ೧೪೦)

**ಅಡಿವೊಣರ್** – (ಅಡಿ+ಪೊಣರ್) ಪಾದಯುಗಳ (ಚಾರಣರಿಷಿಯರಡಿವೊಣರನರ್ಚಿಸಿದ ಪುಣ್ಯದಿಂದಂ: **ವಡ್ಡಾರಾ,** ಪು ೩೮, ಸಾ ೧೩)

**ಅಡಿಸು** – ಬೇಯಿಸು (ಶ್ರಾದ್ಧಕ್ಕೆ ಅತ್ಯುತ್ತಮ ಲೋಹಿತಮತ್ಸ್ಯಮಂ ಉತ್ತಮಮೆಂದು ಒಂದು ಕಡಿಯಂ ಅಡಿಸಿದಂ ಅರಸಂ: **ಯಶೋಧಚ,** ೩. ೫೦)

**ಅಡು** – ಬೇಯಿಸು (ಅಡು – ಪಚನೇ: **ಶಬ್ದಮದ,** ಧಾ ೨೬೪); (ಭಟಾರಾ ಲವಟುಗಳ ಕೈಯಲ್ ಪಗಲುಣಲುಂ ಅಡಲುಂ ಪೆಱಲಾಗ ಮೇಲ್ವಾಯ್ದು ಎಱಿದು ಕೊಂಡುಂಬರ್: **ವಡ್ಡಾರಾ,** ಪು ೯೨, ಸಾ ೩)

**ಅಡುಕು** – ಸ್ಥಾನಾಂತರ ಮಾಡು (ಅಡುಕು – ಸ್ಥಾನಾಂತರ ಪ್ರಣೀತೇ: **ಶಬ್ದಮ** ಧಾ, ೩)

**ಅಡುಗೆ** – ಬೇಯಿಸುವುದು, ಪಾಕಕ್ರಿಯೆ (ಕಿಚ್ಚಿಲ್ಲದಡುಗೆಯುಂ ನಚ್ಚಿಲ್ಲದ ಪೆಂಡತಿಯುಂ: **ಧರ್ಮಾಮೃ,** ೧. ೭೦ ವ)

**ಅಡುರ್ಕೆ** – ಹಬ್ಬುವಿಕೆ, ಆಕ್ರಮಣ (ಆನೆ ಭಾಜನವೆನಿಸಿರ್ದನಂತಕನಡುರ್ಕೆಗೆ ಪೋ ಪೆಱತಾವುದೆಂಬ ದುರ್ಮನದೊಳೆ ದಕ್ಷಿಣಾಶೆ ನಿಡುಸುಯ್ಯುವೊಲಾದುದು ದಕ್ಷಿಣಾನಿಲಂ: **ಚಂದ್ರಪ್ರಪು,** ೭. ೩೯)

**ಅಡುವಳ** – ಬಾಣಸಿಗ (ಅಡುವಳನೆಂದು ಬಾಣಸಿಗಂ – **ಶಬ್ದಮದ,** ಪ್ರ ೪)

**ಅಡುವುಟ್ಗಿ** – ಹದವಾದ ಹುಗ್ಗಿ (ದೆಸೆವಲಿಗುಡಲೆಂದು ಅಂತಕನಡುವುಟ್ಗಿಯನಟ್ಟಂತಿರೆ ಕಡಿಖಂಡಮಾಯ್ತು ರಣಮಂಡಲದೊಳ್: **ಪಂಪರಾ,** ೧೩. ೯೬)

**ಅಡುಱ್** – ಆವರಿಸು (ಸುಜನರ್ ಅಡುರ್ತು ನೋಯಿಸಿ ಸೆಱೆಯಿಟ್ಟೋಯೆನಿಸಿದರ್ಥದಿಂ ಆದಾಯಮದನ್ಯಾಯಂ ಒಳ್ಪಿನಾಸೆಗೆ ಅಪಾಯಂ: **ಹರಿವಂಶ,** ೧. ೫೮) ದಾಳಿಮಾಡು (ಅಸುರರ ಮೆಯ್ಯೊಳಾದ ವಿರಹಾಗ್ನಿಯನಾಱಿಸುತಿಂತೆ ತನ್ನ ಕೂರಸಿಯೊಳಡುರ್ತು ಕೊಂದಸಿಯಳಿರ್ಕಸಿಯೊಳ್: **ಪಂಪಭಾ,** ೧. ೬)

**ಅಡೆ** – ಬೆರಳಿನಿಂದ ಹೊಡೆ (ಅಡೆ–ಅಂಗುಲಿಪ್ರಹರಣೇ: **ಶಬ್ದಮದ** ಧಾ ೨೬೫): ಬಡಗಿಯ ಆಧಾರದ ಕೊರಡು (ಅಡೆ– .. .. ಪಂಚಕಾರುಕದಾರೌ ಚ: **ಶಬ್ದಮದ,** ಧಾ. ೨೬೫); ತಿಪ್ಪೆ, ಸಗಣಿ (ಅಡೆಯಂ ಕೋದೆತ್ತುತುಂ ಮಾರ್ದನಿಗೆ ಮಸಗುತುಂ ದರ್ಪದಿಂ ಛಾಯೆಯೊಳ್ ಕೋಡಿಡುತುಂ: **ನೇಮಿನಾಪು,** ೮. ೧೮)

**ಅಡೆಗೆಡೆ** – ಅಡ್ಡವಾಗಿ ಬೀಳು (ಕಾಡಾನೆಗಳೊತ್ತಿ ಕಿಟ್ಟಡೆಗೆಡೆದ ಮರಂಗಳಂ ಕೊಂಕುವೆತ್ತ ಬಟ್ಟೆಗಳೊಳಂ; **ಕಾದಂಪೂ** ೨೬೬?)

**ಅಡೆಮಂಚಿಕೆ** – ವಸ್ತುಗಳನ್ನು ಕತ್ತರಿಸಲು ಆಧಾರವಾದ ಅಡಿಯ ಮಣೆ (ಕೈರಂದಱಿಯಲ್ಕೆ ಮಾಡಿದಡೆಮಂಚಿಕೆಮಿಂಚಿದುದಾ ಶ್ಮಶಾನದೊಳ್, **ಕಾವ್ಯಾವ,** ೫೬)

**ಅಡೆಯೊಡ್ಡು** – ಅಡೆಯನ್ನು ಒಡ್ಡು (ಓಡನೆ ಪಾಪಕರ್ಮನಡೆಯೊಡ್ಡಿದಮಾಟ್ಕೆಯೊಳರ್ದಂ: **ಆಚವರ್ಧ,** ೩. ೧೧)

**ಅಡೆಯೊತ್ತು** – ಜೋರಾಗಿ ಅಮುಕು (ತೂಗಿಸಿ ತೊಲೆಯೊಳ್ ಬಾಯಂ ಮೂಗುಮನಡೆಯೊತ್ತಿ ಕೊಂದ ಕಳ್ಳನ: **ಯಶೋಧಚ,** ೪. ೨೧)

**ಅಡೆವೊತ್ತು** – ಸುತ್ತಲೂ ಹೊತ್ತಿಕೊ (ಕಡೆಗಾಲದೊಳಡೆವೊತ್ತಿ ಸುತ್ತಲುಂ ನೆಗೆವನಲನ ಪೊಗೆಯಂತೆಯುಂ: **ಪಂಪರಾ,** ೪. ೫೪ ವ)

**ಅಡ್ಡಂ** – ತಡೆ (ಮಿಱುಗುವ ತೋರಹಾರಮುಮನಪ್ಪಿನ ಕಾಳಸೆಗಡ್ಡಮೆಂಬ ಬೇಸಱಿನೊಳೆ ಕಟ್ಟಲೊಲ್ಲದೆ: **ಪಂಪಭಾ,** ೪. ೧೦೫); ಅಡ್ಡಲಾಗಿ (ಸಿದ್ಧಪದಮಂ ಕೆಯ್ಕೊಳ್ವುದರ್ಕಡ್ಡಮೊಡ್ಡಣಂ ಒಡ್ಡಿರ್ದಘಸೈನ್ಯಮಂ ತುಱಿಯಿಸಲ್: **ಶಾಂತಿಪು,** ೧. ೭)

**ಅಡ್ಡಂಬರ್** – ಅಡ್ಡಲಾಗಿ ಬರು (ಪರಮಾಯುವ ಬರೆಗಡ್ಡಂಬರೆ ರೇಖೆಗಳೊಳಗೆ ಕುತ್ತದಿಂ ಪೊಱಗಸ್ತ್ರೋತ್ಕರದಿಂ

ಅಪಮೃತ್ಯುವಕ್ಕುಂ: **ಲೋಕೋಪ,** ೧೧. ೧೭); ತಡೆಯಾಗು (ತಾರ್ಕಿಕರೊಟ್ಟೈಸಿದರಿಲ್ಲ ಸತ್ಕವಿಗಳಡ್ಡಂಬಂದರಿಲ್ಲ: **ಸುಕುಮಾಚ,** ೭. ೫೫)

**ಅಡ್ಡಂಬರಿ** – ಅಡ್ಡಲಾಗಿ ಹರಿ, ನುಗ್ಗು (ಇದಪೂರ್ವಂ ವಾರ್ಧಿಯಡ್ಡಂಪರಿದುದಿಳೆಯೊಳೆಂಬಂತೆ: **ಚಂದ್ರಪ್ರಪು,** ೧. ೮೦)

**ಅಡ್ಡಂಬರಿಯಿಸು** – ಅಡ್ಡಲಾಗಿ ಹೋಗುವಂತೆ ಮಾಡು (ಪೊಱಮಡಿಪಿದಿರೇಱೆಪಡ್ಡಂಬರಿಯಿಪ: **ರಾಜಶೇವಿ,** ೬. ೧೧ ವ)

**ಅಡ್ಡಂಬಾಱು** – ಅಡ್ಡಲಾಗಿ ಹಾರು (ಮುಕ್ತಾಹಾರಮುಂ ನೀಳಕುಂತಳಮುಂ ನರ್ತಿಸೆ ಮೇಲುದುಂ ನಿಱೆಯುಮಡ್ಡಂಬಾಱೆ: **ಜಗನ್ನಾವಿ,** ೧೬. ೮೪)

**ಅಡ್ಡಂಬೀೞ್** – ಅಡ್ಡಲಾಗಿ ಬೀಳು (ಬೇಂಟೆಯ ನೆಪದಿಂದದಲ್ಲಿಂ ತಳರ್ದು ಬಟ್ಟೆಯ ಕಣ್ಣೋಳಡ್ಡಮಬಿೞ್ದಿರ್ದ ವೃದ್ಧವಾನರನಂ ಕಂಡು: **ಪಂಪಭಾ,** ೮. ೩೧ ವ)

**ಅಡ್ಡಂಬು** – ಅಡ್ಡಲಾಗಿ ಬಿಡುವ ಬಾಣ (ಅಂತೆತ್ತಿ ಬಂದು ಪ್ರಮಾಥಿಕುಮಾರನ ರಥಮಂ ಮೂವಳಸಾಗೆ ಮುತ್ತಿಕೊಂಡು ಪೋಗದಡ್ಡಂಬಿನ ಕೂರಂಬಿನ ಕವಲಂಬಿನ: **ಧರ್ಮಾಮೃ,** ೧೩. ೭೭ ವ)

**ಅಡ್ಡಗವಿತೆ** – ವಕ್ರ ಕವಿತ್ವ (ನವಭೂತ ಭಾಷೆಯಿಂ ಕುಱುಪುವೇೞ್ದು ತಾಂ ಅಡ್ಡಗವಿತೆಯಂ ಮಾಡಿ ಮಹಾವ್ಯವಸಾಯಂಗೆಯ್ವ ಮರುಳ್ಗವಿಗಳ್ ತಾವೇಂ ಗುಣಾಢ್ಯರಂ ಮಸುಳಿಸರೇ: **ಗದಾಯು,** ೪. ೪೨)

**ಅಡ್ಡಗೊಂಬು** – ಅಡ್ಡಲಾಗಿ ಚಾಚಿಕೊಂಡಿರವ ಕೊಂಬೆ (ಬಡವಂಗೊಪ್ಪುವ ರಾಜ್ಯಲಕ್ಷ್ಮಿ ಕುರುಡಂಗಕ್ಷಿದ್ವಯಂ ಕೂಪದೊಳ್ ಕೆಡೆವಂಗಡ್ಡಯಿಪ ಅಡ್ಡಗೊಂಬು ರುಜೆಯೊಳ್ಬೇವಂಗೆ ದಿವ್ಯೌಷಧಂ: **ಧರ್ಮಾಮೃ,** ೩. ೯)

**ಅಡ್ಡಣ** – ಢಾಲು, ಗುರಾಣಿ (ಮಾಯೆಯಂಬಡ್ಡಣಮಂ ಪಿಡಿದು ಮೋಹಮೆಂಬ ಸುರಗಿಯಂ ಕಟ್ಟಿ: **ಧರ್ಮಾಮೃ,** ೧೦. ೬೫ ವ)

**ಅಡ್ಡಣಾಯತವಡೆ** – ಗುರಾಣಿ ಹಿಡಿದವರ ಸೈನ್ಯ (ತಲೆಮುಟ್ಟಲಿದೊರ್ಮೆಯೆ ನೂಂಕುವಡ್ಡಣಾಯತವಡೆಯಂ ಕುಮಾರನಿಸೆ: **ಶಾಂತೀಶ್ವಪು,** ೩. ೯೯)

**ಅಡ್ಡಣಿಗೆ** – ತಳಿಗೆಯಿಡುವ ಪೀಠ (ಪಿರಿಯ ಪೊನ್ನ ತಳಿಗೆಯ ಮುಚ್ಚಮಪ್ಪಡ್ಡಣಿಗೆಯುಮನಿಟ್ಟು: **ವಡ್ಡಾರಾ,** ಪು. ೭೮, ಸಾ. ೧೨)

**ಅಡ್ಡತರ** – ಅಡ್ಡಲಾಗಿ ನಿಲ್ಲುವ ಅಥವಾ ಚಲಿಸುವ ರೀತಿ (ಕದಂಪಿನೊಳ್ ಕನಕಕುಂಡಲವಡ್ಡತರಕ್ಕೆ ವಂದು ನಿಶ್ಚಲಮೆನಿಪಂಪ್ರಿಯೊಂದೆಸೆಯೆ: **ಚಂದ್ರಪ್ರಪು,** ೩. ೫೧)

**ಅಡ್ಡಪರಿ** – ನೃತ್ಯದ ಒಂದು ಭಂಗಿ (ಉಗುರ್ವೆಳಗು ಬಿಣ್ಣಿತೆಂದದನುಗುಟ್ಟಂತಿರೆತೋಱುವಂತೆ ತಳದೆಳಗೆಂಪಂ ಬಗೆಗೊಳಿಸುವಡ್ಡಪರಿಯಂ ಪುಗುತುಂ: **ಲೀಲಾವತಿ,** ೪. ೧೨೬)

**ಅಡ್ಡಬರ್** – ಅಡ್ಡಿಯಾಗು (ಅಂತಕಂ ಗೋಣ್ಮುರಿಗೊಂಡು ಎೞೆದುಯ್ವೊಡೆ ಅಡ್ಡಬರ್ಪರುಮೊಳರೇ: **ಅಜಿತಪು,** ೨. ೮೫)

**ಅಡ್ಡಬೊಟ್ಟು** – ಹಣೆಯ ಮೇಲಿನ ಅಡ್ಡ ಗೆರೆ (ಕೆಲಕ್ಕೆ ನಸುಕೊಂಕಿನ ಕತ್ತುರಿಯಡ್ಡಬೊಟ್ಟು ತಳ್ತಿಕ್ಕಿದ ಚಂದನಂ: **ನೇಮಿನಾಪು,** ೩. ೯೮)

**ಅಡ್ಡಮಿರ್** – ಅಡ್ಡಲಾಗಿರು (ಪಡೆಗಡ್ಡಮಿರ್ದ ಬೆಟ್ಟಿಟ್ಟೆಡೆ ಮಟ್ಟಮಿಱುಂಬಮಮೆಂಬಿವಂ ಸಣ್ಣಿಸಿ: **ಆದಿಪು,** ೧೧. ೪೭)

**ಅಡ್ಡಮುಂ ತಿಗಟಮುಂ** – ಅಡ್ಡಡ್ಡಲಾಗಿ (ಪಾಸುಂಪೊಕ್ಕುಂ ದುಗುಣಮುಂ ತಿಗುಣಮುಂ ಅಡ್ಡಮುಂತಿಗಟಮುಂ ಪರಿದು: **ಗದಾಯು,** ೬. ೨೮ ವ)

**ಅಡ್ಡಯಿಸು** – ಅಡ್ಡಿಮಾಡು (ಬಡವಂಗೊಪ್ಪುವ ರಾಜ್ಯಲಕ್ಷ್ಮಿ ಕುರುಡಂಗಕ್ಷಿದ್ವಯಂ ಕೂಪದೊಳ್ ಕೆಡೆದಂಗೆ ಅಡ್ಡಯಿಪಡ್ಡಗೊಂಬು: **ಧರ್ಮಾಮೃ,** ೩. ೯)

**ಅಡ್ಡವಣೆ** – ಕಂಬಗಳ ಮೇಲೆ ಜೋಡಿಸಲಾದ ಮಣೆ (ಕೇಳೀನಿಳಯದ ಕೆಲದೊಳ್ ನಟ್ಟ ಕನಕಯಷ್ಟಿಗಳ್ ಮೇಲಡ್ಡವಣೆಗಳೊಳ್ ಕಣ್ಮುಚ್ಚಿ ಬೆಚ್ಚಿದಂತೆರ್ದು: **ಲೀಲಾವತಿ,** ೩. ೨೦ ವ)

**ಅಡ್ಡವಾಯ್** – (ಅಡ್ಡ+ಪಾಯ್] ಅಡ್ಡಲಾಗಿ ನುಗ್ಗು (ಎಱಗುವ ತುಂಬಿವಿಂಡಗಿಯೆ ಬಗ್ಗಿಪ ಕೋಗಿಲೆ ಕೊಂಬುಗೊಂಡು ಬಳ್ಕುಱೆ ಮುಳಿದಡ್ಡವಾಯ್ದ ಗಿಳಿ ಮಲ್ಲಳಿಗೊಂಡೊಳಸಾರೆ: **ಕಬ್ಬಿಗಕಾ,** ೨೪೪)

**ಅಡ್ಡವಿಸು** – ಅಡ್ಡಿಮಾಡು (ಕರಿರಾವುತ ಪಾಯಕರುರ್ಬಿ ಕೊರ್ಬಿ ಬಂದಡ್ಡವಿಸುತ್ತೆ ನಿಲ್ತಸುರನೊಳ್ ಮಿಗೆ ಪೋರ್ವರ್ ಅಖರ್ವಗರ್ವದಿಂ: **ಉದ್ಭಟಕಾ,** ೪. ೭೭)

**ಅಡ್ಡಸಾರ್ಚು** – ಪಕ್ಕದಲ್ಲಿ ನಿಲ್ಲಿಸು (ಮೊಗಂ ಮುರಿದು ಮೊಲೆಯೊಡಲಡ್ಡಸಾರ್ಚಿದ ಪುಲ್ಲೆಯಿರ್ದಂತೆ: **ನೇಮಿನಾಪು,** ೧. ೯೨ ವ)

**ಅಡ್ಡಸುಟಿ** – ಎದುರಿಗೆ ಸುಳಿದಾಡು (ಅರಲಂಬಿಂ ಗಱಿಸನ್ನೆದೋಱುವನನಂಗಂ ಚಂದವಂ ಕೊಂಕುವಂ ಕರದಿಂ ತೆಂಬೆಲರೆಂಬನಡ್ಡಸುಟಿವಂ ಚೈತ್ರಂ ಪಿಕರಾವದಿಂ ಕರೆವಂ ನಲ್ಲನಗಲ್ದೊಡೆ: **ಅನಂತಪು,** ೮. ೨೧)

**ಅಡ್ಡೈಸು** – ಅಡ್ಡವಾಗು, ಅಡ್ಡಿಯಾಗು (ಪುದಿದ ಪುಳಕಂಗಳ್ ಅಡ್ಡೈಸದೆಇರವು ಎನುತ್ತ ಅಂಜಿದಂತೆ ನಳಿತೋಳ್ಗಳನಪ್ಪದೆ: **ಕಾದಂಬ,** ೬. ೧೦೨)

**ಅಣ್** – ಸೋಕು, ಮುಟ್ಟು (ಈಳೆಯ ಸಾಂದುಮಂ ಪಸಿಯ ಕತ್ತುರಿ ತೀವಿದ ಪೊನ್ನ ಸಿರ್ಪುಮಂ ಗಾಳಿಯುಮಣ್ಣದಂತಡರೆ ಕೆಂದಳದಿಂದಮೆ ಮುಚ್ಚಿಕೊಂಡು: **ನೇಮಿನಾಪು,** ೫. ೭); ಲೇಪಿಸು (ಕತ್ತುರಿಯೊಳ್ ಅಚಿಟ ಪರಿಚೆಯುಂ: **ಆದಿಪು,** ೪. ೪೧ ವ)

**ಅಣಂ** – ಸ್ವಲ್ಪ (ಅಣಂ ಲವಂ: ಅಭಿಧಾವ, ೨. ೧. ೫೬); ಸ್ವಲ್ಪವೂ (ಆಗಳುಮಿಂದುಸೂರ್ಯರಣಮಿಲ್ಲದೆ ಕಟ್ಟಲೆಯೆಂಬುದಿಲ್ಲ: **ಪಂಪಭಾ,** ೪. ೧೬); ಹೆಚ್ಚಾಗಿ, ಅತಿಶಯವಾಗಿ (ನೀನಗ್ನಿಪುತ್ರಿಯ್ಯೆ ಪವಮಾನತನೂಭವನೆಂ ಆಂ ಅಣಂ ಕೂಡೆ ಸುಸಂಧಾನಮರಿನೃಪರೊಳೆಂತು: **ಗದಾಯು,** ೧. ೬೬); ಕಿರಿದು (ಅಣಮೆ ಕಿಱಿದಪ್ಪುದು: ಅಭಿಧಾವ, ೨. ೧. ೫೬)

**ಅಣಂಬೆ** – ಆಳಂಬೆ, ನಾಯಿಕೊಡೆ (ಉಱಿದ ರಾಯರ ಕೊಡೆಗಳ್ ಗಡಣದೊಳೆ ತಳೆದಣಂಬೆಯ ಕೊಡೆವೋಲ್ ಬೆಳ್ಗೊಡೆಗಳಾದವು: **ಕಬ್ಬಿಗಕಾ,** ೪೩)

**ಅಣಕ** – ಆಶ್ಚರ್ಯ (ಧಾತ್ರಿ ಬಿಣ್ಪಿದೆನಗೆಂದಿನಂದವಲ್ಲಣಕಮಿದೆಂದು ಕಣ್ ತುಮುಳಿ: **ಪಂಪಭಾ,** ೯. ೯೯); ಮೂದಲಿಕೆ (ಮುನಿ ತೇಜೋವೃದ್ಧಿಯಿನುರಿಪಿದನಣಕಕ್ಕೆ ಸವಣನುಂ ಸೈರಿಪನೇ: **ಪಂಪರಾ,** ೯. ೧೩); ಕುಚೋದ್ಯನುಮೊಂದಂ ಲೋಗರೇನಾನಣಕದಿನೆಂದೊಡೆ ಸೆಣೆಯದಿರ್: **ಧರ್ಮಾಮೃ,**

೫. ೧೦೩); ನಟನೆ, ಸೋಗು (ಅಕಟಕಟ ನೊಂದಳೆತ್ತಿರೆ ಸುಕುಮಾರಿಯನೆನಿತುಮಿನಿತು ಕೊಂಕಿಂ ನುಡಿದಂ ಪ್ರಕಟಿತಚಿತ್ತಂ ಭೂನಾಯಕನೇನಣಕಕ್ಕೆ ಸವಣನುಂ ಸೈರಿಪನೇ: **ಯಶೋದಚ,** ೨. ೬೮); ಅಡಕಗೊಂಡ (ಎಣಿಕೆಯ ಪದಿನಱುಸಾಸಿರ ಗಣಿಕೆಯರೊಳ್ ನೆರೆದ ಮೂರ್ತಿಯಂ ಧ್ಯಾನಿಪುದೋ ತ್ರಿಣಯನನೆರ್ದೆಯೊಳ್ ನೆಲಸಿರ್ಪಣಕದ ಮೂರ್ತಿಯನೆ ವೈಷ್ಣವಂ ಧ್ಯಾನಿಪುದೋ: **ಸಮಯಪ,** ೮. ೧೪೭)

**ಅಣಕಂ** – ಅಡಕವಾಗಿ (ಗುಣಭದ್ರದೇವರ ಮಿಱುಪ ಅಂಘ್ರಿಗಳಿತ್ತುವೆನಗೆ ಕವಿತೆಯನಣಕಂ: **ನೇಮಿನಾಪು,** ೧. ೧೮)

**ಅಣಕಚಣಕಂಗೆಡೆ** – ಕುಚೋದ್ಯಮಾಡು (ಜಿನತತ್ವಮಂ ಅಂತುಟಿಂತುಟೆಂದು ಬಾಯ್ಗೆವಂದಂತೆ ಅಣಕಚಣಕಂಗೆಡೆದು ಪಾಪಮಂ ಪೊರ್ದಿ ಬಾಧೆಗೊಳಗಾಗಿ; **ಧರ್ಮಾಮೃ,** ೪. ೨೨ ವ)

**ಅಣಕಿಸು** – ಅಪಹಾಸ್ಯ ಮಾಡು (ಅಣಕಿಸುಗುಮೆ ತನ್ನಿತುಂ ತಣಿಯದೆ ಕಡುನಲ್ಲಂ: **ಲೀಲಾವತಿ,** ೧೪. ೨೬); ಅನುಕರಿಸು (ಆ ವಿಚಿತ್ರಮಂ ನಿಮ್ಮೊಳು ಕಾಣಲ್ಬಂದುದೆಂಬಣಕಿಸುವ ಮಕ್ಕಳ ಮಾತಂ ಪ್ರಭಾವತಿ ಕೇಳ್ದು: **ಪುಣ್ಯಾಸ್ರ,** ೧೨. ೧೫ ವ)

**ಅಣಚಿತನ** – ಮುತ್ತೈದೆತನ (ಅಣಚಿತನವಂ ಕೈಕೊಳ್ ನಿನ್ನೋಲೆಭಾಗ್ಯದ ಭದ್ರಲಕ್ಷಣದ ಪದದೊಳ್: **ಸೂಕ್ತಿಸು,** ೬. ೮೧)

**ಅಣಮೆ** – ಸ್ವಲ್ಪವಾದರೂ (ಪಿಡಿದಾರ್ಪ ಭರದಿಂ ಎತ್ತಲ್ಕೊಡರಿಸಿದೊಡೆ ನೆಲದಿಂ ಅಣಮೆ ತಳರದೆ ಬಿಲ್ ನಿಲ್ತೊಡೆ: **ಪಂಪಭಾ,** ೩. ೫೯)

**ಅಣಲ್** – ಬಾಯಿಯ ಅಂಗುಳು (ಕೆನ್ನೆಯ ನರೆಯಂ ಕದಪಿನೊಳ್ ಉನ್ನುನ್ನಂ ನೆಗೆದ ತೆರೆಯನೊಡ್ಡಿದ ಜರೆಯಂ ಕನ್ನಡಿಯ ನೋಡಿ ತಜಿಸಲೆ ಕನ್ನಡಿಕುಂ ವೃದ್ಧ ನೋಡ ನಿನ್ನಯ ಮೊಗಮಂ: **ಅಜಿತಪು,** ೨. ೯೬); ದವಡೆ (ಪುರುಡಿಂ ಕೊಂಡವರಾರೊ ನಿನ್ನಣಲ ಪಲ್ಲಂ: **ಲೀಲಾವತಿ,** ೨. ೬೧); ಗಂಟಲು (ತನ್ನುಮನಣಲೊಡಳಡಸಲೆಂದಿರ್ದ ವಿಕ್ರಮಾರ್ಜುನನಂ ನೋಡಿ; **ಪಂಪಭಾ,** ೧೨. ೧೯೯ ವ)

**ಅಣಸು** – ಕೀಲು (ಮಿನುಕಣಸುಂ ಪೊದಲ್ದಮಳ ನೀಳಶಿಳಾಮಯಬದ್ಧಭೂಮಿ: **ಶಾಂತೀಶ್ವಪು,** ೧. ೧೧೬)

**ಅಣಿ** – ಸೈನ್ಯದ ಒಂದು ಅಂಗ, ಪದಾತಿ (ಕುದುರೆ ಕುದುರೆಯೊಳ್ ರಥಂ ರಥದೊಳಣಿಯಣಿಯೊಳ್ ಘಟೆಯಾನೆ ಘಟಯಾನೆಯೊಳ್ ತಳ್ತು ತಾಗಿ: **ವಡ್ಡಾರಾ,** ಪು ೧೪೮, ಸಾ. ೬); ಸೈನ್ಯದ ವ್ಯೂಹ (ಪಡಲಿಡೆ ಕಾದಿದುವೆರಡಣಿ: **ಕರ್ಣನೇಮಿ,** ೧೧. ೧೫೯); ಕಡಾಣಿ ; ಸಿದ್ಧನಾಗು (ಇಂದು ಅಣ್ಮಿ ಸಾಯಲ್ಕೆ ಅಣಿದೆಂ: **ನೇಮಿನಾಪು,** ೫. ೩೭)

**ಅಣಿಮ** – ಸೂಕ್ಷ್ಮತೆ, ಅಣುತ್ವ (ಅಣಿಮಮೆಂಬುದು ಅಣುತ್ವಂ: **ಅಭಿಧಾವ,** ೨. ೨. ೨೮)

**ಅಣಿಮಾ** – ಅಷ್ಟಸಿದ್ಧಿಗಳಲ್ಲಿ ಒಂದು, ಅತ್ಯಂತ ಸೂಕ್ಷ್ಮರೂಪವನ್ನು ಪಡೆಯಬಲ್ಲ ಶಕ್ತಿ, (ಅಣಿಮಾದಿಗುಣೋತ್ಕರಂ ಉಳ್ಳವಂಗೆ ಭುಜವಿಗುರ್ವಣೆ ಪಿರಿದೇ: **ಶಾಂತಿಪು,** ೧೦. ೪೧), ನೋಡಿ, 'ಅಷ್ಟಸಿದ್ಧಿ'

**ಅಣಿಮುಟ್ಟೆ ದುರಂಧರ** – ಶತ್ರುಸೈನ್ಯದೆದುರು ಪರಾಕ್ರಮ ತೋರಿಸುವ ವೀರ (ನಾಗದೇವನಣಿಮುಟ್ಟೆ ದುರಂಧರ ನಾಗದೇವನೆಂಬಿನಂ ಇಜೆದಿಕ್ಕಿದಂ: **ಅಜಿತಪು,** ೧. ೪೩)

**ಅಣಿಯರ** – ಹಿರಿದು, ಹಿರಿಮೆ (ಅಣಿಯರಮೆಂದು ಪಿರಿದು: **ಶಬ್ದಮದ,** ಪ್ರಸಾ ೫); ಸಡಗರ (ತ್ರಿಣಯನವಿರಹಿತಯಾಗಕ್ಕಣಿಯರದಿಂದ ಪೋಗಿ ಮುಂದೆ ನಿಲೆ: **ಗಿರಿಜಾಕ,** ೩. ೧೩); ಮಹಿಮೆ (ಅಣಿಯರಂ ಅಭವನ ಸುಗುಣಮನೆಣಿಪಂತಿರೆ .. .. ಪಂಚಾಕ್ಷರಮಂ ಅಮಮ ಜಪಿಸಿದನಾಗಳ್: **ರಾಜಶೇವಿ,** ೧೩. ೫೬)

**ಅಣಿಯರಂ** – ಅತಿಶಯವಾಗಿ (ಅಣಿಯರಮೊದವಿದ ಮುಳಿಸಿನೊಳಣಮುಱಿದವರೆಂದು ರಣದೆ ಜಯಿಸಲ್: **ಪಂಪಭಾ,** ೧೦. ೧೧); ತ್ವರಿತವಾಗಿ (ದ್ರುಪದನಂ ಗಡ ಕೋಡಗಗಟ್ಟುಗಟ್ಟಿ ತಂದಣಿಯರಮೊಪ್ಪಿಸಿಂತಿದನೆ ಬೇಡಿದೆನಾಂ: **ಪಂಪಭಾ,** ೨. ೬೧)

**ಅಣಿಲ್** – ಅಳಿಲು (ಅಣಿಲ ಪಡಪು ಬಸುರಿಯ ಪಣ್ಣೆಂತೆ: **ಧರ್ಮಾಮೃ,** ೭. ೧೫೨ ವ)

**ಅಣಿಲೆ** – ಅಳಲೆ ಕಾಯಿ, ಮರ (ಬೇವಿಂಗೆ ಕೈಪೆಯೆಂತು ಅಣಿಲೆಗೆ ತೊಗರೆಂತು ಸಹಜಂ ಸುಂಟಿಗೆ ಕರಮೆಂತು ಸಹಜಂ: **ಧರ್ಮಾಮೃ,** ೪. ೨೩ ವ)

**ಅಣಿವಿಣ** – ಅಡೆತಡೆ (ಮುಸುಱುವ ಪಱಿಮೆಗಳ್ ಅಣಿವಿಣನುಸಿರ್ವೊಗದೆ ಮಾಣದು: **ಲೀಲಾವತಿ,** ೧೧. ೫೮)

**ಅಣಿವಿಣಿ** – ಅಡೆತಡೆ (ಪಾಱುವ ವಿಮಾನದಣಿವಿಣಿಗಾಱದೆ ಮೇಘಾಳಿ ದೇವರನಂಬರದೊಳ್ ಕೀಱಿ ನಿಱಿಸಿದವೊಲ್: **ಶಾಂತಿಪು,** ೪. ೬೧)

**ಅಣು** – ಒಂದು ಬಗೆಯ ಬತ್ತ (ಅಣುವಕ್ಕುಂ ವ್ರೀಹಿಭೇದಂ: **ಅಭಿಧಾವ,** ೩. ೧. ೧೧೭); ಸೂಕ್ಷ್ಮ (ಅಣು ಸೂಕ್ಷ್ಮಂ: **ಅಭಿಧಾವ,** ೨. ೧. ೫೬)

**ಅಣುಕು** – ತುಣುಕು (ಪೊಡೆವ ಸಿಡಿಲ್ಗಳನೆಳೆಯೊಳ್ ಕೆಡೆದೇಟೆಂಟಣುಕು ನೆಗೆದು ನುರ್ಗಪ್ಪಿನೆಗಂ ಪೊಡೆದಂ: **ನೇಮಿನಾಪು,** ೮. ೯)

**ಅಣುಗ** – ಪ್ರೀತಿಪಾತ್ರ ವ್ಯಕ್ತಿ (ಅವರೊಳ್ ಕಿಱಿಯಾತನೆ ನೃಪತಿಗಂ ಪರಿವಾರಕ್ಕಮಣುಗನಾಗಿ ಬಳೆಯೆ: **ಆದಿಪು,** ೨. ೩೭ ವ); ಮಗ (ಇಭಕುಂಭದ ಮೇಲೆ ಬರ್ಪನಂ ಪರಿದಿದಗೊಂಡಣುಗನನದೆಂತು ನಿವಳಿಸಿದಪೆನೋ: ಅನಂತಪು, ೧೨. ೫೩)

**ಅಣುಗಗಲಹ** – ಪ್ರಣಯಕಲಹ (ಉರದೆ ಮುಡಿವಾಳದೊಳ್ ಕೂರ್ಗೆಯ್ವುದಣುಗಗಲಹದೊಳಲ್ಲದಿಲ್ಲ: **ಉದ್ಭಟಕಾ,** ೨. ೧೬)

**ಅಣುಗದಮ್ಮ** – ಪ್ರೀತಿಯ ತಮ್ಮ (ವಸುಧೇಶನಣುಗದಮ್ಮಂ ವಸುದೇವಂ ಧರೆಗೆ ಕಣ್ಣುಮುಳ್ಳಾಗಿರ್ದಂ: **ನೇಮಿನಾಪು,** ೪. ೧೩೧)

**ಅಣುಗಮಗ** – ಪ್ರೀತಿಯ ಮಗ (ಎನಗೀ ಮೀಂಗುಲಿಗನ ಮೇಗನಿಮಿತ್ತಂ ಪ್ರೇಮಮಣುಗಮಗನೊಳಮೊಲ್ವಂಗನೆಯೊಳಂ ಅಗದುದಾಯ್ತು: **ನೇಮಿನಾಪು,** ೪. ೪)

**ಅಣುಗಭೋಗಿ** – ಪ್ರೀತಿಪಾತ್ರನಾದ ಭೋಗಿ (ವಿಳಾಸಂಬೆರಸು ಅಣುಗಭೋಗಿಯರ್ ಕರಮೆಸೆದರ್: **ಆದಿಪು,** ೧೧. ೪೦)

**ಅಣುಗಮೆಯ್ದುನ** – ಪ್ರೀತಿಯ ಮೈದುನ (ನಿಂದಂ ಸುಯೋಧನನಣುಗಮಯ್ದುನಂ ಸಿಂಧುದೇಶಾಧೀಶ್ವರಂ ಜಯದ್ರಥಂ: **ಪಂಪಭಾ,** ೧೦. ೫೭ ವ)

**ಅಣುಗಾಳ್** – ಪ್ರೀತಿಯ, ನಚ್ಚಿನ ಬಂಟ (ತನ್ನಣುಗಾಳಪ್ಪ ಕರ್ಣನ ಸಾವಿನೊಳಂ: **ಗದಾಯು,** ೨. ೧೦ ವ)

**ಅಣುಗಿ** – ಮಗಳು (ಆ ಧನಿಕನಣುಗಿಯೀ ಪುಣ್ಯಾಧಿಕ ಪೆಂಪೆಸೆವ ಪೆಸರ ಹೇಮಪ್ರಭೆ: **ದಶಕುಚ,** ೪. ೫೬?)

**ಅಣುಗಿನವರ್** – ಪ್ರೀತಿಪಾತ್ರರು (ನಗೆಕಾಱರ್ ವಾದ್ಯಕರ್ ಚಿತ್ರಕನಣುಗಿನವರ್ ಸೂಳೆವಾಳರ್ ಪಯಾಳರ್: **ಅನಂತಪು,** ೨. ೨೬)

**ಅಣುಗಿಱಿವೊಯ್** – ಹತ್ತಿರದಿಂದ ತಿವಿದು ಹೊಡೆ (ರಥದಿಂದ ಇಳಿಗಿಟಿದವನವನಿಪತಿಯನಣುಗಿಱಿವೊಯ್ದಂ: **ಪಂಪಭಾ,** ೧೩. ೪೭)

**ಅಣುಗು** – ಪ್ರೀತಿ (ಎಂದಿಂತು ತಮ್ಮತಮ್ಮಣುಗಿಂದಂ ಪೆಸರಿಟ್ಟು ಬುಧಸಮೂಹಮಿದಂ ಪೇೞೆಂದೊಡೆ: **ಆದಿಪು,** ೧. ೩೪)

**ಅಣುಗೆ** – ಪ್ರೀತಿಪಾತ್ರರು (ಆನನಾಂಬುಜಮನೊಯ್ಯನೆ ಬಾಗಿರೆ ಕಾದಲಂಗೆ ಸಯ್ತಂತಿರು ನಾಣ್ಚದೆ ಎಂದು ಅಣುಗೆಯರ್ ಪಿಡಿದು ಅಟ್ಟಿಱೊಳ್ ಎತ್ತಿ ಬುದ್ಧಿವೇೞ್ವಂತೆ: **ಪಂಪಭಾ,** ೩. ೭೮)

**ಅಣುಬ್ರತ** – [ಜೈನ] ಜೈನ ಗೃಹಸ್ಥರು ಪಾಲಿಸಬೇಕಾದ ಅಹಿಂಸೆ, ಸತ್ಯ, ಅಸ್ತೇಯ, ಬ್ರಹ್ಮಚರ್ಯ, ಅಪರಿಗ್ರಹ ಎಂಬ ಐದು ವ್ರತಗಳಲ್ಲಿ ಒಂದು (ಅಯ್ದಣುಬ್ರತಂ ಜಿನಮತದೊಳ್: **ಸುಕುಮಾಚ,** ೫. ೪೦)

**ಅಣುವ** – ಹನುಮಂತ (ನುಂಗಿದನಣುವಂ ಭಾಸ್ಕರನಂ ಗಡ ಕಂಡಿಂದ್ರನಣುವನಂ ವಜ್ರದಿನಿಟ್ಟಂ ಗಡ: **ಸಮಯಪ,** ೧೦. ೧೪೬)

**ಅಣುವ್ರತ** – [ಜೈನ] ಜೈನ ಗೃಹಸ್ಥರು ಪಾಲಿಸಬೇಕಾದ ಅಹಿಂಸೆ, ಸತ್ಯ, ಅಸ್ತೇಯ, ಬ್ರಹ್ಮಚರ್ಯ, ಅಪರಿಗ್ರಹ ಎಂಬ ಐದು ವ್ರತಗಳಲ್ಲಿ ಒಂದು (ತನ್ನಂ ತಾನೆ ಪೞಿದು ನಿಂದಿಸಿ ಪಾಪಕ್ಕಂಜಿ ಅಣುವ್ರತಂ ಮೊದಲಾಗೊಡೆಯ ಶ್ರಾವಕಬ್ರತಂಗಳಂಕೈಕೊಂಡಾಗಳ್: **ವಡ್ಡಾರಾ,** ಪು೧೧. ಸಾ೩೦)

**ಅಣೂತ್ತರೆ** – [ಜೈನ] ಲೋಕಾಕಾಶದ ತುದಿಯ ನೆಲೆಯಲ್ಲಿರುವ ಐದು ವಿಮಾನಗಳಲ್ಲಿ ಒಂದು (ಅಯ್ದಣೂತ್ತರೆಗಳೊಳ್ ಮಧ್ಯಮವರ್ತಿಯಪ್ಪ ಸರ್ವಾರ್ಥಸಿದ್ಧಿಯಹಮಿಂದ್ರರುಂ: **ಶಾಂತಿಪು,** ೧೨. ೪೩ ವ) ನೋಡಿ, ಪಂಚಾಣೂತ್ತರೆ

**ಅಣೆ** – ತಿವಿ, ಇರಿ (ಆಗಸಮನಣೆವ ಕೋಡುಗಲ್ಲಿಂ ನೀಟ್ಟಂ ತಳೆದಾ ಬೆಟ್ಟದ ತಾಟ್ ಪುದಿದ ಬನಂಗಳಲ್ಲಿ ಬೀಡಂ ಬಿಟ್ಟಂ: **ಕಬ್ಬಿಗಕಾ,** ೧೮೪); ಹೊಡೆ, ಅಪ್ಪಳಿಸು (ಭೂಜದೊಳಣೆದುರದೊಳ್ ತೇದು: **ಗಿರಿಜಾಕ,** ೨. ೧೦೫ ವ); ಮುಟ್ಟು, ನದಿಗೆ ಹಾಕುವ ಅಡ್ಡಗಟ್ಟೆ (ಅಣೆ – ಅಂಗುಲಿಪ್ರಹರಣೇ, ಜಲ ಪ್ರತಿಬಂಧನೇ ಚ: **ಶಬ್ದಮದ,** ಧಾ. ೩೬೭); ಬೆಟ್ಟದ ತಪ್ಪಲು (ಬೆಳ್ವೆಳಗಿನ ಸಂತಾನಮನುಗುೞುತ್ತಮರವಿಮಾನಾವಳಿ ಸಾರ್ದುದಿಂತು ಮಂದರದಣೆಯಂ: **ಶಾಂತೀಶ್ವಪು,** ೧೪. ೯೩);

**ಅಣೆದು ನೂಂಕು** – ಮುಂದಕ್ಕೆ ನುಗ್ಗಿಸು (ಕಂಡಣೆದು ನೂಂಕಿ ಮದವೇತಂಡಮನಿದಿರಾದವಿಪುಳಕಂಟನನಿಸಂ ಕೊಂಡಿರದೆ ಕೊಂದು ಗೆಲ್ಲಂಗೊಂಡಂ: **ಶಾಂತಿಪು,** ೫. ೫೫)

**ಅಣೆಯಂ ಬಿಟ್ಟಿಕ್ಕು** – ಅಣೆದು ನೂಂಕು (ಶಚೀಸಂಯುಕ್ತನಾಗಿರ್ಪಿಭಮನಣೆದು ಬಿಟ್ಟಿಕ್ಕಲೆಂದಿರ್ದ: **ಜಗನ್ನಾವಿ,** ೧೩. ೬೬)

**ಅಣೆಯಿಸು** – ಅಣೆಸು, ಹೊಡೆಯಿಸು (ಬೂತುಗಳಿನಾತನ ಮಂಡೆಯಣೆಯಿಸುತ್ತುಂ: **ಪಾರ್ಶ್ವನಾಪು,** ೪. ೨೪ ವ)

**ಅಣೋರಣ್ವಂತರವ್ಯತಿಕ್ರಮಣಮಾತ್ರಂ** – ಅಣುಮಾತ್ರದ ಅಂತರದ ಉಲ್ಲಂಘನೆ (ಜಿನ ನಿನ್ನಂ ಸ್ಮರಿಯಿಪುದಂ ಅಣೋರಣ್ವಂತರ ವ್ಯತಿಕ್ರಮಣಮಾತ್ರಮಂ ಮಱೆದಪೆನೇ: **ಆದಿಪು,** ೧೦. ೫೯)

**ಅಣ್ಕು** – ಮುಳುಗು (ನೆಗೞ್ದ ಮನೋಜರಾಜನ ವರಕೀರ್ತಿವಾರಿಧಿಯೊಳಣ್ಕಿದ ಕಾಮಿನಿಯರ್ಕಳಂತೆ: **ಶಾಂತೀಶ್ವಪು,** ೧೦. ೧೭೧)

**ಅಣ್ಕೆ** – ಬಣ್ಣಹಾಕುವುದು (ಅನಿಲಕಂ ಪತ್ರಕಂ ಬಿಂದುಕಂ ಧೂಮ್ರಾವರ್ತಕಂ ಉದ್ವರ್ತನಂ ಚಿತ್ರಪ್ರವರ್ತನಂ ಎಂಬ ಆಱು ತೆಱದ ಅಣ್ಕೆಯುಮಂ: **ಮಲ್ಲಿನಾಪು,** ೫. ೩೬ ವ)

**ಅಣ್ಕೆಗೆಯ್** – ಲೇಪಿಸು, ಬಣ್ಣಹಾಕು (ಪೂಸಿದ ಚಂದನದ ಭೂರಿ ಭುಜಶಿಖರದೊಳಣ್ಕೆಗೆಯ್ದ ಕುಂಕುಮದ ಬಿಂಕಂ: **ಅನಂತಪು,** ೨. ೨೬ ವ)

**ಅಣ್ಣ** – ಒಡಹುಟ್ಟಿದವರಲ್ಲಿ ಹಿರಿಯ (ಎನಗಂ ಸಮ್ಮೋಹನಮಾದುದಕ್ಕುಮಂದಣ್ಣನ ಸೂನೃತವಚನಮೆಂಬ ಮಂತ್ರಾಕ್ಷರದಿಂ: **ಗದಾಯು,** ೧. ೬೨); ಗಂಡಸರನ್ನು ವಿಶ್ವಾಸದಿಂದ ಸಂಬೋಧಿಸುವ ರೀತಿ: (ಅರಸನ ಕಾಪಿನವರನೆಂದನೆಲೆಯಣ್ಣಗಳಿರಾ ನೀಮೀತನಂ ಕೊಂದಿರ್: ವಡ್ಡಾರಾ, ಪು. ೧೨೫, ಸಾ ೨); ತಿರಸ್ಕಾರಸೂಚಕವಾಗಿ (ಮೊಲೆವೊತ್ತ ತೈಲಜನನಿಯ ಕೆಲದೊಳ್ ರಂಜಿಪರೆ ಮೀಸೆವೊತ್ತಣ್ಣಂಗಳ್: **ಅಜಿತಪು,** ೧. ೬೫); ವ್ಯಂಗ್ಯವಾದ ಅರ್ಥದಲ್ಲಿ (ಜವನಂ ಗೋಣ್ಮುಱಿಗೊಂಡು ಬಾಂಬೊಲಟನುರ್ಕಿಂ ಮೂಱುಮಂ ಸುಟ್ಟು ಜನ್ನವನುಣ್ಬ ಅಣ್ಣರನ್ ಆರ್ದು ಕೊಂದು: **ಕಬ್ಬಿಗಕಾ,** ೧೨೩); ಗೌರವಸೂಚಕ ಸಂಬೋಧನೆ (ಎಮ್ಮಣ್ಣಗಳಪ್ಪ ಭಟಾರರ್ ಚರಿಗೆಗವಂದೊಪ್ಪೊರೆಂದು: **ವಡ್ಡಾರಾ,** ಪು ೧೧೭, ಸಾ ೧೧)

**ಅಣ್ಣನೆ** – ಹಿತವಾಗಿ (ವ್ಯಸ್ತರಜಸ್ತತಿಯಾಯ್ತು ಇವಲಾವಳಯಮುತ್ತಮ ಸೌರಭಮೂದಿತ್ತಣ್ಣನೆಪಣ್ಣನೆ ತಣ್ಣೆಲರ್: **ಚಂದ್ರಪ್ರಪು,** ೩. ೯೪)

**ಅಣ್ಣಲೆ** – ದೊಡ್ಡ ಮನುಷ್ಯ (ಜಳದಿಂದಮೆ ಮೀಸಿ ಲಿಂಗದೇವರಂ ಅರ್ಚಿಪರ್ ಕಟಕದಣ್ಣಲೆಗಳ್ ಗತಿಗೊರ್ಳವ ತಕ್ಕಿನಿಂ: **ಸಮಯಪ,** ೧೪. ೨೭)

**ಅಣ್ಣಕಲ್ಲಾಡು** – ಆ ಹೆಸರಿನ ಆಟವನ್ನು ಆಡು, ಎಸೆದಾಡು (ಆಲಿವರಲಂ ಪೊಯ್ದದಣ್ಣೆಕಲ್ಲಾಡಲುಂ ತಿಱಿಕಲ್ಲಾಡಲುಮೇಂ ತಗುಳ್ದುವೊ ಮನಸ್ಸಂಪ್ರೀತಿಯಂ ಜಾತಕಂ: **ಅನಂತಪು,** ೯. ೯)

**ಅಣ್ಣೆಕಲ್ಲಾಡಿಸು** – ಅಣ್ಣೆಕಲ್ಲಿನಂತೆ ಎಸೆದಾಡು (ದಿಕ್ಪಾಲರ ಬೆರ್ಚಿಸುತುಮಗಮನೋರಂದದಿಂದ ಅಣ್ಣೆಕಲ್ಲಾಡಿಸುತುಂ: **ಶಾಂತೀಶ್ವಪು,** ೧೫. ೩೪)

**ಅಣ್ಣೆವಾಲ್** – ಶುದ್ಧವಾದ ಹಾಲು (ಪರದನಣ್ಣೆವಾಲಂ ಕೆನೆಮೊಸರಂ ಸದ್ಯಘೃತಮುಮಂ ತಕ್ರಮುಮಂ ಮನಮೊಸೆದುಣಲಿಕ್ಕಲ್: **ಧರ್ಮಪ,** ೮. ೭)

**ಅಣ್ಪಿಕ್ಕು** – ಸುಗಂಧವನ್ನು ಲೇಪನಮಾಡು (ಬಿಸಿಲೊಳ್ ಬೆಮರ್ತ ವಿದ್ಯಾಧೃಪ್ರಮದೆಯರ ಕದಪುಗಳ ಕುಂಕುಮದ್ರವಮಂ ಆತ್ಮಪ್ರಸಾರಿತ ಕರಂಗಳಿಂ ತೆಗೆದಣ್ಪಿಕ್ಕುಕೊಂಡನೆಂಬಂತೆಯುಂ: **ಆಚವರ್ಧ,** ೬. ೨೩ ವ)

**ಅಣ್ಬು** – ಬಳಿಯುವುದು, ಲೇಪನ (ಮೃಗಮದದಣ್ಬು ಜಾಜಿಯ ಬಟಲ್ಮುಡಿ: **ಆದಿಪು,** ೧೨. ೧೨); ಲೇಪನವಸ್ತು (ಬೆಳ್ನೊರೆ ಸಿರಂಡದಣ್ಪೆನೆ ವಿರಾಜಿಸೆ: **ರಾಜಶೇವಿ,** ೨. ೬)

**ಅಣ್ಬುಗೆಯ್** – ಲೇಪಿಸು (ಮಿಱುಗುವ ವಜ್ರದೋಲೆಗಳ ಪಾಲೆಗಳೊಳ್ ತಳೆದಣ್ಬುಗೆಯ್ದು ಬಾಂದೊಱೆನೊರೆಯಂತೆ; **ರಾಜಶೇವಿ,** ೭. ೮)

**ಅಣ್ಮು** – ಪರಾಕ್ರಮ, ಸಾಮರ್ಥ್ಯ (ರವಿನಂದನ ನನ್ನಿ ಜಾಗಮಣ್ಮೆಂಬಿನಿತರ್ಕಂ ನೀನೆ ಮೊತ್ತಮೊದಲಿಗನಾದೈ: **ಗದಾಯು,** ೫. ೧೭); ಪೌರುಷ ತೋರು (ಅಣ್ಮು – ಪೌರುಷೇ: **ಶಬ್ದಮದ,** ಧಾ ೪೯೭)

**ಅಣ್ಮುಕಾಱ** – ಸಮರ್ಥ (ಸಿರಿಯೊಳ್ ಕಟ್ಟಣ್ಮುಕಾಱಂ ವಿತತವಿತರಣೋತ್ಸಾಹದೊಳ್ ಗೆಲ್ಲಕಾಱಂ: **ನೇಮಿನಾಪು,** ೧. ೩೭)

**ಅಣ್ಮುಗಿಡು** – ಸಾಮರ್ಥ್ಯ ನಾಶವಾಗು (ಅನ್ವಯಾಗತ ನಭೋಗತಿಗಳ್ ಬಿಲ್ಲಂ ಸರಳ್ಗಮಣ್ಮುಗೆಟ್ಟು ಮಿಟ್ಟೆಡೆಯುಮಾಗಿ ತೊಟ್ಟನೆ ನೆರೆದುರುಳೆ: **ಶಾಂತಿಪು:** ೪. ೩೩ ವ)

**ಅಣ್ಮುಗುಂದು** – ಪೌರುಷ ಕುಗ್ಗು (ಅಳ್ಕದೆ ಬಳ್ಕದೆ ತನ್ನೊಡಲ್ ಪಡಲ್ವಡುವಿನಮಣ್ಮುಗುಂದನೆ ದಲೇನಭಿಮಾನಧನಂ ಸುಯೋಧನಂ: **ಪಂಪಭಾ,** ೧೩. ೯೭)

**ಅಣ್ಮುಟ್ಟಾಗು** – ತೀರ ಹತ್ತಿರವಾಗು (ಮೊದಲೊಳ್ ಪುಟ್ಟಿದ ಭವಬದ್ಧ ವೈರದಿಂ ದಿತಿಸುತನಣ್ಮುಟ್ಟಾಗೆ ಕಡನಂ ಕೊಟ್ಟರ್: **ಶಾಂತಿಪು,** ೮. ೪೯ ವ)

**ಅತಂದ್ರ** – ತೂಕಡಿಕೆಯಿಲ್ಲದ, ಜಾಗರೂಕನಾದವನು (ಅಭಿಮುಖನಾದಿತ್ಯಬಿಂಬಕ್ಕೆ ಯೋಗೀಂದ್ರನತಂದ್ರಂ ನಿರ್ನಿಮೇಷಂ: **ಪಂಪರಾ,** ೨. ೧೪);

**ಅತಃಪರ** – ಇಲ್ಲಿಂದ ಮುಂದಿನ, ಅಲ್ಲಿಂದತ್ತ (ಎಂತುಂ ಭಾವಿಸೆ ದಯೆಯಿಂದಂ ಇನ್ನು ಅತಃಪರಮುಂಟೇ: **ಸಮಯಪ,** ೫. ೨೭)

**ಅತನು** – ದೇಹವಿಲ್ಲದವನು, ಕಾಮ (ಅತನುವಿರೋಧಮುಂ ತನುವಿರೋದಮುಮೊಪ್ಪುಗುಮತ್ತಿಮಬ್ಬೆಯೊಳ್: **ಅಜಿತಪು,** ೧. ೪೯)

**ಅತನುಧನು** – ಕಾಮನ ಬಿಲ್ಲು (ಲತೆಯುಂ ಕರ್ನೆಯ್ದಿಲುಂ ಸೋಗೆತುಂ ಅತನುಧನುರ್ಲೇಖೆಯುಂ: **ಆದಿಪು,** ೪. ೨೦)

**ಅತನುಪರಿತಾಪಿತ** – ಕಾಮಬಾಧೆಯಿಂದ ಬೇಯುವ (ತನ್ನ ನಾಣ್ಗಾಪನೆ ಬಗೆದು ಅತನುಪರಿತಾಪಿತಶರೀರನಾಗಿ ಶಂತನು ಕರಂಗಿ: **ಪಂಪಭಾ,** ೧. ೭೧ ವ)

**ಅತನುಮತ್ತದ್ವಿರದ** – ಕಾಮನ ಮದ್ದಾನೆ (ನೋಡುವ ನೋಟಕರಂ ಅತನುಮತ್ತದ್ವಿರದಂ ಕೋಡಂ ಕಾಣಿಸಿ ಪಿಡಿದೀಡಾಡುವುದು ಎಂಬಿನೆಗಂ ಆಡಿ ರಂಜಿಸಿದಳವಳ್: **ಆದಿಪು,** ೯. ೩೭)

**ಅತನುರಸ** – ಶೃಂಗಾರರಸ (ಅತನುರಸೋಪೇತವಿಳಂಬಿತ ಮಧ್ಯಮದ್ರುತಲಯಂಗಳೊಳ್: **ಆದಿಪು,** ೯. ೨೩)

**ಅತನುಶ್ರೀಜನ್ಮಗೇಹ** – ರತಿಯ ಜನ್ಮಸ್ಥಳ (ಅತನುಶ್ರೀಜನ್ಮಗೇಹಂ ಕುಮುದವನಸಖಂ ತಾರಕಾನೀಕಲಕ್ಷ್ಮಪತಿಸದ್ವ್ಯೋಮಂ .. .. ರೋಹಿಣೀಜೀವಿತೇಶಂ .. .. ಈಗೆ ಆಗಲುಂ ಅತಿಮುದಮಂ: **ಪಂಚತಂತ್ರ,** ೫)

**ಅತನುಹರ** – ಶಿವ (ಭವಂ ಈಶಂ ಶಂಭು ರುದ್ರಂ ಗಿರಿಶಂ ಶೂಲಿ ಭರ್ಗಂ ಭವಾನೀಧವಂ ಉಗ್ರಂ ವ್ಯೋಮಕೇಶಂ ಹರಂ ಅತನುಹರಂ ಶಂಕರಂ ನೀಲಕಂಠಂ ಶಿವಂ ಈಶಾನಂ ತ್ರಿಣೇತ್ರಂ ತ್ರಿಪುರಜಯಿ ಗಿರೀಶಂ ಕ್ರತುಧ್ವಂಸಕಂ ಸ್ಥಾಣು ವಿರೂಪಾಕ್ಷಂ ಧೂರ್ಜಟಿ ಫಣಿಕಟಕಂ ವಾಮದೇವಂ ವೃಷಾಂಕಂ: **ಅಭಿಧಾವ,** ೧. ೧. ೧೩)

**ಅತನೂದರ** – (ಅತನು+ಉದರ) ಕೃಶವಲ್ಲದ ಹೊಟ್ಟೆ (ಸುನಿವೃತ್ತಾಯಾಮಕಾಂಡನನತನೂದರನಂ: **ಶಾಂತಿಪು,** ೧೦. ೧೪೨ ವ)

**ಅತಮ** – ತಮಸ್ಸು ಇಲ್ಲದವನು (ಮತ್ತಮಾ ನರೇಂದ್ರಂ ವಿಬುಧಪತಿಯಾಗಿಯುಂ ಕುಲೀನನುಂ ಅತಮನಾಗಿಯುಂ ವಿಬುಧವಿದ್ವೇಷಿಯುಂ: **ಲೀಲಾವತಿ,** ೧. ೮೯ ವ)

**ಅತರ್ಕ್ಯ** – ಊಹಿಸಲಾಗದ (ಅತರ್ಕ್ಯಂ ವಿಕ್ರಾಂತಂ ಭುಜಬಲಮಸಾಮಾನ್ಯಂ ಅಧಿಕಂ ಪ್ರತಾಪಂ ಪೋಗೀತಂಗೆಣೆಯೆ: **ಪಂಪಭಾ,** ೧. ೮೦)

**ಅತರ್ಕ್ಯಗೋಚರ** – ಊಹೆಗೆ ಹೊರತಾದ (ನಾಕಿನಿಳಯದಂತೆ ಅನೂನಾಪ್ಸರೋಗಣಪ್ರಣೂತಮುಂ ಅತರ್ಕ್ಯಗೋಚರಮುಂ: **ಚಂದ್ರಪ್ರಪು,** ೫. ೫೨ ವ)

**ಅತಸೀಪುಷ್ಪ** – ಅಗಸೆ ಹೂ (ಅತಸೀಪುಷ್ಪಾವಭಾಸಂ ತನುವೆಸೆವಿನೆಗಂ ಕಿಂಕಿರಾತಪ್ರಸೂನಪ್ರತಿಮಂ: **ಜಗನ್ನಾವಿ,** ೨. ೧೦೦)

**ಅತಳಪಟಳ** – ಅತಳ ಎಂಬ ಪಾತಾಳದ ಮಾಳಿಗೆ (ಘಟೆಯ ದಟಿದ ಉಲಿವು ಲಯಘನಘಟೆಗಳ ಮೊಱೆಗೆನಿಸೆ ಪೊಟ್ಟಗೆ ಒಡೆದತ್ತು ರಟತ್ ಪಟು ಪಟಹ ಶಂಖ ಭೇರಿಯ ಚಟುಳಿತದಿಂದ ಅತಳಪಟಂ ಅಂಬರಪಟಳಂ: **ಪಂಪಭಾ,** ೧೦. ೬೭)

**ಅತಾಂತಂ** – ಅನಾಯಾಸವಾಗಿ (ಅತಿದಿವಿಜೇಂದ್ರವಿಳಾಸನೊಳ್ ಅತಾಂತಮೀತನೊಳಡಂಗಿ: **ಶಾಂತಿಪು,** ೫. ೧೪೪)

**ಅತಾತ್ವಿಕ** – ಕೃತ್ರಿಮ (ವಿಷಮಭುಜಂಗವಿಷವ್ಯಾಪ್ತಾಂಗಿಯಾಗಿ ಮಂಗಿ ಬೀೞ್ವುದುಂಅವರತ್ತೆ ಕಂಡು ಅತಾತ್ವಿಕ ಶೋಕವ್ಯಾಕುಳೆಯಾಗಿ: **ಕರ್ಣನೇಮಿ,** ೬. ೨೬ ವ)

**ಅತಿಕರಿಸು** – ಮೀರು (ಸಿತಗಜಮೊಂದು ಇಂದ್ರಂಗೆಂದು ಅತಿಕರಿಸುತೆ ತಮ್ಮ ಮೆಯ್ಯ ಬೆಳಗಿಂದಂ ತಾಂ ಸಿತಮಾಗಿ ತೋರ್ಪ ಕರಿವರದಿಂದಂ: **ತ್ರಿಷಷ್ಟಿಪು,** ೨೮, ೩೮)

**ಅತಿಕರ್ಕಶಶರ್ಕರಾಪ್ರಚುರ** – ಬಹು ಕಠಿಣವಾದ ಮುಳ್ಳುಗಳಿಂದ ಕೂಡಿದ (ಅದಱೊಳ್ ಅತಿಕರ್ಕಶಶರ್ಕರಾಪ್ರಚುರಮುಂ ಅತಿಸ್ಥೂಲ ನಿಶಿತಪಾಷಾಣ ವಿಷಮಿತಮುಂ.. ..ಆಗಿರ್ದೊಂದು ದುರ್ಗಮಮಾರ್ಗದೊಳ್: **ಪಂಚತಂತ್ರ,** ೭೬ ವ)

**ಅತಿಕೃಚ್ಛ್ರ** – ಒಂದು ತಪಸ್ಸು (ಕೃಚ್ಛ್ರ ಅತಿಕೃಚ್ಛ್ರ ಚಾಂದ್ರಾಯಣ ಸಾಂತಪನಾದಿ ಮಹಾತಪಂಗಳಿಂ: **ಪಂಚತಂತ್ರ,** ೧೯೦ ವ); ತುಂಬ ಕಷ್ಟಕರವಾದುದು (ಕಷ್ಟಂ ಅತಿಕೃಚ್ಛ್ರಂ ಗಹನಂ: **ಅಭಿಧಾವ,** ೩. ೧. ೨೯)

**ಅತಿಕ್ರಮ** – ಕ್ರಮವನ್ನು ಮೀರುವುದು (ಇವಯ್ದನ್ನಂಗಳ್ ಅತಿಕ್ರಮಂಗಳ್ ಭೋಗೋಪಭೋಗ ಪರಿಮಿತಗತಿಯೊಳ್: **ಸುಕುಮಾಚ,** ೯. ೨೪)

**ಅತಿಘನ** – ದಟ್ಟವಾದುದು (ಸಾಂದ್ರಂ ಅತುಘನಂ: **ಅಭಿಧಾವ,** ೨. ೨. ೩೯)

**ಅತಿಕ್ರಮಿಸು** – ಮೀರು, ಉಲ್ಲಂಘಿಸು (ಕಿರಾತದೂತಂ ತನ್ನತಿಕ್ರಮಿಸಿ ನುಡಿದುದರ್ಕೆ ಮುಳಿದು: **ಪಂಪಭಾ,** ೮. ೧೮ ವ); ಹೊರಹೊಮ್ಮು (ಚಮರೀಜಕಾಂತೆಯರ್ ಸಿತಚಮರದ ವಿಕ್ಷೇಪದಿಂದಮೆಸೆದರ್ ಭೂಪೋತ್ತಮ ವರತನುವಿಂದ

ಅತಿಕ್ರಮಿಸುವ ಲಾವಣ್ಯರಸದೊಳ್ ಓಲಾಡುವವೊಲ್: **ಕಾದಂಬ,** ಪೂ. ೪೭೩?)

**ಅತಿಕ್ರಾಂತ** – ತೀರಿಹೋದ (ಆ ಸೋಮವಂಶದೊಳನೇಕ ಅರಸುಮಕ್ಕಳುಮತಿಕ್ರಾಂತರಾದರ್: **ಗದಾಯು,** ೫. ೪೪ ವ)

**ಅತಿಗಳೆ** – ಕಡೆಗಣಿಸು (ಪಾಂಡ್ಯನಂ ಪರಿಹರಿಸಿ ಪಾಂಡವರನರವರಿಸಿ ಕುರುಕುಳರನತಿಗಳೆದು ಮರುಪತಿಯನಸಕಳಿದು: **ಜಗನ್ನಾವಿ,** ೧೭. ೧೧೮ ರಗಳೆ)

**ಅತಿಗಟಿ** – ಮೀರು, ತಿರಸ್ಕರಿಸು (ಘನಜಘನವಿಭಕುಂಭ ವಿಭ್ರಮಮನತಿಗಟಿಯೆ: **ಪುಷ್ಪದಂಪು,** ೯. ೬೧)

**ಅತಿಚತುರ** – ಬಹಳ ಜಾಣ (ಅತಿಚತುರನೆಂ ಕಲಾಪಂಡಿತನೆಂ: **ಶಬ್ದಮದ,** ೨೩೧ ಪ್ರ. ೮)

**ಅತಿತರಳ** – ಅತ್ಯುಜ್ವಲ (ಉದ್ದೀಪಿತರತ್ನಪ್ರದೀಪಂಗಳಿಂದಂ ಅತಿತರಳ ಮುಕ್ತಾಮಣಿಪ್ರಲಂಬಂಗಳಿಂದಂ: **ಆದಿಪು,** ೨. ೩೨ ವ)

**ಅತಿತೃಷ್ಣೆ** – ಅತೀವ ಬಾಯಾರಿಕೆ (ಕಡುವಿಸಿಲಕಾಯ್ಪಿನಿಂ ಬಿದುವೊಡೆದುಗೆ ಬಿಸುಮುತ್ತು ಸೋರ್ವ ಸೀರ್ಪನಿಗೆನಿತ್ತೊಂದೆಡೆಮಡೆಮಡಗದೆ ನೊಣೆದು ನವಿಲ್ ಮಿಡುಕಿದುದತಿತಥಷ್ಣೆಯೀಗುಮೆರ್ದೆಗದವಟಿಲಂ: **ಚಂದ್ರಪ್ರಪು,** ೯. ೭೪)

**ಅತಿಥಿ** – ಮನೆಗೆ ಬರುವ ಆಗಂತುಕ (ಅತಿಥಿ ಪ್ರಾಹುಣಿಕಾ: **ಅಭಿಧಾವ,** ೨. ೧. ೨೫)

**ಅತಿದಾಹಜ್ವರ** – ತುಂಬ ಸುಡುವ ಜ್ವರ (ಉರಿಯಳುರ್ವಂತೆ ಅತಿದಾಹಜ್ವರಮುಳುರೆ: **ಆದಿಪು,** ೨. ೧೨)

**ಅತಿದುಷ್ಷಮ** – [ಜೈನ] ಜ್ಞಾನ, ಆಯುಷ್ಯ ಮುಂತಾದವು ಕಡಿಮೆಯಾಗುತ್ತ ಹೋಗುವ ಅವಸರ್ಪಿಣಿ ಎಂಬ ಕಾಲದ ಕಡೆಯ ಭಾಗ; "ದುಷ್ಷಮದುಷ್ಷಮ ಕಾಲ" (ಅಯ್ದನೆಯದು ದುಷ್ಷಮಮೆನಿಪ್ಪ ಕಾಲಂ ಬಟಿಕಾಱನೆಯದತಿದುಷ್ಷಮಂ: **ಪಂಪರಾ,** ೧. ೫೭)

**ಅತಿಧವಳ** – ತುಂಬ ಬೆಳ್ಳಗಿರುವ (ಅತಿಧವಳಜಳದ ಪಥಮಂ ತೊಳಪೆಳೆವೆಳಿಯುಂ ಕಳೆದುವು ಮುಳಿಸಂ ಕಾಮಿಗಳ ಚಿತ್ತದೊಳ್ ನೆಲಸಿದುದಂ: **ಕವಿರಾಮಾ,** ೩. ೧೬೭)

**ಅತಿಪೀಡನ** – ಹೆಚ್ಚು ಒತ್ತು ನೀಡುವುದು (ಅತಿಪೀಡನದಿಂ ರೇಫಾಶ್ರಿತಮಾದ ಱಕಾರಮಂ ಸಮಂತು ಡಕಾರಾಶ್ರಿತಮಾದ ಱಟಿನುಮಂ: **ಶಬ್ದಮದ,** ೨೮)

**ಅತಿಬಲ** – ಹೆಚ್ಚು ಶಕ್ತಿಯಿರುವ (ಸಂಸ್ಕೃತದ ಗುಣವಚನದೊಳ್ ಅರ್ ನಿಯತಂ – ಕುಲವೃದ್ಧರಿರ್ ಆಪ್ತರಿರ್ ಅತಿಬಲರಿರ್: **ಶಬ್ದಮದ,** ೨೩೧, ಪ್ರ ೩)

**ಅತಿಭವ** – ಹಿಂದಿನ ಜನ್ಮ (ಅತಿಭವ ಸೌಧರ್ಮಿಕೆಯ ಕೂರ್ಮೆಯ ಭರದಿಂದೆಱಗುವಂತೆಱಗಿ ಪೊಡಮಡುವುದುಂ: **ಶಾಂತಿಪು,** ೫. ೬ ವ)

**ಅತಿಮಾನುಷ** – ಮನುಷ್ಯನನ್ನು ಮೀರಿದ (ಕೃಷ್ಣನತಿಮಾನುಷ ಪುಷ್ಪನೊಲ್ದು ನೋಡಿ: **ಜಗನ್ನಾವಿ,** ೧೨. ೬೫)

**ಅತಿಮುಕ್ತ** – ಇರುವಂತಿಗೆ (ಅತಿಮುಕ್ತದಲರುಮಂ ತಮಾಳದ ತಳಿರುಮಂ: **ಮಲ್ಲಿನಾಪು,** ೫. ೪೦ ವ)

**ಅತಿಮೇಧ್ಯ** – ಶುದ್ಧವಾದ (ಶುದ್ಧಮದು ಉಜ್ಜ್ವಲಂ ಅತಿಮೇಧ್ಯಂ ವೀಧ್ರಂ ಮಲರಹಿತಂ ಶುಚಿತಮಂ ಪವಿತ್ರಂ ಪಪೂತಂ: **ಅಭಿಧಾವ,** ೨. ೧. ೬೧)

**ಅತಿಮೋಹ** – ಹೆಚ್ಚಾದ ಮೋಹ (ಅತಿಮೋಹಂ ಗತಿಯಂ ಕರಂ ಕಿಡಕುಗುಮೆಂಬೀ ಮಾತು ಕೆಯ್ಗೂಡೆ: **ಪಾರ್ಶ್ವನಾಪು,** ೪. ೪೭)

**ಅತಿರಥ** – ನಾಲ್ಕು ಬಗೆಯ ರಥಿಕರಲ್ಲಿ ಅತ್ಯಂತ ಶ್ರೇಷ್ಠ (ಗತಜೀವಿತರಾದರ್ ಸಂಗ್ರಾಮದೊಳತಿರಥ ಸಮರಥ ಮಹಾರಥಾರ್ಧರಥರ್ಕಳ್; **ಪಂಪರಾ,** ೧೩. ೭೨)

**ಅತಿರೇಕ** – ಅತಿಶಯವಾದ (ವಿವೇಕಾತಿರೇಕಮಂ ನೋಡಲ್ ನೀಂ ಪರದೈವತಕಳಾಸ್ವರೂಪನಾಗಿ ತೋರ್ಪೆ: **ಜಗನ್ನಾವಿ,** ೪. ೭೯ ವ); ಒಂದು ಕಾವ್ಯಾಲಂಕಾರ (ವರಜಾತಿ ರೂಪಕಾರ್ಥಂತರನ್ಯಾಸಾತಿರೇಕ ಯಾಥಾಸಂಖ್ಯಾಸ್ಥಿರದೀಪ ಕೋಪಮಾಬಂಧುರಾತಿಶಯ ಸದೃಶಯೋಗಿತಾಕ್ಷೇಪಂಗಳ್: **ಕವಿರಾಮಾ,** ೩. ೨)

**ಅತಿವರ್ತಿ** – ಕ್ರಮಮೀರಿ ನಡೆಯುವ (ಚಕ್ರವರ್ತಿಯಾಗಿಯುಂ ಅತಿವರ್ತಿಯೇ: **ಶಾಂತಿಪು,** ೧೧. ೬೬)

**ಅತಿವರ್ತಿನಿ** – ಆನೆಯ ಸಪ್ತಮದಗಳಲ್ಲಿ ಆರನೆಯದು (ಅಂತುದಯಿಸಿದ ಕ್ರೋಧೀನಿಯಿಂ ಕ್ರೋಧಾವಿಳನುಂ ಅತಿವರ್ತಿನಿಯೊಳ್ ಅತಿವರ್ತಿಯುಂ: **ಪಾರ್ಶ್ವನಾಪು,** ೪. ೧೩೧)

**ಅತಿವರ್ತಿತ್ವ** – ಅಹಂಕಾರ, ಮದಿಸಿದ ಸ್ಥಿತಿ (ಕರ್ತಾರಂಗೆ ಎಱಗುವುದು ಅತಿವರ್ತಿತ್ವಂ ಪೊಲ್ಲದೆಂದು ಪುರುಸೂನುಗೆ ಮುಂ ಮಾರ್ತಲೆಯಾದ ಚಿಳಾತಾವರ್ತನರಂ ಅಂದು ಊಜಿ ಕಲ್ಪಿಪಂತಾಯ್ತು ನಗಂ: **ಶಾಂತಿಪು,** ೧೧. ೫೨)

**ಅತಿವೃತ್ತ** – ತುಂಬ ಗುಂಡಗಿನ (ಅತಿವೃತ್ತದೆ ರವಿಬಿಂಬಾಕೃತಿ ಯೋಜನಶತಸಹಸ್ರವಿಷ್ಕಂಭಂ: **ಆದಿಪು,** ೧. ೪೯); ಅನಾಚಾರಿ

**ಅತಿವ್ಯಕ್ತ** – ತುಂಬ ಸ್ಪಷ್ಟವಾದ (ಏಕಬಹುತ್ವಂಗಳ್ ಕನ್ನಡದೊಳತಿವ್ಯಕ್ತಂಗಳ್; ದ್ವಿವಚನಮನೌಚಿತ್ಯದಿಂದಱಿವುದು: **ಶಬ್ದಮದ,** ೧೦೪ ವೃತ್ತಿ)

**ಅತಿಶಯ** – ಮೀರುವುದು (ಅತಿಶಂಯ ಲಂಘನವಾಚಕಂ: **ಅಭಿಧಾವ,** ೩. ೧. ೧೧೨); ಅತಿಶಯೋಕ್ತಿ ಎಂಬ ಅಲಂಕಾರದ ಮತ್ತೊಂದು ಹೆಸರು (ಮೇರೆಗೆಳೆದಿರೆ ವಿಶೇಷವಿಚಾರಮಂ ಅಧಿಕೋಕ್ತಿಯೊಳ್ ತಗುಳ್ಚುವುದುಂ ಸಾರತರಂ ಅತಿಶಯಾಲಂಕಾರ: **ಕವಿರಾಮಾ,** ೩. ೯೧); ವಿಸ್ಮಯವನ್ನುಂಟುಮಾಡುವ ಬಗೆಯ ಒಂದು ಅಲಂಕಾರ (ವಸ್ತೂಪವರ್ಣನಂ ವಿಸ್ಮಯಮಂ ಮಾಡುವೊಡೆ ಅತಿಶಯಮಕ್ಕುಂ, **ಕಾವ್ಯಾವಲೋ,** ೭೨೫); [ಜೈನ] ತೀರ್ಥಂಕರನ ಮೂವತ್ತನಾಲ್ಕು ವಿಶೇಷ ಗುಣಗಳು (ನಿಸ್ವೇದತ್ವ ಆದಿ ಅತಿಶಯಸಮೇತನುಂ .. .. ಅಷ್ಟೋತ್ತರಶತಸಹಸ್ರಲಕ್ಷಣನುಂ: **ಕರ್ಣನೇಮಿ,** ೯. ೬ ವ)

**ಅತಿಶಯಧವಳ** – ತುಂಬ ಬಿಳುಪಾದ; ರಾಷ್ಟ್ರಕೂಟ ಚಕ್ರವರ್ತಿ ನೃಪತುಂಗನ ಒಂದು ಬಿರುದು (ವೀರನಾರಾಯಣನಪ್ಪ ಅತಿಶಯಧವಳಂ ನಮಗೀಗತರ್ಕಿತೋಪಸ್ಥಿತ ಪ್ರತಾಪೋದಯಮಂ: **ಕವಿರಾಮಾ,** ೧. ೨)

**ಅತಿಶಯಿತ** – ಶ್ರೇಷ್ಠ (ಅತಿಶಯಿತ ವಸ್ತುವಿಷಯಪ್ರತೀತಿಯಂ ಮಱಸಿ ನಿಱಿಸಿ ಪೇೞ್ವುದು: **ಕವಿರಾಮಾ,** ೩. ೧೮೨)

**ಅತಿಶಯೋಪಮೆ** – ಉಪಮಾಲಂಕಾರದ ಒಂದು ಬಗೆ (ವಿದಿತ ವಿಭೇದ ಕ್ರಮಮಿಂತಿದಲ್ಲದಿಂತಿದಿಲ್ಲೆಂಬುದತಿಶಯೋಪಮೆ ಸತತಂ: **ಕವಿರಾಮಾ,** ೩. ೬೬)

**ಅತಿಸಂಧಿತೆ** – ವಂಚಿತೆ (ಅತಿಸಂಧಿತೆಯಂತೆ ವಿರಳೋತ್ಕರಳಿಕಾ ತರಳೆ: **ಚಂದ್ರಪ್ರಪು,** ೧೫. ೨೯ ವ)

**ಅತಿಸ್ಥೂಲನಿಶಿತಪಾಷಾಣವಿಷಮಿತ** – ತುಂಬ ದಪ್ಪವೂ ಹರಿತವೂ ಕಠಿಣವೂ ಆದ ಕಲ್ಲುಗಳಿಂದ ದಾಟಲಾಗದ (ಅದಱೊಳ್ ಅತಿಕರ್ಕಶಶರ್ಕರಾಪ್ರಚುರಮುಂ ಅತಿಸ್ಥೂಲ ನಿಶಿತಪಾಷಾಣ ವಿಷಮಿತಮುಂ .. .. ಆಗಿರ್ದೊಂದು ದುರ್ಗಮಮಾರ್ಗದೊಳ್: **ಪಂಚತಂತ್ರ,** ೭೬ ವ)

**ಅತೀಂದ್ರಿಯ** – ಪರೋಕ್ಷವಾದುದು, ಇಂದ್ರಿಯಗೋಚರವಲ್ಲದ್ದು (ಐಂದ್ರಿಯಕಂ ಪ್ರತ್ಯಕ್ಷಂ ಅತೀಂದ್ರಿಯಂ ಪರೋಕ್ಷಂ: **ಅಭಿಧಾವ,** ೧. ೧೨. ೨೪)

**ಅತೀಂದ್ರಿಯಸೌಖ್ಯ** – ಇಂದ್ರಿಯಗಳಿಗೆ ಸಂಬಂಧಿಸದ, ಆತ್ಮಕ್ಕೆ ಸಂಬಂಧಿಸಿದ ಸುಖ (ಅನಶ್ವರಶ್ರೀವನಿತೇಶರೀಗೆಮಗೆ ಸಿದ್ಧರತೀಂದ್ರಿಯಸೌಖ್ಯಸಿದ್ಧಿಯಂ: **ಚಂದ್ರಪ್ರಪು,** ೧. ೨)

**ಅತೀತ** – ಗತಿಸಿಹೋದ, ಕಳೆದುಹೋದ (ಭಾವಿಯೆನಿಸಿರ್ದ ಭೋಗದೊಳಾವುದು ನಿಶ್ಚಯಂ ಅತೀತಂ ಅದತೀತಮೆ ದಲ್ ಜೀವಂ ತದಾತ್ವಸುಖಲವಸೇವೆಗೆ ಕಳವಳಿಪುದು: **ಚಂದ್ರಪ್ರಪು,** ೨. ೩೦)

**ಅತೀತಕಾಲ** – ಭೂತಕಾಲ (ಆಖ್ಯಾತವಿಭಕ್ತಿಗಳಕ್ಕುಂ ಅತೀತಭವದ್ಭಾವಿಕಾಲ ವಿಧ್ಯಾದಿಗಳೊಳ್: **ಕಾವ್ಯಾವಲೋ,** ೩೭೪)

**ಅತೀತಭವ** – ಹಿಂದಿನ ಜನ್ಮ (ನೀನತೀತಭವದೊಳ್ ಉಪಾರ್ಜಿತೋರ್ಜಿತಪುಣ್ಯನೆಯಾಗಿ ಸೌಧರ್ಮಕಲ್ಪದೊಳ್ ದೇವನಾದ್ಯೆ: **ಶಾಂತಿಪು,** ೬. ೮೫ ವ)

**ಅತೀವ** – ಅಧಿಕ (ಸಂಯಮಿಗಳ ಮುಂದೆ ನಿಂದೆಱಗಿ ಕಾಣ್ಕೆಯನಿತ್ತುದತೀವ ಭಕ್ತಿಯಿಂ: **ರಾಜಶೇವಿ,** ೧. ೧೨೭)

**ಅತುಚ್ಛ** – ತುಚ್ಛವಲ್ಲದ, ಶ್ರೇಷ್ಠ (ಅತುಚ್ಛದುಕೂಲಪ್ರಚ್ಛದಾಚ್ಛಾದಿತ ಹಂಸಾನಳ್ಪತಳ್ಪದೊಳ್ .. .. ಪವಡಿಸಿ: **ಕರ್ಣನೇಮಿ,** ೧. ೧೩೨ ವ)

**ಅತುಚ್ಛಬಾಣ** – ಹೆಚ್ಚು ಶಕ್ತಿಯ ಬಾಣ (ಸಿಂಹಳಭೂಪತಿ ಮಚ್ಚಿ ಚಂಡಕೋದಂಡಮನಾರ್ಪಿನಿಂ ಸೆಳೆದು ಬೊಬ್ಬಿಱಿದೆಚ್ಚನತುಚ್ಛ ಬಾಣಮಂ: **ರಾಜಶೇವಿ,** ೬. ೮೮)

**ಅತ್ತ** – ಆ ಕಡೆ (ಕುದಿಕುದಿತ್ತಣಿಂ ಕುದುರೆ ನೂಱಱೊಳಾ ಬಲದಾನೆ ಪತ್ತು ತಾಗಿದುವು: **ಕವಿರಾಮಾ,** ೧. ೧೧೯); ಹೊರಗೆ, ಬೇರೊಂದೆಡೆ (ಅನ್ನೆಗಮತ್ತ ಯಮನಂದನಂ ಮೂವರ್ ತಮ್ಮಂದಿರ ಬರವಂ ಕಾಣದೆ: **ಪಂಪಭಾ,** ೮. ೪೧ ವ); ಆಮೇಲೆ (ದುರ್ಮಾರ್ಗಮಂ ಪೊರ್ದಿದೆನಗೆ ಶರಣ್ ಧರ್ಮದಿಂದತ್ತ ಮತ್ತಿಲ್ಲ: **ಸುಕುಮಾಚ,** ೩. ೪೫)

**ಅತ್ತಂ ಇತ್ತಂ** – ಆ ಕಡೆ ಈ ಕಡೆ (ಗುಂಡಿಗೆಯಂ ಕಾಣದತ್ತಮಿತ್ತಂ ನೋಟ್ಪನ್ನೆಗಂ: **ವಡ್ಡಾರಾ,** ಪು ೯೧, ಸಾ ೧೧)

**ಅತ್ತಣಿಂ** – ದೆಸೆಯಿಂದ, ಆ ಕಡೆಯಿಂದ ಎಂಬ ಅರ್ಥದ ಪಂಚಮೀ ವಿಭಕ್ತಿ ಪ್ರತ್ಯಯ (ದಾಯಿಗರತ್ತಣಿನಪ್ಪ ಅಪಾಯಕೋಟಿಗೆ ಪವಣಿಲ್ಲ ಕಲ್ಪಿಗೆ ಎಡೆಯಾವುದೊ ಪಾಟಿಯ ಬಟ್ಟೆದಪ್ಪಿ ಮುಂ ನೆಗಟ್ದೆಡೆಯಿಲ್ಲ ಪೋಗು ಜಯಮಕ್ಕೆ ಶುಭಂ ನಿಮಗಕ್ಕೆ ಮಂಗಳಂ: **ಪಂಪಭಾ,** ೭. ೨೧)

**ಅತ್ತತ್ತ** – ಅತ್ತ ಎಂಬುದರ ದ್ವಿರುಕ್ತಿ, ತುಂಬ ಆಚೆಗೆ (ಉಬ್ಬಸಮಪ್ಪುದತ್ತೆಯತ್ತತ್ತ ಸಾರಿಮೆಂದು: **ಧರ್ಮಾಮೃ,** ೨. ೧೨೮ ವ)

**ಅತ್ತಪರ** – [ಹಸ್ತಫಲಕ] ಗುರಾಣಿ (ಬೇಗಮೊಂದು ಬಾಳುಮಂ ಅತ್ತಪರಮುಮಂ ಕೊಂಡೆಯ್ದೆವಂದೊರಂ ಆಂತಿಱಿದು: **ಹರಿವಂಶ,** ೪. ೧೧ ವ)

**ಅತ್ತರಿಸು** – ಸುವಾಸನೆಗೊಳಿಸು (ಕತ್ತುರಿಯ ಕಡುನೀರಿಂದತ್ತರಿಸಿದ ರತ್ನವೇದಿಕಾ ಪರಿಸರದೊಳ್: **ವರ್ಧಮಾಪು,** ೩. ೮೪)

**ಅತ್ತಲ್** – ಅತ್ತ, ಆ ಕಡೆ (ಅತ್ತಲಸುರಾರಿ ಬೆಸೆಸಿದನಿತ್ತಲ್ ರುದ್ರಾವತಾರನೆಱ್ದೊಯ್ದಪಂ: **ಗದಾಯು,** ೯. ೧೬)

**ಅತ್ತಲಗ್ಗ** – ಅತಿಶಯದ (ನೀನೆನಗತ್ತಲಗ್ಗಮೆಂದಾಂ ಮಗುಟ್ದಿಂದು ನಿಮ್ಮಡಿಗೆ ಸೂಟಿದಱಿಂ ಬೆಸೆಸೆನ್ನನನ್ನೆಗಂ: **ಶಾಂತಿಪು,** ೪. ೨)

**ಅತ್ತವಳ** – ಅನ್ಯಮನಸ್ಕ (ವಿಮನಸ್ಕಂ ಅತ್ತವಳನವನಕ್ಕುಂ: **ಅಭಿಧಾವ,** ೨. ೨. ೨೩)

**ಅತ್ತಳಗ** – ಹೆಚ್ಚಿಗೆ (ಒದವಿದ ಬೇಟವಪ್ಪೊಡೆನಗತ್ತಳಗಂ ಬಗೆವೇಟಿಪ್ಪೊಡೆನ್ನ ಮೇಳದ ಕೆಳೆಯರ್ಕಳಿಲ್ಲ: **ಪಂಪಭಾ,** ೪. ೭೯); ಅಸಾಧ್ಯ (ನೆತ್ತಮನಾಡಲೀ ಘನ ಸುವೃತ್ತಪಯೋಧರೆಯೊಳ್ ಪೊಣರ್ಕೆ ಕೇಳತ್ತಗಂ ದಿಟಂ ನಿಮಗೆ: **ಕರ್ಣನೇಮಿ,** ೪. ೫೩); ವ್ಯಥೆ, ಚಿಂತೆ (ಪಗೆಯೊಡ್ಡು ಗೆಲಲ್ಕಳುಂಬಮೆಂಬಂತರನಿತುವರಂ ಮನಕ್ಕೆ ನಿಮಗತ್ತಳಂ ಬರೆ ಮತ್ತೆ ಮಾಣ್ಬನೇ: **ಪಂಪಭಾ,** ೧೧. ೮೮)

**ಅತ್ತಳಗಂ** – ಹೆಚ್ಚಾಗಿ, ಅಧಿಕವಾಗಿ (ಅತ್ತಳಗಮುರಿದು ಬಟಿಕೆ ವಿಯತ್ತಳಚರನಂದು ಚಿತ್ತಭವನಂ ಕೊಲಲೆಂದುತ್ತರಳನಾದಂ: **ಕರ್ಣನೇಮಿ,** ೭. ೧೫೨)

**ಅತ್ತಿಗೆ** – ಅಣ್ಣನ ಹೆಂಡತಿ (ಮುನ್ನಿನ ಜನ್ಮಾಂತರದತ್ತಿಗೆಯಪ್ಪ ಪೆಣ್ಣರಿಯಿಂದಂ: **ವಡ್ಡಾರಾ,** ಪು ೨. ಸಾ ೧); (ಅಟ್ಟಿಗೆ) ನಲ್ಲೆ, ಪ್ರೇಯಸಿ (ಒಡವುಟ್ಟಿದನರಸಿಯನೆನ್ನೊಡವುಟ್ಟಿದರೆನ್ನ ದಬ್ಬೆಯೆಂದತ್ತಿಗೆಯೆಂದೊಡೆ ನಾಲಗೆಯಾತನ ತಲೆ ಸಿಡಿಲ್ದು ತಲೆ ಸಿಡಿಲ್ದು ಪಾಱೀಳ್ಗುಂ; **ಶಾಂತಿಪು,** ೬. ೮೦)

**ಅತ್ತಿತ್ತ** – ಯಾವ ಕಡೆಯೂ (ಅತ್ತಿತ್ತಡಿಯಿಡದೆ ಲಕ್ಷ್ಮಿ ತಳವೆಳಗಾದಳ್: **ಗದಾಯು,** ೯. ೧೬)

**ಅತ್ತೆ** – ಹೆಂಡತಿಯ ಅಥವಾ ಗಂಡನ ತಾಯಿ (ಮುತ್ತಬ್ಬೆ ಮತ್ತತ್ತಿಗೆ ಕೂಸಿತ್ತತ್ತೆಯೆಂಬೀ ಮೊಱೆಯ ವನಿತೆಯರ್: **ಶಾಂತಿಪು,** ೬. ೮೭); ತಂದೆಯ ಒಡಹುಟ್ಟಿದವಳು (ತಮ್ಮತ್ತೆವಿರಪ್ಪ ವಿಜಯಮತಿ ಕಂತಿಯರ್ ಕಂತಿಯರಾಗೆ ತಪಂಬಟ್ಟು: **ವಡ್ಡಾರಾ,** ಪು ೧೩೪. ಸಾ. ೧)

**ಅತ್ತೆವಿರ್** – ಅತ್ತೆ ಎಂಬುದರ ಬಹುವಚನ (ಮಾವನುಮತ್ತೆವಿರುಂ: **ಅಜಿತಪು,** ೬. ೧೨೨)

**ಅತ್ಯಂಗ** – ಒಂದು ಬಗೆಯ ಬಟ್ಟೆ (ಮಣಿಸ್ತಂಭದೊಳ್ ಪೊಸೆವತ್ಯಂಗಮಪೂರ್ವಮಾಗೆ ಹರಿ ಪರೋಹಿತ್ಯಂ ತಾಳೆ: **ಶಾಂತಿಪು,** ೧೦. ೭೮)

**ಅತ್ಯಂತ** – ಎಲ್ಲಕ್ಕೂ ಮಿಗಿಲಾದ (ಸಮಚತುರಶ್ರಮಪ್ಪ ಸಂಸ್ಥಾನ ಸಂಹನನಮುಂ ಅತಿಶಯರೂಪತೆಯುಂ ಅತ್ಯಂತ ಸುರಭಿ ನಿಃಶ್ವಾಸತೆಯುಂ: **ಶಾಂತಿಪು,** ೧೦. ೮೪ ವ)

**ಅತ್ಯಂತಾಭಾವ** – (ಅತ್ಯಂತ+ಅಭಾವ) ಪೂರ್ತಿ ಇಲ್ಲದಿರುವುದು (ಗಗನಕುಸುಮನತ್ಯಂತಾಭಾವಮಂ ನಿಷೇಧಮಾತ್ರದಿಂದಂ ಉಂಟುಮಾಡಲಕ್ಕುಮೆ: **ಶಾಂತಿಪು,** ೮. ೧೩೮ ವ)

**ಅತ್ಯಪೂರ್ವ** – (ಅತಿ+ಅಪೂರ್ವ) ತುಂಬ ಅಪರೂಪವಾದ (ಅಂಬುಜಸೌರಭಂ ತನಗೆ ಗಾವಣಜೇವಣಮತ್ಯಪೂರ್ವಮ್ ಆಸ್ಯಾಂಬುಜಗಂಧಮೆಂದೆಱಗಿ ಬಗ್ಗಿಸೆ: **ಶಾಂತಿಪು,** ೮. ೮೭)

**ಅತ್ಯಯ** – ಅಪಾಯ (ರತಿಲಂಪಟಂ ಮದಯುತಂ ಮಾನಾತ್ಯಯಾಭೀತನುದ್ಧತವೃತ್ತಂ: **ರಾಜಶೇವಿ,** ೬. ೧೨೪); ಸಾವು (ದುರಘಕುಳಮೆನಿಪ ನಿರಮಯನಿಯದೆಯ್ದಿಪ ನಿರಯದೂತಿ ನಿದ್ರಾಮಿಷದಿಂದ ಇರದುಯ್ವಂತಿರೆ ನಿದ್ರಾಭರದಿಂದ ಅತ್ಯಯಮನೆಯ್ದಿದಂ ಚಕ್ರಧರಂ: **ಶಾಂತೀಶ್ವಪು,** ೫. ೨೨); ಕೊನೆ, ಮುಕ್ತಾಯ (ಪೊಸತು ಅಲರ್ದ ಅಂಭೋರುಹದೊಳ್ ಮುಸುಂಬು ಮುಟುಗುವಿನಂ ಎಱಗೆ ಗಂಧಮಂ ಆಘ್ರಾಣಿಸುತುಂ ಅಳವಳಿಸುವ ಅಳಿಗಳ ಪಸವೋಡಿದುದಿಲ್ಲ ರಜನಿಸಮಯ ಅತ್ಯಯದೊಳ್: **ಅಜಿತಪು,** ೬. ೬೬)

**ಅತ್ಯರ್ಥ** – ಸತತವಾದ (ನಿತಾಂತಂ ಅತ್ಯರ್ಥಂ: **ಅಭಿಧಾವ,** ೨. ೨. ೩೪)

**ಅತ್ಯಾಯತ** – ಬಹಳ ವಿಸ್ತಾರವಾದ (ಸಕಲಜೀವೋತ್ಪತ್ತಿ ಸಂಸ್ಥಾನಮ್ ಊರ್ಜಿತಮ್ ಅತ್ಯಾಯತಮ್ ಅಪ್ರಮೇಯಕಮದ್ಯೋರ್ಧ್ವಭೇದಂ ಜಗತ್ತ್ರಿತಯಂ ನಿಂದುದು: **ಸುಕುಮಾಚ,** ೧೧. ೪೧)

**ಅತ್ಯಾಯಾಮ** – ಅತ್ಯಾಯತ (ಜೀವಿತಾಶಯದಂತೆ ಅತ್ಯಾಯಾಮಮುಂ ಮುಕ್ತಜ್ವರದಂತೆ ನಿರ್ಮುಕ್ತೋಷ್ಮಮುಂ: **ಆದಿಪು,** ೧೩. ೪೬ ವ)

**ಅತ್ಯಾಸನ್ನ** – [ಅತಿ+ಆಸನ್ನ] ತುಂಬ ಹತ್ತಿರದ (ಆದಿದೇವನ ಪರಿನಿಷ್ಕ್ರಮಣಕಲ್ಯಾಣಮತ್ಯಾಸನ್ನಮೆಂಬುದಂ: **ಆದಿಪು,** ೯. ೮ ವ)

**ಅತ್ಯಾಸುರ** – ಮಹಾ ಭಯಂಕರ (ಕರಿಣಿಯ ಕಾರಣದಿಂ ಮದಕರಿಗಳ್ ವೈಭಾವದಿಂದೆ ತಮ್ಮೊಳಗತ್ಯಾಸುರಮಾಗೆ ಪೋರ್ದುದು ಸತ್ತು: **ಶಾಂತಿಪು,** ೯. ೪೭)

**ಅತ್ಯುಜ್ವಲ** – ತುಂಬ ಪ್ರಕಾಶಮಾನವಾದ (ಧರಿತ್ರೀಸ್ತುತ್ಯಂ ಅತ್ಯುಜ್ವಲನಿರುಪಮದೇಹ ಪ್ರಭಾದಿವ್ಯ ಸರ್ವಾವಧಿಬೋಧಂ ತುಷ್ಟನಾದಂ: **ಸುಕುಮಾಚ,** ೬. ೪೮)

**ಅತ್ಯುದ್ಗಾರಿಸು** – [ಅತಿ+ಉದ್ಗಾರಿಸು] ರಭಸದಿಂದ ಹೊರಚೆಲ್ಲು (ಮತ್ಪಾಂಚಜನ್ಯರಶ್ಮಿಯನತ್ಯುದ್ಗಾರಿಪವೊಲ್ ದಂತದ್ಯುತಿ ರಾರಾಜಿಸಿ: **ಜಗನ್ನಾವಿ,** ೧೦. ೧೪);

**ಅತ್ಯುತ್ಸುಕ** – ತುಂಬ ಸಡಗರದ (ವಿಸ್ವಸೇನ ಪ್ರಮುಖ ಸೇನಾಭಿಜ್ಞಾನತೆಯಿಂ ರಾಜಲೋಕಮಱಿದತ್ಯುತ್ಸುಕರಾಗಿ ಶಶಿವಂಶಕೇತುಗೆ ರಾಜ್ಯಾಭಿಷೇಕಂಗೆಯ್ಯೆ: **ಶಾಂತಿಪು,** ೧೦. ೧೦೨ ವ)

**ಅತ್ಯೂರ್ಜಿತ** – ತುಂಬ ಪರಿಣಾಮಕಾರಿಯಾದ (ನೀಲಾಂಬುಜಲೀಲಾಕಾರದಿಂ ಕಾಂತಿಯುತನಿನನಿಂ ಅತ್ಯೂರ್ಜಿತಂ: **ಶಾಂತಿಪು,** ೯. ೨೧೦)

**ಅತ್ರಸ್ತ** – ಹೆದರಿದ (ಕಂಡು ಅತ್ರಸ್ತಚಿತ್ತಂ ಅದಿರದೆ ಶತ್ರುಂಜಯನಶನಿಘೋಷನಂ ನಿಂದಾಂತಂ: **ವರ್ಧಮಾಪು,** ೪. ೮೦)

**ಅತ್ರಪಾತ್ಮಿಕೆ** – ನಾಚಿಕೆಗೆಟ್ಟವಳು (ಸಕಲ ದುಃಖಾವಾಸೆಯೆಂ ಜೀವಿತಕ್ಕೆ ನಿಬದ್ಧಾಸೆಯೆಂ ಅತ್ರಪಾತ್ಮಿಕೆಯೆಂ: **ಕಾದಂಸಂ,** ೭. ೧೦)

**ಅತ್ರಿಜ** – ಚಂದ್ರ (ಅತ್ರಿಜಮಂಡಲಮುಖಿಯ ವಲಿತ್ರಯವಿರದಡಗಿ ಪೋದುವಂತಾ ದಿನದೊಳ್: **ತ್ರಿಷಷ್ಟಿಪು,** ೧೭, ೧೪೭)

**ಅತ್ರಿಪುತ್ರ** – ಅತ್ರಿಯ ಮಗ, ಚಂದ್ರ (ಆ ಕ್ಷತ್ರಪುತ್ರಂ ಸಿತಪಕ್ಷದತ್ರಿಪುತ್ರನಂತೆ ಕಳಾಕಳೋಪಚಯಮಂ ಅಪ್ಪುಕೆಯ್ದಿರೆ: **ಚಂದ್ರಪ್ರಪು,** ೪. ೪ ವ)

**ಅಥರ್ವಕುಶಲ** – ಅಥರ್ವವೇದ ಪಂಡಿತ (ವೇದವಿದಂ ಕಾಲತ್ರಯವೇದಿ ಬಹುಶ್ರುತಂ ಅಥರ್ವಕುಶಲಂ ಶುಭವಂಶೋದಯಂ: **ಶಬ್ದಮದ,** ೧೧೫, ಪ್ರ. ೧)

**ಅದಗುಂತಿ** – ದಗುಂತಿ, ಆಧಿಕ್ಯ (ಸೋಂಕುವ ನಲ್ಲಳ ಸೋಂಕಲಂಪಿನುದ್ದಾನಿಯನೀಯೆ ಸಂತಸದೊಂದಗುಂತಿಯೆ ರೂಪುಗೊಂಡುದು: **ಚಂದ್ರಪ್ರಪು,** ೭. ೭೯); ಆಶ್ಚರ್ಯ (ಅದಗುಂತಿ ನೆಗತೇಯ ಬೀರಮಾವಗಂ ತೊಲಗೆ ಕುಯೋನಿಯೊಳ್ ಸುಳಿದು: **ವರ್ಧಮಾಪು,** ೬. ೨)

**ಅದಟ** – (ಅಧಟ) ಶೂರ (ಅದಟಂ ಪುಟ್ಟಿದನಭಿಮನ್ಯು ಕಲಿತನಂ ಪುಟ್ಟುವವೋಲ್; **ಪಂಪಭಾ,** ೫. ೨೯)

**ಅದಟತೆ** – ಪರಾಕ್ರಮ (ಇರ್ವರುಮರ್ವಿಸಲ್ಕೆ ಕೊಂದದಟತೆಯಿಂದಮಾಗಳೆ ಧನಂಜಯನಂಜದೆ ಕಂಜವಕ್ತ್ರೆಯಂ ಪದೆದತಿವೇಗದಿಂ ಪೆಗಲನೇಱಿಸಿಕೊಂಡು ಬರುತ್ತುಂ: **ಕರ್ಣನೇಮಿ,** ೭. ೪೪)

**ಅದಟಲೆ** – ಪೀಡಿಸು (ಅದಟಲೆದು ನೆಗಟ್ದ ಮದನನ ಮದಮಂ ಬೀರಂ ಅಲೆದು ಗೆಲ್ದುದು ವೀರತಪಂ ವೀರಣಂದಿ ಮಲಧಾರಿಗಳಾ: **ಸಮಯಪ,** ೧. ೨೨); ಧಿಕ್ಕರಿಸು (ವೇದವೇದಾಂತರಹಸ್ಯಮನದಟಲೆದುದೆನಲ್ ಕಂಸಮಥನ ಬಣ್ಣಿಸುವರಲವೆ ನಿನ್ನ ಮಹತ್ವಂ: **ಜಗನ್ನಾವಿ,** ೬. ೮೩)

**ಅದಟಟ್ಟು** – ಶೌರ್ಯ ಕುಸಿ (ಸಾಯಕದ ಬೆಂಬಲದೊಳ್ ಕಲಿಯೆಂದು ಕೆಮ್ಮನಮ್ಮನ ಅದಟಟ್ಟುತಿರ್ಪ ಇರವಿದೇಂ: **ಪಂಪಭಾ,** ೧೧. ೮೮)

**ಅದಟು** – ಪರಾಕ್ರಮ (ಎಮ್ಮಂ ಪಿಡಿದೆೞೆವಂದಿನ ನಿಮ್ಮದಟುಗಳೀಗಳೆತ್ತವೋದುವೋ: **ಪಂಪಭಾ,** ೭. ೩೯); ದರ್ಪ (ಮುಕುಂದಂ ಸಭಾಂತರಮಂ ಪೊಕ್ಕಂ ಅಳುರ್ಕೆವೆತ್ತದಟನಾ ಪೀತಾಂಬರಾಡಂಬರಂ: **ಕರ್ಣನೇಮಿ,** ೬. ೧೧೭)

**ಅದಪು** – ಅಮುಕು (ಪೆರ್ಗಲ್ಲಿಂದದಪುತ್ತುಂ ಕರ್ಗಲ್ಲಂ ನೆರಪಿ ತಂದು ಬರಿಯೆಲ್ವೆಲ್ಲಂ ನುರ್ಗಾಗಿ ಚಿಟಿಲ್ ಚಿಟಿಲ್ಲೆನೆ ಕುರ್ಗುತ್ತುಂ: **ಧರ್ಮಾಮೃ,** ೬. ೧೩೪)

**ಅದಭ್ರ** – ಅಧಿಕವಾದ (ಮುಂದೊಂದೆಡೆಯೊಳದಭ್ರಾಭ್ರ ವಿಭ್ರಮಭ್ರಾಜಿತೋತ್ತುಂಗಶೈಲಮಂ ಕಂಡು: **ಪಂಪಭಾ,** ೪. ೨೫ ವ)

**ಅದರ್ಶನ** – ಲೋಪವಾಗುವುದು (ಪಡೆಗುಂ ವಿಭಾಷೆಯಿಂದಂ ಕಡೆಯೊಳದಂತತೆಯನಸ್ವರಂ ವೃದ್ಧನವೊಲ್ ಪಡೆಗುಮದರ್ಶನಮಂ: **ಕಾವ್ಯಾವಲೋ,** ೧೯೦); ನಾಶಗೊಳ್ಳುವುದು (ಪ್ರವಿನಾಶಂ ಅದರ್ಶನಂ: **ಅಭಿಧಾವ,** ೨. ೨. ೨೧)

**ಅದಭ್ರ** – ಸಮೃದ್ಧಿ (ಬಹು ಭೂಯಿಷ್ಠಂ ಅದಭ್ರಂ: **ಅಭಿಧಾವ,** ೨. ೨. ೫೫)

**ಅದವಂ** – ಅಂಗಹೀನ (ಏನೆಂಬುದಣಕಮಂ ಪ್ರಧ್ವಾನಂಗೆಯ್ದಂಗೆ ತಳೆಗೆವೆರಸಿತ್ತ ಅದವಂಗೆ ಊನಮನೇಱಿಸಿ ಪಾರ್ವಂ ತಾನಾತನ ಸುಕೃತಮಂ ಗಡ ಕೊಂಡೊಯ್ವಂ: **ಸಮಯಪ,** ೧೧. ೯೫)

**ಅದವಟಿಲ್** – ದುಃಖ, ಬೇಗುದಿ (ಅಂತೆನ್ನ ಸಾವಿಲ್ಲದುದುಮಾತನ ಸಾವುದುಮದವಟಿಲನೊದವಿಸೆ ಬಾಯಟಿದು ಮೆಯ್ಯಟಿಯದವಳ್: **ಕಾದಂಸಂ,** ೪. ೯೨)

**ಅದಱಟ್ಟು** – ಬೆದರಿಸಿ ಅಟ್ಟು (ಸಿಂಗಮನಱಟ್ಟುವ ಮುನಿಸಿಂಗಮವನ ಪೇಚಕಾಂತರದೆ ಪೋಪುದಱಿಂ: **ಪಾರ್ಶ್ವನಾಪು,** ೪. ೮೧)

**ಅದಱಿಂ** – ಅದರಿಂದ, ಆ ಕಾರಣದಿಂದ (ಕವಿಗಳಿರ್ವರುಂ ನೆಗೞ್ದಿರದಱಿಂ ಸತ್ಕವಿಗಳಿರ್ವರುಮೆಮಗಭಿವಂದ್ಯರ್: **ಗದಾಯು,** ೧. ೯)

**ಅದಿತಿತನಯ** – ದೇವತೆ (ಅಮರರ್ ಸುಪರ್ವರ್ ಅನಿಮಿಷರ್ ಅಮರ್ತ್ಯರ್ ಅಸ್ವಪ್ನರ್ ಅದಿತಿತನಯರ್ ಲೇಖರ್ ಸುಮನರ್ ಗೀರ್ವಾಣರ್ ಸುರರ್ ಅಮೃತಾಶಕರ್ ಕ್ರತುಭುಜರ್ ನಿಳಿಂಪರ್ ತ್ರಿದಶರ್: **ಅಭಿಧಾವ,** ೧. ೧. ೩೧)

**ಅದಿತಿಪ್ರಿಯಪುತ್ರ** – ಸೂರ್ಯ (ಉದಯಗಿರಿತಟದೊಳ್ ಉದಯಿಸುವ ಅದಿರತಿಪ್ರಿಯಪುತ್ರನಲ್ಲದೆ ಇತ್ತೊರ್ವಂ ಭಾನು ದಲೆ ಒಗೆದಂ: **ಪಂಪಭಾ,** ೧೨. ೫೩)

**ಅದಿರ್** – ನಡುಗು, ಕಂಪಿಸು (ಅದಿರ್ – ಕಂಪನೇ: **ಶಬ್ದಮದ,** ಧಾ ೫೩೭); ಹೆದರು (ಪ್ರತಿಜ್ಞಾಗಾಂಗೆಯಂಗೆ ಅದಿರದಿರ್ದಿರ್ನಿಲ್ವನ್ನರೊಳರೇ: **ಪಂಪಭಾ,** ೧. ೮೦); ಅಲುಗಾಡಿಸು (ಬಿಸಿಯಂಬಲಿಯಂ ಬಾಯೊಳಿಟ್ಟಾಗಳ್ ಕಯ್ಯುಂ ಬಾಯುಂ ಬೆಂದೊಡೆ ಮೆಯ್ಯನದಿರ್ದು ಕಯ್ಯಂ ಬಿದಿರ್ದವನಂ ಕಂಡು: **ವಡ್ಡಾರಾ,** ಪು ೧೮೮. ೨೦)

**ಅದಿರ್ಗಂತಿ** – ಮಾಧವಿ ಹೂ (ಪೊಳೆವದಿರ್ಗಂತಿಯುಣ್ಮೆ ಮಧುಮಾಸಮೊಡರ್ಚಿದುದನ್ಯಪುಷ್ಪನಿಂ: **ಗಿರಿಜಾಕ,** ೭. ೩೬)

**ಅದಿರ್ಪು** – ನಡುಗಿಸು (ನಕುಳನಂ ಯಮನಿನದಿರ್ಪಲ್ವೇೞ್ವಂತೆ ದಕ್ಷಿಣಾದಿಶಾಭಾಗಕ್ಕೆ ಬೆಸಸಿ: **ಪಂಪಭಾ,** ೬. ೨೮ ವ); ಅಡಗಿಸು (ಮದಯುತರಪ್ಪ ವಾದಿಗಳ ದರ್ಪಮನೋವದದಿರ್ಪಿ: **ಪಂಪರಾ,** ೧. ೨೨); ಧಿಕ್ಕರಿಸು (ವನಮಾಲಾಸ್ಪದನೆಂದು ಯಾದಃಪತಿಯನದಿರ್ಪಿಯುಂ; **ಜಗನ್ನಾವಿ,** ೯. ೫೩ ವ); ಕಂಪನ (ಆಱು ತಿಂಗಳ ಬಸಿಱೀಕೆ ಪಾಯ್ತೆಯದಿರ್ಪಿಂ ಬಣವೋಡಿದುದು: **ಸೂಕ್ತಿಸು,** ೧೪. ೬೪)

**ಅದಿರ್ಪುಗೆಯ್** – ಅದುರಿಸು (ಈ ವನೇಭಮಾಘ್ರಾಣಿಸಿ ಪೆರ್ಚಿದ ಮಸಕದಿಂದೆ ಪಾಯಲ್ಕದಿರ್ಪುಗೆಯ್ದಪುದು ನೋಡ ವನವೇದಿಕೆಯಂ: **ಆದಿಪು,** ೧೧. ೬೪)

**ಅದಿರ್ಮುತ್ತೆ** – ಮಾಧವೀಲತೆ, ಇರುವಂತಿಗೆ, ವಸಂತದೂತಿ (ಮುಗುಳ್ವದನಾದ ಸಂಪಗೆ ಮಡಲ್ತದಿರ್ಮುತ್ತೆ ಮರದಲ್ದರಲ್ದ ಮಲ್ಲಿಗೆ: **ಪಂಪಭಾ,** ೫. ೩೫)

**ಅದುಕಾರಣ** – ಆ ಕಾರಣದಿಂದ (ಅದು ಕಾರಣಂ ಗಂಗಾನದಿಯ ತಟದೊಳ್ ವಾರಣವತಮೆಂಬುದು ಪೊೞಲ್.. ..ಅಲ್ಲಿಗೆ ಪೋಗಿ ಸುಖಮಿರಿಂ: **ಪಂಪಭಾ,** ೨. ೯೨ ವ)

**ಅದುಗಾಣ್** – ಅದನ್ನು ನೋಡು (ಕುಮಾರಕಂ ಬರಲ್ ಸೊಗಯಿಸೆ ಭಾಮಿನೀಕುವಳಯೋತ್ಸವಮಂತದುಗಂಡು ಮಾಣ್ಬುಮೇ: **ಕರ್ಣನೇಮಿ,** ೩. ೧೩೦)

**ಅದುಗಿಡು** – [ಅದು+ಕಿಡು] 'ಅದು ತಪ್ಪಿಹೋಗು' (ಜನಕಂಗೆ ಜಲಾಂಜಲಿಯಂ ತನೂಭವಂ ಕುಡುವುದುಚಿತಂ ಅದುಗೆಟ್ಟೀಗಳ್ ನಿನಗಾಂ ಕುಡುವಂತಾದುದೆ: **ಗದಾಯು,** ೪. ೬೨)

**ಅದುವದು** – ವಿಚಾರಮಾಡುವುದು, ವಿಮರ್ಶಿಸುವುದು (ಅದುವದು – ವಿಚಾರಿಸುವಹಂ: **ಶಬ್ದಮದ,** ಪ್ರಸಾ ೮)

**ಅದುಷ್ಟಸಂಧಿ** – ರಾಜನು ಕೈಗೊಳ್ಳಬಹುದಾದ ಹದಿನಾರು ಬಗೆಯ ಸಂಧಿಗಳಲ್ಲಿ ಒಂದು, ಭೂಮಿ ಮುಂತಾದುವನ್ನು ಕೊಟ್ಟು ಮಾಡಿಕೊಳ್ಳುವ ಸಂಧಿ (ಅರಿವಿಜಿಗೀಷುಗೆ ಭೂಮ್ಯೇಕಪ್ರದೇಶಮಂ ಕೊಟ್ಟು ಮಾೞ್ಪುದು ಅದುಷ್ಟಸಂಧಿಯೆಂಬುದಕ್ಕುಂ: **ಪಂಚತಂತ್ರ,** ೩೦೭ ವ)

**ಅದೂಷ್ಯ** – ನಿಂದೆಗೆ ಆಸ್ಪದವೀಯದ (ಬೞಿಯಂ ಕೋಶದ್ವಿತಯಮಾತ್ರದೊಳ್ ಪ್ರಸಿದ್ಧದೂಷ್ಯಮಾಗಿಯುಂ ಅದೂಷ್ಯಮುಂ .. .. ಪ್ರಸ್ಥಾನ ಶಿಬಿರಮಂ ಪೊಕ್ಕು: **ಚಂದ್ರಪ್ರಪು,** ೧೦. ೧೭ ವ)

**ಅದೃಶ್ಯರೂಪ** – ಇತರರಿಗೆ ಕಾಣಿಸದ ರೂಪ (ತಮ್ಮ ಬಂದುದನದೃಶ್ಯರೂಪದಿನಭ್ಯಂಗನ ಕಾಲದೊಳ್ ಕಂಡುದುಮಂ ಸಪ್ರಪಂಚಮಱಿಪಿ: **ಶಾಂತಿಪು,** ೯. ೧೦೧ ವ)

**ಅದೃಷ್ಟಪುರುಷಸಂಧಿ** – ರಾಜನೀತಿಯ ಹದಿನಾರು ಬಗೆಯ ಸಂಧಿಗಳಲ್ಲಿ ಒಂದು (ಎನ್ನ ಕಾರ್ಯಮಂ ನಿನ್ನ ಬಲ್ಲ ಮಾೞ್ಕೆಯಿಂ ತಿರ್ಚಿದೊಡೆ ನೀನೆಂದುದಂ ಮಾೞ್ಪೆನೆಂಬುದು ಅದೃಷ್ಟಪುರುಷಸಂದಿಯೆಂಬುದಕ್ಕುಂ: **ಪಂಚತಂತ್ರ,** ೩೦೭ ವ)

**ಅದೃಷ್ಟಪೂರ್ವ** – ಹಿಂದೆ ಕಂಡಿರದ (ಅದೃಷ್ಟಪೂರ್ವಕೃತಕಮಂ ಬಣ್ಣಿಸುತ್ತುಂ: **ಶಾಂತಿಪು,** ೪. ೭೫ ವ)

**ಅದೇಯ** – ದೇಯವಲ್ಲದ, ಕೊಡಬಾರದ (ಎಮ್ಮರಸನನ್ವಯಾಗತಂ ಕುಲಧನಮಾರ್ಗಂ ಅದೇಯಮುಂ ಅದ್ವಿತೀಯಮುಂ: **ಶಾಂತಿಪು,** ೨. ೭೧ ವ)

**ಅದೈವೆ** – ಅದೃಷ್ಟವಿಲ್ಲದವಳು (ಭಾವೆ ಭಾವಿ ತನೂಭವ ಅನುಕ್ರಮ ಪ್ರಭವ ಭಾವಂಗಳಂ ಭಾವಿಸಿ ಪಲುಂಬಿ ಪಂಬಲಿಸಿಯುಂ .. . ಸನ್ನಿಹಿತದೈವೆಯಾಗಿಯುಂ ಅದೈವೆಯಂತೆಯುಂ: **ಚಂದ್ರಪ್ರಪು,** ೩. ೫೦ ವ)

**ಅದ್ದ** – (ಅರ್ಧ) ಎರಡರಲ್ಲಿ ಒಂದು ಭಾಗ (ದ್ವಿತ್ವಾಗ್ರರೇಫಲೋಪಕ್ಕೆ ಕರ್ಕ್ಕಶಂ – ಕಕ್ಕಸಂ: ಅರ್ಧಂ – ಅದ್ದಂ, **ಶಬ್ದಮದ,** ೨೭೫ ವೃ)

**ಅದ್ದರಿಸು** – ಗದರಿಸು (ಆರೆಲವೋ ಎಂದು ಅದ್ದರಿಸಿ ಬರಲೊಡಂ ತಸ್ಕರನುಂ ಬ್ರಹ್ಮರಾಕ್ಷಸನುಂ ಓಡಿಪೋದರ್: **ಪಂಚತಂತ್ರ,** ೩೪೬ ವ)

**ಅದ್ದಿಕ** – ಅಧ್ಯಕ್ಷ; ಮುಖ್ಯಾಧಿಕಾರಿ (ಯತ್ವಮಿಶ್ರ ಧಕಾರಕ್ಕೆ ಇತ್ವಂ ಬೆರಸಿದ ದಕಾರಂ: ಅಧ್ಯಕ್ಷಂ – ಅದ್ದಿಕಂ: **ಶಬ್ದಮದ,** ೨೯೦ ಪ್ರ)

**ಅದ್ಭುತಾಕೃತಿ** – ಆಶ್ಚರ್ಯದಾಯಕವಾದ ಆಕಾರ (ಅದ್ಭುತಾಕೃತಿಯನಾಂತಾ ರಾಮನಂ ಪೊತ್ತುಕೊಂಡು: **ಜಗನ್ನಾವಿ,** ೪. ೫೩)

**ಅದ್ಭುತೋಪಮೆ** – ಉಪಮಾಲಂಕಾರದ ಒಂದು ಪ್ರಭೇದ (ಕಮಳಂ ಲಲಿತಭ್ರೂವಿಭ್ರಮಮಂ ವಿಸ್ಮಿತಲೋಲ ಲೋಚನಯುಗಮಂ ಸಮವಾಯಮುಳ್ಳೊಡದು ನಿನ್ನ ಮೊಗಕ್ಕೆಣೆಯೆಂಬುದದ್ಭುತೋಪಮೆ ನಿಯತಂ: **ಕವಿರಾಮಾ,** ೩. ೬೮)

**ಅದ್ಯತನ** – ಈಚಿನ, ಈಚಿನವನು (ಆದ್ಯತನನಾಗಿಯುಂ ನೆಗೞ್ದಾದ್ಯರ ದೊರೆಯೆನಿಸಿ ನೆಱೆದು ಸಾಹಿತ್ಯಕಳಾ ಹೃದ್ಯತೆಯಿನೆಸೆದನಾ ನಿರವದ್ಯಗುಣಂ: **ಕರ್ಣನೇಮಿ,** ೧. ೨೨)

**ಅದ್ರಿ** – ಬೆಟ್ಟ (ಗಿರಿ ಗೋತ್ರಂ ಶಿಖರಿ ಧರಂ ಸ್ಥಿರಂ ನಗಂ ಪರ್ವತಂ ಸಿಲೋಚ್ಚಯಂ ಉರ್ವಿಧರಂ ಅದ್ರಿ ಶೈಲಂ ಅಚಲಂ ದರಿಮಂತಂ ಶೃಂಗಿ ಸಾನುಮಂತ ಮಹಾರ್ಯಂ: **ಅಭಿಧಾವ,** ೧. ೫. ೧); ಮರ (ಲತಾಗ್ರದೊಳ್ ಅದ್ರಿಮಟ್ಟಿದಂದು ಆ ವಿಧುಬಿಂಬಂ ಅವಳಂ ಪಡೆದಂದು .. .. ಸತಿಯಂಗಮನಾಂ ಪೊಗಳಳ್ಕೆ ಸಾಲ್ದಪೆಂ: **ರಾಜಶೇವಿ,** ೭. ೨೬)

**ಅದ್ರಿಕುಂಜ** – ಬಿಲ (ದರಿ ಕಂದರಂ ಬಿಲಂ ಗಹ್ವರಂ ಗುಹಾ ಕುಹರಂ ಅದ್ರಿಕುಂಜಂ ಕೊಳ್ಳಂ: **ಅಭಿಧಾವ,** ೧. ೫. ೩)

**ಅದ್ರಿಸುತಾ[ತೆ]** – ಪಾರ್ವತಿ (ಅದ್ರಿಸುತಾಕುಚಲಂಪಟ ಕದ್ರುಜಲಾಧೀಶಭೂಷ ಬಲಯುತ .. .. ಜಯ ಭವನಾಶಾ: **ತ್ರಿಷಷ್ಟಿಪು,** ೭. ೫೯)

**ಅದ್ವಂದ್ವ** – ದ್ವಂದ್ವಗಳಿಲ್ಲದ, ಅದ್ವಿತೀಯ (ಬಂದು ದೂರತರಾರ್ಘ್ಯೌಘ ಪರಾರ್ಘ್ಯರತ್ನಚಯಾದ್ವಂದ್ವಂ ಮಹಾಪುಣ್ಯದಿಂ ಕೃತಮಾಲಾಮರನಾಥನಂದೆಱಗಿದಂ ಶಾಂತೀಶಪಾದಾಬ್ಜದೊಳ್: **ಶಾಂತಿಪು,** ೧೧. ೩೫)

**ಅದ್ವಯತತ್ವ** – ಅದ್ವೈತತತ್ವ (ಸತ್ ಅದ್ವಯತತ್ವದೀಪಂ ಅಭ್ಯುದಯವಹಪ್ರತಾಪಂ ಅಭಕ್ತಿವಶೀಕೃತಶೈಲಚಾಪಂ ಜಿತತ್ರಿತಾಪಬಸವೇಶ್ವರಂ ಈಗೆಮಗೆ ಈಶಭಕ್ತಿಯಂ: **ರಾಜಶೇವಿ,** ೧. ೧೧)

**ಅದ್ವಿತೀಯ** – ಎರಡಾಗಿಲ್ಲದ, ಸಮಾನವಿಲ್ಲದ (ಸಹಸ್ರಮುಸ್ತಕಪ್ರಸರಮಂ ಅತ್ತಿಮಬ್ಬೆ ಪರಮಾದರದಿಂ ಬರೆಯಲ್ಕೆವೇಟ್ವಿ ಪೆಂಪಸದಳಮದ್ವಿತೀಯಮಸಮಂ: **ಶಾಂತಿಪು: ಪರಿ** ೧. ೨)

**ಅಧಃ** – ಕೆಳಗೆ (ನಿಜದಿಂ ತಾಳ್ದಿತ್ತು ಅಧಃ ತಿರ್ಯಕ್ ಊರ್ಧ್ವ ವಿಭೇದತ್ರಯಮಂ ಸಮಸ್ತಭುವನಂ ಷಡ್ದ್ರವ್ಯಗರ್ಭೋದರಂ: **ಮಲ್ಲಿನಾಪು,** ೧. ೫೬)

**ಅಧಃಕರಿಸು** – ಕೀಳುಮಾಡು, ಧಿಕ್ಕರಿಸು (ತನ್ನ ದರ್ಶನಂ ತ್ರಿದರ್ಶನಮಂ ಅಧಃಕರಿಸೆ ಸುಪ್ರತಿಷ್ಠ ಪ್ರತಿಪನನುಕ್ರದಿನೇಕಾದಶಾಂಗಧರನಾಗಿ: **ನೇಮಿನಾಪು,** ೪. ೬೫ ವ); ಹಿಂದೆ ಸರಿಸು (ಶುಕ್ಲಪಕ್ಷದ ಚಂದ್ರಮನಂತೆ ಅನುದಿನಂ ಉಪಚಯಮಂ ಅಪ್ಪುಕೆಯ್ದು ಶೈಶವಮಂ ಅಧಃಕರಿಸಿದ ಇಂಬಟಿಕ್ಕೆ: **ಪಂಪರಾ,** ೧೬. ೨ ವ)

**ಅಧಃಕರಿಯಿಸು** – ಕೀಳುಮಾಡು (ಗುರುವಿರಹಜನಿತ ಚಿಂತಾತರಂಗಿಣೀ ರಯಮನಾತ್ಮಕುಲವೃದ್ಧ ವಚಸ್ತರಣಿಯಿಂ ಎಂತಾಂ ಅಧಃಕರಿಯಿಸಿದಂ ಪಿತೃವಿಯೋಗಮೇಂ ದುಸ್ತರಮೊ: **ಚಂದ್ರಪ್ರಪು,** ೨. ೪೯)

**ಅಧಃಕೃತ** – ಕೀಳುಮಾಡಲ್ಪಟ್ಟ (ಆ ವಿತತಹಾರಮಧಃಕೃತ ತಾರ ಕಾಂತಿ ಪೋಲ್ತುದು ಖಚರಾನನಕ್ಕೆ ಹಿಮದೀಧಿತಿಯೆಂಬುದಂ ಉಂಟುಮಾಡುಗುಂ: **ಶಾಂತಿಪು,** ೭೩ ೪೦)

**ಅಧಃಪಾತ** – ಅಧಃಪತನ (ಆ ಕ್ಷಿತಿಪಂಗೆನ್ನಂದದಿಂದಂ ಸಮನಿಸುಗುಮದಃಪಾತಮಸ್ತಾಬ್ಧಿಯೊಳ್: **ಚಂದ್ರಪ್ರಪು,** ೨. ೪೫)

**ಅಧಃಪ್ರಭಾವ** – ತಗ್ಗಿದ ಪ್ರಭಾವ (ಹಯಗ್ರೀವನಧಃಪ್ರಭಾವಂ ಎರ್ದೆಗೆಟ್ಟಿರ್ದೋಡಿದಂ: **ಪುಷ್ಪದಂಪು,** ೬. ೨೭)

**ಅಧಃಸ್ಥಲ** – ಕೆಳಗಿನ ಪ್ರದೇಶ (ಧನದಾಚಲದಧಃಸ್ಥಲಮನೆಯ್ದಿ; **ಪಂಪರಾ,** ೧೦. ೧೭೪ ವ)

**ಅಧಃಸ್ಥಳ** – ಅಧಃಸ್ಥಲ (ಉದ್ಯಾನಮಧ್ಯಪ್ರದೇಶದ ಶಾಲದ್ರುಮಾಧಃಸ್ಥಳ ನಿವಾಸಿಗಳಾಗಿರ್ದ: **ಸುಕುಮಾಚ,** ೩. ೨೩ ವ)

**ಅಧಃಸ್ಥಳಂಬಿಡಿ** – ತಳಭಾಗವನ್ನು ಅವಲಂಬಿಸು, ಆಶ್ರಯಪಡೆ (ನೆಲಸಿರ್ದಪ್ಪುದಧಸ್ಸ್ಥಳಂಬಿಡಿದಧೋಲೋಕಂ ಸಮಂತೆಯ್ದಿ ಸುತ್ತಲುಮಿರ್ದಪ್ಪುದು ಮಧ್ಯಲೋಕಂ: **ಆದಿಪು,** ೧. ೫೦)

**ಅಧಃಸ್ಥಳ** – ಅಧಃಸ್ಥಳ, ಕೆಳಗಿನ ಪ್ರದೇಶ (ಅಧಃಸ್ಥಳ ಪ್ರಸರ್ಪತ್ಸಿಂಧುವಾಹಪ್ರವಾಹ ವಿರಾಜಿತಮುಂ: **ಆದಿಪು,** ೧೩. ೪೬ ವ)

**ಅಧಟು** – ಅದಟು, ಶೌರ್ಯ (ಕಯ್ಯಂಬೇಡೆನಧಟುಮಸ್ತ್ರಕದಂಬಕಮಂ ಸೋರೆ: **ಶಾಂತಿನಾಪು,** ೬. ೮೮)

**ಅಧನ** – ಬಡವ, ದರಿದ್ರ (ಅಧನಂ ನಿಧಿಯಂ ಪಡೆದಿರ್ದ ಧಾರ್ಮಿಕಂಗಂಜುವಂತೆ: **ಸಮಯಪ,** ೧೩. ೫೭)

**ಅಧನದ** – ಧನವನ್ನು ಕೊಡದವನು; ಜಿಪುಣ (ಧನದರಲ್ಲದಧನರಿಲ್ಲ ತಕ್ಕರಲ್ಲದೆ ಟಕ್ಕರಿಲ್ಲ ಜನ್ನಮಲ್ಲದೆ ಬನ್ನಮಿಲ್ಲ: **ಅಜಿತಪು,** ೧. ೨೧ ವ)

**ಅಧರ** – ಕೀಳಾದವನು (ವಿದ್ಯಾಧರರಧರರರಾಗೆಯುಂ ಪನ್ನಗರ್ ಪನ್ನತಿಕೆಯಿಂ ಬಂದಾಂತೊಡೆ: **ಪಂಪಭಾ,** ೫. ೮೮ ವ); ತುಟಿ, ಕೆಳದುಟಿ (ಜಲಜಲಿಪ ರತ್ನದೀಪಕ್ಕಲಗಣಿಸು ಎನುತಿರ್ಪುದು ಅಧರಂ ಅರುಣಾಧರೆಯಾ: **ಮಲ್ಲಿನಾಪು,** ೩. ೫೯)

**ಅಧರಂಮಾಡು** – ಕೀಳುಮಾಡು (ಅಧರಮನಧರಂ ಮಾಡಿ ಪೊಳೆವ ಸುಳಿಪಲ್ಲ ಪೊಳೆಪುಂ: **ಆದಿಪು,** ೪. ೪೧ ವ)

**ಅಧರತಾವಾಪ್ತಿ** – ಕೀಳುತನವನ್ನು ಹೊಂದುವುದು (ಪಡೆವನ್ನಂ ಪಕ್ವಬಿಂಬಕ್ಕಧರಮಧರತಾವಾಪ್ತಿಯಂ: **ಚಂದ್ರಪ್ರಪು,** ೨. ೨೩)

**ಅಧರತೆ** – ಕೆಳಗಡೆ ಇರುವಿಕೆ, ಕೀಳಾಗಿರುವಿಕೆ (ಅಧರತೆಯೋಷ್ಠದೊಳ್ .. .. ಮಹಾಮಾತ್ರವರ್ತನಂ ಸ್ತಣಿಯೊಳಲ್ಲದಿಲ್ಲಮೆಲ್ಲಿಯುಂ: **ಚಂದ್ರಪ್ರಪು,** ೩. ೯ ವ)

**ಅಧರಲೋಕ** – ಕೆಳಗಿನ ಏಳು ಲೋಕಗಳು (ಗೋಲೋಕ ಸತ್ಯಲೋಕ ತಪೋಲೋಕ ಬ್ರಹ್ಮಲೋಕ ಜನಲೋಕ ದಿವಾಕೋಲೋಕ ಧ್ರುವಲೋಮಂ ಏಟು ಅಧರಲೋಕಮಂ ನೆಱೆ ಕಂಡಂ: **ಜಗನ್ನಾವಿ,** ೫. ೧೦೬)

**ಅಧರಾಮೃತಸೇವನೆ** – ತುಟಿಯ ರಸ ಹೀರುವುದು, ಮುತ್ತು ಕೊಡುವುದರಿಂದ ದೊರೆಯುವ ಸುಖ (ಅಧರಾಮೃತ ಸೇವನೆಯಿಂದೆ ಪಿತ್ತಂ .. .. ಪೋಗುಗುಂ: **ಸೂಕ್ತಿಸುಧಾ,** ೧೪. ೪)

**ಅಧರಿತ** – ಕೀಳುಮಾಡಲ್ಪಟ್ಟ (ಬಧಿರಿತ ಸಮಸ್ತ ದಿಕ್ತಟಮಧರಿತ ಸರ್ವೇಭ್ಯಗರ್ವಿತಂ ಕ್ಷುಭಿತಾಂಭೋನಿಧಿ ಸಲಿಲಳ ಪರೆದುದು: **ಪಂಪಭಾ,** ೧೨. ೧೭೧)

**ಅಧರಿಸು** – ಕೀಳುಮಾಡು (ಅವಳಧರಂ ಮಾಣದಧರಿಕುಂ ಪಲ್ಲವಮಂ: **ಜಗನ್ನಾವಿ,** ೧೦. ೩೬)

**ಅಧರೀಕೃತ** – ಕಡೆಗಣಿಸಲ್ಪಟ್ಟ (ಕಾಂತೆ ಪೊದಳ್ದ ನಾಣ ಭರದಿಂ ಅಧರೀಕೃತ ಚಂದ್ರಬಿಂಬಸತ್ಕಾಂತಿಯಂ ಆನನಮೊಯ್ಯನೆ ಬಾಗಿರೆ: **ಆದಿಪು,** ೩. ೭೮)

**ಅಧರ್ಮ** – ಧರ್ಮವಲ್ಲದ್ದು, ಧರ್ಮವಿರುದ್ಧವಾದುದು (ಕಂಸಂ .. .. ಧರ್ಮಜ್ಞರ್ ಅಧರ್ಮಮೆನೆ ಪಾಸಱೆಯೊಳ್ ಕೂಸನಪ್ಪಳಿಸಿ: **ಜಗನ್ನಾವಿ,** ೨. ೫೩ ವ)

**ಅಧರ್ಮಯುದ್ಧ** – ಅನ್ಯಾಯದ ಯುದ್ಧ (ಹರಿಯುಂ ತಾನುಂ ಭರಂಗೆಯ್ದು ತನ್ನ ಎಸಕಂ ಕಾಯದೆ ಅಧರ್ಮಯುದ್ಧದೆ ನರಂ ಕೊಲ್ವಲ್ಲಿ ಕಂಡು ಇಂತುಪೇಕ್ಷಿಸಿ ನೀಮುಂ ನಡೆ ನೋಡುತ್ತಿರ್ದಿರಿ ಎನೆ ಮತ್ತಿನ್ನಾರಂ ನಂಬುವೆಂ: **ಪಂಪಭಾ,** ೧೧. ೮೩)

**ಅಧವ** – ಹೇಳಿಕೇಳುವವರಿಲ್ಲದವನು (ಚಂದ್ರಪ್ರಭೆಯೆಂಬೊಳ್ ಎನ್ನಂಗನೆಯಂ ವಧುವಂ ಒಲಿದೆನ್ನ ಕೆಯ್ಯಿಂದ ಅಧವಾ ನೀನೆಟೆದುಕೊಂಡ ಪಾತಕನಲ್ತೇ: **ಹರಿವಂಶ,** ೮. ೧೦)

**ಅಧಿಕ** – ಒಂದು ಅರ್ಥಾಲಂಕಾರ (ಅರಬ್ಧಕ್ಕಧಿಕಂ ಅಸಾಧಾರಣಗುಣಂ ಅಧಿಕಮೆಂದಕ್ಕುಂ ಸದೃಶಾಕಾರ ವಿಶೇಷಣಮುದಾರಂ ಬೇಱೊಂದು ತೋರ್ಪೊಡೆ ಅವಿಶೇಷಾಖ್ಯಂ: **ಕಾವ್ಯಾವಲೋ;** ೭೬೨)

**ಅಧಿಕರಣ** – ಗ್ರಂಥದ ಒಂದು ಭಾಗ (ಕವಿಸಮಯಮೆಂಬುದು ಪಂಚಮಾಧಿಕರಣಂ **ಸಮಾಪ್ತಂ: ಕಾವ್ಯಾವಲೋ,** ೬೯೫ ಆಶ್ವಾಸಾಂತ್ಯ ಗದ್ಯ ); ಅಧಿಕಾರವಿರುವ ಒಬ್ಬ ವ್ಯಕ್ತಿ ಅಥವಾ ಒಂದು ಸಂಸ್ಥೆ (ತನ್ನ ಮೂಗನಕಾರಣಂ ಕೊಯ್ದನೆಂದು ಮೂಗಂ ಮತ್ತಂ ನೆತ್ತರ್ ಸುರಿವಿನಮೊರಸಿ ಹಾಹಾಕ್ರಂದನರವದಿಂ ಪುಯ್ಯಲಿಡುವ ಕರುಣಾರವಮಂ ತಳವಾಱಂ ಕೇಳ್ದು ಪರಿತಂದು ನಾವಿದನುಮವನ ಪೆಂಡತಿಯುಮಂ ಪಿಡಿದೊಡಗೊಂಡು ಪೋಗಿ ಧರ್ಮಾಧಿಕರಣದ ತಾಣಾಂತರದೊಳಿರಿಸಿದಂ: **ಪಂಚತಂತ್ರ,** ೧೩೭ ವ)

**ಅಧಿಕರಿಪೊಂ** – ತಿಳಿದವನು (ಜೈನಾಗಮನಧಿಕರಿಪೊಂ ದಿಗ್ನಾಗನಕ್ಷೂಣ ಭದ್ರಗುಣಲಕ್ಷಣದಿಂ: **ಅಜಿತಪು,** ೧. ೨೫)

**ಅಧಿಕಾಕ್ಷರ** – ಹೆಚ್ಚು ಅಕ್ಷರದಿಂದಾಗುವ ದೋಷ (ಮೊದಲ ಪದಂ ನ್ಯೂನಾಕ್ಷರಮದಱಿಂದೆ ಬೞಿಕ್ಕದಮರ್ದಂ ಅಧಿಕಾಕ್ಷರಂ ಇಂತಿದಱಿಂ ಛಂದೋಭಂಗಂ: **ಕವಿರಾಮಾ,** ೧. ೯೨)

**ಅಧಿಕಾರ** – ಗ್ರಂಥದ ಅಧ್ಯಾಯ(ಮಹಾಕವಿ ಬ್ರಹ್ಮದೇವವಿರಚಿತಮಪ್ಪ ಸಮಯಪರೀಕ್ಷೆಯೊಳ್ ಆಪ್ತಸ್ವರೂಪನಿರೂಪಣಂ ಪ್ರಥಮಾಧಿಕಾರಂ: **ಸಮಯಪ,** ಆಶ್ವಾಸಾಂತ್ಯ ಗದ್ಯ))

**ಅಧಿಕಾರಿ** – (ಅಧಿಕ+ಅರಿ) ದೊಡ್ಡ ವೈರಿ, ಅಧಿಕಾರದಲ್ಲಿ ನಿಯೋಜಿಸಲ್ಪಟ್ಟವನು (ಅಧಿಕಾರಿಗಳೆನೆ ಸೈರಿಸೆವು ಅಧಿಕಾರಿಕಾರಿಗಳಾಗಿ ಬಾಟ್ಗೆ ಬಡವುಗಳವರ್ಗಾಯುಧ ಭಾರಮೇಕೆ: **ಗದಾಯು,** ೩. ೩೫)

**ಅಧಿಕೃತ** – ಅಧಿಕಾರದಲ್ಲಿ ನಿಯೋಜಿಸಲ್ಪಟ್ಟ (ಅನ್ನೋಡರ್ಜುನನೆಂಬೆನಂಕಸುತಂ ಭರ್ತಾರನೆಂಬಾತನಕ್ಕುಂ .. .. ಗವಾಧಿಕೃತನಾ ಸಾದೇವಂ; **ಕಾವ್ಯಾವಲೋ,** ೧೭೮); ಕುರಿತು ಹೇಳಲಾದ (ಅಧಿಕೃತ ಸತ್ಪುರುಷಾರ್ಥ ಪ್ರಧಾನ ಧರ್ಮಾರ್ಥ ಕಾಮಮೋಕ್ಷಂಗಳ್: **ಕವಿರಾಮಾ,** ೧. ೨೦); ಅಧಿಕಾರಿ (ಜನನಾಥಂ ಗೋತ್ರಮಿತ್ರಾಧಿಕೃತ ಸಚಿವ ಸಾಮಂತ ಶುದ್ಧಾಂತ ಕಾಂತಾಜನಕಾತ್ಮೋಗಮಂ ಪೇೞ್ದು: **ಚಂದ್ರಪ್ರಪು,** ೪. ೭೦)

**ಅಧಿಕೋಪಮೆ** – ಅಲ್ಪ ವಸ್ತುವಿಗೆ ಮಹತ್ತರವಾದ ವಸ್ತುವನ್ನು ಹೋಲಿಕೆ ಕೊಟ್ಟ ಉಪಮೆ (ಅಧಿಕೋಪಮೆಗೆ – ಮುಂಬಿಟ್ಟು ಪರೆದ ಕಟ್ಟಿಲೆಯಂ ಬೆದಱಿ ತೆರಳ್ಚಿ ಬೆಳಪ ಬೆಳಗಿಂದೆಸೆದಿರ್ಪಂಬುಜಸಖನಂತಿರೆ ಮೀನಂಬುಱು ಬೆಳಗಿದಪುದಖಿಳ ಗಗನಾಂತರಮಂ: **ಕಾವ್ಯಾವಲೋ,** ೬೮೨)

**ಅಧಿಗತ** – ಪಡೆದ, ಪ್ರಾಪ್ತವಾದ; ಅಭ್ಯಾಸಮಾಡಿದ (ಅನುಮತನುವಂ ಆಪ್ತನುಂ ಅಧಿಗತಶಾಸ್ತ್ರನುಂ: **ಶಾಂತಿಪು,** ೨. ೫೧)

**ಅಧಿಗಮ** – ಜ್ಞಾನ (ನಿಜನಂದನನಂ ವೈಶಂಪಾಯನಂಬೆರಸು ವಿದ್ಯಾಭಿನಗಮನದೊಳ್ ಸಮರ್ಪಿಸಿ: **ಕಾದಂಬ,** ೨. ೧೧೦ ವ); ಪ್ರಾಪ್ತವಾದ (ಗುಣಾಂಬುಧಿಯಪ್ಪ ಭವ್ಯನಿರಲ್ ಏನಧಿಗಮ ಸಮ್ಯಕ್ತ್ವಂ ಉಟಿದವಂಗಾದಪುದೇ: **ಸಮಯಪ,** ೪. ೪)

**ಅಧಿಗಮನ** – ಕಲಿಕೆ (ನಿಜನಂದನನಂ ವೈಶಂಪಾಯನಬೆರಸು ವಿದ್ಯಾಧಿಗಮನದೊಳ್ ಸಮರ್ಪಿಸಿ: **ಕಾದಂಸಂ, ೨. ೨೮ ವ)**

**ಅಧಿಜ್ಯಧನು** – ಹೆದೆಯೇರಿಸಿದ ಬಿಲ್ಲು; ಅಂಥ ಬಿಲ್ಲುಳ್ಳ (ಬೆಂಬಳಿವಿಡಿದಟ್ಟುತ್ತುಂ ತಾಂ ಬರೆವರೆ ಬಿಡದಧಿಜ್ಯಧನು ಶಬರೇಶಂ ಮುಂಬರಿದು: **ಶಬರಶಂ,** ೪. ೨೪)

**ಅಧಿತ್ಯಕ** – ಬೆಟ್ಟದ ಮೇಲಿನ ಕಾಡು ಪ್ರದೇಶ (ಶಂಖಾಚಳಕ್ಕೆ ಪೋಗಿ ಭವದೀಯಾಧಿತ್ಯಕಾವಾಸದೊಳಿರ್ದ ಸರ್ವಗುಪ್ತ ಮುನಿಗಳಂ ಕಂಡು ಬಂದಿಸಿ: **ಶಾಂತಿಪು,** ೯. ೮೩ ವ)

**ಅಧಿದೇವತೆ** – ಎಲ್ಲಕ್ಕಿಂತ ಮುಖ್ಯವಾದ ದೇವತೆ (ಪೂಜಿಸಿಮೆನ್ನನಿಲ್ಲಗಧಿದೇವತೆಯಾನೆನುತುತದ್ರಿಯಲ್ಲಿ ನಿಂದು: **ಜಗನ್ನಾವಿ,** ೪. ೮೨)

**ಅಧಿನಾಥ** – ಪ್ರಧಾನ ಅಧಿಕಾರಿ, ಒಡೆಯ (ಸೈನ್ಯಾಧಿನಾಥನಧಿನಾಥನ ಕೆಲದೊಳ್ ಪಕ್ಷಗಣಾಧಿರೂಢನಾಗಿ: **ಆದಿಪು,** ೧೩. ೪೫ ವ);

**ಅಧಿಪ** – ಅಧಿನಾಥ (ನಿಖಿಲಾವನೀಪರಧಿಕರ್ ಮಾಣಿಕ್ಯ ಪರ್ಯಂಕ ಕೀರ್ತಿಮುಖಾಧಾರ ಕಿರೀಟದಿಂದಮನೆ ಸಂದೊಂ ವಿಶ್ವಸೇನಾಧಿಪಂ: **ಶಾಂತಿಪು,** ೯. ೧೫೧)

**ಅಧಿಪತಿ** – ಅಧಿನಾಥ (ಅಸಾದಿತ ಕೇವಳಲೋಚನನಾ ದೇವಂ ಮೋಕ್ಷಲಕ್ಷ್ಮಿಗಧಿಪತಿಯಾದಂ: **ಶಾಂತಿಪು,** ೭. ೫೨)

**ಅಧಿಪಾಲ** – ಅಧಿನಾಥ (ದೇವಾನಕಂಗಳ್ ಮೊಱಗೆ ಪಲವುಮಾ ಕಾಲದೊಳ್ ದೇವಚಾಪಂ ಜ್ಯೋತಿರ್ಲೋಕಾಧಿಪಾಲಾಭರಣ ಕಿರಣದಿಂದುರ್ವಿಯಂ ಪರ್ವೆ ಬಂದರ್: **ಶಾಂತಿಪು,** ೮. ೧೨೧)

**ಅಧಿರಾಜ** – ರಾಜರಲ್ಲೆಲ್ಲ ಮೇಲಿನವನು (ತಮ್ಮನೊಳಾದ ಸ್ನೇಹದಿಂ ವಿಶಾಖಭೂತಿಯುಮನಧಿರಾಜಪದವಿಯೊಳ್ ವಿಶ್ವನಂದಿಯಂ ಯುವರಾಜ ಪದವಿಯೊಳ್ ನಿಯೋಜಿಸಿ: **ಶಾಂತಿಪು,** ೭. ೫೧ ವ)

**ಅಧಿರೂಢ** – ಮೇಲೇರಿದ (ಶ್ರೀವಿಜಯನತ್ತ ಮಗುಟ್ಟಿನಮಾವಾಸ್ಯೆಯೊಳೊಡನೆ ನಡೆದು ಕಡೆಯೊಳ್ ರವಿ ರಾಜೀವರಿಪುವಿಂದಗಲ್ದವೊಲ್ ಆವಿರ್ಭೂತ ಪ್ರತಾಪಂ ಅಧಿರೂಢರಥಂ: **ಶಾಂತಿಪು,** ೬. ೨೧)

**ಅಧಿರೋಹಣ** – ಮೇಲೆ ಹತ್ತುವುದು (ಮೋಕ್ಷಪ್ರಾಸಾದ ಅಧಿರೋಹಣ .. .. ಅಪೂರ್ವಕರಣ ಕ್ಷಪಕ ಪ್ರಥಮ ಶುಕ್ಲಧ್ಯಾನಪರಿಣತನಾಗಿರ್ದು: **ಆದಿಪು,** ೧೦. ೧೪ ವ)

**ಅಧಿವಾಸಿತ** – ಪ್ರತಿಷ್ಠಾನೆಗೊಂಡ (ಅಧಿವಾಸಿತ ಜೈತ್ಯಾಸ್ತ್ರಂ ವಿಧುವಿಶದದುಕೂಲವಸನಶೋಭಂ ನಾನಾವಿಧ ಮಂತ್ರಾನುಷ್ಠಾನಂ ಪ್ರಧಾನನುಪವಾಸದಿಂ ತ್ರಿರಾತ್ರಮನಿರ್ದಂ: **ಆದಿಪು,** ೧೨. ೭೪); ಸುಗಂಧಯುಕ್ತವಾದ (ಒರ್ವಂ

ಸರ್ವಾಂಗೀಣ ಮಲಯರುಹಮೃಗಮದಕದಂಬ ಪರಿಮಳ ಅಧಿವಾಸಿತವಿಲಾಸಿನೀ ಸೌಧಮಂ: **ಚಂದ್ರಪ್ರಭ,** ೮. ೮೨ ವ)

**ಅಧಿವಾಸಿತ ಜೈತ್ರಾಸ್ತ್ರ** – ಮುಚ್ಚಿಟ್ಟ ವಿಜಯಾಸ್ತ್ರ (ಅಧಿವಾಸಿತ ಜೈತ್ರಾಸ್ತ್ರಂ ವಿಧುವಿಶದದುಕೂಲವಸನಶೋಭಂ ನಾನಾವಿಧ ಮಂತ್ರಾನುಷ್ಠಾನಪ್ರಧಾನಂ: **ಆದಿಪು,** ೧೨. ೭೪)

**ಅಧಿವಾಸಿಸು** – ವಾಸಿಸು (ಇವು ದಿವದೊಳಗಗ್ಗಳಮೆನಿಸುವ ರತ್ನವ್ರಾತಮೆಮ್ಮ ಮನೆಯೊಳ್ ಮಿಗಿಲಪ್ಪುವು ನಿಧಿಗಧಿವಾಸಿಸಲಪ್ಪುವೆಂದು ರತ್ನಂಗಳನಿತುಮಂ ಮುಂದಿಟ್ಟಂ: **ಆದಿಪು,** ೧೨. ೧೧೬); ಪೂಜಿಸು (ಧವಳಚ್ಛತ್ರ ಚಾಮರಸಿಂಹಾಸನ ಪಟ್ಟವರ್ಧನ ಕುಲಧನಾದಿ ರಾಜ್ಯಚಿಹ್ನಂಗಳಂ ವಿವಿಧ ವಿಧಾನದಿಂದಮಧಿವಾಸಿಸಿ: **ಪಂಪಭಾ,** ೧೪. ೧೭ ವ); ಸುಗಂಧಭರಿತವಾಗಿ ಮಾಡು (ಅಲ್ಲಲ್ಲಿಗೆ ಕರ್ಪೂರ ಪಲ್ಲವರಸದಿನಧಿವಾಸಿಸಿದ ತಾವರೆಯ ನೂಲದುಗುಲಂಗಳುಮಂ: **ಕಾದಂಬ,** ೭. ೨೧ ವ); ಪ್ರತಿಷ್ಠಾಪಿಸು (ಸರಸ್ವತಿಯಂ ಪೂಜಾಪೂರ್ವಕಮ್ ಅಧಿವಾಸಿಸಿ ನಿಜತನೂಜೆಯರಿರ್ವರುಮನೆರಡು ಕೆಲದೊಳಿರಿಸಿ: **ಆದಿಪು,** ೮. ೫೮ ವ)

**ಅಧಿಶ್ರಯಣಿ** – ಅಡಿಗೆಯ ಒಲೆ (ಅಂತಿಕೆಯೆನೆ ಅಧಿಶ್ರಯಣಿಯೆನಿಪ್ಪುದಕ್ಕುಂ: **ಅಭಿಧಾವ,** ೧. ೧೦. ೩೦)

**ಅಧಿಷ್ಠಾನ** – ಆಧಾರ, ನೆಲೆ (ಜಾಣ್ತನಕ್ಕೆ ಎಱವಟ್ಟು ಒಳ್ನುಡಿಗೆ ಆಣ್ಮಂ ಆಯತಿಗೆ ಅಡರ್ಪು .. .. ಸತ್ಯಕ್ಕೆ ಅಧಿಷ್ಠಾನಂ ಎಂದಜಿತಂ ಕೈಮಿಗೆ ಕೂರ್ತು ಕೀರ್ತಿಸುವುದು ಉರ್ವೀಮಂಡಲಂ ದುರ್ಗನಂ: **ಪಂಚತಂತ್ರ,** ೫೨)

**ಅಧಿಷ್ಠಾನ** – ತಳಹದಿ (ತನ್ನ ನುಡಿದ ನುಡಿವಳಿಯೆಂಬ ಪ್ರಾಸಾಧಕ್ಕೆ ಅಧಿಷ್ಠಾನಂಗಟ್ಟುವಂತೆ ಚಿತ್ರಾಂಗದಂಗೆ ಪಟ್ಟಮಂ ಕಟ್ಟಿ: **ಪಂಪಭಾ,** ೧. ೭೩ ವ)

**ಅಧಿಷ್ಠಾನಂಗಟ್ಟು** – ತಳಹದಿ ಹಾಕು (ಗಾಂಗೇಯಂ .. .. ಮುನ್ನೆ ತನ್ನ ನುಡಿದ ನುಡಿವಳಿಯೆಂಬ ಪ್ರಾಸಾದಕ್ಕೆ ಅಧಿಷ್ಠಾನಂಗಟ್ಟುವಂತೆ ಚಿತ್ರಾಂಗದಂಗೆ ಪಟ್ಟಮಂ ಕಟ್ಟಿ: **ಪಂಪಭಾ,** ೧. ೭೩ ವ)

**ಅಧಿಷ್ಠಿತ** – ಮೇಲಧಿಕಾರವನ್ನು ಪಡೆದವನು (ಅಚ್ಯುತೇಂದ್ರಂ .. .. ಲೋಕಪಾಲಚತುಷ್ಟಯ ಅಧಿಷ್ಠಿತನುಂ .. .. ಆಗಿ: **ಆದಿಪು,** ೬. ೧೩ ವ); ನೆಲಗೊಂಡ (ಸತ್ಯಾಧಿಷ್ಠಿತ ಶ್ರೀಜಿನವಚನದೊಳಿರ್ದಂದಮಂ .. .. ಉಪದೇಶಂಗೆಯ್ಯುತ್ತಿರ್ಪ .. .. ಸುಶ್ರುತಜಳಧಿಗಳಂ ಮಾಟ್ಕೆ ಉಪಾಧ್ಯಾಯರ್ ಎಮ್ಮಂ: **ಆಚವರ್ಧ,** ೧. ೪)

**ಅಧಿಷ್ಠಿಸು** – ನೆಲೆಗೊಳಿಸು, ಸ್ಥಾಪಿಸು (ವಿಶದಯಶಸ್ಸಿದ್ಧಾಧಿಷ್ಠಾನಮೆನಿಪ ಮಜ್ಜನಪೀಠಮಂ ಅಧಿಷ್ಠಿಸಿದಾಗಳ್: **ಆದಿಪು,** ೮. ೬೯ ವ)

**ಅಧೀಶ** – ಒಡೆಯ (ಶ್ರೀ ಶಾಂತೀಶಂ ತ್ರಿಜಗದಧೀಶಂ: **ಶಾಂತಿಪು,** ೧೨. ೧)

**ಅಧೀಶ್ವರ** – ಅಧಿರಾಜ; ಇತರ ರಾಜರ ಮೇಲೆ ಅಧಿಕಾರವುಳ್ಳವನು (ಅಸಿತಪಯೋಜನೇತ್ರೆಯರತಿಪ್ರಿಯಕಾಂತೆಯರಾಸೆವಟ್ಟು ವಿಕ್ಷಿಸುವರಧೀಶ್ವರರಾಗಮನಕಾಲಮನಿರ್ದು ದಿಗಂತದೊಳ್: **ಶಾಂತಿಪು,** ೨. ೪೮)

**ಅಧೋಕ್ಷಜ** – ಕೃಷ್ಣ (ಕಿರ್ಚಟ್ಟಿ ಲಂಕೆಯಂ ನೋಟ್ಟಿಂತೆನೋಡೆ ಧರ್ಮಪುತ್ರನಂ ಅಧೋಕ್ಷಜನಿಂತೆಂದಂ: **ಪಂಪಭಾ,** ೧೨. ೫ ವ); ವಾಸುದೇವ (ಅಧಿರಾಜಂಬರೆಗಂ ಕದನಧುರೀಣಂ ಗಂಡನಾವನೆನೆಮುನಿದು ಘನಪ್ರಧನರತಂ ಸಿಂಹೋದರಂ ಅಧೋಕ್ಷಜಂಗೊರೆಯಿನುರ್ಚಿದಂ ಕೂರಸಿಯಂ: **ಪಂಪರಾ,** ೭. ೫೬)

**ಅಧೋಘ** – ಕೆಳಮುಖವಾದ, ಇಳಿಯುವ (ವಾಸುದೇವ ಬಲದೇವರೊಳ್ ಒರ್ವಂ ಅಧೋಗಂ ಒರ್ವಂ ಊರ್ಧ್ವಗನಾದೊಂ: **ಶಾಂತಿಪು,** ೪. ೧೧೧)

**ಅಧೋಗತಿ** – ನರಕ, ಅವನತಿ (ಧರ್ಮಗುಣಚ್ಯುತದಿಂ ಅಧೋಗತಿಗೆ ಬೀೞ್ವುದೊಂದಚ್ಚರಿಯೆ: **ಗದಾಯು,** ೪. ೩೩)

**ಅಧೋಗ್ರೈವೇಯಕ** – [ಜೈನ] ಒಂಬತ್ತು ಗ್ರೈವೇಯಕಗಳೆಂಬ ಕಲ್ಪಾತೀತ ಸ್ವರ್ಗಗಳಲ್ಲಿ ಕೆಳಗಿನದು (ತಪೋಭರದೊಳ್ ನಾಲ್ವರುಂ ನಿಂದು ಜೀವಿತವ್ಯಪಾಯದೊಳ್ ಅಧೋಗ್ರೈವೇಯಕದೊಳ್ ಅಹಮಿಂದ್ರಪದವಿಯಂ ತಾಳ್ದಿದರ್: **ಆದಿಪು,** ೫. ೨೭ ವ); ನೋಡಿ, 'ಗ್ರೈವೇಯಕ'

**ಅಧೋನಿಬಂಧಿನೀ** – ಭೂರಿದಾನವೆಂಬ ಆನೆಯಮೂರನೆಯ ಮದಾವಸ್ಥೆ (ಚೆಲ್ವಂ ಪಾಳಿಸುತಿರ್ದುದು ಮಧುಕರ ಮಾಳಾಶೋಭಂ ಅಧೋನಿಬಂಧಿನಿ ದಾನಂ: **ಪಾರ್ಶ್ವನಾಪು,** ೪. ೧೨೧)

**ಅಧೋಭೂಮಿ** – ಕೆಳಗಿನ ಲೋಕ (ರಮಣೀಜಾತಿಯೊಳಲ್ತೆ ನಂಬಿದವರ್ಗಳ್ ಸಮ್ಯಕ್ತ್ವಮಂ ಪುಟ್ಟರಾರುಮ್ ಅಧೋಭೂಮಿಯೊಳ್: **ಆದಿಪು,** ೫. ೬೩)

**ಅಧೋಲೋಕ** – ಅಧೋಭೂಮಿ (ನೆಲೆಸಿರ್ದಪುದು ಅಧಃಸ್ಥಳಂಬಿಡಿದು ಅಧೋಲೋಕಂ ಸಮಂತೆಯ್ದೆ ಸುತ್ತಲುಮಿರ್ದಪ್ಪುದು ಮಧ್ಯಲೋಕಂ: **ಆದಿಪು,** ೧. ೫೦)

**ಅಧ್ಯಯನ** – ಬ್ರಾಹ್ಮಣನ ಷಟ್ಕರ್ಮಗಳಲ್ಲಿ ಒಂದಾದ ವೇದಾಧ್ಯಯನ (ಭವಿಷ್ಯದ್ವಿಜನ್ಮವರ್ಣಕ್ಕೆ ಅಧ್ಯಯನ ಅಧ್ಯಾಪನ ದಾನ ಪ್ರತಿಗ್ರಹ ಯಜನ ಯಾಜನ ವಿಶಿಷ್ಟವೃತ್ತಿಯುಮಂ: **ಆದಿಪು,** ೪. ೭೬ ವ)

**ಅಧ್ಯಯನಾಂತರಾಯ** – ಶಾಸ್ತ್ರವ್ಯಾಸಂಗಕ್ಕೆ ಆಗುವ ಅಡ್ಡಿ; ಪಾಠವಿಘ್ನ (ಅಧ್ಯಯನಂ ನಿನಗನಿಷ್ಟಮಪ್ಪುದಜೆಂ ಅಧ್ಯಯನಾಂತರಾಯಮಂ ಮಾಡಲೆಂದು: **ಆದಿಪು,** ೩. ೩೮ ವ)

**ಅಧ್ಯಾತ್ಮ** – ಆತ್ಮಕ್ಕೆ ಸಂಬಂಧಪಟ್ಟ, ಬ್ರಹ್ಮಜ್ಞಾನ (ಮತ್ತಮಾ ಮಹಾತ್ಮಂ ಅಧ್ಯಾತ್ಮಮಂ ಮನದೊಳವಲಂಬಿಸುತ್ತುಂ: **ಸುಕುಮಾಚ,** ೧೨. ೨೬ ವ)

**ಅಧ್ಯಾತ್ಮಧ್ಯಾನ** – ಅತ್ಮತತ್ವವನ್ನು ನೆನೆಯುತ್ತಿರುವುದು (ಸುಧರ್ಮಾಚಾರ್ಯರುಜ್ಜಯಂತ ಪರ್ವತದೊಳ್ ಅಧ್ಯಾತ್ಮಧ್ಯಾನಾಧೀನಮಾನಸರಾಗಿ: **ಸುಕುಮಾಚ,** ೪. ೨ ವ)

**ಅಧ್ಯಾತ್ಮವಿಶಾರದ** – ತತ್ವಶಾಸ್ತ್ರದಲ್ಲಿ ನಿಪುಣ (ಅಂತು ಭಾವಿತಾತ್ಮಂ ಅಧ್ಯಾತ್ಮವಿಶಾರದನಾಗಿ ಪರಮಾತ್ಮನೊಳ್ ಕೂಡಿದನಾಗಳ್: **ಪಂಪಭಾ,** ೧೨. ೨೯ ವ)

**ಅಧ್ಯಾಪನ** – ವೇದವನ್ನು ಪಾಠ ಹೇಳುವುದು; ಬ್ರಾಹ್ಮಣನ ಷಟ್ಕರ್ಮಗಳಲ್ಲಿ ಒಂದು (ಭವಿಷ್ಯದ್ವಿಜನ್ಮವರ್ಣಕ್ಕೆ ಅಧ್ಯಯನ ಅಧ್ಯಾಪನ ದಾನ ಪ್ರತಿಗ್ರಹ ಯಜನ ಯಾಜನ ವಿಶಿಷ್ಟವೃತ್ತಿಯುಮಂ: **ಆದಿಪು,** ೪. ೭೬ ವ); ಓದಿಸುವುದು (ಉಪಾಸಕ ಅಧ್ಯಯನ ಅಧ್ಯಾಪನಾನಂತರಂ: **ಆದಿಪು,** ೧೫. ೧೩ ವ)

**ಅಧ್ಯಾರೋಪ** – ಅಧ್ಯಾಹಾರ (ಕಾರಕಕ್ಕಂ ಕ್ರಿಯೆಗಂ ನೇಯದ ದೋಷಮಿಲ್ಲದಂತೆ ಅಧ್ಯಾರೋಪಮಂ ಮಾಟ್ಪುದು: **ಶಬ್ದಮದ,** ೧೫೬ ವೃತ್ತಿ)

**ಅಧ್ಯಾರೋಪಣಂಗೆಯ್** – ಇಲ್ಲದ ಗುಣಗಳನ್ನು ಆರೋಪಿಸು (ಎನಸುಂ ಕೈವಾರದಿಂದಿಲ್ಲದ ಗುಣಗಣಮಂ ರಾಗದಿಂ ಕೆಮ್ಮನೀ ಪಾಂಥನೊಳ್ ಅಧ್ಯಾರೋಪಣಂಗೆಯ್ದೆನಗನವರತಂ ಬಣ್ಣಿಸುತ್ತಿರ್ದಳ್: **ಕಾದಂಸಂ,** ೫. ೧೦೩)

**ಅಧ್ಯಾರೋಪಿಸು** – ಆರೋಪ ಹೊರಿಸು (ಆರಾನುಂ ದೋಷಮಂ ಅಧ್ಯಾರೋಪಿಸೆ ಗುಣಿಗಳರಮೆ ನೋವರೆನಲ್ ತಮ್ಮಾರಾಧ್ಯರೆ ದೋಷಮಂ ಅಧ್ಯಾರೋಪಿಸೆ ನೋವುದರ್ಕೆ ಪೇೞ್ ಕಡೆಯುಂಟೆ: **ಕಾದಂಬ ಉ,** ೪೮೦?); ಆಧ್ಯಾಹಾರ ಮಾಡಿಕೊ (ಜಯಮೆ ಮೆಱೆವುದೆಂಬಲ್ಲಿ ಆತನೊಳ್ ಎಂಬ ಸಪ್ತಮಿಯಂ .. .. ಅಧ್ಯಾರೋಪಿಸಿಕೊಳ್ವುದು: **ಶಬ್ದಮದ,** ೧೫೬ ಪ್ರ ೬)

**ಅಧ್ಯಾಸಿತ** – ವಾಸಿಸಲ್ಪಟ್ಟ (ಪ್ರಧಾನಪುರುಷ ಅಧ್ಯಾಸಿತಂಗಳಪ್ಪ ಪುರಂಗಳುಮಂ: **ಆದಿಪು,** ೮. ೬೩ ವ)

**ಅಧ್ಯುಷಿತ** – ನೆಲೆಸಿದ, ಸ್ಥಾನ ಪಡೆದ (ತೃಣಶಿಖರ ಅಧ್ಯುಷಿತಾಂಭಃಕಣಸಂಚಳಂ ಅಮರಚಾಪಚಳಂ ವಿದ್ಯುತ್ ಕ್ಷಣಿಕಂ: **ಆದಿಪು,** ೪. ೭೫)

**ಅಧ್ರುವ** – ಅಸ್ಥಿರ (ಭೋಗೀಂದ್ರಭೋಗಂ ಮಹೇಂದ್ರ ಮಹೈಶ್ವರ್ಯಂ ಇವೆಲ್ಲಂ ಅಧ್ರುವಂ: **ಆದಿಪು,** ೧೦. ೫೯)

**ಅಧ್ವ** – ದಾರಿ (ಕೋಮಳೆ ಶೂನ್ಯಾಧ್ವಮಂ ಎಯ್ದೆ ದಾಂಟಿ ನಿಜಪಾದಂ ಪೋಗೆ: **ರಾಜಶೇವಿ,** ೧೩. ೩೨) ರೀತಿ, ಕ್ರಮ (ಧಾರೆಗಳೋರೆಗೆ ಸೂಸೆ ಮುಟ್ಟಿ ಕೆಯ್ಮುಱಿದು ಬಯಲ್ಗೆ ಬಾಯ್ವಿಡುವರ್ ಅಧ್ವಗರ್ ಅಧ್ವತಟಪ್ರಪಾಳೀಯೊಳ್; **ಅನಂತಪು,** ೧. ೮೩)

**ಅಧ್ವಗ** – ಪ್ರಯಾಣಿಕ (ಧಾರೆಗಳೋರೆಗೆ ಸೂಸೆ ಮುಟ್ಟಿ ಕೆಯ್ಮುಱಿದು ಬಯಲ್ಗೆ ಬಾಯ್ವಿಡುವರ್ ಅಧ್ವಗರ್ ಅಧ್ವತಟಪ್ರಪಾಳೀಯೊಳ್; **ಅನಂತಪು,** ೧. ೮೩)

**ಅಧ್ವಗಜನ** – ಪ್ರಯಾಣಿಕರು (ಬುದ್ಧಿವೇೞ್ವಂತೆವೊಲಾದುದು ಅಧ್ವಗಜನಕ್ಕೆ ಕನತ್ಕಳ ಕೋಕಿಳಸ್ವನಂ: **ಚಂದ್ರಪ್ರಪು,** ೭. ೪೬)

**ಅಧ್ವಜಕ್ಲೇಶ** – ದಾರಿಯಲ್ಲಿ ಆಗುವ ತೊಂದರೆ; ಪ್ರಯಾಣವಿಘ್ನ (ಸತತಗತಿವೇಗದಿಂ ಪರಿಚಿತಮಾರ್ಗದೆ ಮಗುೞ್ದು ಬಂದು ಪೂರ್ವಾಸ್ಥಾನಸ್ಥಿತನಂ ಕಂಡಂ ಮೃಗಗಣಪತಿಯಂ ಮೃಗಧೂರ್ತನಧ್ವಜಕ್ಲೇಶಾರ್ತಂ: **ಪಂಚತಂತ್ರ,** ೯೭)

**ಅಧ್ವನೀನ** – ಪ್ರಯಾಣಿಸಲು ಸಮರ್ಥವಾದ (ವಿನಯಾಧೀನನಹೀನಂ ವಿನುತಕುಲೀನಂ ನಿಜೇಶಕಾರ್ಯಧುರೀಣಂ ಮನುವಿಹಿತ ಧರ್ಮಮಾರ್ಗ ಅಧ್ವನೀನನಿವನೆಂದು ದುರ್ಗನೆನಿಸಿದನಲ್ತೇ: **ಪಂಚತಂತ್ರ,** ೫೧)

**ಅಧ್ವನ್ಯ** – ಪ್ರಯಾಣಿಸಲು ಸಮರ್ಥವಾದ, ಸಿದ್ಧವಾದ ರಥ (ಪೀಯೂಷಸಂಕುಳಮಂ ಚಿತ್ತದಿಂ ಈಂಟಿ ತದ್ವಿಷಯದ ಅಧ್ವನ್ಯರ್ ಮನಂಬೆರ್ಚುವರ್: **ಚಂದ್ರಪ್ರಪು,** ೧. ೯೯)

**ಅಧ್ವರ** – ಸೋಮಪಾನಪ್ರಧಾನವಾದ ಯಜ್ಞ (ಭರತಂ ಅನೇಕ ಅಧ್ವರಭರನಿರತಂ ಜಸಮುೞಿಯೆ ಕೞೆಯೆ ಭೂಪರ್ ಪಲರಾದರಿಸಿದ ಧರಣೀಭರಮಂ ಧರಿಯಿಸಿದಂ ಪ್ರತಿಮಮೆಂನಪ್ರತಿಮಬಲಂ: **ಪಂಪಭಾ,** ೧. ೬೪)

**ಅಧ್ವರಿ** – ಯಜ್ಞಮಾಡುವವನು, ಯಾಗದೀಕ್ಷಿತ (ಚೂತಂ ಕರ್ಣಗೊಳಿಪುದು ಹೋಮಾಗ್ನಿಯಂತೆ ಕಾಮಾಧ್ವರಿಯಾ: **ಶಬರಶಂ,** ೨. ೪೮)

**ಅಧ್ವರ್ಯು** – ಯಜ್ಞಕ್ಕೆ ಬೇಕಾದ ಕೆಲಸವನ್ನು ಮಾಡುವ ಜೊತೆಗೆ ಯಜುರ್ವೇದವನ್ನು ಪಠಿಸುವ ವ್ಯಕ್ತಿ (ವ್ಯಾಸ ಕಶ್ಯಪ ವಿಶ್ವಾಮಿತ್ರ ಭರದ್ವಾಜ ಬ್ರಹ್ಮ ಅಧ್ವರ್ಯು ಅಗ್ನೀಧ್ರರ ಮೈತ್ರಾವರುಣ ಅಗ್ನಿಪರಿಚಾರ: **ಪಂಪಭಾ,** ೬. ೩೩ ವ)

**ಅಧ್ವಶ್ರಮ** – ಪ್ರಯಾಣದ ಆಯಾಸ (ಮನದೊಳಾಂ ಚಿಂತಿಸುತಿರ್ಪನ್ನೆಗಂ ಅಧ್ವಶ್ರಮದಿಂದಂ ನಡೆ ಮಾಯ್ದು ಎನಗೆ ನಿದ್ರೆ ಬಂದಿತ್ತಾಗಳ್: **ಕಾದಂಸಂ,** ೮. ೨೮)

**ಅಧ್ವಾನ** – ಕಾಡು (ವಿಶಾಳವಟವಿಟಪಿಯನೆಯ್ತಂದು ಅದಱ ಕೆೞಗೆ ಅಯ್ವರುಮನಿೞಿಪಿದೊಡೆ ಅಧ್ವಾನಪದಪರಿಶ್ರಮ ಶ್ರಾಂತರ್ ನಿದ್ರಾಭರಪರವಶರಾಗಿರೆ: **ಪಂಪಭಾ,** ೩. ೧೦ ವ); ಕಷ್ಟ (ನಿಮಗೇನಾನುಂ ಅಧ್ವಾನಮಾದಾಗಳ್ ಎನ್ನಂ ನೆನೆದೊಡೆ ಆಂ ಬಂದು ದೇವರ ಸೇವೆಯಂ ಮಾಡಿ ಪೋಪೆನ್: **ಪಂಚತಂತ್ರ,** ೧೭೯ ವ)

**ಅನಂಗ** – ದೇಹವಿಲ್ಲದವನು, ಮನ್ಮಥ (ಮನಸಿಜಂ ಅನಂಗಂ ಅಂಗಜಂ: **ಅಭಿಧಾನ,** ೧. ೧ ೨೭)

**ಅನಂಗಚಿಹ್ನ** – ಮನ್ಮಥಚಿಹ್ನೆಗಳು, ಕಾಮಕೇಳಿಯಿಂದಾದ ಗುರುತುಗಳು (ಈಕ್ಷಣಕ್ಕೆ ಪರಮಾನಂದಾಮೃತಂ ಸಾರ್ವಿನಂ ಮೆಱೆದರ್ ಚಕ್ರಿಯ ಮುಂದೆ ತತ್ಕೃತವಿಚಿತ್ರ ಅನಂಗಚಿಹ್ನಂಗಳಂ: **ಆದಿಪು,** ೧೧. ೧೫೩)

**ಅನಂಗಮುದ್ರೆ** – ಅನಂಗಪರವಶತೆಯ ಭಂಗಿ (ಕಲಶಕುಚಂ ಕದಕ್ಕದಿಸೆ ಸುರ್ಕುಸಿರಿಂ ನಡುಗಿತ್ತು ಚಿತ್ತಂ .. .. ಜಾನಕಿಗೆ ಮುದ್ರಿಕೆ ಕೊಟ್ಟುದನಂಗಮುದ್ರೆಯಂ: **ಪಂಪರಾ,** ೧೧. ೮೮)

**ಅನಂಗರಾಗ** – ಮೋಹ, ಕಾಮಾಸಕ್ತಿ (ಪಾಟ್ಟಿಸದಿಯ ಪೆಣ್ಣ ಜೋಹದವೊಲ್ ಒಪ್ಪಿದಳ್ ಒರ್ವಳ್ ಅನಂಗರಾಗದಿಂ: **ಶಾಂತಿಪು,** ೮. ೮೮)

**ಅನಂಗಾಕಾರ** – ಅನಂಗಸುಭಗ (ವಿದುರನೆಂಬಂ ಅನಂಗಾಕಾರನುಂ ಆಚಾರವಂತನುಂ ಬುದ್ಧಿವಂತನುಂ ಎಕ್ಕುಮೆಂದು ಪೇೞ್ದು ಮುನಿಪುಂಗವಂ ಪೋದಂ: **ಪಂಪಭಾ,** ೧. ೮೫ ವ)

**ಅನಂತ** – ಕೃಷ್ಣ (ಜಲಕ್ರೀಡೆಯಾಡಲ್ ಬಗೆದು ತಾನುಂ ಅನಂತನುಂ ಅಂತಃಪುರಪರಿವಾರಂ ಬೆರಸು: **ಪಂಪಭಾ,** ೫. ೫೮ ವ); ಮಿತಿಯಿಲ್ಲದ (ಆಗಳ್ ಅನಂತಂ ಅನಂತಫಣಾಗಣಮಣಿಕಿರಣಂ ಎಸೆಯೆ ದುಗ್ಧಾರ್ಣವದೊಳ್ ರಾಗದಿನಿರ್ಪಂತಿರ್ದಂ ಭೋಗಿ ತೞತ್ತೞಿಸೆ ಬೆಳಗೆ ಕೆಯ್ದೀವಿಗೆಗಳ್: **ಪಂಪಭಾ,** ೪. ೫೩); ಆದಿಶೇಷ (ಅನಂತಭೋಗನಿಲಯಂ ಪ್ರತಿಪಾಲಿತಧರ್ಮಚಕ್ರಂ ಅಬ್ಜಾಯತನೇತ್ರಂ ಆದಿಪುರುಷಂ ಪುರುಷೋತ್ತಮಣ್: **ಗದಾಯು,** ೧. ೧); [ಜೈನ] ಹದಿನಾಲ್ಕನೆಯ ತೀರ್ಥಂಕರ (ಅನಂತ ಜಿನ್ನಾಮನೆನಿಪ್ಪನೀಗೆಮಗೆ ಅನಂತಜಿನೇಂದ್ರಂ ಅನಂತಸೌಖ್ಯಮಂ: **ಅನಂತಪು,** ೧. ೧)

**ಅನಂತಚತುಷ್ಟಯ** – [ಜೈನ] ತೀರ್ಥಂಕರರಾಗುವವರಿಗೆ ಕರ್ಮಪರಿಣಾಮಗಳು ನಷ್ಟವಾದ ಬಳಿಕ ಪ್ರಾಪ್ತವಾಗುವ ಅನಂತಜ್ಞಾನ, ಅನಂತದರ್ಶನ, ಅನಂತಸುಖ, ಅನಂತವೀರ್ಯಗಳೆಂಬ ನಾಲ್ಕು ಗುಣಗಳು (ಕಷ್ಟತರಮಂ ಕಷಾಯಚತುಷ್ಟಯದೆಡೆಗಿಡಿಸಿ ದೇವ ಕಿಡಿಸಿಯೆ ಭವಚಾತುಷ್ಟಯಮಂ ಇನ್ನನಂತ ಚತುಷ್ಟಯಮಂ ಪೊರ್ದು ಪೊರ್ದದಿರು ಸಂಸೃತಿಯಂ: **ಅಜಿತಪು,** ೬. ೭೩)

**ಅನಂತಜ್ಞಾನ** – [ಜೈನ]ಅನಂತಚತುಷ್ಟಯದಲ್ಲಿ ಒಂದು (ಸೂಕ್ಷ್ಮರೂಪನುಂ ಅನಂತಜ್ಞಾನಾದಿ ಗುಣರೂಪನುಂ: **ಆದಿಪು,** ೨. ೧೦ ವ)

**ಅನಂತದರ್ಶನ** – [ಜೈನ] ಅನಂತಚತುಷ್ಟಯದಲ್ಲಿ ಒಂದು (ಸಮ್ಯಕ್ತ್ವಮುಂ ಅನಂತಜ್ಞಾನಮುಂ ಅನಂತದರ್ಶನಮುಂ .. .. ಎಂಟುಂ ಗುಣಂಗಳ್ ಆತ್ಮಾಯತ್ತಮಾಗೆ: **ಶಾಂತಿಪು,** ೧೨. ೫೧ ವ)

**ಅನಂತಪ್ರಬೋಧ** – ಅನಂತಜ್ಞಾನ (ಪರಮಾತ್ಮಂ ಎನ್ನಂ ಎಂದೊಡೆ ಚರಮಾಂಗಪ್ರಮಿತಂ ಅಖಿಳಲೋಕಸಮಾನಂ ನಿರವಯವ ನಿರಂಜನ ನಿರ್ಧಾರಿತಂ ಅನಂತಪ್ರಬೋಧದಶ್ನಸೌಖ್ಯಂ: **ಯಶೋಧಚ,** ೪. ೨೭)

**ಅನಂತಭೋಗನಿಲಯ** – ಅಪರಿಮಿತ ಸುಖಕ್ಕೆ ನೆಲೆಯಾದವನು, ಆದಿಶೇಷನ ಶರೀರವೇ ನೆಲೆಯಾಗಿರುವವನು (ಶ್ರೀಯುವತೀ ಪ್ರಿಯಂ ಬಲಯುತಂ ಬಲಿದರ್ಪಹರಂ ಅನಂತಭೋಗ ನಿಲಯಂ ಲಕ್ಷ್ಮೀಸಮೇತಂ: **ಗದಾಯು,** ೧. ೧)

**ಅನಂತಭೋಗೀಶ್ವರ** – ಆದಿಶೇಷ (ಅನಂತಭೋಗೀಶ್ವರಂ ಆ ದೇವಕಿಯ ಗರ್ಭದೊಳ್ ಜನಿಯಿಸಿದಂ: **ಜಗನ್ನಾವಿ,** ೨. ೬೦)

**ಅನಂತರತ್ನ** – ಅಪರಿಮಿತ ರತ್ನ [ಅನಂತ=ಆಕಾಶ] ಸೂರ್ಯ (ವಿರಹಾನಿಷ್ಟಂ ಅನಂತರತ್ನರುಚಿಯಂ ಘೂಕಂ ರಣದ್ವೀಣೆಯಿಂಚರದೊಳ್ಪಂ .. .. ಪಟಿಯೆ ಕುಂದಾದಪ್ಪದೇ: **ಶಬರಶಂ,** ೧. ೧೩)

**ಅನಂತವಸ್ತುಪ್ರಕಾಶಿ** – ಎಲ್ಲ ವಸ್ತುಗಳಿಗೂ ಕಾಣುವಂತೆ ಮಾಡುವ (ಮಾನಕಷಾಯಂ ಮುನಿಪತಿಗೆ ಪೋಗೆ ಪುಟ್ಟಿದದು ಅನಂತವಸ್ತುಪ್ರಕಾಶಿ ಕೇವಳಬೋಧಂ: **ಆದಿಪು,** ೧೪. ೧೪೫)

**ಅನಂತವಿಧ** – ನಾನಾ ಬಗೆ, ವಿವಿಧ ರೀತಿ (ಸವಿಶೇಷೋಕ್ತಿಗಳುಂ ಅನಂತವಿಧಂಗಳ್ ಅನಂತಭೇದವದಱಿಂ ಮಾರ್ಗಂ: **ಕವಿರಾಮಾ,** ೨. ೪೭)

**ಅನಂತವೀರ್ಯ** – ಅಪರಿಮಿತ ಶಕ್ತಿ; [ಜೈನ] ಅನಂತಚತುಷ್ಟಯಗಳಲ್ಲಿ ಒಂದು (ಏಱಿದ ವಿಮಾನಮೆ ಗಾಳಿಯ ತೂಳದಂತಿರೆ ಆಗುಸಿರ್ವುಸಿರಿಂದೆ ನಂಬಿದರ್ ಅಮರ್ತ್ಯರ್ ಅನಂತವೀರ್ಯಮಂ: **ಅನಂತಪು,** ೫. ೬೪)

**ಅನಂತಶಯನ** – ಆದಿಶೇಷನ ಮೇಲೆ ಮಲಗಿರುವವನು, ವಿಷ್ಣು (ಅಂತು ಅನಂತಂ ಅನಂತಶಯನನ ಆಜ್ಞೆಯಿಂ ಬಂದು ದೇವಕೀಗರ್ಭದೊಳ್ ನೆಲಸೆ: **ಜಗನ್ನಾವಿ,** ೨. ೬೦ ವ)

**ಅನಂತಸಂಜ್ಞ** – 'ಅನಂತ' ಎಂಬ ಹೆಸರಿನವನು (ತಮಾಲಧಾತ್ರೀರುಹಮೂಲ ಭೂತಲಕೆವರ್ಪನಂ ಆಗಳ್ ಅನಂತಸಂಜ್ಞಂ ಚಾರಣಯೋಗಿಯಂ: **ಚಂದ್ರಪ್ರಪು,** ೩. ೬೯)

**ಅನಂತಸುಖ** – ಎಣೆಯಿಲ್ಲದ ಸುಖ (ಸಮಂತಿರಿಸುವೆಂ ಅನಂತಸುಖಸಂಗತ ಮಂಗಳಕಾರಣಂಗಳಂ: **ಕವಿರಾಮಾ,** ೨. ೧೦೨)

**ಅನಂತಸೌಖ್ಯ** – ಅನಂತಸುಖ (ಅನಂತ ಜಿನ್ನಾಮನೆನಿಪ್ಪಂ ಈಗೆಮಗೆ ಅನಂತಜಿನೇಂದ್ರಂ ಅನಂತಸೌಖ್ಯಮಂ: **ಅನಂತಪು,** ೧. ೧)

**ಅನಂತಾಂಶ** – ಅನಂತನ ಒಂದು ಅಂಶ (ನೀಂ ದೇವಕೀಗರ್ಭದ ಶಿಶುವಂ ಅನಂತಾಂಶಮಂ ಕರ್ಷಣಂಗೆಯ್ದು: **ಜಗನ್ನಾವಿ,** ೨. ೫೩ ವ)

**ಅನಂತಾಖ್ಯ** – ಲೆಕ್ಕವಿಲ್ಲದಷ್ಟು ಹೆಸರುಳ್ಳ (ಅನಂತಾಖ್ಯಮೆಂದು ಭೂಮಿಯಂ ತಿಗುರುದಿರುವಿಯುಂ: **ಜಗನ್ನಾವಿ,** ೯. ೫೭ ವ)

**ಅನಂತಾತ್ಮಕ** – ಲೆಕ್ಕವಿಲ್ಲದಷ್ಟು ಬಗೆಯುಳ್ಳದ್ದು (ಇಂತಿಂತೆ ಪೇೞ್ವೊಡೆಲ್ಲಂ ಅನಂತಾತ್ಮಕಮಕ್ಕುಂ ಆ ವಿರುದ್ಧದ ಭೇದಂ: **ಕವಿರಾಮಾ,** ೧. ೧೧೦)

**ಅನಂತಾಧಾರ** – ಕೊನೆಯಿರದ ಆಧಾರ, ವಿಷ್ಣುವಿನ ಆಶ್ರಯಸ್ಥಾನ, ಆದಿಶೇಷನ ಆಧಾರ (ಆ ಮಹಾರ್ಣವಂ .. .. ಮುಕ್ತಾಧಾರಮಾಗಿಯುಂ ಅನಂತಾಧರಮುಂ .. .. ಎನಿಸಿದುದು: **ಜಗನ್ನಾವಿ,** ೧. ೪೪ ವ)

**ಅನಂತಾನುಬಂಧಿ** – [ಜೈನ] ಅನಂತಕಾಲದ ವರೆಗೆ ಜೀವನನ್ನು ಹುಟ್ಟುಸಾವುಗಳ ಸಂಸಾರದಲ್ಲಿ ತಿರುಗಿಸುವ ಕ್ರೋಧ, ಮಾಯ, ಮಾನ ಲೋಭಗಳೆಂಬ ನಾಲ್ಕು ಬಗೆಯ ಕಷಾಯಗಳು (ಅನಂತಾನುಬಂಧಿ ಕ್ರೋಧಮಾನಾದಿ ಚತುಃಕಷಾಯ ವ್ಯಪಾಯಮುಂ: **ಪುಷ್ಪದಂಪು,** ೧೪. ೧೬)

**ಅನಕ್ಷರಂ** – ಮಾತಿಲ್ಲದ (ಚೆಲ್ವೀಕ್ಷಣಹರಮೆನೆ ಜಯಮಂ ಅನಕ್ಷರಮಱಿಪಿದುದು ಭರತರಾಜಮದೇಭಂ: **ಆದಿಪು,** ೧೨. ೫೯)

**ಅನಕ್ಷರಜಠರ** – ನಿರಕ್ಷರಕುಕ್ಷಿ, ವಿದ್ಯೆಯಿಲ್ಲದವನು (ಸಕಳಕಳಾಕುಶಲಂಗೆ ಪುಟ್ಟಿಯುಂ ಅನಕ್ಷರಜಠರರ್ ಏವಂದೆವೆಂಬ ಕಷ್ಟತೆಯೊಳಂ: **ಸುಕುಮಾಚ,** ೨. ೩೨ ವ)

**ಅನಕ್ಷರಾಳಾಪ** – ತೊದಲು ನುಡಿ (ಅನಿಮಿತ್ತ ದರಸ್ಮಿತದಿಂದ ಅನಕ್ಷರಾಳಾಪದಿಂದೆ .. .. ಹರಿಯೆಸೆದಂ: **ಜಗನ್ನಾವಿ,** ೩. ೨೮)

**ಅನಗಾರಕೇವಳಿ** – [ಜೈನ] ಮನೆಯಲ್ಲಿ ವಾಸಿಸದ ಮುನಿ, ತೀರ್ಥಂಕರರೂ ಗಣಧರರೂ ಅಲ್ಲದ ಕೇವಲಿ (ತೀರ್ಥಕರ ಗಣಧರ ಅನಗಾರಕೇವಳಿಗಳ ಪರಿನಿರ್ವಾಣಕ್ಷೇತ್ರದೊಳ್ **ಆದಿಪು,** ೧೫. ೧೬ ವ)

**ಅನಗಾರವೇಳೆ** – [ಜೈನ] ಜೈನಮುನಿಗಳ ಚರಿಗೆಯ ಸಮಯ (ಆ ಮುನೀಂದ್ರೋತ್ತಮಂ .. .. ಅನಗಾರವೇಳೆಯೊಳ್ ಮಾದಿರಾಭಿಧಾನಪುರಕ್ಕೆ ಚರಿಗೆಗೆವರೆ: **ಶಾಂತಿಪು,** ೧೧. ೧೦೬ ವ)

**ಅನಗಾರಸಮಯ** – ಅನಗಾರವೇಳೆ (ಅನಗಾರಸಮಯದೊಳ್ ದ್ವಾದಶಾಪೇಕ್ಷೆಯೊಳಿರೆ: **ಶಾಂತಿಪು,** ೬. ೬೯ ವ)

**ಅನಘ** – ಪಾಪವಿಲ್ಲದ (ಅನಘರನುಬದ್ಧಕೇವಲಿಯೆನಿಸಿದ ಗೌತಮಸುಧರ್ಮ ಜಂಬೂಗಣಭೃದ್ವಿನುತರ್ ಎಮಗೀಗೆ ಶಾಶ್ವತಧನಮೆನಿಸಿದ ವಿಶ್ರುತಶ್ರುತಾರಾಧನಮಂ: **ಮಲ್ಲಿನಾಪು,** ೧. ೧೦)

**ಅನಡ್ವಾಹ** – ಗೂಳಿ (ವೃಷ ಸೌರಭೇಯ ಗೋಪತಿ ಋಷಭ ಬಲೀಮರ್ದ ಶಾಕ್ವರ ಉಕ್ಷ ಕಕುದ್ಮತ್ ವೃಷಭಾಖ್ಯಂ ಅನಡ್ವಾಹಂ: **ಅಭಿಧಾವ,** ೧. ೧೫. ೧)

**ಅನತಿಜರಠ** – ಹೆಚ್ಚು ಮುದಿಯಾಗದ (ಅನತಿಜರಠ ಕರ್ಣಿಕಾಮುಕುಳಸ್ಥೂಳತ್ರಿಚತುರ ಸುವರ್ಣಕಂದೋದರ ಕಂಧರಂ: **ಆದಿಪು,** ೧೩. ೪೫ ವ)

**ಅನತಿದೂರ** – ಹೆಚ್ಚು ದೂರವಲ್ಲದ (ತನಗೆ ಅನತಿದೂರದೊಳ್ ನಂದನವನದೊಳ್: **ಸುಕುಮಾಚ,** ೩. ೮)

**ಅನತಿಶಯ** – ಅಸಾಮಾನ್ಯ (ಅನತಿಶಯ ಕೇವಲಜ್ಞಾನ ನಿರೀಕ್ಷಿತವಿಶ್ವನಾಥಾನಾದಿಜಿನಂ: **ಆದಿಪು,** ೧೦. ೧೬)

**ಅನದೆ** – ನಿರ್ಗತಿಕಳು (ಧನದೆಯುಂ ಅನದೆಯಾಗಿ ಕೆಲವು ದಿವಸಕ್ಕೆಕ್ರೂರಾಂತಕನ ದಾಡೆಗೊಳಗಪ್ಪುದುಂ: **ಧರ್ಮಾಮೃ,** ೮. ೯೬ ವ)

**ಅನಧ್ಯವಸಾಯ** – ಧ್ವಸಾಯ ಅಥವಾ ನಿಶ್ಚಿತಜ್ಞಾನ ಇಲ್ಲದಿರುವುದು (ಸಂಶಯ ವಿಪರ್ಯಯ ಅನಧ್ಯವಸಾಯ ವ್ಯತಿರಿಕ್ತಮಪ್ಪಂತಿರೆ: **ವರ್ಧಮಾಪು,** ೭. ೩ ವ)

**ಅನನೀಕ –** ಸೈನ್ಯರಹಿತ (ಕೌಳಾಧೀಶರಂ ಸಾಧಿಸಿ ಕಿಂಪುರುಷರಂ ಕಾಪುರುಷರ್ ಮಾಡಿ ಬಾಹ್ಲಿಕರಂ ಅನನೀಕರ್ ಎನಿಸಿ ಮಾಳವಿಗರಂ ಕೆಟಗಿವಿಗೆಯ್ಯಲ್ ಈಯದೆ: **ಪಂಪಭಾ,** ೬. ೨೯ ವ)

**ಅನನ್ಯಜ –** ಮನ್ಮಥ (ತಮ್ಮೊಳ್ ಒಂದಿಬಂದ ಅನನ್ಯಜನಂ ಮುನ್ನಿನಂತೆ ಒಡಗೊಂಡು ಪೋಗಿ: **ಕರ್ಣನೇಮಿ,** ೭. ೧೫೩ ವ)

**ಅನನ್ಯಸಾಮಾನ್ಯ –** ಬೇರೆಡೆ ಸಾಮಾನ್ಯವಲ್ಲದ, ವಿಶಿಷ್ಟವಾದ (ಮೂವತ್ತುಮೂಱು ಸಾಗರೋಪಮಾಯುಷ್ಯಂಬರಂ ಅನನ್ಯಸಾಮಾನ್ಯ ದಿವ್ಯಸುಖಮಂ ಅನುಭವಿಸುತ್ತುಮಿರೆ: **ಶಾಂತಿಪು,** ೯. ೧೬೧ ವ)

**ಅನಪತ್ಯ –** ಮಕ್ಕಳಿಲ್ಲದವನು (ನಿಜಜನನೀಜನಕರ್ ಪಲಕಾಲಂ ಅನಪತ್ಯರಪ್ಪುದಱಿಂ: **ಕಾದಂಬ,** ೫. ೯ ವ)

**ಅನಪರಾಧೆ –** ತಪ್ಪು ಮಾಡದಿರುವವಳು (ಮುಳಿದು ಎನ್ನಂ ಅನಪರಾಧೆಯಂ ಅಱಿಲ್ದವಳಂ ಇಂತನಾಥೆಯಂ ಮೋದಿದ ಕಾಲ್ಗಳನಾವ ಜನ್ಮಜನ್ಮಂಗಳೊಳ್ ಆಗಿಯುಂ ಅಕ್ಕೆ ಮುಂದೆ ಕೇಳ್ ತಿನ್ನದಿರೆಂ: **ಸುಕುಮಾಚ,** ೫. ೮)

**ಅನಪವರ್ತಿ –** ಕುಗ್ಗದ, ಕಡಿಮೆಯಾಗದ (ಚತುರಶೀತಿಲಕ್ಷಣ ಪೂರ್ವ ಅನಪವರ್ತಿ ಆಯುಷ್ಯಮಂ ಅಪ್ರತಿಹತಶಾಸನನುಮಾಗಿ: **ಆದಿಪು,** ೧೫. ೩ ವ)

**ಅನಪವರ್ತಿತ –** ಅನಪವರ್ತಿ (ಲಕ್ಷಸಮಾಸಮ್ಮಿತ ಅನಪವರ್ತಿತ ದೀರ್ಘಾಯಷ್ಯಮುಂ: **ಶಾಂತಿಪು,** ೧೦. ೯೪ ವ)

**ಅನಪವರ್ತ್ಯ –** ಅನಪವರ್ತಿ (ಚತುರುತ್ತರಾಶೀತಿಪೂರ್ವ ಲಕ್ಷೋಪಲಕ್ಷಿತ ಅನಪವರ್ತ್ಯ ಆಯುಷ್ಯನುಮಾಗಿ: **ಆದಿಪು, – ನರಸಿಂ.** ೮. ೪ ವ)

**ಅನಪೇಕ್ಷಕ –** ಆಸೆಯಿಲ್ಲದವನು (ಅಕಾರಣಂ ಇವಱೊಳಗೆ ಅನಪೇಕ್ಷಕನೆನಿಸಿ ನೆಗಟ್ದಂ ಇಱಿವಬೆಡಂಗಂ: **ಗದಾಯು,** ೨. ೮)

**ಅನಭಿಜ್ಞಾತ –** ಗೊತ್ತಿರದ, ಪ್ರಸಿದ್ಧವಲ್ಲದ (ಅನಭಿಜ್ಞಾತ ಕುಲಕ್ರಮಂಗೆ ಪಥಿಕಂಗೆ ಏಕಾಕಿಗೆ ಒಲ್ದೀವ ತಕ್ಕಿನೊಳಿರ್ದಪ್ಪೆ: **ಚಂದ್ರಪ್ರಪು,** ೬. ೨೧)

**ಅನಭ್ಯುದಯ –** ಏಳಿಗೆಯಿಲ್ಲದ, ಅಭ್ಯುದಯವಿಲ್ಲದ (ಅದಱಿಂದಂ ಜೀವಕ್ಕೆ ಅನಭ್ಯುದಯಮೆಂಬಿದಂ ಧರ್ಮಮಾಧರ್ಮಮತಿಯೆ ಮಾಟ್ಕುಂ: **ಶಾಂತಿಪು,** ೬. ೨೭)

**ಅನಯ –** ಅಕ್ರಮ (ಪಗಲಿರುಳೆಂಬ ಭೇದಂ ಅನಯಂ: **ಆದಿಪು,** ೫. ೩೦); ಅನೀತಿ (ಆಧಂ ವಾಲ್ಮೀಕಿ ವ್ಯಾಸಾದಿ ಕವೀಶ್ವರರಂ ಅನಯದ ಮಿಥ್ಯಾತ್ವಂ ತಾನೀ ದೊರೆತು ಎನಲ್: **ಸಮಯಪ,** ೧೦. ೧೮೨); ದುರ್ವಿಧಿ (ಉಪಶಮಿಸುಗೆ ಸಕಲೋರ್ವಿಯೊಳ್ ಉಪದ್ರವಂ ಡಿಂಬಂ ಅನಯಂ ಉಪಲಿಂಗಂ ಮಿಕ್ಕ ಉಪಸರ್ಗಂ ಅರಿಷ್ಟಂ ದುಷ್ಟಪೀಡೆ ಡಾಮರಂ ಅಜನ್ಯಂ ಈತಿಪ್ರಕರಂ: **ಅಭಿಧಾವ,** ಕಾಂ. ಸ. ೧)

**ಅನರ್ಘರತ್ನ –** ಅಮೂಲ್ಯರತ್ನ, ಬೆಲೆಯಿಲ್ಲದ ವಸ್ತು (ಚಕ್ರೇಶ್ವರ ಕಟಕೋತ್ತಮನಾಯಕ ವಿರಚನೆಯಿಂ ಅನರ್ಘರತ್ನಮಾದಂ ರತ್ನಂ: **ಗದಾಯು,** ೧. ೪೦)

**ಅನರ್ಘಾಕಾರ –** ಶ್ರೇಷ್ಠ ಆಕಾರ (ಅನೀತಾಖಿಳ ರಾಜಲೋಕಮಂ ಅನರ್ಘಕಾರಮಂ .. .. ತನಗೆ ಮಾಡಲ್ಕೆಂದು ಬಂದಿರ್ದಂ ಈ ಶ್ರೀನಾಥಂ: **ಶಾಂತಿಪು,** ೫. ೮೧)

**ಅನರ್ಘ್ಯರತ್ನ –** ಅನರ್ಘರತ್ನ (ತಮ್ಮ ಮನೆಯೊಳುಳ್ಳ ಅನರ್ಘ್ಯರತ್ನಂಗಳೆಲ್ಲಮಂ ಬಟಿವಟಿಗೊಟ್ಟು: **ಆದಿಪು,** ೧೩. ೮೦ ವ)

**ಅನರ್ಥಕ –** ಪ್ರಯೋಜನರಹಿತ (ಗರ್ಭಂ ಬಳೆಯದ ಬಾಳಕಿಯ ಬಸಿಱ್ ಅನರ್ಥಕಮಲ್ತೇ: **ಮಲ್ಲಿನಾಪು,** ೩. ೯೦); ಅರ್ಥವಿರದ (ತದುಪನ್ಯಸ್ತ .. .. ಅನರ್ಥಕವಚನರಚನಾ ಪ್ರಳಾಪಮಂ ಅವ್ಯಗ್ರಕುಶಾಗ್ರೀಯ ಬುದ್ಧಿಸಮೃದ್ಧಂ ಸ್ವಯಂಬುದ್ಧಂ ಅವಧಾರಿಸಿ: **ಆದಿಪು,** ೨. ೯ ವ)

**ಅನರ್ಥಕಪದ –** ಉಪಯೋಗವಿಲ್ಲದ ಮಾತು (ಮಿಗೆ ದಲ್ ವಲಂ ವೆಱಂ ಮತ್ತೆ ಗಡಂ ಗಳ ಕೆಂ ಎಂಬ ಅನರ್ಥಕಪದಮಂ .. .. ಪೇಟದಿರ್ಕೆ: **ಕಾವ್ಯಾವಲೋ:** ೪೮೫)

**ಅನರ್ಥಕ್ಯ –** ನಿರರ್ಥಕ ಕಾರ್ಯ (ಪೆರ್ಚಿದ ಮೌಖರ್ಯಂ ಅನರ್ಥಕ್ಯದೊಳ್ ವ್ಯತಿಕ್ರಮಂ ಅತಿಪ್ರಸಾಧನಸಹಿತಂ: **ಸುಕುಮಾಚ,** ೬. ೨೦)

**ಅನರ್ಥವಚನ –** ಅರ್ಥವಿಲ್ಲದ ಮಾತು (ನಗದ ಗುಹಾಧ್ವನಿಯವೊಲ್ ಅನರ್ಥವಚನಂ ತನಗಾಗಿಸಲ್ ಅಱಿಯಂ ಉಚಿತವಾಕ್ಯಚತುರತೆಯಂ: **ಕವಿರಾಮಾ,** ೧. ೧೪)

**ಅನಲ –** ಬೆಂಕಿ, ಅಗ್ನಿ (ಗಾಂಗೇಯನುಂ ಸತ್ಯವತಿಯುಂ ಅತ್ಯಂತ ಶೋಕಾನಲದಹ್ಯಮಾನಮಾನಸರ್ಕಳಾಗಿ ಆತಂಗೆ ಪರಲೋಕಕ್ರಿಯೆಗಳಂ ಮಾಡಿ: **ಪಂಪಭಾ,** ೧. ೮೦ ವ)

**ಅನಲಜೆ –** ಬೆಂಕಿಯ ಮಗಳು, ದ್ರೌಪದಿ (ಮುಂದಲೆಯಂ ಪಿಡಿದು ಎನ್ನಯ ಮುಂದೆಟೆದಂ ಅನಲಜೆಯಂ: **ಗದಾಯು,** ೬. ೨೬)

**ಅನಲಮರೀಚಿ –** ಬೆಂಕಿಯ ಕಿರಣ, ಸೂರ್ಯ (ವಿಷಕಿರಣನುಂ ಅನಲಮರೀಚಿಯುಂ ಎಂದೆನಲ್ಕೆ ಮೋಹಾಪೋಹಂ: **ಕವಿರಾಮಾ,** ೩. ೧೮೩)

**ಅನಲವನಿತೆ –** ಅಗ್ನಿಯ ಹೆಂಡತಿ, ಸ್ವಾಹಾದೇವಿ (ಅನಲವನಿತೆಯಂತೆ ಕನಲ್ದು .. .. ಕೆರಳ್ದು ಕಳವಳಿಸಿ ಪೋಪ ಕೆಳದಿಯ ಬಟಿಸಂದು: **ಲೀಲಾವತಿ,** ೧೪. ३३ ವ)

**ಅನಲಾಕ್ಷ –** ಬೆಂಕಿಯ ಕಣ್ಣಿನವನು, ಶಿವ, ಈಶಾನ (ಕುಬೇರಂ ಅನಲಾಕ್ಷಂ .. .. ಸೇರಿ ನೆರೆದೊಪ್ಪಿರೆ: **ರಾಜಶೇವಿ,** ೧೪. ೮೮)

**ಅನಲಾರ್ಚಿ –** ಬೆಂಕಿಯ ನಾಲಗೆ (ಮಲಯರುಹದೊಳ್ ಅನಲಾರ್ಚಿ ನಿನ್ನ ವದನೋದರದೊಳ್ ಪರುಷತರ ವಚನಮಪ್ಪುದು ದುರವಾಪಂ: **ಕವಿರಾಮಾ,** ೩. ೭೯)

**ಅನಲಾಸ್ತ್ರ –** ಆಗ್ನೇಯಾಸ್ತ್ರ, ಬೆಂಕಿಯುಗುಳುವ ಬಾಣ (ಅನಲಾಸ್ತ್ರದಿಂ ಇಸೆ ದಿವಿಜಂ ದನುಜೇಂದ್ರಂ ವಾರುಣಾಸ್ತ್ರದಿಂ ಖಂಡಿಸಿದಂ: **ಪಂಪರಾ,** ೧೦. ೨೦೭)

**ಅನಲೋಷ್ಮ –** ಬೆಂಕಿಯ ಝಳ (ಅನಲೋಷ್ಮಾವಳಿಯಿಂ ಮಹೋಗ್ರಮೆನೆ ಕಾಯ್ದುಷ್ಮಾತಪಜ್ವಾಲೆಗಳ್ಕಿ: **ಕುಸುಮಾಕಾ,** ೮. ೧೪೪)

**ಅನಲ್ಪ –** ಅಲ್ಪವಲ್ಲದ, ದೊಡ್ಡದಾದ (ಈಡಿತ ಜಿನವರ ಶಾಸನ ಚೂಡಾಮಣಿ ಬುಧರ್ಗೆ ಅನಲ್ಪ ಕಲ್ಪಕುಜಂ ಕೆಯ್ ನೀಡಿದ ಬೇಟ್ಪರ ನೆರವಿಗೆ ನೀಡಿಲ್ಲದೆ ಕುಡುವ ಉದಾತ್ತಂ ಆ ಜಿನಚಂದ್ರಂ: **ಶಾಂತಿಪು,** ೧. ೩೨)

**ಅನಲ್ಪವಿಕಲ್ಪ –** ನಾನಾ ಬಗೆಯ ರೂಪರೇಖೆಯಿರುವ (ವಿದಿತೋತ್ತರ ಮಾರ್ಗಗತಂ ಪ್ರತೀತ ವಕ್ರೋಕ್ತಿಕೃತಂ ಅನಲ್ಪವಿಕಲ್ಪಂ: **ಕವಿರಾಮಾ,** ೨. ೫೧)

**ಅನವಕಾರ್ಯ** – ಅವಜ್ಞೆ ಮಾಡಲಾಗದ (ಅನುಕೂಲಕನುಂ ಅನಾಲಸ್ಯನುಂ ಅನವಕಾರ್ಯನುಂ ಲಬ್ಧಿಲುಬ್ಧಸದೃಶನುಂ: **ಅಜಿತಪು,** ೧೧. ೨ ವ)

**ಅನವದ್ಯ** – ದೋಷರಹಿತ, ನಿರ್ದುಷ್ಟ (ಇಂತು ಅನವದ್ಯಮಪ್ಪ ಪದದೊಳ್ ಪತಿಯಂ ನಡೆಯಲ್ಕೆ ಪೇೞ್ದು: **ಆದಿಪು,** ೨. ೬೧)

**ಅನವದ್ಯಚರಿತ** – ಶುದ್ಧಚಾರಿತ್ರ್ಯವುಳ್ಳವನು (ಅನವದ್ಯಚರಿತನೆಂದು ಅಱಿದು ಅನಿಬರ ಕಡೆವುಟ್ಟಿದಾಕೆ ಹನುಮಂಗೆ ಅಸ್ಮಜ್ಜನಕಂ ದಧಿಮುಖಂ: **ಪಂಪರಾ,** ೧೧. ೬೨)

**ಅನವದ್ಯದಾನ** – ಕಳಂಕರಹಿತ ದಾನ (ಅಪಾತ್ರಕ್ಕೆ ಇತ್ತೊಂದು ಅನವದ್ಯದಾನಂ ಅದು ಭಸ್ಮನಿಹುತಮೆಂಬಂತೆ ಮೇಲೆ ನಿಷ್ಫಲಮಕ್ಕುಂ: **ಸಮಯಪ,** ೭. ೫೫)

**ಅನವದ್ಯಾಚರಣ** – ನಿರ್ದುಷ್ಟ ಆಚಾರ (ಅನವದ್ಯಾಚರಣಕ್ಕೆ ಉದಾಹರಣಂ ಉದ್ಯತ್ಕೀರ್ತಿಗೆ ಆಧಾರಂ ಆಳ್ದನ ಕಾರ್ಯಕ್ಕೆ ಮರುತ್ತನೂಜಂ .. .. ಎಂದು ಪೊಗೞ್ಗುಂ ವಿದ್ವಜ್ಜನಂ ದುರ್ಗನಂ: **ಪಂಚತಂತ್ರ,** ೫೦)

**ಅನವದ್ಯಾಚಾರ** – ಅನವದ್ಯಾಚರಣ (ಅನುರೂಪಂಗೆ ಕುಲೀನಂಗೆ ನಿಖಿಲವಿದ್ಯಾವಿದಂಗೆ ತೇಜೋನಿಳಯಂಗೆ ಅನವದ್ಯಾಚಾರಂಗೆ ಈ ವನಜಾಕ್ಷಿಯನೀವೆನೆಂದು ದಿವ್ಯಮುನೀಂದ್ರಂ: **ಪಂಚತಂತ್ರ,** ೩೬೦)

**ಅನವದ್ಯೆ** – ದೋಷರಹಿತೆ (ಅನವದ್ಯೆಯರಾಗಳ್ ಮುತ್ತಿನ ಸೇಸೆಯನಿಕ್ಕಿ ಪರಸಿದರ್ ಮನದೊಲವಿಂ: **ರಾಜಶೇವಿ,** ೮. ೭೬)

**ಅನವಧಿ** – ಕೊನೆಯಿಲ್ಲದ (ಭಾವಂ ಪ್ರಸನ್ನ ರಸಂ ಅನವಧಿ ಮಾಧುರ್ಯಂ ಆಶ್ಚರ್ಯಮೆಂದೀ ಜಗಮೆಲ್ಲಂ ಮೆಚ್ಚೆ ಪೇೞ್ವಂ ಚತುರಕವಿಜನಾಸ್ಥಾನರತ್ನಪ್ರದೀಪಂ: **ಮಲ್ಲಿನಾಪು,** ೧. ೪೩)

**ಅನವಧಿತ್ಯಾಗ** – ಅಪಾರ ತ್ಯಾಗ (ಕಲ್ಪಮಹೀಜದಿಂದ ಅನವಧಿತ್ಯಾಗಪ್ರಭಾವಂ .. .. ಶ್ರೀನಿಳಯಂ ಸುಪುತ್ರನೊಗೆತರ್ಕುಂ: **ಪುಷ್ಪದಂಪು,** ೩. ೧೨೨)

**ಅನವಧಿಬೋಧ** – ಕೊನೆಯಿಲ್ಲದ ಜ್ಞಾನ ಪಡೆದವನು (ಸಮನಿಕುಂ ಅಱಿವಿಂದ ಅವ್ಯಾಮೋಹತೆ ಸಾರ್ಗುಂ ಅವ್ಯಾಹತಸುಖಂ ಈಗುಂ ಅನವಧಿಬೋಧಾ: **ಚಂದ್ರಪ್ರಪು,** ೭. ೧೪)

**ಅನವರತ** – ನಿರಂತರವಾದ (ಅನವರತ ಪರಮಸುಖಸಾಧನ ಚರಿತಂ ಜಿನಕುಮಾರಸದೃಶಂ ಭವ್ಯಂ ನಿನಗೆ ಮಗಂ ಪುಟ್ಟುಗುಂ: **ಸುಕುಮಾಚ,** ೧೦. ೨)

**ಅನವರತಂ** – ಒಂದೇ ಸಮನೆ, ಸದಾಕಾಲ (ಅನವರತಂ ಇರ್ಕೆ ಮತ್ ಭಾವನೆಯೊಳ್ ಪಡಿಯಿಲ್ಲದ ಅಮಳ ಜಿನಮತ ಮಣಿಕೇತನದೆಸೆವ ಪಡಿಗಳೆನಿಸಿದ ಜಿನಸೇನಾಚಾರ್ಯ ವೀರಸೇನಾಚಾರ್ಯರ್: **ಶಾಂತೀಶ್ವಪು,** ೧. ೧೭)

**ಅನವಲಂಬಿತಂ** – ಅವಲಂಬನೆಯಿಲ್ಲದೆಯೇ (ಎಂದು ತಥಾಗತಮತಮಂ ತಿರಸ್ಕರಿಸಿ ತನ್ನೊಳ್ ಅಶಕ್ಯಾನುಷ್ಠಾನಕ್ಕೆ ಪೊಣರ್ದ ಲೋಕಾಯತ ಶಾಕ್ಯಮತಾವಲಂಬಿಯಂ ಅನವಲಂಬಿತಂ ಗೆಲ್ದು: **ಶಾಂತಿಪು,** ೮. ೧೪೭ ವ)

**ಅನಶನ** – ಆಹಾರರಹಿತ, ಉಪವಾಸ (ಎನಗೆ ಇಂದಿಂಗೆ ಆಱುತಿಂಗಳ್ ಸಮನಿಸಿದಪುದಿಲ್ಲ ಎಲ್ಲಿಯುಂ ಬಂದಿಮಂಚಲ್ ಖನನಪ್ರಾರಂಭ ಚೌರ್ಯಾದಿಗಳ್ ಅನಶನಂ ಈಗಳ್ ಚತುರ್ವಾಸರಂ **ಸುಕುಮಾಚ,** ೭. ೧೮); [ಜೈನ] ನಾಲ್ಕು ಬಗೆಯ ಆಹಾರವಿಸರ್ಜಿಸಿ ಮಾಡುವ ತಪಸ್ಸು (ಮೋಹಾಂದತಮಸ್ತೋಮಮಂ ಕಳೆದು ಕೃತ ಅನುಶಯನಂ ಅನಶನವಿಧಾನದಿಂ ಅಸುವಚಂ ವಿಸರ್ಜಿಸಿ ಸೌಧರ್ಮಕಲ್ಪದೊಳ್ ದೇವನಾಗಿ: **ಆದಿಪು,** ೨. ೧೭ ವ)

**ಅನಶನತಪ** – ಉಪವಾಸವ್ರತ (ಉಪವಾಸವ್ರತಪ್ರಚುರತೆಯಿಂ ವಪು ಗಿಡಿಗಿಡಿಜಂತ್ರಮಾದುದೆಂಬನ್ನೆವರಂ ಕ್ಷಪಿಯಿಸಿ ಮುನೀಂದ್ರಂ ಅನಶನತಪದೊಳ್ ತಱಿಸಂದ ಸಲವು ಅದೊಂದಾಶ್ಚರ್ಯಂ: **ಸುಕುಮಾಚ,** ೩. ೪)

**ಅನಶನದೀಕ್ಷೆ** – ಆಹಾರ ತೆಗೆದುಕೊಳ್ಳದ ವ್ರತ (ಕುರುನರೇಂದ್ರನರಸಿಯರ್ ಮೊದಲಾಗೆಲ್ಲರುಂ ಅನಶನದೀಕ್ಷೆಯಂ ಕೈಕೊಂಡು ಉತ್ತಮ ಮೋಕ್ಷಮಂ ತಾಳ್ದಿದರ್: **ಗದಾಯು,** ೧೦. ೨೦, ವ?)

**ಅನಶನವೃತ್ತಿ** – ಅನಶನವ್ರತ (ಅನಶನವೃತ್ತಿ ಆದಿ ತಪೋನುಷ್ಠಾನಮಂ .. .. ಪೇೞ್ದು ಕೈಕೊಳಿಸಿ: **ಆದಿಪು,** ೧೫. ೧೩ ವ)

**ಅನಶ್ವರ** – ಶಾಶ್ವತ (ಉಪಶಿಷ್ಟ ಗುಣಾಷ್ಟಕರಾದನಶ್ವರ ಶ್ರೀವನಿತೇಶರ್ ಈಗೆ ಎಮಗೆ ಸಿದ್ಧರ್ ಅತೀಂದ್ರಿಯಸೌಖ್ಯಸಿದ್ಧಿಯಂ: **ಚಂದ್ರಪ್ರಪು,** ೧. ೨)

**ಅನಶ್ವರಶ್ರೀ** – ಮೋಕ್ಷಪದವಿ (ದೇವ ಭವತ್ಪದಸೇವನೆಯಿಂ ಆ ವಿಶ್ರುತಮಪ್ಪ ಅನಶ್ವರಶ್ರಿಯಕ್ಕುಂ:: **ಕರ್ಣನೇಮಿ,** ೧೨. ೨೬೮)

**ಅನಶ್ವರಾವಾಸ** – ಶಾಶ್ವತಸ್ಥಾನ, ಮುಕ್ತಿ (ಭಾಸುರದೇವಕೋಟಿವಿಭುವಪ್ಪ ಮಹರ್ದ್ಧಿಕನಪ್ಪ ವಾಸವಂಗಾಸನಕಂಪಮಂ ಪಡೆದು ತೀರ್ಥಕರತ್ವಮನಿತ್ತಂ ಅನಶ್ವರಾವಾಸಮನೆಯ್ದಿಸಲ್ಕೆ: **ಆದಿಪು,** ೧೬. ೮೧)

**ಅನಶ್ವರಾಸ್ಪದ** – ಮೋಕ್ಷಸ್ಥಾನ (ಅನಂತಗುಣನಿಳಯನಾದಿದೇವಂ ಪಲಬರ್ ಮುನಿಪತಿಗಳ್ ವೆರಸಡರ್ದಪಂಅನಶ್ವರಾಸ್ಪದಮಂ: **ಆದಿಪು,** ೧೬. ೪೯)

**ಅನಳಾರ್ಚಿ** – ಬೆಂಕಿಯ ಜ್ವಾಲೆ (ಬಳೆದ ಜಡೆ ಬಳ್ಳಿಗಳೊಳೆ ಪೆಣೆದು ವಿಷೋರಗ ಅನಳಾರ್ಚಿಗಳಿಂದಂ ಮಿಳಿರ್ದುವು: **ಆದಿಪು,** ೧೪. ೧೪೨)

**ಅನಾಕಾರ** – ರೂಪವಿಲ್ಲದ (ಮುಕ್ತಜೀವನಪ್ಪೊಡೆ ಏಕಪ್ರಕಾರನುಂ ಅನಾಕಾರನುಂ ಅಶರೀರಾಕಾರದಿಂ ಕಿಂಚಿದೂನನುಂ: **ಸುಕುಮಾಚ,** ೮. ೧೪ ವ)

**ಅನಾಕುಳ** – ಪರಿಶುದ್ಧವಾದ (ತಿಳಿದೆಂ ಮೂಱುನೆಯೆನ್ನತೀತ ಭವದೊಳ್ ಶ್ರೀಷೇಣನಂ ಕೊಟ್ಟು ಅನಾಕುಳಮಾಹಾರದ ದಾನಮಂ .. .. ದೇವತ್ವಮಂ ಪೆತ್ತೆಂ; **ಶಾಂತಿಪು,** ೭. ೨೦)

**ಅನಾಕುಳಂ** – ಪ್ರಶಾಂತವಾಗಿ (ಅನಾಕುಳಂ ಮನದಲಂಪಿನೊಳ್ ಆ ಮದನೋಪಮಾನನೊಳ್ ನೆರೆವೆಂ: **ಕವಿರಾಮಾ,** ೨. ೧೦೫); ಅನಾಯಾಸವಾಗಿ (ಈ ಸಭಾವಳಯದೊಳ್ ಎನ್ನನೇಳಿಸಿದ ನಿನ್ನಂ ಅನಾಕುಳಮೆನ್ನ ಚಟ್ಟರಿಂ ತಳವೆಳಗಾಗೆ ಕಟ್ಟಿಸದೆ ಮಾಣ್ದೊಡೆ ಕೆಮ್ಮನೆ ಮೀಸೆವೊತ್ತನೇ: **ಪಂಪಭಾ,** ೨. ೫೦)

**ಅನಾಗತ** – ಮುಂದೆ ಸಂಭವಿಸುವ, ಭವಿಷ್ಯದ (ಪುರಜನಂಗಳೆಲ್ಲಮೋರೊರ್ವರನೆ ಪಿಡಿಯಚ್ಚುವಿಡಿದು ನುಡಿಯೆ ಕೆಲರ್ ಅನಾಗತಮನಱಿವ ಬುದ್ಧಿಯೊಡನೆ ಇಂತೆಂದರ್: **ಪಂಪಭಾ,** ೨. ೮೬ ವ)

**ಅನಾಗತಮತಿ** – ಭವಿಷ್ಯವನ್ನು ಬಲ್ಲವನು (ಮುನಿವರರೆಂತೀ ಗಿರಿಗೆ ಚರಿಗೆವರ್ಪರ್ ಅನಾಗತಮತಿ ಬಗೆಯ ನೀನುಪಾಯಾಂತರಮಂ: **ಆದಿಪು,** ೫. ೭)

**ಅನಾಗತಂ** – ಭವಿಷ್ಯಜ್ಞಾನದ ಮೂಲಕ (ಮುನ್ನಂ ವಾಲ್ಮೀಕಿಮುನಿ ರಾಮಾಯಣಮಂ ಅನಾಗತಂ ಕಂಡುದಂ ಗ್ರಂಥವಿಸ್ತರಂಗೆಯ್ದಲ್ಲಿ: **ಪಂಚತಂತ್ರ,** ೧೧೭ ವ)

**ಅನಾಗತಕರ್ತೃ** – ಭವಿಷ್ಯವನ್ನು ರೂಪಿಸುವವನು (ವ್ಯಾಸಭಟ್ಟಂ ಮಹಾಭಾರತಕಥಾಪ್ರಪಂಚಮಂ ಅನಾಗತಂ ಕಂಡು ಅದಂ ಗ್ರಂಥ ವಿಸ್ತರಂ ಮಾಡಲ್ಬಗೆದು: **ಪಂಚತಂತ್ರ,** ೧೧೭ ವ)

**ಅನಾಗತಜ್ಞ** – ಭವಿಷ್ಯವನ್ನು ಬಲ್ಲವನು (ತತ್ ತಾಪಸಂ ಅನಾಗತಜ್ಞನಪ್ಪುದರಿಂ ಇಂತೆಂದಂ: **ಕರ್ಣನೇಮಿ,** ೩. ೨೭ ವ)

**ಅನಾಗತಮತಿ** – ಭವಿಷ್ಯವನ್ನು ತಿಳಿದವನು (ಮುನಿವರರ್ ಎಂತೀ ಗಿರಿಗೆ ಚರಿಗೆಗೆವರ್ಪರ್ ಅನಾಗತಮತಿ ಬಗೆಯ ನೀನುಪಾಯಾಮತರಮಂ: **ಆದಿಪು,** ೫. ೭)

**ಅನಾಗತವೇದಿ** – ಅನಾಗತಮತಿ (ಎನ್ನ ಮಾಡಿದ ಅಟಿಗಜ್ಜಂ ಪೇಟಿನ್ನೆಂತು ಮಾಡಲಕ್ಕುಂ ಇದನ್ನಯದೊಳ್ ಕೂಡುವತೆ ಅನಾಗತವೇದೀ: **ಪಂಚತಂತ್ರ,** ೧೨೨)

**ಅನಾದಿಪ್ರಭವ** – ಅನಾದಿಕಾಲದಲ್ಲಿ ಹುಟ್ಟಿದ್ದು (ಇದು ಅನಾದಿಪ್ರಭವಂ ಭವಭ್ರಮಣ ದುಃಖೋಗ್ರಾಗ್ನಿಯೊಳ್ ಮಗ್ಗಿದಪ್ಪುದು ಜೀವಂಗಳಂ: **ಆದಿಪು,** ೧೫. ೧೯)

**ಅನಾದಿಮಿಥ್ಯಾತ್ವ** – [ಜೈನ] ಹಿಂದಿನಿಂದ ಬಂದ ತಪ್ಪು ತಿಳಿವಳಿಕೆ (ಒಲವಿಗೆ ನಲಿಯುವ ಅನಾದಿಮಿಥ್ಯಾತ್ವದೆ ಮಟ್ಗಿದ ಮತಿಯದು ನಿನ್ನಿಂದಲ್ಲದೆ ಪಜ್ಜಳಿಸುಗುಮೆ: **ಚಂದ್ರಪ್ರಭು,** ೭. ೮)

**ಅನಾದೇಯ** – ಸ್ವೀಕರಿಸಬಾರದ (ದೇವತೆಯ ನುಡಿದ ನುಡಿ ಸಾರಮಸಾರಂ ಉಪಾದೇಯಂ ಅನಾದೇಯಂ ಎಂಬಿನಿತಂ ನಿಮಗಱಿಯಲಕ್ಕುಮೆ: **ಶಾಂತಿಪು,** ೪. ೧೦೨ ವ); [ಜೈನ] ನಾಮಕರ್ಮಗಳಲ್ಲಿ ಒಂದು; ಇದರಿಂದ ಜೀವನಿಗೆ ಕಾಂತಿರಹಿತ ಶರೀರ ಪ್ರಾಪ್ತವಾಗುವುದು (ಸ್ಥಿರಾಸ್ಥಿರ ಸುಭಗದುರ್ಭಗ ಸುಸ್ವರ ದುಸ್ವರ ಆದೇಯ ಅನಾದೇಯ ಯಶಸ್ಕೀರ್ತಿ ಅಯಶಸ್ಕೀರ್ತಿ .. .. ಪ್ರಕೃತಿಗಳಂ ದೂರೀಕೃತಂ ಮಾಡಿ: **ಪಂಪರಾ,** ೧೬. ೮೦ ವ)

**ಅನಾದ್ಯನಿಧನ** – ಹುಟ್ಟುಸಾವಿಲ್ಲದ್ದು, ಅನಾದಿ ಅನಂತವಾದುದು (ವಸ್ತುಗಳೆಲ್ಲಂ ಒಳವಪ್ಪುದಱಿಂ ಅನಾದ್ಯನಿಧನ ಸ್ವಭಾವನುಂ: **ಆದಿಪು,** ೨. ೧೦ ವ)

**ಅನಾಧಾರತೆ** – ಆಧಾರರಾಹಿತ್ಯ, ಆಶ್ರಯರಾಹಿತ್ಯ (ಮೇರುವನೊತ್ತಿ ಕಿಟಿತ್ತೊಡೆ ಪಯೋಮಯವಾಯ್ತೊ ನಭಂ ನೆಲ್ಲೆ ಅನಾಧಾರತೆಯಿಂದೆ ಬಿಟ್ಟುದೊ: **ಚಂದ್ರಪ್ರಭು,** ೫. ೩೮)

**ಅನಾಧೇಯ** – ಆಧಾರವನ್ನು ತಿರಸ್ಕರಿಸುವ, ಯಾವುದೇ ಆಶ್ರಯವಿರದ (ಧರೆಯಂ ಸದ್ಧರ್ಮಾಶ್ರಯಧರೆಯಂ ಅನಾಧೇಯನಱಿಯದೆ ಆಕಲ್ಪಂ ನೀಂ ಧರಿಯಿಸೆ ತಪಂ ಅದೆ: **ಚಂದ್ರಪ್ರಭು,** ೯. ೪೧)

**ಅನಾಪ್ತ** – ಸಿಕ್ಕದ; ಪಡೆಯದ (ಆಪ್ತನ ಮಾರ್ಗದೆ ನಡೆಯರ್ ಅನಾಪ್ತ ಆರಾಧಕಸಮಾಜಂ: **ಸಮಯಪ,** ೧೪. ೭೪)

**ಅನಾಪ್ತಾಗಮ** – ಆಪ್ತರಲ್ಲದವರು ರಚಿಸಿದ ಶಾಸ್ತ್ರ (ಆಪ್ತಾಗಮಧರ್ಮಮುಮಂ ಅನಾಪ್ತಾಗಮಮುಂ ಆ ಕುಧರ್ಮಮೆಂಬೆರಡುಮಂ ಒಲ್ದು ಆಪ್ತೋದಿತಮೆನಿಪ ಸುಖಾವಾಪ್ತಿಯಂ ಪಲ್ವರ್ಗೆ: **ಸಮಯಪ,** ೧. ೬೨)

**ಅನಾಭಿಲಾಷೆ** – ಆಸೆಯಿಲ್ಲದ್ದು (ಪರಯುವತರತ ಅನಾಭಿಲಾಷೋದ್ಯಮಂ ಬಹ್ವಾರಂಬಕಾಂಕ್ಷೆಯೆಂಬಿವು .. .. ಜಿನಗದಿತ ಅಣುಬ್ರತಂಗಳ್: **ಸುಕುಮಾಚ,** ೬. ೯)

**ಅನಾಮಯ** – ಪರಿಶುದ್ಧ (ಪರಿಣತವಯಸ್ಕನುಂ ವಪುಷ್ಕಾಂತನುಂ ಅನಾಮಯಶರೀರನುಂ .. .. ನೆಱೀದಂ ಆಚಾರ್ಯನಕ್ಕುಂ: **ಅಜಿತಪು,** ೧೧. ೨ ವ) ಶಿವ (ನೆನೆದಂ ಅನಂತತತ್ತ್ವಮಯನಂ .. .. ಅನಾಮಯನಂ ಚಿದಚಿತ್ ಪ್ರಪಂಚರಂಜನನಂ: **ಶಬರಶಂ,** ೨. ೯೮)

**ಅನಾಯತನಸೇವೆ** – [ಜೈನ] ಆರು ಬಗೆಯ ಮಿಥ್ಯೆಗಳ ಸೇವೆ (ಮೂಱು ಮೂಢಗಳುಂ ಆಱು ಅನಾಯತನಸೇವೆಗಳುಂ ಎಂದಿಂತು ಇಪ್ಪತ್ತೈದು ದೋಷಂಗಳಿದಗಲ್ದ ಸಮ್ಯಕ್ತ್ವಮಂ: **ವಡ್ಡಾರಾ,** ಪು. ೬. ಸಾ. ೨೨)

**ಅನಾಯತಸೇವೆ** – [ಜೈನ] ಆರು ಬಗೆಯ ಮಿಥ್ಯಾಸೇವೆ (ಮಿಥ್ಯಾದೇವರುಂ ಮಿಥ್ಯಾಲಯಮುಂ ಮಿಥ್ಯಾತಪಮುಂ ಮಿಥ್ಯಾತಪಸ್ವಿಯುಂ ಮಿಥ್ಯಾಜ್ಞಾನಮುಂ ಮಿಥ್ಯಾವಿನಯಂ ಎಂಬ ಷಟ್ ಅನಾಯತಸೇವಾವಿರಹಿತಮುಂ: **ಅಜಿತಪು,** ೧೨. ೧ ವ)

**ಅನಾಯುಧ** – ಆಯುಧರಹಿತ (ಕೈದುವಿಡಿಯೆನಾಂ ನಿನಗೆ ಅನಾಯುಧಂಗೆ ಎಂದು .. .. ತೊಟ್ಟನೆ ಬಿಸುಟಂ ಪಿಡಿದ ಬಡಿಯಂ ಅಂತಾ ದಡಿಯಂ: **ಚಂದ್ರಪ್ರಭು,** ೫. ೭೬)

**ಅನಾರತಂ** – ಬಿಡುವಿಲ್ಲದೆ, ನಿರಂತರವಾಗಿ (ವರರತ್ನದ್ವೀಪಂ ಭಾಸುರರತ್ನಾಳಿಯಂ ಅನಾರತಂ ಕೊಟ್ಟು ವಸುಂಧರೆಗಭ್ರದತ್ತ ನೆಗೆಯಲ್ಕೆ: **ಆದಿಪು,** ೧೬. ೪೪)

**ಅನಾವಿಳ** – ಶುಭ್ರ (ಅನಾವಿಳಂ ಪ್ರಸನ್ನಂ ಸ್ವಚ್ಛಂ: **ಅಭಿಧಾವ,** ೨. ೧. ೬೦)

**ಅನಾವೃಷ್ಟಿ** – ಮಳೆಯಿಲ್ಲದ ದುರ್ಭಿಕ್ಷ (ಆತನ ಅಪಚಾರಣಮೆ ಕಾರಣಮಾಗಿ ಪನ್ನೆರಡುವರ್ಷಂ ಅನಾವೃಷ್ಟಿಯಾದಪ್ಪುದು: **ಪಂಚತಂತ್ರ,** ೧೩೮ ವ)

**ಅನಾಸಿಕ** – ಮೂಗಿಲ್ಲದವನು (ಜೈನಧರ್ಮಮೆಂತುಂ ಅಸಂಭಾವಿತಮತಿಗೆ ಸೊಗಯಿಸದು ರಾಜಿತದರ್ಪಣಂ ಎಂತು ಅನಾಸಿಕಂಗೆ ಉಱಿಸದವೋಲ್: **ಸಮಯಪ,** ೫. ೪೭)

**ಅನಾಹತಲೀಲೆ** – ಕುಗ್ಗದ ಲೀಲೆ (ಘನಗರಳಂ ವಿಜೃಂಭಿಸೆ ಫಣಾಮಣಿ ರಂಜಿಸೆ ಘೋರ ಘೂತ್ಕೃತಧ್ವನಿ ಮಿಗೆ ಪಾವು ಸುತ್ತಿರಲ್ ಅನಾಹತಲೀಲೆಯೊಳ್ ಅಂದು .. .. ಕೃಷ್ಣಂ ಎಸೆದಿರ್ದೊಡೆ: **ಜಗನ್ನಾವಿ,** ೩. ೯೧)

**ಅನಿತಿನಿತು** – ಅಷ್ಟಿಷ್ಟು (ಅನಿತಿನಿತೆಂದು ಲೆಕ್ಕಮಿಡಲಾನಱಿಯೆಂ: **ಮಲ್ಲಿನಾಪು,** ೨. ೩೮)

**ಅನಿತು** – ಅಷ್ಟು (ನಿಮಗಿಂದಿನ ದಿವಸದನಿತೆ ಆಯುಷ್ಯಂ ಎಂದು ಪೇೞ್ದುಂ: ವಡ್ಡಾರಾ, ಪು. ೭೬, ಸಾ. ೨೬)

**ಅನಿಧನ** – ಸಾವಿಲ್ಲದ, ನಾಶವಿಲ್ಲದ (ಅನಾದಿ ಅನಿಧನ ಗುಣಯುತಂ ಅದು ಅಕೃತ್ರಿಮ ಂ ಅದು ಮರುತ್ತ್ರಿಕಾವೇಷ್ಟಿತಂ: **ಆದಿಪು,** ೧. ೪೪)

**ಅನಿಬರ್** – ಅಷ್ಟೂ ಮಂದಿ (ಸಾಸಿರ್ವರ್ ಏಱಿದೊಡಲ್ಲದೆ ಈ ಓಡಂ ನಡೆಯದು ಎಂಬುದುಂ ಆಂ ಅನಿಬರ ಬಿಣ್ಪುಮಪ್ಪೆಂ ಏಱಿಸೆಂದೊಡೆ ಗೆಯ್ವೆಂ ಎಂದೊಡಂ ಏಱಿಸಿ ನಡೆಯಿಸುವಲ್ಲಿ: **ಪಂಪಭಾ,** ೧. ೬೮ ವ)

**ಅನಿಮಿತ್ತಂ** – ಕಾರಣವಿಲ್ಲದೆ (ಹಾಹಾಕ್ರಂದನಧ್ವನಿಗಳ್ ಅನಿಮಿತ್ತಂ ಆಕಾಶದೊಳ್ ನೆಗೞೆಯುಂ: **ಪಂಪಭಾ,** ೧೦. ೨೬ ವ)

**ಅನಿಮಿಷ** – ಕಣ್ಣು ಮಿಟುಕಿಸದ, ಮೀನು (ಅನಿಮಿಷ ಕುಲಾಕೀರ್ಣಮುಂ ಪಾತಾಳಭುವನದಂತೆ ಬಹಳ ವಿಷನಾಗಮಯಮಾಗಿಯುಂ: **ಶಾಂತೀಶ್ವಪು,** ೧. ೬೯ ವ);

ದೇವತೆ (ಅಮರರ್ ಸುಪರ್ವರ್ ಅನಿಮಿಷರ್ ಅಮರ್ತ್ಯರ್ ಅಸ್ವಪ್ನರ್ ಅದಿತಿತನಯರ್ ಲೇಖರ್ ಸುಮನರ್ ಗೀರ್ವಾಣರ್ ಸುರರ್ ಅಮೃತಾಶರ್ ಕ್ರತುಭಾಜನರ್ ನಿಳಿಂಪರ್ ತ್ರಿದಶರ್: ಅಭಿಧಾವ, ೧. ೧. ೩೧)

**ಅನಿಮಿಷಚಾಪ** – ಕಾಮನ ಬಿಲ್ಲು (ಅನಿಮಿಷಚಾಪದಂತೆ ಸಿರಿ ಶಾರದನೀರದಕಾಂತಿಯಂತೆ ಯೌವನದೆಸಕಂ ತೃಣಾಗ್ರಗತ ವಾಃಕಣಿಕಾಗಣದಂತೆ ಸಂದ ಜೀವನಂ: **ಪಂಚತಂತ್ರ,** ೧೧೬)

**ಅನಿಮಿಷಜಾತ** – ದೇವತಾ ಸಮೂಹ (ಅನಂತಕೋಟಿ ದಿನೇಶದ್ಯೋತಾಭಮಿರ್ದುದು ಅನಿಮಿಷಜಾತಂ ಚಿರನಿಮಿಷಮಾಗೆ ಕಣ್ಬುಳ್ಳುವಿನಂ: **ಜಗನ್ನಾವಿ,** ೧. ೪೨)

**ಅನಿಮಿಷದ್ರೋಹ** – ದೇವತಾದ್ರೋಹಿ, ರಾಕ್ಷಸ (ಅನಿಮಿಷದ್ರೋಹಂ ಅನಿಮಿಷಮಾರ್ಗದೊಳಿರ್ದ ದುರ್ಗಿಯಂ .. .. ನೋಡುತ್ತುಮಿರೆ: **ಜಗನ್ನಾವಿ,** ೬. ೧೫ ವ)

**ಅನಿಮಿಷಪತಿ** – ದೇವತೆಗಳ ಒಡೆಯ, ಇಂದ್ರ (ಅನಿಮಿಷಪತಿಯಂ ತ್ರಿಜಗಜ್ಜನಪತಿಯಂ ಪೊತ್ತು ಪಥಪರಿಶ್ರಮಂ ಒದವಿತ್ತೆನೆ: **ಅಜಿತಪು,** ೪. ೭೪)

**ಅನಿಮಿಷಪ್ರಕೀರ್ಣಕ** – ಮೀನುಗಳ ಹಿಂಡು; ದೇವತಾಸಮುಹ (ಆ ಮಹಾರ್ಣವಂ .. .. ನಾಕಲೋಕದಂತೆ ಅನಿಮಿಷಪ್ರಕೀರ್ಣಕಮೂ: **ಜಗನ್ನಾವಿ,** ೧. ೪೪ ವ)

**ಅನಿಮಿಷಮಾರ್ಗ** – ಆಕಾಶ (ಅನಿಮಿಷದ್ರೋಹಂ ಅನಿಮಿಷಮಾರ್ಗದೊಳಿರ್ದ ದುರ್ಗಿಯಂ .. .. ನೋಡುತ್ತುಮಿರೆ: **ಜಗನ್ನಾವಿ,** ೬. ೧೫ ವ)

**ಅನಿಮಿಷಲೋಚನ** – ದೇವತೆ (ವಿನಿಹತ ಸಮಸ್ತ ರಿಪುಕುಳಂ ಅನಿಮಿಷಲೋಚನನದೆ ನೋಡಿ ನೀಡುಂ ಪ್ರಿಯೆಯಂ .. .. ಆಶ್ಲೇಷಿಸಿದಂ: **ಕವಿರಾಮಾ,** ೨. ೭೪)

**ಅನಿಮಿಷಶೈಳ** – ದೇವತೆಗಳ ಪರ್ವತ, ಮೇರುಪರ್ವತ (ಮನ್ಮಥಮದಭಂಜನ ಜಿನಜನ್ಮಾಭಿಷವಾನುಕೂಲಂ ಅನಿನಿಷಶೈಳಂ: **ಆಚವರ್ಧ,** ೧. ೩೧)

**ಅನಿಮೇಷ** – ದೇವತೆ (ಅನಿಮೇಷರ್ ನೂತನಪ್ರಸ್ತುತ ಸುರಭಿ ಸುಧಾ ಕ್ಷೀರಧಾರಾ ಅಭಿಷೇಕಾರ್ಚನೆಯಂ .. .. ಪರಸಿದರ್ ಮಸ್ತಕನ್ಯಸ್ತಹಸ್ತರ್: **ಆದಿಪು,** ೧೪. ೧೧೬)

**ಅನಿಮೇಷಾಧಿಪತಿ** – ಇಂದ್ರ (ಅನಿಮಿಷೇಧಿಪತಿ ಸಹಸ್ರನೇತ್ರನಾಗಳ್ ಸಹಸ್ರಕರನಾದಂ: **ಅಜಿತಪು,** ೫. ೧೯)

**ಅನಿಮೇಷಾವಳಿ** – ದೇವತೆಗಳ ಗುಂಪು (ಅನಿಮೇಷಾವಳಿ ಮಾಳೆಗಟ್ಟಿ ತರದಿಂ ದುಗ್ಧಾಬ್ಧಿಯಂ ಮುಟ್ಟಿ: **ಸುಕುಮಾಚ,** ೧. ೬೬)

**ಅನಿಮ್ನನಾಭಿ** – ಆಳವಿಲ್ಲದ ಹೊಕ್ಕಳುಳ್ಳ (ಸಮಪಾರ್ಶ್ವನುಂ ಅಜಕುಕ್ಷಿಯುಂ ಗೋಧೋತ್ರಿಷ್ಟನುಂ ಮೋಹಜಘನಾಪರನುಂ ಅನಿಮ್ನನಾಭಿಯುಃ: **ಆದಿಪು,** ೧೨. ೫೬ ವ)

**ಅನಿಯತವೃತ್ತಕ್ರಮ** – ನಿಯಮಕ್ಕೊಳಪಡದ ನಡತೆ (ದಿನೇಶನುಂ ನೀನುಂ ಭಾಸ್ಕರಂ ಅನಿಯತವೃತ್ತಕ್ರಮಮಂ ಅರಸಾ ನಿನ್ನಂತೆ ನಿಯತವೃತ್ತಿಸ್ಥಿತನೈ: **ಕವಿರಾಮಾ,** ೩. ೪೧)

**ಅನಿಯತಿಕೆ** – ನಿಯಮರಾಹಿತ್ಯ (ಅನಿಯತಿಕೆಯಿಂದೆ ನಡೆಸಲ್ಕಿನಿತಾದುದು ಶಿಕ್ಷೆಗೆಟ್ಟ ಕಾರಣದಿಂದಂ: **ಧರ್ಮಾಮೃ:** ೨. ೫೦)

**ಅನಿಯಾತಾವಾಸ** – ನಿರ್ದಿಷ್ಟ ನೆಲೆಯಿಲ್ಲದ (ಪಾಷಂಡಿಗಳಂತೆ ಕೊಳ್ಳದರುಂ ಪಕ್ಕಿಗಳಂತೆ ಅನಿಯತಾವಾಸರುಂ: **ಚಾವುಂಪು,** ಪು. ೪೫೮. ಸಾ. ೩೩)

**ಅನಿರುದ್ಧ** – ತಡೆಯಿಲ್ಲದ (ವಸುದೇವಭವನದಂತೆ ಅನಿರುದ್ಧಬಲ ಕೃಷ್ಣಸಾರಸಂಚಿತಮುಂ: **ರಾಜಶೇವಿ,** ೫. ೭೪ ವ); ಪ್ರದ್ಯುಮ್ನನ ಮಗ

**ಅನಿಲ** – ಗಾಳಿ, ವಾಯು (ಇಂದ್ರಾಯುಧಮೆಂಬದೊಂದು ದಿವ್ಯಾಸ್ತ್ರಂ ಅಟ್ಟಿದಂ ನಿನಗೇಱಲ್ಕೆ ಅದು ಅನಿಲ ಗರುಡ ಜವಮೆನಿಸಿದುದು ತ್ರಿಜಗಕ್ಕೆ ರತ್ನಮಂ ನಿಜಜನಕಂ: **ಕಾದಂಸಂ,** ೨. ೩೭)

**ಅನಿಲಕ** – ಚಿತ್ರಗಳಿಗೆ ಬಣ್ಣ ಹಾಕುವ ಒಂದು ಬಗೆ (ಅನಿಲಕಂ ಪತ್ರಕಂ ಬಿಂದುಕಂ ಧೂಮ್ರಾವರ್ತನಂ ಉದ್ವರ್ತನಂ ಚಿತ್ರಪ್ರವರ್ತನಂ ಎಂಬಾಱುಂ ಪ್ರಕಾರಮುಮಂ: **ಮಲ್ಲಿನಾಪು,** ೫. ೪೨)

**ಅನಲತನಯ** – ವಾಯುಪುತ್ರ; ಭೀಮ; ಆಂಜನೇಯ (ಮನೋಜನಿತಮುದಂ ಅನಿಲತನಯಂ ಅನನೃತವಚನ ಪ್ರಪಂಚನಿಂತಿರೆ ನುಡಿದಂ: **ಕವಿರಾಮಾ,** ೨. ೪೦)

**ಅನಿಲಪಥ** – ಗಾಳಿಯ ದಾರಿ, ಆಕಾಶ (ರಸೆ ಪತ್ತಿತ್ತೆತ್ತಮಾಕಾಶದೊಳ್ ಅನಿಲಪಥಂ ಧಾರಿಣಿಚಕ್ರದೊಳ್ ಕಾಳಸಗೊಂಡತ್ತೆಂಬಿನಂ: **ಆದಿಪು,** ೧೪. ೯೫)

**ಅನಿಲಾಪ್ತ** – ಗಾಳಿಗೆ ಪ್ರೀತಿಪಾತ್ರನಾದವನು, ಅಗ್ನಿ (ಹರಿರಂಭಾಪರಿರಂಭಿಯಾದನಿಲಾಪ್ತಂ ಪುಂಡರೀಕ ಆಶ್ರಯಸ್ಥಿರಂ: **ರಾಜಶೇವಿ,** ೫. ೩೧)

**ಅನಿಲಾಮರ** – [ಜೈನ] ತೀರ್ಥಂಕರನ ವಿಹಾರ ಮಾರ್ಗವನ್ನು ಶುದ್ಧಿಕರಿಸುವ ದೇವತೆಗಳ ಗುಂಪು (ಆ ದಿವಿಜಾಧಿನಾಥಮತದಿಂ .. .. ತಣ್ಣಗೆ ಕಮ್ಮನಾಗೆ ಮೇಲಾದ ಅನಿಲಾಮರರ್ ಸುಟಿದು ಬೀಸುವರ್: **ಶಾಂತಿಪು,** ೧೨. ೨೨)

**ಅನಿಲಾಹತ** – ಗಾಳಿಯಿಂದ ಹೊಡೆಯಲ್ಪಟ್ಟ (ಅನಿಲಾಹತ ಕೇತನಾಳಿ ಸೊಗಯಿಸಿ ತೋರ್ಕುಂ: **ಕವಿರಾಮಾ,** ೧. ೯೫)

**ಅನಿವ** – ನಿರ್ಬಂಧ, ಆಗ್ರಹ (ಮತ್ತಾವಾಗಳ್ ಅಡಿಗಡಿಗೆ ಅನಿವಿಸಲ್ ಎಮ್ಮ ಅನಿವಕ್ಕೆ ಸೈರಿಸದೆ: **ಕಾದಂಸಂ,** ೬. ೩೧ ವ)

**ಅನಿವಂಗೆಯ್** – ಬಲಾತ್ಕರಿಸು (ಅನಿವಂಗೆಯ್ದುಟಿಯೆಂಬ ತಾಯ ನುಡಿಯಂ ಕೈಕೊಂಡೆನೇ: **ಆದಿಪು,** ೧೨. ೩೬)

**ಅನಿವಾರಣ** – ನಿವಾರಿಸಲಸಾಧ್ಯವಾದ (ತಾನೆ ಮತ್ತೆಱಕಮಂ ಆಂತುದು ಈಗಳ್ ಅನಿವಾರಣಂ ಎನ್ನಯ ಚಿತ್ತವಾರಣಂ: ಚಂದ್ರಪ್ರಪು, ೪. ೧೫)

**ಅನಿವಾರಿತ** – ತಡೆಯಿಲ್ಲದ (ನಿನಗಂ ಮೈತ್ರೇಯರ್ ಕೊಟ್ಟ ಊರುಭಂಗಶಾಪಂ ಅನಿವಾರಿತಂ: **ಪಂಪಭಾ,** ೧೩. ೬೫ ವ)

**ಅನಿವಾರಿತದಾನ** – ತಡೆಯಿಲ್ಲದೆ, ನಿರಂತರವಾಗಿ ನೀಡುವ ದಾನ (ಮೇರುವ ಪೊಂ ಕಲ್ಪಾಂಘ್ರಿಪದಾರವೆ ರಸದೊಱವು ಪರುಸವೇದಿಯ ಕಣಿ ಭಂಡಾರದೊಳುಂಟೆನೆ ಕುಡುವ ಅನಿವಾರಿತದಾನಕ್ಕೆ ಪೋಲ್ವರಾರ್ ಬದ್ದೆಗನಂ: **ಪಂಪಭಾ,** ೧. ೨೮)

**ಅನಿವಾರ್ಯಸುತೇಜ** – ತಡೆಯಲಸಾಧ್ಯವಾದ ತೇಜಸ್ಸುಳ್ಳವನು (ವನನಿಧಿಯಿಂದಂ ಚಂದ್ರಂ ವಿನತಾ ಉದರದಿಂ ಗರುತ್ಮಂ ಉದಯಾಚಳದಿಂ ದಿನಪಂ ಒಗೆವಂತೆ ಪುಟ್ಟಿದಂ ಅನಿವಾರ್ಯಸುತೇಜಂ ಎನಿಪಂ ಇನಜನ ತನಯಂ: **ಪಂಪಭಾ,** ೧. ೧೨೧)

**ಅನಿವಿರಿದು** – ಅಷ್ಟು ದೊಡ್ಡದು (ಅನಿವಿರಿದೊಂದು ಯೌವನಮದಕ್ಕೆ ಎಡೆಯಾಗಿಯುಂ ಅಂದು

ರಾಗಸಂಜನಮನೆಯ್ದೆ ತಾಳ್ದಿದವಿನಶ್ವರಕೀರ್ತಿಯೊಳಂ: **ಆದಿಪು,** ೮. ೭)

**ಅನಿವಿಸು –** ಬಲಾತ್ಕರಿಸು (ಮತ್ತಾವಾಗಳ್ ಅಡಿಗಡಿಗೆ ಅನಿವಿಸಲ್ ಎಮ್ಮ ಅನಿವಕ್ಕೆ ಸೈರಿಸದೆ: **ಕಾದಂಸಂ,** ೩೧ ವ. ಪು ೯೨)

**ಅನಿವೃತ್ತಿಕರಣ –** [ಜೈನ] ಮೂರು ಬಗೆಯ ಕರಣಲಬ್ಧಿಗಳಲ್ಲಿ ಒಂದು; ಒಂಬತ್ತನೆಯ ಗುಣಸ್ಥಾನದಲ್ಲಿ ಜೀವನಿಗೆ ಧ್ಯಾನದಿಂದ ಉಂಟಾಗುವ ಪರಿಶುದ್ಧ ಭಾವಗಳು (ಪ್ರತಿಸಮಯಮನಂತಗುಣಶಕ್ತಿ ಖಚಿತೈಕಪರಿಣಾಮ ನಿವೃತ್ತಿಕರಣ ಕ್ಷಪಣಕನಾಗಿ: **ಆದಿಪು,** ೧೦. ೧೪ ವ)

**ಅನಿಶಂ –** ನಿರಂತರವವಾಗಿ (ಅನಿಶಂ ಉತ್ತಮೋತ್ತಮ ಸುಖಮಂ ಬಯಸುವವಂ ಭಾವಿಸುವುದು ದಯಾನ್ವಿತಂ ಶ್ರೀಜಿನೇಂದ್ರವಚನಾಮೃತಮಂ: **ಸಮಯಪ,** ೬. ೫೪)

**ಅನಿಸು –** ಅಷ್ಟು (ರಸಭಾವಕ್ಕನಿಸೆ ಮಾರ್ಗ ಮಾರ್ಗಂ ಮುದಮಂ ದೇಶಿ ಪಡೆಯೆ: **ಪುಷ್ಪದಂಪು,** ೧೦. ೪೫)

**ಅನಿಳಾಧ್ವ –** ಆಕಾಶ (ಬಲಪಾದೋದ್ಧೂತಧೂಳಿವ್ರಜಮಯಂ ಅನಿಳಾಧ್ವಂ ಭಟಾನೀಕ ಶಸ್ತ್ರೋಚ್ಚಲಿತ ಪ್ರದ್ಯೋತ ಮಾಲಾಮಯಂ ಅಖಿಲಮಹೀಮಂಡಳಂ ಸೈನೇಯಜಾತಾತುಲಂ .. .. ಬಂದಂ ಇಂದ್ರಂ: **ಶಾಂತೀಶ್ವಪು,** ೩. ೧೨೦)

**ಅನೀಕ –** ಸೈನ್ಯ (ದನುಜ ಅನೀಕದ ನಿಂದದೊಂದು ನೆಲೆಯಂ ಮುಟ್ಟುತ್ತೆ ಮಾದೇವನಿತ್ತ ನಜೋಗಶಸ್ತ್ರದೆ ದೈತ್ಯರೆಂಬ ಪೆಸರಿಲ್ಲೆಂಬಂತುಟಂ ಮಾಡಿ: **ಪಂಪಭಾ,** ೮. ೨೮); ಗುಂಪು (ದನುಜಕ್ಷತ್ರಾಧಮ ಅನೀಕಮಂ ಅಗನಿತಮಂ ಕೂಡೆ ನಿರ್ಮೂಲಮನಂಗೆಯ್ದು ಅನಿತುಂ ಭೂಭಾರಮಂ ಪಿಂಗಿಸಲ್ ಉದಯಿಸಿದಂ ಚಕ್ರಿ: **ಜಗನ್ನಾವಿ,** ೩. ೪)

**ಅನೀಕಿನಿ –** ಅಕ್ಷೌಹಿಣಿಯ ಹತ್ತನೆ ಒಂದು ಭಾಗ (ಅನೀಕಿನಿ ಪತ್ತು ಅಕ್ಷೌಹಿಣಿಯೆನಿಕ್ಕುಂ: **ಅಭಿಧಾವ,** ೧. ೧೪. ೮)

**ಅನು –** ಸಿದ್ಧತೆ (ಮತ್ತೆ ಕಾದಂಬರಿಯಿಂದಂ ನೋವು ಬಂದುದು ಅದಜೆಂದ ಇನ್ನು ಅನುವಿನೊಳಾನೆ ಶರಣಂ ಆ ವ್ಯತಿಕರದೊಳ್: **ಕಾದಂಸಂ,** ೫. ೬)

**ಅನುಕಂಪಮಾನ –** ನಡುಗುತ್ತಿರುವ (ಇದಂ ಕಂಡು ಅನುಕಂಪಮಾನಂ ಎನ್ನಯ ತನುವುಂ ಬೀಟಲ್ಕೆ ಬಗೆದಪುದು: **ಕಾದಂಬ,** ೭. ೪೩)

**ಅನುಕೂಲಪವನ –** ಹಿತಕರವಾದ ಗಾಳಿ (ಅನುಕೂಲಪವನನಿಂ ಜೀವನಿಷ್ಟದಿಂ ನಾಭಿಮೂಲದೊಳ್ ಕಹಳೆಯ ಪಾಂಗಿನವೊಲ್ ಶಬ್ದದ್ರವ್ಯಂ ಜನಿಯಿಸುಗುಂ: **ಶಬ್ದಮದ,** ೯)

**ಅನುಕೃತ –** ಅನುಕರಿಸಿದ (ಎಸೆವರ್ ವತ್ಸಪಾಲಕರ್ ಬಲಕೃಷ್ಣರ್ .. .. ಅನುಕೃತ ಮಯೂರ ಕೇಕಾನಿನಾದ ಮೃದುಗಾನ ತಾನನಿಪುಣರ್: **ಜಗನ್ನಾವಿ,** ೩. ೭೪)

**ಅನುಕೃತಿ –** ಅನುಕರಣ (ವರ್ಗದ್ವಿತೀಯವರ್ಣಂ ವರ್ಗಚತುರ್ಥಾಕ್ಷರಂ ಮಹಾಪ್ರಾಣಂ ಅವಂ ಮಾರ್ಗವಿದರ್ ಸಂಕ್ಯೆಯೊಳಂ ಭೋರ್ಗರೆವ ಅನುಕೃತಿಯೊಳಂ ಪ್ರಯೋಗಿಸುತಿರ್ಪರ್: **ಶಬ್ದಮದ,** ೨೪)

**ಅನುಕ್ತಸಿದ್ಧ –** ಹೇಳದೆಯೇ ಸಿದ್ಧವಾದುದು (ಪ್ರಸಿದ್ಧಾನಮಂ ಪಡೆದ ಪರಾರ್ಥಮಂ ಶಾಶ್ವತಮೆಂಬುದು ಅನುಕ್ತಸಿದ್ಧಂ: **ಶಾಂತಿಪು,** ೮. ೧೩೮ ವ)

**ಅನುಕ್ರಮ –** ಕ್ರಮಕ್ಕೆ ಅನುಗುಣವಾದ (ದಮಿತಾರಿಯ ಭುಜಬಲ ವಿಕ್ರಮದ ಅಳವಿಗೆ ಮಚ್ಚಿ ಮಚ್ಚುಗುಡಿಸುವವೊಲ್ ಅನುಕ್ರಮದಿಂ ನೀರ್ಗುಡಿಸಿ ಯಥಾಕ್ರಮದಿಂ ಪದವಡಿಸಿ ಪಾರಲೌಕಿಕವಿಧಿಯಂ: **ಶಾಂತಿಪು,** ೪. ೫೮)

**ಅನುಕ್ರಮಂದಪ್ಪು –** ಕ್ರಮವನ್ನು ಬಿಡು (ಪ್ರಬದ್ಧಮಣಿ ವಿಷ್ಟರಂಗಳೊಳ್ ಅನುಕ್ರಮಂದಪ್ಪದಂತೆ ಬಂದು ಮಘವಾಗ್ನಿ ಧರ್ಮದಿತಿಜ ಪ್ರಚೇತೋಮರುತ್ಕುಬೇರ ಹರರಿರ್ಪುದುಂ ಸಭೆಯೊಳ್: **ಜಗನ್ನಾವಿ,** ೧೧. ೭೨)

**ಅನುಕ್ರಮಾನುಗತ –** ಸಹಜ ಕ್ರಮದಲ್ಲಿ ಬಂದ (ಮುಂದೆ ಸಯ್ತಕ್ಕುಂ ಅನುಕ್ರಮಾನುಗತದಿಂ ಬರಮೀಗೆಮಗೆಂಬ ಕಾರಕಂ: **ಕವಿರಾಮಾ,** ೧. ೧೧೬)

**ಅನುಗತ –** ಅನುಸರಿಸಿ ಬಂದ (ಸಾಮಾನಿಕ ಜನತತಿ ಚೇತೋಮಂ ಪ್ರಾಸಾದಿಕ ಅಂತರ ಆಕ್ಷೇಪಕ ವಿನಿಷ್ಕ್ರಾಮಪ್ರವೇಶ ಗಾನರಸಾಮೃತಮೆಸೆಗುಂ ಧ್ರುವಪ್ರಯೋಗಾನುಗತಂ: **ಅಜಿತಪು,** ೫. ೧೦)

**ಅನುಗತಿವೆಱು –** ಕ್ರಮವನ್ನು ಪಡೆ (ಅನುಗತಿವೆತ್ತ ನಲ್ಲಳಡಿವಜ್ಜೆಗಳಲ್ಲಿಯೆ ನಿಂದುವಬ್ಜಲೋಚನನಡಿವಜ್ಜೆ: **ಜಗನ್ನಾವಿ,** ೫. ೨೯)

**ಅನುಗಮಿಸು –** ಅನುಸರಿಸಿ ನಡೆ (ಅಂತೆಂತಾನುಮವರಂ ಅನುಗಮಿಸಿ ಸೋಮಪ್ರಭನುಂ ಶ್ರೇಯಾಂಸನುಂ ಮಗುಟ್ದು ಬಂದು: **ಆದಿಪು,** ೧೦. ೭ ವ)

**ಅನುಗಾಮಿ –** [ಜೈನ] ಕ್ಷಯೋಪಶಮನನಿಮಿತ್ತಿಕವಾದ ಆರು ಅವಧಿಜ್ಞಾನಗಳಲ್ಲಿ ಒಂದು (ಹೀಯಮಾನ ವರ್ಧಮಾನ ಅವಸ್ಥಿತಾ ಅನವಸ್ಥಿತಾ ಅನುಗ್ರಾಮ್ಯಂ ಅನುಗಾಮಿಸ್ವರೂಪದಿಂ ಷಟ್ಪ್ರಕಾರಮಪ್ಪ ದೇಶ ಪರಮಸರ್ವಾಧಿಜ್ಞಾನಮುಂ: **ಸುಕುಮಾಚ,** ೮. ೪ ವ)

**ಅನುಗುಣ –** ಹೊಂದಿಕೆಯಾಗುವ (ಜಲನಿಧಿ ತಾಂ ಸನ್ನುತಗಭೀರನೆಂಬುದುಂ ಇನ್ನದು ಹೀನಾಧಿಕಪ್ರಶಂಸಾಗುಣಂ: **ಕವಿರಾಮಾ,** ೩. ೮೭)

**ಅನುಗೆಡಿಸು –** ಮೀರು, ಸ್ಥಿತಿಯನ್ನು ಕೆಡಿಸು (ಪವನನಂ ಪರಿಭವಿಸುವ ಮನಮಂ ಅನುಗೆಡಿಸುವ ದಿಟ್ಟಿಗಳನಿಟ್ಟಣಿಸಿ: **ಗಿರಿಜಾಕ,** ೬. ೫೫ ವ)

**ಅನುಗೆಯ್ –** ಅಣಿಯಾಗು, ಸಿದ್ಧಪಡಿಸು (ಆಗಳವರ್ ಕಾದಲ್ ಅನುಗೆಯ್ವ ಕಾಯ್ಪುಂ ಕಂಡು ಎಲೆ ತಂದೆಗಳಿರ ನೀಮೀತನೊಳ್ ತಾಗಿ ತವಿಲಾಗಲ್ವೇಡಿಂ ಬೇಡಿಕೊಂಡೆಂ: **ಶಾಂತೀಶ್ವಪು,** ೫. ೧೭೬ ವ)

**ಅನುಗ್ರಾಹಿಸು –** ಉಪದೇಶಮಾಡು (ಪಂಡಿತನೊಡನೆ ಅಮೃತಾಕ್ಷರಗಂಡೂಷಮಂ ಉಗುಟ್ವ ತೆಱದೆ ಅನುಗ್ರಾಹಿಸಭೂಮಂಡಳಪತಿ: **ಶಾಂತಿಪು,** ೮. ೧೪೯)

**ಅನುಗ್ರಾಹ್ಯ –** ಅನುಗ್ರಹಯೋಗ್ಯಳು (ಅತ್ಯಂತಶುಚಿಗಳ್ ಏಕಾಂತನಿವಾಸನಿರತಿಶಯಚರ್ಯಾನುಪೂರ್ವಕಂ ಅನುಗ್ರಾಹ್ಯೆಯರ್ ಆರ್ಗಂ ಎಱಗುವರಲ್ಲರ್: **ಶಾಂತಿಪು,** ೨. ೮೧ ವ)

**ಅನುಚರ –** ಜೊತೆಯಲ್ಲಿ ನಡೆಯುವವನು, ಸೇವಕ (ಓರಂದದಿಂದ ಅಕ್ಕಱುಗಂಪಂ ನಾಸಿಕಕ್ಕೆ ಒಂದಿಸುತೆನಸುಂ ಮೆಯ್ಗೆ ಸೈಪಂ ಸಮಂತೆಳ್ಚಱಿಸುತ್ತುಂ ತೀಡುತಿರ್ದತ್ತವರ್ಗೆ ಅನುಚರನಂತೆ ಆ ವನಾಂತಸ್ಸಮೀರಂ: **ಶಾಂತೀಶ್ವಪು,** ೫. ೧೩೮)

**ಅನುಜ –** ತಮ್ಮ (ಅನುಜಸಮೇತನೊಳ್ ಅಂತಕತನಯನೊಳ್ ಅನುಜವ್ಯಪೇತನೀಗಳ್ ದುರ್ಯೋಧನನಳುಪಿ ಸಂಧಿಗೆಯ್ದೊಡೆ

ಮುನಿವರ ಮೆಚ್ಚುವರ ಮನಕೆ ಪಕ್ಕಾಗಿರೆನೇ: **ಗದಾಯು**, ೫. ೪೮)

**ಅನುಜಾತೆ** – ತಂಗಿ (ಆತನಂ ಮುಳಿದು ನೀಂ ಕೊಂದು ನಿನ್ನ ಅನುಜಾತೆಗೆ ವೈಧವ್ಯದೀಕ್ಷೆಯಂ ಕುಡುವುದು ಚದುರಲ್ಲ: **ಪಂಪರಾ,** ೧೦. ೧೬೮ ವ)

**ಅನುಜೀವ** – ಬೇರೆಯವರ ಆಶ್ರಯದಲ್ಲಿರುವವನು (ತನ್ನೊಡವಂದ ಮ್ಲೇಚ್ಛರಾಜರಂ ರಾಜರಾಜ ಅನುಜೀವ ಅನುವೃತ್ತದಿಂ ಕೃತಾರ್ಥರ್ಮಾಡಿ: **ಶಾಂತಿಪು,** ೧೧. ೭೧ ವ)

**ಅನುಜೀವಿ** – ಬೇರೊಬ್ಬರ ಆಶ್ರಯದಲ್ಲಿರುವವನು, ಸೇವಕ (ಆಳ್ದನ ಮನಮಂ ಅಜೀವ ಅನುಜೀವಿಗಳಂತೆ ವಿದ್ಯಾದೇವತೆಗಳ್ ಮಹಾಬಳನ ವಿದ್ಯೆಗಳೊಳ್ ಪೊಣರ್ವುದುಂ: **ಶಾಂತಿಪು,** ೪. ೨೫ ವ)

**ಅನುಜೀವಿವೃತ್ತ** – ಸೇವಕವೃತ್ತಿ (ಅನಿಜೀವಿವೃತ್ತದಿಂ ಅನುವರ್ತಿಸುವ ಸೇವಾವಿಚಕ್ಷಣಪ್ರೀಣಕರನಪ್ಪ ಜೀವಿಕಾಪ್ರಸ್ತಾವದೊಳ್: **ಶಾಂತಿಪು,** ೭. ೧೨೮ ವ)

**ಅನುತ್ತರೀಯ** – ದಾಟಲಾಗದ (ಅನುತ್ತರೀಯಕಂಟಕಂ ಅತಿಸುಭಟಮದೋತ್ಕಂಠಂ ಇದು ಕರ್ಣಾಟಬಲಂ: **ಆದಿಪು,** ೧೩. ೪೫ ವ)

**ಅನುದಿನಂ** – ಪ್ರತಿದಿನವೂ (ಅನುದಿನಮೊರ್ವಳೆ ಗೀರ್ವಾಣನಾತವಧು ನಾಕಲೋಕದಿಂ ಬಂದು: **ಶಾಂತಿಪು,** ೯. ೧೮೧)

**ಅನುದಿಶಾ[ಶೆ]** – [ಜೈನ] ನವಗ್ರೈವೇಯಕಗಳ ಮತ್ತು ಐದು ಅಣೂತ್ತರೆಗಳ ಮಧ್ಯೆ ಇರುವ ಒಂಬತ್ತು ಅಹಮಿಂದ್ರಸ್ವರ್ಗಗಳಲ್ಲಿ ಒಂದು (ನಾಕತ್ರಿಷಷ್ಟಿ ಪಟಲಾನೀಕಂ ಗ್ರೈವೇಯಕಂಗಳೊಂಬತ್ತು ಕಡೆವರಂ ಅನುದಿಶೆಗಳ್ ಲೋಕೋಪರಿ ಮಂಗಳಯ್ದು ಅಣೂತ್ತರೆಯಕ್ಕುಂ: **ಶಾಂತಿಪು,** ೧೨. ೭)

**ಅನುದ್ದಿಸೆ** – [ಜೈನ] ಒಂಬತ್ತು ಅನುದ್ದಿಸೆಗಳು, ಇವು ಗ್ರೈವೇಯಕಗಳ ಮೇಲಿರುವ ಸ್ವರ್ಗಗಳು (ಲಚ್ಛಿ ಮಹಾಲಚ್ಛಿ ಮಾಳಿನಿ ವೈರೆ ವೈರೋಚನೆ ಸೋಮೆ ಸೋಮರೂಪೆ ಅಂಕೆ ಪಳಿಕೆ ಅಯಿಚ್ಚೆಯೆಂಬ ನವಾನುದ್ದಿಸೆಗಳೊಳಂ: **ವಡ್ಡಾರಾ,** ಪು ೯೭, ಸಾ ३೦ ಮತ್ತು ಪು ೯೮ ಸಾ ೧), ನೋಡಿ, ನವಾನುದ್ದಿಸೆಗಳ್

**ಅನುದ್ಧತವೇಷ** – ನಮ್ರ ವೇಷ, ನಮ್ರ ವ್ಯಕ್ತಿ (ವಕ್ರೋಕ್ತನಿಪುಣನುಂ ಆಧೇಯವಚನನುಂ ಅನುದ್ಧತವೇಷನುಂ .. .. ಅಪ್ಪ ಮಹತ್ತರನ ಕೈಯೊಳ್: **ಆದಿಪು,** ೧೪. ೪३ ವ)

**ಅನುದ್ವ್ಯಂಜ್ಯ** – ಉದ್ವೇಗವುಂಟುಮಾಡದ (ಅನಿರುದ್ಧಂ ನೃಪನೀತಿಗೆಂತುಂ ಉಚಿತಂ ತಾನೀ ಪದಕ್ಕಾದಂ ಉದ್ಭವಚೈತ್ರಪ್ರತಿಪಾದಕಂ ನಮಗೆ ಅನುದ್ವ್ಯಂಜ್ಯಂ ಜನಕ್ಕೆಂಬುದಂ: **ಚಂದ್ರಪ್ರಭು,** ೯. ೧೧೫)

**ಅನುನಯ** – ಪ್ರೀತಿ (ವೈರಿನರೇಂದ್ರೋದ್ದಾಮ ದರ್ಪೋದ್ದಳನನೆ ಕಥಾನಾಯಕಂ ಮಾಡಿ ಸಂದರ್ಜುನನೊಳ್ ಪೋಲ್ವೀ ಕಥಾಭಿತ್ತಿಯಂ ಅನುನಯದಿಂ ಪೇಟಲೆಂದೆತ್ತಿಕೊಂಡೆಂ: **ಪಂಪಭಾ,** ೧. ೫೧); ಮನವೊಲಿಸುವಿಕೆ (ಅನುನಯಶತಂಗಳಂ ನುಡಿದನುವಶೆ ಮಾಡಲ್ ವಿಯಚ್ಚರೇಂದ್ರನುಮೇನಾರ್ತನೆ ಜನಕಜೆಯಂ: **ಪಂಪರಾ,** ೯. ೧೭೯)

**ಅನುನೀತ** – ಸಮೀಪಕ್ಕೆ ಒಯ್ಯಲ್ಪಟ್ಟ (ಬುಧರ್ಗೋತು ಕಾವಂ ಅನುನೀತಗೃಹೀತವಾಕ್ಯಂ: **ಕವಿರಾಮಾ,** ३. ೨೨೭)

**ಅನುಪದೀನ** – ಹಾವುಗೆ, ಪಾದರಕ್ಷೆ (ಪಾದುಕೆ ತಾನಂತು ಅನುಪದೀನಾನಾಮಂ: **ಅಭಿಧಾವ,** ೧. ೧೦. ೨೪)

**ಅನುಪಮ** – ಹೋಲಿಕೆಯಿಲ್ಲದವನು (ಅನುಪಮನಂ ಬರಿಪ್ಪೆಂ ಅನುರಾಗದೆ ನಲ್ಲನನಂ ಇಂದು: **ಕವಿರಾಮಾ,** ೨. ೧೦೪)

**ಅನುಪಮಮಂಗಳ** – [ಜೈನ] ಚಕ್ರವರ್ತಿಗೆ ಒದಗುವ ಚಾಮರದ ಹೆಸರು (ಯಕ್ಷಕರವಿಧೂಯಮಾನಮಪ್ಪ ಅನುಪಮ ಮಂಗಳಮೆಂಬ ಮೂವತ್ತೆರಡು ಚಾಮರಂಗಳುಂ: **ಆದಿಪು,** ೧೫. ३ ವ)

**ಅನುಪಮಾನ** – ಹೋಲಿಕೆಯಿಲ್ಲದ (ಮುಕ್ತಜೀವನಪ್ಪೊಡೆ ಏಕಪ್ರಕಾರನುಂ ಅಶರೀರಾಕಾರದಿಂ ಕಿಂಚಿದೂನನುಂ ಅನುಪಮಾನನುಂ .. .. ಅಕ್ಕುಂ: **ಸುಕುಮಾಚ,** ೮. ೧೪ ವ)

**ಅನುಪಲಕ್ಷಿತ** – ಗಮನಕ್ಕೆ ಬಾರದ (ಅಕೃತಕಾರಾಮಸಂವರಣಂ ಅನುಪಲಕ್ಷಿತ ಭಾಷಾಸಂಕೇತಜಂಗಳ್ವಿಡಿದು ಬರ್ಪೊಂ: **ಶಾಂತಿಪು,** ೮. ೭೨ ವ)

**ಅನುಪಲಬ್ಧ** – ದೊರೆಯದಿರುವ (ಅನುಪಲಬ್ಧದೊಳ್ ಅಜಿತಂ ಮೆಱೆದು ಉಪಲಬ್ಧದೊಳ್ ನಿಶ್ಚಯಗ್ರಾಹಿಯಾಗಿ: **ಮಲ್ಲಿನಾಪು,** ३. ೧೧)

**ಅನುಪ್ರೇಕ್ಷೆ** – [ಜೈನ] ಯತಿಗಳು ಧ್ಯಾನಮಾಡಬೇಕಾದ ಅನಿತ್ಯತ್ವ, ಅಶರಣತ್ವ, ಸಂಸಾರ, ಏಕತ್ವ, ಅನ್ಯತ್ವ, ಅಶುಚಿ, ಆಸ್ರವ, ಸಂವರ, ನಿರ್ಜರೆ, ಲೋಕ, ಬೋಧಿದುರ್ಲಭತ್ವ, ಧರ್ಮ ಎಂಬ ಹನ್ನೆರಡು ತತ್ವಗಳ ಚಿಂತನೆ (ಮುನಿವೃಂದೋಚ್ಚಾರಿತಪಂಚನಮಸ ತಿಗಾಂತು ಕಿವಿಯನರ್ಹತ್ಪದಮಂ ನೆನೆಯುತ್ತುಮನುಪ್ರೇಕ್ಷೆಯೆ ಮನದೊಳ್ ತಣ್ಮಲೆಯೆ ಸೇಸೆಗೊಳ್ ಖಚರಪತೀ: **ಆದಿಪು,** ೨. ೫೭)

**ಅನುಬಂಧ** – ಸಂಬಂಧ (ಕರಮೆಸೆವ ಅನುಬಂಧಂ ಪಿರಿಯರೊಳಾದುದು .. .. ತಾನುದ್ಧರಿಸದನೆ ಬಂಧು: **ಆಚವರ್ಧ,** ೪. ೬); ಸೇರುವಿಕೆ (ಶೋಕಾನುಬಂಧದೊಳ್ ಕೋಪಾನುಬಂಧಮುಂ ಸಮರಾನುಬಂಧಮುಂ ಅಂತರಿಸಿರ್ದು: **ಗದಾಯು,** ೪. ೧३ ವ)

**ಅನುಬಂಧಂಗಿಡು** – ಸಂಬಂಧ ತಪ್ಪು (ಪಲವುಕಾಲದಿಂದ ಅನುಬಂಧಂಗಿಡದೆ ಒಡಲೆರಡು ಅಸುವೊಂದು ಎನೆ ಗೆಡೆವಕ್ಕಿಗಳಂತೆ ಕೂಡಿ ನಲಿಯುತ್ತಿರ್ದರ್: **ಪಂಪರಾ,**೪. ೬)

**ಅನುಬಂಧಿ** – ಕಟ್ಟಲ್ಪಟ್ಟ, ಸಂಬಂಧ ಪಡೆದ (ಅನಂತಾನುಬಂಧಿ ಕ್ರೋಧಮಾನ ಮಾಯಾಲೋಭ ಅಭೀಭೂತರುಮಪ್ಪ ಮಹಾಪಾಪಿಜೀವಂಗಳ್: **ಸುಕುಮಾಚ,** ೧೧. ೪೧ ವ)

**ಅನುಬದ್ಧಕೇವಲ** – [ಜೈನ] ವರ್ಧಮಾನ ಜಿನನ ಅನಂತರ ಬಂದ ಗೌತಮ, ಸುಧರ್ಮಸ್ವಾಮಿ, ಜಂಬೂಸ್ವಾಮಿ ಎಂಬ ಮೂವರು ಕೇವಲಜ್ಞಾನಿಗಳು (ಅನಿಬದ್ಧಕೇವಲರೆನಿಸಿದ ಗೌತಮ ಸುಧರ್ಮ ಜಂಬೂಗಣಭೃದ್ವಿಮತರ್ ಎಮಗೀಗೆ ಶಾಶ್ವತಧನಮೆನಿಸಿದ ವಿಶ್ರುತ ಶ್ರುತಾರಾಧನಮಂ: **ಪಂಪರಾ,** ೧. ೭)

**ಅನುಬದ್ಧಕೇವಳಿ** – ಅನುಬದ್ಧಕೇವಲ (ಮಳವಿಳಯನರರೆನಿಸಿದ ಕೇವಳಿಗಳ್ ಅಶುದ್ಧಾನುಬದ್ಧ ಕೇವಳಿಗಳ ನಿಶ್ಚಳಿತ ಶ್ರುತಕೇವಳಿಗಳ ಚಳನಂ ನಮಗಚಳ ಸುಖಮನೀಗೆ ಅನವರತಂ: **ಚಂದ್ರಪ್ರಭು,** ೧. ೧೬)

**ಅನುಬಲ** – ಒತ್ತಾಸೆ (ಗೋಗ್ರಹಣಮನೆ ನೆವಂ ಮಾಡಿ ಸುಯೋಧನನೆಂಬ ಪಾಪಕರ್ಮನ ಮಾಡಿದನುವರಂ ನಿಮ್ಮ ಅನುಬಲದೊಳಂ ಅರಿಕೇಸರಿಯ ಭುಜಬಲದೊಳಂ

ಎಮಗಿಂಬುವಂದುದು: **ಪಂಪಭಾ,** ೯. ೧೭ ವ); ಸಹಾಯಕ ಸೈನ್ಯ (ಗ್ರಹಬಲಮಿಲ್ಲದ ಜನ್ಮಿಗನಂತೆ ಪೆರ್ಚಿಲ್ಲದೆ ಅನುಬಲಮಿಲ್ಲದೆ ಪೊಕ್ಕಿಜೀವನಂತೆ ಮನಂಗುಂದಿ: **ಶಾಂತಿಪು,** ೪. ೩೦ ವ)

**ಅನುಭಾಗ** – [ಜೈನ] ಕರ್ಮಪುದ್ಗಲಗಳಿಗಿರುವ ಸ್ವಗತ ಸಾಮರ್ಥ್ಯವಿಶೇಷ; ಆತ್ಮನಿಗೆ ಕರ್ಮಗಳ ಫಲಕೊಡುವ ಶಕ್ತಿ (ಬಾದರ ಸಾಂಪರಾಯ ಕೃಷ್ಣರೂಪ ಅನುಭಾಗಮಮ ಅನಂತಗುಣಹಾನಿರೂಪದಿಂ ಕುಂದಿಸಿ: **ಆದಿಪು,** ೧೦. ೧೪ ವ)

**ಅನುಭಾವ** – ಭಾವಕ್ಕನುಗುಣವಾದ ದೇಹಚೇಷ್ಟೆ (ಭಾವದನುಭಾವದೆಸೆವ ವಿಭಾವದ ಪಸುಗೆಗಳೊಳೊಸರ್ವ ರಸದಭಿನಯಮಮಂ: **ಆದಿಪು,** ೯. ೨೭)

**ಅನುಭಾಷಿಗ** – ವಿಷಯಕ್ಕೆ ಅನುಗುಣವಾಗಿ ಮಾತಾಡುವವನು (ಮಱುದೆವಸಂ ಮುನ್ನಿನ ಚಕ್ರೋತ್ಪತ್ತಿಪೂಜಾನುಭಾಷಿಗನಪ್ಪ ಪ್ರಧಾನಂ ನಿಂದಿರ್ದು: **ಶಾಂತಿಪು,** ೧೦. ೧೨೨ ವ)

**ಅನುಭುಕ್ತ** – ಅನುಭವಿಸಿದ (ಮನದೊಳ್ ಪೂರ್ವಾನುಭುಕ್ತಪ್ರಿಯಲಲನೆಯ ಲಾವಣ್ಯಮಂ ರೂಪಮಂ ಯೌವನಮಂ: **ಮಲ್ಲಿನಾಪು,** ೧೧. ೩೩)

**ಅನುಭೂತ** – ಈ ಹಿಂದಿನ (ದೃಷ್ಟ ಅಶ್ರುತ ಅನುಭೂತ ಕಥೆಗಳಂ ತದನ್ವಯಸಂಬಂಧಿಗಳಂ ಇಂತೆಂದು ಪೇಟಿಲ್ ತಗುಳ್ದಂ: **ಆದಿಪು,** ೨. ೧೧ ವ)

**ಅನುಮತಿ** – [ಜೈನ] ಮನೆ ಸಂಸಾರಗಳು ಇದ್ದರೂ ಎಲ್ಲ ವಿಷಯಗಳಲ್ಲಿಯೂ ಕೇವಲ ಅತಿಥಿಯಂತೆ ನಡೆದುಕೊಳ್ಳುವವನು, ಹತ್ತನೆ ನೆಲೆಯ ಶ್ರಾವಕ, (ಅನುಮತಿಯೆಂಬಂ ತಾಂ ಪತ್ತನೆಯಾತಂ: **ಧರ್ಮಾಮೃ,** ೫. ೯೮)

**ಅನುಮಾರ್ಗಕ್ರಮ** – ಸಂಪ್ರದಾಯಾನುಸಾರಿಯಾದ (ಅನಿಯತವೃತ್ತಿಯಮ ಅಱಿದವಂ ಅನುಮಾರ್ಗಕ್ರಮದೆ ಅಯ್ದು ಮಡುಗೆ ನಿಪುಣಂ: **ಕವಿರಾಮಾ,** ೨. ೧೪)

**ಅನುಮೋದ** – ಸಂತೋಷ (ಅಂತು ತನ್ನಿರ್ವರ್ ಅಗ್ರಮಹಿಸಿಯರುಂ ದ್ವಿಜತನೂಜೆ ಸತ್ಯಭಾಮೆಯುಂ ಪರ್ಯಾಪ್ತಿಸಕ್ತೆಯರುಂ ಅನುಮೋದ ಅನುರಕ್ತೆಯರುಮಾಗಿರೆ: **ಶಾಂತಿಪು,** ೬. ೭೨ ವ); ಒಪ್ಪಿಗೆ (ಮತ್ತಂ ಉತ್ತಮಪಾತ್ರದಾನ ಅನುಮೋದಫಲದಿಂದಲ್ಲಿ ಪುಟ್ಟುವ ಜೀವಂಗಳ್: **ಆದಿಪು,** ೫. ೪೧ ವ)

**ಅನುಯೋಗ** – [ಜೈನ] ತೀರ್ಥಂಕರರು ಉಪದೇಶಿಸಿದ ಶಾಸ್ತ್ರ ಸಮೂಹ; ನಾಲ್ಕು: ಪ್ರಥಮ, ಕರಣ, ಚರಣ, ದ್ರವ್ಯ ಎಂಬ ಅನುಯೋಗಗಳು (ಅನುಯೋಗಕುಸುಮಪಾದಪಂ ಅನೇಕನಯಲತಿಕ ಮಂಗಳಮಹೀಜಂ ಸದ್ವನವನಂ ಎಮಗೆ ವಿಶ್ರಮವನಮಕ್ಕೆ ಅತಿವಿಶ್ರುತಶ್ರುತಸ್ಕಂಧವನಂ: **ಆದಿಪು,** ೧. ೧೦)

**ಅನುರಕ್ತಂಮಾಡು** – ಒಲಿಯುವಂತೆ ಮಾಡು (ತನಗನುರಕ್ತಂ ಮಾಡಿದಳನೇಕ ಕಾಮುಕ ಜನಮಂ: **ಶಾಂತಿಪು,** ೮. ೨೧)

**ಅನುರಾಗ** – ಗಾಢ ಪ್ರೀತಿ (ಧರ್ಮದೊಳಪ್ಪ ಅನುರಾಗಂ ಒದವುಗುಂ ರತ್ನನ ಪೇೞ್ದಜಿತನ ಪುರಾಣಮಂ ಕೇಳಲೊಡಂ: **ಅಜಿತಪು,** ೧೨. ೩೨)

**ಅನುರೂಪ** – ಅನುಗುಣವಾದ, ತಕ್ಕ (ಗುರುವ ಕೇಶಕಳಾಪಮಂ ತೆಗೆದಂ ತೆ ಗಂಡನುಮಾದಂ ಈ ಪರಿಭವಕ್ಕೆ ಅನುರೂಪಮಿಂ ಪೆಱತೊಂದುಮಿಲ್ಲ ಅಹಿಕೇತನಾ: **ಪಂಪಭಾ,** ೧೨. ೩೭)

**ಅನುರೂಪಕ್ರಮ** – ಯುಕ್ತ ಕ್ರಮ (ವಿಕ್ರಮಮೂರ್ತಿಗೆ ತಾರಾಚಕ್ರಂ ಕಟಿಸೂತ್ರಮಾಗೆ ತತ್ಕಟಿಸೂತ್ರಂ ಚಕ್ರಿಗೆ ಬಾಲ್ಯಕ್ಕನುರೂಪಕ್ರಮಮಾಯ್ತೆನಿಸಿ ಮುತ್ತಿನುಡೆವಣಿಯೆಸೆಗುಂ: **ಜಗನ್ನಾವಿ,** ೩. ೪೬)

**ಅನುರೋಧ** – ಒತ್ತಾಯ (ಸಕಲ ರಾಜಲೋಕಮಂ ವಿಸರ್ಜಿಸಿ ಮಹಾಶ್ವೇತಾ ಅನುರೋಧದಿಂ ಕೃತಫಲ ಜಲಾಹಾರೆಯಾಗಿ: **ಕಾದಂಸಂ,** ೭. ೫೪ ವ)

**ಅನುಲೇಪ** – ಬಳಿ, ಸವರು (ಅನುಲೇಪ ಅತಿಶಯಪ್ರಭಾವದಿನಿತು ಅಂಗೋಪಾಂಗಂ ಉತ್ಕೋಕಿಲಸ್ವನ ಲೀಲಾಲಲಿತೋರು ಚಾರುನಿನದಂ: **ಸುಕುಮಾಚ,** ೫. ೩೬)

**ಅನುಲೇಪಂಗೆಯ್** – ಬಳಿಯುವುದು (ಗಗನಮಂ ಅನುಲೇಪಂಗೆಯ್ದೊಡೆ ಅಲ್ಲಿ ಮಸಿ ಪತ್ತುಗುಮೇ: **ಪಂಪರಾ,** ೯. ೧೭೯)

**ಅನುಲೋಮ** – ರೂಢಿಯ ಕ್ರಮ (ತಮ್ಮೊಳ್ ಅನುಲೋಮದೊಳಿರ್ದೊಡಂ ಅನುಲೋಮದೊಳಿರ್ದೊಡಂ ಸವಣ್ಣಂಜ್ಞೆಯಂ ಪಡೆಗುಂ: **ಶಬ್ದಮದ,** ೧೬ ವೃತ್ತಿ)

**ಅನುವದಿಸು** – ಹೇಳಿಕೊಟ್ಟಂತೆ ಹೇಳು (ಮುನಿಜನಮೋದಿಸಿದೋಜೆಯೊಳ್ ಅನುವದಿಪುದು: **ಆದಿಪು,** ೧. ೧೪)

**ಅನುವರ** – ಯುದ್ಧ (ಅಂತು ಹನುಮಂ ಅನುವರದೊಳ್ ಆಂತ ಬಲಮಂ ಕೃತಾಂತನಂತೆ ತವಿಸಿ: **ಪಂಪರಾ,** ೧೦. ೨೧೮ ವ); ಸಂಕಟ (ಗೋಗ್ರಹಣಮನೆ ನೆವಂ ಮಾಡಿ ಸುಯೋಧನನೆಂಬ ಪಾಪಕರ್ಮನ ಮಾಡಿದ ಅನುವರಂ ನಿಮ್ಮನುಬಲದೊಳಂ ಅರಿಕೇಸರಿಯ ಭುಜಬಲದೊಳಂ ಎಮಗಿಂಬುವಂದುದು: **ಪಂಪಭಾ,** ೯. ೧೭ ವ)

**ಅನುವರಭೂಮಿ** – ಯುದ್ಧಭೂಮಿ (ಅನುವರಭೂಮಿಗೆ ಬಲವಾಹನನುಂ ರವಿಹನುಮನುಂ .. .. ವಾಹನಮನೇಱಿ ನಡೆದರ್: **ಪಂಪರಾ,** ೧೩. ೩೦)

**ಅನುವರ್ಣನ** – ನಿರೂಪಣೆ (ಇದು .. .. ಕವಿರಾಜಮಾರ್ಗದೊಳ್ ದೋಷಾದೋಷ ಅನುವರ್ಣನನಿರ್ಣಯಂ ಪ್ರಥಮ ಪರಿಚ್ಛೇದಂ: **ಕವಿರಾಮಾ,** ೧. ೧೯೯ ವ)

**ಅನುವರ್ಣಿಸು** – ವಿವರಿಸು, ನಿರೂಪಿಸು (ಗೃಹನೀತಿಶಾಸ್ತ್ರಮಂ ನೀನಪೂರ್ವಮಂ ನುಡಿಯೆ ಮತ್ತದಂ ಅನುವರ್ಣಿಸುವರ ನುಡಿಗಳ್ ಪ್ರತಿಧ್ವನಿಯವೋಲ್ವೆಗಳ್: **ಶಾಂತಿಪು,** ೨. ೩೬)

**ಅನುವಶ** – ಅಧೀನನಾದ (ಅನುವಶನೀತಂ ಚಾರಿತ್ರನಿಯುಕ್ತಂ ಪಲರೊಳ್ ಎನಿಸಿ ನೆಗೞ್ದಿರ್ದವನುಂ .. .. ನಿಯಮದಿಂದಲೇಂತುಂ ನಡೆಯಂ: **ಸಮಯಪ,** ೬. ೮೧)

**ಅನುವಶೆ** – ಅಧೀನಳಾದವಳು (ಅನುನಯಶತಂಗಳಂ ನುಡಿದು ಅನುವಶೆಮಾಡಲ್ ವಿಯಚ್ಚರೇಂದ್ರನುಂ ವಿನಾರ್ತನೇ: **ಪಂಪರಾ,** ೯, ೧೭೯)

**ಅನುವಸಥ** – ವಾಸಸ್ಥಳ, ಮನೆ (ಚ್ಯುತಯಾಥಾಸಂಖ್ಯಾರ್ಥಪ್ರತೀತ ದೋಷ ಅನುವಸಥಮೆಂದಱಿಗೆ ಬುಧರ್: **ಕವಿರಾಮಾ,** ೧. ೮೬)

**ಅನುವಱಿ** – ಕ್ರಮವನ್ನು ಅರಿ, ಔಚಿತ್ಯ ತಿಳಿ(ಅಂತು ಅನುವಱಿದು ಒಸಗೆಯೊಳ್ ಅಮರರಾಜನುಂ ಸನಾಭಿಗಳ್ವೆರಸು ನಾಭಿರಾಜನುಂ ಬಂದು .. .. ಪಾಣಿಗ್ರಹಣಂಗರೆಯ್ದಿನ್ದಾಗಳ್: **ಆದಿಪು,** ೮. ೨೨ ವ)

**ಅನುವಾದಿ –** ಅನುಸರಿಸುವಂತಹುದು, ಅನುಗುಣ (ನಯಂ ಅಳವಟ್ಟ ಜೀನೆಯಳವಟ್ಟ ಅಧರೋತ್ತರತಂತ್ರಮಪ್ಪ ತಂತ್ರಿಯೊಳ್ ಅನುವಾದಿಯಾಗೆ: **ಶಾಂತಿಪು,** ೯. ೧೮೭)

**ಅನುವಾಸರಂ –** ಪ್ರತಿನಿತ್ಯವೂ (ಬಯಸಿ ಕುಬೇರರಕ್ಷಿತ ದಿಗಂಗನೆಯೊಳ್ ರವಿಪೋಗಿ ಕೂಡಲ್ ಅನುವಾಸರಂ ನೆರೆಯೆ ಸೂಟ್ ಸಮನಾಗಿರೆ: **ಶಾಂತಿಪು,** ೭. ೧೨೬)

**ಅನುವಿಸು –** ಅನುನಯ ಮಾಡು (ನಭದೊಳಿರ್ದಪೆಯಪ್ಪುದಱಿಂದೆ ನಿನ್ನನಾಂ ಅನುವಿಪೆನೆನ್ನ ಮೆಯ್ಯಬ್ಬಡವೊ ನಲ್ಲನ ಮೆಯ್ಯಬ್ಬಡವೋ ನಿಶಾಚರಾ: **ಆದಿಪು ನರಸಿಂ:** ೧೨. ೪೧); ಅಪೇಕ್ಷಿಸು (ಗಂಧರ್ವ ನಿವಾಸಕ್ಕೆ ಅನುವಿಸುವ ಈ ಮನವಪ್ಪೊಡೆ ತನಗೆ ಮಾಱುವೋದತ್ತೀಗಳ್: **ಕಾದಂಬ,** ೭. ೫೫); ನಿರೋಧಿಸು (ಭುವನೈಕನಾಥನಂ ಸಲ್ಗೆವೆರಸು ಬೇಡುತ್ತಿರೆ ಬಂದು ಅನುವಿಸುವ ನಿಮ್ಮ ಮುದುಗಣ್ಣನದೊದೊಳಿದೇನುಂತೆ ಬಟ್ಟೆವೋಪಡೆ ಪೋಗಿಂ: **ಆದಿಪು,** ೯. ೧೦೬); ಸಿದ್ಧಪಡಿಸು (ವಿನಯದೊಳೆ ಮತ್ತಂ ಅಂದು ಒಯ್ಯನೆ ನಿರ್ಝರವಾರಿಯಂ ನಿಜಾಂಜಲಿಯಿಂ ತಂದು ಅನುವಿಸಿ ವದನಪ್ರಕ್ಷಾಳನಮಂ ಮಾಡಿಸಿದನಂದು ಚಂದ್ರಾಪೀಡಂ: **ಕಾದಂಸಂ,** ೪, ೧೨೪); ಹೋಲು (ತದ್ವನಿತೆಯ ನಿಡುಜಡೆಗಂಡು ಅದಂ ಅನುವಿಸುವಂ ರಾಹು ಎಂದು ರಜನಿಪಂ: ಅದರೊಳ್: **ರಾಜಶೇವಿ,** ೧. ೧೧೪)

**ಅನುವು –** ಅವಕಾಶ (ಎರಡುಂ ದೆಸೆಯೊಳ್ ಅನುವಂ ಕಂಡು ದಿವಾಕರಂ ಅಂದಿಂ ದಕ್ಷಿಣೋತ್ತರನದಂ: **ಗಿರಿಜಾಕ,** ೧. ೫೩)

**ಅನುವೃತ್ತ –** ವಿಧೇಯತೆ (ತನ್ನೊಡವಂದ ಮ್ಲೇಚ್ಛರಾಜರಂ ರಾಜಾನುರಾಜದೇವ ಅನುವೃತ್ತದಿಂ ಕೃತಾರ್ಥರ್ ಮಾಡಿ: **ಶಾಂತಿಪು,** ೧೧. ೭೧ ವ)

**ಅನುವ್ಯಾಯಮಿತ –** ಅನುಕೂಲವಾದ ಮತ್ತು ಕ್ರಮಬದ್ಧ ರೀತಿಯ (ಶ್ಲಕ್ಷ್ಣಸ್ನಿಗ್ಧಮೃದು ಬಹುಳ ಅನುವ್ಯಾಯಮಿತಪ್ರತಿಯಾಂಕ ಸ್ನಿಗ್ಧಪ್ರಕಾಶ ಸೂಕ್ಷ್ಮಬಿಂದು ಸಂದೋಹನುಂ: ಶಾಂತಿಪು, ೧೦. **೧೪೩** ವ)

**ಅನುಶಮ –** ಕಳವಳ (ನಮ್ಮರಸಂ ಮರಳ್ದು ಇಂಬುಕೆಯ್ಯುಂ ಎಂದು ಅನುಶಯಮಾದುದು ಇಂದೆನಗೆ ಸಂಶಯಮಂ ಕಳೆ ಕೌರವಾಂತಕಾ: **ಗದಾಯು,** ೧. ೫೬)

**ಅನುಶಯ –** ಕಳವಳ (ನಮ್ಮರಸಂ ಮರಳ್ದು ಇಂಬುಕೆಯ್ಯುಂ ಎಂದು ಅನುಶಯಮಾದುದು ಇಂದೆನಗೆ ಸಂಶಯಮಂ ಕಳೆ ಕೌರವಾಂತಕಾ: **ಗದಾಯು,** ೧. ೫೩)

**ಅನುಶಾಸಿಸು –** ಹೇಳಿದಂತೆ ಕೇಳುವ ಹಾಗೆ ಮಾಡು, ಉಪದೇಶ ಮಾಡು (ಲಘುವಾದೆಯೆಂದು ಅಭಿಜಾತ್ಯಮೆ ತನ್ನಂ ಅನುಶಾಸಿಪಂತೆಯುಂ: **ಕಾದಂಬ,** ೬. ೯೨ ವ)

**ಅನುಶಾಸ್ಯ –** ದಂಡನಾರ್ಹ (ನಿಶಾಚರಾಧಿನಾಥಂ .. .. ಶಮನಂ ಅನುಶಾಸಿಯುಂ: **ಜಗನ್ನಾವಿ,** ೧೧. ೮೧ ವ)

**ಅನುಶೋಣಿತ –** ಅನುಸರಣೆಯಿಂದ ಕೆಂಪಾದ (ರಕ್ತಕಮಳಂಗಳ ಆಸ್ಯ ಅನುಶೋಣಿತ ಶೋಣರಿಪು ನೃಪಶಿಶುಗಳೆಂದೆ ತುಟಿಯಿಸದಂ: **ಆದಿಪು,** ೮. ೪೧ ವ)

**ಅನುಷಂಗ –** ಸಂಬಂಧ (ಚಂದ್ರಕಾಂತನಂ ನಿಯಮಿಸಿದಂ ಸ್ವೀಕೃತ ಸತ್ಸಂಗಂ ದೂರೀಕೃತ ದೋಷ ಅನುಷಂಗಂ ಅಭಿನವಪಂಪಂ: **ಪಂಪರಾ,** ೧೬. ೧); ದಯೆ

**ಅನುಷ್ಠಿತ –** ನೆರವೇರಿಸಿದ (ಅಂತು ನೇಸರ್ಮೂಡುವುದುಂ ಅನುಷ್ಠಿತ ವಿಹಿತಾನುಷ್ಠನಂ ಧರ್ಮಸಹಾಯನಪ್ಪುದಱಿಂ ವಿವಿಧಾಯುಧನಿವೃತ್ತಿಗೆಯ್ದು: **ಮಲ್ಲಿನಾಪು,** ೧೦. ೧೪ ವ)

**ಅನುಷ್ಠಿಸು –** ಮಾಡು, ಆಚರಿಸು (ಎಂದು ಯುಧಿಷ್ಠಿರಂ ನಿಷ್ಠಿತ ಕಾರ್ಯಮಂ ಅನುಷ್ಠಿಸೆ ನಿಜಪರಿಜನಮೆಲ್ಲಮಂ ಈಯೊಂದು

**ಅನೃತವಚನ –** ಸುಳ್ಳು ನುಡಿ (ಕ್ರಮದಿಂದ ಜೀವಘಾತ ಅನೃತವಚನ ಪರಾರ್ಥಪಹಾರ ಅನ್ಯನಾರೀಗಮನ: **ಸುಕುಮಾಚ,** ೫. ೪೩)

**ಅನೇಕಪ –** ಆನೆ (ಕುಪಿತ ಅನೇಕಪ ದಂದಶೂಕ ದವದೈತ್ಯಾರಾಥಿಚೋರಾಂಧಕಾರಪತದ್ವಜವಿಷಾಭಿಚಾರಿಕಜರಾತ ೦ಕಾದಿ ಭೇದಂಗಳ: **ಆದಿಪು.** ೧೬. ೯)

**ಅನೇಕಭವ –** ನಾನಾ ಹುಟ್ಟುಗಳು (ವಿಶಾಖನಂದಿಯುಂ ಆಯುರವಸಾನದೊಳ್ ಸತ್ತು ಅನೇಕಭವ ಗಹನಪರ್ಯಟನದಿಂ ಬಂದು: **ಶಾಂತಿಪು,** ೭. ೬೨ ವ)

**ಅನೇಕಮುಖ –** ನಾನಾ ರೀತಿ (ಅಂತು ಪಿರಿದಪ್ಪುದಱಿಂದ ಅನೇಕಮುಖದೊಳ್ ನಡೆವ ಸುರಕೋಟಿಯಂ ಕಂಡು: **ಶಾಂತಿಪು,** ೧೨. ೨೩ ವ)

**ಅನೇಕವಾರಂ –** ನಾನಾ ಬಾರಿ (ಓರೊರ್ವರ್ ಸೆಣಸಿ ತಗುಳ್ದು ಅನೇಕವಾರಂ ವಾರಸ್ತ್ರೀ ಜನಮಿದಿರೊಳ್ ತುಳುಂಕೆ ನೀರಂ: **ಕಾವ್ಯಾವಲೋ,** ೫೪೮)

**ಅನೇಕಾತ್ಮಕ –** ಅನೇಕ ವಿಷಯಗಳನ್ನೊಳಗೊಂಡ (ಜಿನೇಂದ್ರೋಕ್ತಂ ವಿಶುದ್ಧಾಂತರಂಗಂ ಅನೇಕಾತ್ಮಕಂ ಯರ್ಚೆ ಸುತ್ತಟೆಯೆ ಧರ್ಮಧ್ಯಾನಬಂಧಂ: **ಶಾಂತಿಪು,** ೯. ೨೩)

**ಅನೇಡಮೂಕ –** ಕಿವುಡ ಮತ್ತು ಮೂಗ (ಕವಿತಾರಹಸ್ಯಮಂ ಸತ್ಕವಿಯಱಿಗುಂ ಅನೇಡಮೂಕನೇಡಂ ಜಡನೆಂಬವಂ ಅಱಿಗುಮೆ: **ಆದಿಪು,** ೧. ೨೦)

**ಅನೈಕಾಂತಿಕ –** ಏಕಾಂತಿಯಲ್ಲದವನು (ಅನೇಕಾಂತಿಕರ್ ಕೆಲರ್ ತನುತರತನುಗಳೊಳಂ ಅತಿವಿಶದ ಪ್ರಜ್ಞಾತಿಶಯಮಂ ಕಾಣಲಾದಪ್ಪುದು: **ಆದಿಪು,** ೨. ೧೦ ವ)

**ಅನೈಪುಣ್ಯೋಕ್ತಿ –** [ಅನೈಪುಣ್ಯ+ಉಕ್ತಿ] ನಿಪುಣತೆಯಿಲ್ಲದ ಮಾತು (ಬಂದುವು ಪಾವುಡಂ .. .. ಆನೆಗಳ್ ಈ ಪ್ರದೇಶದೊಳ್ ನಿಂದುದಿದು ಎಂಬುದುಂ ವಚನದೋಷವಿಶೇಷ ಅನೈಪುಣ್ಯೋಕ್ತಿಯಿಂ: **ಕವಿರಾಮಾ,** ೧. ೧೧೭)

**ಅನೋಕಹ –** ಮರಗಿಡ (ರಕ್ತಾಶೋಕಪಲ್ಲವಾಧರೆಯರ್ ಅತಿರಕ್ತಪಲ್ಲವ ಅನೋಕಹಂಗಳುಮಂ .. .. ನೋಡುತ್ತುಂ ಕುಸುಮಾಪಚಯಕ್ರೀಡಾವಿಳಾಸದಿಂ ತೊಟಲ್ವಲ್ಲಿ: **ಆದಿಪು,** ೧೧. ೯೫ ವ)

**ಅನ್ನ –** ಆಹಾರ (ಉನ್ನತ ಕುಕ್ಕುಟೇಶ್ವರ ಜಿನೇಶ್ವರಂ ಜಿನಭಕ್ತೆಪೋಗಿ ಕಾಣ್ಬನ್ನೆಗಂ ಅನ್ನಮಂ ಬಿಸುಟು: **ಅಜಿತಪು,** ೧. ೬೧)

**ಅನ್ನಂ –** ಅಂತಹವನು (ದನುಜಾಂತಕನೆಂಬೀ ನಿನ್ನ ನಚ್ಚುವೋದಂಕಮೆಲವೊ ಮುನ್ನಂ ಎನ್ನನ್ನಂ ದನುಜಂ ಪುಟ್ಟದಡ ಸಂದುದು: **ಪಂಪಭಾ,** ೬. ೫೪); ಅಷ್ಟರಲ್ಲಿ; ಆ ತನಕ; ಹಾಗೆ

**ಅನ್ನಂಬಡೆ –** ಆಹಾರವನ್ನು ಪಡೆ (ಮುನ್ನಿನ ಸಿರಿಯ ನೆನೆನೆನೆದು ಉನ್ನತಿಗೆಟ್ಟ ಬಡತನದ ಒದವಿಂದ ಅನ್ನಂಬಡೆಯದೆ ಮಱುಗಿ: **ಧರ್ಮಾಮೃ,** ೮. ೯೫)

**ಅನ್ನದಾನ** – ಧರ್ಮಕ್ಕಾಗಿ ಆಹಾರ ನೀಡುವುದು (ಅತಿಥಿಯೊಳ್ ಇನ್ನು ಅನ್ನದಾನಮಂ ಕುಡುವೆಡೆಯೊಳ್: **ಆದಿಪು,** ೧೫. ೪೦)

**ಅನ್ನಪ್ರಾಶನ** – ಮಗುವಿಗೆ ಮೊದಲ ಬಾರಿಗೆ ಅನ್ನ ತಿನ್ನಿಸುವುದು, ಷೋಡಶ ಸಂಸ್ಕಾರಗಳಲ್ಲಿ ಒಂದು (ನಾನಾ ಸುತಂಗೆ ಜಾತಕರ್ಮ ನಾಮಕರಣ ಅನ್ನಪ್ರಾಶನ ಚೌಲ ಉಪನಯನಾದಿಕ್ರಿಯೆಗಳಂ ಮಾಡಿ: **ಪಂಚತಂತ್ರ,** ೨೫೩ ವ)

**ಅನ್ನವಾಸ** – ಊಟದ ಮನೆ (ಕವಿ ಗಮಕಿ ವಾದಿ ವಾಗ್ಮಿ ಪ್ರವರರ ಪಂಡಿತರ ನೆಗೞ್ದ ಮಾತಱಿವರ ಸಬ್ಬವದವರೊಡನಂತೊಸೆದು ಅನ್ನವಾಸದ ಓಲಗದೊಳಿರ್ದನಾಗಳ್ ಹರಿಗಂ: **ಪಂಪಭಾ,** ೩. ೮೦)

**ಅನ್ನವಾಸಕ** – ಅನ್ನವಾಸ (ಮತ್ತಂ ಆಹಾರೋತ್ತರ ಅನ್ನವಾಸಕ ಅಧಿಷ್ಠಿತ ಮಹಾಪ್ರಸಾದಪ್ರದವಿನೋದ .. .. ಪ್ರಹೇಳಿಕಾಸಮಸ್ಯಾ ಸಮಾಸೋದಿತ ಕಾಲದೊಳ್: **ಶಾಂತಿಪು,** ೯. ೧೯೨ ವ)

**ಅನ್ನವೃತ್ತಿ** – ಅಂತಹ ಕೆಲಸ (ಬಂದು ಮೊಕ್ಕನೆವೋಗಿ ಕೆಡೆದ ಪೊದಱುಮಂ ಅನ್ನವೃತ್ತಿಗಂ ತಂತ್ರಕ್ಕಿರಲ್ ಎಡವಡೆದಂತೆ ಬೀಡುವೆತ್ತಿರ್ದ ಇಂದ್ರರಥನುಮಂ: **ಹರಿವಂಶ,** ೧೧. ೩೦ ವ)

**ಅನ್ನಳ್** – ಅಂತಹವಳು (ಕಳಭಾಷಿಣಿ ತಾಂ ಕುಸುಮಾವಳಿದೇವಿಗೆ ಜೀವದನ್ನಳ್ ಅದು ಪುಸಿಯಲ್ತು: **ಕುಸುಮಾಕಾ,** ೧೫. ೩೪)

**ಅನ್ನಾಂಗ** – [ಜೈನ] ಆಹಾರವನ್ನು ನೀಡುವ ಕಲ್ಪವೃಕ್ಷ; ಹತ್ತು ಕಲ್ಪವೃಕ್ಷಗಳಲ್ಲಿ ಒಂದು (ವಸನಾಂಗ ಆತೋದ್ಯಾಂಗ ಪ್ರಸವಾಂಗ ಜ್ಯೋತಿರಂಗ ದೀಪಾಂಗ ಅನ್ನಾಂಗ ಸುರಾಂಗ ಭಾಜನಾಂಗ ಅವಸಥಾಂಗ ವಿಭೂಷಣಾಂಗ ದಶಕಲ್ಪಕುಜಂ: ಚಂದ್ರಪ್ರಭ, ೩. ೩೪)

**ಅನ್ನೆಗಂ** – ಅಷ್ಟರೊಳಗೆ (ಜೀವಕ್ಕೇಗೆಯ್ದುಮಿದು ಸಹಜಂ ಅನ್ನೆಗಂ ಎಯ್ದುಗುಮುದಾತ್ತಮುಕ್ತಿಶ್ರೀಯಂ: **ಆದಿಪು,** ೯. ೫೨); ಆ ತನಕ (ಈ ಪಸವು ಕಟಿವನ್ನೆಗಂ ನೀಮುಂ ಎಡದ ಕೈಯನೆಟಲಿಕ್ಕಿ ಪಗಲುಣ್ಣಿಂ: **ವಡ್ಡಾರಾ,** ಪು. ೬೨. ಸಾ. ೧೬): ಆವರೆಗೂ (ರನ್ನದ ಕಳಶಕ್ಕೆಣೆ ಎಂಬನ್ನೆಗಂ ಸುಖಸುಧಾಕರಂಸ್ವಸ್ತಿಕರಂ: **ಆದಿಪು,** ೬. ೩೫); ಆ ಸನ್ನಿವೇಶದಲ್ಲಿ (ಭದ್ರಬಾಹುವೆಂಬ ಮಾಣಿಯೊಂದು ಬಟ್ಟಿನ ಮೇಗೆ ಪದಿನಾಲ್ಕು ಬಟ್ಟಂ ಒಂದೞ ಮೇಗೊಂದು ಗೋಳಿಯೊಳಿಟ್ಟು ಆಡುತಿರ್ಪನ್ನೆಗಂ: **ವಡ್ಡಾರಾ,** ಪು. ೭೯. ಸಾ. ೧೩)

**ಅನ್ನೆಯ** – ಅನ್ಯಾಯ (ಅನ್ನೆಯದಿಂ ನಡೆವವರಂ ನೀಂ ನಿಯಮಿಸುವೈ ದಶಾಸ್ಯ ಪೆಱನಾವಂ ನಿನ್ನನಂ ನಿಯಮಿಸುವರ್: **ಪಂಪರಾ,** ೯. ೯೨)

**ಅನ್ನೆವರಂ** – ಅಲ್ಲಿಯವರೆಗೆ (ಅನ್ನೆವರಂ ಸೈತಿರಲೀಯದಂತಕಂ ಗೋಣ್ಮುರಿಗೊಂಡು ಎೞೆದುಯ್ವೆಡೆ ಅಡ್ಡವರ್ಪರುಮೊಳರೇ: **ಅಜಿತಪು,** ೨. ೮೫); ಅಷ್ಟು ಮಟ್ಟಿಗೆ ನರರೆಬರ್ ವೈರಾಗ್ಯಂ ದೊರೆಕೊಂಡೊಡೆ ತೊಱೆವೆವೆಂಬರ್ ಅನ್ನೆವರಂ ಸೈತಿರಲೀಯದೆ: **ಅಜಿತಪು,** ೨. ೮೫)

**ಅನ್ಯಕಾರ್ಯಪರ** – ಬೇರೆ ಕೆಲಸದಲ್ಲಿ ತೊಡಗಿರುವವನು (ಸುರತಾಸಕ್ತನಂ ಅನ್ಯಕಾರ್ಯಪರನಂ ನಿದ್ರಾಳುವಂ .. .. ಕುಕ್ಕುಟಮಲ್ಲಮೇಷಮಹಿಷೇಭದ್ವಂದ್ವಯುದ್ಧಕ್ರಿಯಾ ಪರನಂ ಭೂಪನಂ ಎಯ್ದಿ ಬಿನ್ನವಿಸಬೇಡ: **ಪಂಚತಂತ್ರ,** ೮೩)

**ಅನ್ಯತರವೇದನೀಯ** – [ಜೈನ] ಸಾತಾವೇದನೀಯ ಅಸಾತಾವೇದನೀಯ ಎಂಬ ಎರಡು ಕರ್ಮಪ್ರಕೃತಿಗಳಲ್ಲಿ ಒಂದು (ನಿಜದ್ವಿಚರಸಮಯದಳ್ ಅನ್ಯತರವೇದನೀಯ ದೇವಗತಿತತ್ಪ್ರಯೋಗ್ಯಾನುಪೂರ್ವ ಶರೀರಬಂಧನ ಸಂಘಾತವರ್ಣರಸಪಂಚಕ ಸಂಸ್ಥಾನ ಸಂಹನನ ಪಂಚಷಟ್ಕಾಂಗೋಪಾಂಗದ್ವಿಕಂ ಗಂಧದ್ವಿಕಂ: **ಆದಿಪು,** ೬. ೪೯ ವ)

**ಅನ್ಯತ್ವ** – [ಜೈನ] ಅನುಪ್ರೇಕ್ಷೆಗಳಲ್ಲಿ ಒಂದು (ಎರಡುಂ ಪಲಗೆಯಂ ಪತ್ತಿ ಪೋಗುತ್ತುಂ ಅನ್ಯತ್ವಮೆಂಬ ಅನುಪ್ರೇಕ್ಷೆಯನಿದಂ ಕಂಡು ನಂಬಿಂ ಎಂಬಂತೆ: **ಹರಿವಂಶ,** ೪. ೧೫ ವ)

**ಅನ್ಯಥಾನುಪಪತ್ತಿ** – ಬೇರೆ ರೀತಿಯಲ್ಲಿ ಸಾಧಿಸಲಾಗದ ಸ್ಥಿತಿ (ಅಸು ಸಾಧನದೂಷಣಪ್ರಯೋಗ ಅನ್ಯಥಾನುಪಪತ್ತಿಯಿಂ ಬಹಿರರ್ಥ ಸಿದ್ಧಿಯಕ್ಕುಂ: **ಆದಿಪು,** ೨. ೧೦ ವ)

**ಅನ್ಯಥಾವಾಸ** – ಬೇರೆ ಬಗೆಯಾದ ವಾಸ [ಅಜ್ಞಾತವಾಸ] (ಧರ್ಮಪುತ್ರಂ ಪನ್ನೆರಡು ವರುಷಂಬರಂ ನಾಡಂ ಪುಗದೆ ಅರಣ್ಯದೊಳ್ನಿಂತು ಅನ್ಯಥಾ ವಾಸದೊಳ್ ಒಂದು ವರುಷದೊಳ್: **ಪಂಪಭಾ,** ೭. ೩ ವ)

**ಅನ್ಯದಾರವಿದೂರ** – ಪರಸ್ತ್ರೀಯರಿಂದ ದೂರವಾಗಿರುವವನು (ಭರತಕ್ಷೇತ್ರದ ಶಂಖಪುರಮನಾಳ್ವ ಅನ್ಯದಾರವಿದೂರಂ ಉದಾರನೆಂಬೊಂ: **ಶಾಂತಿಪು,** ೫. ೮೩ ವ)

**ಅನ್ಯದೃಷ್ಟಿ** – ಬೇರೆಯ ದೃಷ್ಟಿ, ಇತರರ ದೃಷ್ಟಿ (ಭಯಂ ಅಖಿಲಕಾಂಕ್ಷೆ ವಿಚಿಕಿತ್ಸೆ ಅನ್ಯದೃಷ್ಟಿ ಪ್ರಶಂಸೆ ಸಂಸ್ತವನಂ ಎಂಬೀಕ್ರಿಯೆ .. .. ಸಮ್ಯಗ್ ದೃಷ್ಟಿಗೆ .. .. ವ್ಯತಿಕ್ರಮಂ: **ಸುಕುಮಾಚ,** ೬. ೪೫)

**ಅನ್ಯಧನಾಪಹ** – ಇತರರ ಸ್ವತ್ತನ್ನು ಅಪಹರಿಸುವವನು (ಅಧಮರ್ ಇವಂ ಮಱಸಿಯುಂ ಅನ್ಯಧನಾಪಹ ಮದ್ಯಸೇವೆಗಳ್ ಸಲ್ಲೆಂಬರ್: **ಸಮಯಪ,** ೧೧. ೭೬)

**ಅನ್ಯಪರಿಭಂಗ** – ಇತರರನ್ನು ಅವಮಾನಿಸುವುದು, ಸೋಲಿಸುವುದು (ವೃಥಾ ಅನ್ಯಪರಿಭಂಗಂ ಭಂಗಮಂ ಸಾರ್ಚದೇ: **ರಾಜಶೇವಿ,** ೫. ೭೩)

**ಅನ್ಯಪುಷ್ಟ** – ಪರಪುಷ್ಟ, ಕೋಗಿಲೆ (ಮರಾಳಸ್ವನಂ ಉನ್ಮತ್ತ ಅನ್ಯಪುಷ್ಟಧ್ವನಿ ಕಾಕ ರುತಿ ಕೇಕಿಸ್ವರಂ ಕೋಕ ನಾದಂ: **ಕುಸುಮಾಕಾ,** ೯. ೧೩)

**ಅನ್ಯಭವ** – ಬೇರೆಯ ಹುಟ್ಟು (ಹಾರಮಿದು ಅನ್ಯಭವ ಅಲಂಕಾರಮಂ ಅನುಕರಿಸಿಯುಂ ಅದ್ವಿತೀಯನ ಗತಿಸಂಸ್ಕಾರಮನಱೆಪಿದೊಡೆ: **ಶಾಂತಿಪು,** ೨. ೨೬)

**ಅನ್ಯಭೃತ** – ಅನ್ಯಪುಷ್ಟ (ನಂದನವನಪವನಂ ಬೞೆವಂದೊಡಗೊಂಡೊಯ್ದು ಪುಗಿಸೆ ಬನಮಂ ಪುಗಲ್ ಎಂಬೊಂದು ಅನ್ಯಭ್ರತಕ್ವಾಣಿತವಂದಂತಾಯ್ತು ಬೆಸಸೆ ಕುಸುಮಾಮೋದಂ: **ಶಾಂತಿಪು,** ೮. ೩)

**ಅನ್ಯಸಮಯ** – ಬೇರೆಯ ಮತ (ಶ್ರೀ ಜೈನಧರ್ಮಂ ಪೊದಳ್ದೊದವಿತ್ತಿರ್ಪುದು ಮತ್ತಿನ ಸಮಯಕ್ಕೆ ಉತ್ಪತ್ತಿಯಿಲ್ಲೊಂದಱೊಳ್: **ಆದಿಪು,** ೧. ೫೧)

**ಅನ್ಯಸ್ವ** – ಇತರರ ಆಸ್ತಿ (ವಿಶ್ವಜನಾಳಿಗೆ ಭವದೀಯಸ್ವಂ ಕರತಳಿತಗತಸ್ವಂ ಅನ್ಯಸ್ವಂ ಬ್ರಹ್ಮಸ್ವಂ ರಾಜಸ್ವಂ ದೇವಸ್ವಂ ಕೀರ್ತಿಸ್ವ ದುರ್ಗ ವಿಶ್ವಾವನಿಯೊಳ್: **ಪಂಚತಂತ್ರ,** ೪೪೫)

**ಅನ್ಯಾಂಗನಾಸ್ಪೃಹೆ** – ಇತರರ ಹೆಣ್ಣುಗಳಲ್ಲಿ ಮೋಹ(ಅನ್ಯಾಂಗನಾಸ್ಪೃಹೆಯಂ ತಾಳ್ದಿದನಲ್ತೆ ಕಾಲವಶದಿಂ ಲಂಕೇಶ್ವರಂ: **ಪಂಪರಾ,** ೯. ೮೬)

**ಅನ್ಯಾಂಗಪ್ರವೇಶ** – ಇತರರ ದೇಹವನ್ನು ಹೊಗುವುದು, ಪರಕಾಯಪ್ರವೇಶ (ಅನ್ಯಾಂಗಪ್ರವೇಶಕಂ ಹಿಮಸಮಯ ಮಹಾಸಿದ್ಧಂ ಒಪ್ಪಿರ್ದನಾಗಳ್: **ರಾಜಶೇವಿ,** ೯. ೮)

**ಅನ್ಯಾಯವೃತ್ತಿ** – ನ್ಯಾಯವನ್ನು ಬಿಟ್ಟ ನಡತೆ (ತತ್ಸುಕುಮಾರಾಂಗಿಗೆ ಸೋಲ್ತೆಱಗಿಕೊಂಡಂ ಅನ್ಯಾಯವೃತ್ತಿಯಿಂ ಕೋಮಳೆಯಂ: **ಶಾಂತಿಪು,** ೯. ೧೦)

**ಅನ್ಯಾಯೋಪಾರ್ಜಿತ** – ಅನ್ಯಾಯದ ರೀತಿಯಲ್ಲಿ ಗಳಿಸಿದ (ಧರ್ಮದೊಳ್ ಬಹಿರ್ಮುಖನುಂ, ಅರ್ಥದೊಳ್ ಅನ್ಯಾಯೋಪಾರ್ಜಿತಾರ್ಥನುಂ, ಕಾಮದೊಳತಿ ಕಾಮಿಯುಂ, ಮೋಕ್ಷದೊಳ್ ನಿರಪೇಕ್ಷಕರನುಮಾಗಿ: **ಪಂಚತಂತ್ರ,** ೮೧ ವ)

**ಅನ್ವಯ** – ವಂಶ (ಗುರುವನಿನ್ನೀನಾತನಂ ಬೇಗಮಿಕ್ಕದೆ ಕಣ್ಣೀರ್ಗಳನಿಕ್ಕೆ ಚಂದ್ರಧವಳಂ ನಿನ್ನ ಅನ್ವಯಂ ಮಾಸದೇ: **ಪಂಪಭಾ,** ೧೨. ૩೫)

**ಅನ್ವಯಕ್ಷಯ** – ಕುಲಹಾನಿ, ವಂಶನಾಶ (ಇನಿವಿರಿದು ಅನ್ವಯಕ್ಷಯದಪವಾದದ ಪೆರ್ವೊಱೆಯಂ ಪೊತ್ತು ನಿತ್ತರಿಸಲಾರ್ಪುದೇ: **ಶಾಂತಿಪು,** ೪. ೭೯ ವ)

**ಅನ್ವಯದತ್ತಿ** – [ಜೈನ] ತನ್ನ ವಂಶವನ್ನು ಸ್ಥಿರವಾಗಿ ನೆಲೆಗೊಳಿಸಲು ವಂಶದ ಬೇರೆಯವನಿಗೆ ಧರ್ಮವನ್ನೂ ಸರ್ವಸ್ವವನ್ನೂ ಒಪ್ಪಿಸುವುದು (ತನ್ನ ಸಂತತಿಯಂ ನಿಱಿಸಲೆಂದು ಪುತ್ರಂಗಕ್ಕೆ ಗೋತ್ರಜಂಗಕ್ಕೆ ಧರ್ಮಮಂ ಸರ್ವಸ್ವಮುಮಂ ಅಪ್ಪಯಿಸಿ ಕೊಡುವುದು ಅನ್ವಯದತ್ತಿ ಎಂಬುದು: **ಅಜಿತಪು,** ೧೨. ೧ ವ)

**ಅನ್ವಯಪ್ರದೀಪ** – ಕುಲವನ್ನು ಬೆಳಗುವವನು (ತನೂಭವಂ ತನಗೆ ಪುಟ್ಟಿ .. .. ನಮ್ಮದೊಂದು ಅನ್ವಯಪ್ರದೀಪನೆನಿಸಲ್ಕೆ: **ಮಲ್ಲಿನಾಪು,** ೪. ೧೮)

**ಅನ್ವಯವೃದ್ಧಿ** – ವಂಶಾಭಿವೃದ್ಧಿ (ಪ್ರಿಯಕಾರಿಣಿ ಎಂಬೊಳ್ ಅನ್ವಯವೃದ್ಧಿಗೆ ಮದುವೆ ಮಾಡೆ: **ಶಾಂತಿಪು,** ೯. ೯)

**ಅನ್ವಯೋದ್ಧರಣ** – ವಂಶಾಭಿವೃದ್ಧಿ (ಅನ್ವಯೋದ್ಧರಣ ಸಮರ್ಥನಪ್ಪ ನಿಜಾತ್ಮಜಂಗೆ: **ಸುಕುಮಾಚ,** ೬. ೨೫ ವ)

**ಅನ್ವರ್ಥ** – ಅರ್ಥಕ್ಕೆ ಅನುಗುಣವಾದ, ಸಾರ್ಥಕವಾದ (ಶತ್ರುಂತಪನೆನಿಸಿದ ಸ್ಥಿರತ್ವಂ ಅನ್ವರ್ಥಮಗಿ ತಳರವೆ: **ಶಾಂತಿಪು,** ೧೧. ೫೬)

**ಅನ್ವರ್ಥತೆ** – ಅರ್ಥಕ್ಕೆ ಅನುಗುಣವಾಗಿರುವುದು (ಅನ್ವರ್ಥತೆಯಂ ತಾಳ್ದಿತ್ತು ವಿದೇಹಂ ವಿದೇಹಮೆಂಬೀ ಪೆಸರಿಂ: **ಆದಿಪು,** ೧. ೫૩)

**ಅನ್ವವಾಯ** – ವಂಶ, ಕುಲ (ಇಂತವಿಹತಗತಿಯಿಂ ಮುನ್ನ ಅನ್ವವಾಯಭೂಧರದ ಶಿಖರಮಂ ಮುಟ್ಟಿದರಾರ್: **ಆದಿಪು,** ೧೪. ೪೦)

**ಅನ್ವಾಯ** – ಅನ್ವಯ (ಭರತಾನ್ವಾಯದೊಳ್ ಅಂದಿನಿಂದುವರೆಗಂ ಸಾಪತ್ನರೊಳ್ ಬದ್ಧಮತ್ಸರಮಿಲ್ಲ: **ಗದಾಯು,** ೭. ೯)

**ಅಪಕಪಟ** – ಕಪಟವಿಲ್ಲದ್ದು (ಕಪಿಲಂಗಂ ಕಾಪಿಲ್ಲೆಗಂ ಅಪಕಪಟಂ ಜಟಿಳಂ ಎಂಬನಾದಂ ತನಯಂ: **ವರ್ಧಮಾಪು,** ೬. ೧૩)

**ಅಪಕರ್ಷ** – ಗಮನವನ್ನು ಬೇರೆಡೆ ಸೆಳೆಯುವುದು, ಕುಗ್ಗಿಸುವುದು (ಜಡರಂ ಅನ್ ಅಪಕರ್ಷದಿಂ ರಾಗಿಸರೇ: **ಪಂಪರಾ,** ೧೧. ೧೮೧)

**ಅಪಕೃತಿ** – ಅಪಕಾರ (ಉಪಕೃತಿಯಂ ನೆನೆಯದೆ ನೀಂ ಅಪಕೃತಿಯನೊಡರ್ಚಿದ್ದೆ: **ಪಂಪರಾ,** ೧೧. ೧૩೭)

**ಅಪಕ್ಷ್ಮತಾ[ತೆ]** – ರೆಪ್ಪೆ ಬಡಿಯದವನು, ದೇವತೆ (ಅಪಕ್ಷ್ಮತಾಸಮಾಯತ ಗಗನಪ್ರಚಾರಮಪಜೀವನಧರಂ .. .. ಎಂ ಜಿನನೊಳ್ ಪೊದಳ್ದುವೋ: **ಆದಿಪು,** ೧೦. ೪೨)

**ಅಪಗಂಟು** – ಬಿಡಿಸಲಾಗದ ಗಂಟು (ಜೀವಿಪಾಸೆ ಧನಾಸೆಯೆಂಬ ಅಪಗಂಟು ಪಣ್ಣಿದ ಕಣ್ಣಿಯಿಂ ಜೀವನಂ ಗಡ ಕಟ್ಟೆ: **ಆಚವರ್ಧ,** ೧೨. ೯೪)

**ಅಪಗತ** – ದೂರವಾದ (ಅಂತು ಅಪಗತಗುರುಶೋಕವೇಗನಾಗಿ ಗಣಧರಚರಣ ಸರಸಿಜಂಗಳ್ಗೆಱಗಿ: **ಆದಿಪು,** ೧೬. ೭೦ ವ)

**ಅಪಗತಚೇತೋಭವ** – ಮದನಹರ (ಅಪಗತಚೇತೋಭವಪ್ಪೊಡಿಲ್ಲ ಗೌರೀಧವಂ ಈಶ್ವರನಪ್ಪೊಡೆ ಎಂತುಂ ಅಱೆಯಂ ತಿರಿಯಲ್: **ಸಮಯಪ,** ೮. ೬೬)

**ಅಪಗತಕಪಟ** – ವಂಚನೆಯಿರದ ಸ್ಥಿತಿ (ಅಪಗತಕಪಟದೆ ನಟಂ ಅದಂ ಉಪದೇಶಂಗೆಯ್ದು ಪರಸಿ ಪೋಗೆನೆ: **ಪಂಪಭಾ,** ೧೧. ೧૩೧)

**ಅಪಗತತಂದ್ರ** – ಆಲಸ್ಯವಿಲ್ಲದವನು (ಅಪರಾಜಿತಚರಂ ಅಚ್ಯುತೇಂದ್ರಂ ಅಪಗತತಂದ್ರಂ: **ಶಾಂತಿಪು,** ೫. ೧)

**ಅಪಗತತಾಲ್ವೋಷ್ಠಸ್ಪಂದನ** – ನಾಲಗೆ ತುಟಿಗಳ ಚಲನೆಯಿಲ್ಲದಿರುವುದು (ಅಂದು ಅಪಗತತಾಲೋಷ್ಠಸ್ಪಂದನಂ ಅಸ್ಪೃಶ್ಯಕರಣವರ್ಣಂ ಜಗದಾನಂದಕರಂ: **ಆದಿಪು,** ೧೦. ೬૩)

**ಅಪಗತಪ್ರತಿಭ** – ಮಂಕುಹಿಡಿದವನು (ಮೂವರುಂ ಪ್ರತಿವಾದಿಗಳಂ ಅಪ್ರತಿಹತಪ್ರತಿಭೆಯಿಂ ಅಪಗತಪ್ರತಿಭರ್ಮಾಡಿ ಸಭಾಪತಿಯಾಗಿರ್ದ ಮಹಾಬಳನುಮಂ: **ಆದಿಪು,** ೨. ೧೦ ವ)

**ಅಪಗತಮತಿ** – ಬುದ್ಧಿಯಿಲ್ಲದ ಸ್ಥಿತಿ (ತದೀಯ ಪಾದಪದ್ಮಂಗಳಂ ಕರಪಲ್ಲವಂಗಳಿನೊತ್ತುತ್ತುಂ ಅಪಗತಮತಿಯಿಂ: **ಸುಕುಮಾಚ,** ૩. ೪೪ ವ)

**ಅಪಗತಮೋಹ** – ಮೋಹರಹಿತ (ಅಪಗತಮೋಹನಾದ ರಾಮಂಗೆ ದೇವರಿರ್ವರುಂ ತಮ್ಮ ದಿವ್ಯಸ್ವರೂಪಮಂ ತೋಱೆ: **ಪಂಪರಾ,** ೧೬. ೫೬ ವ)

**ಅಪಗತರಜ** – ಧೂಳಿರದ, ರಜೋಗುಣ ರಹಿತ (ಆಗಳುದಯಿಸಿದಾ ಕಹತ್ಮಂ ಅಪಗತರಜನೆಂಬುದಂ ಪೇಟ್ವಂತೆ: **ಚಂದ್ರಪ್ರಪು,** ೧೨. ૩૩ ವ)

**ಅಪಗತವಿಗ್ರಹ** – ದೇಹವಿಲ್ಲದವನು, ಯುದ್ಧದ ಚಿಂತೆಯಿಲ್ಲದವನು (ಸಿದ್ಧಪದವೀಪ್ರಾಪ್ತಂ ಅಂತು ಅಪಗತವಿಗ್ರಹನುಂ: **ಚಂದ್ರಪ್ರಪು,** ೨. ೧೧ ವ)

**ಅಪಗಮ** – ಅಪಾಯ (ಅಪಗಮಂ ಅತ್ಯಯಂ: **ಅಭಿಧಾವ,** ೨. ೨. ೧೭)

**ಅಪಘನ** – ಶರೀರ (ಬಾಡಿದವು ಮುಡಿದ ಮಾಲೆಗಳ್ ಓಡಿದವು ಅಪಘನಕಾಂತಿ: **ಕರ್ಣನೇಮಿ,** ೧. ೧೦೭); ಅವಯವ (ಘನದ ಕರಗಿದುದು ಅಪಘನದ ವಿಳಾಸಮನದೆಂತು ನಂಬುವುದೊ: **ಆದಿಪು,** ೪. ೬೫); ಮೋಡ (ಅಪಘನಂ ಅಪಘನಂ ಇದಱೆಂದಪಾರಸಂಸಾರಸುಖಮಂ ಎಯ್ದುವನೆಂಬಂ ಚಪಲಾಗ್ರಂ ಬಿಡದೀ ಪದಂ ಪವನಪಥಮಂ ಎಯ್ದಲ್ಕೆ ಬಗೆವ ಮರುಳಂ ಪೋಲ್ಕುಂ: **ಶಾಂತೀಶ್ವಪು,** ೯. ೪೧)

**ಅಪಚಯ** – ಸಂಗ್ರಹಣೆ (ತಣ್ಣಾಳಿಗೆ ನಾಟ್ಯಶಾಲೆ ಕುಸುಮ ಅಪಚಯಪ್ರಚಳತ್ಪುರಾಂಗನಾಲೋಲ ಕಟಾಕ್ಷಲಕ್ಷ್ಮಿಗೆ ಎನಲ್ ಒಪ್ಪುವುವು ಅಲ್ಲಿಯ ಪುಷ್ಪವಾಟಿಗಳ್: **ಪುಷ್ಪದಂಪು,** ೨. ೫೦); [ಜೈನ] ಆಯುಷ್ಯ, ಬಲ, ಶರೀರ, ವೈಭವ ಮುಂತಾದವು ಕುಂದುವುದು (ಶರೀರ ಬಳ ಆಯುಃ ದೇಹಪ್ರಮಾಣ ಉಪಚಯ ಅಪಚಯಹೇತುತ್ವದಿಂದಂ ಉತ್ಸರ್ಪಿಣಿ ಅವಸರ್ಪಿಣಿ ನಾಮಮಂ ಪಡೆದುದು: **ಆದಿಪು,** ೬. ೪೮ ವ)

**ಅಪಚಾರಣ** – ಕೆಟ್ಟ ದಾರಿ (ಆತನ ಅಪಚಾರಣಮೆ ಕಾರಣಮಾಗಿ ಪನ್ನೆರಡುವರ್ಷಂ ಅನಾವೃಷ್ಟಿಯಾದಪ್ಪುದು: **ಪಂಚತಂತ್ರ,** ೧೩೮ ವ)

**ಅಪಚಿತ** – ತಗ್ಗಿದ, ಕಡಿಮೆಯಾದ (ವಿಪನ್ನ ಪಾರ್ಥಿವರಂತೆ ಅಪಚಿತಪ್ರಭಂಗಳುಂ .. .. ಅಪ್ಪ ಮುಗ್ಧೆಯರಂ ಬಜೆದೆ ನಾಣ್ಚಿಸದಿರ್: **ಲೀಲಾವತಿ,** ೩. ೨೦ ವ)

**ಅಪಜಿಹ್ಮ** – ಬಾಗಿಲ್ಲದ, ಮೋಸವಿಲ್ಲದ (ತ್ಯಾಗಂ ಅಕಿಂಚತ್ವಂ ಅಪಜಿಹ್ಮಂ ಬ್ರಹ್ಮಚರ್ಯಂ ದಲ್ ಎಂಬಂತೆ: **ಚಂದ್ರಪ್ರಪು,** ೧೧. ೭)

**ಅಪಟೀ** – ಪರದೆ (ಅಪಟೀ ಪ್ರತಿಸೀರಾ ಕಾಂಡೆಪಟಿ ತಿರಸ್ಕರಿಣಿಕಾಖ್ಯೆ ಜವನಿಕೆಯಕ್ಕುಂ: **ಅಭಿಧಾವ,** ೧. ೧೦. ೨೩)

**ಅಪಟುತೆ** – ಸತ್ವಹೀನತೆ (ಪೊಣ್ಮಿದಪಟುತೆ ಕಳಂಕದಿಂ ಉಣ್ಮಿದ ನಿಸ್ತೇಜದಿಂದಸ್ತಾದ್ರಿಗೆ ವಂದಾಣ್ಮನಂ ಈಕ್ಷಿಸಲಾರದೆ ಕಣ್ಮುಚ್ಚುವ ತೆಱದೆ ಮುಗಿದುದು ಅಬಬ್ಜಸಮಾಜಂ: **ಶಾಂತೀಶ್ವಪು,** ೧೧. ೮)

**ಅಪತೃಷ್ಣೆ** – ದುರಾಶೆ (ಆಗಳುಂ ಕುದಿದು ಅಪತೃಷ್ಣೆಯಂ ಕುಸಿದು ಮಾಣಿಸುವ: **ಆದಿಪು,** ೬. ೭)

**ಅಪತ್ಯ** – ಮಗ (ಜಾಬಾಲಿಗಳೆಂಬ ಅತ್ಯುತ್ತಮ ಯತಿಪತಿಗಳ ಅಪತ್ಯಂ ಹಾರೀತನಾಮಂ ಆವಂ ಅದೋರ್ವಂ: **ಕಾದಂಬ,** ೧. ೧೬೭)

**ಅಪತ್ಯವರ್ಗ** – ಮಕ್ಕಳ ಸಮೂಹ (ವೃಷಭನಾಥನುಟಿದ ಅಪತ್ಯವರ್ಗಕ್ಕೆಲ್ಲಂ ಇಳಾತಳವಿಭಾಗಮಂ ಪಚ್ಚುಕೊಟ್ಟು: **ಆದಿಪು,** ೯. ೭೨ ವ)

**ಅಪತ್ಯೋದಯ** – ಮಗನ ಜನನ (ಅಪತ್ಯೋದಯ ಮುಹೂರ್ತ ಫಲಪ್ರಭಾವಭವನಾಜಾತ ವಿಸ್ಮಯಾಂದೋಳಿತ ಶರಸ್ಸರೋರುಹಂ: **ಚಂದ್ರಪ್ರಪು,** ೩. ೯೬ ವ)

**ಅಪಥ್ಯ** – ಅಹಿತಕರ (ಬಂದು ಕಾಣ್ ಕಂಡೊಡೆ ಪಥ್ಯಂ ಅಪಥ್ಯಂ ಈ ಕನಿಷ್ಠಾಚರಣಂ: **ಶಾಂತಿಪು,** ೩. ೮೯)

**ಅಪದಸ್ಥ** – ಕಾಲಿಲ್ಲದ್ದು (ಅಪದಸ್ಥಂ ವಿಷವಕ್ತ್ರಕಂ ದ್ವಿರಸನಂ ಮಿತ್ರದ್ವಿಷಂ ವಕ್ರಗಾಮಿ .. .. ಎನೆ ಪಾವಂ ಪೋಲ್ತು: **ಸಮಯಪ,** ೧೪. ೧೫); ಅಧಿಕಾರರಹಿತ (ಜನನಾಥಂ ಪಿತೃ ಸಾಯೆ ನಮ್ಮಂ ಅಪದಸ್ಥರ್ ಮಾಡಿ .. .. ಅಗ್ರಜನಲ್ಲಿಗೆಯ್ದಿ: **ಸುಕುಮಾಚ,** ೫. ೨೫)

**ಅಪದಾನ** – ದೊಡ್ಡ ಕೆಲಸ, ಉದಾತ್ತ ಕಾರ್ಯ (ಆ ನಾಗಪಾಶಮಂ ಜಗತೀನಾಥಂ ಪೊಸೆಯೆ ಕಟ್ಟುಗಳ್ ಬಿಟ್ಟಿರೆ ಪೋಲ್ತೇನೆಸೆದುದೊ ನೃಪಸುತನ ಅಪದಾನದ ಶಾಸನಕೆ ಲೆಕ್ಕಮಿಟ್ಟಕ್ಕರಮಂ: **ಶಾಂತಿಪು,** ೮. ೫೪)

**ಅಪದೃಕ್ಸಾರ** – ದೃಷ್ಟಿಪಟುತ್ವವನ್ನು ಹಾಳು ಮಾಡುವುದು (ಇದು ಕಾಮನ ಕಾರಲಗು ಎನಿಸಿದುದು ಅಪದೃಕ್ಸಾರಂ ಅಂಧಕಾರಮಪಾರಂ: **ಚಂದ್ರಪ್ರಪು,** ೮. ೨೦)

**ಅಪದೋಷ** – ದೋಷವಿಲ್ಲದವನು (ಅಪದೋಷನಂ ಏಳಿಸಿ ಕೊಂದ ಪಾಪಿಯಂ ಪಲವು ತೆಱದ ಕೊಲೆಗಳಿನೀ ನಿಷ್ಕೃಪನಂ ಕೊಲ್: **ಸುಕುಮಾಚ,** ೬. ೫೩)

**ಅಪಧ್ಯಾನ** – [ಜೈನ] ಅನ್ಯಧರ್ಮದ ಕಾವ್ಯಗಳ ಬಗ್ಗೆ ಚಿಂತಿಸುವುದು (ಗುರುಗಳೊಳ್ ಸಮಾತ್ಸರ್ಯಂ ಅಪಧ್ಯಾನಂ ಅಪಹರ್ಷಂ ಅವಿನಯಂ ಜ್ಞಾನದೃಗಾವರಣದಾಸ್ರವಕ್ಕೆ ನಿಮಿತ್ತಂ: **ಸುಕುಮಾಚ,** ೮. ೧೬)

**ಅಪನಯ** – ಅನೀತಿ (ಅಪನಯಮಾರ್ಗನೆನಿಪ್ಪವನೆ ಕರ್ಷಣೀಯಂ ಅಮೋಘಂ: **ಪಂಚತಂತ್ರ,** ೨೯೭)

**ಅಪನಯನ** – ದೂರ ಮಾಡುವುದು (ಜಿನಮತಪದಾರ್ಥಶಂಕಾ ಅಪನಯನಮುಂ ಭೋಗಕಾಂಕ್ಷೆಯೊಳ್ ವಿಮುಖತೆಯುಂ : **ಆದಿಪು,** ೫. ೫೭)

**ಅಪನೀತ** – ತೆಗೆದುಹಾಕಲಾದ (ಅದಂ ಮಹಾಸಂಧಿವಿಗ್ರಹಿ ಕೊಂಡು ಅಪನೀತಮುದ್ರೆಯಂ ಮಾಡಿ: **ಆದಿಪು,** ೧೪. ೪೫ ವ)

**ಅಪನೋದನ** – ನಿವಾರಿಸುವುದು, ಪರಿಹಾರ (ಪ್ರಿಯಮಧುರಂಗಳುಂ ಶೋಕ ಅಪನೋದನಿಪುಣಂಗಳುಂ ಧರ್ಮೋಪದೇಶಗರ್ಭಂಗಳುಮಪ್ಪ ವಚನನಿಚಯಂಗಳಿಂ ಎಂತಾನುಂ ಸಂತೈಸಿ: **ಕಾದಂಸಂ,** ೨. ೧೧)

**ಅಪಪ್ರಥೆ** – ಅಪವಾದ (ಬನ್ನಂ ಬಂದಡೆಯುಂ ಅಪಪ್ರಥೆಯುಂ ಇರೆ ನಿಶ್ಚಯಮೆ ದೇವತೆಗೆತ್ತು ಭಯಮುಂ ಸಿಗ್ಗುಮಾಗೆ ಮಗುಟ್ದು ಪೋಗಿ: **ಹರಿವಂಶ,** ೭. ೭೫ ವ)

**ಅಪಮತಿ** – ಬುದ್ಧಿಗೆಟ್ಟ (ಮಯ್ದುನನ ಪೊಟಿಲ್ಗೆ ಅಪಮತಿ ಸಂಭಿನ್ನಂಬೆರಸುವೋದಂ: **ಶಾಂತಿಪು,** ೬. ೩೬)

**ಅಪಮಾನಿಸು** – ಕಡೆಗಣಿಸು (ಅವಂ ಅವಂ ಅಪಮಾನಿಸಿ ಸಂಸ್ತವಸತ್ವಂ ಚಕ್ರ ವಿಕರಮೋರ್ಜಿತಂ: **ಕರ್ಣನೇಮಿ,** ೧. ೧೦೫)

**ಅಪಮಿತ** – ಅವಮಾನಕ್ಕೆ ಗುರಿಯಾದ (ಅಪಮಿತಜನಕಕ ಅಭೇದ್ಯಾವಲಿಗಂ .. .. ಪರಮಸುಖಮಂ ಒಸೆದೀಯುತ್ತುಂ: **ಶಾಂತಿಪು,** ೩. ೫೧)

**ಅಪಮೃತ್ಯು** – ಅಕಾಲ ಮರಣ (ಮಱುಕಮಾಮಯಮಪ್ಪ ಅಪಮೃತ್ಯುವೆಂಬಿವಲ್ಲಿಗೆ ಪೊಱಗು: **ಆದಿಪು,** ೫. ೩೦)

**ಅಪರ** – ಅತ್ಯುತ್ತಮವಾದ (ಪರನಪರಂ ಭವನಭವಂ .. .. ಕ್ಷರನಕ್ಷರನೆನಿಪ ಗಣಿತವಿರುದ್ಧಗುಣ ನಿನ್ನ ನಿಜವದೇಂ ಕೇವಳಮೇ: **ಜಗನ್ನಾವಿ,** ೩. ೯೭)

**ಅಪರಗಿರಿ** – ಪಶ್ಚಿಮ ಬೆಟ್ಟ (ಅಂತು ಪತಂಗಮಂಡಲಂ ಅಪರಗಿರಿಯತಟಮನೆಯ್ದುವುದುಂ ಎರಡುಂ ಪಡೆಗಳ್ ಅಪಹಾರತೂರ್ಯಂಗಳಂ ಬಾಜಿಸಿ ತಂತಮ್ಮ ಬೀಡುಗಳ್ಗೆ ಪೋದುವಾಗಳ್: **ಪಂಪಭಾ,** ೧೨. ೮೮ ವ)

**ಅಪರಜ** – ದೂಳಿಲ್ಲದ, ರಜೋಗುಣರಹಿತ (ತಿಳಿನೀರಂತೆ ಅಪರಜರ್: **ಶಾಂತಿಪು,** ೧೧. ೫೫)

**ಅಪರದಿಕ್** – ಪಶ್ಚಿಮ ದಿಕ್ಕು (ಮುತ್ತುಗಳಂ ತಳಿದೆಸೆದಳ್ ಅಪರಗಿರಿ ದಿಗ್ವಧು ತಳೆವಂತಿರೆ ಸಂಜೆವೆರಸಿ ತಾರಾಗಣಮಂ: **ರಾಜಶೇವಿ,** ೫. ೧೧೧)

**ಅಪರವಾರ್ಧಿ** – ಪಶ್ಚಿಮ ಸಮುದ್ರ (ಬೇಸಱ್ ಲೋಕಮಂ ತಗುಳ್ದು ಸುಟ್ಟ ಅಟಲಿಂದೆ ಖರಾಂಶು ನಾರಕಾವಾಸದೊಳ್ ಆಟ್ವವೋಲ್ ಅಪರವಾರ್ಧಿಯೊಳ್ ಆಟ್ದುದುಂ: **ಪಂಪಭಾ,** ೩. ೮೧)

**ಅಪರದಿಗ್ಭಾಗ** – ಅಪರದಿಕ್ (ತದಪರದಿಗ್ಭಾಗದೊಳ್ ಅನಗಾರಕೇವಳಿ ಹುತಾಶನ ಕುಂಡಮಂ ಸ್ಥಾಪನಂಗೆಯ್ದು: **ಆದಿಪು,** ೧೬. ೫೨ ವ)

**ಅಪರನಾಮಧೇಯ** – ಇನ್ನೊಂದು ಹೆಸರು ವಿಷ್ಣುವರ್ಧನ ಅಪರನಾಮಧೇಯನುಂ: **ಗದಾಯು,** ೨. ೭ ವ)

**ಅಪರವಾರಿಧಿ** – ಪಶ್ಚಿಮ ಸಮುದ್ರ (ಆಗಸದಿಂ ಅಪರಸಂಧ್ಯಾರಾಗಾವಿಲಂ ಅಪರವಾರಿಧಿಗಿಳಿದಂ: **ಪಂಪರಾ,** ೯. ೧೮೮)

**ಅಪರಸಂಧ್ಯಾ[ಧ್ಯೆ]** – ಸಾಯಂಕಾಲ (ಅಪರಸಂಧ್ಯಾ ಸಂಪತನತತ್ಪರಪುಣ್ಯಪಾತಕನಿಕರ: **ಚಂದ್ರಪ್ರಪು,** ೮. ೨೪ ವ)

**ಅಪರಾಂಬುರಾಶಿ** – ಅಪರವಾರಿಧಿ (ನಿಜತೇಜದಿಂ ಆಂತ ದೈತ್ಯರಂ ತಳವೆಳಗಾಗೆ ಕಾದಿ ಚಳಿತು ಎಯ್ದಿ ಬಬಲ್ದು ಅಪರಾಂಬುರಾಶಿಯೊಳ್ ಮುಳುಗುವ ತೀವ್ರದೀಧಿತಿವೊಲ್ ಆ ಕೊಳದೊಳ್ ಫಣಿರಾಜಕೇತನಂ ಮುಳುಗಿದಂ: **ಪಂಪಭಾ,** ೧೩. ೭೪)

**ಅಪರಾಂಭೋಧಿ** – ಅಪರವಾರಿಧಿ (ಆನಂತರಂ ರವಿಬಿಂಬಂ ಅಪರಾಂಭೋಧಿಗೆ ವಿಲಂಬಿಸುವುದುಂ: **ಕಾದಂಬ,** ೫. ೨೦೭ ವ)

**ಅಪರಾಂಭೋರಾಶಿ** – ಅಪರವಾರಿಧಿ (ಅಪರಾಂಭೋರಾಶಿ ವೇಳಾವನಂ ಅಮರ ಪುರೋದ್ಯಾನಮಂ ನೋಡಲೇಟ್ಟಿಂದಪುದೋ: **ಪಂಪರಾ,** ೭. ೧೪೨)

**ಅಪರಾಗ** – ಅನುರಾಗವಿಲ್ಲದ (ಅಪರಾಗಂ ಮುನಿಪತಿವೋಲ್ ಅಪಗತಗುಣನಾಗಿಯುಂ ನಿಜಾಯತದೋಷಂ: **ಕವಿರಾಮಾ,** ೩. ೧೫೭)

**ಅಪರಾಜಿತೆ** – ವಿಷ್ಣುಕ್ರಾಂತಿ ಅಥವಾ ಗಿರಿಕರ್ಣಿಕೆ ಎಂಬ ಗಿಡ (ಗಿರಿಕರ್ಣಿಕೆಯೆಂಬುದಕ್ಕುಂ ಅಪರಾಜಿತೆ: **ಅಭಿಧಾವ,** ೧. ೮. ೩೦); [ಜೈನ] ದಿಗ್ವನಿತೆಯರಲ್ಲಿ ಒಬ್ಬಳು (ಜಯಂತೆ ಅಪರಾಜಿತೆ .. . ಎಂಬ ಎಣ್ಬರುಂ ದಿಗ್ವನಿತೆಯರುಂ: **ಆದಿಪು,** ೭. ೩ ವ)

**ಅಪರಾದಿತ್ಯ** – ಪಶ್ಚಿಮದ ಸುರ್ಯ ಮುಳುಗುವ ಸೂರ್ಯ (ಜಲಧಿಯ ಸತ್ಯಾಶ್ರಯ ಬಲಜಲಧಿಯ ನಡುವೂರ್ವ ಕೋಪಶಿಖಿಗಳ ನಡುವಿರ್ತಲೆವೊತ್ತಿದ ಪುಳ್ಳಿಯ ಮುಳುವೊಲಿರ್ದಂ ಅತಿಚಕಿತಚಿತ್ತಂ ಅಪರಾದಿತ್ಯಂ: **ಗದಾಯು,** ೧. ೨೩)

**ಅಪರಾಶಾಕುಂಭಿ** – ಪಶ್ಚಿಮದ ಆನೆ (ಅಪರಾಶಾಕುಂಭಿ ಶುಂಭತ್ಕರಟತಟಗಳದ್ದಾನಸಂಭ್ರಾಂತ ಭೃಂಗೌಘ ಪಯೋದಾಲಂಬಿ .. .. ರಾವಂ ಸುಟಿದುದು: **ರಾಜಶೇವಿ,** ೮. ೯೬)

**ಅಪರಾಶಾಚಲ** – ಪಶ್ಚಿಮದಿಕ್ಕಿನ ಬೆಟ್ಟ (ಒಪ್ಪಿದುದು ಅಪರಾಶಾಚಲ ಚೂಲಿಕೆಯೊಳ್ ಸುಧಾಮರೀಚಿಯ ಬಿಂಬಂ: **ಉದ್ಭಟಕಾ,** ೧೦. ೧೦೨)

**ಅಪರಾಶಾ[ಶೆ]** – ಪಶ್ಚಿಮ ದಿಕ್ಕು (ನಖಪದದಂ ಅಪರಾಶಾ ಪರ್ವತದಗ್ರದೊಳೆ ಕಲಾಪತಿ ಕಲೆ ಸಂಜೆ ಸರಿಯೆ ತೋರ್ಪವೊಲೆಸೆಗುಂ: **ರಾಜಶೇವಿ,** ೧೦. ೮೯)

**ಅಪರ್ಣಾ[ರ್ಣೆ]** – ಆಹಾರವಾಗಿ ಎಲೆಗಳನ್ನೂ ಬಿಟ್ಟವಳು, ಪಾರ್ವತಿ (ಭಕ್ತಿಯೊಳ್ ಏಳ್ತರುತಿರ್ದಂ ಅಂದು ಅಪರ್ಣಾರಮಣಾಂಘ್ರಿಯಂ ನೆನೆವುತ: **ತ್ರಿಷಷ್ಟಿಪು,** ೩೭, ೧೨)

**ಅಪರ್ಯಂತ** – ಮೇರೆಯಿಲ್ಲದ, ಸೀಮಾತೀತ ಇಂತುಪಮಾಕ್ರಮಮಂ ಅಪರ್ಯಂತ ಗುಣಗಣಮನಜೆದು ಪೇೞ್ಗೆ ಕವೀಶರ್: **ಕವಿರಾಮಾ,** ೩. ೯೦)

**ಅಪವರಕ** – ಕೊಠಡಿ (ಅಂತರ್ಗೃಹಂ ಅಪವರಕಂ: **ಅಭಿಧಾವ,** ೧. ೧೦. ೧೦)

**ಅಪವರ್ಗ** – ಮೋಕ್ಷ (ಬುಧರ್ ಸ್ವರ್ಗ ಅಪವರ್ಗಕ್ಕಮಾಸ್ಪದಮಪ್ಪ ಆದಿಪುರಾಣವಸ್ತುಕೃತಿಯಂ: **ಆದಿಪು,** ೧೬. ೭೯)

**ಅಪವರ್ಗಪದ** – ಮೋಕ್ಷಪದವಿ (ಶತಬಳನಂ ಸಹಸ್ರಬಳಖೇಚರನಿಟ್ಟು ತಪೋನಿಯೋಗನಿಶ್ಚಿತಮನನಾಗಿ ಸಂದಂ ಅಪವರ್ಗಪದಕ್ಕೆ: **ಆದಿಪು,** ೨. ೧೯)

**ಅಪವರ್ಗಮಾರ್ಗ** – ಮೋಕ್ಷಮಾರ್ಗ (ನಿಗಪವರ್ಗಮಾರ್ಗಂ ನಿರರ್ಗಳಮೆ ವಲಮಾದೊಡಮೇಂ: **ಆದಿಪು,** ೯. ೬೨ ವ)

**ಅಪವರ್ಗಲಕ್ಷ್ಮಿ** – ಮೋಕ್ಷಲಕ್ಷ್ಮಿ (ಸಂಸಾರಮಂ ದಾಂಟುವ **ಊರ್ಜಿತಪುಣ್ಯಂಗೆ ಅಪವರ್ಗಲಕ್ಷ್ಮಿವರೆಗಂ .. .. ಜಯಂ: ಆದಿಪು,** ೧೬. ೧೦)

**ಅಪವರ್ತಿಸು** – ದೂರಮಾಡು, ನಿವಾರಿಸು (ಚಂದ್ರಸೂರ್ಯಮಂಡಲಂಗಳ್ ಕಾಲಚಕ್ರನಿರ್ವರ್ತನದೊಳ್ ಅಪವರ್ತಿಸದೆಯುಂ ಎಂತು ಪ್ರಯುಕ್ತಂಗಳಾಗಿರ್ದಪುವು: **ಜಗನ್ನಾವಿ,** ೧೩. ೩೨ ವ)

**ಅಪವಾದ** – ನಿಂದೆ, ಅಪಕೀರ್ತಿ (ಇದೇಕೆ ಮಾಡಿದಳೊ ಮುಗ್ಧೆ ಸಹೋದರರೊಳ್ ವಿಭೇದಮಂ ತನಗಪವಾದಮಂ ದಶರಥಂಗೆ ವಿಷಾದಮಂ: **ಪಂಪರಾ,** ೬. ೧೦೪)

**ಅಪವೃಜಿನ** – ಪಾಪರಹಿತ (ಅಜಿತಜಿನಂ ಅಪವೃಜಿನಂ ಅಪಾಕೃತ ಕೃತಾಂತ ಕೋಪಾಟೋಪಂ: **ಅಜಿತಪು,** ೧. ೧೮)

**ಅಪಶದ** – ಬಾಹಿರ (ಏಪೊಟ್ಟುಂ ಉಜೆಗುಮೋ .. .. ದುಷ್ಟ ಅಪಶದರ್ ಸುಕವಿಯಶೋದೀಪಾಂಕುರ ದಗ್ಧಕರ್ಣಕೋಟರ ಕುಟಿಗಳ್: **ಲೀಲಾವತಿ,** ೧. ೨೭)

**ಅಪಶಬ್ದಕುಕ್ಷಿ** – ಅಶುದ್ಧ ಮಾತಾಡುವವನು (ಅಪಶಬ್ದಕುಕ್ಷಿ ನೀನೆಂದು ಪಟಿವುತುಂ ಮುಟ್ಟೆ ಕುಕ್ಷಿಯಂ ಮುಳಿಸಿಂ: **ಸಮಯಪ,** ೧೦. ೧೭೬)

**ಅಪಸತ್** – ಇಲ್ಲದ, ಅಪೂರ್ವವಾದ (ಸ್ಮರಾಕುಳಿತಂ ಮನಂದಳಿತಂ ಅಪಸತ್ ಮುಗ್ಧಂ ಸ್ನಿಗ್ಧಂ ವಿಳೋಕನಮೋಪಳಾ: **ಪಂಪಭಾ,** ೪. ೭೭)

**ಅಪಸನ್ಮುಗ್ಧ** – [ಅಪಸತ್+ಮುಗ್ಧ] ಮುಗ್ಧತೆಯಿಲ್ಲದ, ಪ್ರೌಢವಾದ (ಲುಳಿತ ಮಧುರಂ ಲಜ್ಜಾಳೋಳಂ ಸ್ಮರಾಕುಳಿತಂ ಮನಂ ದಳಿತಂ ಅಪಸನ್ಮುಗ್ಧಂ: **ಪಂಪಭಾ,** ೪. ೭೭)

**ಅಪಸರಣ** – ಪಲಾಯನ (ಸಾಮಾದಿ ಉಪಾಯಂಗಳಿಂ ವಶಂ ಮಾಡಲಾರದೆ ಅಪಸರಣಮೇ ಶರಣಮಾಗಿರ್ಪುದು: **ಪಂಚತಂತ್ರ,** ೯೪ ವ)

**ಅಪಸರಣಂಗೆಯ್** – ಪಲಾಯನ ಮಾಡು (ಚೀ ಸುಡುಸುಡು ತೊಲಗೆಂದಾ ಮುರದ್ವಂಸಿ ಪೇಸುತ್ತುವೆ ತಿರ್ಯಗ್ವಕ್ತ್ರನಾಗಿರ್ಪಿನಂ ಅಪಸರಣಂಗೆಯ್ದನತ್ತಲ್ ಷಡಾಸ್ಯಂ: **ಜಗನ್ನಾವಿ,** ೧೮. ೪೨)

**ಅಪಸರಣಮೆ ಶರಣಂ** – ಓಡಿಹೋಗುವುದೇ ಉಪಾಯ (ಪಿರಿದಾಳಾಪದೊಳೇಂ ಅಪಸರಣಮೆ ಶರಣಂ ನಯಾಗಮಜ್ಞರ ಮತದಿಂ: **ಪಂಚತಂತ್ರ,** ೩೩೨)

**ಅಪಸವ್ಯ** – ಎಡವಲ್ಲದ್ದು, ಬಲ (ಅಸುರವಡೆಯಂ ಅನಿಲತನೂಜಂ ಸವ್ಯ ಅಪಸವ್ಯಂ ಎಚ್ಚು ರಣವ್ಯಸನ ಪಿಶಾಚವಡೆಗೆ ಬಾಣಸುಗೆಯ್ದಂ: **ಪಂಪರಾ,** ೧೩. ೧೩೧)

**ಅಪಸಾರಿತ** – ಹಿಂದೆ ಹೋದ (ಅಪಸಾರಿತ ಸಂಸಾರಿ ಜೀವಂಗಳ್ ಸಂಸಾರದೊಳ್ ತೊೞಲುತ್ತಿರ್ಪುದೆಂಬ ಅಪಾಯವಿಚಯಮುಮಂ: **ಶಾಂತಿಪು,** ೯. ೧೧೮ ವ); ಕಳಚಿದ, ತೆಗೆದಿರಿಸಿದ (ತ್ರೈಲೋಕ್ಯಶೇಖರಂ ಸಿವಿಗೆಯಿಂದಮಿೞಿದು ಅಪಸಾರಿತ ವಸ್ತ್ರಾಭರಣನಾಗಿ: **ಶಾಂತಿಪು,** ೧೧. ೧೦೨ ವ)

**ಅಪಸಿದ್ಧಾಂತ** – ತಪ್ಪು ನಿರ್ಣಯ (ಬಗೆಗೆಟ್ಟವಂದಿರಂ ಪನ್ನಗರಾಜಂ ಕೊಂದನೆಂಬ ಅಪಸಿದ್ಧಾಂತಂ: **ಅಜಿತಪು,** ೧೨. ೨೯)

**ಅಪಸೌಖ್ಯ** – ಸುಖವನ್ನು ಕಳೆದುಕೊಂಡವನು (ಏನಪಸೌಖ್ಯರೋ ಕೂರ್ತ ಮಾನಸರ್: **ಚಂದ್ರಪ್ರಪು,** ೮. ೫೪)

**ಅಪಸ್ಕಾರ** – ಆನೆಯ ಸೊಂಡಿಲ ಮೇಲಿರುವ ಮುಖದ ಒಂದು ಭಾಗ (ಹ್ರಸ್ವಚೂಚುಕನುಂ ಸುವೃತ್ತ ಅಪಸ್ಕಾರನುಂ ಸುಸಂಚಿತ ಪ್ರೋಹಪಳಿಹಸ್ತಗಾತ್ರನುಂ .. .. ವಿಜಯ ಪರ್ವತಗಜೇಂದ್ರಂ ಬಂದು: **ಆದಿಪು,** ೧೨. ೫೬ ವ)

**ಅಪಸ್ಮಾರಗ್ರಹ** – ಅಪಸ್ಮಾರರೋಗ ತರುವ ಗ್ರಹ (ಮಂತ್ರಂ ದಿವ್ಯಗ್ರಹಕ್ಕಲ್ಲದೆ ಅಪಸ್ಮಾರಗ್ರಹಕ್ಕಾಗದಂತೆ: **ಪಂಚತಂತ್ರ,** ೧೦೦ ವ)

**ಅಪಹತ** – ಬಿಟ್ಟುಬಿಟ್ಟ (ಧರ್ಮಪುತ್ರನಂ ಭೀಮಸೇನ ನಕುಳ ಸಹದೇವ ಸಾತ್ಯಕಿ ದ್ರುಪದ ವಿರಾಟಾದಿಗಳ್ ಅಪಹತಕದನರ್ ಮುಂದಿಟ್ಟೊಡಗೊಂಡು ಬೀಡಿಂಗೆ ಪೋದರಾಗಳ್: **ಪಂಪಭಾ,** ೧೧. ೧೦೬ ವ)

**ಅಪಹತಕದನ** – ಯುದ್ಧ ನಿಲ್ಲಿಸಿದವನು (ಸಾತ್ಯಕಿ ದ್ರುಪದ ವಿರಾಟಾದಿಗಳ್ ಅಪಹತಕದನರ್: **ಪಂಪಭಾ,** ೧೧. ೧೦೬ ವ)

**ಅಪಹರ** – ಕದಿಯುವುದು (ರೂಪುಯೌವನಮೆ ಪರಾಂಗನಾ ಅಪಹರದಿಂ ಬೞಿಗಾದಪೆಂ ಆತನಿಂದಂ: **ನೇಮಿನಾಪು,** ೭. ೨೨)

**ಅಪಹರಿಸು** – ಹೋಗಲಾಡಿಸು, ನಿವಾರಿಸು (ಉಪಸಂಹಾರಿಸಿ ಮಾನವವಪುವಂ ರವಿಗಡ್ಡಮಿರ್ದ ಮುಗಿಲ ನೆೞಲ್ ಬಂದು ಅಪಹರಿಸುವಂತೆ: ಶಾಂತಿಪು, ೮. ೧೫೧)

**ಅಪಹಸಿತ** – ಹಾಸ್ಯಕ್ಕೊಳಗಾದ (ಅಭಿನೂತ ಕೇತಕೀ ಕಿಸಲಯ ಅಪಹಸಿತ ಕರತಲಪಲ್ಲವೆ: **ಸುಕುಮಾಚ,** ೯. ೧೦೭ ವ)

**ಅಪಹಸ್ತಮಿಡೆ** – ತಳ್ಳು, ನೂಕು (ಚಪಳಕಪಿವನಮದಾನೇಕಪಕ್ಕೆ ಪಕ್ಕಾಗೆ ಪೊಕ್ಕು ತಾಂ ಭಸ್ತ್ರಿಕಮೆಂದು ಅಪಹಸ್ತಮಿಡೆಯೆ .. .. ನಗಿಪುದು ನಗದೊಳ್: **ಶಾಂತಿಪು,** ೨. ೧೧೧)

**ಅಪಹಾರ** – ಯುದ್ಧ ನಿಲುಗಡೆ (ಗಗನಮಂ ಆಗಳ್ ಆವರಿಸಿತ್ತು ಅಪಹಾರ ಘನಾನಕ ಸ್ವನಂ: **ಪಂಪರಾ,** ೪. ೭೧)

**ಅಪಹಾರತೂರ್ಯ** – ಯುದ್ಧವನ್ನು ನಿಲ್ಲಿಸಲು ಮಾಡುವ ತುತ್ತೂರಿಯ ಸದ್ದು (ಅಂತು ಪತಂಗಮಂಡಲಂ ಅಪರಗಿರಿಯ ತಟಮನೆಯ್ದುವುದುಂ ಎರಡುಂ ಪಡೆಗಳ್ ಅಪಹಾರತೂರ್ಯಂಗಳಂ ಬಾಜಿಸಿ ತಂತಮ್ಮ ಬೀಡುಗಳ್ಗೆ ಪೋದುವಾಗಳ್: **ಪಂಪಭಾ,** ೧೨. ೮೮ ವ)

**ಅಪಹಿಂಸೆ** – ಹಿಂಸೆಯಿಂದ ದೂರಾಗುವುದು (ಆಜಿ ಶೌಚಮುಂ ಮೆಱೆವ ಗುಂಡಿಗೆಯುಂ ವಿಕೃತಕ್ಕೆ ಸಂದನಾಗ್ನ್ಯಮುಂ ಅಪಹಿಂಸೆಯೆಂಬ ಜನವಾದಮುಮಲ್ಲದೆ: **ಶಾಂತಿಪು,** ೮. ೧೩೨)

**ಅಪಾಂಗ** – ಕಡೆಗಣ್ಣ ನೋಟ (ಗಣಿಕೆಯರ ವಿಳಾಸಾಗಾರದೊಳ್ ಪ್ರಣಯಿನಿಯರ ಅಪಾಂಗಶ್ರೇಣಿಗಳ್ ಮೂಱುಬಣ್ಣಂ ಪೆಎದೊದವೆ: **ಆದಿಪು,** ೧೧. ೨೩)

**ಅಪಾಂಗಪ್ರೇರಣೆ** – ಕಡೆಗಣ್ಣಿನ ಸೂಚನೆ (ಅವನಿಪನ ಅಪಾಂಗಪ್ರೇರಣೆಯಿಂ ಬರವೇಳೆಂಬುದುಂ: **ರಾಜಶೇವಿ,** ೫. ೨೩ ವ)

**ಅಪಾಂಗಮರೀಚಿ** – ಕಡೆಗಣ್ಣ ಹೊಳಪು (ಕಮಲನೇತ್ರನ ಅಪಾಂಗಮರೀಚಿಗಪ್ಪೊಡಂ ತಾನೆಣೆವಾರದು: **ಜಗನ್ನಾವಿ,** ೧೧. ೫)

**ಅಪಾಂಗರೋಚಿ** – ಕಡೆಗಣ್ಣ ಹೊಳಪು (ಅಪಾಂಗರೋಚಿಯಿಂ ಪಡೆದಳಿಕುಂತಳಕ್ಕೆ ಅಲರ ಬಾಸಿಗಮಂ: **ಚಂದ್ರಪ್ರಪು,** ೭. ೭೭)

**ಅಪಾಕೃತ** – ಹೊರದೂಡಿದ (ಅಜಿತಜಿನಂ ಅಪವೃಜಿನಂ ಅಪಾಕೃತ ಕೃತಾಂತ ಕೋಪಾಟೋಪಂ: **ಅಜಿತಪು,** ೧. ೧೮)

**ಅಪಾತ್ರ** – ಅನರ್ಹ (ಮಿಥ್ಯಾದೃಷ್ಟಿಯಪ್ಪಂ ತನ್ನನೆಂತು ಸಮಱೆ ನೆಗೞ್ದೊಡಂ ಆತಂ ಅಪಾತ್ರನೇ: **ಆದಿಪು,** ೧೦. ೯ ವ)

**ಅಪಾದಾನ** – ದೂರಕ್ಕೊಯ್ಯುವುದು (ಅಪಾದಾನಮೆಂದು ಆವುದಾನೊಂದಱಿಂ ತೊಲಗುವುದು: **ಶಬ್ದಮದ,** ೧೪೨ ವೃತ್ತಿ)

**ಅಪಾಮಾರ್ಗ**– ಉತ್ತರಣೆ ಗಿಡ (ಪಾಲಾಶ ಅಶ್ವತ್ಥ ಅರ್ಕ ಔದುಂಬರ ನ್ಯಗ್ರೋಧ ಶಮಿ ಅಪಾಮಾರ್ಗ ಖದಿರ ಆದಿ ಶುಷ್ಕಸಮಿತ್ತುಗಳುಮಂ ಕುಶ ಅಶ್ವಲಾಯನ ವಿಶ್ವಾಮಿತ್ರಾದಿ ದೂರ್ವಾಂಕುರಪವಿತ್ರವಸ್ತುಗಳುಮಂ ಕೊಂಡು: **ಪಂಚತಂತ್ರ,** ೧೯೦ ವ)

**ಅಪಾಯವಿಚಯ** – [ಜೈನ] ನಾಲ್ಕು ಬಗೆಯ ಧರ್ಮಧ್ಯಾನಗಳಲ್ಲಿ ಎರಡನೆಯದು; ಲೋಕದ ಅಜ್ಞಾನ–ದುಃಖಗಳನ್ನು ಹೋಗಲಾಡಿಸುವ ಚಿಂತನೆ (ಆಜ್ಞಾವಿಚಯಂ ಅಪಾಯವಿಚಯ ವಿಪಾಕವಿಚಯ ಸಂಸ್ಥಾನವಿಚಯಮೆಂಬ ನಾಲ್ಕುಂ ಧರ್ಮಧ್ಯಾನಮಂ ಧ್ಯಾನಿಸುತ್ತುಂ: **ಆದಿಪು,** ೧೦ ೧೪ ವ)

**ಅಪಾರಭುಜಾಯಮಾನ** – ಅತೀವ ಪರಾಕ್ರಮಿ (ಖೇಚರರಾಜಂಗೆ ಕೃಭ್ರಾಸಾಧ್ಯಕ್ಕಂ ಇವರಿರ್ವರೆ ಅಪಾರಭುಜಾಯಮಾನರ್ ಎಂಬುದನೆ ನಂಬುವುದು: **ಶಾಂತಿಪು,** ೨. ೭೭ ವ)

**ಅಪಾರವಿಸ್ತಾರಿ** – ಕೊನೆಯಿಲ್ಲದ ವಿಸ್ತಾರ ಪಡೆದ (ಆ ಮಹಾರ್ಣವಂ ಸಮುದ್ರಮಾಗಿಯುಂ ಅಪಾರವಿಸ್ತಾರಿಯುಂ .. .. ಎನಿಸಿದುದು: **ಜಗನ್ನಾವಿ,** ೧. ೪೪ ವ)

**ಅಪಾರವೀರ್ಯ** – ಅತಿಶಯ ಪರಾಕ್ರಮಿ (ಅಪಾರವೀರ್ಯನುಂ ಪಂಚಶತಚಾಪೋತ್ಸೇಧನುಂ: **ಆದಿಪು,** ೧೫. ೩ ವ)

**ಅಪಾರಿಪಂಥಿಕ** – ತಡೆಯುವವರೇ ಇಲ್ಲದ (ಆ ವಚೋನ್ಯಾಸಂ ಅಪಾರಿಪಂಥಿಕರವೋಲ್ ಅಟಿದತ್ತು ಅಪವರ್ಗಮಾರ್ಗಮಂ: **ಸಮಯಪ,** ೧೪. ೧೧೮)

**ಅಪಾರ್ಥ** – ಅರ್ಥರಹಿತ (ತತ್ವಾರ್ಥಮನಱಿಯದ ಮುನ್ನಂ ಅಪಾರ್ಥಂರಂಜಿಸಿದ ಪಳಿಕುವೊಲಿರದೇ: **ಜಗನ್ನಾವಿ,** ೧. ೧೪)

**ಅಪಾಸ್ತ** – ದೂರಮಾಡಲ್ಪಟ್ಟ (ನೆಱವಂ ತಾಳ್ದಿದ ಅಪಾಸ್ತದುರ್ನಯತಮೋಬಂಧಂ ಶ್ರುತಸ್ಕಂದಮಾದರವಿಂದಂ: **ಆದಿಪು,** ೧. ೩೯)

**ಅಪಿಂಡ** – [ಜೈನ] ಕರ್ಮದ ನಾನಾ ಬಗೆಗಳಲ್ಲಿ ಎರಡನೆಯ ವಿಭಾಗ (ನಾನಾ ಕರ್ಮಮುಂ ಪಿಂಡಾಪಿಂಡನಾಮದಿಂ ತೊಂಬತ್ತು ಮೂಱು ತೆಱನಕ್ಕುಂ:: **ಶಾಂತಿಪು,** ೧೨. ೧೧ ವ)

**ಅಪುತ್ರಸ್ಯ ಗತಿರ್ನಾಸ್ತಿ** – ಮಗನಿಲ್ಲದೆ ಸದ್ಗತಿಯಿಲ್ಲ (ಅಪುತ್ರಸ್ಯ ಗತಿರ್ನಾಸ್ತಿ ಎನುತ್ತುಂ ಮಿಗೆ ಸಾಱುವುವು ಅಖಿಳ ವೇದ ಪೌರಾಣಮಗಳ್: **ಕುಸುಮಾಕಾ,** ೩. ೬೦)

**ಅಪೂರ್ವ** – ಹಿಂದೆ ಇರದಿದ್ದ, ಅಪರೂಪವಾದ (ತನ್ನ ರತ್ನಪ್ರತತಿಗಳೊಳ್ ಅಪೂರ್ವಂಗಳಂ ಕೊಂಡು: **ಆದಿಪು,** ೧೩. ೯೧)

**ಅಪೂರ್ವಭಿತ್ತಿ** – ಅಪೂರ್ವವಾದ ಹಿನ್ನೆಲೆ (ಬಳ್ಳಿಮಾಡದ ಉಜ್ವಳ ಮಣಿಭಿತ್ತಿ ಚೆಲ್ವನೊಳಕೊಂಡು ಒಳಕೊಂಡು ಒಳಕೊಂಡುದು ಅಪೂರ್ವಭಿತ್ತಿಯಂ: **ಪಂಪರಾ,** ೧. ೧೨೮)

**ಅಪೂರ್ವರೂಪ** – ಅಪರಿಚಿತ ರೂಪವುಳ್ಳವನು (ರಿಸಿಯರ್ ಪೋಪುದುಂ ಸುಕೌಶಳಸ್ವಾಮಿ ಕಂಡು ಈ ಪೋಪರ್ ಏನೆಂಬರಬ್ಬಾ ಅಪೂರ್ವರೂಪರ್ ಇನ್ನನ್ನರನೆಂದುಂ ಕಂಡಱಿಯೆಂ: **ವಡ್ಡಾರಾ,** ಪು. ೪೭. ಸಾ. ೫)

**ಅಪೂರ್ವರೂಪೆ** – ಅಸಾಮಾನ್ಯ ಸುಂದರಿ (ಭಿತ್ತಿವೆತ್ತ ತೆಱನೊಪ್ಪಿದುದು ಒರ್ವಳ್ ಅಪೂರ್ವರೂಪೆಯಾ: **ಶಾಂತಿಪು,** ೮. ೪೧)

**ಅಪೇಕ್ಷೆಗೆಯ್** – ಆಸೆಪಡು (ಪೌಲೋಮಿಯಂ ನಾಳೆ ಬಲ್ಲಿದರಾರಾನುಂ ಅಪೇಕ್ಷೆಗೆಯ್ಯಲ್ ಅವರ್ಗೀಯಲೆವೇಟ್ಕುಂ: **ಜಗನ್ನಾವಿ,** ೧೩. ೫೫)

**ಅಪೇತ** – ಬಿಟ್ಟು ಹೋದ (ಚಾಟುಚಟುಲ ವಚನಂಗಳಂ ನುಡಿಯುತ್ತುಮಿರೆ ಕೇಳ್ದು ಪುಂಡರೀಕದೇವನ ವೃತ್ತಾಂತದಿಂ ಅಪೇತಕೌತುಕೆಯುಂ ಅಪಗತಸುಖೆಯುಂ ಆಗಿ: **ಕಾದಂಸಂ,** ೭. ೧೪)

**ಅಪ್ಪಯಿಸು** – ಒಪ್ಪಿಸು (ಆ ರಾಜ್ಯದೊಳ್ ಪದುಳಂ ಮಾಡಿ ಮಹಾಸಾಮಂತಮಂತ್ರಿಮಂಡಳಕ್ಕೆ ಅಪ್ಪಯಿಸಿ: **ಆದಿಪು,** ೫. ೨೧ ವ); ಒಪ್ಪುವಂತೆ ಮಾಡು (ಅವರಂ ಅಮರರಾಜಂ ಸಿರಿಗನ್ನಡಿವಿಡಿಯಲ್ ಅಪ್ಪಯ್ಸಿದಂ: **ಶಾಂತಿಪು,** ೯. ೧೬೬ ವ)

**ಅಪ್ಪಳಿಸು** – ಹೊಡೆ (ಕಾಳಿಂದಿಯ ಪಾಪಮಂ ಅಪ್ಪಳಿಸಿದೆಂ ಸಿಡಿದೀ ಸಿಲೆಯಲ್ಲಿ: **ಪಂಪಭಾ,** ೫. ೩೮)

**ಅಪ್ಪಿಸು** – ತಬ್ಬುವಂತೆ ಮಾಡು (ನಲಿದು ನೆರೆಯೆಂದು ಕಡುಗಾಯ್ದ ಲೋಹದ ಪುತ್ರಿಕೆಯನಪ್ಪಿಸುವರ್: **ಆಚವರ್ಧ,** ೧೧. ೨೨)

**ಅಪ್ಪು** – ತಬ್ಬಿಕೊ (ಅಪ್ಪು–ಆಲಿಂಗನೇ: **ಶಬ್ದಮದ,** ಧಾ ೪೪೮); ಆಲಿಂಗನ (ಬೇಡಿಸುವ ಅಪ್ಪುಗಳ್ಗೆ ಒರೆವ ಲಲ್ಲೆಯ ಮೆಲ್ನುಡಿಗಳ್ಗೆ ಕೂಡೆ ನಾಣೂಡಿದ ಕೆಂದುಗಳ್ಗೆ ತಲೆದೂಗುವಂತೆವೋಲ್: **ಪಂಪಭಾ,** ೩. ೮೩)

**ಅಪ್ಪುಕಣಿಸು** – ನೀರನ್ನು ಸುರಿ (ಅಪ್ಪುಕಣಿಸಿದುವು ಕಂಪಿನ ಕುಪ್ಪಿಗೆಗಳ್ ಎನಲ್ಕೆ .. .. ಸರೋವರದಿಂ ಅವನಿಪತಿ ಪೊಱಮಟ್ಟಂ: **ಲೀಲಾವತಿ,** ೮. ೮೧)

**ಅಪ್ಪುಕಯ್** – ಆಲಂಗಿಸು (ಎಂದು ಮಾಕಂದಮಹೀರುಹಮಂ ಅಪ್ಪಕಯ್ದು: **ಆದಿಪು,** ೧೧. ೧೩೨ ವ); ಒಪ್ಪಿಕೊ (ಪದಕೊರಲ್ ಇಂಪಂ ಅಪ್ಪುಕೆಯೆ ಕೊಂಕು ನಯಂ ಗಮಕಂಗಳಿಂ ಪೊಡರ್ ಕೊದಳ್ ಎೞೆದಿಕ್ಕಿದಂತೆ ಸುದತಿಯೊಳ್ ಸಮವಾಗಿರೆ .. .. ಮೇನಕೆ ಸರಸ್ವತಿ ಬಾಯ್ದೆಱೆದಂತೆ ಪಾಡಿದಳ್: **ಪಂಪಭಾ,** ೭. ೮೮); ಪಡೆ, ಹೊಂದು (ಪೂಸದ ಸೌರಭಂ ತವದ ಮೆಯ್ಸಿರಿ ಬಾಡದ ದಾಮಂ ಉಟ್ಟೊಡಂ ಮಾಸದ ಸೀರೆ .. .. ಇವಂ ಅಪ್ಪುಕೆಯ್ದಂ .. .. ಕಡೆವರಂ ದಿವಿಜಂ: **ಮಲ್ಲಿನಾಪು,** ೧೧. ೪೬)

**ಅಪ್ಪುಕೆಯ್** – ತಬ್ಬಿಕೊ (ನೀನುಂ ಆನುಂ ಒಡನಿರ್ದಿರವಂ ನೆನೆ ಬಾಳ ಚೂತಮೇ ಎಂದು ಮಾಕಂ ಮಹೀರುಹಮಂ ಅಪ್ಪುಕೆಯ್ದು: **ಆದಿಪು,** ೧೧. ೧೩೨ ವ); ಅಂಗೀಕರಿಸು (ಮುರಾರಿಯ ತಂಗೆಯನಪ್ಪುಕೆಯ್ದು ಚಚ್ಚರನೊಳಪೊಯ್ದು ನೀಂ ನಿನಗೆ ಮಾಡುವುದು: **ಪಂಪಭಾ,** ೪. ೩೪)

**ಅಪ್ಪೈಸು** – ಒಪ್ಪಿಸು (ಒಪ್ಪಿಸಿದೆಂ ಕೆಯ್ಯೆಡೆಯೆಂದು ಅಪ್ಪೈಸಿದ ನಿನ್ನ ಮಗನನೀಗಳೆ ನಿನಗೆಂದಪ್ಪೈಸಿ ಗಂಗೆ ಪೋಪುದುಂ: **ಪಂಪಭಾ,** ೯. ೭೬)

**ಅಪ್ರಗಲ್ಭತೆ** – ಪ್ರೌಢಿಮೆಯಿರದ (ಕುತ್ಸಿತತ್ವಮುಂ ಉದ್ವೇಗಮುಂ ಅಪ್ರಗಲ್ಭತೆಯುಂ .. .. ಸಮನಿಕುಂ ಸಂಸಾರಿಗವ್ಯಾಕುಲಂ: **ಸುಕುಮಾಚ,** ೫. ೩೫)

**ಅಪ್ರಗಲ್ಭವಚನ** – ಪ್ರೌಢಿಮೆಯಿಲ್ಲದ ನುಡಿ (ನರರೊಳಗೆ ಅಪ್ರಗಲ್ಭವಚನಪ್ರವೃತ್ತಿ ನೆಗಟ್ಟುಂ ಸಹಜಂ: **ಕವಿರಾಮಾ,** ೧. ೭)

**ಅಪ್ರಣಾಶ** – ನಾಶರಹಿತವಾದ (ಉಪಾಧ್ಯಾಯರ್ ಅಜೀಯರ್ ಈಗೆಮಗೆ ಮುಕ್ತಿನಿವೇಶಮಂ ಅಪ್ರಣಾಶಮಂ: **ಶಾಂತಿಪು,** ೧. ೪)

**ಅಪ್ರತರ್ಕ್ಯ** – ಊಹಿಸಲಾಗದ್ದು (ಭಾವಭವಂಗೆ ಭಂಗಮನೆ ಸಂಗಳಿಪ ಉಗ್ರತಪಃಪ್ರಭಾವಮಂ ಭಾವಿಪೊಡೆ ಅಪ್ರತರ್ಕ್ಯಂ; **ಶಾಂತೀಶ್ವಪು,** ೧. ೨೨)

**ಅಪ್ರತಿಬದ್ಧ** – ತಡೆಯಿಲ್ಲದ (ಅವನಿಚಕ್ರವಿಕ್ರಮಚಕ್ರಂ ದೊರೆಯಲ್ತು ಧರ್ಮಚಕ್ರಂ ದೊರೆಯಕ್ಕುಂ ಭವ್ಯವಿನಿಮದಪ್ರಬದ್ಧಂ: **ಶಾಂತಿಪು,** ೧೧. ೮೮)

**ಅಪ್ರತಿಮ** – ಅಸಮಾನ; ಎಣೆಯಿಲ್ಲದ (ಅಪ್ರತಿಮಂ ನೃಪೇಂದ್ರಂ ಉಪವಾಸವಿಧಾನದಿನಿರ್ದನಲ್ತೇ: **ಶಾಂತಿಪು,** ೯. ೯೭)

**ಅಪ್ರತಿಮಲ್ಲ** – ಸಮಾನರಿಲ್ಲದ ಮಲ್ಲ (ಕ್ಷಿತಿತಳದೊಳ್ ನೆಗಟ್ದಿರ್ದ ಅಪ್ರತಿಮಲ್ಲನನಿಕ್ಕಿ: **ಆದಿಪು,** ೧೪. ೧೩೪)

**ಅಪ್ರತಿರಥ** – ಸಮಾನರಿಲ್ಲದ ರಥಿಕ (ಖಚರೇಶ್ವರನೆಯ್ದಿದಂ ನಿರಾಕುಳಗತಿಲೀಲಂ ಅಪ್ರತಿರಥಂ ರಥನೂಪುರಚಕ್ರವಾಳಮಂ: **ಶಾಂತಿಪು,** ೬. ೨೨)

**ಅಪ್ರತಿಹತ** – ತಡೆಯಿಲ್ಲದ (ಸತತೋದಯಂ ಅಪ್ರತಿಹತ ಗತಿತೀವ್ರಂ ತದ್ದಿನಾಧಿನಾಥಂ ಅಸ್ತಂಗತನಾದಂ: **ಕವಿರಾಮಾ,** ೩. ೩೦)

**ಅಪ್ರತ್ಯಾಖ್ಯಾನ** – [ಜೈನ] ಅಹಿಂಸೆ ಮುಂತಾದ ವ್ರತಗಳ ಆಚರಣೆಯಲ್ಲಿ ಅಡ್ಡಿಯಾಗುವ ಒಂದು ಕರ್ಮಾವರಣ; ಮೋಹನೀಯ ಕರ್ಮಗಳಲ್ಲಿ ಒಂದು (ಧನದತ್ತಂಗಮಾತನ ಪರದಿತಿ ಧನದತ್ತೆಗಂ ಉಗ್ರಸೇನನೆಂಬೊಂ ತನೂಜಂ ಅಪ್ರತ್ಯಾಖ್ಯಾನಕ್ರೋಧದಿಂ ತಿರ್ಯಗಾಯುಷ್ಯಂಗಟ್ಟಿ: **ಆದಿಪು,** ೫. ೧೪ ವ)

**ಅಪ್ರತ್ಯೂಹಮೈತ್ರಿ** – ಅಡ್ಡಿಯಿಲ್ಲದ ಮೈತ್ರಿ (ಆ ಪಾರ್ಥನೊಳ್ ಅಪ್ರತ್ಯೂಹಮೈತ್ರಿಯಿಂ ವರ್ತಿಸುವುದು: **ಜಗನ್ನಾವಿ,** ೪. ೧೦೮ ವ)

**ಅಪ್ರಮತ್ತಗುಣಸ್ಥಾನ** – [ಜೈನ] ಹದಿನಾಲ್ಕು ಗುಣಸ್ಥಾನಗಳಲ್ಲಿ ಏಳನೆಯದು; ಕಷಾಯಗಳ ತೀವ್ರತೆ ಕಡಿಮೆಯಾಗುವುದು (ಅಂತವಿಶ್ರಾಂತ ಚತುಃಪ್ರಕಾರಧರ್ಮಚಿಂತಾಪರಂ ವಿಶುದ್ಧ ಲೇಶ್ಯಾಪರಿಣಾಮಪರಿಪೂರ್ಣಂ ಅಪ್ರಮತ್ತಗುಣಸ್ಥಾನದೊಳ್ ನಿಂದು .. .. ಕ್ರೋಧಮಾನಮಾಯಾಲೋಭಗಳೆಂಬ ನಾಲ್ಕುಂ ದರ್ಶನಘಾತಿಗಳುಮಂ ಪರಿವಿಡಿಯಿಂ ಕಿಡಿಸಿ: **ಮಲ್ಲಿನಾಪು,** ೧೪. ೫೭ ವ)

**ಅಪ್ರಮತ್ತತೆ** – ಮೈಮರೆಯುವುದು (ಅಪ್ರತಿಮತ್ತತೆಯೊಳ್ ಅನ್ಯಪ್ರೀತಿಶೀಲಕ್ಕೆ ಕೇಡೊಗೆದತ್ತೆಂಬ ಅನಿರುದ್ಧವೃತ್ತರ್ ಎಮಗೊಳ್ಪಂ ಮಾಟ್ಕೆ: **ಪುಷ್ಪದಂಪು,** ೧. ೩)

**ಅಪ್ರಮಿತ** – ಅಳತೆಗೆ ಮೀರಿದ (ಸಮಿತಿವಿರಾಜಿತರ್ ವ್ರತಗುಣಾರ್ಜಿತರ್ ಅಸ್ತಕೋಪರ್ ಅಪ್ರಮಿತದಯಾಪರರ್ .. ..ಮಹಾಮುನೀಶ್ವರರ್: **ಶಾಂತೀಶ್ವಪು,** ೬. ೫೩)

**ಅಪ್ರಮೇಯಕ** – ಅಳತೆಗೆ ಸಿಕ್ಕದ (ಅತ್ಯಾಯುತಂ ಅಪ್ರಮೇಕಂ ಅಧೋಮಧೋರ್ಧ್ವಭೇದಂ ಜಗತ್ತ್ರಿತಯಂ ನಿಂದುದು: **ಸುಕುಮಾಚ,** ೧೧. ೪೧)

**ಅಪ್ರಮೇಯಬಲ** – ಅಳತೆಗೆ ಮೀರಿದ ಬಲ (ಉಗ್ರಯುದ್ಧಕೇಳೀಪ್ರಿಯಂ ಅಪ್ರಮೇಯಬಲಂ .. .. ವಿಮಾನಮನಗುರ್ವಿಸಿದಂ: **ಪಂಪರಾ,** ೧೩. ೩೧)

**ಅಪ್ರವಿಲಕ್ಷ್ಯ** – ಕಾಣಿಸದಿರುವ (ದಿವಮೆಂತು ಅಂತೆ ಶತಾರಂ ಅಗ್ರಿಮಸಹಸ್ರಾರಂ ಸಹಸ್ರಾರಂ ಅಪ್ರವಿಲಕ್ಷ್ಯಂ: **ಶಾಂತಿಪು,** ೧೦. ೧೧೫)

**ಅಪ್ರಶಸ್ತ** – ಒಳ್ಳೆಯದಲ್ಲದ (ಸುಪವಿತ್ರೆಯರೇಕೆ ಮೆಟ್ಟುವರ್ .. .. ಅಪ್ರಶಸ್ತಜನ್ಮಂ: **ಪುಷ್ಪದಂಪು,** ೧೦. ೪೮); ಕೀಳು ವ್ಯಕ್ತಿ (ಇವರನೇಕಿಲ್ಲಿ ಪುಗಲಿತ್ತೆಯೆಂದು .. .. ಅಪ್ರಶಸ್ತಂ ಕೆಡೆನುಡಿಯೆ: **ಪಂಪರಾ,** ೭. ೧೨೫ ವ)

**ಅಪ್ರಸನ್ನ** – ಪ್ರಸನ್ನವಲ್ಲದ, ಅಶುಭ್ರ (ಅವಿಶಾಲಾಂಬರಪ್ರಸನ್ನಂದಿಂ ಅವಸ್ಪಷ್ಟಾಧ್ವಂ: **ಜಗನ್ನಾವಿ,** ೪. ೨೬)

**ಅಪ್ರಸವ** – ಹೂವಿಲ್ಲದ; ಹೆರಿಗೆಯಿಲ್ಲದ (ಪಿರಿದುಂ ವಂಧ್ಯಾಂಗನೆಯಂತಿರೆ ತಾನಪ್ರಸವಮಾಗಿಯುಂ ಮೂಲಾಗ್ರಂ ಬರಮೆಯ್ದೆ ಕಾತು ಮಿಗೆ ಬಿತ್ತರಿಸಿರ್ದುದು ಪನಸಕುಜಂ ಅದೇನಚ್ಚರಿಯೋ: **ಶಾಂತೀಶ್ವಪು,** ೧೦. ೯೪)

**ಅಪ್ರಾಕೃತ** – ಅಸಾಧಾರಣ, ದಿವ್ಯ (ಅಂತು ಸಮಬಾಣಾಸನಪ್ರವೀಣರ್ ಅಪ್ರಾಕೃತಶಾಸ್ತ್ರಪ್ರಕರದಿಂ ಕಾದಿ: **ಕರ್ಣನೇಮಿ,** ೧೨. ೧೬೪ ವ); ವಿಶೇಷವಾದ (ಆ ಕನ್ನೆಯಂ ಕೈವಿಡಿದಂ .. .. ಅಪ್ರಾಕೃತ ನಿಜವಿಭವ ಕೃತಾರ್ಥೀಕೃತ ಬುಧಜನೋರಥಂ ಚಿತ್ರರಥಂ: **ಕಾದಂಸಂ,** ೫. ೨)

**ಅಪ್ರಾಪ್ತಿ** – ದೊರೆಯದಿರುವುದು (ಅಪ್ರಾಪ್ತಿ ರಸಂಬಡೆಗುಂ ವೈಷಯಕ ಸುಖದೊಳಿದು ವಿಸ್ಮಯಮೇ: **ಪಂಪರಾ,** ೯. ೧೮೬)

**ಅಪ್ರಾಸುಕ** – [ಜೈನ] ಜೀವಂತ ವಸ್ತುಗಳಿಂದ ಕೂಡಿರುವ (ಧರೆ ಪೂಗಳ ತುಱುಗಲೊಳೆಸೆಯೆ ಪೊಱಲಿದು ಅಪ್ರಾಸುಕಮೆಂದೊಳಪುಗದೆ: **ಆದಿಪು,** ೫. ೧೦)

**ಅಪ್ರಿಯ** – ಶತ್ರು (ಅನಂತವೀರ್ಯಂ ಪ್ರಿಯನಾದೊಂಖೇಚರಂ ಅಪ್ರಿಯನಾದೊಂ: **ಶಾಂತಿಪು,** ೪. ೪೭)

**ಅಪ್ಸರಃಪತಿ** – ಇಂದ್ರ (ಪುರುಹೂತಂ .. .. ಆಖಂಡಲಂ ಅಪ್ಸರಃಪತಿ .. .. ಶಕ್ರಂ ವೃಷಂ ವಾಸರಂ: **ಅಭಿಧಾವ,** ೧. ೧. ೩೩)

**ಅಪ್ಸರಃಪ್ರತಾನ** – ಕೊಳಗಳ ಸಮೂಹ (ಬೇಱೊಂದು ಅಮರಾವತಿವೋಲ್ ತೋಱುವುದು ಅತುಳ ಅಪ್ಸರಃಪ್ರತಾನದಿನೊಲವಂ ಬೀಱುವ ನಂದನದಿಂ: **ಚಂದ್ರಪ್ರಪು,** ३. ೧೬)

**ಅಪ್ಸರೋಗಣ** – ಅಪ್ಸರಃಪ್ರತಾನ (ಅಪ್ಸರೋಗಣಂ ದಿವದಿಂ ಬಂದು ಆ ಗೋಕುಲದೊಳ್ ಗೋಪಸ್ತ್ರೀಗಣವಾಗಿರ್ದುದು: **ಜಗನ್ನಾವಿ,** ೧. ೭೭)

**ಅಫಲ** – ನಿಷ್ಪ್ರಯೋಜಕ (ಹರಿ ನೀನಿಲ್ಲದ ಮದೀಯಗೋಕುಲಂ ಅಫಲಂ: **ಜಗನ್ನಾವಿ,** ೩. ೯೪)

**ಅಫಳಾಧ್ಯವಸಾಯ** – ವ್ಯರ್ಥಪ್ರಯತ್ನದವನು (ಅಂತು ಅಫಳಾಧ್ಯವಸಾಯನಾದುದರ್ಕೆ ಏವಯ್ಸಿ: **ಚಂದ್ರಪ್ರಪು,** ೬. ೩೯ ವ)

**ಅಬಂಧುರ** – ಮನೋಹರವಲ್ಲದ (ಬಂಧುಗಳ್ ಅಬಂಧುರಮೆನೆ ವಂದಿಗಳ್ ನಿಂದ್ಯಮೆನೆ: **ಜಗನ್ನಾವಿ,** ೨. ೫೩ ವ)

**ಅಬಾಧಿತ್ವ** – ತಡೆಯಿಲ್ಲದ, ಹಿಂಸೆಗೊಳಗಾಗದ (ಜರಾಮಯವ್ಯಾಬಾಧಾ ಅಬಾಧಿತ್ವಮುಂ .. .. ತನಗೆ ಅನುಸಂಗತಮಾಗೆ: **ಶಾಂತಿಪು,** ೧೦. ೯೪)

**ಅಬುಜ** – ತಾವರೆ (ಕರಕಂಜಾತಕ್ಕೆ ಪುಟ್ಟಿರ್ದಬುಜಮೆನಿಸೆ ಲೀಲಾಂಬುಜಂ: **ರಾಜಶೇವಿ,** ೮. ೫೨)

**ಅಬುಧ** – ತಿಳಿಗೇಡಿ (ಆಕಸ್ಮಿಕ ನೃಪ ಕರುಣೋದಯಕ್ಕಂ ಅಕಾಲತರುಫಲಕ್ಕಂ ವಿಬುಧಾನೀಕಂ ಬೆರ್ಚುಗುಂ ಅಬುಧನದೇಕಿರ್ಕ್ಕಿಮೊ ಗೂಗೆವೊಂಗುವೊಂಗದೆ ರಜದಿಂ: **ಶಾಂತಿಪು,** ೨. ೩೫)

**ಅಬ್ಜ** – ತಾವರೆ (ಕೈರವರಾಜಿ ಅಬ್ಜಸಂದೋಹ ವಿಶಾಲರಾಜನಗರೀವ್ರಜ: **ಗಿರಿಜಾಕ,** ೨. ೨); ಶಂಖ; ರತ್ನ; ಐರಾವತ; ಚಂದ್ರ; ಲಕ್ಷ್ಮಿ

**ಅಬ್ಜಗರ್ಭ** – ಬ್ರಹ್ಮ (ಹಂಸಗ್ರೀವನಿಹಿತ ಏಕಪಾದಂ ಇಳಾವಂದ್ಯಂ ಅನಿಂದ್ಯಂ ಅಬ್ಜಗರ್ಭಂ ಬಂದಂ: **ಪಂಪಭಾ,** ೧೨. ೧೩೮)

**ಅಬ್ಜಚ್ಛದ** – ತಾವರೆಯ ಎಲೆ (ಕಿವಿಯಲ್ತು ಅಬ್ಜಚ್ಛದಂ ಪದ್ಮಕಾನನಮಲ್ತು ಅಂಬುಜಂ ;: **ನೇಮಿನಾಪು,** ೫. ೧೧೨)

**ಅಬ್ಜಜ** – ಬ್ರಹ್ಮ (ಮೃತ್ಯುವಿಂದ ಅಬ್ಜಜನಿಂ .. .. ಪಿರಿಯನೆನಿಸಿ: **ಕಾದಂಬ,** ೨. ೨ ಮತ್ತು ೨ ವ)

**ಅಬ್ಜಜನ್ಮ** – ಬ್ರಹ್ಮ (ಶರೀರಂ ಅಬ್ಜಜನ್ಮನೆ ಸಮೆದ ಇಂದುಕಾಂತವನಕಾಂತೆವೊಲ್ ಎಂತೆನೆ ತಟ್ಟುವೆತ್ತುದೋ: **ಶಾಂತಿಪು,** ೯. ೧೯೮)

**ಅಬ್ಜಪತ್ರಮಣಿ** – ತಾವರೆ ಬೀಜ (ಅಬ್ಜಪತ್ರಮಣಿ ಚೂಡಾರತ್ನಮೆಂಬೀ ವನಾಂತರಸಂಜಾತಮಂ ಆತನೋಲಗಿಸಿದಂ: **ಪುಷ್ಪದಂಪು,** ೫. ೧೦೨)

**ಅಬ್ಜಮಿತ್ರ** – ಸೂರ್ಯ (ಪರಮಾರ್ಥಂ ಪರಿಪಾಲನ ಕರದಿಂದ ಅಪರಾಜಿತ ಅಬ್ಜಮಿತ್ರಂ ಕಳೆದಂ .. .. ಶೋಕ ಹಿಮಜಲಲವಮಂ: **ಶಾಂತಿಪು,** ೧. ೯೫)

**ಅಬ್ಜಯೋನಿ** – ಬ್ರಹ್ಮ (ಅಬ್ಜಯೋನಿ ನಿರ್ಜರ ಸಭೆಗಂ ಬಹಿಷ್ಕೃತರುಮೆಂದೆನುತಂ ಗೆರೆಯಾಣೆಯಿಕ್ಕಿದಂತಿರೆ: **ತ್ರಿಷಷ್ಟಿಪು,** ೮. ೨೩)

**ಅಬ್ಜರಜ** – ಕಮಲದ ದೂಳು, ಪರಾಗ (ಪರಿಸ್ಫುರಿತಭುಜಂ ಅಜಿತಂ ಇಳಿಪಿದ ಅರುಣ ಅಬ್ಜರಜಃಪಿಶಂಗಿತ ಊರ್ಮಿಯ ಚೆಲ್ವಂ: **ರಾಜಶೇವಿ,** ೧೪. ೧೩೦)

**ಅಬ್ಜವದನೆ** – ಕಮಲಮುಖಿ (ನವಮಾಸವಿರಾಮದೊಳ್ ಅಬ್ಜವದನೆ ಶುಭಮುಹೂರ್ತದೊಳ್: **ಸುಕುಮಾಚ,** ೫. ೪೪)

**ಅಬ್ಜವಿರೋಧಿ –** ಚಂದ್ರ (ವದನಾಬ್ಜವಿರೋಧಿಯಂ ಆ ಬಿದುವಂ ಕೆಳೆಗೊಮು: **ರಾಜಶೇವಿ,** ೫. ೮೮)

**ಅಬ್ಜವಿಷ್ಟರ –** ಕಮಲಾಸನ, ಬ್ರಹ್ಮ (ತನುತಾಪಮಂ ಆಜಿಸಲ್ ಅಬ್ಜವಿಷ್ಟರಂ ಧರಿಯಿಸಿದಂ ಕಮಂಡಳುವಿನೊಳ್ ಜಳಮಂ: **ಸಮಯಪ,** ೭. ೩)

**ಅಬ್ಜಾಕರ –** ಕೊಳ, ಸರೋವರ (ಅಳಿಸಂಕುಲನಿನದಂ ಒಗೆದುದು ಅಬ್ಜಾಕರದೊಳ್: **ಕಾದಂಬ,** ೧. ೧೨೩)

**ಅಬ್ಜಾಹಿತ –** ತಾವರೆಯ ಶತ್ರು, ಚಂದ್ರ (ಮೇರುವಿಂ ಭೂಮಿಭೃದ್ವರಂ ಅಬ್ಜಾಹಿತನಿಂ ಕಳಾನಿಧಿಕುಮಾರಂ ಪುಟ್ಟುವಂ ನಿಶ್ಚಯಂ: **ರಾಜಶೇವಿ,** ೪. ೨೯)

**ಅಬ್ಜಿನಿ –** ತಾವರೆಯ ಬಳ್ಳಿ (ಪೊಸಪೂ ಅಬ್ಜಿನಿಯೊಂದಱೊಳ್ ಸೊಗಯಿಕುಂ: **ಆದಿಪು,** ೭. ೫೪)

**ಅಬ್ಜಿನೀಕಾಂತ –** ಸೂರ್ಯ (ಬಾಲಾಬ್ಜಿನೀಕಾಂತಸದ್ಯುತಿಯಂ ಪಾರ್ವತಿಯಂ .. .. ಬಣ್ಣಿಪೆಂ ಭಕ್ತಿಯಿಂ: **ರಾಜಶೇವಿ,** ೧. ೪)

**ಅಬ್ಜಿನೀವರ** – ಎಕ್ಕದ ಗಿಡ (ಅಬ್ಜನೀವರದ ಅಭಿಭಾವಮಂ ತಳೆದ ಭೂರುಹಮೊಪ್ಪುಗುಂ ಆ ವನಾಂತದೊಳ್: **ರಾಜಶೇವಿ,** ೫. ೫೭)

**ಅಬ್ದ –** ನೀರನ್ನು ಕೊಡುವುದು, ಮೋಡ (ಕ್ಷಣರುಗ್ಮಾಲಾಮಯ ಅಬ್ದಕ್ಕೆಣೆಯೆನಿಸೆ ಚಳತ್ಕಾಂತಿಯುಕ್ತಾಂತರಂಗೋಲ್ಲಣೆ ನಕ್ರಾರೂಢೆ.. .. ಆ ಮಹಾಮನಸೀಯಕ್ಷಿಣಿಯೆಂದುಂ ಮಾಟ್ಕೆ ಶಾಂತೀಶ್ವರಚರಿತಕರತ್ರೀಗೆ ಸೌಭಾಗ್ಯದೊಳ್ಪಂ: **ಶಾಂತೀಶ್ವಪು,** ೧. ೧೦); ವರ್ಷ (ಶರತ್ ಅಬ್ದ ಸಮಂ ಸಂವತ್ಸರ ಹಾಯನ ವತ್ಸರಂಗಳವು ವರ್ಷಂಗಳ್: **ಅಭಿಧಾವ,** ೧. ೨. ೧೪)

**ಅಬ್ದಕಾಲ –** ಮಳೆಗಾಲ (ಒಂದು ದೆವಸಮಂತರಿಸದೆ ಮಾಗಿಯೊಳ್ ಅಬ್ದಕಾಲದೊಳ್ ಭೂಮಿಯೊಳಂ ಪದನಱಿತು ನೀರನೆತ್ತುಗೆ: **ಲೋಕೋಪಕಾ,** ೬. ೮)

**ಅಬ್ಧಿ –** ಸಮುದ್ರ (ಅಬ್ಧಿ ಸಮುದ್ರಂ ಅರ್ಣವಂ ಜಲನಿಧಿ: **ಅಭಿಧಾವ,** ೧. ೪. ೨)

**ಅಬ್ಧಿಪ –** ಜಲರಾಶಿಯ ಒಡೆಯ, ವರುಣ (ನೃವಾಹಮಂ ನೈರುತಿ ಅಬ್ಧಿಪಂ ಮಕರಮಂ ಮೃಗಮಂ ಪವನಂ ವಿಮಾನಮಂ ಮಾರಹರಪ್ರಿಯಂ ವೃಷಭನಂ ಹರನೇಱೆ ನಭಕ್ಕೆ ಸಲ್ಗುಂ: **ಜಗನ್ನಾವಿ,** ೧. ೩೬)

**ಅಬ್ಬರ –** ಆರ್ಭಟ (ಘುಳಿಘುಳಿಸುವ ವೀರವೃಂದದ ಘುಡುಘುಡಿಸುವ ಡೌಡೆಯ ಕೋಳಾಹಳದ ಅಬ್ಬರಂ ಉಬ್ಬರಮಾಗೆ: **ಗಿರಿಜಾಕ,** ೬. ೫೫ ವ)

**ಅಬ್ಬರಂಗೆಯ್ –** ಆರ್ಭಟಿಸು (ಆಗಳಾ ಕೊಳನ ಬಳಸಿಂಗೆ ಬಂದು ನಿಬ್ಬರಮಾಗೆ ಬೊಬ್ಬಿಱಿದು ಅಬ್ಬರಂಗೆಯ್ದು: **ಗದಾಯು,** ೭. ೧ ವ)

**ಅಬ್ಬೆ –** [ಅಂಬಾ] ತಾಯಿ (ಅಂಗಜೋತ್ಪತ್ತಿಸುಖಕ್ಕೆ ಸೋಲಲಟಿಗುಂ ಪುರುಷವ್ರತಂ ಈಗಳ್ ಅಬ್ಬೆಯೆಂದು ಅತ್ತಿಗೆಯೆಂಬ ಮಾತಂ ಎನಗೇನನಲಕ್ಕುಮೊ ಪಂಕಜಾನನೇ: **ಪಂಪಭಾ,** ೧. ೭೫)

**ಅಬ್ಬೆಗಳು –** ಜೈನಸಂನ್ಯಾಸಿನಿಯರು (ಬೇಗಂ ಅಬ್ಬೆಗಳಂ ವಮದಿಸಿ ಬಸದಿಯಂ ಪೊಱಮಟ್ಟು .. .. ಬಂದಿರ್ದರ್ಳ್: **ನೇಮಿನಾಪು,** ೧. ೭೯ ವ)

**ಅಬ್ರಹ್ಮಣ್ಯ –** ಬ್ರಾಹ್ಮಣನಿಗೆ ಆಗುವ ಅನ್ಯಾಯ (ಸೋಮಶರ್ಮಭಟ್ಟಂ ಪಿರಿದೊಂದು ತೊವಲಂ ಪಿಡಿದು ಅಬ್ರಹ್ಮಣ್ಯಂ ಭೋ ಅಬ್ರಹ್ಮಣ್ಯಂ ಭೋ ಎಂದಱುತ್ತುಂ .. .. ಅರಮನೆಗೆ ಪೋಗಿ: **ವಡ್ಡಾರಾ,** ಪು. ೨೩, ಸಾ. ೨); ''ಹಿಂಸೆ ಮಾಡಬಾರದು'' ಎಂಬ ಘೋಷಣೆ (ಅಪ್ರತಿಕಂಗೆಱಗದ ವೀರವ್ರತಮಂ ಕೇಳ್ದು ಹರ್ಷಮಂ ತಾಳ್ದದ ನಿನ್ನಬ್ರಹ್ಮಣ್ಯಂ ಬರಿಯ ಜನವ್ರೀಡಾಕರಂ ಅದಂ ವಿಚಾರಿಸವೇಡಾ: **ಪಂಪರಾ,** ೭. ೫೧); ''ಬ್ರಾಹ್ಮಣನನ್ನು ಅನ್ಯಾಯದಿಂದ ಪಾರುಮಾಡಿ'' ಎಂಬ ಉದ್ಗಾರ (ಘಳಿಲನೆ ಬರ್ಪನ್ನಂ ಕಂಡಟಿಲಿರ್ಮಡಿಯಾಗೆ ಪತ್ತಿ ಕೆಳೆಯನ ಕೊರಲಂ ಪಟಿವಿಸಿ ಕಪಿಂಜಳಂ ಬಾಯಟಿದು ಅಬ್ರಹ್ಮಣ್ಯಮೆಂದು ಬಿಡೆ ಮುಯ್ಯಲ್ಚಲ್: **ಕಾದಂಬ,** ೫. ೧೬೮)

**ಅಭಂಗುರ –** ಭಂಗವಾಗದ, ಶಾಶ್ವತವಾದ (ಹರಿನ್ಮಣಿ ಭಿತ್ತಿಭಾಗದೊಳ್ ಪುರವನಿತಾಜನಂ ಬರೆಯುತಿರ್ಪುದು ಅಭಂಗುರಪತ್ರಭಂಗಮಂ: **ಪಂಪರಾ,** ೧. ೧೧೭)

**ಅಭಯದಾನ –** ನಾಲ್ಕು ದಾನಗಳಲ್ಲಿ ಒಂದು ಅಭಯವನ್ನು ಕೊಡುವುದು (ಕುಡುವುದುಂ ಆಹಾರ ಅಭಯ ಭೈಷಜ್ಯ ಶಾಸ್ತ್ರದಾನದಿಂ ಚತುರ್ವಿಧಮಕ್ಕುಂ: **ಆದಿಪು,** ೧೦. ೯ ವ)

**ಅಭವ –** ಜನ್ಮರಹಿತ; ಶಿವ (ಧ್ಯಾನದೊಳ್ ಅಭವಂ ನೆಱೆದದಿನಿಸಾನುಮನರೆಮುಚ್ಚಿ ಕಣ್ಗಳಂ ನಿಶ್ಚಳಿತಂ ತಾನಿರ್ದು ಮಱೆದು ಕೆಂದಿದ ಮೀನಂ ತಳ್ತಾಡದಿರ್ದ ಮಡುವಂ ಪೋಲ್ತಂ: **ಪಂಪಭಾ,** ೮. ೧೩); ವಿಷ್ಣು; ಜಿನ (ಧರಣೇಂದ್ರನೆಂ ಅಭವನ ಕಿಂಕರನೆಂ: **ಆದಿಪು,** ೯. ೧೧೧)

**ಅಭವಭವನ –** ಶಿವದೇವಾಲಯ (ರೋದೋಂತದೊಳೆತ್ತಂ ಸುತ್ತುತಿರ್ದತ್ತು ಅಭವಭವನಸಂಪೂರಿತಂ ಶಂಖನಾದಂ: **ರಾಜಶೇವಿ,** ೧೨. ೩)

**ಅಭವ್ಯ –** [ಜೈನ] ಭವ್ಯನಲ್ಲದ, ಮುಕ್ತಿ ಹೊಂದಲಾರದ ಜೀವ (ನೀಂ ಬೆಸಸಿ ಅಭವ್ಯನೊ ಭವ್ಯನೊ ದೂರಭವ್ಯನೋ: **ಆದಿಪು,** ೨. ೩೪)

**ಅಭಿಖ್ಯಾತಿ –** ಕೀರ್ತಿ (ನಿಜಾಭಿಖ್ಯಾತಿಯಂ ಇಳೆಯೊಳ್ ನಿಱೆಸಲ್ಕೀ ತೆಱದ ಇತಿಹಾಸಕಥೆಯಂ ಒಪ್ಪಿಸೆ ಕುಱಿತಂ: **ಪಂಪಭಾ,** ೧೪. ೫೧)

**ಅಭಿಗಮನ –** ಅತಿಥಿಯನ್ನು ಎದುರುಗೊಳ್ಳುವುದು (ಅಭಿಗಮನ ಅಂಘ್ರಿಕ್ಷಾಳನ ಶುಭಾಸನ ಅರ್ಚಾಪ್ರಣಾಮಕರಣ ಆಹಾರ ವ್ಯಭಿಚಾರಶುದ್ಧ ನವಭೇದಪೂರ್ವ ಪುಣ್ಯೈಕ ಪಣ್ಯನಿಧಿ ನಿಱೆಸುವುದುಂ: **ಶಾಂತಿಪು,** ೬. ೭೧)

**ಅಭಿಘಾತ –** ಅಡ್ಡಿ (ವಜ್ರಕೀಟಂಗಳ್ ಕರ್ಣನೆರಡುಂ ತೊಡೆಯುಮಂ .. .. ಉರ್ಚೆ ಪೋಗೆಯುಂ ಅದನಱಿಯದಂತೆ ಗುರುಗೆ ನಿದ್ರಾ ಅಭಿಘಾತಮಕ್ಕುಮೆಂದು ತಲೆಯನುಗುರಿಸುತ್ತುಮಿರೆಯಿರೆ: **ಪಂಪಭಾ,** ೧. ೧೦೪ ವ); ಹೊಡೆತ (ಕುಲಿಶಾಭೀಘಾತದಿಂ ನೀಲಾಚಲಮೆ ಕೆಡೆವಂತೆ: ಗದಾಯು, ೮. ೨೬ ವ); ನಷ್ಟ (ಸಿರಿಗೆ ದರಿದ್ರತೆ ಬಾಟ್ಕೆಗೆ ಮರಣಂ ಜರೆ ಯೌವನಕ್ಕೆ ಅಭಿಘಾತಮೆನುತ್ತಿರೆ ಕಂಡುಂ: **ಚಂದ್ರಪ್ರಪು,** ೨. ೩೭)

**ಅಭಿಚಾರ –** ಮಾಟ (ಅಭಿಚಾರಕ್ರಿಯಾ ಕ್ರೂರಪ್ರಕೃತಿಯಪ್ಪ ಪುರೋಹಿತರ ಗುರುವೆನಿಸುಗುಂ: **ಕಾದಂಬ,** ೩. ೧೦೩ ವ)

**ಅಭಿಚಾರಕ್ರಿಯೆ –** ಮಾಟಮಾಡುವುದು (ಮಲೆಪಗೇ ಅಭಿಚಾರಕ್ರಿಯೆ ವಲಮೆನಿಸಲ್: **ಆದಿಪು,** ೧೧. ೫)

**ಅಭಿಜನ –** ಸತ್ಕುಲಜ (ಸನ್ನಿಪಾತ ಜ್ವರಂ ದೊರೆಕೊಂಡಂತೆ ಅವಿವೇಕದಿಂದ ಅಭಿಜನಂ ವಿದ್ವಜ್ಜನಂ ಮಂಡಲೇಶ್ವರ

ಸೇನಾಪತಿ ಮಂತ್ರಿ ಮಂಡಲಮದೇಂ ಮಾರ್ಕೊಳ್ಳದಂತಿರ್ಕುಮೇ: **ಪಂಪರಾ,** ೬. ೧೬೮); ವಂಶ (ಪೆಜತೇನಲ್ಲದೊಡೆ ಪೊಜಮಡಿಸಿ ಕಳೆವುದೆ ಮದೀಯ ನಂದನನಂ ಅಭಿಜನ ಆನಂದನನಂ: **ಪಂಪರಾ,** ೬. ೧೬೯)

**ಅಭಿಜನವತ್ಸಳ** – ಸದ್ವ್ಯಕ್ತಿಗಳಲ್ಲಿ ಪ್ರೀತಿಯುಳ್ಳವನು (ವತ್ಸಕುಲತಿಲಕಂ ಅಭಿಜನವತ್ಸಳಂ ಅಭಿಮಾನಮೂರ್ತಿ: **ಆದಿಪು,** ೧. ೩೦)

**ಅಭಿಜಾತ** – ಉತ್ತಮ ವಂಶದಲ್ಲಿ ಹುಟ್ಟಿದವನು (ಚತುರಂಗಬಲೋಪೇತಂ ಅತಿಧವಳರಥಂ ಅಭಿಜಾತಂ ಕ್ಷತ್ರಿಯರನುಜದ ಕಲಿ ಕೃಪನಾತಂ: **ಪಂಪಭಾ,** ೧೦. ೫೫); ಹೊಸ (ಮತ್ತೊರ್ವಳ್ ಅಭಿಜಾತ ಕೇತಕೀದಳಧವಳಾಪಾಂಗೆ ಕೇತಕೀದಳಂಗಳಂ ಅಪಾಂದ ನೀಳ್ದಿನೊಳ್ ಪಡಿಯಿಡುವಂತಿರೆ ನೋಡಿ: **ಪಾರ್ಶ್ವನಾಪು,** ೯. ೬೮ ವ)

**ಅಭಿಜಿನ್ಮುಹೂರ್ತ** – ದಿನದ ಎಂಟನೆಯ ಮುಹೂರ್ತ, ಕುತುಪಕಾಲ (ತತ್ಪುರುದೇವಂ ಮುಕ್ತಿವಧೂವರತೆಯಂ ಅಭಿಜಿನ್ಮುಹೂರ್ತದೊಳ್ ಕೈಕೊಂಡಂ: **ಆದಿಪು,** ೧೬. ೫೧)

**ಅಭಿಧಾನ** – ಹೆಸರು (ಸಮಸ್ತರಾಜಕಚ್ಛತ್ರದಿನಂದು ಛತ್ರವತಿಯೆಂಬ ಅಭಿಧಾವಮನಾಳ್ದುದಾ ಪೊಟಿಲ್: **ಪಂಪಭಾ,** ೩. ೩೯); ನಿಘಂಟು (ಅಭೀಧಾನ ಸಾಮುದ್ರಿಕಂ .. .. ಎಂಬಿವು ಮೊದಲಾದ ನರವೈದ್ಯಮುಮಂ ಓದಿಸಿದಂ: **ವಡ್ಡಾರಾ,** ಪು, ೨೩, ಸಾ. ೧೫)

**ಅಭಿಧಾನಪರಂಪರೆ** – ನಿಘಂಟು (ಲಿಪಿ ಶಬ್ದಶಾಸ್ತ್ರಂ ಅಭಿಧಾನಪರಂಪರೆ ನಾಟಕಪ್ರಯೋಗಂ ಕಾವ್ಯಂ ನೃಪನೀತಿ ಜೋಯಿಸಂ ರತ್ನಪರೀಕ್ಷೆ ವಿಷಾಪಹರಂ ಆಯುರ್ವೇದಂ: **ಪುಷ್ಪದಂಪು,** ೪. ೫೮)

**ಅಭಿನಯಚತುಷ್ಟಕ** – ಅಂಗಿಕ, ವಾಚಿಕ, ಸಾತ್ವಿಕ, ಆಹಾರ್ಯ ಎಂಬ ನಾಲ್ಕು ಬಗೆಯ ಅಭಿನಯ (ಅಂಗಪ್ರತ್ಯಂಗ ಸಂಭವಾಂಗಿ ಕಾವ್ಯ ಅಭಿನಯಚತುಷ್ಟಯ ಪ್ರಯುಕ್ತ ಶ್ರುತಕಳಾಪರಿಣತನುಂ: **ಚಂದ್ರಪ್ರಪು,** ೪. ೮೦ ವ)

**ಅಭಿನವ** – ಹೊಸದಾದ (ಅಹರಹರ್ ಅಭಿನವ ಮಣಿರುಚಿರ ಹಾಟಕ ಪ್ರಕರ ವಿರಚಿತಂಗಳಂ ಎಂದುಂ ಬಹು ಭಾಜನಂಗಳಂ ನಿರ್ವಹಿಸುವುದು ಅವರವರ್ಗೆ ಭಾಜನಾಂಗ ಮಹೀಜಂ: **ಶಾಂತಿಪು,** ೬. ೧೧೪)

**ಅಭಿನವರ್** – ಹೊಸಬರು (ಅಭಿವಾದಂ ಎಂದು ನಿಂದ ಅಗ್ನಿಭೂತಿಯುಂ ವಾಯುಭೂತಿಯುಂ ವಿಪ್ರವರಂಗೆ ಅಭಿಮುಖದೊಳಿರ್ಪುದುಂ ಕಂಡು ಅಭಿನವರಿವರ್ ಎಂದು ಸೂರ್ಯಮಿತ್ರಂ ತನ್ನೊಳ್ ವಿಸ್ಮಯಂಬಟ್ಟು: **ಸುಕುಮಾಚ,** ೨. ೪೦ ಮತ್ತು ೪೦ ವ)

**ಅಭಿನಿವೇಶ** – ಆಸಕ್ತಿ, ಆದರ ಕ್ರೀಡಾಕಾಮ ತೀವ್ರ ಅಭಿನಿವೇಶಮೆಂಬ ಪರಸ್ತ್ರೀಗೆಜಗದ ವ್ರತದ ಐದತಿಚಾರದೊಳಂ: **ಧರ್ಮಾಮೃ,** ೮೮ ವ); ನಂಬಿಕೆ

**ಅಭಿಷವ** – ಅಭಿಷೇಕ (ಅಚ್ಛತೀರ್ಥಸಮೂಹಾಂಬುಗಳಿಂದ ಅಭಿಷವಂ ಮಾಟ್ಪಂತೆ .. .. ದಿವ್ಯಾಂಗನೆ ನೋಡಿದಳ್: **ಕಾದಂಸಂ,** ೩. ೩೬)

**ಅಭಿನಿಷಾದಿ** – ಎದುರಿಗಿರುವ ಮಾವತಿಗ (ಇತ್ತಂ ಯುವರಾಜನಾ ಬಗೆದು ಅಭಿನಿಷಾದಿಯುಮಂ: **ಆದಿಪು,** ೧೪. ೯೮ ವ)

**ಅಭಿನುತ** – ಹೊಗಳಲ್ಪಟ್ಟ, ಸ್ತುತವಾದ (ಅಭುನುತ ಕಲ್ಪಮಹೀಜಂಗಳಿಂ: **ಶಾಂತಿಪು,** ೬. ೧೦೦)

**ಅಭಿನೂತ** – ಹೊಗಳಲ್ಪಟ್ಟವನು (ಅಭಿನೂತಕೇತಕೀಕಿಸಲಯ ಅಪಹಸಿತ ಕರತಲಪಲ್ಲವೆ: **ಸುಕುಮಾಚ,** ೯. ೧೦೭ ವ)

**ಅಭಿನ್ನಾಂಗಿ** – ಏಕರೂಪವುಳ್ಳವಳು (ಹಿಮಶೈಳದೊಳಂ ಜಳಧಿಯೊಳಂ ಎಂತು ಅಭಿನ್ನಾಂಗಿ ಗಂಗೆ ಸಂಗತೆ: **ಆದಿಪು,** ೧. ೭೭)

**ಅಭಿಭವ** – ಸೋಲು (ರಾಜ್ಯದೊಳೆನ್ನನವಸ್ತುಮಾಡಿ ಪೊಣ್ದು ಅಭಿಭವಮೀಗಳೀ ಭವದೊಳಿಂತಿದು ನೀಗದು: **ಆದಿಪು,** ೨. ೩೯)

**ಅಭಿಭವಿಸು** – ಶಕ್ತಿಗುಂದಿಸು (ಅಭಿಮನ್ಯು ಮರಣವಾರ್ತಾಪ್ರಭೂತ ಶೋಕಾಗ್ನಿ ಧರ್ಮತನಯನಂ ಇರದದೆ ಅಂದು ಅಭಿಭವಿಸಿ ತನ್ನನಳುರ್ದಂತೆ ಭಾಸ್ಕರಂ ಕೆಂಕಮಾದಂ ಅಸ್ತಾಚಲದೊಳ್: **ಪಂಪಭಾ,** ೧೧. ೧೦೬); ಕಷ್ಟವೆಂದು ತಿಳಿ (ರಾತ್ರಿಭೋಜನಂ ದುಃಖಭಾಜನನಿಶ್ಚಯಮೆಂದು ಅಭಿಭವಿಪರಾಗಿ ದಿವದೊಳ್ ಸುಭೋಜನಂ ಗೆಯ್ವರಲ್ಲರೇ ಜೈನಪರರ್: **ಸಮಯಪ,** ೬. ೩); ಸೋಲಿಸು (ಅಭಿಭವಿಸಿ ಕಪಿಧ್ವಜಿನಿಯಂ ಅಭಿಭಯರ್ ಪರಿತಂದು ರಾಮಲಕ್ಷ್ಮಣರಂ ಕಂಡು: **ಪಂಪರಾ,** ೧೪. ೯೨)

**ಅಭಿಭೂತ** – ಸೋತ (ವ್ಯಸನ ಅಭಿಭೂತಂನಾದನುಂ ಅನುರಾಗವೇಗದೆ ಹಿತಾಹಿತಚಿಂತೆಯನೇಕೆ ಮಾಡುಗುಂ: **ಪಂಪರಾ,** ೧೪. ೧೧೭)

**ಅಭಿಮಂತ್ರಿಸು** – ಮಂತ್ರ ಜಪಿಸಿ ಶಕ್ತಿಯುತವಾಗಿಸು (ಕಸೆಯಂ ಬಿಟ್ಟುಅಭಿಮಂತ್ರಿಸಿ ಚಕ್ರಮಂ ಅಸುರವೈರಿಯಿಡುವಾಗಳ್: **ಪಂಪಭಾ,** ೨. ೨೧೧)

**ಅಭಿಮಾನ** – ಆತ್ಮಗೌರವ (ಅಭಿಮಾನಮೊಂದೆ ಕುಳಮ ಅಣ್ಮು ಕುಲಂ: **ಪಂಪಭಾ,** ೧೦. ೨೧)

**ಅಭಿಮಾನಂಗಿಡು** – ಅಭಿಮಾನಕ್ಕೆ ಧಕ್ಕೆಯೊದಗು (ಅಲ್ಲಿಂದ ಅಭಿಮಾನಂಗಿಡೆ ಜಡಿದು ಬಡಿದು ಕೆಡೆ ನೂಂಕುವುದುಂ: **ಧರ್ಮಾಮೃ,** ೫. ೧೩೧)

**ಅಭಿಮಾನಕ್ಷತಿ** – ಅಭಿಮಾನಭಂಗ (ಮಾನಧನನೆನಿಸಿ ನಿನ್ನಭಿಮಾನಕ್ಷತಿ ಮಾಡಿದ್ಯೆ ಸುಯೋಧಣ; **ಗದಾಯು,** ೭. ೬)

**ಅಭಿಮಾನಧನ** – ಸ್ವಾಭಿಮಾನವನ್ನೇ ಧನವನ್ನಾಗಿ ಉಳ್ಳವನು; ದುರ್ಯೋಧನ (ನೃಪಂ ಅಭಿಮಾನಧನಂ ಅನುಪಮಮನಂ: **ಕವಿರಾಮಾ,** ೨. ೧೬)

**ಅಭಿಮಾನಹಾನಿ** – ಅಭಿಮಾನಕ್ಷತಿ (ಅಭಿಮಾನಹಾನಿ ವಿರಹಿಗಳೊಳ್ .. .. ಅಲ್ಲದೆ ಜನಪದದದ ಜನಂಗಳೊಳಿಲ್ಲ: **ಜಗನ್ನಾವಿ,** ೨. ೧ ವ)

**ಅಭಿಮುಖ** – ಎದುರು (ಅಭಿವಾದಂ ಎಂದು ನಿಂದ ಅಗ್ನಿಭೂತಿಯುಂ ವಾಯುಭೂತಿಯುಂ ವಿಪ್ರವರಂಗೆ ಅಭಿಮುಖದೊಳಿರ್ಪುದುಂ ಕಂಡು ಅಭಿನವರಿವರ್ ಎಂದು ಸೂರ್ಯಮಿತ್ರಂ ತನ್ನೊಳ್ ವಿಸ್ಮಯಂಬಟ್ಟು: **ಸುಕುಮಾಚ,** ೨. ೪೦ ಮತ್ತು ೪೦ ವ)

**ಅಭಿಯಾತಿ** – ಶತ್ರು (ಅಭಿಮಾನಿ ಸತ್ಯಭಾಷಣಂ ಅಭಿಯಾತಿವಿಭೀಷಣಂ .. .. ವಿಶ್ವಂಭರಾಧಿಪತಿ ಅದನಾಳ್ವಂ: **ಆಚವರ್ಧ,** ೧. ೭೭)

**ಅಭಿಯೋಗ** – ಒತ್ತಾಯ (ತಮ್ಮತಮ್ಮ ಪುತ್ರರಂ ಅಭಿಯೋಗದಿಂದತಿಬಳಂಗೆ ನಿಯೋಜಿಸಿ: **ಆದಿಪು,** ೨. ೫೧); ಆಸಕ್ತಿ (ಅದರ್ಕೆ ಮೆಚ್ಚಿ ಬಣ್ಣಿಸಲ್ ಅಭಿಯೋಗಮಾಯ್ತೆನಗೆ ಸಾಹಸಭೀಮನ ಸಾಹಸಂಗಳಂ: **ಗದಾಯು,** ೧. ೫೩); ಅಪವಾದ, ದೂರು (ಅಬ್ಬಾ ನಿಮ್ಮ ಮೇಲೆ ಲೋಕಮೆಲ್ಲಂ

ಅಭಿಯೋಗಮನಿಟ್ಟೊಡೆ ಅರಸಂ ನಿಮ್ಮನಡವಿಯೊಳ್ ಬಿಸಿಟ್ಟು ಬರವೇಟಿಳ್ದೊಡೆ ಇಲ್ಲಿಗೆ ತಂದೆಂ: **ಪಂಪರಾ,** ೧೫. ೭೫ ವ)

**ಅಭಿಯೋಗ್ಯ –** [ಜೈನ] ಇಂದ್ರ ಮುಂತಾದವರಿಗೆ ವಾಹನಸೇವೆ ಮಾಡುವವರು (ಲೋಕಪಾಲ ಅಭಿಯೋಗ್ಯ ದಿಗ್ಗಜೇಂದ್ರ ದೇವವಿಹಾರಪ್ರಾದ ಅಭಿರಾಮಮುಂ .. .. ಆಗಿ: **ಆದಿಪು,** ೧. ೪೯ ವ)

**ಅಭಿರಾಮ –** ಸುಂದರವಾದ (ಆ ಜನಪದಂ .. .. ಕಮಳ ಅಭಿರಾಮಮುಂ ಎನಿಸಿ ರಮಣೀಯಮಾಗಿರ್ಪುದು: **ರಾಜಶೇವಿ,** ೨. ೨೮ ವ)

**ಅಭಿರೂಪ –** ಸುಂದರ ರೂಪುಳ್ಳವನು (ಜನಪದಸಮಭಿಜಾತನುಂ ಅನ್ವಯಾಗತನುಂ ಅಭಿರೂಪನುಂ: **ಆದಿಪು,** ೧೪. ೪೩ ವ); ವಿದ್ವಾಂಸ (ಇದು ಚಿತ್ರಕಥಾ ಅಭಿರೂಪಂ ಇಂತಿದು ಗಜವಾಜಿ ಲಕ್ಷಣ ವಿಚಕ್ಷಣಂ: **ಕಾದಂಬ,** ೧. ೪೯)

**ಅಭಿಲಷಿತ –** ಬಯಸಿದ (ಸುರದ್ರುಮ ಸಂಕುಳಂ ಅಭಿಲಷಿತ ಫಲಮನೀವುದು ಪಿರಿದೇ: **ಪಾರ್ಶ್ವನಾಪು,** ೧೬. ೫೮)

**ಅಭಿವಂದನಂಗೆಯ್ –** ಗೌರವಪೂರ್ವಕ ವಂದನೆ ಸಲ್ಲಿಸು (ಈ ದಯೆಗೆ ಮಹಾಪ್ರಸಾದಮೆಂದು ಅಭಿವಂದನಂಗೆಯ್ದು: **ಸುಕುಮಾಚ,** ೪. ೨ ವ)

**ಅಭಿವಂದಿತಾರ್ಥ –** ಮಾನ್ಯನಾದವನು (ಎನಗೆ ಅಭಿವಂದಿತಾರ್ಥರ್ ಅವಧಾರಿಸು ಚಿತ್ತದೊಳ್ ಅಗ್ರಜಾತ ನೀಂ ಮುನಿಯದೆ ಪಾಂಡುನಂದನರ್ಗೆ ಬಾಡಮನಯ್ದನೆ ಬೇಡೆ: **ಗದಾಯು,** ೭. ೫೯)

**ಅಭಿವರ್ಣಿಸು –** ಚೆನ್ನಾಗಿ ವರ್ಣನೆ ಮಾಡು (ದುರ್ಯೋಧನ ಊರು ಕ್ಷಮಾಧರ ವಜ್ರಂ ಕುರುರಾಜರತ್ನ ಮಕುಟ ಉತ್ಕೂಟ ಅಂಘ್ರಿ ಸಂಘಟ್ಟಸಂಗರಂ ಎಂದು ಅಭಿವರ್ಣಿಪೆಂ ರಣಯಶ್ರೀರಾಮನಂ ಭೀಮನಂ: **ಗದಾಯು,** ೧. ೫೨)

**ಅಭಿವರ್ಧನ –** ಏಳಿಗೆ (ವಿನುತಾನಂತಸುಖಾ ಅಭಿವರ್ಧನಂ ಅವ್ಯಾಬಾಧಸೌಖ್ಯ ಅಬಿವರ್ಧನಮಂ: **ಸುಕುಮಾಚ,** ೯. ೧೪)

**ಅಭಿವಾಂಛಿತ –** ಅಪೇಕ್ಷಿಪಟ್ಟ, ಬಯಸಿದ (ಮುದಂಬಡೆಯರಾರ್ ಅಭಿವಾಂಛಿತ ಕಾರ್ಯಸಿದ್ಧಿಯಿಂ: **ಪಂಪರಾ,** ೧೧. ೧೬೨)

**ಅಭಿವಾದಂ –** ನಮಸ್ಕಾರ (ಅಭಿವಾದಂ ಎಂದು ನಿಂದ ಅಗ್ನಿಭೂತಿಯುಂ ವಾಯುಭೂತಿಯುಂ ವಿಪ್ರವರಂಗೆ ಅಭಿಮುಖದೊಳಿರ್ಪುದುಂ ಕಂಡು ಅಭಿನವರಿವರ್ ಎಂದು ಸೂರ್ಯಮಿತ್ರಂ ತನ್ನೊಳ್ ವಿಸ್ಮಯಂಬಟ್ಟು: **ಸುಕುಮಾಚ,** ೨. ೪೦ ಮತ್ತು ೪೦ ವ)

**ಅಭಿವಾದಯೇ –** ನಮಸ್ಕರಿಸುತ್ತೇನೆ (ತನ್ನ ದೋಣೆಯಂಬುಗಳ್ ತವುವನ್ನೆಗಂ ಎಚ್ಚಂಬು ತಪ್ಪೊಡೆ ಅಭಿವಾದಯೇ ಎನಲ್ಕೆ ಇನ್ನೆನಗೆ ಪದನಿದೆಂದು ಕರಂ ನಗೆ ಸುರರರಿಗನಿದಿರ್ಗೆ ತೊಲಗಿದನಾಗಳ್: **ಪಂಪಭಾ,** ೧೩. ೪೦)

**ಅಭಿವಿನುತ –** ಸ್ತೋತ್ರಪಾತ್ರ (ಅಭಿವಿನುತ ಜೈನಸೂಕ್ತಿ ಪ್ರಭಾವಮಂ ಬಣ್ಣಿಸಲ್ಕೆ ನೆಱೆವವನಾವಂ: **ಸಮಯಪ,** ೩. ೪೬)

**ಅಭಿವೀಕ್ಷಿಸು –** ಆಸಕ್ತಿಯಿಂದ ನೋಡು (ವಸುಧೆಯೊಳ್ ಎಸೆದಿರ್ದಭಿವೀಕ್ಷಿಸುವ ಜನಕ್ಕೆಯ್ದೆ ಜಿನನ ಜನ್ಮೋತ್ಸವಮಂ: **ಶಾಂತಿಪು,** ೧೦. ೨೩)

**ಅಭಿವೇಷ್ಟಿತ –** ಸುತ್ತುವರಿಯಲ್ಪಟ್ಟ (ನುತವೇತ್ರಾಸನರುಳ್ಳುಲ್ಲರೀ ಮೃದಗಾಭಂ ತ್ರಿವಾತಾಭಿವೇಷ್ಟಿತಂ .. .. ಜಗತ್ತ್ರಿತಯಂ ನಿಂದುದು: **ಸುಕುಮಾಚ,** ೧೧. ೪೦)

**ಅಭಿವ್ಯಕ್ತಿ –** ಪ್ರಕಟಗೊಳ್ಳುವುದು (ಶಬ್ದಮುಖದಿಂ ಅಭಿವ್ಯಕ್ತಿಯಂ ಮಾಟ್ಟ ವಿಮಳಸ್ವರೂಪೆಗೆ ಭುವನಸ್ತುತೆಗೆ ಶಾಸ್ತ್ರಮುಖದೊಳ್ ನಮಸ್ಕರಿಸುವೆಂ: **ಶಬ್ದಮದ,** ೧. ವೃತ್ತಿ)

**ಅಭಿಶಂಕೆ –** ಆಳವಾದ ಸಂದೇಹ (ಸದ್ವನಾಬ್ಜವಿಳಾಸಾವಾಸದೊಳ್ ತಳರದೆ ನಿಂದ ವಾಗ್ವನಿತೆ ಎಂಬ ಅಭಿಶಂಕೆಯಂ ಉಂಟುಮಾಡಿದಳ್: ಆದಿಪು, ೨. ೨೭)

**ಅಭಿಷಂಗ –** ಬೈಗುಳು (ಓಡಿ ಬರ್ಪ ಅಮರವ್ಯಾಧಸಂಘದ ಅಭಿಷಂಗಮಂ .. .. ಕಪರ್ದಿ ಕಂಡು: **ಶಬರಶಂ,** ೪. ೧೭ ವ)

**ಅಭಿಷವ –** ಅಭಿಷೇಕ (ಕಾಂತೆಯರ್ಕಳ ದರಹಾಸ ಚಂದನ ಅಭಿಷವಂ .. .. ತನ್ನೋಳೊಪ್ಪೆ ತಳೆದಂ ಮದನೋತ್ಸವಮಂ: **ಕಾದಂಬ,** ೨. ೨೬)

**ಅಭಿಷವಣ –** ಅಭಿಷವ (ಸುರರಾಜಂ ತಾನೆ ರಾಜ್ಯಾಭಿಷವಣವಿಧಿಯಂ ಮಾಡಿದಂ: **ಆದಿಪು,** ೬. ೧೦೮); ಸ್ನಾನ

**ಅಭಿಷವಾಂಬು –** ಅಭಿಷೇಕದ ನೀರು (ಮೊದಲಂ ಬಳಸಿರೆ ಗುಂಟಿಸಿದುದಕದವೋಲಭಿಷವಾಂಬು ಮೇರುನಗಂ ಸ್ಕಂಧದವೊಲಿರೆ: ಚಂದ್ರಪ್ರಪು, ೧೨. ೧೪೦)

**ಅಭಿಷವೋತ್ಸವ –** ಅಭಿಷೇಕ ಮಹೋತ್ಸವ (ತ್ರಿಲೋಕನಾಥನ ಅಭಿಷವೋತ್ಸವಕ್ಕೆ ಪೂರ್ಣೇಂದುಮಂಡಲಂಗಳಿಂದಂ ಇಂಡೆಯಾಡಿತೆಂಬುನಂ: **ಅನಂತಪು,** ೫. ೭೦)

**ಅಭಿಷೇಣನ –** ದಂಡೆತ್ತಿ ಹೋಗುವುದು (ಅಭಿಷೇಣನಮಕ್ಕುಂ ರಿಪುಗಭಿಮುಖದೊಳ್ ಪಡೆವೆರಸಿ ನಡೆವುದು: **ಅಭಿಧಾವ,** ೧. ೧೪. ೨)

**ಅಭಿಷ್ಟುತ –** ಸ್ತುತವಾದ, ಶ್ರೇಷ್ಠ (ತ್ರಿಜಗದಭಿಷ್ಟುತಂಗೆ ಜಿನಚಂದ್ರಮಹಾಮಹಿಮಪಾಳಕಂಗೆ: **ಶಾಂತಿಪು,** ೧೧. ೬೭)

**ಅಭಿಸಾರಿಕೆ –** ಸಂಕೇತಸ್ಥಾನದಲ್ಲಿ ಪ್ರಿಯನನ್ನು ನಿರೀಕ್ಷಿಸುವವಳು (ಪಿರಿದುಂ ಗಟಿಪುತ್ತುಮಿರ್ಪಳಂ ಸಾರಿಕೆಯೆಂಬರ್ ಅಭಿಸಾರಿಕೆಯೆಂಬರೆ ಬುದ್ಧಿಯುಳ್ಳವರ್: **ಪಂಪಭಾ.** ೪. ೮೩)

**ಅಭಿಹತಮರ್ಮ –** ಮರ್ಮಕ್ಕೆ ಪೆಟ್ಟು ತಾಗಿದವನು (ಬಿಟ್ಟಿಂ ವಸುಧೆಗೆ ರಥದಿಂ ಮೂರ್ಛಾವಸಕ್ತಮತಿ ಧರ್ಮಪಾಲಂ ಅಭಿಹತಮರ್ಮಂ: **ಚಂದ್ರಪ್ರಪು,** ೧೦. ೯೨)

**ಅಭಿಹತಿ –** ಪೆಟ್ಟು, ಏಟು (ರಜಂ ನರೇಂದ್ರಚಾಮರಮರುದ್ ಅಭಿಹತಿಯಿಂ ತೆರಳ್ದು ತೂಳ್ದತ್ತಾಗಳ್: **ಆದಿಪು,** ೧೧. ೩೮)

**ಅಭೀತಮನ –** ಹೆದರದ ಮನಸ್ಸಿನವನು (ಎನೆ ಬಗೆಗೊಂಡು ಅಭಿತಮನನರ್ಚಿಸಿ ಬಂದಿಸಿ ಚೈತ್ಯಗೇಹಮುಳ್ಳನಿತುಮಂ: **ಆದಿಪು,** ೩. ೪)

**ಅಭೀತಾತ್ಮಕ –** ಹೆದರದ ಮನಸ್ಸಿನವನು (ಹೈಮಾಚಳಮಿರ್ಪಂತೆ ಆಗಳಿರ್ದಂ ಮರಮೊದಲೊಳ್ ಅಭಿತಾತ್ಮಕಂ ಯೋಗಿನಾಥಂ: **ಸುಕುಮಾಚ,** ೪. ೯)

**ಅಭೀತೆ –** ಹೆದರದ ಮನಸ್ಸಿನವಳು (ಅಭಯರುಚಿ ತಂಗೆಗೆಂದಂ ಅಭೀತೆಯಾಗೆಲಗೆ ತಾಯೆ ಮರಣದ ದೆಸೆಯೊಳ್: **ಯಶೋಚ,** ೧. ೪೮)

**ಅಭೀಪ್ಸಾ[ಪ್ಸೆ] –** ಬಯಕೆ (ಚಂದ್ರವರ್ಧನಂ ಅಭೀಪ್ಸಾವಲ್ಲರೀ ವರ್ಧನಂ: **ಪಂಪರಾ,** ೫. ೨೯)

**ಅಭೀಷ್ಟಫಲ –** ಬಯಸಿದ ಫಲ (ಕೋಮಲಮುಖೀ ಗೌರೀಲತಾಶ್ಲಿಷ್ಟಶಂಕರ ಕಲ್ಪದ್ರುಮಮಂ ಈಗಳೀಗೆ ಅಭೀಷ್ಟಫಲಮಂ ಚಾಳುಕ್ಯನಾರಾಯಣಂ: **ಗದಾಯು,** ೧. ೨)

**ಅಭೇದ್ಯ** – ಭೇದಿಸಲಾಗದ, ಭೇದಿಸಲಾಗದ್ದು (ವಿಷಮೋಚಿಕಗಳೆಂಬ ಪಾವುಗೆಗಳುಂ ಅಭೇದ್ಯಮೆಂಬ ಕವಚಮುಂ: **ಆದಿಪು,** ೧೫. ೩ ವ)

**ಅಭೋಜ್ಯ** – ತಿನ್ನಬಾರದ್ದು (ಔದುಂಬರತರುವಾರ್ಗಂ ಅಭೋಜ್ಯಂ ಕ್ಷುದ್ರಜಂತು ಜನ್ಮಾವಾಸಂ: **ಮಲ್ಲಿನಾಪು,** ೧೦. ೪೩)

**ಅಭ್ಯಂತರ** – ಒಳಗೆ, ನಡುವೆ (ನಗರಾಭ್ಯಂತರ ದೇವತಾಭವನದೊಳ್ ಚೌವಟ್ಟದೊಳ್ ಬೀದಿವೀದಿಗಳೊಳ್ .. .. ನೀತಿಗೆಟ್ಟಾಡುವರ್: **ಸುಕುಮಾಚ,** ೨. ೭)

**ಅಭ್ಯಂತರತಪಸ್** – [ಜೈನ] ಪ್ರಾಯಶ್ಚಿತ್ತ, ವಿನಯ, ವೈಯಾಪೃತ್ಯ, ಸ್ವಾಧ್ಯಾಯ, ವ್ಯುತ್ಸರ್ಗ, ಧ್ಯಾನ ಎಂಬ ಆರು ಬಗೆಯ ಅಂತರಂಗ ತಪಸ್ಸು (ಮತ್ತಂ ಅಭ್ಯಂತರತಪಷ್ಷಟ್ಕದೊಳಂ ಪ್ರಾಯಶ್ಚಿತ್ತ ವಿನಯ ವೈಯಾಪತ್ಯ ಸ್ವಾಧ್ಯಾಯ ಧ್ಯಾನ ವ್ಯುತ್ಸರ್ಗಂಗಳೊಳಂ ಕೈಕೊಂಡು: **ಆದಿಪು,** ೬. ೩೩ ವ)

**ಅಭ್ಯಮಿತ್ರೀಣ** – ಶತ್ರುಗಳನ್ನು ಧೈರ್ಯವಾಗಿ ಎದುರಿಸುವ (ಕರ್ಕಸಂಗಳಂ ನುಡಿದು ಮಾಣದೆ ಅಭ್ಯಮಿತ್ರೀಣವೃತ್ತಿಯನೆ ಪೂಣ್ದು ಪೊಱಮಡುವಾಗಳ್: **ಚಂದ್ರಪ್ರಪು,** ೧೦. ೫೫ ವ)

**ಅಭ್ಯರ್ಚನೆ** – ಪೂಜೆ, ಸತ್ಕಾರ (ಜೈನಪದ ಅಭ್ಯರ್ಚನೆಯುಂ ದಾನಮುಂ ಅಣಮಿಲ್ಲದಿರ್ದೊಡಂ ದಿಬ್ಯಸುಖಂ ಜೈನಂಗಕ್ಕುಂ: **ಸಮಯಪ,** ೪. ೬೯)

**ಅಭ್ಯರ್ಚಿಸು** – ಪೂಜಿಸು, ಸತ್ಕರಿಸು (ಎರಡನೆಯ ತೀರ್ಥಂಕರನಂ .. .. ಸುರರೆಲ್ಲಂ ಚೂಡಾಮಣಿಕಿರಣದಿನ ಅವನತಕಿರೀಟರ್ ಅಭ್ಯರ್ಚಿಸಿದರ್: **ಅಜಿತಪು,** ೫. ೪)

**ಅಭ್ಯರ್ಚ್ಯ** – ಪೂಜಾರ್ಹವಾದ (ಅಮರ ಅಭ್ಯರ್ಚ್ಯಂಗಳ್ ಸುರವಿಮಾನಪರಿವೇಷ್ಟನ ಅಭಿರಾಮಂಗಳ್ .. .. ಚೈತ್ಯಾವಳಿಗಳ್: **ಶಾಂತಿಪು,** ೨. ೧೧೮)

**ಅಭ್ಯರ್ಣ** – ಸಮೀಪ (ಬಹುವಿಧ ವಾದ್ಯಸ್ವನಂ .. .. ಹೇಷಾಬೃಂಹಿತಂಗಳ್ .. .. ಭೋಂಕನೆ ಕಣ್ಯ ಅಭ್ಯರ್ಣಮಂ ಸಾರ್ತರೆ: **ಪಂಪರಾ,** ೧೩. ೨); ಪಕ್ಕ (ಅಹಿಮಕೃತ್ ಬಿಂಬಮನನುಕರಿಸಿ ನಿಜಾಂಬಿಕೆಯಭ್ಯರ್ಣದೊಳ್ ಜಿನಾರ್ಭಕನೆಸೆದಂ: **ಅಜಿತಪು,** ೪. ೪)

**ಅಭ್ಯರ್ಥನ** – ಪ್ರಾರ್ಥನೆ (ಸಕಲ ಪಾರ್ಥಿವಗುಣಸಂಚಯದ ಅಭ್ಯರ್ಚನದಿಂದ ಆಶ್ರಯರೂಪನಂ ಆ ಮಹೀಶನಂ ಬಿದಿ ಪಡೆದಂ: **ಚಂದ್ರಪ್ರಪು,** ೩. ೨೪)

**ಅಭ್ಯರ್ಹಿತ** – ಯೋಗ್ಯವಾದ, ಗೌರವಾರ್ಹ (ಅನೇಕ ಪರಿವ್ರಾಜಿಕಾಸಮಾಜಂ ಸುತ್ತುಂ ಓಲಗಿಸುತ್ತಿರಲ್ ಅಂತಃಪುರ ಅಭ್ಯರ್ಹಿತರೊಳ್ ಆದರಂ ಬೆರಸು ಸಂಭಾಷಿಸುತ್ತುಂ: **ಕಾದಂಸಂ,** ೫. ೬೫ ವ)

**ಅಭ್ಯವಹರಣ** – ಊಟ (ಉಣಿಸು ಅಭ್ಯವಹರಣಂ ಭಕ್ಷಣ ಅಶನಂ ಜಿಗ್ಧಿ ಜೇಮನಂ ಭುಕ್ತಿಸಮಂ: **ಅಭಿಧಾವ,** ೧. ೧೧೬. ೭)

**ಅಭ್ಯವಹಾರ** – ತಿನ್ನುವುದು, ಊಟ (ಆಚರಿತ ಅಭ್ಯವಹಾರನುಂ ಉದ್ಗೃಹೀತ ತಾಂಬೂಲಕರಂಕವಾಹಿನೀ ಸ್ಕಂಧವಿನ್ಯಸ್ತಹಸ್ತನುಂ ಆಗಿ: **ಕಾದಂಬ,** ೧. ೬೮ ವ)

**ಅಭ್ಯವಹೃತಿ** – ಊಟ (ಅಭ್ಯವಹೃತಿಯಂ ನಿವರ್ತಿಸಿ ಕೈಘಟ್ಟಿಯುಮಂ ತಾಂಬೂಲಮುಮಂ ಕೊಂಡು: **ಪಂಪರಾ,** ೭. ೪೭ ವ)

**ಅಭ್ಯಸನ** – ಅಭ್ಯಾಸ (ಭೂಷಾ ಅಭ್ಯಸನಚತುರ ಭಾಷಾವಿಶೇಃ ಕುಶಲೆಯರಪ್ಪ: **ಆದಿಪು,** ೨. ೬೫ ವ)

**ಅಭ್ಯಸ್ತ** – ಕಲಿಯಲಾದ (ಆ ಮಹಾಬಳಂ .. .. ಅಭ್ಯಸ್ತ ಸಮಸ್ತ ವಿದ್ಯಾಧರ ವಿದ್ಯಾಪಾರಗನುಂ: **ಆದಿಪು,** ೧. ೭೩ ವ)

**ಅಭ್ಯಾರೂಢ** – ಮೇಲೇರಿದವನು (ಖಾಂಚನಮಯ ವಿಮಾನ ಅಭ್ಯಾರೂಢಂ ಸುತಾರೆಯೊಳೋಪಳ್ ಮನದೆಱಕದಿಂ ಪೋದೆಂ: **ಶಾಂತಿಪು,** ೬. ೩೦)

**ಅಭ್ಯಾಗತ** – ಆತಿಥ್ಯ ಸ್ವೀಕರಿಸುವವನು (ನೀಂ ಅಭ್ಯಾಗತನಾಗಲೆವೇಟ್ಟು ಎಂದಾಗಳ್ ನೃಪಸುತನಂ ಅಟ್ಟಿಜೆಂ ಸತಿ ನುಡಿದಳ್: **ಕಾದಂಬ,** ೪. ೬೩)

**ಅಭ್ಯಾಗತಕ್ರಿಯೆ** – ಮನೆಗೆ ಬಂದು ಆತಿಥ್ಯ ಸ್ವೀಕರಿಸುವವನಿಗೆ ಮಾಡಬೇಕಾದ ಉಪಚಾರ (ಆ ಕಿರಾತಂ ಕಂಡು ಪೊಡೆವಟ್ಟು ಮನೆಗೆ ಒಡಗೊಂಡು ಉಯ್ದು ಶಿವಭೂತಿಗೆ ಅಭ್ಯಾಗತ ಕ್ರಿಯೆಯಂ ಮಾಡಲುಪಾಯಮಿಲ್ಲದೆ ಉಸಿರದಿರ್ಪನಂ ಕಂಡು: **ಪಂಚತಂತ್ರ,** ೧೮೩ ವ)

**ಅಭ್ಯಾಗತ ಪ್ರತಿಪತ್ತಿ** – ಅಭ್ಯಾಗತಕ್ರಿಯೆ (ಕೂರ್ಮಂಗೆ ಕೂರ್ಮೆ ಕೈಗಣ್ಮೆ ಕಾಗೆಗೆ ಅಭ್ಯಾಗತ ಪ್ರತಿಪತ್ತಿಯೆಲ್ಲಮಂ ನೆಱೆಯೆ ಮಾಡಿ: **ಪಂಚತಂತ್ರ,** ೪೩೧ ವ)

**ಅಭ್ಯಾಸನಿಕೇತನ** – ವ್ಯಾಸಂಗ ಕೋಣೆ (ಒಪ್ಪುವುವಲ್ಲಿ ಶಸ್ತ್ರಕುಟಿ ಕೋಶಾಗಾರಂ ಏಕಾಂತಮಂದಿರಂ ಅಭ್ಯಾಸನಿಕೇತನಂ ಪಚನಧಾಮಂ ಸ್ನಾನಸದ್ಮಂ ಮನೋಹರ ಶಯ್ಯಾವಸಥಂ ವಿಭೂಷಣಗೃಹಂ ದೇವಾರ್ಚನಾವಾಸಂ ಅಂಬರವೇಶ್ಮಂ ವರ ಭೋಜನೌಕಂ ಅವರೋಧಸ್ತ್ರೀನಿವಾಸಾಸ್ಪದಂ: **ಶಾಂತೀಶ್ವಪು,** ೧. ೧೩೭)

**ಅಭ್ಯುತ್ಥಾನ** – ನಿಂತು ಗೌರವಿಸುವುದು (ಇದಿರ್ವಂದು .. .. ಶಂಬ್ರಮ ಅಭ್ಯುತ್ಥಾನ ಸಂಸಮಾನ .. .. ಬೀಯಗನಂ ಅಟ್ಟಿಜೆಂ ತಟ್ಟೈಸಿ: **ಆಚವರ್ಧ,** ೫. ४೫ ವ)

**ಅಭ್ಯುದಯ** – ಉದಯ, ಏಳಿಗೆ (ಇದಂ ಇಂದ್ರನಟ್ಟಿದಂ ನಿನಗೆ ಇದಱ ಪೆರ್ ದೇವದತ್ತಮೆಂಬುದು ನಿನಗೆ ಅಭ್ಯುದಯಕರಂ ಶಂಖಂ ರಿಪುಹೃದಯಕವಾಟಪುಟ ವಿಘಟನಂ ನೋಡರಿಗಾ: **ಪಂಪಭಾ,** ೬. ೪)

**ಅಭ್ಯುಪಗಮ** – ಒಪ್ಪಿಗೆ (ಅಭ್ಯುಪಗಮ ಸಮಸ್ತತತ್ತ್ವಪ್ರಪಂಚಂ ಎಸೆದುದು ಜಿನೇಂದ್ರದಿವ್ಯಧ್ವಾನಂ: **ವರ್ಧಮಾಪು,** ೧೪. ೧೮)

**ಅಭ್ಯುಪಮೋಕ್ತಿ** – ಬಲ್ಲವರು ಒಪ್ಪುವ ಮಾತು (ಅಪರಿಮೇಯಮೆ ದೋಷಗುಣೌಘಂ ಇಂತು .. .. ಪೇಟ್ವೆಂ ಅಭ್ಯುಪಗಮೋಕ್ತಿ ಗುಣಾವಗುಣಂಘಳಂ: **ಕವಿರಾಮಾ,** ೧. ೧೪೨)

**ಅಭ್ರ** – ಆಕಾಶ (ವಸುಂಧರೆಗೆ ಅಭ್ರದತ್ತ ನೆಗೆಯಲ್ಕಿರೆ ಕಂಡಂ ಭರತಮಂತ್ರಿಮುಖ್ಯನುಮಾಗಳ್: **ಆದಿಪು,** ೧೬. ೪೪); ಮೋಡ (ಬೀಸುವುದು ತೆಂಕಣ ಗಾಳಿ ವನಾಫ್ರಲೇಖೆಯಿಂ: **ಲೀಲಾವತಿ,** ೬. ೧೧೦)

**ಅಭ್ರಂಕಷ** – ಆಕಾಶವನ್ನು ಉಜ್ಜುವ (ಅಭ್ರಂಕಷಶಿಖರಿ ಶಿಖರದುರ್ಲಂಘ್ಯಮಪ್ಪ ಗಿರಿದುರ್ಗದ ಪೆಂಪುಮಂ: **ಆದಿಪು,** ೧೩. ೫೭ ವ)

**ಅಭ್ರಕ** – ಕಾಗೆಬಂಗಾರ (ಪೊಳೆವ ರಜತ ಅಭ್ರಕದ್ಯುತಿಗಳಿಂ ಅಮೃತರಸ ಪ್ರವಾಹದಿಂದ ಅಭಿಷವಂ ಅಗ್ಗಳಿಸೆ: **ಕಾದಂಬ,** ೪. ४೫) ಮೋಡ (ಅಭ್ರಕಪಟಲಂಗಳ ಮಱೆಯೊಳಿರ್ದಳೆನೆ ಮೆಯ್ವೆಳಗಿಂ ನೆಱೆಯಲಾದುದಿಲ್ಲ ಅಂಗನೆಯಂ: **ಕಾದಂಬ,** ೪. ೩೭)

**ಅಭ್ರಕುಳ** – ಮೋಡಗಳ ಸಮೂಹ (ಧವಳ ಅಭ್ರಕುಳಂಗಳ ಬಳ್ಳವಳ್ಳಿ ಪೋಲ್ತೆಸೆದುದು ಖೇಚರೀಜನಕೆ ಮಾಡಿದ ಬೆಳ್ಳಿಯ ಬಳ್ಳಿಮಾಡಮಂ; **ಅಜಿತಪು,** ೯. ೧೩)

**ಅಭ್ರಗಂಗೆ** – ದೇವಗಂಗೆ (ಅಭ್ರಗಂಗಾಪ್ರವಾಹಂ ಪೊಱಪೊಣ್ಮುತ್ತಿರ್ದ ಜಹ್ನುವ್ರತಿಯ ಮಹಿಮೆಯಂ ತಾಳ್ದಿದಂ: **ಕಾದಂಬ,** ೧. ೧೯೫)

**ಅಭ್ರಗಜ** – ಆಕಾಶದಲ್ಲಿ ಸಂಚರಿಸುವ ಆನೆ, ಐರಾವತ (ಮೆಱೆವ ಧವಳಾರದೊಳ್ ಅಭ್ರಮುವೆರಸು ಅಭ್ರಗಜಂ ಸೆಜ್ಜರಕ್ಕೆ ಬಂದವೊಲೆಸೆಗುಂ: **ಯಶೋಧಚ,** ೨. ೨೧)

**ಅಭ್ರಗಮನೆ** – ಆಕಾಶದಲ್ಲಿ ಸಂಚರಿಸುವವಳು, ಖೇಚರಿ (ಅಭ್ರಗಮನೆ ಭಾಮಿನಿ ಬೆಂಕೊಳೆ ಪುಗುತಂದಂ .. .. ಸಭೆಯಂ: **ಶಾಂತಿಪು,** ೯. ೩)

**ಅಭ್ರಗರ್ಜಿತ** – ಅಭ್ರಗರ್ಜನೆ (ಅಭ್ರಗರ್ಜಿತಂ ಎಂಬಂತಿರೆ ಗರ್ಜಿಸುತ್ತುಂ: **ಪಂಪರಾ,** ೮. ೩೧)

**ಅಭ್ರಗಾಮಿ** – ಆಕಾಶದಲ್ಲಿ ಸಂಚರಿಸುವವನು (ಜಿನವಚಸ್ತಂಭಂ ನಂಬು ಅಗ್ರಗಾಮಿಶಿಖಾಮಣೀ: **ಶಾಂತಿಪು,** ೬. ೫೨)

**ಅಭ್ರಚ್ಛವಿ** – ಮೋಡದ ಬಣ್ಣದ ಮೈಯವನು (ಅಚ್ಛ ನವನೀತಪಟನಂ ಅಭ್ರಚ್ಛವಿ .. .. ಕಮಲಾಕ್ಷಂ: **ಜಗನ್ನಾವಿ,** ೩. ೭೯)

**ಅಭ್ರಜ** – ಮೋಡದಲ್ಲಿ ಹುಟ್ಟಿದ, ಗುಡುಗು (ಅಜಂ ಅಜಗರ ಗರದಿಂದ ಅಭ್ರಜಶಿಖಿರವದಿಂದೆ ಪುಲಿಯ ಕಾಯ್ಪಿಂ .. .. ಕುಜನ ಜನಮಂ ಸೃಜಿಸಿದಂ: **ರಾಜಶೇವಿ,** ೧. ೩೮)

**ಅಭ್ರಪಥ** – ಆಕಾಶಮಾರ್ಗ (ಅಭ್ರಪಥದತ್ತ ಲಂಘಿಸಲ್ಕೆ: **ಆದಿಪು,** ೧೬. ೪೫)

**ಅಭ್ರಮಾರ್ಗ** – ಅಭ್ರಪಥ (ಮಂದೈಸಿ ಪಾಯ್ದು ಸಾಯಕಸಂದೋಹದಿಂ ಅಭ್ರಮಾರ್ಗಂ ಕಾಣಲ್ ಬಂದುದು: **ಶಾಂತಿಪು,** ೪. ೧೪)

**ಅಭ್ರಮು** – ಐರಾವತದ ಹೆಂಡತಿಯ ಹೆಸರು (ಸುರದೀರ್ಘಿಕೆಯೊಳೆ ಕರಪುಷ್ಕರದಿಂದ ಅಭ್ರಮು ಅಭ್ರಮೂಪತಿ ತಳಿವಂತಿರೆ: **ಚಂದ್ರಪ್ರಪು,** ೭. ೧೨೯)

**ಅಭ್ರಮುವಲ್ಲಭ** – ಐರಾವತ (ಅಭ್ರಮುವಲ್ಲಭಕುಂಭದ ವಿಭ್ರಮಮಂ ಸೆಳೆದು ತಳೆದು ಮೆಱೆದುದು: **ರಾಜಶೇವಿ,** ೧೪. ೧೩೫)

**ಅಭ್ರವಜ್ರ** – ಸಿಡಿಲು (ಅಭ್ರವಜ್ರಾಭಿಘಾತಮಾದಂತೆ ಸಭಾಜನಮೆಲ್ಲಂ ಮೋಹಿಸೆ ಭೋಂಕೆನೆ ಮಹಾಕ್ರಂದನಮೊಗೆದುದು ಅಂತಃಪುರದೊಳ್: **ಅಜಿತಪು,** ೧೦. ೩೩)

**ಅಭ್ರಶ್ರವ** – ನಿಮಿರಿದ ಕಿವಿ (ಗೃಧ್ರಪಕ್ಷೋಚ್ಚಳಿತಾದಭ್ರಶ್ರವಂ ದುಂದುಭಿನಿಭನಿನದತ್ಕಂಧರಂ: **ನೇಮಿನಾಪು,** ೪. ೧೨೧)

**ಅಭ್ರಾಯನ** – ಆಕಾಶ (ಹರಿನೀಳೋರ್ವೀತಳ ಅಭ್ರಾಯನವಳಯಮದು ಅಂಘ್ರಿಸ್ಫುರತ್ಪಲ್ಲವಾಂಶೋತ್ಕರದಿಂ ಸಂಧ್ಯಾರುಣಂಬೆತ್ತವೊಲ್ ಎಸೆದಿರೆ: **ಶಾಂತೀಶ್ವಪು,** ೧೬. ೬೪)

**ಅಭ್ರೋರಗ** – ರಾಹು (ಉಪಪ್ಲವದೇಳ್ಗೆಯಾಯ್ತುಂ ಅಭ್ರೋರಗನಂದದಿಂ: **ತ್ರಿಷಷ್ಟಿಪು,** ೮. ೪೩)

**ಅಮಂದಧ್ವನಿ** – ಗಟ್ಟಿಯಾದ ಕೂಗು, ಗರ್ಜನೆ (ಅರಾತಿಗಜಘಟೆಗಳ್ .. .. ತನ್ನೊಂದು ಅಮಂದಧ್ವನಿಗೆ ಒಡ್ಡೊಡೆದೋಡುವುದಱಿಂ ವೈರಿಗಜಘಟಾವಿಘಟನಂ: **ಪಂಪಭಾ,** ೧೪. ೩೭ ವ)

**ಅಮಂದಸ್ಪಂದ** – ಬಲವಾಗಿ ಅದುರುವಿಕೆ (ವಿಜಯಲಕ್ಷ್ಮೀಲಲನಾ ವಕ್ಷೋಜಸ್ಪರ್ಶಮನಕ್ಕರಮಱೆಪಿದುದು ಪತಿಗೆ ಅಮಂದಸ್ಪಂದಂ: **ಆದಿಪು,** ೧೧. ೧೧)

**ಅಮತ್ರ** – ಪಾತ್ರೆ (ಆಂ ಧನ್ಯೆಂದಾದನ್ನೋಟ್ಟಿಂ ಭೂವರಂ ಪುತ್ರಂ ಅತುಲಜಯ ಅಮತ್ರರಂ ಹರ್ಷನೇತ್ರಂ: **ಶಾಂತೀಶ್ವಪು,** ೭. ೭೭); ತಟ್ಟೆ (ಪೊಂಬರಿಯಣಮಿದೆ ನಿಶಾಟ ಕೊಳ್ಳೆಂದು .. .. ಇಡೆ ಶಿಶುಪಾಲಶಿರಂಬೆರಸು ಅಂಬರತಳಕ್ಕೆ ನೆಗೆದುದು ಅಮತ್ರಂ: **ಜಗನ್ನಾವಿ,** ೧೭. ೫೩)

**ಅಮರ್** – ಒಪ್ಪು (ಜಿನಪತಿಪದಪಂಕಜಮನೆ ಮನದೊಳ್ ಬಗೆದಮರೆ ಮುಗಿದ ಕೈವೆರಸು ಸುರಾಂಗನೆಯರ್: **ಆದಿಪು,** ೬. ೨೦); ಸಂಭವಿಸು, ಉಂಟಾಗು (ಕಪೋಳದೊಳ್ ಕೋಪಂ ಪುರ್ಬಿನೊಳ್ ಅೞಿವು ಬುದ್ಧಿಯೊಳ್ ಭಾವನೆ ಚಿತ್ತದೊಳ್ ಅಮರ್ದುವು ಅಂಬಿಕೆಗೆ ಯೌವನದೊಳ್: **ಗಿರಿಜಾಕ,** ೪. ೧೪); ಸೇರು (ಪಿಂದೆ ಕಡಂಗಿ ತೇರಂ ಎಸಗು ಎಂಬವಂ ಅಂಬಿಗಂ ಆಜಿರಂಗದೊಳ್ ಮುಂದೆ ಸಮಾನನಾಗಿ ಬೆಸೆದೆ ಇರ್ಪವನುಂ ತುಱುಕಾಱನಾಗೆ ಮತ್ ಸ್ಯಂದನಚೋದನಕ್ರಮಮದುಂ ಪೊಲೆಯಂಗೆ ಅಮರ್ದು ಇರ್ಕುಂ: **ಪಂಪಭಾ,** ೧೨. ೯೪)

**ಅಮರ** – ದೇವತೆ (ಅಮರರ್ ಸುಪರ್ವರ್ ಅನಿಮಿಷರ್: **ಅಭಿಧಾವ,** ೧. ೧. ೩೧)

**ಅಮರಕರಿ** – ಐರಾವತ (ದಿಗಿಭದೊಳ್ ಅಮರಕರಿ ದಾನಿಗಳೊಳ್ ಅಗ್ಗಳದ ದಾನಚಿಂತಾಮಣಿ ಚಕ್ರಿಗಳೊಳ್ ಆಹವಮಲ್ಲಂ ಮಿಗಿಲೆನಿಕುಂ: **ಅಜಿತಪು,** ೧. ೨೦)

**ಅಮರಗಜ** – ಐರಾವತ (ಅಮರರಾಜನೊಡನೊಡನೆ ಮಹೋತ್ಸವದಿಂ ತಾಳಲಯಕ್ರಮಕೆ ವಿಚಿತ್ರಂ ಮೆಟ್ಟಿಸುತಿರ್ದುದು ಅರಗಜೇಂದ್ರಂ: **ಅಜಿತಪು,** ೫. ೩೬)

**ಅಮರಗಿರಿ** – ಮೇರುಗಿರಿ (ಪವಿತ್ರಮಾದ ಅಮರಗಿರೀಂದ್ರಕ್ಕೆ ನಡೆಯಿಮೆಂದು: **ಶಾಂತಿಪು,** ೧೦. ೨೬ ವ)

**ಅಮರಗುರು** – ಬೃಹಸ್ಪತಿ, ಗುರು ಗ್ರಹ (ಚಂದ್ರ ಕುಜ ಬುಧ ಅಮರಗುರು ದೈತ್ಯಾರಾಧ್ಯಮಂದಫಣಿಗಳಂ ಆರಾಧಿಪಂ ಒಂದು ಮಣೆಗೆ ತಂದನಿಬರುಮಂ: **ಸಮಯಪ,** ೮. ೧೬೩)

**ಅಮರಧನು** – ಕಾಮನ ಬಿಲ್ಲು (ಅಮರಧನುರ್ದೋತಿಯಂ ಪಂಚರತ್ನಚ್ಛವಿಯಂಕೀಟ್ಮಾಟ್ಟಿ .. .. ತುರಂಗಂ: **ಪುಷ್ಪದಂಪು,** ೫. ೧೦)

**ಅಮರನಗರಿ** – ಅಮರಾವತಿ (ಅಂತು ಚತುರ್ನಿಕಾಯ ಅಮರಜನಂಬೆರಸು ಅಮರರಾಜಂ ಅಮರನಗರಿಗೆ ಪೋದಂ: **ಅಜಿತಪು,** ೫. ೬೦ ವ)

**ಅಮರನಗೇಂದ್ರ** – ಮೇರುಗಿರಿ (ನೆಗೞ್ದ ಅಮರನಗೇಂದ್ರಮಂ ಆ ದಿಗಿಭೇಂದ್ರಂ ಪೊರ್ದಿದಲ್ಲಿ: **ಅಜಿತಪು,** ೪. ೨೬)

**ಅಮರನದಿ** – ದೇವಗಂಗೆ (ಪ್ರೋದ್ಯತ್ ತರಂಗೋಚ್ಚರತ್ ಅಮರನದೀ ಶೀಕರೋದಾರ ತಾರಾರಾಮಂ: **ಕಾದಂಬ,** ೧. ೧)

**ಅಮರಪಟಹ** – ದೇವದುಂದುಭಿ (ಸುರಿದುದು ನಮೇರು ಕುಸುಮದ ಸರಿ ಮೊೞಗಿದುದು ಅಮರಪಟಹಂ: **ಪುಷ್ಪದಂಪು,** ೧೪. ೪೧)

**ಅಮರಪ್ರಭುಮಂತ್ರಿ** – ದೇವೇಂದ್ರನ ಮಂತ್ರಿ, ಬೃಹಸ್ಪತಿ (ಅಭಿಭವಿಸಿದಂ ಉತ್ಸಾಹಪ್ರಭುಶಕ್ತಿಸಮೇತವೆನಿಪ ಶುಕ್ರನಂ ಅಮರಪ್ರಭುಮಂತ್ರಿ: **ಪಂಚತಂತ್ರ,** ೨೯೦)

**ಅಮರಮಹತ್ತರಿಕಾ[ಕೆ] –** ದೇವಸೇವಕಿ (ಅಂತು ಕುಮಾರಂ ಕುಮಾರಕಾಲದೊಳ್ ಅಮರಮಹತ್ತರಿಕಾ ವಿರಚಿತ ಮಜ್ಜನ ಭೋಜನಾದಿ ಭೋಗೋಪಭೋಗಮಂ ಅಪ್ಪುಕೆಯ್ದು: **ಮಲ್ಲಿನಾಪು,** ೧೩. ೬೦ ವ)

**ಅಮರರ ದಂತಿ –** ದೇವತೆಗಳ ಆನೆ, ಐರಾವತ (ಅಮರರ ದಂತಿ ನಿರ್ಜವಿಸೆಯುಂ ಶಚಿ ನೀಡೆಯುಂ ಇಂದ್ರಂ ಆಂತು ಸಂಭ್ರಮಮನನಾಗಿ ಬಾಗಿ ಕೊಳೆಯುಂ .. .. ಆದುದು ಜನ್ಮದೊಳ್ ಇಂದ್ರವಂದ್ಯನಾ: **ಶಾಂತಿಪು,** ೧೦. ೧೨)

**ಅಮರರಾಜೋರ್ವಿಜ –** ಕಲ್ಪವೃಕ್ಷ (ಅಮರರಾಜೋರ್ವಿಜ ರಾಜತ್ಕುಸುಮವಿಸರ ನೀಹಾರ ನೀರೇಜ .. .. ವಿತತಯಶಸ್ಕಾಂತಂ ಶಾಂತಿವರ್ಮಂ: **ಪುಷ್ಪದಂಪು,** ೧. ೮೧)

**ಅಮರಲಂಜಿಕೆ –** ದೇವತಾಸ್ತ್ರೀ (ತಡದಡವಾರದೆ ಗತಿಯೊಳ್ ತೊಡರದೆ ರಂಜಿಸಿದರ್ ಅಮರಲಂಜಿಕೆಯರ್ ಜಾಣ್ಗಿಡಿದಾಡಿ ಮೊದಲ ತಾಣದೊಳ್ ಎಡೆಯೊತ್ತಿನೊಳೆಸೆವ ಕಡೆಯ ತಾಳದ ಯತಿಯೊಳ್: **ಅಜಿತಪು,** ೫. ೪೧)

**ಅಮರವಾಹಿನಿ –** ದೇವಸೈನ್ಯ (ಅಂತು ನಭೋಯಾನದಿಂ ಅಮರವಾಹಿನಿ ಬರೆ: **ಶಾಂತಿಪು,** ೧೦. ೨೧ ವ)

**ಅಮರಸಂಹತಿ –** ದೇವತೆಗಳ ಸಮೂಹ (ಕೊಡಂಬೆರಸು ಆಳಿಗಟ್ಟಿ ಭೋರ್ ಭೋರೆನೆ ಪೋಪ ಬರ್ಪ ಅಮರಸಂಹತಿ ಪೋಲ್ತುದು ಮಂದರಾದ್ರಿಗಂ ಕ್ಷೀರಪಯೋಧಿಗಂ ಹರಿಯ ಕಟ್ಟಿದ ಜಂಗಮಸೇತುಬಂಧಮಂ: **ಶಾಂತಿಪು,** ೧೦. ೪೫)

**ಅಮರಸಿಂಧೂದ್ಭವ –** ಭೀಷ್ಮ (ಅತ್ಯುನ್ನತಿಯೊಳ್ ಅಮರಸಿಂಧೂದ್ಭವಂ: **ಪಂಪಭಾ,** ೧೪. ೬೪)

**ಅಮರಸುತ –** ದೇವಪುತ್ರ, ಅರ್ಜುನ (ಅಂತು ನೋಡಿ ಮುಂ ತನ್ನಂ ಸಮರದೊಳ್ ಪಿಡಿದ ಅಮರಸುತನಪ್ಪುದಂ ನೆಟ್ಟನಱಿದು: **ಕರ್ಣನೇಮಿ,** ೧೧. ೧೦೫ ವ)

**ಅಮರಾಧ್ವ –** ದೇವತೆಗಳ ಮಾರ್ಗ, ಆಕಾಶ (ರಮಣೀಯವಾದುವು ಅಮರಾಧ್ವದೊಳ್ ಎಲ್ಲೆಡೆಯಲ್ಲಿ ತಾರೆಗಳ್: **ರಾಜಶೇವಿ,** ೧೧. ೪೧)

**ಅಮರಾಪಗಾನಂದನ –** ದೇವಗಂಗೆಯ ಮಗ, ಭೀಷ್ಮ (ನಿನ್ನಂ ಆನಿನಿತಂ ಕೈಯೊಡ್ಡಿ ಭೆಡಿದಪೆಂ ಎಂದ ಸತ್ಯವತಿಗೆ ಅಮರಾಪಗಾನಂದನಂ ಇಂತೆಂದಂ: **ಪಂಪಭಾ,** ೧. ೮೧ ವ)

**ಅಮರಾಪಗೆ –** ದೇವಗಂಗೆ (ಹಿಮಶೈಳಾಗ್ರದಿಂ ಇೞಿತಂದು ಅಮರಾಪಗೆ ಕೆಟಗೆ ನಿಂದ ಜಿನಬಿಂಬದ ಮೇಲಮರ್ದಿರೆ .. .. ಪಾವನಮಾಯ್ತು: **ಸಮಯಪ,** ೨. ೫೩)

**ಅಮರಾವತಿ –** ದೇವಲೋಕದ ರಾಜಧಾನಿ (ಶತಸಪ್ತತಂತುಗೆ ಅಮರಾವತಿಯಂ ಫಣಿಪತಿಗೆ ನೆಗಟ್ದಿ ಭೋಗಾವತಿಯಂ ಮತಿಗೆಟ್ಟು ಜಡರ್ ಬಣ್ಣಿಸುವ ತೆಱದಿ ಬಣ್ಣಿಪೆಮೆ ನಿನಗೆ ಮುಕ್ತಿಯ ಸುಖಮಂ: **ಅಜಿತಪು,** ೬. ೮೦)

**ಅಮರೇಂದ್ರ –** ದೇವೇಂದ್ರ (ಅಮರೇಂದ್ರಪುತ್ರನಂ ಕರೆವವೊಲಾದುದು ಪುರದ ವಾತವಿಧೂತ ವಿನೂತಕೇತುಗಳ್: **ಪಂಪಭಾ,** ೪. ೩೪)

**ಅಮರೇಂದ್ರಗಣಿಕೆ –** ಅಪ್ಸರಸ್ತ್ರೀ (ಸ್ನಾನಾರ್ಥಂ ಒಂದು ಕಳಶಮಂ ನಿಯಮನಿಧಾನಂ ಎೞಲೆ ಪಿಡಿದು ಅಮಳಿನ ಗಂಗಾನದಿಗೆ ವಂದು ಸುರತನಿಧಾನಿ ಅಮರೇಂದ್ರಗಣಿಕೆಯಂ ಮುನಿ ಕಂಡಂ: **ಪಂಪಭಾ,** ೨. ೪೧)

**ಅಮರೇಂದ್ರಪುತ್ರ –** ದೇವೇಂದ್ರನ ಮಗ, ಅರ್ಜುನ (ಅಮರೇಂದ್ರಪುತ್ರನಂ ಕರೆವವೊಲಾದುದು ಪುರದ ವಾತವಿಧೂತವಿನೂತಕೇತುಗಳ್: **ಪಂಪಭಾ,** ೪. ೩೪)

**ಅಮರೇಭ –** [ಅಮರ+ಇಭ] ಐರಾವತ (ಸುಪ್ರತೀಕಂ ಉಜ್ಜ್ವಲತರ ಪುಷ್ಪದಂತಂ ಅಮರೇಭಗತಂ: **ಅಜಿತಪು,** ೬. ೬೪)

**ಅಮರ್ಕೆ –** ಬೆಸುಗೆ (ಬಿಗಿದಮರ್ದಪ್ಪುವಪ್ಪುಗಳ್ ಅಮರ್ಕೆಗಳೊಯ್ಯನೆ ಸುಯ್ವ ಸುಯ್ಯ ಗಾಳಿಗಳೊಳಮ್: **ಆದಿಪು,** ೧೨. ೩೭); ಬಲವಾಗಿ ಸೇರಿಸುವುದು, ಜೋಡಣೆ (ರಸದೊಳ್ ಅಮರ್ಕೆ ಬಿನ್ನಣದೊಳ್ ಒಟ್ಟಜೆ ಮಾತಿನ ರೀತಿಯೊಳ್ ಚಲಂ .. .. ಎಸೆದಿರೆ ಪೇೞ್ದು ರಂಜಿಸದೆ: **ಸುಕುಮಾಚ,** ೧. ೪೪)

**ಅಮರ್ಕೆವೆಱು –** ಜೊತೆಯಾಗು (ತಂದೆಯೊಂದಂದಮೆ ತಂದೆಯೊಂದು ನುಡಿಯೋಜೆಯೆ ತನ್ನೊಳ್ ಅಮರ್ಕೆವೆತ್ತುದಾನಂದಕರಂ: **ಆದಿಪು,** ೮. ೪೪)

**ಅಮರ್ಚು –** ಸೇರಿಸು (ಪಲವುಂ ತೆಱದ ಪಲವುಂ ಪೊಱೆಯಾಗಿ ಕಟ್ಟಿದ ಬಲೆಗಳುಮಂ ಪಡಿಗಳಂ ಅಮರ್ಚಿ: **ಪಂಪಭಾ,** ೫. ೪೭ ವ); ಸಿದ್ಧಪಡಿಸು (ಗಂಧರಜಃಪೂರ್ಣಮನಂದು ಅರ್ಘ್ಯಮಂ ಅಮರ್ಚುತ್ತಂ .. .. ಮಾಡಿದರ್ ದ್ವಿಜವರಂಗೆ ಆತಿಥ್ಯಸತ್ಕಾರಮಂ: **ರಾಜಶೇವಿ,** ೬. ೧೦); ಜೋಡಿಸು (ಪಲತೆಱದ ನಳನಳಿಸಿ ಬೆಳೆದ ಎಳವಾೞೆಯ ಸುೞಿಯೆಲೆಯಂ ಉಡಿಯೊಳ್ ಅಮರ್ಚಿಯುಂ: **ಕಬ್ಬಿಗಕಾ,** ೯೮ ವ)

**ಅಮರ್ತ್ಯ –** ದೇವತೆ (ನಾಗಾರಿಕೇತು ಕಾಳಿಯ ನಾಗಂಗೆಱಗಿದಂ ಅಮರ್ತ್ಯರ್ ಈಕ್ಷಿಸೆ ನಭದೊಳ್: **ಜಗನ್ನಾವಿ,** ३. ೮೩)

**ಅಮರ್ದಪ್ಪು –** ಗಾಢವಾಗಿ ಅಪ್ಪಿಕೊ (ನುಡಿವ ನಡೆನೋಡುವಾಡುವ ಪೊಡೆವಡುವ ಅಮರ್ದಪ್ಪಿಕೊಳ್ವ ತಮ್ಮಿನಿಯರ: **ಆದಿಪು,** ೪. ३೨)

**ಅಮರ್ದಿರ್ –** ಒಪ್ಪುತ್ತಿರು (ಹಿಮಶೈಳಾಗ್ರದಿಂ ಇೞಿತಂದು ಅಮರಾಪಗೆ ಕೆಟಗೆ ನಿಂದ ಜಿನಬಿಂಬದ ಮೇಲಮರ್ದಿರೆ .. .. ಪಾವನಮಾಯ್ತು: **ಸಮಯಪ,** ೨. ೫೩)

**ಅಮರ್ದು –** [ಅಮೃತ] ಪೀಯೂಷ (ಅಮರ್ದಿನ ಸವಿಯೊಳಗೀಸವಿ ಸಮನೆನೆ: **ಆದಿಪು,** ೫. ३೯)

**ಅಮರ್ದುಗಡಲು –** ಹಾಲಿನ ಸಮುದ್ರ, ಕ್ಷೀರಸಮುದ್ರ (ಮುನ್ನುದಿಸಿದ ಅಮರ್ದುಗಡಲಂ ಸನ್ನುತದೊಳ್ ಮಗುಳೆ ನೋಡಲೆಯ್ದುವ ಸಿರಿವೋಲ್: **ಕುಸುಮಾಕಾ,** ೧೫. ೧೮)

**ಅಮರ್ದುಗೆಯ್ಯ –** [ಅಮೃತಕರ] ಚಂದ್ರ (ಅಮರ್ದುಗೆಯ್ಯನ ಪುತ್ತಂ ಮಿಗಮನದಂ ಪುಲಿ ಪೊಯ್ಯಲ್ ಬಗೆವುದು ತಾನೆಂದೊಡೆ ಅದ್ರಿಯೇನುನ್ನತಮೋ: **ಶಬರಶಂ,** ೨. ३೪)

**ಅಮರ್ದುವಳ್ಳಿ –** ಅಮೃತಬಳ್ಳಿ (ಸುಂಟಿಯುಂ ಅಮರ್ದುವಳ್ಳಿಯುಂ ಪುಷ್ಕರಮೂಲಮುಂ ಬರಿವದನೆಯುಂ ಜ್ವರದ ಕೇಡು: **ಧರ್ಮಾಮೃ,** ೯. ೭३ ವ)

**ಅಮರ್ಷಣ –** ಕೋಪಿಷ್ಠ (ಗೌರೀತನೂಜೆಯಪ್ಪ ಮಹಾಶ್ವೇತೆಯಿಂ ಸ್ವಯಂವೃತನಾದನಪ್ಪುದರಿಂದ ಅಪಗತ ಅಮರ್ಷಣನಾಗಿ: ೭. **ಕಾದಂಸಂ,** ೪೫ ವ)

**ಅಮಳ್ –** ಜೋಡಿ, ಅವಳಿಮಕ್ಕಳು (ಬಳೆದುವು ತೋಳ್ಗಳ್ ಎಕ್ಕೆಯಿಂ ಅಮಳ್ ಬಳೆವಂತಿರೆ ಮುಯ್ವುಗಳ್ ಕುಳಾಚಳ

ಶಿಖರಂಗಳಂ ಮಸುಳೆವಂದುವು ಪರ್ವಿದ ವಕ್ಷಮೀ ಕ್ಷಮಾತಳ ಕುಳಲಕ್ಷ್ಮಿಗಾಯ್ತು ಕುಳಮಂದಿರಂ: **ಪಂಪಭಾ,** ೨. ೩೭)

**ಅಮಳಂ** – ಜೊತೆ (ಸೊಡರೊಳ್ ಬತ್ತಿಯುಂ ಎಣ್ಣೆಯುಂ ಒಡನಟಿದವೊಲ್ ಆಯುವುಂ ಶರೀರಮುಂ ಅಮಳಂ: **ಶಾಂತಿಪು,** ೯. ೧೧೮)

**ಅಮಳದೃಷ್ಟಿ** – ನಿರ್ಮಲಜ್ಞಾನ (ಪರೆವುದು ದುರಿತತಮಿಸ್ರಂ ಪೊರೆಯಾಎಱುವುದು ಅಮಳದೃಷ್ಟಿ .. .. ಯಶೋಧರಚರಿತ ಕಥಾಶ್ರವಣಮೆಂಬ ಚಂದ್ರೋದಯದೊಳ್: **ಯಶೋಧಚ,** ೧. ೨೬)

**ಅಮಳಸ್ವಾಂತ** – ಪರಿಶುದ್ಧ ಮನಸ್ಸಿನವನು (ರಾಜನೀತಿವಿದಂ ವಿದ್ವದಮರ್ತ್ಯರತ್ನಂ ಅಮಳಸ್ವಾಂತಂ .. .. ಸಮದರ್ಶಿ: **ರಾಜಶೇವಿ,** ೩. ೨೨)

**ಅಮಳರ್** – ಅವಳಿಗಳು (ಆಹ್ವಾನಂಗೆಯ್ದಿಶ್ವಿನಿದೇರಂ ಅವರಿತ್ತ ವರದೊಳವರ ವಂಶಮೆ ಸಂಭಾವಿಸೆ ಗರ್ಭದೊಳ್ ಅಮಳರನಾ ವನಜದಳಾಕ್ಷಿ ಪಡೆದು ಸಂತತಿವೆತ್ತಳ್: **ಪಂಪಭಾ,** ೨. ೩)

**ಅಮಳಿನ** – ನಿರ್ಮಲವಾದ (ಒಗೆದರ್ ಅಮಳ ಎನಿಪ ಅಮಳರ್ ತಾಮಲ್ಲಿ ಕನಕಚಂದ್ರ ಮಹಾಮುನಿಯುಂ ಮಾಧವೇಂದ್ರಯತಿಪುಂಗವನುಂ: **ಅನಂತಪು,** ೧. ೧೯)

**ಅಮಳ್ಗಂಬ** – ಜೋಡಿ ಕಂಬ (ನೀಳ್ದ ತಫಲ್ ಮೆಱೆವುದು ಪೆರುರದೊಳ್ ನೆಲಸಿದ ಲಕ್ಷ್ಮೀಕರಿಣಿಗೆ ಬಾಳಿಸಿದ ರನ್ನದ ಅಮಳ್ಗಂಬದವೋಲ್: **ಯಶೋಧಚ,** ೨. ೮)

**ಅಮಳ್ಗಳ್** – ಅವಳಿಜವಳಿ (ನಾಲ್ವತ್ತೊಂಬತ್ತು ಅಮಳ್ಗಳ್ ಪುಟ್ಟಿದವು ಗುಣದಮಳ್ ಪುಟ್ಟಿದವೋಲ್; **ಆದಿಪು,** ೪. ೭೨)

**ಅಮಳಿನ** – ಪರಿಶುದ್ಧ, ಪವಿತ್ರ (ಸ್ನಾನಾರ್ಥಂ ಒಂದು ಕಳಶಮಂ ನಿಯಮನಿಧಾನಂ ಎಟಲೆ ಪಿಡಿದು ಅಮಳಿನ ಗಂಗಾನದಿಗೆ ವಂದು ಸುರತನಿಧಾನಿ ಅಮರೇಂದ್ರಗಣಿಕೆಯಂ ಮುನಿ ಕಂಡಂ: **ಪಂಪಭಾ,** ೨. ೪೧)

**ಅಮಳಿನಚರಿತ** – ಪರಿಶುದ್ಧ ನಡತೆಯವನು (ತಘೋಂಬುನಿಧಿ ಭುವನಾತಪದ ಕನಕಕಮಳಂ ಅಮಳಿನಚರಿತಂ: ಶಾಂತಿಪು, ೧. ೧೭)

**ಅಮಳ್ಗಳ್** – [ಯಮಲ] ಅವಳಿಜವಳಿ (ಅಮಳ್ಗಳಿವರೆಂಬಿನಂ ತಮಗೆ ಅಮಳ್ವೆಸರಮರ್ದಿಸೆಯೆ ತಾಯ ತಂದೆಯ ಚಿತ್ತಕ್ಕಮರ್ದಿನ ಮಱೆಯಂ ಕಱೆದರ್: **ಪಂಪರಾ,** ೩. ೧೪೪)

**ಅಮಳ್ವಕ್ಕಿ** – ಚಕ್ರವಾಕ (ಅರಗಿಳಿವಿಂಡು ವಾರುವದ ಮೋಹರ ಆಱಿಡಿವಿಂಡು ಬೀರರ ಪಡೆ ಕೊಂಚೆವಿಂಡು ಪಲವಡ್ಡಣದೊಡ್ಡು ಅಮಳ್ವಕ್ಕಿವಿಂಡು ಮೆಯ್ವೆರಸುವ ಕೊಂತಗಾಱರ್: **ಕಬ್ಬಿಗಕಾ,** ೧೫೭)

**ಅಮಳ್ವಡಿಗೀಱು** – ಜೋಡಿಕದಗಳನ್ನು ಮುಚ್ಚು (ಅಮಳ್ವಡಿಗೀಱುವಂತೆ ಕಾವಡಿಗಾ ಱನಂತೆ ಪಲ್ಲಂ ಸುಲಿವರಂತೆ ಮುನ್ನಿನ ದರ್ಶನಂ ನಿಶ್ಶಂಕೆಯೆಂಬೆರಡುಮಂ ಲೇಸು ಮಾಡುವುದು: **ಧರ್ಮಾಮೃ,** ೨. ೨ ವ)

**ಅಮಳ್ವಾಸು** – ಜೊಡಿ ಹಾಸಿಗೆ (ಅಲ್ಲಿಯುಪಪಾದ ಭವನದಮಳ್ವಾಸಿನೆಡೆಯೊಳ್ ಸಹಜಯೌವನರುಂ .. .. ಆಗಿ ಪುಟ್ಟುವರ್ ಅವರ್ಗೆ: **ಚಂದ್ರಪ್ರಪು,** ೩. ೩೨ ವ)

**ಅಮಳ್ವೆಸರ್** – ಜೋಡಿ ಹೆಸರು (ನಕುಲ ಸಹದೇವರೆಂದು ಅವರ್ಗೆ ಅಮಳ್ವೆಸರಂ ಇಟ್ಟು: **ಪಂಪಭಾ,** ೨. ೩ ವ)

**ಅಮಳ್ವೆಱು** – ಅವಳಿಯನ್ನು ಹೆತ್ತವರು (ಅಮಳ್ವೆತ್ರಂತೆ ಕಾಡಿಗೆಯೆಚ್ಚುಯವರಂತೆ .. .. ಮುನ್ನಿನ ದರ್ಶನಂ ನಿಶ್ಶಂಕೆಯೆಂಬೆರಡುಮಂ ಲೇಸು ಮಾಡುವುದು: **ಧರ್ಮಾಮೃ,** ೨. ೨ ವ)

**ಅಮಾತ್ಯ** – ಮಂತ್ರಿ (ಕರ್ಮಸಚಿವನಕ್ಕುಂ ಅಮಾತ್ಯಂ: **ಅಭಿಧಾವ,** ೧. ೧೧. ೫೦)

**ಅಮಾನಿತ** – ಹೊರಟುಹೋದ (ಅಮಾನಿತಹರ್ಷೋತ್ಕರ್ಷೆಯಾಗಿರ್ದ ತನ್ನನ್ವಯ ರಾಜಧಾನಿಯಂ .. .. ಎಯ್ದೆವಂದು: ಶಾಂತಿಪು, ೧. ೯೩ ವ)

**ಅಮಾನುಷ** – ಮನುಷ್ಯರಿಗೆ ಸಹಜವಲ್ಲದ, ದೈವಿಕ (ವೃಷಕೃತ ಜಿನೇಂದ್ರ ಜನ್ಮಾಭಿಷವಂ ನಂದೀಶ್ವರತ್ರಯಂಗಳೊಳ್ ಅಮಾನುಷಮಾಗಿರೆ ಮಾಟ್ಟಿ ಮಹಾಭಿಷೇಕದಂತಾಯ್ತು ದಾನಚಿಂತಾಮಣಿಯಾ: **ಅಜಿತಪು,** ೪. ೭೬)

**ಅಮಾನುಷಚರಿತ್ರ** – ಮನುಷ್ಯಸಹಜತೆಗೆ ಮೀರಿದ ನಡತೆ (ಕೃಷ್ಣನಟ್ಟೆಯೆ ಕೂಸಾಟದೆ ಕಿಟ್ಟಿಂ ಅಮಾನುಷಚರಿತ್ರಂ: **ಜಗನ್ನಾವಿ,** ೩. ೯೦)

**ಅಮಿತಾಳಾಪ** – ಮಿತವಲ್ಲದ ಮಾತು (ಅಮಿತಾಳಾಪಂಗಳಿಂ ಮೊಮ್ಮಳಿಸಿ ಕಿನಿಸಿ ಕೊಟ್ಟೊಳ್ವ ತಾತ್ಪರ್ಯಮೇನ್: **ಸುಕುಮಾಚ,** ೭. ೪೦)

**ಅಮುಂಕು** – ಅದುಮು, ಹಿಸುಕು (ಯಮುನಾನದೀತರಂಗಂ ಅಮುಂಕಿ ವನಲತೆಯ ಮನೆಗಳಂ ಸೋಂಕಿ ವನಭ್ರಮಣಪರಿಶ್ರಮಂ ಮುನ್ನಮೆ ಕಳೆದುದು ಬಂದು ಅದೊಂದು ಮಂದಶ್ವಸನಂ: **ಪಂಪಭಾ,** ೫. ೫೩)

**ಅಮೂಢದೃಷ್ಟಿತ್ವ** – [ಜೈನ] ಸಮ್ಯಗ್ದರ್ಶನದ ಎಂಟು ಅಂಗಗಳ್ಲಿ ಒಂದಾದ ಅಮೂಢದೃಷ್ಟಿಯನ್ನು ಹೊಂದಿರುವುದು (ಮರಕ್ಕೆ ಶಾಖೆಯುಮೆಂತಂತೆ ನಿಶ್ಶಂಕೆಯುಂ ನಿಷ್ಕಾಂಕ್ಷೆಯುಂ ನಿರ್ವಿಚಿಕಿತ್ಸೆಯುಂ ಅಮೂಢದೃಷ್ಟಿತ್ವಮುಂ ಉಪಗೂಹನಮುಂ ಸ್ಥಿತಿಕರಣಮುಂ ವಾತ್ಸಲ್ಯಮುಂ ಧರ್ಮಪ್ರಭಾವನೆಯುಂ ಎಂದು ಎಸೆವ ಅಂಗಂ ಎಂಟರಿಂ: **ಧರ್ಮಾಮೃ,** ೧. ೭೨ ವ ಮತ್ತು ೭೩)

**ಅಮೂರ್ತ** – ರೂಪರಹಿತ, ದೇಹವಿಲ್ಲದ್ದು (ಜೀವಾಜೀವ ದ್ರವ್ಯ ಪರಾವರ್ತನ ಹೇತು ವರ್ತನಾ ಲಕ್ಷಣಸದ್ಭಾವಂ ನಿತ್ಯಂ ಅಮೂರ್ತಂ ಕೇವಲ ಗಮ್ಯಂ ಸದಾನುಮೇಯಂ ಕಾಲಂ: **ಪಂಪರಾ,** ೧. ೪೬)

**ಅಮೂಲ್ಯತ್ವ** – ಬೆಲೆಯಿಲ್ಲದಿರುವಿಕೆ, ಬೆಲೆಗಟ್ಟಲಾಗದ ಸ್ಥಿತಿ (ಆಂ ಪೇಟ್ದಿಚಂದ್ರಪ್ರಭೋದಯ ವಿಸ್ತಾರಿಯೆನಿಪ್ಪ ಕಾವ್ಯಂ ಇದು ಅಮೂಲ್ಯತ್ವಕ್ಕೆ ಪಕ್ಕಾಗದೇ: **ಚಂದ್ರಪ್ರಪು,** ೧. ೬೫)

**ಅಮೃತ** – ಹಾಲು, ನೀರು (ಅಂಚೆಗಳ ಬಾಯ್ಗಳಿಂ ಒಕ್ಕ ಅಮೃತಂಗಳಂ ತುಡುಂಕುತೆ ಮಿಗೆ ನುಂಗುವ ಅಂಬುಚರದಿಂ: **ಶಬರಶಂ,** ೧. ೩೩)

**ಅಮೃತಕರ** – ಚಂದ್ರ (ಪೊಸ ಅಮೃತಕರನ ಕಿರಣದ ಬೆಳವಿಗೆ: **ಪುಷ್ಪದಂಪು,** ೮. ೬೯)

**ಅಮೃತಕಿರಣ** – ಚಂದ್ರ (ಶ್ರೀಮತ್ ಚಳುಕ್ಯವಂಶವ್ಯೋಮ ಅಮೃತಕಿರಣವೆನಿಪ ಕಾಂತಿಯನೊಳಕೊಂಡೀ ಮಹಿಯೊಳಾತ್ಮವಂಂಶಶಿಖಾಮಣಿ ಜಸಮೆಸೆಯೆ ಯುದ್ಧಮಲ್ಲಂ ನೆಗಟ್ದಂ: **ಪಂಪಭಾ,** ೧. ೧೫)

**ಅಮೃತಗರ್ಭ** – ಒಂದು ಬಗೆಯ ತುಪ್ಪ (ಅಮೃತಗರ್ಭಂಗಳೆಂಬ ಸದ್ಯೋಘೃತಮುಂ: **ಆದಿಪು,** ೧೫. ೩ ವ)

**ಅಮೃತಜಳಧಿ** – ಹಾಲ್ಗಡಲು (ಅನ್ನೆಗಮತ್ತಲ್ ಅಮೃತಜಳಧಿವೇಳೆಯಿಂ ಪೊಱಮಡುವ ಶೇಷನಂತೆ: **ಮಲ್ಲಿನಾಪು,** ೮. ೧೧೩ ವ)

**ಅಮೃತದ್ಯುತಿ** – ಚಂದ್ರ (ತರುಣಿಯರ ವದನಂಗಳ್ ಮನ್ನಿಸದೆ ಸೆಎದುಕೊಂಡುವು ಚೆನ್ನಂ ರೋಹಿಣಿಯನಪ್ಪಿದ ಅಮೃತದ್ಯುತಿಯಾ: **ಲೀಲಾವತಿ,** ೯. ೭೪)

**ಅಮೃತಭವ** – ಚಂದ್ರ (ಅಮೃತಭವಂ ಶಿಶಿರಕರಂ ಕಮಳಂ ಜಗದೇಕಪಾವನೀಯಶ್ರೀಕಂ ಸಮನವಱೊಳ್ ನಿನ್ನ ಮೊಗಂ: **ಕವಿರಾಮಾ,** ೩. ೭೪)

**ಅಮೃತರಸಾಯನ** – ಒಂದು ಬಗೆಯ ಪಾನಕ (ಅಮೃತರಸಾಯನಮೆಂಬ ಪಾನಮಂ: **ಆದಿಪು,** ೧೫. ೩ ವ)

**ಅಮೃತರೋಚಿ** – ಚಂದ್ರ (ಸ್ವಾನ್ವಯಕ್ಷೀರೋದ ಅಮೃತರೋಚಿ ಪುಟ್ಟಿ ನೆಎಗಟ್ದಂಶ್ರೀ ದುರ್ಗಸಿಂಹಂ: **ಪಂಚತಂತ್ರ,** ೪೬)

**ಅಮೃತವರ್ಷ** – ಅಮೃತದ ಮಳೆ (ಶ್ರೀ ಧರ್ಮಾಮೃತಮನೀ ಧಾತ್ರೀತಳದ ಭವ್ಯ ಸಸ್ಯಕವ್ಯಾಬಾಧಂ ಕಱೆದಂ: **ಸುಕುಮಾಚ,** ೯. ೧)

**ಅಮೃತಾಂಗನೆ** – ಮೋಕ್ಷವನಿತೆ (ಅಮೃತಾಂಗನೆಯತ್ತಂ ಎಱಕಮುಳ್ಳವಂ ಮರ್ತ್ಯವಧೂಸಂಗಕ್ಕೆ ಎಱಗಂ: **ಸಮಯಪ.** ೪. ೨೫)

**ಅಮೃತಾಂಶು** – ಚಂದ್ರ (ಅವತಂಸೀಕೃತ ಬಾಲಕೈತಕಶಿಖಾ ಸಂದಿಗ್ಧ ಮುಗ್ಧಾಮೃತಾಂಶುವಿಹಾಯಸ್ಸರಿದಂಬುಚುಂಬಿತ ಜಟಾಜೂಟಾಂತರಂ: **ಪಂಚತಂತ್ರ,** ೨)

**ಅಮೃತಾಂಶುಬಿಂಬ** – ಚಂದ್ರಬಿಂಬ (ಜಗತ್ತ್ರಿತಯಾಳಂಕಾರಮಿದು ದಿವ್ಯಮಾತಪವಾರಣಂ ಅಮೃತಾಂಶುಬಿಂಬಧವಳವಿಳಾಸಂ: **ಆದಿಪು,** ೧೩. ೧೭)

**ಅಮೃತಾಂಶುಮಂಡಲ** – ಚಂದ್ರಮಂಡಲ (ಕುಳಿರುತ್ತಿರ್ಪ ಅಮೃತಾಂಶುಮಂಡಳದೊಳಿರ್ದಾದಂ ಸುಧಾಮೋದಮಂ: **ಕಾದಂಸಂ,** ೮. ೫೫)

**ಅಮೃತಾಂಶುವಕ್ತ್ರೆ** – ಚಂದ್ರಮುಖಿ (ಇಂಪು ಪೊದಳ್ದು ಬಂದು ಬಂಧುರ ಹಿಮಮಂದಗಂಧವಹಮೆಟ್ಟಿಱಿಸಿತ್ತು ಅಮೃತಾಂಶುವಕ್ತ್ರೆಯಂ: **ಆದಿಪು,** ೩. ೨೨)

**ಅಮೃತಾವಾಸ** – ಶಾಶ್ವತ ನೆಲೆ, ಮೋಕ್ಷ (ಮೋಕ್ಷಲಕ್ಷ್ಮೀಧಾಮಂ ತ್ರೈಲೋಕ್ಯನಾಥಂ ಕುಡುಗೆ ಎಮಗೆ ಅಮೃತಾವಾಸಮಂ ವೀರನಾಥಂ: **ಸುಕುಮಾಚ,** ೧. ೧)

**ಅಮೃತಾಶನ** – ಅಮೃತವನ್ನೇ ಆಹಾರವಾಗಿ ಪಡೆದವನು, ದೇವತೆ (ದ್ವಿಸಹಸ್ರಹಾನಾಂತರಕೃತ ಅಮೃಥಾಸನನುಂ: **ಚಂದ್ರಪ್ರಪು,** ೪. ೬೯ ವ)

**ಅಮೃತಾಸಾರ** – ಅಮೃತದ ಮಳೆ (ಬಟಲ್ಕೆಯಂ ಬಾರಿಸಲೆಂದು ಬಂದ ಪಥಿಕರ್ ಪಥಿಕಾನಯನಪ್ರಭ ಅಮೃತಾಸಾರದೆ ತೀವಿ ಬರ್ಪ ಪರಿಕಾಲ್: **ಜಗನ್ನಾವಿ,** ೨. ೪)

**ಅಮೇಧ್ಯ** – ಮಲ, ಹೊಲಸು (ಅಮೇಧ್ಯ ಕಳ್ ಮಾಂಸಾದಿ ದುರ್ಗಂಧಮಪ್ಪಂತೆ ಲೋಲತೆಯೊಳ್ ಪೊರ್ದಿದ ಪೊಲ್ಲಮೆಯೊಳೊಂದಿದ ಮಿಥ್ಯಾದರ್ಶನಂಗಳಂ: **ಧರ್ಮಾಮೃ,** ೧೦. ೬೯ ವ)

**ಅಮೇಧ್ಯಭಾಜನ** – ಕೊಳಕಾದ ಊಟದ ತಟ್ಟೆ (ಪರಿತ್ಯಕ್ತ ಸುಂದರಿಯುಂ ತೊಟ್ಟಿನಮೇಧ್ಯಭಾಜನದ ಸಾಮ್ಯಸ್ಥಾನಂ ಎಂದಿಂತು ಕೊಕ್ಕರಿಪಂ ಸನ್ನುತ ಮುಕ್ತಿಲಕ್ಷ್ಮಿಯೊಲವಂ ಪೆತ್ತಲ್ಲದೇಂ ಮಾಣ್ಬನೇ: **ಸಮಯಪ,** ೫. ೬೯)

**ಅಮೇಯ** – ಅಳತೆಗೆ ಸಿಕ್ಕದ (ಸಮಸ್ತಸುರಕೋಟಿ ಹೇಮಘಟಕೋಟಿಯಿಂ ತೀವಿ ತಂದು ಅಮೇಯ ಭುಜಕೋಟಿಯಿಂ ಮಿಸಿಸೆ: **ಆದಿಪು,** ೧೩. ೮೩)

**ಅಮೋಘ** – ವ್ಯರ್ಥವಾಗದ, ಸಾರ್ಥಕವಾದ (ದಿವ್ಯಮುನಿವಾಕ್ಯಂ ಅಮೋಘವಾಕ್ಯಮಕ್ಕುಂ ಅದರ್ಕೇನುಂ ಚಿಂತಿಸಲ್ವೇಡ: **ಪಂಪಭಾ,** ೧. ೧೧೮ ವ)

**ಅಮೋಘಂ** – ವ್ಯರ್ಥವಾಗದ ಹಾಗೆ (ಪ್ರವಿಮಲಸದ್ಗೀರ್ವಾಣದಾತವ್ಯ ಸಾಯಕ ಸಂಪೂರ್ಣ ಕಳಾಪ್ರವೀಣನಂ ಇಳಾಭಾರಕ್ಷಮ ಅಕ್ಷೂಣನಂ .. .. ಸರ್ವಲಕ್ಷಣಸಂಪೂರ್ಣಂ ಅಪ್ಪ ಮಗನಂ ಅಮೋಘಂ ಪಡೆವೆಂ: **ಪಂಪಭಾ,** ೧. ೧೩೪ ಮತ್ತು ೧೩೪ ವ)

**ಅಮೋಘವರ್ಷ** – ನೃಪತುಂಗನ ಬಿರುದು (ಭಾವಿಸಿ ಬೆಸಸಿದಂ ಅಖಿಳಧರಾವಲಲ್ಲಭನಿಂತು ಅಮೋಘವರ್ಷ ನೃಪೇಂದ್ರಂ: **ಕವಿರಾಮಾ,** ೩. ೧)

**ಅಮ್ಮ** – ತಂದೆ (ಒಯ್ಯನೆ ಕೇಳ ಕರ್ಣ ನಿನ್ನಾದಿಯೊಳ್ ಅಬ್ಬೆ ಕೊಂತಿ ನಿನಗಮ್ಮಂ ಅಹರ್ಪತಿ: **ಪಂಪಭಾ,** ಪರಿಷತ್ತು ೯. ೭೪)

**ಅಮ್ಮಂಗೊಡಲಿ** – ಶಂಖಪುಷ್ಪಿ ಎಂಬ ಗಿಡ (ಅಮ್ಮಂಗೊಡಲಿ ಎಂದು ಹೆಗ್ಗಟ್ಟವತ್ತಿಗೆ: **ಶಬ್ದಮದ, ಪ್ರಸಾ,** ೧೦)

**ಅಮ್ಮಾವು** – ಕಾಡ ಹಸು (ಪಂದಿಯ ಗೊಂದಳದಂತೆಯುಂ ಅಮ್ಮಾವಿನ ತೋಮೆಯಂತೆಯುಂ ತೋಳದ ಗೂಳೆಯಂತೆಯುಂ: **ಪುಷ್ಪದಂಪು,** ೩. ೧೨೭ ವ)

**ಅಮ್ಮುವರ್** – ಸಮರ್ಥರು (ಮುನಿದುಯ್ವ ಜವಂಗಂ ಮಾ ಎನಲ್ ಅಮ್ಮುವರಿಲ್ಲ ಬಗೆಯೆ ನಿನಗೆ ಇನ್ನು ಆರ್ಮಂ ಜಿನಧರ್ಮವೊಂದೆ: **ಅಜಿತಪು,** ೨. ೫೭)

**ಅಯ** – ಅದೃಷ್ಟ (ಪ್ರಿಯತಮಮಂ ತಾಳ್ದಿದರ್ ಅಯ ನಯಮಯರ್ ಏಕಾದಶಾಂಗಮಂ: **ವರ್ಧಮಾಪು,** ೧೬. ೩೪); ಸದ್ವರ್ತನೆ (ಪ್ರಿಯವಿಷಯಕಾಂಕ್ಷೆಯಿಂದ ಇಂದ್ರಿಯಂಗಳೆಂತೆಯ್ದೆ ಮನಮನಾಶ್ರಯಿಸುಗುಂ ಅಂತು ಅಯ ನಯಪರರ್ ಅಯ್ವರುಂ ಆಶ್ರಯಿಸಿದರ್ ವಿಷಯಕಾಂಕ್ಷೆಯಿಂ ಮುರರಿಪುವಂ: **ಪಂಪಭಾ,** ೯. ೧೩); ಶ್ರೇಯಸ್ಸು, ಶುಭ (ಅಯನಯ ಮಯನತಿ ವೇಗದೆ ಮಯನಿಸೆ ದುರ್ಜಯನೆನಿಪ್ಪ ಮಾರುತಿಗಂ ವಿಸ್ಮಯಂ ಅಗ್ಗಳಮಾದುದು: **ಪಂಪರಾ,** ೧೪. ೧೩೪)

**ಅಯಃಪುತ್ರಿಕೆ** – ಕಬ್ಬಿಣದ ಪ್ರತಿಮೆ (ಪರವಧು ದುರ್ವ್ಯಸನಂ ನಿನಗೆಂದಮರ್ದಪ್ಪಿಸುವರ್ ಕೆಂಪೆಸೆಯೆ ಕಾಯ್ದು ಅಯಃಪುತ್ರಿಕೆಯಂ: **ಆದಿಪು,** ೫. ೮೭)

**ಅಯಕರಣ** – ಶುಭವಿಧಿಯನ್ನು ನೆರವೇರಿಸುವವನು (ಭಯಭಕ್ತಿವೆಱಸು ನುತಿಸಿದರ್ ಅಯಕರಣರ್ ಕುಮಾರರ್ ಆ ಗುರುವರನಂ: **ರಾಜಶೇವಿ,** ೪. ೯೧)

**ಅಯತ್ನಕೃತ** – ತನಗೆ ತಾನೇ ಆದ (ಸವನಿಪುದಯತ್ನಕೃತ ಗೌರವಮುಖದೊಳ್ .. .. ತಾಂ ಬಹುತ್ವಂ ಏಕತ್ವದೊಳಂ: **ಶಬ್ದಮದ,** ೧೧೨)

**ಅಯತ್ನಸುಖ** – ತನಗೆ ತಾನೇ ದೊರೆತ ಸುಖ (ಪೌರನಂದದೊಳಗಿಂತು ಅಯತ್ನಸುಖಮಂ ಪಥಿಕರ್ ಪಡೆವರ್ ನಿರಂತರಂ: **ಚಂದ್ರಪ್ರಪು,** ೩. ೧೫)

**ಅಯಥಾಕರ್ಮದ ದೋಷ** – ತಕ್ಕುದಲ್ಲದ ಕೆಲಸವನ್ನು ಮಡುವುದರಿಂದಾಗುವ ದೋಷ (ನಮಗೆ ಪಾರಣೆಯಂ ಮಾಟಪ್ಪಾಗಳ್ ಅಯಥಾಕರ್ಮದ ದೋಷಂ ಸಾರ್ತರ್ಕುಂ ಅದಱಿಂ ನಾಮಿಲ್ಲಿ ಚರಿಗೆವುಗದೆ.. ..ಪೋಪಂ: **ವಡ್ಡಾರಾ,** ಪು ೧೦೩, ಸಾ ೨೧)

**ಅಯನ** – ಮಾರ್ಗ (ಅಯನಂ ಮಾರ್ಗಂ ಸೃತಿ ಸರಣಿ ಅಧ್ವಂ: **ಅಭಿಧಾವ,** ೧. ೧೦. ೨); ಮೂರು ಋತುಗಳ ಅಥವಾ ಆರು ತಿಂಗಳ ಕಾಲ (ಮಾಸಂ ಪಕ್ಷದ್ವಿತಯಂ ಮಾಸದ್ವಯಮೊಂದೆ ಋತು ಋತುತ್ರಯಂ ಅಯನನ್ಯಾಸಂ: **ಪಂಪರಾ,** ೧. ೫೨)

**ಅಯನಯ** – ಶುಭಕಾರ್ಯ, ನೀತಿಮಾರ್ಗ (ಆಜ್ಞೆಯಂ ವಿರೋಧಿಗಳ್ಗಿತ್ತು ಅರಸುಗೆಯ್ದಂ ಆತ್ಮಾಯತ್ತಂ ಕಲಿ ಸುಪ್ರತಿಷ್ಠಂ ಅಯನಯನಿಷ್ಠಂ: **ನೇಮಿನಾಪು,** ೪. ೩೩)

**ಅಯನಯಮಾರ್ಗ** – ಒಳ್ಳೆಯ ದಾರಿ (ಅಯನಯಮಾರ್ಗಕ್ರಮ ನಿಶ್ಚಯನಿಪುಣನುಂ .. .. ಭಾವಿಸುವುದು ದಯಾನ್ವಿತಂ ಶ್ರೀಜಿನೇಂದ್ರ ವಚನಾಮೃತಮಂ: **ಸಮಯಪ,** ೬. ೫೪)

**ಅಯನಶೀಲನ** – ಗತಿಶೀಲ (ಇದಱೊಳ್ ಅನಿರುದ್ಧ ನವರಂಧ್ರದೊಳ್ ಅಪಘನ ಘಟದೊಳ್ ಅಯನಶೀಲನದಿಂ ಪೋಪುದು ಚೋದ್ಯಮೆ: **ನೇಮಿನಾಪು,** ೪. ೧೦)

**ಅಯಲತಾ** – ಸೌಭಾಗ್ಯವೆಂಬ ಬಳ್ಳಿ (ಅಯಲತಾ ಕಂದಮಂ ಭಕ್ತಿಯಿಂದಂ ಹರಿವಂಶಕ್ಷತ್ರಚೂಡಾಮಣಿಯ ಚರಿತಮಂ ಪೇೞಲುದ್ಯುಕ್ತನಾದಂ: **ನೇಮಿನಾಪು,** ೧. ೫೨)

**ಅಯಶಸ್ಕೀರ್ತಿ** – [ಜೈನ] ಎಪ್ಪತ್ತೆರಡು ಪ್ರಕೃತಿಗಳಲ್ಲಿ ಅಪಕೀರ್ತಿ ಎಂಬ ಪ್ರಕೃತಿ ಅಥವಾ ಕರ್ಮ (ಶುಭಾಶುಭ ಸುಸ್ವರ ದುಸ್ವರ ಸುಭ್ಗ ದುರ್ಭಗ ಪ್ರತ್ಯೇಕ ಶರೀರ ಅಯಶ್ಕೀರ್ತಿ ಅನಾದೇಯ .. .. ದ್ವಿಸಪ್ತತಿ ಪ್ರಕೃತಿಗಳಂ: **ಆದಿಪು,** ೧೬. ೪೯ ವ)

**ಅಯಶ್ಶಲಾಕೆ** – ಕಬ್ಬಿಣದ ಸರಳು (ಕಾಸಿದ ಅಯಶ್ಶಲಾಕೆಯಂತೊಡನೆ ಕುಮಾರಂ ಅಟ್ಟೆಯ ಸರಂ ಕಿವಿಯಂ ಪುಗೆ: **ಮಲ್ಲಿನಾಪು,** ೧೦. ೨೧)

**ಅಯಸ** – ಆಯಾಸ (ಕೈನೀರೆಱೆಯಲ್ಕೆಂದಿರ್ಪ ಪದದೊಳ್ ಅತ್ಯಾಶ್ಚರ್ಯಂ ನೆಱೆದಿರೆ ಮದಾಳಿಗಯಸಂ ಪಱೆಪಡೆ ಬರ್ಪಂದದಿಂದೆ ನಂದಂ ಬಂದಂ: **ಸುಕುಮಾಚ,** ೭. ೩೨); (ಅಯಶ) ಅಪಯಶಸ್ಸು (ಅಯಸಂ ನಮಗುಱದು ಬೇಗಮೆಱಗದೊಡುಱುಗಂ: **ಆದಿಪು,** ೧೨. ೧೧೯); ಕಬ್ಬಿಣ (ನೆಱೆ ಸಂತೋಷದಿಂ ನೆಱೆಯಲ್ಕೆಂದಿರ್ಪ ಪದದೊಳ್ ಅತ್ಯಾಶ್ಚರ್ಯಂ ನೆಱೆದಿರೆ ಮದಾಳಿಗೆ ಅಯಸಂ ಪಱೆಪಡೆ ಬರ್ಪಂದದಿಂದೆ ನಂದಂ ಬಂದಂ: **ಸುಕುಮಾಚ,** ೭. ೩೨)

**ಅಯಸ್ಕಾಂತ** – ಸೂಜಿಗಲ್ಲು (ತಮ್ಮ ಮೆಯ್ಯೊಳ್ ಉಡಿದ ಅಂಬುಗಳುಮಂ ಎಲ್ವಂ ನಟ್ಟುಡಿದ ಬಾಳ ಕಕ್ಕಡೆಯುಡಿಗಳುಮಂ ಅಯಸ್ಕಾಂತಮಂ ತೋಱೆ ತೆಗೆಯಿಸುತ್ತುಂ: **ಪಂಪಭಾ,** ೧೧, ೨ ವ)

**ಅಯುತ** – ಹತ್ತು ಸಾವಿರ (ಅಯುತಪ್ರಮಿತಸಾಮಾನಿಕ ಸುರಾನೀಕನುಂ: **ಆದಿಪು,** ೬. ೧೩ ವ)

**ಅಯೋಗಕೇವಳಿ** – [ಜೈನ] ಮನೋವಾಕ್ಕಾಯಗಳ ಚಾಂಚಲ್ಯವಿಲ್ಲದವನು, ಹದಿನಾಲ್ಕನೆಯ ಗುಣಸ್ಥಾನ ವನ್ನು ಸೇರಿದವನು (ವೃಷಭನಾಥಂ ಸ್ವಸ್ಥಂ ಅಯೋಗಕೇವಳಿ ಕೇವಳಿಪ್ರದೇಶನಿರ್ಜರೆಯಂ ಮಾಡುತ್ತುಂ: **ಆದಿಪು,** ೧೬. ೪೯ ವ)

**ಅಯೋಗಗುಣಸ್ಥಾನ** – [ಜೈನ] ಹದಿನಾಲ್ಕನೆಯ ಗುಣಸ್ಥಾನ (ಪಂಚಹ್ರಸ್ವಾಕ್ಷರೋಚ್ಚಾರಣ ಮಾತ್ರ ಕಾಲಪ್ರಮಿತಾಯೋಗ ಗುಣಸ್ಥಾನಸ್ಥಿತಂ: **ಆದಿಪು,** ೧೬. ೪೯ವ)

**ಅಯೋಗವಾಹ** – ಬಿಂದು, ವಿಸರ್ಗ, ಜಿಹ್ವಾಮೂಲೀಯ ಮತ್ತು ಉಪಧ್ಮಾನೀಯ (ಶುದ್ಧಾಕ್ಷರಂಗಳುಮಂ ಅಯೋಗವಾಹ ಚತುಷ್ಕಮುಂ: **ಆದಿಪು,** ೮. ೫೯ ವ)

**ಅಯೋಗಿ** – ಅಯೋಗ ಕೇವಲಿ (ಪಲ್ಲಿಖೇಡಮೆಂಬ ಊರ್ಗೆ ಬಂದು ಯೋಗ ನಿರೋಧಂ ಗೆಯ್ದು ಅಯೋಗಿ ಭಟಾರರಾಗಿ: **ವಡ್ಡಾರಾ,** ಪು ೧೫೫, ಸಾ ೨೧)

**ಅಯೋಘನ** – ಸುತ್ತಿಗೆ (ತತ್ ಕ್ಷಣದೊಳ್ ಅಯೋಘನ ಅಭಿಘಾತದೊಳ್ ಶಾರ್ದೂಳ ವೃಕ ಸೃಗಾಳ ಭಲ್ಲೂಕಾದಿ ರೂಕ್ಷ ಶ್ವಾಪದಪ್ರಕಾರಖಾದನದೊಳ್: **ವರ್ಧಮಾಪು,** ೧೫. ೮ ವ)

**ಅಯೋಗ್ರ** – ಒರಳು (ಮುಸಳಂ ಅಯೋಗ್ರಂ ಒರಲ್ಗಂ ಪೆಸರಕ್ಕುಂ: **ಅಭಿಧಾವ,** ೧. ೧೦. ೩೨)

**ಅಯೋಧ್ಯ** – [ಜೈನ] ಚಕ್ರವರ್ತಿಯ ಏಳು ಜೀವರತ್ನಗಳಲ್ಲಿ ಒಬ್ಬನಾದ ಸೇನಾಪತಿಯ ಹೆಸರು (ಅಯೋಧ್ಯ ಭದ್ರಮುಖ ಕಾಮವೃಷ್ಟಿ ಬುದ್ಧಿಸಾಗರ ವಿಜಯಪರ್ವತ ಪರಂಜಯ .. .. ಸ್ತ್ರೀರತನಂಗಳ್ ಎಂಬ ಏೞುಂ ಜೀವರತ್ನಂಗಳುಮಂ: **ಚಂದ್ರಪ್ರಪು,** ೬. ೧೦೧ ವ)

**ಅಯೋನಿಸಂಭವ** – ಅಯೋನಿಜ, ದ್ರೋಣ (ಅಭೇಧ್ಯರುಂ ಅಸಾಧ್ಯರುಂ ಅಪ್ಪ ಯೋನಿಸಂಭವರೆ ಹೇಳಾಸಾಧ್ಯರಾದರ್: **ಪಂಪಭಾ,** ೧೩. ೨೧ ವ)

**ಅಯೋಧ್ಯೆ** – ಜಯಿಸಲಸಾಧ್ಯವಾದುದು (ಅಂತು ಸಮೆದ ಪುರವರಕ್ಕರಾತಿನಿಕರಕ್ಕೆ ಅಯೋಧ್ಯೆಯಪ್ಪುದಱಿಂದ ಅಯೋಧ್ಯೆಯುಂ: **ಆದಿಪು,** ೬. ೧೦೭ ವ)

**ಅಯೋಲಲನೆ** – ಅಯಃಪುತ್ರಿಕೆ (ನೆಱೆಗಾಯ್ದ ಅಯೋಲಲನೆಯನಪ್ಪಿಪರ್ ಪೆಱರ ಪೆಂಡಿರನಪ್ಪದುರಃಪ್ರದೇಶಮಂ: **ಮಲ್ಲಿನಾಪು,** ೧೩. ೧೧೪)

**ಅಯ್ಕಿಲ್** – ಐಕಿಲ್, ಚಳಿ (ನೆಲಮನೆಯೊಳ್ ಓಪಳೊಡನೆ ಅಯ್ಕಿಲ ದೆವಸಂ ಸುಖದಿನಿರ್ಪೆ: **ಹರಿವಂಶ,** ೧೪. ೧೪); ಹಿಮ

**ಅಯ್ಗಣೆಯ** – ಐದು ಬಾಣಗಳುಳ್ಳವನು, ಮನ್ಮಥ (ಅಯ್ಗಣೆಯನ ಜಯಲಕ್ಷ್ಮಿಯ ತಾಯ್ಗುರುವೆನೆ ಮಿಸುಪ ಸತಿಯ: **ಲೀಲಾವತಿ,** ೭. ೫೨)

**ಅಯ್ದೆತನ** – ಸುಮಂಗಲಿತನ (ಮೆಯ್ಗರೆದುದೆ ವೀರಲಕ್ಷ್ಮಿನಿನತಯ್ದೆತನಂ: **ಆಚವರ್ಧ,** ೯. ೭೦)

**ಅಯ್ದೆಮಿನುಗು** – ತಾಳಿಬೊಟ್ಟು, ಮಾಂಗಲ್ಯ (ವರುಣನ ಮಕರಮುಂ ವರುಣಾನಿಯ ಕೊರಲೊಳ್ ಅಯ್ದೆಮಿನುಗುಂ ಉೞೆಯೆ ಉೞಿದ ವಸ್ತುಗಳೆಲ್ಲಮಂ ತಂದು ಮುಂದಿಟ್ಟು: **ಪಂಪಭಾ,** ೬. ೩೨ ವ)

**ಅಯ್ದೇಸು** – ಬಾಣಪ್ರಯೋಗದ ಐದು ಕ್ರಮಗಳು: ಪಾತ, ಲಕ್ಷ್ಯ, ಶೀಘ್ರ, ಘಾತ ಮತ್ತು ಬಹವೇಗ (ಪಾತಂ ಲಕ್ಷ್ಯಂ ಶೀಘ್ರಂ ಘಾತಂ ಬಹುವೇಗಮೆಂಬಿವಯ್ದೇಸಿಯೊಳ್ ಅಂತೀತನ ದೊರೆಯಿಲ್ಲೆನಿಸಿದುದಾತನ ಬಿಲ್ಬಲ್ಮೆ ಸುರಿನಂಬರತಲದೊಳ್: **ಪಂಪಭಾ,** ೧೨. ೧೮೫)

**ಅಯ್ಯ** – ತಂದೆ, (ಬೇಡುವೊಡೆ ನೀವೆಮ್ಮಯ್ಯನಂ ಬೇಡಿರೇ: **ಪಂಪಭಾ,** ೧. ೭೦)

**ಅಯ್ಯಿಲ್** – ಚಳಿ, ಮಂಜು (ಕೈಕಾಲ್ ಸುರುಳ್ದು ನಡುಗದೆ ಸೈಕಾಗ್ರಮನಸ್ಕನಾಗಿ ಭರವಸದಿಂ ಬಪ್ಪ ಅಯ್ಯಿಲ್ಗೆ ಅಳ್ಕದೆ ಪಲ್ಯಂಕಾಸನದಿಪ್ಪ ಸಾಹಸಂ ಪೆಱರ್ಗುಂಟೇ: **ಸುಕುಮಾಚ,** ೪. ೧೨)

**ಅಯ್ಯಗೊಡೆ** – ಎರಡು ಕೊಡೆಗಳು (ಎತ್ತಿದ ಅಯ್ಯಗೊಡೆಗಂ ದಯೆಗೆಯ್ದು ಯುವರಾಜಲಕ್ಷ್ಮಿಗಂ: **ಶಾಂತಿಪು,** ೮. ೨೬ ವ)

**ಅಯ್ವಡಿ** – ಐದು ಪಟ್ಟು (ಆನಂದಾಶ್ರುವೊಗೆಯೆ ಬಗೆವೆರ್ಚುತ್ತೆ ಇರ್ಮಡಿ ಮೂವಡಿ ನಾಲ್ವಡಿ ಅಯ್ವಡಿ ಸಂತಸದಿಂದೆ ತಂದೆ ಮಗಳಂ ಕರೆದಂ: **ಗಿರಿಜಾಕ,** ೩. ೧೦೪)

**ಅಯ್ವರ್** – ಐದು ಮಂದಿ (ಅಯ್ವರ್ ಕೂಸುಗಳುಂ ಏೞ್ಗೆವಾಡಿವದ ಚಂದ್ರನಂತೆ ಉತ್ತರಾಭಿವೃದ್ಧಿಯೊಳ್ ಸೊಗಯಿಸಿ ಬಳೆಯೆ: **ಪಂಪಭಾ,** ೨. ೩)

**ಅಯ್ಸಾಸಿರ್ವರ್** – ಐದು ಸಾವಿರ ಜನ ಸಾಸಿರ್ವರ್ ವನಿತೆಯರ್ ಅಯ್ಸಾಸಿರ್ವರ್ ಪ್ರಿಯತನೂಜರ್: **ಆದಿಪು,** ೬. ೫)

**ಅರಗಿಳಿ** – ಅರಗಿಣಿ, ಶ್ರೇಷ್ಠವಾದ ಗಿಳಿ (ಕೋಗಿಲೆಯಕ್ಕೆ ಎಲರಕ್ಕೆ ತುಂಬಿಯಕ್ಕೆ ಅರಗಿಳಿಯಕ್ಕೆ ಬಂದೊಡಂ ಒಱಲ್ದೆರ್ದೆಯಾಱುವರ್: **ಆದಿಪು,** ೩. ೮೬)

**ಅರಗೀಲ್** – ಚಕ್ರದ ಅರೆಕಾಲು (ಮಿನುಗುವ ಕೊಂಬಿನಚ್ಚು ಕಿಱುಗೊಂಬಿನ ತಳ್ತ ಅರಗೀಲ್ ಕವಲ್ತ ಕೊಂಬಿನ ಮಡವಡ್ಡವಂದ ನಳಿಗೊಂಬಿನ ಪತ್ತುಗೆ ಜೋಲ್ವ ಬಳ್ಳಿಗೊಂಬಿನ ಬಲೆ ತೋರಗೊಂಬಿನ ನೊಗಂ ನಿಡುಗೊಂಬಿನ ಮೂಂಕು ಕಣ್ಗೆ ಚೆಲ್ವೆನೆ ನಡೆತಂದುವಂದು ಅಸುಗೆಯೆಂಬ ನೆಗೞ್ತೆಯ ತೇರ್ಗಳೆತ್ತಲುಂ: **ಕಬ್ಬಿಗಕಾ,** ೧೬೭)

**ಅರಗು** – ಮರದ ಮೇಲಿನ ಮೇಣ (ಅರಗು ಮೊದಲಾಗೆ ಘರತ ಸಜ್ಜರಸಂ ಬೆಲ್ಲಂ ಸಣಂಬಿಬೆಂಬಿವಱೆಂ ವಿಸ್ತರಿಸಿ: **ಪಂಪಭಾ,** ೩. ೩)

**ಅರಘಟ್ಟ** – ನೀರೆತ್ತುವ ರಾಟೆ (ಸುರಿವುತ್ತುಂ ತೀವುತ್ತುಂ ಪರಮಜಿನಸ್ನಾನ ಕನಕಕಲಶಂಗಳಿಂ ಅಂದು ಅರಘಟ್ಟ ಘಟೀಯಂತ್ರದ ದೊರೆಯಾಯ್ತು ಸಹಸ್ರನೇತ್ರ ಬಾಹುಸಹಸ್ರಂ: **ಅಜಿತಪು,** ೪. ೫೫)

**ಅರಣಿ** – ಯಾಗದ ಬೆಂಕಿಯನ್ನು ಕಡೆಯುವ ಒಣಬನ್ನಿ ಮರದ ತುಂಡು (ಕೃಶಾನುಮಂಥನಕಾಷ್ಠಮದು ಅರಣಿಯೆನೆ ಪೆಸರ್ಬಡೆಗುಂ: **ಅಭಿಧಾವ,** ೧. ೧೦. ೩೧)

**ಅರಣ್ಯ** – [ಜೈನ] ಹದಿನಾರು ಕಲ್ಪಗಳಲ್ಲಿ ಒಂದು (ಸೌಧರ್ಮ ಈಶಾನ ಸನತ್ಕುಮಾರ ಮಾಹೇಂದ್ರ ಬ್ರಹ್ಮ ಬ್ರಹ್ಮೋತ್ತರ ಲಾಂತವ ಕಾಪಿಷ್ಠ ಶುಕ್ರ ಮಹಾಶುಕ್ರ ಶತಾರ ಸಹಸ್ರಾರ ಆನತ ಪ್ರಾಣತ ಅರಣ್ಯ ಅಚ್ಯುತಮೆಂಬ ಪದಿನಾಱುಂ ಕಲ್ಪಂಗಳೊಳಂ: **ವಡ್ಡಾರಾ,** ಪು ೯೭, ಸಾ ೨೬)

**ಅರಣ್ಯರುದಿತ** – ಅರಣ್ಯರೋದನ, ನಿರರ್ಥಕ (ಮೂರ್ಖಜಡಜನಾರಣ್ಯದೊಳಿಂ ಪೋಗಡಿಸಿದ ಕವಿಶಬ್ದಮದು ಏಗೆಯ್ದುಂ ಅರಣ್ಯರುದಿತಮದು ಬಗೆವಾಗಳ್: **ಆದಿಪು,** ೧. ೨೩)

**ಅರಣ್ಯಾನೀಚರ** – ಅರಣ್ಯಸಂಚಾರಿ, ಬೇಡ (ಇತ್ತ ಸಹಸ್ರಾಯುಧಂಗೆ ವಜ್ರಾಯುಧಮುನಿಂದ್ರ ತಪಃಪ್ರಭಾವಮಂ ಅರಣ್ಯಾನೀಚರರ್ ಅಱಿಪೆ: **ಶಾಂತಿಪು,** ೯. ೨೮ ವ)

**ಅರದ** – ತೇರು, ರಥ (ಅವಂ ಬಿಸರುಹೋದರನ ಅರದ ದ್ವಿರದನಿಕರವಾಂತು ಬೆದಱಿಸೆ ಬೆದಱಿ ಕಂಡು: **ಕರ್ಣನೇಮಿ,** ೭. ೯೦ ವ)

**ಅರದೇಗು** – ತೇಗದ ಮರದ ಒಂದು ಭೇದ (ಕಕ್ಕೆ ಕಮ್ಮರಂ ಅರದೇಗು ಕರ್ಕಡವುಂ ಅಂಬಟೆ: **ಪುಣ್ಯಾಸ್ರ:** ೩. ೭೩)

**ಅರನೇಱಿಲ** – ಜಂಬುನೇರಿಳೆ ಹಣ್ಣು (ಇಂದೊವರೆನಿಸಿದ ತನಿರಸದಿಂದೊದವಿದ ನೀಲ ಪಾಟಲಚ್ಛವಿಯಿಂ ನುಣ್ಪಿಂದ ಎಸೆವ ಅರನೇಱಿಲ ಪಣ್ಣಿಂದರಗಿಳಿಗೆ ಆಮ್ರದೊಲವನೇಂ ತೊಲಗಿಸಿತೋ: **ಪಂಪರಾ,** ೭. ೧೫೫);

**ಅರಬೊಜಂಗ** – ರಾಜವಿಟ (ಚೆಲ್ವನಾಯ್ತು ಅರಬೊಜಂಗರ ಲೀಲೆ ರಾಜಲೀಲೆಯಿಂ: **ಪಂಪಭಾ,** ೪. ೮೭)

**ಅರಮಗ** – ರಾಜನ ಮಗ (ಎರೆದರ್ಗೀಯದೆ ಮಾರಾಂತರನಿಕ್ಕದೆ ಮಱೆಗೆ ವಂದರಂ ಕಾಯದೇ ಬಾಳ್ವ ಅರಮಗನ ಬಾಹುದಂಡಂ ನಿರರ್ಥಕಂ: **ಪಂಪರಾ,** ೧೨. ೭೯)

**ಅರಮೆ** – ಸ್ವಲ್ಪಮಟ್ಟಿಗೆ, ಕ್ವಚಿತ್ (ಅರಮೆ ಮುಗಿದಿರ್ದುಂ ಓರೊರ್ವರಂ ಎರ್ದೆಯೊಳ್ ಪುಗಿಸಿ ಮುಚ್ಚಿದಂತೆ ಅಲರ್ಗಣ್ಗಳ್ ಕರಮೆ ಬೆಮರ್ತುವು: **ಲೀಲಾವತಿ,** ೧೦. ೫೯); ಬಹಳವಾಗಿ (ಆರಾನುಂ ದೋಷಮಂ ಅಧ್ಯಾರೋಪಿಸೆ ಗುಣಿಗಳ್ ಅರಮೆ ನೋವರ್: **ಕಾದಂಬ,** ೮. ೧೫೯); ಅರ್ಧವಾಗಿರುವುದು (ಅರಮೆಯಾಗಿ ನೆಲಸಿ ಕೆಲಕಾಲದಿಂ ಪೊರೆದಿರದೆ ಅೞಿದ ಬೞಿಕ ತಾ ನೆಲದೊಳ್: **ಕವಿರಾಮಾ,** ೨. ೧೪೬)

**ಅರರೀಪುಟ** – ಬಾಗಿಲ ರೆಕ್ಕೆ, ಕದ (ಅರರೀಪುಟಮೆರಡುಂ ಜೀರ್ಗರೆದು ಮರಲ್ದಂದಮೆಂತುಟಾಯ್ತೆನ್ನ ಭಯಂ: **ಆದಿಪು,** ೧೩. ೩೭)

**ಅರಲ್** – ಹೂ ಸುರಿವ ಸುರಯಿಯ ಅರಲ ಮುಗುಳ್ಗೆ ಮೊಗಸಿದಳಿಕುಳಮಗಳಿಂ ತೊದಲ್ವ ಶಿಶುಶುಕಂಗಳಿಂ: **ಪಂಪಭಾ,** ೧. ೫೮)

**ಅರಲಂಬ** – ಕಾಮ, ಮನ್ಮಥ (ಪರಿಮಳದ ತೂಂಬನೆತ್ತಿ ಅರಲಂಬಂ ಕನಮನೋವನಕ್ಕೆ ಎನೆ ಕಾಳಾಗರುಧೂಮಲತಿಕೆ ಜಾಲಾಂದರದಿಂದ ಒಗೆದುದು: **ಯಶೋಧಚ,** ೨. ೧೯)

**ಅರಲಂಬು** – ಹೂಗಣೆ, ಹೂಬಾಣ (ಉಣ್ಮಿಪೊಣ್ಮಿ ಕಣ್ಮಲರ್ಗಳಿಂ ಎಚ್ಚುಪಾಯ್ದುವು ಅರಲಂಬುಗಳಂತೆ ವಿಲೋಚನಾಂಬುಗಳ್: **ಪಂಪಭಾ,** ೪. ೧೦೮)

**ಅರಲೆ** – ಕಾಳು ತೆಗೆದ ಹತ್ತಿ, ಅರಳೆ (ತನು ಪಂಜಿವೊಲ್ ಬೆಳತಿರ್ಪಿನೆಗಂ ಹಿಮಂ ಅರಲೆವೋಲ್ ಪುದಿದಿರೆಯುಂ: **ಆದಿಪು.** ೬. ೩೩)

**ಅರವರಿಸು** – ವಿಚಾರ ಮಾಡು (ಅರವರಿಸೆ ಮಧುಮದದಿಂ ಸುರತಾಸಕ್ತೆಯ ಕುಂಚಂಗಳ್ ಎಂಱು ಅಂತೆ ನಿರಾವರಣಂಗಳಾಗಿ: **ಅನಂತಪು,** ೧೩. ೩೧); ಉಪೇಕ್ಷೆ ಮಾಡು (ಶುದ್ಧವೃತ್ತಿಯೊಳ್ ಅರವರಿಸದೆ .. .. ರಾಗಂಬೆರಸು ಸದಾಚಾರನಾಗಿ ನಿರ್ಮಲಮನದಿಂ: **ಧರ್ಮಾಮೃ,** ೫. ೯೧)

**ಅರವಾವು** – [ಅರಸು+ಪಾವು] ಹೆಬ್ಬಾವು (ಬಿಸಿಲ್ಕೈಕಿಲ್ ಪಸಿವುಗ್ರದಂಶಮಶಕವ್ಯಾಬಾಧೆ ಪೊಯ್ವ ಸಿಡಿಲ್ ತಿಂಬ ಅರವಾವು ಪುಲಿಯೆಂಬೀ ಬಾದೆಯೊಳ್: **ಆದಿಪು,** ೬. ೩೪)

**ಅರವಿಂದ** – ತಾವರೆ (ಖರಕಿರಣ ತಾಪಮೆನಿಸುಬ್ಬರಿಸಿದೊಡಂ ಕಂದಿಕುಂದ ಅರವಿಂದದವೋಲ್: **ಪುಷ್ಪದಂಪು,** ೧೪. ೨೮)

**ಅರವಿಂದಜಸೂನು** – ಬ್ರಹ್ಮನ ಮಗ, ನಾರದ (ಕೃಪೆಯಿಂ ಬೋಳೈಸುತ ಅರವಿಂದಜಸೂನುಗೆ ಈಶಂ ಅಂದು ಇಂತೆಂದಂ: **ತ್ರಿಷಷ್ಟಿಪು,** ೩೨. ೭)

**ಅರವಿಂದಾಕರ** – ಕೊಳ (ಸುರಸ್ತ್ರೀಯರಿಟ್ಟ ಅರವಿಂದಾಕರಂ ಊರ್ವಶೀವಧು ಸರಾಗಂ ತಂದ ಪೂಗದ್ರುಮಂ: **ಗಿರಿಜಾಕ,** ೨. ೩೧)

**ಅರವಿಂದಾಸ್ಯೆ** – ತಾವರೆಮೊಗದವಳು (ಅರವಿಂದಾಸ್ಯೆಯ ನೊಸಲ ಸಮಾನಂ: **ಸುಕುಮಾಚ,** ೫. ೫೧)

**ಅರವಿಂದಿನಿ** – ತಾವರೆಯ ಕೊಳ (ಬಂದ ಬಸಂತಂಗೆ ಅಂದು ಅರವಿಂದಿನಿ ಸೇಸಿಕ್ಕಲೆಂದು: **ಚಂದ್ರಪ್ರಭು,** ೭. ೫೯)

**ಅರವುರನೆ** – ತ್ವರಿತವಾಗಿ ಕರಕಾಂಬುವಂ ತಳಿದು ಅರವುರನೆ ಎಚ್ಚರಿಸೆ ಮೂರ್ಛೆ ತಿಳಿದು ಕುಮಾರಂ: **ಆದಿಪು,** ೪. ೧೭)

**ಅರವೊಱಸು** – ಒಂದು ಬಗೆಯ ಪಾರಿವಾಳ, ರಾಜಕಪೋತ (ಮಾನಿಸರ ನುಡಿವ ತೆಱದಿಂ ಶ್ಯೆನನುಂ ಅರವೊಱಸು ಮಿಂತು ಗಟಿಪಿದಪುದು: **ಶಾಂತಿಪು,** ೯. ೯೧)

**ಅರಸ** – ರಾಜ (ಪರದರ್ಗೆ ಆಪಾವರ್ಗ್ಗೆ ಆಯ್ತು ಅರಸರ್ಗ್ಗೆ ಆ ಕುಡಿಯರಪ್ಪ ನಾಲ್ವರ್ಗ್ಗಗಳ್: **ಕವಿರಾಮಾ,** ೧. ೩೫); ಅರಸಿಕ (ಅರಸರ್ ಸರಸಮನಜೆವರೆ ಸರಸಮನಾಡು ಅರಸರಲ್ಲದವರೊಳ್ ಮಗಳೇ: **ಕವಿರಾಮಾ,** ೩. ೨೩೨)

**ಅರಸಂಚೆ** – ರಾಜಹಂಸ (ಅರಸಂಚೆಗಳ್ ಒಡವರೆ ನೇವುರದಿಂಚರಕೆ ಒಲ್ದು .. .. ಐತರುತಿರ್ದಂ ಮುಂದೆ ಮುನಿಕುಮಾರಕನೋರ್ವಂ: **ಕಾದಂಬ,** ೫. ೧೪)

**ಅರಸಾಸವಾರಿ** – ಶ್ರೇಷ್ಠ ರಾವುತ (ಉದಗ್ರತರವಾರಿಯಿಂ ಅಂದು ಅರಸಾಸವಾರಿ ಪೊಯ್ದೊಡೆ: **ಕರ್ಣನೇಮಿ,** ೧೧. ೧೬೩)

**ಅರಸಾಳ್ತನ** – ಅರಸಾಳಿನ ಕರ್ತವ್ಯ, ಅಧಿಕಾರ (ನಿನಗೆ ಅರಸಾಳ್ತನಂ ನುಡಿವ ಬೀರರ ಬೀರದಳುರ್ಕೆ ವಿಕ್ರಮಾರ್ಜುನನೊಳದೇಕೆ ಸಲ್ಲದು: **ಪಂಪಭಾ,** ೧೧. ೧೩೮)

**ಅರಸಿ** – ರಾಣಿ (ಅರಸರೊಳೆ ನೀಂ ಸರಸಮಂ ಅರಸಿಯವೋಲಾಡುತಿರ್ಪೆ ನಿನಗಿದು ಗುಣಮೇ: **ಕವಿರಾಮಾ,** ೩. ೨೩೩)

**ಅರಸಿಕೆ** – ರಾಜತನ (ಕರುಣದಿಂ ಎಮ್ಮಂ ತಾಯ್ವೋಲ್ ತರುವಲಿಗಳಂ ಎಯ್ದೆ ನಡೆಪಿದಜ್ಜರ್ ನೀಂ ಇಂತಿರೆಯುಂ ನೋಡಿದೆವೇನೆಮಗೆ ಅರಸಿಕೆಯೋ ಪೇಟಿಮೆಂದು ಶೋಕಂಗೆಯ್ದರ್: **ಪಂಪಭಾ,** ೧೧. ೪೮)

**ಅರಸು** – ಅರಸುತನ (ಅರಸುಗಳೆಲ್ಲಂ ಬಾಯ್ಕೇಳ್ದರೆಂದುಂ ಆಶಾಂತರಂಗಳಕ್ಕಿದುವೆಂದುಂ ಧರಣೀತಳಂ ಕೀರ್ತಿಸೆ: **ಆದಿಪು,** ೧೪. ೪೯)

**ಅರಸುಕುಮಾರ** – ದೊರೆಗುವರ (ಅರಸುಮುಮಾರಂ ಅನಯತತರ ಕಡೆಗಣ್ಣಿಂದೆ ನೋಡಿ: **ಕವಿರಾಮಾ,** ೧. ೫೯)

**ಅರಸುಗಾಣ್** – ರಾಜಪದವಿಯನ್ನು ಪಡೆ (ಕುಱುಂಬಂ ಅರಸುಗಂಡಂತೆ ನೋಡುತ್ತುಮಿರ್ಪನ್ನೆಗಂ ಭವಪ್ರತ್ಯಯಜ್ಞಾನಂ ಪುಟ್ಟಿ: **ಧರ್ಮಾಮೃ,** ೧. ೧೫೭ ವ)

**ಅರಸುಗಿಡು** – ರಾಜತ್ವ ಕೈತಪ್ಪು (ತಮ್ಮ ಅರಸುಗೆಟ್ಟು ಕಟಲ್ದು ಎರ್ದೆಗೆಟ್ಟು ಅರಣ್ಯದೊಳ್ ತಿರಿತರುತಿರ್ದ ಕಣ್ಬಡಿಗರಿಂ: **ಪಂಪಭಾ,** ೮. ೮೫)

**ಅರಸುಗೆಯ್** – ರಾಜ್ಯಭಾರ ಮಾಡು, ಆಳು ತನ್ನ ಒಡನಾಡಿಯಪ್ಪ ಕೆಳೆಯಂ ದ್ರುಪದಂ ಛತ್ರಾವತಿಯೊಳ್ ಅರಸುಗೆಯ್ದಪನೆಂದು ಕೇಳ್ದು ಆ ಪೊಟಲ್ಗೆ ವಂದು: **ಪಂಪಭಾ,** ೨. ೪೬ ವ)

**ಅರಸುತನಂಗೆಯ್** – ಆಳುವುದು (ಅರಸುತನಂಗೆಯ್ವೆಟಿಪಿಂ ಧುರದೊಳ್ ಮಾಱಾಂತರೆಲ್ಲರಂ ಮಟ್ಗಿಪುದುಂ: **ಪಂಪರಾ,** ೧೦. ೧೭೩)

**ಅರಸುಮಗ** – ದೊರೆಗುವರ (ಒಡನೆ ನೆರೆದರಸುಮಕ್ಕಳ ನಿಡುಗಣ್ಗಳ ಬಳಗಮೆಱಗೆ ತನ್ನಯ ಮೆಯ್ಯೊಳ್: **ಪಂಪಭಾ,** ೩. ೫೧)

**ಅರಳ್** – ಹುರಿದ ಏಕದಳ ಧಾನ್ಯ, ಲಾಜೆ (ಮೆದೆಯಂ ಸುಟ್ಟು ಅರಳಂ ಕುಱುಕುವ ತುಪ್ಪಮನೊಕ್ಕು ಸಗಣಮಂ ಕೊಳ್ವ: **ಧರ್ಮಾಮೃ,** ೩. ೧೧ ವ)

**ಅರಳಿ** – ಅಶ್ವತ್ಥದ ಮರ (ಅರಳಿಯ ಪಣ್ಣುಂ .. .. ಗೊರವರ ಶಾಪದೊಳೆ ಮುಟಿತುವೋ ಪೇಟಿಮಿದಂ: **ಸಮಯಪ,** ೧೦. ೧೧೮)

**ಅರಳೆ** – ಬೀಜ ತೆಗೆದ ಹತ್ತಿ (ಒಂದೆಡೆಯೊಳ್ ಒಟ್ಟಿರ್ದ ಅರಳೆಯಂ ಒಡನಳುರ್ವಂತು: **ಪಂಪಭಾ,** ೩. ೫)

**ಅರಳೆಲೆ** – ಅರಳಿ ಎಲೆಯಾಕಾರದ ಮಕ್ಕಳ ಒಂದು ಆಭರಣ (ನೊಸಲೊಳ್ ಒಡಂಬಡುವ ಅರಳೆಲೆ ಇವಜೆಂ ಚೆಲ್ವಿಡಿದಿರ್ದುದು ಧರ್ಮಾತ್ಮಜನಾ: **ಪಂಪಭಾ,** ೨. ೪)

**ಅರಾತಿ** – ಶತ್ರು (ಎಮಗಂ ಅರಾತಿಗಳೊಳರೆಂಬಿನಿತು ಪರಾಭವಮನಗಳೀ ಚಕ್ರಂ ಸೂಚನೆಗೈದುದು: **ಆದಿಪು,** ೧೪. ೯)

**ಅರಾತಿಕಾಂತೆ** – ಶತ್ರುವಿನ ಹೆಂಡತಿ (ಪಾವಡರ್ದಳಿವಂದೆಯಂತಿರೆ ಅಗಿವರ್ ಸುಗಿವರ್ ತದರಾತಿಕಾಂತೆಯರ್: **ರಾಜಶೇವಿ,** ೫. ೧೦)

**ಅರಾತಿಕುಲ** – ಶತ್ರುಸಮೂಹ (ಬಾಹುಬಲೀಶನೇಜೆಸಿದನಾ ನಮ್ರಾಟನೀನಾದಸಂಜನಿತ ಅರಾತಿಕುಲ ಅಂಗನಾಜನ ಮನಸ್ಸಂತಾಪಮಂ ಚಾಪಮಂ: **ಆದಿಪು,** ೧೪. ೯೯)

**ಅರಾತಿಚಕ್ರ** – ಶತ್ರುಸಮೂಹ (ಪರಾಕ್ರಮಾಕ್ರಾಂತ ಅರಾತಿಚಕ್ರನುಂ ಸಾಧಿತದಿಕ್ಚಕ್ರನುಂ: **ಆದಿಪು,** ೩. ೨೯ ವ)

**ಅರಾತಿನಿಕಾಯ** – ಶತ್ರುಸಮೂಹ (ವನಧಿದ್ವೀಪಸಮೀಪವರ್ತಿ ವಸುಧಾಂತರ್ವರ್ತಿಯಾಗಿರ್ದ ಅರಾತಿನಿಕಾಯಕ್ಕಿದು ಯಾಮಿನೀಸಮುದಿತಂ: **ಆದಿಪು;** ೧೪. ೯೯)

**ಅರಿ** – ಕತ್ತರಿಸು (ಅಲ್ಲಾಡದೆ ಕೊಳ್ ಎಂದು ಅರಿದು ಈಡಾಡಿದಂ ಇಂದ್ರಂಗೆ ಕವಚಮಂ ರಾಧೇಯಂ: **ಪಂಪಭಾ,** ೧. ೧೦೨); ಶತ್ರು (ಅರಿಕೇಸರಿಗೆ ಆತ್ಮಜರ್ ಅರಿನೃಪಶಿರೋದಳನ ಪರಿಣತೋಗ್ರಾಸಿ ಭಯಂಕರರ್ ಆ ಇರ್ವರೊಳ್ ಆರ್ ದೊರೆಯೆನೆ ನರಸಿಂಹ ಭದ್ರದೇವರ್ ನೆಗಟ್ದರ್: **ಪಂಪಭಾ,** ೧. ೨೨)

**ಅರಿಂಜಯ** – ಶತ್ರುವನ್ನು ಗೆಲ್ಲುವವನು (ಅರಿಂಜಯ ಮಹಾಗಜಯುದ್ಧದಂಡದಿಂ ಭೂಭುಜರ ಗಜಾಯುದ್ಧಂ ಆಸುರಂ ಧರೀನಿಯೊಳ್: **ಹರಿವಂಶ,** ೧೨. ೪೯)

**ಅರಿಂದಮ** – ಶತ್ರುಗಳನ್ನು ಅಡಗಿಸುವವನು (ಪತಿಯ ಪದಾರವಿಂದಮಂ ಅರಿಂದಮಂ ಅರ್ಚಿಸಿದಂ: **ಪಂಪರಾ,** ೫. ೧೨)

**ಅರಿಕಾಮಧ್ವಂಸಿ** – ಹಗೆಯಾದ ಕಾಮನನ್ನು ಕೊಂದವನು, ಶಿವ (ಅರಿಕಾಮಧ್ವಂಸಿ ನಾಗವ್ರಜಮಯಕಟಕಂ ರಾಜರಾಜ ಪ್ರತಿಷ್ಠಾನಿಕರಂ: **ಜಗನ್ನಾವಿ,** ೧. ೩)

**ಅರಿಕೇಸರಿ** – ಶತ್ರುಗಳಿಗೆ ಸಿಂಹದಂತಿರುವವನು, ಪಂಪನ ಆಶ್ರಯದಾತ (ಉದಾತ್ತನಾರಾಯಣಂ ಎಮಗೀಗೆ ಅರಿಕೇಸರಿ ಸೌಖ್ಯಕೋಟಿಯಂ: **ಪಂಪಭಾ,** ೧. ೧)

**ಅರಿಗ** – ಅರಿಕೇಸರಿ ಎಂಬ ರಾಜ (ಸರಸ್ವತಿ .. .. ಈಗೆ ಅರಿಗಂಗೆ ವಿಶುದ್ಧಬುದ್ಧಿಯಂ: **ಪಂಪಭಾ,** ೧. ೫)

**ಅರಿದಾಳ** – ಶಂಖಪಾಷಾಣ ಮತ್ತು ಗಂಧಕಗಳ ಮಿಶ್ರಣ ಹರಿತಾಲ (ಕಾಲ್ಗಳ ಅರಿದಾಳದ ಮೇಗಣ ಕೆಂಪಿನಣ್ಕೆಯಿಂ ದಿಟ್ಟಿಗೆ ಬಂದುದು: **ಮಲ್ಲಿನಾಪು,** ೫. ೩೨)

**ಅರಿದು** – ಅಸಾಧ್ಯ (ದೇವರ ಭುಜವರ್ಗಕ್ಕೇನಾವುದುಂ ಅರಿದುಂಟೆ: **ಆದಿಪು,** ೧೨. ೭೩)

**ಅರಿಧ್ವಜಿನಿ** – ಶತ್ರುಸೈನ್ಯ (ತ್ರಿಪೃಷ್ಠಂಗೆ ಅರಿಧ್ವಜಿನೀಮಾರಣಮೇನೋ ಯೂಥಪಪಥದಿಂದಕ್ಲೇಷಂ: **ಶಾಂತಿಪು,** ೫. ೪೯)

**ಅರಿನಿರ್ದಾರಣ** – ಶತ್ರುಗಳನ್ನು ಸೀಳಿ ಹಾಕುವವನು ಅರಿನಿರ್ದಾರಣನಂ ಅನಂತವೀರ್ಯಂ ಅಪಾರಬಲಂ ಯೌವರಾಜ್ಯದೊಳ್ ನಿಂದಂ: **ಶಾಂತಿಪು,** ೨. ೧)

**ಅರಿಪರದೂಷಣಸಂಧಿ** – ರಾಜನು ಶತ್ರುವಿನೊಡನೆ ಮಾಡಿಕೊಳ್ಳಬಹುದಾದ ಹದಿನಾರು ಬಗೆಯ ಸಂಧಿಗಳಲ್ಲಿ ಒಂದು; ಉತ್ತಮ ಭೂಪ್ರದೇಶವನ್ನು ಶತ್ರುವಿಗೆ ಕೊಟ್ಟು ಮಾಡಿಕೊಳ್ಳುವ ಸಂಧಿ (ಸಾರಭೂಮಿಯಂ ಕುಡುವುದು ಅರಿಪರದೂಷಣಸಂಧಿ ಜಂಬುದಕ್ಕುಂ: **ಪಂಚತಂತ್ರ,** ೩೦೭ ವ)

**ಅರಿಯಂ** – ಅಸಾಧ್ಯನಾದವನು (ನೆರದೊಳ್ ಕೊಲ್ವಂತೆನಗೇಂ ಅರಿಯನೆ ಗಾಂಡೀವಧನ್ವನೆಂಬುದುಮಾಗಳ್: **ಪಂಪಭಾ,** ೧೨. ೨೦೪)

**ಅರಿಯವು** – ಅಸಾಧ್ಯವಾದವು (ತಕ್ಷ್ಮಿತಿಧರದೆರ್ದೆಯಂತೆ ಚಮೂಪತಿಯಿಂ ತೆಱೆದತ್ತು ಚಕ್ರಿಗೆ ಅರಿಯವುಮೊಳವೇ: **ಆದಿಪು,** ೧೪. ೫೭)

**ಅರಿಷ್ಟ** – [ಜೈನ] ಒಂದು ರತ್ನ ಪ್ರಭೇದ (ರುಚಕಾಚಳದ ಮೂಡಣ ದೆಸೆಯುಂ .. .. ಅರಿಷ್ಟದ ಅಪರಾಜಿತೆಯುಂ: **ಚಂದ್ರಪ್ರಪು,** ೧೧. ೧೨೨ ವ)

**ಅರಿಷ್ಟಘರಟ್ಟ** – ದುಷ್ಟರಿಗೆ ಬೀಸುವ ಕಲ್ಲಿನಂತಿರುವವನು (ಅಕಲಂಕರಾಮ ತಳವರ್ಗತಳಪ್ರಹಾರಂ ಅರಿಷ್ಟಘರಟ್ಟ ರಾಷ್ಟ್ರಕೂಟ ಕಾಳಕೂಟಂ: **ಗದಾಯು,** ೨. ೭ ವ)

**ಅರಿಷ್ಟನೇಮಿ** – [ಜೈನ] ಇಪ್ಪತ್ತೆರಡನೆಯ ತೀರ್ಥಂಕರ (ಆ ಸುರೇಶ್ವರಂ ತ್ರಿವಿಷ್ಟಪಾಧೀಶ್ವರಗೆ ಅರಿಷ್ಟನೇಮಿಸ್ವಾಮಿಯೆಂಬ ಪುಣ್ಯಾಭಿಧಾನಮನಿಟ್ಟು: **ಕರ್ಣನೇಮಿ,** ೮. ೧೬೬ ವ)

**ಅರಿಷ್ಟಸದ್ಮ** – ಹೆರಿಗೆಯ ಮನೆ ಏಂ ಮನಕಕ್ಕೊಲವನಿತ್ತುದೋ ಬಾಗಿಲರಿಷ್ಟಸದ್ಮದಾ: **ಚಂದ್ರಪ್ರಪು,** ೩. ೯೭)

**ಅರಿಷ್ಟೆ** – [ಜೈನ] ಒಂದು ನರಕದ ಹೆಸರು (ಅಲ್ಲಿಂದತ್ತಂ ಏಕರಜ್ಜುಪ್ರಮಾಣಾಂತರದೊಳ್ ಅರಿಷ್ಟೆಯೆಂಬ ಪೆಸರನುಳ್ಳ .. .. ನರಕಬಿಲ: **ಅಜಿತಪು,** ೧೧. ೭ ವ)

**ಅರಿಸಾಧನ** – ಶತ್ರುಸೈನ್ಯ (ಅರಿಸಾಧನಕೆ ಅಡಕುದುರೆಗಳ್ ಮಸಗಿ ತಗುಳ್ದು ಇದಿರಾಂತುಂ .. .. ಉಣ್ಮೆ ಪೊಣ್ಮೆ ತಟ್ಟುತ್ತಿಱಿದರ್: **ಹರಿವಂಶ,** ೭. ೬೧)

**ಅರಿಸ್ಮಯ** – ಶತ್ರುಗಳಿಗೆ ಅಚ್ಚರಿಯುಂಟು ಮಾಡುವ (ಇದು .. .. ಕಂಡೈ ಖಂಡಿತ ಅರಿಸ್ಮಯ ಜಯವಿಜಯಾರ್ಧಾಚಲಂ: **ನೇಮಿನಾಪು,** ೫. ೧೧೭)

**ಅರುಚಿ** – ರುಚಿಯಿಲ್ಲದಿರುವುದು, ಅಪೇಕ್ಷೆಯಿಲ್ಲದಿರುವುದು (ಎಮ್ಮ ತಮ್ಮನ ಕಟಿಪ್ರದೇಶ ಭಾಗಕ್ಕಂ ಕಣ್ಣನೀರ್ ಬರ್ಪುದಕ್ಕಂ ಅರುಚಿಗಂ ಏಕೆ ಮರ್ದಂ ಮಾಡಿಸಿದಿರಿಲ್ಲ: **ವಡ್ಡಾರಾ,** ಪು. ೨೭. ಸಾ. ೩)

**ಅರುಣ** – ಕೆಂಪು ಬಣ್ಣ (ಅರುಣಂ ಶೋಣಂ .. .. ರಕ್ತಂ ಅದು ಲೋಹಿತಂ: **ಅಭಿಧಾವ,** ೨. ೧. ೬೪); [ಜೈನ] ಲೋಕಾಂತಿಕ ದೇವರಲ್ಲಿ ಒಂದು ಬಗೆ ಸಾರಸ್ವತ ಆದಿತ್ಯ ವಹ್ನಿ ಅರುಣ .. .. ದೇವರ್ ಬಂದು: **ಆದಿಪು,** ೯. ೬೦ ವ)

**ಅರುಣಜಳ** – ಕೆಂಪು ನೀರು, ರಕ್ತ ಮೀಂಬೊಲಸು ನಾರ್ಪ ಮೆಯ್ಗಂ ಅಳುಂಬಂ ತೂಂಬುರ್ಚಿದಂತೆ ಸುರಿವ ಅರುಣಜಳಕ್ಕಂ: **ಸುಕುಮಾಚ,** ೪. ೫೯)

**ಅರುಣಮಣಿ** – ಮಾಣಿಕ್ಯ (ಗವಾಕ್ಷಸ್ಥೇಂದುಕಾಂತೇಂದ್ರನೀಲಾ ಅರುಣಮಣಿಕಿರಣಂಗಳ್ ಪೊಣ್ಮುವಂತಾದುವಾಗಳ್; **ಆದಿಪು,** ೧೧. ೨೩)

**ಅರುಣಶಾಲಿ** – ಕೆಂಪು ಬತ್ತ (ಬೆಳೆದು ಪೊದಳ್ದು ನೀಳ್ದ ಅದರುಣಶಾಲಿಯಂ ಶುಕಾವಳಿ ನಡೆಗರ್ಚಿ ಪಾಱುವ ಬೆಡಂಗಂ: **ಪುಷ್ಪದಂಪು,** ೪. ೯೪)

**ಅರುಣಾಂಬು** – ರಕ್ತ (ಗಂಟಲಂ ಮುರಿದು ಅರುಣಾಂಬುವಂ ಪೀರ್ದು ಮರ್ದಿಸಿದಂ ವೃಷನಂ ಜನಾರ್ದನಂ: **ಜಗನ್ನಾವಿ,** ೫. ೩೮)

**ಅರುಣಾಬ್ಜ** – ಕೆಂಪು ತಾವರೆ (ವಿನತ ನಾಗೇಂದ್ರ ಹಸ್ತ ಅರುಣಾಬ್ಜಂ: **ಅಜಿತಪು,** ೧. ೧)

**ಅರುಣಾಶ್ಮ** – ಕೆಂಪು ಕಲ್ಲು, ಮಾಣಿಕ್ಯ (ಅರುಣಾಶ್ಮರಶ್ಮಿ ಸೂತ ಪ್ರಾತಸ್ಸಂಧ್ಯಮಂ ಅವಲೋಕಿಪಂ: **ಲೀಲಾವತಿ,** ೬. ೧೮)

**ಅರುಣಿತ** – ಕೆಂಪು ಮಾಡಲ್ಪಟ್ಟ (ಅಧರಮಯೂಖಾಳಿಯಿಂದೆ ಎತ್ತಲುಂ ಪಾಂಡುರಿತಂ ಪೈಶಂಗಿತಂ ಕರ್ಬುರಿತಂ ಅರುಣಿತಂ ವ್ಯೋಮರಂಗಂ: **ಚಂದ್ರಪ್ರಪು,** ೧೨. ೭೭)

**ಅರುಷ್ಕರ** – ಗೇರುಮರ (ಅರುಷ್ಕರರಸಪ್ರಕಾಶ ಕಲುಷಾಂಬುವಿಂ ಪುಣ್ಣಮೆಯ್ ಕರಂ ಕರಿಯೆ: **ವರ್ಧಮಾಪು,** ೫. ೩೬)

**ಅರುಹ** – ತೀರ್ಥಂಕರ (ಎಱಗುವಂ ಅರುಹಂಗೆ ಉಳಿದರ್ಗೆಱಗಂ ಕನಸಿನೊಳಂ; **ಕಬ್ಬಿಗಕಾ,** ೯)

**ಅರುಹಂತ** – ತೀರ್ಥಂಕರ (ಆಯತಿಯಂ ನಿಮಿರ್ಚುವ ಅರುಹಂತರ ಕೇವಲಬುದ್ಧಿ .. .. ಎಮಗೀಗೆ ಸಮಸ್ತಮತಿಪ್ರಕಾಶಮಂ: **ನೇಮಿನಾಪು,** ೧ ೭)

**ಅರುಹತ್ಸಮಯಿ** – ಜೈನ ಧರ್ಮಾನುಯಾಯಿ (ಅರುಹತ್ಸಮಯಿಗೆ ರುಜೆಯಾದೊಡೆ ಮರ್ದು ಮಾಟ್ಪುದಾ ಕ್ಷಣದೆ: **ಸಮಯಪ,** ೪. ೬೩)

**ಅರೆ** – ನುಣ್ಣಿಸು, ತೇಯು (ಅರೆ–ಪೇಷಣೇ: **ಶಬ್ದಮದ,** ಧಾ ೫೪೦); ಅರ್ಧಭಾಗ (ಬೆಸಸಿದೊಡೆ ಮೂಱುಪೊಟ್ಟುಂ ವಸುಧಾರೆಯನೊಸೆದು ಮೂಱುಕೋಟಿಯುಮರೆಯಂ ವಸುಪತಿ ಕರೆದು ರಾಜಾವಸ್ಥದೊಳೇಂ ಪಿರಿದೊ ಜಿನನ ಪುಣ್ಯಾತಿಶಯಂ: **ಅಜಿತಪು,** ೩. ೫); ಕೊರತೆ (ತಾವರೆಗಂ ಅರೆಯಾಯ್ತು ನಲವು ಎನೆಧರೆಯೊಳ್ ಕಾಲಮನದಾರೊ ಕಳೆಯಲ್ ಬಲ್ಲರ್: **ಚಂದ್ರಪ್ರಪು,** ೧. ೧೯); ಒಂದು ಭಾವಸೂಚಕಾವ್ಯಯ (ಅರೆ ಹೋಯಜ ಬಾಪ್ಪೆಂದು ಹರಿಗನಂ ಗುರು ಪೊಗಟ್ದಂ: **ಪಂಪಭಾ,** ೨. ೬೦); ಕೆಲವು (ಬಹುಳಂ ಚತ್ವಂ ಅರೆ ಎಡೆಯೊಳ್ ಜತ್ವಂ ಮೇಣ್ ಅರೆ ಎಡೆಯೊಳ್ ಸಂಖ್ಯೆಯಾಗೆ ನಿಯತ್ವಂಭತ್ವಂ: **ಶಬ್ದಮದ,** ೭೮)

**ಅರೆಗಟ್ಟು** – ಅರ್ಧ ಕಟ್ಟು, ಸಡಿಲವಾಗಿ ಕಟ್ಟು (ಅರೆಗಟ್ಟಿ ತುರಿಪದಿಂ ಪರಿತರೆ: **ಶಾಂತಿಪು,** ೬. ೧೦)

**ಅರೆಗಣ್ದೆಱೆದು** – ಅರ್ಧಕಣ್ಣನ್ನು ತೆರೆದಿರುವುದು (ಅರೆಗಣ್ದೆಱೆದುಗಳುಂ ತಾಱುವ ತಾಳ್ಗಳುಂ ಅಗುರ್ವಿಸಲ್ ಕಾಡಕೋಣಂ ಎಯ್ದಿದುದು: **ಜಗನ್ನಾವಿ,** ೧೭. ೬೬)

**ಅರೆಗಣ್ಮುಗಿ** – ಅರ್ಧಕಣ್ಣು ಮುಚ್ಚು (ಏಕಪಾದದೊಳೆ ನಿಂದು ಅರೆಗಣ್ಮುಗಿದು ಆತ್ಮಚಿಂಚುವಂ ನಿಡುಗೊರಲಿಂ ಮರಲ್ಚಿ: **ರಾಜಶೇಖರ,** ೬. ೯)

**ಅರೆಗಬ್ಬಿಗ** – ಅಲ್ಪ ಕವಿ (ಮಿಥ್ಯಾತ್ವಂ ತಾನೀ ದೊರೆತು ಎನಲ್ ಅರೆಗಬ್ಬಿಗರಾದರ್ ನೆಱೆ ಬಲ್ಲರೇ ಕವಿಪ್ರಬಲತೆಯಂ: **ಸಮಯಪ,** ೧೦. ೧೮೨)

**ಅರೆಗರಿಂಕುವೋಗು** – ಅರ್ಧ ಸೀದು ಕರಿಕಾಗು (ಅರೆಗರಿಂಕುವೋದ ಚಮರಿಗಳನನುಕರಿಸಿ ಕೊರಗಿ ಪರಿದ ಶೀತಳಿಕೆಗಳ ಬಳಗಮುಮಂ: **ಆಚವರ್ಧ,** ೫. ೬೩ ವ)

**ಅರೆಗವಡಿಕೆ** – ಕವಡೆಯ ಅರ್ಧಭಾಗ ಪಾರ್ವತಿಯಂ ತನ್ನೊಂದು ಪೆಂಪಿಂಗೆ ಅರೆಗವಡಿಕೆಯಂ ಕೊಳ್ಳಳ್: **ನೇಮಿನಾಪು,** ೩. ೪)

**ಅರೆಗಟ್ಟಲೆ** – ಅರ್ಧ ಕತ್ತಲೆ (ನಸುಗಟ್ಟಲೆ ಅರೆಗಟ್ಟಲೆ ಮುಸುಂಕುಗಟ್ಟಲೆ ಮೊದಲ್ದ ಪೆರ್ಗಟ್ಟಲೆ: **ಗಿರಿಜಾಕ,** ೪. ೭೩)

**ಅರೆಗಟಿಗೆ** – ಅರ್ಧಗಳಿಗೆ, ಸ್ವಲ್ಪ ಹೊತ್ತು (ಈ ನಿಜಸಂಗತಿಯಿಂ ಪೊಟ್ಟು ಪೋದುದು ಅರೆಗಟಿಗೆಯವೋಲ್: **ಮಲ್ಲಿನಾಪು,** ೪. ೬೪)

**ಅರೆಗಾವುದ** – ಅರ್ಧ ಗಾವುದ, ಆರು ಮೈಲಿ (ಅರೆಗಾವುದಮಂ ಪರಿದಂ ಮೂಗಾವುದಮಂ ನಡೆದಂ: **ಶಬ್ದಮದ,** ೧೩೯ ಪ್ರ)

**ಅರೆಗೀಲ್** – ಅರೆಕಾಲು (ಮಿನುಗುವ ಕೊಂಬಿನಚ್ಚು ಕಿಱುಗೊಂಬಿನ ತಳ್ತ ಅರಗೀಲ್ ಕವಲ್ತ ಕೊಂಬಿನ ಮಡ: **ಕಬ್ಬಿಗಕಾ,** ೧೬೭)

**ಅರೆಗೆಱೆ** – ಶ್ರೇಷ್ಠವಾದ ಕೆರೆ (ಅರೆಗೆಱೆ ಕೆಱೆ ಮಾವು ಇಮ್ಮಾವೆ ನೋಡೆ ತರು ಸುರತರು: **ಶಾಂತಿಪು,** ೩. ೭)

**ಅರೆಗೇಣ್** – ಅರ್ಧ ಗೇಣು (ಮೂಱುಂ ಮೊಟವರೆಗೇಣ್ ಸಪ್ತೋರ್ವೀವಳಯಂಬರಂ: **ಶಾಂತಿಪು,** ೭. ೮೮)

**ಅರೆಗೊಯ್** – ಅರ್ಧ ಕೊಯ್ಯು ಅರೆಗೊಯ್ದುಂಬುಱದಿಂ ನೊಂದು ಸತ್ತುದಿಲ್ಲ ಅಜಪೋತಂ: **ಯಶೋಧಚ,** ೩. ೭೫)

**ಅರೆಜಾವ** – ಅರ್ಧ ಜಾವದಷ್ಟು ಕಾಲ, ಒಂದೂವರೆ ಗಂಟೆ, ಸ್ವಲ್ಪ ಕಾಲ (ಪುಲ್ಲಂ ಪಿಡಿದು ಮಗುಟ್ದು ಕಿಡಿದಂತರಂ ಬಂದು ಪುಲ್ಲನಲ್ಲಿಯೆ ಬಿಸುಟು ಕಿಡಿದು ಪೋಟ್ಟುಗಳೆದು ಮಗುಟ್ದಿರುಳರೆಜಾವಮಾದಾಗಳ್ ಭಟ್ಟರಿರ್ದೆಡೆಯನಱಿಸುತ್ತುಂ ಬಂದು: **ಪಂಚತಂತ್ರ,** ೩೨೫ ವ)

**ಅರೆದೆಱೆ** – ಅರ್ಧ ತೆರೆ (ತನ್ನ ಕಣ್ಗಳಂ ಅರೆದೆಱೆದು ದರನಿಮೀಲಿತಲೋಚನ ಕಮಲಾಕರಮಿರ್ಪಂತಿಯಿರ್ದ: **ಗದಾಯು,** ೫. ೪೦ ವ)

**ಅರೆಪಲ್ದೆಱೆ** – ಹಲ್ಲುಗಳು ಅರ್ಧ ಹೊರಗೆ ಕಾಣುವಂತೆ ಬಾಯಿಬಿಡು (ಅರೆಪಲ್ದೆಱೆದೋವದೆ ಕಂಡಕಂಡರಂ ಸೈರಣೆಗೆಟ್ಟು ಬೇಡದೆ: **ಧರ್ಮಾಮೃ,** ೪. ೫೪)

**ಅರೆಬರ್** – ಕೆಲವರು (ಧರೆಯೊಳ್ ಸಲೆ ಪಾಷಂಡಿಗಳ್ ಅರೆಬರ್ ಪುಟ್ಟಿಯುಂಡಂಗುವರ್: **ಆದಿಪು,** ೧೫. ೨೯)

**ಅರೆಮತ್ತರ್** – ಅರ್ಧ ಮತ್ತರು (ಭೂಮಿಯ ಒಂದು ಅಳತೆ] (ಅರೆಮತ್ತರ್ ನೆಲನಂ ದ್ವಿಜಂಗೆ ಮುದದಿಂದೀಯಲ್ಕೆ ತದ್ದಾನದಿಂ ಸುರಲೋಕಂ ದೊರೆಕೊಳ್ಗುಂ ಎಂಬರ್: **ಸಮಯಪ,** ೧೦. ೯೭)

**ಅರೆಮುಗುಳ್** – ಅರ್ಧ ಮುಚ್ಚಿಕೊ (ಅರೆಮುಗುಳ್ದ ರಕ್ತಾಂಭೋಜದಳ ವಿಳಾಸೋಪಹಾಸಿಗಳಪ್ಪ ಕಣ್ಗಳಂ: **ಪಂಪಭಾ,** ೧೩. ೬೩ ವ)

**ಅರರೊಳಿ** – ಒಂದು ಬಗೆಯ ಮರ (ಅರರೊಳಿ ತಳಿಸಿನ ಸರಿಸದ ಬೇಳದುರಿಯ ಬಿಳಿಲ ಸಿವನ್ನಿಯ ಕೋಳ್ಮರದಾರ ತಱಿಯ ಬಸುರಿಯ ದುರಿಕ್ಷ ಕಕ್ಷಾಂತರಾಳದಿಂ ಪುದಿದಿರ್ಕುಂ: **ವರ್ಧಮಾಪು,** ೫.೫೦)

**ಅರೆವರಿ** – ಉಪೇಕ್ಷೆ (ಕನರ್ಪ ನಲ್ಮೆರ್ದೊರ್ಪ ಅರೆವರಿಕೆಯ್ವ ಮೇಳಿಸುವ ಜತ್ತುವ ಕಾಲ್ವಿಡಿದಿಂಬುಕೆಯ್ವ .. .. ತೊಡರ್ಪಿನೊಳ್ ಪೋದುವು ಪೊತ್ತುಗಳ್: **ವರ್ಧಮಾಪು,** ೬. ೫೧)

**ಅರೆವಳ** – ಅರೆಯುವ ಕೆಲಸದಲ್ಲಿ ತೊಡಗಿರುವವನು (ಪಯ್ದರ್ ಅರೆವಳರಂತೆ ಕತ್ತುರಿಯ ಘಟ್ಟಿಯನಲ್ಲಿ ಘಟ್ಟಿವಳ್ತಿಯರ್: **ಅನಂತಪು,** ೧. ೧೦೭)

**ಅರೆವಾತು** – ಅಸ್ಪಷ್ಟ ನುಡಿ (ಆಡಿಸುವ ತೋಳ್ ತೇರಯ್ಪ ಬಾಯ್ ತಪ್ಪಿ ಬರ್ಪ ಅರೆವಾತು ಉಣ್ಮುವ ಕಿತ್ತುಸಿರ್: **ಆಚವರ್ಧ,** ೪. ೬೧)

**ಅರೆವಾನಿಸಿಕೆ** – ಅರ್ಧ ಮನುಷ್ಯತ್ವ (ಶೂದ್ರಕನ ವಿಕ್ರಮಾಡಂಬರಮಂ ಅಂದು ಅರೆವಾನಿಸಿಕೆಯೊಳೊಂದಿದ ನರಸಿಂಹ ಆಡಂಬರಕ್ಕೆ ನಸುನಗುತಿರ್ಕುಂ: **ಕಾದಂಬ,** ೧. ೧೦)

**ಅರೆವಿರಿ** – ಅರ್ಧ ಬಿರಿ (ಅರೆವಿರಿದ ನೀರ್ವೂಗಳ ಕಂಪಿಂಗೆ ಮಾಣದೆ ಮುಸುಱೆ ಪೊಱೆವ ಪೆಣ್ದುಂಬಿಗಳ: **ಕಬ್ಬಿಗಕಾ,** ೧೮)

**ಅರೆವೆಣ್ಣ** – ಅರ್ಧ ಹೆಣ್ಣಾದವನು, ಶಿವ (ಅದಟಿನಳುರ್ಕೆಯಂ ಕಿಡಿಸಿ ಬಿಂಕಮನಟ್ಟಿಸಿಯೆನ್ನ ಕೋಲ್ಗಳಿಂ ಸದೆದು ಅರೆವೆಣ್ಣನಂ ಬಿಡದೆ ಮಾಡಿ: **ಕಬ್ಬಿಗಕಾ,** ೧೫೩)

**ಅರೆವೆಣ್ತನ** – ಅರ್ಧ ಹೆಣ್ಣಾಗಿರುವ ಸ್ಥಿತಿ (ಶಿವನರೆವೆಣ್ತನಂ ಹರಿಯ ಹಾದರಂ ಅಬ್ಜಜನ ಒಲ್ದ ಲಜ್ಜೆ ಹೇಳದೆ ನನೆವಿಲ್ಲಬಲ್ಲಹನ ಶೌರ್ಯಮಂ: **ಅನಂತಪು,** ೧. ೯೧)

**ಅರೆವೆಸ** – ಅರ್ಧ ಕೆಲಸ (ಅರೆವೆಸನಾಗಲಿತ್ತಪುವೆ ಪೂವಿನ ಪುತ್ತಳಿಗಳ್ಗೆ ನೋಟದಂತಿರೆ ನಗೆಗಣ್ಗಳ್: **ಲೀಲಾವತಿ,** ೧೧. ೭೦)

**ಅರೆವೊತ್ತು** – ಸ್ವಲ್ಪ ಹೊತ್ತಿಕೊ, ಉರಿ (ಅರೆವೊತ್ತಿ ತೊಟ್ಟ ತನ್ನಣವುರಿಯಲ್ಕೊಡರಿಸಿದೊಡೆ: **ಪಂಪಭಾ,** ೧೦. ೭೯)

**ಅರೆವೊರೆಕ** – ಅಸ್ತವ್ಯಸ್ತ (ಪೊಣ್ಮಿದ ಘರ್ಮಬಿಂದುಗಳಿಂ ನಾಂದು ಪುಚ್ಚಳಿಉ ಅರೆವೊರೆಕನಾದ ಕುಂಕುಮಪತ್ರಭಂಗದ ಕೊರಗಿದ ನಗೆಮೊಗಂಗಳುಂ: **ಆದಿಪು,** ೧೧. ೭೦ ವ)

**ಅರೋಚಕ** – ನಾಲಗೆಯ ರುಚಿ ಕಳೆದುಕೊಂಡವನು (ನಿರತಿಶಯ ರಸಸಮೇತಮಂ ಅರೋಚಕಂ ಮೆಚ್ಚದಂತೆ ಸೊಗಯಿಸುವ ಉಣಿಸಂ: **ಕವಿರಾಮಾ,** ೩. ೧೫೨); ರುಚಿ ಕಳೆದುಕೊಳ್ಳುವ ರೋಗ (ಅರೋಚಕಮಾದೊಡೆ ಇಲ್ಲ ಬಂದೊದವಿ ಕಳಾವಿಳಾಸ ಕವಿತಾಮೃತಮಂ ಮನವಾರೆ ಪೀರ್ದುದು: **ಧರ್ಮಮಧು,** ೧. ೬೫)

**ಅರೋಚಿ** – ಅವಿವೇಕಿ (ಗದ್ಯಕಾವ್ಯದೊಳ್ ನಿರ್ಬಂಧಂ ಪುಗದೆಂದು ಅರೋಚಿಗಳ್ ಅದಂ ತೆಗೞೆಂದು ಆ ಗದ್ಯಕಾವ್ಯದೊಳಿಕ್ಕರ್: **ಶಬ್ದಮದ,** ೭೦)

**ಅರ್ಕ** – ಸೂರ್ಯ (ರವಿ ಮಾರ್ತಂಡಂ ಪತಂಗಂ ತಪಿ ತಪನಂ ಇನಂ ಭಾನು ಪೂಷಂ ಸಹಸ್ರಾಂಶು ವಿಪಸ್ವಂತಂ ಖಗಂ ಭಾಸ್ಕರಂ ಅಹಿಮಕರಂ ಸೂರ್ಯಂ ಅಂಭೋಜಮಿತ್ರಂ ದಿವಸೇಂದ್ರಂ ಬಧ್ನಂ ಅಂಶು ಗ್ರಹಪತಿ ಹರಿದರ್ಶವಂ ತಮೋವೈರಿ ಹಂಸಂ ಸವಿತಾರಂ ಸೂರಂ ಅರ್ಕಂ ದ್ಯುಮಣಿ

ತರಣಿ ಸಪ್ತಾಶ್ವಂ ಆದಿತ್ಯನಕ್ಕುಂ: **ಅಭಿಧಾವ,** ೧. ೧. ೬೪); ಎಕ್ಕೆ (ಪಾಲಾಶ ಅಶ್ವತ್ಥ ಅರ್ಕ ಔದುಂಬರ ನ್ಯಗ್ರೋಧ ಶಮಿ ಅಪಾಮಾರ್ಗ ಖದಿರ ಆದಿ ಶುಷ್ಕಸಮಿತ್ತುಗಳುಮಂ ಕುಶ ಅಶ್ವಲಾಯನ ವಿಶ್ವಾಮಿತ್ರಾದಿ ದೂರ್ವಾಂಕುರ ಪವಿತ್ರವಸ್ತುಗಳುಮಂ ಕೊಂಡು: **ಪಂಚತಂತ್ರ,** ೧೯೦ ವ)

**ಅರ್ಕಗ್ರಾವ** – ಸೂರ್ಯಕಾಂತಶಿಲೆ (ಅರ್ಕತೇಜದಿಂ ಅರ್ಕಗ್ರಾವದ ಕಾರ್ಪ್ವೇಱುವವೋಲ್: **ಜಗನ್ನಾವಿ,** ೧೩. ೪೧)

**ಅರ್ಕಜಾಂಬು** – [ಅರ್ಕಜಾ+ಅಂಬು] ಸೂರ್ಯನ ಮಗಳಾದ ಯುಮುನಾ ನದಿಯ ನೀರು (ನೃಪನಲ್ಲಿ ನಾಂದು ಕಂಗೊಳಿಸಿದಂ ಅರ್ಕಜಾಂಬು ಮುಸುಕಿರ್ದ ಅಮರೇಂದ್ರಗಜೇಂದ್ರದಂತೆ: **ರಾಜಶೇವಿ,** ೧೦. ೯೧)

**ಅರ್ಕನಂದನ** – ಕರ್ಣ (ಪತಿಹಿತಂ ಅಂಜನಾತನಯಂ ಆ ಪವನಾತ್ಮಜನಿಂ ಖಗೇಶ್ವರಂ ಪತಿಹಿತಂ ಆ ಮರುತ್ತನಯನಿಂ ಖಗರಾಜಂ ಅರ್ಕನಂದನಂ ಪತಿಹಿತಂ: **ಪಂಚತಂತ್ರ,** ೪೪೭)

**ಅರ್ಕಱ್** – ಅಕ್ಕರು, ಪ್ರೀತಿ (ಎಡೆವಿಡದೆ ಅರ್ಕಱುಣ್ಮೆ ಗಲನಿಸ್ವನಮೊಪ್ಪಿರೆ .. .. ಸಮಾಗಮಂಬಡುತೆ: **ಹರಿವಂಶ,** ३. ೬೩)

**ಅರ್ಕಾಡು** – ಅಱ್ಕಾಡು, ನಿಶ್ಶೇಷವಾಗು (ತಮ್ಮ ಬಲಂ ಅರ್ಕಾಡುವುದುಮಂ ಅಂಜಿಯೋಡುವುದುದುಮಂ ಕಂಡು: **ಹರಿವಂಶ,** ೭. ೬೩ ವ)

**ಅರ್ಗಳ** – ಅಗುಳಿ (ಅತ್ವಕ್ಕಿತ್ವಮಕ್ಕುಂ: .. .. ಅರ್ಗಳಂ–ಅಗುೞಿ: **ಶಬ್ದಮದ,** ೨೯೨ ಪ್ರ)

**ಅರ್ಗಳಾಕಾರ** – ಅಗುಳಿಯಂತೆ ದಂಡಾಕಾರದ (ಸಕಟೋದ್ವೃಷ್ಟವನೇಭ ತುಂಗಜರಠಸ್ಥೂಳ ಅರ್ಗಳಾಕಾರಮಾರ್ಗ ಕುಜಂ: **ಆದಿಪು.** ೧೩. ೫೫)

**ಅರ್ಗು** – ಅಟ್ಟು, ಮುಳುಗು (ತೀವಿದ ಭಂಡದಿನೊಪ್ಪುವ ನಾವೆ ಮರುದ್ವಶದಿಂದಂ ಅರ್ಗಿದುದಾಗಳ್: **ಹರಿವಂಶ,** ೪. ೧೫)

**ಅರ್ಘಿಸು** – ಅರ್ಘ್ಯವನ್ನು ಕೊಡು (ಅರ್ಘ್ಯಮನೆತ್ತಿ ದಿನೇಶಂಗೆ ಅರ್ಘಿಸಿ ಪೊಡೆವಟ್ಟು: **ಸುಕುಮಾಚ,** ೩. ೪)

**ಅರ್ಘ್ಯ** – ಶ್ರೇಷ್ಠ, ಪೂಜ್ಯ (ಶ್ರೀ ವಾಸುದೇವಂ ಅರ್ಘ್ಯಂ ಅಮೋಘಂ: **ಜಗನ್ನಾವಿ,** ೧೭. ೨೭)

**ಅರ್ಘ್ಯಕರ** – ಪೂಜಾಸಾಮಗ್ರಿಗಳನ್ನು ಕೈಯಲ್ಲಿಟ್ಟುಕೊಂಡವನು (ವಿವಿಧ ಅರ್ಘ್ಯಕರರ್ ಕಾಣ್ಬುಜ್ಜುಗದಿಂ ಭವನ ಮಹತ್ತರದೇವರ್ ಕ್ರಮದಿಂ ಬರೆ: **ಚಂದ್ರಪ್ರಪು,** ೪. ೬೩)

**ಅರ್ಚನಾನೀಕ** – ಪೂಜಾದ್ರವ್ಯಗಳ ಸಂದಣಿ (ಜಿನಪದಾಂಭೋಜಮಂ ಪೂಜಿಸಿದ ವಿವಿಧಮಪ್ಪ ಅರ್ಚನಾನೀಕಮಂ ದೇವನಿಕಾಯಂ ಪ್ರೀತಿಯಿಂದಂ .. .. ತಾಳುವರ್: **ಸಮಯಪ,** ೧. ೧೨೧)

**ಅರ್ಚನಾವಿಧಿ** – ಪೂಜಾಕ್ರಮ (ಏಂ ದ್ರವ್ಯದ ಭವದ ಅರ್ಚನಾವಿಧಿ ಪಿರಿದೋ: **ಶಾಂತಿಪು,** ೧೨. ೪೭)

**ಅರ್ಚನೆ** – ಪೂಜಾಸಾಮಗ್ರಿ (ವಿವಿಧ ಅರ್ಚನೆಗಳಿನರ್ಚಿಸಿ ವಿವಿಧಸ್ತುತಿಶತಸಹಸ್ರದಿಂ ಸ್ತುತಿಯಿಸಿ: **ಆದಿಪು,** ೫. ೭೨)

**ಅರ್ಚನೆಗುಣಿ** – [ಅರ್ಚನೆ+ಕುಣಿ] ಅರ್ಚನೆಯ ಭಾಗವಾಗಿ ಕುಣಿ (ತಮ್ಮುತ್ತಮಿಕೆಯನೊಕ್ಕು ಆಗಡೆ ಸತ್ತಪೆವೆಂದಂಜಿ ಬಳರಿಗೆ ಅರ್ಚನೆಗುಣಿವರ್: **ಸಮಯಪ,** ೯. ೯೧)

**ಅರ್ಚಾಕ್ರೀಡನ** – ಪೂಜೆಯ ಆಟ (ತತ್ ಪ್ರತಿಮಾನೀಡಾಗಮಂ ಅರ್ಚನಾಕ್ರೀಡನಮುಂ ಮುಕ್ತಿಹೇತುವಪ್ಪುದು ಪಿರಿದೇ: **ಶಾಂತಿಪು,** ೧೨. ೪೯)

**ಅರ್ಚಿ** – ಜ್ವಾಲೆ (ನೋಡಲ್ ಅಣಂ ಅಣ್ಮಳೆ ತಪ್ತ ವಿಳೋಚನಾರ್ಚಿಯಿಂ: **ನೇಮಿನಾಪು,** ३. ೧೦೮); ಕಾಂತಿ (ರತ್ನ ಅರ್ಚಿಃ ಅಲಂಕೃತಖ ಕೃತಕಶೈಲಂ: **ಜಗನ್ನಾವಿ,** ೨. ೨)

**ಅರ್ಚಿಃಕಣ** – ಕಿಡಿ (ಸಂಜಾತೇಂದ್ರಗೋಪಪ್ರಸರವಿಸರದ ಅರ್ಚಿಃಕಣಂ .. .. ಬಂದುದು: **ಚಂದ್ರಪ್ರಪು,** ೪. ೨೯)

**ಅರ್ಜುನ** – ಮತ್ತಿಯ ಗಿಡ (ಕಕುಭ ಅಶೋಕ ಕದಂಬ ಲುಂಗ ಲವಲೀ ಭೂಜ ಅರ್ಜುನ ಅನೋಕಹಪ್ರಕರಂ: **ಪಂಪಭಾ,** ೫. ೮೦); ಬಿಳಿಪು; ಪಾಂಡವರಲ್ಲಿ ಒಬ್ಬ

**ಅರ್ಣವ** – ಸಮುದ್ರ (ಇದು ನಿಚ್ಚಂ ಪೊಸತು ಅರ್ಣವಂಬೊಲತಿಗಂಭೀರಂ ಕವಿತ್ವಂ: **ಆದಿಪು,** ೧. ೨೭)

**ಅರ್ಣವತೀರ್ಣ** – ಸಮುದ್ರವನ್ನು ದಾಟಿದವನು (ಕಳಾ ಅರ್ಣವತೀರ್ಣನ ಕೋಮಳಸ್ವಭಾವನ ಕವಿರಾಜಮಲ್ಲನ: **ಲೀಲಾವತಿ,** ೯. ೧೩೯)

**ಅರ್ಣವವೃತ** – ಸಮುದ್ರದಿಂದ ಸುತ್ತುವರಿದ (ಅರ್ಣವವೃತ ಭೂಭರಮಂ ನಿರ್ಣಯಿಸುವ ಪುತ್ರನಲ್ಲಿ ಗತಿವಡೆಯದೆ ಪೋಪರ್: **ನೇಮಿನಾಪು,** ೧. ೧೧೯)

**ಅರ್ತಿ** – ಪ್ರೀತಿ (ಪೊಸವೂಗಳಂ ಅರ್ತಿಯೊಳ್ ಆಯ್ದು ಕೊಯ್ದು ಬೆನ್ನನೆ ಬರಲ್: **ಕಾದಂಬ,** ೫. ೨೮); ವ್ಯಥೆ (ಈ ವಿಳಾಸವತಿಯರ ಸೋಂಕಿಂದ ಅನುರಕ್ತನಾದನೆಂಬ ಅರ್ತಿ ನಿಮಿರ್ದವೋಲ್ ದಿವಸಲಕ್ಷ್ಮಿಯುಂ ಬಡವಾದಳ್: **ಆಚವರ್ಧ,** ೬. ೨೩)

**ಅರ್ಥಕೃತಿ** – ಅರ್ಥವಂತಿಕೆಯಿಂದ ಕೂಡಿದ ಕಾವ್ಯ (ಕೆಲವರೋದದೆ ಕೇಳದೆ ಕಲ್ಗಳಂತೆ ಗರ್ವಿತರ್ ಅಡಸಿರ್ಪರ್ ಅರ್ಥಕೃತಿಗೆ: **ಗದಾಯು,** ೧. ೫೦)

**ಅರ್ಥಖಂಡನ** – ಇತರ ಅರ್ಥವನ್ನು ನಿರಾಕರಿಸುವುದು (ಶಬ್ದಖಂಡನಂ ಅರ್ಥಖಂಡನಂ ಅನುಮಾನಖಂಡನಮೆಂಬ ತರ್ಕತಂತ್ರಕೋವಿದರಪ್ಪ ವಾದಿಗಳುಂ: **ಗಿರಿಜಾಕ,** ೨. ೧೦೫ ವ)

**ಅರ್ಥಗ್ರಾಹಿ** – ಹಣ ಅಥವಾ ಪ್ರಯೋಜನವನ್ನು ಪಡೆಯುವವನು (ನಿರಂಜನರಾಗಿರ್ದುಂ ಅಶೇಷ ಲೋಕಹಿತ ಅರ್ಥಗ್ರಾಹಿಗಳ್: **ಪುಷ್ಪದಂಪು,** ೧. ೨)

**ಅರ್ಥಘಟನೆ** – ಅರ್ಥ, ಅಭಿಪ್ರಾಯದ ಹೊಂದಿಕೆ (ಬಡಿದು ಪೂಣ್ದಿಜೆವಾಗಳೆಂಬುದು ಬೞೆದು ಪೂಣ್ದಿಜೆವಾಗಳೆಂದೊಡೆ ಅರ್ಥಘಟನೆಯಿಲ್ಲ ಅದಱಿಂ ಯಮಕವಾಗದು: **ಶಬ್ದಮದ,** ಸೂ. ३೦, ಪುಟ ೨೫ ಅಡಿಟಿಪ್ಪಣಿ)

**ಅರ್ಥದುಷ್ಟ** – ಅಸಭ್ಯ ಅರ್ಥಪ್ರತೀತಿಗೆ ಎಡೆ ಮಾಡಿಕೊಡುವಂಥದು, ಒಂದು ಕಾವ್ಯ ದೋಷ (ಶ್ರುತಿದುಷ್ಟಂ ಅರ್ಥದುಷ್ಟಂ ಶ್ರುತಿಕಷ್ಟಂ ಕಲ್ಪನೋಕ್ತಿಕಷ್ಟಂ ಎಂದೀ .. .. ನಾಲ್ಕುಮಿಲ್ಲಿ ಕೃತಿದೋಷಂಗಳ್: **ಕವಿರಾಮಾ,** ೧. ೬೨)

**ಅರ್ಥದೂಷಕ** – ಹಣ ದುರುಪಯೊಗ ಮಾಡುವವನು (ತ್ಯಾಗಿಯಂ ಅರ್ಥದೂಷಕನೆಂಬರ್ ಅರ್ಥದೂಷಕನಂ ತ್ಯಾಗಿಯೆಂಬರ್: **ಪಂಚತಂತ್ರ,** ೧೦೪ ವ)

**ಅರ್ಥದೃಷ್ಟಿ** – ಅರ್ಥದ ಕಡೆಗಿನ ಗಮನ (ಇನಿತು ಉಪಪತ್ತಿಯಿಲ್ಲ ಇನಿತು ಬಿನ್ನಣಮಿಲ್ಲ ಇನಿತು ಅರ್ಥದೃಷ್ಟಿಯಿಲ್ಲ: **ಅಜಿತಪು,** ೧೨. ३೫)

**ಅರ್ಥಪ್ರವರ್ತನ** – ಆರ್ಥಿಕ ವ್ಯವಹಾರ (ವಣಿಗ್ವಂಶಕ್ಕೆ ಜಳಸ್ಥಳಯಾತ್ರಾಸಂವೃತಂ ಅರ್ಥಪ್ರವರ್ತನಮುಂ .. .. ನಿಜೆಸಿ: **ಆದಿಪು,** ೮. ೭३ ವ)

**ಅರ್ಥವೃತ್ತಿ** – ಅರ್ಥವಿವರಣೆ (ವೃತ್ತಿವ್ಯಾಸಂ ತದ್ವ್ಯಾಕುಲಮೆಂದು ಆ ಸೂತ್ರಕ್ಕೆ ಅರ್ಥವೃತ್ತಿ ವರ್ತಿಸೆ ಪೇೞ್ದಿಂ: **ಶಬ್ದಮದ,** ೬)

**ಅರ್ಥವ್ಯಕ್ತಿ** – ಅರ್ಥ ಸ್ಪಷ್ಟವಾಗಿರುವುದು (ಕ್ರಿಯಾಕಾರಕದೊಳ್ ಪುದಿದು ಅರ್ಥವ್ಯಕ್ತಿಯನೀವುದು: **ಕವಿರಾಮಾ,** ೧. ೨೫)

**ಅರ್ಥಶಾಸ್ತ್ರ** – ಕೌಟಿಲ್ಯದ ರಾಜನೀತಿಯ ಗ್ರಂಥ (ಲೋಕಕಿದು ಅರ್ಥಶಾಸ್‌ರದ ಟೀಕೆನಿಸಿದ ತನ್ನ ನುಡಿ ಮನಂಗೊಳಿಸೆ: **ಪಂಪಭಾ,** ೯. ೧೪)

**ಅರ್ಥಶಾಸ್ತ್ರಸದ್ಭಾವ** – ಅರ್ಥಶಾಸ್ತ್ರ ಅಭಿಪ್ರಾಯ (ಎಂಬುದರ್ಥಶಾಸ್ತ್ರಸದ್ಭಾವಂ: **ಪಂಪಭಾ,** ೨. ೯೦ ವ)

**ಅರ್ಥಸಂಚಯ** – ಹಣಶೇಖರಣೆ, ಹಣದ ರಾಶಿ (ನೋಡುವೆನಾ ಮಹೀಪತಿಯಂ ಅರ್ಥಿಗಣ ಅರ್ಥಿತ ಕಲ್ಪವೃಕ್ಷನಂ ಬೇಡುವೆಂ ಅರ್ಥಸಂಚಯಮಂ: **ಕವಿರಾಮಾ,** ೨. ೧೦೨)

**ಅರ್ಥಸಂವರಣೆ** – ಹಣವನ್ನು ಬಚ್ಚಿಡುವುದು (ಅರ್ಥಸಂವರಣೆಯಿನರ್ಥಮಂ ಪಡೆಗುಂ ಅಲ್ಲದೆ ಸೌಖ್ಯಮನೀಯಲಾರ್ಕುಮೇ: **ಪಾರ್ಶ್ವನಾಪು,** ೧೨. ೪೦)

**ಅರ್ಥಾನುರೂಪ** – ಅರ್ಥಕ್ಕೆ ಅನುಗುಣವಾದ (ಅನ್ವರ್ಥನಾಮಂ ಗುಣಕ್ಕಂ ಅರ್ಥಕ್ಕಂ ಅನುರೂಪಮಾಗಿರ್ಪುದು: **ಶಬ್ದಮದ,** ೮೬ ವೃತ್ತಿ)

**ಅರ್ಥಾರ್ಥಿ** – ಹಣವನ್ನು ಬೇಡುವವನು (ಅರ್ಥಾರ್ಥಿಯಾಗಿ ಪೋಗಲ್ಬಗೆದು ತನ್ನ ಮನೆಯೊಳ್ ಮಾರ್ಮನುಷ್ಯರಿಲ್ಲದ ಕಾರಣದಿಂ ತಾಂ ನಡಪಿದೊಂದು ನಕುಲನಂ ತೊಟ್ಟಿಲ ಸಮೀಪದೊಳ್ ನಿಡಿದಪ್ಪ ನೇಣಿಂ ಕಟ್ಟಿ ಪೋದಂ: **ಪಂಚತಂತ್ರ,** ೨೫೭ ವ)

**ಅರ್ಥಿ** – ಯಾಚಕ (ಪೊನ್ನರಾಶಿಗಳಂ ಅರ್ಥಿ ಜನಕ್ಕೆ ಗೋಸನೆಯಿಟ್ಟು ಕುಡವೇೞ್ದು: **ಪಂಪಭಾ,** ೧೨. ೫೨ ವ); ಸೇವಕ; ಸಂತೋಷ (ಮಂಗಳಾಭರಣಶ್ರೇಣಿಯಂ ಉದ್ಧರತ್ನಚಯಮಮಂ ಮಾತಂಗಸಂಘಾತಮಮಂ ತುರಗವ್ರಾತಮಮಂ ಇತ್ತಂ ಅರ್ಥಿ ನಿಮಿರಲ್ ವಿದ್ಯಾಧರಾಧೀಶ್ವರಂ: **ಶಾಂತೀಶ್ವಪು,** ೪. ೬೬)

**ಅರ್ಥಿಗ** – ಬಯಸುವವನು (ಅರ್ಜುನಂ ಬಿಲ್ಲಗಲ್ಪಿಯೊಳ್ ಅರ್ಥಿಗನಾದಂ: **ಹರಿವಂಶ,** ೧೦. ೩೨ ವ)

**ಅರ್ಥಿತ** – ಬೇಡಿದ (ನೋಡುವೆನಾ ಮಹೀಪತಿಯಂ ಅರ್ಥಿಗಣ ಅರ್ಥಿತ ಕಲ್ಪವೃಕ್ಷನಂ ಬೇಡುವೆಂ ಅರ್ಥಸಂಚಯಮಂ: **ಕವಿರಾಮಾ,** ೨. ೧೦೨)

**ಅರ್ಥಿವ್ರಾತ** – ಅರ್ಥಿಗಣ (ಆತನ ಚಾಗಂ ಪೆರ್ಮೞೆ ಜಾತಕಪೋತಕಮಂ ಅಲಸೆ ಕೊಳ್ವವೋಲ್ ಅರ್ಥಿವ್ರಾತಮಂ ಅಲಸಿದುದು ಪೆರ್ಮಾತಿನ ತೊಡವಿಂ ಮದಾಂದಕರಿಯಿಂ ಹರಿಯಿಂ: **ಶಾಂತಿಪು,** ೯. ೧೫೪)

**ಅರ್ಥೋಪಾರ್ಜನ** – ಹಣಸಂಪಾದನೆ (ಅದಱಿಂ ಅರ್ಥೋಪಾರ್ಜನಮೇ ನಕಲಗುಣೋಪಾರ್ಜನಕ್ಕೆ ಮುಖ್ಯವಾಗಿರ್ಕುಂ: **ಪಂಚತಂತ್ರ,** ೭೫ ವ)

**ಅರ್ದಿಡು** – ಬಲವಾಗಿ ಚುಚ್ಚು ಅಲ್ಲಿ ಮೆಯೊಳ್ ಅರ್ದಿಡುವುವು ಪತ್ರ ಪುಷ್ಪ ಫಲಸಂಕುಳದಂದದ ಶಸ್ತ್ರಕೋಟಿಗಳ್: **ಆದಿಪು,** ೫. ೮೮)

**ಅರ್ದಿಸು** – ಅಡಗಿಸು (ಪಸು ಸಾಯಲ್ ಪೊಲೆಯರ್ಕಳೆಯ್ದೆ ಸುಲಿಯಲ್ ಮಾತಂಗರಾ ತೋಲಂ ಅರ್ದಿಸಿ ಪೋೞ್ದು ಆಱಲಿಟ್ಟು ನೇರೆ: **ಸಮಯಪ,** ೬. ೧೭); ಮುಳುಗಿಸು (ಪುಸಿ ಕೊಲೆ ಕಳವು ಪರಸ್ತ್ರೀವ್ಯಸನಂ ಬಹುವಿಧಪರಿಗ್ರಹಂ ನರರಂ ಬಂಧಿಸಲೀ ಭವಾಬ್ಧಿಯೊಳಗೆ ಅರ್ದಿಸಲಾರ್ಕುಂ ದ್ಯೂತ ಮದ್ಯ ಮಾಂಸವ್ಯಸನಂ: **ಅಜಿತಪು,** ೨. ೬೭)

**ಅರ್ದುಗಂಚಿ** – ಅದಿರ್ಗಂಚಿ, ಮಾಧವೀ ಹೂ (ಮದನಿಯ ಪೊಸಮಾಲೆಗಳ ಮೆಳೆಗಳಿಂದ ಅರ್ದುಗಂಚಿಯ ಕುಱುಜುಗಳ ಕಳೆಗಳಿಂ: **ಉದ್ಭಟಕಾ,** ೫. ೨೨)

**ಅರ್ಧಋಜು** – ಅರೆ ಓರೆನೋಟ (ಗಿಳಿ ಋಜ್ವಾಗತದಿಂದಂ ಅರ್ಧಋಜುವಿಂದಂ ಕೋಕಿಳಂ ಸಾಚಿಯಿಂ ಕಳಹಂಸೀಕಳಭಂ .. .. ಕಣ್ಗೊಳೆ: **ಮಲ್ಲಿನಾಪು,** ೫. ೩೬)

**ಅರ್ಧಗಪ್ಪಡ** – ಅರ್ಧಕಪ್ಪಟೆ (ಎಡದ ಕೈಯಂ ಎಟಲಿಕ್ಕಿ ಅರ್ದ್ಧಗಪ್ಪಡಮನೆಡದ ಮುಯ್ಯಿನ ಮೇಗಿಕ್ಕಿ ಒಳಗೆ ನಿರ್ಗ್ರಂಥಮಪ್ಪ ರೂಪಂ ತಾಳ್ದಿ: **ವಡ್ಡಾರಾ,** ಪು. ೯೨ ಸಾ. ೧೬)

**ಅರ್ಧಗಪ್ಪಡ ತೀರ್ಥ** – ಅರ್ಧಗಪ್ಪಡದ ಸಂಪ್ರದಾಯ (ಅವರ್ ಜಿನಕಲ್ಪಂ ಸ್ಥವಿರಕಲ್ಪಂ ಎಬ ಎರಡು ಭೇದಂ ಮಾಡಿ ಅರ್ಧಗಪ್ಪಡದ ತೀರ್ಥಮಂ ನೆಗೞ್ಚಿದರ್: **ವಡ್ಡಾರಾ,** ಪು. ೯೩, ಸಾ. ೩)

**ಅರ್ಧಗಪ್ಪಡ ಯತಿ** – ಅರ್ಧಗಪ್ಪಡ ಸಂಪ್ರದಾಯದ ಮುನಿ (ಎಲೆ ಮಹಾದೇವಿ ಈ ನಿನ್ನ ಅರ್ಧಗಪ್ಪಡದ ಯತಿಯರ ಧರ್ಮಂ ಒಳ್ಳಿತಲ್ತು: **ವಡ್ಡಾರಾ,** ಪು. ೯೩, ಸಾ. ೧೧)

**ಅರ್ಧಗಪ್ಪಡ ಸಂಘ** – ಅರ್ಧಗಪ್ಪಡ ಸಂಪ್ರದಾಯದ ಮುನಿಗಳ ಸಮುದಾಯ (ಮೇಗಿರ್ದು ಗವಾಕ್ಷ ಜಾಳಾಂತರಂಗಳಿಂದಂ ದಿಶಾವಲೋಕನಂ ಗೆಯ್ಯುತ್ತಿರ್ಪನ್ನೆಗಂ ಅರ್ಧಗಪ್ಪಡದ ಸಂಘಂ ಭೈಕ್ಷಂ ಕಾರಣಮಾಗಿ ಅರಮನೆಯಂ ಪುಗುವುದಂ ಅರಸಂ ಕಂಡು: **ವಡ್ಡಾರಾ,** ಪು. ೯೩. ಸಾ. ೯)

**ಅರ್ಧಗುಚ್ಛ** – ಇಪ್ಪತ್ತನಾಲ್ಕು ಎಳೆಗಳ ಹಾರ (ನಕ್ಷತ್ರಮಾಳಾ ಅರ್ಧಗುಚ್ಛ ಮಾಣವಕಾರ್ಧಮಾಣವಕಂಗಳೆಂಬ ಪನ್ನೊಂದು ನಾನಾ ರತ್ನದ..: **ಆದಿಪು,** ೮. ೫೪ ವ)

**ಅರ್ಧಚಕ್ರವರ್ತಿ** – [ಜೈನ] ಭರತಖಂಡದ ಮೂರು ಖಂಡಗಳಿಗೆ ಅಧಿಪತಿಯಾದ ಸಾಮ್ರಾಟ (ಅದನಾಳ್ವೊಂ ವಿಷ್ಣು ಅರ್ಧಚಕ್ರಿ ಆತನ ತಂದೆ ವಸುದೇವಸ್ವಾಮಿಯೆಂಬೊಂ: **ವಡ್ಡಾರಾ,** ಪು ೫೦, ಸಾ ೧೪)

**ಅರ್ಧನಾರಿ** – ಅರ್ಧ ಕಪ್ಪು, ಅರ್ಧ ಕೆಂಪು ಬಣ್ಣವುಳ್ಳ (ಸಂಜೆಗೆಂಪು ಪಡುವಲ್ ಕೈಕೊಂಡು ಎಟಲೆ ಧರೆಗೆ ಅರ್ಧನಾರಿಯ ತಟೆವಿಡಿದಂತೆತಾಯ್ತು ಗಗನಮಂಡಲಮಿನಿಸುಂ: **ಅನಂತಪು,** ೭. ೬೨); ಪಾರ್ಶ್ವವಾಯು (ತನ್ನ ಬಲಮನಿತುಂ ಅರ್ಧನಾರಿಯ ಬಲದಂತೆರೆ ಅಡಗಿಯುಂ: **ಅನಂತಪು,** ೧೪. ೭ ವ); ದೇಹದ ಅರ್ಧ ಗಂಡು ಅರ್ಧ ಹೆಣ್ಣಾಗಿರುವುದು (ರೂಪರ್ಧನಾರಿಯಾಯ್ತು ವಿರೂಪಾಕ್ಷಂಗೆ: **ಕಾವ್ಯಾವಲೋ,** ೭೨೪)

**ಅರ್ಧಮಂಡಳಿಕ** – ಅರ್ಧ ಮಂಡಲದ ಒಡೆಯ (ಅರ್ಧಮಂಡಳಿಕರ್ ಮಾೞ್ಪ ಸರ್ವತೋಭದ್ರಮೆಂಬ ಪೆಸರಂ .. .. ಬಗೆದು: **ಆದಿಪು,** ೧೫. ೧೩ ವ)

**ಅರ್ಧಮಾಗಧಿ** – ಒಂದು ಪ್ರಾಚೀನ ಭಾಷೆ (ನೆಗೞ್ದ ಅರ್ಧಮಾಗಧಿಯಂ ನೆಗೞ್ದ ಅಜಿತಾನನದೊಳ್ ಆಗಳುಂ ಅಸ್ಫುಟವಚನಂ ನೆಗೞ್ದಿತ್ತು ಅವ್ಯಕ್ತಾಕ್ಷರ ನಿಗೂಢ ಪರಿಜಪನವಿಧಿಗೆ ಅದೇಂ ಚೆಲ್ವಾಯ್ತೋ: **ಅಜಿತಪು,** ೫. ೬೫)

**ಅರ್ಧಮಾಣವಕ** – ಹನ್ನೆರಡು ಎಳೆಗಳ ಮುತ್ತಿನ ಹಾರ (ನಕ್ಷತ್ರಮಾಳಾ ಅರ್ಧಗುಚ್ಛ ಮಾಣವಕ

ಅರ್ಧಮಾಣವಕಂಗಳೆಂಬ ಪನ್ನೊಂದು ನಾನಾ ರತ್ನದ ಸುವರ್ಣಪದಕರಚನವಿರಚನಾದಿ ಭೇದದಿಂ: **ಆದಿಪು,** ೮. ೫೪ ವ)

**ಅರ್ಧರಥ** – ಕೆಲವೊಮ್ಮೆ ಧೈರ್ಯದಿಂದ, ಮತ್ತೆ ಕೆಲವು ವೇಳೆ ಅಧೈರ್ಯದಿಂದ ಯುದ್ಧಮಾಡುವ ರಥಿಕ; ಮತ್ತೊಬ್ಬನ ಸಹಾಯ ಪಡೆಯುವ ರಥಿಕ (ಗತಜೀವಿತರಾದರ್ ಸಂಗ್ರಾಮದೊಳ್ ಅತಿರಥ ಸಮರಥ ಮಹಾರಥ್ ಅರ್ಧರಥರ್ಕಳ್: **ಪಂಪರಾ,** ೧೩. ೭೨)

**ಅರ್ಧಹಾರ** – ಅರವತ್ತುನಾಲ್ಕು ಎಳೆಗಳ ಮುತ್ತಿನ ಹಾರ (ವಿಜಯಚ್ಛಂದಹಾರ ದೇವಚ್ಛಂದ್ರ ಅರ್ಧಹಾರಕಳಾಪ ನಕ್ಷತ್ರಮಾಳಾ: **ಆದಿಪು,** ೮. ೫೪ ವ)

**ಅರ್ಧಾಂಗಿ** – ಹೆಂಡತಿ (ವಸುದೇವನರ್ಧಾಂಗಿ ರೋಹಿಣೀದೇವಿ: **ಜಗನ್ನಾವಿ,** ೨. ೮೭ ವ)

**ಅರ್ಧಾವಲಿಕ** – ಒಂದು ಬಗೆಯ ಅಸ್ತ್ರ; ಅರ್ಧಚಂದ್ರಾಕೃತಿಯ ಬಾಣ (ಅಂತು ಅಶ್ವಸೇನಂ ಅರ್ಧಾವಲಿಕಮೆಂಬ ಅಮೋಘಾಸ್ತ್ರಮಾಗಿ ಕರ್ಣನ ದೊಣೆಯೊಳಿರ್ದಂ: **ಪಂಪಭಾ,** ೫. ೧೦೦ ವ)

**ಅರ್ಬಿ** – ಝರಿ, ಗಿರಿನದಿ (ಅರ್ಬಿಯೆಂದು ನಿರ್ಝರಂ: **ಶಬ್ದಮದ,** ಪ್ರಸಾ, ೯)

**ಅರ್ಬಿಸು** – ಅತಿಕ್ರಮಿಸು ಹೆದರಿಸು (ಕಡುಮುಳಿದಾ ಖಚರನ ಬಟೆವಿಡಿದಾಗಳ್ ಬಂದಳ್ ಅಟ್ಟುತ್ತುಂ ಕೂರಸಿಯಂ ಜಡಿಯುತ್ತುಂ ಖೇಟಕಮಂ ಪಿಡಿದರ್ಬಿಸುತ್ತುಂ ವಿಯಚ್ಚರಾಂಗನೆಯೊರ್ವಳ್: **ಶಾಂತೀಶ್ವಪು,** ೧೨. ೯೨)

**ಅರ್ಭಕ** – ಮಗು (ಪಿರಿದೊಂದು ದೋಹಳಂ ನೆಗಲಟ್ಟುದು ಗರ್ಭದ ಅರ್ಭಕನ ದೋರ್ಬಲಗರ್ಬಮನಂದು ಪೇಟ್ವಿವೊಲ್: **ಆದಿಪು,** ೮. ೪೮)

**ಅರ್ವಿ** – ಗಿರಿನದೀಪ್ರವಾಹ (ತಾರಾಗಣಮಂ ತಳ್ಪೊಯ್ದು ಪೇರ್ ಅರ್ವಿಗಳಿಂ ಅಸದಳಂ ಕಣ್ಗೆ ಚೆಲ್ವಾಗೆ ನಾನಾ ಮಣಿಕೂಟಂ ಚಿತ್ರಕೂಟಂ ಸೊಗಯಿಸೆ: **ಪಂಪರಾ,** ೭. ೩೧)

**ಅರ್ವಿಸು** – ಪ್ರಸರಿಸು (ಕಿಸುಸಂಜೆ ಪರ್ವೆ ಮರ್ವು ಅರ್ವಿಸೆ ತಾರಾನಿಕರಂ ಒಗೆಯೆ ಬೇಟಸ್ಕೆತ್ತರ್ ಬೆಕ್ಕಸಮುತ್ತರ್ ಭಯರಸದಿಂ ದೆಸೆಗೆಟ್ಟರ್ ಕಂಡು ಅದೃಷ್ಟಪೂರ್ವಮನಾರ್ಯರ್: **ಪಂಪರಾ,** ೧. ೭೧); ಹೆದರಿಸು (ಆ ಲಯಕ್ರೀಡೆಯೊಳ್ ಈ ಚರಾಚರಮುಮಂ ಸುಡುವಂದಿನ ಮೆಯ್ಗುಮಗ್ಗಳಂ ಮಾಡಿ ತಗುಳ್ದು ನೀಳ್ದು ಬಳೆದು ಅರ್ವಿಸೆ ಪರ್ವಿದನಾ ವನಾಂತಮಂ: **ಪಂಪಭಾ,** ೫. ೮೫); ಸುಡು (ನಿಮಿರ್ದರ್ಲರ್ಗಣ್ಣ ನುಣ್ಪೆಳಗು ಅದು ಅರ್ವಿಪ ಕೂರಲಗು: **ಶಾಂತೀಶ್ವಪು,** ೧೦. ೧೪೯)

**ಅರ್ಹಚ್ಛಾಸನ** – [ಜೈನ] ಜಿನನ ಆಜ್ಞೆ, ಜೈನಧರ್ಮ (ಅರ್ಹಚ್ಛಾಶನದೆಬುಷವಿಡಿದು ಅಘಮಂ ತ್ರಾಸಿಸಲೆಂದು ಅಮಳದೀಕ್ಷೆಯಂ ಕೆಯ್ಗೊಂಡಳ್: **ಶಾಂತಿಪು,** ೪. ೮೪)

**ಅರ್ಹತ್ಪದ** – ತೀರ್ಥಂಕರ ಪದವಿ, ತೀರ್ಥಂಕರನ ಪಾದ (ಅರ್ಹತ್ಪದಮಂ ನೆನೆಯುತ್ತುಂ ಅನುಪ್ರೇಕ್ಷೆಯೆ ಮನದೊಳ್ ತಣ್ಮಲೆಯೆ: **ಆದಿಪು,** ೨. ೫೭)

**ಅರ್ಹತ್ಪರಮೇಶ್ವರ** – ತೀರ್ಥಂಕರಸ್ವಾಮಿ (ಮುದಮಂ ಎಯ್ದುವಂ ಅರ್ಹತ್ಪರಮೇಶ್ವರ ಮಣಿಭವನೋಪರಿಲಂಘನ ಪಾಪಲೋಪದಿಂದಂ ಚಂದ್ರಂ: **ಅನಂತಪು,** ೧೦೫)

**ಅರ್ಹತ್ಪ್ರವಚನ** – ತೀರ್ಥಂಕರನ ಉಪದೇಶ (ಸುಖಮಂ ಭಾವಿಸೆ ಶರೀರಿಗೆ ಅರ್ಹತ್ಪ್ರವಚನಮಲ್ಲದೆ ಪೆಱತಿಲ್ಲ: **ಚಂದ್ರಪ್ರಪು,** ೨. ೩೯)

**ಅರ್ಹದಾಲಯ** – ಬಸದಿ (ಅವಱೆಡೆಯೊಳ್ ತಾನೊಂದೊಂದು ಅರ್ಹದಾಲಯಂ ಸೊಗಯಿಸುಗುಂ: **ಆದಿಪು,** ೧೦. ೨೪)

**ಅರ್ಹನ್ಮತ** – ಜೈನಮತ (ಅರ್ಹನ್ಮತ ಸ್ಥಾಪನಾಚಾರ್ಯ ಪರವಾದಿಭಯಂಕರನೆನಿಸುತ್ತ: **ತ್ರಿಷಷ್ಟಿಪು,** ೨೯. ೩ ವ)

**ಅರ್ಹಲ್ಲಕ್ಷ್ಮಿ** – [ಜೈನ] ಮೋಕ್ಷಲಕ್ಷ್ಮಿ (ಅರ್ಹಲ್ಲಕ್ಷ್ಮೀಪ್ರಭುತೆವರಂ ಬರೆಯಿಸಿ ಭಕ್ತಿಭಾರಮಂ ಸಫಲಮೆನಿಸಿ ನಿಜೆಸಿದನಿಂದ್ರಂ: **ಶಾಂತಿಪು,** ೧೨. ೪೧)

**ಅಲ್** – ಬೇಡ ಎಂಬರ್ಥದ ಶಬ್ದ [ಉದಾ: ಮುನಿಯಲ್ ಎಂದರೆ ಮುನಿಯಬೇಡ] (ಪುಗಲ್ ಪುಗಲ್ ಎಂದು ಸಂಗಳಿಸಿ ಶರದಿಂ ಕೊಳ್ ಕೊಳೆಂದು ಎಚ್ಚೊಡೆ: **ಶಾಂತಿಪು,** ೪. ೨೪)

**ಅಲಂಕ್ರಿಯಾರಚನೆ** – ಅಲಂಕಾರ ಸೃಷ್ಟಿ (ಪದಿನಾಱಲ್ಲವು ಅಲಂಕ್ರಿಯಾರಚನೆ ಮೂವತ್ತಾಱು ನೇರ್ಪಟ್ಟುವುದು: **ಗದಾಯು,** ೧. ೭)

**ಅಲಂಘನೀಯಂ** – ದಾಟ[ಮೀರ]ಬಾರದುದು (ಗುರುಗಳ್ ಬಂದುಪರೋಧಿಸೆ ಗುರುವಚನಂ ಅಲಂಘನೀಯಂ ಎಂದೆದೆಗೊಂಡಂ ಪರಿಣಯನಮಂ: **ಅಜಿತಪು,** ೬. ೩೫)

**ಅಲಂಘ್ಯ** – ಅಲಂಘನೀಯ (ನಿಲ್ಲಲೊಲ್ಲದೆ ವೈರಾಗ್ಯಮೆ ಕುಲವಟೆಯೆಂಬಂತೆ ತಂದೆಯಿಂ ಮುನ್ನಂ ನಿರ್ಮಲ ಜಿನದೀಕ್ಷೆಗವರ್ ಪೂಣ್ದು ಅಲಂಘ್ಯ ದಮಮಂ ಧರಿತ್ರಿಯಿಂ ಪೊಗಟೆಸಿದರ್: **ಶಾಂತಿಪು,** ೯. ೫೩)

**ಅಲಂಘ್ಯಬಲ** – ಮೀರಲಾಗದ ಶಕ್ತಿಯವನು (ಅಲಂಘ್ಯಬಲಂ ಬಲಗರ್ವದಿಂದಂ ಬಗೆದನೆ: **ಪಂಪರಾ,** ೫. ೧೦೦)

**ಅಲಂಪಿಕ್ಕು** – ಲೇಪನ ಮಾಡು, ಬಳಿ (ರವಿ ಬಯ್ಗುವೊಟ್ಟು ಅಲಂಪಿಕ್ಕುವ ಕುಂಕುಮರಜದ ಪೊಟ್ಟಳಕ್ಕೊತ್ತಿದನೆಂಬವೊಲ್: **ಆಚವರ್ಧ,** ೮. ೨೫)

**ಅಲಂಪು** – ಸೌಖ್ಯ (ಸೋಂಕಿನೊಳ್ ನಲಿವ ನಲ್ಲಳ ಅಲಂಪನೊಡರ್ಚಿ ಲೀಲೆ ಕಣ್ಗಸದಳಮಾಗೆ ಪಾಱುವ ಮಹೀಧರನೆಂಬ ವಿಯಚ್ಚರೇಂದ್ರಂ: **ಆದಿಪು,** ೨. ೪೧) ಪ್ರೀತಿ (ಪೂತ ಕಲ್ಪಲತೆಯಂ ಲಲಿತಾಂಗಿಯೆ ಗೆತ್ತ ಅಲಂಪಿನಿಂದೆಱಗುವುದುಂ: **ಆದಿಪು,** ೪. ೧೩); ಸಂತೋಷ (ಈತನೊರ್ವನೆ ಧನುರಾಗಮದೆಡೆಗೆ ಕುಶಲನಕ್ಕುಮದಕೇಂ ಕಿನಿಸದಿರಿಂ ಮುನ್ನಱಿಪಿದೆನೆನೆ ಭೀಷ್ಮನಲಂಪು ಮಿಗೆ ಮುಗುಳ್ನಕ್ಕಂ: **ಪಂಪಭಾ,** ೨. ೫೫); ಅತಿಶಯ, ಮೇಲ್ಮೆ (ಪುರಂದರನ ಅಲಂಪಿಂ ನಾಭಿರಾಜಂಗವಂ ಮಾಡಿಟ್ಟಂ ಕರುವಿಟ್ಟು ಮನ್ಮಥನೆ ಬಣ್ಣನೆಗೆಯ್ದನೆಂದೊಡೆ ಆ ನಾಡಂ ಬೀಡುಮನೊಂದೆ ನಾಲಗೆಯೊಳ್ ಇನ್ನೇವಣ್ಣಿಪಂ ಬಣ್ಣಿಪಂ: **ಪಂಪರಾ,** ೧. ೧೦೦); ಹೊಳಪು (ಚಂದಳಿರ್ದಂಪಂ ಬಿಂಬದೊಳೊಂದಿದ ಕೆಂಪಂ ಪಯೋರಸದೊಳ್ ಅಮರ್ದ ಇಂಪಂ ಕುಂದದ ರನ್ನದ ಅಲಂಪಂ: **ರಾಜಶೇವಿ,** ೭. ೫೩); ಸೊಗಸು (ಪತಿಮೋಹಿ ನಾಮದ ಅಲಂಪಿಂ ಮಂತ್ರಿಪಂ ರಂಜಿಪಂ: **ರಾಜಶೇವಿ,** ೩. ೨೨)

**ಅಲಂಬು** – ತೊಳೆ (ಧೌತವಲ್ಕಲಮಂ ಅಲಂಬುವ ಅಕ್ಷಮಣಿಯಂ ಸಮೆವ ಈ ವ್ಯವಸಾಯಮೆತ್ತಲುಂ: **ಕಾದಂಸಂ,** ೧. ೭೧)

**ಅಲಕ** – ಮುಂಗುರುಳು (ಅಲಕಂ ಮಂದಾರಶೂನ್ಯಂ ಕದಪು ಮಕರಿಕಾಪತ್ರಶೂನ್ಯಂ: **ಆದಿಪು,** ೩. ೧೩)

**ಅಲಕ್ತಕ** – ಅರಗು (ತ್ರಿದಶೇಂದ್ರಮೌಳಿಮಣಿಶೋಣದೀಪ್ತಿಗಳ್ ಪುದಿದು ಪೊಳೆವ ಅಲಕ್ತಕರಸದಿಂಪುದಿದು: **ಆದಿಪು,** ೧೦. ೫೩)

**ಅಲಗಣಸು** – ಪ್ರತಿಸ್ಪರ್ಧೆ (ದುಗುಲದ ಮಱೆಯೊಳ್ ಜಲಜಲಿಪ ರತ್ನದೀಪಕ್ಕಲಗಣಸೆನುತಿರ್ಪುದು ಅಧರಮರುಣಾಧರೆಯಾ: **ಮಲ್ಲಿನಾಪು,** ೩. ೭೪); ಅಸಮಾಧಾನ (ಪ್ರಿಯ ನಿನ್ನ ರೂಪಂನೆಡೆಯೊಳ್ ಪೇೞ್ವೊಡಲ್ ಇನ್ನೇವೆನೋ ಎಂದು ಅಲಗಣಸಂ ತೋಱೆ: **ಲೀಲಾವತಿ,** ೨. ೬೫ ಮತ್ತು ೬೫ ವ)

**ಅಲಗಂಬು** – ಹರಿತವಾದ ಅಲಗಿನ ಬಾಣ (ಅಲಗಂಬಿಗೆ ಅಳ್ಕದ ಮನಂ ಅಲರಂಬಿಗಳ್ಕಿದಪ್ಪುದು: **ಪಾರ್ಶ್ವಪು,** ೩. ೨೫)

**ಅಲಗು** – ಆಯುಧಗಳ ಹರಿತವಾದ ಮಗ್ಗುಲು (ಕಾಸಿ ಕಂದಿಸಿದ ಸೆಲಗಿನ ಅಂಬಿನ ಅಲಗುಗಳಿವೆನಿಸಿ: **ಆಚವರ್ಧ,** ೫. ೬೩ ವ); ಬಾಣ (ಮದನನ ಅಲಗಿನ ಮೊನೆದೋಱಿದಂ ಒಡನೆ: **ಮಲ್ಲಿನಾಪು,** ೫. ೧೦)

**ಅಲಗೆ** – ಆ ಹೆಸರಿನ ಹುಲ್ಲಿನ ಹಗ್ಗ (ಗೋವಂಗೆ ಅಲಗೆ ಕೊಟಲ್ ಕೋಡಕಾಳೆ ಕೋಲುಡೆದೋಲ್ ಕಂಬಲ ಕಲ್ಲಿ ಚೆಲ್ಲಿ ಪೀಲಿಯ ತಲೆಸುತ್ತಲ್ಲದೆ ಮಹಾಗ್ರಪೂಜೆವಿರುದ್ಧಂ: **ಜಗನ್ನಾವಿ,** ೧೭. ೨೨)

**ಅಲಗೆಗಟ್ಟು** – ಹುಲ್ಲನ್ನು ತಲೆಗೆ ಕಟ್ಟು; ಪಣ ತೊಡು (ದೇವರ ದೊರೆಯ ವಿದಗ್ಧಜನಾವಳಿಯುಮಂ ಅಲಗೆಗಟ್ಟಿ ಮಾಱುತ್ತುಂ ನಾನಾವಿಧದೊಳೆ ಪೊಕ್ಕಾಡುವ ಡಾವರಡಾಕಿನಿಯ ಮನೆಯನಾಗಳ್ ಕಂಡಂ: **ಪಂಚತಂತ್ರ,** ೨೧೮)

**ಅಲಘುತರ** – ತುಂಬ ತೂಕವುಳ್ಳ, ಮಹತ್ತರವಾದ (ಅಲಘುತರ ಪ್ರಗುಣ ದಶಾಕಲಿತಂ ಜ್ಯೋತಿರ್ವಿಶೇಷದಿಂ ಪರಹಿತಮಂ ವಿಲಸತ್ಕಾಂತಿ ಸುಪುತ್ರಃ ಕುಲದೀಪಕ ಎನಿಸಿ ದುರ್ಗಸಿಂಹಂ ನೆಗೞ್ದಂ: **ಪಂಚತಂತ್ರ,** ೪೮)

**ಅಲಘುನಿತಂಬ** – ಭಾರವಾದ ಪಿರ್ರೆ (ಅಲಘುನಿತಂಬದ ಪೊಯ್ಲೊಳ್ ನೆಲೆಮೊಲೆಯಳ್ಳೇಱಿನೊಳ್: **ಆದಿಪು,** ೧೧. ೧೪೬)

**ಅಲಘುಭುಜ** – ಉದ್ದ ತೋಳು (ಅಲಘುಭುಜನಾಗಿಯುಂ .. .. ಮೇರುಕಠಿಣ ಭೋಗಾಧಾರಂ: **ಕವಿರಾಮಾ,** ೩. ೪೩)

**ಅಲತಗೆ** – ಅರಗು (ಅಡಿಯೊಡಲ್ಕೆ ಅಲತಗೆಯಂ ತುಡಲ್ಕೆ ತುಡುಗೆಯಂ: **ಆದಿಪು,** ೭. ೧೧); ಗೋರಂಟಿ (ಅಲತಗೆಯ ರಾಗಮಂ ಕಾಱುವವೋಲ್ ಮುನ್ನಂ ಸೊಗಯಿಸದುವು ಮಿಗೆ ಕನ್ನೆಯ ಕನತ್ ಅರುಣಚರಣಕೋಕನದಂಗಳ್: **ಲೀಲಾವತಿ,** ೩. ೨೬)

**ಅಲಪು** – ತೊಂದರೆ (ಸುರಕುಜದ ನೆಟಿಲೊಳಂಗಣದೊಳೇನುಂ ಅಲಪಿಲ್ಲದೆ ಕಟ್ಟಿರೆ ಕಾಮಧೇನು: **ಪಂಪಭಾ,** ೪. ೧೦)

**ಅಲಬ್ಧಲಾಭ** – ಇಲ್ಲದ್ದನ್ನು ಪಡೆಯುವುದು (ಅಲಬ್ಧಲಾಭಂ ಲಬ್ಧಪರಿರಕ್ಷಣಂ ರಕ್ಷಿತವಿವರ್ಧನಂ ವರ್ಧಿತತೀರ್ಥ ಪ್ರತಿಪಾದನಂ ಎಂಬ ಚತುರ್ವಿಧ ಪುರುಷಾರ್ಥ ವೃತ್ತಿಯಾಗಿರ್ಪುದು: **ಪಂಚತಂತ್ರ,** ೭೫ ವ)

**ಅಲರ್** – ಬಿರಿ, ಅರಳು (ಮನದ ಅನುರಾಗದಿಂದಂ ಅಲರ್ದು ಒಪ್ಪುವ ಕಣ್ಮಲರ್: **ಕಾದಂಬ,** ೨. ೮೪); ಹೂವು (ನಳಿನೀದಳಪುಟದೆ ಕೆಂದಾವರೆಯ ಅಲರ್ಗಳಿಂ ದಿವಸಕರಂಗೆ ಅರ್ಘ್ಯಮೆತ್ತಿ .. .. ನಿಜಾಶ್ರಮಕ್ಕೆ ಪೋಗೆವೋಗೆ: **ಕಾದಂಸಂ,** ೧. ೬೮ ವ)

**ಅಲರಂಬ** – ಕಾಮ (ಅಲರಂಬಂ ಶಶಿಬಿಂಬದೊಳ್ ಮಸೆದವೊಳ್ ಕೂರ್ಪಿಂಗಡಪಾದ ಕಣ್ಮಲರ್ಗಳ್: **ಅನಂತಪು,** ೨. ೧೪)

**ಅಲರಂಬು** – ಹೂಬಾಣ (ಅಲರಂಬು ಇಕ್ಷುಧನುಸ್ ಸಹಾಯಂ ಅಮೃತಾಂಶುದ್ಯೋತನಂ ಯಾಮಿನೀ ಲಲಿತಂ ಸೋಲಿಸುಗುಂ: **ಲೀಲಾವತಿ,** ೧. ೭೫)

**ಅಲರೆಸಟ್** – ಹೂವಿನ ಪಕಳೆ (ಮೆಲ್ಲನಲ್ಲಿಗೆ ವಂದು ಪಲತೆಱದ ಅಲರೆಸಟಿ ಪಸೆಗಳೊಳ್ ಮೆಯ್ಯನೀಡಾಡಿ: **ಕುಸುಮಾಕಾ,** ೧೩. ೪೬ ವ)

**ಅಲರೊದ್ದೆ** – ಹೂ ರಾಶಿ (ಮುಗುಳ ಅಲರೊದ್ದೆ ಕರಂ ಸಿದ್ಧಮಾದುದಂಬರತಲದೊಳ್: **ಪಂಪಭಾ,** ೧೨. ೨೧೮)

**ಅಲರೋಳಿ** – ಹೂಸಾಲು, ರಾಶಿ (ತಳಿರ್ಗಲ ತೊಂಗಲಿಂದಂ ಅಲರೋಳಿಗಳಲ್ಲುಗುವಂತೆ: **ಆದಿಪು,** ೪. ೫೯)

**ಅಲರ್ಕೆ** – ಅಲರಿಕೆ, ಬಿರಿಯುವುದು (ನೆಗೞ್ದ ಅರ್ಹಚ್ಚಂದ್ರನ ತನುರುಚಿ ಚಂಚಚ್ಚಂದ್ರಿಕೆ ಪಡೆದ ಅಲರ್ಕೆಯಂ ಪೆರ್ಚುಗೆಯಂ: **ಆಚವರ್ಧ,** ೧೩. ೯೩)

**ಅಲರ್ಗಂಪು** – ಹೂವಿನ ಪರಿಮಳ (ಪಾದರಿಯಲರ್ಗಂಪು ಪಚ್ಚಳಿಯ ಕಂಪು: **ಗಿರಿಜಾಕ,** ೨. ೬೧)

**ಅಲರ್ಗಣ್** – ಹೂವಿನಂತಹ ಕಣ್ಣು (ಅಲರ್ಗಣ್ಣಿಂದತ್ತ ಕೆಂಪು ಇನ್ನುಂ ಓಸಱದ .. .. ನಿನ್ನ ರೂಪನೆಡೆಯೊಳ್ ಪೇೞ್ವೊಡಲಿನ್ನೇವೆನೋ: **ಲೀಲಾವತಿ,** ೨. ೬೫)

**ಅಲರ್ಗಣೆ** – ಹೂಬಾಣ (ಓರಂತೆ ಇಸುತಿರಲ್ ಆತಂ ಅಲರ್ಗಳೆಯ ಗಾಳಿಯ ಪೊಯ್ವಂತೆ ಮೆಯ್ ನಡುಗಲೊಡರಿಸಿದುದು: **ಕಾದಂಬ,** ೧೦. ೫೫ ವ)

**ಅಲರ್ಗಣೆಯ** – ಹೂಬಾಣವುಳ್ಳವನು, ಮನ್ಮಥ (ಅಲರ್ಗಣೆಯನೆಂಬ ಸೊರ್ಕಾನೆಯಂ ತೊಲಗಲೀಯದೆ ನಿಲಿಸೆಯುಂ: **ಕಬ್ಬಿಗಕಾ,** ೧೨೩)

**ಅಲರ್ಗಣ್ಣ** – ಹೂವಿನಂತಹ ಕಣ್ಣುಳ್ಳವನು (ಅಕಾರಕ್ಕೆ : ಅಲರ್ಗಣ್ಣಂ, ಬಟ್ಟದೊಡೆಯಂ: **ಶಬ್ದಮದ,** ೧೯೭ ಪ್ರ)

**ಅಲರ್ಗಳಂ** – ಅಡೆತಡೆಯಿಲ್ಲದೆ (ಮತ್ತಗಜೇಂದ್ರಂಬೋಲ್ ಅಲರ್ಗಳಂ ವನಮಂ ಅಂದು ಆನಂದದಿಂ ಪೊಕ್ಕಂ: **ಕಾವ್ಯಾವಲೋ,** ೩೪೨)

**ಅಲರ್ಗುಡಿ** – ಹೂಗೊಂಚಲು (ಬಾಳಲರ್ಗುಡಿ ಪಿಕರುತಿ ಬಾಯ್ಕೇಳಿಕೆ ಮಾಂದಳಿರ ಕೆಂಪು ದೀವಿಗೆಯೆನೆ .. .. ಬಂದುದು ವಸಂತಂ: **ಯಶೋಧಚ,** ೪. ೨)

**ಅಲರ್ಗೊಂಚಲ್** – ಹೂಗೊಂಚಲು (ಪಾರಿಜಾತದ ಒಂದು ಎಸೆವ ಅಲರ್ಗೊಂಚಲಂ ಪಿಡಿದು ನಂದನದೊಳ್ ಬರುತೊರ್ವಳೊಪ್ಪಿದಳ್: **ಕಾದಂಬ,** ೫. ೫೦)

**ಅಲರ್ಚು** – ಅರಳಿಸು (ಮಂಡನದ ಮಯೂಖ ಲೇಖೆ ಜಡೆಗೊಂಡು ಮಡಲ್ತು ಕವಲ್ತು ಅಲರ್ಚೆ ದೃಗ್ವನರುಹಮಂ ಜಟಾಯುವೆಸರಾದುದು ಅದರ್ಕೆ ರಘುಪ್ರವೀರರಿಂ: **ಪಂಪರಾ,** ೯. ೧೬)

**ಅಲರ್ಜೊಂಪ** – ಹೂಗೊಂಚಲು (ರಾಂತಕ್ಕೆ – ಕುಳಿರ್ಗಾಳಿ, ಅಲರ್ದೋಟಂ .. .. ಅಲರ್ಜೊಂಪಂ: **ಶಬ್ದಮದ,** ೫೩ ಪ್ರಯೋಗ)

**ಅಲರ್ದುಱುಗಲ್** – ಹೂವಿನ ರಾಶಿ (ಅಂಭೋರುಹದ ಅಲರ್ದುಱುಗಲೆನಲೆದೊಗೆದುವು .. .. ಬಂಬಲ್ದೆರೆಗಳ್: **ಪಂಪಭಾ,** ೫. ೫೭)

**ಅಲರ್ಮಟಿ** – ಹೂಮಳೆ (ಸುರತರುನಂದನಂಗಳಿಮಲರ್ಮಟಿ ಬಂದೆಱಗಿತ್ತು: **ಆದಿಪು,** ೨. ೬೫)

**ಅಲರ್ದೋಟ** – ಹೂವಿನ ತೋಟ (ರಾಂತಕ್ಕೆ – ಕುಳಿರ್ಗಾಳಿ, ಅಲರ್ದೋಟಂ .. .. ಅಲರ್ಜೊಂಪಂ: **ಶಬ್ದಮದ,** ೫೩ ಪ್ರ)

**ಅಲರ್ವಕ್ಕಿ** – ದುಂಬಿ (ಮಱಿಗಿಳಿವಿಂಡು ಮಿಂಚುವ ಮರಾಳದ ಪಿಂಡು ಅಲರ್ವಕ್ಕಿವಿಂಡು ತಟ್ಟೆಱಗಿ ಬರಲ್: **ಶಾಂತೀಶ್ವಪು,** ೧೪. ೯೮)

**ಅಲರ್ವಚ್ಚ** – ಹೂವಿನ ತೊಡಿಗೆ (ಅಲರ್ವಚ್ಚಂ ಪಚ್ಚಮುಂ ಪೊಚ್ಚಮುಮೆನಿಸದೆ ಮೆಯ್ವೆತ್ತೊಡಂಬಟ್ಟು ತನ್ನೊಳ್ ನಿಲೆ: **ಶಾಂತಿಪು,** ೮. ೪೫)

**ಅಲರ್ವಸೆ** – ಹೂವಿನ ಹಸೆ[ಮಣೆ], ಹೂ ಹಾಸಿಗೆ (ಅವನೀಭಾಗಮಂ ತನ್ನೆಡಗಯ್ಯಿಂ ಮೆಲ್ಲನೊತ್ತುತ್ತೆ ಎಸೆವ ಅಲರ್ವಸೆಯಿಂ ಕಾಂತೆಎಂತಾನುಮೆಟ್ಟಿದ್ಗಳ್: **ಕಾದಂಸಂ,** ೫. ೮೯)

**ಅಲರ್ವಾಸು** – ಹೂ ಹಾಸಿಗೆ (ಅಲರ್ಗಳ ತಲೆದಿಂಬಿನಿಂದಂ .. .. ಅಲರ್ವಾಸಿನ ಮೇಲೆ ಲೀಲೆಯಿಂ ಕುಳ್ಳಿರ್ದಂ: **ಪಾರ್ಶ್ವನಾಪು,** ೯. ೩೦)

**ಅಲರ್ವಿಲ್** – ಹೂವಿನ ಬಿಲ್ಲು (ನೃಪಸೌಂದರ್ಯಕ್ಕೆ ಮುಂದಿಟ್ಟು ತನ್ನ ಅಲರ್ವಿಲ್ಲಂ ನಿಜರಾಜಚಿಹ್ನಸಹಿತಂ .. .. ಮನ್ಮಥನೃಪಂ ಕೊಟ್ಟಂ: **ಮಲ್ಲಿನಾಪು,** ೩. ೨೭)

**ಅಲರ್ವೋಗು** – ಹೂ ಬಿಡು (ಬಸಂತಂ ಅಲರ್ವೋದ ಮಾವಿನ ಅಡಿಮಂಚಿಕೆಯೊಳ್ ಕುಸುರಿದಱಿದ ಅಡಗಿನಂತೆವೊಲೆಸೆದುವು .. .. ಮುತ್ತದ ಮುಗುಳ್ಗಳ್: **ಯಶೋಧಚ,** ೧. ೩೭)

**ಅಲವರಿಕೆ** – ಬಿಗಿಪಟ್ಟು (ತಮ್ಮೊಳ್ಗಾರ್ಯರ್ ತಲೆಯೊತ್ತಿ ಕುಟ್ಟಿ ಪೊಯ್ವವರ ಅಲವರಿಕೆಯೊಳಾದ ತೋಟಿಯಂ ತೊಲಗಿಸಿದಂ: **ಪಂಪರಾ,** ೧. ೭೫)

**ಅಲವರಿಸು** – ಆಸೆಪಡು, ಹಂಬಲಿಸು (ಲೋಧ್ರ ಲತಾಂತ ಸೌರಭಕ್ಕೆ ಅಲವರಿಸಿತ್ತು ಮತ್ತ ಮಧುಪಾಳಿ: **ಜಗನ್ನಾವಿ,** ೧೪. ೭)

**ಅಲವಲಿಸು** – ಅಲವರಿಸು (ಅಲವಲಿಸಿ ಮಸಗಿ ಪರಿಪರಿದಲಸದೆ ತಿರಿದೆಱಗಿಪೆಣನದಂ ತಿಂದು .. .. ಮರುಳಂ: **ಹರಿವಂಶ,** ೨. ೧೪)

**ಅಲವಱಿಲ್** – ಹಂಬಲು (ತನ್ನ ಮನಂ ಸಲಲಾಗದು ತೀರದುದಕ್ಕೆ ಅಲವಱಿಲಾಗದು ಪರತ್ರೆಯಂ ಬಯಸುವವಂ: **ಯಶೋಧಚ,** ೪. ೩೧)

**ಅಲವಱು** – ಆಸೆಪಡು (ಕೊಲಲಾಗದು ಪುಸಿಯಾಗದು ಪೆಱರ ಪೆಂಡಿರೊಳ್ ತನ್ನ ಮನಂ ಸಲಲಾಗದು ತೀರದುದಕ್ಕೆ ಅಲವಱಿಲಾಗದು: **ಯಶೋಧಚ,** ೪. ೩೧)

**ಅಲಸ** – ಸೋಮಾರಿ (ಅಲಸರಪ್ಪವರ್ ತಮ್ಮ ಮೆಯ್ಯಸುಖಕ್ಕೆ ಪಾಪಹೇತುಗಳಪ್ಪ ಕುಧರ್ಮಮಂ ಪೇಟ್ದು: **ಧರ್ಮಾಮೃ,** ೪. ೨೦ ವ)

**ಅಲಸಂಬೆಱು** – ಆಲಸ್ಯ ಹೊಂದು, ಬಳಲು (ನುರ್ಗೊತ್ತಿಯುಂ ಕಾಲಗಲ್ದಲಸಂಬೆತ್ತಿರೆ ಪೋಗದಂತು ನಡೆಯಂ ಮಾಣ್ದು: **ಕುಸುಮಾಕಾ,** ೨. ೪೮)

**ಅಲಸಗಾಮಿನಿ** – ಮಂದಗಮನೆ (ಘನಕುಚಭಾರ ಅಲಸಗಾಮಿನಿ ಗರ್ಭಂ ಬಳೆಯವಳಿಯೆ ನಸುಜೋಲ್ದು ಬಟಲ್ದು: **ಸುಕುಮಾಚ,** ೧೦. ೧೧)

**ಅಲಸಿಕೆ** – ದಣಿವು (ಆಕೆಯ ಮಂದಗಮನಮುಂ ಪಗೆವರ ಮನಂಗಳಂ ಒಡನೊಡನೆ ಅಲಸಿಕೆಯಂ ಕೈಕೊಂಡುವು: **ಪಂಪಭಾ,** ೧. ೧೪೧ ವ); ನಿಧಾನ (ಅಲಸಿಕೆ ಮೆಯ್ಗಾದುದು ಕಣ್ಮಲರ್ ಮರಲ್ದೆಸೆದು ಒದವಿತಾಗುಳಿಕೆಶತಂ ಪಲವುಂ ವಸ್ತುಗಳೊಳ್ ತನಗೊಲವರಮಾಯ್ತು ಕಾಂತೆಗೆ ಅಂದು ಎಳವಸಿಱೊಳ್: **ಕಾದಂಬ,** ೨. ೭೮)

**ಅಲಸಿಗ** – ಸೋಮಾರಿ (ಭೀತನಂ ಅಲಸಿಗನಂ ಕಾರ್ಯಾತುರನಂ ಪಸಿದನಂ ತೃಷಾಪೀಡಿತನಂ ದ್ಯೂತ ಮೃಗವ್ಯಸನಜನೋಪೇತನಂ ಅಱಿಅದಱಿದು ಬಿನ್ನವಿಪ್ಪಂ ಗಾಂಪಂ: **ಪಂಚತಂತ್ರ,** ೮೫)

**ಅಲಸಿಸು** – ದಣಿವುಗೊಳಿಸು (ಅರ್ಥಿವ್ರಾತಮಂ ಅಲಸಿಸಿದುದು ಪೆರ್ಮಾತಿನ ತೊಡವಿಂ ಮದಾಂಧಕರಿಯಿಂ ಹರಿಯಿಂ: **ಶಾಂತಿಪು,** ೯. ೧೫೪)

**ಅಲಸು** – ಬಳಲು, ದಣಿ (ಅಲಸು–ಆಲಸ್ಯೇ: **ಶಬ್ದಮದ,** ಧಾ ೬೭೮); ಬಳಲಿಕೆ (ಆತನ ಚಾಗಂ ಪೆರ್ಮಟಿ ಜಾತಕಪೋತಕಮಂ ಅಲಸೆ ಕೊಳ್ವವೊಲ್ ಅರ್ಥಿವ್ರಾತಮಂ ಅಲಸಿದುದು ಪೆರ್ಮಾತಿನ ತೊಡವಿಂ ಮದಾಂಧಕರಿಯಿಂ ಹರಿಯಿಂ: **ಶಾಂತಿಪು,** ೯. ೧೫೪); ಹಿಂದೇಟು ಹಾಕು (ಯೋನಿಮುಖಪ್ರಸರಕ್ಕಲಸಿದವೊಲ್ ಏಱ ಬಾಯಿಂ ತಾಯೊಂದಸುವೆರಸು ಬಿರ್ದುದಂ: **ಯಶೋಧಚ,** ೩. ೫೬)

**ಅಲಱು** – ಒಡೆದುಹೋಗು (ಅರ್ಥಿವ್ರಾತಮಂ ಅಲಸಿಸಿದುದು ಪೆರ್ಮಾತಿನ ತೊಡವಿಂ ಮದಾಂಧಕರಿಯಿಂ ಹರಿಯಿಂ: **ಶಾಂತಿಪು,** ೯. ೧೫೪)

**ಅಲಾತಚಕ್ರ** – ಪಂಜನ್ನು ವೇಗವಾಗಿ ತಿರುಗಿಸಿದಾಗ ಉಂಟಾಗುವ ವೃತ್ತ ತನ್ನಿಶಾಟ ಆಸ್ಯದಿಂ ಪೊಡರ್ದ ಅಸ್ರಾಂಬುವು ಅಲಾತಚಕ್ರಮೆನೆ ವೃತ್ತಾಕಾರದಿಂದುಣ್ಮುತುಂ: **ಜಗನ್ನಾವಿ,** ೬. ೬೯)

**ಅಲಾಬು** – ಸೋರೆ ಗಿಡ (ಅಲಾಬು ತುಂಬೀ ನಾಮಂ: ಅಭಿಧಾವ, ೧. ೮. ೨೧); ಕಾಯಿ ವೀಣೆಯ ಬುರುಡೆ (ಅದಲ್ಲದೆಯುಂ ಸ್ನಾಯ್ವಲಾಬುದಂಡಾಂಗುಷ್ಠಾಂಗುಳಿ ಪ್ರಯತ್ನದಿಂ ಶ್ರವಣರಮಣೀಯಕ್ವಣಿತಮೆತು ನೆಗಟ್ದಿಪುದು ಅಂತೆ: **ಆದಿಪು,** ೨. ೯ ವ)

**ಅಲಾಭ** – [ಜೈನ] ಮುನಿಗೆ ಚರಿಗೆಯಲ್ಲಿ ಭಿಕ್ಷೆ ದೊರೆಯ ದಿರುವುದು (ತಮ್ಮಾವಾಸಕ್ಕೆ ಪೋದೊಡೆ ಭಟ್ಟಾರರೆಂದರ್ ಏನಲಾಭಮಾದುದೇ: **ವಡ್ಡಾರಾ,** ಪು. ೯. ಸಾ. ೨೧)

**ಅಲುಂಬು** – ನೀರಿನಿಂದ ಶುದ್ಧಿ ಮಾಡು (ಬಾಂದೊಱೆಯೊಳ್ ಅಲುಂಬಿದ ಮಂದಾರವಲ್ಕವಿರಚಿತ ನವದಿವ್ಯಾಂಬರವಾ ಮುನಿವರನೊಳ್ ರಂಜಿಸಿತು: **ಕಾದಂಬ,** ೫. ೨೭); ಕಾಲು ತೊಳೆದ ನೀರು

**ಅಲುಗು** – ಅಲ್ಲಾಡು (ಮಾಲೆಗಾಱಿಂ .. .. ಮರದಲುಗುವ ಕೊಂಬಂ ಕಂಡು: **ವಡ್ಡಾರಾ,** ಪು. ೧೭೩. ಸಾ. ೨); ಅಲ್ಲಾಡಿಸುಅಳ್ಳೆವಿಳ್ಳೆಯಾಗಿ ಪಿಡಿದಲುಗುವಂತೆ ಅಲುಗೆ: **ಶಾಂತಿಪು,** ೨. ೨೨ ವ)

**ಅಲುಪ** – [ಅಲ್ಪ] ಸಣ್ಣದಾದ, ಕ್ಷುದ್ರ (ಉತ್ವಕ್ಕೆ: ಅಲ್ಪಂ – ಅಲುಪಂ: **ಶಬ್ದಮದ,** ೨೬೮ ಪ್ರ)

**ಅಲೆ** – ತಿರಸ್ಕರಿಸು ಹಾಗೂ ಚಲಿಸು (ಅಲೆ–ಪರಿಭಾವ ಲೋಲನಯೋಃ: **ಶಬ್ದಮದ,** ಧಾ ೬೧೨); ಪೀಡಿಸು (ಕಡುಪಿಂ ತಗುಳ್ದು ನಟ್ಟು ಅಲೆವ ಅಸಮಾಸ್ತ್ರವಕ್ರತೆಯೊ ದೈವಿಕಮೊ ನಿನಗೇನೆಂಬೆಂ: **ಕಾದಂಸಂ, ೪.** ೯೧); ನಿವಾರಿಸು (ಬಳ್ಳಿಗವುಂಗಂ ತಳ್ತೆಲೆವಳ್ಳಿಯ ಕಟ್ಟಿಲೆಯಂ ಅಲೆವ ಸೊಡರ್ಗುಡಿಗಳಂ: **ಆದಿಪು,** ೧೧. ೬೭); ತಾಗು; ತೊಳೆ (ಪುಳಿಯೊಳ್ ಅಲೆದ ಪವಳದ ಬಟ್ಟಿನಂತೆ ಸೊಗಯಿಸುವ ಸಂಸಾರಸಾರೋದಯಯನ ಬಿಂಬಾಧರಂ ಅನಂಗರಾಗರಸದ ಉರುಳಿಯಂತಾದುದು: **ಪಂಪಭಾ,** ೨. ೩೯ ವ); ನಿವಾರಿಸು (ವಿಷಮನೆಲಯಲ್ ಇಂತಿದೆ ಸಾಲ್ಗುಂ; **ಲೋಕೋಪಕಾ,** ೧೦. ೧೭);

ತೊಂದರೆಪಡಿಸು (ನಮ್ಮ ಜನ್ಮಾಂತರದಿಂದ ಬಂದ ಮೋಹಂ ಬಿಡದೆ ಅಲೆವುದಱಿಂದಾದೊಡಂ ಧೈರ್ಯದಿಂ ಸಂಸರಣ ಅಂಭೋರಾಸಿಯಮ ದಾಂಟುವ ಬಗೆಯನೆ: **ಆದಿಪು,** ೪. ೮೯)

**ಅಲೆದಾಡು** – ಕಾಡು, ಹಿಂಸಿಸು (ಗರುಡಂ ವಾಹಮಾಗಿರ್ದ ಚಕ್ರೇಶ್ವರಿ ಭಸ್ವದ್ಧರ್ಮಚಕ್ರಾಕ್ರಮಿಗಳಂ ಅಲೆದಾಟಕ್ಕೆ ವಿಕ್ರಾಂತದಿಂದಂ: **ಆದಿಪು,** ೧. ೭)

**ಅಲೆಪ** – ಬೀಸುವಿಕೆ (ತೆಂಬೆಲರಲೆಪದ ಪೂಲತೆಯೆಂಬಿನಂ ಅಂಕುರಿಸೆ ಪುಳಕಂ: **ಶಾಂತಿಪು,** ೧೦. ೭); ಸಂಚಾರ (ತೆಂಕಣೆಲರ ಅಲೆಪದಿಂದಂಕುರಿಸಿದ ಚೂತದಂತೆ ಆತಂ ರೋಮಾಂಚಕಂಚುಕಿತನಾಗಿ: **ಆದಿಪು:** ೪. ೨೧ ವ)

**ಅಲೆಪು** – ಬೀಸುವಿಕೆ (ಚಾಮರದ ಗಾಳಿಯ ಅಲೆಪಿನೊಳಲ್ಲುಗುವ ಬಂಬಲ್ಗುರುಳುಳ ಬಂಬಲಿಂದಂ: **ಆದಿಪು,** ೪. ೯ ವ); ಕಾಟ (ಬಿಸುಸುಯ್ವ ಬೆಂಕೆಯಲೆಪಿಂ ಪಳ್ವಿರ್ದ ಬೆಳ್ವಾಯ ದರ್ದುರಂ: **ಲೀಲಾವತಿ,** ೨. ೬೫)

**ಅಲೋಕಾಕಾಶ** – [ಜೈನ] ಲೋಕದ ಹೊರಗಿನ ಆಕಾಶ; ಸಿದ್ಧರು ಇರುವ ಸ್ಥಳ (ಅತ್ತಲ್ ಅಲೋಕಾಕಾಶಂ ಸುತ್ತಿರ್ದುದು ಅನಂತಂ: **ಸುಕುಮಾಚ,** ೧೧. ೫೯)

**ಅಲ್ಗು** – ಅಳ್ಳಾಡು (ಚತುರಂಗಮುಂ ಒರ್ಮೊದಲೆ ನಡುಗಿದುದು ಕೂಡಿದ ಚದುರಂಗದ ಮಣೆಯಂ ಅಲ್ಗಿದಂತಪ್ಪಿನೆಗಂ: **ಪಂಪಭಾ,** ೧೧. ೭೦)

**ಅಲ್ಪ** – ಚಿಕ್ಕದಾದ (ಗಗನವಿಹಾರಂ ಅಲ್ಪವೆನೆಯುಂ: **ಶಾಂತಿಪು** ೧೨. ೨೨ ವ)

**ಅಲ್ಪಘಾಟ** – ಆನೆಗಳ ಕೆನ್ನೆಯ ಪಕ್ಕ, ಕುತ್ತಿಗೆಯ ಹಿಂಭಾಗ (ಅಲ್ಪಘಾಟನುಮನುನ್ನತಶಿಖನುಂ ಪೀನಮಾಂಸಕಟಶ್ಲಿಷ್ಟನುಂ: **ಆದಿಪು,** ೧೨. ೫೬ ವ)

**ಅಲ್ಪಮಧ್ಯೆ** – ತೆಳುವಾದ ನಡುವುಳ್ಳವಳು (ಸೋಲ್ತು ನೋಡಿದರ ಮನಕ್ಕಣಂ ಪಡೆಯದಲ್ತೆ ವಿಕಲ್ಪಮಂ ಅಲ್ಪಮಧ್ಯೆಯಾ: **ಆದಿಪು,** ೪. ೧೯)

**ಅಲ್ಪವ್ಯಾಹಾರಿ** – ಮಿತಭಾಷಿ (ಅಮಿತಂ ಅಮಿತಾರ್ಥ ಅಲ್ಪವ್ಯಾಹಾರಿ ಗಾಣಿಯರ್ಗೆಂಗುಂ: **ಶಾಂತಿಪು,** ೩. ೨೩)

**ಅಲ್ಪಶ್ರುತ** – ಕಡಿಮೆ ತಿಳಿದವನು (ವಕ್ತ್ರದೊಳೊಡಂಬಟ್ಟೊಪ್ಪೆ ಕೇಳ್ದಂ ಬಹುಶ್ರುತಂ ಅಲ್ಪಶ್ರುತಂ ಎನ್ನದೆ: **ಶಾಂತಿಪು,** ೧. ೮)

**ಅಲ್ಪಸುಖಾಶಿ** – ಸ್ವಲ್ಪ ಸುಖಕ್ಕೆ ಆಸೆ ಪಡುವವನು (ಮುಕ್ತಿಯೊಳಾದ ನಂಬುಗೆ ಮನಂಬುಗು ಅಲ್ಪಸುಖಾಶಿಗೆ: **ಶಾಂತಿಪು,** ೧. ೮೬)

**ಅಲ್ಪಾಯು** – ಕಡಿಮೆ ಆಯುಸ್ಸುಳ್ಳವನು (ವಿಸ್ಮಯಮಾದಪುದು ಅಲ್ಪಾಯುವಲ್ಲನಕ್ಕುಂ ದನುಜಂ: **ಪಂಪರಾ,** ೧೪. ೩೨)

**ಅಲ್ಪಾಯುಷ** – ಕಡಿಮೆ ಆಯುಸ್ಸುಳ್ಳವನು (ಅಲ್ಪಾಯುಷನುಂ ಆಸನ್ನಭವ್ಯನುಂ ಅಪ್ಪುದಂ ಜಲಕ್ಕಱಿದು: **ಸುಕುಮಾಚ,** ೪. ೩೮ ವ)

**ಅಲ್ಪೋಪಜಲ್ಪ** – ಮಿತ ನುಡಿ, ಮಿತಭಾಷಿ (ಲೋಕಪ್ರತಿತ್ಯಾಶ್ರಯಸಕಳಕಳಾಲೀಲಾಕರ ಅಲ್ಪೋಪಜಲ್ಪಂ: **ಕವಿರಾಮಾ,** ೩. ೨೧೬)

**ಅಲ್ಲ** – ಹಸಿ ಶುಂಠಿ (ಮೊಳೆಯ ಅಲ್ಲವೇಲೆ ಕಮ್ಮಿಪ್ಪ ಸುಭದ್ರೆ ಮಾಮಿಡಿ ಕರಂಜಿಕೆ ಅಂಬಟೆ ನಿಂಬೆ ನೆಲ್ಲಿಗಾಯ್ .. .. ಆದಿಯಾದ ಉಪ್ಪಿನ ಕಾಯ್ಗಳಂ: **ಲೀಲಾವತಿ,** ೫. ೬೭)

**ಅಲ್ಲಕಲೊಳ** – ದೊಡ್ಡ ಅಲೆಗಳೆದ್ದಾಗಿನ ಸಮುದ್ರದ ಕ್ಷೋಭೆ (ಸಡಗರದೇೞ್ಗೆಯುಂ ಕಳವಳಧ್ವನಿಯುಂ ಬೆರಸಾಡುವಂತೆ ಎರಟ್ವಡೆಯೊಳ್ ಆಗಳೊರ್ಮೊದಲೆ ಪಲ್ಲಣಮಿಕ್ಕಿಪುದು ಅಲ್ಲಕಲ್ಲೋಳಂ: **ಪಂಪಭಾ,** ೧೩. ೩೩)

**ಅಲ್ಲಕಲ್ಲೋಲ** – ಅಲ್ಲೋಲಕಲ್ಲೋಲ, ಕ್ಷೋಭೆ (ಪಾಂಡವ ಬಲಮೆಲ್ಲಮಂ ಅಲ್ಲಕಲ್ಲೋಲಂ ಮಾಡಿ: **ಪಂಪಭಾ,** ೧೧. ೬೦ ವ)

**ಅಲ್ಲಣಿಗೆ** – ಮೇಳ, ವಿನೋದ (ಅಲ್ಲಣಿಗೆಯೆಂದು ಮೇಳಂ: **ಶಬ್ದಮದ,** ಪ್ರಸಾ, ೧೨)

**ಅಲ್ಲಣಿಗೆಗಾಳಗ** – ವಿನೋದ ಯುದ್ಧ (ಜಿನಚಂದ್ರಂ ತಮ್ಮನಂ ಪೇೞ್ದು ಅಲ್ಲಣಿಗೆಗಾಳೆಗಂ ಕಾದುತಿರ್ಪುದುಂ: **ಶಾಂತಿಪು,** ೪. ೪೩ ವ)

**ಅಲ್ಲಣಿಗೆಮುಳಿಸು** – ಹುಸಿಮುನಿಸು (ಅಲ್ಲಣಿಗೆಮುಳಿಸಂ ಮುಳಿದೊಲ್ಲದೆ ಪೋಪನೆರಡಿಲ್ಲದೆ ನಲ್ಲಳ್ ಪಿಡಿದು: **ಶಾಂತಿಪು,** ೮. ೧೦೪ ವ)

**ಅಲ್ಲದಲ್ಲಣಿಗೆ** – ಹಸಿ ಶುಂಠಿಯ ಮಿಶ್ರಣ (ಕುಡಿಬಿದಿರ ಕುಡಿಯ ಮಾವಿನ ಮಿಡಿಯ ಮಾರುಡಿನ ಮೆಣಸುಗಡಲೆಯ ಪುಡಿಯೊಳ್ ಅಡಸಿದ ಅಲ್ಲದಲ್ಲಣಿಗೆಯ ಚಕ್ಕಣಂಗಳಂ ಸವಿಸವಿದು: **ಪಂಪಭಾ,** ೪. ೮೭ ವ)

**ಅಲ್ಲಳಿಗಾಳಗ** – ಅಲ್ಲಣಿಗೆಗಾಳಗ (ಧರ್ಮಪುತ್ರಂಗೆ ತನ್ನ ನುಡಿದ ನುಡಿವಳಿಯಂ ನೆನದು ಅಲ್ಲಳಿಗಾಳೆಗಂಗಾದೆ: **ಪಂಪಭಾ,** ೧೧. ೪೩ ವ)

**ಅಲ್ಲಾಟ** – ಅಲುಗಾಡು, ನಡುಕ (ಬಗೆಯಂ ತೆಗೆಯಂ ಅಲ್ಲಾಟಮಂ ಕಾಟಮಂ ನೋವುದಂ ಸಾವುದಂ ಎಲ್ಲಂದದಿಂ: **ಪಂಪಭಾ,** ೫. ೪೩)

**ಅಲ್ಲಾಡಿಸು** – ಅಲುಗಾಡಿಸು, ಹೆದರಿಸು (ಬಂದಳ್ ನೆರವಿಯ ನೋಟಕರ ಮನಮನಲ್ಲಾಡಿಸುತುಂ: **ಧರ್ಮಾಮೃ,** ೭. ೧೨೨)

**ಅಲ್ಲಿ** – ಆ ಸ್ಥಳ, ಆ ಜಾಗ (ಬೆಳಗುವೆನಿಲ್ಲಿ ಲೌಕಿಕಮಂ ಅಲ್ಲಿ ಜಿನಾಗಮಮಂ: **ಪಂಪಭಾ,** ೧೪. ೬೦)

**ಅಲ್ಲಿಂ** – ಅದಕ್ಕಿಂತ (ನೆನೆವಲ್ಲಿಂ ಮುನ್ನಂ ಮದನನ ಪಂಚಬಾಣಂ ಪರಿತಂದು: **ಗಿರಿಜಾಕ,** ೮. ೪೫ ವ); ಅಲ್ಲಿಂದ

**ಅಲ್ಲಿದ** – ಅಲ್ಲಿ ಹುಟ್ಟಿದವನು, ಅಲ್ಲಿಯವನು (ದಕಾರಕ್ಕೆ: ಕೆಲದಂ, ಬಲದಂ, ಅಲ್ಲಿದಂ, ಇಲ್ಲಿದಂ, ಎಲ್ಲಿದಂ: **ಶಬ್ದಮದ,** ೧೨೧ ಪ್ರ)

**ಅಲ್ಲುಗು** – ಅಲುಗಾಡು (ಬೀಸುವ ಚಾಮರದ ಗಾಳಿಯಲೆಪಿನೊಳ್ ಅಲ್ಲುಗುವ ಬಂಬಲ್ಗುರುಳ್ಗಳ ಬಂಬಲಿಂದಂ: **ಆದಿಪು,** ೪. ೯ ವ)

**ಅಲ್ಲೊಗು** – ಚೆಲ್ಲು, ಸೂಸು (ಉದಿರ್ದು ಅಲ್ಲೊಕ್ಕ ವಿಚಿತ್ರಪುಷ್ಪಚಯದಿಂ ತದ್ಗಂಧಸಂಸಕ್ತಷಟ್ಪದದಿಂ: **ಆದಿಪು,** ೧೧. ೧೫೪)

**ಅವಕರ್ಣಂಗೆಯ್** – ಕಿವಿಯ ಮೇಲೆ ಹಾಕಿಕೊಳ್ಳದಿರುವುದು (ಬೇಡಬೇಡೆಂದೊಡಂ ನೀಂ ಅವಕರ್ಣಂಗೆಯ್ದು ಇನಿತ್ತು ಉಗ್ರತರವಿಷಯದುಃಖಲಲೆ ಪಕ್ಕಾದೆಯಲ್ತೇ: **ಪಾರ್ಶ್ವನಾಪು,** ೪. ೧೫೪)

**ಅವಕರ್ಣಿಸು** – ಅಲಕ್ಷ್ಯದಿಂದ ಕೇಳು (ಪರಶುರಾಮನನಂಜಿಸಿದ ವೀರಂಗೆ ವೀರಪಟ್ಟಮಂ ಕಟ್ಟಿ ಪಗೆವರಂ ಎನ್ನ ಮಂಚದ ಕಾಲೊಳ್ ಕಟ್ಟಿದೆನೆಂದು ಪೊಟ್ಟಳಿಸುವ ಸುಯೋಧನನ ನುಡಿಯಂ ಅವಕರ್ಣಿಸಿ ಕರ್ಣನಿಂತೆಂದಂ: **ಪಂಪಭಾ,** ೧೦. ೧೫ ವ)

**ಅವಕಾಶಂಗುಡು** – ಎಡೆಮಾಡಿಕೊಡು (ತದೀಯ ಯಶಃಪ್ರಸರಕ್ಕೆ ಅವಕಾಶಂಗುಡುವಂತೆ .. .. ಪ್ರಕಾಶಿತಾಶಾಂತಮಾಗೆ: **ಆದಿಪು,** ೭. ೭೫ ವ)

**ಅವಕುಂಠಿತ** – ಮರೆಮಾಚಲ್ಪಟ್ಟ (ನಳಿನೀದಳ ಅವಕುಂಠಿತಮಾದ ಮೆಲ್ಲೆರ್ದೆಯೊಳ್ ಅದೋರೊರ್ಮೆ ಕಳವಳಿಸಿ ಕರತಳದಿನೆಳವಿಯಿಂ: **ಕಾದಂಸಂ,** ೪. ೯೬ ವ)

**ಅವಕುಟ್ಟು** – ಗಲಿಬಿಲಿಗೊಳ್ಳು (ಎನ್ನ ಶಿಷ್ಯಂ ಬಿಟ್ಟಕಣ್ಣಿಂ ಪೊನ್ನಿರ್ದೆಡೆಯನಱಿಯದೊಡವಕುಟ್ಟುತ್ತುಂ ಮಠಮಂ ಪತ್ತುವಿಡದೆ ಪಿರಿಯದೊಂದು ಕರಕೆಯ ಕೂಟಿಂ ತಂದು ತಾನೊಂದು ಭಾಗಮನುಂಡು: **ಪಂಚತಂತ್ರ,** ೪೩೪, ವ)

**ಅವಕೇಶಿ** – ಬಂಜೆ, ಫಲವಿಲ್ಲದ್ದು (ಆಫಮುಳ್ಳುದು ಫಳಿನಂ ನಿಷ್ಫಳಕುಜಂ ಅವಕೇಶಿ: **ಅಭಿಧಾವ,** ೧. ೭. ೨)

**ಅವಕ್ಕನೆ** – ತಟಕ್ಕನೆ (ಸುಲಭನಾದೊಡಂ ಅವಕ್ಕನೆ ಬೇಡ .. .. ಅವನೇವನೋ ಲಕ್ಕುಮೀವೊಡಂ: **ಲೀಲಾವತಿ,** ೨. ೭೪)

**ಅವಕ್ರಿಯೆ** – ನಿರರ್ಥಕ ಕೆಲಸ (ಶಿಶಿರಕ್ರಿಯೆಯಂ ತನ್ನ ಮನೋರುಜೆಗೆ ಅವಕ್ರಿಯೆಯಾಗಿ ಕಂಡು: **ಚಂದ್ರಪ್ರಭು,** ೮. ೮೮ ವ)

**ಅವಗಂಧ** – ಕೆಟ್ಟ ವಾಸನೆ (ಮುಖಕುಟ್ಮಲದಿಂದ ಅವಗಂಧಮಂ ಮರುಳ್ದೆಱಗದೆ .. .. ಸರಸ್ವತಿಯೆಂಬ ತುಂಬಿ ಬಂದೆಱಗುಗೆ: **ಲೀಲಾವತಿ,** ೧. ೬)

**ಅವಗಡ** – ಸಾಹಸ (ಪವನಜನಂತು ಪೂಣ್ದು ಯುವರಾಜನ ನೆತ್ತರನಾರ್ದು ಪೀರ್ದಂ ಇಂತು ಅವಗಡದಿಂ ದಿನೇಶಜನಂ ಅಂಕದ ಗಾಂಡಿವಿ ಕೊಂದಂ: **ಪಂಪಭಾ,** ೧೩. ೮)

**ಅವಗಡಿಸು** – ಕಡೆಗಣಿಸು, ಹೀಯಾಳಿಸು (ಹರಿ ಸಂಧಾನಕ್ಕೆ ವಂದಂದು ಅವಗಡಿಸಿದ ಅಹಂಕಾರಮೇನಾಯ್ತೊ: **ಗದಾಯು,** ೭. ೧೪)

**ಅವಗತ** – ಚೆನ್ನಾಗಿ ತಿಳಿದವನು (ಅವಗತ ಅನೇಕ ಲೋಕವ್ಯಾಪಾರಕನುಂ ಜನ್ಮಾಂತರಾಭ್ಯಸ್ತಕಳಾಕುಶಲನುಂ: **ಆದಿಪು ನರಸಿಂ,** ೮. ೩ ವ)

**ಅವಗಮನ** – ಅರಿವು, ತಿಳಿವಳಿಕೆ (ಚತುರಸದವಗಮನ ಸಮನ್ವಿತಂ ಅಜಿತಂ ಪರಮಯೋಗಿ ಪರಲೋಕಗತಾಗತ ಕಾರ್ಯಕಳಾಪದೊಳ್ ಅವಹಿತನಾದನ್ನದೆ ಜಿಗೀಷು ಮಱಿದಿರ್ದಪನೇ: **ಅಜಿತಪು,** ೬. ೧೨೫)

**ಅವಗಮ್ಯ** – ತಿಳಿಯಬಹುದಾದ (ವಿಶದದರ್ಶನ ಅವಗಮ್ಯಂ ಅದೆಲ್ಲಂ ಅಸತ್ಯಾವಭಾಸಿ: **ಆದಿಪು,** ೨. ೯ ವ)

**ಅವಗಯಿಸು** – ತಿಳಿದುಕೊ (ಅಸನಕಂಪದಿಂದ ಇಱಿದು .. .. ವಿಮಾನದ ಯಾನದ ವಾಹನಂಗಳಗ್ರೇಸರಸದ್ವಿಮಾನಮುಮಂ ಅರ್ಚನೆಯೊಳ್ ದೊರೆಕೊಂಡ ಚೆಲ್ವುಮಂ ಅವಗಯಿಸಿ: **ಶಾಂತಿಪು,** ೧೦. ೨ ಮತ್ತು ೨. ವ); ತೋರಿಸು, ಹೊಂದು (ವಾಸವಪುರಂ ಇದಱೀ ವಿನ್ಯಾಸಮಂ .. .. ವಿಲಾಸಮಂ ಇದಱೀ ಬೆಡಂಗಂ ಅವಗಯಿಸುಗುಮೇ: **ಶಾಂತಿಪು,** ೩. ೮)

**ಅವಗಹನ** – [ಜೈನ] ಮುಕ್ತಾತ್ಮದ ಎಂಟು ಗುಣಗಳಲ್ಲಿ ಒಂದು; ಮುಕ್ತಜೀವನದಲ್ಲಿ ಅನೇಕ ಸಿದ್ಧಜೀವಿಗಳು ಸೇರುವ ಅವಕಾಶ (ಅವಗಹನಮುಂ ಅವ್ಯಾಬಾಧಂಗಳೆಂಟುಂ ಗುಣಸ್ಥಾನಂಗಳ್ ಆತ್ಮಾಯತ್ತಮಾಗೆ: **ಶಾಂತಿಪು,** ೧೨. ೫೧ ವ)

**ಅವಗಹನಂ ಮಾಡು** – ಮುಳುಗಿ ಸ್ನಾನ ಮಾಡು (ನೀಡು ಮೇಲಾಡಿದಂ ಅವಗಹನಮಂ ಮಾಡಿದಂ ರಾಗದಿಂದೀಂಟಿದಂ ಓರಂತೆ ಈಸಿದಂ: **ಸುಕುಮಾಚ,** ೬. ೪೩)

**ಅವಗಾಹಿಸು** – ಮುಳುಗಿ ಸ್ನಾನಮಾಡು (ಜಳಮಂ ರಂಭಾದಿಗಳ್ ಸೇವಿಸುತ್ತಿರೆ ಕೂರ್ಪಿಂದ ಅವಗಾಹಿಸುತ್ತ ಅನಿಮಿಷವ್ರಾತಂ ಕರಂ ತೋಱೆ: **ರಾಜಶೇವಿ,** ೨. ೪)

**ಅವಗಟೆ** – ಆಧಿಕ್ಯ (ವಿರಹಿಜನ ಸಂಜ್ವರವ್ಯತಿಕರದೊಳ್ ಅವಗಟೆಯ ಮಂದ ಘರ್ಮದಿಂದ: **ಆಚವರ್ಧ,** ೫. ೬೩ ವ)

**ಅವಗಟೆಯ** – ರಭಸದಿಂದ ನುಗ್ಗುವುದು (ಅಟೆಪು ಕೊಲೆ ಕಳವು ಪುಸಿ ಅವಗಟೆಯಂ ಪಟೆಯೆಂಬ ದೋಷದೊಳ್: **ಕಾವ್ಯಾವಲೋ,** ೨೯೧)

**ಅವಗಟೆಯಿಸು** – ಅಧಿಕವಾಗು; ಮೇಲೆ ಮೇಲೆ ಬರು, ಉರವಣಿಸು, ಅತಿಶಯವಾಗು (ಹರಿವಕ್ಷಮಂ ಅಬ್ಬಟೆವೋಗೆಯೆಚ್ಚು ಮುಳಿಸವಗಟೆಯಿಸುತಿರೆ ನರನ ಬಿಲ್ಲ ಗೋಣೆಯಮನೆಚ್ಚಂ: **ಪಂಪಭಾ,** ೧೨. ೨೦೯)

**ಅವಗಾಢ** – ಒತ್ತಾದ, ದಟ್ಟವಾದ (ನಿಬಿಡಪೀಡಿತ ಪ್ರಾಸಮುಷ್ಟಿದುರ್ಧರ ಅಶ್ವಾರೋಹತುರಂಗಬಲವದ್ ಅವಗಾಢನುಂ: **ಆದಿಪು,** ೧೪. ೯೩ ವ)

**ಅವಗಾಹ** – ಆಳ (ಯೋಜನಗಾತ್ರ ಅವಗಾಹಮುಂ ಸರ್ವರತ್ನಜಾಂಬೂನದವೈಡೂರ್ಯಮಯಮುಂ: **ಆದಿಪು,** ೧. ೪೯ ವ); ಉದ್ದಳತೆ (ಸಪಾದಷಡ್ಯೋಜನ ಅವಗಾಹದೊಳಂ ಷಡ್ಯೋಜನಾಧೋವಿಸ್ತಾರದೊಳಂ: **ಆದಿಪು,** ೧. ೬೨ ವ); ಮುಳುಗುವಿಕೆ, ಸ್ನಾನ (ಆ ನೃಪತಿ ನಿಚ್ಚಲ್ ಅಯ್ಯೂಱಾನೆಯಂ ಅವಗಾಹಮಿರಿಸುವಂ ಬೋದನದೊಳ್: **ಪಂಪಭಾ,** ೧. ೧೭)

**ಅವಗುಣ** – ಕೆಟ್ಟ ಗುಣ (ಅವಗುಣಮಿನಿತಾದೊಡಂ ಆ ಕವಿತಾಬಂಧಂ ಮಂ ಅಶೇಷಮಂ ದೂಷಿಸುಗುಂ: **ಕವಿರಾಮಾ,** ೧. ೪೩)

**ಅವಗುಣಿ** – ದುರ್ಗುಣಿ (ಅವಗುಣಿಗಳ ಗುಣಮಂ ಗುಣಜ್ಞನೇನೆಣಿಸುವುದೇ: **ಸುಕುಮಾಚ,** ೧. ೪೮)

**ಅವಗೂಹಿತ** – ಮರೆಮಾಚಲ್ಪಟ್ಟ (ಕಾಕಗೃಧ್ರನಿಕಾಯಚ್ಛದಂ ಅವಗೂಹಿತನೆನಲ್ ಬಿಟ್ಟಿರ್ದನಂ: **ಜಗನ್ನಾವಿ,** ೪. ೫೯)

**ಅವಗೃಹ್ಯಮಾಣ** – ಹಿಡಿಯಲ್ಪಟ್ಟ (ಆ ಕಾಂತೆಯಂ ಉಪಸಂಹೃತಮನ್ಯುವೇಗೆಯುಂ ಗದ್ಗದಿತ ಅವಗೃಹ್ಯಮಾಣ ಕಂಠೆಯುಂ ಆಗಿ ಕುಮಾರರನಿಂತೆಂದರ್ಳ; **ಕಾದಂಸಂ,** ೭. ೯ ವ)

**ಅವಗ್ರಹ** – ಆನೆಯ ಹಣೆ (ನಿರ್ವ್ಯಾಣೋನ್ನತ ಅವಗ್ರಹವಿಭಕ್ತವಿದುವಿಧಾನಶರೀರನುಂ: **ಆದಿಪು,** ೧೨. ೫೬ ವ); ಬೇರ್ಪಡಿಸುವುದು (ವ್ಯಗ್ರಮನರ್ ಅನ್ಯರ್ ಎಂತುಂ ಅವಗ್ರಹಮೆಂದುದನೆ ಮತ್ತಮನುಭವಿಸುವರ್: **ಸಮಯಪ,** ೬. ೭೨); [ಜೈನ] ಅವಗ್ರಹ, ಈಹಾ, ಅವಾಯ ಮತ್ತು ಧಾರಣ ಎಂಬ ನಾಲ್ಕು ಪ್ರತ್ಯಕ್ಷ ಪ್ರಮಾಣಗಳಲ್ಲಿ ಮೊದಲನೆಯದು (ಸಕಲ ವಿನೇಯ ಸಂಹತಿಯೊಳಲ್ಲದೆ ಅವಗ್ರಹವೆಂಬುದಿಲ್ಲ: **ಅಜಿತಪು,** ೧. ೨೨)

**ಅವಘಾಟಕ** – ಮಧ್ಯೆ ಕ್ರಮವಾಗಿ ಸಣ್ಣ ಸಣ್ಣ ಮುತ್ತುಗಳಿರುವ ಹಾರ (ಪ್ರತ್ಯೇಕೋಪಶೀರ್ಷಕ ಅವಘಾಟಕ ಪ್ರಕಾಂಡಕರತಳತರಬಂಧೋಪಪದ ಪಂಚಕಸಮೇತಂಗಳಾಗಿ: **ಆದಿಪು,** ೮. ೫೪ ವ)

**ಅವಚಂಬಡು** – ಅವರ್ಣನೀಯವಾಗು (ಪೊಂಗವಚಂಗಳನಿತ್ತರ್ ಪಾಮಗು ಅವಚಂಬಡುವಿನಂ: **ಚಂದ್ರಪ್ರಭು,** ೧೦. ೬೪)

**ಅವಚಱ** – ಬೇಸರ, ಜಿಗುಪ್ಸೆ (ಕೊಂಕುವೆತ್ತ ಪೊಸನುಡಿಯೆಪುಗುಗುಮುಟಿದುದು ಸೈಱುತ ಅವಚಱನೆ ಮಾಡಿ: **ಆದಿಪು,** ೧. ೧೮)

**ಅವಚಱು** – ಬೇಸರ ಪಡು, ಜಿಗುಪ್ಸೆ ತಾಳು (ದಿವಸಮನೊಂದು ಮೇಣೆರಡು ಮೂಱಿಸೆ ನಿಲ್ವುದು ಮೂಱುತಿಂಗಾಲ್ತು ಅವಚಱದಿಂತು ನಿಂದನೊಳನೇ: **ಆದಿಪು,** ೯. ೮೯); ಜಿಗುಪ್ಸೆ (ಅವಚಱಂ ಇಂದ್ರಿಯಸೌಖ್ಯಮೀಯೆ ವಿರಕ್ತಿಯಿಂದ ಅವನಿಯನಿತ್ತು ನಿಜಾತ್ಮಜಂ ಪ್ರತಿಬಿಂದುಗೆ: **ಪಂಪರಾ,** ೧೦. ೧೨೧)

**ಅವಚು** – ಅವಚಱು (ಮನಕ್ಕೆ ಅವಚಱಂಮಾಡದೆ ಅಳುರ್ಕೆ ಕುಂದದೆ ಅಳುಪು ಏವಂಗೊಳ್ಳದೆ ಆಸಕ್ತಿ: **ಶಾಂತಿಪು,** ೭. ೩೭)

**ಅವಚೂಲ** – ಬಾವುಟದ ತುದಿಗೆ ಕಟ್ಟಿರುವ ಅಲಂಕಾರದ ಕುಚ್ಚು (ಅವಚೂಲಂ ಬೃಹತ್ ಚಂದನಶಾಖಾಬದ್ಧ ರಕ್ತಧ್ವಜವಿನಿಸಿನಿಸುಂ ಕಾಣಲಾದತ್ತಾಗಳ್: **ಕಾದಂಬ,** ೮. ೨)

**ಅವಚ್ಛನ್ನ** – ಮುಚ್ಚಲಾದ ಧವಳ ಕಂಚುಕ ಅವಚ್ಛನ್ನ ವೃದ್ಧಕಂಚುಕೀಜನ: **ಅಜಿತಪು,** ೩. ೧೩ ವ)

**ಅವಜ್ಞೆ** – ಅಲಕ್ಷ್ಯ (ದುರ್ಘಟಮುಂ ಎನಿಪ ಎಡೆಯೊಳ್ ಎರ್ದೆಗೊಟ್ಟು ಅದೊಂದು ಅವಜ್ಞೆಯಿಂದೆಸಗಿದಪಂ ವಿಷಮಾಸ್ತ್ರಂ: **ಕಾದಂಬ,** ೫. ೧೨೦ ವ)

**ಅವಟಯಿಸು** – ಅರ್ಪಿಸು (ಭೂಪಾಳಂಗವಟಯಿಸಿದುದು ಆ ಪೂಗೊಳದೊಳ್ ವಿಚಿತ್ರಕಾಂಡಪಟೀಪ್ರಕ್ಷೇಪಣ ವಿಳಾಸಮಂ ತತ್ ಸೋಪಾನನ ಉತ್ತಾನ ಮಣಿಮಯೂಖವಿತಾನಂ: **ಮಲ್ಲಿನಾಪು,** ೬, ೭೩); ಒಪ್ಪಿಸು (ತಾಂಬೂಲ ಪರಿಚಾರಕಿಯರ್ ಭೋಗೋಪದ್ರವ್ಯಂಗಳಂ ತಂದು ಅವಟಯಿಸಿದರಾಗಳ್: **ಹರಿವಂಶ,** ೩. ೭೨ ವ); ಪರಿಚಯಿಸು (ಅಂತು ತಂದು ವೃಂದಾರಕವೃಂದಂ ಅವಟಯಿಸುವಾಗಳ್: **ಅನಂತಪು,** ೫. ೭೫ ವ)

**ಅವಟಯ್ಸು** – ಒಪ್ಪಿಸು, ಅರ್ಪಿಸು (ಕವಿತೆಗೆ ವಾಗ್ದೇವತೆ ಕಿಟ್ಟಿವಳಿಗೆವಿಡುವಂತೆ ತಂಬುಲದಿಂದೀವಿದ ಪೊಂಗವಳಿಗೆಯಂ ಪಿಡಿದು ಅಂಬಿಕೆಗೆ ಅವಟಯ್ಸಿದಳ್ ಒರ್ವಳ್ ಇಂದ್ರವಧು ತಂಬುಲಮಂ: **ಶಾಂತಿಪು,** ೯. ೧೮೦); ಒಟ್ಟಾಗು (ಬಗೆ ಮತ್ತೊಂದೆನೆಯುಂ ಗೆಯ್ಯೊಗಂ ಇತ್ತೊಂದೆನೆಯುಂ ಅಂಗುಳೀ ನಖಚಯಕಾಂತಿಗಳಂ ಅವಟಯ್ಸಿ ಸಲೆ ಪಾಸಗಯದೆಸೆದೆಸೆ ಪೊರಳ್ದಿದಂ ಮತ್ತೊರ್ವಂ: **ಶಾಂತಿಪು,** ೫. ೧೦೫); ಹರಡುವಂತೆ ಮಾಡು (ಎಲ್ಲ ದೆಸೆಗಂ ತಣ್ಬಿಸಿಲ್ ಅವಟಯಿಸುವ ವಜ್ರಶಿಲಾತಳಂಗಳುಮಂ: **ಪಂಪರಾ,** ೨. ೧೩ ವ)

**ಅವಡೀನ** – ಹಾರುತ್ತ ಕೆಳಗಿಳಿಯುವುದು (ಉಡ್ಡೀನ ಅವಡೀನಪ್ರಕೃತಿ ಗರುಡನೇಂ ವಿಸ್ಮಯಂ ಸೌಭವೇಗಂ: **ಜಗನ್ನಾವಿ,** ೧೮. ೯೪)

**ಅವತಂಸ** – ಕಿವಿಯ ಆಭರಣ (ತ್ರಿದಶಾಂಗನೆ ಜಿನಜನನಿಗೆ ಪದೆಪಿಂ ತಾರಾವತಂಸಮಂ ಭೂಷಿಸೆ: **ಶಾಂತೀಶ್ವಪು,** ೧೩. ೨೧೮)

**ಅವತಂಸೀಕೃತ** – ಆಭರಣವಾಗಿ ಮಾಡಲ್ಪಟ್ಟ (ಅವತಂಸೀಕೃತ ಬಾಲಕೈತಕಶಿಖಾ ಸಂದಿಗ್ಧ ಮುಗ್ಧಾಮೃತಾಂಶು ವಿಹಾಯಸ್ಸರಿತ್ ಅಂಬುಚುಂಬಿತ ಜಟಾಜೂಟಾಂತರಂ: **ಪಂಚತಂತ್ರ,** ೨)

**ಅವತರಣ** – ಇಳಿಯುವುದು (ಇದು .. .. ಸುಧಾರ್ಣವ ಅವತರಣೋದ್ಯೋಗ ವರ್ಣನಂ: **ಜಗನ್ನಾವಿ,** ೧. ೮೦ ವ)

**ಅವತರಿಸು** – ಇಳಿದು ಬಾ (ರಾಜಭವನದ್ವಾರದೊಳ್ ಇಂದ್ರಾಯುಧದಿಂದ ಅವನಿತಳಕ್ಕೆ ಅವತರಿಸಿ ಅರಮನೆಯಂ ಪೊಕಕು: **ಕಾದಂಸಂ,** ೨. ೪೨ ವ); ಉಂಟಾಗು ಉಣ್ಮುವ ಅಶ್ರುಗಳ್ ಅವತರಿಸುವ ಗದ್ಗದಂ ಮನೋಹರಮಾಗಳ್: **ಗಿರಿಜಾಕ,** ೩. ೨೭); ದೇವತೆಗಳು ಭೂಲೋಕದಲ್ಲಿ ಹುಟ್ಟುವುದು (ಶಾಶ್ವತದಿನತರಿಸಿರ್ದಂ ಗದಾಶಂಖ ಚಕ್ರಾಂಕಿತಹಸ್ತಂ .. .. ವಾಸುದೇವಂ: **ಜಗನ್ನಾವಿ,** ೨. ೯)

**ಅವತಾರ** – ಇಳಿಸುವಿಕೆ (ಮಹಾಭಾರ ಅವತಾರದೊಳ್ ಅತಿರಥಮಹಾರಥಸಮರಥ ಅರ್ಧರಥರ್ಕಳಂ ಪಡಲ್ವಡಿಸುವುದಱಿಂ .. .. ಬೀರದೊಳರಿಕೇಸರಿಯುಮಾಗಿ, ಪಂಪಭಾ, ೧೪. ೩೭ ವ); ದೇವರು ಭೂಮಿಯಲ್ಲಿ ಜನ್ಮ ತಾಳುವುದು (ಇದು ಪರಮಸರಸ್ವತೀ ತೀರ್ಥಾವತಾರ ನೃಪತುಂಗದೇವಾನುಮತಪ್ಪ: **ಕವಿರಾಮಾ,** ಆಶ್ವಾಂತ್ಯಗದ್ಯ); [ಜೈನ] ಗರ್ಭಾನ್ವಿತಕ್ರಿಯೆಗಳಲ್ಲಿ ಒಂದು (ಮತ್ತಂ ಅವತಾರ ವೃತ್ತಿಲೋಭ ಗಣಗ್ರಹಣ ಪೂಜಾರಾಧ್ಯ .. .. ಎಂಬೆಂಟುಂಬೆರಸು: **ಆದಿಪು,** ೧೫. ೧೬ ವ); ನಿರೂಪಣೆ (ಕೃತಿಪತಿ ನರೇಂದ್ರಚಂದ್ರಂ ಕೃತಿಯಂ ಪೇಟ್ದಿಂ ಬುಧಾಬ್ಜವನಕಳಹಂಸಂ ಕೃತಿ ಕಾದಂಬರಿಯೆನೆ ಕಥಾವತಾರಮೇಂ ಕೇವಳಮೇ: **ಕಾದಂಬ,** ೧. ೭)

**ಅವತಾರಾಕೃತಿ** – ದೇವರು ಅವತಾರ ಮಾಡಿದಾಗ ಹೊಂದುವ ಆಕೃತಿ (ಇಂದ್ರಾಚ್ಯುತರ್ .. .. ನಿನ್ನ ಅವತಾರಾಕೃತಿಯಂ ಅರ್ಚಿಪರ್: **ಜಗನ್ನಾವಿ,** ೬. ೧೦೭)

**ಅವತೀರ್ಣ** – ಇಳಿಸಲ್ಪಟ್ಟ, ಇಳಿದ ಜೀವಿತಾಂತ್ಯದೊಳ್ ಸಮಾಧಿವಿಧಿಯಿಂ ಅವತೀರ್ಣಶರೀರಭರನಾಗಿ: **ಚಂದ್ರಪ್ರಪು,** ೪. ೩೦ ವ)

**ಅವತೆ** – ಅವಸ್ಥೆ, ಹೀನಸ್ಥಿತಿ (ಮೇಘವರ್ಣಂ ಎನಗೆ ಇನಿತು ಅವತೆಯಂ ಮಾಡಿದಂ ಈ ಪರಾಭವಮಂ ಅಗ್ನಿಪ್ರವೇಶಂಗೆಯ್ದು ನೀಗಿ: **ಪಂಚತಂತ್ರ,** ೩೫೪ ವ)

**ಅವದಾತ** – ಬೆಳ್ಳಗಿರುವ (ನತ ನರಪಾಲ ಮೌಳಿ ಹರಿನೀಳಮಣಿ ಪ್ರಚಯ ದ್ವಿರೇಫಚುಂಬಿತ ಚರಣಾರವಿಂದಂ ಅವದಾತ ಯಶಂ: **ಪಂಪರಾ,** ೧೦. ೨೩೬); ಸುಂದರವಾದ (ಚೆಲ್ವಾದುದು ಆಕಾಶಂ ಆರಾಮಾಜಾತ ಅಸಿತಪತ್ರಂ ಅವದಾತಂ ಬಿಂಬಂ ಅಬ್ಜಾರಿಯಾ: **ರಾಜಶೇವಿ,** ೧೧. ೫೪)

**ಅವದಾತೆ** – ಬೆಳ್ಳಗಿರುವಾಕೆ, ಸುಂದರಿ (ಚಂಪಕದಾಮ ಅವದಾತೆಯುಮಾಗಿ ಕುಸುಮ ಸುಕುಮಾರತನುವಪ್ಪುದಱಿಂದ ಅತನು ಪರಿತಾಪಮಂ ಸೈರಿಸಲಾಱದೆ: **ಆದಿಪು,** ೪. ೨೧ ವ)

**ಅವದಾತಕೀರ್ತಿ** – ಪರಿಶುದ್ಧ ಕೀರ್ತಿವಂತ (ರಿಪುನೃಪಸಾಮಜಂ ಅವದಾತಕೀರ್ತಿ ಸಾಹಸಭೀಮಂ: **ಗದಾಯು,** ೩. ೧)

**ಅವದಾತಯಶ** – ಅವದಾತಕೀರ್ತಿ (ಅವದಾತಯಶಂ ಕವಿತಾಮನೋಹರಂ: **ಪಂಪರಾ,** ೧೦. ೨೬೬)

**ಅವದ್ಯ** – ನಿಕೃಷ್ಟ, ಅಧಮ (ಭರ್ಗನೊಳರ್ಪಿಸಿ ಸರ್ವಮಂ ಶಿವಾಧವನ ಒಲವೆತ್ತರ್ ಇಂದೆಮಗೆ ವಂದ್ಯರ್ ಅನಿಂದ್ಯರ್ ಅವದ್ಯವರ್ಜಿತರ್: **ರಾಜಶೇವಿ,** ೧. ೧೫)

**ಅವಧರಿಸು** – ಕೇಳು (ಅವಧರಿಸಿದಂ ನಿಮ್ಮಯ್ಯಂಗವರಜೆ ತತ್ಸೂರ್ಯಮಿತ್ರ ಸಹಧರ್ಮಿಣಿ: **ಸುಕುಮಾಚ,** ೨. ೪೨); ಮನಸ್ಸಿಗೆ ತಂದುಕೊ (ಎನಿತೆನಿತು ಭವದೊಳಾಯ್ತಿಲ್ಲೆನಿತಂ ನೆನೆವುದನಿತಂ ಅವಧರಿಸುವುದೋ: **ಆದಿಪು,** ೯. ೫೪)

**ಅವಧಾತೃ** – ಏಕಚಿತ್ತತೆಯಿರುವವನು (ಅಸಂಚಳನೆಲ್ಲಿದಂ ಅಪ್ರಮಾದಿಯೆಲ್ಲಿದಂ ಅವಧಾತೃವೆಲ್ಲಿದಂ: **ಅಜಿತಪು,** ೬. ೧೧೮)

**ಅವಧಾನ** – ಏಕಚಿತ್ತತೆ, ಎಚ್ಚರಿಕೆ ತಂದೆಯ ಬೆನ್ನನೆ ಪೋಪಂತೆ ಅವಧಾನಂ ಗೆಂಟುವೋದುದು: **ಶಾಂತಿಪು,** ೪. ೭೯ ವ)

**ಅವಧಾರಣ** – ನಿರ್ಣಯ (ಸಮಸ್ತಾಗಮ ಪದಾರ್ಥ ಅವಧಾರಣಗುಣಸಮೇತನುಂ: **ಸುಕುಮಾಚ,** ೮. ೫೮ ವ)

**ಅವಧಾರಿತ** – ಆಧಾರ, ಆಶ್ರಯ (ಕುವಳಯಕೀರ್ತಿಗೆ ಶಾರದಂ ಅವಧಾರಿತಮಯ್ತು: **ಕವಿರಾಮಾ,** ೨. ೬೩)

**ಅವಧಾರಿಸು** – ಸೈರಿಸು (ಅಶ್ವತ್ಥಾಮಂ ಕರ್ಣನೊಳಾದ ಮುಳಿಸಂ ಅವಧಾರಿಸಲಾಱದೆ ಸುಯೋಧನನಿಂತೆಂದಂ: **ಪಂಪಭಾ,** ೧೨. ೪೨ ವ); ಗಮನವಿಟ್ಟು ಕೇಳು (ದೂತನ ನುಡಿಯುಮಂ ರಾಜಾದೇಶಮುಮಂ ಅವಧಾರಿಸಿ ಬಂದ ದೂತನಂ ಮನ್ನಿಸಿ: **ಆದಿಪು,** ೧೪. ૩೧ ವ)

**ಅವಧಾರು** – ಹಿರಿಯರ ಗಮನ ಸೆಳೆಯುವ ಮಾತು (ದೇವಿ ಅವಧಾರು ಎನುತುಂ ಪುಗುತುಂ ಮಿಗುತುಂ ನಗುತುಂ ಸೊಗಯಿಸಿದರ್: ಗಿರಿಜಾಕ, ೪. ೨೨)

**ಅವಧಿ** – [ಜೈನ] ಕಾಲದೇಶಗಳ ಮಿತಿ ಮೀರಿ ಯಾವುದೇ ಜಾಗ ಕಾಲದಲ್ಲಿ ನಡೆಯುವದನ್ನು ತಿಳಿಯುವ ಶಕ್ತಿ ಎಂಟು ಬಗೆಯ ಜ್ಞಾನಗಳಲ್ಲಿ ಒಂದು; ಇದರಲ್ಲಿ ಮೂರು ಬಗೆ: ದೇಶಾವಧಿ, ಪರಮಾವಧಿ, ಸರ್ವಾವಧಿ (ಮುನಿನಾಥಂ ಅವಧಿಯಿಂ ಬಗೆದು ನೋಡಿ ನಿಗಾಯುರವಧಿ ಮೂಱುದಿನಂ.. ..ಎಂದು ಸುಕುಮಾರಸ್ವಾಮಿಯ ಪರಿಚ್ಛೇದಕ್ಕೆ .. .. ಮೆಚ್ಚಿ ಬಿಚ್ಚಳಿಸಿ ದೀಕ್ಷಾಪ್ರಸಾದಂಗೆಯ್ವುದುಂ; **ಸುಕುಮಾಚ,** ೧೨. ೮ ಮತ್ತು ೮ ವ)

**ಅವಧಿಜ್ಞಾನ** – ಅವಧಿಜ್ಞಾನವನ್ನುಳ್ಳವನು (ಅವಧಿಜ್ಞಾನನುಂ ಸ್ವಾವಧಿಕ್ಷೇತ್ರಬಳಪ್ರಕಾಶ ಶರೀರ ವಿಕ್ರಿಯಾದಿ ಗುಣಾಲಂಕೃತನುಂ ಆಗಿ: **ನೇಮಿನಾಪು,** ೪. ೬೫ ವ)

**ಅವಧಿಜ್ಞಾನಾವರಣೀಯ** – [ಜೈನ] ಅವಧಿಜ್ಞಾನವನ್ನು ಮುಚ್ಚುವ ಕರ್ಮ (ಅವಧಿಜ್ಞಾನಾವರಣೀಯಂ .. .. ಎಮದೀ ಪ್ರಕಾರದೆ ಪಂಚಪ್ರಕಾರ ಜ್ಞಾನಾವರಣಿಯಮಂ: **ಸುಕುಮಾಚ,** ೩. ೩೯ ವ)

**ಅವಧಿಜ್ಞಾನಿ** – ಅವಧಿಜ್ಞಾನವಿರುವವನು (ವಿಜಯಭದ್ರರೆಂಬ ಭಟಾರರ್ ಅವಧಿಜ್ಞಾನಿಗಳ್ ಚರಿಗೆವೊಕ್ಕೊಡೆ: **ವಡ್ಡಾರಾ,** ಪು ೪೩, ಸಾ ೨೦)

**ಅವಧಿಬೋಧ** – ಅವಧಿಜ್ಞಾನ (ಆ ದೇವರ ದೇವಂ .. .. ಉದಯಿಸಲಿರ್ದುದಂ ಸೌಧರ್ಮೇಂದ್ರಂ ಅವಧಿಬೋಧದಿಂದಱಿದು .. .. ವೈಶ್ರವಣಂ ರತ್ನವೃಷ್ಟಿಯಂ ಕಱೆಯುತ್ತಿರೆಂದು ನೇಮಿಸಿದಾಗಳ್: **ಶಾಂತೀಶ್ವಪು,** ೧೩. ೨೦೪ ವ)

**ಅವಧಿವಿಬೋಧ** – ಅವಧಿಜ್ಞಾನ (ಅವಧಿಬೋಧದಿಂ ಲಕ್ಷ್ಮಣಂ ಮರಣಪ್ರಾಪ್ತನಪ್ಪುದುಂ ರಾಮಂ ಶೋಕಾಧಿಭೂತನಾಗಿರೆ ಪಗೆವಡೆಯಿಱಿಯಲೆಂದು ಬಂದು ಅಯೋಧ್ಯೆಯಂ ಬಳಸಿ ಬಿಟ್ಟಿರ್ದುದಂ ಅಱಿದು: **ಪಂಪರಾ,** ೧೬. ೫೩ ವ)

**ಅವಧೀರಿಸು** – ಕಡೆಗಣಿಸು, ತಿರಸ್ಕರಿಸು (ಇವರೊಳೀ ಕುಮಾರರ್ ಕಲಲಾದುವಿವೇ ವಿದ್ಯೆಗಳ್ ಎಂದು ಅವಧೀರಿಸಿ ನುಡಿದಂ ಅಂದು ಸೂರ್ಯತನೂಜಂ: **ಕರ್ಣನೇಮಿ,** ೯. ೨೦)

**ಅವಧೂತ** – ಅಲುಗಾಡಿಸಲ್ಪಟ್ಟ, ತಳ್ಳಲ್ಪಟ್ಟ (ಜಯವರ್ಮನುಂ ಅವಮಾನಪವಮಾನಾವಧೂತನಾಗಿ ಪೋಗಿ: **ಆದಿಪು,** ೨. ೩೮ ವ); ಗೆದ್ದ (ಭವದಂಘ್ರಿಸರೋಜಮಂ ಅವಧೂತಾರಾತಿನೃಪ ಭವತ್ಕಿಂಕರನೆಂ: **ಆದಿಪು,** ೧೩. ೨೮)

**ಅವನ** – ರಕ್ಷಣೆ (ಅಸತ್ ಅನುಶಾಸನಂ ಅತ್ ಅವನಂ ನೃಪಲಕ್ಷಣಂ: **ಪಂಪರಾ,** ೬. ೧೧೩)

**ಅವನತ** – ಬಗ್ಗಿದ (ಗಂಧರ್ವಕುಮಾರಂ ಬೆರಸು ತೆರಳಿಕೆ ಮಹಾಶ್ವೇತೆಯಲ್ಲಿಗೆ ಬಂದು ಇರ್ವರುಂ ದೂರ ಅವನತ ಉತ್ತಮಾಂಗರಾಗಿ ಪೊಡವಟ್ಟು: **ಕಾದಂಸಂ,** ೫. ೮ ವ); ನಮ್ರವಾದ (ಅಂತು ಪಾಂಡುರಾಜಂ ಅಧಿಕತೇಜನುಂ ಅವನತವೈರಿ ಭೂಭೃತ್ಸಮಾಜನುಂ ಆಗಿ ನೆಗಱುತ್ತಿರ್ದೊಂದು ದಿವಸಂ: **ಪಂಪಭಾ,** ೧. ೧೧೦ ವ)

**ಅವನಮ್ರ** – ಬಾಗಿದ (ಸಮೀಪದೊಳಿರ್ದ ಹರಿತಪಲ್ಲವಭರ ಅವನಮ್ರಮಾದ ಒಂದು ಜಂಬೂವೃಕ್ಷಮಂ ಅಡರ್ದು ಕಿಱಿದು ಬೇಗಮಿರ್ದು: **ಕಾದಂಸಂ,** ೮. ೨೬ ವ)

**ಅವನದ್ಧ** – ಕಟ್ಟಲ್ಪಟ್ಟ, (ಅವನದ್ಧ ಕಂಠಗಳ್ ಇಳಾತಳನಾಥನ ಮಧ್ಯಸ್ಥಿತೆಯಂ ಅಳವಿಯಂ ಅಳವಲ್ಲದೆನಗೆ: **ಶಾಂತಿಪು,** ೯. ೧೫೨); ಮೃದಂಗದಂತಹ ಚರ್ಮವಾದ್ಯ (ತತ ಘನ ಸುಷಿರ ಅವನದ್ಧವಾದ್ಯಂಗಳಂ: **ಆದಿಪು,** ೫. ೩೫)

**ಅವನಿ** – ಭೂಮಿ (ಅದಱಿಂ ಬೇಡೊಲ್ದು ಸಮುದ್ರಮುದ್ರಿತ ಅವನಿಯೆಡೆಯೊಳ್: **ಗಿರಿಜಾಕ,** ೬. ૩೪)

**ಅವನಿಜ** – ಮರಗಿಡ (ತ್ರಿದಶ ಅವನೀಜಫಲದಿಂ ಸೌಧರ್ಮಕಲ್ಪೇಂದ್ರಂ ಆದರದಿಂದರ್ಚಿಸಿದಂ ದ್ವತೀಯ ಜಿನತೀರ್ಥೇಶಾಂಘ್ರಿಪದ್ಮಂಗಳಂ: **ಅಜಿತಪು,** ೪. ೭೮)

**ಅವನಿಪ** – [ಅವನಿ+ಪ] ಭೂಮಿಯ ರಕ್ಷಕ, ರಾಜ; [√ಅವನಿಸು=ಬೇಡಿಕೊ ಎಂಬುದರ ಕೃದ್ವಾಚಕ ರೂಪ] (ಅಂತು ಅವನಿಪ ನಿಕರಂ ಕಯ್ಯಾಂತು ಅವನಿಪ ಕರಂ ಒಂದು ಕೋಟಿಗೆ ಮಿಗಿಲ್ ಎಂಬಂತಾದೊಡಂ ಒಳಸೋಱದೆ .. .. ಇಱುಗುಂ ಈಗುಂ: **ಗದಾಯು,** ೧. ೧೫)

**ಅವನಿಭೃತ್** – ರಾಜ (ಐಂದ್ರೀದಿಶಾ ಅವನಿಭೃತ್ ಚೂಳಮನೇಱೆ ತನ್ನಮಳಹೃತ್ಪೀಠಾಗ್ರಮಂ ಖೇಚರಾವನಿಭೃತ್ ನಂದನೆ ಆ ಸ್ವಯಂಪ್ರಭೆ .. .. ರ್ಚಿಸಿದಳ್: **ಶಾಂತೀಶ್ವಪು,** ೨. ೧೪); ಪರ್ವತ (ಉದ್ವಂಶವಿಂಧ್ಯಾ ಅವನಿಭೃತ್ ಮೂರ್ಧಾಧಿರೂಢ ದ್ವಿಪಭಯದ ರವಂ: **ಆದಿಪು,** ೧೪. ೯೮)

**ಅವನಿಭೃನ್ನಂದನೆ** – ರಾಜಕುಮಾರಿ (ಐಂದ್ರೀದಿಶಾ ಅವನಿಭೃತ್ ಚೂಳಮನೇಱೆ ತನ್ನಮಳಹೃತ್ಪೀಠಾಗ್ರಮಂ ಖೇಚರಾ ಅವನಿಭೃನ್ನಂದನೆ ಆ ಸ್ವಯಂಪ್ರಭೆ .. .. ಅರ್ಚಿಇಸದಳ್: **ಶಾಂತೀಶ್ವಪು,** ೨. ೧೪)

**ಅವನಿಭೃನ್ಮೂರ್ಧ** – (ಅವನಿಭೃತ್+ಮೂರ್ಧ) ಪರ್ವತಶಿಖರ (ಉದ್ವಂಶವಿಂಧ್ಯಾ ಅವನಿಭೃನ್ಮೂರ್ಧಾಧಿರೂಢ ದ್ವಿಪಭಯದ ರವಂ: **ಆದಿಪು,** ೧೪. ೯೮)

**ಅವನಿಸು** – ಆತುರಪಡು (ಜಂಕರಿಸಂ ಕಾತರಿಸಂ ಮಾಂಕರಿಸಂ ಬೆಕ್ಕಸಂಬಡಂ ಬೆಕ್ಕರಿಸಂ ಹೂಂಕರಿಸಂ ನಿರ್ವಿನಿಸಂ ಜೀಂಕರಿಸಂ ಜಿನುಗಂ ಅವನಿಸಂ ಕೊಕ್ಕರಿಸಂ: **ಅಜಿತಪು,** ೫. ೮೯)

**ಅವನೀಪಾಲ** – ರಾಜ (ನಾಳೆ ಸಯಂಬರಮೆನೆ ಪಾಂಚಾಳ ಮಹೀಪಾಳಂ ಅಖಿಳ ಭೂಭೃತ್ ನಿಕರಕ್ಕೆ ಓಳಿಯೆ

ಸಾಱಿದೊಡೆ ಅವನೀಪಾಲರ್ ಕೆಯ್ಗುಯ್ಯಲೆಂದು ಪಱಿಮಱಿಯಾದರ್: **ಪಂಪಭಾ,** ೩. ೪೨)

**ಅವಭಾಸ** – ಕಾಂತಿ, ಹೊಳಪು (ಅತಸೀಪುಷ್ಪಾವಭಾಸಂ ತನುವೆಸೆವಿನೆಗಂ .. .. ಶಾಶ್ವತಂ ಅವತರಿಸಿರ್ದಂ: **ಜಗನ್ನಾವಿ,** ೨. ೯೯)

**ಅವಭೃತಸವನ** – ಯಾಗದಂತಹ ಮಹತ್ಕಾರ್ಯ ಮುಗಿದ ಬಳಿಕ ಮಾಡುವ ಮಂಗಳಸ್ನಾನ (ಸುಹುತಂ ಕೌರವ್ಯ ಕ್ರವ್ಯ ಹವ್ಯದಿಂದೆನ್ನ ಕೋಪಹವ್ಯವಹಂ ದುರ್ವಹ ದುರ್ಯೋಧನದೇಹ ಪ್ರಹರಣಲೋಹಿತದಿಂ ಆದುದು ಅವಭೃಥಸವನಂ: **ಗದಾಯು,** ೮. ೪೭)

**ಅವಭೃತಸ್ನಾನ** – ಅವಭೃತಸವನ (ವಿವೇಕಾಭರಣಮಂ ತೊಟ್ಟು ವಾಂಛೆಯಂ ಬಿಟ್ಟು ಅವಭೃಥಸ್ನಾನಮಂ ಮಾಡಿ: **ಉದ್ಭಟಕಾ,** ೪. ೧೧೨ ವ)

**ಅವಮೆ** – ಅಮಾವಾಸ್ಯೆ (ಚಂದ್ರಾಂಶುಬಿಂಬಕ್ಕೆ ಅವಮೆಯ ರಜನಿಪೋದ್ಗಮಂ .. .. ತಾನೆಂಬಿನಂ ಬಂದುದು ಬಹುಳ ತಟಿಜ್ಜಾಲಂ ಅಂಭೋದಕಾಲಂ: **ಕಾದಂಬ,** ೯. ೧೩)

**ಅವಮೋದರ್ಯ** – [ಜೈನ] ಒಂದು ಬಗೆಯ ತಪಸ್ಸು; ಆಹಾರದಲ್ಲಿ ಒಂದೊಂದು ತುತ್ತು ಕಡಿಮೆ ಮಾಡುತ್ತ, ಕೊನೆಗೆ ಒಂದು ತುತ್ತಿಗೆ ಸೀಮಿತಗೊಳಿಸುವ ಕ್ರಮ (ಗೃಹೀತೋಪಾಸಕವ್ರತಂ ಅನಶಂ ಅವಮೋದರ್ಯ ಆದಿ ಆಚರಣಪರಿಣತಂ ಯಥೋಚಿತವಿಧಿಯಿಂದ ಆಯುರವಸಾನದೊಳೆ .. .. ಸನ್ನ್ಯಸನವಿಧಾನದಿಂ ಪರಿತ್ಯಕ್ತಜೀವಿತಂ: **ಆದಿಪು,** ೨. ೧೯ ವ)

**ಅವಯವ** – ಶ್ರಮರಹಿತ, ಸುಲಭ (ನಾಕಿನಿಕಾಯಂ ಜ್ಯೋತಿರ್ಲೋಕಮಂ ಅವಯವದಿನುಱಿಯೆ ಪೋಗೆ: **ಆದಿಪು,** ೭. ೬೦); ಪಂಪನ **ಆದಿಪು**ರಾಣದ ಎಂಟು ವರ್ಣನ ವಿಷಯಗಳು (ಲೋಕಕಾರಕಕಥನಮುಂ ದೇಶನಿವೇಶೋಪದೇಶಮು ನಗರಸಂಪತ್ ಪರಿವರ್ಣನಮುಂ ರಾಜ್ಯರಮಣೀಯತಾವ್ಯಾಖ್ಯಾನಮುಂ ತೀರ್ಥಮಹಿಮ ಸಮರ್ಥನಮುಂ ಚತುರ್ಗತಿಸ್ವರೂಪ ನಿರೂಪಣಮುಂ ತಪೋದಾನವಿಧನವರ್ಣನಮುಂ ತತ್ಫಳಪ್ರಾಪ್ತಿಪ್ರಕಟನಮುಂ ಎಂದಿಂತು ಅವಯಂವಂಗಳ್ ಎಂಟಕ್ಕುಂ: **ಆದಿಪು,** ೧. ೪೨ ವ); ಅಲಕ್ಷ್ಯ (ದಿವಿಜಾಶ್ವತ್ಥಾಮದೊಳ್ ಈ ಭುವನಂಗಳ್ ನಡುಗೆ ಶಿಶು ಸರಂಗೆಯ್ದೊಡೆ ನಕ್ಕು ಅವಯವದೆ ಕುಂಭಸಂಭವಂ ಇವಂ ಅಶ್ವತ್ಥಾಮನೆಂದು ಪೆಸರಿಡೆ ನೆಗಟ್ದಂ: **ಪಂಪಭಾ,** ೨. ೪೪); ಲೀಲೆ (ಒತ್ತಿದ ತಳ್ಕು ಎತ್ತಿದ ತಟಿ ಮುತ್ತಿನ ಪೊಸದುಡುಗೆ ತಳಿರ ದೋರ್ಮುಡಿ ಮನಮಂ ಪತ್ತಿಸಿ ಜೊತ್ತಿಸೆ ಮದನೋನ್ಮತ್ತೆಯರ್ ಅವಯವದೆ ಬಂದರ್ ಅರಸಿಯರ್ ಅರೆಬರ್: **ಪಂಪಭಾ,** ೫. ೫೯)

**ಅವಯವದಿಂ** – ನಿಪುಣತೆಯಿಂದ (ವ್ಯಾಕರಂದೊಳ್ ಅವಯವದಿಂ ಅವರ ಶಬ್ದಾರ್ಥಮಂ ಅಚ್ಚರಿವಟ್ಟು ಭಾವಿಸುತ್ತುಂ: **ಧರ್ಮಾಮೃ,** ೮. ೨೧)

**ಅವಯವದಿಂದ** – ಸೈನ್ಯಸಮೇತನಾಗಿ (ಅಂತು ಅವಂ ಅವಯವದಿಂದೋಡಿಸಿ ಮಹಾವಿಭೂತಿಯಿಂ ಪುರಮಂ ಪೊಕ್ಕರ್: **ಪಂಪರಾ,** ೯. ೧೪೦ ವ)

**ಅವಯೋಗ** – ಕೆಟ್ಟ ಸಂದರ್ಭ, ಕಾಲ (ವರಲಕ್ಷ್ಮಿಯುಂ ಇಷ್ಟಸಿದ್ಧಿಯುಂ ಜಿನಚರಣಸ್ಮರಣೆಯುಂ ಅವಯೋಗದೊಳಂ ದೊರಕೊಳ್ಗುಂ: **ಸಮಯಪ,** ೪. ೬)

**ಅವರಜ** – ತಮ್ಮ (ತಪ್ಪಿ ಪಾಱಿದುವು ಪೊಱಮೆಯ್ವರಂ ತೆಗೆದೆಚ್ಚಱಿಕೆಯ ಪೊಸಗಱಿಯ ಕಣೆಗಳ್ ಅವರಜನಂ: **ನೇಮಿನಾಪು,** ೬. ೪೪)

**ಅವರಜೆ** – ತಂಗಿ (ಅವಧರಿಸಿಂ ನಿಮ್ಮಯ್ಯಂಗೆ ಅವರಜೆ ತತ್ ಸೂರ್ಯಮಿತ್ರ ಸಹಧರ್ಮಿಣಿ: **ಸುಕುಮಾಚ,** ೨. ೪೩)

**ಅವರಿ** – ದೇವತೆ (ಮಕಾರಕ್ಕೆ ವತ್ವಂ: ಜೇಮನಂ–ಜೇವಣಂ, ಸಂಗಮಂ–ಸಂಗವಂ, ಅಮರಿ–ಅವರಿ: **ಶಬ್ದಮದ,** ೨೭೭, ಪ್ರ)

**ಅವರುದ್ಧ** – ಪ್ರತಿಬಂಧ, ಅಡ್ಡಿ (ಕುಳಿತವರುದ್ಧಮೆಂದು ಅಱಿಯಲ್ ಆರ್ಗಂ ಅಗೋಚರನಾಗಿ ಕೊಳ್ವ .. .. ಜೈನಯೋಗಿಯವೊಲೇಂ ನಿಲಲಾರ್ಪರೆ: **ಸಮಯಪ,** ೭. ೪)

**ಅವರೋಧ** – ಅಂತಃಪುರ (ದಿವಮಂ ನೀಂ ಪುಗೆ ಖೇಚರೇಂದ್ರ ತರಳಾಪಾಂಗ ಪ್ರಭಾಪಾತದಿಂಸ ಅವರೋಧಾಂಗನೆಯರ್ಕಳ್ ಆ ತಿಲಕದೊಳ್ ಪೂಗೊಂಚಲಂ ಮಾಟ್ಪರ್: **ಪಂಪರಾ,** ೧೪. ೧೯೬)

**ಅವರೋಧವಧು** – ಅಂತಃಪುರಸ್ತ್ರೀ (ಮೂವತ್ತಿರ್ಛಾಸಿರ್ಬರ್ ಅವರೋಧವಧೂನಿವಹಮಂ: **ಆದಿಪು,** ೫. ೩ ವ)

**ಅವರೋಧಸ್ತ್ರೀನಿವಾಸ** – ಅಂತಃಪುರ (ಒಪ್ಪುವುವಲ್ಲಿ ಶಸ್ತ್ರಕುಟಿ ಕೋಶಾಗಾರಂ ಏಕಾಂತಮಂದಿರಂ ಅಭ್ಯಾಸನಿಕೇತನಂ ಪಚನಧಾಮಂ ಸ್ನಾನಸದ್ಮಂ ಮನೋಹರ ಶಯ್ಯಾವಸಥಂ ವಿಭೂಷಣಗೃಹಂ ದೇವಾರ್ಚನಾವಾಸಂ ಅಂಬರವೇಶ್ಮಂ ವರ ಭೋಜನೌಕಂ ಅವರೋಧಸ್ತ್ರೀನಿವಾಸಾಸ್ಪದಂ: **ಶಾಂತೀಶ್ವಪು,** ೧. ೧೩೭)

**ಅವರ್ಷಣ** – ಅನಾವೃಷ್ಟಿ (ಚೋಳಮಂಡಳದೊಳ್ ಅವರ್ಷಣಮಾಗಿ ಬಱಂ ಬೀಳ್ವುದದಂ ಅಱಿದು: **ತ್ರಿಷಷ್ಟಿಪು,** ೪೫. ೪ ವ)

**ಅವಲ್** – ಕುಟ್ಟುವಿಕೆ (ಅವಲ್–ಮುಸಲಕ್ರಿಯಾಯಾಂ: **ಶಬ್ದಮದ,** ಧಾ ೬೧೩); ಅವಲಕ್ಕಿ (ಗಾಳಿಯಂ ಮೆಲ್ವನ ಬಾಯ್ಗೆ ಅವಲಂ ಪೊಯ್ದರೆಂಬಂತೆ: **ಧರ್ಮಾಮೃ,** ೨. ೯೪ ವ)

**ಅವಲಂಬಿ** – ಆಶ್ರಯ ಪಡೆದ (ಸಲೆಯೆಂಬುದು ನಿತ್ಯಾರ್ಥ ಅವಲಂಭಿ: **ಶಬ್ದಮದ,** ೩೨೭)

**ಅವಲಿಪ್ತ** – ಲೇಪಿಸಿದ (ಅರುಣಜಲ ಅವಲಿಪ್ತ ಪೊಸ ಕುಂಕುಮದಂತಿರೆ: **ಗದಾಯು,** ೪. ೨೨)

**ಅವಲೀಢ** – ನೆಕ್ಕಲ್ಪಟ್ಟ (ಮನೋಜಜ್ವಾಲ ಅವಲೀಢನಂ ತಂದುದು ಬೆಟ್ಟಬೇಸಗೆಯಿಂ ಬೆಂದ ಜನಕ್ಕೆ ಕಾಟ್ಕಿರ್ಚಂ ತಂದಂತಾದುದು: **ಲೀಲಾವತಿ,** ೧೧. ೬ ವ); ವ್ಯಾಪಿಸಿದ (ಅಗುರ್ವಿಂದಾದಂ ಚೆಲ್ವಾಯ್ತು ಚಕ್ರಿದ್ವಿಪಘಟಿ ನಿಶಿತಾಸ್ತ್ರಾಂಶುಜಾಳಾ ಅವಲೀಢಂ: **ಆದಿಪು,** ೧೪. ೯೭)

**ಅವಲೇಪ** – ಸೊಕ್ಕು, ಮದ (ಧರಣೇಂದ್ರನಿದಿರೊಳ್ ಅವರಂತರ್ನಿಗೂಢಕೋಪ ಅವಲೇಪರುಮ್ ಈಷತ್ ಆರೋಪಿತಭ್ರೂಚಾಪರುಮಾಗಿ: **ಆದಿಪು,** ೯. ೧೦೪ ವ)

**ಅವಲುಪ್ತ** – ಲೋಪಗೊಳಿಸಿದ (ಅವಲುಪ್ತ ಸಪ್ತಸಪ್ತಿ ದೀಪ್ತಿಪ್ರತಾಪವಿಧಾನ ನಿರತಂ: **ಶಾಂತಿಪು,** ೧. ೭೧ ವ)

**ಅವಲೋಕಿನೀವಿದ್ಯೆ** – [ಜೈನ] ದೂರದಲ್ಲಾಗುವುದನ್ನು ತಿಳಿಯಲು ಸಹಾಯಕವಾದ ವಿದ್ಯೆ (ಅಂತು ನೆನೆಯಲೊಡಂ ಅವಲೋಕಿನೀವಿದ್ಯೆ ಮನದೊಡನೆ ಬಂದು: **ಪಂಪರಾ,** ೯. ೪೯ ವ)

**ಅವಲೋಕಿಸು** – ನೋಡು (ತಱಿಸಂದು ಮನದೆಱಕದಿಂದ ಅವಲೋಕಿಸುತ್ತಿರ್ಪುದುಂ: **ಪಂಪರಾ,** ೨. ೧೮ ವ)

**ಅವಲೋಹ** – ದೋಷಯುಕ್ತ ಲೋಹ (ಅವಲೋಹಂ ಪಿಂಗೆ ಹೇಮಂ ಸಹಜದಿನಿರ್ಪಂತೆ... .. ಸಿದ್ಧರ್ ಆತ್ಯಂತಿಕ ಸುಖಪದವೀಸಿದ್ಧಿಯಂ ಮಾೞ್ಕೆ ನಮ್ಮೊಳ್: **ಮಲ್ಲಿನಾಪು,** ೧. ೨)

**ಅವಲ್ಮಾಡು** – [ಅವಲಕ್ಕಿಯಂತೆ] ಕುಟ್ಟು (ಅವನಂ ಅವಲ್ಮಾೞ್ಪುದೆಂದಾ ಪುರಸ್ತ್ರೀ ಭ್ರೂವಿಕ್ಷೇಪಕ್ಕೆ ಸೇನಾಪತಿ ಪದವಿಯನಿತ್ತಂ ಮನೋಜಾತಂ: **ಮಲ್ಲಿನಾಪು,** ೨. ೪೪)

**ಅವಶಿಷ್ಟ** – ಉಳಿದ (ಇತ್ತ ರತ್ನಗ್ರೀವಾದ್ಯವಶಿಷ್ಟರೊಡನೆ .. .. ನೆರೆದು: **ಶಾಂತಿಪು,** ೪. ೨೬)

**ಅವಶೇಷ** – ಉಳಿದ, ಶೇಷ (ಪರಮಾಯುರವಶೇಷಂ ಅಱುದಿಂಗಳುಂಟೆನೆ: **ಶಾಂತಿಪು,** ೯. ೧೬೧ ವ)

**ಅವಶ್ಯಾಯ** – ಹಿಮ (ಏಗೆಯ್ವಂ ಈ ಲೋಕಮಂ ಹೈಮನಗಂ ಕೈಕೊಂಡುದು ಎಂಬನ್ನೆಗಂ ಒದವಿದ ಅವಶ್ಯಾಯದೊಳ್: **ಸುಕುಮಾಚ,** ೪. ೧೧)

**ಅವಷ್ಟಂಭ** – ಆಶ್ರಯ (ಏವನೆಮಗೆಂಬ ಶೌರ್ಯಮದ ಅವಷ್ಟಂಭದೊಳವಂದಿಱಿಂತುಱದಿರೆ: **ಆದಿಪು,** ೧೪. ೨೯); ಸ್ಥೈರ್ಯ (ದೇವರ್ ದಿಗ್ವಿಜಯ ವ್ಯಸನಾವಷ್ಟಂಭದೊಳೆ ನಡೆಯದೆ ಆಟವಿಕ್ಕೊಳ ಆದ ಈ ವಿಗ್ರಹಕ್ಕೆ ನಡೆಉದು: **ಪಂಪರಾ,** ೪. ೪೭); ಗರ್ವ, ಹೆಮ್ಮೆ (ದೇವರಂ ಅಡಿಗಡಿಗೆ ಎೞಗಿಸಿ ಸಕಳ ಅವನಿತಳದ ಅದಟರಂ ಪಡಲ್ವಡಿಸಿದ ಶೌರ್ಯ ಅವಷ್ಟಂಭದೊಳ್ ಆನಿರೆ ಗೋವಳಿಗಂಗೆ ಅಗ್ರಪೂಜೆಯಂ ನೀಂ ಕುಡುವಾ: **ಪಂಪಭಾ,** ೬. ೫೭)

**ಅವಷ್ಟಂಭಿತ** – ಕುಳ್ಳಿರ್ದ, ಆಶ್ರಯಿಸಿದ (ಅವಷ್ಟಂಭಿತ ಕುಂಭಿ ಕುಂಭಸ್ಥಳಪೂರ್ವಾಸನನುಂ: **ಗಿರಿಜಾಕ,** ೨. ೧೦೩ ವ)

**ಅವಷ್ಟಂಭಿಸು** – ಒರಗಿಕೊ, ಆಶ್ರಯಿಸು (ಶೈಲರಾಜ ಅವಷ್ಟಂಭಣಿಸಲೊಡಂ ಸಿಂಹಾಸನದಿರ್ಕೆಲದೊಳ್ ನಿಂದ ವೀರಲಕ್ಷ್ಮಿ ವಿಜಯಲಕ್ಷ್ಮಿಯರ್: **ಗಿರಿಜಾಕ,** ३. ೧೦೫ ವ); ಗರ್ವಪಡು (ಮಧ್ಯಮಖಂಡಮುಮಂ ಔಂಕಿ ಪೂಣ್ದು ಪೊಕ್ಕು ಅವಷ್ಟಂಭಿಸಿ ನಿಂದಾಗಳ್: **ಆದಿಪು,** ೧೩. ೫೬ ವ)

**ಅವಸಕ್ತ** – ತನ್ಮಯವಾದ ಕುಸುಮಾಪಚಯ ವ್ಯಸನ ಅವಸಕ್ತ ಸುರಯುವತಿ: **ಆದಿಪು,** ೬. ೯೬)

**ಅವಸಥ** – ನೆಲೆ (ಎಸಗಿದುದು ಸಮೀರಂ ಶೈತ್ಯಸೌರಭ್ಯಮಾಂದ್ಯ ಅವಸಥಂ: **ಆದಿಪು,** ೮. ೩೫)

**ಅವಸರ** – ಅವಕಾಶ (ಪರಮನನೋಲಗಿಸಿ ಕೃತಾರ್ಥರಪ್ಪೆವಮೋಘ ಅವಸರಂಗುಡಿಸುವುದು: **ಆದಿಪು,** ೯. ೧೦); ಸಂದರ್ಭ (ಆ ಸಮಯದೊಳ್ ವನಮಹತ್ತರಂ ಅಕ್ಷಕಂ ನಿಂದಿರ್ದು ದೇವ ಬಿನ್ನಪಂ ಇದು ಜಲಕೇಳಿಗೆ ಅವರಸರಂ ಎಂದು ನುಡಿದುದಂ: **ಕುಸುಮಾಕಾ,** ೫. ೧೨೪ ವ); ಆವಶ್ಯಕತೆ, ಬೇಡಿಕೆ (ಶರಣಾರ್ಥಿಯೆಂ ಎನ್ನ ಅವಸರಮಂ ತೀರ್ಚಿಂ ಎಂದು ಬಿನ್ನವಿಸುವುದುಂ: **ಪಂಪರಾ,** ೧೧. ೨೮)

**ಅವಸರ** – ಸಮಯ (ಜಿನಮಜ್ಜನಾವಸರದೊಳ್ ದಿನಮಜ್ಜನ .. .. ಮಕುಟಮಿದೆನಿಸಲಾರ್ತುದು: **ಅಜಿತಪು,** ೪. ೫೮); ಆವಶ್ಯಕತೆ (ನಿನ್ನವಸರಕ್ಕೆ ಬಂದು ಕೂಡುವ ಬಲದೇವನುಮಂ: **ಪಂಪಭಾ,** ೧೩. ೭೦ ವ); ಅವಕಾಶ (ಗಾಂಗೇಯನ ನುಡಿಯೊಳ್ ಅವರಸಂ ಪಸರಮಂ ಪಡೆಯದೆ: ಪಂಪಭಾ, ೧. ೭೫ ವ)

**ಅವಸರಂಬಡೆ** – ಅವಕಾಶ ಪಡೆ (ಅವಸರಂಬಡೆದು ದೇವೇಂದ್ರನಾಸ್ಥಾನದ ಭದ್ರಮಂದಿರಮನಿಂದ್ರಂ ಬಂದು ಪೊಕ್ಕು: **ಜಗನ್ನಾವಿ,** ೧೧. ೬೯ ವ)

**ಅವಸರಂಬಾರ್** – ಸಮಯ ನಿರೀಕ್ಷಿಸು ಬಿನ್ನವಿಸಲ್ ಅವಸರಂಬಾರುತ್ತುಮಿರ್ದ ವಿದ್ಯಾಧರಚರಂ: **ಆಚವರ್ಧ,** ೪. ೧೧ ವ)

**ಅವಸರೋಚಿತ** – ಸಮಯೋಚಿತ (ಆಗಳ್ ಅವಸರೋಚಿತ ಫಳಪ್ರಾಪ್ತಿಗೆ ಸಂತಸಂಬಟ್ಟು:, **ಮಲ್ಲಿನಾಪು,** ೪. ೨೪ ವ)

**ಅವಸರ್ಪಣ** – ಇಳಿಕೆ; [ಜೈನ] ಮನುಷ್ಯರ ಆಯುಸ್ಸು, ಸುಖ ಮುಂತಾದುವು ಕ್ರಮವಾಗಿ ಇಳಿಕೆಗೊಳ್ಳುವ ಕಾಲ (ತನು ಭೋಗಾಯುಷ್ಯಂಗಳ್ ಮನುಷ್ಯರೊಳ್ ಕುಂದುವಡೆಗುಂ ಅವಸರ್ಪಣದೊಳ್: **ಪಂಪರಾ,** ೧. ೫೮)

**ಅವಸರ್ಪಿಣಿ** – (ಶರೀರ ಬಳ ಆಯುಃ ದೇಹಪ್ರಮಾಣೋಪಚಯ ಅಪಚಯಹೇತುತ್ವದಿಂದಂ ಉತ್ಸರ್ಪಿಣಿ ಅವಸರ್ಪಿಣಿ ನಾಮಮಂ ಪಡೆದುದು: **ಆದಿಪು,** ೬. ೪೮ ವ): ಇದರಲ್ಲಿನ ಆರು ಕಾಲಭೇದಗಳು: (ಅವಸರ್ಪಿಣಿ ಕಾಲಂ ಸುಷಮೆ, ಸುಷಮಸುಷಮೆ, ಸುಷಮದುಷಮೆ, ದುಷಮಸುಷಮೆ, ದುಷಮೆ, ಅತಿದುಷಮೆಯೆಂದು ಷಡ್ವಿಧಮಕ್ಕುಂ: **ಚಾವುಂಪು,** ೧೬೪, ಸಾ. ೪–೫)

**ಅವಸಾನ** – ಕೊನೆ, ಸಾವು (ಆದಿಮಧ್ಯ ಅವಸಾನಮೊಡಂಬಡೆ ತನ್ನೊಳಂ ಸಂತದೊಳಂ ಇದೇಂ ಬಸಂತದ ಅದಗುಂತಿಗೆ ಬಾಟಿಮ್ಮೊದಲಾಯ್ತೆ ಮಾಮರಂ: **ಶಾಂತಿಪು,** ೭. ೧೪೩)

**ಅವಸಾನಕಾಲ** – ಕೊನೆಗಾಲ (ತಪಂಗೆಯ್ದು ಅವಸಾನಕಾಲದೊಳ್ ನಿದಾನಪೂರ್ವಕಂ ಸತ್ತು: **ಶಾಂತಿಪು,** ೭. ೪೪ ವ)

**ಅವಸ್ಕಂದ** – ಮುತ್ತಿಗೆ (ಅವಸ್ಕಂದಪ್ರಯಾಣಕ್ಷಮಾ ಅವನಿಪಾಳವ್ರಜಮೀಗಳೆಮ್ಮೊಡನೆ ಬರ್ಕೆಮದಂ ರಣನಂದದಿಂ: **ಆದಿಪು ನರಸಿಂ,** ೪. ೯೧)

**ಅವಸ್ತು** – ಕಃಪದಾರ್ಥ, ಕೆಲಸಕ್ಕೆ ಬಾರದುದು (ಇದು ದಲ್ ಅವಸ್ತುವೆನ್ನದೆ ಮದುಕ್ತಿಯನೊಯ್ಯನೆ ಕೇಳ್ದು ದಿವ್ಯಚಿತ್ತದೊಳವಧಾರಿಸು: **ಆದಿಪು,** ೮. ೧೧)

**ಅವಸ್ತುಭೂತ** – ನಿಷ್ಪ್ರಯೋಜಕ (ಅವಸ್ತುಭೂತನೆಂದಾದಮೆ ಭೂತಳಂ ಪಟಿಯೆ ತೇಜಮೆ ಕೆಟ್ಟಪುದು ಇಂತಿದಕೇ ಪದ್ಮೋದರ ನೀನೆ ಪೇೞ್ ಬಗೆದು ಕಜ್ಜಮನೀಗಳೆ ದಿವ್ಯಚಿತ್ತದಿಂ: **ಪಂಪಭಾ,** ೯. ೧೮)

**ಅವಸ್ತುಮಾಡು** – ಗಣನೆಗೆ ತಂದುಕೊಳ್ಳದಿರು (ಪ್ರಭು ಕಿಱಿಯಾತನಂ ನಿಱಿಸಿ ರಾಜ್ಯದೊಳೆನ್ನ ಅವಸ್ತುಮಾಡಿ ಪೂಣ್ದಭಿಭವಂ: **ಆದಿಪು,** ೨. ३೮)

**ಅವಸ್ಥಾಂತರ** – ಮತ್ತೊಂದು ಅವಸ್ಥೆ; ಕಷ್ಟಕಾಲ (ತನ್ನವಸ್ಥಾಂತರಕ್ಕೆ ತಾನೆ ಬೆಕ್ಕಸಂಬಡುತ್ತಿರ್ಪನ್ನೆಗಂ: **ಚಂದ್ರಪ್ರಪು,** ೫. ೧೯ ವ)

**ಅವಸ್ಪಂದ** – ಪ್ರತಿಕ್ರಿಯಾರಹಿತ (ಈ ಬಿನ್ನಪಮಂ ಅವಸ್ಪಂದಮಂ ಅಂಎತೆಯ್ದೆ ಕೇಳ್ದು: **ಶಾಂತಿಪು,** ೧೦. ೧೧೬)

**ಅವಹಿತ** – ಗಮನವಿತ್ತ (ಅವಹಿತಧ್ಯಾನಾಧಿನಮಾನಸನಾಗಿ ವಿಹಾರಿಸುತ್ತುಂ: **ಆದಿಪು,** ೧೦. ೧३ ವ)

**ಅವಹಿತಭಾವ** – ಭಾವವನ್ನು ಅಡಗಿಸಿಕೊಳ್ಳುವುದು ಸ್ವಭಾವಗಂಭೀರವೃತ್ತಿಯಪ್ಪುದಱಿಂ ಅವಹಿತಭಾವಮಂ ಅವಳಂಬಿಸಿ: **ಚಂದ್ರಪ್ರಪು,** ೬. ೧३ ವ)

**ಅವಾಗ್ಗೋಚರ** – ವರ್ಣನೆಗೆ ಸಿಕ್ಕದ (ಖೇಚರಿಯೋ ಭೂಚರಿಯೋ ನಿಶಾಚರಿಯೋ ರೂಪು ಬಣ್ಣಿಸಲ್ಕೆ ಆರ್ಗಂ ಅವಾಗ್ಗೋಚರಂ ಈ ಕಾನನಮುಂ ಅಗೋಚರಂ ಇವಳ್ ಇಲ್ಲಿಗೇಕೆ ಬಂದಳೊ ಪೇೞಿಂ: **ಪಂಪಭಾ,** ೩. ೧೪)

**ಅವಾಗ್ವಿಷಯ** – ಮಾತಲ್ಲಿ ಹೇಳಲಾಗದ (ಪುರಶ್ರೀಯಂ .. .. ಅವಾಗ್ವಿಷಯಮುಂ ಅವರ್ಣನ ಅಗೋಚರಮುಂ ಆಗೆ ಬಣ್ಣಿಸುತ್ತುಂ: **ಶಾಂತಿಪು,** ೬. ೧೧ ವ)

**ಅವಾಙ್ಮನಸಗೋಚರ** – ಮಾತು–ಮನಸ್ಸುಗಳಿಗೆ ನಿಲುಕದ (ಅವಾಙ್ಮನಸಗೋಚರಮಪ್ಪ ಆತ್ಮತ್ತ್ವಮಂ ತತ್ತ್ವವಿಚಾರ ಪಾರಗರುಂ ಅನುಮಾನಪ್ರಮಾಣರುಂ ಆಗಿ ಕೈಕೊಂಡು: **ಪಂಚತಂತ್ರ,** ೧೫೫ ವ)

**ಅವಾಚೀದಿಗ್ವಿಜಯ** – ದಕ್ಷಿಣ ದಿಕ್ಕನ್ನು ಗೆಲ್ಲುವುದು (ನಡೆದಂ ಅವಾಚೀದಿಗ್ವಿಜಯಹೇತುವಿಂ ಜಿನಚಂದ್ರಂ: **ಶಾಂತಿಪು,** ೧೧. ೧)

**ಅವಾಚ್ಯ** – ಹೇಳಲಾಗದ (ಬಿನ್ನವಿಸಲವಾಚ್ಯಮಿದು ದೇವ: **ಕರ್ಣನೇಮಿ,** ೩. ೧೩೫)

**ಅವಾಪ್ತ** – ಪಡೆಯಬಹುದಾದ (ಮನೋರಥ ಅವಾಪ್ತ ದಿವ್ಯಭೋಗಂ ಮನೋರಥನೆಂಬ ಕಲ್ಪಜನಾದಂ: **ಆದಿಪು,** ೫. ೭ ವ)

**ಅವಾಪ್ತಿ** – ಪ್ರಾಪ್ತಿ, ಲಾಭ (ಪಾಪಹೃತ್ಪಾದಾಬ್ಜಂ ದಯೆಗೆಯ್ವನಕ್ಕೆಮಗೆ ಮುಕ್ತಿಶ್ರೀ ಸುಖ ಅವಾಪ್ತಿಯಂ: **ಆದಿಪು,** ೧. ೧)

**ಅವಾಮವೃತ್ತಿವರ್ತನ** – ಋಜುಮಾರ್ಗಾನುಸಾರಿ, ಪ್ರದಕ್ಷಿಣೆ ಸುತ್ತುವ (ಅಧ್ವರಾನಲಂ ಅವಾಮವೃತ್ತಿವರ್ತನಮಾದುದು: **ಚಂದ್ರಪ್ರಪು,** ೧೨. ೩೩ ವ)

**ಅವಾರಪಾರ** – ಕೊನೆಯಿಲ್ಲದ (ಪುರುಷೋತ್ತಮಾವತಾರಂ ಅವಾರವಾರ ಗಂಭೀರಂ .. .. ಯಶಃಪ್ರಹಾಸನಂ ಅರ್ಹದ್ದಾಸನೆಂಬೊಂ: **ನೇಮಿನಾಪು,** ೧. ೬೮ ವ)

**ಅವಾರ್ಯವೀರ್ಯ** – ತಡೆಯಲಾಗದ ಸಾಮರ್ಥ್ಯವಿರುವ (ಏಂ ಮತಮಱಿದೋಲಗಿಪುದೋ ದಂಪತಿಗೆಂದುಂ ಅವಾರ್ಯವೀರ್ಯತೂರ್ಯಕ್ಷ್ಮಾಜಂ: **ಆದಿಪು,** ೫. ೩೫)

**ಅವಿ** – ಅವಿತುಕೊ (ಅವಿ–ನಿಗೂಹನೇ: **ಶಬ್ದಮದ,** ಧಾ ೬೬೦); ಮೇಕೆ (ಅವಿ ಮೇಷ ಉರಭ್ರಂ ಮೇಂಡವದು ಏಳಕ ವೃಷ್ಣ್ಯರಣಕಂ ಏಕಾರ್ಥಂ: **ಅಭಿಧಾವ,** ೧. ೧೫. ೧೧); ಮುತ್ತಿಕೊ (ಎಲರ್ಗೆ ಕಾಪನಿತ್ತು ಉೞಿ ಕೈಕೊಂಡವೊಲೆಱಗಿ ಪೆಱಮೆವಱಿವಿಂಡು ಅವಿದತ್ತು ಅದಿರ್ಉತ್ತೆಯಲ್ಲಿ ಸಂದಣಿಗೊಳುತುಂ: **ಕಬ್ಬಿಗಕಾ,** ೪೮); ಸೂರ್ಯ (ಅವಿ ರವಿಯುಂ ಕುಜಿಯುಂ: **ಅಭಿಧಾವ,** ೩. ೧. ೫)

**ಅವಿಕಳ** – ಕೊರತೆಯಿಲ್ಲದ, ನ್ಯೂನತೆಯಿಲ್ಲದ (ಧವಳ ಜಳಧರ ಕುಳಾಕುಳಂ ಅವಿಕಳಂ ಅಂಬರತಳಂ: **ಕವಿರಾಮಾ,** ೨. ೬೩)

**ಅವಿನ್ನಾಣ** – [ಅಭಿಜ್ಞಾನ] ಗುರುತು, ಕುರುಹು (ರಘುವೀರನಣುವಂಗೆ ಜಾನಕಿಯ ತನ್ನ ಕುಱುಪಿನ ಅವಿನ್ನಾಣಂಗಳನಱಿಪಿ: **ಪಂಪರಾ,** ೧೧. ೪೬ ವ)

**ಅವಿಕಲ್ಪ** – ವಿಕಾರವಿಲ್ಲದ (ಅವಧಿಯಿಂ ಆಸನ್ನಭವ್ಯನೆಂಬುದನಱಿದು .. .. ಇಂತು ನುಡಿದರ್ ಆತ್ಮಂ ಅವಿಕಲ್ಪಂ ನೆನೆಯುತ್ತಿರ್ದವು: **ಯಶೋಧಚ,** ೪. ೧೬)

**ಅವಿಚಲ** – ನಿಶ್ಚಲವಾದ (ಅವಿಚಲಮಪ್ಪ ಲಕ್ಷ್ಮಿ ವಿವಿಧೋತ್ಕರಹೃದಯಮೆನಿಪ್ಪ ವಿದ್ಯೆನೋೞ್ಪವರ ಅನುರಾಗಮಂ ಪಡೆವ ರೂಪು .. .. ಆ ನೃಪನಲ್ಲಿ ತೋಱಿಲ್: **ಮಲ್ಲಿನಾಪು,** ೩. ೨೦)

**ಅವಿಚಾರಿತರಮಣೀಯ** – ತೋರಿಕೆಯ ಸೌಂದರ್ಯವುಳ್ಳ (ಇನ್ನಾರಾರ ಕವಿತ್ವಂ ಅವಿಚಾರಿತರಮಣೀಯಮಲ್ಲಿ ಮರುಳಳಿಸುವುದೇ: **ಶಾಂತಿಪು,** ೧೨. ೭೯)

**ಅವಿಚ್ಛಿನ್ನ** – ನಿರಂತರವಾದ (ಇಂತು ಸೋಮವಂಶದಿಂದಂ ಅವಿಚ್ಛಿನ್ನಮಾಗಿ ಬಂದಭರತಾನ್ವಯದೊಳ್: **ಗದಾಯು,** ೫. ೪೪ ವ)

**ಅವಿಜ್ಞೇಯ** – ತಿಳಿಯಲಾಗದ (ಅವರ ವಚನಂ ಜಡಸಂಸ್ಥಾನಂ ಅವಿಜ್ಞೇಯಂ: **ಶಾಂತಿಪು,** ೧೦. ೧೮೦)

**ಅವಿತ** – ಕತ್ತಿಕಾಳಗದ ಒಂದು ವರಸೆ (ಆಗಳಿರ್ವಲದ ಕಡಿತಲೆಕಾಱರ್ ಅಲಗಿನೊಳ್ ಪಳಂಚೆ ತಾಗಿ ನಿರ್ಘಾತ ಉಪ್ಪರಂ ತಾಳವಟ್ಟಂ ಅವಿತಂ ಉಱಿತಂ ಎಂಬ ಪಲವುಂ ತೆಱದದ ಇಱಿವ ಬಿನ್ನಣದೊಳ್ ನೆಱೆದು ತಾಳುಂತಟ್ಟುಂ ಪೊಯ್ಯೆ: **ಪಂಪರಾ,** ೧೩. ೫೪ ವ)

**ಅವಿತಥ** – ಸುಳ್ಳಲ್ಲದ, ನಿಶ್ಚಯ (ತನ್ನ ಬಾಣದ ಮೊನೆಯೊಳ್ ಮಾರ್ವಲಮಂ ತವಿಸಿದನೆನೆ ದೋರ್ವಲಮೇಂ ಬ್ರಹ್ಮರಥನೊಳ್ ಅವಿತಥಮಾಯ್ತೋ: **ಪಂಪರಾ,** ೨. ೬೨)

**ಅವಿದಿಡು** – ಮೊರೆಯಿಡು (ಶಿವಂಗೆ ಅವದಿಡಲ್ ಶ್ವಾಕಾರದಿಂ ವೇದಮಂತ್ರಿಗಳಂ ಘ್ರಾಣಿಸುತೆಯ್ದೆ ತಚ್ಚರನಮಂ ಎಚ್ಚಂ ಕೇಳ್ ಕಿರಾತೇಶ್ವರಂ: **ರಾಜಶೇವಿ,** ೩. ೧೦೦); ಹಬ್ಬು (

**ಅವಿದಿತ** – ತಿಳಿಯದ (ಅವಿದಿತ ಪರಸ್ಪರೋಚ್ಚವ್ಯವಹೃತಿ ತಂತಮಗೆ ವಿಸ್ಮಯಂಪುಟ್ಟುವಿನಂ: **ಮಲ್ಲಿನಾಪು,** ೧೪. ೭೬)

**ಅವಿಧಾ** – ''ಕಾಪಾಡಿ'' ಎಂಬ ಮೊರೆಯ ಕೂಗು (ಅವಿಧಾ ಪಾರ್ವನೊರ್ವನುಳ್ಳ ಮಗನಂ ನಿಷ್ಕಾರಣಂ ನಿರ್ಘ್ರಣಂ ಜವನುಯ್ದಂ: **ಅಜಿತಪು.** ೧೦. ೧೧)

**ಅವಿಧೃತೋದ್ರೇಕ** – [ಅವಿಧೃತ+ಉದ್ರೇಕ] ಉದ್ವೇಗವನ್ನು ತಡೆದುಕೊಳ್ಳುವುದು (ಊರ್ಜಿತರಾತಿರಾಜಪ್ರತಾತಪಮುಂ ಅವಿಧೃತೋದ್ರೇಕಮಾಗೆಯುಂ: **ಆದಿಪು ನರಸಿಂ,** ೧೩. ೨೭ ವ)

**ಅವಿನಯ** – ಕೆಟ್ಟ ನಡವಳಿಕೆ (ಎನ್ನ ಕಾಮಪರವಶತೆಗಾಂ ನೆಲದೊಳ್ ತಲೆಯಂ ಕುತ್ತಿ .. .. ನಿಜ ಅವಿನಯಶ್ರವಣಲಜ್ಜೆಯಿಂ ಕರಗುವಂತೆಯುಂ .. .. ಆಗಿ ಇಂತೆಂದಂ: **ಕಾದಂಬ,** ೧೦. ೩ ವ)

**ಅವಿನಾಣ** – (ಅಭಿಜ್ಞಾನ) ಗುರುತು (ಅತಿರಹಸ್ಯಂಗಳಪ್ಪ ಕೆಲಕೆಲವು ಅವಿನಾಣಂಗಳಂ ನಾಣ್ಚಿ ಬಂಚಿಸಿ ಪಿರಿದುಮನುರಾಗದಿಂದಮೆನ್ನ ಬರೆದ ಪಟಮನಿದನರ್ಚಿಸಿ: **ಆದಿಪು,** ೩. ೪೩ ವ)

**ಅವಿನಾಭಾವಿ** – ಸದಾ ಕೂಡಿರುವ, ಜೊತೆಗಿರುವ (ಭವವಿಜಯಮೆಂಬುದು ಜೀವಂಗೆ ಚೇತನಾಚೇತನಂಗಳೊಳ್ ಅವಿನಾಭಾವಿಸಹಾಯಮನೊಂದುಮಿಲ್ಲಂ: **ಅಜಿತಪು,** ೮. ೨೮ ವ)

**ಅವಿನೀತ** – ವಿನಯರಹಿತ (ಅವಿನೀತನುಂ ಅಪ್ರತಿಷ್ಠನುಂ ಸ್ವಪರಾಂತಸ್ಥವಿದನುಂ ಅಲ್ಲದ ಅರಸನಂ ಅಱಿದಿಂಬಱಿಕ್ಕೆ ಸಮೀಪಕ್ಕೆ ಪೋಗಿ ದುರಭಿಮಾನದಿಂ ನುಡಿವುದು ತಕ್ಕುದಲ್ಲಂ: **ಪಂಚತಂತ್ರ,** ೮೫ ವ)

**ಅವಿನ್ನಾಣ** – [ಅಭಿಜ್ಞಾನ] ಗುರುತು (ಕಾದಂಬರೀದೇವಿಯಟ್ಟಿದ ಮದನವೇದನೆಯ ಅವಿನ್ನಾಣಂಗಳಪ್ಪ ಪಸುರೆಸೆವ

ಪಾಲಡಕೆಯ ಗೊಂಚಲುಮಂ .. .. ಮಲಯಜ ವಿಲೇಪನಮುಮಂ ಅರಸಂಗೆ ತೋಱೆ: **ಕಾದಂಸಂ,** ೫. ೭೮ ವ)

**ಅವಿಭಾವ್ಯ** – ಯೋಚಿಸಿ ತಿಳಿಯಲಾರದ; ಗುರುತು ಹಚ್ಚಲಾಗದ (ವಾಜಿಗಳ ನಡುವೆ ಪೀಲಿದಟಿಗಳ ನೆಟಲಿಂದ ಅವಿಭಾವ್ಯನೆನಿಸಿ ಬರುತಿರ್ಪಂ: **ಕಾದಂಬ,** ೮. ೬೧)

**ಅವಿಮಧೂತ** – [ಜೈನ] ದರ್ಶನ ಮೋಹನೀಯಗಳಲ್ಲಿ ಒಂದು (ಅವಿಮಧೂತಂ ಸಮ್ಯಗ್ವಿಧೂತಂ ಸಮ್ಯಕ್ತ್ವಪ್ರಕೃತಿಯುಮೆಂದು ದರ್ಶನಮೋಹನೀಯಂ ಮೂಱು ತೆಱಂ: **ಶಾಂತಿಪು,** ೧೨. ೧೧ ವ)

**ಅವಿರತಂ** – ನಿರಂತರವಾಗಿ (ಉಪಧಾವಿಶುದ್ಧ ಮಂತ್ರಿಮಂಡಲದೊಳ್ ಅವಿರತಂ ನಿಘರ್ಷಿಸಿಯುಂ: **ಚಂದ್ರಪ್ರಪು,** ೭. ೬೦ ವ)

**ಅವಿರಳ** – ದಟ್ಟವಾದ, ಬಿಡುವಿಲ್ಲದ (ಅವಿರಳ ಧೂಪಾಮೋದಸಂಸಂಗಿ ಭೃಂಗಾನ್ವಿತಂ: **ಚಂದ್ರಪ್ರಪು,** ೧. ೧೫೦)

**ಅವಿರಳವಿಸಾರಿ** – ನಿರಂತರವಾಗಿ ಹರಡುವ (ಆ ರಮಣೀಯ ದೇಹದ್ಯುತಿವಾರಿಯಿಂ ಅವಿರಳವಿಸಾರಿಯಿಂ ತೊಳೆವಂತೆ: **ಚಂದ್ರಪ್ರಪು,** ೨. ೧೪)

**ಅವಿವೇಕಾತ್ಮತೆ** – ವಿವೇಕರಹಿತವಾದ ಮನಸ್ಸುಳ್ಳುದು (ಅವಿವೇಕಾತ್ಮತೆಯಿಂದೆ ಮೆಯ್ಯಱಿಯದೆ ಆಂ ದಿಙ್ಮೂಢನಾಗಿರ್ದೆಂ: **ಸುಕುಮಾಚ,** ೧೨. ೧೫)

**ಅವಿವೇಕಿ** – ವಿವೇಕರಹಿತ (ಅವಿವೇಕಿ ದಶಮುಖಂ ದೃಷ್ಟಿವಿಷಾಹಿಯ ಪೆಡೆಯ ಮಣಿಶಲಾಕೆಗೆ ಕೈನೀಡುವ ಗಾಂಪಂನಂತೆ .. .. ಮನದೊಳ್ ಅಳಿಪಂ ತಂದಂ: ಪಂಪರಾ, ೯. ೮೮)

**ಅವಿಹತಗತಿ** – ತಡೆಯಲಸಾಧ್ಯವಾದ ವೇಗ (ಪುರಾಣಪುರುಷರವೋಲಿಂತು ಅವಿಹತಗತಿಯಿಂ ಮುನ್ನನ್ವಯಾಯಭೂಧರದ ಶಿಖರಮಂ ಮುಟ್ಟಿದರಾರ್: **ಆದಿಪು,** ೧೪. ೪೦)

**ಅವು** – ಒನಕೆಯಿಂದ ಕುಟ್ಟು (ಅವು–ಮುಸಲಕ್ರಿಯಾಯಾಂ: **ಶಬ್ದಮದ, ಧಾ,** ೬೬೧)

**ಅವುಂಕು** – ಒತ್ತರಿಸು (ದೇವಸೌಂದರಿಯರ ದಿವ್ಯಮಪ್ಪ ಪೊಸಗಂಪಿನಲಂಪಂ ಅವುಂಕಿಕೊಂಡು: **ಆದಿಪು,** ೨. ೬೫)

**ಅವುಂಡು** – ಔಡು, ದವಡೆ (ಹರಿಪೋತಮಂ ಬೆದಱುತುಂ ಕರಿಪೋತಂ ಅವುಂಡುಗರ್ಚಿ ಕೇಸರಿಣಿಯಂ ಕೆಚ್ಚಲಂ ತುಡುಕುತಂ ಪರಿದತ್ತು: **ಪಂಪಭಾ,** ೭. ೮೦)

**ಅವುಜ** – ಒಂದು ವಾದ್ಯ (ರಂಗಪೂಜೆಗೆ ಕರಂ ಒಪ್ಪುವ ಆವುಜಿಗಂ ಆವುಜಮಂ ಪಿಡಿದೆತ್ತಿ ಕಂದವಟ್ಟಿಗೆಯನೆ ಕಂಡದೊಳ್ ತಳೆದು: **ಧರ್ಮಪ,** ೨. ೨೧)

**ಅವುಡಲ** – ಔಡಲ, ಹರಳು ಗಿಡ (ಬಯಲೊಳ್ ನಿತ್ತಱಿಸಲಾಱದೆ ಆನೆಯಂ ಬಿಟ್ಟು ಅವುಡಲಕ್ಕೆಯಂ ಮಱೆಗೊಂಡರೆಂಬರಂತೆ: **ಪಾರ್ಶ್ವನಾಪು,** ೩. ೧೩೧ ವ)

**ಅವುಟ್** – ಅಗುಳು (ತವಗುಣಬಡ್ಡಿಸೆ ಮೀಸಲಂ ಅವಿವೇಕಿಗಳ್ ಇಕ್ಕಿ ಕಿರ್ಚಿನೊಳ್ ಕಿಱಿದಂ ಮಿಕ್ಕವುಟಂ ಪೊಱಗಣ್ಗೀಡಾಡುವರ್: **ಸಮಯಪ,** ೧೨. ೫)

**ಅವ್ಯಗ್ರ** – ಏಕಾಗ್ರ ಮನಸ್ಸಿನ (ಅವ್ಯಗ್ರಕುಶಾಗ್ರೀಯಬುದ್ಧಿಸಮೃದ್ಧಂ ಸ್ವಯಂಬುದ್ಧಂ ಅವಧಾರಿಸಿ: **ಆದಿಪು,** ೨. ೯ ವ)

**ಅವ್ಯತಿರಿಕ್ತೆ** – ಬೇರೆಯಲ್ಲದವಳು (ಸತತಂ ನಿಜದೇಹದಿಂ ಅವ್ಯತಿರಿಕ್ತೆಯೆನಿಪ್ಪ ಹೃದಯವಲ್ಲಭೆಯೊಳ್: **ಚಂದ್ರಪ್ರಪು,** ೬. ೨೫)

**ಅವ್ಯಭಿಚಾರಿಮಿತ್ರ** – ಸ್ಥಿರನಾದ ಗೆಳೆಯ (ಪಾಪೇಭಕಂಠೀರವ ಅನುಜಂ ಅವ್ಯಭಿಚಾರಿಮಿತ್ರಾನುಕಾರರಿಯಪ್ಪ ಬಿಲ್ಲನದಂ ಬಿಸುಟ್ಟು: **ಶಾಂತಿಪು,** ೪. ೫೦ ವ)

**ಅವ್ಯಯ** – ನಷ್ಟವಿಲ್ಲದ, ಒಂದೆ ಪ್ರಕಾರದ (ಅಮೇಯಂ ಅವ್ಯಯಂ ದೇವರದೇವಂ ಆದಿಪುರುಷಂ: **ಜಗನ್ನಾವಿ,** ೧. ೩೨)

**ಅವ್ಯವಚ್ಛಿನ್ನ** – ಎಡೆಬಿಡದ; ನಿರಂತರವಾದ (ಹಿರಣ್ಯಗರ್ಭಬ್ರಹ್ಮರಿಂ ತಗುಳ್ದು ಅವ್ಯವಚ್ಛಿನ್ನಮಾಗಿ ಬಂದ ಸೋಮವಂಶಂ ಈಗಳ್ ಎಮ್ಮ ಕುಲಸಂತತಿಗಂ ಆರುಮಿಲ್ಲದೆ ಎಡವಱಿದು ಕಿಡುವಂತಾಗಿರ್ದುದು: **ಪಂಪಭಾ,** ೧. ೮೪ ವ)

**ಅವ್ಯವಧಾನ** – ಸಂತತವಾದ (ಭ್ರಾಂತಿವಶದಿಂ ಗ್ರಾಹ್ಯಸಂವೇದನಾಕಾರತ್ರಯಾಕ್ರಾಂತಂಗಳ್ ವಿಜಾತೀಯ ಅವ್ಯವಧಾನ ಲಘೂವೃತ್ತಿ ಸದೃಶಾಪರೋತ್ಪತ್ತಿ ಎಂಬಿವಱಿಂ: **ಆದಿಪು,** ೨. ೯ ವ)

**ಅವ್ಯಾಕುಲಾತ್ಮಕ** – ವ್ಯಾಕುಲಗೊಳ್ಳದ ಮನಸ್ಸುಳ್ಳ (ಮಿಥ್ಯಾತಾನುಭವಿಯೆನಿಸಿರ್ದಂ ಆಸನ್ನಭವ್ಯಂ ಅವ್ಯಾಕುಲಾತ್ಮಕಂ ನಿರ್ವ್ಯಾಜಂ: **ಸುಕುಮಾಚ,** ೩. ೧೧)

**ಅವ್ಯಾಕುಳಂ** – ವ್ಯಾಕುಲವಿಲ್ಲದವನು (ಜಿನೇಶ್ವರಂ .. .. ಕುಡುಗೆ ಸಮ್ಯಗ್ದರ್ಶನ ಜ್ಞಾನ ಚಾರಿತ್ರಂಗಳ್ .. .. ಭವ್ಯಶ್ರೇಣಿಗೆ ಅವ್ಯಾಕುಳಂ: **ಅನಂತಪು,** ೧. ೭); ತಡೆಯಿಲ್ಲದೆ; ವ್ಯಾಕುಲವಿಲ್ಲದೆ (ಕಾಮಿನೀರೂಪದಿಂ ಕನ್ನಡಿಸಿತು ಅವ್ಯಾಕುಳಂ ಪುಣ್ಯವತಿ ಕನಸಿನೊಳ್ನಿನ್ನ ಪುಣ್ಯಾಧಿದೈವಂ: **ಮಲ್ಲಿನಾಪು,** ೪. ೪೭)

**ಅವ್ಯಾಜ** – ಸಹಜವಾದ (ಭವ್ಯಶ್ರೇಣಿಗೆ ಅವ್ಯಾಜದಿಂದಱಿಯಲ್ ನಾಲ್ಕನುಯೋಗಮಾದುದು: **ಆದಿಪು,** . ೩೯)

**ಅವ್ಯಾಹತ** – ತಡೆಯಿಲ್ಲದ (ನಿರ್ಮೋಹದಿನಿರೆ ಯತಿಪತಿಗೆ ಅವ್ಯಾಹತಂ ಅಳವಟ್ಟುದು ಉತ್ತಮಾಕಿಂಚನ್ಯಂ: **ಮಲ್ಲಿನಾಪು,** ೧೧. ೩೦)

**ಅವ್ಯುತ್ಪನ್ನ** – ಪಾಂಡಿತ್ಯವಿಲ್ಲದವನು (ಅವ್ಯಾಜಶೌರ್ಯಂ ಅವ್ಯುತ್ಪನ್ನನವೋಲಿಂತು ಮೊಱೆದಪ್ಪುವನೇ: **ಪಂಪರಾ,** ೧೬. ೧೭)

**ಅವ್ರತಯೋಗ** – ವ್ರತಾಚರಣೆಯಿಲ್ಲದ, ಆಮೆಯಂತೆ ನೀರಿನಲ್ಲಿ ವಾಸಮಾಡುವ (ಅವ್ರತಯೋಗಂ ಜಳಪಕ್ಷಿಗಲ್ಲದೆ ಜನಕ್ಕಿಲ್ಲ ಅಲ್ಲಿ: **ಪುಷ್ಪದಂಪು,** ೨. ೨೯)

**ಅವ್ವಳಿಸು** – ವ್ಯಾಪಿಸು, ಮೇಲೆ ಬೀಳು (ಚಳದಳಕಾಖಿ ನಿನ್ನ ವದನಾಂಬುಮಂ ನಡೆ ನೋಡಲೀಯದೆ ಅವ್ವಳಿಸುವುದು ಔಪರಿಷಟಕದೊಳೆನ್ನಂ: **ಆದಿಪು,** ೪. ೧೨); ಅಪೇಕ್ಷಿಸು (ವಿಚಕಿಲಮಾಲೆಯೆಂದು ಎಱಗಲ್ ಅವ್ವಳಿಪ ಮದಮಧುಪಂಗಳಿಂ: **ರಾಜಶೇವಿ,** ೨. ೧೩೫ ವ)

**ಅಶನ** – ಆಹಾರ (ಬದರಾಕ್ಷಾಮಲಕಪ್ರಮಾಣಂ ಅಶನಂ; **ಶಾಂತಿಪು,** ೬. ೧೦೪)

**ಅಶನಿ** – ಸಿಡಿಲು (ಮನದೊಲವರದಿಂದೀ ಯಮತನಯನ ಕಂಡುವಗ್ರಪೂಜೆ ಮತ್ಸನ್ನಿಧಿಯೊಳ್ ನನಗಶನಿಯ ಮಿಟ್ಟುವ ನಂಜಿನ ದೊರೆ: **ಪಂಪಭಾ,** ೬. ೫೧); ವಜ್ರಾಯುಧ (ಬೆಟ್ಟುಗಳ್ ಉಗ್ರ ಅಶನಿ ಸಂಘಟ್ಟದೆ ಕೆಡೆವಂತೆ ಭೀಮ

ಭೀಮಗದಾಸಂಘಟ್ಟದೆ ಕೆಡೆದೊಡನೆ ಪಡಲ್ವಟ್ಟುವು ಕಾಳಿಂಗರಾಜ ಸಮರಗಜಂಗಳ್: **ಗದಾಯು,** ೩. ೪)

**ಅಶರೀರಧ್ವನಿ** – ಶರೀರ ಕಾಣಿಸದೆ ಕೇಳುವ ಧ್ವನಿ (ಅಶರೀರಧ್ವನಿಯಂತೆ ನಾರದನ ಪೇೞ್ದ ಆದೇಶಮಿಂದಾಯ್ತು: **ಜಗನ್ನಾವಿ,** ೩. ೧೯)

**ಅಶಲ್ಯ** – ಆಯುಧವಿಲ್ಲದ, ನಿರಾಯುಧ (ಶಲ್ಯನಂ ಅಂದು ಅಶಲ್ಯನಂ ಬಗೆವವೊಲ್ ಏಳಿದಂಬಗೆದು ದಂತಿಯಂ ಆಗಡೆ ತೋಱಿಕೊಟ್ಟು ತೊಟ್ಟಗೆ ರಥಮಂ ಪಡಲ್ವಡಿಸಿ ಪೊೞ್ದಂ ಅರಾತಿಯಂ ಅಸ್ತ್ರಕೋಟಿಯಿಂ: **ಪಂಪಭಾ** ಪರಿಷತ್ತು, ೧೦. ೧೧೧)

**ಅಶಲ್ಯಭಾವೆ** – [ಜೈನ] ರಾಗದ್ವೇಷರಹಿತಳಾದವಳು (ಪರಮ ಜಿನೇಂದ್ರನಂ ಬಗೆವ ಭಾವಂ ಅಚಾಲ್ಯಂ ಅಶಲ್ಯಭಾವೆಯಾ: **ಸುಕುಮಾಚ,** ೯. ೧೬)

**ಅಶಾಂತಮತಿ** – ಕದಡಿದ ಮನಸ್ಸಿನವಳು (ಅಶಾಂತಮತಿ ಚಂಡರುಚಿ ನಿಶಚರನಾದಂ: **ಚಂದ್ರಪ್ರಭು,** ೫. ೮೮)

**ಅಶಿಶಿರಕರ** – ಸೂರ್ಯ (ಆರ್ದ್ರ ಚಂದನಾನ್ವಿತಮುಂ ಅಶಿಶಿರಕರ ರಥತುರಗಖುರಶಿಖರನಿಖಂಡಿತ ಲವಂಗಪಲ್ಲವಮುಂ: **ಪಂಪಭಾ,** ೪. ೧೮ ವ)

**ಅಶಿಷ್ಟ** – ಒರಟಾದ (ಕಂಸಂ ತದೀಯ ಬಾಲಹಿಂಸಾಪರನಗಿ .. .. ಶಿಷ್ಟರ್ ಅಶಿಷ್ಟಮೆನೆ .. .. ಕೂಸನಪ್ಪಳಿಸಿ: **ಜಗನ್ನಾವಿ,** ೨. ೫೩ ವ ಮತ್ತು ೫೪ ವ)

**ಅಶೀತಿ** – ಎಂಬತ್ತು (ಮಂತಣಮೇನಾದಿಯ ಮನ್ವಂತರದೊಳ್ ಅಶೀತಿಭಾಗಿ ಪಲ್ಯದೊಳ್ ಆ ಮನ್ವಂತರ ದಶಮಾಂಶಂ ಮನ್ವಂತರಮಕ್ಕುಂ ಪ್ರಸೇನಜಿತ್ಪರ್ಯಂತಂ: **ಪಂಪರಾ,** ೧. ೮೮)

**ಅಶುಭಸ್ಯ ಕಾಲಹರಣಂ** – ಕೆಡುಕನ್ನು [ಆದಷ್ಟೂ] ಮುಂದೂಡಬೇಕು (ಅಮತು ಗಾಂಗೇಯಂ ಮನದೊಳ್ ಪೊಗೞ್ದು ಅಶುಭಸ್ಯ ಕಾಲಹರಣಂ ಎಂಬೀ ಕಾರ್ಯಾರ್ಥಮನವಧಾರಿಸಿ: **ಗದಾಯು,** ೬. ೬ ವ)

**ಅಶೇಷ** – ಎಲ್ಲ, ಸಕಲ (ಸಮಸ್ತ ಉರ್ವಿಧರ ಅಶೇಷ ಶೇಷ ಮಹಾನಾಗಫಣಾಮಣಿದ್ಯುತಿಯನೇಂ ಖದ್ಯೋತದೊಳ್ ಕಾಣ್ಬರೇ: **ಪಂಪಭಾ,** ೫. ೭೬)

**ಅಶೇಷಜಗಜ್ಜನಕ** – ಸಮಸ್ತಲೋಕಕ್ಕೂ ತಂದೆಯಾದ (ತೋಯಜಗರ್ಭಂ ಆದಿಮುನಿಮುಖ್ಯಮತಪ್ರಕಟೀಕೃತಾಖಿಳ ಆಮ್ನಾಯ ಪರಂಪರಾಯತಂ ಅಶೇಷಜಗಜ್ಜನಕಂ .. .. ಒಲ್ದು ದೀರ್ಘಾಯುಮಂ ಈಗೆ ಶಿಷ್ಟನಿಧಿಗೆ: **ಪಂಚತಂತ್ರ,** ೩)

**ಅಶೇಷಭವ್ಯ** – ಸಮಸ್ತ ಜೈನಸಮುದಾಯ (ಶ್ರೀಮತ್ ಅಶೇಭವ್ಯಕಮಲಾಕರಹಂಸಂ .. .. ಜಿನಾರ್ಕನೊಲ್ದು ಎಮಗೆ ಮಾಡುಗೆ ದೃಷ್ಟಿಲಕ್ಷ್ಮಿಯಂ: **ಸಮಯಪ,** ೮. ೧)

**ಅಶೋಕ** – ಒಂದು ಮರ (ಕಕುಭ ಅಶೊಕ ಕದಂಬ ಲುಂಗ ಲವಲೀ ಭೂಜ ಅರ್ಜುನ ಆನೋಕಹಪ್ರಕರಂ: **ಪಂಪಭಾ,** ೫. ೮೦)

**ಅಶೋಕವೃತ್ತ** – ಶೋಕಕ್ಕೆ ಒಳಗಾಗದ ನಡತೆಯವನು (ಅಗಲ್ದು ಪೋದಂ .. .. ಅಶೋಕವೃತ್ತಂ ಅಭಯಾತ್ಮಕಂ: **ಪುಷ್ಪದಂಪು,** ೧೯. ೯೩)

**ಅಶ್ಮ** – ಕಲ್ಲು (ಮೇರುಮಹೀಜಾತಂ ಪಾರಿಜಾತ ಅಂಘ್ರಿಪೋತ್ಕರಂ ಅಶ್ಮಬ್ರಜಂ ಪಯಃಪ್ರಸರಮುಂ ಚಿಂತಾಮಣಿ: **ಶಾಂತೀಶ್ವಪು,** ೧೪. ೮೯)

**ಅಶ್ಮಂತ** – ಒಲೆ (ಅಶ್ಮಂತಂ ಉತ್ಥಾನಂ ಅಂತಿಕೆಯೆನೆ ಅಧಿಶ್ರಯಣಿಯೆನಿಪ್ಪುದಕ್ಕುಂ: **ಅಭಿಧಾವ,** ೧. ೧೦. ೩೦)

**ಅಶ್ಮಗರ್ಭ** – ಮರಕತ (ಮರಕತಮದು ಅಶ್ಮಗರ್ಭಂ: **ಅಭಿಧಾವ,** ೧. ೬. ೧೦)

**ಅಶ್ಮಸಾರ** – ಕಬ್ಬಿಣ (ಬಿಸಿಳುರೆ ಕರಗಿ ಹರಿವ ಅಶ್ಮಸಾರಮಂ ಗಿರಿಯ ನಿರ್ಝರಂಗೆತ್ತು: **ಚಂದ್ರಪ್ರಭು,** ೯. ೭೨)

**ಆಶ್ರಮ** – ಆಯಾಸವಿಲ್ಲದ, ನಿರಾಯಾಸ (ನಿರಾಳೋಚನೆಯಿಂದ ಅಶ್ರಮದೆ ಗೆಲ್ವ ಅತಿವೀರ್ಯನೆ ನೀನಿರಲ್ಕೆ: **ಕರ್ಣನೇಮಿ,** ೧. ೧೨೦)

**ಅಶ್ರಾಂತ** – ಶ್ರಮರಹಿತವಾದ, ಕೊನೆಯಿಲ್ಲದ (ಅಂತು ಅಶ್ರಾಂತರಾಗದಿಂ ಸಂಭೋಗಸುಖಸಾಗರದೊಳೋಲಾಡಿ: **ಜಗನ್ನಾವಿ,** ೨. ೭೫ ವ)

**ಅಶ್ರಾಂತಂ** – ದಣಿವಿಲ್ಲದೆ (ಅಶ್ರಾಂತಂ ಕಣ್ಗೊಪ್ಪಿದಂ ಮಂಜುಳ ಗುಣಗಣಮಾಣಿಕ್ಯಕೋಶಂ ಮಹೇಶಂ: **ರಾಜಶೇವಿ,** ೧೪. ೧೬೯)

**ಅಶ್ರೀಕ** – ಸಂಪತ್ತು ಸೌಭಾಗ್ಯಗಳಿಲ್ಲದ (ಲೋಕಾಲೋಕಾವಿತತ ಲೋಕಂ ಜ್ಞಾನಂ ಸಮಾರ್ಜಿತ ಅವದ್ಯವಿದು ಅಶ್ರೀಕಂ: **ಶಾಂತಿಪು,** ೬. ೪೭)

**ಅಶ್ರು** – ಕಂಬನಿ (ಅಶ್ರುವಂ ಪೇೞುವ ಕಣ್ಮಲರ್: **ಜಗನ್ನಾವಿ,** ೩. ೧೦೧)

**ಅಶ್ರುಕಣ** – ಕಣ್ಣೀರ ಹನಿ (ಸುರಿವ ನಿರಂಜನ ಅಶ್ರುಕಣದಿಂ ಕುಚದೊಳ್ ಪೊಸಮುತ್ತಿನ ಹಾರಮಂ .. .. ನಿಯೋಜಿಪ: ಚಂದ್ರಪ್ರಭು, ೩. ೫೪)

**ಅಶ್ರುಜಲ** – ಕಣ್ಣೀರು (ಒಗೆದ ಸುತಶೋಕದಿಂದ ಆವಗೆಯಂತೆ ಒಳಗು ಉರಿಯೆ ಭೋಂಕನೆ ಎರ್ದೆ ತೆಱೆಯಲ್ ಹಾ ಮಗನೇ ಎಂದು ಅಶ್ರುಜಲ ಆರ್ದ್ರಗಂಡಂ ಆ ಗಂಡಿನೊಡನೆ ಬಿಸುಟಂ ಬಿಲ್ಲಂ: **ಪಂಪಭಾ,** ೧೨. ೨೮)

**ಅಶ್ರುತ** – ಕೇಳಿಸದ (ಜನಿಯಿಸುಗುಂ ದುರ್ಗತಿ ಬಂಧನಮೆಂಬೀ ದಿವ್ಯಭಾಷೆ ನಿನಗಶ್ರುತಮೇ: **ಮಲ್ಲಿನಾಪು,** ೧೦. ೩೦)

**ಅಶ್ರುತಪೂರ್ವ** – ಹಿಂದೆಂದೂ ಕೇಳದ (ಅಂತು ಅಶ್ರುತಪೂರ್ವಧ್ವನಿಯಂ ತೊಟ್ಟನೆ ಕೇಳ್ದು ಕೇಳ್ದು ಕಿವಿಯೊಡೆದಪುದು: **ಕಾದಂಬ,** ೧. ೧೨೯)

**ಅಶ್ರುತಪ್ರಕೃತಿಜನ** – ಶಾಸ್ತ್ರಜ್ಞಾನವಿಲ್ಲದ ಸಾಮಾನ್ಯರು (ಗುಣಮಿದು ದೋಷಮಿದೆಂಬೀ ಗಣಿದಮನೆತ್ತಱಿಗುಂ ಅಶ್ರುತಪ್ರಕೃತಿಜನಂ: **ಕವಿರಾಮಾ,** ೧. ೮)

**ಅಶ್ಲಾಘೆ** – ತೆಗಳಿಕೆ (ಪಿರಿದುಂ ಬ್ರಹ್ಮಾದಿ ದೇವರ್ಕಳಿನೆನೆಯುಂ ಅದೇಂ ವಿಷ್ಣುಗಶ್ಲಾಘೆಯಂ ಬಿತ್ತರಿಪೆಂ: **ಜಗನ್ನಾವಿ,** ೧. ೧೯)

**ಅಶ್ಲಾಘ್ಯ** – ಪ್ರಶಂಸಾಯೋಗ್ಯವಲ್ಲದ (ವಿಭುಗೆ ಅಪರಿಮಿತಾಳಾಪ< ಅಶ್ಲಾಘ್ಯಮಲ್ತೇ: **ಜಗನ್ನಾವಿಇ,** ೧. ೬೬)

**ಅಶ್ಲೀಲ** – ಗ್ರಾಮ್ಯ (ಗ್ರಾಮ್ಯಂ ಅಶ್ಲೀಲಾಖ್ಯಂ: **ಅಭಿಧಾವ,** ೧. ೧೩. ೨೮)

**ಅಶ್ವಗ್ರೀವ** – [ಜೈನ] ಒಬ್ಬ ವಿದ್ಯಾಧರ (ಅಶ್ವಗ್ರೀವ ನಭಶ್ಚರನಲ್ತೆ ಪುರಾತನವೈರದಿನಟೆದನಾ ತ್ರಿಪೃಷ್ಠನ ಕೈಯೊಳ್: ಶಾಂತಿಪು, ೭. ೬೪)

**ಅಶ್ವತ್ಥ** – ಅರಳಿಮರ (ಪಾಲಾಶ ಅಶ್ವತ್ಥ ಅರ್ಕ ಔದುಂಬರ ನ್ಯಗ್ರೋಧ ಶಮಿ ಅಪಾಮಾರ್ಗ ಖದಿರ ಆದಿ ಶುಷ್ಕಸಮಿತ್ತುಗಳುಮಂ ಕುಶ ಅಶ್ವಲಾಯನ ವಿಶ್ವಾಮಿತ್ರಾದಿ

ದೂರ್ವಾಂಕುರಪವಿತ್ರವಸ್ತುಗಳುಮಂ ಕೊಂಡು: **ಪಂಚತಂತ್ರ,** ೧೯೦ ವ)

**ಅಶ್ವತ್ಥಾಮ** – ಕುದುರೆಯ ಶಕ್ತಿ, ವೇಗ (ದಿವಿಜ ಅಶ್ವತ್ಥಾಮದೊಳ್ ಈ ಭುವನಂಗಳ್ ನಡುಗೆ ಶಿಶು ಸರಂಗೆಯ್ದೊಡೆ ನಕ್ಕು ಅವಯವದೆ ಕುಂಭಸಂಭವಂ ಇವಂ ಅಶ್ವತ್ಥಾಮನೆಂದು ಪೆಸರಿಡೆ ನೆಗಟ್ದಂ: **ಪಂಪಭಾ,** ೨. ೪೪); ದ್ರೋಣನ ಮಗ; ಮಹಾಭಾರತದಲ್ಲಿನ ಒಂದು ಆನೆಯ ಹೆಸರು

**ಅಶ್ವಮಹಿಷನ್ಯಾಯ** – ಕುದುರೆ–ಕೋಣಗಳ ನಡುವೆಯಿರುವಂತಹ ಸಹಜವೈರ (ಆಯೆಡೆಗೆ ನೀರುಣಲ್ಬರೆ ಜಾಯಿಲಂ ಅರಸನ ಪಸಾಯಿತಂ ಕೋಡೆರಡುಂ ಕೋಯೆ ಸೆಳೆದಶ್ವಮಹಿಷನ್ಯಾಯಂ ನಿಲೆ ಕೊಂದುದು: **ಯಶೋಧಚ,** ೩. ೬೭)

**ಅಶ್ವೀಯ** – ಕುದುರೆಗಳ ಸಮೂಹ, ತುರಗಸೈನ್ಯ (ನಡೆದುದು ವಿತತಾಶೀಯಂ ಉರ್ವೀಶ್ವರೀಯಂ: **ಚಂದ್ರಪ್ರಪು,** ೧೦. ೨೨)

**ಅಶ್ವೀಯಬಹುಳ** – ಕುದುರೆಗಳ ಹೆಚ್ಚಳ (ಮ್ಲೇಚ್ಛರಾಜರ್ ಧನುರ್ಧರಪ್ರಾಯಮಂ ಅಶ್ವೀಯಬಹುಳಮಂ ಹಾಸ್ತಿಕಸಾಧನಮುಮಪ್ಪ ತಮ್ಮ ಬಲಮನೊಂದುಮಾಡಿ: **ಆದಿಪು,** ೧೩. ೫೬ ವ)

**ಅಷ್ಟಋದ್ಧಿ** – [ಜೈನ] ಬುದ್ಧಿ, ಕ್ರಿಯಾ, ವಿಕ್ರಿಯಾ, ತಪ, ಬಲ, ಔಷಧ, ರಸ, ಅಕ್ಷೀಣ ಎಂಬ ಎಂಟು ಬಗೆಯ ಋದ್ಧಿಗಳು (ಏಂ ಸಮನಿಸಿದುದೊ ಸನ್ನುತಮತಿಗೆ ಅಷ್ಟರ್ದ್ಧಿಗಳ್ ಕ್ರಮದಿಂದಂ: **ಚಂದ್ರ ಪು,** ೧೪. ೩೦)

**ಅಷ್ಟಕರ್ಮ** – [ಜೈನ] ಜ್ಞಾನಾವರಣೀಯ, ದರ್ಶನಾವರಣೀಯ, ಅಂತರಾಯ, ಮೋಹನೀಯ, ಆಯುಃ, ನಾಮ, ಗೋತ್ರ, ವೇದನೀಯ ಎಂಬ ಎಂಟು ಕರ್ಮಗಳು (ಅಷ್ಟಕರ್ಮಾಗ್ನಿ ಪರಿಪ್ಲುಷ್ಟಂ .. .. ನಿಕೃಷ್ಟಮೀ ಸಂಸಾರಂ: **ಅಜಿತಪು,** ೨. ೭೪)

**ಅಷ್ಟಗುಣ** – ಅಣಿಮಾ, ಮಹಿಮಾ, ಗರಿಮಾ, ಲಘಿಮಾ, ಪ್ರಾಪ್ತಿ, ಪ್ರಕಾಮ್ಯ, ಈಶಿತ್ವ ಮತ್ತು ವಶಿತ್ವವೆಂಬ ಅಷ್ಟಸಿದ್ಧಿಗಳು (ಅಣಿಮಾದ್ಯಷ್ಟಗುಣಮಣಿನಿಧಾನನುಂ: **ಚಂದ್ರಪ್ರಪು,** ೧೧. ೩೩ ವ)

**ಅಷ್ಟಚಾಪೋತ್ಸೇಧ** – ಎಂಟು ಬಿಲ್ಲಗಳಷ್ಟು ಎತ್ತರವಾದ (ಏಟುನೂಱಯ್ವತ್ತು ಧನುರ್ವಿಸ್ತಾರಮಂ ಅಷ್ಟಚಾಪೋತ್ಸೇಧಮುಮಂ ಅಪ್ಪುಕೆಯ್ದು: **ಮಲ್ಲಿನಾಪು,** ೧೪. ೧೨೬)

**ಅಷ್ಟಪದ** – ಶರಭ (ಕಳಭಂ ವೃಕಂ ಚಮರಿ ಸೈರಿಭಂ ಅಷ್ಟಪದಂ ತರಕ್ಷು: **ತ್ರಿಷಷ್ಟಿಪು,** ೨೭. ೨೩)

**ಅಷ್ಟಪ್ರಕಾರಾರ್ಚನೆ** – ನೀರು, ಗಂಧ, ಸದಕ, ಪುಷ್ಪ, ಅನ್ನ, ದೀಪ, ಧೂಪ, ಫಲ ಎಂಬ ಎಂಟರಿಂದ ಮಾಡುವ ಪೂಜೆ (ನಿಪ್ಪೊಸತಾಯ್ತು ಅಷ್ಟಪ್ರಕಾರಾರ್ಚನೆಯೆನಿಸಿದಪೆಂ ಸಲ್ಗೆ ಅನಂತಂಗೆ ಮತ್ತಾಕ್ಯವ್ಯಸಪಯಾಶ್ಚರ್ಯಂಗಳ್: **ಅನಂತಪು,** ೧. ೬೪)

**ಅಷ್ಟಮಂಗಳ** – ಎಂಟು ಬಗೆಯ ಮಂಗಳವಸ್ತುಗಳು: ಛತ್ರ, ಧ್ವಜ, ಕುಶ, ಚಾಮರ, ಸುಪ್ರತಿಷ್ಠಕ, ಭೃಂಗಾರ, ದರ್ಪಣ, ವ್ಯಜನ (ಅಲ್ಲಿಂದತ್ತ ವನವನಿತೆಯ ಕನಕಕಾಂಚೀಕಳಾಪನನುಕರಿಸಿ ರತ್ನಾಭರಣತೋರಣ ಘಂಟಾಜಾಳಮುಕ್ತಾಲಂಬನಪುಷ್ಪದಾಮ ಅಷ್ಟಮಂಗಳಮನವನಿಧಿಪ್ರಧಾನಂಗಳುಂ: **ಆದಿಪು,** ೧೦. ೪೨ ವ)

**ಅಷ್ಟಮಚಂದ್ರ** – ಚಂದ್ರನು ಜನ್ಮಲಗ್ನದಿಂದ ಎಂಟನೆಯ ಸ್ಥಾನದಲ್ಲಿತುವುದು, ಕೇಡುಂಟಾಗುವುದು (ಅಮರಾಧ್ವದೊಳ್ ಒಂದಶರೀರ ಮಹಾಧ್ವನಿ ಕಂಸ ಕಂಸ ಕೇಳ್ ದೇವಕಿಯಷ್ಟಮಗರ್ಭದಾತನಿಂದ ಅಷ್ಟಮಚಂದ್ರಂ ನಿನಗೆ ನೆರೆಗುಂ ಎಂದುದಮೋಘಂ: **ಜಗನ್ನಾವಿ,** ೨. ೪೭)

**ಅಷ್ಟಮತೀರ್ಥನಾಥ** – ಎಂಟನೆಯ ತೀರ್ಥಂಕರ, ಚಂದ್ರಪ್ರಭ (ಪ್ರಿಯದಿಂದ ಅಷ್ಟಮತೀರ್ಥನಾಥಂ ಇರದೆನ್ನಲ್ಲಿಗೇ ಮಾತೊ ನಿರ್ವ್ಯಯ ಸೌಖ್ಯೋನ್ಮುಖನೆಂದು ತನ್ನಗರಿ ತಾಂ ಮೆಯ್ವೆರ್ಚಿ: **ಚಂದ್ರಪ್ರಪು,** ೧೧. ೭೪)

**ಅಷ್ಟಮದ** – [ಜೈನ] ಕುಲಮದ, ರೂಪಮದ, ವಯಸ್ಸಿನ ಮದ, ತೋಳಿನ ಮದ, ತಪೋಮದ, ಕಲಾಮದ, ದೇವತಾಬಲಮದ ಹಾಗೂ ರಾಜ್ಯಮದಗಳು (ಶಂಕಾದ್ಯಷ್ಟಮಲಂಗಳುಂ ಎಂಟು ಮದಂಗಳುಂ ಮೂಱು ಮೂಢಮುಂ: **ವಡ್ಡಾರಾ,** ಪು ೬, ಸಾ ೨೧)

**ಅಷ್ಟಮಭೂಮಿ** – [ಜೈನ] ಸಿದ್ಧರು ವಾಸಮಾಡುವ ಲೋಕಭಾಗ (ಅಷ್ಟಮಭೂಮಿ ಸಮೀಪಮಾಯ್ತು ಜೈನಾಗಮಭಾಗಿ ಭವ್ಯಜನಕೇನುಪಶಾಂತಿಯೋ ಶಾಂತಿನಾಥನಾ: **ಶಾಂತಿಪು,** ೧೨. ೨೪)

**ಅಷ್ಟಮಲ** – ಶಂಕೆ, ಘೃಣೆ, ಭಯ, ಲಜ್ಜೆ, ಜುಗುಪ್ಸೆ, ಕುಲ, ಶೀಲ, ಜಾತಿ ಇವುಗಳ ಭಾವನೆಯಿಂದ ಬರುವ ದೋಷಗಳು (ಶಂಕಾದ್ಯಷ್ಟಮಲಂಗಳುಂ ಎಂಟು ಮದಂಗಳುಂ ಮೂಱು ಮೂಢಮುಂ: **ವಡ್ಡಾರಾ,** ಪು ೬, ಸಾ ೨೧)

**ಅಷ್ಟಮಹಾಪ್ರಾತಿಹಾರ್ಯ** – [ಜೈನ] ಜಿನನ ಎಂಟು ಮಂಗಳ ಲಾಂಛನಗಳು: ಅಶೋಕವೃಕ್ಷ, ಸುರಪುಷ್ಪವೃಷ್ಟಿ, ದಿವ್ಯಧ್ವನಿ, ಚತುಷ್ಷಷ್ಟಿಚಾಮರ, ರತ್ನಖಚಿತ ಸುವರ್ಣ ಸಿಂಹಾಸನ, ಪ್ರಭಾವಲಯ, ದೇವದುಂದುಭಿ, ಛತ್ರತ್ರಯ (ಅನಂತಚತುಷ್ಟಯ ಸಂಪುಷ್ಟನುಂ ಅಷ್ಟಮಹಾಪ್ರಾತಿಹಾರ್ಯ ಪರ್ಯಾಯಪ್ರಯುಕ್ತನುಂ: **ಕರ್ಣನೇಮಿ,** ೧೩. ೮೯ ವ)

**ಅಷ್ಟಮಾವನಿ** – ಅಷ್ಟಮಭೂಮಿ (ಸಿದ್ಧರ್ ಖರಕರ್ಮಾಷ್ಟಕಮಟಿಯೆ ಜಗತ್ಪರ್ಯಷ್ಟಿಗೆ ನೆಲೆಯಾದರ್ ಅಷ್ಟಮಾವನಿನಿಳಯರ್: **ಶಾಂತಿಪು,** ೨೪. ೯)

**ಅಷ್ಟವಿಂಶತಿ** – ಇಪ್ಪತ್ತೆಂಟು (ಶರ್ಕರಾಪ್ರಭೆಯೆಂಬೆರಡನೆಯ ನರಕಮಲ್ಲಿಂ ಕೆಳಗೇಕರಜ್ಜ್ವಂತರದೊಳ್ ಅಷ್ಟವಿಂಶತಿ ಸಹಸ್ರಯೋಜನಬಾಹುಲ್ಯದಿಂ: **ಸುಕುಮಾಚ,** ೧೧. ೪೧ ವ)

**ಅಷ್ಟವಿಧಕರ್ಮ** – [ಜೈನ] ನಾಲ್ಕು ಘಾತಿ ಕರ್ಮಗಳು ಮತ್ತು ನಾಲ್ಕು ಅಘಾತಿ ಕರ್ಮಗಳು (ಕನಿಷ್ಠದಿಂದ ಏಟು ಭವಂಗಳೊಳಗೆ ಅಷ್ಟವಿಧ ಕರ್ಮಂಗಳಂ ಕಿಡಿಸಿಮೋಕ್ಷಮನೆಯ್ದುವರ್: **ವಡ್ಡಾರಾ,** ಪು ೯೮, ಸಾ ೨೭)

**ಅಷ್ಟವಿಧಶುದ್ಧಿ** – [ಜೈನ] ಕಾರ್ಯ, ಭಾವ. ಈರ್ಯಾಪಥ, ಭಿಕ್ಷಾ, ಪ್ರತಿಷ್ಠಾಪನಾ, ಶಯನ, ಆಸನ, ವಾಕ್ಯ – ಇವುಗಳಿಗೆ ಸಂಬಂಧಿಸಿದ ಶುದ್ಧಿ (ಕಾಯಶುದ್ಧಿ ವಿನೇಯಶುದ್ಧಿ ಆದಿ ಅಷ್ಟವಿಧಶುದ್ಧಿಯುಂ .. .. ತನ್ನೊಳುಂ ಸಚ್ಛನ್ನಮಾಗಿ: **ಪುಷ್ಪದಂಪು,** ೧೪. ೧೬ ವ)

**ಅಷ್ಟವಿಧಾರ್ಚನೆ** – ಅಕ್ಷತೆ, ಜಲ, ಗಂಧ, ಪುಷ್ಪ, ಧೂಪ, ದೀಪ, ನೈವೇದ್ಯ, ತಾಂಬೂಲಗಳಿಂದ ಕೂಡಿದ ಎಂಟು ಬಗೆಯ ಅರ್ಚನೆ (ತ್ರಿಲೋಕಶಿಖರಶೇಖರಂಗೆ ಅಷ್ಟಾಂಗಮೆಱಗಿ ಪೊಡಮಟ್ಟು ಅಷ್ಟವಿಧಾರ್ಚನೆಗಳಿನರ್ಚಿಸಿ: **ಶಾಂತಿಪು,** ೮. ೧೧೪ ವ)

**ಅಷ್ಟಶೋಭೆ** – ಕಳಶ, ಕನ್ನಡಿ, ಬಾವುಟ, ತೋರಣ, ಧೂಪ, ದೀಪ, ಭೇರಿ, ಬೀಸಣಿಗೆ ಎಂಬ ಎಂಟು ಬಗೆಯ ಅಲಂಕಾರಗಳು (ಸೊಗಯಿಸುವ ಪೊೞಲೊಳ್ ಅಷ್ಟಶೋಭೆಯಂ ಮಾಡಿ ದುರ್ಯೋಧನನ ಸಂಕೇತದೊಳ್.. ..ಇದಿರ್ವಂದು ಮೇಯ್ಯಿಕ್ಕಿ ಪೊಡೆಮಟ್ಟು: **ಪಂಪಭಾ,** ೩. ೨ ವ)

**ಅಷ್ಟಷಡ್ಗುಣಿತ** – ಅರುವತ್ತನಾಲ್ಕು (ಕಮಳ ಕರಿ ಚಕ್ರ ಶಿಖಿ ಸಿಂಹ ಮರಾಳ ಸುಧಾಂಶು ತಿಗ್ಮಕರ ವೃಷಭ ವಿಹಂಗಮ ರಾಜಾಂಕಿತ ಕಮನೀಯಮಪ್ಪ ಅಷ್ಟಷಡ್ಗುಣಿತ ಕೋಟಿಕೇತುಬ್ರಾತಂ: **ಶಾಂತೀಶ್ವಪು,** ೧೫. ೮೧)

**ಅಷ್ಟಾಂಗ** – ಎಂಟು ಅಂಗಗಳು ನೆಲಕ್ಕೆ ತಾಗುವಂತೆ ಮಾಡುವ ದೀರ್ಘದಂಡ ನಮಸ್ಕಾರ (ತ್ರಿಲೋಕಶಿಖರಶೇಖರಂಗೆ ಅಷ್ಟಾಂಗಮೆಱಗಿ ಪೊಡಮಟ್ಟು ಅಷ್ಟವಿಧಾರ್ಚನೆಗಳಿನರ್ಚಿಸಿ: **ಶಾಂತಿಪು,** ೮. ೧೧೪ ವ)

**ಅಷ್ಟಾಂಗಕಯುಕ್ತ** – [ಜೈನ] ನಿಶ್ಶಂಕೆ, ನಿಷ್ಕಾಂಕ್ಷೆ, ನಿರ್ವಿಚಿಕಿತ್ಸೆ, ಅಮೂಢದೃಷ್ಟಿ, ಉಪಗೂಹನ, ಸ್ಥಿತಿಕರಣ, ವಾತ್ಸಲ್ಯ, ಧರ್ಮಪ್ರಭಾವನೆ ಇವುಗಳನ್ನು ಹೊಂದಿದವನು (ಅಷ್ಟಕಯುಕ್ತನಾತನೆ ವಲಂ ಸಮ್ಯಕ್ತ್ವರತ್ನಾಕರಂ: **ಸಮಯಪ,** ೪. ೧೩)

**ಅಷ್ಟಾಂಗನಿಮಿತ್ತ** – ಭೂಮಿ, ಸ್ವಪ್ನ, ಶರೀರ, ಸ್ವರ, ಉತ್ಪಾತ, ಆಕಾಶ, ಲಕ್ಷಣ, ವ್ಯಂಜನ – ಇವುಗಳಿಗೆ ಸಂಬಂಧಿಸಿದ ಒಂದು ಶಾಸ್ತ್ರ (ಶಿವಗುಪ್ತಾಚಾರ್ಯರ್ ಅಷ್ಟಾಂಗನಿಮಿತ್ತಂಗಳಂ ಬಲ್ಲರ್: **ವಡ್ಡಾರಾ,** ಪು. ೭೭, ಸಾ. ೨೪)

**ಅಷ್ಟಾಂಗಪ್ರಣಾಮ** – ಸಾಷ್ಟಾಂಗ ನಮಸ್ಕಾರ; ಎದೆ, ತಲೆ, ಎರಡು ಕಾಲುಗಳು, ಮೊಣಕಾಲು, ದೃಷ್ಟಿ, ಎರಡು ಕೈಗಳು, ತನ್ಮಯತೆ ಇವನ್ನು ಒಳಗೊಂಡಂತೆ ಮಾಡುವ ನಮಸ್ಕಾರ (ಕಂಡು ಅಷ್ಟಂಘಪ್ರಣಾಮಂಬೆರಸು ಹರಿಸದಿಂ ನಾರದಂ .. .. ಶರಣೆನುತಂ ಸ್ತೋತ್ರಮಂ ಮಾಡುತಿರ್ದಂ: **ಗಿರಿಜಾಕ,** ೪. ೪೫)

**ಅಷ್ಟಾದಶತೀರ್ಥ** – ರಾಜನಿಗೆ ಸಹಾಯಕವಾದ ಹದಿನೆಂಟು ಅಧಿಕಾರಿಗಳು: ಮಂತ್ರಿ, ಪುರೋಹಿತ, ಯುವರಾಜ, ಕೋಶಾಧಿಕಾರಿ, ಅಂತರ್ವಂಶಿಕ, ನಗರಾಧ್ಯಕ್ಷ, ದ್ವಾರಪಾಲ, ಸೇನಾಧ್ಯಕ್ಷ, ಧರ್ಮಾಧ್ಯಕ್ಷ, ಧರ್ಮೋಪದೇಶಕ, ಕಾರ್ಯ ನಿರ್ಮಾಣಕ, ಸಭಾಧ್ಯಕ್ಷ, ದುರ್ಗಪಾಲಕ, ಅರಣ್ಯಪಾಲಕ, ಸೀಮಾಪಾಲಕ, ಸೆರೆಮನೆಯ ಅಧಿಕಾರಿ, ದಂಡಪಾಲ, ಯೋಜನಾಧಿಕಾರಿ (ಅನುಕ್ರಮದಿಂ ಚರರಂ ದ್ವಿಷನ್ನೃಪ ಅಷ್ಟಾದಶತೀರ್ಥದೊಳ್ ನಡೆಯಿಸಲ್: **ಶಾಂತಿಪು,** ೨. ೪೨)

**ಅಷ್ಟಾದಶದೋಷ** – [ಜೈನ] ಜೀವಿಗೆ ಅಂಟುವ ಹದಿನೆಂಟು ದೋಷಗಳು: ಕ್ಷುಧೆ, ತೃಷೆ, ಭಯ, ದ್ವೇಷ, ರಾಗ, ಮೋಹ, ಚಿಂತೆ, ಜರೆ, ರೋಗ, ಮೃತ್ಯು, ಖೇದ, ಸ್ವೇದ, ಮದ, ಅರತಿ, ವಿಸ್ಮಯ, ಜನ್ಮ, ನಿದ್ರೆ, ವಿಷಾದ (ಮೊದಲಾತಂ ಅಷ್ಟಾದಶದೋಷರಹಿತನಪ್ಪೊಂ: **ಚಾವುಂಪು,** ಪು. ೧೬೧, ಸಾ. ೩)

**ಅಷ್ಟಾದಶಪುರಾಣ** – ಹದಿನೆಂಟು ಪುರಾನಗಳು: ಬ್ರಹ್ಮ, ವಿಷ್ಣು, ಪದ್ಮ, ಶಿವ, ವಾಯು, ಭಾಗವತ, ನಾರದ, ಮಾರ್ಕಂಡೇಯ, ಅಗ್ನಿ, ಭವಿಷ್ಯ, ಬ್ರಹ್ಮವೈವರ್ತ, ಲಿಂಗ, ವರಾಹ, ವಾಮನ, ಕೂರ್ಮ, ಮತ್ಸ್ಯ, ಗರುಡ, ಬ್ರಹ್ಮಾಂಡ (ವರ್ಧಮಾನನ ಮನೆಯೊಳಿರ್ಪಂದು ಅಷ್ಟಾದಶಪುರಾಣ ಶ್ರುತಿಸ್ಮೃತಿ ರಾಮಾಯಣ ಭರತಾದಿ ಕಥಾಶ್ರವಣಪರಿಣತನುಂ: **ಪಂಚತಂತ್ರ,** ೧೧೪ ವ)

**ಅಷ್ಟಾದಶಶೀಲ** – [ಜೈನ] ಮುನಿಯ ಹದಿನೆಂಟು ಶೀಲಗಳು (ಅಷ್ಟಾದಶಶೀಲ ಸಹಸ್ರಚತುರಶೀತಿ ಲಕ್ಷಣಗುಣ ಮಣಿಭೂಷಣಭೂಷಿತನುಂ: **ಕರ್ಣನೇಮಿ,** ೨. ೬೧)

**ಅಷ್ಟಾಪದ** – ಎಂಟು ಕಾಲುಗಳುಳ್ಳ ಪ್ರಾಣಿ, ಶರಭ (ಭ್ರಮಿತ ಅಷ್ಟಾಪದಂ ಉಗ್ರ ಖಡ್ಗಮೃಗ ಸಂಭನ್ನಂ ಜರತ್ ದಂದಶೂಕ ಮುಖಶ್ವಾಸವಿಷಾಗ್ನಿ ದಗ್ಧವಿಪಿನಂ .. .. ವಿಂಧ್ಯಾಚಲಂ: **ಪಂಪರಾ,** ೭. ೧೨೨); ಚಿನ್ನ (ಗೈರಿಕ ನಿಷ್ಕ ಹಿರಣ್ಯ ಮಹಾರಜತ ಸ್ವರ್ಣ ಕರ್ಬುರ ಅಷ್ಟಾಪದಂ: **ಅಭಿಧಾವ,** ೧. ೬. ೭):

**ಅಷ್ಟಾಪದವಿಷ್ಟರ** – ಸುವರ್ಣಪೀಠ (ರಾಜಪುತ್ರಸಮಾಜ ಪರಿವೇಷ್ಟಿತಂ ಇಷ್ಟಪ್ರಾಷ್ಟಾಪದವಿಷಷ್ಟರೋಪವಿಷ್ಟಂ ಅಜಿತಸೇನಚಕ್ರಧರನಿರೆ: **ಚಂದ್ರಪ್ರಪು,** ೯. ೩ ವ)

**ಅಷ್ಟಾಪದಶೈಲ** – ಮೇರುಪರ್ವತ (ಪಾಪಹರಂ ಪ್ರಕಾಶಿತವೃಷಂ ವೃಷಭಂ ವೃಷಧ್ವಜಂ ಮಹಾ ಅಷ್ಟಾಪದದೊಳ್ವಿಜಿತಘಾತಿಚತುಷ್ಟಯಂ: **ಆದಿಪು,** ೧. ೪೦)

**ಅಷ್ಟಾರ್ಘ್ಯ** – [ಜೈನ] ಜಲ, ಅಕ್ಷತೆ, ಗಂಧ, ಪುಷ್ಪ, ಧೂಪ, ಧೂಪ, ಚರು, ಫಲ ಇವುಗಳ ಅರ್ಪಣೆ (ದೊರೆವೆತ್ತಷ್ಟಾರ್ಘ್ಯಮುಮಂ ಮಾಡಿದುದು .. .. ಜಿನನ ತಾಂಯ್ಗಿಂದ್ರಕಾಂತಾಕದಂಬಂ: **ಪುಷ್ಪದಂಪು,** ೯. ೬೧)

**ಅಷ್ಟಾರ್ಚನೆ** – ಅಷ್ಟವಿಧಾರ್ಚನೆ (ಆ ನೃಪನಾಗಳ್ .. .. ಪುಣ್ಯೋದಂ ಉತ್ತಮಗಂಧಂ ವಿಮಲಾಕ್ಷತಂ. ಸುರಭಿಪುಷ್ಪಂ ದಿವ್ಯಧೂಪಂ ಸುದೀಪಂ ಉದಂಚಚ್ಚರು ಸತ್ಫಲಾವಳಿ ಎನಿಪ್ಪ ಅಷ್ಟಾರ್ಚನಾನೀಕದಿಂದಮೆ ತಾನರ್ಚಿಸಿ: **ಶಾಂತೀಶ್ವಪು,** ೬. ೪೯)

**ಅಷ್ಟಾವಂಕ**– ಅಷ್ಟಾವಕ್ರ; ಮಹಾ ಕುರೂಪಿ (ಅಮೃತಮತಿಯೆತ್ತ ರೂಪಾಧಮಂ ಅಷ್ಟಾವಂಕನೆತ್ತ: **ಯಶೋಧಚ,** ೨. ೩೪)

**ಅಷ್ಟಾಹ್ನಿಕ** – [ಜೈನ] ಶ್ರಾವಕರು ಎಂಟು ದಿನಗಳು, ಪ್ರತಿದಿನ ಎಂಟು ಜಾವಗಳು ಆಚರಿಸುವ ಜಿನಪೂಜೆ (ಅರಸಂ ಅಷ್ಟಾಹ್ನಿಕಮಂ ಎತ್ತಿಕೊಂಡು ಇತ್ತ ಮಹೇಂದ್ರನುಂ ಮಾಡಲಾಱದ ಮಹಾಮಹಿಮೆಯಂ ಮಾಡುತ್ತುಮಿರ್ದಂ: **ನೇಮಿನಾಪು,** ೨. ೫ ವ)

**ಅಸಕಲಿತ** – ಕೈಮೀರಿದ (ಅಸಕಲಿತ ದುಸ್ಸಹ ವಿರಹ ದಹನದಾಹಕ್ಕೆ ಸೈರಿಸಲಾಱದೆ: **ಲೀಲಾವತಿ,** ೧೧. ೪೨ ವ)

**ಅಸಕಟಿ** – ಆಕ್ರಮಿಸು (ಬೆಳಗುವ ಮಣಿಮುಕುರಂಗಳುಂ ಅವರ್ಕೆ ತಾಂಗಾಗಿ ಪಚ್ಚೆಯ ಪಸಲೆಯ ಪಸುರಂ ಅಸಕಟಿದು ನಿಮಿರ್ದ ನೆಲೆವಡಲಗೆಯ ಜಾಗಂಗಳುಮಂ: **ಆದಿಪು,** ೮. ೧೫ ವ); ಮಿತಿಮೀರು (ಇನ್ನೇವೆಸಗೊಳ್ವುದೊ ಕಡುವೇಗದಿಂ ಅಸಕಟಿದುದು ಮನಮುಮಂ ತುರಂಗಮರತ್ನಂ: **ಆದಿಪು,** ೧೩. ೩೯); ತಪ್ಪಿಸು

**ಅಸಕಟಿಹ** – ಕೈಮೀರುವುದು (ಅಸಕಟಿಹಮೆಂದು ಕೈಮೀಱುಹಂ: **ಶಬ್ದಮದ,** ಪ್ರಸಾ, ೧೫)

**ಅಸಕೃತ್** – ಅನೇಕ ಬಾರಿ (ಉಲಿವಂತಿತಿರ್ಪುವು ರಾಟಣಂಗಲ್ ಅಸಕೃತ್ ವ್ಯಾಘಾಕ್ಷ ಚೀತ್ಕಾರದಿಂ: **ಆಚವರ್ಧ,** ೧. ೪೩)

**ಅಸಗ** – ಅಗಸ (ಈ ಅಸಗಂ ಊರ ಸೀರೆಯೆಲ್ಲಮಂ ಎನ್ನ ಬೆನ್ನೊಳೊಟ್ಟಿಕೊಂಡುಂ ಅತ್ತಲಿತ್ತಲುಂ ಆಹಾರಾರ್ಥಮಾಗಿ ಪೋಗಲೀಯಂ: **ಪಂಚತಂತ್ರ,** ೪೦೭ ವ)

**ಅಸಗವೊಯ್ಲು** – ಅಗಸನ ಒಗೆತ (ಎರಡುಂ ಕೆಲನಂ ಎರಡುಂ ಕರಪರಿಘದಿನಡಸಿ ಗುರ್ದಿ ಪೆಱಪಿಂಗುವಿನಂ ಮುರಿದಡಸಿ ಪಿಡಿದು ಘಟ್ಟಿಸಿ ಪಿರಿಯಜೆಯೊಳ್ ಪೊಯ್ವಂ ಅಸಗವೊಯ್ಲುಂ ಭೀಮಂ: **ಪಂಪಭಾ,** ೩. ೩೦)

**ಅಸಗವೊಯ್ವೊಯ್** – ಅಗಸನ ಹೊಡೆತ ಹೊಡೆ (ಮದವದ್ದಂತಿಗಳಂ ಕಱುತ್ತು ಅಸಗವೊಯ್ವೊಯ್ದು ಆಜಿಯೊಳ್ ಭೀಮಂ ಆರ್ದೊದೆದು ಈಡಾಡಿದೊಡೆ: **ಪಂಪಭಾ,** ೧೧. ೬೭)

**ಅಸಗವೊಟಿ** – ಅಗಸ ಒಗೆಯಲು ಬಳಸುವ ನದಿ (ಮತ್ತಂ ಅಸಗವೊಟಿಯೊಳ್ ಒರ್ವಳ್ ಅಸಗನ ಪೆಂಡತಿ ಕುರುಡನಪ್ಪ ಅಸಗಂಗೆ ಲಲಿತಾಂಗಂ ಬಂದನೆಂದು ಪೇೞ್ದೊಡೆ: **ಧರ್ಮಾಮೃ,** ೨. ೩೪ ವ)

**ಅಸತಿ** – ಜಾರೆ (ಎಡಗೆಯ್ಯಿಂ ನೀವಿಯಂ ಸಾರ್ಚುತುಂ ಉರಸಿಜದ ಒತ್ತಂಬದಿಂ ಬಳ್ಕುತುಂ.. ..ಅಸತಿಯರ್ ಪೋದರ್ ಇಂತು ಅತ್ತಂ ಇತ್ತಂ: **ಶಾಂತೀಶ್ವಪು,** ೧೧. ೨೩)

**ಅಸತೀಸಂಗ** – ಜಾರೆಯರೊಡನೆ ಸೇರುವುದು (ಪರಿಭವಮನೆ ಮಾಟ್ಕುಂ ಇಹಂಪರದೊಳಂ ಅದಱಿಂದೆ ಕಷ್ಟಂ ಅಸತೀಸಂಗಂ: **ಸಮಯಪ,** ೫. ೬೨)

**ಅಸದನುಶಾಸನ** – ದುಷ್ಟನಿಗ್ರಹ (ಅಸದನುಶಾಸನಂ ರಘುಕುಲ್ಲೆ ಕುಲವ್ರತಂ: **ಪಂಪರಾ,** ೧೧. ೫)

**ಅಸದಳ** – ಅಸಾಧ್ಯ (ಭಾವಿಸುವೊಡಾದಿದೇವನ ದೇವೇಂದ್ರನ ಬಗೆಗಂ ಅಸದಳಂ ನರ್ತಕಿಯಾ: **ಆದಿಪು,** ೯. ೨೭)

**ಅಸದಳಂ** – ಅತಿಶಯವಾಗಿ (ಅಸದಳಮಾಗಿ ಸಂದ ಜಿನಶಾಸನ ವರ್ತನೆಯಿಂ .. .. ಬಱಂ ಬಱಕಾದುದು ತನ್ಮಹೀತಳಂ: **ನೇಮಿನಾಪು,** ೧. ೬೦)

**ಅಸದಾಗ್ರಹ** – ಸಲ್ಲದ ಹಟ (ಬಿಡುವುದು ಅಸದಾಗ್ರಹಮಂ ಪ್ರಸನ್ನಗಂಭೀರಚಿತ್ತದಿಂದಿದನವಧಾರಿಸುವುದು: **ಆದಿಪು,** ೧೪. ೧೦೪)

**ಅಸದ್ವ್ಯಯ** – ದುಂದು ವೆಚ್ಚ (ಕಷ್ಟತರ ದುರ್ವ್ಯಸನಂಗಳ ಅಸದ್ವ್ಯಯಕ್ಕೆ ಕೊಟ್ಟನ್ನರುವೆಯ್ದೆ ಚೌರ್ಯಪರರಾಗಿ: **ಕರ್ಣನೇಮಿ,** ೬. ೧೯)

**ಅಸನಿ** – ಸಿಡಿಲು, ವಜ್ರಾಯುಧ (ಶಕಾರಕ್ಕೆ ಸಕಾರಂ – .. .. ನಿಶ್ಶಂಕಂ–ನಿಸ್ಸಂಕಂ, ಅಶನಿ–ಅಸನಿ: **ಶಬ್ದಮದ,** ೨೬೭ ಪ್ರ)

**ಅಸಮವಿಭೂತಿ** – ಅಸಮವಾದ ಸಿರಿ (ಅಸಮವಿಭೂತಿಗಳಂ ಉಪಾರ್ಜಿಸುವೊಡೆ ಜನಮಂ ಸ್ವಕೀಯಮಂ ಮಾಟ್ಪುದು: **ಚಂದ್ರಪ್ರಪು,** ೪. ೨೧)

**ಅಸಮಶರ** – ಬೆಸಸಂಖ್ಯೆಯ ಬಾಣಗಳುಳ್ಳವನು, ಮನ್ಮಥ (ಆ ಸಮಯದೊಳ್ ಅಸಮಶರನ ವಶೀಕರಣಮಂತ್ರ ಅಧಿದೇವತೆಯರೆ ಸನ್ನಿದಮಾದಂತೆ: **ಮಲ್ಲಿನಾಪು,** ೮. ೧೦ ವ)

**ಅಸಮಾಕ್ಷ** – ಶಿವ (ಅಸಮಾಕ್ಷನಂ ಇರದಾರ್ದಿಸುವ ಸಮಾಸ್ತ್ರರ್ ಜಲಧಿವಸನ ವಸುಧೆಯೊಳುಂಟೇ: **ಗಿರಿಜಾಕ,** ೭. ೨೯)

**ಅಸಮಾಯುಧ** – ಅಸಮಶರ (ನಿಜಮೌಕ್ತಿಕಾಭರಣದೀಧಿತಿಯಿಂ ಕಣ್ಗೊಳಿಸೆ ಲತಾಂಗಿ ಪೋಲ್ತಳ್ ಅಸಮಾಯುಧ ಮೋಹನಮಂತ್ರಶಕ್ತಿಯಂ: **ಮಲ್ಲಿನಾಪು,** ೩. ೭೯)

**ಅಸಮಾಸ್ತ್ರ** – ಅಸಮಶರ (ಕಡುಪಿಂ ತಗುಳ್ದು ನಟ್ಟಲೆವ ಅಸಮಾಸ್ತ್ರವಕ್ರತೆಯೊ ದೈವಿಕಮೋ ನಿನಗೇನೆಂಬೆಂ ಅಗ್ಗಲಿಸಿಯೆ ನಿಂದುದು: **ಕಾದಂಸಂ,** ೪. ೯೧)

**ಅಸಮಾಸ್ತ್ರತೆ** – ಬೆಸ ಸಂಖ್ಯೆಯ ಬಾಣಗಳಿರುವುದು (ಅಸಮಾಕ್ಷನಂ ಇರದೆ ಆರ್ದಿಸುವ ಅಸಮಾಸ್ತ್ರತೆ ಜಲಧಿಶಯನ ವಸುಧೆಯೊಳುಂಟೇ: **ಗಿರಿಜಾಕ,** ೭. ೨೯)

**ಅಸರಪಸರ** – ಸಲಿಗೆ, ಸದರ (ಲೋಭಕ್ಕೆ ಅಸರಪಸರಮಿಲ್ಲದಿರ್ದ ಬಚ್ಚರ ಪಸರಂಗಳುಮಂ: **ಶಾಂತಿಪು,** ೩. ೧೫ ವ)

**ಅಸವಸ** – ಆತುರ (ಪೊಡೆವಡುವನಿತುವರಮನ್ನ ಮನದೊಳಱಿವಿಲ್ಲದೆಯುಂ ಅಸವಸದೊಳಾದ ಮನದೆಱಕದಿನೆಱಗಿ: **ಆದಿಪು,** ೩. ೩೬ ವ); ಸಂಭ್ರಮ (ಪಸರಿಸಿ ಪೊಸಯಿಸಿ ಪೊಸಸುಸಿಲ ಮಸಕದ ಬಸದೊಳೆ ಬಸದಾಗಿಯುಮಸಿಯಳೆನಗೆ ಅಸವಸದೊಳೆ ಬೆಸೆದು ಪೋಗಿ: **ಆದಿಪು,** ೪. ೧೨ ವ)

**ಅಸಹಾಯ** – ನೆರವಿಲ್ಲದವನು, ಸ್ವಯಂ ಸಮರ್ಥ (ಅಸಹಾಯನೆ ನೀಂ ಪ್ರತಿನೃಪರ್ ಅಸಹಾಯರ್ ನೀಂ ಪ್ರತಿಬಲಂ ಅದಱಿಂದ ಅನರ್ಥಕಂ ವಾಕ್ಯಾರ್ಥಂ: **ಗದಾಯು,** ೩. ೪೫)

**ಅಸಹ್ಯ** – ಸಹಿಸಲಸಾಧ್ಯವಾದ (ಅಸಹ್ಯ ಪರಿಭವಾನಲ ದಂದಹ್ಯಮಾನಗಾತ್ರೆಯುಮಾಗಿ: **ಗದಾಯು,** ೧. ೫೫ ವ)

**ಅಸಾಧಾರಣ** – ಸಾಮಾನ್ಯವಲ್ಲದ (ರಾಜಾಧಿರಾಜನೊಳ್ ಪಡೆಯಂ ಔದಾರ್ಯಂ ಅಸಾಧಾರಣಂ: **ಶಾಂತಿಪು,** ೨. ೪೭ ವ)

**ಅಸಾಧುಜನ** – ಕೆಟ್ಟ ಜನ (ತೊಱೆವುದು ತೊಱೆವಂತೆ ಅಸಾಧುಜನಸಂಗತಿಯಂ: **ಕವಿರಾಮಾ,** ೧. ೬೬)

**ಅಸಾರಚೇತನ** – ಸತ್ವಹೀನ ಮನಸ್ಸಿನವನು (ಲೆಪ್ಪದ ರಸಂ ಕೊಲವೇೞ್ದಂ ಅಸಾರಚೇತನಂ: **ಪಂಪರಾ,** ೩. ೨೮)

**ಅಸಾರತಿಕೆ** – ನಿಸ್ಸಾರತೆ (ಖಳಸಂಸಾರದ ಅಸಾರತಿಕೆ ಎನ್ನ ಬಗೆವುಗೆ ಬಂದೆಂ: **ಕರ್ಣನೇಮಿ,** ೩. ೧೫)

**ಅಸಾರ್ದ್ರತೆ** – ಒಣಗಿದ, ನೀರಸ (ಘನನಿನದಯುಕ್ತಮಾಗಿಯುಂ ಅಸಾರ್ದ್ರ ತಾನುವಿದ್ಧಮಲ್ತು: **ಚಂದ್ರಪ್ರಪು,** ೪. ೪೨ ವ)

**ಅಸಿ** – ಚೆಲ್ಲು, ಈಡಾಡು (ಅಸಿದನೆಂದು ಈಡಾಡಿದಂ: **ಶಬ್ದಮದ,** ಪ್ರಸಾ ೧೬); ನವಿರಾದ, ಸಣ್ಣದಾದ (ಆಕೆಯ ಬಾಸೆಗಳುಂ ಪಗೆವರ ಬಾಟ್ವಾಸೆಗಳುಂ ಒಡನೊಡನೆ ಅಸಿಯವಾದವು: **ಪಂಪಭಾ,** ೧. ೧೪೧ ವ); ಕತ್ತಿ (ಮಿಕ್ಕಸುರರ ಮೆಯ್ಯೊಳಾದ ವಿರಹಾಗ್ನಿಯಂ ಆಱಿಸುತಿಂತೆ ತನ್ನ ಕೂರಸಿಯೊಳಡುರ್ತು ಕೊಂದು: **ಪಂಪಭಾ,** ೧. ೬); ಸ್ತ್ರೀ (ಇವೆ ಬಾಯ್ದೆಱೆಯಿಂ ಮುತ್ತುಂ ಪವಳಮುಂ ಈ ಅಸಿಯ ನುಡಿಯೆ ಸುರಿದಪುವು ಎಂಬಂತೆವೊಲ್ ಅವಲೆ ನುಡಿಯೆ: **ನೇಮಿನಾಪು,** ೧. ೯೩)

**ಅಸಿಖೇಟಕಹಸ್ತೆ** – ಕತ್ತಿಗುರಾಣಿಗಳನ್ನು ಹಿಡಿದವಳು (ಆಕೆಯುಂ ಅಸಿಖೇಟಕಹಸ್ತೆಯಾಗಿವಿಭೀಷಣಮಪ್ಪ ರೂಪುಮಂ ವಿಗುರ್ವಿಸಿ: **ವಡ್ಡಾರಾ,** ಪು. ೬೦. ಸಾ. ೧೧)

**ಅಸಿತ** – ಕಪ್ಪಾದ (ತನಗಿದಿರ್ವಂದು ನಿಂದ ರಜನೀವಧುವಂ ನಸುಸೋಂಕಿದಾಕ್ಷಣಂ ಘನತಿಮಿರ ಅಸಿತ ಅಂಬರಂ ಅದೊಯ್ಯನೆ ಜಾಱೆ: **ರಾಜಶೇವಿ,** ೪. ೧೪); ನೈದಿಲೆ (ಅಸಿತಮದು ಕುವಳಯಸಂಜ್ಞಂ: **ಅಭಿಧಾವ,** ೧. ೪. ೨೨)

**ಅಸಿತರುಚಿ** – ಕಪ್ಪು ಬಣ್ಣ (ವಾಸವನ್ ಅಪೂರ್ವ ನಾಟ್ಯವಿಳಾಸದೆ ತಾಂ ಭ್ರಮರಿಗುಡುವುದುಂ ನೇತ್ರ ಸಹಸ್ರ ಅಸಿತರುಚಿ ಕರ್ನೆಯ್ದಿಲ ಬಾಸಿಗಮಂ ಬೀಸಿದಂತುಟಾದುದು ಸಭೆಯೊಳ್: **ಅಜಿತಪು,** ೫. ೧೫)

**ಅಸಿತಪಯೋಜ** – ಕನ್ನೈದಿಲೆ (ಅಸಿತಪಯೋಜನೇತ್ರೆಯರ್ ಅತಿಪ್ರಿಯಕಾಂತೆಯರ್: **ಶಾಂತಿಪು,** ೨. ೪೮)

**ಅಸಿತಮಣಿ** – ಇಂದ್ರನೀಲರತ್ನ (ಸ್ಫುರತ್ ಅಸಿತಮಣಿಕುಟ್ಟಿಮಕಿರಣದೆ ಕತ್ತಲಿಪ ಗೋಪುರಂಗಳಂ ಓರಂತಿರೆ ಬೆಳಗುತ್ತೆಸೆವ ಜ್ಯೋತಿರಮರ ದೌವಾರಿಕರ್ ನಿಜಾಂಗಪ್ರಭೆಯಿಂ: **ಶಾಂತೀಶ್ವಪು,** ೧೬. ೨೮)

**ಅಸಿತವ್ರತ** – ಕೆಟ್ಟ ವ್ರತ (ಅಂತಾದೊಡೆ ಆ ವ್ರತಮಿರ್ಕೆ ಮತ್ತಿನ ಜೊತ್ತಿಸಿ ಕೊಟ್ಟ ಅಸಿತವ್ರತಂಗಳಂ ಆ ಜಿನಮುನಿಗೆ ಕೊಟ್ಟು ಬರ್ಪಂ: **ಸುಕುಮಾಚ,** ೭. ೫ ವ)

**ಅಸಿತಾಹಿ** – ಕಾಳಸರ್ಪ (ಅಗರುವ ಧೂಪಧೂಮಲತೆಯೆಂದು ಅಸುತಾಹಿಗೆ ಸಾರ್ವ .. .. ಎಗ್ಗನಂತೆ: **ಕಾದಂಬ,** ೫. ೧೧೪)

**ಅಸಿತಾಂಬುವಾಹ** – [ಅಸಿತ+ಅಂಬುವಾಹ] ಕಾರ್ಮೋಡ (ಅಂಬರಮೆಂಬ ಪಾಟಿನೇಟಿಸಿದುದು ಅಸಿತಾಂಬುವಾಹಂ ಎಂಬ ಕುಟುಂಬಕದಂಬೋತ್ಕರಂ: **ಆದಿಪು,** ೬. ೭೧)

**ಅಸಿತೇಂದೀವರ** – ಕನ್ನೈದಿಲೆ (ಅಸಿತೇಂದೀವರಲೋಲಲೋಚನೆಯಂ ಅಂದಂತಾ ಸಭಾಮಧ್ಯದೊಳ್ ಪಸುವಂ ಮೋದುವವೋಲೆ ಮೋದೆಯಿಂ: **ಪಂಪಭಾ,** ೭. ೫೮)

**ಅಸಿತೋರಗ** – ಅಸಿತಾಹಿ (ಅಡಸುವ ಕಾಲದಂಡಂ ಎರೆಗೊಳ್ವ ಅಸಿತೋರಗಮೆಭ ಶಂಕೆ ನೂರ್ಮಡಿಸಿರೆ: **ಕಾದಂಸಂ,** ೧, ೫೫,)

**ಅಸಿದು** – ಕೃಶವಾದ (ಪೊಡರ್ದ ಪಗೆವರೊಡನೆ ಕರಂ ಅಸಿದಾದ ಮಧ್ಯಪ್ರದೇಶಮುಂ: **ಆದಿಪು,** ೩. ೯ ವ)

**ಅಸಿಧಾರಾವ್ರತ** – ಕತ್ತಿಯ ಅಲಗಿನ ಮೇಲೆ ನಡೆಯುವಂತಹ ಕಷ್ಟಕರ ವ್ರತ (ಪತಿವಿಗಮದೊಳ್ ಅಸಿಧಾರಾವ್ರತಂಗಳಂ ತಾಳ್ದಿ ಧರ್ಮಮಂ ಮಾಡುವ ಸಂತತಿಯಂ ಕಾಯುತೆ ಕಾಯಸ್ಥಿತಿಯಂ ತಾನತ್ತಿಮಬ್ಬೆ ಮಾಣ್ಬಳೆ ಮಾಣಳ್: **ಅಜಿತಪು,** ೧. ೫೦)

**ಅಸಿಧಾರಾವ್ರತಿ** – ಕತ್ತಿ ಅಲಗಿನ ಮೇಲೆ ನಡೆಯುವ ವ್ರ ಹೊತ್ತ ವ್ಯಕ್ತಿ (ರಸವರ್ಧನಂಗಳಂ ಬಿಸುಟು ಅಸುವಟೆ ಪಿಣಿಲಿಟೆಸು ಕೇಶಮಂ ಕಾಸೆಯನುಟ್ಟು ಅಸಿಧಾರಾವ್ರತಿಯಾಗಿ: **ಹರಿವಂಶ,** ೪. ೩೦)

**ಅಸಿಧೇನು** – ಸಣ್ಣ ಕತ್ತಿ (ಘೂರ್ಣಮಾನಲೋಹಿತಲೋಚನಂ ದಶನನಿಪೀಡಿತದಶನವಸನಂ ಅಸಿಧೇನುವಂ ಕಿಟ್ತು: **ಆದಿಪು,** ೨. ೧೪ ವ)

**ಅಸಿಧೇನುಕೋಶ** – ಕತ್ತಿಯ ಒರೆ (ಮಲ್ಲಿಕಾಮುಕುಳಾಕಾರ ವಿತಸ್ತಿಮಾತ್ರ ಅಸಿಧೇನುಕೋಶಮುಂ: **ಆದಿಪು,** ೧೩. ೪೫ ವ)

**ಅಸಿನೆಱಂ** – ಕೋಮಲಶರೀರಿ (ಬಾಳಂ ಬಾಳಮೃಣಾಳದಂತೆ ಅಸಿನೆಱಂ ದುಗ್ಧಪ್ಲವಂ: **ಆದಿಪು,** ೭. ೯೧)

**ಅಸಿಪಂಜರ** – ಅಲಗಿನ ಪಂಜರ (ಅಸಿಪಂಜರದೊಳ್ ಮುನ್ನಂ ಕುಸಿದಿರೆ ಸೆಱೆಯಿಟ್ಟು ನೆಲನನಾಳ್ದಂ: **ಹರಿವಂಶ,** ೧೧. ೭೭)

**ಅಸಿಪತ್ರ** – ಕತ್ತಿಯ ಅಲಗು (ನಿಶಿತ ಅಸಿಪತ್ರಪತಿತಪ್ರಚಂಡಸುಭಟಮಸ್ತಕೋಚ್ಚಳಿತ ಚಟಾಚ್ಚಾಟನ ದುರ್ನಿರೀಕ್ಷ್ಯ: **ಪಂಪಭಾ,** ೧೩. ೫೧ ವ)

**ಅಸಿಪತ್ರನಂದನ** – ಕತ್ತಿಯಂತೆ ಚೂಪಾದ ಎಲೆಗಳ ಮರಗಳುಳ್ಳ ತೋಟ (ಎಲ್ಲಿಗೆ ಪೋಪೆವೆಂದು ಮೆಟ್ಟಿಡಿಂ ಅಸಿಪತ್ರನಂದನಮನೊಯ್ಯನೆ ಸಾರ್ವುದುಂ: **ಆದಿಪು,** ೫. ೮೮)

**ಅಸಿಯ ಬಾಸೆ** – ಎದೆಯಿಂದ ಹೊಕ್ಕುಳವರೆಗಿನ ಸೂಕ್ಷ್ಮ ರೋಮರಾಜಿ (ಮುನ್ನಿನ ಚೆಲ್ವನಪ್ಪ ಅಸಿಯ ಬಾಸೆಗೆ ಕರ್ಪಸೆದತ್ತೇ ಚೋದ್ಯಮಿದೆಂದು ಮರಲ್ದು: **ಆದಿಪು,** ೭. ೩೧)

**ಅಸಿಯರ್** – ಕೃಶರು (ನಕುಳನುಂ ತೆಂಕಣದೆಸೆಯ ಮಲೆಪರಂ ಮಂಡಳಿಕರ್ ಅಸಿಯರಾಗೆ ಕವರ್ದುಕೊಂಡು: **ಪಂಪಭಾ,** ೪. ೭೨)

**ಅಸಿಯಳ್** – ತೆಳುವಾದ ದೇಹವುಳ್ಳವಳು (ಪೊಸಸುಸಿಲ ಮಸಕದ ಬಸದೊಳೆ ಬಸದಾಗಿಯುಂ ಅಸಿಯಳೆನಗಸವಸದೊಳೆ ಬೆಸೆದು ಪೋಗಿ: **ಆದಿಪು,** ೪. ೧೨ ವ);

**ಅಸಿಯುಗುರ್** – ಹರಿತವಾದ ಉಗುರು (ಮಿಸುಗುವ ಅಸಿಯುಗುರ್ಗಳ ನುಣ್ಬೆಳಗು ನಿಮಿರ್ದು ಎಸೆದುವು: **ಕಾದಂಬ,** ೩. ೫೫)

**ಅಸಿಯೇಱು** – ಕತ್ತಿಯ ಗಾಯ (ನಚ್ಚಿನ ಜವನುಂ ನಿನಗೆ ಅಸಿಯೇಱಿನವನಾದನೆ ತಮ್ಮನೆ: **ಆಚವರ್ಧ,** ೯. ೬೨)

**ಅಸಿರತ್ನ** – ಶ್ರೇಷ್ಠವಾದ ಖಡ್ಗ (ಅಸಿರತ್ನಂ ಚಕ್ರರತ್ನಂ ನವನಿಧಿ ಪಲವುಂ ವಿದ್ಯೆ ಕೈಸಾರ್ದುವು: **ಪಂಪರಾ,** ೯. ೧೭೭)

**ಅಸಿಲತಾಧಾರೆ** – ಬಳ್ಳಿಯಂತೆ ಬಳುಕುವ ಕತ್ತಿಯ ಅಲಗು (ವೈರಿಭೂಪಾಳಕಜಾಳಸ್ವಾಂತ ಚಿಂತಾಭರಮಂ ಅಸಿಲತಾಧಾರೆಯಿಂ .. .. ಮಾಡಿ: **ಚಂದ್ರಪ್ರಪು,** ೪. ೮೪)

**ಅಸಿಲತೆ** – ಬಳ್ಳಿಯಂತೆ ಬಳುಕುವ ಕತ್ತಿ (ಮಸೆದ ಅಂಗಜನ ಅಸಿಲತೆಯೆನಿಪ ಸತಿಯ ಮನ ಬಯಸಿ ಮೇಲೆಱಗಿದೊಡೆ: **ಸಮಯಪ,** ೫. ೬೩)

**ಅಸು** – ಪ್ರಾಣ (ಎಯ್ದಿರ್ದುದಿಲ್ಲ ಅಸು ಎನ್ನಂ ಕೃಪೆಗೆಟ್ಟನಂ ಪೆಱನದೊರ್ವಂ ಸತ್ತವೊಲಿರ್ದನಂ: **ಕಾದಂಸಂ,** ೧. ೬೧)

**ಅಸುಂಗೊಳ್** – ಕೊಲ್ಲು (ಗಂಗಾವಾರ್ಧಿಯೊಳಾತ್ಮತುರಂಗಮಂ ಮಿಸಿಸಿ ನೆಗಟ್ದಿ ಡಾಳಪ್ರಿಯನೊಳ್ ಸಂಗತಗುಣಂ ಅಸಿಲತೆಯಂ ಅಸುಂಗೊಳೆ ಭುಜವಿಜಯಗರ್ವದಿಂ ಸ್ಥಾಪಿಸಿದಂ: **ಪಂಪಭಾ,** ೧. ೩೮); ಹೆದರು (ಅಸುಂಗೊಳೆ ಭೈತ್ರಮನೇಱೆಯುಂ .. .. ಸೇದೆವಡುತಿರ್ಪುದು ಕಜ್ಜಮೆ ಭವ್ಯಜೀವನೇ: **ಜೀವಸಂ,** ೩. ೧೮); ಬೆರಗಾಗು (ಗಂಗಾವಾರ್ಧಿಯೊಳ್ ಆತ್ಮತುರಂಗಮಮಂ ಮಿಸಿಸಿ ನೆಗಟ್ದಿ ಡಾಳಪ್ರಿಯನೊಳ್ ಸಂಗತಗುಣಂ ಅಸಿಲತೆಯಂ ಅಸುಂಗೊಳೆ ಭುಜವಿಜಯ ಗರ್ವದಿಂ ಸ್ಥಾಪಿಸಿದಂ: **ಪಂಪಭಾ,** ೧. ೩೮)

**ಅಸುಂಗೊಳಿಸು** – ಅಚ್ಚರಿಪಡಿಸು (ತ್ರಿಣೇತ್ರನುಮಂ ಅಸುಂಗೊಳಿಸಿದ ಸಾಹಸದೊಳ್ ಕದನತ್ರಿಣೇತ್ರನುಂ: **ಪಂಪಭಾ,** ೧೪. ೩೭ ವ); ಭಯಪಡಿಸು (ಈತನೋಲಗಂಗೊಟ್ಟಿರೆ ಸಪ್ತಾಂಗದ ರಾಜ್ಯದ ತೇಜಂ ಅಸುಂಗೊಳಿಸುವುದು ಅನ್ಯಮಂಡಲಾಧೀಶ್ವರರಂ:: **ಶಾಂತಿಪು,** ೫. ೧೨೮)

**ಅಸುಂಬು** – ಅಲ್ಲಾಡಿಸು (ಅಸುಂಬು– ಸಂಚಾಲನೇ: **ಶಬ್ದಮದ, ಧಾ,** ೪೭೫)

**ಅಸುಕೆ** – ಅಶೋಕ (ಪೊಸದಳಿರಂ ಪೊತ್ತ ಅಸುಕೆಯ ಸಸಿಯಂತೆ ತೋಱುತಿರ್ಪವನನಲಂ: **ಲೀಲಾವತಿ,** ೪. ೮೯)

**ಅಸುಗತಿ** – ದುರ್ಗತಿ (ಸಲೆ ದುಷ್ಕರ್ಮಂಗಳ್ಗೆಱಗಿ ಪಾರ್ವರ್ ಅಸುಗತಿಗಿಟೆವರ್: **ಸಮಯಪ,** ೧೧. ೨೧)

**ಅಸುಗೆ** – ಅಶೋಕೆ (ಯುವತಿ ಪಾಣಿಪಲ್ಲವರಾಗಂ ಮುಸುಕಿದುದೆನಿಸಿದ ಅಸುಗೆಯ ಪೊಸದಳಿರ್ಗಳೊಳೆಸೆವ ಕೆಂಪು ನಂದನವನದೊಳ್: **ಆದಿಪು,** ೬. ೯೬)

**ಅಸುಗೆದಳಿರ್** – ಅಶೋಕದ ಚಿಗುರು (ಘುಸೃಣದಿಂ ಅಸುಗೆದಳಿರಂ ಕೊಯ್ವಂತೆ: **ಚಂದ್ರಪ್ರಭ,** ೬. ೬೩ ವ)

**ಅಸುಮೋಕ್ಷ** – [ಅಸು+ಮೋಕ್ಷ] ಪ್ರಾಣವಿಯೋಗ; [ಅ+ಸುಮೋಕ್ಷ] ಒಳ್ಳೆಯದಲ್ಲದ ರೀತಿಯ ಮೋಕ್ಷ (ಕೆಳೆಯಂಗೆ ಆಯ್ತು ಅಸುಮೋಕ್ಷಂ ಆಗದೆನಗಂ ಬಾಷ್ಪಾಂಬುಮೋಕ್ಷಂ .. .. ಸತ್ಕ್ರಿಯಾನಳನಿಂ ಸುಟ್ಟೆನುಮಿಲ್ಲ: **ಗದಾಯು** ೫. ೩೧)

**ಅಸುಭೃತ್** – ಜೀವಿ (ಕಿವಿವೊಕ್ಕು ಅಸುಭೃತ್ ಗಣಕೆ ಇನಿದೆನಿಪುದು ಬಿಸವಂದಂ ಪೇಟಿಂ ಈ ವಿಪಂಚೀನಿನದಂ: **ಕರ್ಣನೇಮಿ,** ೫. ೨೮)

**ಅಸುರ್** – ಅಸಹ್ಯಪಡು (ಅಸುರ್– ಅಸಹ್ಯಭಾವೇ: **ಶಬ್ದಮದ, ಧಾ,** ೫೪೨)

**ಅಸುರ** – ರಾಕ್ಷಸ (ದನುಜರ್ ದೈತೇಯರ್ .. .. ಅಸುರರ್: **ಅಭಿಧಾವ,** ೧. ೧. ೩೨)

**ಅಸುರವೈರಿ** – ರಾಕ್ಷಸನ ವೈರಿ (ಪಿಡಿದದವರ್ ಅಸುರವೈರಿಯೊಡಂಬಡಿಂ: **ಪಂಪಭಾ,** ೧೦. ೮)

**ಅಸುರೇಂದ್ರ** – ರಾಕ್ಷಸರಾಜ (ಅಸುರೇಂದ್ರನಳ್ಕಿ .. ..ನಿಜವಿಮಾನದೊಳಗಂ ಪೊಕ್ಕಂ: **ಶಾಂತಿಪು,** ೮. ೫೨)

**ಅಸುವಲ್ಲಭೆ** – ಪ್ರಾಣವಲ್ಲಭೆ (ಕುಸುಮಂ ಸ್ಮಿತಂ ಅಳಿ ನಯನಂ ಕಿಸಲಯಂ ಅಧರಂ ಭುಜದ್ವಯಂ ವಿಟಪ< ಮತ್ತಸುವಲ್ಲಭೆ ಲತೆ: **ಕವಿರಾಮಾ,** ೩. ೧೪)

**ಅಸುವೆ** – ಅಸಿಗಲ್ಲು, ಸಾಂಬಾರ ಪದಾರ್ಥಗಳನ್ನು ಅರೆಯುವ ಕಲ್ಲು (ಅಸುವೆ ಒರಲ್ ಒನಕೆ ಗೂಟಂ ಪೊಸತಿಲ್ ಮನೆಮನೆಯ ಕಂಭವೊಲೆ ಪಡಿ .. .. ದೆಯ್ವಂ ಇಂತಿವರ್ ಎಂಬರ್ ಮೂಢರ್: **ಸಮಯಪ,** ೯. ೮೧)

**ಅಸುವೊಸರ್** – ಜೀವಹೋಗು (ಅಸುವೊಸರ್ದರಸುಮಕ್ಕಳಂ ಕುಡುವುದವರ ವನಿತೆಯರ್ಘೀಗಳ್: **ಗದಾಯು,** ೧೦. ೧೭)

**ಅಸುಹೃತ್** – ಶತ್ರು (ಸಿಂಗದ ಮುಪ್ಪುಂ ನೆಗೞ್ದೀ ಗಾಂಗೇಯರ ಮುಪ್ಪುಂ ಇಳಿಕೆವಡೆಗುಮೇ ವನಮಾತಂಗಂಗಳಿಂ ಅಸುಹೃತ್ ಚತುರಂಗಬಲಂಗಳಿಂ ಅದೆಂತುಮಂಗಾಧಿಪತೀ: **ಪಂಪಭಾ,** ೧೦. ೧೯)

**ಅಸುಹೃದ್ದಮ** – ಅರಿಂದಮ, ಶತ್ರುಗಳನ್ನು ಗೆಲ್ಲುವವನು (ಎಸೆವ ಮಣಿಕಟಕಮಂ ಮಿಕ್ಕಸದೃಶಮಂ ಕೊಟ್ಟನಂದು ಗಂಧರ್ವಾರ್ಯಂಗೆ ಅಸುಹೃದ್ದಮಂ ಎನೆ: **ಕರ್ಣನೇಮಿ,** ೪. ೧೨೧)

**ಅಸುಹೃದ್ಬಳ** – ಅಸುಹೃತ್ಸೇನೆ (ಬಳಮೆರಡುಂ ತನ್ನನೆ ಮಿಳಮಿಳ ನೋಡೆ ನರೇಂದ್ರಂ ಒಂದೆ ರಥದಿಂದ ಅಸುಹೃದ್ಬಳಮಂ ಇರದೆಯ್ದಿ ಭೀಷ್ಮರ ಚಳಣಯುಗಕ್ಕೆಱಗೆ ನಿನಗೆ ಜಯಮಕ್ಕೆ ಎಂದಂ: **ಪಂಪಭಾ,** ೧೦. ೬೦

**ಅಸೃಕ್** – ರಕ್ತ (ಶ್ರೀಯಂ ಅರಾತಿಬಳ ಅಸೃಕ್ ತೋಯಧಿಯೊಳ್ ಪಡೆದ ವೀರಂ ಉಱದರಿಗಳಂ ಆತ್ಮೀಯಪದಸ್ಫುರಿತ ನಖಚ್ಛಾಯೆಗಳೊಳ್ ನಿಱಿಸಿ ನಿಂದ ಗಂಡಂ ಹರಿಗಂ: **ಪಂಪಭಾ,** ೩. ೧)

**ಅಸೃಕ್ತೋಯಧಿ** – ರಕ್ತಸಮುದ್ರ ಶ್ರೀಯನರಾತಿಬಳ ಅಸೃಕ್ತೋಯಧಿಯೊಳ್ ಪಡೆದ ವೀರಂ: **ಪಂಪಭಾ,** ೩. ೧)

**ಅಸೃಗ್ಜಲ** – ರಕ್ತದ ನೀರು, ರಕ್ತ (ಭವತ್ಸುತರಂ ನೂರ್ವರುಮಂ ಗದಾಪ್ರಹತಿಯಿಂ ದುಶ್ಶಾಸನ ಉರಃಸ್ಥಳಕ್ಷತಜಾಸೃಗ್ಜಲ ಸೇಕದಿಂ ತಣಿಪಿದೆಂ ಕೋಪಾಗ್ನಿಯಂ: **ಗದಾಯು,** ೬. ೩೬)

**ಅಸೃಗ್ಜಳ** – ಅಸೃಕ್ಜಲ (ಅಸೃಕ್ಜಳದೊಳಗೋಲಾಡಿದುವು ಮರುಳ್ ಕುಣಿ ಕುಣಿದಾಡಿದುವು ಅಂಬರದೊಳ್ ಒಸೆದು ನಾರದ ಗೊರವಂ: **ಹರಿವಂಶ,** ೧೨. ೬೫)

**ಅಸೆವಿಜೆ** – ಮುಖವನ್ನು ಚುಚ್ಚು (ಅಸೆವಿಜೆವಂತೆ ನಟ್ಟುಗಿದ ಕೋಡೊಡನುಣ್ಮುವ ಸೃಗ್ನಿಷೇಕಂ ಆಜೆಸೆ: **ಅಚವರ್ಧ,** ೮. ೫೮)

**ಅಸೇವ್ಯ** – ಸೇವಿಸಬಾರದ (ಸೇವ್ಯರ್ ಅಸೇವ್ಯಮೆನೆ .. .. ಪಾಸಱೆಯೊಳ್ ಕೂಸಂ ಅಪ್ಪಳಿಸಿ: **ಜಗನ್ನಾವಿ,** ೨. ೫೩); ಸೇವಿಸಬಾರದವನು (ಭೂಮಿಗೋಚರರೊಳ್ ಅಸೇವ್ಯರೊಳ್ ತನಗೆ ಕಿಂಕರಭಾವಮನಪ್ಪುಕೆಯ್ದಂ; **ಪಂಪರಾ,** ೧೧. ೧೦೪)

**ಅಸ್ಖಲಿತಗತಿ** – ದೃಢವಾದ, ತಡೆಯಿಲ್ಲದ ನಡಿಗೆ (ಅಸ್ಖಲಿತಗತಿಯಪ್ಪ ಚಕ್ರರತ್ನಸ್ಖಲನಕ್ಕೆ .. .. ಚಕ್ರಿ ವಿಸ್ಮಯಂಬಟ್ಟು: **ಆದಿಪು,** ೧೪. ೬ ವ)

**ಅಸ್ಖಳಿತ** – ದೃಢವಾದ (ಆರ್ಯೆಯಂ ವ್ಯಕ್ತದಿಂದ ಅಸ್ಖಳಿತಂ ತಾನೆನ್ನನುದ್ದೇಶಿಸಿ ಸುಲಲಿತಮೆಂಬಂದದಿಂ ಓದಿ ತೋರ್ದ ಈ ಗಿಳಿಗೆ: **ಕಾದಂಸಂ,** ೧. ೨೪)

**ಅಸ್ತಂಗತ** – [ಸೂರ್ಯ] ಮುಳುಗಿದವನು (ತದ್ದಿನಾಧಿನಾಥನುಂ ಅಸ್ತಂಗತನಾದಂ: **ಕವಿರಾಮಾ,** ೩. ೩೦)

**ಅಸ್ತಗತಿ** – ಮುಳುಗುವ ಪರಿಸ್ಥಿತಿ (ಅಸ್ತಗತಿಯಿಂ ಬೀೞ್ವ ಅದಿತ್ಯನಂ: **ಚಂದ್ರಪ್ರಭ,** ೮. ೩)

**ಅಸ್ತದವ** – ನಂದಿಹೋದ (ಅನುದ್ಯೋಗಜನೌಘವಸ್ತದವ ಸ್ಮೇರಾಬ್ಜಂ: **ಜಗನ್ನಾವಿ,** ೪. ೨೬)

**ಅಸ್ತದೋಷೋದಯಂ** – ಕತ್ತಲೆಯನ್ನು ನಾಸಪಡಿಸಿ ಹುಟ್ಟಿದವನು, ಸೂರ್ಯ (ವನೇಜಸಖಂ ಅನೇಕಚಕ್ರರಥಂ ಅಸ್ತದೋಷೋದಯಂ .. .. ದಿನಾಧೀಶ್ವರಂ: **ಪಂಚತಂತ್ರ,** ೩೬೨)

**ಅಸ್ತವಿಳಾಸ** – ಸಂತೋಷ ಮರೆಯಾದವನು (ಬಿಲ್ಲುಂಬೆಱಗಾಗಿರ್ದಂ ರತೀಶಂ ಅಸ್ತವಿಳಾಸಂ: **ಗಿರಿಜಾಕ,** ೮. ೩೭)

**ಅಸ್ತವ್ಯಸ್ತ** – ಕ್ರಮವಾಗಿಲ್ಲದಿರುವುದು (ಎಲ್ಲಂ ಬಱೆ ತಾಱೆಗಬೀಱೆಗ ವೆತ್ತಱ ತತ್ತಱ ಎಕ್ಕಸಕ್ಕಂ ಅಸ್ತವ್ಯಸ್ತಂ: **ಗಿರಿಜಾಕ,** ೧. ೨೩)

**ಅಸ್ತಸಮಯ** – ಮುಳುಗುವ ಹೊತ್ತು (ದಿನಪ ಅಸ್ತಸಮಯದೊಳ್ ದಿನಪನ ಪಿಂಬಡಿನೊಳ್ .. .. ಕಿಡಿವುದಱಿದೆ ಕಮಳವಿಳಾಸಂ: **ಶಾಂತಿಪು,** ೮. ೬೨)

**ಅಸ್ತಾಂ ತಾವನ್ಮಂತ್ರಪ್ರಸ್ತಾವನಂ** – ಮಂತ್ರಾಲೋಚನೆಯನ್ನು ಮಾಡುವುದಾಗಿರಲಿ (ಅಸ್ತಾಂ ತಾವತ್ ಮಂತ್ರಾಲೋಚನಂ ಆರ್ಯ ನಮಗಂ ಆ ಕೌಶಿಕಪತ್ರಿ ಸ್ತೋಮವಲ್ಲಂಭಂಗ ಪ್ರಸ್ತುತಮತಿವೈರಮಾದ ತೆಱನಂ ಮೊದಲೊಳ್: **ಪಂಚತಂತ್ರ,** ೩೧೧)

**ಅಸ್ತಾಚಲ** – ಸೂರ್ಯ ಮುಳುಗುವ [ಪಶ್ಚಿಮದ] ಬೆಟ್ಟ (ಅಭಿಮನ್ಯು ಮರಣವಾರ್ತಾಪ್ರಭೂತ ಶೋಕಾಗ್ನಿ ಧರ್ಮತನಯನಂ ಇರದಂದು ಅಭಿಭವಿಸಿ ತನ್ನಂ ಅಳುರ್ದಂತೆ ಭಾಸ್ಕರಂ ಕೆಂಕಮಾದಂ ಅಸ್ತಾಚಲದೊಳ್: **ಪಂಪಭಾ,** ೧೧. ೧೦೬)

**ಅಸ್ತಾದ್ರಿ** – ಸೂರ್ಯ ಮುಳುಗುವ ಬೆಟ್ಟ (ಉದಯಾದ್ರಿಯುಂ ಅಸ್ತಾದ್ರಿಯುಂ ಉದಗ್ರ ಕೋಪೋತ್ಕರಂಗಳಿರ್ಪಂತಿರೆ: **ಗದಾಯು,** ೮. ೬)

**ಅಸ್ತಾಬ್ಧಿ** – ಸೂರ್ಯ ಮುಳುಗುವ ಸಮುದ್ರ (ಸಮನಿಸುಗುಂ ಅಧಃಪಾತಂ ಅಸ್ತಾಬ್ಧಿಯೊಳ್: **ಚಂದ್ರಪ್ರಪು,** ೨. ೪೫)

**ಅಸ್ತೇಯ** – [ಜೈನ] ಕದಿಯದಿರುವುದು, ಪಂಚಾಣುವ್ರತಗಳಲ್ಲಿ ಒಂದು (ಅಸ್ತೇಯವ್ರತಕ್ಕತಿಕ್ರಮಮಕ್ಕುಂ: **ಸುಕುಮಾಚ,** ೬. ೧೫)

**ಅಸ್ತೋಕ** – ಮಹತ್ತಾದ (ಸತ್ಕಳಾಢ್ಯಂ ಅಸ್ತೋಕಯಶೋರ್ಥಿ ರೇಚವಿಭು ರಂಜಿಸಿದಂ: **ಆಚವರ್ಧ,** ೧. ೨೨)

**ಅಸ್ತ್ರ** – ಆಯುಧ; ಬಾಣ (ತೋಮರ ಪಾಶಾಂಕುಶಾದಿ ಶಸ್ತ್ರಾಸ್ತ್ರಂಗಳೊಲೆಚ್ಚುಂ: **ಪಂಪರಾ,** ೧೩. ೭೬ ವ)

**ಅಸ್ತ್ರಶಾಲೆ** – ಆಯುಧಾಗಾರ (ಬಂದುದಿಂದು ವಿಯಚ್ಚಕ್ರದಿಂ ಅಸ್ತ್ರಶಾಲೆಗೆ ಮಹಾಚಕ್ರಂ: **ಶಾಂತಿಪು,** ೧. ೧೧೫)

**ಅಸ್ತ್ರಾಲಿ** – ಬಾಣಸಮೂಹ (ಲಕ್ಷ್ಮೀಧರಂ ಅಸ್ತ್ರಾಲಿಗಳಿಂ ಖಂಡಖಂಡಮಾಗಿರೆ ಕಡಿದಂ: **ಪಂಪರಾ,** ೧೪. ೨೫)

**ಅಸ್ಪಂದ** – ಅಲುಗದಿರುವ (ನಿಜಚರಣ ನಿಕಟನಿಪತತ್ ಗಾತ್ರಂ ಅಸ್ಪಂದನೇತ್ರಂ ಕಿಱಿದು ಪೊಟ್ಟು ನೋಡುತ್ತುಮಿರ್ದು: **ಆಚವರ್ಧ,** ೨. ೫೫ ವ)

**ಅಸ್ಪೃಷ್ಟಪಾಂಶು** – ಧೂಳು ಸೋಕದವನು (ಅಸ್ಪೃಷ್ಟಪಾಂಶುವಾದೊಡಂ ಶಾಂತಿಧಾರಾರ್ಥಂ .. .. ಶ್ರೀಪದಮಂ .. .. ತೊಳೆದು: **ಚಂದ್ರಪ್ರಪು,** ೫. ೨೨ ವ, ಮತ್ತು ೨೩)

**ಅಸ್ಫುಟವಚನ** – ಅಸ್ಪಷ್ಟವಾಗಿ ಮಾತಾಡುವವನು (ನೆಗೞ್ದ ಅರ್ಧಮಾಗಧೀಯಂ ನೆಗೞ್ದಜಿತಾನನದೊಳ್ ಆಗಳ್ ಅಸ್ಫುಟವಚನಂ: **ಅಜಿತಪು,** ೫. ೬೫)

**ಅಸ್ಮತ್** – ನನ್ನ (ರಥದಿಂ ಧಾತ್ರಿಗೆ ಪಾಯ್ದು ಕೊಂಡು ಗದೆಯಂ ಕೆಯ್ಸಾರ್ದುದು ಅಸ್ಮತ್ ಮನೋರಥಂ ಇಂದು ಎಂದು ಕಡಂಗಿ: **ಪಂಪಭಾ,** ೧೧. ೬೬)

**ಅಸ್ಮದೀಯ** – [ನನಗೆ] ನಮಗೆ ಸೇರಿದ (ಇನ್ನಸ್ಮದೀಯ ಸಹಜಾತನಂ ಪುರಾಭ್ಯಂತರದೊಳ್ ಎಂತುಂ ವಿಹಾರಿಸಲೀವೆನಲ್ಲೆಂ: **ಕರ್ಣನೇಮಿ,** ೬. ೧೩೬ ವ)

**ಅಸ್ಮರಣ** – ನೆನೆಪಿಲ್ಲದಿರುವುದು (ಪರಿಕಿಪೊಡೆ ಅಸ್ಮರಣಮನಾದರಂ .. .. ಸಾಮಯಿಕವ್ರಕ್ಕತಿಚಾರಂ: **ಸುಕುಮಾಚ,** ೬. ೨೧)

**ಅಸ್ರ** – ರಕ್ತ (ಅತಿವಿಶದ ವಿಶಾಲೋರುಕ್ಷತದಿಂದೊಱಿದನಿತು ಜಡೆಯುಮಂ ನಾಂದಿ ಮನಃಕ್ಷತದೊಡನೆೞ್ಚರಿಸಿದುದು ಉತ್ಥಿತಮಾ ವಂದಸ್ರಮಿಶ್ರಗಂಧಂ ಮುನಿಯಂ; **ಪಂಪಭಾ,** ೧. ೧೦೫); ಕಣ್ಣೀರು

**ಅಸ್ವಪ್ನ** – ನಿದ್ದೆಯಿಲ್ಲದ[ವನು] ದೇವತೆ (ಸುತ್ತಿರ್ಪುದು ಒಪ್ಪುತ್ತಮೆ ಮುಗುಳಾದಿ ಉತ್ತಮ ನವನಿಧಿ ರಕ್ಷಾಜ್ಯೋತಿರ್ ಅಸ್ವಪ್ನರಿಂದಂ: **ಶಾಂತೀಶ್ವಪು,** ೧೬. ೩೮)

**ಅಸ್ವಪ್ನಾನಕ** – ದೇವದುಂದುಭಿ (ದಿವಿಜ ಜಯಧ್ವಾನಮುಂ .. .. ಅಸ್ವಪ್ನಾನಕಧ್ವಾನಮುಂ ಎಸೆಯೆ: **ಜಗನ್ನಾವಿ,** ೮. ೧೧೦)

**ಅಹಃಪತಿ** – ಹಗಲಿನ ಒಡೆಯ, ಸೂರ್ಯ (ತತ್ಪುರಪತಿ ವರವಿಭವ ಮರುತ್ಪತಿ ತೇಜೋವಿರಾಜಿತ ಅಹಃಪತಿ ಚಂಚತ್ಪರಮಯ ಯಶಃಪತಿ ವಿದ್ವತ್ಪೂಜ್ಯಂ ಜ್ವಲನಜಟಿಮಹಾಖಚರೇಜ್ಯಂ: **ಶಾಂತೀಶ್ವಪು,** ೧. ೧೪೬)

**ಅಹಂಗೆ** – ಅಹಗೆ, ಹಾಗೆ (ಅಹಂಗಾದೊಡಂ ಶ್ರೀರಾಮಂ ಸಮುದ್ರಮಂ ಶೋಷಿಸಿದನಿಲ್ಲ: **ಪಂಚತಂತ್ರ,** ೨೮೨, ಶ್ಲೋಕ ೧೪೯, ಟೀಕೆ)

**ಅಹಃಪತಿಸುತ** – ಸೂರ್ಯನ ಮಗ, ಕರ್ಣ (ಕುರುಕುಲ ದರ್ಪಣಮಱಿವುದು ಇನ್ನಹಃಪತಿಸುತನಂ: **ಗದಾಯು,** ೫. ೩೨)

**ಅಹಗೆ** – ಹಾಗೆ (ತಿಬ್ಬಂ ಮಾಡಿದಂ, ತಿಬ್ಬ ಎಹಗೆ ಅಹಗೆ ಮಾಡಿದಂ: **ಶಬ್ದಮದ,** ೧೫೫ ಪ್ರ)

**ಅಹಮಹಮಿಕೆ** – ಅಹಂಭಾವ (ಆಂ ಬಂದುದಂ ಅಹಮಹಮಿಕೆಯಿಂ ಬೇಗಂ ಪರಿದು ಪೋಗಿ ಪರಮೋತ್ಸವದಿಂದಂ ಬಿನ್ನವಿಪ ಜನಂ ಕಾದಂಬರಿಯಂ ಮೆಚ್ಚುಗೊಳ್ಳದಿರ್ಕುಮೆ ಪಿರಿದುಂ: **ಕಾದಂಸಂ,** ೭. ೩)

**ಅಹಮಿಂದ್ರ** – [ಜೈನ] ಹದಿನಾರು ಸ್ವರ್ಗಗಳೂ ಅಣೂತ್ತರಗಳೂ ಆದ ಮೇಲೆ ಬರುವ ಗ್ರೈವೇಯಕದಲ್ಲಿ ಹುಟ್ಟಿದ ಜೀವ (ನಿನಗಹಮಿಂದ್ರರುಂ ಇಂದ್ರರುಂ ಅನಿಬರುಂ ಈ ಲೋಕಪಾಲರುಂ . .. ಎಱಗುವರ್: **ಅಜಿತಪು,** ೮. ೨೧)

**ಅಹಮಿಂದ್ರತ್ವ** – ಅಹಮಿಂದ್ರತನ (ಅಹಮಿಂದ್ರತ್ವಮಂ ಕುಡೆಂದು ಜಿನೇಂದ್ರಂಗೆ ಪಾಱಿಂಬಿಡುವಂತೆ ಮೂಱು ತಿಂಗಳ್ ಸನ್ಯಸನಮಿರ್ದು ಒಡಲನೀಡಾಡಿ: **ನೇಮಿನಾಪು,** ೪. ೬೫ ವ)

**ಅಹರಹ** – ಅನುದಿನ (ಅಹರಹರ್ ಅಭಿನವ ಮಣಿರುಚಿರ ಹಾಟಕ ಪ್ರಕರ ವಿರಚಿತಂಗಳಂ ಎಂದುಂ ಬಹು ಭಾಜನಂಗಳಂ ನಿರ್ವಹಿಸುವುದು ಅವರವರ್ಗೆ ಭಾಜನಾಂಗ ಮಹೀಜಂ: **ಶಾಂತಿಪು,** ೬. ೧೧೪)

**ಅಹರ್ನಿಶಂ** – ಹಗಲೂ ರಾತ್ರಿ (ಪಡೆದತ್ತು ಅಹರ್ನಿಶಂ ಪೆರ್ಚನಂಗಕ್ಕೆನ್ನಾ: **ಕವಿರಾಮಾ,** ೧. ೫೫)

**ಅಹರ್ಪತಿ** – ಸೂರ್ಯ (ಒಯ್ಯನೆ ಕೇಳ ಕರ್ಣ ನಿನ್ನಾದಿಯೊಳ್ ಅಬ್ಬೆ ಕೊಂತಿ ನಿನಗಮ್ಮಂ ಅಹರ್ಪತಿ: **ಪಂಪಭಾ,** ಪರಿಷತ್ತು ೯. ೬೪)

**ಅಹಸ್ಪತಿ** – ಸೂರ್ಯ (ಉದುಗಿರಿಯಿಂದ ಅಹಸ್ಪತಿಯುದಯಿಪ ತೆಱದಿಂದಂ: **ಕರ್ಣನೇಮಿ,** ೨. ೪೭)

**ಅಹಸ್ಸು** – ಹಗಲು (ಅಲರಿರ್ದ ಪಂಕಜಂ ಮುಗಿದುದು ಅಹಸ್ಸಿನಿಂ ಮುದದೆ ಕೈರವಂ ಅಂತಲರಿರ್ದು ತೋಱಿ: **ತ್ರಿಷಷ್ಟಿಪು,** ೨೪. ೬೬)

**ಅಹಿ** – ಹಾವು (ತೊರೆಯೊಳ್ ಅಟ್ಟಂ ಮತ್ತಹಿಯಂ ತೆಪ್ಪಮೆಂದು ಪಿಡಿವಂತಕ್ಕುಂ: **ಸಮಯಪ,** ೩. ೭೬)

**ಅಹಿಂಸಾ ಲಕ್ಷಣೋ ಧರ್ಮಃ** – ಅಹಿಂಸೆಯೇ ಧರ್ಮದ ಲಕ್ಷಣ (ಅಹಿಂಸಾಲಕ್ಷಣೋ ಧರ್ಮಃ ಎಂಬ ವೈಶೇಷಿಕ ನೈಯಾಯಿಕ ಸಾಂಖ್ಯ ಮೀಮಾಂಸ ಷಟ್ತರ್ಕಸಿದ್ಧಾಂತವಾದಿಗಳುಂ: **ಪಂಚತಂತ್ರ,** ೧೧೭ ವ)

**ಅಹಿಕಟಕ** – ಸರ್ಪವನ್ನೇ ಬಳೆ[ಕಟಕ]ಯಾಗುಳ್ಳವನು [ಶಿವ] (ಸಂದ ಅಹಿಕಟಕಪ್ರಸಾದದೆ ಮನೋಜನುಮಂ ಗೆಲೆವಂದನಾಗಳುಂ ಸಹಜಮನೋಜಂ ಎಮಗೀಗೆ ವಿಚಿತ್ರರತೋತ್ಸವಂಗಳಂ: **ಪಂಪಭಾ,** ೧. ೪)

**ಅಹಿಕೇತನ** – ಸರ್ಪಧ್ವಜ, ದುರ್ಯೋಧನ (ಗುರುವ ಕೇಶಕಳಾಪಮಂ ತೆಗೆದಂ ತೆ ಗಂಡನುಮಾದಂ ಈ ಪರಿಭವಕ್ಕೆ ಅನುರೂಪಮಿಂ ಪೆಱತೊಂದುಮಿಲ್ಲ ಅಹಿಕೇತನಾ: **ಪಂಪಭಾ,** ೧೨. ೩೭)

**ಅಹಿಗರಳಹರ** – ಹಾವಿನ ವಿಷವನ್ನು ಹೋಗಲಾಡಿಸುವವನು, ಗರುಡ (ಜವನೆಂಬ ಬಱಸಿಡಿಲೆಱಗುವವೊಲ್ ಅಹಿಯಂ ಹಿಗರಳಹರಂ: **ಸುಕುಮಾಚ,** ೨. ೧೧)

**ಅಹಿಗೃಹ** – ಹಾವಿನ ಮನೆ, ಹುತ್ತ (ಅಹಿಗೃಹಮಂ ಘನಕುಚೆ ರಜನೀಚರಮದೊಳ್ ಜಿನಾಂಬಿಕೆ ಕಂಡಳ್: **ಶಾಂತಿಪು,** ೯. ೨೦೭)

**ಅಹಿತ** – ಕೆಟ್ಟುದು (ಶಿವಭೂತಿಗೆ ತೊಟ್ಟನೆ ಬಗೆದಂ ಅಹಿತಮಂ ತದ್ವನಚರಂ ಎಂತುಂ ಕೃತಘ್ನರೇನಂ ಮಾಡರ್: **ಪಂಚತಂತ್ರ,** ೧೮೪)

**ಅಹಿತನಿಷೂದನ** – ಶತ್ರುಗಳನ್ನು ನಾಶಮಾಡುವವನು (ತೋಱಿದಳಿಂದೂದಯಕಾಂತನಂ ಅಹಿತನಿಷೂದನನಂ ದಿವಿಜರಾಜ ಲೀಲಾಸ್ಪದನಂ: **ಶಾಂತಿಪು,** ೫. ೧೧೭)

**ಅಹಿತಾಗ್ನಿ** – ನಿತ್ಯೋಪಾಸನೆಗಾಗಿ ಇಟ್ಟ ಧಾರ್ಯಾಗ್ನಿ (ಯಜನಾದಿ ಷಟ್ಕರ್ಮನಿರತನುಂ ಅಹಿತಾಗ್ನಿಯುಮಪ್ಪ ದೇವಶರ್ಮನೆಂಬ ಪಾರ್ವನಿರ್ಪಂ: **ಪಂಚತಂತ್ರ,** ೨೫೨ ವ)

**ಅಹಿಧ್ವಜ** – ದುರ್ಯೋಧನ (ನುಡಿಯಿಸಿದುದು ಅಹಿಧ್ವಜನೋವದೆ ಮುನ್ನೆ ನೆಗಟ್ದ ದುಶ್ಚರಿತಂಗಳ್: **ಪಂಪಭಾ,** ೯. ೨೧)

**ಅಹಿನಾಯಕ** – ಆದಿಶೇಷ (ಅಹಿನಾಯಕನಱಿಯಂ ಪೇೞಲ್ ಉೞಿದನದೆತ್ತತ್ತಇವೊಂ: **ಶಾಂತಿಪು,** ೪. ೧೧೬)

**ಅಹಿನಿವಾಸ** – ಸರ್ಪಲೋಕ, ಪಾತಾಳ (ಕುಲನಗಮಂ ಅಡರ್ವ ಜಲನಿಧಿ ಜಲಮಂ ಪಾಯ್ವ ಅಹಿನಿವಾಸಮಂ ಪುಗುವ ಮರುನ್ನಿಲಯಕ್ಕೆ ಒಗೆವೀತನ ಕೀರ್ತಿಲತಾಂಗಿ ಚಲಾಂಗಿ ಖಚರಂ ಅಚಳಿತಂ ಅಬಲೇ: **ಶಾಂತಿಪು,** ೫. ೧೫೪)

**ಅಹಿಪ** – ಆದಿಶೇಷ (ಹರಿ ಶಿಖಿ ಯಮ ನಿರುತಿ ಜಳಾಕರಪತಿ ಮರುತ್ ಐಳಬಿಳ ಹರ ಅಹಿಪ ಶಶಿ ಭಾಸ್ಕರರರಂ ಸೌಧರ್ಮೇಂದ್ರಂ ನಿರವಿಸಿದಂ ದಶದಿಶಾಳಿಯೊಳ್ ಬಲಸಹಿತಂ: **ಶಾಂತೀಶ್ವಪು,** ೧೪. ೧೦೯)

**ಅಹಿಪತಲ್ಪ** – ಹಾವಿನ ಹಾಸಿಗೆಯವನು, ವಿಷ್ಣು (ನವಗಾದೀ ಖೇದಮಂ ಬಿನ್ನವಿಪವಹಿಪತಲ್ಪಂಗೆ: **ಜಗನ್ನಾವಿ,** ೧. ೩೫)

**ಅಹಿಪತಿ** – ಆದಿಶೇಷ (ಅಹಿಪತಿ ಪೆಡೆಯಂ ಬಿರ್ಚಿದಂ: **ಜಗನ್ನಾವಿ,** ३. ೪)

**ಅಹಿಭುಗಿನ** – ನವಿಲು (ಅಹಿಭುಗಿನಾರೂಢಂ ಒಪ್ಪಿರ್ದಂ ಉದ್ಯತ್ ಲೀಲಾಯುಕ್ತಂ ವಿಘ್ನನಾಶಂ .. .. ಗಣೇಶಂ: **ರಾಜಶೇವಿ,** ೧೪. ೧೫೦)

**ಅಹಿಭೂಷಣ** – ಹಾವನ್ನು ಆಭರಣವಾಗುಳ್ಳವನು, ಶಿವ (ಏಕಪಾದತಪದೊಳ್ ನಿಲೆ ಗೀರ್ವಾಣನಾಥಾತ್ಮಜನಲ್ಲಿಗೆ ಗುಹನಂ ಅಹಿಭೂಷಣನ ಅಂಬಂ ಬೇಡಿ ಅಟ್ಟಿದೊಡೆ: **ಪಂಪಭಾ,** ೮. ೧೬ ವ)

**ಅಹಿಮಕಿರಣ** – ಶೀತಲವಲ್ಲದ ಕಿರಣದವನು, ಸೂರ್ಯ (ಮಂಜಿನ ಮಱೆಯನಹಿಮಕಿರಣನಾತ್ಮಕಿರಣಂಗಳಿಂ ಕಿಡಿಸುವಂತೆ: **ಶಾಂತಿಪು,** ೪. ೧೪ ವ)

**ಅಹಿಮಕೃತ್** – ಅಹಿಮಕಿರಣ (ಅಹಿಮಕೃತ್ ಬಿಂಬಮನನುಕರಿಸಿ ನಿಜಾಂಬಿಕೆಯಭ್ರರ್ಣದೊಳ್ ಜಿನಾರ್ಭಕನೆಸೆದಂ: **ಅಜಿತಪು,** ೪. ೪)

**ಅಹಿಮಹಿಮಕರಬಿಂಬ** – ಸೂರ್ಯಚಂದ್ರರ ಬಿಂಬ (ಗಗನಗಜಕ್ಕಿಕ್ಕಿದ ಪೊನ್ನ ಗಂಟೆಯೆರಡೆನಲುಂ ಅಂಬರಾಂಭೋನಿಧಿಯೊಳ್ ನೆಗೆದುರಿವವರ್ವಾನಳಂ ಉರ್ಬುಗಳೆನಲುಂ ನೆಗೆದುವು ಅಹಿಮಹಿಮಕರಬಿಂಬಂ: **ಆದಿಪು,** ೬. ೫೨)

**ಅಹಿರಾಜ** – ಅಹಿಪತಿ, ಆದಿಶೇಷ (ಅಹಿರಾಜಂ ಬಳ್ಕೆ ಕೂರ್ಮಂ ಔಯಾತುರಘರ್ಮಾನನರಾಗೆ: **ಗಿರಿಜಾಕ,** ೬. ೫೪)

**ಅಹೀಂದ್ರ** – ಆದಿಶೇಷ (ಪಗೆ ಪೊಲ್ಲ ಪಾಂಡುನಂದನರೊಳ್ ಅಹೀಂದ್ರಕೇತನನ ಜೂದಿನ ಗೆಲ್ಲಂ: **ಪಂಪಭಾ,** ೬. ೭೫); [ಜೈನ] ನಾಗರಾಜ (ನತದಿವಿಜೇಂದ್ರ ಅಹೀಂದ್ರ ವಾಸುಪೂಜ್ಯ ಜಿನೇಂದ್ರಾ: **ಸುಕುಮಾಚ,** ೪. ೪೯)

**ಅಹೀಂದ್ರಕೇತನ** – ಸರ್ಪಧ್ವಜ (ಅಹೀಂದ್ರಕೇತನನ ಜೂದಿನ ಗೆಲ್ಲಮದೆಂತುಟೆನ್ನ ನಂಜಿನ ಸವಿಯಂತುಟೆಂದೊಡೆ: **ಪಂಪಭಾ,** ೬. ೭೫)

**ಅಹೀನ** – ಸರ್ಪ (ಸಾರಸತ್ವವ್ಯಾಮಿಶ್ರ ಅಹೀನ ಚಂಚತ್ ಕಟಕಂ .. .. ಸ್ವಸ್ತಿಲೋಕಸ್ತೋಮ ಭ್ರಾಜಿಷ್ಣುವೆಮ್ಮಂ ಪೊರೆಗೆ: **ಶಬರಶಂ,** ೧.೧)

**ಅಹೀಶ್ವರ** – ಅಹೀಂದ್ರ (ಪಡೆದ ಧನಕ್ಕೆ ಲೆಕ್ಕಮಿಡಲ್ ಇಂದ್ರನಗಂ ಬಳಪಂ ಧರಾತಳಂ ಕಡಿತಂ ಅಹೀಶ್ವರಂ ತಗುಳೆ ಬಾಚಿಸುವೊಂ ಸುರಮಂತ್ರಿ ಕೂಡುವೊಂ: **ಶಾಂತಿಪು,** ೯. ೧೪೭)

**ಅಹೋ** – ಒಂದು ಭಾವಸೂಚಕಾವ್ಯಯ (ಅಹೋ ಕಷ್ಟಂ ಸಂಸಾರಮೆಂದು ಸಿದ್ಧಾರ್ಥ ಭಟ್ಟಾರರ್; **ವಡ್ಡಾರಾ,** ಪು. ೪೮, ಸಾ. ೨೪)

**ಅಹೋಧ್ವಾನ** – ಅಹೋ ಎಂಬ ಕೂಗು (ದೇವರ್ ಆರ್ವ ಅಹೋಧ್ವಾನನಿನಾದಂ ಒಪ್ಪಿದುದು: **ಶಾಂತಿಪು,** ೬. ೭೪)

**ಅಹೋರಾತ್ರಂ** – ಹಗಲೂ ರಾತ್ರಿ (ಮೇರುನೃಪಂಗೆ ನಭಃಶ್ರೀ ನೀರಾಜನವಿಧಿಯನೊಸೆದು ಮಾಟ್ಪಂತೆ ಎಸೆದತ್ತು ಆ ರಾತ್ರಿಕ ದೀಪದವೊಲ್ ಅಹೋರಾತ್ರಂ ಬಳಸಿ ಬರ್ಪ ತಾರಾಚಕ್ರಂ: **ಅಜಿತಪು,** ೨. ೫)

**ಅಳಂಕರಣಗೃಹ** – ಅಲಂಕಾರ ಮಾಡಿಕೊಳ್ಳುವ ಮನೆ (ಬಂದಳಂದು ಅಳಂಕರಣಗೃಹಕ್ಕೆ .. .. ದೇವಿ ಲೀಲೆಯಿಂ: **ಚಂದ್ರಪ್ರಪು,** ೧೨. ೭)

**ಅಳಂಕಾರಧ್ವನಿ** – ಆಭರಣಗಳ ಸದ್ದು (ಧ್ವನಿಯೆನಿಸಿದ ಅಳಂಕಾರಧ್ವನಿಯೆಸೆವಿನಮೆಸೆವುದಲ್ಲಿ ಮಧುರವಿಪಂಚೀಧ್ವನಿ: **ಆದಿಪು,** ೯. ೧೧೯)

**ಅಳಂಕೃತಿ** – [ಕಾವ್ಯದ] ಅಲಂಕಾರಗಳು (ಪುದಿದ ಜಸಂ ಪೊದಳ್ದ ಚಳಂ ಒಂದಿದ ಅಳಂಕೃತಿ ಕೈತ ದೇಸಿ ಎಂಬುದಂ ಎನೆ ವಸ್ತುವಿದ್ಯೆಯೆನೆ ಕಬ್ಬಮೆ ಮುನ್ನಂ ಅವಂತಿವಲ್ಲದಲ್ಲದೆ ಪೆಱವಿಲ್ಲ ಕಬ್ಬಂ ಎನೆ ಮುನ್ನಿನ ಕಬ್ಬಮನೆಲ್ಲಮಂ ಇಕ್ಕಿಮೆಟ್ಟಿದುವು ಸಮಸ್ತಭಾರತಮುಂ ಆದಿಪುರಾಣ ಮಹಾಪ್ರಬಂಧಮುಂ: **ಪಂಪಭಾ,** ೧೪. ೫೯)

**ಅಳಂಕೆಗೊಳ್** – ಸೇರಿಕೊ (ನಿನಗಂ ಪುಣ್ಯೋದಯಂ ಸಾರ್ಚಿ ಬಂದುದು ಧಾತ್ರಂಗಂ ಅಳಂಕೆಗೊಂಡ ಪಿರಿದುಂ ಚಿಂತಾಂತರಂ ಪೋಯ್ತು: **ಆದಿಪು,** ೪. ೧೮); ಉದ್ಭವಿಸು

**ಅಳಂಕೆವೆಱು** – ಜೋಡಣೆ ಹೊಂದು (ಕಳಿಕೆಗಳಿಂ ಪೂದುಱುಗಲಿಂ ಅಳಂಕೆವೆತ್ತಿರೆ ಬಸಂತದೊಳ್ ಶೋಭಿಸುವಂದೆಳಮಾವಿನ ತೆಱದಿಂ ಅಱದೇಂ ವಿಲಾಸ ಯೌವನ ವಿಭೂತಿಯಂ ತಾಳ್ದಿದನೋ: **ಸುಕುಮಾಚ,** ೧೦. ೬೨)

**ಅಳಕ** – ಬರೆಯುವ ಓಲೆ (ಲಲಿತಪದಂ ಪ್ರಸನ್ನಕವಿತಾಗುಣಮಿಲ್ಲದೆ ಪೂಣ್ದು ಪೇೞ್ದ ಬೆಳ್ಗಳ

ಕೃತಿಬಂಧಮೇಂ ಬರೆಪಕಾರರ ಕೈಗಳ ಕೇಡು ನುಣ್ಣನಪ್ಪ ಅಳಕದ ಕೇಡು: **ಪಂಪಭಾ,** ೧. ೧೨); ಮುಂಗುರುಳು (ಆ ನರಸಿಂಹಮಹೀಶಮನೋನಯನಪ್ರಿಯೆ ವಿಳೋಳನೀಳ ಅಳಕೆ ಚಂದ್ರಾನನೆ ಜಾಕವ್ವೆ ದಲ್ ಆ ಜಾನಕಿಗಗ್ಗಳಮೆ ಕುಲದೊಳಂ ಶೀಲದೊಳಂ: **ಪಂಪಭಾ,** ೧. ೩೯)

**ಅಳಕೆ** – ಕುಬೇರನ ರಾಜಧಾನಿ (ಅದು ಕೊಯ್ದುದು ಅಳಕೆಯಳಕಮಂ ಅದು ಮಿಕ್ಕುದು ಭೋಗಪತಿಯ ಭೋಗಮಂ: **ಮಲ್ಲಿನಾಪು,** ೨. ೩೨)

**ಅಳಗ** – ಮದ್ದಳೆ ಬಾರಿಸುವ ಒಂದು ಕ್ರಮ (ಅಳಗಂ ಸುಳಿಯಳಗಂ ಬೊಟ್ಟಳಂ ಕತ್ತರಮುಂ ಎಸೆವ ಪೊಱಕತ್ತರವಗ್ಗಳಿಸಿರೆ ನಾನಾ ಭೇದಂಗಳ ಪಹರಣಿ ತುಡುಕುಮೋಡಿಯಂ ಬಾಜಿಸಿದಂ: **ಧರ್ಮಪ,** ೨. ೨೩)

**ಅಳವಡಿಸು** – ಹೊಂದಿಸು (ಆರ್ಯಜನಕ್ಕವಂ ಅಳವಡಿಸುವ ಬಗೆಯರ್ನ ಮಹಾತ್ಮಂ ಪೇೞ್ದಂ: **ಆದಿಪು,** ೬. ೫೬); ಪರಿಹರಿಸು (ಮಲಯೋಚ್ಚರ ಪವನಂ ಸೊಗಯಿಪ ಚಮರರುಹ ಅನಿಲನಿಂ ಒಗೆವ ಬೆಮರಂ ಅಳವಡಿಸುವಿನಂ: **ಶಾಂತಿಪು,** ೯. ೭೯)

**ಅಳವಡು** – ಹೊಂದಿಕೊ (ಮಿಂಚುವೆತ್ತ ಸುಲಿಪಲ್ಗಳಳವಟ್ಟ ದುಕೂಲಮೊಪ್ಪೆ ಬೆಳ್ಪಸದನಂ ಅಂತದೇಂ ಎಸೆದುದೊ ಪರಿಪೂರ್ಣ ಸುಧಾಂಶುವಕ್ತ್ರೆಯಾ: **ಸುಕುಮಾಚ,** ೯. ೧೧೪); ಸಾಧ್ಯವಾಗು (ತಂದಿತ್ತು ಕೆಯ್ಸೆಱೆಯಂ ಕೊಟ್ಟು ಅಳವಟ್ಟ ಸಾಱುಧನಮಂ ಮೂವಿಟ್ಟಿಗಂ ಪೂಣ್ದು ಕಾಲ್ಗೆಱಗಿತ್ತರಿಗಂಗೆ ಬೆರ್ಚಿ ಭಯದಿಂ ಗ್ರಾಮಂ ಕುಳಂ ರಾಜಕಂ: **ಪಂಪಭಾ,** ೬. ೩೦); ಸೇರಿಸು, ಕೂಡಿಸು (ಕೆಯ್ಸೆಱೆಯಂ ಕೊಟ್ಟು ಅಳವಟ್ಟ ಸಾರಧನಮಂ ಮೂವಿಟ್ಟಿಗಂ ಪೂಣ್ದು ಕಾಲ್ಗೆಱಗಿತ್ತು ಅಂತೆ ಅರಿಗಂಗೆ ಬೆರ್ಚಿ ಭಯದಿಂ ಗ್ರಾಮಂ ಕುಳಂ ರಾಜಕಂ: **ಪಂಪಭಾ,** ೬. ೩೦)

**ಅಳವಳಿಸು** – ಶಬ್ದಮಾಡು (ಪೊಸತು ಅಲರ್ದ ಅಂಭೋರುಹದೊಳ್ ಮುಸುಂಬು ಮುಱುಗುವಿನಂ ಎಱಗೆ ಗಂಧಮಂ ಆಘ್ರಾಣಿಸುತುಂ ಅಳವಳಿಸುವ ಅಳಿಗಳ ಪಸವೋಡಿದುದಿಲ್ಲ ರಜನಿಸಮಯ ಅತ್ಯಯದೊಳ್: **ಅಜಿತಪು,** ೬. ೬೬); ಶಕ್ತಿಗುಂದು (ಅಳವಳಿಸಂ ಬೆಬ್ಬಳಿಸಂ ಕಳವಳಿಸಂ ಕನಲಂ ಒನಲಂ ಅೞ್ಕಂ ಚಳವಳಿಸಂ ಚಪ್ಪರಿಸಂ ತಳವಳಿಸಂ ಬೇಸಱೆಯ್ದು ಬೆಳ್ಮೊಗದಿನಿರಂ: **ಅಜಿತಪು,** ೫. ೯೦)

**ಅಳವಱೆ** – [ಅಳವು+ಅಱೆ] ಅಳತೆಯನ್ನು ತಿಳಿ (ಸೂರ್ಯಕಾಂತದ ಧೂಪಗುಂಡಿಗೆಯೊಳ್ ಅಳವಱೆಯದೆ ಸೆಜ್ಜೆವಳನಿಕ್ಕಿದ ಕೇಶಸಂಸ್ಕಾರಕಾಳಾಗರುಧೂಪಂ: **ಆದಿಪು,** ೫. ೨೩)

**ಅಳವಟಿ** – [ಅಳವು+ಅಟಿ] ಯೋಗ್ಯತೆ ಹಾಳಾಗು (ಮಹಿಮಾಕರಂನೀದೊರೆಯನುಂ ಅಳವಟಿಯೆ: **ಆದಿಪು,** ೧೪. ೧೧೨)

**ಅಳವಾಱು** – ಶಕ್ತಿಗುಂದು (ನೀರೆಯನೇಱಸುತ್ತೆ ಖೇಚರನೊಲವಿಂದೆ ತನ್ನ ಪೆಗಲೊಳ್ ಬಿಗಿದು ಅಭ್ರಪಥಪ್ರದೇಶದೊಳ್ ಬರುತ ಅಳವಾಱೆ: **ಶಬರಶಂ,** ೧. ೪೪)

**ಅಳವಿ** – ಪ್ರಮಾಣ, ಅಳತೆ (ಸಾರಸಹಕಾರಧಾರಾಸಾರಂ ಕೊಳದ ಅಳವಿಯಂತೆ ಸುರಿತರೆ: **ಆದಿಪು,** ೬. ೯೫); ಶಕ್ತಿ, ಯೋಗ್ಯತೆ (ಕಡಲ ತಡಿಯೆಯ್ದೆ ನೆಲನಂ ಪಡೆದರ್ ಭವದೀಯಪುತ್ರರುಳ್ಳ ಅಳವಿಗಳೊಳ್: **ಆದಿಪು,** ೯. ೯೮)

**ಅಳವಿಗ** – ಪರಾಕ್ರಮಿ (ಕಪ್ಪಡಿನಾಗಿ ಬಂದೆಂ .. .. ಅಳವಿಗನಪ್ಪುದನಾಂ ತೋರ್ಪೆಂ: **ಹರಿವಂಶ,** ೫. ೧೭)

**ಅಳವಿಗಳೆ** – ಮಿತಿಮೀರು (ಅಳವಳವಿಗಳೆದ ನವಪರಿಮಳಕ್ಕೆ ಗೆಂಟಾಗಿ ಮದನಮಂಗಳದೀಪಂಗಳ್ ಇವೆಂದು ಪೂತ ಸಂಪಗೆಗಳೊಳ್ ಎಳಸದೆ ಮೊಱೆದು ತಿರಿವುವು ಅಳಿಗಳ ಬಳಗಂ: **ಶಾಂತಿಪು,** ೭. ೧೪೧)

**ಅಳವಿಗಟಿ** – ಅಳತೆ ಮೀರು (ಕೆಚ್ಚುವಿರ್ದ ಮಚ್ಚನುಮುರ್ಚಿಪೋದ ಮೇಳಮುಮಂ ಅಳವಿಗಟಿದಲಂಪುಮಂ: **ಆದಿಪು,** ೪. ೫೨ ವ)

**ಅಳವಿಗಾಣ್** – ಪರಿಮಿತಿಯನ್ನು ಕಾಣು (ಮಾನಭಂಗಮಂ ಮಾಡೆ ಮನಃಕ್ಷತಕ್ಕೆ ಅಳವಿಗಾಣೆವು: **ಪಂಪಭಾ,** ೬. ೧೬)

**ಅಳವಿಗೆಡು** – ಅಂತಸ್ತನ್ನು ಕಳೆದುಕೊ (ಪೆಱನಿಕ್ಕುಂಗೂಟಕೊಳಂ ಕೀಟಿಲೊಳಂ ಅಳವಿಗೆಟ್ಟಿರ್ಪ ನಿಮ್ಮಿರ್ಪುದರ್ಕಂ ಮಱುಗುತ್ತಿರ್ಪಳ್ಗೆ: **ಪಂಪಭಾ,** ೮. ೭೧)

**ಅಳವಿದಪ್ಪು** – ಅಳತೆ ಮೀರು (ಅಳವಿದಪ್ಪ ಆಕುಳತೆಯಿಂ ಬಂಧುಜನಂಗಳ್ ಕೆದಱೆ: **ಚಂದ್ರಪ್ರಪು,** ೫. ೧೯ ವ); ಗುರಿ ತಪ್ಪು (ಬಟಿಗೊಳ್ವ ಮಿಗಮುಮಂ ಕಳಿಪದೆ ತಾನೊಂದಳವಿದಪ್ಪದೆ ಎಚ್ಚು: **ಪಂಪಭಾ,** ೫. ೪೮)

**ಅಳವು** – ಶಕ್ತಿ (ವಿಜಯಾರ್ಧಾದ್ರಿಯನುರ್ಚಿ ಬರ್ಪ ಅಳವಿದೇಂ ಸಾಮಾನ್ಯಮೇ: **ಆದಿಪು,** ೧೩. ೫೭); ಅಳತೆ, ಪ್ರಮಾಣ (ದುಗ್ಧಸ್ನಿಗ್ಧಧಾರಾ ಪ್ರವಾಹಂ ಅಗುರ್ವಾಗಿರೆ ಸುತ್ತಲುಂ ಪರಿವಿನಂ ಚೆಲ್ವಾಗೆ ಜೈನಾಭಿಷೇಕಮನಾನಂದದೆ ಮಾಡಿದೊದು ಅಳವಂ ಆನೇಟ್ಸೆನಾ ಕಾಂತೆಯಾ: **ಸುಕುಮಾಚ,** ೧೦. ೩೩)

**ಅಳಸಗಾಮಿನಿ** – ಮಂದಗಾಮಿನಿ (ಕಚಭಾರ ಅಳಸಗಾಮಿಣಿಪರಿವೃತಂ ಗಂಗಾತರಂಗೋಪಮಾನ ಚಳಚ್ಚಾಮರವಾತಪೀತನಿಜ ಘರ್ಮಾಂಭಃಕಣಂ.. .. ಇರ್ದನಂದು ಸುಖದಿಂ: **ಪಂಪಭಾ,** ೩. ೮೫)

**ಅಳಸು** – ಸುರತಧ್ವನಿಮಾಡು (ಅಳಸುವ ದನಿ ಬಳಸುವ ಮದೆಕೊಳಿಸುವ ಕೋಡೆಱಕೆ ಮೆಱೆಯೆ ತಳಿರ್ಗೊಂಬುಗಳೊಳ್ ಗಿಳಿ ಪರಳ್ವರಗಿಳಿ ಪೆಣ್ಗಿಳಿಂ ಎಳಮಾವಿಳಿಸಿದುದು ರತಿಯ ಜಕ್ಕನ್ದೊಟಿವಂ: **ಅನಂತಪು,** ೬. ೮೦); ಸುರತಧ್ವನಿ (ಬಹುಪ್ರಕಾರದಳಸಂ ತೋಱುತ್ತೆ .. .. ಕೀರಮಿಥುನಂ ಕೂಡಿತ್ತೊ ಕಾದಲ್ಮೆಯಿಂ: **ಲೀಲಾವತಿ,** ೬. ೧೦೪)

**ಅಳಱು** – ತೊಲಗಿ ನಾಶವಾಗು (ಅಳಱೆ ಕಿಡೆ ಘಾತಿಗಳ್ ದಾನಳಾಭಭೋಗೋಪಭೋಗವೀರ್ಯಂಗಳೊಳ್ ಅಗ್ಗಳಿಸಿದ ಅನಂತಚತುಷ್ಟಯ: **ಆದಿಪು,** ೧೦. ೧೫); ನಡುಗು ಭರದಿಂದಂ ದಂಡದೊಳ್ ತಾಟಿಸಿದೊಡೆ ವಿಜಯಾರ್ಧಾಚಳಂ ತೊಟ್ಟನಾಗಳ್ ಬಿರಿದತ್ತೆಂಬಂತುಂಆ ಪರ್ವತಂ ಅಳಱೆದುದೆಂಬಂತು: **ಆದಿಪು,** ೧೩. ೩೬)

**ಅಳಱಿಸು** – ಹೆದರಿಸು (ನೆಲದೊಳ್ ಪಗೆ ಪುಗೆ ಫಣಿಯವೊಲೊಳಪೊಕ್ಕು ಅಳಱೆಸಿದನೆಂಬ ನಿಯಮಂ ದೂಷ್ಯಂ: **ಶಬ್ದಮದ,** ೨೯ ಪ್ರ ೬); ಚೆದುರಿಸು (ವಿಂಧ್ಯಕಂ ಅತಿಬಳಂ ಅಳಱೆಪಂ ಎಯ್ದೆ ಕಾಯ್ದು ಮೃಗರಿಪುತತಿಯಂ: **ಕರ್ಣನೇಮಿ,** ೧. ೭೪)

**ಅಳಱು** – ಚದುರು (ಅನ್ನೆಗಮತ್ತ ಸಂಸಪ್ತಕಬಲಮೆಲ್ಲಮಂ ಅಳಱೆ ಪೆಳಱೆ ಕಿವುಟಿದುಟಿದು ಕೊಲ್ವಲ್ಲಿ ವಿಕ್ರಮಾರ್ಜುನಂ ಮುರಾಂತಕನೊಳ್ ಇಂತೆಂದಂ: **ಪಂಪಭಾ,** ೧೧. ೧೦ ವ);

ಹಾಳಾಗು (ಕರಿಮಕರಾಹತಿಯಿಂ ಬಿರಿದಳಱುವ ಭೈತ್ರದಂತೆ ವಿವಿಧಾಯುಧದಂತುರಿತಂಗಳಟೆದುವು: **ಪಂಪಭಾ,** ೧೩. ೩೫); ಭಯಪಡು (ಸಕಳಭುವನಂ ಒಂದೊಂದಱೊಳ್ ಕೇಣಿಗೊಂಡು ಉಚ್ಚಳಿಸಲ್ ಸೂಸಲ್ ಪಳಂಚಲ್ ಪಿಡಿದು ಒಡೆದು ಅಳಱಲ್ ಪಾಱೆ ಜೀಱೇಟಿಲ್ ಅಂದು ಉಮ್ಮಳಿಸುತ್ತೆ ಅತ್ತಿರ್ದೊಡೆ ಆವಂ ಹರಿಗನೊಳ್ ಇದಿರ ಮೀಱೆ ಮಾಱಾಂಪ ಗಂಡಂ: **ಪಂಪಭಾ,** ೧೦. ೬೫)

**ಅಳಿ –** ದುಂಬಿ (ಕಳಮಕ್ಷೇತ್ರಂಗಳ ಪರಿಮಳಕ್ಕೆ ಮಂಡಳಿಸುವ ಅಳಿಗಳಿಂದ ಎಸೆವ ವಿಯತ್ತಳಂ: **ಆಚವರ್ಧ,** ೧. ೪೫)

**ಅಳಿಕ –** ಅಲಿಕ, ಹಣೆ (ಅಂತಾ ಫಣಿಕಾಂತೆಗೆ ಅಮರಿಕಾಂತಾ ಅಳಿಕಫಳಕತಿಳಕಹರನೆನಿಪ ಅರಿಗಂಗಂ ತನಯನಧಿಕ ತೇಜೋವಂತಂ ಇಳಾವಂತಂ ಇಂದುಮಂಡಳಕಾಂತಂ: **ಪಂಪಭಾ,** ೪. ೧೮); ಕಪಟ (ಅಕ್ಷರದರಿದ್ರರ ಅಳಿಕವಿಚಕ್ಷಣರ್ ಓದಿದೊಡಮಪ್ಪುದೇಂ .. .. ಕಾವ್ಯಕಳಾಶಿಕ್ಷಕರ್ .. .. ಈಕ್ಷಿಸೆ ಕೃತಿಯಂ ಕೃತಾರ್ಥರಲ್ಲರೆ ಕವಿಗಳ್: **ಲೀಲಾವತಿ,** ೧. ೬೭); ಹೇಡಿ (ಪಿಡಿವಡೆ ಬಲ್ಪಿಂ ಪಾವಂ ಪಿಡಿವಂತಿರೆ ಪಿಡಿವುದು ಅಳಿಕನಾದೊಡೆ ತನ್ನಂ ಪಿಡಿಯದೆ ಮಾಣದು: **ಪುಣ್ಯಾಸ್ರ:** ೩. ೫೯)

**ಅಳಿಕಲಭ –** ಮರಿದುಂಬಿ (ಕುಸುಮಿತ ಚಂಪಕಾನೋಕಹಮಂ ಕಂಡ ಅಳಿಕಲಭದಂತೆ ಮೊಗಂದಿರಿಪೆಯುಂ: **ಪಂಪರಾ,** ೮. ೩೦ ವ)

**ಅಳಿಕಾಬಂಧ –** ಬಾಸಿಂಗ (ಕ್ಷಳಕ್ಕೆ: ಅರ್ಗ್ಗಳಂ–ಅಗ್ಗಟಿ, ಅಳಿಕಾಬಂಧಂ–ಅಟೆಗೆವಂದಂ:: **ಶಬ್ದಮದ,** ೩೧ ಪ್ರ)

**ಅಳಿಕುಂತಳ –** ದುಂಬಿಯಂತೆ ಕಪ್ಪಾದ ಕೂದಲು (ಅಪಾಂಗರೋಚಿಯಿಂ ಪಡೆದಳಿಕುಂತಳಕ್ಕಲರ ಬಾಸಿಗಮಂ: **ಚಂದ್ರ ಪ್ರಭು,** ೭. ೭೭)

**ಅಳಿಗಬ್ಬ –** ಕೀಳು ಕಾವ್ಯ (ಪರೋಕ್ತಿಯುಕ್ತಿಯಂ ವಿರಚಿಸುತ ಅಂತುಂ ಇಂತುಂ ಅಳಿಗಬ್ಬಮನಾಗಿಸಿ ಕೇಳಿಸುತ್ತೆ: **ರಾಜಶೇವಿ,** ೧. ೨೩)

**ಅಳಿಗೂರ್ಮೆ –** ನಾಸವಾಗದ ಪ್ರೀತಿ (ಬೆಲೆವೆಣ್ಣಳಿಗೂರ್ಮೆ ಪೆರ್ಮೆಯಂ ಮಾಡುಗುಮೇ: **ಧರ್ಮಮಧು,** ೧. ೧೧೨)

**ಅಳಿನೀ –** ಹೆಣ್ಣು ದುಂಬಿ (ಪಾಸಱೆ ಸಿಂಹಪೀಠಂ ಅಳಿನೀರುತಿ ಮಂಗಳಗೀತಿ ಭೂತಳಂ ಪಾಸು ಮೃಗವ್ರಜಂ ಪರಿಜನಂಪೊದಱ್ ಓಲಗಸಾಲೆ .. .. ಎನಲ್ .. .. ಸುಖಾವಾಸನಿಮಿತ್ತವಾಯ್ತೊ ವನವಾಸಮೆ ಪಾಂಡುಪುತ್ರರಾ: **ಪಂಪಭಾ,** ೭. ೨೯)

**ಅಳಿಪ –** ಆಸೆಗಾರ (ಆಯುಷ್ಯಂ ಪೆರ್ಚುಗುಂ ಎಂದು ಔಷಧಸೇವನೆಗೆಯ್ವರ್ ಅಳಿಪರ್ ಮೂಢರ್: **ಸಮಯಪ,** ೧೨. ೨೦)

**ಅಳಿಪಿಳಿವೋಗು –** ವ್ಯರ್ಥವಾಗು (ತನ್ನ ನುಡಿಗಳ್ ಅಳಿಪಿಳಿವೋಗೆ ಸೈರಿಸಲಾಱದೆ ಪಿಡಿವುದುಂ ಪಾಂಚಾಲರಾಜತನೂಜೆ ಇಂತೆಂದಳ್: **ಪಂಪಭಾ,** ೮. ೬೯ ವ)

**ಅಳಿಪು –** ಆತಿಯಾಸೆ (ಮನದ ಅಳಿಪಿಂ ತಮಾಳಲತಿಕಾಂಗಿಯರಾಟಿಸೆ ಬರ್ದುಗೆಟ್ಟು ಕಾಂಚನಲತಿಕಾಂಗಿಯರ್ ಬಯಸೆ: **ಆದಿಪು,** ೨. ೪೬); ಆಸೆಪಡು (ಎಂದು ಎನಿತಾನುಂ ತೆಱದೊಳ್ ಅಳಿಪಿನ ಲಲ್ಲೆಯ ಚೆಲ್ಲದ ಪುರುಡಿನ ಮುಳಿಸಿನ ನೆವದ ಪಡೆಮಾತುಗಳಂ ನುಡಿದುಂ ಕಾಲ್ವಿಡಿದುಂ ಅಚಳಿತಧೈರ್ಯನ ಮನಮಂ ಚಲಿಯಿಸಲಾಱದೆ: **ಪಂಪಭಾ,** ೭. ೯೪ ವ); ಬಯಕೆ (ಅಳಿಪಿನೊದವಿಂ ನೀಡುಂ ಪೀರ್ವಂದದಿ ನಡೆ ನೋಡಿ ಸಂಗಳಿಸೆ ನಿಡುಸುಯ್: **ಕಾದಂಸಂ,** ೮. ೫೩); ಕಾಮಿಸು (ಅಳಿಪು–ಲೋಲತ್ವೇ: **ಶಬ್ದಮದ,** ಧಾ ೪೪೯)

**ಅಳಿಯಕ್ಕರ –** ಹೀನ ಬರಹ (ಅಳಿಯಕ್ಕರದ ಹೊಲಿಗೆ ಬಿರ್ಚಿದೊಡೆಲ್ಲಂ ಬಱಿತಾಱಿಗ ಬೀಱಿಗಂ .. .. ಅಸ್ತವ್ಯಸ್ತಂ: **ಗಿರಿಜಾಕ,** ೧. ೨೩)

**ಅಳಿಲುಳಿ –** ಕುದುರೆಯ ಒಂಬತ್ತು ಗತಿಗಳಲ್ಲಿ ಒಂದು (ಪಲ್ಲಣಮಂ ಕಟ್ಟಿಯೇಱಿ .. .. ದಾಟು ದೀಟು ಹೊಳಹು ಹೊಮ್ಮಚ್ಚುವಡೆ ಮೋಡಿ ಭವರಿ ಭಜನೆ ಅಳಿಲುಳಿತವರತರಹಮೆಂಬ ನವಗತಿಗಳೊಳು: **ಪುಣ್ಯಾಸ್ರ:** ೭. ೫೧ ವ)

**ಅಳಸ್ಫಾರ –** ದುಂಬಿಗಳಿಂದ ಪ್ರಕಾಶಿಸುವ (ಅಳಿಸ್ಫಾರ ಕಲ್ಹಾರಪುಷ್ಪಂಗಳ ಘಂಟಾಶ್ರೇಣಿಯಿಂ: **ರಾಜಶೇವಿ,** ೨. ೨೧)

**ಅಳೀಕ –** ಸುಳ್ಳು (ಗುಣವಿಹೀನನೆನ್ನಂ ಅಳೀಕ ಮಿತ್ರನಂ ನೆನೆಯದೆ .. .. ಅದೇಕೆ ನಿಂದನೋ: **ಕಾದಂಸಂ,** ೬. ೩೫); ಕಪಟ (ಅನೇಕಕ್ಷುದ್ರವಿದ್ಯಾಗರ್ವ ದುರ್ವಿದಗ್ಧರುಮ್ ಅಳೀಕವಿಚಕ್ಷಣರುಂ ಅಪ್ಪುದಱೆಂದಂ ಅದನನುಮಾನದಿಂದಱೆದು: **ಆದಿಪು,** ೩. ೮೭ ವ)

**ಅಳೀಕಭ್ರುಕುಟಿ –** ಹುಸಿ ಹುಬ್ಬುಗಂಟು; ತೋರಿಕೆ ಕೋಪ (ಉದಾರವೀರಚರಿತನಿರತಕದನಕರ್ಕಶಕ್ಷತ್ರಿಯಂಗೆ ವಿಪಕ್ಷ ಕ್ಷತ್ರಿಯಪರಾಕ್ರಮಾಕರ್ಣನೋದೀರ್ಣ ಕ್ರೋಧದೊಳ್ ಅಳೀಕಭ್ರುಕುಟಿಯುಂ ಅನರ್ಥಲಲಾಟ ತ್ರಿಪತಾಕೆಯುಂ: **ಆದಿಪು,** ೧೪. ೮೧ ವ)

**ಅಳೀಕೋದಂತ –** ಸುಳ್ಳು ಸುದ್ದಿ (ಪರಿಪೀತಾಸವನಂತಿರ್ದ ವಾಸವನಂ ದುರ್ದಂತಂ ಅಳೀಕೋದಂತಂಗಳಂ ಆಱೆಸುತ್ತಿರ್ಪುದುಂ: **ಆದಿಪು,** ೩. ೮೮ ವ)

**ಅಳುಂಕು –** ಅಲುಗಾಡು (ಅಂದಿನ ರೂಪು ಶಾಸನಂ ಬರೆದುದು ಬರ್ಚಿಸಿತ್ತಮರ್ದುದು ಅಳುಂಕಿದುದುರ್ಚಿ ಪೊಕ್ಕು ಬೇರ್ವರಿದುದು: **ಆದಿಪು,** ೩. ೪೩)

**ಅಳುಂಬ –** ಅತಿಶಯ, ವೆಗ್ಗಳ (ಕೇಳ್ವಂಗೆ ಬಿತ್ತರಿಪಂಗಾದಂ ಅಳುಂಬಮಲ್ತೆ ಭಗವಜ್ಜನ್ಮಾಭಿಷೇಕೋತ್ಸವಂ: **ಆದಿಪು,** ೭. ೧೦೧); ಮನೋಹರವಾದ; ಆಶ್ರಯ (ತಳವಱ ಕಳ್ಳರ ಬಾರಿಯೊಳೊಳಗಾಗದೆ ನಿನ್ನ ಬರ್ದುಕಿ ಬಂದಂದಂ ಇದು ಆರಳವೀಗ ಅಳುಂಬಂ ಅಂಬುಜದಳಾಕ್ಷಿ ಪೋಗಬ್ಬೆ ಬೇಗಂ ಎಂಬುದುಂ: **ಸುಕುಮಾಚ,** ೭. ೨೪)

**ಅಳುಂಬಂ –** ಅತಿಶಯವಾಗಿ (ತದ್ದೇವೀವಿಕರಣಸಂಭವ ದೇವಿಯರುಂ ಪಲಬರೆನಗೆ ಪೊಗಟಲ್ ಅಳುಂಬಂ: **ಆದಿಪು,** ೬. ೧೫)

**ಅಳುಂಬಮಾಗು –** ಅತಿಶಯವಾಗು (ಅಲರ್ವ ಆದರಮಾದ ಅಳುಂಬಮಾಗೆ ವೈಮಾನಿಕಚಕ್ರವಾಕದೊಲವುಣ್ಮಿರೆ: **ಆದಿಪು,** ೧೦. ೧೭)

**ಅಳುಪ –** ವ್ಯಾಮೋಹಿ (ವನಿತೆ ಪರಸ್ತ್ರೀ ಪೆಱರ್ಗೆ ಇತ್ತನಿತಱೋಜೆದಱೆದುಂ ಅಳುಪಂ ಆದಂ ಅಶ್ವಗ್ರೀವನ ಮಿಱ್ತು ಪೊಟ್ಟುವು ಆರ್ದಪುದು **ಶಾಂತಿಪು,** ೫. ೫೦)

**ಅಳುಪು –** ಪ್ರೀತಿ (ಆಯಿಲದ ಅಳುಪಿನ ಇಟೆವಿಟೆಯುಂ ಕುತ್ತದ ಮಱುಕದ ಚಿತ್ತವೃತ್ತಿಯುಂ ಅಪಮೃತ್ಯುವಿನ ಸತ್ವಬಾಧೆಯ ಗಂಧಾಗಂಧಮುಂ ಇಲ್ಲ: **ಶಾಂತಿಪು,** ೬. ೧೦೨ ವ)

**ಅಳುರ್** – ಆವರಿಸು, ಹಬ್ಬು (ಉರಿ ಅಳುರ್ವಂತತತಿದಾಹಜ್ವರಮ್ ಅಳುರೆ: **ಆದಿಪು,** ೨. ೧೨); ಸುಡು (ನಾಗರ ಖಂಡಂಗಳಂ ಆ ನಾಗರ ಖಂಡದೊಳೆ ತೊಡರೆ ನರಂ ಇಸುವುದುಂ ನಾಗರ ಖಂಡಂಗಳುಮಂ ನಾಗರ ಖಂಡಮುಮಂ ಅಳುರ್ದುಕೊಂಡಂ ದಹನಂ: **ಪಂಪಭಾ,** ೮೯): ಪ್ರಕಾಶಿಸು (ಕರತಳದರುಣದ್ಯುತಿ ತಳ್ತಿರೆ ಬಂದುಗೆಗೆತ್ತು ನೋಡೆ ಕಣ್ಗದಿರ್ ಅಳುರ್ದು ಒಪ್ಪಿರೆ: **ರಾಜಶೇಖಿ,** ೧೦. ೩೫)

**ಅಳುರ್ಕೆ** – ವ್ಯಾಪಿಸುವುದು, ಆಧಿಕ್ಯ (ಚುಂಬನಾಭಿಲಾಷೆ ತನಿಗೆತ್ತು ಬಾಯ್ಗೆ ಬಳಸಲ್ ಪದೆದಟ್ಟು ಅಳುರ್ಕೆ ತೋಳ್ಗೆ ಬಂದೊದವಿರೆ: **ಆದಿಪು,** ೪. ೧೫); ಮರೆಯಾಗು (ಘನನಿನದಕ್ಕನುರೂಪಂ ಇದೆನೆ ಸಂಜೀವಕಂ ಅಳುರ್ಕೆಯಿಂ ಕೆಲೆಯೆ ಮಹಾಧ್ವನಿಯಿಂ: **ಪಂಚತಂತ್ರ,** ೮೦); ಸಾಮರ್ಥ್ಯ (ತದೀಯಸೂನು ದೋರ್ದಂಡದ ಅಳುರ್ಕೆಯಿಂ ಸರರಂ ಅಂಡಲೆದಂ: **ಕರ್ಣನೇಮಿ,** ೭.೪೨)

**ಅಳುರ್ಕೆಗೊಳ್** – ಆವರಿಸು (ಜಲಜಲನೆ ಒಟ್ಟುತಿರ್ಪ ಪರಿಕಾಲ್ ಪರಿಕಾಲೊಳ್ ಅಳುರ್ಕೆಗೊಂಡ ನೈದಿಲ ಪೂ .. . ಸಿರಿ ನೋಡುಗುಮಾ ವನಾಂತರಾಳದೊಳ್: **ಪಂಪಭಾ,** ೧. ೫೨)

**ಅಳುರ್ಕೆವೆಱು** – ಅತಿಶಯವಾಗು (ಮುಕುಂದಂ ಸಭಾಂತರಮಂ ಪೊಕ್ಕನಳುರ್ಕೆವೆತ್ತದಟಿಂ: **ಕರ್ಣನೇಮಿ,** ೬. ೧೧೭)

**ಅಳುರ್ಚು** – ಹರಡು (ಜಯಮಂ ಬಯಸುವೊಡಂ ಮಾರಿಯಂ ಆವರ್ತಿಸಿದರ್ ಎಂಬ ನಾಣ್ಣುಡಿಗಂ ಅಳುರ್ಚಿಯೆ ನಿನ್ನೊಳ್ ಎಡಱೆ ತನಗಱೆಕೆಯ ಮಿಟ್ಟುವಂ ಇಂತು ತಂದುಕೊಂಡರುಂ ಒಳರೇ: **ಶಾಂತಿಪು,** ೩. ೭೨)

**ಅಳೆ** – ಮಜ್ಜಿಗೆ (ಪ್ರಥಮ ದಿವಸದೊಳೆ ಪಾರಕಿನ ಕೂೞುಂ ಅವರೆಯುಂ ಎಣ್ಣೆಯುಂ ಆಡಿನ ಅಳೆಯುಮಂ ಬಡ್ಡಿಸಿದೊಡೆ: **ವಡ್ಡಾರಾ,** ಪು ೬೭, ಸಾ ೨೬); ಅಳತೆ ಮಾಡು (ಎಳೆಯೆಳೆ ಕೊಳೆ ನಾರ್ಪವನನಿವನೆನೆಯುಂ ಅಳೆ ಅಳೆ ನಾಣ್ಗೆಟ್ಟವನಿನನೆನೆಯುಂ: **ಹರಿವಂಶ,** ೧೦. ೧೦)

**ಅಳ್ಕಜಕಾಱ** – ಹೊಟ್ಟೆಕಿಚ್ಚು ಪಡುವವನು (ಅಳ್ಕಜಕಾಱನವಂಗೆ ಪುತ್ರಸಂಪದಮೆ ದಲೇಕೆ ಬೇಱೆ ಪರಪುತ್ರರನೀಕ್ಷಿಪ ತುಷ್ಟಿ ಸಾಲದೇ: **ರಾಜಶೇಖಿ,** ೧. ೩೫)

**ಅಳ್ಕಾಟ** – ನಡುಕ (ಆಟಂ ಮನಸಿಜನ ಅಂಬೆರ್ದಾಟಂ ನಡೆನೋಟ್ಟಿ ಜನದ ಮನದ ಅಳ್ಕಾಟಂ: **ಅಜಿತಪು,** ೫. ೪೪)

**ಅಳ್ಕಾಡು** – [ಹೆದರಿಕೆಯಿಂದ] ನಡುಗು (ನೆಲಂ ಮೊೞಗಿದುದು ಒಂಬತ್ತು ಗ್ರಹಂಗಳ್ ಅಳ್ಕಾಡುತಿರ್ದುವು: **ಶಾಂತಿಪು,** ೩. ೧೦೩) ; ಶಿಥಿಲವಾಗು (ಪೊಕ್ಕು ಅಮಿತಶ್ರಮದಲ್ಲಿ ಅಳ್ಕಾಡೆ ತೊೞಲ್ದಿ ತೂಳ್ದು: **ಕುಸುಮಾಕಾ,** ೧೦. ೧೩)

**ಅಳ್ಕಿಸು** – ಜೀರ್ಣಿಸು (ಖಳದುಶ್ಶಾಸನಲೋಹಿತ ಜಳಮಂ ಕುಡಿದೆಂ ಅಸುಂ ಅಳ್ಕಿಸಲಾಱದೆ ಕಣ್ಣೊಳೆ ಕಾಱುವಂತೆ ಕೌರವಕುಳಾಂತಕಂ ತರಲತಾಮ್ರಲೋಚನನನಾದಂ: **ಗದಾಯು,** ೮. ೫); ಅಂಜಿಸು (ಲಾಳನನಿಕ್ಕಿ ಮಾಳವನಂ ಅಳ್ಕಿಸಿ ಗೂರ್ಜರನಂ ಪೊರಳ್ಚಿ: **ರಾಜಶೇಖಿ,** ೬. ೩೮)

**ಅಳ್ಕು** – ಅಳುಕು, ಹೆದರು (ನೀಮಿದಾವುದು ಪಡೆಮಾತನಿಂತು ನುಡಿದಿರ್ ಪುದುವಾಟ್ಕೆಯೊಳೆನ್ನ ಬಳ್ಕಿದ ಅಳ್ಕಿದ ಬಗೆಗಂಡಿರೇ: **ಪಂಪಭಾ,** ೧೧. ೫೦); ಹಿಂಜರಿ (ಕಡಕುಂ ಪೆಟ್ಟೆಯುಂ ಒತ್ತೆ ಮೆಲ್ಲಡಿಗಳಂ ಬಳ್ಕುತ್ತುಂ ಅಳ್ಕುತ್ತುಂ ಓರಡಿಗೆ ಒರ್ಮೊರ್ಮೆ ಕುಳುತ್ತುಂ ಏೞುತಿರೆ: **ಪಂಪಭಾ,** ೩. ೯); ದುರ್ಬಲಗೊಳ್ಳು (ಮೊದಲೊಳ್ ಸೊರ್ಕಿದವಂಗೆ ಕಳ್ ವಿಷದಿಂ ಅಳ್ಕಿರ್ದವಂಗೆ ದುರ್ನಿದ್ರೆ ಕಾಣದವಂಗೆ .. ..ಬೀಸಿದ ಕಣ್ಮಾಯದ ಕುಂಚದಂತಿರೆ ಎನಗಾದತ್ತು: **ಕಾದಂಸಂ,** ೪. ೩೯); ಹೆದರಿಕೆ (ಅಳ್ಕೆಂದು ಭಯಂ: **ಶಬ್ದಮದ,** ಪ್ರಸಾ, ೨೦)

**ಅಳ್ಕುಱು** – ಭಯಪಡು (ಕರಿ ನೊಂದು ಕೋಪದಿಂ ಪಿಡಿದೆೞಗಿತ್ತು ಭೀಮನನುಗುರ್ವಿಸಿ ಪಾಂಡುಸೈನ್ಯಂ ಅಳ್ಕುಱಲ್: **ಪಂಪಭಾ,** ೧೧. ೭೪)

**ಅಳ್ಗಿಡಿ** – ಸಣ್ಣ ಕಿಡಿ (ಮೊನೆಯಂಬುಗಳ್ ಅಳ್ಗಿಡಿವೋಗೆಯುಂ ಮನಂಗಿಡಂ ಆಂಕೆಗೊಳ್ಳಂ ಅಗಿಯಂ ಸುಗಿಯಂ ಸುರಸಿಂಧುನಂದನಂ; **ಪಂಪಭಾ,** ೧೧. ೪೪)

**ಅಳ್ತಿ** – ಪ್ರೀತಿ (ಕೂರ್ತು ಪೇಳ್ವ ಅಳ್ತಿಯಿಂದಂ ಕಾವ್ಯಂ ಕಲ್ಪಾಂತರಸ್ಥಾಯಿ ಎನಿಪ ನುಡಿ: **ಗಿರಿಜಾಕ,** ೧. ೧೬)

**ಅಳ್ದರಿ** – ಕಣಿವೆ (ಆ ಕಾಲದೊಳ್ ದರಿಯುಂ ಅಳ್ದರಿಯುಂ ಕುೞಿಯುಂ ಕುತ್ತುಱುಂ .. .. ಪುಟ್ಟಿ: **ಪಂಪರಾ,** ೧. ೮೧ ವ)

**ಅಳ್ವಿಕೊಳ್** – ಮುನ್ನುಗ್ಗಿ ಕೊಳ್ (ಅಳ್ವಿಕೊಳ್ವ ವಿರಹಜ್ವರದ ಉಗ್ರತರಾತಿರೇಕದಿಂ ತಡಹರಮೆರ್ದುವು ಎಂಬಿನೆಗಂ ಎಯ್ದುವು ಮೆಯ್ನವಿರಾ ಮೃಗಾಕ್ಷಿಯಾ: **ಲೀಲಾವತಿ,** ೧೨. ೩೭)

**ಅಳ್ವು** – ಹಬ್ಬು, ವ್ಯಾಪಿಸು (ಭುಗಿಲೆನೆ ನೆಗೆದು ಅಳ್ವಿದ ತತ್ಪಗಾಧಿರಾಜ ಪ್ರಚಂಡ ಕೋಪಾಗ್ನಿ: **ಆಚವರ್ಧ,** ೮. ೨೨)

**ಅಳ್ಳಿಱಿ** – ನಡುಗಿಸು (ಕಟ್ಟಲೆಯನಲೆವ ಸೊಡರ್ಗುಡಿಗಳನೀ ಅಳ್ಳಿಱಿದಲೆವುವು ಬನದೊಳಗುಳ್ಳಲರ್ದುಜ್ವಳಿಪ ಚಂಪಕಪ್ರಸವಂಗಳ್: **ಆದಿಪು,** ೧೧. ೬೭); ತಿವಿ (ಕುಳಾಚಳದಂತೆ ನಭಮಂ ಅಳ್ಳಿಱಿವ ಉತ್ತುಂಗ ಚೈತನ್ಯಕುಲದಿಂ: **ಮಲ್ಲಿನಾಪು,** ೨. ೪೨ ವ)

**ಅಳ್ಳಿಱಿಸು** – ನಡುಗುವಂತೆ ಮಾಡು (ಆ ತನೂದರಿಯರ್ ಆನಾಭೆಯನ ಮನಸ್ಸರಸ್ತಟಮಂ ತಮ್ಮ ವಳಿತ್ರಯ ತರಂಗಗಳಿಂದಂ ಅಳ್ಳಿಱಿಯಿಸಿ: **ಆದಿಪು,** ೮. ೨೪ ವ)

**ಅಳ್ಳೆ** – ಪಕ್ಕೆ (ಬಸಿರ್ ಉಗುರ್ ಪುರ್ವು ಅಳ್ಳೆ ಪಲ್ ಕೆಕ್ಕೆ ಕಾಲ್ ಅಡಿಯೆಂದಿಂತಿವಂ ಉರ್ಚಿಪೋದುವು ಇಸೆ ತತ್ಸೌಜನ್ಯ ಕಂದಾಂಕುರಂ: **ಶಾಂತಿಪು,** ೪. ೧೭)

**ಅಳ್ಳೆಗೊಂಬು** – ಸಣ್ಣ ರೆಂಬೆ (ನನೆಯಂ ಪೂಗೊಂಚಲಂ ಕಾಯ್ಗಳಂ ತನಿವಣ್ಣಂ ತಳೆದಳ್ಳೆಗೊಂಬು ತರದಿಂ ಚೆಲ್ವಾದುದಿಮ್ಮಾವಿನೊಳ್: **ಕಬ್ಬಿಗಕಾ,** ೫೩)

**ಅಳ್ಳೆಜೊಳ್ಳೆತನ** – ನಿಸ್ಸಾರವಾಗಿರುವುದು (ಜೋಲ್ದು ಸಡಿಲ್ದಿರ್ದೊಡಲ ಅಳ್ಳೆಜೊಳ್ಳತನಮಂ ಮೇಣ್ಕಾಣನೋ: **ಆದಿಪು,** ೨. ೪೫)

**ಅಳ್ಳೆಜೊಳ್ಳೆಯ** – ಶಕ್ತಿಹೀನ (ದುರಿತವಿರೋಧಿಗಳ ಅಳ್ಳೇಱೊಳ್ ಅಳ್ಳೆಜೊಳ್ಳೆಯನಾದೆಂ: **ಅಜಿತಪು,** ೨. ೮೩)

**ಅಳ್ಳೆಯಾಗು** – ದುರ್ಬಲಗೊಳ್ಳು (ಬೇಟದ ತೋಟಿಯಂ ತೊಡರ್ದಟ್ಟುಪೆತ್ತ ಪೊಲೆವುಲ್ಲೆ ಅಳ್ಳೆಯಾದ ಮಾತಂ ತನ್ನ ಸೂಟಿಯ ಬೇಸಱಿಂ ಕೆಳೆಯಂಗಿತೆಂದಂ: **ಆದಿಪು ನರಸಿಂ,** ೧೨. ೨೮ ವ)

**ಅಳ್ಳೆವಿಳ್ಳೆಯಾಗು** – ಆಯಾಸದಿಂದ ಜರ್ಜರಿತವಾಗು (ಪಗಲಿನ ಅನುವರದೊಳ್ ಅಳ್ಳೆವಿಳ್ಳೆಯಾದ ಪಾಂಡವರಂ ಇರುಳೊಳ್ ಗೆಲ್ವೆನೆಂದು ಚತುರ್ಬಲಂಗಳಂ ಒಂದುಮಾಡಿ: **ಪಂಪಭಾ,** ೧೨. ೪ ವ)

**ಅಳ್ಳೆರ್ದೆ** – ಮೃದುಹೃದಯ (ಸ್ವಯಂಪ್ರಭೆ ಲಲಿತಾಂಗನ ಅಳ್ಳೆರ್ದೆಗೆ ತೊಟ್ಟನೆ ಬೇಂಟಮೆ ಪುಟ್ಟೆ ಪುಟ್ಟಿದಳ್: **ಆದಿಪು,**

೨. ೭೩); ಅಸ್ಥಿರ ಮನಸ್ಸು (ಆನಂದವಾರಾಶಿಯೊಳ್ ಮುೞುಗಿರ್ದಳ್ಳಿರ್ದೆ ಮೂಡದಂತು ಕುವರಂ ಕೂಡಿರ್ದನಬ್ಜಾಕ್ಷಿಯೊಳ್: **ನೇಮಿನಾಪು,** ೩. ೧೦೭)

**ಅಳ್ಳೆವಿಳ್ಳೆಯಾಗು** – ಚದುರಿ ಹೋಗು (ಓಳಿವಟ್ಟು ಬರ್ಪ ಶಂಖದ ಬಳ್ಳವಳ್ಳಿಗಳುಮನಳ್ಳೆವಿಳ್ಳೆಯಾಗಿ ಪೋಗಲೀಯದೆ: **ಆದಿಪು,** ೧೨. ೭೯ ವ); ತುಂಬ ದಣಿ (ಪಯಣದೊಳ್ ಅಳ್ಳೆವಿಳೆಯಾಗಿ ಬಂಬಲ ಬಾಡಿದ ತನುಲತೆಗಳುಂ: **ಆದಿಪು,** ೧೧. ೭೦ ವ)

**ಅಳ್ಳೆವೊಯ್** – ಪಕ್ಕೆ ಬಡಿದುಕೊ (ಪೊಣ್ದು ಅಖಿಳಶಕ್ತಿಯನೆತ್ತುತುಂ ಅಳ್ಳೆವೊಯ್ಯೆ ನಿಃಪಾಟರಾಗಿ ಪಿಂಗೆ: **ಅಚವರ್ಧ,** ೩. ೪೫)

**ಅಳ್ಳೇಱು** – ಜೋರಾದ ಏಟು (ಪಾಱುವ ವಿಮಾನದೊಂಳ್ಳೇಱಿಂ ಪಱಿದುಗುವ ಮುಗಿಲ ನೀರ್ಗಳ ಪಲವುಂ ಪೀಱುಗಳೊಳ್; **ಆದಿಪು,** ೪. ೮೬)

**ಅಳ್ಳೊಱತೆ** – ನೀರಿನ ಬುಗ್ಗೆ (ಅಂತು ಪೋಪಿನಂ ಒಂದೆಡೆಯೊಳ್ ಇಡಿದ ಮಟಲೇರಿಕೊಂಡು ಬಳಸಿ ತಳಿದಳ್ಳೊಱತೆಯೊಳ್: **ಲೀಲಾವತಿ,** ೬. ೫೫ ಮತ್ತು ೫೬)

**ಅಱ** – ಧರ್ಮ (ಅಸತ್ಯವಾದಮಂ ಪೊಸಯಿಸಿ ಜೀವನಿಲ್ಲ ಮೋಱಯಿಲ್ಲ ಅಱನಿಲ್ಲ ಪರತ್ರೆಯಿಲ್ಲ: **ಆದಿಪು,** ೨. ೧೧); ಯಮಧರ್ಮ (ಅಱನ ಮಗಂ ಪ್ರಾರ್ಥಿಸೆ ಬಾಂದೋಱಯ ಮಗಂ ಮಾಡೆ ಸಂದಿಯಾದಪುದೆನುತುಂ ಮಱುಗುವೆಂ: **ಗದಾಯು,** ೧. ೭೨)

**ಅಱಬುಗಱ** – ಅಪಶಕುನ ನಿವಾರಣೆಗೆ ಹಸುವಿನ ಹಾಲು ಕರೆ (ಅನಂತರಂ ಸಮಸ್ತ ಗೋಕುಳ ಸಮೇಂ .. .. ಬಂದಾ ಯಕ್ಷಿಯ ಸಮಕ್ಷದೊಳ್ ಅಳಱಬುಗಱದು ಅರ್ಚಿಸಿದಂ: **ಕರ್ಣನೇಮಿ,** ೬. ೧೦೪ ವ)

**ಅಱಕಿಡು** – ಧರ್ಮಕ್ಕೆ ಇಡು (ಮನೋಜನಱಕಿಟ್ಟ ಅಱವಟ್ಟಿಗೆವಾರ್ವರಂತೆ ತೆಂಗಿನ ಮರಗಳ್: **ಲೀಲಾವತಿ,** ೬. ೧೧೬)

**ಅಱಕೆ** – ಬಾಯಾರಿಕೆ (ನೀರಱಕೆ ತೊಟ್ಟನೆ ಮಾಣ್ದುದು: **ಸೂಕ್ತಿಸು,** ೧೦. ೨೬೭)

**ಅಱಗಂಡಿ** – ತಪ್ಪಿದ ಯುದ್ಧಾವಕಾಶ (ಏಳಿದರಪ್ಪ ದುರ್ಮನುಜರ್ ಇಱಿಯಲ್ ಮುನ್ನಂ ಬಂದಿರ್ದೊಡೇಂ ಅಱಗಂಡಿಯಾಯ್ತು: **ಹರಿವಂಶ,** ೧೨. ೩)

**ಅಱಗಂಜಿ** – ಧರ್ಮದ ಗಂಜಿ (ಕೂಟಿರ್ದಂತೆ ಅೞುಗಂಜಿಯಂ ಕುಡಿವ ಪೊನ್ನಿರ್ದಂತೆ ಕರ್ಗಲ್ಲನತ್ಯಾಳಾಪಂ ಬಗೆಗೆಟ್ಟುಕೊಳ್ವ: **ಧರ್ಮಾಮೃ,** ೪. ೨೮)

**ಅಱಗುಲಿ** – ಧರ್ಮದ್ರೋಹಿ (ತೆಱಪನೆ ಪಾರ್ದಿರ್ಪಂ ಮಾಯ್ದು ಅಱಗುಲಿ ಜವಂ: **ಆದಿಪು,** ೪. ೭೬); ಹಿಂಸಕ (ಅಱಿಯದೆ ಪೊಟಲಂ ಪುಗೆ ಕೆಲರ್ ಅಱಗುಲಿ ಋಷಿಯರ್ಗೆ ಮುನಿದು ತನ್ನಾಜ್ಞೆಗೆ ಬೆಳ್ಕುಱರೆಂದು ಕೊಂದು ಪಾತಕಿ ತೆಱದಂ ಪುಗಲೆಂದು ನಿರಯದರರೀ ಪುಟಮಂ: **ಪಂಪರಾ,** ೯. ೧೧)

**ಅಱಗುಲಿತನ** – ಧರ್ಮದ್ರೋಹ (ಯಾಚಿಪುದರ್ಕಂ ಸಲೆ ಜನ್ನಮನಿರ್ಪುದರ್ಕಂ ಅಱಗುಲಿತನಕಂ .. .. ಅರ್ಹರ್ ಪಾರ್ವರ್: **ಸಮಯಪ,** ೧೧. ೮೩)

**ಅಱಗುಲಿವೆಂಡಿರ್** – ಧರ್ಮಬಾಹಿರ ಹೆಂಗಸರು (ಶಾಸನದೇವತೆಗೆಂದೊಡೆ ವೀಸದ ಪುಷ್ಪಮನೀಯರ್ ಅಱಗುಲಿವೆಂಡಿರ್: **ಸಮಯಪ,** ೫. ೯೯)

**ಅಱಗೆಱೆ** – ಬತ್ತಿಹೋಗದ ಕೆರೆ (ಕೆಱೆಗಳೆಲ್ಲಂ ದಯಾಧರ್ಮದಮತೆ ಅಱಗೆಱೆಗಳೆ: **ಹರಿವಂಶ,** ೧. ೧೮ ವ)

**ಅಱನಿಱಿವರ್** – ಧರ್ಮಧ್ವಂಸಕರು (ಜೈನರ ಕೆಲದೊಳ್ ಬಳೆದಾ ಮಾನಸ ನೆಲೆಯಱನಿಱಿವರೊಳ್ ಕೂಡಿದೊಡಂ ತಾನಿದಿರಂ ಕೊಲಲಱಿಯಂ: **ಸಮಯಪ,** ೬. ೧೦೭)

**ಅಱಮಗ** – ಧರ್ಮರಾಜ (ಅಱಮಗನಿರ್ಕೆ ಅರ್ಜುನನಿರ್ಕೆ ಅಱಿಕೆಯ ಮಾದ್ರೀಸುತರ್ಕಳಿರ್ಕೆ ಅಱಿವಗೆಯಂ ಪಱಿಪಡಿಸಲ್ಕೆ ಹಲಾಯುಧನೆಱದಿರ್ದಪಂ ಎನಗೆ ತೋಱಿ ಬಿಡು ಕೌರವನಂ: **ಗದಾಯು** ಪರಿಷತ್ತು, ೭. ೬೨)

**ಅಱಲ್** – ನಂದಿಹೋಗು (ವಿಜಯಂ ಅಶ್ವಗ್ರೀವನ ಮಗನಪ್ಪ ವಿಪುಳಕಂಠನಂ ತನ್ನವಾರ್ಯವೀರ್ಯಕ್ಕೆ ಮುಡಿಗಿಕ್ಕುವಂತಿಕ್ಕಿ ಕೆಯ್ಮಿಕ್ಕು ಅಱಲೊಳ್ ಅನಿಬರುಂ ಒಂದಾಗಿ ಬಂದು ತಾಗೆ: **ಶಾಂತಿಪು,** ೫. ೫೫ ವ)

**ಅಱಲ್ಗೊಳ್** – ಬಾಯಾರಿಕೆಯಾಗು (ಪಥಿಕರ್ ಅಱಲ್ಗೊಂಡು ತೋಡಿದ ಅಱುಂಬುನೀರ ಬಗರಗೆಗಳುಮಂ: **ಕಾದಂಬ,** ೦. ವ)

**ಅಱವಟ್ಟಿಗೆ** – ಧರ್ಮಕ್ಕೆ ಪಾನೀಯ ನೀಡುವ ಜಾಗ (ತರುಣಿಯರಲ್ಲಿಗಲ್ಲಿಗೆ ಅಱವಟ್ಟಿಗೆಯೊಳ್ ಕಡುಗೋಡುವೆತ್ತ ತಣ್ಣಗಗಮನೆತ್ತಿ ನೀರೆಱೆಯೆ ಸಾಲ್ವುದು: **ಜಗನ್ನಾವಿ,** ೧೭. ೭೯)

**ಅಱವಟ್ಟಿಗೆವಾರ್ವ** – ಅಱವಟ್ಟಿಗೆಯಲ್ಲಿ ಕೆಲಸಮಾಡುವ ಬ್ರಾಹ್ಮಣ (ಮನೋಜನಱಕಿಟ್ಟ ಅಱವಟ್ಟಿಗೆವಾರ್ವರಂತೆ ತೆಂಗಿನ ಮರಗಳ್: **ಲೀಲಾವತಿ,** ೬. ೧೧೬)

**ಅಱವಟ್ಟಿಗ** – ನ್ಯಾಯದ ಹಾದಿಯಲ್ಲಿ ನಡೆಯುವವನು (ಅರುಹಂತಂ ನಲ್ಮೆಯಂ ಮಾಟ್ಕೆ ಬೇಡಿದುದಂ ತನ್ನಱವಟ್ಟಿಗರ್ಗೆ ನೆಲನುಂ ಮುನ್ನೀರುಂ ಇರ್ಪನ್ನೆಗಂ: **ಕಬ್ಬಿಗಕಾ,** ೨೭೨)

**ಅಱವಱಗಾಗು** – ಬತ್ತಿ ಹೋಗು, ಮಳೆಯಿಲ್ಲದೆ ಒಣಗು (ಅಂತು ನಿಶಾಚರಬಲಂ ಅಱವಱಗಾದ ಕಾಡಂ ಅಳುರ್ವ ಬೇಗೆಯ ದಲ್ಪುರಿಯಂತೆ: ಪಂಪಭಾ, ೧೨. ೭ ವ)

**ಅಱವೆ** – ಅಜೀರ್ಣ (ಒಂದರ್ಥಕ್ಕೆ; ಅಟ್ಟಮೆಯೆಂದು ಅಱವೆ: **ಶಬ್ದಮದ,** ೩೩ ವೃತ್ತಿ ೬)

**ಅಱಸು** – ಹುಡುಕು (ಸತ್ಕುಲದ ಮರ್ತ್ಯಯುಗಲಕಮಂ ತಾಂ ಅಱಸಲ್ ಬಳರಿಯ ಬನದಿಂ ಪೊಱಮಟ್ಟಂ ಚಂಡಕರ್ಮನೆಂಬ ತಳಾಱಂ: **ಯಶೋಧಚ,** ೧. ೪೩)

**ಅಱಿ** – ತಿಳಿ (ಜಾಣರ್ಕಳಲ್ಲದವರುಂ ಪೂಣಿಗರ್ ಅಱಿಯದೆಯುಂ ಅಱಿವವೋಲ್ ಅವಗುಣದಾ ತಾಣಮಂ: **ಕವಿರಾಮಾ,** ೧. ೪೦)

**ಅಱಿಕೆ** – ತಿಳಿವಳಿಕೆ (ಅಱಿಕೆಯ ಭವಸಂಬಂಧಮಂ ಕಂಡು ನಿಚ್ಚಂ ನೆನೆವೋ: **ಆದಿಪು.** ೩. ೫೫); ಬಯಕೆ (ಜಯಮಂ ಬಯಸುವೊಡಂ ಮಾರಿಯಂ ಆವರ್ತಿಸಿದರ್ ಎಂಬ ನಾಣ್ಣುಡಿಗಂ ಅಳುರ್ಚಿಯೆ ನಿನ್ನೊಳ್ ಎಡೆಱಿ ತನಗಱಿಕೆಯ ಮಿಟ್ಟುವಂ ಇಂತು ತಂದುಕೊಂಡರುಂ ಒಳರೇ: **ಶಾಂತಿಪು,** ೩. ೭೨); ಪ್ರಸಿದ್ಧಿ (ಪೆಱರುಂ ಅಱಿಕೆಯ ಕಪಿಧ್ವಜ ಬಲನಾಯಕರನೇಕರ್ ರಾಕ್ಷಸ ಬಲದ ನಾಯಕರೊಳ್ ಬಿಲ್ವೊಯ್ದು: **ಪಂಪರಾ,** ೧೪. ೧೮ ವ)

**ಅಱಿಕೆಗಾಳೆಗ** – ಪ್ರಸಿದ್ಧ ಕಾಳಗ (ವಿಕ್ರಮಮಂ ಸೊಲ್ವಿನಂ ಆವರ್ಜಿಸಿದಂ ನಾಲ್ವತ್ತೆರಡು ಅಱಿಕೆಗಾಲೆಗಂಗಳೊಳ್ ಈತಂ: **ಪಂಪಭಾ,** ೧. ೨೫)

**ಅಜೆಕೆದಾಣ –** ಶ್ರೇಷ್ಠ ಸ್ಥಳ (ಬುಧರಂ ಅಜೆಕೆದಾಣದೊಳೆಸೆವಂತೆ ಒಂದಿಸುತುಂ .. .. ಸಾರ್ತಂದಂ: **ಪುಷ್ಪದಂಪು,** ೫. ೫೯)

**ಅಜೆಕೆನಾಯಕ –** ಪ್ರಸಿದ್ಧನಾದ ಮುಂದಾಳು (ಮಾರ್ಗದೊಳುಳುದರ್ಕೆ: ಕಡುರಾಗಂ, ಮೊಗರಾಗಂ, ಅಜೆಕೆನಾಯಕಂ: **ಶಬ್ದಮದ,** ೧೮೫ ಪ್ರ)

**ಅಜೆಕೆಯ ಪಜೆ –** ಘೋಷಣೆ ಮಾಡಲು ಬಳಸುವ ತಮಟೆ (ಅಯೋಧ್ಯೆಯೆಗೆ ಮೊಗಸಿದಂ ಅಜೆಕೆಯ ಪಜೆ ಪಲವುಮೆಸೆಯೆ ಭರತಮಹೀಶಂ: **ಆದಿಪು,** ೧೪. ೨)

**ಅಜೆತ –** ಜ್ಞಾನ, ವಿವೇಕ (ಗರುವಿಕೆಗೆ ಇಂಬು ಗಾಡಿಗೆ ತವರ್ಮನೆ ಮೈಮೆಗೆ ಮೇರೆ ನನ್ನಿಗೆ ಆಗರಂ ಅಜೆತಕ್ಕೆ ಗೊತ್ತು ಪೆರ್ವೆತ್ತ ನೆಗಟ್ತೆಗೆ ತಾಣಂ: **ಕಬ್ಬಿಗಕಾ,** ೩)

**ಅಜೆಪು –** ತಿಳಿಸು (ಕುಜೆತಂತು ಪೆಜರ ಬಗೆಯಂ ತೆಜೆದಿರೆ ಪೆಜರ್ಗಜೆಪಲಾರ್ಪವಂ ಮಾತಜೆವಂ: **ಕವಿರಾಮಾ,** ೧. ೧೫)

**ಅಜೆಯುಮಿಕ್ಕೆ –** ಅಜ್ಞಾನ, ತಿಳಿಗೇಡಿತನ (ಇಂತಪ್ಪ ಗುಣೋಪೇತನೊಳ್ ಇಂತಾ ನೆಗಟ್ದ ಅಜೆಯುಮಿಕ್ಕೆಗಂ ಪೆಜದಿಲ್ಲ: **ಹರಿವಂಶ,** ೯. ೨)

**ಅಜೆಯಮೆ –** ಅಜ್ಞಾನ (ಅಜೆಯಮೆಯಿಂದಲಕ್ಕೆ ಧನಲೋಭದಿನಕ್ಕೆ ಪಾತಕಂಗಳಂ ಮಾಡಿ .. .. ಮಜುಗದಿರ್: **ಸಮಯಪ,** ೧೫. ೯೩); ಮರೆವು (ಅಜೆಯಮೆ ತಿಣ್ಣಂ ನಿನಗೇನಜೆವೊ ಮಹಾಬಳನೆನ್ನನೆಲೆ ಶತಮತಿ ನಿನ್ನ ಅಜೆಯಮೆಯೆ ನಿನ್ನನಿನಿತಂ ಮುಜುಗಿಸಿದುದು: **ಆದಿಪು,** ೫. ೯೫)

**ಅಜೆಲ್ –** ನಕ್ಷತ್ರ (ಅಜೆಲೆಂದು ನಕ್ಷತ್ರಂ: **ಶಬ್ದಮದ,** ಪ್ರಸಾ, ೧೧)

**ಅಜೆವಂ –** ಜ್ಞಾನಿ. ವಿವೇಕಿ (ಆಗಮಮಿನ್ನಂತದೆ ಮೋಕ್ಷಕ್ಕೆ ಮಾರ್ಗಂ ಎಂದು ಅಜೆಗೆ ಅಜೆವಂ: **ಸಮಯಪ,** ೩. ೭)

**ಅಜೆವಿಡಿ –** ಅರಿತುಕೊ (ಜಾತ್ಯಶ್ವದಂತೆ ಬೇಗಮಾಗಿ ಕೋಟಿಕಾಳಿಕಾಜನಂತೆ ಬಟೆಯಜೆವಿಡಿದು ತುಂಬಿನ ನೀರಂಉರ್ಚಿದಂತೆ: **ಪಂಪಭಾ,** ೫. ೪೬ ವ)

**ಅಜೆವು –** ತಿಳಿವಳಿಕೆ, ಜ್ಞಾನ (ಕರವಾಳಂ ಘರವಟ್ಟಿಸಿ ಶಿರೋಜಮಂ ಪಿಡಿದು ತೆಗೆದು ಗುರುವಂ ಪಚ್ಚಂತಿರೆ ಪಿರಿದು ಪೊಯ್ದಂ ಎಂತಪ್ಪರೊಳಂ ಮುಳಿಸು ಅಜೆವಂ ಆಗಲೇನಿತ್ತಪುದೇ: **ಪಂಪಭಾ,** ೧೨. ೩೦)

**ಅಜುಂಬುನೀರ್ –** ಹಳ್ಳ ತೋಡಿದಾಗ ಸಿಕ್ಕುವ ನೀರು, ಚಿಲುಮೆ ನೀರು (ಪಥಿಕರ್ ಅಜಲ್ಗೊಂಡು ತೋಡಿದ ಅಜುಂಬುನೀರ ಬಗರಗೆಗಳುಮಂ: **ಕಾದಂಬ,** ೮. ೦. ವ)

**ಅಜುಕುಳಿ –** ಒಣಗುವ ಸ್ವಭಾವದ್ದು (ಕುಳಿ ಪ್ರತ್ಯಯಕ್ಕೆ; ಪೋರ್ಕುಳಿ, ಓಡುಕುಳಿ .. .. ಅಜುಕುಳಿ, ಪೆಂಕುಳಿ: **ಶಬ್ದಮದ,** ೨೧೪ ಪ್ರ)

**ಅಜುಗೆಯ್ –** ಒಣಗಿದ ಗದ್ದೆ (ಎಳೆವೆಣ್ಣ ಮೆಯ್ಯ ಕೋಮಲ ನಖರೇಖೆಯಂತಿರೆ ಅಜುಗೆಯ್ಗಳೊಳಾದುವು ಕೂಡೆ ಬೀಡೆಗಳ್: **ಜಗನ್ನಾವಿ,** ೧೪. ೭)

**ಅಜುಗೆಱೆ –** ಬತ್ತಿಹೋದ ಕೆರೆ (ಕಂಪಲ್ ಮಸಗುತ್ತುಂ ಬತ್ತೆ ಕೆರ್ಪಂಬಡೆದಜುಗೆಱೆಗಳ್ ಬೀಡೆವೋಗಿರ್ದ ತಣ್ಣೀರೊಸೆದಾರ್ಣಂ: **ಜಗನ್ನಾವಿ.** ೧೭. ೬೨)

**ಅಜುಚು –** ಅರಚು, ಗಟ್ಟಿಯಾಗಿ ಕೂಗು (ಅಜುಚದೆ ಪೋ ಮಾಣ್ ಎಂಬ ಎಡೆಯಜೆದಿರಿಂ ಎಂಬ ಇಕ್ಕು ಗದ್ದುಗೆಯಂ ಎಂಬ .. .. ಪಡಿಯಜರ ರವಂ ನೆಗಟ್ಟುದು: **ಜಗನ್ನಾವಿ,** ೧೧. ೬೨)

**ಅಜುದಿಂಗಳ್ –** ಆರು ತಿಂಗಳು (ಅಮರಲೋಕಭೋಗಂ ಏಕಸಾಗರಪ್ರಮಿತಜೀವಿತಂ ಅಜುದಿಂದಳುಟಿದುದು: **ಆದಿಪು,** ೩. ೨ ವ)

**ಅಜುನೀರ್ –** ಇಂಗಿಹೋದ ನೀರು (ಕಾಮಶರಂಗಳ್ ಅವರ್ಗಳೆದೆಐಂ ಉರ್ಚಿಪೋಗಿ ಪರವಸೆಯರಾಗಿ ಮಜಗಿದ ಅಜುನೀರ ಮೀಂಗಳ್ವೊಲಾದರ್: **ವಡ್ಡಾರಾ,** ಪು. ೫೭. ಸಾ. ೧೩)

**ಅಜುನೂಜು –** ಆರು ನೂರು (ಐಸಾಸಿರದ ಅಜುನೂಜುವಧಿಜ್ಞಾನಿಗಳುಂ: **ಅಜಿತಪು,** ೮. ೨೫ ವ)

**ಅಜುವಡಿ –** ಆರು ಪಟ್ಟು (ಆಜರ್ಕೆ: ಅಜುವಡಿ, ಅಜುವತ್ತು, ಅಜುನೂಜು: **ಶಬ್ದಮದ,** ೨೦೦ ಪ್ರ)

**ಅಜುವತ್ತು –** ಅರವತ್ತು (ಆಜರ್ಕೆ: ಅಜುವಡಿ, ಅಜುವತ್ತು, ಅಜುನೂಜು: **ಶಬ್ದಮದ,** ೨೦೦ ಪ್ರ)

**ಅಜುಸಾಸಿರ –** ಆರು ಸಾವಿರ (ಅಜುಸಾಸಿರ ಬಿಲ್ನಿಡಿಯರಾಗಿ: **ಆದಿಪು,** ೫. ೪೧ ವ)

**ಅಱೆ –** ಬತ್ತು (ಅಜ್–ಸ್ವರೂಪಾಭಾವೇ ಶಿಲಾಯಾಂ ಚ: **ಶಬ್ದಮದ, ಧಾ,** ೮೩೧); ಅಪ್ಪಳಿಸು (ಕೆಲರಂ ಭುಜಬಲದಿಂ ಅಜೆದು ಶಿಲೆಯೊಳ್ವೊಯ್ದಂ: **ಗದಾಯು,** ೩. ೧೦); ಪೆಟ್ಟು (ಕಳ್ಗರಾಯಿಲಂ ಅಜ್ ಏಜು ಮಾರಿ ಪಸವಿಟ್ದ ಬಜಂ ಪೆಜವುಂ ಭಯಂಗರ್ಳ: **ಆದಿಪು,** ೧. ೫೨); ಬಂಡೆ (ಅಜ್– ಸ್ವರೂಪಾಭಾವೇ ಶಿಲಾಯಾಂ ಚ: **ಶಬ್ದಮದ, ಧಾ,** ೮೩೧)

**ಅಱೆಗಲ್ –** ಬಂಡೆಗಲ್ಲು ಅಜೆಗಲ್ಲೊಳ್ ಪಾಂಸುವಂ ಪುಟ್ಟಿಪ ತನುವಿನ ರೌದ್ರಾಸ್ಯದಿಂ .. .. ಎಟ್ಟಿಂದಂ ಪುಳಿಂದಾಗ್ರಣಿ: **ಕುಸುಮಾಕಾ,** ೧೪. ೩೬)

**ಅಱೆಮರುಳ್ –** ಭ್ರಮೆಗೊಂಡವನು (ಭವತ್ ಅಗ್ರಜಾತನಂ ಅಜೆಮರುಳೊಳೆ ನಿನ್ನ ಸುತನೊಳೆನ್ನಯ ಸುತೆಯಂ ಕಜುಪಿಂ ಕೂಡಿರ್ದು: **ಕರ್ಣನೇಮಿ,** ೪. ೪೨)

**ಅಱೆಯಟ್ಟು –** ಬೆನ್ನಟ್ಟು (ಸ್ಮರಶರಮೇವುವೆಂಬ ಶಿಶಿರಾಶುವ ತಣ್ಣದಿರೇವುವೆಂಬ ತೆಂಬೆರಲರಲೇವುವೆಂಬ ಕಳಕಂಠಿಯ ಬಗ್ಗಣೆಯೇವುವೆಂಬ .. .. ಬದ್ದರಂ ಅಜೆಯಟ್ಟಿ ಸಂತಮಿರಲೀಯದೆ ಬಾಳಬಸಂತವಾರಣಂ: **ಅಜಿತಪು,** ೬. ೨೬)

**ಅಱೆವೊಯ್ –** ಅಪ್ಪಳಿಸಿ ಹೊಡೆ (ಓರೊರ್ವಂ ಅಂದು ಅಜೆವೊಯ್ದು ಪೊಯ್ಯೆ: **ಕರ್ಣನೇಮಿ,** ೧೨. ೧೯೫)

**ಅಟ್ –** ಕಣ್ಣೀರು ಹಾಕು, ಅಳುವಿಕೆ (ಅಟ್ – ರೋದನೇ: **ಶಬ್ದಮದ, ಧಾ,** ೯೧೧)

**ಅಟಲ್ –** ದುಃಖಿಸು (ಜೈನನಕ್ಕೆಮ ದೇವಂ ಶಿವಭಕ್ತರ್ ಅಟಲಲಾಗದು ಶಿವೇಬ್ಬೆಯಿಂ ಜೈನನಾದನೆಂಬುದು ಶೈವಂ: **ಸಮಯಪ,** ೧೦. ೨೭); ದುಃಖ (ಕಟೆದಿರ್ದ ತಂದೆಯಂ ಬಿಸುಟು ಅಟಲುಮಂ ಇನಿಸು ಅಜೆಯದೆ ಎಳವೆಯೊಳ್ ಪಾತಕನೆಂ .. .. ಇಟೆದು ಬಂದೆಂ: **ಕಾದಂಸಂ,** ೫೭, ಪು ೧೧)

**ಅಟಲಿಗ –** ಪ್ರಿಯ (ನೀಡುಂ ಕಾದುವನ್ನೆಗಂ ಅಟಲಿಗರುಂ ವೇಗಾಯ್ಲರುಂ ಅಪ್ಪ ಅನ್ವಯಾಗತನಭೋಗತಿಗಳ್: **ಶಾಂತಿಪು,** ೪. ೩೩ ವ)

**ಅಟಲಿಸು –** ದುಃಖಕ್ಕೀಡುಮಾಡು (ಆ ಮೂಲಚೂಲಂ ಎಮಗೆ ಆಮಳಕಂ ಭವನಿಬದ್ಧಂ ಅಟಲಿಸಿತು ಎಮ್ಮಂ: **ಯಶೋಧಚ,** ೧. ೬೫)

**ಅೞಲ್ಚು** – ಅೞಲಿಸು, ದುಃಖವುಂಟುಮಾಡು (ಅೞಲ್ಚು– ದುಃಖೋತ್ಪಾದನೇ: **ಶಬ್ದಮದ, ಧಾ,** ೧೬೪)

**ಅೞಲ್ವೆ** – ಶೋಕ (ಬಡಿಹದ ಮಕ್ಕಳಂತೆಅೞಲ್ವೆಯೊಳಂ ನೀರ್ ಮುಟ್ಟಿದ ಕೆಂಡದಂತೆ ಉಪಶಮದೊಳಂ: **ಧರ್ಮಾಮೃ,** ೮೩ ವ)

**ಅೞಿ** – ನಾಶಗೊಳ್ಳು (ಒರ್ವಂ ಮೊಮ್ಮಂ ಪರಮಗುರು ಒರ್ವಂ ಅವರಿರ್ವರುಮಮ ಕಾದಿ ಅೞಿವೆಂ ಉೞಿದ ರಿಪುಬಲನೃಪಬಲಮಂ: **ಪಂಪಭಾ,** ೧೦. ೧೪); ಕೊಲ್ಲು (ಮಾಡಿದ ಕೋೞಿಯಂ ಅೞಿದು ಅರ್ಕಾಡಿದ ಯಶೋಧರಂ ಚಂದ್ರಮತಿಯಿಂತಿರ್ಬರ್ .. .. ಕೋಳಿಗಳಾದರ್: **ಯಶೋಧಚ,** ೪. ೩೩); ನಾಶಮಾಡು (ಅಂತು ಗುರುನಂದನಂ ಮರುನ್ನಂದನವಿರಚಿತ ನಿಶಾತ ವಿಶಿಖಪಂಜರಮನೞಿದು ಕೞಕುೞಂ ಮಾಡಿಯುಂ ಅನಿತಱೊಳ್ ಮಾಣದೆ: **ಪಂಪಭಾ,** ೧೨. ೬೮ ವ); ಅಲ್ಪತನ (ಅೞಿಯೊಳ್ ಜಾನಕಿಯಂ ತಂದು ಅೞಿಗಂಡನೆ ನಿನ್ನ ಪೆಂಡಿರಂ ನೀಂ ನೋೞ್ಪಂತೆ ಎೞೆದುಯ್ದಪೆಂ: **ಪಂಪರಾ,** ೧೪. ೧೦೨); ಸೀಳು (ಬೞಿಕಾ ಮೀನನೆ ವಾಗುರಿಕರ್ ಪಿಡಿದು ಅೞಿಯುತ್ತ ಆ ಶರಮಂ ಕಂಡು: **ಕರ್ಣನೇಮಿ,** ೧೪. ೯೧); ಅಳೆಯುವ ಪಾತ್ರೆಯಲ್ಲಿ ನಿಂತ ದ್ರವ (ಅೞಿ– .. ಮಾನಶೇ ರಸೇ ಚ: **ಶಬ್ದಮದ,** ಧಾ ೯೧೨)

**ಅೞಿಕ** – ನೀಚ (ಕ ಪ್ರತ್ಯಯಕ್ಕೆ: ಬಡಕಂ, ನಿಡುಕಂ .. .. ಅೞಿಕಂ, ಬೆಳುಕಂ: **ಶಬ್ದಮದ,** ೨೧೬ ಪ್ರ)

**ಅೞಿಗಂಡ** – ಪೌರುಷಹೀನ, ಕಾಪುರುಷ (ಅೞಿಯೊಳ್ ಜಾನಕಿಯಂ ತಂದು ಅೞಿಗಂಡನೆ ನಿನ್ನ ಪೆಂಡಿರಂ ನೀಂ ನೋೞ್ಪಂತೆ ಎೞೆದುಯ್ದಪೆಂ: **ಪಂಪರಾ,** ೧೪. ೧೦೨)

**ಅೞಿಗಂಡು** – ಹೇಡಿ (ಅೞಿಗಂಡಿನೊಳೇಂ ಕೈದುವನುೞಿ: **ಪಂಪರಾ,** ೧೪. ೧೮೨)

**ಅೞಿಗಜ್ಜ** – [ಅೞಿ+ಕಜ್ಜ] ಮಾಡಬಾರದ ಕೆಲಸ (ಎನ್ನ ಮಾಡಿದ ಅೞಿಗಜ್ಜಂ ಪೇೞ್ನೆಂ ಎಂತು ಮಾಡಲಕ್ಕುಂ: **ಪಂಚತಂತ್ರ,** ೧೨೨)

**ಅೞಿಗಣ್** – ವಿಕಾರವಾದ ಕಣ್ಣು (ಪೞಿದಲೆ ಕುೞಿನೊಸಲ್ ಅೞಿಗಣ್ ಒೞೆವಾಯ್: **ಯಶೋಧಚ,** ೨. ೩೮)

**ಅೞಿಗವಿ** – ಕ್ಷುಲ್ಲಕ ಕವಿ (ಮುತ್ತಂ ಮೆೞಸಂ ಕೋದಂತಿರೆ ಪೇೞ್ವ ಅೞಿಗವಿಗಳ ಕವಿತೆ ಬುಧರನೆರ್ದೆಗೊಳಿಸುಗುಮೇ: **ಕಾವ್ಯಾವಲೋ,** ೫೫)

**ಅೞಿಗಾಳೆಗ** – ಸಣ್ಣ ಕಾಳಗ (ಮನದೊಳೊಡಂಬಟ್ಟಂತೆ ಮನಮಂ ಎಡಗಲಿಸಿ ಪರಿವ ಜಾತ್ಯಶ್ವಂಗಳೆಲ್ಲಂ ಅೞಿಗಾಳೆಗದೊಳ್ ಸತ್ತೊಡೆ: **ಪಂಪಭಾ,** ೮. ೯೪ ವ)

**ಅೞಿಗೆಯ್ತ** – ನೀಚ ಕಾರ್ಯ (ಈ ಪದದೊಳಡಂಗಿದೊಡಂ ಅೞಿಗೆಯ್ತಕ್ಕೆ ಕಡಂಗಿದೊಡಂ ನಮ್ಮಿಂದಂ ಕಷ್ಟರಿಲ್ಲೆಂಬ ಮಾತಂ ಧರ್ಮಜಂ ಮೆಚ್ಚಿ: **ಹರಿವಂಶ,** ೧೧. ೪೨ ವ)

**ಅೞಿಗೆವದ್ದ** – [ಅಳಿಕಾಬಂಧ] ಬಾಸಿಂಗ (ಕ್ಷಳಕ್ಕೆ: ತಾಳಂ–ತಾೞ್ ಪುಳಿನಂ–ಪುೞಿಲ್ ಕಳಮಂ–ಕೞಮೆ ಅರ್ಗ್ಗಳಂ–ಅಗ್ಗೞಿ ಅಳಿಕಾಬಂಧಂ–ಅೞಿಗೆವಂದಂ ಮಾನ್ಯಾಳಿ–ಮನ್ನೞಿ: **ಶಬ್ದಮದ,** ದ ೩೧ ಪ್ರ)

**ಅೞಿಚಟ್ಟು** – ಹೀನವಾದ ಲೇಪನದ್ರವ್ಯ (ಅೞಿಚಟ್ಟಿಂ ತಲೆ ಬುಗುಂಟುವೋದುದೆಂಬ: **ಧರ್ಮಾಮೃ,** ೬. ೧೫ ವ)

**ಅೞಿಚಾಗಿ** – ಕ್ಷುಲ್ಲಕ ತ್ಯಾಗಿ (ಪೊಂಗೆಱಗದೆ ಅೞಿಚಾಗಿಯಂತೆ ಪೊಗೞ್ತೆಗಾಸೆಗೆಯ್ಯದೆ ಬೆಸದವರಂತೆ: **ಧರ್ಮಾಮೃ,** ೪. ೨೬ ವ)

**ಅೞಿಜಗಳ** – ಕ್ಷುಲ್ಲಕ ಜಗಳ (ಅೞಿಜಗಳದೊಳೇನೆಮ್ಮ ತಕ್ಕೂರ್ಮೆಯುಂಟೇ: **ಶಾಂತಿಪು,** ೬. ೮೭)

**ಅೞಿಜನ** – ವಂಚಕ, ಮೋಸಗಾರ (ಪ್ರಯೋಗ, ಮಾರ್ಗದೊಳುಳ್ಳುದರ್ಕೆ, ಇರ್ಬಲಂ, ಅೞಿಜನಂ, ತುರಗದೞಂ: **ಶಬ್ದಮದ,** ೧೮೫, ಪ್ರ)

**ಅೞಿಜಪ** – ಸುಳ್ಳು ಜಪ (ಉೞಿದು ಅೞಿಜಪಮಂ ದನುಜ ತೋರ್ಪುದೆನ್ನೊಳ್ ಕೂರ್ಪಂ: **ಪಂಪರಾ,** ೧೪. ೧೦೨)

**ಅೞಿತೊರೆ** – ಸಾಮಾನ್ಯ ಹೊಳೆ (ಪಲವು ಅೞಿತೊರೆಗಳ ನೀರ್ಗಳಂ ಅಲಸದೆ ಮಿಂದಂ ಪುನೀತನಲ್ಲಂ: **ಸಮಯಪ,** ೧. ೧೧೪)

**ಅೞಿದೋಲ್** – ನಶಿಸುವ ಧರ್ಮ (ನರವಿನ ಪುತ್ತಂ ಅಮೇಧ್ಯದ ತವರ್ಮನೆ .. .. ಅೞಿದೋಲ ಪೆರ್ವಡಿಕೆ .. .. ದುಷ್ಕಳೇವರಂ: **ಸಮಯಪ,** ೬. ೩೪)

**ಅೞಿನುಡಿ** – ಕೆಟ್ಟ ಮಾತು (ನಿನಗಪ್ಪುದು ಈ ಅೞಿನುಡಿ ಬರ್ಕೆ ನಿನ್ನ ಪಿರಿಯಣ್ಣನೆ ಪಣ್ಣನೆ ನೋೞ್ಪಂ ಆತನ ಒಡ್ಡಣೆಯದ ಗಂಡವಾತಂ: **ಪಂಪಭಾ,** ೩. ೧೬)

**ಅೞಿನೆಗೞ್ತೆ** – ತುಚ್ಛ ಕಾರ್ಯ (ಅೞಿನೆಗೞ್ತೆಯೆಂಬ ಮೊಸಳೆಯಂ ತೊಲಗಿಸಿ ಸಂಶಯಮೆಂಬ ಮಹಾಮತ್ಸ್ಯಮಂ ಓಸರಿಸಿ: **ಧರ್ಮಾಮೃ,** ೬. ೧೪೮ ವ)

**ಅೞಿಪ** – ಹಾಳುಮಾಡುವವನು; ಅಲ್ಪ ವ್ಯಕ್ತಿ (ಬೞಿವೞಿಯೆಂಬುದು ಬಡವಂಗೆ ಅೞಿಪಂಗೇಂ ಮುಟ್ಟೆ: **ಶಾಂತಿಪು,** ೬. ೨೦)

**ಅೞಿಪು** – ಕೇಡು (ನಮ್ಮ ತೋಯಮಾನಾಹ್ವಯಕ್ಕೆ ಬನ್ನಮಪ್ಪಂತು ಅೞಿಪಂ ತಂದ ನಿರ್ಬುದ್ಧಿಕೆಯಂ ಉೞಿದು ನಿನಗಂ ನಿನ್ನ ವಂಶಕ್ಕಂ ಅಕಾಲಮೃತ್ಯುವಂ ತಾರದೆ: **ಪಂಪರಾ,** ೧೪. ೧೩ ವ); ಆಸೆ (ಅಣ್ಣ ನೀನೀ ಪೆಣನಂ ಅೞಿಪಿನಿಂ ಪೊತ್ತಿರಲ್ ಬರ್ಪುದುಂಟೇ: **ಪಂಪರಾ,** ೧೬. ೫೫)

**ಅೞಿಪೂಜೆ** – ವಿಧಿವಿರುದ್ಧವಾದ ಪೂಜೆ (ವ್ಯಂತರನಂತೆ ಅೞಿಪೂಜೆಗೆಱಗದೆ ದ್ರೋಹರಂತೆ ಗುಜುಗುಜುಗೊಳ್ಳದೆ: **ಧರ್ಮಾಮೃ,** ೫. ೬೪ ವ)

**ಅೞಿಬಂಟು** – ಅಲ್ಪ ಕಾರ್ಯ (ಅೞಿಬಂಟಂ ಪೋಗಿ ಪೊಕ್ಕೆನಪ್ಪೊಡೆ ಕಾಪಿನವರ ಕಯ್ಯ ಸಾವು ನಿಶ್ಚಯಂ: **ಧರ್ಮಾಮೃ,** ೬. ೧೫ ವ)

**ಅೞಿಬಳಿ** – ಮೇರೆಮೀರು (ತೀವಿದ ಯೌವನಭರಮುಂ ಲಾವಣ್ಯರಸಂ ತುಳುಂಕೆ ನಯಮೞಿಬಳಿವೊಂದಿ: **ಅನಂತಪು,** ೬. ೨೯)

**ಅೞಿಭವ** – ಹೀನ ಜನ್ಮ (ಸುರತ್ವಮಂ ಕೊಟ್ಟು ಮಗುೞೆ ಅೞಿಭವಮಂ ಪಿರಿದಂ ಕಿೞಿದಕಲ್ಕೀವಂತಿರೆ: **ಶಾಂತಿಪು,** ೪. ೬೯)

**ಅೞಿಮಂತ್ರ** – ಹೀನ ಸಮಾಲೋಚನೆ (ಬಹುವಿಧಮಪ್ಪ ಅೞಿಮಂತ್ರಂ ನಾನಾ ಪ್ರಕಾರದಿಂದಿರ್ಪ ಮಹಾಯಂತ್ರಂಕೇಡಡಸಿದೊಡೆ ಅವು ಜಂತ್ರದ ಕೀಲ್ಕಳಚಿದಂತೆ ಕಳಕುಳಮಕ್ಕುಂ: **ಧರ್ಮಾಮೃ,** ೩. ೩೨)

**ಅಱಿಮಾನಸ** – ಅಳಿವಾನಿಸ, ಕೆಟ್ಟ ವ್ಯಕ್ತಿ (ಸಾದುಗೆತ್ತು ಬಗೆಯಾದವನಾನೋಡಲಟ್ಟಿದೇನಾದಮಾನುಂ ಅಱಿಮಾನಸನಾಗದೆ ಮಾಳದೊಳ್: **ಕವಿರಾಮಾ,** ೧. ೧೨೭)

**ಅಱಿಮೋಹ** – ಹೀನಕರವಾದ ಮೋಹ (ಕುಱಿಯಂ ಬಳಾರಿಗೆ ಆರ್ಪನಿತನೆ ಕೊಟ್ಟು ಜೀವಿಸುವೆನೆಂದು ಅಱಿಮೋಹದೆ ಕೊಲ್ವ ಪಾಪಕರ್ಮನೆ .. .. ಬದುಕಂ: **ಸಮಯಪ,** ೫. ೨೦)

**ಅಱಿಯಳವು** – ಕ್ಷೀಣಗೊಂಡ ಸಾಮರ್ಥ್ಯ (ನಳನಳಿದು ನಡೆವ ಹಯದ ಅಱಿಯಳಮಂ ಕಂಡುದಱಿಂ: **ಆದಿಪು,** ೧೫. ೩೧)

**ಅಱಿಯಾಸೆ** – ಕೀಳು ಆಸೆ, ದುರಾಸೆ (ಆ ದ್ವಿಜಕುಮಾರಂ ಎನ್ನಂ ಅಪ್ಪುವ ಅಱಿಯಾಸೆಯಿಂ ದೂರದೊಳ್ ನಿಮಿರ್ದ ನಿಡುತೋಳ್ಗಳಂ ತೋಱಿ: **ಕಾದಂಸಂ,** ೭. ೨೭ ವ)

**ಅಱಿಯೂರ್** – ಕುಗ್ರಾಮ (ಸರ್ವನಿವೇದಕಮೆಂಬ ಯಜ್ಞದೊಳ್ ಕ್ಷಿತಿ ಪೊಗಟ್ವನ್ನಮಿತ್ತು ಗುರುದಕ್ಷಿಣೆಯಾಗಿರೆ ಕಶ್ಯಪಪ್ರಜಾಪತಿಗೆ ಸಮುದ್ರಮುದ್ರಿತಧರಿತ್ರಿಯನೊಂದು ಅಱಿಯೂರಂ ಈವವೊಲ್: **ಪಂಪಭಾ,** ೨. ४೫)

**ಅಱಿಯೆ ನೊಯ್** – ಸಾಯುವಂತೆ ನೋವುಪಡು (ವಿಕ್ರಾಂತತುಂಗಂ ಇರ್ಪನ್ನೆಗಂ ಇತ್ತಲ್ ಎರಡುಂ ಪಡೆಯ ನಾಯಕರ್ ಅಱಿಯೆ ನೊಂದ ತಮ್ಮ ಅಣುಗಾಳ್ಗಳ ಕೊಂಡಾಟದಾನೆಗಳ ನಚ್ಚಿನ ಕುದುರೆಗಳ ಪುಣ್ಗಳಂ ಉಡಿಯಲುಂ ಓವಲುಂ ಮರ್ದುಬೆಜ್ಜರುಮಂ ಅಟ್ಟುತ್ತುಂ: **ಪಂಪಭಾ,** ೧೧. ೨ ವ)

**ಅಱಿಯೊಡಲ್** – ನಶ್ವರವಾದ ಶರೀರ (ಅಱಿಯೊಡಲೆಂಬ ಮಣ್ಣ ಮಱಿಗೋಂಟೆಯೊಳ್ .. .. ಜೀವನಿರಲಾರ್ತಪಂ: **ಸಮಯಪ,** ೧೫. ೯४)

**ಅಱಿವಗೆ** – [ಅಱಿ+ಪಗೆ] ಅಲ್ಪನಾದ ಹಗೆ (ಅಱಮಗನಿರ್ಕೆ ಅರ್ಜುನನಿರ್ಕೆ ಅಱಿಕೆಯ ಮಾದ್ರೀಪುತ್ರರ್ಕಳ್ ಇರ್ಕೆ ಅಱಿವಗೆಯಂ ಪಱಿಪಡಿಸಲ್ಕೆ ಹಲಾಯುಧ ನೆಱಿದಿರ್ದಪನೆನಗೆ ತೋಱಿ ಬಿಡು ಕೌರವನಂ: **ಗದಾಯು,** ೭. ೬೧); [ಅಱಿ+ಬಗೆ] ಕೆಟ್ಟ ಆಲೋಚನೆ (ಅಂತು ತನ್ನ ಬಗೆಯನ್ನರಪ್ಪರ ಬಗೆಯಂ ಬಗೆಯದೆ ಅಱಿವಗೆಯನೆ: **ಲೀಲಾವತಿ,** ೧४. ४೭)

**ಅಱಿವಡೆಮಾತು** – ಅಪಕೀರ್ತಿ (ಉಱಿದಱಿವಡೆಮಾತಂ ಮಾಡಿ ನೀನೆ ಕೆಮ್ಮನೆ ನುಡಿವೈ: **ಪಂಪಭಾ,** ೧೨. ೧೮೧)

**ಅಱಿವಾಡ** – ಕುಗ್ರಾಮ (ಅಯ್ದು ಅಱಿವಾಡದೊಳ್ ಅಯ್ವರುಮಂ ನೀಂ ಕೂರ್ತಿರಿಸೆಂದೊಡಂ ಏಗೆಯ್ದುಂ ಒಲ್ಲದ ಕಾರಣದಿಂದಂ: **ಪಂಪಭಾ,** ೧೩. ೮೬)

**ಅಱಿವು** – ವಿನಾಶ, ಸಾವು (ತನೂಜನಾಳ್ವ ಸಾಮಿಗಂ ಅಱಿವಾಗೆ ಶೋಕರಸಮಿರ್ಮಡಿಸಿತ್ತು: **ಪಂಪಭಾ,** ೧೩. ೧೦೬)

**ಅಱಿವೆಂಡಿರ್** – ಅಲ್ಪರಾದ ಸ್ತ್ರೀಯರು (ಪೊಕ್ಕಂ ಪುಸಿದಱಿವೆಂಡಿರ ಬೇಟಂ ಬಿಸುಟು ಏರ್ದಯಂ ಸ್ಮರನೆ ಪುಗುವವೊಲ್ ಪೊಸಮನೆಯಂ: **ನೇಮಿನಾಪು,** ४. ೧४೯)

**ಅಱಿವೆಜ್ಜ** – ಕ್ಷುದ್ರ ವೈದ್ಯ (ಅರಿದು ಗೆಲಲ್ಕೆ ಕಿಲ್ಬಿಷರುಜಾಳಿಯಂ ಔಷಧಸಾಧ್ಯಮಲ್ಲದಂ ನರರ್ ಅಱಿವೆಜ್ಜರೇನಱಿವರೇ ಕಿಡಿಸಲ್: **ಸಮಯಪ,** ೧. ೧೧೩)

**ಅಱಿವೆಸನ** – ಹೀನ ಆಸೆ (ಪೆಸರೊಳ್ ಸೈರಂಧ್ರಿಯಿಂ ಅಱಿವೆಸನದ ದೆಸೆಯಱಿಯೆಂ ಎನಗೆ ಗಂಧರ್ವರ ಕಾಪು ಅಸದಳಂ ಉಂಟು: **ಪಂಪಭಾ,** ೮. ೫೭); ಕ್ಷುದ್ರ ಕಾರ್ಯ (ಪೆಸರೊಳ್ ಸೈರಂಧ್ರಿಯನಱಿವೆಸನದ ದೆಸೆಯಱಿಯೆಂ: **ಪಂಪಭಾ,** ೮. ೫೭)

**ಅಱಿವೊಡಲ್** – ನಶ್ವರವಾದ ಶರೀರ (ಮಿಡಿದನಿತು ಬೇಗದಿಂದ ಅಱಿವೊಡಲನಿದಂ ಪೋಗೆ ನೂಂಕಿ: **ಆದಿಪು,** ೨೨. ೫೮)

**ಅಱುಂಬಂ** – ಅಧಿಕ (ಅಬಲೆಯ ಅಂಗಜತಾಪಂ ಅದೇನಱುಂಬಮೋ: **ಲೀಲಾವತಿ,** ೧೧. ೩೬)

**ಅಱುಱ್** – ಆವರಿಸು (ಖೇದಾನಳನುರಿದೆರ್ದು ಮನೋದಾರುವನಳುಱಿ ಧೃತಿಯುಮಱಿವುಂ ಬಱಿಯಲ್ ಹಾ ದೇವಿ ಹಾ ದೇವಿ ಎನುತುಂ ಅವನಿಪತಿ ಮೂರ್ಛಿಸಿದಂ: **ಶಾಂತೀಶ್ವಪು,** ೫. ೧೮೨)

**ಅಱ್ಕಜ** – ಅಕ್ಕಜ, ಆಶ್ಚರ್ಯ (ತನ್ನ ತೊಡಂಕದೆಯ್ದೆ ನೂರ್ಮಡಿ ಮನದೊಳ್ ಪಳಂಚಲೆಯೆ ಡಕ್ಕೆಯೊಳ್ ಅಱ್ಕಜವಾಗೆಯಾಡಿದಳ್: **ಪಂಪಭಾ,** ४. ೯೦)

**ಅಱ್ಕಮೆ** – ಅಜೀರ್ಣ (ಗಟ್ಟನೆ ಕೊಳೆ ಕಡುಗಂಪಿನೊಳ್ ಅಱ್ಕಮೆಗೊಳಗಪ್ಪವೆಂದು ಮಧುಪಂಗಳ್: **ಆದಿಪು,** ೧೧. ೧೧೯)

**ಅಱ್ಕಱು** – ಅಕ್ಕರೆ (ದಿಗಂಗನಾಸಮಿತಿಗೆ ಅಱ್ಕಱಿನೊಳ್ ಕುಡುವಲ್ಲಿ ಕೇಸರಂಬೆರಸಿದ ಪೊನ್ನ ಬಾಯಿನದ ಬಟ್ಟಲಿವೆಂಬಿನಂ: **ಆದಿಪು,** ೧೧. ೧೧೭); ಪ್ರೀತಿ ತೋರಿಸು (ರಾಜತಾದ್ರೀಂದ್ರಶೋಭಾ ವಿಭವಕ್ಕಱ್ಕರ್ತು ತತ್ಪರ್ವತನಿಕಟವನೋಪಾಂತದೊಳ್ ಬೀಡುವಿಟ್ಟಂ: **ಆದಿಪು,** ೧೩. ೭೮)

**ಅಱ್ಕಾಡಿಸು** – ನಾಶಪಡಿಸು (ನೋಡಿಸುಗುಂ ಅವಯವಂಗಳಂ ಓಡಿಸುಗುಂ ಚಲಮಂ ಒಲವಂ ಅವನೊಳ್ ಪಡೆದಱ್ಕಾಡಿಸುಗುಂ ಮನಂ: **ಹರಿವಂಶ,** ३. ೭೧)

**ಅಱ್ಕಾಡು** – ನಾಶವಾಗು, ಜೀರ್ಣವಾಗು (ವಿರೋಧಿ ಕ್ಷಾತ್ರಪರ್ ಎನ್ನೀ ಗದಾಪರಿಘಾತದಿಂ ಅಱ್ಗಿ ತಱ್ಗಿ ಮಡಿದಿನ್ನು ಅಱ್ಕಾಡದೇಂ ಪೋಪರೇ: **ಪಂಪಭಾ,** ೧೩. ೯೦)

**ಅಱ್ಕಿ ಮೆಟ್ಟು** – ಸಂಪೂರ್ಣವಾಗಿ ನಾಶವಾಗು (ತನ್ನ ಬಲಮೆಲ್ಲಂ ಅಱ್ಕಿ ಮೆಟ್ಕಿದಂತಾದುದೆಂಬುದಂ ಕೇಳ್ದು: **ಪಂಪಭಾ,** ೫. ೧೦೦ ವ)

**ಅಱ್ಕು** – ಜೀರ್ಣವಾಗು (ಅಱ್ಕು–ಜೀರ್ಣೇ: **ಶಬ್ದಮದ,** ಧಾ ೫); ನಾಶವಾಗು (ಭವಲಲಾಟವಿಲೋಚನಾಗ್ನಿಶಿಖೆಯಿಂ ಬೆಂದು ಅಱ್ಕಿ ಮತ್ತಂ ಮನೋಭವಂ ಎಟ್ಟುತ್ತೊಡೆ: **ಪಂಪಭಾ,** ೭. ೨४)

**ಅಱ್ಕೆ** – ರೋದನ (ತನಗೆ ಪೊಱಿ ತುಡುಗೆ ನವಲೇಪನಮೆ ಮಳಂ ಗೀತಂ ಅಱ್ಕೆ: **ಆದಿಪು,** ೯. ೫೫)

**ಅಱ್ಗಿತಟ್ಗು** – ನಾಶವಾಗಿ ತಗ್ಗು (ಎಡವಱದೊಳ್ ಎಱಗಿ ಬಱಿಸಿಡಿಲ್ ಇಡುಮುಡುಕನೆ ಪೊಡೆದುದೆನಿಸಿ ಪಾಂಡ್ಯನ ರಥದ ಅಚ್ಚು ಉಡಿದು ಅಱ್ಗಿತಟ್ಗಿ ಕೊಂಡುವು ಕಡುಗೂರಿದುವೆನಿಪ ಗುರುತನೂಜನ ಕಣೆಗಳ್: **ಪಂಪಭಾ,** ೧೨. ೮೨)

**ಅಱ್ಗಿಮಟ್ಗು** – ನಾಶವಾಗಿ ಮಟ್ಟವಾಗು (ಅಂತು ಉಭಯಬಲ ಧನುರ್ಧರಬಲಂಗಳುಂ ಅಱ್ಗಿಮಟ್ಗಿದಾಗಳ್: **ಪಂಪಭಾ,** ೧೦. ೭೫ ವ)

**ಅಱ್ಗಿಸು** – ಕ್ಷೀಣವಾಗುವ ಹಾಗೆ ಮಾಡು (ಒರ್ವನಂ ಅಱ್ಗಿಪರ್ ಒರ್ವನ ಮುನ್ನಂ ಬಟಿಕ್ಕವನ ಒಳ್ಗುಣಂಗಳಂ ಕೊರ್ವಿಪರ್: **ಪಂಚತಂತ್ರ,** ೧೦೫)

**ಅಟ್ಟು** – ಕುಗ್ಗು (ಜ್ಞಾನಕೃಶಾನುವಿಂದಂ ಉರಿದು ಅಟ್ಟಿದ ಕಾಮನ ಮೋಹನಾಸ್ತ್ರಸಂತಾನಶರಾಸನಾವಳಿಯಂ ಒಪ್ಪಿಸಲ್ .. .. ತಂದರ್: **ಪಂಪರಾ,** ೧೬. ೮೯); ನಾಶವಾಗು (ಅಟ್ಟಿದ ಬಿಲ್ವಡೆ ಮಾಣದೆ ತಟ್ಟಿದ ರಥಮೆಯ್ದೆ ಬಗಿದ ಪುಣ್ಗಳ ಪೊಱೆಯಿಂ ಮೊಟ್ಟಿದ ಕರಿಘಟೆ ಜವನಡುವಟ್ಟಿಯನನುಕರಿಸೆ ವೀರಭಟರಣರಂಗಂ: **ಪಂಪಭಾ,** ೧೧. ೬೪); ನಾಶ ಹೊಂದು (ಪರಿತಾಪಾತಂ ಅಟ್ಟಿದತ್ತು ಒಗೆದುದು ಉದ್ಬೋಧ ಪ್ರದೀಪಂ: **ನೇಮಿನಾಪು,** ೪. ೧೪)

**ಅಟ್ಟೆ** – ಪ್ರೀತಿ (ಮನ್ನಿಸಿ ಮನ್ತ್ರಿಮುಖ್ಯನಿತಿಭಕ್ತಿಭರಾನತಮೂರ್ಧಂ ಅಟ್ಟೆಯಿಂ ಬಿನ್ನವಿಕುಂ: **ಆದಿಪು,** ೨. ೩೪); ಸಂತೋಷ; ಇಷ್ಟ (ನಾನಾಪ್ರಕಾರದಿಂದಮದೇನೆಂಬುತ್ಸವಮಂ ಅಟ್ಟೆಯಿಂ ಮಾಡಿದರೋ: **ಆದಿಪು,** ೧೬. ೫೪)

**ಅಟ್ಟೆಕಾಱ** – ಪ್ರೀತಿಸುವವನು (ಕಂಡಟ್ಟೆಕಾಱರ್ ಒಂದಂ ಕಂಡಿರೆ ಸರ್ವಸ್ವದಾನಮಂ ಕುಡುವೆಡೆಯೊಳ್ ಪೆಂಡತಿಯನೀವುದು ಗಡ: **ಸಮಯಪ,** ೧೧. ೯೭)

**ಅಟ್ಟೆಗ** – ಪ್ರೀತಿಯುಳ್ಳವನು (ಜೈನರುಮೇಂ ತಮ್ಮವೊಲಾಗೆ ಮಾಡಲ್ ಅಟ್ಟೆಗರ್ ಅರೆಬರ್: **ಸಮಯಪ,** ೧೩. ೨೩)

**ಅಟ್ಟೆಗೆ** – ಪ್ರೀತಿಯುಳ್ಳವಳು (ಮುನೀಶ್ವರ ಪರಿಚರ್ಯೆಯೊಳ್ ಪಿರಿದುಂ ಅಟ್ಟೆಗೆಯಾಗು: **ಕಾದಂಸಂ,** ೨. ೧೦)

**ಅಟ್ಟೆವಡು** – ಆಸೆಪಡು (ಪೌದನಪುರಮನೆಯ್ದಿ ಪುರಶ್ರೀಯಂ ಅಟ್ಟೆವಟ್ಟು ನೋಡಿ ಮೆಚ್ಚುತುಂ: **ಆದಿಪು,** ೧೪. ೪೩ ವ)

**ಅಟ್ಟೞಿವೋಗು** – ನಾಟಿಕೊಂಡು ಹೊರಬರು (ಹರಿವಕ್ಷಮಂ ಅಟ್ಟೞಿವೋಗೆಯೆಚ್ಚು ಮುಳಿಸವಗಟಿಯಿಸುತಿರೆ ನರನ ಬಿಲ್ಲ ಗೊಣೆಯಮನೆಚ್ಚಂ: **ಪಂಪಭಾ,** ೧೨. ೨೦೯)

**ಅಟ್ಟಿದಂ** – ಸತ್ತುಹೋದವನು, ಸೊಪ್ಪಾದವನು (ಎರಡರ್ಥಕ್ಕೆ: ಅಟ್ಟಿದನೆಂದು ಸತ್ತನುಂ ಸೊಪ್ಪಾದವನಕ್ಕುಂ: **ಶಬ್ದಮದ,** ೩೩ ವೃತ್ತಿ, ೧೩೦)

**ಅಟ್ಟು** – ಮುಳುಗು (ಅದುವೆ ಗರ್ಭದೊಳ್ ಅಟ್ಟಿ ಮೇಣದಕ್ಕುಮೆ ಜೀವಂ: **ಸಮಯಪ,** ೧೨. ೩೫); ಮುಳುಗಿಸು (ಪಾವುಗಳಂ ಕೊಳಿಸಿ ಮಹಾಗ್ರಾವಮಂ ಉಱದೆ ಅಡಸಿ ಕಟ್ಟಿ ಕೊರಲೊಳ್ ಗಂಗಾದೇವಿಯ ಮಡುವಿನೊಳ್ ಅಟ್ಟಿದರ್ ಏವಯಿಸದೆ ತಮ್ಮ ಕುಲಮಂ ಅಡಿಗಟ್ಟುವವೋಲ್: **ಪಂಪಭಾ,** ೨. ೩೨)

**ಅಟ್ಟುಬರ್** – ಮುಳುಗಿ ಹೋಗು, ಹೂತುಹೋಗು (ಮಣಲೊರ್ಳ ಅಟ್ಟುವರೆ ಮೆಲ್ಲಡಿಗಳ್ ನಡೆಯದ ಬೇವಸಮಂ ತಾಂ ನಡೆಯಿಸುವಂತೆ ಅವರ್ಗಳ್ ಒಯ್ಯನೊಯ್ಯನೆ ನಡೆದರ್: **ಪಂಪಭಾ,** ೭. ೮೫)

**ಅಟ್ಟು** – ಸುಡು, ಕೇಡನ್ನುಂಟುಮಾಡು (ಪಾವಕಂ ಅಟ್ಟೆ ಖಾಂಡವಮಂ ಉಂಡಪಂ ಅರ್ಜುನಂ ಊಡಿದಪ್ಪಂ ಐರಾವತವಾಹನಂ ನೆಱೆದು ಸಾಧನಸಂಯುತಂ: **ಪಂಪಭಾ,** ೫. ೭೮)

**ಅಟ್ಟು** – ಹಬ್ಬಿ ಸುಡು (ವನದಹನಂ ವನಾಮತರಮನೊರ್ಬಳಸಾಗಿರೆ ಮುತ್ತಿ ಸುತ್ತಿ ಸುತ್ತಿನ ನಡುವಿರ್ದುಮಾ ಮರನಂ ಅಟ್ಟಿದುದು: **ಆದಿಪು,** ೯. ೫೯)

**ಅಟಿಗ್ಗೆ** – ಅಡುಗೆ (ಜವನಡುವ ಅಟ್ಟಿಯಂ ಅನುಕರಿಸೆ ವೀರಭಟರಣರಂಗಂ: **ಪಂಪಭಾ,** ೧೧. ೬೪)

## ಆ

**ಆ** – ನಿರ್ದೇಶಕ ಅವ್ಯಯ (ಕಾವೇರಿಯಿಂದಂ ಆ ಗೋದಾವರಿವರಮಿರ್ಪ ನಾಡದಾ ಕನ್ನಡದೊಳ್: ಕವಿರಾಮಾ, ೧. ೩೬)

**ಆಂಕೆ** – ಹಿಡಿತ (ಖರಕರನ ಸಹಸ್ರ ಕರೋತ್ಕರದ ಆಂಕೆ ಕಟಿಲ್ದು ಕಿಡೆ: **ಲೀಲಾವತಿ,** ೬. ೮೭); ಪ್ರತಿಭಟನೆ

**ಆಂಕೆಗೊಡು** – ಆಸರೆ ನೀಡು (ಮಹೀಪತಿಸುತನ ಮನಮನಾಜೆಸಿ ಪರಕಾಯಪ್ರವೇಶಂಗೆಯ್ವಂತೆ ಮನಕ್ಕೆ ಮನಮಂ ಆಂಕೆಗೊಟ್ಟು: **ಲೀಲಾವತಿ,** ೪. ೬೬ ವ)

**ಆಂಕೆಗೊಳ್** – ಪ್ರತಿಭಟಿಸು, ಎದುರಿಸು (ಮೊನೆಯಂಬುಗಳ್ ಅಳ್ಳಿಡಿವೋಗೆಯುಂ ಮನಂಗಿಡಂ ಆಂಕೆಗೊಳ್ಗಂ ಅಗಿಯಂ ಸುಗಿಯಂ ಸುರಸಿಂಧುನಂದನಂ; **ಪಂಪಭಾ,** ೧೧. ೪೪)

**ಆಂಕೆಯಾಳ್** – ಪ್ರತಿಭಟಿಸುವ ಭಟ (ಪೊಱಮಟ್ಟಿಜೆವ ಆಳ್ಗಂ ಆಂಕೆಯಾಳ್: **ಚಂದ್ರಪ್ರಪು,** ೫. ೧೦೩)

**ಆಂಗಿಕ** – ದೇಹಕ್ಕೆ ಸಂಬಂಧಿಸಿದ (ಅಂಗೋಪಾಂಗಂಗಳೊಳೆಸೆವ ಆಂಗಿಕಮುಂ: **ಆದಿಪು,** ೯. ೨೮); ಒಂದು ಅಭಿನಯ ಪ್ರಭೇದ (ಅಂಗೋಪಾಂಗಂಗಳೊಲೆಸೆವ ಆಂಗಿಕಮಂ ಗಾನಪಾಠ್ಯದೊಳ್ ವಾಚಿಕಮಂ; **ಆದಿಪು,** ೯. ೨೮)

**ಆಂಗೊಳಗು** – ಹಸುವಿನ ಗೊರಸು (ಜಳಧಿಯ ನೀರನದೊಂದು ಆಂಗೊಳಗಿನ ನೀರೆಂದು ಬಗೆದು: **ಆದಿಪು,** ೧೩. ೪)

**ಆಂದೆ** – ಒಂದು ಹಕ್ಕಿ, ಗೂಬೆ (ಕಾಗೆ ಗೂಗೆ ಪರ್ದು ಚಕೋರಂ ಹಂಸೆ ಕುರ್ಕು ಗಿಳಿ ಪುರುಳಿ ಪೆಂಗುರು ಕಾರಂಡಂ ಆಂದೆ ಮೊದಲಾಗೊಡೆಯ ಗಗನಚರಂ: **ವಡ್ಡಾರಾ,** ಪು ೯೭, ಸಾ ೯)

**ಆಂದೆಗೀರ** – ಆಂದೆ, ಗೂಬೆ (ಅಂತಾ ಪಿಂಗಲಿಯೆಂಬ ಆಂದೆಗೀರಂಆ ಹಂಸಗೆ ಕಾಪುರುಷನಂತೆ ತನಗಿಲ್ಲದ ಮೈಮೆಯನುಮುಟುಮಾಡಿ: **ಪಂಚತಂತ್ರ,** ೧೯೭ ವ)

**ಆಂದೋಲನ** – ತೂಗಾಟ (ಅನುಕೂಲಮಾರುತ ಆಂದೋಲದಿಂ ಗಿರಿಶಿಖರಾವನಿಯೊಳ್ ಮಿಳ್ಳಿಸಿದುದು ಕೇತನಪಲ್ಲವಂ: **ಪಂಪರಾ,** ೧೦. ೪೯)

**ಆಂದೋಳ** – ತೂಗಾಟ (ಪಂಡಿತಸಂದೋಹಶಿರಶ್ಶಿಂಖಿಡಿ ನಟನಾ ಆಂದೋಳಪ್ರದಂ .. .. ಮಾಡಳೇ: **ಅನಂತಪು,** ೧. ೪೧); ಉಯ್ಯಾಲೆ (ಸುರವಿರಚಿತ ಆಂದೋಳದಿಂದಂ: **ಆದಿಪು,** ೧೦. ೧೮); ಪಲ್ಲಕ್ಕಿ (ಕರಿಣಿಗಳ್ ಮೇಲೆ ಕೆಬರ್ ತುರಂಗಗಳ ಮೇಲೆ ಕೆಲಬರ್ ಎಸೆವ ಆಂದೋಳಿರದರೆಬರ್ ಸತಿಯರ್: **ತ್ರಿಷಷ್ಟಿಪು,** ೨೪. ೩೫)

**ಆಂದೋಳನ** – ಉಯ್ಯಾಲೆ (**ಲೀಲಾವತಿ**ನದೊಳೆ ವಿಹರಿಪ ಲೀಳಾಸರದೊಳಗೆ ಮೂಡಿ ಮುಚ್ಚುವ ಲೀಲಾಂದೋಳಮನೇಱುವ ಲೀಲಾಕೇಳಿಗಳೆ ವಿಲಾಸಕೇಳಿಗಳ್ ನೃಪಸತಿಯಾ: **ಅಜಿತಪು,** ೩. ೯); ತೂಗಾಟ, ತುಳುಕಾಟ (ಲಾವಣ್ಯರಸಾವಿಳಂ ಆಂದೋಳಿತದಿಂ ಎಸೆದುದಾಸ್ಯಂ ನಟಿಯಾ: **ರಾಜಶೇಖಿ,** ೧೨. ೭೪); ಮೇನೆ (ಕಳಶಂ ಆದರ್ಶಂ ಆದೋಳನಂ ದಂತಿಸಮೂಹಂ ವಾಜಿವೃಂದಂ: **ರಾಜಶೇಖಿ,** ೯. ೪೦)

**ಆಂದೋಳಮನಾಡು** – ಹೊಯ್ದಾಡು (ಮಾಡದೊಡೆ ತಾಯ್ಗೆ ಮರಣಂ ಮಾಡಿದೊಡೆ ಎನ್ನೊಂದು ಗತಿಗೆ ಕೇಡುಂ ಅದೇನಂ ಮಾಡುವೆಂ ಎಂದು ಆಂದೋಳಮನಾಡೆ ಮನಂ: **ಯಶೋಧಚ**, ೩. ೨೨)

**ಆಂದೋಳಾಯಮಾನ** – ಉಯ್ಯಾಲೆಯಂತಹ ತೂಗಾಟ (ಅನುಕೂಲ ಆಂದೋಳಾಯಮಾನ ರಾಜಕುಂಜರ ವಿಜಯಕದಳಿಕಾತರಂಗಿತ ಗಗನಾಂಗಣನುಂ: **ಆದಿಪು,** ೧೨. ೬೧ ವ)

**ಆಂಧ್ರಿ** – ಆಂಧ್ರದೇಶದ ಹೆಂಗಸು (ಆಂಧ್ರೀ ನೀರಂಧ್ರಬಂಧುರ ಸ್ತನಹಾರನುದಾರಂ ಸರಸ್ವತೀಮಣಿಹಾರಂ: **ಆದಿಪು,** ೧. ೩೨)

**ಆಕಂಠಪ್ರಮಾಣ** – ಕಂಠದವರೆಗೂ (ದಿವ್ಯಾಹಾರಮಂ ಆಕಂಠಪ್ರಮಾಣಂ ಬರೆಗಂ ತಣಿಯುಂಡು: **ವಡ್ಡಾರಾ,** ಪು. ೭೮. ಸಾ. ೨೨)

**ಆಕಂಠೋಷ್ಠಂಬರಂ** – ಗಂಟಲು ಮತ್ತು ತುಟಿಯವರೆಗೆ (ಇಂಬಾಗಿರೆ ಮುದದಿಂ ಪಲವುಂ ಬಣ್ಣದ ಭಕ್ಷ್ಯರಾಶಿವೆರಸು ಆಕಂಠೋಷ್ಠಂಬರಮುಂಡೊಯ್ಯನೆ ಪಾರ್ವಂ ಬಂದಾ ಕೊಡನ ಕೆಳಗೆ ಪಟ್ಟಿರ್ದಾಗಳ್: **ಪಂಚತಂತ್ರ,** ೨೫೪)

**ಆಕಂಪನಗೊಳ್** – ನಡುಗು (ಕಾಮದೇವನ ಕೂರಲಗಿನ ಧ್ವನಿಯೆಂದು ಕೋಕಿಲಧ್ವನಿಗೆ ಆಕಂಪನಗೊಳುತ್ತುಂ; **ಗಿರಿಜಾಕ,** ೪. ೧೨೦ ವ)

**ಆಕಂಪಿಸು** – ನಡುಗು (ಮುಡಿ ಸೊಪ್ಪಾಗದು ನೀವಿ ಬಿರ್ಚದು ಅಧರಂ ಬೆಳ್ಪೇಱದು ಊರುದ್ವಯಂ ಪೊಡರ್ದು ಆಕಂಪಿಸದು ಅಕ್ಷಿ ಕೆಂಪಡಸದು: **ಜಗನ್ನಾವಿ,** ೧೬. ೧೨೬)

**ಆಕಪ್ಪು** – ಗುಳಿ, ಖೆಡ್ಡ (ತಂದು ಆನೆಯಂ ಕೆಡಪು ಆಕಪ್ಪಿನೊಳ್ ಎಚ್ಚು ತೋಱ ಬಲವದ್ಭಲ್ಲೂಕಮಂ: **ಉದ್ಭಟಕಾ,** ೨. ೫೦)

**ಆಕರಿಸು** – ವ್ಯಾಪಿಸು, ಆವರಿಸು (ಕರಮೆಸೆದಂ ವಿಸ್ತರಚಂದ್ರಿಕೆ ಆಕರಿಸಿದ ಹರನೀಳನಗೇಂದ್ರಂದದಿಂ: **ಕರ್ಣನೇಮಿ,** ೧೨. ೨೭೫)

**ಆಕರ್ಣಕೃಷ್ಟ** – ಕಿವಿಯವರೆಗೆ ಸೆಳೆಯಲ್ಪಟ್ಟ (ಆಕರ್ಣ್ಯಕೃಷ್ಟ ಉತ್ಸೃಷ್ಟ ನಿಜ ವಿಕೀರ್ಣಟಂಕಂಗಳಿಂದಂ: **ಆದಿಪು,** ೧೪. ೧೦೩ ವ)

**ಆಕರ್ಣನ** – ಆಲಿಸುವುದು, ಕೇಳು (ತತ್ ವಾರ್ತಾ ಆಕರ್ಣನದಿಂ ಸಂತೋಷಂಬಟ್ಟು: **ಚಾವುಂಪು,** ಪು. ೪೫೩. ಸಾ. ೧೯)

**ಆಕರ್ಣನೀಯ** – ಆಲಿಸಲು ಯೋಗ್ಯವಾದ (ದ್ವಿರೇಘೋದಿತನಾದ ಆಕರ್ಣನೀಯಂ ಪಂಚೇಂದ್ರಿಯಸುಖದೊದವಂ ನಂದನಂ ಮಾೞ್ಪುದೆಂದು: **ಚಂದ್ರಪ್ರಭು,** ೧. ೧೧೨)

**ಆಕರ್ಣಾಂತ** – ಬಿಲ್ಲಿನ ಹೆದೆಯನ್ನು ಕಿವಿಯವರೆಗೂ ಎಳೆಯುವುದು (ಜಗತೀನಾಥಂ ಆ ಕುಮಾರಂ ಒಸೆದು ಆಕರ್ಣಾಂತವಿಶ್ರಾಂತ ದೃಷ್ಟಿಗಳಿಂ ನೋಡುತ ಎಯ್ದೆವರ್ಪುದುಂ: **ಸುಕುಮಾಚ,** ೧೧. ೨)

**ಆಕರ್ಣಾಂತಂಬರಂ** – ಆಕರ್ಣಾಂತಂ (ಧನಂಜಯಂ ಆಕರ್ಣಾಂತಂಬರಂ ತೆಗೆದು ಆ ಕರ್ಣಾಂತಂ ಮಾಡಲ್ ಬಗೆದು: **ಪಂಪಭಾ,** ೧೨. ೨೧೨ ವ)

**ಆಕರ್ಣಿಸು** – ಆಲಿಸು (ರಾಜನೀತಿಯ ಕ್ರಮಂಗಳಂ ಅತಿಕ್ರಮಿಸಿ ನಡೆವುದು ಉಚಿತಮಲ್ಲೆಂದು ನುಡಿದ ದವನಕನ ಮಾತನಾಕರ್ಣಿಸಿ: **ಪಂಚತಂತ್ರ,** ೧೬೯ ವ)

**ಆಕಸ್ಮಿಕ** – ಅನಿರೀಕ್ಷಿತ (ನರಕ ನಗರ ಲಗ್ನಕೆ ಆಕಸ್ಮಿಕ ಅಗ್ನಿಸ್ಫುಲಿಂಗಸ್ಫುರದವಿರಳ ಲಾಕ್ಷಾಗೇಹಪೂರಂ: **ಆದಿಪು,** ೫. ೮೯)

**ಆಕಳ್** – ಹಸು (ಆಕಳ್ಗಳಿಲ್ಲದೆಯುಂ ಆ ಕಳ್ಗಳ ಸೊರ್ಕು ನಿಂದುದಱಿಂದೆ: **ಲೀಲಾವತಿ,** ೫. ೧೧೮)

**ಆಕಳಿತ** – ಹಿಡಿದ (ಮುನಿಪತಿಯಾಗಿರ್ದೆಕೆಂದಱಿಯೆಂ ದಶಧರ್ಮ ಆಕಳಿತಕರಾಗ್ರನಾದನೆನೆಗಿದು ಚೋದ್ಯಂ: **ಆದಿಪು,** ೬. ೩೦); ಸೇರಿದ (ಝಣಝ್ಝುಣಿತ ಮೇಖಲಾಕಲಿತಹಾರ ಕೇಯೂರ ಭೂಷಣಪ್ರಭೆ ದಿಗಂತಮಂ ಬೆಳಗೆ: **ಕಾದಂಸಂ,** ೮. ೪೬)

**ಆಕಳಿಸು** – ಹಿಡಿ (ನಳಿನಿಯ ನಳಿನಮನಿನಿಸಾದೊಡಂ ಆಕಳಿಪಂತಿರೆ ಕರದೆ ವಧುವ ಕರಮಂ ಕರದಿಂ ತಳಿದಂ ಕುಮಾರಂ: **ಚಂದ್ರಪ್ರಭು,** ೬. ೭೪)

**ಆಕಾಂಕ್ಷಣ** – ಆಕಾಂಕ್ಷೆ (ಈಕೆಯ ವದನಾಕಾರಮನೇಕಾಂತಂ ಪೋಲ್ವೆನೆಂಬುದರ್ಕಾಗಿ ಕನತ್ಕೋಕನದಕಿಂದುಂ ಉಂಟು ಆಕಾಂಕ್ಷಣಂ ಅದಱೊಳ್ ಎಂಬುದು ಉಪಮೋತ್ಪ್ರೇಕ್ಷಂ: **ಕವಿರಾಮಾ,** ೩. ೬೭)

**ಆಕಾರಂಗಿಡು** – ರೂಪಗೆಡು (ಲೋಕದೊಳಾಂ .. .. ಮೆಯ್ಯಾಕಾರಂಗೆಟ್ಟು ನಮೆವರಂ ಕಂಡಱಿಯೆಂ; **ಧರ್ಮಾಮೃ,** ೪. ೫೫)

**ಆಕಾರಸಂವರಣೆ** – ಆಕಾರಗುಪ್ತಿ, ರೂಪವನ್ನು ಮರೆಮಾಚಿಕೊಳ್ಳುವುದು (ಅತಿ ವಿಸ್ತೀರ್ಣಶಾಖಾ ಸಂಕೀರ್ಣಮಪ್ಪುದೊಂದು ವಟವಿಟಪಿಯ ಕೆಳಗೆ ತರುಣಹರಿಣವೃಕ ವರಾಹಋಕ್ಷತರಕ್ಷು ಪ್ರಮುಖನಿಖಿಲ ಮೃಗಗಣಪರಿವೃತನುಮಾಗಿಯಾಕಾರಸಂವರಣೆಯಂ ಉಟುಮಾಡಿಕೊಂಡಿರ್ಪುದುಂ: **ಪಂಚತಂತ್ರ,** ೮೧ ವ)

**ಅಕಾಳಿಕೀ** – ಕ್ಷಣಿಕವಾದದ್ದು (ಜಲದಾಟೋಪಮಂ ಬುದ್ಬುದನಿವಹನಿಭಂ ಫೇನಪಿಂಡಾಯಮಾನಂ ಜಲರೇಖಾಕಾರಂ ಆಖಂಡಲ ಲಲಿತ ಧನುರ್ಲೀಲಂ ಆಕಾಳಿಕೀಸಂಚಳಂ ಈ ಸೌಂದರ್ಯಂ: **ಅಜಿತಪು,** ೬. ೫೦); ಮಿಂಚು (ಆಖಂಡಲ ಲಲಿತ ಧನುರ್ಲೀಂ ಆಕಾಳಿಕೀಸಂಚಲಂ ಈ ಸೌಂದರ್ಯಮಿಂತೀ ನವರಸಚಯಮೀ ದೇಹಂ: **ಅಜಿತಪು,** ೬. ೫೦)

**ಆಕಾಶಗಾಮಿ** – ಅಂತರಿಕ್ಷದಲ್ಲಿ ಸಂಚರಿಸುವವನು (ಆತಂ ಆಕಾಶಗಾಮಿ ನೀಮೆಂತು ಕೊಲ್ವಿರೆನೆ: **ವಡ್ಡಾರಾ,** ಪು. ೫೯. ಸಾ. ೨೩)

**ಆಕಾಶದ್ರವ್ಯ** – [ಜೈನ] ಷಡ್ದ್ರವ್ಯಗಳಲ್ಲಿ ಒಂದು (ಜೀವದ್ರವ್ಯ ಪುದ್ಗಲದ್ರವ್ಯ ಧರ್ಮದ್ರವ್ಯ ಅಧರ್ಮದ್ರವ್ಯ ಆಕಾಶದ್ರವ್ಯ ಕಾಲದ್ರವ್ಯಗಳೆಂಬ ಷಡ್ದ್ರವ್ಯಂಗಳ ಗುಣಪರ್ಯಾಯಮುಮಂ: **ಸುಕುಮಾಚ,** ೩. ೩೯ ವ)

**ಆಕಾಶಸ್ಫಟಿಕ** – ಸೂರ್ಯಕಾಂತಶಿಲೆ (ರತ್ನಂ ಪ್ರತಿಬಿಂಬಿತ ಮಣಿದೀಪಪ್ರತಿಬಿಂಬದತಾನುಂ ಆಕಾಶಸ್ಫಟಿಕಾಂತರಿತ ದಹನಾರ್ಚಿಯಂತಾನುಂ .. .. ತನ್ನ ಬೆಳಗೆ ಬೆಳಗಾಗೆ: **ಶಾಂತಿಪು,** ೯. ೨೧೪ ವ)

**ಆಕಾಶಾಸ್ತಿಕಾಯ** – [ಜೈನ] ಐದು ಬಗೆಯ ಅಸ್ತಿಕಾಯಗಳಲ್ಲಿ ಒಂದು (ಆಕಾಶಾಸ್ತಿಕಾಯಮೆಂಬ ಪಂಚಾಸ್ತಕಾಯ ನಿಕಾಯಮುಮಂ: **ಸುಕುಮಾಚ,** ೩. ೩೬ ವ); ನೋಡಿ, 'ಅಸ್ತಿಕಾಯ'

**ಆಕಾಸವನಿ** – ಮಳೆಯ ಹನಿ (ಚಾದಗೆಯಂತೆ ಆಕಾಸವನಿಗೆ ಬಾಯಂ ಬಿಡುತ್ತುಂ ದಾಹಜ್ವರಂಬೆತ್ತಂತೆ ಗಾಳಿಗಾಸೆಗೆಯ್ಯುತ್ತುಂ: **ಧರ್ಮಾಮೃ,** ೧. ೧೨೪ ವ)

**ಆಕಿಂಚನ್ಯ** – ತನ್ನದೆಂದು ಏನೂ ಹೊಂದದಿರುವುದು, ಬಡತನ (ತ್ಯಾಗಂ ಲಸತ್ಕೀರ್ತಿ ಸಂಯಮ ಆಚಾರಗುಣಂ ತಪಂಫಲಂ ಆಕಿಂಚನ್ಯಂ ನಯಂ ಬ್ರಹ್ಮಚರ್ಯಮೆ ಮಾನೋನ್ನತಿ ವರ್ಧಮಾನಮುನಿಗಕ್ಕುಂ ಪೆಱರ್ಗಕ್ಕುಮೇ: **ಸುಕುಮಾಚ,** ೧. ೨೬)

**ಆಕೀರ್ಣ** – ತುಂಬಿದ, ವ್ಯಾಪಿಸಿದ (ಕುಸುಮಾಸ್ತ್ರನ ಶಸ್ತ್ರಶಾಲೆಯೆನಿಸಿ ಕುಸುಮಾಕೀರ್ಣಮಾದ ಕರ್ಣಿಕಾರಲತೆಗಳುಮಮ: **ಮಲ್ಲಿನಾಪು,** ೬. ೧೪ ವ)

**ಆಕುಂಚಿತ** – ಕುಗ್ಗಿದ (ಊಪಸಂಜಾತ ರೋಮಾಂಚಂ ಆಕುಂಚಿತ ಗಾತ್ರಂ .. .. ವೈಭಾತಿಕವಿಧಿವಿಹಿತಾಮೋಘಂ ದ್ವಿಜೌಘಂ: **ಲೀಲಾವತಿ,** ೯. ೨೫); **ಗದಾಯು**ದ್ಧದಲ್ಲಿನ ಒಂದು ಹೊಡೆತದ ಬಗೆ

**ಆಕುಲ** – ಕ್ಷೋಭೆ, ತೊಂದರೆ (ಈ ಕಲಹದೊಳ್ ಅಣ್ಣ ನಿಮ್ಮ ಕುಲಂ ನಿಮಗೆ ಆಕುಲಮಂ ಉಂಟುಮಾಡುಗುಂ: **ಪಂಪಭಾ,** ೧೦. ೨೧); ಕಳವಳಗೊಂಡ (ಪೋಗು ಬೇಗಂ ಎಂಬಂತೆಯುಂ ಎನ್ನಂ ಅಶ್ರುಪಿಹಿತ ಆಕುಲದೃಷ್ಟಿಗಳಿಂದೆ ನೋಡಿದಳ್: **ಕಾದಂಸಂ,** ೬. ೧೯)

**ಆಕುಲಿತೆ** – ತುಂಬಿದ; ಕಲಕಿದ; ಕಳವಳ (ಕಳ್ಳರಾಯಿಲಮಱೆಯೇಱು ಮಾರಿ ಪಸಿವಿಟ್ಟಿ ಬಱಿಂ ಪೆಱವುಂ ಭಯಂಗಳ್ ಆಕುಲಿತೆಗಳಿಲ್ಲ: **ಆದಿಪು,** ೧. ೫೨)

**ಆಕುಲೆ** – ಚಿಂತೆಗೊಳಗಾದವಳು (ವಸಂತಂ ಬರಲೊಡನೊರ್ಮೆಯೆ ಗಂಧರ್ವರಾಜಸುತೆ ಮನದೊಳ್ ಆಗಳ್ ಆಕುಲೆಯಾದಳ್: **ಕಾದಂಸಂ,** ೮. ೫೧)

**ಆಕುಳ** – ಕಳವಳ, ವ್ಯಥೆ (ಧಾರಾಗೇಹಂಗಳಂ ಸೆಱೆಗೆಯ್ದಂ ಆಕುಳಮೆನೆ ಕುಳಿರ್ಕೊಱಿತ್ತಾಗಳ್ ಮನಂ ಮನುಜೇಂದ್ರನಾ: **ಆಚವರ್ಧ,** ೪. ೭೨)

**ಆಕುಳಮತಿ** – ದುಃಖಿ (ಆಕುಳಮತಿಗಳ್ ನಿಚ್ಚಂ ಲೋಕಪುರಾಣಮನೆ ಕೇಳ್ವರ್: **ಸಮಯಪ,** ೧೦. ೧೪೩)

**ಆಕುಳೀಕೃತ** – ಕದಡುವಂತೆ ಆದ (ಧ್ವನದ ಅಳಿಕುಳಾಕುಳಿಕೃತವನಂಗಳಿಂದೆಸೆವ ಪದ್ಮಷಂಡಂಗಳ: **ಪಂಪಭಾ,** ೮. ೫೨)

**ಆಕೂತ** – ಇಂಗಿತ (ದಕ್ಷಜನೋಪಲಕ್ಷಿತ ಆಕೂತಂ ಅಪರಾಜಿತಾನುಜನ್ಮಂ ನುಡಿವಾಗಳ್: **ಶಾಂತಿಪು,** ೨. ೫೧ ವ)

**ಆಕೂರ್ಪರ** – ಮೊಳಕೈವರೆಗೆ (ಆಕೂರ್ಪರರಚಿತ ಕಾಳಯಸ ವಳಯ ಭಯಂಕರಕರದ್ವಯಮುಂ: **ಆದಿಪು,** ೧೩. ४೫ ವ)

**ಆಕೃತಿ** – ಆಕಾರ (ದಿವ್ಯಾಕೃತಿಯಂ ಧರಿಯಿಸಿ ಕೃಷ್ಣಂ: **ಜಗನ್ನಾವಿ,** ४. ೮೧)

**ಆಕೃತಿವಂತ** – ರೂಪವಂತ (ಅವಗತ ಅರ್ಥಶಾಸ್ತ್ರಂ ಆಕೃತಿವಂತಂ ಉದಾತ್ತೋದಂತ ಸಂಭಾಷಣಸಮುತ್ಪಾದಿತೋಷಣಂ: **ಶಾಂತಿಪು,** ೨. ೧೮ ವ)

**ಆಕೃತಿಸಂವೃತಿ** – ರೂಪು ಮರೆಮಾಚುವಿಕೆ (ವಿಸ್ಮಯಾಕ್ಷಿಪ್ತಚಿತ್ತನಾಗಿ ನಿಜ ಆಕೃತಿಸಂವೃತಿಯಿಂ ತ್ರಿಃಪ್ರದಕ್ಷಿಣಂಗೆಯ್ದು: **ಆದಿಪು,** ೯. ೧೦೦ ವ)

**ಆಕೃಷ್ಟ** – ಜಗ್ಗಿದ, ಸೆಳೆದ, ಆಕರ್ಷಣೆಗೊಂಡ (ವಿಜೃಂಭಮಾಣ ನವನಳಿನ ಪರಿಕರ ಆಕೃಷ್ಟ ಮಧುಕರರಮಣೀಯ ಪುಳಿನ ಪರಿಸರ ಪ್ರದೇಶಮಂ ಎಯ್ದೆವಂದು: **ಪಂಪಭಾ,** ೫. ೧೦ ವ)

**ಆಕೃಷ್ಟಿ** – ಹಿಡಿದೆಳೆಯುವಿಕೆ (ಜತುಗೇಹಾನಲದಾಹದಿಂ ವಿಷವಿಶೇಷ ಆಲಿಪ್ತಗುಪ್ತಾನ್ನದಿಂ ಕೃತಕದ್ಯೂತವಿನೋದದಿಂ ದ್ರುಪದಜಾ ಕೇಶಾಂಬರ ಆಕೃಷ್ಟಿಯಿಂ ಧೃತರಾಷ್ಟ್ರಾತ್ಮಜ ಪಾಂಡುರಾಜಸುತರಂ ಮುನ್ನಂ ಕೊಲಲ್ಕೊಡ್ಡಿದಯ್: **ಗದಾಯು,** ೭. ४೧)

**ಆಕೃಷ್ಟಿಮಂತ್ರ** – ವಶೀಕರಣ ಮಂತ್ರ ಶರ್ಗರಂ ವಿದ್ವಿಡ್ವಿಜಯಶ್ರೀಗಂ ಇದು ಆಕೃಷ್ಟಿಮಂತ್ರಂ: **ಚಂದ್ರಪ್ರಪು,** ೧೦. ೧)

**ಆಕೇಕರ** – ಅರೆತೆರೆದ ಕಣ್ಣು (ಅದು ಬಗೆಗೊಂಡಂತಿರೆ ಆಕೇಕರ ಆಲೋಕಮುಖಂ ನೋಡುತ್ತುವೇಱಲ್ ಕರೆವ ತೆಱದೆ ಹೇಷಾರವಂ ಪೊಣ್ಮೆ: **ಕಾದಂಸಂ,** ೨. ४೨)

**ಆಕೇಕರಾಲೋಕ** – ಓರೆನೋಟ (ಅದು ಬಗೆಗೊಂಡಂತಿರೆ ಆಕೇಕರ ಆಲೋಕಮುಖಂ ನೋಡುತ್ತುವೇಱಲ್ ಕರೆವ ತೆರದೆ ಹೇಷಾರವಂ ಪೊಣ್ಮೆ: **ಕಾದಂಸಂ,** ೨. ४೨)

**ಆಕ್ರಂದತ್ಸ್ವರ** – ಅಳುವಿನ ಧ್ವನಿ (ನಿಮೀಳನ್ನೇತ್ರ ಸೀವದ್ಗಾತ್ರಮುಹ್ಯನ್ಮಾದಸ ಆಕ್ರಂದತ್ಸ್ವರ ಪರಿಗತರ್ ಸೈರಿಸಲಾಱದೆ ತಡಬಡಿಸಿ: **ಆದಿಪು,** ೫. ೮೭ ವ)

**ಆಕ್ರಂದನ** – ಅಳುವಿಕೆ (ಕಾರುಣ್ಯ ಆಕ್ರಂದನಂ ಅನಿವಾರಿತಂ ಒರ್ಮೊದಲೆ ಬಂದು ತೀಡಿತ್ತಾಗಳ್: **ಪಂಪಭಾ,** ೩. ೨४)

**ಆಕ್ರಂದಿಸು** – ಅಳು (ಭಯವಶದಿನಿರದೆ ಆಕ್ರಂದಿಸುವಂತೆಸೆಯೆ: **ಶಾಂತಿಪು,** ೩. ೧೧೧)

**ಆಕ್ರಮಣಧ್ವನಿ** – ಗದರಿಕೆ (ಜರ್ಬು–ಆಕ್ರಮಣಧ್ವನೌ: **ಶಬ್ದಮದ, ಧಾ,** ४೮೩)

**ಆಕ್ರಾಂತ** – ಆವರಿಸಲ್ಪಟ್ಟ (ಆ ದ್ವಿಜನ ನುಡಿಯಂ ಕೇಳ್ದು ವಿಸ್ಮಯಾಕ್ರಾಂತಸ್ವಾಂತನಾಗಿ: **ಅಜಿತಪು,** ೧೦. ೧೬ ವ)

**ಆಕ್ರಾಂತಿ** – ಆಕ್ರಮಣ (ನಮ್ಮೀ ಭರಾಕ್ರಾಂತಿನಿರೋಧಂ ಮಾಣ್ದುದಿನ್ನು: **ಜಗನ್ನಾವಿ,** ३. ४)

**ಆಕ್ರೋಶ** – ಬೈಗುಳು (ಬಯ್ಗುಳ್ ಶಪನಂ ಅದು ಆಕ್ರೋಶನಾಮಮುಂ ತಾನಕ್ಕುಂ: **ಅಭಿಧಾವ,** ೧. ೧೩. ೩४)

**ಆಕ್ರೋಶಧ್ವನಿ** – ದುಃಖದ ಕೂಗಾಟ; ರೇಗಾಟದ ಧ್ವನಿ (ಕೊರಲ್ಚು–ಆಕ್ರೋಶಧ್ವನೌ: **ಶಬ್ದಮದ, ಧಾ,** ೧೮೦)

**ಆಕ್ಷಿಪ್ತ** – ಕೂಡಿದ (ಕ್ಷತ್ರಿಯಪುತ್ರಂ ವಿಸ್ಮಯಾಕ್ಷಿಪ್ತಚಿತ್ತನಾಗಿ ನೋಡುತಿರ್ದು: ಕಾದಂಸಂ, ೨. ೫೫ ವ); **ಗದಾಯು**ದ್ಧದಲ್ಲಿನ ಒಂದು ಬಗೆಯ ಹೊಡೆತ (ವಿಳಂಬಿತಂ ಆಕುಂಚಿತಂ ಆಸ್ಫೋಟಿತಂ ಆಕ್ಷಿಪ್ತಂ ಉದ್ಭ್ರಾಮಿತಂ ದಿಗ್ಭ್ರಾಮಿತಂ ಉಚಿತವಿರುದ್ಧಂ ಅಚಿಂತ್ಯಮುಂ ಎಂಬ ಎಂಟು ತೆಱದ ಪ್ರಹರಣಂಗಳೊಳಂ: **ಗದಾಯು,** ೮. ೧ ವ)

**ಆಕ್ಷೇಪ** – ಎಸೆತ; ನಡುಕ; ಬೈಯುವುದು (ಆಕ್ಷೇಪಮಮಂ ಮಾಣ ನೀಂ ಕ್ರೋಧನನಾಗಲ್ ನಿನ್ನ ತಮ್ಮಂ ನಿನಗೆಱಗಂ: **ಆದಿಪು,** ೧४. ೮४)

**ಆಕ್ಷೇಪಕ** – (ಸಾಮಾನಿಕ ಜನತತಿ ಚೇತೋಮಂ ಪ್ರಾಸಾದಿಕ ಅಂತರ ಆಕ್ಷೇಪಕ ವಿನಿಷ್ಕಾಮಪ್ರವೇಶ ಗಾನರಸಾಮೃತಂ ಎಸೆಗುಂ ಧ್ರುವಪ್ರಯೋಗಾನುಗತಂ: **ಅಜಿತಪು,** ೫. ೧೦)

**ಆಕ್ಷೇಪವಾಚಕ** – ಪರಿಹಾಸಕ್ಕೆ ಎಡಗೊಡುವ ಮಾತು (ಧನಪತಿ ನಿರ್ಧನನದಱಿಂ ಧನಪತಿಗಾಕ್ಷೇಪವಾಚಕಂ ತನ್ನಾಮಂ: **ಮಲ್ಲಿನಾಪು,** ೨. ४೮)

**ಆಕ್ಷೋಟ** – ಬೆಟ್ಟದ ಗೋಣಿಮರ (ಲಕುಚ ಅಶೋಕ ತಮಾಳ ಶಾಲ ಕದಳೀ ಸಪ್ತಚ್ಛದ ಆಕ್ಷೋಟ ಚಂಪಕ .. .. ಪಾದಪಂ ಕಣ್ಗೊಪ್ಪುಗುಂ ಸುತ್ತಲುಂ: **ವರ್ಧಮಾಪು,** ೧. ೫೧)

**ಆಖಂಡಲ** – ಇಂದ್ರ (ತೀರ್ಥಕರ್ತುಗೆ ಆಖಂಡಲನಿಂ ಜಗತ್ತ್ರಿತಯಮಂಡನಮಾಯ್ತಭಿಷೇಕಮಂಡಪಂ: **ಅಜಿತಪು,** ೪. ೩೬)

**ಅಖಂಡಳತನಯ** – ಇಂದ್ರನ ಮಗ, ಅರ್ಜುನ (ಅಶ್ವಸೇನನೆಂಬ ಪನ್ನಗಂ .. .. ದಹನಾರ್ಚಿಗಳಿಂ ಬರ್ದುಂಕಿ ನೆಗೆದು ಪಾಱುವಾಗಳ್ ಅದಂ ಎರಟ್ಟುಂಡಮಪ್ಪಿನಂ ಆಖಂಡಳತನಯಂ ಇಸುವುದುಂ: **ಪಂಪಭಾ,** ೫. ೯೯ ವ)

**ಆಖಂಡಳವನ** – ಇಂದ್ರನ ವನ, ನಂದನವನ (ಆಖಂಡಳವನಸುಮನೋಮಾಲಿಕಾಲಂಬಲೀಲಾರ್ಚನೆಯಂ: **ಆದಿಪು,** ೧೪. ೧೧೬)

**ಆಖು** – ಇಲಿ (ಆಖುಭಯದಿಂದ ಆವಾಸಮಂ ಮಾಡದಿರ್ಪರೆ: **ಧರ್ಮಪ,** ೧. ೩೬)

**ಆಖೇಟ** – ಬೇಟೆ (ಕರೆದೊಡೆ ಜೂದಿಂಗಂ ಧುರಭರಕೆ ಆಖೇಟಕ್ಕೆ ಭೂಭುಜಂಗೇ ಆಗದು ಮೆಯ್ಗರೆದಿರಲಿ ಎಂಬ ಪುರಾತನ ಗುರುವಚನಂ ತನಗೆ ನಿಟ್ಟೆಪಟ್ಟುದೆಱಿಂ: **ಪಂಪಭಾ,** ೬. ೭೧)

**ಆಖ್ಯ** – ಹೆಸರು (ಪವನವೇಗಾಖ್ಯಂ ಮನೋವೇಗನುಂ ಸಾರ್ತಂದರ್: **ಧರ್ಮಪ,** ೨. ೩೩)

**ಆಖ್ಯಾತಪ್ರತ್ಯಯ** – ಧಾತುವಿಗೆ ಸೇರುವ ಪುರುಷಲಿಂಗವಚನಸೂಚಕ ಪ್ರತ್ಯಯ (ಗುಣವಚನದೊಳಂ ಸರ್ವನಾಮದೊಳಂ ಸಂಖ್ಯೆಯೊಳಂ ಸಂಸ್ಕೃತ ಗುಣವಚನದೊಳಂ ಆಖ್ಯಾತ ವಿಭಕ್ತಿಗಳ್ ವರ್ತಿಸುಗುಂ: **ಶಬ್ದಮದ,** ೨೩೦ ವೃತ್ತಿ)

**ಆಖ್ಯಾನ** – ನಿರೂಪಣೆ; ಕಥಾನಕ, ಜೈನ ಪುರಾಣಗಳ ಎಂಟು ಭಾಗಗಳಲ್ಲಿ ಒಂದು (ಆ ಪುರಾಣಕ್ಕಂ ಲೋಕಾಕರಕಥನಮುಂ ದೇಶನಿವೇಶೋಪದೇಶಮುಂ ನಗರಸಂಪತ್ಪರಿವರ್ಣನಮುಂ ರಾಜ್ಯರಮಣೀಯತಾಖ್ಯಾನಮುಂ ತೀರ್ಥಮಹಿಮ ಸಮರ್ಥನಮುಂ ಚತುರ್ಗತಿಸ್ವರೂಪನಿರೂಪಣಮುಂ ತಪೋದಾನವಿಧಾನವರ್ಣನಮುಂ ತತ್ಫಳಪ್ರಾಪ್ತಿಪ್ರಕಟನಮುಂ ಎಂದಿಂತವಯವಂಗಳೆಂಟಕ್ಕುಂ: **ಆದಿಪು,** ೧. ೪೨ ವ)

**ಆಖ್ಯಾನಕ** – ಕಥೆ (ಬರೆಪಂ ಬಾಜನೆ ಗಂಡಯುಕ್ತಿಗಣಿತಂ ಗಂಧರ್ವಂ ಆಖ್ಯಾನಕಂ ಭರತಾಭ್ಯಾಸಂ: **ಪುಷ್ಪದಂಪು,** ೪. ೫೯)

**ಆಖ್ಯಾಯಿಕೆ** – ಕಥೆ (ಸಮಾನಾರ್ಥಂಗಳ್ ಆಖ್ಯಾಯಿಕೆ ಕಥೆಯೆಂಬುವು: **ಅಭಿಧಾವ,** ೧. ೧೩. ೩೬)

**ಆಖ್ಯೆ** – ಹೆಸರು (ವರ್ಗದಂತ್ಯಂಗಳಂ ಅಱಿ ಅನುನಾಸಿಕಾಖ್ಯೆಯಂ ತಳೆದಿರ್ಕುಂ: **ಶಬ್ದಮದ,** ೨೫)

**ಆಗ** – [ಆಗು+ಅ] ಆಗದು (ಪಿಡಿದುಯ್ವುದು ಗಂಧರ್ವರ ಪಡೆ ನಿಮ್ಮಣ್ಣನಂ ಸುಯೋಧನನಂ ಇದಂ ಕಡೆಗಣಿಸಲ್ ಆಗ: **ಪಂಪಭಾ,** ೭. ೩೭); ಪಾಪ, ಅಪರಾಧ (ದೋಷಂ ಅಪರಾಧಂ ಆಗಂ .. .. ಪರಿಷ್ವಂಗಾರ್ಥಂ: **ಅಭಿಧಾವ,** ೩. ೨ ೧೮)

**ಆಗಂತುಕ** – ಅನಿರೀಕ್ಷಿತವಾಗಿ ಬಂದವನು (ಸಮನಿಸುವ ಸಹಜ ಶಾರೀರ ಮಾನಸ ಆಗಂತುಕ ಪ್ರಕರಮೆನಿಸಿದ ನಾಲ್ಕುಮುದ್ಗರ ಪೀಡೆ: **ಪುಷ್ಪದಂಪು,** ೧೩. ೩೨)

**ಆಗಡು** – ಯಾವಾಗಲೂ (ಉಪಾಧ್ಯಾಯರಾಗಡುಮೆಮ್ಮಂ ಮನಮೊಲ್ದು ಕಲ್ಪಿಸುಗೆ ಸನ್ಮಾರ್ಗೋಪದೇಶಂಗಳಂ: **ಸುಕುಮಾಚ,** ೧. ೪); ಆ ಸಮಯದಲ್ಲಿ (ಕರ್ಮದ ತೊಡರಂ ಪಱಿವಂತೆ ಕೇಶಪಾಶಮನಂತಾಗಡೆ ಪಱಿದು ತಪಂಗೊಂಡಂ: **ಆದಿಪು,** ೬. ೨೪)

**ಆಗಡೆ** – ಆ ಸಮಯದಲ್ಲಿ (ಮಾಗಧರಂ ಗೆಲ್ದಂತೆವೊಲ್ ಆಗಡೆ ವರತನುವನೊತ್ತಿ: **ಆದಿಪು,** ೧೩. ೩)

**ಆಗಮ** – ಬರುವುದು (ಒಪ್ಪಿದುದು ನೀರದಶರದ ನಿರ್ಗಮಾಗಮಂ: **ಪುಷ್ಪದಂಪು,** ೪. ೪೮); [ಜೈನ] ಶಾಸ್ತ್ರಗಳು (ಚಾರಿಸಿ ಬಾಳ ಆಗಮಂ ಅವತಾರಂಗೆಯ್ದಂತೆ ಅಕಾಲದಂತಕನನೆ ಪೋಲ್ತು ಆರುತ್ತುಂ ಕವಿವದಟರಂ ಓರೊಂದೋರೊಂದೆವೊಯ್ದು ಕೊಂದರ್ ಪಲರಂ: **ಪಂಪಭಾ,** ೧೦. ೮೩); ವೇದ, ಸಿದ್ಧಾಂತ (ಸಿದ್ಧಾಂತಂ ಆಗಮಂ ಶ್ರುತಿ: **ಅಭಿಧಾವ,** ೧. ೧. ೯)

**ಆಗಮಕೋವಿದ** – ಶಾಸ್ತ್ರಗಳನ್ನು ಬಲ್ಲವನು (ಆಗಮಕೋವಿದ ನಿಗದಿತಮಾರ್ಗಂ: **ಕವಿರಾಮಾ,** ೧. ೫೧)

**ಆಗಮಧರ** – ಆಗಮಜ್ಞ (ಹೇಯಂ ಉಪಾದೇಯಂ .. .. ನೆಗೞದ ಆಗಮಧರನಪ್ಪಾ ಯತಿಯಂ ಯತಿಯೆನವೇಡ: **ಸಮಯಪ,** ೭. ೫೧)

**ಆಗಮಭಾಷೆ** – ಶಾಸ್ತ್ರಗಳಲ್ಲಿನ ನುಡಿ (ಪೞವುಟೆವುಳ್ಳುವಿಲ್ಲಿಯೊಳ್ ಆವ ಆಗಮಭಾಷೆಗಳಲ್ಲಿಯುಳ್ಳವಂ ಪೞವುಟೆ ಕಾಣಲಾಗದು: **ಅಜಿತಪು,** ೧೨. ೩೩)

**ಆಗಮವಿತ್ತ್ವ** – ಆಗಮಜ್ಞಾನ (ಅನ್ವಿತ ಚತುರಾನನತ ಆಗಮವಿತ್ತ್ವಂ .. .. ಇಂತು ಪತ್ತತಿಶಯಂಗಳಿವೇಂ ಜಿನನೊಳ್ ಪೊದಳ್ದುವೋ: **ಆದಿಪು,** ೧೦. ೪೩)

**ಆಗಮಸಮಯ** – ಆಗಮಗಳ ಸಂಪ್ರದಾಯ (ಆಗಮಸಮಯ ನ್ಯಾಯವಿಭಾಗ ಕಳಾಕಾಲಲೋಕ ದೇಶವಿರುದ್ಧಂ .. .. ಪ್ರಾಣತ್ಯಾಗಮನಾಗಿಸುಗುಂ ಅಮಳಕೃತಿವಧುಗೆ: **ಕವಿರಾಮಾ,** ೧. ೬೯)

**ಆಗಮಿಕ** – ಶಾಸ್ತ್ರಜ್ಞ (ಫೇಟಕೋಜೆಗೆ ಸಮನಿಲ್ಲ ಧನಂಜಯಂಗೆ ಕವಿತಾಗಮಿಕರ್: **ಸುಕುಮಾಚ,** ೧. ೩೬)

**ಆಗರ** – [ಆಕರ] ಆಶ್ರಯ, (ಇದು ಪೆಂಪಿಗೆ ತವರ್ ಸುಖಕ್ಕೆ ಕಣಿ ಸೌಖ್ಯಕ್ಕೆ ಆಗರಂ: **ಸುಕುಮಾಚ,** ೧. ೬೮); ಮನೆ (ಸುತ್ತಿಱಿದ ರಸದ ತೊಱೆಗಳೆ ಮುತ್ತಿನ ಮಾಣಿಕದ ಪಲವುಂ ಆಗರಮೆ ಮದೋನ್ಮತ್ತ ಮದಕರಿವನಂಗಳೆ ಸುತ್ತಲುಂ ಆ ನೆಲದ ಸಿರಿಯನೇನಂ ಪೊಗೞ್ವೆಂ: **ಪಂಪಭಾ,** ೧. ೫೭)

**ಆಗರಣ** – [ಆಗ್ರಹಣ] ಹಿಡಿಯುವಿಕೆ (ಹರಿಮಣಿ ಅೞಿಯೊಳ್ ಮಿಱುಗುತ್ತಿರೆ .. .. ಭಾಸ್ಕರಬಿಂಬಂ ಎಂದು ಬಂದು ಆಗರಣದ ಸಮಯದೆ ವಿಧುಂತುದಂ ಪಿಡಿವುದದಂ: **ರಾಜಶೇವಿ,** ೬. ೨೨)

**ಆಗರೆ** – [ಆಗರ್+ಎ] ಆಗುವವರೇ ಅಲ್ಲ (ಗಿರಿಶನ ಲಿಂಗಮಿಂತು ಪಱಿದಲ್ಲಿಯೆ ನಟ್ಟಿರೆ ಮಕ್ಕಲಾರ್ಗಂ ಆಗರೆ ಗಡಂ: **ಸಮಯಪ,** ೮. ೧೦)

**ಆಗಸ್** – ಪಾಪ (ದುರಿತಂ ಅಪರಾಧಂ ಎಂಬೀ ಎರಡುಂ ಅವು ಆಗಸ್ಸಮಾಖ್ಯೆಯಂ ಪಡೆದಿರ್ಕುಂ: **ಅಭಿಧಾವ,** ೩. ೧. ೨೮)

**ಆಗಸ** – [ಆಕಾಶ] ಬಾನು (ದೆಸೆಗೆತ್ತಂ ಗಜಱುತ್ತುಮಿರ್ಪ ಪುಲಿಯಿಂ ನೀಳಾಭ್ರಮಂ ದಂತಿಗೆತ್ತು ಸಿಡಿಲ್ದು ಆಗಸಕೆ ಎಯ್ದೆ ಪಾಯ್ವ ಪಲವುಂ ಸಿಂಗಂಗಳಿಂದೆತ್ತಗುರ್ವಿಸಿ: **ಪಂಪಭಾ,** ೭. ೨೬)

**ಆಗಸವಳಯ** – ಆಕಾಶಮಂಡಲ (ಬೆಳಗುಗಳ ಬಳಗಂಗಳೊಳ್ ಆಗಸವಳಯಮೆಲ್ಲಂ ಕುವಳಿತಮಾಗೆ ಬಂದು ತಾಗುವುದುಂ: **ಶಾಂತಿಪು,** ೪. ೨೬ ವ)

**ಆಗಸ್ಕರ** – ಅಪರಾಧ ಮಾಡಿದವನು, ತಪ್ಪಿತಸ್ಥ (ಶಿವಭಕ್ತಂಗೊರ್ಮೆ .. .. ಇತ್ತವಂ .. .. ಪುಣ್ಯಾವಾಪ್ತಿಯಂ ತಾಂ ಪಡೆವನೆನೆ ತದಾಗಸ್ಕರಂ .. .. ಮೇಣ್ಪಡೆಯನೆ: **ರಾಜಶೇವಿ,** ೧೪. ೧೦)

**ಆಗಳುಂ** – ಯಾವಾಗಲೂ (ಆಗಳುಂ ಇಂದುಸೂರ್ಯರ್ ಅಣಂ ಇಲ್ಲ ಕಟ್ಟಿಲೆಯೆಂಬುದಿಲ್ಲ ತದ್ಭೋಗಿಫಣಾದ್ಯುತಿಯೆ ಕಟ್ಟಿಲೆಯಂ ತಲೆದೋಱಲೀಯದು: **ಪಂಪಭಾ,** ೪. ೧೬)

**ಆಗಾಮಿಕ** – ಭವಿಷ್ಯತ್ತಿಗೆ ಸಂಬಂಧಿಸಿದ (ಆಗಾಮಿಕ ಸಂಗ್ರಾಮಕ್ಕೆ ಪಾತ್ರಂಗಳಂ ಸಮೆಯಿಸುವ ಸೂತ್ರಧರನಂತೆ: **ಪಂಪಭಾ,** ೨. ೫೯ ವ)

**ಆಗಾಮಿಕಾರ್ಯ** – ಮುಂದಿನ ಕೆಲಸ (ಪರಶುರಾಮನ ಆಗಾಮಿಕಾರ್ಯಮನಱಿಪಿ ಕಳುಪಿದಂ: **ಜಗನ್ನಾವಿ,** ೮. ೨೧)

**ಆಗಾರ** – ನೆಲೆ, ಮನೆ (ಜಿನಬೋಧಾಗಾರ ತೋಯಾಶಯದ ನಡುವೆ ಸರ್ವಾಂತರಿಕ್ಷಂ ಸರೋಜಾನಿಭಂ ವಿಭ್ರಾಜಿಕುಂ: **ಆಚವರ್ಧ,** ೧. ೨೭)

**ಆಗಿಸು** – ಆಗುವಂತೆ ಮಾಡು (ಶ್ರೀವಿಜಯಪ್ರಭೂತ ಮುದಮಂ ತನಗಾಗಿಸಿದೊಂ ಕವೀಶ್ವರಂ: **ಕವಿರಾಮಾ,** ೨. ೧೫೫)

**ಆಗುಹ** – ಆಗುವಿಕೆ (ತಳಮಳನೆಂದು ಬೆಱಗಾಗುಹಂ: **ಶಬ್ದಮದ,** ಪ್ರಸ್ತಾ, ೯೯)

**ಆಗುಳಿ** – ಆಕಳಿಕೆ (ವಿಭೀಷಣಂಗಳೊಳ್ ತೀಡುವ ರಶ್ಮಿಗಳ್ ಮಸುಳ್ದುವು ಆಗುಳಿಯಾಯ್ತು: **ಆದಿಪು,** ೩. ೩)

**ಆಗುಳಿಕೆ** – ಆಕಳಿಕೆ (ಅಲಸಿಕೆ ಮೆಯ್ಗಾದುದು ಕಣ್ಮಲರ್ ಮರಲ್ದೆಸೆದು ಒದವಿತು ಆಗುಳಿಕೆಶತಂ ಪಲವುಂ ವಸ್ತುಗಳೊಳ್ ತನಗೊಲವರಮಾಯ್ತು ಕಾಂತೆಗೆ ಅಂದು ಎಳವಸಿಱೊಳ್: **ಕಾದಂಬ,** ೨. ೭೮)

**ಆಗುಳಿಸು** – ಆಕಳಿಸು (ಲಸತ್ಕೀರ್ಣಕೇಸರಮಂ ಪರಪುತ್ತುಮಾರ್ಗ ಆಗುಳಿಸುವ ಬಾಯ ಕೆಂಪನುದಯಂಗೆಯೆ: **ಆದಿಪು,** ೧೨. ೫)

**ಆಗುಱೆ** – ಗಂಡು ಕುರಿ, ಟಗರು (ಆಗುಱೆಯಾಗು ಎಂದು ಎಂಬವೊಲ್ ಆ ಗಿರಿಜಾಧಿಪನದೊದು ದೇವತ್ವಕ್ಕೆ .. .. ಭಕ್ತರಾಗಲ್ ತಕ್ಕರ್: **ಸಮಯಪ,** ೧೪. ೫೪)

**ಆಗ್ರಹ** – ಹಿಡಿಯುವುದು (ಕಂತುಶರಭವನಂ ಆ ಪ್ರಿಯಕಾಂತಾ ಭ್ರೂವಿಭ್ರಮಗ್ರಾಗ್ರಹವಶದಿಂ ಭ್ರಾಂತಿಸದುಪಶಾಂತಮನಂ ಶಂತನುಗಿತ್ತಂ ಸಮಸ್ತರಾಜ್ಯಶ್ರೀಯಂ: **ಪಂಪಭಾ,** ೧. ೬೬); ಹಟ (ಕಂತುಶರಭವನಂ ಆ ಪ್ರಿಯಕಾಂತಾಭ್ರೂವಿಭ್ರಮಗ್ರಹ ಆಗ್ರಹವಶದಿಂ ಭ್ರಾಂತಿ ಸದುಪಶಾಂತಂ ಮನಂ ಶಂತನುಗಿತ್ತಂ ಸಮಸ್ತರಾಜ್ಯಶ್ರೀಯಂ: **ಪಂಪಭಾ,** ೧. ೬೬); ವಿಶ್ವಾಸ (ಇವಳೆ ನಮ್ಮನತ್ಯಾಗ್ರಹದಿಂ ಶಿಕ್ಷಿಸಿಸಾಕ್ಷರಿಕರಂ ಮಾಟ್ಪೊಡೆ ನಮ್ಮೊಲ್ಲದುದಾವುದೆಂದು: **ಸುಕುಮಾಚ,** ೨. ೫೫ ವ); ಕೋಪ (ಉತ್ತರ ಗೋಗ್ರಹಂ ಪಿರಿದುಮಾಗ್ರಹಮಂ ಮನದೊಳ್ ತಗುಳ್ಚೆ: **ಪಂಪಭಾ,** ೮. ೯೨)

**ಆಗ್ರಹಂಗೆಯ್** – ಒತ್ತಾಯ ಮಾಡು (ಎನಿತೆನ್ನನಾಗ್ರಹಂಗೆಯ್ದು ನುಡಿದೊಡಂ ಬಿಸುಡಲೊಲ್ಲೆಂ: **ಸುಕುಮಾಚ,** ೬. ೫೧)

**ಆಗ್ರಹಮಾಗು** – ಆಸೆಯಾಗು (ಭವತ್ ಪ್ರತಾಪಕಥೆಯಂ .. .. ಕೇಳ್ವ ಆಗ್ರಹಮಾಯ್ತು ಅನುಗ್ರಹಿಪುದೆನ್ನಂ ದೇವ ಕಾರುಣ್ಯದಿಂ: **ಪುಷ್ಪದಂಪು,** ೫. ೩)

**ಆಗ್ರಹಾಯಣಿ** – ಮೃಗಶಿರಾ ನಕ್ಷತ್ರ (ಆಗ್ರಹಾಯಣಿ ಮೃಗಶಿರದ ಪೆಸರ್: **ಅಭಿಧಾವ,** ೧. ೧. ೮೦)

**ಆಗ್ರಹಿಸು** – ಕೋಪಿಸಿಕೊ (ಕಳ್ಳಂಗೆ ಮಾಟ್ಪ ನಿಗ್ರಹಮಂ ಮಾಟ್ಪೆನೆಂದು ಆಗ್ರಹಿಸಿ ನುಡಿವುದುಂ: **ಸುಕುಮಾಚ,** ೭. ೮ ವ)

**ಆಘಾಟ** – ಮೇರೆ, ತುದಿ (ನೆಲಂ ಇಲ್ಲಿಂದಿತ್ತಲ್ ಇಲ್ಲ ಎಂಬಿನಂ ದಿಶಾಘಾಟಮೆಂಬನ್ನೆಗಂ ಕಟ್ಟಿಲೆ ಚಂದ್ರಾದಿತ್ಯ ತೇಜಕ್ಕೆ ಅದಿರದೆ ಇದಿರಂ ಒಡ್ಡಿರ್ದುದು: **ಪಂಪರಾ,** ೭. ೧೨೩)

**ಆಘಾಟಶುದ್ಧಿ** – ಮೇರೆಯನ್ನು ನಿಶ್ಚಯಿಸುವುದು (ಆರ್ಯಜನಕ್ಕೆ ಆಘಾಟಶುದ್ಧಿಯಂ ಮಾಡಿ ಸೀಮಂಧರನಾದಂ: **ಆದಿಪು,** ೬. ೫೭ ವ)

**ಆಘಾತ** – ಹೊಡೆತ, ಏಟು (ತುಂಗವನ್ಯಮತಂಗಜದಂತೆ ಆಘಾತನಿಪಾತಿಸಲ್ಲಕೀಭಂಗಮಂ .. .. ನೃಪನೆಯ್ದಿದಂ ಉದ್ಯತ್ ಶೃಂಗಮಂ ಶತಶೃಂಗಮಂ: **ಪಂಪಭಾ,** ೧. ೧೧೫)

**ಆಘಾತ ಕರ್ಮ** – [ಜೈನ] ಆತ್ಮನ ಗುಣಗಳನ್ನು ನಾಶಮಾಡುವ ಕರ್ಮ, ಇವು ನಾಲ್ಕು ತೆರ: ಆಯು, ನಾಮ, ಗೋತ್ರ ಮತ್ತು ವೇದನೀಯ (ದೇವನಿಕಾಯಂ ಬಂದರ್ಚಿಸಿ ಪೂಜಿಸಿ ಪೋದೊಡೆ ಅವರುಂ ಬಟೆಕ್ಕೆ ಆಘತಿಕರ್ಮಂಗಳಂ ಕಿಡಿಸಿ ಮೋಕ್ಷಕ್ಕೆ ವೋದರ್: **ವಡ್ಡಾರಾ,** ಪು ೧೦೪, ಸಾ ೨೫)

**ಆಘ್ರಾಣಿಸು** – ಮೂಸಿನೋಡು (ಸಪ್ತಚ್ಛದಗಂಧಮನೀ ವನೇಭಂ ಆಘ್ರಾಣೀಸಿ ಪೆರ್ಚಿದ ಮಸಕದಿಂದೆ: **ಆದಿಪು,** ೧೧. ೬೪)

**ಆಘ್ರಾಯಿಸು** – ಆಘ್ರಾಣಿಸು (ಜಿನಾಂಘ್ರೀಶ್ವಸದ ಅಮೃತಾನ್ನಮಂ ಆಘ್ರಾಯಿಸಿದಂ ಜಿನಚಂದ್ರಂ: **ಶಾಂತಿಪು,** ೭. ೪೧)

**ಆಚ** – ಸಾಲವೃಕ್ಷ (ಎಲವಂ ಸಂಪಗೆ ಹೊನ್ನೆ ಚೆನ್ನೆ ಕವಳಂ ಕಾರಾಚಂ ಆಚಂ ಪುಲುಂಗಿಲು: **ರಾಜಶೇವಿ,** ೫. ೫೬)

**ಆಚಂದ್ರತಾರಂ** – ಚಂದ್ರತಾರೆಯರಿರುವವರೆಗೆ (ಗುಣಗ್ರಾಮಣಿಗಳ್ ಪಾಟಾಗೆ ತೆಗಟೆ ಬಾಟ್ವಿ ಬಾಟ್ ಏನಾಂದ್ರತಾರಮೋ ಮಾನಸರಾ: **ಕವಿರಾಮಾ,** ೩. ೧೭೭)

**ಆಚಮಿತ** – ಆಚಮನ ಮಾಡಿದ (ಬಟಿಯಂ ಆಚಮಿತ ಚಂದ್ರಕಾಂತದ್ರವಸುರಭಿಸಲಿಲನುಂ: **ಆದಿಪು,** ೧೧. ೨೭ ವ)

**ಆಚಮಿಸು** – ಆಚಮನ ಮಾಡು (ಅಂಗರಾಜಂ .. .. ಆಚಮಿಸಿ ಕನಕಕಮಳಮಗಳಿಂ ಕಮಳಾಕರಬಾಂದವಂಗೆ ಅರ್ಘ್ಯಮನೆತ್ತಿ: **ಪಂಪಭಾ,** ೧೨. ೧೦೮ ವ)

**ಆಚರಣ** – ಅನುಸರಣೆ (ಕುಲವಧುಗೆ .. .. ಪತಿಪರೋಕ್ಷದೊಳ್ ಜಿನದೀಕ್ಷಾಚರಣಂ ಮೇಣ್ ಶುಭಚರಿತದೆ ಮರಣಂ: **ಅಜಿತಪು,** ೧. ೪೬)

**ಆಚರಿಸು** – ನೆರವೇರಿಸು (ಚತುರ್ವಿಧ ರಾಜವೃತ್ತಮಂ ಉದಾತ್ತಮಪ್ಪಂತೆ ಆಚರಿಸುತ್ತುಂ: **ಅಜಿತಪು,** ೨. ೪೭ ವ)

**ಆಚಾಮ್ಲವರ್ಧನ** – [ಜೈನ] ಒಂದು ಬಗೆಯ ಉಪವಾಸವ್ರತ (ಅಚಾಮ್ಲವರ್ಧನಮಂ ತಪ್ಪದೆ ನೋಂತಂತಪ್ಪ ತನುವಂ ಪ್ರಾಯೋಪವೇಶಕ್ಕೆ ತಂದು: **ಶಾಂತಿಪು,** ೯. ೮೪)

**ಆಚಾರ್ಯರು** – ಗುರು, ನಿಶ್ಚಯಮಾರ್ಗದಲ್ಲಿ ಸಾಗಿ, ಶಿಷ್ಯರಿಗೆ ಧರ್ಮೋಪದೇಶ ಮಾಡುವ ಶಾಸನಾಧಿಕಾರವುಳ್ಳವರು (ಆಚಾರ್ಯರ್ ನಮಗೀವರಕ್ಕೆ ನಯನಿಕ್ಷೇಪಪ್ರಮಾಣಂಗಳಂ: **ನೇಮಿನಾಪು,** ೧. ೪)

**ಆಚೂಳಕಸ್ವಸ್ತಿಬದ್ಧ** – ಶಿರಸ್ಸಿನವರೆಗೆ ಸ್ವಸ್ತಿಕಾಕೃತಿಯಲ್ಲಿ ಕಟ್ಟಿದ (ಆಚೂಳಕಸ್ವಸ್ತಿಬದ್ಧವಿಚಿತ್ರವಸ್ತ್ರ ದ್ವಯೋದ್ದಾಮಧನುಷ್ಯಂ: **ಆದಿಪು,** ೧೩. ೪೫. ವ)

**ಆಚ್ಛಾದಿಸು** – ಮುಚ್ಚು (ಚೌಕಮಂ ಕೀಱುತುಂ ತೆಗೆದಾಚ್ಛಾದಿಸೆ ಕೇಳ ನೀಳಪಟಮಕ್ಕುಂ: **ಗಿರಿಜಾಕ,** ೪. ೭೬)

**ಆಚ್ಛಾರಣ** – ಹೊರಹೊಮ್ಮುವ (ಶಾರದ ಶಶಾಂಕಶಂಕಾಜನನ ಮನೋಹರ ಹಾರಂ ಅಂಘ್ರೀನಖಕಿರಣಾಚ್ಛಾರಣ ಸಂಕಾಶ ಮೌಕ್ತಿಕ ಪದಬಂಧಂ ಆ ದೇವಂ ಶ್ರೀದೇವನಾಮಮಂ ತಾಳ್ದಿ: **ಶಾಂತಿಪು,** ೭. ೧೩ ವ)

**ಆಜವಂಜವ** – ಸಂಸಾರ (ಜಿನೇಂದ್ರ ದೀಕ್ಷೆಯ ಮಱವೊಕ್ಕಂ ಬೇಗಂ ಆಜವಂಜವಭಯದಿಂ: **ಶಾಂತಿಪು,** ೯. ೧೮)

**ಆಜವಂಜವವಿಭಾವ** – ಹುಟ್ಟುಸಾವುಗಳ ವ್ಯಾಪಾರ (ಎಂದಾ ಮಹಾನುಭಾವಂ ಆಜವಂಜವವಿಭಾವಕ್ಕೇವಯಿಸಿ: **ಆದಿಪು,** ೪. ೬೭ ವ)

**ಆಜವಂಜವವ್ಯಸನ** – ಹುಟ್ಟುಸಾವುಗಳಿರುವ ಸಂಸಾರದ ಬಗೆಗಿನ ವ್ಯಾಮೋಹ (ಇನ್ನು ಆಜವಂಜವವ್ಯಸನಪುಂಜಮಂ ಕಿಡಿಪುದಾದಿತೀರ್ಥೇಶ್ವರಾ: **ಆದಿಪು,** ೧೩. ೮೮)

**ಆಜಸ್ರಂ** – ಸದಾಕಾಲ (ಚರಣಾಸಂಘಾತಕರಜಂ ಆಜಸ್ರಂ ನೆರೆದು ಅಂಬರಕೊಗೆಯಲ್: **ಪಂಪಭಾ,** ೧೦. ೬೮)

**ಆಜಾನೇಯ** – ಉತ್ತಮ ಜಾತಿಯ ಕುದುರೆ (ದಾನಾಂಭಃ ಪೀನಗಂಡಸ್ಥಳ ಕರನಿಕರಂ ಬಾಟ್ಟೆಯೋ ಮೆಚ್ಚುವೇಱಾಜನೇಯ ಆಶ್ವೋತ್ಕರಂ ಬಾಟ್ಟೆಯೊ .. .. ಪೇಟಿಮೆಂದು ದೀನಾನಾಥರ್ಗೆ .. .. ಸೂಱಗೊಟ್ಟಂ: **ಪಂಪಭಾ,** ೬. ೪೦)

**ಆಜಿ** – ಯುದ್ಧ (ಆರ್ತು ಆಜಿಗೆ ಬಂದೊಡ್ಡಲ್ಕೆ ಪೇಟ್ಟಿಂಗರನಿಕಷದೊಳೆಮ್ಮಂದಮಂ ನೀನೆ ಕಾಣ್ಬೈ: **ಆದಿಪು,** ೧೪. ೮೨)

**ಆಜಿರ** – ಅಂಗಳ (ಪರಿಣತ ಕವೀಂದ್ರ ವದನಾಜಿರದೊಳ್ ಮೃದುಪದವಿಲಾಸ ವಿನ್ಯಾಸಾಲಂಕರಣಂ ರಂಜಿಸೆ ನರ್ತಿಪ ಸರಸ್ವತೀಲಾಸ್ಯಭೇದಮಂ ಜಡನಱಿಯಂ: **ಮಲ್ಲಿನಾಪು,** ೧. ೩೪)

**ಆಜಿರಂಗ** – ಯುದ್ಧರಂಗ (ಪಿಂದೆ ಕಡಂಗಿ ತೇರಂ ಎಸಗು ಎಂಬವಂ ಅಂಬಿಗಂ ಆಜಿರಂಗದೊಳ್ ಮುಂದೆ ಸಮಾನನಾಗಿ ಬೆಸೆದೆ ಇರ್ಪವನುಂ ತುಱುಕಾಱನಾಗೆ ಮತ್ ಸ್ಯಂದನಚೋದನಕ್ರಮಮದುಂ ಪೋಲೆಯಂಗೆ ಅಮರ್ದು ಇರ್ಕುಂ: **ಪಂಪಭಾ,** ೧೨. ೯೪)

**ಆಜಿಲಂಪಟ** – ಯುದ್ಧದಲ್ಲಿ ಅತ್ಯಾಸಕ್ತ (ಆಜಿಲಂಪಟಂ ದೆಸೆಗೆ ಮಸಗಿದಂ ದನುಜೇಂದ್ರಂ: **ಪಂಪರಾ,** ೧೩. ೧೩೩)

**ಆಜಿಶ್ರಾಂತ** – ಯುದ್ಧಮಾಡಿ ಆಯಾಸಗೊಂಡ (ಎನಿತು ಮದವಾರಣಂ ಕ್ರೋಧಿನಿ ಪೊಕ್ಕುಂ ಸಿಂಪೋಹತಮಂ ಗೆಲ್ಗುಮೆ ಮಾತಿನೊಳೇನೊ ಕೆಯ್ದುಗೆಯ್ ಬಱುವನಂ ಆಜಿಶ್ರಾಂತನಂ ಯಶೋಧನಂ ಇಱಿಯಂ: **ಶಾಂತಿಪು,** ೪. ೫೧)

**ಆಜ್ಞಾನಿಧಿ** – ಆಜ್ಞೆಗಳಿಗೆ ಮೂಲವಾಗಿರುವವನು (ಬಹುಶ್ರುತಂ ಆಜ್ಞಾನಿಧಿ ಯಾಜ್ಞವಲ್ಕ್ಯಸದೃಶಂ: **ಶಾಂತಿಪು,** ೧. ೪೪)

**ಅಜ್ಞಾಪರಿಸ್ಫುರಣೆ** – ಅಪ್ಪಣೆಯ ಪ್ರಕಟಣೆ (ಆಜ್ಞಾಪರಿಸ್ಫುರಣೆಗಂ .. .. ತಾನೊರ್ವನೆ ನಿರುಪಮ ಜನ್ಮಭೂಮಿಯಾಗಿ: **ಶಾಂತಿಪು,** ೩. ೪೯ ವ)

**ಆಜ್ಞಾಲಂಘನ** – ಆಜ್ಞೆಯನ್ನು ಮೀರುವುದು (ಲಂಘಿಸಿದೆಂ ನಿಮ್ಮಯ ಮಾತಂ ಒರ್ಮೆಗೆ ಇದು ಆಜ್ಞಾಲಂಘನಂ: **ಗದಾಯು,** ೬. ೫)

**ಅಜ್ಞಾವಿಚಯ** – [ಜೈನ] ನಾಲ್ಕು ಬಗೆಯ ಧರ್ಮಧ್ಯಾನಗಳಲ್ಲಿ ಒಂದು; ಆಗಮಗುಣಗಳ ಕುರಿತಾದ ಚಿಂತನೆ (ಆಜ್ಞಾವಿಚಯಂ ಅಪಾಯವಿಚಯ ವಿಪಾಕವಿಚಯ ಸಂಸ್ಥಾನವಿಚಯಮೆಂಬ ನಾಲ್ಕುಂ ಧರ್ಮಧ್ಯಾನಮಂ ಧ್ಯಾನಿಸುತ್ತುಂ: **ಆದಿಪು,** ೧೦ ೧೪ ವ)

**ಆಜ್ಞಾವಿಧೇಯ** – ಆಜ್ಞಾನುಸಾರ ನಡೆಯುವವನು (ಕಳಿಂಗರಾಜಂಗೆ ಕೋಶೋಪನತವೃತ್ತಿಯನಿತ್ತು ಸರ್ವಸ್ವಮಂ ಕೊಂಡಾಜ್ಞಾವಿಧೇಯಮಂ ಮಾಡಿ ಮಹೇಂದ್ರ ಉಪಕಂಠದೊಳ್ ಮೂಱು ಉಪ್ಪಯಣಂಗೆಯ್ದು: **ಶಾಂತಿಪು,** ೧೦. ೧೬೫)

**ಆಜ್ಞಾಸಮುತ್ಪನ್ನೆ** – ಆಜ್ಞೆಗನುಸಾರವಾಗಿ ಹುಟ್ಟಿದವಳು (ಎಲೆ ಮಯಾದೇವಿ ಲೋಕತ್ರಯಜನನಿ ಮದಾಜ್ಞಾಸಮುತ್ಪನ್ನೆ: **ಜಗನ್ನಾವಿ,** ೨. ೫೮)

**ಆಜ್ಯ** – ತುಪ್ಪ (ಮಧುಮಾಂಸಮಿಲ್ಲದಿರ್ದಂದು ಧರಾಮರಸಮಿತಿ ಆಜ್ಯಮುಮಂ ಉದ್ದುಮಂ ಮಧು ಮಾಸಮೆಂದು ಕಲ್ಪಿಪರ್: **ಸಮಯಪ,** ೧೪. ೧೪೯)

**ಆಜ್ಯಾಹುತಿ** – ಹೋಮದಲ್ಲಿ ಅಗ್ನಿಗೆ ತುಪ್ಪ ಆಹುತಿಯಾಗಿ ನೀಡುವುದು (ಗಣನಾತೀತ ಆಜ್ಯಾಹುತಿಗಣದಿಂದಂ ತಣಿಯೆ ಜಾತವೇದನುಂ ಆ ಬ್ರಾಹ್ಮಣಸಮಿತಿ ಬೇಳೆ ದೇವರ್ ತಣಿಯುಂಡರ್ ನೆರೆದು ದಿವ್ಯ ಹವ್ಯಾಮೃತಮಂ: **ಪಂಪಭಾ,** ೬. ೩೭)

**ಆಟ** – ಕ್ರೀಡೆ (ಆಟಪಾಟವಿನೋದಂಗಳಿಂದಂ: **ವಡ್ಡಾರಾ,** ಪು. ೯೮, ಸಾ. ೧೫); ಕುಣಿತ, ನಾಟಕ ಮುಂತಾದವುಗಳ ಪ್ರದರ್ಶನ (ಸುರೇಂದ್ರಸೌಂದರಿಯರ ಆಟದಿಂ ಗಾಡಿವೆತ್ತದೇಂ ಗಗನಮಂಡಲಂ ನೆಱೆಯೆ ಶೋಭೆಯಂ ಪೆತ್ತುದೋ: **ಆದಿಪು,** ೭. ೫೯)

**ಆಟಂದು** – ಬಯಸು (ಜನಕಜೆಯ ಸುದ್ದಿಯಂ ತರ್ಪ ನಿಯೋಗಂ ನಿನಗೆ ಮೊನೆಯೊಳ್ ಆಟಂದು ದಶಾಸ್ಯನನಂ ಇಕ್ಕಿ ದೇವಿಯಂ ತರ್ಪ ನಿಯೋಗಂ ಲಕ್ಷ್ಮಣಂಗೆ ಪುದು ಪೆಱಗುಂಟೇ: **ಪಂಪರಾ,** ೧೧. ೪೫); ಮೇಲೆ ಹಾಯು (ಕ್ರಂದತ್ ಸ್ಯಂದನ ಜಾತ ನಿರ್ಗತ ಶಿಖಿಜ್ವಾಳಾಸಹಸ್ರಂಗಳ್ ಆಟಂದೆತ್ತಂ ಕವಿದೇಟ್ವ ಬೇವ ಶವಸಂಘಾತಂಗಳಂ: **ಪಂಪಭಾ,** ೧೩. ೭೧)

**ಆಟಕಾಱ** – ನಟ (ತನ್ನಂ ಮೆಱೆವಂ ಕವಿಯಲ್ಲವಾಟಕಾಱರ ಚೋಹಂ: **ಮಲ್ಲಿನಾಪು,** ೧. ೩೨)

**ಆಟಪಾಟ** – ವಿನೋದ, ಆಡು ಹಾಡು ಆಟಪಾಟವಿನೋದಂಗಳಿಂದಂ: **ವಡ್ಡಾರಾ,** ಪು. ೯೮, ಸಾ. ೧೫)

**ಆಟರ್** – ಮೇಲೆ ಬೀಳು (ಲಂಕೆಯಂ ಬನಮಂ ಆಟಂದು [√ಆಟರ್] ಉರ್ಕಿ ಕಿಟ್ಟಿಕ್ಕಿ ಸಂತಸಮಂ ಸೀತೆಗೆ ಮಾಡಿ ಸುಟ್ಟು ಪೊಱಲಂ: **ಪಂಪಭಾ,** ೮. ೩೫)

**ಆಟರಲ್** – ಮೇಲೆ ಬೀಳಲು (ಅರಿನೃಪಕೋಟಿಯಂ ಆಟರಲೆಂದು ಆಸ್ಫೋಟಿಸಿ ನಿಶಿತಶರಕೋಟಿಯೊಳ್ ತಟಿಗೋಂಟೆಯನಿಕ್ಕಿ ವೀರರಸನಿಕೇತನನಾಗಿರ್ದ

ಕಳಶಕೇತನನಂ ನೋಡಿ ದ್ರುಪದಂ ಸೈರಿಸದೆ: **ಪಂಪಭಾ,** ೧೨. ೧೮ ವ)

**ಆಟಲೆ** – ಹಿಂಸೆ, ಕಾಟ (ಅರಿಷಡ್ವರ್ಗಮನವನೀಶ್ವರನ ಆಠಲೆಯೆ ಪೊಱಗಣರಿಗೆ: **ಶಾಂತಿಪು,** ೧೦. ೧೨೯)

**ಆಟವಿಕ** – ಕಾಡಿನಲ್ಲಿ ವಾಸಿಸುವವನು, ಕಿರಾತ (ಅಡಂಗದ ಆಟವಿಕರುಂ ಒತ್ತಿ ಬರ್ಪ ಪಾರ್ಷ್ಣಿಗ್ರಾಹಕರುಂ: **ಆದಿಪು,** ೪. ೮೨ ವ)

**ಆಟವಿಟಂಬರಿಸು** – ಮೋಸಗೊಳಿಸು; ಗಾಯಗೊಳಿಸು (ಚಿತ್ತಮಂ ಆಟವಿಟಂಬರಿಸೆ ನೆನಹದಿಂ ಪೊಸವೇಟಂ ಕೋಟಿ ತೆಱನಾಗೆ ಕಾಮಿನಿ ಬೇಟದ ಕಥೆಗಳ್: **ಲೀಲಾವತಿ,** ೯. ೧೨೨)

**ಆಟಿಸು** – ಬಯಸು (ಪಸಿಯದುದು ಪರಾಘನೆಗೆ ಆಟಿಸದುದು ಕೊಲಲದುದು ಮೋಹಮಿಲ್ಲದುದಱಿವಂ ಪೊಸಯಿಸುವುದು: **ಆದಿಪು,** ೫. ೭೯); ಅಲ್ಲಾಡಿಸು (ಪೆಱರ್ಕೇಳದಂತೆ ಆಟಿಸಿ ಕೀಲಂ ಕಳೆದು ನೆಲಕ್ಕೆ ಬೀೞಲೀಯದೆ ಪಿಡಿದುಕೊಂಡು ತಲೆಯೊಳಿಕ್ಕಿಕೊಡು: **ಧರ್ಮಾಮೃ,** ೬. ೪೯ ವ)

**ಆಟೋಪ** – ಅಬ್ಬರ, ದರ್ಪಪ್ರದರ್ಶನ (ಸಮದಗಜಘಟಾಟೋಪಂಬೆರಸು ನೆಲನದಿರೆವಂದು ತಾಗಿದ: **ಪಂಪಭಾ,** ೯. ೫೨)

**ಆಟೋಪಂಬೆಱು** – ಆಟೋಪವನ್ನು ಹೊಂದು (ಖೇಚರಚಯಮೆಟ್ಟು ಆ ಪವನಪಥದಿಂ ಆಟೋಪಂಬೆತ್ತಂದು: **ಕರ್ಣನೇಮಿ,** ೧೨. ೯೦)

**ಆಡಪೋರಿ** – ಹೋತ (ಆಡಪೋರಿಯನೇಱಿ ಸಮಭೂಮಿಯೊಳ್ ಇೞಿದು ತಿದಿಯಂ ಪೊಕ್ಕೊರ್ದೊಡೆ: **ಹರಿವಂಶ,** ೪. ೩೩ ವ)

**ಆಡಿಸು** – ಅಲುಗಾಡಿಸು (ಕೈಯುಂ ಕಾಲುಂ ಆಡಿಸದೆ ಒಂದು ಕೆಲದಿಂದೊಂದು ಕೆಲಕ್ಕೆ ಮಗುೞದೆ: **ವಡ್ಡಾರಾ,** ಪು. ೧೦೧, ಸಾ. ೧೨); ನಟಿಸುವಂತೆ ಮಾಡು (ವಿರಾಟನ ಮಗಳು ಉತ್ತರೆ ಮೊದಲಾಗೆ ಪಲವುಂ ಪಾತ್ರಂಗನಾಡಿಸುತ್ತುಂ: **ಪಂಪಭಾ,** ೮. ೫೫ ವ); ನರ್ತಿಸುವಂತೆ ಮಾಡು (ಮಾಣದೆ ಆಡಿಸಿದಾತಂ ಅಂಗಜನೆಂಬ ನಟ್ಟುವಂ: **ಆದಿಪು,** ೪. ೧೫)

**ಆಡು** – ನುಡಿ (ಆ ಪಾಣ್ಬರಂಕುಸಂ ಆ ಪಾಣ್ಬೆಯರ ಗೆಯ್ದ ಗೆಯ್ತಂಗಳುಮಂ ತೋರ್ಪ ಸನ್ನೆಗಳುಮಂ ಆಡುವ ಮಿಟ್ಟುಗೊಡ್ಡಂಗಳುಮಂ ಕಂಡು ಚೋದ್ಯಂಬಟ್ಟು: **ಪಂಪಭಾ,** ೪. ೮೩ ವ); ಚಲಿಸು (ಧ್ಯಾನದೊಳಭವಂ ನೆಱೆದಿನಿಸಾನುಮನರೆಮುಚ್ಚಿ ಕಣ್ಗಳಂ ನಿಶ್ಚಳಿತಂ ತಾನಿರ್ದು ಮಱೆದು ಕೆಂದಿದ ಮೀನಂ ತಾತಾಡರ್ದಿ ಮಡುವಂ ಪೋಲ್ತಂ: **ಪಂಪಭಾ,** ೮. ೧೩); ವಾಗ್ದಾನ ಮಾಡು (ಚಾಳುಕ್ಯವಂಶದೊಳೇಲ್ಲಿಯುಂ ಇನ್ನೆವರೆಗಂ ನುಡಿದು ಮಸಿವುದುಂ ಆಡಿ ಅಳುಪುವುದುಂ .. .. ಇಲ್ಲಂ: **ಗದಾಯು,** ೨. ೭ ವ); ಪಗಡೆ ಮುಂತಾದ ಆಟಗಳಲ್ಲಿ ಕಾಯಿ ನಡೆಸು; ಮೇಕೆ; ನರ್ತಿಸು (ಆಡುವ ಮರುಳ್ಗಳಂ ನಡೆ ನೋಡಿದುದಱಿನಿಂತು ಕನಸಿನೊಳ್ ಮಕ್ಕಳ್ಗಂ ಕೂಡೆ ಪೆಸರಿಟ್ಟು ಸಲೆ ಕೊಂಡಾಡಿದರಾರ್: **ಆದಿಪು,** ೧೫. ೩೯); ಆಟದಲ್ಲಿ ತೊಡಗು (ಮಧುವುಂ ಮನೋಭವನೂಂ ಅಟ್ಟೆಯೊಳಾಡುವ ಪೊನ್ನಬಟ್ಟಂ: **ಶಾಂತಿಪು,** ೧. ೫೮)

**ಆಡುಂಗುಳಿ** – ಆಟದಲ್ಲಿ ಅತ್ಯಾಸಕ್ತ (ಗುಳಿ ಪ್ರತ್ಯಯಕ್ಕೆ: ಆಡುಂಗುಳಿ, ಸಾಲಂಗುಳಿ, ಲಂಚಂಗುಳಿ, ಕುತ್ತಂಗುಳಿ: **ಶಬ್ದಮದ,** ೨೧೩, ಪ್ರ)

**ಆಡುಂದೊಲೆ** – ತೂಗುವ ಮರ, ಏತದ ಮರ (ದಕಾರಕ್ಕೆ: ಆಡುಂದೊಲೆ, ತೂಗುಂದಲೆ: **ಶಬ್ದಮದ,** ೧೮೧ ಪ್ರ)

**ಆಡುಂಬೊಲ** – ಆಟದ ಸ್ಥಳ, ಕ್ರೀಡಾಂಗಣ (ಬೀಡು ಸುಕೃತಕ್ಕೆ ಚೆಲ್ವಿಂಗೆ ಆಡುಂಬೊಲಂ ಆಶ್ರಯಂ ಸುಖಕ್ಕೆ ಎನೆ .. .. ನಾಡೊಳಗೆ ಉತ್ಕೃಷ್ಟಮಲ್ತೆ ಕೌಶಲದೇಶಂ: **ಪಂಪರಾ,** ೧. ೧೦೧)

**ಆಢಕೀ** – ಅವರೆ (ರಾಜಮಾಷ ಆಢಕೀ ನಿಷ್ಪಾವ ಚಣಕ ಕುಸುಂಭ .. .. ವಿವಿಧ ಧಾನ್ಯಭೇಧಂಗಳುಂ: **ಆದಿಪು,** ೬. ೭೨ ವ)

**ಆಢ್ಯ** – ಹೊಂದಿರುವ (ಶುದ್ಧಧರ್ಮಂ ನಿರುಪಮಮಹಿಮ ಆಢ್ಯಂ ಸಮಸ್ತ ಅನೀಢ್ಯಂ: **ಉದ್ಭಟಕಾ,** ೧೨. ೧೩೮)

**ಆಣಂಬೆ** – ಅಣಬೆ (ನಿಂಬದ ಕುಸುಮಂಗಳಂ ಔದುಂಬರಪಂಚಕಮಂ ಅಂತೆ ನವನೀತಮಂ ಆಣಂಬೆಯಂ ಅನಾರತಂ ಬೆಳ್ಗುಂಬಳಮಂ ಗಿಣ್ಣಂ ಉಣ್ಣದಿರ್ಪುದಮೋಘಂ: **ಸುಕುಮಾಚ,** ೬. ೪೩)

**ಆಣತಿ** – [ಆಜ್ಞಪ್ತಿ] ಆಜ್ಞೆ ಪುಗಿಸೆ ಬನಮಂ ಪುಗ್ ಎಂಬೊಂದು ಅನ್ಯಭೃತಕ್ಕಾಣತಿವಂದಂತಾಯ್ತು: **ಶಾಂತಿಪು,** ೮. ೩); ಹಾಡು ಬೀಣೆಯ ಸರಂ ಬಿಡದಿಲ್ಲಿಯತೆನಿಪ್ಪ ಠಾಯೆಯಿಂಸ ಆಣತಿಮಾಡಿ: **ಚಂದ್ರಪ್ರಪು,** ೭. ೯೬)

**ಆಣತಿಗೆಯ್** – ಧ್ವನಿ ಮಾಡು (ಮುಗುಳ್ವದನಾದ ಸಂಪಗೆ ಮಡಲ್ತ ಅದಿರ್ಮುತ್ತೆ ಮರಲ್ದರಲ್ದ ಮಲ್ಲಿಗೆ ಕಾಕಳಿಯೊಳ್ ಆಣತಿಗೆಯ್ವ ಮದಾಳಿ: **ಪಂಪಭಾ,** ೫. ೩೫)

**ಆಣತಿಮಾಡು** – ಹಾಡು ಹೇಳು (ನುಣ್ಚರದಿಂ ಆಣತಿಮಾಡಿದುದು ಉನ್ಮದಾಳಿ: **ಮಲ್ಲಿನಾಪು,** ೬. ೬೯)

**ಆಣತಿಯಿಡು** – ಆಜ್ಞೆಮಾಡು (ಋಷಿರೂಪಂ ಊರಂ ಪೊಕ್ಕೊಡೆ ಕೆಲ್ವೆನೆಂದು ಆಣತಿಯಿಟ್ಟು: **ಪಂಪರಾ,** ೯. ೧೦ ವ)

**ಆಣಿಮುತ್ತು** – ದುಂಡು ಮುತ್ತು (ಮದನಂಗೆ ಮಲ್ಲಿಗೆಮುಗುಳ ಮಾಲೆಯನೀವ ವಸಂತನಂತೆ ತಾಂ ತಂದ ಆಣಿಮುತ್ತಿನ ಮಾಲೆಯಂ ಕಾಣ್ಕೆಗೈದು: **ರಾಜಶೇವಿ,** ೧೨. ೧೦೦ ವ)

**ಆಣೆ** – [ಆಜ್ಞಾ] ಅಪ್ಪಣೆ (ಜವನಾಣೆಗಂ ಆಜ್ಞೆಗಂ ಉಂಟೆ ವಕ್ರಂ: **ಆದಿಪು,** ೪. ೬೭); ಪ್ರತಿಜ್ಞೆ ಮಾಡು (ನಿನಗೆನ್ನಾಣೆ ಎಂದು ತನ್ನ ಮೇಗೆ ಸೂರುಳಿಸಿ ಬೆಸಗೊಂಡೊಡೆ: **ವಡ್ಡಾರಾ,** ಪು. ೪೬. ಸಾ. ೨೪)

**ಆಣೆಗೋಸಣೆ** – ಅಪ್ಪಣೆಯನ್ನು ಘೋಷಿಸುವುದು (ಮಿಕ್ಕಿನಕ್ಕರದ ಮಾತಂತಿಕೇ ತನ್ನ ಆಣೆಗೋಸಣೆ ಸಲ್ಗುಂ: **ಧರ್ಮಮಧು,** ೧. ೬೯)

**ಆಣೆಯಿಡು** – ಆಜ್ಞೆಮಾಡು; ಪ್ರತಿಜ್ಞೆಮಾಡು (ಪನ್ನೆರಡು ಯೋಜನಂಬೋದಲ್ಲಿ ರಥಮಾಣೆಯಿಟ್ಟಂತೆ ಮಾಣೆ: **ಅಜಿತಪು,** ೯. ೧೭ ವ)

**ಆಣ್ಮ** – ಒಡೆಯ (ಜಯವಧುಗೆ ಆಣ್ಮನಾಗಿಯುಂ ಅಸೌಮ್ಯನೆ: **ಶಾಂತಿಪು,** ೧೧. ೬೬); ಗಂಡ (ಸುರಿಯಲ್ವೇಡಮದರ್ಕೆ ಬಾಷ್ಪಜಳಮಂ ನಿನ್ನ ಆಣ್ಮನಂ ಕೂಡುವೆವು ಎಮ್ಮೊಳಾದ ಕಲಹಕ್ಕೆಂತಾದೊಡಂ ಕೇಳ ನೂರ್ವರೆ ದಲ್ ಕೌರವರ್ ಆಮುಂ ಅಯ್ವರೆ ವಲಂ: **ಪಂಪಭಾ,** ೭. ೩೬)

**ಆತಂಕ** – ಹೆದರಿಕೆ, ತಲ್ಲಣ (ಜನನ ಮೃತಿ ಜರಾ ಆತಂಕ ಶೋಕಾಗ್ನಿಯಿಂದ ಆವನುಂ ಈ ಸಂಸಾರದೊಳ್ ಬೆಯದನೊಳನೆ: **ಆದಿಪು,** ೩. ೬)

**ಆತಂಕಿತಹೃದಯ** – ಭಯಗೊಂಡ ಹೃದಯದವನು (ಆತಂಕಿತ ಹೃದಯರಾದ ಅಂಗ ವಂಗ ಕಳಿಂಗ ಕೊಂಗ ಮಾಳವ ಚೋಳ: **ಜಗನ್ನಾವಿ,** ೨. ೩೯ ವ)

**ಆತತ** – ಅತಿಶಯವಾದ (ದ್ವೈತೀಯಕ ಜಿನಪಂಗೆ ಅದ್ವೈತಂಗೆ ಅಜಿತಂಗೆ ಭುವನದಯಿಂತಗಾಗಳ್ ದೈತೇಂದ್ರೆಲ್ಲರಂ ಗೈಱಗಿದರಾತತ ಪುಣ್ಯಂಗೆ ಜಗದೊಳಗೆಱಗದರೊಳರೇ: **ಅಜಿತಪು,** ೫. ೩)

**ಆತತಜ್ಯಂಮಾಡು** – ಬಿಲ್ಲಿಗೆ ಹೆದೆಯೇರಿಸು (ಬಲಪ್ರಖ್ಯಾತರ್ ಆತತಜ್ಯಂ ಮಾಡಲಾಱದ ಆ ದಿವ್ಯಧನುವನೇಱಸಿ: **ಜಗನ್ನಾವಿ,** ೧೫. ೫ ವ)

**ಆತಪ** – ಬಿಸಿಲು (ಶೀತ ವಾತ ಆತಪ ವರ್ಷಾದಿ ಸರ್ವ ದ್ವಂದ್ವ ದೋಷರಹಿತಮಪ್ಪದೊಂದು ರತ್ನಶಿಲಾತಲದೊಳ್ ಚಂದ್ರಾಪೀಡದೇವನಂ ನಿಲಿಸಿ: **ಕಾದಂಸಂ,** ೭. ೫೩ ವ)

**ಆತಪತ್ರ** – [ಆತಪ+ತ್ರ] ಕೊಡೆ, ಛತ್ರಿ (ಹಿಮಧವಳ ಆತಪತ್ರಮನೆ ಪೋಲೆ ಮುಖೇಂದುವ ಬೆಳ್ಪು ಪೂರ್ಣಕುಂಭಮನೆ ನಿರಂತರಂ ಗೆಲೆ ಕುಚಂಗಳ ತೋರ್ಪು: **ಪಂಪಭಾ,** ೧. ೧೨೦)

**ಆತಪಬಾಧೆ** – ಬಿಸಿಲಿನ ಬಾಧೆ (ಹಿಮಮೆಂದು ಆತಪಬಾಧೆಯೆಂದು ಮಟೆಯೆಂದು: **ಆದಿಪು,** ೫. ೨೯)

**ಆತಪಯೋಗ** – ಗ್ರೀಷ್ಮ ಋತುವಿನಲ್ಲಿ ಬಿಸಿಲಿನಲ್ಲಿ ನಿಂತು ತಪಸ್ಸು ಮಾಡುವುದು (ಆತಪಯೋಗದಿಂದಿರೆ ಭೂತಹಿತರ್ ಬಂದು ಮುನಿಪರವಧಿಜ್ಞಾನಖ್ಯಾತರದಂ ಅಱದು: **ಕರ್ಣನೇಮಿ,** ೧೪. ೧೧೫)

**ಆತಪವಾರಣ** – ಕೊಡೆ, ಛತ್ರಿ (ದಿವ್ಯಂ ಆತಪವಾರಣಂ ಅಮೃತಾಂಶುಬಿಂಬಧವಳವಿಳಾಸಂ: **ಆದಿಪು,** ೧೪. ೧೭)

**ಆತಪವಾರಣತ್ರಿತಯ** – ಮುಕ್ಕೊಡೆ (ಆತಪವಾರಣತ್ರಿತಯದಿಂ ತ್ರೈಲೋಕ್ಯಸಾಮ್ರಾಜ್ಯಭೂಷಣ ಮಾಣಿಕ್ಯ ಜಿನೇಂದ್ರಬಿಂಬಮೆ ಜಯಂಶುಭಂ ಮಂಗಳಂ: **ಆದಿಪು,** ೧೬. ೪)

**ಆತರ** – ನದಿಯನ್ನು ದಾಟಿಸುವುದು, ದೋಣಿ, ಹಡಗು(ವಿದಿತಸಕಳತತ್ತ್ವನೆ ತೀರ್ಥಂಕರನೆ ಭವಜಲಧಿತರಣ ಆತರನಾದೈ: **ಪುಷ್ಪದಂಪು,** ೧೩. ೬೪)

**ಆತಾಮ್ರ** – ಚೆನ್ನಾಗಿ ಕೆಂಪಾಗಿರುವ (ಅತ್ಯುನ್ನತ ಅಂಗುಷ್ಠಮೊಪ್ಪುವುದು ಆತಾಮ್ರತಲಂ ಕನತ್ ನಖಚಯಂ ಪಾದದ್ವಯಂ ಚಕ್ರಿಯಾ: **ಅಜಿತಪು,** ೯. ೧೦)

**ಆತಾಮ್ರದಶನವಸನಂ** – ಕೆಂಪಾದ ತುಟಿಯುಳ್ಳವನು (ವಿಕಸಿನ ನಾಸಾಪುಟನತಿವಿಕಂಪಿತ ತಾಮ್ರದಶನವಸನಂ ಬದ್ಧಭ್ರುಕುಟಿಪುಟಂ: **ಆದಿಪು,** ೧೪. ೨೪)

**ಆತಿಥ್ಯ** – ಅತಿಥಿಸೇವೆ (ಮಾಮರಕೆ ಕಾಮಂ ಕೊಟ್ಟನಾತಿಥ್ಯಮಂ: **ಪುಷ್ಪದಂಪು,** ೮. ೮೦)

**ಆತುರ** – ಪೀಡಿತನಾದ (ಶಾಪದಿಂದಂ ತಿರ್ಯಗ್ಜಾತಿಗೆ ಬಿೞ್ದಿಂ ಬಿಡು ದುಃಖಾತುರನೆಂ ನಿನಗೆ ಪುಣ್ಯಮಕ್ಕುಂ ಅಗಣ್ಯಂ: **ಕಾದಂಸಂ,** ೮. ೩೪)

**ಆತುರಿಸು** – ಆತುರಪಡು (ಆತುರಿಸುವ ತುಂಬಿಗಳೌತಣದ ಅರಮನೆಯೆನೆ ಪುಷ್ಪವಿಕ್ರಯಸ್ಥಲಮೆಸೆಗುಂ: **ಗಿರಿಜಾಕ,** ೨. ೮೪)

**ಆತೋದ್ಯ** – ಬಾಜಿಸುವ ವಾದ್ಯ (ಆಗಳ್ ದ್ರುಪದಂ ನಿಜಾಂತಃಪುರಪರಿವಾರಂ ಬೆರಸು ಉದಾರಮಹೇಶ್ವರನಲ್ಲಿಗೆ ಓಲಗಕ್ಕೆ ವಂದು ನೃತ್ಯವಾದ್ಯ ಗೀತಾ ಆತೋದ್ಯಂಗಳೊಳ್ ಕಿಱದುಂ ಬೇಗಮಿರ್ದು: **ಪಂಪಭಾ,** ೩. ೮೧ ವ)

**ಆತೋದ್ಯನಾದ** – ಆತೋದ್ಯಘೋಷ (ಮಂಗಳಗೀತ ಆತೋದ್ಯನಾದಂಗಳೊಳೆ ಪುದುವಿನಂ ಕಟ್ಟಿದಂ ಖೇಚರೇಂದ್ರಂ: **ಆದಿಪು,** ೧. ೭೬)

**ಆತೋದ್ಯಲಯ** – ತಾಳವಾದ್ಯಗಳ ಲಯ (ವಿವಿಧ ಆತೋದ್ಯಲಯಾನುಬಂಧಿವಿಳಸಲ್ಲಾಸ್ಯಂ ತಗುಳ್ದಲ್ಲಿ ನಾಟ್ಯವಿದರ್ ತಾಂಗೆಯುಮೇಱ ನೃತ್ಯಗೃಹಮಂ: **ಆದಿಪು,** ೧೧. ೧೯)

**ಆತೋದ್ಯಾಂಗ** – [ಜೈನ] ಹತ್ತು ಬಗೆಯ ಕಲ್ಪವೃಕ್ಷಗಳಲ್ಲಿ ಒಂದು; ಬೇಡಿದ ವಾದ್ಯವನ್ನು ನೀಡುವ ವೃಕ್ಷ (ವಸನಾಂಗ .. .. ವಿಭೂಷಣಾಂಗ ದಶಕಲ್ಪಕುಜಂ: **ಚಂದ್ರಪ್ರಪು,** ೩. ೩೪); ನೋಡಿ 'ಕಲ್ಪಕುಜ'

**ಆತ್ತ** – ಪಡೆದ (ಇತ್ತ ವಂದ ಸಂಧ್ಯಾಸಮಯ ಆತ್ತ ರಕ್ತರುಚಿ ಪಿಂಗೆ ಬಟೆಕ್ಕುದಯಾದ್ರಿಯೊಳ್ ಪದಂಗಾಸಿದ ಪೊನ್ನ ಪುಂಜಿಯವೊಲಿರ್ದುದು ಕಣ್ಗೆ ಹಿಮಾಂಶುಮಂಡಲಂ: **ಪಂಪಭಾ,** ೩. ೮೧); ಸೋತ (ಪ್ರಚಂಡವಿಕ್ರಮಧನರ್ ಆತ್ತ ಬಾಂಧವಪರಾಭವ ಭರಮನೇಕೆ ಸೈರಿಪರ್: **ಮಲ್ಲಿನಾಪು,** ೫. ೫)

**ಆತ್ತನಿರ್ವೇಗೆ** – ವಿರಕ್ತಿಯನ್ನು ಒಪ್ಪಿದವಳು (ಅತ್ತನಿರ್ವೇಗೆಯರ್ ವಿವಾಹವಿಮುಖೆಯರಾಗಿ ಗುರುಪ್ರಸಾದದಿಂ ದೀಕ್ಷೆಯಂ ಕೈಕೊಂಡು: **ಆದಿಪು,** ೧೦. ೬೫ ವ)

**ಆತ್ತವ್ಯೋಮ** – ಕವಿದ ಆಕಾಶ (ಪರೆವಂತಾದುದು ಕಾಳಾಗರುಧೂಪಶ್ಯಾಮ ಆತ್ತವ್ಯೋಮಂ: **ಆದಿಪು,** ೭. ೭೯)

**ಆತ್ಮಂಭರಿ** – ತನ್ನ ತಾನು ಸಾಕಿಕೊಳ್ಳುವವನು (ಸ್ವಪ್ರಯತ್ನಂ ಎಂಬಿದಂ ಆತ್ಮಂಭರಿಯಾಗಿ ಬಿಸುಟ ನರಪತಿ ಪರಿಹೃತ ದರ್ಮಾರ್ಥಕಾಮಮೋಕ್ಷನೆಯಕ್ಕುಂ: **ಪಂಚತಂತ್ರ,** ४೨೫)

**ಆತ್ಮಗುಪ್ತಿ** – ನಸುಗುನ್ನಿ (ಪಾಕಕುಶಕಾಶವಿಶದಂ ಕಾಕಾಂದೋಳ ಆತ್ಮಗುಪ್ತಿ ಅಲಾಬೂ ನಿರ್ಗುಂಡೀ .. .. ತಟಂ ಕಡುರಯ್ಯಂ: **ಲೀಲಾವತಿ,**೫. ೮೦)

**ಆತ್ಮಘಾತ** – ಆತ್ಮಹತ್ಯೆ (ಮೇಲೆ ಕೂಡುವರ್ ಒಡಸತ್ತವರ್ ಡಂಬೊಡೆ ಅದು ಕೂಡದು ಕೇವಲಂ ಆತ್ಮಘಾತದೋಷವೆ ಪೆಱತಿಲ್ಲ: **ಕಾದಂಬ,** ೫. ೨೦೩)

**ಆತ್ಮಜ** – ಮಗ (ಏಕಪಾದತಪದೊಳ್ ನಿಲೆ ಗೀರ್ವಾಣನಾಥ ಆತ್ಮಜನಲ್ಲಿಗೆ ಗುಹನಂ ಅಹಿಭೂಷಣನ ಅಂಬಂ ಬೇಡಿ ಅಟ್ಟಿದೊಡೆ: **ಪಂಪಭಾ,** ೮. ೧೬ ವ)

**ಆತ್ಮಜನೊಸಗೆ** – ಪುತ್ರೋತ್ಸವ (ಶೋಭಿತಾಂತಃಪುರದೊಳ್ ಮಾದೇವಿಗಾದ ಆತ್ಮಜನೊಸಗೆಯನಾ ಮೂವರುಂ ಬಿನ್ನಪಂಗೆಯ್ದಿರ್ದ: **ಆದಿಪು,** ೧೦. ೪೯)

**ಆತ್ಮಜನ್ಮ** – ಮಗ (ದೀರ್ಘಬಾಹಾಲಂಬಂ ಭುಜವೀರ್ಯವಿಕ್ರಮಯುತಂ ಗಂಗಾ ಆತ್ಮಜನ್ಮಂ ಜಯಶ್ರೀಲೋಲಂ: **ಪಂಪಭಾ,** ೧. ೬೮)

**ಆತ್ಮಜಾತ** – ಮಗ (ಜಯಶ್ಯಾಮೆಗೆ ಇನ್ನು ಆತ್ಮಜಾತ ಉದ್ಭವಮೆಂದಕ್ಕುಂ ನಮೋಸ್ತೂ ಬೆಸಸಿಂ ಎನೆ: **ಅನಂತಪು,** ೨. ೩೯)

**ಆತ್ಮಜ್ಞತೆ** – ಆತ್ಮದ ಸ್ವರೂಪ ತಿಳಿದಿರುವುದು (ಸಜ್ಜನರ್ ಆತ್ಮಜ್ಞತೆಗೆ ನೋಟಪ್ಪೊಡದು ಫಲಮೆ ವಲಂ: **ಚಂದ್ರಪ್ರಪು,** ೨. ೩೮)

**ಆತ್ಮತತ್ತ್ವ** – ಆತ್ಮದ ಸ್ವರೂಪ (ಆತ್ಮತತ್ತ್ವದೊಳ್ ಬಗೆ ಗಡಂ: ಆದಿಪು, ೨. ೬೦)

**ಆತ್ಮಭವ** – ಮಗ (ಆತ್ಮಭವನಾ ನರಾಧಿಪ ಆತ್ಮಜಂ ಆ ನಹುಷ ಪೃಥು ಭಗೀರಥ ನಳ ಮಹಾತ್ಮರನಿಳಿಸಿ ನೆಗೞ್ದಮಹಾತ್ಮಂ ನರಸಿಂಹನಜೀವಿನೊಳ್ ಪರಮಾತ್ಮಂ: **ಪಂಪಭಾ,** ೧. ೩೧)

**ಆತ್ಮಭಾವಿ** – ಆತ್ಮಜ್ಞಾನದ ಫಲ (ಸುಖಂ ಆತ್ಮಭಾವಿ ಗಾಂಭೀರ್ಯಂ ಅಮಾನುಷಂ ನಿನಗೆ ದೇವರ ದೇವ: **ಶಾಂತಿಪು,** ೧೦. ೧೦೦)

**ಆತ್ಮರಕ್ಷಕ** – [ಜೈನ] ಸ್ವರ್ಗದಲ್ಲಿ ಹುಟ್ಟಿದ ಜೀವಕ್ಕೆ ಅಂಗರಕ್ಷಕರಾಗಿರುವ ದೇವತೆಗಳು (ಅಮರರುಂ .. .. ಆತ್ಮರಕ್ಷಕ ಲೋಕಪಾಲ ಕಿಲ್ಬಿಷಾಭಿಯೋಗ್ಯಭೇದದಿಂ ನವವಿಧಮಕ್ಕುಂ: **ಶಾಂತಿಪು,** ೧೨. ೬ ವ)

**ಆತ್ಮವಿದ್ಧ** – ತನ್ನ ರೂಪವನ್ನು ತಾನೇ ಚಿತ್ರಿಸುವುದು (ಶ್ರುತಿವಿದ್ಧಂ ಆತ್ಮವಿದ್ಧಂ ಪರವಿದ್ಧಂ ಎಂಬ ವಿದ್ಧಪದ್ಧತಿಯುಮಂ ಲಾಕ್ಷಾರಸರೇಖಾಶುದ್ಧಿಯುಮಂ: **ಮಲ್ಲಿನಾಪು,** ೫. ೩೬ ವ)

**ಆತ್ಮಾನುಗತಾರ್ಥ** – ಮನಸ್ಸಿನಲ್ಲಿರುವ ಆಸೆ (ಯಮಂ ಬೆಸನಾವುದು ಆವುದು ಆತ್ಮಾನುಗತಾರ್ಥಂ ಎಂದೊಡೆ ಎನಗೀವುದು ನಿನ್ನನೆ ಪೋಲ್ವ ಪುತ್ರನಂ: **ಪಂಪಭಾ,** ೧. ೧೧೯)

**ಆತ್ಮಾಮಿಷ** – ರಾಜ ಮಾಡಿಕೊಳ್ಳುವ ಹದಿನಾರು ಬಗೆಯ ಸಂಧಿಗಳಲ್ಲಿ ಒಂದು; ಶತ್ರು ಸಮಸ್ತಬಲದೊಡನೆ ವಿಜಿಗೀಷುವನ್ನು ಕಾಣುವುದು (ಶತ್ರು ಸಮಸ್ತಬಲಂ ಬೆರಸು ವಿಜಿಗೀಷುವಂ ಕಾಣ್ಬುದುಂ ಆತ್ಮಾಮಿಷಸಂಧಿ ಎಂಬುದಕ್ಕುಂ: **ಪಂಚತಂತ್ರ,** ೩೦೭ ವ)

**ಆತ್ಮಾಯತ್ತ** – ತನ್ನ ಅಧೀನ (ಆತ್ಮಾಯತ್ತಂ ಮಾಡಿದುರ್ವರಾಸ್ಯತಿಲಕನ ಸೈನಿಕನಂ: **ಶಾಂತಿಪು,** ೧೦. ೧೬೨ ವ)

**ಆತ್ಮಾರ್ಥಂ ಪೃಥಿವೀಂ ತ್ಯಜೇತ್** – ಸ್ವಂತಕ್ಕಾಗಿ ಜಗತ್ತನ್ನು ತ್ಯಜಿಸು (ಅಂತುಮಲ್ಲದೆಯುಂ ಆತ್ಮಾರ್ಥಂ ಪೃಥಿವೀಂ ತ್ಯಜೇತ್ ತನ್ನ ನಿಮಿತ್ತಮಾಗಿ ಭೂಮಿಯನ್ನು ಬಿಡುವುದು ಎಂಬ ನೀತಿಶಾಸ್ತ್ರಮುಂಟು: **ಪಂಚತಂತ್ರ,** ೯೨ ವ)

**ಆತ್ಮಾಸ್ತಿತ್ವ** – ಆತ್ಮನ ಇರುವಿಕೆ (ಆತ್ಮಾಸ್ತಿತ್ವ ಅಭಿನಿವೇಸದಿಂ ತನು ಮನ ಧನ ನಿಧನಂ ಮಡಿ ಸೇದೆಗಿಡಲ್ವೇಡ: **ಆದಿಪು,** ೨. ೯ ವ)

**ಆತ್ಮೀಯ** – ತನಗೆ ಸೇರಿದ, ತನಗೆ ಪ್ರಿಯವಾದ (ಅವರ ವಚನನದಿಂ ಆತ್ಮೀಯ ಪಿತೃಮರಣಮುಮಂ ಆತನ ನರಕಗತಿ ಗಮನಮುಂ ಅಱೆದು: **ಆದಿಪು,** ೨. ೧೪ ವ)

**ಆತ್ಮೇಶ** – ತನ್ನ ಒಡೆಯ (ಆತ್ಮೇಶಂ ಅಂದಿತ್ತುದಂ ಕೆದಱುತ್ತಾದುದಲಂಕೃತಂ: **ಅನುಭವ,** ೭೩)

**ಆತ್ಯಂತಿಕ** – ಕೊಟ್ಟ ಕೊನೆಯ (ಅಜ್ಞಾನಭರಂ ಕಿಡಲ್ ಸುಖಭರಂ ಕೈಕೊಳ್ಳ್ಗಂ ಆತ್ಯಂತಿಕಂ: **ಜಗನ್ನಾವಿ,** ೧೮. ೧೧೨)

**ಆತ್ಯಂತಿಕಸುಖ** – ಪರಮಸುಖ, ಮೋಕ್ಷ (ಸಿದ್ಧರ್ ಆತ್ಯಂತಿಕಸುಖಮದವೀಸಿದ್ಧಿಯಂ ಮಾೞ್ಕೆ ನಮ್ಮೊಳ್: **ಪಂಪರಾ,** ೧. ೨)

**ಆತ್ಯಯ** – ನಾಶಮಾಡುವ (ಮದಯುತಂ ಮಾನಾತ್ಯಯಾಭೀತಂ ಉದ್ವೃತ್ತಂ .. .. ತಾನಾದ ಭೂಪತಿಗೆ ಐಸಿರಿ .. .. ಪಾಳಾಗದೇಂ ಪೋಕುಮೇ: **ರಾಜಶೇವಿ,** ೬. ೧೨೪)

**ಆತ್ರೇಯದ್ಯುತಿ** – ಚಂದ್ರನ ಕಾಂತಿ (ಆತ್ರೇಯದ್ಯುತಿಯಂ ಪಳಂಚಲೆದು .. .. ತ್ರೈವಿದ್ಯಮುನೀಂದ್ರ ನಿರ್ಮಳಯಶಃಶ್ರೀ: **ಚಂದ್ರಪ್ರಪು,** ೧. ೩೩)

**ಆತ್ರೇಯಬಿಂಬ** – ಚಂದ್ರಮಂಡಲ (ನಯನಸುಖಲತಾಸ್ತಂಬಂ ಆತ್ರೇಯಬಿಂಬಂ: **ಚಂದ್ರಪ್ರಪು,** ೮. ೩೪)

**ಆದಂ** – ವಿಶೇಷವಾಗಿ (ನಿನಗೊರ್ವಂಗಲ್ಲವಸ್ಥಾಂತರಂ ಅಮರಜನಕ್ಕೆಲ್ಲಮೀ ಪಾಂಗೆ ಕಾರುಣ್ಯನಿನಾದಂ ನಿನ್ನಂ ಆದಂ ನಗಿಸುಗುಂ: **ಆದಿಪು,** ೩. ೬)

**ಆದಮಾನುಂ** – ವಿಶೇಷವಾಗಿ (ಬೆಳಗುವ ಗಳಂತಿಗೆಯಂ ಆದಮಾನುಂ ಒಪ್ಪುತ್ತಿರ್ದುದಂ ಪಿಡಿದು ನಿಂದಿರ್ದೊಳಂ ಅರಸಂ ಕಂಡು: **ವಡ್ಡಾರಾ,** ಪು ೩೩, ಸಾ ೬)

**ಆದಮೆ** – [ಆದಂ+ಎ] ವಿಶೇಷವಾಗಿಯೇ (ದುರ್ಧರರಜಳಯುದ್ಧಮುಂ ಆದಮೆ ಪರಿಭವಮಂ ಚಕ್ರವರ್ತಿಗಿತ್ತತ್ತಾಗಳ್: **ಆದಿಪು,** ೧೪. ೧೦೮)

**ಆದರ** – ಗೌರವ, ಪ್ರೀತಿ (ಆದಲೆ ಗುಂಡಿತ್ತೆಂದು ಈದಲೆಯೊಳೆ ನಿಂದು ಸತಿಗೆ ಹರಿಗಂ ತೋಱುತ್ತ ಆದರದೆ ಜಾನುದಘ್ನಂ ಉರೋದಘ್ನಂ ಕಂಠದಘ್ನಂ ಎಂಬ ಅಳವಿಗಳಂ: **ಪಂಪಭಾ.** ೫. ೬೨)

**ಆದರಂಗೊಳ್** – ಆಸಕ್ತಿ ಹೊಂದು (ನಾಲ್ವರುಮಂ ಆದರಂಗೊಂಡು ನಾಲ್ಕುಂ ದೆಸಗೆ ಬೆಸಸಿಂ ಬೇಳ್ಕುಱುವಿನಂ: **ಪಂಪಭಾ,** ೬. ೨೮)

**ಆದರಿಸು** – ಗೌರವ ತೋರಿಸು, ಉಪಚಾರ ಮಾಡು (ನಿಜಾಗ್ರಜಂಗೆ .. .. ಆದರಿಸದೆಯುಂ ಮೂಗಂ ಮೇಲೆತ್ತಿಕೊಂಡಿರ್ಪುದುಂ: **ಸುಕುಮಾಚ,** ೪. ೨೪ ವ)

**ಆದರ್ಪಿಸು** – ಪ್ರತಿಭಟಿಸು (ನೀರದ ಪಥಕ್ಕೆ ಭೋಂಕನೆ ನಾರದನೊಗೆದೆಯ್ದಿ ಲಂಕೆಯಂ ತನು ರುಚಿ ನೀಹಾರಮಂ ಆದರ್ಪಿಸೆ ಬಲ ನಾರಾಯಣ ದೇವರಿರ್ದ ಸಭೆಯಂ ಪೊಕಕ್ಕಂ: **ಪಂಪರಾ,** ೫. ೧೫)

**ಆದರ್ಶ** – ಕನ್ನಡಿ (ಪ್ರಫುಲ್ಲೈಕಗಂಡಸ್ಥಳಂ ಆದರ್ಶಾರ್ಪಿತ ಏಕೇಕ್ಷಣಂ: **ಆಚವರ್ಧ,** ೧. ೬೯)

**ಆದಲೆ** – ಅಗ್ರಭಾಗ (ಪಾಳೀಧ್ವಜ ಸಂಕುಲಮುಂ ಭಟಕಟಕಮುಂ ಆದಲೆಯೊಳ್ ಬರೆ ವಜ್ರಬಾಹು ಪಯಣಂ ಬಂದಂ: **ಪಂಪರಾ,** ೨. ೧೨); ಅತ್ತ ಕಡೆ (ಕೆಲದೊಳ್ ರಾಜಕುಮಾರವೃಂದಪ್ರಕರಮಿದಿರೊಳ್ ವಾರಾಂಗನಾವರ್ಗಂ ಆದಲೆ ವಣದಿಪ್ರಕರಂ: **ಆದಿಪು,** ೧೧. ೨೭); ಉಂಟಾಗುವಿಕೆ (ಪಯೋರಸದಿಂದಂ ಹಂಸಂಗುಪದೇಶಮೀವ ಗಾಂಪನುಮೊಳನೇ ಆದೊಡಂ ಅಱೆಪಿದಪೆಂ ನಯದಾದಲೆಯಂ ನಿನಗೆ ನಳಿನವಿಕಸನದೊಳ್ ಸೂರ್ಯೋದಯಕೆ ಸಹಾಯತ್ವಮನೂದುವ ತಣ್ಣೆಲರುಮಲಸದೇಂ ಪುದುಗುವುದೇ: **ಲೀಲಾವತಿ,** ೪. ೩೮)

**ಆದಿ** – ಮೊದಲಾದುವು (ಸ್ವಾಮ್ಯಾದಿಳಂ ಷಷ್ಠಿ ತಾನದಕ್ಕುಂ, **ಕಾವ್ಯಾವಲೋ:** ೧೨೦); ಮೊದಲು (ನಿನ್ನಾದಿಯೊಳ್ ಅಬ್ಬೆ ಕೊಂತಿ ನಿನಗಮ್ಮಂ ಅಹರ್ಪತಿ: **ಪಂಪಭಾ,** ೯. ೬೪)

**ಆದಿಕಮಠ** – ಮೊದಲನೆಯ ಆಮೆ, ಭೂಮಿ ಹೊತ್ತ ವಿಷ್ಣುವಿನ ಕೂರ್ಮಾವತಾರ (ಆದಿಕಮಠಂ ಅಂಬರಮಾಳಮನಾಳ್ದಗಳ್: **ಶಬರಶಂ,** ೧. ೫೪)

**ಆದಿಗರ್ಭೇಶ್ವರ** – ಹುಟ್ಟಿನಿಂದ ರಾಜವಂಶಕ್ಕೆ ಸೇರಿದ; ಆಗರ್ಭ ಶ್ರೀಮಂತ (ತಾವು ಆದಿಗರ್ಭೇಶ್ವರ್ ಅಪ್ಪುದಱಿಂ ತಳರ್ದೆಡೆಯೆಡೆಯ ಮರಂಗಳ ತೊಱೆಗಳ ಬಾಡಂಗಳ

ಪೆರ್ಗಳಂ ಬೆಸಗೊಳುತ್ತುಂ.. ..ಬಂದು: **ಪಂಪಭಾ,** ೨. ೯೭ ವ)

**ಆದಿಜಿನ** – [ಜೈನ] ಮೊದಲ ತೀರ್ಥಂಕರ, ವೃಷಭನಾಥ (ಅನತಿಶಯ ಕೇವಲಜ್ಞಾನಂ ಅನಿರೀಕ್ಷಿ ವಿಶ್ವನಾಥಂ ಆದಿಜಿನಂ: **ಆದಿಪು,** ೧೦. ೧೫)

**ಆದಿತ್ಯ** – ಸೂರ್ಯ (ಆದಿತ್ಯಂ ಮಸುಳ್ವನ್ನೆಗಂ ಧ್ವಜಘಟಾಟೋಪಂಗಳಿಂದಂ ಲಯಾಂಭೋದಂಗಳ್ ಕವಿವಂತೆವೋಲ್ ಕವಿವುದುಂ ಕಾಲ್ಗಾಪು ಕಾಲ್ಗಾಪಿನೊಳ್ ಜೋದರ್ ಜೋದರೊಳ್ .. .. ಅಗುರ್ವಪ್ಪನ್ನೆಗಂ: **ಪಂಪಭಾ,** ೧೦. ೯೩); ದೇವತೆ (ದೈತ್ಯಾದಿತ್ಯರ್ ನೆರೆದರ್ ಅಂದು ನಭದೊಳ್: **ಕರ್ಣನೇಮಿ,** ೧೨. ೮೬); [ಜೈನ] ಎಂಟು ಮಂದಿ ಲೋಕಾಂತಿಕ ದೇವರಲ್ಲಿ ಒಬ್ಬ (ಸಾರಸ್ವತ ಆದಿತ್ಯ ವಹ್ನಿ ಅರುಣ ಗರ್ಭತೋಯ ತುಷಿತಾವ್ಯಾಬಾಧಾರಿಷ್ಟರೆಂಬ ಎಣ್ಬರುಂ ಲೋಕಾಂತಿಕದೇವರ್ ಬಂದು: **ಆದಿಪು,** ೯. ೩೦ ವ)

**ಆದಿತ್ಯನದೀಜ** – ದೇವಗಂಗೆಯ ಮಗ, ಭೀಷ್ಮ (ಆದಿತ್ಯನದೀಜಂ ಕದನಾದಿತ್ಯಂ ಕಾದಿದಪ್ಪಂ ಈಕ್ಷಿಪೆಂ: **ಕರ್ಣನೇಮಿ,** ೧೨. ೮೬)

**ಆದಿತ್ಯಪ್ರಭ** – ಸೂರ್ಯನಂತೆ ಪ್ರಭೆಯುಳ್ಳವನು (ಬೆಸಸುವುದೆನಗೆ ಆದಿತ್ಯಪ್ರಭ ನಿಮ್ಮ ಬಂದ ಕಾರ್ಯಾಂತರಮಂ: **ಜಗನ್ನಾವಿ,** ೨. ೪೨)

**ಆದಿದೇವ** – ಮೊಟ್ಟ ಮೊದಲ ದೇವ, ಜಿನ (ಇದಿರ್ಗೊಳ್ವಂತಾಯ್ತು .. .. ಬಂದೊಡೆ ಆದಿದೇವಂ: **ಆದಿಪು,** ೭. ೬೦)

**ಆದಿನಾಥಮತ** – ಜೈನಮತ (ತತ್ತ್ವಂ ಆದಿನಾಥಮತದಿಂ ಸಿರಿಯಂ ನೃಪರಿಂ ಮಹಾಪ್ರಸಿದ್ಧಂ: **ಶಾಂತಿಪು,** ೧೨. ೮೦)

**ಆದಿಪುರಾಣ** – [ಜೈನ] ಮೊದಲ ತೀರ್ಥಂಕರನನ್ನು ಕುರಿತ ಪುರಾಣ (ನೆಗಟ್ದ ಆದಿಪುರಾಣದಳ್ ಅಱೆವುದು ಕಾವ್ಯಧರ್ಮಮಂ ಧರ್ಮಮುಮಂ: **ಆದಿಪು,** ೧. ೩೮)

**ಆದಿಪುರುಷ** – ಮೊದಲ ವ್ಯಕ್ತಿ; ಆದಿಜಿನ; ಆದಿನಾರಾಯಣ; ಶಿವ

**ಆದಿಬ್ರಹ್ಮ** – ಆದಿಜಿನ (ಶ್ರೀದೇವೇಂದ್ರಮುನೀಂದ್ರವಂದಿತ ಗುಣವ್ರಾತಂ ಜಗತ್ಸ್ವಾಮಿಸಂದ ಆದಿಬ್ರಹ್ಮಂ ಅಗಾಧಬೋಧನಿಳಯಂ: **ಆದಿಪು,** ೧. ೧)

**ಆದಿವರಾಹ** – ವಿಷ್ಣುವಿನ ವರಾಹಾವತಾರ (ಹಿರಣ್ಯಾಕ್ಷನಂ ತವೆ ಕೊಂದು ಆದಿವರಾಹರೂಪದೊಳೆ ನೀನಂದೆತ್ತಿದೈ ಗೋಮಿನೀಧವ .. .. ಭೂಗೋಳಮಂ: **ಜಗನ್ನಾವಿ,** ೧. ೫೭)

**ಆದಿವಾಸರ** – ಭಾನುವಾರ (ಆದಿವಾಸರದೊಳ್ ಉತ್ತರೆಯೊಳ್ .. .. ಆದುದು ಕವಿರತ್ನನಂನನ ರಾಯನ ಜಾತಕಂ: **ಅಜಿತಪು,** ೧೨. ೫೧)

**ಆದೇಯ** – ತೆಗೆದುಕೊಳ್ಳಬಹುದಾದ (ವಿವೇಕಿಗಮರತ್ವಂ ಹೇಯಂ ಆದೇಯಮೇ: **ಮಲ್ಲಿನಾಪು,** ೧೩. ೯೪)

**ಆದೇಯರೂಪ** – ಮೆಚ್ಚಿಕೊಳ್ಳಬಹುದಾದ ರೂಪ (ಆದೇಯರೂಪರಂ ಕಂಡು ಆದರಿಸದಳ್ ಏಱಲಿಕ್ಕಿದಳ್: **ಪಂಪರಾ,** ೭. ೧೨೫)

**ಆದೇಶ** – ಆಜ್ಞೆ (ದ್ವಿತೀಯ ಮುನೀಶ್ವರಂ ಅಗ್ರಮುನೀಶ್ವರನ ಆದೇಶದಿಂ .. .. ಜನ್ಮಾಂಧಕಿಯಲ್ಲಿಗೆ ಬಂದು: **ಸುಕುಮಾಚ,** ೫. ೨೩ ವ); ವಿಧಿ, ನಿಯಮ (ನಲಿನಲಿದಾಡುವ ಜಂತ್ರದ ಮೀನಂ ಎಚ್ಚನುಮಾಕೆಗೆ ಗಂಡನಕ್ಕುಂ ಎಂದು ಆದೇಶಂ ಅಂತಪ್ಪ ಸಾಹಸಪುರುಷಂವಿಕ್ರಮಾರ್ಜುನನಲ್ಲದೆ ಪೆಱರಿಲ್ಲ: **ಪಂಪಭಾ,** ೩. ೩೨ ವ); ಭವಿಷ್ಯವಾಣಿ (ಲಕ್ಷ್ಮೀಧರ ಧಾತ್ರೀದಯಿತೆನಪ್ಪೆ ನೀನೆಂಬ ಆದೇಶಂ ಅದೆತ್ತ ಪೋಯ್ತು ಮನುಕುಲ ತಿಲಕಾ: **ಪಂಪರಾ,** ೧೪. ೪೪)

**ಆದೇಶಂಗೆಯ್** – ಭವಿಷ್ಯ ನುಡಿ (ಮುನೀಶಂ ಆದೇಶಂಗೆಯ್ದು ಪೋಗು ಎಂದು ಕಳಿಪಿದ ಒಸಗೆಗೆ: **ಜಗನ್ನಾವಿ,** ೧೧. ೨೯)

**ಆದೇಶಪುರುಷ** – [ಜೈನ] ಭವಿಷ್ಯವಾಣಿಯಲ್ಲಿ ಹೇಳಲಾದ ವ್ಯಕ್ತಿ (ಆದೇಶಪುರುಷದರ್ಶನಂ ಸಮನಿಸೆ ನಮಗೆ ಸಮನಿಸಿತು ಇನ್ನೇಕೆ ಇರ್ಪಂ: **ಕರ್ಣನೇಮಿ,** ೫. ೩೬ ವ)

**ಆದೇಶವಚನ** – ಭವಿಷ್ಯವನ್ನು ಹೇಳುವ ನುಡಿ (ಈ ವಚನಂ ಆದೇಶವಚನಂ: **ಶಾಂತಿಪು,** ೫. ೨೭ ವ)

**ಆದೊಡೆ** – ಆದರೆ (ಕತೆ ಪಿರಿದಾದೊಡಂ ಕತೆ ಮೆಯ್ಗಿಡಲೀಯದೆ .. .. ಮುಂ ಪೇಟ್ದ ಕವೀಶ್ವರರಿಲ್ಲ: **ಪಂಪಭಾ,** ೧. ೧೧); ಹಾಗಾದರೆ ಎಂಬ ಅರ್ಥದ ಒಂದು ಅವ್ಯಯ (ಪವನಜನಿಂದೆ ಕೌರವಕುಲಂ ಪಡಲಿಟ್ಟವೊಲಕ್ಕುಂ ಆದೊಡೆ ಇನ್ನವರಾರುಮಿಲ್ಲಣಮೆ ಸಂತತಿ ಕೆಟ್ಟಪುದು: **ಪಂಪಭಾ,** ೧೦. ೬೩)

**ಆದೊರೆತು** – ಅದಕ್ಕೆ ಸಮನಾದ, ಅಂತಹ (ವಿದ್ಯಾಪ್ರಭಾವಂ ಆದೊರೆತೆ ವಲಂ: **ಪಂಪಭಾ,** ೨. ೫೬)

**ಆದೊರೆಯ** – ಅಂತಹ (ಆ ದೊರೆಯ ವಿಭವದೊಳ್ ಪರಮಾದರದಿಂ ದಿವಿಜಸಮಿತಿಯಿಂ ತಮ್ಮ ಮಗಂಗಾದ ಮಹಿಮೆಗೆ : **ಆದಿಪು,** ೭. ೧೧೧)

**ಆದ್ಯ** – ಮೊದಲ (ಆದಿಮಂ ಆದ್ಯಂ: **ಅಭಿಧಾವ,** ೨. ೧. ೭೦), ಹಿಂದಿನ, ಹಿರಿಯ (ಆದ್ಯರ್ ಅದ್ಯತನರ್ ಏಕಾಕಾರರಾದೊಡಂ ಪೇಱರೇ: **ಪಂಪರಾ,** ೧. ೩೦)

**ಆದ್ಯಕಾವ್ಯ** – ಮೊದಲ ಕಾವ್ಯ, ಶ್ರೇಷ್ಠ ಕಾವ್ಯ (ನಿರತಿಶಯ ವಸ್ತುವಿಸ್ತರ ವಿರಚನೆ ಲಕ್ಷ್ಯಂ ತತ್ ಆದ್ಯಕಾವ್ಯಕ್ಕೆಂದುಂ: **ಕವಿರಾಮಾ,** ೧. ೩೨)

**ಆದ್ಯಮಹೀಪತಿ** – ಮೊದಲ ಚಕ್ರವರ್ತಿ, ಭರತ (ವಿಮಿಶ್ರಮುಕ್ತಾಕ್ಷತದಿಂದ ಆದ್ಯಮಹೀಪತಿಗೆತ್ತಿದ ಪಾದ್ಯಮಂ ಅನುಕರಿಪುದಾಯ್ತು ವಾರ್ಧಿವಿಳಾಸಂ: **ಆದಿಪು.** ೧೨. ೭೭)

**ಆದ್ಯೋಪಾದ್ಯ** – [ಆದ್ಯ+ಉಪ ಆದ್ಯ] ಮೊದಲನನೆಯ ಮತ್ತು ಎರಡನೆಯ (ಪುರುದೇವಾಜಿತದೇವರಿರ್ವರೆ ದಲ್ ಆದ್ಯೋಪಾದ್ಯತೀರ್ಥೇಶ್ವರರ್: **ಅಜಿತಪು,** ೧೨. ೭)

**ಆಧಾನ** – ಸ್ವೀಕರಿಸುವುದು (ಪರಾಧಾನ ಸಂಧಾನ ಮೋಕ್ಷಂಗಳ ವೇಗಂ ಲೋಚನಾಗೋಚರಂ: **ಜಗನ್ನಾವಿ,** ೧೨. ೬೬)

**ಆಧಾರ** – ನೆಲೆ; ತಳಹದಿ ನಿಜ ಆಧಾರ ಆಧೇಯ ಸ್ಥಿತಿಯೊಳ್ ಅಲ್ಲದಿರ್ಕುಮೇ: **ಶಾಂತಿಪು,** ೮. ೧೩೮ ವ); ನೀರಿನಾಸರೆ, ಬಾವಿ (ಸರಸಿ ಸರಂ .. .. ಆಧಾರಂ ಪುಷ್ಕರಿಣಿಯದು ವಾಪಿ: ಅಭಿಧಾವ, ೧> ೪. ೧೫)

**ಆಧಿ** – ದುಃಖ (ಆಧಿಯಿಂ ಶಾರ್ವರದೆ ನೆರೆದು ಬರ್ಪ ವಿಬುಧವಂದಿವೃಂದದ ಮನೋಮುದಮಂ ಒದವಿಸುತ್ತುಂ: **ಆಚವರ್ಧ,** ೨. ೩೩ ವ); ವಿಪತ್ತು (ಚಿಂತಾ ಪೀಡೆ ತಾಂ ಆಧಿ; **ಅಭಿಧಾವ,** ೨. ೨. ೧)

**ಆಧಿಕ್ಯ** – ಅಧಿಕತೆ, ಹಿರಿಮೆ (ಎಲೆ ಕೃಷ್ಣ ನಿನ್ನ ರೂಪಮುಂ .. .. ವಿಕ್ರಮಾಧಿಕ್ಯಮುಂ ವಿವೇಕಾತಿರೇಕಮುಂ: **ಜಗನ್ನಾವಿ,** ೪. ೭೯ ವ)

**ಆಧೇಯ** – ಆಧಾರವಾಗಿರುವ, ಆಶ್ರಯ (ಎಂದು ಕೊಂತಿಯ ವಿಸರ್ಜಿಸಿ ಚಾಗದ ಕುಲದ ನನ್ನಿಯಂ ಆವರ್ಜಿಸಿ

ರಾಧೇಯಂ ಒಳ್ಪಿಂಗೆ ಆಧೇಯಮಾಗಿರ್ದಂ: **ಪಂಪಭಾ,** ೯. ೮೭ ವ); ನ್ಯಾಸ

**ಆಧೇಯವಚನ –** ಮಾತಿನಲ್ಲಿ ಚತುರ (ವಕ್ರೋಕ್ತಿನಿಪುಣನುಂ ಆಧೇಯವಚನನುಮುದ್ಧತವೇಷನುಂ ಪರಿಚಿತಾಶೇಷ ದೇಶಭಾಷನುಂ: **ಆದಿಪು,** ೧೪. ೪೩ ವ)

**ಆಧೋರಣ –** ಆನೆಯ ಸವಾರ, ಮಾವುತ (ಮದೀಯಜೀವಿತೇಶಂ ಆಧೋರಣಂ ಕೆಡೆವಂತೆ ಧರಾತಳಕ್ಕೆ ಕೆಡೆವುದುಂ: **ಆದಿಪು,** ೩. ೪೦ ವ)

**ಆನ್ –** ಎದುರಾಗು, ಎದುರಿಸು (ಆಂತವನಿಪನಿಕರಂ ಕೈಯಾಂತ ಅವನಿಪನಿಕರಮೊಂದು ಕೋಟಿಗೆ ಮಿಗಿಲೆಂಬಂತಾದೊಡಂ: **ಗದಾಯು,** ೧. ೧೫); ಧರಿಸು (ಸುರಸಂದೋಹದ ತೀವಿತಂದ ಘಟಸಂಘಾತಗಳಂ ಆನಲ್ಕೆ ಬಾರದೆ ಮಾಣೆ: **ಆದಿಪು,** ೭. ೮೬); ಒಡ್ಡು (ಪಲರುಂ ಬಣ್ಣಿಸೆ ಕಿವಿಯನಾಂತು ಕೇಳುತ್ತುಂ: **ಪಂಪಭಾ,** ೧೧. ೨)

**ಆನಂದನಾಟಕ –** ಹರ್ಷದಿಂದ ಮಾಡುವ ನೃತ್ಯ (ಆನಂದನಾಟಕಂ ಪರಮಾನಂದಮನಂದು ಮಾಡೆ: **ಆದಿಪು,** ೧೬. ೫೪)

**ಆನಂದನೃತ್ಯ –** ಜಿನನ ಹುಟ್ಟಿನಿಂದ ಆನಂದತುಂದಿಲನಾಗುವ ಇಂದ್ರ ಮಾಡುವ ನೃತ್ಯ (ಎಸೆದತ್ತು ಇಂದ್ರನ ಆನಂದನೃತ್ಯಂ: **ಆದಿಪು,** ೭. ೧೨೦)

**ಆನಂದವಸನ –** ಮುಟ್ಟಿನಿಂದ ಕೆಂಪಾದ ಬಟ್ಟೆ (ಬಟಿಕಾಕೆ ದೇವಕಿಯ ಆನಂದವಸನಂಗಳಂ ಪಟಳಿಕೆಯೊಳಿಕ್ಕಿ ತಂದು: **ಕರ್ಣನೇಮಿ,** ೬. ೫ ವ)

**ಆನಕ –** ದುಂದುಭಿ (ತ್ರಿದಶಾನೇಕ ಆನಕಂಗಳ್ ಮೊಳಗಿದವು: **ಆದಿಪು,** ೭. ೩೯); ಮೃದಂಗ (ಮುರಜಂ ಮೃದಂಗ ಆನಕಂ ಉರುಪಟಹಂ ಡಿಂಡಿಮಾಭಿಧಾನಂ: **ಅಭಿಧಾವ,** ೧. ೧೩. ೨೬)

**ಆನಕದುಂದುಭಿ –** ಶ್ರೀಕೃಷ್ಣನ ತಂದೆ ವಸುದೇವ (ಎಂದು ನೊಂದು ನುಡಿದಾತ್ಮಸೌಂದರಿಗೆ ಆನಕದುಂದುಭಿ ಇಂತೆಂದಂ: **ಕರ್ಣನೇಮಿ,** ೬. ೧೪ ವ)

**ಆನಕರಾವ –** ಆನಕಧ್ವನಿ (ಕದನ ಆನಕರಾವಂ ಅಗುರ್ವಿನಂ ಉರ್ವು ಪರ್ವುತ್ತಿರೆ ಚಾರುವೀರಭಟಕೋಟಿಗೆ ರಾಗರಸಂ ಪೊದರ್ಪುದು ತುಳ್ಕುತ್ತಿರೆ: **ಪಂಪಭಾ,** ೮. ೯೨)

**ಆನತ –** [ಜೈನ] ಹದಿನಾರು ಕಲ್ಪಗಳಲ್ಲಿ ಒಂದು, ಹದಿಮೂರನೆಯ ಸ್ವರ್ಗ (ಸೌಧರ್ಮ ಈಶಾನ ಸನತ್ಕುಮಾರ ಮಾಹೇಂದ್ರ ಬ್ರಹ್ಮ ಬ್ರಹ್ಮೋತ್ತರ ಲಾಂತವ ಕಾಪಿಷ್ಠ ಶುಕ್ರ ಮಹಾಶುಕ್ರ ಶತಾರ ಸಹಸ್ರಾರ ಆನತ ಪ್ರಾಣತ ಅರಣ್ಯ ಅಚ್ಯುತಮೆಂಬ ಪದಿನಾಱುಂ ಕಲ್ಪಂಗಳೊಳಂ: **ವಡ್ಡಾರಾ,** ಪು ೯೭, ಸಾ ೨೬)

**ಆನದ್ಧ –** ಕಟ್ಟಲ್ಪಟ್ಟದ್ದು (ನಾಲ್ಕುಂ ಮಾನಸ್ತಂಭಂಗಳ್ ರತ್ನ ಆನದ್ಧಂಗಳ್ ನಿರಂತರಂ ಸೊಗಯಿಸುಗುಂ: **ಆದಿಪು,** ೧೦. ೨೪)

**ಆನನ –** ಬಾಯಿ; ಮುಖ (ಪ್ರಿಯಾತ್ಮಜಾ ಆನನಾರವಿಂದನಿರೀಕ್ಷಣಾನಂತರಂ: **ಶಾಂತಿಪು,** ೮. ೬೭ ವ)

**ಆನೀಕ –** ಸಂಕುಲ (ಮನದ ಮೋಹಧ್ವಾಂತಾನೀಕಂ ಪ್ರಯೋಜನಾರ್ಥ ಆಲೋಕನಂ ಉಳ್ಕಾಪ್ರದೀಪದಿಂದಾಯ್ತಾಗಳ್: **ನೇಮಿನಾಪು,** ೪. ೫೩)

**ಆನೀಕಿನಿ –** ಅಕ್ಷೌಹಿಣಿಯ ಹತ್ತನೇ ಒಂದು ಭಾಗ (ಆನೀಕಿನಿಯಕ್ಕುಂ ಅದು ಪದಿರ್ಮಡಿಸಲೊಡಂ ತಾಕ್ಷೌಹಿಣಿಯಕ್ಕುಂ ಜೈನೋಕ್ತಂ: **ಪಂಪರಾ,** ೧೩. ೪ ವ)

**ಆನುವಂಶ –** ವಂಶಪರಂಪರೆಯಿಂದ ಬಂದ (ಅನುವಂಶವೃತ್ತಾಂತರ ವಿಂಶತಿನಖನಂ: **ಶಾಂತಿಪು,** ೧೦. ೧೪೬ ವ)

**ಆನುಷಂಗಿಕಫಲ –** ಮುಖ್ಯ ವಿಷಯಕ್ಕೆ ಅಂಟಿಕೊಂಡು ಬರುವ, ಪ್ರಾಸಂಗಿಕ ವಾದ ಫಲ (ಆನುಷಂಗಿಕಫಲಂ ಭೂಪೇಂದ್ರದೇವೇಂದ್ರರಾಜ್ಯವಿಳಾಸಂ: **ಆದಿಪು,** ೨. ೭)

**ಆನೆಗಂಪಲ್ –** ಆನೆ ಹೂತುಹೋಗುವ ಕೆಸರುದಾಣ (ವರವಜ್ರಘೋಷಕರಿ ಪೋಗುತೆ ತತ್ತಟಾನ್ಗಂಪದೊಳ್ ಭಾವಿಸದೆಯ್ದೆಪೊಕ್ಕು: **ಪಾರ್ಶ್ವನಾಪು,** ೫. ೬೧)

**ಆನೆಗಂಬ –** ಆನೆಯನ್ನು ಕಟ್ಟುವ ಕಂಬ (ಮಹಾಸಾಮಂತರ ಪದಿರ ಪಱಿಗಳಿಂದಂ ಅಗುರ್ವಾಗೆ ನಡೆದ ಬೀಡಿಂಗೆ ಬೀಡುವಿಡಲ್ ನೆಲನುಂ ಆನೆಗಂಬಕ್ಕೆ ಪೆರ್ಮರಂಗಳುಮಂ ಆ ಪಡೆಗೆ ನೆಱೆಯವೆನಿಸಿ: **ಪಂಪಭಾ,** ೯. ೧೦೪ ವ)

**ಆನೆಗಂಭ –** ಆನೆಗಂಬ (ಕಟ್ಟುವಾನೆಗಂಭಂಗಳುಮಂ: **ಶಾಂತಿಪು,** ೩. ೧೯ ವ)

**ಆನೆಗದುಪು –** ಆನೆಗಳ ಸಮೂಹ (ಮೃಗರಾಜಂಗೆ ಅಗಿದು ಓಡುವ ಆನೆಗದುಪಂ ಕೈಕೊಂಡು ಯೂಥಾಧಿಪಂ ಮಗುಳ್ದುಂ: **ಪಂಪರಾ,** ೩. ೫೭)

**ಆನೆರಕ್ಕಸ –** ಗಜಾಸುರ (ತಕ್ಕಿನಿಂ ಮಿಕ್ಕು ಪೋರ್ದ ಆನೆರಕ್ಕಸನ ಸಮ್ಮದ ಮೇಲ್ವೊದಿಕೆಯೊಳಂ ಚೆಲ್ವನಾಂತು: **ಕಬ್ಬಿಗಕಾ,** ೧೩೦ ವ)

**ಆನೆವಾಂಗು –** ಆನೆಯನ್ನು ಪಳಗಿಸುವ ವಿದ್ಯೆ (ಕಲ್ತ ಆನೆವಾಂಗು ಗೆಲೆ ಸಲೆ ಸೋಲ್ತ ಆನೆಗೆ ಲೆಕ್ಕಮಿಲ್ಲ: **ಶಾಂತಿಪು,** ೩. ೨೪)

**ಆನೆವಿನ್ನಾಣಿ –** ಗಜಶಾಸ್ತ್ರ ಬಲ್ಲವನು (ಆ ನವಮದಮಾತಂಗಮನೇಱೆದೊಡೆ ಆನೆವಿನ್ನಾಣಿ ನಾನಹೆನು: **ಕರ್ಣನೇಮಿ:** ೯. ೯)

**ಆನೆಸಾಲೆ –** ಗಜಶಾಲೆ (ಸೊದೆವಟಿದರ ಮನೆಯಂ ಬಳಸಿದ ಆನೆಸಾಲೆಗಳೆಸೆಗುಂ: **ಮಲ್ಲಿನಾಪು,** ೨. ೫೧)

**ಆಪಗಾ[ಗೆ] –** ನದಿ (ಆಪಗಾವಾರಿ ವಿರಾಜತ್ ಚಂದ್ರಕಾಂತೋಪಲ ಕಲಶಮಂ ಅಂದೆತ್ತಿ ಭೂಪಾಲಕಂಠೀರವನಂ .. .. ಯೌವರಾಜ್ಯಾಭಿಷೇಕೋತ್ಸವಮಂ .. .. ಮಾಡಿದಂ ಸಾರ್ವಭೌಮಂ: **ಕಾದಂಸಂ,** ೨. ೫೭)

**ಆಪಣ –** ಅಂಗಡಿ (ಧನದ ಭವನಮೆನಿಪ ಸಿರಿಯ ಬಚ್ಚರ ಆಪಣಂಗಳಿಂ ಪೊದಲ್ದ ಕಾವಣಂಗಳಿಂ: **ಪಂಪಭಾ,** ೧. ೫೮)

**ಆಪದ್ವಿನೀತ –** ಕಷ್ಟಕಾಲದಲ್ಲಿ ವಿನೀತನಾಗುವ (ಆಪದ್ವಿನೀತನಂ ಧೃತಕೋಪನಂ ಅಜ್ಞಾನಿಯಂ ಕೃತಘ್ನನಂ: **ಪಂಚತಂತ್ರ,** ೧೫೬)

**ಆಪನ್ನ –** ಆಪತ್ತಿಗೆ ಗುರಿಯಾದ (ಆಪನ್ನಾಶ್ರಿತಸುಖಪದಂ .. ಎನೆ: **ಜಗನ್ನಾವಿ,** ೧೦. ೧)

**ಆಪಾಂಡು –** ನಸುಬಿಳುಪಿನ (ಬೆಳ್ಪೆಲೆ ಬಿಡದೇಂ ನನೆಯಿಸಿದುದೊ ತರುಣಿಜನ ಘನವಿರಹ ಆಪಾಮಡುಗಂಮಂಡಳದಿಂದಂ: **ರಾಜಶೇವಿ,** ೨. ೦೩)

**ಆಪಾತಮಾತ್ರರಮಣೀಯತರ –** ಮೇಲುನೋಟಕ್ಕೆ ಮಾತ್ರ ಸುಂದರವಾದ (ತನುಗಾಯಾಸಕರಂ ಶುಕ್ಲಾರ್ತವವಾಸಿತಂ ಆಪಾತಮಾತ್ರರಮಣೀಯತರಂ: **ಆದಿಪು,** ೬. ೪೪)

**ಆಪಾಳಿತ –** ವ್ಯಾಪ್ತವಾದ (ಶ್ರೀಪತಿಗೆ ಯುದ್ಧಮಲ್ಲ ಮಹೀಪತಿಗೆ ನೆಗಟ್ತೆ ಪುಟ್ಟೆ ಪುಟ್ಟಿದಂ ಅಖಿಳಕ್ಷ್ಮಾಪಾಲಮೌಳಿಮಣಿಕಿರಣ

ಆಪಾಳಿತ ನಖಮಯೂಖರಂಜಿತಚರಣಂ: **ಪಂಪಭಾ**, ೧. ೧೮)

**ಆಪೀಡ** – ಒತ್ತುವುದು; ತಲೆಯ ಆಭರಣ (ಜನನಿಯ ವಕ್ತ್ರಾಬ್ಜದೊಳ್ ಚಂದ್ರಮಂ ಪೊಕ್ಕುದನಲ್ತೆ ಕಂಡೆನಾಂ ಎಂದು .. .. ಚಂದ್ರಾಪೀಡ [ಚಂದ್ರ ಆಪೀಡ] ನೆಂಬ ಪೆರನಿಟ್ಟಂ ತನೂಜಂಗೆ .. ..ಸಾರ್ವಭೌಮಂ: **ಕಾದಂಸಂ**, ೨. ೨೭)

**ಆಪೊತ್ತುಂ** – ಯಾವಾಗಲೂ (ಆ ಪುರದ ತೆಂಕವಂಕದೊಳ್ ಆಪೊತ್ತುಂ ಅನೇಕ ಜೀವಹತಿ ತನಗೆ ಸುಖೋದ್ದೀಪನಂ: **ಯಶೋಧಚ**, ೧. ೩೪)

**ಆಪೋಶನ** – ಊಟದ ಮೊದಲು ಮತ್ತು ಕೊನೆಗೆ ಮಂತ್ರಪೂರ್ವಕವಾಗಿ ಕುಡಿಯುವ ನೀರು, ಮುಗಿಸಿಬಿಡು (ಕೆಂಗೋಲ್ಮಸಗಿದ ಸಿಂಹಕ್ಕೆ ಪೂಣಿಗೆತನದಿಂದ ಏನಾನುಮೊಂದಂ ನುಡಿದೆನಪ್ಪೊಡೆ ಎನ್ನನೆ ಮುನ್ನಂ ಆಪೋಶನಂಗೊಳ್ಗುಂ: **ಪಂಚತಂತ್ರ**, ೨೩೦ ವ)

**ಆಪೋಶಿಸು** – ಊಟದ ಬಳಿಕ ನೀರು ಕುಡಿ (ಜೀವಶ್ರಾದ್ಧಕ್ಕುಟಿದಿರ್ದ ಮಾಜನಂಗಳ್ ಕಟಿಯುಂಉ ಆಪೋಶಿಪಲ್ಲಿ ನೆನೆದುದು ತನ್ನಂ: **ಯಶೋಧಚ**, ೩. ೫೧)

**ಆಪ್ತ** – [ಜೈನ] ಅಷ್ಟಾದಶದೋಷರಹಿತನಾದವನು (ಮಾತೇಂ ಉದ್ಘಾತ ದೋಷಪ್ರಕರರಹಿತನೆನಿಪಂ ಆಪ್ತಂ: **ಸುಕುಮಾಚ**, ೫. ೩೯); ನೋಡಿ, '**ಅಷ್ಟಾದಶದೋಷ**'; ಪೂಜ್ಯವ್ಯಕ್ತಿ (ಪೊಲ್ಲೆಂದು ಆವೇಕೆಂದಪೆಂ ಆಪ್ತಂ ಪಾವನಮಲ್ಲೆಂದು ಸಾಱುತಿರ್ಪರ್ ಶೈವರ್: **ಸಮಯಪ**, ೮. ೧೬)

**ಆಪ್ತಗೃಹ** – ಸ್ವಂತ ಮನೆ (ಜಿನಗೃಹಮಂ ಮನೋಮುದದೆ ಮಾಡದಂ ಆಪ್ತಗೃಹಂಗಳಂ ಮಹಾಜನಮನೆ ನೋಡಿ ಮಾಡಿಸುವವಂಶುಚಿಯಪ್ಪುದು: **ಸಮಯಪ**, ೪. ೧೨೭)

**ಆಪ್ತವಂತ** – ಆತ್ಮೀಯತೆಯುಳ್ಳವನು, ನಂಬಿಕಸ್ಥ (ರಸದಾನಾದಿಗಳೊಳ್ ಛಿದ್ರಿಸುವಮಪ್ಪೊಡೆ ಅವರ್ ಆಪ್ತವಂತರುಂ ಬುದ್ಧಿವಂತರುಂ ಆಗಿ ನೆಗೞ್ದರ್ ಇನ್ನಾವ ಮಾಟ್ಕೆಯೊಳ್ ಪಗೆಯಂ ಕೆಯ್ಗೆ ಮಾಡುವುದು ಪೇೞಿಂ: **ಪಂಪಭಾ**, ೬. ೬೭ ವ)

**ಆಪ್ತಾಗಮ** – ವೇದ, ಶಾಸ್ತ್ರ (ಮೊದಲಿಂ ತುದಿವರಂ ಉಚಿತಾಪ್ತಾಗಮ ಪದಾರ್ಥ ಸೂತ್ರ ಪ್ರಪಂಚಮಂ ಮುನಿ ನುಡಿದಂ: **ಶಾಂತಿಪು**, ೭. ೩)

**ಆಪ್ಯಾಯನ** – ಸುಖ, ತೃಪ್ತಿ (ಪುತ್ರಸ್ಪರ್ಶನ ಆಪ್ಯಾಯನ ಕೋಟಿಯಾಗೆ: **ಪಂಪಭಾ**, ೧೩. ೮ ವ)

**ಆಪ್ಯಾಯಮಾನ** – ಹಿತಕರವಾದ (ಪುಂಡರೀಕನ ಶರೀರಮಂ ಕಿಡದಂತು ತಂದು ಮತ್ ತೇಜದಿಂದ ಆಪ್ಯಾಯನಮಾಗೆ .. .. ಇರಿಸಿದಪ್ಪೆಂ: **ಕಾದಂಸಂ**, ೭. ೪೫ ವ)

**ಆಬಾಲಗೋಪಾಲ** – ಮಕ್ಕಳಿಂದ ಹಿಡಿದು ಗೋಪಾಲಕರವರೆಗೆ; ಸಮಸ್ತ (ತನ್ನ ಮುನ್ನಿನ ಭವದ ಪೆಸರಂ ನೆಗೞ್ತೆಯುಮಂ ಪೇೞ್ದು ಆಬಾಲಗೋಪಾಲವೃದ್ಧಪ್ರಸಿದ್ಧಂ: **ಶಾಂತಿಪು**, ೮. ೧೩೭ ವ)

**ಆಭ** – ಹೋಲುವ (ಸುಖಮಯಮಾಗಿರ್ದುದು .. .. ಕರ್ವಟ್ಟಮಂ ಕಂಡರಸಿ ಸಮದವೊಲ್ ನೀರದಾಭಂ ಮದೇಭಂ: **ನೇಮಿನಾಪು**, ೫. ೯೩); ಕಾಂತಿ (ನುತವೇತ್ರಾಸನರುಳ್ಳರೀ ಮೃದಗಾಭಂ ತ್ರಿವಾತಾಭಿವೇಷ್ಟಿತಂ .. .. ಜಗತ್ತ್ರಿತಯಂ ನಿಂದುದು: **ಸುಕುಮಾಚ**, ೧೧. ೪೦)

**ಆಭಾಸ** – ಕಾಂತಿ; ಭ್ರಾಂತಿ (ಕಂತು ವಿನೋದದಾರ್ಥ ವಿಚಿತ್ರ ಚಿತ್ರಿತ ಪತಾಕಾಭಾಸಮೆಂಬಂತು: **ಸುಕುಮಾಚ**, ೯. ೧೦೮); ಹೋಲಿಕೆ ಪೊಱಮಟ್ಟಂ ಉಲ್ಲಸಿತ ವಿಭವಂ ದೇವೇಂದ್ರ ಆಭಾಸಂ ಆ ಮನುಜೇಶ್ವರಂ: **ವರ್ಧಮಾಪು**, ೮. ೩೭)

**ಆಭಿಚಾರ** – ಶೂನ್ಯ ಮಾಟ (ಅತ್ತ ದುರ್ಯೋಧನನ ಬೆಸದೊಳ್ ಆತನ ಪುರೋಹಿತಂ ಕನಕಸ್ವಾಮಿಯೆಂಬಂ ಪಾಂಡವರ್ಗೆ ಆಭಿಚಾರಮಾಗೆ ಬೇಳ್ವ ಬೇಳ್ವೆಯ ಕೊಂಡು: **ಪಂಪಭಾ**, ೮. ೪೨ ವ)

**ಆಭಿಚಾರಿಕ** – ಮಾಟ (ಆಭಿಚಾರಿಕಜರಾತಂಕಾದಿ ಭೇದಂಗಳಪ್ಪುಪಸರ್ಗಂಗಳ: **ಆದಿಪು**, ೧೬. ೯)

**ಆಭಿಜಾತ್ಯ** – ಸತ್ಕುಲದ, ಕುಲೀನತೆ (ಆಭಿಜಾತ್ಮೆ ತನ್ನಂ ಅನುಶಾಸಿಪಂತೆಯುಂ .. .. ಅತಿಲಜ್ಜಿತೆಯಾಗಿ: **ಕಾದಂಬ**, ೬. ೯೨ ವ)

**ಆಭೀಳ** – ಭಯಂಕರವಾದ (ಪೊಡೆಯಿಪ್ಪ ಆಭೀಳನಿಸ್ಸಾಳದ ಪಟುರವ ಆಶೇಭಕರ್ಣೋತ್ಕರಂ ಘಿಮ್ಮಿಡೆ: **ಶಾಂತೀಶ್ವಪು**, ೩. ೫೮)

**ಆಭೀಳತೆ** – ಭಯಂಕರತೆ (ಉದ್ವಹಿಮೋಗ್ರಖಡ್ಗಮಂ ಚಾಳಿಸುತುಂ ಸುರಾಧಿಪದಿಶಾನಿಳವಾಹಮನೇಱಿ ಬಂದುದು ಆಭೀಳತೆವೆತ್ತುಮಾಗಿ: **ಶಾಂತೀಶ್ವಪು**, ೧೨. ೭೩)

**ಆಭೋಗ** – ಸುಖ; ಪರಿಪೂರ್ಣತೆ (ಆಲೇಪ ಕಾಶ್ಮೀರ ರಾಗಾಕ್ತಂಗಳ್ ನೆಗೆತಂದುವಂದು ಕಠಿನೋತ್ತುಂಗ ಸ್ತನಾಭೋಗದಿಂ: **ಲೀಲಾವತಿ**, ೧೩. ೧೪೮); ಹರಹು (ಕ್ಷಣಿಕಂ ನಿಟ್ಟೆಯೆ ತನುಭೃದ್ಗಣ ಯೌವನ ರೂಪ ವಿಭವ ಭೋಗ ಆಭೋಗಂ: **ಆದಿಪು**, ೪. ೭೫); ಸಂಗೀತದ ಒಂದು ಕ್ರಮ (ಗಮಕಂ ಪ್ರಯೋಗಂ ಆಭೋಗಮಳಂಕಾರಂ ಪೊಗರ್ ನಯಂ ಮಿಱುಗು: **ಆದಿಪು** ೭. ೧೬); ಸೊಂಪು (ಜಘನಾಭೋಗಂ ಪೊದಳ್ದುರ್ವೆ ಸೌಂದರಿ ನಾನಾ ಕಳೆವೆತ್ತು ಸೋಂಕಿ ನೆರೆದ್ ಕಾದಲ್ಮೆಯಿಂ ಕಾಂತನೊಳ್: **ರಾಜಶೇವಿ**, ೧೧. ೧೪೨)

**ಆಮಂತ್ರಣಂಗೆಯ್** – ಆಹ್ವಾನಿಸು (ಆತ್ಮಗತದೊಳ್ ಗರುತ್ಮಂಗೆ ಆಮಂತ್ರಣಂಗೆಯ್ದು: **ಜಗನ್ನಾವಿ**, ೮. ೭೯ ವ)

**ಆಮಯ** – ರೋಗ (ದಂದುಗಮಳಿಪಾಯಿಲಂ ಮಱುಕಂ ಆಮಯಂ ಅಪ್ಪಪಮೃತ್ಯುವೆಂಬಿವಲ್ಲಿಗೆ: **ಆದಿಪು**, ೫. ೩೦); ಕಷ್ಟ, ತೊಂದರೆ (ವಿಖ್ಯಾತ ಮಾಯಾ ಮೋಹ ಆಮಯದೂರ .. .. ರಕ್ಷಿಸೊಲವಿಂ ಶ್ರೀಶೈಲಜಾವಲ್ಲಭಾ: **ರಾಜಶೇವಿ**, ೩. ೩೬)

**ಆಮಲಕ** – ನೆಲ್ಲಿಗಿಡ, ಕಾಯಿ (ಪರಮಾತ್ಮನಂತೆ ಲೋಕಾಲೋಕದ ವಸ್ತುಗಳುಮಂ ಕರತಳ ಆಮಲಕಮಾಗಿ ಅಱೆವುದಱಿಂ ನೃಪಪರಮಾತ್ಮನುಂ: **ಪಂಪಭಾ**, ೧೪. ೩೭ ವ)

**ಆಮಿಷ** – ಮಾಂಸ (ವಿಹಗ ಆಮಿಷ ಲಾಭಲೋಲುಪಂ ನೋಡಿದಂ: **ಕಾದಂಬ**, ೧. ೧೪೭); ಆಸೆ (ಆ ನರನಾಥಂ ತೊಱೆದಂ ಅಖಿಳವಿಷಯ ಆಮಿಷಮಂ: **ಯಶೋಧಚ**, ೨. ೧೨); ಲಂಚ (ಉಪಾದಾನಂ ಉತ್ಕೋಚಂ ಉಪಚಾರಂ ಲಂಚಂ ಆಮಿಷಾಖ್ಯಮದಕ್ಕುಂ: **ಅಭಿಧಾವ**, ೧. ೧೧. ೬೦); ಬರಡು ನೆಲ (ಜಲರಹಿತಮಹಿಯುಂ ಆಮಿಷಮುಂ: **ಅಭಿಧಾವ**, ೧. ೩. ೧. ೪೩)

**ಆಮೀಲನ** – [ಕಣ್ಣಿವೆ] ಮುಚ್ಚುವುದು (ಕಣ್ಗದಿರ್ ಮಿಂಚುಗುಂ ಎನುತ ಅದಂ ಆಮೀಲನಂಗೈದಳಕ್ಕುಂ: **ರಾಜಶೇವಿ**, ೧೧. ೩೪)

**ಆಮೀಳನ** – [ಕಣ್ಣವೆ] ಮುಚ್ಚುವುದು (ಆಮೀಳನಮಂ ಕಣ್ಗಳೊಳ್ ಆ ಮನದೊಳ್ ಒಸಗೆಯಂ .. .. ಮದಿರಾಮದವಾಗಿಸೆ ತೆಗಟ್ಟಿನಾಕೆಯ ನುಡಿಯೊಳ್: **ಕವಿರಾಮಾ,** ೩. ೯)

**ಆಮುತ್ರಿಕ** – ಆಮುಷ್ಮಿಕ, ಬೇರೆ ಲೋಕದ (ಆಮುತ್ರಿಕವ್ಯಾಪ್ತಿಗಾಸ್ಪದಮೆಂದೆಣಿಗಿತ್ತು ಜೈನವಚನಕ್ಕೆಲ್ಲಂ ಮಹೀಮಂಡಳಂ: **ಸಮಯಪ,** ೩. ೪)

**ಆಮುಷ್ಮಿಕ** – ಪರಲೋಕ ಸಂಬಂದಿಯಾದ (ಜಿನಂ ಸತ್ಯವಾದಿ ಕಥಾನಾಯಕಂಗೆ ತಚ್ಚರಿತಮಂ ಪೇಲ್ದಂಗೆ ಕೈಸಾರ್ಗುಂ ಐಹಿಕ ಆಮುಷ್ಮಿಕಂ ಆನುಷಂಗಿಕಮೆನಲ್ ನಿಶ್ರೇಯಸಶ್ರೀಸಂಪದಂ: **ಮಲ್ಲಿನಾಪು,** ೧. ೪೮)

**ಆಮೂಲಚೂಲ** – ಬೇರಿನಿಂದ ಹಿಡಿದು ತುದಿಯವರೆಗೆ (ಆಮೂಲಚೂಲಂ ಎಮಗೆ ತಳಾಮಳಕಂ ಭವಬದ್ಧಂ ಅಱಲಿಸಿತೆಮ್ಮಂ: **ಯಶೋಧಚ,** ೧. ೬೫)

**ಆಮೋದ** – ಅರಳುವಿಕೆ (ಪರರಾಜಾಶೇಷಸ್ಥಿತಿ ಕೆಡೆ ಕಮಳಾಮೋದಂ ಇಂಬಾಗೆ ಧಾತ್ರೀ ಪರಿತೋಷ ಪೆರ್ಚೆ: **ರಾಜಶೇವಿ,** ೩. ೭೩); ಪರಿಮಳ (ಆಮೋದಬಂಧುರ ಮಂದಾರ ಸುಧಾರಸಾನ್ನ ಮಣಿಮಾಲಾದೀಪ್ರದೀಪಾಸಿತ ಅಗರುಧೂಪ ತ್ರಿದಶಾವನೀಜಫಲದಿಂ: **ಅಜಿತಪು,** ೪. ೭೮)

**ಆಮೋಷಧಿ ಋದ್ಧಿ** – ತಪಸ್ಸಿದ್ಧಿ ಪಡೆದವರಿಗೆ ಉಂಟಾಗುವ ಒಂದು ಮಹಿಮೆ ಅಥವಾ ಋದ್ಧಿ (ತಪಂಗಳಂ ಪಡೆದ ಮಾಹಾತ್ಮ್ಯದಿಂದಂ ಆಮೋಷಧಿ ಶ್ವೇಳೋಷಧಿ ಜವೋಷಧಿ ವಿಪ್ರೋಷಧಿ ಸರ್ವೋಷಧಿ ಎಂದಿವು ಮೊದಲಾಗೊಡೆಯ ಋದ್ಧಿಗಳ್: **ವಡ್ಡಾರಾ,** ಪು ೬೯, ಸಾ ೩)

**ಆಮ್ನಾಯ** – ಸಂಪ್ರದಾಯ, ಪರಂಪರಾನುಗತ (ನಿಮಗಮೆನಗಂ ಆಮ್ನಾಯದಿಂ ಬಂದುದಿಂತೀ ಜಿನಧರ್ಮಂ: **ಆದಿಪು,** ೨. ೨೦); ವಂಶ (ಜನಕಂ ಶದರೀಜಿತಶತ್ರು ತಾಯ್ ವಿಜಯಸೇನಾದೇವಿ ಸಂದಿರ್ದ ಅಯೋಧ್ಯೆ ನಿಜಾಮ್ನಾಯದ ರಾಜಧಾನಿ: **ಅಜಿತಪು,** ೯. ೩); ವೇದ (ತೋಯಜಗರ್ಭಂ ಆದಿಮುನಿಮುಖ್ಯಮತ ಪ್ರಕಟೀಕೃತಾಖಿಳ ಆಮ್ನಾಯ ಪರಂಪರಾಯತಂ ಅಶೇಷ ಜಗಜ್ಜನಕಂ .. ... ಒಲ್ದು ದೀರ್ಘಾಯುಮಂ ಈಗೆ ಶಿಷ್ಟನಿಧಿಗೆ: **ಪಂಚತಂತ್ರ,** ೩)

**ಆಮ್ರ** – ಮಾವು, ಮರ ಮತ್ತು ಹಣ್ಣು (ಮತ್ತೊಂದು ಆಮ್ರ ಮಹೀಜದಲ್ಲಿ: **ರಾಜಶೇವಿ,** ೧೦. ೫೩ ವ)

**ಆಮ್ರದ್ರುಮ** – ಮಾವಿನ ಮರ (ಮಾವಿಂ ಬಂದಿರ್ದುವೆಂದು ಬಿನ್ನವಿಪಂದದೆ ಕೋಗಿಲೆಗಳುಲಿದುವು ಆಮ್ರದ್ರುಮದೊಳ್: **ಅಜಿತಪು,** ೬. ೧೩)

**ಆಮ್ರಚೂಷಿಕಕ** – ಔಪರಿಷ್ಟಕವೆಂಬ ರತಿಭೇದಗಳಲ್ಲಿ ಮಾವಿನ ಹಣ್ಣನ್ನು ಚೀಪಿ ಚಪ್ಪರಿಸುವುದನ್ನು ಹೋಲುವ ಒಂದು ಭೇದ (ಔಪರಿಷ್ಟಕರತಂಗಳ ಭೇದದೊಳೊಂದಿದ ಆಮ್ರಚೂಷಿಕಮಂ: **ಆದಿಪು,** ೧೧. ೯೯)

**ಆಮ್ರಾಯ** – ಒಂದು ಬಗೆಯ ಹೂ (ಕಟ್ಟಿದಂ ಆಮ್ರಾಯಲತಾಂತಮಾಲಿಕೆಯಂ: **ಅನಂತಪು,** ೩. ೯೭)

**ಆಮ್ರೇಡಿತ** – ಪುನರುಕ್ತಿ (ಈಡಿತಮೆನಗೆ ಸಮಂತು ಆಮ್ರೇಡಿತಮುಂ ಮಹಿಪ ಬಗೆವೊಡೆ: **ಚಂದ್ರಪ್ರಪು,** ೨. ೫೫)

**ಆಯ್** – ಆರಿಸಿಕೊ (ಇವಂ ಆಯ್ವುದೊ ತಪ್ಪದೆ ಪೇೞಿಂ: **ಪಂಪಭಾ,** ೯. ೬೯); ಮನಸ್ಸಿಗೆ ಬಂದದ್ದನ್ನು ಮಾತ್ರ ತೆಗದುಕೊ (ಸದ್ಗುಣೋದಯಮಂ ಆಯ್ದುವಱಿಂ ಸಮೆದೊಂದು ಕಾವ್ಯದಿಂ: **ಕವಿರಾ,** ೨. ೧೫೫): ಆಯುಸ್ಸು (ವಿರಲದಸ್ತ್ರಾಕರ್ಷಣೇ ಆಯುಷ್ಯೇ ಚ): **ಶಬ್ದಮದ, ಧಾ,** ೫೧೪)

**ಆಯ** – ಪರಾಕ್ರಮ ಚಲಮಿಲ್ಲದ ಗಂಡ ತಂಬುಲಮಿಲ್ಲದ ವದನಂ ಆಯಮಿಲ್ಲದ ತುಱಿಲಾಳ್: **ಅಜಿತಪು,** ೬. ೯೫); ಐಶ್ವರ್ಯ (ಕುಲದ ಚಲದ ಆಯದ ಅಱಿವಿನ ಕಲಿತನದುನ್ನತಿಯಂ: **ಆದಿಪು,** ೧೨. ೧೦೧) ಪ್ರಮಾಣ (ತದ್ವಶಾತನಯ ವಿನೋಹಮುಂ ಹರಿಯ ವಿಕ್ರಮದಾಯಮುಂ ಏನುದಾತ್ತನಮೋ: **ಶಾಂತಿಪು,** ೨. ೧೦೫); ಪದ್ಧತಿ (ಪೆಂಡಿರ್ ಪಱಿಯಿಸುವಂದದೆ ಗಂಡರ್ ಪಱಿಯಿಸುವುದು ಆಯಮೋ ಛಲಮುಂ ಕೊಂಡೆಸೆಪರಾರೊ: **ಗದಾಯು,** ೫. ೩೩); ಸೌಕರ್ಯ (ಆಂ ಬರ್ಪನ್ನವಾಯಂ ನಿನಗಿದು ವಿಗತಾಪಯಮಪ್ಪೊಂದುಪಾಯಂ: **ಜಗನ್ನಾವಿ,** ೧೬. ೧೨೭); ಏಳಿಗೆ (ಆಯಂಗೆಟ್ಟು .. .. ಪರತ್ರೆಗೆಟ್ಟು .. .. ಪೋದಂದು ಏನೊಳ್ಳಿತೇ: **ಜೀವಸಂ,** ೧೨. ೩೮); ವಿಶಾಲ (ಛಾಯಾಲಕ್ಷ್ಯಮನೊಡ್ಡಿಯುಂ ಆಯದ ನೀರೊಳಗೆ ತನ್ನನಡಸಿದ ನೆಗೞಂ ಬಾಯಱಿವಿನಮಿಸಿಯುಮರೆಹೋಯಜ ಬಾಪ್ಪೆಂದು ಹರಿಗನಂ ಗುರು ಪೊಗೞ್ದಂ: **ಪಂಪಭಾ,** ೨. ೬೦); ಮರ್ಮ (ಭಂಡಾರಿಗನಂತೆ ಆಯಮಂ ಪಿಡಿದು ಜೂದುಗಾಱನಂತೆ ಕವಡಿಕೆಯಂ ತೆಗೆದು ತುರಗಾರೋಹಕನಂತೆ ಆರೂಢಕ್ರಮಮಂ ಅಱಿದು: **ಸುಕುಮಾಚ,** ೩. ೬ ವ)

**ಆಯಗಾಱ** – ಕೆಲಸದ ಮರ್ಮ ತಿಳಿದವನು (ಗಾಂಪರುಂ ಚದುರರ್ ಲೆಂಕರುಂ ಆಯಗಾಱರುಂ ಅಧಮವ್ಯಾಪಾರರುಂ ಧಾರ್ಮಿಕರ್: **ಅನಂತಪು,** ೧೧. ೧೨)

**ಆಯತ** – ಅಗಲವಾದ (ಸಾಲಪ್ರಾಂಶು ವಿಶಾಲಲೋಲನಯನಂ ಪ್ರೋದ್ಯತ್ ವೃಷಸ್ಕಂಧಂ ಉನ್ಮೀಲತ್ ಪಂಕವಕ್ತ್ರಂ ಆಯತ ಸಮಗ್ರ ಉರಸ್ಸ್ಥಳಂ: **ಪಂಪಭಾ,** ೧. ೬೮)

**ಆಯತನ** – ಮನೆ (ಇದು ಸಿದ್ಧ ಆಯತನಂ ಮನಂಗೊಳಿಸಿ ತೋಱುತ್ತಿರ್ಪುದು: **ಕಾದಂಸಂ,** ೩. ೨೧); ದೇವಾಲಯ (ಅಲ್ಲಿಗಲ್ಲಿಗೆ ಒಡೆದ ಕೆಱೆಗಂ ಅೞಿದ ಆಯತನಕ್ಕಂ ಧನಮನಿತ್ತು ಜೀರ್ಣೋದ್ಧಾರಂಗಳಂ ಮಾಡಿಸುತ್ತುಂ: **ಪಂಪಭಾ,** ೨. ೯೭ ವ)

**ಆಯತಿ** – ಸಂಯಮ (ಜಾಣ್ತನಕ್ಕೆ ಎಱವಟ್ಟು ಒಳ್ನುಡಿಗೆ ಆಣ್ಮಂ ಆಯತಿಗೆ ಅಡರ್ಪು .. .. ಸತ್ಯಕ್ಕೆ ಅಧಿಷ್ಠಾನಂ ಎಂದಜಿತಂ ಕೈಮಿಗೆ ಕೂರ್ತು ಕೀರ್ತಿಸುವುದು ಉರ್ವೀಮಂಡಲಂ ದುರ್ಗನಂ: **ಪಂಚತಂತ್ರ,** ೫೨); ಸಾಮರ್ಥ್ಯ (ಎನಗುಳ್ಳ ಆಯತಿ ಮೇರುಗುಂಟೆ: **ಆದಿಪು:** ೯. ೧೧೪); ಮಹಿಮೆ (ಧರ್ಮಚಕ್ರಂ ಆಯತಿಯಂ ಕೈಕೊಳೆ: **ಆದಿಪು,** ೧೦. ೬೭)

**ಆಯತಿಕೆ** – ಗೌರವ, ಯೋಗ್ಯತೆ, ಮೇಲ್ಮೆ (ಇರ್ಬರಿಯೊಳೆ ಸುತ್ತಿಪ ಆಯತಿಕೆಯಿಂ ಮಿಗೆ ನರ್ತಿಪ ದಿಂಡುವಾಯಲ್ ಉಪ್ಪರಿಪ: **ರಾಜಶೇವಿ,** ೧೩. ೮೨)

**ಆಯತಿಕ್ಕೆ** – ಆಯತಿಕೆ, ಪ್ರಭಾವ, ಗೌರವ (ನಾಯಕುನ್ನನಿಗೆ ಕೂರ್ತು .. .. ರಾಜ್ಯಮನಿತ್ತು ತಂದು ಆಯತಿಕ್ಕೆಯಿಂ ಒಪ್ಪವಾಗಿರಿಸಿ: **ಧರ್ಮಾಮೃ,** ೧೧. ೧೧೪)

**ಆಯತಿವೆಱು** – ವಿಸ್ತಾರಗೊಳ್ಳು (ಆಯತಿವೆತ್ತ ವಾರಿಜಾಕ್ಷನ ಧವಳೇಕ್ಷಣಂ: **ಪಂಪರಾ,** ೩. ೧೫೭); ಉತ್ಸಾಹಗೊಳ್ಳು (ಆಯತಿವೆತ್ತ ನಿಜಾಭಿಪ್ರಾಯದಿಂ ಅನಿಮಿಷರಶೇಷರ್ ಅನುನಯದಿಂ .. .. ಎಯ್ದಿ: **ಕರ್ಣನೇಮಿ,** ೮. ೧೩೭ ವ); ಒಟ್ಟಾಗು (ಆಯತಿವೆತ್ತು .. .. ಅಖಿಳಶಾಸ್ತ್ರಸಮಾಜಂ ಓಜೆಯಿಂ .. .. ಪೇೞುತಿರಲ್ಕೆ: **ಕುಸುಮಾಕಾ,** ೭. ೨೮)

**ಆಯತ್ತ** – ಅಧೀನ (ಶ್ರೀಯಂ ನಿರಂತರಂ ತನಗೆ ಆಯತ್ತಂಗೆಯ್ವ ನೃಪತಿ .. .. ಮಾಯಾತ್ಮಕನಂತೆ ವಂಚಿಪುದು ನಿಪುಣತೆಯಿಂ: **ಪಂಚತಂತ್ರ,** ೩೯೪); ಸನ್ನದ್ಧ (ವಸಿಷ್ಠಪರ್ವತಂಗಳೆಂಬ ತೀರ್ಥಂಗಳೊಳ್ ಓಲಾಡುತ್ತುಂ ಆ ದಿಶಾಭಾಗಮಂ ಆತ್ಮೀಯ ಶಾಸನ ಆಯತ್ತಂ ಮಾಡುತ್ತುಂ: **ಪಂಪಭಾ,** ೪. ೧೮ ವ)

**ಆಯಸ** – ಬಳಲಿಕೆ (ಕೌರವಪತಿ ದುಃಖಮಹಾಭಾರಮನಾಂತು ಆಯಸಕ್ಕೆ ಗುಱಿಯಾದುದಱಿಂ: **ಗದಾಯು,** ೪. ೫); ಕಬ್ಬಿಣ (ಪಾರಸವಂ ಲೋಹಂ ಗಿರಿಸಾರಂ ಅಯಸ್ತೀಕ್ಷ್ಣಂ ಆಯಸಾಖ್ಯಂ ಕರ್ಬೊನ್: ಅಭಿಧಾವ, ೧. ೬. ೫)

**ಆಯಸಪಿಂಡ** – ಕಬ್ಬಿಣದ ಗುಂಡು (ಪಸರಿಸಿದುದು ಕಟ್ಟಿಲೆ .. .. ತಪನತಪ್ತ ಆಯಸಪಿಂಡಮಂ ಅರ್ದೆ ನೆಗೆದ ಪೊಗೆಯೆಂಬಿನೆಗಂ: **ನೇಮಿನಾಪು,** ೫. ೧೭)

**ಆಯಾಮ** – ಉದ್ದ, ನೀಳತೆ (ದ್ವಾದಶಯೋಜನ ಆಯಾಮದೊಳಂ ನವಯೋಜನವಿಸ್ತಾರದೊಳಂ: **ಆದಿಪು,** ೧೧. ೩ ವ)

**ಆಯಾಸಂಬಡು** – ಕಷ್ಟಪಡು (ಎಂದು ಆಯಾಸಂಬಟ್ಟು ಕಾಲ ಮೇಲೆ ಕವಿದು ಬಿಟ್ಟು: **ಗದಾಯು,** ೯. ೨೦ ವ)

**ಆಯಿಲ** – ಕೊಳ್ಳೆ (ಕಳ್ಳರ ಆಯಿಲಮಱೆಯೇಱು ಮಾರಿ ಪಸವಿಟ್ಟಿಬಱಿಂ ಪೆಱವುಂ ಭಯಂಗಳ್ಗಳ್: **ಆದಿಪು,** ೧. ೫೨); ರೋಗ (ಆಯಿಲದ ಅಳುಪಿನ ಇಟಿವಿಟಿಯುಂ ಕುತ್ತದ ಮಱುಕದ ಚಿತ್ತವೃತ್ತಿಯುಂ ಅಪಮೃತ್ಯುವಿನ ಸತ್ವಬಾಧೆಯ ಗಂಧಾಗಂಧಮುಂ ಇಲ್ಲ: **ಶಾಂತಿಪು,** ೬. ೧೦೨ ವ)

**ಆಯಿಲಂಗೊಳ್** – ಕೊಳ್ಳೆಹೊಡೆ (ಎಮ್ಮೆಮ್ಮ ಜೀವಧನಂಗಳಂ ಆಯಿಲಂಗೊಂಡಿರ್ದಪಂ: **ಸುಕುಮಾಚ,** ೭. ೩೭ ವ)

**ಆಯು** – ಜೀವಿತಾವಧಿ (ಸೊಡರೊಳ್ ಬತ್ತಿಯುಂ ಎಣ್ಣೆಯುಂ ಒಡನಟಿದವೊಲ್ ಆಯುವುಂ ಶರೀರಮುಂ ಅಮಳಂ: **ಶಾಂತಿಪು,** ೯. ೧೧೮)

**ಆಯುಶ್ಚ್ಯುತಿ** – ಆಯುಸ್ಸಿನ ಕೊನೆ (ಅಚ್ಯುತೇಂದ್ರನ ಆಯುಶ್ಚ್ಯುತಿಯೊಳ್ .. .. ವಿಬುಧಸಮಾಖ್ಯೆಗಂ ನಾಡೆ ಮಾಡಿದಂ ಸಾರ್ಥತೆಯಿಂ: **ಚಂದ್ರಪ್ರಪು,** ೯. ೫೮)

**ಆಯುಷ್ಯಾಂತ** – ಆಯುಸ್ಸಿನ ಕೊನೆ (ಆಯು ತವೆ ಪಾರದರಿಗಂ ಅಪಾಯಮಂ ಎತ್ತಱಿವಂ ಉಚಿತ ವಾಕ್ಯಾರ್ಥಂ ಕೊಳ್ಳೀಯೆ ಪರದಾರಗಮನಮಂ ಆಯುಷ್ಯಾಂತಮೆನಲ್ ಮನಂದಂದಪನೇ: **ಶಾಂತಿಪು,** ೫. ೫೧)

**ಅಯೋಗ** – ಸೇರುವೆ, ಜೋಡಣೆ (ಮುತ್ತಿನ ಮಾಣಿಕದ ಮಂಡನ ಆಯೋಗಂಗಳೊಳ್ ಆಯೋಗಂಗೊಂಡು ಬಂದ ಮದಾಂಧಗಂಧಸಿಂಧುರಮಪ್ಪ ಪಟ್ಟವರ್ಧನನ ಬೆಂಗೆ ವಂದು: **ಪಂಪಭಾ,** ೧೦. ೨೬ ವ); ಅಲಂಕಾರ (ನಡೆಯೆ ತುರಗಂ ಪೊನ್ನ ಆಯೋಗಂಗಳಿಂ ಅಮರ್ದು ಅೞ್ತಿಯಿಂ ಪಡೆಯೆ ನೆಳಟಿಂ ಚಂಚತ್ ಪಿಂಛಾತಪತ್ರಮೆ ಕೂಡೆ ತಮ್ಮೊಡನೆ ಬರೆ: **ಪಂಪಭಾ,** ೯. ೧೦೨)

**ಆಯೋಗಂಗೊಳ್** – ಸೇರ್ಪಡೆಯಾಗು (ಮುತ್ತಿನ ಮಾಣಿಕದ ಮಂಡನ ಆಯೋಗಂಗಳೊಳ್ ಆಯೋಗಂಗೊಂಡು ಬಂದ ಮದಾಂಧ ಗಂಧಸಿಂಧುರಮಪ್ಪ ಪಟ್ಟವರ್ಧನನ ಬೆಂಗೆ ವಂದು: **ಪಂಪಭಾ,** ೧೦. ೨೬ ವ)

**ಆಯೋಧನ** – ಯುದ್ಧ (ಪರಿಪಠನ ಮೃದುಕೂಜಿತ ರಸಿತದರಹಸಿತ ಕ್ರೇಂಕಾರಾರೋಹಣ ಆಯೋಧನಾದಿ ನಾನಾ ವಿನೋದಂಗಳೊಳಂ: **ಆದಿಪು,** ೮. ೩ ವ)

**ಆಯೋಧನಾಪಟಹ** – ಯುದ್ಧಭೇರಿ (ದಂತಿಸಂಘಟ್ಟಾರುದಿತ ಸ್ವಚ್ಛಂದಂ ಆಯೋಧನಾ ಪಟಹರವೋಜ್ಜೃಂಭಿತಂ: **ಆದಿಪು,** ೧೪. ೯೩)

**ಆಯ್ಕುಳಿಗೊಳ್** – ಆರಿಸಿಕೊ (ನಾನಾರ್ಥಮಂ ಸೆಱೆಗೊಂಡು ಆಯ್ಕುಳಿಗೊಂಡಂ ಉದ್ಭಯಶಮಂ: **ಪುಷ್ಪದಂಪು,** ೫. ೫೧)

**ಆರ್** – ಗಟ್ಟಿಯಾಗಿ ಕೂಗು, ಅರಚು (ಮಚ್ಚರದಿಂ ಒರ್ವರೊರ್ವರಂ ಉಚ್ಚಳಿಸಿ ತಗುಳ್ದು ಗೋವಂ ಆರ್ದು ಇಸೆ ಕೀೞಿಂ ಕರ್ಚಿ ಪುಡಿಯೊಳ್ ಪೊರಳ್ದುವು ನಚ್ಚಿನ ಕಾಂಭೋಜವಾಜಿಗಳ್ ಕೆಲವಾಗಳ್: **ಪಂಪಭಾ,** ೮. ೯೪); ಕೂಗಿ ಕರೆ (ಮನುವಂಶಾಂಬರಭಾನು ಕಲ್ಪತರು ಕೈವಂದಂತೆ ರೈವೃಷ್ಟಿ ಪಳ್ಳನೆ ಕೊಂಡಂತೆ ಸುರೇಂದ್ರಧೇನು ಕಱೆದಂತೆ ಆರ್ತು ಇತ್ತು ಕೂರ್ತು ಇತ್ತು .. .. ಜಾತಕರ್ಮಮುಮಂ ಅತ್ಯುತ್ಸಾಹದಿಂ ಮಾಡಿದಂ: **ಪಂಪರಾ,** ೩. ೧೩೭); ತೃಪ್ತಿಪಡು; ತುಂಬು (ಆತ್ಮನಂದನ ಶುಕನಾಸನಂದನರಂ ಆ ಸತಿ ಕಣ್ಮಲರ್ ಆರೆ ನೋಡಿದಳ್: **ಕಾದಂಸಂ,** ೨. ೪೬); ಸಮೀಪಿಸು (ವನಿತೆ ಪರಸ್ತ್ರೀ ಪೆಱರ್ಗೆ ಇತ್ತನಿತಱೋಜೆದಱೆದುಂ ಅಳುಪಂ ಆದಂ ಅಶ್ವಗ್ರೀವನ ಮಿಟ್ಟು: ಪೊಟ್ಟುವು ಆರ್ದಪುದು **ಶಾಂತಿಪು,** ೫. ೫೦); ಸಮರ್ಥವಾಗು (ದುಷ್ಕವಿ ಮಹಾಕವಿಮಧ್ಯದೊಳ್ ಒಪ್ಪಲಾರ್ಪನೇ: **ರಾಜಶೇವಿ,** ೧. ೨೪); ನೊಗ ಎತ್ತುಗಳನ್ನು ಹೂಡಿದ ನೇಗಿಲು (ಒಬ್ಬಳೇ ಹೆಂಡತಿ; ಮೂವರ್ ಪುತ್ರರ್; ಎರಡಾರ ಬೆವಸಾಯಂ; ಹತ್ತು ಹಸುಕಱೆಹ; ಮಧ್ಯದೇಶದೊಳ್ ಸುಕ್ಷೇತ್ರಮಪ್ಪ ತಾಣದೊಳಿರ್ಪುದೇ ಸೇವ್ಯಂ: **ಪಂಚತಂತ್ರ,** ೧೧೫, ಶ್ಲೋಕ ೩೫ ಟೀಕೆ)

**ಆರ** – ಹಾರ (ಒದವಿದ ನೂಲ ತೊಂಗಲಿಲ್ಲದೆ ಪೀನನಿತಂಬಂ ಆರಮಿಲ್ಲದೆ ಕುಚಮಂಡಳಂ: **ಆದಿಪು,** ೩. ೪೮)

**ಆರಂಬಂಗೆಯ್** – ಬೇಸಾಯ ಮಾಡು (ಅವರ್ಕೆ ಪುಟ್ಟಿದ ಪೋರಿಗಳಂ ತಿರ್ದಿ ಆರಂಬಗೆಯ್ದು ಸಮಸ್ತ ಧಾನ್ಯಮಂ ಸಂಪೂರ್ಣಮಾಗಿ ಬೆಳೆದು: **ಪಂಚತಂತ್ರ,** ೨೫೪ ವ)

**ಆರಂಭ** – ಮೊದಲು (ಆರಂಬ ಮಂಗಳಾದಿಯೊಳ್: **ಅಭಿಧಾವ,** ೩. ೧. ೧೧೨); ಬೇಸಾಯ ಸುಧಾಮಕನೆಂಬೊಂ .. .. ತನ್ನಾರಂಭದ ಕೆಯ್ಗಳನೊಕ್ಕು ಎಟ್ಟುಗಳ ಬಾಯಂ ಕಟ್ಟಿಯೊಕ್ಕಿಸುಗುಂ: **ವಡ್ಡಾರಾ,** ಪು. ೧೭೦. ಸಾ. ೧೧); ಕೆಲಸ (ದಂದುಗಳನೊತ್ತುವ ದೊನ್ನಲಮನಲುಂಬುವ ಕಂದಂಗಳಂ ಆಯ್ವ ಆರಂಭವೆಸೆವವುವಾ ಮುನಿವನದೊಳ್: **ತ್ರಿಷಷ್ಟಿಪು,** ೧. ೬೪); [ಜೈನ] ಹಿಂಸೆಗೆ ಕಾರಣವಾಗುವ ಕಾರ್ಯ (ವಿವಿಧಾರಂಭಪರಿಗ್ರಹಂ ದ್ರವಿಣಮಂ ಬೈತುದ್ಧತಂ ತನ್ನುಸಿರ್ ತವೆ: **ಆದಿಪು,** ೫. ೪)

**ಆರಕ್ತ** – ಕೆಂಪಗಿರುವ (ದಳ್ಳಿಸೆ ಕೋಪಾರಕ್ತನೇತ್ರಂ ನಿಜಭುಜಗದೆಯಂ ತೂಗಿದಂ ಧಾರ್ತರಾಷ್ಟ್ರಂ: **ಗದಾಯು,** ೬. ೩೦)

**ಆರಡಿಗೊಳ್** – ಸೂರೆಗೊಳಗಾಗು (ತಾವೆ ತಮ್ಮಗಳಂ ಆರಡಿಗೊಳ್ವರೊ ನಾಡೆ ಗೊಡ್ಡೆಯರ್: **ಲೀಲಾವತಿ,** ೧೪. ೪೦)

**ಆರಡಿಗಳ್ಳ** – ಸೂರೆಕಾರ (ಬಿದಿಯೆಂಬ ಆರಡಿಗಳ್ಳಂ ಎನ್ನನುಜನಂ ಗೋವಿಂದನಂ ನಿರ್ನೆರುಯ್ವುದುಂ; **ಆದಿಪು,** ೩. ೫೨)

**ಆರಣೆ** – ಪದಾತಿಸೈನ್ಯ (ಮಗಧ ಭೂಭುಜನ ಆರಣೆ ಬಂದು ಸಂಗರಕ್ಕೆಳಸಿವೊಡ್ಡಿದತ್ತು: **ಪುಣ್ಯಾಸ್ರ:** ೮. ೨೨)

**ಆರಭಟೀ** – ಓಜಸ್ವೀ ಮಾತುಗಳಿಂದ ರೌದ್ರ ಬೀಭತ್ಸ ರಸಗಳನ್ನು ಅಭಿನಯಿಸುವ ಕ್ರಮ ಅಥವಾ ವೃತ್ತಿ (ಭಾರತಿ ಸಾತ್ವತಿ ಕೈಶಿಕೀ ಆರಭಟಿಯುಮೆಂಬ ವೃತ್ತಿಯೊಳ್: **ಆದಿಪು,** ೯. ೨೬)

**ಆರಭಟೀರಸ** – ಶೌರ್ಯೋದ್ರೇಕ (ವೀರಭಟರ ಉದ್ಧಟ ಆರಭಟೀರಸರಿವರವರೆನ್ನದೆ ಎನ್ನನುಂ ಸೆನಸುವೊಡೇ ಕಾರಣಮೋ: **ಆದಿಪು,** ೧೪. ೨೬)

**ಆರಭಟೀಸಮುದ್ಘಟಕಥೆ** – ಕಲಹ ಕ್ರೋಧಾದಿಗಳಿಂದ ಕೂಡಿದ ಕತೆ (ಸಾಹಸೋತ್ಕೀರ್ಣಮಹಾಹವ ಅರ್ಣವಪ್ರವೀರಪ್ರಾರಬ್ಧ ಆರಭಟೀಸಮುದ್ಘಟಕಥೆಗಳನೆ ಕೇಳಲುಂ: **ಆದಿಪು,** ೮. ೩೨ ವ)

**ಆರನಾದೊಡಂ** – ಯಾರನ್ನಾದರೂ (ಸುರ ದನುಜ ಭುಜಗ ವಿದ್ಯಾಧರ ನರ ಸಂಕುಲದೊಳ್ ಆರನಾದೊಡಂ ಏನೋ ಗರಮುಟ್ಟೆ ಕೊಲ್ಗುಂ ಇದು ನಿಜವಿರೋಧಿಯಂ ಧುರದೊಳ್ ಎಂದು ಶಕ್ತಿಯನಿತ್ತಂ: **ಪಂಪಭಾ,** ೧. ೧೦೩)

**ಆರನಾಳ** – ಅಂಬಲಿ (ಧಾನ್ಯಾಮ್ಲವು ಆರನಾಳಂ: **ಅಭಿಧಾವ,** ೧. ೧೬. ೧೦)

**ಆರಯ್** – ವಿಚಾರಿಸು, ವಿಮರ್ಶಿಸು (ಆರಯೆ ಕಜ್ಜಂ ಪೆಱತಿಲ್ಲ ಶಂತನುಸುತಂಗೆನ್ನಂ ಕರಂ ನಂಬಿದಂಬೆಯೊಳ್ ಎನ್ನಂಬೆ ವಲಂ ವಿವಾಹವಿಧಿಯಂ ಮಾಟ್ಪಿಂ ಪೆಱರ್ ಮಾಟ್ಪರೇ: **ಪಂಪಭಾ,** ೧. ೭೭); ಹುಡುಕು (ಇದು ನಮ್ಮಂ ಆರಯಲೆ ವೈರಿಯ ಮಾಡಿದ ಗೊಡ್ಡಂ ಇಲ್ಲಿ ಮಾಣ್ದಿರಲಾಗ: **ಪಂಪಭಾ,** ೮. ೯೦)

**ಆರಯ** – ರಕ್ಷಣೆ (ಒದವಿದ ಕೂರ್ಮೆಯಿಲ್ಲದಳಿಪು ಆರಯಮಿಲ್ಲದ ಪಾಳಿ, ರಾಗಮಿಲ್ಲದ ಸುರತಂ: **ಆದಿಪು,** ೧೨. ೪೫)

**ಆರವೆ** – ಉದ್ಯಾನ (ಮೇರುವ ಪೊಂ ಕಲ್ಪಾಂಘ್ರಿಪದಾರವೆ ರಸದೊಱವು ಪರುಸವೇದಿಯ ಕಣಿ ಭಂಡಾರದೊಳುಂಟೆನೆ ಕುಡುವ ಅನಿವಾರಿತದಾನಕ್ಕೆ ಪೋಲ್ವರಾರ್ ಬದ್ದೆಗನಂ: **ಪಂಪಭಾ,** ೧. ೨೮)

**ಆರಾಜಿತೆ** – ಅಲಂಕೃತಗೊಂಡವಳು (ವರಶೃಂಗಾರ ಆರಾಜಿತೆಯೆನಿಸುವ ಕಾವೇರಿ ಧರಾಕಾಮಧೇನುವೆನಿಪದು ಪುಸಿಯೇ: **ರಾಜಶೇವಿ,** ೨. ೮)

**ಆರಾತಿ** – ಹತ್ತಿರದ (ಸಮುಚಿತ ಆರಾತಿಜನಂಬೆರಸು ಅನುರಾಗದೆ ಪೌದನಪುರಕ್ಕೆ ಪೋಪುದೆನೆ ನೆಗಟ್ದಿನಾ ಖಚರೇಂದ್ರಂ: **ಶಾಂತೀಶ್ವಪು,** ೨. ೧೦೯)

**ಆರಾತೀಯ** – ಹಿಂದಿನ (ಜೀವನೋಪಕರಣಂಗಳಂ ತೋಱಿ ಕೊಟ್ಟು ಆರಾತೀಯ ಮನುಪ್ರಧಾನರಂ ಉದಾತ್ತಂ ನಾಭಿ ಕೀಱ್ತ್ಮಾಡಿದಂ: **ಪಂಪರಾ,** ೧. ೯೧)

**ಆರಾಧನೆ** – ಪ್ರಜೆ; [ಜೈನ] ಸಮ್ಯಕ್‌ಜ್ಞಾನ ದರ್ಶನ, ಚಾರಿತ್ರ, ತಪಸ್ಸುಗಳ ಸಾಧನೆ (ಜಿನೇಂದ್ರಾರ್ಚನಾಪುರಸ್ಸರಂ ವಾಚನಾಗ್ರಹಣಸಮೇತಂ ಆರಾಧನೆಯಿನರ್ಚಿಸಿ ವೀರಸಂಸ್ಥಾನಾರೂಢನಾದಾಗಳ್: **ಆದಿಪು,** ೨. ೫೦ ವ)

**ಆರಾಧಿಸು** – ಪೂಜಿಸು, ಓಲಯಿಸು (ಕೈಮುಗಿದು ಆರಾಧಿಸಿ: **ಆದಿಪು,** ೬. ೮೫)

**ಆರಾಧ್ಯ** – ಪೂಜನೀಯ (ತಮ್ಮ ಆರಾಧ್ಯರೆ ದೋಸಮಂ ಅಧ್ಯಾರೋಪಿಸೆ ನೋವುದು: **ಕಾದಂಬ,** ೮. ೧೩೯)

**ಆರಾಮ** – ಸುಖಕರವಾದ; ಊರ ಹೊರಗಿನ ಉದ್ಯಾನವನ (ಊರಿಂದಂ ಪೊಱಗಣ ಮೆಯ್ಯೊಳೊಲ್ದು ಧರ್ಮಕ್ಕಾರಾನುಂ ಪುರಜನವಿಟ್ಟ ಭೂಜಷಂಡಂ ಆರಾಮಂ: **ಅಭಿಧಾವ,** ೧. ೭. ೧೪)

**ಆರಾವ** – ಶಬ್ದ, ಧ್ವನಿ (ಉಭಯಬಲದರಸುಗಳ್ .. .. ಕೆಯ್ವೀಸೆ ಲಯಕ್ಷುಭಿತ ಜಲನಿಧಿನಿನಾದಮಂ ಅಭಿನಯಿಸಿದುದು ಒಗೆದು ನೆಗೆದ ಸಮರ ಆರಾವಂ: **ಪಂಪಭಾ,** ೧೧. ೩೪)

**ಆರುಷ್ಕರ** – ಗೇರುಬೀಜ (ಆರುಷ್ಕರದ್ರವ ಆವರ್ತಗರ್ತಗಂಭೀರೆಯುಂ .. .. ವೈತರಣಿಯಂ ಪೊಕ್ಕಾಗಳ್: **ಆದಿಪು,** ೫. ೮೭ ವ)

**ಆರುಹತ** – ಜೈನಮತೀಯ (ನೆಱೆ ನಂಬಿರ್ದುದು ಆರುಹತಂ ಜಿನೇಂದ್ರನಂತಿರ್ದ ಮಹಾನುಭಾವಂ: **ಶಬ್ದಮದ,** ೩೪, ಪ್ರ. ೧)

**ಆರೂಢ** – ಹೊಂದಿದ (ಆರೂಢ ನಿಜಮನೋಹಂಕಾರೋತ್ಕರ್ಷಂ ಊರ್ಜಿತ ಸರಳಂಕಾರಂ: **ಕವಿರಾಮಾ,** ೩. ೧೯೮); ಹತ್ತಿದ (ಇಂದ್ರಂ .. .. ಐರಾವತಾರೂಢಂ ಲೋಕಪಾಲಪುರಸ್ಸರಂ ಮಹಾಯುದ್ಧಂಗೆಯ್ವುದುಂ: **ಪಂಪರಾ,** ೧೦. ೧೭೫ ವ)

**ಆರೂಢಕ್ರಮ** – ಹತ್ತುವ ರೀತಿ (ಭಂಡಾರಿಗನಂತೆ ಆಯಮಂ ಪಿಡಿದು ಜೂದುಗಾಱನಂತೆ ಕವಡಿಕೆಯಂ ತೆಗೆದು ತುರಗಾರೋಹಕನಂತೆ ಆರೂಢಕ್ರಮಮಂ ಅಱೆದು: **ಸುಕುಮಾಚ,** ೩. ೬ ವ)

**ಆರೂಢತಪ** – ತಪಸ್ಸನ್ನು ಕೈಗೊಂಡವನು, ಮಾಘಮಾಸವನ್ನು ಹಿಡಿದವನು (ಅಜಿತಸೇನ ಮಹಾರಾಜಂ .. .. ಆರೂಢತಪನುಮಾಗಲೊಡಂ: **ಚಂದ್ರಪ್ರಪು,** ೯. ೪೧ ವ)

**ಆರೂಢಪ್ರತಿಜ್ಞ** – ಪ್ರತಿಜ್ಞೆಯನ್ನು ಕೈಗೊಂಡವನು (ನಿನ್ನಂ ಅನಾಕುಳಂ ಎನ್ನ ಚಟ್ಟರಿಂ ತಳವೆಳಗಾಗೆ ಕಟ್ಟಿಸದೆ ಮಾಣ್ದೊಡೆ ಕೆಮ್ಮನೆ ಮೀಸೆವೊತ್ತೆನೇ.. .. ಎಂದು ಆರೂಢಪ್ರತಿಜ್ಞನಾಗಿ: **ಪಂಪಭಾ,** ೨. ೫೦ ಮತ್ತು ವಚನ)

**ಆರೆ** – ಗೊರಸಿನ ಹಿಂಭಾಗ (ಕೂರ್ಚೆಗಳಾರೆ ಕೋಟಿಯಾರೆವೊಲಿರೆ ಮುಷ್ಕಂ ಒಂದೆನಸು ನೇಲ್ದಿರೆ ಸೈತುಂ ಎಯ್ದೆ .. .. ವಾಜಿ ಚಿರಾಯು ನಿಶ್ಚಯಂ: **ಲೋಕೋಪಕಾ,** ೧೧. ೭೫); ಕಿರುಗತ್ತಿ (ಗಜೆಯ ಫಕಫಕರವಂ ಬಾಯಱೆಚುವ ಕೆಕೆಕೆಂಬ ನಾದ ಆರೆಗಳ್ ಓರಂತೆ ಉಱೆ ತಾಗಲ್: **ಶಾಂತೀಶ್ವಪು,** ೧೨. ೧೧೫)

**ಆರೆಕಾಱ** – ಆರೆಯನ್ನು ಹಿಡಿದ ಮಾವತಿಗ (ಮನ್ನಣೆಯ ಮಾವಂತರುಮಂ ಆರೆಕಾಱರುಮಂ ಮೀಱೆ ಗೆಂಟಱೊಳ್ ನಿಂದು ನೋಡುವ ನುಡಿಗೆ ಗಿಱ್ಱನೆಯ್ದುವ ಸೊರ್ಕಾನೆಗಳ: **ಕಬ್ಬಿಗಕಾ,** ೩೭ ವ)

**ಆರೆಗೊಂಬು** – ಭಲ್ಲೆ, ಈಟಿ (ಕೋರಕಂ .. .. ಅಂಗಜವೀರನ ಪಿಡಿದ ಆರೆಗೊಂಬೆನಲ್ ಸೊಗಯಿಸುಗುಂ: **ಮಲ್ಲಿನಾಪು,** ೬. ೨೦)

**ಆರೋಗಿಸು** – ಊಟಮಾಡು (ಇದು ನಿಂದ ನವೇಂದುಪಲಂ ಪೂಜೆಗೆಯ್ದು ಶೀಕರತಲಂ ಇಂತಿದು ನೃಪಂ ಆರೋಗಿಸಿದ ಪವಳದ ನೆಲೆ ಇದು ಪವಡಿಸಿರ್ದ ಚಂದನತಲ್ಪಂ: **ಕಾದಂಸಂ,** ೫. ೮೫)

**ಆರೋಗಿಸುವ ಮನೆ** – ಊಟದ ಮನೆ (ಎಸೆವ ಪವಡಿಸುವ ಮನೆ ಚಿತ್ರಸಾಲೆ ಸುರತಾಲಯ ಮಹೀಗೃಹಂ ಆರೋಗಿಸುವ ಮನೆ ಮಂಡಪಂ ಗುಣಣಸಾಲೆ ಎಂಬಿನಿತುಮಂ ಗೃಹಾಂಗಂ ಕುಡುಗುಂ: **ಶಾಂತಿಪು,** ೬. ೧೧೬)

**ಆರೋಪಿತ** – ಹೆದೆಯೇರಿಸಿದ (ಆರೋಪಿತಚಾಪಂ ಸಂಧಾರಿತಕವಚಂ ಧೃತೋಗ್ರಶರಧಿಯುಗಂ

ತಾನಾರಂದಮಲ್ಲವಂ ತ್ರಿಪುರಾರೀ ಕೇಳ್ ತ್ರಿಪುರಮಿಸುವ ನಿನ್ನನೆ ಪೋಲ್ವಂ; **ಪಂಪಭಾ,** ೮. ೧೩)

**ಆರೋಹಕ** – ಸವಾರ (ಆರೋಹಕಂ ಬಂದು ಕಂಡು ಸಾಷ್ಟಾಂಗವೆಱಗಿ ಮುಂದೆ ನಿಂದು: **ನೇಮಿನಾಪು,** ೮. ೫೫ ವ)

**ಆರ್ಕಿ** – ಸೂರ್ಯನ ಮಗ, ಯಮ (ಸಿಂಹರಥಂ ಮಾರ್ಕೊಳ್ವರೆನ್ನನಾರ್ಕಿಗೆ ಬಿರ್ದಿಕ್ಕಿ .. .. ಬಲಮಂ: **ಕರ್ಣನೇಮಿ,** ೫. ೮೫)

**ಆರ್ಗೆ** – ಯಾರಿಗೆ {ಹುಟ್ಟಿದವನು/ಳು}, ಯಾರ ಮಗ[ಳು] ( ಈ ಕನ್ನೆ ಆರ್ಗೆ ಪೆರೇಂ: **ಕಾದಂಬ,** ೧೦. ೫೦)

**ಆರ್ಜವ** – ಪ್ರಾಮಾಣಿಕತೆ, ಸಮಚಿತ್ತತೆ, ವಿನಮ್ರಸ್ವಭಾವ (ಸಹಜದೊಳ್ ಅಪಾಪಿಗಳುಂ ಆರ್ಜವಂಗಳುಂ ಅತಿಮೃದುಗಳುಮಪ್ಪುದಱಿಂದೆ ನಾಕಲೋಕಪ್ರಾಪ್ತಂಗಳಕ್ಕುಂ: **ಆದಿಪು,** ೫. ೪೧ ವ); ಋಜುಸ್ವಭಾವದವನು (ಪಗಲಿರುಳೆಂಬೀ ವಿಭೇದಂಗಳಿಲ್ಲ ಆಳ್ ಅರಸೆಂಬ ಈ ಪಂಬಲಿಲ್ಲ ಆರ್ಜವರೆ ಮನುಜರೆಲ್ಲಂ: **ಪಂಪರಾ,** ೧. ೬೦)

**ಆರ್ಜಿಕೆ** – ಕಂತಿ (ಅಭಿವಿನುತಭಕ್ತಿಯಿಂದ ಅಗ್ನಿಭೂತಿ ಮೊದಲಾದ ಮುನಿಪರುಂ ನಾಗಶ್ರೀಪ್ರಭೃತಿ ಸಮಸ್ತ ಆರ್ಜಿಕೆಯರುಂ ಅಭೀಕ್ಷಪರಿಣಾಮಶುದ್ಧಿಯಿಂ ವಂದಿಸಿದರ್: **ಸುಕುಮಾಚ,** ೮. ೬೯)

**ಆರ್ಜಿಸು** – ಸಂಪಾದನೆ ಮಾಡು (ನೋಟದೊಳ್ ಅಲಂಪನಾರ್ಜಿಸಿ ಕಾಮಿನಿ ಕಾಮಪಾಶದಂತೆಯಿರೆ ನಾಲ್ವರುಂ ಭಟರ ಮನಮನುಱೆ ಸೆಱೆವಿಡಿದಳ್: **ಸುಕುಮಾಚ,** ೭. ೧೨)

**ಆರ್ತ** – ಸಮರ್ಥ (ಪಡೆದಂ ಬ್ರಹ್ಮಂ ಜಗಮಂ ಪಡೆಯಲ್ ತಾನಾರ್ತನಿಲ್ಲ ಪೆಂಪಂ: **ಪಂಪಭಾ,** ೬. ೧೨); ದೈನ್ಯ (ಪುಸಿಯಂ ಪೊರ್ದದಿರು ಆರ್ತಮಂ ಬಿಸುಡು ... .. ಎಂದುಪಾಧ್ಯಾಯರ್ ಓದಿಸಿ .. .. ಬೆಳಗುಗೆ .. .. ಮಚ್ಚಿತ್ತಮಂ: **ನೇಮಿನಾಪು,** ೧. ೫); ವಿಪತ್ತು, ದುಃಖ (ಚರಮಶರೀರಂ ಎಯ್ದುವನೆ ಬಾಧೆಯಂ ಉತ್ತಮಸತ್ತ್ವಂ ಆರ್ತದೊಳ್ ಪೊರೆವನೆ ಪುಣ್ಯಮೂರ್ತಿಗೆ ಎಡಱುಂ ದೊರೆಕೊಳ್ಗುಮೆ: **ಪಂಪರಾ,** ೬. ೧೭೨); ಅಪೇಕ್ಷೆ (ಮನದಾರ್ತಂ ತಗ್ಗುವನ್ನಂ ವಿಭಾಸುರ ಹೇಮೋತ್ಕರಮಂ .. .. ಇತ್ತಂ ಅರ್ಥಿ ನಿಮಿರಲ್ ವಿದ್ಯುಧರಾಧೀಶ್ವರಂ: **ಶಾಂತೀಶ್ವಪು,** ೪. ೬೬); ಕಷ್ಟಫಲ (ಶ್ರೀನದಿಯ ತೊಱೆಯ ಪೊರೆಯೊಳ್ ಎತ್ತುಗಳ ಕಾರಣದಿಂ ಕಲಹಮಾಗಿ ಕಾದಿ ಸತ್ತು ಸಂಗಣಿಸಿದ ಆರ್ತದಿಂ .. .. ದುಷ್ಟಗಜಂಗಳಾಗಿ ಪುಟ್ಟಿ: **ಶಾಂತೀಶ್ವಪು,** ೧೨. ೧೧೭ ವ); ಆರ್ತಧ್ಯಾನ (ಎನ್ನಯ ನಂಟರ್ .. .. ಎನ್ನಯ ಪೊಂಗಳೆಂದವನೆ ಕೂಡೆ ಪಲುಂಬುತುಂ ಆರ್ತದಲ್ಲಿ ಚಿತ್ತಂ ನಿಲೆ ಜೀವಮಂ ಬಿಡುವರ್: **ಸಮಯಪ,** ೬. ೧೧೯)

**ಆರ್ತಧ್ಯಾನ** – [ಜೈನ] ಇಷ್ಟವಾದದ್ದು ದೂರವಾದೀತೆಂಬ ಮತ್ತು ಅದರ ಬಗೆಗಿನ ಆಕಾಂಕ್ಷೆಯಿಂದ ಕೂಡಿದ ಚಿಂತೆ (ಅಂತು ಆರ್ತಧ್ಯಾನದೊಳ್ ಅಜಗರನಾಗಿ ತನ್ನ ಮುನ್ನಿನ ಸಂಚಿತವಸ್ತುಗಳಂ ಕಾವಂದು ಮಗಂ ಮಣಿಮಾಳಿಯಂ ಕಂಡು ಜಾತಿಸ್ಮರನಾಗಿ: **ಆದಿಪು,** ೨. ೧೫ ವ)

**ಆರ್ತರೌದ್ರ** – [ಜೈನ] ಕಷ್ಟಕ್ಕೆ ಕಾರಣರಾದವರ ಮೇಲೆ ಸೇಡು ತೀರಿಸಿಕೊಳ್ಳುವ ಚಿಂತೆ (ಆರ್ತರೌದ್ರದಿಂ ಪೆಣ್ಬುಲಿಯಾಗಿ ಪುಟ್ಟಿ ಸಹದೇವಿ ಬರುತ್ತಿರೆಳ: **ಪಂಪರಾ,** ೨. ೫೩)

**ಆರ್ತವ** – ರಜಸ್ಸು (ಉತ್ತಮ ಪಾತ್ರದಾನಾನುಮೋದಫಲದಿಂದಲ್ಲಿ ಪುಟ್ಟುವ ಜೀವಂಗಳ್ ನಾರಿಪುರುಷಸಂಯೋಗನಿಯೋಜಿತ ಶುಕ್ಲಾರ್ತವಂಗಳೊಳ್ ಜೀವಯುಗಳಂಗಳಾಗಿ ನೆಲಸಿ: **ಆದಿಪು,** ೫. ೪೧ ವ)

**ಆರ್ದ್ರ** – ಒದ್ದೆಯಾದ (ಹರಿದಳಿತ ಮದಗಜಕುಂಭರಕ್ತಸಿಕ್ ಆರ್ದ್ರ ಮೌಕ್ತಿಕಪ್ರಕರದವೋಲ್ ಕರಮೆಸೆವ ದಾಡಿಮಬೀಜರಾಜಿಯಂ ತೆಗೆದು ತೆಗೆದು ರಸವಂ ಆಸ್ವಾದಿಸಿದೆಂ: **ಕಾದಂಸಂ,** ೧. ೩೨)

**ಆರ್ದ್ರಕ** – ಹಸಿ ಶುಂಠಿ (ಪಸುರ್ವಡೆದುವು ನಂದನದ ಕೆಲಂಬಿಡಿದ ಆರ್ದ್ರಕವನ ಜೀರಕವನ ಹರಿದ್ರವನ ಸಂತತಿಗಳ್: **ಪುಷ್ಪದಂಪು,** ೨. ೪೭)

**ಆರ್ದ್ರಕಪೋಳೆ** – ಮದಜಲದಿಂದ ಒದ್ದೆಯಾಗಿ ದೂರಸ್ಥಿತರನ್ನು ಕೊಲ್ಲಲು ಬರುತ್ತಿರುವ ಆನೆ (ಒಪ್ಪುವ ಕತ್ತುರಿಯಂ ತೊಡದಂತೆವೊಳ್ ಆರ್ದ್ರಕಪೋಳೆ ಪುಟ್ಟಿದುದು ಗಜವತಿಯೊಳ್; **ಪಾರ್ಶ್ವನಾಪು,** ೪. ೧೧೭)

**ಆರ್ದ್ರಗಂಡಂ** – ತೋಯ್ದ ಕೆನ್ನೆಯುಳ್ಳವನು (ಒಗೆದ ಸುತಶೋಕದಿಂದ ಆವಗೆಯಂತೆ ಒಳಗು ಉರಿಯೆ ಭೋಂಕನೆ ಎರ್ದೆ ತೆಱೆಯಲ್ ಹಾ ಮಗನೇ ಎಂದು ಅಶ್ರುಜಲಾರ್ದ್ರಗಂಡಂ ಆ ಗಂಡಿನೊಡನೆ ಬಿಸುಟಂ ಬಿಲ್ಲಂ: **ಪಂಪಭಾ,** ೧೨. ೨೮)

**ಆರ್ದ್ರಮತಿ** – ಮೃದುಹೃದಯ (ಪಗೆವಂಗಂ ಕೆಳೆಯಂಗಂ ಆರ್ದ್ರಮತಿಯಂ ತನ್ಮೂರ್ತಿ ತೀರ್ಥೇಶ ಮಾಡುಗುಂ: **ಶಾಂತಿಪು,** ೮. ೧೫೮)

**ಆರ್ದ್ರಮೃತ್ತಿಕಾವಿರಚಿತ** – ಹಸಿ ಮಣ್ಣಿನಿಂದ ಮಾಡಿದ (ವಿವಾಹಗೇಹಮಂ ಸಮೆಯಿಸಿ ಅದಱ ನಡುವಣ ಆರ್ದ್ರಮೃತ್ತಿಕಾವಿರಚಿತಮಪ್ಪ ಚತುರಾಂತರದೊಳ್: **ಪಂಪಭಾ,** ೩. ೭೪ ವ)

**ಆರ್ದ್ರಹೃದಯ** – ಆರ್ದ್ರಮತಿ (ಶಾಂತರಸಾತ್ಮಂ ಆದ್ರಹೃದಯಂ ಸುದಿಗಂಬರದರ್ಶನಂ: **ಚಂದ್ರಪ್ರಪು,** ೧. ೨೭)

**ಆರ್ಪ ಭರ** – ಸಾಧ್ಯವಾದಷ್ಟೂ ಬಲವಾಗಿ (ಪಲಗೆಗಳೆರಡುಮಂ ಅಗಲಿಸಿರ್ದು ಬೆಟ್ಟಿರ್ದ ತಱೆಯದ ಕೀಲಂ ಇರ್ಕೈಗಳಿಂದ ಪಿಡಿದು ಆರ್ಪ ಭರದಿಂ ಅಲ್ಲಾಡಿ ಕೀಱಲ್ವುದುಂ: **ಪಂಚತಂತ್ರ,** ೮೨ ವ)

**ಆರ್ಪಳಿ** – ಆರ್ಪು ಅಳಿ, ಶಕ್ತಿಗುಂದು (ಕುಸುಮಾಸ್ತ್ರಂ ಆರ್ಪಳಿದು ಕೂರ್ಪಳ ಕೈಪಿಡಿದೆಯ್ದಿ .. .. ಪೊಸಪೂವಸೆಯಲ್ಲಿಕೂಡಿದಂ: **ರಾಜಶೇವಿ,** ೫. ೧೦೫)

**ಆರ್ಪು** – ಸಾಮರ್ಥ್ಯ, ಪರಾಕ್ರಮ (ಆತನ ಪೊದಪುರ್ಪಂ ಆರ್ಪನಿಪ್ಪುವೆಮ್ಮೊಳೇಂ ಸಂದಪ್ಪುವೇ: **ಆದಿಪು,** ೧೨. ೯೩)

**ಆರ್ಪುಗುಂದು** – ಆರ್ಪಳಿ (ಆರ್ಪುಗುಂದಿ ಕಾರ್ಪಣ್ಯದಿಂ ನಗತನೂಜೆಯಂ ಪೊಗಳ್ದು: **ಗಿರಿಜಾಕ,** ೮. ೧೪ ವ)

**ಆರ್ಭಟೆ** – ಗರ್ಜನೆ, ಗಟ್ಟಿಯಾದ ಕೂಗು (ಅಂತುಶರವರ್ಷಮಂ ಕಱೆಯುತ್ತುಮಿರ್ದದೊಂದು ಅಭಿನವಾರ್ಭಟೆಯಂ ಅಪ್ಪುಕಯ್ದು: **ಜಗನ್ನಾವಿ,** ೮. ೫೭ ವ)

**ಆರ್ಮ** – ನೆಲೆ, ರಕ್ಷಣೆ (ಒಲವಿನ ಕೂರ್ಮೆಯ ತತ್ಪತಿಗಂ ಆಕೆಗಂ ನಿಜವಂಶಕ್ಕೆ ಆರ್ಮಮೆನೆ ಪುಟ್ಟಿದರ್: **ಆದಿಪು,** ೨. ೩೭)

**ಆರ್ಯಚರಿತ** – ಉತ್ತಮ ನಡವಳಿಕೆಯವನು (ಇಂದ್ರಾದಿಗಳ್ ಆರ್ಯಚರಿತರ್: **ಶಾಂತಿಪು,** ೬. ೧೨೨)

**ಆರ್ಯಷಟ್ಕರ್ಮ** – [ಜೈನ] ಶ್ರಾವಕರು ಅನುಸರಿಸಬೇಕಾದ ಆರು ಕರ್ಮಗಳು: ಸ್ವಾಧ್ಯಾಯ, ಸಂಯಮ, ತಪ, ಇಜ್ಯಾ, ವಾರ್ತಾ,

ದತ್ತಿ; ಜೀವನೋಪಾಯದ ಕರ್ಮಗಳು: ಅಸಿ, ಮಸಿ, ವಿದ್ಯೆ, ವಾಣಿಜ್ಯ, ಶಿಲ್ಪ, ಕೃಷಿ (ಪಂಚಾಣುವ್ರತ .. .. ಆರ್ಯಷಟ್ಕರ್ಮಂಗಳುಂ ನಿಮಗಿವು ಕುಲಾಚಾರಂಗಳ್: **ಆದಿಪು,** ೧೫. ೧೬ ವ); ನೋಡಿ, ಆರ್ಯಕರ್ಮ

**ಆರ್ಯಿಕೆ** – ಗೌರವಾರ್ಹಳು, ಕಂತಿ (ಸುವ್ರತೆಯರ್ ಎಂಬ ಆರ್ಯಿಕೆಯರ್ಗೆ ಆಹಾರದಾನಮಂ ಮಾಡಿದೊಡೆ ಅವರುಂ ಉಪವಾಸ ಶ್ರಮದಿಂ ಛರ್ದಿಗೆಯ್ಯೆ: **ಶಾಂತೀಶ್ವಪು,** ೮. ೧೩೨ ವ)

**ಆರ್ಯೆ** – ಒಂದು ಪದ್ಯಜಾತಿ (ಸಭೆಯ ಚಿತ್ತದೊಳ್ ಅತ್ಯಾಶ್ಚರ್ಯ ಒದವುವಿನಂ ಅರಸಂಗೆ ಆರ್ಯೆಯಂ ಓದಿತ್ತು ಅದೊಂದಂ ಆ ಶುಕರತ್ನಂ: **ಕಾದಂಸಂ,** ೧. ೨೧)

**ಆರ್ಹತ** – ಜೈನಧರ್ಮ (ಕುಮತಂಗಳ್ ಭುವನದೊಳಗೆಲ್ಲಂ ಆರ್ಹತದವೊಲೇಮ ಸಂದಪುದೇ; **ಸಮಯಪ,** ೩. ೧೨); ಜೈನಧರ್ಮಿ (ಮಾಹೇಶ್ವರವೃತ್ತಿಯೊಳ್ ಎಸಗುತ್ತುಮಿರ್ದು ಕಳ್ಗುಡಿವವರಂ ಪತ್ತಿದೊಡೆ ಮುಟಿಯರ್ ಆರ್ಹತರ್: **ಸಮಯಪ,** ೧೩. ೩೭)

**ಆರ್ಹಂತ್ಯ** – [ಜೈನ] ಮೋಕ್ಷ (ಪೂಜಾರ್ಹಂ ಆರ್ಹಂತ್ಯಲಕ್ಷ್ಮೀಕಾಂತಂ ಮುನಿಸುವ್ರತಂ ನಮಗೆ ಮಾೞ್ಕೆ ಇಷ್ಟಾರ್ಥ ಸಂಸಿದ್ಧಿಯಂ: **ಪಂಪರಾ,** ೧. ೧); [ಜೈನ] ಅರ್ಹನಾದ ಪದವಿ, ಒಂದು ಗರ್ಭಾನ್ವಯಕ್ರಿಯೆ (ದಾನಸುಖೋದಯ ಇಂದ್ರತ್ಯಾಗ ಅವತಾರಹಿರಣ್ಯಗರ್ಭೋತ .. .. ಆರ್ಹಂತ್ಯವಿಹಾರ ಯೋಗತ್ಯಾಗಾಗ್ರನಿರ್ವೃತಿಯೆಂಬ ಅಯ್ವತ್ತಮೂಱು ಗರ್ಭಾದಿ ನಿರ್ವಾಣಪರ್ಯಂತಂಗಳಪ್ಪ ಗರ್ಭಾನ್ವಯಕ್ರಿಯೆಗಳಂ: **ಆದಿಪು,** ೧೫. ೧೫ ವ)

**ಆರ್ಹಂತ್ಯಧರ್ಮ** – ಜೈನಧರ್ಮ (ಆರ್ಹಂತ್ಯಧರ್ಮಂ ತನಗಾರ್ಮಂ ಭೂಷೆ ರತ್ನತ್ರಯಮೆನೆ ನೆಗೞ್ದಂ ಧಾತ್ರಿಯೊಳ್ ಶಾಂತಿನಾಥಂ: **ಸುಕುಮಾಚ,** ೧. ೫೫)

**ಆರ್ಹಂತ್ಯಲಕ್ಷ್ಮಿ** – ಮೋಕ್ಷಲಕ್ಷ್ಮಿ (ಪೂಜಾರ್ಹಮಂ ಆರ್ಹಂತ್ಯಲಕ್ಷ್ಮೀಕಾಂತಂ ಮುನಿಸುವ್ರತಂ; **ಪಂಪರಾ,** ೧. ೧)

**ಆಲ** – ಆಲದ ಮರ (ತಮ್ಮ ಪಗೆ ಪರ್ವುವಂತೆ ಪನ್ನಿರ್ಮತ್ತರ್ ಪರ್ವಿದ ಆಲದ ಮರದ ಮೇಲೆ: **ಪಂಪಭಾ,** ೨. ೩೦ ವ)

**ಆಲಂಬ** – ಆಶ್ರಯ (ದೀರ್ಘಬಾಹಾಲಂಬಂ ಭುಜವೀರ್ಯ ವಿಕ್ರಮಯುತಂ ಗಂಗಾತ್ಮಜನ್ಮಂ ಜಯಶ್ರೀಲೋಲಂ ಜಮದಗ್ನಿಮುನಿಯೊಳ್ ಕಲ್ತಂ ಧನುರ್ವಿದ್ಯೆಯಂ: **ಪಂಪಭಾ,** ೧. ೩೮)

**ಆಲಂಬನ** – ಆಧಾರ (ಎನಗೆ ಆಲಂಬನಮಕ್ಕೆ ಮುಕ್ತಿಪದ ಪರ್ಯಂತಂಬರಂ ಜೈನ ಶಾಸನಂ: **ಅನಂತಪು,** ೧. ೧೧)

**ಆಲಕ್ತಿಕ** – ಮದರಂಗಿ (ಮದೋದ್ಧತ ಮಕುಟಬದ್ಧಚೂಡಾಮಣಿಕಿರಣಚರಣ ಆಲಕ್ತಿಕರಾಗಮುಂ ಸೀತಾತರಂಗಿಣೀ ತರಂಗೋತ್ತರೆಯುಂ: .. .. ತನಗೆ ಸಹಜಾಭರಣಮಾಗೆ: **ಮಲ್ಲಿನಾಪು,** ೩. ೨೧ ವ)

**ಆಲಜಾಲ** – ಆಗದ ಹೋಗದ ಕಲ್ಪನೆ (ಎಂದಿವು ಮೊದಲಾಗಿ ಪಲವುಂ ಆಲಜಾಲಂಗಳಂ ಎನ್ನೊಳ್ ಚಿಂತಿಸುತ್ತುಂ ಇರ್ಪನ್ನೆಗಂ: **ಕಾದಂಸಂ,** ೭. ೨೦ ವ)

**ಆಲವಾಲ** – ಮರದ ಸುತ್ತಣ ಪಾತಿ (ಪರಿವೃತಮಾದ ತದ್ವನಧಿ ವಾರಿಸಮುನ್ಮೀಳಿತ ಆಲವಾಲದಂತಿರೆ: **ಶಬರಶಂ,** ೧. ೩೫)

**ಆಲಾನ** – ಆನೆಯನ್ನು ಕಟ್ಟುವ ಕಂಬ (ಕುಮಾರಕುಂಜರನ ಮನಃಕುಂಜರ ಆಲನಸ್ತಂಭಮಾಗೆಯುಂ .. .. ಓಲಾಡುತ್ತುಮಿರೆ: **ನೇಮಿನಾಪು,** ೬. ೭೯ ವ)

**ಆಲಾಪ** – ಮಾತು (ಸಲ್ಲಕ್ಷಣ ಆಲಾಪದಿಂ ಶಸ್ತ್ರವಿಶೇಷಾಶ್ತ್ರಪ್ರಪಂಚಪ್ರವಚದೆ ನಿಸೆಯಂ ನೂಂಕಿದಂ ಮಂತ್ರಲಕ್ಷಂ: **ರಾಜಶೇವಿ,** ೬. ೨೯)

**ಆಲಾಪ ಕಳಾ** – ಮಾತಿನ ಮೂಲಕ ಹೇಳುವ ಕಲೆ, ಕಾವ್ಯಕಲೆ (ಸಕಳಾಳಾಪಕಲಾಕಳಾಪಕಥಿತ ವ್ಯಾವೃತ್ತಿಯೊಳ್ ಕೂಡಿ: **ಕವಿರಾಮಾ,** ೧. ೧೫೦)

**ಆಲಿ** – ಕಣ್ಗುಡ್ಡೆ (ಬಿಗಿದು ಅಮರ್ದಿರ್ದ ತೋಳ್ ಸಡಿಲೆ ಜೋಲೆ ಮೊಗಂ ಮೊಗದೊಇಂದಂ ಒಯ್ಯಗೊಯ್ಯಗೆ ನಗೆಗಣ್ಗಳ ಆಲಿ ಮಗುೞ್ದಂತಿರೆ ಮುಚ್ಚಿರೆ: **ಪಂಪಭಾ,** ೨. ೧೯); ಕಣ್ಣು (ಪದೆದಾಂ ನೋಡಟಿದೆಂ ಆತನಿರ್ದ ದೆಸೆಯಂ ನಟ್ಟ ಆಲಿ ಬೀೞ್ವನ್ನೆಗಂ: **ಕಾದಂಸಂ,** ೪. ೨೯); ಆಲಿಕಲ್ಲು (ಸುರಧನು ತಳಿರ್ದೋರಣವಾಲಿ ರಂಗೋಲಿ ಬದ್ವಣವಣಂ ಜಳಧರರವಮಾಗೆ: **ಚಂದ್ರಪ್ರಪು,** ೪. ೪೨)

**ಆಲಿಂಗನಗೆಯ್** – ತಬ್ಬಿಕೊ (ಪರಮಾಶೀರ್ವಚನ ಶತಸಹಸ್ರಂಗಳಿಂ ಪರಸಿ ಪುನಃಪುನರಾಲಿಂಗನಂಗೆಯ್ದು: **ಗದಾಯು,** ೩. ೮೪ ವ)

**ಆಲಿಕಲ್** – ಗಟ್ಟಿಯಾದ ಮಳೆಯ ಹನಿ (ಬಣ್ಣವುರಂ ತೀವಿದ ಮಾಟಿಯಾಯ್ತು .. .. ಇಂದ್ರಗೋಪವಿಳಾಸಂಗಳಿಂ ಆಲಿಕಲ್ಲ ಪರಲಿಂ ಕಾರೊಳ್ ಮಹೀಮಂಡಲಂ; **ಪಂಪಭಾ,** ೭. ೨೪)

**ಆಲಿಕೋಡು** – ಆಲಿಕಲ್ಲಿನಂತೆ ತಣ್ಣಗಾಗು ತಣ್ಣೇಟಲೊಳ್ ಆಲಿಕೋಡೆ ತದೀಯ ಜ್ವಾಲೆ: **ಲೀಲಾವತಿ,** ೮. ೪೪)

**ಆಲಿನೀರ್** – ತಣ್ಣನೆಯ ನೀರು, ಮಂಜಿನ ನೀರು (ಪೂವಿನಂಬಿನ ಕೋಳ್ಗಂ ತಳಿವ ಆಲಿನೀರ್ಗಂ ಅಲರ್ವ ಆಸಿಂಗಂ: **ಆದಿಪು,** ೧. ೭೫); ಕಣ್ಣೀರು (ತಣ್ಗರಗದ ತಣ್ಗೋಡುವಾಲಿನೀರಂ ಆರ್ಪನಿತಂ ಕುಡಿದು: **ಧರ್ಮಾಮೃ,** ೧. ೧೨೦ ವ)

**ಆಲಿಪ್ತ** – ಬೆರಸಿದ (ಜತುಗೇಹಾನಲದಾಹದಿಂ ವಿಷವಿಶೇಷ ಆಲಿಪ್ತ ಗುಪ್ತಾನ್ನದಿಂ ಕೃತಕದ್ಯೂತವಿನೋದದಿಂ ದ್ರುಪದಜಾ ಕೇಶಾಂಬರ ಆಕೃಷ್ಟಿಯಿಂ ಧೃತರಾಷ್ಟ್ರಾತ್ಮಜ ಪಾಂಡುರಾಜಸುತರಂ ಮುನ್ನಂ ಕೊಲಲ್ಕೊಡ್ಡಿದಯ್: **ಗದಾಯು,** ೭. ೪೧)

**ಆಲಿವರಲ್** – ಆಲಿಕಲ್ಲು (ಜಳದಾಗಮಪ್ರಸೂಚಕಂಗಳಪ್ಪ ಆಲಿವರಲ್ಗಳವರಲ್ಗಳೆಂದುಂ ಸರೋಜವನದಿಂ ಶಾಲಿವನಕ್ಕೆ ಪರಿವ ಪರಿಕಾಲ್ಗಳಂ ಮೆರೆದು ಮುರಿದು: **ಸುಕುಮಾಚ,** ೧೦. ೫೭ ವ)

**ಆಲಿವಟೆ** – ಆಲಿಕಲ್ಲಿನ ಮಳೆ (ಕೃಷ್ಣನ ಮೇಲೆ ಮೊದಲ್ದುದೆಂದು ಕಪ್ಪುರವಟೆಯಂತಿರೆ ಆಲಿವಟೆಯಂತಿರೆ ಅಲರ್ವಟೆ: **ಜಗನ್ನಾವಿ,** ೧೪. ೯೮)

**ಆಲಿಸು** – ಗಮನವಿರಿಸಿ ಕೇಳು (ಧನುರ್ಲತಾಗುಣನಿನಾದಮಂ ಆಲಿಸಿ ಕೇಳಲುಳ: **ಪಂಪಭಾ,** ೧. ೧೪೨)

**ಆಲೀಢ** – ರುಚಿ ನೋಡಿದ, ತಿಂದ (ಆರಾತಿ ನೃಪಮಣಿಮಯಕಿರೀಟಪ್ರಭಾಲೀಢ ಚಳನ ನಳಿನಯುಗ್ಮಂ: **ಸುಕುಮಾಚ,** ೧. ೭೯ ವ); ಬಾಣ ಬಿಡುವಾಗ ಬಲ ಮೊಳಕಾಲನ್ನು ಮುಂದೆ ಚಾಚಿ ಎಡಗಾಲನ್ನು ಹಿಂದಿಟ್ಟು ನಿಲ್ಲುವುದು (ಬಡತನವೆಂಬುದು ಸತಿಯರ ನಡುವಿನೊಳ್ ಆಲೀಢವು ಅಲಗುವಿನ್ನಣದೊಳ್ .. .. ಅಲ್ಲದಿಲ್ಲಾ ನಾಡೊಳ್: **ಧರ್ಮಪ,** ೧. ೪೩); ಆವರಿಸಿದ (ಅಮರೀನೀಲಾಲಕ

ಆಲೀಢಪಾದಯುಗಂ ತತ್ಕುಚಕೂಟಘಟ್ಟಿತ ವಿಶಾಲೋರುಸ್ಸ್ಥಲಂ: **ಆದಿಪು,** ೫. ೭೧)

**ಆಲೇಪನ** – ಬಳಿಯುವಿಕೆ (ತರವೇಟ್ ದಿವ್ಯಾಂಬರ ಆಲೇಪನಮೃಗಮದಗಂಧಂಗಳಂ: **ಅಜಿತಪು,** ೫. ೭೯)

**ಆಲೇಹನಂಗೆಯ್** – ನೆಕ್ಕು (ಆಘ್ರಾಣಮಂ ಮಾಡಿಯುಂ ಮಗುಟಿಸ್ದಿಂ ಆಲೇಹನಂಗೈದುಂ ಎಟ್ಟಿಚೆಸಿ ತೆರೆದ ಮೊಲೆಯಂ ಸಾರ್ಚಿ: **ಪುಷ್ಪದಂಪು,** ೩. ೭೬ ವ)

**ಅಲೋಕ** – ನೋಡುವುದು (ಅವಿಶ್ರಾಂತ ದೃಷ್ಟಿಗಳಿಂ ನೋಡುತುಂ ಎಯ್ದೆವರ್ಪುದುಂ ಅಪೂರ್ವಾಲೋಕದಿಂದಾಗಳ್: **ಸುಕುಮಾಚ,** ೧೧. ೨); ಕಾಂತಿ (ಆಲೋಕಮ ಟಜೆಗೆ ಬೆಳಗುಂ ದ್ಯುತಿಯುಂ; **ಅಭಿಧಾವ,** ೩. ೧. ೬೬); ಜ್ಞಾನ (ಪದದಿಂ ಅರ್ಥಂ ಅರ್ಥದೆ ತತ್ವಾಲೋಕಂ ತತ್ವಾಲೋಕದಿಂ ಆಕಾಂಕ್ಷಿಪ ಮುಕ್ತಿಯಕ್ಕುಂ: **ಶಮ್ದಮದ,** ೧೦)

**ಆಲೋಕನ** – ನೋಡುವುದು (ಜಗದಾಲೋಕನ ದರ್ಪಣಂ ಪ್ರಥಮದಿಕ್ಕಾಂತತಾನನಂ: **ಅಜಿತಪು,** ೬. ೪೨)

**ಆಲೋಕಿಸು** – ನೋಡು (ಪಲವುಂ ವೀಧಿಗಳವಿಚಿತ್ರ ವಿಭ್ರಮಮಂ ಆ ಶೈಲಪತಿ ಆಲೋಕಿಸುತುಂ: **ಗಿರಿಜಾಕ,** ೪. ೧೧೧)

**ಆಲೋಚಿಸು** – ವಿಚಾರಮಾಡು (ನೆಗಟ್ವೆ ಕಜ್ಜಮಾವುದುಮಂ ನಿಮ್ಮಜ್ಜನೊಳಲೋಚಿಸಿ ನೆಗಟ್ಪುದು: **ಗದಾಯು,** ೪. ೧೩ ವ)

**ಆಲೋಡನೆ** – ಕಲಕುವುದು (ಕಲಂಕು–ಆಲೋಡನೇ: **ಶಬ್ದಮದ,** ಧಾ, ೧೭)

**ಆಲೋಲ** – ಅಲುಗಾಡುವ (ಆಲೋಲ ಆಕೀರ್ಣ ನೀಲಾಳಕಂ ಅಮಳಿನ ಗಂಡಸ್ಥಳೀಪಾತಿತ ಆಟಕಂ ಆಲಂಬ ಶ್ರೋತಕಂ: **ಉದ್ಘಟಕಾ,** ೮. ೧೨೨)

**ಆವಗಂ** – ಯಾವಾಗಲೂ (ಕನಕನಂದಿಮುನೀಂದ್ರನ ಹೃದ್ಯಮಪ್ಪ ವಿದ್ಯಾವಳಿಯಂ ಪವಣ್ಗೊಳಿಪೊಡೆ ಅಂಬುಜಸೂನುಗೆ ಅಳುಂಬಮಾವಗಂ: **ಶಾಂತೀಶ್ವಪು,** ೧. ೨೨); ಬಹಳವಾಗಿ (ನಾನಾ ವಿಧದ ಪದಪಿನೊಳ್ ಹರಿಗಾವಗಮಾಜೆದುದು ಪಥಪರಿಶ್ರಮಮೆಲ್ಲಂ: **ಪಂಪಭಾ,** ೯. ೨೮)

**ಆವಗೆ** – ಮಡಕೆ ಸುಡುವ ಕುಂಬಾರನ ಒಲೆ (ಜೀಮೂತಂಗಳೆಲ್ಲಂ ತೆರಳ್ದೋಡಿದೊಡೆ ಅಗ್ನಿದೇವಂ ಆವಗೆಯ ಕಿರ್ಚಿನೊಳಂತೆ ಒಳಗೊಳಗೆ ಅಳುರ್ದು: **ಪಂಪಭಾ,** ೫. ೯೬ ವ)

**ಆವಗೆಯುರಿ** – ಆವಗೆಗಿಚ್ಚು (ಫಣಿಕೇತನನಿರ್ದಟಿಲೊಂದು ತನ್ನಂ ಆವಗೆಯುರಿಯಟ್ಟಿವೋಲಳುರೆ: **ಪಂಪಭಾ,** ೧೨. ೧೭೦)

**ಆವಟ** – ನಟನೆ (ತೃಷಿತ ಪಥಿಕ ಪುಷ್ಪಾಯುಧ ಖಾತಾವಟಮೆನಲ್ ಎನಸುಂ ಕುಸುಮಾವಳಿಯ ಗಭೀರ ನಾಭಿಮಂಡಳಮೆಸೆಗುಂ: **ಕುಸುಮಾಕಾ,** ೧೨. ೫೩)

**ಆವಡಿ** – ತೊಂದರೆ (ಒಂದು ಆವಿಜೆಯೆ ಕೆಡೆದು ಬೀದಿಯೊಳ್ ಆವಡಿವಡುವುದುಮದೀಗಳಾದುಗದುದೆ ನಿಗಂ: **ವರ್ಧಮಾಪು,** ೨. ೪೬)

**ಆವಣ** – ಆಪಣ, ಅಂಗಡಿ (ಆವರದ ಎಡೆಯ ಆವಣಂಗಳೊಳ್ ಒಳವೆಂದುಂ: **ಹರಿವಂಶ,** ೧. ೨೪)

**ಆವದಿವಡು** – ಕಷ್ಟಪಡು (ಜಿನಧರ್ಮಮನೆಂತುಂ ಒಲ್ಲದೆ ಆವದಿವಡುವಂಗೆ ಶಾಶ್ವತಸುಖಂ ದೊರೆಕೊಂಡೊಡಂ ಒಲ್ಲದಂದದಿಂ: **ಸಮಯಪ,** ೧೫. ೬೦)

**ಆವರ** – ಅಲ್ಲಿಯವರೆಗೆ (ಆವರದ ಎಡೆಯ ಆವಣಂಗಳೊಳ್ ಒಳವೆಂದುಂ: **ಹರಿವಂಶ,** ೧. ೨೪)

**ಆವರಿಸು** – ಸುತ್ತುವರಿ, ವ್ಯಾಪಿಸು (ಅವನ ಸೈನ್ಯದೊಳಾಚರಿಸಿದ ಧೂಳಿ ಪೊಟ್ಟುವುದಂಭೋನಿಧಿಯಂ: ಆದಿಪು, ೧೩. ೭೪); ಪ್ರಾಪ್ತವಾಗು (ಗುರೂಪದೇಶಮಾವರಿಸೆ ಜಿನೇಂದ್ರಭಕ್ತಿ ಪೊಜಪೊಣ್ಮೆ ದಯಾರಸಂ: **ಆದಿಪು,** ೫. ೫೩)

**ಆವರೆಗೊಂಬು** – ತಂಗಡಿ ಗಿಡದ ಕೊಂಬೆ (ತುಜುಗಿರ್ಧಾವರೆಗೊಂಬಂ ಮುಜಿದು ನೆಟಲ್ಮಾಡಿಕೊಂಡು ನಡೆವರ್ ಪಥಿಕರ್: **ಜಗನ್ನಾವಿ,** ೧೭. ೬೯)

**ಆವರ್ಜನ** – ಬಗ್ಗಿಸುವುದು (ದುರ್ಜಯರಿಪು ನೃಪಶೌರ್ಯೋನ್ನಮನ್ಮಸ್ತಕ ಆವರ್ಜನ ವಾಂಛಾದುರ್ಧರಂ; **ಆದಿಪು,** ೧೪. ೧೯)

**ಆವರ್ಜಿಸು** – ಸಂಪಾದಿಸು (ಭುವನಕ್ಕಾಶ್ಚರ್ಯಮಪ್ಪಂತು ಕೀರ್ತಿಯಂ ಆರ್ಜಿಸುತಿರ್ಪುದು ಆವ ಚರಿತಪ್ರಾರಂಭದಿಂ: **ಅಜಿತಪು,** ೧೨. ೧೧)

**ಆವರ್ತ** – ಸುಳಿ (ಸಲಿಲಭ್ರಮಂ ಆವರ್ತಂ: **ಅಭಿಧಾವ,** ೧. ೪. ೧೪)

**ಆವರ್ತನ** – ಸುತ್ತುವುದು (ಆವರ್ತನ ಪರಿವರ್ತನದಿಂ ದುರಿತವರ್ತಿಯಾಗಿ: **ಸುಕುಮಾಚ,** ೫. ೩೨ ವ)

**ಆವರ್ತನಸಿದ್ಧಿ** – ಸುಳಿಯಂತಿರುವುದು; ಸುಳಿಗಳನ್ನು ಹೊಂದಿರುವುದು (ಗಂಭೀರಗುಣದೊಳಂ ಆವರ್ತನಸಿದ್ಧಿಯೊಳಂ ಜಳನಿಧಿಯನೆ ಪೋಲ್ವ ಶರಣಾಗತ ಜಳಧಿಯ ನಿಮ್ಮ ನಾಭಿ ಚೆಲ್ವಿಂಗೆ ತಾನೆ ನಾಭಿಯಾದುದು: **ಪಂಪಭಾ,** ೨. ೩೯ ವ)

**ಆವರ್ತಿಸು** – ವ್ಯಾಪಿಸು (ಶಂತನು ತನ್ನದೊಂದು ಸವಿಗಂ ಸೋಲಕ್ಕಂ ಇತ್ತಂ ನಿಜಕ್ರಮಮಂ ತನ್ನಯ ಬೇಟದಾಕೆಯ ಮಗಂಗೆ ಎಂಬೊಂದು ಅಪಖ್ಯಾತಿ ಲೋಕಮಂ ಆವರ್ತಿಸೆ: **ಪಂಪಭಾ,** ೧. ೭೧); ಮರಳಿ ಬರುವಂತೆ ಮಾಡು, ಆಹ್ವಾನಿಸು (ಜಯಮಂ ಬಯಸುವೊಡಂ ಮಾರಿಯಂ ಆವರ್ತಿಸಿದರ್ ಎಂಬ ನಾಣ್ಣುಡಿಗಂ ಅಳುರ್ಚಿಯೆ: **ಶಾಂತಿಪು,** ೩. ೭೨)

**ಆವಲ್** – ಕೆಂದಾವರೆ (ತೀವಿದ ತಿಳಿಗೊಳದಿಂ ಪೊನ್ದಾವರೆಗೊಳದಿಂದ ಅರಲ್ದ ನೆಯ್ದಿಲ್ಗೊಳದಿಂದ ಅದು ಆವಲ್ಗೊಳದಿಂ ಚೆಲ್ವಿಂಗಾವಾಸಮೆನಿಪ್ಪವ ಒಪ್ಪುವಾ ನಾಡೂರ್ಗಳ್: **ಪಂಪರಾ,** ೧. ೧೦೪)

**ಆವಲ್ಗೊಳ** – ಕೆಂದಾವರೆಯ ಕೊಳ (ಪೋದಿರುಳೊಳ್ ಪೊಂದಾವರೆಗೊಳದಂಚೆ ಕಟಲ್ದ ಆವಲ್ಗೊಳದೊಳಗೆ ನಲಿವ ಕನಸಂ ಕಂಡೆಂ: **ಯಶೋಧಚ,** ೩. ೯)

**ಅವಶೀರ್ಣ** – ನಾಶವಾದ (ಸಮುಜ್ಜ್ವಳಧೈರ್ಯದೊಳಿಂತೆ ವಿಭಿನ್ನತೆವೆತ್ತಿರೆ ತಾಂ ಅವಶೀರ್ಣಶರೀರಭಾವರಾದರ್ ಮುನಿಪರ್: **ಶಾಂತೀಶ್ವಪು,** ೧೩. ೧೧೪)

**ಆವಶ್ಯಕ** – [ಜೈನ] ದೀಕ್ಷೆ ವಹಿಸುವವನ ಆರು ಆವಶ್ಯಕ ಗುಣಗಳು (ಸಾಮಾಯಿಕ ಚತುರ್ವಿಂಶತಿಸ್ತವನ ವಂದನ ಪರಿಕ್ರಮಂ ಪ್ರತ್ಯಾಖ್ಯಾನ ಕಾಯೋತ್ಸರ್ಗಗಳೆಂಬ ಆಜು ಆವಶ್ಯಕಂಗಳುಂ: **ಹರಿವಂಶ,** ೧೪. ೫೨ ವ)

**ಆವಸಥ** – ವಾಸಸ್ಥಾನ, ಮನೆ (ಅತ್ತ ಸುರೇಶ್ವರ ಆವಸಥಂ ಇತ್ತ ಮಹೀತಳಂ ಉತ್ತ ಪನ್ನಗೋದಾತ್ತಸಮಸ್ತಲೋಕಂ: **ಪಂಪಭಾ,** ೧. ೭೫)

**ಅವಸ್ರಂಸನ** – ಕೆಳಕ್ಕೆ ಜಾರುವುದು (ಬಟೆಲ್ಚು – ಅವಸ್ರಂಸನೇ: **ಶಬ್ದಮದ,** ಧಾ ೨೦೩)

**ಆವಹ** – ಒದಗಿಸುವ; ಉಂಟುಮಾಡುವ (ಹೇಮಕುಕ್ಷಿಕ್ಕೀಳದಿಂದೆ ತೆಂಕಣದೆಸೆಯೊಳ್ ಮಹಿ ಭರತಂ ಷಟ್ಖಮಥಾವಹಂ ಅಲ್ಲಿ ಶುಭಾವಹಂ ವಿನೀತಾಖಂಡಂ: **ಸುಕುಮಾಚ,** ೧. ೬೮); ಕೂಡಿದ

**ಆವಹನ** – ಬರಮಾಡಿಕೊಳ್ಳು (ಆ ವಿಪ್ರಘೋಷಣಂ ಸ್ಮೃತಿಗೆ ಆವಹನಮಾದವೋಲ್ ಅಜಪೋತಂ ಭಾವಿಸಿದುದು ಆಂ ಯಶೋಧರದೇವಂ ಎನ್ನಾತ್ಮಜಂ ಯಶೋಮತಿಯೀತಂ: **ಯಶೋಧಚ,** ३. ೬೧)

**ಆವಳಿ** – ಸಮೂಹ (ಸಮಯಸಮೂಹಂ ಅಸಂಖ್ಯಾತಮಾದೊಡೆ ಆವಳಿಯೆನಿಕ್ಕು: **ಪಂಪರಾ,** ೧. ೪೯)

**ಆವಾಪ** – ಪಾತಿ, ಮಡಿ (ಏಜೆಸಿದಂ ಮುರಾರಿ .. .. ಸಜಯವೃಕ್ಷ ಆವಾಪಮಂ ಚಾಪಮಂ: **ಜಗನ್ನಾವಿ,** ೧೨. ೭)

**ಆವಾಪ್ತಿ** – ಸಿದ್ಧಿ (ದೇವಿಯರೊಂದು ಅಭಿಲಷಿತಫಲ ಆವಾಪ್ತಿಗೆ ದೇವ ನಿಮ್ಮ ದಯೆಗೆಯ್ದು ಫಳಂ ಕೇವಲ ಶುಭಸೂಚಕಂ: **ಮಲ್ಲಿನಾಪು,** ೪. ೨೫)

**ಆವಾಸ** – ಮನೆ (ದೇವೇಂದ್ರರ್ ತಂತಮ್ಮಾವಾಸಂಗಳ್ಗೆ ಪರೆದು ಪೋದರ್: **ಶಾಂತಿಪು,** ೮. ೧೨೩ ವ)

**ಆವಾಹ** – ಸೇತುವೆ (ಸ್ಥಿರಬಂಧಂ ಸೇತು ಪಯಃಸರಣಿಯದಕ್ಕುಂ ಪ್ರಣಳಿ ಆವಾಹಂ: **ಅಭಿಧಾವ,** ೧. ೪. ೧೭)

**ಆವಾಳ** – ಮರದ ಸುತ್ತಲಿನ ಪಾತಿ (ಎತ್ತ ನೋಡಿದೊಡಂ ತಣ್ಬುಳಿಲ್ ಎಲ್ಲಿ ನೊಡದಡಂ ಆವಾಳಂಗಳ್ ಎತ್ತ ನೋಡಿದೊಡಂ ಪೋಗೋಳಂ: **ಆಚವರ್ಧ,** ೧. ३३)

**ಆವಿಗೆಗಿಚ್ಚು** – ಆವಗೆಯ ಬೆಂಕಿ (ಸವಸಂದ ಆವಿಗೆಗಿಚ್ಚು ಮೆಲ್ಲೆರ್ದೆಯ ಸೂಡು: **ಸೂಕ್ತಿಸುಧಾ,** ೧೫. ೫೪)

**ಆವಿದ್ಧ** – ತೂತುಮಾಡಿದ (ರೋದೋಂತರ್ಭಾಗಮೆಲ್ಲಂ ಮಣಿಮಯರುಚಿಯಿಂ ಚಿತ್ರಸಂಕಾಶಮಾದತ್ತು ಆದಂ ದಿಗ್ಭಾಗಮೆಲ್ಲಂ ಪಟಹರವದಿಂ ಎತ್ತೆತ್ತಂ ಆವಿದ್ಧಮಾದತ್ತು: **ಸುಕುಮಾಚ,** ೮. ೬೪); ವಕ್ರವಾದ, ತಿರುಗಿಸಿದ (ಭುಜದಂಡ ಆವಿದ್ಧ ದಿಕ್ಚಕ್ರದೊಳ್ ಇಭಮದ ಧಾರಾ ಜಲ ಕ್ಲಿನ್ನ ವೀರಧ್ವಜಿನೀಪಾದಾಹತವಲಯಮೃದಿತ ಮೃತ್ಪಿಂಡಮಂ: **ಅಜಿತಪು,** ೯. ೯)

**ಆವಿರ್ಭಾವ** – ಉಂಟಾಗುವುದು (ತಪಃಪ್ರಭಾವಮಹಿಮಾ ಆವಿರ್ಭಾವಮಂ ತಾಳ್ದಿದರ್: **ಸುಕುಮಾಚ,** ೯. ೯)

**ಆವಿರ್ಭೂತ** – ಉಂಟಾದ (ದಿವಿಜ ಮನುಜ ತಿರ್ಯಗ್ವಿನೇಯನುಂ ಆವಿರ್ಭೂತ ಚತುಸ್ತ್ರಿಂಶದತಿಶಯನುಂ: **ಅಜಿತಪು,** ೭. ೨೦ ವ)

**ಆವಿಲ** – ಕದಡಿದ, ಒಂಡು (ಕೌರವಕುಲಹಿಮಕರ ಆವಿಲಪ್ರಚಯವರ್ಷವಾರಿದನಪ್ಪ ಪವನತನಯಂ ಬದ್ಧವಪುವಾಗಿ ದುರ್ಯೋಧನಾನುಜರಂ ಪೆರ್ವಸರೊಳೆ ಕರೆದು ಮೂದಲಿಸೆ: **ಪಂಪಭಾ,** ೧೨. ೧೪೪ ವ)

**ಆವಿಲೆ** – ಕೂಡಿದವಳು (ಲಾವಣ್ಯರಸಾವಿಲೆಯಂ .. .. ಚಂದ್ರಮತಿಯನಿತ್ತಂ ಅತೀಂದ್ರಂ: **ಪಂಪರಾ,** ೧೦. ೧೦೯)

**ಆವಿಷ್ಕರಣ** – ಪ್ರತ್ಯಕ್ಷವಾಗುವುದು; ಸ್ಪಷ್ಟಪಡಿಸುವುದು (ಸ್ವಗುಣ ಪ್ರಚ್ಛಾದನಂ ಅನ್ಯಗುಣ ಆವಿಷ್ಕರಣಂ .. .. ಆಸ್ರವಮಕ್ಕುಂ: **ಸುಕುಮಾಚ,** ೮. ೨೪)

**ಆವಿಷ್ಕೃತ** – ಕಾಣಿಸಿಕೊಂಡ, ಸ್ಪಷ್ಟಗೊಂಡ (ಈವುದು ಅತಿವಿಶದವೃತ್ತಿಗುಣ ಆವಿಷ್ಕೃತನಪ್ಪ ಸುತನಂ: **ಮಲ್ಲಿನಾಪು,** ೪. ३೧)

**ಆವಿಷ್ಟೆ** – ಆವೇಶಭರಿತೆ (ಕಣ್ಗಳಿಂದುಗುತರ್ಪ ಕಣ್ಣಬಿಗಿಡಿಗಳಿಂದ ಉರಿಪುವಂತೆ ಅವನಂ ನೀಡುಂ ನೋಡುತ್ತ ಆವಿಷ್ಟೆಯಂತೆ ಎನ್ನಂ ಆನಡೆಯದೆ: **ಕಾದಂಸಂ,** ೭. ೨೨ ವ)

**ಆವಿಳ** – ಕಲುಷಿತವಾದ (ಬಾಡಬಾನಳ ಆವಿಳಜಳಮಂ ಮನಂ ಬಯಸಿ ನೋಡಿದಂ ಅರ್ಣವನಂ ಗುಣಾರ್ಣವಂ: **ಪಂಪಭಾ,** ೪. ೨೫); ಕಶ್ಮಲ, ಒಂಡು (ಅಸಹ್ಯಮೆನಿಪ ಅತಿದುಃಖದಿಂದಂ ಆವಿಳಮೆನಿರ್ಪುದು ಅಗ್ಗದ ವಿವೇಕಿಗಳಪ್ಪರ ಮಾನಸಂ: **ಕಾದಂಬ,** ೮. ೧೪೪)

**ಆವೀಕ್ಷಿತ** – ನೋಡಿದ (ಕೃತ ನಿತ್ಯದಾನಂ ಆವೀಕ್ಷಿತ ಘೃತಂ ಆಸ್ಪೃಷ್ಟಕಪಿಳಂ ಒಯ್ಯನೆ ಸಾರ್ದಂ .. .. ಅರಸಿಯನರಸಂ: **ಯಶೋಧಚ,** ೨. ೬೬)

**ಆವು** – ಹಸು (ನಮೆವ ಆವಿನ ಮೆಯ್ಯೊಳ್ ತಲೆಮಟ್ಟಂತೆಂತು ನಿಂದರಾ ದೇವರ್ಕಳ್: **ಸಮಯಪ,** ೯. ೬೨)

**ಅವುಕ** – ತಂದೆ (ವಾರಿಯಂ ವಡಬಾಸ್ಯಂ ತವಿಪಂತೆ ಆವುಕನಂ ಈ ನಿರ್ಬಂಧದಿಂ ಬಂಧದಿಂ ಬಿಡಿಕುಂ: **ಜಗನ್ನಾವಿ,** ೨. ೮೫)

**ಆವುತಿ** – ಒಂದು ಬಗೆಯ ಅಯುಧ (ಕೃತವಿಧಾಸ್ತ್ರವೀರ ಭಟಕೋಟಿ ಭಯಂಕರಮಾಗೆ ಬೀಸುವ ಆವುತಿಯ ಕಳಂಕಪಂಕದೊಳೆ ಪೆರ್ಚಿದ ಕಟ್ಟಿಲೆ ತೀವ್ರಶಸ್ತ್ರಸಂಹತಿಗಳ ದೀಪ್ತಿಯಿಂ ಬಿಸುಗೆಯಾಗೆ: **ಪಂಪಭಾ,** ೧೦. ೫೦)

**ಆವುದು** – ಯಾವುದು, ಏನು (ನೀನಾರ್ಗೆ ಏನೆಂಬೆ ಆವುದು ಕಾರಣದಿಂದಮೆನ್ನ ದೋಣೆಯಂ ಪೊಕ್ಕಿರ್ದೆ: **ಪಂಪಭಾ,** ೧೨. ೨೦३ ವ)

**ಆವೃತ** – ಹೊದಿಸಲ್ಪಟ್ಟ (ಅಂತು ವಲ್ಕಲ ಆವೃತ ಕಟಿತಟನುಮಾಗಿರ್ದ ಜಟಾಕಲಾಪನುಮಾಗಿ ತಪೋವನಕ್ಕೆ ಪೋಪ ಭಾರ್ಗವಂ: **ಪಂಪಭಾ,** ೨. ४೫ ವ)

**ಆವೆ** – ಆಮೆ, ಕೂರ್ಮ (ಮೀಂ ಆವೆ ಪಂದಿ ಎಂದು ಎನಿತಾನುಂ ತೆಜನಾಗಿ ಡೊಂಬವಿದ್ಯೆಯನಾಡಲ್ ನೀನಜಿವೆ: **ಪಂಪಭಾ,** ೭. ೫೭)

**ಆವೇಗ** – ತ್ವರೆ, ಸಂಭ್ರಮ (ಕಾದಲ್ ನಡೆತರ್ಪ ಆವೇಗದೊಳ್ ಮಮ್ಮಳಿಸಿದ ಪಲವುಂ ರಾಜಚಿಹ್ನಂಗಳಂ ಬೆಳ್ಗೊಡೆಗಳ್ ತಳ್ವೊಯ್ದು ಅದೇಂ ಕಣ್ಗೊಳಿಸಿದುದೋ: **ಪಂಪಭಾ,** ೧३. ३೮); ಉದ್ವೇಗ

**ಆವೇದಿಸು** – ನಿವೇದಿಸು, ಹೇಳು (ಆದಪುದು ಯಾನದೊಳ್ ಮಿತ್ರೋದಯಂ ಈ ತೆಜದಿ ಭುವನಮಿತ್ರಂಗೆ ಎಂದು ಆವೇದಿಸುವಂತಾದುದು: **ಪುಷ್ಪದಂಪು,** ೮. ೨೧)

**ಆವೇಶ** – ಉದ್ವೇಗ (ಆವೇಶಂ ಸಂರಂಭಂ: **ಅಭಿಧಾವ,** ೨. ೨. ೧೬)

**ಆವೇಶನ** – ಶಿಲ್ಪಶಾಲೆ (ಆವೇಶನಾಹ್ವಯಂ ಶಿಲ್ಪಶಾಲೆ: **ಅಭಿಧಾವ,** ೧. ೧೦. ೨೦)

**ಆವೇಷ್ಟಿತ** – ಸುತ್ತುವರಿದ (ತಾರಾನಿಕರ ಆವೇಷ್ಟಿತ ತಾರಾಪತಿಯಂ ಸಮಸ್ತಸುರಲೋಕಮುಮಂ ನೇರಿತ್ತು ಬೆಳಗಿ: **ಆದಿಪು,** ೧೬. ४೬)

**ಆವೇಷ್ಟಿಸು** – ಸುತ್ತುವರಿ, ಆವರಿಸು (ಪಾರಿಜಾತ ಶಾಖಾನುಕಾರಿ ಆಜಾನುಶಾಖಾದ್ವಯಮಂ ಆವೇಷ್ಟಿಸಿಯುಂ: **ನೇಮಿನಾಪು,** ೬. ೭೯ ವ)

**ಆವ್ರೀಡ –** ನಾಚಿದ (ಎಂದರಸರ್ ಪಕ್ಕದೊಳ್ ಸುತ್ತುಗೊಂಡು ಬೆಚ್ಚಿ ಬಿಚ್ಚಳಿಸುತ್ತುಂ ಬರೆ ಕಿಂಚಿತ್ ಅವನತಾನನಂ ತದ್ ಆವ್ರೀಡನಾಗಿ: **ಶಾಂತಿಪು,** ೮. ೬೫ ವ)

**ಆವ್ಯಾನ –** ಮುಚ್ಚಿದ, ಆವೃತ (ನೀನಪ್ಪುದನಂಜೆಯದೆ ದಾನವಮಾನವಸುರೇಂದ್ರಮಣಿಮಕುಟತಟ ಆವ್ಯಾನಪದಂಗೆ ಆ ನೆಗಟ್ಟುದಂ ಆನೇತಱೊಳ್ ಎಂತು ನೀಗುವೆಂ ನೀಂ ಬೆಸಸಾ: **ಪಂಪಭಾ,** ೮. ೨೫)

**ಆಶಂಕೆ –** ಸಂದೇಹ (ಬಿದಿ ಸೇತುವಂ ಸಮೆದನೆಂಬಾಶಂಕೆಯಂ ಮಾಡುಗುಂ; **ಶಾಂತಿಪು,** ೯. ೧೫೦)

**ಆಶಂಕೆಗೊಳ್ –** ಗಾಬರಿಯಾಗು (ತಮತಮಗೆ ಭಯಗೊಂಡರ್ ಆಶಂಕೆಗೊಂಡರ್: **ಶಬ್ದಮದ,** ೨೫೬, ಪ್ರ ೨)

**ಆಶಯ –** ಹೃದಯ (ಸಕಳಕಳಾಪ ವಿದ್ಯೋಪದೇಶೋತ್ಸುಕ ಆಶಯಕುಶೇಶಯನಾಗಿರ್ಪನ್ನೆಗಂ: **ಆದಿಪು,** ೮. ೫೫ ವ); ಅಭಿಪ್ರಾಯ, ಭಾವನೆ (ಪರಮ ಕವಿಜ್ಯೇಷ್ಠರಾದರ್ ತದೀಯಾಂಗ್ರಿಪಯೋಜಂಗಳ್ ಮದೀಯಾಶಯ ಮಣಿಭವನಕ್ಕಕ್ಕೆ ಪುಷ್ಪೋಪಹಾರಂ: **ಪಂಪರಾ,** ೧. ೨೮)

**ಆಶಯಕುಶೇಶಯ –** ಹೃದಯ ಕಮಲ (ಸಕಳಕಳಾಪ ವಿದ್ಯೋಪದೇಶೋತ್ಸುಕ ಆಶಯಕುಶೇಶಯನಾಗಿರ್ಪನ್ನೆಗಂ: **ಆದಿಪು,** ೮. ೫೫ ವ)

**ಆಶಾ –** ದಿಕ್ಕು (ವಿಗತ ದಿಗಿಭ ಆಶಾ ದೇಶ ಸಮಸ್ತಂಗತಾರ್ಕಂ ಗಗನ ಪರಿಧಿ ಯಾತ ಪ್ರಾಣವಾತಂ ಶರೀರಂ: **ಪಂಪರಾ,** ೬. ೧೫೬)

**ಆಶಾಂತರಾಳ –** ದಿಕ್ಕುಗಳ ಮಧ್ಯಭಾಗ (ಮಂಗಳ ಭೇರೀರವಂ ಆಶಾಂತರಾಳಮಂ ತೀವುವಿನಂ: **ಮಲ್ಲಿನಾಪು,** ೯. ೧)

**ಆಶಾಂಬರ –** ದಿಕ್ಕುಗಳು ಮತ್ತು ಆಕಾಶ (ಸುರವಂದಿವ್ರಜ ಜೀಯಜೀಯರವರುಂ ಪರಿಪೂರಿಸಿದತ್ತು ಆಶಾಂಬರವಂ: **ಚಂದ್ರಪ್ರಪು,** ೪. ೬೩ ರಗಳೆ); ದಿಗಂಬರ, ನಗ್ನ ಸನ್ಯಾಸಿ ಅಂದು ಅರ್ಕಕೀರ್ತಿಯುಂ .. .. ಮುನಿಪ್ರಧಾನನೊಳ್ ಆಶಾಂಬರನಾದೊಂ: **ಶಾಂತಿಪು,** ೫. ೭೩ ವ)

**ಆಶಾಕರಟಿ –** ದಿಗ್ಗಜ (ಘಟಪ್ರಧ್ವಾನಂ ಆಶಾಕರಟಿನಿಕಟಮಂ ತಾಗೆ ಮಾಮಗಲ್ಯಗೇಯೋತ್ಕಟ ರಾಜದ್ರಾಜಗೇಹಂ ಸೊಗಯಿಸೆ: **ಕರ್ಣನೇಮಿ,** ೨. ೯೫)

**ಆಶಾಚಕ್ರ –** ದಿಙ್ಮಂಡಲ (ವಿತತ ಆಶಾಚಕ್ರಮಂ ಅದ್ವಿತೀಯತೇಜದೊಳೆ ಸತತಂ ಅಕ್ರಮಿಪಾ ಭೂಪತಿಯೊಳ್: **ಆಚವರ್ಧ,** ೧. ೮೦)

**ಆಶಾಭಾಸಂ –** ದಿಕ್ಕುಗಳನ್ನು ಬೆಳಗುವುದು(ಇದಿರೊಳ್ ಕಟ್ಟಿದ ತೋರಣಂ ನಿಜೆದಳಿರ್ ಪೂಗೊಂಚಲ್ ಅಂದಂಬೆತ್ತಿದ ಪೂಮಾಲೆ ಪರಾಗರಾಗಮುದಿತ ಆಶಾಭಾಸಂ: **ಪಂಪಭಾ,** ೫. ೬)

**ಆಶಿ –** ಹಾವಿನ ಹಲ್ಲು (ಆಶೀಶ್ಮಬ್ದಂ .. .. ಭುಜಂಗದಂಷ್ಟ್ರಮುಮಕ್ಕುಂ: **ಅಭಿಧಾವ,** ೩. ೧. ೫೬)

**ಆಶೀರ್ನಿನಾದ –** ಆಶೀರ್ವಾದದ ಧ್ವನಿ (ಆಶೀರ್ನಿನಾದವು ಆಶಾದೇಶಮನೆಯ್ದೆದುದು: **ಪಂಪರಾ,** ೧೪. ೭೨)

**ಆಶೀವಿಷ –** ಹಾವು (ದೋಷಮೆಂಬ ಆಶೀವಿಷಕ್ಕೆ ಪುತ್ತು ಎನಿಸುವಳ್: **ಕಾದಂಬ,** ೩. ೮೬)

**ಆಶೀಸ್ತವ –** ಆಶೀರ್ವಾದ (ಸುರಜಯಸ್ತೋತ್ರಂ ಸುರ ಆಶೀಸ್ತವಂ ಸುರರಾಜೇಂದ್ರಮಹಾವಿಭೂತಿ: **ಆದಿಪು,** ೧೩. ೯೨)

**ಆಶು –** ಬೇಗನೆ, ಜಾಗ್ರತೆ (ಪ್ರಚಂಡಲಯತಾಂಡವ ಕ್ಷುಭಿತಯಾಶು ಯಸ್ಯಾನಯಾ: **ಪಂಪಭಾ,** ೪. ೨೭); ವೇಗ (ಶೀಘ್ರಂ ಸತ್ವರಂ ಆಶು ಚೆಚ್ಚರಂ: **ಅಭಿಧಾವ,** ೨. ೨. ೧೩)

**ಆಶುಗ –** ವಾಯು (ವರ ವೇಣುಗಳೊಂದೊಂದಂ ಪಿರಿದೊರಸಲ್ಕೊಗೆದ ರಂಧ್ರವಾಶುಗನಿಂ ಪೂಂಕರಿಸಲ್: **ತ್ರಿಷಷ್ಟಿಪು,** ೨೭. ೧೧); ಬಾಣ (ಆಶುಗಾಶನನಿಭ ಆಶುಗಮಂ ಆಶುಗಾಸನದೊಳ್ ಓಸರಿಸದೆ ತೊಡರ್ಚಿ ಸಾರ್ಚಿ ತೆಗೆ ನೆಱೆದು ನಿಂದು: **ರಾಜಶೇವಿ,** ೬. ೯೭ ವ)

**ಆಶುಗತ್ವ –** ಶೀಘ್ರತೆ (ಅರಿಗಳಸುಪವನನಂ ನಾನಿರದೊಕ್ಕೆದ ಆಶುಗತ್ವಮಂ ಪ್ರಕಟಿಸಿದತ್ತು: **ರಾಜಶೇವಿ,** ೬. ೪೯)

**ಆಶುಗಮಿತ್ರ –** ಬೆಂಕಿ (ಅರೆದೆಱೆದ ಉರಿಗಣ್ಣಿಂ ಕರಂ ಪೊಣ್ಮೆ ನೀಳ್ದು ಆಶುಗಮಿತ್ರಂ: **ಶಬರಶಂ,** ೨. ೯)

**ಆಶುಗಾಶನ –** [ಆಶುಗ+ಅಶನ] ಗಾಳಿಯನ್ನೇ ಆಹಾರವಾಗಿ ಉಳ್ಳದ್ದು, ಹಾವು (ಆಶುಗಾಶನನಿಭ ಆಶುಗಮಂ ಆಶುಗಾಸನದೊಳ್ ಓಸರಿಸದೆ ತೊಡರ್ಚಿ ಸಾರ್ಚಿ ತೆಗೆ ನೆಱೆದು ನಿಂದು: **ರಾಜಶೇವಿ,** ೬. ೯೭ ವ)

**ಆಶುಗಾಸನ –** ಬಾಣಾಸನ, ಬಿಲ್ಲು (ಆಶುಗಾಶನನಿಭ ಆಶುಗಮಂ ಆಶುಗಾಸನದೊಳ್ ಓಸರಿಸದೆ ತೊಡರ್ಚಿ ಸಾರ್ಚಿ ತೆಗೆ ನೆಱೆದು ನಿಂದು: **ರಾಜಶೇವಿ,** ೬. ೯೭ ವ)

**ಆಶುಶುಕ್ಷಣಿ –** ಬೆಂಕಿ, ಅಗ್ನಿ (ಒಣಗಿದುದೊಂದು ಪೆರ್ವಿದಿರ ಪೆರ್ವೊದಱಿಂ ಮೊರೆದುರ್ವುವ ಆಶುಶುಕ್ಷಣಿಯವೊಲ್ ಖಟ್ಗಿನಿವಹಕ್ಕೆ ರಥಕ್ಕೆ ದಟಿಕ್ಕೆ: **ಪಂಪಭಾ,** ೧೧. ೯೪)

**ಆಶೆವಡು –** ಬಯಸು, ಇಚ್ಛಿಸು (ಭವ್ಯಜನಂಗಳ್ ಆಶೆವಡುತಿರ್ಪ ಆರ್ಹಂತ್ಯಮುಂ ಸಾರ್ಗುಂ: **ಆದಿಪು,** ೪. ೯೯)

**ಆಶೇಭ –** [ಆಶಾ+ಇಭ] ದಿಕ್ಕರಿ (ಪೊಡೆಯಿಪ್ಪ ಆಭೀಳನಿಸ್ಸಾಳದ ಪಟುರವ ಆಶೇಭಕರ್ಣೋತ್ಕರಂ ಘಿಮ್ಮಿಡೆ: **ಶಾಂತೀಶ್ವಪು,** ೩. ೫೮)

**ಆಶ್ಚರ್ಯ –** ಸೋಜಿಗ (ಚೋದ್ಯಮದು ಆಶ್ಚರ್ಯಂ ಅದ್ಭುತಂ: **ಅಭಿಧಾವ,** ೨. ೨. ೨೫)

**ಆಶ್ರಮ –** ಮುನಿಗಳ ವಾಸಸ್ಥಳ (ಮುನಿಜನ ನಿವಾಸಂ ಆಶ್ರಮಮೆನಿಕ್ಕುಂ: **ಅಭಿಧಾವ,** ೧. ೧೦. ೩)

**ಆಶ್ರಯಣ –** ಆಶ್ರಯ, ಆಸರೆ (ತ್ರಿಜಗದಭಿಷ್ಟುತಂ ತ್ರಿಜಗದಾಶ್ರಯಣಂ ಕಥೆ ಶಾಂತಿನಾಥನಾ: **ಶಾಂತಿಪು,** ೧೨. ೫೫)

**ಆಶ್ರಯಾಶ –** ಆಶ್ರಯದಾತನನ್ನೇ ನುಂಗುವುದು, ಅಗ್ನಿ (ಮೂದೆಱನಾಯ್ತು ವಾಸರದೊಳ್ ಆ ರವಿತೇಜಂ ಆಶ್ರಯಾಶಂ ಆಯ್ತು ಆದಮುಮಪ್ರಚಂಡತರತೇಜಂ ಅದು ಆಸ್ಪದಮಾವ ವಾರ್ಧಿ ಲೀಲೋದಕ ಶೋಷಣೀಯ ಕೃತಮಾಯ್ತು: **ಶಾಂತೀಶ್ವಪು,** ೧. ೧೪೯)

**ಆಶ್ರವ –** ಪುಣ್ಯಾಪಾಪ ರೂಪವಾದ ಕರ್ಮವು ಜೀವನಲ್ಲಿ ಹರಿಯುವುದು (ಸಕಲಬದ್ಧಾಶ್ರವ ನಿರೋಧದಿನಯೋಗಿಕೇವಲಿ ಗುಣಸ್ಥಾನಮಂ ಪೊರ್ದಿ: **ಪಂಪರಾ,** ೧೬. ೭೯ ವ); [ಜೈನ] ಸಪ್ತತತ್ವಗಳಲ್ಲಿ ಒಂದು (ಸಕಲಬದ್ಧಾಶ್ರವ ನಿರೋಧದಿ ಅಯೋಗಿಕೇವಲಿ ಗುಣಸ್ಥಾನಮಂ ಪೊರ್ದಿ: **ಪಂಪರಾ,** ೧೬. ೭೯ ವ), ನೋಡಿ 'ಪಂಚಾಸ್ರವ'

**ಆಶ್ರಿತ –** ಆಶ್ರಯದಲ್ಲಿರುವ (ಆಶ್ರಿತಜನಾಧಾರಂ ಮದಗ್ರಜಂ: **ಸುಕುಮಾಚ,** ೨. ೩೯)

**ಆಶ್ಲಿಷ್ಟ** – ಆಲಿಂಗನಕ್ಕೊಳಗಾದ (ಗೌರೀಲತಾಶ್ಲಿಷ್ಟ ಶಂಕರ ಕಲ್ಪದ್ರುಮನೀಗೆ ಅಭೀಷ್ಟಫಲಮಂ: **ಗದಾಯು,** ೧. ೨); ಒಡಗೂಡಿದ (ಕೃಷ್ಣಲೋಹಿತಜಲಾಶ್ಲಿಷ್ಟಂ ಕರುಪ್ರೋದ್ಭವ ಪ್ರಳಯಜ್ವಾಲಿ .. .. ಹಿಡಿಂಬಾಂತಕಂ: **ಗದಾಯು,** ೧. ೫೫)

**ಆಶ್ಲೇಷ** – ಆಲಿಂಗನ (ಬಿಣ್ಗೊಂಚಲ್ ಆಶ್ಲೇಷನಿಷ್ಠುರಂ ಉದ್ಯತ್ ಕುಚದಂತಿರೆ: **ಲೀಲಾವತಿ,** ೧೪. ೯೩)

**ಆಶ್ವಾಸ** – ಅಧ್ಯಾಯ ಎಂಬರ್ಥದಲ್ಲಿ ಕಾವ್ಯದ ಭಾಗ (ಧರ್ಮಾಮೃತದೊಳ್ ದರ್ಶನವ್ಯಾವರ್ಣನಂ ಪ್ರಥಮಾಶ್ವಾಸಂ: **ಧರ್ಮಾಮೃ.** ೧. ೧೬೨ ವ)

**ಆಶ್ವಾಸನಪರ** – ಸಮಾಧಾನಗೊಳಿಸುವುದರಲ್ಲಿ ಆಶ್ವಾಸನೆ ನೀಡು (ಆಶ್ವಾಸನಪರ ಅಂತಃಪುರ ವೃದ್ಧಾಂಗನಾ ನಿರ್ಷವ್ಯಮಾಣೆಯುಂ: **ಚಂದ್ರಪ್ರಪು,** ૩. ೫೦ ವ)

**ಆಶ್ವಾಸಿಸು** – ಸಮಾಧಾನಪಡಿಸು (ಆಂ ಆಶ್ವಾಸಿಸಿದ ಅನಿತಱೊಲೇನಾ ಚಂದ್ರಮನೆ ನಿನ್ನಂ ಆಶ್ವಾಸಿಸಿದಂ ತಾನೆಂದೊಡೆ ಏನೆಂಬುದೊ: **ಕಾದಂಸಂ,** ೪. ೧೨೩)

**ಆಶ್ವಿಕಬಲ** – ಕುದುರೆ ಸೈನ್ಯ (ಪರಸ್ಪರ ಆರ್ಜಿತಜಾನುಭಾಗರಪ್ಪ ಆಶ್ವಿಕಬಲಸಮನ್ವಿತನಾಗಿ ಮಗರಿಯಂ ಪೊಱಮಟ್ಟು: **ಕಾದಂಬ,** ೮. ೧೦೨ ವ)

**ಆಷಾಢ** – ಒಂದು ಚಾಂದ್ರಮಾನ ತಿಂಗಳು (ಗರ್ಭಾವತರಣಂ ಆಷಾಢ ಬಹುಳ ಬಿದಿಗೆಯುತ್ತರಾಷಾಢ ನಕ್ಷತ್ರದ ಬೆಳಗಪ್ಪ ಜಾವದೊಳ್: **ಆದಿಪು,** ೭. ೩೨ ವ); ಋಷಿಗಳು ಹಿಡಿಯುವ ಮುತ್ತುಗದ ದಂಡ (ಸಾಷಾಢ ಸಪ್ತರ್ಷಿಸಂಕುಳ ಸಂಪೂತವರುಂಧತೀಸ್ಥಿತಿನುತಂ: **ಕಾದಂಸಂ,** ೧. ೮೫)

**ಆಸಂದಿ** – ಪೀಠ (ನಾಡಂ ಬಿಟ್ಟು ಸಪ್ತಾಂಗ ರಾಜ್ಯಮಂ ಈಡಾಡಿ ಸಪತ್ನನಂ ನಿಲಿಸಿ ಸಿಂಹ ಆಸಂದಿಯೊಳ್: **ಪಂಪರಾ,** ೬. ೧೭೦)

**ಆಸನ** – ಪೀಠ (ಆಗ ರಾಜಸುತೆಯಂ ಉಚ್ಚಾಸನದೊಳ್ ಕುಳ್ಳಿರಿಸಿ: **ಗಿರಿಜಾಕ,** ೪. ೪೭); ರಾಜನ ಷಾಡ್ಗುಣ್ಯಗಳಲ್ಲಿ ಒಂದು, ಪರಸ್ಪರ ಯುದ್ಧಕ್ಕೆ ಬಂದೂ ಮೇಲೆ ಬೀಳಲಾರದೆ ನಿಲ್ಲುವುದು (ಅರಿವಿಜಿಗೀಷುಗಳ್ ಒರ್ವರೊರ್ವರ ಮೇಲೆತ್ತಿಯೊತ್ತಲಾಱದೆ ನಿಲ್ವುದು ಆಸನಮೆಂಬುದಕ್ಕುಂ: **ಪಂಚತಂತ್ರ,** ૩೦೭ ವ)

**ಆಸನಂ** – ಔದಾಸೀನ್ಯ (ಪಸುಗೆ ನೆಲಂ ಜಲಂ ಹಯದೊಡಂಬಡು ವಂಚನೆ ಕೇಣಂ ಆಸನಂ ಕೊಸೆ ದೆಸೆ ದಿಟ್ಟಿ ಮುಟ್ಟಿ ಕೆಲಜಂಕೆ ನಿವರ್ತನೆ ಕಾಣ್ಕೆ ಪರ್ವಿದ ಏರ್ವಸನದೊಳಾದ ಬಲ್ಮೆಯೊಳ್ ಒಡಂಬಡೆ ತಳ್ತಿಱಿವಲ್ಲಿ ಮಿಂಚಿನೊಳ್ ಮುಸುಕಿದ ಮಾಟ್ಕೆಯಾಯ್ತು ಸಮರಾಂಗಣಂ ಉಳ್ಕುವ ಬಾಳ್ಗಳ ಉಳ್ಕದಿಂ: **ಪಂಪಭಾ,** ೧೦. ೭೮)

**ಆಸನಂದೋಱು** – ಯುದ್ಧದಲ್ಲಿ ಉಪೇಕ್ಷೆಯನ್ನು ಅಥವಾ ತಾಟಸ್ಥವನ್ನು ತೋರಿಸು (ಆಸನಂದೋಱುವ ಬಲ್ಪುದೋಱುವ ಎರ್ದೆದೋಱುವ ಕಯ್ಪೆಸರಂಗಳ್ ಎಮ್ಮನುಂತೇಱವು: **ಪಂಪಭಾ,** ೮. ೨೦)

**ಆಸನಕಂಪ** – [ಜೈನ] ತೀರ್ಥಂಕರನ ಜೀವಿತದ ವಿಶೇಷ ಪ್ರಸಂಗಗಳಲ್ಲಿ ಆಗುವ ದೇವೇಂದ್ರನ ಪೀಠದ ಅಲುಗಾಟ ವಾಸವನ ಆಸನಕಂಪದಿಂ ಆ ಸಮಯದೊಳು ಅವಧಿಯಂ ಪ್ರಯೋಗಿಸಿ ಬೋಧಾವಾಸಪ್ರಿಯನ ಉದಯಮನಱಿದು: **ಆದಿಪು,** ೭. ೪೧)

**ಆಸನ್ನ** – ಹತ್ತಿರ, ಸಮೀಪ (ಆ ವಿಲಾಸಿನೀನಿವಾಸಕ್ಕೆ ಆಸನ್ನಮೆನಿಪ ವಿಪಣಿಮಾರ್ಗದೊಳ್: **ಮಲ್ಲಿನಾಪು,** ೨. ೪೫ ವ)

**ಆಸನ್ನಕಾಲ** – ಸಾವು ಸಮೀಪಿಸಿರುವುದು (ಇತ್ತ ನೇಸಱ್ ಪಟ್ಟೊಡೆ ಕಿತ್ತಯ್ಯಂಗಳ್ಗೆ ಆಸನ್ನಕಾಲಮಾದುದು ಎಂಬುದಂ ಭಟ್ಟಾರರ್ ಅಱಿದು: **ವಡ್ಡಾರಾ,** ಪು ೮೩ ಸಾ ೧೦)

**ಆಸನ್ನತೆ** – ಹತ್ತಿರವಾಗುವುದು, ಸಾಮೀಪ್ಯ (ಮುನ್ನಿನ ಭವಮಂ ಬಂಧುಗಳಂ ನೆಱೆ ತಿಳಿವಱಿತಮಾಯ್ತು ಭವದೀಯಪದ ಆಸನ್ನತೆಯಿಂ: **ಕಾದಂಸಂ,** ೮. ૩)

**ಆಸನ್ನಪೀಡನ** – ಹತ್ತಿರ ಬಂದು ಹಿಂಸೆ ಕೊಡುವುದು (ಅಂಡಲೆ– ಆಸನ್ನಪೀಡನೇ: **ಶಬ್ದಮದ, ಧಾ,** ೬೧೦)

**ಆಸನ್ನಭವ್ಯ** – [ಜೈನ] ಶೀಘ್ರದಲ್ಲಿಯೇ ಮನಃಪರಿಪಾಕವನ್ನು ಹೊಂದುವವನು (ಆತನಭವ್ಯನಲ್ಲಂ ಭವ್ಯನೇ, ಭವ್ಯನಾಗಿಯುಂ ಆಸನ್ನಭವ್ಯಂ: **ಆದಿಪು,** ೨. ૩೫ ವ)

**ಆಸನ್ನಮೃತ್ಯು** – ಮೃತ್ಯು ಸಮೀಪವಾಗಿರುವುದು (ವಿದ್ಯಾವಚನದಿಂ ಆತನಾಸನ್ನಮೃತ್ಯುವನಱಿದು: **ಆದಿಪು,** ೨. ೧೪ ವ)

**ಆಸನ್ನವರ್ತಿ** – ಹತ್ತಿರದಲ್ಲಿರುವ (ಪಾಗುಡಮಂ ಆಸನ್ನವೃತ್ತಿಯುಂ ಅಭಿರಾಮಮೂರ್ತಿಯುಂ: **ಶಾಂತಿಪು,** ೨. ೨೨ ವ)

**ಆಸವ** – ಮಧು (ಅಭಿನವಪಾರಿಜಾತ ಕುಸುಮ ಆಸವಮೊರ್ಮೊದಲುಣ್ಮೆ: **ಆದಿಪು,** ೨. ೭૩); ಮದ್ಯ (ಮತ್ತಮೊರ್ವಳ್ ಅಭಿನವಯೌವನ ಆಸವಮದವಿಳಾಸನಿರಂಕುಶೆ: **ಆದಿಪು,** ೧೧. ೨೦ ವ); ಹೂವಿನ ಮಕರಂದ (ನವಯೌವನದೊಳ್ ಗುಣದೋಷವಿಚಾರಮನಿಂತು ಮಾಡಲೀಯದ ಭಾವೋದ್ಭವನಿಂ ಪರವಶೆಯಾದೆಂ ನವಕುಮಾಸುಮಾಸವದೆ ಸೊರ್ಕಿದಳಿನಿಯ ತೆಱದಿಂ: **ಕಾದಂಸಂ,** ೪. ೮)

**ಆಸವಸೇಕ** – ಮದ್ಯಸೇಚನೆ (ವಾಸವವನಿತಾವದನಾಬ್ಜ ಆಸವಸೇಕಪ್ರಭಿನ್ನಮುಕುಳಂ ವಕುಳಂ: **ಆದಿಪು,** ೮. ೯೭)

**ಆಸವಾರಿ** – ಕುದುರೆಸವಾರಿ (ಕಳಕಳನಾದಮಾದ ತೆಱನಂ ಜನಕಂ ತಿಳಿದು ಆಸವಾರಿಗಳ್ ತಳೆದು ಖಲೀನಮಂ ತುರಿಪದಿಂ ಬರೆ: **ಪಂಪರಾ,** ೪. ೧೧૩)

**ಆಸಱು** – ಬಳಲಿಕೆ (ಪೋರ್ವ ಗಜಂಗಳಂ ಶರಭಮಂ ಬೆಂಕೊಳ್ವ ಭೇರುಂಡವಕ್ಕಿಗಳಂ ನೋಡಿದ ನೋಟದ ಆಸಱುಗಿವನ್ನಂ ಕಂಡು: **ಪಂಪರಾ,** ೧೦. ೭೮); ಆಯಾಸಗೊಳ್ಳು (ಆಸತ್ತು ತಿರಿದು ಅರಣ್ಯಾವಾಸದ ಪರಿಭವದ ಕುದಿಪಮಂ ನೀಗಿ ಸುಖಾವಾಸಮನೆಯ್ದಿಸಿದುದು ದುಶ್ಶಾಸನನಿರ್ದಿರವು ಮನದೊಳಾ ದ್ರೌಪದಿಯಾ: **ಪಂಪಭಾ,** ೧೨, ೧೫೨)

**ಆಸಾತಪ್ರಬಂಧತ್ವ** – [ಜೈನ] ದುಃಖವನ್ನುಂಟುಮಾಡುವ ಕರ್ಮಬಂಧ (ಆಸಾತಪ್ರಬಂಧತ್ವಂ ಅವಿಕಳತ್ವಂ ಪರಸೇವಕತ್ವಂ .. .. ಅಧರ್ಮಂ: **ಕರ್ಣನೇಮಿ,** ೧. ೮೦)

**ಆಸಾದನ** – ಮೇಲೆ ಬೀಳುವುದು (ಒದವಿರೆ ಮಾತ್ಸರ್ಯಂ ತತ್ಪದರದೋಷಮಾಸಾದನಂ ಪ್ರತಿಘಾತಂ: **ವರ್ಧಮಾಪು,** ೧೪. ૩೬)

**ಆಸಾದಿತ** – ಹೊಂದಿದ (ವಿಕ್ರಮಾಸಾದಿತ ವಿಶ್ವಲೋಕವಿಜಯಂ .. .. ಜನಾರ್ದನಂ: **ಪಂಪರಾ,** ೧೪. ೧೭೫)

**ಆಸಾಧಿತ** – ಸಾಧಿಸಲ್ಪಟ್ಟ (ಲೋಕಾಯತವಾದಿಯಂತೆ ಆಸಾಧಿತ ಗುರುಮತನುಂವಿರಹಿಯಂತೆ ಮುಕ್ತಾಭರಣನುಂ: **ಚಂದ್ರಪ್ರಪು,** ೯. ೪೧ ವ)

**ಆಸಾರ** – ಸುರಿಮಳೆ (ಧಾರಾಸಂಪಾತಮದು ಆಸಾರಂ: **ಅಭಿಧಾವ,** ೧. ೧. ೬೧); ಜಡಿಮಳೆ (ಇದು ವಿದ್ವಿಷ್ಟಪ್ರತಾಪೋದಯದವದಹನೋದ್ರೇಕವಿಧ್ವಂಸಿನೀಳಾಂಬುದ

ಧಾರ ಆಸಾರಂ ಎಂಬಂತೊದವಿದ ಮದಧಾರಾಜಳಸಾರದಿಂ: **ಆದಿಪು,** ೧೨. ೬೧); ರಸ (ರಸದಾಳಿಂಬದ ಬೀಜಮಂ ಕರ್ದುಕಲ್ ಆಸಾರಂ ಕರಂ ಸೃಕ್ವದೊಳ್ ಬಸಿಯಲ್ ಶೋಭಿಕುಂ: **ಉದ್ಭಟಕಾ,** ೯. ೨೭)

**ಆಶೀನ** – ಕುಳಿತುಕೊಂಡ (ಉತ್ತುಂಗ ಸಿಂಹಾಸನಾಸೀನಂ: **ಆದಿಪು,** ೨. ೨ ವ)

**ಆಸು** – ಸಾಲವೃಕ್ಷ (ಪಲಸು ಆಲಂ ತಡಸು ಆಸು ತೇಗು ತದುಕಿಂಚಿಲ್ ಪೊನ್ನೆ ಚೆನ್ನಂಗಿ ಬೊಬ್ಬುಲಿ ಇರ್ಬಿಡ: **ಪಾರ್ಶ್ವನಾಪು,** ೧೨. ೫೮); ಮೇಲಿನಿಂದ ಎಸೆ (ಆಸು– ಊರ್ಧ್ವರ್ವ ವಿಮೋಚನೇ: **ಶಬ್ದಮದ, ಧಾ,** ೬೭೯); ಶೀಘ್ರ (ಆಸುವೆಂದು ಶೀಘ್ರಂ: **ಶಬ್ದಮದ,** ಪ್ರಸಾ, ೨೩)

**ಆಸುಕರ** – ತೀವ್ರತೆ, ಆಧಿಕ್ಯ (ತಾಗಿದುವು ಆಸುಕರಂಬೆರಸು ತಡೆಯದೆ ಉಭಯಬಲಂಗಳ್: **ಪಂಪಭಾ,** ೧೧. ೫೭)

**ಆಸುಕರಂ** – ತೀವ್ರತೆ (ಕೆಯ್ವೀಸಲೊಡಂ ಅಱಿದು ತಾಗಿದುವು ಆಸುಕರಂ ಬೆರಸು ತಡೆಯದುಭಯಬಲಂಗಳ್: **ಪಂಪಭಾ,** ೧೧. ೫೭)

**ಆಸುರ** – ಭಯಂಕರವಾದ (ಕಟಿದ ಭವಕ್ಕೆ ಪೇಸುವ ಅಡೆವ ಆಸುರ ಕರ್ಮದ ತಲ್ಪಂ ಅರ್ಥಿಸುತ್ತ ಅಟಿವ: **ಶಾಂತಿಪು,** ೯. ೧೩೧)

**ಆಸುರಂ ಮಸಗು** – ಭಯಂಕರವಾಗಿ ಕೆರಳು (ಆಸುರರ್ ಆಸುರಂ ಮಸಗಿ ಕೊಂದೊಡೆ ತಿಂಬ ಬಳಾರಿ .. .. ತಿಂದಪಳೆ ಬಲ್ಗುಱೆಯಂ: **ಸಮಯಪ,** ೯. ೧೧೩)

**ಆಸುರಕರ್ಮಂಗೆಯ್** – ಕ್ರೂರಕೆಲಸವನ್ನು ಮಾಡು (ಅದಱಿಂದಕಾರಣಕೋಪನುಂ ಪಾಪರೂಪನಪ್ಪಾ ಕೇಸರಿಗೆ ಆಸುರಕರ್ಮಂಗೆಯ್ಯಲ್ವೇಡೆಂದು ಧರ್ಮೋಪದೇಶಂಗೆಯ್ದು ಪರಲೋಕಕ್ಕುತ್ತರ ಸಾಧಕನಾಗಿ ನಡೆವೆಂ: **ಪಂಚತಂತ್ರ,** ೨೦೬ ವ)

**ಆಸುರತರ** – ಅತಿ ಭಯಂಕರವಾದ (ಪರೆದ ಉರಿಗೇಸಂ ಅವ್ವಳಿಪ ನಾಲಗೆ ಮಿಂಚುವ ದಾಡೆ ಬಿಟ್ಟ ಕಣ್ ತಿರುಪಿದ ಮೀಸೆ ಕೊಂಕಿದ ಸಟಂ ಕಡು ನೆಕ್ಕ ಕದಂಪು ನೀಳ್ದ ತಾಟ್ಕುರದವೊಲಪ್ಪ ಒಡಲ್ ಕಹಕಹಧ್ವನಿ ಕೌಳಿಕನಾದಂ ಆದುದು ಆಸುರತರಮಾಗೆ ಬಂದು ಕವಿದತ್ತು ಘಟೋತ್ಕಚರೌದ್ರಸಾಧನಂ: **ಪಂಪಭಾ,** ೧೨. ೭)

**ಆಸೆ** – [ಆಶಾ] ದಿಕ್ಕು (ಅವನೀಶ್ವರನೊಡನೆ ತನೂಭವಂ ತಪಂಬಟ್ಟೊಡೆ ಆಸೆಯಾರ್ ಎನಗೆ ಎಂದು ಆ ಯುವತಿ ಭಯಚಕಿತೆ ಚಿಂತಾರ್ಣವ ಗರ್ತ ನಿಮಗ್ನೆ ಮಱೆದಳ್ ಎಮೆಯಿಕ್ಕುವುದಂ: **ಪಂಪರಾ,** ೬. ೯೦)

**ಆಸೆಕಾಱ** – ಆಸೆಯನ್ನು ಹೊಂದಿದವನು (ಬಂದ ಚೆನ್ನಿಗರಂ ಆಸೆಕಾಱರುಮಂ ಒಲ್ಲದೆ: **ಪಂಪಭಾ,** ೧. ೧೦೬)

**ಆಸೆಗಾಣ್** – ಭರವಸೆ ಹೊಂದು (ಆವೆಡೆಯೊಳಂ ಆಸೆಗಾಣೆಂ: **ಪಂಪಭಾ,** ೪. ೧೦೪)

**ಆಸೆಗಾಱ** – ಭರವಸೆ ಹೊಂದಿದವನು (ಧರೆ ಲೇಸೆಂಬ ಆಸೆಗಾಱಂ .. .. ನೇಮಿಚಂದ್ರಂ: **ನೇಮಿನಾಪು,** ೧. ೩೭)

**ಆಸೆಗೆಯ್** – ಬಯಸು, ಅಪೇಕ್ಷಿಸು (ಬಡವನಂತೆ ಮನ್ನಣೆಗಾಸೆಗೆಯ್ಯದೆ ವ್ಯಂತರನಂತೆ ಅಟಿಪೂಜೆಗೆಱಗದೆ: **ಧರ್ಮಾಮೃ,** ೬೪ ವ)

**ಆಸೆದೋಱು** – ಆಸೆ ತೋರಿಸು (ಪುಸಿದೊಡಂ ಆಸೆದೋಱಿ ಬಗೆದೋಱಿದೊಡಂ: **ಪಂಪಭಾ,** ೪. ೯೨)

**ಆಸೆವಡು** – ಇಷ್ಟಪಡು (ಆಸೆವಡು–ಈಪ್ಸಾಯಾಂ: **ಶಬ್ದಮದ, ಧಾ,** ೨೬೦)

**ಆಸೆವಾತು** – ಆಸೆಯನ್ನುಂಟುಮಾಡುವ ನುಡಿ (ಆಸೆವಾತಂ ಎನಗೆ ಓಪನೆ ನೀಂ ದಯೆಗೆಯ್ಯಲಾಗದೇ: **ಪಂಪಭಾ,** ೪. ೯೯)

**ಆಸ್ತರಣ** – ಕುಳಿತುಕೊಳ್ಳಲು ಹರಡುವ ಚಾಪೆ ಮುಂತಾದ ಸಾಧನ (ನಿಜವಿಜಯತುರಂಗರಥಂಗಳಂ ಅರ್ಚಿಸಿ ಮೊಡೆವಟ್ಟು ದರ್ಭಾ ಆಸ್ತರಣದೊಳ್ ಆ ಇರುಳಂ ಕಳೆದು: **ಪಂಪಭಾ,** ೧೨. ೫೨ ವ)

**ಆಸ್ಥಾನ** – ರಾಜಸಭೆ (ದನುಜಂ ಆಪ್ತಮಂತ್ರಿ ನಿವಹಕ್ಕಿಂತೆಂದು ಆಸ್ಥಾನದೊಳ್: **ಜಗನ್ನಾವಿ,** ३. ೧೮)

**ಆಸ್ಥಾನಾರವಿಂದಿನೀ** – ಆಸ್ಥಾನವೆಂಬ ಕೊಳ (ಅಂತು ಭಗವತ್ ಆಸ್ಥಾನಾರವಂದಿನೀಯಂ ರಾಜಹಂಸನಂತೆ ಅಳಂಕರಿಸುತ್ತುಂ: **ಆದಿಪು,** ೧೪. ೧೩೬ ವ)

**ಆಸ್ಥಾಯಿ** – ಸ್ಥಿರವಾದ (ಆಸ್ಥಾಯಿಯಾಗಿಯುಂ ಲೋಕತ್ರಯ ಸಂಚಾರಿಯೆನಿಸಿದ .. .. ನಿನ್ನ ಜನೋತ್ಸಾಹಕರಣಂ ಜಗಕ್ಕುದಾಹರಣಮಾದುದು: **ಶಾಂತಿಪು,** ೬. ೫೩ ವ)

**ಅಸ್ಥಾಯಿಕೆ** – ರಾಜಸಭೆ (ಕಣ್ಣ ಕೆಂಪುಂ ಭ್ರುಕುಟಿಪ್ರಸಾರಾಂಧಕಾರಮುಂ ದೆಸೆದೆದೆಸೆಗೆಸೆದವು ಬಾಹುಬಲಿನೃಪ ಆಸ್ಥಾಯಿಕೆಯೊಳ್: **ಆದಿಪು;** ೧೪. ೮೩)

**ಆಸ್ಪದ** – ಆಕರ (ವಿನಯೈಕಜನ್ಮಗೃಹಂ ಆಳ್ತನದ ಆಸ್ಪದಂ ಒಳ್ಪಿನ ಆಟಿಂ ಆರ್ಪಿನ ಕಣಿಯ ಎಂದು ಅನುನಯದಿಂ ಕೂರ್ತು ಜಗಜ್ಜನಜಾಲಂ ಪೊಗಟೆ ದುರ್ಗಮಯ್ಯಂ ನೆಗೞ್ದಂ: **ಪಂಚತಂತ್ರ,** ೪೨)

**ಆಸ್ಪೃಷ್ಟಕಪಿಳ** – ಕಪಿಲವರ್ಣದ ಹಸುವನ್ನು ಮುಟ್ಟಿದವನು (ಕೃತ ನಿತ್ಯದಾನಂ ಆವೀಕ್ಷಿತ ಘೃತಂ ಆಸ್ಪೃಷ್ಟಕಪಿಳಂ ಒಯ್ಯನೆ ಸಾರ್ದಂ .. .. ಅರಸಿಯನರಸಂ: **ಯಶೋಧಚ,** ೨. ೬೭)

**ಆಸ್ಫಾರ** – ಹೊಳೆಯುವ (ಮತ್ತ ಮಾತಂಗ ಪದನಖ ಖರ್ವಿತ ಉರ್ವೀತಳಮುಂ ಪ್ರಚಂಡ ಮಾರ್ತಂಡ ಮರೀಚಿ ತೀವ್ರ ಜ್ವಳನ ಆಸ್ಫಾರ ಕರಾಳ ಕರವಾಳ ಭಾಮಂಡಳ ಪರೀತ ಉದ್ವೃತ ದೋರ್ದಂಡ ಚಂಡಪ್ರಚಂಡ ಸುಭಟ: **ಪಂಪಭಾ,** ೧೩. ೫೧)

**ಆಸ್ಫಾಲನ** – ತಟ್ಟುವುದು, ಆಘಾತ (ಉಭಯತಟವಜ್ರವೇದಿಕಾ ಆಸ್ಫಾಲನ ಬಹುಳ ಕಲ್ಲೋಲಮಾಲಾಪರೀತಮುಂ: **ಮಲ್ಲಿನಾಪು,** ೨. ೬ ವ)

**ಆಸ್ಫಾಳನಕರ್ಕಶ** – ತಟ್ಟುವುದರಿಂದ ಒರಟಾಗು (ರಕ್ತಾಶೋಕ ಪಲ್ಲವದಂತೆ ತೊಳತೊಳಗುವ ಆಂಧ್ರೀಕುಚಕಲಶಪಲ್ಲವನ ಕರತಳಪಲ್ಲವಂಗಳ್ ಸಮದಗಜಕುಂಭಸ್ಥಳ ಆಸ್ಫಾಳನಕರ್ಕಶಂಗಳಾದುವು: **ಪಂಪಭಾ,** ೨. ೩೯ ವ)

**ಆಸ್ಫೋಟನ** – ಸಿಡಿತ (ಸಕಲಲೋಕಾಸ್ಫೋಟನಾಪೇಕ್ಷನಂ ತವೆ ಕೊಂದು: **ಜಗನ್ನಾವಿ,** ೧. ೫೭)

**ಆಸ್ಫೋಟಿಸು** – ಕೋಪದಿಂದ ಸಿಡಿ (ಕಾದಿದೊಡಲ್ಲದೆ ಈಯೆಂ ಅಱಿದಿರ್ಕೆ.. ..ಎಂಬುದುಂ ವೃಕೋದರಂ ಮುಳಿದು ಆಸ್ಫೋಟಿಸಿ: **ಪಂಪಭಾ,** ೯. ೯೦ ಮತ್ತು ೯೦ ವ)

**ಆಸ್ಯ** – ಮುಖ (ಇಳಾಕಾಂತೆಗೆ ಆವಂತಿ ವಿಷಯಂ ಆಸ್ಯದವೊಲ್ ಶೋಭಾಕರಮಾಯ್ತು: **ಯಶೋಧಚ,** ೨. ೧)

**ಆಸ್ಯವಿಳಸಿತ** – ಮುಖದಲ್ಲಿ ಭಾವಪ್ರದರ್ಶನ ಮಡುವುದು (ಆಕೆಯರ ಚತುರ್ದಶವಿಧ ಆಸ್ಯವಿಳಸಿತದಿಂ .. .. ಅತಿ

ಮನೋಹರಮಾಗೆ ಎತ್ತೆತ್ತಂ ನರ್ತಿಸೆ: **ಚಂದ್ರಪ್ರಪು,** ೧೨. ೧೯೪ ವ)

**ಆಸ್ಯಾನಿಳ** – ಉಸಿರು (ಆಸ್ಯಾನಿಳಂ ಶೀತಶೀತಳಿಕಾ ಸಖ್ಯಮನೊಲ್ದುದಿಲ್ಲ: **ಮಲ್ಲಿನಾಪು,** ೪. ೩)

**ಆಸ್ರವ** – [ಜೈನ] ಸಪ್ತತತ್ವಗಳಲ್ಲಿ ಒಂದು; ಪುಣ್ಯಪಾಪ ರೂಪವಾದ ಕರ್ಮವು ಜೀವದೊಳಕ್ಕೆ ಹರಿಯುವುದು (ಆಸ್ರವಂ ಎರಡು ತೆಱಂ ಪುಣ್ಯಾಸ್ರವಂ ಒಂದು ಅದಱ ವೈಪರೀತ್ಯಭವಂ ಪಾಪಾಸ್ರವಂ ಅಂತವಱೊಳ್ ಪುಣ್ಯಾಸ್ರವ ವಸ್ತುಸ್ವರೂಪಮಕ್ಕುಂ ತ್ರಿವಿಧಂ: **ಶಾಂತಿಪು,** ೧೨. ೪)

**ಆಸ್ವಾದಿಸು** – ರುಚಿನೋಡು, ತಿನ್ನು (ಹರಿದಳಿತ ಮದಗಜಕುಂಭರಕ್ತಸಿಕ್ ಆರ್ದ್ರ ಮೌಕ್ತಿಕಪ್ರಕರದವೋಲ್ ಕರಮೆಸೆವ ದಾಡಿಮಬೀಜರಾಜಿಯಂ ತೆಗೆದು ತೆಗೆದು ರಸವಂ ಆಸ್ವಾದಿಸಿದೆಂ: **ಕಾದಂಸಂ,** ೧. ೩೨)

**ಆಹತಿ** – ಹೊಡೆತ (ಅಂಭೋಧಿವೇಲೆ ಭೋರ್ಗರೆವವೊಲ್ ಒರ್ಮೊಲೆಸೆದವು ಘನಪಥದೊಳ್ ತ್ರಿದಶಕರ ಆಹತಿಯಿಂ ಒಡನೆ ಸುರದುಂದುಭಿಗಳ್: **ಪಂಪಭಾ,** ೧. ೧೪೬)

**ಆಹವ** – ಯುದ್ಧ (ಕೊಂಡಾಹವದಹನದೊಳಂ ಪಾಂಡವನಂ ಪೊರ್ದಿದ ಅಕ್ಷಯಾಸ್ತ್ರಾಂಬುಧಿಯಂ .. .. ಬಡಬಾಗ್ನಿ ಪೀರ್ದು: **ಶಬರಶಂ,** ೫. ೫೬)

**ಆಹವದುರ್ಜಯ** – ಯುದ್ಧದಲ್ಲಿ ಗೆಲ್ಲಲು ಅಸಾಧ್ಯನಾದವನು (ತಾಗಿದಂ ಆಹವದುರ್ಜಯಂ ಮಯಂ: **ಪಂಪರಾ,** ೧೪. ೧೩೩)

**ಆಹವನೀಯ** – ಕ್ರಿಯಾಸಮಾಪ್ತಿಪರ್ಯಂತವೂ ಹೋಮ (ವೇದಿಯ ಯಥೋಚಿತಸ್ಥಾನಂಗಳೊಳ್ .. .. ಆಹವನೀಯಮುಂ ವಿವಿಧಮುಖಪರಿಕರಂಗಳುಮಂ ಬೇಱ್ವೇಱ್ ತೋಱೆ: **ಜಗನ್ನಾವಿ,** ೧೭. ೭ )

**ಆಹವಭೀಷ್ಮ** – ಯುದ್ಧದಲ್ಲಿ ಭಯಂಕರನಾದ (ಕುರುಕುಲ ಪಿತಾಮಹನುಂ ಆಗವಭೀಷ್ಮನುಂ ಎನಿಸಿದ ಭೀಷ್ಮಂ ಶರಶಯನದೊಳ್: **ಗದಾಯು,** ೨. ೧೦ ವ)

**ಆಹಾರದಾನ** – ಆಹಾರವನ್ನು ನೀಡುವುದು (ಸುವ್ರತೆಯರ್ ಎಂಬ ಆರ್ಯಿಕೆಯರ್ಗೆ ಆಹಾರದಾನಮಂ ಮಾಡಿದೊಡೆ ಅವರುಂ ಉಪವಾಸ ಶ್ರಮದಿಂ ಛರ್ದಿಗೆಯ್ಯೆ: **ಶಾಂತೀಶ್ವಪು,** ೮. ೧೩೨ ವ)

**ಆಹಾರ್ಯ** – [ವೇಷಭೂಷಣಗಳಿಂದ ಕೂಡಿದ] ಅಭಿನಯದ ಒಂದು ಬಗೆ(ಆ ದಿವಿಜಾಂಗನೆಗೆ ಆಹಾರ್ಯಸಾತ್ವಿಕಂ ನಿಜಮೆ ವಲಂ: **ಆದಿಪು,** ೯. ೨೮)

**ಆಹಾರ್ಯಕ** – ಆಹಾರ್ಯ (ವಿತತಾಮಗಿಕಂ ಆಹಾರ್ಯಕಂ ಅತಿಶಯ ಸಾತ್ವಿಕಂ ಅಮರ್ದ ವಾಚಿಕಂ ಎನಿಪೀ ಚತುರಭಿನಯಮಂ: **ರಾಜಶೇವಿ,** ೧೨. ೭೩)

**ಆಹಿತಾಗ್ನಿ** – ಅಗ್ನಿಹೋತ್ರ ಮಾಡುವ ಬ್ರಾಹ್ಮಣ (ಅಗ್ನಿಹೋತ್ರೋಪಚರಣ ಪರಿಣತಾಂತಃಕರಣರಪ್ಪ ಅಹಿತಾಗ್ನಿಗಳ ಮೆಯ್ಯೊಳೊಗೆದ ಶ್ರಮಸ್ವೇದಬಿಂದುಗಳುಮಂ ತಂತಮ್ಮೆಱಂಕೆಯ ಗಾಳಿಯೊಳಾಱಿಸುತ್ತಿರ್ಪ ರಾಜ ಹಂಸೆಗಳುಮಂ: **ಪಂಚತಂತ್ರ,** ೧೯೦ ವ)

**ಆಹುತಿ** – ಹವಿಸ್ಸು (ಇಕ್ಕಿದ ಆಹುತಿಗಳ ಗೊಂದಳದಿಂ ಒಡನೊಗೆದ ಪೊಗೆಗಳ್ ಬಳಸಿದುವೆಡೆವಿಡದೆ ಕನಕಯೂಪಮನಾಗಳ್: **ಪಂಪಭಾ,** ೬. ೩೫)

**ಆಹುತಿಗೆಯ್** – ಆಹುತಿಯನ್ನು ಅರ್ಪಿಸು (ಅವಯವದ ಸಾರಸರ್ವಸ್ವವಂ ಆಹುತಿಗೆಯ್ದಳ್ ಅಂಗಜಾಗ್ನಿಯೊಳ್: **ಜಗನ್ನಾವಿ,** ೧೧. ೨೫)

**ಆಹೂತ** – ಆಹ್ವಾನಿತನಾದ (ದೇವನಿಕಾಯ ದುಂದುಭಿಧ್ವನ ಆಹೂತನಾಗಿ ಪುರುಹೂತನ ಪಿರಿಯರಸಿವೆರಸು .. .. ಬಂದು: **ನೇಮಿನಾಪು,** ೪. ೧೧೧ ವ)

**ಆಹೂತಿ** – ಆಹ್ವಾನಿಸುವುದು (ಪುರಶ್ರೀ ಪುರುಹೂತ ಆಹೂತಿಗೆಯ್ವಂತಿರೆ ಸೊಗಯಿಸುಗುಂ ಕೇತುಹಸ್ತಂಗಳಿಂದಂ: **ಅಜಿತಪು,** ೨. ೨೧)

**ಆಹೂತಿಗೆಯ್** – ಬರಮಾಡಿಕೊ (ಶ್ರೀಪುರುಷಾಹೂತಿಗೆಯ್ವಂತಿರೆ ಸೊಗಯಿಸುಗುಂ ಕೇಯುಹಸ್ತಂಗಳಿಂದಂ: **ಅಜಿತಪು,** ೨. ೨೧)

**ಆಹ್ಲಾದ** – ಸಂತೋಷ (ಜನಚಿತ್ತಾಹ್ಲಾದಪಾದಂ ಬೆಳಗುಗೆ ಜಗಮಂ: **ಜಗನ್ನಾವಿ,** ೧. ೪)

**ಆಹ್ವಯ** – ಹೆಸರು (ಪ್ರಿಯದಿಂದೆ ಮಹಾಕಾಳ ಆಹ್ವಯಂ ಈಶಂ ನೆಲಸೆ ನಗರಿಯೊಂದಧಿಕರ್ಖಯಾತಿಯಿನೆಸೆದು ತೋರ್ಪುದು ಉಜ್ಜಯಿನಿ: **ಕಾದಂಸಂ,** ೨. ೧)

**ಆಹ್ವಾನ** – ಕರೆಯುವಿಕೆ (ಅಂತು ಕೊಟ್ಟ ಅಯ್ದು ಮಂತ್ರಂಗಳಂ ಆಹ್ವಾನಂಗೆಯ್ದು ನಿನ್ನ ಬಗೆಗ ಬಂದ ಪೋಲ್ವೆಯ ಮಕ್ಕಳಂ ಪಡೆವೆ ಎಂದು ಬೆಸಸಿದೊಡೆ: **ಪಂಪಭಾ,** ೧. ೮೯ ವ)

**ಆಹ್ವಾನಪುರುಷ** – ಆಹ್ವಾನಿಸಲು ಹೋಗುವವನು, ದೂತ (ಬಟಿ– ಸಮ್ಮಾರ್ಜನಮಾರ್ಗವಂತೇಷು, ಆಹ್ವಾನಪುರುಷೇ ಚ: **ಶಬ್ದಮದ, ಧಾ,** ೯೩೫)

**ಆಳ್** – ಪಡೆ (ವದನಾಬ್ಜದ ಕಂಪಂ ಆಳ್ದು ಉಣಲ್ ಬಳಸುವ ತುಂಬಿಯಂ ಪಿಡಿದ ನೆಯ್ದಿಲೊಳ್ ಒಯ್ಯನೆ ಸೋವುತುಂ: ೨. ೧೭); ಮುಳುಗು, ಹೊರಳಾಡು (ಶರಣಪದಪಂಕಜಂಗಳೊಳ್ ಆಳದಂತುಂ ಶಂಕರಾ ತುರಗಖುರಹತಿಜನಿತಧೂಳಿಯೊಳ್ ಅಳಿದೆಯೆಂತುಂ ಶಂಕರಾ: **ರಾಜಶೇವಿ,** ೧೩. ೧೨೫); ಪ್ರಜೆ (ನೀಮಂ ಆಳ್ಗಳಿರ್ ಆನೆ ನಿಮ್ಮ ಕುಲಪತಿಯೆನಗೆ ಮಲೆವರುಮೊಳರೇ: **ಆದಿಪು,** ೧೨. ೯೫); ಅಧಿಕಾರ ನಡೆಸು (ವೈರಿಗಳನೆ ಕೊಂದು ವಾರಿಧಿಪರೀತ ಮಹೀತಳಮಂ ನಿಮಿರ್ಚಿ ಜೆಟ್ಟಿಗರಂ ಅಯೋನಿಸಂಭವರಂ ಆಳ್ದು ಅರಿವರ್ಗದೊಳಾಂತು ಕಾದೆಯುಂ: **ಪಂಪಭಾ,** ೧೩. ೧೦೩); ಶೂರ (ಗೆಲಲ್ ಆರ್ಪೊಡೆ ಇಱಿದು ಗೆಲ್ವುದು ಗೆಲಲಾಱದೊಡೆ ಅಣ್ಮಿ ಸಾವುದು ಆಳ್ಗೆ ಇನಿತೆ ಗುಣಂ: **ಗದಾಯು,** ೨. ೨೧)

**ಆಳಂ** – ವ್ಯರ್ಥ (ಪರಿವಾರಂ ಗುಣಹಾನಿ ಎನಗಕ್ಕುಂ ಮುನ್ನಂ ಎನ್ನಿತ್ತುದುಂ ಭರತಂ ಪೆತ್ತುದುಂ ಆಳಂ ಅಕ್ಕುಂ: **ಪಂಪರಾ,** ೬. ೧೪೮)

**ಆಳಂಬಿ** – ಅಣಬೆ (ಆಳಂಬಿ ಮೂಡೆ ವಿಭವಂ: **ಲೋಕೋಪಕಾ,** ೧೨. ೪೪)

**ಆಳಂಬಿತ** – ಜೋತುಬಿದ್ದ (ವೀಚೀಚಯನಿಚಿತ ಪೃಚ್ಛದಾಳಮಭಿತ ಕಂಬುರ್ಲಸಿತ .. .. ಜಂಬೂದ್ವೀಪದ ಭರತಕ್ಷೇತ್ರದ ವಿನೀತಾಖಮಡದೊಳ್: **ಹರಿವಂಶ,** ೧. ೧೭ ವ)

**ಆಳಂಬೆ** – ಅಣಬೆ, ನಾಯಿಕೊಡೆ (ಮತ್ತಂ ಮಧುಮದ್ಯಮಾಂಸಂಗಳುಮಯ್ದು ಪಾಲ್ಮರದ ಪಣ್ಗಳುವಂ ಆಳಂಬೆಯುಂ ಸಣಂಬಿನ ಪೂವುಮೆಂದಿವಂ ಸೇವಿಸುವವರುಂ: **ವಡ್ಡಾರಾ,** ಪು ೧೨೬ ಸಾ. ೧೮)

**ಆಳಣೆ** – ಆನೆಯನ್ನು ಕಟ್ಟುವ ಕಂಬ (ಗಗನಂ ಮಾರ್ಗಂ ಸ್ಯಂದನದ ಗಾಲಿಯೊಂದು ಅಶ್ವಂ ಏಟು ರಥದ ಆಳಣೆ ಪಾವುಗಳೇ ರವಿಗೆಂಬರ್: **ಸಮಯಪ,** ೧೧. ೫೧)

**ಆಳರ್ಪಿಸು** – ಆಳಾಗಿ ಅರ್ಪಿಸು; ಕಡೆಗಣಿಸು (ನಯನಂ ನೀಲಸರೋಜಮಂ ಸೆಣಸುಗುಂ ವಕ್ಷಃಸ್ಥಳಂ ವಜ್ರವೇದಿಯಂ ಆಳರ್ಪಿಸುಗುಂ ಮುಖಂ ಕಮಲಮಂ ಕೀೞ್ಮಾಡುಗುಂ: **ಪಂಪರಾ,** ೧. ೯೫)

**ಆಳವಾಡು** – ಮರುಳುಗೊಳಿಸು, ವಂಚಿಸು (ಇನ್ನೀ ಬೆಳ್ಳನಂ ಆಳವಾಡಲ್ ಬಲ್ಲೆನೆಂದು ಬಗೆದು ಗೃಹಮಧ್ಯಸ್ತಂಭಾವಷ್ಟಂಭೆಯಾಗಿರೆ: **ಪಂಚತಂತ್ರ,** ೧೩೩ ವ)

**ಆಳವಾಳ** – ಪಾತಿ (ಮೆಲ್ಲನೆ ವಕುಲ ಆಳವಾಳತಳದೊಳ್ ಸುರಿದ ಅಂಬುಜಸೂತ್ರದಿಂದೆ ಮತ್ತನಿತಱೊಳಂ ಮುಗುಳ್ದರಿಗೆ ತೋಳ್ವಳೆ ಕಂಕಣವಾರಮೆಂದು ಬೇಟ್ಟನಿತನೆ ಮಾಡಿ: **ಪಂಪಭಾ,** ೨. ೧೬)

**ಆಳವಿಣೆ** – ಒಂದು ಬಗೆಯ ವೀಣೆ (ಅಳಿಸಿ ಕುಚಾಗ್ರದೊಳ್ ಪಿಡಿದು ಆಳವಿಣೆಯ ವನಜಸೂತ್ರತಂತ್ರಿಯದೆನಿಸುಂ ಗಾಳಿಯ ಕೋಳಿಂ ದನಿವಿಡೆ ಭಾಳಾರೂಪಕಮೆ ಬಾಜಿಪಂತೆಸೆಗು: **ಲೀಲಾವತಿ,** ೧೧. ೬೨)

**ಆಳಾನಸ್ತಂಭ** – ಆನೆಯನ್ನು ಕಟ್ಟುವ ಕಂಬ (ದೇವೇಂದ್ರನ ಐರಾವತ ಆಳಾನಸ್ತಂಭಸಮಾನಂಗಳಪ್ಪ ಭುಜಸಂದೋಹಂಗಳೊಳ್: **ಆದಿಪು,** ೭. ೧೨೪)

**ಆಳಾಪ** – ಮಾತು, ಸಂಭಾಷಣೆ (ಮಹೀಪಾಳರೊಳಾದ ಕಾರ್ಯಗತಿಗಳ್ ಬಗೆಯಲ್ಕೆ ಬಹುಪ್ರಕಾರಮೋ ಎಂಬ ಮರಜನ ಆಳಾಪಂಗಳ್ ನೆಗೞ್ಜೆ: **ಪಂಪಭಾ,** ೯. ೬ ಮತ್ತು ೬ ವ)

**ಆಳಾಪನ** – ಸಂಭಾಷಣೆ (ನೇತ್ರತ್ರಿಭಾಗಕಟಾಕ್ಷ ಸಮಗ್ರೇಕ್ಷಣ ಭ್ರೂವಿಭ್ರಮದರಹಸಿತ ಆಳಾಪಂ: **ಆದಿಪು,** ೧೧. ೨೫ ವ)

**ಆಳಾಪಂಗೆಯ್** – ಹರಟು, ಗಳಹು (ಮಾಯಾತಪಮಂ ಮೇಳಿಸಿ ಪೊಕ್ಕೆಂ ಮಿಕ್ಕೆಂತಾಳಾಪಂಗೆಯ್ದು ಪುಗುವ ಗಂಡರುಮೊಳರೇ: **ಧರ್ಮಾಮೃ;** ೬. ೩೪)

**ಆಳಾಸ** – ಹಕ್ಕಿಗಳ ಧ್ವನಿ (ಸುಸಿಲೆಲ್ದ ಸೊಂಡಿಗಿಳೀಗಳ ರಸಿಕ ಆಳಾಸಂಗಳ್ ಉಣ್ಮೆ ಪೊಣ್ಮಿದವು: **ವರ್ಧಮಾಪು,** ೮. ೯೯)

**ಆಳಿ** – ಮೋಸ (ಆಳಿಯೆ ಲಗ್ಗೆಗೆಯ್ದು ತೊತ್ತಳದುೞಿಸಿರ್ಪಂ ಉದ್ದವರಿದಿಂ ಜವಂ: **ಸಮಯಪ,** ೧೫. ೯೪); ಸಖೀ, ಗೆಳತಿ (ತಳಮಳಗೊಳ್ಳುತ ಆಳಿಯರಿಲ್ಲದಿರಲ್ ಜಲಜಲನೆ ಬೆಮರ್ತು ಎದೆಗುಂದುತೆ: **ಅನುಭವ,** ೭೧)

**ಆಳಿಗಟ್ಟು** – ಸಾಲಾಗು, ಸಾಲುಗಟ್ಟು (ಕೊಡಂಬೆರಸು ಆಳಿಗಟ್ಟಿ ಭೋರ್ ಭೋರೆನೆ ಪೋಪ ಬರ್ಪ ಅಮರಸಂತತಿ ಪೋಲ್ತುದು ಮಂದರಾದ್ರಿಗಂ ಕ್ಷೀರಪಯೋಧಿಗಂ ಹರಿಯ ಕಟ್ಟಿದ ಜಂಗಮಸೇತುಬಂಧಮಂ: **ಶಾಂತಿಪು,** ೧೦. ೪೫)

**ಆಳಿಗೊಳ್**– ಜೊತೆಗೂಡು, ಸ್ನೇಹಮಾಡಿಕೊ; ವಂಚಿಸು (ದೇವಾರ್ಚನೆಯುಳ್ಳೊಡೆ ಸಾಲ್ಗುಂ ಎಂಬ ಮುನಿಗಳ ನುಡಿಯಂ ಕೇಳ್ದು ಆಳಿಗೊಳ್ಳದಿರ್ಪರೆ ಚದುರರ್: **ಸಮಯಪ,** ೧೪. ೮೮)

**ಆಳಿಸು** – ಅಳವಡಿಸು (ಆ ತ್ರಿಲೋಕತಿಳಕನ ಮನೋಮದೇಭಮಂ ತಮ್ಮ ರಂಭಾಸ್ತಂಭಾಯಮಾನ ಊರುಸ್ತಂಭಂಗಳೊಳ್ ಆಳಿಸಿಯುಂ: **ಆದಿಪು,** ೮. ೨೪ ವ); ಉಂಟುಮಾಡು (ಸುಸಿಲ ಸೊಕಕ್ಕೆ ಸೊರ್ಕಡರೆ ಮೆಯ್ಯಳವಾಱುವ ತೋಳತಳ್ಪನಾಳೀಸುವಿರದೊಟ್ಟಮಂ ಸವಿವ .. .. ಗೆಯ್ತಂ: **ಚಂದ್ರಪ್ರಪು,** ೮. ೭೩); ಆಳಿಕೆಯನ್ನು ನಡೆಸು (ಪಟ್ಟಮಂ ತಡೆಯದೆ ಕಟ್ಟಿ ಭೂತಳಮನಾಳಿಸದಿರ್ದಡೆ ಅದರ್ಕೆ ಸೊರ್ಕಿ ನೀಂ ನುಡಿಯದಿರಣ್ಣ: **ಪಂಪಭಾ,** ೪. ೬)

**ಆಳೀಜನ** – ಸಖಿಯರು (ಅಂಭೋರುಹದ ಎಲೆಗಳೊಳ್ ಆಳೀಜನಂ ಸೂಸಿದ ಅಂಭಃಕಣಜಾಲಂ ಕಂಪಿಸುತ್ತೊಪ್ಪಿದುವು: **ಲೀಲಾವತಿ,** ೧೧. ೪೦)

**ಆಳುವೇರಿ** – (ಕಲಿಕಾಮಂ ಕಿಡಿಕಿಡಿಯೋಗಿ ಕೋಟಯ ಆಳುವೇರಿಯೊಳ್ ನಿಂದಿರ್ದು ಮೂದಲಿಸಿ ಕಾಳೆಗಮಂ ಕೊಂಡಾಗಳ್: **ತ್ರಿಷಷ್ಟಿಪು,** ೫. ೮ ವ)

**ಆಳೇಟ್** – ಪೌರುಷ ಉಕ್ಕು (ಆಳಟ್ಟು ಗರ್ಜಿಪ ಆಶಾಪಾಳರ ಕಣ್ಮಲರ ಕೆಂಪು ಪರ್ವಿದುದು: **ಜಗನ್ನಾವಿ,** ೧೩. ೫೭)

**ಆಳ್ಕೈಸು** – ಆಲಾಪಿಸು (ಗಿಳಿಗಳೊಳೆ ಗಱಿಪಿ ಮೊಱೆವಳಿಕುಳದೊಎನೆ ಆಳ್ಕೈಸಿ ಮರುಳಿಯೊಡನೆಳಸಿ: **ಆದಿಪು,** ೧೧. ೮೨)

**ಆಲೋಕನರುಚಿ** – ದೃಷ್ಟಿಯ ಕಾಂತಿ (ಆಕೆಯರಷ್ಟವಿಧಾಲೋಕನರುಚಿಯಿಂ ಕುಡುಮಿಂಚಿನೊಳ್ ಕಟ್ಟಿ ಮೆಱೆವಂತೆಯುಂ: **ಚಂದ್ರಪ್ರಪು,** ೧೨. ೧೯೪ ವ)

**ಆಲೋಚ** – ಆಲೋಚನೆ, ವಿಚಾರ (ಆಲೋಚಂ ಬೆರಸಿರ್ಪ ದೇವಗಣಮಂ ನಂಬಿಪ್ಪುದಾಯ್ತು: **ಆದಿಪು,** ೭. ೯೧)

**ಆಲೋಚಂಬೆರಸು** – ಆಲೋಚನೆಯಿಂದ ಕೂಡು (ರಾಹುಗೆತ್ತು ಅಗಿದಿರ್ದ ಅಟ್ಟಾಳಿಕೆಗಳಲ್ಲಿ ನಾಡೆಯುಂ ಆಲೋಚಂಬೆರಸು ತಡೆದು ನಡೆವಂ ದಿನಪಂ: **ಆದಿಪು,** ೬. ೧೦೫)

**ಆಲೋಚನೆ** – ನೋಡುವುದು, ವಿಚಾರ ಮಾಡುವುದು (ಭೂತವತಿಗೆ: ಓಲಗಂ ಪರೆವುದುಂ ಆಲೋಚನೆಗೆ ಪೊಕ್ಕಂ: **ಶಬ್ದಮದ,** ೨೫೮, ಪ್ರ)

**ಆಲೋಚಿಸು** – ವಿಚಾರಮಾಡು (ತನ್ನ ಮನಮೆ ಮಧ್ಯಸ್ಥಮಂತ್ರಿಯಾಗಲ್ ಆಲೋಚಿಸಿ: **ಶಾಂತಿಪು,** ೨. ೬೩ ವ); ಗುರುವಿನ ಬಳಿ ತಪ್ಪೊಪ್ಪಿಸು (ಗುರುಗಳ್ಗೆ ತಮ್ಮುಕ್ಕೆವದಿಂ ತಪಂಬಟ್ಟುದಂ ಆಲೋಚಿಸಿ: **ವಡ್ಡಾರಾ,** ಪು. ೬. ಸಾ. ೨೬)

**ಆಲೋಳಿ** – ಆಳುಗಳ ಸಾಲು (ಅಖಿಳ ದ್ವೀಪಾಧಿಪರ್ ಖೇಚರರ್ ನೆರದು ಆಲೋಳಿಗೆ ವಂದರ್: **ಪಂಪರಾ,** ೧೨. ೬೯)

**ಆಳ್ಗೆಯ್ತ** – ಶೂರನ ಕೆಲಸ (ಕೂರ್ಪವರ ಮಾತಂ ಮೀಱಿದ ಆಳ್ಗೆಯ್ತದೊಳ್ ನೆರೆದಂತೆ ಈಗಳೆ ಪೋಗಿ ತಳ್ತಿಱಿವೆಂ: **ಕಬ್ಬಿಗಕಾ,** ೧೫೯)

**ಆಳ್ತನ** – ಆಳಿನ ಸೇವೆ (ಅಂತು ದಕ್ಷಿಣದಿಕ್ಪಾಲಪುರಸ್ಸರರ್ ಅವನಿಪತಿಗೊಳ್ ಆಳ್ತನಮಂ ಪೂಣ್ದು ಸಾರಸರ್ವಸ್ವನಿವೇದನಂಗೆಯ್ದು: **ಶಾಂತಿಪು,** ೧೧. ೩ ವ); ಪೌರುಷ (ವಿನಯೈಕಜನ್ಮಗೃಹಂ ಆಳ್ತನದ ಆಸ್ಪದಂ ಒಳ್ಪಿನ ಆಗಂ ಆರ್ಪಿನ ಕಣಿಯ ಎಂದು ಅನುನಯದಿಂ ಕೂರ್ತು ಜಗಜ್ಜನಜಾಲಂ ಪೊಗೞೆ ದುರ್ಗಮಯ್ಯಂ ನೆಗೞ್ದಂ: **ಪಂಚತಂತ್ರ,** ೪೨)

**ಆಳ್ದಟ್ಟು** – ಶೂರಸಮೂಹ (ಬೀಟ್ತಂದ ಭಾಸ್ಕರನಂತಿರ್ದುದು ಸಿಂಹಚೂಡನ ಶಿರಂ ಪೊಂಬಟ್ಟಿನ ಆಳ್ದಟ್ಟಿನೊಳ್: **ಅನಂತಪು,** ೧೧. ೭೫)

**ಆಳ್ದಂ** – ಒಡೆಯ, ಪ್ರಭು ಈ ದೊರೆಯನಂ ಆಳ್ದನಂ ಪಡೆವುಪಾಯಮದಾವುದೋ ಜನ್ಮಜನ್ಮದೊಳ್: **ಆದಿಪು,** ೯. ೭೫)

**ಆಳ್ದಿತಿ** – ಆಳುವವಳು, ಒಡತಿ (ಕೌತುಕದಿಂ ನಿನ್ನಂ ಪಿಡಿದು ತರಲೆಂದು ಪಲಂಬರನಟ್ಟಿದೊಡೆ ಎನ್ನ ಪುಣ್ಯದಿಂ ನೀನೆನಗೆ ದೊರೆಕೊಂಡೆ ನಿನ್ನಂ ಎನ್ನ ಆಳ್ದಿತಿಯಲ್ಲಿಗೊಯ್ದು ಒಪ್ಪಿಸುವೆಂ: **ಕಾದಂಬ,** ೧೦. ೩೬ ವ)

**ಆಳ್ಮಾಡು** – ಆಳಾಗಿ ಮಾಡು; ಸೇವೆ ಮಾಡು (ನಾರಾಯಣಂ ತನ್ನಾಳ್ದನಂ ಮಾಡಿ ತಾನಾಳ್ಮಾಡಿಯುಂ: **ಪಂಪಭಾ,** ୬. ೩೯ ವ)

**ಆಳ್ವೆರಿ** – ಕೋಟೆ ಬುರುಜು (ಒಗೆದಭ್ರಾಟ್ಟಾಲಂಕರಣ ರಚನೆಯಿಂ ಸುತ್ತಲುಂ ಸುತ್ತುಗೊಂಡುಂ ಬಗೆಗೊಂಡುಂ ದೇವೆಸೆತ್ತಾಳ್ವೆರಿಯ ತುಱುಗಲಿಂ .. .. ಕರಮೆಸೆಗುಂ ವಿಶ್ರುತೋತ್ತುಂಗ ವಪ್ರಂ: **ಸುಕುಮಾಚ,** ೧೦. ೫೨)

**ಆಳ್ವಲ** – ಸೈನಿಕರ ಸಮೂಹ (ಆಳ್ವಲದ ತೋಳ್ವಲದ ಬಾಳ್ವಲದ ಗರ್ವದಿದುರ್ವಿ ಗರ್ವಿತ ಉರ್ವೀಶನನಂ ಎಟ್ಟಿಟ್ಟಿ: **ಪುಷ್ಪದಂಪು,** ೫. ೫೧ ವ)

**ಆಳ್ವಿಸ** – ಸೇವಾವೃತ್ತಿ (ನೃಪ ನೀಂ ದಯೆಯಿಂದಂ ಇಲ್ಲಿ ಬಂದಿರೆ ದೊರೆವೆತ್ತುದೆನ್ನ ಆಳ್ವಿಸಂ ಎನ್ನ ತನೂಜೆಗೆ ಅಂಕದ ಉತ್ತರೆಗೆ ವಿವಾಹಮಂಗಳಮಂ ಇನ್ನು ಅಭಿಮನ್ಯುಗೆ ಮಾಳ್ಪುದು; **ಪಂಪಭಾ,** ೯. ೭)

**ಆಳ್ವಿಸಕೆಯ್ಸು** – ಆಳಾಗಿ ಮಾಡಿಕೊ; ಸೇವೆ ಮಾಡಿಸಿಕೊ ನಮ್ಮನ್ನೈವರ ನಿನ್ನಾಳ್ವಿಸಂಗೆಯ್ಸಿಕೊಳ್: **ಗದಾಯು,** ೭. ೪೪)

**ಆಳ್ವಿಸಗೆಯ್** – ಸೇವೆಮಾಡು (ನೀನೆನ್ನಾಳ್ವುದು ಆಳ್ವಿಸಗೆಯ್ವೆಂ: **ಆದಿಪು,** ೧೩. ೨೯)

**ಆಳ್ವೇರಿ** – ಕಂದಕವುಳ್ಳ ಕೋಟೆಯ ಗೋಡೆ (ಚೆನ್ನರನ್ನದ ಕೋಟೆಯಿಂ ಪವಳದ ಆಳ್ವೇರಿಯಿಂ .. .. ಕಣ್ಗೆ ಮಂಗಳವೆನಿಸಿ ಸೊಗಯಿಸುತಿರ್ಪುದು: **ಧರ್ಮಪ,** ೧. ೫೪ ವ)

**ಆಳ್ವೇಲಿ** – ಮನುಷ್ಯರ ಬೇಲಿ (ಉದ್ಧತಸಿದ್ಧಖೇಚರರೆ ತಾಂ ಆಳ್ವೇಲಿಯಾಗಿಂತು ನಿಚ್ಚಲುಂ ಓರಂತೆ ಕಾವರೀ ದೊರೆತು ಕಾಪು ನಂದನಕ್ಕಿಂದ್ರನಾ: **ಪಂಪಭಾ,** ೫. ೮೧)

**ಆಱ್** – ಸಮರ್ಥವಾಗು (ಕುರುಗೋತ್ರಂ ಧರೆಯೊಳ್ ಪವಿತ್ರಮೆನಿಸಲ್ಕೆ ಇನ್ನು ಆರ್ತುದು ಇಂದೆಮ್ಮ ಮಂದಿರಂ: **ಆದಿಪು,** ೧೦. ೫); ತಾಳಿಕೊ (ಬೃಹಸ್ಪತಿ ನಕ್ಕು "ಕೆರೆಗೆ ಮುನಿದು ಮಂಡೂಕಂ ಪೊಱಗಿರ್ದುದು" ಎಂಬಂತೆ ಇಲಿಯ ಕಾಟಕ್ಕಾಱದೆ ಮಠಮಂ ಬಿಸುಟು ಪೋಗಲೇಂ: **ಪಂಚತಂತ್ರ,** ೪೩೪ ವ)

**ಆಱಡಿ** – ದುಂಬಿ (ಮುಡಿಯಂ ಸೋಗೆಯೆ ಗೆತ್ತು ಸೋಗೆ ನಡೆಯಂ ಪೆಣ್ಣಂಚೆಗೆತ್ತು .. .. ಅಳಕಾನೀಕಂಗಳಂ ಸೊರ್ಕಿದ ಆಱಡಿಗೆತ್ತು ಆಱಡಿ ಸುತ್ತುತುಂ ಬರೆ: **ಪಂಪಭಾ,** ೭. ೮೬); ಸುಲಿಗೆ (ಶತ್ರುಸಂತತಿ ತಲೆವಾಗೆ ಶಿಷ್ಟಜನದ ಆಱಡಿ ನಾಟ್ಕಡೆವೋಗೆ ತೇಜಂ ಉದ್ಧತರನೆ ಕೊಂದು ಕೂಗೆ: **ಪುಷ್ಪದಂಪು,** ೧೩. ୬)

**ಆಱಡಿಕಾಱ** – ಶತ್ರು (ಪುಣ್ಯಂ ದೊರೆಕೊಳ್ಳುಂ ನೃಪತಿಗೆ ಎಂಬರ್ ಆಱಡಿಕಾಱರ್: **ಸಮಯಪ,** ೧೪. ೭೯); ದಾರಿಗಳ್ಳ (ಆಱಡಿಕಾಱನನಾರುಂ ದೂಱಾದೊಡೆ ಕೊಂದು ಕಡಿದು ಬೇಳುತ್ತಿರಲಿಂ; **ಸಮಯಪ,** ೧೦. ೧೦೮)

**ಆಱಡಿಗಳ್ಳ** – ಸುಲಿಗೆಗಾರ, ಲೂಟಿಕೋರ (ಬಿದಿಯೆಂಬಾಱಡಿಗಳ್ಳಂ ಎನ್ನನುಜನಂ ಗೋವಿಂದನಂ ನಿರ್ನೆರಂ ಉದುದುಂ: **ಆದಿಪು,** ೩. ೫୬)

**ಆಱಡಿಗೊಳ್** – ಹಿಂಸೆಮಾಡು (ಕಳ್ಳರ್ ಈ ಅಡವಿಯೊಳ್ ಆಱಡಿಗೊಂಡೊಡೆ ಎಮ್ಮವರೆಲ್ಲಂ ಸತ್ತು ಕೆಟ್ಟು ಯಥಾಯಥಂ ಆದೊಡಂ: **ಜೀವಸಂ,** ೧೦. ೩೦ ವ); ನಿಂದಿಸು (ಗಾವಿಲನಾಗಿ ಚೀ ಕಿಡಿಸಿ ಚಾರುಚರಿತ್ರಮಂ ತೊಱೆದು ಎಮ್ಮನಾಱಡಿಗೊಂಡು ಕೈಮಡಗದೆ ಏಳಿದರಂತೆ ಘಮ್ಮನೆ ಪೊರ್ದಿದೈ ಜಿನದೀಕ್ಷೆಯಂ: **ಧರ್ಮಾಮೃ,** ೮. ೩೯)

**ಆಱೆನುಡಿ** – ಸಮಾಧಾನದ ಮಾತಾಡು (ನಿಮ್ಮಮ್ಮನ ದರ್ಪದಿಂದ ಇನಿತಾಯ್ತು ಉಬ್ಬೆಗಂಬಡದಿರು ಎಂದು ಆಱೆನುಡಿದು: **ಹರಿವಂಶ,** ೭. ೮೧ ವ)

**ಆಱೆಸು** – ದಣಿವು ನಂದಿಸು, ಶಾಂತಗೊಳಿಸು (ಪೊಸಗಂಪಿನೊಳ್ ಪುದು ಅಲೆವ ಎಲರ್ ಆಱೆಪುದು ಖಚರದಂಪತಿಶತಮಂ: **ಆದಿಪು,** ೧. ୬೮)

**ಆಱು** – ಒಂದು ಸಂಖ್ಯೆ (ನಾಲ್ಕು ವೇದಮುಂ ಆಱು ಅಂಗಮುಂ: **ವಡ್ಡಾರಾ,** ಪು. ೭୬, ಸಾ. ೧೩)ನಂದಿಹೋಗು (ಗುಹಾದ್ವಾರಮಂ ಪೂರ್ವೋಕ್ತಕ್ರಮದೊಳೆ ತೆಱೆದು ಅದಱ ಬೆಂಕಿಯಾಱುವನ್ನೆಗಂ .. .. ಪೋಗೆ: **ಆದಿಪು,** ೧೩. ೭೮ ವ); ಸಮಾಧಾನಗೊಳ್ಳು (ಪಲವು ಸೂಕ್ತಿಗಳಿಂ ನಾರದಂ ಆಱೆ ನುಡಿದೊಡಂಬಡಿಸಿ: **ಕರ್ಣನೇಮಿ,** ೮. ೭೧ ವ); ಒಣಗಿಹೋಗು (ಆಱು–ನಿರ್ದ್ರವೇ: **ಶಬ್ದಮದ,** ಧಾ ೮೩೬); ತಣ್ಣಗಾಗು (ಬಾಣಸಿಗಂ ಬಂದು ಬೋನಮೆತ್ತಿ ಓಗರಂ ಆಱಿದಪ್ಪುದೆಂದು ಪೇಳ್ದೊಡೆ: **ವಡ್ಡಾರಾ,** ಪು. ೪, ಸಾ. ୬೩); ಸಮರ್ಥವಾಗು (ಇದು ದಿವವೊ ರಾತ್ರಿಯೊ ಮೇಣಿದು ದುಃಖವೊ ರುಜೆಯ ಕಳವಳಮೊ ಪೇೞಿದು ಪೊಲ್ಲದೊ ತಾನಿದೊಳ್ಳಿತೊ ಮೇಣಿದೆಂಬುದಂ ಬಗೆಯಲ್ ಆರ್ತೆನಿಲ್ಲ ಆ ಕ್ಷಣದೊಳ್: **ಕಾದಂಸಂ,** ೪. ୬೮)

**ಆಱುಂ ಋತು** – ವಸಂತ, ಗ್ರೀಷ್ಮ, ವರ್ಷ, ಶರತ್, ಹಿಮಂತ ಮತ್ತು ಶಿಶಿರಗಳೆಂಬ ವರ್ಷದ ಆರು ಋತುಗಳು (ಆಗಳ್ ಆಱುಂ ಋತುಗಳ ಪೂಗಳಂ ಒಂದುಮಾಡಿ ಪೂವಿನಂಬುಗಳಂ ಪಣ್ಣಲೆಂದು ಕಾಮದೇವಂ ಮಾಡಿದ ಓಜನ ಸಾಲೆಯಿರ್ಪಂತಿರ್ಪ ಪೂವಿನ ಸಂತೆಯೊಳ್: **ಪಂಪಭಾ,** ೪. ೮೦ ವ)

**ಆಱುಂ ಕುಲಗಿರಿ** – ಹಿಮವಂ ಮಹಾಹಿಮವಂ ನಿಷಧ ನೀಲ ರುಗ್ಮಿ ಶಿಖರಿ ಎಂಬ ಆರು ವರ್ಷಧರಪರ್ವತಗಳು (ಇದು ಹೈಮಾಂದ್ರೀಂದ್ರಂ ಆಱುಂ ಕುಲಗಿರಿಗೆ ಮೊದಲ್: **ಆದಿಪು,** ೧೩. ୬೮)

**ಆಱುಂ ಬಲಂಗಳ್** – ಆನೆ ಕುದುರೆ ರಥ ಪದಾತಿ ದಿವಿಜ ಖೇಚರ ಸೇನೆಗಳು (ನೆಗಟ್ದೀ ಷಟ್ಖಂಡಭೂಮಂಡಲಮನನಿತುಮಂ ಗೆಲ್ದು ಅಖಂಡಪ್ರತಾಪಂ ನೆಗೞ್ವಂತೆ ಆಱುಂ ಬಲಂಗಳ್ವೆರಸು ಒದವಿದ ಸಂಗ್ರಾಮಸಂರಂಭದಿಂದಂ: **ಆದಿಪು,** ೧೪. ೮୬)

**ಆಟ್** – ಮುಳುಗು (ಕುದುರೆಯ ಖುರಂಗಳಿನಿಸು ಆೞದೆಯುಂ ಚಕ್ರಂಗಳರ್ದು ಬಾರದೆಯುಂ: **ಆದಿಪು,** ೧୬. ೮୬); ಹೂಳು (ಅಪಘನತತಿಯೊಳೆಯ್ದೆ ಗಜೇವರಮೞ್ದಾ ಶರನಿಕರಂ: **ಕರ್ಣನೇಮಿ,** ୬. ೫୬ ವ); ಕುಸಿದುಹೋಗು (ಬಱೆತ ಬಾಯುಂ ಆೞ್ದರೆಗಣ್ಣೆಡುಗಳುಂ: **ಜಗನ್ನಾವಿ,** ೧೭. ୬୬)

**ಆೞ** – ಗಾಂಭೀರ್ಯ, ಗಾಢತೆ (ವಿನಯೈಕಜನ್ಮಗೃಹಂ ಆಳ್ತನದಾಸ್ಪದಂ ಒಳ್ಪಿನಾೞವಂ ಆರ್ಪಿನಕಣಿ ಎಂದನನುಯದಿಂ ಕೂರ್ತು ಜಗಜ್ಜನಜಾಲಂ ಪೊಗೞೆ ದುರ್ಗಮಯ್ಯಂ ನೆಗೞ್ದಂ: **ಪಂಚತಂತ್ರ,** ೪೫)

**ಆಟಿವಡು** – ಆಳವನ್ನು ಹೊಂದು (ಆಟಿವಟ್ಟು ದಿಟ್ಟಿಗೊಲವನೋಗಿಪ ಲೀಲಾಸರೋವರಮಂ ರಾಜಹಂಸಂ ಲೀಲಾವತೀ ಜನಸಮೇತಂ ಪುಗೆ: **ಚಂದ್ರಪ್ರಭು,** ೭. ೧೧೯ ವ)

**ಆಟಿಸಾಟಿ** – ಹಟಮಾರಿತನ (ಆಟಿಸಾಟಿಗೆ ಬಲ್ಲಾಳನ ದಾಟಿಯ ದಾವಣಿಯ ತುರಗದಟಿಖುರಹತಿಯಿಂ ಪೇಟಿ ಪೆಸರಿಲ್ಲದಂತಿರೆ ಪಾಟಿಸಾದುದು: **ಯಶೋಧಚ,** ೧. ೧೪)

**ಆಟಿಸಾಟಿಗ** – ಮಾಲೆ, ಹಾರ (ಆಟಿಸಾಟಿಗಮೆಂದು ಒಂದು ಸಾಮಾನ್ಯ ಮಾಲಾಬಂಧಂ: **ಶಬ್ದಮದ,** ೩೩, ವೃತ್ತಿ, ಒಂದರ್ಥಕ್ಕೆ, ೧೦)

**ಆಟಿ** – ಮೋಸ ಹಾಗೂ ಏಕಗ್ರಾಹಿತ್ವ (ಎರಡರ್ಥಕ್ಕೆ: ಆಟಿಯೆಂದು ವಂಚನೆಯುಂ ಏಕಗ್ರಾಹಿತ್ವಮುಂ ಅಕ್ಕುಂ: **ಶಬ್ದಮದ,** ೩೩, ವೃತ್ತಿ, , ೧೩೧)

**ಆಟಿಕಾಜ** – ಮೋಸಗಾರ (ಜಾಱುವವಂ ಪಲುಂಬುವಂ ಅಸ್ಥಿರನಪ್ಪಂ ಆಟಿಕಾಜನಂ .. .. ನೃಪಾಳಲನಕ್ಕುಮೇ: **ಸೂಕ್ತಿಸುಧಾ,** ೧೬. ೪೫)

**ಆಟಿಗೊಳ್** – ವಂಚಿಸು (ಮುನಿಗಳ ನುಡಿಯಂ ಕೇಳ್ದು ಆಟಿಗೊಳ್ವದಿರ್ಪರೆ ಚದುರರ್: **ಸಮಯಪ,** ೧೪. ೮೧)

**ಆಟಿಸು** – ಮುಳುಗಿಸು (ಪುನ್ನಾಗದ ಬಾಸಿಗಂ ಬಗೆದ ಬಣ್ಣದ ಪುಟ್ಟಿಗೆ ನಾಗಜಾಲಮೆಂದಾಗಡೆ ನಾಗಲೋಕವಿಭವಂಗಳೊಳ್ ಆಟಿಸಿ: **ಪಂಪಭಾ,** ೪. ೧೭)

**ಆಟ್ಕೆ** – ಆಳ (ಮೊದಲೊಳ್ ನೂಱು ಯೋಜನದಗಲಮುಂ ಅನಿತು ಉತ್ಸೇಧಮುಂ ಮೇಗಯ್ವತ್ತು ಯೋಜನ ವಿಸ್ತಾರಮುಂ ಅಯ್ವತ್ತು ಯೋಜನಂ ಆಟ್ಕೆಯುಮನವಗಯ್ಸಿ: **ಶಾಂತಿಪು,** ೧೧. ೬೦ ವ)

## ಇ

**ಇಂಕೆವರ್** – ಬತ್ತು, ಇಂಗಿಹೋಗು (ಇಂಕೆವಂದು ಎಯ್ದೆ ಕಂಪಲ್ ಮಸಗುತ್ತುಂ ಬತ್ತೆ ತೆರ್ಪಂಬಡೆದ ಅಱುಪುಗೆಱೆಗಳ್: **ಜಗನ್ನಾವಿ,** ೧೭. ೬೨)

**ಇಂಗಡಲ್** – ಹಾಲ್ಗಡಲು (ಬಡಬಾನಲಂಗೆ ಸೆಡೆದಿಂಗಡಲೆ ಸರಣ್ಬೊಕ್ಕುದಮರಶೈಲಮನೆಂಬೀ ಪಡೆಮಾತಂ ನೀರ್ಘಾದಿಗೆ ಪಡೆಯುತ್ತುಂ ಪೊನ್ನ ಕೋಂಟೆಯಂ ಬಳಸಿರ್ಕುಂ: **ಪಂಪರಾ,** ೧. ೧೧೩)

**ಇಂಗದಿರ್** – ಬೆಳುದಿಂಗಳು (ನನೆವಿಲ್ಲ ಬಲ್ಲಹನ ಸೊಂಪಇಂಗೆ ಬೆಕ್ಕಸಂಬಡುತ್ತುಂ ಬದ ಇಂಗದಿರ್ಗಳಂ ಕಾಣ್ಕೆಗೊಟ್ಟು ಜೊನ್ನವಕ್ಕಿ ಬಿನ್ನವಿಸಿತ್ತು: **ಕಬ್ಬಿಗಕಾ,** ೧೧೩ ವ)

**ಇಂಗದಿರ್ವಕ್ಕಿ** – ಬೆಳದಿಂಗಳು ಕುಡಿಯುವ ಹಕ್ಕಿ, ಚಕೋರ (ಮಹಾದೇವನ ಮೂರ್ತಿಯಂ ಕಂಡು ಇಂಗದಿರ್ವಟ್ಟಂ ಕಂಡ ಇಂಗದಿರ್ವಕ್ಕಿಯಂತೆ ಪೊಂಗಿ ಪೊಱೆಯೇಱೆ: **ಉದ್ಭಟಕಾ,** ೧೨. ೧೩೮ ವ)

**ಇಂಗದಿರ್ವಟ್ಟು** – ಶೀತಲ ಕಿರಣಗಳನ್ನು ಹೊಂದಿದ, ಚಂದ್ರ ಮಂಡಲ (ಮಹಾದೇವನ ಮೂರ್ತಿಯಂ ಕಂಡು ಇಂಗದಿರ್ವಟ್ಟಂ ಕಂಡ ಇಂಗದಿರ್ವಕ್ಕಿಯಂತೆ ಪೊಂಗಿ ಪೊಱೆಯೇಱೆ: **ಉದ್ಭಟಕಾ,** ೧೨. ೧೩೮ ವ)

**ಇಂಗಳ** – ಕೆಂಡ (ಊದುವ ತಣ್ಣೇಳಲ್ ಇಂಗಳಮಾದುದು ಕುಸುಮಾಳಿ ಶಸ್ತ್ರಮಾದುದು ಬಿಸಿಲ್: **ಉದ್ಭಟಕಾ,** ೧೦. ೫೭)

**ಇಂಗಳಗಣ್** – ಬೆಂಕಿಯ ಕಣ್ಣು, ಉರಿಯುವ ಕಣ್ಣು (ದ್ರುಪದಾತ್ಮಜಾತಂ ಓವದೆ ಪುಡಿಯೊಳ್ ಪೊರಳ್ಚಿ ತಲೆಯಂ ತೆಗೆವಲ್ಲಿ ಪಿನಾಕವೆತ್ತವೋದುದೊ ಶರವೆತ್ತವೋದುದೊ ಲಲಾಟದಿಂ ಇಂಗಳಗಣ್ಣು ಅದೆತ್ತವೋದುದೊ: **ಗದಾಯು,** ೪. ೫೧)

**ಇಂಗಿಣೀಮರಣ** – [ಜೈನ] ಹತ್ತೊಂಬತ್ತು ಬಗೆಯ ಮರಣಗಳಲ್ಲಿ ಒಂದು; ಯತಿಯು ಸಂಗವನ್ನು ತೊರೆದು ಒಂಟಿಯಾಗಿದ್ದು, ಆಹಾರವನ್ನು ಬಿಟ್ಟು, ಉಪಸರ್ಗದಲ್ಲಿ ಉಪಚಾರ ಬಿಟ್ಟು ಸಮತೆಯಿಂದ ಹೊಂದುವ ಮರಣ (ಕ್ಷಮೆಯಂ ಭಾವಿಸಿ ಚತುರ್ವಿಧಮಪ್ಪ ಆಹಾರ ಶರೀರಮುಮಂ ತೊಱೆದು ಇಂಗಿಣೀಮರಣದಿಂ ಶುಭಪರಿಣಾಮದೊಳ್ ಕೂಡಿ: **ವಡ್ಡಾರಾ,** ಪು ೧೯೨, ಸಾ ೧೦)

**ಇಂಗು** – ಬತ್ತು (ಮೈಮೆ ಮಡಿಯಿತ್ತು ಉತ್ಸಾಹಂ ಇಂಗಿತ್ತು: **ಗಿರಿಜಾಕ,** ೮. ೧೬೨); ಹಿಂಗು (ಉಪ್ಪಿಲ್ಲಣೆಂಗು ಸಾಸವೆ ತಪ್ಪಿಲ್ಲದ ಮೆಣಸು ಸುಂಟಿ ಪೊಸಸುಣ್ಣಮಿವಂ ಚಪ್ಪರಿಸಿ ಬಡಿದು ಮೆಯ್ಯಂ ಸೊಪ್ಪಾಗಿರೆ ಮೋದಿ ಪೂಸುವರ್ ನಿರ್ದಯೆಯಿಂ: **ಧರ್ಮಾಮೃ,** ೩. ೪೨)

**ಇಂಗುದಿ** – ಗಾರೆಗಿಡ, ತಾಪಸಭೂಜ (ಇಂಗುದಿ ತಾಪಸಭೂಜಂ: **ಅಭಿಧಾವ,** ೧. ೧೦. ೧೭)

**ಇಂಗುಲಿಕ** – ಕೆಂಪು ಬಣ್ಣ (ದಿಗುಣಿಸೆ ಪತ್ತಿದಿಂಗುಲಿಕದಿಂ ನಖದೀಧಿತಿ: ಮಲ್ಲಿನಾಪು, ೫. ೨೭)

**ಇಂಗುಳಿಕ** – ಕೆಂಪು ಬಣ್ಣ (ನಯಮಳವಟ್ಟ ಪಚ್ಚೆ ಸಹಕಾರದೊಳಿಂಗುಳಿಕಂ ತಳಿರ್ತಶೋಕೆ: **ಶಾಂತಿಪು,** ೧. ೬೪)

**ಇಂಗೂಟ** – ಇನಿದಾದ ಕೂಟ, ಸಂಭೋಗ (ಬಸಮಾದ ಗಂಡರಿಂಗೂತಮೆ ತೋಟಿಯೆಂದು: **ಲೀಲಾವತಿ,** ೧೪. ೪೦)

**ಇಂಗೊರಲ್** – ಇಂಪಾದ ಕಂಠ, (ಇಂಗೊರಲ್ಕೊಳೆ ಪಾಡಿಯಾಡಿ ರಂಜಿಸಿತೊ ಸಭಾಜನಂಗಳ ಮನಂಗಳನಾ ದಿವಿಜಾಂಗನಾಜನಂ: **ಅಜಿತಪು,** ೫. ೪೦)

**ಇಂಗೋಲ್** – ರುಚಿಯಾದ ಕೋಲು, ಕಬ್ಬು (ಬೆಳ್ವುವೆರ್ತಿ ಇಂಗೋಲಂ ತೋಂಟಿಗಂ ಕೊಟ್ಟನೊರ್ವಂ: **ಕಬ್ಬಿಗಕಾ,** ೮೮)

**ಇಂಗೋಲ** – ಕಬ್ಬುವಿಲ್ಲ, ಮನ್ಮಥ (ಇಸಲೊಡರಿಸುವ ಇಂಗೋಲನ ಮಿಸುಗುವ ಪೊಸವಿಲ್ಲ ಜೇವೊಡೆಯ ದನಿವೋಲ್: **ಕಬ್ಬಿಗಕಾ,** ೯೬)

**ಇಂಗೋಲ್ವಿಲ್ಲ** – ಇಂಗೋಲ, ಮನ್ಮಥ (ಇಂಗೋಲ್ವಿಲ್ಲನೆಂದು ಕಾಮಂ: **ಶಬ್ದಮದ,** ಪ್ರಸಾ, ೨೪)

**ಇಂಚರ** – ಇಂಪಾದ ಧ್ವನಿ (ಅಂಚೆಗಳ ಇಂಚರದಿಂ ತಣ್ಪಿಂ ಚೆಲ್ವಿಂ ಸವಿಯಿಂ ಅಬ್ಜಘನಸೌರಭದಿಂ ಕಾಂಚನ ಕಮಳಾಕರಮಿದು ಪಂಚೇಂದ್ರಿಯಸುಖಮಂ ಎನಗೆ ಪಡೆದಪುದೀಗಳ್: **ಕಾದಂಸಂ,** ೩. ೧೬)

**ಇಂಚಲ್** – ಈಚಲು ಮರ (ಪಲಸು ಆಲಂ ತಡಸು ಆಸು ತೇಗು ತದುಕು ಇಂಚಲ್ ಪೊನ್ನೆ ಚೆನ್ನಂಗಿ ಬೊಬ್ಬುಲಿ ಇರ್ಬಿಡ ಅರನೇಱಿಲ್ ಇಪ್ಪೆ ಸಿರಿಸಂ ಹಾಡಂಗಿ: **ಪಾರ್ಶ್ವನಾಪು,** ೧೨. ೫೮)

**ಇಂಚಿಲ್** – ಈಚಲು ಮರ (ಆಲದ ಇಂಚಿಲ ಕರಿಬೇವಿನ ಅಂಬಟೆಯ ತಾಱೆಯ ತಂಡಸಿನ: **ಲೀಲಾವತಿ,** ೬. ೨೧)

**ಇಂಚೆ** – ಹಿಂಸೆ (ಇಂಚೆಯ ಪಸವಿನ ಬಱಿದ ಕಳಂಚಿನ ಡಾವರದ ಬಾಧೆಯಿಲ್ಲದ ಪದದೊಳ್ ಮುಂಚದೆ ಪಿಂಚದೆ ಬಳೆದು ವಿರಿಂಚಿಯ ಕೆಯ್ಪಿಡಿವೊಲಾದುವಾ ನಾಡೂರ್ಗಳ್: **ಪಂಪಭಾ,** ೮. ೫೧)

**ಇಂಡೆ** – ರಾಶಿ, ಹಿಂಡು (ನಾಟಕಶಾಲೆಯೊಳೆಯ್ದೆ ರಕ್ತಪುಷ್ಪಾಂಜಳಿಗೆಯ್ದ ಮಾಣ್ಕೆಯವೊಲಿರ್ದುವು ಖಂಡದಿಂಡೆಗಳ್: **ಪಂಪಭಾ,** ೮. ೭೮); ಹೂವಿನ ದಂಡೆ (ಖಂಡೇಂದುಧರನಂ ಅರ್ಚಿಸಿ ಇಂಡೆಗಳುಚ್ಚಳಿಸಿ ಕೆಯ್ಗೆ ಬಾರದೊಡೆ ಆಗಳ್ ಮಂಡೆಯನರಿದೇಱಿಸುವಂ: **ಸಮಯಪ,** ೯. ೩೮)

**ಇಂಡೆಗಟ್ಟು** – ಹೂವಿನ ದಂಡೆಯನ್ನು ಕಟ್ಟು (ಎಡ್ಡವೆನಲಿಂಡೆಗಟ್ಟುವ ಗಡ್ಡುಗೆಗುಡುವೆಡೆಗೆ ನೀರನಡಕುವ ಫಲಮಂ ಬಡ್ಡಿಸಿ ನಿವೇದ್ಯಮೀವ: **ಜಗನ್ನಾವಿ,** ೧೬. ೫೬)

**ಇಂಡೆಯಾಟ** – ಚೆಂಡಾಟ (ನೆರೆದುದು ಪೆಂಡವಾಸದ ಎಳವೆಂಡಿರ ತಂಡಮದು ಇಂಡೆಯಾಟದೊಳ್: **ಪುಷ್ಪದಂಪು,** ೧೨. ೨೧)

**ಇಂಡೆಯಾಡು** – ಹೂವಿನ ದಂಡೆಯನ್ನು ಎಸೆದಾಡು (ಸತ್ತವರೆತ್ತ ನೀರಿಟಿವರೆತ್ತ ಜನಂ ನೆರೆದಿಂಡೆಯಾಡಿ ಪಾಡುತ್ತೆಸೆದಿರ್ಪರ್ ಇಂತು ಮೃತರಾಜವಿಡಂಬಮನೇಕೆ ಕಾಣ್ಬಿರೇ: **ಅಜಿತಪು,** ೨. ೧೦೫)

**ಇಂತಪ್ಪ** – ಇಂತಹ, ಇಂಥ (ಇಂತಪ್ಪ ರೂಪಮಂ ಕೈಕೊಂಡೊಡೆ: **ವಡ್ಡಾರಾ,** ಪು. ೭೪. ಸಾ. ೩)

**ಇಂತುಟು** – ಇಷ್ಟು ಮಹಾದೇವಿಗೆ ಉಂತುಟೊಂದು ಬಯಕೆಯಾದುದು: **ವಡ್ಡಾರಾ,** ಪು. ೧೬೨, ಸಾ. ೧೪); ಹೀಗೆ (ಜಿನತತ್ವಮಂ ಇಂತುಟು ಅಂತುಟು ಎಂದು ಬಾಯ್ಗೆವಂದಂತೆ ಅಣಕಚಣಕಂಗೆಡೆದು .. .. ದುಃಖಂಬಡುವರ್: **ಧರ್ಮಾಮೃ,** ೪. ೨೨ ವ)

**ಇಂತುಟೆ ವಲಂ** – ಇಷ್ಟೇ ಅಲ್ಲವೇ? ಹೀಗಾಯಿತೇ? (ಬಿಸುಸುಯ್ದು ಅಟಲಿಂದಂ ಇಂತುಟೆವಲಂ ಎಂದು ಮಹಾಶ್ವೇತೆ ತನ್ನಾಶ್ರಮಕ್ಕೆ ಪೋಗೆ: **ಕಾದಂಬ,** ೮. ೬೩ ವ)

**ಇಂದಗಿ** – ಇಂದ್ರಜಿತು (ಮಂಡೋದರಿ ಪಡೆದಳ್ ಮುನ್ನಿಂದಗಿಯಂ ಬಟಿಕೆ ಮೇಘವಾಹನನಂ: **ಪಂಪರಾ,** ೧೦. ೧೫೧)

**ಇಂದಿಂದಿರ** – ದುಂಬಿ, ಗುಂಗೀಹುಳು (ಸಮುದ್ಯತ್ ಮಂದವ್ರಾತ ಇಂದಿಂದಿರ ಚಂಡ ತಾಂಡವ ಕಲ ಸ್ವಾಭಾವಿಕಶ್ರೇಯಸಃ; **ಪಂಪಭಾ,** ೯. ೯೭)

**ಇಂದಿರದಿಕ್ಕು** – ಪೂರ್ವದಿಕ್ಕು (ಇಂದಿರದಿಕ್ಕೆಂಬಾಳಿ ತೋರ್ಪಆ ಮುಕುರಮೆನೆ ಕರಂ ಮೂಡಿತು ಅಬ್ಜಾರಿಬಿಂಬಂ: **ರಾಜಶೇವಿ,** ೪. ೧೩)

**ಇಂದಿರವಿಲ್** – ಇಂದ್ರಬಿಲ್ಲು, ಕಾಮನಬಿಲ್ಲು (ತೋರಣಂ ಇಂದಿರೆವಿಲ್: **ರಾಜಶೇವಿ,** ೮. ೧೧೮)

**ಇಂದಿರೆ** – ಲಕ್ಷ್ಮಿ (ಧರಣೀಕಾಂತೆಗೆ ಸಂತಸಂ ರಿಪುಮಹೀಕಾಂತರ್ಗೆ ಸಂತಾಪಂ ಇಂದಿರೆಗೆ ಆನಂದರಸಂ ಬುಧಪ್ರಕರದಾರಿದ್ರ್ಯಕ್ಕೆ ವಿಚ್ಛೇದಂ: **ರಾಜಶೇವಿ,** ೪. ೧೧೯); ಬಿಲ್ವವೃಕ್ಷ (ಇಂದಿರೆಯ ಪಟೀರದೇಳ್ಗೆಯ ಕಪೋತದ .. .. ಭೂರುಹಂ ಒಪ್ಪುಗುಂ ಆ ವನಾಮತರದೊಳ್: **ರಾಜಶೇವಿ,** ೫. ೫೭)

**ಇಂದೀವರ** – ಕನ್ನೈದಿಲೆ (ದಳಿತಾಂಭೋಜಾಸ್ಯಂ ಇಂದೀವರದಳ ನಯನಂ ಪಕ್ವಬಿಂಬಾಧರಂ: **ಆದಿಪು,** ೮. ೫೧)

**ಇಂದು** – ಚಂದ್ರ (ವಿಧು ಚಂದ್ರಂ ರಜನಿಕರಂ ಸುಧಾಂಶು ಮೃಗಲಕ್ಷ್ಮಂ ಇಂದು: **ಅಭಿಧಾವ,** ೧. ೧. ೬೭); ಈ ಹೊತ್ತು (ಮನೆಗಿಂದು ಬರ್ಕುಂ ಎಂದು ಆಂ ಅನೇಕತರವಸ್ತುವಾಹನದಿಯಂ ಒಸೆದು ಇಂಬನೆ ಪಸರಿಸಿ ಕುಡಲಿರ್ದೆಂ: **ಕವಿರಾಮಾ,** ೨. ೩೩)

**ಇಂದುಕಾಂತಕರ** – ಚಂದ್ರನ ಸುಂದರವಾದ ಬೆಳುದಿಂಗಳು (ಬಸಿವ ಇಂದುಕಾಂತಕರಸಂಕುಳಮೊಯ್ಯನವುಂಕಿ ಸೋಂಕೆ: **ಆದಿಪು,** ೪. ೪೯)

**ಇಂದುಕರಾವಳಿ** – ಬೆಳುದಿಂಗಳ ರಾಶಿ (ಹಿಮೋಘಳಂ ಒಸರ್ವವೊಲ್ ಇಂದುಕರಾವಳಿಗೆ .. .. ನೀಳಮಣಿ ಒಸೆದಿರ್ಪುದೇ: **ಚಂದ್ರಪ್ರಪು,** ೧. ೩೯)

**ಇಂದುಕಾಂತೋಪಲ** – ಚಂದ್ರಕಾಂತಶಿಲೆ (ಇದು ನಿಮದ ನವ ಇಂದೂಪಲಂ ಇದು ಅಭವನಂ ಪೂಜೆಗೆಯ್ದ ಶೀಕರತಲಂ: **ಕಾದಂಸಂ,** ೫. ೮೫)

**ಇಂದುಕುಳತಿಳಕ** – ಚಂದ್ರವಂಶಶ್ರೇಷ್ಠ (ಉನ್ನತ ಧವಳಚ್ಛತ್ರಚ್ಛನ್ನ ವಿಯತ್ತಳನಂ ಇಂದುಕುಳತಿಳಕನಂ ಇಂತು ಅನ್ನೆಯದಿಂದ ಈ ಪಟುವಿನೊಳ್ ಎನ್ನರಸನಂ ಇಂತು ಬಿದಿಯೆ ತಂದಿಕ್ಕುವುದೇ: **ಪಂಪಭಾ,** ೨. ೨೨)

**ಇಂದುಗತಿ** – [ಜೈನ] ಸರ್ವಸಮಾನತ್ವದಿಂದ ಚರಿಗೆಗೆ ಹೋಗುವುದು (ಪಾರಣೆಗೆ ಮಱುದಿನದೊಳ್ ಇಂದುಗತಿಯಿಂ ಆ ಯತಿಪರ್ ಚರಿಗೆಗೆ ವರೆ: **ಕರ್ಣನೇಮಿ,** ೬. ೪ ವ)

**ಇಂದುಜ್ಯೋತ್ಸ್ನೆ** – ಬೆಳುದಿಂಗಳು (ಇನಂ ಇಂದುಜ್ಯೋತ್ಸ್ನೆಯಂ ತಾಳ್ದಿದಂ: **ಸುಕುಮಾಚ,** ೪. ೧೧)

**ಇಂದುಧರ** – ಶಿವ (ಇಂದುಧರಂ ವಟುವೇಷಂದಳೆದೊಡಂ ಅಜೆಗಾದುದು ಹರುಷಂ: **ಗಿರಿಜಾಕ,** ೯. ೯೬)

**ಇಂದುಮಣಿ** – ಚಂದ್ರಕಾಂತಶಿಲೆ (ಉತ್ಪಲಾವಳಿ ತಿಳಿಜೊನ್ನಮೆಂದಲರ್ಗುಮಾ ನಗದಿಂದುಮಣಿಪ್ರಕಾಶಮಂ: **ಶಬರಶಂ:** ೧. ೩೮)

**ಇಂದುಲಕ್ಷ್ಮಿ** – ಚಂದ್ರನ ವೈಭವ (ಇಂದುಲಕ್ಷ್ಮಿಯಂ ಉದಂಚದ್ವೀಪದಿಂ ಕಾಂತಿಯಂ .. .. ಮಾಡುಗುಂಜಿನಪತಿಪದಪಂಕಜಂ: **ಶಾಂತಿಪು,** ೧೦. ೫೫)

**ಇಂದುಶಿಲೆ** – ಚಂದ್ರಕಾಂತ ಶಿಲೆ (ಇಂದುಶಿಲೆಯ ಡೊಕ್ಕರಿಗಳಂ ಆಗಳೆ ಕೊಂಡು ತಾನುಮಾ ಮಾನಿನಿಯುಂ ಧರಣೀವಲ್ಲಭ ಚಕ್ರಿಗಿಂದು ಜಳಕೇಳೀಸ್ಥಾನಂ ಆನಾದೆನೆಂಬ ಉರು ಸಂತೋಷದೆ ತತ್ಸರೋವರಮದುಂ ಮೈವೆರ್ಚುತಿರ್ದತ್ತು; **ಶಾಂತೀಶ್ವಪು,** ೧೦. ೧೬೦ ಮತ್ತು ೧೬೧)

**ಇಂದುಸಖ** – ಮನ್ಮಥ (ಒಂದು ದಿನಂ ಆತ್ಮವಲ್ಲಭನ ಸೂಚ್ಗೆವಂದು ಇಂದುಸಖಸುಖಮನಾಂತು ಸುಖನಿದ್ರಾ ಮುದ್ರಿತಲೋಚನೆಯಾಗಿ: **ಕರ್ಣನೇಮಿ,** ೫. ೭೩ ವ)

**ಇಂದೂಪಲ** – ಚಂದ್ರಕಾಂತಶಿಲೆ (ಇದು ನಿಂದ ನವ ಇಂದೂಪಲಂ ಇದು ಅಭವನಂ ಪೂಜೆಗೆಯ್ದ ಶೀಕರತಲಂ .. .. ಎಂದು ಪರಿಜನಂ ಪೇೞೆ: **ಕಾದಂಸಂ,** ೫. ೮೫ ಮತ್ತು ೮೫ ವ)

**ಇಂದೂಪಳ** – ಇಂದೂಪಲ (ಈಕ್ಷಣಚಂದ್ರಿಕೆಯಿಂ ಒಸರ್ವ ಇಂದೂಪಳದ ಪೊಳೆವ ಕಲಶಮನಾಗಳ್: **ಲೀಲಾವತಿ,** ೧೧. ೫೮)

**ಇಂದೊವರ್** – ಮಧುರವಾದ ಒಗರು ರುಚಿ (ಇಂದೊವರೆನಿಸಿದ ತನಿರಸದಿಂದೊದವಿದ ನೀಲ ಪಾಟಲಚ್ಛವಿಯಿಂ ನುಣ್ಪಿಂದ

ಎಸೆವ ಅರನೇಜೆಲ ಪಣ್ಣಿಂದರಗಿಳಿಗೆ ಆಮ್ರದೊಲವನೇಂ ತೊಲಗಿಸಿತೋ: **ಪಂಪರಾ,** ೭. ೧೫೫)

**ಇಂದೊಳ** – ಮಧುರ ಗಾನ (ಇಂದೊಳದಿಂ ಉನ್ಮದಷಟ್ಪದವೃಂದಮೀಗಳೀಗಳೆ ಮೊರೆದತ್ತು: **ಆದಿಪು,** ೧೩. ೫)

**ಇಂದೋಳ** – ಇಂದೊಳ (ಇದು ಲೀಲಾಂದೋಳಂ ಇಂದೋಳದ ದನಿ ನೆಱೆಗೊಳ್ವನ್ನೆಗಂ ಪಾಡಲೆಂದೇಱೆದಿಳಂ ತೂಗುತ್ತುಮಿರ್ದನ್ನಯ ಪರಿಜು: **ಆದಿಪು,** ೪. ೯); ಹಿಂದೋಳ ರಾಗ; ದುಂಬಿ (ಬಗೆಮುಟ್ಟೆ ಪಾಡುವ ಇಂದೊಳದ ಸರಂ .. .. ನೆಗಟ್ದಿನಾಲ್ಸರದಿಂದಿಸುವಂ ವಿಯೋಗಿಯಂ: **ಮಲ್ಲಿನಾಪು,** ೫. ೨೫)

**ಇಂದ್ರ** – ದೇವತೆಗಳ ಒಡೆಯ (ಪುರುಹೂತಂ ಮಘವಂ ದಿವಸ್ಪತಿ .. .. ಇಂದ್ರಂ ಜಿಷ್ಣು: **ಅಭಿಧಾವ,** ೧. ೧. ೩೩); ದ್ವಾದಶಾದಿತ್ಯರಲ್ಲಿ ಒಬ್ಬ; ಒಡೆಯ (ಅಧಿಪಂ ಈಶ್ವರಂ ಇಂದ್ರಂ: **ಅಭಿಧಾವ,** ೨. ೧. ೯); ಶ್ರೇಷ್ಠ (ವಿಸ್ಮಿತಾಂತಃಕರಣರಾಗಿ ಮುನೀಂದ್ರನಂ ಇಂತೆಂದರ್: **ಕಾದಂಸಂ,** ೧. ೭೭ ವ)

**ಇಂದ್ರಕ** – [ಜೈನ] ನರಕಬಿಲಗಳಲ್ಲಿ ಒಂದು ಬಗೆ (ಆ ಬಿಲಂಗಳುಂ ಇಂದ್ರಕ ಶ್ರೇಢೀಬದ್ಧ ಪ್ರತೀಣ್ಣಂಗಳೆಂದು ಮೂಱುತೆಱಂ: **ಆದಿಪು,** ೫. ೮೩ ವ); ಸೌಧರ್ಮೇಂದ್ರ ಮುಂತಾದವರ ವಿಮಾನಗಳಲ್ಲಿ ಒಂದು ಬಗೆ (ಅಲ್ಲಿ ಸ್ವರ್ಗಮೆಂಬಿನಂ ಸೌಧರ್ಮೇಶಾನಾದಿಗಳ ವರವಿಮಾನಂಗಳ್ ಇಂದ್ರಕ ಶ್ರೇಣಿಬದ್ಧ ಪ್ರಕೀರ್ಣತೆಗಳೆಂದು ಮೂದೆಱಂ: **ಚಂದ್ರಪ್ರಪು,** ೩. ೩೨ ವ)

**ಇಂದ್ರಕಾಂತಮಣಿಪುತ್ರಿಕೆ** – ಚಂದ್ರಕಾಂತಶಿಲೆಯ ಬೊಂಬೆ (ಸೋಂಕಿನೊಳೊಱೆವ ಇಂದುಕಾಂತ ಮಣಿಪುತ್ರಿಕೆಯಂದದಿಂ ಒಪ್ಪಿ ತೋಱೆದಿಳ್: **ಆದಿಪು,** ೪. ೪೯)

**ಇಂದ್ರಕಾರ್ಮುಕ** – ಕಾಮನಬಿಲ್ಲು (ರತ್ನತೋರಣವೊ ತಾನೆನಲ್ ಒಪ್ಪಿದುದು ಇಂದ್ರಕಾರ್ಮುಕಂ: **ತ್ರಿಷಷ್ಟಿಪು,** ೮. ೨೧)

**ಇಂದ್ರಕೀಲ** – ಒಂದು ಪರ್ವತದ ಹೆಸರು (ಇಂದ್ರಕೀಲನಗೇಂದ್ರದ ತಪೋಧನರೆಲ್ಲಂ ನೆರದು ಬಂದು: **ಪಂಪಭಾ,** ೮. ೧೦ ವ)

**ಇಂದ್ರಕೇತು** – [ಜೈನ] ಮಹಾಮಂಡಲೇಶ್ವರರ ಜಿನಪೂಜೆ (ಮಹಾಮಂಡಳೇಶ್ವರರ್ ಮಾಟ್ಟ ಇಂದ್ರಕೇತುವೆಂಬ ಪೂಜೆಯಂ: **ಸುಕುಮಾಚ,** ೬. ೨೫ ವ)

**ಇಂದ್ರಕೋದಂಡ** – ಇಂದ್ರಧನುಸ್ಸು (ವಿದ್ಯುಲ್ಲತೆಯ ತಿರುವುವೊಯ್ದು ಇಂದ್ರಕೋದಂಡಮಂ: **ಜಗನ್ನಾವಿ,** ೪. ೨೧)

**ಇಂದ್ರಕೋಶ** – ತವಗ, ಸುಖಾಸನ (ನಿರಂತರಾಟ್ಟಾಳಕಪ್ರತೋಳಿ ಇಂದ್ರಕೋಶ ದೇವಸನಾಥಂಗಳುಂ: **ಆದಿಪು ನರಸಿಂ:** ೧೩. ೫೭ ವ)

**ಇಂದ್ರಗೋಪ** – ಮಿಂಚುಹುಳು, ಹೊನ್ನೆ ಹುಳು (ಕಾಮಕಾಂತೆ ಬಟೆಯಂ ತನ್ನಿಚ್ಚೆಯಿಂ ಮೆಚ್ಚಿ ಬಣ್ಣವುರಂ ತೀವಿದ ಮಾಟ್ಕೆಯಾಯ್ತು ನವಿಲಿಂ ಕುಂದಂಗಳಿಂ ಇಂದ್ರಗೋಪವಿಳಾಸಂಗಳಿಂ ಆಲಿಕಲ್ಲ ಪರಲಿಂ ಕಾರೊಳ್ ಮಹೀಮಂಡಲಂ: **ಪಂಪಭಾ,** ೭. ೨೪); ಹಡಗಿನ ಮಂಚ (ಎಳೆದಳಿರ್ ಇಂದ್ರಗೋಪಂ ಅಳಿಮಾಳಿಕೆ ನೀಲದ ಮಾಲೆ .. .. ಸಮುಜ್ವಳಿಸಿರೆ ವಹಿತ್ರಮಿದೆಂದೆನಿಸಿತ್ತು ನಂದನಂ: **ರಾಜಶೇವಿ,** ೧೦. ೪)

**ಇಂದ್ರಚಾಪ** – ಕಾಮನ ಬಿಲ್ಲು (ಕಟ್ಟಿದ ಪಂಚವಣ್ಣಿಗೆಯ ಪಟ್ಟೆಯ ತೊಂಗಲೊಳ್ ಇಂದ್ರಚಾಪಮಂ ಪುಟ್ಟಿಸಿ .. .. ಮೇರೆದಪ್ಪಿ ಕವಿತಂದುದು ರೌದ್ರರಸಂ ರಣೋರ್ವಿಯೊಳ್: **ಪಂಪರಾ,** ೧೩. ೫೯)

**ಇಂದ್ರಚ್ಛಂದ** – ಸಾವಿರದೆಂಟು ಎಳೆಗಳಿಂದ ಕೂಡಿದ ಮುತ್ತಿನ ಹಾರ (ಬೆಳಗಿಂದೆ ಜಗಂ ಬಾಸಣಿಸಿದುದೆನೆ ಸಕಳಸುರಾಸುರಪತಿಯುರದೊಳೆಸೆದುದು ಇಂದ್ರಚ್ಛಂದಂ: **ಆದಿಪು,** ೯. ೭)

**ಇಂದ್ರಜಾಲ** – ಯಕ್ಷಿಣೀ, ಗಾರುಡಿ, ಕಣ್ಕಟ್ಟು (ಇಂದ್ರಜಾಲದ ಸಿರಿಗೇಕೆ ಮೆಟ್ಟಿಡುವವಿರಿ: **ಗದಾಯು,** ೧. ೩೫)

**ಇಂದ್ರಜಾಲಿಗ** – ಯಕ್ಷಿಣಿಗಾರ (ಇಂದ್ರಜಾಲಿಗರ ಪಾಪೆಗಳುಂ ಸೀರೆಗಳುಂ ಝುಣಂಬಮುಮಂ ತೊಟ್ಟು ಶ್ಮಶಾನದೊಳುರಿವ ಕಿಚ್ಚಿನ ಪಕ್ಕದೆ ನಿಂದಿರ್ದಳ್: **ವಡ್ಡಾರಾ,** ಪು ೧೯, ಸಾ ೧೨)

**ಇಂದ್ರಜಾಲಿಗತನ** – ಮಾಯಾವಿತನ (ಬಿತ್ತರಿಸಿದಂ ಇಂದ್ರಜಾಲಿಗತನಮಂ: **ಅಜಿತಪು,** ೫. ೧೮); ಮಾಯೆ (ಬಿತ್ತರಿಸಿದಂ ಇಂದ್ರಜಾಲಿಗತನಮಂ: **ಆದಿಪು,** ೫. ೧೮)

**ಇಂದ್ರಜಿತು** – ಇಂದ್ರನನ್ನು ಗೆದ್ದವನು; ರಾವಣನ ಮಗ, ಮೇಘನಾದ (ರಣಭೂಮಿಗಿಂದ್ರಜಿತು ಪೊಱಮಟ್ಟಂ; **ಪಂಪರಾ,** ೧೩. ೧೫)

**ಇಂದ್ರತನಯ** – ಅರ್ಜುನ (ಸೊಕಮಿರ್ಕೆ ಅಕ್ಕಟ ದರ್ಭಪಾಣಿ ಯಮಜಂ ದರ್ವೀಕರಂ ವಾಯುಪುತ್ರಕನುಂ ಜರ್ಜರಹಸ್ತಂ ಇಂದ್ರತನಯಂ ದಸ್ರಾತ್ಮಜರ್ ದಂಡಮುಷ್ಟಿಕರರ್ ಶಸ್ತ್ರವಿಡಂಬಂ ಏವುದವರ್ಗಂ ಪಾಂಚಾಲಿಯುಂ ಗಂಧದಾಯಕಿಯಾಗಿರ್ಪಿನಂ ಅಂದು ಮತ್ಸ್ಯಗೃಹದಿಂದ ಈ ನಿಗ್ರಹಂ ಪೊಲ್ಲದೇ: **ಗದಾಯು,** ೩. ೩೪)

**ಇಂದ್ರತರು** – ಕಲ್ಪವೃಕ್ಷ (ರಸಭಾವಂಗಳೊಳಾಡಿ ಪಾಡಿ ಮಧುರಪ್ರಧ್ವಾನದಿಂ ದಿವ್ಯವಸ್ತು ಸುಗಂಧ ಇಂದ್ರತರುಪ್ರಸೂನ ಫಲಸಂತಾನಂಗಳಂ ತಂದು: **ಅಜಿತಪು,** ೩. ೬)

**ಇಂದ್ರತ್ಯಾಗ** – [ಜೈನ] ಅಧಿಕಾರತ್ಯಾಗ; ಪದವಿತ್ಯಾಗ; ಐವತ್ತಮೂರು ಗರ್ಭಾನ್ವಯಕ್ರಿಯೆಗಳಲ್ಲಿ ಒಂದು (ದಾನಸುಖೋದಯ ಇಂದ್ರತ್ಯಾಗ ಅವತಾರಹಿರಣ್ಯಗರ್ಭೋತ .. .. ಎಂಬ ಅಯ್ವತ್ತಮೂಱು ಗರ್ಭಾದಿ ನಿರ್ವಾಣಪರ್ಯಂತಂಗಳಪ್ಪ ಗರ್ಭಾನ್ವಯಕ್ರಿಯೆಗಳಂ: **ಆದಿಪು,** ೧೫. ೧೫ ವ)

**ಇಂದ್ರದಂತಿ** – ಐರಾವತ (ದಿಗಿಭವ್ರಾತದೊಳ್ ಇಂದ್ರದಂತಿ ಸುರರೊಳ್ ಶಂಬಾಯುಧಂ ಚಕ್ರವರ್ತಿಗಳೊಳ್ ಶ್ರೀಜಗದೇಕಮಲ್ಲಮಹಿಪಂ .. .. ಮಿಗಿಲ್: **ಪಂಚತಂತ್ರ,** ೩೨)

**ಇಂದ್ರಧ್ವಜ** – [ಜೈನ] ಇಂದ್ರಾದಿಗಳು ಮಾಡುವ ಜಿನಪೂಜೆ (ಇಂದ್ರರ್ ಮಾಟ್ಟ ಇಂದ್ರಧ್ವಜಮುಂ: **ಆದಿಪು,** ೧೫. ೧೩ ವ)

**ಇಂದ್ರನಂದನ** – ಇಂದ್ರನ ಮಗ, ಅರ್ಜುನ (ತೊಳಗಿದ ಇಂದ್ರನಂದನನ ಮೈಸಿರಿಯಂ ಜಱೆದು .. .. ವಿಭ್ರಮವಿಳಾವಿರಾಜಿತ ರಾಜಶೇಖರಂ: **ರಾಜಶೇವಿ,** ೧೩. ೬೦); ಜಯಂತ

**ಇಂದ್ರನಗ** – ಮೇರುಪರ್ವತ (ಪಡೆದ ಧನಕ್ಕೆ ಲೆಕ್ಕಮಿಡಲ್ ಇಂದ್ರನಗಂ ಬಳಪಂ ಧರಾತಳಂ ಕಡಿತಂ ಅಹೀಶ್ವರಂ ತಗುಳೆ ಬಾಚಿಸುವೊಂ ಸುರಮಂತ್ರಿ ಕೂಡುವೊಂ: **ಶಾಂತಿಪು,** ೯. ೧೪೭)

**ಇಂದ್ರನೀಲ** – ನೀಲವರ್ಣದ ರತ್ನ (ಮೂಱುಬಣ್ಣಂ ಪೆಣೆದೊದವೆ ಗವಾಕ್ಷಸ್ಥ ಇಂದುಕಾಂತ ಇಂದ್ರನೀಲ ಅರುಣಮಣಿಕಿರಣಂಗಳ್ ಪೊಣ್ಮುವಂತಾದುವಾಗಳ್: **ಆದಿಪು,** ೧೧. ೨೩)

**ಇಂದ್ರಪುರ** – ಅಮರಾವತಿ (ಆನಗರಂ ಇಂದ್ರಪುರಕ್ಕಂ ಉದಾತ್ತಂ ಅಗ್ಗಳಂ: **ಜಗನ್ನಾವಿ,** ೨. ೩೫)

**ಇಂದ್ರಮಣಿ** – ಇಂದ್ರನೀಲ (ಇಂದ್ರಮಣೀ ಆಳ್ವರಿ ಬಜ್ಜರಗೊತ್ತಳಂಗಳ್ ಅಗ್ಗಳಿಸಿರೆ: **ಶಬರಶಂ,** ೧. ೫೪)

**ಇಂದ್ರವಧು** – ಇಂದ್ರ ನೇಮಿಸಿದ ಅಪ್ಸರೆ (ಕವಿತೆಗೆ ವಾಗ್ದೇವತೆ ಕಿಟ್ಟವಳಿಗೆವಿಡುವಂತೆ ತಂಬುಲದಿಂದೀವಿದ ಪೊಂಗವಳಿಗೆಯಂ ಪಿಡಿದು ಅಂಬಿಕೆಗೆ ಅವಟಯ್ಸಿದಳ್ ಒರ್ವಳ್ ಇಂದ್ರವಧು ತಂಬುಲಮಂ: **ಶಾಂತಿಪು,** ೯. ೧೮೦); ಶಚೀದೇವಿ

**ಇಂದ್ರವನ** – ಇಂದ್ರನ ನಂದನವನ (ಓಗರವೂಗಳ ಬಂಡಂ ಎಯ್ದೆ ಪೀರುತ್ತ ಒಡವಂದುವು ಇಂದ್ರವನದಿಂ ಮಱಿದುಂಬಿಗಳ್; **ಪಂಪಭಾ,** ೧೧. ೮೧)

**ಇಂದ್ರವಿದ್ವಿಷ** – ಇಂದ್ರನ ಶತ್ರು, ರಾವಣ (ಪುಷ್ಪಕ ವಿಮಾನಮನೇಱಿದಂ ಇಂದ್ರವಿದ್ವಿಷಂ: **ಪಂಪರಾ.** ೯. ೭೪)

**ಇಂದ್ರಸಿಂಧು** – ದೇವಗಂಗೆ (ನೀರದಮುಕ್ತ ಶೀತಕರನಂ ನವಚಂದ್ರಿಕೆ ಪೊರ್ದುವಂತೆ ಕೂಪಾರಮಂ ಇಂದ್ರಸಿಂಧು ಪುಗುವಂತೆ: **ಶಾಂತಿಪು,** ೬. ೨)

**ಇಂದ್ರಸಿಂಧುರ** – ಇಂದ್ರನ ಆನೆ, ಐರಾವತ (ಮಂತಣಸಾಲೆಗೆ ಬಂದಂ ಇಂದ್ರಸಿಂಧುರಗತಿ ರೇವತೀಧವನುಂ: **ಜಗನ್ನಾವಿ,** ೧೫. ೪೬)

**ಇಂದ್ರಹರಿನ್ನಗೇಂದ್ರ** – ಉದಯಪರ್ವತ, ಪೂರ್ವದಿಕ್ಕು (ಪಾಣ್ಬೆಯರಾಟಮಂ ಈಕ್ಷಿಸಲ್ ಮನಂದಂದು ಏಱಿದಂ ಮುದದೆ ಚಂದ್ರಮಂ ಇಂದ್ರಹರಿನ್ನಗೇಂದ್ರಮಂ: **ಪಂಚತಂತ್ರ,** ೧೩೨)

**ಇಂದ್ರಾಂಗನೆ** – ಶಚೀದೇವಿ (ಇಂದ್ರಾಂಗನೆ ನೋಡಿದಳ್ .. .. ಜಿನೇಂದ್ರದಾರಕ ರವಿಯಂ: **ಶಾಂತಿಪು,** ೧೦. ೬)

**ಇಂದ್ರಾಣಿ** – ಇಂದ್ರನ ಹೆಂಡತಿ, ಶಚೀದೇವಿ (ಒಪ್ಪುವ ಇಂದ್ರತುರಗಂ ಸಂದ ಇಂದ್ರಗೇಹಂ .. .. ಇಂದ್ರೈಶ್ವರ್ಯಂ ಇಂದ್ರಾಣಿ ಸಂದ ಇಂದ್ರಾನರ್ಘ್ಯವಿಭೂಷಣಂ: **ಪಂಪಭಾ,** ೩. ೭೯)

**ಇಂದ್ರಾನೇಕಪ** – ಇಂದ್ರನ ಆನೆ, ಐರಾವತ (ಮೊದಲ್ದಿಂದ್ರಾನೇಕಪಂ .. .. ಈಗೆ ಅರಿಗಂಗೆ ಮಂಗಳ ಮಹಾಶ್ರೀಯಂ: **ಪಂಪಭಾ,** ೩. ೭೯)

**ಇಂದ್ರಾನೋಕಹ** – ಇಂದ್ರನ ಮರ, ಕಲ್ಪವೃಕ್ಷ (ಇಂದ್ರಾನೋಕಹಂ ಒಪ್ಪುವ ಇಂದ್ರತುರಗಂ ಸಂದ ಇಂದ್ರಗೇಹಂ: **ಪಂಪಭಾ,** ೩. ೭೯)

**ಇಂದ್ರಾಭಿಷೇಕ** – [ಜೈನ] ಐವತ್ತಮೂರು ಗರ್ಭಾನ್ವಯ ಕ್ರಿಯೆಗಳಲ್ಲಿ ಒಂದು (ಇಂದ್ರಾಭಿಷೇಕ ಗುರುಪೂಜೋಪಲಂಭನ ಯೌವರಾಜ್ಯ .. .. ಎಂಬ ಅಯ್ವತ್ತಮೂಱು ಗರ್ಭಾದಿನಿರ್ವಾಣಪರ್ಯಂತಂಗಳಪ್ಪ ಗರ್ಭಾನ್ವಯಕ್ರಿಯೆಗಳಂ: **ಆದಿಪು,** ೧೫. ೧೫ ವ)

**ಇಂದ್ರಾಯುಧ** – ವಜ್ರಾಯುಧ, ಸಿಡಿಲು (ತಾಮ್ರಮಯ ಗುಹ್ಯಕಪ್ರತಿರೂಪಂ ಕಿಚ್ಚಿಂಗೆ ತೋಱಿದ ಅರಗು ಕರಗುವಂತೆ ಕರಗಿ ಪೊನಲ್ವರಿಯೆ ಬಿಟ್ಟಿರ್ದ ಇಂದ್ರಾಯುಧಮಂ ಕಂಡು: **ಶಾಂತಿಪು,** ೬. ೨೯ ವ); ಕಾಮನ ಬಿಲ್ಲು (ಆರ್ಗಿವು ನಿಲ್ಕುಂ ನವಸಾಂಧ್ಯರಾಗಹಿಮರುಂದ್ರ ಇಂದ್ರಾಯುಧಾಭಾಸಿಗಳ್: ಶಾಂತಿಪು, ೭. ೮): ಕಪ್ಪು ಕಣ್ಣುಗಳಿರುವ ಕುದುರೆ: (ಸಿತ ಚಕ್ಷು ಮಲ್ಲಿಕಾಖ್ಯಂ ಸಿತೇತರಾಖ್ಯಂ ತುರಗಂ ಇಂದ್ರಾಯುಧನುಂ: **ಅಭಿಧಾವ,** ೧. ೧೪. ೨೪)

**ಇಂದ್ರಾವರಜ** – ವಿಷ್ಣು (ವನಜಾಕ್ಷಂ ಪುರುಷೋತ್ತಮಂ ನಗಧರಂ ಶ್ರೀವತ್ಸಲಕ್ಷ್ಯಂ ಜನಾರ್ದನಂ ಇಂದ್ರಾವರಜಂ ಚತುರ್ಭುಜಂ ಉಪೇಂದ್ರಂ ವಿಷ್ಣು: **ಅಭಿಧಾವ,** ೧. ೧. ೨೦)

**ಇಂದ್ರಾಶೆ** – ಇಂದ್ರನ ದಿಕ್ಕು, ಪೂರ್ವದಿಕ್ಕು (ಇಂದ್ರಾಶೆಯೊಳ್ ಎನೆಯೆನೆ ಚೆಲ್ವಾಯ್ತು ಶೀತಾಂಶುಬಿಂಬಂ: **ಶಾಂತಿಪು,** ೮. ೭೧)

**ಇಂದ್ರಿಯಸೌಖ್ಯ** – ಇಂದ್ರಿಯಗಳ ಸುಖ (ತವಿಲುಳ್ಳಿಂದ್ರಿಯಸೌಖ್ಯದಿಂ ತಣಿವೊಡೀ ಭೂಲೋಕಮೇಂ ನಾಕಮೇಂ: **ಮಲ್ಲಿನಾಪು,** ೧೬. ೧೨೪)

**ಇಂದ್ರಿಯಕ್ಷರಣೆ** – ರೇತಸ್ಸಿನ ಸ್ಖಲನೆ (ಋತುಕಾಲಪ್ರಾಪ್ತೆಯಾಗಿರ್ದ ನಲ್ಲಳಲ್ಲಿಗೆ ಬರಲ್ ಪಡೆಯದೆ ಆಕೆಯಂ ನೆನೆದು ಇಂದ್ರಿಯಕ್ಷರಣೆಯಾದೊಡೆ: **ಪಂಪಭಾ,** ೧. ೬೮ ವ)

**ಇಂದ್ವಂಕ** – ಚಂದ್ರನಲ್ಲಿರುವ ಕಲೆ (ಇರ್ದುದು ಇಂದ್ವಂಕ ಕರ್ಬುರಕಾಯಂ ಶಬರೀಚಯಂ ನೆರೆದು ಪಾನಕ್ರೀಡೆಯೊಳ ನಾಡೆಯುಂ: **ಚಂದ್ರಪ್ರಪು,** ೫. ೫೬)

**ಇಂದ್ವರ್ಧ** – ಅರ್ಧಚಂದ್ರ (ಪೂಜಿಸಿ .. .. ಶಂಭುವಂ ಇಂದ್ವರ್ಧಾಂಕಕೋಟೀರನಂ ಅನಘನಂ ಆನಂದದಿಂ ತನ್ನಪಾಲಂ: **ರಾಜಶೇವಿ,** ೧೩. ೪೭)

**ಇಂಧನ** – ಉರುವಲು (ತನಯನ ತಲೆಯೊಂದೆಸೆಯೊಳ್ ತನುವೊಂದೆಸೆಯೊಳ್ ಸಿಡಿಲ್ದು ಕೆಡೆದಿರೆ ಕಂಡಾ ವನಿತೆ ಭಯರಸದಿನೆರ್ದೆ ಪೌವನೆ ಪಾಱೆ ವಿಷಾದವಹ್ನಿಗೆ ಇಂಧನಮಾದಳ್: **ಪಂಪರಾ,** ೯. ೨೮)

**ಇಂಪಾಣ** – ಇಂಪಾಗಿ ಹಾಡುವವನು (ದೇಸಿಯ ಗೀತಮನಂದು ಪಾಡುವ ಇಂಪಾಣನಂ ಉರ್ವರಾಧಿಪತಿ .. .. ಕೇಳುತ್ತುಮಿರ್ದಂ: **ಚಂದ್ರಪ್ರಪು,** ೭. ೯೩)

**ಇಂಪು** – ಮಧುರತೆ, ಸವಿ (ಇನಿಯನೊಡಗೂಡಲೆಂದು ಇಂಪಿನ ರಮ್ಯಸ್ಥಳಮನಱಸಿ ಬರುತುಂ: **ಗಿರಿಜಾಕ,** ೧. ೧೨೬)

**ಇಂಪುಗಾಣ್** – ರುಚಿ ಕಾಣು (ಕರ್ಬಿನ ರಸಕ್ಕಂ ಇನಿಸು ಇಂಪುಗಾಣೆಂ ಎಂದು ಅಲಸುತಂ: **ಪಂಪಭಾ,** ೧೨. ೧೫೬)

**ಇಂಬನೆ** – ಅಚ್ಚುಕಟ್ಟಾಗಿ (ಮನೆಗಿಂದು ಬರ್ಕುಂ ಎಂದು ಆಂ ಅನೇಕತರವಸ್ತುವಾಹನದಿಯಂ ಒಸೆದು ಇಂಬನೆ ಪಸರಿಸಿ ಕುಡಲಿರ್ದೆಂ: **ಕವಿರಾಮಾ,** ೨. ೩೩)

**ಇಂಬವಳ** – ಇನಿದಾದ ಹವಳ (ಲತಾಗ್ರದೊಳ್ ಅದ್ರಿ ಪುಟ್ಟಿದಂದು ಆ ವಿಧುಬಿಂಬಂ ಇಂಬವಳಮಂ ಪಡೆದಂದು .. .. ಸತಿಯಂಗಮನಾಂ ಪೊಗಳಲ್ಕೆ ಸಾಲ್ದಪೆಂ: **ರಾಜಶೇವಿ,** ೭. ೨೬)

**ಇಂಬಱಿ** – [ಇಂಬು+ಅಱಿ] ಮರ್ಮವನ್ನು ತಿಳಿ (ಸಮೀರೋತ್ಥಿತ ವಿಶಾಳವಿಳೋಳ ತರಂಗರೇಖೆ ಪದ್ಮಾಂತರದಿಂದಂ ಇಂಬಱಿದು: **ಪಂಪಭಾ,** ೩. ೫೭)

**ಇಂಬಟಿಕ್ಕೆ** – ಆ ಬಳಿಕ (ಶುಕ್ಲಪಕ್ಷದ ಚಂದ್ರಮನಂತೆ ಅನುದಿನಂ ಉಪಚಯಮಂ ಅಪ್ಪುಕೆಯ್ದು ಶೈಶವಮಂ ಅಧಃಕರಿಸಿದ ಇಂಬಟಿಕ್ಕೆ: **ಪಂಪರಾ,** ೧೬. ೨ ವ)

**ಇಂಬಾಗು** – ಆಶ್ರಯವಾಗು; ಸೊಗಸಾಗು (ಇಂಬಾಗಿರೆಯುಂ ಮಕುಟಮದಂ ಬಿಣ್ಪಿನೊಳ್ ಓರೆವೋದೊಡೆ ಓಸರಿಪವೋಲ್ ಒರ್ವಂ ಬಹಳ ನಖಮಯೂಖ ಕದಂಬಕಮಂ ಕರಮಂ ಉತ್ತಮಾಂಗಕ್ಕೊಯ್ದಂ: **ಶಾಂತಿಪು,** ೫. ೧೦೨)

**ಇಂಬಿನೆ** – ಸುಕರವಾಗಿ (ತಿಂಗಳ ಉಪವಾಸಮಂ ಇಂಬಿನೆ ಮಾಟ್ಟಿವಂಗೆ ಮಾದವನತಿ ಭಕ್ತಿಯಿಂದೆಱಗುವಂ ಗಡ: **ಸಮಯಪ,** ೮. ೧೫೨)

**ಇಂಬು** – ಆಶ್ರಯ, ಎಡೆ (ನಂಬಿ ನೃಪನೆನಗೆ ಸೈಂಧವನಂ ಬಂದಪ್ಪೆಸೆ ಪೊಣ್ದೆಂ ಆದುದಂ ಆಗಲ್ಕೆ ಇಂಬು ಅಱಿದನುವರದೊಳ್ ಅವಂ ಮುಂಬಯಣಂಬೋದಂ ಎನಗೆ ಮಾಣ್ದುದು ದೊರೆಯೇ: **ಪಂಪಭಾ,** ೧೨. ೨); ಲೇಸು (ಅನಯದಿನಪ್ಪ ಸಂಪದದಿಂ ಇಲ್ಲಮೆ ನಾಡೆಯುಂ ಇಂಬುವೆತ್ತುದು: **ಪಂಪರಾ,** ೭. ೧೮); ಸ್ಥಿತಿ (ನಿನ್ನ ಇಂಬಂ ಅಱಿಯದೆ ಆಜಿಯೊಳ್ ಎನ್ನೊಡನೆ ಪೋಣರ್ಕೆಗೆಂದು ಬಂದಪೆ: **ಪಂಪರಾ,** ೧೩. ೧೩೮)

**ಇಂಬುಕೆಯ್** – ಅಂಗೀಕರಿಸು (ದೇವನ ದರಹಸಿತಾನನದೊಳ್ ತನಗೆ ಇಂಬುಕೆಯ್ದು ಬಗೆಯಂ ಪದಿನಾಲ್ಕನೆಯ ಮನು ಜಲಕನಱಿದು: **ಆದಿಪು,** ೮. ೧೫); ಸಹಾಯಕವಾಗಿ ನಡೆದುಕೊ (ಮತ್ತರುಂ ಕುರುಡರುಂ ಎನ್ನದೆ ಎಮ್ಮ ನುಡಿಗೇಳ್ ಮಗನೇ ಬಗೆ ತಂದೆಗಿಂಬುಕೆಯ್: ಪಂಪಭಾ, ೧೩. ೧೨); ಸಂತೋಷಪಡಿಸು (ಅಚ್ಚರಸೆಯರ್ ಇಚ್ಚೆಯಂ ಸಲಿಸಿ ಮೆಚ್ಚಱಿದು ಓಲಗಿಸುತ್ತುಮಿರ್ಪರ್ ಅಚ್ಚರಸೆಯರ್ ಇಂಬುಕೆಯ್ದೊಲಿಸಿ ಚಿತ್ತದೊಳ್ ಅಗ್ಗಲಿಸುತುಂ ಇರ್ಪರ್: **ಸುಕುಮಾಚ,** ೯. ૩೭)

**ಇಂಬುಕೆಯ್ಸು** – ಹಿತವುಂಟುಮಾಡು (ತನ್ನ ಮುನ್ನಱಿವು ಬೇಟದ ಲಲ್ಲೆಯ ಬಲ್ಮೆ ಪತ್ತಿ ಸುತ್ತಿಸೆ ಪುರುಡು ಇಂಬುಕೆಯ್ಸೆ ಬಿಯಮಾಗಿಸೆ ಪೊಂದದವಂ ಬೊಜಂಗನೇ: **ಆದಿಪು,** ೧೨. ೧೭)

**ಇಂಬುವೋಗು** – ತನ್ನ ನೆಲೆಗೆ ಹೋಗು (ಪೊಳಪಿಂಬುವೋಯ್ತು ತಾರಗೆಗಳ್ ಉಗುೞ್ದುವು .. .. ಮುನ್ನೇಸಱನೊಳ್: **ಲೀಲಾವತಿ,** ૩. ೫)

**ಇಂಬೆನೆ ನಡೆ** – ಹಿತಕರವಾಗಿ ನಡೆದುಕೊ (ಎನಗೀಗಳ್ ಜೀವಮಾಗಿ ಸಂಜೀವಕಂ ಇಂಬೆನೆ ನಡೆಪುತಿರ್ದಪಂ; **ಪಂಚತಂತ್ರ,** ೧೫೨)

**ಇಂಬೆಳಸು** – ಚೆನ್ನಾದ ಬೆಳಸು, ಇನಿದಾದ ಬೆಳೆ (ನಾಡ ಕಾಡ ಬೆಳಸು ಇಂಬೆಳಸಾ ವಿಷಯಾಂತರಾಳದೊಳ್: **ಪಂಪಭಾ,** ೧. ೫೪)

**ಇಕ್ಕಿ ಮೆಟ್ಟು** – ಬೀಳಿಸಿ ತುೞಿ (ಪುದಿದ ಜಸಂ ಪೊದಳ್ದ ಚಳಂ ಒಂದಿದ ಅಳಂಕೃತಿ ಕೈತ ದೇಸಿ ಎಂಬುದಂ ಎನೆ ವಸ್ತುವಿದ್ಯೆಯೆನೆ ಕಬ್ಬಮೆ ಮುನ್ನಂ ಅವಂತಿವಲ್ಲದಲ್ಲದೆ ಪೆಱವಿಲ್ಲ ಕಬ್ಬಂ ಎನೆ ಮುನ್ನಿನ ಕಬ್ಬಮನೆಲ್ಲಮಂ ಇಕ್ಕಿಮೆಟ್ಟಿದುವು ಸಮಸ್ತಭಾರತಮುಂ ಆದಿಪುರಾಣ ಮಹಾಪ್ರಬಂಧಮುಂ: **ಪಂಪಭಾ,** ೧೪. ೫೯)

**ಇಕ್ಕು** – ಇಡು (ಒಂಬತ್ತು ತಿಂಗಳ ಗರ್ಭಿಣಿಯಂ ಪೊಱತ್ತು ಪೋಗಿ ಆಕೆಯನಲ್ಲಿಕ್ಕಿ ಇಂತೆಂದರ್: ವಡ್ಡಾರಾ, ಪು. ೧೧೨, ಸಾ. ೭); ಧರಿಸು ಕೊರಲೊಳಿಕ್ಕಿದ ಎಕ್ಕಸರದ ಕೆಂಬಟ್ಟೆಯ ತೊಂಗಲ್ ಅನಂಗಜಗಮಲತೆಯ ತಳಿರ ತೊಂಗಲಂತೆ ಪೊಳೆಯೆಯುಂ: **ಮಲ್ಲಿನಾಪು,** ೪. ೬೪ ವ); ಬಿಸಾಕು (ಸಕಳಾವನಿತಳವಲ್ಲಭನಂ ಭೋಂಕನೆತ್ತಿ ಪೊತ್ತಿರ್ದಂ ಇಕ್ಕಲೊಲ್ಲದೆ ನೆಲದೊಳ್: **ಆದಿಪು,** ೧೪. ೧೧೧); ಪ್ರಯೋಗಿಸು; ನಿಕ್ಷೇಪಮಾಡು; ನೀಡು; ಹೊಡೆ, ಹನನಗೈ (ಇಕ್ಕಿದಂ ಅಭವಂ ಪಾರ್ಥನಂ ಇಕ್ಕಿದನಾ ತ್ರಿಪುರಹರನಂ ಅರ್ಜುನಂ: **ಪಂಪಭಾ,** ೮. ೨೨)

**ಇಕ್ಕುಂಗೂೞ್** – ಇತರರು ನೀಡುವ ಅನ್ನ, ಭಿಕ್ಷೆ (ಪೆಱನಿಕ್ಕುಂಗೂೞೊಳಂ ಕೀೞೆಲೊಳಂ ಅಳವಿಗೆಟ್ಟಿರ್ಪ ನಿಮ್ಮಿರ್ಪುದಕ್ಕಂ .. .. ನೀಗು ನೀಂ ಭೀಮಸೇನಾ: **ಪಂಪಭಾ,** ೮. ೭೧)

**ಇಕ್ಕುಪಡು** – ಸೋಲು ಅನುಭವಿಸು (ಸುಮಿತ್ರನೊಳ ಪೋರಲೆಂದು ಆತನ ಪೊೞಲ್ಗೆ ವಂದು ರಂಗದೊಳ್ ಗೆಲ್ದೋಡಿ ಇಕ್ಕುಪಟ್ಟ ಸುಮಿತ್ರಂ: **ಚಾವುಂಪು,** ೨೭೯. ಸಾ. ೫)

**ಇಕ್ಕುವಡು** – ಸೋಲು ಅನುಭವಿಸು, ಹೊಡೆಯಲ್ಪಡು (ಮೆಯ್ಯನೀಡಾಡಿ ದಾರುಣಮೆನಿಪ ದಾಹಜ್ವರದಿಂ ಇಕ್ಕುವಟ್ಟಂತೆ ಏನಾನುಂ ವ್ಯಾಧಿ ಕೆಯ್ಕೊಂಡಂತೆ ಆರೊಳಂ ನುಡಿಯದೆ: **ಕಾದಂಸಂ,** ೫. ೯೫ ವ)

**ಇಕ್ಕುೞ್** – ಒಂದು ರೋಗ ಮತ್ತು ಪಟಿಕಾರ (ಎರಡರ್ಥಕ್ಕೆ: ಇಕ್ಕುೞೆಂದು ವ್ಯಾಧಿವಿಕಾರಮುಂ ಸಂದಂಶಮುಂ ಅಕ್ಕುಂ: **ಶಬ್ದಮದ,** ૩૩ ವೃತ್ತಿ ೧૩೨); ಇಕ್ಕುಳ (ಪುಸಿ ಬಸನಮೆಂದು ಕೆಲಬರ್ ಕುಸಿವರ್ ನಾಲಗೆಯಂ ಇಕ್ಕುೞೊಳ್: **ಆದಿಪು,** ೫. ೮೭)

**ಇಕ್ಕೆ** – ಇರುವ ಜಾಗ, ಮನೆ (ತನಗೆ ಇಕ್ಕೆಯಾದ ಕಡಲಂ ಕುಂಭಂಗಳಂ ಪೊಕ್ಕ ದೇವನಿಕಾಯಂಗಳನಿಂದ್ರಂ .. .. ಪವಿತ್ರಮೆನಿಸಿತ್ತು: **ಆದಿಪು, ನರಸಿಂ,** ೭. ೯೬)

**ಇಕ್ಕೆದಾಣ** – ಬಿಡದಿ, ಬಿಡಾರ (ಭವನ ಇಕ್ಕೆದಾಣಮೆಂದೊಂದು ವಿಶೇಷಪ್ರೀತಿಯಿಂದೆ ಕೈಲಾಸನಗೇಂದ್ರವೆ ಬಳಸಿದುದು ಎಂಬಂತಿರೆ: **ಕಾದಂಬ,** ೨. ૩)

**ಇಕ್ಷು** – ಕಬ್ಬು (ಸರೋರುಹಷಂಡದಿಂ ಇಕ್ಷು ಪುಷ್ಪವಾಟಂಗಳಿಂ ಆವ ಮಂಡಲಮುಮಂ ಗೆಲೆವಂದುದು ವೆಂಗಿಮಂಡಲಂ: **ಅಜಿತಪು,** ೧. ೨೧)

**ಇಕ್ಷುಕಾಂಡ** – ಕಬ್ಬಿನ ಜಲ್ಲೆ (ಕಂಡರಿಸಿದೊಡೆ ಇಕ್ಷುಕಾಂಡಮೆನೆ ಸೀಯನೆ ಸದ್ರಸಂ ಉಣ್ಮದಿರ್ದೊಡಂ: **ರಾಜಶೇವಿ,** ೧. ೫೧)

**ಇಕ್ಷುಕ್ಷೇತ್ರ** – ಕಬ್ಬಿನ ಗದ್ದೆ (ಎಲ್ಲಿ ನೋಡೊದೊಡಂ ಇಕ್ಷುಕ್ಷೇತ್ರಂ ಎತ್ತೆತ್ತ ನೋಡಿದೊಡಂ ಶಾಲಿವನಂಗಳಿಲ್ಲದ ನೆಲಂ ಬೇೞಿಲ್ಲ ಕಾಲೂಱಿರಲ್: **ಆಚವರ್ಧ,** ೧. ૩૩)

**ಇಕ್ಷುಚಾಪ** – ಕಬ್ಬಿನ ಬಿಲ್ಲು, ಕಬ್ಬುವಿಲ್ಲ, ಮನ್ಮಥ (ಇಕ್ಷುಚಾಪವೆಡಗೈಯೊಳ್ ತೋಱೆ .. .. ಸಿದ್ಧಯನಿ ತಾರ್ಕ್ಷ್ಯಪುತ್ರಿ ನಮಗೀಗೆ ಇಷ್ಟಾರ್ಥಸಂಸಿದ್ಧಿಯಂ: **ಧರ್ಮಪ,** ೧. ೭)

**ಇಕ್ಷುಪುಷ್ಪ** – ಕಬ್ಬಿನ ಹೂ, ಸೂಲಂಗಿ (ವಿಸಸನದೊಳ್ ವಿರೋಧಿನೃಪರಂ ತಱಿದೊಟ್ಟಲುಂ .. .. ನೋಯಿಸಿದಪುದು ಇಕ್ಷುಪುಷ್ಪದವೊಲೆನ್ನಯ ನಿಷ್ಫಲಪುಷ್ಪದರ್ಶನಂ: **ಪಂಪಭಾ,** ೧. ೧೧೭)

**ಇಕ್ಷುಯಂತ್ರ** – ಕಬ್ಬಿನ ರಸ ತೆಗೆಯುವ ಯಂತ್ರ, ಗಾಣ (ಮೊರ್ಮರಾಗಿ ಕರಿವುದುಂ ಚಿಮಿಚಿಮಿಸೆ ತಾಳಿಸುವುದುಂ ಇಕ್ಷುಯಂತ್ರಗಳಿಂ ಪಿೞಿವುದುಂ: **ಸುಕುಮಾಚ,** ೧೧. ೪೭ ವ)

**ಇಕ್ಷುರಸ** – ಕಬ್ಬಿನ ರಸ (ಸಿದ್ಧಭಕ್ತಿಪುರಸ್ಸರಂ ಪಾಣಿಪಾತ್ರದೊಳ್ ಕನಕಪಾತ್ರದೊಳ್ ತೀವಿದಿಕ್ಷುರಸಮಂ ಪಯೋರಸಮುಮಂ ಪಾನಂಗಳಿಂದೆಱೆಯೆ: **ಅಜಿತಪು,** ೭. ೨ ವ)

**ಇಕ್ಷುವಾಟ** – ಕಬ್ಬಿನ ಗದ್ದೆ (ಮೊರೆವುವು ಗಾಣಂಗಳ್ ಇಕ್ಷುವಾಟಾಂತರದೊಳ್: **ಸುಕುಮಾಚ,** ೯. ೫೬)

**ಇಕ್ಷುವಾಟಿ** – ಕಬ್ಬಿನ ಗದ್ದೆ (ಇರ್ದತ್ತು ಅಮೃತಾಕರಾವನಿಯವೋಲ್ ಪುಂಡ್ರೇಕ್ಷುವಾಟೀಕುಲಂ: **ಜಗನ್ನಾವಿ,** ೨. ೯)

**ಇಚ್ಛಾಕಾರಂಗೆಯ್** – ಸತ್ಕರಿಸು (ನಾರದ ಮುನಿಪಂ ಬರ್ಪುದಂ ಅಪರಾಜಿತ ಮಹಾದೇವಿ ಕಂಡು ಇದಿರೇಟ್ಟು ಏಱಲಿಕ್ಕಿ ಬಟೆಯಂ ಇಚ್ಛಾಕಾರಂಗೆಯ್ದುದುಂ: **ಪಂಪರಾ,** ೫. ೧೩ ಮತ್ತು ೧೩ ವ)

**ಇಚ್ಛೆ** – ಆಸೆ, ಬಯಕೆ (ಕಾಮಕಾಂತೆ ಬಟೆಯಂ ತನ್ನಿಚ್ಛೆಯಂ ಮೆಚ್ಚಿ ಬಣ್ಣವುರಂ ತೀವಿದ ಮಾಟ್ಕೆಯಾಯ್ತು: **ಪಂಪಭಾ,** ೭. ೨೪); ಬಯಸಿದ ವಸ್ತು, ವಿಷಯ (ಅಕ್ಕರಿಗರ ಆಭರಣಂ ಬುಧರಿಚ್ಛೆಯಚ್ಚು: **ಸೂಕ್ತಿಸುಧಾ,** ೧. ೨೫); ಸ್ವೇಚ್ಛೆ (ಪುಚ್ಚವಣಂ ನೋಡುವೆಂ ಎನ್ನಿಚ್ಛೆಯೊಳೀ ಮುನಿಯವರದ ಮಹಿಮೆಯನೆನುತುಂ: ಪಂಪಭಾ, ೧. ೯೦); ಅಭಿಪ್ರಾಯ (ಅರಸುಗಳವಿಚಾರದಿಂದಾರಾನುಮಂ ಕೊಲಲುಂ ಕಿಡಿಸಲುಮೆಂದಿರ್ದರಲ್ಲದೆ ಮಂತ್ರಿಗಳಿಚ್ಛೆಯಂ ಪ್ರತಿಪಾಲಿಸರ್: **ಪಂಚತಂತ್ರ,** ೨೦೬ ವ)

**ಇಚ್ಛೆಕಾರ್ತನ** – ಕಾಮ (ಲಲಿತಾಂಗನಂ ಮನಂಗೊಳಿಸುವರ್ ಇಚ್ಛೆಕಾರ್ತನದ ಲಲ್ಲೆಯ ಸಗ್ಗದ ದೇಸೆಕಾರ್ತಿಯರ್: **ಆದಿಪು,** ೨. ೭೧)

**ಇಚ್ಛೆಕಾರ್ತಿ** – ಮನಃಪ್ರಿಯೆ (ತನಗಿಚ್ಛೆಕಾರ್ತಿ ಗಡ ಕಡು ಚೆನ್ನೆ ಗಡ ಪಿಡಿದೊಡೆಳಸಿ ತಾಂ ಪಟ್ಟುದು ಗೆಯ್ವನ್ನಳ್ ಗಡ: **ಸಮಯಪ.** ೫. ೫೫)

**ಇಚ್ಛೆಗಾರ್ತಿ** – ಇಷ್ಟಾನುಸಾರ ನಡೆಯುವವಳು (ಬಿಚ್ಚತಮಾಡುವ ಇಚ್ಛೆಗಾರ್ತಿಯರೊಳ್: **ಅನಂತಪು,** ೭. ೨೮ ವ)

**ಇಚ್ಛೆಕಾಱ** – ಇಚ್ಛಾನುಸಾರ ನಡೆಯುವವನು, ಸ್ವೈರ ವ್ಯಕ್ತಿ (ವಿಳಾಸಿನಿಯರುಂ ನಗೆಕಾಱರುಂ ಇಚ್ಛೆಕಾಱರುಂ, **ಪುಷ್ಪದಂಪು,** ೮. ೪೨)

**ಇಚ್ಛೆಗೆಯ್** – ಇಷ್ಟಪೂರ್ತಿಮಾಡು (ಮನದಿಚ್ಛೆಯಂ ಇಚ್ಛೆಗೆಯ್ಯಲ್ ಅಚ್ಚರಸಿರೆಂದೊಡೇವೊಗಟ್ಟುವೋ: **ಶಾಂತಿಪು,** ೭. ೭೫)

**ಇಚ್ಛೆಯಾಣ್ಮ** – ಮನದನ್ನ (ಇಚ್ಛೆಯಾಣ್ಮನೆಲ್ಲಿರ್ದಂ ಎರ್ದೆಯಾಣ್ಮನೆನೆನರಸನೆಲ್ಲರ್ದನೋ ಲಲಿತಾಂಗವಲ್ಲಭಂ: **ಆದಿಪು,** ೩. ೧೫)

**ಇಚ್ಛಾಕಾರ** – ಆತಿಥ್ಯ; ಆದರ, ಗೌರವ (ಬರೆ ಕಂಡು ಇದಿರೆಟ್ಟು ಇಚ್ಛಾಕಾರಪೂರ್ವಕಂ ಸಮುಚಿತ ವಿಷ್ಟರದೊಳ್ ನಾರದನಂ ಕುಳ್ಳಿರಿಸಿ: **ಶಾಂತೀಶ್ವಪು,** ೭. ೯೮)

**ಇಚ್ಛಾಮಿ** – ಇಷ್ಟಪಡುತ್ತೇನೆ (ಇಚ್ಛಾಮಿ ಎಂದು ಕೈಮುಗಿಯಲ್ ಪೋ ಕುಲದಿಂ ಮಿಗಿಲಾನೆಂಬಾ ಖಳಂಗೆ ಸಮ್ಯಕ್ತ್ವಮೊಪ್ಪಲೇನಱಿದಪುದೇ: **ಸಮಯಪ,** ೪. ೧೦೩)

**ಇಚ್ಛಾವಿಘಾತಿ** – ಇಷ್ಟಕ್ಕೆ ಭಂಗ (ಸೀತೆಯಂ ರಾಮಂಗೊಪ್ಪಿಸುವುದೆ ನೀತಿಯುಂ ನಿರ್ವಾಹಮುಮೆಂದು ಸತ್ಪುರುಷವಿಭೂಷಣನಪ್ಪ ವಿಭೀಷಣಂ ಸುಭಾಷಿತಂಗಳಂ ನುಡಿಯೆ ತನಗಿಚ್ಛಾವಿಘಾತಿಯಂ ಮಾಡಿದನೆಂಬನಿತಱೊಳಾ ದನುಜನನುಜನಂ ಮೊದಲಾಗಿ ಕೊಲಲ್ಬಗೆದಂ: **ಪಂಚತಂತ್ರ,** ೨೦೯ ವ)

**ಇಟ್ಟಗೆ** – (ಇಷ್ಟಕಾ) ಇಟ್ಟಂಗಿ, ಇಟ್ಟಿಗೆ (ಇಟ್ಟಗೆಯಂ ಸುಡುವಲ್ಲಿ ಸಾವ ಜೀವನಿಕರದೊಂದು ಹಿಂಸೆಯೊಳೆ ಪಾಪಮೆ ಮೊಕ್ಕಳಂ: **ಸಮಯಪ,** ೪. ೧೨೭)

**ಇಟ್ಟಡೆ** – ಇಕ್ಕಟ್ಟು (ಯಾನಮೇಂ ಕೀಱಿದುದೋ ನಭಃಪ್ರಸ್ರುತಿಗೆ ಇಟ್ಟೆಡೆ ಇಟ್ಟಡೆಯಾದುದೆಂಬಿನಂ: **ಶಾಂತಿಪು,** ೨. ೮೨)

**ಇಟ್ಟಣಂಬಡೆ** – ಸಂದರವಾಗು (ಮತ್ತಮಾ ಪಟ್ಟಣಂ ಇಟ್ಟಣಮಬಡೆದು ಮೆಱೆವ ಪೊಂಬೆಸದುಪ್ಪರಿಗೆಯ: **ಕಬ್ಬಿಗಕಾ,** ೪೪)

**ಇಟ್ಟಣಿಸು** – ಗುಂಪಾಗು (ಅಗ್ಗದ ಪಟ್ಟೆಯಂಗಳಂ .. .. ಇಟ್ಟಣಿಸಿ ಪಳಂಚಿದರ್ ತುರಂಗಿಗಳ್ ಅದಱೊಳ್: **ರಾಜಶೇವಿ,** ೬. ೬೦); ದಟ್ಟವಾಗು (ಮುಂದೆ ತಮಂಧಂ ಇಟ್ಟಣಿಸಿ ರಾಹುವಿನಂತಿರೆ ಪೂರ್ವವೈರಮಂ ಮುಂದುಗೊಳುತ್ತೆ: **ಗಿರಿಜಾಕ.** ೪. ೧೦೧); ಸುಂದರವಾಗು (ದುರ್ಜನರಂ ಪುಟ್ಟಿಸಿದಂ .. .. ಸುಜನದೊಳಿಟ್ಟಣಿಸಿದ ಗುಣಮನಱಿಪಲ್: **ಪುಷ್ಪದಂಪು,** ೧. ೫೧)

**ಇಟ್ಟಣಿಕೆ** – ಸೊಗಸು, ಯೋಗ್ಯತೆ (ಅಮೃತೋಪಮಗಾನಕ್ಕೆ ಮೆಚ್ಚಿ ಅವರ ಇಟ್ಟಣಿಕೆಗೆ ಅಳವಡುವ ಅಂಗಚಿತ್ತಮಂ ಕೊಟ್ಟು: **ಉದ್ಭಟಕಾ,** ೩. ೩ ವ)

**ಇಟ್ಟಳ** – ಗುಂಪು (ಕಂತುಗೆ ಕೆಯ್ಗೊಟ್ಟವೊಲಿರ್ದುದು ಇಟ್ಟಳದೆ ಕೈಬಂದ ಒಂದು ಚೂತದ್ರುಮಂ: **ಶಾಂತೀಶ್ವಪು,** ೧೦. ೧೧೦); ಮನೋಹರ (ಕಣ್ಗೆ ಇಟ್ಟಳವೆನಿಪ ನಭೋಲಕ್ಷ್ಮಿ ಎಂಬಂತಿರೆ: **ಕಾದಂಬ,** ೨. ೫೫); ಸಮೃದ್ಧಿ (ಪದವಟ್ಟು ಬಿತ್ತಿದಂದು ಇಟ್ಟಳಮಪ್ಪುದೊಂದು ಬೆಳಸಂ ಪಡೆವಂತೆ ಸಮಸ್ತಧಾತ್ರಿಯೊಳ್: **ಸಮಯಪ,** ೭. ೬೬); ನಿಂದೆ (ದುರ್ವಾಚಾರಂ ಮೆಲ್ವಾಯ್ದಂ ಇಂತಧೋಗತಿಗೊಯ್ದಂ ಎಂದು ಮತ್ತಂ ಎನಿತಾನುಂ ಇಟ್ಟಳಂಗಳುಮಂ ಪಮುಸಿಯ ಪೊಟ್ಟಣಂಗಳುಮಂ ನುಡಿಯೆ: **ಹರಿವಂಶ,** ೭೦ ಮತ್ತು ೭೦ ವ)

**ಇಟ್ಟಳಂ** – ಅತಿಶಯವಾಗಿ (ಇಳಾವಿಖ್ಯಾತನಂ ಕೂರ್ತು ನೋಡಲುಂ ಅಟ್ಟಿಕೂರ್ತು ಅಮರ್ದು ಅಪ್ಪಲುಂ ಪಡೆವೆ ಇಂದು ಎಂಬಂತೆ ಕೆತ್ತಿತ್ತು ದಲ್ ಬಲಗಣ್ಣುಂ ಬಲದೋಳುಂ ಆ ಬಲಿಬಲಪ್ರಧ್ವಂಸಿಗೆ ಅಂದು ಇಟ್ಟಳಂ: **ಪಂಪಭಾ,** ೪. ೩೩)

**ಇಟ್ಟಳಂಗಟ್ಟು** – ಒತ್ತಾಗಿ ಕಟ್ಟು (ದಿಟ್ಟಿಗೆಸೆಯೆ ದಂಡೆಗಟ್ಟಿದ ಮಾಲತಿಯ ಮುಗುಳ ವನಮಾಲೆಗಳುಮಂ: **ಜಗನ್ನಾವಿ,** ೬. ೧೬ ವ)

**ಇಟ್ಟಳವಿಡು** – ಆಕ್ಷೇಪ ಮಾಡು (ರಾವಣನುಯ್ದಳಂ ತಂದು ವಿಚಾರಿಸದೆ ಮಹಾದೇವೀಪಟ್ಟಂಗಟ್ಟುವುದು ಆವ ಉಚಿತಮೆಂದು ಇಟ್ಟವಿಟ್ಟು ನುಡಿಯೆ: **ಪಂಪರಾ,** ೧೫. ೮೨ ವ)

**ಇಟ್ಟಾಡು** – ಎಸೆದಾಡು, ಚೆಲ್ಲು (ತುಳ್ಕಾಡಿದರ್ ಇಟ್ಟಾಡಿದರ್ ಈಸಾಡಿದರ್ ಅಮರ್ದಾಡಿದರ್ ಸರೋಜಾನನೆಯರ್: **ಗಿರಿಜಾಕ,** ೪. ೩೨)

**ಇಟ್ಟಿ** – ಈಟಿ (ನಡುವ ಸರಲ್ಗೆ ಮೆಯ್ಯೊಳ್ ಅಡಂಗುವ ಸಂಕುಗೆ ದಿಂಕುಗೊಳ್ವ ಕಕ್ಕಡೆಗೆ ಇದಿರ್ ಉರ್ಚುವ ಇಟ್ಟಿಗೆ .. .. **ಪಂಪಭಾ,** ೧೦. ೯೪)

**ಇಟ್ಟೆಡೆ** – ಇಕ್ಕಟ್ಟು (ಅಡಿಯಿಡಲೀ ಧರೆ ಇಟ್ಟೆಡೆಯೆಂಬಿನಂ ಅಭ್ರಮಂಡಲಂ ಕಡುನಳಿದಾದುದು: **ಆದಿಪು,** ೧೨. ೬೨)

**ಇಟ್ಟೆಡೆವೆರ್ಗಡೆತನ** – ಕಷ್ಟದ ಹೆಗ್ಗಡೆತನ (ಇಟ್ಟೆಡೆವೆರ್ಗಡೆತನದೊಳ್ ಇದೇವಡೆವಿರ್ ನಿಮಗೆಮ್ಮ ಕಜ್ಜದೊಳ್ ಪೊರೆಯುಂಟೆ: **ಆದಿಪು,** ೯. ೧೦೭)

**ಇಡಿ** – ಕುಟ್ಟು (ಇಡಿ–ಚೂರ್ಣೇ: **ಶಬ್ದಮದ,** ಧಾ ೨೭೧); ತಿವಿ (ಅಟ್ಟು ಇಡಿದುವು ಕುಜಿದಜಿದಜಿದುವು ಕಡುಪಿಂದಿಸೆ ವಿಬುಧವನಕಳಹಂಸಂ: **ಶಾಂತಿಪು,** ೪. ೨೭); ದಟ್ಟವಾಗು (ಇಡಿದಡರೆ ಕಾಯ್ತ ಚೂತಮನಡಸಿ ಸಿಡಿಲ್ವೊಯ್ದುದೆನಿಸೆ: **ಆದಿಪು,** ೩.೩೪)

**ಇಡಿಕಿಜಿ** – ಒತ್ತಾಗಿರು (ಮೆಯ್ಯನಿರ್ ಪೊದಲ್ದು ಇಡಿಕಿಜಿದತ್ತು ಘರ್ಮಜಲಂ ಉಣ್ಕಿದುದು: **ಶಬರಶಂ,** ೪. ೧೧೨)

**ಇಡಿಕೆಗೊಳ್** – ನಿಬಿಡವಾಗು (ಮುಂದೊಂದೆಡೆಯೊಳ್ ಇಡಿಕೆಗೊಂಡು ಕಣ್ಗೊಳಿಪ ಪಣ್ಗೊಂಚಲ ಸಂಚಯದಿಂದಂಚಿತಮಾಗಿರ್ದ ಗೋಸ್ತನೀ ಲತಾಮಂಡಪದ ಸಲ್ಲಲಿತ ಪಲ್ಲವಾಸ್ತರಣದೊಳ್: **ಶಾಂತೀಶ್ವಪು,** ೧೧. ೬೮ ವ)

**ಇಡಿವು** – ಇಕ್ಕಟ್ಟು (ಆಗಸಮನುಗಿವ ಮನೆಗಳ ದೇಗುಲದ ಇಡಿವುಗಳೊಳ್ ಅಡಿಯನಿಡಲಜಿಯದೆ ತಾರಾಗಣಂ ಇಳೆಗಿಟಿದಂತೆವೊಲಾಗಿರ್ಕುಂ: **ಲೀಲಾವತಿ,** ೭. ೧೭)

**ಇಡು** – ಹೊಡೆ (ಇಸುವ ಇಡುವ ಪೊಯ್ವ ಕುತ್ತುವ ಮಸೆಯಂ ಪತ್ತಿಸುವ ಕೈದುಬಿನ್ನಣಂ ಈಕ್ಷಿಸಲಾಗ: **ಸಮಯಪ,** ೫. ೧೨೪); ಧರಿಸು

**ಇಡುಂಕು** – ದೂರ ಎಸೆ, ಬಿಸಾಕು (ಇಡುಕು ಇಡುಂಕು–ಗಾಢ ವಿಮೋಚನೇ: **ಶಬ್ದಮದ,** ಧಾ, ೭)

**ಇಡಿರ್ಗಿಜುಗಟ್ಟಿಗೆ** – ಕೊಕ್ಕೆಕೋಲು ; ಮೀನು ಹಿಡಿಯುವ ಗಾಳದ ಕೊಕ್ಕೆ (ತೊಜೆವೆಂಟೆಯಾಡಲೆಳಸುತಿಜೆಗೂಳಿ ಪಂಜರಗೂಳಿಡುತಾಣಂ .. .. ಪೆರ್ಗೂಳಿ ಕೊಡಂಬೆ ಇಡಿರ್ಗಿಜುಗಟ್ಟಿಗೆಯೆರೆಮಡ್ಡಿ ಸೂಸುಗೂಳ್ಗಳೆಂಬಿವಂ ಕೊಂಡು: **ರಾಜಶೇವಿ,** ೫. ೧೧೪ ವ)

**ಇಡುಕುಂಗಬ್ಬ** – ಸ್ವಯಂಪೂರ್ಣ ಕಾವ್ಯ, ಮುಕ್ತಕ (ಇಡುಕುಂಗಬ್ಬಂ ಮುಕ್ತಕಂ: **ಕಾವ್ಯಾವಲೋ,** ೯೪೧)

**ಇಡುಕುಂಬನಿ** – ದಟ್ಟವಾಗಿ ಹಾಕುವ ಹನಿ (ಘನಕುಚಶೈಲಮೌಳಿಗಿಡಿಕುಂಬನಿಯಂ ಬಿಡುತಿರ್ಪುದೇಕೆ: **ಕುಸುಮಾಕಾ,** ೩. ೪೦)

**ಇಡುಮುಡುಕು** – ಛಿಟಿಛಿಟಿರೆನ್ನುವ ಶಬ್ದ (ಎಡೆವಜಿದೊಳ್ ಎಜಗಿ ಬಜಿಸಿಡಿಲ್ ಇಡುಮುಡುಕೆನೆ ಪೊಡೆದುದೆನಿಸಿ ಪಾಂಡ್ಯನ ರಥದ ಅಚ್ಚು ಉಡಿದು ಅಟ್ಟಿಗೆತಟ್ಟಿಗೆ ಕೊಂಡುವು ಕಡುಗೂರಿದುವೆನಿಪ ಗುರುತನೂಜನ ಕಣ್ಗಳ್: **ಪಂಪಭಾ,** ೧೨. ೮೨)

**ಇಡುವಗೆ** – ಬದ್ಧದ್ವೇಷ (ಆನೆ ಪೂಣ್ದ ಇಡುವಗೆಗೆ ಎನ್ನೊಳಾದ ಕಿಸುರ್ ಎನ್ನೊಡವೋಪುದು ಒಳ್ಳಿತು: **ಪಂಪಭಾ,** ೧೩. ೧೮); ಬದ್ಧವೈರಿ (ಬಿರಯಿಗೆ ಮುನ್ನಿನ ಭವದ ಇಡುವಗೆ ಚೂತಾಂಕುರಂ ವಿಷಾಂಕುರಮೆ ವಲಂ: **ಮಲ್ಲಿನಾಪು,** ೬. ೧೯)

**ಇಡುವರ್ಣ** – ಗಾಢವಾಗಿ ಬಳಿದ ಬಣ್ಣ (ತೆಡೆವ ಬೆರಸುವ ತೆರಳ್ಚುವ ಇಡುವರ್ಣದ ತೆರ್ಳವರ್ಣದ ಅರ್ಧೋದಕದ ಬಹುವಿಧದ ವರ್ಣಕ್ರಮುಂ: **ಆಚವರ್ಧ,** ೭. ೩ ವ)

**ಇಡುವಲೆ** – ಬೀಸುವ ಬಲೆ (ಎಳೆಯಳ ಕಣ್ಗದಿರೋಡುವ ಗಿಳಿಗಳ ಬೆಂಬತ್ತಿ .. .. ತೋರ್ಕುಂ ಪೋಳೆವ ಇಡುವಲೆಯಿಡೆಯವಳವನೊಳಗಾಗಿಸಿದಂತೆ ನೋಳ್ಪ ಪಥಿಕರ್ಗಾಗಳ್: **ರಾಜಶೇವಿ,** ೨. ೧೯)

**ಇಡುವಟಿ** – ಇರಿಸಿದ ಸ್ಥಿತಿ (ಇಡುವಟಿಯಲಿರ್ಪವಲ್ ಮೇಟ್ಟಿಡಿಸಿದಂ ಇಂತೆನ್ನಂ ಎನಗೆ ವಸುದೇವನೆನಲ್: **ಜಗನ್ನಾವಿ,** ೫. ೬೦)

**ಇಡುವು** – ಸಂದಿಗೊಂದಿ, ಇಕ್ಕಟ್ಟು (ಇಡಿದಿರೆ ಪೂತಮರದ್ರುಮದ ಇಡುವುಗಳೊಳ್ ಬದ್ಧವಣದ ಪುಡಿವೊಲ್: **ಆದಿಪು,** ೭. ೭೩); ರಾಶಿ

**ಇಡ್ಡಲಿಗೆ** – ಇಡ್ಡಲಿ ಎಂಬ ತಿಂಡಿ (ಪೂರಿಗೆ ಇಡ್ಡಲಿಗೆ ಸೋದಿಗೆ ಲಾವಣಿಗೆ ಘೃತಪೂರಂ ಲಡ್ಡುಗೆ ಮಂಡಗೆ ಮೊದಲಾಗೊಡೆಯ ಪದಿನೆಂಟುಂ ತೆಜಿದ ಭಕ್ಷ್ಯರೂಪಂಗಳುಮಂ: **ವಡ್ಡಾರಾ,** ಪು ೭೮ ಸಾ ೧೬)

**ಇಣಿ** – ಎತ್ತಿನ ಹಿಣಿಲು (ಪುಣ್ಬೆತ್ತ ಇಣಿಗೆಜಿಗೆ ನೊಣಂ ಶೀರ್ಣಶೃಂಗಾಗ್ರದಿಂ ಮಾರ್ದೊಡೆಯುತ್ತುಂ .. .. ಮಹೋಕ್ಷಂ: **ನೇಮಿನಾಪು,** ೮. ೧೮)

**ಇತರ** – ಬೇರೆಯ (ನೃಪನವ್ಯಗ್ರತೆಯಿಂ ಇತರವನಿತೆಯರ ಆಗ್ರಹಮಂ ಬಿಟ್ಟಂ: **ಶಾಂತಿಪು,** ೧. ೭೩)

**ಇತರೆ** – ಸಾಮಾನ್ಯಳು (ಇತರೆಯಂತೆ ಅಲ್ಪಜನ ಸಖೀಪರಿವೃತೆಯುಂ ಉಪನೀತ ಅಶೇಷ ರಾಜಚಿಹ್ನೆಯುಂ .. .. ಆಗಿ ಬಂದು ಕುಳ್ಳಿರೆ: **ಕಾದಂಸಂ,** ೫. ೫೮ ವ)

**ಇತರೇತರ** – ಪರಸ್ಪರ (ಪ್ರವಾಹಸಹಸ್ರಂಗಳಿಂದಂ ಇತರೇತರಹೇಷಾರವ ಆಕರ್ಣನೋದೀರ್ಣರೋಷಹಯ ಹೂಂಕಾರನಿಷ್ಠುರ: **ಆದಿಪು,** ೧೪. ೯೫ ವ)

**ಇತರೇತರೋಕ್ತಿ** – ಪರಸ್ಪರ ಮಾತು (ಇತರೇತರೋಕ್ತಿಯಿಂದಂ ಆ ಭೂಮಿಪನಾಂತು ಮಧ್ಯಮಂ ಲೋಕಪಾಲನಾದಂ: **ಶಾಂತಿಪು,** ೮. ೧೨೪)

**ಇತಿವೃತ್ತ** – ನಾಟಕದ ಒಂದು ಭಾಗ (ನಾಂದೀ ಪ್ರರೋಚನಾ ಪ್ರಸ್ತಾವನಾ ಇತಿವೃತ್ತ ಸಂಧಿ ಪ್ರವೇಶ ವಿಷ್ಕಂಭ ಕಪೋತಿಕಾ ವ್ಯಾಳಿಕಾದಿ ಲಕ್ಷಣೋಪೇತಂಗಳಪ್ಪ ನಾಟಕಂಗಳೊಳಂ: **ಪಂಪಭಾ,** ೨. ೩೪ ವ)

**ಇತಸ್ತತ** – ಅತ್ತ ಇತ್ತ (ಮಂದಾರ ಪಾರಿಜಾತ ಕುಸುಮವರ್ಷಮುಂ ಇತಸ್ತತಸ್ಸಂಚಲಂ ಅಮರಕರ ಪರಿತಾಡ್ಯಮಾನ ಮಹನೀಯದೇವರುಂ: **ಶಾಂತಿಪು,** ೧೦. ೧ ವ)

**ಇತಿಹಾಸಕಥೆ** – ಚರಿತ್ರೆ ಮತ್ತು ಕತೆಗಳು ಒಂದಾದ ಕತೆ (ನಿಜಾಭಿಖ್ಯಾತಿಯಂ ಇಳೆಯೊಳ್ ನಿಜಿಸಲ್ಕೆ ತೆಜಿದ ಇತಿಹಾಸಕಥೆಯಂ ಒಪ್ಪಿಸೆ ಕುಜಿತಂ: **ಪಂಪಭಾ,** ೧೪. ೫೧)

**ಇತಿಹಾಸೋಪಾಶ್ರಯ** – ಇತಿಹಾಸವನ್ನು ಅವಲಂಬಿಸಿರುವುದು (ಅತಿಶಯಂ ಇತಿಹಾಸೋಪಾಶ್ರಯಂ ಮೇಣ್ ಕಥಾವಿಶ್ರುತಚತುರವಿಕಾಶೋತ್ಪಾದಿತ ಅರ್ಥಕರಂ: **ಕವಿರಾಮಾ,** ೩. ೨೦೯)

**ಇತ್ತಳತ್ತಳ್** – ಈ ಕಡೆ ಆ ಕಡೆ (ಇತ್ತಳತ್ತಳ್ ಇಪ್ಪೊಚ್ಚರೆಗಣ್ಣ ನೀಜಿ ವರ ಮಲ್ಲಣಿ ದಶಬ್ದಮಾಳ್ದು ನೀನುಚ್ಚವದಿಂ: **ಉದ್ಭಟಕಾ,** ೧೨. ೬೭)

**ಇತ್ತಿಗ** – ಇತ್ತಿಗೆ, ಪಗಡೆಯಲ್ಲಿ ಎರಡು ಕಡೆ ಮೂರು ಬೀಳುವುದು (ಚೌಕ ದುಗಂ ಇದ್ದುಗಂ ಇತ್ತಿಗಂ ಬಾರಮಂ ಎಂಬ ಆರಿಸಿ ಬೇಡಿದ ದಾಳಮಳವಟ್ಟಿರೆ: **ಪುಣ್ಯಾಸ್ರ,** ೪. ೧೮)

**ಇತ್ತೊಂದು** – ಮಗುದೊಂದು (ಬಗೆ ಮತ್ತೊಂದೆನೆಯುಂ ಗೆಯ್ವೊಗಂ ಇತ್ತೊಂದೆನೆಯುಂ ಅಂಗುಳೀ

ನಖಚಯಕಾಂತಿಗಳಂ ಅವಟಯ್ಸಿ ಸಲೆ ಪಾಸಗಯದೆಸೆದೆಸೆ ಪೊರಳ್ದಿದಂ ಮತ್ತೊರ್ವಂ: **ಶಾಂತಿಪು,** ೫. ೧೦೫)

**ಇದಂದೇವ** – ಈತನೇ ದೇವ (ತ್ಯದಾದಿಗೆ – ಇದಂದೇವ [ಈತನೆ ದೇವನೆಂಬರ್ಥಂ], ಅದಃಪುತ್ರ [ಈತನೆ ಪುತ್ರನೆಂಬರ್ಥಂ]: **ಶಬ್ದಮದ,** ೯೧ ಪ್ರ)

**ಇದಾನೀಂತನ** – ಈಗಿನ, ಈ ಕಾಲದ (ಕಟಕೋಪಾಧ್ಯಾಯನಾ ನಾಗವರ್ಮಂ ಇದಾನೀಂತನ ಶರ್ವವರ್ಮನೆ ಗಡಂ ಜನ್ನಂಗುಪಾಧ್ಯಾಯಂ: **ಅನಂತಪು,** ೧. ೩೪)

**ಇದಿರ್** – ಎದಿರು, ಸಮ್ಮುಖ (ಪೆರ್ಮಡುಗಳೊಳ್ ಇದಿರುಂ ಬಟೆಯುಂ ಈಸಿಸುತ್ತುಂ: **ಅಜಿತಪು,** ೧೦. ೧೦ ವ); ವಿರೋಧ ತನಗಿದಿರಂ ಅದಿರದೆ ಒಡ್ಡಿ ವಿದ್ವಿಷ್ಟಬಲಂ ನೋಡೆ ನೋಡೆ ಕರಗುವುದಜೆಂ: **ಪಂಪಭಾ,** ೧೪. ೩೭ ವ)

**ಇದಿರಂ ನೋಡು** – ನಿರೀಕ್ಷಿಸು (ಎಲ್ಲಿವೊಕ್ಕೊಡಂ ಕೊಂಡುಬಂದಪೆನೆಮದು ಬಗೆಯದೆ ಇದರಂ ನೋಡುತ್ತಿರಿಮೆಂದು: **ಪಂಪಭಾ,** ೭. ೩೭ ವ)

**ಇದಿರಂ ಬಟೆಯಂ** – ಮುಂದೆ ಮತ್ತು ಹಿಂದೆ (ಕೂಟಶಾಲ್ಮಲಿಗಳನಡರವೇಟ್ಟು ಇದಿರಂ ಬಟೆಯಂ ಉರ್ಚುವರುಂ: **ಆದಿಪು,** ೫. ೮೫ ವ)

**ಇದಿರಾನ್** – ಎದುರಿಸು (ಎನಗೆ ಇದಿರಾಂಪವರಾರ್ ಮೇದಿನಿಯೊಳ್: **ಧರ್ಮಾಮೃ,** ೪. ೧೪೭)

**ಇದಿರೀಸು** – ಪ್ರವಾಹಕ್ಕೆ ವಿರುದ್ಧವಾಗಿ ಈಜು (ಎಟೆವ ತೊಱೆಯಂ ಇದಿರೀಸುವುದೆಲ್ಲಿಯ ಗಾಂಪು: **ಆದಿಪು,** ೧೨. ೧೦೮)

**ಇದಿರುಗಟ್ಟು** – ಮನೆಯ ಮುಂಭಾಗದಲಿ ನಿರ್ಮಿಸಿರುವ (ಅರಸನ ಮನೆಯ ಇದಿರುಗಟ್ಟಿನ ಭದ್ರದ ಮುಂದಣ ಜಗತಿಯ ಮೇಲಾಕೆ ಕುಳ್ಳಿರ್ದಾಗಳ್: **ಪುಣ್ಯಾಸ್ರ:** ೭. ೧೧ ವ)

**ಇದಿರೆತ್ತು** – ಎದುರಾಗಿ ದಂಡೆತ್ತಿ ಹೋಗು (ಆಜಿಗೆ ಇದಿರೆತ್ತಿ ಬರೆ ಮಾಯಾದೇವಿಯನಂದು ಕಂಡು ವಾನರಚಿಹ್ನಂ: **ಪಂಪರಾ,** ೧೦. ೨೧)

**ಇದಿರೇಟ್ತರ್** – ಎದುರಾಗಿ ಬಾ (ನಾಡೆಯುಂ ಗೋಸಣೆವೆತ್ತ ರಾಯರ್ ಇದಿರೇಟ್ತರೆ ತಳೆರ್ದಂ ನನೆಯಂಬಂ: **ಕಬ್ಬಿಗಕಾ,** ೯೧)

**ಇದಿರೇಱಿಸು** – ಎದುರಾಗಿ ನುಗ್ಗಿಸು (ಪರಿಯಿಪ ನೆಟ್ಟನಟ್ಟು ಇದಿರೇಱಿಪ ಪಾರಿಪ ಕೀಳ್ತು ದಾಂಟಿಪ .. .. ಪಂಚಧಾರೆಯೊಳ್ ಪರಿಣತಿದೋರ್ಪ ವಾಹಳಿತನಂ: **ರಾಜಶೇಖಿ,** ೧೩. ೮೨)

**ಇದಿರೇಟ್** – ಗೌರವದಿಂದ ಎದುರುಗೊಳ್ಳು (ಜಗದ್ಗುರುಗೆ ಬೇಗಂ ಉಚ್ಚಾಸನದಿಂದ ಇದಿರೇಟೆಇಂ ಎಂದು ಪೇಟ್ವಿವೊಲ್: **ಆದಿಪು,** ೭. ೪೦)

**ಇದಿರೊಡ್ಡಣ** – ಎದುರಿನ ಸೈನ್ಯ (ನಿರಂಕುಶಂ ಮುಟ್ಟೆವಂದಂ ಇದಿರೊಡ್ಡಣಮಂ: **ಪಂಪರಾ,** ೧೦. ೧೯)

**ಇದಿರೊಡ್ಡು** – ಪ್ರತಿಸೈನ್ಯ (ವಾರಣಕ್‌ಕೆ ವಾರಣದಿದಿರೊಡ್ಡನೊಡ್ಡಿದುದು ಯಾಧವ ಮಾಗಧ ಸೈನ್ಯವಾಜಿಯೊಳ್: ಜಗನ್ನಾಪಿ, ೭. ೫೦): ವಿರುದ್ಧ ನಿಲ್ಲಿಸು (ಉಗ್ಗಡದಿಂ ಬಂದಿದಿರೊಡ್ಡಿ ಬಾಟ್ವಿವರ ನೆಂದುಂ ಕಂಡುದಿಲ್ಲ ಇನ್ನೆಗಂ: **ಕಬ್ಬಿಗಕಾ,** ೧೭೨)

**ಇದ್ಧ** – ಪ್ರಖರವಾದ (ಅಮರೇಂದ್ರಾಭ ಪ್ರಸಿದ್ಧ ಇದ್ಧ ಖೇಚರರಾಜರ್ ನುಡಿದಟ್ಟಲ್ ಅಣ್ಮರ್: **ಹರಿವಂಶ,** ೭. ೭೯)

**ಇಧ್ಮ** – ಸಮಿತ್ತು, ಸೌದೆ (ಮನಂ ಆರಾಧಿತ ಹೋಮಭೂಮಿ ಪಶುಗಳ್ ಕಾಮಾತುರರ್ ಬಂದ ಮಾವನಿತುಂ ಸ್ಥಾಪಿತ ಯೂಪಕೋಟಿ ಬಳವತ್ಕಾಮಾಗ್ನಿ ಹೋಮಾಗ್ನಿ ಚಂದನ ಕರ್ಪೂರ ಮೃಣಾಳನಾಳಮೆ ಪೊದಳ್ದ ಇಧ್ಮಂಗಳ್ ಇಂತಾಗೆ ತಾನಿನಿತುಂ ಕಾಮನ ಬೇಳ್ವೆಯೆಂದು ಸುಗಿದಳ್ ತನ್ವಂಗಿ ಬೆಳ್ದಿಂಗಳೊಳ್; **ಪಂಪಭಾ,** ೪. ೫೯)

**ಇನ್** – ಇನ್ನು, ಇನ್ನು ಮುಂದೆ (ಜನಕಂ ಬಟೆಯಟ್ಟಿದಂ ಅಟ್ಟಿಜೆಂ ಮುರಕ್ಕೆ ಇನ್ ನಡೆತಂದು ದೇವ ಪಡೆ ಪೌರಜನಂಗಳ ಕಣ್ಗೆ ಪರ್ವಮಂ; **ಕಾದಂಸಂ;** ೨. ೩೬)

**ಇನ** – ಸೂರ್ಯ (ಇನ ವಂಶೋದ್ಭವನಪ್ಪ ಲಕ್ಷ್ಮಣನ ಮೂರ್ಛಾವೇಗಮಂ ಪಿಂಗಿಸಲ್ ಮನುವಂಶಂಗೆಡೆ ಮಾಟ್ಪೆನಿಂದಿನಿರುಳೊಳ್: **ಪಂಪರಾ,** ೧೪. ೩೩); ದೇವರು (ಜಲಜಾಕ್ಷಂ ಹಂಸವಿನನೆಂದಜೆಗೆ ಬುಧರ್: **ಅಭಿಧಾವ,** ೩. ೧. ೬); ಹಡಗು (ತರಣಿ ಬಹಿತ್ರಮಿನನುಂ: **ಅಭಿಧಾವ,** ೩. ೧. ೧೩);

**ಇನಕರ** – ಬಿಸಿಲು (ಇನಕರಪಾತಭೀತ ಪಥಿಕಶ್ರಮ ಸಂಹರಣಾರ್ಥಂ ಅಂಬುಜಾಸನಂ ಒಸೆದಿಟ್ಟ ತಣ್ಣೆಟಿಲ ಸೋಲದ ಸಾಲೆಯೆನಲ್: **ಶಾಂತೀಶ್ವಪು,** ೧೩. ೧೩೦)

**ಇನಜ** – ಯಮ (ದಿನಪನೊಗೆವಂತೆ ಪುಟ್ಟಿದಂ ಅನಿವಾರ್ಯತೇಜನೆನಿಪಂ ಇನಜನ ತನಯಂ: **ಪಂಪಭಾ,** ೧. ೧೨೧); ಕರ್ಣ (ಜಗದೊಳ್ ಪತಿಹಿತದೆಡೆಯೊಳ್ ನೆಗಟ್ದ ಇನಜನಿಂ ಏಕದಂತನಿಂ ಪವನಜನಿಂ ಖಗರಾಜನಿಂ ದುರ್ಗಂ ದ್ವಿಗುಣಂ ತ್ರಿಗುಣಂ ಚತುರ್ಗುಣಂ ಪಂಚಗುಣಂ: **ಪಂಚತಂತ್ರ,** ೫೫)

**ಇನಜನ ತನಯ** – ಯಮನ ಮಗ, ಧರ್ಮರಾಯ (ವನನಿಧಿಯಿಂದಂ ಚಂದ್ರಂ ವಿನತಾ ಉದರದಿಂ ಗರುತ್ಮಂ ಉದಯಾಚಳದಿಂ ದಿನಪಂ ಒಗೆವಂತೆ ಪುಟ್ಟಿದಂ ಅನಿವಾರ್ಯ ಸುತೇಜಂ ಎನಿಪಂ ಇನಜನ ತನಯಂ: **ಪಂಪಭಾ,** ೧. ೧೨೧)

**ಇನತನೂಜ** – ಕರ್ಣ (ಪಿಡಿದನೆ ಪುರಿಗಣೆಯಂ ಎರಟ್ಟುಡಿದನೆ ಬಳ್ಕಿದನೆ ತಾನೆ ತನ್ನನೆ ಚಲಮಂ ಪಿಡಿದು ಅಟೆದಂ ಎಂದು ದೇವರ ಪಡೆ ಗಡಣದೆ ಪೊಗಟ್ದುದು ಇನತನೂಜನ ಗಂಡಂ: **ಪಂಪಭಾ,** ೧೨. ೨೧೬); ಕಾಗೆ (ಮೌಕುಳಿ ಕೃಷ್ಣಧ್ವಾಂಕ್ಷಂ ಕಾಕೋಳಂ ದ್ರೋಣಂ ಇನತನೂಜನೆನಿಕ್ಕುಂ: **ಅಭಿಧಾವ,** ೧. ೯. ೧೫)

**ಇನಬಿಂಬ** – ಸೂರ್ಯಮಂಡಲ (ಉದಯಂಗೆಯ್ವ ಇನಬಿಂಬದಿಂ ಉದಯಿಸುವ ಎಳೆಬಿಸಿಲೆಂಬಿನಂ: **ಕಾದಂಬ,** ೧. ೬೭)

**ಇನವಳಯ** – ಸೂರ್ಯಮಂಡಲ (ಒಳಕೊಂಡ ಕೆಂಪಿನಿಂದ ಇನವಳಯಂ ಪೋಲ್ತಿರ್ದುದಪರದಿಗ್ವಧು ಭೂಭೃತ್ತಿಳಕಂಗೆ ಪಿಡಿವ ಬಗೆ .. .. ಮಣಿರಾಗದರ್ಪಣಮಮಂ: **ಆದಿಪು,** ೧೨. ೨)

**ಇನಿಗೊಳ** – ಸಿಹಿನೀರಿನ ಕೊಳ್, ಅಮೃತಸರೋವರ (ನನೆಗಣೆಯನ ಮೆಯ್ಪೆಳಗೆಂಬಿನಿಗೊಳದೋಲ್ ಮೊದಲೆ ಮಿಳಿರ್ದು: **ಕಬ್ಬಿಗಕಾ,** ೩೩೧)

**ಇನಿತು** – ಸ್ವಲ್ಪ (ಅವಗುಣಂ ಇನಿತಾದೊಡಂ ಆ ಕವಿತಾಬಂಧಮಂ ಅಶೇಂ ದೂಷಿಸುಗುಂ: **ಕವಿರಾಮಾ,** ೧. ೪೩); ಇಷ್ಟು (ಇನಿತಟಿಲುಂ ಇನಿತು ಮಱುಕಮಮುಂ ಇನಿತು ಮನಃಕ್ಷತಮುಂ ಆವನಿಂದಾದುದು: **ಕಾವ್ಯಾವಲೋ,** ೩೫೬)

**ಇನಿತ್ತು** – ಇಷ್ಟು (ಉದಗ್ರರಥಂಗಳಂ ಇನಿತ್ತಿನಿತ್ತಿವು ಎಂದೊದವಿದ ರಾಗದಿಂದೆ ಗಣಿಯಿಪ್ಪಿನದಾವಂ: **ಆಚವರ್ಧ,** ೨. ೨೮೦;

**ಇನಿದು** – ಮಧುರ (ಸವಿವೊಡೆ ಮಧುರರಸಂಬೊಲ್ ಕಿವಿಗಿನಿದಾಗಿರ್ಪ ವಚನವಿರಚನೆ ಮಧುರಂ: **ಕವಿರಾಮಾ,** ೨. ೬೦); ರುಚಿಯಾದ (ಇನಿದುಂಬಂ ವಿಷಸೇವನೆಗಿನಿಸಂ ಬಯಸುವಂತೆ: **ಸಮಯಪ,** ೫. ೪೮)

**ಇನಿವಿರಿದು** – [ಇನಿತು+ಪಿರಿದು] ಇಷ್ಟು ದೊಡ್ಡದು (ನೀಮೆನ್ನ ಪುರಾಕೃತ ಪುಣ್ಯಮೆ ರೂಪುಗೊಂಡು ಬರ್ಪಂತೆ ಬಂದಿರ್ ಏನಿಮಿತ್ತಂ ಎನಗೆ ಇನಿವಿರಿದು ಉಪಕಾರಮಂ ಒಡರ್ಚಿದಿರಿ: **ಪಂಪರಾ,** ೭. ೧೨೧ ವ)

**ಇನಿವಿಲ್** – ಇನಿದು ಬಿಲ್ಲು, ಕಬ್ಬು (ಪುರಿದಂತಾದುವು ಪೂವಿನಂಬಿ ಇನಿವಿಲ್ ನಿಸ್ಸಾರಮಾದತ್ತು ಸೀಕರಿವೋದತ್ತು ಮೃಣಾಳತಂತು: **ಪಂಪರಾ,** ೧. ೧೬)

**ಇನಿಸು** – ಇನಿತ್ತು (ಧ್ಯಾನದೊಳ್ ಅಭವಂ ನೆಱೆದು ಇನಿಸಾನುಂ ಅರೆಮುಚ್ಚಿ ಕಣ್ಗಳಂ ನಿಶ್ಚಳಿತಂ ತಾನಿರ್ದು ಮಱೆದು ಕೆಂದಿದ ಮೀನಂ ತಳ್ತಾಡದಿರ್ದ ಮಡುವಂ ಪೋಲ್ತಂ: **ಪಂಪಭಾ,** ೮. ೧೩)

**ಇನ್ನರ್** – ಇಂಥವರು (ಅಱಿಯದೆ ತಂದೊಡಮೇಂ ಎಮ್ಮ ಎಱೆಯಂಗೆ ಅದಂ ಎಮ್ಮ ಕೆಯ್ಯೊಳಟ್ಟಿಂ ನೀಂ ಇಂತಱಿಯುತ್ತುಂ ಪೆಱರೊಡಮೆಯಂ ಉಱೆ ಸೆಱೆವಿಡಿದಿರ್ಪಿರಿ ಇನ್ನರ್ ಉರ್ವಿಯೊಳ್ ಒಳರೇ: **ಪಂಪಭಾ,** ೮. ೧೮)

**ಇನ್ನವು** – ಇಂಥವು (ನಿನ್ನ ಪೆಡಗೆಯ್ಗಟ್ಟಿಂ ಶರದಿಂ ಬಿಡಿಸಿದನಲ್ಲನೆ ಸರಿತ್ಸುತಂ ಬನ್ನವಿನ್ನವು ಎಂಬುವುಮೊಳವೇ: **ಪಂಪಭಾ,** ೮. ೫೩); ಇಲ್ಲಿಯವರೆಗೆ

**ಇನ್ನುಣಿಸು** – ಇನಿದಾದ ಉಣಿಸು (ಮಣಿಕನಕಾದಿ ವಸ್ತುಗಳನೊಂದುಮಂ ಒಲ್ಲೆಂ ಏವುವಾದವು ಇನ್ನುಣಿಸೆನಗೆ ಅಟ್ಟಿ ಮೆಯ್ ಪಸಿದು ಜೊಮ್ಮನೆ ಪೋದಪುದು: **ಪಂಪಭಾ,** ೫. ೭೧)

**ಇನ್ನೆಗಂ** – ಇಷ್ಟರವರೆಗೆ, ಇಲ್ಲಿಯವರೆಗೆ (ಕಮಲೆಯಂ ಇನ್ನೆವರಂ ಕುರುಮಹೀಪತಿಯೊಳ್ ನೆಲಸಿರ್ದೆಂ: **ಗದಾಯು,** ೯. ೪)

**ಇನ್ನೆವರೆಂ** – ಇದುವರೆಗೆ (ಭಯಂಕರಾಟವಿಯೊಳ್ ಇನ್ನೆವರಂನೆಲಸಿರ್ದ ಸೇದೆ: **ಪಂಪಭಾ,** ೯. ೪೨)

**ಇನ್ನೆವರೆಗಂ** – ಇನ್ನೆವರಂ (ಕಠೋರವಾಣಿಗಳಿಂ ಘಾತಿಸುತಿರ್ದೆಂ ಇನ್ನೆವರೆಗಂ ನಿಮ್ಮ: **ಸುಕುಮಾಚ,** ೨. ೩೩)

**ಇಪ್ಪತ್ತೈದು ದೋಷ** – [ಜೈನ] ನೋಡಿ, ಪಂಚವಿಂಶತಿಮಳ (ಶಂಕಾದ್ಯಷ್ಟಮಲಂಗಳುಂ ಎಂಟುಮದಂಗಳುಂ ಮೂಱು ಮೂಢಮುಂ ಆಱು ಅನಾಯತನ ಸೇವೆಗಳುಂ ಎಂದಿಂತು ಇಪ್ಪತ್ತೈದು ದೋಷಂಗಳಿದಗಲ್ದ ಸಮ್ಯಕ್ತ್ವಮನೊಡೆಯನಾಗಿ: **ವಡ್ಡಾರಾ,** ಪು ೬, ಸಾ ೨೨)

**ಇಪ್ಪೆ** – ಒಂದು ಮರ (ಇರ್ಬೀಡ ಅರನೇಱೆಲ್ ಇಪ್ಪೆ ಸಿರಿಸಂ ಹಾಡಂಗಿ ಭಾರಂಗಿ ನೇಳಲ್ ಎರಂ ಪಾದರಿ ತಾಱೆ ತಂಡಸು ಬಿಳಿಲ್ ಬಲ್ಮತ್ತಿ ಬೇವತ್ತಿ: **ಪಾರ್ಶ್ವನಾಪು,** ೧೨. ೫೮)

**ಇಬ್ಬಕುಳ** – [ಇಭ್ಯಕುಲ] ವರ್ತಕ ವಂಶ (ಭಾನುದತ್ತಸೆಟ್ಟಿಯೆಂಬೊಂ ಇಬ್ಬಕುಳೋದ್ಭವಂ ಆತನ ಭಾರ್ಯೆ ದೇವಿಲೆಯೆಂಬೊಳ್: **ಹರಿವಂಶ,** ೩. ೩ ವ)

**ಇಭ** – ಆನೆ (ಇಭಶೈಲಂಗಳನೇಱೆಯೇಱೆ ರುಧಿರ ಸ್ರೋತಂಗಳಂ ದಾಂಟಿ ದಾಂಟಿ .. .. ಭರಂಗೆಯ್ದುಱಿದೆಯ್ದಿ: **ಗದಾಯು,** ೪. ೪೮)

**ಇಭದ್ವಿಣ್ಮೂರ್ತಿ** – ಸಿಂಹದ ಆಕಾರ (ಕಾಲನಂ ಪೊಡೆದಿಕ್ಕಲ್ ವಿಳಯಾಂತಕಂ ಮುಳಿದು ಇಭದ್ವಿಣ್ಮೂರ್ತಿಯಂ ತಾಳ್ದಿದಂ ಗಡಂ ಎಂಬಂತೆ ಕೊಲುತ್ತುಮಿರ್ದುದು ಸಮಂತು ಉತ್ಕಂಠಕಂಠೀರವಂ: **ಶಾಂತೀಶ್ವಪು,** ೩. ೫)

**ಇಭಮುಕ್ತಾವಳಿ** – ಆನೆಯ ದಂತದ ಮಣಿಗಳ ಹಾರ (ಗುಂಜಾಫಳಮೆನೆ ತಳೆದು ಇಭಮುಕ್ತಾವಳಿಯಂ ಮರುಳಮಮ ಶಬರಿಯೆನಿಸಿತ್ತದಱೊಳ್: **ರಾಜಶೇವಿ,** ೬. ೧೧೯)

**ಇಭವಕ್ತ್ರ** – ಗಣಪತಿ (ಇಭವಕ್ತ್ರಂ ನಲಿದೀಗೆ ಮತ್ಕೃತಿಗೆ ನಿರ್ವಿಘ್ನತ್ವಮಂ ಸಂತತಂ: **ತ್ರಿಷಷ್ಟಿಪು,** ೧. ೮)

**ಇಭಶಿಕ್ಷಕ** – ಆನೆಗಳನ್ನು ನಿಯಂತ್ರಿಸುವವನು, ಮಾವತಿಗ ನೆರೆದ ಇಭಶಿಕ್ಷಕರ್ ಕಲಿಸಲೇರ್ವೆಸನಂ ಕಲುತಿರ್ಪ ಗಂಧಸಿಂಧುರಚಯಂ: **ಜಗನ್ನಾವಿ,** ೨. ೧೭)

**ಇಭಾಂತಕ** – ಆನೆಯನ್ನು ಕೊಲ್ಲುವಂಥದು, ಸಿಂಹ (ವಿಲಯದ ಮೃತ್ಯುವಂತೆ ತವೆ ಕೊಂದುದು ತಿಂದುದು ಅದೊಂದು ಇಭಾಂತಕಂ: **ರಾಜಶೇವಿ,** ೫. ೧೧೯)

**ಇಭೇಂದ್ರವೈರಿ** – ಆನೆಯ ವೈರಿ, ಸಿಂಹ (ಉದಿತಸ್ಮೇರಂ ಇಭೇಂದ್ರವೈರಿ ನಯದಿಂ ಕೈನೀಡಿ ಗೋಮುಖ್ಯ ಬಲ್ಲಿದಿರೇ ಸಂತಸಮೇ ಕರಂ ಕುಶಲಮೇ: **ಪಂಚತಂತ್ರ,** ೧೧೯)

**ಇಭೇಂದ್ರಶಿಕ್ಷೆ** – ಆನೆಗಳನ್ನು ಪಳಗಿಸುವಿಕೆ, ಗಜಶಾಸ್ತ್ರ (ಭರತಾಭ್ಯಾಸಂ ಇಭೇಂದ್ರಶಿಕ್ಷೆ .. .. ಎಂಬಿನಿತಱೊಳಂ ಪಡೆದನತಿಕೌಶಲಮಂ: **ಪುಷ್ಪದಂಪು,** ೪. ೫೯ ತ್ತು ೬೦)

**ಇಭ್ಯ** – ಆನೆಗಳ ಗುಂಪು (ಬಧಿರಿತ ಸಮಸ್ತ ದಿಕ್ತಟಂ ಅಧಿರಿತ ಸರ್ವ ಇಭ್ಯಗರ್ವಿತಂ ಕ್ಷುಭಿತಾಂಭೋಸಲಿಲಂ ಪರೆದುದು ಧುರವಿಧಾನ ಪಟು ಪಟಹ ಕಹಳ ಭೇರೀರಭಸಂ: **ಪಂಪಭಾ,** ೧೨. ೧೭೧)

**ಇಭ್ಯಕುಲ** – ವೈಶ್ಯಕುಲ (ಮಂಡಲಮಂಡನನಪ್ಪ ಪುಣ್ಯ ಭಜನನಂ ಅಪೂರ್ವಮನ್ಮಥನಂ ಇಭ್ಯಕುಲಾಮುಬರತಿಗ್ಮರೋಚಿಯಂ ತನಯನಣ ಅಂದೆ ಪೆತ್ತವೊಲ್ ಅದೇನುರಾಗಮನಪ್ಪುಕೆಯ್ದಳೋ: **ಸುಕುಮಾಚ,** ೧೦. ೪)

**ಇಮ್ಮನೆ** – ಸಂತೋಷವಾಗಿ (ಸುರಾಂಗನೆಯರ್ ನಿಜವದನಮಂ ಇಮ್ಮನೆ ನೋಟ್ಟಿನಮಚ್ಯುತಂ ಪರಿಚ್ಯುತನಾದಂ: **ಆದಿಪು,** ೬. ೨೦)

**ಇಮ್ಮಾವು** – ಸಿಹಿ ಮಾವು (ತನಿವಣ್ಣಾಗಿರ್ದುದು ಇಮ್ಮಾವು ಕಟ್ಟಿಲಿಸಿದತ್ತೆಳೆವಳ್ಳಿ: **ಆದಿಪು,** ೧೧. ೬೮)

**ಇಮ್ಮಿದಳ್** – ಚೆಲುವೆ (ವಿಕಲ್ಪಮಿಲ್ಲದ ಅಳ್ಗೆ: ಕಿಱಿಯಳ್, ಪಿರಿಯಳ್ಳಿನಿಯಳ್, ಅಸಿಯಳ್, ಇಮ್ಮಿದಳ್: **ಶಬ್ದಮದ,** ೨೧೯, ಪ್ರ)

**ಇರ್** – ಜೀವಿಸು, ವಾಸಮಾಡು (ಇನ್ನಾವ ಶೈಳದೊಳಿರ್ಪೆ ಇರ್ಪಡೆವೇೞು ನೀಂ ತ್ರಿಪುರಂತಕ: **ಪಂಪಭಾ,** ೮. ೧೧); ವರ್ತಿಸು (ರತ್ನಪ್ರದೀಪಂಗಳಿರ್ಪವೊಲಿರ್ಪರ್: **ವಡ್ಡಾರಾ,** ಪು. ೧. ಸಾ. ೪); ಸಮಾಸದಲ್ಲಿ ಎರಡು ಎಂಬುದಕ್ಕೆ ಆದೇಶವಾಗುವ ರೂಪ (ಹರನೊಳೆ ಪತ್ತಿ ತೆತ್ತಿಸಿದ ಚಿತ್ತಮಂ ಇರ್ಬಗಿಯಾಗೆ ಮೋಹಮೊತ್ತರಿಸೆ: **ಪಂಪಭಾ,** ೧೩. ೬೩)

**ಇರಂ** – ಇರವು, ಇರುವಿಕೆ (ಈಗಳ್ ಇರ್ವಾವುಗಳೊಡನೆ ನೆರೆದ ಇರಂ ಆಯ್ತು: **ವಡ್ಡಾರಾ,** ಪು. ೧೪೦, ಸಾ. ೧)

**ಇರಮ್ಮದ** – ಸಿಡಿಲು (ಪೊಣ್ಮಿದ ಇರಮ್ಮದ ಅನಳ ಶಿಖಾದಾಮಂಗಳೋ ತಾಂ ವಿಯೋಗಿಗಣಕ್ಕುರ್ಚುವ ಮೇಘಮನ್ಮಥನ ತೂಣೀರೋದ್ಗತಜ್ವಾಳೆಯಂಬುಗಳೊ ಪೇಳೆನೆ ಮಿಂಚುಗಳ್: **ಶಾಂತೀಶ್ವಪು,** ೧೨. ೪೨)

**ಇರಿ** – [ಕರೆಯುವ ಹಾಲಿನ] ಧಾರೆ (ಇರಿದೊಂದೆರಡಿರಿಯಿಂ ತೀವಿರೆ ಕಂದಲ್ .. .. ನೊರೆವಾಲಿಂ ತೀವಿತ್ತು: **ಲೀಲಾವತಿ,** ೫. ೧೦೭); ಹಾಲು ಕರೆ (ಇರಿದು ಒಂದೆರಡಿರಿಯಂ ತೀವಿರೆ ಕಂದಲ್ ತನ್ನ ಬಿಳಿಯ ಕಣ್ಗಳ ಬೆಳಗಿಂ ನೊರೆವಾಲಿಂ ತೀವಿತೆಗೆತ್ತಿರದೆಟ್ಟಿವಳಾತ್ಮಪತಿಯನೇಂ ನಗಿಸಿದಳೋ: **ಲೀಲಾವತಿ,** ೫. ೧೦೭)

**ಇರಿಸಿಡು** – ಇಡು (ದೇವನುಂ ಇರಿಸಿಟ್ಟು ಪೋದರ್ ಇನಿಬರುಮಮ ಶೂನ್ಯಾವಾಸದೊಳ್: **ಅಜಿತಪು,** ೬. ೧೨೨)

**ಇರಿಸು** – ಇರುವಂತೆ ಮಾಡು, ಇಡು (ಸಮಂತಿರಿಸುವೆಂ ಅನಂತಸುಖಸಂಗತಮಂಗಳಕಾರಣಂಗಳಂ: **ಕವಿರಾಮಾ,** ೨. ೧೦೨)

**ಇರು** – ವಾಸಮಾಡು (ಇರು–ಸ್ಥಾಯಿಭಾವೇ: **ಶಬ್ದಮದ, ಧಾ,** ೫೪೫)

**ಇರುಳ್** – ರಾತ್ರಿ (ಇರುಳೋರಂತಿರೆ ಕಾದಂಬರಿಯನೆ ನೋಡುತ್ತುಮಿರ್ದು ಝೋಂಪಿಸೆ ನಿದ್ರಾತುರನಾಗಿ ಪಟ್ಟಿ ಸಾರ್ವಂತಿರೆ ಸಾರ್ದಂ ಚಂದ್ರಂ ಅಪರವೇಲಾವನಮಂ; **ಕಾದಂಸಂ,** ೫. ೬೪)

**ಇರುಳುಮೆಯ್** – ನಡುರಾತ್ರಿ (ನಿಧಾನವನೆತ್ತಿಕೊಳ್ವವೋಲ್ ಇರುಳುಮೆಯ್ಯೊಳ್ ಬೇಗಮೆತ್ತಿಕೊಂಡು: **ನೇಮಿನಾಪು,** ೭. ೪೪ ವ)

**ಇರ್ಕಚ್ಚೆ** – ಜೋಡುಗಚ್ಚೆ (ಕಾಮರಸಂ ಭೋಂಕನೆ ಸೂಸೆ ತಾಳ್ದಲರಿದೆಂದು ಇರ್ಕಚ್ಚೆಯಂ ಕಟ್ಟಿದಳ್: **ಪಂಪಭಾ,** ೪. ೩೮)

**ಇರ್ಕಡಿ** – ಎರಡು ಭಾಗ (ಪೊಡೆದೊಡೆ ವಾಲಿಯಸುತಂ ಇರ್ಕಡಿಯಾಗಿ ನೆಲಕ್ಕೆ ಬೀಳೆ: **ಧರ್ಮಪ,** ೯. ೪೩)

**ಇರ್ಕಣ್ಣುರುಡ** – ಎರಡು ಕಣ್ಣೂ ಕಾಣದವನು (ಪರಿಣತವಯಸರೆಂ ಇರ್ಕಣ್ಣುರುಡರೆಂ ಎಮಗೆ ಇಂಬುಕೆಯ್ವುದುಚಿತಂ: **ಗದಾಯು,** ೪. ೨)

**ಇರ್ಕುಟಿಗೊಳ್** – ಎಳೆದುಕೊ (ಅತಿವಿಷಮಗರಳರಸವಾಸಿತ ನೀಳೋತ್ಪಳದ ಕಂಪಂ ಇರ್ಕುಟಿಗೊಂಡಂ ಕ್ಷಿತಿವರಂ: **ಶಾಂತೀಶ್ವಪು,** ೬. ೬೬)

**ಇರ್ಕುಟಿಸು** – ಇಕ್ಕುಳದಿಂದ ಹಿಡಿ, ಇಕ್ಕಟ್ಟಿಗೆ ಸಿಲುಕಿಸು (ಕಾಯ್ದು ಇರ್ಕುಟಿಂದ ಇರ್ಕುಟಿಸೆ ಕರವದಿಂ ಕೂಡೆ ನೆತ್ರ್ ತೆರಳ್ದುಣ್ಮುವಿನಂ: **ಸುಕುಮಾಚ,** ೭. ೩೫)

**ಇರ್ಕೆ** – ಇಕ್ಕೆ, ಇರುವ ಸ್ಥಳ (ಅನ್ನೆಗಂ ಟಿಟ್ಟಿಭಮಿಥುನಂ ಕಿಱಿದಾನುಂ ಬೇಗದಿಂ ಬಂದು ತಮ್ಮಿರ್ಕೆಗೆ ಪೋಗಲಲ್ಲಿ ತತ್ತಿಗಳಂ ಕಾಣದೆ ಬೆಕ್ಕಸಂಬಟ್ಟು ಮಱುಗಿ: **ಪಂಚತಂತ್ರ,** ೨೨೫ ವ); ಮನೆ (ತನಗೆ ಇರ್ಕೆಯಾದ ಕಡಲಂ ಕುಂಭಂಗಳಂ ಪೊಕ್ಕ ದೇವನಿಕಾಯಂಗಳನಿಂದ್ರಂ .. .. ಪವಿತ್ರಮೆನಿಸಿತ್ತು: **ಆದಿಪು,** ೭. ೯೬)

**ಇರ್ಕೆದಾಣ** – ಇರುವ ಜಾಗ, ನೆಲೆ (ಮಾವನೆ ಮಱೆಗೊಂಡು ಬಗ್ಗಿಸುವ ಕೋಗಿಲೆ ಕೋಗಿಲೆಯ ಇರ್ಕೆದಾಣದೊಳ್ ಜಿನುಗುವ ತುಂಬಿ: **ಆದಿಪು,** ೧. ೬೫)

**ಇರ್ಕೆಮ** – ಇದ್ದರೆ ಇರಲಿ (ಒಳಗಜೆಯದಿರ್ದೊಡೆ ಇರ್ಕೆಮ ತಿಳಿದೊಳಪೊಕ್ಕಿಂ ಬಟೆಕ್ಕೆ ಭಾಷಿತಮಂ .. .. ಬಗೆದೊಡೆ ಖಳನುಂ ಜೈನಬ್ರತಕ್ಕೆ ಘಟಿಲನೆ ಬರ್ಕುಂ: **ಸಮಯಪ,** ೩. ೨೯)

**ಇರ್ಕೆವನೆ** – ಆಶ್ರಯ (ನುಡಿ ಸಲೆ ನನ್ನಿಗೆ ಇರ್ಕೆವನೆಯಾದುದು ಜೌವನದೇಟ್ಗೆ ಕಯ್ಗೆ ಕನ್ನಡಿಯೆನಿಸಿತ್ತು: **ಕಬ್ಬಿಗಕಾ,** ೪೦)

**ಇರ್ಕೆಲ** – ಎರಡೂ ಬದಿ (ಶೈಲರಾಜ ಅವಷ್ಟಂಭಣಿಸಲೊಡಂ ಸಿಂಹಾಸನದ ಇರ್ಕೆಲದೊಳ್ ನಿಂದ ವೀರಲಕ್ಷ್ಮಿ ವಿಜಯಲಕ್ಷ್ಮಿಯರ್: **ಗಿರಿಜಾಕ,** ೩. ೧೦೫ ವ)

**ಇರ್ಚ್ಛಾಸಿರ್ವರ್** – ಎರಡು ಸಾವಿರ ಮಂದಿ (ಇರ್ಚ್ಛಾಸಿರ್ವರ್ ಮಾಹೇಶ್ವರರಂ ಅದೊರ್ವಂ ಜೈನಂ ಅದಾರ್ಗೆ ಮಾಡಲ್ ಬರ್ಕುಂ: **ಸಮಯಪ,** ೧೫. ೬೯)

**ಇರ್ಛಾಸಿರ** – ಎರಡು ಸಾವಿರ (ಸ್ಮರಿಯಿಪಂ ಇರ್ಪತ್ತು ಇರ್ಛಾಸಿರಬರಿಸಕ್ಕೊರ್ಮೆ: **ಆದಿಪು,** ೬. ೧೬)

**ಇರ್ತಡಿ** – ಎರಡು ದಡ (ಪರಿಕಾಲಿರ್ತಡಿಯೊಳ್ ಮಡಲ್ತು ಮುಗುಳಂ ಪೂಗೊಂಚಲಂ: **ಮಲ್ಲಿನಾಪು,** ೨. ೬)

**ಇರ್ತರ** – ಎರಡು ಸಾಲು (ಇರ್ತರದಿಂದೋಲಗದೊಳ್ ಕುಳ್ಳಿರ್ದ ಜತಿಗಳ್: **ಕಬ್ಬಿಗಕಾ,** ೧೬೨)

**ಇರ್ತಲೆವೊತ್ತು** – ಎರಡು ಕಡೆಗಳಿಗೂ ಉರಿ ಹೊತ್ತು (ಇರ್ತಲೆವೊತ್ತಿದ ಪುಳ್ಳಿಯ ಪುಱುವೊಲಿರ್ದಂ ಅತಿಚಕಿತಚಿತ್ತಂ ಅಪರಾದಿತ್ಯಂ: **ಗದಾಯು,** ೧. ೨೩)

**ಇರ್ತಳ** – ಎರಡು ಅಂಗೈಗಳೂ (ತೀವಿದೊಳ್ರಸದ ಮಾವಿನ ಪಣ್ಗಳಂ ಇರ್ತಳಂಗಳಿಂ ಪೊಸೆದು: **ಜಗನ್ನಾವಿ,** ೧೭. ೮೨)

**ಇರ್ತೆಱ** – ಎರಡು ತೆರ (ಸಂಸಾರಿಜೀವಂ ತ್ರಸಸ್ಥಾವರ ವಿಕಲ್ಪದಿಂ ಇರ್ತೆಱನಕ್ಕುಂ: **ಆದಿಪು.** ೧೦. ೬೩)

**ಇರ್ದಲ್** – ಇದ್ದಿಲು (ನಿಧಿ ದೊರೆಕೊಂಡು ಇರ್ದಿಲಾದ ತೆಱನಂ ಪೋಲ್ಕುಂ: **ಸಮಯಪ,** ೪. ೩೮)

**ಇರ್ದೆಸೆ** – ಎರಡು ದಿಕ್ಕು, (ಕಾಕಿಣೀಮಣಿಸ್ಕಂಧದಿಂದಂ ಇರ್ದೆಸೆಯ ಕೇರ್ಗಳೊಳಗಂ ಬರೆದು: **ಶಾಂತಿಪು,** ೧೧. ೪೬)

**ಇರ್ನಾಲಗೆ** – ಎರಡು ನಾಲಗೆ (ನುಡಿದುದನೆ ನುಡಿಯದೆ ಎರಡಂ ನುಡಿವ ಇರ್ನಾಲಗೆಯ ಜಡರಂ ಉತ್ತಮರೆನವೇಡ: **ಸಮಯಪ,** ೩. ೮೨)

**ಇಪ್ಪತ್ತನಾಲ್ವರ್** – ಇಪ್ಪತ್ತ ನಾಲ್ಕು ಮಂದಿ (ಜಿನನಾಥರ್ ವಿವರಿಪ್ಪೊಡೆ ಇಪ್ಪತ್ತನಾಲ್ವರ್: **ಧರ್ಮಾಮೃ,** ೫. ೧೫೦)

**ಇರ್ಪತು** – ಇಪ್ಪತ್ತು (ಇರ್ಪತೆಂಟನೆಯ ದ್ವಾಪರಾಂತ್ಯದಲ್ಲಿ ಧರೆಯೊಳ್ ಹರಿ ಪುಟ್ಟುಗುಂ; **ಜಗನ್ನಾವಿ,** ೯. ೪೬)

**ಇರ್ಪತ್ತಿರ್ಛಾಸಿರ** – ಇಪ್ಪತ್ತೆರಡು ಸಾವಿರ (ಸ್ಮರಿಯಿಪಂ ಇರ್ಪತ್ತಿರ್ಛಾಸಿರ ಬರಿಸಕ್ಕೊರ್ಮೆ ಮನದೊಳುಣಿಸಂ: **ಆದಿಪು,** ೬. ೧೬)

**ಇರ್ಪಟಿ** – [ಇರ್ಪು+ಅಟಿ] ತೇವವಿಲ್ಲದಾಗು, ಒಣಗು (ಇರ್ಪಟಿದು ಬಱವಱಿದ ಬಾಯೆಱೆಯುಂ: **ಕುಸುಮಾಕಾ,** ೧೩. ೪೬ ವ)

**ಇರ್ಪು** – ದ್ರವ, ತೇವ (ಅಮರೀತತಿ ತೊಡೆದುದು ನೃಪರಮಣಿಯ ಮೆಯ್ಯ ಇರ್ಪಂ ಎಸೆವ ಮಸೃಣ

ಅಂಶುಕದಿಂ: **ಶಾಂತೀಶ್ವಪು,** ೧೪. ೧೩); ತೀವ್ರ, ಕಡು (ಕುಸುಮಾಳಿ ಶಸ್ತ್ರಮಾದುದು ಬಿಸಿಲ್ ಇರ್ಪಾದುದು ಚಂದ್ರಿಕೆ ಇನ್ನುಂ ಕಾದಲನೇಂ ಬಾರಂ: **ಉದ್ಭಟಕಾ,** ೧೦. ೫೭)

**ಇರ್ಪುಗುಂದು** – ಒಣಗು, ಕಾಂತಿಹೀನವಾಗು (ನಿನ್ನ ಮೊಗಮೆಂಬ ಸುಧಾಕರಬಿಂಬಮಿಂದು ಇಂದು ಬೆಳ್ಪಗೆ ತೋಱದುದು ಇಂದುಟಿಚಂದಳಿರ್ ಇರ್ಪುಗುಂದಿದತ್ತು: **ರಾಜಶೇವಿ,** ೩. ೫೭)

**ಇರ್ಪುದು** – ಇರುವ ಸ್ಥಿತಿ, ಇರುವಿಕೆ (ಪೆಱನಿಕ್ಕುಂಗೂಟಿಯೊಳಂ ಕೀಟಿಲೊಳಂ ಅಳವಿಗೆಟ್ಟಿರ್ಪ ನಿಮ್ಮಿರ್ಪುದರ್ಕಂ ಮಱುಗುತ್ತಿರ್ಪಳ್ಗೆ: **ಪಂಪಭಾ,** ೮. ೭೧)

**ಇರ್ಪುವಡೆಯಿಸು** – ಹಸಿಯಾಗಿಸು (ಪಡುವಣೇಲರ್ ಇರ್ಪುವಡೆಯಿಸಲ್ ಅಡವಿಯೊಳ್ ಒತ್ತಂಬದಿಂದಂ .. .. ನಳನಳಿಸುವ ಎಳದಳಿರ್ಗಳ್ ರಯ್ಯಂ: **ಜಗನ್ನಾವಿ,** ೪. ೩)

**ಇರ್ಪೊತ್ತು** – ಎರಡು ಹೊತ್ತು, ಹಗಲು–ರಾತ್ರಿ (ಪೊಱಲ ಜನಮೆಲ್ಲಂ ಇರ್ಪೊತ್ತುಂ ಅರ್ಚನೆಯಂ ಕೊಂಡುಬಂದು ಅರ್ಚಿಸಿ: **ವಡ್ಡಾರಾ,** ಪು. ೮೩. ಸಾ. ೬)

**ಇರ್ಪೋಡು** – ಒಣಗಿಹೋಗು (ಸೂಡಿದ ಪಾರಿಜಾತದ ನಮೇರುವ ಬಾಸಿಗಮೊಯ್ಯನೆ ಇರ್ಪೋಡಿದುದು ಅಂದಿನಂಗರುಚಿ ಕಣ್ಗೆಳಿದಾಯ್ತು: **ಆದಿಪು,** ೩.೩)

**ಇರ್ಪೋೞ್** – ಎರಡು ಹೋಳು (ಬೇಗಂ ಮಂಡೆಯನಿರ್ಪೋೞಾಗಿರೆ ಕರ್ಬುನದ ಡಂಕೆಯಿಂ ಪೊಯ್ವುದುಂ: **ಧರ್ಮಾಮೃ,** ೭. ೬೩)

**ಇರ್ಬಗಿ** – ಇರ್ವಗಿ, ಇಬ್ಬಗಿ, ಎರಡು ಹೋಳು (ತತ್ಪತಾಕಿನೀಕುಂಜರಶಿರಶ್ಶಿಳಾಪಟ್ಟಕಂಗಳಂ ಇರ್ಬಗಿ ಮಾಡಲ್ವಡೆಯದೆಯುಂ: **ಆದಿಪು,** ೧೪. ೧೦೩ ವ)

**ಇರ್ಬಗಿಮಾಡು** – ಎರಡು ಹೋಳಾಗಿ ಸೀಳು (ತತ್ಪತಾಕಿನೀಕುಂಜರಶಿರಶ್ಶಿಳಾಪಟ್ಟಕಂಗಳಂ ಇರ್ಬಗಿ ಮಾಡಲ್ವಡೆಯದೆಯುಂ: **ಆದಿಪು,** ೧೪. ೧೦೩ ವ)

**ಇರ್ಬೀಡ** – ಒಂದು ಬಗೆಯ ಮರ (ಆಸು ತೇಗು ತದುಕಿಂಚಿಲ್ ಪೊನ್ನೆ ಚೆನ್ನಂಗಿ ಬೊಬ್ಬುಲಿ ಇರ್ಬೀಡ ಅರನೇಱಲ್ ಇಪ್ಪೆ ಸಿರಿಸಂ ಹಾಡಂಗಿ ಭಾರಂಗಿ ನೇಳಲ್: **ಪಾರ್ಶ್ವನಾಪು,** ೧೨. ೫೮)

**ಇರ್ಬಾಯ** – ಎರಡು ಬಾಯಿ ಉಳ್ಳುದು, ಗಂಡಭೇರುಂಡ (ತೊಂಡಿಗಂ ಉರುಳಿಗಂ ಇರ್ಬಾಯನುಂ ಜಾತಕಂ .. .. ತದ್ವನಾಂತಸ್ಥಮಿರ್ಕುಂ: **ಶಬರಶಂ,** ೩. ೩೩)

**ಇರ್ಮಡಿ** – ಎರಡು ಪಟ್ಟು (ಆನಂದಾಶ್ರುವೊಗೆಯೆ ಬಗೆವೆರ್ಚುತ್ತಿರ್ಮಡಿ ಮೂವಡಿ ನಾಲ್ವಡಿ ಅಯ್ವಡಿ ಸಂತಸದಿಂದೆ ತಂದೆ ಮಗಳಂ ಕರೆದಂ: **ಗಿರಿಜಾಕ,** ೩. ೧೦೪)

**ಇರ್ಮಡಿಸು** – ಎರಡರಷ್ಟಾಗು (ಮಗನಟಿಲೊಳ್ ಕರಂ ಮಱುಗುತ್ತಿರ್ಪಿನಂ ಎನ್ನ ತನೂಜನಾಳ್ವ ಸಾವಿಗಂ ಅಟಿವಾಗೆ ಶೋಕರಸಂ ಇರ್ಮಡಿಸಿತ್ತು: **ಪಂಪಭಾ,** ೧೩. ೧೦೫)

**ಇರ್ಮೆ** – ಎರಡು ಸಲ, ಎರಡು ಬಾರಿ (ಇರ್ಮೆ ನೀಂ ಮರ್ತ್ಯಲೋಕದೊಳ್ ಪುಟ್ಟೆನುತ್ತೆ ಶಾಪಂಗೊಟ್ಟಂ: **ಕಾದಂಸಂ,** ೭. ೪೪)

**ಇರ್ಮೆಯ್ಯಾಗಿಸು** – ಎದೆ ಬೆನ್ನುಗಳನ್ನು ಕಾಣಿಸು, ಬೆನ್ನಲ್ಲಿ ಹೊರಟು ಎದೆಯಲ್ಲಿ ಹೊರಬರು (ಕಾಮನ ಬಾಣಕ್ಕೆ ಕಂಪನಿತ್ತುಂ ಕಾಮಿಗಳನಿರ್ಮೆಯ್ಯಾಗಿಸುತ್ತುಂ: **ಗಿರಿಜಾಕ,** ೭. ೪೨ ವ)

**ಇರ್ಮೊನೆಗಾಣ್** – ಎರಡು ತುದಿಯಲ್ಲೂ ಕಾಣಿಸು (ಭಿಂಡಿವಳಕ್ಕೆ ಇರ್ಮೊನೆಗಾಣ್ಬಕಕ್ಕಡೆಗೆ ಬಿದ್ದಂ ಬೀಟ್ವಿ: **ಚಂದ್ರಪ್ರಪು,** ೧೦. ೮೦)

**ಇರ್ವಕ್ಕ** – ಎರಡು ಪಕ್ಕ, ಎರಡು ಮಗ್ಗುಲು (ಇರ್ವಕ್ಕದೊಳಂ ವಿಯಚ್ಚರ ಕುಲಪ್ರಭುಗಳ್ ಬರೆ: **ಪಂಪರಾ,** ೧೫. ೩)

**ಇಲ್ಲಣ** – ಜೇಡನ ಬಲೆ, ಹೊಗೆನೂಲು (ಉಪ್ಪು ಇಲ್ಲಣ ಇಂಗು ಸಾಸವೆ ತಪ್ಪಿಲ್ಲದ ಮೆಣಸು ಸುಂಟಿ .. .. ಮೋದಿ ಮೂಸುವರ್: **ಧರ್ಮಾಮೃ,** ೩. ೪೨)

**ಇಲ್ಲಮೆ** – ಇಲ್ಲವೆ, ಇಲ್ಲದಿರುವಿಕೆ, ಅಭಾವ (ಅನಯದಿನಪ್ಪ ಸಂಪದದಿಂ ಇಲ್ಲಮೆ ನಾಡೆಯುಂ ಇಂಬುವೆತ್ತುದು: **ಪಂಪರಾ,** ೭. ೧೮)

**ಇಷಂ** – ಆಶ್ವಯುಜ ಮಾಸ (ಪುರಜನಮನಿತುಂ ಇಷಂ ಚೈತ್ರಂ ಎಂಬ ತಿಂಗಳೊಳ್ ಅಖಿಳಾರ್ಚನೆವೆರಸು ಜಾತ್ರೆ ನೆರೆಯದಿರ್ದೊಡೆ ಅನಿತುಮಂ ಒರ್ಮೊದಲೆ ವಿಳಯದೊಳ್ ನೆರೆಯಿಸುವಳ್: **ಯಶೋಧಚ,** ೧. ೩೫)

**ಇಷು** – ಬಾಣ (ಧನುವಂ ದಿವ್ಯ ಇಷುಗಳಂ ತನುತ್ರಮಂ ಕಳೆದು ಲಕ್ಷ್ಮಣಂ ದಶರಥ ರಾಮನನೆಯ್ದೆ ವಂದು .. .. ಇಂತೆಂದಂ: **ಪಂಪರಾ,** ೧೬. ೧೮)

**ಇಷುವಿದ್ಯಾ** – ಧನುರ್ವಿದ್ಯೆ (ಕೂರಿಸೆ ಗುರುಶುಶ್ರೂಷೆಯೊಳಾ ರಾಮನನುಗ್ರಹಪರಶುಪಾಟಿತ ರಿಪುವಂಶಾರಾಮನಂ ಇಷುವಿದ್ಯಾಪಾರಗನೆನಿಸಿದುದು ಬಲ್ಮೆ ವೈಕರ್ತನನಾ: **ಪಂಪಭಾ,** ೧. ೧೦೪)

**ಇಷ್ಟಂ ಧರ್ಮೇಣ ಯೋಜಯೇತ್** – ಇಷ್ಟರಾದವರನ್ನು ಧರ್ಮದಲ್ಲಿ ತೊಡಗಿಸು (ಆತನ ಪರೋಪಕಾರ ಬುದ್ಧಿಯುಮಂ **'ಇಷ್ಟಂ ಧರ್ಮೇಣ ಯೋಜಯೇತ್'** ಎಂಬ ವಾಕ್ಯಮಂ ನೆನದು: **ಅಜಿತಪು,** ೧೨. ೧ ವ)

**ಇಷ್ಟತುಷ್ಟಿಕರ** – ಇಷ್ಟವನ್ನು ಪೂರೈಸುವ (ಅಪರಿಮಿತಮೆನಿಸೆ ಚೆಂಬೊನ್ನ ಪರಿಯಣದ ಬಳಸಿ ಬಣ್ಣವಣ್ಣಿಗೆಗಳೊಳಾದ ಉಪದಂಶಂಗಳ್ ತುಱುಗಿದವು ಪತ್ರಶಾಕಂಗಳ್ ಇಷ್ಟತುಷ್ಟಿಕರಂಗಳ್: **ಸುಕುಮಾಚ,** ೧೧. ೨೯)

**ಇಷ್ಟಾವಾಪ್ತಿ** – ಬಯಸಿದ್ದನ್ನು ಪಡೆಯುವುದು (ಮುನ್ನಂ ನೆರೆಪಿದ ಸುಕೃತಂ ಪಕ್ವಮಾದಲ್ಲದಂದು ಆವುದುಂ ಇಷ್ಟಾವಾಪ್ತಿಯಿಲ್ಲ: **ಪುಷ್ಪದಂಪು,** ೩. ೧೦೨)

**ಇಷ್ಟಿ** – ಯಾಗ (ಮುನಿಜನಕ್ಕೆ ಇಷ್ಟಿವಿಘ್ನಂಗಳಂ ದಾರುಣದೈತ್ಯರ್ ಮಾಡೆ .. .. ಕೊಂದಿಕ್ಕದೆ: **ಪಂಪಭಾ,** ೪. ೧೧); ಬಯಕೆ (ಇಷ್ಟಿ ಮಖ ಇಚ್ಛಾವಚನಂ: **ಅಭಿಧಾವ,** ೩. ೧. ೭೨)

**ಇಸಿಸು** – ಬಾಣಪ್ರಯೋಗ ಮಾಡಿಸು (ಛಾಯಾಲಕ್ಷ್ಯಮನೊಡ್ಡಿಯುಂ ಆಯದ ನೀರೊಳಗೆ ತನ್ನನಡಸಿದ ನೆಗಟಿಂ ಬಾಯಟಿವಿನಂ ಇಸಿಸಿಯುಂ ಅರೆ ಹೋಯಜ ಬಾಪ್ಪೆಂದು ಹರಿಗನಂ ಗುರು ಪೊಗೞ್: **ಪಂಪಭಾ,** ೨. ೬೦)

**ಇಸು** – ಬಾಣಪ್ರಯೋಗ ಮಾಡು (ಒರ್ವರಿಂ ಒರ್ವರೆ ಮಿಕ್ಕು ಪಾರ್ದು ಸಾರ್ದು ಇಸೆ ತುಱುಗಾಱಿರ್ ಅಂದು ಇನಿಸು ಬಳ್ವಳನಾದುದು ಅದೊಂದು ಕಾಳಗಂ: **ಪಂಪಭಾ,** ೮. ೯೩)

**ಇಸುವೆಸ** – ಊಳಿಗ, ಸೇವಕವೃತ್ತಿ (ಇಂತು ಪೆಱವುಂ ಇಸುವೆಸಂಗಳನವರ್ಗೆ ತಕ್ಕುವಂ ತಕ್ಕಂದದಿಂ ಪೇೞ್ದಾಗಳ್: **ಆದಿಪು,** ೭. ೨೧ ವ)

**ಇಹ** – ಈ ಲೋಕ (ಕೃತಘ್ನರಾದಂದು ನಮಗಿಹಂಪರಂ ಉಂಟೇ: **ಸುಕುಮಾಚ,** ೨. ೬೭)

**ಇಹತ್ರೆ** – ಇಹಲೋಕ, ಈ ಲೋಕ (ಮಗನೆನಿಪಂಗೆ ಮಾತೃಪಿತೃಭಕ್ತಿಯೆ ಕೃತ್ಯಂ ಇಹತ್ರೆಗಂ ಪರತ್ರೆಗಂ: **ಪಂಪರಾ,** ೬. ೧೧೨)

**ಇಳಾಕಾಂತೆ** – ಭೂಮಿಯೆಂಬ ಹೆಣ್ಣು (ಇಳಾಕಾಂತೆಗೆ ಆವಂತಿ ವಿಷಯಂ ಆಸ್ಯದವೊಲ್ ಶೋಭಾಕರಮಾಯ್ತು: **ಯಶೋಧಚ,** ೨. ೧)

**ಇಳಾಚಕ್ರ** – ಭೂಮಂಡಲ (ನಿಚ್ಚಂ ಪೊಗಟಿಸಿದಂ ಇಳಾಚಕ್ರದಿಂ ಶಕ್ರಲೀಲಂ: **ಚಂದ್ರಪ್ರಪು,** ೨. ೭೧)

**ಇಳಾತಳ** – ಇಳಾಗ್ರ (ಭವಂ ಭವನ ಗೋತ್ರದಿಂದ ಅಜಂ ಅಜಾಂಡದಿಂ ಭಾನು ಭಾನುವೀಧಿಯಿಂ ಇಳಾತಳಂ ತಳದಿನೆಯ್ದೆ ಕಿಟ್ಟೆಟ್ಟು: **ಪಂಪಭಾ,** ೧೧. ೧೩೩)

**ಇಳಾಧಿನಾಥ** – ರಾಜ (ಪಟ್ಟಂಗಟ್ಟಿದ ಇಳಾಧಿನಾಥರೆ ಪಯಿಂಛಾಸಿರ್ವರ್ ಒಳ್ಳಾನೆಗಳ್ ಪಟ್ಟಂಗಟ್ಟಿದುವು ಒಂದು ಲಕ್ಕ ತುರಗಂ ಪತ್ತೆಂಟು ಲಕ್ಕಂ: **ಪಂಪಭಾ,** ೧೦. ೧೧೭)

**ಇಳಾಧ್ರ** – ಬೆಟ್ಟ (ಇದು ಹೇಮದಿಳಾಧ್ರದ ಶಿಖರದಿನಿೞಿದು ಜಿನಾಂಗಸಂಗದಿಂದಾ ಗಂಗಾನದಿ ಪಾವನಂ ಅಘಹರಂ ಅಪ್ಪುದು: **ಶಾಂತೀಶ್ವಪು,** ೧೫. ೯೩)

**ಇಳಾಭಾರಕ್ಷಮ** – ಭೂಮಿಯ ಭಾರವನ್ನು ಹೊರುವ ಸಾಮರ್ಥ್ಯವುಳ್ಳ (ಪ್ರವಿಮಲಸದ್ಗೀರ್ವಾಣದಾತವ್ಯ ಸಾಯಕ ಸಂಪೂರ್ಣ ಕಳಾಪ್ರವೀಣನಂ ಇಳಾಭಾರಕ್ಷಮ ಅಕ್ಷೂಣನಂ .. .. ಸರ್ವಲಕ್ಷಣಸಂಪೂರ್ಣಂ ಅಪ್ಪ ಮಗನಂ ಅಮೋಘಂ ಪಡೆವೆಂ: **ಪಂಪಭಾ,** ೧. ೧೩೪ ಮತ್ತು ೧೩೪ ವ)

**ಇಳಾಚಕ್ರಭಾರಾವಹ** – ಭೂಭಾರವನ್ನು ಹೊತ್ತುದು, ಆದಿಶೇಷ (ನಿಜನೇತ್ರಂ ಲೋಕನೇತ್ರಂ ನಿಜಭರಣಂ ಇಳಾಚಕ್ರಭಾರಾವಹಂ ಮೇಣ್ ನಿಜವಾಹಂ ಧರ್ಮಗೇಹಂ: **ರಾಜಶೇವಿ,** ೧. ೨)

**ಇಳಾಭೃತ್ಸುತ** – ರಾಜನ ಮಗ (ಮೆೞೆದಂ ಇಳಾಭೃತ್ಸುತಂ ಪಟ್ಟಬದ್ಧಂ: **ರಾಜಶೇವಿ,** ೪. ೧೧೯)

**ಇಳಾಮರ** – ಬ್ರಾಹ್ಮಣ (ಎನೆಯೆನೆ ರತ್ನರಶ್ಮಿಜಟಿಳಂ ಮಕುಟಂ ಮಣಿಕುಂಡಳಂ ಕನತ್ ಕನಕ ಪಿಶಂಗ ದೇಹರುಚಿ.. .. ಇಳಾಮರಂ ಅಂದು ಅಮರೇಂದ್ರರೂಪಮಂ: **ಪಂಪಭಾ,** ೮. ೭)

**ಇಳಾಲತಾಂಗಿ** – ಭೂಮಿ ಎಂಬ ಹೆಣ್ಣು (ಎನಗೆ ಎಕ್ಕಬಾಗೆ ನೋಡೀಗಳ್ ಈ ಇಳಾಲತಾಂಗಿ ಪುದುವಲ್ಲಳ್ ಅದೆಂತೆನೆ ಮುನ್ನ ನೂಲ ತೋಡಾಗದೆ ಕೆಟ್ಟು ಪೋದವರಂ ಇಂ ಮಗುಟ್ಟುಂ ನಿಱಿಪಂತು ಬೆಳ್ಳನೇ: **ಪಂಪಭಾ,** ೯. ೪೬)

**ಇಳಾವಂದ್ಯ** – ಲೋಕದ ಗೌರವಕ್ಕೆ ಪಾತ್ರನಾದವನು (ಹಂಸಗ್ರೀವನಿಹಿತ ಏಕಪಾದಂ ಇಳಾವಂದ್ಯಂ ಅನಿಂದ್ಯಂ ಅಬ್ಜಗರ್ಭಂ ಬಂದಂ: **ಪಂಪಭಾ,** ೧೨. ೧೩೮)

**ಇಳಾವಲ್ಲಭ** – ಇಳಾಧಿಪ (ಆ ವಿವಿಧ ಕಳಕಳಿಕ್ಕೆ ವನಾವಳಿಯಿಂ ಪಾಱೆ ಮೊೞೆವ ಮಧುಪಶ್ರೇಣೀರಾವದ ಘೋಷಣೆ ಕಳೆದುದು ಇಳಾವಲ್ಲಭಸುತನ ಪಡೆಯ ಮಥನಶ್ರೀಯಂ: **ಶಾಂತಿಪು,** ೮. ೬)

**ಇಳಿಂಕೆ** – ಅವಜ್ಞೆ (ರಾಘವಂ ಪೋಗೆ ಕಣ್ಣಂ ಬಗೆಗಂ ಇಳಿಂಕೆಯಧತ್ತು ಆ ಸಭಾಚಕ್ರಪಾಲಂ: **ಪಂಪರಾ,** ೬. ೧೫೬)

**ಇಳಿಂಕೆಗೆಯ್** – ತಾತ್ಸಾರದಿಂದ ನೋಡು (ಆ ಮೃಗಾಂಕನ ಉಜ್ವಳಮಂ ಇಳಿಕೆಂಗೆಯ್ದು: **ರಾಜಶೇವಿ,** ೧೩. ೬೦)

**ಇಳಿಂಕೆಗೊಳ್** – ಕಡೆಗಣಿಸು, ಅಪಹಾಸಗೈ ಗುರುವೃದ್ಧರ ಪೇೞ್ದ ಹಿತೋಪದೇಶಮಂ ಮನದೊಳ್ ಇಳಿಂಕೆಗೊಂಡು: **ಗದಾಯು,** ೫. ೪೦)

**ಇಳಿಕೆ** – ತಿರಸ್ಕಾರ, ಅವಜ್ಞೆ (ರಾಘವಂ ಪೋಗೆ ಕಣ್ಣಂ ಬಗೆಗಂ ಇಳಿಕೆಯಾದತ್ತೂ ಆ ಸಭಾಚಕ್ರವಾಲಂ: **ಪಂಪರಾ,** ೬. ೧೫೬)

**ಇಳಿಕೆಯ್**– ತಾತ್ಸಾರದಿಂದ ನೋಡು (ಕರಿದಾದೊಡೆ ಕತ್ತುರಿಯಂ ಮುರುಡಾದೊಡೆ ಮಲಯಜಂಗಳಂ ಕೊಂಕಿದೊಡೆ ಏಂ ಸ್ಮರಚಾಮಂ ಇಳಿಕೆಯ್ವರೇ: **ಯಶೋಧಚ,** ೨. ೪೨)

**ಇಳಿಕೆವಡೆ** – ಉಪೇಕ್ಷೆಗೊಳಗಾಗು (ಸಿಂಗದ ಮುಪ್ಪುಂ ನೆಗೞ್ದೀ ಗಾಂಗೇಯರ ಮುಪ್ಪುಂ ಇಳಿಕೆವಡೆಗುಮೇ ವನಮಾತಂಗಂಗಳಿಂ ಅಸುಹೃತ್ ಚತುರಂಗಬಲಂಗಳಿಂ ಅದೆಂತುಮಂಗಾಧಿಪತೀ: **ಪಂಪಭಾ,** ೧೦. ೧೯)

**ಇಳಿಗಾಱ** – ತಿರಸ್ಕರಿಸುವವನು (ಇೞಿಗಾಱರ ಪರಪಿದ ಮಾತುಂ ಪುರಾಣಮಕ್ಕೆ ಎಮಗೇನೋ: **ನೇಮಿನಾಪು,** ೧. ೨೯)

**ಇಳಿದು** – ಕೀಳಾದ, ಕ್ಷೀಣವಾದ (ಬೇವಂ ಮೆಚ್ಚಿದ ಕಾಗೆಗೆ ಮಾವು ಇಳಿದಪ್ಪಂತೆ: **ಯಶೋಧಚ,** ೨. ೪೫)

**ಇಳಿದಾಗು** – ಕ್ಷೀಣವಾಗು (ಬಿಗುರ್ವಣೆ ರಘೂದ್ವಹ ಸನ್ನಿಧಿಯಿಂದ ಅದೃಶ್ಯಮಪ್ಪುದುಂ ಇಳಿದಾಯ್ತು ಚಾಪಲತೆ: **ಪಂಪರಾ,** ೫. ೮೬)

**ಇಳಿಪು** – ಕೆಳಕ್ಕೆ ತರು, ಇಳಿಸು, ಕೀಳುಗಳೆ (ಬೆಳ್ಳಿಯ ಬೆಟ್ಟಂಗಳಂ ಇಳಿಪ ಜೈನನಿಳಯಂಗಳಂ ಈ ಸೃಷ್ಟಿಯೊಳೆ ಕೂಡೆ ಮಾಡಿದ ರಟ್ಟಂ ಶಂಖಾವನೀಶನೆನೆ ಪೊಗೞದರಾರ್: **ಸಮಯಪ,** ೧. ૩೭)

**ಇಳಿಲೆ** – ಸುಂದರಿ (ಸುರದಂಪತಿಗಳ ಪೋಲ್ವೆಯನೊಪ್ಪಿದುವು ಇಳಿಲೆಯ ಪದಯುಗನಖದಾಕೃತಿಗಳ್: **ಸುಕುಮಾಚ,** ೫. ೫೦ ರಗಳೆ)

**ಇಳಿಸಿ ನುಡಿ** – ಅವಗಣಿಸಿ ಮಾತಾಡು (ಮರುಳೇ ಗಾಂಡಿವಿ ಯಾರೆಂದು ಇಳಿಸಿ ನುಡಿವೈ ಗಂಧರ್ವರುಯ್ವಂದು ನಿನ್ನಂ ಕರುವಿಟ್ಟಂತಿರ್ದುದಿಲ್ಲಾ ನೆರದ ಕುರುಬಲಂ ತಂದವಂ ಪಾರ್ಥನಲ್ಲಾ: **ಪಂಪಭಾ,** ೯. ೫೫)

**ಇಳಿಸು** – ಕೀಳುಗೈ (ಮದನನ ಬಿಲ್ಲೊಳಮಾತನ ಸುದತಿಯ ಬೀಣೆಯೊಳಮೆಸೆವ ದನಿಯುಮಂ ಇೞಿತ್ತಿದು ದಲ್: **ಆದಿಪು,** ೯. ೧೫); ಕಡೆಗಣಿಸು (ಇಳಿಸಲಕ್ಕುಮೇ ಗಾಂಡಿವಿಯಂ ಸುಯೋಧನಾ: **ಗದಾಯು,** ೨. ૩೭)

**ಇಳೆ** – ಭೂಮಿ, ಮಾತು (ಇಳೆಯಕ್ಕುಂ ಪೃಥ್ವಿಯುಂ ವಾಣಿಯುಂ: **ಅಭಿಧಾವ,** ૩. ೧. ೯೪)

**ಇಱಿ** – ತಿವಿ, ಚುಚ್ಚು (ಇಱಿ–ಘಾತನೇ: **ಶಬ್ದಮದ,** ಧಾ ೮૩೮); ಯುದ್ಧ ಮಾಡು (ಅರ್ಕುಡುಕೆಯ್ದು ಪಾಂಡವರೊಳ್ ಆಂತು ಇಱಿಯಲ್ ನೆಱೆವನ್ನರ್ ಇಂತಿದೇತರ್ಕೆ ಬಿಗುರ್ತಪ್ಪೈ: **ಪಂಪಭಾ,** ೯. ೫೦); ಸಡಿಲವಾಗು (ಇಱಿವ ಪಿಣಿಲ್ ತೆರಳ್ದೊೞೆದ ಕಣ್ಬನಿ ಮಾಣದೆ ಮೋದೆ ಶೋಕದಚ್ಚಿಱಿವೊಲಿರ್ದ ಬಾಸುಟಿನೊಳ್ ಅಟ್ಟು ಕನಲ್ದು ಬಟಿಲ್ದು ಜೋಲ್ದ ಮೆಯ್: **ಪಂಪಭಾ,** ೧೪. ೫); ನೀರಿಗೆ ಹಾರು (ಅಂತು ತನ್ನ ಒರೆಗಳ್ವೆರಸು ದುಡುಮ್ಮಿಱಿದು ಓಲಾಡುವ್ಲಿ: **ಶಾಂತಿಪು,** ೮. ೨೮ ವ)

**ಇಱಿಕುಳಿ** – ಕೊಂಬುಳ್ಳ ಪ್ರಾಣಿ (ಕುಳಿ ಪ್ರತ್ಯಯಕ್ಕೆ: ಪೆಂಕುಳಿ, ಇಱುಕುಳಿ, ಅಯ್ಕುಳಿ: **ಶಬ್ದಮದ,** ೨೧೪, ಪ್ರ)

**ಇಱಿಮುಱಿ** – ಚೂರು ಚೂರು (ಕನ್ನೆಯಾದೊಳ್ ಆ ದೆಸೆಯೊಳ್ ಇಱಿಮುಱಿಯಾಗಿ ಕಡೆದುಪಟ್ಟ ರೂಪಾವುದೆನಲ್: **ಹರಿವಂಶ,** ೧೧. ೧೨ ವ)

**ಇಱಿವಿಟ್ಟಿ** – ಸೋತ ರಾಜನು ಗೆದ್ದವನಿಗೆ ಮಾಡಬೇಕಾದ ಬಿಟ್ಟಿಯ ಕೆಲಸ, ಅವನ ಸಹಾಯಕ್ಕೆ ಬಂದು ಹೋರಾಡುವುದು (ಭೂಪೋತ್ತಮನಾಜ್ಞೆಯಂ ತಲೆಯೊಳಾಂತು ಪದಾನತನಾಗಿ ಕಪ್ಪಮಂ ತೆತ್ತು ಉೞಿ, ಗಂಡುಗೆಯ್ಯದೆ ಇಱಿವಿಟ್ಟಿಗೆ ಜಟ್ಟಿಗನಾಗಿ ಬಾೞ್ವುದು ಅತ್ಯುತ್ತಮ ಪಕ್ಷಂ: **ಪಂಪರಾ,** ೮. ೨೬)

**ಇಱಿಸಿಲ್** – ಮೃಗಗಳನ್ನು ಕೆಡಹುವ ಗುಳಿ, ಖೆಡ್ಡ (ಇಱಿಸಿಲೆಂದು ಮಿಗಮಂ ಕೆಡಪುವ ಗುೞಿ: **ಶಬ್ದಮದ,** ಪ್ರಸಾ ೨೫); ಮನೆಯ ಇಳಿಜಾರು ಛಾವಣಿ (ತಳಿರ್ಗಳ ಓವರಿಗಳೆ ಕೆಂದಳಿರ್ಗಳ ಪೊಳೆವ ಇಱಿಸಿಲ್ಗಳೆ ವಿಳಾಸಮಂ ಮೆಱೆದರ್: **ಆದಿಪು,** ೧೧. ೭೯)

**ಇಱುಂಕು** – ಅದುಮಿ ಹಿಡಿ, ಹಿಸುಕು (ಅಗ್ಗದ ನಿಡುಗೋಡು ಮೇಡುವಂ ಅಮರುತ್ತುಂ ಇಱುಂಕಿದ ಕೆಚ್ಚಲ್ ಎತ್ತಮೆತ್ತಿದ ಕುಡಿವಾಲಂ ಅಂದೆಸೆಯೆ ಕರ್ಬಸುಗಳ್ ಪರಿಗೊಂಡುವಾಜಿಯೊಳ್: **ಪಂಪಭಾ,** ೮. ೧೦೪)

**ಇಱುಂಪೆ** – ಇರುವೆ ಅಲ್ಲಲ್ಲಿಗೆ ತೇೞಿಸೋಳಿಗಳ್ .. .. ಅಲ್ಲಲ್ಲಿಗೆ ಇಱುಂಪೆಯ ತೊಂಡಲ್: **ಧರ್ಮಾಮೃ,** ೩. ೪೪)

**ಇಱುಂಬು** – ಇರುಕಲು, ಇಕ್ಕಟ್ಟು, ಸಂದಿ (ವಿವಿಧದ್ರುಮೋತ್ಕರದಿಱುಂಬಿನೊಳ್ ಇಂಬೆನೆ ನಿಂದು ನಿಂದು ತೀಡಿದುದು ಅಘಹಾರಣಂ ಪಥಪರಿಶ್ರಮಾರಣಂ ಆ ಸಮೀರಣಂ: **ಪಂಚತಂತ್ರ,** ೧೯೦); ಗುಂಪು, ದಟ್ಟಣೆ (ಅಶೋಕಲತೆಯ ವಿಳಾಸಗೃಹಂಗಳೊಳಂ ನವಮಾಲಿಕಾ ಲತೆಯ ಇಱುಂಬುಗಳೊಳಂ: **ಆದಿಪು,** ೪. ೯೨ ವ)

**ಇಱುಪೆ** – ಇರುವೆ (ರಿಸಿಯರ್ ಒಂದಿ ಇಱುಪೆಗಪ್ಪೊಡಂ ಪೊಲ್ಲದಂ ಬಗೆಯದವರ್ ಎನಗೆ ಅಹಿತಮಂ ಬಗೆವರೆ: **ವಡ್ಡಾರಾ,** ಪು. ೧೭೬, ಸಾ. ೨೫)

**ಇೞಿ** – ಕೆಳಕ್ಕೆ ಬರು (ರಥದಿಂದಮಿೞಿದು ಮಣಿಮಯ ಪೀಠದೊಳ್ ಕುಳ್ಳಿರ್ದು: **ಪಂಪಭಾ,** ೯. ೨೭ ವ); ಸೋರು; ಜೋಲು ಬೀಳು ; ಕೃಶವಾಗು (ಎರಡರ್ಥಕ್ಕೆ: ಇೞಿದನೆಂದು ಮೆಯ್ಗುಂದಿದನುಂ ಕೆೞಗಣ್ವೆ ವಂದನುಂ ಅಕ್ಕುಂ: **ಶಬ್ದಮದ,** ೩೩ ವೃತ್ತಿ)

**ಇೞಿಕೆ** – ಕೀಳು (ರಾಘವಂ ಪೋಗೆ ಕಣ್ಗಂ ಬಗೆಗಂ ಇೞಿಕೆಯಾದತ್ತಾ ಸಭಾ ಚಕ್ರವಾಲಂ: **ಪಂಪರಾ,** ೬. ೧೫೬)

**ಇೞಿಕೆಯ್** – ಕೀಳುಮಾಡು (ಸಂಸಾರಸಮುದ್ರಮಂ ತೃಣಪಯಃಕಣದಿಂ ಇೞಿಕೆಯ್ದು .. .. ಶ್ರುತಪಯೋಧಿಯಂ ಈಸಿದ ವರ್ಧಮಾನ ಭಟ್ಟಾರಕರಂ .. .. ಅರ್ಚಿಪೆಂ: **ಪಂಪರಾ,** ೧. ೧೪)

**ಇೞಿದು** – ಸಾಮಾನ್ಯ (ಸ್ತ್ರೀರತ್ನಂ ಭುವನತ್ರಯಸಾರಮಲ್ಲದೊಡೆ ನಿನ್ನಂ ಒಲಿಸುವುದು ಇೞಿದೇ: **ಲೀಲಾವತಿ,** ೫. ೭)

**ಇೞಿದುಮಾಡು** – ಕೀಳು ಮಾಡು (ಪದ್ಮಸಂಭವನ ಸೃಷ್ಟಿಯಂ ಇೞಿದುಮಾಡುವಂತೆಯುಂ ಅನಂತಶೋಭಾನಿಲಯಮಾಗಿ: **ಲೀಲಾವತಿ,** ೧೨. ೮ ವ)

**ಇೞಿಪು** – ಕೆಳಕ್ಕೆ ತಂದಿರಿಸು (ಬಲದೇವ ವಾಸುದೇವರನಿೞಿಪುದು .. .. ಮಲ್ಲಪನ ಪೊನ್ನಮಯ್ಯನ ಚರಿತಂ: **ಅಜಿತಪು,** ೧. ೩೩); ಕಳೆದುಕೊಳ್ಳು (ಮಹಾಬಳ ಖಚರೇಂದ್ರಂ ಪ್ರಾಯೋಪಗಮನ ವಿಧಿಯಿಂದಮಾತ್ಮೀಯ ಶರೀರಭಾರಮನಿೞಿಪೆ: **ಆದಿಪು,** ೨.೬೧ ವ)

**ಇೞಿಯುಂಬೊೞ್ತು** – ಇಳಿಹೊತ್ತು, ಸಾಯಂಕಾಲ (ಬಹುಳ ಗ್ರಹಣದಿಕಾರಾಂತದ ಪದದೊಳ್ ಉಕಾರಂ ಬರೆ ಬಿಂದುವಕ್ಕುಂ: ಸಿಡಿಯುಂದಲೆ, ಇೞಿಯುಂಬೊೞ್ತು: **ಶಬ್ದಮದ,** ೧೮೧. ಪ್ರ)

**ಇೞಿವಿೞಿ** – ಕೇಡು (ಆಯಿಲದ ಅಳುಪಿನ ಇೞಿವಿೞಿಯುಂ ಕುತ್ತದ ಮಱುಕದ ಚಿತ್ತವೃತ್ತಿಯುಂ ಅಪಮೃತ್ಯುವಿನ ಸತ್ವಭಾಧೆಯ ಗಂಧಾಗಂಧಮುಂ ಇಲ್ಲ: **ಶಾಂತಿಪು,** ೬. ೧೦೨ ವ)

**ಇೞಿವು** – ಇಳಿಯುವಿಕೆ (ಗೞಗೞ ಸುರಿವಶ್ರುವ ಕೊರಲ್ ಇೞಿವಿಗಂ ಅಗಿಮಟ್ಟಿದಟ್ಟ ಮೊೞಗಿಂಗಂ: **ಶಾಂತಿಪು,** ೬. ೮೯)

**ಇೞಿವೊಲ** – ಇಳಿಜಾರು ಭೂಮಿ (ಇೞಿವೊಲದ ನೀರಂತೆ ಕುಪಥಕ್ಕೆಱಗದೆ: **ಧರ್ಮಾಮೃ,** ೫. ೬೪ ವ)

**ಇೞಿವೋಗು** – ಇಳಿದುಹೋಗು, ಹರಿದು ಹೋಗು (ಕೞಿಯೇೞ್ ಪೆತ್ತ ಇಭವೈರಿಯಂ ಎೞಿಕೆ ಶಿರಂ ಮಾಟ್ಟವೋಲ್ ಅವಂ ಮುಳಿಯಿಸೆ ಕೆಯ್ಗೞಿಯೆ ಮುನಿಪತಿಯ ಕಣ್ಗಳೊಳ್ ಇೞಿವೋದುವು ತೀವಿ ಕೋಪರಸದ ಪೊನಲ್ಗಳ್: **ಶಾಂತಿಪು,** ೭. ೬೧)

**ಇೞಿಸು** – ಕುಗ್ಗಿಸು (ಜಸಕ್ಕೆ ಅಡರ್ಪು ಅಪ್ಪನ್ನೆಗಂ ಸಂದನೀ ಜಗದೊಳ್ ಬದ್ದೆಗಂ ಅನ್ನಂ ಆವಂ ಇೞಿಕುಂ ಭ್ರೂಕೋಟಿಯಿಂ ಕೋಟಿಯಿಂ: **ಪಂಪಭಾ,** ೧. ೨೭)

**ಇೞ್ಕುೞ್** – ಇಕ್ಕುಳ (ಉನ್ನತ ಮಸ್ತಕಸ್ಥಳದೊಳ್ ಅಂಬುಗಳ್ ಅೞ್ದುಡಿದಿರ್ದೊಡಂ ಅತ್ತಮಿತ್ತನೞ್ತಂದು ಬಲ್ದಡಿಗರ್ ಇೞ್ಕುೞಿನೊಳ್ ಕಿೞ್ ನೊಂದೆಂ ಎನ್ನದೆ: **ಪಂಪಭಾ,** ೧೧. ೩); ಬಿಕ್ಕಳಿಕೆ

**ಇೞ್ಕುೞಿಗೊಳ್**– ಸೆಳೆದುಕೊ, ಆಕರ್ಷಿಸು (ಅೞ್ಕಱಿಂ ಈಯೆ ಸಂಬಳಂಗೊಳ್ವವೊಲ್ ಆ ತಳೋದರಿಯ ಚಿತ್ತಮಂ ಇೞ್ಕುೞಿಗೊಂಡಂ ಅರ್ಜುನಂ: **ಪಂಪಭಾ,** ೭. ೬೮)

**ಇೞ್ಟಿ** – ಸುಲಿಗೆ, ಲೂಟಿ (ಹುಸಿ ಹೋಗದು ಬೆಳಸು ಬಱಂ ಪಸವು ಇೞ್ಟಿಗಳಿಂದಂ ಇಷ್ಟನಯದಿಂ ಪ್ರತಿಪಾಲಿಸುವರ್ ಮಹೀಭುಜರ್: **ವರ್ಧಮಾಪು,** ೧೪. ೧)

**ಇೞ್ದುವರಿ** – ಎಳೆದುಕೊಂಡು ಹೋಗು (ಕನ್ನೆತನಂಗೆಯ್ಯಲ್ ಬಗೆಗುಂ ನಾಣ್ ಮಿಗೆ ಮನಮುಂ ಇೞ್ದುವರಿಯಲ್ ಬಗೆಗುಂ ಕನ್ನಡಿಕುಂ ತನ್ನಳಿಪಂ ತನ್ನಲೆ ತಾನಿಂತು ಕನ್ನೆ ತಳವೆಳಗಾದರ್: **ಪಂಪಭಾ** ಪರಿಷತ್ತು: ೪. ೫೫)

**ಇೞ್ದಿ** – ಸುಲಿಗೆ, ಲೂಟಿ (ಕಳ್ಳರಾಯಿಲಮಱೆಯೇಱು ಮಾರಿ ಪಸವು ಇೞ್ದಿ ಬಱಂ ಪೆಱವುಂ ಭಯಂಗಳಾಕುಲಿತೆಗಳಿಲ್ಲ: **ಆದಿಪು,** ೧. ೫೨)

## ಈ

**ಈ** – ಕೊಡು (ಈ–ಪ್ರದಾನೇ: **ಶಬ್ದಮದ,** ಧಾ ೧); ದಾನಮಾಡು (ಪೆಣನಂ ಎತ್ತಲ್ ಸಲ್ಲೆಂದು ಆಪತ್ತುವಡಿಸಿ ಪುತ್ರನಂ ಈ

ಪೊನ್ನಂ ಸಂಗತಿಗುಡುವೆವೆಂಬರ್ ತಕ್ಕರ್: **ಸಮಯಪ,** ೧೪. ೧೫೫); ಎಡೆಗೊಡು (ಮಣಿಮಾಲಿಯಲ್ಲದೆ ಉೞಿದಾರುಮಂ ಸಾರಲ್ ಈಯದೆ ಭಂಡಾರಮಮಂ ಕಾದುಕೊಂಡಿರ್ಪುದುಂ: **ಆದಿಪು,** ೨. ೧೫ ವ)

**ಈಂಟಿಸು** – ಕುಡಿಸು (ಕಿವಿಯಿಂದೀಂಟಿಸುವರ್ ಸಮಸ್ತರಸಮಂ: **ಲೀಲಾವತಿ,** ೧. ೧೨)

**ಈಂಟು** – ಕುಡಿ, ಪಾನಗೈ (ನೀಳಪಾಟಳ ಜಂಬೂಫಳ ಮಧುರರಸಮಂ ಈಂಟಿದೆಂ ಇಳೇಶ ಪಿರಿದಟ್ಟೆಯಿಂ ಮನಂ ತಣಿವಿನೆಗಂ: **ಕಾದಂಸಂ,** ೧. ೩೧)

**ಈಂಟುಜಳಧಿ** – ಕುಡಿನೀರಿನ ಸಾಗರ (ಈಂಟುಜಳಧಿಯೆನಿಪ ಅಗಟಿ ನೀಳ್ಪಿನಿಂ ನೆಗದು ಸೊಗಯಿಸುವ ಕೋಂಟೆಯೊಳ್ಪಿನಿಂ: **ಪಂಪಭಾ,** ೩. ೨೨)

**ಈಂದನಿ** – ಇನಿದನಿ (ಈಂದನಿಯಿಂದೆ ದೇವಗಣಿಕಾತತಿಯಾತನ ಗೀತಮಂ ನಿಜಾನಂದದೆ ಪಾಡೆ: **ಚಂದ್ರಪ್ರಪು,** ೧೧. ೮೬)

**ಈಂದೋಳ್** – ಸುಂದರವಾದ ತೋಳು (ಬಹುಳದಿಂ ವ್ಯಂಜನಪರಮಾದಲ್ಲಿಯುಂ ಆದಿ ದೀರ್ಘಮಾಯ್ತು: ಈಂಚರಂ, ಈಂಬುಳಿ, ಈಂಗಡಲ್, ಈಂದುಟಿ, ಈಂದೋಳ್: **ಶಬ್ದಮದ,** ೧೯೧, ಪ್ರ)

**ಈಕ್ಷಣ** – ಕಣ್ಣು (ಅಲಂಪುಗಳ್ ಕನಸಿನೊಳಂ ಪಳಂಚಲೆವುದೆನ್ನೆರ್ದೆಯೊಳ್ ತರಳಾಯತೇಕ್ಷಣೇ: **ಪಂಪಭಾ,** ೪. ೧೦೬); ನೋಟ (ಆ ಪೀನಕುಚಂಗಳ್ ಆಕ್ಷಣದೊಳ್ ಈಕ್ಷಣಮಮಂ ಸೆಱೆಗೆಯ್ಯೆ: **ಪಂಪರಾ,** ೭. ೧೦೯)

**ಈಕ್ಷಣಭದ್ರ** – ನೋಡಲು ಶುಭಪ್ರದವಾದ ಧಾತಕೀಷಂಡಂ ಈಕ್ಷಣಭದ್ರಂ: **ಚಂದ್ರಪ್ರಪು,** ೧. ೭೨)

**ಈಕ್ಷಣಹರ** – ಕಣ್ಸೆಳೆಯುವ (ದಕ್ಷಿಣಕಟಮೆನೆ ಸಿವುಱುವ ದಕ್ಷಿಣರದನದೊಳೆ ಹಸ್ತಮಂ ಪೇಱುವ ಚೆಲ್ವು ಈಕ್ಷಣಹರಮೆನೆ: **ಆದಿಪು,** ೧೨. ೫೯)

**ಈಕ್ಷಣಾಕರ್ಷಣ** – ನೋಟವನ್ನು ಸೆಳೆಯುವ, ಆಕರ್ಷಕವಾದ (ಅಕೃತಕಚಿತ್ರಪ್ರಕಾರದಿಂ ಮೆಱೆದುದು ಈಕ್ಷಣಾಕರ್ಷಣಮಂ: **ಮಲ್ಲಿನಾಪು,** ೮. ೯೪)

**ಈಕ್ಷಿಸು** – ನೋಡು (ನಾಸಿಕಂ ಅಡ್ಡಂಬಂದಂದಮಂ ಈಕ್ಷಿಸಿ: **ಕವಿರಾಮಾ,** ೩. ೨೩೪)

**ಈಗಡು** – ಈಗ, ಈ ಸಮಯದಲ್ಲಿ (ಈಗಡಿನ ನೆಗೞ್ತೆಯ ಕಬ್ಬದೊಳ್ ಒಡಂಬಡಂ ಮಾಡಿದ್ ಪುರಾತನ ಕವಿಗಳ್: **ಕವಿರಾಮಾ,** ೧. ೩೨)

**ಈಗಡೆ** – ಈಗಲೇ (ಮಂತ್ರಾವಾಸದೊಳ್ ಮಂತ್ರನಿಶ್ಚಿತನಾಗಿ ಈಗಡೆ ಕಾದಿದಲ್ಲದೆ ಇಳೆಯಂ ನೀನೆಂತುಮಿತ್ತಪಯ್: **ಪಂಪಭಾ,** ೮. ೮೭)

**ಈಚಲ್** – ಈಚಲುಮರ (ತದೀಯ ತಟಂಗಳಲ್ಲಿ ಈಚಲ ಕಡೆಗೊಂಬುಗಳ್ ತುಱುಗಿ ಬಿರ್ದವೊಲಿರ್ದುವು .. .. ಮೊಸಳೆಗಳ್: ಕುಸುಮಾಕಾ, ೭. ೧೮)

**ಈಡಾಡು** – ಚೆಲ್ಲಾಡು, ಬಿಸಾಡು (ನಿಧಾನಮಂ ಈಡಾಡುವಂತೆ ಕೂಸಂ ಗಂಗೆಯೊಳ್ ಈಡಾಡಿ ಬಂದಳ್: **ಪಂಪಭಾ,** ೧. ೯೫); ನಿರ್ಲಕ್ಷ್ಯದಿಂದ ಕೊಟ್ಟುಬಿಡು (ಕೊಳ್ ಎಂದು ಅರಿದು ಈಡಾಡಿದಂ ಇಂದ್ರಂಗೆ ಕವಚಮಂ ರಾಧೇಯಂ: **ಪಂಪಭಾ,** ೧. ೧೦೧)

**ಈಡಿತ** – ಹೊಗಳಲ್ಪಟ್ಟ, ಸ್ತುತ್ಯ (ಈಡಿತ ಜಿನವರ ಶಾಸನ ಚೂಡಾಮಣಿ ಬುಧರ್ಗೆ ಅನಲ್ಪ ಕಲ್ಪಕುಜಂ ಕೆಯ್ ನೀಡಿದ ಬೇಟ್ಪರ ನೆರವಿಗೆ ನೀಡಿಲ್ಲದೆ ಕುಡುವ ಉದಾತ್ತಂ ಆ ಜಿನಚಂದ್ರಂ: **ಶಾಂತಿಪು,** ೧. ೩೨); ಸ್ತೋತ್ರ (ಈಡಿತಂ ಸಫಳಂ ವಿರಕ್ತಿ ವಿಮುಕ್ತಿಸಂಗಮಕಾರಣಂ: **ಆಚವರ್ಧ,** ೧೩. ೬)

**ಈಡಿಜೆ** – ಕೊಂಬಿನಿಂದ ತಿವಿ (ಈಡಿಜೆವ ಕಾಡಾನೆಗಳ ಕೋಡಪೊಯ್ಲಿಂದುದಿರ್ದೆತ್ತಲುಂ ಪರೆದ ಗುರುಗಂಜಿಯಂ ನೋಡಿ: **ಕಬ್ಬಿಗಕಾ,** ೧೮೧ ವ); ಕಿಕ್ಕಿರಿ (ಈಡಿಜೆ–ಶೃಂಗಸಂಕರ್ಷಣೇ: **ಶಬ್ದಮದ,** ಧಾ ೮೩೯)

**ಈಡು** – ಬಾಣದ ಗುರಿ (ಬೇಡನಂತೆ ಈಡಿಂಗೆ ವಂದು ಬಿಲ್ಲಾೞನಂತೆ ಬೆಟ್ಟೇಱಿಂಗೆ ವಂದು: **ಧರ್ಮಾಮೃ,** ೩. ೪೬ ವ); ಎಸೆತ (ದೀರ್ಘಕ್ಕೆ: ಇಡು–ಈಡು, ಬಿಡು–ಬೀಡು, ತುಡು–ತೋಡು: **ಶಬ್ದಮದ,** ೨೨೪ ಪ್ರ)

**ಈದಲೆ** – ಇತ್ತ, ಈ ಕಡೆ (ಆದಲೆ ನೀರ್ ಗುಂಡಿತ್ತು ಎಂದು ಈದಲೆಯೊಳೆ ನಿಂದು ಸತಿಗೆ ಹರಿಗಂ ತೋಱುತ್ತ ಆದರದೆ ಜಾನುದಘ್ನಂ ಉರೋದಘ್ನಂ ಕಂಠದಘ್ನಮೆಂಬ ಅಳವಿಗಳಂ: **ಪಂಪಭಾ,** ೫. ೫೩)

**ಈದೊರೆಯನ್** – ಇಂತಹವನು (ಈ ದೊರೆಯನೆಂದು ತೋಱಲ್ ಮೇದಿನಿಯೊಳಗೆ ಆತನಲ್ಲದೆ ಇಲ್ಲ: **ಯಶೋಧಚ,** ೨. ೩೭)

**ಈತಿ** – ತೊಂದರೆ, ಕಷ್ಟ (ಉಪಶಮಿಸುಗೆ ಸಕಲೋರ್ವಿಯೊಳ್ ಉಪದ್ರವಂ ಡಿಂಬಂ ಅನಯಂ ಉಪಲಿಂಗಂ ಮಿಕ್ಕ ಉಪಸರ್ಗಂ ಅರಿಷ್ಟಂ ದುಷ್ಟಪೀಡೆ ಡಾಮರಂ ಅಜನ್ಯಂ ಈತಿಪ್ರಕರಂ: **ಅಭಿಧಾವ,** ಕಾಂ. ಸ. ೧)

**ಈನ್** – ಕರು ಹಾಕು (ಇಳೆ ಈಂದುದೆನಲ್ ಪುಳಿಂದರ್ ಎಮ್ಮೀ ವಿಷಯಕ್ಕೆ ದಾಟಿಯಿಡಲ್ ಉಜ್ಜುಗದಿಂದಿರೆ ಮಿಕ್ಕ ಸೊರ್ಕಿನಿಂ: **ಪುಷ್ಪದಂಪು,** ೩. ೧೨೬); ಹೆರು (ಶರಸಂಧಾನದ ಬೇಗಂ ಅಂಬುಗಳಂ ಅಂಬು ಈಂಬಂತೆ ಮೇಣಂಬಿನಾಗರಮೆಂಬೆತೆನೆ ಪಾಯ್ದ ಅರಾತಿಶರಸಂಘಾತಂಗಳಂ ನುರ್ಗಿ: **ಪಂಪಭಾ,** ೧೧. ೪೦)

**ಈಪೊಟ್ಟು** – ಈ ಹೊತ್ತು, ಇಂದು (ಪ್ರತಿಜ್ಞೆಯಂ ನೆರಪಿದೆ ಒಳ್ಳಿತ್ತಾಯ್ತು ಈ ಪೊಟ್ಟು ಪೊಲ್ಲದು: **ವಡ್ಡಾರಾ,** ಪು. ೧೬. ಪು. ೨೦)

**ಈಪೊಟ್ಟಱ್** – ಈ ಹೊತ್ತು (ನಿನಗೀ ಪೊಟ್ಟಱೊಳ್ ಇತ್ತ ಬರ್ಪದಟನಿಂತಾರಿತ್ತರ್: **ಪಂಪಭಾ,** ೩. ೩೪)

**ಈಪ್ಸಿತಾರ್ಥ** – ಬಯಸಿದ; ಬಯಕೆ (ನೃಪಂ ವನಜಳಕೇಳಿ ನಿಮಿತ್ತದಿಂ ಅರ್ಥಿಗೆ ಈಪ್ಸಿತಾರ್ಥಮನಿತ್ತಂ: **ಚಂದ್ರಪ್ರಪು,** ೭. ೧೫೨)

**ಈಮಿಷ** – (ನವಭಾವರಸಂಗಳಂ ತಟಂಕಷಮೆನೆ ತೋಱೆ ತದ್ರುಚಿಯ ಮೆಯ್ಯೊಳೆ ಸದ್ರುಚಿಯೊಳ್ ತೊಡರ್ಚುವ ಈಮಿಷದ ಕವೀಂದ್ರರ್: **ಪುಷ್ಪದಂಪು,** ೧. ೩೪)

**ಈರಣ** – ಬೀಸುವಿಕೆ (ಮಲಯಸಮೀರಣ ಈರಣಚಲತ್ತರುಶಾಖೆಗಳೊರ್ಮೆಗೊರ್ಮೆಗೆ ನೀರೊಳಗೆ ಬಟಲ್ದು: **ಆದಿಪು,** ೧೧. ೬೭)

**ಈರಯ್ದು** – ಎರಡು ಬಾರಿ ಐದು, ಹತ್ತು (ಇಸೆ ಮಸಗಿ ಭೀಮಂ ಈರಯ್ದು ಶಿತಾಸ್ತ್ರದಿಂ ಉರುಳೆ ಸೂತಂ ಉಡಿಯೆ ರಥಂ ಕೀಲಿಸೆ ಕುದುರೆ ಮುಱಿಯೆ ಪಟವಿಗೆ ಮಸಕದಿಂ ಎಚ್ಚೆಚ್ಚಂ ಒಂದೆ ಸರಲೊಳ್ ನೊಸಲಂ: **ಪಂಪಭಾ,** ೧೦. ೯೯)

**ಈರಳ್ಳೆ** – ಎರಡು ಕಡೆಯ ಪಕ್ಕೆ (ಬಟ್ಟಿತ್ತಾದ ಬರಿಯುಂ ಒಳಪೊಕ್ಕ ಈರಳ್ಳೆಯುಂ .. .. ಬೆರಸು .. .. ಪೋಪ ಪಂದಿಯಂ ಕಂಡು: **ಲೀಲಾವತಿ,** ೬. ೧೬ ವ)

**ಈರಾಱು** – ಎರಡುಸಲ ಆರು, ಹನ್ನೆರಡು (ಆಱುಂಗುಣದೆಱೆವಟ್ಟೀರಾಱುಂ ಮಂಡಡಲದ ನಾಭಿ ಷಡ್ಬಲದ ಬಲಂ ಮೂಱುಂ ಸಿದ್ಧಿಯಂ ನೆಲೆ ನಿಲೆ: **ಶಾಂತಿಪು,** ೨. ೪೬)

**ಈರಿದು** – ಬೀಸು (ಒಯ್ಯನೆ ತಂಬೆಲರ್ ತೆಱದಿಂದ ಈರಿದುವು: **ಲೀಲಾವತಿ,** ೯. ೧೧೬)

**ಈರೆಂಟು** – ಎರಡು ಸಲ ಎಂಟು, ಹದಿನಾರು (ನರಮಾತಂಗ ತುರಂಗ ಸೈನ್ಯಂ ಇದಿರಾಂತು ಈರೆಂಟು ಲಕ್ಕಂಬರಂ ಕರಗಿತ್ತು: **ಪಂಪಭಾ,** ೧೨. ೧೩೫)

**ಈರೆಲೆವೋಗು** – ಬೀಜ ಮೊಳೆತು ಎರಡು ಎಲೆ ಬಿಡು, ಚಿಗುರು (ಈರೆಲೆವೋದ ತನುವ ಕೇಳೀರಂಭಾಕಾಂಡಂ ಎನಿಪ ನಾಸಾವಂಶಂ ಭ್ರೂರೇಖಾಶಾಖೆಗಳಿಂ ರಾರಾಜಿಪುದು: **ಆಚವರ್ಧ,** ೪. ೨೦)

**ಈರೇೞ್** – ಎರಡು ಸಲ ಏಳು, ಹದಿನಾಲ್ಕು (ಈರೇೞ್ ಮಹೀಭಾಗಮಂ ದೊರೆವೆತ್ತುತ್ತಮಭೋಗದೊಳ್ ತಣಿಪಿದಂ ಭೂಪೋತ್ತಮಂ: **ಪಂಚತಂತ್ರ,** ೨೮)

**ಈರೊಂಬದಿಂಬರ್** – ಹದಿನೆಂಟು ಮಂದಿ (ಚಂದ್ರಾಸ್ಯೆಯರಂ ಮನದೊಳು ದೇವೇಂದ್ರಂಗೆ ಈರೊಂಬದಿಂಬರಂ ನಿರ್ಜಿತ ದೇವೇಂದ್ರ ಗಣಿಕೆಯರಂ ಅಂಕದ ಚಂದ್ರಧ್ವಜನಕ್ಕಿ ಕಪ್ಪಮೀವವೊಲಿತ್ತಂ: **ಪಂಪರಾ,** ೫. ೧೦೫)

**ಈರೊಡಲ್** – ಎರಡು ದೇಹ (ತೊಟ್ಟನೆ ಪೋಪುವು ನಲ್ಲರೀರ್ವರ ಒಡಲೊಳಗಿರ್ಪ ಜೀವಂ: **ಪಂಪಭಾ,** ೪. ೧೦೪)

**ಈರ್ಮ** – ಗಾಯ, ಹುಣ್ಣು (ಈರ್ಮಂ ವ್ರಣಂ: **ಅಭಿಧಾವ,** ೧. ೧೨. ೨೭)

**ಈರ್ಯಾಗೋಚರಂ** – ನಡೆಯುವಾಗ ಪ್ರಾಣಿಗಳಿಗೆ ನೋವಾಗದಂತೆ ನೋಡಿಕೊಳ್ಳುವುದು (ಕಯ್ಯಂ ಸುರೇಶ್ವರಶೈಳಂ ತಳರ್ವಂತೆವೊಲ್ ತಳರ್ದಂ ಈರ್ಯಾಗೋಚರಂ ಶುದ್ಧಿ ತಳ್ತಿರೆ ತನ್ನೊಳ್ ಧರೆಯಂ ಪದಾಂಬುಜಂಗಳ್ ನೀರಜಂ ಮಾಳ್ಪಿನಂ: **ಆದಿಪು,** ೯. ೧೨೪)

**ಈರ್ಯಾಪತ್ತಿ** – [ಜೈನ] ನೆಲವನ್ನು ನಾಲ್ಕು ಮೊಳಗಳಷ್ಟು ಮುಂದೆ ನೋಡುತ್ತ ನಡೆಯುತ್ತ ಆಗಬಹುದಾದ ಜೀವಹಿಂಸೆಯನ್ನು ತಡೆಯುವುದು (ಕಾಲಂ ಕರ್ಚಿ ಒಳಗಂ ಪೊಕ್ಕು ಈರ್ಯಾಪತ್ತಿಯಂ ಬಿಡಿಸಿ ಗೋಚಾರನಿಯಮಂಗೆಯ್ದುದಂ: **ವಡ್ಡಾರಾ,** ಪು ೭೯, ಸಾ ೧)

**ಈರ್ಯಾಪಥಶುದ್ಧಿ** – [ಜೈನ] (ದಿಗವಲೋಕನಾದಿ ದೋಷವಿರಹಿತನುಮಪ್ಪ ಈರ್ಯಾಪಥಶುದ್ಧಿಯೊಳ್ ನೆಱೆದು ಯುಗಾಂತರದೃಷ್ಟಿಯಾಗಿ ಚರ್ಯಾಮಾರ್ಗದಿಂ: **ಅಜಿತಪು,** ೭. ೧ ವ)

**ಈರ್ಯಾಪಥೆ** – ಪರ್ಯಟಣ ಮಾರ್ಗದಲ್ಲಿದ್ದವಳು (ಈರ್ಯಾಪಥೆಯಂ ಬಿಡಿಸಿ ಕಾಲಂ ಕರ್ಚಿ ಒಳಗಂ ಪೊಕ್ಕು ದೇವರ ದೇವಂಗೆ ಅಭಿಮುಖದೊಳ್ ನಿಂದು: **ಹರಿವಂಶ,** ೧೧. ೨ ವ)

**ಈರ್ಷ್ಯೆ** – ಮತ್ಸರ (ವಿದ್ಯಾಮಹಿಮೆ ಚತುಷ್ಷಷ್ಟಿಕಲಾಮಹಿತರ ಮನದೊಳ್ ಈರ್ಷ್ಯೆಯಂ ಪುಟ್ಟಿಸುಗುಂ: **ಪಂಪರಾ,** ೩. ೧೪೮)

**ಈವಱು** – ಇತ್ತೀಚೆ (ಈವಱು ಎಂಬುದು ಈಷಿದ್ಭೂತಕಾಲಂ: **ಶಬ್ದಮದ,** ೩೩೭ ವೃತ್ತಿ)

**ಈಶಶಾಸನ** – ಒಡೆಯನ ಆಜ್ಞೆ (ಈಶಶಾಸನಮಂ ನೆತ್ತಿಯೊಳಾಂತು ಬನ್ನಿಂ ಎಱಗಿಂ ಚಕ್ರೇಶಪಾದಾಬ್ಜದೊಳ್ **ಆದಿಪು,** ೧೪. ೩೧)

**ಈಶಾದಂಡ** – ಬಂಡಿಯ ಈಸು (ಕಠಿನ ಶಕಟದ ಈಶಾದಂಡಹತಿಯಿಂ ಪೃಥ್ವೀತಳಂ ಪಾತಾಳಲ್ಲೆ ತೂತುವೋಗೆ: **ನೇಮಿನಾಪು,** ೮. ೨೨ ವ)

**ಈಶಾನ** – ಈಶ್ವರ (ಹಿಮವದ್ಧಿಶಾನಿಲಯಂ ಈಶಾನಂ ಧೃತೇಂದ್ವಾಪಗಂ: **ರಾಜಶೇವಿ,** ೫. ೩೧)

**ಈಶಾನಕಲ್ಪ** – [ಜೈನ] ಹದಿನಾರು ಸ್ವರ್ಗಗಳಲ್ಲಿ ಎರಡನೆಯದು (ಅಂತಾ ದೇವಂ ಈಶಾನಕಲ್ಪದಿಂದ ಅತಿಪ್ರೀತಿವರ್ಧನಕರಂ ಎಂಬ ಮಧ್ವಿಮಾನಮಂ ಪ್ರೀತಿವರ್ಧನಕರಮಾಗೇಜೆಸಿಕೊಂಡು ಉಯ್ದು: **ಆದಿಪು,** ೩. ೫೮ ವ)

**ಈಶಾನೇಂದ್ರ** – [ಜೈನ] ಈಶಾನಕಲ್ಪದ ಒಡೆಯ (ಚಂದ್ರಾಕೃತಿಯ ಕೊಡೆಯಂ ಅತಿಶೋಭಾಕರಮಂ ಪಿಡಿದಂ ಆಗಳ್ ಈಶಾನೇಂದ್ರಂ: **ಕರ್ಣನೇಮಿ,** ೮. ೧೧೯)

**ಈಶಿತೆ** – ಸಾಮರ್ಥ್ಯ (ಜಿನೇಶ್ವರಾರ್ಚನಾ ಪರಿಕರವೃದ್ಧಿಯೊಳ್ ಮಹಿಮೆ ಈಶಿತೆ ತತ್ಪರಿಚರ್ಯೆಯಲ್ಲಿ: **ಪಾರ್ಶ್ವನಾಪು,** ೫. ೧೧೧)

**ಈಶ್ವರವಿರಹ** – ಒಡೆಯನ ಅಗಲಿಕೆ (ಈಶ್ವರವಿರಹದೆ ಶೋಕಾಕುಲಂ ವಿಶೇಷಾಪ್ತಜನಂ: **ಕವಿರಾಮಾ,** ೩. ೩೧)

**ಈಶ್ವರಶೈಲ** – ಕೈಲಾಸಪರ್ವತ (ವೃಷಂ ಪುಷ್ಪಂ ಈಶ್ವರಶೈಲಂ ಫಲಮಾಗೆ: **ಗದಾಯು,** ೧. ೨)

**ಈಶ್ವರಾಯತನ** – ಶಿವದೇವಾಲಯ (ಈ ಅರ್ಥಮಂ ಮಡಂಗಿ ನಿರರ್ಥಕೆ ಕಿಡದೆ ಈಶ್ವರಾಯತನಮಂ ಮಾಡಿಸಿಂ: **ಪಂಚತಂತ್ರ,** ೪೩೩ ವ)

**ಈಷತ್** – ಸ್ವಲ್ಪ (ಪಾರ್ಶ್ವದೊಳಿರ್ದ ಕೆಳದಿಯಂ ನೋಡಿದಂ ಈಷತ್ ವಳಿತಕಂಧರಂ ಧರಣೀಶಂ: **ಮಲ್ಲಿನಾಪು,** ೪. ೧೫)

**ಈಷತ್‌ಪ್ರಾಗ್ಭಾರ** – [ಜೈನ] ಅಷ್ಟಮಭೂಮಿ (ಈಷತ್ ಪ್ರಾಗ್ಭರಮೆಂಬ ಎಂಟನೆಯ ನೆಲನುಮಂ ದಾಂಟಿ ತೀರ್ಥೇಶ್ವರಂ: **ಶಾಂತಿಪು,** ೧೨. ೫೦)

**ಈಷದಾರೋಪಿತ** – ಸ್ವಲ್ಪ ಏರಿಸಿದ (ಧರಣೀಶನಿದಿರೊಳ್ ಅವರ್ ಅಂತರ್ನಿಗೂಢಕೋಪಾವಲೇಪರುಂ ಈಷತ್ ಆರೋಪಿತಭ್ರೂಚಾಪರುಮಾಗಿ: **ಆದಿಪು,** ೯. ೧೦೪ ವ)

**ಈಷದಾವಲಿತ** – ಸ್ವಲ್ಪ ತಿರುಗಿದ [ಈಷತ್+ಆವಲಿತ] (ಆ ಮಾತಂ ಕೇಳ್ದು ಈಷದಾವಲಿತಕಂಧರಂ ಇದೆತ್ತಣಿಂ ಬಂದುದು ಎಂದು .. .. ಭಾವಿಸಿ ನೋಡಿ: **ಕಾದಂಸಂ,** ೧. ೭೬ ವ)

**ಈಷದುನ್ಮಿಷಿತ** – ಸ್ವಲ್ಪ ಅರಳಿದ (ಲಾಘವಮಂ ಅಪ್ಪುಕೆಯ್ದಂತಿರೆ ಈಷದುನ್ಮಿಷಿತವದನಾರವಿಂದನಾಗಿ: **ಲೀಲಾವತಿ,** ೪. ೫೭ ವ)

**ಈಸ** – [ಈಶ] ಶಿವ (ಪೆಱದೆಗೆಯದೆ ಈಸನೊರ್ವನೆ ನಿಂದಂ: **ಕಬ್ಬಿಗಕಾ,** ೨೯೫)

**ಈಸರ** – [ಈಶ್ವರ] ಶಿವ (ವತ್ವಲೋಪಕ್ಕೆ: ಈಶ್ವರಂ–ಈಸರಂ, ಶಾಶ್ವತಂ–ಸಾಸತಂ, ಶ್ವಾನಂ–ಸಾನಂ: **ಶಬ್ದಮದ,** ೨೯೬ ಪ್ರ)

**ಈಸಾಡು** – ಈಜು (ತೋಱೆಯನೀಸಾಡಲಾಱದ ನಿಶ್ಶಕ್ತನ ಕಾಲಂ ಪಿಡಿದಂತಾಗೆ: **ಧರ್ಮಾಮೃ,** ೯. ೮೭ ವ)

**ಈಸು** – [ಈಷಾ] ಈಜು (ವ್ಯಾಸಮುನೀಂದ್ರ ರುಂದ್ರ ವಚನಾಮೃತವಾರ್ಧಿಯಂ ಈಸುವೆಂ ಕವಿವ್ಯಾಸನೆಂ ಎಂಬ ಗರ್ವಮೆನಗಿಲ್ಲ: **ಪಂಪಭಾ,** ೧. ೧೩); ಬಂಡಿಯ ಈಚು, ಇರ್ಚಿಮರ (ಉಡಿದಿರ್ದ ಅಚ್ಚು ಅಟೆದ ಈಸು ತಳ್ತಿದ ನೊಗಂ ಜೀಱಟ್ಟಿ ಚಕ್ರಂ .. .. ನೆತ್ತರ ಪೊನಲ್ ಕಣ್ಗೊಂಡುದುಗ್ರಾಜಿಯೊಳ್: **ಪಂಪಭಾ,** ೧೦. ೯೧)

**ಈಸೂಟ್** – ಈ ವರ್ಷ (ಒಂದರ್ಥಕ್ಕೆ: ಈ ಸೂಟೆಂದು ವರ್ತಮಾನ ವರುಷಂ: ಶಬ್ದಮದ, ೩೩, ವೃತ್ತಿ)

**ಈಳ್** – ಸೆಳೆ (ಕೈದಳದಿಂ ಪೊಡೆದು ಈಳ್ದು ಸೀಳ್ದು ಮೇಲೇಳ್ತರೆ .. .. ನೆರೆದರ್ ಸುರತಾಬ್ಧಿಯೊಳ್: **ರಾಜಶೇವಿ,** ೧೧. ೧೩೬)

**ಈಳೆ** – ಕಿತ್ತಿಳೆ, ಹೇರಿಳೆ ಮುಂತಾದ ಜಾತಿಯ ಮರ, ಹಣ್ಣು (ಬಾಳೆಯ ಮಾವಿನ ಕಮ್ಮರದ ಈಳೆಯ ತನಿವಣ್ಣುಳಿಂದಂ ಅರ್ಚಿಸಿದಂ ಭೂಪಾಳಂ ನಿರ್ಭರ ಭಕ್ತಿಯ ಜಾಳಮೆನೆ ಮೆಯ್ಯೊಳೊಗೆದ ರೋಮಾಂಚಂಗಳ್: **ಪಂಪರಾ,** ೧೨. ೬)

**ಈಳೆಸಾಂದು** – ಈಳೆಯ ಗಂಧ, ಅನುಲೇಪನ (ಬಳಮರ್ದಂ ಅಂಗಜಂಗೆರವವೊಲ್ ಈಳೆಸಾಂದರೆವರಿಂಬಳವಟ್ಟಿರೆ ಘಟ್ಟಿವಳ್ತಿಯರ್: **ಮಲ್ಲಿನಾಪು,** ೨. ೪೭)

**ಈಳ್ಕೊಳ್** – ಕಸಿದುಕೊ (ದನುಜರ ಕೈಯೊಳಿರ್ದ ಅಮರ್ದಂ ಆವಗ ಈಳ್ಕೊಳಲೆಂದು .. .. ವಿಲಾಸಿನಿಯಾದ ವೇಷ: **ಕಾದಂಬ,** ೧. ೩೫)

**ಈಳ್ದೆಳೆ** – ಹಿಡಿದು ಎಳೆ (ಪ್ರಮದೆಯ ಕಣ್ಗಳ್ ಈಳ್ದೆಳೆದುಕೊಂಡವೊಲಾದುದು ಕಣ್ಗೆ ನೋಳ್ಪರಾ: **ರಾಜಶೇವಿ,** ೭. ೧೯)

**ಈಱಿಲ್** – ಹೆರಿಗೆಯ ಶುದ್ಧಿಸ್ನಾನ (ಅಬ್ಬೆ ದಾದಿ ಪರಿಚಾರಕರ್ ಈಱಿಲ ಕಾಪು ಕಾಪೆ ಕೂರ್ತಿಟ್ಟ ಅವರ ಆತ್ಮಪುಣ್ಯಮೆ ವಿಪುಣ್ಯರಂ ಓಳಿಯೆ ಕಾಪು ಕಾಗುಮೇ: **ಶಾಂತಿಪು,** ೬. ೧೦೬)

**ಈಱ್** – ಸೆಳೆದುಕೊ, ಹೀರು (ಕಳಕ್ಕಳಿಸಿ ಸಂತಸವಾತಿನ ಪೂರ್ಣಪಾತ್ರಮಂ ಕೊಳ್ವವೊಲ್ ಈಱ್ದುಕೊಂಡುವಳಿಗಳ್ ಸುಮನೋಮಕರಂದಮಂ: **ಅಜಿತಪು,** ೬. ೬೯); ಆಕರ್ಷಿಸು (ಉರಿಯಂ ಕಾಱುವ ಕೆಂಡಮಂ ಕಱಿವ ಬಿಲ್ಲಂ ಕಂಡೆವಿಲ್ಲ ಉಕ್ಕೆವದಿಂ ತರುಣೀರತ್ನಮಂ ಈಱ್ದುಕೊಳ್ವ ಸಮಕಟ್ಟಿಂದಟ್ಟಿದಂ ಖೇಚರಂ: **ಪಂಪರಾ,** ೫. ೭೮)

**ಈಱ್ಕುಳಿಗೊಳ್** – ಇರ್ಕುಳಿಗೊಳ್, ಕಿತ್ತುಕೊ (ಚಾಪಳ ಹರಿಣಿವಿಲೋಕನಮಂ ಈಱ್ಕುಳಿಗೊಂಡಳೆನಲ್ಕೆ ಗಾಳುಗಣ್ ಪೊಳೆಯೆ: **ನೇಮಿನಾಪು,** ೩. ೬೧)

**ಈಱಿಕೊಳ್** – ಸೆಳೆದುಕೊ, ಆಕರ್ಷಿಸು (ಖಚರೀಜನಾನನನವಾಂಭೋಜಂಗಳೊಳ್ ಕಂಪಂ ಈಱಿಕೊಳುತುಂ: **ಆದಿಪು,** ೧. ೮೪)

## ಉ

**ಉಂಕೆ** – ಒಂದು ಜಾತಿಯ ಹಕ್ಕಿ (ನಿನ್ನ ಭರ್ತಾರಂ ಬೇಂಟೆಯಾಡಿ ಪಲವುಂ ಲಾವುಗೆಯುಂ ಉಂಕೆಯುಂ ಕೊರಸುಂ ಮೊದಲಾಗೊಡೆಯ ಪಕ್ಷಿಜಾತಿಗಳಂ ಬಲೆಯನೊಡ್ಡಿ ಪಿಡಿದು: **ವಡ್ಡಾರಾ,** ಪು. ೧೫೧, ಸಾ. ೩)

**ಉಂಗುಟ** – ಕಾಲಿನ ಹೆಬ್ಬೆರಳು (ಜಳರಾಶಿಯಂ ಉಂಗುಟದನಿತೊಳನೊರ್ವಂ ಅಗಸ್ತ್ಯನೆಯ್ದೆ ಕುಡಿದನೆನುತ್ತುಂ ಗಱಪುತಿರ್ಪರ ನುಡಿಯೊಳ್ ಫಳಮಿಲ್ಲ: **ಸಮಯಪ,** ೧೦. ೧೦೯)

**ಉಂಗುರವಿಡು** – ಮದುವೆ ನಿಶ್ಚಿತಾರ್ಥದಲ್ಲಿ ಉಂಗುರ ತೊಡಿಸು (ತನಗೆ ಕಿಱಿಯಂದು ಉಂಗುರವಿಟ್ಟ ಸಾಲ್ವಲನೆಂಬಲ್ಲಿಗೆ ಪೋಗಿ ನೀನೆನ್ನಂ ಕೈಕೊಳವೇಳ್ಕುಂ ಎಂದೊಡೆ: **ಪಂಪಭಾ,** ೧. ೭೫ ವ)

**ಉಂಟೊಡೆತು** – ಹೌದು, ಇದೆ ಎಂಬುದನ್ನಾಗಿ ಮಾಡಿ (ಆತ್ಮವಿಟತ್ತ್ವಮಂ ಉಂಟೊಡೆತಾಗಿ ಮಾಡಿ ಬಾಂದೊಱೆಯನೆ ಪೊತ್ತು ಗೌರಿಗೆ ಕವಲ್ದೊಱೆಗೆಯ್ದಿದಂ ಈ ಪ್ರದೇಶದೊಳ್: **ಪಂಪಭಾ,** ೭. ೭೫)

**ಉಂಡಲಿಗೆ** – ಕಡುಬು (ಮಂಡಗೆ ಮೇಣ್ ಹೂರಿಗೆ ಮೇಣ್ ಉಂಡಲಿಗೆಗಳಿಕ್ಕಿ .. .. ಕೊಡುವುದು ದೃಢವ್ರತಂಗಱೊಳ್: **ಅನಂತಪು,** ೧೦. ೭೬)

**ಉಂಡಿಗೆ** – ಮುದ್ರೆ (ಎಲ್ಲಡೆಗಳುಮಂ ತನ್ನಟ್ಟಿದೋಲೆಗಂ ಇಟ್ಟ ಉಂಡಿಗೆಗಂ ಬಸಂ ಮಾಡಿದ ನನೆವಿಲ್ಲ ಬಲ್ಲಹಂ ನಿಮ್ಮಡಿಗಳ ಪೆಸರಂ ಕೇಳ್ದು: **ಕಬ್ಬಿಗಕಾ,** ೧೩೧ ವ); ಅಪ್ಪಣೆ ಚೀಟಿ, ಅಧಿಕಾರ ಮುದ್ರೆ (ಮಾಮರಂಗಳೊಳ್ ಕನರ್ಗೊನೆ ಮೂಱು ನಾಲ್ಕು ತಲೆದೋಱಿದುವು ಉಂಡಿಗೆ ಸಾಧ್ಯಮಾದುದು ಇನ್ನೆನಗೆ: **ಮಲ್ಲಿನಾಪು,** ೫. ೨೩); ಗಂಟಲು (ಪೊಸಮುತ್ತಂ ನುಂಗಿದ ಸೋಗೆವಿಂಗಡಣಂ ಮಱುಗಿದವು ಉಂಡಿಗೆ ಬೇಯೆಕೆಂಡಮಂ ನುಂಗಿದವೋಲ್: **ಪಂಪರಾ,** ೭. ೯೬)

**ಉಂಡಿಗೆ ಸಾಧ್ಯಂ ಮಾಡು** – ತನ್ನ ಹೆಸರಿನ ಮುದ್ರೆ ಬೇರೆಡೆ ಚಲಾವಣೆಯಾಗುವಂತೆ ಮಾಡು, ಆ ಪ್ರದೇಶವನ್ನು ಗೆಲ್ಲು (ಅಂತು ಷಟ್ಖಂಡಭರತಮಂಡಳಮಂ ಉಂಡಿಗೆ ಸಾಧ್ಯಂ ಮಾಡಿ: **ಆದಿಪು,** ೧೫. ೩ ವ)

**ಉಂಡಿಗೆಯೊತ್ತು** – ಮುದ್ರೆ ಒತ್ತು, ಸ್ವಾಧೀನಪಡಿಸಿಕೊ (ಅರಸರ ಕಾಪಿನ ಪೊಲನಂ ಪೊಕ್ಕುವೆಂದು ಉಂಡಿಗೆಯೊತ್ತಿಕೊಳುತ್ತುಂ ಊಟಿಗವಾದೆಡೆಗಳೊಳ್ ಝೂಳೆಯಂಗೊಳುತ್ತುಂ: **ಸುಕುಮಾಚ,** ೭. ೩೫ ವ)

**ಉಂತಪ್ಪ** – ಹೇಗೆ ಹೇಗೆಯೋ (ಸಹಜಮನೋಜನ ಕುಲದ ಚಲದ ಚಾಗದ ಬೀರದ ಭಾಗ್ಯದ ಸೌಭಾಗ್ಯದ ಅಗುಂತಿಗಳಂ ಉಂತುಂ ಅಳವಲ್ಲದೆ ಪೊಗಱಿ: **ಪಂಪಭಾ,** ೪. ೪೦ ವ)

**ಉಂತಾಗಿಯುಂ** – ಹಾಗಿದ್ದರೂ ಕೂಡ (ಜನಂ ಉಂತಾಗಿಯುಂ ಎಲ್ಲಂ ಮುನಿಸು ಒಸಗೆವೆರಸು ಪಟಿಗುಂ ಪೊಗಟ್ಸಿಂ: **ಕವಿರಾಮಾ,** ೩. ೧೭೮)

**ಉಂತು** – ನಡುವಣ ರೀತಿಯಲ್ಲಿ (ಜೈನಾಗಮಮನದಂ ಅಂತು ಇಂತು ಉಂತು ಎಂತು ಎಂದೆನಲ್ಕದೇಂ ಬಂದಪುದೇ: **ಸಮಯಪ,** ೩. ೨೩)

**ಉಂತುಂ** – ಹೇಗೋ (ವಿಚಾರಪರರವರ್ ಉಂತುಂ ಭಾವಿಸಿ ತಿಳಿದುಂ ತ್ಮಯ ದೇವರ ಪೊಲ್ಲಮೆಯಂ ಅಂತುಂ ಇಂತುಂ ಬಿಡುವರ್: **ಸಮಯಪ,** ೮. ೨೨೭)

**ಉಂತುಟು** – ಈ ನಡುವಣ ಪ್ರಕಾರವಾಗಿ (ಅಂತುಟು ಇಂತುಟು ಪೇೞ್ ಇನ್ನುಂತುಟು ಅದು ಎಂಬಂತುಟಲ್ತು ಜೈನಾಗಮಂ: **ಸಮಯಪ,** ೩. ೨೪)

**ಉಂತೆ** – ವ್ಯರ್ಥವಾಗಿ (ನಿಮ್ಮ ಮುದಿಗಣ್ಣನದೊಳ್ ಇದೇಂ ಉಂತೆ; ಬಟ್ಟೆವೋಪಡೆ ಪೋಗಿಂ: **ಆದಿಪು,** ೯. ೧೦೬); ಹಾಗಲ್ಲದೆ (ವೃತ್ತಿಗಳಿಂ ಬೇಱಾದರ್ ದ್ವಿಜರ್ ಉಂತೇಂ ಮನುಷ್ಯಜಾತಿ ತಾನೊಂದೆ ವಲಂ: **ಆದಿಪು,** ೧೫. ೧೪); ನಿಷ್ಕಾರಣವಾಗಿ (ಅನರಣ್ಯನೆಂಬ ಪೆಸರಂ .. .. ನಾನಾ ಜನಪದಮಂ ಪಡೆದು ಜಗಜ್ಜನಂ ಕುಡಲ್ ಪಡೆದಂ ಉಂತೆ ಪಡೆದನೆ ಪೆಸರಂ: **ಪಂಪರಾ,** ೨. ೬೯)

**ಉಂತೇಂ** – ಹಾಗಲ್ಲದೆ (ಇಂತಿವನೆಲ್ಲಂ ತಿಳಿಪಿದೆಂ ಉಂತೇಂ ಜಿನಧರ್ಮರ್ಮವಲ್ಲದುಂಟೇ ಧರ್ಮಂ: **ಸಮಯಪ,** ೨. ೮೫)

**ಉಂದುರ** – ಇಲಿ, ಹೆಗ್ಗಣ (ಮಿತ್ರನ ಸರಮಂ ಉಂದುರಂ ಕೇಳ್ದು ಪರಿತಂದು ನೋಡಿ ಬಲೆಯೊಳ್ ಸಿಲ್ಕಿರ್ದನಂ ಕಂಡು: **ಪಂಚತಂತ್ರ,** ೪೨೦ ವ)

**ಉಂಬರಕುಷ್ಠ** – ಒಂದು ಬಗೆಯ ಕುಷ್ಠ ರೋಗ (ಉಂಬರಕುಷ್ಠಂ ಮೂಡಿದೊಡೆ ಇಂಬಟೆಯೆ ಮುರುಂಟಿ ಬಾತು ಕೀತೊಡೆ: **ಹರಿವಂಶ,** ೧೩. ೩೪)

**ಉಕ್ಕಂದ** – ತುಂಬಿ ತುಳುಕುವ (ಸಿರಿಯಂ ನೋಡಲ್ ಬಂದುದು ಅಮರ್ದಿನ ತಾಯ್ಗಡಲೆಂಬಂದಮಂ ಉಕ್ಕಂದಮಾಗಿ ತಳೆದೆಸೆದಿರ್ಕುಂ: **ಮಲ್ಲಿನಾಪು,** ೨. ೫೬)

**ಉಕ್ಕಡ** – ನಗರದ ಗಡಿ (ಗರಟಿಗೆಯುಕ್ಕಡದ ವಿಯಚ್ಚರರಂ ಪೇಸೇಟಿಕೊಂದರೋ: ಶಾಂತಿಪು, ೩. ೧೦೦); ಶಾಂತಿಪು (ಗರಟಿಗೆಯ ಜಾವದ ಉಕ್ಕಡದ ಉಲಿ ಮಟ್ಟಿದ ಪೊತ್ತು ಸೂಟ್ಗಿ ಕರುಮಾಡದ ಪಕ್ಕದೊಳಿರ್ದ ಪಟ್ಟದಾನರಯ ಬದಗಂ: **ಯಶೋಧಚ,** ೨. ೨೭); ಕಾವಲು (ಬಾಗಿಲ್ಗಾಪಿನ ಜಾವದುಕ್ಕಡದ ಗರವಟಿಗೆಯ ಠಾಣಾಂತರದವರೆಲ್ಲಂ ಎರಡು ಕೈಯನೆತ್ತಿ ಪುಂಡರೀಕಾಕ್ಷಂಗೆ ಪೊಡೆವಟ್ಟು: **ನೇಮಿನಾಪು.** ೭. ೪೪ ವ)

**ಉಕ್ಕಲಿಸು** – ದರ್ಪದಿಂದಿರು (ನೀಂ ಉಕ್ಕಲಿಸಿದೆಯಕ್ಕುಂ .. .. ಅಮರೇಂದ್ರನ ಮಱವೊಕ್ಕೊಡಂ ಆಂ ಕೊಲಿಪೆಂ ಎನ್ನ ಮುಳಿಸನೆ ಸಲಿಪೆಂ: **ಹರಿವಂಶ,** ೮. ೬೮)

**ಉಕ್ಕಿಱ** – ಅತಿಶಯವಾಗು (ಮತ್ತಮಾ ಖಗೇಶ್ವರನೆಡವಕ್ಕದೊಳಿಱಿವ ತಕ್ಕಿನೊಳ್ ಉಕ್ಕಿಱಿಯನಾಂತುಕೊಂಡು: **ವರ್ಧಮಾಪು,** ೪. ೪೯ ವ)

**ಉಕ್ಕೆವ** – ಠಕ್ಕು, ಮೋಸ (ಜೂದಿನೊಳ್ ಉಕ್ಕೆವದಿಂದೆ ಗೆಲ್ದು ನಿನ್ನಂ ಅವನಿತಳಂ ಕರಾತಳದವೋಲ್ ತನಗಂ ಬೆಸಕೆಯ್ಯೆ ಕೆಯ್ಗೆ ಮಾಡುವ ನಯಂ ಆ ಬೃಹಸ್ಪತಿಯುಮಂ ಗೆಲೆವಂದುದು ಧಾರ್ತರಾಷ್ಟ್ರನಾ: **ಪಂಪಭಾ,** ೭. ೪೦); ಮೋಸಗಾರ (ಮಿಕ್ಕ ಗುಣಂಗಳ ಭವ್ಯರಂ ಉಕ್ಕೆವಂ ಅಜ್ಞಾನದಿಂದೆ ಕಿಡೆ ನುಡಿವುದೆ: **ಸಮಯಪ,** ೧೩. ೫೦); ಉತ್ಸಾಹ, ಉತ್ಸವ (ಉರಿಯಂ ಕಾಱುವ ಕೆಂಡಮಂ ಕಱವ ಬಿಲ್ಲಂ ಕಂಡೆವಿಲ್ಲ ಉಕ್ಕೆವದಿಂ ತರುಣೀರತ್ನಮಂ ಈಟ್ಟುಕೊಳ್ವ ಸಮಕಟ್ಟಿಂದಟ್ಟಿದಂ ಖೇಚರಂ: **ಪಂಪರಾ,** ೫. ೭೮)

**ಉಕ್ಕೆವಗುದುರೆ** – ಮೋಸದ ಕುದುರೆ (ಪುಯ್ಯಲಿಡೆ ಕಡುಕೆಯ್ದು ಉಕ್ಕೆವಗುದುರೆ ಪೊಟಲನಡಟಲಿಸಿತಾಗಳ್: **ಪಂಪರಾ,** ೪. ೧೦೬)

**ಉಕ್ಕೆವಚಾಮರ** – ಉತ್ಸವಕಾಲದ ಚಾಮರ (ಮಂಡೋದರಿಯಂ ಮದೀಯ ಪಿತೃಗೆ ಉಕ್ಕೆಚಾಲಮರಮಿಕ್ಕಲುಯ್ದಪೆಂ: **ಪಂಪರಾ,** ೧೪. ೧೦೩)

**ಉಕ್ಕೆವತನ** – ವಂಚಕತನ (ಎಂದು ತನ್ನುಕ್ಕೆವತನದಿನೋದಿಸಿದ ವೃತ್ತಾಂತಮಂ ಆದ್ಯಂತಮಱಿಯೆ ಪೇೞ್ದು: **ಸುಕುಮಾಚ,** ೨. ೬೨ ವ)

**ಉಕ್ಕೆವತಪ** – ಕಪಟ ತಪಸ್ಸು (ಉಕ್ಕೆವತಪದಿಂದಂ ಅನಂತಸುಖಕ್ಕೆ ಕಾರಣಮಪ್ಪ ಸನ್ಮಾರ್ಗಮಂ ಪೆತ್ತೆಂ: **ವಡ್ಡಾರಾ,** ಪು. ೬. ಸಾ. ೨೫)

**ಉಕ್ಕೆವಿಸು** – ವಂಚಿಸು (ಪಿತೃಬಂಧುಗಳಂ ತವೆ ಕೊಂದು ತಂದನೆನ್ನಂ ಕುಡದಿರ್ದೊಡೆ ಉಕ್ಕೆವಿಸಿ ನಿನ್ನುಮಂ ಎಮ್ಮಗನಿಂತು ತಂದನೇ: **ಕರ್ಣನೇಮಿ,** ೮. ೬೭)

**ಉಕ್ಕೆಸಱು** – (ಉಕ್ಕೆಸಱಾಯ್ತು ಪೊಕ್ಕ ಸರಸೀ ಸಲಿಲಂ ಪೊಗೆಯೆೞ್ದುದು: **ಕುಸುಮಾಕಾ,** ೧೩. ೫೩)

**ಉಕ್ತಿಪ್ರೌಢ** – ಮಾತಿನ ನಿಪುಣ (ಉಕ್ತಿಪ್ರೌಢರಂ ಭಾವತತ್ಪರರಂ ನೀತಿವಿದರ್ಕಳಂ ರಸಿಕರಂ ಸಾಹಿತ್ಯದೊಳ್ ಸಂದ ಜಾಣರಂ: **ಕುಸುಮಾಕಾ,** ೧. ೭)

**ಉಕ್ತಿವಕ್ರಿಮ** – ಮಾತಿನ ಬನಿ (ಅವಳ ಉಕ್ತಿವಕ್ರಿಮಕ್ಕೆ ಸೂಕ್ತಿರತ್ನಾಕರಂ ಮನದೊಳ್ ಮೆಚ್ಚಿ: **ಚಂದ್ರಪ್ರಪು,** ೪. ೭೯ ವ)

**ಉಕ್ಷ** – ಎತ್ತು (ಜಿತಾಕ್ಷ ಮಹಾ ಉಕ್ಷಲಕ್ಷ ಫಾಲಾಕ್ಷ .. .. ರಕ್ಷಿಪುದು .. .. ಶಿವಾಕ್ಷಿಸಂಭವಾ: **ರಾಜಶೇವಿ,** ೧. ೧೦)

**ಉಕ್ಷಿತ** – ನಿರ್ಮಲವಾದ (ರವಿರುಕ್ಸಂಧು ಉಕ್ಷಿತಾಂಗಕ್ಷಿತಿಪತಿತನಯಂಗಾಯ್ತು ಅರಣ್ಯಂ ಶರಣ್ಯಂ: **ನೇಮಿನಾಪು,** ೫. ೭೪)

**ಉಗಿ** – ಹೊರಗೆಳೆ (ವಿನೇಯೋತ್ಕರ ಸಸ್ಯಾವಳಿ ಸುಗಿದು ಅಗಿದು ಕೂಡೆ ಬಾಡಿರ್ದುದು: **ಆದಿಪು,** ೧೦. ೬೬); ಕತ್ತರಿಸು (ತಿದಿ ಉಗಿದು ಕೊಟ್ಟೆಂ ಒಡವುಟ್ಟಿದ ಕವಚಮಂ ಅಮರಪತಿಗೆ: **ಪಂಪಭಾ,** ೧೨. ೧೮೯); ಆಕರ್ಷಿಸು (ಧರಣೀಭೃನ್ಮುನಿ ಪೊಱಗಾಗುಟಿದರ ಕಣ್ಮನಮೆಂಬಿವಂ ಉಗಿವುದು ಅಮರಗಣಿಕೆಯರಾಟಂ: **ಶಾಂತಿಪು,** ೧೧. ೩೩); ಉಗುರಿನಿಂದ ಸೀಳು (ಉಗಿ–ಆಕರ್ಷಣೇ ನಖಕ್ಷತೇ ಚ: **ಶಬ್ದಮದ,** ಧಾ ೮೫); ಕಡಿಮೆ ಮಾಡು (ನೀರಂ ಸೇದಿಕೊಂಡು ಬಂದು ಕುಡಿಯಲೆಱಿಯೆ ಕುಡಿದು ಕುಡಿಯೆ ಕರಗದದಾರೆಯನುಗಿದು ಕೊಂಡು ಅರಸನಾಕೆಯ ಮೊಗಮಂ ನೋಡಿ: **ವಡ್ಡಾರಾ,** ಪು. ೧೧೧. ಸಾ. ೪); ಭಯಪಡು (ನರರಿರ್ದರುದಿರ್ದರ ಅಂಬರಚರರಗಿದರ್ ದಿಗಿಭಭನಾಥರುಗಿದರ್ ದನುಜರ್: **ಕರ್ಣನೇಮಿ,** ೬. ೧೨೦)

**ಉಗಿಪಟಂಗೊಳ್** – ಸೆಳೆದುಕೊ; ಹೋಗಲಾಡಿಸು (ಬೆಸಗೊಳೆ ದಶನದ್ಯುತಿ ದೆಸೆದೆಸೆಯ ತಮಃಪಟಮಂ ಉಗಿಪಟಂಗೊಳೆ ದೇವಂ ಬೆಸಸಿದನಾ ಕನ್ನೆಗೆ ಪಸರಿಸೆ ಚಿತ್ತವಿಶೋಧಿ ಬೋಧಿಪರಿಣಾಂಂಗಳ್: **ಶಾಂತಿಪು,** ೪. ೬೫)

**ಉಗಿಪದ** – ಸುಲಿಗೆ (ಉಗಿಪದಮೆಂದು ಸುಲಿಹಂ: **ಶಬ್ದಮದ,** ಪ್ರಸಾ, ೨೮)

**ಉಗಿಬಗಿ** – ಸೀಳು, ಚೂರಾಗಿರುವುದು (ಸಿಡಿಖಂಡಂಗೊಂಡು ಉಗಿಬಗಿದು ಇಡಿದಿಡಿದು ಎಡೆವಿಡದೆ ಕೂಱುಗೊಳ್ವರ್ ಬಾಯೊಳ್: **ಸುಕುಮಾಚ,** ೧೧. ೪೨)

**ಉಗಿಬಗಿಮಾಡು** – ಕಲಕು (ಸೇಸಿಕ್ಕಲೆಂದು ಬಂದಮರ ಪುರಂಧ್ರಿಯರುಮಂ ಆಲೋಕನಮಾತ್ರದೊಳೆ ಮನಮಂ ಉಗಿಬಗಿಮಾಡಿ: **ಆದಿಪು,** ೨. ೬೫ ವ); ಪರವಶಗೊಳಿಸು; ಪರಚಿ ಗಾಯಮಾಡು (ಸಕಳ ಪ್ರಕ್ಷೋಭದೊಳ್

ವಿಹ್ವಳರಾಗಿರ್ದ ನಿರಯಜರಂ ಎಯ್ದಿ ಸುತ್ತಿಮುತ್ತಿ ಪಿಡಿದು ಉಗಿಬಗಿ ಮಾಡಿ: **ಶಾಂತಿಪು,** ೭. ೯೪ ವ)

**ಉಗಿಬಗಿಯಾಗು** – ಆತುರಪಡು (ಉಗಿಬಗಿಯಾಗಿ ಬಾಗಿ ಕೊಳಲೆಂದು ಕಡಂಗುವಶೇಷ ದೇವಕೋಟಿಗಳ್: **ಅನಂತಪು,** ೫.೭೮); ಸಂಭ್ರಮಪಡು (ಕುಮುದಂ ನಗುತಿರೆ ಕೋಕದ್ವಯಂ ರತೀಶ್ವರನೆಸುವಿಂದ ಉಗಿಬಗಿಯಾಗುತ್ತಿರೆ: **ಗಿರಿಜಾಕ,** ೪. ೧೧೨); ಕಕ್ಕಾವಿಕ್ಕಿಯಾಗು (ಬಗೆವಂ ಪೊಗಟಲ್ ಪರಮನನಗಲ್ದು ಪೋಗಲ್ಕಮಾಜಿನಂತಂತೆ ಮನಕ್ಕುಗಿಬಗಿಯಾಗಿರೆ: **ಅಜಿತಪು,** ೫. ೫೮)

**ಉಗಿವಡೆ** – ಗಾಯಹೊಂದು (ಸಮರಕೇಸರಿಯುಗುರಿಂದ ಉಗಿವಡೆದ ಸತಿಯ ಘನಕುಚಯುಗಳಮೆ ಮದನೇಭ ಕುಂಭಮಪ್ಪುದು ಪುಸಿಯೋ: **ಲೀಲಾವತಿ,** ೧೩. ೨೪)

**ಉಗಿಸು** – ಚಿಮುಕಿಸು ಹೊರಬೀಳಿಸು ಕಳ್ಳೆಲ್ಲಮಂ ನಿಶ್ಶೇಷಮೊಯ್ದು ಅಗಂಗಳ ಕಲ್ಲ ದೋಣಿಗಳೊಳ್ ಉಗಿಸಿ: **ಕರ್ಣನೇಮಿ,** ೧೪. ೪೬ ವ)

**ಉಗು** – ಚೆಲ್ಲು, ಹೊರಬೀಳಿಸು (ಕುಡಿತೆಯ ನಿರಂತೆ ಉಗಲುಂ ಕುಡಿಯಲ್ಕುಂಟೆನಗೆ ಲವಣವಾರ್ಧಿಯ ನೀರಂ: **ಆದಿಪು,** ೧೨. ೮೭)

**ಉಗುಣಿ** – ಒಂದು ಬಗೆಯ ಮರ (ಎಂದು ಎರ್ದು ಒಡವೊಯ್ದಡೆ ಅವನ ಗದೆ ಸಿಡಿಲ್ದು ಉಗುಣಿ ಪಾಱುವಂತೆ ಪಾಱಿತ್ತಾಗಳ್: **ಹರಿವಂಶ,** ೧೧. ೧೨)

**ಉಗುತರ್** – ಉಕ್ಕಿಬರು, ಸುರಿ (ಒಗೆದ ಶರಸ್ತಂಬದೊಳ್ ಇರ್ಬಗಿಯಾಗಿ ಮನೋಜರಾಗರಸಂ ಉಗುತರೆ ತೊಟ್ಟಗೆ ಬಿಸುಟು ಬಿಲ್ಲಂ ಅಂಬುಮಂ ಅಗಲ್ದಂ ಆಶ್ರಮದಿಂ ಉದಿತಲಜ್ಜಾವಶಂ: **ಪಂಪಭಾ,** ೨. ೩೩)

**ಉಗುರಿಸು** – ಉಗುರಿನಿಂದ ಕೆರೆ, ಗೀಚು (ಅದನಱಿಯದಂತೆ ಗುರುಗೆ ನಿದ್ರಾಭಿಘಾತಮಕ್ಕುಮೆಂದು ತಲೆಯಂ ಉಗುರಿಸುತ್ತುಂ ಇರೆಯಿರೆ: **ಪಂಪಭಾ,** ೧. ೧೦೪ ವ)

**ಉಗುರ್ವಿಸಿ** – ಉಗುರು ಬಿಸಿ (ಉಗುರ್ವಿಸಿಯಪ್ಪುವು ಒರ್ಮೆ ಪುಗೆವಾರಿರುಹಾಕರವಾರಿ ಸುಯ್ಯ ಬೆಂಕೆಗಳೊಳೆ: **ಶಾಂತಿಪು,** ೮. ೯೫)

**ಉಗುರ್ವೆಚ್ಚನೆ** – ಉಗುರುಬೆಚ್ಚಗೆ ಉಗುರ್ವೆಚ್ಚನಪ್ಪುಣಿಸು .. .. ತನತನಗಿಕ್ಕಿ ಮೆಟ್ಟಿದುದೊ ಭೋಗಿಜನಂ: **ಜಗನ್ನಾವಿ,** ೧೪. ೧೯)

**ಉಗುಟ್** – ಉಗುಳು (ರಾಹು ತವೆ ನುಂಗಿದ ಚಂದ್ರನಂ ಒಯ್ಯನೊಯ್ಯನೆ ಅಂದು ಉಗುಟ್ವವೊಲ್ ಒಪ್ಪಿರಲ್ ಬಲದೊಳುರ್ವಸಿ ದೇಸಿಗೆ ದೇಸಿಯಾಡಿದಳ್: **ಪಂಪಭಾ,** ೭. ೮೮); ಜೊಲ್ಲು; ಎಂಜಲು (ನುಡಿವಾಗಳ್ ಉಗುಟಿ ಸೀಕರಂಗಳ್ ತಮ್ಮ ಮುಂಗೆಯ್ಯ ಮೇಲೆ ಬಿಟಿಳ್ದೊಡೆ: **ವಡ್ಡಾರಾ,** ಪು. ೬೯, ಸಾ. ೨೫)

**ಉಗುಟಿಸು** – ಕಕ್ಕಿಸು, ವಾಪಸ್ಸು ಪಡೆ (ಎನ್ನೊಡೆಮೆಯಂ ಉಗುಟಿಸದೆ ಮಾಣೆಂ ಆರ್ ಬಾರಿಪೊಡಂ: **ಧರ್ಮಾಮೃ,** ೧೨. ೧೩೮)

**ಉಗುಟ್ತಿರ್** – ಹೊಮ್ಮಿಸು (ಮಲ್ಲಿಕೋಜ್ಜ್ವಲಮುಕುಳಕ್ಕಮಾದ ಪೊಸಗಂಪಂ ಉಗುಟ್ತಿರಲಿರ್ದು: **ಆದಿಪು,** ೩. ೧೯)

**ಉಗೆಮಿಗೆ** – ಅಧಿಕವಾಗಿ (ಬಂದುಗೆಯ ಕುಸುಮರಸಮಂ ಬಂದು ಉಗೆಮಿ ಪೀರ್ವ ಷಟ್ಪದಂ ನೆನೆಯಿಸಿತು .. .. ಅರುಣಾಧರಮನೀಂಟುವುದನಂಗನರೆಯಾ: **ಪಾರ್ಶ್ವನಾಪು,** ೯. ೬೮)

**ಉಗ್ಗಡ** – [ಉತ್ಕಟ] ಆಧಿಕ್ಯ (ಇದು ಮನೆಯಲ್ತು ಉರಿವ ದಳ್ಳುರಿ ಉಗ್ಗಡದಂದಮಾಗಿ ತೋಱಿದಪುದು ಕಣ್ಗೆ: **ಪಂಪಭಾ,** ೩. ೪)

**ಉಗ್ಗಡಿಸು** – [ಉದ್ಘೋಷಿಸು] ಕೂಗಿ ಹೇಳು (ರಪಣಮಂ ತೋಱಿಯುಂ ಒತ್ತೆಯಂ ಉಗ್ಗಡಿಸಿಯುಂ ಆಡಿಂ ಎನೆ ಪೆಱತೇನುಪಾಯಮಿಲ್ಲದೆ ಎಮ್ಮಾಳ್ವ ನೆಲನೊತ್ತೆಯೆಂದೊಡೆ: **ಪಂಪಭಾ,** ೭. ೩ ವ); ಕೊಂಡಾಡು (ಕುಲಮನೆ ಮುನ್ನಂ ಉಗ್ಗಡಿಪಿರೇಂಗಳ: **ಪಂಪಭಾ,** ೧೦. ೨೧)

**ಉಗ್ಗು** – ತೊದಲುವಿಕೆ (ಉಗ್ಗು–ವಚನವಿರೋಧೇ: **ಶಬ್ದಮದ,** ಧಾ, ೮೭)

**ಉಗ್ರ** – ಭಯಂಕರವಾದ (ಉಗ್ರಸಂಗ್ರಾಮಗ್ರನಪ್ಪೆನಗೆ .. .. ದಂಡವು ಅಪಹಾಸ್ಯವಪ್ಪುದು: **ಜಗನ್ನಾವಿ,** ೫. ೬೧ ವ)

**ಉಗ್ರಕರ** – ತೀಕ್ಷ್ಣ ಕಿರಣಗಳನ್ನುಳ್ಳವನು, ಸೂರ್ಯ (ಉಗ್ರಕರಂ ಅತುಳ .. .. ಈ ವಿತತಾಟವಿಯಲ್ಲಿ ಸಲಿಸನೆಂದುಂ ಕರಮಂ: **ಚಂದ್ರಪ್ರಪು,** ೫. ೫೧)

**ಉಗ್ರಖಡ್ಗಿ** – ಭಯಂಕರ ಖಡ್ಗಮೃಗ (ಶರಭ ವ್ಯಾಘ್ರ ಉಗ್ರಖಡ್ಗಿ ಪ್ರಕರಖರಭಯಾಕ್ರಾಂತಮಂ .. .. ನೀನೆಂತು ಪೊಕ್ಕೈ: **ಪಂಚತಂತ್ರ,** ೧೧೧)

**ಉಗ್ರಗ್ರಾಹ** – ಮೊಸಳೆ (ತರಳತರಂಗತುರಂಗಂ ಕರಿಮಕರಕರೀಂದ್ರಮಖಿಳಘರಪದಾತ್ಯುತ್ಕರಂ ಉಗ್ರಗ್ರಾಹ ರಥಂ ಭರತಂಗಿತ್ತುದು ಪಯೋಧಿಬಳವಿಳಸನಮಂ: **ಆದಿಪು,** ೧೨. ೭೮)

**ಉಗ್ರಘೋಷ** – ಭಯಂಕರ ಧ್ವನಿ (ಪೆರ್ಚಿತ್ತು ಉಗ್ರಘೋಷಂ ಪ್ರಳಯಘನಘಟಾಟೋಪಗಂಭೀರಘೋಷಂ: **ಆದಿಪು,** ೧೩. ೩೬)

**ಉಘೇ** – ಜಯಘೋಷ (ಕಟ್ಟಿಗೆಗಾಱರ್ ಉಘೇ ಉಘೇ ಎನುತ್ತಿರೆ ನೃಪಲೀಲೆಯಂ ಪಡೆದಪಂ: **ಧರ್ಮಾಮೃ,** ೬. ೧೦೭)

**ಉಚಿತಂ** – ತಕ್ಕನಾದುದು, ಸರಿಯಾದುದು (ಜನಕಂಗೆ ಜಲಾಂಜಲಿಯಂ ತನೂಭವಂ ಕುಡುವುದು ಉಚಿತಂ ಅದುಗೆಟ್ಟೀಗಳ್ ನಿನಗಾಂ ಕುಡುವಂತಾದುದೆ ತನೂಜ ನೀಂ ಕ್ರಮವಿಪರ್ಯಯಂ ಮಾಡುವುದೇ: **ಗದಾಯು,** ೪. ೬೨)

**ಉಚ್ಚ** – ಎತ್ತರವಾದ (ಉಚ್ಚ ಕೇತುಚಯದಿಂ ನೀಲಾಭ್ರಮಂ ಮೇಲೆ ನಿರ್ಮಿಸುತುಂ .. .. ದೇವಕುಳಂ .. .. ಅಲ್ಲಿರ್ಪುವ್ಯಾಕುಳಂ: **ಲೀಲಾವತಿ,** ೭. ೬)

**ಉಚ್ಚಂಡ** – ಹರಿತವಾದ, ಉಗ್ರವಾದ (ಉಚ್ಚಂಡಪ್ರತಾಪೋದಯಂ .. .. ಬೆಳಗುಗೆ ಜಗಮಂ ಗೋಪಮಾರ್ತಂಡದೇವಂ: **ಜಗನ್ನಾವಿ,** ೧. ೪)

**ಉಚ್ಚಂಡಕರ** – ಕೊರೈಸುವ ಕಾಂತಿ, ಬಲಿಷ್ಠ ಕೈ (ಆನತಜನಕ್ಕೆ ಆನಂದಮಂ ಮಾಟ್ಕೆ ಮಂಗಳಂ ಉಚ್ಚಂಡಕರಂ ಮಹೀವಳಯದೊಳ್ ಚಾಳುಕ್ಯಮಾರ್ತಾಂಡನಾ: **ಗದಾಯು,** ೧. ೪)

**ಉಚ್ಚಂಬರಿ** – ಮೇಲೆ ಹಾರು (ಉಚ್ಚಂಬರಿಯದೆ ತದೀಯ ಪದಪಕ್ಷದೊಳೆ ಪತಿತಮಾಗಿರ್ಪುದು: **ಕರ್ಣನೇಮಿ;** ೫. ೬೦ ವ)

**ಉಚ್ಚರತ್** – ಚಿಮ್ಮುವ, ಸಿಡಿಯುವ (ಪ್ರೋದ್ಯತ್ ತರಂಗ ಉಚ್ಚರತ್ ಅಮರನದೀ ಶೀಕರೋದಾರ ತಾರಾರಾಮಂ: **ಕಾದಂಸಂ,** ೧. ೧)

**ಉಚ್ಚರಿಸು** – ಉಚ್ಚಾರಮಾಡು, ಹೇಳು (ಬರೆಪಂಬೊಕ್ಕು ಉಚ್ಚರಿಸಲ್ ಬಾರದುವು ಅಕ್ಕರಮಲ್ತು: **ಶಬ್ದಮದ,** ೧೨)

**ಉಚ್ಚವಿಗ್ರಹ** – ಘೋರಯುದ್ಧ (ತಮ್ಮ ಬಲಮನೊಂದು ಮಾಡಿ ಕೂಡಿಕೊಂಡು ಚಕ್ರವರ್ತಿಯೊಳ್ ಉಚ್ಚವಿಗ್ರಹಂಗೆಯ್ಯಲ್: **ಆದಿಪು,** ೧೩. ೫೬ ವ)

**ಉಚ್ಚಳತ್** – ಮೇಲೆ ಚಿಮ್ಮುವ (ಮತ್ತದ್ವಿಪೇಂದ್ರಾವಳಿಹಸ್ತಾಗ್ರ ಉಚ್ಚಳತ್ ಶೀಕರಸಮುದಯಂ: **ಆದಿಪು,** ೧೩. ೮)

**ಉಚ್ಚಳಿತ** – ಮೇಲೆ ಚಿಮ್ಮಿದ (ಪುಚ್ಚವಣಂ ನೋಡುವೆನೆನ್ನೆಚ್ಚೆಯೊಳೀ ಮುನಿಯ ವರದ ಮಹಿಮೆಯಂ ಎನುತ ಅಂದು ಉಚ್ಚಸ್ತನಿ ಗಂಗೆಗೆ ಶಫರ ಉಚ್ಚಳಿತ ತರತ್ತರಂಗೆಗೆ ಒರ್ವಳೆ ಬಂದಳ್: **ಪಂಪಭಾ,** ೧. ೯೦)

**ಉಚ್ಚಳಿಸು** – ಮೇಲಕ್ಕೆ ಚಿಮ್ಮು (ಪಲತೆಱದ ವಚನಂಗಳಂ ಉಚ್ಚರಿಸುತ್ತುಂ ಉಚ್ಚಳಿಪ ವಿಲೋಚನಜಳಂಗಳಿಂ: **ಆಚವರ್ಧ,** ೨. ೬೦ ವ); ಎಲ್ಲೆ ಮೀರು (ಎಚ್ಚೊಡೆ ತಪೋಮರೀಚಿಯನುಚ್ಚಳಿಸಲ್ಕಾಱದಿತ್ತ ತುರುಗಿದ ಶರಮಂ ಚೆಚ್ಚರದೀಕ್ಷಿಸಿ ಛಲದಿಂದೆಚ್ಚಂ ಪಂಚೇಷು ಮದನಶರದಿಂದಾಗಳ್: **ಗಿರಿಜಾಕ,** ೮. ೧೮)

**ಉಚ್ಚಾಟಿಸು** – ಓಡಿಸು (ಬೇಳ್ವೆಗಳ್ಗೆ ಉಪದ್ರವಂಗೆಯ್ವ ನಿಶಾಟಕೋಟಿಯಂ ನಿಶಿತಶರಕೋಟಿಯಿಂದಂ ಉಚ್ಚಾಟಿಸಿ ಕೆಲವು ದಿವಸಮಿರ್ದು: **ಪಂಪಭಾ,** ೪. ೧೫ ವ)

**ಉಚ್ಚಾವಚ** – ಮೇಲು ಮತ್ತು ಕೀಳು, ವಿವಿಧ (ಉಚ್ಚಾವಚನಾದದಿಂ ಆದಂ ತೀವಿದ ಕುಪ್ಪಿಗೆವೊಲಾದುದು ಅಬ್ಜಭವಾಂಡಂ: **ಜಗನ್ನಾವಿ,** ೧೨. ೯)

**ಉಚ್ಚಾಸನ** – ಉನ್ನತ ಪೀಠ (ಬೇಗಂ ಉಚ್ಚಾಸನದಿಂದ ಇದರೇೞೆಂ ಪೇೞವಲದೇಂ ಕರಂ ತೀರ್ಥಕರನ ಪುಣ್ಯಂ ಪಿರಿದೋ: **ಆದಿಪು,** ೭. ೪೦)

**ಉಚ್ಚಿಷ್ಟ** – ಎಂಜಲು (ಪುಣ್ಯಸ್ತ್ರೀಯರ ಉಚ್ಚಿಷ್ಟದಾಗರಮಪ್ಪಾ ಪಡಿಗಕ್ಕೆ .. .. ಸಾಮ್ಯಸ್ಥಾನಮೆಂದಿಂತು ಕೊಕ್ಕರಿಪಂ: **ಸಮಯಪ,** ೫. ೬೯)

**ಉಚ್ಚು** – ನಿಮಿರಿ ನಿಲ್ಲು (ಇಳೆಯಂ ಸಾಸಿರ ಯೋಜನಂಬರೆಗಂ ಆನುಚ್ಚಿರ್ದೆನಿರ್ದುಂ ಮಹೀತಳ ಮಧ್ಯಸ್ಥನೆನಂತುಮಲ್ಲದೆಯು ಇಂದ್ರಾವಾಸಮಂ ಮುಟ್ಟಿದೆಂ ಬೆಳಗುತ್ತಿರ್ಪ್ಪವು: **ಸುಕುಮಾಚ,** ೧. ೬೫)

**ಉಚ್ಚೈರ್ಧ್ವಾನ** – ಗಟ್ಟಿ ಕೂಗು (ಬಹಿರುದ್ಯಾನಾಂತರದೊಳ್ ಸಹಸೋದಿತ ಮತ್ತಕೋಕಿಲ ಉಚ್ಚೈರ್ಧ್ವಾನಂ ಮುಹುರಾಕರ್ಣಿಸೆ: **ಕವಿರಾಮಾ,** ೧. ೫೫)

**ಉಚ್ಚೈಶ್ರವಸ** – ಇಂದ್ರನ ಕುದುರೆ (ಉಚ್ಚೈಸ್ರವಸಂ ಅದುವೆ ದಿವಿಜತುರಂಗಂ: **ಅಭಿಧಾವ,** ೧. ೧. ೩೭)

**ಉಚ್ಚಿತ್ತಿ** – ಕತ್ತರಿಸುವುದು (ಮೂಲೋತ್ತರಾದಿಭೇದ ಭಿನ್ನಕರ್ಮಪ್ರಕೃತಿಗಳ ನಿರ್ಮೂಳ ಉಚ್ಛಿತ್ತಿ ಮೋಕ್ಷಮೆಂಬುದು: **ಆದಿಪು,** ೧೦. ೬೩ ವ)

**ಉಚ್ಚಿಷ್ಟಪಕ್ವ** – ತಿಂದು ಬಿಟ್ಟ ಹಣ್ಣು (ಮೆಲ್ದು ಉಗುೞ್ದ ಸಹಕಾರೋಚ್ಚಿಷ್ಟಪಕ್ವಂಗಳಂ: **ಸುಕುಮಾಚ,** ೪. ೫೭)

**ಉಚ್ಛೃಂಖಲ** – ಸಂಕೋಲೆಗೊಳಪಡದ, ಕಟ್ಟುಪಾಡುಗಳಿಲ್ಲದ (ದೇವ ಬಲಿಬಂಧನ ಉಚ್ಛೃಂಖಲಾಕಾರ ಜಯ ದೇವ: **ಜಗನ್ನಾವಿ,** ೫. ೧೧೨ ವ)

**ಉಚ್ಛೇದನ** – ತುಂಡರಿಸುವುದು, ನಾಶ ಮಾಡುವುದು (ಅಂತು ದೀರ್ಣೋಚ್ಛೇದನಮಂ ನಿರಾತಂಕಮಾಗಿ: **ಶಾಂತಿಪು,** ೧೧. ೪೮ ವ)

**ಉಚ್ಛೇದ್ಯಶತ್ರು** – ನಾಶಮಾಡಬಹುದಾದ ಶತ್ರು (ಇಂತೀ ಬಲಂಗಳೊಳೊಂದುಮಿಲ್ಲದ ಕಾರಣದಿಂ ನಿಮ್ಮಡಿಗುತ್ಸಾಹಶಕ್ತಿ ಸಾಧಾರಣಂ, ಅದಱೆಂ ನಾವುಂ ಉಚ್ಛೇದ್ಯಶತ್ರುಗಳಾಗಿರ್ದೆವೆಂದು ನುಡಿದ ಚಿರಂಜೀವಿಯ ಮಾತಂ ಮೇಘವರ್ಣಂ ಕೇಳ್ದು: **ಪಂಚತಂತ್ರ,** ೨೯೭ ವ)

**ಉಚ್ಛ್ರಿತ** – ಮೇಲೆತ್ತಿದ (ಉಚ್ಛ್ರಿತಾತಪತ್ರ ಚಿತ್ರಾತಪತ್ರಧೋಧೂಯಮಾನ ಧವಳಚಾಮರ ಸಹಸ್ರಸಂಛಾದಿತ: **ಆದಿಪು,** ೧೧. ೧೪ ವ)

**ಉಚ್ಛ್ವಾಸ** – ಉಸಿರನ್ನು ಹೊರಕ್ಕೆ ಬಿಡು (ವಿಷಣ್ಣಾನನೆಯಂ ಮಾರ್ಗಾವಲಗ್ನನೇತ್ರೆಯಂಉಚ್ಛ್ವಾಸನಿತಪ್ತಾಧರರುಚಿಯಂ .. .. ಕಂಡು: **ಯಶೋಧಚ,** ೨. ೩೫); ಮರಣ; [ಜೈನ] ಕಾಲವನ್ನು ಅಳೆಯುವ ಒಂದು ಪ್ರಮಾಣ (ಸಮಯಾವಳಿಕ ಉಚ್ಛ್ವಾಸಸ್ತೋಕನಿಮೇಷನಾಳಿಕಾಮುಹೂರ್ತದಿವಸ .. .. ಸಂವತ್ಸರಾದಿ ಗಣನಾಕ್ರಮದಿಂ: **ಆದಿಪು,** ೬.. ೪೮ ವ)

**ಉಚ್ಛ್ವಾಸಭಿನ್ನಶ್ರಮ** – ಉಸಿರಾಟದ ತೊಂದರೆ (ಬಾಷ್ಪಮಂ ಸೋಲ್ತ ಸಿಗ್ಗಿಂ ಪೂರಂಬಾಯ್ವ ಬಾಷ್ಪಂಗಳೊಳ್ ಅಸಮಶರಂ ಮಾಡಿದ ಉಚ್ಛ್ವಾಸಭಿನ್ನಶ್ರಮಂ ಪೊರ್ದ್ದೀನ ದೀನಶ್ರಮದೊಳ್ .. .. ಬೆರಸಿದಳ್: **ನೇಮಿನಾಪು,** ೩. ೨೨)

**ಉಜ್ಜವಣೆ** – [ಉದ್ಯಾಪನಾ] ವ್ರತಸಮಾಪ್ತಿ (ಒಂದಕ್ಷೋಹಿಣಿಬಲಂ ಎರಡುಂ ದೆಸೆಯೊಳಂ ಉೞಿದುವು ಅಂತೆ ಭಾರತಂ ಎಮಗೆ ಇಂದು ಉಜ್ಜವಣೆ ದಲ್ ಎಂದು ಅದಟೊಂದುತ್ತರಮಾಗೆ ಕಾದಿದರ್ ಕಟ್ಟಾಳ್ಗಳ್: **ಪಂಪಭಾ,** ೧೩. ೩೬); ನೆರವೇರುವಿಕೆ (ಬಲದೇವಂ ಬಲದೇವನುಜ್ಜವಣೆಯೊಳ್ ಮುಂದಾದರಂ ಕೊಂದ ಮೆಯ್ಗಲಿ ತಮ್ಮಂ ಸಯೆ: **ಶಾಂತಿಪು,** ೮. ೧೦೮)

**ಉಜ್ಜವಣೆವಡೆ–** ಮುಗಿಸು, ಪೂರ್ಣಗೊಳಿಸು (ಆವಳ್ ವನಿತಾನಿಷ್ಪಾದನಕ್ಕೆ ಉಜ್ಜವಣೆವಡೆದಳೋ ಪದ್ಮಜಂಗೆ: **ಲೀಲಾವತಿ,** ೪. ೬೧)

**ಉಜ್ಜಳ** – [ಉಜ್ಜ್ವಲ] ಪ್ರಕಾಶಿಸುವ (ಮುಳಿಸು ಲಲಾಟನೇತ್ರಶಿಖಿ ಮೆಚ್ಚೆ ವಿನೂತ ರಸಪ್ರಸಾದಂ ಉಜ್ಜಳಜಸಂ ಅಗಸಂಗತ ಲಸತ್ ಭಸಿತಂ ಪ್ರಭುಶಕ್ತಿ ಶಕ್ತಿ ನಿರ್ಮಳಮಣಿಭೂಷಣಂ ಫಣಿಭೂಷಣಂ ಆಗೆ ನೆಗೞ್ತೆಯಂ ಪುದುಂಗೊಳಿಸಿದಂ ಈಶ್ವರಂ ನೆಗೞ್ದ ಉದಾರಮಹೇಶ್ವರಂ ಈಗೆ ಭೋಗಮಂ: **ಪಂಪಭಾ,** ೧. ೨)

**ಉಜ್ಜಳಿಕೆ** – ಪ್ರಕಾಶ (ಅದೇಂ ಬೞೆಕೆ ಬಿಂಬದ ಉಜ್ಜಳಿಕೆಯೋ ಸುಧಾಸೂತಿಯಾ: **ಆದಿಪು,** ೧೨. ೭)

**ಉಜ್ಜಳಿಸು** – ಪ್ರಕಾಶಿಸು (ಪೊಸದಳಿರುಟ್ಟುದು ಉಜ್ಜಳಿಸೆ .. .. ಒಸೆದಾಡುವರಾ ಮೃಗಾಕ್ಷಿಯರ್: **ಲೀಲಾವತಿ,** ೧೧. ೩)

**ಉಜ್ಜುಗ** – [ಉದ್ಯೋಗ] ಪ್ರಯತ್ನ (ಎಂದು ಪರಿಚ್ಛೇದಿಸಿ ಮನದೊಳ್ ಉಳ್ಳ ಉಜ್ಜುಗದಿಂ ಅಂಂಜುತ್ತಿರ್ದೊಂದು ದೆವಸಂ: **ಹರಿವಂಶ,** ೧೩. ೧೮ ವ); ಉದ್ದೇಶ (ಗುರ್ಣಾರ್ಣವಂಗೆ ಕುಡು ಗೆಲ್ಲಮಂ ಇಂತಿದೆ ಕಜ್ಜದ ಉಜ್ಜುಗಂ: **ಪಂಪಭಾ,** ೫. ೧೦೨)

**ಉಜ್ಜುಗಿಸು** – ಪ್ರಯತ್ನಿಸು (ಭೂಭುಜ ಭೂನುತನಾಗಳ್ ಉಜ್ಜುಗಿಸೆತದ್ವಿಜಯಾವರಜಂ ಪ್ರತಾಪಪಂಚಾನನಂ ಇಂತು ಬಿನ್ನವಿಸಿದಂ: **ಆಚವರ್ಧ,** ೩. ೩೭)

**ಉಜ್ಜೃಂಭಿತ** – ತೀವ್ರವಾದ (ಅರುಣ ಉಜ್ಜೃಂಭಿತ ಚರ್ಮ ಅಸ್ತಿ ಶಕಲಂ ವಾಲಂ ವಿಷಾಣಂ: **ತ್ರಿಷಷ್ಟಿಪು,** ೨೭. ೩೩)

**ಉಜ್ಜೃಂಭಿಸು** – ಏಳೆಗೆಹೊಂದು (ಪಾರಾವಾರದೊಳ್ ಬಂದಂ ವೀಚಿಕಾವ್ರಜಂ ಉಜ್ಜೃಂಭಿಸೆ ಬಂದಂ ವಿಹಂಗಾಧಿಪಂ: **ಜಗನ್ನಾವಿ,** ೧೩. ೩೭)

**ಉಜ್ಜ್ವಲ** – ಹೊಳೆಯುವ, ಉರಿಯುವ (ಸಂಮಾರ್ಜಿತ ಉಜ್ಜ್ವಲದಶನನಿಚಯ ತಾಂಬೂಲಚರ್ವಣಭರಿತ ಕಪೋಲರುಂ ಗೋನಿಯೋಗ ದಂಢಧಾರರುಂ ಆಗಿ: **ಜಗನ್ನಾವಿ,** ೪. ೮೦ ವ)

**ಉಜ್ಜ್ವಲಿಸು** – ಹೊಳೆ, ಪ್ರಕಾಶಿಸು (ಉಜ್ಜ್ವಲಿಸಿ ಬೆಳೆವ ಮಣಿದೀಪದವೋಲ್: **ಅಜಿತಪು,** ೭. ೧೯)

**ಉಜ್ಝಿತಲಕ್ಷ್ಮ** – ಕಳಂಕವಿಲ್ಲದ (ಅತಿಶುದ್ಧಮಾಯ್ತು ಸತಿಯಾಕೃತಿ ದಿವ್ಯದ್ರವ್ಯ ಗರ್ಭಶೋಧನದಿಂದ ಉಜ್ಝಿತಲಕ್ಷ್ಮಮೆನಿಸಿ: **ಚಂದ್ರಪ್ರಪು,** ೧೧. ೧೪೮)

**ಉಜ್ವಳಿಕೆ** – ಕಾಂತಿ (ಚಂದ್ರಕಿರಣದುಜ್ವಳಿಕೆಯಿಂ ಆ ಭರತನ ಮುಳಿಸಸೊಗೆಯನನುಕರಿಸಿದುದು: **ಆದಿಪು,** ೧೧. ೭)

**ಉಟಜ** – ಪರ್ಣಶಾಲೆ (ವಿರಹದೆ ರಾಮ ಬಾಣದ ಉಟಜಾಂಗಣ ರಮ್ಯಶಿಲಾತಲಂಗಳೊಳ್ ಬರೆಯೆ: **ಕಾದಂಬ,** ೧. ೯೭)

**ಉಡಮೊಗ** – ಬಾಗೆಹೂ[ವಿನಂತಹ] ಮುಖ (ಉಡಮೊಗಮೆಂಬ ತಾವರೆಯ ನೀಳ್ದೆಸಳೊಳ್ ಮಱೆದುಂಬಿ ಪಾಯ್ದು ಒಡಂಬಡನೊಳಕೊಂಡು ಕಣ್ಮಲರ ಬೆಳ್ಪುಗಳ್ ಆಲಿಯ ಕರ್ಪಿನೊಳ್ ಪೊದಳ್ದು; **ಪಂಪಭಾ,** ೫. ೭೮)

**ಉಡಲಿಕ್ಕು** – ಉಡುಗೊರೆಯನ್ನು ಕೊಡು (ಸಾಸಿರ ಪೊಂಗೆಯ್ದುಂ ಚೀ ಕಾಸಟಮೆಂದು ಒಂದು ಲಕ್ಕಗೆಯ್ವುದಿರ್ದರ್ಕಂ ಮಾಸರಂ ಉಡಲೆಂದು ಅಧಿಕ ವಿಳಾಸದಿಂದ ಉಡಲಿಕ್ಕಿ ನೆಱೆಯೆ ಬಿಯಮಂ ಮೆಱೆದಂ: **ಪಂಪಭಾ,** ೩. ೪೪)

**ಉಡಿ** – ಒಡೆದುಹೋಗು (ಪೊಲಂ ಉಡುಗಿ ಬಂದುದು ಉಡಿದುದು ಪುಲ್ ಕಾಡುಂ ದಲ್ ಎಲೆಯಿಕ್ಕಿ ಘಳಿಲೆನೆ ನಿಂದುವು ತಣಿದುವು ಮೃಗಂಗಳ್ ಎತ್ತಲುಮೀಗಳ್: **ಪಂಪಭಾ,** ೫. ೩೭); ತುಂಡುಮಾಡು (ಕಡುಲೋಭಂ ತನ್ನ ಕಾಲ್ಗಳಂ ಪಿಡಿದು ಉಡಿದಂ: **ಆದಿಪು,** ೫. ೨೦); ಮುರಿದುಹೋಗು (ಎಲ್ಲಂ ನಟ್ಟುಡಿದ ಬಾಳ ಕಕ್ಕಡೆಯುಡಿಗಳುಮಂ ಅಯಸ್ಕಾಂತಮಂ ತೋಱೆ ತೆಗೆಯಿಸುತ್ತುಂ: **ಪಂಪಭಾ,** ೧೧. ೨ ವ); ಚಿಗುರಿಡು (ಪೊಲನುಡುಗಿ ಬಂದುದು ಉಡಿದುದು ಪುಲ್ ಕಾಡುಂ ದಲೆಲೆಯಿಕ್ಕಿ ಘಳಿಲೆನೆ ನಿಂದುವು ತಣಿದುವು ಮೃಗಂಗಳೆತ್ತಲುಮೀಗಳ್: **ಪಂಪಭಾ,** ೫. ೩೭); ಚೂರು (ಎಲ್ಲಂ ನಟ್ಟುಡಿದ ಬಾಳ ಕಕ್ಕಡೆಯುಡಿಗಳುಮಂ ಅಯಸ್ಕಾಂತಮಂ ತೋಱೆ ತೆಗೆಯಿಸುತ್ತುಂ: **ಪಂಪಭಾ,** ೧೧. ೨ ವ); ಮಡಿಲು (ಪಲತೆಱದ ನಳನಳಿಸಿ ಬೆಳೆದ ಎಳವಾಟೆಯ ಸುಟಿಯೆಲೆಯಂ ಉಡಿಯೊಳ್ ಅಮರ್ಚಿಯುಂ: **ಕಬ್ಬಿಗಕಾ,** ೯೮ ವ); ಒಂದು ರೋಗ (ಉಡಿ–ಮೋಟನೇ ರೋಗಭೇದೇ ಚ: **ಶಬ್ದಮದ,** ಧಾ ೨೭೫)

**ಉಡಿಸು** – ಉಟ್ಟುಕೊಳ್ಳುವಂತೆ ಮಾಡು (ನುಡಿಸಿದನೆನ ನಲ್ಲಂ .. .. ಉಡಿಸಿದಂ ಒಳ್ಳುಡೆಯಂ: **ಕವಿರಾಮಾ,** ३. ೨೬೪)

**ಉಡು** – ಧರಿಸು (ಅಯ್ಯಾ ಎನಗುಡಲೇನಾನುಮೊಂದು ದಮ್ಮಕ್ಕಾದೊಡಂ ಸೀರೆಯಂ ಕೋಡೀಯಿಂ: **ವಡ್ಡಾರಾ,** ಪು. ೭೭, ಸಾ. ೧೧); ಹಲ್ಲಿ ಜಾತಿಯ ಒಂದು ಪ್ರಾಣಿ (ಅಂತು ಅಪೂರ್ವಂಗಳಾಗಿ ತೊಳಗುವ ಕಿಱುದೊಡೆಗಳ್ ಉಡು ಅಡರ್ದನ್ನಮಾರೂಢ ಸರ್ವಜ್ಞ ದೊಡ್ಡ ಮಾರ್ಗಂಗಳ್ ಎಳವಾಟೆಯ ದಿಂಡಿನೊಳ್ ಸಾಣೆಗಟ್ಟಿದಂತಾದುವು: **ಪಂಪಭಾ** ಪರಿಷತ್ತು, ೨. ೩೯ ವ); ನಕ್ಷತ್ರ (ಅಮೃತಕರದ್ಯುತಿಯುಂ ಉಡುಗಣದ್ಯೋತಿಯುಂ ಅಸ್ತಮಿಸೆ: **ಪಂಚತಂತ್ರ,** ೨೭೮)

**ಉಡುಕ** – ಕುಂದುವಿಕೆ (ದಾನಗುಣಂಗಳ್ ಕಿಡೆ ತೇಜದ ಉಡುಕಮೇಂ ಪಿರಿದಾಯ್ತೇ: **ಆದಿಪು,** ೬. ೫೧)

**ಉಡುಗು** – ಕ್ಷೀಣಿಸು (ಆಯುಷ್ಯಮುಡುಗಿ ಬಂದೆಡೆಯೊಳ್ ಬೇಡಿರ್ದಲ್ಲ ಸುಕೃತಮುಮಂ ಇತ್ತಿರ್ದೆಡೆಯಿಂದೆತ್ತಿ ಪೂಜಿಪರ್ ಸಲೆ ಜೈನರ್: **ಸಮಯಪ,** ೪. ೮೬); ಒಳಸೇರು; ನಿಂತುಹೋಗು; ಹಿಂತೆಗೆದುಕೊ (ಬೇಡ ಬೇಡ ಅಂಬಂ ತುಡದಿರ್ ಉಡುಗಿದರ್ ಮೃಗವಲ್ಲ ಇಲ್ಲಿ ಸಂದೆಯಮಿಲ್ಲ ಆಂ ಬಲ್ಲೆಂ: **ಕರ್ಣನೇಮಿ,** ೧. ೭೫ ವ); ಕಡಿಮೆ ಮಾಡು (ಕುಳಿರ್ವ ತಿಳಿನೀರಂ ಉಡುಗದೆ ತಳಿ: **ಆದಿಪು,** ೨. ೧೪); ಗುಡಿಸು (ನಾನಾವಿಧ ಧಾನ್ಯಂಗಳಂ ಪದನಱಿದು ಉಡುಗುವ ಕಣಂ ಮಾಡುವ ಒಕ್ಕುವ ಅಡುಕುವ: **ಆದಿಪು,** ೬. ೭೭ ವ)

**ಉಡುಗಿಸು** – ಅಡಗಿಸು (ಕೃತಕಜಿನರೂಪಮಂ ಉಡುಗಿಸಿ .. .. ಪೂರ್ವಸ್ವರೂಪಮಂ ಕೈಕೊಂಡು: **ಧರ್ಮಾಮೃ,** ೫. ೧೫೮ ವ)

**ಉಡುಗೆ** – ಹಾಕಿಕೊಳ್ಳುವ ಬಟ್ಟೆ (ಪಿಡಿದ ಜವನಿಕೆಯ ಮಱೆಯೊಳ್ ತೊಡವುಮಂ ಉಡುಗೆಯಂ ಅಂಗದಿಂ ಪಿಂಗಿಸಿ: **ಆಚವರ್ಧ,** ೧೫. ೭)

**ಉಡುಗೊಱೆ** – ಕಾಣಿಕೆ (ಶ್ರೀವಿಜಯಂ ಸುತಾರೆಯೊಳ್ ನೆರೆದು .. .. ಅನೇಕ ಪಸದನದುಡುಗೊಱೆಸಹಿತಂ ಕಳಿಪೆ: **ಶಾಂತಿಪು,** ೬. ೨೩ ವ)

**ಉಡುತತಿ** – ನಕ್ಷತ್ರಗಳ ಸಮೂಹ (ಕೊಳನಂ ಗಗನಂ ನೀರ್ವೂಗಳಂ ಉಡುತತಿ ನೀರಂ ಅಚ್ಚವೆಳ್ದಿಂಗಳ ಬೆಳ್ಪಳಿಸೆ: **ಅಜಿತಪು,** ೬. ೪೪)

**ಉಡುಪ** – ಚಂದ್ರ (ಉಡುಪ ವಿರಹ ದುಸ್ಸಹವಾಸರಂಗಳಂ ಕಟಿಪಲ್ಕೆ ಕುಮುದಿನಿಯಿರ್ಪ ತಾಂ ಸಿಡಿಲ ಕಿಚ್ಚಿನ ಬೇಗೆಯ ಪಾಱೆಸಲ್ ಜಲಧರಸಂಕುಲಮಿರ್ಪ ತಾಣಂ: **ಕಾದಂಬ,** ೭. ೨೩), ಅಂಗಹೀನ (ಭವದಾನನಕ್ಕೆ ಸೋಲ್ತು ಆತ್ಮವಿಲಾಸಮಂ ಉಟಿದ ತೆಱದೆ ರುಚಿಗೆಟ್ಟು ದಿಗಂತ ವಿಲಂಬಿ ಬಿಂಬಂ ಅಂಬುರುಹವೈರದಿಂದ ಉಡುಪಂ ಉಡುಪನಾದಂತಾದಂ: **ಶಾಂತಿಪು,** ೫. ೮೮)

**ಉಡುಪಾನನೆ** – ಚಂದ್ರಮುಖಿ (ಒಡನಿರ್ದ ನಲ್ಲನಂ ಬಿಸುಟು ಉಡುಪಾನನೆ ಪರಿಯೆ: **ಹರಿವಂಶ,** ೧. ೪೬)

**ಉಡುಪಾಸ್ಯೆ** – ಉಡುಪಾನನೆ (ಪಡೆಗುಂ ಜಯಮಂ ಮದನಂಗೆ ಉಡುಪಾಸ್ಯೆಯ ಚೆಲ್ವನಪ್ಪ ಕಿಱುದೊಡೆಯ ನಯಂ: **ಹರಿವಂಶ,** ೭. ೨೫)

**ಉಡುಮೊಗ** – ಶಿರೀಷದ ಹೂವಿನಂತೆ ಕೋಮಲ ಮುಖವುಳ್ಳವನು (ಬಂದರ್ ನಗೆಮೊಗದ ಉಡುಮೊಗದ ಮುದ್ದುಮೊಗದ ಅಂಗನೆಯರ್: **ಜಗನ್ನಾವಿ,** ೪. ೧೨೩)

**ಉಡುರಾಜಾನನೆ** – ಚಂದ್ರಮುಖಿ, ಸುಂದರಿ (ಉಡುರಾಜಾನನೆ ರಾಜಶೇಖರನಸೊರ್ವಳ್ ಕೂರ್ಮೆಯಿಂ ನೋಡಿದಳ್: **ರಾಜಶೇವಿ,** ೭. ೧೩)

**ಉಡುವರ** – ಚಂದ್ರ (ಮಧುರ ತಾರಕಾವಸನಂ ಭಾಸುರ ಚಂದ್ರಕಾತಿಲಕಂ ಉಡುವರ ಕಾಂತಿಯುತಂ ಬೆಡಂಗುವೆತ್ತಾ್ಗಳ್: **ಅಜಿತಪು,** ೬. ೩೯)

**ಉಡೆ** – ಸೊಂಟ (ಉಡೆ ಬಾಳಕಿಯರ ಪಱೆಕ್ಕೆ ದುಡುಕಿಂದಂ ಪಱೆದ ಮುಂಜಿ: **ಅನಂತಪು,** ೧. ೫೮); ಉಡುವ ಬಟ್ಟೆ (ಉಡೆ ಜೋಲಲ್ ನೂಲ್ ಸಡಿಲಲ್ ಮುಡಿ ಪರೆಯಲ್: **ಕಾದಂಬ,** ೩. ೨೭)

**ಉಡೆಗಂಟೆ** – ಮಕ್ಕಳಿಗೆ ಸೊಂಟಕ್ಕೆ ಕಟ್ಟುವ ಗಂಟೆಯಾಕಾರದ ಆಭರಣ (ಮಲ್ಲಗಂಟಿನ ತೊಡರ್ಚಿದ ಉಡೆಗಂಟೆಯ ಕಿರ್ಗಟ್ಟಿನ ಸುರಗೊಯ ಕಟ್ಟಿದ ಚಿಂದಿರಯ: **ಗಿರಿಜಾಕ,** ೬. ೫೫ ವ)

**ಉಡೆದೊವಲ್** – ಉಟ್ಟಿರುವ ಚರ್ಮ (ಮಣಿ ಉಡೆದೊವಲುಂ ಪೀಲಿಯ ಪಣೆಗಟ್ಟುಂ: **ಶಬ್ದಮದ,** ೭೫, ಪ್ರ, ೪)

**ಉಡೆದೋಲು** – ಉಟ್ಟಿರುವ ಚರ್ಮ (ಉಡೆದೋಲಂ ಪಣೆಕಟ್ಟುಂ ಮಡಮೇಱೆಸಿ ಮೆಟ್ಟಿದ ಎಕ್ಕಡಮುಂ: **ವರ್ಧಮಾಪು,** ೨. ೪೫)

**ಉಡೆನೂಲ್** – ಉಡಿದಾರ (ಮೇಲೆ ಮಿಸುಗುವ ಉಡೆನೂಲ ಪಸುರ್ವರಲ ರಶ್ಮಿಗಳಿಂ ಎಳೆವ ಅಸುರಂ: **ಆಚವರ್ಧ,** ೭. ೯ ವ)

**ಉಡೆವಣಿ** – ಗೆಜ್ಜೆಯುಳ್ಳ ಉಡಿದಾರ (ಉಡೆವಣಿ ಪಱೆಯದ ಮುನ್ನಮೆ ತೊಡಗಿ ಚಲಂ ನೆಗೞೆ ರಿಪುಬಲಂಗಳನೆ ಪಡಲ್ವಡಿಸಿ ಪರಬಲದ ನೆತ್ತರ ಕಡಲೊಳಗಣ ಜಿಗುಳೆ ಬಳೆವ ತೆಱದೊಳೆ ಬಳೆದಂ; **ಪಂಪಭಾ,** ೧. ೪೬)

**ಉಡ್ಡಿಸು** – ಹೆದರಿಸು (ಪಿಸುಣ್ ನುಡಿಯಲ್ ಉಡ್ಡಿಸಿ ಸೂಱೆಗೊಳಲ್ ವಿಶಿಷ್ಟರಂ ಮಱುಗಿಸಲ್ .. .. ಅಣಂ ಆಗದು ಕೇಳ್ ತುೞೆಲಾಳ ಧರ್ಮಮಂ: **ಹರಿವಂಶ,** ೧೧. ೯೨)

**ಉಡ್ಡೀನ** – ಗಗನಯಾನ (ಸ್ಫುರತ್ ಉಡ್ಡೀನ ಮರೀಚಿರಾಜಿ ವಿಲಸತ್ಸೂತ್ರಂಗಳಂದಾಗೆ ಬಂಧುರದಂಡಂ ನಭಮಾಗೆ: **ಉದ್ಭಟಕಾ.** ೧೦. ೨೨)

**ಉಣ್** – ಊಟಮಾಡು (ಉಪಾಧ್ಯಾಯಂಗೆ ಕಱಿಮೆಯ ಕೂೞುಂ ತುಪ್ಪಮುಂ ತೊವೆಯುಂ ಉಣಲ್ಕೊಟ್ಟಟು: **ವಡ್ಡಾರಾ,** ಪು. ೭೫. ಸಾ. ೧೫); ಅನುಭವಿಸು (ಮಾಡಿದುದಂ ಉಣ್ ಮಹಾರಾಜ ಎಂಬಿನಂ: **ಯಶೋಧಚ,** ೩. ೩೨)

**ಉಣಸು** – ಆಹಾರ (ಈ ನುಣ್ಬಳಿಯ ಉಣಸಂ ಕಂಡು ಮನ್ಯುಕೆತ್ತು ಸಯರಿಸದೆ ಇನಿಸುಂ ಕೆಟ್ಟುವೋಗಿ: **ಹರಿವಂಶ,** ೧೪. ೩೩ ವ)

**ಉಣಿಸು** – ಊಟ (ನಾಳಿನ ಉಣಿಸು ಎನಗೆ ದೊರೆಕೊಳಿಸಿ ಬಂದುದು ಕರಮೊಳ್ಳಿತ್ತಾಯ್ತೆಂದು ನಗುತಿರ್ಪನ್ನೆಗಂ: **ಪಂಪಭಾ** ೩. ೨೬ ವ)

**ಉಣ್ಣಪಡು** – ಊಟಮಾಡದೆ ಮಲಗು (ಪಸಿದು ಉಣ್ಣಪಟ್ಟು ಬಿರ್ದಿರ್ದು ಸಮುದ್ರದ ತಡಿಯೊಳ್: **ಆದಿಪು,** ೧೪. ೬೮)

**ಉಣ್ಣವಳಿ** – ಹಿರಿದು (ಉಣ್ಣವಳಿಯೆಂದು ಪಿರಿದು: **ಶಬ್ದಮದ,** ಪ್ರಸಾ, ೩೦)

**ಉಣ್ಮೆಪೊಣ್ಮು** – ಚಿಮ್ಮಿ ಸೂಸು (ಉಣ್ಮೆಪೊಣ್ಮೆ ಕಣ್ಮಲರ್ಗಳಿಂ ಎಚ್ಚುಪಾಯ್ದುವು ಅರಲಂಬುಗಳಂತೆ ವಿಲೋಚನಾಂಬುಗಳ್: **ಪಂಪಭಾ,** ೪. ೧೦೮)

**ಉಣ್ಮು** – ಉಬ್ಬು, ಉಕ್ಕಿ ಬರು (ನರಲೋಕಂಬರಂ ಉಣ್ಮೆ ಪೊಣ್ಮೆದ ಪಯಃಪೂರಂಗಳಿಂದಂ: **ಆದಿಪು,** ೭. ೧೦೧); ಹಿಗ್ಗು

**ಉಣ್ಮೆ** – ಇರುವಿಕೆ (ಕೊಕ್ಕರಿಸುವ ಲೋಕದೊಂದುಲಿಪಿಂದಱೆ ಭೂಪತಿ ಪಾಪದುಣ್ಮೆಯಂ: **ಧರ್ಮಾಮೃ,** ೯. ೩೫)

**ಉತ್ಕ** – ಕುತೂಹಲವುಳ್ಳ (ಮಧುಮಾಸಕೇಸರಿ ವಿಯೋಗಿಗಳೆಂಬ ಮೃಗಂಗಳಂ ಭಯಂಗೊಳಿಸಿದುದು ಉತ್ಕ ಕೋಕಿಲ ಗರ್ಜಿತ ತರ್ಜಿತಂಗಳಿಂ: **ಅಜಿತಪು,** ೬. ೨೩); ಮದಿಸಿದ (ಪೊರ್ದಿದಂ ಅಬ್ಜಷಂಡ ಸಂಭನ್ನಮಂ ಉತ್ಕ ಕಂಸ ಮಧುರಸ್ವನಮಂ ಬನಮಂ ರಘೂದ್ವಹಂ: **ಪಂಪರಾ,** ೮. ೨); ಮೈಮರೆತ (ಮತ್ತಿತ್ತ ಮದೋತ್ಕ ಕೋಕಿಲಕದಂಬಕವು ಎಯ್ದೆ ವಿಜೃಂಭಿಸಿತ್ತು: **ಕಾದಂಸಂ,** ೪. ೭೮)

**ಉತ್ಕಂಚಂ ನುಡಿ** – ಗಟ್ಟಿಯಾಗಿ ಮಾತಾಡು (ಎಡೆಗೊಂಡಿರಿಂ ಉತ್ಕಂಚಂ ನುಡಿಯದಿರಿಂ ನೃಪತಿ ನುಡಿಯೆ ನುಡಿಯಿಂ ನೀಮಿರ್ಪೆಡೆಯೊಳಿರಿಂ ನೀವೞೆವಿರ್ ಮಿಡುಕಿದೊಡೆ ಎನೆ ಚಿತ್ರವೇತ್ರದಂಡಧರರ್ಕಳ್: **ಪಂಪಭಾ,** ೧೪. ೨೨)

**ಉತ್ಕಂಠ** – ಅತಿ ಔತ್ಸುಕ್ಯ (ಗಂಧರ್ವರಾಜನುಂ ಮದಿರಾದೇವಿಯುಂ ನಿಮ್ಮ ನೋಡಲ್ ಉತ್ಕಂಠರಾಗಿ ಕರೆಯಲ್ ಅಟ್ಟಿದರ್: **ಕಾದಂಸಂ,** ೫. ೩೦ ವ)

**ಉತ್ಕಂಠತೆ** – ತವಕ (ಉತ್ಕಂಠತೆ ಮಯೂರಂಗಳೊಳ್ .. .. ಪಂಕ್ತಿಭೇದಂ ಲಿಪಿಗಳೊಳ್ ಅಕ್ಕುಮಲ್ಲದೆ ಜನಪದದ ಜನಂಗಳೊಳಿಲ್ಲ: **ಜಗನ್ನಾವಿ,** ೨. ೧ ವ)

**ಉತ್ಕಂಠಿತ** – ತವಕದಿಂದ ಕೂಡಿದ (ತನ್ನ ವಿಜಯಶ್ರೀಯ ಬರವಿಂಗೆ ಇದಿರ್ವಂದಂತೆ ಬಂದ ಶರತ್ಕಾಲಶ್ರೀಯಂ ಉತ್ಕಂಠಿತ ಹೃದಯನಾಗಿ ಮೆಚ್ಚಿ ನೋಡುತ್ತುಂ: **ಪಂಪಭಾ,** ೭. ೭೧ ವ)

**ಉತ್ಕಂಪ** – ನಡುಕ (ಉತ್ಕಂಪ ದರಿದ್ರಮಧ್ಯಂ .. .. ಗಾಡಿಯನೀಯೆ ಸೌಮದರಿಯರ್: **ಆದಿಪು,** ೮. ೭೦)

**ಉತ್ಕಚ** – ಮೇಲಕ್ಕೆದ್ದ ಕೂದಲು (ಉತ್ಕೋಪದಹನದೊಡನೆ ಪೃಷತ್ಕಂಗಳ್ ಕೋಟಿಗಣಿತದಿಂದ ಉಱುವಿನಂ ಆರ್ದ ಉತ್ಕಚದಿಂ ಉಱದೆ ಘಟೋತ್ಕಚನಂ ಬಿಟ್ಟು ಮೂರ್ಛೆವೋಪಿನಂ ಎಚ್ಚಂ: **ಪಂಪಭಾ,** ೧೧. ೮)

**ಉತ್ಕಟವೃತ್ತಿ** – ತೀವ್ರತೆ ಹೊಂದಿರುವ ಸ್ಥಿತಿ (ಮೃದುಪದ ಬಂಧಮುಂ ಸುರುಚಿರಾರ್ಥಮುಂ ಉತ್ಕಟವೃತ್ತಿಯಾಗಿ ತೀವಿದ ರಸಮುಂ: **ಪುಷ್ಪದಂಪು,** ೧. ೪೦)

**ಉತ್ಕರ** – ಸಮೂಹ, ಗುಂಪು (ದುರ್ವಾರ ದುಃಖೋತ್ಕರಂ ಎಲ್ಲಂ ನೋಡಲ್ ಎನ್ನಿಂದ್ರಿಯನಿವಹದ ದೋಷಂ ದಲಂ: **ಕಾದಂಸಂ,** ೮. ೩೯); ಸೀಳುವುದು (ಪರಿಗಳಿತ ಪೂತಿಗಂಧರ್ ಖರ ಕಾಕ ಸೃಗಾಲ ಕರಭ ಕೌಶಿಕ ವೃಕ ವಾನರ ವಿಷದಂಷ್ಟ್ರೋತ್ಕರ ಕುರ್ಕುರ ಕೀಟಕ ಭಲ್ಲನಿಕರ ನಿಷ್ಠುರನಿನದರ್: **ಶಾಂತೀಶ್ವಪು,** ೯. ೧೦೬); ಅಧಿಕ (ಅವಿಚಲಮಪ್ಪ ಲಕ್ಷ್ಮಿ ವಿವಿಧೋತ್ಕರಹೃದಯಮೆನಿಪ್ಪ ವಿದ್ಯೆ ನೋಟ್ಟವರನುರಾಗಮಂ ಪಡೆವ ರೂಪು: **ಮಲ್ಲಿನಾಪು,** ೩. ೨೦)

**ಉತ್ಕರಣ** – ಕೆತ್ತನೆ ಕೆಲಸ (ಇಂದ್ರಜಾಲಂ ಎಱಕಂ ಲೆಪ್ಪಂ ಶಿಲಾಕರ್ಮಂ ಉತ್ಕರಣಂ ಚಿತ್ರವಿವಕ್ಷೆ ವಾಸ್ತು ಶಕುನಜ್ಞಾನಂ: **ಪುಷ್ಪದಂಪು,** ೪. ೫೯)

**ಉತ್ಕರ್ಣ** – ಮೇಲಕ್ಕೆದ್ದಿರುವ ಕಿವಿ (ಚೂತಾಮೋದಕ್ಕೆ ಮೂಗಂ ತದುಕಿನ ತಳಿರ್ಗಾಸ್ವಾದಮಂ ತತ್ ಪುಳಿಂದೀಗೀತಕ್ಕೆ ಉತ್ಕರ್ಣಮಂ .. .. ಒಪ್ಪಿಇ: **ನೇಮಿನಾಪು,** ೫. ೯೩)

**ಉತ್ಕರ್ಷ** – ಹೆಚ್ಚಳ, ಏಳಿಗೆ (ಶೀರ್ಷಾಭರಣಂ ಧರೆಗೆ ಉತ್ಕರ್ಷ ವಿಳಾಸನದ ಭೂಮಿ ಸಕಳ ಕನಕ್ಕಂ: **ಯಶೋಧಚ,** ೧. ೨೭)

**ಉತ್ಕಲಿಕೆ** – ವಿರಹಕಾತರ (ಚಿತ್ತದ ಉತ್ಕಲಿಕೆಯಿಂ ನಭಕೆ ಈ ನೆಗೆತಂದಳ್ ಆಗಳುಂ ಮೊಗಮನೆ ನೋಡಲೆಂದು ಉರದೊಳ್ ಈ ನೆಲಸಿರ್ದಪಳ್: **ಕಾದಂಸಂ,** ೫. ೭೪); ಅಲ್ಲೋಲ ಕಲ್ಲೋಲ

**ಉತ್ಕಲ್ಲೋಳ** – ಎತ್ತರವಾದ ಅಲೆ (ತಾಙುದ್ದಂಬರಂ ಉತ್ಕಲ್ಲೋಳಂ ಅಸ್ಪೃಕ್ಸಿಂಧು ಕಾಟ್ಪುರಂ ಬರಿವಿನೆಗಂ ತಾಳುಂ ತಟ್ಟುಂಬೊಯ್ದರ್: **ಪಂಪರಾ,** ೧೩. ೬೪)

**ಉತ್ಕಳಿಕಾವಿಲಾಸ** – ಮೊಗ್ಗುಗಳ ವೈಭವ (ಪುಳಕೋದ್ಗಮಂಗಳುಂ ತನುಲತೆಯೊಳ್ ಪೊದಳ್ದು ಒದವೆ ತಾಳ್ದಿದಳ್ ಉತ್ಕಳಿಕಾವಿಲಾಸಮಂ: **ಪಂಪರಾ,** ೭. ೧೦೬)

**ಉತ್ಕಳಿಕೆ** – ಮೊಗ್ಗು (ಜೋಲ್ವರ್ ಉತ್ಕಳಿಕೆಯಿನಾಮ್ರವಲ್ಲರಿಯೊಳ್ ಓಪರ್ ಆ ಪುರನಂದನಂಗಳೊಳ್: **ಅನಂತಪು,** ೧. ೯೫); ವಿರಹ ಕಾತರ (ನವವರನಂ ನೋಡುವ ಉತ್ಕಳಿಕೆಯಿನೇಂ ಯುವತಿಯ ಕಣ್ಣುಂ ಮನಮುಂ ಜವನಿಕೆಯಂ ಕನ್ನಮಿಕ್ಕಲಡಪಡಿಸಿದುದೋ: **ಅನಂತಪು.** ೬. ೫೬)

**ಉತ್ಕಶಿಖಂಡಿತಾಣ್ಡವ** – ಉತ್ಕಂಠಿತವಾದ ನವಿಲಿನ ಕುಣಿತ (ಉತ್ಕಶಿಖಂಡಿತಾಣ್ಡವಮನೋಹರಂ: **ಆದಿಪು,** ೧. ೬೩)

**ಉತ್ಕೀರ್ಣ** – ಚೆದುರಿದ (ಕುಲಗಿರಿ ಶರಣಸ್ಥಾನಂ ಉತ್ಕೀರ್ಣಫೇನಂ ಬಳವದ್ವೀಚೀವಿತಾನಂ ಪ್ರಬಳ ಘುಳುಘುಳುಧ್ವಾನಂ ಅಂಭೋನಿಧಾನಂ: **ಜಗನ್ನಾವಿ,** ೧. ೨೬); ಕೆತ್ತಲ್ಪಟ್ಟ (ಸಮುದ್ರ ಉತ್ಕೀರ್ಣ ನಿವಾಸಂಗಳಪ್ಪ ಪಟ್ಟಣಂಗಳುಮಂ: **ಆದಿಪು,** ೮. ೬೩ ವ)

**ಉತ್ಕೂಟ** – ಎತ್ತರವಾದ ಶಿಖರ (ದುರ್ಯೋಧನ ಊರು ಕ್ಷಮಾಧರ ವಜ್ರಂ ಕುರುರಾಜರತ್ನ ಮಕುಟ ಉತ್ಕೂಟ ಅಂಘ್ರಿ ಸಂಘಟ್ಟಸಂಗರಂ ಎಂದು ಅಭಿವರ್ಣಿಪೆಂ ರಣಯಶ್ರೀರಾಮನಂ ಭೀಮನಂ: **ಗದಾಯು,** ೧. ೫೨)

**ಉತ್ಕೆ** – ಉತ್ಕಂಠತೆ, ವಿರಹಕಾತರ ಉನ್ಮನಮೆ ಮಾಟ್ಕುಂ ಉತ್ಕೆಯಂ ಉನ್ಮದ ಬರ್ಹಿಣಶಿಖಂಡಿಕೇಕಾವಿರುತಂ .. .. ದೆಸೆದೆಸೆಗೆಸೆಗುಂ: **ಕಾವ್ಯಾವಲೋ,** ೪೬೦)

**ಉತ್ಕೇತು** – ಹಾರಾಡುವ ಬಾವುಟ (ಸಾಕೇತಂ ಉತ್ಕೇತು ಬಾಹುಗಳಿಂದಂ ಕರೆವಂತೆ ಏನೆಸೆದುದೋ ಸರ್ವಾರ್ಥಸಿದ್ಧೀಶನಂ: **ಆದಿಪು,** ೭. ೨)

**ಉತ್ಖಾತ** – ಎಳೆಯಲ್ಪಟ್ಟ (ಗಂಡಗುಣಂ ವೀರಶ್ರೀಗಾದುದು ನೃಪವೀರಭುಜೋತ್ಖಾತ ಖಡ್ಗ ಧಾರಾಶ್ರಯದಿಂ: **ಮಲ್ಲಿನಾಪು,** ೩. ೧೩)

**ಉತ್ಕ್ರಾಂತಿ** – ನಿರ್ಗಮನ (ಚಿತ್ತದೊಳೊಂದುಂ ತೊದಳಿಲ್ಲದೆ ಎನ್ನಸುಗಣಕ್ಕೆ ಉತ್ಕ್ರಾಂತಿಯಂ ಮಾಡುವೆಂ: **ಗದಾಯು,** ೯. ೨೯)

**ಉತ್ಖಾತ** – ಒರೆಯಿಂದ ಹೊರಕ್ಕೆಳೆದ (ಉತ್ಖಾತಮಾತ್ರವಿತ್ರಸ್ತ ಸಮಸ್ತಾರಿಮಂಡಲಮುಂ: **ಆದಿಪು,** ೧೧. ೩ ವ)

**ಉತ್ತ** – ಮಧ್ಯದ ಪ್ರದೇಶ (ಅತ್ತ ಮಹೀಶ್ವರ ಅವಸಥಂ ಇತ್ತ ಮಹೀತಳಂ ಉತ್ತ ಪನ್ನಗೋದಾತ್ತ ಸಮಸ್ತಲೋಕಂ: **ಪಂಪಭಾ,** ೧. ೭೫)

**ಉತ್ತಂಭಿತ** – ಮೇಲೆತ್ತಿ ಹಿಡಿದ (ಪೌರನಾರೀಜನಂಗಳ್ ಗೀರ್ವಾಣಶಂಕೆಯಿನುತ್ತಂಭಿತ ಪಕ್ಷ್ಮಪಾಳಿವದನರ್: **ಶಾಂತಿಪು,** ೪. ೭೨ ವ)

**ಉತ್ತಂಸ** – ತಲೆಯ ಒಡವೆ (ಶ್ರೀಪಾದಂ .. .. ಭೂಪಾಲೋತ್ತಂಸ ತಾರಾತರಳ ಮಣಿಗಳಿಂದುತ್ತಮಾಂಗಂ .. .. ಅಚಿಪೆ ನಿಜೈಶ್ವರ್ಯಮಂ: **ಮಲ್ಲಿನಾಪು,** ೧. ೧); ಶ್ರೇಷ್ಠನಾದವನು (ಸೌಂದರಿಯರೇಕಚ್ಛತ್ರರಾಜ್ಯಾಭಿಷೇಕಂ ಇದೆಂಬಂತಿರೆ ಮಜ್ಜನಂಬುಗಿಸಿದರ್ ಮನ್ವನ್ವಯೋತ್ತಂಸನಂ: **ಆದಿಪು,** ೮. ೭೦)

**ಉತ್ತಂಸಿತ** – ಶೋಭಿಸುವ (ಅಂತೊಗೆದು ದಿಕ್ಕರಿ ಕರಾನುಕಾರಿ ಪರಿಘ ಉತ್ತಂಸಿತ ತೋರಣೀಕೃತರೌದ್ರ ಗದಾದಂಡನುಂ ಪ್ರಚಂಡನುಂ ಆಗಿ ಸೆರಗಿಲ್ಲದೆ ಕೊಳದಿಂ ಪೊಱಮಟ್ಟು ಬರ್ಪ ದುರ್ಯೋಧನನಂ ಧರ್ಮಪುತ್ರಂ ನೋಡಿ: **ಪಂಪಭಾ,** ೧೩. ೮೨ ವ)

**ಉತ್ತಪ್ತ** – ಚೆನ್ನಾಗಿ ಕಾದ, ಪುಟಕ್ಕಿಟ್ಟ (ವರ್ಣಪೂರದಿಂ ಉತ್ತಪ್ತ ಸುವರ್ಣ ಜಿನರಾಜಕುಮಾರಂಗೆ ನೀರಾಜನವಿಧಿಯಂ ಮಾಡಿ: **ಅಜಿತಪು,** ೪. ೬೮ ವ)

**ಉತ್ತಮಾಂಗ** – ಶ್ರೇಷ್ಠವಾದ ಅವಯವ, ತಲೆ (ಸರೋವರಜಲಂಗಳಂ ಪದ್ಮಪತ್ರಪುಟಂಗಳಿಂ ತಂದು ಪದಪದ್ಮಂಗಳಂ ಕರ್ಚಿ ತತ್ಪಾದಪವಿತ್ರೋದಕಂಗಳಂ ಅನಿಬರುಂ ಉತ್ತಮಾಂಗದೊಳ್ ತಳಿದುಕೊಂಡಿರ್ದಾಗಳ್: **ಪಂಪಭಾ,** ೭. ೫೯ ವ)

**ಉತ್ತಮಿಕೆ** – ಮೇಲ್ಮೆ (ತಮ್ಮುತ್ತಮಿಕೆಯಂ ಒಕ್ಕಾಗಡೆ ಸತ್ತಪೆಮೆಂದಂಜಿ ಬಳರಿಗೆ ಅರ್ಚನೆಗುಣಿವರ್: **ಸಮಯಪ,** ೯. ೯೧)

**ಉತ್ತಮಿಕ್ಕೆ** – ಉತ್ತಮ ಗುಣ (ಶ್ರಾವಕಭೋಜನಮೆಂದೊಡೆ ಇದೇವಣ್ಣಿಪುದು ಉತ್ತಮಿಕ್ಕೆಯಂ ಶ್ರಾವಕನೊಳ್: **ಸಮಯಪ,** ೬. ೮೯)

**ಉತ್ತರ** – ಮರು ನುಡಿ (ಮರುಳಾಗದೆನ್ನ ನುಡಿಗುತ್ತರಮಂ ಮುನ್ನಿತ್ತು ಕುಡಿಯೆ ಕಜ್ಜಂ ನಿನಗುತ್ತರಿಸುಂ: **ಪಂಪಭಾ,** ೮. ೪೭); ಮೇಲ್ತರಗತಿಯ (ಸಕಳಸಂಪದ ಉತ್ತರಂ ಎನಿಸಿದ ಉತ್ತರ ಮಧುರೆ ಎಂಬ ಪೆಸರಿನೆಸೆವ ನಗರಿಯಂ ಎಯ್ದೆವರ್ಪುದುಂ: **ಆಚವರ್ಧ,** ೩. ೧ ವ); ಮುಂದಿನದು (ಪತ್ತರ್ಕೆ ಪನ್ನೆನಿಕ್ಕುಂ ಅದು ಉತ್ತರಕೊಂದೆರಡು ನೆಲಸೆ ಪದಿಯೆಂದಕ್ಕುಂ: **ಶಬ್ದಮದ,** ೨೦೩)

**ಉತ್ತರಂ ಬಳೆ** – ಅತಿಶಯತೆ ಮಿಗಿಲಾಗು (ಅಂತಾಗಲೊಂದು ಉತ್ತರಂ ಬಳೆಯೆ ಸೊಗಯಿಸುವ ಪೊಟಿಲೊಳ್ ಅಷ್ಟಶೋಭೆಯಂ ಮಾಡಿ: **ಪಂಪಭಾ,** ೩. ೨ ವ)

**ಉತ್ತರಕುರು** – ಕುರುದೇಶದ ಉತ್ತರಭಾಗ (ನಿನ್ನ ಗಗನಗಾಮಿನೀವಿದ್ಯೆಯಿಂ ಉತ್ತರಕುರುವನೆಯ್ದಿಸು: **ಆದಿಪು,** ೨. ೧೪೫ ವ)

**ಉತ್ತರಕುರು** – [ಜೈನ] ವಿದೇಹಕ್ಷೇತ್ರದಲ್ಲಿ ಮೇರುಪರ್ವತದ ಉತ್ತರದ ಭೋಗಭೂಮಿ (ನೀನೆನ್ನಂ ನಿನ್ನ ಗಗನಗಾಮಿನೀವಿದ್ಯೆಯಿಂ ಉತ್ತರಕುರುವನೆಯ್ದಿಸು: **ಆದಿಪು,** ೨. ೧೪ ವ)

**ಉತ್ತರಕ್ಷಣ** – ಮರುಗಳಿಗೆ (ಶರೀರೇಂದ್ರಿಯಬುದ್ಧಿಗಳ್ ಏಕಕ್ಷಣಾಂತರಾಳವರ್ತಿಗಳ್ ಉತ್ತರಕ್ಷಣವ್ಯಪಾಯಿಗಳ್: **ಶಾಂತಿಪು,** ೮. ೧೪೨ ವ)

**ಉತ್ತರಗುಣಂಗಳು** – ಮುನಿಗಳ ಆಚರಣೆ: ಇಪ್ಪತ್ತೆರಡು ಪರೀಷಹಗಳೂ ಹನ್ನೆರಡು ತಪಸ್ಸುಗಳೂ ಸೇರಿ ಮೂವತ್ತನಾಲ್ಕು ಉತ್ತರಗುಣಗಳು; ದ್ವಾದಶ ತಪಸ್ಸುಗಳೂ ಷಡಾವಶ್ಯಕಗಳೂ ಸೇರಿ ಮೂವತ್ತಾರು ಉತ್ತರಗುಣಗಳು (ಮತ್ತಮಿವು ಮೊದಲಾಗಿ ಇರ್ಪತ್ತೆಂಟು

ಮೂಲಗುಣಂಗಳೊಳಂ ಉತ್ತರಗುಣಂಗಳೊಳಂ ಉತ್ತರೋತ್ತರಂ ನೆಗಟ್ದು: **ಆದಿಪು,** ೬. ೨೮ ವ)

**ಉತ್ತರಣ** – ದಾಟುವಿಕೆ (ದ್ರೋಣಿಪಾತ್ರಾದಿಗಳೊಳ್ ಜಲದುರ್ಗ ಉತ್ತರಣಮುಮಂ ಉಪದೇಶಂಗೆಯ್ದು: **ಆದಿಪು,** ೬. ೬೨ ವ)

**ಉತ್ತರಣೆ** – ಒಂದು ಗಿಡ (ಪುಲುಗಿಲುಂ ಉತ್ತರಣೆಯುಮಂ ಅಂತೆ ಲೊಕ್ಕಿಯುಂ ಮತ್ತೆ ಮುತ್ತಂ ಆ ಎಕ್ಕೆಯುಮಂ ಕೊಲೆಯುಂ ಬನ್ನಿಯ ಮರನಂ ಕುಲದೆಯ್ವಮಿದೆಂದು ಕೊಂಡುಕೊನೆವರ್ ಮೂಢರ್: **ಸಮಯಪ,** ೯. ೫೭)

**ಉತ್ತರತಪ** – [ಜೈನ] ಹನ್ನೆರಡು ವಿಧವಾದ ತಪ್ಪುಗಳಲ್ಲಿ ಒಂದು (ಮತ್ತಂ ಉತ್ತರತಪದೊಳ್ ಉತ್ತರೋತ್ತರಂ ನೆಗಟ್ದು: **ಸುಕುಮಾಚ,** ೪. ೧೪ ವ)

**ಉತ್ತರಮಾಗು** – [ಉತ್ತರಂ+ಆಗು] ಅತಿಶಯವಾಗು (ಪೆತ್ತಳ್ ಕೊಂತಿಯೆ ಮಕ್ಕಳ್ವೆತ್ತರೊಳ್ ಎಂಬವರೆ ಕೊಂತಿಮಾದೇವಿಗಂ ಒಂದು ಉತ್ತರಮಾದಲ್ ಕರ್ಣಂಬೆತ್ತಕ್ಕಳೆ ಎಂದು ಪೊಗಟ್ದರ್ ಎರಡುಂ ಪಡೆಯೊಳ್: **ಪಂಪಭಾ,** ೧೨. ೧೨೫)

**ಉತ್ತರಶ್ರೇಣಿ** – ಉತ್ತರಭಾಗದ ಪಂಕ್ತಿ (ವಿಜಯಾರ್ಧದ ಉತ್ತರಶ್ರೇಣಿಯ ಕಾಂಚನಪುರವೆಂಬ ಪೊಟಲ ಅರಸಂ ಮಹೇಂದ್ರನೆಂಬೊಂ: **ಶಾಂತಿಪು,** ೯. ೧೧)

**ಉತ್ತರಸಾಧಕ** – ಮುಂದಿನ ಕೆಲಸವನ್ನು ಸಾಧಿಸುವವನು (ಕೇಸರಿಗೆ ಆಸುರಕರ್ಮಂಗೆಯ್ಯಲ್ವೇಡೆಂದು ಧರ್ಮೋಪದೇಶಂಗೆಯ್ದು ಪರಲೋಕಕ್ಕುತ್ತರ ಸಾಧಕನಾಗಿ ನಡೆವೆಂ: **ಪಂಚತಂತ್ರ,** ೨೦೬ ವ); ಸಹಾಯಕ (ಮತ್ತಮೊರ್ವನುತ್ತರಸಾಧಕನಾತಂಗುಡಲುಂ ತುಡಲಂ ಪೊದೆಯಲುಂ ತಂದುಕೊಟ್ಟು ಕನ್ನದ ಮುಟ್ಟುಗಳಂ ತಂದೆನೆಂದು ಪೇಟ್ವುದುಂ: **ಪಂಚತಂತ್ರ,** ೩೨೬ ವ);

**ಉತ್ತರಳ** – ಹೊಳೆಯುವ (ದೋಃಕಂಡೂಯನಮಂ ಕಟಲ್ಚಲೆಡೆಯಾಯ್ತೆನುತ್ತುಂ ಉತ್ತರಳ ತಾಮ್ರಲೋಚನನಾದಂ: **ಪಂಪರಾ,** ೧೩. ೬)

**ಉತ್ತರಾಪಥ** – ವಿಂಧ್ಯಪರ್ವತದಿಂದ ಉತ್ತರಕ್ಕಿರುವ ದೇಶ (ವೃದ್ಧಪರಾಶರಮುನೀಂದ್ರನುತ್ತರಾಪಥಕ್ಕೆ ಪೋಗುತ್ತುಂ: **ಪಂಪಭಾ,** ೧. ೬೮); ಉತ್ತರಮಾರ್ಗ (ಉತ್ತರಾಪಥದ ಹಸ್ತಿನಪುರದಿಂ ಬಂದೆಂ ಎಂದೊಡೆ ಅಲ್ಲಿ ಪಾಂಡವರ ಪಡೆಮಾತಾವುದು ಧೃತರಾಷ್ಟ್ರ ಸುಯೋಧನರ್ ಇರ್ಪಂದಮಾವುದು ಎಂದು ಬೆಸಗೊಳ್: **ಪಂಪಭಾ,** ೩. ೩೧ ವ)

**ಉತ್ತರಾಭಿಮುಖ** – ಉತ್ತರಕ್ಕೆ ಮುಖಮಾಡಿಕೊಂಡಿರುವ (ಉತ್ತರಾಭಿಮುಖನಾಗಿ ಸಿದ್ಧಭಕ್ತಿಪೂರ್ವಕಂ ತ್ರಿಜಗದ್ಗುರುವೃ ಗುರುವೆಂದು: **ಆದಿಪು,** ೧೬. ೭೨ ವ)

**ಉತ್ತರಾಭಿವೃದ್ಧಿ** – ನಿರಂತರ ಅಭಿವೃದ್ಧಿ (ಅಯ್ವರ್ ಕೂಸುಗಳುಂ ಏಟ್ಗೆವಾಡಿವದ ಚಂದ್ರನಂತೆ ಉತ್ತರಾಭಿವೃದ್ಧಿಯೊಳ್ ಸೊಗಯಿಸಿ ಬಳೆಯೆ: **ಪಂಪಭಾ,** ೨. ೩)

**ಉತ್ತರಾಯಣ** – ಸೂರ್ಯ ಉತ್ತರದ ಕಡೆಗೆ ಓಲಿ ಸಾಗುವ ಕಾಲ (ಅಂತು ಶರಪಂಜರದೊಳ್ ಒಱಗಿಯುಂ ಒಡಲಿಂ ಪತ್ತುವಿಟ್ಟು ಪೋಪ ಜೀವಮಂ ಪೋಗಲೀಯದೆ ಸ್ವಚ್ಛಂದಮಿಟ್ಟು ಅಪ್ಪುದಱೆಂ ಉತ್ತರಾಯಣಂ ಬರ್ಪನ್ನಂ ಇರಿಸಿದಂ: **ಪಂಪಭಾ,** ೧೧. ೪೭ ವ)

**ಉತ್ತರಾರ್ಧ** – [ಜೈನ] ಒಂದು ಪರ್ವತದ ಹೆಸರು (ವಿಜಯಾರ್ಧಜಯವಿದೆನಗಾವ ಜಯಂ ನೆಗಟ್ದ ಉತ್ತರಾರ್ಧಜಯಮೆ ಜಯಂ: **ಆದಿಪು,** ೧೩. ೧೯)

**ಉತ್ತರಿಗೆ** – ಉತ್ತರೀಯ (ಬಹುಳದೆ ತೃತೀಯಾಕ್ಷರ ದೀರ್ಘತ್ವಕ್ಕಂ ಹ್ರಸ್ವಂ: ಉತ್ರೀಯಕಂ–ಉತ್ತರಿಗೆ, ವರ್ಧಮಾನಂ–ಬದ್ದವಣಂ: **ಶಬ್ದಮದ,** ೩೦೧ ಪ್ರ)

**ಉತ್ತರಿಗೆಜನ್ನಿವರ** – ಉತ್ತರೀಯವಾಗಿ ಧರಿಸಿದ ಜನಿವಾರ (ವರಕಮಂಡಲಮೊಪ್ಪೆ ಹಸ್ತದೊಳ್ ಓಜೆವೆತ್ತಿರೆ ಬೆಳ್ಳಿಯ ಉತ್ತರಿಗೆಜನ್ನಿವರಂ ಬೆಡಂಗಳವಟ್ಟು ಬಾಲದಿನೇಶನಂತಿರೆ: **ಧರ್ಮಾಮೃ,** ೫, ೧೩೩)

**ಉತ್ತರಿಸು** – ಅತಿಕ್ರಮಿಸು (ಪಿರಿದು ಪೊತ್ತು ಕಾದಿ ಕರ್ಣನಂ ಉತ್ತರಿಸಲಾಱದೆ: **ಹರಿವಂಶ,** ೧೨. ೩೩ ವ); ನೆರವೇರು (ಮರುಳಾಗದೆನ್ನ ನುಡಿಗೆ ಉತ್ತರಮಂ ಮುನ್ನಿತ್ತು ಕುಡಿಯೆ ಕಜ್ಜಂ ನಿನಗೆ ಉತ್ತರಿಸುಗುಂ ಅಂತಲ್ಲದೆ ಇವಂದಿರೋರಂತೆ ನೀನುಂತೆ ಮೂರ್ಖನಾಗದಿರರಸಾ: **ಪಂಪಭಾ,** ೮. ೪೭); (ಸವಾರ) ಕೆಳಗಿಳಿ (ಕೊರಲಂ ಕುಸಿಯುತ್ತುಂ ಉತ್ತರಿಸಿದ ಕುದುರೆಯಂತೆ ಮೋಱೆಯಂ ನೆಗಪುತ್ತುಂ ಮೆಯ್ಯಂ ಮುಟ್ಟುತ್ತುಂ: **ಧರ್ಮಾಮೃ,** ೫. ೯೧ ವ); ಶುಭ್ರಗೊಳಿಸು (ಲವಂಗಪಲ್ಲವರಸದೊಳ್ ವಿಳಾಸಾವಾಸಭವನಮಂ ಉತ್ತರಿಸಲುಂ: **ಆದಿಪು,** ೭. ೨೧ ವ)

**ಉತ್ತರೀಯ** – ಉತ್ತರಿಗೆ, ಹೊದೆದುಕೊಳ್ಳುವ ಬಟ್ಟೆ (ಉತ್ತರೀಯಾಂತರೀಯಂ ತೊನೆಯೆ ತೊಲಗಿ ನಿಂದಿರ್ದಲ್ಲಿ ತಂದಿತ್ತುವುಚ್ಚ ಸ್ತನದೊಳಮರ್ದ ಹಸ್ತಸ್ವಸ್ತಿಕಂಗಳ್ ಬೆಡಂಗಂ: **ಆದಿಪು,** ೧೧. ೧೫೨)

**ಉತ್ತರೀಯಾಂಶುಕ** – ಉತ್ತರೀಯದ ಬಟ್ಟೆ (ನಿಜೋತ್ತರೀಯಾಂದಸುಕಮನೆ ಮಹೋತ್ಸವಧ್ವಜಮಂ ಮಾಡಿ: **ಆದಿಪು,** ೪. ೩೦ ವ)

**ಉತ್ತರೋತ್ತರ** – ಹೆಚ್ಚು ಹೆಚ್ಚು ಅಭಿವೃದ್ಧಿ (ವರಂಬಡೆದ ಸಂತಸಂ ಮನದೊಳಾಗಲ್ ಒಂದು ಉತ್ತರೋತ್ತರಂ ಬಳೆವ ಮಾಟ್ಕೆಯಿಂ ಬಳೆದ ಗರ್ಭಮಂ ತಾಳ್ದಿ: **ಪಂಪಭಾ,** ೧. ೮೬); ನಿರಂತರವಾದದ್ದು (ಸುರತಾಸವಸೇವನಾ ಸನಾತನಸುಖದಿಂದಿರಿಪ್ಪೆಂ ಅನುರಾಗದಿನೆಂಬುದಿದು ಉತ್ತರೋತ್ತರಂ: **ಕವಿರಾಮಾ,** ೨. ೧೦೪)

**ಉತ್ತರ್ಯದುಕೂಲ** – ಹೊಳೆಯುವ ಬಟ್ಟೆ (ಚಕ್ರಿಯುಂ .. .. ಪವಡಿಸಿ ತನ್ನುತ್ತರ್ಯದುಕೂಲ ವಿಶದಶಯ್ಯಾತಳದೊಳ್: **ಶಾಂತಿಪು,** ೪. ೧೦೬)

**ಉತ್ತಲ್** – ನಡುವೆ, ಎಡಬಿಡಂಗಿ (ಅತ್ತಂ ಇತ್ತಂ ಉತ್ತಲ್ ಭವಮಂ ಬಾಯಟಿವ ದುರ್ಗುಣಂಗಳುಂ ಒಳವೇ: **ಸಮಯಪ,** ೫. ೪೧)

**ಉತ್ತವಳ** – ಕಾತರತೆ (ಕೂಸಂ ಬೇಡಿ ಅಟ್ಟಿ ಉತ್ತವಳನಾಗಿ ಅವರ ಬಟಿಯನೆ ತಾನುಂ ನಾಗದತ್ತನ ಮನೆಗೆ ಪೋಗಿಕೂಸಂ ಬೇಡಿ ಪೆತ್ತಂ: **ವಡ್ಡಾರಾ,** ಪು. ೩೩, ಸಾ. ೨೨)

**ಉತ್ತವಳತನ** – ಕಾತರತೆ (ಚಿತ್ತದ ಉತ್ತವಳತನಮಂ ತನ್ನ ಮನದನ್ನಳಪ್ಪ ಕೆಳದಿಗಿಂತೆಂದಳ್: **ಅನಂತಪು,** ೮. ೧೫ ವ)

**ಉತ್ತವಳಿಕೆ** – ಉತ್ತವಳತನ (ತಮ್ಮ ಅಟಲಿನ ಅಳವಿಯಂ ಮಟ್ಗಿಸಲೆಂದು ಉತ್ತವಳಿಕೆಯೊಳ್ ಸಾವರ್: **ಕಾದಂಸಂ,** ೪. ೧೨೦)

**ಉತ್ತವಳಿಸು** – ಕಾತರಿಸು (ಕಣ್ಗಳ ಬಟಿಯೊಳುತ್ತವಳಿಸಿ .. .. ನಿಮಿರ್ವ ಸುಯ್ಗಳುಂ: **ಆಚವರ್ಧ**, ೬. ೧೨ ವ)

**ಉತ್ತಾನ** – ಮೇಲಕ್ಕೆದ್ದ ಹರಡಿದ (ಭೂಪಾಳಂಗವಟಯಿಸಿದುದು ಆ ಪೂಗೊಳದೊಳ್ ವಿಚಿತ್ರಕಾಂಡಪಟೀಪ್ರಕ್ಷೇಪಣವಿಳಾಸಮಂ ತತ್ ಸೋಪಾನ ಉತ್ತಾನ ಮಣಿಮಯೂಖವಿತಾನಂ: **ಮಲ್ಲಿನಾಪು**, ೬, ೭೩)

**ಉತ್ತಾನಕ** – ಮಲ್ಲಯುದ್ಧದ ಒಂದು ವರಸೆ (ಮಲ್ಲನನೌಂಕಿ .. .. ಭುಜದೊಳಣೆದು ಉರದೊಳ್ ತೇದು ಉತ್ತಾನಕದೊಳ್ ನಿಂದು: **ಗಿರಿಜಾಕ**, ೨. ೧೦೫ ವ)

**ಉತ್ತಾನಗಾನ** – ಉಚ್ಚಕಂಠದ ಹಾಡುಗಾರಿಕೆ (ಪ್ರತ್ಯಂತರಾಜಾತ್ಮಜ ನಿಭವಸಮಾಕರ್ಣಿಕೋತ್ತಾನಗಾನಧ್ವನಿಯಿಂ: **ಚಂದ್ರಪ್ರಭು**, ೧. ೧೩೧)

**ಉತ್ತಾನಚಳತ್** – ಮೇಲೆ ಹಾರುತ್ತಿರುವ (ನಾನಾನಕ ಘೂರ್ಣನಂ ಉತ್ತಾನಚಳತ್ ವೈಜಯಂತಿಸಂತಾನಂ: **ಕರ್ಣನೇಮಿ**, ೧೧. ೧೪೭)

**ಉತ್ತಾನಶಯಿತ** – ಅಂಗತ್ತಲಾಗಿ ಮಲಗುವುದು (ಲಲಿತ ಉತ್ತಾನಶಯಿತ ದರಹಸಿತತರಂಗಿತ ಗತಿಸ್ಖಲಿತ ಮುಗ್ಧಜಲ್ಪಿತಾದಿ ಬಾಲ್ಯವಿಳಾಸಂಗಳಿಂದಂ: **ಆದಿಪು**, ೮. ೫೦ ವ)

**ಉತ್ತಾನಶಯ್ಯೆ** – ಉತ್ತಾನಶಯಿತ (ನಿಜಾಂಗುಳಿಜನಿತ ರಸಾಯನಾಸ್ವಾದದೊಳಂ ಉತ್ತಾನಶಯ್ಯೆಯೊಳಂ ಕಟಿಪಿ: **ಆದಿಪು**, ೫. ೪೧ ವ)

**ಉತ್ತಾನಿತ** – ಮೇಲಕ್ಕೆದ್ದ ಆಸ್ಥಾನವೇದಿಕೆಗೆ ಉತ್ತಾನಿತ ಚಿತ್ರವೇತ್ರಲತನೊರ್ವಂ .. .. ಬಂದಂ ಪ್ರತೀಹಾರಕಂ: **ಪಂಪರಾ**, ೨. ೨)

**ಉತ್ತಾಯಕ** – ಪ್ರತಾಪವನ್ನು ಮೆರೆದವನು (ಯುಧಿಷ್ಠಿರನಟೆಯೆ ನೊಂದ ನೋವಂ ಕಂಡು ಪಾಂಡವಬಲದ ನಾಯಕರ್ ಉತ್ತಾಯಕರಾಗಿ ತಂತಮ್ಮ ಚತುರ್ವಲಂಗಳಂ ಒಂದುಮಾಡಿಕೊಂಡು: **ಪಂಪಭಾ**, ೧೨. ೧೧೮ ವ); ಪ್ರತಿಭಟಿಸುವವನು

**ಉತ್ತಾರ** – ಉಚ್ಚಸ್ವರ (ನೀನಿರದೆ ಏಟ್ಟುದೆಂದು ಕರೆವಂತಾದತ್ತು ರಾಜಾಲಯಾಬ್ಜಿನಿಯೊಳ್ ಪೊಣ್ಮುವ ಹಂಸ ಸಾರಸ ರಥಾಂಗ ಉತ್ತಾರ ಕೋಲಾಹಲಂ: **ಪಂಪರಾ**, ೧೧. ೧೮೬)

**ಉತ್ತಾರಣ** – ದಾಟಿಸುವ, ಪಾರುಮಾಡುವ (ಭವೋತ್ತಾರಣ ಪಂಚವಕ್ತ್ರನೆಸೆದಂ ಕನಕಾದ್ರಿಯೊ ಅದ್ರಿಜಾನ್ವಿತಂ: **ರಾಜಶೇವಿ**, ೩. ೧೦೫)

**ಉತ್ತಾರರವ** – ಉಚ್ಚಸ್ವರ (ಸುದತೀರಾಜಿಯ ಕಿವಿಗೆಯ್ದುದು ರಥಾಂಗಮಿಥುನದುಲಿಪುಂ ಕನ್ನಡವಕ್ಕಿಯ ದನಿ ಮದಾಳಿನೀವಿರುತಿ ಸಾರಸ ಉತ್ತಾರರವಂ: **ಮಲ್ಲಿನಾಪು**, ೫. ೬೩)

**ಉತ್ತಾರಿತ** – ಅರಳಿದ (ವಿಚಿತ್ರಚಿತ್ರವಿದ್ಯಾಕೌಶಲಮಂ ಅತಿ ಕುತೂಹಲದೊಳ್ ಉತ್ತಾರಿತಲೋಚನನಾಗಿ ನೀಡುಂ ಭಾವಿಸಿ ನೋಡಿ: **ಆದಿಪು**, ೪. ೪ ವ)

**ಉತ್ತಾಳ** – ಎತ್ತರವಾದ (ದವದಹನಧೂಮಾದಧಿಕಶ್ಯಾಮಳಿತ ಉತ್ತಾಳ ತಾಳಕಾಯಂ: **ಆದಿಪು**, ೧೩. ೪೫ ವ)

**ಉತ್ತು** – [√ ಉಱು] (ವಿವೇಕಮುಂ ಅದೆಂತಾದದತ್ತೊ ಪೇಟ್ ಎಂದು ವಿಸ್ಮಯಂ ಉತ್ತು ಎಂದುದಗೆಯ್ವಂ ಎಂಬ ಬಗೆಯೊಳ್ .. .. ಆಜೆಸಿದೆಂ ಆಂ ತದ್ಭಕ್ಷ್ಯ ಪಾನಂಗಳಿಂ: **ಕಾದಂಸಂ**, ೮. ೪೦)

**ಉತ್ತುಂಗ** – ಎತ್ತರವಾದ (ಪರ್ವತದ ಮೇಲೆ ಕಱಂಗಿ ಕಟ್ಟಿಲಿಸಿದ ಮರದುಱುಗಲ ನಡುವೆ ಸುಧಾಧವಳಿತ ಉತ್ತುಂಗ ರಮ್ಯಹರ್ಮ್ಯಂಗಳಂ ಕಾಣ್ಬೆರಪ್ಪೊಡೆ ಅದು ಹಿಡಿಂಬಪುರಂ: **ಪಂಪಭಾ**, ೩. ೧೮ ವ); ಉನ್ನತವಾದ, ಶ್ರೇಷ್ಠವಾದ (ಗಂಧರ್ವ ಕುಲೋತ್ತುಂಗನೆನಲ್ ನೆಗಟ್ದಾ ಹಂಸಂಗಾದುದು ಗೌರಿಯೊಳ್ ವವಾಹೋತ್ಸವಂ: **ಕಾದಂಸಂ**, ೪. ೧)

**ಉತ್ತುಂಗಚೂಡ** – ಎತ್ತರವಾದ ಶಿಖರವಿರುವುದು (ರಂಜಿಸಿರ್ಕುಂ ಕರುಮಾಡಂ ಕಾಂತಿನೀಡಂ ಮಣಿಮಯಕಳಶಾಪೀಡನಂ ಉತ್ತುಂಗಚೂಡಂ: **ಪುಷ್ಪದಂಪು**, ೯. ೨೯)

**ಉತ್ತುಂಗಭಂಗ** – ದೊಡ್ಡ ಅಲೆ (ಉತ್ತುಂಗಭಂಗಂ ಕಡಲೊಳ್: **ಜಗನ್ನಾವಿ**, ೨. ೧ ವ)

**ಉತ್ತೋಯ** – ಚಿಮ್ಮುವ ನೀರು (ಉತ್ತೋಯಮಂ ಇಭಪತಿನಾಗಾಂಗನಾಂಗಂಗಳೊಳ್ ಸೂಸುವವೋಲ್: **ಶಾಂತಿಪು**, ೮. ೩೧)

**ಉತ್ಥ** – ಮೇಲಕ್ಕೆದ್ದ (ಗುಹಾನೀಕ ಸುಪ್ತ ಉತ್ಥ ಸಿಂಹಪ್ರಕರಪ್ರೋನ್ನಾದದಿಂ .. .. ಪೊಣ್ಮಿತ್ತು .. .. ಕೈರಾತಘೋಷಂ: **ಕಾದಂಸಂ**, ೧. ೪೬)

**ಉತ್ಥಿತ** – ಮೇಲಕ್ಕೆದ್ದ (ಅತಿವಿಶದವಿಶಾಲ ಊರುಕ್ಷತದಿಂದೊಱೆದನಿತು ಜಡೆಯುಮಂ ನಾಂದಿ ಮನಃಕ್ಷತದೊಡನೆ ಎಟ್ಟಿರಿಸಿದುದು ಉತ್ಥಿತಮಾ ವಂದಸ್ರಮಿಶ್ರಗಂಧಂ ಮುನಿಯಂ: **ಪಂಪಭಾ**, ೧. ೧೦೫); ಉಂಟಾದ

**ಉತ್ಪಥಕ್ರಮ** – ಮಿತಿಮೀರಿದ ನಡವಳಿಕೆ (ಧರಣಿಗೆಸೆದತ್ತು .. .. ತಾರಕನ ಮೂರ್ಖತೆ ತಾರಕನ ಉತ್ಪಥಕ್ರಮಂ: **ಗಿರಿಜಾಕ**, ೬. ೧೧)

**ಉತ್ಪನ್ನ** – ಹುಟ್ಟಿದ (ಜಿನಪದಾಂಭೋಜ ವರಪ್ರಸಾದೋತ್ಪನ್ನ .. .. ಕವಿತಾಗುಣಾರ್ಣವ ವಿರಚಿತಮಪ್ಪ ವಿಕ್ರಮಾರ್ಜುನವಿಜಯ: **ಪಂಪಭಾ**, ೧. ೧೪೯ ವ)

**ಉತ್ಪನ್ನಮತಿ** – ಬುದ್ಧಿವಂತ (ಪಗೆವನಂ ಶಂಕಿಸದೆ ಉತ್ಪನ್ನಮತಿಯಪ್ಪವಂ ಪೋ ತನ್ನುಪ್ಪುದು: **ಪಂಚತಂತ್ರ**, ೧೩೯)

**ಉತ್ಪಲ** – ನೈದಿಲೆ (ಎಸೆವಂ ನಿನಗುತ್ಪಲಧವಲಂ ಶರದವನಿಪಾಲಕಂ ಕವಿಧವಳಾ: **ಲೀಲಾವತಿ**, ೫. ೪೩)

**ಉತ್ಪಳರಿಪುಧರ** – ನೈದಿಲೆಯ ಶತ್ರುವಾದ ಚಂದ್ರನನ್ನು ಧರಿಸಿದವನು, ಶಿವ (ತಳುವದೆ ಸೈತಾಗೆ ಮಹಾ ಉತ್ಪಳರಿಪುಧರನಂದು .. .. ರೂಪುದೋಱಿದನಾಗಳ್: **ತ್ರಿಷಷ್ಟಿಪು**, ೨೦. ೨೦)

**ಉತ್ಪಾಟನ** – ಕೀಳುವುದು (ಐರಾವತದಂತಿದಂತೋತ್ಪಾಟನ ಪಟುಬಾಹುಪರಿಘರುಮಪ್ಪ ಅನೇಕ ವೀರದಾನವ ಸೇನಾಗ್ರಗಣಿಗಳಿಂ: **ಜಗನ್ನಾವಿ**, ೨. ೩೯ ವ)

**ಉತ್ಪಾಟಿತ** – ಕಿತ್ತುಹಾಕಿದ (ಆಗಳ್ ತತ್ ಉತ್ಪಾಟಿತವಿನೀಳಕುಟಿಲಕುಂತಳಂಗಳಂ ಅಮರತರು ಕುಸುಮದಾಮೋದ್ದಾಮರಜೋರಂಜಿತಂಗಳಂ .. .. ಆಂತುಕೊಂಡು ಪೋಗಿ: **ಆದಿಪು**, ೯. ೭೯ ವ)

**ಉತ್ಪಾಟಿಸು** – ಕಿತ್ತು ಹಾಕು (ಮಿಂಡರ್ ಉತ್ಪಾಟಿಪೆಂ ಎಂದು ಪೊಣ್ದು ಅಖಿಳಶಕ್ತಿಯಿಂ ಎತ್ತುತ್ತುಂ ಅಳ್ಳಿವೊಯ್ಯೆ: **ಆಚವರ್ಧ**, ೩. ೪೬)

**ಉತ್ಪಾತ –** ಮೇಲೆ ಹಾರುವುದು; ದುರಂತಕಾರಕ ಪ್ರಾಕೃತಿಕ ಘಟನೆ (ಕಲ್ಪಾಂತ ದಿನಕರ ದುರ್ನಿರೀಕ್ಷ್ಯಂ ಉತ್ಪಾತ ಮಾರುತನಂತೆ ಸಕಲ ಭೂಭೃತ್ಕಪಂಕಾರಿಯುಂ .. .. ಭೈರವಾಕಾರನುಂ ಆಗಿ: **ಪಂಪಭಾ,** ೧೧. ೧೧೭ ವ); ಅಪಶಕುನ; ವೈಹಾಯಸ, ಭೌಮ, ದಿಗ್ಭವ, ಸೈನ್ಯಜ, ಗೃಹೋದ್ಭೂತ ಎಂದು ಐದು ಬಗೆ

**ಉತ್ಪಾತಮಾರುತ –** ಪ್ರಳಯಮಾರುತ (ಕಲ್ಪಾಂತ ದಿನಕರ ದುರ್ನಿರೀಕ್ಷ್ಯಂ ಉತ್ಪಾತ ಮಾರುತನಂತೆ ಸಕಲ ಭೂಭೃತ್ಕಪಂಕಾರಿಯುಂ .. .. ಭೈರವಾಕಾರನುಂ ಆಗಿ: **ಪಂಪಭಾ,** ೧೧. ೧೧೭ ವ)

**ಉತ್ಪಾದ –** ಉತ್ಪತ್ತಿ (ಉತ್ಪಾದ ವ್ಯಯ ದ್ರವ್ಯಾತ್ಮಕನುಂ ಸಕಲಕರ್ಮನಿರ್ಮೂಲನಕರನುಂ: **ಆದಿಪು,** ೨. ೧೦ ವ)

**ಉತ್ಪಾದಿಸು –** ಹುಟ್ಟಿಸು (ಸೋದರರೊಳ್ ಸೋದರರಂ ಕಾದಿಸುವುದು ಸುತನ ತಂದೆಯೆಡೆಯೊಳ್ ಉತ್ಪಾದಿಸುವುದು ಕೋಪಮಂ: **ಆದಿಪು,** ೧೪. ೧೨೨)

**ಉತ್ಪುಷ್ಪ –** ಉದುರುತ್ತಿರುವ ಹೂ (ತತ್ಕುಂಜಸಂಜಾತಭೂಜಗಳ ಉತ್ಪುಷ್ಪ ರಾಗಸೌರಭಹೃನ್ಮಂದಾನಿಲಂ; **ಆದಿಪು,** ೧೩. ೧೧)

**ಉತ್ಪ್ರಭ –** ಹೆಚ್ಚು ಕಾಂತಿಯುಳ್ಳ (ಉಪಶಮಿಸಿದ ಉತ್ಪ್ರಭದಂಡನಿಹಿತ ಸಂಭೂತಭೂರಿ ಪರಿತಾಪಂ: **ಶಾಂತಿಪು,** ೧೧. ೪೫)

**ಉತ್ಪ್ರಸವಣ –** ಮೇಲಕ್ಕೆ ಚಿಮ್ಮುವ (ಶಂಕಾವಿಳಚಿತ್ತ ಉದ್ಘೂಣಂ ತತ್ಪ್ರಸವಣ ಸಮಯ ಸೂತ್ಕಾಪಿತೈಕಾಂಘ್ರಿವಕ್ತ್ರಾಂತಚಳಂ .. .. ಬಂದುದೋ ಶ್ವಾನಂ: **ನೇಮಿನಾಪು,** ३. ೬೨)

**ಉತ್ಪ್ರೇಂಖತ್ –** ಮೇಲೆ ತೇಲಾಡುವ (ಕಣ್ಗೊಪ್ಪಿ ತೋರ್ಪುದಿದು ಉತ್ಪ್ರೇಂಖತ್ ಅಸಂಖ್ಯ ಶಂಖಧವಳಂ ಗಂಭೀರನೀರಾಕರಂ: **ಪಂಪಭಾ,** ೪. ೨೪)

**ಉತ್ಪ್ರೇಕ್ಷಿಸು –** ಪರಿಶೀಲಿಸು (ಅದನುತ್ಪ್ರೇಕ್ಷಿಸಿ ನೋಡುತ್ತುಂ ಪೋಗಿ: **ಶಾಂತಿಪು,** ೬. ೧೦೬ ವ)

**ಉತ್ಪ್ಲುತ –** ಜೋರಾಗಿ ಹಾರುವಿಕೆ (ಉತ್ಪ್ಲುತದಿಂ ಆಯುಃಪ್ರಾಣಮಂ ಬೆನ್ನನೇಜೆಸಿಕೊಂಡು ಓಡುವ ಕಾಲಂ ಎಂಬ ಎರಲೆಯಂ: **ಮಲ್ಲಿನಾಪು,** ೯. ೫೭)

**ಉತ್ಫಣಿತ –** ಮೇಲೆತ್ತಿದ ಹೆಡೆಯ (ಉತ್ಫಣಿತ ಅಹಿಶೀರ್ಷರತ್ನಜಘೃಣಿಮಾಲೆ: **ರಾಜಶೇವಿ,** ೮. ೧೦೮)

**ಉತ್ಫುಲ್ಲ –** ಚೆನ್ನಾಗಿ ಅರಳಿದ (ಮತ್ತಮಲ್ಲಿ ಕೆಲರ್ ಉತ್ಫುಲ್ಲ ಮಲ್ಲಿಕಾವಲ್ಲರಿಯಂ ನೋಡಿ: **ಮಲ್ಲಿನಾಪು,** ३. ३೦ ವ)

**ಉತ್ಸಂಗ –** ಸೇರುವುದು, ಸಮಾಗಮ; ತೊಡೆ (ದಂತ ಉತ್ಸಂಗಸ್ಥಿತಜಯಕಾಂತೆಗೆ ಚೆಲ್ವಾಗೆ ಪಿಡಿದ ಸೀಗುರಿದಟೆಯೆಂಬಂತೆವೊಲ್: **ಆದಿಪು,** ೧೨. ೬೦); ಮಗ್ಗುಲು (ಸ್ರೋತಸ್ಸುರುಚಿರಪುಷ್ಕರಂ ಆತತ ಋಕ್ಷಂ ಗುಹಾನ್ವಿತಂ ಪ್ರಿಯವಂಶ ಉಪೇತಂ ತುಂಗ ಉತ್ಸಂಗಮೇತಂ ಕರಿರಾಜನೆನಿಸುಗುಂ ಗಿರಿರಾಜಂ: **ಅಜಿತಪು,** ೯. ೨೯); ನಡು

**ಉತ್ಸಂಗಸ್ಥೆ –** ತೊಡೆಯಮೇಲೆ ಕುಳಿತವಳು (ಕ್ಷಿತಿಪತಿಸುತೆ ನೀನೀ ಮಹಿಮತಿಯುತ್ಸುಂಗಸ್ಥೆಯಾಗಿ ವಾತಾಯನ ಪದ್ಧತಿವಿಡಿದು: **ಶಾಂತಿಪು,** ೫. ೧೨೪)

**ಉತ್ಸನ್ನಮತಿ –** ನಷ್ಟವಾದ ಬುದ್ಧಿ (ಇತರ ಕುಮತಂಗಳೊಳುತ್ಸನ್ನಮತಿ ಮನಂಗೆಯ್ವುದು ಹೊನ್ನಂಬಂ ನೀರೊಳೆಚ್ಚು ಕೆಡಿಪಂತಕ್ಕುಂ: **ಸಮಯಪ,** ३. ३೪)

**ಉತ್ಸನ್ನಶರೀರೆ –** ತೊರೆದ ದೇಹದವಳು (ಗುರುಪಂಚಕಮಂ ನೆನಯುತ್ತೆ ಭೋಂಕನೆ ಉತ್ಸನ್ನಶರೀರೆಯಾಗಿ ದಿವದಿಂದಿಟೆದಳ್: **ಆದಿಪು,** ३. ೧೭)

**ಉತ್ಸರ್ಗ –** ವಿಸರ್ಜನೆ; [ಜೈನ] ಆರುವಿಧವಾದ ಅಭ್ಯಂತರ (ನಡೆವ ನುಡಿವ ಉಣ್ಬ ಕೋಳ್ವ ಇಡುವ ಎಡೆಯೊಳಂ ಉತ್ಸರ್ಗದೆಡೆಯೊಳಂ .. .. ಪುಗುವ ಪಾಪರಜಮಂ ತೆಗೆಗುಂ: **ಜೀವಸಂ,** ೯. ३)

**ಉತ್ಸರ್ಪಿಣಿ –** [ಜೈನ] ಮನುಷ್ಯರ ಭೋಗ ಆಯುಸ್ಸು ಮುಂತಾದವು ಹೆಚ್ಚುವ ಕಾಲ (ಶರೀರ ಬಳ ಆಯುಃ ದೇಹಪ್ರಮಾಣೋಪಚಯ ಅಪಚಯಹೇತುತ್ವದಿಂದಂ ಉತ್ಸರ್ಪಿಣಿ ಅವಸರ್ಪಿಣಿ ನಾಮಮಂ ಪಡೆದುದು: **ಆದಿಪು,** ೬. ೪೮ ವ)

**ಉತ್ಸವ –** ಸಂಭ್ರಮ (ತಮ್ಮ ಮಗಂಗಾದ ಮಹಿಮೆಗೆ ಮನಂಗೊಳಲಾದ ಉತ್ಸವಮರಿದು ಪೊಗಟಲಾ ದಂಪತಿಯಾ: **ಆದಿಪು.** ೭. ೧೧೧)

**ಉತ್ಸವಕರ –** ಸಂಭ್ರಮನ್ನುಂಟುಮಾಡುವ (ಉತ್ಸವಕರಮೆನೆ ಬೆಳೆಪ ಶರತ್ಸಮಯದೊಳಿಂದುಕಾಂತಿ ದಳವೇಱುವವೋಲ್: **ಜಗನ್ನಾವಿ,** ೧. ೧೧)

**ಉತ್ಸವಾನಕ –** ಸಡಗರಸೂಚಕ ವಾದ್ಯಗಳಿಂದ ಕೂಡಿದ (ಅದೇಂ ಸೊಗಯಿಸಿರ್ದುದೊ ತತ್ಪುರಮಂ ಉತ್ಸವಾನಕಂ ಉತ್ತರೋತ್ತರಣಂ: **ಆದಿಪು,** ೮. ೫೦)

**ಉತ್ಸಾಯಕ –** ಬಾಣಗಳ್ನು ಸಜ್ಜುಮಾಡಿಕೊಂಡಿರುವವನು, ಯುದ್ಧಸನ್ನದ್ಧನಾದವನು (ಪೆಸರ ನಾಯಕರ್ ಉತ್ಸಾಯಕರಾಗಿ ನಡೆದರ್: **ಪಂಪರಾ,** ೧३. ೨೬ ವ)

**ಉತ್ಸಾರಿತ –** ತ್ಯಜಿಸಿದ, ದೂರೀಕರಿಸಿದ (ಅಳಕ ಉತ್ಸಾರಿತ ಕೇಶಸಂಚಯಮನೀವೀಬಂಧನಾವಿಷ ತಸ್ಖಳಿತಂ: **ಆದಿಪು,** ೪. ೬೦)

**ಉತ್ಸಾಹಂಗುಂದು –** ಉತ್ಸಾಹಗೆಡು (ವಶೀಕರಣಾಸ್ತ್ರವ್ಯೂಹಂ ವ್ಯರ್ಥಮಿದೆಂದು ಉತ್ಸಾಹಂಗುಂದುತ್ತೆ: **ಗಿರಿಜಾಕ,** ೮. ३೫)

**ಉತ್ಸಾಹಶಕ್ತಿ –** ರಾಜರ ಮೂರು ಶಕ್ತಿಗಳಾದ ಮಂತ್ರ, ಪ್ರಭು, ಉತ್ಸಾಹಗಳಲ್ಲಿ ಒಂದು (ಅಗಣಿತ ದೋರ್ಬಲದಿಂ ಸಂಯುಗದೊಳ್ ಮಾಱಾಂತ ವೈರಿರಾಜನಂ ಏನುಂ ಬಗೆಯದೆ ಉಱದಿಱೆವ ವಿಕ್ರಾಂತಗುಣಮಂ ಉತ್ಸಾಹಶಕ್ತಿಯೆಂಬರ್ ವಿಬುಧರ್: **ಪಂಚತಂತ್ರ,** ೨೮೭), ನೋಡಿ, **'ಶಕ್ತಿತ್ರಯ'**

**ಉತ್ಸುಕ –** ಕುತೂಹಲಗೊಂಡ (ನಂದಗೋಪಂ ನಂದನಮುಖಾಲೋಕನೋತ್ಸುಕಂಗೋಕುಲಕ್ಕೆ ಪೋಗಿ: **ಜಗನ್ನಾವಿ,** ३. ೨३ ವ)

**ಉತ್ಸುಕತ್ವ –** ಉತ್ಸುಕತೆ (ತೃತೀಯ ಕಲ್ಯಾಣ ಉತ್ಸುಕತ್ವದಿಂ ಬಂದು ಭಗವತ್ಪಾದಪಯೋರುಹಕ್ಕೆಱಗೆ: **ಶಾಂತಿಪು,** ೮. ೧೯೯ ವ)

**ಉತ್ಸೃಷ್ಟ –** ಬಿಡಲ್ಪಟ್ಟ (ಲತಾಗಹನದೊಳ್ ಉತ್ಸೃಷ್ಟ ಸಕಲವ್ಯಾಪಾರನುಂ ವಿಗತನಿಮೇಷನುಂ ಎನಿಸಿ.. .. ಮರವಟ್ಟನಂತೆಯುಂ ಯೋಗಸಮಾಧಿಸ್ಥಿತನಂತೆಯುಂ .. .. ಇರ್ದಂ: **ಕಾದಂಸಂ,** ೪. ೫೬ ವ)

**ಉತ್ಸೇಕ –** ಅಭಿಮಾನ (ವಿಳಾಸವತಿಯೆಂಬ ಮಗಳಾಗಿ .. .. ಕೇಳಿಂ ಉತ್ಸೇಕಮಂ ಪಾರ್ವತಿಯಂ ತನ್ನೊಂದು ಪೆಂಪಿಗರೆಗವಡಿಕೆಯಂ ಕೊಳ್ಳಳ್: **ನೇಮಿನಾಪು,** ३. ३ ವ ಮತ್ತು ೪)

**ಉತ್ಸೇಧ** – ಎತ್ತರ (ಅನೇಕ ತಾಳೋತ್ಸೇಧಮುಂ ಅಭ್ರಂಕಷಮುಂ ದುರಾರೋಹಮುಂ ಆದೊಡಂ ಬಗೆಯದೆ ಬಳಸಿದ ಬಳ್ಳಿವಿಡಿದು ಅಡರ್ದು ಏಱೆ: **ಕಾದಂಸಂ,** ೧. ೪೯ ವ); ಔನ್ನತ್ಯ (ಎನಗುಳ್ಳಾಯತಿ ಮೇರುಗುಂಟೆ ಪೆಱತೇಂ ಉತ್ಸೇಧಮೊಂದುಂಟೆ: **ಆದಿಪು,** ೯. ೧೧೪);

**ಉದ** – ನೀರು (ಉದ ಬಿಂದುಗೆತ್ತು ಗಿರಿ ಸಾನುದೇಶದೊಳ್ ಕಾಯ್ದು ಬಿದಿರ ಪೊಸಮುತ್ತಂ ನುಂಗಿದ ಸೋಗೆವಿಂಗಡಣಂ ಮಱುಗಿದವು ಉಂಡಿಗೆ ಬೇಯೆ ಕೆಂಡಮಂ ನುಂಗಿದವೊಲ್: **ಪಂಪರಾ,** ೭. ೯೬)

**ಉದಂಚ** – ನೇರವಾಗಿ ಗುರಿ ತಲುಪುವ (ವಿಭ್ರಮಬಳಸಂಪನ್ನಂ ಕಾಮಂ ತೆಗೆದಂ ತನ್ನಗ್ಗದ ಉದಂಚಪಂಚಬಾಣಮನಾಗಳ್: **ಗಿರಿಜಾಕ,** ೮. ೪೩)

**ಉದಂಚಿತ** – ಮೇಲೆಕ್ಕೆತ್ತಿರುವ (ಉದಂಚಿತ ಪಲ್ಲವಪಾಣಿ ಪಲ್ಲವಾವಲಿಯನೆ ಪಾಸದಿರ್ಮದನವಹ್ನಿಶಿಖಾತತಿಯೆಂದು ಬೆರ್ಚುವಳ್: **ರಾಜಶೇವಿ,** ೭. ೮೯); ಹೊಮ್ಮುವ (ಉರು ಭಾವಂ ಉದಂಚಿತ ರೀತಿ: **ರಾಜಶೇವಿ,** ೧. ೮೩); ಒಡಗೂಡಿದ; ಹೆಚ್ಚಾದ (ವನಿತೆಯ ರೂಪುಂ ಪೊಸಜವ್ವನಮುಂ ಮೋಹನಂ ಅದಿನ್ನು ಉದಂಚಿತ ರಸ ನರ್ತನ ಭಾವಭಾವಿತಂ: **ನೇಮಿನಾಪು,** ३. ೯೭)

**ಉದಂತ** – ಸುದ್ದಿ (ವಾಸವನಂ ಅಳೀಕ ಉದಂತಂಗಳಿಂ ಆಱೆಸುತ್ತಿರ್ಪುದುಂ: **ಆದಿಪು,** ३. ೮೮ ವ); ಸಮುದ್ರದವರೆಗೆ (ವದನಂ ಅತಿಪ್ರಸನ್ನತಯನಾಳ್ದುದು ಶಾಂತಿಯಂ ಆಂತ ಉದಂತವು ಎಯ್ದಿದುದು ಅತಿಕಾಂತಿಯಂ: **ಪುಷ್ಪದಂಪು,** ೧. ३೨)

**ಉದಕಮಂತ್ರ** – ಜಲಸ್ತಂಭನ ವಿದ್ಯೆ (ಬಿರ್ದಿರ್ದು ಸಮುದ್ರದ ತಡಿಯೊಳ್ ಉದಕಮಂತ್ರದ ಬಲದಿಂ ನುಸುಳ್ದೊಡೆ ಜಳದಿಯಂ: **ಆದಿಪು,** ೧೪. ೬೮)

**ಉದಕಸ್ತಂಭ** – ಹೊರಗೆ ನೀರು ಮಧ್ಯದಲ್ಲಿ ಗಿಡಗಳಿಂದ ತುಂಬಿರುವ ಭೂಪ್ರದೇಶ (ಪೊಱಗೆ ನೀರುಂ ಭೂರಿಭೂರುಹಸಂದೋಹಮುಂ ತೃಣಗುಲ್ಮಲತಾ ಸ್ತೋಮಮುಮಿಲ್ಲದೆ ಒಳಗೆ ತೃಣಕಾಷ್ಠಜಲಸಂಪೂರ್ಣಮಪ್ಪುದು ಉದಕಸ್ತಂಭಮೆಂಬುದಕ್ಕುಂ: **ಪಂಚತಂತ್ರ,** ೨೯೭ ವ)

**ಉದಗ್ರ** – ಎತ್ತರ (ಲವಣಜಳಧಿ ಬಳಸಿದಂತೆ ಬಳಸಿದ ಅಗಟಿ ನೀಳದಿಂದ ಉದಗ್ರ ಕನಕಶಾಳದಿಂ: **ಪಂಪಭಾ,** ೧. ೫೮); ಶ್ರೇಷ್ಠ (ವೀರವೈರಿಕ್ಷಿತಿಪ ಗಜಘಟಾಟೋಪ ಕುಂಭಸ್ಥಳೀಭೇದನಂ ಉದಗ್ರ ಉದ್ಘ ಅಸಿ ಭಾಸ್ವತ್ ಭುಜಪರಿಘನಂ ಆರೂಢಸರ್ವಜ್ಞನಂ: **ಪಂಪಭಾ,** ೧. ೫೧)

**ಉದಙ್ಮುಖ** – ಉತ್ತರಕ್ಕೆ ಅಭಿಮುಖವಾಗಿರುವ (ತದ್ವಿಜಯಾವಸಾನದೊಳ್ ಶಾಸನಚೂಡಾಮಣಿ ಉದಙ್ಮುಖನಾಗಿ ಪಯಣಂ ಬರೆವರೆ: **ಶಾಂತಿಪು,** ೧೧. ೨೨ ವ)

**ಉದಧಿ** – ಸಮುದ್ರ (ಉದಧಿಯ ತೋಱುಮುತ್ತೆನಿಸೆ ತಾರಗೆ ಶೀತಮರೀಚಿಶಂಕದಂದನಿರೆ ನೀರ ಮೇಲೆ ನಲಿವ ಅಚ್ಚರಿಯರ್ ಜಲಮಾನುಷೀಪ್ರಕರದನಿರೆ: **ಮಲ್ಲಿನಾಪು,** ೧೨. ೧೦೬)

**ಉದನಿಧಿ** – ಸಮುದ್ರ (ಉದನಿಧಿವೃತ ಜಂಬೂದ್ವೀಪದ ಪೂರ್ವವಿದೇಹದೊಳ್ ಕರಂ ಪೆಸರ್ವಡೆದ ಅಗ್ಗದ ಪುಷ್ಕಳಾವತೀವಿಷಯದೊಳ್ ಎಸೆವುದು ಪುಂಡರಿಕಿಣೀ ಎನಿಪ ಪುರಂ: **ಶಾಂತೀಶ್ವಪು,** ೨. ೫೮)

**ಉದಧಿಪ** – ಸಮುದ್ರರಾಜ (ತಮಗಿದಿರ್ವಂದ ಉದಧಿಪನಿತ್ತಮಳಮಣಿವ್ರಜದೆ ಕಲ್ಪಕುಜಮಿತ್ತ ಮಹಾಸುಮನಃಪುಂಜದೆ ಹರಿಗರ್ಘ್ಯಮನಿತ್ತರ್ ಜಯಜಯಾನ್ವಿತರ್ ಬ್ರಹ್ಮಾದ್ಯರ್: **ಜಗನ್ನಾವಿ,** ೧. ೫೨)

**ಉದನ್ವದಂತಸ್ಥ** – ಸಮುದ್ರದೊಳಗಿರುವ (ಸುರಶೈಲಂ .. .. ಸಕಲೋದನ್ವದಂತಸ್ಥ ಕೂರ್ಮೋತ್ಕರಂ ಉರ್ವೀಚಕ್ರಮಂ ತಾಳ್ದಿದವೋಲ್ ಉದ್ವೇಗಂಗೊಂಡು: **ಚಂದ್ರಪ್ರಪು,** ೧೦. ೬೬)

**ಉದನ್ವದಾವೇಷ್ಟಿತ** – ಸಮುದ್ರದಿಂದ ಸುತ್ತುವರಿದ (ಅಳೆವವೊಳ್ ಉದನ್ವದಾವೇಷ್ಟಿತಾಖಿಳಾವನಿತಳಮಂ: **ಆದಿಪು,** ೭. ೧೧೯)

**ಉದಬಿಂದು** – ನೀರ ಹನಿ (ಚಾದಗೆ ನವ ಉದಬಿಂದುವನಾದರಿಪವೊಲ್ ಉಱಿದ ಕೆಱೆಯ ತೊಱೆಯುದಕಮನೇನಾದರಿಕುಮೆ: **ಆದಿಪು,** ೯. ೧೮೯)

**ಉದಯ** – ಹುಟ್ಟು; ಅಭಿವೃದ್ಧಿ (ಉದಿತೋದಿತನ್ಯೆ ನೀಂ ನಿನಗೆ ಉದಯದ ಮೇಲುದಯಂ ಎಂದು ನೆಗಟ್ದಿ ಅರಿಗಂಗೆ ಅಭ್ಯುದಯಮನಱಿಪುವ ತೆಱದಿಂದ ಉದಯಾಚಳಚುಂಬಿತ ಬಿಂಬಂ ಇನಂ ಉದಯಿಸಿದಂ: **ಪಂಪಭಾ,** ೨. ೯३)

**ಉದಯಗಿರಿ** – ಸೂರ್ಯ ಹುಟ್ಟುವ ಮೂಡಣ ಬೆಟ್ಟ (ಉದಯಗಿರಿ ಕಟಕ ಕುಹರ ಪರಿಕರ ನಿಶಾಕರಂ ಹರಿದಳಿತ ನಿಜಹರಿಣ ರುಧಿರನಿಚಯ ನಿಚಿತಮಾದಂತೆ ಲೋಹಿತಾಂಗನಾಗೆ: **ಪಂಪಭಾ,** ४. ೪೯ ವ)

**ಉದಯರಾಗ** – ಬೆಳಗಿನ ಕೆಂಪು (ಉದಯರಾಗಮಂ ಕುಡೆ ಬೆಳ್ದಿಂಗಳಂ ಒಳಕೆಯ್ದುದು ತಪನೋಜ್ವಳರುಚಿ ಎಂಬೊಂದು ಶಂಕೆಗೇನೆಡೆಯಾಯ್ತೋ: **ಪಾರ್ಶ್ವನಾಪು,** ३. ३४)

**ಉದಯಾಚಳ** – ಉದಯಗಿರಿ (ಉದಿತೋದಿತನ್ಯೆ ನೀಂ ನಿನಗೆ ಉದಯದ ಮೇಲುದಯಂ ಎಂದು ನೆಗಟ್ದಿ ಅರಿಗಂಗೆ ಅಭ್ಯುದಯಮನಱಿಪುವ ತೆಱದಿಂದ ಉದಯಾಚಳ ಚುಂಬಿತಬಿಂಬಂ ಇನಂ ಉದಯಿಸಿದಂ: **ಪಂಪಭಾ,** ೨. ೯३)

**ಉದರ** – ಹೊಟ್ಟೆ, ಗರ್ಭ (ವನನಿಧಿಯಿಂದಂ ಚಂದ್ರಂ ವಿನತಾ ಉದರದಿಂ ಗರುತ್ಮಂ ಉದಯಾಚಳದಿಂ ದಿನಪಂ ಒಗೆವಂತೆ ಪುಟ್ಟಿದಂ ಅನಿವಾರ್ಯ ಸುತೇಜಂ ಎನಿಪಂ ಇನಜನ ತನಯಂ: **ಪಂಪಭಾ,** ೧. ೧೨೧)

**ಉದರಬಂಧ** – ನಡುಪಟ್ಟಿ, ಡಾಬು (ಪೊಳೆವ ಮಣಿಮಕುಟಂ ಎಕ್ಕಾವಳಿಹಾರಂ ಕಟಕಂ ಉದರಬಂಧಂ .. .. ಕುಡುಗುಂ: **ಶಾಂತಿಪು,** ೬. ೧೧೦)

**ಉದರಭರಣ** – ಹೊಟ್ಟೆ ಹೊರೆಯುವುದು (ಉದರಭರಣಮಾತ್ರಮಪ್ಪಂತೆ ರಾಜಾನುಸೇವನಂಗೆಯ್ದಿರ್ಪವು: **ಪಂಚತಂತ್ರ,** ೮೨ ವ)

**ಉದರ್ಕ** – ಭವಿಷ್ಯದಲ್ಲಾಗುವ ಫಲ (ಅದಂ ಮಾರ್ಕೊಂಡು ಉಪಾಂಶುವೆನ್ನುದರ್ಕಪರಿಜ್ಞಾನದಾನಪತಿ ಕೈಕೊಂಡಂ: **ಜಗನ್ನಾವಿ,** ೫. ೬೫)

**ಉದವಾಸ** – ನೀರಿನ ವಾಸ (ನಹುಷಂ .. ..ಚತುರುದಧಿಯೊಳ್ ಉದವಾಸಮಿರಿಸಿದಂ ರಿಪುನೃಪರಂ: **ಪಂಪರಾ,** ೨. ೫೯)

**ಉದಶ್ರು** – ಉಕ್ಕಿಬರುವ ಕಣ್ಣೀರು (ನೇಸಱೆಂದೊಳಗೆ ಆಂ ದಿನಕರಸುತನಂ ಇಕ್ಕಿ ಬಂದಲ್ಲದೆ ಕಾಣೆಂ ದಲ್ ಭವತ್ ಪದಾಬ್ಜಮಂ ಎಂದು ಎಟ್ಟಿಂ ಉದಶ್ರುಜಳಲವಾರ್ದ್ರ ಕಪೋಳಂ: **ಪಂಪಭಾ,** ೧೨. ೧३४)

**ಉದಸ್ತ** – ಮೇಲೆ ಹರಡಿದ (ದಿವ್ಯಾಭರಣರುಚಿಗಳ್ ಅಸ್ತ ಉದಸ್ತ ಸೂರ್ಯಾಂಶುಗಳ್ವೋಲಿರೆ: **ಶಾಂತಿಪು,** ೭. ३೮)

**ಉದಾತ್ತ** – ಉದಾರನಾ (ಉದಾತ್ತನಾರಾಯಣನಾದ ದೇವಂ ಎಮಗೀಗೆ ಅರಿಕೇಸರಿ ಸೌಖ್ಯಕೋಟಿಯಂ: **ಪಂಪಭಾ,** ೧. ೧)

**ಉದಾತ್ತಪುಣ್ಯ** – ಅತಿಶಯ ಪುಣ್ಯವುಳ್ಳವನು (ಸೂರ್ಯತನಯಂ ತೇಜೋಗ್ನಿಯಿಂದಂ ದ್ವಿಷದ್ಬಲಮಂ ಸುಟ್ಟಂ ಉದಾತ್ತಪುಣ್ಯನವಂ ಚೈತಾಗ್ನಿಯಿಂ ಸುಟ್ಟನಿಲ್ಲ ಒಲವಿಂದ ಇಂದಿಂತು ಎರ್ದೆಮುಟ್ಟೆ ಕೂರ್ತನೊಳನೇ ಕರ್ಣಂಗೆ ದುರ್ಯೋಧನಂ: **ಪಂಪಭಾ,** ೧೩. ೬೦)

**ಉದಾತ್ತಮತಿ** – ಉನ್ನತ ಜ್ಞಾನಿ (ಬಳವತ್ ಸೈನ್ಯಮಂ ಅವನಿಪತಿ ಬಿಸುಟಂ .. .. ಸದ್ವಸನವಿಮುಕ್ತಮಂ ಇಳಾನ್ವಿತಂ ಬರೆವುದಾತ್ತಮತಿ ಬಿಸುಡುವವೊಲ್: **ಶಾಂತಿಪು,** ೧೧. ೧೪)

**ಉದಾತ್ತವಚನ** – ಒಳ್ಳೆಯ ಮಾತು (ಎಂಬುದಂ ಕೇಳ್ದು ಉದಾತ್ತವಚನಂ ಇದು ಎಂದು ಅಱೆಪುತ್ತಂ ಪೋಗಿ ನೋಟ್ಪಂ: **ಹರಿವಂಶ,** ೩. ೫೪ ವ)

**ಉದಾರ** – ಅತಿಶಯ (ಉದಾರಶುಕೀಮೃದುವಾಣಿಗೆ ಅಚ್ಚದಾಡಿಮ ರದನಾಳಿ: **ರಾಜಶೇವಿ,** ೭. ೬೦)

**ಉದಾರಚರಿತ** – ಉದಾತ್ತ ನಡವಳಿಕೆಯವನು (ಅಪೇತದೋಷನಂ ಉದಾರಚರಿತೋದಯನಂ: **ಕವಿರಾಮಾ,** ೨. ೧೬)

**ಉದಾರತೆ** – ವಿಸ್ತಾರ (ಸತತ ಗಭೀರವೃತ್ತಿಯಿಂ ಉದಾರತೆಯಿಂ .. .. ರಸಭಾವವಿಳಾಸದಿಂ .. .. ಸರಸ್ವತಿಯಂದದಿಂ ದಯೆಗೆಯ್ಗೆ ಸರಸ್ವತಿ: **ಕಾದಂಸಂ,** ೧. ೨); ಔದಾರ್ಯ (ಶ್ರೀಯುತನೊಳುದಾರತೆ ವಾಕ್ಶ್ರೀಯುತನೊಳ್ ಅಮತ್ಸರತ್ವಂ ಆಗದು: **ಗದಾಯು,** ೧. ೪೯)

**ಉದಾಹರಣ** – ನಿದರ್ಶನ (ಒಳ್ಪಿನ ಉದಾಹರಣಮುಂ ಆಗೆ ಗುಣಾರ್ಣವನ ಶರಪರಿಣತಿಯಿಂದೆ ಕುಲಶೈಲಂ ಬೀೞ್ವಂತೆ ನೆಲನದಿರೆ ಬಿರ್ಬಿದಾಗಳ್: **ಪಂಪಭಾ,** ೧೨. ೨೧೬)

**ಉದಾಹರಿಸು** – ದೃಷ್ಟಾಂತವಾಗಿ ತೋರಿಸು (ಘನಾಘನನಿನಾದದಿಂ ಬೃಂಹಿತಂಗೆಯ್ವ ವಿಜಯಗಜಮಂ ನೆಲನಂ ಪೊಕ್ಕಡಂಗಿದ ಪಗೆವರಂ ಅಗುೞ್ದು ಕೊಲ್ವುದಂ ಉದಾಹರಿಸುವಂತೆ: **ಪಂಪಭಾ,** ೯. ೯೫ ವ)

**ಉದಿತ** – ಹುಟ್ಟಿದ, ಉಂಟಾದ (ಎನ್ನಳವೆ ಗಣಧರೋದಿತ ಚರಿತಂ: **ಆದಿಪು,** ೧. ೬೪)

**ಉದಿತಕೀರ್ತಿ** – ಕೀರ್ತಿವಂತ (ಶ್ರೀವಧುವಂ ನಿಜಭುಜಶೌರ್ಯಾವಷ್ಟಂಭದೊಳೆ ಕಯ್ಗೆಮಾಡಲ್ ಜಯಲಕ್ಷ್ಮೀವಲ್ಲಭನಿರ್ದಂ ಪೃಥ್ವೀವಲ್ಲಭಂ ಉದಿತಕೀರ್ತಿ ಸಾಹಸಭೀಮಂ: **ಗದಾಯು,** ೬. ೧)

**ಉದಿತಸ್ಮೇರ** – ಮುಗುಳುನಗೆಯಿಂದ ಕೂಡಿದವನು (ಉದಿತಸ್ಮೇರಂ ಇಭೇಂದ್ರವೈರಿ ನಯದಿಂ ಕೈನೀಡಿ ಗೋಮುಖ್ಯ ಬಲ್ಲಿದಿರೇ ಸಂತಸಮೇ ಕರಂ ಕುಶಲಮೇ: **ಪಂಚತಂತ್ರ,** ೧೦೯)

**ಉದಿತೋದಿತ** – ನಿರಂತರ ಏಳಿಗೆಯುಳ್ಳವನು (ಉದಿತೋದಿತನ್ನೆ ನೀಂ ನಿನಗೆ ಉದಯದ ಮೇಲುದಯಂ ಎಂದು ನೆಗೞ್ದ ಅರಿಗಂಗೆ ಅಭ್ಯುದಯಮನಱಿಪುವ ತೆಱದಿಂದ ಉದಯಾಚಳಚುಂಬಿತಬಿಂಬಂ ಇನಂ ಉದಯಿಸಿದಂ: **ಪಂಪಭಾ,** ೨. ೯೩)

**ಉದಿರ್** – ಮೇಲಿನಿಂದ ಬೀಳು (ಉದಿರ್–ಪತನೇ: **ಶಬ್ದಮದ,** ಧಾ, ೫೪೭)

**ಉದಿರ್ಚು**– ಉದುರಿಸು (ಉದಿರ್ಚು–ಅಧಃಪತನೇ: **ಶಬ್ದಮದ,** ಧಾ, ೧೬೬)

**ಉದೀಚಿ** – ಉತ್ತರ ದಿಕ್ಕು (ಪಾಂಥವರ್ಗೆ ಅವರ ಕಾಂತಾಶ್ಲೇಷಮಂ ಕೆಯ್ಕೊಳಲ್ ಅಲೆದುದು ಉದೀಚೀಭವಂ ಶಿತವಾತಂ: **ಪುಷ್ಪದಂಪು,** ೬. ೩೬)

**ಉದೀಚ್ಯ** – ಉತ್ತರದಿಕ್ಕಿನ, ಔತ್ತರೇಯ (ಇದು ದಾಕ್ಷಿಣಾತ್ಯ ಕವಿಮಾರ್ಗಂ ಉದೀಚ್ಯದ ಉರು ವಿಶೇಷಣಯುತಂ ಅಪ್ಪುದನೊಲ್ವರ್ ಇಂತು ಹೇಮಾಂಗದ ಲೀಲಾಂಬುಜ ವಿಚಿತ್ರ ಚಿತ್ರಾಧೀಕಮಂ: **ಕವಿರಾಮಾ,** ೨. ೭೯)

**ಉದೀರಿತ** – ನುಡಿದ (ಜಡನಾದ ದೇಹಿಯಂ ಸರ್ವಜ್ಞ ಉದೀರಿತ ದರವಚನಸುಧಾಹಾರಮೆ ಪಟುಮಾಟ್ಕುಂ: **ಸಮಯಪ,** ೩. ೪೪)

**ಉದೀರ್ಣ** – ದೊಡ್ಡದಾದ, ಹೆಚ್ಚಾದ (ತದ್ವಾರ್ತಾಕರ್ಣನ ಉದೀರ್ಣಶೋಕವ್ಯಾಕುಳೆಯಾಗಿರ್ದ ನಿಜವಲ್ಲಭೆಯಲ್ಲಿಗೆ ಬಂದು: **ಆದಿಪು,** ೪. ೪೪ ವ)

**ಉದೀರ್ಣತೆ** – ಅತಿಶಯ, ಏಳಿಗೆ (ಕವಚಾನ್ವಿತಕರ್ಣಸಹಾಯಮಂ ಗುಣೋದೀರ್ಣತೆಯಿಂದೆ ಪೊಂದಿತೆನೆ: **ರಾಜಶೇವಿ,** ೬. ೯೬)

**ಉದುಂಬರ** – ಅತ್ತಿ ಹಣ್ಣು (ಕ್ರಿಮಿಫಳಂ ಉದುಂಬರಂ: **ಅಭಿಧಾವ,** ೧. ೮. ೯)

**ಉದ್ಗಂಧ** – ಒಳ್ಳೆಯ ಪರಿಮಳವುಳ್ಳ (ಮಂದಾರಪುಷ್ಪೋಪಹಾರದಿಂ ಉದ್ಗಂಧಸುಗಂಧದಿಂ .. .. ಅರ್ಚಿಸಿದರ್: **ಶಾಂತಿಪು,** ೭. ೩೬)

**ಉದ್ಗಂಧಿ** – ಉದ್ಗಂಧವನ್ನು ಹೊಂದಿದ (ಕರಿಕರ್ಣತಾಳಾನಿಳನೆ ಮಳಯರುಹನಂದನಾಂದೋಳನೋಗ್ದಂಧಿಯಂ: **ಆದಿಪು,** ೧೩. ೬ ವ)

**ಉದ್ಗತ** – ಮೇಲಕ್ಕೆ ಬಂದ (ಬೆಡಂಗಿನೊಳ್ ಪುದಿದೆಟ್ಟಿರಂ ಉದಿತ ಚಂದ್ರಸಿಂಹದಾ: **ಆದಿಪು,** ೧೨. ೫)

**ಉದ್ಗತೋಷ್ಮ** – ಹೊಮ್ಮಿದ ಉಮ್ಮಳ (ಉದ್ಗತೋಷ್ಮ ಕುಚದೊಳ್ ಕುಡೆ ಸತ್ತಿಗಮಂ: **ಲೀಲಾವತಿ,** ೧೪. ೧೭)

**ಉದ್ಗಮ** – ಮೇಲೇರುವುದು, ಹೊಮ್ಮುವುದು (ಔರ್ವಜ್ವಲನಜ್ವಾಳಾಕಳಾಪ ಉದ್ಗಮಮನನುಗುಣಂ ಮಾಡುತುಂ: **ಆದಿಪು,** ೧೧. ೨); ಹೂವು, ಮೊಗ್ಗು (ಅರಲ್ಗಳಿಂ ಪುದಿದ ಚಂಪಕಂ ಉದ್ಗಮಮಂಜರೀ ವಿಳಾಸಂ ತಳೆದಿರ್ಪ ಮಾಧವಿ: **ಶಬರಶಂ,** ೨. ೪೧)

**ಉದ್ಗಮಚಾಪ** – ಹೂಬಾಣ, ಮನ್ಮಥ (ಪಾಡುಗುಂ ಕಳಕಂಠಿಗಳ್ ಕಾಮನುದ್ಗಮಚಾಪಮಂ ಓಲಗಿಸಿರ್ಪನಚ್ಚರಿಯೆಂಬಿನಂ: **ರಾಜಶೇವಿ,** ೨. ೧೧೭)

**ಉದ್ಗಮೇಷು** – ಹೂಬಾಣ (ಉದ್ಗಮೇಷುವೊಲ್ ಸಾಯುಧಮಂತ್ರಿಗೂಡಿ ವನಮಧ್ಯದೊಳ್ಪೆದೆ ವಿರಾಜಿಪ: **ಉದ್ಭಟಕಾ,** ೭. ೧೨೨)

**ಉದ್ಗಾತೃ** – ಯಜ್ಞಯಾಗಗಳಲ್ಲಿ ಸಾಮವೇದ ಹೇಳುವ ಋತ್ವಿಕ್ಕು (ಅಗ್ನೀಧ್ರ ಮೈತ್ರಾವರುಣ ಅಗ್ನಿಪರಿಚಾರಕ ಉದ್ಗಾತೃ ನೇತೃ ಹೋತೃ ಜಮದಗ್ನಿ ಆದಿಗಳಪ್ಪ ಷೋಡಶರ್ ಋತ್ವಿಜರ್ಕಳಿಂ: **ಪಂಪಭಾ,** ೬. ೩೩ ವ)

**ಉದ್ಗಾರವೇಱು** – ಅಸಹ್ಯಪಡು (ಅವಳ್ ಆತನ ರೂಪುಗಂಡು ಕಣ್ಗಂ ಮನಕ್ಕಂ ಉದ್ಗಾರವೆತ್ತು ಭೋಂಕನೆ ಮಗುಟ್ದಳ್: **ಯಶೋಧಚ**, ೨. ೩೩)

**ಉದ್ಗಾರಿ** – ಹೊರಸೂಸುವ (ನೀರೇಜಿನೀ ಬಂಧುರ ಗಂಧ ಉದ್ಗಾರಿ ಲೀಲಾಸರದ ಪುಳಿನದೊಳ್ .. ..ದೇವ ಕುಳ್ಳಿರ್ಪುದೀಗಳ್: **ಕಾದಂಸಂ**, ೫. ೫೮)

**ಉದ್ಗಾರಿಸು** – ವಾಂತಿಮಾಡಿಕೊ (ತವಕದೆ ತವೆ ಪೀರ್ದಾ ವಾಯುವಂ ಅಕ್ಕಿಸಲಾಱದೆ ಉದ್ಗಾರಿಸುತಿರ್ದುವೆನಲ್ ಫಣಿಗಳ್ ಘೂತ್ಕರಿಸುವ ರವಮಯಮಾದುದು ಆ ರಥಾವರ್ತ ನಗಂ: **ಶಾಂತೀಶ್ವಪು**, ೩. ೭೨)

**ಉದ್ಗ್ರೀವ** – ಎತ್ತಿದ ಕೊರಳು (ಮೆರಯ್ಯಿಕ್ಕದೆ ಸಜ್ಜನಮಾಗಿಯುಂ ಉದ್ಗ್ರೀವಮಾಗಿಯುಂ ನೋಡುತ್ತಿರ್ಪುದುಂ: **ಲೀಲಾವತಿ**, ४. ೮೬ ವ)

**ಉದ್ಘ** – ಪ್ರಶಸ್ತವಾದ (ನಭದೊಳಿರ್ದ ಅಮೃತಾಂಶುವಿಂ ಉದ್ಘಕಾಂತಿಸಂತಾನಮಂ ಆವಗಂ ತನಗೆ ಮಾಡಿದಳ್: **ಪಂಪಭಾ**, ४. ೭೧); ಸುಖ (ವಾರಿ ಬಿಂದುನಿಕಾಯಂಗಳಂ ಉದ್ಘ ಘರ್ಮಜಳದೊಳ್ .. .. ಒಂದಿಸುತ್ತುಂ ಪಡೆಗೆ ಅತ್ಯಾನಂದಸಂದೋಹಮಂ: **ಪಾರ್ಶ್ವನಾಪು**, ೮. ೧೦೩); ಬಲ (ಉದ್ಘಹಿಮೋಗ್ರಖಡ್ಗಮಂ ಚಾಳಿಸುತುಂ ಸುರಾಧಿಪದಿಶಾನಿಳವಾಹಮನೇಱಿ ಬಂದುದು ಆಭೀಳತೆವೆತ್ತು ಮಾಗಿ: **ಶಾಂತೀಶ್ವಪು**, ೧೨. ೭೩)

**ಉದ್ಘಕೃತಿ** – ಶ್ರೇಷ್ಠ ಕೃತಿ, ಶ್ರೇಷ್ಠ ಗ್ರಂಥ (ಇರ್ವರ ಪೆಸರ್ಗಂ ನೆಗಟ್ದುವು ತನ್ನೆಡರುಂ ಉದ್ಘಕೃತಿಗಳ್: **ಅಜಿತಪು**, ೧೨. ೫೩)

**ಉದ್ಘಚಾರಿ** – ಶ್ರೇಷ್ಠ ನಡತೆಯವನು (ಸದಾಚಾರಸಮೇತರಾದವರ್ ಎಮಗೀಗೆ .. .. ಸೌಖ್ಯಮಂ ಸೂರಿಗಳ್ ಅಂಗಜಾರಿಗಳ್ ತತ್ವವಿದಾರಿಗಳ್ ಉದ್ಘಚಾರಿಗಳ್: **ಶಾಂತಿಪು**, ೧. ೩)

**ಉದ್ಘಟ್ಟ** – ಬಲವಾದ ಹೊಡೆತ, ಸದೆಬಡಿಯುವಿಕೆ (ಸುಯೋಧನೋರು ಮಕುಟೋದ್ಘಟ್ಟ ಪ್ರತಿಜ್ಞಾಕ್ಷರಾವಳೀ ವಿನ್ಯಸ್ತವಿಶಾಲ ನಿಶ್ಚಳಶಿಲಾಸ್ತಂಭಂ .. .. ಹಿಡಿಂಬಾಂತಕಂ: **ಗದಾಯು**, ೧. ೫೫)

**ಉದ್ಘಾಟನ** – ತೆರೆಯುವಿಕೆ, ಮೇಲೆತ್ತುವುದು (ಪೂರ್ವೋಕ್ತಸ್ಥಿತಿಯೊಳ್ ವಜ್ರಕವಾಟೋದ್ಘಟನಂಗೆಯ್ದು: **ಶಾಂತಿಪು**, ೧೧. ೬೭)

**ಉದ್ಘಾಟಿಸು** – ಆಕ್ಷೇಪಿಸು (ತನ್ನನುದ್ಘಾಟಿಸಿ ನುಡಿದೊಡೆ ಉಮ್ಮಚ್ಚರದೊಳ್ ಮೆಚ್ಚದೆ: **ಪಂಪಭಾ**, ೧೨. ೧೭೬)

**ಉದ್ಘಾತ** – ಬಲವಾದ ಹೊಡೆತ (ಮಾತೇಂ ಉದ್ಘಾತ ದೋಷಪ್ರಕರರಹಿತನೆನಿಪಂ ಆಪ್ತಂ: ಸುಕುಮಾಚ, ೫. ೩೯)

**ಉದ್ಘಾಸಿ** – (ಉದ್ಘ+ಅಸಿ) ಶ್ರೇಷ್ಠವಾದ ಕತ್ತಿ (ವೀರವೈರಿಕ್ಷಿಪ ಗಜಘಟಾಟೋಪ ಕುಂಭಸ್ಥಳೀಭೇದನಂ ಉದಗ್ರ ಉದ್ಘ ಅಸಿ ಭಾಸ್ವತ್ ಭುಜಪರಿಘನಂ ಆರೂಢಸರ್ವಜ್ಞನಂ: **ಪಂಪಭಾ**, ೧. ೫೧)

**ಉದ್ಘುಷ್ಟಿ** – ಉದ್ಘೋಷ, ಘೋಷಣೆ (ದೌವಾರಿಕ ಉದ್ಘುಷ್ಟ ಮಲ್ಲಭುಜಾಸ್ಫಾಳನನಿಸ್ವನಂ ನೃಪಸಭಾಕೋಳಾಹಳಂ: **ನೇಮಿನಾಪು**, ೮. ೯೨)

**ಉದ್ಘೂಣ** – ನಡುಕ (ಶಂಕಾವಿಳಚಿತ್ತ ಉದ್ಘೂಣಂ ಉತ್ತ್ರಸವಣಂ .. .. ಬಂದುದೋ .. .. ಶ್ವಾನಂ ಏಣಾವಸಾನಂ: **ನೇಮಿನಾಪು**, ೩. ೬೨)

**ಉದ್ಘೃಷ್ಟ** – ಉಜ್ಜಲ್ಪಟ್ಟ (ಅಗತನಯಾನೂಪುರ ಉದ್ಘೃಷ್ಟ ಜೂಟಂ .. .. ಮಹಾಕಾಳನಾಮಂ ಗಿರಿಶಂ: **ಕಾದಂಸಂ**, ೨. ೨)

**ಉದ್ದಂ ನುಡಿ** – ಹೆಚ್ಚು ಮಾತಾಡು (ಎಡೆಗೋದಿರದಿರಿಂ ಉದ್ದಂ ನುಡಿಯದಿರಿಂ ನೃಪತಿ ನುಡಿಯೆ ನುಡಿಯಿಂ: **ಆದಿಪು**, ೯. ೬)

**ಉದ್ದಂ ನೆಗೆ** – ಎತ್ತರಕ್ಕೆ ನೆಗೆ (ಮುನ್ನೀರ್ ಉದ್ದಂನೆಗೆದು ಇಂದ್ರನಂದನಕೆ ಪೊಯ್ಯೀರಾಯ್ತಿದೇಂ ರೌದ್ರನೋ: **ಜಗನ್ನಾವಿ**, ೧೮. ೨೬)

**ಉದ್ದಂ ಬರ್** – ಸಾಲಾಗಿ ಬಾ (ಚಿತ್ರಿತಚಿತ್ರಿಕಾಲೀಲೆಯಿಂ ಉದ್ದಂ ಬರ್ಪ ಚೇಟೀನಿವಹದ ಬರವಿಂ: **ಆದಿಪು**, ೧೧. ४೫)

**ಉದ್ದಂಬರು** – ಗರ್ವಿಷ್ಠನಾಗು (ಕುಱುಂಬರ್ ತಱುಂಬಿರ್ದ್ದರಿಲ್ಲ ಎತ್ತಲುಂ ಉದ್ದಂಬಂದು ದಳ್ಳೆದುರಿವ ರಿಪುಗಳಿಲ್ಲ: **ಸುಕುಮಾಚ**, ೧. ೮೦)

**ಉದ್ದಬಿದ್ದಮಾಗು** – ನೀರಿನಿಂದ ತುಂಬು (ಉಪಜಲಧಿಗಳೆನೆ ಜನಮಱೆಯಱೆಯೆ ದಲ್ ಉದ್ದಬಿದ್ದಮಾಯ್ತುವನಿತಳಂ: **ಆದಿಪು**, ೬. ೬೨)

**ಉದ್ದಮುರಿ** – ಸಿಟ್ಟಾಗು (ಕೋಗಿಲೆಗಳೆಂದೊಡೆ ಬಂದೆಳಮಾವೆಂದೊಡೆ ನೆಱೆದಿಂಗಳ ತಣ್ಪೆಳಗೆಂದೊಡೆ ಉದ್ಮುರಿವಂ ಗೊರವಂ: **ಕಬ್ಬಿಗಕಾ**, ೧४೬)

**ಉದ್ದಮುರಿಸು** – ಹೆಚ್ಚು ಉರಿಸು (ಬೀಸಿದ ನುಡಿಯೆ ತನ್ನ ವಿರಹಾಗ್ನಿಯಂ ಉದ್ದಮುರಿಸಲ್ ಬಿಡದೆ ಬಿಸಿದ ಗಾಳಿಯಂತಾಗೆ: **ಪಾರ್ಶ್ವನಾಪು**, ೩. ೯೯ ವ)

**ಉದ್ದಮೂಳ** – ಮಹಾ ಮೂರ್ಖ (ಚೀಃ ಪಳಿಯೆಂದೊಡೆ ಅಗಿದು ಸಜ್ಜನ ಕುಳಮಂ ಕಂಡಾಗಳ್ ಉದ್ದಮೂಳಂ ಬಾಳಂ: **ಧರ್ಮಮಧು**, ೧. ೬೩)

**ಉದ್ದಮೇಱು** – ಉತ್ಸಾಹಿಸು (ಬೇಂಟೆಗೆ ಪೋಱಮಡಿಂ ಎಮದು ಉದ್ದಮೇಱಿ ಸವಳದೆ ನಿಚ್ಚಂ ಪಱೆಯಂ ಪೊಯ್ಸುತ್ತಿರ್ಪಂ .. .. ಮೃತ್ಯುಗರೆವಂತಕ್ಕುಂ: **ಸಮಯಪ**, ೧४. ೮೦)

**ಉದ್ದರ್ಪ** – ಹೆಚ್ಚಿನ ಸೊಕ್ಕು ಪುಷ್ಪೋತ್ಕರಬಳವಿಜಯ ಉದ್ದರ್ಪಕಂದರ್ಪಲೀಲಾಕರನಾದಂ ತಾನಾಗೆ: **ಆದಿಪು**, ೧೩. ೭)

**ಉದ್ದವಣ** – ಜೋರಾಗಿ ಕೂಗು; ಘೋಷಣೆ; ಒಂದು ವಾದ್ಯ (ಮುದದೆಸೆದಿರ್ಪ ಬದ್ದಣಂ ಉದ್ದವಣಂ ರಿಚೆ ಪಾಟವಾಟವೆತ್ತಿದ ಗುಡಿ ತೋರಣಂ: **ನೇಮಿನಾಪು**, ೨. ೩೯)

**ಉದ್ದವರಿ** – ನುಗ್ಗಿ ಹರಿ (ತೊತ್ತಳದುಱೆದಿರ್ಪಂ ಉದ್ದವರಿದಿಂ ಜವನಂತೆ ಅದಱೆಂದೆ ನಂಬಿ ನಿರ್ಮಳ ಜಿನಧರ್ಮಮಾರ್ಗದೊಳೆ ನಡೆದು ಎಯ್ದು ಅಪವರ್ಗದುರ್ಗಮಂ: **ಸಮಯಪ**, ೧೫. ೯४)

**ಉದ್ದಳನ** – ಸೀಳುವುದು (ವೈರಿನರೇಂದ್ರ ಉದ್ದಾಮದರ್ಪ ಉದ್ದಳನನೆ ಕಥಾನಾಯಕಂ ಮಾಡಿ ಸಂದರ್ಜುನನೊಳ್ ಪೋಲ್ವೀ ಕಥಾಭಿತ್ತಿಯಂ ಅನುನಯದಿಂ ಪೇೞಲೆಂದೆತ್ತಿಕೊಂಡೆಂ: **ಪಂಪಭಾ**, ೧. ೫೧)

**ಉದ್ದಾನಿ** – ಹಿರಿಮೆ, ಅತಿಶಯ (ಇವಂದಿರ ಮೆಯ್ಯ ಗಂಧದ ಉದ್ದಾನಿಗೆ ವಾರದೆಂಬಿನಂ: **ಆದಿಪು**, ೫. ೯೦)

**ಉದ್ದಾಮಧಾಮ** – ಶ್ರೇಷ್ಠವಾದ ತೇಜಸ್ಸು[ಳ್ಳವನು] (ಅಮಿತಗುಣಧಾರಂ ನಿಮ್ಮ ಮಾವಂ ಉದ್ದಾಮಧಾಮಂ: **ಸುಕುಮಾಚ**, ೨. ४೦)

**ಉದ್ದಿಷ್ಟವಿರತ** – [ಜೈನ] ಶ್ರಾವಕರಲ್ಲಿನ ಒಂದು ಬಗೆ, ತನಗಾಗಿ ಮಾಡಿದ ಆಹಾರವನ್ನು ಉಣ್ಣದಿರುವವನು (ದರ್ಶನಿಕಂ ವರ್ತಿಹಂ .. .. ಅನುಪಮವಿರತಂ ಉದ್ದಿಷ್ಟವಿರತನೆಂದಿಂತು ಪನ್ನೊಂದು ವಿಕಲ್ಪಮನುಳ್ಳ ಶ್ರಾವಕರೊಳ್: **ಸುಕುಮಾಚ,** ೬. ೩೬ ವ)

**ಉದ್ದೀಪನ** – ಉರಿಸುವ, ಉತ್ತೇಜನ (ಆ ಪಕ್ವಾನ್ನಮೆ ಮೃತಿಗೆ ಉದ್ದೀಪನಪಿಂಡದವೊಲಾಗೆ ಅಘದಿಂ: **ಯಶೋಧಚ,** ೩. ೩೪)

**ಉದ್ದು** – ಒಂದು ಧಾನ್ಯ, ಮಾಷ (ಧರಾಮರಸಮಿತಿ ಆಜ್ಯಮುಮಂ ಉದ್ದುಮಂ ಆ ಮಧುಮಾಂಸಮೆಂದು ಕಲ್ಪಿಪರ್: **ಸಮಯಪ,** ೧೪. ೧೪೯)

**ಉದ್ದೆಸ** – [ಉದ್ದೇಶ] ಗುರಿ (ಅಸದಳಮೆಸೆದುದು ಮೊಗೆವ ಉದ್ದೆಸದೊಳೆ ತಳತಳಿಸಿ ಪೊನ್ನ ಪೊಸಕಳಸಂಗಳ್: **ಆದಿಪು,** ೭. ೮೫); ಅಭಿಪ್ರಾಯ (ಹಸುರ್ವಾಸೆ ಬಟ್ಟೆಯಿಂದುದ್ದೆಸಮಱಿಯದೆ ನಡೆದು ಕುಚನಗಾಂತದೊಳ್: **ಆಚವರ್ಧ,** ೬. ೮)

**ಉದ್ದೇಶ** – ಎತ್ತರವಾದ ಪ್ರದೇಶ (ನಗರಾಭ್ಯಂತರ ದೇವತಾಭವನದೊಳ್ ಚೌವಟ್ಟದೊಳ್ .. .. ದುರ್ಜನೋಪಗತೋದ್ದೇಶದೊಳಂ ಪಣ್ಯವರ್ಮವೀಧಿ ವ್ರಾತದೊಳಂ .. .. ನೀತಿಗೆಟ್ಟಾಡುವರ್: **ಸುಕುಮಾಚ,** ೨. ೭)

**ಉದ್ದೇಶಿಸು** – ದೃಷ್ಟಿಯಲ್ಲಿಟ್ಟುಕೊ (ಮತ್ತಮಾ ದಮಿತಾರಿಯನುದ್ದೇಶಿಸಿ ಬಲದೇವನಿಂತೆಂದಂ: **ಶಾಂತಿಪು,** ೨. ೩೦ ವ)

**ಉದ್ದೃಪ್ತ** – ಗರ್ವದಿಂದ ಕೂಡಿದ (ಸಪ್ತಸಮುದ್ರಮುದ್ರಿತ ಧರಾತಳಮಂ ಬೆಸಕಯ್ಸು ಮೀಱಿದ ಉದ್ದೃಪ್ತ ವಿರೋಧಿ ಸಾಧನಮಂ ಆಹವದೊಳ್ ತಱಿದೊಟ್ಟು: **ಪಂಪಭಾ,** ೧. ೧೪೯)

**ಉದ್ಧತ** – ಶ್ರೇಷ್ಠ (ಕುಲಜರಂ ಉದ್ಧತರಂ ಭುಜಬಲಯುತರಂ ಹಿತರಂ ಈ ಸಭಾಮಧ್ಯದೊಳ್ ಅಗ್ಗಲಿಸಿದ ಮದದಿಂ ನಾಲಗೆ ಕುಲಮಂ ತುಬ್ಬುವವೊಲ್ ಉಱದೆ ನೀಂ ಕೆಡೆನುಡಿವೈ: **ಪಂಪಭಾ,** ೧೦. ೨೦)

**ಉದ್ಧತವೃತ್ತ** – ಸೊಕ್ಕಿನ ನಡವಳಿಕೆಯುಳ್ಳವನು (ಉದ್ಧತವೃತ್ತಂ .. .. ಗಾಳಿಗೊಡ್ಡಿದ ಸೊಡರ್: **ರಾಜಶೇವಿ,** ೬. ೧೨೪)

**ಉದ್ಧತಿಕೆ** – ಅಹಂಕಾರ (ಇಕೆಗೆ: ಉನ್ನತಿಕೆ, ಉದ್ದತಿಕೆ, ಆಯತಿಕೆ: **ಶಬ್ದಮದ,** ೨೨೨, ಪ್ರ)

**ಉದ್ಧತಿಕೆ** – ಉದ್ಧತಿಕೆ (ನೀನೆನ್ನಂ ಬಗೆಯದೆ ಉದ್ಧತಿಕೆಯೊಳಿರ್ದೈ: **ಧರ್ಮಾಮೃ,** ೫. ೧೩೧)

**ಉದ್ಧರಿಸು** – ಮೇಲಕ್ಕೆತ್ತು (ಸಚ್ಚರಿತರ್ ಸಾಧುಗಳ್ ಎಮ್ಮನುದ್ಧರಿಸುಗೀ ಸಂಸಾರವಾರಾಶಿಯಿಂ: **ಮಲ್ಲಿನಾಪು,** ೧. ೫)

**ಉದ್ಧುರ** – ನಿರರ್ಗಳವಾದ (ಉದ್ಧುರಂ ಉದ್ಭಟಂ ಉನ್ಮುಖಂ ಉದ್ಧತಂ ಉಚ್ಛೃಂಖಲಂ ನಿರರ್ಗಳಮಕ್ಕುಂ: **ಅಭಿಧಾವ,** ೨. ೧. ೫೪); ಅತಿಶಯವಾದ (ಯಶೌಘನ ವಿರಹದ ಪರಿತಾಪಮಂ ಯಶೋಧರನ ಯಶೋಹರಿಚಂದನ ಚರ್ಚೆಯಿಂ ಉದ್ಧುರ ದಾನಾಸಾರಸೇಕದಿಂ ಮಗ್ಗಿಸಿದಳ್: **ಯಶೋಧಚ,** ೨. ೧೪); [ರಥದಿಂದ] ಕಳಚಿದ (ಕರಮೆರಡುಂ ಪಱಿವುದುಂ ಆತುರದಿಂದಂ ತನ್ನ ಕುನ್ನಗೆಯ್ಯೊಳೆ ಕೊಂಡು ಉದ್ಧುರಚಕ್ರದಿಂ ಇಟ್ಟಂ ತಿರಿಪಿ ನರಪ್ರಿಯತನೂಜನ ಅಕ್ಷೋಹಿಣಿಯಂ: **ಪಂಪಭಾ,** ೧೧. ೧೦೩)

**ಉದ್ಧೂತರವ** – ಜೋರಾದ ದನಿ (ಸೂತ ನಟ ವಂದಿಮಾಗಧ ವೈತಾಳಿಕ ಕಥಕ ಪುಣ್ಯಪಾಠಕ ವಿಪ್ರ ಉದ್ಧೂತರವಂ ಎಸೆಯೆ: **ಪಂಪಭಾ,** ೧೨. ೧೦೬)

**ಉದ್ಧೂಯಮಾನ** – ಮೇಲೆತ್ತಿದ, ಹೆದೆಯೇರಿಸಿದ (ಉದ್ಧೂಯಮಾನಪ್ರಕೀರ್ಣ ಚಾಪಲಕ್ಷಿತ ಕ್ಷತ್ರಪುತ್ರ ನಿರಂತರಮುಮಪ್ಪ ನಿಜಬಲಂಬೆರಸು: **ಆದಿಪು,** ೧೪. ೯೩ ವ)

**ಉದ್ಬದ್ಧಕುಕ್ಷಿ** – ದೃಢವಾದ ಹೊಟ್ಟೆಯುಳ್ಳ (ಉದ್ಬದ್ಧಕುಕ್ಷಿ ತನುಸ್ನಿಗ್ಧತನೂರುಹಂ .. .. ತುರಗಂ ಮನಂಗೊಳಿಸಿದತ್ತು ಉತ್ತಾರ ಹೇಷಾರವಂ: **ಮಲ್ಲಿನಾಪು,** ೮. ೧೧೪)

**ಉದ್ಬದ್ಧಜೂಟ** – ಎತ್ತಿ ಕಟ್ಟಿದ ಜಡೆಯುಳ್ಳ (ಉತ್ಕಟಹಾಟಕ ಪದಕಮಣಿ ತ್ರಿಖಂಡಕರ್ಣಾಭರಣಂ ಉದ್ಬದ್ಧಜೂಟಂ: **ಆದಿಪು,** ೧೬. ೪೫ ವ)

**ಉದ್ಬೋಧಕೋಶ** – ಜ್ಞಾನಕೋಶ (ಶ್ರುತಬಲಮೆ ಬಲಂ ಕೋಶಂ ಉದ್ಬೋಧಕೋಶಂ: **ಚಂದ್ರಪ್ರಪು,** ೧. ೨೯)

**ಉದ್ಭಟವೃತ್ತ** – ಉತ್ತಮ ನಡವಳಿಕೆಯುಳ್ಳ (ದೃಢಚಿತ್ತಂ ಉದ್ಭಟವೃತ್ತಂ ಘಾತಿಸಲೊಡರ್ಚಿದಂ ಘಾತಿಗಳಂ: **ಪುಷ್ಪದಂಪು,** ೧೪. ೧೬)

**ಉದ್ಭವ** – ಹುಟ್ಟುವುದು, ಉತ್ಪತ್ತಿ (ತವದ ಆಯುಷ್ಯದ ಕುಂದದಂದದ ಬಿಯಂಗೆಯ್ದುಂ ಪವಣ್ಗೊಱದ ಉದ್ಭವದೆ ಏ ನೋಂತೆಂ ಎನಿಪ್ಪ: **ಶಾಂತಿಪು,** ೭. ೮)

**ಉದ್ಭಾವಿಸು** – ಕಾಣಿಸಿಕೊ (ಆವಾವಿಂದ್ರಿಯದ ವಿಷಯಮಂ ಶ್ರೋತ್ರದೊಳುದ್ಭಾವಿಪ ನಿರ್ಮಳಮೂರ್ತಿಗೆ .. .. ಅವನತನಪ್ಪೆಂ: **ಶಬ್ದಮದ,** ೧)

**ಉದ್ಭಾಸಿ** – ಪ್ರಕಾಶಮಾನವಾಧ (ದಯಿತೇಕ್ಷಣ ಮಗ್ನ ಮೃಗಂ ವಿಯತ್ತ್ವ ಉದ್ಭಾಸಿ ರುಧಿರಕರ್ದಮ ವಲ್ಮೀಕಯುತಂ .. .. ಕೀರ್ತಿಚಂದ್ರಂ: **ನೇಮಿನಾಪು,** ೪. ೨೪)

**ಉದ್ಭಾಸಿಸು** – ಬೆಳಕು ಬೀರಿ ಸ್ಪಷ್ಟಪಡಿಸು (ದೋಷಮಿನಿತೆಂದು ಬಗೆದುದ್ಭಾಸಿಸಿ ತಱಿಸಂದು .. .. ಅಱಿಯಲಾಱದೆ ಬೇಸಱುಗುಂ: **ಕವಿರಾಮಾ,** ೧. ೪೬)

**ಉದ್ಭೂತ** – ತೋಳೆಯಲಾದ (ನದನದಿ ಉದ್ಭೂತವಾರಿಪ್ರಸರಂ ಎಸರ ನೀರಂದದಿಂ ಕಾಯ್ದು ಆಕಾಶದಿಶೌಘಂ ತೀವ್ರದಾವಾಗ್ನಿವೊಲುರಿದಪುದು: **ಸುಕುಮಾಚ,** ೪. ೧೩)

**ಉದ್ಭಿದ್ಯಮಾನ** – ಚಿಗುರುತ್ತಿರುವ (ಅಭಿನವ ಉದ್ಭಿದ್ಯಮಾನ ಮೃದುಕುಟಿಳಶ್ಮಶ್ರು ಮಧುಕರಪಟಳ ಪರಿವೃತ ಮುಗ್ಧಮುಖಸರಸಿಜನುಂ: **ಆದಿಪು,** ೩. ೯೦ ವ)

**ಉದ್ಭಿನ್ನ** – ಸೀಳಲ್ಪಟ್ಟ (ಸಂಜೀವಕಂಗೆ ಒಲ್ದು ನೀಡಿದಂ ಉದ್ಭಿನ್ನ ಮದಾಂಧಸಿಂಧುರ ಘಟಾಸಂಘಟ್ಟ ಕುಂಭಾಗ್ರನಿರ್ಯತ್ ಅಸೃಕ್ ಕುಂಕುಮ ಪಂಕಪಂಕಿಳಸಟಾಜಾಳಂ ಮೃಗಾಧೀಶ್ವರಂ: **ಪಂಚತಂತ್ರ,** ೧೧೧)

**ಉದ್ಭಿನ್ನೆ** – ಸೀಳುವವಳು (ಶ್ರೀಗಂ ವಾಕ್ಶ್ರೀಗಂ ಇಂತೀಕೆಯೆ ಮಿಗಿಲೆನಿಪ ಐಶ್ವರ್ಯಸಂಪನ್ನೆಯಂ ಸಂವೇಗವ್ಯುತ್ಪನ್ನೆಯಂ ದುರ್ಧರಕುಮತನಗ ಉದ್ಭಿನ್ನೆಯಂ: **ಸುಕುಮಾಚ,** ೭. ೪೮

**ಉದ್ಭ್ರಾಮಿತ** – ಗದೆಯಿಂದ ಹೊಡೆಯುವ ರೀತಿಗಳಲ್ಲಿ ಒಂದು (.. .. ಉದ್ಭ್ರಾಮಿತಂ ಉಚಿತವಿರುದ್ಧಂ ಅಚಿಂತ್ಯಮುಂ ಎಂಬ ಎಂಟುಂ ತೆಱದ ಪ್ರಕರಣಂಗಳೊಳಂ: **ಗದಾಯು,** ೮. ೧ ವ)

**ಉದ್ಯಚ್ಛೃಂಗ** – ಮೇಲೆ ಚಾಚಿಕೊಂಡಿರುವ ಕೋಡು, ಶಿಖರ (ಮಂತ್ರಪೂತಾಂಗಮಂ ನೃಪನೆಯ್ದಿದಂ ಉದ್ಯಚ್ಛೃಂಗಂ ಆ ಶತಶೃಂಗಮಂ: **ಪಂಪಭಾ,** ೧. ೧೧೫)

**ಉದ್ಯತ್** – ಮೇಲಕ್ಕೆ ಚಾಚಿಕೊಂಡಿರುವ (ಬಿಣ್ಪೊಂಚಲ್ ಉದ್ಯತ್ ಕುಚದಂತಿರೆ: **ಲೀಲಾವತಿ,** ೧೪. ೯೩); ಹರಡುತ್ತಿರುವ (ಚಾರು ಉದ್ಯತ್ ನಯನಾಂಶುಚಂದ್ರಿಕೆಗಳಿಂ ನೀರಾಜಿಸಿತ್ತೆಲುಂ: **ಆಚವರ್ಧ,** ೨. ೪೩)

**ಉದ್ಯತ** – ಪ್ರಯತ್ನವುಳ್ಳ (ರಣೋದ್ಯತನಾಗೆಂಬುದಂ ಎಮ್ಮಂ ಅನ್ಯರವೊಲೇಂ ನೀಂ ಪ್ರಾರ್ಥಿಸಲ್ವೇಟ್ಟುದೇ: **ಪಂಪಭಾ,** ೧೦. ೧೦)

**ಉದ್ಯಮ** – ಪ್ರಯತ್ನ (ಆ ಕೌಂತೇಯರಾಯಕ್ಕೆ ಗೆಂಟೆಂತಕ್ಕುಂ ಅದಂ ಮತ್ ಉದ್ಯಮಮೆ ಪೇೞ್ಗೆ: **ಪಂಪಭಾ,** ೧೨. ೪೭)

**ಉದ್ಯಾನವನ** – ಸಾರ್ವಜನಿಕರ ವಿಹಾರದ ವನ (ಸಮಸ್ತಲೋಕಂ ರಮಿಯಿಸುವ ವನಾಂತರಂ ಅಂತದು ಉದ್ಯಾನವನಂ: **ಅಭಿಧಾವ,** ೧. ೭. ೧೩)

**ಉದ್ಯಾಪನ** – ವ್ರತವನ್ನು ಪೂರ್ಣಗೊಳಿಸಲು ಮಾಡುವ ಕರ್ಮ (ಅವಿಪ್ಪತ್ತಯ್ದು ನೆಱೆದಂದಕ್ಕುಂ ತದುದ್ಯಾಪನಂ: **ಸುಕುಮಾಚ,** ೯. ೧೧)

**ಉದ್ಯುಕ್ತ** – ಪ್ರಯತ್ನಪಡುವವನು (ಕಾವ್ಯಶ್ರೀಕರಣೋದ್ಯುಕ್ತನಕ್ಕೆ ಕವಿ ತನ್ನಜೀವಂತೆ: **ಕವಿರಾಮಾ,** ೧. ೨೧)

**ಉದ್ಯೋಗಂಗೆಯ್** – ಪ್ರಯತ್ನಪಡು (ಆರಭಟೀವೃತ್ತಿಯುಕ್ತಮಪ್ಪ ತಾಂಡವಮಮಂ ಆಡಲ್ ಉದ್ಯೋಗಂಗೆಯ್ದು: **ಆದಿಪು,** ೭. ೧೧೪ ವ)

**ಉದ್ಯೋತ** – ಹೊಳಪು, ಕಾಂತಿ (ಉದ್ಯೋತಂ ಶ್ವೇತಕೃಷ್ಣಂಗಳಂ ಅಱಿಪುವವೊಲ್ ಪುಣ್ಯಪಾಪಂಗಳಂ ಸ್ಯಾದ್ವಿದ್ಯಾವಾದಂಗಳಿಂದ ಭವ್ಯರ ಬಗೆವುಗುವನ್ನಂ: **ಮಲ್ಲಿನಾಪು,** ೧. ೪)

**ಉದ್ಯೋತಿ** – ಉದ್ಯೋತ (ಭೂಷಣಾಡಂಬರ ಉದ್ಯೋತಿಯಿಂ ಒಪ್ಪಿರ್ದುದ್ವಿಳಾಸಂ: **ಆದಿಪು,** ೧೧. ೪೬)

**ಉದ್ವೃತ್ತ** – ಉದ್ಧಟ (ಉದ್ವೃತ್ತರಿಪುನೃಪತಿಗಳಂ ಏಸಾಡುತ್ತುಂ ಅಲ್ಲಿಂ ತಳರ್ದು: **ಪಂಪಭಾ,** ೪. ೧೮ ವ)

**ಉದ್ವರ್ತ** – ಅಂಗರಾಗ (ಚಂದನ ಉದ್ವರ್ತಂ ಈಗಳಿದೇಕಿಲ್ಲ ಎನೆ: **ಲೀಲಾವತಿ,** ೭. ೮೪)

**ಉದ್ವರ್ತನ** – ಸುಗಂಧ ಲೇಪಿಸುವುದು (ಪ್ರಸಾಧಕದ್ರವ್ಯಸಂ ಉತ್ಪಾದಿತಂ ಉದ್ವರ್ತನಂ ಉತ್ಸಾದಂ ಪಿಷ್ಟಾತಚೂರ್ಣಮದು ಪಟವಾಸಂ: **ಅಭಿಧಾವ,** ೧. ೧೩. ೧೫); ಬಣ್ಣ ಹಾಕುವ ಒಂದು ಬಗೆ (ಅನಿಲಕಂ ಪತ್ರಕಂ ಬಿಂದುಕಂ ಧೂಮ್ರಾವರ್ತನಂ ಉದ್ವರ್ತನಂ ಚಿತ್ರಪ್ರವರ್ತನಂ ಎಂಬಾಱುಂ ಪ್ರಕಾರಮುಮಂ: **ಮಲ್ಲಿನಾಪು,** ೫. ೪೨)

**ಉದ್ವರ್ತನಂಗೆಯ್** – ಲೇಪನಮಾಡು (ಘನಸಾರಮೇಳಾಪಿತ ಯಕ್ಷಕರ್ದಮಮಂ ಉದ್ವರ್ತನಂಗೆಯ್ದು: **ಧರ್ಮಪ,** ೨. ೫೨ ವ)

**ಉದ್ವಹ** – ಅಗ್ರಗಣ್ಯ (ರಥದಿಂದ ಇೞಿದುಬಂದಂ ಉಪೇಂದ್ರಯುತಂ ರಘೂದ್ವಹಂ: **ಪಂಪರಾ,** ೧೬. ೨೦)

**ಉದ್ವಹನ** – ಮದುವೆ (ಶರಧಿ ನಗಂ ಪುರಂ ಜನಪನ ಉದ್ವಹನಂ ತನಯ ಋತು ಚಂದ್ರ ಭಾಸ್ಕರರುದಯಂ: **ತ್ರಿಷಷ್ಟಿಪು,** ೧. ೪೨)

**ಉದ್ವಾಹ** – ಮದುವೆ (ವಿವಾಹ ಉದ್ವಾಹ ಪರಿಣಯಂ: **ಅಭಿಧಾವ,** ೧. ೧೧. ೧೧)

**ಉದ್ವಾಹಗೇಹ** – ಮದುವೆಯ ಮನೆ (ಹರಿನೀಲ ಸ್ತಂಭಮುಂ ಜಾಗದ ಪಡಲಿಗೆಯುಂ .. .. ಎಳಸೆ ಬೆಡಂಗಾದುದು ಉದ್ವಾಹಗೇಹಂ: **ಪಂಪರಾ,** ೫. ೧೧೨)

**ಉದ್ವಿಗ್ನೆ** – ತಳಮಳಗೊಂಡವಳು (ಪೊತ್ತುದು ಸಂಲಗ್ನವಿರಹಾಗ್ನಿ ತಾಪೋದ್ವಿಗ್ನೆಯ ನಾಸಿಕಮಭೇದಮಂ ಚಂಪಕದೊಳ್: **ಚಂದ್ರಪ್ರಪು,** ೫. ೧೩೨)

**ಉದ್ವಿಳಾಸ** – ಅತಿಶಯ ಬೆಡಗು (ಭೂಷಣಾಡಂಬರ ಉದ್ಯೋತಿಯಿಂ ಒಪ್ಪಿರ್ದ ಉದ್ವಿಳಾಸಂ: **ಆದಿಪು,** ೧೧. ೪೬)

**ಉದ್ವೃತ್ತ** – ತುಂಟ (ನಂದೆ ಅಪರನಂದೆ ಅಶ್ವಿನಿ ಮಹಾನಂದೆ ಎಂಬ ತೀರ್ಥಜಲಂಗಳೊಳ್ ಓಲಾಡುತ್ತುಂ ಉದ್ವೃತ್ತ ರಿಪು ನೃಪತಿಗಳಂ ಏಸಾಡುತ್ತುಂ ಅಲ್ಲಿಂ ತಳರ್ದು: **ಪಂಪಭಾ,** ೪. ೧೮ ವ); ಅಹಂಕಾರಿ (ಅತಿ ಉದ್ವೃತ್ತನೃಪರೆಱಗಿದರ್ ಭೂಪೋತ್ತಮನ ಅಡಿಗೆ ಅಧಿಕಭಾರಂ ಎೞಗಿಸದಾರಂ: **ಮಲ್ಲಿನಾಪು,** ३. ೨೨)

**ಉದ್ವೃತ್ತತೆ** – ಸೊಕ್ಕು (ಕೊಳ್ಳಳ್ ಏವೇಟ್ಟಿಂ ಉದ್ವೃತ್ತತೆಯಂ ಸೌಭಾಗ್ಯಸಂಪತ್ತಿಗೆ ಖಗನ ಮಗಳ್: **ನೇಮಿನಾಪು,** ३. ೪)

**ಉದ್ವೃತ್ತವೃತ್ತತೆ** – ಅತಿಶಯ ವರ್ತುಲತ್ವ (ಒಲ್ದು ನೋಡುವ ಗಾಡಿಕಾರ್ತಿಯರ ಕಣ್ಗೆ ಕಾಮನ ಅಡ್ಡಣದಂತೆ ದೊಡ್ಡಿತ್ತಾಗಿ ಮೀಱುವ ಉದ್ವೃತ್ತವೃತ್ತತೆಯಂ ಈಱುಕೊಂಡಂತೆ ಉದ್ವೃತ್ತಂಗಳಾದುವು: **ಪಂಪಭಾ,** ೨ ३೯ ವ)

**ಉದ್ವೇಗ** – ಕಳವಳ (ತಂತಮ್ಮ ಮಾಡಿದುದಂ ತಾಂ ಉಣವೇಟ್ಟುಂ ಎಂದು ಪಿರಿದೊಂದು ಉದ್ವೇಗದಿಂದಂ ಮಗುಟ್ದಿಂ: **ಕಾದಂಸಂ,** ३. ೯)

**ಉದ್ವೇಗಪರ** – ಕ್ಷೋಭೆಗೊಂಡ (ಮಾರಿದತ್ತನೃಪಂ ಬಿಲ್ಲಂಬೆಱಗುಂ ಆದಂ ಉದ್ವೇಗಪರಂ: **ಯಶೋಧಚ,** ೪. ೭೧)

**ಉದ್ವೇಜನ** – ಉದ್ವೇಗ (ಕಣ್ಣೀರ್ಗಳೊಳ್ ತೇಂಕುತುಂ ದುಃಖಸಹಸ್ರ ಉದ್ವೇಜನ ಅಧೋಮುಖಿಯೆನಿಪ ಮಹಾಶ್ವೇತೆಯಂ ಕಂಡನಾಗಳ್: **ಕಾದಂಸಂ,** ೭. ೮)

**ಉದ್ವೇಳ** – ಮೇರೆಮೀರಿದ (ಶೃಂಗಾರರಸೋದ್ವೇಳಂ ಕಂದರ್ಪ ಕುಸುಮ ಬಾಣಾಭೀಳಂ: **ಗಿರಿಜಾಕ,** ೧೦. ೪೭)

**ಉಧ್ನಿ** – ಕೆಚ್ಚಲು (ಪಾಣಿತಳಂ ಘಟೋಧ್ನಿಗಳೊಳ್ ಅಚ್ಚೊತ್ತಿರ್ಪಿನಿಂ ಭೋರೆನಲ್ ಕಱೆದಲ್ ಪಾಲಂ ಅತೀವ ಲೀಲೆಯೊದವಲ್: **ತ್ರಿಷಷ್ಟಿಪು,** ೧೫. ೨೭)

**ಉನ್ನಂ** – ನಡುವಣ ರೀತಿಯವನು (ಅಂತಹಂ ಇಂತಹಂ ಉಂತಹಂ ಎಂತಹಂ .. .. ಅರ್ಥದೊಳ್ ಮೇಣ್ ಅಂತವಱೆಡೆಗೆ ಅನ್ನಂ ಇನ್ನಂ ಉನ್ನನುಂ ಎನ್ನಂ: **ಶಬ್ದಮದ,** ೧೭೧)

**ಉನ್ನತಿ** – ಮೇಲ್ಮೆ (ತನ್ನ ಸಾಮರ್ಥ್ಯದೊಂದುನ್ನತಿಯಂ ನುಡಿಯುತ್ತುಂ: **ಗಿರಿಜಾಕ,** ೧೦. ೪೫ ವ); ಏಳಿಗೆ (ಆರತಿಗಳನೆತ್ತಿಯೆತ್ತಿ ಪಿಂಗದೆ ಮಂಗಳೋನ್ನತಿಯಂ ಕೊಂಡಾಡುತ್ತುಂ: **ಗಿರಿಜಾಕ,** ೧೦. ೪೫ ವ); ಉಚ್ಚತೆ (ಉತ್ತಮಕುಲಶೈಲಂ ಉನ್ನತಿಯಂ ಏಳಿದವಾಗೆ ಬಿಸಟಿಪ್ಪೊಡಂ ಬಿಸುಟಿಪ್ಪೆಮ ಬಿಸುಡೆಂ ಮದೀಯ ಪುರುಷವ್ರತಮೊಂದುಮಂ: **ಪಂಪಭಾ,** ೧. ೮೩); ಎತ್ತರ (ಮಂದರಮೇಂ ತಾಂ

ರಾಜಿಸಿದುದೊ ಲಕ್ಷಯೋಜನ ಉನ್ನತಿಯಿಂದಂ: **ಮಲ್ಲಿನಾಪು,** ೨. ೧)

**ಉನ್ನಮಿತ –** ಮೇಲಕ್ಕೆತ್ತಿದ (ಆ ಶುಕ ರಾಜಾಭಿಮುಖ ಉನ್ನಮಿತ ದಕ್ಷಿಣಚರಣನುಂ ಅತಿಸ್ಪಷ್ಟವರ್ಣಸಂಸ್ಕಾರಮಪ್ಪ ವಾಣಿಯುಂ ಕೃತಜಯಶಬ್ದನುಂ ಆಗಿ: **ಕಾದಂಸಂ,** ೧. ೨೦ ವ)

**ಉನ್ನಿದ್ರ –** ಅರಳಿದ (ಉನ್ನಿದ್ರಾಂಭೋಜಾಸ್ಯೆಗೆ ಮದನದ್ರವಮುಂ ಕಣ್ಣನೀರುಂ ಉಣ್ಮಿದುವಾಗಳ್: **ಆದಿಪು,** ೧೨. ೪೪); ಜಾಗ್ರತ (ಭದ್ರಂ ಉನ್ನಿದ್ರಂ ಅಪಾರಂ ಪಾವನಪ್ರಸ್ತುತಗತಿ ಭುವನಾಗ್ರಸ್ಥಿತಂ .. .. ಸಿದ್ಧನೀರೇಜಷಂಡಂ: **ನೇಮಿನಾಪು,** ೧. ೩)

**ಉನ್ನಿದ್ರನಾಗು –** ನಿದ್ದೆಯಿಂದ ಎಚ್ಚರಗೊಳ್ಳು (ಮಂಗಳಪಾಠಕರವಂಗಳೊಡನೆ ಭರತೇಶ್ವರಂ ಉನ್ನಿದ್ರನಾದಂ: **ಆದಿಪು,** ೧೨. ೫೩ ವ)

**ಉನ್ನಿದ್ರೆ –** ನಿದ್ದೆ ತಿಳಿದೆದ್ದ (ಮಂಗಳಾನಕ ಸದ್ರಭಸದಿಂದಂ ಉನ್ನಿದ್ರೆಯಾದ ಮಹಾದೇವಿವೆರಸು: **ಪುಷ್ಪದಂಪು,** ೧೨. ೬ ವ)

**ಉನ್ನಿಸು –** ಲೆಕ್ಕಿಸು (ಆರುಂ ಗಡ ಉನ್ನಿಸದು ತನುಮನವ ಮೇಣಿನ್ನಾರುತ್ಯ ಧೀರತೆಯಂ ಆಹರಿಸದು: **ಅನುಭವ,** ೮೨)

**ಉನ್ನುನ್ನಂ –** ವಿಶೇಷವಾಗಿ (ಬಿನ್ನನೆ ಕುರುಳ ನೆಟಿಲ್ಗಳ್ ತನ್ನೊಳೆ ತಳ್ವೊಯ್ದು ನೆಗಟ್ದಿ ಕಱೆಯನೆ ಪೋಲ್ತು ಉನ್ನುನ್ನಂ ಸೊಗಯಿಸುತಿರೆ: **ಆದಿಪು,** ೭. ೧೦); ಮಧ್ಯೆ ಮಧ್ಯೆ (ಕೆನ್ನೆಯ ನರೆಯಂ ಕದಪಿನೊಳ್ ಉನ್ನುನ್ನಂ ನೆಗೆದ ತೆರೆಯನೊಡ್ಡಿದ ಜರೆಯಂ ಕನ್ನಡಿಯ ನೋಡಿ ತಜಿಸಲೆ ಕನ್ನಡಿಕುಂ ವೃದ್ಧ ನೋಡ ನಿನ್ನಯ ಮೊಗಮಂ: **ಅಜಿತಪು,** ೨. ೯೬)

**ಉನ್ಮಗ್ನ –** ಮೇಲೆ ಉಕ್ಕುವ (ಗುಹಾಮಧ್ಯದೊಳ್ ಉನ್ಮಗ್ನನಿಮಗ್ನಜಲನಿಮ್ನಗಾತಟದೊಳ್ ಬೀಡಂ ಬಿಡಿಸಿ: **ಆದಿಪು,** ೧೩. ೫೦ ವ)

**ಉನ್ಮತ್ತ –** ಮದಿಸಿದ (ವಚನಪ್ರೌಢಿಯಂ ಅರ್ಥಪ್ರಚುರತೆಯಂ .. .. ಮಾತ್ಸರ್ಯಚಿತ್ತಂ ಉನ್ಮತ್ತಂ ಅಱೆದೊಡೇಂ ಪೊಗಟ್ದಪನೇ: **ಮಲ್ಲಿನಾಪು**. ೧. ೨೭)

**ಉನ್ಮತ್ತವಿಳಾಸನ –** ಹುಚ್ಚಾಟ (ನೃತ್ಯಂ ಬಗೆಯಲೆನಗೆ ದಲ್ ಉನ್ಮತ್ತವಿಳಾಸನಂ: **ಆದಿಪು,** ೯. ೫೫)

**ಉನ್ಮದ –** ಸೊಕ್ಕಿದ, ಮದಿಸಿದ (ಉರಿಯಿಂ ಕರಿಮುರಿಕನಾದುವು ಉನ್ಮದ ಪರಭೃತ ಷಟ್ಚರಣ ರಾಜಕೀರಕುಲಂಗಳ್: **ಪಂಪಭಾ,** ೫. ೯೦)

**ಉನ್ಮದಾಳಿ –** ಸೊಕ್ಕಿದ [ಹೆಣ್ಣು]ದುಂಬಿ (ಆ ಸತಿಯಿಕ್ಕಿದ ಕಣ್ಣ ನೀರ ಧಾರೆಗಳೊಳೆ ನಾಂದು ಎಲರ್ಚಿ ಪೊದಳ್ದು ಒರ್ಮೆಯೆ ಪಾಱೆದುವು ಉನ್ಮದಾಳಿಗಳ್: **ಪಂಪಭಾ,** ೫. ೧೦)

**ಉನ್ಮನ –** ಉತ್ಕಂಠಿತ ಮನಸ್ಸು (ಜನ್ಮಾಭಿಷೇಕ ಕಾರ್ಯದೊಳ್ ಉನ್ಮನರಪ್ಪ ಇಂದ್ರರೆರಡುಮಾಸಮಿಕ್ಕುಂ: **ಆದಿಪು,** ೭. ೭೬)

**ಉನ್ಮಾರ್ಗವೃತ್ತಿ –** ಆಕ್ರಮಣಶೀಲತೆ (ಗಂಭೀರನಾಭಿಯೊಳ್ ಉನ್ಮಾರ್ಗವೃತ್ತಿಯೆಂಬುದು ಅಂದಿರಡರ್ದ ಬಾಸೆಯೊಳ್ ಅನತಿಗುಣಶ್ಲಾಘ್ಯ ಸ್ವಭಾವಮೆ ಎಂಬುದು: **ವರ್ಧಮಾಪು,** ೮. ೨೪ ವ)

**ಉನ್ಮಿಷಿತ –** ಅರಳಿದ (ತಳೆದನಿಮಿಷ ವಧುಗಳ್ ಕಣ್ಗೊಳಿಸಿದರ್ ಉನ್ಮಿಷಿತ ಕರ್ಣಿಕಾರ ಲತಾಸಂಕುಳಮೆನೆ: **ಪಂಪರಾ,** ೧೬. ೯೧)

**ಉನ್ಮೀಲತ್ –** ಅರಳಿದ (ಸಾಲಪ್ರಾಂಶು ವಿಶಾಲ ಲೋಲನಯನಂ ಪ್ರೋದ್ಯತ್ ವೃಷಸ್ಕಂಧಂ ಉನ್ಮೀಲತ್ ಪಂಕಜವಕ್ತ್ರಂ ಆಯತ ಸಮಗ್ರ ಉರಸ್ಥಳಂ: **ಪಂಪಭಾ,** ೧. ೬೮)

**ಉನ್ಮೀಲನ –** ಅರಳುವುದು (ನಲ್ ದಯೆಯ ನೇತ್ರೋನ್ಮೀಲನಂ ಗೆಯ್ದು ಸಚ್ಚರಿತರ್ ಸಾಧುಗಳ್ ಎಮ್ಮನುದ್ಧರಿಸುಗೆ ಈ ಸಂಸಾರವಾರಾಶಿಯಿಂ: **ಮಲ್ಲಿನಾಪು,** ೧. ೫)

**ಉನ್ಮೀಲಿತಲೋಚನ –** ಅರಳಿದ ಕಣ್ಣು (ಶ್ರೀಮತಿಯ ನಿಕಾಮಕೋಮಳಕರತಳಪಲ್ಲವಸ್ಪರ್ಶನಸುಖ ಉನ್ಮೀಳಿತ ಲೋಚನನಾಗೆ: **ಆದಿಪು,** ೪. ೪೮ ವ)

**ಉನ್ಮೀಷಿತ –** ಅರಳಿದ (ಸಿತಪುಂಡ್ರ ಅಂಭೋಜ ಪಂಡ ಉನ್ಮೀಷಿತ ಕಾಸಾರವಾರಪ್ರಸೂನಾಂಚಿತ .. .. ದ್ರುಮಸಮಿತಿಮಯ ಉದ್ಯಾನ ಶೋಭಯಮಾನಂ: **ಶಾಂತೀಶ್ವಪು,** ೬. ೮೧)

**ಉನ್ಮುಚ್ಯಮಾನ –** ಬಿಡಲ್ಪಟ್ಟ (ಗಣಬದ್ಧ ಅಮರಹೂಂಕೃತಂ ಜಯಕುಮಾರ ಉನ್ಮುಚ್ಯಮಾನೋಗ್ರಮಾರ್ಗಣಂ: **ಆದಿಪು,** ೧೩. ೬೭)

**ಉನ್ಮುಖ –** ಕಾತರನಾದ (ದಶಮುಖಂ ಉನ್ಮುಖಂ ಅಳಿಪಿಂ ಶಶಿಮುಖಿಯಂ .. .. ಉಯ್ದಂ: **ಪಂಪರಾ,** ೯. ೧೦೨)

**ಉನ್ಮೂಲನ –** ಬೇರುಸಹಿತ ಕಿತ್ತುಹಾಕುವುದು (ಕುರುರಾಜಮಹಾಮಹೀಜ ಮೂಲೋನ್ಮೂಲನ ಪ್ರಳಯಭಂಜನನುಂ: **ಗದಾಯು,** ೨. ೧೮ ವ)

**ಉನ್ಮೇಷ –** ಕಣ್ಣು ತೆರೆಯುವುದು (ನಿಜನಿಮಿಷೋನ್ಮೇಷಮಾತ್ರಂ ಜಗತ್ತ್ರಯ ಸೃಷ್ಟಿಕ್ಷಮನಾದ ಕೃಷ್ಣನ: **ಜಗನ್ನಾವಿ,** ೩. ೬೭)

**ಉನ್ಮೋಟಿತ –** ವಿಶೇಷವಾಗಿ ಹೊಡೆಯಲ್ಪಟ್ಟ (ಸುಗಿದು ಸಮದ ಇಭಕರ ಉನ್ಮೋಟಿತ ಮಹೀಜಮಂ ವಿಂಧ್ಯಾಟವಿಯಂ ಪೊಕ್ಕುದು ಆ ಮಹೋಗ್ರವರಾಹಂ: **ಲೀಲಾವತಿ,** ೬. ೧೭)

**ಉಪಕಂಠ –** ಹತ್ತಿರ (ವಿಜಯಾರ್ಧಮಹೀಧರ ಉಪಕಂಠವನನಿಕಟದೊಳ್ ಬೀಡಂ ಬಿಟ್ಟಾಗಳ್: **ಆದಿಪು,** ೧೩. ೫೫ ವ); ತಪ್ಪಲು (ಜಂಬುಕಂ ಉದ್ಯತ್ ವಿಪುಳತರಮಪ್ಪ ಗಿರಿವರದ ಉಪಕಂಠದ ಬಿಲದೊಳ್ ಇರ್ಪುದು ಅತಿಮುದದಿಂ: **ಪಂಚತಂತ್ರ,** ೯೨); ಕುದುರೆಯ ಓಟದ ಒಂದು ಬಗೆ (ಬಿಂಕಂಬಡೆದುದು ವಿಕ್ರಮಂ ಅಂಕಿತಂ ಉಪಕಂಠಂ ಉಪಜಯಂ ಉಪಜವಮೆಂಬ ಅಯ್ದುಂ ಕಣ್ಗೊಳಿಸುವ ಧಾರೆಗಳಿಂ ಕುದುರೆಯ ಕಾಲ್ಗೆ ಕೋಡಗಟೆಯೊಳಿವಕ್ಕುಂ: **ಮಲ್ಲಿನಾಪು,** ೯. ೨೩)

**ಉಪಕರಣ –** ಸಾಧನ (ಪರರ್ಗುಪಕರಿಪೆಡೆಗಳ್ಗೆ ಉಪಕರಣಂ ತನು: **ಕಾದಂಸಂ,** ೫. ೬೨)

**ಉಪಕಾಂತ –** ಮಿಂಡ (ಪಾರದೆ ಬರ್ಪ ದೂದವಿಯರಂ ತವಕದಿಂ ತಲೆಮಿಕ್ಕು ನೀವಿಯಂ ಚಾರು ಕಳಾಪದೊಳ್ ನಿಲಿಸುತುಂ .. .. ಜಾರೆಯರೆಯ್ದುತಿರ್ದರ್ ಉಪಕಾಂತರನಾ ಬಹಳಾಂಧಕಾರದೊಳ್: **ಶಾಂತೀಶ್ವಪು,** ೧೧. ೨೪)

**ಉಪಕಾರಿಕಾ[ಕೆ] –** ಅರಸನ ಬಿಡಾರ (ಮಹಾಸಧಾವಾರ ಮಧ್ಯಮನಳಂಕರಿಸಿ ತೋಱುವ ಉಪಕಾರಿಕಾಪ್ರದೇಶದೊಳ್ ಆತ್ಮೀಯ ಸ್ಥಪತಿರತ್ನಪ್ರಯತ್ನ ವಿರಚಿತಮಪ್ಪ: **ವರ್ಧಮಾಪು,** ೮. ೫೯ ವ)

**ಉಪಕಾರ್ಯ –** ಅರಸನ ಬಿಡಾರ (ಪೊಟಲ ಪೂರ್ವ ದಿಗ್ಭಾಗಂಗಳೊಳ್ ಶಿಬಿರ ನಿವೇಶ ಉಪಕಾರ್ಯಾವಿರಚನಪರರಾಗಿ: **ಶಾಂತಿಪು,** ೧೦. ೧೨೩

ವ); ಅರಮನೆ (ನೃಪನಿಕೇತನ ಸ್ಥಾನಕಂ ಉಪಕಾರ್ಯಮುಂ ಉಪಕಾರಿಕೆಯುಂ : **ಅಭಿಧಾವ,** ೧. ೧೦. ೧೭)

**ಉಪಕೃತಿ** – ಸಹಾಯ (ಉಪಕೃತಿಯಂ ನೆನೆಯದೆ ನೀನಪಕೃತಿಯನೊಡರ್ಚಿದ್ಯೆ: **ಪಂಪರಾ,** ೧೧. ೧೩೬)

**ಉಪಗತ** – ಹತ್ತಿರ ಬಂದ (ನಿರೀಕ್ಷಿಸಿ ನಿಕೃಷ್ಟದುಷ್ಟಗಣರಂ ಗತಪ್ರಜ್ಞರಂ ನಿರಂತರ ದಿಗಂತರೋಪಗತ ದುರ್ಯಶಃಪ್ರಾಜ್ಞರಂ: **ಸುಕುಮಾಚ,** ೨. ೧೮); ಯುಕ್ತವಾದ (ಅಂತದಂ ಕಂಡು ಅಪಗತಮೋಹರಸನುಂ ಉಪಗತನಿರ್ವೇಗರಸನುಂ ಆಗಿ: **ಆದಿಪು,** ೧೬. ೬೧ ವ)

**ಉಪಗೂಹನ** – ರಕ್ಷಣೆ (ಸಂಶ್ಲೇಷಮದು ಉಪಗೂಹನಂ ಪರಿಷ್ವಂಗಾರ್ಥಂ: **ಅಭಿಧಾವ,** ೨. ೨. ೧೮); [ಜೈನ] ತನ್ನಲ್ಲಿ ಸದ್ಗುಣಗಳನ್ನು ಬೆಳೆಸಿ ಸಧರ್ಮಿಗಳ ದೋಷವನ್ನು ಮುಚ್ಚುವುದು (ಉಪಗೂಹನಮುಂ ಸದ್ಧರ್ಮಪಥಚ್ಯುತ ಭವ್ಯಸಂಹತಿ ಸ್ಥಾಪನಮುಂ ವಿಮಳಗುಣವತ್ಸಳತ್ವಮುಂ ಅಪಗತ ಅಮಳಜೈನಶಾಸನೋದ್ಭಾಸನಮುಂ: **ಆದಿಪು,** ೫. ೫೮)

**ಉಪಗೃಹೀತ** – ಕೈವಶಮಾಡಿಕೊಂಡ (ಉಪಜಾಪೋಪಗೃಹೀತ ವಿರೋಧಿನರೇಂದ್ರಾಸ್ವಾದತೀರ್ಥನುಂ: **ಶಾಂತಿಪು,** ೧. ೭೧ ವ)

**ಉಪಗ್ರಹಸಂಧಿ** – ರಾಜನು ಮಾಡಿಕೊಳ್ಳುವ ಹದಿನಾರು ಬಗೆಯ ಸಂಧಿಗಳಲ್ಲಿ ಒಂದು; ಸರ್ವಸ್ವವನ್ನು ತೆತ್ತು ಪ್ರಾಣರಕ್ಷಣೆ ಮಾಡಿಕೊಳ್ಳುವುದು (ಸರ್ವಸ್ವಮಂ ತೆತ್ತು ಪ್ರಾಣರಕ್ಷಣಂಗೆಯ್ವುದು ಉಪಗ್ರಹಸಂಧಿಯೆಂಬುದಕ್ಕುಂ: **ಪಂಚತಂತ್ರ,** ೩೦೭ ವ)

**ಉಪಘಾತ** – ಪೆಟ್ಟು, ಏಟು (ದೇವೋಪಘಾತ ಶೌರ್ಯಾವಷ್ಟಂಬದಿನದೆಂತು ಗೆಲ್ದೆಯೋ ಪೇೞ್: **ಶಾಂತಿಪು,** ೮. ೬೯)

**ಉಪಚಯ** – ಅಭಿವೃದ್ಧಿ (ಶುಕ್ಲಪಕ್ಷದ ಚಂದ್ರಮನಂತೆ ಅನುದಿನಂ ಉಪಚಯಮಂ ಅಪ್ಪುಕೆಯ್ದು ಶೈಶವಮಂ ಅಧಃಕರಿಸಿದ ಇಂಬಟಿಕ್ಕೆ: **ಪಂಪರಾ,** ೧೬. ೨ ವ); [ಜೈನ] ಆಯುಷ್ಯ, ಬಲ, ಶರೀರ, ವೈಭವ ಮುಂತಾದವುಗಳ ಬೆಳವಣಿಗೆ (ಶರೀರ ಬಳ ಆಯುಃ ದೇಹಪ್ರಮಾಣ ಉಪಚಯ ಅಪಚಯಹೇತುತ್ವದಿಂದಂ ಉತ್ಸರ್ಪಿಣಿ ಅವಸರ್ಪಿಣಿ ನಾಮಮಂ ಪಡೆದುದು: **ಆದಿಪು,** ೬. ೪೮ ವ)

**ಉಪಚರಿತ** – ನೆರವೇರಿಸಿದ (ಉಪಚರಿತ ಗರ್ಭಾದಾನ ಮಂಗಳವಿಧಾನಂ ದಶರಥಮಹಿನಾಥಂ .. .. ಒಳಗುವುದುಂ: **ಪಂಪರಾ,** ೩. ೭೭ ವ)

**ಉಪಚಿತ** – ಹೆಚ್ಚಾದ (ಪೂರ್ವಭವಾಭ್ಯಸ್ತ ಸಮಸ್ತಾಗಮಾರ್ಥರುಂ ಉಪಚಿತ ಶುಭಭಾವನಾಧ್ಯಾಸಿತ ಅಂತಃಕರಣರುಂ: **ಆದಿಪು,** ೯. ೬೦ ವ)

**ಉಪಜ** – ಕುದುರೆಯ ಒಂದು ಬಗೆಯ ಓಟ (ಬಿಂಕಂಬಡೆದುದು ವಿಕ್ರಮಕ್ರಮಂ ಅಂಕಿತಂ ಉಪಕಂಠಂ ಉಪಜಂ ಉಪಜವಂ ಎಂಬ ಅಯ್ದುಂ ಕಣ್ಗೊಳಿಸುವ ಧಾರೆಗಳಿಂ ಕುದುರೆಯ ಕಾಲ್ಗೆ ಕೋಡಗಚೆಯೊಳಿವಕ್ಕುಂ: **ಮಲ್ಲಿನಾಪು,** ೯. ೨೩)

**ಉಪಜಲಧಿ** – ಜಲಾಶಯ (ಕದಡಿ ಬರ್ಪ ತೊಱೆ ಬೆಟ್ಟು ತೆವರ್ ಮೊಱಡುಗಳ್ ಉಪಜಲಧಿಗಳೆನೆ .. .. ಉದ್ದಬಿದ್ದಮಾಯ್ತುವನಿತಳಂ: **ಆದಿಪು,** ೬. ೬೨)

**ಉಪಜಾತ** – ಉತ್ಪತ್ತಿಗೊಂಡ (ಜನಕನೊಳನುರೂಪತೆಯಂ ತನೂಭವಂ .. .. ಪ್ರದೀಪೋಪಜಾತ ದೀಪಾಕೃತಿಯಿಂ: ಚಂದ್ರಪ್ರಪು, ೪. ೯)

**ಉಪಜಾಪ** – ಭೇದೋಪಾಯ (ಉಪಜಾಪೋಪೇತ ವಿರೋಧಿನರೇಂದ್ರಾಷ್ಟದಶ ತೀರ್ಥನುಂ: **ಶಾಂತಿಪು,** ೧. ೭೧ ವ)

**ಉಪಜಾಹ** – ಭೇದ (ಉಪಜಾಹಂ ಭೇದಂ: **ಅಭಿಧಾವ,** ೨. ೨. ೧೯)

**ಉಪಜೀವಿಸು** – ಅನ್ಯರನ್ನು ಆಶ್ರಯಿಸಿ ಬದುಕು (ಶ್ರಾವಕಮಾನಿಗಳ್ ಅನೇಕವಿಧದಿಂ ಉಪಜೀವಿಪರ್: **ಶಾಂತಿಪು,** ೮. ೧೩೧)

**ಉಪದೋಷಣ** – ಆನಂದ, ತೃಪ್ತಿ (ಸುರತಸುಖ ಸಮಾಸಕ್ತ ದೇವದಂಪತಿ ಶರೋಪಜೋಷಣ: **ವರ್ಧಮಾಪು,** ೫. ೫೩ ವ)

**ಉಪಢೌಕಿತ** – ಸುಸಜ್ಜಿತಗೊಂಡ (ಕುಮಾರನೇಱಿದ ವರೂಥಮಂ ಖಚರಯಾನ ಸಂದೋಹಕಂ .. .. ಅಂತು ಉಪಢೌಕಿತಮಾಗೆ: **ಚಂದ್ರಪ್ರಪು,** ೬. ೨೯ ಮತ್ತು ೩೦)

**ಉಪತ್ಯಕ** – ಬೆಟ್ಟದ ತಪ್ಪಲು (ತೀಡಿತ್ತು ಸಲ್ಲಲಿತ ಉಪತ್ಯಕಸಂಚರಂ ಕುಸುಮಲಿಡ್ಡಾಮಾರುತಂ ಮಾರುತಂ: **ಶಾಂತೀಶ್ವಪು,** ೮. ೯)

**ಉಪದಂಶ** – ವ್ಯಂಜನಪದಾರ್ಥ (ಅನೇಕ ಭಕ್ಷ್ಯ ಉಪದಂಶ ರಸಪ್ರಚುರಚಾರುಚರುಕಂಗಳಿಂದಂ: **ಆದಿಪು,** ೨. ೩೨ ವ)

**ಉಪದಿಗ್ಧ** – ಲೇಪಿಸಿದ (ಕನಕಾಂದ್ರೀಂದ್ರಂ .. .. ಇರ್ದುದು ಜಿನಸವನಸ್ನಿಗ್ಧದುಗ್ಧೋಪದಿಗ್ಧಂ: **ಅಜಿತಪು,** ೪. ೬೮)

**ಉಪದಿಶ್ಯಮಾನ** – ಉಪದೇಶಕ್ಕೊಳಗಾದ (ಪರಿಮಿತಪರಿಜನ ಉಪದಿಶ್ಯಮಾನಮಾರ್ಗನುಂ ಆಗಿ .. .. ನಿಜಾಂಬಿಕೆಯ ಮನೆಯಂ ಪೊಕ್ಕು: **ಕಾದಂಸಂ,** ೨. ೪೫ ವ)

**ಉಪದಿಷ್ಟ** – ಸೂಚಿಸಲ್ಪಟ್ಟ (ಇಂತು ನರೇಂದ್ರ ಮುಕುಂದಂ ವೇಗಿಳೋಪದಿಷ್ಟದಿಂ ಬೀಡಂ ಬಿಡಿಸುತ್ತಿರ್ದಂ: **ಕುಸುಮಾಕಾ,** ೧೫. ೧೦೯ ವ)

**ಉಪದೂಷಣ** – ಸಂಬಂಧಪಟ್ಟ ತಪ್ಪು (ತಿರ್ದುವುದು .. .. ವಿಪರ್ಯಯಂ ಇದು ಅಭ್ಯುಪಮೋಕ್ತಿ ಉಪದೂಷಣಂ: **ಕವಿರಾಮಾ,** ೧. ೧೪೪)

**ಉಪದೇಶ** – ಮಂತ್ರ ಮುಂತಾದವನ್ನು ಬೋಧಿಸುವುದು (ಉಪದೇಶಂ ದೊರೆಕೊಂಡುದಪ್ಪೊಡೆ ಎನಗೀ ತ್ರೈಲೋಕ್ಯ ಸಾಮ್ರಾಜ್ಯ ರಾಜ್ಯಪದಂ ಸಾರ್ದನಿತುಂ ಮಹಾಮಹಿಮೆ ಸಾರ್ಗುಂ: **ಸುಕುಮಾಚ,** ೩. ೨೩)

**ಉಪದೇಶಕ** – ಉಪದೇಶಿಸುವ ಗುರು (ಋತ್ವಿಜರುಂ ನಮ್ಮೀ ನಾಲ್ವರುಂ ಸಂಗರಾಧ್ವರದೊಳ್ ತಾನುಪದೇಶಕಂ ಮುರಹರಂ: **ಗದಾಯು,** ೮. ೪೬)

**ಉಪದ್ರವ** – ಕಾಟ (ಮುನಿಜನಂಗಳ ಬೇಳ್ವೆಗೆ ಉಪದ್ರವಂಗೆಯ್ವ ನಿಶಾಟಕೋಟಿಯಂ ನಿಶಿತಶರ ಕೋಟಿಯಿಂದಂ ಉಚ್ಚಾಟಿಸಿ: **ಪಂಪಭಾ,** ೪. ೧೫ ವ)

**ಉಪಧಾನ** – ಒರಗುದಿಂಬು, ತಲೆದಿಂಬು (ಮಜ್ಜನ ಭೋಜನಾದಿ ದಿವಸ ವ್ಯಾಪಾರಮಂ ತೀರ್ಚಿ ಸೆಜ್ಜೆವನೆಯೊಳ್ ಉಪಧಾನವಿರಾಜಮಾನ ಹಂಸತೂಲಿಕಾತಳ್ಪದೊಳ್ ವಿಶ್ರಮಿಸಿ: **ಪಂಪರಾ,** ೫. ೩೦ ವ)

**ಉಪಧಾವಿಶುದ್ಧ** – ಪರೀಕ್ಷೆಗಳಿಂದ ಶುದ್ಧನೆಂದು ನಿರ್ಣಯಿಸಲ್ಪಟ್ಟ (ದವನಕನಪ್ಪೊಡೆ ಉಪಧಾವಿಶುದ್ಧನಪ್ಪ ಮಂತ್ರಿಪುತ್ರಂ ಎನಗೆಂದುಂ ತಪ್ಪುವನಲ್ಲಂ: **ಪಂಚತಂತ್ರ,** ೯೪ ವ)

**ಉಪಧೆ** – ವಂಚನೆ (ಸಕಳಕಳಾವಗಾಹನ ಸಮಾಹಿತಮತಿಗಳುಮಾಗಿ ನಾಲ್ಕುಂ ಉಪಧೆಗಳೊಳಂ ಶುದ್ಧರಾಗಿ: **ಆದಿಪು,** ೧. ೮೧)

**ಉಪನಯನ** – ಮುಂಜಿ, ಬ್ರಹ್ಮೋಪದೇಶ (ವಸುಮತಿವೆಸರ್ ಅನ್ವರ್ಥಂ ವಸುಧೆಗೆನಲ್ ಕಱೆದು ಮಱೆಯಂ ದಾನವ್ಯಸನಿ ದಶರಥನದೇಂ ಪೊಸಯಿಸಿದನೊ ಚೌಲ ಉಪನಯನ ಮಹಿಮೋತ್ಸವಮಂ: **ಪಂಪರಾ,** ೩. ೧೪೨); [ಜೈನ] ಜೈನಾಗಮಗಳ ಅಭ್ಯಾಸಕ್ಕೆ ಹುಡುಗನನ್ನು ಗುರುವಿನ ಬಳಿ ಕಳಿಸುವ ಸಂಸ್ಕಾರ

**ಉಪನಿಯುದ್ಧಂ** – ಮಲ್ಲಯುದ್ಧದಲ್ಲಿ ನಿರತನಾದ (ವಿಜಯೋತ್ಸುಕನಾಗಿ ಚತುರ್ಭುಜದವೊಲಿರ್ದಂ ಉಪನಿಯುದ್ಧಂ ಕೃಷ್ಣಂ: **ನೇಮಿನಾಪು,** ೮. ೮೯)

**ಉಪನಿಷತ್** – ವೇದಾಂತ (ಉಪನಿಷದಮೆಂಬುದದು ವೇದಾನ್ತಂ: **ಅಭಿಧಾವ,** ೧. ೧ ೧೨)

**ಉಪನೀತ** – ಹತ್ತಿರ ತರಲಾದ (ಅನ್ನೆಗಂ ಅತ್ತ ದುರ್ಯೋಧನಂ ಅತಿಸಂಭ್ರಮಾಕುಳಿತಪರೀತಜನ ಉಪನೀತ ಚಂದನಕರ್ಪೂರ ಮಿಶ್ರಿತ ಹಿಮಶಿಶಿರ ಧಾರಾಪರಿಷೇಕದಿಂದ ಎಂತಾನುಂ ಮೂರ್ಛೆಯಿಂದೆಚ್ಚತ್ತು: **ಪಂಪಭಾ,** ೧೩. ೨ ವ)

**ಉಪನ್ಯಾಸ** – ರಾಜನು ಕೈಗೊಳ್ಳಬಹುದಾದ ಹದಿನಾರು ಬಗೆಯ ಸಂಧಿಗಳಲ್ಲಿ ಒಂದು, ನಿರ್ದಿಷ್ಟ ಉದ್ದೇಶದಿಂದ ಮಾಡಿಕೊಂಡ ಸಂಧಿ (ಭಾವಿಯಪ್ಪ ಏಕಾರ್ಥಸಿದ್ಧಿಯಂ ಉದ್ದೇಶಂಗೆಯ್ದು ನಡೆವುದು ಉಪನ್ಯಾಸ ಸಂಧಿಯೆಂಭುದಕ್ಕುಂ: **ಪಂಚತಂತ್ರ,** ೩೦೭ ವ)

**ಉಪನ್ಯಾಸಸಂಧಿ** – ಶತ್ರುಗಳೊಡನೆ ರಾಜ ಮಾಡಿಕೊಳ್ಳಬಹುದಾದ ಹದಿನಾರು ಬಗೆಯ ಸಂದಿಗಳಲ್ಲಿ ಒಂದು: ತನ್ನ ಉದ್ದೇಶಸಾಧನೆಗಾಗಿ ಆವಶ್ಯಕವಾದಂತೆ ಮಾಡಿಕೊಳ್ಳುವ ಸಂಧಿ (ಭಾವಿಯಪ್ಪೇಕಾರ್ಥಸಿದ್ಧಿಯನುದ್ದೇಶಂಗೆಯ್ದು ನಡೆವುದು ಉಪನ್ಯಾಸಸಂಧಿಯೆಂಬುದಕ್ಕುಂ: **ಪಂಚತಂತ್ರ,** ೩೦೭ ವ)

**ಉಪಪತಿ** – ಹಾದರಿಗ, ಮಿಂಡ (ಉಪಪತಿಗಳೊಡನೆ ನಿಜೆಯುರ್ಚದೆ ಸೈಗೆಡೆದುರುಳಿ .. .. ಜಾರೆಯರೆಸೆದರ್: **ತ್ರಿಷಷ್ಟಿಪು,** ೨೪. ೧೨೫)

**ಉಪಪತ್ತಿ** – ಸಿದ್ಧಾಂತಸಮರ್ಥನೆಗೆ ಅನುಸರಿಸುವ ತರ್ಕ, ಯುಕ್ತಿ (ಪರಪಕ್ಷದೂಷಣಪುರಸ್ಸರಂ ಅನೇಕ ಉಪಪತ್ತಿಗಳಿಂ ಸ್ವಪಕ್ಷಸ್ಥಾಪನಂ ಗೆಯ್ದು: **ಆದಿಪು,** ೨. ೨೨ ವ)

**ಉಪಪದಪಂಚಕ** – ಸಮ ಅಥವಾ ಸದೃಶ ಆಕಾರದ ಐದು ವಸ್ತುಗಳ ಗುಂಪು (ಶೀರ್ಷಕ ಉಪಶೀರ್ಷಕ ಆಘಾಟಕ ಪ್ರಕಾಂಡಕ ತರಳತರಬಂಧ ಉಪಪದಪಂಚಕಸಮೇತಂಗಳಾಗಿ: **ಆದಿಪು,** ೮. ೫೪ ವ)

**ಉಪಪಾತತಲ್ಪ** – [ಜೈನ] ಕಲ್ಪದಲ್ಲಿ ದೇವತೆಗಳು ಹುಟ್ಟುವ ಹಾಸಿಗೆ (ಶ್ರೀಪ್ರಭವವಿಮಾನದೊಳ್ ಉಪಪಾದತಳ್ಪತಳದ ಪೊರೆಯೊಳಂ (ಜೈನಧರ್ಮಮಂ ಪತ್ತುವಿಡದೆ ನಡೆದು ಕಡೆಯೊಳಯ್ದನೆಯ ಕಲ್ಪದುಪಾತತಲ್ಪದೊಳ್ ದೇವನಾದೈ: **ಪಂಪರಾ,** ೬. ೫೭ ವ)

**ಉಪಪಾದಶಯನ** – ಉಪಪಾದತಲ್ಪ (ಅದಱ ಪರಾರ್ಥ್ಯರತ್ನರಚನಾವಿಚಿತ್ರ ಉಪಪಾದಶಯನದೊಳ್ ಅಂತರ್ಮುಹೂರ್ತದೊಳ್ ಪರ್ಯಾಪ್ತಿಯಂ ಕೈಕೊಂಡು: **ಆದಿಪು,** ೬. ೩೭ ವ)

**ಉಪಪ್ರಚ್ಛದ** – ಹೊದಿಕೆ, ಮಗ್ಗುಲು ಹಾಸಿಗೆ (ಪಯಃಪಯೋಧೀಫೇನಸಂಕಾಶದುಕೂಲ ಉಪಪ್ರಚ್ಛದ ಆಚ್ಛಾದಿತ ವಿಚಿತ್ರನೇತ್ರಂ: **ಆದಿಪು,** ೫. ೨೨ ವ)

**ಉಪಪ್ಲವ** – ತೊಂದರೆ (ಉಪಶಮಿತ ಜಗದುಪಪ್ಲವಮೆನಿಸಿದ ಮಹಾನುಭಾವಂ ತಾರಾಪೀಡನಿರ್ಪಂ: **ಕಾದಂಸಂ,** ೨. ೨ ವ); ಗ್ರಹಣ (ಉಪಪ್ಲವಂ ಚಂದ್ರಾರ್ಕಬಿಂಬಗಳೊಳ್ .. .. ಅಲ್ಲದೆ ಜನಪದಜನಂಗಳೊಳಿಲ್ಲ: **ಜಗನ್ನಾವಿ,** ೨. ೧ ವ); ಉತ್ಪಾತ (ಆಗಳ್ ಪೌದನಪುರಿಯೊಳ್ ಪುಟ್ಟಿದ ಉತ್ಪಾತಂಗಳ್ಗೆ ಸಂಕೆಗೊಂಡು.. ..ನಿಮಿತ್ತಿಕರಂ ಬರಿಸಿ ತದೀಯ ಉಪಪ್ಲವಂಗಳ ಫಲಮಂ ಬೆಸಗೊಳ್ವುದುಂ: **ಶಾಂತೀಶ್ವಪು,** ೫. ೧೯೩ ವ); ಮುತ್ತಿಗೆ (ಆ ಮಹಾಬಳನೊಳ್ ಅತಿಪ್ರತಾಪನೊಳ್ ಉಪಪ್ಲವಂ ಬಗೆವೊಂ ಮಹೀಪತೀ: **ಚಂದ್ರಪ್ರಪು,** ೫. ೩೬)

**ಉಪಭೋಗ** – ವಿಷಯಸುಖ (ಅನುಭವಂ ಉಪಭೋಗಂ ಭುಕ್ತಿ ನಿರ್ವೇಶನಾಮಂ: **ಅಭಿಧಾವ,** ೨. ೨. ೧)

**ಉಪಭೋಗ್ಯ** – ಅನುಭವಿಸಲು ಯೋಗ್ಯವಾದ (ಎನಗೊರ್ವಂಗೆ ಉಪಭೋಗ್ಯಮಲ್ತು ವಸುಧಾಸಾಮ್ರಾಜ್ಯಂ ಓರಂತೆ ನಿಮ್ಮನಿಬರ್ಗಂ: **ಆದಿಪು,** ೧೪. ೩೧)

**ಉಪಯಾಮ** – ಮದುವೆ (ಉಪಯಾಮ ವಿವಾಹ ಉದ್ವಾಹ ಪರಿಣಯಂ: **ಅಭಿಧಾವ,** ೧. ೧೧. ೧೧)

**ಉಪರತವಶನಾಗು** – ಮೃತ್ಯುವಶನಾಗು (ಮರವಟ್ಟನಂತೆಯುಂ ಯೋಗಸಮಾಧಿಸ್ಥನಂತೆಯುಂ ಉಪರತವಶನಾದಂತೆಯುಂ ಇರ್ದಂ: **ಕಾದಂಸಂ,** ೪. ೫೬ ವ)

**ಉಪರಾಗ** – ಗ್ರಹಣ (ದಾನವರ ಪಂದಲೆಗಳ್ ರವಿಮಂಡಲಂಬರಂ ಪಾಯೆ ಬಿಸಿಲ್ ಪೊಡರ್ಪುಗಿಡೆ ಪಾಳಿಸಿದತ್ತು ಉಪರಾಗಲೀಲೆಯಂ: **ಪಂಪರಾ,** ೧೩. ೬೨)

**ಉಪರಿ** – ಮೇಲ್ಭಾಗ (ಸಮಂಚಿತ ಕಾಂಚನಮಂಚ ಉಪರಿಭಗದೊಳ್ ಒಲವಿಂದಂ ಬಂದು .. .. ಕುಳ್ಳಿರ್ದು: **ಉದ್ಭಟಕಾ,** ೮. ೯೧ ವ); ಆನಂತರ (ಮನಮೆ ಮಾನಸನಾದಂತೆ ಪರಿದು ಉಪರಿಯೊಳ್ ಬಟಲ್ಚಿ .. .. ಬೂತಾಟನಂಗೆಯ್ದು: **ನೇಮಿನಾಪು,** ೫. ೧೧೩ ವ)

**ಉಪರಿಮ** – ಮೇಲ್ಭಾಗ (ಕೌಸ್ತುಭದಿರವಂ ಪರಿಭವಿಸಿ ಮೆಱೆದುದು .. .. ಅಂಬುಜಪೀಠ ಉಪರಿಮಸ್ಥಿತಂ ಅರುಣರುಚಿರರುಚಿ ಪರಿಮಿಳಿತಂ: **ರಾಜಶೇವಿ,** ೫. ೨೭)

**ಉಪರೋಧ** – ಅಡ್ಡಿ (ಪರಿಭವಾಕ್ರಾಂತೆಯಾದ ನಿಜವಯಸ್ಯೆಯಂ ಚಿರಪರಿಚಯ ಉಪರೋಧದಿಂ ಆರಯ್ಯಲ್ ಎಳಸಿದಂತಿರೆ: **ಆಚವರ್ಧ,** ೬. ೧೯ ವ); ಬಲಾತ್ಕಾರ (ಅಂತು ತನ್ನ ಉಪರೋಧದೊಳಂ ಪ್ರಜಾನುಗ್ರಹಬುದ್ಧಿಯೊಳಂ ಪೋಗಲಾಱದೆ: **ಆದಿಪು,** ೮. ೧೫ ವ)

**ಉಪರೋಧಿಸು** – ಅಡ್ಡಿಮಾಡು (ಜಲಮಂ ತಂದು ದೇವಿಯರ್ ಅವಧಾರಿಸುವುದೆಂದು ಭೂಪಂ ಇಳಿಂಪಂ ಉಪರೋಧಿಸುತ್ತುಂ ಎಱೆಯೆ: **ಕಾದಂಸಂ,** ೩. ೪೫ ವ); ಒತ್ತಾಯಿಸು (ಗುರುಗಳ್ ಬಂದುಪರೋಧಿಸೆ ಗುರುವಚನಂ ಅಲಂಘನೀಯಂ ಎಂದೆಡೆಗೊಂಡಂ ಪರಿಣಯನಮಂ: **ಅಜಿತಪು,** ೬. ೩೫)

**ಉಪರ್ಬುದ** – ಬೆಂಕಿ (ಸುಡುವ ಉಪರ್ಬುದಂ ಉರ್ವಿ ಪರ್ವಿದ ಕರ್ಬೊಗೆಯ ಮೊತ್ತಮೊತ್ತರಿಸಿ ನೆಲಂಬತ್ತಿ ಪರಿವಂತೆ: **ಕರ್ಣನೇಮಿ,** ೧೧. ೧೭೨ ವ)

**ಉಪಲ** – ಕಲ್ಲು (ರಾಜಹಂಸಂ .. .. ತೀರ ಹಿಮಾಂಶುಶು ಉಪಲದೊಂದು ಪಟ್ಟಶಿಲೆಯೊಳ್ ನಿಂದಿರ್ದಂ ಆನಂದದಿಂದಂ: **ಶಾಂತೀಶ್ವಪು,** ೧೦. ೧೦೩)

**ಉಪಲಕ್ಷಿತ** – ಗುರುತುಮಾಡಿದ (ಬೇಱೊಂದು ಮೊನೆಯೊಳ್ ಕಾದುತ್ತಿರ್ದ ಅಶ್ವತ್ಥಾಮಂ ಕಂಡು ಮುಟ್ಟೆವರ್ಪನ್ನೆಗಂ ಶೋಣಾಶ್ವೋಪಲಕ್ಷಿತ ನಿಜಪಿತೃಸೂತಕೇತನಕಥಿತಮಾಗಿರ್ದ ರಥಮಂ ಉಪಲಕ್ಷಿಸಿ: **ಪಂಪಭಾ,** ೧೨. ೩೦ ವ); ವೈಶಿಷ್ಟ್ಯ (ತಮಗಿದಿರಂ ಬಪ್ ಸೂರ್ಯಮಿತ್ರನಂ ಕಂಡು ತದಾಕಾರೋಪಲಕ್ಷಿತದಿಂದ ಅತ್ಯಾಸನ್ನಭವ್ಯನೆಂದು ನಿಶ್ಚಯಿಸಿ: **ಸುಕುಮಾಚ,** ೬. ೫ ವ)

**ಉಪಲಕ್ಷಿಸು** – ಗುರುತಿಸು (ಆ ಗುರುವಿನ ಚಿತ್ತವೃತ್ತಿಯಂ ಅದೆಂತು ಉಪಲಕ್ಷಿಸಲಾರ್ತೆಯೋ: **ಆದಿಪು,** ೧೦. ೮)

**ಉಪಲಾಲನೆ** – ಮುದ್ದಾಡು (ಸರ್ವದೋಷಪ್ರದುಷ್ಟ ಪ್ರದುಷ್ಟ ಗಜಂಗಳನುಪಲಾಲನೆಯೊಳ್: **ಶಾಂತಿಪು,** ೩. ೭೨ ವ)

**ಉಪಲಾಲನೋಕ್ತಿ** – ಮುದ್ದುಗರೆಯುವ ಮಾತು (ಅಖಿಲಲಕ್ಷಣ ಸಮಗ್ರಮುಮಾದ ಗಜಪತಿಯೊಳ್ ಉಪಲಾಲನೋಕ್ತಿಗಳಂ ಪ್ರಯೋಗಿಸುವುದುಂ: **ಚಂದ್ರಪ್ರಪು,** ೯. ೯೪ ವ)

**ಉಪಲಿಪ್ತ** – ಲೇಪಿಸಿದ (ಉಪಲಿಪ್ತಂ ದಿಗ್ಧಂ ಸಮಾವೃತಂ ಸಂವೀತಂ: **ಅಭಿಧಾವ,** ೨. ೧ ೪೧)

**ಉಪವನ** – ಊರ ಬಳಿಯ ಉದ್ಯಾನ (ಪಪ್ಪಲದಲರ್ಗಳ್ ಸಂಬಳಮಪ್ಪಿನಂ ಉಪವನಕೆ ನಿಚ್ಚವಯಣಂ ಬರುತುಂ ಪಪ್ಪಕಮಾಗಿರೆ ಪಱಿಮೆಗಳುಪ್ಪವಯಣಂಗೆಯ್ದುವಂದು ಪೊಸಮಲ್ಲಿಗೆಯೊಳ್: **ಅಜಿತಪು,** ೬. ೨೧)

**ಉಪವಾದಕ** – ಸ್ವರ್ಗದ ಒಂದು ವಾದ್ಯ (ಆಗಳ್ ನಾಕಲೋಕವಾದ್ಯಂಗಳೊಳ್ ಅನೇಕಭೇದಂಗಳಪ್ಪ ಉಪವಾದಕ ಪರಿವಾದಕ ವಾದ್ಯಂಗಳೊಳ್ .. .. ನೆಗಱೆ: **ಆದಿಪು,** ೭. ೧೧೮ ವ)

**ಉಪವಿದ್ಧ** – ಜೊತೆಗಿರುವ, ಹೋಲುವ (ಇದು ಚಿತ್ರಿತಸಿದ್ಧರಸ ಉಪವಿದ್ಧಂ ಅತ್ಯಂತವಿಶುದ್ಧ ಹೇಮರಸವಾಗವೆ ಲೋಹರಸಂಗಳಾದೊಡಂ: **ಮಲ್ಲಿನಾಪು,** ೧. ೪೯)

**ಉಪವಿಷ್ಟ** – ಕುಳಿತುಕೊಂಡಿರುವ (ಸುರಪತಿಗೆ ಉಪವಿಷ್ಟಾಸನಾಕಂಪದಿಂದಂ ಬರೆ: **ಶಾಂತಿಪು,** ೯. ೧೬೨)

**ಉಪವೀಣಿತ** – ವೀಣೆಯ ವಾದನದಿಂದ ಕೂಡಿದ (ಮಧುಕರನಿಕರನಿನಾದೋಪವೀಣಿತ ಕ್ರೀಡಾಸರೋವರಂಗಳ್: ಆದಿಪು, **ಆದಿಪು,** ೪. ೫೩ ವ)

**ಉಪವೀತ** – ಜನಿವಾರ (ಕೊರಲೊಳೆಸೆದುದು ನೀರೇರುಹದ ಅಮಳ ಸೂತ್ರಮಯದ ಉಪವೀತಂ: **ಕುಸುಮಾಕಾ,** ೧. ೧೨೮)

**ಉಪಶಮ** – ಇಂದ್ರಿಯ ನಿಗ್ರಹ (ಮೊದಲೊಳ್ ಉದಯಿಸಿದುದು ಉಪಶಮಂ ಬಟಿಕಾದುದಲ್ತೆ ವೇದಕಂ: **ಪಾರ್ಶ್ವನಾಪು,** ೫. ೪೭); ಸಹನೆ (ನಿನ್ನದೊಂದು ಉಪಶಮಮಂ ಪಡೆದತ್ತು ಮನುಷ್ಯಜನ್ಮಮಂ: **ಆದಿಪು,** ೩. ೪೦)

**ಉಪಶಮಗುಣ** – ತಾಳ್ಮೆ (ಉಪಶಮಗುಣಮಂ ಪಡೆವೊಡೆ ಜಪಮುಂ ತಪಮುಂ ಸಮಾಧಿಯುಂ ಬೇಟ್ಪುದು: **ಸಮಯಪ,** ೭. ೩೭)

**ಉಪಶಮನಿರತ** – ಶಾಂತಸ್ವಭಾವದವನು (ಕಲ್ಗುಡಿವರೆ ಮತ್ತಿ ಸಮಯಿಗೆಲ್ಲರುಂ ಎಂದು ನಾಡೆಯುಂ ಗುಂಡುಗೊಳ್ವರ್ ಉಪಶಮನಿರತರ್: **ಸಮಯಪ,** ೧೩. ೧೦)

**ಉಪಶಲ್ಯ** – ಊರಿನ ಹತ್ತಿರ (ಉಪಶಲ್ಯಂ ಗ್ರಾಮಾಂತರಂ: **ಅಭಿಧಾವ,** ೧. ೧೦. ೨); ಈಟಿ (ವಿರಹಿಗಳೆದೆಗೆ ಉಪಶಲ್ಯಮಿದೆನಿಸಿ ಸಂತತಂ ಸೊಗಯಿಸುಗುಂ: **ಪುಷ್ಪದಂಪು,** ೯. ೨೩)

**ಉಪಶಲ್ಯಕ** – ಊರಿನ ಹತ್ತಿರ (ರಹಟಘಟೀಯಂತ್ರಂಗಳ್ ಬಹುವಿಧವಿಭ್ರಮದಿಂ ಎಸೆವುವು ಉಪಶಲ್ಯಕದೊಳ್: **ಪುಷ್ಪದಂಪು,** ೨. ೫೧)

**ಉಪಶಾಂತ** – ಉಪಶಮನಗೊಂಡ (ಉಪಶಾಂತ ರಜೋವಿಕೃತಿಯಿಂ ಉಪಾತ್ತಕಾಳಿಮ ಪಯೋಧರಾಸ್ಯೆಯಿಂ: **ಚಂದ್ರಪ್ರಪು,** ೪. ೪೩)

**ಉಪಶಾಂತಿ** – ಮನಶ್ಶಾಂತಿ (ಎಸೆದುದೀ ಭರತಾವನಿ .. .. ಭವ್ಯಜನಕೇನುಪಶಾಂತಿಯೋ ಶಾಂತಿನಾಥನಾ: **ಶಾಂತಿಪು,** ೧೨. ೨೪)

**ಉಪಶೀರ್ಷಕ** – ಮಧ್ಯದಲ್ಲಿ ಕ್ರಮವಾಗಿ ದೊಡ್ಡದಾಗಿರುವ ಮೂರು ಮುತ್ತುಗಳುಳ್ಳ ಹಾರ (ಪ್ರತ್ಯೇಕ ಶೀರ್ಷಕ ಉಪಶೀರ್ಷಕ ಅವಘಾಟಕ ಪ್ರಕಾಂಡಕ ತರಳತರಬಂಧ ಉಪಪದಪಚಕಸಮೇತಂಗಳಾಗಿ: **ಆದಿಪು,** ೮. ೫೪ ವ)

**ಉಪಶ್ಲೋಕಿಸು** – ಸ್ತುತಿಮಾಡು, ಹೊಗಳು (ಇರ್ವರುಂ ಬೇಱೆ ಬೇಱೆ ಉಪಶ್ಲೋಕಿಸಿ ಕ್ರಿಯಾಕಾರಕ ಸಂಬಂಧದಿಂದಂ ವಖ್ಖಾಣಿಸಿ ತಮ್ಮ ಪಂಡಿತಿಕ್ಕೆಯಂ ಅಱೆಪಿದೊಡೆ: **ವಡ್ಡಾರಾ,** ಮ ೪, ಸಾ ೨೫)

**ಉಪಶ್ರುತಿ** – ಜೋಯಿಸರನ್ನು ಕೇಳುವ ಭವಿಷ್ಯ (ಓಷಧಿಸೂತ್ರಚಯಮಂ ತಳೆದುಂ ಉಪಶ್ರುತಿಗಳಂ ಕೇಳ್ದುಂ: **ಕಾದಂಬ,** ೨. ೬೮ ವ)

**ಉಪಸಂಹೃತಿ** – ಪ್ರಳಯ (ಕಲ್ಪಂ ಕ್ಷಯಂ ಉಪಸಂಹೃತಿ: **ಅಭಿಧಾವ,** ೧. ೨. ೧೭); ಕೊನೆಗೊಳಿಸುವುದು (ಕೃತಕ ತುರಂಗಮಾಕೃತಿಯಂ ಅಂದು ಉಪಸಂಹೃತಿಮಾಡಿ ಮುನ್ನಿನಾಕೃತಿಯೊಳೆ ಪೋಗಿ ಪೊಕ್ಕಂ: **ಪಂಪರಾ,** ೫. ೧೨)

**ಉಪಸರ್ಗ** – ಬಾಧೆ (ಪುರುಪರಮೇಶ್ವರತನೂಭವರ ಯುದ್ಧಾಡಂಬರ ಉಪಸರ್ಗದೊಳಂ ಆಕುಳ ವ್ಯಾಕುಳರಾಗಿ: **ಆದಿಪು,** ೧೪. ೧೧೫ ವ)

**ಉಪಹತಿ** – ತೊಂದರೆ (ಸೀತೆ ಬಗೆದಳಿಲ್ಲ ಉಪಹತಿಯಂ: **ಪಂಪರಾ,** ೯. ೧೯೦)

**ಉಪಹಾರ** – ಸಮೀಪಕ್ಕೆ ತರುವುದು; ನೈವೇದ್ಯ (ಭರತೇಶ್ವರಚಕ್ರವರ್ತಿ ಮಹೀತಳನಿಹಿತಮಣಿ ಕಿರೀಟರಶ್ಮಿ ಸಂದೋಹ ಸಾಂದ್ರಕುಂಕುಮಪಂಕದಿಂ ವಿಹಿತ ಉಪಾಹಾರನಾಗಿ: **ಆದಿಪು,** ೧೩. ೮೨ ವ); ಪೂಜೆ, ಬಲಿ (ಗೋಮಯಮಪ್ಪ ಭೂತಲಮುಂ ಕುಸುಮ ಉಪಹಾರರಮಣಿಯಮುಂ ವಿಸ್ತೀರ್ಣತರ ಅವಕಾಶಮುಂ ಎನಿಸಿದ ರಕ್ತಾಶೋಕತರುವಿನ ತಣ್ಣೆಟಲೊಳ್: **ಕಾದಂಸಂ,** ೧. ೭೩ ವ)

**ಉಪಹಾಸನ** – ಹದಿನಾರು ಬಗೆಯ ಸಂಧಿಗಳಲ್ಲಿ ಒಂದು, ಸಂಧಾನಮಾರ್ಗ (ಸಂಧಾನಂ ಉಪಹಾಸನಂ ಎಂಬುದಕ್ಕುಂ: **ಪಂಚತಂತ್ರ,** ೩೦೭ ವ)

**ಉಪಹಾಸಿ** – ತಿರಸ್ಕಾರ ಅಥವಾ ಹಾಸ್ಯ ಮಾಡುವ (ಪಾಂಡುಶಿಲಾತಲವಿಳಾಸ ಉಪಹಾಸಿ ಚಂದ್ರಕಾಂತ ಶಿಳಾತಳದೊಳ್ ಶಿಬಿಕೆಯನಿರಿಸಿ: **ಆದಿಪು,** ೯. ೭೬ ವ)

**ಉಪಹಿತ** – ಕೂಡಿರುವ (ಉಪಹಿತಲೋಭವಶಜನಪರಿಪೂರ್ಣ ನಾನಾನಗರ ನಂದನ .. .. ಸಂಪದ್ವಿಷಯಮಪ್ಪ ಅಳಕಾವಿಷಯಮೆಂಬ ದೇಶದೊಳ್: **ಚಂದ್ರಪ್ರಭು,** ೪. ೭೯ ವ)

**ಉಪಳ** – ಕಲ್ಲು (ಉಪಳದೊಳ್ ವಿಕಸಿತಮೆನಿಸುವ ನಳಿನಮನಾರಯ್ವ ತೆಱನೆ ಪೆಱತಾದಪುದೇ: **ಆಚವರ್ಧ,** ೧. ೨೦)

**ಉಪಾಂಗ** – ಪಕ್ಕವಾದ್ಯ (ತುಂಗಮೃದಂದ ಉಪಾಂಗದ ಚಂಗಿನ ದಂಡಿಗೆಯ ತಾಳದ ಆವುಜದ ಪಸತ್ ಸಂಗೀತದ: **ರಾಜಶೇವಿ,** ೧೨. ೬೦)

**ಉಪಾಂತ** – ಹತ್ತಿರ (ಅಂತು ವಸುಷೇಣನಾ ಲೋಕಾಂತಂಬರಂ ಅಳವಿ ಬಳೆಯೆ ಬಳೆದ ಎಸಕಂ ಅದು ಓರಂತೆ ಜನಂಗಳ ಕರ್ಣ ಉಪಾಂತದೊಳ್ ಒಗೆದೆಸೆಯೆ ಕರ್ಣನೆಂಬನುಂ ಆದಂ: **ಪಂಪಭಾ,** ೧. ೯೮)

**ಉಪಾಂಶುವಧ** – ರಹಸ್ಯವಾದ ಕೊಲೆ (ಅಂತು ವಿಕ್ರಮಾರ್ಜುನಂ ಬಿಲ್ಗೊಳಲುಂ ಭೀಮಸೇನಂ ಗದೆಗೊಳಲುಂ ಅಂಪುದರಿದು ಉಪಾಂಶುವಧದೆ ಕೆಯ್ಗೆ ಮಾಡುವುದುತ್ತಮಪಕ್ಷಂ: **ಪಂಪಭಾ,** ೨. ೯೦ ವ)

**ಉಪಾಂಶುವಧೆಗೆಯ್** – ರಹಸ್ಯವಾಗಿ ಕೊಲ್ಲು ಮದೀಯಜನಕನಂ ಚಂದ್ರೋದರ ವಿಯಚ್ಚರೇಂದ್ರನಂ ಉಪಾಂಶುವಧೆಗೆಯ್ವುದುಂ: **ಪಂಪರಾ,** ೯. ೧೩೨ ವ)

**ಉಪಾಂಸ** – ಮೋಸ (ಮುನಿದು ಕಂಸಂ ಮಾಡಿದ ಉಪಾಂಸಮೆಲ್ಲಮಂ ಅಱಿದುಂ ಇರ್ದಂ: **ನೇಮಿನಾಪು,** ೮. ೫೧ ವ)

**ಉಪಾಖ್ಯಾನ** – ಉಪಕಥನ (ಪೆಱವುಂ ಉಪಾಖ್ಯಾನ ಕಥೆಗಳೊಳ್ ಒಂದುಮಂ ಕುಂದಲೀಯದೆ ಪೇಟ್ಟಿಂ: **ಪಂಪಭಾ,** ೧೪. ೫೨ ವ)

**ಉಪಾತ್ತ** – ಗಳಿಸಿದ (ಉಪಾತ್ತ ಕಾಳಿಮ ಪಯೋಧರಾಸ್ಯೆಯಿಂ ಪೋಲ್ತುಭ್ರಾಗಮಂ ಸಗರ್ಭಾಂಗನೆಯಂ: **ಚಂದ್ರಪ್ರಭು,** ೪. ೪೩); ಉಂಟುಮಾಡುವ (ಸುಖಮಿದು ದಃಖೋಪಾತ್ತಮಿದೆಂದಱಿಪುಗುಂ ಪರಮಕವಿಪ್ರಧಾನರಾ ಕಾವ್ಯಂಗಳ್: **ಕವಿರಾಮಾ,** ೧. ೧೮)

**ಉಪಾದೇಯ** – ಸ್ವೀಕಾರಾರ್ಹ (ಹೇಯಂ ಸಾಮ್ರಾಜ್ಯಂ ಉಪಾದೇಯಂ ಪ್ರವ್ರಜ್ಯಂ: **ಆದಿಪು,** ೧೬. ೬೨)

**ಉಪಾದ್ರಿ** – ಬೆಟ್ಟದ ಬಳಿ (ವಿವಿಧಾರಂಭಪರಿಗ್ರಹಂ ವಿಷಯಸೌಖ್ಯಾಯತ್ತಂ ಅತ್ಯಂತಲೋಭವಿಷಯಗ್ರಸ್ತಂ ಉಪಾದ್ರಿಯೊಳ್ ದ್ರವಿಣಮಂ ಬಯ್ತು: **ಆದಿಪು,** ೫. ೪)

**ಉಪಾದ್ಯ** – ಎರಡನೆಯ (ಉಪಾದ್ಯ ಜಿನತೀರ್ಥೇಶಂಗೆ ಪಾದ್ಯಂಬೊಲೊಪ್ಪಿದುದು ಆದ್ಯಾಮರ ರಾಜಮೌಳಿ ಮಣಿಗುಚ್ಛಾಚೋಚ್ಛರೋಚಿರ್ಜಲಂ: **ಅಜಿತಪು,** ೪. ೧೨)

**ಉಪಾಧ್ಯಾಯ** – ಓದಿಸುವಾತ (ಉಪಾಧ್ಯಾಂಗೆ ಕಟಿಮೆಯ ಕೂಟುಂ ತುಪ್ಪಮುಂ ತೊನೆಯುಮಂ ಉಣಲ್ಕೊಟ್ಟು ಕುಮಾರನನೋದಿಸುಗೆ: **ವಡ್ಡಾರಾ,** ಪು. ೭೯, ಸಾ. ೧೩); [ಜೈನ] ಪಂಚಪರಮೇಷ್ಠಿಗಳಲ್ಲಿ ಒಬ್ಬ, ಮಹವ್ರತಗಳನ್ನಾಚರಿಸುತ್ತ, ಭವ್ಯರಿಗೆ ಧರ್ಮೋಪದೇಶ ಹಾಗೂ ಶಾಸ್ತ್ರಜ್ಞಾನ ಮಾಡಿಕೊಡುವವನು (ಉಪಾಧ್ಯಾಯರ್ ಓದಿಸಿ ಕೆಯ್ಗೆನ್ನಡಿಯಂದದಿಂ ಬೆಳಗುಗೆ ಅಂದಂದಿಗೆ ಮಚ್ಚಿತ್ತಮಂ: **ನೇಮಿನಾಪು,** ೧. ೫)

**ಉಪಾಧ್ಯಾಯರಹಸ್ಯ** – ಉಪಾಧ್ಯಾಯನು ಶಿಷ್ಯನಿಗೆ ಉಪದೇಶಿಸುವ ರಹಸ್ಯ (ಅಲ್ಲಿಯೇನಾನುಂ ಉಪಾಧ್ಯಾಯರಹಸ್ಯಮಕ್ಕುಂ ಅದುವುಂ ಸೂಚನಾ ಮಾತ್ರದೊಳ್ ವಿದಿತಮಕ್ಕುಂ: **ಸುಕುಮಾಚ,** ೩. ೨೨ ವ)

**ಉಪಾನತ್** – ಪಾದರಕ್ಷೆ (ಪಾದತ್ರಾಣಮ ಉಪಾನತ್ ಪಾದುಕೆ: **ಅಭಿಧಾವ,** ೧. ೧೦. ೨೪)

**ಉಪಾಯ** – ಯುಕ್ತಿ; ಸಾಮ, ದಾನ, ಭೇದ ದಂಡಗಳೆಂಬ ಚತುರೋಪಾಯಗಳು (ಉಪಾಯಚತುಷ್ಟಯ ಪ್ರಯೋಗಪ್ರವೀಣನುಂ ವಿನಿರ್ಜಿತಪಂಚೇಂದ್ರಿಯಪ್ರಭಾವಕನುಂ .. .. ವಸುಂಧರಾವಳಯಮಂ .. .. ನಿಜಭುಜಾಗ್ರದೊಳ್ ತಾಳ್ದು: **ಪಂಚತಂತ್ರ,** ೬೫ ವ)

**ಉಪಾಯನ** – ಉಡುಗೊರೆ, ಕಾಣಿಕೆ (ಭರತನಾಥದೂತಂ ಆತ್ಮಪಾರ್ಶ್ವಚರಕರತಳದಿಂ ಉಪಾಯನ ರತ್ನಕರಂಡಕಮಂ ಕೊಂಡು: **ಆದಿಪು,** ೧೪. ೪೫ ವ)

**ಉಪಾರೂಢ** – ಮೇಲೇರಿದ (ಆರೂಢ ಸಮರರಸನುಂ ಉಪಾರೂಢಕನಕರಥನುಂ ಆಗಿ ಕೈಲಾಸವಾಸಿಗೆ ಪೊಡೆವಟ್ಟು ಬಿಲ್ಲಂ ಕೊಂಡು ಗಂಗಾಸುತಂಗೆ ಅದಿರದೆ ಇದಿರ್ಚಿ ನಿಂದಾಗಳ್: **ಪಂಪಭಾ,** ೧೦. ೫೨ ವ); ಹೆಚ್ಚಿದ, ಬೆಳೆದ (ಅಂತು ಉಪಾರಾಢಯೌವನೋದಯನುಂ ಪರಿಸಮಾಪ್ತ ಸಕಲಕಲಾವಿಜ್ಞಾನನುಂ ಆದ .. .. ಚಂದ್ರಾಪೀಡನಂ .. ಕಂಡು: **ಕಾದಂಸಂ,** ೨. ೩೫ ವ)

**ಉಪಾರ್ಜಿತ** – ಸಂಪಾದನೆಮಾಡಿದ (ನೀನತೀತ ಭವದೊಳ್ ಉಪಾರ್ಜಿತ ಊರ್ಜಿತಪುಣ್ಯನೆಯಾಗಿ ಸೌಧರ್ಮಕಲ್ಪದೊಳ್ ದೇವನಾದೈ: **ಶಾಂತಿಪು,** ೬. ೮೫ ವ)

**ಉಪಾರ್ಜಿಸು** – ಸಂಪಾದಿಸು (ತಪದಿಂ ಗುಣದಿಂ ಪುಣ್ಯಮಂ ಉಪಾರ್ಜಿಪರ್ ಪಲಬರ್: **ನೇಮಿನಾಪು,** ೧. ೧೦೮)

**ಉಪಾಲಂಭ** – ದೂಷಣೆ (ನೃಪಸುತನೆಂದಂ ಉಪಾಲಂಭನಿಭ ಗಭೀರೋಕ್ತಿಗಳಂ: **ಲೀಲಾವತಿ,** ೪. ೫೮)

**ಉಪಾಲಂಭನ** – ವ್ಯಂಗ್ಯೋಕ್ತಿ (ನಿಷ್ಕರುಣಿಯಾದೆ ಎಂದು ಓರೊರ್ಮೆ ಸಂಭ್ರಮದಿಂ ಉಪಾಲಂಭನಂ ಮಾಡಿಯುಂ .. .. ದುಃಖಪ್ರಸೂತೆಯುಂ ಆದೆಂ: **ಕಾದಂಸಂ,** ೪. ೯೬ ವ)

**ಉಪಾಲಂಭಂಗೆಯ್** – ನಿಂದಿಸು (ಮೇಲಾದ ಪಾಂಡುಸುತರಂ ಉಪಾಲಂಭನಗೆಯ್ಯುತಿರ್ಪ ದುರ್ಯೋಧನನಂ ಲೀಲೆಯೆ ನುಂಗುವ ಮೃತ್ಯುವ ನಾಲಗೆಯೆನೆ ನೆಗೆದುವುರಿಯ ನಾಲಗೆ ಪಲವುಂ: **ಪಂಪಭಾ,** ೩. ೬)

**ಉಪಾಶ್ರಯ** – ದೂರಸರಿಸುವುದು (ಅಪಾಕರಣಂ ನಿರಸನಂ ಉಪಾಶ್ರಯಂ ಸಂಶ್ರಯಣಂ: **ಅಭಿಧಾವ,** ೨. ೨. ೨೪)

**ಉಪಾಶ್ರಯಂಬಡೆ** – ಆಸರೆಯನ್ನು ಹೊಂದು (ಬಹುವಿಧ ಅರ್ಚನೆಗಳಿಂದರ್ಚಿಸಿ ಧರ್ಮಚಕ್ರಚ್ಛತ್ರತ್ರಿತಯಂಗಳಂ ಬಳಸಿಯುಂ ಉಪಾಶ್ರಯಂಬಡೆಯೆ: **ಆದಿಪು,** ೧೫. ೧೬ ವ)

**ಉಪಾಶ್ರಿತ** – ಆಶ್ರಯಪಡೆದ (ಆಶ್ರಿತ ನಾಭಿನಂದನಂ ಉಪಾಶ್ರಿತ ಭವ್ಯಜನಾಭಿಧೇಯನುಂ: **ಆದಿಪು,** ೧. ೪೦)

**ಉಪಾಸಕ** – [ಜೈನ] ಶ್ರಾವಕ (ಧವಳಾತಪವಾರಣಕಕುಧ ವಿಭೂತಿಯನುಟಿದು ನೆಗಟ್ದು ಉಪಾಸಕನಾದಂ: **ಆದಿಪು,** ೬. ೬)

**ಉಪಾಸಕಾಧ್ಯಯನ** – [ಜೈನ] ಶ್ರಾವಕರ ಕರ್ತವ್ಯ ತಿಳಿಸುವ ಶಾಸ್ತ್ರ (ಅರ್ಹದರ್ಚನಾಶೇಷ ಘೃತತಿಳಾಜ್ಯಾಹುತಿಗಳಿಂ

ಉಪಾಸಕಾಧ್ಯಯನಗದಿತ ಸಮಸ್ತಪ್ರಕಾರ ಪಿಪೀಲಿಕಾಜಾತ್ಯಾದಿ ಮಂತ್ರಂಗಳಿಂ ಕ್ರಿಯಾಯುಕ್ತಮಾಗೆ ಪೇೞ್ದು: **ಆದಿಪು,** ೧೫. ೧೬ ವ)

**ಉಪಾಸನೆ –** ಸೇವೆ (ಸೇವೆಯುಪಾಸನೆ: **ಅಭಿಧಾವ,** ೧. ೧೧. ೫೮)

**ಉಪಾಸಾಸ್ತವ –** ಸ್ತುತಿ, ಸ್ತೋತ್ರ (ನಿನಗೀ ಪರಾರ್ಧ್ಯನಿಲಯಂ ಶ್ರೀಪ್ರಾಭವಂ ಜೈನಪಾದದುಪಾಸಾಸ್ತವದಿಂದಮಾದುದು: **ಶಾಂತಿಪು,** ೭. ೨೫)

**ಉಪಾಸ್ತಿ –** ಧರ್ಮಬುದ್ಧಿ, ಆರಾಧನೆ (ಉಪಶಮದಿಂ ಆಸ್ತಿಕ್ಯದಿಂ ಉಪಾಸ್ತಿಸಂಯೋಗದಿಂ ದಯಾಳುತೆಯಿಂದಂ .. .. ಸಮ್ಯಕ್ತ್ವಂ: **ವರ್ಧಮಾಪು,** ೬. ೩೫)

**ಉಪಾಸ್ಯಮಾನ –** ಅಭ್ಯಸಿಸುತ್ತಿರುವ (ಜಿತಕಂದರ್ಪಂ ಪರಿಹೃತಸಪ್ತವ್ಯಸನಂ ನಿರಂತರ ಉಪಾಸ್ಯಮಾನತಾಸ್ತ್ರವ್ಯಸನಂ: **ಪಂಚತಂತ್ರ,** ೭೩)

**ಉಪಾಹಿತ –** ಹತ್ತಿರವಿರಿಸಿದ (ವಿವೇಕಪರಾಯಣಂ ಪ್ರಕಟಿತೋಕ್ತಿ ವಿವಿಕ್ತ ಕಳಾಕಳಾಪಂ ಉಪಾಹಿತ ಸಾಹಿತ್ಯ ವಿದ್ಯೆಯೊಳ್: **ಕವಿರಾಮಾ,** ೩. ೨೧೮)

**ಉಪೇಂದ್ರ –** ವಿಷ್ಣು (ಸತ್ಯೇಂದ್ರನರೇಂದ್ರಂ ಉಪೇಂದ್ರವಂದ್ಯನಂ ಆರಾಧಿಸುತ್ತಮಿರೆ: **ರಾಜಶೇವಿ,** ೪. ೧೨೧ ವ); ಕೃಷ್ಣ (ಅನಿಂದಿತ ರೂಪ ರುಗ್ಮಿಣೀಹರಣಂ ಉಪೇಂದ್ರ ಚಿತ್ತಹರಣಂ ಜಯ ಸಿಂಹರಣಕ್ಕೆ ಕಾರಣಂ: **ಹರಿವಂಶ,** ೭. ೭೧)

**ಉಪೇಕ್ಷಾದೋಷ –** ಉದಾಸೀನ ಮಾಡುವ ದೋಷ (ರಾವಣಂ ನೆಲನೆಲ್ಲಂ ಪಱಿವನ್ನಂ ಅನ್ಯವಧುವಂ ದುರ್ಮೋಹದಿಂ ಬಾೞ್ತೆಗೆಯ್ಯಲ್ ಅದಂ ಬಾರಿಸಲದೆ ಒಯ್ಯನಿಪುರ್ದಾದು ಉಪೇಕ್ಷಾದೋಷಮೇನಾಗದೇ: **ಪಂಪರಾ,** ೧೧. ೭೭)

**ಉಪೇಕ್ಷಾಸಂಯುತ –** ಜಿತೇಂದ್ರಿಯ (ಜಿತಮದರ್ ಜ್ಞಾನರ್ಧಿಸಂಪನ್ನರ್ ಉರ್ವೀಚಕ್ರಸ್ತುತಪಾದಪಂಕಜರ್ ಉಪೇಕ್ಷಾಸಂಯುತರ್: **ಸುಕುಮಾಚ,** ೧. ೧೭)

**ಉಪೇಕ್ಷಿಸು –** ಅಲಕ್ಷಿಸು (ಹರಿಯುಂ ತಾನುಂ ಭರಂಗೆಯ್ದು ತನ್ನ ಎಸಕಂ ಕಾಯದೆ ಅಧರ್ಮಯುದ್ಧದೆ ನರಂ ಕೊಲ್ವಲ್ಲಿ ಕಂಡು ಇಂತು ಉಪೇಕ್ಷಿಸಿ ನೀಮುಂ ನಡೆ ನೋಡುತ್ತಿರ್ದಿರಿ ಎನೆ ಮತ್ತಿನ್ನಾರಂ ನಂಬುವೆಂ: **ಪಂಪಭಾ,** ೧೧. ೮೩)

**ಉಪೇಕ್ಷೆ –** ಅವಜ್ಞೆ (ಅದು ನಿಮ್ಮುಪೇಕ್ಷೆಯೆಂದಱಿಯೆಂ ಇದೆನ್ನ ಕರ್ಮವಶಮೆಂದಱಿವೆಂ: **ಗದಾಯು,** ೪. ೪೯)

**ಉಪೇತ –** ಕೂಡಿದ (ಆತನ ಸಾರೆ ಕಮಂಡಲು ಕೇತನಂ ಅಂಬರಮಂ ಅಡರೆ ಚತುರಂಗಬಲ ಉಪೇತಂ ಅತಿಧವಳರಥಂ ಅಭಿಜಾತಂ ಕ್ಷತ್ರಿಯಂ ಉೞದೆ ಕಲಿ ಕೃಪನಾತಂ: **ಪಂಪಭಾ,** ೧೦. ೫೫)

**ಉಪೇಶ್ವರ –** ಉಪಪತಿ, ಮಿಂಡ (ಪುಷ್ಪಮಾಲಾಯುತೆಯಾಗಿ ರಾಗದಿಂ ಉಪೇಶ್ವರನೊಳ್ ನೆಱೆವ ಅಟ್ಟಿೞಿಂ ಪ್ರಸೂನಾಯುಧತಾಪತಪ್ತೆ .. .. ಹರಿಣಾಕ್ಷಿ: **ಪಂಚತಂತ್ರ,** ೧೨೯)

**ಉಪೋಷಿತೆ –** ಉಪವಾಸವ್ರತವನ್ನು ಆಚರಿಸುವವಳು (ಕಲ್ಯಾಣ ಅಭ್ಯುದಯ ದಿವಸಂಗಳೊಳ್ ತಪ್ಪದೆ ಉಪೋಷಿತೆಯಾಗಿ ದರ್ಭಶಯನದೊಳಿರ್ಪಳ್: **ಪುಷ್ಪದಂಪು,** ೩. ೧೧೩)

**ಉಪ್ಪಟ –** ವಸ್ತ್ರ, ಬಟ್ಟೆ (ಐವರುಮಂ ಕುಳ್ಳಿರಿಸಿ .. .. ಉಪ್ಪಟಮನುಡಿಸಿಮೆಂದು ಎಣ್ಣೆಯೊಳ್ ನಾಂದಿದ ಘಟ್ಟಿಗಳಂ ತರಿಸಿ: **ಹರಿವಂಶ,** ೧೪. ೫೫ ವ)

**ಉಪ್ಪಯಣಂಗೆಯ್ –** ಪಯಣದ ನಡುವೆ ತಂಗು (ಕಳಿಂಗರಾಜಂಗೆ ಕೋಶೋಪನತವೃತ್ತಿಯನಿತ್ತು ಸರ್ವಸ್ವಮಂ ಕೊಂಡಾಜ್ಞಾವಿಧೇಯಮಂ ಮಾಡಿ ಮಹೇಂದ್ರ ಉಪಕಂಠದೊಳ್ ಮೂಱು ಉಪ್ಪಯಣಂಗೆಯ್ದು: **ಶಾಂತಿಪು,** ೧೦. ೧೬೫)

**ಉಪ್ಪರ –** ಕತ್ತಿಕಾಳಗದ ಒಂದು ವರಸೆ (ಆಗಳಿರ್ವಲದ ಕಡಿತಲೆಕಾಱರ್ ಅಲಗಿನೊಳ್ ಪಳಂಚೆ ತಾಗಿ ನಿರ್ಘಾತ ಉಪ್ಪರಂ ತಾಳವಟ್ಟಂ ಅವಿತಂ ಉಬಿತಂ ಎಂಬ ಪಲವುಂ ತೆಱದದ ಇಱಿವ ಬಿನ್ನಣದೊಳ್ ನೆಱೆದು ತಾಳುಂತಟ್ಟುಂ ಪೊಯ್ಯೆ: **ಪಂಪರಾ,** ೧೩. ೫೪ ವ)

**ಉಪ್ಪರವಟ್ಟ –** ಮೇಲುಮಟ್ಟ (ಕರ್ವುವಿಲ್ಗೆ ಅದೇಂ ನಿಲ್ಲದೆ ಕಂತು ಮಾಡಿದನೊ ತೋಮರದ ಉಪ್ಪರವಟ್ಟದ ಒಪ್ಪಮಂ: **ಆಚವರ್ಧ,** ೨. ೬); ಮೇಲ್ಕಟ್ಟಿನ ಬಟ್ಟೆ (ಮದನಂಗೆ ಉಪ್ಪರವಟ್ಟವಾಗದ ತಳಿರ್ ಕಾಮಂಗೆ ಕೋದಂಡವಾಗದ ಕರ್ವು .. .. ಮಱೆದು ಆಗವು ಎಂಬ ವಿವಿಧೋದ್ಯಾನಂಗಳ್: **ನೇಮಿನಾಪು,** ೧. ೬೪)

**ಉಪ್ಪರವೊಯ್ಲು –** ಮೇಲಿನ ಹೊಡೆತ (ಕಡುಗದ ಪೊಯ್ಲಿಂದಂ ಕಾಲಡಿಗಳ್ ಕಡಿಯಾಗೆ ನೀಡಿದ ಉಪ್ಪರವೊಯ್ಲಿಂ ಪೊಡವಿಗೆ ಬೀೞ್ತರೆ ತಲೆಸೊರ್ಕಡಗದೆ ಕೆಲರಿಱಿದು ಬೀರಸಿರಿಯೊಳ್ ನೆರೆದರ್: **ಕಬ್ಬಿಗಕಾ,** ೨೧೨)

**ಉಪ್ಪವಡ –** ಉದಯರಾಗ, ನಿದ್ದೆಯಿಂದ ಎಚ್ಚರಿಸುವ ಹಾಡು (ಎಂದು ಉಪ್ಪವಡಮಂ ಪಾಡುವ ರಾಗಾಧರೆಯರ ರಾಗರಸಪೂರಂ: **ರಾಜಶೇವಿ,** ೧೩. ೪೫ ವ)

**ಉಪ್ಪವಡಿಸು –** ನಿದ್ದೆಯಿಂದ ಎಚ್ಚರಗೊಳ್ಳು (ಉಪ್ಪವಡಿಸಿ ಮಜ್ಜನ ಮಂಡನವಿಧಿಯಂ ಲತಾಂಗಿ ನಿರ್ವರ್ತಿಸಿ ಭೂಮಂಡಳಪತಿಗಱಿಪಿದೊಡೆ: **ಆದಿಪು,** ೭. ೨೮)

**ಉಪ್ಪಳ –** (ಉತ್ಪಲ) ನೈದಿಲೆ (ಕೆಳೆಯೆಂದು ಉಪ್ಪಳಮಂ ಚಂದ್ರಂ ಅಬ್ಜಮಂ ರವಿಬಿಂಬಂ ಒಪದಪಿರೆ: **ಲೀಲಾವತಿ,** ೭. ೧೦೮)

**ಉಪ್ಪಾಗು –** ಅಲಕ್ಷ್ಯಕ್ಕೊಳಗಾಗು (ಎಲ್ಲರುಂ ಒಪ್ಪಿ ಕೃತಿಯಂ ಕುತರ್ಕೇ ಪಳಿದೊಡೆ ತನಗೇಂ ಉಪ್ಪಾದುದೆ ಸೊಪ್ಪಾದುದೆ: **ಧರ್ಮಮಧು,** ೧. ೬೦)

**ಉಪ್ಪಿಕ್ಕು –** ಉಪ್ಪು ಹಾಕು (ಉಪ್ಪಿಕ್ಕಿದೊಡೆ ತುಪ್ಪದ ಮೆಟ್ಟಿಡಿತೆಂಬಂತೆ ನಮ್ಮ ಕೆಮ್ಮನಿರ್ಪಿರವಿದು ಏಕಾರಣಂ: **ಪಂಪಭಾ,** ೭. ೧೬ ವ)

**ಉಪ್ಪುಂಗಾಯ್ –** ಉಪ್ಪಿನ ಕಾಯಿ (ಉಪ್ಪುಂಗಾಯ್ಗಳನಾಗಲ್ ಸೇವಿಸಲ್ಕೆ ಭೀತಂ ಜೈನಂ: **ಸಮಯಪ,** ೬. ೯)

**ಉಬ್ಬಟೆ –** ಅಧಿಕವಾದ (ಅಱೆಕೆಯ ರೂವಿಲ್ಲದ ನಿನ್ನೆಱೆಯಂಗೆ ಉಬ್ಬಟೆಯು ಬೀರಮುಂಟೆಂದುದ್ದಂ ಜಱುಚಿದೆ ಕೇರಿಲ್ಲದೆ ಕಣ್ದೆಱೆವಿನೆಗಂ ಕರ್ಬು ಗಡ ಬಿಲ್ಲಿದೇನಚ್ಚರಿಯೋ: **ಕಬ್ಬಿಗಕಾ,** ೧೪೨)

**ಉಬ್ಬದಿಗ –** ಅತಿಶಯ, ಆಧಿಕ್ಯ (ಸಾರ್ಚಿದಗಲ್ಕೆಯೊಳಿಂತು ಬೇಟದ ಉಬ್ಬದಿಗಮನಾಂತ ನಲ್ಲಳ ಮುಖಾಂಬುಜಮಂ ನಡೆ ನೋಡಿ ನೋಡಿ: **ಆದಿಪು,** ೧೨. ೨೫)

**ಉಬ್ಬರಂಬರಿ –** ಉಕ್ಕಿ ಹರಿ (ಬನದೊಳಗುಬ್ಬರಂಬರಿವ ಶಾಂತರಸಾಮೃತಮೆಯ್ದೆ ತಣ್ಣನೆ ತಣಿದಂತೆ: **ಚಂದ್ರಪ್ರಪು,** ೨. ೧೧೨)

**ಉಬ್ಬರಮುರಿ** – ಅತಿಶಯ ಗರ್ವದಿಂದ ಕೂಡಿರು (ಬಿರುದರಂ ಅದಟಿನೊಳ್ ಉಬ್ಬರಮುರಿವರಂ ಆಯ್ದಱಿಸಿಕೊಂಡುವು ಅರಿಗನ ಕಣೆಗಳ್: **ಪಂಪಭಾ,** ೧೨. ೧೧೪)

**ಉಬ್ಬರವರಿ** – ಉಕ್ಕಿ ಹರಿ (ಉಬ್ಬರವರಿದ ಸೊಬಗಿಂಗೆ ಸಂತೋಷಂಬಟ್ಟು: **ನೇಮಿನಾಪು,** ೫. ೨)

**ಉಬ್ಬರಿಕೆ** – ಅತಿಶಯ, ಉಬ್ಬರ (ಖರಕೋಪಾದಿ ಕಷಾಯದುಬ್ಬರಿಕೆಯಿಂ ಚಾರಿತ್ರಮೋಹಾಸ್ರವಂ ದೊರೆಕೊಳ್ಗುಂ: **ಸುಕುಮಾಚ,** ೮. ೧೯)

**ಉಬ್ಬರಿಸು** – ಮೇಲೇಳು (ಗಗ್ಗರಿಪ ಕೊರಲೊಳ್ ಉಬ್ಬರಿಸಿ ಪೊರೆದ ಸೆರೆಗಳೊಳಂ: **ಆಚವರ್ಧ,** ೯. ೬೦ ವ); ಗರ್ವಿಸು (ಸುರಲೋಕಂ ಮರ್ತ್ಯಲೋಕಂ ಫಣಿಪತಿಭುವನಂ ಪೂಜ್ಯಂ ಎಮ್ಮಿಂದಮೆಂಬಂತಿರೆ ಮುನ್ನಾರ್ ನೋಂತರೆಂದುಬ್ಬರಿಸಿ ಕೊನೆದು: **ಧರ್ಮಾಮೃ,** ೮. ೧೨೦)

**ಉಬ್ಬಸ** – ತೊಂದರೆ (ಪರಪಕ್ಷಂ ಉಳ್ಳಿನಂ ತನಗೆ ಇರವು ಉಬ್ಬಸಂ: **ಕವಿರಾಮಾ,** ೩. ೧೫೦); ಭಯ (ಕಸವೇಂ ಕಸವರಮೇಮೆಂಬುಬ್ಬಸಮಂ ಬಸಮಲ್ಲದಿರ್ದು ಮಾಡುವರೆಲ್ಲಂ: **ಕವಿರಾಮಾ,** ೩. ೧೭೭)

**ಉಬ್ಬಸಂಬಡು** – ಉಸಿರಾಡಲು ಕಷ್ಟಪಡು (ಉಬ್ಬಸಂಬಡು– ಉಚ್ಛ್ವಾಸನಿಗ್ರಹೇ: **ಶಬ್ದಮದ, ಧಾ,** ೨೭೭)

**ಉಬ್ಬಾಳಿ** – ಉಬ್ಬುವ ಸ್ವಭಾವದವನು (ಬೆಸಗಲಿಗಳುಮಂ ಉಬ್ಬಾಳಿಯಳವಿಯ ಲೆಕ್ಕಕ್ಕಿಱಿದು ಬೆಸಕೆಯ್ವ ಪಱಗಲಿಗಳುಂ ಅಳವನಱಿದು ಬೇಗಿಸುವ ಬಲ್ಗಲಿಗಳುಮಂ: **ಗದಾಯು,** ೯. ೩೪ ವ)

**ಉಬ್ಬಿನಂ** – ಶ್ರೇಷ್ಠ (ಬಾಸಿಗಂಗಟ್ಟುವಂತು ಕಟ್ಟುವುದು ಕಬ್ಬಮಂ ಉಬ್ಬಿನಂ ಆಗೆ ಕಬ್ಬಿಗಂ: **ಲೀಲಾವತಿ,** ೧. ೬೨)

**ಉಬ್ಬೆಗ** – [ಉದ್ವೇಗ] ದುಃಖ, ಚಿಂತೆ (ಇನಿತು ಉಬ್ಬೆಗಂ ಮೊಗಂ ಬಾಡೆ ತಗುಳ್ದು ಸೂಚಿಸಿದುವಾ ದಿವಿಜಂಗವಸಾನಕಾಲಮಂ: **ಆದಿಪು,** ೩. ೩)

**ಉಭಯಕವಿ** – ಕನ್ನಡ ಮತ್ತು ಸಂಸ್ಕೃತಗಳಲ್ಲಿ ಕಾವ್ಯ ರಚಿಸುವವನು (ಚಾಳುಕ್ಯರಾಜ್ಯದೊಳ್ ನೆಗಟ್ದಂ ಉಭಯಕವಿ ಕವಿರತ್ನಂ: **ಅಜಿತಪು,** ೧೨. ೪೨)

**ಉಭಯಕುಲ** – ತಂದೆ ಮತ್ತು ತಾಯಿಯರ ಕುಲ (ಉಭಯಕುಲವಿಶುದ್ಧರ್ ನ್ಯಾಯವಂತರ್ ಜಿತಾತ್ಮರ್: **ಶಾಂತಿಪು,** ೩. ೭೩)

**ಉಭಯಪರಿಗ್ರಹ** – ಇಹಪರಗಳಲ್ಲಿ ಸಾಧಿಸುವ ಗಳಿಕೆ (ಉಭಯಪರಿಗ್ರಹಮಂ ನೆರಪಿ ತಣಿಯದೆ ಎಲ್ಲಾ ಪೊಟ್ತುಂ ವ್ಯಗ್ರಮನನಾಗಿ ಚಿಂತಿಸುವ ಉಗ್ರಂಗೇನುಭಯ ಜನ್ಮದೊಳಮುಂಟೆ ಸುಖಂ: **ಸಮಯಪ,** ೫. ೭೫)

**ಉಭಯಬಲ** – ಎರಡೂ ಕಡೆಗಳ ಸೈನ್ಯ (ಸುಭಟರ್ ಸುಭಟರೊಳ್ ಉಱದಿದಿಱದುಭಯ ಬಲಂ ಮೊಟ್ಟನಾದೊಡೆ: **ಶಾಂತಿಪು,** ೬. ೮೨)

**ಉಭಯಭವ** – ಇಹ ಮತ್ತು ಪರ (ಉಭಯಭವಕ್ಕಂ ಶ್ರುತದಿಂದೆ ಹಿತಕರಂ ಪೆಱತುಂಟೇ: **ಅಜಿತಪು,** ೧. ೧೨)

**ಉಭಯಲೋಕ** – ಉಭಯಭವ (ಉಭಯಲೋಕಹಿತದೊಳ್ ನೆಗಟಿ ಜನಂ ಪಟಿಗೆ ಪೊಗಟ್ಗೆ ತನಗೇನದಱಳ್: **ಕವಿರಾಮಾ,** ೩. ೧೭೯)

**ಉಭಯವ್ಯಾಕರಣ** – ಕನ್ನಡ ಮತ್ತು ಸಂಸ್ಕೃತಗಳ ವ್ಯಾಕರಣ (ವಚೋವಿಭವಂ ಒಡನೆಸೆಯೆ ರಂಜಿಪಂ ಉಭಯವ್ಯಾಕರಣ ಪರಿಣತಂ ಕವಿರತ್ನಂ: **ಅಜಿತಪು,** ೧೨. ೪೩)

**ಉಭಯಾಬ್ಧಿ** – (ಪೂರ್ವ–ಪಶ್ಚಿಮಗಳಲ್ಲಿರುವ) ಎರಡು ಸಮುದ್ರಗಳು (ಉಭಯಾಬ್ಧಿವರವದಿಂ .. .. ಇಱಿದು: **ಶಾಂತಿಪು,** ೬. ೮೨)

**ಉಭಯೋಪಧಾನ** – ಎರಡೂ ಕಡೆಯ ದಿಂಬುಗಳು (ದುಕೂಲೋಪಪ್ರಚ್ಛಾದಿತ ವಿಚಿತ್ರ ನೇತ್ರ ಉಭಯೋಪಧಾನಶಯ್ಯಾತಳದೊಳ್: **ಆದಿಪು,** ೫. ೨೨ ವ)

**ಉಮಾವರ** – ಉಮೆಯ ಗಂಡ, ಶಿವ; ಕೀರ್ತಿವಂತ (ವಿದಿತ ಉಮಾವರನಾತ್ತಭುಜಂಗನಲ್ಲನೀ ಭೂಪಾಲಂ: **ಕವಿರಾಮಾ,** ३. ೧೧೨)

**ಉಮುಟ್** – ಉಗುಳು (ಉಮುಟ್ದು ಇಭಮದಕರ್ದಮಮಂ ಕ್ರಮದೊಳೆ ಕಾನೀಕಜಾನುದಘ್ನಮನೆ: **ನೇಮಿನಾಪು,** ३. ೮೬); ಮುಕ್ಕುಳಿಸು

**ಉಮ್ಮಚ್ಚ** – [ಉನ್ಮತ್ತ] ಕೋಪ, ಅಸಮಾಧಾನ (ಮಱೆವುದು ಮನದ ಉಮ್ಮಚ್ಚಮಂ ಅಜ್ಜ ನಿಮ್ಮಂ ಎರೆಯಲೆ ಬಂದೆಂ: **ಪಂಪಭಾ,** ೧೨. ೫೪); ದಿಗ್ಭ್ರಮೆ (ನಚ್ಚುವುದೀ ಅರಸನಂ ಉಮ್ಮಚ್ಚಂ ಮಿಗಿಲಂಜಿ ತನುಜನಂ ತಟಿನಿಯೊಳ್ ಅಂದು ಅಚ್ಚರಿಯಾಗಿಕ್ಕಿದ ಬೆಳ್ಕುರ್ಚೆಯಂ: **ಕರ್ಣನೇಮಿ,** ೧೧. ೧೦೨)

**ಉಮ್ಮಚ್ಚರ** – ತೀವ್ರ ಕೋಪ (ಮದ್ರರಾಜಂ ಉಮ್ಮಚ್ಚರದೊಳ್ ಉಮ್ಮನೆ ಬೆಮರ್ತು ಕನಿಸಿ ಕಿಂಕಿರಿವೋಗಿ: **ಪಂಪಭಾ,** ೧೨. ೯೧ ವ)

**ಉಮ್ಮನೆ** – ಬಿಸಿಬಿಸಿಯಾಗಿ (ಆ ಮಾತಿಂಗೆ ಮಱುಮಾತುಗುಡಲಱಿಯದೆ ಪಂದೆಯಂ ಪಾವಡರ್ದಂತೆ ಉಮ್ಮನೆ ಬೆಮರುತ್ತುರ್ದ ಕರ್ಣನಂ ದುರ್ಯೋಧನಂ ಕಂಡು: **ಪಂಪಭಾ,** ೨. ೮೨ ವ)

**ಉಮ್ಮಳ** – ದುಃಖ (ಸಿಡಿಲವೊಲ್ ಎಱಗುವ ನರಗನ ಪಡೆಗೆ ಅಗಿದು ಉಮ್ಮಳದಿಂ ಉಂಡೆಡೆಯೊಳ್ ಉಣ್ಣದೆಯುಂ ಕೆಡೆದೆಡೆಯೊಳ್ ಕೆಡೆಯದೆಯು ನಿಂದೆಡೆಯೊಳ್ ನಿಲ್ಲದೆಯುಂ ಓಡಿದಂ ಮಹೀಪಾಲಂ: **ಪಂಪಭಾ,** ೧. ३೭)

**ಉಮ್ಮಳಿಕೆ** – ಉಮ್ಮಳ (ನೀರೊಳ್ ಮುೞುಂಗಿದರ್ ಅಂತುಮ್ಮನೆ ಬೆಮರುತ್ತುಂ ಉಮ್ಮಳಿಕೆವಂದು ಬೆಚ್ಚನೆ ಸುಯ್ದೊಡೆ: **ಪಂಪಭಾ,** ೪. ೬೯ ವ)

**ಉಮ್ಮಳಿಸು** – ದುಃಖಿಸು (ಅತ್ತ ಮನುಜಮನೋಜನುಂ ಮದನಪರಿತಾಪಕ್ಕಾಱದೆ ಉಮ್ಮಳಿಸಿ ಮಧುಮಥನನ ಕಣ್ಣಂ ಬಂಚಿಸಿ .. .. ವನಮಂ ಎಯ್ದೆವಂದು: **ಪಂಪಭಾ,** ೫. ೧೦ ವ); ಚಿಂತಿಸು (ತಮ್ಮ ಬಲಮಿಱಿವಿನಂ ಕರಮುಮ್ಮಳಿಸಿ ಕಡಂಗಿ ಕಾದಲ್: **ಹರಿವಂಶ,** ೧೧. ೧೧೨)

**ಉಮ್ಮಾರ್ಗ** – ವಿರುದ್ಧಮಾರ್ಗ (ಕರಂ ರಭಸದೆ ನಾವುಮ್ಮನ್ನಮೆ ಬಿನ್ನವಿಸುವುದು ಉಮ್ಮಾರ್ಗಮಿದಲ್ತು ನಾಡೆ ನೀತಿವಿರುದ್ಧಂ: **ಪಂಚತಂತ್ರ,** ೨೭೯)

**ಉಯ್** – ಕರೆದುಕೊಂಡು ಹೋಗು (ಸಭಾಲಯಮಂ ನಿಜರಾಜಲೀಲೆಯೊಳ್ ಕೂಡಿ ಯುಧಿಷ್ಠಿರಪ್ರಭುಗೆ ತಾನೆ ಸುಯೋಧನಂ ಉಯ್ದು ತೋಱಿದಂ: **ಪಂಪಭಾ.** ೬. ೬೯); ನಿರ್ಬಂಧಿಸು (ಉಯ್–ನೀಯಮಾನೇ: **ಶಬ್ದಮದ,** ಧಾ ೫೧೭); ಧಾನ್ಯದ ಹೊಟ್ಟು (ಪಾಪಹೇತುಗಳೊಳ್ ತೊಡರ್ದು

ಪರತ್ರೆಯೊಳ್ ಸುಖಮಂ ಬಯಸುವಾತಂ .. .. ಬಿಡದು ಉಯ್ಯಂ ಕುಟ್ಟಿ ಪದೆದಕ್ಕಿಯನಱಸುವ ಬೆಳ್ಪನುಮಂ .. .. ಪೋಲ್ಗುಂ;: **ಧರ್ಮಾಮೃ,** ೬. ೧೧೫ ವ)

**ಉಯ್ಯಲ್ –** ಉಯ್ಯಾಲೆ (ಉಣ್ಬುವ ಉಯ್ಯಲ ಪೊಸಗಾವರಂ ಪುಗಿಲೊಳ್ ಏಂ ಎಸೆದತ್ತೋ ಬಸಂತಮಾಸದೊಳ್: **ಪಂಪಭಾ,** ೨. ೧೨)

**ಉಯ್ಯಲಾಡು** –ಉಯ್ಯಾಲೆಯಾಡು (ಮದನೋದ್ಯಾನದೊಳ್ ಉಯ್ಯಲಾಡುತ್ತಿರ್ದೊಳಂ .. .. ಕಂಡು: **ವಡ್ಡಾರಾ,** ಪು. ೫೪. ಸಾ. ೯); ಅನಿಶ್ಚಿತತೆಯಲ್ಲಿ ಹೊಯ್ದಾಡು (ಲತಾಲಲಿತೇ ನಾವಿರ್ವರುಂ ಉಯ್ಯಲಡೆ ಮನಂ ಉಯ್ಯಲಾಡೆ: **ಶಾಂತಿಪು,** ೪. ೯೬)

**ಉರ** – ಎದೆ (ಮೃಗಕುಲಂ ಆಸೆಗೆಯ್ವ ಮೃಗತೃಷ್ಣಿಕೆಯಂ ಜಲಮೆಂದು ತೃಷ್ಣೆಯಿಂ ಪಗಲಿಟಿವನ್ನೆಗಂ ಪರಿದು ಗಂಟಲ್ ಉರಂಬರಂ ಆಱೆ: **ಪಂಪರಾ,** ೭. ೯೩)

**ಉರಃಸ್ಥಲ –** ಎದೆಯ ಪ್ರದೇಶ (ಕ್ಷಮಾಂಗನಾಲಿಂಗಿತನಪ್ಪ ಮಹಾಮುನಿಯಂ ಮಲರ್ಚಿ ಪಟ್ಟಿರಿಸಿಯುರಃಸ್ಥಲಮಂ ನಾಭಿವರೆಗಂ ವಿದಾರಿಸಿ ಪಂದೊವಲ್ ಪೊರೆತಾಪಿನೆಗಂ .. .. ಕಾಯ್ದು ಕರ್ಬೊನ್ನ ಕೀಲ್ಗಳಂ .. .. ಇಱಿದೊಡೆ: **ವಡ್ಡಾರಾ,** ಪು ೫೧ ಸಾ ೨೯)

**ಉರಗ –** ಎದೆಯಿಂದ ಚಲಿಸುವಂಥದು, ಹಾವು (ಮಂತ್ರಪದಕ್ಕೆ ಉರಗಂ ಸುಗಿವಂತೆವೊಲ್ ಅಗಿದು ಸುಗಿದು ತಲೆಗರೆದಿರ್ಪಂ: **ಪಂಪಭಾ,** ೭. ೪೩)

**ಉರಗಗೇಹ** – ಹುತ್ತ (ನೇಜಿಲ ಮರದಿಂ ಮೂಡಲುರಗಗೇಹಮಾದೊಡೆ .. .. ಜಲಮಿರ್ಪುರುಪ ಪ್ರಮಾಣದದ್ಭುತಮಕ್ಕುಂ: **ಲೋಕೋಪಕಾ,** ೫. ೧೪)

**ಉರಗಪತಾಕ –** ಸರ್ಪಧ್ವಜ, ದುರ್ಯೋಧನ (ನೀರೊಳಗಿರ್ದುಂ ಬೆಮರ್ತನುರಗಪತಾಕಂ: **ಗದಾಯು,** ೭. ೨೨)

**ಉರಗಪರಿವೃಢ –** ಉರಗಪತಿ, ಆದಿಶೇಷ (ಅಂತು ಬಂದುರಗಪರಿವೃಢಂ ಪ್ರಸಾರಿತ ಫಣಸಹಸ್ರನಾಗಿ: **ಜಗನ್ನಾವಿ,** ೩. ೯ ವ)

**ಉರಗಮಥನಾರೂಢ** – ಗರುಡವಾಹನ, ವಿಷ್ಣು (ಆಕಾಶಕ್ಕೊಗೆದಂ ಉರಗಮಥನಾರೂಢಂ: **ಜಗನ್ನಾವಿ,** ೧೨. ೧)

**ಉರಗವನಿತೆ –** ನಾಗಕನ್ನಿಕೆ (ಉರಗವನಿತೆಯಂತೆ ಕೋಳ್ಪಪ್ಪಿ ಮುಳಿದಿರ್ದಳಂ: **ಶಾಂತಿಪು,** ೮. ೮೩ ವ)

**ಉರಗಿ –** ಹೆಣ್ಣು ಹಾವು (ಉರಗಿಯಂ ಎಯ್ ಪಿಡಿದೊಡೆ ಅದಂ ಕುರಗರಿಪು ಬೆಕ್ಕು ಕೊಕ್ಕನಂ ತವೆ ಪಿಡಿವಂತಿರೆ ಪಿಡಿದುದು: **ಯಶೋಧಚ,** ೩. ೪೬)

**ಉರಗೆಜ್ಜೆ –** ಎತ್ತುಗಳ ಕೊರಳಿಗೆ ಕಟ್ಟುವ ಗೆಜ್ಜೆ (ಭೋರ್ಗರೆದುಲಿವ ಘಮಟೆಯಯುಮಂ ಉರಗೆಜ್ಜೆಯುಂ ಅಂದಂಬಡೆಯೆ: **ಜಗನ್ನಾವಿ,** ೪. ೮೦ ವ)

**ಉರಗೌಘ –** ಹಾವುಗಳ ಸಮೂಹ (ಮೇಘಮುಖರೆನಿಸಿ ಸಂದ ಉರಗೌಘನಂದೋಘಮೇಘಮಾದೊಡೆ ಮಱೆ ಶೌರ್ಯಾಘಾತಂ ನೆಗೞೆ: **ಆದಿಪು,** ೧೪. ೭೧)

**ಉರಚಲ್ಲಿ –** ಎದೆಗೆ ಕಟ್ಟಿಕೊಳ್ಳುವ ಕನ್ನಡಿ (ಅಮರಿ ನರ್ತಿಸೆ ಚೆಲ್ವಂ ಪುದಿದು ಉರಚಲ್ಲಿಯೊಳೆಸೆದುದು ತತ್ ಉರೋಜ ಸರೋಜಮುಕುಳ ಯುಗಸಂಚಳನಂ: **ಆದಿಪು,** ೭. ೧೯)

**ಉರಭ್ರ –** ಮೇಕೆ (ಪೆರ್ವುಣ್ಣೊಡಯುತ್ತುಮಿರ್ಪ ಪಣೆ ಅದ್ಭುತಮಾದುದು ಉರಭ್ರಯುಗ್ಮದಾ: **ನೇಮಿನಾಪು,** ೪. ೧೧೯)

**ಉರರೀಕರಿಸು –** ಸ್ವೀಕರಿಸು (ಧರೆಯೊಳ್ ಸದ್ಬುಧಂ ಉರರೀಕರಿಸಿದ ಸತ್ಕೃತಿಯಂ ಅಧಮಂ ನೆಗೆಯ್ವನೋ: **ಶಬರಶಂ,** ೧. ೧೪)

**ಉರವಣಿ –** ಆನೆಯ ಎದೆಯ ಮೇಲುಭಾಗ (ಭೋರೆಂದು ಕೊಳುವ ಪೆರ್ಮಟಿಗೆ ಕರಿ ಕರಿಣಿಯಂ ತನ್ನ ಉಪರಿಯ ಉರವಣಿಯೊಳಿಕ್ಕಿತ್ತು: **ಅನಂತಪು,** ೯. ೧೬೮)

**ಉರವಣಿಸು –** ವೇಗವಾಗಿ ಮುನ್ನುಗ್ಗು (ಪರಧನಹರಣನ ಹರಣಮಂ ಹರಿಯಿಪ ಪರಿಣತೆಯಿಂ ಉರವಣಿಸಿ ಬೆನ್ನೊಳೆ ಪರಿದು: **ಆಚವರ್ಧ,** ೨. ೪೮ ವ)

**ಉರವಣೆ –** ಶೀಘ್ರತೆ (ಬಿರಯಿಗಳನೆಲ್ಲರಂ ಮುಳಿದು ಉರವಣೆಯಿಂ ಮೆಟ್ಟುವೆಡೆಯೊಳ್ ಉಚ್ಚಳಿಸುವ ನೆತ್ತರೊಳ್ ಒಂದಿದಂತೆ ಬಂದುಗೆಯರಲ ತೊಡರ್ ಕಾಲೊಳೇನೊಪ್ಪಿದುದೋ: **ಕಬ್ಬಿಗಕಾ,** ೧೧೩); ರಭಸ (ಉರವಣೆಯಿಂ ವಿರಹಿ ಮೃಗೋತ್ಕರಮಂ ವಿದಳಿಸಿದ ಮದನ ಶಾರ್ದೂಲದ ಭೀಕರ ರದನಸಮಿತಿಯೆನೆ: **ಕುಸುಮಾಕಾ,** ೫. ೯೨); ದಿಟ್ಟತನ (ಹರಿಹರಹಿರಣ್ಯಗರ್ಭರಂ ಉರವಣೆಯಿಂ ಗೆಲ್ದ ಕಾಮನಂ ದೀಪ್ರ ತಪೋಭರದಿಂದ ಉರಿಪಿದರ್ ಎನೆ ಬಿತ್ತರಿಸದರಾರ್ ವೀರಣಂದಿ ಸೈದ್ಧಾಂತಿಕರಂ: **ಪಂಪರಾ,** ೧. ೨೭)

**ಉರವರಿಸು –** ವೇಗವಾಗಿ ಮುನ್ನುಗ್ಗು (ಉರವಣಿಸಿ ಬಂದಂ ಆ ಧೀವರನಾಯಕಂ ಇಭ್ಯಕೇತು ಭೂನಾಯಕಂ: **ನೇಮಿನಾಪು,** ೪. ೩)

**ಉರಸಿಜ –** ಮೊಲೆ (ಎಡಗೆಯ್ಯಿಂ ನೀವಿಯಂ ಸಾರ್ಚುತುಂ ಉರಸಿಜದ ಒತ್ತಂಬದಿಂ ಬಳ್ಕುತುಂ.. ..ಅಸತಿಯರ್ ಪೋದರ್ ಇಂತು ಅತ್ತಂ ಇತ್ತಂ: **ಶಾಂತೀಶ್ವಪು,** ೧೧. ೨೩)

**ಉರಸ್ಕಂ –** ಎದೆಯುಳ್ಳವನು (ಶ್ರೀರಾಮಾಲಂಗಿತ ವಿಪುಳ ಉರಸ್ಕಂ ಭಾಸ್ಕರ ಪ್ರತಾಪಂ .. .. ಹರಿಗಂ: **ಪಂಪಭಾ,** ೧೪. ೧)

**ಉರಸ್ತಟ –** ಎದೆಯ ಪ್ರದೇಶ (ಜಟಮಟಿಸಿಕೊಂಡು ನಿಮ್ಮೀ ಘಟಯಿಸುವ ಈ ಸಂಧಿ ಕೌರವರ್ಕಳೊಳ್ ಎನ್ನಿಂ ಘಟಿತ ಜರಾಸಂಧ ಉರಸ್ತಟ ಸಂಧಿವೊಲ್ ಒಂದೆ ಪೊಟ್ಟೞಿಕೊಳ್ ವಿಘಟಿಸದೇ: **ಪಂಪಭಾ,** ೯. ೨೩)

**ಉರಸ್ಥಳ –** ಎದೆಯ ಪ್ರದೇಶ ಅರಳಿದ (ಸಾಲಪ್ರಾಂಶು ವಿಶಾಲ ಲೋಲನಯನಂ ಪ್ರೋದ್ಯತ್ ವೃಷಸ್ಕಂಧಂ ಉನ್ಮೀಲತ್ ಪಂಕಜವಕ್ತ್ರಂ ಆಯತ ಸಮಗ್ರ ಉರಸ್ಥಳಂ: **ಪಂಪಭಾ,** ೧. ೬೮)

**ಉರಾವುರೇ –** ಬಾಪುರೇ ಎಂಬಂತಹ ಉದ್ಗಾರ (ಚತುರಾಸ್ಯಂ ಇಂದ್ರಾದಿ ದಿಗ್ವರರುಂ ಮುಂದೆ ಉರಾವುರೇ ಎಂದು ಮೆಯ್ಯಾಂತು: **ಗಿರಿಜಾ,** ೭. ೭೨ ವ)

**ಉರಿ –** ದಹನ, ಸುಡು (ಉರಿ–ದಹನೇ, ತರುವಿಶೇಷೇ ಚ: ಶಬ್ದಮದ, ಧಾ, ೫೪೮); ಸಂಕಟಪಡು (ವಿರಹಾನಳನಳುಱೆ .. .. ಕಾಯ್ಪಿಂದುರಿಯುತ್ತುಂ ಬೆಯ್ದು ಶೈಲಮಿರ್ಪಂತಿರ್ದಂ: **ಧರ್ಮಾಮೃ,** ೩, ೧೬); ಜ್ವಾಲೆ (ಉರಿ ಮುಟ್ಟಿದರಳೆಯಂತೆ ಅಂತಂಬರಂ ಉರಿದತ್ತು: **ಪಂಪಭಾ,** ೧೦. ೩೫ ವ)

**ಉರಿಗಣ್** – ಉರಿಕಾರುವ ಕಣ್ಣು, ಕೋಪದ ಸ್ಥಿತಿ (ಕೊರಲ ಕಱೆ ಶಿರದ ಪೆಱೆ ನೊಸಲ ಉರಿಗಣ್: **ಗದಾಯು,** ೯. ೨)

**ಉರಿಗಣೆ** – ಉರಿಯುವ ಬಾಣ; ಆಗ್ನೇಯಾಸ್ತ್ರ (ಕೃತಾಂತನೆಚ್ಚ ಉರಿಗಣೆಯಂತೆ ಬಂದುದು ಲಯಾನಿಳಕಲ್ಪನಿದಾಘಜಾಳನಿಂ: **ನೇಮಿನಾಪು,** ೪. ೬೪)

**ಉರಿಗೇಸಂ** – ಉರಿಯಂತಹ ಕೇಶವುಳ್ಳವನು (ಕಾರಿರುಳ ತಿರುಳ ಬಣ್ಣ ಕೂರಿದುವೆನೆ ತೊಳಪ ದಾಡೆ ಮಿಳಿರ್ವ ಉರಿಗೇಸಂ ಪೇರೊಡಲ್ ಎಸೆದಿರೆ ಪುಟ್ಟಿದಂ ಆರುಂ ಅಗುರ್ವಿಸೆ ಮ್ಗಂ ಘಟೋತ್ಕಚನೆಂಬಂ: **ಪಂಪಭಾ,** ೩. ೨೦)

**ಉರಿದೇಟಿಲ್** – ಕೆರಳು (ಚರನ ನುಡಿಗೇಳ್ದು ಕೋಪದಿಂದ ಉರಿದೆಟ್ಟಿಂ: **ಆಚವರ್ಧ,** ೮. ೧೮)

**ಉರಿಪು** – ಸುಡು (ಉರಿಪು–ಅಗ್ನಿಬಾಧೇ: **ಶಬ್ದಮದ,** ಧಾಥು, ೪೫೧)

**ಉರಿಸು** – ಉರಿಯುವ ಹಾಗೆ ಮಾಡು (ಉರಿಸುವುದೋ ನರಕದ ಕಡುದುಃಖ: **ಆದಿಪು,** ೫. ೧೬)

**ಉರಿವರಿ** – [ಉರಿ+ಪರಿ] ಉರಿ ಹಬ್ಬು (ಉರುವರಿವ ಬಿಸಿಲ್ ಸುಡೆ ಸೀಕರಿವೋದುವಿವೆನಿಸಿ ತುಂಬಿಯುಂ ಕೋಗಿಲೆಯುಂ ಮರಗಲೆಲೆವಱೆಗಳೊಳ್ ಮೆಯ್ಗರೆದುವು ಪಡಿನೇಸಱಪ್ಪಿನಂ ಬೇಸಗೆಯೊಳ್: **ಪಂಪರಾ,** ೭. ೮೯)

**ಉರಿವುರಿ** – [ಉರಿ+ಪುರಿ] ಉರಿಯ ಹುರಿ (ಏೞುಂ ಮಾಳವಮಂ ಪಾಱೇಟೆ ತಗುಳ್ದಿಱೆದು ನರಗನುರಿಪಿದೊಡೆ ಕರಿಂ ಕೇಟಿಸಿದಂ ಆತನ ತೇಜದ ಬೀಱಲಂ ಅನುಕರಿಪುವಾದುವೊಗೆದು ಉರಿವುರಿಗಳ್: **ಪಂಪಭಾ,** ೧. ೩೫)

**ಉರುಗಜ್ಜ** – [ಉರು+ಕಜ್ಜ] ದೊಡ್ಡ ಕೆಲಸ (ತನಗೆ ಉರುಗಜ್ಜಕ್ಕೆ ಪಾಕಶಾಸನನರ್ಧಾಸನಮನೇಱೆಸಿನೀರೇಱೆಸಿ ಮನುಜಂಗಂ ಮಾನ್ಯಮಂ ಮಾಡಿದನೇ: **ಗದಾಯು,** ೩. ೪೦)

**ಉರುಗುರ** – ಅಮೇಧ್ಯ (ತಳ್ತಗಲದ ನಲ್ಲಳೆತ್ತ ಉರುಗುರಕ್ಕೊಳೆದೆತ್ತುವ ಪಂದಿಯೆತ್ತ: **ಹರಿವಂಶ,** ೪. ೫)

**ಉರುಟು** – ಅತಿಕ್ರಮಣ (ಉರುಟು–ಅತಿಕ್ರಮಣೇ: **ಶಬ್ದಮದ, ಧಾ,** ೨೩೩)

**ಉರುಡಾಡು** – ಪ್ರತಿಭಟಿಸು (ನೀನಿರ್ಪ ಇರವುಂ ಪರಿಭಾವಿಪೊಡೆ ಒಡೆಯರೊಳ್ ಇರದೆ ಉರುಡಾಡುವ ಪಾಮಗಿದಲ್ತೆ: **ಕರ್ಣನೇಮಿ,** ೧೧. ೯೭)

**ಉರುತರ** – ವಿಶೇಷ, ಅತಿಶಯ (ಉರುತರಭಕ್ತಿರಸಭರದ ಉರವಣೆಯಿಂದಂ ಕರಂಗುತಿರ್ಪ ತನ್ನೃಪಾಲನಂ ಅಪಾರಕೃಪಾಕರನಪ್ಪ ಶಮಕರಂ ಕಂಡು: **ಉದ್ಭಟಕಾ,** ೧೨. ೧೩೮ ವ)

**ಉರುಪಾರ** – ದೂರತೀರ (ಪರಮಗುಣಪರೀತ ಕಾವ್ಯರತ್ನಾಕರದ ಉರುಪಾರಮನೆಯ್ದುಗುಂ ಮಹಾತ್ಮಂ: **ಕವಿರಾಮಾ,** ೩. ೨೩೦)

**ಉರುಪು** – ಸುಡು, ದಹಿಸು (ಉರುಪಿದಪುದೆನಲ್ ಪತಿವಿಯೋಗ ಖಿದ್ಯತ್ ವನಿತಾ ಹೃದಂಗಳೊಳ್: **ಕಾದಂಬ,** ೧. ೧೪)

**ಉರುಸರ** – ಗಟ್ಟಿಯಾದ ಧ್ವನಿ (ಆತಂ ಉರುಸರದಿನಿನಿಸಾಕೂತಮಂ ಆಂ ಜಡನಱೆದೆಂ ಎಂದೊಡೆ: **ಶಾಂತಿಪು,** ೨. ೬೦)

**ಉರುಳ್** – ಕೆಳಕ್ಕೆ ಬೀಳು (ಉರುಳ್–ನಿಮ್ನ ಪತನೇ:: ಶಬ್ದಮದ, ಧಾ, ೯೪೩): ಹಾಳಾಗು (ಅಂಸ್ಕೃತಿವಾರ್ಧಿಯಲ್ಲಿ ಬಿರ್ದು ಉರುಳದೆ ವೀರವೃತ್ತಿಯನೆ ಪಾಟಿಸಿ ಮೋಕ್ಷಸಯುಖಕ್ಕ ಚಿತ್ತಮಂ ತಿರಿಪುತಮಿರ್ದ ಜೈನಮುನಿಪುಂಗವರಿಂ ಮಿಗಿಲಾರೊ; **ಧರ್ಮಾಮೃ:** ೧೨. ೩೭)

**ಉರುಳಿ** – ಉಂಡೆ (ತಳತಳಿಸಿ ಪೊಳೆವ ಮಾವಿನ ತಳಿರ್ಗಳಶೋಕೆಗಳ ಮಿಸುಪ ಲತೆಗಳ ನೆಲೆ ಬಳ್ವಳ ಬಳೆದ ಬೇಟದುರುಳಿಯ ಬಳಗಂ ಇದೆಂದು ಎಳೆಯಳೆಳಸಿ ತಳೆವೆಳಗಾದಳ್: **ಪಂಪಭಾ,** ೫. ೩)

**ಉರುಳಿಗುರುಳ್** – ಗುಂಗುರು ಕೂದಲು (ಸುರ್ಕಟಿದ ಉರುಳಿಗುರುಳ್ ನಸುಸುರ್ಕಿದ ಕುಚಚೂಚುಕಂ ಬೆಳರ್ತಧರಂ: **ಆದಿಪು,** ೧೧. ೧೪೯)

**ಉರುಳಿಗೊಳ್** – ಗುಂಡಗೆ ಆಗು, ಉಂಡೆಯಾಗು; ಸುರುಳಿಯಾಗು (ನಗುವಂತೆ ಇರ್ದಪ್ಪುದೀ ವದನಂ ಉರುಳಿಗೊಂಡಿರ್ಪುದೀ ಕೇಶಂ ದೃಗಯುಗಳಂ ಕರ್ನೆಯ್ದಿಲಂತಿರ್ದಪುದು: **ಕಾದಂಸಂ,** ೭. ೫೪)

**ಉರುಳೆವರಿ** – ಉರುಳಿಕೊಂಡು ಹೋಗು (ಆರೆಳೇದೊಡಂ ಉರುಳೆವರಿದು ಪುರುಳೀಲ್ಲದೆ ಅಹಂಕಾರದೊಳೆ ಬಾತು : **ಲೀಲಾವತಿ,** ೧. ೨೪)

**ಉರುಳೆವಾಯ್** – ಉರುಳೆವರಿ ನೆರವಿಯಂ ಉರುಳಿವಾಯ್ದುಗುರ್ವಿಸಿ ಪರಿವ ಕರ್ಬುಸುಗಲಿಗಳುಂ: **ಲೀಲಾವತಿ,** ೫. ೧೩೩ ವ)

**ಉರೋಜ** – ಮೊಲೆ (ಕುರಂಗನಾಭಿಯಂ ಉರೋಜಕೆ ಲೇಪಿಸಿ ಪಲ್ಲವಂಗಳಂ ಜೋಡಿಸಿ ಕಟ್ಟಿ: **ರಾಜಶೇವಿ,** ೫. ೧೦೭)

**ಉರೋಜಸರೋಜಮುಕುಳ** – ಮೊಲೆ ಎಂಬ ತಾವರೆ ಮೊಗ್ಗು (ಅಮರಿ ನರ್ತಿಸೆ ಚೆಲ್ವಂ ಪುದಿದು ಉರಚಲ್ಲಿಯೋಳೆಸೆದುದು ತತ್ ಉರೋಜಸರೋಜಮುಕುಳಯುಗಸಂಚಳನಂ: **ಆದಿಪು,** ೭. ೧೯)

**ಉರೋದಘ್ನ** – ಎದೆ ಮುಳುಗುವುದು (ಆದಲೆ ನೀರ್ ಗುಂಡಿತ್ತು ಎಂದು ಈದಲೆಯೊಳೆ ನಿಂದು ಸತಿಗೆ ಹರಿಗಂ ತೋಱುತ್ತ ಆದರದೆ ಜಾನುದಘ್ನಂ ಉರೋದಘ್ನಂ ಕಂಠದಘ್ನಮೆಂಬ ಅಳವಿಗಳಂ: **ಪಂಪಭಾ,** ೫. ೫೩)

**ಉರೋಮಣಿ** – ಆನೆಯ ಗಂಟಲು ಎದೆ ಇವುಗಳ ನಡುವಣ ಭಾಗ (ನಾಭಿಕಪೋಳ ಉರೋಮಣಿಯುಂ ಪೀನಾಯತಾಮ್ರಪಲ್ಲವಕೋಶಸುಕೋಶಮೇಹನನುಂ: **ಆದಿಪು,** ೧೨. ೫೬ ವ)

**ಉರೋರುಹ** – ಉರೋಜ (ಏಳಿಸೆ ಪುರ್ವು ದೂರ್ವೆಯಂ ಉರೋರುಹಂ ಉಜ್ವಲ ಕುಂಭಶೋಭೆಯಂ: **ಚಂದ್ರಪ್ರಪು,** ೧೦. ೫)

**ಉರ್ಕಳಿ** – ಧೈರ್ಯಗುಂದು (ಉರ್ಕಳಿದರ್ ದಿಗ್ವರರ್ ಅಂಜಿದರ್ ದಿವಿಜರ್ .. .. ಗ್ರೀಷ್ಮದೊಳ್: **ರಾಜಶೇವಿ,** ೫. ೩೭)

**ಉರ್ಕಾಳು** – ಶೂರ (ಕಿರಾತರಾಜರ್ ತಮ್ಮ ಉಳ್ಳಾಳುಮಂ ಉರ್ಕಾಳುಮಂ ಒಳ್ಳಾಳುಮಂ ಒಡಗೊಂಡು ಬಂದು ತಾಗಿದರಾಗಳ್: **ಜೀವಸಂ,** ೩. ೪೦)

**ಉರ್ಕು** – ಹಿಗ್ಗು (ಅನಿತೊಂದುರ್ಕಿನೊಳ್ ಉರ್ಕಿ ಕೌರವಖಳರ್ ಪಾಂಚಾಳರಾಜಾತ್ಮಜಾನನಪದ್ಮ ಗ್ಲಪನಕಾರಣಪರರ್ ತಾಮಾಗೆಯುಂ: **ಪಂಪಭಾ,** ೭. ೯); ಉತ್ಸಾಹ (ಉರ್ಕು ಅಳಿದರ್ ದಿಗ್ವರರ್ ಅಂಜಿದರ್ ದಿವಿಜರ್ .. .. ಆ

ಗ್ರೀಷ್ಮದೊಳ್: **ರಾಜಶೇವಿ,** ೫. ೩೬); ದರ್ಪ (ಪರಪಕ್ಷ ದೂಷಣಾಲೋಕನದ ಉರ್ಕು ತರ್ಕದೊಳ್ ಅಭುಜ್ಞತೆ .. .. ಶದುದು ತಜ್ಞರ್ರಂಜನಂ: **ನೇಮಿನಾಪು,** ೨. ೩೪); ಕೆಚ್ಚು (ಅಶನಿ ಹರಿ ದಿನಪೋದಯಮೆನಿಸಿದುದು ವಿದ್ಯೆಯೊಂದು ಉರ್ಕು ಅವರಾ: **ಆದಿಪು,** ೩. ೭೫); ಏಳಿಗೆ (ತನ್ನೈಕಿಲ್ಗಳಂ ನಾಂದಿ ಸಂಚಳನಂ ಮಾಡಿ ತದಾಪ್ತನ ಉರ್ಕ ಮುಱಿದೇಂ ಪರ್ಬಿತ್ತೊ ಹೈಮಾಗಮಂ: **ರಾಜಶೇವಿ,** ೯. ೭); ಹದ ಮಾಡಿದ ಕಬ್ಬಿಣ (ಓದಿದೊಡೆ ಕಲ್ಲಮಾಲೆಯನಾದಂ ಕರ್ಬೊನ್ನ ಕಡಲೆ ವಾದಿಸೆ ರಸಮಂ ಸೋದಿಸೆ ಉರ್ಕಿನ ಪುಡಿ ಎನಿಪಾ ದುಷ್ಕವಿತೆಗಳಂ ಎಣಿಸಲೇಕೀ ಕೃತಿಯೊಳ್: **ಗಿರಿಜಾಕ,** ೧. ೨೨)

**ಉರ್ಕುಂದೊಱಿ –** ಉಕ್ಕಿ ಹರಿಯುವ ನದಿ (ದಕಾರಕ್ಕೆ – ಕುಡುಕುಂದಱಿ, ಉರ್ಕುಂದೊಱಿ, ತೂಗುಂದೊಟ್ಟಿಲ್: **ಶಬ್ದಮದ,** ೧೮೧, ಪ್ರ)

**ಉರ್ಕುಗಿಡು –** ಎದೆಗುಂದು (ಕವಿದುವು ಸಪ್ತಸಾಗರಜಲಂಗಳೆ ಲೋಕಮಂ ಎಂಬಿನಂ ಕವಿದು ಮುಗಿಲ್ಗಳಲ್ಲಿ ಕಱೆಯುತ್ತಿರೆ ಪಾವಕಂ ಉರ್ಕುಗೆಟ್ಟು ಇದೆಂತುವೊ ತೊದಳಾಯ್ತು ದಾನಂ ಎನೆ ಮಾರುತಬಾಣದೆ ಮೇಘಮಾಲಿಕಾನಿವಹಮಂ ಎಚ್ಚು ಕೂಡೆ ಶರಪಂಜರಮಂ ಪಡೆದಂ ಗುಣಾರ್ಣವಂ: **ಪಂಪಭಾ,** ೫. ೯೬)

**ಉರ್ಕುಡಿ –** ಪರಾಕ್ರಮಶಾಲಿ (ಕನ್ನಡಿಯ ಚೆನ್ನಡಿಯ ಅಡ್ಡಣವೆಡ್ಡಮಾಗೆ ಮೂದಲಿಸಿ ಪೊಡರ್ಪು ಪೆರ್ಚಿ ಕೆಲರ್ ಉರ್ಕುಡಿಗಳ್ ತಱಿಸಂದು ಕಾದಿದರ್: **ಕಬ್ಬಿಗಕಾ,** ೨೧೧); [ಉರ್ಕು+ಉಡಿ] ಗರ್ವವನ್ನು ಮುರಿಯುವಂತಹ (ಕಿಡಿಗಳ್ ಜಾತಿಜರಾದಿಗಳ್ಗೆ ದುರಘವ್ರಾತಾದಿಗಳ್ಗೆ ಅಳ್ಕದುರ್ಕುಡಿಗಳ್ ಪುಣ್ಯದ ಬೀಡು ಬಿಟ್ಟ ಗುಡಿಗಳ್ .. .. ಗುಣಭದ್ರದೇವರಡಿಗಳ್: **ಕಾವ್ಯಾವಲೋ,** ೮೯)

**ಉರ್ಕುಡಿಸು –** ಗರ್ವವನ್ನು ಮುರಿ (ಕಣ್ಗಡೆ ಕುಡಿಮಿಂಚಂ ಉರ್ಕುಡಿಸಲಾರ್ಪುದು .. .. ಶುಭಾವಹ ಭಾವಭವಾಧಿದೇವಿಯಾ: **ರಾಜಶೇವಿ,** ೭. ೬೧)

**ಉರ್ಕುಡುಗು –** ಧೈರ್ಯಗುಂದು (ಉರ್ಕುಡುಗಲ್ ಕುಮುದಂಗಳ್ ಸೊರ್ಕೊಗೆಯಲ್ ಕಮಳ .. .. ಅರ್ಕನುದಯಿಸುವಾಗಳ್: **ಗಿರಿಜಾಕ,** ೮. ೬)

**ಉರ್ಕೆ –** ಉದ್ರೇಕ, ಉತ್ಸಾಹ (ಕೂಡಿದ ಕೂಟದಿಂದ ಒಲಿಸಿದ ಇರ್ವರುಮಂ ಸಮಪಾತವಾರಿಯಿಂ ಕೋಡೆ ಸರಾಗದೊಳ್ ಮುಬುಗಿ ಮೂಡೆ ಮೃಗಾಂಕಕರಂ ಪಯೋರಸಂ ತೋಡುವ ತಂಬೆಲರ್ ಮನದೊಳ್ ಉರ್ಕೆಗಳಂ ಸುರತಾವಾಸದೊಳ್ ಮಾಡೆ ರತಕ್ಕೆ ಮತ್ತೆ ಬಗೆದಂದುದು ದಂಪತಿ ಸೌಧಕೂಟದೊಳ್: **ಶಾಂತಿಪು,** ೮. ೧೦೦)

**ಉರ್ಗಿವಳೆದೆಣ್ಣೆ –** ಉರಿಯುತ್ತಿರುವ ಎಣ್ಣೆ (ಉರ್ಗಿವಳೆದೆಣ್ಣೆಯೆಂದು ಉರಿವೆಣ್ಣೇ: **ಶಬ್ದಮದ,** ಪ್ರಸಾ, ೨೯)

**ಉರ್ಚಿಕೊಳ್ –** ಒರೆಯಿಂದ ಅಥವಾ ಬತ್ತಳಿಕೆಯಿಂದ ಸೆಳೆದುಕೋ (ತನಗೆ ವಿನಾಯಕಂ ದಯೆಯಿನಿತ್ತ ಜಯಾಸ್ತ್ರಮಂ ಉರ್ಚಿಕೊಂಡು ಭೋಂಕನೆ ಶರಾಸನದೊಳಾಂತು ಅದನಾಗಡೆ ಪೂಡಿ .. .. ಎಚ್ಚೊಡೆ (**ಪಂಪಭಾ,** ೧೨. ೧೬೮)

**ಉರ್ಚಿಪಾಯ್ –** ರಭಸದಿಂದ ನುಗ್ಗು, ಭೇದಿಸಿಕೊಂಡು ಮುನ್ನುಗ್ಗು (ಭುಗಭುಗನೆ ಉರ್ಚಿಪಾಯ್ವ ಬಿಸುನೆತ್ತರ ಸುಟ್ಟುರೆಯಂ ನೆಲಕ್ಕೆ ಪರ್ದುಗಳ್ ಉಗಲೀಯದೆ ಅವ್ವಳಿಸಿ ಪೀರ್ವಿನಂ ಒರ್ಮೆಯೆ ಪೊಯ್ವ ಪೊಯ್ಗಳಿಂ ನೆಗೆದು ಮುಗಿಲ್ಗಳ್ ಇಟ್ಟೆಡೆಗಳೊಳ್ ತಲೆಗಳ್ ತೊಡರ್ದಿರ್ದು ಜೇನ ಪುಟ್ಟಿಗಳೆನೆ ಪೋಲ್ತುವು ಏಂ ಕಲಹಂ ಅಚ್ಚರಿಯಾಯ್ತೊ ತುರಂಗಸೈನ್ಯದೊಳ್: **ಪಂಪಭಾ,** ೧೦. ೮೦)

**ಉರ್ಚಿಪೋಗು –** ಭೇದಿಸಿಕೊಂಡು ಹೋಗು (ಕೆಚ್ಚುವಿರ್ದ ಮಚ್ಚುಮಂ ಉರ್ಚಿಪೋದ ಮೇಳಮುಮಂ ಅಳವಿಗಟಿದಲಂಪುಮಂ: **ಆದಿಪು,** ೪. ೫೨ ವ)

**ಉರ್ಚಿಮುಕ್ಕು –** ಕಿತ್ತು ತಿನ್ನು (ಒಣಗಿದುದೊಂದು ಪೆರ್ವಿದಿರ ಪೆರ್ವೊದಱಿಂ ಮೊರೆದು ಉರ್ವಿದ ಆಶುಶುಕ್ಷಣಿಯವೊಲ್ ಆಂತ ಖಟ್ಟನಿವಹಕ್ಕೆ ರಥಕ್ಕೆ ದಟಕ್ಕೆ ಮತ್ತವಾರಣನಿವಹಕ್ಕೆ ತಕ್ಕಿನ ಅಭಿಮನ್ಯುವ ಕೂರ್ಗಣೆ ಪಾಯ್ದು ನುಂಗಲುಂ ನೋಣೆಯಲುಂ ಉರ್ಚಿಮುಕ್ಕಲುಂ ಇದೇಂ ನೆಱೆ ಕಲ್ತುವೊ ಯುದ್ಧರಂಗದೊಳ್: **ಪಂಪಭಾ** ಪರಿಷತ್ತು, ೧೧. ೯೪)

**ಉರ್ಚು –** ಹೊರಕ್ಕೆ ತೆಗೆ (ಮುಳಿದು ತಳಮಳಿಸಿ ತಳರದೆ ತೊಳಗುವ ಕರವಾಳಂ ಉರ್ಚಿ ಮೆಯ್ವೆರ್ಚಿ ಪೊದಳ್ದ ಅಳವು ಅಮರೆ ಪಿಡಿದು ರಥದಿಂದೆ ಇಳೆಗೆ ಇೞಿದು ಅವಂ ಅವನಿಪತಿಯಂ ಅಣುಗಿಱಿ ಪೊಯ್ದಂ: **ಪಂಪಭಾ,** ೧೩. ೪೭); ಚುಚ್ಚು (ಇಡಿದಿರೆ ರೋಮಕೂಪದೊಳಗೆ ಉರ್ಚಿದ ಸಾಲ ಸರಲ್ಗಳುಂ ತೆಱಂಬಿಡಿದಿರೆ ಬೆಟ್ಟು ಒರ್ಗುಡಿಸಿದಂತೆ ನೆಱಲ್ದಿರೆ .. .. ಬಿಟ್ದಂ ಏನೆಸೆದನೋ ಶರಶಯ್ಯೆಯೊಳ್ ಅಂದು ಸಿಂಧುಜಂ: **ಪಂಪಭಾ,** ೧೩, ೬೨); ಹೊರಕ್ಕೆ ಚಾಚು (ವಿಜಯಾರ್ಧಮಂ ಉರ್ಚಿ ಬರ್ಪಳವಿದೇಂ ಸಾಮಾನ್ಯಮೇ: **ಆದಿಪು,** ೧೩. ೫೭); ಪೀಡಿಸು (ಅವಯವದಿಂದ ಅಂದು ಉರ್ಚುವ ಭವಭಯಮುಂ ಶಿಥಿಲ ಮಾದುದು: **ಶಾಂತಿಪು,** ೬. ೪೧); ಮಲವಿಸರ್ಜನೆಯಾಗು (ಉರ್ಚು– .. .. ಭೇದನೇ ಚ: **ಶಬ್ದಮದ,** ಧಾ ೧೬೫)

**ಉರ್ದು –** ಉಜ್ಜು, ತಿಕ್ಕು (ಕೆಲರಂ ಗುರ್ದಿಯುಂ ಉರ್ದಿಯುಂ ತಿರುಪಿಯುಂ ತೇದುಂ ಭುಜಾದಂಡದಿಂ: **ಗದಾಯು,** ೩. ೧೨); ಉದ್ದಿನ ಕಾಳು, ಬೇಳೆ (ಪುಟ್ಗೆಯೆಂದು ಉರ್ದು ತೊವರಿ ಹೆಸಱು ಮೊದಲಾದವನಿಕ್ಕಿ ಅಟ್ಟ ಕೂಟ್: **ಶಬ್ದಮದ,** ೩೩ ವೃತ್ತಿ, ಒಂದರ್ಥಕ್ಕೆ, ೮೫)

**ಉರ್ಬಟೆ –** ಶೌರ್ಯಾತಿರೇಕ (ಇನಿತೊಂದು ಉರ್ಬಟೆಯೇಂ ಪುಳಿಂದ ಬಿಡು ನಿನೀಬಿಂಕಮಂ: **ಶಬರಶಂ,** ೪. ೬೫)

**ಉರ್ಬಿ –** ಉರ್ವಿ, ಭೂಮಿ (ಪರ್ಬಿಸಿಲರ್ಬಿಸಿತು ಉರ್ಬಿ ನಿದಾಘಂ ಉರ್ಬಿಯೊಳ್: **ಜಗನ್ನಾವಿ,** ೧೭. ೭೬)

**ಉರ್ಬು –** ಉಬ್ಬು (ಅಂಬರಾಂಭೋನಿಧಿಯೊಳ್ ನೆಗೆದುರಿವ ದೌರ್ವಾನಳನ ಉರ್ಬುಗಳೆನಲುಂ ನೆಗೆದುವು ಅಹಿಮಹಿಮಕರಬಿಂಬಂ: **ಆದಿಪು,** ೬. ೫೨)

**ಉರ್ಬುಗುಂದು –** ಉಬ್ಬುವಿಕೆ ಕುಂದು (ಪುಲಿ ಪೊರಳ್ದು ಪೋದ ತಾಣದೊಳ್ ನಿಂದು ಗರ್ಬಂಗೆ ಅಗಿದು ಉರ್ಬುಗುಂದಿ ಹಮ್ಮಂದಂಬೋದ ಹರಿಣಂಗಳಿಂ: **ರಾಜಶೇವಿ,** ೫. ೫೫ ವ)

**ಉರ್ಬೇಟಿಸು –** ಹಿಗ್ಗಿಸು (ಒರ್ಮೆಯೆ ಮುಟ್ಟೆವಂದುದು .. .. ಮಹೀರಂಗವಂ ಕೆಲೆದು ಉರ್ಬೇಟಿಸುತ ಅಂಗವಂ ಮೊನೆಯಿಡುತ್ತುಂ ಶೃಂಗವಂ ಪುಂಗವಂ: **ಜಗನ್ನಾವಿ,** ೫. ೩೬)

**ಉರ್ವರಾಪಾಳ** – ಭೂಮಿಯನ್ನು ಪಾಲಿಸುವವನು, ರಾಜ (ಉರ್ವರಾಪಾಳನಿನಿಟ್ಟ ವಾಸರ ಚತುಸ್ತ್ರಿಕ ಮಾತ್ರದೊಳ್ ಆವುಪಾಯದಿಂ ಮೇಳೀಸಿ ತಂದುಕೊಂಡು ಕುಡುವೆಂ: **ಸುಕುಮಾಚ,** ೭. ೯)

**ಉರ್ವರಾಶ್ರೀ** – ಭೂಮಿಯೆಂಬ ಲಕ್ಷ್ಮಿ (ನೀ ತಲೆವೀಸದೆ ಉರ್ವರಾಶ್ರೀಯಂ ಇದಾಗದೆನ್ನದೆ ಒಳಕೊಳ್ ಪರಮೋತ್ಸವದಿಂ ಗುಣಾರ್ಣವಾ: **ಪಂಪಭಾ,** ೧೪. ೧೭)

**ಉರ್ವರೆ** – ಭೂಮಿ (ಕೆಂಬಣ್ಣದ ಕುದುರೆಗಳೊಳ್ ಒಡಂಬಡೆ ನಿಜರಜತರಥಂ ಅಗುರ್ವು ಉರ್ವರೆಯಂ ತಿಂಬೆ: **ಪಂಪಭಾ,** ೧೦. ೫೪)

**ಉರ್ವರೇಶ್ವರ** – ಭೂಮಿಯ ಒಡೆಯ, ರಾಜ, ಕ್ಷತ್ರಿಯ (ಇರ್ಪತೊಂದು ಉರ್ವರೇಶ್ವರರಂ ನೀಂ ತಱಿದೊಟ್ಟಿದೈ ಪರಶುರಾಮಾಕಾರದಿಂದಚ್ಯುತಾ **ಜಗನ್ನಾವಿ,** ೧. ೬೦)

**ಉರ್ವಿ** – ಭೂಮಿ (ತೋಡುವೆಂ ಒರ್ವನ ಒಳ್ಗರುಳಂ ಉರ್ವಿಗೆ ನೆತ್ತರನೆತ್ತಿ ಪೀರ್ದು ವಿರ್ದಾಡುವೆಂ ಒರ್ವನ ಊರುಗಳಂ ಎನ್ನ ಗದಾಶನಿಘಾತದಿಂದೆ ನುರ್ಗಾಡುವೆಂ: **ಪಂಪಭಾ,** ೯. ೨೪)

**ಉರ್ವಿನಂ** – ಅತಿಶಯ, ಹೆಚ್ಚಿಗೆ (ಆನೆಯುಳ್ಳರ್ ಆನೆಯಂ ಕಟ್ಟಿಯಾಲರೆ ನಿಮ್ಮ ಮಗನುರ್ವಿನಂ ನಾಡಿಂ ಪೊಱಗೆ ಎಂದೊಡೆ: **ಹರಿವಂಶ,** ೬. ೧೫ ವ)

**ಉರ್ವಿಸು** – ಉಬ್ಬಿಸು, ಹೆಚ್ಚಿಸು (ಆಯುಧಾವಲಿಯಿಂದ ಉರ್ವಿಸುವ ಇಂದ್ರಜಾಲಿಗನವೋಲ್: **ಶಾಂತಿಪು,** ೭. ೮೯)

**ಉರ್ವೀಜ** – ಭೂಮಿಯಲ್ಲಿ ಹುಟ್ಟಿದುದು, ಗಿಡಮರ (ವನದೊಳ್ ಮದೀಯ ಪಿತೃಗೆಂತುಂ ವೈರಮುಂ ಉರ್ವೀಜರಾಜಿಗಳೊಳ್: **ಪಂಪರಾ,** ೧೧. ೧೨೬)

**ಉರ್ವೀತಳ** – ಭೂಪ್ರದೇಶ (ಮತ್ತ ಮಾತಂಗ ಪದನಖ ಖರ್ವಿತ ಉರ್ವೀತಳಮುಂ ಪ್ರಚಂಡ ಮಾರ್ತಂಡ ಮರೀಚಿ ತೀವ್ರ ಜ್ವಳನ ಆಸ್ಫಾರ ಕರಾಳ ಕರವಾಳ ಭಾಮಂಡಳ ಪರೀತ ಉದ್ಯತ ದೋರ್ದಂಡ ಚಂಡಪ್ರಚಂಡ ಸುಭಟ: **ಪಂಪಭಾ,** ೧೩. ೫೧)

**ಉರ್ವೀಧರ** – ಬೆಟ್ಟ (ಉರ್ವೀಧರನಿರುದ್ಧಂಗಳಪ್ಪ ಖರ್ವಡಂಗಳುಮಂ: **ಆದಿಪು,** ೮. ೬೩ ವ); ಭೂಮಿಯನ್ನು ಹೊತ್ತಿರುವ (ಸಮಸ್ತ ಉರ್ವೀಧರ ಅಶೇಷ ಶೇಷ ಮಹಾನಾಗ ಫಣಾದ್ಯುತಿಯನೇಂ ಖದ್ಯೋತದೊಳ್ ಕಾಣ್ಬರೇ: **ಪಂಪಭಾ,** ೫. ೭೬)

**ಉರ್ವೀಧರವೈರಿ** – ಇಂದ್ರ (ಎನಗೆ ಉರ್ವೀಧರವೈರಿ ಬಂಧು ಜಯದರ್ ದೇವರ್ಕಳ್: **ನೇಮಿನಾಪು,** ೧. ೫೬)

**ಉರ್ವೀಧ್ರ** – ಬೆಟ್ಟ (ಶೇಷನಂ ತಂದು ಉರ್ವೀಧ್ರಕ್ಕುರ್ವಿ ಸುತ್ತುತ್ತೊಡನೆ ಕಡೆಯೆ ದೇವಾಧಿದೇವರ್: **ರಾಜಶೇವಿ,** ३. ೧೦३)

**ಉರ್ವೀಭರ** – ರಾಜ್ಯಭಾರ, ಭೂಮಿಯ ಭಾರ (ಒರ್ವಂ ಶ್ರೀವಿಜಯಂ ನೀನೊರ್ವಯ್ ಖಚರೇಶ ಪೊತ್ತು ನಿಂದಿರ್ ದೊರೆವೆತ್ತು ಉರ್ವೀಭರಂ೦: **ಶಾಂತಿಪು,** ೫. ೮೪)

**ಉರ್ವೀಭೃತ್** – ಬೆಟ್ಟ (ವಿಚಾರಿಸದೆ ಈ ದಿಗ್ವಿಜಯ ಪ್ರಘಟ್ಟಕದೊಳ್ ಉರ್ವೀಭೃತ್ಸಮಾಜಕ್ಕೆ ನೋಯಿಸಿದಂ ನಿರ್ನರಮೆನ್ನೆಂದು ಮೊರೆಯಿಟ್ಟಂತಾಯ್ತು ರೂಪ್ಯಾಚಳಂ: **ಶಾಂತಿಪು,** ೧೧. ೪೦)

**ಉರ್ವೀಮಂಡಲ** – ಭೂಮಂಡಲ (ಜಾಣ್ತನಕ್ಕೆ ಎಱವಟ್ಟು ಒಳ್ನುಡಿಗೆ ಆಣ್ಮಂ ಆಯತಿಗೆ ಅಡರ್ಪು .. ..ಸತ್ಯಕ್ಕೆ ಅಧಿಷ್ಠಾನಂ ಎಂದಱಿತಂ ಕೈಮಿಗೆ ಕೂರ್ತು ಕೀರ್ತಿಸುವುದು ಉರ್ವೀಮಂಡಲಂ ದುರ್ಗನಂ: **ಪಂಚತಂತ್ರ,** ೫೨)

**ಉರ್ವೀರಮಣ** – ರಾಜ (ಉರ್ವೀರಮಣ ದುರ್ಬಲಸ್ಯ ಬಲೋ ರಾಜಾ ಎನ್ನದೆ ಇವರ್ಗೆ ಮುಳಿವುದೆ ಮರುಳೇ: **ಯಶೋಧಚ,** ४. ४೭)

**ಉರ್ವೀರುಹ** – ಮರಗಿಡ (ಮಳಯೋರ್ವೀರುಹ ಕುಂಕುಮದ್ರವಯುತಂ .. .. ಗಂಧೋದಕಂ: **ಅಜಿತಪು,** ४. ೭೨)

**ಉರ್ವರ್ವೀಲೇಖ** – ಬ್ರಾಹ್ಮಣ (ತತ್ಸಮಯದೊಳ್ ಒರ್ವಂ ಉರ್ವೀಲೇಖಪ್ರಮುಖಂ ಆತ್ಮೀಯ ಯುವತಿ ವಸುದೇವ ನಿರೀಕ್ಷಣಕ್ಷಣದಿಂ: **ಕರ್ಣನೇಮಿ,** ३. ೧೨೭ ವ)

**ಉರ್ವು** – ಉಬ್ಬು, ಗರ್ವಿಸು (ಮಕ್ಕಳನೊರ್ವಗೊವರನೆ ಪಡೆದಳ್ ಅಮರರ್ಗೆ ಎಂದಿಂತು ಉರ್ವುವರ್ ಅರೆಬರ್: **ಸಮಯಪ,** ೧೦. ೧೫೮) ಮೇಲೇಳು (ಒಣಗಿದುದೊಂದು ಪೆರ್ವಿದಿರ ಪೆರ್ವೊದಱಿಂ ಮೊರೆದು ಉರ್ವಿದ ಆಶುಶುಕ್ಷಣಿಯವೊಲ್ .. .. ಉರ್ಚಿಮುಕ್ಕಲುಂ ಇದೇಂ ನೆಱೆ ಕಲ್ತುವೊ ಯುದ್ಧರಂಗದೊಳ್: **ಪಂಪಭಾ** ಪರಿಷತ್ತು, ೧೧. ೯೪); ಮಿತಿಮೀರು ಉರ್ವಿ ಕೊರ್ವಿ ಪ್ರಿದ ಮರ್ವಿಂದೆ ಗರ್ವಿಸುತ್ತೆ: **ಗಿರಿಜಾಕ,** ೨. ೧೦೫ ವ); ಸಂತೋಷಪಡು (ಪರಿಜನಮುರ್ವೆ ಬಂಧುತತಿ ಕೊರ್ವೆ ಯಶೋಲತೆ ಪರ್ವೆ: **ಪುಷ್ಪದಂಪು,** ೧೨. ೧೧೦); ಏಳಿಗೆ, ಆಧಿಕ್ಯ (ಅನುಪಮ ನಾಳಿಕೇರಫಳಸಂಕುಳಂ ಒಳ್ಳೆನೀರಂ ಆಂತುದು ಇಂಪಿನ ರಸದ ಉರ್ವನಾಳ್ದು ನಯವೇಱಿದುದು: **ಶಾಂತೀಶ್ವಪು,** ೧೨. ೭೪); ರೊಚ್ಚು (ಪೂರ್ವಭವ ಬದ್ಧಕ್ರೋಧದಿಂ ಬಾಲನಂ ಸುರಂ ಉರ್ವಿಂ ಪಿಡಿದುಯ್ದಂ ಅಯ್ವ ತೆಱದಿಂ ಸ್ವರ್ಭಾನು ಬಾಲಾರ್ಕನಂ: **ಪಂಪರಾ,** ४. ೧೬)

**ಉರ್ವೇಟ್** – ಮೇಲಕ್ಕೆ ನೆಗೆ, ತಲೆದೋರು (ಗೋತ್ರಶೈಲಂ ತಳರ್ದು ಮಸಕದಿಂ ತಾಗಲ್ ಉರ್ವೇಟ್ಟುವೋ ವಾರ್ಧಿಗಳುಂ ದ್ವೀಪಂಗಳುಂ: **ಆಚವರ್ಧ,** ೮. ४೫)

**ಉಲಿ** – ಧ್ವನಿ ಮಾಡು (ರತ್ನನೂಪುರಕಲಾಪ ಕಲಧ್ವನಿಗೆ ಅಂಚೆವಿಂಡು ತಂಡದಿಂ ಉಲಿಯುತ್ತಿರಲ್ .. .. ಏಱಿದಳ್ ತರುಣಿ .. .. ಕನ್ನೆಮಾಡಮಂ: **ಕಾದಂಸಂ,** ೭. ೮४); ಮಾತನಾಡು (ಉಲಿವ ಜನದ ಕಳಕಳರವಮುಮಂ ಮೊಱಗುವ ಪಱೆಗಳುಮಂ ಬಾರಿಸಿ: **ಪಂಪಭಾ,** ೨. ೭४ ವ); ಹೇಳು (ನಿಲಿಸಲೊಲ್ಲದೆ ಮಾಣ್ದುಱಿದಿರ್ದೆನಪ್ಪೊಡಂ ನಿಱಿಸದ ಕಷ್ಟನೆಂದು ಉಲಿವರ್: **ಧರ್ಮಾಮೃ,** ४. ೬೨)

**ಉಲಿಪು** – ಧ್ವನಿ, ಕೂಗು (ಬೇಲಿಯ ಕೆಲದೊಳಲ್ಲದೆ ಪೆಱಗಣ ಉಲುಪಿಂಗಂ ಉಳ್ಳೊಳಕ್ಕಂ ಗೆಂಟಾಗಿ ಬೀಡಂ ಬಿಡಿಸಿ: **ಪಂಪಭಾ,** ೫, ४೭ ವ)

**ಉಲಿಪುಗೇಳ್** – ಧ್ವನಿಯನ್ನು ಕೇಳು (ಜಲವಿಹಗಂಗಳೊಳ್ ಉಲಿಪುಗೇಳ್ದು: **ಕುಸುಮಾಕಾ,** ೧. ४೧)

**ಉಲುಕು** – ನಡುಗು, ಅದುರುವಿಕೆ (ಉಲುಕು–ಶರೀರಸ್ಫುರಣೇ: **ಶಬ್ದಮದ, ಧಾ,** ೧೦)

**ಉಲೂಕ** – ಗೂಬೆ (ಉಲೂಕಂ ಪಿಂಗಲಿ ನಿಶಾಟನಂ ತಾನಕ್ಕುಂ: **ಅಭಿಧಾವ,** ೧. ೯. ೧೫)

**ಉಲೂಖಲ** – ಒರಳು (ಗೋಪಿ .. .. ದೃಢವಾಗಲುಲೂಖಲದಲ್ಲಿ ಕಟ್ಟಿ: **ಜಗನ್ನಾವಿ,** ३. ३६)

**ಉಲುಪು** – ಉಲಿಪು (ಸಂಬಳಿಗೋಲಿಂದ ಒಗೆದ ಉಲುಪಿಂಗೆ ಅತ್ತಲೆ ಮೊಗಮಾದುದು ಭೋಂಕನೆ ಅಖಿಳರಾಜಕದಂಬಂ: **ಕಾದಂಬ,** ೧. ३೨)

**ಉಳೂಕ** – ಗೂಬೆ (ಕಾಕೋಳುಕಸೃಗಾಳ ಬಳಾಕೋಷ್ಪ ಚಮೂರು: **ಸುಕುಮಾಚ,** ೧೧. ४೧ ವ)

**ಉಲೂಖಲ** – ಒರಳು (ಉಲೂಖಲಂಗಳೊಳ್ ಚಂದದ ನಿಗ್ಗವಂಗಳ ಲಸನ್ಮಂಗಳನಾಂತು ಪಾಡುತುಂ: **ಉದ್ಭಟಕಾ,** ೨. ೯೦)

**ಉಲ್ಕಾ[ಲ್ಕ]** – ಕೊಳ್ಳಿ, ಆಕಾಶದಿಂದ ಬೀಳುವ ಹೊಳೆಯುವ ವಸ್ತು (ಮಹಾಪ್ರಳಯ ಉಲ್ಕೋಪಮ ಮತ್ ಗದಾಹತಿಯಿಂ ಅತ್ಯುಗ್ರ ಆಜಿಯೊಳ್ ಮುನ್ನಂ ಈ ಖಳ ದುಶ್ಶಾಸನನಂ ಪೊರಳ್ಚಿ ಬಸಿಱಂ ಪೋೞ್ದಿಕ್ಕಿ ಬಂಬಲ್ಗರುಳುಗಳಂ ಆನಲ್ತೆ ವಿಳಾಸದಿಂ ಮುಡಿಯಿಪೆಂ ಪಂಕೇಜಪತ್ರೇಕ್ಷಣೇ: **ಪಂಪಭಾ,** ೭. ೧೨)

**ಉಲ್ಕಾಪಾತ** – ಉಲ್ಕೆಯು ಆಕಾಶದಿಂದ ಕೆಳಕ್ಕೆ ಬೀಳುವುದು (ಉಲ್ಕಾಪಾತಮಂ ನಿಜಪ್ರತಾಪಾನಲಸ್ಫುಲಿಂಗಗಳೆಂದುಂ: **ಪಂಪರಾ,** ೧४. ೧೨೮ ವ)

**ಉಲ್ಬಣ** – ಬಲವಾದ (ಪೊಗಟ್ವ ತೆಗಟ್ವ ಸುಜನನ ಖಳನ ಉಲ್ಬಣರಸನೆಗಂ ಇಂತಿದು ಲಕ್ಷಣಂ ಇರ್ವರ್ಗಂ: **ಶಬರಶಂ,** ೧. ೨೧); ರಾಶಿ (ತೊವಲ್ಗಳ ಸಾಲ್ಗಳ್ ಅಂಗದ ಅಂಗಡಿ ಮೊಸಕಂಡದ ಇಂಡೆ ನೆಣದ ಉಲ್ಬಣ: **ರಾಜಶೇವಿ,** ६. ೭೯)

**ಉಲ್ಮುಕ** – ಕೊಳ್ಳಿ (ಆನಳರಾಶಿಯೆಸೆದುವು ಅಂತರ್ಜ್ವಳದ ಉಲ್ಮುಕಂ ಒಟ್ಟಿ ಪೋಗೆ ಪಥಿಕರ್ ಪಥದೊಳ್: **ಲೀಲಾವತಿ,** ೯. ೯)

**ಉಲ್ಲಂಘನ** – ದಾಟುವುದು (ಪಾಟಿಯಲ್ತು ಪಿತೃವಾಕ್ಯೋಲಂಘನಂ ರಾಘವಾ: **ಪಂಪರಾ,** ६. ೮೨)

**ಉಲ್ಲಂಘಿಸು** – ಮೀರು (ಗುರುವಚನಮಂ ಉಲ್ಲಂಘಿಸಿ ಚರಿಯಿಸಲಣಮಾಗದು: **ಧರ್ಮಾಮೃ,** ३. ೧೦೧)

**ಉಲ್ಲಟಿಸು** – ತಲೆಕೆಳಗುಮಾಡು (ಒಂದು ಮೂರ್ತಮುಂ ಸಲ್ಲದ ಬೇಂಟಂ ಉಲ್ಲಟಿಸಿ ಮಿಂಚುವ ಮಿಂಚು: **ಲೀಲಾವತಿ,** ೧. ६೧); ಚಂಚಲಗೊಳ್ಳು (ಸಲ್ಲದ ಬೇಂಟಂ ಉಲ್ಲಟಿಸಿ ಮಿಂಚುವ ಮಿಂಚು: **ಲೀಲಾವತಿ,** ೧. ६೧)

**ಉಲ್ಲವ** – ಮೇಲ್ಕಟ್ಟು (ಪಲವುಂ ನೇತ್ರದ ಪಟ ಉಲ್ಲವಂಗಳ್ ಧ್ವಜಪತಾಕೆಗಳುಮಂ ಎತ್ತಿಸಿ: **ವಡ್ಡಾರಾ,** ಪು. ೮३, ಸಾ. ೨೭)

**ಉಲ್ಲಸಿತ** – ಕಾಂತಿಯುಕ್ತವಾದ (ಕರತಳಪಲ್ಲವ ಉಲ್ಲಸಿತ ಹೇಮಚಾಮರ ಪವನವಿಲೋಲ ದುಕೂಲವಸನಪರಿವೃತ: **ಆದಿಪು,** ೨. ೨ ವ); ಗುರಾಣಿ (ವಸುವಂದಂ ಖೇಟಕಂ ಉಲ್ಲಸಿತ: **ಅಭಿಧಾವ,** ೧. ೧४. ೨೧)

**ಉಲ್ಲಾಘ** – ರೋಗರಹಿತನಾದವನು (ರೋಗವಿಮುಕ್ತನಪ್ಪಂ ಉಲ್ಲಾಘಂ: **ಅಭಿಧಾವ,** ೧.೧೨. ३೨)

**ಉಲ್ಲಾಸ** – ಸಂತೋಷ, ನಲಿವು (ವಿಕಾಸೋಲ್ಲಾಸದಿಂ ತಮ್ಮತಿಪರಿಮಳದಿಂ .. .. ಸಂಪತ್ತುವೆತ್ತಿರ್ದುದು: **ಜಗನ್ನಾವಿ,** ४. ६३)

**ಉಲ್ಲಾಳ** – ಒಂದು ನಾಟ್ಯ ಭಂಗಿ (ತಾಳಾನುಗತಮೆನಿಪ್ಪ ಉಲ್ಲಾಳಂ ಮೊದಲಾಗಿ ಸೊಗಯಿಸುವ ಪದಿನಾಱುಂ ಪಾಳಕಳೆಯಿನಮರ್ದಂ ವಿಧುಲೀಲೆಯಿನವಂ .. .. ಬಾಜಿಸಿದಂ: **ಪಾರ್ಶ್ವಪು,** ೧೨. ೧೮)

**ಉಲ್ಲಿ** – ನಡುವೆ (ಅಲ್ಲಿ ಇಲ್ಲಿ ಉಲ್ಲಿ ಎಂದು ಸ್ಥಳವಿಶೇಷದೊಳಮೀ ಶಬ್ದಮೊಳವು: **ಶಬ್ದಮದ,** ೧೨೯, ಪ್ರ, ೨)

**ಉಲ್ಲುಳಿತ** – ಚಲಿಸುವ (ಜಳರುಹನಾಭನ ನಾಭಿಯ ಜಳಬುದ್ಬುದದೊಳಗೆ ಸುರಭಿಪರಿಮಳಮಿಳಿತ ಉಲ್ಲುಳಿತ ಅಳಿ ಜಲಜಮಾಯ್ತು ಆ ಜಳಜದೊಳಗೆ ಒಗೆದಂ ಹಿರಣ್ಯಗರ್ಭಂ: **ಪಂಪಭಾ,** ೧. ४೯)

**ಉಲ್ಲೇಖನಂಗೆಯ್** – ಬರೆ, ಲಿಖಿಸು (ಹರನನುಜ್ಞೆಯಿಂ ಸ್ಥಂಡಿಲಮನಲಂಕರಿಸಿಮೆಲ್ಲಮೆಲ್ಲನೆ ಉಲ್ಲೇಖನಂಗೆಯ್ದಗ್ನಿಯಂ ಪ್ರತಿಷ್ಠೆಯಂ ಮಾಡಿ: **ಗಿರಿಜಾಕ,** ೧೦. ೯३ ವ)

**ಉಲ್ಲೋಲ** – ದೊಡ್ಡ ಅಲೆ (ರತ್ನಾಕರಂ ಉಲ್ಲೋಲಂಗಳಿಂದಂ ಮಱಿಯಿಸಿ .. .. ಈ ವಾಜಿಯಂ ಕೊಟ್ಟಂ: **ಕಾದಂಬ,** ३. ೧೦)

**ಉಲ್ಲೋಳ** – ರಭಸ (ಮಾಗಧರವಂಭೋರಾಶಿ ಉಲ್ಲೋಳದಿಂತವನಿಭಾಗದೊಳ್ ಉಣ್ಮಿಪೊಣ್ಮಿದುದು: **ವರ್ಧಮಾಪು,** ೧೧. ೭೦)

**ಉವಿ** – ಹೊಟ್ಟು, ಸಿಪ್ಪೆ (ಉವಿಗುಟ್ಟಿ ಕೆಯ್ ಲುಗುಟನಾಣತುದು ಎಂಬಂತೆ: **ಪಾರ್ಶ್ವನಾಪು,** ೧३. ೧೮)

**ಉಷ** – ಬೆಳಗಿನ ಜಾವ (ಅಂತು ಸುಖಶಯ್ಯೆಯೊಳಿರ್ದುಂ ಉಷದ ಸಮಯಂ ಸಮನಿಸಿತಾಗಳ್: **ಕುಸುಮಾಕಾ,** ೧. ३೧ ವ)

**ಉಷಃಕಾಲ** – ಬೆಳಗಿನ ಹೊತ್ತು (ಬಸಂತಮಾಸದೊಳ್ ಒಂದು ವಾಸರದ ಉಷಃಕಾಲದೊಳ್ ಉಮಾಕಾಂತನಂ ಪೂಜಿಸಿದ ನಂತರಂ: **ರಾಜಶೇವಿ,** ೯. ೭६ ವ)

**ಉಷರ್ಬುಧ** – ಬೆಂಕಿ, ಅಗ್ನಿ (ನಿಷ್ಠುರಜಿಹ್ವಂ ಉಷರ್ಬುಧಂ ಅಂತಿರೆ ದುರ್ಬುಧನಾರೊಳೋಂದಿ ಪಡೆಯಂ ನೋವಂ: **ಚಂದ್ರಪ್ರಪು,** ೧. ४೨)

**ಉಷೆ** – ಬೆಳಿಗ್ಗೆ ಹೊತ್ತು (ಅಂಧಕಾರಮಂ ರವಿ ಕಳೆದಿಕ್ಕೆ ತನ್ನ ಕರಪಲ್ಲವದಿಂದ ಉಷೆ ಪಿಂಗೆ: **ಪಂಪರಾ,** ೧३. ೯३)

**ಉಷ್ಣಕರ** – ಸೂರ್ಯ (ಕಸುಗಾಯ್ದು ಕಣ್ಣೊಳ್ ಉಟ್ಟುವ ಉಷ್ಣಕರನ ಬಿಸುರ್ಗದಿರ್ಗಳೆಯ್ದೆ ಮೆಯ್ದೆಗೆದುವೋ ಬನದೊಳಿರ್ದುವೊ.. .. ಈಕ್ಷಿಸಲ್: **ಆಚವರ್ಧ,** ६. ೨३ ವ)

**ಉಷ್ಣದೀಧಿತಿ** – ಬಿಸಿಯಾದ ಕಾಂತಿ (ಹಿಮಕರಂ ಆತ್ಮ ಶೀತರುಚಿಯಂ ದಿನನಾಯಕಂ ಉಷ್ಣದೀಧಿತಿಯಕ್ರಮಮಂ ಅಗಾಧವಾರಿಧಿಯೆ ಗುಣ್ಪಂ ಇಳಾವಧು ತನ್ನ ತಿಣ್ಪಂ ಬಿಸುಟಿಪ್ಪೊಡಂ; **ಪಂಪಭಾ,** ೧. ೮३)

**ಉಷ್ಣಾಂಶು** – ಸೂರ್ಯ (ಉಷ್ಣಾಂಶುವಿನ ಊರ್ಧ್ವಗಾಂಶುನಿವಹಂ ಮೆಯ್ಯಿಟ್ಟು ಅಲರ್ಚುತ್ತುಂ ಇರ್ಪುದು: **ಪಂಪಭಾ,** ४. ೨೨)

**ಉಷ್ಣೀಷ** – ಪಾಗು, ಶಿರಸ್ತ್ರಾಣ (ಧವಳಹಯಂ ಧವಳರಥಂ ಧವಳ ಉಷ್ಣೀಷಂ ಶಶಾಂಕಸಂಕಾಶ ಯಶೋಧವಳಿತ ಭುವನಂ ತಾಗಿದಂ ಅವಯವದಿಂ ಬಂದು ಧರ್ಮತನಯನ ಬಲದೊಳ್: **ಪಂಪಭಾ,** ೧೧. ३೯); ಕಿರೀಟ (ದೇವೇಂದ್ರುಷ್ಣೀಷಸಮಂಚಿತ ಅಂಘ್ರಿಕಮಲಂಗೆ ಆದ್ಯಂತಶೂನ್ಯಂಗೆ .. .. ಅರ್ಪಿಸಿದಂ .. .. ಧೂಪಮಂ: **ಉದ್ಭಟಕಾ,** ೧೧. ೮೭)

**ಉಷ್ಣೇತರಕಿರಣ** – ಬಿಸಿಯಲ್ಲದ ಕಿರಣವುಳ್ಳವನು, ಚಂದ್ರ (ಕರಮೊಪ್ಪಿತು ಉಷ್ಣೇತರಕಿರಣಂ ವರ್ಷಾಂತಸಮಯ ಜಳಧರಪಥದೊಳ್: **ಕವಿರಾಮಾ,** ೩. ೭೬)

**ಉಷ್ಮ** – (ಅನಲ ಉಷ್ಮಾವಳಿಯಿಂ ಮರ್ಹೋಗ್ರಮೆನೆ ಕಾಯ್ದುದ್ದಷ್ಮಾತಪಜ್ವಾಲೆಗಳ್ಕಿ: **ಕುಸುಮಾಕಾ,** ೮. ೧೪೪)

**ಉಸಿಕನೆ** – ಸುಮ್ಮನೆ, ಮೌನದಿಂದ (ತನ್ನಮಧುರಾಧರ ರಾಗಮಿಶ್ರಿತಜ್ವಳಂ ಅರುಣಾಂಬುವೆಂದು ಉಸಿಕನಿರ್ಪುದಂ ಈಕ್ಷಿಸಿ ನಕ್ಕೊಡೆ: **ರಾಜಶೇಖಿ,** ೨. ೨೩)

**ಉಸಿರ್** – ಉಸಿರು, ಶ್ವಾಸೋಚ್ಛ್ವಾಸ (ಎಳವಳ್ಳಿಮಾವಿನ ಕುಳಿರ್ವೊರ್ವರಿಯಲರ ಪಸೆಯೊಳ್ ಉಸಿರ್ದರ್ ಕೆಲಬರ್: **ಆದಿಪು,** ೧೧. ೮೦); ಹೇಳು (ಉಸಿರ್–ಭಾಷಣೇ: **ಶಬ್ದಮದ, ಧಾ,** ೫೪೯)

**ಉಸಿರ್ದಾಣ** – ಉಸಿರು ನಿಲ್ಲಿಸುವ ಜಾಗ, ಯತಿ (ಯತಿಯೆಂಬುದು ಉಸಿರ್ವ ತಾಣಂ: **ಕವಿರಾಮಾ,** ೧. ೭೧)

**ಉಸುರ್ವು** – ಹೆಚ್ಚಳ (ಮನಮಂ ತಪೋಧನರ ಪಾದಾಂತಿಕದೊಳ್ ನಿಜೆಸಿ ವ್ಯಾಮೋಹದ ಉಸುರ್ವಂ ಪತ್ತುವಿಡೆ ನುಡಿದು: **ಶಾಂತಿಪು,** ೪. ೮೨ ವ)

**ಉಳ್** – ಹೊಂದು (ಊಳ್ ಧಾತುವಿನ ಉಳ್–ಸತ್ತಾಯಾಂ ಎಂಬ ಸತ್ತಾರ್ಥದ ಧಾತುವಿನ: **ಶಬ್ದಮದ,** ೨೫೫ ಟೀಕೆ)

**ಉಳಿ** – ಅವಿತುಕೊ (ಇಂದೆ ಹಳಿಯುಂ ಗಡ ಕೂಡುವಂ ಆತನಂ ಗೆಲಲ್ ಬಂದಪುದೇ ಬಟೆಕ್ಕ ಅದುವೆ ಕಾರಣಮಾಗಿ ಉಳಿದಿರ್ದಂ ಅಂಧರಾಣ್ಣಂದನಂ: **ಪಂಪಭಾ,** ೧೩. ೭೫); ಕಲ್ಲು ಕತ್ತರಿಸುವ ಸಾಧನ (ವಜ್ರಕೀಟಂಗಳ್ ಕರ್ಣನೆರಡುಂ ತೊಡೆಯುಮಂ ಉಳಿಯನೂಡೆ ಕೊಡತಿಯೊಳ್ ಬೆಟ್ಟಿದಂತೆ ಅತ್ತಂ ಇತ್ತಂ ಉರ್ಚಿಪೋಗೆಯುಂ: **ಪಂಪಭಾ,** ೧. ೧೦೪ ವ)

**ಉಳಿನಯ** – ವಂಚನೆಯ ನಯ (ತಂದೆಯ ಲೆಕ್ಕಮೆಂದು ಉಳಿನಯಂಬೆರಸು ಆಂ ಬೆಸಕೆಯ್ವೆಂ: **ಹರಿವಂಶ,** ೨. ೮)

**ಉಳಿಸೆಂಡು** – ಚೆಂಡನ್ನು ಬಚ್ಚಿಟ್ಟು ಆಡುವ ಆಟ (ಒಡನಾಡಿಯುಂ ಒಡನೋದಿಯುಂ ಒಡವಳೆದುಂ ಗುಳ್ಳೆಗೊಟ್ಟಿ ಬಟ್ಟು ಉಳಿಸೆಂಡುಂ ಪೊಡೆಸೆಂಡು ಇವಂ ಆಡುತ್ತ ಒಡವಳೆದರ್ ತಮ್ಮೊಳೆಳಸೆ ತಂತಂಗೆಡೆಗಳ್: **ಪಂಪಭಾ,** ೨. ೩೦)

**ಉಳುಕ** – ಉಲ್ಕೆ (ಮಾಗಧಾವಾಸದೊಳ್ ಬಂದುಳುಕಂ ಬೀಳ್ವಂತೆ ಬಿರ್ದತ್ತಡಿಚಯದಮಿಳಾವಲ್ಲಭೋನ್ಮುಕ್ತಬಾಣಂ: **ವರ್ಧಮಾಪು,** ೯. ೯)

**ಉಳೂಕ** – ಗೂಬೆ (ಉಳೂಕವೃಂದಕೆ ಉಬ್ಬಸವೇಱೆ .. .. ವಸಿರುಹಮಿತ್ರಂ ಉದಯಪರ್ವತಮಂ ಭರದಿಂದಮೇಱಿದಂ: **ಧರ್ಮಪ,** ೩. ೧೨೨)

**ಉಳ್ಕ** – ಉಲ್ಕೆ (ಶೌರ್ಯಾಂಬುನಿಧಿ ತೊಟ್ಟಿಸಲೊಡಮಿರದಂಬರದಿಂದ ಉಳ್ಕುವುಳ್ಕಮಂ ಪೋಲ್ತು ಶರಂ: **ಆದಿಪು,** ೧೨. ೯೦)

**ಉಳ್ಕು** – ಪ್ರಕಾಶಿಸು (ಶೌರ್ಯಾಂಬುನಿಧಿ ತೊಟ್ಟಿಸಲೊಡಮಿರದಂಬರದಿಂದ ಉಳ್ಕುವುಳ್ಕಮಂ ಪೋಲ್ತು ಶರಂ: **ಆದಿಪು,** ೧೨. ೯೦); ಹಿಮ್ಮೆಟ್ಟು (ಸುರರ್ ಆ ಕಿನ್ನರರ್ ಉಳ್ಕಿದರ್ ದಿಗಧಿಪರ್ ಬೆಳ್ಕುತ್ತರ್: **ಕರ್ಣನೇಮಿ,** ೧೨. ೧೬೮); ಮುರಿ (ಭಂಗುರಂ ಉಳ್ಕುವಂತೆ ನರಜನ್ಮಂ ಅದಂ ಬಗೆದುಂ ವಿವಾಹಕಾರ್ಯಂಗಳ ಕಾಮಸೇನೆಗಳ .. .. ಆದರದೊಳ್ ಮನಮಂ ತೊಡರ್ಚಿ .. .. ಮಾಣ್ಬುದು ಮರುಳ್ತನಮಲ್ತೆ: **ಅಜಿತಪು,** ೬. ೪೭); ಪ್ರವಾಹವಾಗಿ ಹರಿ (ಜನಪತಿ ಕುಂಕುಮವಾರಿಯಂ ಅನುನಯದಿಂ ಪೊಯ್ಯೆ ರಯ್ಯಮಾಗಿರ್ದಳ್ ದೇವಿ ನಿಜಸ್ವಾಂತದೊಳ್ ಉಳ್ಕಿದ ಅನುರಾಗಂ ತನುವಿನಲ್ಲಿ ತಲೆದೋಱಿದವೊಲ್; **ಶಾಂತೀಶ್ವಪು,** ೧೦. ೧೭೪)

**ಉಳ್ಗರುಳ್** – ಒಳ ಕರುಳು (ತೋಡುವೆಂ ಒರ್ವನ ಒಳ್ಗರುಳಂ ಉರ್ವಿಗೆ ನೆತ್ತರನೆತ್ತಿ ಪೀರ್ದು ವಿರ್ದಾಡುವೆಂ ಒರ್ವನ ಊರುಗಳಂ ಎನ್ನ ಗದಾಶನಿಘಾತದಿಂದೆ ನುರ್ಗಾಡುವೆಂ: **ಪಂಪಭಾ,** ೯. ೨೪)

**ಉಳ್ವು** – ಉಳು (ನೊರೆವಿಂಡಂ ಮೀನುಂ ಉಳ್ವಂತಿರೆ .. .. ಚಂದ್ರೋದಯಮಂ ಅಬಲೆಯರ್ ಕಂಡು ಸೋಲ್ತಪ್ಪರ್: **ಲೀಲಾವತಿ,** ೧೨. ೩೨)

**ಉಳ್ಳಂಜಿಸು** – ಅಂಜಿಸು, ಭಯವುಂಟುಮಾಡು (ಪಲವುಂ ವಿದ್ಯೆ ಕೈಸಾರ್ಚಿ ಉಳ್ಳಂಜಿಸಿದೆಂ ದಿಕ್ಪಾಲರಂ: **ಪಂಪರಾ,** ೯. ೧೭೭)

**ಉಳ್ಳರೆಮುಗುಳ್** – ಒಳಗೆ ಅರ್ಧ ಮುಚ್ಚಿಕೊಳ್ಳು (ಲೋಚನಂಗಳ್ ಉಳ್ಳರೆಮುಗುಟ್ದೆಂಬುವೆತ್ತಿರೆ ಕರದ್ವಯಪಲ್ಲವಮಂಕದೊಳ್ ಮರಲ್ದಿರೆ: **ಆದಿಪು,** ೧೦. ೧೪)

**ಉಳ್ಳಲರ್** – ಚೆನ್ನಾಗಿ ಅರಳು (ಅಲರ್ದಂಭೋರುಹಷಂಡಂ ಉಳ್ಳಲರ್ದ ಚೆನ್ನೆಯ್ದಿಲ್ಗೊಳಂ: **ಆದಿಪು,** ೧. ೬೭); ಅರಳಿದ ಹೂವು (ಪೊದಳ್ದ ಪೂಗುಡಿ ಪಯೋಜಿನಿಗೆ ಉಳ್ಳರಲ್ ಇಂಪುವೆತ್ತ ಸಂಪಗೆಗೆ .. .. ಆಗೆ ಬಂದಂ .. .. ಮನೋಜ್ಞಮಾಧವಂ: **ರಾಜಶೇಖಿ,** ೧೦. ೩)

**ಉಳ್ಳಾಯ** – [ಉಳ್ಳ+ಆಯ] ಇರುವ ಸಾಮರ್ಥ್ಯ (ಶ್ರೀಯುವತಿಯಂ ಆ ವೀರಶ್ರೀಯುವತಿಗೆ ಸವತಿ ಮಾಟ್ಪೆನೆಂದು ಅರಿನೃಪರಂ ಉಳ್ಳಾಯವೆರಸು ಎಟೆದುಕೊಂಡು ಧರಾಯುವತಿಗೆ ನೆಗಟ್ದ ಹರಿಗನೊರ್ವನೆ ಗಂಡಂ: **ಪಂಪಭಾ,** ೧೧. ೧)

**ಉಳ್ಳಾಳು** – ದಂಡಿನಲ್ಲಿರುವ ಶೂರ (ಕಿರಾತರಾಜರ್ ತಮ್ಮ ಉಳ್ಳಾಳುಮಂ ಉರ್ಕಾಳುಮಂ ಒಳ್ಳಾಳುಮಂ ಒಡಗೊಂಡು ಬಂದು ತಾಗಿದರಾಗಳ್: **ಜೀವಸಂ,** ೩. ೪೦)

**ಉಳ್ಳಿ** – ಬೆಳ್ಳುಳ್ಳಿ (ಮಱೆದಪ್ಪೊಡಂ ಉಳ್ಳಿಯನಾಸ್ವಾದಿಸಿದೊಡೆ ಪಾತಕನಕ್ಕುಮಾತನೆಂಬರ್ ತಕ್ಕರ್: **ಸಮಯಪ,** ೧೪. ೧೪೨)

**ಉಳ್ಳುಡೆ** – ಒಳ ಉಡುಪು (ಅವಯವದಿಂದಮೆ ದೇವಾಂಗವಸ್ತ್ರದ ಉಳ್ಳುಡೆಯಂ ಆಕೆಯೋಸರಿಸುವ ಸೂಸುವ ಹಾರಲತೆಯನಳವಡಿಸುವ: **ಆದಿಪು,** ೯. ೩೬)

**ಉಳ್ಳೊಳ** – ಗದ್ದಲ (ಬೇಲಿಯ ಕೆಲದೊಳಲ್ಲದೆ ಪೆಱಗಣ ಉಲುಪಿಂಗಂ ಉಳ್ಳೊಳಕ್ಕಂ ಗೆಂಟಾಗಿ ಬೀಡಂ ಬಿಡಿಸಿ: **ಪಂಪಭಾ,** ೫, ೪೭ ವ)

**ಉಳ್ಳೋಳ** – ಕೋಲಾಹಲ, ಕ್ಷೋಭೆ (ದಳ್ಳಿಸಿ ಕುಕಿಲುತ್ತಂಬುಧಿಯ ಉಳ್ಳೋಳಂ ನೆಗೞೆ: **ಆದಿಪು,** ೧೩. ೫೩)

**ಉಱದರ್** – ಕಡಿಮೆಯಾದವರು (ನಿಮಗೆ ಅವರ್ ಏತಱಿಂದ ಉಱದರ್ ಎಂದು ಇಳಿಕೆಯ್ದಿರೊ ವಂಶವೀರ್ಯದಿಂ ಸಮನವರ್ಗಾರುಮಿಲ್ಲ: **ಪಂಪರಾ,** ೫. ೨೫)

**ಉಱದೆ** – [√ಉಱ] ಲಕ್ಷ್ಯಮಾಡದೆ (ಏವನೆಮಗೆಂಬ ಶೌರ್ಯಾವಷ್ಟಂಭದೊಳ್ವಂದಿರಿಂತು ಉಱದೆ ಇರೆ: **ಆದಿಪು,** ೧೪. ೨೯); ವಿಚಾರಮಾಡದೆ (ಕುಲಜರಂ ಉದ್ಧತರಂ ಭುಜಬಲಯುತರಂ ಹಿತರಂ ಈ ಸಭಾಮಧ್ಯದೊಳ್

ಅಗ್ಗಲಿಸಿದ ಮದದಿಂ ನಾಲಗೆ ಕುಲಮಂ ತುಬ್ಬುವವೊಲ್ ಉಱದೆ ನೀಂ ಕೆಡೆನುಡಿವೈ: **ಪಂಪಭಾ,** ೧೦. ೨೦); ಹೆಚ್ಚಾಗಿ (ಆಮೆ ಮುಖ್ಯ ನಾಯಕರ್ ಎನುತ್ತ ಆರಿಂ ಮುನ್ನಂ ಸೆರಗಂ ಪಾರದೆ ಹಸ್ತಪ್ರಹಸ್ತರ್ ಉಱದೆ ಒಡ್ಡಿರ್ದರ್: **ಪಂಪರಾ,** ೧೩. ೧೨)

**ಉಱೆಸು** – ಸಹಿಸಿಕೊ (ಉಱೆಸು–ಸಹನೇ: **ಶಬ್ದಮದ, ಧಾ,** ೬೮೨); ಮುಟ್ಟು (ತರುಣಾಱು ಶಬಕಂಧರಮಮಂ ನಖಮುಖದಿಂ ಉಱೆಸಿ ತುಱೆಸಿದವೊಲವಿಂ: **ಪುಷ್ಪದಂಪು,** ೧೪. ೧೯)

**ಉಱು** – ಹೊಂದು (ಅಱೆಯದೆ ತಂದೊಡಮೇಂ ಎಮ್ಮ ಎಱೆಯಂಗೆ ಅದಂ ಎಮ್ಮ ಕೆಯ್ಯೊಳಟ್ಟಿಂ ನೀಂ ಇಂತಱೆಯುತ್ತುಂ ಪೆಱರೊಡಮೆಯಂ ಉಱ್ ಸೆಱ್ವಿಡಿದಿರ್ಪಿರಿ ಇನ್ನರ್ ಉರ್ವಿಯೊಳ್ ಒಳರೇ: **ಪಂಪಭಾ,** ೮. ೧೮); ಗಮನಿಸು (ಅಬ್ಧಿಯೊಳ್ ಮಱ್ದು ನೀಂ ಉಱದಿರ್ದೊಡೆ ಬಟ್ಟೆಂ: **ಕರ್ಣನೇಮಿ,** ೧೧. ೯೫); ಪರಿಗಣಿಸು (ನಿಮ್ಮಂ ಎಮ್ಮರಸಂ ತನಗಾಳಾಗಿ ಸುಖಮಿರ್ಪುದೆಂದು ಬೆಸಸಿ ಅಟ್ಟಿದಂ ಇದು ನಿಮಗೆ ಉಱುವ ಕಜ್ಜಂ: **ಪಂಪರಾ,** ೮. ೧೭ ವ)

**ಉಱುಂಬು** – ದಂಡೆತ್ತಿಹೋಗು (ಉಱುಂಗು–ಯುದ್ಧಕ್ರಮಗಮನೇ: **ಶಬ್ದಮದ, ಧಾ,** ೪೭೭)

**ಉಱುಗಿಸು** – ಬಾಗಿಸು (ಉರ್ಬುತೆ ಪುರ್ಬನೇಱೆಸುತ್ತ ಉಱುಗಿಸಿ ನೋಡಿ ದಾಂಟಲನುಗೇಯ್ಯುತೆ: **ಗಿರಿಜಾಕ,** ೫. ೨೦)

**ಉಱುಗು** – ಬಾಗು, ವಕ್ರವಾಗು (ಭಯಮಱೆಯದ ಕಲಿಯುಂ ಚಾಗಿಯುಂ ಎನಿಸದೆ ನಾಡೆ ಲೋಭಿಯುಂ ಪಂದೆಯುಂ ಆಗಿಯೆ ಬಾಟ್ವಂಗಲ್ಲದೆ ಸೂಳಿಯ ಕಣ್ ಪಾಸಗೆಯ ಕಣ್ಣುಂ ಏಂ ಉಱುಗುಗುಮೇ: **ಪಂಪಭಾ,** ೬. ೭೩)

**ಉಱುಮಿಕೆ** – ಸಾಮರ್ಥ್ಯ (ನಿನ್ನ ಸುತನೊಳೆನ್ನಯ ಸುತೆಯಂ ಕಟುಪಿ ಕೂಡಿರ್ದಾ ನಿನ್ನುಱುಮಿಕೆಯಂ ತೋಱೆದೈ: **ಕರ್ಣನೇಮಿ,** ೪. ೪೨)

**ಉಱುಮಾಱು** – ಅವಿವೇಕ (ದಿವ್ಯಧ್ವನಿ ಸಾರಮಂ ಬಿಸುಟನಪ್ಪೊಡೆ ಉಱುಮಾಱಲ್ತೇ: **ಶಾಂತಿಪು,** ೧೧. ೯೦)

**ಉಱುವಱೆವಂ** – ವಿಶೇಷ ಜ್ಞಾನಿ (ದುರಿತದ ಬೇರೊಳ್ ನೆಱ್ ಬೆನ್ನೀರಂ ಪೊಯ್ದುವಂ ಉಱುವಱೆವಂ: **ಸಮಯಪ,** ೧೫. ೮೭)

**ಉಱುವಾಱು** – ವಕ್ರವಾಗಿ ಹಾರು; ವಿನಿಮಯ (ಕರಂ ಉಱುವಾಱು ದುಗ್ಧ ಜಲ ವಿಕ್ರಯದಿಂ ದೊರೆಕೊಂಡುದೀ ಜಿನೇಶ್ವರನಳಕಂಗಳೆಂಬ ಹರಿನೀಲಚಯಂಗಳ ಲಾಭಂ: **ಅಜಿತಪು,** ೬. ೧೨೮)

**ಉಱುವಾಟ್** – ಈಗಿನ ಬದುಕು (ಅಟ್ಟ ಬೀಜಭೋಜಿಗಳವೊಲಪ್ಪುದು ಉಱುವಾಟ್ಮಗೆ ಎಂಬುದುಂ: **ಕರ್ಣನೇಮಿ,** ೧೨. ೩೧)

**ಉಱುವೆಸ** – ಹಿತವಾದ ಉಪಚಾರ (ಅಱುವರುಮಂ ಜಿನಾಂಬಿಕೆಗೆ ಉಱುವೆಸಂಗೆಯಲ್ಕೆ ನಿಯಮಿಸಿಯುಂ: **ಕರ್ಣನೇಮಿ,** ೮. ೮೨ ವ)

**ಉಱುಸೆಱ್ಗೆಯ್** – ಬಲವಾದ ಕಟ್ಟು (ಮೇಲುದಱ ಸೆಱಂಗಂ ಉಱುಸೆಱ್ಗೆಯ್ದು ಪೊಱಪೊಣ್ಮುವ ಅಪರಭಾಗ ಶರೀರಕಾಂತಿ: **ಮಲ್ಲಿನಾಪು,** ೪. ೬೪ ವ)

**ಉಱ್** – ಅತಿಶಯವಾಗಿ (ಕಾಯ್ವ ಅಟಲ್ ಉಱ್ ಜತುಗೃಹದೊಳಗೆ ಅಯ್ವರುಮಂ ಮಂತ್ರಬಲದೆ ಸುಟ್ಟೊಡಂ ಅವರಂ ದೆಯ್ವಬಲಮೊಂದೆ ಕಾದುದು ದೆಯ್ವಮಂ ಆರಯ್ಯೆ ಮೀಱೆ ಬಾಟಿಲ್ ನೆಱ್ವರ್: **ಪಂಪಭಾ,** ೪. ೩)

**ಉಟ್** – ನೇಗಿಲಿನಿಂದ ಅಗೆ, ಉಳು (ಕುಡುಗೋಲಂ ಕೂಱೆಗೆಯಂ ಕೊಡಲಿ ಕುರುಂಜಿಗೆಯಂ ಉಟುವ ಪರಗುವ ಕಱುಪಿಂ ಬಿಡದೆಯಗುಟ್ದಾ ಮುಟ್ಟಂ ಕುಡರ್ ಎರವಂ ಪೆಱರ್ಗೆ: **ಸಮಯಪ,** ೫. ೧೭)

**ಉಟೆ** – ಬಿಡು (ಭವದಾನನಕ್ಕೆ ಸೋಲ್ತು ಆತ್ಮವಿಲಾಸಮಂ ಉಟೆದ ತೆಱದೆ ರುಚಿಗೆಟ್ಟು ದಿಗಂತ ವಿಲಂಬಿಬಿಂಬಂ ಅಂಬುರುಹವೈರದಿಂದ ಉಡುಪಂ ಉಡುಪನಾದಂತಾದಂ: **ಶಾಂತಿಪು,** ೫. ೮೮); ಹೊರತಾಗು (ಪಲಂಬರ್ ಪರದರ್ ಸತ್ತರ್ ಉಟೆದರೆಲ್ಲಂ ಓಡಿ ಕೆಟ್ಟೊಡೆ: **ವಡ್ಡಾರಾ,** ಪು. ೭೬, ಸಾ. ೧೩); ಮೀರು (ಮನನಿಸದೆ ತಂದೆಯಂ ಪೊಟಲಂ ನೆಱ್ ಕಾಡುತ್ತುಂ ಅಟಲಿಸುತ್ತುಂ ದೂರ್ತಿದಂ ನೃಪಸುತನಿರೆ ಮತ್ತಂ ತನ್ನಾಣೆಯಂ ಉಟೆದುದರ್ಕೆ ಮುಳಿದು ನರೇಂದ್ರಂ: **ಧರ್ಮಾಮೃ,** ೨. ೫೯) ಬದುಕಿರು (ಭೂಪೋತ್ತಮನ ಆಜ್ಞೆಯಂ ತಲೆಯೊಳಾಂತು ಪದಾನತನಾಗಿ ಕಪ್ಪಮಂ ತೆತ್ತು ಉಟೆ, ಗಂಡುಗೆಯ್ಯದೆ ಇಱೆವಿಟ್ಟಿಗೆ ಜಟ್ಟಿಗನಾಗಿ ಬಾಟ್ವುದು ಅತ್ಯುತ್ತಮ ಪಕ್ಷಂ: **ಪಂಪರಾ,** ೮. ೨೬); ಬಿಟ್ಟದ್ದು, ಲಾಭವಾದುದು (ನಾಲ್ಕರ್ಥಕ್ಕೆ: ಉಟೆದುದೆಂದು ಬಿಟ್ಟುದು: ಶಬ್ದಮದ, ೩೩ ವೃತ್ತಿ, ೧೭೭); ಶಕುನದ ಹಕ್ಕಿ (ಅದಲ್ಲದೆಯುಂ ಪ್ರಯಾಣಶಕುನದೊಳ್ ಉಟೆಯನೊಂದಂ ಕಂಡಂತೆ ಕಳಿಯೆ ತಡೆಯದೆ ಗರವೊಡೆದಂತೆ ಮೇಲ್ವಾಯ್ದವಪ್ಪೊಡೆ, ತಮ್ಮ ಮೇಲೆ ತಾವೆ ಮರಂಗಡಿದರೆಂಬಂತಕ್ಕುಂ: **ಪಂಚತಂತ್ರ,** ೨೮೦ ವ)

**ಉಟೆಕು** – ಉಳಿದದ್ದು (ಒಂದರ್ಥಕ್ಕೆ: ಉಟೆಕು, ಉಟೆವು, ಕಟೆವು ಎಂಬಿವು ಭಾವವಾಚಿಗಳ್: **ಶಬ್ದಮದ,** ೩೩ ವೃತ್ತಿ ೧೫)

**ಉಟೆಗಿರ್** – ತಪಸ್ಸುಮಾಡು (ಪರಿದು ವಿಮಾನದ ಓವರಿಗಳೊಳ್ ಪಡಿಗೆತ್ತು ಉರಿಗಿರ್ಪನೋ .. .. ಏತೆಱದಿಂದೆ ವಂಚಿಪೆಂ: **ಆಚವರ್ಧ,** ೧೦. ೫೭)

**ಉಟೆತ** – ಕತ್ತಿಕಾಳಗದ ಒಂದು ವರಸೆ (ಆಗಳಿರ್ವಲದ ಕಡಿತಲೆಕಾಱರ್ ಅಲಗಿನೊಳ್ ಪಳಂಚೆ ತಾಗಿ ನಿರ್ಘಾತ ಉಪ್ಪರಂ ತಾಳವಟ್ಟಂ ಅವಿತಂ ಉಟೆತಂ ಎಂಬ ಪಲವುಂ ತೆಱದದ ಇಱೆವ ಬಿನ್ನಣದೊಳ್ ನೆಱ್ದು ತಾಳುಂತಟ್ಟುಂ ಪೊಯ್ಯೆ: **ಪಂಪರಾ,** ೧೩. ೫೪ ವ)

**ಉಟೆಪು** – ಇರುವಂತೆ ಮಾಡು; ಬದುಕಿಸು; ಮುಚ್ಚುಮರೆ ಮಾಡು (ಏಕುಟೆಪಿ ಪೇಟ್ವೆ ಮಗಳೇ ಪ್ರಾಕಟಮಾಗಱೆಯೆ ಪೇಟು: **ಕರ್ಣನೇಮಿ,** ೮. ೬೫)

**ಉಟೆವು** – ಉಳಿಯುವಿಕೆ (ಎಮ್ಮ ಸಾವುಂ ಉಟೆವುಂ ದೈವೇಚ್ಛೆಯಾಯ್ತಾಗದೇ: **ಪಂಪಭಾ,** ೨. ೮೯)

**ಉಟೆಸು** – ಸಹಿಸು (ಉಟೆಸು–ಸಹನೇ: **ಶಬ್ದಮದ, ಧಾ,** ೬೮೨)

**ಉಟುಗ** – ಶಕುನದ ಹಕ್ಕಿ (ಉಟುಗನೆಂದು ಶಕುನದ ಹಕ್ಕಿ: ಒಂದರ್ಥಕ್ಕೆ: **ಶಬ್ದಮದ,** ೩೩ ವೃತ್ತಿ ೧೬)

**ಉಟುಗಿದಂ** – ಪ್ರೀತಿಸಿದವನು ೯ಉಟುಗುದನೆಂದನೆಂದು ಕೂರ್ತಂ: **ಶಬ್ದಮದ,** ಪ್ರಸಾ, ೩೫)

**ಉಟುಗಿಸು** – ಒಲಿಸು (ನಿನ್ನಂ ಉಟುಗಿಸಲುಂ ಆಱೆಯೊಳ್ ಎನ್ನಂ ಬೆಂಕೊಂಡು ಕಾದಲುಂ ಬಂದು ಈಗಳ್ ಬಿನ್ನನೆ

ಮೊಗದಿಂ ಬೀರರ್ ಬೆನ್ನಿತ್ತುದಂ ಇನಿಸು ನೋಡ ಸರಸಿಜಮುಖೀ: **ಪಂಪಭಾ,** ೩. ೭೩)

**ಉಱುಗು** – ಪ್ರೀತಿಸು (ಬೊಟ್ಟೆಯನುಱುಗಿಸಲ್ ಅಳವಡಿಸೋಲಿಯಿಸಿ ಪಾಱನದಿರ್ಪಲ್: **ವರ್ಧಮಾಪು,** ೮. ೯೪); ಪ್ರೀತಿ (ಉಳುಗು ಎಂದು ಬೇಟಂ: ಒಂದರ್ಥಕ್ಕೆ: **ಶಬ್ದಮದ,** ೩೩ ವೃತ್ತಿ ೧೫)

**ಉಱುಮೆ** – ಉಳುವ ಕೆಲಸ, ಬೇಸಾಯ (ಕೆಯ್ಯುಱುಮೆಯಂತೆ ಕೆಯ್ಯೊಳ್ ಪದಂಬಡೆದಂತೆ ಬಿತ್ತಣದಂತೆ ರಾಶಿಯಂತೆ: **ಧರ್ಮಾಮೃ,** ೧೨. ೧೪ ವ)

**ಉಱಿಕ್ಕೆ** – ಉಱುಮೆ (ಉಱ್ಕೆ ಎಂದು ಉಱ್ವ ಭಾವಂ: **ಶಬ್ದಮದ,** ೩೩, ವೃತ್ತಿ, ಒಂದರ್ಥಕ್ಕೆ, ೧೯)

**ಉಟ್ಗೆ** – ಒಂದು ನೋಂಪಿ (ಉಟ್ಗೆ [ಉಗಿ] ಎಂದೊಂದು ನೋಫಿ, **ಶಬ್ದಮದ,** ಪ್ರಸಾ, ೩೪)

**ಉಟ್ಗು** – ಅನುರಾಗಿಸು (ತನ್ನ ಮೇಳದಾಕೆಗಳಂ ಬೆಸಗೊಂಡೊಡೆ ಆಕೆಗಳ್ ಆಕೆಯ ಪತ್ತಿದ ಕಣ್ಣುಮಂ ಉಟ್ಗಿದ ಮನಮುಮಂ ಜೋಲ್ದ ನಾಣುಮಂ ನೀಳ್ದ ಸರಮುಮಂ ಅಱಿದು: **ಪಂಪಭಾ,** ೪. ೪೦)

## ಊ

**ಊಟ** – ಆಹಾರ ತಿನ್ನುವುದು (ಘೃತಮಿಲ್ಲದ ಊಟಮೇನೊಪ್ಪುಗುಮೇ: **ಅಜಿತಪು,** ೬. ೯೩)

**ಊಡು** – ಫಲ ನೀಡು (ಮುನ್ನೆರಪಿದುಭಯಕರ್ಮಂ ತನ್ನಂ ಪಿಡಿದೂಡುತಿರ್ಕುಂ ಇಂ ಜೋಯಿಸವೇಕೆ: **ಸಮಯಪ,** ೪. ೮); ತಿನ್ನಿಸು (ಮುನ್ನಿನ ದಿವಸದೊಳಗಣ ಪರಿಜನಮೆಲ್ಲಮಂ ಪಾರ್ವರಂ ಊಡುವ ನೆವದೊಳೆ ಪೊಱಮಡಿಸಿ: **ಪಂಪಭಾ,** ೩. ೪ ವ); ಲೇಪಿಸು (ಆ ನೃಪರೂಪಚಂದ್ರನಂತರದೊಳೆ ಮಾಡಿ ಕೇಸಡಿಗಳಂ ಹರಿಚಂದನದಿಂದಂ ಊಡಿ ಕೇಸರದ ತುಱುಂಬನಿಕ್ಕಿ: **ಕಾದಂಸಂ,** ೮. ೫೨); ಆಧಾರ (ಭೋಜನಕ್ರಿಯಾಯಾಂ ಆಧಾರೇಚ (**ಶಬ್ದಮದ, ಧಾ,** ೨೭೮)

**ಊಡುಗೊಳ್** – ಮರೆಮಾಚು (ನೀಡುಂ ಊಡುಗೊಂಡೋಡಿ ತತ್ ಪಿತೃವನಾಭ್ಯಂತರದೊಳಿರ್ದ ಭೂರುಹಮನೇಱೇ: **ಕರ್ಣನೇಮಿ,** ೩. ೧೬೧ ವ)

**ಊಣ** – ಊನ, ಕೊರತೆ (ಜಡಮತಿಯೊಳೆನ್ನೊಳ್ ಆವುದಮೂಣಂ ನೋಡದೆ: **ಪುಷ್ಪದಂಪು,** ೫. ೧೦೩)

**ಊದು** – ಬಾಯಿಂದ ಗಾಳಿ ಹೊರಬೀಳಿಸು, ಗಾಳಿ ಬೀಸು (ಸೊಡರ್ಗುಡಿ ಒಯ್ಯನಾಗೆ ಪೊಸಮಲ್ಲಿಗೆ ಕಂಪುನಾಱೆ ತಣ್ಪಿಡಿದ ಎಲರ್ ಊದೆ ಗಾವರದ ಮೆಲ್ಲುಲಿ ತುಂಬಿಯ ಗಾವರಂಗಳ ಗೆಡೆಗೊಳೆ: **ಪಂಪಭಾ,** ೪. ೧೧೦)

**ಊನ** – ಕೊರತೆ (ತನಗಿನಿತು ಊನಮಾಗೆ ಮೆಱೆದಾ ಭುಜವೀರ್ಯಮನಾಂತು ಮಾಣ್ದುದೇಂ: **ಪಂಪಭಾ,** ೧೨. ೧೯೭)

**ಊನತ್ವ** – ನ್ಯೂನತೆ, ಕೊರತೆ (ಸಾಹಸದ ನಿಮ್ಮಯ್ವರುಂ ಮಕ್ಕಳಾಗಿರೆಯುಂ ನಿಚ್ಚಲುಂ ಇಂದ್ರನೋಲಗದೊಳ್ ಅಂತಾ ಪಾಂಡುರಾಜಂಗೆ ನಿರ್ನೆರಮಪ್ಪ ಒಂದಪಮಾನದಿಂದಂ ಇನಿತೊಂದು ಊನತ್ವಮಪ್ಪಂತುಟೇ: **ಪಂಪಭಾ,** ೬. ೧೭)

**ಊರ್** – ವಾಸಿಸುವ ಸ್ಥಳ (ತನಗದಂದೊಂದು ಊರ್ ನಾಮದೊಳಂ ವೆಂಗಿಪಱು: **ಪಂಪಭಾ,** ೧೪. ೪೦)

**ಊರಱುವು** – ಊರಿನ ನಾಶ, ಊರಿಗೆ ಊರೇ ಸೂರೆಗೊಳ್ಳುವುದು (ತುಱುಗೋಳೊಳ್ ಪೆಣ್ಬುಯ್ಯಲೊಳ್ ಎಱೆವೆಸದೊಳ್ ನಂಟನ ಎಡಱೊಳ್ ಊರಱುವಿನೊಳಂ ತಱಿಸಂದು ಗಂಡುತನಮನೆ ನೆಱುಪದವಂ ಗಂಡನಲ್ಲಂ ಎಂತುಂ ಷಂಡಂ: **ಗದಾಯು,** ೨. ೨೪)

**ಊರಾವು** – ಊರಿನ ಹಸು (ಕಾಟ್ವಿಲಸುಂ ಊರ ಪಲಸುಂ ಕಡಾವುಂ ಊರಾವುಂ: **ಧರ್ಮಾಮೃ,** ೯. ೪೧ ವ)

**ಊರಿಚ** – ದಡ್ಡ, ಅಸಂಸ್ಕೃತ (ಇದೇಕೆ ಬಿಕ್ಕಿ ಬಿರಿದು ಅಟ್ಟಿಪೆ ಎಂದಂ ಅದೊರ್ವಂ ಊರಿಚಂ: **ಲೀಲಾವತಿ,** ೨. ೧೧೯)

**ಊರು** – ತೊಡೆ (ತೋಡುವೆಂ ಒರ್ವನ ಒಳ್ಗರುಳಂ ಉರ್ವಿಗೆ ನೆತ್ತರನೆತ್ತಿ ಪೀರ್ದು ವಿರ್ದಾಡುವೆಂ ಒರ್ವನ ಊರುಗಳಂ ಎನ್ನ ಗದಾಶನಿಘಾತದಿಂದೆ ನುರ್ಗಾಡುವೆಂ: **ಪಂಪಭಾ,** ೯. ೨೪)

**ಊರುಕ್ಷತ** – ತೊಡೆಯ ಗಾಯ (ಅತಿವಿಶದವಿಶಾಲ ಊರುಕ್ಷತದಿಂದೊಱೆದನಿತು ಜಡೆಯುಮಂ ನಾಂದಿ ಮನಃಕ್ಷತದೊಡನೆ ಎಟ್ಟರಿಸಿದುದು ಉತ್ಥಿತಮಾ ವಂದಸ್ರಮಿಶ್ರಗಂಧಂ ಮುನಿಯಂ: **ಪಂಪಭಾ,** ೧. ೧೦೫)

**ಊರುದಘ್ನ** – ತೊಡೆ ಮುಳುಗುವಷ್ಟು ಮಟ್ಟ (ಪೆಣ್ಬಡೆ ನಿಂದುದು ಜಾನುದಘ್ನ ಊರುದರ್ಘನ ಕಟಿದಘ್ನ ನಾಭಿದಘ್ನ ಸ್ಥಳದೊಳ್: **ಜಗನ್ನಾವಿ,** ೧೪. ೯೫)

**ಊರುದ್ವಯನ** – ತೊಡೆ ಮುಳುಗುವಷ್ಟು ಮಟ್ಟ (ಲಾವಣ್ಯರಸಂ ತೆಕ್ಕನೆ ತೀವಿದ ತಿಳಿಗೊಳನ ಪಯಸಂ ಊರುದ್ವಯನಂ: **ಅನಂತಪು,** ೭. ೩೫)

**ಊರುಬ್ಬೆ** – ಊರಿಗೆ ಬಂದ ತೊಂದರೆ (ಊರುಬ್ಬೆಯಾದ ತಮ್ಮನ ಅಗುರ್ವಿನ ಅಗುರ್ವಿಂಗೆ ಉಬ್ಬೆಗಂಬಟ್ಟು .. .. ಮೆಲ್ಲನಿಂತೆಂದಂ: **ನೇಮಿನಾಪು,** ೫. ೨ ವ)

**ಊರುಭಂಗ** – ತೊಡೆ ಮುರಿಯುವಿಕೆ (ಕೃಷ್ಣೆಗಿಂದು ಧಮ್ಮಿಲ್ಲಮಂ ಇಂಬಿನಿಂ ಮುಡಿಸಿ ಕೌರವನಾಯಕನ ಊರುಭಂಗಮೊಂದಲ್ಲದೆ ಎಲ್ಲಮಂ ನೆಱಪಿದೆಂ ಗಡಂ ಓಳಿಯೆ ಕೇಳಿಂ ಎಲ್ಲರುಂ: **ಪಂಪಭಾ,** ೧೨. ೧೬೧)

**ಊರುಯುಗ** – ಊರುದ್ವಯ, ಎರಡು ತೊಡೆಗಳು (ಭವತ್ ಊರುಯುಗಂಗಳಂ ಆಜಿರಂಗದೊಳ್ ಗಿಜಿಬಿಜಿಮಾಡಲೆಂದು ಅವನ ಪೂಣ್ದುದು ನಿಕ್ಕುವಂ ಆಗದಿರ್ಕುಮೇ: **ಪಂಪಭಾ,** ೯. ೫೨)

**ಊರೆಳ್ಳು** – ಬೇಸಾಯದಿಂದ ಬೆಳೆದ ಎಳ್ಳು (ಕಾಡೆಳ್ಳುಂ ಊರೆಳ್ಳುಂ ಎಂತು ಲೋಕದೊಳ್ ಒಳವು: **ಧರ್ಮಾಮೃ,** ೯. ೪೧ ವ)

**ಊರೇಱು** – ಬೇರೆ ಊರಿಗೆ ವಲಸೆ ಹೋಗು (ಊರೇಱಲ್ ಮನೆ ಮಾಡಲ್ಕೆ ಆರಂಬಂಗೆಯ್ಯಲ್ಕೆಟ್ಟು: **ಕಾವ್ಯಾವಲೋ,** ೨೧೫)

**ಊರ್ಜ** – ಕಾರ್ತಿಕ ಮಾಸ (ಏವೊಗಟ್ವೆಂ ಊರ್ಜಶ್ರೀಯ ಬೆಳ್ದಿಂಗಳಂ: **ಜಗನ್ನಾವಿ,** ೪. ೭೪)

**ಊರ್ಜಿತ** – ಹೆಚ್ಚಿದ (ವಿಕ್ರಮಪುರವೆಂಬುದುಂ ಅಗ್ರಹಾರ ಸಂಪತ್ಪದವಿಗಳೊಳಂ ಅಗ್ರಗಣ್ಯಂ ಊರ್ಜಿತಪುಣ್ಯಂ: **ಪಂಪಭಾ,** ೧೪. ೪೧)

**ಊರ್ಜಿತತೇಜ** – ಹೆಚ್ಚಿನ ತೇಜಸ್ಸುಳ್ಳವನು (ಲಳಿತೆಯ ಗರ್ಭದೊಳಗಿರ್ದಂ ಊರ್ಜಿತತೇಜಂ: **ಪುಷ್ಪದಂಪು,** ೯. ೧೧೫)

**ಊರ್ಡಂಗುರ** – ಊರಿನಲ್ಲಿ ಹಾಕುವ ಡಂಗುರ (ಮಱೆಯಂ ಕಾಲನಿದೇಕೆ ಮೈಮಱವಿರೆಂದು ಊರ್ಡಂಗುರಂ ಪೊಯ್ವವಲ್ ಪಱೆಪೊಯ್ದು: **ಅನಂತಪು,** ೯. ೨೧)

**ಊರ್ಣನಾಭ** – ಜೇಡರ ಹುಳು (ಲೂತಾಹ್ವಯಂ ಊರ್ಣನಾಭಂ: **ಅಭಿಧಾವ,** ೧. ೯. ೮)

**ಊರ್ಣೆ** – ಹುಬ್ಬಿನ ಕೂದಲು (ಪೆಱನೊಸಲೊಳ್ ಬಿಸತಂತುವ ತೆಱದಿಂ ಮಿಱುಗುವುದು ಊರ್ಣೆ: **ಕಾದಂಬ,** ೨. ೧೮೯)

**ಊರ್ಧ್ವಗ** – ಮೇಲೆ ವ್ಯಾಪಿಸಿದ (ವಾಸುದೇವ ಬಲದೇವರೊಳ್ ಒರ್ವಂ ಅಧೋಗಂ ಒರ್ವಂ ಊರ್ಧ್ವೋಗಂ ಆದೊಂ: **ಶಾಂತಿಪು,** ೪. ೧೧೧)

**ಊರ್ಧ್ವಗಾಂಶು** – ಮೇಲೆ ಹರಡುವ ಕಿರಣ (ಉಷ್ಣಾಂಶುವಿನ ಊರ್ಧ್ವಗಾಂಶುನಿವಹಂ ಮೆಯ್ಯಿಟ್ಟು ಅಲರ್ಚುತ್ತುಂ ಇರ್ಪುದು: **ಪಂಪಭಾ,** ೪. ೨೨)

**ಊರ್ಧ್ವಜ್ವಲನ** – ಮೇಲ್ಮುಖವಾಗಿ ಉರಿಯುವುದು (ಎಱಗುವುದು ಊರ್ಧ್ವಜ್ವಲನಮೆ ತೆಱನೆನಿಸುವ ದೀಪವರ್ತಿ ನಿಧಿಗೆ: **ಪಂಪರಾ,** ೬. ೧೩೫)

**ಊರ್ಧ್ವಬಾಹುವ್ರತಿ** – ಕೈಗಳನ್ನು ಮೇಲೆ ಎತ್ತಿ ಹಿಡಿದುಕೊಂಡು ತಪಸ್ಸು ಮಾಡುವವನು (ಸಂಸಾರಸಾಗರಮನೀಯಂದದಿಂ ದಾಂಟುವುದೆಂದು ತೋಱುವಂದದಿಂದೊಂದೆ ಕಾಲೊಳ್ ನಿಂದಿರ್ದೇಕಪಾದ ವ್ರತಸ್ಥರುಮಂ: **ಪಂಚತಂತ್ರ,** ೧೯೦ ವ)

**ಊರ್ಧ್ವಯಾನ** – ಗಗನಯಾನ (ಮಹೀತಳಂ ಅಹಿಲೋಕದಂತೆಸೆದುದಾ ಜಗತೀಪತಿಗೆ ಊರ್ಧ್ವಯಾನದೊಳ್: **ನೇಮಿನಾಪು,** ೬. ೩)

**ಊರ್ಧ್ವರೇತ** – ವೀರ್ಯವನ್ನು ತಡೆಗಟ್ಟಿರುವವನು (ನೆರೆದು ಊರ್ಧ್ವರೇತದೊಳ್ ಪುರುಹಿರಣ್ಯರೇತೋತಿತೀವ್ರದೊಳ್ .. .. ಮುನಿವರನೊಳ್: **ಕವಿರಾಮಾ,** ೧. ೬೩)

**ಊರ್ಧ್ವಲೋಕ** – ಮೇಲಿನ ಲೋಕ; [ಜೈನ] ಮೇಲುಗಡೆಯ ಸ್ವರ್ಗಗಳಲ್ಲಿ ಕೊನೆಯದು (ಮಧ್ಯಲೋಕಮೆಸೆದಿರ್ದಾ ಚೂಳಿಕಾಭಾಗದಾದಲೆಯೊಳ್ ನಿಂದಪುದು ಊರ್ಧರ್ವಲೋಕಮೆನೆ ಮೂಲೋಕಕ್ಕೆ ಪೆಂಪಿಂದ ಅಂಗುದಲೆಯಾಗಿರ್ದುದು: **ಆದಿಪು,** ೧. ೫೦)

**ಊರ್ಮಿ** – ದೊಡ್ಡ ತೆರೆ, ಅಲೆ (ಇದಿರೊಳ್ ನಿಂದೊಡೆ ವಜ್ರಿ ಸೈರಿಸಂ ಇರಲ್ವೇಡ ಎಮ್ಮೊಳೊಳ್ವೊಕ್ಕು ನಿಲ್ವುದು ನೀಂ ಎಂದು ಕಡಂಗಿ ಕಾಲ್ವಿಡಿವವೋಲ್ ತನ್ನೂರ್ಮಿಗಳ್ ಬಂದುವು: **ಪಂಪಭಾ,** ೪. ೨೪)

**ಊರ್ಮಿಕಾ[ಕೆ]** – ಉಂಗುರ (ರತ್ನಯುಕ್ತ ಊರ್ಮಿಕಾಬಂಧುರಂ ಈ ವಕ್ತ್ರೇಂದುಬಿಂಬಂ ಮೆಱೆವುದು ಅರಿದೇ: **ರಾಜಶೇವಿ,** ೮. ೪೧); ವಿಷಾದ

**ಊರ್ಮಿಮಾಳಿನಿ** – ಅಲೆಗಳ ಮಾಲೆಯುಳ್ಳದ್ದು, ನದಿ (ಮೆಲ್ಲನುಗೆ ತೇಂಕುವ ಪೂವಿನ ಸಂಕರಂಗಳಂ ನೂಂಕುವುವು ಊರ್ಮಿಮಾಳಿನಿಯ ತುಂಗತರತ್ತರಳೋರ್ಮಿಮಾಲೆಗಳ್: **ಆದಿಪು,** ೧. ೬೧)

**ಊರ್ಮೆ** – ಆಧಿಕ್ಯ, ಶ್ರೇಷ್ಠತೆ (ಸೊಗಯಿಸುವ ತಮ್ಮ ಜವ್ವನದ ತಮ್ಮ ವಿಭೂತಿಯ ತಮ್ಮ ತಮ್ಮ ಚೆಲ್ವುಗಳ ವಿಲಾಸದ ಊರ್ಮೆಗಳೊಳ್ ಆವೆವು ಆಗಿಪೆವು: **ಪಂಪಭಾ,** ೧. ೧೦೬)

**ಊರ್ವೇಲಿ** – ಊರ ಸುತ್ತಣ ಬೇಲಿ (ರೇಫೆಗೆ ದ್ವಿತ್ವಂ: ನೀರ್ಗ್ಗಿಚ್ಚು, ಊರ್ವ್ವೇಲಿ, ನೀರ್ವ್ವಾನಸೆ: **ಶಬ್ದಮದ,** ೧೯೫, ಪ್ರ)

**ಊಷರ** – ಬಂಜರುಭೂಮಿ (ಆ ಪೊಟ್ಟೆರೆಯೊಳ್ ಕಣ್ದೆರೆದತ್ತು ಊಷರ ಶಯ್ಯಾಧೂಮ್ರ ರೋಮಹರಿಣಸಮೂಹಂ: **ಕಾದಂಬ,** ೧. ೧೨೫)

**ಊಷ್ಮ** – ತಾಪ, ಬೆಂಕಿ (ಕುಲಕ್ರಯಾತಪ್ರತಾಪ ಊಷ್ಮಮಂ ಪತ್ತುವಿಡುವರಾತಿಗಳ ಸಂಖ್ಯೆಯೊಳಂ: **ಆದಿಪು,** ೧೪. ೮೪ ವ)

**ಊಳ್** – ಗಟ್ಟಿಯಾಗಿ ಶಬ್ದಮಾಡು (ತಳಿರೊಳ್ಗೊಂಬಿನೊಳ್ ಊಳ್ವ ಕೋಕಿಳಕುಳಂ ಪೂಗೊಂಬಿನೊಳ್ ಪಾಡುತಿರ್ಪಳಿವೃಂದಂ: **ಆದಿಪು,** ೧೧. ೯೬); ನಾಯಿನರಿಗಳ ಧ್ವನಿ (ನೆತ್ತರಂ ಪಡೆಯದೆ ಆಕಾಶಕ್ಕೆ ಬಾಯಂ ತೆಱೆದು ಊಳ್ವ ಬಳ್ಳುಗಳುಮಂ ನರವುಮಂ ಬರಿಯುಮಂ ಪತ್ತಿ ತೆಗೆದು ಪೆಡಸಾರ್ವ ನರಿಗಳುಮಂ ತಾನೆ ಸೋದು: **ಪಂಪಭಾ,** ೧೩. ೫೬ ವ); ನಿಂದಿಸು (ಅದನಜ್ಞಾನಿ ಜನಂಗಳ್ ಪದೆದೂಳ್ವರ್: **ಕರ್ಣನೇಮಿ,** ೭. ೮೧)

**ಊಳಿಕ್ಕು** – ಕೂಗಿಕೊ (ಅಸಿತಪತ್ರವನದೊಳ್ ಊಳಿಕ್ಕೆ ಗುರ್ದುವುದುಂ: **ಸುಕುಮಾಚ,** ೧೧. ೪೭ ವ)

**ಊಳಿಗವಾಗು** – ಒಡೆತನದಲ್ಲಿರು (ಅರಸರ ಕಾಪಿನ ಮೊಲನಂ ಪೊಕ್ಕುವೆಂದು ಉಂಡಿಗೆಯೊತ್ತಿಕೊಳುತ್ತುಂ ಊಟಿಗವಾದೆಡೆಗಳೊಳ್ ಝೂಳೆಯಂಗೊಳುತ್ತುಂ: **ಸುಕುಮಾಚ,** ೭. ೩೫ ವ)

**ಊಳಿಡು** – [ನಾಯಿನರಿಗಳು] ಬೊಗಳು (ಊಳಿಡು–ಶ್ವಾನಜಂಬುಕಧ್ವನೌ: **ಶಬ್ದಮದ, ಧಾ,** ೨೭೯)

**ಊಱೆ ಸಾಱು** – ಒತ್ತಿ ಹೇಳು (ಇದಂ ಪುಗಲಿಂ ಗಡಿಂ ಎಂದು ಬೇಟಕಾಱಿರಂ ಇರದೆ ಊಱೆ ಸಾಱೆ ಜಡಿವಂತೆ ಎಸೆಗುಂ ಸಹಕಾರಕೋಮಳ ಅಂಕುರಪರಿತುಷ್ಟ ಪರಪುಷ್ಟಗಳ ಧ್ವನಿ ನಂದನಂಗಳೊಳ್: **ಪಂಪಭಾ,** ೨. ೧೩)

**ಊಱೆಸು** – ಚುಚ್ಚಿಸು, ಇರಿಯುವಂತೆ ಮಾಡು (ಪೆರ್ನೊಣಗಳಿಂತಗುಳ್ದೂಱೆಸಿಯುಂ ಕಾವಲಿಯೊಳಿಕ್ಕಿ ವಾಟಿಸಿಯುಂ; **ಧರ್ಮಾಮೃ,** ೩. ೪೩ ವ)

**ಊಱು** – ನೆಲೆಯಾಗಿ ನಿಲ್ಲು (ಊಱು–ಸತ್ವೇ: **ಶಬ್ದಮದ,** ೮೪೧); ಸ್ಥಾಪಿಸು (ತೊಳಪ ಹರಿನ್ಮಣಿಕುಟ್ಟಿಮತಳದೊಳ್ ತಳಮಾರೆ ತಳಮನೂಱೆ ಬೆಡಂಗಂ ತಳರ್ನಡೆ ನಡೆವೆಡೆಯೊಳ್: **ಸುಕುಮಾಚ,** ೧೦. ೩೯); ಕೆತ್ತು (ಕರ್ಣನ ಎರಡುಂ ತೊಡೆಯುಮಂ ಉಳಿಯಂ ಊಱೆ ಕೊಡಂತಿಯೊಳ್ ಬೆಟ್ಟಿದಂತೆ ಅತ್ತಂ ಇತ್ತಂ ಉರ್ಚಿಪೋಗೆಯುಂ: **ಪಂಪಭಾ,** ೧. ೧೦೪ ವ); ಬಾಗು (ಅವರೆ ಕೂರ್ತೆಱಗಿದೊಡೆ ಆ ಭಾರಕ್ಕೆ ತಲೆಉಂ ಊಱುವರಾರುಂ ಪುರುಷರ್: **ಲೀಲಾವತಿ,** ೧೪. ೧೧೫)

**ಊಟಿಗ** – ಕಾರ್ಯ (ಊಟಿಗವಾದೆಡೆಗಳೊಳ್ ಝೂಳೆಯಂಗೊಳುತ್ತುಂ: **ಸುಕುಮಾಚ,** ೭. ೩೫ ವ)

# ಋ

**ಋಕ್ಕು** – ಋಗ್ವೇದಮಂತ್ರ, ವೇದಮಂತ್ರ (ಉತ್ವಂಬೆರೆಸಿದ ದ್ವಿತ್ವಕ್ಕೆ: ಸಂತ್–ಸಂಯತ್ತು, ಋಕ್–ಋಕ್ಕು, ಯಜುಸ್–ಯಜುಸ್ಸು: **ಶಬ್ದಮದ,** ೯೬, ಪ್ರ)

**ಋಕ್ಷ** – ಕರಡಿ (ವಟವಿಟಪಿಯ ಕೆಟಿಗೆ ತರುಣ ಹರಿಣ ವೃಕ ವರಾಹ ಋಕ್ಷ ತರಕ್ಷು ಪ್ರಮುಖನಿಖಿಲಮೃಗಗಣ ಪರಿವೃತನುಂ ಆಗಿ: **ಪಂಚತಂತ್ರ,** ೮೧ ವ); ಒಂದು ಜಾತಿಯ ಮರ (ಸ್ರೋತಸ್ಸುರುಚಿರಪುಷ್ಕರಂ ಆತತ ಋಕ್ಷಂ ಗುಹಾನ್ವಿತಂ ಪ್ರಿಯವಂಶ ಉಪೇತಂ ತುಂಗ ಉತ್ಸಂಗಮೇತಂ ಕರಿರಾಜನೆನಿಸುಗುಂ ಗಿರಿರಾಜಂ: **ಅಜಿತಪು,** ೯. ೨೯); ನಕ್ಷತ್ರ (ಋಕ್ಷಚಯದೊಳ್ ಚಂದ್ರಂ ಪಿರಿದೆಸೆವಂತಿರೆ ಭಕ್ತರ ನೆರವಿಯೊಳ್ ಅಂದಲ್ಲಿ ಸೌಂದರಂ ಕುಳ್ಳಿರ್ದಂ: **ತ್ರಿಷಷ್ಟಿಪು,** ३. ೧೮)

**ಋಕ್ಷರಾಜ** – ಚಂದ್ರ (ನಭಮಂ ಋಕ್ಷರಾಜಾನ್ವಿತಂ ನಾಗಕದಂಬಾನಂತವಿಭ್ರಾಜಿತಮಹಿಪುರಮಮಂ: **ಶಬರಶಂ,** ३. ೨೯)

**ಋಕ್ಷಾಕೀರ್ಣ** – ನಕ್ಷತ್ರಗಳಿಂದ ಕೂಡಿದ, ಕರಡಿಗಳಿಂದ ಕೂಡಿದ (ಆ ಮಹಾವನಂ .. .. ಗಗನಮಂಡಲದಂತೆ ಋಕ್ಷಾಕೀರ್ಣಮುಂ: **ಚಂದ್ರಪ್ರಪು,** ೫. ೫೨ ವ)

**ಋಚ** – ಮಂತ್ರ (ನಾಲ್ಕು ವೇದಂಗಳೊಳ್ ನಾಲ್ಕುಂ ಋಚಂಗಳಂ ಪೇಟ್ದು ಸಿತ ದೂರ್ವಾಂಕುರವಿಮಿಶ್ರಂಗಳಪ್ಪ ಶೇಷಾಕ್ಷತೆಗಳಂ ಕೊಟ್ಟು ಮುಂದೆ ನಿಂದನಂ ನಿಮಗೆ ಬಾಟ್ತೆಯಪ್ಪುದಂ ಬೇಡಿಕೊಳ್ಳಿಂ ಎನೆ: **ಪಂಪಭಾ,** ೫. ೭೦ ವ)

**ಋಚೆ** – ಋಚ (ಅಂತು ಸೊಗಯಿಸೆ ಪಾಡುವ ಮಂಗಳರವಂಗಳುಂ ಓದುವ ಋಚೆಗಳುಂ ಪರಸುವ ಪರಕೆಗಳುಂ ಎಸೆಯೆ ಪಸೆಯೊಳಿರ್ದು: **ಪಂಪಭಾ,** ३. ೭೬ ವ)

**ಋಜು** – ಸರಳವಾದ (ಆತ್ಮವಲ್ಲಭನೊಳಾದ ಅನುರಕ್ತತೆಯಂ ಮಹತ್ತ್ವಮಂ ಸಮದ ಪತಿವ್ರತಾಚರಣಮಂ ಋಜುವೃತ್ತಿಯಂ ಅಂದು ಭಾವಿಸುತ್ತ ಒಂದುಮಂ ಎಂದಳಿಲ್ಲ: **ಕಾದಂಸಂ,** ೮. ೬೮); ಒಂದು ವಸ್ತುವನ್ನು ನೋಡುವ ವಿವಿಧ ಕೋನಗಳು (ಕೆಲರಾಗಳ್ ಋಜುವಿಂದಂ ಅರ್ಧಋಜುವಿಂದಂ ಸಾಚಿಯಿಂದಂ ಕೆಲರ್ ಪಲವು ಭಂಗಿಯಿನಿರ್ದು ಜಾನಕಿಯ ರೂಪಾಶ್ಚರ್ಯಮಂ ನೋಡಿ.. ನಿಷ್ಪಂದರಾಗಿರ್ಪುದುಂ: **ಪಂಪರಾ,** ೫. ೬೫)

**ಋಜುಗುಣ** – ನೇರ ಸ್ವಭಾವ (ಈ ಋಜುಗುಣಕ್ಕೆ ಆರ್ ಕೂರರ್: **ಕಾದಂಸಂ,** ೫. ೪೬)

**ಋಜುಮತಿ** – [ಜೈನ] ಋಜು ಬುದ್ಧಿ (ಕ್ರಮದಿಂ ಋಜುಮತಿಯುಂ ವಿಪುಲಮತಿಯುಂ ಎಂಬದಱ ಭೇದಂ ಇರ್ತೆಱನಕ್ಕುಂ: **ಚಂದ್ರಪ್ರಪು,** ೧೪. ೫೭)

**ಋಜುಮಾರ್ಗ** – ನೇರ ಮಾರ್ಗ, ನೇರ ನಡವಳಿಕೆ (ಪಿರಿಯಾತಂ ಸ್ವಭಾವದಿಂ ಋಜುಮಾರ್ಗವೃತ್ತಿಯಂ ತಳೆದು: **ಸುಕುಮಾಚ,** ೨. ೫೭ ವ)

**ಋಜುರೋಹಿತ** – ಕಾಮನಬಿಲ್ಲು (ಅಂತಾ ಋಜುರೋಹಿತಂ ತಿರೋಹಿತಮಾಗೆ .. .. ಸಂಸೃತಿಯ ಅನಿತ್ಯತೆಗಿದುವೆ ನಿದರ್ಶನಂ: **ಚಂದ್ರಪ್ರಪು,** ೪. ೫೧ ವ)

**ಋಜುವೃತ್ತಿ** – ನೇರ ನಡವಳಿಕೆ (ಋಜುವೃತ್ತಿಯಂ ಅಂದು ಭಾವಿಸುತ್ತ ಒಂದುಮನಂದಳಿಲ್ಲ: **ಕಾದಂಬ,** ೧೦. ೮೯)

**ಋಜ್ವಾಗತ** – ನೇರವಾಗಿ ನಿಲ್ಲುವಿಕೆ (ಋಜ್ವಾಗತದೊಳ್ ಬೆರೆಸಿರೆ ತನ್ನಯ ನಿಲವು ಯೋಗಿಸಂಸ್ತವಯೋಗ್ಯಂ: **ಪಾರ್ಶ್ವನಾಪು,** ೧೫. ೯೬); ನೇರ ಮಾರ್ಗ (ಎಸೆಗುಂ ಋಜ್ವಾಗತಂ ಕಣ್ಗೊಳಿಸುಗುಂ ಅಳವಟ್ಟಿರ್ದ ಋಜ್ವಾಗತಂ: **ಅಜಿತಪು,** ೨. ೪೫)

**ಋಣಂಗುಡು** – ಸಾಲ ಕೊಡು (ಉಪದೇಶಂಗೊಟ್ಟರ್ ಋಣಂಗೊಟ್ಟರ್ ಎಂಬ ನಾಣ್ನುಡಿಯಿಂತು: **ಧರ್ಮಾಮೃ,** ೬. ೧೩೯ ವ)

**ಋತ** – ಸತ್ಯ (ಋತಮೆಸೆದಿರ್ಪ .. .. ಮತವಿರ್ಪೆಡೆಯೊಳ್ .. .. ಮುಸಿಯಿರ್ಪ .. .. ಕುತ್ಸಿತಮತಮಿರ್ಪುದಲ್ತು: **ನೇಮಿನಾಪು,** ೧. ३೯)

**ಋತವಚನ** – ಸತ್ಯದ ಮಾತು (ಯತಿಪತಿ ಮುಖಾರವಿಂದೋದ್ಗತ ಋತವಚನಮಂ ಸ್ವಕೀಯಹೃದ್ಗೋಚರಮಾಗೆ: **ಸುಕುಮಾಚ,** ೯. ೧೧೨)

**ಋತವಾಕ್ಯ** – ಋತವಚನ (ಅನುಪಮ ವಿಕ್ರಮಕ್ರಮಂ ಉದಾರಗುಣಂ ಋತವಾಕ್ಯಂ ಎಂಬ ಪೆಂಪೆನಲಿವು ಮೂಱೆ ನಾಲ್ಕೆ ಗುಣಂ: **ಪಂಪಭಾ,** ೧೨. ೯३)

**ಋತು** – ಎರಡ ತಿಂಗಳ ಕಾಲ (ಆಗಳ್ ಆಱುಂ ಋತುಗಳ ಪೂಗಳಂ ಒಂದುಮಾಡಿ ಪೂವಿನಂಬುಗಳಂ ಪಣ್ಣಲೆಂದು ಕಾಮದೇವಂ ಮಾಡಿದ ಓಜನ ಸಾಲೆಯಿರ್ಪಂತಿರ್ಪ ಪೂವಿನ ಸಂತೆಯೊಳ್: **ಪಂಪಭಾ,** ೪. ೮೦ ವ)

**ಋತುಕಾಲಪ್ರಾಪ್ತೆ** – ಋತುಮತಿಯಾಗು (ಋತುಕಾಲ ಪ್ರಾಪ್ತೆಯಾಗಿರ್ದ ನಲ್ಲಳಲ್ಲಿಗೆ ಬರಲ್ ಪಡೆಯದೆ ಆಕೆಯಂ ನೆನೆದು ಇಂದ್ರಿಯಕ್ಷರಣೆಯಾದೊಡೆ: **ಪಂಪಭಾ,** ೧. ೬೮ ವ)

**ಋತುಪ್ರತಾನ** – ಋತುಸಮೂಹ (ಋತುಪ್ರತಾನಾವಯವಂಗಳನೆ ವಿದೂಷಕಂ ಮದೋಪಕ್ರಮಂ ಮಾಡಿ: **ಶಾಂತಿಪು,** ೮. ೮೮ ವ)

**ಋತುಮತಿ** – ರಜಸ್ವಲೆಯಾದವಳು (ಅವಿ ರಾತ್ರೆಯಿ ಮಲಿನಿಕೆ ಪುಷ್ಪವತಿ ರಜಸ್ವಲೆ ಉದಕ್ಕೆ ಋತುಮತಿ: **ಅಭಿಧಾವ,** ೧. ೧೧. ೧೪)

**ಋತುವಿಮಾನ** – [ಜೈನ] ಅರವತ್ತಮೂರು ಇಂದ್ರಕಗಳಲ್ಲಿ ಮೊದಲನೆಯದು (ಇದು ಋತುವಿಮಾನಮೋ ಮೇಣಿದು ಅಹೀಂದ್ರನ ರುಂದ್ರರಮ್ಯಹರ್ಮ್ಯಮೋ: **ಕರ್ಣನೇಮಿ,** ೧೧. ೪)

**ಋತುಸಾರ್ವಭೌಮ** – ಋತುಗಳ ಸಮ್ರಾಟ, ವಸಂತಋತು (ವಸಂತಂ ಋತುಸಾರ್ವಭೌಮಂ ವಿಭವಂ ಮೆಯ್ವೆತ್ತು ಅದೇಂ ಬಂದುದೋ: **ಚಂದ್ರಪ್ರಪು,** ೭. ३೭)

**ಋತ್ವಿಜ** – ಯಾಗದಲ್ಲಿ ಯಜಮಾನನಿಗೆ ಸಹಾಯ ಮಾಡುವವರು, ಯಜ್ಞಪುರೋಹಿತ (ಅಗ್ನೀಧ್ರ ಮೈತ್ರಾವರುಣ ಅಗ್ನಿಪರಿಚಾರಕ ಉದ್ಗಾತೃ ನೇತ್ರ ಹೋತೃ ಜಮದಗ್ನಿ ಆದಿಗಳಪ್ಪ ಷೋಡಶರ್ ಋತ್ವಿಜರ್ಕಳಿಂ: **ಪಂಪಭಾ,** ೬. ३३ ವ)

**ಋದ್ಧ** – ವೃದ್ಧಿ ಹೊಂದಿದ (ಮೃಗಭೂ ಋದ್ಧ ವಿಳಾಸಿನೀ ಕಬರಿಕಾಬಂಧಗಳಂ ಪೊತ್ತು ಮಲ್ಲಿಗೆಯೊಳ್ ಭಾವಿಸಿ ಧೂಪದೊಳ್ ಪೊರೆದು ತತ್ಕಾಂತಾ ರತಿಸ್ವೇದಬಿಂದುಗಳೊಳ್ ನಾಂದು ಕುರುಳ್ಗಳೊಳ್ ಸುೞಿದು ಮುಂದೊಂದಿರ್ದ ಸೌಭಾಗ್ಯಘಂಟೆಗಳೊಂದಿ ಇಂಚರದೊಳ್ ಪಳಂಚಿ ಸುೞಿದತ್ತು ಅಂದೊಂದು ಮಂದಾನಿಳಂ: **ಪಂಪಭಾ,** ೪. ೮೦)

**ಋದ್ಧಿ** – ಕೈಗೂಡುವಿಕೆ, ಸಿದ್ಧಿ (ಪಲವುಂ ಋದ್ಧಿಗಳಿಂ ಕೂಡಿದೊರೆಲ್ಲಾ ಋಷಿಸಮುದಾಯಮುಮಂ ಪ್ರತಿಪಾಳಿಸುತ್ತುಂ: **ವಡ್ಡಾರಾ,** ಮು. ೭೫, ಸಾ. ೨); [ಜೈನ] ತಪಸ್ಸಿನಿಂದ ಪ್ರಾಪ್ತವಾಗುವ ಮಹಿಮೆ: ಬುದ್ಧಿ, ಕ್ರಿಯಾ, ವಿಕ್ರಿಯಾ, ತಪ, ಬಲ, ಔಷಧಿ, ರಸ, ಅಕ್ಷೀಣ ಎಂಬ

ಋದ್ಧಿಗಳು (ಸಪ್ತ ಋದ್ಧಿ ಸಮನ್ವಿತಂ ವ್ರತನಿಯಮಯುಕ್ತ್ವಗಭಸ್ತೀಭೂತಂ: **ಶಾಂತಿಪು,** ೯. ೧೧೨)

**ಋದ್ಧಿಪ್ರಾಪ್ತ –** ಋದ್ಧಿಯನ್ನು ಹೊಂದಿದವನು (ಧರಣೀಪಾಲಕ ಮುನಿಪರ್ ಪಂಚಮಕಾಲದೊಳಣಂ ಆಗರಲ್ತೆ ಋದ್ಧಿಪ್ರಾಪ್ತರ್: **ಆದಿಪು,** ೧೫. ೪೧)

**ಋಷಭ –** ಎತ್ತು (ವೃಷ ಸೌರಭೇಯ ಗೋಪತಿ ಋಷಭ; **ಅಭಿಧಾವ,** ೧. ೧೫. ೧)

**ಋಷಿ –** ತಪಸ್ವಿ (ದಂಡಕಂ ಕಡುಮುಳಿದಂ ಋಷಿಯರ್ಗೆ: **ಪಂಪರಾ,** ೯. ೯)

**ಋಷಿನಿವೇದಕ –** ಮಹರ್ಷಿಗಳ ಆಗಮನವನ್ನು ಸಾರುವ ದೂತ ಋಷಿನಿವೇದಕಂ ಇಂತೆಂದು ಬಿನ್ನಪಂಗೆಯ್ದಂ: **ಶಾಂತಿಪು,** ೮. ೧೫೩ ವ)

**ಋಷಿರೂಪಕ –** ಋಷಿಯ ರೂಪ, ಋಷಿದೇಹ (ಪಟ್ಟಿರ್ದ ಋಷಿರೂಪಕಮಂ ಕಂಡು ಶಬಮೆಂದೆ ಸಾರ್ದು ತಾನೊಂದು ಕಾಲಂ ತನ್ನೆರಡು ಮಱಿಗಳೊಂದು ಕಾಲಂ ಕೂಡೆ ತೋಡಿ ಸೀಳ್ದು ತಿಂದಾಗಳ್: **ಸುಕುಮಾಚ,** ೧೨. ೨೪ ವ)

## ಎ

**ಎಂಜಲ್ –** ತಿಂದ ಮೇಲು ಉಳಿಯುವುದು (ನೀನೆ ಜಾತಿದೇವತೆಯಪ್ಪೊಡೆ ಎನ್ನೆಂಜಲನೆಂತು ತಿಂಬೆ: **ಪಂಪಭಾ,** ೮. ೪೩ ವ)

**ಎಂಜಲಗುಟಿ್ –** ತಿಂದು ಉಳಿದ ಅಗುಳು (ಕೂಟ್ಟಿಡೆಯದೆ ಪೊಟಲೊಳಗೆ ಎಂಜಲಗುಟಿಂ ಆಯ್ದು ಅಲಸಿ ಕುಱುಕುತ್ತುಂ: **ಧರ್ಮಾಮೃ:** ೮. ೯೬ ವ)

**ಎಂಜಲಿಸು –** ಎಂಜಲುಮಾಡು. ಸವಿನೋಡು (ಅಮೃತಮಿರೆ ನಂಜನೆಂಜಲಿಸುವುದೇ: **ಸಮಯಪ,** ೧೧. ೧೫೩)

**ಎಂಜಲೆವುಟು –** ಎಂಜಲ ಅಗುಳು (ತಾವಿರ್ಬರುಂ ತಿರಿದು ತಂದಿಕ್ಕಿದೆಂಜಲೆವುಱುಮಂ ತಿಂದು ಪೆಸರುಮಿಲ್ಲದೆ ನಿರ್ನಾಮಿಕೆಯೆಂದು ಪೆಸರಾಗಿ ಬಳೆಯೆ: **ಆದಿಪು,** ೩. ೩೪ ವ)

**ಎಂಟಡಿ –** ಶರಭ (ದ್ವಿಶರಂ ತಾಯ್ದಪ್ಪಿ ಪಾಯ್ದ ಎಂಟಡಿಗೆ ಕುಟುಕಂ ಒಲ್ದು ಊಡುಗುಂ: **ಶಬರಶಂ,** ೨. ೬೫)

**ಎಂಟುಗೆಯ್ –** ಎಂಟು ಭಾಗ ಮಾಡು (ದಕ್ಷಿಣೋತ್ತರ ತಟಂಗಳೊಳ್ ಒಂದೊಂದಱೊಳ್ ಎಂಟುಗೆಯ್ದು: **ಮಲ್ಲಿನಾಪು,** ೨. ೮)

**ಎಂಟೆರ್ದೆ –** ತುಂಬ ಧೈರ್ಯ (ಉರ್ಬಿನೊಳಾಂತು ಸೆಣಸಿ ಕಾದುವ ಜನಪಂಗೆ ಎಂಟೆರ್ದೆಯ: **ಧರ್ಮಾಮೃ,** ೪. ೧೪೭)

**ಎಂತಪ್ಪ –** ಎಂತಹ, ಎಂಥ (ವಿರಾಟನಂ ಕಂಡು ಎಂತಪ್ಪ ದುಷ್ಟಾಶ್ವಂಗಳಂಮನೇಱಲುಂ ತಿರ್ದಲುಂ ಬಲ್ಲೆಂ ಎಂದು: **ಪಂಪಭಾ,** ೮. ೫೪ ವ)

**ಎಂತಾನುಂ –** ಹೇಗಾದರೂ, ಯಾವುದೇ ರೀತಿಯಲ್ಲಿಯಾದರೂ (ಅನ್ನೆಗಂ ಇತ್ತ ಸಂಸಪ್ತಕ ನಿಕುರುಂಬದೊಳಗೆ ಒರ್ವರುಮಂ ಕಿಱುವೀಟಲೀಯದೆ ರಸಮಂ ಕೊಲ್ವಂತೆ ಎಂತಾನುಂ ಕೊಂದು: **ಪಂಪಭಾ,** ೧೨. ೧೨೦ ವ)

**ಎಂತು –** ಹೇಗೆ, ಯಾವ ರೀತಿ (ಜಡರಂ ಕಱೆದು ತಿಳಿಪಲ್ ಎಂತು ಎನೆ ಖರಕರನಂ ಗೂಗೆಗೆಯ್ದು ತೋರ್ಪಂತಕ್ಕುಂ: **ಧರ್ಮಾಮೃ,** ೧. ೪೩)

**ಎಂತುಂ –** ಹೇಗಾದರೂ (ಇಂತೀ ಪೇಳ್ದ ವಿಭಕ್ತಿಗಳ್ ಎಂತುಂ ಪಲ್ಲಟಿಸುಗುಂ: **ಶಬ್ದಮದ,** ೧೪೫)

**ಎಂತುಗೆ –** ಹೇಗೆ (ಈ ಎಡೆಯೊಳ್ ಎಂತುಗೆ ಸೈರಿಸಿದ್ದೈ ಮನಃಪ್ರಿಯೆ: **ಲೀಲಾವತಿ,** ೧೪. ೬೦)

**ಎಂತುಟು –** ಹೇಗೆ (ಸುಯೋಧನಂಗೆ ರಣಭೂಮಿಯೊಳ್ ಎಂತುಟವಸ್ಥೆಯೋ: **ಪಂಪಭಾ,** ೧೨. ೬೩)

**ಎಂದುಂ –** ಯಾವಾಗಲೂ (ಕಾಣದಂತೆ ಎಂದುಂ ಕಣ್ಗಳ್ ಕಾಡಿಗೆಯಂ: **ಕವಿರಾಮಾ,** ೧. ೪೫)

**ಎಂಬುಕೆಯ್ –** [ಎಂಬುದಂ+ಕೆಯ್] ಅಂಗೀಕರಿಸು (ದೇವರ ಸಮ್ಮಾವಾವುಗೆಗಳಂ ಪಿಡಿದು ಎಂಬುದಂ ಎಂಬುಕೆಯ್ವ ಸದ್ಭಾವಮೆ ಸಾಲ್ಗುಂ: **ಪಂಪರಾ,** ೭. ೬೮)

**ಎಕ್ಕಛಾಯ –** ಇಂದ್ರನೀಲ (ವರ್ಗದ್ವಿತೀಯಕ್ಕೆ: ಛಪ್ಪಿಸಿದಂ, ಎಕ್ಕಛಾಯಂ, ಠಾವು: **ಶಬ್ದಮದ,** ೨೫, ವೃತ್ತಿ)

**ಎಕ್ಕಟಿ –** ಗುಪ್ತವಾಗಿ, ಗುಟ್ಟಾಗಿ (ಕಣ್ಸನ್ನೆಗೆಯ್ವುದುಂ ಆಕೆಗಳ್ ಆತನಂ ಎಕ್ಕಟಿಗಱೆದು: **ಲೀಲಾವತಿ,** ೧೪. ೨೬ ವ)

**ಎಕ್ಕಟಿಗಾಳೆಗ –** ದ್ವಂದ್ವಯುದ್ಧ (ಪುದುವೆತ್ತು ಎಕ್ಕಟಿಗಾಳೆಗಂ ಸಮನಿಸಿತ್ತು ಎಮ್ಮೀ **ಗದಾಯುದ್ಧ**ಮಂ ತ್ರಿದಶರ್ ನೋಡಲೆ ಕೌತುಕಂಬೆರಸಿ ಬಂದಿರ್ದರ್: **ಗದಾಯು,** ೭. ೬೯)

**ಎಕ್ಕತಕ್ಕು –** ಸಮಾನಯೋಗ್ಯತೆ, ಅರ್ಹತೆ (ಕರಿಯಂ ಬೇಡುವ ಬಾಯ್ಗಿದೊಂದಲಗಿನಂಬೊಲ್ದೇಱುವಂಗಕ್ಕೆ ಭಾಸುರ ಭಲ್ಲಾಸ್ತ್ರಮಿದು ನೀಡಿ ಬಿಡದಿಕ್ಕಲ್ ಎಕ್ಕತಕ್ಕುಳ್ಳ ತೋಳೆರಡಕ್ಕುಂ: **ಅನಂತಪು,** ೧೪. ೧೮)

**ಎಕ್ಕತಳ –** ನಿಯಮಿತ ಜಾಗ (ಎಕ್ಕಕ್ಕೆ: ಏಕಪತ್ರಂ–ಎಕ್ಕವತ್ತಂ, ಏಕಸ್ಥಲಂ; ಎಕ್ಕತಳಂ, ಏಕಸ್ಥೂಲಂ–ಎಕ್ಕತುಳಂ: **ಶಬ್ದಮದ,** ೩೦೫, ಪ್ರ)

**ಎಕ್ಕತಾಳ –** ಏಳು ಬಗೆಯ ತಾಳಕ್ರಮಗಳಲ್ಲಿ ಒಂದು (ಧ್ರುವ ಮಟ್ಠೆಯಂ ಪಡಿಮಟ್ಠೆಯಂ ಅಟ್ಟತಾಳ ಎಕ್ಕತಾಳ ರೂಪಕಂ ರಚ್ಚೆಯ ಎಂಬ ಏೞುಂ ತೆಱದ ತಾಳಕ್ರದಿಂದ: **ಧರ್ಮಪ,** ೨. ೨೦ ವ)

**ಎಕ್ಕತುಳ –** [ಏಕತುಲ] ದ್ವಂದ್ವಯುದ್ಧ (ಅಂತು ಮುಳಿಸಿನ ಮೋಪಿನ ಗಂಡಮಚ್ಚರದ ಮೆಚ್ಚವಣಿಗೆಯ ಅಂಕಕಾಱರ್ ಎಕ್ಕತುಳಕ್ಕೆ ಎಕ್ಕೆಯಿಂ ಸೂಟೀಱೆಱೆವಂತೆ ಒರ್ವರ್ ಒರ್ವರೊಳ್ ಕಾದೆ: **ಪಂಪಭಾ,** ೧೨. ೭೬ ವ); ಸಾಹಸ (ಸಿಂಗಮಂ ಓವದೆ ಎಕ್ಕತುಳದಿಂ ತವೆ ತೂಳ್ದಿಯೆ ಸಿಂಧುದೇಶದಿಂ ಪಿಂಗಿಸದಂ ಮಹಾಭಯಮಂ: **ಶಾಂತೀಶ್ವಪು,** ೩. ೨೮); ಸಮಾನ (ರಾವಣನೊಳ್ ಅಡುರ್ತು ಎಕ್ಕತುಳಮಿಱೆದು: **ಪಂಪರಾ,** ೯. ೧೦೫)

**ಎಕ್ಕತುಳಂ –** ಅತಿಶಯವಾಗಿ (ಕಡೆಗಣ್ಣ ಕಾಂತಿಗಳೊಳ್ ಎಕ್ಕತುಳಂ ಇಕ್ಕಿಯುಂ: **ಆಚವರ್ಧ,** ೬. ೩೨ ವ)

**ಎಕ್ಕಬಾಗೆ –** [ಏಕಭೋಗ್ಯೆ] ಒಂದೇ ಪಾಲುಳ್ಳವಳು (ಎನಗೆ ಎಕ್ಕಬಾಗೆ ನೋಡೀಗಳ್ ಈ ಇಳಾಲತಾಂಗಿ ಪುದುವಲ್ಲಳ್ ಅದೆಂತೆನೆ ಮುನ್ನ ನೂಲ ತೋಡಾಗದೆ ಕೆಟ್ಟು ಪೋದವರಂ ಇಂ ಮಗುಟ್ದುಂ ನಿಱೆಪಂತು ಬೆಳ್ಳನೇ: **ಪಂಪಭಾ,** ೯. ೪೬)

**ಎಕ್ಕಮದ್ದಳೆ –** ಒಂದು ಬಗೆಯ ಚರ್ಮವಾದ್ಯ (ಎಕ್ಕಮದ್ದಳೆಯ ಕೊಟಲ ಝುಂಕಾರದ ಪಱೆಗಳ್ ಮುಂದೆ ಬಾಜಿಸುತ್ತಂ: **ವಡ್ಡಾರಾ,** ಪು. ೮೦, ಪು. ೧೨)

**ಎಕ್ಕಲ –** ಕಾಡು ಹಂದಿ (ಬೆರ್ಚಿಸಿ ತನ್ನಗೇಂದ್ರಕಂದತಮೃಗರಾಜಿಯಂ ಜವದನೇಟ್ಟಿಂದುದು ಸೋರ್ಕಿದ ಎಕ್ಕಲಂ: **ಶಬರಶಂ,** ೪. ೫)

**ಎಕ್ಕಲಗಾಣ** – ಒಂಟಿ ಹಾಡುಗಾರ (ನುಣ್ಚರದಿಂ ಆಣತಿಮಾಡಿದುದು ಉನ್ಮದಾಳಿ ತಾವರೆಯೊಳಗಿರ್ದ ಲಕ್ಷ್ಮಿಯ ಮನಂಬಡೆವ ಎಕ್ಕಲಗಾಣನೆಂಬಿನಂ: **ಮಲ್ಲಿನಾಪು,** ೬. ೬೯)

**ಎಕ್ಕಲದೇವಿ** – ಒಂದು ಕ್ಷುದ್ರ ದೇವತೆಯ ಹೆಸರು (ಎಕ್ಕಲದೇವಿಗಂ ಆ ಮಾಲಕ್ಕನಿಗಂ ಬನದ ಬಳರಿಗಂ ಮೈಲಾರಂಗೆ ಅಳ್ಕದೆ ಜಾತ್ರೆಯ ಮಾಟ್ಟಂ .. .. ಆತಂ ಕೌಳಂ: **ಸಮಯಪ,** ೪. ೧೨೩)

**ಎಕ್ಕಲವಿರಿ** – ಎಲ್ಲಮ್ಮ, ರೇಣುಕಾದೇವಿ (ಎಕ್ಕಲವಿರಿಗಣನಂ ಆ ಲಕ್ಕಣಿಗರ ಬನದ ಬಳರಿಗಂ ಮೈಲಾರಂಗೆಯ್ದೆ ಜಾತ್ರೆ ಮಾಟ್ಟಂ ಒಕ್ಕಲಿಗಂ: **ಸಮಯಪ,** ೪. ೧೨೫)

**ಎಕ್ಕಲಾವಣ** – ಅಸದೃಶ (ಇದಿರನೆ ಬಂದು ಮೇಲೆವಾಯ್ದೊಡೆ ತೀವಿರ್ದಲಂಗಿಂದ ಎಕಲ್ಕಲನಂ ಕೊಲೆ ಕಲಿತನವಾಯ್ತು ಎಕ್ಕಲಾವಣಂ ಲುಬ್ಧಕನೊಳ್: **ಪಾರ್ಶ್ವನಾಪು,** ೧೨. ೮೦); ಏಕ ನೆಲೆ (ಅಭಿಮಾನಕ್ಕೆ ಅಧಿಷ್ಠಾನಮುಂ ಲಾವಣ್ಯಕ್ಕೆ ಎಕ್ಕಲಾವಣಮುಂ ಆಗಿ: **ವರ್ಧಮಾಪು,** ೧೦. ೧ ವ)

**ಎಕ್ಕವಡ** – ಎಕ್ಕಡ, ಪಾದರಕ್ಷೆ (ತೊಟ್ಟ ಎಕ್ಕವಡಂ ಮರವಿಲ್ ಕಟ್ಟಿದ ಪಣೆಕಟ್ಟು ಬೇಂಟೆವಱೆ ದೊರೆಯೊಳ್ ಒಡಂಬಟ್ಟ ಅಸಿಯ ಸುರಗಿ ದಳಿವದ ತೊಟ್ಟ ಅಂಗಿಗೆ ತನ್ನೊಳ್ ಅಮರೆ ಬೇಂಟೆಯನೊರ್ವಂ; **ಪಂಪಭಾ,** ೫. ೩೬)

**ಎಕ್ಕವತ್ತ** – ಒಂಟಿ ಎಲೆಯಿರುವ, ಒಂದೆಲಗ (ಎಕ್ಕಕ್ಕೆ: ಏಕಪತ್ರಂ–ಎಕ್ಕವತ್ತಂ, ಏಕಸ್ಥಲಂ–ಎಕ್ಕತಳಂ, ಏಕಸ್ಥೂಲಂ–ಎಕ್ಕತುಳಂ: **ಶಬ್ದಮದ,** ೩೦೫, ಪ್ರ)

**ಎಕ್ಕಸಕ್ಕ** – ಅಸ್ತವ್ಯಸ್ತತೆ (ಹಜೆಗವಿಗಳ ಕಬ್ಬಂಗಳ ಹೊಱಗಟೆಯಕ್ಕರದ ಹೊಲಿಗೆ ಬಿರ್ಚಿದೊಡೆಲ್ಲಂ ಬಱೆ ತಾಜೆಗಬೀಜೆಗ ಎತ್ತಱ ತತ್ತಱ ಎಕ್ಕಸಕ್ಕಂ ಅಸ್ತವ್ಯಸ್ತಂ: **ಗಿರಿಜಾಕ,** ೧. ೨೩); ಅಸಂಬದ್ಧ ನುಡಿ (ಎಮ್ಮ ನುಡಿಗುತ್ತರಮಂ ಕಾಣದೆ ಏನಾನುಂ ಎಕ್ಕಸಕ್ಕಂ ಗಱಪಿದೆಯಾದೊಡಂ: **ಧರ್ಮಾಮೃ,** ೯. ೮೨ ವ); ಹರಟೆಗಾರ (ಅತಿಮಾರ್ಗಂ ಎಕ್ಕಸಕ್ಕಂ ಸಿತಗಂ ಚಳಬಳಗಂ: **ಸಮಯಪ,** ೩. ೫೫)

**ಎಕ್ಕಸಕ್ಕಂಗೆಡೆ** – ಅಸಂಬದ್ಧವಾಗಿ ಮಾತಾಡು (ತಮ್ಮಾಯುಂ ದಲ್ ತಮ್ಮ ಭವಿಷ್ಯಂ ಕುಂದಲುಂ ಅಂದಾಗಳ್ ಎಕ್ಕಸಕ್ಕಂಗೆಡೆವರ್: **ಸಮಯಪ,** ೧೩. ೪೦)

**ಎಕ್ಕಸಕ್ಕತನ** – ನಿಂದೆ–ಪರಿಹಾಸ (ಎಂಬುದುಂ ದ್ರೋಣಾಚಾರ್ಯಂ ಮುಗುಳ್ನಗೆ ನಕ್ಕು ವಿಕ್ರಮಾರ್ಜುನಂ ಇಳಿಸಿ ನುಡಿವ ನಿನ್ನ ಏಣಗೋಣಂಗಳುಂ ಎಕ್ಕಸಕ್ಕತನಂಗಳುಂ ಎತ್ತವೋದುವು: **ಪಂಪಭಾ,** ೧೧. ೧೩೮)

**ಎಕ್ಕಸರ** – ಒಂಟಿ ಎಳೆಯ ಸರ (ಸುರಪನ ವಜ್ರಮುಂ ಹರಿಯ ಕೌಸ್ತುಭಮುಂ ಹರನಿಂದುಲೇಖೆಯುಂ ವರುಣನ ಮುತ್ತಿನ ಎಕ್ಕಸರಮುಂ .. .. ಬೆಲೆಗೆ ಬಿಣ್ಣಿದುವಲ್ಲಂ: **ಪಂಪರಾ,** ೧. ೧೨೧); ಒಂದೇ ಬಾಣ (ಎಕ್ಕಕ್ಕೆ: ಏಕಶರಂ–ಎಕ್ಕಸರಂ ಏಕಪತ್ರಂ– ಎಕ್ಕವತ್ತಂ: **ಶಬ್ದಮದ,** ೩೦೫ ಪ್ರ)

**ಎಕ್ಕಸಿರ್ಕ** – ರೋಷ, ಉದ್ರೇಕ (ಕಲ್ಮಿಷಿಕವಾಗಿ ತನ್ನೊಕ್ಕಳ್ಮಕ್ಕಳ್ ಎಕ್ಕಸಿರ್ಕಮಾದೊಡೆ ಪಾರ್ವಂ ಮಲ್ಮಲನೆ ಮಱುಗಿ ಕೂಡೆಯೊಡಲ್ಮಸಿಯಪ್ಪಿನೆಗಂ ಎಯ್ದೆ ಬೆದವೆದ ಬೆಂದಂ: **ಸುಕುಮಾಚ,** ೨. ೧೦)

**ಎಕ್ಕಳವಟ್ಟ** – ಏಕವಸ್ತ್ರ, ಉಡುವ ಹೊದೆವ ಒಂದೇ ಬಟ್ಟೆ (ಎಕ್ಕಳವಟ್ಟದಿಂದಱೆಯೆ ಬರ್ಪರ್ ಪೋಪರ್: **ಶಾಂತಿಪು,** ೮. ೭೫)

**ಎಕ್ಕಾವಳಿ** – ಏಕಾವಳಿ, ಒಂದೆಳೆಯ ಸರ (ತನ್ನೊಳ್ನೆರೆಯಲಿದು ಜಯಶ್ರೀಯ ಮುಂದಟ್ಟಿದ ಎಕ್ಕಾವಳಿಯೆಂಬತಿರ್ದುದು: **ಆದಿಪು,** ೧. ೭೬)

**ಎಕ್ಕು** – ಹಿಂಜು, ಬಿಡಿಸು, ಬೇರ್ಪಡಿಸು (ತನು ಪಂಜಿಯವೊಲ್ ಬೆಳತಿರ್ಪನೆಗಂ ಹಿಮಮೆಕ್ಕಿದ ಎರಲೆವೋಲ್ ಪುದಿದಿರೆಯುಂ: **ಆದಿಪು,** ೬. ೩೩); ಭೇದಿಯಾಗು (ವಿಭಜನೇ ಪ್ರವಾಹಿಕಾಯಾಂ ಚ: **ಶಬ್ದಮದ, ಧಾ,** ೧೨)

**ಎಕ್ಕೆ** – ಒಟ್ಟಿಗೆ, ಸಂಗಡ (ನಿರುಪಮದೇಹದೀಪ್ತಿಗಳೊಳ್ ಎಕ್ಕೆಯಿನೆಯ್ದೆ ಪಳಂಚಿ ಮಿಂಚುವಾಭರಣದ ಮಿಂಚು: **ಆದಿಪು,** ೨. ೫); ರಾಶಿ (ಮುದಮಂ ಜಪಾಪ್ರಸವ ರಕ್ತಾಶೋಕಬಂಧೂಕಶೋಣ ಮಣಿಜ್ಯೋತಿಗಳ್ ಎಕ್ಕೆಯಿಂ ಕುಡೆ: **ಆದಿಪು,** ೧೬. ೩); ಒಂದು ಜಾತಿಯ ಗಿಡ, ಎಕ್ಕೆ ಗಿಡ, ಅರ್ಕ (ಪುಲುಗಿಲುಂ ಉತ್ತರಣೆಯುಮಂ ಅಂತೆ ಲೊಕ್ಕಿಯುಂ ಮತ್ತೆ ಮುತ್ತಂ ಆ ಎಕ್ಕೆಯುಮಂ ಕೊಲೆಯುಂ ಬನ್ನಿಯ ಮರನಂ ಕುಲದೆಯ್ವಮಿದೆಂದು ಕೊಂಡುಕೊನೆವರ್ ಮೂಢರ್: **ಸಮಯಪ,** ೯. ೫೭); ಮಂಚದ ಚೌಕಟ್ಟು (ಒಂದು ಮಂಚದೆಕ್ಕೆಯಂ ಕೊಂಡು ಬರುತ್ತಿರೆ ಕಂಡು ಆ ತಗರಂ ಕೊಟ್ಟು ಮಂಚದೆಕ್ಕೆಯಂ ಕೊಂಡು: **ಜೀವಸಂ,** ೧೧. ೨೮ ವ); ಮನೆ

**ಎಕ್ಕೆಕ್ಕೆ** – ಮೇಲೆ ಮೇಲೆ (ದೀವಿಗೆಗಳ್ ಜಲಕ್ಕನೆ ಎಕ್ಕೆಕ್ಕೆಯಿನಿಟ್ಟಳಂ ಬೆಳಗುತಿರ್ದುವು: **ಪಂಪಭಾ,** ೧೨. ೫), ಒಟ್ಟಾಗಿ (ಅತ್ತ ಲಕ್ಷ್ಮೀಮಹಾದೇವಿಯುಂ ಎಕ್ಕೆಕ್ಕೆಯೊಳೆ ಮಂಡಳಿಕ ಮಹಾಸಾಮಂತ ಮಂತ್ರಿಮಂಡಳ ಅಂತಃಪುರಾಂಗನಾನಿಕರಕ್ಕೆ: **ಆದಿಪು,** ೪. ೩೪ ವ); ಅಧಿಕ ಸಾಮರ್ಥ್ಯ (ಎಕ್ಕೆಕ್ಕೆಯಿಂ ನಭಮಂ ದಿಕ್ಕುಮಂ ಒಕ್ಕಲಿಕ್ಕಿ ಪೊಣರ್ದರ್ ಚಾಣೂರಚಕ್ರಾಯುಧರ್: **ನೇಮಿನಾಪು,** ೮. ೯೨)

**ಎಕ್ಕೆಗುಟ್ಟು** – ಗೋಣಗುಟ್ಟಿಕೊ (ತಂದೆಯ ಕಾಯ್ಪಿನೊಳ್ ಎಕ್ಕೆಗುಟ್ಟುವ ಅಕ್ಕನ ಪಡಪೆತ್ತಿ ಬಯ್ವ ಕಿಱುದಂಗೆಯ: **ಶಾಂತಿಪು,** ೮. ೧೦೫)

**ಎಕ್ಕೆವಾಱು** – ಒಂದೇ ಹಾರು (ಎರಡುಂ ಬಲದ ಕಡಿತಲೆಯ ನಾಯಕರ್ ಕೆಯ್ಕೊಂಡು ಬಳ್ಳುಗೆಡೆದು ಎಕ್ಕೆವಾಱುವಾಱೆ ಪಲಗೆವಾಱೆ ಗೂಳಿಸೊರ್ಕಿ ಮಾರ್ಕೊಂಡು ಕಾದೆ: **ಪಂಪಭಾ,** ೧೦. ೮೦ ವ); ಒಂದೇ ಸಮನೆ ಮಿಡಿಯುತ್ತಿರು (ಬೆಳ್ವೇಱೆ ಬಾನಲ್ಗೊಂಡ ವದನಮಂಡಲಮುಂ ಎಕ್ಕೆಪಾಱುವ ಅಳ್ಳೆರ್ದೆಯುಂ: **ಕುಸುಮಾಕಾ,** ೧೩. ೪೬ ವ)

**ಎಗ್ಗ** – ಮೂಢ, ಗಾಂಪ (ಆ ಸುದತಿಯ ರೂಪನಿಂ ಪೆಱತನೆಂದೊಡೆ ಚಿಃ ಕರಂ ಎಗ್ಗನಾಗೆನೇ: **ಆದಿಪು,** ೨. ೭೪)

**ಎಗ್ಗತನ** – ಹೆಡ್ಡತನ (ಕಪಟಹೃದಯನಂ ಧೂರ್ತನಂ ತೊಱೆಯದುದು ಎಗ್ಗತನಮಲ್ತೇ: **ರಾಜಶೇವಿ,** ೧೧. ೯೨)

**ಎಗ್ಗಿಕೆ** – ಹೆಡ್ಡತನ (ಸಂಸಾರಮಂ ನಂಬಿ ದರ್ಶನಮುಮಂ ವ್ರತಮುಮಂ ಕೆಡಿಸುಱದ ಎಗ್ಗಿಕೆಯೆಂದು: **ಧರ್ಮಾಮೃ,** ೩. ೯೩ ವ)

**ಎಗ್ಗು** – ದಡ್ಡತನ (ಕಾಂತಾನೀಕದ ಮರುಳ್ವುದಂ ಮದನಾಕುಳತೆಯಂ ಉಂತೆ ಪೇೞ್ವುದೊಂದು ಎಗ್ಗಲ್ತೇ: **ಆದಿಪು,** ೮. ೫೨); ಬಿಕ್ಕಳಿಸು (ಎಗ್ಗುವೊಡೆ ತಿರಿಗಿ ಕೆಡೆವೊಡೆ ಮೆಯ್ ಝೋಪಿಸುವೊಡೆ .. .. ಮಿಗೆ ರಾಸ್ನಾದಿತೋಯಮಮ ಕುಡೆ ತೀರ್ಗುಂ: **ಲೋಕೋಪಕಾ,** ೯. ೨೩೯); ನಾಚಿಕೆ (ಕಡುಚೆಲ್ವಿಂ ರತಿಗೆಗ್ಗಂ ಪಡೆದು ವಿಲಾಸಕ್ಕೆ ದೇಸಿವಡೆದವನೆನಿಪನೊಳ್ ಪಡೆದು

ಪಿರಿಯರಸಿತನಮಂ ಪಡೆದಳ್ ತನಯರಂ ಅನಂತರಥ ದಶರಥರಂ: **ಪಂಪರಾ,** ೨. ೭೨)

**ಎಚ್ಚ** – ಹಕ್ಕಿಗಳ ಹಿಚಿಕೆ (ವಾಯಸಂ ಎಚ್ಚಮನಿಕ್ಕಿದೊಡೆ ವಾರ್ಧಿಗಕ್ಕುಮೆ ಭಂಗಂ: **ಸಮಯಪ,** ೧೩. ೫೧)

**ಎಚ್ಚು** – ಬಳಿ, ಲೇಪಿಸು (ಕಡಕುಂ ಪರಲ್ಗಳುಂ ಮೆಲ್ಲಡಿಗಳನೆಡೆಯುಡುಗದೊತ್ತಿದೆಡೆಯಿಂ ನೆತ್ತರ್ ಬಿಡದೆಚ್ಚು ಪಾಯೆ ಸಂಯಮಿ ನಡೆದು ಮಹಾಕಾಳದೊಳಗನಾಗಳ್ ಪೊಕ್ಕಂ: **ಸುಕುಮಾಚ,** ೧೨. ೧೮)

**ಎಚ್ಚುಪಾಯ್** – ಚಿಮ್ಮಿ ಹರಿ (ಉಣ್ಮೆಪೊಣ್ಮೆ ಕಣ್ಮಲರ್ಗಳಿಂ ಎಚ್ಚುಪಾಯ್ದುವು ಅರಲಂಬುಗಳಂತೆ ವಿಲೋಚನಾಂಬುಗಳ್: **ಪಂಪಭಾ,** ೪. ೧೦೮)

**ಎಟ್ಟು** – ನಿಲುಕು, ಕೈಗೆ ಸಿಕ್ಕು (ಎಟ್ಟು–ಊರ್ಧ್ವಗತವಸ್ತುಗ್ರಹಣೇ: **ಶಬ್ದಮದ, ಧಾ** ೨೩೪)

**ಎಡಂಬಡು** – ಅಸಮಾಧಾನ (ಪಿರಿದುಂ ಕಾಯ್ಪಿನೊಳ್ ಎಯ್ದೆ ಕಾಯ್ವ ಸಮಕಟ್ಟಿಂ ದೋಷಮಲ್ತು ಅಕ್ಕ ಮಚ್ಚರಮುಂ ಮೋಘಂ ಎಡಂಬಡುಂ ಕಲುಷಮುಂ ಮುನ್ನುಳ್ಳುದು .. .. ನಿಷ್ಕಾರಣಂ ಕಾಯ್ವರೇಂ: **ಪಂಪಭಾ,** ೭. ೩೫); ಎಡವಟ್ಟು (ಗ್ರಾಮ ನಗರ ಖೇಡ ಖರ್ವಡ ಮಡಂಬಗಳೊಳ್ ಎಡಂಬಡಿಲ್ಲದೆ ಚರ್ಯಾಮಾರ್ಗದೊಳ್ ನಡೆವಲ್ಲಿ: **ಆದಿಪು,** ೯. ೧೨೪ ವ)

**ಎಡಗ** – ಕೆಲಸಕ್ಕೆ ಬಾರದವನು (ಈ ಬೇಂಟೆಯ ಬಿನದದೊಳ್ ಎಡಗನನಾಂ ಕಂಡೆಂ ಎಂದು ಕಡುಮುಳಿಸಿಂದಂ ಬಿಡೆ ನಾಯ್ಗಳಂ: **ಪುಣ್ಯಾಸ್ರ,** ೩. ೫೪)

**ಎಡಗಲಿಸು** – ಮೀರು (ಅಂತು ತಮ್ಮ ಮನದೊಳೊಡಂಬಟ್ಟಂತೆ ಮನಮಂ ಎಡಗಲಿಸಿ ಪರಿವ ಜಾತ್ಯಶ್ವಂಗಳೆಲ್ಲಂ ಅಟಿಗಾಳೆಗದೊಳ್ ಸತ್ತೊಡೆ: **ಪಂಪಭಾ,** ೮. ೯೪ ವ)

**ಎಡಚತನ** – ಎಡಗೈಯನ್ನೇ ಬಳಸುವುದು, ಅಪಸವ್ಯ (ಪೊಱಗೆಡೆಯ ರಂಗದೊಳ್ ಲಿಂಗವೆಡಚತನದಿಂದಿರ್ಕುಂ: **ಸಮಯಪ,** ೨. ೬೮)

**ಎಡಪು** – ಎಡವು, ತೊಡರಿ ಬೀಳು (ಭುಜಲತೆಗಳೊಳ್ ಪಸರಿಸಿಯುಂ ಘನಸ್ತನಂಗಳೊಳ್ ಎಡಪಿಯುಂ: **ಆದಿಪು,** ೭. ೧೨೬. ವ); ತಪ್ಪು ಮಾಡು (ಬೆಸಗೊಳ್ಳದೆ ಎಡಪದೆ ಅನುಮಾನಿಸದೆ ಉಚಿತಮೆನಿಪ್ಪ ವಚನದಿಂದೆಸೆದಿರೆ: **ಪಾರ್ಶ್ವನಾಪು,** ೨. ೪೯)

**ಎಡರ್** – ಅಡಚಣೆ, ಕಷ್ಟ (ಬಟಲ್ದಿರೆ ಕಂಡಿರೆ ನಿಮ್ಮಳವಂ ನಿಮಗಂ ಈ ಎಡರಾಯ್ತೇ: **ಪಂಪಭಾ,** ೭. ೩೯)

**ಎಡವಕ್ಕ** – ಎಡದ ಭಾಗ, ಮಗ್ಗುಲು (ಬಲವಕ್ಕದ ಎಡವಕ್ಕದ ಅಂಗರಕ್ಕರ ನೆರವಿಯುಮಂ ಈಕ್ಷಿಸುತ್ತುಂ: **ಆಚವರ್ಧ,** ೯. ೬೦ ವ)

**ಎಡವೆಗಲ್** – ಎಡಭಾಗದ ಹೆಗಲು ಪೊನ್ನ ಬತ್ತಳಿಕೆಯಂ ಬೆನ್ನೊಳ್ಳೆಳೆದು ತರಕಸಮಂ ಎಡವೆಗಲೊಳ್ ತೊಡರ್ಚಿ: **ರಾಜಶೇವಿ,** ೬. ೧೧ ವ)

**ಎಡಱು** – ಪ್ರತಿಭಟಿಸುವ (ಎಡಱುವ ಅಹಿತರಂ ಚಕ್ರಮೆ ಸಾಧಿಸಿದಪ್ಪುದು: **ಆದಿಪು,** ೧೪. ೬೧); ಬಡತನ (ಎಡಱು ಅಱಿದು ಈವ ಕಲ್ಪತರುವೆಂದು ವನೀಪಕಕೋಟಿ ಸಂತಸಂಬಡೆ ಪೊಡೆವ ಒಂದಕಾಳವಿಳಯಾಶನಿ ಎಂದು ವಿರೋಧಿಗಳ್ ಮನಂಗಿಡೆ: **ಪಂಪಭಾ,** ೨. ೯೮); ಸಂಕಷ್ಟ (ಸಂಧಿಯಂ ಮಾಡಲೊಲ್ಲದೆ ಸುಹೃದ್ಬಲಮೆಲ್ಲಮನಿಕ್ಕಿ ಯುದ್ಧಮಂ ಮಾಡಿದ ಜಾತಿಬೆಳ್ ನಿನಗೆ ಅದೇವಿರಿದು ಈ ಎಡಱ್ ಎಂದು ಮುಂದೆ ಬಂದು ಏಡಿಸುವಂತಿರೆ ಆಡಿದುದೊಂದು ಮರುಳ್ ಫಣಿರಾಜಕೇತುವಂ: **ಪಂಪಭಾ,** ೧೩. ೫೪)

**ಎಡೆ** – ಸ್ಥಳ (ನಾಯ್ಪುಗದೆಡೆಯೆಲ್ಲಮಂ ಪುಗಿಸಿ: **ಸುಕುಮಾಚ,** ೨. ೬೩); ಸಂದರ್ಭ (ಗೆಡೆವಚ್ಚಿರ್ವರ್ ಮನಗೊಂಡು ಒಡನೊಡನೆ ಓರಂತು ತಗುಳ್ದು ಝೇಂಕರಿಸಿದೊಡೆ ಎಲ್ಲವಗಾಗೆ ಮೋದಲೆಂದಿರ್ದ ಎಡೆಯೊಳ್ ಗುರು ತನ್ನ ಮಗನಂ ಎಡೆವುಗವೇಟ್ದಂ: **ಪಂಪಭಾ,** ೨. ೭೩); ಜೊತೆಗಾರ (ಒಡವರೆಯದ ತನ್ನ ಎಡೆಗಳ್ ಎನಿಬರ್ ಪಸಾಯಂಬಡೆವ ಅರಸರ ಮಕ್ಕಳೆನಿಬರ್ ಅನಿಬರುಂ ಎಟ್ದಿರ್: **ಶಾಂತಿಪು,** ೮. ೧೧); ಮಧ್ಯೆ (ಅನ್ನೆಗಂ ಎಡೆಯೊಳರಸನ ಪುರೋಹಿತಸೋಮಶರ್ಮನೆಂಬೊಂ: **ವಡ್ಡಾರಾ,** ಪು. ೧೨. ಸಾ. ೩); ಹತ್ತಿರ (ಅದಲ್ಲದೆಯುಂ ಪಲತೆಱದ ಪಱಿಗಳೆಡೆಯೊಳ್ ಬಾಜಿಸುವ ಪದಿರಪಱಿಗಳುಂ ಒತ್ತಾದ ಸನ್ನಗಾಳೆಗಳುಂ: **ಕಾದಂಬ,** ३. ೨೨ ವ); ಊಟ (ಬಾಡಿದ ಮೊಗಮಂ ದಯೆಯಿಂ ನೋಡಿ ಕರಂ ಪಸಿದ ರೂಪಱಿದು ಉಣಲೆಡೆಯಂ ಮಾಡುವರ್ ಆರ್ಹತರ್: **ಸಮಯಪ,** ೪. ೮೩); ಹೆಚ್ಚಾಗಿ (ನಾಡೆ ಎಡೆ ಆವಗಂ ನೆಱೆ ನೀಡುಂ ಕರಂ ಆದಂ ಎಯ್ದೆ ನೂಳದುಪಿರಿದುಂ ನೀಡು ಮಿಗೆ ಕೆನ್ನಂ ಎಲ್ಲಂ ರೂಢಿಯನುಳ್ಳುದುಂ ಇವು ಅವ್ಯಯದೊಳ್ ಅಧಿಕಾರ್ಥಂ: **ಶಬ್ದಮದ,** ३೧೯)

**ಎಡೆಗಟ್ಟು** – ಕಟ್ಟುಪಾಡು, ನಿಯಮ (ಪರಿವ ಮನಕ್ಕೆ ಪಗ್ಗಮಿಲ್ಲಂ ನೋಡುವ ಕಣ್ಗಳ್ಗೆಡೆಗಟ್ಟಿಲ್ಲಂ: **ಅನಂತಪು,** ೧೧. ೬೨ ವ); ಭೇದ (ದೇವರ್ ಎನಗಿತ್ತೊಡಂ ವಸುಧಾವಲಯಮಂ ಆಳ್ವರ್ ಎನ್ನ ತಮ್ಮಂದಿರೆ ಚಿಂತಾ ವಿಷಯಮಲ್ತು ಭರತಂಗೀವುದು ವಸುಮತಿಯಂ ಎಮ್ಮೊಳ್ ಎಡೆಗಟ್ಟುಂಟೇ: **ಪಂಪರಾ,** ೬. ೧೧೯)

**ಎಡೆಗಲಿಸು** – ಜೊತೆಗೂಡಿಸು (ಗಾಳಿಯನೆಡೆಗಲಿಸಿದುದು ವಿನೀಳಘನಾಘನಮನಳಱೆ ಪಱಿದುದು: **ಆದಿಪು,** ೪. ೮೫)

**ಎಡೆಗಾಳ** – ಮಧ್ಯಮ ಗಾತ್ರದ ಗಾಳ (ಗಾಳಕ್ಕೆ: ಗಳಗಾಳಂ, ಸನ್ನಗಾಳಂ, ಎಡೆಗಾಳಂ: **ಶಬ್ದಮದ,** ३೧३, ಪ್ರ)

**ಎಡೆಗಿಡಿಸು** – ನೆಲೆ ತಪ್ಪಿಸು (ಕಷ್ಟತರಮಂ ಕಷಾಯಚತುಷ್ಟಯದ ಎಡೆಗಿಡಿಸಿ ದೇವ ಕಿಡಿಸಿಯೆ ಭವಚಾತುಷ್ಟಯಮಂ: **ಅಜಿತಪು,** ೬. ೭೩)

**ಎಡೆಗಿಡು** – ಸ್ಥಳಾಂತರ ಹೊಂದು; ನೆಲೆಗೆಡು (ನಭಂ ಮುಟ್ಟೆ ಸಿಡಿಲ್ದು ಎಡೆಗಿಡುವಿನಂ ಒಟ್ಟಿದ ಕೈದುಗಳ ಮೇಲೆ ಬಿದ್ದನಂ: **ಆದಿಪು,** ೫. ೮೪)

**ಎಡೆಗಿಱಿ** – ತುಂಬಿಕೊ (ಎಡೆಗಿಱಿದ ಅಬಲೆಯ ಮೊಲೆಯಿಟ್ಟೆಡೆಯೊಳ್ ಕೆಳೆಗೊಂಡು ನಿಂದುವಲ್ಲದೆ ನುಸುಳಲ್ ಪಡೆಯವು ಮದನಾಸ್ತ್ರಂಗಳ್: **ನೇಮಿನಾಪು,** ३. ೨३); ಆಕ್ರಮಿಸು (ಎಡೆಗಿಱಿದೆತ್ತಲುಂ ನಡೆವ ದಂತಿಘಟಾಳಿಯಿಂ: **ಆದಿಪು,** ೧೨. ೬೨)

**ಎಡೆಗುಡು** – ಆಸ್ಪದ ನೀಡು (ಕಳ್ಳರ್ಗೆಡೆಗುಡುವುದುಂ ಅದು ಕಳ್ಳತನಬ್ರತದ ಹಾನಿಯೆಂಬಂ ಜೈನಂ: **ಸಮಯಪ,** ೫. ೪೪)

**ಎಡೆಗೆಯ್** – ಜಾಗ ಕೊಡು, ಅವಕಾಶ ಕೊಡು (ಮಹಾಪ್ರತಿಜ್ಞೆಯೊಳ್ ತೊಡರ್ದನುಂ ಆನೆ ಭೂತಳಂ ಅದಿರ್ಕೆ ಎಡೆಗೆಯ್ ಗೆಲಲ್ ಆರ್ತರ್ಗೆ ಎರಟ್ಬುಡಿಯದಿರ್ ಎಂದು ಒಡಂಬಡಿಸಿದಂ ಹಳಿಯಂ ನಯದಿಂ ವೃಕೋದರಂ: **ಪಂಪಭಾ,** ೧३. ೯೧)

**ಎಡೆಗೊಳ್** – ಅವಕಾಶ ಕಲ್ಪಿಸು (ಬೀರವಟ್ಟಮಂ ಆನಿರೆ ನೀಂ ಈ ಸೂತಸುತಂಗೆ ಎಡೆಗೊಂಡು ಕೈವಾರದಿಂದ ಒಸೆದು ಇತ್ತೊಡಂ ಏನಾಯ್ತು: **ಪಂಪಭಾ,** ೧೨. ೪೩); ಹೊಂದು (ಮಹಾವಿವಾಹಮಂಟಪಮಂ ಪುಗುತಿರ್ಪಾಗಳ್ ಕಂಡು ಹರುಷಮಂ ಎಡೆಗೊಂಡು: **ಗಿರಿಜಾಕ,** ೧೦. ೭೭ ವ)

**ಎಡೆಗೋ** – ನಡುವೆ ಸೇರಿಕೊ, ತೂರಿಕೊ (ಎಡೆಗೋದಿರದಿರಿಂ ಉದ್ದಂ ನುಡಿಯದಿರಿಂ ನೃಪತಿ ನುಡಿಯೆ ನುಡಿಯಿಂ: **ಆದಿಪು,** ೯. ೬)

**ಎಡೆದೆಱಪು** – ನಡುವಣ ಅವಕಾಶ, ಬಿಡುವು (ತೆನೆಯ ತುಱುಗಲ ಎಡೆದೆಱಪುಗಳಿಂ ಸೊಗಯಿಸಿದುವು .. .. ಭಗಣಂ: **ಲೀಲಾವತಿ,** ೭. ೪)

**ಎಡೆನುಡಿ** – ನಡುವಣ ನುಡಿ (ಎಡೆಯ ನುಡಿ=ಎಡನುಡಿ: **ಶಬ್ದಮದ,** ೧೭೩ ಪ್ರ)

**ಎಡೆನೆಱೆ** – ಜಾಗ ಸಾಕಾಗು (ಎಡೆ ನೆಱೆಯದು ಭುವನತಳಂ ನಡೆವ ಚತುರ್ಬಲಕೆ: **ಆದಿಪು,** ೧೧. ೩೪)

**ಎಡೆಮಡಗು** – ತಡಮಾಡು (ತುಡು ಪಾಶುಪತಮನೆನೆ ನರನೆಡೆಮಡಗದೆ ತುಡೆ ದಿಶಾಳಿ ನಡುಗಿದದು: **ಪಂಪಭಾ,** ೧೧. ೧೫೨); ಅವಕಾಶ ಕೊಡು (ಎಡೆಮಡಗದೆ ಸಂದಿಸಿ ಮೀವ ಉಡುವ ತುಱುಂಬುವ ಜಲಾಂಬರಸ್ರಕ್ತತಿಯಿಂ ನಡೆದರ್ ಮಜ್ಜನವಳ್ಳರ ಮಡಿವಳ್ಳರ ಮಾಲೆಗಾಱರಂದದೆ ದಿವಿಜರ್: **ಅಜಿತಪು,** ೫. ೯೩); ದಾಕ್ಷಿಣ್ಯ ತೋರಿಸು (ಪಡೆದರ್ ತಾಯುಂ ತಂದೆಯುಂ ಒಡಲಂ ಪ್ರಾಣಮುಮಂ ಅವು ಅವರವು ಕೆಯ್ಯೆಡೆಯಂ ಕುಡುವುದು ಅರಿದಾಯ್ತೆ ನೀಂ ಎನಗೆ ಎಡೆಮಡಗದೆ ಬೆಸಪ ತೊಟ್ಟುವೆಸನಂ ಬೆಸಸಿಂ: **ಪಂಪಭಾ,** ೯. ೮೧)

**ಎಡೆಮಾಡಿಸು** – ಊಟ ಬಡಿಸು (ಬಂದಳೆ ದೇವಿ ಪಂಕ್ತಿಗೆಡೆಮಾಡಿಸಿದಪ್ಪಳೆಚಂಡಶಾಸನಂ ಬಂದನೆ: **ಅನಂತಪು,** ೧೧. ೬೪)

**ಎಡೆಮಾಡು** – ಅವಕಾಶವೊದಗಿಸು (ಆತನ ಪಡೆಗೆ ನಡೆಯಲೆಡೆಮಾಡಿದಂತೆ ಬಳ್ವಳಾದ ದೆಸೆಗಳುಂ: **ಆದಿಪು,** ೧೧. ೫ ವ); ಒಪ್ಪಿಸು (ಪರಚಕ್ರಕ್ಕೆಡೆಮಾಡಿ ಭೂವಲಯಮಂ ಭಂಡಾರಮಂ ಬಾಲವೃದ್ಧರನೀಡಾಡಿ ತಪಕ್ಕೆ ಪೋಪುದು ಅನಯಂ: **ಪಂಪರಾ,** ೨. ೩೨)

**ಎಡೆಯ** – ದನಗಾಹಿ (ಎಡೆಯಂ ಅರಸಾದೊಡೆ ಕೊಡೆಯ ಕಾವು ಮೇಗಾದುದೆಂಬಂತೆ: **ಧರ್ಮಾಮೃ:** ೨. ೭೯ ವ)

**ಎಡೆಯಱೆ** – ಅವಕಾಶ ಅರಿತುಕೊ (ಒಳಗು ಪೊಱಗು ಬಲಂ ಎಡಣ ಎಂಬೀ ಎಡೆಯಱೆಱೆದು: **ಗದಾಯು,** ೮. ೧೬)

**ಎಡೆಯಾ**ಗು – ಕಡಿದುಹೋಗು (ವಯೋಧಿಕರ್ ಈಗಳುಂ ಆಗಳುಂ ಅಱೆವರಾದೊಡಂ ಇನಿಸು ಎಡೆಯಾಗಿರ್ದ ಸಂಬಂಧಮಂ ನೀನಿರ್ದು ಪೊಸಯಿಸುವುದು: **ಶಾಂತಿಪು,** ೨. ೭೭ ವ)

**ಎಡೆಯಾಡು** – ಓಡಾಡು, ತಿರುಗಾಡು (ಪೆಣ್ತಂಡಂ ಇಂದ್ರಾಣಿಯೆಂದುದನೆಂದೆಂದು ಎಡೆಯಾಡುತಿರ್ಪುದು: **ಆದಿಪು,** ೮. ೨೨)

**ಎಡೆಯಿಡು** – ಅವಕಾಶ ನೀಡು (ಅವಧಿಯನೊಂದು ತಿಂಗಳೆಡೆಯಿಟ್ಟನಿಯಂ ತಡೆದಿರ್ಪನಲ್ಲಂ ಎಂಬವಸರದೊಳ್: **ಆದಿಪು,** ೧೨. ೪೩)

**ಎಡೆಯುಡುಗು** – ವಿಚ್ಛೇದಗೊಳ್ಳು, ಕೊಂಡಿ ತುಂಡರಿಸು (ನಿನಗೆ ಎಡೆಯುಡುಗದೆ ಕುಡುಗುಂ ಉಚಿತಮುಕ್ತಿಶ್ರೀಯಂ: **ಆದಿಪು,** ೫. ೫೦)

**ಎಡೆಯೊತ್ತು** – ನರ್ತನದ ಗತಿ (ತಡದಡವಾರದೆ ಗತಿಯೊಳ್ ತೊಡರದೆ ರಂಜಿಸಿದರ್ ಅಮರಲಂಜಿಕೆಯರ್ ಜಾಣ್ಗೆಡಿದಾಡಿ ಮೊದಲ ತಾಣದೊಳ್ ಎಡೆಯೊತ್ತಿನೊಳೆಸೆವ ಕಡೆಯ ತಾಳದ ಯತಿಯೊಳ್: **ಅಜಿತಪು,** ೫. ೪೧)

**ಎಡೆವಗಲ್** – ನಡುಹಗಲು (ಪೊಸ ಮುತ್ತಿನ ಮೊತ್ತದ ಬೆಳಗು ಚಂದನಾಲೇಪದ ಪದನಂ ಕುಡುವುದು ಅಲೆವ ರವಿಗೆ ಎಡೆವಗಲೊಳ್: **ಯಶೋಧಚ,** ೧. ೨೯)

**ಎಡೆವಟ್ಟಲ್** – ಊಟದ ತಟ್ಟೆಯ ಜೊತೆಗಿನ ಬಟ್ಟಲು (ಎಡೆವಟ್ಟಲ್ಗೆ ಅಡ್ಡಣಿಗೆಗೆ ಪಡಿಗಕ್ಕೆ ತಗುಳ್ದ ಪಟಿಯ ಬಿತ್ತರಿಗೆಗೆ ತಕ್ಕಡೆಯಱೆದು ಪಂತಿಕಾಱರ ನೆಡೆಯಱೆದು ವಿಲಾಸದಿಂದಮಿರಿಸಿದಾಗಳ್: **ಸುಕುಮಾಚ,** ೧೧. ೨೬)

**ಎಡೆವಱ** – ನಡುವಣ ಬರ[ಗಾಲ] (ಎಡವಱದೊಳ್ ಎಱಗಿ ಬಱಸಿಡಿಲ್ ಇಡುಮುಡುಕನೆ ಪೊಡೆದುದೆನಿಸಿ ಪಾಂಡ್ಯನ ರಥದ ಅಚ್ಚು ಉಡಿದು ಅಟ್ಟೆಗೆತಟ್ಟೆ ಕೊಂಡುವು ಕಡುಗೂರಿದುವೆನಿಪ ಗುರುತನೂಜನ ಕಣೆಗಳ್: **ಪಂಪಭಾ,** ೧೨. ೮೨)

**ಎಡೆವಱೆ** – ಮಧ್ಯೆ ತುಂಡರಿಸಿಹೋಗು (ಹಿರಣ್ಯಗರ್ಭಬ್ರಹ್ಮರಿಂ ತಗುಳ್ದ ಅವ್ಯವಚ್ಛಿನ್ನಮಾಗಿ ಬಂದ ಸೋಮವಂಶಂ ಈಗಳ್ ಎಮ್ಮ ಕುಲಸಂತತಿಗಂ ಆರುಮಿಲ್ಲದೆ ಎಡವಱೆದು ಕಿಡುವಂತಾಗಿರ್ದುದು: **ಪಂಪಭಾ,** ೧. ೮೪ ವ)

**ಎಡೆವಱೆಯದೆ** – ಮಧ್ಯೆ ಜಾಗ ಬಿಡದೆ (ಸಭಾಮಂಟಪದೊಳ್ ಒಡ್ಡೋಲಂಗೊಟ್ಟು ಎಡೆವಱೆಯದೆ ಅವರವರವರ ಪಡೆದ ಪ್ರತಿಪತ್ತಿಗಳಂ ಅಱೆದು ಇಕ್ಕಿದ ಲೋಹಾಸನಂಗಳೊಳಂ .. .. ಕುಳ್ಳಿರಿಸಿ: **ಪಂಪಭಾ,** ೯. ೨೮ ವ)

**ಎಡೆವಾತು** – ನಡುವಣ ಮಾತು (ನಿನ್ನ ಪತಿಯಂ ಬರವೇೞ್ ಎಡೆವಾತನಟ್ಟಲೇಂ ಕದನದೊಳಾನೆ ಪೇೞ್ದಪೆಂ: **ಚಂದ್ರಪ್ರಪು,** ೬. ೨೪)

**ಎಡೆವಾಯ್** – ಮಧ್ಯೆ ಬರು (ಕರಡಿಯಂತೆ ಪಿರಿಯರ ನುಡಿಗೆ ಎಡೆವಾಯದೆ: **ಧರ್ಮಾಮೃ,** ೫. ೬೪ ವ)

**ಎಡೆವಿಡಿಸು** – ಜಾಗ ಕೊಡು (ಸರಲೆನಿತು ಅನಿತುಮಂ ಎಡೆವಿಡದೆ ತಱೆದು ತಲೆಯಂ ತಱೆಯಾ: **ಪಂಪಭಾ,** ೧೨. ೧೬೭)

**ಎಡೆವುಗು** – ಮಧ್ಯೆ ಪ್ರವೇಶಿಸು (ಗೆಡೆವಚ್ಚಿರ್ವರ್ ಮನಗೊಂಡು ಒಡನೊಡನೆ ಓರಂತು ತಗುಳ್ದು ಝೇಂಕರಿಸಿದೊಡೆ ಎಲ್ವಡಗಾಗೆ ಮೋದಲೆಂದಿರ್ದ ಎಡೆಯೊಳ್ ಗುರು ತನ್ನ ಮಗನಂ ಎಡೆವುಗವೇಟ್ಟಂ: **ಪಂಪಭಾ,** ೨. ೭೩);

**ಎಡೆವೆಱು** – ಸ್ಥಳವನ್ನು ಪಡೆ, ಅವಕಾಶ ಪಡೆ (ಎಡೆವೆತ್ತೊರ್ಮೆಯೆ ಮುಪ್ಪು ಕುತ್ತದೊಳಡಂಬಟ್ಟೊತ್ತೆ ಮತ್ತಲ್ಲಿ ಮೆಟ್ಟುಡದೆ ಆರ್ತಣ್ಮೆ ತಪಕ್ಕೆ ಪೋಪ ಪದದೊಳ್; **ಆದಿಪು,** ೨. ೩೮)

**ಎಡೆವೇಡು** – ಜಾಗಕ್ಕಾಗಿ ಬೇಡು (ಓರ್ವ ಪಾರ್ವಂ ವಿಸ್ತೀರ್ಣ ಜೀರ್ಣ ಕರ್ಪಟಾವೃತ ಕಟಿತಟನುಂ ಆಗಿ ಬಂದು ಕಣ್ಮುಚ್ಚಲ್ ಎಡೆವೇಡೆ ತನಗವರ್ ಪಾಸಲ್ಕೊಟ್ಟ ಕೃಷ್ಣಾಜಿನಮಂ ಪಾಸಿ ಪಟ್ಟಿರ್ದನಂ: **ಪಂಪಭಾ,** ೩. ೩೧ ವ)

**ಎಡೆವೇೞ್** – ಕಾರಣವನ್ನು ತಿಳಿಸು (ನನಗೆ ಎಡೆವೇೞದೆ ಪೇೞ್ ಆರ್ಗೆ ಪೇೞ್ವೆಂ: **ಪಂಪಭಾ,** ೪. ೬೧)

**ಎಡೆವೊತ್ತು** – ಅದುಮು (ಮಸಗಿ ಬೆಸದಿರ್ದು ವಿವರಮನಸಿಯದಱೆಡೆವೊತ್ತಿ ಪೊಕ್ಕು ಕೆಲನಂ ಕೊರ್ಬುತ್ತೆಸೆದು ಬಿದಿರ್ದಾದೇಟ್ಗೇಟ್ಗೆ ಸಮಂಜಸನಿಕ್ಕಿ ಮಿಕ್ಕನರಿವಾಹಿನಿಯಂ: **ಕವಿರಾಮಾ,** ೧. ೬೬)

**ಎಡೆವೋಗು** – ಸಂಕೇತಸ್ಥಾನಕ್ಕೆ ಹೋಗು (ಅಲರ್ಗಣ್ಣೊಳ್ ಸ್ಮರನಿರ್ದಪನಕ್ಕುಂ ಎಡೆವೋಪಾ ಜೋಡೆ ಕಾಮಂಗೆ ಕಾದಲೆಯಕ್ಕುಂ: **ಪಂಪಭಾ,** ೪. ೮೪)

**ಎಡ್ಡ** – ಸುಂದರ (ಭ್ರೂಲಾಸ್ಯಮಂ ನೀಳ್ದಪಾಂಗದ ಬೆಳ್ದಿಂಗಳಂ ಎಡ್ಡಮಪ್ಪ ಕಬರೀವಿಸ್ತಾರಮಂ ತೋಱೆದಳ್: **ಆದಿಪು,** ೧೧. ೧೭)

**ಎಡ್ಡಮಾಗು** – ಸುಂದರವಾಗು, ಶೋಭಿಸು (ನಾನಾಶಕ್ತಿಯರ್ ಬೇಡಿತಿಯರ ಎಸಕಮಂ ತಾಳ್ದು ಕಣ್ಗೆಡ್ಡಮಾದರ್: **ಶಬರಶಂ,** ೩. ೭)

**ಎಡ್ಡಮಿಂಡಿ** – ಚೆಲುವೆ ಹೆಣ್ಣು ಮೆಲ್ಲನೆ ಮರಳ್ದು ಮಱೆದೊಱಗಿದ ಎಡ್ಡಮಿಂಡಿಯರ ಮೇಲುದು ಸೆಳೆದು ಕುಸಿದು ಕೆಲಕ್ಕೆ ಎೞೆದು: **ಲೀಲಾವತಿ,** ೩. ೨೦ ವ)

**ಎಣ್** – ಸಮಾಸವಾಗುವಾಗ ಎಂಟು ಎಂಬುದಕ್ಕೆ ಬರುವ ರೂಪ ನರನ ರಥಮಂ ಪಡುವು ಎಣ್ಗಾವುದುವರಂ ಸಿಡಿಲ್ವಿನಂ ಎಚ್ಚು ಅಚ್ಚುಡಿಯೆ ಭುಜಬಲದ ಹರಿಯ ಉರದೆಡೆಯಂ ಬಿರಿಯೆಚ್ಚು ಮೆಱೆದಂ ಅಳವಂ ಭೀಷ್ಮಂ: **ಪಂಪಭಾ,** ೧೧. ೨೦); ಎಣಿಕೆಮಾಡು (ಎಣ್ ಎನೆ ಲೆಕ್ಕಿಪುದುಂ: **ರನ್ನ ನಿಘಂಟು,** ೬)

**ಎಣಿಕೆ** – ಲೆಕ್ಕ, ಅಂದಾಜು (ಅಳತೆಗೆ ತೂಕಕ್ಕೆ ಎಣಿಕೆಗಂ ಒಳಗಾದುವು ಸಕಳವಸ್ತುಗಳ್ : **ಆದಿಪು,** ೧೦. ೫೫)

**ಎಣಿಕೆಗಟಿ** – ಲೆಕ್ಕಕ್ಕೆ ಮೀರಿದ (ಎಣಕೆಗಟಿದ ಕರಿ ತುರಗ ವರೂಥ ಪದಾತಿಗಳುಮಂ ನೋಡಿ: **ಆದಿಪು,** ೧೪. ೨ ವ)

**ಎಣಿಕೆದಪ್ಪು** – ಲೆಕ್ಕಾಚಾರ ತಪ್ಪು (ಕೆಳದಿಗೆ ಏವೆನೆಂಬುದುಂ ಅವಳ್ ಎಣಿಕೆದಪ್ಪಿಂದಕ್ಕೆ ತಕ್ಕುದಂ ಇಂತೆಂದಳ್: **ಚಂದ್ರಪ್ರಪು,** ೮. ೭೮ ವ)

**ಎಣಿಕೊಳ್** – ಲೆಕ್ಕಹಾಕು (ಎಣಿಕೊಂಡ ಕಸವರಂ ತವನಿಧಿಯಂತೆ ತವದಿರ್ದಪ್ಪುದೆ ನಿನ್ನ ಕೈಯಿಂದಂ ಕೊಳ್ಳೆ ಪೋಗಬ್ಬಾ: **ವಡ್ಡಾರಾ,** ಪು. ೧೭, ಸಾ, ೪)

**ಎಣಿಲ್** – ಸುಂದರಿ, ವೇಶ್ಯೆ (ಇರುಳ್ ತೋಟಿಲ್ದು ಎಣಿಲ್ಗೆ ಒತ್ತೆಯಿಟ್ಟು ಪಟ್ಟಾತಂ: **ಸುಕುಮಾಚ,** ೭. ೨೭ ವ)

**ಎಣಿಸು** – ಲೆಕ್ಕಹಾಕು (ಭುವನಜನಕ್ಕೆ ಅಳೆಯಲ್ ತೂಗಲ್ಕೆ ಎಣಿಸಲ್ಕೆ ಅಳುಂಬಮೆನಿಸಿದುವು ನಿನ್ನ ಗುಣಗಣಮರ್ಹಾ: **ಆದಿಪು,** ೧೦, ೫೪); ಪರಿಗಣಿಸು (ರಸಮಂ ಸೋದಿಸೆಯುರ್ಕಿನ ಪುಡಿಯೆನಿಪಾ ದುಷ್ಕವಿತೆಗಳನೆಣಿಸಲೇಕೆ ಈ ಕೃತಿಯೊಳ್: **ಗಿರಿಜಾಕ,** ೧. ೨೨)

**ಎಣೆ** – ಸಮ (ಭೃಂಗೀನಿವಹದ ಗಱೆ ಗಱೆಗೆಣೆಯೆನೆ ಗವಾಕ್ಷಂ ಅಂಗಜನ ದೊಣೆಗೆ ತೊಣೆಯೆನಿಸಿರ್ಕುಂ: **ಆಚವರ್ಧ,** ೧. ೬೨)

**ಎಣೆಗಂ ತೊಣೆಗಂ** – ಸರಿಸಮಾನಕ್ಕೆ (ಅಱೆಯದೆಯುಂ ವಿಚಾರಿಸದೆಯುಂ ನೃಪ ನೀಂ ನೆಗೞ್ವನ್ನನಲ್ಲಯ್ ಆನಱೆವೆಂ ಅದಂತೆ ಕರ್ಣನ ಎಣೆಗಂ ತೊಣೆಗಂ ನೃಪರಾರುಮಿಲ್ಲ: **ಪಂಪಭಾ,** ೧೨. ೧೦೦)

**ಎಣೆಗೊಳ್** – ಸಮನಾಗು (ಗರ್ಜಿಸುತ ಅಣಿಯರಂ ಎಣೆಗೊಂಡ ಇಭಂಗಳಿಂ ಭರಿಕೈಗಳ್ ಪೆಣೆದಿರೆ ಕಾದಿಸಿ: **ರಾಜಶೇವಿ,** ೧೩. ೮೬)

**ಎಣೆಬಲ** – ಸಮಬಲ (ತಮದ ತೋಱೆಯುಕ್ಕುವಂತೆ ಎಣೆಬಲಂ ನಡೆಯೆ: **ಹರಿವಂಶ,** ೧೧. ೬೨ ವ)

**ಎಣೆವಕ್ಕಿ** – ಜೋಡಿಹಕ್ಕಿ, ಚಕ್ರವಾಕ (ಬಿರಯಿಗಳೆಂಬ ಎಣೆವಕ್ಕಿಗಳಂ ನಿರಂತರಂ ಮಱುಗಿಸುವಂತು ಕಟ್ಟಿಲೆಯನೀವ ಎಲೆವಳ್ಳಿಗಳೆತ್ತ ನೋಟಿಯೊಡ್ಡಂ: **ಲೀಲಾವತಿ,** ೬. ೧೧೨)

**ಎಣ್ಗಾವುದು** – ಎಂಟು ಗಾವುದ (ನುಡಿವಳಿಗೆ ನರನ ರಥಮಂ ಪಡುವು ಎಣ್ಗಾವುದುವರಂ ಸಿಡಿಲ್ವಿನಂ ಎಚ್ಚು ಅಚ್ಚುಡಿಯೆ ಭುಜಬಲದ ಹರಿಯ ಉರದೆಡೆಯಂ ಬಿರಿಯೆಚ್ಚು ಮೆಱೆದಂ ಅಳವಂ ಭೀಷ್ಮಂ: **ಪಂಪಭಾ,** ೧೧. ೨೦)

**ಎಣ್ಬಾಸಿರ್ವರ್** – ಎಂಟು ಸಾವಿರ ಮಂದಿ (ಎಲ್ಲರುಮಂ ಆಚಾರ್ಯರ್ ಮಾಡಿ ದ್ರವಿಟವಿಷಯಕ್ಕೆ ಪೋಗಿಂ ಎಂದು ವಿಶಾಖಾಚಾರ್ಯರೊಡನೆ ಎಣ್ಬಾಸಿರ್ವರ್ ರಿಸಿಯರಂ ಅಟ್ಟಿದರ್: **ವಡ್ಡಾರಾ,** ಪು ೮೮, ಸಾ ೨೨)

**ಎಣ್ದೆಸೆ** – ಎಂಟು ದಿಕ್ಕು (ಎಲ್ಲಿದಂ ಭೀಮಂ ಎಂದು ಎಣ್ದೆಸೆಯಂ ನೋಡುತ್ತೆ .. .. ನಿಜಭುಜಗದೆಯಂ ತೂಗಿದಂ ಧಾರ್ತರಾಷ್ಟ್ರಂ: **ಗದಾಯು,** ೭. ೩೦)

**ಎಣ್ಬತ್ತು** – ಎಂಬತ್ತು (ಎಂಟರ್ಕೆ: ಎಣ್ಬತ್ತು, ಎಣ್ಬಾಸಿರಂ, ಎಣ್ದೆಸೆ: **ಶಮ್ದಮದ,** ೨೦೦, ಪ್ರ)

**ಎಣ್ಬರ್** – ಎಂಟು ಮಂದಿ (ವಾಯು ಯಕ್ಷೇಶನ ಕ್ರಮದಿಂ ಅವರ್ ಎಣ್ಬರ್ ಅಂತುತ್ತಮನ್ಯೆ: **ಕವಿರಾಮಾ,** ೩. ೯೬)

**ಎಣ್ಬೆರಲ್** – ಎಂಟು ಬೆರಳು[ಗಳಷ್ಟು ಅಗಲವಾದ] (ನಿನ್ನ ದಯೆಗೆಯ್ದು ವೀರವಟ್ಟಮೆಂಬುದು ಎನಗೆ ಎಣ್ಬೆರಲ ಪಟ್ಟಂ ಎಂಬುದುಂ ಬದ್ದವಣಂ ಬಾಜಿಸಿ ಕರ್ಣನಂ ಕನಕಪೀಠದೊಳ್ ಕುಳ್ಳಿರಿಸಿ: **ಪಂಪಭಾ,** ೧೨. ೫೧ ವ)

**ಎತ್ತ** – ಎಲ್ಲಿ, ಯಾವ ಕಡೆ (ಈ ಗಣಿದಮಂ ಎತ್ತಱೆಗುಂ ಅಶ್ರುತ ಪ್ರಕೃತಿಜನಂ: **ಕವಿರಾಮಾ,** ೧. ೮)

**ಎತ್ತಂ** – ಎಲ್ಲೆಡೆಯೂ (ನಡೆದರ್ ಎತ್ತಂ ಬೀರರ್ ಆ ಪಾಡಿಯೊಳ್: **ಕಬ್ಬಿಗಕಾ,** ೨೫೩)

**ಎತ್ತಕ** – ಸತ್ತಿಗೆ ಮರ (ಬೊಬ್ಬುಲಿ ಮಾವು ಅಂಬಟೆ ಕಕ್ಕೆ ಬಿಕ್ಕೆ ಬಕುಳಂ ಬೇವು ಎತ್ತಕಂ ಕಿಂಶುಕಂ: **ರಾಜಶೇವಿ,** ೫. ೫೬)

**ಎತ್ತಣ** – ಎಲ್ಲಿಯ (ಇನ್ನೆಲ್ಲಿಯ ಧೃತರಾಷ್ಟ್ರಂ ಎತ್ತಣ ಗಾಂಗೇಯಂ ಎಲ್ಲಿಯ ಸಂಧಿಕಾರ್ಯಂ: **ಗದಾಯು,** ೨. ೮ ವ)

**ಎತ್ತಣಂ** – ಎಲ್ಲಿಯವನು (ಎಲ್ಲಿದಂ ಎತ್ತಣಂ ಎಂದು ಕರ್ಣನ ಕಳೇವರಮಂ ನೋಡಿ ನೋಡಲಾಱದೆ ಕಣ್ಗಳಂ ಮುಚ್ಚಿ: **ಪಂಪಭಾ,** ೧೩. ೫೮ ವ)

**ಎತ್ತಣದು** – ಎಲ್ಲಿಯದು (ಚದುರಿದು ಎತ್ತಣದು ಆಕೆಗೆ ಎಂದು ಕಣ್ಗೊಂಡ ವಿಲಾದಿಂ: **ಅಜಿತಪು,** ೬. ೧೧೭)

**ಎತ್ತಲ್** – ಎಲ್ಲಿ, ಎಲ್ಲ ಕಡೆಯೂ (ಶಂಖನಿಸ್ವನದಿಂದ ಅತ್ತಲುಂ ಇತ್ತಲುಂ ಸೊಗಯಿಸುಗುಂ ಸೊಗಯಿಸುಗುಂ: **ಸುಕುಮಾಚ,** ೯. ೫೯)

**ಎತ್ತಱತತ್ತಱ** – ಅಸ್ತವ್ಯಸ್ತತೆ (ಹಱಗವಿಗಳ ಕಬ್ಬಂಗಳ ಹೊಱಗಳಿಕಗಕರದ ಹೊಲಿಗೆ ಬಿರ್ಚಿದೊಡೆ ಎಲ್ಲಂ ಬಱಿ ತಾಱೆಗ ಬೀಱೆಗಂ ಎತ್ತಣ ತತ್ತಣ ಎಕ್ಕಸಕ್ಕಂ ಅಸ್ತವ್ಯಸ್ತಂ: **ಗಿರಿಜಾಕ,** ೧. ೨೩)

**ಎತ್ತಿಸು** – ಮೇಲೆ ಹಿಡಿಸು (ಧ್ವಜಪತಾಕೆಗಳನೆತ್ತಿಸಿ: **ವಡ್ಡಾರಾ,** ಪು, ೮೩. ಸಾ. ೨೭)

**ಎತ್ತಾನುಂ** – ಯಾವಾಗಲಾದರೂ (ಆಂ ಬದರಿಕಾಶ್ರಮದ ಉಪವನದೊಳಿರ್ಪೆಂ ಅಲ್ಲಿಗೆ ಎತ್ತಾನುಂ ಬಂದಿರಪ್ಪೊಡೆ ಎನ್ನಾರ್ಪ ಶಕ್ತಿಯಿಂ ಭಕ್ತಿಗೆಯ್ವೆಂ: **ಪಂಚತಂತ್ರ,** ೧೭೯ ವ)

**ಎತ್ತು** – ದಾಳಿ ಮಾಡು (ಉಸುರದೆ ಎತ್ತು ಅರಿಸೈನ್ಯದ ಮೇಲೆ ಪಾರ್ಥ ಬಂಧುಗಳೆನವೇಡ: **ಸಮಯಪ,** ೧೦. ೧೬೩)

**ಎತ್ತುಂಗೋಲಂ** – ಹರಿತವಾದ ಬಾಣದಂತೆ ಅಪಾಯಕಾರಿ (ಇವನೆತ್ತುಂಗೋಲಂ ನೀಮಿವನಂ ನಂಬದಿರಿಂ ಎಂದು ಕಂಡವರ್ಗಳ್ಸಾಱುವರ್: **ಸಮಯಪ,** ೫. ೪೧)

**ಎದೆಗುದಿಪ** – ಎದೆಗುದಿತ, ಹೃದಯ ವೇದನೆ (ಒದೆವಡೆದ ಅಸುಗೆ ತಳಿರ್ತ ಎದೆಗುದಿಪಮಂ ಒದವಿಸುವೊಡೆ ಆರೊ ಬಾರಿಪರ್: **ಲೀಲಾವತಿ,** ೧೧. ೪೮)

**ಎನ್** – ಮಾತಾಡು (ಎನ್–ಭಾಷಣೇ: ಶಬ್ದಮದ, ಧಾ, ೪೩೧); ಆಗಿದ್ದೇನೆ (ಕವಿ ಕೇಶವನೆಂ ಯೋಗಿಪ್ರವರ ಮಲ್ಲಿಕಾರ್ಜುನ ಸುತನೆಂ: **ಶಬ್ದಮದ,** ೨)

**ಎನತು** – ನನ್ನದು (ನೀನೀಯೆ ಬಂದುದೆನಗೆ ಇದಂ ಎನತು ಎಂದು ಏಂ ನಿನಗೆ ಬಗೆಯಲಪ್ಪುದೆ: **ಆದಿಪು,** ೧೪. ೧೪೪)

**ಎನತ್ತು** – ನನ್ನದು (ದ್ವಿರ್ಭಾವಕ್ಕದಕ್ಕೆ: ಮುನಿಸಿದು ನಿನತ್ತು ಸೈರಣೆ ಎನತ್ತು ಕೆಳದಿಗೆ ತನನತುಸಂದೆಸುವೆಸಕಂ: **ಶಬ್ದಮದ,** ೧೫೮ ಪ್ರ, ೨)

**ಎನಸುಂ** – ಎಷ್ಟೋ, ತುಂಬ (ಕುರುರಾಜಂ ವಿದ್ಯಾಧರಕರಣದೆ ನೆಗೆದು ಅಂಬರಕ್ಕೆ ಗದೆಯಂ ಕ್ರಮದಿಂ ತಿರುಪೆ ಧರಾಚಕ್ರಂ ಕೋವರಚಕ್ರಂ ತಿರಿವ ತೆಱದೆ ತಿರಿದತ್ತು ಎನಸುಂ: **ಗದಾಯು,** ೮. ೨೪)

**ಎನಿತಾನುಂ** – ಎಷ್ಟೆಷ್ಟೋ, ಹಲವು ಬಗೆಗಳಲ್ಲಿ (ಎಂದು ಎನಿತಾನುಂ ತೆಱದೊಳ್ ಅಳಿಪಿನ ಲಲ್ಲೆಯ ಚೆಲ್ಲದ ಪುರುಡಿನ ಮುಳಿಸಿನ ನೆವದ ಪಡೆಮಾತುಗಳಂ ನುಡಿದುಂ ಕಾಲ್ವಿಡಿದುಂ ಅಚಳಿತಧೈರ್ಯನ ಮನಮಂ ಚಲಿಯಿಸಲಾಱದೆ: **ಪಂಪಭಾ,** ೭. ೯೪ ವ)

**ಎನಿತ್ತು** – ಎಷ್ಟು (ಎನಿತ್ತೆನಿತ್ತಂಬುಜಪತ್ರನೇತ್ರೆಯಾ ಘನಸ್ತನಂಗಳ್ ಬಳೆಗುಂ ಕಿರಾತೆಯಾ: **ಕಾವ್ಯಾವಲೋ,** ೩೫೯)

**ಎನಿವಿರಿದು** – ಎಷ್ಟು ದೊಡ್ಡದು (ಕುಸುಮಕೋಮಳೆಯ ಈ ವಿರಹಾಗ್ನಿಯಿಂದಂ ಇನ್ನೆನಿವಿರಿದಪ್ಪ ಅವಸ್ಥೆಯುಮಂ ಎಯ್ದುಗುಮೋ: **ಆಚವರ್ಧ,** ೪. ೪೦)

**ಎನಿಸು** – ಎನ್ನುವಂತೆ ಮಾಡು, ಅನ್ನಿಸು (ನೆಗೞ್ದಾದಿ ಕ್ಷತ್ರಿಯರೊಳಂ ಇಲ್ಲೆನಿಸುದುದೀ ತ್ರಿಜಗದೊಳ್ ಎಸಗಿದ ಎಸಕಂ ಅರಿಕೇಸರಿಯಾ: **ಪಂಪಭಾ,** ೧. ೨೧); ಎಷ್ಟು (ಎನಿಸು ಶಕ್ತಿಯುಳ್ಳೊಡಂ ಔಷಧಂ ತಱಿಂಟುದಲೆಯೊಳ್ ರೋಮಮಂ ಪುಟ್ಟಿಸಲಾರದು: **ಧರ್ಮಾಮೃ,** ೭. ೩೯ ವ)

**ಎನ್ನಂ** – ಎಂತಹುದು (ಪತಿವ್ರತಾಗುಣದಿಂ ಅಗ್ಗಳಮಾವುದುಂಟೆ ಜಾನಕೀದೇವಿಗೆ ರಾವಣಂ ಮುಳಿದು ಮಾಡ್ಪ ಉಪಸರ್ಗಂ ಎನ್ನಮಾದೊಡಂ ಬೇವಸಮಂ ಮನಕ್ಕೆ ತರಲಾಱವೆ: **ಪಂಪರಾ,** ೧೧. ೧೬೭)

**ಎನ್ನನ್** – ಎಂಥವನು (ಪರಮಾತ್ಮಂ ಎನ್ನನ್ ಎಂದೊಡೆ ಚರಮಾಂಗಪ್ರಮಿತಂ ಅಖಿಲಲೋಕ ಸಮಾನಂ ನಿರವಯವಂ ನಿತ್ಯಂ: **ಯಶೋಧಚ,** ೪. ೨೯)

**ಎನ್ನನಾದೊಡಂ** – ಎಂತಹವನಾದರೂ (ರಾಜನೀತಿಯಂ ಅಱಿವಿರಪ್ಪುದಱಿಂ ಎನ್ನನಾದೊಡಂ ಮನ್ನಿಸವೇೞ್ಪುದು: **ಪಂಚತಂತ್ರ,** ೮೭ ವ)

**ಎನ್ನೆಗಂ** – ಎಲ್ಲಿಯವರೆಗೆ (ಇದು ಸಹಜಂ, ಅನ್ನೆಗಂ ಎಯ್ದುಗುಂ ಎನ್ನೆಗಮುದಾತ್ತಮುಕ್ತಿಶ್ರೀಯಂ: **ಆದಿಪು,** ೯. ೫೨)

**ಎನ್ನೆವರಂ** – ಎನ್ನೆಗಂ (ಗಕಾರ ಲೋಪಕ್ಕೆ: ಎನ್ನೆವರಂ ಸಿರಿ ತಮಗುಂಟನ್ನೆವರಂಸೇವ್ಯರಲ್ತೆ ಖಳರುಂ: **ಶಬ್ದಮದ,** ೨೫೯, ಪ್ರ, ೧)

**ಎನ್ನೊಂದಿಗರ್**– ನನ್ನಂಥವರು (ಆತಂ ಕೇಳ್ದಪಂ ನನ್ನ ಸದ್ಭಾವಂಬೆತ್ತು ಉಪದೇಶಮಂ ಕೆಳೆಯ ಪೇೞ್ ಎನ್ನೊಂದಿಗಂ ಕೇಳ್ವನೇ: **ಕಾದಂಸಂ,** ೪. ೬೬)

**ಎಬ್ಬಟ್ಟು** – ಬೆನ್ನಟ್ಟು (ಇರದೂರೂರ ಪೊಲಂಗಳೊಳ್ ಸುಟಿವರಂ ಸೀಟ್ಟಿಕ್ಕುತುಂ ಬಟ್ಟೆವೋಪರಂ ಎಬ್ಬಟ್ಟಿ ಕೊಲುತ್ತುಂ ಆಂತ ಭಟರಂ ತುತ್ತೆತ್ತುತಂತಿರ್ದ ಸಿಂಧುರವಿದ್ವಿಡ್ಭಯದಿಂದ ಸಿಂಧುವಿಷಯಂ ಪಾಟಾಗೆಯುಂ: **ಶಾಂತೀಶ್ವಪು,** ೩. ೭)

**ಎಮ** – ಒಪ್ಪಿಗೆ ಸೂಚಕ ಪ್ರತ್ಯಯ (ಅಂಗೀಕಾರಾರ್ಥದ ಎಮ ಶಬ್ದಕ್ಕಂ ಗಡಾರ್ಥಕ್ಕಮಾದೇಶಮಾದ ಅಕಾರಕ್ಕಂ ಸ್ವರಂ ಪರಮಾಗೆ ಸಂಧಿಯಿಲ್ಲ: **ಶಬ್ದಮದ,** ೬೭, ವೃತ್ತಿ); ಹಾರೈಕೆ ಸೂಚಕ (ನಿಮಗಕ್ಕೆಮ ಅಬ್ಜಗರ್ಭನಾಯುಂ ಶ್ರೀಯುಂ: **ಶಬ್ದಮದ,** ೬೭, ಪ್ರ, ೫)

**ಎಮೆ** – ಎವೆ, ಕಣ್ಣುರೆಪ್ಪೆ (ಮದನ ದವಾನಲಾರ್ಚಿ ತನುವಂ ಸುಡೆ ತಳ್ತ ಎಮೆಯೊಳ್ ಪಳಂಚಿ ಬೀಗಿದ ಬೆಳರ್ವಾಯೊಳ್ ಉಚ್ಚಳಿಸಿ .. .. ಎಯ್ದಿದುವು ನೇತ್ರಜಲಬಿಂದುಗಳ್ ಆಕೆಯ ನಿಮ್ನನಾಭಿಯಂ: **ಪಂಪಭಾ,** ೫. ೯)

**ಎಮೆದುಱುಗಲ್** – ರೆಪ್ಪೆಗೂದಲ ಸಾಲು (ತುಂಬಿದ ಪೆಱೆಯಿನೊಗೆದ ನೆಯ್ದಿಲಂತೆ ಎಮೆದುಱುಗಲ್ ಎಱಗೆ: **ಲೀಲಾವತಿ,** ೧೦. ೮೦ ವ)

**ಎಮೆಯಿಕ್ಕು** – ರೆಪ್ಪೆ ಮಿಟುಕಿಸು (ಎಮೆಯಿಕ್ಕದೆ ನೀಡುಂ ನೋಡಿ: **ಆಚವರ್ಧ,** ೧. ೯೭)

**ಎಮೆವೊಱೆ** – ರೆಪ್ಪೆಯ ಭಾರ (ಕಣ್ಣೀರಪೂರದೊಳ್ ಮುಳುಗಿದ ಎಮೆವೊಱೆಯಂ ಆನಲ್ ಆಱದೆ ಅಳವಟಿದ ಕಣ್ಗಳಿಂ: **ಆಚವರ್ಧ,** ೯. ೬೬ ವ)

**ಎಮ್ಮಂದಿಗರ್** – ನಮ್ಮಂಥವರು (ಎಮ್ಮಂದಿಗರ್ ಪ್ರಣಾಮದೊಳೆ ಪುಣ್ಯಮಂ ಪಡೆವರ್: **ಆದಿಪು,** ೧೩. ೯೦)

**ಎಯ್** – ಮುಳ್ಳುಹಂದಿ, ಎಕ್ಕಲ (ಪೊಳೆದು ಪರಿವ ಪೊಳೆವುಲ್ಲೆಗಳುಮಂ ತಲೆಯಂ ಕುತ್ತಿ ವಿಶಾಲಂಬರಿವ ಕರಡಿಗಳುಮಂ ಅಡಂಗಿ ಪರಿವ ಪುಲಿಗಳುಮಂ ಸೋಂಕಿ ಪರಿವೆಯ ಎಯ್ಗಳುಮಂ ತಡಂಮೆಟ್ಟಿ .. .. ಪಲವನೆಚ್ಚು: **ಪಂಪಭಾ,** ೫. ೪೮ ವ)

**ಎಯ್ತರ್** – ಐತರು, ಬರು, ಹತ್ತಿರ ಬರು (ರಕ್ಷಿಸವೇೞ್ಕುಂ ಆವ ತೆಱದಿಂದಸುವಂ ನಿನ್ನಲ್ಲಿಗಾತಂ ಎಯ್ತರ್ಪಿನೆಗಂ: **ಕಾದಂಸಂ,** ೪. ೧೧೦)

**ಎಯ್ದು** – ಪ್ರಾಪ್ತವಾಗು (ಇದು ಸಹಜಂ, ಅನ್ನೆಗಂ ಎಯ್ದುಗುಂ ಎನ್ನೆಗಮುದಾತ್ತಮುಕ್ತಿಶ್ರೀಯಂ: **ಆದಿಪು,** ೯. ೫೨); ಸಮರ್ಥವಾಗು (ಪದೆದು ನಿರೀಕ್ಷಿಸಲ್ ಪೊಗೞಲ್ ಎಯ್ದವು ತಮ್ಮಯ ನೇತ್ರಜಿಹ್ವೆಗಳ್: **ಶಾಂತೀಶ್ವಪು,** ೧. ೧೦೪)

**ಎಯ್ದೆ** – ಐದೆ, ಚೆನ್ನಾಗಿ (ಧರಾತಳಮಂ ಒಲ್ಲಣಿಗೆಯಂ ಪಿಟಿವಂತೆ ತಳಂ ಎಯ್ದೆ ಸುರುಳ್ದಿನಂ ಮುಯ್ಯೇಱು ಸೂೞ್ ಪಿಟಿದ ಸಾಹಸಮುಂ: **ಪಂಪಭಾ,** ೧೨. ೪೮ ವ); ಅಯ್ದೆ [ಸುಮಂಗಲಿ] (ತಳಿರ್ಗಳಸಂ ಮುಕುಂದ ರವಂ ಎತ್ತಿದ ಮುತ್ತಿನ ಮಂಟಪಂ ಮನಂಗೊಳಿಪ ವಿತಾನಪಙ್ಕ್ತಿ

ಪಸುರ್ವಂದಲೊಳ್ ಒಲ್ದು ಎಡೆಯಾಡುವ ಎಯ್ದೆಯರ್: **ಪಂಪಭಾ,** ೧. ೧೦೭)

**ಎಯ್ದೆ ಪಾಯ್** – ಮುಟ್ಟುವಂತೆ ನುಗ್ಗು (ದೆಸೆಗೆತ್ತಂ ಗಜಱುತ್ತುಮಿರ್ಪ ಪುಲಿಯಿಂ ನೀಳಾಭ್ರಮಂ ದಂತಿಗೆತ್ತು ಸಿಡಿಲ್ದು ಆಗಸಕೆ ಎಯ್ದೆ ಪಾಯ್ವ ಪಲವುಂ ಸಿಂಗಂಗಳಿಂದೆತ್ತಗುರ್ವಿಸಿ: **ಪಂಪಭಾ,** ೭. ೨೬)

**ಎಯ್ದೆವರ್** – ಸಮೀಪಿಸು (ಗಂಗಾಜಲಕ್ರೀಡಾಸಕ್ತಚಿತ್ತನಾಗಿ ತತ್ಪರಿಸರಪ್ರದೇಶಮಂ ಎಯ್ದೆವಂದು: **ಆದಿಪು,** ೧೧. ೧೩೯ ವ)

**ಎಯ್ಯಮೃಗ** – ಮುಳ್ಳುಹಂದಿ (ಶಲಲಿ ಶಲ್ಯಕನೆಯ್ಯಮೃಗಮಕ್ಕುಂ: **ಯಶೋಧಚ,** ३. ४६)

**ಎರ** – ಎಲಚಿ ಮರ (ನೇಳಲ್ ಎರಂ ಪಾದರಿ ತಾಱೆ ತಂಡಸು ಬಿಳಿಲ್ ಬಲ್ಮತ್ತಿ ಬೇವತ್ತಿ ಸೆಳ್ಳೆಲವಂ ಸಂಪಗೆ ತುಂಬುರಂಬಡೆ ಒವುಂಗು ಇಮ್ಮಾವು ಕಕ್ಕಿಮ್ಮರಂ: **ಪಾರ್ಶ್ವನಾಪು,** ೧೨. ೫೮)

**ಎರಂಗುಡು** – ಕಡಕೊಡು (ಎಟಿಕುಳಿಗೊಳ್ವಂಗೆ ಎರಂಗೊಟ್ಟಂತಾಯ್ತು: **ನೇಮಿನಾಪು,** ೬. ೭೦ ವ)

**ಎರಕ** – ಅಚ್ಚು (ಎರಕಕ್ಕೆ ಬಿಟ್ಟ ಕರುವಿನಂತೆ ಮಱುಗುವಂತೆ ಇರ್ದು: **ಧರ್ಮಾಮೃ,** ೧. ೧೨೫ ವ)

**ಎರಡಜೆ** – ಕಪಟವರಿ (ತನಗೆರಡಜೆಯದೆ ಒಲ್ದ ನಲ್ಲಳಂ ಏತೞೊಳಪ್ಪೊಡಂ ಏವಮಂ ಮಾಡದೆ: **ಪಂಪಭಾ,** ४. ೯೨ ವ)

**ಎರಡುಗೇಳು** – ಒಂದೇ ಸಲ ಹೇಳಲು ಅವಕಾಶವೀಯದೆ (ವಿದ್ಯಾಧರರರ್ಗೆಲ್ಲಂ ಬಟೆಯನಟ್ಟುವುದುಂ ಎರಡುಗೇಳದೆ ತಂತಮ್ಮ ಮಹಾವಿಭೂತಿಯಿಂದೊದವಿ: **ಧರ್ಮಾಮೃ,** ೮. ೧೧೧ ವ)

**ಎರಡುಗೊಳ್** – ಎರಡನೆಯದನ್ನು ತೆಗೆದುಕೊ (ದರ್ಪಕ್ಕೊಂದುಗೊಳ್ ಮತ್ಸಹೋದರರಂ ಕೋಪದೆ ತಿಂದುದರ್ಕೆ ಎರಡುಗೊರ್ಳ: **ಗದಾಯು,** ೮. ೧೮); ಎರಡನ್ನು ತೆಗೆದುಕೊ (ಮತ್ಸಹೋದರರಂ ಕೋಪದೆ ತಿಂದುದರ್ಕೆ ಎರಡುಗೊಳ್: **ಗದಾಯು,** ೮. ೧೮)

**ಎರಡುವರೆ ದ್ವೀಪ** – ಜಂಬು, ಧಾತಕಿ, ಮತ್ತು ಪುಷ್ಕರಾರ್ಧ ಎಂಬ ದ್ವೀಪಗಳಲ್ಲಿ ಮಾತ್ರ ಮಾನವರು ಜೀವಿಸುತ್ತಾರೆ (ಎರಡುವರೆದ್ವೀಪಂ ವ್ಯಂತರ ಮಾನವ ತಿರ್ಯಗಾಲಯಂ ತತ್ರಮಿತಂ ವರಸಿದ್ಧಕ್ಷೇತ್ರಂ; **ಶಾಂತಿಪು,** ೧೨. ೧೦)

**ಎರದ** – ಯಾಚಕ, ಬೇಡುವವನು (ಎರದರ್ಗಿಲ್ಲೆನ್ನದೆ ಈವ ಅಗ್ಗಳಿಕೆ ಮಱೆಗೆ ಬಂದಾತನಂ ಕಾವ ಪೆಂಪು: **ರಾಜಶೇವಿ,** ೬. ೧೩೬)

**ಎರಲೆ** – ಜಿಂಕೆ (ಎರಲೆಗೆ ಪಾಡುವ ಗೋರಿಯಂ ಅರಣ್ಯದೊಳ್ ಮೃಗವಿರೋಧಿಗಂ ಪಾಡುವುದೇ: **ಆದಿಪು,** ೧४. ೮೦); ವಿಷಕ್ರಿಮಿ (ಅರಗಿನ ಮನೆಯೊಳ್ ಪಾಂಡವರ್ ಉರಿದು ಅೞ್ಗಿದರ್ ಅಕ್ಕಟ ಅಯ್ಯೊ ದುರ್ಯೋಧನನೆಂಬ ಎರಲೆಯಿಂ ಎಂದು ಅೞುತುಂ ತತ್ಪುರಜನಂ ಅೞಲ್ ಒದವೆ ಪರಿದು ನೋಡಿತ್ತಾಗಳ್: **ಪಂಪಭಾ,** ३. ೮)

**ಎರಲೆಧೀಂಕು** – ಜಿಂಕೆಯ ಹಾಗೆ ನೆಗೆಯುವ ಒಂದು ಆಟ (ಎರಲೆಧೀಂಕನಾಡಲೆಂದು ಇರ್ಬರ್ ಒಂದಾಗಿರೆ ಪಚ್ಚಾಡುವಲ್ಲಿ: **ಜಗನ್ನಾವಿ,** ४. ೫೨ ವ)

**ಎರಲೆವಜೆ** – ಜಿಂಕೆಯ ಮರಿ (ಅಲ್ಲಿ ಪಟ್ಟಿರ್ದ ಎರಲೆವಜೆ ಲಸಲ್ಲಕ್ಕ್ಮಮಂ ಪೋಲ್ತು: **ಪುಷ್ಪದಂಪು,** ३. ೭೬)

**ಎರವಣ್ಣು** – ಎಲಚಿಹಣ್ಣು (ಸರಕ್ಕೋಡುವಂ ಬೇಡವೆಣ್ .. .. ಕೊಯ್ಯಲ್ಕೆಳಸುವಳ್ ಎರವಣ್ಣೆಂದು ಶೋಣಾಂಶುಮನ್ಮಂಡಳಮಂ ತಾಳೀಫಳಂಗೆತ್ತು ತುಡುಕುಗುಂ ಬಾಲಶಾಖಾಚರಂಗಳ್: **ರಾಜಶೇವಿ,** ೬. ೨೦)

**ಎರವಿಗೊಳ್** – ಬೇಡಿಕೊ (ವೇದನೆಯ ಸಮಾಪ್ತಿಯೊಳ್ ಎರವಿಗೊಳ್ಳದೊಡೆ ನುಂಗುವಳೇ: **ಸಮಯಪ,** ೯. ೧೦೮): (ಅಂತು ಎರವುಗೊಂಡು .. .. ದುಃಖಾಕ್ರಾಂತಂ: **ಕಾದಂಬ,** ೫. ೧೯೬)

**ಎರವು** – ಎರವಲು, ಸಾಲ (ಕುಡುಗೋಲಂ ಕೂಱೆಗೆಯಂ ಕೊಡಲಿ ಕುರುಂಜಿಗೆಯಂ ಉಱುವ ಪರಗುವ ಕಱುಪಿಂ ಬಿಡದೆಯಗುಟ್ಟಾ ಮುಟ್ಟಂ ಕುಡರ್ ಎರವಂ ಪೆಱರ್ಗೆ: **ಸಮಯಪ,** ೫. ೧೭)

**ಎರಳೆ** – ಜಿಂಕೆ (ತರುಣಿಯ ಬೆನ್ನೊಳ ಅಂಗಭಂಗವನಾಡಿಸಿದಂದದೊಳಾಡಿ ಗೋರಿಗೊಂಡ ಎರಳೆವೊಲಾಗಿ ಪೋದನೊ: **ಕಾದಂಸಂ,** ४. ೫३)

**ಎರಳ್ಮಾಡು** – ಎರಡಾಗಿ ಮಾಡು (ಶರಾಗ್ರದೆ ಖಂಡಿಪಂತೆ ಎರಳ್ಮಾಡುವ ಪೊದಳ್ದ ಲೋಹದೊಳ್ ಜೋಡನಡುರ್ತು ತುಂಡಿಪ: **ರಾಜಶೇವಿ,** ೬. ೬೭)

**ಎರಟ್ಟಂಡ** – ಎರಡು ತಂಡ ಅಥವಾ ಸೈನ್ಯಗಳು (ಎನ್ನನೆ ನಚ್ಚಿದಂ ಅನುವರಕೆ ಎನ್ನನೆ ಪೂಣಿಸಿದಂ ಎನಗೆ ಎರಟ್ಟಂಡಮುಂ ಓರನ್ನರೆ: **ಪಂಪಭಾ,** ೧೦. ೧೨)

**ಎರಟ್ನುಡಿ** – ಎರಡು ನುಡಿ, ಮಾತಿಗೆ ತಪ್ಪು (ಮಹಾಪ್ರತಿಜ್ಞೆಯೊಳ್ ತೊಡರ್ದನುಂ ಆನೆ ಭೂತಳಂ ಅದಿರ್ಕೆ ಎಡೆಗೆಯ್ ಗೆಲಲ್ ಆರ್ತರ್ಗೆ ಎರಟ್ನುಡಿಯದಿರ್ ಎಂದು ಒಡಂಬಡಿಸಿದಂ ಹಳಿಯಂ ನಯದಿಂ ವೃಕೋದರಂ: **ಪಂಪಭಾ,** ೧३. ೯೧)

**ಎರೆ** – ಬೇಡು (ನಿರಪೇಕ್ಷನಂ ಏಕೆ ಎರೆವಿರ್ ಪುರುದೇವನಂ: **ಆದಿಪು,** ೯. ೧೦४); ಕಪ್ಪು ಭೂಮಿ (ಎರೆಯುಳ್ಳುದೊಂದು ಭೂಮ್ಯಂತರಮದು ತಾಂ ಕೃಷ್ಣಭೂಮಿಯಕ್ಕುಂ: ಅಭಿಧಾವ, ೧. ೫. ४); ಪ್ರಾಣಿಗಳಿಗೆ ಹಾಕುವ ಆಹಾರ (ಅಡಸುವ ಕಾಳದಂಡಂ ಎರೆಗೊಳ್ವ ಅಸಿತೋರಗಮೆಂಬ ಶಂಕೆ ನೂರ್ಮಡಿಸಿರೆ: **ಕಾದಂಸಂ,** ೧. ೫೫); ಕವಣೆ (ಬಡಿಗೋಲ್ ತುಪಾಕಂ ಇಡುಗಲ್ ಎರೆ ಪೆರ್ಬಲೆ .. .. ಇವಂ ಪಿಡಿದು ಬೇಂಟೆಗೆ ಸಂದ ಪುಳಿಂದರೆಯ್ದಿದರ್: **ರಾಜಶೇವಿ,** ೫. ೫೨); ಪರದೆ (ಸೊಗಯಿಪ ಸಸಿ ಶರದದ ಬೆಳ್ಮುಗಿಲೊಳ್ ಪೊರೆಯಿಂದಮೆಯ್ದೆ ಮುಸುಕಿರ್ದುದೆನಲ್ ಸೊಗಯಿಪ ದುಗುಲದ ಸೆಱಗಮ ಮೊಗಕ್ಕೆ ತೆಗೆದಾಗಳಿರದೆ ಗೋಳಿಟ್ಟಟ್ಟಿ: **ಕಾದಂಬ,** ೫. ೧೯೯)

**ಎರೆಗೆಯ್** – ಪೊರೆಯನ್ನು ಬಿಡು (ಉರಗಕೇತನಂಎರೆಗೆಯ್ದ ಉರಗರಾಜನಂತೆ ಬೆನ್ನನೆ ಬರೆ: **ಕರ್ಣನೇಮಿ,** ೧೨. ೧೮೭ ವ); ಎರೆ [ಕಪ್ಪು] ಹೊಲ (ಕೋಮಲ ನಖರೇಖೆಯಂತಿರೆ ಎರೆಗೆಯ್ಗಳೊಳಾದುವು ಕೂಡೆ ಬೀಡೆಗಳ್: **ಜಗನ್ನಾವಿ,** ೧४. ೭)

**ಎರೆಗೊಳ್** – ತಿನ್ನುತ್ತಿರು (ಮುನ್ನ ಎರೆಗೊಂಡ ಆಮಿಷಖಂಡಸಂಹತಿ ತಮೋವಿಭ್ರಾಂತಿಯಿಂದಳ್ಕೆ ಭಾಸ್ಕರಂ ಏಳ್ತರ್ಪುದಂ ಖಂಡಿಸಿ ಖಗೇಶಂ ರಕ್ಷಿಸಿತ್ತರ್ಕನಂ: **ರಾಜಶೇವಿ,** ೫. ೬೮)

**ಎರೆದಂ** – ಬೇಡಿದವನು (ಎರೆದನ ಪೆಂಪುವೇೞ್ಪೊಡೆ ಅನಲಂ ಪೊಣರ್ವಾತನ ಪೆಂಪುವೇೞ್ಪೊಡೆ ಆ ಸುರಪತಿ ಕೊಟ್ಟ

ತಾಣದೆಡೆವೇೞ್ಪೊಡೆ ಯಮುನಾನದೀತಟಾಂತರಂ: **ಪಂಪಭಾ,** ೫. ೭೩)

**ಎಱೆಯಿಕ್ಕು** – [ಹಾವು] ಪೊರೆ ಬಿಡು (ಇದಿರೊಳ್ ಪಟ್ಟು ಎಱೆಯಿಕ್ಕುತಿರ್ಪ ಪದದೊಳ್.. .. ಕೊಂಡುದು ಆ ಕೃಷ್ಣೋರಗನಂ: **ಸುಕುಮಾಚ,** ೫. ೪೫)

**ಎಱೆವಚ್ಚಾಡು** – ಎರಡು ಗುಂಪಾಗಿ ಮಾಡಿ ಆಡು ೯

**ಎಱೆವಚ್ಚು** – ಎರಡಾಗಿ ವಿಭಾಗಿಸು (ಎರಲೆಧೀಂಕನಾಡಲೆಂದು ಇರ್ಬರ್ ಒಂದಾಗಿರೆ ಪಚ್ಚಾಡುವಲ್ಲಿ: **ಜಗನ್ನಾವಿ,** ೪. ೫೨ ವ)

**ಎಱೆವವಂ** – ಬೇಡುವವನು (ಮುಂಚುವುದು ಎಱೆವವಂ .. .. ಚಲದಿನೀವುದಲ್ಲದೊಡೇಂ ಚಾಗಮೇ: **ಲೀಲಾವತಿ,** ೬. ೫೮)

**ಎರ್ದೆ** – ಎದೆ, ಹೃದಯ (ಮಲಯಾನಿಲಮುಂ ಮಲಯಜಜಲಮುಂ ಶಶಿಕಿರಣಮುಂ ವಿಯೋಗಿಗಳ ಎರ್ದೆಯೊಳ್ ನಲಸಿರ್ದುವು: **ಕವಿರಾಮಾ,** ೩. ೩೨)

**ಎರ್ದೆಗೊಳ್** – ಹೃದಯಂಗಮವಾಗು (ಏನೆರ್ದೆಗೊಂಡು ಬೇಟದತ್ತಳಗಮಂ ಉಂಟುಮಾಡಿದುದೋ ಕಾಮನ ಕಾರ್ಮುಕದಂತೆ ಕಾರ್ಮುಕಂ: **ಪಂಪಭಾ,** ೭. ೨೫)

**ಎರ್ದೆಗಿಡು** – ಎರ್ದೆಗುಂದು (ಸಿಡಿಲಿಂ ಮಿಂಚಿಂ ಮೊಟಗಿಂ ಪಡೆಗುಳ್ಕಂ ಪಡೆವಹೀಂದ್ರ್ ಎರ್ದೆಗಿಡುವಿನೆಗಂ: **ಆದಿಪು,** ೧೩. ೬೨)

**ಎರ್ದೆದೋಱು** – ಧೈರ್ಯ ತೋರಿಸು (ಏಱನೆ ಸೂಱೆಗೊಂಡು ನುಡಿವೀ ನುಡಿಯಲ್ಲದೆ ಮತ್ತಂ ಆಸನಂದೋಱುವ ಬಲ್ಪುದೋಱುವ ಎರ್ದೆದೋಱುವ ಕಯ್ಪೆಸರಂಗಳ್ ಎಮ್ಮಂ ಉಂತೆ ಏಱುವು: **ಪಂಪಭಾ,** ೮. ೨೦)

**ಎರ್ದೆಮುಟ್ಟು** – ಎದೆ ಸೋಂಕು (ಸೂರ್ಯತನಯಂ ತೇಜೋಗ್ನಿಯಿಂದಂ ದ್ವಿಷದ್ಬಲಮಂ ಸುಟ್ಟಂ ಉದಾತ್ತಪುಣ್ಯನವಂ ಚೈತಾಗ್ನಿಯಿಂ ಸುಟ್ಟೆನಿಲ್ಲ ಒಲವಿಂದ ಇಂದಿಂತು ಎರ್ದೆಮುಟ್ಟೆ ಕೂರ್ತನೊಳನೇ ಕರ್ಣಂಗೆ ದುರ್ಯೋಧನಂ: **ಪಂಪಭಾ,** ೧೩. ೬೦)

**ಎರ್ದೆಯಾಣ್ಮ** – ಪ್ರಿಯಕರ (ಇಚ್ಚೆಯಾಣ್ಮನೆಲ್ಲಿದಂ ಎರ್ದೆಯಾಣ್ಮನೆನ್ನರಸಂ ಎಲ್ಲಿದನೋ: **ಆದಿಪು,** ೩. ೧೫)

**ಎರ್ದೆಯಾರು** – ಮನವಾರು, ಹೃದಯಕ್ಕೆ ತೃಪ್ತಿ ತರು (ಭೂಪಕುಸುಮಾಯುಧಂ ಇಂತೆರ್ದೆಯಾರೆ ನೋಡಿದಂ: **ಕುಸುಮಾಕಾ,** ೧೩. ೭೬)

**ಎರ್ದೆಯೆಱಕ** – ಮನದಿಚ್ಚೆ, ಪ್ರೀತಿ (ಎರ್ದೆಯೆಱಕದೆ ಪೊಗೞ್ದೆಖಿಳಭುವನಜನನಿಯನಾಗಳ್: **ಆದಿಪು,** ೭. ೪೫)

**ಎರ್ದೆಯೊಡೆ** – ಧೈರ್ಯಗುಂದು (ಮರಣದಿನಾದ ಖೇದದಿಂದ ಎರ್ದೆಯೊಡೆದಂತಿರೆ: **ಪಂಪರಾ,** ೭. ೮೮)

**ಎರ್ದೆವಟಿಲ್** – ಎದೆಯ ಅಳಲು (ಉಪದೇಶಂಗೆಯ್ದು ಕಳೆದಂ ಅವರರೆರ್ದೆವಟಿಲಂ: **ಪಂಪರಾ,** ೧. ೭೨)

**ಎರ್ದೆವುಗು** – ಎದೆಯನ್ನು ಹೊಗು, ಮನಸ್ಸನ್ನು ಸೇರು (ಪುರುಳುಂ ಲಕ್ಕಣಮುಂ ಮಯ್ಸಿರಿಯುಂ .. .. ತಳ್ತೆಸೆವ ರನ್ನದಂತೆ ಎರ್ದೆವುಗದೇ: **ಕಬ್ಬಿಗಕಾ,** ೬)

**ಎರ್ದೆವೇೞ್** – ಎದೆಬಿಚ್ಚಿ ಹೇಳು (ನುಡಿವೊಡೆ ಲಲ್ಲೆಯೆಂಗುಂ ಎರ್ದೆವೇೞ್ದೊಡೆ ಕೈತವಮೆಂಗುಂ: **ಆದಿಪು,** ೧೨. ೪೨)

**ಎರ್ಬಟ್ಟು** – ಬೆನ್ನಟ್ಟು (ಭೀತರಂ ಎರ್ಬಟ್ಟಿ ಪೊಟಿಲಂ ಪೊಕ್ಕು ಸಾರವಸ್ತುಗಳಂ ಕೊಂಡು: **ಹರಿವಂಶ,** ೮. ೨೭ ವ)

**ಎರ್ಮೆ** – ಎಮ್ಮೆ (ಇರ್ಮಡಿ ಕೋಡುಳ್ಳ ಆಡು ಎರ್ಮೆಗೆ ತಾನುಮೊಲ್ದು ಪೊಡೆವಡುಗೆ ಫಲಂ: **ಸಮಯಪ,** ೯. ೭೧)

**ಎರ್ಮೆವೋರಿ** – ಎಮ್ಮೆಯ ಹೋರಿ, ಕೋಣ (ತಗರಂ ಕೋಟಿಗಳಂ ಲಾವಗೆಗಳಂ ಎಸೆವ ಎರ್ಮೆವೋರಿಯಂ ಪಾಪಿಷ್ಠರ್ .. .. ಪೋರಿಪರ್: **ಸಮಯಪ,** ೫. ೧೫)

**ಎಲರ್** – ಗಾಳಿ (ಆ ದೆಸೆಯಿಂ ಬರ್ಪ ಎಲರುಮಂ ಆ ದೆಸೆಯಿಂದೆಸೆವ ಕುಸುಮ ಪರಿಮಳಮುಮಂ ಅಂತು ಆ ದೆಸೆಯಿಂ ಎಸೆವ ವಿಹಗನಿನಾದಮುಮಂ ವಾರ್ತೆಗೇಳಲ್ ಆಂ ಒಡರಿಸಿದೆಂ; **ಕಾದಂಸಂ,** ೪. ೩೦)

**ಎಲರ್ಚು** – ಚೇತನಗೊಳ್ಳು (ಆ ಸತಿಯಿಕ್ಕಿದ ಕಣ್ಣ ನೀರ ಧಾರೆಗಳೊಳೆ ನಾಂದು ಎಲರ್ಚೆ ಪೊದಳ್ದು ಒರ್ಮೆಯೆ ಪಾಱೆದುವು ಉನ್ಮದಾಳಿಗಳ್: **ಪಂಪಭಾ,** ೫. ೧೦)

**ಎಲರ್ವೊಯ್ಲು** – ಗಾಳಿಯ ಹೊಡೆತ (ಎಲರ್ವೊಯ್ಲಿಂದಂ ಅಲ್ಲೊಕ್ಕ ನವ್ಯಾಮಳ ಪುಷ್ಪಂಗಳ್: **ಕುಸುಮಾಕಾ,** ೧. ೧೦೩)

**ಎಲವ** – ಬೂರುಗ, ಶಾಲ್ಮಲೀ (ಎಲವಂ ಮಡಲ್ತುದೆನೆ ಎಲೆ ಕೆಲಕೆಲವಾಗಿರ್ದುಂ ಎಲೆಯ ಪುದುವಿಂದವೆ ಕಟ್ಟೆಲಿಸಿದವೊಲಿರ್ದಂದಗ್ಗಲಿಸಿದ ಗಿಳಿವಿಂಡುಗಳ ಪೊದಳ್ದ ಪಸುರ್ಪಿಂ: **ಕಾದಂಸಂ,** ೧. ೪೧)

**ಎಲವೊ** – ತಿರಸ್ಕಾರ–ಕೋಪದಿಂದ ಕೂಡಿದ ಸಂಬೋಧನೆ ಪೆಱರಂ ಪೊಗೞ್ದಪೆ ಎಮ್ಮಂ ಕಿಱೆಯಂ ಮಾಡಿದಪೆ ಎಲವೊ: **ಗದಾಯು,** ೩. ೫೬)

**ಎಲುವಡೆ** – ಹೊಳಪು ಹೊಂದು (ಹಿಮಸಮಯದೊಳಧಿಪಂ ತಾ ಹಿಮದಿಂದೆಲುವಡೆಯೆ .. .. ಬೆಳ್ಳಿವಾಸದೊಳಿರ್ದಂ: **ಅಜಿತಪು,** ೧೨. ೩)

**ಎಲು** – ಎಲುಬು, ಮೂಳೆ (ಮಹಾವ್ರತಿಗಳೇವೆಂದು ಎಲುವಂ ತೀವೆ ತೊಟ್ಟು ಸುತ್ತಿಯೊಳಮುಂಡಪರ್ ತತ್ಪಥದಿಂ: **ಸಮಯಪ,** ೧೪. ೪೯)

**ಎಲುವು** – ಮೂಳೆ (ಕಡಿದು ಕಿಱಿಕಿಱಿದಂ ಎಲುವಂ ಪುಡಿಗುಟ್ಟಿಸಿ ತೊವಲನುಗಿದು ಕರುಳ ತೊಡಂಕಂ ಬಿಡಿಸಿ ನಡೆ ನೋೞ್ಪಿಂ ಒಳಗೆಲ್ಲಡಗಿರ್ಪುದು ಜೀವಂ ಎಲ್ಲಿಗೆ ಪೋದಂ: **ಯಶೋಧಚ,** ೪. ೧೯)

**ಎಲೆ** – ಆಶ್ಚರ್ಯಸೂಚಕವಾದ ಅವ್ಯಯ (ಎಲೆ ತಾರಾಗಂ ಹರಂ ಕಣ್ಣಿಟಡೆ ಕರಗಿದುದು: **ಕಾದಂಸಂ:** ೩. ೨); ಮರಗಿಡಗಳ ಪತ್ರ (ಬೇರನಱೆವರ್ಗಲೆಯಂ ತೋಱೆದರೆಂಬಂತೆ: **ಧರ್ಮಾಮೃ,** ೮. ೨೭ ವ); ಸಂಬೋಧನಾಸೂಚಕಾವ್ಯಯ (ಎಲೆ ಭಾವ! ಏಂ ಬಡವಾದಿರೆನೆ; ಪಲವು ದಿವಸಮಾಹಾರಂಬಡೆಯದೆ ಬಡವಾಗಿ ನಿನ್ನಲ್ಲಿ ಆಸೆಪಟ್ಟು ಬಂದೆನೆಂಬುದು: **ಪಂಚತಂತ್ರ,** ೯೩ ವ)

**ಎಲೆಗೆ** – ಹೆಂಗಸನ್ನು ಸಂಬೋಧಿಸುವ ರೀತಿ (ಮನೆಯೊಳ್ಮಯ್ಮೆಗೆ ಬಾತುಕೊಂಡು ಸಿರಿಯೊಳ್ ಕಣ್ಗಾಣದೆ ಒಡ್ಡಯ್ಸುವಂದಿನ ನೀಮಾರ್ಗೆ ಎಲಗೆ ನಿಮ್ಮನಾವಱೆಯೆಂ: **ಸುಕುಮಾಚ,** ೪. ೨೬)

**ಎಲೆಮಿಡುಕು** – ದಿಗ್ಭ್ರಮೆ, ಸ್ತಬ್ಧತೆ (ಜಿನರಾಜನಾಜ್ಞೆಯನೆ ಮೀಱೆ ನಿಲಲ್ ನೆಗೞಲ್ ಆಗದೆಂದು ಎಲೆಮಿಡುಕಲ್ಕೆ ಸಲ್ಲದುದಱೆಂ ಜಿನವಾಕ್ಯಮೆ ಮುಖ್ಯಂ: **ಸಮಯಪ,** ೩. ೯)

**ಎಲೆಯಿಕ್ಕು** – ಚಿಗುರು (ಪೊಲಂ ಉಡುಗಿ ಬಂದುದು ಉಡಿದುದು ಪುಲ್ ಕಾಡುಂ ದಲ್ ಎಲೆಯಿಕ್ಕಿ ಫಳಿಲೆನೆ

ನಿಂದುವು ತಣಿದುವು ಮೃಗಂಗಳ್ ಎತ್ತಲುಮೀಗಳ್: **ಪಂಪಭಾ,** ೫. ೩೭)

**ಎಲೆವಸರ** – [ಎಲೆ+ಪಸರ] ಎಲೆಯ ಅಂಗಡಿ (ಎಲೆವಸರದವೊಲ್ ಕಡುಚೆಲ್ವಂ ಪಡೆದು ತೋರ್ಪುವು ಈ ಬನದೆಡೆಯೊಳ್: **ಕಬ್ಬಿಗಕಾ,** ೧೦೭)

**ಎಲೆವಾಡು –** ಸೊಪ್ಪಿನ ತರಕಾರಿ (ಮಱಿಗಾಲದೊಳ್ ಎಲೆವಾಡಂ ಪಱಿಯೆಳ್ಳಂ ಪಿಟಿದ ತೈಲಮಂ .. .. ಸೇವಿಸಲ್ಕೆ ಭೀತಂ ಜೈನಂ: **ಸಮಯಪ,** ೬. ೯)

**ಎಲೊ –** ತಿರಸ್ಕಾರದಿಂದ ಗಂಡಸನ್ನು ಸಂಬೋಧಿಸುವ ಬಗೆ (ಎಲವೆಲವೊ ರಜಕಾ ನಿಲ್ಲೆಲೊ: **ಜಗನ್ನಾವಿ,** ೬. ೪)

**ಎಲ್ಲದು –** ಎಲ್ಲ, ಸಮಸ್ತ (ಅದುವು ಇದುವು ಉದುವು ಆವುದುವು ಎಲ್ಲದು ಪೆಱತೇನ್ ಪೆಱದೆನಿಪ್ಪ ಶಬ್ದಂಗಳ್: **ಶಬ್ದಮದ,** ೮೮)

**ಎಲ್ಲಿತು –** ಎಲ್ಲಿಯದು, ಎಲ್ಲಿರುವುದು (ಪೆತ್ತವರುಂ ಎಲ್ಲಿದರಾ ಧನಂ ಎಲ್ಲಿತು ಇಂದ್ರಜಾಲದ ಸಿರಿಗೇಕೆ ಮೆಟ್ಟಿಡುವಿರ್: **ಗದಾಯು,** ೧. ೩೫)

**ಎಲ್ಲಿದಂ –** ಎಲ್ಲಿಯವನು (ಪೆತ್ತವರುಂ ಎಲ್ಲಿದರಾ ಧನಂ ಎಲ್ಲಿತು ಇಂದ್ರಜಾಲದ ಸಿರಿಗೇಕೆ ಮೆಟ್ಟಿಡುವಿರ್: **ಗದಾಯು,** ೧. ೩೫)

**ಎಲ್ವಡಗು** – [ಎಲ್ವು+ಅಡಗು] ಮೂಳೆ ಮಾಂಸ (ಗೆಡೆವಚ್ಚಿರ್ವರ್ ಮನಗೊಂಡು ಒಡನೊಡನೆ ಓರಂತು ತಗುಳ್ದು ಝೇಂಕರಿಸಿದೊಡೆ ಎಲ್ವಡಗಾಗೆ ಮೋದಲೆಂದಿರ್ದ ಎಡೆಯೊಳ್ ಗುರು ತನ್ನ ಮಗನಂ ಎಡೆವುಗವೇೞ್ದಂ: **ಪಂಪಭಾ,** ೨. ೭೩)

**ಎಲ್ವು –** ಎಲುಬು, ಮೂಳೆ (ಬಿಸುನೆತ್ತರ್ ನೆಣಂ ಅಡಗು ಎಲ್ವು ಸಮಸ್ತಂ ಸುರಿಯೆ ಕೈಗೆ ತೊವಲ್ ಉಱಿಯಲ್ ಅಗುರ್ವಿಸಿದುದು ತೀವಿದ ಗುಳ್ಳೆಯ ಪಸುಂಬೆಯ ಸೋರ್ಚಿದಂತೆ ತನು ಕೀಚಕನಾ: **ಪಂಪಭಾ,** ೮. ೭೭)

**ಎವುಱ್ –** ಎಂಜಲು (ಎವುಱೆಂದು ಎಂಜಲ್: **ಶಬ್ದಮದ,** ಪ್ರಸಾ, ೩೮)

**ಎಸಕ** – ಕಾಂತಿ (ನಮಗೀಗೆ ಅತ್ಯಂತಸೌಖ್ಯಾಸ್ಪದಮಂ ಒಸೆದು .. .. ಆತ್ಮತೇಜಃಪ್ರಸರದ ಎಸಕದಿಂ ವಿಶ್ರುತಂ ಮೋಕ್ಷಲಕ್ಷ್ಮೀರಮಣಂ: **ಸಮಯಪ,** ೧. ೨); ವೈಭವ (ಅಂತು ವಸುಷೇಣನಾ ಲೋಕಾಂತಂಬರಂ ಅಳವಿ ಬಳೆಯೆ ಬಳೆದ ಎಸಕಂ ಅದು ಓರಂತೆ ಜನಂಗಳ ಕರ್ಣ ಉಪಾಂತದೊಳ್ ಒಗೆದೆಸೆಯೆ ಕರ್ಣನೆಂಬನುಂ ಆದಂ: **ಪಂಪಭಾ,** ೧. ೯೮); ಕೆಲಸ (ಧರ್ಮಮ್ ಅಮರೇಂದ್ರಗತಿಯಂ ಅಧರ್ಮಂ ಅಧೋಗತಿಯಂ ಎಸಗುವ ಎಸಕದೊಳೀಗುಂ ಧರ್ಮಾಧರ್ಮ ಕ್ರಿಯೆಗಳಂ: **ಆದಿಪು,** ೫. ೭೮); ಪ್ರತಾಪ (ಮಕ್ಕಳ್ ಒಸಗೆಯಂ ಈವುದು ನಿನ್ನೆಸಕದ ಮಸಕಮನೆ ಪೋಲ್ವ ಮಗನಂ ಮಘವಾ: **ಪಂಪಭಾ,** ೧. ೧೩೯); ಕರ್ತವ್ಯ (ವಿಷಯ ಗೃಹಾಮಾತ್ಯ ದಂಡಾಧಿನಾಥಾವಳಿ ಧರ್ಮಾಧ್ಯಕ್ಷ ಕೋಶಾಧಿಪ ತಳವರ ಹಾಸ್ಯಾದಿ ತಂತ್ರಾಳಿಪಾಳಾವಳಿ ರಾಜಶ್ರೇಷ್ಠಿ ಸೇನಾಪರಿಕರಣ ಪುರೋಧೋಧಿಕಾರ ಅಂಗರಕ್ಷಾವಳಿ ಮುಖ್ಯಂಬೆತ್ತ ಬಾಹತ್ತರದೆಸಕದ ನಾನಾ ನಿಯೋಗಿಪ್ರತಾನಂ: **ಶಾಂತೀಶ್ವಪು,** ೧೫. ೯೦); ವ್ಯವಹಾರ (ಆಜಿ ದರ್ಪದ ಕೂರ್ಪೇಱಿರೆ ಬೇಱದೊಂದೆಸಕಮಂ ಕೈಕೊಂಡಂ ಅಬ್ಜೋದರಂ: ಜಗನ್ನಾವಿ, ೧೮. ೬)

**ಎಸಕಂಗಾಯ್** – ಕರ್ತವ್ಯಪಾಲಿಸು (ಹರಿಯುಂ ತಾನುಂ ಭರಂಗೆಯ್ದು ತನ್ನ ಎಸಕಂ ಕಾಯದೆ ಅಧರ್ಮಯುದ್ಧದೆ ನರಂ ಕೊಲ್ವಲ್ಲಿ ಕಂಡು ಇಂತುಪೇಕ್ಷಿಸಿ ನೀಮುಂ ನಡೆ ನೋಡುತ್ತಿರ್ದಿರಿ ಎನೆ ಮತ್ತಿನ್ನಾರಂ ನಂಬುವೆಂ: **ಪಂಪಭಾ,** ೧೧. ೮೩)

**ಎಸಗು** – ಮಾಡು (ಎಸಗು–ಉದ್ಯೋಗೇ: **ಶಬ್ದಮದ,** ಧಾ ೯೩): ರಥ ನಡೆಸು (ಪಿಂದೆ ಕಡಂಗಿ ತೇರಂ ಎಸಗು ಎಂಬವಂ ಅಂಬಿಗಂ ಆಜಿರಂಗದೊಳ್ ಮುಂದೆ ಸಮಾನನಾಗಿ ಬೆಸದೆ ಇರ್ಪವನುಂ ತುಱುಕಾಱನಾಗೆ ಮತ್ ಸ್ಯಂದನಚೋದನಕ್ರಮಮದುಂ ಪೋಲೆಯಂಗೆ ಅಮರ್ದು ಇರ್ಕುಂ: **ಪಂಪಭಾ,** ೧೨. ೯೪); ಗಾಳಿ ಬೀಸು (ಪೊಸಪೂವಿನ ಸರಿ ಪರಿದಾಯ್ತಸದಳಂ ಎಸಪ ಎಲರದೊಂದು ಮೇಲ್ವಾಯ್ದಾಗಳ್: **ಆದಿಪು,** ೧೦. ೨); ಮಾಡು (ಲೋಕದ ಪೞಿ ಪೊರ್ದದೆ ಮಾಣೆ ಧರ್ಮಯುದ್ಧದೊಳ್ ಎಸಗಿಂ: **ಆದಿಪು** ೧೪. ೧೦೨); ಧ್ವನಿ ಕೇಳಿಸು (ಮೊದಲೊಳ್ ತತ್ ಕಿನ್ನರ ದ್ವಂದ್ವದ ಬಳಿಸಲ್ಪುದು ಎತ್ತಾನುಂ ಅಚ್ಛೋದಮಂ ಸಾರ್ವುದು ಎತ್ತ ಅಂತಲ್ಲಿಗೊಂದಿರಂ ಎಸಗುವುದು ಎತ್ತ ಆ ಮಹಾಶ್ವೇತೆಯಂ ಕಾಣ್ಬುದು: **ಕಾದಂಸಂ,** ೬. ೨೦); ಕೈಗೊಳ್ಳು (ತಪದೊಳೆಸಗಿದಂ ಸೂರ್ಯಮಿತ್ರ ಬ್ರತೀಂದ್ರಂ: **ಸುಕುಮಾಚ,** ೪. ೧೭)

**ಎಸಡಿ** – ಏಡಿ (ಮೀನಾದಂ ಎಸಡಿಯಾದಂ ಮಾನವಕೇಸರಿಯುಂ ಆಗಿ ಪಂದಿಯುಂ ಆದಂ: **ಸಮಯಪ,** ೮. ೧೩೭)

**ಎಸಡಿಯೋಡು** – ಏಡಿಯ ಮೈಚಿಪ್ಪು (ಬಳೆಯ ಪೇಱಂ ಆನೆ ಮೆಟ್ಟಿದಂತೆ ಎಲುವೆಲ್ಲಂ ನುರ್ಗುನುರ್ಗಾಗೆ ಮೆಯ್ಯ ತೊವಲ್ ಆಗೆ ಎಸಡಿಯೋಡುಗಳಂ ತೀವಿದ ಅವಲ ಚೀರಂಗಳಂ ಈಡಾಡಿದಂತೆ ಈಡಾಡಿದ ಚಾಣೂರಮಥನನ ಮೇಲೆ: **ನೇಮಿನಾಪು,** ೮. ೧೧೬ ವ)

**ಎಸಡು –** ಏಡಿ (ಈಗಳ್ ಕಪ್ಪೆಗಳುಂ ಎಸಡುಗಳುಂ ಇಲಿಗಳುಂ ಒಂತಿಗಳುಂ ಮೊದಲಾಗೊಡೆಯ ಜೀವರಾಶಿಗಳಂ ಕೊಂದು .. .. ನರಕಂಬುಗಲಾಟಿಸಿದಪ್ಪಯ್: **ವಡ್ಡಾರಾ,** ಪು ೧೪೦, ಸಾ ೪); ಆಮೆ

**ಎಸಪಂ –** ನಡೆಸುವವನು, ಸಾರಥಿ (ತೇರ್ಗೆ ಒಂದೆ ಗಾಲಿ ಎಸಪಂ ಪೆಱವಂ ಕೇಡಿನ್ನಲಸಿದೊಡಕ್ಕುಮೆ: **ಲೀಲಾವತಿ,** ೧೦. ೧೭)

**ಎಸರ್ಗೊಳ್ –** ಕುದಿಯಲು ತೊಡಗು (ಸಂಸಂದ ಔರ್ವಾನಳಂ ಪರ್ಬಿದವೊಲ್ ಉದಧ ಕಾಯ್ದುರ್ಕಿಎಸರ್ಗೊಂಡುದು: **ಕುಸುಮಾಕಾ,** ೮. ೧೧೯)

**ಎಸರ್ –** ಎಸರು, ಅಡಿಗೆಂದು ಕುದಿಯುವ ನೀರು (ಎಸರನಿಡುವ ಅಕ್ಕಿಗರ್ಚುವ ಬೆಸನಂ .. .. ಆರಿತ್ತರೆಲವೊ: **ಗದಾಯು,** ೭. ೩೭)

**ಎಸರ್ಮುಚ್ಚಿ –** ಅಡುಗೆಯ ಪಾತ್ರೆಯ ಮುಚ್ಚಳ (ಕುಲನೌಘಂ ನುರ್ಗಿದತ್ತು ಆನೆ ಮೆಟ್ಟಿದ ವೆಸರ್ಮುಚ್ಚೆವೊಲಾಗಿ ಕೂರ್ಮನೊಡೆದಂ: **ಜಗನ್ನಾವಿ,** ೧. ೩೦)

**ಎಸಱ್ –** ಎಸಳು, ಹೂವಿನ ಪಕಳೆ (ತಾವರೆಯ ನೀಳ್ದೆಸಱೊಳ್ ,ಱೆದುಂಬಿ ಪಾಯ್ದು ಒಡಂಬಡನೊಳಕೊಂಡು: **ಪಂಪಭಾ,** ೪. ೭೮)

**ಎಸಱ್ವಾಸು –** ಹೂವಿನ ಹಾಸು (ಕಟಿಲ್ದ ಪದ್ಮದಳಸಂಕುಳದಿಂದ ಎಸಱ್ವಾಸನೊತ್ತಿ: **ಅನಂತಪು,** ೭. ೬೧)

**ಎಸಟಿಕ್ವೊರೆ** – ಹೂವಿನ ಹೊರೆ ಎಳ್ತೆಸಟಿಕ್ವೊರೆಯೊಳ್ ಅಡಂಗಿ ನುಣ್ಚರದಿಂ ಆಣತಿಮಾಡಿದುದು ಉನ್ಮದಾಳೀ: **ಮಲ್ಲಿನಾಪು,** ೬. ೯೮)

**ಎಸೆ** – ಬಾಣ ಪ್ರಯೋಗಿಸು; ಬಿಸುಡು; ಶೋಭಿಸು (ಮಂಗಳತೂರ್ಯನಾದಂ ಎಸೆಯುತ್ತಿರ್ಪನ್ನೆಗಂ ಚಕ್ರಿ ರಾಗಿಸಿ ಕೆಯ್ನೀರ್ ಎಱೆದಂ ಗುಣಾರ್ಣವ ಮಹೀಪಾಲಂಗಂ ಆ ಕನ್ನೆಯಂ: **ಪಂಪಭಾ,** ೫. ೨೫); ಹಾಡು (ಮಿಡಿವಂ ಬೀಣೆಯನಿವಂ ಇವಳ್ ಒಡನೆ ಎಸೆವಳ್ ಬೆರಲ ಕೊರಲ ಕೂಟಂ ಬೆರಲಂ ಮಿಡಿಯಿಸಿದುದೆನಿಸಿ: **ಆದಿಪು,** ೯. ೧೧೭); ಧ್ವನಿ ಕೇಳಿಸು (ಇದು ಮನುಜರ್ಗೆ ಅಗೋಚರಮೆನಿಪ್ಪ ಹರಾದ್ರಿಯ ತಟ್ಟಿಲ್ ಇಲ್ಲಿ ಗೇಯದ ದನಿ ನುಣ್ಪುವೆತ್ತು ಎಸೆಯುತ್ತಿರ್ದಪುದು: **ಕಾದಂಸಂ,** ೩. ೨೦)

**ಎಹಗೆ** – ಹೇಗೆ (ತಿಬ್ಬಂ ಮಾಡಿದಂ, ತಿಬ್ಬ ಎಹಗೆ ಅಹಗೆ ಮಾಡಿದಂ: **ಶಬ್ದಮದ,** ೧೫೫ ಪ್ರ)

**ಎಳ್** – ಎಳ್ಳು, ತಿಲ ಬೆಳೆದೆಳ್ಳಂ ಬಿರ್ಚಿ ರಾಶಿಸ್ಥಿತಿಯನಿರಿಸಿ: **ಸುಕುಮಾಚ,** ೫. ೩೪)

**ಎಳಕ** – ಅಲುಗಾಟ (ಕಲಶದ ತೆಳುವೆಳಗಿನ ಎಳಕದಿಂ ಎಳನೀರ ಪೊನಲೊಳ್ ಮುಚುಗಿಸುವಂತೆಯುಂ: **ಅನಂತಪು,** ೫. ೭೧ ವ)

**ಎಳಗಂದಿ** – ಈದು ಕೆಲವೇ ಕಾಲವಾಗಿರುವ ಹಸು, ಎಮ್ಮೆ (ತಾಯ ಶಿಶುವಿನಂತೆ ಕರುವಿನೆಳಗಂದಿನಂತೆ: **ಧರ್ಮಾಮೃ,** ೫. ೮೩ ವ)

**ಎಳಗಾರ್** – ಮುಂಗಾರು, ಮಳೆಗಾಲದ ಆರಂಭ (ಮುಕ್ಕುಳಿಸಿದ ಎಳಗಾರ ಕಿಱುಮುಗಿಲ ಜವಳಿಗಳಿವೆನಿಸಿ: **ಆಚವರ್ಧ,** ೫. ೬೩ ವ)

**ಎಳಗೆಯ್** – ಎಳೆಯ ಪಯರಿರುವ ಹೊಲ (ಪರಿಯಿಸೆ ಮಾರ್ಬಲಂ ಎಳಗೆಯ್ಯ ಮೇಲೆ ಕಾಟ್ಟುರದ ತೊಱೆ ಪರಿದಂತೆ: **ಹರಿವಂಶ,** ೧೨. ೧೭ ವ)

**ಎಳಜವ್ವನೆ** – ಎಳೆಯ ಹರೆಯದವಳು ನಳಿನೀಕುಟ್ಮಲಕುಚಂಗಳ ಎಳಜವ್ವನೆಯರ್: **ಜಗನ್ನಾವಿ,** ೪. ೧೨೧)

**ಎಳಜೊನ್ನ** – ನಸು ಬೆಳದಿಂಗಳು ಪಗಲಿರುಳ್ ಎಳಜೊನ್ನಂ ಕಾಳಮೆಂಬುಕ್ಕಿ ಚಿತ್ತಂಬುಗೆ: **ಅಜಿತಪು,** ೧೦. ೨೦)

**ಎಳತೆ** – ಚಾಂಚಲ್ಯ (ಮೀಂಬೊಣರ್ಗಣ್ಣ ನಿಮಿರ್ಕೆ ಸೊರ್ಕುಗಣ್ಣ ಅಸತೆ ಮಲ್ಲೆಗಣ್ಣ ಎಳತೆ .. .. ಬೆಳಸಿನ ಸುಗ್ಗಿಗಾಣಲಣಮಾಯ್ತು: **ಪುಷ್ಪದಂಪು,** ೫. ೨೪)

**ಎಳದಳಿಸು** – ಎಳವೆಯಿಂದ ಹೊಳೆ (ಪೊಳೆವೆಳೆದರಿಲೊಳೆ ಪುದಿದು ಎಳದಳಿಸಿ ಕುಳಿರ್ಕೋಟ್ಟ್ ಸೋನೆಯ ಸೊನೆಯನೆ ಪುದುಂಗೊಳಿಸಿದುದು: **ಆದಿಪು,** ೧೧. ೮೦)

**ಎಳದಿಂಗಳ್** – ಎಳೆಯ ಚಂದ್ರ, ಬಾಲಚಂದ್ರ (ಗಂಗೆಯುಮಂ ಜೆಡೆಯೊಳ್ ಎಳದಿಂಗಳುಮಂ ತಾಳ್ದಿ ರುದ್ರನಿರ್ಪಂ ಗಡ: **ಸಮಯಪ,** ೧೦. ೭೨)

**ಎಳದು** – ಎಳೆಯ, ಕೋಮಲವಾದ (ಪೊಸತು ಪಟುದು ಎಳದು ಪೊಱಗು ಒಳಗು ಸಮಂ ಎನಿಪ್ಪವಱೊಳಂ ಅತ್ವಂಂತಕ್ಕೆ: **ಕಾವ್ಯಾವಲೋ,** ೨೪೯); ಅಲುಗಾಡು (ಮನಮೆಳದಾಗೆ ವೈರಿಗೆ ಮನೀಷಜನಂ ಮನಮೀಯೆ: **ಪಂಪರಾ,** ೩. ೯)

**ಎಳದೆಂಗು** – ಎಳೆಯ ತೆಂಗು, ಎಳನೀರು ಕಾಯಿ (ಎಳದೆಂಗಿನ ಎಳೆಯೆಲೆಯನಮರ್ಕೆವಡೆಯೆ ಪೆಣೆದು: **ಚಂದ್ರಪ್ರಪು,** ೭. ೯೫ ವ)

**ಎಳನೀರ್** – ಸೀಯಾಳ (ಎಳನೀರೊಳೊತ್ತಿನೊಳೊತ್ತಿ ಬರ್ಪ ಪೊನಲೊಳ್: **ಆದಿಪು,** ೧. ೬೪)

**ಎಳನೀಲ** – ರಾಜಾವರ್ತ ಎಂಬ ರತ್ನ (ರಾಜಾರ್ತಮೆಂದು ಎಳನೀಳಂ; **ಶಬ್ದಮದ,** ಪ್ರಸಾ ೨೧೦)

**ಎಳನೇಸಱ್** – ಬಾಲಸೂರ್ಯ (ಎಳನೇಸಱತೇಜದೊಳ್ ಓರಂತಪ್ಪನಂ: **ವಡ್ಡಾರಾ,** ಪು. ೪೪, ಸಾ. ೨೩)

**ಎಳಲ್** – ಜೋತಾಡು (ನರರ ನರಮಾಲೆ .. .. ಮಾಲೆ ಸರಪಳಿಯಂತೆ ಬಳ್ಳಿಗರುಳ್ಚಿಂಗಾಲೊಳೆಳಲ್ದು ಬರೆ: **ರಾಜಶೇವಿ,** ೬. ೮೬ ವ)

**ಎಳಲೆವಿಡು** – ಜೋತಾಡು (ಪರಿಸರದೊಳ್ ನಿಜೆವಿಡಿದು ಎಳಲೆವಿಟ್ಟ ತಳಿರ್ವಟ್ಟೆಯ ಚಿತ್ರಾವಳಿಯ: **ರಾಜಶೇವಿ,** ೮. ೫ ವ)

**ಎಳವಾಳೆ** – ಬಾಳೆಯ ಮೀನು (ಮಿಳಿರ್ವ ಜಳದೊಳಗೆ ಪೊಳೆವೆರಡು ಎಳವಾಳೆಯಂ: **ಆದಿಪು,** ೭. ೨೭ ರಗಳೆ)

**ಎಳವಾಟಿ** – ಎಳೆಯ ಬಾಳೆಗಿಡ (ನೇರಿತು ಎಳವಾಟಿಗಂಬಮಂ ಓರಂತಿರೆ ನುಣ್ಪುವೆತ್ತು ಸೋಲಿಪ ಚೆಲ್ವಿಂ ಬಾರಿಸಿ ಸೊಬಗಿಂಗೆತ್ತಿದ ತೋರಣಗಂಬಂಬೊಲಿರ್ದುದುವು ಆಕೆಯ ತೊಡೆಗಳ್: **ಕಬ್ಬಿಗಕಾ,** ೬೧)

**ಎಳವಿದಿರ್** – ಎಳೆಯ ಬಿದಿರು (ಎಳವಿದಿರ ಬಣ್ಣಮೊಳ್ಕುಡು ಕಳಶಮನವ್ವಳಿಪಮೊಲೆ: **ಆದಿಪು,** ೪. ೪೪)

**ಎಳವು** – ಆಜ್ಞೆಮಾಡು (ಕಡೆಗಣ್ಣಳಿಂ ಮೊಗಮಂ ಎಳವಿ ಬಿಭಾಧರಮಂ ಮಾಯಿಂದಮಡಿಸಿ ಪಿಡಿದಾಗಳ್: **ಲೀಲಾವತಿ,** ೧೪. ೧೦೫ ವ); ಸರಿಪಡಿಸು (ಸುಟಿದುದು ಬಾಟಿನುಣ್ಗೊಡೆಯನಪ್ಪುತೆ ಕಂಪನಮಂ ಸಾರ್ದು ಎಳವಿ ಸುಗುಚ್ಛಮೆಂಬ ಮೊಲೆಯಂ: **ಶಬರಶಂ,** ೨. ೫೦)

**ಎಳವುಟಿಲ್ದಾಣ** – ಎಳೆಯ ಮರಗಳ ತೋಪಿನ ಜಾಗ (ಎಳವುಟಿಲ್ದಾಣಂಗಳಿಂ ಕಣ್ಗೆವಂದಿರೆ ಶಿಪ್ರಾನದೀ ತಟಸ್ಥಲಿಗಳೊಳ್ .. .. ನಡೆಪಾಡುತಿರ್ದಂ: **ಕಾದಂಬ,** ೮. ೬೦)

**ಎಳವೆ** – ಬಾಲ್ಯ (ಸಕಲ ಧರಿತ್ರೀತಳಮಂ ಎಱಗಿದಿದಂ ಎಳವೆಯೊಳ್ ಇಳೆ ಬಣ್ಣಿಸೆ ದಶರಥಂ ಭಗೀರಥ ಚರಿತಂ: **ಪಂಪರಾ,** ೩. ೨)

**ಎಳವೆಱಿ** – ಎಳೆಯ ಚಂದ್ರ (ಆ ದೇವಿಯ ಜಾತ್ರೆಗೆ ಮೊಳೆವೋದ ಎಳವೆಱ ಸಿರದ ಗಾಳಂ ಉರಿ ಉಯ್ಯಲೆ .. .. ಆಗೆ ಬಂದುದಂದು ವಸಂತಂ: **ಯಶೋಧಚ,** ೧. ೩೬)

**ಎಳವೇಟ** – ಪ್ರೇಮಾಂಕುರ (ಮೊಳೆ ಎಳವೇಟಮಂ ಅಲರ್ಚಿ ಸುಸಿಲೆಸರಿಂದಂ ಬಳೆಯಿಪುದುಗೆಟ್ಟು ಮಾನಿನಿ ಮೊಳೆಯೊಳ್ ಮುರುಟಿಪುದೆ: **ಲೀಲಾವತಿ,** ೧೪. ೩೫)

**ಎಳಸು** – ಆಸೆಪಡು (ಎಳಸಿ ಸುರಸಮಿತಿ ಕಲ್ಪಂಗಳ ದೆಸೆಯನೆ ಬಿಸುಟುಟು ರಮಿಯಿಸುತ್ತುಂ: **ಆದಿಪು,** ೭. ೬೩); ವ್ಯಾಪಿಸು, ಆವರಿಸು (ಎಳವಿಸಿಲುಂ ಬೆಳ್ದಿಂಗಳುಂ ಎಳಸಿದುವೆನೆ ರಮ್ಯಹರ್ಮ್ಯಶಿಖರ ಸ್ಥಳಿಯೊಳ್ ಪೊಳೆದುವು ಪೊಂಗಳಸಗಳ ಪೊಳೆಪುಂ ಕೇತನ ದುಕೂಲ ಚಾಲಾಂಚಲಮುಂ: **ಪಂಪರಾ,** ೩. ೧೧೩)

**ಎಳಱು** – ಹೆದರು (ಓವೋವೆಂದು ಎಳಱ ಜನಂ ದಾವಾನಲದಂತೆ ಸುಡುವನಿರುಳುಂ ಪಗಲುಂ: **ಧರ್ಮಾಮೃ,** ೨. ೩೯)

**ಎಳೆ** – ಇಳಾ, ಭೂಮಿ (ಎಳೆಯೊಳ್ ತೋಱಿದ ರೂಪನಾಗಳೆ ನಭೋಭಾಗಾಗ್ರದೊಳ್ ತೋರ್ಪನಾಗಳೆ: **ಆದಿಪು,** ೭. ೧೨೨)

**ಎಳೆದೇರ** – ಭೂಮಿಯನ್ನೇ ರಥವಾಗುಳ್ಳವನು, ಈಶ್ವರ (ಬಲ್ಲೆಯನಿಟ್ಟುಳಿಗೊಂಡು ಬೇಗದಿಂ ಕದಕದಪಂ ತೊಡರ್ಚಿಂ ಎಳೆದೇರನಂ ಓಡಿಪೆನೆಂದು ಪೂಸರಂ: **ಕಬ್ಬಿಗಕಾ,** ಪರಿಷತ್ತು ೧೫೩)

**ಎಳೆವಾಸೆ** – ಹಾವಸೆ, ಪಾಚಿ (ಎಳೆವಾಸೆಯಾಂತಂ ಅಂಬುಜದೆಳೆವಾಸೆಗೊಂಡ ಪುಳಿನದೆಡೆಗನವೀಶಂ: **ರಾಜಶೇವಿ,** ೧೦. ೯೮)

**ಎಳ್ತರ** – ಅಟಾಟೋಪ, ಆಡಂಬರ (ಸಿಡಿಲ ಕಡುಗಾಯ್ಪು ಸಿಂಗದ [ಒಡ[ಉರ್ ಭೈರವನ ಬಲ್ಪು ಮಾರಿಯ ಮಸಕಂ ಕಡೆಗಾಲದ ಕವನೆಟ್ತರಂ ಒಡರಿಸೆ ಲಕ್ಷ್ಮಂ ಅಡುರ್ತು ಕಾದುತ್ತಿರ್ದಂ: **ಪಂಪರಾ,** ೯. ೭೦)

**ಎಳ್ಳನಿತು** – ಏಳ್ಳಿನಷ್ಟು, ಸ್ವಲ್ಪವೂ (ನಿನ್ನೊಳೆಳ್ಳನಿತುಂ ದೋಷಮನುಂಟುಮಾಡದಿರೆಯುಂ: **ಪಂಪಭಾ,** ೪. ೯೩)

**ಎಳ್ಳನೀರೆಱೆ** – ಎಳ್ಳುನೀರು ಬಿಡು, ತ್ಯಜಿಸು (ಗರತಿಯಲ್ಲದೆ ಗೃಹಮೆಲ್ಲಿತ್ತೆಂದು ಗಾರ್ಹಸ್ಥ್ಯಕ್ಕೆ ಎಳ್ಳನೀರೆಱೆದು: **ನೇಮಿನಾಪು,** ೫. ೩ ವ)

**ಎಱಂಕೆ** – ರೆಕ್ಕೆ (ಭೋಂಕನೆ ಪಾಯ್ದು ಎಱಂಕೆ ನಾಂದೊಡೆ ಜಿನುಂಗಿ ನೆಲಸಿದುದು ವಿಕಚಕನಕಾಬ್ಜಿನಿಯೊಳ್: **ಆದಿಪು,** ೧೧. ೬೨)

**ಎಱಂಕೆವೆಟ್ಟು** – ರೆಕ್ಕೆಯುಳ್ಳ ಬೆಟ್ಟ (ಕರಿಗಳ್ ಎಱಂಕೆವೆಟ್ಟುಗಳವೋಲ್ ನಡೆತಂದುವು ವಾಜಿರಾಜಿಗಳ್ ತೆರೆಗಳ ತೆರ್ಕೆಯಂತೆ ಕವಿತಂದುವು: **ಪಂಪರಾ,** ೪. ೫೫)

**ಎಱಕ** – ಪ್ರೀತಿ (ಭರತನ ಕಣ್ಗೆ ಎಱಕಮನೆ ಪಡೆದು ಚೆಲ್ವಿಂ ಮಱಸಿದುವು ಉದ್ಯಾನಲತೆಗಳಂ ವನಲತೆಗಳ್: **ಆದಿಪು,** ೧೧. ೯೫); ನಮಸ್ಕಾರ, ಬಾಗುವಿಕೆ (ಚಲದಿಂ ಎಱಗಿಸಲಿರೆ ಭರತಂಗೆ ಎಱಗುವ ಎಱಕಂ ಅಂಜುಮೆಯಲ್ತೇ: **ಆದಿಪು,** ೧೪. ೭೫)

**ಎಱಕಂಬೆರು** – ಎರಕ ಹೊಯ್ಯು (ಇನ್ನಿಲ್ಲಿ ಪೆಂಪು ಎಱಕಂಬೆತ್ತಿರೆ ಕಾವೆನೆನ್ನ ನುಡಿಯಂ ಕೆಯ್ಕೊಂಡ ಕಟ್ಟಾಯಮಂ: **ಪಂಪಭಾ,** ೧೨. ೧೯೮)

**ಎಱಕೆ** – ರೆಕ್ಕೆ (ಎಱಕೆಗಳಂ ಮೆಲ್ಲನೆ ಉರ್ಚುತ್ತೆ ನಿಂದು ಒಯ್ಯನೆ ಸಾರ್ದು ಆ ತ್ರೋಟಿಯಿಂದಂ ತೊಡೆದು ಗಱಿಗಳಂ ನುಣ್ಣವಿರ್ ಬಿರ್ಚಿ ಮೆಯ್ಯಂ ತೊನೆದು ಉದ್ದಂ ನೀಡಿ ಗೋಣಂ ನವ ದಿನಮುಖದೊಳ್ ಕುಕ್ಕುಟಂ ಕೂಗಿತಾಗಳ್: **ಶಾಂತೀಶ್ವಪು,** ೧೧. ೯೬)

**ಎಱಗು** – ನಮಸ್ಕರಿಸು (ಎಱಗು–ಪ್ರಣತೇ: **ಶಬ್ದಮದ,** ಧಾ ೯೨); ಪ್ರೀತಿಯಿಂದ ಸೇರು (ಎಱಗದೆ ಪೂತ ಚಂಪಕವನಕ್ಕೆ ನಮೇರು ಮಹೀರುಹಕ್ಕೆ ಬಂದೆಱಗುವ ಚಂಚರೀಕದವೋಲ್ ಆಕೆಯ ಕೇಕರಂ ಅನ್ಯರಾಜಕಕ್ಕೆ ಎಱಗದೆ ರಾಘವಂಗೆಱಗೆ ಕಂಚುಕಿ ಕಣ್ಣಱಿದು ಆ ಲತಾಂಗಿಗೆ ಅಟ್ಟೆಱೆಳ್ ಅಭಿವರ್ಣಿಸಲ್ ಬಗೆದಳ್: **ಪಂಪರಾ,** ೫. ೭೧); ಮೇಲೆ ಬೀಳು (ಎಡವಱದೊಳ್ ಎಱಗಿ ಬಱಸಿಡಿಲ್ ಇಡುಮುಡುಕನೆ ಪೊಡೆದುದೆನಿಸಿ ಪಾಂಡ್ಯನ ರಥದ ಅಚ್ಚು ಉಡಿದು ಅಟ್ಟಿತಟ್ಟಿ ಕೊಂಡುವು ಕಡುಗೂರಿದುವೆನಿಪ ಗುರುತನೂಜನ ಕಣೆಗಳ್: **ಪಂಪಭಾ,** ೧೨. ೮೨); ಬಾಗು (ಗಱಿಸನ್ನೆಗೆಯ್ದು ತೆಗೆನೆಱೆದು ಎಱಗಿ ಪರಂಕಲಿಸಿ ಪರ್ವಿ ಕೂಕಿಱಿದು ಇಸೆ ಕೆಂಗಱಿಯ ಮೊನೆಯಂಬುಗಳ್ ಕಣ್ದೆಱೆಯಿಸಿದುವು ಪೊಣರ್ವ ಬಿಲ್ಲ ಕಡುವಿತ್ತೆಗರಂ; **ಪಂಪಭಾ,** ೧೦. ೭೩)

**ಎಱಗುಹ** – ಮೇಲೆ ಬೀಳುವಿಕೆ (ತೆಂಗುಹಮೆಂದು ಪಕ್ಕಯೆಱಗುಹಂ: **ಶಬ್ದಮದ,** ಪ್ರಸಾ, ೧೦೭)

**ಎಱಚು** – ಚೆಲ್ಲು (ತಣ್ಣನಿರ್ಪ ನೀರಂ ಪೊಕ್ಕಿರಲುಂ ಮೇಲೆ ಎಱಚಿಕೊಳಲುಂ ಮನಮಾಗಿ ವಿರಹಾನಳನಿಂದಿರಲಾಱದೆ: **ಧರ್ಮಾಮೃ,** ೧೩. ೬೪)

**ಎಱವಟ್ಟು** – ಆಶ್ರಯ (ಜಾಣ್ತನಕ್ಕೆ ಎಱವಟ್ಟು ಒಳ್ನುಡಿಗೆ ಆಣ್ಮಂ ಆಯತಿಗೆ ಅಡರ್ಪು .. ..ಸತ್ಯಕ್ಕೆ ಅಧಿಷ್ಠಾನಂ ಎಂದಱಿತಂ ಕೈಮಿಗೆ ಕೂರ್ತು ಕೀರ್ತಿಸುವುದು ಉರ್ವಿಮಂಡಲಂ ದುರ್ಗನಂ: **ಪಂಚತಂತ್ರ,** ೫೨)

**ಎಱವಿಱನಾಗು** – ಅಸ್ತವ್ಯಸ್ತಗೊಳ್ಳು, ಚೆದುರಿ ಹೋಗು (ಬಂಬಲ ಬಾಡಿದ ತನುಲತೆಗಳುಂ ಎಱವಿಱನಾದ ತಲೆದುಡುಗೆಗಳುಂ ಬಾಡಿದ ಪೂಮಾಲೆಯೊಡನೆ: **ಆದಿಪು,** ೧೧. ೭೦ ವ)

**ಎಱವಟ್ಟು** – ಆಶ್ರಯ (ಮಿಸುಪ ಕೊಸಗಿನ ಚೆಲ್ವೆಂ ಪುಟ್ಟಿಸಿದುದೊ ಪೊಸಸಿರಿಗೆ ಎಱವೆಟ್ಟೆನೆ ಪೂಗಣೆಯನಿರ್ಪ ನೆಲೆಮಾಡದವೋಲ್: **ಕಬ್ಬಿಗಕಾ,** ೮೬)

**ಎಱೆ** – ಆಧಿಪತ್ಯ (ನನೆಯಂಬನೆ ಕರ್ಚಿ ಪಾಱಿದಪುದೋ ಶೃಂಗಾರವಾರಾಶಿ ಭೋಂಕನೆ ಬೆಳ್ಳಂಗೆಡೆದತ್ತೊ ಕಾಮನ ಎಱೆ ಮೆಯ್ವೆರ್ಚಿತ್ತೊ ಪೇೞ್ ಈಕೆಗೆ ಎಂಬಿನಂ: **ಪಂಪಭಾ,** ೪. ೪೨); ಸುರಿ (ಮಂಗಳತೂರ್ಯನಾದಂ ಎಸೆಯುತ್ತಿರ್ಪನ್ನೆಗಂ ಚಕ್ರಿ ರಾಗಿಸಿ ಕೆಯ್ನೀರ್ ಎಱೆದಂ ಗುಣಾರ್ಣವ ಮಹೀಪಾಲಂಗಂ ಆ ಕನ್ನೆಯಂ: **ಪಂಪಭಾ,** ೫. ೨೫)

**ಎಱೆಯ** – ಒಡೆಯ, ಪ್ರಭು (ಅಱೆಯದೆ ತಂದೊಡಮೇಂ ಎಮ್ಮ ಎಱೆಯಂಗೆ ಅದಂ ಎಮ್ಮ ಕೆಯ್ಯೊಳಟ್ಟಿಂ ನೀಂ ಇಂತಱೆಯುತ್ತುಂ ಪೆಱರೊಡಮೆಯಂ ಉಱೆ ಸೆಱೆವಿಡಿದಿರ್ಪಿರಿ ಇನ್ನರ್ ಉರ್ವಿಯೊಳ್ ಒಳರೇ: **ಪಂಪಭಾ,** ೮. ೧೮); ಪ್ರೀತಿಪಾತ್ರ (ತನ್ನೆಱೆಯನೊಳೊಲ್ದು ಕೋಪಿಸುವ ಕಾಮಿನಿಗೀ ಮುನಿಸೊಂದೆ ಸಾಲದೇ: **ಗಿರಿಜಾಕ,** ೪. ೧೪೮)

**ಎಱೆಯಿಸು** – ಸುರಿಸು, ಹುಯ್ಯಿಸು (ಎಮ್ಮ ಮಾವಂ ಬೈಕಂದಿರಿದು ತಂದ ಕೂೞ್ಗೆ ನೆರಂ ಎಣ್ಣೆಯನಕ್ಕೆ ಉಪ್ಪನಕ್ಕೆ ಕಟೆಯನಕ್ಕೆ ಎಂದೊಪ್ಪೊಡಂ ಎಱೆಯಿಸಿಯಱೆಯಂ: **ವಡ್ಡಾರಾ,** ಪು ೪, ಸಾ ೧೪)

**ಎಱೆವಟ್ಟು** – ಆಶ್ರಯ (ಅಂತು ಶೋಭೆಗೆ ಎಱೆವಟ್ಟಾದ ತುಱುವಟ್ಟಿಯಂ ವಿಸ್ಮಯಂಬಟ್ಟು ನೋಡುತ್ತುಂ: **ಲೀಲಾವತಿ,** ೫. ೧೦೮ ವ)

**ಎಱೆವಿಡಿ** – ಆಶ್ರಯ ಪಡೆ (ತೊಱೆದು ಪರೀಷಹತತಿಯಂ ಪಱೆವಱೆಯಾದ ಒಡಲಂ ಆತ್ಮನಿರಪೇಕ್ಷತೆಯಿಂ ನಿಱೆಸಿ ದುರಿತಾರಿಯೊಡಮಡಿದೆಱೆವಿಡಿದು ಅಘಹರಂ ಅಚ್ಯುತೇಂದ್ರನೆನಾದಂ: **ಶಾಂತಿಪು,** ೭. ೮೪)

**ಎಱೆವಿಱನಾಗು** – ಎರ್ರಾಬಿರ್ರಿಯಾಗು (ಬಂಬಲ ಬಾಡಿದ ತನುಲತೆಗಳುಂ ಎಱೆವಿಱನಾದ ತಲೆದುಡುಗೆಗಳುಂ: **ಆದಿಪು,** ೧೦. ೭೦ ವ);

**ಎಱೆವಟ್ಟು** – ಮೂಲಸ್ಥಳ, ಆಶ್ರಯ (ವರಪುಣ್ಯೋದಯಹೇತು ಶಾಶ್ವತಮಹಿಂಸಾಲಕ್ಷಣಂ ಸದ್ಗುಣಾಕರಂ ಒಳ್ಪಿಂಗೆಱೆವಟ್ಟು ನೆಟ್ಟನೆ ಪುನರ್ಜಾತಕ್ಷಯಶ್ರೀಗೆ ತಾಯ್ಗರು: **ಸುಕುಮಾಚ,** ೧. ೬)

**ಎಱಿಕೆವೆಸ** – ಸ್ವಾಮಿಕಾರ್ಯ (ತುಱುಗೋಳೊಳ್ ಪೆಣ್ಬುಯ್ಯಲೊಳ್ ಎಱಿಕೆವೆಸದೊಳ್ ನಂಟನ ಎಡಱಿಳ್ ಊರಳುವಿನೊಳಂ ತಱಿಸಂದು ಗಂಡುತನಮನೆ ನೆಱುಪದವಂ ಗಂಡನಲ್ಲಂ ಎಂತುಂ ಷಂಡಂ: **ಗದಾಯು,** ೨. ೨೪)

**ಎಱಕುಳಿ** – ಸೆಳೆತ, ಆಕರ್ಷಣೆ (ತಳವೆಳಗಾದಂ ವನಿತಾತಿಳಕದ ನೊಸಲ ರೋಚನಾ ತಿಲಕದ ಚೆಲ್ವು ಎಱೆಕುಳಿಗೊಳೆ ಸಮ್ಮೋಹನತಿಳಕದವೋಲ್ ಮನಮನವನಿಪಾಲಕ ತಿಲಕಂ: **ಪಂಪರಾ,** ೫. ೬೧)

**ಎಱತೆ** – ನೇತಾಡುವಿಕೆ (ಪಾವಂ ವ್ಯೋಮದಿಂದಂ ತಡೆಯದೆ ಎಱತೆಯೊಳ್ ಇಕ್ಕಿದಂತೆಲ್ಲಿಯುಂ .. .. ಮಱೆ ಭೊರೆಂದು: **ಧರ್ಮಾಮೃ,** ೧೧. ೧೩೬)

**ಎಱಲ್** – ಜೋಲು ಬೀಳು (ಮರದ ತುತ್ತತುದಿಯೊಳಿರ್ದು ಎಱಲ್ವ ಗುಂಡಿಗೆಯಂ ಕಂಡು ಗುರುಗಳ್ಗಿಂತೆಂದಂ: **ವಡ್ಡಾರಾ,** ಪು. ೯೧, ಸಾ ೧೨); ಜೋತುಬೀಳು, ಬಳಲು (ಎರಡರ್ಥಕ್ಕೆ: ಎಱಲ್ದನೆಂದು ಜೋಲ್ದನುಂ ಬಱಲ್ದನುಮಕ್ಕುಂ: **ಶಬ್ದಮದ,** ೩೩ ವೃತ್ತಿ ೧೩೪) ಜೋಲಾಡು (ಸ್ನಾನಾರ್ಥಂ ಒಂದು ಕಳಶಮಂ ನಿಯಮನಿಧಾನಂ ಎಱಲೆ ಪಿಡಿದು ಅಮಳಿನ ಗಂಗಾನದಿಗೆ ವಂದು ಸುರತನಿಧಾನಿ ಅಮರೇಂದ್ರಗಣಿಕೆಯಂ ಮುನಿ ಕಂಡಂ: **ಪಂಪಭಾ,** ೨. ೪೧); ಬಳಲು (ಪೆಸರಱಿಯದಮರತೂರ್ಯಪ್ರಸರಂಗಳ ಜತಿಗೆ ತೊಡರದೆ ಇನಿಸು ಎಱಲದೆ: **ಆದಿಪು,** ೯. ೩೧)

**ಎಱಲಿಕ್ಕು** – ನೇತು ಹಾಕು (ರಥಾಂಗಂ ಎಱಲಿಕ್ಕಿದ ಮುತ್ತಿ ಸೂಸಕಂಗಳಂ ಬಾಳಮೃಣಾಳಮೆಂದು ಕರ್ದುಕಲ್ ಬಗೆಗುಂ ಕಲಹಂಸ ಪೋತಕಂ: **ಪಂಪರಾ,** ೧. ೧೨೭); ತೂಗು ಹಾಕು (ಎಱಲಿಕ್ಕಿದ ಮುಕ್ತಾದಾಮಶೋಭೆ ಲಕ್ಷ್ಮೀಲಲನಾ ದರಹಾಸ ಶೋಭೆ: **ಆದಿಪು,** ೪. ೩೦ ರಗಳೆ)

**ಎಱಲೆವಿಡು** – ನೇತುಹಾಕು (ಮುತ್ತಿನ ಸರಮಂ ಎಱಲೆವಿಟ್ಟಂತೆ ಅಡಿಗಡಿಗೆ ಬಿಂದುಮಾಲೆಯಂ ಬಿಡುವ .. .. ಧಾರಾಗೃಹಂಗಳ ಸುತ್ತಲುಂ: **ಲೀಲಾವತಿ,** ೧೧. ೫೬ ವ)

**ಎಱಲ್ಚು** – ಎಱಲಿಕ್ಕು (ಕೈಯನೆಱಲಿಕ್ಕಿ ಅರ್ಧಗಪ್ಪಡಮನೆಡದ ಮುಯ್ಯಿನ ಮೇಗಿಕ್ಕಿ: **ವಡ್ಡಾರಾ,** ಪು. ೯೨, ಸಾ. ೧೬)

**ಎಱವಾಡು** – ನೇವರಿಸು (ಮಣಿಮುದ್ರಿಕೆಯಂ ಕಳೆದು ನೀಡಿ ನಿಡಿ ಎಱವಾಡಿ ಮಱೆದೀಡಾಡಿ ಪೋಪುದುಂ: **ನೇಮಿನಾಪು,** ೪. ೮೪ ವ)

**ಎಱವಿಸು** – ಎಱವಾಡು (ಕರತಲದಿಂ ಲಲಿತಾಮಗಮನೆ ಎಱವಿಸಿ ಕೋಮಲ ಹಸ್ತಮನೆತ್ತಿ: **ಕುಸುಮಾಕಾ,** ೧೦. ೪೫)

**ಎಱವು** – ನೇವರಿಸು (ಪರೆದಿರ್ದ ಕುರುಳ್ಗಳಂ ಓಸರಿಸಿ ಕದಂಪುಗಳಂ ಒಯ್ಯನೆ ಎಱವುತ್ತ ಅಂದು ಆಳ್ ಅರಸೆಂಬ ಭೇದಂ ಎಮ್ಮಿರ್ಬರೊಳಂ ಪಲ್ಲಿಟಸಿತು: **ಕಾದಂಸಂ,** ೪. ೪೧)

**ಎಱಿ** – ಬರಸೆಳೆದುಕೊ. ನೂಲು (ಒಂದರ್ಥಕ್ಕೆ: ಎಱಿಯೆಂದು ನೂಲೆಱೆಯೊಳಂ ಬರಸೆಳೆವುದಱೊಳ್ ಱಱಂ; ಭೂಮ್ಯರ್ಥದೊಳ್ ಕುಳಂ: **ಶಬ್ದಮದ,** ೩೩, ವೃತ್ತಿ, ೧೩೫)

**ಎಱಿಕುಳಿಗೊಳ್** – ಆಕರ್ಷಿಸು (ಪೞಿನೊಸಲ ರೋಚನಾ ತಿಲಕದ ಚೆಲ್ವು ಎಱೆಕುಳಿಗೊಳೆ: **ಪಂಪರಾ,** ೫. ೬೧)

**ಎಱಿಗೋಣ** – [ಬಲಿಗಾಗಿ] ಎಳೆದು ತಂದ ಕೋಣದ ಸಾವು (ಅಂತು ದ್ರೋಣಂ ಎಱೆಗೋಣಸಾವಂ ಸಾವುದುಂ ಭೋರ್ಗರೆದಾರ್ದ ಪಾಂಡವ ಪತಾಕಿನಿಯುಮಂ ಒಂದು ತಲೆಯಾಗೋಡುವ ಕೌರವಧ್ವಜಿನಿಯುಮಂ ಬೇಱೊಂದು ಮೊನೆಯೊಳ್ ಕಾದುತಿರ್ದ ಅಶ್ವತ್ಥಾಮಂ ಕಂಡು: **ಪಂಪಭಾ,** ೧೨. ೩೦ ವ – 'ಎಱೆಗೋಣಸಾವು' ಎಂಬುದು ಡಿ.ಎಲ್. ಎಂ ಸ್ವೀಕರಿಸಿರುವ ಪಾಠ, ದೀಪಿಕೆ ೪೪೬)

**ಎಱಿದಿಕ್ಕು** – ತಂತಿಯನ್ನು ಎಳೆ (ಪದಕೊರಲ್ ಇಂಪಂ ಅಪ್ಪುಕೆಯೆ ಕೊಂಕು ನಯಂ ಗಮಕಂಗಳಿಂ ಪೊಡರ್ ಕೊದಳ್ ಎಱೆದಿಕ್ಕಿದಂತೆ ಸುತಿಯೊಳ್ ಸಮವಾಗಿರೆ .. ..ಮೇನಕೆ ಸರಸ್ವತಿ ಬಾಯ್ದೆಱೆದಂತೆ ಪಾಡಿದಳ್: **ಪಂಪಭಾ,** ೭. ೮೮)

**ಎಱಿಯಿಸು** – ಎಳೆಯುವ ಹಾಗೆ ಮಾಡು (ಆತನನಟ್ಟಿ ಕಳೆಯಿಂ ಎಂದಟ್ಟಿದನೆಂದು ಪೇೞ್ದು ಪಡಿಯಱನಿಂದಂ ಎಱೆಯಿಸಿ ಪೆಡತಲೆಯಂ ಪಿಡಿದು ನೂಂಕುತ್ತಂ: **ವಡ್ಡಾರಾ,** ಪು. ೧೮೬. ಸಾ. ೨)

**ಎಱಿಸು** – ಎಱೆಯಿಸು (ಲುಱಿಯಂ ಕೊಲ್ವಂತಿರೆ ಕೊಂದು ಪೊಲೆಯರಿಂ ಚಚ್ಚರಂ ಎಱಸುವರ್ ಅಟ್ಟಿ ದೂಱುವರ್ ಪೆರ್ವಡಿಯೊಳ್: **ಧರ್ಮಾಮೃ,** ೬. ೯೨)

**ಎಚ್ಚಱ್** – ಎಚ್ಚರಗೊಳ್ಳು (ಬಣ್ಣವುರಂ ತೀವಿದ ಮಾಣ್ಕೆಯಾಯ್ತು ನವಿಲಿಂ ಕುಂದಂಗಳಿಂದ ಇಂದ್ರಗೋಪ ವಿಳಾಸಂಗಳಿಂ ಆಲಿಕಲ್ಲ ಪರಲಿಂ ಕಾರೊಳ್ ಮಹೀಮಂಡಲಂ: **ಪಂಪಭಾ,** ೭ ೨೪); ಜಾಗರೂಕತೆಯಿಂದಿರು (ಪರಿಜನ ಸಂಭ್ರಮಕೃತ ಹಿಮಕರಣದನೆಚ್ಚಱುತುಂ ಅಕಟ ಇದೇನಂ ನೆಗೞ್ದೆ: ಆಚವರ್ಧ, ೯. ೬೨); ನಿದ್ರೆ ತಿಳಿದೇಳು ರೋಗದಿಂದ ಚೇತರಿಸಿಕೊಳ್ಳು ಹಾಗೂ ನೆನಪಿಸಿಕೊ (ಮೂರರ್ಥಕ್ಕೆ: ಎಚ್ಚತ್ತನೆಂದು ನಿದ್ರೆತಿಳಿದನುಂ ಕುತ್ತಮೋಸರಿದಿದನುಂ ಮಱವೆ ಪಿಂಗಿದನುಮಕ್ಕುಂ: **ಶಬ್ದಮದ,** ೩೩ ವೃತ್ತಿ ೧೬೪)

**ಎಚ್ಚಱಿಸು** – ಎಬ್ಬಿಸು, ಎಚ್ಚರಗೊಳಿಸು (ಇಱಿಯೆಂ ಬಿಟ್ಟನೆಂಬೀ ಬಿಱುಬಿಂದಂ ಬೀಸೆ ಗದೆಯ ಗಾಳಿಯ ಕೋಳೆಚ್ಚಱಿಸಿದುದು ಭೀಮನಂ: **ಗದಾಯು,** ೮. ೩೨)

**ಎಚ್ಚಱುಗೆಡು** – ಎಚ್ಚರ ತಪ್ಪು, ಮೂರ್ಛೆ ಹೋಗು (ಪಟದ ಪೆಣ್ಣಂ ನೋಡಿ ಸೋಲ್ತು ಅಂಗದೆಚ್ಚಱುಗೆಟ್ಟಂ ಗಡ ದೇವ: **ಕುಸುಮಾಕಾ,** ೯. ೮೨)

**ಎಟ್ಟಿರ್** – ಸಮೀಪಿಸು, ಬರು (ಆಂ ಎಟ್ಟಿಂದ ಬೞಿಕ್ಕೆ ಚಿತ್ರರಥರಾಜಾವಾಸದೊಳ್ ವಾರ್ತೆಯೇಂ ನೀರೇಜದಳಾಕ್ಷಿ: **ಕಾದಂಸಂ,** ೫. ೮೩)

**ಎಟ್ಟಿರ** – ಆಧಿಕ್ಯ (ಕಟವಿಂ ಪೊಲ್ಲಮೆ ಪೆಱತೊಳವೆ ಪಾಪದ ಎಟ್ಟಿರಮಲ್ತೇ: **ಧರ್ಮಾಮೃ,** ೧೨. ೧೪೮); ಏಳಿಗೆ, ಅಗ್ಗಳಿಕೆಕೀರ್ತಿಲಕ್ಷ್ಮಿ ಬಿಡುಗುಂ ಕೆಡುಗುಂ ಕಡುಪೆಂಪಿನೆಟ್ಟಿರಂ: **ಪುಷ್ಪದಂಪು,** ೭. ೬೮)

**ಎಟ್ಟಿರವು** – ಬರುವಿಕೆ (ಈ ಮದದಂತಿಯ ಎಟ್ಟಿರವುಂಈತನ ಶೌರ್ಯಮಿಂ ಈ ಮಹೋಗ್ರಸಂಗ್ರಾಮದೊಳ್ ಎನ್ನುಮಂ ಚಳಿಯಿಸಲ್ ಬಗೆದಪುದು: **ಪಂಪಭಾ,** ೧೨. ೮೪)

**ಎಟ್ಟು** – ಎತ್ತು, ಗೂಳಿ (ಪಲಂಬರ್ ಪರದರ್ ಸತ್ತರ್ ಉೞಿದರೆಲ್ಲರುಂ ಕೆಟ್ಟೋಡೆ ಬಂಡಮುಂ ಎಟ್ಟುಗಳುಂ ಮೊದಲಾಗೆಲ್ಲಮ್ಮಂ ಕಳ್ಳರ್ ಕಳ್ಳರ್ ಕೊಂಡು ಪೋದರ್ದ; **ವಡ್ಡಾರಾ,** ಪು ೭೬, ಸಾ ೧೪); ಮಂಚದ ಹಗ್ಗ (ಮೂರರ್ಥಕ್ಕೆ : ಎಟ್ಟೆಂದು ಗೂಳಿಯುಂ ಅನಡ್ವನುಂ ಹೊರಸಿನ ನೆಯ್ಗೆಯ ಊಕೆಯ ನುಲಿಯುಮಕ್ಕುಂ: **ಶಬ್ದಮದ,** ೩೩ ವೃತ್ತಿ ೧೬೫)

**ಎಟ್ಟಾಡು** – ಎದ್ದು ನರ್ತಿಸು (ಕರಿಯ ಸೀಳ್ದು ಈಡಾಡುವವನೆ ಬಿರ್ಚಿ ಜೆಡೆಯಂ ಎಟ್ಟಾಡುವನೇ: **ಸಮಯಪ,** ೮. ೬೯)

**ಎಟ್ಟಿಟ್ಟು** – ಅಟ್ಟಿಸಿಕೊಂಡು ಹೋಗು (ಕೆಲಬರೆಮ್ಮಂ ಎಟ್ಟಿಟ್ಟಿ ಪಿಡಿದುಕೊಳ್ಗುಮೆಂದು ಮಗುಟ್ದಿ ನೋಡುತ್ತುಂ; **ಆದಿಪು,** ೯. ೯೨ ವ)

**ಎಟ್ಟಿಸು** – ಎಚ್ಚರಗೊಳಿಸು (ಎರಡರ್ಥಕ್ಕೆ: ಎಟ್ಟಿಸಿದನೆಂದು ನಿದ್ರೆತಿಳಿತಿಳಿಯಿಸಿದನುಂ ಎತ್ತಿ ಕಳೆದನುಮಕ್ಕುಂ: **ಶಬ್ದಮದ,** ೩೩ ವೃತ್ತಿ, ೧೩೭)

**ಎಟ್ಟು** – ಮೇಲೆಬ್ಬಿಸು (ಎಲ್ಲರುಂ ಮರಲುಂದಿದ ಬಟಿಕ್ಕಂ ಆ ಕಳ್ಳನಂ ಎಟ್ಟಿ ಏಕಾಂತದೊಳ್ ಇಂತೆಂದಂ: **ವಡ್ಡಾರಾ,** ಪು. ೧೭, ಸಾ ೧೭)

## ಏ

**ಏಂ ಗಳ** – ಏನಪ್ಪಾ! ಹಾಗಲ್ಲವೇ (ಪಸಿವನಾಮೇಗೊಂಡು ಏಂ ಗಳ ಗೆಯ್ವೆವು: **ಆದಿಪು,** ೭. ೭೩)

**ಏಕ** – ಸಮಾನವಿಲ್ಲದ, ಶ್ರೇಷ್ಠ (ಏಕಂ ಕೂಟಸ್ಥಂ ನಿನ್ನಾಕಾರ ತ್ರಿತಯವಾದ ವಿಭುತೆ ಸಮಗ್ರಂ: **ಜಗನ್ನಾವಿ,** ೪. ೮೦)

**ಏಕಕ** – ಒಬ್ಬಂಟಿ (ರಾಜವ್ರಜಪರಿಷತ್ ಪರಿವೃಷ್ವಿತ ಪ್ರಭುವೇಕೆ ತೊಟ್ಟನೆ ಏಕಕನಾದಂ: **ಕರ್ಣನೇಮಿ ,** ೧೪. ೮೭)

**ಏಕಕುಂಡಲ** – ಬಲರಾಮ (ಆರ್ಪಿನ ತಳಿಸಲದಂ ಕಂಡಂ ಏಕಕುಂಡಲನೆ ವಲಂ: **ಪಂಪರಾ,** ೬. ೧೩೫)

**ಏಕಗ್ರಾಹಿ** – ಒಂದೇ ಪಟ್ಟು ಹಿಡಿದವನು (ಆಗಳ್ ಅಂಗರಾಜಂಗೆ ಶಲ್ಯಂ ಕಿನಿಸಿ ಮುಳಿಸಿನೊಳೆ ಕಣ್ಗಾಣದ ಇಂತಪ್ಪ ಏಕಗ್ರಾಹಿಗಂ ಒಱಂಟಂಗಂರಥಮಂ ಎಸಗೆಂ ಎಂದು ವರೂಥದಿಂದ ಇಟಿದು ಪೋಗೆ: **ಪಂಪಭಾ,** ೧೨. ೨೦೫ ವ)

**ಏಕಚಕ್ರ** – ಒಬ್ಬನೇ ರಾಜನ ಆಳ್ವಿಕೆಗೊಳಪಟ್ಟದ್ದು (ತದ್ಭೂಪತಿಗೆ ಅಖಿಳಧರಾಚಕ್ರಂ ಆಯ್ತು ಏಕಚಕ್ರಂ: **ಸುಕುಮಾಚ,** ೯. ೭೩)

**ಏಕಚ್ಛತ್ರಚ್ಛಾಯೆ** – ಒಂದೇ ಕೊಡೆಯ ನೆರಳು, ಒಬ್ಬ ರಾಜನ ಆಳ್ವಿಕೆ (ಅಂತು ಭರತಂ ಭರತಮಂಡಲಮಂ ಏಕಛತ್ರಚ್ಛಾಯೆಯಿಂದಂ ಪ್ರತಿಪಾಲಿಸುತ್ತಮಿರೆಯಿರೆ: **ಆದಿಪು,** ೫. ೪ ವ)

**ಏಕಚ್ಛತ್ರೀಕೃತ** – ಒಂದೇ ಆಳ್ವಿಕೆಗೊಳಪಡಿಸಿದ (ಅತೆ ಏಕಚ್ಛತ್ರೀಕೃತ ಭರತವರ್ಷನುಂ: **ಚಂದ್ರಪ್ರಪು,** ೭. ೩೫ ವ)

**ಏಕದಂಡಿ** – ಒಂದು ದಂಡ ಧರಿಸಿದ ಸನ್ಯಾಸಿ (ಗುಣವಿಲ್ಲದ ಪಾರ್ವನುಂ ಏಕಂಡಿಯುಂ ಗೊರವನುಂ ಎಂತು ಪೂಜ್ಯರೊ; **ಸಮಯಪ,** ೧೧. ೧೩೯)

**ಏಕದಂತ** – ವಿಘ್ನೇಶ್ವರ (ಜಗದೊಳ್ ಪತಿಹಿತದೆಡೆಯೊಳ್ ನೆಗಟ್ದಿ ಇನಜನಿಂ ಏಕದಂತನಿಂ ಪವನಜನಿಂ ಖಗರಾಜನಿಂ ದುರ್ಗಂ ದ್ವಿಗುಣಂ ತ್ರಿಗುಣಂ ಚತುರ್ಗುಣಂ ಪಂಚಗುಣಂ: **ಪಂಚತಂತ್ರ,** ೫೫)

**ಏಕಪದಿ** – ದಾರಿ, ಮಾರ್ಗ (ಅಯನಂ ಮಾರ್ಗಂ ಸೃತಿ ಸರಣಿ ಅಧ್ವಂ ಏಕಪದಿ: **ಅಭಿಧಾವ,** ೧. ೧೦. ೨)

**ಏಕಪಾದತಪ** – ಒಂಟಿಕಾಲಲ್ಲಿ ನಿಂತು ಮಾಡುವ ತಪಸ್ಸು (ಏಕಪಾದತಪದೊಳ್ ನಿಲೆ ಗೀರ್ವಾಣನಾಥಾತ್ಮಜನಲ್ಲಿಗೆ ಗುಹನಂ ಅಹಿಭೂಷಣನ ಅಂಬಂ ಬೇಡಿ ಅಟ್ಟಿದೊಡೆ: **ಪಂಪಭಾ,** ೮. ೧೬ ವ)

**ಏಕಪಾದವ್ರತಸ್ಥ** – ಒಂದೆ ಕಾಲ ಮೇಲೆ ನಿಂತು ತಪಸ್ಸು ಮಾಡುವವನು (ಸಂಸಾರಸಾಗರಮನೀಯಂದದಿಂ ದಾಂಟುವುದೆಂದು ತೋಱುವಂದದಿಂದೊಂದೆ ಕಾಲೊಳ್ ನಿಂದಿರ್ದೇಕಪಾದ ವ್ರತಸ್ಥರುಮಂ: **ಪಂಚತಂತ್ರ,** ೧೯೦ ವ)

**ಏಕ ಪುಂಸಾ ನ ಗಂತವ್ಯಂ** – [ಕಾಡಿನೊಳಗೆ] ಒಬ್ಬನೇ ಎಲ್ಲಿಗೂ ಹೋಗಬಾರದು (ಕಾನೊಳಗೇಕಪುಂಸಾ ನ ಗಂತವ್ಯಂ ಎಂದೀ ನಡೆದಪುದೆ ತಿಮಿರದೊಳೆನಿಪುವು ನಾನಾಹಿ ಮಸ್ತಿ ಮಣಿದೀಪಂ: **ನೇಮಿನಾಪು,** ೩. ೩೮)

**ಏಕಭುಕ್ತ** – ಒಂದೇ ಹೊತ್ತು ಊಟ ಮಾಡುವ ವ್ರತ (ದೇಹದೊಳ್ ಲಮಂ ಅನಾರತಂ ತಳೆದು ಉಪವಾಸಕವಾಸದೊಳ್ ಏಕಭುಕ್ತಮಂ ಸಲಿಸುವ ಘೋರವೀರತಪಂ: **ಸುಕುಮಾಚ,** ೩. ೨೯)

**ಏಕಮತ** – ಒಂದೇ ಅಭಿಪ್ರಾಯ (ತ್ರಿಜಗದೇಕಮತಂ .. .. ತ್ರಿಜಗದೀಶನುತಂ ಕಥೆ ಶಾಂತಿನಾಥನಾ: **ಶಾಂತಿಪು,** ೧೨. ೫೫)

**ಏಕವೃತಿ** – ಏಕಪ್ರಾಕಾರ (ಅವಱ ಬಳಸಿಯುಂ ಯಥೋಚಿತಪ್ರದೇಶಂಗಳೊಳ್ ಏಕವೃತಿಪರಿವೃತಂಗಳುಂ: **ಆದಿಪು,** ೮. ೬೩ ವ)

**ಏಕಸಂಧಿ** – ಒಂದು ಬಾರಿ ಕೇಳಿ ನೆನಪಿನಲ್ಲಿರಿಸಿಕೊಳ್ಳಬಲ್ಲವನು (ಇವಂ ಕಪಿಲನೆಂಬೊಂ ಏಕಸಂಧಿಯಪ್ಪುದಱಿಂ ನಾನುಂ ಮತ್ತಿನ ಮತ್ತನಯರ್ಕಳಂ ಓದಿಸೆ ಮತ್ತಿವಂ ಅಕ್ಲೇಶದಿಂ ಶ್ರುತಿ ಸ್ಮೃತಿ ಶಾಸ್ತ್ರೋಪಾತ್ರಮುಖನಾಗೆ: **ಶಾಂತಿಪು,** ೬. ೬೨ ವ ಮತ್ತು ೬೩)

**ಏಕಸಱೆ** – ಅಖಂಡಶಿಲೆ (ಇತ್ತ ಭದ್ರಬಾಹು ಭಟ್ಟಾರರ್ ಕಟ್ಟಪ್ಪು ನಾಡ ಅಡವಿಯ ಬೆಟ್ಟದ ಮೇಗಣ ಏಕಸಱೆಯ ಮೇಗಿರ್ದು.. ..ಸಂನ್ಯಸನಂಗೆಯ್ದರ್: **ವಡ್ಡಾರಾ,** ಪು ೮೮, ಸಾ ೨೭)

**ಏಕಾಂಗವಿಜಯ** – ಒಬ್ಬನೇ ಯುದ್ಧಮಾಡಿ ಪಡೆಯುವ ಗೆಲವು (ಗೋಗ್ರಹಣದ ಕಲಹದೊಳ್ ಏಕಾಂಗವಿಜಯನಾದಂ ವಿಜಯಂ: **ಗದಾಯು,** ೨. ೩೯)

**ಏಕಾಂತ** – ಒಬ್ಬನೇ ಇರುವುದು (ತನ್ನಲ್ಲಿಗೆ ವಂದೊಳಂ ಏಕಾಂತಂ ಸಮನಿಸಿದೊಡೆ: **ವಡ್ಡಾರಾ,** ಪು. ೧೭. ಸಾ. ೧೩); ಒಬ್ಬನೇ ಇರುವ ಜಾಗ (ಅಂತು ಏಕಾಂತದೊಳ್ ತಮ್ಮ ತಂದೆಯ ಮನೋಗ್ಲಾನಿಯಂ ಪಱಿಪಡೆ ನುಡಿದು: **ಸುಕುಮಾಚ,** ೭. ೯ ವ)

**ಏಕಾಂತಮಂದಿರ** – ಗುಪ್ತ ಸಮಾಲೋಚನೆಯ ಕೋಣೆ (ಒಪ್ಪುವುವಲ್ಲಿ ಶಸ್ತ್ರಕುಟಿ ಕೋಶಾಗಾರಂ ಏಕಾಂತಮಂದಿರಂ ಅಭ್ಯಾಸನಿಕೇತನಂ ಪಚನಧಾಮಂ ಸ್ನಾನಸದ್ಮಂ ಮನೋಹರ ಶಯ್ಯಾವಸಥಂ ವಿಭೂಷಣಗೃಹಂ ದೇವಾರ್ಚನಾವಾಸಂ ಅಂಬರವೇಶ್ಮಂ ವರ ಭೋಜನೌಕಂ ಅವರೋಧಸ್ತ್ರೀನಿವಾಸಾಸ್ಪದಂ: **ಶಾಂತೀಶ್ವಪು,** ೧. ೧೩೭)

**ಏಕಾಗ್ರಚಿತ್ತ** – ಒಂದೇ ವಿಷಯದ ಮೇಲೆ ಗಮನವಿರುವವನು (ಮನದಿಂ ತನುವಿಂ ವಚನದಿಂ ಏಕಾಗ್ರಚಿತ್ತನಾಗಿ ಪೊಡವಟ್ಟಂ: **ಶಾಂತಿಪು,** ೧೦. ೫೬)

**ಏಕಾದಶರುದ್ರ** – ಮೃಗವ್ಯಾಧ, ಸರ್ಪ, ನಿರ್‌ಋತಿ, ಅಜೈಕಪಾತ್, ಅಹಿರ್ಬುದ್ಧ, ಪಿನಾಕಿ, ದಹನ, ಈಶ್ವರ, ಕಪಾಲಿ, ಸ್ಥಾಣು ಮತ್ತು ಭವ ಎಂಬ ಹನ್ನೊಂದು ಮಂದಿ ರುದ್ರರು (ಏಕಾದಶರುದ್ರರೊಳಗೆ ತುತ್ತತುದಿಯ ರುದ್ರನುಂ ರೌದ್ರನುಂ ಅಪ್ಪ ಅಶ್ವತ್ಥಾಮಂ ಏವದೊಳ್ ಕಣ್ಗಾಣದೆ ಮಾರ್ಕೊಂಡು ವಿಕ್ರಮಾರ್ಜುನನಂ: **ಪಂಪಭಾ,** ೧೩. ೩೯ ವ)

**ಏಕಾಯತಮಾನಸ** – ಏಕಾಗ್ರಚಿತ್ತ (ವಸುಧೆಯಂ ಏಕಾಯತಮಾನಸಮನಜೀವಿಂ ನೆಱೆದು ರಾಜಧರ್ಮದಿನಭಿರಕ್ಷಿಸೆ: **ಶಾಂತಿಪು,** ೬. ೬೯)

**ಏಕೋತ್ತರವೃದ್ಧಿ** – ಒಂದೊಂದಾಗಿ ಹೆಚ್ಚುವಿಕೆ (ಇರ್ಪತ್ತೊಂದು ದೇವಸಂ ಏಕೋತ್ತರವೃದ್ಧಿಯಿಂ ಮನಂ ತವದೆ ತನು ತವೆ ನೋನುತ್ತಿರ್ಪಿನಂ: **ಶಾಂತಿಪು,** ೪. ೬೭ ವ)

**ಏಗಂ** – ನಿಶ್ಚಿತವಾಗಿ (ತಂದೆಗೆ ತಾಯ್ಗೆ ಪೇೞ್ದು ಮಗನೋದ್ಯಮನಾಗಲೇೞ್ಕುಂ ಅಲ್ಲದಿರ್ದಂದು ಅಕ್ಕುಂ ಏಘುಂ ಅನುತಾಪಪರಂಪರೆ: **ಕಾದಂಸಂ,** ೬. ೨೪)

**ಏಗಳ್** – ಯಾವಾಗ (ನೀಮೊಂದಂ ಮುನ್ನೇಗಳ್ ಕಂಡಿರಿ: **ಶಾಂತಿಪು,** ೯. ೦೧ ವ)

**ಏಗಳುಂ** – ಯಾವಾಗಲೂ (ಕರಮೆಸೆವ ಕಾವ್ಯಮುಕುರದೊಳ್ ಚಿರಂತರಂ ಏಗಳುಂ ತೋಱುವರೀ ಧರೆಯೊಳ್ ಸಮರ್ಥರ್: **ಆಚವರ್ಧ,** ೧. ೧೭)

**ಏಗು** – ಏನು ಮಾಡು, ಏನುಪಯೋಗ (ಮುನ್ನಂ ಎನ್ನ ಮಾಡಿದ ಪಾಪ ಫಲಂ ಈ ನೆವದಿಂ ಫಲಮನೀಯಲೆಂದು ಬಂದುದಕ್ಕೆ ನೀವೇಗುವಿರಿ: **ಧರ್ಮಾಮೃ,** ೭. ೬೯ ವ)

**ಏಗೊಳ್** – ಒಪ್ಪು, ಸಮ್ಮತಿಸು (ನಿಮ್ಮಡಿ ನೀಮೀ ಚಾತುರ್ಮಾಸಂ ಇಲ್ಲಿರ್ಪನ್ನೆಗಂ ಸ್ವಾಧ್ಯಾಯ ಅನುಷ್ಠಾನ ನಿಯಮದಿಂ ಮೋನಗೊಂಡಿರ್ಪುದು ಇದಂ ನಿಮ್ಮನಾಂ ಕಯ್ಯನೊಡ್ಡಿ ಬೇಡಿದೆನೆಂಬುದುಂ ಮುನೀಶ್ವರರ್ ಏಗೊಂಬುದುಂ: **ಸುಕುಮಾಚ,** ೧೧. ೩೮ ವ)

**ಏಡ** – ಕಿವುಡ (ಕವಿತಾರಹಸ್ಯಮಂ ಸತ್ಕವಿಯಱೆಗುಮ್ ಅನೇಡಮೂಕಂ ಏಡಂ ಜಡಂನೆಂಬವನಱೆಗುಮೆ: **ಆದಿಪು,** ೧. ೨೦)

**ಏಡಿಸು** – ಹಾಸ್ಯಮಾಡು (ತುಂಬಿಗಳ ಬಟೆವಿಡಿದು ಬನದೊಳೆಡೆಯಾಡುವ ಸಬರಿಯರ ನಡೆಯಂ ಏಡಿಸುವಂತೆ ಮೆಲ್ಲಡಿಯಿಡುವ ಪೆಣ್ಣಂಚೆಗಳ: **ಕಬ್ಬಿಗಕಾ,** ೧೭ ವ)

**ಏಡು** – ಕೊಳೆ (ಮೆಯ್ಯೊಳ್ ಆವೆಡೆಯೊಳಂ ಏಡು ಕೂಡೆ: **ಕರ್ಣನೇಮಿ,** ೩. ೧೧೨)

**ಏಣ** – ಜಿಂಕೆ (ಏಣ ಶಾಬತತಿ ನೀರುಣೆ ಕಣ್ಗೊಳಿಪ ಆಳವಾಳಮಂಡಳದಿಂ ಅದೊಂದು ಮುಂದೆಸೆದು ತೋಱೆದುದು ಆಗಳ್ ಅಶೋಕಭೂರುಹಂ: **ಕಾದಂಸಂ,** ೧. ೭೩)

**ಏಣಗೋಣ** – ಗರ್ವ, ವಕ್ರತೆ (ಎಂಬುದುಂ ದ್ರೋಣಾಚಾರ್ಯಂ ಮುಗುಳ್ನಗೆ ನಕ್ಕು ವಿಕ್ರಮಾರ್ಜುನಂ ಇಳಿಸಿ ನುಡಿವ ನಿನ್ನ ಏಣಗೋಣಂಗಳುಂ ಎಕ್ಕಸಕ್ಕತನಂಗಳುಂ ಎತ್ತವೋದುವು: **ಪಂಪಭಾ,** ೧೧. ೧೩೮ ವ); ಕೊಂಕು ಮಾತುಗಾರ (ಏಣಗೋಣಂ ಮೂರ್ಖಂ ಸತವಱೆಯನೆನಿಪ್ಪಂ ಜಿನಮತಮಂ ಕೇಳ್ವಾಗಳ್ ಅನಘನಕ್ಕುಂ ಅಭವ್ಯಂ: **ಸಮಯಪ,** ೩. ೫೪)

**ಏಣಗೋಣತನ** – ಕೊಂಕುತನ (ಏಣಗೋಣತನದಿಂ ಮಾತಾಡುತುಂ ರಾಗದಿಂ ಸುಟೆವೃತ್ತಿರ್ಪವರ್: **ಸಮಯಪ,** ೬. ೩೯)

**ಏಣವಾಹನ** – ಜಿಂಕೆಯ ವಾಹನದವನು, ವಾಯು (ಅಂತು ಬಂದು ಅಭಿಮುಖದೊಳಿರ್ದ ಏಣವಾಹನನಂ ಮನಂಗೊಂಡು: **ಜಗನ್ನಾವಿ,** ೭. ೩ ವ)

**ಏಣಾಂಕ** – ಜಿಂಕೆಯ ಗುರುತುಳ್ಳವನು, ಚಂದ್ರ (ಅಂಗಕಾಂತಿಯಂ ತಾಂ ಕುಡುಕಿಕ್ಕುವಂ ಯುವತೀನೇತ್ರಚಕೋರಚಯಕ್ಕೆ ಭೋಂಕನೆ ಏಣಾಂಕನ ಕೆಯ್ತದಿಂ .. .. ನರೇಂದ್ರಚಂದ್ರಮಂ: **ನೇಮಿನಾಪು,** ೪. ೧೩೬)

**ಏಣಾಕ್ಷಿ** – ಜಿಂಕೆಯಂತಹ ಚಂಚಲ ಕಣ್ಣುಳ್ಳವಳು (ಪೊರ್ದಿದೊಡೆ ಏಣಾಕ್ಷಿಯರಂ ಸರಾಗಮಾಗದುದುಂಪಿ: **ಪುಷ್ಪದಂಪು,** ೭. ೨೮)

**ಏಣಿ** – ಹೆಣ್ಣು ಜಿಂಕೆ (ರೂಪಂ ಲತೆಗೆ ವಿರುತಮಂ ಕೋಕಿಲಶ್ರೇಣಿಗೆ ಆಲೋಕಿತಮಂ ಕೊಟ್ಟು ಏಣಿಗೆ: ಲೀಲಾವತಿ, ೧೪. ೭೧); ನಿಚ್ಚಣಿಕೆ

**ಏತ** – ಮೇಲೇರುವುದು (ಱು, ದು ಎಂಬ ಅಂತ್ಯಾಕ್ಷರ ಲೋಪಕ್ಕೆ: ಏಱುತಕ್ಕೇತಂ, ಓದಿಂಗೋತಂ: **ಶಬ್ದಮದ,** ೨೨ ಪ್ರ); ನೀರೆತ್ತುವ ಸಾಧನ (ಜಳಜಾತದ್ವಯಂ ಏತಂ ಎತ್ತಿದಪುವು ಅಂಭೋಜಾಳಿಗೆಂಬಂಥೆ: **ಅನಂತಪು,** ೭. ೩೬)

**ಏತೞ್** – ಏನು, ಏಕೆ (ವೇದಂ ಇನ್ನೇತೞ್ ಕಾಟ್ಕಿಚ್ಚಿಂಗೆ ಗಾಳಿ ನೆರವೆನೆ ಮೆಚ್ಚಿದ ತೆಱದಿಂದೆ ಜಗಮನುರಿಪರೆ ಪಾರ್ವರ್: **ಸಮಯಪ,** ೧೪. ೧೨೧)

**ಏತೊದಳ್** – ಯಾವ ಸುಳ್ಳು (ನೀಂ ಇನಿಸು ಕಾಲ ಇರ್ದೆಯಪ್ಪೊಡೆ ಏ ತೊದಳೊ ಸರೋವರಾಂಬುವನಿತಂ ತವೆ ತುಳ್ಕಿ ರಸಾತಳಂಬರಂ ಬೆದಕಿಯುಂ ಎಂತುಂ ಅಪ್ಪಳಿಸಿ ಕೊಂದಪೆಂ: **ಪಂಪಭಾ,** ೧೩. ೮೦); ತಡವರಿಸಲೇಕೆ (ಭೂಭುಜನ ಆಜ್ಞೆಗೆ ಮಾಣ್ದೆಂ ಅಲ್ಲದಂದು ಏ ತೊದಳ್ ಈ ತ್ರಿಇಕೂಟ ಕುಧರಂಬೆರಸು ಅಂಬಿಕೆ ನಿಮ್ಮನುಯ್ಯೆನೇ: **ಪಂಪರಾ,** ೧೧. ೧೧೨)

**ಏದೊರೆತು** – ಯಾವ ಬಗೆಯದು, ಎಂತಹುದು (ಎಮ್ಮನ್ವಯಕ್ಷ್ಮಾಪರ್ ಆವ ವಿಳಾಸಂಗೊಳ್ ಇರ್ಪರ್ ಏದೊರೆತು ತಾಂ ಎಮ್ಮಯ್ಯನೈಶ್ವರ್ಯಂ ಇಂತು ಇವನೆಲ್ಲಂ ತಿಳಿವಂತುಟಾಗಿ ಬೆಸಸಿಂ ಪಂಕೇಜಗರ್ಭಾತ್ಮಜಾ: **ಪಂಪಭಾ,** ೬. ೧೫)

**ಏನ** – ಪಾಪ (ತಾನಂದುವರೆಗಂ ಒವಿಸಿದ ಏನಂಗಳ್ಗೆ ಅಳ್ಕಿ .. .. ನರಪಿ ಬೞಿಕೆ ದೀಕದಷೆಯಂ ಕೈಕೊಂಡಂ: **ಯಶೋಧಚ,** ೪. ೭೬)

**ಏನಸ್ಸಂತಾನ** – ಪಾಪಸಮೂಹ (ಏನಸ್ಸಂತಾನಂ ಎಂಟುಂ ಕಿಡೆ ನಿಜಗುಣಮೆಂಟುಂ ಮೊಗಂದೋಱೆ .. .. ಸಿದ್ಧರ್ ಆತ್ಯಂತಿಕಸುಖ ಪದವೀಸಿದ್ಧಿಯಂ ಮಾೞ್ಕೆ ನಮ್ಮೊಳ್: **ಪಂಪರಾ,** ೧. ೨)

**ಏನುಂ ಮಾಣದೆ** – ಸ್ವಲ್ಪವೂ ತಡಮಾಡದೆ (ಅಂತು ತನ್ನ ಬಲಮೆಲ್ಲಮಂ ಜವನಂತೆ ಒಕ್ಕಲಿಕ್ಕಿ ಕೊಲ್ವ ಕಳಶಕೇತನನಂ ಯಜ್ಞಸೇನಂ ಏನುಂ ಮಾಣದೆ ಆತನ ಮೇಲೆ ಬಟ್ಟಿನಂಬಿನ ಬೆಳ್ಸರಿಯುಮಂ ಕೆಲ್ಲಂಬಿನ ತಂದಲುಮಂ ಪಾರೆಯಂಬಿನ ಸೋನೆಯುಮಂ ಸುರಿಯೆ: **ಪಂಪಭಾ,** ೧೨. ೨೧ ವ)

**ಏನೋಜೀವ** – ಪಾಪ ಮಾಡಿದ ಜೀವ (ಅನಂತಕಾಲಮುಂ ನಮೆವ ಏನೋಜೀವಂಗಳ್ ಅರುಹಪದವಿಮುಖಂಗಳ್: **ಸಮಯಪ,** ೧೫. ೭೩)

**ಏನೋದಾವಂ** – ಪಾಪವೆಂಬ ಕಾಳ್ಗಿಚ್ಚು (ಆಚಾರ್ಯರ್ ಇನ್ನೆಮ್ಮಂ ಏನೋದಾವಂ ತಳ್ತಟ್ಟದಂತೆ ಓಸರಿಸಿ ಕಳೆಗೆ ಸಮಸಾರಕಾಂತಾರದಿಂದಂ: **ಆದಿಪು,** ೧. ೩)

**ಏನೋವಶ –** ಪಾಪವಶ (ಏನೋವಶದಿಂದ ಆತ್ಮಂ ತಾನೆಂತಪ್ಪಲ್ಲಿ ಪುಟ್ಟಿದೊಡಮ ಅಮಳನೆ ಸುಜ್ಞಾನಿಯೆ: **ಸಮಯಪ,** ೧೧. ೧೩೯)

**ಏನೋಹೀನಂ –** ಪಾಪರಹಿತವಾದ (ಏನೋಹೀನಂ ನಿರ್ಮಳವಾನಂದಾವಹಮಿದೆನಿಸಿ ಕೇಳ್ವಂ: **ಸಮಯಪ,** ೩. ೧೧)

**ಏಪಚ್ಚು –** ಏನು ವಿಭಾಗ, ಪಾಲು (ಆಪೋಶನಮಂ ಪಿಡಿದಿರ್ದು ಓಪಳಂ ಬೇಡಿ ಕುಡಲೆವೇಟ್ಕುಂ ಪಾರ್ವಂ ಏಪಚ್ಚೋ ಕುಡುದೊಡಾಗಳ್ ಪೋಪಂ ನರಕಕ್ಕೆ: **ಸಮಯಪ,** ೧೧. ೯೬)

**ಏಪೊತ್ತುಂ –** ಎಲ್ಲ ವೇಳೆಯಲ್ಲೂ (ನಿಕ್ಷೇಪದ ಪೊನ್ನಂ ಕೈಕೊಂಡು ಏಪೊತ್ತುಂ ನೋಡುತಿರ್ಪ ಪಾವಿನ ತೆಱದಿಂ: **ಧರ್ಮಾಮೃ,** ೨. ೭೩)

**ಏ ಬಂಡಂ –** [ಭಾಂಡ] ಯಾವ ದ್ರವ್ಯ, ಏನು ಪ್ರಯೋಜನ (ತಪೋರಾಜ್ಯಾಯತ್ತಂ ಎನ್ನ ಚಿತ್ತಂ ನ್ಯಾಯಾರ್ಜಿತಮಲ್ಲದೆನಿಪ ಧನಂ ಏ ಬಂಡಂ: **ಪಂಪರಾ,** ೬. ೧೨೬)

**ಏಬಾರ್ತೆ –** ಏನು ಪ್ರಯೋಜನ (ಭವವಿಷಾವೇಶವಿಧ್ವಂಸನಂಗೆಯ್ದುವೆ ಮೋಹಧ್ವಾಂತಮಂ ತೂಳ್ದಿದುವೆ ಬಗೆವೊಡೆ ಏ ಬಾರ್ತೆ ಪಾಷಾಣರೂಪಂ: **ಮಲ್ಲಿನಾಪು,** ೧. ೬); ಏನು ಗತಿ (ಈತನಿಲ್ಲದೆ ಪೇೞ್ ಮಾನಸವಾಟಿ ಮೋಹಮೆನಗಿನ್ನು ಏಬಾರ್ತೆ ಎಂದುಗ್ರಶೋಕದಿನಾಕ್ರಂದಿಸಿದೆಂ: **ಆದಿಪು,** ೩. ೫೨)

**ಏ ಭಂಡಂ –** ಏನು ಪ್ರಯೋಜನ (ದೇವೇಂದ್ರವಿಭವಮೆಂದುಂ ಭವ್ಯಂಗೆ ಏ ಭಂಡಮೊ ರತ್ನತ್ರಯ ಲಾಭಮೆ ಲಾಭಂ: **ಸಮಯಪ,** ೪. ೨೪)

**ಏರ್ –** ನೊಗ–ಎತ್ತುಗಳನ್ನು ಕಟ್ಟಿದ ನೇಗಿಲು (ಕುರುಧರೆಯಂ ನೀಜೋಗ್ರದೆಯೇರ್ಗಳಿಂ ಉತ್ತು ಉಗಿಯುತ್ತೆ: **ಗದಾಯು,** ೧೦. ೪)

**ಏರಂಡ –** ಔಡಲ ಗಿಡ (ಆಗಳ್ ಆ ವಿಷಮ ಕೋದಂಡಮಂ ಏರಂಡ ಕಾಂಡಮಂ ಬಗೆವಂತೆ ಬಗೆದು: **ಪಂಪರಾ,** ೫. ೮೬ ವ)

**ಏರಣಿಗ –** ಅಕ್ಕಸಾಲೆ, ಚಿನಿವಾರ (ವಾಸವದಿಕ್ತಟಂ ಸಮೆದ ಮೂಷೆ ತಮಂ ಸುರಿದಿರ್ದಲಬ್ಜಸಂವಾಸಿ ಸಮೀರಂ ಏರಣಿಗನಾಗೆ: **ಅಜಿತಪು,** ೬. ೭೦)

**ಏರ್ಪೞು –** ಗಾಯಗೊಳ್ಳು (ಏರ್ಪೆತ್ತರ್ ಏರ್ಪೆತ್ತರಂ ಪದುಳಂ ಮಾಡ್ಪುದು ಚಿತ್ರಂ: **ಶಬ್ದಮದ,** ೭೬ ಪ್ರ, ೯)

**ಏರ್ವಡೆ –** ಏರ್ಪೞು (ಬಡವೊಡಲಂತೆ ಜೋಲದು ಏರ್ವಡೆದ ಪಂದೆಯಂತೆ ತಲ್ಲಣಿಸಿ: **ಧರ್ಮಾಮೃ,** ೧. ೧೨೯ ವ)

**ಏರ್ವೆಸನ –** ಯುದ್ಧಕಾರ್ಯ, ಯುದ್ಧ ಪ್ರಯತ್ನ (ಎಸೆವುಗ್ರರಣಾನಕ ರೌದ್ರಘೋಷಂ ಏರ್ವೆಸನಮಂ ಉಂಟುಮಾಡಿದುದು ಪಂದೆಗಮಂದಿನ ವೀರಗೋಷ್ಠಿಯೊಳ್: **ಆದಿಪು,** ೧೪. ೯೦)

**ಏಲೆ –** ಏಲಕ್ಕಿ (ರತಿಪತಿಯ ವಿವಾಹಗೇಹಮೆನಿಸಿ ಪೊಸದಳಿರ ಪಸರದಿಂ ಒಪ್ಪುವ ಏಲಾಲತೆಗಳುಮಂ ಅರಸನವಳೋಕಿಸುತ್ತಿರ್ಪುದುಂ: **ಮಲ್ಲಿನಾಪು,** ೬. ೧೪ ವ)

**ಏವ –** ಬೇಸರ, ವ್ಯಥೆ (ಏವದ ಮುಳಿಸಿನ ಕಾರಣಮಾವುದೊ; **ಪಂಪಭಾ,** ೨. ೮೨); ಮತ್ಸರ (ಏವದಿಂ ಅಟ್ಟಿಪಳ್ ಪಿರಿದುಂ ಅಬ್ಜಿನಿಯೆಂಬವೊಲ್: **ಪಾರ್ಶ್ವನಾಪು,** ೧೦. ೮); ತಿರಸ್ಕಾರ (ತನಗೆರಡಱಿಯದೆ ಒಲ್ದ ನಲ್ಲಳಂ ಏತಱಿಕೊಳಪ್ಪೊಡಂ ಏವಮಂ ಮಾಡದೆ ಬೇಟಮಂ ಸಲಿಸುವುದರ್ಕೆ ಸಂತಸಂಬಟ್ಟು: **ಪಂಪಭಾ,** ೪. ೯೨ ವ); ದ್ವೇಷ (ಏಕಾದಶರುದ್ರರೊಳಗೆ ತುತ್ತತುದಿಯ ರುದ್ರನುಂ ರೌದ್ರನುಂ ಅಪ್ಪ ಅಶ್ವತ್ಥಾಮಂ ಏವದೊಳ್ ಕಣ್ಗಾಣದೆ ಮಾರ್ಕೊಂಡು ವಿಕ್ರಮಾರ್ಜುನನಂ: **ಪಂಪಭಾ,** ೧೩. ೩೯ ವ); ನಾಚಿಕೆ (ಯುಧಿಷ್ಠಿರಂ ತಲೆಗವಿವನಲ್ಲದೆಯುಂ ಏವದೊಳ್ ತಲೆಗವಿದು ಸಿಗ್ಗಂ ಕೊಂಡಾಡಿ ನೆತ್ತಮನಾಡಿ: **ಪಂಪಭಾ,** ೭. ೨ ವ); ನಾಚಿಕೆ (ಚೇಮಥಿಸುವ ಚಿಂತೆಯೊಳತಿಬಲ ನೃಪನಾಶ್ಥಾಯಿಕೆಯೊಳ್ ಪುಲಿಂ ನೊಚ್ಚಿದರಾದೆವೆಂದು ಏವದೊಳಂ ತಮ್ಮನುಱೆ ಸೆಱೆಗೆಯ್ದು: **ಸುಕುಮಾಚ,** ೨. ೩೨ ವ); ದೋಷ (ಏವಮಂ ಬಗೆಯದಂತಿರೆ ಪೇೞ್ದಿ ಸಮಿಚ್ಚರ್ಯೋದ್ಧಾವಕ್ರಮವಿಚಾರದೆ ದೋಷಮಿದಗ್ಗಳಂ: **ಕವಿರಾಮಾ,** ೧. ೧೩೨)

**ಏವಂಗೊಳ್ –** ಸಿಟ್ಟು ಮಾಡಿಕೊ (ನೀಮುಂ ಮನದೊಳ್ ಏವಂಗೊಳ್ಳದೆ ಕ್ಷಮಿಯಿಸಿಂ ಎಂದು ನುಡಿದು: **ವಡ್ಡಾರಾ,** ಪು. ೯೧. ಸಾ. ೨೦)

**ಏವಂಬಡೆ –** ಮಾತ್ಸರ್ಯಹೊಂದು (ಧರಣೀನಾರಿಗೆ ಪಾಂಡುವಿಂ ಬೞಿಯಂ ಇಲ್ಲಾರುಂ ಪೆಱರ್ ಗಂಡರ್ ಅಂತಿರಲ್ ಏವಂಬಡೆದಿರ್ದೊಡೆ ಅಟ್ಟು ಕಿಡುಗುಂ: **ಪಂಪಭಾ,** ೪. ೮)

**ಏವಣ್ಣಿಸು –** ಏನು ತಾನೆ ವರ್ಣಿಸು (ಕೃತಿಯಂ ವಿರಚಿಸಿದಂ ಅಲಂಕೃತಿಯಂ ಕವಿರತ್ನನೆಂದೊಡೆ ಏವಣ್ಣಿಪುದೋ: **ಗದಾಯು,** ೧. ೩೨)

**ಏವಯಿಸು –** ನೋಯು (ಜನಪದ ಪೞಿಗೆ ಏವಯಿಸಿ ನೀವು ಆ ಪರಮೇಶ್ವರಿಯ ಗರ್ಭದೊಳಿರ್ದಂದು ತೊೞೆದು.. ..ತನ್ನ ಪಡೆವಳನಂ ಕರೆದು ಪೋಗಿ ಅರಣ್ಯದೊಳ್ ಈಡಾಡಿ ಬಾ ಎಂದು ಪೇೞ್ವುದುಂ: **ಪಂಪರಾ,** ೧೬. ೭ ವ); ಹೇಸಿಕೆಪಡು (ಎಂದಾ ಮಹಾನುಭಾವನಾ ಜವಂಜವವಿಭಾವಕ್ಕೆ ಏವಯಿಸಿವಜ್ರಜಂಗನೊಳ್ ಆತ್ಮೀಯಧರಾಭಾರಮಂ ನಿಱಿಸಿ: **ಆದಿಪು,** ೪. ೬೭ ವ)

**ಏವಯ್ಸು –** ಜಿಗುಪ್ಸೆ ಪಡು (ಪೊಲೆಗೆ ಏವಯ್ಸರ್ ತೊಗಲಿನೊಳ್ ಅಲಸದೆ ನೀರ್ಗುಡಿಯುತಿರ್ಪರ್ ಅಡಗಂ ತಿಂಬರ್: **ಸಮಯಪ,** ೧೪. ೯೬)

**ಏವರ್ –** ಏನು ಬರು; ಏನು ಮಾಡುವರು? (ಎಚ್ಚು ಏವರ್ ಎಂದು ಉಱದಿಂ ಒರ್ವಂ ಅಗುರ್ವು ಪರ್ವಿರೆ ದೇವರಂ: **ಪಂಪಭಾ,** ೫. ೯೪)

**ಏವಾಳ್ತೆ –** ಏನು ಪ್ರಯೋಜನ (ದಿನಮಣಿಯೆನ್ನೊಳಗಿರೆ ಮತ್ತಿನ ಮಣಿ ಏವಾಳ್ತೆ: **ರಾಜಶೇವಿ,** ೧೧. ೩೯)

**ಏವಾೞ್ತೆ –** ಏನು ಪ್ರಯೋಜನ (ಕಿಡುಗುಮೆ ರಾಜ್ಯಂ ರಾಜ್ಯದ ತೊಡರ್ಪು ಅದೇವಾೞ್ತೆ ನನ್ನಿಯ ನುಡಿಯಂ ಕಿಡೆ ನೆಗೞ್ ನಾನುಂ ಎರಡಂ ನುಡಿದೊಡೆ ಹರಿಹರಹಿರಣ್ಯಗರ್ಭರ್ ನಗರೇ: **ಪಂಪಭಾ,** ೧. ೮೨)

**ಏವಿರಿದು –** ಏನು ದೊಡ್ಡದು, ಯಾವ ಮಹತ್ವದ್ದು (ಅವರಿರ್ಪೆಡೆಯುಂ ವಿರಾಟನಿರ್ಪ ಅಱೆಕೆಯ ಪಟ್ಟಣಂ ನಮಗೇವಿರಿದಪ್ಪುದು: **ಪಂಪಭಾ,** ೮. ೮೯)

**ಏವುದು –** ಏನು ಮಾಡುವುದು (ಪೋ ಬಿಡು ಕಟಿಸೂತ್ರಮಂ ತೊಡೆಯ ಬಿಣ್ಪು ಪದಾಂಬುರುಹಕ್ಕೆ ತಿಣ್ಣಂ ಎಂತು ಉಡಿಸುವುದಕ್ಕ ನೂಪುರಮಂ ಈ ತೊಡವು ಏವುದೋ

ರೂಪ ಸಾಲದೇ: **ಪಂಪಭಾ,** ३. ४६); ಏನು ಪ್ರಯೋಜನ (ಅರಮನೆಯುಂ ಅವಂತಿಯುಂ ಉರ್ವರೆಯುಂ ರಾಜ್ಯಮು ಇಬೆಲ್ಲಂ ಏವುದೊ ಕಾದಂಬರಿಯಿಲ್ಲದಂದು: : **ಕಾದಂಸಂ,** ೬. ೧)

**ಏವೆಸಗೊಳ್** – ಏನೆಂದು ಕೇಳುವುದು (ಇನ್ನು ಏವೆಸಗೊಳ್ವುದೊ ಕಡುವೇಗದಿಂ ಅಸಕಟಿದುದು ಮನಮುಮಂ ತುರಂಗಮರತ್ನಂ: **ಆದಿಪು,** ೧೩. ೩೯)

**ಏವೇಟಿ್** – ಏನು ಹೇಳು, ಏನೆಂದು ವರ್ಣಿಸು (ಏವೇಟ್ವೆನವನ ಚಾಗದ ಪೆಂಪಂ: **ಶಬ್ದಮದ, ಪ್ರ,** ४)

**ಏವೇಟ್ಟುದು** – ಏನು ಬೇಕೋ ಅದು (ಪೂಜಿಸಿದವರ್ಗೆ ಏವೇಟ್ಟುದಂ ಆ ಜನ್ಮದೊಳೀವ ದೆಯ್ವಮುಳ್ಳೊಡೆ ಬಟೆಯಂ ರಾಜಾಶ್ರಯಂ ಏವುದೋ: **ಸಮಯಪ,** ೯. ೯೦)

**ಏಷಣಾಸಮಿತಿ** – [ಜೈನ] ಸಾಧಕನು ರತ್ನತ್ರಯಭಾವನೆಯಿಂದ ಪ್ರಾಸುಕಾಹಾರವನ್ನು ತೊರೆದು ಸಮಚಿತ್ತದಿಂದ ಊಟಮಾಡುವುದು (ಭಟಾರರ್ಋಷಿದೆ ಕಿತ್ತಯ್ಯಂಗಳ್ಗೆ ಏಷಣಾಸಮಿತಿ ಮೊದಾಗೊಡೆಯ ಬ್ರತಂಗಳಂ ಮತ್ತಂ ಸಂಕ್ಷೇಪದಿಂ ಪೇಟ್ದು: **ವಡ್ಡಾರಾ,** ಪು, ೭೯, ಸಾ. ೨೬)

**ಏಸಾಡು** – ಬಾಣ ಪ್ರಯೋಗಮಾಡು (ಅನಿತುಂ ಬಲಮಂ ಮುತ್ತಿ ಚಿಳಾತಾವರ್ತರ್ ಸುತ್ತಲುಂ ಏಸಾಡಿ ಪಿರಿದು ತಿಣಿಕಂ ತಂದರ್: **ಆದಿಪು,** ೧४. ೭೦)

**ಏಸು** – ಎಷ್ಟು (ಒಲ್ದವರೊಳ್ ನವಭೋಗದುಜ್ಜುಗಂ ಮೊಳೆತುವು ಕಾಮಂ ಏಸು ಗುಜಿಗಂಡುದು ತಂಡದೆ ನಿಂದ ನಂದನಂ ತಳೆದುದು: **ಗಿರಿಜಾಕ,** ೭. ३೯); ಬಾಣಪ್ರಯೋಗದ ಹೊಡೆತ (ಒಂದೆ ಕೆಲ್ಲಂಬಿನಿಂ ಮೆಲ್ಲಗೆ ಪಾರ್ದು ಆರ್ದು ಎಚ್ಚಂ ಏಸಿಂ ತಲೆ ಪಜಿದು ಸಿಡಿಲ್ದತ್ತ ಬೀಟ್ವಿನ್ನಮಾಗಳ್: **ಪಂಪಭಾ,** ೧೨. ೧೮)

**ಏಸುವೆಸ** – ಬಾಣಪ್ರಯೋಗ (ವಿವಿಧ ವಿಚಿತ್ರದ ಏಸುವೆಸದೊಳ್ ಪಿರಿದುಂ ಪರಿಭಾವಿಸಲ್ಕೆ: **ಕುಸುಮಾಕಾ,** ೭. ६३)

**ಏಸುವೆಸನ** – ಬಾಣಪ್ರಯೋಗ (ನೂಪುರೋಲ್ಲಪನ ವ್ಯಾಜದಿಂ ಆಗಳೇಸುವೆಸನಂ ಕಾಮಂಗೆ ಪೇಟ್ವಂದದಿಂ: **ಚಂದ್ರಪ್ರಪು,** ೫. ೧೧४)

**ಏಸುವೆಜು** – ಬಾಣದಿಂದ ಗಾಯಗೊಳ್ಳು (ಪಲಕಾಲಕ್ಕೇಸುವೆತ್ತಂ ದಶಮುಖಂ ಎನುತುಂ ಮನ್ಮಥಂ ಮಾನದೆಚ್ಚಂ: **ಪಂಪರಾ,** ೯. ೮३)

**ಏಳಕ** – ಟಗರು (ಅವಿ ಮೇಷ ಉರಭ್ರಂ ಮೇಂಡವದೇಳಕ: **ಅಭಿಧಾವ,** ೧. ೧೫. ೧೧)

**ಏಳಾ** – ಏಲಕ್ಕಿ (ನೆಗಟ್ದೀ ಕರ್ಪೂರ ಕಾಳಾಗರು ಮಳಯಮಹೀಜಂಗಳ್ ಏಳಾಲತಾಳೀ ಸ್ಥಗಿತಂಗಳ್ ಕಣ್ಗೆವಂದಿರ್ದುವಂ ಇವನೆ ವಲಂ ಕೊಂಬುಗೊಂಡ ಅಂಗಜಂ .. .. ಎಚ್ಚು ಮೆಚ್ಚಂ ಸಲಿಸುವಂ: **ಪಂಪಭಾ,** ४. ೨३)

**ಏಳಾಗಂಧ** – ಏಲಕ್ಕಿಯ ವಾಸನೆ ಮುನ್ನಿನ ಸಪ್ತಚ್ಛದಗಂಧದಿಂ ಏಳಾಗಂಧದಿಂ ಎಸೆವುದು ದೇವ: **ಪುಷ್ಪದಂಪು,** ೫. ६३)

**ಏಳಾವನ** – ಏಲಕ್ಕಿ ತೋಟ ಚೂತ ಸಪ್ತಚ್ಛದ ಏಳಾವನಸುರಭಿ .. .. ಆಶಾಚಕ್ರಂ ಗಂದೇಭಚಕ್ರಂ: **ಆದಿಪು,** ೧೧. ३೦)

**ಏಳಿದ** – ತಿರಸ್ಕಾರ ಹುಟ್ಟಿಸುವ (ಕುಲಜನುಂ ಅಲ್ಲಂ ನಣ್ಪಿನ ಬಲಮುಂ ತನಗಿಲ್ಲ ಕಣ್ಗಂ ಏಳಿದಂ: **ಕವಿರಾಮಾ,** ३. ೧೭೨); ಅವಮಾನ (ದೂತರಂ ಅಟ್ಟಿದೊಡೆ ಏಳಿದವಾತಂಗೆ: **ಜಗನ್ನಾವಿ,** ೯. ೧೮); ನಿಕೃಷ್ಟ (ಪಾದಮಾರ್ಗದಿಂ ಜಾನಕಿಯುಂ ಬಲಾಚ್ಯುತರುಂ ಏಳಿದರಂದದೆ ಬರ್ಪದಾವುದೋ: **ಪಂಪರಾ,** ೬. ೧೭೯)

**ಏಳಿದಂಗೆಯ್** – ತಿರಸ್ಕಾರ ಮಾಡು (ಏಟಿದಂಗೆಯ್ದು ನುಡಿದ ಕಪರ್ದಿಯ ಕಟೂಕ್ತಿಯಂ ಕೇಳ್ದು: **ಶಬರಶಂ,** ४. ३೦ ವ)

**ಏಳಿದಂಬಗೆ** – ತಿರಸ್ಕಾರದಿಂದ ಕಾಣು (ಶಲ್ಯನಂ ಅಂದು ಅಶಲ್ಯನಂ ಬಗೆವವೊಲ್ ಏಳಿದಂಬಗೆದು ದಂತಿಯಂ ಆಗಡೆ ತೋಟಿಕೊಟ್ಟು ತೊಟ್ಟಗೆ ರಥಮಂ ಪಡಲ್ವಡಿಸಿ ಪೊಟ್ಟಿಂ ಅರಾತಿಯಂ ಅಸ್ತ್ರಕೋಟಿಯಿಂ: **ಪಂಪಭಾ** ಪರಿಷತ್ತು, ೧೦. ೧೧೧)

**ಏಳಿದಂಮಾಡು** – ಏಳಿದಂಗೆಯ್ (ಎನ್ನನೇಳಿದಂ ಮಾಡಿ ಮೂಗನರಿದು ಕನ್ನಡಿಯಂ ತೋಱುವಂತೆ: **ಧರ್ಮಾಮೃ,** ೯. ೧४೦ ವ)

**ಏಳಿದವಾಗು** – ತಿರಸ್ಕಾರಯೋಗ್ಯವಾಗು (ಉತ್ತಮಕುಲಶೈಲಂ ಉನ್ನತಿಯಂ ಏಳಿದವಾಗೆ ಬಿಸಟ್ಟೊಡಂ ಬಿಸುಟ್ಕೆಮ ಬಿಸುಡೆಂ ಮದೀಯ ಪುರುಷವ್ರತಮೊಂದುಮಂ: **ಪಂಪಭಾ,** ೧. ೮३)

**ಏಳಿದಿಕೆ** – ತಿರಸ್ಕಾರ (ಕಂದಿದುದು ಒಪ್ಪುವ ಮೆಯ್ ಕರಂ ಒಂದಿದುದು ಏಳಿದಿಕೆ: **ಹರಿವಂಶ,** ೨. ೨)

**ಏಳಿದಿಕ್ಕೆ** – ಅವಜ್ಞೆ, ತಿರಸ್ಕಾರ (ಪಾಂಚಾಲರಾಜತನೂಜೆ ಪಗೆವರ ಕಟ್ಟುವಟ್ಟಿರ್ದ ಏಳಿದಿಕ್ಕೆಗೆ ಸಂತಸಂಬಟ್ಟು ಸೈರಿಸಲಾಜಿದೆ ಇಂತೆಂದಳ್: **ಪಂಪಭಾ,** ೭. ३೮ ವ)

**ಏಳಿಸು** – ತಿರಸ್ಕಾರಮಾಡು, ಅವಹೇಳನಗೈ (ದಿವಮಂ ಏಳಿಪಂತು ಮಿಳಿರ್ವ ವಿವಿಧಕೇತನಂಗಳಿಂ ಸದಾನಿಕೇತನಂಗಳಿಂ: **ಪಂಪಭಾ,** ೧. ೫೮)

**ಏಳ್ಗೆ** – ಎತ್ತರ, ಔನ್ನತ್ಯ (ಪಟೀರದ ಏಳ್ಗೆಯ ಕಪೋತದ ಬೊಟ್ಟಿನ ಕೆಂಡದಬ್ಬಿನೀವರನಭೀಧಾನಮಂ ತಳೆದ ಭೂರುಹಂ ಒಪ್ಪುಗುಂ ಆ ವನಾಂತರದೊಳ್: **ರಾಜಶೇವಿ,** ೫. ೫೭)

**ಏಱ್** – ಏಟು, ಹೊಡೆತ (ಒಡವಂದಂಕದ ಕೌರವರ್ ದ್ರುಪದನ ಅಂಬ ಏಱಿಂಗೆ ಮೆಯ್ಯೊಡ್ಡದೆ ಒಡ್ಡುತಿರೆ ಸೂಸೆ ಬೀಟ್ವ ತಲೆಗಳ್ ಸೂಟ್ಪಟ್ಟಂ: **ಪಂಪಭಾ,** ೨. ೬೨); ಯುದ್ಧ (ತಱಿಸಂದು ಲಾಟದೊಳ್ ತಳ್ತಿಱಿದ ಏಱಂ ಪೇಟ್ ಕೇಳ್ದು: **ಪಂಪಭಾ,** ೧. ३३); ಗಾಯ (ಏಱ್ಂಬುಉ ನೆಲೆವಾಡದೊಳ್ ಮಡಿಯೆಂಬುದು ಮರುಗದ ತಾಣದೊಳ್ ಮೊಱ್ಯೆಂಬುದು ನಂಟರೊಳ್ .. .. ಅಲ್ಲದೆ ಇಲ್ಲ: **ಕಬ್ಬಿಗಕಾ,** ೨३ ವ)

**ಏಱಲಿಕ್ಕು** – ಪೀಠ ನೀಡು (ಅಪರಾಜಿತ ಮಹಾದೇವಿ ಕಂಡು ಇದಿರೆಟ್ದು ಏಱಲಿಕ್ಕಿ ಬಟೆಯಂ ಇಚ್ಛಾಕಾರಂಗೆಯ್ವುದುಂ: **ಪಂಪರಾ,** ೧೫. ೧३ ವ)

**ಏಱನೂಂಕು** – ಮೇಲಕ್ಕೆ ನೂಕು (ಕರಾಂಭೋಜದಿಂದ ಏಱನೂಂಕುತ್ತ ಒಡನೆ ಉತ್ತುಂಗಸ್ತನಾಗ್ರಕ್ಕಿಳಿವ ಮುಡಿಯನೌಂಕುತಂ: **ರಾಜಶೇವಿ,** ३. ೫४)

**ಏಱಿ** – ಏರಿ, ಕಟ್ಟೆ (ಪ್ರಸ್ತಾವದೊಳ್ ಸೀತಾದೇವಿ ತದಗ್ನಿಕುಂಡದ ಏಱಿಯಂ ಮೆಟ್ಟಿ .. .. ನುಡಿದಳ್: **ಪಂಪರಾ,** ೧೬. ೨೫ ವ ಮತ್ತು ೨೬)

**ಏಱಿಸು** – ಮೇಲಕ್ಕೆ ಹತ್ತಿಸು; ಹೆದೆಯೇರಿಸು; ಹೆಚ್ಚು ಮಾಡು; ಸ್ವೀಕರಿಸು (ನಿಶ್ಶಂಕಾದ್ಯಷ್ಟಗುಣಂಗಳಿಂ ಕೂಡಿದ ಶುದ್ಧಮಪ್ಪ ಸಮ್ಯಕ್ತ್ವಪೂರ್ವಕಮಪ್ಪ ವ್ರತಂಗಂ ಏಱಿಸಿಕೊಂಡು: **ವಡ್ಡಾರಾ,** ಪು ೧೨೮, ಸಾ ೨)

**ಏಱು** – ಗಾಯ, ಹೊಡೆತ (ಕಿವಿಯಂ ಪಳಂಚೆ ಕುಮುದೋತ್ತಂಸಕ್ಕೆ ಎಱಪ ಅಳಿಗಳ ದನಿ ನೋವಳೆಗಱೆಯಿಂದುಡಿವ ಏಱೆನೊಳಗಂ ಎಳವುವ ತೆಱದಿಂ: **ಆಚವರ್ಧ,** ೪. ೩೭); ಅಡರು (ಏಱನೆ ಸೂೞೆಗೊಂಡು ನುಡಿವೀ ನುಡಿಯಲ್ಲದೆ ಮತ್ತಂ ಆಸನಂದೋಱುವ ಬಲ್ಪುದೋಱುವ ಎರ್ದೆದೋಱುವ ಕಯ್ಪೆಸರಂಗಳ್ ಎಮ್ಮಂ ಉಂತೆ ಏಱವು: **ಪಂಪಭಾ,** ೮. ೨೦); ಮೇಲಕ್ಕೆ ಹತ್ತು ಮತ್ತು ಗಾಯವಡೆ (ಏಱು–ಆರೋಹಣೇ ಸಮಗ್ರತ್ವೇ ಕ್ಷತೇ ಚ: **ಶಬ್ದಮದ,** ಧಾ ೮೪೬)

**ಏಱುಂಜವ್ವನ** – ಹೆಚ್ಚಾಗುತ್ತಿರುವ ಯೌವನ (ಏಱುಂಜವ್ವನದೊಳ್ ಸೊಕ್ಕೇಱಿದ ನೀಱೆಯರ: **ಶಬ್ದಮದ,** ೧೮೧, ಪ್ರ ೫); ಹೊಸ ಹರೆಯ (ಅಂಗಜಲಕ್ಷ್ಮಿಗಿದುವೆ ಪುದಿದ ಏಱುಂಜವ್ವನ: **ಪುಷ್ಪದಂಪು,** ೮. ೭೯)

**ಏಱುಗಾಣ್** – ಗಾಯ ಹೊಂದು (ವಾರಿಜಾಕ್ಷೋಜ್ವಳ ಪದತಳದಾದ ಏಱುಗಂಡಳ್ಕೆ: **ಕರ್ಣನೇಮಿ,** ೧೪. ೯೭)

**ಏಱುವೇೞ್** – ಯುದ್ಧಗಳನ್ನು ಹೇಳುವ (ಬಗವತಿಯ ಏಱುವೇೞ್ವ ತೆರದಿಂ ಕಥೆಯಾಯ್ತು ಇವರೇಱು: **ಪಂಪಭಾ:** ೧೦. ೧೬)

**ಏೞೆಗೊಳ್** – ಆವರಿಸು (ಎಂದು ತನ್ನಂ ಏೞೆಗೊಂಡ ಮುಳಿಸಿನೊಳ್ ನೆಱನಲ್ಲದುದಂ ಮಾಡಿ ನೆಱನೆತ್ತೆ: **ಶಾಂತಿಪು,** ೭. ೬೦ ವ)

**ಏೞ್** – ಎದ್ದು ನಿಲ್ಲು (ಏೞ್ ಉತ್ಥಾಪನೇ: **ಶಬ್ದಮದ, ಧಾ,** ೯೧೮); ಎಚ್ಚರಗೊಳ್ಳು (ಕೞಿದವರ್ಗೆ ಅೞ್ವುದು ಅೞ್ತೊಡೆ ಅವರೇೞ್ವರೇ: **ಆದಿಪು,** ೩. ೫೩); ಒಂದು ಸಂಖ್ಯೆ (ಪ್ರಥಮಾದಿ ಭೇದ ನಿರ್ಧಾರಣದಿಂದದಂ ಪಿಡಿದು ನಿಲ್ವ ವಿಭಕ್ತಿಗಳ್ ಏೞನಿಕ್ಕುಂ: **ಕವಿರಾಮಾ,** ೧. ೧೧೪)

**ಏೞಗ** – ಏಳಗ, ಟಗರು (ತನ್ನ ಕೀರ್ತ್ಯಂಗನೆಯ ಏೞಗಮಂ ಒಸೆದೇಱೆ ಮಿಗೆ ಬಂಧುಗಳುಮಂ ಆ ತಂದೆಯೊಡನೆ ಪೊರೆಯೇಱಿಸಿದಂ: **ಪಾರ್ಶ್ವನಾಪು,** ೭. ೯೪)

**ಏೞಡಿ** – [ಆಪ್ತರೊಡನೆ ಇಡುವ] ಏಳು ಹೆಜ್ಜೆ (ನೀನಾವ ಪ್ರಾಣಿಗಾದೊಡಂ ಮುನಿವಲ್ಲಿ ಪೆಱಗೆ ಏೞಡಿಯಂ ಪಿಂಗಿ ಬೞಿಕ್ಕಂ ನಿನ್ನ ಮೆಚ್ಚಿದಂತೆ ಮಾಡು ಎಂಬುದುಂ: **ಧರ್ಮಾಮೃ,** ೨. ೧೨೮ ವ)

**ಏೞಿದಂ** – ತಿರಸ್ಕಾರಗೊಳ್ಳು (ದಿಗಂಬರ ರಾಜಹಂಸಸಂಕುಳಂ ಇತರಾರ್ಥಯುಕ್ತಸಮಯಂ ಕರಂ ಏೞಿದಮಾಗೆ: **ಪಾರ್ಶ್ವನಾಪು,** ೪. ೬೩)

**ಏೞಿದಿಕೆ** – ತಿರಸ್ಕಾರ (ವನಿತಾವಶ್ಯಾಂಜನಕ್ಕೆ ಏೞಿದಿಕೆಯಂ ಅಬಲೋನ್ಮಾದಚೂರ್ಣನಕ್ಕೆ ಸತ್ಕೀರ್ತನಮಂ .. .. ಉತ್ಪಾದಿಸುವುದು ನೃಪರೂಪಂ: **ಮಲ್ಲಿನಾಪು,** ೩. ೨೮)

**ಏೞಿಸು** – ಗೇಲಿ ಮಾಡು (ಕೆಂದಳದೊಂದು ಕೆಂಪು ಕಿಸುಸಂಜೆಯನಂಜಿಸೆ ಕರ್ಪುವೆತ್ತ ಕೇಸಂದಳವಾದ ಕೞ್ತಲೆಯಂ ಏೞಿಸೆ: **ಕಬ್ಬಿಗಕಾ,** ೧೦೩); ಎಬ್ಬಿಸು, ನಿರ್ಮಿಸು (ದೇವನಿಳಯಂಗಳಂ ಏೞಿಸಿ ರೂಢಿವೆತ್ತನುಂ ಪರವಧುಗಾಸೆಗೆಯ್ಯೆ ಕೆಡುಗುಂ: **ಸಮಯಪ,** ೫. ೬೭)

**ಏೞಲೆವಾೞೆ** – ಏಳು ಎಲೆಗಳುಳ್ಳ ಬಾಳೆ (ಎಲೆವಳ್ಳಿಯ ತಳ್ಪಿಂದ ಏೞೆಲೆವಾೞೆಯ ಪರಪಿನಿಂದ ಅಶೋಕೆಯ ಪೊದಱಿಂ: **ಕಾವ್ಯಾವಲೋ,** ೩೨೦)

**ಏೞ್ಕಟ್ಟು** – [ಏೞು+ಕಟ್ಟು] ವರ್ಷಗಳ ಅವಧಿಯ ಕಟ್ಟುಪಾಡು (ಏೞ್ಕಟ್ಟಿನೆೞೆದು ನಿಮ್ಮಂ ನಾಡ್ಡಿಡೆಗೞಿದೊಡೆ ಮದೀಯ ನಾಥಂ ಬೇರಂ ಬಿೞ್ಕೆಯನೆ ತಿಂದ ದೆವಸದೊಳ್ ಅೞ್ಕಾಡಿದ ಬೀರಮೀಗಳೇಂ ಪೊಸತಾಯ್ತೇ: **ಪಂಪಭಾ,** ೧೨. ೧೭೮)

**ಏೞ್ಗೆ** – ಅಭಿವೃದ್ಧಿ (ಶೌಚದೇೞ್ಗೆ ಪೞಿಯೊಳ್ ಕೆಳೆಗೊಳ್ಳದು ಕೀರ್ತಿ ಕಲ್ಮಷಕ್ಕೆಡೆಗುಡದು: **ಸಮಯಪ,** ೬. ೨)

**ಏೞ್ಗೆವಾಡಿವ** – [ಏೞ್ಗೆ+ಪಾಡಿವ, ಚಂದ್ರ ಬೆಳೆಯುವ ಕಾಲದ, ಅಂದರೆ ಶುಕ್ಲಪಕ್ಷದ ಪಾಡ್ಯ] (ಅಯ್ವರ್ ಕೂಸುಗಳುಂ ಏೞ್ಗೆವಾಡಿವದ ಚಂದ್ರನಂತೆ ಉತ್ತರಾಭಿವೃದ್ಧಿಯೊಳ್ ಸೊಗಯಿಸಿ ಬಳೆಯೆ: **ಪಂಪಭಾ,** ೨. ೩)

**ಏೞ್ಗೆವೆಱು** – ಏೞ್ಗೆವಡೆ (ವಿಶ್ವಜಗಜ್ಜನ ಕೀರ್ತನಾರವಂಗಳಿಂ ಇನಿಸು ಏೞ್ಗೆವೆತ್ತು .. .. ಪುಗುತಂದಂ ಅಚ್ಯುತಂ: **ಜಗನ್ನಾವಿ,** ೧೦. ೧೩೧)

**ಏೞ್ತರ್** – ಹೊರಟು ಬಾ (ಆದಿಬ್ರಹ್ಮನೇೞ್ತರ್ಪುದನೆ ಕನಸುವೇೞ್ದಿಪ್ಪುದು ಎಂದು ಅಗ್ರಜಂಗೆ ಆದರದಿಂದಮ ಪೇೞ್ದು: **ಆದಿಪು,** ೯. ೧೩೦)

**ಏೞ್ತರ** – ಆಡಂಬರ (ವದನ ವಿಕಾಸದಿಂ ಬರವಿನ ಏೞ್ತರದಿಂದಮೆ ಕಾರ್ಯಸಿದ್ಧಿಯಾದುದು: **ಪಂಪರಾ,** ೧೧. ೧೬೨)

# ಐ

**ಐ** – ಏ ಮತ್ತು ಆಕಾರಗಳು ಖಡಿ ಆದ ಒಂದು ಸಂಧ್ಯಕ್ಷರ (ಅಕಾರಮುಂ ಏಕಾರಮುಂ ಕೂಡಿ ಸಂಧಿಯಾಗೆ ಐಕಾರಂ ಪುಟ್ಟುಗುಂ: **ಶಬ್ದಮದ,** ೨೦, ವಿಚಾರಂ)

**ಐಂದವ** – ಇಂದು ಅಥವಾ ಚಂದ್ರನಿಗೆ ಸಂಬಂಧಿಸಿದ; ಬೆಳುದಿಂಗಳು (ಅಂಚೆ ಸಂಚಳಿಪನಂಗನ ಜಂಗಮಕಲ್ಪವಲ್ಲಿ ಮಂಜುಳಕರಪುಂಜವಂ ಕೆದಱುವೈಂದವ ಕೋರಕಜಾಲಮೆಂಬಿನಂ: **ಅನಂತಪು,** ೨. ೨೦)

**ಐಂದವಬಿಂಬ** – ಚಂದ್ರಬಿಂಬ (ಐಂದವಬಿಂಬ ರೌಪ್ಯಕುಂಭಗತಸುಧಾಮರೀಚಿಜಳಮಂ ಸುರಿದಂ ಸಲೆ ಕಾಲಪಾಮರಂ: **ರಾಜಶೇವಿ,** ೧೧. ೬೮)

**ಐಂದ್ರ** – ಇಂದ್ರಾಸ್ತ್ರ (ಕೆಳರ್ದು ಅಂದುಗ್ರರಣಾಗ್ರಹ ಪ್ರಣಯದಿಂದಾಗಳ್ ಕುರುಕ್ಷೇತ್ರಮಂ ಕಳವೇೞ್ದು ಇರ್ವರುಂ ಐಂದ್ರ ವಾರುಣದೆ ವಾಯವ್ಯಾದಿ ದಿವ್ಯಾಸ್ತ್ರಸಂಕುಳದಿಂದ ಒರ್ವರಂ ಒರ್ವರ್ ಎಚ್ಚು: **ಪಂಪಭಾ,** ೧. ೭೯)

**ಐಂದ್ರದಿಶೆ** – ಇಂದ್ರದಿಕ್ಕು, ಪೂರ್ವ (ಆ ನಗೇಂದ್ರದ ಐಂದ್ರದಿಶಾಭಾಗದೊಳ್: **ಚಂದ್ರಪ್ರಪು,** ೧. ೭೫)

**ಐಂದ್ರಿಯ** – ಇಂದ್ರಿಯಗಳನ್ನು ಹೊಂದಿದಂತಹ (ಬಂದುದು ಉನ್ಮದೇಭದ ತೆಱದಿಂ ಹಿಮೋದಿತ ಮಹಾರುತಂ ಐಂದ್ರಿಯದೊಂದು ಮಾರುತಂ: **ಕುಸುಮಾಕಾ,** ೭. ೨)

**ಐಂದ್ರಿ** – ಇಂದ್ರನ ಮಡದಿ, ಶಚೀದೇವಿ (ಚಂದ್ರಲೇಖೆ ಚಂದ್ರ ಆದಿತ್ಯಪ್ರತಿಮರ್ ಐಂದ್ರಿಯವೋಲ್ ಅಪ್ರತಿಮಪ್ರಭರಂ ಪ್ರಸಿದ್ಧರಂ ಬಧು ಪಡೆದಳ್: **ಪಂಪರಾ,** ೧೦. ೭೦)

**ಐಂದ್ರಿಯಕ** – ಇಂದ್ರಿಯಗೋಚರವಾದ, ಪ್ರತ್ಯಕ್ಷವಾದ (ಐಂದ್ರಿಯಕಂ ಪ್ರತ್ಯಕ್ಷಂ ಅತೀಂದ್ರಿಯಮಪ್ಪುದು ಪರೋಕ್ಷಂ: **ಅಭಿಧಾವ,** ೧. ೧೨. ೨೪)

**ಐಂದ್ರೀತನೂದರಿ** – ಪೂರ್ವದಿಕ್ಕು (ದಿವಸಶ್ರೀದೇವಿಗೆ ಐಂದ್ರೀತನೂದರಿ ತಂದುತ್ಸವದಿಂದೆ ತೋರ್ಪ ಅರುಣರತ್ನ ಆದರ್ಶಮೆಂಬಂತೆ .. .. ಭನುಬಿಂಬಂ: **ಕುಸುಮಾಕಾ,** ೪. ೭೯)

**ಐಂದ್ರೀದಿಶಾ** – ಪೂರ್ವದಿಕ್ಕು (ಐಂದ್ರೀದಿಶಾ ಅವನಿಭೃತ್ ಚೂಳಮನೇಜಿ ತನ್ನಮಳಹೃತ್ಪೀಠಾಗ್ರಮಂ ಖೇಚರ ಅವನಿಭೃನ್ನಂದನೆ ಆ ಸ್ವಯಂಪ್ರಭೆ .. .. ಅರ್ಚಿಸಿದಳ್: **ಶಾಂತೀಶ್ವಪು,** ೨. ೧೪)

**ಐಂದ್ರೀನಾರಿ** – ಪೂರ್ವ ದಿಗಂಗನೆ (ದರಸ್ಮೇರಾನನೆಯಾದ ಐಂದ್ರೀನಾರಿಯ ನಗೆಯಂತೆ ನೆಗೆದುವು ಇಂದುಕರಂಗಳ್: **ಲೀಲಾವತಿ,** ೬. ೯೦)

**ಐಕಿಲ್** – ಚಳಿ, ಹಿಮ (ಬಿಸಿಲ್ ಐಕಿಲ್ ಪಸಿವು ಉಗ್ರದಂಶಮಶಕವ್ಯಾಬಾಧೆ ನೀರಟ್ಕೆ: **ಆದಿಪು,** ೬. ೩೪)

**ಐಕಿಲಣುಗಿ** – ಪಾರ್ವತಿ (ಐಕಿಲಣುಗಿ ಸರಸತಿ ಸಿರಿ ತೊಡೆ ಬಾಯ್ ಎರ್ದೆಯೊಳಿರ್ದು ತಮ್ಮೆಚಿಯರಂ ಒಲ್ದು ಇರುಳುಂ ಪಗಲುಂ ಕಾದಿರ್ಪರ್: **ತ್ರಿಷಷ್ಟಿಪು,** ೭. ೩೦)

**ಐಕ್ಷವರಸ** – ಕಬ್ಬಿನ ರಸ (ಸುಧೆ ದಧಿ ಘೃತಂ ಮಧು ಸತ್ ಐಕ್ಷರಸಂಗಳಂ ಮಧುರತರ ಭಸಿತಮಿಶ್ರಿತ ಜಳಂಗಳಂ: **ರಾಜಶೇವಿ,** ೧೩. ೫೧ ರಗಳೆ)

**ಐನಸ** – ಪಾಪ (ವಿನುತವಿಶೋಧಿ ನಾಡೆ ನೆಲವೆರ್ಚೆ ಮಹಾ ಐನಸರಾಜವ್ಯೂಹಮಂತನಿವೃತ್ತಿ ಸೂಕ್ಷ್ಮಪರಿಣಾಮವಿಶೇಷ ವಿನಷ್ಟಮಾಗೆ: **ಶಾಂತೀಶ್ವಪು,** ೧೬. ೧೭)

**ಐನೋಬಂಧನ** – ಪಾಪದ ಸೆರೆ (ಸುಜನಸಂ ಅಖಿಳ ಐನೋಬಂಧನಮಂ ಬಿಡಿಪಂತಿರೆ ಬಂಧುಗಳಂ ಬಿಡಿಸಿ ತಪಕೆ ತಱಿಸಂದಿರ್ದಂ: **ಪಾರ್ಶ್ವನಾಪು,** ೧೫. ೭೧)

**ಐರಣಿ** – ಶುಭಸೂಚಕ ಚಿತ್ರ ಬರೆದ ಗಡಿಗೆ (ಅರ್ಚಿಸಿದೈರಣಿ ಚಂದನ ಚರ್ಚೆಯ ತಳಿರ್ಗೆಂಪಂ: **ವರ್ಧಮಾಪು,** ೩. ೯೦)

**ಐರಣಿಕ** – ಅಕ್ಕಸಾಲಿಗ (ಐರಣಿಕಂ ಕುರುಕುರುಕಾರಂ ತದಧ್ಯಕ್ಷಂ ಭೌರಿಕನೆನಿಕುಂ: **ಅಭಿಧಾವ,** ೧. ೧, ೮೦)

**ಐರದಾಳಿ** – ಮುತ್ತೈದೆಯರ ಮಾಮಗಲ್ಯಸೂಚಕ ತಾಳಿ (ಆಳಾಪಂ ಮಿಗೆ ಮೇಳಯ್ಸಿದರ್ ಐರದಾಳಿಯಂ ಬಾಳಕಿಯರ್: **ಗಿರಿಜಾಕ,** ೧೦. ೩೮)

**ಐರಾದೇವಿ** – (ಕಮನೋದ್ಬುದ್ಧತೆವೆತ್ತು ನಿತ್ಯಮೆಸೆವ ಐರಾದೇವಿಯ ಆಸ್ಯಾರವಿಂದಮಂ ಆ ಪೋಲ್ತಪೆಂ: **ಶಾಂತೀಶ್ವಪು,** ೧೩. ೧೮೧)

**ಐರಾವಣ** – ಇಂದ್ರನ ಆನೆ (ಐರಾವಣದಯೆ ಪೆಱಗನೆ ವಾರಣಗಣವಾಸೆಯಿಂದೆ ಬರ್ಪಂತಿರೆ .. .. ಮುಖ್ಯರಪ್ಪ ಮಲ್ಲರ್ವಂದರ್: **ನೇಮಿನಾಪು,** ೮. ೭೧)

**ಐಲಬಿಲ** – ಕುಬೇರ (ಅಳಕಾನಗರದಂತೆ ಅಗಣ್ಯಪುಣ್ಯಜನ ಮಿಳಿತಮುಂ ಧನಸನಾಥ ಐಲಬಿಲೋಪಯುಕ್ತಮುಂ: **ರಾಜಶೇವಿ,** ೨. ೨೮ ವ)

**ಐಶ್ವರ್ಯ** – ಅಧಿಕಾರ, ಶಕ್ತಿ (ಉಮಾಕಾಮಿನೀಜೀವಿತೇಶಂ ಪರಮೈಶ್ವರ್ಯಸ್ಪದಂ ರಕ್ಷಿಸುಗೆ ವಸುಧೆಯಂ: **ಜಗನ್ನಾವಿ,** ೧. ೩); ಭಾಗ್ಯ (ಪುತ್ರಕಳತ್ರಪರಿಗ್ರಹಗಾತ್ರ ಧನೈಶ್ವರ್ಯಮೆಂಬಿವು ಆರ್ಗಂ ಅನಿತ್ಯಂ: **ಪುಷ್ಪದಂಪು,** ೧೩. ೨೭)

**ಐಸರ** – ಐದೆಳೆಯ ಸರ (ಕಟ್ಟಿದ ಐಸರಂ ಅದೊಂದು ಬೆಡಗಿನ ಸೇತುಮಾಲೆ: **ಆದಿಪು,** ೧೨. ೧೨); ಪಂಚಶರ, ಮನ್ಮಥನ ಐದು ಬಾಣಗಳು (ಅಸಮಾಸ್ತ್ರಂ ಐಸರಂಗಳಿಗಿಸದೆ ಈಗಳ್ ಈ ನೆಗಟ್ದ ನಾಲ್ಸರದಿಂದಿಸುವಂ ವಿಯೋಗಿಯಂ: **ಮಲ್ಲಿನಾಪು,** ೫. ೨೫)

**ಐಸರಲ** – ಪಂಚಬಾಣ, ಮನ್ಮಥ (ಪಿರಿದು ಮಾತಿನೊಳೇಂ ಐಸರಲಂಗೆ ಪೊಡರ್ಪಿನೆಟ್ಗೆಯುಂಟಾದೊಡೆ ಚೆಚ್ಚರದಿಂದೆತ್ತಿಸಿ ತಂದಿರ್ವರ ಬಲ್ಪಂ ಬಟಿಕೆ ನೋಡು ನೀಂ ಕಾಳೆಗದೊಳ್: **ಕಬ್ಬಿಗಕಾ,** ೧೪೫)

**ಐಳಬಿಳ** – ಕುಬೇರ (ಹರಿ ಶಿಖಿ ಯಮ ನಿರುತಿ ಜಳಾಕರಪತಿ ಮರುತ್ ಐಳಬಿಳ ಹರ ಅಹಿಪ ಶಶಿ ಭಾಸ್ಕರರರಂ ಸೌಧರ್ಮೇಂದ್ರಂ ನಿರವಿಸಿದಂ ದಶದಿಶಾಳಿಯೊಳ್ ಬಲಸಹಿತಂ: **ಶಾಂತೀಶ್ವಪು,** ೧೪. ೧೦೯)

**ಐಳಾವನ** – ಏಲಕ್ಕಿಯ ತೋಟ (ತಳರ್ದುದೆತ್ತಂ ಚೂತಸಪ್ತಚ್ಛದ ಏಳಾವನಸುರಭಿಮದಾಸಾರಾಸ: **ಆದಿಪು,** ೧೧. ೩೦)

## ಒ

**ಒಂತಿ** – ಓತಿಕೇತ (ಈಗಳ್ ಕಪ್ಪೆಗಳುಂ ಎಸಡುಗಳುಂ ಇಲಿಗಳುಂ ಒಂತಿಗಳುಂ ಮೊದಲಾಗೊಡೆಯ ಜೀವರಾಶಿಗಳಂ ಕೊಂದು .. .. ನರಕಂಬುಗಲಾಟಿಸಿದಪ್ಪಯ್: **ವಡ್ಡಾರಾ,** ಪು ೧೪೦, ಸಾ ೪)

**ಒಂದವಿಂದ** – [ಒಂದು] ಅಸ್ತವ್ಯಸ್ತತೆ (ತೆಱನಱಿಯದೆ ಒಂದವಿಂದಂ ಜಱಚುವುದುಂ .. .. ಅಱುಗುಲಿಯಪ್ಪವಂಗೆ ಸಹಜಮಿವಿನಿತುಂ: **ಸಮಯಪ,** ೧೩. ೫೮)

**ಒಂದವಿಂದಿ** – ಒಂದು ಗುಂಪಿಗೆ ಸೇರಿದ (ಪೊಂದಳಿರೊಳ್ ಒಂದವಿಂದಿಯಲ್ಲದದೊಂದು ನಾಡೆಯುಂ ಅಂದಂಬಡೆದು ಪೊಳೆವ ಪೊಂದಳಿರುಂ: **ಆದಿಪು** ನರಸಿಂ, ೪. ೪೧ ವ); ಹೊಂದಿಕೆ, ಸರಿದೊರೆಯಾಗು (ಮಹಾತ್ಮರಪ್ಪ ಪುರುಷರ್ಕಳ ವೃತ್ತಿಯಂ ಒಂದವಿಂದಿಯಪ್ಪಂತು ತಗುಳ್ಚಿ ಪೇಟ್ವ ಕಥೆಯಂತಿರೆ: **ಹರಿವಂಶ,** ೧. ೩೦)

**ಒಂದಿಗ** – ಜೊತೆಯವನು (ಕಿಱುಕುಳನಪ್ಪ ಎನ್ನೊಂದಿಗನಳ್ ಅನುಚಿತಮಿದಂ ನಿಮ್ಮಡಿ ಬೆಸಸಿ ಕಳೆಯಮತ್ಸಂಶಯಮಂ: **ಶಾಂತಿಪು,** ೫. ೯)

**ಒಂದಿಸು** – ಕೂಡಿಸು, ಜೋಡಿಸು ಕೆಂದಾವರೆಯ ಸಲರ್ದ ಅಲರೊಳ್ ಒಂದಿಸುವಂತೆ ಅಳಿಕುಳಂಗಳಂ: **ಕರ್ಣನೇಮಿ,** ೧೩. ೭೭)

**ಒಂದು** – ಕೂಡು, ಸೇರು (ಮುತ್ತಿನ ಪಚ್ಚೆ ಮಾಣಿಕದ ವಜ್ರದ ಕೇಟಿಯೊಳ್ ಒಂದಿ ಸಾಂದಿನೊಳ್ ಕತ್ತುರಿಯೊಂದು ಕೋಟ್ಗೆಸಱೊಳ್ ಓಕುಳಿ ಚಂದನ ಗಂಧವಾರಿಯೊಳ್ ಸುತ್ತಲುಂ ಅಟ್ಕೆಱಿಂ ಪಡೆವ ಗೇಯದ ಪೆಂಪಿನ ಅಲಂಪಂ ಆರ್ಗಂ ಆರ್ತಿತ್ತುದು ಪಟ್ಟಬಂಧ ಮಹೋತ್ಸವಂ ಆ ಪಡೆಮೆಚ್ಚೆ ಗಂಡನಾ: **ಪಂಪಭಾ,** ೧೪. ೨೦); ಪಡೆ, ಹೊಂದು (ವಿನೋದಕೇಳಿಯಂ ತೊಱೆವಾತಮ

ಪಂದೆಯವನೆಂಬ ನಿಂದೆಯನೊಂದುವನಿದು ರಾಜಧರ್ಮಮೇ: **ರಾಜಶೇವಿ,** ೩೩. ೨೦); ಒಂದು ಸಂಖ್ಯೆ (ಒಂದುಂ ಎಡಂಬಡುಂ ಪೊರೆಯುಂ ಇಲ್ಲ ಅವರ್ಗೆ ಎಂಬುದಂ ಎಯ್ದೆ ನಂಬಿ ನಾಡಂ ದಯೆಗೆಯ್ದು ನೀಂ ಕುಡುವಿನಂ: **ಪಂಪಭಾ,** ೯. ೪೩)

**ಒಂದುಗುಂದು** – ಒಂದೂ [ಸ್ವಲ್ಪವೂ] ಕಡಿಮೆಯಾಗದೆ (ಪ್ರಯತ್ನದೆ ಬಿಗಿದಿರ್ದ ಎರಟೊಡ್ಡಣೆ ಮಿಸುಪ್ಪ ಅಸಿ ಖೇಟಕಂ ಇಂತಿವು ಒಂದುಗುಂದದೆ ನಿಲೆ ನೋಟ್ಟಿ ನೋಟಕರ್ಗೆ ಸೌಮ್ಯಭಯಂಕರನಾದಂ ಅರ್ಜುನಂ: **ಪಂಪಭಾ,** ೭. ೭೯)

**ಒಂದು ತಲೆಯಾಗೋಡು** – ಒಂದೆ ದಿಕ್ಕಿಗೆ ತಲೆತಿರುಗಿಸಿಕೊಂಡು ಓಡು (ಅಂತು ದ್ರೋಣಂ ಎಚಿಗೋಣಸಾವಂ ಸಾವುದುಂ ಭೋರ್ಗರೆದಾರ್ದ ಪಾಂಡವ ಪತಾಕಿನಿಯುಮಂ ಒಂದು ತಲೆಯಾಗೋಡುವ ಕೌರವಧ್ವಜಿನಿಯುಮಂ ಬೇಱೊಂದು ಮೊನೆಯೊಳ್ ಕಾದುತಿರ್ದ ಅಶ್ವತ್ಥಾಮಂ ಕಂಡು: **ಪಂಪಭಾ,** ೧೨. ೩೦ ವ)

**ಒಂದೆವಸ** – ಒಂದು ದಿವಸ (ಇಂದುವಿಮಾನಂ ಒಂದೆವಸ ರಾಹುವಿಮಾನಂ ಅದೊರ್ಮೆಗೊರ್ಮೆ ಸಾರ್ತಂದಿರೆ ಚಂದ್ರನುಂ ಕ್ರಮದೆ ತೋಱುವಂ: **ಸಮಯಪ,** ೧೧. ೪೨)

**ಒಂದೆವಱಿಗುಟ್ಟು** – ಒಂದೇ ತಮಟೆಯನ್ನು ಹೊಡೆ (ಎನ್ನುಮಂ ಈತನಂತೆ ಪೆಡಂಗಯ್ಯುಡಿಯೆ ಕಟ್ಟಿ ಒಂದೆವಱಿಗುಟ್ಟಿ ನೀಮೆಲ್ಲ ನಂಟರ್ ನೋಡೆ ಶ್ಮಶಾನಕ್ಕುಯ್ದು ಸೂಲದೊಟಿಕ್ಕಿ ಕೊಲ್ವರ್: **ವಡ್ಡಾರಾ,** ಪು ೧೪, ಸಾ ೧೨)

**ಒಂದೆವಿಂದೆ** – ಒಂದು ಗುಂಪಾಗಿ ಅಲ್ಲದೆ, ಬೇರೆ ಬೇರೆಯಾಗಿ (ಅತಿರಥ ಸಮರಥ ಮಹಾರಥ ಅರ್ಧರಥರ್ ಒಂದೆವಿಂದೆಯಲ್ಲದೆ ಒಂದೊರ್ವರೊಳ್ ಸಂಧಿಸಿ ಗೊಂದಣಿಸಿ ನಿಂದಾಗಳ್: **ಪಂಪಭಾ,** ೧೧. ೧೪೬ ವ)

**ಒಂದೆಸೆ** – ಒಂದು ದೆಸೆ, ದಿಕ್ಕು, ಕಡೆ (ಅಸುರರ್ ಅಲ್ಲಿರದೆ ಏನೊಂದೆಸೆಯೊಳ್ ಪೋಗಿರ್ದರೆ: **ಸಮಯಪ,** ೮. ೧೪೩)

**ಒಂಬತ್ತು ನಿಧಿ** – [ಜೈನ] ಚಕ್ರವರ್ತಿಯ ಬಳಿಯ ನವನಿಧಿಗಳಲ್ಲಿ ಒಂದು (ಕಾಳ ಮಹಾಕಾಳ ಪದ್ಮ ಪಾಂಡುಕ ನೈಸರ್ಪ ಮಾಣವಕ ಪಿಂಗಳ ಶಂಖ ಸರ್ಪರತ್ನಂಗಳೆಂಬೊಂಬತ್ತು ನಿಧಿಗಳುಮಂ ಅನುಕ್ರಮದೊಳರ್ಚಿಸಿ: **ಚಂದ್ರಪ್ರಪು,** ೬. ೧೦೨ ವ)

**ಒಕ್ಕಣ** – ಒಕ್ಕುವ ಕೆಲಸ (ಒಕ್ಕಣದಂತೆ ರಾಶಿಯಂತೆ ಮಿರ್ಥಯಾದೃಷ್ಟಿ ಸಾಧನ ಸಮ್ಯಗ್ದೃಷ್ಟಿ ಸಂಯಕ್ ಮಿಥ್ಯಾದೃಷ್ಟಿ: **ಧರ್ಮಾಮೃ,** ೧೨. ೧೪ ವ); ಒಂದು ಆಯುಧ (ಭಲ್ಲೆ ಹ ಸೀಸಕಂ ಕವಚ ಅಡಾಯುಧ ಒಕ್ಕಣವುದ್ದುವಾರೆಯುಂ: **ಸೂಕ್ತಿಸು,** ೧೮. ೨೮)

**ಒಕ್ಕಲ್** – ಮನೆತನ (ಮಲೆಪರ್ ಮಂಡಳಿಕರ್ ಕಱುಂಬರ್ ಅದಟರ್ ವೀರರ್ಕಳುಂ ತಮ್ಮ ಬಾಟ್ಟಲೆಯಂ ಬೇಡಿದ ವಸ್ತುವಾಹನಮುಮಂ ಮುಂದಿಟ್ಟು ಮೂವಿಟ್ಟಿಯ ಒಕ್ಕಲವೋಲ್ ಇಂ ಬೆಸಕಯ್ಯೆ ಸಂತಮಿರುತುಂ: **ಪಂಪಭಾ,** ೯. ೧೦); ಬೇಸಾಯಗಾರ (ಪಿರಿದು ತೆತ್ತ ಒಕ್ಕಲಂತೇ ಗಂಡನೊಲ್ಲದ ಸ್ತ್ರೀಯಂತೆ: **ಧರ್ಮಾಮೃ,** ೫. ೮೩ ವ)

**ಒಕ್ಕಲಿಕ್ಕು** – ಒಕ್ಕಣ ಮಾಡು, ಬಡಿ (ಅಂತು ತನ್ನ ಬಲಮೆಲ್ಲಮಂ ಜವನಂತೆ ಒಕ್ಕಲಿಕ್ಕಿ ಕೊಲ್ವ ಕಳಶಕೇತನನಂ: **ಪಂಪಭಾ,** ೧೨. ೨೧ ವ); ಧ್ವಂಸಮಾಡು (ನಿಂದ ತುಟಿಲಾಳ್ಗಳನಾಂ ತಱಿದು ಒಕ್ಕಲಿಕ್ಕದಿರ್ದೊಡೆ .. .. ನಚ್ಚಿನ ನಿನ್ನ ಲೆಂಕನೇ: **ಕಬ್ಬಿಗಕಾ,** ೧೮೭)

**ಒಕ್ಕಲಿಗ** – ಬೇಸಾಯ ಮಾಡುವವನು (ಮಲೆ ತಲೆದೋಱಿದೆಂದುದನೆ ಕೊಟ್ಟುದು ಡಂಗಮಡಂಗಿ ಬಂದುದು ಒಕ್ಕಲಿಗವೆಸರ್ಗೆ ಪೂಣ್ದುದು: **ಪಂಪಭಾ,** ೨. ೯೦); ರೈತ (ಒರ್ವಂ ಒಕ್ಕಲಿಗಂ ಒಂದು ಪೇಱು ಮಣ್ಣಂ ತಂದು ಶ್ರೀಪರ್ವತದ ಮೇಗೊಟ್ಟಿದೊಡೆ: **ವಡ್ಡಾರಾ,** ಪು ೧೮೭, ಸಾ ೨೩)

**ಒಕ್ಕಲಿಸು** – ವ್ಯಾಪಿಸು (ದಿವಿಜರ ಕಿವಿಯಂ ಜಕ್ಕುಲಿಸಿ ನೆಗೆದು ಭುವನಮಂ ಒಕ್ಕಲಿಸಿದುದು ಆ ಗಭೀರಭೇರೀ ನಿನಾದಂ: **ಕರ್ಣನೇಮಿ ,** ೧೧. ೮೪)

**ಒಕ್ಕಳ** – [ಒರ್+ಕಳ] ಒಂದು ಕೊಳಗ (ಉಪ್ಪಿಲ್ಲದೆ ಕೇಳ್ ಒಕ್ಕಳ ತುಪ್ಪವನೆಱೆದುಣ್ಬೆನೆಂಬೊಡೆ ಉಂಬ ಉಣಿಸೇಂ ಸ್ವಾದಪ್ಪುದೇ: **ಧರ್ಮಾಮೃ,** ೧. ೫೦)

**ಒಕ್ಕು** – ಹೊರಕ್ಕೆ ಸುರಿ (ತಿಸುಳದೊಳ್ ಉಚ್ಚಳಿಪ್ಪ ಪೊಸನೆತ್ತರೆ ಕೆಂದಳಿರಾಗೆ ಕಣ್ಗೆ ಅಗುರ್ವಿಸುವಿನಂ ಒಕ್ಕು ನೇಲ್ವ ಕರುಳೋಳಿಯೆ ಬಾಳಮೃಣಾಳಮಾಗೆ ಮಿಕ್ಕಸುರರ ಮೆಯ್ಯೊಳಾದ ವಿರಹಾಗ್ನಿಯಂ ಆಱಿಸುತಿಂತೆ ತನ್ನ ಕೂರಸಿಯೊಳ್ ಅಡರ್ತು ಕೊಂದಸಿಯಳ್ ಇರ್ಕೆ ಅಸಿಯೊಳ್ ಪಡೆಮೆಚ್ಚೆ ಗಂಡನಾ: **ಪಂಪಭಾ,** ೧. ೬); ಬೆಳೆಯಿಂದ ಕಸ ಬೇರ್ಪಡಿಸು, ಒಕ್ಕಣ ಮಾಡು ಹಾಗೂ ಶಕುನ ಹೇಳು (ಒಕ್ಕು–ಖಲಕರಣೇ ಶಕುನೇಚ: **ಶಬ್ದಮದ,** ಧಾ ೧೩)

**ಒಕ್ಕೈಸು** – ಸೇರು, ಒಂದುಗೂಡು (ಉಭಯಕಟದ ಸೊರ್ಕುಕದಡಿನ ತೆರ್ಕೆಗಡಲ್ಗಳ್ ಒಕ್ಕೈಸಿ ಜಗಮನಿಕ್ಕಲೆಂದು : **ಅನಂತಪು,** ೧೨. ೩೦ ವ)

**ಒಖ್ಖಾಣಿಸು** – ವ್ಯಾಖ್ಯಾನಿಸು (ಕವಿಮಾರ್ಗದೊಳ್ ಒಖ್ಖಾಣಿಪ ಠವಣಿಪ ಕಮ್ಮೈಸುವ ಎಡೆಯೊಳ್ ವಖ್ಖಾಣಿಸಲುಂ ಠವಣಿಸಲುಂ ಕಮ್ಮೈಸಲುಂ ಇವನಂತಾರ್ ಬಲ್ಲರ್ ಎನಿಸಿದಂ ಕವಿರತ್ನಂ: **ಅಜಿತಪು,** ೧. ೮೨)

**ಒಗಂಟುವೇಟ್** – ಅರ್ಥ ತಿಳಿಯದಂತೆ ಮಾತಾಡು, ಒಗಟು ಹೇಳು (ಅರ್ಥಮಂ ಪ್ರಕಟಿಸಿ ಪೇಟದೆ ಒಗಂಟುವೇಟ್ವಕವಿಯುಂ ಕವಿಯೇ: **ಪಾರ್ಶ್ವಪು,** ೧. ೭೫)

**ಒಗಂಟೆ** – ಒಗಟು, ಅರ್ಥ ತಿಳಿಯದ ಹೇಳಿಕೆ (ಒಗಂಟೆ ತಾಂ ಪ್ರಹೇಳಿಕೆಯಕ್ಕುಂ: **ಅಭಿಧಾವ,** ೧. ೧೩. ೩೬)

**ಒಗಸುಗಂ** – ಅತಿಶಯವಾಗು (ನೆಗಟ್ಟಿದಮರಾಂಗನಾಜನದ ರೂಪುಗಳೆಲ್ಲಂ ಈಕೆಯೊಂದು .. .. ಮೆಲ್ಪಿನ ತೊದಳ್ನುಡಿಗಪ್ಪೊಡಮೆಯ್ದೆ ವಾರವೇಂ ಒಗಸುಗಂ ಎಂದು ತಳ್ತಗಲನಾಕೆಯಂ ಲಲಿತಾಂಗವಲ್ಲಭಂ: **ಆದಿಪು,** ೨. ೭೫)

**ಒಗು** – ಹೊರಸೂಸು; ಹೊಮ್ಮುವಿಕೆ; ತ್ಯಜಿಸು (ಆಳ್ದನ ಕಜ್ಜಮಂ ಒಕ್ಕು ಸತ್ತರಂ ನಗುವವೊಲಿರ್ದಂ ಅಂಗಪತಿ ನೆಮ್ಮೀ ನಿಜೋನ್ನತ ಕೇತುದಂಡಮಂ: **ಗದಾಯು,** ೫. ೧೦)

**ಒಗುಮಿಗು** – ಆಧಿಕ್ಯ (ನೆನೆದುರಿವ ತಲೆಯ ಕಿಚ್ಚಿನೊಳೊಗುಮಿಗೆ ನೆಯ್ವೊಯ್ವ ತೆಱದೆ ಪೊಣ್ಮಿದ ಮುನಿಸಿಂ ಭುಗಿಲನುರುದೆಟ್ಟು: **ಕಬ್ಬಿಗಕಾ,** ೧೧೮)

**ಒಗೆ** – ಹುಟ್ಟು, ಕಾಣಿಸಿಕೊ (ಕಮಲೋದ್ಭವನ ಅಮಳಿನ ಹೃತ್ಕಮಲದೊಳ್ ಒಗೆದರ್ ಸುರೇಂದ್ರಧರಕರ್ ಆ ವಾಗಮಳರ್ ನೆಗೆಟ್ದಿರ್ದರ್ ಪುಲಹ ಮರೀಚಿ ಅತ್ರಿ ಅಂಗಿರಸ್ ಪುಳಸ್ತ್ಯ ಕ್ರತುಗಳ್: **ಪಂಪಭಾ,** ೧. ೬೦);

ವಸ್ತ್ರಪ್ರಕ್ಷಾಲನ, ಬಟ್ಟೆಯನ್ನು ಶುದ್ಧಗೊಳಿಸು (ಒಕ್ಕು – .. .. ವಸ್ತ್ರಪ್ರಕ್ಷಾಳನಯೋ: **ಶಬ್ದಮಣಿ,** ಧಾ ೯೪)

**ಒಗೆತರ್** – ಕಾಣಿಸಿಕೊ, ಹುಟ್ಟಿ ಬರು (ಅಂಬುಜಮುಖಿ ಪುತ್ರನೆನ್ನ ದೊರೆಯಂ ನಿನಗಕ್ಕೆ ಎಂಬುದುಂ ಒದವಿದ ಅಂಬುಜಮಿತ್ರನನೆ ಪೋಲ್ವ ಮಗಂ ಒಗೆತಂದಂ: **ಪಂಪಭಾ,** ೧. ೯೪); ಉಂಟಾಗು (ಪೇಳ್ದಳ್ ಮುದಮೊಗೆತರೆ ತಾಂ ಕಂಡ ಕನಸೆಲ್ಲಮಂ: **ರಾಜಶೇಖ,** ೪. ೨೭)

**ಒಗ್ಗಡಿಸು** – ಒಂದಾಗು (ಒಡೆದು ಕಟವೆರಡುಂ ಒಗ್ಗಡಿಸದೆ ಮದವುಣ್ಮಿ ಪೊಣ್ಮಿರಲ್ .. .. ವಿಜಯ ಗಜಮಂ ಕಂಡಳ್: **ಸೂಕ್ತಿಸು,** ೭. ೩೬)

**ಒಗ್ಗುಗೆಡು** – ಬೇರೆಯಾಗು (ಮೊಗ್ಗರಂಬೊಯ್ದು ಅಗಲಿಸಿ ನಡೆದು ಬಗ್ಗಿಸಿ ಬಯ್ದು ಒಗ್ಗುಗೆಡದೆ ಮುಂಕಣಿಸಿ: **ಗಿರಿಜಾಕ,** ೬. ೬೬ ವ)

**ಒಚ್ಚತ** – ಸಂತೋಷ (ಬಿಚ್ಚುಮಂ ವಿದ್ಯೆಗಳೊಳೆಲ್ಲಂ ಒಚ್ಚತಂ ನೋಡಿದೊಡೆ ಒಂದೊಂದರ್ಕೆ ಮಚ್ಚರಿಸಿದಂತೆ ಪಚ್ಚು ಪಸರಿಸಿ ನಿಚ್ಚಯ್ಸಲ್: **ಸುಕುಮಾಚ,** ೩. ೬ ವ); ಒಂದೇ ಸಮನೆ (ಮೆಯ್ಗೆ ಮೆಚ್ಚಿದಂತೆ ಒಚ್ಚತಂ ಕಾದಂಬರಿಯೊಳ್ ನೆರೆದು .. .. ನೆಗಳುತ್ತಮಿರ್ಪಂ: **ಕಾದಂಬ,** ೯. ೧೧ ವ); ವಿಶಿಷ್ಟ (ಅಮರ್ದಿಂಗೊಚ್ಚತಮಲ್ತು ಮತ್ತಿವರ ವಾಕ್ಯೀಯೂಷ ಪೂರಕ್ಕಮುಂಟು ... .. ಸೌಖ್ಯಂ .. .. ಎನಿಪರ್ ಈಗೊಳ್ಪಂ ಕವೀಂದ್ರೋತ್ತಮರ್: **ನೇಮಿನಾಪು,** ೧. ೩೨)

**ಒಚ್ಚತಂಗೊಳ್** – ಪಡೆದುಕೊ ಪೂವಿನ ಬಿಲ್ಲನೊಚ್ಚತಂಗೊಂಡು ಅರ್ಚಿಸುತ್ತಿರ್ಪ ನಿಡುವುರ್ವಿನ ನೀಳ್ಚೆಯರಿಂ: **ಗಿರಿಜಾಕ,** ೭. ೧೧ ವ)

**ಒಜ್ಜರಂಬರಿ** – ಝರಿಯಂತೆ ರಭಸದಿಂದ ಹರಿ (ಗುಜ್ಜರ ಮಂಡಲದೊಳ್ ಒಜ್ಜರಂಬರಿದು ಮಱುಮಂಡಲದೊಳ್ ಪರೆಪುವಡೆದು: **ಅನಂತಪು,** ೧೪. ೪೭ ವ)

**ಒಟ್ಟ** – (ಓಷ್ಠ) ತುಟಿ (ತೋಳತಳ್ಪನಾಳಿಸುವ ಇರದೆ ಒಟ್ಟಂ ಸವಿವ ಬಾಯ್ಬಿಡುತಂದೊಡಮೆಟ್ಟಿದಂತೆ ಚುಂಬಿಸುವ: **ಚಂದ್ರಪ್ರಪು,** ೮. ೭೭)

**ಒಟ್ಟಜ** – ಕಪ್ಪ, ಕಾಣಿಕೆ (ತಾನೊತ್ತೆಯಿಡಲ್ ಪೋದಡೆ ನೀನಿನ್ನಮಗೆಮ್ಮ ತಂದೆಯ್ಯೆಯೊತ್ತಗೆ ಕಯ್ಯಾನೆಮೆನೆ ಮೆಚ್ಚಿ ಸುಲ್ಲಿಇವಂ ಮಾನಿನಿರಜ್ಜನೊಟ್ಟಜಮಂ ಮಚ್ಚಿದವೊಲ್; **ಅಜಿತಪು,** ೨. ೯೯)

**ಒಟ್ಟಜೆ** – ಅತಿಶಯ (ತನ್ನ ನಣ್ಪಂ ಒಟ್ಟಜೆಯಿಂ ತೋಱಿ ವಜ್ರಬಾಹುಮಹೀಪತಿಯಂ ಕರೆದುಂ: **ಆದಿಪು,** ೪. ೫೨ ವ); ಅತಿಶಯತ್ವ (ಪುಟ್ಟಿದೊಡೆ ಆತನೊಳ್ ಅಱಿವು ಒಡವುಟ್ಟಿದುದು ಅಱಿವಿಂಗೆ ಪೆಂಪು ಪೆಂಪಿನೊಳ್ ಆಯಂ ಕಟ್ಟಾಯದೊಳ್ ಅಳವು ಅಳವಿನೊಳ್ ಒಟ್ಟಜೆ ಪುಟ್ಟಿದುದು ಪೋಲ್ವರಾರ್ ಬದ್ದೆಗನಂ: **ಪಂಪಭಾ,** ೧. ೨೪); ಸಮೂಹ (ರಸದೊಳ್ ಅಮರ್ಕೆ ಬಿನ್ನಣದೊಳ್ ಒಟ್ಟಜೆ ಮಾತಿನ ರೀತಿಯೊಳ್ ಚಲಂ .. .. ಎಸೆದಿರೆ ಪೇೞ್ದು ರಂಜಿಸದೆ: **ಸುಕುಮಾಚ,** ೧. ೪೪); ಪರಾಕ್ರಮ (ವಿಜಿಗೀಷುತ್ವದೊಳ್ .. .. ರಣದೊಳ್ ಭೂಭಾಗಮಂ ನೆಟ್ಟನೆ ಒಟ್ಟಜೆಯಿಂದ ಅಂಜಿಸಿ ಕೊಳ್ಳದಿರ್ಪರೆ: **ಪಂಪಭಾ** ಪರಿಷತ್ತು, ೯. ೪೭); ರಾಶಿ (ಖಂಡದಿಂಡೆಯಂ ತೆಗೆತೆಗೆದಿಟ್ಟುದು ಒಟ್ಟಜೆಯಂ ಒಟ್ಟಿದುದು: **ರಾಜಶೇಖ,** ೫. ೧೧೭)

**ಒಟ್ಟಜೆಕಾಱ** – ಪರಾಕ್ರಮಿ (ಆಂತು ಪರಿವ ಒಟ್ಟಜೆಕಾಱರುಮಂ ಇಟ್ಟಿಯನೆತ್ತಿ ಪರಿವ ಜಟ್ಟಿಗರುಮಂ: **ಲೀಲಾವತಿ,** ೫. ೧೩೪)

**ಒಟ್ಟಜೆಗಿಡು** – ಚದುರಿಹೋಗು (ಒಟ್ಟಜೆಗಿಡದೆ ತಳ್ತಿಱಿದು ಪಾಱಿಯಂ ಅಸಕಟಿಯದೆ ಅಱಿಯೆ: **ಪಂಪರಾ,** ೧೩. ೧೮೯ ವ)

**ಒಟ್ಟಜೆಗೆಡು** – ಗುಂಪು ಚೆದುರು (ಬೆದಱಿದುದು ಅಭ್ರಮೂರಮಣಂ ಒಟ್ಟಜೆಗೆಟ್ಟುದು ಪುಂಡರೀಕಂ: ಪುಷ್ಪದಂಪು, ೫. ೮)

**ಒಟ್ಟಯಿಸು** – ಕೂಡಿಹಾಕು (ಪಾರ್ವರ ಪರದರ ಒಳ್ವೆಂಡಿರ್ಕಳೆಲ್ಲರುಮಂ ಎೞೆದು ತಂದು ಬಗ್ಗಿಸಿಯುಂ ಒಟ್ಟಯಿಸಿಯುಂ: **ವಡ್ಡಾರಾ,** ಪು ೧೬೬, ಸಾ ೯)

**ಒಟ್ಟಯ್ಸು** – ಅಡಗಿಸು (ವಿನಯಪ್ರಾಗ್ಭರದಿಂ ಮಾನಗರ್ವಮಂ ಒಟ್ಟಯ್ಸು: **ಜೀವಸಂ,** ೯. ೬)

**ಒಟ್ಟಳ** – ಗಲಿಬಿಲಿ, ಕೋಲಾಹಲ (ಒಟ್ಟಳವಾದುದು ಕೋಂಟೆಗಾಳಗಂ: **ಚಂದ್ರಪ್ರಪು,** ೫. ೧೦೫)

**ಒಟ್ಟಿಲ್** – ರಾಶಿ (ಚಂದನಂ ಹೃದಯದೊಳ್ ಒಟ್ಟಿಲಾಯ್ತು ಬಿನದಕ್ಕಿರಲಾದುದೆ ಮನ್ಮಥಾಗ್ನಿಗಾಱದೆ ಪುಗಲಾಯ್ತು ಪಲ್ಲವಲತಾಗೃಹಂ ಈಗಳ್ ಅವಳ್ಗೆ ಭೂಪತೀ: **ಆಚವರ್ಧ,** ೪. ೪೪)

**ಒಟ್ಟಿಸು** – ಒಟ್ಟಯಿಸು, ರಾಶಿಮಾಡು, (ಪಿರಿದುಂ ಗೊಬ್ಬರಮನೊಟ್ಟಿಂ ಎಂದು ಪಕ್ಕದಿರ್ದು ಒಟ್ಟಿಸಿ: **ವಡ್ಡಾರಾ,** ಪು. ೧೯೨, ಸಾ. ೧)

**ಒಟ್ಟು** – ರಾಶಿಮಾಡು (ನೆರೆದ ವಿರೋಧಿನಾಯಕರಂ ಆಹವದೊಳ್ ತಱಿದು ಒಟ್ಟಲ್: **ಪಂಪಭಾ,** ೧೧. ೫೧); ರಾಶಿ (ಈಶಾನ್ಯದಿಶಾಭಾಗದೊಳ್ ಬೆಳಗಿಲೊಟ್ಟಿನಂತೆ ದಿಟ್ಟಿ ಕೋರೈಸುವ ಜಿನಭವನಮಂ ಕಂಡು: **ಪುಣ್ಯಾಸ್ರ,** ೮. ೯ ವ)

**ಒಟ್ಟೆ** – [ಉಷ್ಟ್ರ] ಒಂಟೆ (ಪಡೆವಳ್ಳಂ ಗಡಂ ಆ ಬಲಕ್ಕೆ ದಲೆ ದೃಷ್ಟದ್ಯುಮ್ನನೆಂಬ ಒಳ್ಳೆ ಆ ಪಡೆಯೊಳ್ ಗಂಡನುಂ ಆ ಮೊಲಂ ದ್ರುಪದನುಂ ಪೇರೊಟ್ಟೆ ಆ ಮತ್ಸ್ಯನುಂ ಗಡಂ: **ಪಂಪಭಾ,** ೧೦. ೪)

**ಒಟ್ಟೆಗುತ್ತ** – ಅಡವಿಟ್ಟ ವ್ಯಕ್ತಿ (ಎಳ್ ಬಂದೊಡೆ ಕೊದಳಿಯಂ ಬೆಳಸು ಬಂದೊಡೆ ನೆಲನಂ ಸಾಲಂ ಬಂದೊಡೆ ಒಟ್ಟೆಗುತ್ತನಂ ಕಟ್ಟಿದ ಕೂಳನುಂಡೊಡೆ ಪುಲ್ಲಿಗೆಯಂ ಬಿಡುವಂತೆ: **ಧರ್ಮಾಮೃ,** ೧೪. ೯೬ ವ)

**ಒಟ್ಟೈಸು** – ಆಕ್ರಮಿಸು (ಜರೆ ಬಂದು ಒಟ್ಟೈಸೆ ಮಾಣ್ದಿರ್ದಳಿಪೆನಗಿದೆ ಮುಂ ಸಾಲದೇ: **ಆದಿಪು,** ೨. ೪೯); ನೂಕು, ತಳ್ಳು, ಜಾರು (ಮೇಲುದನೊಟ್ಟೈಸಿ ಕುಚಂ ಕದಕ್ಕದಿಸೆ ಮುಗ್ಧಾಲೋಕನಂ ಲಜ್ಜೆಯಂ ಪದೆಪಂ ಮುಂದಿಡೆ .. .. ಸತಿ ಪುಷಪಚಾಮ ಚತುರಂಗಂ ಮೀಱಿ ಮೇಲೇಟ್ಟುವೋಲ್: **ಪಂಪರಾ,** ೩. ೭೮); ಒಗ್ಗೂಡು, ದಟ್ಟವಾಗು (ವೈಶಂಪಾಯಂ ತನ್ನಯ ಮಗಂ ಸ್ನೇಹಂ ಒಟ್ಟೈಸೆ ತಮ್ಮಿರ್ದೆಡೆಗೀಗಳ್ ಮುಕ್ತಶಾಪಂ ನಿಜತನುವೆರಸು ಆನಂದದಿಂ ಬಂದಂ: **ಕಾದಂಸಂ,** ೮. ೬೦)

**ಒಡಂಗೊಳ್** – ಜೊತೆಯಲ್ಲಿ ಸೇರಿಸಿಕೊ (ಪೃಥಾತನೂಜರಂ ನಿನ್ನ ಬಲ್ಲ ಮಾಟ್ಕೆಯಿಂ ನುಡಿದು ಒಡಂಗೊಂಡು ಬರ್ಪುದು: **ಪಂಪಭಾ,** ೪. ೩ ವ)

**ಒಡಂಬಡಂ** – ಒಪ್ಪಿಗೆ (ತದ್ವೃಂತ್ತಾಂರಮೆಲ್ಲಮಂ ಅಱಿಪಿ ಹಿಡಿಂಬೆ ಡಂಬಮಿಲ್ಲದೆ ಭೀಮಸೇನಂಗೆ ಒಡಂಬಡಂ ನುಡಿಯೆ: **ಪಂಪಭಾ,** ೩. ೧೮ ವ); ಹೊಂದಿಕೆ (ವರ್ಣಕಂ ಕತೆಯೊಳ್

ಒಡಂಬಂಡಂಬಡೆಯೆ ಪೇಟಿಶ್ವೊಡೆ ಪಂಪನೆ ಪೇೞ್ಗುಂ; **ಪಂಪಭಾ,** ೧. ೧೧)

**ಒಡಂಬಡಿಸು** – ಸಮನ್ವಯಗೊಳಿಸು (ಎಂದು ಅಪರಾಜಿತ ಅನಂತವೀರ್ಯರ ಮಾತಂ ಒಡಂಬಡಿಸಿಟ್ಟು ರಹಸ್ಯದೊಳ್ ನಿಶ್ಚಯಿಸಿದ ಬಹುಶ್ರುತನ ಮಂತ್ರನಿಯಮುಮಂ .. .. ಮಚ್ಚಿ: **ಶಾಂತಿಪು,** ೨. ೭೦ ವ)

**ಒಡಂಬಡು** – ಒಪ್ಪುವ (ತೊಟ್ಟ ಎಕ್ಕವಡಂ ಮರವಿಲ್ ಕಟ್ಟಿದ ಪಣೆಕಟ್ಟು ಬೇಂಟೆವಱೆ ದೊರೆಯೊಳ್ ಒಡಂಬಟ್ಟ ಅಸಿಯ ಸುರಗಿ ದಳಿವದ ತೊಟ್ಟ ಅಂಗಿಗೆ ತನ್ನೊಳ್ ಅಮರೆ ಬೇಂಟೆಯನೊರ್ವಂ; **ಪಂಪಭಾ,** ೫. ೩೬); ಅನುಮತಿ ನೀಡು (ನುಡಿಗಳೊಡಂಬಡಲ್ ಬಗೆದವೊಲ್ ಬಗೆಯಂ ಮಿಗಲೀಯದೊಂದೆ ನಾಣ್ನುಡಿಯ ಬೆಡಂಗೆ ಕನ್ನಡದ ಮಾತಿನೊಳ್: **ಕವಿರಾಮಾ,** ೧. ೧೪೯); ಒಪ್ಪಿಕೆ (ನೆಗರ್ೞೆತೆಯ ಕಬ್ಬದೊಳ್ ಒಡಂಬಡಂ ಮಾಡಿದರ್ ಮುನ್ನಿನ ಕವಿಗಳ್: **ಕವಿರಾಮಾ,** ೧. ೩೨); ಹೋಲಿಕೆ ಳ್ನುಡಿಯಿಂ ನಡೆಯಂ ನೋಟ್ಟಿಂದು ಒಡಂಬಡಂ ಇಲ್ಲ ಎನಿಸಿ ನೆಗಟ್ಟುದು ಆರ್ಹತ ಭಕ್ತರ್: **ಸಮಯಪ,** ೫. ೧೫೭)

**ಒಡಂಬಿ** – ಶರೀರ (ಒಡಂಬಿಯೆಂದು ಶರೀರಂ: **ಶಬ್ದಮದ,** ಪ್ರಸಾ, ೪೦)

**ಒಡಗಚ್ಚು** – ಪ್ರತಿಯಾಗಿ ಕಚ್ಚು (ನಾಯ್ ಕಚ್ಚಿದೊಡೆ ಒಡಗಚ್ಚಲ್ ಬೊಗುೞೇ ಬೊಗುೞಲೇಂ ಬಂದಪುದೇ: **ಧರ್ಮಾಮೃ,** ೯. ೧೨೪)

**ಒಡಗಲಸು** – ಸೇರು, ಜೊತೆಗೂಡು (ಪೊಲೆಯರ ಒಡಗಲಸೆ ದಿವ್ಯಾರ್ಚನೆಯಂ ಸಕಳ ಸುರೇಂದ್ರಾರ್ಚಿತಚರಣಕ್ಕೆ ಕೊಟ್ಟು ಪಡೆವುದು ಸುಖಮಂ: **ಸಮಯಪ,** ೯. ೧೨೪)

**ಒಡಗಳೆ** – ಜೊತೆಯಲ್ಲಿ ಬಿಡು (ತೋಳಂ ಸಡಿಲಿಸದಾ ಪ್ರಾಣವಲ್ಲಭರ್ ಪ್ರಾಣಮಂ ಅಂದು ಒಡಗಳೆದರ್: **ಆದಿಪು,** ೫. ೨೪)

**ಒಡಗಾಣ್** – ಜೊತೆಜೊತೆಗೆ ಕಾಣು (ಮಿಸುಗುವ ಪೊಸಮಾಣಿಕದ ಎಳವಿಸಿಲುಮಂ ಒಡಗಾಣಲಾದುದು ಆಸ್ಥಾಯಿಕೆಯೊಳ್: **ಆದಿಪು,** ೯. ೫)

**ಒಡನಟೆ** – ಜೊತೆಯಲ್ಲಿ ನಾಶವಾಗು (ಸೊಡರೊಳ್ ಬತ್ತಿಯುಂ ಎಣ್ಣೆಯುಂ ಒಡನಟಿದವೊಲ್ ಆಯುವುಂ ಶರೀರಮುಂ ಅಮಳಂ: **ಶಾಂತಿಪು,** ೯. ೧೧೮)

**ಒಡನಾಟ** – ಸಹವಾಸ, ಸ್ನೇಹ (ಪಾಪಾನುರಾಗಂ ಪತ್ತುವಿಟ್ಟು ದುರ್ಜನರೊಡನಾಟಮಂ ಮಾಣ್ಬುದು ಎನ್ನಾಣೆ: **ಧರ್ಮಾಮೃ,** ೨. ೬೨ ವ)

**ಒಡನಾಡಿ** – ಜೊತೆಗಾರ (ತನ್ನ ಒಡನಾಡಿಯಪ್ಪ ಕೆಳೆಯಂ ದ್ರುಪದಂ ಛತ್ರಾವತಿಯೊಳ್ ಅರಸುಗೆಯ್ದಪನೆಂದು ಕೇಳ್ದು ಆ ಪೊೞಲ್ಗೆ ವಂದು: **ಪಂಪಭಾ,** ೨. ೪೬ ವ)

**ಒಡನಾಡಿಗ** – ಒಡನಾಡಿ (ಒಡನಾಡಿಯುಂ ಒಡನೋದಿಯುಂ ಒಡವಳೆದುಂ ಗುಳ್ಳೆಗೊಟ್ಟಿ ಬಟ್ಟು ಉಳಿಸೆಂಡುಂ ಪೊಡೆಸೆಂಡು ಇವಂ ಆಡುತ್ತ ಒಡವಳೆದರ್ ತಮ್ಮೊಳೆಳಸೆ ತಂತಂಗೆಡೆಗಳ್: **ಪಂಪಭಾ,** ೨. ೩೦)

**ಒಡನಾಡು** – ಜೊತೆಯಲ್ಲಿ ಆಡು, ಸ್ನೇಹಮಾಡು (ಒಡನಾಡಿಯುಂ ಒಡನೋದಿಯುಂ ಒಡವೆಳೆದುಂ: **ಪಂಪಭಾ,** ೨. ೩೦)

**ಒಡನೆ** – ಜೊತೆಗೆ (ಸಹಾರ್ಥಂ ಒಡನೆ ಎನೆ: **ಶಬ್ದಮದ,** ೩೨೪); ತಕ್ಷಣ (ಕಲ್ತು ಒಡನೆ ಓದುವುವಲ್ತೆ ಗಿಳಿಗಳುಂ ಪುರುಳಿಗಳುಂ: **ಕವಿರಾಮಾ,** ೧. ೧೦)

**ಒಡನೊಡನೆ** – ಜೊತೆಜೊತೆಯಾಗಿ (ಗೆಡೆವಚ್ಚಿರ್ವರ್ ಮನಗೊಂಡು ಒಡನೊಡನೆ ಓರಂತು ತಗುಳ್ದು ಝೋಂಕರಿಸಿದೊಡೆ ಎಲ್ಲದಗಾಗೆ ಮೋದಲೆಂದಿರ್ದ ಎಡೆಯೊಳ್ ಗುರು ತನ್ನ ಮಗನಂ ಎಡೆವುಗವೇಟ್ಟಿಂ: **ಪಂಪಭಾ,** ೨. ೭೩)

**ಒಡನೋದಿ** – ಜೊತೆಯಲ್ಲಿ ವಿದ್ಯಾಭ್ಯಾಸ ಮಾಡುವವನು (ಒಡನಾಡಿಯುಂ ಒಡನೋದಿಯುಂ ಒಡವಳೆದುಂ ಗುಳ್ಳೆಗೊಟ್ಟಿ ಬಟ್ಟು ಉಳಿಸೆಂಡುಂ ಪೊಡೆಸೆಂಡು ಇವಂ ಆಡುತ್ತ ಒಡವಳೆದರ್ ತಮ್ಮೊಳೆಳಸೆ ತಂತಂಗೆಡೆಗಳ್: **ಪಂಪಭಾ,** ೨. ೩೦)

**ಒಡಮೆ** – ಧನ, ಒಡವೆ (ನೀಮಿಂತು ಅಱೆಯುತ್ತುಂ ಪೆಱರೊಡಮೆಯಂ ಉೞೆ ಸೆಱೆವಿಡಿದಿರ್ಪಿರಿ ಇನ್ನರುಂ ಉರ್ವಿಯೊಳ್ ಒಳರೇ: **ಪಂಪಭಾ,** ೮. ೧೮)

**ಒಡರಿಸು** – ಉಂಟುಮಾಡು (ಜ್ಯೋತಿರ್ಲೋಕಂ ಇದೊಂದುಂಟೆಂಬ ವಿವೇಕಮಂ ಒಡರಿಸಿದುದು ಅಮರಸಮಿತಿಯ ಮನದೊಳ್: **ಆದಿಪು,** ೭. ೯೪); ಪ್ರಯತ್ನಿಸು (ಅವಧರಿಸಿ ಮನದೊಳ್ ಏನಾನುವನಾಗಳ್ ಕನ್ನೆ ನುಡಿಯಲ್ ಒಡರಿಸಿ ನಿಷ್ಕಂಪವೆನಿಪ್ಪ ತಾರೆಗಳ್ವೆರಸು ಎವೆಯಿಕ್ಕದೆ ನೋಡುತಿರ್ದಳ್ ಎನ್ನಯ ಮೊಗಮಂ: **ಕಾದಂಸಂ,** ೬. ೫); ಒಟ್ಟುಗೂಡಿಸು (ಅಮೃತ ಕಳಾಳಿಗಳ್ ಒಡರಿಸಿ ಶಶಿಕಾಂತಮೊಸರ್ವುದೊಂದಚ್ಚರಿಯೇ: **ನೇಮಿನಾಪು,** ೮. ೨೧)

**ಒಡರ್ಚು** – ತೊಡಗು, ಆರಂಭಿಸು (ಅಗ್ರತನೂಜೋತ್ಪತ್ತ್ಯುತ್ಸವಕ್ಕೆ ಒಡರ್ಚುವ ಪದದೊಳ್: **ಆದಿಪು,** ೧೧. ೪); ಪ್ರಯತ್ನಿಸು (ಕಂಪಿನೊಳ್ ಪೊರೆವ ವಸಂತದ ಒಳ್ಮುಗುಳ ತಣ್ಗೊಡವಂ ತುಡಿಸಲ್ಕೆ ಒಡರ್ಚಿದಳ್: **ಕಾದಂಸಂ,** ೮. ೫೨); ಉಂಟುಮಾಡು (ಉರುತರ ಸಿದ್ಧಲಿಂಗಯತಿತುಂಗಂ ಒಡರ್ಚುಗೆ ಸಜ್ಜನೇಷ್ಟಮಂ: **ರಾಜಶೇಖವಿ,** ೧. ೧೪)

**ಒಡಲ್** – ಶರೀರ (ಪಡೆದರ್ ತಾಯುಂ ತಂದೆಯುಂ ಒಡಲಂ ಪ್ರಾಣಮುಮಂ ಅವು ಅವರವು ಕೆಯ್ಯೆಡೆಯಂ ಕುಡುವುದು ಅರಿದಾಯ್ತೆ ನೀಂ ಎನಗೆ ಎಡೆಮಡಗದೆ ಬೆಸಪ ತೊಟ್ಟುವೆಸನಂ ಬೆಸಸಿಂ: **ಪಂಪಭಾ,** ೯. ೮೧)

**ಒಡವರ್** – ಜೊತೆಯಲ್ಲಿ ಬರು (ಒಡವಂದಂಕದ ಕೌರವರ್ ದ್ರುಪದನ ಅಂಬ ಏಱೆಂಗೆ ಮೆಯ್ಯೊಡ್ಡದೆ ಒಡ್ಡುತಿರೆ ಸೂಸೆ ಬೀೞ್ವ ತಲೆಗಳ್ ಸೂಟ್ಟಟ್ಟಂ: **ಪಂಪಭಾ,** ೨. ೬೨)

**ಒಡವರಿ** – ಜೊತೆಯಾಗಿ ಹರಿ (ನೆತ್ತರ ತೊಱೆಗಳ್ ಸುಲಿಇಸುೞೆದು ಒಡಬರಿದುವು: **ಪಂಪಭಾ,** ೧೧. ೩೬)

**ಒಡವರೆಯ** – ಒಂದೇ ಪ್ರಾಯ, ಸಮ ವಯಸ್ಸು (ಒಡವರೆಯದ ತನ್ನ ಎಡೆಗಳ್ ಎನಿಬರ್ ಪಸಾಯಂಬಡೆವ ಅರಸರ ಮಕ್ಕಳೆನಿಬರ್ ಅನಿಬರುಂ ಎಟ್ದಿರ್: **ಶಾಂತಿಪು,** ೮. ೧೧)

**ಒಡವಳೆ** – ಜೊತೆಯಾಗಿ ಬೆಳೆ (ಒಡನಾಡಿಯುಂ ಒಡನೋದಿಯುಂ ಒಡವಳೆದುಂ ಗುಳ್ಳೆಗೊಟ್ಟಿ ಬಟ್ಟು ಉಳಿಸೆಂಡುಂ ಪೊಡೆಸೆಂಡು ಇವಂ ಆಡುತ್ತ ಒಡವಳೆದರ್ ತಮ್ಮೊಳೆಳಸೆ ತಂತಂಗೆಡೆಗಳ್: **ಪಂಪಭಾ,** ೨. ೩೦)

**ಒಡವಾಳು** – ಜೊತೆಗೆ ಹಾರು (ಮುಳಿಸಿಂದಿನಲೊಡವಾಱುವ ಶಿಳೀಮುಖಂಗಳೆ ಶಿಳೀಮುಖಂ: **ಜಗನ್ನಾವಿ,** ೭. ೫೫)

**ಒಡವಾ[ವ]ೞ್** – ಕೂಡಿ ಬಾಳು (ಮುನ್ನೊಡವಟ್ದು ತನ್ನ ಪೆಂಡತಿ ಮೊದಲಾಗಿ ಪೊರ್ದಲಣಮೀಯಳೆ ಮಿತ್ರಜನಂಗಳೆಲ್ಲಮುದ್ಧತನಿವನೆಂದು ಮನ್ನಿಸರೆ: **ಸುಕುಮಾಚ,** ೫. ೧೨)

**ಒಡವುಗು** – ಕೂಡಿ ಹೊಗು (ಒಡವುಗುವ ಅರಸಿಯರ ನೆಬಿಲ್ ಬೆಡಂಗುವೆತ್ತಿರ್ದುವು: **ಶಾಂತಿಪು,** ೮. ೨೭)

**ಒಡವುಟ್ಟು** – ಒಂದೇ ತಾಯ ಹೊಟ್ಟೆಯಲ್ಲಿ ಹುಟ್ಟು; ಜೊತೆಯಲ್ಲೇ ಹುಟ್ಟಿದ (ತಿದಿ ಉಗಿದು ಕೊಟ್ಟೆಂ ಒಡವುಟ್ಟಿದ ಕವಚಮಂ ಅಮರಪತಿಗೆ: **ಪಂಪಭಾ,** ೧೨. ೧೯)

**ಒಡವುಟ್ಟಿದರ್** – ಸೋದರರು (ಒಡವುಟ್ಟಿದವರಂ ಕೊಂದವರ ಅಡಗಂ ತಿಂದು ಅವರ ನೆತ್ತರಂ ಬೆಸಲೆಗಯೊಳ್ ಕುಡಿವ: **ಗದಾಯು,** ೩. ೨೮)

**ಒಡವೋಗು** – ಜೊತೆಗೇ ಹೋಗು (ಪಾಪಿಗಳಂ ಪೊರೆದಂದೊಡವೋಪರೆ ಪೋಗಿರ್ದು ಬರ್ಪರೇ: **ಸಮಯಪ,** ೫. ೧೫೧)

**ಒಡಸಲ್** – ಜೊತೆಯಲ್ಲಿ ಸಲ್ಲು, ಸೇರು (ಏ ಮಾತೊ ನಿರ್ವಾಣಮಾರ್ಗದೊಳ್ ಒಡಸಲ್ವೆಂ: **ಪಂಪರಾ,** ೨. ೭೫)

**ಒಡಸಾಯ್** – ಜೊತೆಯಲ್ಲಿ ಮರಣಹೊಂದು (ಬಿಡದೆ ಪೊಗೆ ಸುತ್ತೆ ತೋಳಂ ಸಡಿಲಿಸದೆ ಆ ಪ್ರಾಣವಲ್ಲಭರ್ ಪ್ರಾಣಮಂ ಅಂದು ಒಡಗಳೆದರ್ ಓಪರ್ ಓಪರೊಳ್ ಒಡಸಾಯಲ್ ಪಡೆದರ್ ಇನ್ನವೇಂ ಸೈಪು ಒಳವೇ: **ಆದಿಪು,** ೫. ೨೪)

**ಒಡೆ** – ಭಾಗವಾಗು, ಚೂರಾಗು (ಪನ್ನೆರಡು ತಲೆಯ ಪಾವುಮಂ ಚಂದ್ರನೊಡೆದುದುಮಂ .. .. ಕನಸುಗಳ ಕಂಡು: **ವಡ್ಡಾರಾ,** ಪು. ೮೫, ಸಾ. ೨೭); ಚೂರುಮಾಡು ಕುಮಾರನ ಎರಡುಂ ಕಣ್ಗಳುಮಂ ಒಡೆದು ಕುರುಡನಂ ಮಾಡಿದ: **ವಡ್ಡಾರಾ,** ಪು. ೭೫, ಸಾ. ೨೩)

**ಒಡೆಬೀೞ್** – ಒಡೆದು ಬೀಳು (ಪುರುಷಂ ನುಡಿಯದುದು ಏನಾಗಸದಿಂದ ಒಡೆಬಿರ್ದೊಡೆ ವೇದಮನಱಿವರ್ ತಿಳಿಯಿಮಿದಂ: **ಸಮಯಪ,** ೧೧. ೪)

**ಒಡೆಯ** – ಪ್ರಭು; ಯಜಮಾನ (ಒಡೆಯನ ಮನೆಗೆ ಬಂದ ಬಂಟರಂತೆ: **ಧರ್ಮಾಮೃ,** ೧೦. ೨೬ ವ); ಉಳ್ಳ ಅಥವಾ ಹೊಂದಿದ ಎಂಬರ್ಥದ ಪ್ರತ್ಯಯ (ಅರಸನಂ ಬಯ್ಗು ಇರುಳಿನ ಜಾವದೊಳ್ ಉದ್ಯಾನವನಕ್ಕೊಡಗೊಂಡು ಪೋಗಿ ಗುಂಡಿತಪ್ಪುದೊದು ನಾಡೆ ಕೆಸಱನೊಡೆಯ ಪಟಿವಾವಿಯ ತಡಿಯೊಳ್ ಇಱಿದು ಕೊಂದು: **ವಡ್ಡಾರಾ,** ಪು ೧೮೦, ಸಾ ೨೩): ಹಣವಂತ (ಸ್ವಾಮಿ ಭೃತ್ಯಸಂಬಂಧಮುಮಂ ಒಡೆಯ ಬಡವರೆಂಬ ದೇಶಭಾಷೆಯುಮಂ: **ಸುಕುಮಾಚ,** ೧೧. ೩೪ ವ)

**ಒಡೆಯದು** – ಉಳ್ಳುದು (ಇಂದ್ರನೀಲ ಮಾಣಿಕದೊಳ್ ಓರಂತಪ್ಪ ಬಣ್ಣಮಂ ಒಡೆಯದು ಮಲಯಸುಂದರನೆಂಬ ಆನೆಯುಂಟು: **ವಡ್ಡಾರಾ,** ಪು. ೩೪, ಸಾ. ೧೯)

**ಒಡೆಯಿಕ್ಕು** – ಚೂರುಮಾಡು (ತನ್ನನೆತ್ತಿಕೊಂಡು ಆಗ್ರಹಮಂ ಒಡೆಯಿಕ್ಕುವಂತೆ ಇಕ್ಕಿ ಪೋಪುದುಂ: **ಚಂದ್ರಪ್ರಪು,** ೫. ೪೧ ವ)

**ಒಡೆಯಿಡು** – ಒಡೆಯಿಕ್ಕು (ಕನಲ್ದು ಒಡೆಯಿಟ್ಟೊಡೆ ಒಂದು ಪೋೞ್ ಅನಿತಱೊಳ್ ಇರ್ದುದೊಂದು ಕಡಿ ಪೀಠದೊಳ್ ಇರ್ದಪುದೆಂಬರೆಲ್ಲರುಂ: **ಸಮಯಪ,** ೯. ೭)

**ಒಡ್ಡ** – ರಾಶಿ, ಸಮೂಹ (ವಿಳಾಸದ ಒಡ್ಡವಿನಿತುಂದಿವದಿಂದ ಒಡವಂದುದುಬನಿತ್ತಾದುದು ರೂಪು: **ಆದಿಪು,** ೩. ೧೦); ಜೂಜಿನ ಪಣದ್ರವ್ಯ (ನಾಟಿವಾಸಗೆಗಳಂ ಅರಸಾಳಂತೆ ಕಣ್ಣಱಿದು ಮೆಟ್ಟಿ ಮಟ್ಟಮಱಿದು ಇಕ್ಕುವಾಗಳ್ ಒಡ್ಡಮಂ ಪೇಟಿಮೆನೆ: **ಪಂಪಭಾ,** ೬. ೭೧ ವ)

**ಒಡ್ಡಣ** – ಗುಂಪು (ಮಿಸುಪ ಅಸಿಧೇನು ಮೀನಿವಹಂ ಪೋಳೆವ ಅಡ್ಡಣದ ಒಡ್ಡಣಂ ವಿರಾಜಿಸುವುದು: **ಆಚವರ್ಧ,** ೮. ೧೨); ಸೈನ್ಯ (ಶ್ವೇತನ ಗಂಗಾಜಾತನ ಮಾತನೆ ಪಾರ್ದು ಎರಡು ಒಡ್ಡಣಂ ಕಾದಲ್ಕೆಂದೀ ತೆಱದಿನೊಡ್ಡಿ ನಿಂದುವು ಭೂತಳಮಳ್ಳಾಡೆ ಕೆಸಱ ಕಡಿತದ ತೆಱದಿಂ: **ಪಂಪಭಾ,** ೧೦. ೫೩); ವ್ಯೂಹ (ಪಲವುಂ ತೆಱದಾಯುಧಂಗಳಿಂ ಪಲವು ವಿಧಂಗಳಿಂ ಪಲವುಂ ಒಡ್ಡಣದಿಂ ಪಲರುಂ ಪೊಗಟ್ವೆನಂ .. .. ಅದ್ಭುತಮಾಯ್ತು ಆಹವಂ: **ಪಂಪರಾ,** ೧೪. ೯); ಯುದ್ಧರಂಗ (ತಟತಟ ನೇಸಱ್ ಮೂಡುವುದುಂ ಒಡ್ಡಣಕೆಳ್ತಂದರ್: **ಪಂಪಭಾ,** ೧೧. ೬)

**ಒಡ್ಡಯ್ಸು** – ಸೋಲಿಸು, ಪ್ರತೀಕಾರ ಮಾಡು (ಮನೆಯೊಳ್ಮಯ್ಮೆಗೆ ಬಾತುಕೊಂಡು ಸಿರಿಯೊಳ್ ಕಣ್ಣಾಗ್ಗಣದೆ ಒಡ್ಡಯ್ಸುವಂದಿನ ನೀಮಾರ್ಗೆ ಎಲಗೆ ನಿಮ್ಮನಾವಱಿಯೆಂ: **ಸುಕುಮಾಚ,** ೪. ೨೬)

**ಒಡ್ಡವಣೆ** – ಒಡ್ಡಣ, ಸಿದ್ಧತೆ (ಲಗ್ಗೆಯ ದೆಸೆಯ ದಿವಸಸದರನಿದರಮುಮಂ ಜಂತ್ರದ ಒಡ್ಡಣೆಗಳುಮಂ .. .. ವಸುಷೇಣಂ ಬಳಸಿ ನೋಡುತ್ತುಂ: **ಅನಂತಪು,** ೧೧. ೮೨ ವ)

**ಒಡ್ಡಯಿಸು** – ಒಡ್ಡುವಂತೆ ಮಾಡು (ಅರಣ್ಯದೊಳ್ ತಿರಿತರುತಿರ್ದ ಕಣ್ಬಡಿಗರಂ ಮಗುಟ್ದುಂ ಬಿಱುತು ಓಡಿ ಬೇಡರೊಳ್ ನೆರೆದಿರಲ್ ಒಡ್ಡಯಿಸಿ ರಾಜ್ಯದೊಳೇಂ ನೆರೆಯಲ್ಕೆ ತೀರ್ಗುಮೋ: **ಪಂಪಭಾ,** ೮. ೮೫)

**ಒಡ್ಡಟಿ** – ಸತ್ವಗುಂದು (ನಿನಗಪ್ಪುದು ಈ ಅಟಿನುಡಿ ಬರ್ಕೆ ನಿನ್ನ ಪಿರಿಯಣ್ಣನೆ ಪಣ್ಣನೆ ನೋಟ್ಪಂ ಆತನ ಒಡ್ಡಟಿಯದ ಗಂಡವಾತಂ: **ಪಂಪಭಾ,** ೩. ೧೬)

**ಒಡ್ಡಿಸು** – ಒಡ್ಡಯಿಸು, ಒಡ್ಡವಿಸು (ಕಾಣಲುಂ ಕಾಣಿಸಲುಂ ಕಡಂಗಲುಂ ಕಡಂಗಿಸಲುಂ ಅಡಂಗಲುಂ ಅಡಮಗಿಸಲುಂ ಒಡ್ಡಲುಂ ಒಡ್ಡಿಸಲುಂ .. ..ಆನೆ ಬಲ್ಲೆಂ: **ಪಂಪಭಾ,** ೫. ೪೩ ವ); ಪ್ರತಿಭಟಿಸು (ಒಡ್ಡಿಸೆ ಕಾದಂ ಆಗಳ್ ಅರ್ವಿಸೆ ತೆಗೆದೆಚ್ಚ ವೈಷ್ಣವಮಂ ಒಡ್ಡಿಸಿ ವೈಷ್ಣವದಿಂ ಮುರಾಂತಕಂ; **ಪಂಪಭಾ,** ೧೨. ೩೨)

**ಒಡ್ಡು** – ಸೈನ್ಯ (ಬಹುವಿಧ ವ್ಯೂಹರಚನೆಇನೊಡ್ಡಂ ಬಲಿದು ನಿಲ್ವಿನಂ: **ಆಚವರ್ಧ,** ೮. ೩೯ ವ); ಸೈನ್ಯವನ್ನು ಯುದ್ಧಕ್ಕೆ ನಿಲ್ಲಿಸು (ಅದಿರದಿದಿರ್ಚಿ ತಳ್ತಿಱಿಯಲ್ ಈ ಮಲೆದೊಡ್ಡಿದ ಚಾತುರಂಗಬಲಮೆಂಬುದು ನಿನಗೊಡ್ಡಿ ನಿಂದುದು ಇದಂ ಓವದೆ ಕೊಲ್ವೊಡೆ ನೀನುಂ ಎನ್ನ ಕಜ್ಜದೊಳೆಸೆಗು ಎಂದು ಸೈತು ಅಜಿತಂ ಆದಿಯ ವೇದರಹಸ್ಯದೊಳ್ .. .. ನೆಱಿಯೆ: **ಪಂಪಭಾ,** ೧೦. ೬೪); ಪಣವಾಗಿ ಮುಂದಿಡು (ಪಲಗೆಗೆ ಪತ್ತು ಸಾಯಿರಮೆ ಗದ್ಯಾಣಂ ಎಂದಿರದೆ ಒಡ್ಡಿ ತಾಮ್ ಎರಟ್ವಲಗೆಯಂ ಆಡಿ ಸೋಲ್ತೊಡೆ: **ಪಂಪಭಾ,** ೬. ೭೨); ಸ್ವರೂಪ, ಮುದ್ರೆ (ಸುಕರತರಂ ವಚೋನಿಚಯಂ ಆರಯೆ

ದುಷ್ಕರಂ ಅರ್ಥವಾರ್ತಂ ಅತಿ ಅಕುಟಿಲಂ ಆಸ್ಯದ ಒಡ್ಡು.. ..ಅನಂತವೀರ್ಯನಾ: **ಶಾಂತಿಪು,** ೨. ೫೨): ಎದುರಿಸು ಮತ್ತು ವ್ಯೂಹ (ಒಡ್ಡು–ಪ್ರತೀಕಾರೇ ವ್ಯೂಹೇ ಚ: **ಶಬ್ದಮದ,** ಧಾ ೨೮೧)

**ಒಡ್ಡುಂಗಲ್** – ಚಾಚುಗಲ್ಲು (ಕಲ್ಲೆನ್ನದೆ ಬೆಳೆದ ಪಸುರ್ವುಲ್ಲೆಂದು ಆಸೆಯೊಳ್ ಸಾರ್ದು ಮರಕತದ ಒಡ್ಡುಂಗಲ್ಲನೆ ಕಾರ್ದು ಮೃಗಂಗಳ್ ಕಲ್ಲನೆ ಕನಲುತ್ತುಮಿರ್ಪುವು ಆ ಖಗನಗದೊಳ್: **ಅಜಿತಪು,** ೯. ೨೩)

**ಒಡ್ಡುಂಗಾಡಿ** – ಒಟ್ಬಾರೆ ಸೌಂದರ್ಯ (ಬಲ್ಲಾಳಿಕೆಯಿಂ ಬಣ್ಣವಿಟ್ಟಂತೆ ತಿಣ್ಣಮಾದೊಡೆ ಒಡ್ಡುಂಗಾಡಿ ಸಭೆಯ ಕಣ್ಗಳಂ ಕವ್ವರೆಗೊಳಿಸೆ: **ಅನಂತಪು,** ೨. ೨೬ ವ)

**ಒಡ್ಡುಗಟ್ಟು** – ಗುಂಪಾಗಿ ಸೇರು (ಗುಡಿ ತೋರಣಂ ಸಸಿ ಮೊಸರ್ ಪಸೆ ಸೇಸೆ ವಿಳಾಸಿನೀಜನಂ ಚದುಕಮಿದು ಒಡ್ಡುಗಟ್ಟೆ: **ನೇಮಿನಾಪು,** ೨. ೩೯)

**ಒಡ್ಡುವಲಗೆ** – ಗುರಾಣಿ (ಮುಗಿಲೊಳ್ ಪಳಂಚುವ ಪಳವಿಗೆಯ ಸುವರ್ಣದ ಒಡ್ಡವಲಗೆಯ ನೆಗಪೆ: **ರಾಜಶೇವಿ,** ೬. ೧೧ ವ)

**ಒಡ್ಡೋಲಗ** – ರಾಜನ ಆಸ್ಥಾನ, ಸಭೆ (ಸುಯೋಧನನ ಒಡ್ಡೋಲಗಂ ಇಂದ್ರನ ಓಲಗಮುಮಂ ಕೀೞ್ಮಾಡಿ ಕಣ್ಗೊಪ್ಪುಗುಂ: **ಪಂಪಭಾ,** ೯. ೨೯)

**ಒಡ್ಡೋಲಗಂಗೊಡು** – [ರಾಜ] ಸಭೆ ನಡೆಸು (ಸಭಾಮಂಟಪದೊಳ್ ಒಡ್ಡೋಲಗಂಗೊಟ್ಟು ಎಡೆವಱಿಯದೆ ಅವರವರವರ ಪಡೆದ ಪ್ರತಿಪತ್ತಿಗಳಂ ಅಱಿದು ಇಕ್ಕಿದ ಲೋಹಾಸನಂಗಳೊಳಂ .. .. ಕುಳ್ಳಿರಿಸಿ: **ಪಂಪಭಾ,** ೯. ೨೮ ವ)

**ಒಣಗಿಕ್ಕು** – ಒಣಗುಹಾಕು (ಗಾವಿಲನೊರ್ವ ಪಾರ್ವಂ ದೋವತ್ತಿಯಂ ಪಿಳಿದು ನಭದೊಳ್ ಒಣಗಿಕ್ಕಿದೊಡೆ: **ಸಮಯಪ,** ೧೨. ೩೨)

**ಒಣಗಿಲ್ಗುಂದು** – ಕಿರಿದುಗೊಳ್ಳು, ಸಂಕುಚಿಸು (ವೇದಂ ಅನಂತಂ ಗಡ ಮುನ್ನ ಬಟೆಕಂ ಒಣಗಿಲ್ಗುಂದಿರ್ದಂತವು ಮಱಾದುವೆ ಪೇೞ್: **ಸಮಯಪ,** ೧೧. ೧೨)

**ಒಣಗು** – ಹಸಿತನ ಹೋಗಿರುವುದು (ಒಣಗು ಪಸಿ ಜೀವನಿಕರಂ ಪೆಣನೆನ್ನದೆ ಸುಡುವುದು .. .. ಆಪ್ತನೆಂಬರ್ ಕಿರ್ಚಂ: **ಸಮಯಪ,**

**ಒಣರ್** – ಭಾವಿಸು, ತಿಳಿ (ಸಂತತ ವ್ಯಸನೋದ್ರೇಕದ ಕುಂದಂ ಒಣರನೋ ಶಕ್ತಿಕ್ಷಯಂಗಾಣನೋ: **ಆದಿಪು,** ೨. ೪೫); ಕೂಡು, ಅನ್ವಯಿಸು (ಕ್ಷಣಿಕಪ್ರತಿಜ್ಞೆ ಜೀವನೊಳ್ ಒಣರದು ವಂಧ್ಯಾಸ್ತನಂಧಯಪ್ರತಿಮಂ ಅದಂ ಗುಣಿ ದೂಷಿಸೆ ಯುಕ್ತಿಗಳಿಂ ಕ್ಷಣಾರ್ಥಮುಂ ನಿಲ್ಲದಿಲ್ಲದಕ್ಕೆ ಅನುಮಾನಂ: **ಶಾಂತಿಪು,** ೮. ೧೪೪); ಹೇಳು (ಎಮ್ಮ ಪಿತಾಮಹಂ ಜಗಕ್ಕೀಶ್ವರನಾದಂ ತತ್ಪ್ರಭುತೆಯಂ ಆಂ ಶಾಸ್ತ್ರಾಂತರಮಂ ಪೇೞ್ದು ಪಡೆದೆನೆಂಬಿದಂ ಒಣರ್ದಂ: **ಆಚವರ್ಧ,** ೧೦. ೪೮)

**ಒಣರ್ಚು** – ಸೇರಿಸು, ಒಂದುಗೂಡಿಸು (ದೋಣೆಗಳಿಂ ಉರ್ಚುವ ತಿರುವಾಯ್ ಒಣರ್ಚಿ ತೆಗೆನೆಱೆವ ಬೇಗಮಂ ಕೂರ್ಗಣೆಗಳ ಪಂದರನೆ ನಭೋಂಗಣದೊಳ್ ಕಂಡತ್ತು ದೇವಗಣಂ ಇನಸುತನಾ: **ಪಂಪಭಾ,** ೧೨. ೧೮೪)

**ಒಣವಸಿಱ್** – ಸಣ್ಣಗಾದ ಹೊಟ್ಟೆ (ಪೆಡತಲೆಯೊಳ್ ಪೊಕ್ಕ ಕಣ್ ತೋರ್ಪ ಕೆಯ್ಗಾಲ್ ಸೆರೆ ಪಾತಾಳಕ್ಕೆ ಪೊಕ್ಕಿರ್ದ ಒಣವಸಿಱ್: **ನೇಮಿನಾಪು,** ೭. ೧ ವ)

**ಒತ್ತಂಬ** – ಒತ್ತಾಯ, ಬಲಾತ್ಕಾರ (ನೂಂಕು ಅಂಪತಪ್ಪನಂ ಅಱಿಯೆಂ ಎಂದು ಸಭೆಯೊಳ್ .. .. ನುಡಿದುದಂ ಪಡಿಯಱಂ ಬಂದು ಮಾಱ್ಕೆಯೊಳ್ ಅಱಿಪೆ ದ್ರೋಣಂ ಒತ್ತಂಬದಿಂದ ಒಳಗಂ ಪೊಕ್ಕು ದ್ರುಪದನಂ ಕಂಡು: **ಪಂಪಭಾ,** ೨. ೪೭ ವ); ಗಾಢ (ಪುಳಕಪ್ರೋದ್ಭೇದ ಘರ್ಮೋದಕವಿಸರಮಂ ಒತ್ತಂಬದಿ ತಾಗೆಯುಂ: **ಆದಿಪು,** ೪. ೫೧); ಸಮೂಹ (ಪೆತ್ತುದು ಪೂರ್ಣಶಶಾಂಕರ ಮೊತ್ತಮಂ ಎನೆ ಮಧುಪಮಿಳಿತಸಿತಸರಸಿಜದೊಂದು ಒತ್ತಂಬದಿಂದಂ ಎನಸುಂ ಬಿತ್ತರಿಸುತ್ತಿರ್ದುದು ಆ ಸರೋರುಹಷಂಡಂ: **ಶಾಂತೀಶ್ವಪು,** ೧೦. ೧೦೦); ಭಾರ (ಎಡಗೆಯ್ಯಿಂ ನೀವಿಯಂ ಸಾರ್ಚುತುಂ ಉರಸಿಜದ ಒತ್ತಂಬದಿಂ ಬಳ್ಕುತುಂ .. .. ಅಸತಿಯರ್ ಪೋದರ್ ಇಂತು ಅತ್ತಂ ಇತ್ತಂ: **ಶಾಂತೀಶ್ವಪು,** ೧೧. ೨೩)

**ಒತ್ತಂಬರಿ** – ಮೇಲೆ ಬೀಳು (ಇವು ಮುನ್ನಾರಾರ ಬಲ್ಪಂ ನೆಲೆಗಿಡಿಸವು ಇವು ಆರಾರ ತಕ್ಕಂ ನೆಲಕ್ಕಿಕ್ಕವು ಇವು ಆರಾರ ಉರ್ಕಂ ಒತ್ತಂಬರಿದು ಕಿಡಿಸವು: **ಕಬ್ಬಿಗಕಾ,** ೨೩೭)

**ಒತ್ತರ** – ಒಂದೇ ಬಗೆ, ರೀತಿ (ಒತ್ತರದಿಂ ಎತ್ತಿ ನಡವೆಡೆಯೊಳಂ ಅರಿರಾಯರ ಗುಹೆಗಹ್ವರಂ: **ಗಿರಿಜಾಕ,** ೨. ೧೦೫ ವ)

**ಒತ್ತರಿಸು** – ಒಂದೆಡೆಗೆ ತಳ್ಳು (ಘೂರ್ಣಿತ ಅರ್ಣವಮಂ ಒತ್ತರಿಸಿತ್ತು ಚತುರ್ಬಲ ಆರ್ಣವಂ: **ಪಂಪಭಾ,** ೧೦. ೨೮); ಮೀರು, ಅವಜ್ಞೆ ಮಾಡು (ಘೂರ್ಣಿತಾರ್ಣವಮನೊತ್ತರಿಸಿತ್ತು ಚತುರ್ಬಲಾರ್ಣವಂ: ಪಂಪಭಾ, ೧೦. ೨೮); ನಿವಾರಿಸು; ಹಬ್ಬು, ಆಕ್ರಮಿಸು (ಪತಂತಂ ಪಶ್ಚಿಮಾಬ್ಧಿಯೊಳಿಳಿದಂ .. .. ಕಳ್ತಲೆಯೊತ್ತರಿಸಿತ್ತು: **ಗಿರಿಜಾಕ,** ೪. ೧೦೩ ವ)

**ಒತ್ತಿಡು** – ಒತ್ತೆ ಇಡು (ಒತ್ತಿಟ್ಟು ಇರುಳ್ ಒರ್ವಳ ಕೆಯ್ಯಕಂಜಿ ಪೊಱಮಟ್ಟಿರ್ದಂ: **ಸೂಕ್ತಿಸು,** ೮. ೪೪೯)

**ಒತ್ತು** – ಆಕ್ರಮಿಸು ಮತ್ತು ನದೀ ತೀರ (ಓಒತ್ತು–ಆಕ್ರಮಣೇ ನದೀತೀರೇ ಚ: **ಶಬ್ದಮದ,** ಧಾ ೩೮೨); ಚುಚ್ಚು, ತಿವಿ, ನಾಟು (ಕಡಕುಂ ಪೆಟ್ಟೆಯುಂ ಒತ್ತೆ ಮೆಲ್ಲಡಿಗಳಂ ಬಳ್ಕುತ್ತುಂ ಅಳ್ಕುತ್ತುಂ ಓರಡಿಗೆ ಒರ್ಮೊರ್ಮೆ ಕುಳುತ್ತುಂ ಏೞುತಿರೆ: **ಪಂಪಭಾ,** ೩. ೯); ಬಲವಾಗಿ, ಜೋರಾಗಿ (ಪಗೆವರ ಗಂಟಲನೊತ್ತುವಂತೆ ಪೌಂಡ್ರವೆಂಬ ಶಂಖಮನೊತ್ತಿ : ಪಂಪಭಾ, ೧೦. ೯೭); ನೂಕು, ಸೋಲಿಸು (ಧರಿತ್ರಿಯಂ ಜೀಯ ಎನೆ ಬೇಡಿ ಕೊಳ್ಳದೆ ವಿರೋಧಿನರೇಂದ್ರರಂ ಒತ್ತಿ ಕೊಂಡುಂ: **ಪಂಪಭಾ,** ೧.೧); ಸಂಗಿತದ ಕಾಲ, ತಾಳ (ಒಂದೊತ್ತಂ ನಡೆಯಿಸುವುದು ಅದೊಂದೊತ್ತಿನ ಲಯಕೆ ಲಕ್ಕತೆಱನಾಡುವುದು: **ಆದಿಪು,** ೯. ೩೩); ಬಳಿದುಕೊ (ಕೊಡುವ ಬಾಡಕ್ಕಂ ಜೀವಧನಂಗಳ್ಗಂ ಬಿಡುವೆಣ್ಣಂ ಲೆಕ್ಕಮಿಲ್ಲೆನಿಸಿ ರಾಗಂಗಿಡದೆ ಕೊಂಡಾಡಿದಂ ಬಲ್ಲಹನಱಿಯೆ ಗುಣಾರ್ಣವಂ ಕವಿತಾಗುಣಾರ್ಣವನಂ: **ಪಂಪಭಾ,** ೧೪. ೫೫); ಸಹಾಯ (ಆರ್ಹತದ ಒತ್ತುಳ್ಳಂದು ಅನ್ಯಸಮಯಿ ದೇವನೆನಿಕ್ಕುಂ: **ಸಮಯಪ,** ೧೫. ೩೬); ಮಗ್ಗುಲು (ಬೇಡಂ ಪಿಳುಕೊತ್ತಿನ ತಾಯೋಡಲ್ ಬಿಟ್ಟಲ್ಲಿ ಕೊಂಡು ಬಂದು ಪಿಳುಕಂ ಬೇಡಿತಿಗೆ ಸಲಹಲಿತ್ತೊಡೆ: **ಯಶೋಧಚ,** ೩. ೩೬)

**ಒತ್ತುಂಗರಡೆ** – ಒಂದು ಬಗೆಯ ಕರಡೆ, ಚರ್ಮವಾದ್ಯ (ಪರುಷತರನಮಕ್ಕುಂ ಒತ್ತುಂಗರಡೆಯ ಮದ್ದಳೆಯ ಜರ್ಝುಱು ಧ್ವನಿಗಳವೋಲ್: **ಕವಿರಾಮಾ,** ೧. ೫೩)

**ಒತ್ತುಂಬಲ** – ಒತ್ತಾಯ (ಚೂಡಾಸ್ಥಳಿಗೆ ಪರಿಯಿಸಿದರ ಒತ್ತುಂಬಲದಿಂದದು ಕಂತುಯಂತ್ರಸೂತ್ರಿತಮಕ್ಕುಂ: **ಆಚವರ್ಧ**, ೭. ೧೫)

**ಒತ್ತುಂಗೊಳ್** – ಆಶ್ರಯಿಸು (ಪಲವು ದಿನಂಗಳ್ ಅಸ್ಮತ್ ಅಧಿನಾಥನ ಸತ್ವವಂ ಒತ್ತುಗೊಂಮಾರ್ಮಲೆವ ಅದಟರ್ಕಳ್: **ಕರ್ಣನೇಮಿ** , ೧೧. ೩೪)

**ಒತ್ತೆ** – ಅಡವು (ಒತ್ತೆಯ ಗೂಂಟಂ ಸೊಡರಿಟ್ಟೇಱುವಂತೆರವಿನ ಸಿರಿಯನಜೆದು: **ನೇಮಿನಾಪು**, ೫. ೨ ವ); ಜೂಜಿನ ಪಣದ್ರವ್ಯ (ರಪಣಮಂ ತೋಳೆಯುಂ ಒತ್ತೆಯಂ ಉಗ್ಗಡಿಸಿಯುಂ ಆಡಿಂ ಎನೆ ಪೆಱತೇನುಪಾಯಮಿಲ್ಲದೆ ಎಮ್ಮಾಳ್ವ ನೆಲಂ ಒತ್ತೆಯೆಂದೊಡೆ: **ಪಂಪಭಾ**, ೭. ೩ ವ); [ಸೂಳೆಯರಿಗೆ] ಭೋಗಕ್ಕಾಗಿ ಕೊಡುವ ಹಣ (ಒತ್ತೆಯದೇನೆನೆ ಲೋಕಮಿತ್ರ .. .. ಮತ್ತದಿಗ್ವಾರಣಸತ ಎನಲುಂ ಮಗುಳ್ದುಂ ತಲೆದೂಗೆ ತದ್ವಿಟಂ: **ತ್ರಿಷಷ್ಟಿಪು**, ೨೪. ೧೭೯)

**ಒತ್ತೆಗೊಡು** – [ಸೂಳೆಯರಿಗೆ] ಒತ್ತೆ ನೀಡು (ಅನಂಗಸೌಂದರಿಯೆಂಬ ಸೂಳೆಯಂ ಕಂಡು ಕಣ್ಬೇಟಂಗೊಂಡು ಒತ್ತೆಗೊಟ್ಟು: **ಧರ್ಮಾಮೃ**, ೨. ೭೨ ವ)

**ಒತ್ತೆಗೊಳ್** – ವಿಟರಿಂದ ಮುಂಗಣ ಹಣ ಪಡೆ, ವಶವಾಗು (ನಿಜೆಗಳನಿಕ್ಕಿ ದಾಂಟಿಸದೆ ದುಂಡಿಸುವಾಕೆಯಂ ಒತ್ತೆಗೊಳ್ಳದಂತೆಱಿಯದೆ ತೇಪೆಗುಳ್ಳ ಬಳಿ ನೀರ್ಗಳನಗ್ಗದ ಪೆಣ್ಗೆ: **ಲೀಲಾವತಿ**, ೨. ೯೩)

**ಒತ್ತೆಯಿಡು** – ಅಡವಿಡು (ಸಮಂತಾವಗಂ ತಲೆಯಂ ಮೂಗುಮಂ ಒತ್ತೆಯಿಟ್ಟು ನೆರೆವಂತುಟೇನವರ್ ಗಾಂಪರೇ: **ಪಂಪಭಾ**, ೪. ೮೪)

**ಒತ್ತೆವಿಡಿಸು** – ಒತ್ತೆಯಿಂದ ಬಿಡಿಸು (ಸುಣ್ಣದೆಲೆಯಂ ಒತ್ತೆಯಿಟ್ಟು ಮದದಾನೆಯುಮಂ ಮಾಣಿಕಮುಮಂ ಒತ್ತೆವಿಡಿಸಲಟ್ಟುವ: **ಪಂಪಭಾ**, ೪. ೮೭ ವ)

**ಒತ್ತೆವೋಗು** – ಒತ್ತೆಯಾಗಿ ಹೋಗು (ದಾಯಿಗಂಗೆ ನೆಲಂ ಜೂದಿನೊಳ್ ಒತ್ತೆವೋಗೆ: **ಪಂಪಭಾ**, ೮. ೫)

**ಒದವಿಸು** – ಉಂಟುಮಾಡು (ಅಶೇಷ ಭವ್ಯಸಸ್ಯಸಂಪತ್ತಿಯಂ ನಿತಯಂ ಒದವಿಸುತ್ತುಂ ಒರ್ಮೆ ಸಕಳಸಂಪದುತ್ತರಮೆನಿಸಿ ಉತ್ತರ ಮಧುರೆ: **ಆಚವರ್ಧ**, ೩. ೧ ವ)

**ಒದವು** – ಉಂಟಾಗು (ಅರಗಿನ ಮನೆಯೊಳ್ ಪಾಂಡವರ್ ಉರಿದು ಅಟ್ಟೆಗಿದರ್ ಅಕ್ಕಟ ಅಯ್ಯೋ ದುರ್ಯೋಧನನೆಂಬ ಎರಲೆಯಿಂ ಎಂದು ಅೞುತುಂ ತತ್ಪುರಜನಂ ಅೞಲ್ ಒದವೆ ಪರಿದು ನೋಡಿತ್ತಾಗಳ್: **ಪಂಪಭಾ**, ೩. ೮); ವಯಸ್ಸಿಗೆ ಬರು (ಒದವಿದ ಲತೆಗಂಕುರ ಗರ್ಭದ ಚಿಹ್ನಂ ಮೂಡುವಂದದಿಂ ದೇವಕಿಗುರ್ವಿದ ಗರ್ಭದ ಚಿಹ್ನಂ ಮೂಡಿದುದಾ ಕಂಸಂಗೆ ಮಿಟ್ಟು ಮೂಡುವ ತೆಱದಿಂ: ನೇಮಿನಾಪು, ೭. ೩೭); ತೋಡು (ಒದವಿದರೆ ಬಳಿದೆನಿಪ ಬರಿವದಣೆಯ ಕಿಱುದೆಂಗು .. .. ನೀರಕ್ಕುಂ: **ಲೋಕೋಪಕಾ**, ೫. ೧೭); ಏಳಿಗೆ ಹೊಂದು, ಅಧಿಕವಾಗು (ಪದೆಪಿಂ ತನ್ನಯ ಸಾರ್ಗೆ ವಂದ ಸುತೆಯೊಂದಾಶ್ಚರ್ಯ ಸೌಂದರ್ಯಸಂಪದಮಂ ಶ್ರೀಜಿನಪಾದಭಕ್ತಿಯ ಒದವಂ ಕಂಡು: **ಶಾಂತೀಶ್ವಪು**, ೨. ೨೦); ಅಭಿವೃದ್ಧಿ (ಮದೀಯ ಮನೋಗತ ಕಾಮಸಾಗರದ ಒದವಿಂಗೆ ನಲ್ಲಳ ವಿಲೋಚನಚಂದ್ರಿಕೆಯೊಂದೆ ಸಾಲದೇ: **ಪಂಪಭಾ**, ೫. ೧೧); ಸಾಧಿಸು (ಶ್ರೀವಿಜಯನೊಳಂ ಉರ್ವರಾಸ್ಯ ತಿಲಕನೊಳಂ ಅನಿಬರ್ ನೆರೆದುಂ ಕಾದಿಯುಂ ಒದವಲಾಱದುದಱಿಂ: **ಶಾಂತಿಪು**, ೬. ೩ ವ)

**ಒದಱು** – ಭುಜ ಅಥವಾ ತೊಡೆಯನ್ನು ತಟ್ಟು (ಗಿರಿಶನಂ ಆರಾಧಿಪ ದೈತ್ಯರೆ ಗಿರಿಶನೊಳ್ ಒದಱೆ ಕಾದುತಿರ್ಪರ್: **ಸಮಯಪ**, ೧೦. ೬೬); ಕೊಡಹು; ಕಿರುಚು (ನಾಗಂಗಳ್ ಪಡೆಗಳನೆತ್ತಿ ನಾಲಗೆಗಳಂ ಪೊಳೆಯಿಸುತ್ತುಂ ಬಂದೊಡೆ ನೀಂ ಒದಱೆ ಅವಂ ಬಗ್ಗಿಸಿದೊಡೆ: **ವಡ್ಡಾರಾ**, ಮ ೧೦೦, ಸಾ ೮)

**ಒದೆ** – ಕಾಲಿನಿಂದ ತುಳಿ (ಕಾಲಿಂದಂ ತಲೆಯನೊದೆದು: **ವಡ್ಡಾರಾ**, ಪು. ೮. ಸಾ. ೧೭)

**ಒದೆವಡೆ** – ಒದೆತವನ್ನು ಪಡೆ; ಏಟು ತಿನ್ನು (ಲಲನೆಯರಿಂದ ಅಂದು ಒದೆವಡೆದಾ ನಲವಂ ತಳೆದ: **ಕುಸುಮಾಕಾ**, ೫. ೪೩)

**ಒದ್ದೆ** – ರಾಶಿ (ಬದ್ದವಣದ ಪಱೆಗಳ್ ಕಿವಿ ಸದ್ದಂಗಿಡೆಮೊೞಗೆ ದೇವದುಂದುಭಿರವಂ ಒಂದು ಉದ್ದಾನಿ ನೆಗೞೆ ಮುಗುಳ ಅಲರ ಒದ್ದೆ ಕರಂ ಸಿದ್ಧಮಾದುದು ಅಂಬರತಲದೊಳ್: **ಪಂಪಭಾ**, ೧೨. ೨೧೮); ನೆನೆದಿರುವುದು (ದೇವದುಂದುಭಿ ರವದೊಂದುದ್ದಾನಿ ನೆಗೞೆ ಮುಗುಳಲರೊದ್ದೆ ಕರಂ ಸಿದ್ಧಾದುದು ಅಂಬರತಲದೊಳ್: **ಪಂಪಭಾ**, ೧೨. ೨೧೮)

**ಒನಕೆ** – ಕುಟ್ಟುವ ಸಾಧನ,; ಮುಸಲ (ದಂತದ ಒನಕೆಯನೆತ್ತು ನುಣ್ದನಿಯ ಸುವ್ವಿಯ ಗಾವರದೊಳ್ ತೊಡರ್ಚೆ: **ಲೀಲಾವತಿ**, ೮. ೩೦)

**ಒನಕೆವಾಡು** – ಕುಟ್ಟುವಾಗ ಹೇಳುವ ಹಾಡು (ಎನಿತೋದನೋದಿಯುಂ ಮನದನಿತೆ ವಲಂ ಬುದ್ಧಿಯಕ್ಕುಂ ಎಂದು ಸಮಸ್ತಾವನಿಯ ಜನಂ ಒನಕೆವಾಡಪ್ಪಿನೆಗಂ ಸಲೆ ನುಡಿದ ನುಡಿ ಯಥಾರ್ಥಂ ನಿನ್ನೊಳ್: **ಪಂಚತಂತ್ರ**, ೬೮)

**ಒನಲ್** – ಕ್ರೋಧಗೊಳ್ಳು (ಬಿರಿಯಿಸೆ ಬೇಟದೊಳ್ ಬಿರಿದ ನಲ್ಲರಗಲ್ದು ಕನಲ್ದು ಒನಲ್ದು ನಲ್ಲರ ದೆಸೆಯಿಂದಂ ಅಟ್ಟೆವರೆ: **ಆದಿಪು**, ೩, ೮೬)

**ಒನಲಿ** – ಜರಡಿ (ಒನಲಿಯಂತೆ ಪೊಲ್ಲಮೆಯಂ ಪಿಡಿಯದೆ ಕೋಣನಂತೆ ಕದಡದೆ ಬಕನಂತೆ ಧೂರ್ತನಾಗದೆ: **ಧರ್ಮಾಮೃ**, ೧. ೧೩೮ ವ)

**ಒನಲಿಸು** – ಕೆರಳಿಸು (ಆವಡವಿಗಳೊಳ್ ಪಣ್ಣಲಂ ಆವಗಂ ಒಳವು ಅಲ್ಲಿಗಱಿಸಿ ಪರಿಪರಿದು ಕರಂ ತಾವಡಿಗೊಳ್ವ ಈ ಭೀಮನ ಬೇವಸಮಿದು ನಿನ್ನ ಮನಮಂ ಒನಲಿಸಿತಿಲ್ಲಾ: **ಪಂಪಭಾ**, ೭. ೪೬)

**ಒನೆ** – ಧಾನ್ಯವನ್ನು ಮೊರದಲ್ಲಿ ಶುದ್ಧಗೊಳಿಸು (ಒನೆ– ಶೂರ್ಪಕರಣೇ: **ಶಬ್ದಮದ, ಧಾ** ೪೩೨)

**ಒಪ್ಪ** – ಒಪ್ಪಿಗೆ (ಕರ್ವುವಿಲ್ಗೆ ಅದೇಂ ನಿಲ್ಲದೆ ಕಂತು ಮಾಡಿದನೊ ತೋಮರದ ಉಪ್ಪರವಟ್ಟದ ಒಪ್ಪಮಂ: **ಆಚವರ್ಧ**, ೨. ೬); ಅಚ್ಚುಕಟ್ಟು (ಅಂಧಲಾವುಕನ್ಯಾಯದೆ ಭಾವಮೊಂದೆರಡು ಲೇಸನೆ ಪೇೞ್ದುಱದಿರ್ಪುದೊಪ್ಪಮೇ: **ಚಂದ್ರಪ್ರಪು**, ೧. ೪೮); ಕಾಂತಿ (ಗಣಿಕಾಜನಂ ಸ್ಮರಣ ದೀವದ ಪುಲ್ಲೆಯೊಲಿರ್ದುದುದೊಪ್ಪದಿಂ: **ಧರ್ಮಾಮೃ**, ೪. ೪. ೮೬)

**ಒಪ್ಪಂಗಿಡು** – ಕಾಂತಿಹೀನವಾಗು (ಧಾತ್ರೀತಳಂ ಬಿನ್ನಗಾದವೊಲ್ ಒಪ್ಪಂಗಿಡೆ ವಲ್ಲಭಾವಿರಹಿತಂ ಬೆಂದಿರ್ದನುರ್ವೀಶ್ವರಂ: **ಲೀಲಾವತಿ**, ೧೪. ೫೩)

**ಒಪ್ಪಂಗುಂದು** – ಅಂದ ಕೆಡು (ಬಾಳ ಬಾಯ್ದಾರೆಯ ಸೋಂಕೆಂದು ಕದಳೀದಳ ಸ್ಪರ್ಶನಕ್ಕೆ ದರ್ಪಂಗೆಟ್ಟು ಒಪ್ಪಂಗುಂದುತ್ತುಂ: **ಗಿರಿಜಾಕ**, ೪. ೧೧೯ ವ)

**ಒಪ್ಪಂಬಡೆ** – ಅಂದಗೊಳ್ಳು (ನುಡಿ ನೆರೆದ ಜೀವಕದಂಬಂಗಳ್ಗೆ ಅಭಯಮೆಂಬ ಡಂಗುರದವೊಲ್ ಒಪ್ಪಂಬಡೆಯೆ: **ಯಶೋಧಚ**, ೪. ೭೧)

**ಒಪ್ಪಂಬೂಸು** – ಒಪ್ಪವನ್ನು ಲೇಪಿಸು, ಮೆರುಗು ನೀಡು (ಒಪ್ಪಂಬೂಸಿದವೋಲ್ ತೆಱಂಬೊಳೆವ ಕೊಂಕಂ ಪಾಲೊಳೊಂದಿರ್ಪವೋಳ್ ಒಪ್ಪಂಬೆತ್ತಿನಿದಾದ ಬರ್ದುನುಡಿಯಂ ತಳ್ತು .. .. ಕೊರಲ್ಗೊಳ್ಳದೇ: **ಕಬ್ಬಿಗಕಾ**, ೫)

**ಒಪ್ಪಂಬೆಱು** – ಅಂದವನ್ನು ಪಡೆ (ಒಪ್ಪಂಬೂಸಿದವೋಲ್ ತೆಱಂಬೊಳೆವ ಕೊಂಕಂ ಪಾಲೊಳೊಂದಿರ್ಪವೋಳ್ ಒಪ್ಪಂಬೆತ್ತಿನಿದಾದ ಬರ್ದುನುಡಿಯಂ ತಳ್ತು .. .. ಕೊರಲ್ಗೊಳ್ಳದೇ: **ಕಬ್ಬಿಗಕಾ**, ೫)

**ಒಪ್ಪಕಾಱ** – ಓರಣಗೊಳಿಸುವವನು (ಗಜಱುವ ಗಳೆಕಾಱರ ಚಪ್ಪರಿಸುವ ಒಪ್ಪಕಾಱರ ಕರೆವ ಪರಿಕಾಱರ .. .. ನೆರವಿಗಳಂ: **ಅನಂತಪು**, ೨. ೨೯ ವ)

**ಒಪ್ಪವಿಡಿ** – ಒಪ್ಪ ಹಾಕು (ಕೈರವದ ಸಬಳಮಂ ಒಪ್ಪವಿಡಿದ ಕುಮುದಾಕ್ಷಿಯರಿಂ: **ಗಿರಿಜಾಕ**, ೭. ೧೧ ವ)

**ಒಪ್ಪಸಲಗೆಯಿಡು** – ಒಪ್ಪವಿಡುವ ಸಲಾಕಿಯಿಂದ ತೀಡು (ಮಲಯರುಹದ ಒಪ್ಪಮಂ ಅಲರ್ಗಣೆಗಳಿಂ ಒಪ್ಪಸಲಗೆಯಿಡೆ ನಡೆತಂದಳ್: **ಅನಂತಪು**, ೪. ೧೦೮)

**ಒಪ್ಪಳ** – ಒಂದು ಪಲ ಅಥವಾ ಮೂರು ತೊಲ ತೂಕ, ಒಂದು ಹಿಡಿ (ಜಗದೀಶ್ವರಪೂಜೆಗೆ ತಪಸಿಗೆ ಎಂದೊಡೆ ಒಪ್ಪಳಮಂ ಇಕ್ಕರ್ ಅಱಗುಲಿವೆಂಡಿರ್: **ಸಮಯಪ**, ೫. ೧೦೨)

**ಒಪ್ಪಿಡಿ** – ಒಂದು ಹಿಡಿ (ಅದಱಿಂ ಕುಲಂ ಒಪ್ಪಿಡಿ ತವುಡುಂ ಇರದು ಚರಿತಂ ಅಮೂಲ್ಯಂ: **ಸಮಯಪ**, ೧೦. ೧೩೭)

**ಒಪ್ಪುವೆಱು** – ಅಂದವನ್ನು ಹೊಂದು (ಸೂಸಕಂಗಳಿಂ ಒಪ್ಪುವೆತ್ತ ಉನ್ನತಧ್ವದೋಳಿಯಿಂ ಬಿಡುಮುತ್ತಿನಿಂ ಕಡುಶಫಭೆವೆತ್ತು: **ಧರ್ಮಾಮೃ**, ೬. ३೧)

**ಒಬ್ಬಳ** – [ಒರ್+ಬಳ] ಒಂದು ಬಳ್ಳ (ಕಱೆವುವು ಗೋಸಹಸ್ರಂ ಒಳವಾದೊಡಂ ಒಬ್ಬಳ ಪಾಲೆ: **ಸಮಯಪ**, ೫. ೭೯)

**ಒಬ್ಬುಳಿ** – ರಾಶಿ (ನಿಬ್ಬೆರಗುವಟ್ಟು ಸೌಂದರಿ ಒಬ್ಬುಳಿಗೊಂಡಳದಣ್ಮದಿನೀಕ್ಷಿಸಿ ನೃಪನಂ: **ಉದ್ಭಟಕಾ**, ೧೧. ೨೩)

**ಒಬ್ಬುಳಿಕ್ಕು** – ಕೂಡಿಡು (ಅದೃಶ್ಯಾಕಾರದಿಂ ಕೊಯ್ದು ಒಬ್ಬುಳಿಕ್ಕಳ್ ಅದಂ ವಿಪ್ರಂ ಕಂಡು: **ತ್ರಿಷಷ್ಟಿಪು**, ೫೬. ೧೦ ವ)

**ಒಮ್ಮು** – ಅನುಸರಿಸಿ ನಡೆ (ಒಮ್ಮು–ಅನುವರ್ತನೇ: **ಶಬ್ದಮದ**, **ಧಾ** ೪೯೯)

**ಒಮ್ಮುಕ್ಕುಳ್** – ಒಂದು ಮುಕ್ಕು, ಬಾಯಿ ಹಿಡಿಯುವಷ್ಟು (ತಮಮೆಂಬ ತಮಕ್ಕೆ ಒಮ್ಮುಕ್ಕುಳಾದುದು ಜಗದ್ವಿಧುಬಿಂಬಂ: **ಲೀಲಾವತಿ**, ೧೪. ೧೦೪)

**ಒಮ್ಮೊಟ** – ಒಂದು ಮೊಳ (ಮಱೆದುಂ ಸಾವದ್ಯಮೆಂದೊಡಂ ಒಮ್ಮೊಟ ಪಾವಿಂಗೆ ಅಂಜದುದಂ ಅಂಜುವರ್ ಸಲೆ ಜೈನರ್: **ಸಮಯಪ**, ೫. ೯)

**ಒಯ್** – ತೆಗೆದುಕೊಡು ಹೋಗು (ಕನಕಶ್ರೀಯಂ ಗಗನಗಾಮಿನೀವಿದ್ಯೆಯಿಂ ಒಯ್ದು: **ಶಾಂತಿಪು**, ३. ೬೦ ವ)

**ಒಯ್ಯನಾಗು** – ಕ್ಷೀಣವಾಗು, ಕಾಂತಿಹೀನವಾಗು (ಸೊಡರ್ಗುಡಿ ಒಯ್ಯನಾಗೆ ಪೊಸಮಲ್ಲಿಗೆ ಕಂಪುನಾಱೆ ತಣ್ಪಿಡಿದ ಎಲರ್ ಊದೆ ಗಾವರದ ಮೆಲ್ಲುಲಿ ತುಂಬಿಯ ಗಾವರಂಗಳ ಗೆಡೆಗೊಳೆ: **ಪಂಪಭಾ**, ೪. ೧೧೦)

**ಒಯ್ಯನೆ** – ಮೆಲ್ಲನೆ, ಮೃದುವಾಗಿ (ಎಂದು ಒಯ್ಯನೆ ಇಟಿಪೆ ನೆಲದೊಳ್ ದುಂದುಭಿರವದೊಡನೆ ವಿಜಯಘೋಷಣೆ ನೆಗಟ್ಟಿದ್ದತ್ತು: **ಆದಿಪು**, ೧೪. ೧೧३); ಸಾವಕಾಶವಾಗಿ (ಎಱಕೆಗಳಂ ಮೆಲ್ಲನೆ ಉರ್ಚುತ್ತೆ ನಿಂದು ಒಯ್ಯನೆ ಸಾರ್ದು ಆ ತ್ರೋಟಿಯಿಂದಂ ತೊಡೆದು ಗಱೆಗಳಂ ನುಣ್ಣವಿರ್ ಬಿರ್ಚಿ ಮೆಯ್ಯಂ ತೊನೆದು ಉದ್ದಂ ನೀಡಿ ಗೋಣಂ ನವ ದಿನಮುಖದೊಳ್ ಕುಕ್ಕುಟಂ ಕೂಗಿತಾಗಳ್: **ಶಾಂತೀಶ್ವಪು**, ೧೧. ೯೬); ಕ್ರಮವಾಗಿ (ಮುನಿಪತಿ ವಾಚನೆಯಿಂ ಪೃಚ್ಛನೆಯಿಂ ಅನುಪ್ರೇಕ್ಷೆಯಿಂ ತದಾಮ್ನಾಯದಿಂ ಒಯ್ಯನೆ ಧರ್ಮಕಥನದಿಂದಂ ವಿನುತಸ್ವಾಧ್ಯಾಯಮೆಂಬ ತಪಮಮಂ ತಳೆದಂ: **ಸುಕುಮಾಚ**, ೪. ೧೮)

**ಒಯ್ಯಾರ** – ಒನಪು, ಬೆಡಗು (ಮಲ್ಲಿಗೆಯ ಮುಗುಳ ಹಾರಕ್ಕೆ ಒಯ್ಯಾರಮಪ್ಪ ಪಚ್ಚೆಸಾರಮಂ ಸಮೆಯಲೆಂದು: **ಪಾರ್ಶ್ವನಾಪು**, ೯. ೪೬ ವ)

**ಒರಲ್** – ಒರಳು, ಕುಟ್ಟಲು ರುಬ್ಬಲು ಬಳಸುವ ಸಾಧನ (ಕೊರಲಸತ್ವಮಿಲ್ಲದೆ ಒರಲಂ ನುಂಗಿದರೆಂಬ ನಾಟ್ಣುಗ್ದೆಯಂತೆ: **ಧರ್ಮಾಮೃ**, ೭.೧೦೮ ವ)

**ಒರಸು** – ಉಜ್ಜು, ಘರ್ಷಿಸು (ಬೆರಲೊಳ್ ಬೀಣೆಯ ತಂತಿಗಳ್ ಒರಸಿದ ಕೆಂಗಲೆಗಳ್ ಅಕ್ಷಮಾಲೆ: **ಪಂಪಭಾ**, ೬. ೧೦)

**ಒರೆ** – ತಿಳಿಸು, ಹೇಳು (ಈ ಪುಟ್ಟಿನೊಳ್ ದೊರೆಕೊಳ್ವಂತದು ತಾನೊಡರ್ಚು ಮುಱುವುಟ್ಟಲ್ಲಾದೊಡಂ ನೀನೆ ಎಂದು ಒರೆವನ್ನಂ ಬಿರಿದತ್ತು ಭೋಂಕನೆರ್ದೆ ತದ್ರಾಜೇಂದ್ರಚಂದ್ರಾರ್ಕನಾ: **ಕಾದಂಸಂ**, ೭. ೨೫); [ಚಿನ್ನವನ್ನು] ಒರೆಗೆ ಹಚ್ಚು, ಪರೀಕ್ಷಿಸು (ತಮ್ಮ ಮತಮಂ ಮತ್ತಾ ಚರಿತದೊಡನೆ ಓಜೆಯಿಂ ನಿಜಚರಿತಮಂ ಒರೆದೆಯ್ದೆ ನೋಡುವುದೆಗ್ಗೇ: **ಸಮಯಪ**, ೧३. ೫); ಸಮಾನತೆ (ಕಾಗಿಣಿಗೆ ಮರಂ ಬೀಟಲ್ವೋಗಿರ್ಕುಂ ಕಡಲ ಕಡೆವರಂ ನಿಮಿರ್ದ ಮಹೀಭಾಗಮಂ ಅನುಜಂಗಿತ್ತಂ ಭಾಗಿಗಳಾರ್ ಸೀರಪಾಣಿಯ ಒರೆಗಂ ದೊರೆಗಂ: **ಪಂಪರಾ**, ೬. ೧३೪)

**ಒರೆಗಲ್** – ಚಿನ್ನವನ್ನು ಪರೀಕ್ಷಿಸುವ ಉಜ್ಜುಗಲ್ಲು (ಪರುಸದ ಒರೆಗಲ್ ಸುವರ್ಣದ ಒರೆಪಕ್ಕೆ ಎಡೆಯಾಗಿ ತೋರ್ಪವೊಲ್: **ಚಂದ್ರಪ್ರಪು**, ೧. ೪೬)

**ಒರೆಪ** – ಉಜ್ಜುವಿಕೆ (ಪರುಸದ ಒರೆಗಲ್ ಸುವರ್ಣದ ಒರೆಪಕ್ಕೆ ಎಡೆಯಾಗಿ ತೋರ್ಪವೊಲ್: **ಚಂದ್ರಪ್ರಪು**, ೧. ೪೬)

**ಒರೆಯಿಡು** – ಹೋಲಿಸು (ಹರಿಗಂ ನಿನಗಂ ಪರಿಗಂ ಹರಿಣಂಗಂ ಹರಿಗಮುಡುಗಮೊರೆಯಿಡಲ್ ಎಂತು ಅಂತಿರೆ: **ಜಗನ್ನಾವಿ**, ೧೭. ३೦)

**ಒರ್ಕುಡಿತೆ** – ಒಂದು ಬೊಗಸೆ (ತೃಷ್ಣೆಗೆ ಒರ್ಕುಡಿತೆಯಿಂ ಕೊಂಡು ಅಚ್ಚವೆಳ್ದಿಂಗಳಂ ಕುಡಿಯಲ್ ಬರ್ಕುಮೇ: **ನೇಮಿನಾಪು**, ೧. ३೧)

**ಒರ್ಕೋಲ್** – ಒಂದು ಕೋಲು, ದೂರ ಅಳೆಯುವ ಪ್ರಮಾಣ ಒರ್ಕೋಲ್ ಪೊರಜೆಗೆ ಬಗೆವೊಡೆದಿರ್ಕುಂ ನಟ್ಟುಗಿಯೆ ಗಣಪನಂತಭಪತಿ ಕುಳ್ಳಿರ್ಕುಂ: **ಶಾಂತಿಪು**, ३. ೨೭)

**ಒರ್ಗು** – ಗುಂಪು (ಬೇಡರ ಒರ್ಗಿನಿಂ ನಗರಮದೊಂದು ಸಂದ ಪೆಸರಿಂದೆ ಪುಳಿಂದಪುರಂ: **ರಾಜಶೇವಿ**, ೫. ೨೮); ಸಂಬಂಧ (ಅಬ್ದರಾವದ ಒರ್ಗು ಒಡೆಯದೆ ಮೇಲೆ ಸೂಸುವ ಸುಲಾಜೆಗಳೊಳ್ ಸಜೆಯಾಗೆ ಬಂದು: **ರಾಜಶೇವಿ**, ೧३. ೯೪)

**ಒರ್ಗುಡಿಸು** – ಓಲು, ಓರೆಯಾಗು (ಇಡಿದಿರೆ ರೋಮಕೂಪದೊಳಗೆ ಉರ್ಚಿದ ಸಾಲಸರಲ್ಗಳುಂ ತೆಱಂಬಿಡಿದಿರೆ ಬೆಟ್ಟು ಒರ್ಗುಡಿಸಿದಂತೆ ನೆಱದ್ದಿರೆ .. .. ಬಿಟ್ಟಂ ಏನೆಸೆದನೋ ಶರಶಯ್ಯೆಯೊಳ್ ಅಂದು ಸಿಂಧುಜಂ: **ಪಂಪಭಾ,** ೧೩, ೬೨); ಕುಸಿ (ಉರ್ವರೆಯೊರ್ಗುಡಿಸಿತ್ತು ಸಾಗರಂ ವೇಳೆಯಿನುರ್ಕಿ ಸೂಸಿದುದು ತೊಟ್ಟು ಕಟಿಲ್ದವು: **ಅನಂತಪು,** ೧೧. ೫೮)

**ಒರ್ಗೇಣ್** – ಒಂದು ಗೇಣು ಉದ್ದ (ಎರಡುಂ ಮಡಂಗಳೆಡೆ ನಾಲ್ವೆರಳ್ ಉಂಗುಷ್ಠಂಗಳೆರಡಱೆಡೆ ಒರ್ಗೇಣಾಗಿರೆ: **ಸುಕುಮಾಚ,** ೮. ೫೮)

**ಒರ್ಗೊಡೆ** – [ಒರ್ಗು+ಒಡೆ] ಚೆಲ್ಲಾಪಿಲ್ಲಿಯಾಗು (ನಡೆ ನಡೆ ಇದಿರ್ಚು ಇದಿರ್ಚಿ ಒರ್ಗೊಡೆಯದಿರ್: **ರಾಜಶೇವಿ,** ೫. ೧೨೧)

**ಒರ್ಚರ** – [ಒರ್+ಸರ] ಒಂದೆಳೆಯ ಸರ (ನುಣ್ಮುತ್ತಿನ ಒರ್ಚರಮಂ ಪೆರ್ಮೊಲೆ ಚುನ್ನವಾಡೆ: **ಕಬ್ಬಿಗಕಾ,** ೬೯)

**ಒರ್ಚವಡಿ** – ಒಂದು ಪದರ, ಒಳಗೊಂದು ಹೊರಗೊಂದು ಪದರವುಳ್ಳ (ಒಪ್ಪಿಸಿ ಮನಮಂ ಮಾನಿನಿಗೆ ಒಪ್ಪಿಸಿ ತನುವಂ ತಪಕ್ಕೆ ಮುನಿ ಮನಸಿಜನಿಂ ಸೊಪ್ಪಾಗಿರ್ದು ಒರ್ಚವಡಿಯ ಕುಪ್ಪಸಮಂ ಪೋಲ್ತು ಪೊಱಗೆ ನೇರಿದನಾದಂ: **ಪಂಪರಾ,** ೪. ೧೩)

**ಒರ್ಬುಳಿ** – ಗುಂಪು, ರಾಶಿ (ಪುಣ್ಯತತಿಯೋ ಪ್ರಭೆಯ ಒರ್ಬುಳಿಯೋ .. .. ಶಿವಜ್ಞಾನಮೊ .. .. ಪೇಳೆನೆ ತಾಸವೀಥಿಯೊಪ್ಪುಗುಂ: **ಗಿರಿಜಾಕ,** ೧. ೫೯)

**ಒರ್ಬುಳಿಗೊಳ್** – ಒಟ್ಟುಗೂಡು (ಶಿವನ ಗುಣಂ ಪುರಾಂತಕನ ವಿಕ್ರಮಂ ಒಂದುಕಳಾಕಪರ್ದನ ಉತ್ಸವಂ .. .. ಒರ್ಬುಳಿಗೊಂಡು ಪುಟ್ಟಿದಂತೆವೊಳ್: **ರಾಜಶೇವಿ,** ೧. ೬೧)

**ಒರ್ಬುಳಿಸು** – ಒಟ್ಟುಗೂಡು (ಸರ್ವಬಲಂ ಒರ್ಬುಳಿಸಿ ಬೊಬ್ಬಿಟ್ಟು ಅಬ್ಬರಿಸಿ ಪರ್ಬಿ ಪರೆದು ಶರ್ವನ ಸಮಾಧಿಪರ್ವತಮನೊತ್ತರಿಸಿ: **ಗಿರಿಜಾಕ,** ೮. ೮೮)

**ಒರ್ಮಡಿ** – ಒಂದು ಸಲ (ಒರ್ಮಡಿಗಿರ್ಮಡಿ ಬಂದೊಡಂ ಸುಧಾರಸಮನೆ ತೀವಿದ ಒಳ್ರಸದ ಮಾವಿನ ಪಣ್ಗಳ್: **ಜಗನ್ನಾವಿ,** ೧೭. ೮೨)

**ಒರ್ಮನ** – ಒಂದೇ ಮನಸ್ಸು, ಏಕಾಗ್ರತೆ (ಶಿವನಿಳಯದ ಚೆಲ್ವಂ ನಿರೀಕ್ಷಿಸಲ್ ಒರ್ಮನದಿಂದ ಇಟಿದಂ: **ಕುಸುಮಾಕಾ,** ೧೧. ೧೮೪)

**ಒರ್ಮಾನಂಗಱೆವಾವು** – ಒಂದು ಮಾನ ಹಾಲು ಕರೆಯುವ ಹಸು (ಒರ್ಮಾನಂಗಱೆವಾವಿಂಗೆ ಒರ್ಮೆಯುಂ ಎಱಗುತ್ತುಮಿರದೆ ಕೊಡವಾಲ್ಗಱೆವಾ ಎಮ್ಮೆಗೆಱಗುವುದು ಫಲಮೀಗುಂ: **ಸಮಯಪ,** ೯. ೭೦)

**ಒರ್ಮೆ** – ಒಂದು ಬಾರಿ (ಎಱಗಿಯುಂ ಒರ್ಮೆ ದಿವ್ಯಮುನಿಗಾರ್ತು ಉಪವಾಸಮನಿರ್ದು ಒರ್ಮೆ: **ಪಂಪಭಾ,** ೧. ೧೩೫)

**ಒರ್ಮೆಯುಂ** – ಒಂದೇ ಸಮನೆ (ಗಗನದೊಳ್ ಒರ್ಮೆಯುಂ ತೊಳಲುತ್ತಿರ್ಪ ವಿಯಚ್ಚರಸಂಕುಲಕ್ಕೆ ನೆಟ್ಟಗೆ ಪರಿಪಕ್ವಮಪ್ಪ ಫಲಸಾರಮನಿತ್ತು ನಿಜೋನ್ನತಿಕ್ಕೆಯಂ ಪೊಗಳಿಸಿಕೊಳ್ವೆಂ: **ಶಾಂತೀಶ್ವಪು,** ೧೦. ೯೧)

**ಒರ್ಮೆಯೆ** – ಒಟ್ಟಿಗೆ, ಒಂದೇ ಬಾರಿಗೆ (ಆ ಸತಿಯಿಕ್ಕಿದ ಕಣ್ಣ ನೀರ ಧಾರೆಗಳೊಳೆ ನಾಂದು ಎಲರ್ಚಿ ಪೊದಳ್ದು ಒರ್ಮೆಯೆ ಪಾಱಿದುವು ಉನ್ಮದಾಳಿಗಳ್: **ಪಂಪಭಾ,** ೫. ೧೦)

**ಒರ್ಮೊದಲ್** – ಒಂದೇ ಬಾರಿಗೆ (ತ್ರಿದಶೇಂದ್ರಾಮರರ್ ಕಳಕಳಪ್ರಧ್ವಾನದಿಂ ಶಾತಕುಂಭದ ಕುಂಭಂಗಳ ನೀರಂ ಒರ್ಮೊದಲೆ ಭೋರ್ಭೋರೆಂದು ಪೊಯ್ವಾಗಳ್: **ಆದಿಪು:** ೭. ೯೭); ಮೊದಲಿಗೇ (ಅನಂಗನಿರ್ದೆಡೆವೇಟ್ವವೊಲ್ ಒರ್ಮೊದಲೆ ಗೀತವಾದಿತರವಂ ಏವೇಟ್ವುದೊ ಸಭೆಯಂ ರಸದೊಳ್ ಪೂಟ್ದವೊಲೆಸೆದತ್ತು: **ಆದಿಪು,** ೯. ೧೪)

**ಒರ್ಮೊರ್ಮೆ** – ಒಂದೊಂದು ಬಾರಿ (ಕಡಕುಂ ಪೆಟ್ಟೆಯುಂ ಒತ್ತೆ ಮೆಲ್ಲಡಿಗಳಂ ಬಳ್ಕುತ್ತುಂ ಅಳ್ಕುತ್ತುಂ ಓರಡಿಗೆ ಒರ್ಮೊರ್ಮೆ ಕುಳುತ್ತುಂ ಏಟುತಿರೆ: **ಪಂಪಭಾ,** ೩. ೯)

**ಒರ್ಮೊಟಿ** – ಒಂದು ಮೊಳ [ಉದ್ದ] ಸೊಗಯಿಸುವುದು ನಿರ್ಮಳಮ ಒರ್ಮೊಟದ ಶರೀರಮುದಾರಂ: **ಶಾಂತಿಪು,** ೯. ೧೨೬)

**ಒರ್ವ** – ಒಬ್ಬ (ಒರ್ವ ಗೋವಳಂ ಅನಿಬರ ಸಾವುಮಂ ಕಂಡು: **ಪಂಪಭಾ,** ೮. ೯೫ ವ)

**ಒರ್ವಗಲ್** – ಒಂದು ಹಗಲು (ದಶಧರ್ಮಮಂ ಒರ್ವಗಲಪ್ಪೊಡಂ ತಪ್ಪಲೀಯದೆ: **ಧರ್ಮಾಮೃ,** ೧. ೧೩೪ ವ)

**ಒರ್ವಟಿ** – ಒಂದು ಕಡೆ (ಮುನ್ನೀರ ನೀರ ಒರ್ವಟಿಗೆ ತೆಗೆದೊಡಂ .. .. ತಾನೆ ಮೇಲ್ಗೈ ಎನಲೇಂ ಕೈಗೆಯ್ದುದೋ .. .. ಜೈನಧರ್ಮಂ: **ಸಮಯಪ,** ೧೫. ೮೨)

**ಒರ್ವಾಗ** – ಒಂದು ಭಾಗ, ಪಾಲು (ಏಗೆಯ್ದುಂ ಎನ್ನ ಧರೆಯ ಒರ್ವಾಗಮುಮಂ ನೀಮೆ ಬೆಸಸೆಯುಂ ಕುಡದೆ ಇನಿತಂ ಮೇಗಿಲ್ಲದೆ ನೆಗಟ್ದು ಅಟಿದಂ ನಾಗಧ್ವಜನಯ್ಯ ನೀಮದರ್ಕೆ ಅಟಲದಿರಿಂ; **ಪಂಪಭಾ,** ೧೪. ೬)

**ಒರ್ವುಳಿ** – ಒಗ್ಗೂಡುವುದು (ತಮ್ಮನಿಬರುಮಂ ಅಂದು ಒರ್ವುಳಿ ನೆರೆದು ಅತಿಲಲಿತದೋರ್ವೀಸುಖಮಂ ಉಣುತುಮಿರೆ ಪಲಕಾಲಂ: **ಆದಿಪು,** ೬. ೪)

**ಒರ್ವುಳಿಗೊಳ್** – ಒಟ್ಟಾಗು (ಸೈತು ಒರ್ವುಟಿಗೊಂಡು ಸಾರ್ದುದಿರದಾಗಳೆ ಸಿಂಹಬಳಂ ಅವನೀಶನಾ: **ಕುಸುಮಕಾ,** ೧೧. ೪೭)

**ಒರ್ವುಟಿ** – ಒಂದು ಜಾಗ (ಇರ್ವಿರ್ವರೆ ನವಮಾಸಾಂತದೊಳ್ ಒರ್ವುಟಿಯೊಳ್ ಅಮಳ್ಗಳಾಗಿ ಸಂಕ್ರಮಿಪರವರ್: **ಶಾಂತಿಪು,** ೬. ೧೦೫)

**ಒಲ್** – ಮೋಹಗೊಳ್ಳು, ಪ್ರೀತಿಸು (ಸುಯೋಧನನ ರಾಜ್ಯಮಂ ಒಲ್ವೊಡಂ ಶಲ್ಯನನೆ ಸಾರಥಿಮಾಡಿ ಕಾದುವುದು ಎಂದು ಪರಸಿ ಪೋಗೆಂಬುದುಂ: **ಪಂಪಭಾ,** ೧೨. ೫೯ ವ); ಸಮ್ಮತಿಸು (ಉದೀಚ್ಯದುರುವಿಶೇಷಣಯುತಮಪ್ಪುದಂ ಒಲ್ವರಿಂತು ಹೇಮಾಂಗದ ಲೀಲಾಂಬುಜ ವಿಚಿತ್ರ ಚಿತ್ರಾಧಿಕಮಂ: **ಕವಿರಾಮಾ,** ೨. ೮೧); ಬಯಸು (ಎರಡಟಿದೊಲ್ದು ನಿನ್ನೊಳೆರಡಂ ನುಡಿಯಲಾಗದೆನಗೆ: **ಪಂಪಭಾ,** ೩. ೧೪ ವ)

**ಒಲವರ** – ಪ್ರೀತಿ, ಮೋಹ (ಎಲೆ ನೀನಾರ್ ಏಕಿಕ್ಕಿದೆ ಬಲೆಯಂ ಪೇಟಣ್ಣ ನಿನಗೆ ಮಾಂಸದೊಳಾದ ಒಂದು ಒಲವರಮೆ: **ಕಾದಂಸಂ,** ೮. ೨೯); ಪ್ರವೃತ್ತಿ, ಒಲವು (ಮೃಗದ ಒಲವರಮುಮಂ ಅರಸನ ಬಗೆಯುಮಂ ಅಱಿದು ಅಲಸದೆ

ಎಳಸಿ ಓಲಗಿಸಲ್ ನೆಟ್ಟನೆ ಬಲ್ಲನುಳ್ಳೊಡೆ ಅವನಲ್ತೆ ಗುಣಾರ್ಣವ ಬೇಂಟೆಕಾಱಂ ಓಲಗಕಾಱಂ: **ಪಂಪಭಾ,** ೫. ೪೨); ಪಕ್ಷಪಾತ (ಒಲಿದಿದನೊರ್ವಳ್ಗಿತ್ತಂದು ಒಲವರಮಾಗಿರ್ಕುಮೆಂದು ಸೊಸೆವಿರ್ಗೆಲ್ಲಂ ಸಲೆ ಚಮ್ಮವಾವುಗೆಯ ಲಲನೆ ಮಹೋತ್ಸಾಹದಿಂದೆ ಮಾಡಿಸಿಕೊಟ್ಟಳ್: **ಸುಕುಮಾಚ,** ೧೦. ೧೨೦)

**ಒಲವರಂಗೊಳ್** – ಪಕ್ಷಪಾತ ಮಾಡು (ಒಲವರಂಗೊಳ್– ಸ್ವಪಕ್ಷಸ್ವೀಕಾರೇ: **ಶಬ್ದಮದ, ಧಾ** ೯೪೫)

**ಒಲವು** – ಪ್ರೀತಿ, ಮೋಹ (ಪಲವುಂ ದಿವಸಕ್ಕೆ ಕಂಡು ಒಗೆದ ಒಲವಿಂ ಬಿಗಿಯಪ್ಪಿದಳ್ ಮಹಾಶ್ವೇತೆಯಂ: **ಕಾದಂಸಂ,** ೫. ೨೩)

**ಒಲಿ** – ಒಲ್, ಆಸೆಪಡು (ಕುಲಮೆಂಬುದುಂಟೆ ಬೀರಮೆ ಕುಲಮಲ್ಲದೆ ಕುಲಮನಿಂತು ಪಿಕ್ಕದಿರಿಂ ನೀಂ ಒಲಿದಲ್ಲಿ ಪುಟ್ಟಿ ಬಳೆದಿರೊ ಕುಲಮಿರ್ದುದೆ ಕೊಡದೊಳಂ ಶರಸ್ತಂಬದೊಳಂ: **ಪಂಪಭಾ,** ೨. ೮೩)

**ಒಲೆ** – ತೂನೆದಾಡು (ಶ್ರೀರಮಣಿ ತೋರಮುತ್ತಿನ ಹಾರದೊಳ್ ಒಲೆದುಯ್ಯಲಾಡೆ ನಿತ್ಯವಸಂತಂ ಪೇರುರಮಾಗಿರೆ ತಾಳ್ದಿದರಾರೊ .. .. ನೀನಲ್ಲದವರ್: **ಯಶೋಧಚ,** ೩. ೧)

**ಒಲೆ** – ಅಡುಗೆ ಮಾಡುವ ಉರಿಯ ಸಾಧನ (ಒಲೆಯ ಕಿರ್ಚಿನ ಮೃದ್ಭಾಜನದ ಎಸರ ನಿರ ಬಾಣಸಿಗರ್ ಉರಿಪುವ ಗಾಳಿಯ ಸಮಯೋಗದೊಳ್ ಚೈತನ್ಯಮದೇಕೆ ಪುಟ್ಟದು: **ಶಾಂತಿಪು,** ೮. ೧೩೭ ವ)

**ಒಲೆಗಲ್** – ಒಲೆಗೆ ಇಟ್ಟ ಕಲ್ಲು (ಒಲೆಗಲ್ವೋಲ್ಕಾಯ್ದುವು ಎಂಟು ದಿಗಿಭದ ಬಿದುಗಳ್ ಕಾಯ್ದು ಕರ್ಬೊನ್ನ ಪೆರ್ಗಾವಲಿವೋಲಾಯ್ತು ನೆಲಂ: **ಜಗನ್ನಾವಿ,** ೧೭. ೭೩)

**ಒಲ್ಮೆ** – ಒಲುಮೆ, ಪ್ರೀತಿ (ಸೊಬಗಂ ಒಲ್ಮೆಯಂ ಧೈರ್ಯಮಂ: **ವಡ್ಡಾರಾ,** ಪು. ೩೦, ಸಾ. ೧೦)

**ಒಲ್ಲಣಿಗೆ** – ಒದ್ದೆಯಾದ ಬಟ್ಟೆ, ಸ್ನಾನವಸ್ತ್ರ (ಧರಾತಳಮಂ ಒಲ್ಲಣಿಗೆಯಂ ಪಿಟಿವಂತೆ ತಳಂ ಎಯ್ದೆ ಸುರುಳ್ವಿನಂ ಮುಯ್ಯೇಱು ಸೂಟ್‌ ಪಿಟಿದ ಸಾಹಸಮುಂ: **ಪಂಪಭಾ,** ೧೨. ೪೮ ವ)

**ಒಲ್ಲನುಲಿ** – ಮೆಲ್ಲನೆ ಸದ್ದುಮಾಡು (ಸುರಾಸುರ ನಿಕುರುಂಬವು ಅಂಬರದೊಳೊಲ್ಲನುಲಿಯೆ: **ಕರ್ಣನೇಮಿ,** ೧೨. ೪೯ ವ); ಒಕ್ಕೊರಲಿನಿಂದ (ತನ್ನ ನನ್ನಿಯ ಕಲಿತನದ ಚಲದ ಚಾಗದ ನೆಲೆವೆತ್ತ ಪಲವುಂ ಗುಣಂಗಳನೆ ನೆಲನೆಲ್ಲಂ ಒಲ್ಲನುಲಿದು ಪೊಗೞೆ: **ಕರ್ಣನೇಮಿ,** ೧೧. ೧೫೦ ವ)

**ಒಲ್ಲನೆ** – ಮೆಲ್ಲನೆ, ನಿಧಾನವಾಗಿ (ಗೋಪಿಯರೆಲ್ಲಂ ಒಲ್ಲನುಲಿದು ಮಲೆದು ಬೆನ್ನಟ್ಟೆ ಕೃಷ್ಣನುಂ ಕಿಱಿನಗೆ ನಗುತ್ತುಂ: **ನೇಮಿನಾಪು,** ೭. ೮೬ ವ)

**ಒಲ್ಲಮೆ** – ಒಲುಮೆ (ಕೂರ್ಪರ ಒಲ್ಲಮೆಯಂತೆ ನಿದಿಗಂಡ ಬಡವನಂತೆ: **ಧರ್ಮಾಮೃ,** ೮. ೫೭ ವ)

**ಒವಜ** – [ಉಪಾಧ್ಯಾಯ] ಗುರು (ಈ ಕೂಸುಗಳ್ ಯೋಗ್ಯರಪ್ಪುದಂ ಇನ್ನೊಲ್ವೊಡೆ ಶಸ್ತ್ರವಿದ್ಯೆಗೆ ಒವಜಂ ನೀನಾಗು ಕುಂಭೋದ್ಭವಾ: **ಪಂಪಭಾ,** ೨. ೫೩)

**ಒವಜುಗೆಯ್** – ಪಾಠ ಹೇಳಿಕೊಡು (ಬವರದೊಳೇಂ ಬಲ್ಲಂ ಕರಂ ಒವಜುಗೆಯಲ್ ಪೆಱರ್ಗೆ ಕರಮೆ ತನಗೆ ಅಱಿಯಂ ಅದೆಂತುವೊ ನುಡಿ ತಪ್ಪದು ಕಮ್ಮಱಿಯೊವಜಂ ಬಿಲ್ಲೊವಜಂ ಎಂಬುದು ಮಾಡುವೆನೇ: **ಪಂಪಭಾ,** ೧೨. ೩)

**ಒಸಗೆ** – ಶುಭ, ಮಂಗಳಕಾರ್ಯ (ಖರಕರಸಮಪ್ರಭಂ ಚಕ್ರರತ್ನಮೊಡವುಟ್ಟೆ ಪುಟ್ಟಿದೆರಡು ಒಸಗೆಯೋಳಂ: **ಆದಿಪು,** ೩. ೨೭); ಸಂತೋಷ (ಮಕ್ಕಳ್ ಒಸಗೆಯಂ ಈವುದು ನಿನ್ನೆಸಕದ ಮಸಕಮನೆ ಪೋಲ್ವ ಮಗನಂ ಮಘವಾ: **ಪಂಪಭಾ,** ೧. ೧೩೯); ಶುಭ ಸಂದೇಶ (ಧನಂಜಯನ ಬರವಿನ ಸಂತಸದೊಸಗೆ ಪಡೆಮಾತಂ ಮುಂದುವರಿದಱಿಪುವಂತೆ: **ಪಂಪಭಾ,** ೪. ೩೨ ವ); ಕಾಣಿಕೆ (ನಿನಗೆ ಒಸಗೆ ಇದೇನಂ ಕುಡುವುದೆಂದೊಡೆ ಎಂದಳ್ ಮಕ್ಕಳೊಸಗೆಯನೆನಗೀವುದು: **ಪಂಪಭಾ,** ೧. ೧೩೯)

**ಒಸಗೆಮರುಳ್ಗೊಳ್** – ಸಂತೋಷದಿಂದ ಹುಚ್ಚೇರು (ಪರಿಜನಮುಂ ಪುರಜನಮುಂ ಒಸಗೆಮರುಳ್ಗೊಂಡು ನಿರ್ಭರಕ್ರೀಡಾ ರಸಪರವಶರಾದಾಗಳ್: **ಆದಿಪು,** ೭. ೧೧೨ ವ)

**ಒಸಗೆವರ್** – ಮಂಗಳವುಂಟಾಗು (ಭುವನಕ್ಕೆಲ್ಲಂ ಒಸಗೆವರ್ಪ<ಂತೆ: ಬಂದ ವಸಂತದೊಳ್: **ಪಂಪಭಾ,** ೫. ೩೫ ವ)

**ಒಸಗೆವಱೆ** – ಮಂಗಳವಾದ್ಯ (ಅಮರರ್ ಒಸಗೆವಱೆ ಬಾಜಿಪಿನಂ: **ಜಗನ್ನಾವಿ,** ೩. ೬೯)

**ಒಸಗೆವಾತು** – ಸಂತೋಷ ಸಮಾಚಾರ (ಪಾಂಡವರಂ ಇಕ್ಕಿದ ಒಸಗೆವಾತುಗಳಂ ಈಗಳೆ ಕೇಳಿಸುವೆಂ ಎಂದು ಸರೋಜನಿಳಯೆ ಎನ್ನ ಬರ್ಪನ್ನಂ ಅರಸನಂ ಅಗಲದೆ ವಿಕಸಿತಶತಪತ್ರಾತಪತ್ರದ ತಣ್ಣೆೞಲುಮಂ ಕುಂದಲೀಯದಿರು ಎಂದು ನಿಯಮಿಸಿ: **ಪಂಪಭಾ,** ೧೩. ೧೦೫ ವ)

**ಒಸಡು** – ಹಲ್ಲುಗಳ ಆಧಾರದ ಮಾಂಸಖಂಡ (ಪಲ್ಲಿಂಗೆ ಪಾಲಂ ಬಿಟ್ಟೊಡೆ ಒಸಡೆಲ್ಲಮಂ ದೈವಂ ತಿಂದುದೆಂಬಂತೆ: **ಧರ್ಮಾಮೃ,** ೨. ೫೯ ವ)

**ಒಸರ್** – ಜಿನುಗು, ಸ್ರವಿಸು (ಎರಡುಂ ಬಂಚಂಗಳಿಂದ ಇಂಚರಂ ಒಸರ್ವಿನೆಗಂ ಕಿನ್ನರದ್ವಂದ್ವಂ ಒತ್ತುತ್ತಿರೆ .. .. ಕಾದಂಬರಿಯಂ ಅವನಿಪಂ ಕಂಡನಾಗಳ್: **ಕಾದಂಸಂ,** ೫. ೬೬); ಜಿನುಗುವುದು (ಆತಂಗೆ ಅಪರಾಜಿತನೆಂದಿಟ್ಟಮರ್ದಿನೊಸರಂ ಪೆಸರಂ: **ನೇಮಿನಾಪು,** ೨. ೨೮)

**ಒಸರಾಱು** – ಹಸಿತನ ಆರಿಹೋಗು (ಸವನಿಸೆ ಹಮ್ಮದಂ ನಡುಪಕಾಲ್ ಬೆವರಂ ಬಿಡುತಿರ್ಪ ಗಲ್ಲಂ ಉಣ್ಮುವ ನವಿರ್ ಎಚ್ಚು ಪಾಯ್ವ ಕಡೆಗಣ್ ಒಸರಾಱುವ ಬಾಯ್ ಜಗುಟ್ಟು ತೋಱುವ ಪೊಱವಾಱೊಳುಚ್ಚಳಿಪ ತೆಳ್ವದಂ ಇರ್ವರೊಳೊಪ್ಪೆ ನೋಡಿದರ್ ತವಕಿಪ ಕಣ್ಮಲರ್ ಸುಸಿಲನೊಪ್ಪಿಸೆ ಕಾವನುಂ ಇಚ್ಛೆಗಾರ್ತಿಯುಂ: **ಕಬ್ಬಿಗಕಾ,** ೨೫೯)

**ಒಸರ್ಚು** – ಜಿನುಗು (ಚಂದ್ರಕಾಂತಕಲಶಂಗಳಂ .. .. ಮುಖಚಂದ್ರಸ್ಮೇರ ಚಂದ್ರಿಕೆಯಿಂ ಒಸರ್ಚಿ: **ಚಂದ್ರಪ್ರಪು,** ೧೧. ೧೪೫ ವ)

**ಒಸರ್ತರ್** – ಒಸರ್ಚು (ರಸಮೊಸರ್ತಪ್ ಪಣ್ಗಳ್ ಸಮಂತಿಟ್ಟಳಮಪ್ಪ ಆಮ್ರಪ್ರತಾನಂ ಬನದೊಳವಿರಳಂ ಶೋಭಿಸುತಿರ್ಪುದೆತ್ತಂ: **ಕುಸುಮಾಕಾ,** ೧. ೮೯)

**ಒಸರ್ದಾಣ** – ನೀರುಕ್ಕುವ ಜಾಗ, ಒರತೆ (ಬೀಡೆವೋಗಿರ್ದ ತನ್ನೀರೊಸರ್ದಾಣಂ ಬಾವಿಯಾದತ್ತು: **ಜಗನ್ನಾವಿ,** ೧೭. ೬೨)

**ಒಸೆ** – ಪ್ರೀತಿಸು (ಪೊಗೞ್ತೆಯನಾಂತಳ್ ಆವಳ್ ಆ ಸರಸತಿ ಕೂರ್ಮೆಯಿಂದ ಒಸೆದು ಮಾಡುಗೆ ಕಬ್ಬದ ಬರ್ದಿನೇಟ್ಗೆಯಂ: **ಕಬ್ಬಿಗಕಾ,** ೩); ಅನುಗ್ರಹಿಸು (ಬೀರವಟ್ಟಮಂ ಆನಿರೆ ನೀಂ ಈ ಸೂತಸುತಂಗೆ ಎಡೆಗೊಂಡು ಕೈವಾರದಿಂದ ಒಸೆದು ಇತ್ತೊಡಂ ಏನಾಯ್ತು: **ಪಂಪಭಾ,** ೧೨. ೪೩); ಹಿಗ್ಗು

(ಸಹಜಭಕ್ತಿಯ ಭರದಿಂ ಸುರಪತಿಯ ಬೆಸೆದಿಂ ಒಸೆದಂ ಧನದಂ: **ಆದಿಪು,** ೭. ೩); ಮೆಚ್ಚು (ಒಸೆದು ಅರ್ಜುನಂಗೆ ಮುಂ ಕಳಶಸಂಭವಂ ಮಾನ್ಯಪದವಿಯಂ ಮಾಡಿದೊಡಂ ಬೆಸುಗೆಗಿಡೆ ಪಾಟೆಗಿಡೆ ತನ್ನಸುವಂ ತೆಲ್ಲಟೆಗೆಗುಡುವ ತೆಱದೊಳ್ ಕೊಟ್ಟಂ: **ಗದಾಯು,** ೨. ೧೫)

**ಒಸೆಯಿಸು** – ಒಲಿಸಿಕೊ (ಜಲಕೇಳಿಯ ಬಿನದದೊಳೆ ಸತಿಯನವರೊಸೆಯಿಸಿದರ್: **ಪುಷ್ಪದಂಪು,** ೯. ೮೨); ಸಂತಸಗೊಳಿಸು (ಅವಿಭಕ್ತಸ್ನೇಹೆಯಂ ರೋಹಿಣಿಯಂ ಒಸೆಯಿಸಲ್ ಸೋಮಲೋಕಕ್ಕೆ .. .. ಎಟ್ಟಿಂದು ರಾಜೇಂದ್ರಚಂದ್ರಂ: **ಕಾದಂಸಂ,** ೮. ೭೦)

**ಒಳಕತ್ತರ** – ಮದ್ದಳೆ ಬಾರಿಸುವ ಒಂದು ರೀತಿ (ಅಳಗಂ ಸುಳಿಯಳಗಂ ಬೊಟ್ಟಳಂ ಕತ್ತರಮುಂ ಎಸೆವ ಪೊಱಕತ್ತರವಗ್ಗಳಿಸಿರೆ ನಾನಾ ಭೇದಂಗಳ ಪಹರಣಿ ತುಡುಕುಮೋಡಿಯಂ ಬಾಜಿಸಿದಂ: **ಧರ್ಮಾಪ,** ೨. ೨೩)

**ಒಳಕೊಳ್** – ಸೇರಿಸಿಕೊ (ಪೊನಲ್ಗಳ ಕೆಂಪು ಪಸುರ್ಪು ಕರ್ಪು ಬೆಳ್ಪು ಒಳಕೊಳೆ ಶಕ್ರಕಾರ್ಮುಕವಿಳಾಸಮಂ ಏನೆರ್ದೆಗೊಂಡು ಬೇಟದತ್ತಳಗಮಂ ಉಂಟುಮಾಡಿದುದೋ ಕಾಮನ ಕಾರ್ಮುಕದಂತೆ ಕಾರ್ಮುಕಂ: **ಪಂಪಭಾ,** ೭. ೨೫); ಸ್ವೀಕರಿಸು (ನೀಂ ತಲೆವೀಸದೆ ಉರ್ವರಾಶ್ರೀಯನಿದಾಗದೆನ್ನದೆ ಒಳಕೊಳ್: **ಪಂಪಭಾ,** ೧೪. ೧೭); ಜೊತೆಗೂಡು (ಇಷ್ಟರ್ ಬಾರಿಸಿದೊಡಂ ಮಾಣದೆ ದುಷ್ಟರನೊಳಕೊಂಡು ಕೆಟ್ಟರ ಕಥೆಗಳಂ ಪೇಟ್ಟೆಂ ಕೇಳಿಂ: **ಪಂಚತಂತ್ರ,** ೧೯೩ ವ); ಉಂಟಾಗು (ಒಳಕೊಂಡ ಪಂಚವಿಂಶತಿ ಮಳದಿಂದಂ ಪಿಂಗಿ: ತತ್ವರುಚಿಯಂ ತಾಳ್ದುಜ್ವಳಗುಣಗಣಂಗಳಿಂದಂ ಬೆಳಗುಗುಮೀ ತೆಱದೆ ನಿನ್ನ ದರ್ಶನರತ್ನಂ: ಸುಕುಮಾಚ, ೬. ೪೬); ಸಹಿಸಿಕೊ (ಬಂದು ನಲ್ಲಂ ಮುನಿಸನೊಳಕೊಂಡು ಮುಖಮಂ ಮುಗುಳ್ನಗೆವೆರಸು ನುಡಿದು ಗೆಂಟಾದಂ: **ಆದಿಪು,** ೧೨. ೨೯ ವ); ಹೊಂದು (ಶಾಂತರೂಪಂ ಬಿಟ್ಟು ಕ್ರೂರ ರೂಪಂ ಕೈಕೊಂಡು ನಗೆಯಂ ಬಿಟ್ಟು ಮುಳಿಸನೊಳಕೊಂಡು: **ಧರ್ಮಾಮೃ,** ೭. ೩೭ ವ)

**ಒಳಗು** – ಒಳಗಡೆ, ಮರ್ಮ, ಮನಸ್ಸು (ಒಗೆದ ಸುತಶೋಕದಿಂದ ಆವಗೆಯಂತೆ ಒಳಗು ಉರಿಯೆ ಭೋಂಕನೆ ಎರ್ದೆ ತೆಱೆಯಲ್ ಹಾ ಮಗನೇ ಎಂದು ಅಶ್ರುಜಲಾರ್ದ್ರಗಂಡಂ ಆ ಗಂಡಿನೊಡನೆ ಬಿಸುಟಂ ಬಿಲ್ಲಂ: **ಪಂಪಭಾ,** ೧೨. ೨೮)

**ಒಳನ್** – ಇದ್ದಾನೆ (ದೇಹದೊಳಗೆ ಆತ್ಮನದೇಕಿಲ್ಲ ಕಿರುಡಂಗೆ ತೋಱದೊಡೆ ಇಲ್ಲಪ್ಪುದೇ ವಸ್ತು ಭೇದಿಪಂಗೆ ಆತ್ಮನೊಳಂ: **ಯಶೋಧಚ,** ೪. ೨೭)

**ಒಳಪೊಯ್** – ವಶಪಡಿಸಿಕೊ, ಒಳಗೆ ಹಾಕಿಕೊ (ಒಳಪೊಯ್ಯಲ್ ನಿನ್ನನಾ ಕನ್ನೆಯ ತುಱುಗೆಮೆಗಳ್: **ಆದಿಪು,** ೪. ೨೧)

**ಒಳವಗೆ** – ಒಳಗಿನ ಶತ್ರು, ಅರಿಷಡ್ವರ್ಗ (ಒಲವಗೆಗಳಂ ಆಱುಮಂ ಅದಿರ್ಪಿದ್ಯೆ ದೇವ ಮಗುಟ್ಟುಂ ಅವು ಕೂಡದವೋಲ್: **ಲೀಲಾವತಿ,** ೪. ೪೪)

**ಒಳವು** – [√ಉಳ್] ಉಂಟು, ಇವೆ (ಇನಿತಾನುಂ ಮತ್ತಮೊಳವು ಶೈವಾಗಮದೊಳ್: **ಸಮಯಪ,** ೧೦. ೮೧)

**ಒಳವೊಗು** – ಒಳಪೊಗು (ಸುಯೋಧನಂ ಎನಗೆ ಒಳ್ಳಿಕೆಯ್ದು ಕೃತಮಂ ಪೆಱಗಿಕ್ಕಿ ನೆಗಟ್ತೆ ಮಾಸೆ ನಣ್ಪಿನ ನೆವದಿಂದೆ ಪಾಂಡವರಂ ಆಂ ಒಳವೊಕ್ಕಡೆ ನೀಮೆ ಪೇಸಿರೇ: **ಪಂಪಭಾ,** ೯. ೬೮)

**ಒಳಸಾರ್** – ಒಳಪೊಗು (ಆಕುಳವ್ಯಾಕುಳರಾಗಿ ನಾಣ್ಚಿ ಜಗುಟ್ದಿರ್ದರುಂ ಅಂದು ಒಳಸಾರ್ದು ಪೋಪುದುಂ: **ಆದಿಪು,** ೩. ೮೯)

**ಒಳಸೋರ್** – ಕೈವಶವಾಗು; ಹಿಂಜರಿ (ಎಂತು ಇದಿರಾಂತೆ ಅಂತೆ ಕಲಿಯಾಗು ಒಳಸೋರದಿರ್ ಎಂದು ಭೀಮಂ ಓರಂತೆ ಕನಲ್ದು ತಿಣ್ಣಂ ಇಸೆ: **ಪಂಪಭಾ,** ೧೦. ೯೮); ಜಾರು, ಕುಂದು (ನೆಚ್ಚಿನ ಎಲರ್ ಒಯ್ಯನೆ ಜಾಱದೆ ಬಂದ ಮಾವು ಬೀತು ಒಱಗದೆ ಗಂಡುಗೋಗಿಲೆಯ ಸೊರ್ಕು ಒಳಸೋಱದೆ ಸೈತೆ ಪೋಕುಮೇ: **ಕಬ್ಬಿಗಕಾ,** ೧೮೧); ಮರೆಯಾಗು, ಅಡಗು (ಕುಱಿವಿಂಡನೆಯ್ದಿ ಮೆಯ್ವಸಂ ಒಳಸೋರ್ವಿನಂ ಪಿಡಿದು ಗುಕ್ಕಿಸಲಾಱಳೆ: **ಸಮಯಪ,** ೯. ೧೧೩)

**ಒಳಱು** – ಕಿರಿಚು, ಅರಚು (ಉರಿ ಕೊಳೆ ದೆಸೆಗಾಣದೆ ದೆಸೆವರಿವರಿದು ಕುಜಂಗಳಂ ಪಡಲ್ವಡಿಸಿ ಭಯಂಬೆರಸು ಒಳಱೆ ನೆಗೆದುದಾ ವನ ಕರಿ ಶರಭ ಕಿಶೋರಕಂಠಗರ್ಜನೆ ಬನದೊಳ್: **ಪಂಪಭಾ,** ೫. ೯೧)

**ಒಳ್ಕ** – ಸುರತಕ್ರೀಡೆ (ಮಸೆವುದು ಮಾಸಲಿರ್ದ ಪಱವೇಟಮಂ ಇಚ್ಚೆಯ ಬಿಚ್ಚತಿಕ್ಕೆಯಂ ಪೊಸೆಯಿಪುದು ಒಳ್ಕಮಂ ನಡೆಪುತಿರ್ಪುದು ಧಾತುವಂ ಒಳ್ಪಿತೆಯ್ದೆ ಪಾಟಿಸುವುದು ಕೂಟದೊಳ್ ಕುಶಲನಪ್ಪುದು: **ಶಾಂತಿಪು,** ೮. ೯೧)

**ಒಳ್ಗುಡಿ** – ಒಳ್ಳೆಯ ಬಾವುಟ (ಓಳಿದೋರಣಮಾಯ್ತು ಹಾರದ ಪಚ್ಚೆಸಾರದ ಮಾಲೆ ಸೌಧಾಳಿಯ ಒಳ್ಗುಡಿಯಾಯ್ತು ಚೀನದ ಸೂಯಿಯಾಣದ ಬಟ್ಟೆ: **ಪಂಪಭಾ,** ೧೪. ೧೫)

**ಒಳ್ನುಡಿಕಾಱ** – ಒಳ್ಳೆಯ ಮಾತುಗಾರ (ಕಾಱಕ್ಕೆ: ನಡೆವಳಿಕಾಱಂ ನೀಱಂ ಪಗೆಕಾಱಂ ಪಾಟಕಾಱಂ ಒಳ್ನುಡಿಕಾಱಂ: **ಶಬ್ದಮದ,** ೨೧೦ ಪ್ರ ೧)

**ಒಳ್ಪು** – ಒಳ್ಳೆಯದು (ವಂಚನೆಯೆಲ್ಲಿಯುಂ ಒಳ್ಪು ಮಾಡದು ಕಡೆಯೊಳ್: **ಯಶೋಧಚ,** ೩. ೧೧); ಚೆಲುವು (ಪಿಡಿದೆಡಗಯ್ಯ ಚಾಮರದದಕ್ಷಿಣಹಸ್ತದ ಪದ್ಮದ ಒಳ್ಪು ಒಡಂಬಡೆ: ಪಂಪಭಾ, ೩. ೯೯); ಒಳಿತು (ಅವನೀನಾಥನ ಗೆಯ್ದ ಪೊಲ್ಲಮೆಗಂ ಎನ್ನ ಒಳ್ಪಿಂಗಂ ಇಂ ಸಕ್ಕಿಯಾಗಿ ಅವಂ ಈವಂತುಟಂ ಅದಂ ಬಲ್ಲಂತು ಕಾಲ್ಗುತ್ತಿ ನೋಡು: **ಪಂಪಭಾ,** ೯. ೨೬); ಸಾರ, ತಿರುಳು (ಕನ್ನಡದೊಳಿನ ನುಡಿಯಂ ಮುನ್ನಿದಱೊಳೆ ನೋಡಿ ತಿಳಿದುಕೊಳ್ವುದು ಚದುರಂ: **ಕಬ್ಬಿಗಕಾ,** ೭); ಮೇಲ್ಮೆ (ಚಕ್ರವರ್ತಿಯುಮಂ ಪೆರ್ಚಿಸಿದೊಳ್ಪು ನಿನ್ನೊಳೆಸೆಗುಂ ಶ್ರೀದಾನಚಿಂತಾಮನೀ: ಅಜಿತಪು, ೧೨. ೧೧)

**ಒಳ್ಪುಗೊಳ್** – ಒಪ್ಪಿಕೊ (ಅನ್ನೆಗಂ ಮುನ್ನಮೆ ರಾಜ್ಯಮಂ ಒಳ್ಪುಗೊಳ್ಗೆ ಬಟಿಕ್ಕೆ ಕಳಿಪುವೆನೆನೆ: **ಕರ್ಣನೇಮಿ,** ೪. ೧೧೩ ವ)

**ಒಳ್ಮೊಗ** – ಚೆಲುವಾದ ಮುಖ (ಸೊಗಯಿಸಿ ಬಂದ ಮಾಮರನೆ ತಳ್ತ ಎಲೆವಳ್ಳಿಯೆ ಪೂತ ಜಾತಿಸಂಪಗೆಯೆ ಕುಕಿಲ್ವ ಕೋಗಿಲೆಯೆ ಪಾಡುವ ತುಂಬಿಯೆ ನಲ್ಲರ ಒಳ್ಮೊಗಂ ನಗೆಮೊಗದೊಳ್ ಪಳಂಚಲೆಯೆ ಕೂಡುವ ನಲ್ಲರೆ ನೋಟಪ್ಪೊಡೆ: **ಪಂಪಭಾ,** ೪. ೨೮)

**ಒಳ್ವರಿಜು** – [ಒಳ್+ಪರಿಜು] ಒಳ್ಳೆಯ ಆಕಾರ, ಸುಂದರ ದೇಹ (ಬಾನ್ನವಿರಂ ಒಳ್ವರಿಜಂ ತಳೆದೊಪ್ಪಿ ತೋಱಿದಂ: **ಶಬರಶಂ,** ೫. ೯)

**ಒಳ್ವೆಂಡಿರ್** – ಸುಂದರ ಹೆಣ್ಣು (ಕುಡುಮಿಂಚಂ ಮಸೆದನ್ನರಪ್ಪ ಪಲರ್ ಒಳ್ವೆಂಡಿರ್ ಮನಂಗೊಂಡು ಬಂದೊಡಮಾ ರಾಜಕುಮಾರನೊಲ್ಲದೆ: **ಆದಿಪು,** ೩. ೧೨)

**ಒಳ್ವೊಕ್ಕು ನಿಲ್** – ಬಲವಾದ ಆಶ್ರಯ ಪಡೆದಿರು (ಇದಿರೊಳ್ ನಿಂದೊಡೆ ವಜ್ರಿ ಸೈರಿಸಂ ಇರಲ್ವೇಡ ಎಮ್ಮ ಒಳ್ವೊಕ್ಕು ನಿಲ್ ನೀನೆಂದು ಕಡಂಗಿ ಕಾಲ್ವಿಡಿವವೊಲ್: **ಪಂಪಭಾ,** ೪. ೨೪)

**ಒಳ್ಳಕ್ಕರಿಗ** – ಶ್ರೇಷ್ಠ ವಿದ್ವಾಂಸ (ಭಾವುಕರ್ ಏಕಱೆದು ಮಾಣರ್ ಒಳ್ಳಕ್ಕರಿಗರ್: **ಸಮಯಪ,** ೯. ೭೪)

**ಒಳ್ಳನುರಿ** – [ಗಾಯ] ಭಗಭಗ ಉರಿ (ಒಳ್ಳನುರಿವ ಪುಣ್ಗಳೊಳ್ ಕ್ಷಾರವಾರಿಗಳನೆಱೆದೊರಸಿ ಕರ್ಚುವರುಂ: **ಆದಿಪು,** ೫. ೮೫ ವ)

**ಒಳ್ಳನೆ** – ಸುಮ್ಮನೆ (ಒಳ್ಳನುರಿವ ಪುಣ್ಗಳೊಳ್ ಕ್ಷಾರವಾರಿಗಳಂ ಎಱೆದೊರಸಿ ಕರ್ಚುವರುಂ: **ಆದಿಪು,** ೫. ೮೫ ವ)

**ಒಳ್ಳರ್ಚನೆ** – ಉತ್ತಮ ಪೂಜಾಸಾಮಗ್ರಿ (ಕೂಸಿಂಗೆ ಕುತ್ತವಾದೊಡೆ ದೇಶದ ಬಳರಿಯರ್ಗೆ ಕುಡುವರ್ ಒಳ್ಳರ್ಚನೆಯಂ: **ಸಮಯಪ,** ೫. ೯೯)

**ಒಳ್ಳಾನೆ** – ಒಳ್ಳೆಯ ಆನೆ (ಪಟ್ಟಂಗಟ್ಟಿದ ಇಳಾಧಿನಾಥರೆ ಪಯಿಂಛಾಸಿರ್ವರ್ ಒಳ್ಳಾನೆಗಳ್ ಪಟ್ಟಂಗಟ್ಟಿದುವು ಒಂದು ಲಕ್ಕ ತುರಗಂ ಪತ್ತೆಂಟು ಲಕ್ಕಂ: **ಪಂಪಭಾ,** ೧೦. ೧೧೭)

**ಒಳ್ಳಾರ** – ಒಳ್ಳೆಯ ಮಾಲೆ (ಚಂಪಕದ ಒಳ್ಳಾರಂಗಳಂತೆ ದೀಪಿಕಾಸಹಸ್ರಂಗಳ್ .. .. ಮಾರ್ಪೊಳೆಯುಂ: **ಕಾದಂಬ,** ೩. ೫೧ ವ)

**ಒಳ್ಳಾಳ್** – ಒಳ್ಳೆಯ ಶೂರ (ಕಿರಾತರಾಜರ್ ತಮ್ಮ ಉಳ್ಳಾಳುಮಂ ಉರ್ಕಾಳುಮಂ ಒಳ್ಳಾಳುಮಂ ಒಡಗೊಂಡು ಬಂದು ತಾಗಿದರಾಗಳ್: **ಜೀವಸಂ,** ೩. ೪೦

**ಒಳ್ಳಿಕೆಯ್** – ಒಳಿತನ್ನು ಮಾಡು (ಘೋರವೀರ ತಪಮೆಂಬಿನಂ ನೆಗಟ್ಟಿ ತತ್ಸಚಿವೋತ್ತಮಂ ಒಳ್ಳಿಕೆಯ್ದಂ: **ಆದಿಪು,** ೨. ೬೧)

**ಒಳ್ಳಿದ** – ಒಳ್ಳೆಯವನು (ಮದೆವಳಂ ಪೋಗಲ್ವೇಟ್ಟು ಪೂಜಿಸಿ ಕಟಿಪಿದೊಡೆ ಆಕೆಯುಂ ತನ್ನ ಮನೆಗೆ ಪೋದಳ್ ಇಂತು ಅವರ್ ಒಳ್ಳಿದರಾದರ್: **ವಡ್ಡಾರಾ,** ಪು ೧೭, ಸಾ ೬)

**ಒಳ್ಳೆ** – ವಿಷವಿಲ್ಲದ ಹಾವು (ಪಡೆವಳ್ಳಂ ಗಡಂ ಆ ಬಲಕ್ಕೆ ದಲೆ ದೃಷ್ಟದ್ಯುಮ್ನನೆಂಬ ಒಳ್ಳೆ ಆ ಪಡೆಯೊಳ್ ಗಂಡನುಂ ಆ ಮೊಲಂ ದ್ರುಪದನುಂ ಪೇರೊಟ್ಟೆ ಆ ಮತ್ಸ್ಯನುಂ ಗಡಂ: **ಪಂಪಭಾ,** ೧೦. ೪)

**ಒಱಂಟ** – ಒರಟ, ಗಡುಸಾದವನು (ಆಗಳ್ ಅಂಗರಾಜಂಗೆ ಶಲ್ಯಂ ಕಿನಿಸಿ ಮುಳಿಸಿನೊಳೆ ಕಣ್ಣಾಣದ ಇಂತಪ್ಪ ಏಕಗ್ರಾಹಿಗಂ ಒಱಂಟಂಗಂ ರಥಮಂ ಎಸಗೆಂ ಎಂದು ವರೂಥದಿಂದ ಇಟಿದು ಪೋಗೆ: **ಪಂಪಭಾ,** ೧೨. ೨೦೫ ವ)

**ಒಱಂಟು** – ಮೊಂಡುತನ (ನೀನೆ ಜೆಟ್ಟಿಗನ್ನೆ ಮುನ್ನಿನ ಒಱಂಟುವೇಡ ಮಗನೇ ಕೈಕೊಳ್ ಧರಾಭಾರಮಂ: **ಪಂಪಭಾ,** ೧. ೮೧)

**ಒಱಂಟುತನ** – ಒರಟುತನ, ಬಿರುಸು (ನಿನ್ನ ಒರಂಟುತನಂ ಕೈಗಟಿವಾಯ್ತು ಅದಪ್ಪೊಡೆ ಮಹಾಭಾರಾವತಾರಂ ರಣೋದ್ಯತನಾಗು ಎಂಬುದಂ ಎಮ್ಮಂ ಅನ್ಯರವೊಲೇಂ ನೀಂ ಪ್ರಾರ್ಥಿಸಲ್ವೇಟ್ಟುದೇ: **ಪಂಪಭಾ,** ೧೦. ೧೦)

**ಒಱಂತೆ** – ಒರತೆ, ನೀರ ಬುಗ್ಗೆ (ದೂರ ಪೆರ್ಬಾವಿಯ ಒಱಂತೆ ತೋಡುವಿನೆಗಂ ತಳಕೋಡಿದುದಾ ನಿದಾಘದೊಳ್: **ಸೂಕ್ತಿಸು,** ೧೦. ೯೦)

**ಒಱಗು** – ಮಲಗು (ಅಂತು ಶರಪಂಜರದೊಳ್ ಒಱಗಿಯುಂ ಒಡಲಿಂ ಪತ್ತುವಿಟ್ಟು ಪೋಪ ಜೀವಮಂ ಪೋಗಲೀಯದೆ: **ಪಂಪಭಾ,** ೧೧. ೪೭ ವ): ನಿದ್ದೆ ಹೋಗು (ಒಱಗು– ಸುಪ್ತೌ: **ಶಬ್ದಮದ, ಧಾ** ೯೬)

ಒಱತೆ – ಚಿಲುಮೆ (ಮಿಱುಗುವ ಬೆಳತಿಗೆಗಣ್ಬೊಣರ್ ಒಱತೆಯ ಜಲದೊಳಗೆ ಪೊಳೆಯೆ: **ಲೀಲಾವತಿ,** ೬. ೪೩)

**ಒಱಲ್** – ಪ್ರೀತಿಸು (ಇಂದ್ರನರೇಂದ್ರವಂದ್ಯನಂ ಒಱಲ್ದು ಎತ್ತಾನುಮೋರೊರ್ಮೆ ಚಿಂತಿಸಿದೊಂಗಂ ಪವಣಿಲ್ಲ ಪುಣ್ಯಂ: **ಆದಿಪು,** ೧. ೩೭); ಸ್ನೇಹ ತೋರು (ಒಱಲ್ದು ಮಱುಗಿ ಕಾತರಿಸುತ್ತುಂ ಮನದೊಳ್ ಸೈರಿಸಲಾಱೆಂ: **ಕವಿರಾಮಾ,** ೨. ೮೩); ಕೂಗು (ಅವಿರಳಮಾಗೆ ಕಾಂತಮಣಿದರ್ಪಣಮಂ ಬೆಳಪಂದದಿಂ ಮಹಾಕವಿಗಳ್ ಒಱಲ್ದು ತಿರ್ದುಗೆ ವಚೋವನಿತಾಕಚಬಂಧಮಂ: **ಮಲ್ಲಿನಾಪು,** ೧. ೨೪)

**ಒಱಲ್ಚು** – ಧ್ವನಿಮಾಡು (ಮಣಿಕಂಠನಾದಂ ಒಱಲ್ಚೆ ಸೇಸೆಯಂ ತಳಿದರ್ ಅನಂಗಜಂಗಮಲತಾಲಲಿತಾಂಗಿಯರ್: **ಪಂಪಭಾ,** ೪. ೫೯)

**ಒಱಲ್ದಂ** – ಪ್ರೀತಿಸಿದವನು (ಒಱಲ್ದನೆಂದು ಕೂರ್ತಂ: **ಶಬ್ದಮದ.,** ಪ್ರಸಾ, ೪೧)

**ಒಱವು** – ಊಟೆ, ಒರತೆ (ಮೇರುವ ಪೊಂ ಕಲ್ಪಾಂಘ್ರಿಪದ ಆರವೆ ರಸದ ಒಱವು ಪರುಸವೇದಿಯ ಕಣಿ ಭಂಡಾರದೊಳ್ ಉಂಟೆನೆ ಕುಡುವ ಅನಿವಾರಿತ ದಾನಕ್ಕೆ ಪೋಲ್ವರಾರ್ ಬದ್ದೆಗನಂ: **ಪಂಪಭಾ,** ೧. ೨೮)

**ಒಱವುಗಱೆ** – ಬುಗ್ಗೆಯಂತೆ ಚಿಮ್ಮು (ಭೂಗೆ ಒಲ್ದು ಒಱವುಗಱೆಯಲ್ ಆ ಗೋಸ್ತನಿ ನಾಮಂ .. .. ಸದ್ರಸಮನೆ ಸುರಿಯುತ್ತಿರ್ಪ ಪಣ್ಗೊಂಚಲಂ: **ಕುಸುಮಾಕಾ,** ೧. ೯೩)

**ಒಱವುದೋಡು** – ಒರತೆಯನ್ನು ತೋಡು (ಸುಧಾಂಬುಧಿ ದೊರೆಕೊಂಡೊಡೆ ಏಂ ಒಱವುದೋಡುವರೇ: **ನೇಮಿನಾಪು,** ೧. ೪೯)

**ಒಱೆ** – ಸ್ರವಿಸು (ಸೋಂಕಿನೊಳ್ ಒಱೆವ ಇಂದುಕಾಂತ ಮಣಿಪುತ್ರಿಕೆಯಂದದಿಂ ಒಪ್ಪಿ ತೋಱೆದಳ್: **ಆದಿಪು,** ೪. ೪೯); ಕತ್ತಿಯ ಕವಚ (ಪಿಡಿಕೆಯ್ ತೀವಿದ ಕೂರ್ಗಣೆ ಮಡಕಾಲ್ವರಂ ಅಲೆವ ಕಚ್ಚೆ ನಿಡಿಯಸಿಯ ಒಱೆ ಕರ್ಪಿಡಿದ ಪಣೆಕಟ್ಟು ಕೆಯ್ಪುಡೆ ಬೆಡಂಗನೊಳಕೊಳೆ ಧನುರ್ಧರರ್ ಪೆಣೆದೆಚ್ಚರ್: **ಪಂಪಭಾ,** ೧೦. ೭೧)

**ಒಱೆಗಾಱ** – ಒಱೆಯನ್ನು ತಯಾರಿಸುವವನು (ವಾದಿ ವಾಗ್ಮಿ ಪಾಠಕ ಸುಭಟ ಶ್ರೇಣಿಗಳ ಒಱೆಗಾಱರ್ ಅವರ್ ಸಾಣೆಯಂ ಮೊದಲಾದ ಶಿಲ್ಪಿಗಳ್ ಪೊಱಮಟ್ಟರ್: **ಸೂಕ್ತಿಸು,** ೧೮. ೨೬)

**ಒಱೆದುರ್ಚು** – ಒಱೆ, ಸ್ರವಿಸು (ಮಹೋರಗನೆಯ್ದೆ ಪಲ್ಗಳರ್ದೊಡೆ ಕಿಡಿವೀಟೆ ನೆತ್ತರ್ ಒಱೆದುರ್ಚುಗೆ ಕೊಂಡುದು ತತ್ತಪಸ್ವಿಯಂ: **ಆದಿಪು,** ೨. ೪೦)

**ಒಱೆಪು** – ಸ್ರವಿಸುವಿಕೆ (ನಿಚ್ಚಂ ಪಗಲ್ ಇನಕಾಂತದಕಿಚ್ಚಂ ಇರುಳ್ ಚಂದ್ರಕಾಂತದ ಒಱೆಪಮ ಪಡೆದು: **ಅಜಿತಪು,** ೯. ೨೨)

**ಒಱೆವಾಯ್** – ಜೊಲ್ಲು ಸುರಿಸುವ ಬಾಯಿ (ಪಱೆದಲೆ ಕುಟಿನೊಸಲ್ ಅಟಿಗಣ್ ಒಱೆವಾಯ್ ಹಪ್ಪಳಿಕೆ ಮೂಗು: **ಯಶೋಧಚ,** ೨. ೩೮)

**ಒಱೆವೋಗು** – ಸೋರಿಹೋಗು (ಮೇರೆಗಟಿದ ಬಱೆಕಾರ ಸೈರಣೆಯುಂ ಒಱೆವೋಗದಿರವು: **ಅನಂತಪು,** ೧೧. ೩೨ ವ)

**ಒಟ್ಟು** – ಪ್ರವಹಿಸು, ಹರಿದು ಹೋಗು (ಜಲಜಲನೆ ಒಟ್ಟುತಿರ್ಪ ಪರಿಕಾಲ್ ಪರಿಕಾಲೊಳ್ ಅಳುರ್ಕೆಗೊಂಡ ನೈದಿಲ ಪೂ .. .. ಸಿರಿ ನೋಡುಗುಮಾ ವನಾಂತರಾಳದೊಳ್: **ಪಂಪಭಾ,** ೧. ೫೨)

**ಒಟ್ಟುಡಿ** – ನಿಲ್ಲದ ಪ್ರವಾಹ (ಬಿಡದೆ ಅಟಲ್ವ ಬಂಧುಜನದ ಒಟ್ಟುಡಿಯದ ಕಣ್ಣೀರ ಪೂರಂ ಆ ಪ್ರೇತಮಂ ಓಗಡಿಸದೆ ಸುಡುವುದು ಗಡಂ ಇನ್ನುಡುಗುವುದೀ ಶೋಕಮಂ ಸರೋಜದಳಾಯತಾಕ್ಷೀ: **ಪಂಪಭಾ,** ೨. ೨೮)

**ಒಟ್ಗು** – ಗುಂಪು ಸೇರು (ಒಟ್ಗು–ಸಮ್ಮೇಲನೇ: **ಶಬ್ದಮದ, ಧಾ** ೯೭)

# ಓ

**ಓ** – ಪ್ರೀತಿಸು (ಧರಾಭರಮನಶೇಷಮಂ ನಿಜತನೂಭರ್ಗೆ ಓವದೆ ಪಚ್ಚುಕೊಟ್ಟು: ೯. ೭೫); ಓ ಎಂದು ಉತ್ತರಿಸು; ಸಲಹು (ಆವ ಅಲರುಂ ಪಣ್ಣುಂ ಬೀತು ಓವುವು ಗಡ ಬೀಯವಲ್ಲಿ ಮಲ್ಲಿಗೆಗಳುಂ ಇಮ್ಮಾವುಗಳುಂ ಎಂದೊಡೆ ಇಂ ಪೆಱತಾವುದು ಸಂಸಾರಸಾರಸರ್ವಸ್ವಫಲಂ: **ಪಂಪಭಾ,** ೧. ೫೫); ಉಪಚರಿಸು (ವಿಕ್ರಾಂತತುಂಗಂ ಇರ್ಪನ್ನೆಗಂ ಇತ್ತಲ್ ಎರಡುಂ ಪಡೆಯ ನಾಯಕರ್ ಅಱಿಯೆ ನೊಂದ ತಮ್ಮ ಅಣುಗಾಳ್ಗಳ ಕೊಂಡಾಟದಾನೆಗಳ ನಚ್ಚಿನ ಕುದುರೆಗಳ ಪುಣ್ಗಳಂ ಉಡಿಯಲುಂ ಓವಲುಂ ಮರ್ದುಬೆಜ್ಜರುಮಂ ಅಟ್ಟುತ್ತುಂ: **ಪಂಪಭಾ,** ೧೧. ೨ ವ)

**ಓಂಕಾರ** – ಪ್ರಣವಾಕ್ಷರ (ಕಾಲಾಂತಕಂ ಶಂಕರನೋಂಕಾರಂ: **ರಾಜಶೇವಿ,** ೧೪. ೧೫೩): ಆರಂಭಮಂಗಳ ಮತ್ತು ಅಂತ್ಯಸೂಚಕ (ಆರಂಭಮಂಗಳಾದಿಯೊಳ್ ಓರಂತೆ ಓಂಕಾರಂ: **ಅಭಿಧಾವ,** ೩. ೧. ೧೧೨)

**ಓಂತಿ** – ಓತಿಕೇತ (ನರಿ ನಾಯ್ ಬೆಕ್ಕು ಓಂತಿ .. .. ಕಾಟ್ಕೋಟಿ ಎಂಬ ತಿರಿಕವ್ರಾತಂಗಳೊಳ್ ಸಂಭವಿಸಿ; ಧರ್ಮಾಮೃ, ೧೩. ೧೦೩)

**ಓಕ** – ಆಶ್ರಯ, ಮನೆ (ಎಲೆ ವಿದ್ಯಾಧರನಾಥ ದೇವಿ ಪಡೆದಳ್ ಭೂಭಾನುವಂ ಸೂನುವಂ ಲಲಿತಾಗಣ್ಯವರೇಣ್ಯ ಲಕ್ಷಣಮಣಿವ್ರಾತ ಓಕನಂ ತೋಕನಂ: **ಶಾಂತೀಶ್ವಪು,** ೪. ೪೪); ಸ್ಥಾನ (ಓಕಂ ಸ್ಥಾನಮುಂ ಆಗರಮುಂ ತಾನಕ್ಕುಂ: **ಅಭಿಧಾವ,** ೩. ೧. ೨೦)

**ಓಕರಿಸು** – ಕಾರು, ವಾಂತಿಮಾಡು (ಓ ಎಂದು ಓಕಱಿಸಿ ನರೇಂದ್ರನ ಮೇಲೆ ಕಾಱಿದನಾಗಳ್: **ಧರ್ಮಾಮೃ,** ೪. ೧೦೦)

**ಓಕಃಪ್ರಾಂಗಣ** – ಮನೆಯ ಅಂಗಳ (ಮಣಿಹರ್ಮ್ಯಶ್ರೇಣಿ ಕೇಳೀವನವಿಳಸಿತ ಮಾನವ್ಯಮಷ್ಪೋಹಾರೋಲ್ಬಣ ಓಕಃಪ್ರಾಂಗಣಂ ಸಸ್ಮಿತ ಸರಸಿಜ ಕಾಸಾರಂ: **ಶಾಂತೀಶ್ವಪು,** ೧೩. ೧೬೧)

**ಓಕುಳಿ** – ಬಣ್ಣದ ನೀರು (ಮುತ್ತಿನ ಪಚ್ಚೆ ಮಾಣಿಕದ ವಜ್ರದ ಕೇಱಿಯೊಳ್ ಒಂದಿ ಸಾಂದಿನೊಳ್ ಕತ್ತುರಿಯೊಂದು ಕೋಟ್ಗೆಸಱೊಳ್ ಓಕುಳಿ ಚಂದನ ಗಂಧವಾರಿಯೊಳ್ ಸುತ್ತಲುಂ ಅಟ್ಟೞಂ ಪಡೆವ ಗೇಯದ ಪೆಂಪಿನ ಅಲಂಪಂ ಆರ್ಗಂ ಆರ್ತಿತ್ತುದು ಪಟ್ಟಬಂಧ ಮಹೋತ್ಸವಂ ಆ ಪಡೆಮೆಚ್ಚೆ ಗಂಡನಾ: **ಪಂಪಭಾ,** ೧೪. ೨೦)

**ಓಗಂಬಾಡು** – ಸುಪ್ರಭಾತ ಹಾಡು (ನಿನಗೆ ಓಗಂಬಾಡುವ ಯುವತಿನಿಕಾಯದ ದನಿಗೆ ಸೆಣಸುವಂತೆವೊಲ್ .. .. ಮೊರೆವುವಳಿಗಳ ಬಳಗಂ: **ಆದಿಪು,** ೧೨. ೫೦)

**ಓಗಡಿಸು** – ಹಾಳಾಗು (ಮೂರ್ಖಜಡಜನಾರಣ್ಯದೊಳ್ ಇಂಪು ಓಗಡಿಸಿದ ಕವಿಶಬ್ದಮದು ಏಗೆಯ್ದುದು ಅರಣ್ಯರುದಿತಂ ಬಗೆವಾಗಳ್: **ಆದಿಪು,** ೧. ೨೩); ಬೇಸರ ತೋರು (ಪೂಮಾಲೆಯಂ ಓಗಡಿಸದೆ ಕುಡುವಮರಿ ಕಲ್ಪಲತೆಯಂ ಪೀಲ್ದಳ್: **ಆದಿಪು,** ೭. ೧೧); ಹಿಂಜರಿ (ನಡೆಯೆ ಚಟುಳತೆಗೆ ಕಣೆಯಂ ಸಡಿಲ್ದೊಡೆ ಅದಂ ಎಡದ ಕೆಯ್ಯೊಳ್ ಓಸರಿಸುತ್ತುಂ ನಡೆದು ಗವಾಕ್ಷಂಬರಂ ಓಗಡಿಸದೆ ನವವರನಂ ಅಬಲೆ ನೋಡಿದಳೊರ್ವಳ್: **ಶಾಂತಿಪು,** ೬. ೯); ಅಸಹ್ಯಪಡು (ಬಿಡದೆ ಅಟಲ್ವ ಬಂಧುಜನದ ಒಟ್ಟುಡಿಯದ ಕಣ್ಣೀರ ಪೂರಂ ಆ ಪ್ರೇತಮಂ ಓಗಡಿಸದೆ ಸುಡುವುದು ಗಡಂ ಇನ್ನುಡುಗುವುದೀ ಶೋಕಮಂ ಸರೋಜದಳಾಯತಾಕ್ಷೀ: **ಪಂಪಭಾ,** ೨. ೨೮)

**ಓಗರ** – ಅನ್ನ (ನೀಮಿಂದು ಬಂದೊಡೆ ಅವು ನೆಱೆಯವಾಗಿ ಮುತ್ತಿನೋಗರದ ಅಕ್ಕಿಯಂ ಬೆರಸಿ ಬಾಗಿದ ಕಾರಣದಿಂ .. ..ಪುಷ್ಪವಾಸನೆಯಕ್ಕಿಯಯ ಕೂಟನುಣ್ಬುಂ ಉಟಿದಕ್ಕಿಯ ಕೂಟಂ ಉಗುಳುತಿರ್ಕುಂ: **ಸುಕುಮಾಚ,** ೧೧. ೩೫ ವ)

**ಓಗರಗಂಪು** – ಬೆರಕೆ ಗಂಧ, ಸಮ್ಮಿಶ್ರಗಂಧ (ಅಗರುವ ಮೆಚ್ಚು ಅಚ್ಚ ಸಿರಿಕಂಡದೊಳ್ ಅಗ್ಗಲಿಸಿತ್ತು ಸೂಡುಶಯ್ಯೆಗಳ ಬಯಕ್ಕೆ ಜೊಂಪಲರ್ದವು ಪಾಸುಗಳೊಳ್ ನೆಲಸಿತ್ತು ಪೂತ ಗೊಜ್ಜಗೆಗಳ ಸಿಂದುರಂಗಳೊಳಗೆ ಓಗರಗಂಪನೆ ಬೀಱುತ; **ಪಂಪಭಾ,** ೫. ೩೦)

**ಓಗರವೂ** – ಬೆರಕೆ ಹೂ (ಓಗರವೂಗಳ ಬಂಡಂ ಎಯ್ದೆ ಪೀರುತ್ತ ಒಡವಂದುವು ಇಂದ್ರವನದಿಂ ಮಱಿದುಂಬಿಗಳ್; **ಪಂಪಭಾ,** ೧೧. ೮೧)

**ಓಘ** – ಗುಂಪು (ಬಂದಿಸುವೆಂ ಪ್ರೀತಮನಂ ನಿಖಿಲ ಗಣಧರ ಓಘ ಉತ್ತಮನಂ: **ಆಚವರ್ಧ,** ೧. ೯); ಪ್ರವಾಹ (ಅಂಬುಪ್ರವಾಹಮುಂ ವೃಂದಮುಂ ಅಂತವು ಓಘಂ: ಅಭಿಧಾವ, ೩. ೧. ೪೬)

**ಓಘಮೇಘಮಾಗು** – ಧಾರಾಕಾರ ಮಳೆ ಸುರಿ (ಮೇಘಮುಖರೆನಿಸಿ ಸಂದುರಗೌಘದಿನಂದು ಓಘಮೇಘಮಾದೊಡೆ ಮಱಿ: **ಆದಿಪು,** ೧೪. ೭೧)

**ಓಜ** – ಒವಜ [ಉಪಾಧ್ಯಾಯ] ಗುರು (ಮತ್ತುಱಿದ ವಿದ್ಯೆಗಳ್ ಓಜರೆ ಚಟ್ಟರ್ ಎಂಬಿನಂ ನೆರೆದುವು ಗಳ ತನ್ನೊಳಾರ್ ದೊರೆ ಗುಣಾರ್ಣವನಂತು ಕುಶಾಗ್ರಬುದ್ಧಿಗಳ್: **ಪಂಪಭಾ,** ೨. ೩೪); ಪರಾಕ್ರಮ (ನೇಜೆಯದಿಂದಿಱಿದೆತ್ತಿ ನಿಜ ಓಜಮನೆ ಬಿಡೌಜಸರ್ಗೆ ತೋರ್ಪಂತೆ: **ರಾಜಶೇವಿ,** ೬. ೬೫)

**ಓಜನ ಸಾಲೆ** – ವಾಜರಶಾಲೆ, ಕಮ್ಮಾರನ ಸಾಲೆ (ಆಗಳ್ ಆಱುಂ ಋತುಗಳ ಪೂಗಳಂ ಒಂದುಮಾಡಿ ಪೂವಿನಂಬುಗಳಂ ಪಣ್ಣಲೆಂದು ಕಾಮದೇವಂ ಮಾಡಿದ ಓಜನ ಸಾಲೆಯಿರ್ಪಂತಿರ್ಪ ಪೂವಿನ ಸಂತೆಯೊಳ್: **ಪಂಪಭಾ,** ೪. ೮೦ ವ)

**ಓಜಾಯಿತ** – ಶ್ರೇಷ್ಠ ಶಿಲ್ಪಿ (ಓಜಾಯಿತರೋಜೆಯೊಲವಱಿದ ಭೂಮನಕ್ಕಂ ಸಕ್ಕಸಮನಾಗಿ ತೂಗಿದಂತೆ: **ಅನಂತಪು,** ೨. ೩೦ ವ)

**ಓಜಾಯಿಲ** – ಬಡಗಿ (ಮರನುಮಂ ಓಜಾಯಿಲನಾಗಿ ಪೊಸೆಯೆ ಕಿರ್ಚಕ್ಕುಂ: **ಧರ್ಮಾಮೃ,** ೮೨ ವ); ಹೊಂಚುಹಾಕುವವನು

(ಪುಲಿಯಂತೆ ಓಜಾಯಿಲನುಂ ಅತ್ತಿಯ ಪಣ್ಗಳಂತೆ ಒಳಗಶುದ್ಧನುಂ: **ಧರ್ಮಾಮೃ,** ೬. ೩೮ ವ)

**ಓಜೆ –** ಕ್ರಮ (ಯಥಾ ರಾಜಾ ತಥಾ ಪ್ರಜಾ ಎಂಬವೊಲ್ ಓಜೆಗೊಂಡು ಧರ್ಮಪ್ರಿಯರಾದರ್ ಪ್ರಜೆಗಳುಂ: **ಆದಿಪು,** ೧೬. ೪೦); ಧಾಟಿ (ತಂದೆಯ ಚೆಲ್ವೆ ತಂದೆಯೊಂದಂದಮೆ ತಂದೆಯೊಂದು ನಿಡಿಯ ಓಜೆಯೆ ತನ್ನೊಳಮರ್ಕೆವೆತ್ತುದು: **ಆದಿಪು,** ೮. ೪೩); ತಾಳ, ಲಯ (ಪೊಲೆಯರ್ಬಡಿವ ಪಜೆಯೋಜೆಗೊಡುವ ಪಗರಣಗರಂ ಕಂಡರ್ ನಗುವರಲ್ಲದೆ ವರಾಟಕ್ಕೆ ಲಕ್ಷಣಮಂ ನೋಡರ್: **ಧರ್ಮಾಮೃ,** ೫. ೬೭ ವ)

**ಓಜೆಗೊಳ್ –** ಕ್ರಮ ಅನುಸರಿಸು (ಯಥಾ ರಾಜಾ ತಥಾ ಪ್ರಜಾ ಎಂಬವೊಲ್ ಓಜೆಗೊಂಡು ಧರ್ಮಪ್ರಿಯರಾದರ್ ಪ್ರಜೆಗಳುಂ: **ಆದಿಪು,** ೧೬. ೪೦)

**ಓಜೆವಿಡಿ –** [ಓಜೆ+ಪಿಡಿ] ಪಳಗಿಸಿದ ಜೋಡಿ ಹೆಣ್ಣಾನೆ (ಎರಡುಂ ಪಕ್ಕದೆ ಪಣ್ಣಿದ ಓಜೆವಿಡಿಯಂ ಕೈಗೆಯ್ದು ಬಂದೇಜೆ .. .. ಕಾಲ್ಗಾಪಿನೊಳ್ ಬರೆ ಬಂದಂ ಧವಳಾತಪತ್ರದಡಿಯೊಳ್: **ಪಂಪರಾ,** ೨. ೧೧)

**ಓಜೆವೆಱು –** ಕ್ರಮಬದ್ಧ (ಓಜೆವೆತ್ತ ಗಾಯಿನಿಯರ ಸೀಯನಪ್ಪ ರಸಗೇಯಮನಾಲಿಸುತಿರ್ಪಳ್: **ಪಂಪರಾ,** ೩. ೧೦೭)

**ಓಟ –** ಓಡುವಿಕೆ (ಕೆಲರ್ ನೋಡೆ ನೋಡೆ ತಮ್ಮ ಓಟಕ್ಕೆ ತಾವೆ ನಾಣ್ಚಿದರ್: **ಶಾಂತಿಪು,** ೪. ೩೦ ವ)

**ಓಡ –** ತೆಪ್ಪ, ದೋಣಿ (ಸಾಸಿರ್ವರ್ ಏಜೆದೊಡಲ್ಲದೆ ಈ ಓಡಂ ನಡೆಯದು ಎಂಬುದುಂ ಆಂ ಅನಿಬರ ಬಿಣ್ಪುಮಪ್ಪೆಂ ಏಜೆಸೆಂದೊಡೆ ಗೆಯ್ವೆಂ ಎಂದೊಡಂ ಏಜೆಸಿ ನಡೆಯಿಸುವಲ್ಲಿ: **ಪಂಪಭಾ,** ೧. ೬೮ ವ)

**ಓಡು –** ವೇಗವಾಗಿ ಹೋಗು ಹಾಗೂ ಮಡಕೆಯ ಚೂರು (ಓಡು–ಪಲಾಯನೇ ಭಾಂಡಶಕಲೇ ಚ: **ಶಬ್ದಮದ,** ಧಾ ೨೮೪); ಬೋಕಿಬಿಂಚು (ಓಡಿನಗೆಯಲ್ಲಿ ಬೆಳೆಗಳಂ ಆಡಿನ ಕಂಠಸ್ತನಂಗಳೊಳ್ ಸವಿವಾಲಂ ನೋಡುವ ಪೆರ್ಮರುಳರಂತಿರೆ: **ತ್ರಿಷಷ್ಟಿಪು,** ೩೩. ೧೦೧); ಮಡಕೆ (ಎಮ್ಮೆಯ ಪೆಸರ್ ಮಹಾದೇವಿಯೆಂದಂತೆ ಓಡಿನ ಪೆಸರ್ ಮಂಗಳಮೆಂಬಂತೆ: **ಧರ್ಮಾಮೃ,** ೮. ೧೦೩ ವ); ತಲೆಯ ಚಿಪ್ಪು (ವಜ್ರಮುಷ್ಟಿಯ ಪೊಯ್ಗೊಳಂ ಬಾಳ ಕೋಳೊಳಮ್ ಉಚ್ಚಳಿಸಿದ ಕಪಾಲದ ಓಡುಗಳಂ ಗಂಗೆಗಟ್ಟುತ್ತುಂ: **ಪಂಪಭಾ,** ೧೧. ೨ ವ); ಹುರಿಯುವ ಹೆಂಚು (ಹುರಿಗಡಲೆಯಂತಾನುಂ ಕಾಯ್ವಾಱದ ಓಡಿನ ಜೋಳದೊಳ್ ಮರಲ್ ಅಲರುವಂತಾನುಂ ಕಾರ್ಗೆಯ್ಯ ಮೇರೆಯೊಳಿಟ್ಟ ಕೆಕ್ಕರಿಕೆ ಬಿರಿವಂತಾನುಂ: **ಶಾಂತಿಪು,** ೨. ೯೨)

**ಓಣಿಯೋಗು –** ಕೊರಕಲಾಗು (ಅಂತು ಚಕ್ರಹತಿಯಿಂದ ಓಣಿಯೋದ ರಣಕ್ಷೋಣಿಯಂ: **ಪಾರ್ಶ್ವನಾಪು,** ೩. ೧೨೧ ವ)

**ಓತ –** ಓದು; ಒಲಿದ (ಓತರ ಗೆಯ್ತದಂತೆ ರಸಭಾವಮೊಡಂಬಡೆ .. .. ಪೇೞ್ವಾತನಾರೊ ನಾನಜೆಯೆಂ: **ಲೀಲಾವತಿ,** ೧. ೮೨)

**ಓತಿ –** ಓತಿಕೇತ (ಮೋಹದಾಕೆ ಓತಿಯಾದಳೆಂಬಂಥೆ: **ಧರ್ಮಾಮೃ,** ೨. ೫೧ ವ)

**ಓದನ –** ಓಗರ, ಅನ್ನ (ಆಯುವಿಲ್ಲದಂಗೆ ಅಂತುಂ ಓದನ ನಂಜಲ್ತೇ: **ಕರ್ಣನೇಮಿ,** ೧೪. ೭೮)

**ಓದಜೀವ –** ವಿದ್ಯಾವಂತ (ಓದಜೀವರ ಪೇೞ್ದನೋಮಪಿಗಳಂ ಒರ್ಮ ಪಲರ್ಮೆಯುಂ .. .. ನಮೆದರ್: **ಪಂಪಭಾ,** ೧. ೧೩೫)

**ಓದಾಳಿ –** ಓದುಗಾರ (ಮಾರಾಳಿಯುಂ ಓದಾಳಿಯುಂ ಏಱಾಳಿಯುಂ ಅಪ್ಪನಾಗಿ ಪಡೆಪಾಳಿಯೆ ಕೇಳ್: **ಕಾವ್ಯಾವಲೋ,** ೩೫೩)

**ಓದಿದರ್ –** ಓದಿದವರು (ಪೊಸವೇಟದ ಅಲಂಪುಗಳೆಲ್ಲ ಓದಿದರ್ಗೆ ಇದಱ ಅನುಯಾಯಿಗಳ್ಗೆ ಎಸೆವ ಉದಾರಗುಣಂ: **ಪಂಪಭಾ,** ೧೪. ೬೩)

**ಓದಿಸು –** ಕಲಿಸು, ಶಿಕ್ಷಣ ನೀಡು, ಹೇಳಿಕೊಡು (ಎಂದು ತನ್ನುಕ್ಕೆವತನದಿನೋದಿಸಿದ ವೃತ್ತಾಂತಮಂ ಆದ್ಯಂತಮಜೆಯೆ ಪೇೞ್ದು: **ಸುಕುಮಾಚ,** ೨. ೬೨ ವ)

**ಓದು –** ಹೇಳು (ಕಾಗೆಯುಂ ನಾಯುಂ ಮುಟ್ಟಿದುದು ಅದನೆ ಶುದ್ಧಮಂ ಮಾಟ್ಪುದೆಂದು ಓದಿದರ್ ಪುರೋಹಿತರೆಲ್ಲರ್: **ಯಶೋಧಚ,** ೩. ೫೮); ವಿದ್ಯೆ ಕಲಿ (ನಾಮೆಲ್ಲಂ ಒಂದೆ ಗರಡಿಯೊಳ್ ಓದಿದ ಮಾನಸರೆವು: **ಪಂಪಭಾ,** ೯. ೪೮ ವ); ಜ್ಞಾನ (ಓದಂ ತಡೆಯದೆ ಕಲ್ತುಂ ಗುರೂಪದೇಶಕ್ರಮದಿಂ: **ಕವಿರಾಮಾ,** ೧. ೧೦)

**ಓದುಂಗಾಱ –** ಓದುವವನು, ವಿದ್ಯಾರ್ಥಿ (ಬಿಂದುಗೆ – ಪಾಡುಂಗಾಱಂ ಅಲಸುಂಗಾಱಂ ಜೂದುಂಗಾಱಂ ಓದುಂಗಾಱಂ: **ಶಬ್ದಮದ,** ೨೧೧ ಪ್ರ)

**ಓದುವೇೞ್ –** ಓದಿಸು (ಅಂತೇವಾಸಿಗಳ್ಗೆ ಓದುವೇೞ್ವವು .. .. ಕೇಳೀ ಶುಕಸಾರಿಕಾತತಿಗಳ್: **ಜಗನ್ನಾವಿ,** ೯. ೧೧೫)

**ಓದುಳ್ಳ –** ಓದಿದವನು, ವಿದ್ವಾಂಸ (ಉಳ್ಳ ಪ್ರತ್ಯಯಕ್ಕೆ – ಓದುಳ್ಳಂ, ಗುಣಮುಳ್ಳಂ ತೇಜಮುಳ್ಳಂ: **ಶಬ್ದಮದ,** ೨೧೭ ಪ್ರ)

**ಓದೊಡೆಯ –** ಓದುಳ್ಳ (ಸಿರಿಯೊಡೆಯನಾಗಿಯುಂ ದರ್ಪರಹಿತಂ ಓದೊಡೆಯನಾಗಿಯುಂ ವಿಗಳಿತಮತ್ಸರಂ: **ಶಾಂತಿಪು,** ೬. ೮೬)

**ಓಪ –** ಪ್ರಿಯಕರ (ಅತ್ತಲ್ ಓಪನುಂ ಇದನಿಂತೆ ಕೇಳ್ದೊಡೆ ನಿರಾಶೆಯೊಳ್ ಅಕ್ಕಟ ಸಾಗುಂ: **ಕಾದಂಸಂ,** ೪. ೭೬)

**ಓಪರ್ –** ಪ್ರಿಯ–ಪ್ರೇಯಸಿಯರು (ಬಿಡದೆ ಪೊಗೆ ಸುತ್ತೆ ತೋಳಂ ಸಡಿಲಿಸದೆ ಆ ಪ್ರಾಣವಲ್ಲಭರ್ ಪ್ರಾಣಮಂ ಅಂದು ಒಡಗಳೆದರ್ ಓಪರ್ ಓಪರೊಳ್ ಒಡಸಾಯಲ್ ಪಡೆದರ್ ಇನ್ನವೇಂ ಸೈಪು ಒಳವೇ: **ಆದಿಪು,** ೫. ೨೪)

**ಓಪಳ್ –** ನಲ್ಲೆ (ಅದಂ ಒಂದು ಕದಳೀಪತ್ರದೊಳ್ ಪುದಿದು ತನ್ನ ನಡಪಿದ ಗಿಳಿಯ ಕೈಯೊಳ್ ಓಪಳಲ್ಲಿಗೆ ಅಟ್ಟಿದೊಡೆ: **ಪಂಪಭಾ,** ೧. ೬೮ ವ)

**ಓರಂಡಲ –** ಏರುಪೇರು (ಅಂತು ವಿಜಯಾರ್ಧಕಟಕಕ್ಕಂ ಓರಂಡಲಮಾಗೆ ಕಟಕಮಂ ಬಿಡಿಸಿ: **ಪಾರ್ಶ್ವನಾಪು,** ೧೧. ೧೯ ವ)

**ಓರಂತೆ –** ಒಂದೇ ಸಮನಾಗಿ (ಚಿಂತಾಶೋಕವಿಷಾದ ಭ್ರಾಂತಿಸಮುದ್ಭೂತದುಃಖದಿಂ ನರಕದೊಳ್ ಓರಂತೆ ವಲಂ ಮಾನಸಗತಿ: **ಆದಿಪು,** ೯. ೪೯)

**ಓರಂದ –** ಒಂದೇ ಕ್ರಮ, ಏಕಪ್ರಕಾರ (ಭುವನಪ್ರಸ್ತುತ್ಯರ್ ಓರಂದದೆ ತಪದೊಳೆ ಕರ್ಕ್ಷಯಂ ಗೆಯ್ದು ಮೂಲೋಕವಿದೆಲ್ಲಂ ಕಯ್ಯೊಳಿರ್ದ ಆಮಳಕಫಳಮೆನಲ್ ಕಾಣ್ಬ ಯೋಗೀಂದ್ರರ್: **ಕಾದಂಸಂ,** ೧. ೭೬)

**ಓರಗೆ** – ಸಮವಯಸ್ಕ (ತನ್ನ ಓರಗೆಗಳಪ್ಪ ಪಲಂಬರ್ ಮಾಣಿಗಳ್ವೆರಸು ಪೊಱವೂರೊಳ್ ಬಟ್ಟಾಡುತ್ತಿರೆ: **ವಡ್ಡಾರಾ,** ಪು. ೭೩, ಸಾ. ೨೧)

**ಓರಗೆವೂ** – ಬಗೆಬಗೆಯಾದ ಹೂ ಓರಗೆವೂಗಳನಾಯ್ದು ಕೊಯ್ದು ಅಳಂಕಾರಮನಾ ಲತಾಂತತತಿಯಿಂ ಸಮೆದು: **ಜಗನ್ನಾವಿ,** ೧೦. ೬೭)

**ಓರಡಿ** – ಒಂದು ಅಡಿ, ಒಂದು ಹೆಜ್ಜೆ (ಕಡಕುಂ ಪೆಟ್ಟೆಯುಂ ಒತ್ತೆ ಮೆಲ್ಲಡಿಗಳಂ ಬಳ್ಕುತ್ತುಂ ಅಳ್ಕುತ್ತುಂ ಓರಡಿಗೆ ಒರ್ಮೊರ್ಮೆ ಕುಳುತ್ತುಂ ಏಱುತಿರೆ: **ಪಂಪಭಾ,** ೩. ೯)

**ಓರಣ** – ಸಾಲು, ಪಂಕ್ತಿ (ಓರಣದೊಳ್ ಪೆಣಂಗಳ ಬಣಂಬೆಗಳೊಟ್ಟಿದವು ಆಜಿರಂಗದೊಳ್: **ತ್ರಿಷಷ್ಟಿಪು,** ೨೪. ೩೨೧)

**ಓರಣಿಕೆ** – ಓರಣವಾಗಿರುವಿಕೆ (ಸಾರಮಾರಿಯ ಒಱಿಯೊಳ್ ಓರಣಿಕೆಗೆಡೆಯಿಂ ತೆತ್ತಿಸಿದ ಗಾಣದೊಳ್ ಎತ್ತಿದ ಪಾಪೆಯಂತೆರಲೆಯುಂ: **ಅನಂತಪು,** ೧೧. ೮೪ ವ)

**ಓರನ್ನ** – ಒಂದೇ ತೆರ (ವಾರಾಶಿಯೊಳಿನ್ನವು ಮುತ್ತು ಓರನ್ನವು: **ಆದಿಪು,** ೧೨. ೧೧೮)

**ಓರನ್ನೆ** – ಸಮಾನೆ (ಶ್ರೀದೇವತೆಯರೊಳ್ ಓರನ್ನೆಯರಂ .. .. ಶುಭಮುಹೂರ್ತದೊಳ್ ನೋಡಿ ಮುದ್ರಿಕಾಪ್ರದಾನಂ ಮಾಡಿ: **ಸುಕುಮಾಚ,** ೧೦. ೬೫ ವ)

**ಓರನ್ನರ್** – ಒಂದೇ ಬಗೆಯವರು (ಎನ್ನನೆ ನಚ್ಚಿದಂ ಅನುವರಕೆ ಎನ್ನನೆ ಪೂಣಿಸಿದಂ ಎನಗೆ ಎರಟ್ಟಿಂಡಮುಂ ಓರನ್ನರೆ: **ಪಂಪಭಾ,** ೧೦. ೧೨)

**ಓರೆ** – ಓರಗೆ (ಅಂತು ತನ್ನ ಓರೆಗಳ್ವೆರಸು ದುಢುಮ್ಮಿಱಿದು ಓಲಾಡುವಲ್ಲಿ: **ಶಾಂತಿಪು,** ೮. ೨೮ ವ)

**ಓರೆಂಜಲ್** – ಜೊತೆಗೆ ಊಟಮಾಡುವವರು (ಓರೆಂಜಲ್ ಒರ್ಪಂತಿಗೆ ವಾರದ ಖಳರೊಡನೆ ಬೆರಸಿ ಮೇಳಂಗೊಂಡುಂದು ಆರುಂ ಲಘುವಪ್ಪರ್: **ಕಾವ್ಯಾವಲೋ,** ೨೫೯)

**ಓರೆವೋಗು** – ಒಂದು ಕಡೆಗೆ ಓಲು (ಇಂಬಾಗಿರೆಯುಂ ಮಕುಟಮದಂ ಬಿಣ್ಪಿನೊಳ್ ಓರೆವೋದೊಡೆ ಓಸರಿಪವೊಲ್ ಒರ್ವಂ ಬಹಳ ನಖಮಯೂಖ ಕದಂಬಕಮಂ ಕರಮಂ ಉತ್ತಮಾಂಗಕ್ಕೊಯ್ದಂ: **ಶಾಂತಿಪು,** ೫. ೧೦೨)

**ಓರೊಂದು** – ಪರಸ್ಪರ (ಪದಿನಾಲ್ಕುಮಂ ಓರೊಂದನೆ ತೋಱಿ ನಿಜಾದರದಿಂ ಭರತೇಶ್ವರಂಗೆ ದಿವಿಜಂ ಕೊಟ್ಟಂ; **ಆದಿಪು,** ೧೩. ೩೧); ಒಂದೊಂದು (ಓರೊಂದದಱೊಳಗೆ ನಾಡುಗಳೀರೆಂಟುಗಳಾಗೆ ಕೂಡಿ ಮೂವತ್ತೆರಡುಂ ರಾರಾಜಿಸೆ ಸೊಗಯಿಪ್ಪುದು ಇಳಾರಮಣೀರಮ್ಯಗೇಹಂ ವಿದೇಹಂ: **ಪುಷ್ಪದಂಪು,** ೨. ೨)

**ಓರೊರ್ಮೆ** – ಒಂದೊಂದು ಬಾರಿ (ಪೆಸರ್ಗೊಂಡು ಇಂದ್ರನರೇಂದ್ರವಂದ್ಯನನೊಱಲ್ದೆತ್ತಾನುಂ ಓರೊರ್ಮೆ ಚಿಂತಿಸಿದೊಂಗಂ ಪವಣಿಲ್ಲ ಪುಣ್ಯಂ: **ಆದಿಪು,** ೧. ೩೭)

**ಓರೊರ್ವ** – ಒಬ್ಬೊಬ್ಬ (ಓರೊರ್ವರ್ ಐಯ್ನೂರ್ವರ್ಗಂ ನಾಯಕರಾಗಿ ಪರದೇಶದೊಳ್ ಕಳ್ದು: **ಧರ್ಮಾಮೃ,** ೨. ೧೦೭ ವ)

**ಓರ್ಗುಡಿಸು** – ಕುಪ್ಪೆಹಾಕು (ಪೊಡವಿ ನಿಲಲಾಱದೆ ಒಲೆದು ಓರ್ಗುಡಿಸುಗುಂ ಎಂದಲ್ಲಿ ಬೆಟ್ಟನಿಟಾರ್ಪಿಂ ದಂ ಪಿಡಿದೆಣ್ದೆಸೆಯಾನೆಗಳಂ ಕಡುನಲವಿಂದೇಱಿ ಬರುತುಮಿರ್ದರ್ ಕೆಲರ್: **ಕಬ್ಬಿಗಕಾ,** ೧೯೬)

**ಓಲಗ** – ರಾಜಸಭೆ (ಅಂತು ಪಸೆದು ಅನ್ನವಾಸದ ಓಲಗದೊಳಿರ್ದನಾಗಳ್ ಹರಿಗಂ: **ಪಂಪಭಾ,** ೩. ೮೦); ರಾಜಸೇವೆ (ಈ ಭವಗೆಡಿಸುವ ಓಲಗಕ್ಕೆ ಅಭವ ಬೇಸಱಿಂ: ಆದಿಪು, ೧೩. ೮೭)

**ಓಲಗಂಗುಡು** – ರಾಜಸಭೆ ನಡೆಸು (ಈತಂ ಓಲಗಂಗೊಟ್ಟಿರೆ ಸಪ್ತಾಂಗದ ರಾಜ್ಯದ ತೇಜಂ ಅಸುಂಗೊಳಿಸುವುದು ಅನ್ಯಮಂಡಲಾಧೀಶ್ವರರಂ: **ಶಾಂತಿಪು,** ೫. ೧೨೮)

**ಓಲಗಕಾಱ** – ಸೇವಕ ಮೃಗದ ಒಲವರಮುಮಂ ಅರಸನ ಬಗೆಯುಮಂ ಅಱಿದು ಅಲಸದೆ ಎಳಸಿ ಓಲಗಿಸಲ್ ನೆಟ್ಟನೆ ಬಲ್ಲನುಳ್ಳೊಡೆ ಅವನಲ್ತೆ ಗುಣಾರ್ಣವ ಬೇಂಟೆಕಾಱಂ ಓಲಗಕಾಱಂ: **ಪಂಪಭಾ,** ೫. ೪೨)

**ಓಲಗವುರುಡು** – ರಾಜಸಭೆಯಲ್ಲಿ ನಡೆಯುವ ಸ್ಪರ್ಧೆ (ಚಲದಿನೆನ್ನೊಳೆ ಪೊಂಗಿ ಪೊಡರ್ಪುದೊರ್ಪಂ ಓಲಗವುರುಡಿಲ್ಲ ಮೆಚ್ಚವಣಿಗಿಲ್ಲ: **ಆದಿಪು,** ೧೨. ೩೩)

**ಓಲಗಶಾಲೆ** – ರಾಜನ ಸಭಾಮಂಟಪ (ಓಲಗಶಾಲೆ ಪೂಗಿಡುಗಳೋಳಿಗೆ ಜೀವಣಶಾಲೆ ಮುಕ್ತ ಭೃಂಗಾಳಿಗೆ: **ಪುಷ್ಪದಂಪು,** ೨. ೫೦)

**ಓಲಗಿಸು** – ಸೇವೆಮಾಡು (ಮಗಮಗಿಪ ಜಾದಿ ಪೊಂಗೇದಗೆ ಮಲ್ಲಿಗೆಯೆಂಬ ಪಲವು ಪೂಮಾಲೆಗಂ ಬಗೆಯಱಿದು ಓಲಗಿಪುದು: **ಆದಿಪು,** ೫. ೩೬); ಅರ್ಪಣೆಮಾಡು (ಸುರವಧು ಒರ್ಬಳ್ ದೇವಿಯ ಚರಣಕ್ಕೆ ಓಲಗಿಸೆ ಪೊಳೆವ ಹರಿನೀಳದ ನೂಪುರಂ ಅದು ನೆನೆಯಿಸಿದುದು ಷಟ್ಚರಣಾವಳಿ ಬಳಸಿದ ಅರುಣಸರಸಿಜದ ಇರವಂ: **ಶಾಂತೀಶ್ವಪು,** ೧೩. ೨೧೪)

**ಓಲಾಡಿಸು** – ಸಂತಸಪಡಿಸು (ಪೊರ್ಕುಟೆಂಬ ತಿಳಿಗೊಳಂ ಕಮ್ಮಂಗೋಲನೆಂಬ ಜಕ್ಕವಕ್ಕಿಯಂ ಓಲಾಡಿಸೆಯುಂ: ಕಬ್ಬಿಗಕಾ, ೧೨೩); ಮುಳುಗಿಸು (ಅತಿಪ್ರಮೋದ ರಸಪ್ರವಾಹದೊಳ್ ಮನಮಂ ಓಲಾಡಿಸಿ: **ಮಲ್ಲಿನಾಪು,** ೪. ೪೯ ವ)

**ಓಲಾಡು** – ಜಲಕೇಳಿಯಾಡು (ನಂದೆ ಅಪರನಂದೆ ಅಶ್ವಿನಿ ಮಹಾನಂದೆ ಎಂಬ ತೀರ್ಥಜಲಂಗಳೊಳ್ ಓಲಾಡುತ್ತುಂ ಉದ್ವೃತ್ತ ರಿಪು ನೃಪತಿಗಳಂ ಏಸಾಡುತ್ತುಂ ಅಲ್ಲಿಂ ತಳರ್ದು: **ಪಂಪಭಾ,** ೪. ೧೮ ವ)

**ಓಲೆ** – ತಾಳೆಗರಿ; ಪತ್ರ (ಇರ್ವರ್ ಪರಿವೊಟ್ಟೆಯವರ್ ಓಲೆಯಂ ಕೊಂಡು ಬಂದು ಅರಸನ ಮನೆಯ ಬಾಗಿಲೊಳ್ ನಿಂದು ಪಡಿಯಱಂಗೆ ಪೇೞ್ದೊಡೆ: **ವಡ್ಡಾರಾ,** ಪು ೧೩೦, ಸಾ ೧೮); ಕಿವಿಯ ಆಭರಣ (ನೀನೆನ್ನೋಲೆಯ ಕಡಗದಟೆವನೇಂ ನೋಡಿದಪಾ: **ಪಂಪಭಾ,** ೧೦೧ ೧೨೩)

**ಓಲೆಗುಡು** – ಪತ್ರ ಕಳಿಸು (ಮಾವಿನೊಳ್ ಮಸಗುತುಮಿರ್ಪ ಬಲ್ಸೊನೆಯ ಸೋನೆಗೆ ಕಾಂತನ ಕೇತಕೀ ನವಪ್ರಸವದಳಂಗಳ್ ಓಲೆಗುಡೆ: **ಶಬ್ದಮದ,** ೭೮ ಪ್ರ ೧೧)

**ಓಲೆಯಡಕು** – ಪತ್ರ ತಲುಪಿಸು (ಓಲೆಯಡಕುವ ವಿಶಾಖನಂದಿ ಗಣಿಕಾವಾಟದೊಳ್ ಸುಟಿಯುತ್ತಿರ್ದು: **ಶಾಂತಿಪು,** ೭. ೫೯ ವ)

**ಓಲೆಯೊಯ್** – ಓಲೆಯಡಕು (ಇತ್ತರಂದುಱದಾತಂಗಿರದೆ ಓಲೆಯೊಯ್ವ ಬೆಸನಂ ಭೀರುತ್ವಂ ಏಗೆಯ್ದುದೋ: **ಶಾಂತಿಪು,** ೭. ೫೯)

**ಓಲೆವಾಗ್ಯ** – ಓಲೆಯ ಭಾಗ್ಯ, ಮುತ್ತೈದೆತನ (ನಾಳೆ ಮಗುಟ್ದು ಬಂದು ಎನ್ನೊಳ್ ನೆರೆವೆ ಎಂದು ಪೇೞ್ ನಿನಗಱವುಂಟೆ

ಎಂದು ಪೇಳೆ ಎನ್ನ ಓಲಗೆವಾಗ್ಯಮುಂಟು ಎಂದಳ್: **ಪಂಪಭಾ,** ೧೦. ೪೪ ವ)

**ಓಲೈಸು** – ಸೇವೆಮಾಡು (ಎನ್ನಂ ಕಂಡು ಪಿಡಿದು ಉಯ್ದು ತಾರಾಪೀಡನರೇಂದ್ರಂಗೆ ಓಲೈಸೆ ತದೀಯ ನಂದನನೆನಿಸಿದ .. .. ಚಂದ್ರಾಪೀಡಂಗೆ .. .. ನಿನ್ನಂ ಕಾಣಿಸಲೆಂದು .. .. ತಂದಂ: **ಕಾದಂಸಂ,** ೭. ೪೮ ವ)

**ಓವನಿಗೆ** – ಒಂದು ಬಗೆಯ ಹಾಡುಗಬ್ಬ (ಪಾಡುವರಾದರ್ ಓವನಿಗೆವಾಡುವರುಂ ನೃಪ ನಿನ್ನ ಗೀತಮಂ: **ಆಚವರ್ಧ,** ೪. ೩೬)

**ಓವದೆ** – [ಓ+ಅದೆ] ಲಕ್ಷ್ಯಮಾಡದೆ ತಮ್ಮ ತಪಃಪ್ರಭಾವದಿಂ ಮದಯುತರಪ್ಪ ವಾದಿಗಳ ದರ್ಪಮಂ ಓವದೆ .. .. ಭುವನಪ್ರಸಿದ್ಧಿಗಾಸ್ಪದರೆನಿಸಿರ್ದರ್: **ಪಂಪರಾ,** ೧. ೨೨)

**ಓವರಿ** – ಕೋಣೆ (ತಳಿರ್ಗಳ ಕಂಡವಡಂಗಳೆ ತಳಿರ್ಗಳ ಪಾಸುಗಳೆ ತಳಿರ್ಗಳ ಓವರಿಗಳೆ: **ಆದಿಪು,** ೧೧. ೭೯); ಒಳ ಮನೆ (ಅವನೆರ್ದೆ ಪಡಿದೆಱೆವಿನಂ ಓವರಿಯ ಪಡಿಯಂ ಆ ಸತಿ ಕೆತ್ತಳ್: **ಪಂಪರಾ,** ೧೦. ೮)

**ಓವು** – [√ಓ] ಕಾಪಾಡು (ಬಡನೆನಿಸದೆ ಓವಿ ಜೀವಮನಡಕಂಬೆರಸು ಅಯ್ದುಸಮಿತಿಯೊಳ್ ಮುನಿ ನೆಗೞ್ದಂ: **ಆದಿಪು,** ೬. ೨೮)

**ಓವೊಲವು** – ಒಲಿಯುವ ಪ್ರೇಮ (ನಾಣ್ನುಡಿಯೆನೆ ಕೇಳ್ದೆನಿನ್ನೆವರಂ ಓವೊಲವೆಂಬುದಿದಂತುಟಾಗದೇ: **ಆದಿಪು,** ೧೨. ೪೦)

**ಓವೋ** – ಆಶ್ಚರ್ಯ–ದುಃಖಸೂಚಕ ನಿಪಾತಾವ್ಯಯ (ಓವೋ ಲಂಪಳರ್ ಎಮ್ಮೊಂದಿಗರಂ ಬಗೆವಂದದೆಕೊಂದಿಕ್ಕವೆ ಸಕಳವಿಷಯವಿಷಮವಿಷಂಗಳ್: **ಆದಿಪು,** ೪. ೭೩); ಓವೋ ಪೆಱತೇನೋ ನೀನೆ ಭುವನಕಕಾರಾಧ್ಯನೈ: **ಆದಿಪು,** ೧೧. ೯೮)

**ಓಷಧ** – ಓಷಧಿ (ಪ್ರಕೃತಿಯನಿಚ್ಚೆಯಿಂ ಗ್ರಹಗಣಂಗಳಿಂ ಅಟ್ಟಿಱಿಂ ಓಷಧಂಗಳಿಂ: **ವರ್ಧಮಾಪು,** ೮. ೯೩)

**ಓಷಧಿ** – ವನಸ್ಪತಿ, ಮೂಲಿಕೆ (ನವರತ್ನವ್ರಾತ ಸರ್ವ ಓಷಧಿಫಲಮಿಳಿತ ಅಂಭೋಧಿತೀರ್ಥ ಆಪಗಾವಾರಿ ವಿರಾಜಚ್ಚಂದ್ರಕಾಂತೋಪಲಕಲಶ: **ಕಾದಂಸಂ,** ೨. ೫೭)

**ಓಷಧೀಶ್ವರ** – ಸಸ್ಯಾಧಿಪತಿ, ಚಂದ್ರ (ಉರೆ ಚಿಂತೆಯಂ ಆಳ್ವಂತೆವೊಲ್ ಓಷಧೀಶ್ವರಂ ಕಳೆಗೆಟ್ಟಂ: **ರಾಜಶೇವಿ,** ೧೨. ೧೩)

**ಓಷ್ಠಪುಟಸಂದಂಶ** – ಹಲ್ಲುಮುಡಿ ಕಚ್ಚುವುದು (ಉದಾರವೀರಚರಿತನಿರತಕದನಕರ್ಕಶಕ್ಷತ್ರಿಯಂಗೆ .. .. ನಿರರ್ಥಕ ನಿಷ್ಠುರ ಓಷ್ಠಪುಟಸಮದಂಶಮುಂ .. .. ನಿರಾಲಭನವಾಗಾಡಂಬರಮುಂ ತಕ್ಕುದಲ್ತು: **ಆದಿಪು** ೧೪. ೮೧ ವ)

**ಓಸರಿಗೆ** – ಮನೆಯ ಮುಂದಣ ಅಥವಾ ಹಿಂದಣ ಅಂಗಳ (ಓಸರಿಗೆಯೊಳ್ ತೊಟ್ಟಿಲೊಳ್ ಇರ್ದ ಅವ್ಯಕ್ತ ಕಿಱುಗೂಸು ಬೋಳಹ ಬೋಳಹ ಭಟ್ಟಾರಾ ಎಂದತ್ತು: **ವಡ್ಡಾರಾ,** ಪು ೮೫, ಸಾ ೧೨)

**ಓಸರಿಗೊಳ್** – ಪಕ್ಕಕ್ಕೆ ಸರಿದು ಹೋಗು (ಮೆಯ್ದೋಱುವುದಿಲ್ಲಿ ಸಲ್ಲದು ಎನಗೆ ಎಂಬವೋಲ್ ಓಸರಿಗೊಂಡು ಪೋಗುತಂ: **ಪುಷ್ಪದಂಪು,** ೧೪. ೨೬)

**ಓಸರಿಸು** – ಓರೆ ಮಾಡು, ಓರೆಯಾಗು (ಕರ್ಣಪೂರ ಪಾರಿಜಾತಸ್ತಬಕಮಂ ಓಸರಿಸುವ ವಿಳಾಸಮುಂ: **ಆದಿಪು,** ೪. ೯ ವ); ಹಿಂಜರಿ (ಮಱೆ ಮಂಜು ಕಾಳಗತ್ತಲೆ ಎಂದು ಓಸರಿಸದೆ ಮನವೊಲ್ದಾಗಳ್ ನೆರೆಯಲ್ ದೊರೆಕೊಳ್ವ ವ್ರತಮೆ ಸಂಕಲ್ಪರತಂ: **ಕಾದಂಬ,** ೮. ೩೬); ನೇರ್ಪಡಿಸು, ಸರಿಪಡಿಸು (ಇಂಬಾಗಿರೆಯುಂ ಮಕುಟಮದಂ ಬಿಣ್ಪಿನೊಳ್ ಓರೆವೋದೊಡೆ ಓಸರಿಪವೊಲ್ ಒರ್ವಂ ಬಹಳ ನಖಮಯೂಖ ಕದಂಬಕಮಂ ಕರಮಂ ಉತ್ತಮಾಂಗಕ್ಕೊಯ್ದಂ: **ಶಾಂತಿಪು,** ೫. ೧೦೨); ಸಾವರಿಸು, ಹಿಡಿದುಕೊ (ನಡೆಯೆ ಚಟುಳತೆಗೆ ಕಣೆಯಂ ಸಡಿಲ್ದೊಡೆ ಅದಂ ಎಡದ ಕೆಯ್ಯೊಳ್ ಓಸರಿಸುತ್ತುಂ ನಡೆದು ಗವಾಕ್ಷಂಬರಂ ಓಗಡಿಸದೆ ನವವರನಂ ಅಬಲೆ ನೋಡಿದಳೊರ್ವಳ್: **ಶಾಂತಿಪು,** ೬. ೯)

**ಓಸಱೆ** – ಶಕುನ, ನಿಮಿತ್ತ (ಓಸಱೆಯಂ ಕೇಳ್ವೊಡೆ ಸಂಧ್ಯಾಸಮಯಂ ಮೂಱುಂ ಉತ್ತಮಂ: **ಲೋಕೋಪಕಾ,** ೧೨. ೫೦)

**ಓಸಱೆಗೇಳ್** – ಶಕುನ ವಿಚಾರಿಸು (ನೀರಪೊಱೆ ಪಾಡುವೆಡೆ ಹೊಲಗೇರಿ ಪರೇತವನ ಅಸಗವನೆ ಸಭೆ ದೇವಾಗಾರಂ ಚೌವಟಂ ಎಸೆದಿರ್ಪ ಆರವೆಂಬೆಡೆಗಳ್ ಉಚಿ ಓಸಱೆಗೇಳಲ್: **ಲೋಕೋಪಕಾ,** ೧೨. ೫೬)

**ಓಹರಿಸಾಹರಿ** – ತಂಡೋಪತಂಡವಾಗಿ (ಅಂತು ಓಹರಿಸಾಹರಿಯಾಗಿ ಕಾದುವರಂ ಕಲಿ ಕಾಮದೇವಂ ಕಂಡು ಕೋಪಮಂ ತಾಳ್ದಾಗಳ್: **ತ್ರಿಷಷ್ಟಿಪು,** ೫. ೯ ವ)

**ಓಳ್** – ಸಂಭೋಗಿಸು (ಓಳ್–ನಿಧುವನೇ: **ಶಬ್ದಮದ,** ಧಾತು ೯೪೬)

**ಓಳಿ** – ಸಾಲು, ಸಮೂಹ (ಎರಡು ಓಳಿಯೊಳಂ ಮೊದಲೊಳ್ ಭರತೇಶ್ವರಬಾಹುಬಲಿಗಳಿರೆ ಮತ್ತಿನ ಪುತ್ರರು ಅವರ ಕೆಲದೊಳಿರೆ: **ಆದಿಪು,** ೯. ೩); ಓರಣ, ಕ್ರಮ (ಕೃಷ್ಣೆಗಿಂದು ಧಮ್ಮಿಲ್ಲಮಂ ಇಂಬಿನಿಂ ಮುಡಿಸಿ ಕೌರವನಾಯಕನ ಊರುಭಂಗಮೊಂದಲ್ಲದೆ ಎಲ್ಲಮಂ ನೆಱಪಿದೆಂ ಗಡಂ ಓಳಿಯೆ ಕೇಳಿಮ್ ಎಲ್ಲರುಂ: **ಪಂಪಭಾ,** ೧೨. ೧೬೦)

**ಓಳಿಗೊಳ್** – ಸಾಲುಗೊಳ್ಳು (ಓಳಿಗೊಂಡು ಮಂದಯಿಸಿ ನಿಂದ ಬಲವಕ್ಕದ ಎಡವಕ್ಕದ ಅಂಗರಕ್ಕರ ನೆರವಿಯುಮನೀಕ್ಷಿಸುತ್ತುಂ: **ಆಚವರ್ಧ,** ೯. ೫೬ ವ)

**ಓಳಿದೋರಣ** – ಸಾಲು ತೋರಣ (ಓಳಿದೋರಣಮಾಯ್ತು ಹಾರದ ಪಚ್ಚೆಸಾರದ ಮಾಲೆ ಸೌಧಾಳಿಯ ಒಳ್ಗುಡಿಯಾಯ್ತು ಚೀನದ ಸೂಯಿಯಾಣದ ಬಟ್ಟೆ: **ಪಂಪಭಾ,** ೧೪. ೧೫)

**ಓಳಿವಡು** – ಗುಂಪುಗೂಡು (ತೆರೆಗಳ ಬಂಬಲಂ ಮಿಳಿರ್ವ ಕೇತನರಾಜಿಗಳ ಓಳಿವಟ್ಟ ಬೆಳ್ನೊರೆಗಳ ಪಿಂಡನೆತ್ತಿಸಿದ ಬೆಳ್ಗೊಡೆಗಳ್: **ಪಂಪಭಾ,** ೩. ೬೮)

**ಓಳಿವಡೆ** – ಸಾಲುಗಟ್ಟು (ನೆಲೆಮಾಡಂಗಳೊಳ್ ಓಳಿವಟ್ ಗುಡಿಗಳ್: **ಆದಿಪು,** ೭. ೧೧೩)

**ಓಳಿವೀಡು** – ಸಾಲು ಮನೆ (ಬಂದು ಮಚ್ಚಱಿದು ಊಡೆ ವಿನಿರ್ಮಿಸಿದ ಓಳಿವೀಡು ನಂದನಚಯಮಲ್ಲಿ ರಾಜಿಪುವು: **ಶಾಂತಿಪು** ೭. ೧೩೦)

**ಓಱಿಯಾವು** – ಕರಾವು, ಕರೆಯುವ ಹಸು (ಇವಂ ಸರಿಗೊಂಡಂತೆ ಅಜಮೂತ್ರದೊಳರೆದು ಎಚ್ಚುಗೆ ನೀಱೆಚ್ಚೆಯಿಂದ ಓಱಿಯಾವು ಮಟ್ಟಂ ಕಱೆಗುಂ: **ಲೋಕೋಪಕಾ,** ೯. ೧೯೩)

## ಔ

**ಔಂಕು** – ಅಮುಕು (ಚಕ್ರರತ್ನಮಂ ಮುಂದಿಟ್ಟು ಮಧ್ಯಮಖಂಡಮುಮಂ ಔಂಕಿ ಪೊಟಿ ಪೊಕ್ಕವಷ್ಟಂಭಿಸಿ ನಿಂದಾಗಳ್: **ಆದಿಪು,** ೧೩. ೫೬ ವ)

**ಔಂಡುಗರ್ಚು** – ಔಡು ಕಚ್ಚು, ತುಟಿ ಕಚ್ಚು (ಹುಂಕೃತಿಯಂ ಮಾಡುತುಂ ಔಂಡುಗರ್ಚಿ ಕಿಸುಗಣ್ಣಿಟ್ಟಚ್ಯುತಂ ರಂಜಿಕುಂ: **ಜಗನ್ನಾವಿ,** ೩. ೬೧)

**ಔಡು** – ತುಟಿ (ಕರ್ಚಿದ ಓಡು ಉರ್ಚಿದ ಬಾಳ್ ಇಱಿಯಲನುಗೆಯ್ದ ಕೈ: **ಗದಾಯು,** ೪. ೨೭)

**ಔಡೊತ್ತು** – ತುಟಿ ಕಚ್ಚು, ಹಲ್ಲುಮಡಿ ಕಚ್ಚು (ಸಂಗರಸಮುತ್ಸಾಹ ಫಲಮಂ ಆಸ್ವಾದಿಪಂತಿರೆ ಓಡೊತ್ತುವ ನಾಳೆ ಕಾಳೆಗದೊಳ್ ಎಮ್ಮ ಕಲಿತನಕ್ಕೆ ನೀನೆ ಸಕ್ಕಿ: **ಆಚವರ್ಧ,** ೭. ೪೧ ವ)

**ಔದಲೆಗಾಣ್** – ಅಡಗು, ಗುಪ್ತವಾಗು (ಕೂರಿಸಿ ಕೂರ್ತ ನಿನ್ನ ಮೆಯ್ ಕಸವರಂ ಎನ್ನಂ ಇನ್ನುಸಿರದೆ ಓದಲೆಗಾಣ್ಬಿನಂ: **ಕಾವ್ಯಾವಲೋ,** ೩೦೪)

**ಔದಾರಿಕತನು** – ಮನುಷ್ಯ ಮತ್ತು ತಿರ್ಯಕ್ ಶರೀರವೇ ತನು (ಔದಾರಿಕತನು ನೆಟಿಲಂತಿರೆ ನೆಲಕೆ ವಂದುದು ಅಘಟನವಿಘಟನದಿಂ: **ಶಾಂತಿಪು,** ೧೨. ೩೩)

**ಔದಾರಿಕವಪು** – ಸ್ಥೂಲದೇಹ (ಸಹಜಸುರಭಿಗಂಧಬಂಧುರ ಔದಾರಿಕವಪುವಂ: **ಆದಿಪು,** ೭. ೧೦೬ ವ)

**ಔದಾರಿಕಶರೀರ** – ಔದಾರಿಕವಪು (ಪಂಚಾಷ್ಪಧನುಃಪರಿಮಿತ ಉತ್ಸೇಧಮುಂ ದಶಶಾಳಲಕ್ಷಣೋಪಜೀವಿತಮುಂ.. ..ಔದಾರಿಕ ಶರೀರಮಂ ತಳೆದು ಶಾಂತಿಕುಮಾರಂ: **ಶಾಂತೀಶ್ವಪು,** ೧೫. ೧೭ ವ)

**ಔದುಂಬರ** – ಉದುಂಬರ ಮರದಿಂದ ಹುಟ್ಟಿದ್ದು; ಅತ್ತಿಯ ಮರ (ಪಾಲಾಶ ಅಶ್ವತ್ಥ ಅರ್ಕ ಔದುಂಬರ ನ್ಯಗ್ರೋಧ ಶಮಿ ಅಪಾಮಾರ್ಗ ಖದಿರ ಆದಿ ಶುಷ್ಕಸಮಿತ್ತುಗಳುಮಂ ಕುಶ ಅಶ್ವಲಾಯನ ವಿಶ್ವಾಮಿತ್ರಾದಿ ದೂರ್ವಾಂಕುರ ಪವಿತ್ರವಸ್ತುಗಳುಮಂ ಕೊಂಡು: **ಪಂಚತಂತ್ರ,** ೧೯೦ ವ)

**ಔದುಂಬರಕುಷ್ಠ** – ಮೈ ಹುಳಬೀಳುವ ಕುಷ್ಠರೋಗದ ಬಗೆ (ಔದುಂಬರಕುಷ್ಠಂ ನೆಗೆದೌದಾರ್ಯಕಳೇವರಂ ಪಳಾಳಂಬಿತಮಾದ ಔದುಂಬರಮೆನಿಪಂತೆವೊಲಾ ದೊರೆಯಂಗಾಯ್ತು ಖಳಕಳಂಕಾತಂಕಂ: **ಸುಕುಮಾಚ,** ೫. ೧೧)

**ಔಪರಿಷ್ಟಕ** – ಮೇಲ್ಭಾಗ (ಚಳದಳಿಕಾಳಿ ನಿನ್ನ ವದನಾಂಬುಜಮಂ ನಡೆ ನೋಡಲೀಯದೆ ಅವ್ವಳಿಸುವು ಔಪರಿಷ್ಟದೊಳೆನ್ನನಿವು: **ಆದಿಪು,** ೪. ೧೨); ಒಂದು ಬಗೆಯ ರತಿಕ್ರೀಡೆ (ಮಧುರಸೀತ ತನಾದದೊಳುಣ್ಮೆ ಪೊಣ್ಮೆಚೂಷಿಕಮಂ ಔಪರಿಷ್ಟಕರತಂಗಳ ಭೇದದೊಳೊಂದಿದ ಆಮ್ರ ಚೂಷಿಕನಾಮಪಕ್ವಫಲದೊಳ್: **ಆದಿಪು,** ೧೧. ೯೯)

**ಔಮೀನ** – ಅಗಸೆ ಹೊಲ (ಏನೆಸೆವುವೊ ಕೌದ್ರವೀಣದ ಔಮೀನದ ತೈಳಿನದ ಮಾಷೀಣದ ಮೌದ್ಗೀನದ ಬಹುಪಾಳ ಸಸ್ಯಸಕಳ ಫಳಂಗಳ್: **ಪುಷ್ಪದಂಪು,** ೨. ೧೨)

**ಔಮ್ಯ** – ಅಗಸೆ ಹೊಲ ಪರಿಪಾಲಿಸಿದುವು ಕಣ್ಗೆ ನಾಡೆ ಮೌದ್ಗಂ ಮಾಷ್ಯಂ ಶಾಲೇಯಂ ವ್ರೈಹೇಯಂತೈಲೀನಂ ಕೌದ್ರವೀಣಂ ಔಮ್ಯಂ ಯವ್ಯಂ: **ಚಂದ್ರಪ್ರಪು,** ೧. ೯೧)

**ಔರಸತನುಜ** – ಸ್ವಂತ ಮಗ (ತನಗೆ ಗುಣವಂತಂ ಔರಸತನುಜಂ ಪುಟ್ಟಿದೊಡೆ .. .. ಸಗ್ಗಕ್ಕೊಯ್ವನೆಂದುಂ ಊಳ್ವರ್ ಪಾರ್ವರ್: **ಸಮಯಪ,** ೧೧. ೩೨)

**ಔರ್ವ** – ಬಡಬಾಗ್ನಿ (ಮಹಾಭಂಗಮಂ ತಾಳ್ದೆನೆಂದು ಒಳಗೆ ಅಂಭೋರಾಶಿ ಚಿಂತಾಗ್ನಿಯನೆ ತಳೆದವೊಳ್ ಔರ್ವಣಂತಸ್ಥಮಿರ್ಕುಂ: **ರಾಜಶೇವಿ,** ೧. ೧೦೨)

**ಔರ್ವಜ್ವಲನ** – ಸಮುದ್ರದ ಬೆಂಕಿ, ಬಡಬಾಗ್ನಿ (ಔರ್ವಜ್ವಲನ ಜ್ವಾಳಾಕಳಾಪೋದ್ಗಮಮನನುಗುಣಂ ಮಾಡುತುಂ .. .. ಬೆಳಗಿದುದು ದಿಶಾಚಕ್ರಮಂ ಚಕ್ರರತ್ನಂ: **ಆದಿಪು,** ೧೧. ೨)

**ಔರ್ವಾಗ್ನಿ** – ಬಡಬಾಗ್ನಿ (ಕಾನನದುರ್ಗಕ್ಕೆ ಮಹಾದವಾಗ್ನಿ ಜಲದುರ್ಗಕ್ಕೆ ಉರ್ವಿದ ಔರ್ವಾಗ್ನಿ: **ಪುಷ್ಪದಂಪು,** ೫. ೫೦)

**ಔರ್ವಾನಲ** – ಬಡಬಾಗ್ನಿ (ದ್ವಿಷದುರ್ವೀಪಾಲ ಸೈನ್ಯಾಂಬುಧಿದಹನಕರ ಔರ್ವಾನಲ ಉಗ್ರಪ್ರತಾಪಂ: **ಸುಕುಮಾಚ,** ೯. ೭೬)

**ಔರ್ವಾನಳ** – (ಪುದಿದು ಔರ್ವಾನಳಂ ಅಬ್ಧಿಯಂ ಸುಡುವವೋಲ್ ಶಸ್ತ್ರಾಗ್ನಿಯಿಂ ತೀವ್ರಕೋಪದಿಂ ಉದ್ವೃತ್ತಬಳಾಬ್ಧಿಯಂ ಸುಡೆ: **ಪಂಪಭಾ,** ೧೨. ೩೫)

**ಔವಳಿಸು** – ಹಾರು, ಜಿಗಿ (ಚಾದಗೆ ಕಾರ್ಗಾಲದ ಪನಿಯೆಂದೀಮಟಲ್ ಮೇಲಂಗೌವಳಿಸಿ ನಗಿಸಿದವು: **ಧರ್ಮಪ,** ೨. ೧೭)

## ಕ

**ಕ** – ನಾನಾರ್ಥಗಳು (ಅವಸರ ಶರ ಕುತ್ಸಾ ವಾರ ವಾರ್ವಾಚಿ ಕಾಂಡಂ ಪವನಜಲಜಜಾತಾಂಭಃ ಶಿರೋಕ್ತಂ ಕಶಬ್ದಂ: **ಅಭಿಧಾವ,** ೩. ೧. ೧೦೫

**ಕಂ** – ನೀರು (ಅಂಸಂ ಕಂ ಅಮೃತಂ ಪಾನೀಯಂ ಎಂದಿಂತು .. .. ನೀರ್ಗೆ ಪೆಸರಂ ಪರ್ಯಾಯದಿಂ ವಾಗ್ವಿದರ್: **ಅಭಿಧಾವ,** ೧. ೪. ೧)

**ಕಂಕ** – ಚಿಮುಟ, ಇಕ್ಕುಳ (ಮದಂಘ್ರಿಸಂಸ್ಪರ್ಶನಮುಂ ಸಂಗತಮಲ್ತು ಎನಲಿದೆ ಕಂಕಂಗೆ ಅರುವನೆ ಎನಲ್: **ಉದ್ಭಟಕಾ,** ೧೧. ೧೮); ಕರೀ ಹದ್ದು (ಚರಣಾಯುಧಂ ಶಕುನಿ ಕಂಕಂ ತೊಂಡಿಗಂ ಸೋರೆ ತಿತ್ತಿರೆ ಕೋಕಂ .. .. ರತ್ನಖಗಮಿರ್ಕುಂ ತದ್ವನಾಗೌಘದೊಳ್: **ರಾಜಶೇವಿ,** ೫. ೫೯)

**ಕಂಕಟ** – ಕವಚ (ಆಗಳ್ ಅತಿ ಮನೋಜವ ತುರಂಗಮಾರೂಢಂ ಉದ್ಗಾಢ ಕಂಕಟನುಂ ಉತ್ಥಿತ ನಿಶಾಹತಿಯುಂ ಉದೀಣ್ ಕ್ರೋಧಾನಳನುಂ ಆಗಿ: **ವರ್ಧಮಾಪು,** ೪. ೬೪ ವ)

**ಕಂಕಣ** – ಬಳೆ (ರತ್ನದ ಕಂಕಣಮೆಂಬಂತೆ ಕೈಗೆ ವಂದುದು ಚಕ್ರಂ: **ಪಂಪರಾ,** ೧೪. ೧೦೫)

**ಕಂಕಣವಾರ** – ಬಳೆಗಳ ಸಾಲು [ಕಂಕಣ+ಆರ=ಕಂಕಣ ಮತ್ತು ಹಾರ] (ಮೆಲ್ಲನೆ ವಕುಲ ಆಳವಾಳತಳದೊಳ್ ಸುರಿದ ಅಂಬುಜಸೂತ್ರದಿಂದೆ ಮತ್ತನಿತಱೊಳಂ ಮುಗುಳ್ಸರಿಗೆ ತೋಳ್ವಳೆ ಕಂಕಣವಾರಮೆಂದು ಬೇಟ್ಪಿನಿತನೆ ಮಾಡಿ: **ಪಂಪಭಾ,** ೨. ೧೬)

**ಕಂಕಪತ್ರ –** ಹದ್ದಿನ ಗರಿ[ಗಳುಳ್ಳ ಬಾಣ] (ಚಪಳ ಚಾಪನುಂ ಕರತಳಕಲಿತ ಕಂಕತ್ರನುಂ ಆಗಿ ಮೃಗಯಾವಿನೋದದಿಂ ತೊಟಲುತಿರ್ಪಾಗಳ್: **ನೇಮಿನಾಪು,** ೩. ೬೦ ವ)

**ಕಂಕರಿ –** ಒಂದು ವಾದ್ಯ (ಕಂಕರಿಯ ಸಿವಿಜಿ ಪೆಂಪಿನ ಝೆಂಕಟ ಬೊಂಬುಟಿಯ .. .. ಉಲಿ ನೆಗಟ್ಟು ಕರ್ಣಾಮೃತಸಮುದ್ರಘೂರ್ಣನಮಾಯ್ತೋ: **ಪುಷ್ಪದಂಪು,** ೧೨. ೨೭)

**ಕಂಕಾಳಿ –** ಕೈಲಾಸದ ದಂಡಧಾರಿಯಾದ ಒಬ್ಬ ಸೇವಕ (ಪೊಂಬೆತ್ತಮನೆತ್ತಿ ಪೋ ಸಾರ್ ತೊಲಗು ಎಂದು ನಿವಾರಿಸಿ ಸಮುಚಿತಸ್ಥಾನದೊಳ್ ಇಂಬುಕಯ್ಯುವ ಭೀಮ ಕಂಕಾಳಿಗಳೆಂಬ ವೇತ್ರಧರರಿಂ; **ಶಬರಶಂ,** ೧. ೭೯ ವ)

**ಕಂಕಾಳಿಕೆ –** ಎಲುಬು ಗೂಡು (ಬರಿಯೆಲ್ ಬೇಱೆರ್ದ ಕಂಕಾಳಿಕೆ ಪೆಡತಲೆಯ ಪೊಕ್ಕ ಕಣ್ .. .. ಗಿಟಿಗಿಟಿಜಂತ್ರಂಬೊಲಾಗಿರ್ದ ಮೈ: **ನೇಮಿನಾಪು,** ೭. ೨)

**ಕಂಕೆಲ್ಲಿ –** ಅಶೋಕದ ಮರ (ಸಲ್ಲತಾಭವನಂಗಳೊಳಂ ಜಲಂಗಳೊಳಂ ಸಹಕಾರ ಕಂಕೆಲ್ಲಿ ಪಲ್ಲವರಾಜಿತ ಶೈತ್ಯಸ್ಥಾನದೊಳಂ: **ಸುಕುಮಾಚ,** ೨. ೪೬)

**ಕಂಕೇಲಿ –** ಕಂಕೆಲ್ಲಿ (ಪುಣ್ಯಾಂಬುಪೂರ್ಣಕುಂಭಾಗ್ರಮುಚಿತ ಕಂಕೇಲಿಪಲ್ಲವೋಲ್ಲಾಸರಚಿತ: **ಆದಿಪು,** ೪. ೩೦ ರಗಳೆ)

**ಕಂಗನೆ –** ಬಹಳವಾಗಿ (ಮುನಿಸಿನೊಳ್ ಆದಂ ಏವಯಿಸಿ ಸೈರಿಸದೆ ಅದವಟಲೊಳ್ ಕನಲ್ದು ಕಂಗನೆ ಕನಲುತ್ತುಂ ಉಮ್ಮಳಿಸಿ: **ಪಂಪಭಾ,** ೪. ೧೦೬)

**ಕಂಗು –** ನವಣೆ (ಕಳಮ ಷಷ್ಟಿಕಾ ವ್ರೀಹಿ ಯುವ ಯಾವನಾಳ ಗೋಧೂಮ ಕಂಗು .. .. ವಿವಿಧ ಧಾನ್ಯಭೇದಂಗಳುಂ: **ಆದಿಪು,** ೬. ೭೨ ವ)

**ಕಂಚಗಾಱ –** ಕಂಚು ಮುಂತಾದ ಲೋಹದ ಕೆಲಸ ಮಾಡುವವನು (ಬೆಳ್ವೆಳಗುಂ ಬಿದಿರುತ್ತೆ ಕಂಚಗಾಱರ ಪಸರಂ ಪೊದಳ್ದೆಸೆವುದು: **ಕುಸುಮಾಕಾ,** ೨. ೧೦೪)

**ಕಂಚೀಳೆ –** ಕಂಚಿನಿಂಬೆ, ಈಳೆ ಜಾತಿಯ ಒಂದು ಹಣ್ಣು (ಪೇರೀಳೇಯ ನಾರಂಗದ ಕಂಛೀಳೆಯ ತನಿವಣ್ಣನಿಕ್ಕೆ ಮೆಲ್ದು: **ಧರ್ಮಾಮೃ,** ೧. ೧೨೦)

**ಕಂಚು –** ಪಾತ್ರೆ (ಸತ್ತರ್ .. .. ಸೇಲೆಯಂ ಕಂಚುಮಂ ಒಲ್ದಿತ್ತೊಡೆ ನಭಕ್ಕೆ ಪೋಪರ್: **ಸಮಯಪ,** ೧೧. ೧೧೭)

**ಕಂಚುಕ –** ಅಂಗಿ (ಒರ್ವಂ .. ..ಕಾರ್ಯವಿಜ್ಞಾಪನೋತ್ಸುಕಚಿತ್ತಂ ಧವಲೋತ್ತರೀಯವಸನಂ .. .. ಸಿತಕಂಚುಕಂ ತ್ವರಿತದಿಂ ಬಂದಂ ಪ್ರತೀಹಾರಕಂ: **ಪಂಪರಾ,** ೨. ೨)

**ಕಂಚುಕಿ –** ರಾಣಿವಾಸದ ಅಧಿಕಾರಿ (ಕಂಚುಕಿ ಬಂದು ಕಂಡಂ ಅನುರಾಗದಿಂ ಆ ಮನುಜೇಂದ್ರಚಂದ್ರನಂ: **ಕಾದಂಬ,** ೧. ೭೧)

**ಕಂಚುಕಿತ –** ಹೊಂದಿದ (ಹರ್ಷೋತ್ಕರ್ಷಚಿತ್ತನುಂ ರೋಮಾಂಚಕಂಚುಕಿತ ಶರೀರನುಮಾಗಿ: **ನೇಮಿನಾಪು,** ೩. ೧೮ ವ)

**ಕಂಚುಕೀಂದ್ರ –** ಹಾವುಗಳ ರಾಜ, ಆದಿಶೇಷ (ಗರುಡ ಚಂಚುವಂ ಕಂಡ ಕಂಚುಕೀಂದ್ರನಂತೆಯುಂ ಭಯಂಗೊಂಡು: **ಪುಷ್ಪದಂಪು,** ೧೩. ೨೬ ವ)

**ಕಂಚುಗರ್ಚು –** ಕಂಚಿನ ತಟ್ಟೆ ತೊಳೆ (ಬೆಸನಂ ಕೆಯ್ಗೆಱೆವ ಕಂಚುಗರ್ಚುವ ಬೆಸನಂ ಬೆಸನಲ್ಲದೆ .. .. ಆರಿತ್ತರೆಲವೊ ನಿನಗೀ ಬೆಸನಂ: **ಗದಾಯು,** ೭. ೩೭)

**ಕಂಚುಗಾಱ –** ಕಂಚಿನ ಕೆಲಸ ಮಾಡುವವನು (ನಿರ್ಮಳ ಪಾತ್ರೋತ್ಕರದಿಂದಂ ತೊಳತೊಳಗುತ್ತಿರ್ಪ ಕಂಚುಗಾಱರ ಪಸರಂ: **ಗಿರಿಜಾಕ,** ೨. ೯೨)

**ಕಂಚುಗಾಱಗೇರಿ –** ಕಂಚುಗಾರರ ಬೀದಿ (ಭಯದಿಂ ಬಿಟ್ಟು ಪೋಗೆ ಕಂಚುಗಾಱಗೇರಿಯಂ ಪೊಕ್ಕು: **ಧರ್ಮಾಮೃ,** ೨. ೧೬ ವ)

**ಕಂಚುವಱಿ –** ಕಂಚಿನ ಹರೆ, ತಮಟೆ (ಪೊಲೆಯರ ದನಿಯಪ್ಪೊಡಂ ಕೇಳದಂತು ಕಂಚುವಱೆವೆರಸು ಲೇಸುನುಡಿ ಲೇಸುನುಡಿಯೆಂಬ ಮಹಿಮೆಯಿಂದುಣ್ಬರ್: **ಧರ್ಮಾಮೃ,** ೯. ೬೭ ವ)

**ಕಂಚುಳಿಕೆ –** ರವಿಕೆ (ತೊಡರ್ಚಿದ ಉಡೆಗಂಟೆಯ ಕಿರ್ಗಟ್ಟಿನ ಸುರಿಗೆಯ ಕಟ್ಟಿದ ಚಿಂದಿಯ ತೊಟ್ಟ ಕಂಚುಳಿಕೆಯ: **ಗಿರಿಜಾಕ,** ೬. ೫೫ ವ)

**ಕಂಜ –** ಕಮಲ (ತೋಱೆತ್ತು ಕೊಳಂ ಪರಿವಿಕಸಿತ ಕನಕ ಕಂಜ ಪಿಂಜಲ್ಕಪುಂಜಪಿಂಜರಿತಜಳಂ: **ಪಂಪಭಾ,** ೮. ೩೮)

**ಕಂಜಕಿಂಜಲ್ಕ –** ತಾವರೆಯ ಕೇಸರ (ಕಂಜ ಕಿಂಜಲ್ಕ ಪುಂಜಪಿಂಜರಿತಾಚ್ಛೋದಕಪರಿಪೂರ್ಣತಟಾಕ: **ಆದಿಪು,** ೧. ೫೮)

**ಕಂಜಜ –** ತಾವರೆಯಲ್ಲಿ ಜನಿಸಿದವನು, ಬ್ರಹ್ಮ (ಉಡುರಾಜಿ ಲತಾಂತಮದಾಗೆ ಕಂಜಜಂ ಪೂಜಿಪ ಹೇಮಲಿಂಗಮೆನೆ ರಾಜಿಸಿತಂದು ಸುವರ್ಣಭೂಧರಂ: **ಉದ್ಭಟಕಾ,** ೧. ೪೦)

**ಕಂಜಜಾತಾಕರ –** ತಾವರೆಯ ಕೊಳ (ಕಂಜತಾಕರದಲ್ಲಿ ವಲಂ ಜನಿಸಿದ ಸುಟಿಯ ಮಧ್ಯದೊಳ್ ಮಿಸುಪ ರಜಃಪುಂಜಂ: **ಉದ್ಭಟಕಾ,** ೫. ೬೧)

**ಕಂಜಪ್ರಿಯ –** ಸೂರ್ಯ ಮಂಜಿನ ಮಱೆಯೊಳ್ ಮಸುಳ್ದಿರೆ ಕಂಜಪ್ರಿಯಕುಮುದಬಂಧುಗಳ್: **ಆದಿಪು,** ೬. ೬೧)

**ಕಂಜಾತ –** ತಾವರೆ (ತದ್ಗುರು ಕರಕಂಜಾತ ಜಾತನೆನಿಸಿದಂ ಈತಂ: **ರಾಜಶೇವಿ,** ೧. ೬೪)

**ಕಂಜಾಸನ –** ಬ್ರಹ್ಮ (ನೀನಿತು ಅಂಜಿದೊಡಂ ಕುಂಜರಾರಿ ಕೊಲ್ಲದೆ ಮಾಣಂ ಕಂಜೋದರನುಂ ಹರನುಂ ಕಂಜಾಸನನುಂ ಕಡಂಗಿ ಕಾವೊಡಮೀಗಳ್: **ಪಂಚತಂತ್ರ,** ೨೩೧)

**ಕಂಜಾಸ್ತ್ರ –** ಮನ್ಮಥ (ಕಂಜಾಸ್ತ್ರನಂ ನಗುವಂತೆ ಒಪ್ಪುವನಂ ಮೃಗಾಕ್ಷಿ ನಡೆ ನೋಡುತ್ತಿರ್ದಳಾ ಭೂಪನಂ: **ರಾಜಶೇವಿ,** ೭. ೨೧)

**ಕಂಜೋದರ –** ಹೊಕ್ಕುಳಲ್ಲಿ ತಾವರೆಯನ್ನು ಹೊಂದಿದವನು, ವಿಷ್ಣು (ನೀನಿತು ಅಂಜಿದೊಡಂ ಕುಂಜರಾರಿ ಕೊಲ್ಲದೆ ಮಾಣಂ ಕಂಜೋದರನುಂ ಹರನುಂ ಕಂಜಾಸನನುಂ ಕಡಂಗಿ ಕಾವೊಡಮೀಗಳ್: **ಪಂಚತಂತ್ರ,** ೨೩೧)

**ಕಂಟ –** ತಾಳೆಗರಿಯ ಮೇಲೆ ಬರೆಯಲು ಬಳಸುತ್ತಿದ್ದ ಸಾಧನ (ಕಂಟಮೊನೆ ಬಾಳ್ಮೊನೆಯಾಗಿರೆ: **ಅನಂತಪು,** ೨. ೨೪)

**ಕಂಟಕ –** ಮುಳ್ಳು (ಸಕಳೋರ್ವಿತಳಪೂಜ್ಯಮಪ್ಪ ಭವದೀಯ ಪ್ರಾಜ್ಯರಾಜ್ಯಕ್ಕೆ ಕಂಟಕನಾದಂ ಕ್ರಮದಿಂದೆ: **ಪಂಚತಂತ್ರ,** ೧೬೦); ಪುಲಕ (ಅನುಜನ ಭುಜಪ್ರತಾಪಕ್ಕೆ ಅನುರಾಗಮೆಯ್ದಿ ತಡೆಯದೆ ಅನುರಾಗಮಂ ಇತ್ತುದಂ ಉದಗ್ರ ಕಂಟಕಾಂಚಿತ ಘನಭುಜದಿಂದಪ್ಪಿ ಭುಜಬಲಂ ಬಲದೇವಂ: **ಶಾಂತೀಶ್ವಪು,** ೮. ೧೧೯); ತೊಂದರೆ ಮಾಡುವವನು (ದಶಕಂಠನಂ ತ್ರಿದಶಕಂಟಕನಂ ಕೊಲಲೆಂದು ರಾಮನಾದಂದಿನ ಸಾಹಸಂ ಮನದೊಳ್ ಆವರಿಸಿತ್ತು ಅಕಳಂಕರಾಮನಾ: **ಪಂಪಭಾ,** ೪. ೧೯)

**ಕಂಟಕಾಂಕುರ** – ಪುಲಕವುಂಟಾಗು (ಪಥಿಕರ ಪಪದತಳಹತಿಯಂ ಹತಕಂಟಕಾಮಕುರಂ ಮಾಡುವವೊಲ್: **ಲೀಲಾವತಿ,** ೧. ೩೬)

**ಕಂಟಣಿಪು** – ಹಿಗ್ಗು (ಕಂಟಣಿಪಿಂ ಅಮಲರಿಸಿದಂ ಕುಂಟಣಿಯರ ಕೊರಡುಗೊಂಡ ಮನಮಂ ಮದನಂ: **ನೇಮಿನಾಪು,** ೪. ೧೪೮)

**ಕಂಟಣಿಸು** – ಕುಗ್ಗು (ಎನ್ನಂ ಪಿಡಿದುಕೊಂಡು ದಕ್ಷಣಾಭಿಮುಖನಾಗಿ ಪೋಪುದುಂ ಬೇಡವಟ್ಟುಮಂ ಕಂಡು ಕಂಟಣಿಸುತ್ತುಂ ಬರುತಿರೆ: **ಕಾದಂಸಂ,** ೮. ೩೫ ಮತ್ತು ೩೫ ವ); ಪುಲಕಗೊಳ್ಳು; ಹೇಸಿಗೆಪಡು (ಅಂತದಂ ಕಂಡು ಕಂಟಣಿಸುತ್ತುಂ ಎನ್ನೊಳಿಂತೆಂದಂ: **ಕಾದಂಬ,** ೧೦. ೪೨ ವ)

**ಕಂಟವಲಗೆ** – (ಬಂಧೂಕದ ಬಾರವಟ್ಟಗೆಳಿಂ ಕೇತಕಿಯ ಕಂಟವಲಗೆಗಳಿಂ ಕುರುವಕದ ಕೀಟ್ವುದುವಂಗಳಿಂ: **ಕುಸುಮಾಕಾ,** ೧೨. ೧೫೭ ವ)

**ಕಂಟಳಿಸು** – ಅಸಹ್ಯಪಡು (ಪೇಸದೆ ಕಂಟಳಿಸದೆ ಬಿಱುತೋಸರಿಸದೆ ಮಾಂಸಸೇವೆಗೆಯ್ವನೆ .. .. ವೇದಮಂ ದೋಷಿಸಿದಂ: **ಸಮಯಪ,** ೧೪. ೧೪೬); ನಿರ್ಬಂಧಿಸು (ಪೀರ್ದ ಪಟಿನೀರ್ಗಳಂ ಅಟ್ಟಿಸಲಾಱದೆ ಎಯ್ದೆ ಕಂಟಳಿಸಿ ಮಗುಳ್ಚಿದಪ್ಪುದೆನಲ್ ಉಮ್ಮನೆ ಕಾಮಿನಿಯೇಂ ಬೆಮರ್ತಳೋ: **ಲೀಲಾವತಿ,** ೧೨. ೩೮)

**ಕಂಟಿಯ ಬಾರ** – ಮುಳ್ಳು ತುಂಬಿದ ಬಾಗಿಲು (ಆ ರಾಜಗೇಹದ ಸೀಯದರದ ಕಂಟಿಯ ಬಾರದ ಅಂತರಾಳದಲ್ಲಿ: **ಅನಂತಪು,** ೧. ೧೧೭ ವ)

**ಕಂಟಿಸು** – ಪೀಡಿಸು (ಕರೆಯದೆ ಕಾಡಿ ಕಂಟಿಸುವ ಕೂಂಟಣಿಯಂ ನೊಣೆಗಬ್ಬೆ ತಿಂಗೆ: **ಲೀಲಾವತಿ,** ೨. ೧೦೬)

**ಕಂಠಗತವಾಯು** – ಕೊರಳಲ್ಲಿ ಉಸಿರು ಸಿಕ್ಕಿಹಾಕಿಕೊಂಡವನು, ಮರಣೋನ್ಮುಖ (ಅಂತು ಬಿಟ್ಟು ಜಟಾಯು ಕಂಠಗತವಾಯುವಾಗೆ ದಶಕಂಠನುಯ್ವ ಸಮಯದೊಳ್: **ಪಂಪರಾ,** ೯. ೧೦೬ ವ)

**ಕಂಠಗತಾಸು** – ಕಂಠಗತವಾಯು (ಅಗಧರ ನಿನ್ನಂಘ್ರಿ ಭರಮಂ ಕ್ಷೀಣಬಲೋರಗನೆಂತು ಸೈರಿಪಂ ಕಂಠಗತಾಸುವಕ್ಕುಂ ಏಕಕ್ಷಣದಿಂ: **ಜಗನ್ನಾವಿ,** ೩. ೧೧೦)

**ಕಂಠಗ್ರಹಂಗೆಯ್** – ಕತ್ತು ಹಿಸುಕು (ಅಂತಕಂ ಕಡುಪಿಂ ಕಂಠಗ್ರಹಂಗೆಯ್ಯದೆ ಇಂ ತಡೆಯಂ: **ಆದಿಪು,** ೧. ೭೯)

**ಕಂಠದಘ್ನ** – ಕಂಠ ಮುಳುಗುವುದು (ಆದಲೆ ನೀರ್ ಗುಂಡಿತ್ತು ಎಂದು ಈದಲೆಯೊಳೆ ನಿಂದು ಸತಿಗೆ ಹರಿಗಂ ತೋಱುತ್ತ ಆದರದೆ ಜಾನುದಘ್ನಂ ಉರೋದಘ್ನಂ ಕಂಠದಘ್ನಮೆಂಬ ಅಳವಿಗಳಂ: **ಪಂಪಭಾ,** ೫. ೫೩)

**ಕಂಠರುತಿ** – ಕಂಠಧ್ವನಿ (ಶಕುನಿರವಕ್ಕೆ ಕಂಠರುತಿಕೂಟದೊಡಂಬಡಿನೊಳ್ ನಿಮಿರ್ಚೆ ಗಾಯಕತೆಯಂ: **ಶಾಂತಿಪು,** ೮. ೧೦೧)

**ಕಂಠಸ್ಥ** – ಕೊರಳಿನಲ್ಲಿರುವ (ಕಂಠಸ್ಥ ನಕ್ಷತ್ರಮಾಲೆಯಿಂ .. .. ಉದ್ಭಾಸಿಸಿದಂ ಸ್ವಯಂವರದೊಳ್: **ಶಾಂತಿಪು,** ೫. ೧೬೧)

**ಕಂಠಿಕಾಪರಿಕಲಿತ** – ಹಾರದಿಂದ ಕೂಡಿದ (ಭಾರ್ಗವಂಗೆ ತಾನೆ ಭಾರ್ಗವನಾಗಿ ಯುವರಾಜಕಂಠಿಕಾಪರಿಕಲಿತ ಕಂಠಲುಂಠನುಂ ಆಗಿ: **ಪಂಪಭಾ,** ೧. ೬೮ ವ)

**ಕಂಠಿಕಾಬಂಧನ** – ಕೊರಳ ಆಭರಣವನ್ನು ತೊಡಿಸುವುದು (ಸಮ್ಯಗ್ದರ್ಶನಮೆಂಬ ಕಂಠಿಕೆಯಂ ಕಂಠಿಕಾಬಂಧನಮಂ ಮಾಡಿ : **ಆದಿಪು,** ೫. ೬೩ ವ)

**ಕಂಠಿಕಾ** – ಹಾರ, ಸರ, ಏಕಾವಳಿ (ಲೋಕದ ಚೆಲ್ವೆಲ್ಲಮಂ ಒಳಕೊಂಡು ರೇಖೆಗೊಂಡ ಲಾಟೀಲಲಾಮನ ಪರಿಣದ್ಧ ಕಂಧರಂ ಯುವರಾಜ ಕಂಠಿಕಾಭರಣಮಂ ಕಟ್ಟುವುದರ್ಕೆ ನೋಂತು: **ಪಂಪಭಾ,** ೨. ೩೯ ವ)

**ಕಂಠೀರವ** – ಸಿಂಹ (ಕಾದಂಬರೀ ವಿರಹೋತ್ಕಂಠಿತಚಿತ್ತಂ ಅಂದು ತಳರ್ದಂ ವೈರೀಭ ಕಂಠೀರವಂ: **ಕಾದಂಬ,** ೭. ೫೬)

**ಕಂಠೀರವವಾಹನೆ** – ಸಿಂಹವಾಹನೆ, ದುರ್ಗೆ (ಕೂರಸಿಯೊಳ್ ನೆಲಸುಗೆ ಕಂಠೀರವವಾಹನೆ ಚಳುಕ್ಯಕಂಠೀರವನಾ: **ಗದಾಯು,** ೧. ೫)

**ಕಂಠೀರವಾಸಂದಿ** – [ಕಂಠೀರವ+ಆಸಂದಿ] ಸಿಂಹಾಸನ (ಸೌಂದರಾನೇಕಮಣಿ ರುಚಿಜಳಸ್ಯಂದಿಯಂ ಮಂದರೋತ್ತುಂಗ ಕಂಠೀರವಾಸಂದಿಯಂ: **ಆದಿಪು,** ೭. ೨೭ ರಗಳೆ)

**ಕಂಠೋಷ್ಟಂಬರಂ** – ಕತ್ತು ತುಟಿಯವರೆಗೆ (ಭಕ್ಷ್ಯರಾಶಿವೆರಸು ಆ ಕಂಠೋಷ್ಟಂಬರಂ ಉಂಡು ಒಯ್ಯನೆ ಪಾರ್ವಂ ಬಂದು: **ಪಂಚತಂತ್ರ,** ೨೫೪)

**ಕಂಡ** – [ಖಂಡ] ಮಾಂಸಖಂಡ (ವಿನತಾಪುತ್ರನ ವಜ್ರ ತುಂಡ ಹತಿಗಂ ಮೆಯ್ಯಾಂತು ಕಂಡಂಗಳುಳ್ಳಿನಂ ಅಂಗಂಗಳಂ ಒಡ್ಡಿ ಒಡ್ಡಿ ತನುವಂ ಕೊಟ್ಟಂತು: **ಪಂಪಭಾ,** ೪. ೨೬)

**ಕಂಡಣಿಸು** – ಕೆತ್ತು, ಕಂಡರಿಸು (ಮಾಣಿಕ್ಯದಿಂ ಕಡೆದು ಕಂಡಣಿಸಿ ಕೆತ್ತಿಸಿದ ತೆನೆಗಳಿಂ .. .. ಕಣ್ಗೆ ಮಂಗಳವಿನಿಸಿ ಸೊಗಯಿಸುತಿರ್ಪುದು: **ಧರ್ಮಾಪ,** ೧. ೫೪ ವ)

**ಕಂಡದಿಂಡೆ** – ಮಾಂಸಖಂಡದ ರಾಶಿ (ತಲೆಗಳ ಬಟ್ಟಲಿಂ ಮೊಗೆದು ನೆತ್ತರನಾಗಳೆ ಈಂಟಿಯೀಂಟಿ ಮೆಯ್ಗಲಿಗಳ ಕಂಡದಿಂಡೆಗಳ ಬಕ್ಕಣಮಂ ತವೆ ಮೆಲ್ದು ಮೆಲ್ದು: **ಕಬ್ಬಿಗಕಾ,** ೨೨೧)

**ಕಂಡಪಟ** – ತೆರೆ, ಪರದೆ (ತೊಡಂಬೆಯ ಮೂಡಿಗೆಯ ಕದಳಿಕೆಯ ಕಂಡಪಟಂಗಳುಮಂ: **ಪಂಪಭಾ,** ೫. ೪೭ ವ)

**ಕಂಡರಣೆಗೆಯ್** – ಕೆತ್ತನೆಯ ಕೆಲಸ ಮಾಡು (ಬಳ್ಳಿಮಿಂಚಿನೊಳ್ಗುಡಿಯನೆ ಕೊಂಡು ಕಂಡರಣೆಗೆಯ್ದರೊ ಪೇಟೆನೆ: **ಅನಂತಪು,** ೬. ೧೯)

**ಕಂಡರಿಸು** – ಕೆತ್ತು, ಕಂಡರಣೆಗೆಯ್ (ಎಸಳ್ಗಳನೆಯ್ದೆ ಕಂಡರಿಸಿ ಸುವರ್ಣಚೂರ್ಣಮಂ ಪಸರಿಸಿ: **ಆದಿಪು,** ೧೧. ೧೧೬)

**ಕಂಡವಡ** – ಕಾಂಡಪಟ (ತಳಿರ್ಗಳ ಕಂಡವಡಂಗಳೆ ತಳಿರ್ಗಳ ಪಾಸುಗಳೆ ತಳಿರ್ಗಳೋವರಿಗಳೆ: **ಆದಿಪು,** ೧೧. ೭೯)

**ಕಂಡಿ** – ನುಸುಳುವ ರಂಧ್ರ, ಜಾಗ (ಮೃಗಮಂ ಗಾಳಿಯನಿರ್ಕೆಯಂ ಪಕ್ಕೆಯಂ ಗಣಿದಮಂ ಕಂಡಿಯಂ ಮಾರ್ಕಂಡಿಯಂ ಪುಗಿಲಂ ಪೋಗಂ: **ಪಂಪಭಾ,** ೫. ೪೩)

**ಕಂಡಿಕೆ** – ತುಂಡು (ಕಡಿದಿಕ್ಕಿದ ಬೆರಲ ಕಂಡಿಕೆಗಳಿಂ ಪಸಿಯರಸಿನದ ಕೊಂಬನುಡಿದು ಸುಣ್ಣಂದೊಡೆದು ಈಡಾಡಿದಂತಾಗೆ: **ನೇಮಿನಾಪು,** ೫. ೨ ವ)

**ಕಂಡು** – ನವೆ (ಕಂಡು ಕಂಡೂತಿ ಖರ್ಜುಗಳ್ ತಾನಕ್ಕುಂ: **ಅಭಿಧಾವ,** ೧. ೧೨. ೩೬))

**ಕಂಡುಗ** – ಖಂಡುಗ, ಒಂದು ಅಳತೆ (ಗೋಮಂಡಳದೊಳ್ ಒಳ್ಳಿದುವಪ್ಪ ಪತ್ತು ಪಯನುಮಂ ಮೂಸಾಸಿರ ಕಂಡುಗ ಬತ್ತಮುಮಂ ಪ್ರಮಾಣಂ ಮಾಡಿ ಕೊಟ್ಟೊಡೆ: **ವಡ್ಡಾರಾ,** ಪು ೨೨ ಸಾ ೩)

**ಕಂಡುವೋಗು** – ತುಂಡಾಗು (ಕಡಿಕಂಡಮಾದ ಮೆಯ್ಯುಂ ಕುಣಿಲ್ವಾಱುವ ಮುಂಡಮುಂ ಮುಂಡುವೋದ ಕಯ್ಯುಂ ಕಂಡುವೋದ ತೊಡೆಯುಂ ಪಿಸುಟ್ಟಿ ಕಿಟಿಲ್ವೊಡೆಯುಂ ಕಣೆವೋದ ಕಣಕಾಲುಂ ದೊಣೆವೋದ ಮೇಗಾಲುಂ: **ಪಂಪರಾ,** ೧೩. ೫೪ ವ)

**ಕಂಡೂತಿ** – ನವೆ (ಕಟಕಂಡೂತಿ ನಿವಾರಣೈಕಮತಿ ಮತ್ತೇಭೌಘ ಸಂಘೃಷ್ಟ ತತ್ಕಟದಾನದ್ವರಚಿಹ್ನ: **ರಾಜಶೇವಿ,** ೫. ೫೫)

**ಕಂಡೂಯ** – ನವೆ, ತುರಿಕೆ (ದೋರ್ದಂಡಕಂಡೂಯ ದುರ್ದಮವೈರಿದ್ವಿರದೇಂದ್ರಕೇಸರಿರವಂ: **ಆದಿಪು,** ೧೧. ೧೦); (ದೋರ್ದಂಡ ಕಂಡೂಯಮಾನಮಂ ಚಂಡಾಸಿ ಸಂಘಟ್ಟದಿಂ ಒಗೆವುರಿಯಿಂ ಮಟ್ಟಿಪೆಂ: **ಪಂಪರಾ,** ೧೨. ೭೩)

**ಕಂಡೂಳ** – ನವೆ, ಕಜ್ಜಿ (ಮದಪಯಃಕಂಡೂಳಗಂಡಸ್ಥಳ ದ್ವಿರದೋದ್ಧೃಷ್ಟ ಘನಸ್ರವತ್ಸರಳಸಾರಾಮೋದಂ: **ಆದಿಪು,** ೧೩. ೯)

**ಕಂಡಹರಣ** – ನವೆಯನ್ನು ಹೋಗಲಾಡಿಸುವುದು (ನಿಜಭುಜಾದಂಡಕಂಡೂಹರಣ ನಿಘರ್ಷಣ ಕುತೂಹಳಂ ಹಳಧರನೆಟ್ಟು ನಿಂದಿರ್ದು: **ಅಚವರ್ಧ,** ೭. ೬೧ ವ)

**ಕಂಡೂಹೃತಿ** – ನವೆಯನ್ನು ಹೋಗಲಾಡಿಸುವುದು (ಎನ್ನಯ ಭುಜಕಂಡೂಹೃತಿಯಂ ನೆಗಳ್ವೆಂ ತೋರ್ಪೆನೆನ್ನ ಸಾಹಸದಿರವಂ: **ರಾಜಶೇವಿ,** ೫. ೧೩೨)

**ಕಂತಿ** – ಜೈನಸನ್ಯಾಸಿನಿ (ಶಾಂತಿಸುಲಕ್ಷಣ ಕಂತಿಯರ ಸಾರೆ ತಪಮಂ ಕೈಕೊಂಡು: **ಚಾವುಂಪು,** ೩೦೪, ಸಾ. ೪)

**ಕಂತಿಕೆ** – ಕಂತಿ (ಪ್ರಭಾವತಿ ಕಂತಿಕೆಯರಲ್ಲಿ ಧರ್ಮಮಂ ಕೇಳ್ದು ಬಂದಿಸಿ ತಪಂಬಟ್ಟೊಳ್: **ಚಾವುಂಪು,** ಪು. ೨೧೫. ಸಾ. ೧೧)

**ಕಂತು** – ಮನ್ಮಥ (ಕಂತು ಪುಷ್ಪಾಂಜಳಿಯಂ ಸೂಸಿದ ಪದದೊಳೆ ಸಭೆಗಂ ಸೂಸಿದನೊಡನೊಡನೆ ನನೆಯ ಮೊನೆಯಂಬುಗಳಂ: **ಆದಿಪು,** ೯. ೨೧)

**ಕಂತುಕ** – ಆಟದ ಚೆಂಡು (ಪಲ್ಲಿಲಿವಾಯೊಳ್ ಕ್ರೀಡಾಕಂತುಕಮಂ ತೂತಂತಿ ಕಾಲ್ದುಡುಗೆಯಂ ಕಳೆದೀಡಾಡಿ: **ನೇಮಿನಾಪು,** ೫. ೨ ವ)

**ಕಂತುಚಾಪ** – ಕಾಮನಬಿಲ್ಲು (ಚಂದ್ರಿಕೆ ಚಂದ್ರಿಕೆಯಂ ಪಳಂಚೆ ಗೇಯದ ರುತಿ ಕಂತುಚಾಪರುತಿಯೊಳ್ ತಡಮಾಗೆ: **ಜಗನ್ನಾವಿ,** ೧೬. ೧೧೩)

**ಕಂತುಚೇತ** – ಕಾಮಾಸಕ್ತಿ (ಕಂತುಚೇತಂ ತೊಟಿಲಲ್ ಅವಿರತಂ ಚಕ್ರವಾಕಂ ಪರಾಕಂ: **ಚಂದ್ರಪ್ರಪು,** ೮. ೧೦)

**ಕಂತುಮನ** – ಕಾಮಾಪೇಕ್ಷೆ (ಕೊಂತಿ ಕಂತುಮನದೊಳ್ ತಾಂ ರಚ್ಚೆಯೊಳ್ಪುಟ್ಟಿ ಪೆತ್ತೆನ್ನಂ .. .. ಕೃತಬೂಲೋಕರ್ಣನಂ ಕರ್ಣನಂ: **ನೇಮಿನಾಪು,** ೪. ೯೯)

**ಕಂತುಶರ** – ಕಂತುಚಾಪ; ಮನ್ಮಥನ ಬಾಣ (ಅಂತು ಕಂತುಶರ ಪರವಶನಾಗಿ ಧೈರ್ಯಕ್ಷರಣೆಯುಂ ಇಂದ್ರಿಯಕ್ಷರಣೆಯುಂ ಒಡನೊಡನಾಗೆ: **ಪಂಪಭಾ,** ೨. ೪೨ ವ)

**ಕಂತೆ** – ಚಿಂದಿ ಬಟ್ಟೆ (ಥಕಾರಕ್ಕೆ ತಕಾರಂ – ಕಥೆ–ಕತೆ, ಕಂಥಾ–ಕಂತೆ: **ಶಬ್ದಮದ,** ೨೬೯, ಪ್ರ)

**ಕಂತೆಗ** – ಚಿಂದಿ ಬಟ್ಟೆ ಧರಿಸಿದವನು, ವಿರಾಗಿ (ಗಪ್ರತ್ಯಯಕ್ಕೆ – ಮಾತುಗಂ ಬೂತುಗಂ ಕಂತೆಗಂ ಬೊಂತೆಗಂ: **ಶಬ್ದಮದ,** ೨೧೨, ಪ್ರ)

**ಕಂತೆವೊರೆ** – [ಕಂತೆ+ಒರೆ] ಕೆಲಸಕ್ಕೆ ಬಾರದ ಮಾತಾಡು (ಅವರಿವರಂ ಕನಲ್ದು ಬಿಱುವಾತುಗಳಿಂ ಜಱೆದು ಆನೆ ಲೋಕದೊಳ್ ಕವಿಯೆನುತ ಉಂತೆ ಕಂತೆವೊರೆದಂತೆ: **ಧರ್ಮಮಧು,** ೧. ೬೬)

**ಕಂದ** – ಮೋಡ (ಧರಾಳೀವಕ್ತ್ರಮಂ ವೀಕ್ಷಿಪಾತುರದಿಂ ವೇಷ್ಟಿತ ಕಂದ ಕಾಡಪಟಮಂ ನೂಕಿರ್ದಳೋ ವ್ಯೋಮಸೌಂದರಿ ಎಂಬಂತೆ ಪಟಚ್ಚನಾಯ್ತು ಗಗನಂ ಮೇಘಬ್ರಜಂ ಪೋಗೆಯುಂ: **ಶಾಂತೀಶ್ವಪು,** ೧೨. ೬೨); ಹಣೆಯ ಮೂಳೆ (ಇಡೆ ಪಣೆಯಂ ಅಡಸಿ ಕಂದಮಂ ಒಡೆದುಚ್ಚಳಿಸಿರೆ ಸರೋಷಮತಿ ಮಗುಳ್ದು: **ರಾಜಶೇವಿ,** ೫. ೯೧); ಭುಜ (ಕರಖೇಟಕಮಂ ಪೊಡೆದಿಕ್ಕಿ ಸೀಸಕಂ ಪುಡಿಪುಡಿಯಪ್ಪಿನಂ ಕಡಿದು ಕಂದಮಂ ಇರ್ಕಡಿಗೆಯ್ದು: **ರಾಜಶೇವಿ,** ೬. ೬೨); ನಾಲ್ಕು ಸಾಲಿನ ಚಿಕ್ಕ ಪದ್ಯಜಾತಿ, ಫಲ (ಕಂದಂಗಳ್ ಅಮೃತಲತಿಕಾಕಂದಂಗಳ್: **ಗಿರಿಜಾಕ,** ೧. ೧೨) ಮಗು (ಪಾಲ್ವೊರೆದ ನುಣ್ಬೆರಲಂ ಮೊಲೆಗಿತ್ತು ಪೀರ್ದು ಕಣ್ದೆಱೆಯದ ಕಂದನೆಂದೆನಗೆ ಕಣ್ದೆಱೆಯಿಪ್ಪನೊ ಮಂದಹಾಸಮಂ: ನೇಮಿನಾಪು, ೧. ೧೦೦); ಚಿಕ್ಕವರನ್ನು ವಾತ್ಸಲ್ಯದಿಂದ ಸಂಬೋಧಿಸುವುದು (ಕಂದ ನಿಜಾನುಜರೆಲ್ಲಿದರ್: **ಗದಾಯು,** ೩. ೭೬); ಗೆಡ್ಡೆ (ಕರಹಾಟಂ ಕಂದಂ: **ಅಭಿಧಾವ,** ೧. ೪. ೨೧)

**ಕಂದಮೂಲ** – ಗೆಡ್ಡೆ ಗೆಣಸು (ಈ ಬನದ ಕಂದಮೂಲಫಲಂಗಳಂ ತಿಂದುಂ ಅರವಿಂದಮಕರಂದ ಗರ್ಭಸಂದರ್ಭಸರೋವರಜಲಂಗಳಂ: **ಆದಿಪು,** ೯. ೯೨ ವ)

**ಕಂದರ** – ಗುಹೆ (ದರಿ ಕಂದರಂ ಬಿಲಂ ಗಹ್ವರಂ: **ಅಭಿಧಾವ,** ೧. ೬. ೩); ಕಣಿವೆ (ತತ್ ಗಿರೀಂದ್ರ ಕಂದರ ಕನಕಾಚಳಂಗಳಂ ಇಂತುಟನಿತಂ ತವೆ ಹೇಮರೇಣುಗಳ್ವೆರಸು ಕಡಂಗಿ ಪೊತ್ತು ನಡೆದತ್ತು ಘಟೋತ್ಕಚರೌದ್ರಸಾಧನಂ: **ಪಂಪಭಾ,** ೬. ೩೨)

**ಕಂದರೋದರ** – ಕಂದರಗಳನ್ನು ಒಳಗೊಂಡುದು (ಸಂದರ ಮಂದರಾಚಳಂ ಕಂದರೋದರಂ ಕಿನ್ನರಾಮರ ಸ್ತ್ರೀರ್ಯಂ: **ಅಜಿತಪು,** ೨. ೨)

**ಕಂದರ್ಪ** – ಮನ್ಮಥ (ಆ ಮಹಾರ್ಣವಂ .. .. ಕಂದರ್ಪನಂತೆ ಶಂಬರ ಮದವಾರಣೋದಾರಮಂ: **ಜಗನ್ನಾವಿ,** ೧. ೪೪ ವ)

**ಕಂದರ್ಪಸಾಯಕ** – ಕಾಮಬಾಣ (ವಿಲಾಸವತಿ ನರ್ತಿಸಿದಳ್ ಕಂದರ್ಪಸಾಯಕ ಗಾಯಕಂ ನರ್ತಿಪವೋಲ್: **ಮಲ್ಲಿನಾಪು,** ೮. ೩೩)

**ಕಂದಲ್** – ಮೊಳಕೆ, ಚಿಗುರು (ಬೇಟದ ಕಂದಲ್ಗಳಂತೆ ಚಿತ್ರಾಂಗದ ವಿಚಿತ್ರವೀರ್ಯರೆಂಬ ಮಕ್ಕಳ್ ಪುಟ್ಟೆ: **ಪಂಪಭಾ,** ೧. ೭೩ ವ); ಚಿಕ್ಕ ಪಾತ್ರೆ (ನೆಲಹಿನ ಪಾಲುಂ ಬರ್ದುಂಕದೆಲೆ ಕಱೆವೀ ಕಂದಲ ಪಲುಂ ಮುಂ ಬರ್ದುಕದು: **ನೇಮಿನಾಪು,** ೭. ೮೦)

**ಕಂದಲು** – ಮಣ್ಣಿನ ಗಡಿಗೆ (ಕಂದಲಂ ಒಱಸಿ ತೊಳೆ ತಗುಳ್ದೊದೆವಾವಂ ತುಡೆಸು .. .. ಎಂಬ ಸರಮೆ ತುಱುಗಾರ್ತಿಯರಾ: **ಲೀಲಾವತಿ,** ೫. ೧೦೪)

**ಕಂದಳ** – ಒಂದು ಬಗೆಯ ಹೂ (ದೇಹದೀಪ್ತಿ ಹಾರದ ನೆವದಿಂದಮೋಲಗಿಸೆ ತಾರಗೆಯಂ ನಿಜಕಂಠ ಕಂದಳಂ: **ಪಂಪರಾ,** ೬. ೭೮)

**ಕಂದಳಿ** – ಮೊಳಕೆ, ಚಿಗುರು (ವಿಷಮವಿಷದ್ರುಮ ಕಂದಳಿಯುಮಿಂದ್ರಿಯಲುಬ್ಧಕಸ್ವಚ್ಛಂದವಿಹಾರಗಹನಭೂಮಿಯ ಱಂ: **ಆದಿಪು,** ೧೪. ೧೨೨ ವ)

**ಕಂದಳಿತ** – ಅರಳಿದ (ತತ್ ಪದಾಂಬುಪ್ರಸಾದಾಸ್ವಾದಾನಂದ ಕಂದಳಿತಹೃದಯರುಂ: **ರಾಜಶೇವಿ,** ೪. ೨೬ ವ)

**ಕಂದಳಿಸು** – ಕುಡಿಯೊಡೆ (ಮುಕ್ತಾಲತೆ ಮುಂದೆ ಕಂದಳಿಸೆ ಕಣ್ಮಲರಂ ಶ್ರವಣಾನತೋತ್ಪಳಂ ಲಾಲಿಸೆ ಬಾಲೆ ಬಂದೆಱಗಿದಳ್ ನಿಜತಾತನ ಪಾದಪೀಠದೊಳ್: **ಆಚವರ್ಧ,** ೯. ೩೫)

**ಕಂದಿಸು** – ಬಾಡುವಂತೆ ಮಾಡು (ಪಿರಿದುಂ ಸುಯ್ವಂಕೆಯಿಂ ಪಂಕಜೋತ್ಕರಮಂ ಕಂದಿಸುತುಂ: **ಶಾಂತೀಶ್ವಪು,** ೧೧. ೧೨)

**ಕಂದು** – ಕಾಂತಿಹೀನವಾಗು (ಕಂದ–ಗತಕಾಂತೌ: **ಶಬ್ದಮದ,** ಧಾ ೪೦೦); ಕೆಂಪು ಮಿಶ್ರ ಕಪ್ಪು ಬಣ್ಣ (ಅವಳ ಮೆಯ್ಸಿರಿ ಸವನಿಸದೆನೆಗೆ ಎಂದು ಕಂದನೆರ್ದೆಯೊಳ್ ತಾಳ್ದಂ ಹಿವಗದಿರನೆಂದೊಡೆ .. .. ಪೊಗಟಿಲಾರ್ಪರ್ ಆಕೆಯ ಮೊಗಮಂ: **ಕಬ್ಬಿಗಕಾ,** ೯೭); ಸಾರಸದ ಗಡ್ಡೆ (ಕಂಪು ತಿಳಿದ ಕಂದುಗಳಂ ಕೆಂದಳಂಗಳಿಂದ ಔಂಕಿ ಪಸುರ್ಮಣಿಯಿಸುವೆಯೊಳಂ: **ಲೀಲಾವತಿ,** ೧೨. ೬೭ ವ): ರುಬ್ಬುಗುಂಡು (ಹಿಮಚೂರ್ಣಮಂ ತಳಿದು ಕಂದುಗಳಿಂ ಪಿಡಿದೌಂಕಿ ನೂಂಕಿದರ್ ದೆಸೆದೆಸೆಗೆಲ್ಲ ಕಂಪೆಸೆಗೆ ಗಟ್ಟಿ ಮುಗುಳ್ಚುತೆ ಗಟ್ಟಿವಳ್ತಿಯರ್: **ಗಿರಿಜಾಕ,** ೨. ೮೯)

**ಕಂದುಕ** – ಚೆಂಡು (ಇಂದುವ ಬಿಂಬಂ .. .. ಸೌಂದರಿಯ ಕಯ್ಯ ಕೇಳಿಯ ಕಂದುಕದಂತಿರ್ಪುದು: **ನೇಮಿನಾಪು,** ೩. ೧೧೪)

**ಕಂದುಕಕೇಳಿ** – ಚೆಂಡಾಟ (ಡೋಳಾಕೇಳಿಯ ಕಂದುಕಕೇಳಿಯ .. .. ಬಿನದದೊಳೆ ಸತಿಯನವರ್ ಒಸೆಯಿಸಿದರ್: **ಪುಷ್ಪದಂಪು,** ೯. ೮೨)

**ಕಂದುಕಕ್ರೀಡೆ** – ಕಂದುಕಕೇಳಿ (ತನ್ನ ವಿಭವಮುಮಂ ವಿಳಾಸಮುಮಂ ಪಾಂಡವರ್ಗೆ ಮೆಱೆದು ಕಂದುಕಕ್ರೀಡಾದಿ ನಾನಾವಿನೋದಂಗಳಿಂ ಕೆಲವು ದಿವಸಮನಿರ್ದು: **ಪಂಪಭಾ,** ೬. ೬೯ ವ)

**ಕಂಧರ** – ಕೊರಳು (ಲೋಕದ ಚೆಲ್ವೆಲ್ಲಮಂ ಒಳಕೊಂಡು ರೇಖೆಗೊಂಡ ಲಾಟೀಲಲಾಮನ ಪರಿಣದ್ಧ ಕಂಧರಂ ಯುವರಾಜಕಂಠೀಕಾಭರಣಮಂ ಕಟ್ಟುವುದರ್ಕೆ ನೋಂತು: **ಪಂಪಭಾ,** ೨. ೩೯ ವ)

**ಕಂಧರದ್ವಯಸ** – ಕೊರಳು ತಾಕುವವರೆಗೆ (ಪರಿಕಿಸೆ ಕಂಧಕದ್ವಯಸಮಾಯ್ತು ವಿಭಾಸುರ ಕೇಸರಾಳಿಯೊಳ್: **ಚಂದ್ರಪ್ರಪು,** ೭. ೬೪)

**ಕಂಧರಬಂಧ** – ಹೆಗಲು (ಗಂದೇಭ ಕಂಧರಬಂಧಪ್ರವಿಭಾಸಿಯಪ್ಪ ಅರಿಗನಂ ಕಾಣುತ್ತೆ ಕಣ್ಸೋಲ್ತು: **ಪಂಪಭಾ,** ೪. ೩೮)

**ಕಂಧರಸಂಧಿ** – ಕೊರಳ ಕೀಲು (ಧಾತ್ರಿ ತಿಱ್ಱನೆ ತಿರಿವನ್ನೆಗಂ ತೆಗೆದು ಕಂಧರಸಂಧಿಯಂ ಎಯ್ದೆ ನೋಡಿ ತೊಟ್ಟನೆ ನರಂ ಎಚ್ಚೊಡೆ: **ಪಂಪಭಾ,** ೧೨. ೧೬೮)

**ಕಂಪ** – ಜೇಡಿಮಣ್ಣು (ಮದಮಂ ಗಂಡಸ್ಥಳೋದೀರ್ಣ ಕಂಪದೊಳಂಸೇವಿಸಿ ತುಂಬಿಗಳ್ ತಣಿದುವು: **ಪುಷ್ಪದಂಪು,** ೧೦. ೧೧); ನಡುಕ (ರಂಭೋರುವ ಕಂಪಂ ಅೞ್ಗಿದೆ ನಿಜೋಷ್ಠಸ್ಪಂದನ ಸ್ಫೂರ್ತಿ ಮಾಣದೆ: **ಸೂಕ್ತಿಸುಧಾ,** ೮. ೧೬೫)

**ಕಂಪಣ** – ಒಂದು ಆಯುಧ (ಕಣೆಯ ಕಂಪಣ ಮುಸಲ ಮುಸುಂಡಿ ಭಿಂಡಿವಾಳ ತೋಮರ ಮುದ್ಗರ ಮಹಾ ವಿವಿಧಾಯುಧಂಗಳೊಳಿಟ್ಟುಂ ಇಱಿದುಂ ಅಗುರ್ವು ಅದ್ಭುತಮಾಗೆ ಕಾದುವಾಗಳ್: **ಪಂಪಭಾ,** ೧೨. ೧೧೮ ವ)

**ಕಂಪನ** – ಒಂದು ಆಯುಧ, ಕಂಪಣ (ಮುಸಲ ಕಣಾಯ ಕಂಬನ ಮುಸುಂಡಿ .. .. ಶಸ್ತ್ರಾಸ್ತ್ರಂಗಳೊಳ್ ಎಚ್ಚು: **ಪಂಪರಾ,** ೧೩. ೭೬ ವ)

**ಕಂಪಲ್** – ಕೆಸರು (ಜಳರಾಶಿಶ್ರೇಣಿ ಕಂಪಲ್ ಮಸಗೆ ಬಲಪದೋದ್ಧೂತ ಧೂಳಿವ್ರಜವ್ಯಾಕುಳದಿಂ ದಿಗ್ಮಾಳೆ ಚಂದ್ರಾತಪವಿಸರದ ಅಗುರ್ವಾಗೆ.. ..ನಡೆದುದು ಭೂಪಸೇನಾ ಪ್ರತಾನಂ: **ಶಾಂತೀಶ್ವಪು,** ೧೨. ೭)

**ಕಂಪು** – ಬಂಡು, ಮಕರಂದ (ಕಂಪಂ ಕೊಳಲ್ಬರ್ಪ ಭೃಂಗನಿಕಾಯಂ ಕವಿದಲ್ಲಿ ಮೆಲ್ಲನುಗೆ ತೇಂಕುವ ಪೂವಿನ ಸಂಕರಂಗಳಂ: **ಆದಿಪು,** ೧. ೬೨)

**ಕಂಪುಗು** – ಸುಗಂಧ ಸೂಸು (ಸಂಪಗೆ ಕರಂ ಮಿಗೆ ಕಂಲುಗೆ ನಂದನಂಗಳೊಳ್: **ಕರ್ಣನೇಮಿ,** ೧೩. ೧೭)

**ಕಂಪುಗೊಳ್** – ಮೂಸಿನೋಡು (ಕಂಪುಗೊಳಲ್ಕೆ ಉಸಿರ್ದ ಉಸುರಿನಿಸಂ ಪೊಱಮಟ್ಟೆಸಟಿ ತುದಿಯನೆಯ್ದಲೊಡಂ: **ಆದಿಪು,** ೧೧. ೧೧೫)

**ಕಂಪುನಾಱು** – ಕಂಪಿನಿಂದ ಗಮಗಮಿಸು (ಸೊಡರ್ಗುಡಿ ಒಯ್ಯನಾಗೆ ಪೊಸಮಲ್ಲಿಗೆ ಕಂಪುನಾಱೆ ತಣ್ಪಿಡಿದ ಎಲರ್ ಊದೆ ಗಾವರದ ಮೆಲ್ಲುಲಿ ತುಂಬಿಯ ಗಾವರಂಂಗಳ ಗೆಡೆಗೊಳೆ: **ಪಂಪಭಾ,** ೪. ೧೧೦); ದುರ್ನಾತ (ಕೆಂಡಂಗಳೊಳ್ ಸುಟಿದು ಬೇವ ಪೆಣಂಗಳ್ ಕಂಪುನಾಱುವುದರ್ಕೆ ಸೈರಿಸಲಾರದೆ ಕೋಳ್ದಾಂಟನೊಳ್ ಕೊಳುಗುಳವಂ ಕಟಿದು ಪೋಗಿ: **ಪಂಪಭಾ,** ೧೩. ೭೧ ವ)

**ಕಂಬ** – ಧಾನ್ಯವನ್ನಳೆಯುವ ಒಂದು ಅಳತೆ (ಒಕ್ಕಲಮಗನದೊಂದು ಕಂಬಮನೊಯ್ದಿಟ್ಟು ಆ ಊರಿನ ಬಾದುಬ್ಬೆಗೆ ಸಾಯಿರಮಂ ಬೆಳೆದನೆಂದು ನುಡಿವರ್ ಮೂಢರ್: **ಸಮಯಪ,** ೯. ೪೧)

**ಕಂಬಳ** – ಕಂಬಳಿ, ಉಣ್ಣೆಯ ಹೊದಿಕೆ (ರತ್ನದ್ವೀಪದಿಂದೊರ್ವ ಪರದಂ ಸರ್ವರತ್ನ ಕಂಬಳಂಗಳಂ ಲಕ್ಷ ದೀನಾರಂಗಳ್ ಬೆಲೆಯಪ್ಪವಂ ಉಜ್ಜೇನಿಗೆ ಮಾಱಲ್ಕೊಂಡು ಬಂದಂ: **ವಡ್ಡಾರಾ,** ಪು ೨೫, ಸಾ ೨೦)

**ಕಂಬಳತೀರ್ಥ** – ಒಂದು ಕ್ಷೇತ್ರದ ಹೆಸರು (ಅಲ್ಲಿಂದಿತ್ತ ಕಂಬಳತೀರ್ಥವೆಂಬುದಾದುದು: **ವಡ್ಡಾರಾ,** ಪು ೯೩, ಸಾ ೧೯)

**ಕಂಬಿ** – ಹೆಗಲ ಕಲ್ಲಿ (ಚಮರಂ ಜತು ಪೇರುಡು ಪೀಲಿ ಎಂಬಿವಂ ತುಂಬಿದ ಕಂಬಿಯಂ ತಳೆದು ಅದೇಂ ತಳರ್ದತ್ತೊ ಪುಳಿಂದಸಂಕುಳಂ: **ರಾಜಶೇವಿ,** ೫. ೧೧೪); ಕುದುರೆ ಬಾಯಲ್ಲಿನ ಲೋಹದ ತುಂಡು (ಕಂಬಿಯ ಕಡಿಯಣದ ಕೀಲಣದ ಹೋರಟೆಯ ಘಾರಾಘಾರಿಯೊಳ್ ಜೋಳಿಸುವ ಲಾಲಾಜಲಂ ಖುರಹತಿಯಿಂ ನೆಗೆದ ದೂಳ್ಗೆ ಚಳಿಯಂಗುಡೆ: **ಗಿರಿಜಾಕ,** ೬. ೫೫ ವ); ಭಾರ ಹೊರುವ ಅಡ್ಡೆ (ಜಾಲಮನೊಪ್ಪಿರೆ ಮಾಟ್ಟಿ ಕಲ್ಲಿಯಂ ಕಾಸಿನ ಕಂಬಿಯಂ ಸಮೆವ ಮಾರ್ಘಣನುಮಂ ಗಱೆಗಟ್ಟುತಿರ್ಪ .. .. ವನೇಚರರು: ಜಗನ್ನಾವಿ, ೧೬. ೧೬); ಸೌಟು (ಕಂಬಿ ಕದ್ರು ತಾಂ ದರ್ವಿ ದಾರುಹಸ್ತಕಮೆನಿಪ್ಪುದದು ಖಿಱಿಕಾಖ್ಯಂ: **ಅಭಿಧಾವ,** ೧೧೦. ೩೩)

**ಕಂಬು** – ಶಂಖ (ಅಗಲದೆ ರೇಖಾತ್ರಯದಿಂದಗಲದೆ ಪೊಗರ್ವಟ್ಟ ಬಂಧುರಚ್ಛವಿಯಿಂ ಕಂಬುಗಳಂ ನಗುವಂತಿರೆ ಕಂಬುಗಳಂ ಕರಮೆಸೆಗುಂ ಆ ವಣಿಕ್ಪತಿಸತಿಯಾ: **ಸುಕುಮಾಚ,** ೯. ೮೯)

**ಕಂಬುಕಂಧರ** – ಶಂಖುವಿನಂತಹ ಕೊರಳು (ಇದು .ಮದನಕಂದಳಂ .. .. ಸಂದಯಮೇನೆನೆ ಸುದತಿಯ ಕಮನೀಯ ಕಂಬುಕಂಧರಮೆಸೆಗುಂ: **ಮಲ್ಲಿನಾಪು,** ೩. ೫೮)

**ಕಂಬುಕಮ್ರಶಿರೋಧರೆ** – ಶಂಕದಂತೆ ಸುಂದರ ಕತ್ತುಳ್ಳವಳು (ಬಿಂಬಾಧರೆಯ ಕಂಬುಕಮ್ರಶಿರೋಧರೆಯ ಬೆಡಂಗನಾರುಮೇನುಯ್ದುವರೇ: **ಆದಿಪು,** ೪. ೪೬)

**ಕಂಬುಗಳ** – ಶಂಖುವಿನಂತಹ ಕೊರಳು (ಅಗಲದೆ ರೇಖಾತ್ರಯದಿಂದಗಲದೆ ಪೊಗರ್ವಟ್ಟ ಬಂಧುರಚ್ಛವಿಯಿಂ ಕಂಬುಗಳಂ ನಗುವಂತಿರೆ ಕಂಬುಗಳಂ ಕರಮೆಸೆಗುಂ ಆ ವಣಿಕ್ಪತಿಸತಿಯಾ: **ಸುಕುಮಾಚ,** ೯. ೮೯)

**ಕಂಬುಗ್ರೀವೆ** – ಶಂಖುವಿನಂತಹ ಕೊರಳುಳ್ಳವಳು (ಕಂಬುಗ್ರೀವೆಯ ಜಾನಕಿಯ ಸುದ್ದಿಗಾತಂ ಬಂದಂ: **ಪಂಪರಾ,** ೧೧. ೧೧೪)

**ಕಂಬುಲತಾ** – ಶಂಖದ ಬಳ್ಳಿ (ಕಂಬುಲತಾಸುಲಲಿತ ಲವಣಾಂಬುಧಿಪರಿಧಾನಮಾಗೆ ಚೆಲ್ವಂ ಪಡೆದೀ ಜಂಬೂದ್ವೀಪಪ್ರಭುಗೆ: **ಆದಿಪು,** ೭. ೬೨)

**ಕಂಬುಲತೆ** – ಶಂಖದ ಬಳ್ಳಿ (ಪೆಂಪನಾಳ್ದುದು ಫಲಭಾರ ಕಂಬುಲತೆ ತೆಂಬೆಲವರ್ೊಯ್ಲಿನ ಲೋಲವೃತ್ತಿಯಿಂ: **ಕುಸುಮಾಕಾ,** ೯. ೨೪)

**ಕಂಭ** – ಕಂಬ (ಕಂಭಂಗಳೊಳಂ ಕೇರ್ಗಳೋಳಂ ಆಸ್ಫೋಟಿಸಿ ತಾಟಿಸಿದಾಗಳ್: **ಪಂಪಭಾ,** ೮. ೭೬ ವ)

**ಕಂಭಗಟ್ಟು** – ಕಂಬದ ಸುತ್ತ ಮಾಡಿದ ಅಲಂಕಾರ (ದಿಟ್ಟಿಗೆ ದೇವಾಂಘದ ಮೇಲ್ಕಟ್ಟುಂ ಕಂಭೆಯದ ಕಂಭಗಟ್ಟುಂ ಚೆಲ್ವಂ ನೆಟ್ಟನೆ ಕುಡೆ: **ಪಾರ್ಶ್ವನಾಪು,** ೧೪. ೬೬)

**ಕಂಭನಿಱುಗೆ** – ಕಂಬ ಸ್ಥಾಪಿಸುವುದು (ಕಂಭನಿಱುಗೆಯಿಲ್ಲದೆ ಜಿನಭವನಮಂ ಮಾಟ್ಟಿ: **ಧರ್ಮಾಮೃ,** ೧೨. ೧೪ ವ

**ಕಂಭಶಕ್ತಿ** – ಬೆಂಬಲ ಶಕ್ತಿ (ಮಕುಟಭಂಗಂ ಮಾಡಲ್ ನುಡಿದೆನಗೆ ಮಕುಟಬದ್ಧರುಂ ಒಡನಿರ್ದರುಂ ಅವರ ಕಂಭಶಕ್ತಿಗಳಾದರ್: **ಗದಾಯು,** ೧. ೬೮)

**ಕಂಭೆಯ** – ಒಂದು ಬಗೆಯ ವಸ್ತ್ರ (ದಿಟ್ಟಿಗೆ ದೇವಾಂಘದ ಮೇಲ್ಕಟ್ಟುಂ ಕಂಭೆಯದ ಕಂಭಗಟ್ಟುಂ ಚೆಲ್ವಂ ನೆಟ್ಟನೆ ಕುಡೆ: **ಪಾರ್ಶ್ವನಾಪು,** ೧೪. ೬೬)

**ಕಂಸಸೂದನ** – ಕೃಷ್ಣ (ಉಗ್ರಸೇನ ಭಯಭೇದನಂ ಉದ್ಧತ ಕಂಸಸೂದನನಂ: **ಜಗನ್ನಾವಿ,** ೨. ೮೪)

**ಕಂಸಾಳ** – [ಕಾಂಸ್ಯ+ತಾಳ] ಕಂಚಿನ ತಾಳ (ಸುಗತಿಯನುಗುಳ್ವ ಕರಡೆಗಳ ಮೇಳೈಪ ಕಂಸಾಳದ ಗರ್ಗರಿಸಪ ಗಿರ್ಗಟೆಗಳ: **ಗಿರಿಜಾಕ,** ೧೦. ೭೭ ವ)

**ಕಂಸಾರಿ** – ಕಂಸನ ಶತ್ರು, ಶ್ರೀಕೃಷ್ಣ (ನೀಂ ಬರೆ ಪೆಱತೇಂ ಕಂಸಾರೀ ಯುಷ್ಮತ್ ಪದಪಾಂಸುಗಳಿಂದೆ ಆಂ ಪವಿತ್ರಗಾತ್ರನೆಂ ಆದೆಂ: **ಪಂಪಭಾ,** ೯. ೩೨)

**ಕಕುದ** – ಗೂಳಿಯ ಹಿಣಿಲು (ಧವಳಾತಪ ವಾರಣಕಕುದ ವಿಭೂತಿಯನುಟಿದು ನೆಗಟ್ಟುಪಾಸಕನಾದಂ: **ಆದಿಪು,** ೬. ೬); ಶಿಖರ, ಶ್ರೇಷ್ಠ (ನೃಪಕಕುಧಮಂ ಸ್ಫಿತಚ್ಛತ್ರಾದಿ ಭೂತಿ ವಿಭೂತಿಯಂ: **ವರ್ಧಮಾಪು,** ೭. ೫೨)

**ಕಕುದ್ಮತ್** – ಎತ್ತು (ಕಕುಭಂ ಮುಂಗಾಲ್ ಕಕುದ್ಮತ್ ಅತಿ ವಿಷಮ ವಿಷಾಣಂ .. .. ಹರಿಗೆ ಮುನಿದು ಬರ್ಪಂತೆ ಬಂದತ್ತಿಭೇಂದ್ರಂ: **ನೇಮಿನಾಪು,** ೮. ೮೨)

**ಕಕುಭ** – ದಿಕ್ಕು (ಕಕುಭಾವಳಿಯಂ ಮುಸುಕಿದ ಮೇಘಂಗಳ ಮೊರ್ಬುಂ ಪರ್ಬಿದತ್ತು ಧರಣೀತಳಮಂ: **ತ್ರಿಷಷ್ಟಿಪು,** ೩೭. ೭); ಮತ್ತಿಯ ಗಿಡ (ಕಕುಭ ಅಶೋಕ ಕದಂಬ ಲುಂಗ ಲವಲೀ ಭೂರ್ಜ ಆರ್ಜುನ ಅನೋಕಹ ಪ್ರಕರಂ: **ಪಂಪಭಾ,** ೫. ೮೦); ವೀಣೆಯ ಬುರುಡೆ (ಶೃಂಗಾರಾರ್ದ್ರಂ ಕಕುಭಜನಿತಂ .. .. ಸರಿಗಮಪಧನ್ಯುತ್ತರಾಭೋಗವದ್ಧ್ವಂಗಂ: **ಲೀಲಾವತಿ,** ೨. ೩೦)

**ಕಕ್ಕಂಬು** – ಒಂದು ಬಗೆಯ ಬಾಣ, ಮುಳ್ಳಿನ ಬಾಣ (ನೆಱನರಿವ ಕಣೆ ಗೆಲೆಯಂಬು ಕಕ್ಕಂಬು ಕೆಲ್ಲಂಬು ಮೊನೆಯಂಬು ತೀವೆ ಕಣ್ಣಂ: **ಪಂಪಭಾ,** ೧೩. ೩೯)

**ಕಕ್ಕಡವಂದಿ** – ದೊಡ್ಡ ಹಂದಿ (ಕೆಡೆದಿರ್ದ ಶಬರನಂ ಕ್ಕಡವಂದಿಯನೀಕ್ಷಿಸುತ್ತೆ ಶಬರಸಮೂಹಂ: **ಗಿರಿಜಾಕ,** ೧. ೧೧೦)

**ಕಕ್ಕಡೆ** – ಗರಗಸದಂತೆ ಬಾಯುಳ್ಳ ಒಂದು ಬಗೆಯ ಆಯುಧ (ನಡುವ ಸರಲ್ಗೆ ಮೆಯ್ಯೊಳ್ ಅಡಂಗುವ ಸಂಕುಗೆ ದಿಂಕುಗೊಳ್ವ ಕಕ್ಕಡೆಗೆ ಇದಿರ್ ಉರ್ಚುವ ಇಟ್ಟಿಗೆ .. .. **ಪಂಪಭಾ,** ೧೦. ೯೪)

**ಕಕ್ಕರ** – ಒಂದು ಬಗೆಯ ಮದ್ಯ (ಈ ಕಕ್ಕರಕ್ಕಿಂತುಟಪ್ಪುದು ಕಳ್ಳಪ್ಪುದು ತಪ್ಪದೆಂದು ಕುಡಿದರ್ ಕಾಮಾಂಗಮಂ ಕಾಂತೆಯರ್: **ಪಂಪಭಾ,** ೪. ೮೮)

**ಕಕ್ಕರಗೆಯ್ತು** – ಕಕ್ಕರವೆಂಬ ಮದ್ಯದ ಪ್ರಭಾವ, ಅಮಲಿನಿಂದ ಮಾಡುವ ಚೇಷ್ಟೆ (ಅಂತು ಕುಡಿಯೆ ಕಕ್ಕರಗೆಯ್ತದಿಂ ತುದಿನಾಲಗೆಯೊಳ್ ತೊದಳ್ವೆರಸು ನುಡಿದ ನುಡಿಗಳುಂ: **ಪಂಪಭಾ,** ೪. ೮೮ ವ)

**ಕಕ್ಕರವಟಿಯಿಗೆ** – ಮಾಸಲು ಬಣ್ಣದ ಬಟ್ಟೆ (ಕಾರೋಹಣದ ಕಕ್ಕರವಟಿಯಿಗೆಯ ಚಿತ್ರಾವಳಿಯ: **ಆದಿಪು,** ೪. ೩೪ ವ)

**ಕಕ್ಕಸ** – ಕರ್ಕಶ, ಕಠಿಣ (ಆಗಳೆ ಪೂಣಿಸಿ ಪೋಗವೇೞ್ದು ಮಚ್ಚರದೊಳೆ ಮಾಣದೆ ಒಡ್ಡಿದಂ ಅಸುಂಗೊಳೆ ಕಕ್ಕಸರ್ ಅಂಜೆ ಸಂಜೆಯೊಳ್: **ಪಂಪಭಾ,** ೧೧. ೮೫)

**ಕಕ್ಕಸಂಬೆಱು** – ಚಡಪಡಿಸು (ಆ ರಕ್ಕಸಂ ಕಕ್ಕಸಂಬೆತ್ತು ಒಳಱುತ್ತುಂ ಬಿಳ್ದು: **ಶಬರಶಂ,** ೨. ೧೫)

**ಕಕ್ಕಸಜವ್ವನ** – ಕರ್ಕಶ ಯೌವನ, ಬಲಿತ ಯೌವನ (ಕರ್ಕಶಯೌನ–ಕಕ್ಕಸಜವ್ವನ: **ಶಬ್ದಮದ,** ೩೦೪ ಪ್ರ)

**ಕಕ್ಕಳಗಟಿಲ್** – ಚೂರುಚೂರಾಗು (ಎನಿತಂ ಕುಕ್ಕುಟಗುದಿದಪೆ ಎನಿತಂ ಕಕ್ಕಳಗಟಿಲ್ದಪಯ್ ಜೀವನೆ ನೀನೆನಿತಂ ಮಲ್ಮಲ ಮಱುಗುವೆ ಎನಿತಂ ಸಂಸಾರದೊಳಗೆ ತಿಱ್ಱನೆ ತಿರಿವಯ್: **ಅಜಿತಪು,** ೨. ೬೧)

**ಕಕ್ಕು** – ವಾಂತಿಮಾಡಿಕೊ (ಕರೀಂದ್ರನೊಳ್ ಸುರೇಂದ್ರನ ಕರೀಂದ್ರಮಮಾದೊಡಂ ಕೈಯಿಕ್ಕಿದೊಡೆ ಕ್ಕಕಕ್ಕದಿರದು ಎಂದು: **ಕುಸುಮಾಕಾ,** ೧೪. ೧೪೪ ವ); ಗರಗಸದ ಹಲ್ಲು (ಕಕ್ಕಿನ ಪವಳದ ಮಣಿಗಳನಿಕ್ಕುವವರ್ಪಲರೊ ಮುತ್ತಿನ್ನೆಸರಮಂ ಕೇಳಿಕ್ಕುವರ್ಪಲರೊ: **ಧರ್ಮಾಮೃ,** ೧. ೧೫೦)

**ಕಕ್ಕುಂದಟಿ** – ಹಲ್ಲುಗಳಿರುವ ಆಯುಧ, ಗರಗಸ (ಬಾಟ್ಸೇಲಿಯ ಕೇಸರದ ಕಕ್ಕುಂದಟಿಯ ಕಾಪಿನ ಕಂಪಿನ ಕೋಶಮಿರ್ಪಂತೆ: **ಲೀಲಾವತಿ,** ೮. ೫೧ ವ)

**ಕಕ್ಕುವಡ** – ಮಲ್ಲಯುದ್ಧದ ಒಂದು ವರಸೆ (ಎಸೆವ ಮುಹಗ್ಗಳಂ ಠಡಕಿ ಕಕ್ಕುವಡಂ .. .. ಎನಿಪ್ಪ ಜೆಟ್ಟಿಗನ ಬಿನ್ನಣಮೊಪ್ಪೆ ಕಾದಿದರ್: **ಚಂದ್ರಪ್ರಪು,** ೫. ೭೮)

**ಕಕ್ಷ** – ಕಂಕುಳು (ನಿಚ್ಚಲಿ ಕಾರಿರುಳೊಳ್ ಪೊಱಪಚ್ಚಮಂ ಉಟ್ಟಿರ್ದು ಇಱುಂಕಿ ಕಕ್ಷದೊಳಾ ಪಾಟಚ್ಚರ ಭಯದಿಂದುಟ್ಟು ಪಟಚ್ಚರಮಂ ಮನೆಗೆ ವಂದು ನಿಂದು ಅಂಗಣದೊಳ್:

**ಶಾಂತಿಪು,** ೬. ೬೫); ಪಕ್ಷ (ಆಗಳ್ ಮದಗಜಕಕ್ಷಧ್ವಜವಿರಾಜಿತಮಪ್ಪ ತನ್ನ ಪೊನ್ನ ರಥಮಂ ಮದ್ರರಾಜನಂ ಏಱಲ್ವೇಱ್ದು: **ಪಂಪಭಾ,** ೧೨. ೧೦೯)

**ಕಕ್ಷಪಾಳಿಕೆ** – ಬಗಲ ಚೀಲ (ಕಕ್ಷತಳದೊಳ್ ಇಱುಂಕಿದ ಪೊಂಬುಲಿಯ ಚರ್ಮದ ಕಕ್ಷಪಾಳಿಕೆಯೊಳ್ ಅಳವಟ್ಟ ನಿಗ್ಗವದ ಕರಂಡಕದೊಳಗೆ: **ರಾಜಶೇವಿ,** ೫. ೨೫ ವ)

**ಕಕ್ಷಪುಟ** – ಕಕ್ಷ (ಮಾಱ್ಪುದು ಕಂಪಿನ ಸೊಂಪಿನ ಪೊಗರಿಂದಂ ವನಿತೆಯ ಕಕಷ್ಪುಟಂ ಈಕ್ಷಣಂ ಆಕರ್ಷಣಂ: **ಪುಷ್ಪದಂಪು,** ३. ३೮)

**ಕಕ್ಷಮೂಲ** – ಕಕ್ಷ (ಕೌಂಕುಳೆಂದು ಕಕ್ಷಮೂಲಂ: **ಶಬ್ದಮದ,** ३३ ಒಂದರ್ಥಕ್ಕೆ, ४೧)

**ಕಕ್ಷ್ಯ** – ಮನೆಯ ತೊಟ್ಟಿ (ಚಿತ್ರರಥ ರಾಜಧಾನಿಯಂ ಪೊಕ್ಕು ಸಪ್ತಕಕ್ಷ್ಯಾಂತರಂಗಳ ಕಾಂಚನಮಯ ತೋರಣಂಗಳಂ ನುಸುಳ್ದು ಕನ್ಯಾಂತಃಪುರಮಂ ಎಯ್ದಿವರ್ಪಾಗಳ್: **ಕಾದಂಸಂ,** ೫. ೧೫ ವ)

**ಕಗ್ಗು** – ಕಪ್ಪಾಗಾಗು (ನೆಲನೆಲ್ಲಂ ಪಸುರೇಱೆ ಕಗ್ಗಿ ನಿಲೆ ದಿಗ್ಭಾಗಂಗಳ್ ಆಕಾಶಮಂಡಳಂ ಅಂಬೋಧನಿಕೀರ್ಣಮಾಗೆ: **ವರ್ಧಮಾಪು,** ೯. ३೯)

**ಕಚ** – ತಲೆ ಕೂದಲು (ಏಳಸುತ್ತಿರ್ಕುಂ .. .. ಬಹಿರ್ಕಣಭರೆಯರ್ ಕೇಳಿಮೇಳಕ್ಕೆ ನಿಚ್ಚಂ: **ನೇಮಿನಾಪು,** ೧. ೬೫); ಆನೆಯ ಜಘನಸ್ಥಳದ ಒಂದು ಭಾಗ (ಅಪೂರ್ವಲಾಂಗೂಲನಂ ಕಚಕಿಲೀ ಸಂವರ್ತಕನಂ: **ಶಾಂತಿಪು,** ೧೧. ೧४೨ ವ)

**ಕಚಗ್ರಹ** – ಕೂದಲನ್ನು ಹಿಡಿಯುವಿಕೆ (ಸಂಗ್ರಾಮಭೂಮಿಯ ನಡುವೆ ಧೃಷ್ಟದ್ಯುಮ್ನ ಕಚಗ್ರಹವಿಲುಳಿತಮೌಳಿಯುಂ ತದೀಯ ಕೌಕ್ಷೇಯಕಧಾರಾವಿದಾರಿತಶರೀರನುಂ ಆಗಿ ಬಿೞ್ದಿರ್ದ ಶರಾಚಾರ್ಯರಂ ಕಂಡು: **ಪಂಪಭಾ,** ೧३. ೫೫ ವ)

**ಕಚಬಂಧ** – ಮುಡಿ, ತುರುಬು (ಮಹಾಕವಿಗಳ್ ಒಱಲ್ದು ತಿರ್ದುಗೆ ವಚೋವನಿತಾ ಕಚಬಂಧಮಂ: **ಮಲ್ಲಿನಾಪು,** ೧. ೨४)

**ಕಚಭಾರ** – ಕೇಶರಾಶಿ (ಕಚಭಾರಂ ಕೊರಲ್ಗಬಲೆಯ ಕಚಕುಚಭರಂ ಅಸಿಯ ನಡುಗೆ: **ಅಜಿತಪು,** ೨. ४३)

**ಕಚರಿ** – ಅರಿದಾಳ (ತಳಗು ಕಲೆ ಕಚರಿ ಜರ್ಝರಿ ಪುಳಕಂ ತಿಳಿಗಾರೆ ತಿರವಿ ವರ್ಣಮಣಂ ಸಂಗಳಿಸದೆ ಪಳುಕಿನ ಕುಟ್ಟಿಮ ತಳಮದು ತಳತಳಿಸಿ ತೊಳಗುವುದು ತನಿವೆಳಗಿಂ: **ಕುಸುಮಾಕಾ,** ೧. ೧೧೫)

**ಕಚಾಕಚಿ** – ಪರಸ್ಪರ ಕೂದಲು ಹಿಡಿದೆ ಎಳೆದಾಡು (ಜೆಟ್ಟಿಗರೊಳ್ ಶಸ್ತ್ರಾಶಸ್ತ್ರಿಯುಂ ಖಡ್ಗಾಖಡ್ಗಿಯುಂ ದಂಡಾದಂಡಿಯುಂ ಕಚಾಕಚಿಯುಂ ಆಗಿ: **ಅನಂತಪು,** ೧೧. ೮३ ವ)

**ಕಚಾವಳಿ** – ಕೇಶರಾಶಿ (ಈ ವಧು ಗರ್ವದ ಗಾಳು ವಸ್ತ್ರಭೂಷಾವಳಿಯಂ ಕಚಾವಳಿಯಂ ಇತ್ತರನಲ್ಲದೆ ಪೊರ್ದಲೀವಳೇ: **ಪಂಪರಾ,** ೨. ೧೯)

**ಕಚೋದ್ಬಂಧ** – ಕೇಶರಾಶಿ (ತನು ಮೃದು ಕುಚಂ ಸ್ತಬ್ಧಂ ಶೀಲಂ ಕರಂ ರುಜು ಪುಷ್ಪಕೇತನನಿಭಕಚೋದ್ಬಂಧಂ .. .. ಎಂಬ ಪೆಂಪಿನ ತನೂಜೆಯಂ ಕೊಟ್ಟಂ ಶಾಂತೀಶ್ವರಂಗೆ ನಭಶ್ಚರಂ: **ಶಾಂತಿಪು,** ೧೧. ೬೯)

**ಕಚ್ಚಟೆ** – ಬಿರುದಿನ ಬಳೆ (ಕಚ್ಚಟೆಯೆಂದು ಬಿರುದಿನ ಬಳೆ: **ಶಬ್ದಮದ,** ಪ್ರಸಾ, ४२)

**ಕಚ್ಚುಟ** – ಕೌಪೀನ (ತಿರಿದುಂಡು ಕಚ್ಚುಟಮನುಟ್ಟು ರಚ್ಚೆಯೊಳ್ಪಟ್ಟು ಮುಟ್ಟುಗೆಟ್ಟು ಉಬ್ಬೆಗಮುಬ್ಬರಿಸಿ ನಮೆದುದನದಂ ಮಱೆದಿರೆ ಮಾವಂ ದೇವನಾದೊನೇ ನಮಗೀಗಳ್: **ಸುಕುಮಾಚ,** ४. ३೦)

**ಕಚ್ಚೆ** – ಪಂಚೆ ಅಥವಾ ಸೀರೆಯ ಚುಂಗು (ಪಿಡಿಕೆಯ್ ತೀವಿದ ಕೂರ್ಗಣೆ ಮಡಕಾಲ್ವರಂ ಅಲೆವ ಕಚ್ಚೆ ನಿಡಿಯಸಿಯ ಒಱೆ ಕರ್ಪಿಡಿದ ಪಣೆಕಟ್ಟು ಕೆಯ್ವಡೆ ಬೆಡಂಗನೊಳಕೊಳೆ ಧನುರ್ಧರರ್ ಪೆಣೆದೆಚ್ಚರ್: **ಪಂಪಭಾ,** ೧೦. ೭೧)

**ಕಚ್ಚೆಯಂ ಕಟ್ಟು** – ಸಿದ್ಧವಾಗು (ಎನ್ನ ಮಾತಂ ಕೇಳದೆ ಕಲಹಕ್ಕೆ ಕಚ್ಚೆಯಂ ಕಟ್ಟುವ ನಿನಗೆ ಕಚ್ಛಪ ಕಥೆಯಾಗದೆ ಪೋಗದು: **ಪಂಚತಂತ್ರ,** ೨೧೬ ವ)

**ಕಚ್ಚೆವಾಸು** – ಸಿದ್ಧವಾಗು (ಕಲಹಕ್ಕೆ ಕಚ್ಚೆವಾಸುವ .. .. ಜಗಳವಾಡುವವನುಂ .. .. ನಿರ್ಮಲನಕ್ಕುಂ ಕೇಳಲೊಡನೆ ಜೈನಾಗಮಮಂ: **ಸಮಯಪ,** ३. ೫೫)

**ಕಚ್ಛ** – ಕಚ್ಚೆ (ಯಮುನಾ ಕಚ್ಛಂಬಿಡಿದು ಏೞ್ತರುತ್ತುಂ ಒಂದವಸರದೊಳ್: **ಜಗನ್ನಾವಿ,** ३. ೭೮)

**ಕಚ್ಛಪ** – ಆಮೆ (ಘನಪಂಕೋದರಮಗ್ನ ಕಚ್ಛಪಕುಲಂ: **ಶಾಂತೀಶ್ವಪು,** ೧೨. ೨೯)

**ಕಚ್ಛಪೋಪಾಯ** – ಆಮೆ ತನ್ನ ಚಿಪಿನಲ್ಲಿ ಹುದುಗುವಂತೆ ಮಾಡಿಕೊಳ್ಳುವ ಆತ್ಮರಕ್ಷಣೆ (ವಾಯಸದಂತೆ ನೋಡು ಬಕದಂತಿರೆ ಮೆಲ್ಲನೆ ಮೆಟ್ಟು ಕಚ್ಛೋಪಾಯದಡಂಗಿ ನಿಲ್: **ಕಾವ್ಯಾವಲೋ,** ४೦२)

**ಕಚ್ಛಾವಾಲ** – ಕಚ್ಚೆಯ ತುದಿ (ಎಯ್ದೆವಂದ ಕಚ್ಛಾವಾಲಮಂ ಕೈದುಡುಕಿ ಪಿಡಿದನಂ ನೋಡದಂತಿರ್ದ ಪಾಂಗಿಂ ಪೊಱಕೈಯೊಳ್ ಮೋದಿ: **ಜಗನ್ನಾವಿ,** ೬. ೯४)

**ಕಜ್ಜ** – ಕಾರ್ಯ (ಅವಸ್ತುಭೂತನೆಂದಾದಮೆ ಭೂತಳಂ ಪಟಿಯೆ ತೇಜಮೆ ಕೆಟ್ಟಪುದು ಇಂತಿದಕೇ ಪದ್ಮೋದರ ನೀನೆ ಪೇೞ್ ಬಗೆದು ಕಜ್ಜಮನೀಗಳೆ ದಿವ್ಯಚಿತ್ತದಿಂ: **ಪಂಪಭಾ,** ೯. ೧೮)

**ಕಜ್ಜಗಲಿ** – ಕೆಲಸದಲ್ಲಿ ಗಟ್ಟಿಗ (ಕಜ್ಜಮಂ ಕಾಲಮಂ ಪಾರ್ವ ಕಜ್ಜಗಲಿಗಳುಮಂ .. .. ನೋಡಿ: **ಗದಾಯು,** ೮. ३४ ವ)

**ಕಜ್ಜಲ** – ಕಣ್ಣಿನ ಕಾಡಿಗೆ (ಕಣ್ಗೆ ಕಜ್ಜಲವಿಳಾಸವಿನ್ನೇವುದು ಎಮೆಗವೇಗೆಯ್ದಪುವೋ: **ಅಜಿತಪು,** ೬. ೧೦೬)

**ಕಜ್ಜಳ** – ಕಜ್ಜಲ (ಕಸ್ತೂರಿಯಂ ಪುಲ್ಲೆ ಕಜ್ಜಳಮಂ ದೀಪಿಕೆ .. .. ಪಡೆದವೋಲ್ .. .. ಪಡೆದಳ್ ಕಂಸೋಷ್ಣನಂ ಕೃಷ್ಣನಂ: **ನೇಮಿನಾಪು,** ೭. ४३)

**ಕಟ** – ಆನೆಯ ಗಂಡಸ್ಥಳ; ದವಡೆ (ಅಲ್ಪಘಾಟನುಂ ಉನ್ನತಶಿಖನುಂ ಪೀನಮಾಂಸಕಟಶ್ಲಿಷ್ಟನುಂ: **ಆದಿಪು,** ೧೨. ೫೬ ವ)

**ಕಟಕ** – ಸೈನ್ಯ (ಇಭಖಡ್ಗಿವ್ರಾತಾನಾನಾಹರಿಮಯ ಕಟಕಭ್ರಾಜಿತಂ: **ಆದಿಪು,** ೧३. ४೬); ಗುಂಪು (ನಂದಗೋಪಂ .. .. ನಿಖಿಲ ಗೋಪಕಟಕಂಬೆರಸು ಕತಿಪಯ ಪ್ರಯಾಣಂಗಳಿಂ ಪೋಗಿ: **ಜಗನ್ನಾವಿ,** ३. ೬೫ ವ); ತಪ್ಪಲು (ಉದಯಗಿರಿ ಕಟಕ ಕುಹರ ಪರಿಕರ ನಿಶಾಕರಂ ಹರಿದಳಿತ ನಿಜಹರಿಣ ರುಧಿರನಿಚಯ ನಿಚಿತಮಾದಂತೆ ಲೋಹಿತಾಂಗನಾಗೆ: **ಪಂಪಭಾ,** ४. ४೯ ವ); ಕೈಬಳೆ (ಎರಡು ಪಕ್ಕಂಗಳೊಳ್ ಕಾಂಚನ ಕಟಕಖಲೀನಾಗ್ರ ಸಂಲಗ್ನರಿರ್ವರ್ ಭರದಿಂದಂ ಕೀಱಿ ನೇಣ ತೆಗೆದು ಬರೆ: **ಕಾದಂಸಂ,** ೨. ३೯); ರಾಜಧಾನಿ (ಮತ್ತಮಾ ಕಟಕ ನಾಗರಕ ವಿಟಜನಂಗಳೊಂದೆಡೆಯೊಳ್ ನೆರೆದು ನಿಂದಲ್ಲಿ: **ವರ್ಧಮಾಪು,** ೮. ೯೨ ವ); ಬಿಲ್ಲಿನ ಹೆದೆ (ಡೊಣೆಯಿಂ ಕಣೆಯಂ ತೆಗೆದಾರ್ದುಂ ಬಿಲ್ಗದಂ ಪೊಡಿ

ಪೊಡರ್ಪುವೆತ್ತು ಕಟಕಾನುಮುಖದಿಂ ಸೆಳೆದು: **ಶಬಶಂವಿ,** ೩. ೫೨)

**ಕಟಕತ್ವ –** ಸೇನಾಧಿಪತ್ಯ (ಸೊಗಯಿಸುಗುಂ ಕಟಕತ್ವಮಂ ಸಮರ್ಥಬಲಂ: **ಕವಿರಾಮಾ,** ೨. ೧೫೨)

**ಕಟಕೋಪಾಧ್ಯಾಯ –** ಶಸ್ತ್ರವಿದ್ಯಾಗುರು (ಜನನಾಥಂ ಜಗದೇಕಂ ಅಲ್ಲಿ ಕಟಕೋಪಾಧ್ಯಾಯಂ ಆ ನಾಗವರ್ಮಂ: **ಅನಂತಪು,** ೧. ೩೪)

**ಕಟಕಾಚಾರ್ಯ –** ಸೇನೆಯ ತರಬೇತಿದಾರ (ಕವಿ ಸುಮನೋಭಾಣನ ಯಾದ ಕಟಕಾಚಾರ್ಯನ ಎಸೆವ ದೌಹಿತ್ರನೆ ನಾಂ ಕವಿ ಕೇಶವನೆಂ: **ಶಬ್ದಮದ,** ೨)

**ಕಟಕಿ –** ಅಪಹಾಸ್ಯ (ಕಟಕಿಯಿದೇಂ ಪುಳಿಂದ ಬಿಡು ನಿನ್ನ ದುರುಕ್ತಿಯಂ: **ಶಬರಶಂ,** ೪. ೩೬)

**ಕಟಕೋಪಾಧ್ಯಾಯ –** ಕಟಕಾಚಾರ್ಯ (ಜನಾಥಂ ಜಗದೇಕಮಲ್ಲನಲ್ಲಿ ಕಟಕೋಪಾಧ್ಯಾಯಂ ಆ ನಾಗವರ್ಮಂ: **ಅನಂತಪು,** ೧. ೩೪)

**ಕಟತಟ –** [ಆನೆಯ] ಕುಂಭಸ್ಥಲ, ಕಪೋಲ (ದಿಕ್ಕರಿ ಕಟತಟಕ್ಕೆ ಮದಲೇಖೆಯಿರ್ಪಂತೆ ಕೈಟಭಾರಾತಿಯ ವಿಶಾಲೋರುಸ್ಥಳಕ್ಕೆ ಕೌಸ್ತುಭಮಿರ್ಪಂತೆ ಸೊಗಯಿಸುತಿರ್ದುದು: **ಪಂಪಭಾ,** ೧. ೫೭ ವ)

**ಕಟವಾಯ್ –** ಬಾಯ ಕೊನೆ (ಕಲ್ಲ ಪೊಗರೊಳಂ ನೆಮ್ಮಿ ಪುಲಿ ಸಮಚಿದುವು ಕಟವಾಯ ಸವಿಗಳಂ: **ಅನಂತಪು,** ೯. ೧೬ ರಗಳೆ)

**ಕಟಾಕ್ಷ –** ಕುಡಿನೋಟ (ಕಡುವೆಂಕೆಯಿಂ ಕಟಾಕ್ಷಂಬಿಡಿದಿಟೆವ ಲಲಾಟಕುಂಕುಮಸ್ವೇದಜಳಂ: **ಆದಿಪು,** ೧೧. ೫೪)

**ಕಟಾಕ್ಷವಿಕ್ಷೇಪ –** ಕುಡಿನೋಟ, ಕಣ್ಣ ಸಂಜ್ಞೆ (ಕರಂ ಚೆಲ್ವನೆ ಮೆಱೆವ ಕುಮುದಕುವಳಯವನಂಗಳ್ ಆಕೆಯ ಕಟಾಕ್ಷವಿಕ್ಷೇಪಂಗಳ್: **ಆದಿಪು,** ೬. ೮೩)

**ಕಟಾರ –** ಕಿರುಗತ್ತಿ (ಭಟ್ಟಗುತ್ತನ ಕಟಾರದವೊಲ್: **ಅನಂತಪು,** ೧೪. ೨೦)

**ಕಟಾಹ –** ಕಡಾಯಿ (ಮುನ್ನೆ ಪೂಜ್ದ ಸುವರ್ಣಪೂರ್ಣ ಕಟಾಹಂಗಳಂ ತೋಱಿದಾಗಳ್: **ಆದಿಪು,** ೫. ೧೧ ವ)

**ಕಟಾಹಪತಿತ ಲಾಜಃಪುಂಜ –** ಬಾಣಲೆಯಲ್ಲಿ ಬಿದ್ದ ಅರಳಿನ ಸಮೂಹ (ಸಿತಕರ್ಷಪಂಗಳನಿಟೆಯೆ ಸುರಿವುದುಂ ತಪ್ತಾಯಃಕಟಾಹಪತಿತ ಲಾಜಃಪುಂಜದಂತೆ ದೆಸೆದೆಸೆಗೆ ಚಳಿಲ್ ಚಳಿಲೆನೆ ಸಿಡಿಲ್ದು: **ಅಜಿತಪು,** ೧೦. ೫೩ ವ)

**ಕಟಿ –** ಸೊಂಟ (ರಂಜಿಸಿದುದು ಪೊನ್ನಾಯುಗದ ಪೊನ್ನ ಬಜ್ಜರಿ ಕಟಿಯೊಳ್: **ಅನಂತಪು,** ೬. ೫೦)

**ಕಟಿತಟ –** ಸೊಂಟ ಪ್ರದೇಶ (ಓರ್ವ ಪಾರ್ವಂ ವಿಸ್ತೀರ್ಣ ಜೀರ್ಣ ಕರ್ಪಟಾವೃತ ಕಟಿತಟನುಂ ಆಗಿ ಬಂದು ಕಣ್ಮುಚ್ಚಲ್ ಎಡೆವೇಡೆ ತನಗವರ್ ಪಾಸಲ್ಕೊಟ್ಟ ಕೃಷ್ಣಾಜಿನಮಂ ಪಾಸಿ ಪಟ್ಟಿರ್ದನಂ: **ಪಂಪಭಾ,** ೩. ೩೧ ವ)

**ಕಟಿದಘ್ನ –** ಸೊಂಟದವರೆಗೆ ಮುಳುಗುವ (ತರುಣಿಯರಿದೆ ಕಟಿದರ್ಘನದ ಸುರಚಾಪ ತರಂಗಿಣೀ ಪ್ರವಾಹಾಂತರದೊಳ್ ಬರುತಿರ್ದರ್: **ಅನಂತಪು,** ೨. ೩೮)

**ಕಟಿವ –** ಕಟಿ (ಕಡಿ ಕಟಿವಮಂ ಉಡಿ ತೊಡೆಯಂ ನಡನಡ ನಡುಗುವಿನಮಡಸಿ ತಡೆಯದೆ ಖಳನಂ ಪಿಡಿದುಡಿಯೆ: **ವಡ್ಡಾರಾ,** ಪು. ೧೨೭, ಸಾ. ೫)

**ಕಟಿಸೂತ್ರ –** ಕಟಿಬಂಧ, ಉಡಿದಾರ (ಪೋ ಬಿಡು ಕಟಿಸೂತ್ರಮಂ ತೊಡೆಯ ಬಿಣ್ಪು ಪದಾಂಬುರುಹಕ್ಕೆ ತಿಣ್ಣಂ ಎಂತು ಉಡಿಸುವುದಕ್ಕ ನೂಪುರಮಂ ಈ ತೊಡವು ಏವುದೋ ರೂಪ ಸಾಲದೇ: **ಪಂಪಭಾ,** ೩. ೪೬)

**ಕಟು –** ಕಾರವಾದ (ಮಧು ಸೀಧು ಕಟು ಸೀಧು ಪೋ ಪುಳಿತ ಕಳ್ಳಲ್ತುಂ ಕರಂ ಕಯ್ತುಬರ್ಪುದು: **ಪಂಪಭಾ,** ೪. ೮೮, 'ಮಧು ಸೀಧು' ಡಿಎಲ್ಎನ್ ಒಪ್ಪಿದ ಪಾಠ)

**ಕಟುಕ –** ಕಟುರುಚಿಯ ಪದಾರ್ಥ (ಮೊದಲೊಳ್ ಕಟುಕಂ ಪರಿಣಾಮದೊಳ್ ಅಮೃತಸಮಾನಮಪ್ಪ ಜೈನಬ್ರತ: **ಸಮಯಪ,** ೧೫. ೫೭)

**ಕಟುಕತ್ರಯ –** ಕಟುತ್ರಯ (ಕಟುಕತ್ರಯದಿಂದಲ್ಲದೆ ಮಧುರಪ್ರಯೋಗದಿಂ ಕಫವನಾವನುಪಶಮಿಸಿದಂ: **ಪಾರ್ಶ್ವನಾಪು,** ೨. ೪೨)

**ಕಟುತ್ರಯ –** ಶುಂಠಿ, ಮೆಣಸು, ಹಿಪ್ಪಲಿಗಳ ಮಿಶ್ರಣ (ಗಿರಿಕರ್ಣಿಕೆ ಕಟುತ್ರಯಂ ಅರಿಸಿನಂ ಉತ್ತರಣೆ ಎಕ್ಕೆ ಮಧುವೆಂಬಿವಱಿಂ ವಿರಚಿಸಿದ ಗುಳಿಗೆ: **ಲೋಕೋಪಕಾ,** ೯. ೧೨೨)

**ಕಟುತ್ರಿಕ –** ಕಟುತ್ರಯ (ದೇವನೇಂ ನರುಷ್ಕರ ಗುಡಮೋ ವಿಶುದ್ಧ ರಸಭಸ್ಮಮೊ ವರ್ಮ ಕಟುತ್ರಿಕಾದಿಯೋ: **ಸಮಯಪ,** ೯. ೪೮)

**ಕಟ್ಟಂಕ –** ಬಿರುಸಾದ ಕಾಳಗ (ಅಂಕಕ್ಕೆ: ಮೃಗಾಂಕಂ, ವೃಷಾಂಕಂ, ಕಟ್ಟಂಕಂ, ಮಾಱಂಕಂ: **ಶಬ್ದಮದ,** ೩೧೩, ಕ್ರಮಪ್ರಯೋಗಂ)

**ಕಟ್ಟಂಕದಲ್ಲಟಿ –** ದೊಡ್ಡ ಶೂರರನ್ನೂ ತಲ್ಲಣಗೊಳಿಸುವವನು (ತತ್ಸಮಸಮಾಸಕ್ಕಂ ದೇಸಯಕ್ಕಂ ಸಮಾಸಂ: ಸಬಳಗದ್ಯಾಣದೆಱೆ, ಕಟ್ಟಂಕದಲ್ಲಟಿಂ: **ಶಬ್ದಮದ,** ೩೧೪ ಪ್ರ)

**ಕಟ್ಟಣಕ –** ಸುಂದರ, ಅದ್ಭುತ (ಮಂಗಳದ ಬೊಟ್ಟಿನ ಕಟ್ಟಣಕದ ಸಿಂಗರಂಬೆರಸಿ ಬೀರ ಸಿರಿಯಂ ಬೀಱೆ: **ಗಿರಿಜಾಕ,** ೬. ೫೫ ವ)

**ಕಟ್ಟಳಿಪರ್ –** ಅತ್ಯಾಸೆಗಾರರು (ಕಟ್ಟಳಿಪರಾಗಿ ಶಿಷ್ಯಂ ಕೊಟ್ಟುದಂ ಒಲ್ದು ಈಸಿಕೊಳ್ವರ್: **ಸಮಯಪ,** ೧೪. ೨೧)

**ಕಟ್ಟಳಿ –** ಅತಿಯಾಶೆ (ಕಟ್ಟಳಿಪಿಂದ ಒಳ್ಗುಣಮಂ ಬಿಟ್ಟುಂ ಲಘುಪಾತ್ರನಾಗಿ .. .. ನೆಟ್ಟನೆ ಬಿಣ್ಣಿದನೆನಿಕ್ಕುಂ: **ಸಮಯಪ,** ೧೫. ೩೩)

**ಕಟ್ಟಳೆ –** ಚಿನ್ನರತ್ನಗಳನ್ನು ತೂಗುವ ಒಂದು ಅಳತೆ (ಒಟ್ಟಿದ ಪೊನ್ನ ಬೆಟ್ಟುಗಳನೀವೆಡೆಗೇವುದೊ ತೂಕಮೆನ್ನ ಕೆಯ್ಗಟ್ಟಳೆ ಕೊಳ್ಳಿಂ: **ಪಂಪಭಾ,** ೬. ೩೯)

**ಕಟ್ಟಱಿಕೆ –** ಪ್ರಸಿದ್ಧಿ (ಕುಱಿವಾನಿಸನಾನೆ ಕುಬುದ್ಧಿಯಾನೆ ಕಟ್ಟಱಿಕೆಯ ದುಷ್ಟನಾನೆ: **ಶಬರಶಂ,** ೪. ೧೯)

**ಕಟ್ಟಿಟಿಕ್ಕೆ –** ಒತ್ತಾಗಿರುವುದು (ಟಕಾರಕ್ಕೆ: ಕಟ್ಟಾಯಂ, ಕಟ್ಟೇಟ್ಗೆ, ಕಟ್ಟಟಿಕ್ಕೆ: **ಶಬ್ದಮದ,** ೧೯೧, ಪ್ರ)

**ಕಟ್ಟಾಣಿ ಮುತ್ತು –** ಅಮೂಲ್ಯವಾದ ಮುತ್ತು (ಕಟ್ಟಾಣಿಯ ಮುತ್ತಿನ ಸರವಾಂತು ಏಣಾಕ್ಷಿಯ ನುಣ್ಗೊರಲ್ ವಿರಾಜಿಪುದರಸಾ: **ಉದ್ಭಟಕಾ,** ೬. ೧೦೦)

**ಕಟ್ಟಾನೆ –** ಶಕ್ತಿಶಾಲಿಯಾದ ಆನೆ (ಕಟ್ಟಾನೆಯುಮಂತುಟಿಲ್ಲ ಸರಿ ದಿಕ್ಕರಿಯೊಳ್: **ಅನಂತಪು,** ೧೩. ೧೭)

**ಕಟ್ಟಾಯ –** ಖಂಡಿತವಾದ ಮಾತು ನಿಮ್ಮ ಮಂತಣಕ್ಕೆ ಅವಸರಮಲ್ತು ಉಸಿರದಿರಿಂ ಎಂದು ಮಂತ್ರಿಗಳಂ ಜಡಿಯೆ ರಾವಣನ ಕಟ್ಟಾಯಕ್ಕೆ ಮಯಂ ವಿಸ್ಮಯಂಬಟ್ಟು: **ಪಂಪರಾ,** ೧೪. ೭೯ ವ); ಮಹಾ ಪರಾಕ್ರಮ (ಇನ್ನಿಲ್ಲಿ ಪೆಂಪು

ಎಱಕಂಬೆತ್ತಿರೆ ಕಾವೆನೆನ್ನ ನುಡಿಯಂ ಕೆಯ್ಕೊಂಡ ಕಟ್ಟಾಯಮಮಂ: **ಪಂಪಭಾ,** ೧೨. ೧೯೮); ಕಠಿಣ ಸಂದರ್ಭ (ಇಱಿವಾಳ್ ರಣಕ್ಕೆ ತುಱಿಲಾಳ್ ಕಟ್ಟಾಯದೊಳ್: **ಗದಾಯು,** ೫. ೩೫)

**ಕಟ್ಟಾಯಕಾಱ** – ಮಹಾ ಪರಾಕ್ರಮಿ (ನಸರ್ಗಶೂರನುಂ ಕಟ್ಟಾಯಕಾಱನುಂ ಅಪ್ಪುದಱಿಂ: **ಶಾಂತಿಪು,** ೪. ೮ ವ)

**ಕಟ್ಟಾಯತ** – ಚೆನ್ನಾದ ಸಿದ್ಧತೆ (ಸುವ್ರತಸೂತ್ರಂ ಮೆಟ್ಟಿದ ಕೆರ್ಪು .. .. ಕಟ್ಟಾಯತನಾಗಿ ಚಳಯದಿಂ ಪೊಱಮಟ್ಟಂ: **ಅನಂತಪು,** ೧೦. ೫೬)

**ಕಟ್ಟಾಳ್** – ಮಹಾ ಶೂರ (ಒಂದಕ್ಷೋಹಿಣಿಬಲಂ ಎರಡುಂ ದೆಸೆಯೊಳಂ ಉೞಿದುವು ಅಂತೆ ಭಾರತಂ ಎಮಗೆ ಇಂದು ಉಜ್ಜವಣೆ ದಲ್ ಎಂದು ಅದಟೊಂದುತ್ತರಮಾಗೆ ಕಾದಿದರ್ ಕಟ್ಟಾಳ್ಗಳ್: **ಪಂಪಭಾ,** ೧೩. ೩೬)

**ಕಟ್ಟಿಕೊಳ್** – ಸಂಪಾದಿಸು (ಪೂಜೆಗಳಂ ಕೊಟ್ಟು ಕಟ್ಟಿಕೊಳ್ವುದು ಪೊನ್ನಂ: **ಸಮಯಪ,** ೯. ೯೦)

**ಕಟ್ಟಿಗೆಗಾಱ** – ದಂಡಧಾರಿ, ಪ್ರತೀಹಾರಿ (ಕಟ್ಟಿಗೆಗಾಱರ್ ಉಘೇ ಉಘೇ ಎನುತ್ತಿರೆ ನೃಪಲೀಲೆಯಂ ಪಡೆದಪೆಂ: **ಧರ್ಮಾಮೃ,** ೬. ೧೦೭)

**ಕಟ್ಟಿದಿರ್** – ಸರಿಯಾಗಿ ಎದುರು (ವನಗಜಮುಳ್ಳ ಪೇರಡವಿಯೊಳ್ ಬರೆ ಕಟ್ಟಿದಿರಾಗಿ ತಾಗೆ ಬೆನ್ನನೆ ಪರಿತರ್ಪ ಪೆರ್ಬುಲಿ: **ಸಮಯಪ,** ೧. ೧೯)

**ಕಟ್ಟಿಱುಂಪೆ** – ಕಟ್ಟಿರುವೆ, ಗೊದ್ದ (ಸುಡುವ ಉದರಾಗ್ನಿಯುಂ ಒಡಲಂ ಮಿಡುಕುವಿನಂ ಕಡಿದ ಕಟ್ಟಿಱುಂಪೆಗಳುಂ: **ಆದಿಪು,** ೫. ೧೩)

**ಕಟ್ಟು** – ಬಂಧಿಸು (ಕಟ್ಟು–ಬಂಧನೇ: ಶಬ್ದಮದ, ಧಾ ೨೩೭); ತಡೆ ಹಾಕು (ತೃಷ್ಣೆಯೆಂಬ ತೊಱೆಯಂ ಕಟ್ಟುವುದು; ಗುರುಗಳಲ್ಲಿ ವಿನಯಂ ಗೆಯ್ವುದು; ಸರ್ವಪ್ರಾಣಿಗಳಲ್ಲಿ ದಯೆಯನೆ ಮಾೞ್ಪುದು ಇವೆಲ್ಲಮೆಲ್ಲಾ ಶಾಸ್ತ್ರಂಗಳಲ್ಲಿ ಸಾಧಾರಣಂ: **ಪಂಚತಂತ್ರ,** ೧೧೭, ಶ್ಲೋಕ ೩೩ ಟೀಕೆ); ಧರಿಸು (ಕಟ್ಟಿದುದೆ ಸುರಿಗೆ ಮೆಟ್ಟಿದುದೆ ಕಳಂ: ಆದಿಪು, ೩. ೭೨); ರಸವಾದಿ ಪಾದರಸವನ್ನು ಉಂಡೆ ಮಾಡುವುದು (ದುರ್ಯೋಧನಂ ಬಂದಿಕಾಱನಂತೆ ಸೆಱೆಗೆಯ್ದುಂ ವ್ರಣವೈದ್ಯನಂತೆ ಕೊಡಸಾರಿಯಂ ಪಿಡಿದುಂ ಸೂಳೆಯಂತೆ ಕಟಿವು ಉೞಿವನಱಿದುಂ ರಸವಾದಿಯಂತೆ ಕಟ್ಟಿಯುಂ ಪೆರ್ಜೋಡೆಯಂತೆ ನುಣ್ಣಿತಂ ವೇೞ್ದು: **ಪಂಪಭಾ,** ೬. ೭೨ ವ); ಬೆಂದಿರುವ ಧಾನ್ಯದ ರಸ (ಕಟ್ಟು–ಬಂಧನೇ ಪಕ್ವ ಧಾನ್ಯ ರಸೇಚ : **ಶಬ್ದಮದ,** ಧಾ ೨೩೭);

**ಕಟ್ಟುಂಗವಳ** – ಬುತ್ತಿ (ಸೇನಾನಿಗೆ ಕೆಯ್ಸಾರೆ ಜಯಲಕ್ಷ್ಮಿ ನೃಪಘಟೆಗಾರಾಜಕಮಾದದುದಂದು ಕಟ್ಟುಂಗವಳಂ: **ಶಾಂತಿಪು,** ೧೦. ೧೬೪)

**ಕಟ್ಟುಂಜುರಿಗೆ** – ಸೊಂಟದಲ್ಲಿ ಕಟ್ಟಿಕೊಂಡ ಸುರಿಗೆ (ಜಕಾರಕ್ಕೆ: ಅಟ್ಟುಂಜಗಳಂ, ಕಟ್ಟುಂಜುರಿಗೆ: **ಶಬ್ದಮದ,** ೧೮೧, ಪ್ರ ೪)

**ಕಟ್ಟುಕಡಹ** – ಕಟ್ಟುಕಟ್ಟಳೆ (ನಿಮ್ಮ ಕಟ್ಟುಕಡಹಮಂ ಕಳೆವಂದು ಮಹಾವಿಭೂತಿಯಿಂದರಮನೆಗೆ ವಂದು: **ಧರ್ಮಾಮೃ,** ೭. ೬೯ ವ)

**ಕಟ್ಟುಕಡೆ** – ಆತಂಕಪಡು (ಮುನ್ನಂ ಮೈತ್ರೇಯರ್ ಕೊಟ್ಟ ಊರುಭಂಗ ಶಾಪಮಂ ನೆನೆನೆನೆದು ಮನದೊಳ್ ಕಟ್ಟುಕಡೆದು: **ಗದಾಯು,** ೪. ೪೩ ವ); ಮರುಗು (ಅರಸನೊಂದೆ ಮೆಯ್ಯೊಳೆ ಪೋಗಿ ಬಾರದುದರ್ಕೆ ಕಟ್ಟುಕಡೆದು: **ಆದಿಪು,** ೧೨. ೧೨೪ ವ); ಮರ್ಯಾದೆ ಮೀರು, ಕೋಪಗೊಳ್ಳು (ಭರತಂ ಕ್ರಮಂದಪ್ಪಿ ಸಾಕೇತಸಾಮ್ರಾಜ್ಯಪಟ್ಟಮನೊಡಂಬಟ್ಟುದರ್ಕೆ ಲಕ್ಷ್ಮಣಂ ಕಟ್ಟುಕಡೆದು: **ಪಂಪರಾ,** ೬. ೧೩೭)

**ಕಟ್ಟುಪಡು** – ಬಂಧಿಸು (ಕಿಸುಗುಳನಪ್ಪ ಬೈಕುಂಗುಳಿಯುಮಂ ಕಟ್ಟುಪಟ್ಟ ಕಳ್ಳನುಮಂ ಕಂಡು : **ಜೀವಸಂ,** ೩. ೧೫ ವ)

**ಕಟ್ಟುವಂಜರ** – ಬಲವಾದ ಪಂಜರ, ನಾಗವೇದಿಕೆ (ತಮ್ಮಯ್ಯಂ ಪೇೞ್ದಿಗಾಹೆಯಂ ಕಟ್ಟುವಂಜರದ ನಡುವಣ ನಾಗವೇದಿಕೆಯೊಳ್ ವಿನೋದದಿಂ ಬರೆದಿಟ್ಟಂ: **ಪಂಚತಂತ್ರ,** ೨೬೪ ವ)

**ಕಟ್ಟುವಗ್ಗ** – ಕಟ್ಟುವ ಹಗ್ಗ (ಆತ್ಮರಂ ಆತ್ಮಪಾಶದಿಂ ಕಟ್ಟುವಗ್ಗಮನದಂ ಪಱಿದಿಕ್ಕುವ .. .. ಮಹಾತ್ಮನೊಳಪ್ಪುದೆ ಮತ್ಪರಾಕ್ರಮಂ: **ಶಬರಶಂ,** ೪. ೧೩೫)

**ಕಟ್ಟುವಡು** – ಕಟ್ಟನಿಂದ ಬಿಗಿ (ಪಾಂಚಾಲರಾಜತನೂಜೆ ಪಗೆವರ ಕಟುವಟ್ಟಿರ್ದ ಏಳಿದಿಕ್ಕೆಗೆ ಸಂತಸಂಬಟ್ಟು ಸೈರಿಸಲಾಱದೆ ಇಂತೆಂದಳ್: **ಪಂಪಭಾ,** ೭. ೩೮ ವ)

**ಕಟ್ಟುವರ್** – ಕಠಿಣವಾಗು (ಮುಳಿಸಂ ನೀನೆಂದಿಂಗಂ ಬಿಸುಡು ಈ ತಮ್ಮಂದಿರೊಡನೆ ಕಟ್ಟುವರ್ಪುದು ಪೆಂಪೇಂ: **ಆದಿಪು** ನರಸಿಂ, ೧೪. ೧೨೮)

**ಕಟ್ಟೆ** – ಜಗಲಿ, ವೇದಿಕೆ (ಧನ್ಯಕುಮಾರನಂ ಕಟ್ಟೆಯೊಳು ಕುಳ್ಳಿರಿಸಿ: **ಪುಣ್ಯಾಸ್ರ;** ೧೨. ೧೪ ವ)

**ಕಟ್ಟೆಗಟ್ಟು** – ಅಣೆಯನ್ನು ಕಟ್ಟು (ಲಾವಣ್ಯರಸದ ಬರಿವೊನಲಂ ಕಟ್ಟೆಗಟ್ಟಿ ಕಡೆಗೋಡಿವಿಟ್ಟಂತಿರೆ: **ಆಚವರ್ಧ,** ೭. ೯ ವ)

**ಕಟ್ಟೇವ** – ಕಡು ಬೇಸರ; ತಿರಸ್ಕಾರ (ಕಟ್ಟೇವಮುಂ ಕಡುಮುಳಿಸುಂ ಅಳವಿಗಟಿಯೆ ಸಿಗ್ಗಾಗಿ ಸೈರಿಸಲಾಱದೆ ಅಭಿನವ ನಾರಸಿಂಹಾಡಂಬರಂ ಅಗುರ್ವುಂ ಅದ್ಭುತಮಾಗೆ: **ನೇಮಿನಾಪು,** ೮. ೧೧೬ ವ)

**ಕಠೋರ** – ಬಿರುಸು, ಉಗ್ರ (ಕರಿಕಳಭ ಪ್ರಚಂಡ ಮೃಗರಾಜಕಿಶೋರ ಕಠೋರ ಘೋರ ಹೂಂಕರಣ: ಪಂಪಭಾ, ೯. ೪೨)

**ಕಡ** – ಸಾಲ (ನದಿಯನೊಸರ್ವ ಎಳನೀರಿಂದಂ ಬೆಳಯಿಸೆ ತೆಂಗೊಪ್ಪಿದುವು ಅವಿರಳಮಂ ಒಂದಱ ಕಡವನೊಂದು ನೀಗುವ ತೆಱದಿಂ: **ಪಾರ್ಶ್ವನಾಪು,** ೯. ೧೦)

**ಕಡಂಗು** – ಉತ್ಸುಕಗೊಳ್ಳು (ಪಗಲಿರುಳೆನ್ನದೆನ್ನೊಳೆ ಕಡಂಗುವನೆನ್ನೊಳೆ ಬಲ್ಪುದೋರ್ಪಂ: **ಆದಿಪು,** ೧೨. ೩೩); ಆವೇಶಗೊಳ್ಳು (ಪಿಂದೆ ಕಡಂಗಿ ತೇರಂ ಎಸಗು ಎಂಬವಂ ಅಂಬಿಗಂ ಆಜಿರಂಗದೊಳ್: **ಪಂಪಭಾ,** ೧೨. ೯೪)

**ಕಡಂಗೊಳ್** – ಸಾಲ ತೆಗೆದುಕೊ (ಶಾರ್ಙ್ಗಧರಂ ಕಡಗೊಂಡೊಂ ಕುಡುವಂತೆ ಮಗುಟ್ಚಿದಂ ಕೊಂಡಿಡೆ: **ಶಾಂತಿಪು,** ೫. ೬೩)

**ಕಡಂದುಱು** – ಒಂದು ಕೀಟ, ಕಣಜದ ಹುಳು (ಸೊಗಯಿಸುವ ಕಬ್ಬಮಂ ಕಬ್ಬಿಗರಲ್ಲದೆ ಮೆಚ್ಚರ್ ಉೞಿದರೇನ್ ಅಱಿವರೆ ತುಂಬಿಗಳಲ್ಲದೆ ಪೂವೊಳ್ ಮಗಮಗಿಸುವ ಕಂಪಂ ಕಡಂದುಱು ಏನಱಿದಪುದೇ: **ಕಬ್ಬಿಗಕಾ,** ೮)

**ಕಡಂಮಾಡು** – ಕಡಂಗೊಳ್ (ಪೆಱರ ಬಿನ್ನಣಮಂ ಪೆಱರೊಡವೆಯಂ ಕಡಂಮಾಡುವ ಕರ್ಣವ ಕೊಲ್ವ ಖಳರಿರ್ಕೆಮ: **ಶಾಂತಿಪು,** ೧೨. ೭೭)

**ಕಡಕು** – ಚೂರು ಕಲ್ಲು (ಕಡಕುಂ ಪೆಟ್ಟೆಯುಂ ಒತ್ತೆ ಮೆಲ್ಲಡಿಗಳಂ ಬಳ್ಕುತ್ತುಂ ಅಳ್ಕುತ್ತುಂ ಓರಡಿಗೆ ಒರ್ಮೊರ್ಮೆ ಕುಳುತ್ತುಂ ಏೞುತಿರೆ: **ಪಂಪಭಾ,** ೩. ೯)

**ಕಡಗದುಡಿ** – ಲೋಹದ ಬಳೆಯ ಚೂರು (ಕಡಗದುಡಿಯಂತಿರಿದೋಡೆ ಪೊಡವಡುವರ್ ಪೂರ್ಣನಾದೊಡಂ ಪೌರ್ಣಮಿಯೊಳ್: **ಸಮಯಪ,** ೯. ೪೨)

**ಕಡದೊಂಟಿ** – ಒಂದು ಆಟ (ನೆತ್ತಂ ಚದುರಂಗಂ ಬಾರ್ಗುತ್ತಂ ಕಡದೊಂಟಿ ಗೊಟ್ಟಿ ಜೂದೆಂಬಿವಂ ಆಡುತ್ತುಮಿರಲಾಗದು: **ಸಮಯಪ,** ೬. ೪೮)

**ಕಡಲ್** – ಸಮುದ್ರ (ಕಡಲ ತಡಿಯೆಯ್ದೆ ನೆಲನಂ ಪಡೆದರ್ ಭವದೀಯ ಪುತ್ರರ್: **ಆದಿಪು,** ೯. ೯೮)

**ಕಡಲುರಿ** – ಸಮುದ್ರದ ಬೆಂಕಿ, ಬಡಬಾಗ್ನಿ (ಕಡಲುರಿಯಂತೆ ಅಕಾಲಘರ್ಜನೆಯಂತೆ ಸಮಸ್ತದಿಕ್ತಟಮ ಪಿಡುಗುವಿನಂ ರಣಾನಕರವಂಗಳಸುಂಗೊಳೆ: **ಪಂಪಭಾ,** ೧೩. ೩೬)

**ಕಡಲೆ** – ಚಣಕ (ಕಡಲೆಗಳಂ ತಿಂಬ ಮೊಗ್ಗು ಕಲ್ಗಳೊಳುಂಟೇ: **ಧರ್ಮಾಮೃ,** ೧. ೧೩೪)

**ಕಡಲ್ವರಿ** – ಕಡಲಿನಂತೆ ಅಗಾಧವಾಗು (ಅತಿ ನೂತ್ನ ಗೀತಪಾತನ ವಿಕಲಸ್ವಾಂತೆಗೆ ನೋಡುವ ಕೂಡುವ ಚಿಂತೆ ಕಡಲ್ವರಿದುದು: **ಯಶೋಧಚ,** ೨. ೩೨)

**ಕಡವಡ** – ಡೇರೆ (ದಂಡಿಗಳ ದಂಡನಾಯಕರ ದಾನವಸೇನಾನಿಗಳ ಕಡವಡಂಗಳುಮಂ: **ಅನಂತಪು,** ೧೩. ೯೦ ವ)

**ಕಡವರ** – ನಿಧಿ, ಬಂಗಾರ (ಬಡವಂ ಕಡವರಮಂ ಂಡಂತೆ ಆನಂದಮನೆಯ್ದಿ ಪೆರ್ಚಿ: **ತ್ರಿಷಷ್ಟಿಪು,** ೫೫. ೨೧ ವ)

**ಕಡವು** – [ಕದಂಬ] ಕಡವಾಲದ ಮರ (ಕಡವಿನ ಕಂಪು ಅಡಂಗಿದುದು ಜಾದಿಯ ಕಂಪು ಒದವಿತ್ತು ಸೋಗೆಯ ಉರ್ಕು ಉಡುಗಿದುದು ಅಂಚೆಯುರ್ಕು ಪೊಸತಾಯ್ತು: **ಪಂಪಭಾ,** ೭. ೬೯)

**ಕಡಸು** – ಕರು ಹಾಕದ ಹಸು (ಕಡುಗೊಬ್ಬಿನ ಕಡಸುಗಳಿಂ ಕಡೆಯೊಳ್ ಬರುತಿರ್ಪಧೇನು: **ಲೀಲಾವತಿ,** ೫. ೯೨)

**ಕಡಾರ** – ಕೊಪ್ಪರಿಗೆ (ಪೋಪಂ ಬಾ ಎಂದು ತನ್ನ ಮನೆಯ ಕಡಾರದ ಪೊನ್ನಂ ತಂದು ಮುಂದಿಟಿಪುವುದುಂ: **ಸುಕುಮಾಚ,** ೭. ೨೮ ವ)

**ಕಡಿಕ** – ಕಟುಕ (ನರಪತಿಯಣುಗಂ ಸೊಣಕಡಿಕರುಮಂ ಪೊಲೆಯರುಮಂ ಓಲಗಿಪ್ಪುದೆ: **ಸಮಯಪ,** ೯. ೯೯)

**ಕಡಿಕಂಡ** – ತುಂಡು ತುಂಡು (ಕಡಿಕಂಡಮಾದ ಮೆಯ್ಯುಂ ಕುಣಿಲ್ವಾಱುವ ಮುಂಡಮುಂ ಮುಂಡುವೋದ ಕಯ್ಯುಂ ಕಂಡುವೋದ ತೊಡೆಯುಂ ಪಿಸುಟ್ಟಿ ಕಿಟಿಪ್ಪೊಡೆಯುಂ ಕಣೆವೋದ ಕಣಕಾಲುಂ ದೊಣೆವೋದ ಮೇಗಾಲುಂ: **ಪಂಪರಾ,** ೧೩. ೫೪ ವ)

**ಕಡಿಕೆಯ್** – ಕಡಿಕಂಡಂಗೆಯ್ (ವೈರಿಯಾರ್ .. .. ಕಡಿಕೆಯ್ದು ಇದಿರಾಂತಂದು ಆತನಂ ಆಜಿಯೊಳ್ ಅಂತಕಂಗೆ ಈವೆಂ: **ಆಚವರ್ಧ,** ೨. ೨೭); ರಭಸಗೊಳ್ಳು (ಕಡಿಕೆಯ್ದು ಇದಿರಾಂತಂದಾತನಂ ಆಜಿಯೊಳಂ ಅಂತಕಂಗೀವೆಂ: **ಆಚವರ್ಧ,** ೨. ೨೭)

**ಕಡಿಕೊಂಬು** – ಕತ್ತರಿಸಿದ ಕೊಂಬೆ (ಶರಪಂಜರನಂ ಯಮಕುಂಜರಕ್ಕೆ ಕಡಿಕೊಂಬು ಮಾಡಿ: **ಪಂಪರಾ,** ೧೩. ೧೦೮)

**ಕಡಿತ** – ಪಗಡೆ ಚದುರಂಗಗಳ ಹಾಸು (ಕಡಿತಮಂ ಬಳಸಿಕೊಂಡಿರ್ಪ ಜೂದುಗಾಱರಂತೆ ಅಕ್ಕಪಡಮಂ ಬಳಸಿಕೊಂಡು ಕುಳ್ಳಿರಲೊಡನೆ: **ನೇಮಿನಾಪು,** ೮. ೭೧ ವ); ಕಡತ, ಲೆಕ್ಕದ ಪುಸ್ತಕ (ಪಡೆದ ಧನಕ್ಕೆ ಲೆಕ್ಕಮಿಡಲ್ ಇಂದ್ರನಗಂ ಬಳಪಂ ಧರಾತಳಂ ಕಡಿತಂ ಅಹೀಶ್ವರಂ ತಗುಳೆ ಬಾಚಿಸುವೊಂ ಸುರಮಂತ್ರಿ ಕೂಡುವೊಂ: **ಶಾಂತಿಪು,** ೯. ೧೪೭)

**ಕಡಿತಲೆ** – ಕತ್ತಿ (ಎರಡುಂ ಬಲದ ಕಡಿತಲೆಯ ನಾಯಕರ್ ಕೆಯ್ಕೊಂಡು ಬಳ್ಳುಗೆಡೆದು ಎಕ್ಕೆವಾಱುವಾಜೆ ಪಲಗೆವಾಜೆ ಗೂಳಿಸೊರ್ಕಿ ಮಾರ್ಕೊಂಡು ಕಾದೆ: **ಪಂಪಭಾ,** ೧೦. ೮೦ ವ)

**ಕಡಿಯಣ** – ಕಡಿವಾಣ (ಕಡಿಯಣಕೆ ಬಾಯಂ ತೆಱೆಯದಿರಿಂ: **ನೇಮಿನಾಪು,** ೬. ೫೪)

**ಕಡಿವಡಿ** – ತುಂಡಾಗು (ಕಡಿವಡಿದುದೇ ಕಲ್ಪಾವನೀಜಮಿದು ವಿಧಿವಶದಿಂ: **ರಾಜಶೇವಿ,** ೧೩. ೧೧೩)

**ಕಡಿವೋಗು** – ಕತ್ತರಿಸಿ ಹೋಗು (ಅರೆ ಮುಗಿದಿರ್ದ ಕಣ್ಗಳುಂ ಅಲರ್ದ ಮೊಗಂ ಕಡಿವೋದ ಕೆಯ್ಯುಂ: **ಗದಾಯು,** ೪. ೫೩)

**ಕಡಿಹ** – ಕತ್ತರಿಸುವಿಕೆ (ಕರ್ಬೊನ್ನದಂತೆ ಇಕ್ಕುಟೆಗೆ ವಂದು ಕಬ್ಬಿನಂತೆ ಕಡಿಹಕ್ಕೆ ವಂದು: **ಧರ್ಮಾಮೃ,** ೩. ೪೬ ವ)

**ಕಡು** – ಹೆಚ್ಚಾಗಿ (ಪರೆದ ಉರಿಗೇಸಂ ಅವ್ವಳಿಪ ನಾಲಗೆ ಮಿಂಚುವ ದಾಡೆ ಬಿಟ್ಟ ಕಣ್ ತಿರುಪಿದ ಮೀಸೆ ಕೊಂಕಿದ ಸಟಂ ಕಡು ನೆಕ್ಕ ಕದಂಪು ನೀಳ್ದ ತಾಟ್ಕರದವೊಲಪ್ಪ ಒಡಲ್ ಕಹಕಹಧ್ವನಿ ಕೌಳಿಕನಾದಂ ಆದುದು ಆಸುರತರಮಾಗೆ ಬಂದು ಕವಿದತ್ತು ಘಟೋತ್ಕಚರೌದ್ರಸಾಧನಂ: **ಪಂಪಭಾ,** ೧೨. ೭)

**ಕಡುಂಬು** – ಕಡುಬು, ಒಂದು ತಿಂಡಿ (ಕೆಲವು ಪದಮಗಳ್ ಸ್ವಭಾವದಿಂ ನಿತ್ಯಬಿಂದುಗಳಪ್ಪುವು ಅವರ್ಕೆ ಪ್ರಯೋಗಂ: **ಶಬ್ದಮದ,** ೪೬, ವೃತ್ತಿ, ೧೦)

**ಕಡುಕೆಯ್** – ರಭಸಗೊಳ್ಳು (ಬಿಡದೆ ಕಡುಕೆಯ್ದು ದಿವ್ಯದ ನುಡಿಗೆ ಕಿವುಟ್ಕೇಳ್ದು ಕುಡಿದು ನೀರಂ ಭೀಮಂ ಗದೆವೆರಸು ಭೋಂಕನೆ ಕೆಡದಂ ಗಿರಿಶಿಖರದೊಡನೆ ಕೆಡೆವಂತಾಗಳ್: **ಪಂಪಭಾ,** ೮. ೪೨); ಶೌರ್ಯ ತೋರು (ಕಡುಕೆಯ್ದಾನಿರೆ ಚಕ್ರವರ್ತಿವರೆಗಂ ಮೇಘಾಮರರ್ ಬರ್ಪರೆಂದೊಡಿದರ್ಕಂ ಮಿಗಿಲುಂಟೆ: **ಆದಿಪು,** ೧೩. ೬೬)

**ಕಡುಗಟ್ಟಿಲೆ** – ದಟ್ಟವಾದ ಕತ್ತಲೆ (ಕಡುಗಟ್ಟಲೆ ತಲೆಯನೆತ್ತದೆ ಒತ್ತರಿಸದೆ ಅಣಂ ಸೊಡರದೆಲೆ ಮಿಡುಕದಿರೆ: **ಶಾಂತಿಪು,** ೬. ೧೧೮)

**ಕಡುಗಾಡಿ** – ಬಹು ಚೆಲುವು (ಕಡುಗಾಡಿ ಕಣ್ಗಡರೆ ಮನಂ ಬೆರ್ಚೆ: **ಕಾವ್ಯಾವಲೋ,** ೩೦೦)

**ಕಡುಗಾಡಿವೆಱು** – ಬಹಳ ಚೆಲುವನ್ನು ಪಡೆ (ಕಡುಗಾಡಿವೆತ್ತ ವಾಕ್ಸುಂದರಿ ಕೂರ್ತು ನಿಲ್ಕೆ ನಯಸೇನ ಮುನೀಂದ್ರ ಮುಖಾಬ್ಜಷಂಡದೊಳ್: **ಧರ್ಮಾಮೃ,** ೧. ೮)

**ಕಡುಗಾಯ್ಪು** – ಬಹಳ ಬಿಸಿ (ಬಿಸುಗದಿರನ ಕಡುಗಾಯ್ಪುಂ ಮಸುಳಿಸಿದುವು ತುಱುಗಿ ನೆಗೆದು ನಾಲ್ಕುಂ ದೆಸೆಯಂ ಮುಸುಕಿದುವು ಮುಳಿದರಂ ಜಂಕಿಸಿದುವು ಬಿಡದಾರ್ದು ಕಾವನೆಚ್ಚಲರ್ಗಣೆಗಳ್: **ಕಬ್ಬಿಗಕಾ,** ೨೩೫)

**ಕಡುಗಾರ** – ತುಂಬ ಉಪ್ಪುಪ್ಪು, ಕಟು (ಕಡುಗಾರಮಪ್ಪ ಕಡಲ ನೀರ್ ಅರೋಚಕಮಾಗೆ: **ಲೀಲಾವತಿ,** ೧೧. ೪೨ ವ)

**ಕಡುಗಾಳಿ** – ಬಿರುಗಾಳಿ (ಉಸಿರ್ದೊಡೆ ಕಡುಗಾಳಿಯ ತರಗೆಲೆಗಳಮತೆ ಪಾಱಿದರಮರರ್: **ಅಜಿತಪು,** ೪. ೬೫)

**ಕಡುಗು** – ಅತಿಶಯತೆ (ಕಡುಗೆನಿಸಿದವೋಲ್ ಗುಡುಗುಡಿಸೆ ಗಂಟುಗಂಟುಗಳೆಡೆಯಿಂ ರಸಮುಣ್ಮುವ ಇಕ್ಷುವಾಟಿಗಳೆಸೆಗುಂ: **ಕುಸುಮಾಕಾ,** ೧. ೧೦೦)

**ಕಡುಗುಣ್ಪು** – ತುಂಬ ಆಳ (ಅವಳ ಕಡುಗುಣ್ಪಲಾಲ್ದ ಪೊರ್ಕುೞ್: **ಕಬ್ಬಿಗಕಾ,** ೭೮)

**ಕಡುಗುತ್ತ** – ತೀವ್ರವಾದ ಕಾಯಿಲೆ (ಕಡುಗುತ್ತದಿಂ ಬಡಪೆಟ್ಟನ ಒಡಲಂ ಬಿಡದೆ ನೋಡಿ ನಡನಡ ನಡುಗಿ: **ಆಚವರ್ಧ,** ೧೬. ೫೬ ವ)

**ಕಡುಗುದುರೆ** – ಬಿರುಗುದುರೆ (ಘೋಳಾಯ್ಲುರ್ ಪೊಳೆಯಿಸೆ ಬಿಸಿಲ್ಗುದುರೆಗಳ್ ಪೊಳೆವಂತೆ ಪೊಳೆವ ಕಡುಗುದುರೆಗಳುಮಂ .. .. ಒಡ್ಡಿ ನಿಂದಾಗಳ್: **ಪಂಪಭಾ,** ೧೦. ೫೧ ವ)

**ಕಡುಗೆಯ್ಯ** – ಕೈಚಳಕವುಳ್ಳವನು (ಕಡುಗೆಯ್ಯನಾಗಿ ಶೀಘ್ರಸಂಧಾನಮಿಸುವ ಅಶ್ವಗ್ರೀವನ ತಕ್ಕುಂ ಬೇಗಯ್ಯೆಯುಂ ಕಿಡೆ: **ಶಾಂತಿಪು,** ೫. ೬೦ ವ)

**ಕಡುಗೊರ್ಬು** – ತುಂಬ ಕೊಬ್ಬು, ಸೊಕ್ಕು (ಅಂತು ತಳರ್ದು ನಡೆಗೊಂಡು ಮೊದಲೊಳ್ ಮಿಳಿಸುತ್ತಿಂಗೆ ಅಗ್ಗಳಮಾಗಿ ಕಡುಗೊರ್ಬಿಂ ಬಳೆದ ಪೆರ್ಮರಂಗಳ: **ಕಾದಂಬ,** ೮. ೦ ವ)

**ಕಡುನಳಿದಾಗು** – ಅತಿಯಾಗಿ ಬಾಗು (ಅಭ್ರಮಂಡಲಂ ಕಡುನಳಿದಾದುದು ಈ ಬಲದ ಧೂಳಿಯೊಳೆಂಬಿನಂ: **ಆದಿಪು,** ೧೨. ೬೨)

**ಕಡುನೀಱೆ** – ಮಹಾ ಚೆಲುವೆ (ಕಡುನೀಱೆಯರಂ ಲೋಗರ ಮಡದಿಯರಂ ಸೋಂಕಿ ಸೋಂಕಿ ಕುಳ್ಳಿರ್ಪನಿತಂ ಪಡೆಯದೊಡೆ: **ಸಮಯಪ,** ೫. ೫೩)

**ಕಡುಪು** – ಉಗ್ರತೆ (ಇನಿಯರಗಲ್ಕೆಯೊಳ್ ಕಡುಪಿನಿಂ ಕೊಱಚಾಡಿದನೆಂದು ಕಂತುವಂ ತನತನಗೆಯ್ದೆ ಮೂದಲಿಸಿ ಬಗ್ಗಿಸಲ್: **ಶಾಂತೀಶ್ವಪು,** ೧೦. ೧೨೩); ಪರಾಕ್ರಮ (ಕಡುಪಿದಱೊಲಪ್ಪೊಡೆ ಈಗಳೆ ಸುಡುವೆಂ ಬಾಣಾನಳಾರ್ಚಿಯಿಂ ಮಾಗಧನಂ: **ಆದಿಪು,** ೧೨. ೮೭); ದರ್ಪ, ಗರ್ವ (ಸೋಗೆ ದನಿಯೆತ್ತದಿರು ಒಯ್ಯನೆ ಬಂದು ಕುಳ್ಳಿರು .. .. ಎಂದು ಗಿಳಿಗಳ್ ಕಡುಪಿಂ ನಡೆತಂದು ಸುತ್ತಲುಂ ಪಡಿಯಱರಾಗಿ ಚಪ್ಪರಿಪವೋಲಗದೊಳ್ ಸಲೆ ಕರ್ವುವಿಲ್ಲನಾ: **ಕಬ್ಬಿಗಕಾ,** ೧೦೦); ಬಲಾತ್ಕಾರ (ಕರ್ಮಂ ಕಡುಪಿಂದೆ ಎೞೆದೊಯ್ದು ನೂಂಕುಗುಂ ಸಂಸೃತಿಯೊಳ್: **ಸಮಯಪ,** ೧೩. ೫೨); ತೀವ್ರತೆ, ರಭಸ (ಸಂಜೆ ಕರಂ ಕಡುಪಿನೊಳ್ ಅಪ್ಪೆ ನೆಗೆದ ರೋಮಾಂಚಂಗಳ್ ನೂಂಕಿ ಕಳೆದಂತೆ ಕೆಡೆದಂ ಪಂಕಜಸಖಂ ಜಳನಿಧಿಜಳದೊಳ್: **ಲೀಲಾವತಿ,** ೧೦. ೧೮)

**ಕಡುಬು** – ಒಂದು ತಿಂಡಿ (ಕಡುಬಿಟಿಗುಮೆ ಗಂಜಿಯಿಟಿಯದೆನಲೇಂ ಮರುಳೇ: **ಕರ್ಣನೇಮಿ,** ೧೧. ೯೮) ತಿಂಡಿ

**ಕಡುರಯ್ಯ** – ತುಂಬ ಸುಂದರ (ಬಂಧುಗಳ್ ಮನಂಬಡೆ ಕಡುರಯ್ಯಮಾಯ್ತು ಅಮಿತತೇಜನೊಳಂದು ವಿವಾಹಮಂಗಳಂ: **ಆದಿಪು,** ೪. ೫೩)

**ಕಡುವಂದೆ** – [ಕಡು+ಪಂದೆ] ದೊಡ್ಡ ಹೇಡಿ (ಕಲಿಯನೆ ಪಂದೆ ಮಾಟ್ಟಿ ಕಡುವಂದೆಯಂ ಒಳ್ಗಲಿ ಮಾಟ್ಟಿ ತಕ್ಕನಂ ಪೊಲೆಯನೆ ಮಾಟ್ಟಿ: **ಪಂಪಭಾ,** ೧೨. ೯೨)

**ಕಡುವಿತ್ತಿಗ** – ಬಹು ನಿಪುಣ (ಕೆಂಗಱೆಯ ಮೊನೆಯಂಬುಗಳ್ ಕಣ್ದೆಱೆಯಿಸಿದುವು ಪೊಣರ್ವ ಬಿಲ್ಲ ಕಡುವಿತ್ತಿಗರಂ: **ಪಂಪಭಾ,** ೧೦. ೭೩)

**ಕಡುವಿಲ್ಲ** – ಗಟ್ಟಿಗನಾದ ಬಿಲ್ಲುಗಾರ (ಎರಡುಂ ಬಲದ ಕಡುವಿಲ್ಲರ್ ಭೋರ್ಗರೆದು ಇಸೆ ಕೂರ್ಗಣೆಯೊಳ್ ಪಂದರ್ ಇಕ್ಕಿದಂತಾಯ್ತು ಗಗನಮಂಡಲಮೆಲ್ಲಂ: **ಪಂಪಭಾ,** ೧–. ೭೨)

**ಕಡುವೊಸತು** – [ಕಡು+ಪೊಸತು] ಹೊಚ್ಚ ಹೊಸದು (ಪೊಸತೆನಿಪ ಸುರಗೆವೆಕ್ಕಣಂ ಎಸೆದಿರೆ ಕಡುವೊಸತು ಬಣ್ಣರಸಂ ಎಸೆದಿರೆ ನಿಪ್ಪೊಸತೆನಿಪ ದೇಸೆ ಮಾಸಱಂ ಎಸೆದಿರೆ ಸಭೆ ಮೆಚ್ಚಿ ಪೊಚ್ಚಪೊಸತಾಯ್ತು ರಸಂ: **ಅಜಿತಪು,** ೫. ೩೩)

**ಕಡುಸೀ** – ತುಂಬ ಸಿಹಿ (ನಾಯಕಸಾರವೊಲಿದು ಕಡುಸೀಯೆನೆ ಕುಡಿಯೆಂದು ತಂದು ಕುಡಿಯಿಸುವರ್ ತಪ್ತಾಯಸ ರಸಮಂ ಬಸನಿಗಪಾಯಂ ಭವಭವದೊಳ್ ಎಂದುಂ ಏಂ ಕುಂದುಗುಮೇ: **ಶಾಂತಿಪು,** ೭. ೯೭)

**ಕಡುಸೇದೆ** – ತುಂಬ ಬಳಲಿಕೆ (ಬಿರ್ದದೊಂದು ಕಡುಸೇದೆಯೊಳಂ ಬಂದು ಎನ್ನಂ ಪರವಶತೆಯೊಳ್ ಒಂದಿಸಿದತ್ತು: **ಕಾದಂಬ,** ೧. ೧೫೭)

**ಕಡೆ** – ಮಥಿಸು ಹಾಗೂ ಕೊನೆ, ಸಾವು (ಕಡೆ–ಮಥನೇ ಅವಸಾನೇ ಚ: **ಶಬ್ದಮದ,** ಧಾ, ೨೮೯) ; ಕೆತ್ತನೆ (ಕತ್ತುರಿಯ ಕಾಲ್ಪಗಳಿಂ ಕಪ್ಪುರವಳಿಕಿನ ಕಡೆಗಳಿಂ ಕಮಲದ ಸರಂಗಳಿಂ: **ಕುಸುಮಾಕಾ,** ೧೨. ೧೫೭ ವ); ರಂಗೋಲಿ (ಕಡೆಯೊಳ್ ತಗುಳ್ದ ರತ್ನದ ಬೆಡಂಗುವೆತ್ತೆಸೆವ ದೀಪ್ತಿವಳಯದ ಚೆಲ್ವಂ ಪಡೆದು: **ಆದಿಪು,** ೭. ೭೫)

**ಕಡೆಗಣ್** – ಕಟಾಕ್ಷ, ಕುಡಿನೋಟ (ಅಂತು ನೋಡಿ ಕಡೆಗಣ್ಣ ಚೆಲ್ಲಂಬೆರಸು ಸೂಸುವ ವಾಸವಸ್ತ್ರೀಯರ ಮುಖಾಬ್ಜಾಸವ ಸಂಬಂಧಿಗಳಪ್ಪ ಶೇಷಾಕ್ಷತಂಗಳಂ ಈಶ್ವರನಂ ಗೆಲ್ದ ಗೆಲ್ಲಕ್ಕೆ ಸೇಸೆಗೊಳ್ವಂತೆ ಸೇಸೆಗೊಳ್ಳುತ್ತುಂ: **ಪಂಪಭಾ,** ೮. ೨೭ ವ)

**ಕಡೆಗಣಿಸು** – ಅಲಕ್ಷ್ಯಮಾಡು (ನಿಮ್ಮಯ ಧರ್ಮದ ಮಕ್ಕಳೆವು ಎಮ್ಮಂ ಕಡೆಗಣಿಸಿ ನಿಮಗೆ ನೆಗಟ್ಟುದು ದೊರೆಯೇ: **ಪಂಪಭಾ,** ೧೧. ೧೨೮)

**ಕಡೆಗಣ್ಚು** – ಕಡೆಗಣಿಸು (ಸೀತೆ ಕಡಂಗಿ ಕಾಯ್ದು ಕಡೆಗಣ್ಚಿದಳಪ್ಪೊಡೆ ಧಾತ್ರನಿಂ ತೊದಳ್ವಾತಿನೊಳೇನೊ ಪಾಂಡವರ ಕೈಯೊಳೆ ನಿನ್ನ ನಿಸೇಕಮಾಗದೇ: **ಪಂಪಭಾ,** ೯. ೪೯)

**ಕಡೆಗಾಣ್** – ಕೊನೆಗಾಣು (ಕ್ಷಯಮಣಮಿಲ್ಲ ಕೇಳ್ದು ಕಡೆಗಂಡವಂ ಆವನುಮಿಲ್ಲ ಎನಲ್: **ಪಂಪಭಾ,** ೧.೫)

**ಕಡೆಗೋಡಿವರಿಯಿಸು** – ಕೋಡಿ ಬೀಳುವಂತೆ ಮಾಡು(ಕಣ್ಣ ತವಕಮಂ ಕಡೆಗೋಡಿವರಿಯಿಸುವ ರೂಪಿಂಗೆ ಅನುರೂಪಮಾಗಿ: **ಅನಂತಪು,** ೧೦. ೨೭ ವ)

**ಕಡೆಗೋಲು** – ಮಜ್ಜಿಗೆ ಕಡೆಯುವ ಕೋಲು (ಕಡೆನೇಣಾಗಿ ಫಣೀಂದ್ರಂ ಕಡೆಗೋಲ್ ಕನಕಾದ್ರಿಯಾಗೆ ಕಮಠಂ ತಾಳ್ದಲ್ ಕಡೆದರ್ ಅಮರರ್ ಅಸುರರ್ ಪಾಲ್ಗಡಲಂ: **ಸಮಯಪ,** ೧೦. ೧೦೧)

**ಕಡೆದೋಱು** – ಕೊನೆಗಾಣು (ಕಡೆದೋಱುತ್ತಿಲ್ಲ ಎನಿಪ್ಪ ಆಗಸದ ನಡುವೆ ವಾಯುತ್ರಯಂ ಸುತ್ತೆ: **ಪಂಪರಾ,** ೧. ೪೨)

**ಕಡೆನೇಣ್** – ಕಡೆಗೋಲಿನ ಹಗ್ಗ (ಕಡೆನೇಣಾಗಿ ಫಣೀಂದ್ರಂ ಕಡೆಗೋಲ್ ಕನಕಾದ್ರಿಯಾಗೆ ಕಮಠಂ ತಾಳ್ದಲ್ ಕಡೆದರ್ ಅಮರರ್ ಅಸುರರ್ ಪಾಲ್ಗಡಲಂ: **ಸಮಯಪ,** ೧೦. ೧೦೧)

**ಕಡೆಪ** – ಕಡೆಯುವಿಕೆ (ಅದು ಮೊಟಗು ಮಾಣ್ದ ಕಾರ್ಗಾಲದ ಮುಗಿಲ್ ಅದು ಕಡೆಪಂ ಉಡುಗಿದ ಅಂಬುಧಿ ಎಂಬಂದದಿಂ ಅಡವಿ ಮೂಗುವಟ್ಟಿರ್ದುದು: **ಕಾದಂಸಂ,** ೧. ೪೮)

**ಕಡೆಪಟ್ಟನ್** – ಅತ್ಯಂತ ಕನಿಷ್ಠ ವ್ಯಕ್ತಿ (ಉಟಿದರಂದದೆ ದಾನಂಗುಡಿಂ ಎಂದು ಬೇಡಲಜಿವನೆ ಕಡೆಪಟ್ಟನುಮಾಗಿ ಸಾವೊಡೆಂತುಂ ಜೈನಂ: **ಸಮಯಪ,** ೭. ೬೩)

**ಕಡೆಪಡು** – ಕನಿಷ್ಠವಾಗು (ಗೊಟ್ಟಿ ಗಾಣರಿಲ್ಲದ ಕಡೆಪಟ್ಟ ಸೂಳೆವನೆಯಿಲ್ಲದವಿಲ್ಲವು ಸೂಳೆಗೇಱಿಯೊಳ್: **ಮಲ್ಲಿನಾಪು,** ೨. ೪೫)

**ಕಡೆಯ** – ರಂಗೋಲಿ (ಗುಡಿ ಪಸೆ ವೇದಿಕೆ ಪಂದಲ್ ಕಡಯವೆ ಭೃಂಗಾರಿ .. .. ಒಪ್ಪಿತು ಉದ್ವಾಹಗೃಹಂ: **ತ್ರಿಷಷ್ಟಿಪು,** ೩೫. ೧೭)

**ಕಡೆಯಿಕ್ಕು** – ರಂಗೋಲೆ ಹಾಕು, ಅಲಂಕರಿಸು (ಕಡೆಯಿಕ್ಕಿದ ಬಿಡುಮುತ್ತಿನ ಪೊಡರ್ದುಣ್ಮುವ ಬೆಳಗು: **ಆದಿಪು,** ೮. ೧೬)

**ಕಡೆವಾಯ್** – [ಕಡೆ+ಪಾಯ್] ಕೊನೆ ಮುಟ್ಟು, ಪಾರಾಗು (ಪಿಡಿಯಲೊಡರ್ಚಿ ಕಡೆದು ತೊಡಂಕಿ ತುಡುಂಕಿದ ಗೋವನಂ ಕೊಡಪಿ ಕೆಡಪಿ ಕಡೆವಾಯ್ದು ನಡುವೀದಿಗೆ ಕಡುಬೇಗದಿಂ ಪರಿತಂದು: **ರಾಜಶೇವಿ,** ೬. ೧೧ ವ); ಕಟವಾಯಿ, ಬಾಯಿಯ ಕೊನೆ (ಹಸ್ತಾಗ್ರಮಂ ಕಡೆವಾಯೊಳ್ ನೆಱೆಯಿಟ್ಟು .. .. ಇರ್ದುದೊಂದು ಮದೇಭಂ: **ಗಿರಿಜಾಕ,** ೯. ೨೪)

**ಕಡೆವುಟ್ಟು** – ಕಡೆಯಲ್ಲಿ ಹುಟ್ಟಿದ ಮಗು (ಕಡೆವುಟ್ಟಿದಾಕೆ ಹನುಮಂಗೆ ಅಸ್ಸೃಜ್ಜನಕಂ ದಧಿಮುಖ ನಗರೀಜನತಿ ಗಂಧರ್ವನೆಂಬ ಅಂಬರಗಮನಂ: **ಪಂಪರಾ,** ೧೧. ೬೨)

**ಕಡೆವೊನ್** – ಪುಟವಿಟ್ಟ ಚಿನ್ನ (ನೀಡಿದ ಪತಿಯ ನಿಡಿಯ ಕಯ್ದಾವರೆಗಾದಂ ನೀಡಿದಲ್ ಆ ಶಚಿ ಕಡೆವೊಂ ಎಸಕಮನಿಱಿಸಿ ಮಿಸುಪ ಜಿನಬಾಳಕನಂ: **ಶಾಂತೀಶ್ವಪು,** ೧೪. ೬೩)

**ಕಡ್ಡ** – ಮತ್ಸರ (ಒರ್ವರೊರ್ವರೊಳ್ ಮೂಗುದುಱಿಸಲಾಗದ ಕಡ್ಡಂ ಅವರ್ಗೆಂತುಂ ಒಡಂಬಡಾಗದು: **ಪಂಪಭಾ,** ೧೨. ೧೦೩ ವ); ದಡ್ಡ (ಅಂತಪ್ಪಾತಂ ಕಿಱುಕುಳನುಂ ಕಡ್ಡುಂ ಆಗಲಾಗ: **ಹರಿವಂಶ,** ೧೧. ೧೦೪ ವ)

**ಕಡ್ಡಗೂಂಟಣಿ** – ದಿಟ್ಟೆಯಾದ ಕುಂಟಣಿ (ಕಡಗೂಂಟಣಿ ಕಿಡಿಯಂ ಮೆಟ್ಟಿದಂತಾಗೆಚೌಕಿಗೆಯ ಬಾಗಿಲ್ಗೆ ಬರ್ದು: **ಲೀಲಾವತಿ,** ೨. ೧೧೯ ವ)

**ಕಡ್ಡವಣೆ** – ಬರಸೆಳೆ (ಪುರುಡುವೆರೆಸಿದ ಕೊಂಕಿಂಗಂ ಕಡ್ಡವಣೆವೆರಸಿದ ಸೋಂಕಿಗಂ: **ಪಂಪಭಾ,** ೪. ೧೭ ವ)

**ಕಡ್ಡುಗೊಳ್** – ರೋಷಗೊಳ್ಳು (ಬೆಸನಂ ಬೇಡುವ ಕಡ್ಡುಗೊಂಡು ನೆಲನಂ ಪೊಯ್ದೆತ್ತೆ ದೂತಂಗೆ ಘರ್ಜಿಸಿ ಸಂದೊಟ್ಟಿಜೆಗೊಳ್ವ: **ವರ್ಧಮಾಪು,** ೪. ೧೬)

**ಕಡ್ಡುವರ್** – ಗಡ್ಡ ಬರು (ಅಂತು ಪೊಱಮಡುವ ಅರಾತಿ ಕಾಲಾನಲನಂ ಕಂಡು ಕಡ್ಡುವಂದ ದೊಡ್ಡರೆಲ್ಲಂ ಮುಸುಱಿ: **ಪಂಪಭಾ,** ೩. ೬೧ ವ)

**ಕಡ್ಡೆ** – ದುಷ್ಟೆ (ವೀರಾಂಗನೆ ಕಡ್ಡೆ ತೋಳ್ವಿಸುಗೆಯೊಳ್ ಮೇಳ್ಪಟ್ಟು ನಿಲ್ವನ್ನಳೇ: **ಪಂಪರಾ,** ೧೨. ೬೦)

**ಕಣ್** – ಗೆಣ್ಣು (ಎಲೆ ಸುಲಿದೆಡೆಗಳ ಕಣ್ ಕಣ್ಗೆಲೆಯೆಡೆ ಗಂಟೊಡೆದು ಮೊನಸಿ ನನೆಕೊನೆದು ಮುಗುಳಲರ್ದು: **ಯಶೋಧಚ,** ೪. ೫)

**ಕಣಯ** – ನೀವಿಬಂಧ, ಸೀರೆಯ ಉಡಿಯ ಗಂಟು (ನಾರಿಯರ್ಕಳ ಜಘನಾಂಶುಕಗ್ರಂಥಿ ಕಣಯಂ ಅಂತದು ನೀವಿಯೆಂಬುದಕ್ಕುಂ: **ಅಭಿಧಾವ,** ೧. ೧೩. ೨೧); ಒಂದು ಆಯುಧವಿಶೇಷ (ಅಸಿ ಮುಸಲ ಕಣಯ ಕಂಪಣ ಗದಾದಂಡ ತೋಮರ ಆದಿ ಆಮುಕ್ತಾಮುಕ್ತ ಪಾಣಿಮುಕ್ತ ಯಂತ್ರಮುಕ್ತಂಗಳಪ್ಪ ನಿಜನಿಶಿತ ನಿಖಿಳಾಯುಧಂಗಳಂ: **ಪುಷ್ಪದಂಪು,** ೮. ೨೮ ವ)

**ಕಣಿ** – [ಖನಿ] ಗಣಿ (ಕಣಿರತ್ನತ್ರಯಕ್ಕೆ ಇದೇಂ ಪಿಱಿದು ಎನಲ್ ರತ್ನಾಕರಂ: **ಆದಿಪು,** ೧೬. ೪)

**ಕಣಿಕೆ** – ಚೂರು, ತುಂಡು (ಕವಿ ಕಾಂಚನಕಣಿಕೆಗೆ ಮಾಱುವನೇಕೆಯೊ .. .. ಬೆಲೆಯೆನಿಪ ಕೃತಿಯಂ ಅಮಳಾಕೃತಿಯಂ: **ನೇಮಿನಾಪು,** ೧. ೪೬)

**ಕಣಿತನ** – ಧೈರ್ಯ (ನಾಭಿನಂದನನ ನಿಯಮದವಸಾನಮಂ ಬಲ್ ಕಣಿತನದಿಂ ಕೆಲವು ದೆವಸಂಬರಂ ಪಾರ್ದು: **ಆಚವರ್ಧ,** ೧೦. ೪೦ ವ)

**ಕಣಿಶ** – ತೆನೆ (ಸರಸೋದ್ಯತ್ ಕಣಿಶಾವಳೀ ಘೃಣಿಮಯಂ ಕೇದಾರಜಾಲಂ ಲಸತ್ ಸರಸೀಜಾತಮಯಂ ಸರೋವರಚಯಂ: **ಶಾಂತೀಶ್ವಪು,** ೧೩. ೧೩೬)

**ಕಣೆ** – ಬಾಣ (ಎಡವಱದೊಳ್ ಎಱಗಿ ಬಱಸಿಡಿಲ್ ಇಡುಮುಡುಕನೆ ಪೊಡೆದುದೆನಿಸಿ ಪಾಂಡ್ಯನ ರಥದ ಅಚ್ಚು ಉಡಿದು ಅಟ್ಟಿತಟ್ಟಿ ಕೊಂಡುವು ಕಡುಗೂರಿದುವೆನಿಪ ಗುರುತನೂಜನ ಕಣೆಗಳ್: **ಪಂಪಭಾ,** ೧೨. ೮೨); ಕೊನೆ ಮೊದಲ್ ನಡು ಕಣೆ ಎನ್ನದೆ ಇದು ಎಳವೆ ಜವ್ವನಂ ಮುಪ್ಪೆನ್ನಂ: **ಅನಂತಪು,** ೩. ೭೧)

**ಕಣೆಕಾಲ್** – ಕಾಲಿನ ಕೆಳಭಾಗ (ಅಡಿ ತೊಡೆ ಪೊರ್ಕುಱುಂ ತೆಗಲೆ ಕೈ ಕಣೆಕಾಲ್ ಕೊರಲ್ ಎಂಬಿವುಂ ಬೆರಲ್ ನಡುವುರ ಬೆಂ ಬಸಿಱ್ ತೊಳಕು ಕರ್ಜಱ್ ಮುಯ್ಪು.. ..ಎಂಬೆಡೆಯನೆ ನಟ್ಟುರ್ಚಿದುವು .. .. ಪಾರ್ಥನಂಬುಗಳ್: **ಪಂಪಭಾ,** ೧೧. ೧೩೬)

**ಕಣೆಯ** – ಬಾಣ (ಕಣೆಯ ಕಂಪಣ ಮುಸಲ ಮುಸುಂಡಿ ಭಿಂಡಿವಾಳ ತೋಮರ ಮುದ್ಗರ ಮಹಾ ವಿವಿಧಾಯುಧಂಗಳೊಳಿಟ್ಟುಂ ಇಱಿದುಂ ಅಗುರ್ವು ಅದ್ಭುತಮಾಗೆ ಕಾದುವಾಗಳ್: **ಪಂಪಭಾ,** ೧೨. ೧೧೮ ವ); ಸೀರೆಯ ನಿರಿ (ಮೃಗೇಕ್ಷಣೆಯ ತೆಗೆದುಟ್ಟ ದುಗುಲದ ಕಣೆಯಕ್ಕೆಣೆ ಎನಿಸಿ ರಜತಗಿರಿ ಸೊಗಯಿಸುಗುಂ: **ಪಾರ್ಶ್ವನಾಪು,** ೬. ೧೦)

**ಕಣೆವೋಗು** – ದಿಂಡು ತುಂಡಾಗಿಹೋಗು (ಕಡಿಕಂಡಮಾದ ಮೆಯ್ಯುಂ ಕುಣಿಲ್ವಾಱುವ ಮುಂಡಮುಂ ಮುಂಡುವೋದ ಕಯ್ಯುಂ ಕಂಡುವೋದ ತೊಡೆಯುಂ ಪಿಸುಟ್ಟಿ ಕಿಟ್ಪೊಡೆಯುಂ ಕಣೆವೋದ ಕಣಕಾಲುಂ ದೊಣೆವೋದ ಮೇಗಾಲುಂ: **ಪಂಪರಾ,** ೧೩. ೫೪ ವ)

**ಕಣ್ಕೆತ್ತು** – ಕಣ್ಣುಸನ್ನೆ ಮಾಡು (ಜಯಾವತಿ ಕಣ್ಕೆತ್ತು ವಾರಿಸಿದೊಡೆ: **ವಡ್ಡಾರಾ,** ಪು. ೪೬, ಸಾ. ೧೬)

**ಕಣ್ಗೆತ್ತು** – ಕಣ್ಣುಸನ್ನೆ ಮಾಡು (ಕುಂಚದ ಅಡಪದ ಡವಕೆಯ ಪರಿಚಾರಿಕೆರೆಲ್ಲರುಮಂ ಕಣ್ಗೆತ್ತಿ ಕಳೇದು ಏಕಾಂತದೊಳ್ ಕನ್ನೆಯನಿಂತೆಂದಳ್: **ಪಂಪಭಾ,** ೪. ೬೬ ವ)

**ಕಣ್ಗಾ** – ನಿರೀಕ್ಷಿಸು (ಪಾಂಥಶ್ರೇಣಿ ನೀರಟ್ಟೆಯಂ ಶ್ರಮಮಂ ತೀರಮೆಯಂ ಪ್ರಪಾಂಗನೆಯರಂ ಕಣ್ಗಾಗುವುದಾದೇಶದೊಳ್: **ಪಂಪರಾ,** ೧. ೧೦೩)

**ಕಣ್ಗಾಣ್** – ಕಣ್ಣಿಗೆ ಕಾಣಿಸು (ಎನ್ನ ಗಂಡನಂ ಕಣ್ಗಾಣದಂತು ಮಾಡಿದೊಡೆ ನಿನಗೆ ನಾಂ ಪೊನ್ನಪಟ್ಟಮಂ ಬೊಟ್ಟುಮನೀವೆನೆಂಬುದುಂ: **ಪಂಚತಂತ್ರ,** ೩೯೨ ವ)

**ಕಣ್ಗಾಣದ**– ನೋಡಲಾರದ (ಆಗಳ್ ಅಂಗರಾಜಂಗೆ ಶಲ್ಯಂ ಕಿನಿಸಿ ಮುಳಿಸಿನೊಳೆ ಕಣ್ಗಾಣದ ಇಂತಪ್ಪ ಏಕಗ್ರಾಹಿಗಂ ಒಱಂಟಂಗಂರಥಮಂ ಎಸಗೆಂ ಎಂದು ವರೂಥದಿಂದ ಇೞಿದು ಪೋಗೆ: **ಪಂಪಭಾ,** ೧೨. ೨೦೫ ವ)

**ಕಣ್ಗಾಪು** – ಕಣ್ಣ ಕಾವಲು (ಪುರೋಚನನುಂ ಪೆಱಗಣ ಕಾಪಂ ಕಣ್ಗಾಪಿನೊಲೆ ಕಾದಿರ್ಪನ್ನೆಗಂ: **ಪಂಪಭಾ,** ೩. ೪ ವ)

**ಕಣ್ಗಿಡು** – ಹೆದರು (ಒತ್ತಂಬದಿಂದ ಒಳಗಂ ಪೊಕ್ಕು ಪಾಂಚಾಳಿಯಂ ಕಣ್ಗಿಡೆ ಜಡಿದು ಮುಡಿಯ ಪಿಡಿದು ತನ್ಮಧ್ಯದಿಂ ಸುಯೋಧನನ ಸಭಾಮಧ್ಯಕ್ಕೆ ತಂದು: **ಪಂಪಭಾ,** ೭. ೪ ವ)

**ಕಣ್ಗೆಳಿದಾಗು** – ಕಣ್ಣಿಗೆ ಅಹಿತವಾಗು (ಅಂಗರುಚಿ ಕಣ್ಗೆಳಿದಾಯ್ತು ವಿಭೂಷಣಂಗಳೊಳ್ ತೀಡುವ ರಶ್ಮಿಗಳ್ ಮಸುಳ್ದುವು: **ಆದಿಪು,** ೩. ೩)

**ಕಣ್ಗುಡಿತೆ** – ಬೊಗಸೆಗಣ್ಣು (ಕಣ್ಗುಡಿತೆಗಳಿಂದಾಕೆ ಪವಣ್ಗಟಿದು ಆ ಬಾಷ್ಪವಾರಿಯಂ ಸುರಿಯುತ್ತುಂ: **ಕಾದಂಬ,** ೯. ೭)

**ಕಣ್ಗುಬ್ಬೆ** – ಕಣ್ಣ ಗುಡ್ಡೆ (ಕಣ್ಗುಬ್ಬೆಯ ಗುಳ್ಳೆಯಂತೆ ಪೊಱಪಾಯ್ವನಮಟ್ಟಳೆವೊಯ್ದೊಡೆ ಓರ್ವನಂ: **ಸುಕುಮಾಚ,** ೭. ೬)

**ಕಣ್ಗೆಡು** – ನೋಡಿವ ಶಕ್ತಿ ಕುಂದು (ಕಟ್ಟಿದ ಪಟ್ಟಮೆ ಸರವಿಗೆ ನೆಟ್ಟನೆ ದೊರೆ ಪಿಡಿದ ಬಿಲ್ಲೆ ದಂಟಿಂಗೆಣೆ ಕಣ್ಗೆಟ್ಟ ಮುದುಪಂಗೆ: ಪಂಪಭಾ, ೧೦. ೧೭); ಗಾಬರಿಗೊಳ್ಳು (ಬನದೊಳ್ ಕೂಡೆ ತೊಟಲ್ದು ಕಾಣದೆ ಕರಂ ಕಣ್ಗೆಟ್ಟು ಬಾಯ್ಬಿಟ್ಟು ಬರ್ಪಿನೆಗಂ: **ಕರ್ಣನೇಮಿ,** ೩. ೧೫೨)

**ಕಣ್ಗೆಡಱು** – ಕಣ್ಣ ನೋಟಕ್ಕೆ ಸಿಕ್ಕು (ನಸು ಮಾಸಿ ಪಾಡಟಿದ ರೂಪಿನೊಳ್ ಉಣ್ಮುವ ಗಾಡಿ ನಾಡೆ ಕಣ್ಗೆಡಱೆ: **ಪಂಪಭಾ,** ೧೩. ೯೯)

**ಕಣ್ಗೆತ್ತು** – ಕಣ್ಣು ಸಂಜ್ಞೆಮಾಡು (ಮೆಲ್ಲಮೆಲ್ಲನೆ ಕೆಲಕ್ಕೆ ವಂದು ಕುಂಚದ ಅಡಪದ ಡವಕೆಯ ಪರಿಚಾರಿಕೆಯರೆಲ್ಲರುಮಂ ಕಣ್ಗೆತ್ತಿ ಕಳೆದು: **ಪಂಪಭಾ,** ೪. ೬೧ ವ)

**ಕಣ್ಗೆಯ್** – ಕಣ್ಣು ಮುಚ್ಚು, ನಿದ್ದೆಮಾಡು (ಅರೆದುಱುಗಿರ್ದ ಬಯಲ್ದಾವರೆಯ ಎಲಗೊಡೆಯಿಡುವಿನಲ್ಲಿ ಸುಖದಿಂ ಕಣ್ಗೆಯ್ದಿರೆ: **ಕಾದಂಬ,** ೮. ೧೧)

**ಕಣ್ಗೆವರ್** – ಚೆನ್ನಾಗಿ ಕಾಣು, ಆಕರ್ಷಿಸು (ನೆಗಟ್ದೀ ಕರ್ಪೂರ ಕಾಳಾಗರು ಮಳಯಮಹೀಜಂಗಳ್ ಏಳಾಲತಾಳೀ ಸ್ಥಗಿತಂಗಳ್ ಕಣ್ಗೆವಂದಿರ್ದುವಂ ಇವನೆ ವಲಂ ಕೊಂಬುಗೊಂಡ ಅಂಗಜಂ .. .. ಎಚ್ಚು ಮೆಚ್ಚಂ ಸಲಿಸುವಂ: **ಪಂಪಭಾ,** ೪. ೨೩)

**ಕಣ್ಗೊಳ್** – ಕಣ್ಣು ಸೆಳೆ, ಸುಂದರವಾಗಿ ಕಾಣು (ಕಣ್ಗೊಂಡು ಮನಂಗೊಂಡುಂ ಇಂದ್ರನೆ ಖೇಚರೇಂದ್ರನೆ ದಲೀ ಭೂಪೇಂದ್ರನೆಂಬನ್ನೆಗಂ: **ಆದಿಪು,** ೧೧. ೧೫೭)

**ಕಣ್ಗೊಳಿಸು** – ಆಕರ್ಷಿಸು (ಕಣ್ಗೊಳಿಸುಗುಂ ಆಕೆಯ ವಿನೀಳ ಕಬರೀಭಾರಂ: **ಸುಕುಮಾಚ,** ೯. ೮೪)

**ಕಣ್ಚಲ್ಲ** – ಚೆಲ್ಲುನೋಟ (ನೀನವನೊಳ್ ಕಣ್ಚಲ್ಲದೆ ಪೋಗಿ ನೆರೆದು ಮೆಲ್ಲನೆ ಬಂದ್ಯೆ: **ಪುಷ್ಪದಂಪು,** ೮. ೧೧೫)

**ಕಣ್ಣಲಾಗೆನೆ** – ಕ್ಷಣ ಮಾತ್ರದಲ್ಲಿ (ಬೆಮರಿಂದೆ ಕಣ್ಣಲಾಗೆನೆ ನೆಱೆ ನಾಂದು ಪತ್ತಿದ ನಿಜಾಂಶುಕಮಂ ಪುಳಕಂಗಳೆತ್ತೆ: **ಕಾದಂಬ,** ೮. ೩೪)

**ಕಣ್ಣಲೆ** – ಕಣ್ಣಿಗೆ ಬೀಳು (ಕವಿತೆಗೆ ಕಣ್ಣಲೆಯಾದುದು ಕವಿತಾವಿಳಾಸನ ಕಾವ್ಯಂ: **ಧರ್ಮಮಧು,** ೧. ೭೦)

**ಕಣ್ಣಱೆ** – ಕಣ್ಣನ್ನು [ಅಭಿಪ್ರಾಯವನ್ನು] ತಿಳಿ (ಆ ರಮ್ಯನದಿಯ ಚೆಲ್ವಂ ಇಳಾರಮಣಂ ಅಟ್ತೆಯಿಂ ನೋಡುವಿನಂ ಸಾರಥಿ ಕಣ್ಣಱಿದು: **ಆದಿಪು,** ೧೧. ೫೭)

**ಕಣ್ಣಾರ್** – ಕಣ್ಣಿಗೆ ತೃಪ್ತಿಯಾಗು (ಉಸಿರೊತ್ತಿಂ ತಿದಿಯಂತಿರೊತ್ತಿರೆ ಬಸಿಱ್ ಪೋತಂದ ಕಣ್ ಬಿಟ್ಟ ಬಾಯ್ .. .. ಪುಡಿಯೊಳ್ ಪೊರಳ್ವ ಪಗೆಯಂ ಕಣ್ಣಾರ್ವಿನಂ ನೋಡಿದಳ್: **ಪಂಪಭಾ,** ೧೨. ೧೫೧)

**ಕಣ್ಣಾಲಿ** – ಕಣ್ಣ ಗುಡ್ಡೆ (ನೋಡಿದರೆಲ್ಲರ ಕಣ್ಣಾಲಿಗೆ ಸೊಗಯಿಸುವಳ್: **ವಡ್ಡಾರಾ,** ಪು. ೨. ಸಾ ೧೧)

**ಕಣ್ಣಿ** – ಹಗ್ಗ, ಕುಣಿಕೆ (ಆಡಿನ ಬಾಲಮಂ ಮುರಿದೊಡೇಂ ಮಿಳಿಯಕ್ಕುಮೆ ಕಣ್ಣಿಯಕ್ಕುಮೇ: **ಸಮಯಪ,** ೮. ೨೪೭)

**ಕಣ್ಣಿಡು** – ದೃಷ್ಟಿಸಿ ನೋಡು (ಕೌಮುದಿ ಕಣ್ಣಿಡೆ ಕರಗುವ ಚಂದ್ರಕಾಂತಮಣಿಪುತ್ರಿಕೆವೊಲ್: **ಯಶೋಧಚ,** ೨. ೨೩)

**ಕಣ್ಣಿವಲೆ** – ಕಣ್ಣಿಯ [ದಾರದ] ಬಲೆ (ಅವಳ ಪೆಱನೊಸಲನಲೆವ ಬಳ್ಳಿಗುರುಳೊಳ್ ತೊಡಂಕಿದ ಕಣ್ ಕಣ್ಣಿವಲೆಯೊಳ್ ಕೆಡೆದ ಎರಲೆಯಂತೆ ಅಡಿಯಿಡಲಾರ್ತುದಿಲ್ಲ: **ಕಬ್ಬಿಗಕಾ,** ೬೩ ವ)

**ಕಣ್ಣೀರ್** – ಕಂಬನಿ (ಶೋಕಶಿಖಿಯನಾಱಿಸಿ ಕಣ್ಣೀರನಿತುಂ ಬತ್ತಿದುದು: **ಅಜವರ್ಧ,** ೯. ೮೦)

**ಕಣ್ಣುರಿ** – [ಶಿವನ] ಕಣ್ಣಿನ ಉರಿ (ಲಲಾಟದೊಳ್ ಮಿಱುಪ ಕಣ್ಣುರಿಯಂತೆ: **ಶಬ್ದಮದ,** ೨೪೩, ಪ್ರ ೬)

**ಕಣ್ಣುಳ್ಕು** – ಕೋರೈಸು (ನೆರೆದುದಿರು ಕ್ಷಾತ್ರಂ ತೇಜಂ ಧರಾಧಿಪರೂಪದಿಂ ಧರೆಗೆನುತುಂ ಆ ದೂತಂ ಕಣ್ಣುಳ್ಕೆ ನೋಡಿ ಕುಮಾರನಂ: **ಆದಿಪು,** ೧೪. ೪೪)

**ಕಣ್ಣೂಱು** – ಗಮನ ನೀಡು (ಭವ್ಯಜನಮಂ ಕಣ್ಣೂಱೆ ಕಲ್ಪಿಪ್ಪ ಉಪಾಧ್ಯಾಯರ್ ಜ್ಯೋತಿಸುಗೆ ಎಮ್ಮ ಚಿತ್ತಗೃಹದೊಳ್ ರತ್ನತ್ರಯಜ್ಯೋತಿಯಂ: **ಆದಿಪು,** ೧. ೪)

**ಕಣ್ಣೆಂಜಲ್** – ಕೆಟ್ಟನೋಟದಿಂದಾಗುವ ಕೆಡುಕು, ದೃಷ್ಟಿಯಾಗುವುದು (ಲೋಕದ ಕಿಸುರುಂ ಕಣ್ಣೆಂಜಲುಂ ಒತ್ತುಗುಂ ಇನ್ನೆಂದುಂ ಮನೆಯ ಪೊಸಂತಿಲಂ ಪೊಱಮಡಲಾಗದು: **ನೇಮಿನಾಪು,** ೪. ೪ ವ)

**ಕಣ್ಣೆಮೆ** – ಕಣ್ಣ ರೆಪ್ಪೆ (ಮನೆಯಾರ್ಣಮನ ಕಣ್ಣೆಮೆಯ ಕಾಂಡಪಟಮಾಗೆಯುಂ ಬಗೆಯಾಣ್ಮನ ಕಣ್ಣೆಮೆಯ ದೂದವಿಯಾಗೆಯುಂ: **ಪಂಪಭಾ,** ೪. ೮೧ ವ)

**ಕಣ್ಣೆಮೆಯಿಕ್ಕು** – ರೆಪ್ಪೆ ಮಿಟುಕಿಸು ಕೆಡೆದಿರ್ದನಂ ಧರೆಗೆ ಕಣ್ಣೆಮೆಯಿಕ್ಕದೆ ನೋಡಿ: **ನೇಮಿನಾಪು,** ೩. ೧೪)

**ಕಣ್ಣೆಱಕ** – ಕಣ್ಣಿಗೆ ಹಬ್ಬ; ದೃಷ್ಟಿ ಬೀಳುವುದು (ಸುತ್ತಣ ಸಭೆ ಕಣ್ಣೆಱಕಮೆ ಗೆತ್ತು ಪಲರ್ ನೆರೆಯೆ ನೋಡೆ: **ಅಜಿತಪು,** ೫. ೫೬)

**ಕಣ್ತೀವು** – ಕಣ್ಣು ತುಂಬು, ತೃಪ್ತಿಯಾಗುವಂತೆ (ನಿಮ್ಮ ಸಿರಿಯಂ ಕಣ್ತೀವಿ ನೋಡಿಯುಂ ನಿಮಗಪ್ಪ ಯೋಗಕ್ಷೇಮಂಗಳಂ ಆರೈದುಂ ಸುಖದೊಳಿರ್ಪೆಂ: **ಪಂಚತಂತ್ರ,** ೮೭ ವ)

**ಕಣ್ದಣಿ** – [ಕಣ್+ತಣಿ] ಕಣ್ಣಿಗೆ ತೃಪ್ತಿಯಾಗು ಕಣ್ದದಣಿಯದೆ ಅರ್ಭಕನಂ ನಡೆ ನೋಡಿ ನೋಡಿ: **ಮಲ್ಲಿನಾಪು,** ೩. ೯೩)

**ಕಣ್ದೆಱವಿ** – ಕಣ್ಣು ತೆರೆಯುವುದು (ಚೆಲ್ವಿಂಗೆ ಕಣ್ದೆಱವಿಯಾದಂತೆ ತೆಱಂಬೊಳೆವ ದೀವದ ಹರಿಣಿಗಳ ಲೋಚನ ಪ್ರತಿಬಿಂಬಗಳೂಂ: **ಪಂಪರಾ,** ೩. ೭೫ ವ)

**ಕಣ್ದೆಱೆ** – ಕಣ್ಣು ತೆರೆ (ಕೆಂಗಱೆಯ ಮೊನೆಯಂಬುಗಳ್ ಕಣ್ದೆಱೆಯಿಸಿದುವು ಪೊಣರ್ವ ಬಿಲ್ಲ ಕಡುವಿತ್ತೆಗರಂ: **ಪಂಪಭಾ,** ೧೦. ೭೩)

**ಕಣ್ತೊಡವು** – ಕಣ್ಣ ಆಭರಣ (ಆತನ ರೂಪಿದೊಂದು ಕಣ್ತೊಡವೆನೆ: **ಪಂಪರಾ,** ೩. ೩೯)

**ಕಣ್ಪೊಣರ್** – ಕಣ್ಣ ಜೋಡಿ (ಬೆರಲಿಂ ಕಣ್ಪೊಣರನೊತ್ತುವ ಆಕೆಯ ಮೊಗದಿಂ ಸರಿದುದು ಕತ್ತುರಿನೀರ್: **ಲೀಲಾವತಿ,** ೧೩. ೧೩೭)

**ಕಣ್ಬಡಿಗ** – ಕಣ್ತಪ್ಪಿಸಿ ತಿರುಗುವವನು (ಅರಣ್ಯದೊಳ್ ತಿರಿತರುತಿರ್ದ ಕಣ್ಬಡಿಗರಂ ಮಗುಟ್ದುಂ ಬಿಱುತು ಓಡಿ ಬೇಡರೊಳ್ ನೆರೆದಿರಲ್ ಒಡ್ಡಯಿಸಿ ರಾಜ್ಯದೊಳೇಂ ನೆರೆಯಲ್ಕೆ ತೀರ್ಗುಮೋ: **ಪಂಪಭಾ,** ೮. ೮೫); ಮೋಸಗಾರ (ಈ ಮೊಗಂಗುಡದ ಇರವು ಇಂತು ಕಣ್ಬಡಿಗರಪ್ಪರೆ ಮಾನಸರಪ್ಪರ್: **ಪಂಪಭಾ,** ೮. ೭೬)

**ಕಣ್ಬಡು** – ಆಸೆಪಡು (ಅಟ್ಟಿ ಬಟ್ಟಿ ಬೆಸೆಗೆಯ್ದು ಇಂತೇಕೆ ಕಣ್ಬಟ್ಟಪಂ ನೀಮಿಂ ಪೇೞಿಂ ಅಮೋಘಂ; **ಜೀವಸಂ,** ೧೧. ೪೧)

**ಕಣ್ಬರಿ** – ವಿವೇಕ (ಕಣ್ಬರಿಗೆಟ್ಟು ದಿವ್ಯಮುನಿಗಿತ್ತ ಅಪಮಾನದಿಂ ಆರ್ತರೌದ್ರದಿಂ ಪೆಣ್ಬುಲಿಯಾಗಿ ಪುಟ್ಟಿ ಸಹದೇವಿ ಬರುತ್ತಿರೆ: **ಪಂಪರಾ,** ೨. ೫೩); ನೋಟದ ಹರಹು (ತಣಿವಂ ಕಣ್ಬರಿಗೀವುದು ಉಚ್ಚಳಿತ ಗಂಗಾ ಸಿಂಧು ಸೌಗಂಧಿಕೋಲ್ಬಣ ಗಂಧಂ ವಿಜಯಾರ್ಧರತ್ನಕಟಕಂ: **ಧರ್ಮಮಧು,** ೨. ೧೦)

**ಕಣ್ಬರಿಗೆಡು** – ವಿವೇಕವನ್ನು ಕಳೆದುಕೊ (ತಮ್ಮೊಮ್ಮೊರ್ವೊರಂ ನಣ್ಪುಗೆ ಕಣ್ಬರಿಗೆಟ್ಟು ಇಱಿಯಿಱಿದು: **ಕರ್ಣನೇಮಿ,** ೩. ೭೦ ವ)

**ಕಣ್ಬರಿವು** – ಕಣ್ಣಿನ ಹರವು (ಎಂತೆಂತು ಕಂಡೆ ಕಣ್ಬರಿವು ಎಂತೆಂತು ಏನೆಂದು ನುಡಿದಂ: **ಕಾದಂಬ,** ೫. ೮೨);

**ಕಣ್ಬಸ** – ಕಣ್ಣಿನ ಅಪೇಕ್ಷೆ, ಬಯಕೆ (ನಾರದನ ಕಣ್ಬಸಿವು ಓಡಿದುದಿಂದು: **ಜಗನ್ನಾವಿ,** ೧೮. ೧೦೯)

**ಕಣ್ಬಸಿವು** – ಕಣ್ಣಿನ ಹಸಿವು (ತಮ್ಮೊಳ್ ಭರದಿಂ ವನದೇವತೆಯರ ನೆರವಿಯ ಕಣ್ಬಸಿವು ನಿಸದಂ ಒಸರಿಸುವಿನಂ: **ಚಂದ್ರಪ್ರಪು,** ೫. ೭೯)

**ಕಣ್ಬೀಡು** – ಕಣ್ಣು ಬಿಡುವಿಕೆ (ಕಡೆಗಣ್ಣಿಂದುಜ್ಜಳಿಪ ಕಡಗೆಂಪು ಕೌರವಕುಳಂಗೆ ಕಡುಮುಳಿವ ಜವನ ಕಣ್ಬೀಡಿನವೋಲ್: **ಗದಾಯು,** ೮. ೩೪)

**ಕಣ್ಬೀಲಿ** – ಕಣ್ಣುಳ್ಳ ಪೀಲಿ, ನವಿಲ ಗರಿ (ಮೃಗನಾಭಿಯಂ ಆನೆಯ ಕೊಂಬುಗಳಂ ಪೆರ್ವಿದಿರ ತೋರಮುತ್ತಂ ಕಣ್ಬೀಲಿಗಳಂ ಮುಂದಿಟ್ಟು ಒರ್ವಂ ಪುಗುತಂದಂ ರಾಜಭವನದೊಳಗಂ ಶಬರಂ: **ಪಂಪರಾ,** ೪. ೧೧೬)

**ಕಣ್ಬೇಟ** – ಕಣ್ಣೊಲುಮೆ, ಮೊದಲ ನೋಟದ ಪ್ರೇಮ (ಪಸುರ್ವಂದರ್ ಪಸೆ ವೇದಪಾರಗರವಂ ಕಣ್ಬೇಟದ ಉದ್ದಾನಿಯಂ ಪಸರಂಗೆಯ್ದವೊಲಪ್ಪ: **ಪಂಪಭಾ,** ೫. ೨೫)

**ಕಣ್ಬೇಟಂಗೊಳ್** – ನೋಟದಿಂದ ಮೋಹವಶನಾಗು (ಕಣ್ಬೊಲದೊಳ್ ತನ್ನಂ ಕಂಡು ಕಣ್ಬೇಟಂಗೊಂಡು .. .. ಸೋಲದಿಂದೆಳಸಿ ಸುೞಿಯಿಸುವ ಕಡೆಗಣ್ಣ ನೋಟದಿಂ: **ಪಂಪರಾ,** ೭. ೧೦೫ ವ)

**ಕಣ್ಬೇಹತನ** – ನೋಟದಿಂದ ಉಂಟಾಗುವ ಬಯಕೆ (ಕಣ್ಬೇಹತನದಿಂ ತನ್ನಾರ್ಪನಿತಂ ಕಟ್ಟಿಕೊಂಡು ಪೋಪೆಂ; **ಧರ್ಮಾಮೃ,** ೧೨ ೪೪ ವ)

**ಕಣ್ಬೊಣರ್** – [ಕಣ್+ಪೊಣರ್] ಕಣ್ಣ ಜೋಡಿ (ಕಣ್ಬೊಣರ ಬೆಂಬಱಿಯೊಳ್ ಅಸವಸದಿಂ ಎಟ್ಟಿರುತ್ತುಮಿರ್ದಳ್: **ಆಚವರ್ಧ,** ೫. ೬೪ ವ)

**ಕಣ್ಬೊಲ** – ಕಣ್ಣಿಗೆ ಕಾಣುವಷ್ಟು ದೂರ, ದೃಷ್ಟಿಪಥ (ಗಗನತಳಗಮನದೊಳಂದಾದ ಬೆಡಂಗಂ ನೋಡಿದರ್ ಆದರದಿಂ ತಮ್ಮ ಕಣ್ಬೊಲಂಗಱೆವಿನೆಗಂ: **ಆದಿಪು,** ೫. ೬೫)

**ಕಣ್ಮಲರ್** – ಹೂವಿನಂತಹ ಕಣ್ಣು (ಉಡಮೊಗಮೆಂಬ ತಾವರೆಯ ನೀಳ್ದೆಸಳೊಳ್ ಮಱಿದುಂಬಿ ಪಾಯ್ದು ಒಡಂಬಡನೊಳಕೊಂಡು ಕಣ್ಮಲರ ಬೆಳ್ಪುಗಳ್ ಆಲಿಯ ಕರ್ಪಿನೊಳ್ ಪೊದಳ್ದು; **ಪಂಪಭಾ,** ೫. ೭೮)

**ಕಣ್ಮಲೆ** – ಕಣ್ಣು ಕೆರಳಿಸು (ಬನ್ನಮುಂ ಮುನ್ನಮೆ ಸೋಂಕಿ ಕಣ್ಮಲೆವ ಮಾತುಗಳ್ ಎಲ್ಲರ ಪೇೞ್ವ ಮಾತುಗಳ್: **ಪಂಪಭಾ,** ೭. ೫೫); ಮನಸ್ಸಿಗೆ ಹೊಳೆ, ವೇದ್ಯವಾಗು (ನಂದನಂಗಳೊಳ್ ಸುಖಿಇವ ಬಿರಯಿಯಿಂ ಕಂಪು ಕಣ್ಮಲೆಯೆ ಪೂತ ಸುರಯಿಯಿಂ: **ಪಂಪಭಾ,** ೩. ೨೨)

**ಕಣ್ಮುಚ್ಚು** – ಕಣ್ಣು ಮುಚ್ಚು (ಸುಭದ್ರೆಯ ರೂಪು ಕಣ್ಣಪಾಪೆಯಂತೆ ಕಣ್ಣೊಳೆ ತೊೞಲೆ ಕಣ್ಮುಚ್ಚದೆ .. .. ಚಂದ್ರನಂ ನೋಡಿ: **ಪಂಪಭಾ,** ೪. ೬೯ ವ); ನಿದ್ರಿಸು (ಒರ್ವ ಪಾರ್ವಂ ವಿಸ್ತೀರ್ಣ ಜೀರ್ಣ ಕರ್ಪಟಾವೃತ ಕಟಿತಟನುಂ ಆಗಿ ಬಂದು ಕಣ್ಮುಚ್ಚಲ್ ಎಡೆವೇಡೆ ತನಗವರ್ ಪಾಸಲ್ಕೊಟ್ಟ ಕೃಷ್ಣಾಜಿನಮಂ ಪಾಸಿ ಪಟ್ಟಿರ್ದನಂ: **ಪಂಪಭಾ,** ೩. ೩೧ ವ)

**ಕಣ್ಸೋಲ್** – ಕಣ್ಣು ಸೋತುಹೋಗು, ಆಕರ್ಷಣೆಗೊಳ್ಳು (ಗಂದೇಭ ಕಂಧರಬಂಧಪ್ರವಿಭಾಸಿಯಪ್ಪ ಅರಿಗನಂ ಕಾಣುತ್ತೆ ಕಣ್ಸೋಲ್ತು: **ಪಂಪಭಾ,** ೪. ೩೮)

**ಕಣ್ಸೋಲ** – ಕಣ್ಣು ಆಕರ್ಷಣೆಗೊಳ್ಳುವ ಮೂಲಕ ಸೋಲುವುದು (ಪದೆಪಿಂದೀಕೆಯ ರೂಪನೀಕ್ಷಿಸಲೊಡಂ ಕಣ್ಸೋಲವೆನ್ನೊಳ್ ಪೊರಟ್ಟಿದವಿತ್ತು: **ಜಗನ್ನಾವಿ,** ೧೦. ೮೧)

**ಕತ** – ಕಾರಣ, ನಿಮಿತ್ತ (ಕುಱಿಗಳ ಕತದಿಂ ಜಗಮಂ ಬೞಿಕಯ್ಯದೆ ಮಾಣ್ದರ್: **ಸಮಯಪ,** ೯. ೧೧೬)

**ಕತಕಬೀಜ** – ಚಿಲ್ಲದ ಬೀಜ, ಕದಡುನೀರನ್ನು ತಿಳಿಗೊಳಿಸುವ ಬೀಜ (ಬಿನದಕೆ ಪಾಡುತ್ತಿರೆ ನುಣ್ದನಿ ನಿದ್ರೆಗೆ ಕತಕಬೀಜಮಾಯ್ತೆನೆ ಮೃಗಲೋಚನೆ ತಿಳಿದು: **ಯಶೋಧಚ,** ೨. ೨೮)

**ಕತಕಫಳ** – ಕತಕದ ಹಣ್ಣು (ಕತಕಫಳೋಪಮ ಶುಭ ಪರಿಣತಿಯಿಂದೆ ನಿಜಾಂತರಂಗವಿಪುಳಸರಸ್ಸಂ ಗತಸಪ್ತಪ್ರಕರತಿ ಕಳಂಕತೆ ತೊಲಗಿರೆ: **ಪಾರ್ಶ್ವನಾಪು,** ೫. ೪೦)

**ಕತಿಪಯ –** ಕೆಲವು (ಕತಿಪಯತುರಂಗಬಲ ಪರಿವೃತನೊಳಮೊಕ್ಕು: **ಆದಿಪು,** ೧೩. ೩೫)

**ಕತೆ –** [ಕಥಾ] ನಿರೂಪಿತ ಘಟನೆ (ಕತೆ ಪಿರಿದಾದೊಡಂ ಕತೆಯ ಮೆಯ್ಗೆಡೆಯಲೀಯದೆ .. .. ಪೇೞ್ವೊಡೆ ಪಂಪನೆ ಪೇೞ್ಗುಂ: **ಪಂಪಭಾ,** ೧. ೧೧)

**ಕತ್ತರಿ –** ಕತ್ತರಿಸಲು ಬಳಸುವ ಸಾಧನ (ಗಂಟಲ ಬಳೆಯಂ ಪತ್ತಿಸಿದ ಚಂದ್ರಕಾಂತದ ಕತ್ತರಿಯೆನೆ ತೊಳಗಿ ಬೆಳಗಿತೆಳೆವೆಱ ನಭದೊಳ್: **ಸೂಕ್ತಿಸುಧಾ,** ೮. ೨೫೬); ಕುಸ್ತಿಯ ಒಂದು ಪಟ್ಟು (ಬಾಹುದಣೆ ಖಮ್ಮರಿ ಕತ್ತರಿ ಖೋಡ ಅಂಕುಶಂ ಸಸಿಕುವೆನಿಪ್ಪ ಜೆಟ್ಟಿಗನ ನೆಚ್ಚಿನ ಬಿನ್ನಣಮೊಪ್ಪೆ ಕಾದಿದರ್: **ಚಂದ್ರಪ್ರಭ,** ೫. ೭೪)

**ಕತ್ತರಿವಾಣಿ –** [ಕರ್ತರಿ+ಪಾನೀಯ] [ಮುಟ್ಟಿದರೆ] ಕತ್ತರಿಸುವ ನೀರು (ದಶರಥಂ .. .. ಸಾಮಾನ್ಯನೆಂದು ಅನಿತುಂ ರಾಜಸಮಾಜಂ ಆಜಿಗೆ ಉಱದೆಯ್ತಂದತ್ತು ನೀರ್ಗೆತ್ತು ಬೆಳ್ತನದಿಂ ಕತ್ತರಿವಾಣಿಯಂ ಜಡಜನಂ ಕೈಗುತ್ತಲೆೞ್ತರ್ಪವೋಲ್: **ಪಂಪರಾ,** ೩. ೪೮)

**ಕತ್ತರಿವೆಸ –** ಕತ್ತರಿಯ ಕೆಲಸ, ಕತ್ತರಿಸುವುದು (ಸುಯ್ಯಾಣವೆಸದ ಕತ್ತರಿವೆಸದ ಮಣಿವೆಸದ ಮೇಲ್ಗಟ್ಟಿನೊಳಂ: **ಆಚವರ್ಧ,** ೭. ೩ ವ)

**ಕತ್ತರಿಸು –** ನೇರವಾಗಿ ಮಾಡು, ನಿಮಿರಿಸು (ಕತ್ತರಿಸಿ ಕಿವಿಗಳಂ ನಸುಗುತ್ತುಂ ಮೆಯ್ಯ ಖಂಡಮಂ ಘುರುಘುರೆನುತ್ತೊತ್ತರಿಸೆ ಘೋಣ ಪವನಂ ಉದಾತ್ತಂ ಮಸಗಿತ್ತು ವಾಜಿ ಪೆರ್ಮಾರಿಯವೋಲ್: **ಪಂಪರಾ,** ೪. ೧೦೮)

**ಕತ್ತಳಿಕೆ –** ಕಿರುಗತ್ತಿ, ಕಠಾರಿ (ಪೊಯ್ವ ಕತ್ತಳಿಕೆ ಕುತ್ತುವ ಕೊಂತಂ ಉರುಳ್ಚುವ ಒಡ್ಡುಗಲ್: **ಚಂದ್ರಪ್ರಭ,** ೫. ೧೦೫)

**ಕತ್ತಿ –** ಖಡ್ಗ (ಅನಿಷ್ಟಕ್ಕೆ: ಆತಂಗೆ ಕತ್ತಿಯಂ ಮಸೆದಂ: **ಶಬ್ದಮದ,** ೧೪೧, ಪ್ರ)

**ಕತ್ತಿಗೆ –** [ಕರ್ತ್ರಿಕಾ] ಕೈ ಮಚ್ಚು, ಕತ್ತಿ (ಕೃತಾಂತನಂತಾಕಾರಮಾಗಿ ತಟತಟಿಸಿ ಪೊಳೆವ ಕತ್ತಿಗೆಯಂ ಬೆರಸು ಪೊಱಮಟ್ಟು ಕೀರ್ತಿಗೆಯೆಂಬ ಉಗ್ರದೇವತೆ: **ಪಂಪಭಾ,** ೮. ೪೨ ವ)

**ಕತ್ತುರಿ –** ಕಸ್ತೂರಿ, ಒಂದು ಸುಗಂಧ ದ್ರವ್ಯ (ಕತ್ತುರಿಬಿಯಮಮಂ ಮೆಱೆದು ಕತ್ತುರಿಯೊಳ್ ಪೂಜ್ದು ಕತ್ತುರಿಮಿಗದಂತಿರ್ಪ ಕತ್ತುರಿಬೊಜಂಗರುಂ: **ಪಂಪಭಾ,** ೪. ೮೭ ವ)

**ಕತ್ತುರಿಬಿಯ –** ಕಸ್ತೂರಿಯ ವೆಚ್ಚ (ಚಿಕ್ಕ ಪೋರ್ಕುಳಿ ಬೊಜಂಗರುಂ ಕತ್ತುರಿಬಿಯಮಮಂ ಮೆಱೆದು ಕತ್ತುರಿಯೊಳ್ ಪೂಜ್ದು ಕತ್ತುರಿಮಿಗದಂತಿರ್ಪ ಕತ್ತುರಿಬೊಜಂಗರುಮಂ: **ಪಂಪಭಾ,** ೪. ೮೭ ವ)

**ಕತ್ತುರಿಬೊಜಂಗ –** ಕಸ್ತೂರಿ ಲೇಪಿಸಿಕೊಂಡ ವಿಟ (ಚಿಕ್ಕ ಪೋರ್ಕುಳಿ ಬೊಜಂಗರುಂ ಕತ್ತುರಿಬಿಯಮಮಂ ಮೆಱೆದು ಕತ್ತುರಿಯೊಳ್ ಪೂಜ್ದು ಕತ್ತುರಿಮಿಗದಂತಿರ್ಪ ಕತ್ತುರಿಬೊಜಂಗರುಮಂ: **ಪಂಪಭಾ,** ೪. ೮೭ ವ)

**ಕತ್ತುರಿಮಿಗ –** ಕಸ್ತೂರಿ ಮೃಗ (ಚಿಕ್ಕ ಪೋರ್ಕುಳಿ ಬೊಜಂಗರುಂ ಕತ್ತುರಿಬಿಯಮಮಂ ಮೆಱೆದು ಕತ್ತುರಿಯೊಳ್ ಪೂಜ್ದು ಕತ್ತುರಿಮಿಗದಂತಿರ್ಪ ಕತ್ತುರಿಬೊಜಂಗರುಮಂ: **ಪಂಪಭಾ,** ೪. ೮೭ ವ)

**ಕತ್ತುರಿವೆಕ್ಕು –** ಪುನುಗಿನ ಬೆಕ್ಕು (ಕತ್ತುರಿವೆಕ್ಕಂ ಸಲ್ಲಕೀಪಲ್ಲವಮಂ ಇಭಶಿಶುವಂ .. .. ಕೊರ್ವಿಸೆ ಸೊಗಯಿಪುದೀ ಕಾನನೋದ್ದೇಶಂ: **ಪುಷ್ಪದಂಪು,** ೫. ೬೯)

**ಕಥಕ –** ಕತೆ ಹೇಳುವವನು (ಸೂತ ನಟ ವಂದಿಮಾಗಧ ವೈತಾಳಿಕ ಕಥಕ ಪುಣ್ಯಪಾಠಕ ವಿಪ್ರ ಉದ್ಘೂತರವಂ ಎಸೆಯೆ: **ಪಂಪಭಾ,** ೧೨. ೧೦೬); ಒಂಟೆ (ಸೃಗಾಲ ಶಾರ್ದೂಲಕಾಕಂಗಳ್ ಕಥಕನ ಪೃಥುಶರೀರಮಂ ಸೀೞ್ದು ಸೀೞುಂಬುಳಾಡಿ ಕೊಂದುವು: **ಪಂಚತಂತ್ರ,** ೨೧೧)

**ಕಥಕಶ್ರೇಣಿ –** ಕತೆ ಹೇಳುವವರ ಗುಂಪು (ಬೀಣೆಯ ಕೊಟಲ ಬೆದಂಡೆಯ ಗಾಣರ ಬಟಿವಿಡಿದು ಸುಟಿದು ಕುಂದಿಂ ಕಥಕಶ್ರೇಣಿಯೊಡನೆಳಸಿ ಬಳಸುವ ನಾಣಿಲಿಗಳಂ ಈ ಬುಧಾಳಿಯೊಳ್ ಪುಗಿಸುವುದೇ: **ಸುಕುಮಾಚ,** ೨. ೨೪)

**ಕಥಾಂತರ –** ಮತ್ತೊಂದು ಕತೆ (ಕೃಷ್ಣಂ ಆಟಿಗುಟ್ಟಿದೊಡೆ ಏನೆಂದುಂ ಮಾಣಿಸಲಱಯದೆ ಅದೊಂದು ಕಥಾಂತರದೆ ಗೋಪಿ ಮಾಣಿಪ ಬಗೆಯಿಂ: **ಜಗನ್ನಾವಿ,** ೩. ೫೯)

**ಕಥಾನಾಯಕ –** ಕತೆಯ ಮುಖ್ಯ ಪಾತ್ರ (ವೈರಿನರೇಂದ್ರೋದ್ದಾಮ ದರ್ಪೋದ್ದಳನನೆ ಕಥಾನಾಯಕಂ ಮಾಡಿ ಸಂದ ಅರ್ಜುನನೊಳ್ ಪೋಲ್ವೀ ಕಥಾಭಿತ್ತಿಯಂ ಅನುನಯದಿಂ ಪೇೞಲೆಂದೆತ್ತಿಕೊಂಡೆಂ: **ಪಂಪಭಾ,** ೧. ೫೧)

**ಕಥಾಪತಿ –** ಕತೆಯ ನಾಯಕ (ಈ ಕೃತಿಗೆ ಕಥಾಪತಿ ಕೃಷ್ಣಂ: **ಜಗನ್ನಾವಿ,** ೧. ೨೧)

**ಕಥಾಭಿತ್ತಿ –** ಕತೆಯ ಹಿನ್ನೆಲೆ, ಕತೆಯ ವಸ್ತು (ವೈರಿನರೇಂದ್ರೋದ್ದಾಮ ದರ್ಪೋದ್ದಳನನೆ ಕಥಾನಾಯಕಂ ಮಾಡಿ ಸಂದ ಅರ್ಜುನನೊಳ್ ಪೋಲ್ವೀ ಕಥಾಭಿತ್ತಿಯಂ ಅನುನಯದಿಂ ಪೇೞಲೆಂದೆತ್ತಿಕೊಂಡೆಂ: **ಪಂಪಭಾ,** ೧. ೫೧)

**ಕಥಾರಸ –** ಕತೆಯ ಸ್ವಾರಸ್ಯ (ಪೆಂಪು ದೊರೆವೆತ್ತು ಕಥಾರಸಂ ಅತಿಶಯಮುಂ ಪೊಂಪುಟಿಯೋಳಿಯುಂ ಆಗೆ: **ಶಾಂತಿಪು,** ೬. ೫೯ ವ)

**ಕಥಾರಾಧನೆ –** ಆರಾಧನಾ ಕಥಾಕೋಶ (ಕೇಳ್ವುದು ಕೇಳದು ತಾನವಂ ತಿಳಿವುದು ಲೋಕದ ಕಥೆಗಳಂ ಕಥಾರಾಧನೆಯೊಳ್: **ಸಮಯಪ,** ೧೦. ೯೧)

**ಕಥಾವತಾರ –** ಕತೆಯ ಆರಂಭ (ಕೃತಿ ಕಾದಂಬರಿಯೆನೆ ಸತ್ಕೃತಿಕಥಿತ ಕಥಾವತಾರಮೇಂ ಕೇವಳಮೇ: **ಕಾದಂಸಂ,** ೧. ೫)

**ಕಥಾಶ್ರುತಿ –** ಕತೆ ಕೇಳುವುದು (ಅಗ್ಗಳದವಿವೇಕಿಗಳ್ .. .. ಕಥಾಶ್ರುತಿಗೇಕೆಯೊ ಚಿತ್ತವಿತ್ತಪರ್: **ಸಮಯಪ.** ೧೦. ೧೮೭)

**ಕಥಿತ –** ಹೇಳಲಾದ (ಬೇಱೊಂದು ಮೊನೆಯೊಳ್ ಕಾದುತ್ತಿರ್ದ ಅಶ್ವತ್ಥಾಮಂ ಕಂಡು ಮುಟ್ಟೆವರ್ಪನ್ನೆಗಂ ಶೋಣಾಶ್ವೋಪಲಕ್ಷಿತ ನಿಜಪಿತೃಸೂತಕೇತನ 'ಕಥಿತಮಾಗಿರ್ದ ರಥಮಂ ಉಪಲಕ್ಷಿಸಿ: **ಪಂಪಭಾ,** ೧೨. ೩೦ ವ)

**ಕಥಿಸು –** ನಿರೂಪಿಸು (ಗುಣಧರಾದಿಗಳ್ ಉಳ್ಳುದಂ ಉಳ್ಳ ಮಾಟ್ಕೆಯಿಂ ಕಥಿಸಿದರ್: **ಪುಷ್ಪದಂಪು,** ೧. ೪೩)

**ಕಥೆ –** ಕತೆ (ಮಹಾಪುರುಷರ್ಕಳ ಕಥೆಗಳಂ ಪೇೞ್ವಲ್ಲಿ: **ವಡ್ಡಾರಾ,** ಪು. ೧. ಸಾ. ೧೧)

**ಕಥೆವೇೞ್ –** ನಿರೂಪಣೆ ಮಾಡು (ನನ್ನಿಯಾದುದು ಸುತಂಗೆ ಕಥೆವೇೞ್ವರೆಂಬ ನಾಣ್ಣುಡಿ ಜಗದೊಳ್: **ಆದಿಪು,** ೮. ೧೪)

**ಕದಂಪು –** ಕೆನ್ನೆ, ಗಲ್ಲ (ಮೃಗೋದ್ಭವಪಂಕದೆ ಪತ್ರಭಂಗಮಂ ತೊಳಪ ಕದಂಪಿನೊಳ್ ಬರೆದುದಂ: **ಆದಿಪು,** ೪. ೧೨)

**ಕದಂಬ –** ಈಚಲ ಮರ (ಕಕುಭ ಅಶೋಕ ಕದಂಬ ಲುಂಗ ಲವಲೀ ಭೂರ್ಜ ಆರ್ಜುನ ಅನೋಕಹ ಪ್ರಕರಂ: **ಪಂಪಭಾ,** ೫. ೮೦); ಗುಂಪು, ಸಮೂಹ (ಅತಿಚತುರ ಕವಿಕದಂಬಂ

ಸ್ತುತಿಯಿಸೆ.. .. ಕೃತಿಪಂ ತಾಂ ಸುಖದಿನಿರ್ಕೆ: **ಕಾದಂಬ,** ೧೦. ೯೭)

**ಕದಂಬಕ** – ಗುಂಪು, ಸಮೂಹ (ಅತ್ಯಂತ ಸೌಂದರ ಶುದ್ಧಾಂತವಧೂಕದಂಬಕಮನೇಂ ಮೆಯ್ವೆರ್ಚಿಸಲ್ಕಾರ್ತುದೋ: **ಆದಿಪು,** ೧೧. ೪೨)

**ಕದಂಬದಂಬುಲ** – ಸುಗಂಧಭರಿತ ತಂಬುಲ (ನಿಡುಸುಯ್ದು ನಲ್ಲಳ ಮುಖಾಂಬುಜಸೌರಭದೊಳ್ ಪೊದಳ್ದು ಅದೇಂ ಮಗಮಗಿಸಿತ್ತೊ ಕತ್ತುರಿಯ ಕಪ್ಪುರದೊಂದು ಕದಂಬದಂಬುಲಂ: **ಪಂಪಭಾ,** ೪. ೧೦೭)

**ಕದಂಬವೆಳಗು** – ವಿವಿಧ ಬಣ್ಣಗಳ ಮಿಶ್ರ ಕಾಂತಿ (ಬಳ್ವಳ ಬಳೆದ ಕದಂಬವೆಳಗೆಂಬ ಧವಳಾರುಣನೀಲ ನೀರರುಹವನಕ್ಕಿದಿರೇಟ್ಟ್ವಿ ಲೋಚನಮರೀಚಿಗಳ್: **ಅನಂತಪು,** ೨. ೩೩ ವ)

**ಕದಕದಪು** – ನಡುಕ (ಬೇಗದಿಂ ಕದಕದಪಂ ತೊಡರ್ಚಿ ಎಳೆದೇರನಂ ಓಡಿಪೆನೆಂದು ಪೂಸರಂ: **ಕಬ್ಬಿಗಕಾ,** ೧೯೫)

**ಕದಕದಿಸು** – ನಡುಗು (ಕದಕದಿಸು–ಸಂಚಲತ್ವೇ: **ಶಬ್ದಮದ, ಧಾ,** ೭೬೫)

**ಕದಕ್ಕದಿಸು** – ಅಲುಗಾಡು (ತುಂಗಸ್ತನಂ ಕದಕ್ಕದಿಸೆ ಕಣ್ಮಲರ್ ಪೊಳೆಯೆ: **ಆದಿಪು,** ೧೨. ೧೩)

**ಕದಡು** – ಕಲಕು (ಕದಡಿದ ನೀರ್ಗಳನುಂಡು: **ವಡ್ಡಾರಾ,** ಪು. ೧೫೬, ಸಾ. ೨೪); ರಾಡಿ, ಬಗ್ಗಡ (ರಮಣೀಯ ರಮಣೀಜನಂ ಬೆರಸು ಪಂಚರತ್ನಂಗಳಿಂ ಕೆದಱಿಸಿ ಸಾಂದಿನ ಸೌಸವದ ಕುಂಕುಮದ ಕತ್ತುರಿಯ ಕದಡಂ ಕದಡಿ: **ಪಂಪಭಾ,** ೫. ೬೦ ವ)

**ಕದನಕ್ಷೇತ್ರ** – ಯುದ್ಧರಂಗ (ಕದನಕ್ಷೇತ್ರದೊಳಾಂತ ಶತ್ರು ಪಿಡಿಪಟ್ಟಂ ಕೂಡೆ ಕಣ್ಗೆಟ್ಟಂ ಓಡಿದಂ ಅಟ್ಟಾಡಿದಂ: **ಪುಷ್ಪದಂಪು,** ೩. ೧೮)

**ಕದನತ್ರಿಣೇತ್ರ** – ಯುದ್ಧದಲ್ಲಿ ರುದ್ರನಂತೆ ಪ್ರಚಂಡ (ತ್ರಿಣೇತ್ರನುಮಂ ಅಸುಂಗೊಳಿಸಿದ ಸಾಹಸದೊಳ್ ಕದನತ್ರಿಣೇತ್ರನುಂ: **ಪಂಪಭಾ,** ೧೪. ೩೭ ವ)

**ಕದನಪ್ರಾರಂಭಶೌಂಡ** – ಯುದ್ಧೋದ್ಯೋಗದಲ್ಲಿ ಆಸಕ್ತ (ಕದನಪ್ರಾರಂಭಶೌಂಡಂ ರಿಪುನೃಪಬಲದಾವಾನಲಂ ವೈರಿಭೂಭೃತ್ ಮದವತ್ ಮಾತಂಗಕುಂಭಸ್ಥಳ ದಳನಖರೋಗ್ರಾಸಿಪಂಚಾಸ್ಯಧೈರ್ಯಂ: **ಪಂಪಭಾ,** ೬. ೭೭)

**ಕದನಾನಕ** – ರಣಭೇರಿ (ದಿಗ್ಭಿತ್ತಿವಿಭೇದಿ ಪೆರ್ಚೆ ಕದನಾನಕ ರಾವಂ : **ಪಂಪಭಾ,** ೮. ೯೨)

**ಕದಪಂ ಕರ್ಚು** – ಕೆನ್ನೆಯನ್ನು ಕಚ್ಚು [ಮುದ್ದಿಸು] (ತೆಗೆದುತ್ಸಂಗದೊಳಿಟ್ಟು ಒಯ್ಯಗೆ ಮೊಗಮಂ ನೋಡಿ ಕರ್ಚಿ ಕದಪಂ ನುಡಿದಂ ಜಗದಧಿಪತಿ: **ಆದಿಪು,** ೮. ೫೭)

**ಕದಪು** – ಕೆನ್ನೆ (ಕೆನ್ನೆಯ ನರೆಯಂ ಕದಪಿನೊಳ್ ಉನ್ನುನ್ನಂ ನೆಗೆದ ತೆರೆಯನೊಡ್ಡಿದ ಜರೆಯಂ ಕನ್ನಡಿಯ ನೋಡಿ ತಱಿಸಲೆ ಕನ್ನಡಿಕುಂ ವೃದ್ಧ ನೋಡ ನಿನ್ನಯ ಮೊಗಮಂ: **ಅಜಿತಪು,** ೨. ೯೬)

**ಕದರ್ಥನೆ** – ಕಾಟ (ಎಮ್ಮ ನಣ್ಪಿಂ ಜನಿಯಿಸಿದೀ ಕದರ್ಥನೆಗೆ ಸೈರಿಪುದು ಇಲ್ಲಿಗೆ ಬರ್ಪುದು: **ಕಾದಂಸಂ,** ೫. ೮೦)

**ಕದರ್ಯ** – ಜಿಪುಣ (ಕುಡದೊಡಲೊಳಗಟ್ಟಾಡುವ ಕುಬುದ್ಧಿಯೋದಿನ ಕೇಡಂ ಕಾನರೆ ಕದರ್ಯರ್: **ಲೀಲಾವತಿ,** ೧. ೪೮); ದುಷ್ಟರು (ಆರ್ಯರ ಯಶಮಿದು ಖಳರ ಕದರ್ಯರ ದುರ್ಯಶಮಿದು ಎಂದು ತೋರ್ಪಲ್ಲಿಯೆ ತಾತ್ಪರ್ಯಂ ಎನಗೆ: **ಲೀಲಾವತಿ,** ೧. ೫೩)

**ಕದರ್ಥಿಸು** – ಪೀಡಿಸು (ಭೂತಲಪತಿಯಂ ಕದರ್ಥಿಸಿದರ್ ಅಂಕದ ಷಷ್ಟಿಸಹಸ್ರನಂದನರ್: **ಅಜಿತಪು,** ೧೦. ೧೦)

**ಕದಲಿಕೆ** – ಬಾವುಟ (ಬಿಟ್ಟುಳಿಯ ಕುಕ್ಕಂಬಂ ತೊಡಂಬೆಯ ಮೂಡಿಗೆಯ ಕದಲಿಕೆಯ ಕಾಂಡಪಟಗಳುಮಂ ಪಲವುಂ ತೆಱದ ಪಲವುಂ ಪೊಱೆಯಾಗಿ ಕಟ್ಟಿದ ಬಲೆಗಳುಮಂ: **ಪಂಪಭಾ,** ೫. ೪೭ ವ)

**ಕದಲೆಗದಿರ್** – ಪ್ರಖರ ಕಿರಣ (ಪೊದಱುಗಟ್ಟುವ ಕದಲೆಗದಿರಂ ಉರದಿರನುರವಣಿಸಿ ನೆತ್ತಿಯಿಂ ಪೊತ್ತು ನೆಗೆದುಚಂಚುವಿಂಚಲ್ಲೆವೊಯ್ದು: **ಅನಂತಪು,** ೭. ೮೦ ವ)

**ಕದಲೊಡೆ** – ತೆನೆಬಿಡು (ಕದಲೊಡೆದ ಬೆಳೆದ ಕಱಮೆಯ ಕದಿರ್ಗಂಪಿಂಗೆಱಗಿ ಪಱಮೆಗಳ್: **ಅನಂತಪು,** ೧. ೪೦)

**ಕದಳ** – ಬಾಳೆ ಗಿಡ (ಶೇಷಕಂಠ ಕದಳ ಕಠಿನಾಸ್ತಿ ನುಗ್ಗಿದುದೊ ಗೋತ್ರನಗಂ ಪಿಳಿಗಿತ್ತೊ .. .. ಎನಲ್ ವಿಘೂರ್ಣಿಸಿದುದು ಇರ್ಬಲದೊಳ್ ಸಮರಾನಕ ಸ್ವನಂ: **ಪಂಪರಾ,** ೧೩. ೩೫)

**ಕದಳಿ** – ಬಾಳೆ ಗಿಡ (ಮೂಡಿಗೆ ಕುಕ್ಕಂಬಂ ಸುಟಿಸಿ ಜೊಂಪಂ ಬೀಡುಬಿಡುವ ಇಂಬು ಕದಳಿ ತೆಂಗಿನ ತಾಣಂ ಜಾಣಿಂ ನೀರ್ದಾಣಮೆಂದು ಎಡೆಯಱಿದುಂ: **ಪಂಪಭಾ,** ೫. ೪೧)

**ಕದಳಿಕಾ** – ಕದಲಿಕೆ, ಪತಾಕೆ (ಜಿನೇಂದ್ರರುಂದ್ರಸಿದ್ಧ ಅಭ್ಯರ್ಚಿತಂಗಳುಂ ಕದಳಿಕಾ ಆತಪತ್ರ ಚಾಮರ ಕನಕಘಂಟಾಕಿಂಕಿಣೀಮನೋಹರಂಗಳುಂ: **ಆದಿಪು,** ೧೦. ೩೪ ವ)

**ಕದಳೀಗರ್ಭಶ್ಯಾಮ** – ಬಾಳೆಯ ಮೋತೆಯ ಒಳಭಾಗದಂತೆ ನಸುಗಪ್ಪು ಬಣ್ಣ (ಕದಳೀಗರ್ಭಶ್ಯಾಮಂ ಮೃದುಕುಟಿಲಶಿರೋರುಹಂ: **ಆದಿಪು,** ೧. ೨೯)

**ಕದಳೀಘಾತ** – [ಜೈನ] ಒಮ್ಮೆಲೇ ಬೀಳುವಂತೆ ಬಾಳೆಮರಕ್ಕೆ ಹೊಡೆದ ಏಟು, ಅಕಾಲಮರಣ, ಆಹಾರ ನೀರು ಬಿಡುವುದರಿಂದ ಆಗುವ ಆಯುಸ್ಸಿನ ಕಡಿತ (ಕದಳೀಘಾತಂ ಜೀವಕ್ಕೆ ದುರಿತದಿಂದಕ್ಕುಂ ಎಂಬುದರ್ಹನ್ಮತಂ ಅಂತದು ಮಾಣ್ದಿರೆ ಬೇರ್ವೆರಸಾದುದು ಜಿನನೀಘಾತಿಗಳ್ಗೆ ಕದಳೀಘಾತಂ: **ಶಾಂತಿಪು,** ೧೧. ೧೧೨)

**ಕದಳೀದಳ** – ಬಾಳೆಯ ಎಲೆ (ಕದಳೀದಳ ವ್ಯಜನ ಮಂದಮಾರುತಾಂದೋಳನದಿಂ ಎಂತಾನುಂ ಮೂರ್ಛೆಯಿಂದೆಟ್ಟಿಱಿಸಿ: **ಆದದಿಪು,** ೩. ೨೩ ವ)

**ಕದಳೀಪತ್ರ** – ಬಾಳೆಯ ಎಲೆ (ಅದಂ ಒಂದು ಕದಳೀಪತ್ರದೊಳ್ ಪುದಿದು ತನ್ನ ನಡಪಿದ ಗಿಳಿಯ ಕೈಯೊಳ್ ಓಪಳಲ್ಲಿಗೆ ಅಟ್ಟಿದೊಡೆ: **ಪಂಪಭಾ,** ೧. ೬೮ ವ)

**ಕದಳೀಷಂಡ** – ಬಾಳೆಯ ತೋಟ (ಎಳನೀರಿಂ ನಾಳಿಕೇರಂ ಬಳಯಿಸೆ ಕದಳೀಷಂಡಮಂಗೊಳದಿಂ ಪೂಗದ್ರುಮಂ ಬಲ್ಸಡಱ್ವಿಡಿಯೆ: **ಮಲ್ಲಿನಾಪು,** ೨. ೨೫)

**ಕದಿರ್** – ಕಿರಣ (ತೊಳಗುವ ಮುತ್ತಿನೋಲೆಗಳ ಬೆಳ್ವೆಳಗಿನ ಸುಲಿಪಲ್ಲ ಮಿಂಚಿನಿಂ ಪೊಳೆವಲರ್ಗಣ್ಣ ನುಣ್ ಕದಿರ್ಗಳಿಂ ತಿಸರಂಗಳ ನೀಳ್ದ ಡಾಳದಿಂ .. .. ಮಿಗೆ ಪೆರ್ಮೆವೆತ್ತು ಕಣ್ಗೊಳಿಸಿದಳ್: **ಕಬ್ಬಿಗಕಾ,** ೬೪); ತೆನೆ (ಪೂ ಕದಿರ್ ಮಿಡಿ ದೋರೆ ಪಕ್ವಫಲಸಂತತಿಯಿಂ ದೊರೆವೆತ್ತು ಮಾಮರಂ: **ಪುಣ್ಯಾಸ್ರ,** ೩. ೭೫); ನೂಲು ತೆಗೆಯುವ ಸಾಧನ (ಆ ಕದಿರ ಕಡ್ಡಿಯಂ ನೀರೊಳಿಕ್ಕಿ ಅರ್ದಿದಾಗಳ್: **ಪುಣ್ಯಾಸ್ರ,** ೩. ೩೧ ವ)

**ಕದಿರ್ಗಂಪು** – ತೆನೆಗಳ ನರುಗಂಪು (ಕದಲೊಡೆದ ಬೆಳೆದ ಕಱವೆಯ ಕದಿರ್ಗಂಪಿಂಗೆಱಗಿ ಪಱಿಮೆಗಳ್: **ಅನಂತಪು,** ೧. ೪೦)

**ಕದಿರ್ಜೊನ್ನ** – ಕಾಂತಿಯುಕ್ತ ಬೆಳುದಿಂಗಳು (ರಾಂತಕ್ಕೆ: ಅಲರ್ಜೊಂಪಂ, ಕದಿರ್ಜೊನ್ನಂ: **ಶಬ್ದಮದ,** ೫೩ ಪ್ರ)

**ಕದಿರ್ದೊಂಗಲ್** – ಕಿರಣಸಮೂಹ (ತಿಂಗಳ ತಣ್ಣನಪ್ಪ ಕದಿರ್ದೊಂಗಲೊಳ್ ಅಭ್ಯಸಿಸಿತ್ತೊ ಕಾಮಬಾಣಂಗಳ್: **ಚಂದ್ರಪ್ರಪು,** ೧. ೫೯)

**ಕದಿರ್ವರಿ** – ಕಾಂತಿ ಹರಡು (ಉರಿದು ಕದಿರ್ವರಿದು .. .. ಅಬಲಾಸ್ಫುರಿತಾಕ್ಷಿ ರುಚಿಗಳ್ .. .. ಸೊಗಯಿಸುಗುಂ: **ಲೀಲಾವತಿ,** ೧೨. ೫)

**ಕದುಪು** – ಗುಂಪು, ಹಿಂಡು (ಬನಕ್ಕಾಗಿ ನೆಗೆದು ಕದುಪಂ ಕೂಡಲ್ ಮೃಗರಾಜಂ ನಡೆವಂದದೆ: **ಚಂದ್ರಪ್ರಪು,** ೯. ೧೮)

**ಕದುಷ್ಣ** – ಉಗುರು ಬೆಚ್ಚಗಿರುವ ನಗೆಗಣ್ ಸೋರ್ವ ಕದುಷ್ಣವಾರಿಚಯದಿಂ ಬಿಂಬಾಧರಂ .. .. ನಾಡೆ ಬೆಡಂಗುಗೆಟ್ಟು: **ಪಂಪಭಾ,** ೪. ೬೮)

**ಕನಕ** – ಚಿನ್ನ (ಎನೆಯೆನೆ ರತ್ನರಶ್ಮಿಜಟಿಳಂ ಮಕುಟಂ ಮಣಿಕುಂಡಳಂ ಕನತ್ ಕನಕ ಪಿಶಂಗ ದೇಹರುಚಿ .. .. ಇಳಾಮರಂ ಅಂದು ಅಮರೇಂದ್ರರೂಪಮಂ: ಪಂಭಾ, ೮. ೭); ಉಮ್ಮತ್ತ, ದತ್ತೂರಿ ಗಿಡ (ಕುಂದ ಮುಚುಕುಂದ ಮಂದಾರ ಇಂದೀವರ ನಂದ್ಯಾವರ್ತ ತ್ರಿಸಂಧ್ಯಾ ಬಂಧೂಕ ಕದಂಬ ಕನಕ ಕರವೀರ ಕರ್ಣಿಕಾರ ಕುಮುದವನವಕುಳ ಕುರವಕ ಕಮಲ ತಿಲಕ ಚಂಪಕ ಪಾಟಲಿ ಪಾರಿಜಾತ ಜಾತಿ ಪುನ್ನಾಗ ಮಲ್ಲಿಕಾದಿ ಅನೇಕ ಸುರಭಿಕುಸುಮಂಗಳಂ: **ಪಂಚತಂತ್ರ,** ೧೯೦ ವ)

**ಕನಕಗಿರಿ** – ಚಿನ್ನದ ಬೆಟ್ಟ, ಮೇರು ಪರ್ವತ (ಇನ್ನೂಱು ಕನಕಗಿರಿಗಳಿಂದಂ: **ಆದಿಪು,** ೧. ೪೮ ವ)

**ಕನಕದ ಕಾಯ್** – ದತ್ತೂರಿ ಬೀಜ (ಕಳ್ಳಿಂ ಕನಕದ ಕಾಯಿಂ ಗುಳ್ಳದ ವಿಷದಿಂದಂ ಅಗ್ಗಳಂ ಮಿಥ್ಯಾತ್ವಂ: **ಸಮಯಪ,** ೪. ೧೫೩)

**ಕನಕಪೀಠ** – ಚಿನ್ನದ ಪೀಠ (ನಿನ್ನ ದಯೆಗೆಯ್ದ ವೀರವಟ್ಟಮೆಂಬುದು ಎನಗೆ ಎಣ್ಬೆರಲ ಪಟ್ಟಂ ಎಂಬುದುಂ ಬದ್ದವಣಂ ಬಾಜಿಸಿ ಕರ್ಣನಂ ಕನಕಪೀಠದೊಳ್ ಕುಳ್ಳಿರಿಸಿ: **ಪಂಪಭಾ,** ೧೨. ೫೧ ವ)

**ಕನಕಭೃಂಗಾರ** – ಚಿನ್ನದ ಕಳಶ (ತುಂಗಕನಕಭೃಂಗಾರವಿರಾಜಿ ರಾಜನ್ಮರಕತಮಯಶುಕವಿರಾಜಿ: **ಆದಿಪು,** ೪. ೩೦ ರಗಳೆ)

**ಕನಕಮಣಿಕಿಂಕಿಣಿ** – ಚಿನ್ನದ ಮಣಿಗಳ ಸಣ್ಣಗೆಜ್ಜೆ (ಕನಕಮಣಿಕಿಂಕಿಣೀಮೃದುನಿನದಂ ಕಟಿತಟದೊಳೆಸೆಯೆ: **ಆದಿಪು,** ೮. ೨)

**ಕನಕಯೋಗ** – ಚಿನ್ನದ ಕೆಲಸ ಮಾಡಿದ ಜೀನು (ಕನಕಯೋಗಾಳಂಕೃತಗಳಾಗಿ ಸೊಗಯಿಸುವ ಕರಿಯ ಪಿರಿಯ ಮೆಯ್ಯು: **ಆದಿಪು,** ೪. ೫೪ ವ)

**ಕನಕಶಾಳ** – ಚಿನ್ನದಿಂದ ಕೂಡಿದ ಕೋಟೆಯ ಗೋಡೆ (ಲವಣಜಲಧಿ ಬಳಸಿದಂತೆ ಬಳಸಿದಗಟ ನೀಳದಿಂದುದಗ್ರ ಕನಕಶಾಳದಿಂ: **ಪಂಪಭಾ,** ೧. ೫೮)

**ಕನಕಾಚಲ** – ಕನಕಗಿರಿ (ಗುರುಜನಂಗಳ್ಗೆ ಲಜ್ಜಿಸಿ ಮಾನಕನಕಾಚಲಂ ಶಿಶಿರೋಪಚಾರಂಗಳ್ಗೆ ಮೆಯ್ದೆರಲಾಱದೆ: **ಕಾದಂಬ,** ೮. ೫೭ ವ)

**ಕನಕಾದ್ರಿ** – ಕನಕಗಿರಿ (ನೆಗೆಟ್ದಮರನಗೇಂದ್ರನಾದಿಗಿಭೇಂದ್ರಂ ಪೊರ್ದಿದಲ್ಲಿ ಸುರತೂರ್ಯರವಂ ನೆಗೆಟ್ವೆನೆಗಂ ಕನಕಾದ್ರಿಗೆ ಖಗಾದ್ರಿ ಸಂತಸದೆ ಬಿರ್ದುವಂದಂತಿರ್ಕುಂ: **ಅಜಿತಪು,** ೪. ೨೬)

**ಕನಕಾವಳಿ** – [ಜೈನ] ಒಂದು ವರ್ಷದಲ್ಲಿ ಎಂಬತ್ತಮೂರು ಬಾರಿ ಉಪವಾಸವಿರುವ ವ್ರತ (ಜಿನದತ್ತೆಯರೆಂಬ ವಿರತಿಯರಂ ಪೊರ್ದಿ ದೀಕ್ಷೆಯಂ ತಳೆದು ಕನಕಾವಳಿ ನೋಂಪಿಯ ನೋಂತು: **ಕರ್ಣನೇಮಿ,** ೧೪. ೨೨ ವ)

**ಕನತ್** – ಹೊಳೆಯುವ (ಕನತ್ ಖಚಿತಮುಂ ಮೌಕ್ತಿಕಸ್ತಂಭಮುಮಪ್ಪ ಸರ್ವತೋಭದ್ರಂ ಎಂಬ ಸಿವಿಗೆಯನೇಜಿಸಿ: **ಪಂಪಭಾ,** ೩. ೪೮ ವ)

**ಕನರ್** – ಒಗರು ರುಚಿ (ಎಳೆದಳಿರಂ ಕರ್ದುಂಕಿ ಕನರ್ ಒಂದಿದ ತದ್ರಸಮೀಂಟಿದತ್ತು ಕೋಕಿಳಂ: **ರಾಜಶೇಖ,** ೧೦. ೨೯)

**ಕನರ್ಗಂಪು** – ಒಗರು ವಾಸನೆ (ಕನರ್ಗಂಪಂ ಮೊತ್ತುವೇ ಕೋರಕದ್ರವಮುಂ: **ಲೀಲಾವತಿ,** ೧೩. ೩೯)

**ಕನರ್ಗಾಯ್** – ಕಸಗಟ್ಟೆ ಕಾಯಿ (ನನೆ ಬಲ್ಲನೆ ಮೊಗ್ಗೆ ಅಲರ್ ಕನರ್ಗಾಯ್ ದೋರೆವಣ್ಣು ಪಣ್: **ಶಾಂತೀಶ್ವಪು,** ೫. ೧೦೦)

**ಕನರ್ಗೊನರ್** – ಎಳೆಯ ಚಿಗುರು (ಕನರ್ಗೊನರಿರ್ಕೆ ನುಣ್ದಳಿರ ಬಾಟ್ವನೆ ಕೆಂದಳಿರಿರ್ಪ ಬೀಡು ಬಲ್ಲನೆಯ ಪೊದಱ್: **ಕಬ್ಬಿಗಕಾ,** ೮೯)

**ಕನಲ್** – ಸಿಟ್ಟುಗೊಳ್ಳು, ಕೋಪಿಸಿಕೊ (ಎಂತು ಇದಿರಾಂತೆ ಅಂತೆ ಕಲಿಯಾಗು ಒಳಸೋರದಿರ್ ಎಂದು ಭೀಮಂ ಓರಂತೆ ಕನಲ್ದು ತಿಣ್ಣಂ ಇಸೆ: **ಪಂಪಭಾ,** ೧೦. ೯೮)

**ಕನಲವೋರಿ** – ಬಿರುಸು ಹೋರಿಗಳು (ಕವಿತರ್ಪ ನೆರವಿಯಂ ಕನಲವೋರಿಗಳ್ಕಂಡು ಬೆರ್ಚಿ ಕೆಂಗೋಲ್ಗೊಂಡೋಡುವುದಂ ಇದೇನೆಂದು ಕೊಡವಿ ಬೆಸಗೊಳೆ ನಾಗಶರ್ಮನ್ ಅದಂ ಅಱಿದು ಇಂತೆಂದಂ: **ಸುಕುಮಾಚ,** ೭. ೨)

**ಕನಲಿಸು** – ಕೆರಳಿಸು, ಸಿಟ್ಟಿಗೆಬ್ಬಿಸು ಭೀಮಸೇನನ ನುಡಿಗಳ್ ತನ್ನ ಮನಮಂ ಒನಲಿಸೆಯುಂ ಎರ್ದೆಯಂ ಕನಲಿಸೆಯುಂ: **ಪಂಪಭಾ,** ೬. ೭೩ ವ)

**ಕನವನಿಪ** – ಭಯಂಕರವಾದ (ಕನವನಿಪ ಕಾಳರಾತ್ರಿಯ ದನಿಯಂತೆ ಆ ನೃಪನ ಕಿವಿಗೆ ದುಸ್ಸಹಮಾಯ್ತು ಆ ವನಿತೆಯ ನುಡಿ: **ಪಂಪರಾ,** ೬. ೯೮)

**ಕನಲ್ಕೆ** – ಕೋಪ (ಮತ್ಕುಲದ ಕರ್ವಿನ ಬಿಲ್ಲಂ ಅನಂಗನಿಂದಗಲ್ಚಿಸಿದರ್ ಈ ಪುರಾಂಗನೆಯರ್ ಎಂಬ ಕನಲ್ಕೆಯಿಂ: **ಪುಷ್ಪದಂಪು,** ೨. ೪೯)

**ಕನಲ್ಗಿಡಿ** – ನಿಗಿನಿಗಿ ಕೆಂಡ (ಸೂಸುವ ಕನಲ್ಗಿಡಿ ಬೀಸುವ ಪಾಸಂ ಓಸರಿಯಿಂದಿಡುವಱೆಪೊಯ್ವ ಕತ್ತಳಿಕೆ: **ಚಂದ್ರಪ್ರಪು,** ೫. ೧೦೫)

**ಕನಸು** – ಸ್ವಪ್ನ (ಇರುಳ್ ಕಂಡ ಕನಸುಗಳಂ ಪಗಲ್ ನೆನೆವಂತೆ: **ಧರ್ಮಾಮೃ,** ೧. ೧೨೧ ವ); ಕಲ್ಪನೆ (ಮರುಳಕ್ಕ ಕನಸಿನ ತೊಱೆಯೊಳ್ ನೀರ್ಗುಡಿದು ತಣಿವನಱಿಸಿದರೊಳರೇ: **ಶಾಂತಿಪು,** ೪. ೯೮)

**ಕನಿ** – ಪ್ರಕಾಶಿಸು (ದನುಜೇಂದ್ರನ ಒಡ್ಡು ಕರ್ಗನೆ ಕನಿಯುತ್ತಿರೆ ನೋಡೆ ಕಂಡು ವಾನರಚಿಹ್ನರ್ ಮುನಿಸನುವಿಸೆ ಕಾದುವ ತಕ್ಕಿನೊಳ್ ಆಹವಭೂಮಿಗೆ ಎಕ್ಕೆಯಿಂ ನಡೆತಂದರ್: **ಪಂಪರಾ,** ೧೩. ೨೧)

**ಕನೀಯ** – ಕಿರಿಯ, ತಮ್ಮ (ಅಗ್ನಿಭೂತಿಯೆ ನಾನಗ್ರಜನೆಂ ಕನೀಯನೆ ಕಳಾಸಂಪನ್ನನೈ ವಾಯುಭೂತಿ: **ಸುಕುಮಾಚ,** ೫. ೨೪); ನೀಚ

**ಕನ್ನ** – ಗೋಡೆಯಲ್ಲಿ ಮಾಡುವ ರಂಧ್ರ (ಕನ್ನವನಿಕ್ಕುವೊಡೆ ಅವನೀಶೋನ್ನತ ನೆಲಗಟ್ಟು ವಜ್ರಮಯಮೇಱುವರಾರ್: **ಧರ್ಮಾಮೃ,** ೬. ೧೦); ರಂಧ್ರವಿಕ್ಕಿ ಮಾಡುವ ಕಳ್ಳತನ (ಕನ್ನದೊಳ್ ಸತ್ತ ಕಳ್ಳನ ತಾಯಂತೆ ಒಳಗೊಳಗೆ ಅೞುತೆ: **ನೇಮಿನಾಪು,** ೭. ೧೨ ವ)

**ಕನ್ನಗಳ್ಳ** – ಕನ್ನ ಹಾಕಿ ಕದಿಯುವವನು (ಎಂಬುದುಂ ಆ ಪಂಡಿತಂ ಕನ್ನಗಳ್ಳನಂತೆ ಬಳಪಮಂ ತೆಗೆದು ಕಬ್ಬಿಗನಂತೆ ಗೋಮೂತ್ರವೃತ್ತಾಳಂಕೃತನಾಗಿ: **ಸುಕುಮಾಚ,** ೩. ೬ ವ)

**ಕನ್ನಡ** – ಕನ್ನಡ ನುಡಿ (ಪರಮಾಚಾರ್ಯರವೋಲ್ ಸೈತಿರಲಱಿಯರ್ ಕನ್ನಡಕ್ಕೆ ನಾಡವರೋಜರ್: **ಕವಿರಾಮಾ,** ೧. ೪೨); ಕನ್ನಡ ನಾಡು (ನಾಡದಾ ಕನ್ನಡದೊಳ್ ಭಾವಿಸಿದ ಜನಪದಂ ವಸುಧಾವಳಯವಿಲೀನ ವಿಶದವಿಷಯವಿಶೇಷಂ: **ಕವಿರಾಮಾ,** ೧. ೩೬)

**ಕನ್ನಡಂಗಳ್** – ಕನ್ನಡದ ವಿವಿಧ ಪ್ರಾದೇಶಿಕ ಪ್ರಭೇದಗಳು (ದೋಸಮಿನಿತೆಂದು .. .. ಕನ್ನಡಂಗಳೊಳ್ ಎಂದುಂ ವಾಸುಗಿಯುಂ ಅಱಿಯಲಾರಥೆ ಬೇಸಱುಗುಂ ದೇಶಿ ಬೇಱವೇಱಪ್ಪುದಱಿಂ: **ಕವಿರಾಮಾ,** ೧. ೪೬)

**ಕನ್ನಡವಕ್ಕಿ** – ಗಿಳಿ (ಬನಗಳೊಳ್ ತಾಣಂದರಮಾಗಿರ್ಪ ಕೆಂಗಣ್ವಕ್ಕಿ ಅಲರ್ವಕ್ಕಿ ಕನ್ನಡವಕ್ಕಿ ಪೊಣರ್ವಕ್ಕಿ ಮೊದಲಾದ ದಟ್ಟಿಯ ಕೂರಾಳ್ಗಳುಂ: **ಕಬ್ಬಿಗಕಾ,** ೧೫೩ ವ)

**ಕನ್ನಡಿ** – ಪ್ರತಿಬಿಂಬ ಕಾಣಿಸುವ ಸಾಧನ (ಸುವರ್ಣಪೂರ್ಣ ಕಳಸಮುಂ ಕನ್ನಡಿಯುಂ ಪೂವುಂ ಅಕ್ಕಿಯುಂ: **ವಡ್ಡಾರಾ,** ಪು. ೭೮.ಸಾ ೭)

**ಕನ್ನಡಿಗ** – ಕನ್ನಡ ನಾಡಿನವನು (ವಿಕಸಿತಪುಷ್ಪದಂತರಳಿ ಕನ್ನಡಿಗರ್ ಕರೆವಂತೆ ಬನ್ನಿ: **ಪುಣ್ಯಾಸ್ರ:** ೧. ೯೩)

**ಕನ್ನಡಿಸು** – ಕನ್ನಡದಲ್ಲಿ ಹೇಳು (ಆಕೃತಿ ಮುನ್ನಂ ಚೆಲ್ವಿಂಗಾಕರಮೆನಿಸಿರ್ದು ಮತ್ತೆ ಕನ್ನಡಿಸಿತ್ತು ಎನ್ನೀ ಕವಿತೆಯಿಂ ಪ್ರಗಲ್ಭತೆಯಾ ಕಾದಂಬರಿಯ ಸೊಬಗದೇನಚ್ಚರಿಯೋ: ಕಾದಂಬ, ೧. ೬); ಪ್ರತಿಫಲಿಸು (ಮನೋವಿಕಾಸಮಂ ಕನ್ನಡಿಸಿತ್ತು ಸೀತೆಯ ಮುಖಾಂಬುರುಹಂ ದರಹಾಸ ಪೇಶಲಂ: **ಪಂಪರಾ,** ೧೧. ೮೭); ಹೋಲು (ಸಿರಿಗನ್ನಡಿ ಕನ್ನಡಿಪುದು ಇಂದುಶ್ರೀಯಂ: **ಆದಿಪು,** ೭. ೧೦)

**ಕನ್ನವಟ್ಟ** – ಮದ್ದಳೆಯ ಚರ್ಮವಿರುವ ಭಾಗ ಕದಳಿ ಕನ್ನವಟ್ಟಂ ತಾನೆಂಬೆಡೆಯೊಳ್ ಪ್ರಹರಣಂ ಇಂಪಂ ಪಡೆದಿರೆ ಸುರವಧು ಮೃದಂಗಮಂ ಬಾಜಿಸಿದಳ್: **ಚಂದ್ರಪ್ರಪು,** ೧೧. ೧೪೩)

**ಕನ್ನವಡ** – ಕನ್ನಡಿ ಗೋಡೆ (ಬಳಸಿದ ಪೊನ ಕೋಂಟೆ ಪುರಲಕ್ಷ್ಮಿಯ ಕೈಗೆಯಲಿರ್ದ ತಾಣದೊಳ್ ಬಳಸಿದ ಕನ್ನವಡದಂತಿರೆ: **ಆದಿಪು,** ೧. ೭೧)

**ಕನ್ನವುರ** – (ಕರ್ಣಪೂರ) ಕಿವಿಯ ಆಭರಣ (ಎಳೆಯಳ ಕನ್ನವುರದ ನವನಳಿನಮನಲೆವಂತೆ ಕರಿಕರಂ ಕರಮೆಸೆಗುಂ: **ಲೀಲಾವತಿ,** ೪. ೧೧೯)

**ಕನ್ನೆ** – ಕನ್ಯೆ, ಮದುವೆಯಾಗದ ಹುಡುಗಿ (ಮಂಗಳತೂರ್ಯನಾದಂ ಎಸೆಯುತ್ತಿರ್ಪನ್ನೆಗಂ ಚಕ್ರಿ ರಾಗಿಸಿ ಕೆಯ್ನೀರ್ ಎಱೆದಂ ಗುಣಾರ್ಣವ ಮಹೀಪಾಲಂಗಂ ಆ ಕನ್ನೆಯಂ: **ಪಂಪಭಾ,** ೫. ೨೫)

**ಕನ್ನೆಗೋಸಾಸ** – ಕನ್ಯಾಗೋಸಾಹಸ, ಕನ್ಯೆಯರ ಮೇಲೆ ಮತ್ತು ಗೋವುಗಳ ಮೇಲೆ ಮಾಡುವ ಸಾಹಸ (ಪರಹಿತವ್ಯಸನಿಗಳಲ್ಲದೆ ದುರ್ವ್ಯಸನಿಗಳಿಲ್ಲ ಗೋಸಾಸಮಲ್ಲದೆ ಕನ್ನೆಗೋಸಾಸಮಿಲ್ಲ: **ಅಜಿತಪು,** ೧. ೨೧ ವ)

**ಕನ್ನೆತನ** – ಕನ್ಯಾವಸ್ಥೆ (ಮುನ್ನೆ ತನ್ನ ಕನ್ನೆತನದಿಂದೆತ್ತಿ ಕೊಂಡಾಡಿದ ಮತಾಪಿತೃಪಕ್ಷದ ಜನನೀಜನಂಗಳ್ ನೋಡೆ: **ಶಾಂತಿಪು,** ೬. ೩೬ ವ)

**ಕನ್ನೆಮಾಡ** – ಕನ್ನಿಕೆಯರ ವಾಸಸ್ಥಾನ, ಅಂತಃಪುರ (ತನ್ನ ಚೆಂಬೊನ್ನ ಕನ್ನೆಮಾಡದ ಓವರಿಯೊಳಗೆ .. .. ಪವಡಿಸಿದ ನಿಶಾವಸಾನಸಮಯದೊಳ್: **ಆದಿಪು,** ३. ೨೧ ವ)

**ಕನ್ನೆವಾಡ** – ಕನ್ನೆವಾಡ (ನಾರದಂ ಗಗನವೀಧಿಯಿಂ ಮಿಥಿಲೆಗೆ ಬಂದು ಕನ್ನೆವಾಡದ ಬಾಗಿಲ್ವಾಡಮಂ ಪುಗುವಾಗಳ್: **ಪಂಪರಾ,** ೪. ೮೧ ವ)

**ಕನ್ನೆವೇಟ** – ಕನ್ಯೆಯ ಬೇಟ (ಎನ್ನ ಕಣ್ಗಳೊಳ್ ಸುೞಿದುವು ತಾಮೆ ಕನ್ನಡಿಸಿಪ್ಪುವು ಕನ್ನೆಯ ಕನ್ನೆವೇಟಮಂ: **ಪಂಪಭಾ,** ೪. ೬೧)

**ಕನ್ಯಕಿ** – ಕನ್ಯೆ (ಪ್ರೀತಿಂಕರಂ ಗೂಢಪತ್ರಮನಟ್ಟುವುದುಂ ಕನ್ಯಕಿ ರಾಗಿಸಿ ಪೆಱರಱಿವರಕ್ಕುಮೆಂದು ಪತ್ರಮಂ ಸೀಳ್ದು: **ಚಾವುಂಪು,** ಪು. ೪೮೯. ಸಾ ೭)

**ಕನ್ಯಕೆ** – ಕನ್ಯೆ (ಕನ್ಯಕೆ ವಜ್ರಬಾಹುಗೆ ಅನುರೂಪೆ ಗಡಂ: **ಪಂಪರಾ,** ೨. ೭)

**ಕನ್ಯಾಧ್ಯಕ್ಷ** – ಅಂತಃಪುರದ ಅಧಿಕಾರಿ (ಅದಂ ಕನ್ಯಾಧ್ಯಕ್ಷಂ ಅಱಿದು ಬಾಣಾಸುರಂಗೆ ಪೇೞೆ: **ಜಗನ್ನಾವಿ,** ೧೭. ೧೨೪ ವ)

**ಕನ್ಯಾಬ್ರತ** – ಕನ್ಯೆಯಾಗಿಯೇ ಉಳಿಯುವ ವ್ರತ (ಬಡನಂಟರ್ ಮದುವೆ ಮಾಡೆಯುಂ ಒಲ್ಲದೆ ಕನ್ಯಾಬ್ರತದೊಳ್ ಪತ್ತಿವೆಸಂಗೆಯ್ದು ಕಾಲಮಂ ಕಳೆವುತ್ತುಂ: **ಶಾಂತಿಪು,** ೪. ೬೬ ವ)

**ಕನ್ಯಾವ್ರತ** – ಕನ್ಯಾಬ್ರತ (ಕನ್ಯಾವ್ರತಂ ಒಡನೆೞದುದು ತದೀಯಗುರುಜನವಿನುತಂ: **ಶಾಂತಿಪು,** ೫. ೧೮)

**ಕಪಟ** – ಮೋಸ (ಕಪಟಂ ಕೂಟಂ ವ್ಯಾಜಂ ಅಪದೇಶಂ ಕೈತವಂ: **ಅಭಿಧಾವ,** ೨. ೨. ೬)

**ಕಪರ್ದ** – ಕವಡೆ (ಶರನಿಧಿಯಂತೆ ಕಪರ್ದ ಉದ್ಧರಣರ್ ಕಾರ್ಗಾಲದಂತಿರೆ ಆಕಾಶ ಆಡಂಬರರಜನಂತೆ: **ತ್ರಿಷಷ್ಟಿಪು,** ೧. ೫೭); ಜಡೆ (ಶಿವನ ಗುಣಂ ಪುರಾಂತಕನ ವಿಕ್ರಮಂ ಇಂದುಕಳಾಕಪರ್ದಂ ಉತ್ಸವಂ ಅಹೀರಾಜಭೂಷಣನ ಮೈಮೆ: **ರಾಜಶೇವಿ,** ೧. ೬೧)

**ಕಪರ್ದಿ** – ಶಿವ (ಕೆಂದಳಿರೊಂದು ಅಲಗಿನಿಂ ಕಪರ್ದಿಯೊಳ್ ಬೆರಸು ಬಟಿಕ್ಕೆ ನೀಂ ಎನುತೆ ನೋಡಿದಂ ಅಂಗಭವಂ ವಸಂತನಂ: **ಅನಂತಪು,** ೬. ೮೭)

**ಕಪಾಲ** – ತಲೆಬುರುಡೆ (ವಜ್ರಮುಷ್ಟಿಯ ಪೊಯ್ಗೊಳಂ ಬಾಳ ಕೋಳೊಳಮ್ ಉಚ್ಚಳಿಸಿದ ಕಪಾಲದ ಓಡುಗಳಂ ಗಂಗೆಗಟ್ಟುತ್ತುಂ: **ಪಂಪಭಾ,** ೧೧. ೨ ವ); ರಾಜನು ಕೈಗೊಳ್ಳಬಹುದಾದ ಹದಿನಾರು ಬಗೆಯ ಸಂಧಿಗಳಲ್ಲಿ ಒಂದು, ಸಮಸಂಧಿ (ಸಮಸಂಧಿ ಕಪಾಲಮೆಂಬುದಕ್ಕುಂ: **ಪಂಚತಂತ್ರ,** ३೦೭ ವ)

**ಕಪಾಲಪಾಣಿ** – ಶಿವ (ಶೂಲಿ ಕಪಾಲಪಾಣಿ ದಯೆಯಿಂ ಬಂದಿರ್ದಂ: **ಪಂಪಭಾ,** ೧೦. ೧೨೦)

**ಕಪಾಳ** – ಭಿಕ್ಷಾಪಾತ್ರೆ (ನೀಲಾಂಬುಜಶ್ಯಾಮನುಂ ಕನಕಪಿಂಗಳಜಟಾಬಂಧಕಳಾಪನುಂ ದಂಡಕಪಾಳಹಸ್ತನುಂ ಕೃಷ್ಣಮೃಗತ್ವಕ್‌ಪರಿಧಾನನುಂ ಆಗಿ: **ಪಂಪಭಾ,** ೧. ೬೯ ವ); ತಲೆಬುರುಡೆ (ಅನೇಕ ನೃಪ ಶಿರಃ ಕಪಾಳ ಶಕಳ ಜರ್ಜರಿತಮುಂ ಪರಸ್ಪರ ಸಮರ ರಭಸ ಸಮುತ್ಸಾರಿತಮುಂ: **ಪಂಪಭಾ,** ೧೩. ೫೧ ವ);

**ಕಪಿಂಜರ** – ಜಾತಕ ಅಥವಾ ತಿತ್ತಿರಿ ಅಥವಾ ಲಾವುಗೆ (ಆ ಮಹಾವೃಕ್ಷದ ಕೆಲದಲ್ಲಿರ್ದ ಮಲ್ಲಿಕಾವಲ್ಲಿರೆಯೆ ತನಗರಮನೆಯಾಗೆ ಚತುರಕನೆಂಬುದೊಂದು ಕಪಿಂಜರನಿರ್ಕುಂ: **ಪಂಚತಂತ್ರ,** ೩೨೨ ವ)

**ಕಪಿಂಜಳ** – ಚಾತಕ ಪಕ್ಷಿ (ಕ್ರಕರ ಕಪಿಂಜಳ ತಿತ್ತಿರಿ .. .. ಶಾರಿಕಾದಿಗಳ್ ವಿಹಂಗಜಾತಿಯಕ್ಕುಂ ಪಲವುಂ: **ಅಭಿಧಾವ,** ೧. ೯. ೨೧); ಒಬ್ಬ ಋಷಿ ಕುಮಾರನ ಹೆಸರು (ಆ ಕಂಚುಕಿಯೊಡವರುತಿರ್ದ ಪಕಪಿಂಜಳನಂ ಕಂಡು: **ಕಾದಂಸಂ,** ೪. ೪೬ ವ)

**ಕಪಿಕೇತು** – [ಜೈನ] ಬಾವುಟದಲ್ಲಿ ಕಪಿ ಲಾಂಛನವುಳ್ಳ ಸುಗ್ರೀವಾದಿಗಳು (ಕಪಿಕೇತುವುದಾತ್ತಂ ಬಂದಂ ನಡೆವ ವರ್ಷಧರಶೈಲಮೆಂಬಿನಂ ಸುಗ್ರೀವಂ: **ಪಂಪರಾ,** ೧೦. ೩)

**ಕಪಿತ್ಥ** – ಬೇಲದ ಹಣ್ಣು (ನೀಹಾರಶಕಲ ಪರಿಣತ ಕಪಿತ್ಥಫಳಪರಿಮಳಮಧುರದಧಿಯುಮಂ: **ಆದಿಪು,** ೧೧. ೨೬ ವ)

**ಕಪಿಧ್ವಜ** – ಅರ್ಜುನ (ಕಪಿಧ್ವಜಂ ವನದಂತಿಯಂತೆ ಧ್ವಾಂಕ್ಷಧ್ವಜಮನುಡಿದು ಕೆಡವಿನಮೆಚ್ಚಾಗ್ರರ್ಗ: **ಪಂಪಭಾ,** ೧೨. ೨೦೮ ವ)

**ಕಪಿಧ್ವಜಕುಲ** – ಕಪಿಧ್ವಜವನ್ನು ಹೊಂದಿದವರ ಕುಲ (ಕಿಷ್ಕಿಂಧ ನಗರಾಧಿನಾಥನುಂ ಕಪಿಧ್ವಜನುಂ .. .. ಸುಗ್ರೀವಂ ನಿಮ್ಮನೋಲಗಿಸಲ್ ಬಂದಂ: **ಪಂಪರಾ,** ೧೦. ೨ ವ)

**ಕಪಿಪೃತನಾ** – ಕಪಿಸೇನೆ (ನರಪತಿಯಂ ಕಪಿಪೃತನಾ ಪರಿವೃತನಂ ಜಲಧಿತಟದೊಳ್ ಅಣುವಂ ಕಂಡಂ: **ಕವಿರಾಮಾ,** ೨. ೮೯)

**ಕಪಿಶ** – ನಸುಗೆಂಪು (ಪರಮೇಶ್ವರಂ ಅತಿ ಲಲಿತ ಕಪಿಶ ಕಿಸಲಯಂಗಳಿಂ ವಿದ್ರುಮಿರ್ಪಂತಿರ್ದು: **ಅಜಿತಪು,** ೬. ೧೨೩ ವ)

**ಕಪೋತ** – ಪಾರಿವಾಳ (ಗೋಮೂತ್ರಚ್ಛವಿಯಂ ಮುದ್ಗಚ್ಛವಿಯಂ ಕಪೋತಚ್ಛವಿಯುಮಪ್ಪ ಘನೋದಧಿಯಂ ಘನಾನಿಳನುಂ: **ಅಜಿತಪು,** ೧೧. ೫ ವ); ಹಾಲುವಾಣದ ಮರ (ಪಟೀರದೇಳ್ಗೆಯ ಕಪೋತದ ಬೊಟ್ಟಿನ ಕೆಂಡದಬ್ಜಿನೀವರನ ಭಿಧಾವಮಂ ತಳೆದ ಭೂರುಹಂ: **ರಾಜಶೇವಿ,** ೫. ೫೭)

**ಕಪೋತಕ** – ಪಾರಿವಾಳದ ಮರಿ (ಆತನ ಚಾಗಂ ಪೆರ್ಮಟಿ ಜಾತಕಪೋತಕಮಂ ಅಲಸೆ ಕೊಳ್ವವೊಲ್ ಅರ್ಥಿವ್ರಾತಮಂ ಅಲಸಿದುದು ಪೆರ್ಮಾತಿನ ತೊಡವಿಂ ಮದಾಂಧಕರಿಯಿಂ ಹರಿಯಿಂ: **ಶಾಂತಿಪು,** ೯. ೧೫೪)

**ಕಪೋತಪಾಲಿಕೆ** – ಪಾರಿವಾಳದ ಗೂಡು (ಕಪೋತಪಾಲಿಕೆಗಳೊಳ್ ಪಂತಿಗೊಂಡ ಕೃತ್ರಿಮ ಖಗಾವಳಿಗಳೊಳಗೆ ದನಿಗೆಯ್ದುಡಗಲಾಜಿದಂತಿರ್ದ ಪಾರಾವತಂಗಳುಮಂ: **ಲೀಲಾವತಿ,** ೮. ೮೦ ವ)

**ಕಪೋತಲೇಶ್ಯೆ** – [ಜೈನ] ಕರ್ಮಸಂಬಂಧವಾದ ಬೂದುಬಣ್ಣ, ಆರು ಲೇಶ್ಯೆಗಳಲ್ಲಿ ಒಂದು (ಮಹಾಬೀಭತ್ಸು ಕಯತ್ರಿತೋತ್ಪತ್ತಿಸ್ಥನಂಗಳೊಳುತ್ಕೃಷ್ಟ ಕೃಷ ನೀಲ ಕಪೋತಲೇಶ್ಯಾನುಬಂಧ ರೌದ್ರಪರಿಣಾಮ ಪರಿಣತರುಂ: **ಸುಕುಮಾಚ,** ೧೧. ೪೧ ವ)

**ಕಪೋತಿಕಾ[ಕೆ]** – ನಾಟ್ಯದಲ್ಲಿ ಒಂದು ಹಸ್ತವಿನ್ಯಾಸ (ನಾಂದೀ ಪ್ರರೋಚನಾ ಪ್ರಸ್ತಾವನಾ ಇತಿವೃತ್ತ ಸಂಧಿ ಪ್ರವೇಶ ವಿಷ್ಕಂಭ ಕಪೋತಿಕಾ ವ್ಯಾಳಿಕಾದಿ ಲಕ್ಷಣೋಪೇತಂಗಳಪ್ಪ ನಾಟಕಂಗಳೊಳಂ: **ಪಂಪಭಾ,** ೨. ೩೪ ವ)

**ಕಪೋಲ** – ಕೆನ್ನೆ (ತಾಂಬೂಲಚರ್ವಣಭರಿತ ಕಪೋಲರುಂ: **ಜಗನ್ನಾವಿ,** ೪. ೮೦ ವ)

**ಕಪೋಲಪತ್ರ** – ಮಕರಿಕಾ ಪತ್ರ; ಕೆನ್ನೆಯ ಮೇಲೆ ಬರೆದುಕೊಳ್ಳುವ ರೇಖೆಗಳು (ಮದವದರಾತಿಕಾಂತೆಯರ ಲೋಚನವಾರಿಗಳಿಂ ಕಪೋಲಪತ್ರದ ಸಿರಿಯಂ ವಿಮರ್ದಿಸದೆ; **ಪಾರ್ಶ್ವನಾಪು,** ೨. ೧೭)

**ಕಪೋಳಪತ್ರ** – ಮಕರಿಕಾ ಪತ್ರ, ಕೆನ್ನೆಯ ಮೇಲೆ ಬರೆದುಕೊಳ್ಳುವ ರೇಖೆಗಳು (ಸಿದ್ಧಕಾಮಿನಿಯರ ಕಪೋಳಪತ್ರದಿಂ ಮದನಕೇಳೀಯೊಳುದಿರ್ದ ಕನಕಕದಳೀದಳಪತ್ರಭಂಗಂಗಳಿಂ: **ಮಲ್ಲಿನಾಪು,** ೧೦. ೭೧ ವ)

**ಕಪ್ಪ** – ರಾಜನಿಗೆ ಒಪ್ಪಿಬೇಕಾದ ಪೊಗದಿ (ಕುಬೇರನಿಂ ಕಪ್ಪಂಗೊಂಡು ಪೊನ್ನಂ ಜಕ್ಕರೆಕ್ಕೆಯಿಂ ಪೊತ್ತು ಬರೆ: **ಪಂಪಭಾ,** ೬. ೩೨ ವ)

**ಕಪ್ಪಂಗವಿ** – [ಕಪ್ಪು+ಕವಿ] ಕತ್ತಲೆ ಕವಿ (ಅನ್ನೆಗಂ ಕಪ್ಪಂಗವಿಯಾಗಿ ಕವಿವ ದ್ರುಪದವಿಳಯಾನಿಳನಂ ದ್ರೋಣಂ ಮಹಾದ್ರೋಣ ಪುಷ್ಕಾವರ್ತಕಂಗಳೆಂಬ ವಿಳಯಕಾಳನೀಳ ಜಳಧರವರ್ಷಂಗಳಿಂ ನಂದಿಸೆಯುಂ: **ಪಂಪಭಾ,** ೧೨. ೨೦ ವ)

**ಕಪ್ಪಂಗವಿಯಾಗು** – ಕತ್ತಲೆ ದಟ್ಟೈಸು (ನಾಟ್ಯರಸಕೂಪಾರಂ ಮೇರೆದಪ್ಪಿ ಕಪ್ಪಂಗವಿಯಾಗಿ ಕವಿಯೆ: **ಶಾಂತಿಪು,** ೧೦. ೬೨ ವ)

**ಕಪ್ಪಂಗೊಡು** – ಕಪ್ಪವನ್ನು ಕೊಡು, ಅಧೀನನಾಗಿರು (ತಂದೆಗೆಂತಪ್ಪೊಡಂ ಕಪ್ಪಂಗೊಡದ ಮಂಡಳಿಕರ್ಕರ ಮೇಗೆತ್ತಿ ಮೊಟ್ಟೊಯಿಸಿಜೆದು: **ವಡ್ಡಾರಾ,** ಪು. ೧೪೬, ಸಾ. ೪)

**ಕಪ್ಪಂಗೊಳ್** – ಕಪ್ಪ ಸ್ವೀಕರಿಸು (ಉತ್ತರ ದಿಕ್ಪಾಲಕನಪ್ಪ ಕುಬೇರನಂ ಅದಿರ್ಪಿ ಕಪ್ಪಂಗೊಂಡು ಬಂದು ಅಪ್ರತಿಮಪ್ರತಾಪನನಿಸಿದಂ: **ಜಗನ್ನಾವಿ,** ೧೫. ೫ ವ)

**ಕಪ್ಪಡ** – [ಹರಕಲು] ಬಟ್ಟೆ (ಮಗನ ವಾರ್ತೆಯಂ ಕೇಳ್ದು ತಾನುಂ ತನ್ನ ಪೆಂಡತಿಯಪ್ಪ ಅನುಮತಿಯಂ ಸರಸೆಯ ತಾಯಪ್ಪುರಿಯುಂ ಕಪ್ಪಡಮಂ ಉಟ್ಟು ಅತಿಭೂತಿಯನಱಸುತ್ತಂ ಬಂದು: **ಪಂಪರಾ,** ೬. ೩೫ ವ)

**ಕಪ್ಪಡಿ** – ಹರಕಲು ಬಟ್ಟೆ ತೊಟ್ಟವನು, ಜೋಗಿ, ತಿರುಕ (ಬಡ ಕಪ್ಪಡಿ ತನ್ನಿರ್ಪಾ ಗುಡಿಸಲ ಬಲ್ಲಿತ್ತು ಮಾಟ್ಪೆಂ ಎಲ್ಲಂದದಿಂ ಎಂದೊಡೆ ದೇವನಗಲದಿರ್ಪಂ: **ಸಮಯಪ,** ೯. ೬೧)

**ಕಪ್ಪಡಿಗ** – [ಕರ್ಪಟಿಕ] ಹರಕು ಬಟ್ಟೆ ಧರಿಸಿದವನು(ಬಾಜಿಸುವ ವಾದ್ಯಮಂ ತೊಟ್ಟನೆ ಕಂಡು ನಡೆ ನೋಡುತ್ತಿರ್ದು ನೋಡಿರೆ ಕಪ್ಪಡಿಗನಾಗಿಯುಂ: **ಹರಿವಂಶ,** ೫, ೧೩ ವ)

**ಕಪ್ಪು** – ಗುಂಡಿ, ಖೆಡ್ಡ (ಅವಳ ಬಟ್ಟಮೊಲೆಯಿಟ್ಟೆಡೆಯೊಳ್ ತೊಟ್ಟನೆ ಸಿಲ್ಕಿದ ಕಣ್ ಕಪ್ಪಿನೊಳ್ ಕೆಡೆದ ಮಱೆವುಲ್ಲೆಯಂತೆ ಮಿಡುಕಲಾರ್ತುವಿಲ್ಲ: **ಕಬ್ಬಿಗಕಾ,** ೬೩ ವ)

**ಕಪ್ಪುರ** – ಕರ್ಪೂರ (ನಿಡುಸುಯ್ದ ನಲ್ಲಳ ಮುಖಾಂಬುಜಸೌರಭದೊಳ್ ಪೊದಳ್ದು ಅದೇಂ

ಮಗಮಗಿಸಿತ್ತೊ ಕತ್ತುರಿಯ ಕಪ್ಪುರದೊಂದು ಕದಂಬದಂಬುಲಂ: **ಪಂಪಭಾ,** ೪. ೧೦೭)

**ಕಪ್ಪುದಂಬುಲ** – [ಪಚ್ಚ] ಕರ್ಪೂರ ಹಾಕಿದ ತಾಂಬೂಲ (ಕಪ್ಪುರದಂಬುಲಮಂ ಮಾಣದೆ ಮೆಲ್ವೊಡಂ ಅಳಿಪಿಲ್ಲದೆ ಪೂಜಿಸಿ ಇಂದ್ರವಂದ್ಯನ ಪದಮಂ; **ಧರ್ಮಾಮೃ,** ೬. ೧೦೦)

**ಕಪ್ಪುರದೀವ** – ಕರ್ಪೂರದೀಪ (ಬರ್ಪರ್ ಪೋಪರ್ ಆರ್ಗಂ ಮನಂಗೊಳಿಸಲ್ ಕಪ್ಪುರದೀಮವಿಟ್ಟು: **ಶಾಂತಿಪು,** ೮. ೭೫)

**ಕಪ್ಪುರವಚ್ಚ** – ಕರ್ಪೂರದ ತಂಪು (ಬೀಸುವ ಪುಷ್ಪವೀಜನವಮರ್ಚುವ ಕಪ್ಪುರದಚ್ಚವಾಗಳುಂ ಪೂಸುವ ಚಂದನಂ ಬಿಸುಪನಾಜಿಸಲರ್ತವು ಸತ್ಯಭಾಮೆಯಾ: **ಜಗನ್ನಾವಿ,** ೧೧. ೨೦)

**ಕಪ್ಪುರವಳುಕು** – ಕರ್ಪೂರದ ಹರಳು (ಪೊಳೆವಲರಮರ್ದಿನ ಕಪ್ಪುರವಳುಕಿನ ಕತ್ತುರಿಯ ಕೊಟಿತ ದೂರ್ವಾಭರಣಂ: **ಆದಿಪು,** ೧೧. ೪೩)

**ಕಪ್ಪೆ** – ಮಂಡೂಕ (ಪಾವಿಲ್ಲದೆಡೆಯೊಳ್ ಕಪ್ಪೆಗಳ್ ತಮ್ಮ ಗಜಱಿ ಗಜಱಾಗಿರ್ಪುವು: **ಧರ್ಮಾಮೃ,** ೧. ೧೩೩ ವ)

**ಕಫ** – ಶ್ಲೇಷ್ಮ, ದೇಹದ ಮೂರು ಧಾತುಗಳಲ್ಲಿ ಒಂದು (ವಾಯು ಸಮೀರಂ ಪಿತ್ತಮಾಯು ಕಫಂ ಶ್ಲೇಷ್ಮಂ ಎಂದೆನಿಕ್ಕುಂ ತತ್ತಯ್ಯಾಯತ್ತಂ ಬಹಿರಾತ್ಮಂ ಕಾಯಂ ಪ್ರತ್ಯುಪ್ತಸಪ್ತಧಾತುನಿಬದ್ಧಂ: **ಅಭಿಧಾವ,** ೧. ೧೨. ೨೬);: ದಮ್ಮು ರೋಗ (ಕಟುಕತ್ರಯದಿಂದಲ್ಲದೆ ಮಧುರಪ್ರಯೋಗದಿಂ ಕಫಮನಾವನುಂ ಉಪಶಮಿಯಿಸಿದಂ: **ಪಾರ್ಶ್ವನಾಪು,** ೨. ೪೨)

**ಕಬಂಧ** – ಅಟ್ಟೆ, ತಲೆಯಿಲ್ಲದ ದೇಹ (ಸಂಗ್ರಾಮರಂಗದೊಳ್ ಅರಾತಿನಾಯಕರ ಕಬಂಧಪಾತ್ರಂಗಳಂ ಆಡಿಸುವುದಂ ಉದಾಹರಿಸುವಂತಿರ್ದಂ: **ಪಂಪಭಾ,** ೮. ೫೫ ವ); ನೀರು (ಪರಕಬಂಧ ಸಂಸಕ್ತ ಸರಕ್ತ ಶಿಳೀಮುಖಮಿಳಿತಮಶಾಗಿಯುಂ ಅಪ್ಪಟಿತಪ್ರಭವಮುಂ: **ರಾಜಶೇವಿ,** ೮. ೧೧೮ ವ)

**ಕಬರಿಕಾಬಂಧ** – ಕಟ್ಟಿದ ಮುಡಿ (ಮೃಗಭೂ ಖುದ್ಧ ವಿಳಾಸಿನೀ ಕಬರಿಕಾಬಂಧಗಳಂ ಪೊತ್ತು ಮಲ್ಲಿಗೆಯೊಳ್ ಭಾವಿಸಿ ಧೂಪದೊಳ್ ಪೊರೆದು ತತ್ಕಾಂತಾ ರತಿಸ್ವೇದಬಿಂದುಗಳೊಳ್ ನಾಂದು ಕುರುಳ್ಗಳೊಳ್ ಸುಟಿದು ಮುಂದೊಂದಿರ್ದ ಸೌಭಾಗ್ಯಘಂಟೆಗಳೊಂದಿ ಇಂಚರದೊಳ್ ಪಳಂಚಿ ಸುಟಿದತ್ತು ಅಂದೊಂದು ಮಂದಾನಿಳಂ: **ಪಂಪಭಾ,** ೪. ೮೦)

**ಕಬರೀ** – ತುರುಬು, ಹೆರಳು (ಕಬರೀಭಾರಾಲಸೆ ತೊಳಪ ಬೆಳಂತಿಗೆಯೆನಿಸಿದಚ್ಚವೆಳ್‌ದಿಂಗಳೊಳಿರ್ದಬಲೆಯ ಸನ್ನಿಧಿಯೊಳ್: **ಸುಕುಮಾಚ,** ೧೦. ೨೪)

**ಕಬರೀಭರ** – ಭಾರವಾದ ಮುಡಿ (ಪೊದಲ್ದ ಕಬರೀಭರಂ ಪರೆದು ಪರ್ವೆ ತುಂಗಸ್ತನಂ ಕದಕ್ಕದಿಸೆ: **ಆದಿಪು,** ೧೨. ೧೩)

**ಕಬರೀಭಾರೆ** – ಭಾರವಾದ ತುರುಬುಳ್ಳವಳು (ಮತ್ತೊರ್ವಳ್ ಕಸ್ತೂರಿಕಾಕದಂಬಚುಂಬಿತಕಬರೀಭಾರೆ: **ಆದಿಪು,** ೧೧. ೧೨೬ ವ)

**ಕಬರೀವಿಸ್ತಾರ** – ಕೇಶರಾಶಿ (ಭ್ರೂಲಾಸ್ಯಮಂ ನಿರ್ಜದಪಾಂಗದ ಬೆಳ್ದಿಂಗಳಂ ಎಡ್ಡಮಪ್ಪ ಕಬರೀವಿಸ್ತಾರಮಂ ತೋಱಿದಳ್: **ಆದಿಪು,** ೧೧. ೧೭)

**ಕಬಳ** – ತುತ್ತು (ತತ್ಕಳಮಕಣಿಶ ಕಬಳ ಸಮುತ್ಕ ಶುಕಪ್ರಕರಮೆಸೆಯೆ: **ಶಾಂತಿಪು,** ೧. ೬೦)

**ಕಬಳಂಗೊಳ್** – ತುತ್ತು ನುಂಗು, ತಿನ್ನು (ಮೃದು ಪಲ್ಲವಂಗಳಂ ಕಬಳಂಗೊಳುತ್ತುಂ: **ವಡ್ಡಾರಾ,** ಪು, ೩೬, ಸಾ. ೨೦)

**ಕಬ್ಬ** – ಕಾವ್ಯ (ಮೃದುಪಾದಮಾದ ವಾಕ್ಶ್ರೀಸುಭಗಂ ಕಳಾಕಳಿತಮೆಂಬ ನೆಗೞ್ತೆಯನಾಳ್ದ ಕಬ್ಬಮಂ ಕೂಸುಮಂ ಈವುದು ಈವುದರಿಕೇಸರಿಗಲ್ಲದೆ ಅವಸ್ತುಗೀವುದೇ: **ಪಂಪಭಾ,** ೧ ೯)

**ಕಬ್ಬಳಿ** – ಒಂದು ಬಗೆಯ ಬಳ್ಳಿ (ಸುಗಂಧಿ ಕಬ್ಬಳಿ ನಱುವಲ್ ಕುರುಟಿಗೆ ಪಾಗಲ್ ಗೆಳಸು ಈಶ್ವರಿ ಅಮರ್ದಿನವಳ್ಳಿ ವಿಪಿನದೊಳ್ ಪಿರಿದೆಸೆಗುಂ: **ತ್ರಿಷಷ್ಟಿಪು,** ೨೭. ೧೯)

**ಕಬ್ಬಿಗ** – ಕವಿ, ಕಾವ್ಯರಚಕ (ಸೊಗಯಿಸುವ ಕಬ್ಬಮಂ ಕಬ್ಬಿಗರಲ್ಲದೆ ಮೆಚ್ಚರ್: **ಕಬ್ಬಿಗಕಾ,** ೮)

**ಕಬ್ಬಿಗಗಳ್ಳ** – ಕೃತಿಚೌರ್ಯ ಮಾಡುವವನು (ಕಬ್ಬಿಗರಿಕೇಮ ಕಬ್ಬಿಗಗಳ್ಳರೆಂದು ಕೂಸಾಡಿಸಬಾರದು ಈ ರಾಜ್ಯದೊಳೀ ಕವಿಚಕ್ರವರ್ತಿಯಾ: **ಶಾಂತಿಪು,** ೧೨. ೭೭)

**ಕಬ್ಬಿಗವಂದಿ** – [ಕಬ್ಬಿಗ+ಮಂದಿ] ಕವಿಜನ (ರಂಜಿಸುವ ಎರ್ದೆಗೊಳ್ಪದ ಈಗಡಿನ ಕಬ್ಬಿಗವಂದಿಗಳೋಂದವಿಂದಿಗಳ್: **ಶಾಂತಿಪು,** ೧೨. ೭೬)

**ಕಬ್ಬಿಲ** – ಬೇಡರವನು (ತನ್ನ ಮುಕ್ಕುಳಿಸಿದ ತೋಯದಿಂ ಮಿಸಿಸಿ ಪತ್ರೆಯನೊಟ್ಟುತುಮಿರ್ದ ಕಬ್ಬಿಲಂಗೆಳಸ ಸ್ವಯಂಭು: **ಸಮಯಪ,** ೧೦. ೭೯)

**ಕಮಂಡಲು** – ಯತಿಯ ನೀರಿನ ಪಾತ್ರೆ (ಮಹಾಋಷಿಯ ತಳಿದ ಕನಕ ಕಮಂಡಲುವಿನ ತೀರ್ಥೋದಕಂಗಳಿಂದ ಅಯ್ವರುಂ ಪವಿತ್ರೀಕೃತ ಮಸ್ತಕರಾಗಿರ್ದು: **ಪಂಪಭಾ,** ೬. ೧೧ ವ)

**ಕಮಠ** – ಆಮೆ (ಪಡೆದುವು ಎತ್ತಾನುಂ ದಿಶಾದಂತಿ ದಿಕ್ಕರಿಣೀ ಪೇಚಕ ಚುಂಬನೈಕ ಸುಖಮಂ ಶೇಷೋರಗಂ ಭೋಗಿನೀ ಪರಿರಂಭೋತ್ಸವಮಂ ಪುರಾನ ಕಮಠಂ ನಿದ್ರಾಂಗನಾ ಸಂಗಮಂ: **ಪಂಪರಾ,** ೬. ೮೪); ಕೂರ್ಮಾವತಾರ (ಕಮಠನುಂ ತೂಗಿದಂ ಹರ್ಷದಿಂದಂ: **ಜಗನ್ನಾವಿ,** ೩. ೪)

**ಕಮಠಾಧಿಪ** – ಆದಿಕೂರ್ಮ, ವಿಷ್ಣುವಿನ ಕೂರ್ಮಾವತಾರ (ಕಿಡಿವಿಡೆ ಕರ್ಪರಂ ಸುಗಿದು ಮೆಯ್ದೆಗೆದಂ ಕಮಠಾಧಿಪಂ: **ಪಂಪರಾ,** ೬. ೮೩)

**ಕಮನ** – ಚೆಲುವಾದ (ಕಮನೋದ್ಬುದ್ಧತೆವೆತ್ತು ನಿತ್ಯಮೆಸೆವ ಐರಾದೇವಿಯ ಆಸ್ಯಾರವಿಂದಮಂ ಆ ಪೋಲ್ತಪೆಂ: **ಶಾಂತೀಶ್ವಪು,** ೧೩. ೧೮೧)

**ಕಮನೀಯ** – ಮನೋಹರ (ಇದು ಮದನಕಂದಳಂ .. .. ಸಂದಯಮೇನೆನೆ ಸುದತಿಯ ಕಮನೀಯ ಕಂಬುಕಂಧರಮೆಸೆಗುಂ: **ಮಲ್ಲಿನಾಪು,** ೩. ೫೮)

**ಕಮನೀಯ ಮಾಧವ** – ಸೌಂದರ್ಯದ ಅಧಿದೇವತೆ (ಕಮನೀಯ ಮಾಧವನೇ ಕೂರ್ಪಿಂದೋವು: **ಉದ್ಭಟಕಾ,** ೭. ೬೩)

**ಕಮಲಕುಲೋದ್ಭವ** – ಕಮಲದಲ್ಲಿ ಹುಟ್ಟಿದವನು, ಬ್ರಹ್ಮ (ಕಮಲಕುಲೋದ್ಭವ ಮಿಗೆ ವಿಷ್ಣುಮೂರ್ತಿ ರುದ್ರಾವತಾರಂ ಇಱಿವಬೆಡಂಗಂ: **ಗದಾಯು,** ೧. ೧೪)

**ಕಮಲಜಾಂಡ** – ಬ್ರಹ್ಮಾಂಡ (ಕುಪಿತ ಮರುತ್ಸುತರವಕೆ ಅಳ್ಕಿ ಪಯಶ್ಚರನಿಕರಸಂಭ್ರಮೋಲ್ಲಹರಿಕೆ ಭಾವಿಪೊಡೆ ಪಾಱುವಂತಾಯ್ತು ಕಮಲಜಾಂಡಂಬರಂ: **ಗದಾಯು,** ೭. ೨೦)

**ಕಮಲಾ[ಲೆ]** – ಲಕ್ಷ್ಮೀ (ಕಮಲೆಯಂ ಇನ್ನೆಗಂ ಕುರುಮಹೀಪತಿಯೊಳ್ ನೆಲಸಿರ್ದಂ: **ಗದಾಯು,** ೯. ೪)

**ಕಮಲಾಕರ** – ಕೊಳ, ಸರೋವರ (ಯಮಿವೃಷಭ ನಿಮ್ಮ ಬೆಸಸಿದ ಕಮಲಾಕರದೊಳ್ ಸರೋಜಕುಟ್ಮಲದೊಳ್ ಸಂಕ್ರಮಿಸಿ

ವಿರಾಜಿಸಿ ಬೆಳಗುತ್ತುಮಿರ್ದುದು ನೋಡಿ ಕಂಡೆಂ ಆನುಂಗುರಮಂ: **ಸುಕುಮಾಚ,** ೩. ೨೪)

**ಕಮಲಾಕ್ಷ –** ವಿಷ್ಣು (ಗೋಪಿ ಬಂದು .. .. ತತ್ ಕಮಲಾಕ್ಷನನೆತ್ತಿಕೊಂಡು: **ಜಗನ್ನಾವಿ,** ೩. ೩೧)

**ಕಮಲಾಭಿರಾಮ –** ತಾವರೆಯಂತೆ ಸಂತೋಷ ತರುವ ಸೊಬಗ (ಉದಿತೋದಿತನಂ ದಿಗಿಭಗಂಳೆಂಟುಂ ಒಳ್ಪೊಡರಿಸಿ ಮಜ್ಜನಂಬುಗಿಸೆ ಕಂಡುದಱೆಂ ಕಮಲಾಭಿರಾಮನಂ: **ಪಂಪಭಾ,** ೧. ೧೪೧)

**ಕಮಲೋತ್ಸವಕಾರಿ –** [ಕಮಲ] ತಾವರೆಗೆ ಹಬ್ಬವನ್ನುಂಟುಮಾಡುವವನು, ಸೂರ್ಯ, [ಕಮಲೆ] ಲಕ್ಷ್ಮಿಗೆ ಹಬ್ಬವುಂಟು ಮಾಡುವವನು, ವಿಷ್ಣು (ಆ ಘನಸಮಯ .. .. ವಿಧೃತಮದನಜನಕತ್ವಮಾಗಿಯುಂ ಕಮಲೋತ್ಸವಕಾರಿಯಲ್ತು: **ಚಂದ್ರಪ್ರಭ,** ೪. ೪೨ ವ)

**ಕಮಲೋದಯ –** ವಿಷ್ಣುವಿನ ಹೊಕ್ಕುಳ ಕಮಲದಲ್ಲಿ ಜನಿಸಿದ, ಬ್ರಹ್ಮ (ಕಮಲೋದಯಂ ಅಖಿಲಮಹೀರಮಣಂ ಉಮಾಪ್ರಿಯಂ ಎನಿಪ್ಪ ಗುಣದುನ್ನತಿಯಿಂ: **ಗದಾಯು,** ೧. ೧೪)

**ಕಮಲೋದ್ಭವ –** ಬ್ರಹ್ಮ (ಕಮಲೋದ್ಭವನ ಅಮಳಿನ ಹೃತ್ಕಮಲದೊಳ್ ಒಗೆದರ್ ಸುರೇಂದ್ರಧಾರಕರ್ ಆ ವಾಗಮಳರ್ ನೆಗೞ್ದಿರ್ದರ್ ಪುಲಹ ಮರೀಚಿ ಅತ್ರಿ ಅಂಗಿರಸ್ ಪುಳಸ್ತ್ಯ ಕ್ರತುಗಳ್: **ಪಂಪಭಾ,** ೧. ೬೦)

**ಕಮಳಕಾಮುಕ –** ಕಮಲಗಳಿಗೆ ಪ್ರಿಯನಾದವನು, ಸೂರ್ಯ (ಕಮಳಕಾಮುಕನಂ ಕಂಡ ಕಮಳಿನಿಯಂತೆ ಮೊಗಮಲರ್ದಲರಂ ಕಂಡ ಅಳಿಯಂತೆ ಬಳಿಸಾರ್ದು: **ರಾಜಶೇವಿ,** ೧೧. ೧೪೦ ವ)

**ಕಮಳಗರ್ಭ –** ಬ್ರಹ್ಮ (ಬಹುಕಳಾಕಮಳಗರ್ಭನಂ ಮೆಚ್ಚಿಸುವುದೆನಗೆ ವಿಷಯಮಲ್ತು ಎಂದು ಮನಮನಲ್ಲಾಡುತ್ತುಂ: **ಮಲ್ಲಿನಾಪು,** ೫. ೨೮ ವ)

**ಕಮಳಾಪ್ತ –** ಸೂರ್ಯ (ಕರಿಯಿಂ ಭದ್ರಯುತಂ ಸರೋಜದೆ ಗುಣಾಧಾರಂ ವೃಷಾಧೀಶನಿಂ ಹರಭಕ್ತಂ ಕಮಳಾಪ್ತನಿಂ ಪ್ರಬಳತೇಜೋಯುಕ್ತಂ: **ರಾಜಶೇವಿ,** ೪. ೨೯)

**ಕಮಳಾವಾಸ –** ತಾವರೆಯ ಕೊಳ (ಒಪ್ಪಿದುರ್ದದ್ವಿಳಾಸಂ ವಿಳಸಿತಕಮಳಾವಾಸ: **ಆದಿಪು,** ೧೧. ೪೬)

**ಕಮಳೆ –** ಲಕ್ಷ್ಮಿ (ಕಮಳೆಯಂ ಅಶ್ವತ್ಥಾಮಂ ಮುಂದಿಟ್ಟು ಕುರುಕುಟುಂಬ ಘಟಚೇಟಿಕೆಯಂ ತರ್ಪಂತೆ ತಂದು .. .. ಕೌರವೇಶ್ವರನಂ ಎಯ್ದೆ ಪೋಗಿ: **ಪಂಪಭಾ,** ೧೩. ೧೦೨ ವ)

**ಕಮಳೈಕಬಾಂಧವ –** ಸೂರ್ಯ (ಪೊಲಸುನಾಱುವ ಮೆಯ್ಯನೆ ಕರ್ಚಲೆಂದು ಚೆಚ್ಚರಂ ಅಪರಾಂಬುರಾಶಿಗೆ ಇೞಿವಂತೆ ಇೞಿದಂ ಕಮಳೈಕಬಾಂಧವಂ: **ಪಂಪಭಾ,** ೧೧. ೫೧)

**ಕಮ್ಮಂಗಣೆ –** ಕಮ್ಮನೆಯ ಬಾಣ, ಹೂವಿನ ಬಾಣ (ಕಮ್ಮಂಗಣೆಯಿಂದೆಚ್ಚಪಂ ಇಮ್ಮಾವಿನ ಪೊದಱೊಳಿರ್ದು ವಿರಹಿವ್ರಜಮಂ: **ಶಬ್ದಮದ,** ೧೮೭ ಪ್ರ ೨)

**ಕಮ್ಮಂಗಣೆಯ –** ಹೂಬಾಣವುಳ್ಳವನು, ಮನ್ಮಥ (ಕಮ್ಮಂಗಣೆಯನೆಂದು ಕಾಮಂ: **ಶಬ್ದಮದ,** ಪ್ರಸಾ, ೪೭)

**ಕಮ್ಮಂಗಟಿವೆ –** ಸುವಾಸನೆಯ ಅಕ್ಕಿ (ಭ್ರಮರಂಗಳ್ ಪಾಱಿ ಕಮ್ಮಂಗಟಿವೆಯ ಮಡಿಯೊಳ್ ಗಾಡಿವೆತ್ತಾಡುತಿರ್ಕುಂ: **ಧರ್ಮಮಧು,** ೨. ೩೦)

**ಕಮ್ಮಂಗೋಲ –** ಕಮ್ಮಂಗಣೆಯ (ಪರಿವಡೆದ ಪೊಱವಾಱೆಂಬ ತಿಳಿಗೊಳಂ ಕಮ್ಮಂಗೋಲನೆಂಬ ಜಕ್ಕವಕ್ಕಿಯಂ ಓಲಾಡಿಸೆಯುಂ: **ಕಬ್ಬಿಗಕಾ,** ೯೭ ವ)

**ಕಮ್ಮಕ –** ಬಾಣ (ಕಮ್ಮಗಟಿವೆಗಳ್ ಅನಂಗನ ಕಮ್ಮಕದಂತೆಸೆದವು: **ಲೀಲಾವತಿ,** ೫. ೫೧)

**ಕಮ್ಮಗಟಿವೆ –** [ಕಮ್ಮ+ಕಟಿವೆ] ಕಮ್ಮಗಡಲೆ ಅಕ್ಕಿ, ಪರಿಮಳ ಸೂಸುವ ಅಕ್ಕಿ (ಕಮ್ಮಗಟಿವೆಗಳ್ ಅನಂಗನ ಕಮ್ಮಕದಂತೆಸೆದವು: **ಲೀಲಾವತಿ,** ೫. ೫೧)

**ಕಮ್ಮಟ –** ಕುಲುಮೆ (ಮದನನ ಬಾಣಾವಳಿಯಂ ಕಾಸಲ್ ಚೈತ್ರೋಜ್ವಳ ಕಾರುಕನಿಟ್ಟ ಕಮ್ಮಟಂಬೊಲದೆಸೆಗುಂ: **ರಾಜಶೇವಿ,** ೨. ೫೬)

**ಕಮ್ಮಡು –** ಕಪ್ಪಗೆ ಕಾಣುವ ಮಡು (ನರನಯನಾಳಿ ಮತ್ಸ್ಯತತಿಯಾಳಿಪ ಕಮ್ಮಡುವೋ ನಭಸ್ತಮಾಲ ರುಚಿರಪಲ್ಲವಾವಲಿಯೋ: **ರಾಜಶೇವಿ,** ೧೧. ೨೧)

**ಕಮ್ಮನೆ –** ಸುಗಂಧವುಳ್ಳ (ಕಮ್ಮನಪ್ಪ ತುಪ್ಪದ ಕೊಡದೊಳ್ ಸಮಂತು ಮಡಗಿಟ್ಟೊಡೆ: **ಪಂಪಭಾ,** ೧. ೧೩೧)

**ಕಮ್ಮಯಿಸು –** ಕಮ್ಮೈಸು, ಶೋಭೆಯುಂಟು ಮಾಡು (ರಂಜಿಸುವ ಎರ್ದೆಗಪಳ್ಳದ ಈಗಡಿನ ಕಬ್ಬಿಗವಂದಿಗಳೊಂದವಿಂದಿಗಳ್: ಶಾಂತಿಪು, ೧೨. ೭೬)

**ಕಮ್ಮರ –** ಕಮರಿಕೆ ಎಂಬ ಹಣ್ಣು (ಬಾಳೆಯ ಮಾವಿನ ಕಮ್ಮರದ ಈಳೆಯ ತನಿವಣ್ಗಳಿಂದಂ ಅರ್ಚಿಸಿದಂ ಭೂಪಾಳಂ ನಿರ್ಭರ ಭಕ್ತಿಯ ಜಾಳಮೆನೆ ಮೆಯ್ಯೊಳೊಗೆದ ರೋಮಾಂಚಂಗಳ್: **ಪಂಪರಾ,** ೧೨. ೬)

**ಕಮ್ಮರಿ –** ಪ್ರಪಾತ, ಕೊಳ್ಳ (ಧುರದೊಳ್ ಕಮ್ಮರಿಯೊಳ್ ಮದೋರ್ವಿರುದೊಳ್ ಸಪ್ತಾರ್ಚಿಯೊಳ್ ನೀರ್ಗಳೊಳ್ ಭರದಿಂ ದೇಹಮನಿಕ್ಕಿ: **ಧರ್ಮಾಮೃ,** ೫. ೧೫೩)

**ಕಮ್ಮರಿಯೊವಜ –** ಕೆಲಸ ಮಾಡದವನು (ಕಮ್ಮರಿಯೊವಜಂ ಬಿಲ್ಲೊವಜಂ ನೆಣಬುದಂ ಮಾಡುವೆನೇ: **ಪಂಪಭಾ,** ೧೨. ೩); ನೋಡಿ, **ಕಮ್ಮಱಿಯೊವಜ**

**ಕಮ್ಮರಿಯೋಜ –** ಕಮ್ಮರಿಯೊವಜ (ಒಡಲ್ ಅಧ್ರುವಂ ಅಶುಚಿ ಇದಂ ಬಿಡುವುದು ಧರ್ಮಮನೆ ಪಿಡಿವುದು ಆ ತೆಱದಿಂ ನಡೆಯದೆ ಮಱೆದೆನಾಂತಿರ್ದೊಡೆ ಕಮ್ಮರಿಯೋಜನೆಂಬ ನುಡಿಗೆಡೆಯಪ್ಪೆಂ: **ಚಂದ್ರಪ್ರಭ,** ೧೦. ೨೪)

**ಕಮ್ಮರಿವಾಯ್ –** ಕಮರಿಯಲ್ಲಿ ಬೀಳು (ಪಿರಿದುಂ ಕಂಸನ ಭೀತಿಯಿಂದೆ ವಸುದೇವಂ ಮುಂದುಗೆಟ್ಟಡಟಲ್ಲಿ ಕಮ್ಮರಿವಾಯ್ದಂತಿರೆ ಪೊಕ್ಕಡಂಗೆ: **ಜಗನ್ನಾವಿ,** ೩. ೧೦)

**ಕಮ್ಮಱ –** [ಕರ್ಮಕಾರ] ಕಮ್ಮಾರ (ವಿಚಿತ್ರ ಬೆಸುಗೆಗಳಂ ತತ್ ಕ್ಷಣದೆ ಗಣಿಯಿಸದೆ ಮಾಟ್ಪ ಏರಣಿಗರ ಕಮ್ಮಱರ ಸಾಲ್ಗಳ್ ಅಭಿರಾಜಿಸುಗುಂ: **ಕುಸುಮಾಕಾ,** ೨. ೧೦೮)

**ಕಮ್ಮಱಿತಿ –** ಕಮ್ಮಾರ ಹೆಂಗಸು (ಸ್ವರಲೋಪಕ್ಕೆ: ದೇಸಿಗಿತಿ, ಕಮ್ಮಱಿತಿ, ನಾವಿದಿತಿ, ಹಾದರಗಿತಿ: **ಶಬ್ದಮದ,** ೨೨೦ ಪ್ರ)

**ಕಮ್ಮಱಿಯೊವಜ –** ಕಮ್ಮರಿಯೋಜ (ಬವರದೊಳೇಂ ಬಲ್ಲಂ ಕರಂ ಒವಜುಗೆಯಲ್ ಪೆಱರ್ಗೆ ಕರಮೆ ತನಗೆ ಅಱಿಯಂ ಅದೆಂತುವೊ ನುಡಿ ತಪ್ಪದು ಕಮ್ಮಱಿಯೊವಜಂ ಬಿಲ್ಲೊವಜಂ ಎಂಬುದು ಮಾಡುವೆನೇ: **ಪಂಪಭಾ,** ೧೨. ೩) ಈ ಪ್ರಯೋಗಗಳಲ್ಲಿರುವ **'ಱ'** ಪ್ರಯೋಗ ತಪ್ಪೆಂದೂ, ಈ ಶಬ್ದವು **'**ಕರ್ಮಾರಿ=ಕರ್ಮಕ್ಕೆ ಶತ್ರುವಾದವನು, ಕೆಲಸ ಮಾಡದವನು**'**

ಎಂಬ ಅರ್ಥವುಳ್ಳುದೆಂದೂ ಡಿಎಲ್ಎನ್ ಹೇಳಿಕೆ [ದೀಪಿಕೆ; ಪು. ೪೩೬]

**ಕಮ್ಮಱಿಯೋಜ** – ಕಮ್ಮರಿಯೊವಜ (ಅಂತುಟು ಪೇೞ್ದು ಕೆಮ್ಮಗಿರೆ ಗಮ್ಮನೆ ಕಮ್ಮಱಿಯೋಜನಾಗನೇ: **ಆದಿಪು,** ೨. ೬೧)

**ಕಮ್ಮಾಯಿಲ** – ಕೆಲಸಗಾರ (ಚೈತ್ರಧ್ವಜಮನೆ ನಿಱಿಸಲ್ಕೆಂದು ಬಂದಿರ್ದ ಕಮ್ಮಾಯಿಲನಂ ಪೋಲ್ತಿರ್ದುದು ಆ ರಾಜನ ವಿಜಯಗಜಂ: **ಪಾರ್ಶ್ವನಾಪು,** ೬. ೧೨೯)

**ಕಮ್ಮಿತು** – ಸುಗಂಧಭರಿತವಾದ (ಕೀರ್ತಿವರ್ಮಂ ನಿರುತಂ ಪೊನ್ ಕಮ್ಮಿತಾದುದುಎನಿಸಿದನಿಳೆಯೊಳ್: **ಸಮಯಪ,** ೧. ೪೮)

**ಕಮ್ಮಿತಾಗು** – ಸುಗಂಧಭರಿತವಾಗು (ಧರಣಿಪತಿ ಕೀರ್ತಿದೇವಂ ನಿರುತಂ ಪೊನ್ ಕಮ್ಮಿತಾದುದೆನಿಸಿದನಿಳೆಯೊಳ್: **ಸಮಯಪ,** ೧. ೪೭)

**ಕಮ್ಮಿಸು** – ಗಮಗಮಿಸು (ಕಮ್ಮಿಪ್ಪ ಸುಭದ್ರೆ ಮಾಮಿಡಿ ಕರಂಜಿಕೆ ಅಂಬಟೆ ನಿಂಬೆ ನೆಲ್ಲಿಗಾಯ್ .. .. ಆದಿಯಾದ ಉಪ್ಪಿನಕಾಯ್ಗಳಿಂ: **ಲೀಲಾವತಿ,** ೫. ೭೧)

**ಕಮ್ಮು** – ಕಮ್ಮಿಸು (ಕಮ್ಮ–ಗಂಧಶ್ವಾಸೇ: **ಶಬ್ದಮದ, ಧಾ** ೫೦೦)

**ಕಮ್ಮುಗಿಲು** – ಕಪ್ಪು ಆಕಾಶ (ತಾರೆಗಳ ಬೆಳಗಿನಿಂ ವಿಸ್ತಾರಿಪ ಕಮ್ಮುಗಿಲ ಸಿರಿಯಂ ಅನುಕರಿಸಿರ್ಪಾ ಭೂರಮಣನ ನಖರುಚಿ: **ಕುಸುಮಾಕಾ,** ೧೫. ೧೩೯)

**ಕಮ್ಮೆ** – ಒಂದು ನಾಡು (ಆ ಧರಣೀಪ್ರಿಯಾ ಕಟಾಕ್ಷಾಧರ ವಿಭ್ರಮ ಭ್ರಮಣಂ ಅಗ್ಗಳಂ ಅಗ್ಗದ ಕಮ್ಮೆನಾಡು: **ಶಾಂತಿಪು,** ೧. ೪೩); ಒಂದು ವಂಶ (ಜನಕಂ ಕಮ್ಮೆಕುಲಪ್ರದೀಪಂ: **ಪಂಚತಂತ್ರ,** ೪೭)

**ಕಮ್ಮೆಣ್ಣೆ** – ಸುವಾಸಿತ ಎಣ್ಣೆ (ಕಮ್ಮೆಣ್ಣೆಯಿಂ ಮರ್ದನಂ ಮಾಡಿಸಿ ಪನ್ನೀರಿಂ ಮಜ್ಜನಂಬುಗಿಸಿ: **ಧರ್ಮಾಪ,** ೨. ೫೨ ವ)

**ಕಮ್ಮೆಲರ್** – ಸುಗಂಧಭರಿತ ಗಾಳಿ (ಕಮ್ಮೆಲರುಣ್ಮೆ ಮುಷ್ಪವೀಜನತತಿಯಿಂದೆ ಬೀಸುವ: **ಕುಸುಮಾಕಾ,** ೯. ೧೦೧)

**ಕಮ್ಮೈಸು** – ಶೋಭೆಗೊಳಿಸು (ಕವಿಮಾರ್ಗದೊಳ್ ಒಖ್ಖಾಣಿಪ ಠವಣಿಪ ಕಮ್ಮೈಸುವ ಎಡೆಯೊಳ್ ವಖ್ಖಾಣಿಸಲುಂ ಠವಣಿಸಲುಂ ಕಮ್ಮೈಸಲುಂ ಇವನಂತಾರ್ ಬಲ್ಲರ್ ಎನಿಸಿದಂ ಕವಿರತ್ನಂ: **ಅಜಿತಪು,** ೧. ೮೨)

**ಕಮ್ರ** – ಪ್ರಿಯವಾದ (ವಿನಮ್ರಂ ಕಮ್ರ ಕಲ್ಯಾಣಮಂ ಭರದಿಂದಾದ್ಯಮನಿಂತು ಬಿತ್ತಿಸಿದಂ ಸ್ಯಾದ್ವಾದ ವಿದ್ಯಾಪ್ರಿಯಂ: **ಆಚವರ್ಧ,** ೧೩. ೭೦)

**ಕಯ್ಕೊಳ್** – ಸ್ವೀಕರಿಸು (ಉಪಪತ್ತಿಯುಕ್ತಂ ಇದನಿಂ ಕಯ್ಕೊಳ್ ನಿನ್ನ ತಂದೆಯೆಂದುದನೆನೆ ಭೂಮಿಪನೆಂದಂ ನಿಮ್ಮಯ ಪೂರ್ವಪಕ್ಷಮೆಮಗಾದುದೇ ವಲಂ ಸಿದ್ಧಾಂತಂ: **ಗದಾಯು,** ೪. ೮)

**ಕಯ್ಗಣ್ಮು** – ಆವರಿಸು (ನಿಜಸ್ಕಂಧಾವಾರಮಂ ಕರಡು ಆ ಗಂಧರ್ವಕುಮಾರಂ ಮಗುೞ್ಚಿ ಕಟಕಜನಮಾನಂದಮುಂ ಅತಿಕೌತುಕಮುಂ ಕಯ್ಗಣ್ಮೆ: **ಕಾದಂಸಂ,** ೫. ೭೪ ವ)

**ಕಯ್ಗಯ್** – ಅಲಂಕರಿಸು (ಜನನೀಜನಕರಿಂ ಕೃತ ಅನುಜ್ಞೆಯಾಗಿ ಕಾದಂಬರಿ ಕಯ್ಗಯ್ದು ಕೆಲಂಬರ್ ಆಪ್ತ ಪರಿಚಾರಿಕೆಯರ್ವೆರಸು .. .. ವಂದು: **ಕಾದಂಸಂ,** ೭. ೨೬ ವ)

**ಕಯ್ಗಟಿ** – ಕೈಮೀರು, ಅತಿಕ್ರಮಿಸು (ಕಯ್ಗಟಿ–ಅತಿಕ್ರಮಣೇ: **ಶಬ್ದಮದ, ಧಾ** ೯೧೯)

**ಕಯ್ಗೂಡು** – ಒಗ್ಗೂಡು, ಸೇರು (ಮಂದರಕ್ಷಾಧರದೊಳ್ ಕಯ್ಗೂಡಿ ಗೋತ್ರಾದ್ರಿಗಳೆ ಘಟಾರೂಪದಿಂ ತಾಗೆಯುಂ: **ಆದಿಪು,** ನರಸಿಂ. ೧೪. ೯೧)

**ಕಯ್ಗೆಮಾಡು** – ಸ್ವಾಧೀನಪಡಿಸಿಕೊ (ಶ್ರೀವಧುವಂ ನಿಜಭುಜಶೌರ್ಯಾವಷ್ಟಂಭದೊಳೆ ಕಯ್ಗೆಮಾಡಲ್ ಜಯಲಕ್ಷ್ಮೀವಲ್ಲಭನಿರ್ದಂ ಪೃಥ್ವೀವಲ್ಲಭಂ ಉದಿತಕೀರ್ತಿ ಸಾಹಸಭೀಮಂ: **ಗದಾಯು,** ೬. ೧); ಸೋಲಿಸು (ಹಲಾಯುಧ ಕೃಪ ಅಶ್ವತ್ಥಾಮರುಂ ನಾಗಕೇತನನೊಳ್ ನಾಳೆಯೆ ಕೂಡಿ ಬರ್ಪರ್ ಅವರಿನ್ನುಂ ಬಾರದನ್ನಂ ಸುಯೋಧನನಂ ಮುನ್ನಮೆ ಕಯ್ಗೆಮಾಪ್ಟುದು ಬಟೆಕ್ಕಾರ್ಗಂ ಬರ್ಕುಮೇ: **ಗದಾಯು,** ೬. ೩೯)

**ಕಯ್ಗೆಯ್** – ಅಲಂಕರಿಸು (ಎಂದು ಬಗೆಗೆ ವಂದ ಪೂಗಳೊಳ್ ಪೂದುಡುಗೆಯ ಮಾಡಿ ವಸಂತಕಾಂತೆಯರಂತೆ ನೆಱೆಯೆ ಕಯ್ಗೆಯ್ದಾಗಳ್: **ಆದಿಪು,** ೧೧. ೧೨೮ ವ)

**ಕಯ್ತು** – ಕಹಿಯಾಗಿರುವುದು (ಮಧು ಸೀಧು ಕಟು ಸೀಧು ಪೋ ಮಳಿತ ಕಳ್ಗಳ್ತುಂ ಕರಂ ಕಯ್ತುಬರ್ಪುದು: **ಪಂಪಭಾ,** ೪. ೮೮, **'ಮಧು ಸೀಧು'** ಡಿಎಲ್ಎನ್ ಒಪ್ಪಿದ ಪಾಠ)

**ಕಯ್ದು** – ಸಾಧನ (ಕರ್ಣಭೂಷಾವಳಿ ಭೂಷಾವಳಿಯಾಗದೆ ಸೆಳೆದೊಡೆ ಸಾವಲ್ಲಿಗೆ ಕಯ್ದುವಾಯ್ತು: **ಯಶೋಧಚ,** ೨. ೬೯)

**ಕಯ್ಪಿಡಿ** – ಕನ್ನಡಿ (ಮನಸಿಜನಂಬು ಮನ್ಮಥನ ಕಯ್ಪಿಡಿ ಕಾಮನ ಕೈದು ಕಂತುರಾಜನ ಕರವಾಳ್: **ಸುಕುಮಾಚ,** ೫. ೫. ೫೪)

**ಕಯ್ಪೆ** – ಕಹಿ (ಕಯ್ಪೆಯುಣ್ಬರಂ ರಸಮೆ ಜಾರಿಕುಂ ಕೆಮ್ಮನಿರಿಂ: **ಶಾಂತಿಪು,** ೬. ೭೭)

**ಕಯ್ಪೆಸರಂ** – ಕಠಿನೋಕ್ತಿ (ಏಱನೆ ಸೂಱೆಗೊಂಡು ನುಡಿವೀ ನುಡಿಯಲ್ಲದೆ ಮತ್ತಂ ಆಸನಂದೋಱುವ ಬಲ್ಪುದೋಱುವ ಎರ್ದೆದೋಱುವ ಕಯ್ಪೆಸರಂಗಳ್ ಎಮ್ಮಂ ಉಂತೆ ಏಱವು: **ಪಂಪಭಾ,** ೮. ೨೦)

**ಕಯ್ಪೆಸೊರೆ** – ಕಹಿ ಸೋರೆ (ಕೀರ್ತಿಪ್ರಸರದ ಕುಡಿ ಕಯ್ಪೆಸೊರೆಯ ಕುಡಿವೊಲಕಕುಂ: **ಯಶೋಧಚ,** ೨. ೫೫)

**ಕಯ್ವೊಯ್** – ಪ್ರತಿಜ್ಞೆಮಾಡು, ಚಪ್ಪಾಳೆ ತಟ್ಟು (ಕಯ್ವೊಯ್– ಪ್ರತಿಜ್ಞಾಯಾಂ ಹಸ್ತತಾಡನೇ ಚ: **ಶಬ್ದಮದ, ಧಾ** ೫೨೩)

**ಕಯ್ಮಱ** – ಬೆರಗಾಗು (ಕಯ್ಮಱ–ವಿಸ್ಮಯೇ: **ಶಬ್ದಮದ, ಧಾ** ೮೫೧)

**ಕಯ್ಮಿಗು** – ಹೆಚ್ಚಾಗು (ನೀಂ ಇಂತು ಅಱೆದೊಡಂ ಸೌಧರ್ಮಿಕೆ ಮಿಕ್ಕು ಬರ್ಕುಮೆಂಬಂತೆ ನಿಮಗತಿಸ್ನೇಹಮುಂ ವ್ಯಾಮೋಹಮುಂ ಕಯ್ಮಿಕ್ಕು ಬಂದುದು: **ಸುಕುಮಾಚ,** ೫. ೨೧ ವ)

**ಕಯ್ಯಿಕ್ಕು** – ಕೈ ಇಳಿಬಿಟ್ಟುಕೊಂಡು ಕದಲದಿರು (ಇನನಸ್ತಂಗತನಾಗೆ ತತ್ಸಮಯದೊಳ್ ಕೆಯ್ಯಿಕ್ಕಿ .. .. ಪೇೞ್ದಿ ಸ್ವೈರಣೆಯ ಮಾನುಷ್ಯರ್: **ಸಮಯಪ,** ೧. ೫)

**ಕಯ್ಯೇಱು** – ಆನೆಯ ಸೊಂಡಿಲ ಹೊಡೆತ (ಕಯ್ಯೇಱೆನೊಳ್ ಬಿಬ್ಬಿರಿಬಿರಿದೊಡೆದ ಮುಕ್ತಾಪುಟಂಗಳೊಳ್: **ಆದಿಪು,** ೧೨. ೭೯ ವ)

**ಕಯ್ವಾಯ್** – ಸೆಣಸಾಡು (ದಿನಕರ ಕಾಂತಿಯುಮಂ ನೀವಿಂ ಪರಿಕಿಸಿ ನೋಡಿಂ ಎಂದು ಎಂದು ಸೂರ್ಯನೊಡನೆ ಕಯ್ವಾಯ್ದು ಮಧ್ಯಸ್ಥರಲ್ಲಿಗೆ ಬರ್ಪಂತೆ: **ಧರ್ಮಾಮೃ,** ೮. ೧೧೬ ವ)

**ಕಯ್ವಾರ** – ಹೊಗಳಿಕೆ (ಎನಸುಂ ಕಯ್ವಾರದಿಂದಿಲ್ಲದ ಗುಣಗಣಮಂ ರಾಗದಿಂ ಕೆಮ್ಮನೀ ಪಾಂಥನೊಳ್ ಅಧ್ಯಾರೋಪಂಗೆಯ್ದು ಎನಗನವರತಂ ಬಣ್ಣಿಸುತ್ತಿರ್ದಂ: **ಕಾದಂಸಂ,** ೫. ೧೦೩)

**ಕಯ್ವೀಸು** – ಕೈಯನ್ನು ಬೀಸು, ಯುದ್ಧಾರಂಭಕ್ಕೆ ಸೂಚನೆ ಕೊಡು (ಕಯ್ವೀಸು–ರಣಾರಂಭಸೂಚನಹಸ್ತಸೂಚನಯೋಃ: **ಶಬ್ದಮದ, ಧಾ** ೬೮೭)

**ಕರ** – ಕೈ, ತೋಳು (ಕರಂ ದೋರ್ ಬಾಹ್ವಾಖ್ಯಂ: ಅಭಿಧಾವ, ೧. ೧೨. ೭); ಆನೆಯ ಸೊಂಡಿಲು (ಐರಾವತ ಕರಲೂನ ಸಲ್ಲಕೀ ಶಬಳಮುಂ ಅಪ್ಪ ಉದಯಗಿರಿಯಿಂ ಸೊಗಯಿಸುವ ಮೂಡಣ ದೆಸೆಗೆ ವಂದು: **ಪಂಪಭಾ,** ೪. ೧೮ ವ); ಕಪ್ಪ (ಭೋಜರಾಜಂಗೆ ಕರಮಂ ತೆಱಲೆಂದು ಬಂದ ನಂದಗೋಪನಂ ಕಂಡು: **ಜಗನ್ನಾವಿ,** ೩. ೨೨ ವ); ಕಾಂತಿ, ಕಿರಣ (ಕರಂಗಳಡಂಗಿ ಕಿಲುಂಬುಗೊಂಡ ಕನ್ನಡಿಗೆಣೆಯಾಯ್ತು ಭಾನುವಳಯಂ ದಿವಿಜಾಪಗೆ ನೋಡೆ ನೋಡೆ ಕರ್ಪಡರ್ದೆಣೆಯಾದುದು ಆ ಯಮುನೆಗೆ ಅಗ್ಗದ ಯಾಗದ ಧೂಮದ ಏೞ್ಗೆಯೊಳ್: **ಪಂಪಭಾ,** ೬. ೩೬)

**ಕರಂ** – ಹೆಚ್ಚಾಗಿ (ಎನ್ನಂ ಕರಂ ನಂಬಿದ ಅಂಬೆಯೊಳ್ ಎನ್ನಂಬ ವಲಂ ವಿವಾಹವಿಧಿಯಂ ಮಾೞ್ಪಿಂ ಪೆಱರ್ ಮಾೞ್ಪರೇ: **ಪಂಪಭಾ,** ೧. ೭೭); ಅತಿಶಯವಾಗಿ (ಸುೞಿಯದು ಗಾಳಿ ಮೃಗಂ ಕೆಯ್ವಟೆಗಳ ಮೇತದೊಳೆ ತಣಿದಪುವು ಪಂದಿಗಳುಂ ಪಟಿನವಿರ್ ಇಕ್ಕಿದುವು ಆದಂ ಪಟು ಪರಿದಾಡಲ್ ಕರಂ ಬೆಡಂಗವನಿಪತೀ: **ಪಂಪಭಾ,** ೫. ೩೮)

**ಕರಂಕ** – ಭರಣಿ, ಸಣ್ಣ ಪೆಟ್ಟಿಗೆ (ವೈಶಂಪಾಯನನಂ ಮಹಾದೇವಿಯರ ಅರಮನೆಗೆ ಕಟೆಪಿಂ ಎಂದು ಆ ತಾಂಬೂಲಕರಂಕವಾಹಿನಿಗೆ ಬೆಸಸಿ: **ಕಾದಂಸಂ,** ೧. ೨೭ ವ)

**ಕರಂಕವಾಹಿನಿ** – ಭರಣಿಯನ್ನು ಹೊತ್ತ ಪರಿಚಾರಿಕೆ (ಕಾವನ ಅಂಬು ಅವಱ ಬೆಣ್ಪಿನೊಳ್ ಒಯ್ಯನೆ ಜೋಲ್ದವೋಲೆ ತಾಂಬೂಲ ಕರಂಕವಾಹಿನಿಯ ಮೇಲೆ ನೆಱಲ್ದಿರೆ ಬಾಲೆ ಲೀಲೆಯಿಂ: **ಪಂಪಭಾ,** ೪. ೪೩)

**ಕರಂಗು** – ಕರಗಿ ಹೋಗು, ನೀರಾಗು (ಎಂದು ತನ್ನ ನಾಣ್ಣಾಪನೆ ಬಗೆದು ಅತನುಪರಿತಾಪಿತ ಶರೀರನುಮಾಗಿ ಶಂತನು ಕರಂಗಿ ಎರ್ದೆಗಿಡೆ: **ಪಂಪಭಾ,** ೧. ೭೧ ವ)

**ಕರಂಜ** – ಹುಲುಗಿಲ ಮರ (ಪ್ಲಕ್ಷ ಕದಂಬ ನಿಂಬ ಪನಸ ಅರ್ಜುನ ತಾಲ ಲವಂಗ ಲುಂಗ ರುದ್ರಾಕ್ಷ ತುರುಷ್ಕ ಮುಷ್ಕ ನಿಚುಳ ಆಮ್ರ ಕರಂಜ ವಟ ಆದಿ ಅನೇಕ ವೃಕ್ಷ: **ಪಂಚತಂತ್ರ,** ೯೫)

**ಕರಂಜಕ** – ಒಂದು ಬಗೆಯ ಹುಳಿಯಾದ ಕಾಯಿ (ಫಲಿತ ರಸಾಲಂ ಒಪ್ಪುವ ಕಪಿತ್ಥ ಕರಂಜಕ ನೆಲ್ಲಿ ಮತ್ತಿ ಪಾಟಳಿ: **ಉದ್ಭಟಕಾ,** ೬. ೧೯)

**ಕರಂಡಕ** – ಭರಣಿ (ಅವಳ ಕೈಯಿಂದ ಆ ಕರಂಡಕಮಂ ಕೊಂಡೊಡೆ: **ಹರಿವಂಶ,** ೨. ೫ ವ)

**ಕರಂಡಿಗೆ** – ಕರಂಡಕ (ಭೂವನಿತೆಯ ಕರ್ಪುರದ ಕರಂಡಗೆ .. .. ಪೊಸವೇಟದಿರ್ಕೆ ಸಯ್ಪಿನ ತಾಣಂ: **ಶಾಂತಿಪು,** ೯. ೧೩೯)

**ಕರಂಬ** – ಸಸ್ಯದ ದೇಟು, ಕಾವು (ದಕಾರಕ್ಕೆ ರೇಫಂ: ಕದಂಬಂ–ಕರಂಬಂ, ಕರಂಬಮೆಂದು ಹಸುರ ಶಾಕದ ಕಾವು: **ಶಬ್ದಮ,** ೨೮೧ ಪ್ರ)

**ಕರಂಬವಾಸಿಗ** – ವಿವಿಧ ಹೂಗಳ ಬಾಸಿಗ (ಒಯ್ಯರಮಾದುದು ಆಯ್ದು ಕಟ್ಟಿದ ಕರಂಬವಾಸಿಗದಕುಸುಮವಿಸರದ ಪಸರಂ: **ಅನಂತಪು,** ೪. ೭)

**ಕರಕಂಜಾತಜಾತ** – ಕರಕಮಲಜಾತ, ಶಿಷ್ಯ (ಜಡಜಜನೆನಿಸದೆ ತದ್ಗುರು ಕರಕಂಜಾತಜಾತನೆನಿಸಿದನೀತಂ: **ರಾಜಶೇವಿ,** ೧. ೬೪)

**ಕರಕ** – ಆಲಿಕಲ್ಲು (ಸುರುಚಿರ ಮುಕ್ತೋತ್ಕರಮೆನೆ ಪರಿದಿರ್ದುವು ಅಮಳ ಕರಕಾವಳಿಗಳ್: **ತ್ರಿಷಷ್ಟಿಪು,** ೮. ೨೮); ಕರಗ, ಕಳಶ (ತರತರದೆ ತರಳಗುರುತರ ಕರಕ ಅಂಬುಕಣಂಗಳ್ ಅಮರ್ದುವು: **ಲೀಲಾವತಿ,** ೧೧. ೨೯)

**ಕರಕರಿಸು** – ಕೋಪಿಸು (ಮಕರಧ್ವಜನಂ ಬಿಡೆ ಬೈದು ಚಂದ್ರನೊಳ್ ಕರಕರಿಸುತ್ತೆ ತೆಂಬಲರ್ಗೆ ಕಾಯ್ವುತೆ: **ತ್ರಿಷಷ್ಟಿಪು,** ೨೪. ೨೦೦)

**ಕರಕಾಂಬು** – ಕಳಶದ ನೀರು (ಕಪ್ಪುರದ ರಜಂಬೊರೆದ ಕರಕಾಂಬುವ ತಳಿದು: **ಆದಿಪು,** ೪. ೧೭)

**ಕರಕೆ** – ಕಮಂಡಲು (ಮಠಮಂ ಪತ್ತುವಿಡದೆ ಪಿರಿಯದೊಂದು ಕರಕೆಯ ಕೂಟ ತಂದು ತಾನೊಂದು ಭಾಗಮಂ ಉಂಡು: **ಪಂಚತಂತ್ರ,** ೪೩೪ ವ)

**ಕರಕೋಪಲ** – ಆಲಿಕಲ್ಲು (ಕಱೆದುವು ಕಾಳಿಮಮಂ ಮುಂಕಱೆದವುದು ಮಿಂಚಂ ಬಟೆಕ್ಕೆ ಕರಕೋಪಲಮಂ ಕಱೆದುವು: **ಚಂದ್ರಪ್ರಪು,** ೪. ೩೮)

**ಕರಗ** – ಗಡಿಗೆ, ಕಳಶ (ಸುತ್ತಿದ ಕರಗದ ನೀರುಮಂ ಎತ್ತಿದ ಬೋನಮುಮಂ ಇದಿರೊಳಿಟ್ಟು: **ಆದಿಪು,** ೯. ೧೨೬)

**ಕರಗಂಬೊಱು** – ತಲೆಯ ಮೇಲೆ ಕರಗ ಹೊರು (ನೀನುಂ ದೇವಾ ಸುರಯುದ್ಧಕ್ಕೆ ಕರಗಂಬೊತ್ತ ಡಾವರಡಾಕಿನಿಯೆನಿಸಿದ ಪಾಂಚಾಲಿಯುಂ ಬುದ್ಧಿಮತಿಯೆಂಬ ಗಾಳುದೊಟ್ಟುಂ ಇಂತೀ ಮೂವರುಂ: **ಗದಾಯು,** ೨. ೮ ವ)

**ಕರಗದ ದಾರೆ** – ಗಡಿಗೆಯ ನೀರ ಧಾರೆ (ಕುಡಿಯೆ ಕುಡಿಯೆ ಕರಗದ ದಾರೆಯಂ ಉಗಿದುಕೊಂಡೊಡೆ ಅರಸಣ ಆಕೆಯ ಮೊಗಮಂ ನೋಡಿ ಏಕೆ ಕಾಡುವೌ ಕೂಸೆ ಕಾಡದೆ ಕುಡಿಯಲೆಱೆಯಾ: **ವಡ್ಡಾರಾ,** ಪು ೧೧೧, ಸಾ ೩)

**ಕರಗವಳ** – ಕೊಡದಿಂದ ನೀರು ತುಂಬುವ ಆಳು (ಬಟೆಕ್ಕೆ ಕರಗವಳನೆಱೆದ ಚಂದ್ರಕಾಂತದ ಹಿಮಶಿಶಿರ ಸುರಭಿವಾರಿಯಂ: **ಸುಕುಮಾಚ,** ೧೧. ೩೨ ವ)

**ಕರಗಸ** – ಗರಗಸ (ಕರಗಸಗಳಿಂದಂ ಉದ್ದಂ ಪಿಡಿದು ಪೋೞ್ವುದುಂ: **ವಡ್ಡಾರಾ,** ಪು. ೯೬, ಸಾ. ೩೦)

**ಕರಗಸಿಗ** – ಗರಗಸದಿಂದ ಕೊಯ್ಯುವವನು (ಒಂದು ಗೋಲಾಂಗೂಲಂ ಬಂದು ಕರಗಸಿಗರೊಂದು ಭಾಗಂಬರಂ ಸೀೞ್ದು ನೂಲ ತಲೆಯೊಳ್ ಕೀಲಂ ಬೆಟ್ಟಿರ್ದ ಮರನಂ ಕಂಡು: **ಪಂಚತಂತ್ರ,** ೮೪ ವ)

**ಕರಚಂಡ** – ವಿಧ್ವಂಸಕ (ದುರ್ಧರ ಜಿನದೀಕ್ಷೆಯಂ ಅಘಕುಳಕರಚಂಡಂ ಮೂಱುಜಾವದೊಳ್ ಕೊಂಡಂ: **ಆದಿಪು,** ೯. ೭೯)

**ಕರಜ** – ಕೈಯಲ್ಲಿ ಹುಟ್ಟಿದ್ದು, ಉಗುರು (ಕೈತ ಕೈದಳಮಂ ತುದಿಗೊಂಡು ಕರಜಮೊಪ್ಪಿದುದವಳಾ: **ರಾಜಶೇವಿ,** ೭. ೪೨)

**ಕರಟ** – ಆನೆಯ ಗಂಡಸ್ಥಳ (ಕರಟತಟಗಳಿತ ಮದರರುಚಿರಮುಖತೆಯಂ ಕಂಡು: **ಆದಿಪು,** ೭. ೨೭ ರಗಳೆ)

**ಕರಟಿ** – ಗಂಡಸ್ಥಳವುಳ್ಳದ್ದು, ಆನೆ (ಬಳವದ್ವಿದ್ವಿಷ್ಟವಿದ್ಯಾಧರ ಕರಟಿಶಿರಶ್ಶುಕ್ತಿಸಂಭೂತಮುಕ್ತಾವಳಿಯೊಳ್: **ಆದಿಪು,** ೧. ೭೬)

**ಕರಟಿಕಟಷೀಕರಣ** – ಆನೆಯ ಗಂಡಸ್ಥಳವನ್ನುಜ್ಜುವುದು (ಅಂತು ಪೊಱಮಟ್ಟು ಅನೇಕ ಕರಟಿಕಟಷೀಕರಣ ನಿಶ್ಶೇಷಿತಾರಾತಿವನದುರ್ಗನುಂ: **ಆದಿಪು,** ೧೪. ೫೨ ವ)

**ಕರಟಿಘಟ** – ಆನೆಗಳ ಹಿಂಡು (ಗಿರಿರಾಜೋದಗ್ರಸಿಂದೂರಿತ ಕರಟಿಗಟಾಟೋಮಂ: **ಆದಿಪು,** ೧೧. ೨೪)

**ಕರಡ** – ಕಾಡು ಹುಲ್ಲು (ಕರ್ಮಂ ಕಿಚ್ಚುಪತ್ತಿದ ಕರಡದಂತೆ ಭಸ್ಮಮಕ್ಕುಂ: **ಧರ್ಮಾಮೃ,** ೧೪. ೭೪ ವ)

**ಕರಡಿ** – ಭಲ್ಲೂಕ (ಕರಡಿಗಂಜಿ ಪುಲಿಯ ಗುಹೆಯಂ ಪೊಗುವಂತೆ: **ಧರ್ಮಾಮೃ,** ೬. ೧೨೦ ವ)

**ಕರಡಿಗೆ** – ಕರಂಡಿಕೆ, ಭರಣಿ (ಸುರರ ಶರೀರಂ ಪಳಿಕಿನ ಕರಡಿಗೆಯೆನೆ ನಿರ್ಮಳಿನಂ ತದ್ರುಚಿಯನಾಂತು ಕಣ್ಗೊಳಿಕ್ಕುಂ: **ಪಾರ್ಶ್ವನಾಪು,** ೫. ೮೧)

**ಕರಡೆ** – ಜರ್ಝರ ಎಂಬ ಚರ್ಮವಾದ್ಯ (ಕರಡೆಯ ತಾಳದ ಪಟವದ ಮದ್ದಳೆಯ ಮಿಕ್ಕವಾದ್ಯಮುಮೊಳವೇ: **ಗದಾಯು,** ೩. ೪೯)

**ಕರಣ** – ಕೆಲಸಗಾರ (ಅರಸನ ಕೋಷ್ಠಾಗಾರದ ಕರಣಂಗಳ ಕಾಪನೆಯ್ದೆ ಬಂಚಿಸಿ ಕಳ್ದುಂ: **ಆದಿಪು,** ೫. ೧೫); ಅಧಿಕಾರಿ, ನಿಯೋಗಿ (ಕೊರಳೊಳ್ ಅಮರ್ದು ಇರ್ಕೆ ಕಂಠಾಭರಣಂ ಮತ್ ಅಧೀಶಗುಣವಿಭೂಷಣವು ಎರ್ದೆಯೊಳ್ ಸ್ಥಿರಮಿರ್ಕೆ ಎಂದು ಅಂದು ಅಧ್ಯಕ್ಷದ ಕರಣಂ ಬರೆ ದೂತನೊಡನೆ ಬಂದೋಲಗದೊಳ್: **ಶಾಂತಿಪು,** ೨. ೭೩); ಜ್ಞಾನೇಂದ್ರಿಯ (ಪರಿವಿಡಿಯಿಂದಂ ತ್ವಕ್ ಚಕ್ಷು ರಸನೆ ಕಿವಿ ಮೂಗು ಇವೈದುಂ ಅಱಿಗೆ ಹೃಷೀಕಂ ಕರಣಂ: **ಅಭಿಧಾವ,** ೧. ೧೨. ೨೩); ನಾಟ್ಯದ ಒಂದು ಭಂಗಿಕರಣ ಅಂಗಹಾರ ಮೃದುಪದ ಪರಿಕ್ರಮಂಗಳ ಬೆಡಂಗುಗಳ ಜತಿಯೊಳ್ ಅಳಮಕರಿಸಿದುದೆಂಬಿನಂ: **ಆದಿಪು,** ೭. ೧೮); ಮಲ್ಲಯುದ್ಧದಲ್ಲಿ ತೋರುವ ಚಾತುರ್ಯ (ಕರಣಂಗಳ ಗಾಯಂಗಳ ಪರಿಣತಿಯಂ ಮೆಱೆದು ಪೊಣರ್ದು: **ಆದಿಪು,** ೧೪. ೧೧೦); ಕೆಲಸ (ನಿನ್ನಂ ಆಳ್ವೆನೆಂದು ಬಾಣಸಿನ ಕರಣಕ್ಕೆ ನಿರೂಪಣಂಗೆಯ್ದುಂ: **ಪಂಪಭಾ,** ೮. ೫೪ ವ); ಕರಣಿಕ, ಲೆಕ್ಕಪತ್ರ ಇಡುವವನು (ಜವನುಂ ಕರಣಂಗಳುಂ ಆ ಜವದೂತರುಂ ಇರ್ಪ ತಾಣಂ: **ಸಮಯಪ,** ೧೦. ೧೨೭); ಸಾಧನ (ಸಾಧನಮೆನೆ ಸಿದ್ಧಸಾಧನಂ ತಾಮ ಕರಣಂ: **ಅಭಿಧಾವ,** ೩. ೧. ೯೮)

**ಕರಣಗಣ** – ಇಂದ್ರಿಯ ಸಮೂಹ (ಕರಣಗಣಂ ಕುನುಂಗಿರೆ ಮನಂ ನೊಸಲಲ್ಲಿರೆ ಲೋಚನಂಗಳ್ ಉಳ್ಳರೆ ಮಗುಟ್ದಿಂಬುವೆತ್ತಿರೆ: **ಆದಿಪು,** ೧೦. ೧೪)

**ಕರಣಗ್ರಾಮ** – ಕರಣಗಣ (ಈ ಮನುಜರ ಅಖಿಳ ಕರಣಗ್ರಾಮಮಂ ಒಂದೊಡಲೊಳ್ ಎಂತೊಡಂಬಡಿಸಿದರೋ: **ಆದಿಪು,** ೪. ೭೨)

**ಕರಣಗ್ರಂಥ** – [ಜೈನ] ಕರಣಾನುಯೋಗದ ಗ್ರಂಥ (ಲೋಗಾಣಿ ಸಂಗಾಣಿ ಮೊದಲಾಗೊಡೆಯ ಕರಣಗ್ರಂಥಂಗಳುಮನಿವೆಲ್ಲಮಂ ಕಲ್ತೊಡಲ್ಲದೆ ಪೇೞಲಾಗದು: **ವಡ್ಡಾರಾ,** ಪು. ೬. ಸಾ ೮)

**ಕರಣತತಿ** – ಇಂದ್ರಿಯ ಸಮೂಹ (ಕರಣತತಿ ವಾಯುವಿನೊಳ್ ಕುನಿದಿರೆ ಪದ್ಮಾಸನದೊಳ್ ತನುವಿರೆ ಯೋಗೀಂದ್ರಂ ಆತ್ಮಚಿಂತೆಯೊಳಿರ್ದಂ: **ಯಶೋಧಚ,** ೪. ೧೩)

**ಕರಣತ್ರಯ** – ಮನ ವಚನ ಕಾಯ ಎಂಬ ಮೂರು ಕರಣಗಳು (ಕರಣತ್ರಯಶುದ್ಧನೆಂದಧೇಂ ಸ್ತುತಿಯಿಸಿದತ್ತೊ .. .. ಪೌರಜನಂ: **ಪುಷ್ಪದಂಪು,** ೩. ೧೩೨): [ಜೈನ] ಅಧಃಕರಣ, ಅಪೂರ್ವಕರಣ, ಅನಿವೃತ್ತಿಕರಣ ಎಂಬ ಮೂರು ತತ್ವಗಳು (ಮುನ್ನಂ ಅಧಃಪ್ರವೃತ್ತಮಪೂರ್ವಮೆಂಬ ಕರಣತ್ರಯದಿಂ: **ಮಲ್ಲಿನಾಪು,** ೧೪. ೫೭ ವ)

**ಕರಣಲಬ್ಧಿ** – [ಜೈನ] ಐದು ಲಬ್ಧಿಗಳಲ್ಲಿ ಒಂದು, ಕರಣ ಪರಿಣಾಮಗಳ ಪ್ರಾಪ್ತಿ (ಕಾಲಲಬ್ಧಿ ಕರಣಲಬ್ಧಿ ಉಪಶಮಲಬ್ಧಿ ಕ್ಷಯೋಪಶಮಲಬ್ಧಿ ಪ್ರಾಯೋಗ್ಯತಾಲಬ್ಧಿಯೆಂಬ ಲಬ್ಧಿಪಂಚಕಮುಮಂ: **ಸುಕುಮಾಚ,** ೩. ೩೯ ವ)

**ಕರಣೀಯ** – ಮಾಡಬೇಕಾದುದು (ಸೌಹೃದಂ ಇಱಿದೆಂಬನ್ನನೆ ಕನ್ನೆಗೆ ಯೋಗ್ಯನೆಂ ಇನ್ನೆಂದುದೆ ಯೋಗ್ಯಮಲ್ಲದು ಇದು ಕರಣೀಯಂ: **ಪುಷ್ಪದಂಪು,** ೭. ೪೯)

**ಕರತನ** – ಉಗ್ರತೆ, ರೇಗುವಿಕೆ (ಖರಕಿರಣಂಗಳ ಕಾಯ್ಪಿನ ಕರತನದಿಂ ಚಂದ್ರಕಿರಣದಜ್ಜಳಿಕೆಯಿಂ: **ಆದಿಪು,** ೧೧. ೭)

**ಕರತರ್ಜನ** – ಕೈಸನ್ನೆ ಮಾಡಿ ಹೆದರಿಸುವುದು ಅಥವಾ ಹೆದರಿಕೆ ಸೂಚಿಸುವುದು (ನಾಲಗೆಯ ಮಾತು ಕಣ್ಣೊಳ್ ಕರತರ್ಜನಮಡರೆ ನಿಮಿರ್ದ ಪುರ್ವಿನ ಕೊನೆಯೊಳ್: **ಚಂದ್ರಪ್ರಪು,** ೫. ೯೮)

**ಕರತಳಾಮಳಕ** – ಅಂಗೈ ಮೇಲಣ ನೆಲ್ಲಿಕಾಯಿಯಂತೆ ಸುಸ್ಪಷ್ಟ (ಆತನ ಪುರುಷಾರ್ಥದ ಪುರುಳುಂ ಶಕ್ತಿಯಳವುಂ ಕಲಿತನದ ಗುಣ್ಪುಂ ಪರಾಕ್ರಮದ ಬಿಣ್ಪುಂ ಕರತಳಾಮಳಕಮಾಗಿರ್ದಪ್ಪುದು: **ಪಂಚತಂತ್ರ,** ೧೫೬ ವ)

**ಕರದೀಪಿಕೆ** – ಕೈದೀವಿಗೆ (ಕರದೀಪಿಕಾನಿಕಾಯಂ ತರದಿಂದಂ ಮುಂದೆ ತೊಲಗಿಸುತ್ತಿರೆ: **ಕಾದಂಬ,** ೨. ೮೮)

**ಕರಪಟಶಾಸ್ತ್ರ** – ಚೋರವಿದ್ಯೆ (ಕಳ್ಳರನಾರಯ್ವ ತೆಱನಂ ಪೇೞ್ವ ಸುರಖಮೆಂಬ ಓದಂ ಕಲ್ತೊಂ ಆನುಂ ಕಳ್ವುಪಾಯಮಂ ಪೇೞ್ವ ಕರಪಟಶಾಸ್ತ್ರಮಂ ಕಲ್ತೆಂ: **ವಡ್ಡಾರಾ,** ಪು ೧೨೮, ಸಾ ೨೫)

**ಕರಪಾತ** – ಕಿರಣಗಳ ಬೀಳುವಿಕೆ (ಉಲ್ಲಸಿತಂ ವಸುಧಾತಳಂ ಸುಧಾಕರ ಕರಪಾತ ಪಾಂಡುನಭಂ: **ನೇಮಿನಾಪು,** ೪. ೮೩)

**ಕರಪಾಳಿಕೆ** – ದೊಣ್ಣೆ (ಸಿರದೊಳ್ ಅಮರ್ದ ಓಲೆ ಕೌಂಕುಳ ಕರಪಾಳಿಕೆ ಮೆಟ್ಟಿದ ಎಕ್ಕಡಂ .. .. ತಲ್ಲೇಖವಾಹನ ಉನ್ನತದೇಹಂ: **ಆಚವರ್ಧ,** ೩. ೧೩)

**ಕರಪೀಡನ** – ತೆರಿಗೆಯ ಭಾರ (ಸುರತಾಸಕ್ತೆಯ ಕುಚಂಗಳ್ ಎಂತು ಅಂತೆ ನಿರಾವರಣಂಗಳಾಗಿ ಪಱಿವುವು ಕರಪೀಡನದಿಂದಂ ಅಗ್ರಹಾರಚಯಂಗಳ್: **ಅನಂತಪು,** ೧೩. ೩೦)

**ಕರಭ** – ಒಂಟೆ (ಪರಿಗಳಿತ ಪೂತಿಗಂಧರ್ ಖರ ಕಾಕ ಸೃಗಾಲ ಕರಭ ಕೌಶಿಕ ವೃಕ ವಾನರ ವಿಷದಂಷ್ಟ್ರೋತ್ಕರ ಕುರ್ಕುರ ಕೀಟಕ ಭಲ್ಲನಿಕರ ನಿಷ್ಠುರನಿನದರ್: **ಶಾಂತೀಶ್ವಪು,** ೯. ೧೦೬); ಪ್ರಾಣಿಯ ಮರಿ (ತಲೆಯೆತ್ತಿದೊಡೇಂ ಉತ್ತಮನೆ ಕುಕವಿ ಶರಭಕ್ಕೆ ಕರಭಂ ಎಣೆಯೆನಿಸುಗುಮೇ: **ಧರ್ಮಮಧು,** ೧. ೫೪)

**ಕರಭರಕ್ಷಮ** – ಹೊರುವುದಕ್ಕಾಗುವಷ್ಟು ತೆರಿಗೆಗಳುಳ್ಳದ್ದು (ಕರಭರಮಪ್ಪ ನಾಡಂ ಬೇಡರಂತೆ ಪರಿಪರಿದು ನಿರವಶೇಷದಿಂ ಕಿಡಿಸಿಯುಂ: **ಪಂಚತಂತ್ರ,** ೮೧ ವ)

**ಕರಮೆ** – ಹೆಚ್ಚಾಗಿ, ವಿಶೇಷವಾಗಿ (ಕೀಚಕಂ ಕಾಮದೇವಂ ಮಾಡಿದ ಯಾಚಕನಂತೆ ಕರಮೆ ನಾಣ್ಗೆಟ್ಟು ಮನಂಗಾಪು ಅಟೆದು ಅಳಿಪಿ ನೋಡಿ: **ಪಂಪಭಾ,** ೮. ೫೯ ವ)

**ಕರರುಹರೇಖೆ** – ಉಗುರಿನ ಗುರುತು (ಮಿಳಿರ್ವಸಿಯ ಪಸಿಯ ಪೊಸಬಾಸುಟಿ ಕರರುಹರೇಖೆ ತುಱುಗಿ: **ಆದಿಪು,** ೧೨. ೧೫)

**ಕರವತಿ** – ಚರ್ಮದ ನೀರಿನ ಬುದ್ದಲಿ, ಪಕಾಲೆ (ಬಿಡರಿನಿಸಂ ಜೇನೆಯ್ಯಂ ಬಿಡರೆನಿಸಂ ಮಾಂಸಸೇವನೆಯಂ ಕರವತಿಯಂ .. .. ವೇದಜಡರ್: **ಸಮಯಪ,** ೧೪. ೧೫೧)

**ಕರವತಿಗೆ** – ನೀರಿನ ಗಿಂಡಿ (ಕರವತಿಗೆಯ ಕೊಳೆ ನೀರ್ ಪಾರ್ವರಿಗಂ ಭಗವರಿಗಂ ಅಂತೆ ವ್ಯಾಧರಿಗಂ: **ಸಮಯಪ,** ೬. ೧೩)

**ಕರವತ್ತಿ** – ಗರಗಸ (ತುರಿಪದೆ ಕೊಂಡು ಪೋಗಿ ಕರವತ್ತಿಯನೋತದನಿಟ್ಟುಬಾಸುವಂ: **ಸಮಯಪ,** ೧೪. ೨೬); ಚರ್ಮದ ನೀರಿನ ಬುದ್ದಲಿ, ಪಕಾಲೆ (ಕರವತ್ತಿಯ ನೀರ್ಗುಡಿವಂಗೆ ನೋಡುವಂ .. .. ಉತ್ತಮೋತ್ತಮಂ: **ಸಮಯಪ,** ೧೪. ೧೧೭); (ತಾನುತ್ತಮನಲ್ಲಂ ದಲ್ ಕರವತ್ತಿಗೆ ಸಿದ್ದಿಗೆ ತದಂಗಮಂ ಬಿಡದನ್ನಂ: **ಸಮಯಪ,** ೬. ೨೨)

**ಕರವಳ** – ಕತ್ತಿ ಹಿಡಿದವನು (ಅಂಗರಕ್ಕರುಂ ಕರವಳರುಂ ವಿಳಾಸಿನಿಯರುಂ ನಗೆಕಾಱರುಂ .. .. ನಡೆತಂದರ್: **ಪುಷ್ಪದಂಪು,** ೮. ೪೨); ಮಲ್ಲಯುದ್ಧದ ಒಂದು ವರಸೆ (ಆಂ ಪಿಡಿದುದೆ ಕತ್ತರಂ ಕರವಳಂ ಸೆರಪಟ್ಟಣಿ ಹತ್ತೆ ಡೊಕ್ಕರಂ: **ಅನಂತಪು,** ೨. ೨೭)

**ಕರವಳಯ** – ಕೈಯ ಬಳೆ (ಮಯೂಖಲೇಖಾಮುದ್ರಿತ ಸಭಾವಳಯಮಪ್ಪ ಕರವಳಯಾದಿ ನೂತ್ನ ರತ್ನಾಭರಣಂಗಳಂ ಬೇಱವೇಱ ತೋಱ: **ಪಾರ್ಶ್ವನಾಪು,** ೨. ೫೩ ವ)

**ಕರವಾಳ್** – ಕತ್ತಿ (ಶರಚಾಪಚಕ್ರಭೀಕರ ಕರವಾಳಾಯುಧವಿರಾಜಿ ಮತ್ಕರಯುಗಮಿಂದೊರೆಗಿಡೆ: **ಆದಿಪು,** ೧೨. ೧೦೦)

**ಕರವಾಳಾಂಶು** – ಕತ್ತಿಯ ಹೊಳಪು (ಕರವಾಳಾಂಶುಚಯ ಅಂಜನಂಗಳೊಳ್ ಅರಿಕ್ಷ್ಮಾಭೃತ್ ಜಯಶ್ರೀವಶೀಕರಣಂ ಮಾಡಿ: **ಆದಿಪು,** ೯. ೬೪)

**ಕರವಿಕ್ಷೇಪ** – ಕೈಯ ತೂಗಾಟ (ಪಿರಿದುಮೆರ್ದೆ ಡವಕೆ ವಾಜಿಸುತಿರೆ ಭಂಗಂಬೆತ್ತು ಹಾರಲತೆ ಘನಕುಚದೊಳ್ ಕರವಿಕ್ಷೇಪದೆ ನರ್ತಿಸೆ ನರೇಂದ್ರನಂದನನನೊಲ್ದು ನೋಡಿದಳೊರ್ವಳ್: **ಕಾದಂಬ,** ೩. ೨೮)

**ಕರವೀರ** – ಕಣಿಗಲೆ (ಕುಂದ ಮುಚುಕುಂದ ಮಂದಾರ ಇಂದೀವರ ನಂದ್ಯಾವರ್ತ ತ್ರಿಸಂಧ್ಯಾ ಬಂಧೂಕ ಕದಂಬ ಕನಕ ಕರವೀರ ಕರ್ಣಿಕಾರ ಕುಮುದವನವಕುಳ ಕುರವಕ ಕಮಲ ತಿಲಕ ಚಂಪಕ ಪಾಟಲಿ ಪಾರಿಜಾತ ಜಾತಿ ಪುನ್ನಾಗ ಮಲ್ಲಿಕಾದಿ ಅನೇಕ ಸುರಭಿಕುಸುಮಂಗಳಂ: **ಪಂಚತಂತ್ರ,** ೧೯೦ ವ)

**ಕರವೇಟಿ** – ಬಲು ಹೇಡಿ (ಪುರುಷರ್ ಮೂವರೊಳ್ ಒರ್ವನೆಂಬರ್ ಅಂಬರಸುರಪ್ರಧ್ವಂಸಿಯೆಂಬರ್ ಜಗದ್ಗುರುವೆಂಬರ್ ಪೆಱರ್ಗೆಕೆ ತೇರನೆಸಪಂ ಧರ್ಮಾನುಜಂಗೇಕೆ ಕಿಂಕರನಾದಂ ಕರವೇಟಿಯಾದಂ: **ಗದಾಯು,** ೩. ೪೩)

**ಕರಸಾಣೆ** – ಖರಸಾಣೆ, ಮಸೆಗಲ್ಲು, ಸಾಣೆಗಲ್ಲು (ಮದನಾಸ್ತ್ರಂ ಖರಸಾಣೆಗಾಣಿಸಿದುದು ಎಂಬಂತಾಗೆ ನಿನ್ನೊಂದು ಕಂದಿದ ಮೆಯ್ ಎನ್ನಯ ತೋಳೊಳೊಂದೆ ಸಿರಿಯಂ ನೀನುಯ್ದು ತೊಟ್ಟಾಳ್ದು ರಾಗದಿಂ ಎನ್ನೊಳ್ ಸುಕಮಿರ್ಪುದು: **ಪಂಪಭಾ** ಪರಿಷತ್ತು, ೮. ೬೬)

**ಕರಸ್ಥಳಾಮಳಕ** – ಅಂಗೈ ಮೇಲಿನ ನೆಲ್ಲಿ, ಬಹು ಸ್ಪಷ್ಟ (ಚತುರ್ಗತಿಯ ಬಟ್ಟೆಯಂ ನೆಱೆಯೆ ಕಂಡರ್ ಎಂತುಂ ಕರಸ್ಥಳಾಮಳಕಂ ಎಂಬರ್: **ಆದಿಪು,** ೧೩. ೮೫)

**ಕರಹ** – ಆಹ್ವಾನ (ಕರಹಂ ಪೆಂಡಿರದು ಎಯ್ದೆ ತನ್ನದುಟೆವಿಂ ಕಟ್ಟಾಯದೊಳ್ ನಿಂದನೇ: **ಲೀಲಾವತಿ,** ೨. ೬೯)

**ಕರಹಾಟ** – ಗೆಡ್ಡೆ (ಕರಹಾಟಂ ಕಂದಂ: **ಅಭಿಧಾವ,** ೧. ೪. ೨೧)

**ಕರಾಂಕಯಷ್ಟಿ** – ಕೈಕೋಲು (ಬಾಗಿದ ಬೆನ್ ಉಱೆ ತೂಗುವ ಆನನಂ ಪಿಡಿದ ಕರಾಂಕಯಷ್ಟಿ .. .. ಮುಪ್ಪಡಸಿದ ತಾಪಸಾಕೃತಿಯಂ ಆಂತು: **ತ್ರಿಷಷ್ಟಿಪು,** ೮. ೪೬)

**ಕರಾಗ್ರ** – ಹಸ್ತ, ಕೈ (ಕರಾಗ್ರಂ ತಾಂ ಹಸ್ತಂ ಶಯಸಮಭಿದಂ ಪಾಣಿ ಕರಮುಂ: **ಅಭಿಧಾವ,** ೧. ೧೨. ೭)

**ಕರಾತಳ** – ಅಂಗೈ (ಜೂದಿನೊಳ್ ಉಕ್ಕೆವದಿಂದೆ ಗೆಲ್ದ ನಿನ್ನಂ ಅವನಿತಳಂ ಕರಾತಳದವೋಲ್ ತನಗಂ ಬೆಸಕೆಯ್ಯೆ ಕೆಯ್ಗೆ ಮಾಡುವ ನಯಂ ಆ ಬೃಹಸ್ಪತಿಯುಮಂ ಗೆಲೆವಂದುದು ಧಾರ್ತರಾಷ್ಟ್ರನಾ: **ಪಂಪಭಾ,** ೭. ೪೦)

**ಕರಾಲ** – ಪ್ರಚಂಡ (ನಿರ್ಲಯ ಲಯಕಾಲ ಸಾಯುಧಕರಾಲ ಕರಾಲಸದ್ಭುಜಾ: **ರಾಜಶೇವಿ,** ೧೩. ೫೨)

**ಕರಾಲಂಬನ** – ಕೈಯ ಆಸರೆ (ಕರಮೊಪ್ಪಿ ತೋರ್ಪುದು ಬನಂ ಲಕ್ಷ್ಮೀಕರಾಲಂಬನಂ: **ಸುಕುಮಾಚ,** ೧೦. ೬೧)

**ಕರಿ** – ಸೀದುಹೋಗು; ಎಣ್ಣೆಯಲ್ಲಿ ಬೇಯಿಸು; ಕಪ್ಪು ಬಣ್ಣ (ಕರಿಯ ಮುಗಿಲ್ಗಳಿಂ ಗಗನಮಂಡಳಮೊಪ್ಪಿರೆ ಸೋಗೆಯಿಂ ವನಾಂತರಂ ಎಸೆದು ಒಪ್ಪೆ ತೋರ್ಪ ಮೊಳೆವುಲ್ಗಳಿನೀ ಧರಣೀವಿಭಾಗಂ ಒಪ್ಪಿರೆ: **ಪಂಪಭಾ,** ೭. ೨೩); ಆನೆ (ದ್ವಿರದಂ ದಂತಿ ಮತಂಗಗಜಂ ಗಜಂ ಇಭಂ ಸ್ತಂಭೇರಮ ವಾರಣಂ ಕರಿ ವೇತಂಡಮ ಅನೇಕಪಂ ರದನಿ ಶುಂಡಾಳಂ ದ್ವಿಪಂ ಕುಂಭಿ ಸಿಂಧುರಂ ಎಂದಿಂತಿವು ಸಾಮಜಾಖ್ಯೆಯೊಳಭಿನ್ನಾರ್ಥಕಂಗಳಕ್ಕುಂ: **ಅಭಿಧಾವ,** ೧. ೧೪. ૩೧)

**ಕರಿಕದಳಿಕೆ** – ಗಜಪತಾಕೆ (ಅಂಬರದೊಳಮರ ವೃಂದಂಗಳ್ ಬಿತ್ತರಿಸುವ ಪತಾಕರಗಳೆನಿಸುವ ಕರಿಕದಳಿಕೆಗಳುಮಂ: **ಆದಿಪು,** ೧೩. ೪೪ ವ)

**ಕರಿಂಕೇಟಿಸು** – ಕರಿಕಾಗಿಸು (ಏಟುಂ ಮಾಳವನಮಂ ಪಾಱೇಱ ತಗುಳ್ದಿಱಿದು ನರಗನುರಿಪಿದೊಡೆ ಕರಿಂಕೇಟಿಸಿದಾತನ ತೇಜದ ಬೀಟಲಂ ಅನುಕರಿಪುವಾದುವು ಒಗೆದುರಿಗಳ್: **ಪಂಪಭಾ,** ೧. ૩೫)

**ಕರಿಕಲಭ** – ಆನೆ ಮರಿ (ಕರಿಕಲಭಂಗಳ್ ಕರಿಕೇಸರಿಗಳ್ ವೈರಮನೆ ಬಗೆಯದೆ ಅಹಿ ನಕುಲಂಗಳ್ ಹರಿಣ ಚಮೂರಂಗಳ್ ಶಾಂತರೂಪದಿಂದಿರ್ದುವು ಅಜಿತನಾಥನ ಕೆಲದೊಳ್: **ಅಜಿತಪು,** ೭. ೬)

**ಕರಿಕೃತ್ತಿ –** ಆನೆಯ ಚರ್ಮ (ಕಱೆಗೊರಲ್ ಕರಿಕೃತ್ತಿ ಮೃಗಾರಿ ಚರ್ಮದ ಒಳ್ಳುಡೆ .. .. ವಿರಾಜಿಸೆ ರಂಜಿಸಿದಂ ಮಹೇಶ್ವರಂ: **ರಾಜಶೇವಿ,** ೧೪. ೯೫)

**ಕರಿಘಟೆ –** ಆನೆಯ ಸೈನ್ಯ (ಬೆಂಕೊಳೆ ಕಳಿಂಗರಾಜನ ನೂಂಕಿದ ಕರಿಘಟೆಯಂ ಉಡಿಯೆ ಬಡಿಬಡಿದೆತ್ತಂ ಕಿಂಕೊಟೆ ಮಾಟ್ಟುದುಂ ಉಱದೆಚ್ಚಂ ಕರ್ಣಂ ನಿಸಿತಶರದಿಂ ಎರಡುಂ ಕರಮಂ: **ಪಂಪಭಾ,** ೧೧. ೧೦೨)

**ಕರಿಣಿಗಣ –** ಹೆಣ್ಣಾನೆಗಳ ಗುಂಪು (ಬಂದು ಸ್ವಚ್ಛ ವಿಚ್ಛಳಾಕಾರಮಪ್ಪ ಮಡುವಂ ಪೊಕ್ಕು ಮನೋಹಾರಿಗಳಪ್ಪ ಕರಿಣೀಗಣದೊಡನೆ ಕ್ರೀಡಿಸುವುದುಂ: **ವಡ್ಡಾರಾ,** ಪು ೩೬, ಸಾ ೨೧)

**ಕರಿತುವು –** ಕಪ್ಪಾಗಾದವು (ಪೊಸವೇಟಕಾಱರ ಎರ್ದೆಗಳ್ ಪೊಸಕಾರ ಪೊಡಪರ್ಪುಗಂಡದೇಂ ಕರಿತುವು ಅದೇಂ ಕಲಂಕಿದುದು ಅದೇಂ ಕುಟಿಗೊಡುವು ಅದೇಂ ಕನಲ್ದುವೋ: **ಪಂಪಭಾ,** ೭. ೨೩)

**ಕರಿಮುರಿ –** ಸುಟ್ಟು ಮುರುಟಾದುದು (ಅರಗಿಳಿಯಂ ಮೃಗಾಕ್ಷಿ ಪಿಡಿದೋಲದಿಸಲಣ್ಮಳೆ ಸುಯ್ಯ ಬೆಂಕೆಯಿಂ ಕರಿಮುರಿಯಕ್ಕುಮೆಂದು ತೆಗೆದಪ್ಪಲುಮಣ್ಮಳೆ: **ನೇಮಿನಾಪು,** ೩. ೧೦೮)

**ಕರಿಮುರಿಕ –** ಸೀದು ಕಪ್ಪಾದ (ಉರಿಯಿಂ ಕರಿಮುರಿಕನಾದುವು ಉನ್ಮದ ಪರಭೃತ ಷಟ್ಚರಣ ರಾಜಕೀರಕುಲಂಗಳ್: **ಪಂಪಭಾ,** ೫. ೯೦)

**ಕರಿಮುರಿವೋಗು –** ಸುಟ್ಟು ಮುರುಟಿಹೋಗು (ಸೊರ್ಕಿನ ಸೊವಡಿಂಗೆಱಗಿ ತುಱುಗಿದ ಪಱಮೆಗಳ್ ಕರಿಮುರಿವೋಗಿ: **ಗಿರಿಜಾಕ,** ೨. ೧೦೫ ವ)

**ಕರಿಯೂಧಪತಿ –** ಸಲಗ (ಕರಿಯೂಧಪತಿಗಳೆರಡುಂ ಸರಸೀಜಳಮಂ ವಿಳಾಸದಿಂ ಪುಗುವವೋಲ್: **ಆದಿಪು,** ೧೪. ೧೦೬)

**ಕರಿರಿಪು –** ಆನೆಯ ವೈರಿ, ಸಿಂಹ (ಕರಿರಿಪು ಪುಟ್ಟಿ ವಿಂಧ್ಯಗಿರಿ ತಾವರೆ ಪುಟ್ಟೆ ಸರೋವರಂ .. .. ಅಭಿಷ್ಟುತಮೊಪ್ಪಲ್: **ಪುಷ್ಪದಂಪು,** ೧೨. ೧೫)

**ಕರಿಸಂಘಾತ –** ಆನೆಗಳ ಹಿಂಡು (ಕರಿಸಂಘಾತಮುಮಂ ಹಯವ್ರಜಮುಮಂ ಪಿಂತಿಕ್ಕಿ: **ಆದಿಪು,** ೧೨. ೬೮)

**ಕರಿಸ –** ಬಿಸಿಪು, ಬೆಂಕಿ (ಗಂಟಲುರಂಬಮಾಱೆ ಬೆಂದೊವಲ್ ತೆಗಳಿಗೆ ಬೀಱೆ ಬಾಯ್ಗೆ ಕರಿಸಂ ಬರೆ ನಾಲಗೆಗಿಟ್ಟು ನಟ್ಟ ದಿಟ್ಟಿಗಳೊಡನಳ್ಳೆ ಪೊಯ್ಯೆ ನಡೆಗೆಟ್ಟುವು ತೃಷ್ಣೆಯಿನಾರೊ ಬೇಯದರ್: **ಪಂಪರಾ,** ೭. ೯೩)

**ಕರಿಸೆ –** ಬೆಂಕಿ (ಒಳವಾಯಿಂ ಕರಿಸೆಯುಗುಟ್ಟುವೆಯ್ದೆ ಮೃಗಂಗಳ್: **ಜಗನ್ನಾವಿ,** ೧೭. ೬೭)

**ಕರೀರ –** ಬಿದಿರು (ಲಕುಚ ಅಶೋಕ ತಮಾಳ ಶಾಲ ಕದಳೀ ಸಪ್ತಚ್ಛದ ಆಕ್ಷೋಟಿ ಚಂಪಕ .. .. ಪಾದಪಂ ಕಣ್ಗೊಪ್ಪುಗುಂ ಸುತ್ತಲುಂ: **ವರ್ಧಮಾಪು,** ೧. ೫೧); ಬಿದಿರ ಚಿಗುರು, ಕಳಲೆ (ಅವನ ಊರುದಂಡಮಂ ಕದಳೀಕಾಂಡಮಂ ಮುಱೆವಂತೆ ಮುಱೆದು ಅವನ ಭುಜಮಂ ಕರೀರಮಂ ಕಿಳ್ವಂತೆ ಕಿಳ್ತು: **ರಾಜಶೇವಿ,** ೬. ೮೬ ವ)

**ಕರು –** ಎರಕದ ಅಚ್ಚು (ಕರು ಕರುವಿಂಗೆ ಕಣ್ದೆಱವಿ ಕಲ್ವೆಸದೋಜೆಗೆನಚ್ಚಿನಚ್ಚು ಕಂಡರಣೆಎ: **ಮಲ್ಲಿನಾಪು,** ೨. ೬೦); ಎರಕದ ಬೊಂಬೆ ವಿರಹದ ಕರುವಿನಂತೆ ಕರುಣದ ಹಾಹೆಯಂತೆ: **ಗಿರಿಜಾಕ,** ೪. ೧೯ ವ); ಮೂಲಸ್ಥಾನ (ನರಕದ ನೆಲೆ ಪೇಸಿಕೆಗಳ ಕರು ಮಸಣದ ಪುಟ್ಟು: **ಕಾದಂಬ,** ೧೦. ೪೨); ಗೋಡೆ (ಪುರವರದ ಸೌಧತಳದೊಳ್ ಕರುವಿನ ಚಿತ್ರದ ಬಿಡಾಲವಂ ಕಂಡೊಡೆ: **ಪುಷ್ಪದಂಪು,** ೨. ೭೨)

**ಕರುತ್ತು –** ಗುರಿಯಿಟ್ಟು (ಪಳಂಚಲಿಸದೆ ಪೊಯ್ ಕರುತ್ತು ಇಱೆ ಎನಿಪ್ಪ ರವಂ ಪಿರಿದಾಯ್ತು ಬೇಡರೊಳ್: **ಶಬರಶಂ,** ೪. ೬)

**ಕರುಮಾಡ –** ಉಪ್ಪರಿಗೆ (ಕರುಮಾಡದ ಕೆಲದ ಮಾಡದೊಳ್ ವಜ್ರಬಾಹುನೃಪನನಿರಿಸಿ: **ಆದಿಪು,** ೪. ೨೫ ವ)

**ಕರುವಿಡು –** ಎರಕ ಹೊಯ್ (ಮರುಳೇ ಗಾಂಡಿವಿ ಯಾರೆಂದು ಇಳಿಸಿ ನುಡಿವೈ ಗಂಧರ್ವರುಯ್ವಂದು ನಿನ್ನಂ ಕರುವಿಟ್ಟಂತಿರ್ದುದಿಲ್ಲಾ ನೆರದ ಕುರುಬಲಂ ತಂದವಂ ಪಾರ್ಥನಲ್ಲಾ: **ಪಂಪಭಾ,** ೯. ೫೫)

**ಕರುವೆಸ –** ಎರಕದ ಕೆಲಸ (ನಿರ್ಗಮಕ್ಷಪಣೆಗಳನಳವಡಿಸಿ ಸುತ್ತುಗತ್ತರಿಗೆವರೆಗೊಯ್ದು ಕರುವೆಸಂ ಇದೆನಿಸಿ: **ಆಚವರ್ಧ,** ೭. ೩ ವ)

**ಕರುಳ್ –** ಅಂತ್ರ (ಅವನ ಕರುಳ ಪಿಣಿಲಿಂದೆನ್ನಂ ಮುಡಿಯಿಸುಗೆ ಆ ಮುಡಿಯಂ: **ಪಂಪಭಾ,** ೭. ೧೦)

**ಕರೆ –** ಬರಹೇಳು, ಕೂಗು (ಮಗನಂ ಕರೆದು ಒಪ್ಪಿಸವೇಟಿ: ಪಂಪಭಾ, ೬. ೭೬); ಬಟ್ಟೆಯ ಅಂಚು (ಕರೆವೆರಸಿದ ಪೊಸದುಗುಲದ ತೆರಳ್ಕೆವೆತ್ತುಡೆ ಹಟತ್ಕಟೀಸೂತ್ರ ಪರಿಸ್ಫುರಿತದೊಳಂ: **ಆದಿಪು,** ೪. ೩೬); ಕರಿಮೆಣಸು (ಎಳಮಾವಿನ ಮಿಡಿ ಮಾಗುಳಿ ಮೆಟಿಸಿನ ಕರೆ .. .. ಯಿಂದಳವಟ್ಟಿರೆ ಲಾವಣಕಂಗಳನಿಕ್ಕಿದರ್: **ಸುಕುಮಾಚ,** ೧೧. ೩೦)

**ಕರೆಗಣ್ಮು –** ದಡ ತೀಡಿ ಹರಿ, ತುಂಬಿ ತುಳುಕು (ಬಳ್ವಳ ನೀಳ್ದ ಕಣ್ಮಲರ ತಳ್ತಮೆಯಿಂ ಕರೆಗಣ್ಮೆ ಬೆಳ್ಗಡಲ್ಗಳ್ ಪರಿಯಲ್ಕಂ: **ಪಂಪಭಾ,** ೭. ೬೮)

**ಕರೆಗೊಯ್ –** [ಹೊಸ] ಬಟ್ಟೆ ತೊಡಲು ಸ್ವಲ್ಪ ಅಂಚು ಕತ್ತರಿಸುವುದು (ಕರೆಗೊಯ್ದ ಸೀರೆಯಂತೆ ರಾಶಿಗೆ ಬಂದ ಆರಂಬದಂತೆ: **ಧರ್ಮಾಮೃ,** ೧೦. ೨ ವ)

**ಕರೇಣು –** ಹೆಣ್ಣಾನೆ, ಪಿಡಿ (ಪುರಜನಸಕಳಾಂತಃಪುರ ಪರಿಜನಮದಕರಿಕರೇಣುಪರಿವೃತದೊಳ್: **ಆದಿಪು,** ೧೦. ೫೨)

**ಕರೋಟಿ –** ತಲೆಬುರುಡೆ ಖಱೆಗೊರಳ್ ಅಸ್ಥಿಮಾಲೆ ನೃ ಕರೋಟಿ ವಿಭೂತಿ .. .. ಮೆಱೆವ ನಗಾತ್ಮಜರಮಣನಂ: **ತ್ರಿಷಷ್ಟಿಪು,** ೮. ೬೫)

**ಕರ್ಕಂಬು –** ಶ್ರೇಷ್ಠ ಬಾಣ (ಪಿಡಿದ ಕರ್ಕಂಬು ಅಮರ್ಕೆವೆತ್ತ ಪುಲಿದೋಲ ಪಟ್ಟಿಗೆಯುಂ: **ವರ್ಧಮಾಪು,** ೪. ೪೨ ವ)

**ಕರ್ಕಟಕ –** ಏಡಿ (ಬದ್ಧಾಶ್ಮ ತತ್ಸಂಧಿರಂಧ್ರನಿಕಾಯೋಪಗತ ಆರ್ತ ಕರ್ಕಟಕಜಾಲಂ: **ಶಾಂತೀಶ್ವಪು,** ೧೨. ೨೯)

**ಕರ್ಕಡೆ –** ಕಕ್ಕಡೆ, ಹಲ್ಲುಗಳಿರುವ ಒಂದು ಆಯುಧ (ಜವಮುಟಿದೊಂದು ಸೋಗೆನವಿಲ್ ಒಯ್ಯನೆ ಕರ್ಕಡೆಗಾಸಿಯಾಗಿ ಪಾಱುವುದುಂ: **ಪಂಪಭಾ,** ೫. ೫೧)

**ಕರ್ಕರ –** ಪಾರಿವಾಳ (ಬಕ ಕಾಕ ಕೋಕಿಲ ಶುಕ ಚಕ್ರವಾಕ ಚಕೋರ ಕರ್ಕರ ಶ್ಯೇನ ಕಪೋತ ಹಂಸ ಕಾರಂಡ ಭೇರುಂಡಾದಿ ಸಮಸ್ತ ವಿಹಂಗಮಜಾತಿಗಳೆಲ್ಲಮಂ ನೆರಪಿ: **ಪಂಚತಂತ್ರ,** ೨೨೭ ವ)

**ಕರ್ಕೇತನ –** ಒಂದು ಬಗೆಯ ರತ್ನ (ಇಂದ್ರನೀಲದ ಭದ್ರದೊಳಂ ಕರ್ಕೇತನದ ಜಾಳರಿಗೆಯೊಳಂ ಪಳುಕಿನ ಚಿತ್ರಭಿತ್ತಿಯೊಳಂ ವಿವಾಹಗೇಹಮಂ ಸಮೆಯಿಸಿ: **ಪಂಪಭಾ,** ೩. ೩೪ ವ); ಬೆಳ್ಳಿ

(ಕರ್ಕೇತನದ್ವಾರ ಶಾಖಾಂತರಮಂ ರತ್ನ ಸ್ಫುರತ್ತೋರಣಮೆಳಸೆ ಬೆಡಂಗಾದುದು ಉದ್ವಾಹಗೇಹಂ: **ಪಂಪರಾ,** ೫. ೧೧೨)

**ಕರ್ಕೊಳ** – ಒಂದು ಬಗೆಯ ಸುಗಂಧದ್ರವ್ಯ (ಅಭಿಷೇಕಂಗೆಯ್ದು ಕರ್ಕೊಳ ಜಾತೀಫಲ ಜಾತೀಪತ್ರ ಗೋಶೀರ್ಷ ಚಂದನ ಲವಂಗ ಕುಂದುರುಷ್ಕಾದಿ ಸುಗಂಧದ್ರವ್ಯಸಹಿತನಾಗಿ: **ಅಜಿತಪು,** ೪. ೭೦ ವ)

**ಕರ್ಗನೆ** – ಕಪ್ಪಗೆ (ದನುಜೇಂದ್ರನ ಒಡ್ಡು ಕರ್ಗನೆ ಕನಿಯುತ್ತಿರೆ ನೋಡೆ ಕಂಡು ವಾನರಚಿಹ್ನರ್ ಮುನಿಸನುವಿಸೆ ಕಾದುವ ತಕ್ಕಿನೊಳ್ ಆಹವಭೂಮಿಗೆ ಎಕ್ಕೆಯಿಂ ನಡೆತಂದರ್: **ಪಂಪರಾ,** ೧೩. ೨೧)

**ಕರ್ಗು** – ಕಪ್ಪಾಗು, ಕಪ್ಪಿಡು (ಸಕಳಾಶಾಚಕ್ರಮುಂ ವ್ಯೋಮಮಂಡಳಮುಂ ಕರ್ಗಿ ಕಱಂಗಿ ತೋಱೆ: **ಆದಿಪು,** ೧೩. ೫೯)

**ಕರ್ಗುಡಿವಡು** – (ದೀಪದ) ಕಪ್ಪಾದ ಕುಡಿ (ದೀಪಿಕೆಯುಂ ಕರ್ಗುಡಿವಟ್ಟುದು ಎನ್ನಿಯಂ ಇನ್ನುಂ ಬಾರನೇಕೆ: **ಲೀಲಾವತಿ,** ೨. ೫೪)

**ಕರ್ಚಿ ಕಳೆ** – ತೊಳೆದು ಪರಿಹರಿಸು (ಕಳಿಮಳಿನ ಕುಮತಸಂಗತ ಕಳಂಕಮಂ ಕರ್ಚಿ ಕಳೆವೊಡೆ ಅಭವೋದಿತ ನಿರ್ಮಳ ವಾಕ್ಸುಧಾಪೂರಮೆ ಕಳೆಗುಂ: **ಸಮಯಪ,** ೩. ೪೫)

**ಕರ್ಚಿಸು** – ಹಲ್ಲಿನಿಂದ ಕಚ್ಚುವಂತೆ ಮಾಡು (ಕಲಹಂಸೆಗಳ್ ಬಲ್ಲಿತಪ್ಪುದೊಂದು ದಕ್ಕಂ ತಂದದಱೆರಡು ಕಡೆಯುಮಂ ತಾವಡಸಿ ಕರ್ಚಿ ನಡುವೆಯಾವೆಯಂ ಕರ್ಚಿಸಿಕೊಂಡು: **ಪಂಚತಂತ್ರ,** ೨೨೪ ವ)

**ಕರ್ಚು** – ತೊಳೆ, ಪ್ರಕ್ಷಾಲನ (ಇನ್ನಱೆದು ಜಿನೇಂದ್ರಧರ್ಮಜಳದಿಂ ಕಳೆ ಕರ್ಚು ಕಳಂಕಮಂ: **ಆದಿಪು,** ೩. ೪೦); ಹಲ್ಲಿನಿಂದ ಕಚ್ಚು (ನನೆಯಂಬನೆ ಕರ್ಚಿ ಪಾಱಿದಪುದೋ ಶೃಂಗಾರವಾರಾಶಿ ಭೋಂಕನೆ ಬೆಳ್ಳಂಗೆಡೆದತ್ತೊ ಕಾಮನ ಎಱೆ ಮೆಯ್ವೆರ್ಚಿತ್ತೊ ಪೇೞ್ ಈಕೆಗೆ ಎಂಬಿನಂ: **ಪಂಪಭಾ,** ೪. ೪೨)

**ಕರ್ಚುಂಗಲ್** – ಸೂಜಿಗಲ್ಲು (ಉಕಾರಾಂತದೊಳ್ ಗಕಾರಂ ಪರಮಾದುದರ್ಕೆ: ಸುರ್ಕುಂಗುರುಳ್, ಕರ್ಚುಂಗಲ್, ಚುರ್ಚುಂಗೊಳ್ಳಿ: **ಶಬ್ದಮದ,** ೧೮೧ ಪ್ರ ೧)

**ಕರ್ಣಜಪ** – ಚಾಡಿ ಮಾತು (ಶಾರ್ಙ್ಗಧರನುಂ ಆ ಮಂತ್ರಿವರ್ಗಮುಂ ನೋಡಿ ರಾಗಿಸಿ ಕರ್ಣಜಪದೊಳ್ ಮೂರ್ಛಾವ್ಯಾಸಂಗಮಂ ಬೆಸಗೊಳೆ: **ಶಾಂತಿಪು,** ೨. ೨೫ ವ)

**ಕರ್ಣತಾಳ** – ಕರ್ಣಚಾಲನ, ಕಿವಿ ಅಲ್ಲಾಡಿಸುವಿಕೆ (ಮದಾಮೋದ ಸುರಭಿಯುಂ ಮದಶೀಕರಾಸಾರ ಶಿಶಿರಮುಂ ಮದಾಮೋದಭರಮಂಥರಮುಂ ಅಪ್ಪ ಕರ್ಣತಾಳಾನಿಳನೆ: **ಆದಿಪು,** ೧೩. ೬ ವ)

**ಕರ್ಣದೂಷಿಕೆ** – ಕುದುರೆಗೆ ಬರುವ ಒಂದು ರೋಗ (ಆನೆಗೆ ಕೂಟಪಾಕಳಂ ಕುದುರೆಎ ಕರ್ಣದೂಷಿಕೆ ರಥಕ್ಕೆ ಸಿಡಿಲ್ ಭಟಮಂಡಲಕ್ಕೆ ಕೆಂಡದ ಮೞೆಯೆಂಬಿನಂ ಕಟಿದಂ ಅಂಬಿನ ಪೆರ್ಮೞೆಯಂ ಹಲಾಯುಧಂ: **ಪಂಪರಾ,** ೪. ೬೭)

**ಕರ್ಣಧಾರ** – ಹಡಗಿನ ಚಾಲಕ (ವಿಪುಳಾರ್ಥಮಂತ್ರಮುಂ ಯಾನಪಾತ್ರಮುಂ ಭಿನ್ನಮಾದೊಡೆ ಅಟೆವರ್ ವಸುಧಾಧಿಪ ಕರ್ಣಧಾರರ್ ಇರ್ವರುಂ: **ಪಂಚತಂತ್ರ,** ೨೯೩)

**ಕರ್ಣಪತ್ರ** – ಕಿವಿಯ ಆಭರಣ (ಪೊಡೆಮಟ್ಟ ಶಶಿಪ್ರಭೆಯಂ ಅಖಂಡಿತ ಕರ್ಣಪತ್ರ ಶೋಭಾಪಾತ್ರೆಯಾಗೆಂದು ಪರಸಿ: **ಚಂದ್ರಪ್ರಪು,** ೬. ೯೧ ವ)

**ಕರ್ಣಪರಂಪರೆ** – ಕಿವಿಯಿಂದ ಕಿವಿಗೆ ಬರುವ ರೀತಿ (ಎಂದು ಗಗ್ಗರಿಕೆಗೊಳ್ವ ಸರಮಂ ಕರ್ಣಪರಂಪರೆಯಿಂ ಕೇಳ್ದು ಸಿಂಹಬಲನ ಒಡವುಟ್ಟಿದರ್ ನೂರ್ವರ್ ಕೀಚಕರುಂ ಪರಿತಂದು ಮುಳಿಸಿನೊಳ್: **ಪಂಪಭಾ,** ೮. ೭೯ ವ)

**ಕರ್ಣಪಾಲಿಕೆ** – ಕಿವಿಯ ಹಾಲೆ (ತ್ರಿಲೋಚನದ ಲಲನೆಗೆ ಕರ್ಣಪಾಲಿಕೆಯ ಕಾಮಿನಿಗೆ ಕಪೋಳದ ವಿಪುಳೆಗೆ: **ಗಿರಿಜಾಕ,** ೩. ೯೧ ವ)

**ಕರ್ಣಪೂರ** – ಕಿವಿಯ ಆಭರಣ (ದಿಶಾಲಲನೆಯರ ವಕ್ತ್ರಂಡನ ವಿಲಾಸದೊಳ್ ನೆಗೞ್ದ ಕರ್ಣಪೂರಶ್ರೀಯಂ: **ಆದಿಪು,** ೭. ೯೫)

**ಕರ್ಣರಸಾಯನ** – ಕಿವಿಗೆ ಹಿತವಾಗಿರುವ, ಕರ್ಣನ ಕತೆಯಿಂದ ಹಿತವಾಗಿರುವ (ಕರ್ಣನ ಪಡೆಮಾತಿನೊಳ್ ಪುದಿದು ಕರ್ಣರಸಾಯನಮಲ್ತೆ ಭಾರತಂ: **ಪಂಪಭಾ,** ೧೨. ೨೧೭)

**ಕರ್ಣಶೂಲ** – ಕಿವಿಗೆ ನೋವು ತರುವ (ತದೀಯ ಪರುಷಭಾಷಿತಂ ತನಗೆ ಕರ್ಣಶೂಲಮಾಗೆ: **ಜಗನ್ನಾವಿ,** ೩. ೧೪ ವ)

**ಕರ್ಣಾಭ್ಯರ್ಣ** – ಕಿವಿಯ ಹತ್ತಿರ (ರಣಪಟಹ ರವಂ ದಿಗ್ವಾರಣ ಕರ್ಣಾಭ್ಯರ್ಣಮಂ ಪಳಂಚಲೆಯೆ: **ಪಂಪರಾ,** ೧೧. ೫೧)

**ಕರ್ಣಾವಧಿ** – ಕಿವಿಯವರೆಗೆ (ಪೂಗೆಗಳಯ್ದುಮಂ ಒರ್ಮೆಯೆ ಪೂಡಿಕೊಂಡು ಕರ್ಣಾವಧಿಯಾಗೆ ತೀವಿ ತೆಗೆದು: **ಮಲ್ಲಿನಾಪು,** ೧೪. ೨೭)

**ಕರ್ಣಿಕಾ[ಕೆ]** – ತಾವರೆಯ ಮಧ್ಯಭಾಗ (ಇದು ಭೂಪದ್ಮದ ಕರ್ಣಿಕಾವಿಳಾಸಂ ಮೇಣ್ ಇಂತಿದು ಆಕಾಶಪದ್ಮದ ಕಾವು ಎಂಬಿನಂ: **ಅಜಿತಪು,** ೧೧. ೬)

**ಕರ್ಣಿಕಾರ** – ಬೆಟ್ಟದಾವರೆ (ಆರ್ದ್ರಕೇಸರಂಬೆರಸಿದ ಚೆಲ್ವು ತಳ್ತೆಸಳ್ ಅದೇನೆಸೆದಿರ್ದುದೊ ಕರ್ಣಿಕಾರದಾ: **ಆದಿಪು,** ೧೧. ೧೧೭)

**ಕರ್ಣಿಕಾರಕ** – ಕರ್ಣಿಕಾರ (ಕೆಂದಳಿರುರ್ಚುತಿರ್ದುವು ಒತ್ತಿದುವೆಲೆ ಗಂಟಮೊತ್ತವಿಸಿ ಕೋರಕಮಂ ನವಕರ್ಣಿಕಾರಕಂ: **ಲೀಲಾವತಿ,** ೯. ೬೨)

**ಕರ್ಣಿಕೆ** – ತಾವರೆಯ ಮಧ್ಯಭಾಗ (ಜಂಬೂದ್ವೀಪವೆಂಬ ಶುಂಭತ್ ಕನಕಾಂಭೋಜದ ಕರ್ಣಿಕೆಯೆನೆ ವಿಭ್ರಾಜಿಪುದು: **ಕುಸುಮಾಕಾ,** ೧. ೨೪)

**ಕರ್ಣೇಜಪ** – ಚಾಡಿಕೋರ (ಆತಂ ಕರ್ಣೇಜಪರ ಮಾತಂ ಕೇಳ್ದು ಕೈಕೊಂಡಂ: **ಪಂಚತಂತ್ರ,** ೨೦೬ ವ)

**ಕರ್ಣೋತ್ತಂಸ** – ಕಿವಿಯ ಆಭರಣ ನಮ್ಮ ಪುರೀಪುರಂಧ್ರಿಯರ ಕರ್ಣೋತ್ತಂಸಮಂ ನಾಡೆ ಕಾದಾತಂ: **ಚಂದ್ರಪ್ರಪು,** ೫. ೧೧೩)

**ಕರ್ಣೋತ್ಪಲ** – ಕನ್ನೈದಿಲೆ (ನೆಲಸಿ ಕಿವಿಯೊಳ್ .. .. ಪೊಳೆವುದೊಳ್ಪನೆಂಬೀ ಕರ್ಣೋತ್ಪಲಮುಮಂ: **ಕವಿರಾಮಾ,** ೩. ೧೧೬))

**ಕರ್ತಾರ** – ಸೃಷ್ಟಿಕರ್ತ (ಕರ್ತಾರಂಗೆ ಎಱಗುವುದು ಅತಿವರ್ತಿತ್ವಂ ಪೊಲ್ಲದೆಂದು ಪುರುಸೂನುಗೆ ಮುಂ ಮಾರ್ತಲೆಯಾದ ಚೆಳಾತಾವರ್ತನರಂ ಅಂದು ಊಱೆ ಕಲ್ಪಿಪಂತಾಯ್ತು ನಗಂ: **ಶಾಂತಿಪು,** ೧೧. ೫೨)

**ಕರ್ತೃ ಭೋಕ್ತೃ** – ಮಾಡುವವನು, ಅನುಭವಿಸುವವನು (ಜೀವಂ ಕರ್ತೃ ಭೋಕ್ತೃ ಎಂಬೀ ಸೂಕ್ತಂ ಜಿನವಚನದೊಳಲ್ಲದೆ ಮತ್ತಿನ ಕುಮತದೊಳುಂಟೆ: **ಸಮಯಪ,** ೩. ೧೯)

**ಕರ್ದಮ** – ಕೆಸರು, ನೀರಲ್ಲಿ ಕದರಿರುವುದು (ವೈಶ್ಯರಾಜಗೇಹಾಂಗಣಂ ಒಪ್ಪುಗುಂ ಕರಿಮದೋತ್ಕಟ ಕರ್ದಮ ದುರ್ದಿನಾಂಗಣಂ: **ಸುಕುಮಾಚ,** ೧೦. ೫೪)

**ಕರ್ದಮೋದಕ** – ಸ್ತಂಭನಗಹನ; ನೀರಿನಿಂದಲೂ ಕೆಸರಿನಿಂದಲೂ ತುಂಬಿದ ಭೂಪ್ರದೇಶ (ಜಲಪರಿಪೂರ್ಣ ಜಲಾಶಯಮುಂ ದುರ್ದರಕರ್ದಮೋಪೇತಾತೀತಮಪ್ಪುದು ಕರ್ದಮೋದಕಂ ಎಂಬುದಕ್ಕುಂ: **ಪಂಚತಂತ್ರ,** ೨೯೭ ವ)

**ಕರ್ದಿಂಗಳ್** – ಅಮಾವಾಸ್ಯೆ (ಬಸಿರ್ಪೆಂಡತಿ ವೇಳಾಸ್ವಾಮಿನಿಯೆಂಬೊಳ್ ಕರ್ದಿಂಗಳಿರುಳೊಳ್ ಕಟ್ಟಿಲೆಯೊಳ್ ನಿರ್ಗ್ರಂಥಮಪ್ಪ ರೂಪಂ ಕಂಡು ಬೆರ್ಚಿದೊಡೆ: **ವಡ್ಡಾರಾ,** ೯೦. ಸಾ ೧೨)

**ಕರ್ದುಂಕು** – ಕೊಕ್ಕಿನಿಂದ ಕುಟುಕು (ಪಸರಿಸಿದ ಪದ್ಮರಾಗದ ಪೊಸಗೆಂಪಂ ಮಾಂಸಮೆಂದು ಮುಂ ಕರ್ದುಕಲ್ಕೆ ಆಟಿಸಿಯುಂ: **ಆದಿಪು** ೧೨. ೧೨೨)

**ಕರ್ದುಕು** – ಕರ್ದುಂಕು (ಮಯೂಖಶೈವಾಳಮಂ ಮರಾಳನಿಕರಂ ಕರ್ದುಂಕುವವೋಲ್ ಆದುವಾಗಳ್ ವಧೂ ಕರಾಂಬುರುಹ ಸಂಚಳದ್ಧವಳಚಾಮರಶ್ರೇಣಿಗಳ್: **ಮಲ್ಲಿನಾಪು,** ೮. ೧೨)

**ಕರ್ನೆಯ್ದಿಲ್** – ಕನ್ನೈದಿಲೆ (ಲತೆಯುಂ ಕರ್ನೆಯ್ದಿಲುಂ ಸೋಗೆಯುಮ್ ಅತನುತನುಧನುರ್ಲೇಖೆಯತುಂ: **ಆದಿಪು,** ೪. ೨೦)

**ಕರ್ಪಟ** – ಬಟ್ಟೆ, ಹರಿದ ಬಟ್ಟೆ (ಒರ್ವ ಪಾರ್ವಂ ವಿಸ್ತೀರ್ಣ ಜೀರ್ಣ ಕರ್ಪಟಾವೃತ ಕಟಿತಟನುಂ ಆಗಿ ಬಂದು ಕಣ್ಮುಚ್ಚಲ್ ಎಡೆವೇಡೆ ತನಗವರ್ ಪಾಸಲ್ಕೊಟ್ಟ ಕೃಷ್ಣಾಜಿನಮಂ ಪಾಸಿ ಪಟ್ಟಿರ್ದನಂ: **ಪಂಪಭಾ,** ೩. ೩೧ ವ)

**ಕರ್ಪರ** – ತಲೆಬುರುಡೆ (ಶೇಷಕಂಠ ಕಠಿನಾಸ್ಥಿಶ್ರೇಣಿ ನುರ್ಗಾಗದಿರ್ಪುದೆ ಕೂರ್ಮೋನ್ನತ ಕರ್ಪರಂ ನಳಿದು ಬೆನ್ನಂ ಪತ್ತದೇಂ ಮಾಣ್ದುದೇ: **ಪಂಪರಾ,** ೫. ೮೭)

**ಕರ್ಪಿಡಿ** – ಕಪ್ಪಾಗು (ಪಿಡಿಕೆಯ್ ತೀವಿದ ಕೂರ್ಗಣೆ ಮಡಕಾಲ್ವರಂ ಅಲೆವ ಕಚ್ಚೆ ನಿಡಿಯಸಿಯ ಒಱೆ ಕರ್ಪಿಡಿದ ಪಣೆಕಟ್ಟು ಕೆಯ್ಪಡೆ ಬೆಡಂಗನೊಳಕೊಳೆ ಧನುರ್ಧರರ್ ಪೆಣೆದೆಚ್ಚರ್: **ಪಂಪಭಾ,** ೧೦. ೭೧)

**ಕರ್ಪು** – ಕಪ್ಪು (ಪೊನಲ್ಗಳ ಕೆಂಪು ಪಸುರ್ಪು ಕರ್ಪು ಬೆಳ್ಪು ಒಳಕೊಳೆ ಶಕ್ರಕಾರ್ಮುಕವಿಳಾಸಮಂ ಏನೆರ್ದೆಗೊಂಡು ಬೇಟದತ್ತಳಗಮಂ ಉಂಟುಮಾಡಿದುದೋ ಕಾಮನ ಕಾರ್ಮುಕದಂತೆ ಕಾರ್ಮುಕಂ: **ಪಂಪಭಾ,** ೭. ೨೫); ಭಂಗ (ಪಿರಿದುಂ ಬನ್ನದ ಕರ್ಪೆಸೆದುದು ತೊಱೆಗಿನ್ನುಂ ಹರಗಳ ತಮಾಳನೀಳಚ್ಛವಿಯಂ: **ಪಂಪಭಾ,** ೫. ೫೪)

**ಕರ್ಪೂರ** – ಒಂದು ಸುಗಂಧಯುಕ್ತ ವಸ್ತು (ಸುದರ್ಶನಮೆಂಬ ಮಣಿಕುಟ್ಟಿಮಮಪ್ಪ ಬೊಡ್ಡಣ ಬಾವಿಯೊಳ್ ಕರ್ಪೂರ ಕಾಳಾಗರು ತುರುಷ್ಕ ಕುಂಕುಮ ಚಂದನಾದಿ ಸುಗಂಧ ದ್ರವ್ಯಂಗಳಿಂ ಬೆರಸೆ: **ವಡ್ಡಾರಾ,** ಪು ೧೩೭, ಸಾ ೨೨)

**ಕರ್ಪೂರಪಾಂಸು** – ಅಚ್ಚಕರ್ಪೂರ (ಸುರೇಂದ್ರಸಮಿತಿ ಸುರತರುಪ್ರಸೂನ ಕರ್ಪೂರಪಾಂಸು ಗೋಶೀರ್ಷ ಚಂದನದ್ರವಪರಿಮಳಂ: **ಆದಿಪು** ೭. ೧೧೧ ವ)

**ಕರ್ಪೂರಪಾಳಿ** – ಕರ್ಪೂರದ ಹಳುಕು (ಶ್ರುತಿಸೌಖ್ಯಾವಹ ವಲ್ಲಕೀಕ್ವಣದೊಳ್ ಕರ್ಪೂರಪಾಳೀ ವಿಮಿಶ್ರಿತತಾಂಬೂಲರಸೋತ್ಕಟಪ್ರಮದದೊಳ್: **ಆದಿಪು,** ೯. ೧೧೮)

**ಕರ್ಬಸು** – ಕಪ್ಪು ಹಸು (ಅಗ್ಗದ ನಿಡುಗೋಡು ಮೇಡುವಂ ಅಮರುತ್ತುಂ ಇಱುಂಕಿದ ಕೆಚ್ಚಲ್ ಎತ್ತಮೆತ್ತಿದ ಕುಡಿವಾಲಮಂದೆಸೆಯೆ ಕರ್ಬಸುಗಳ್ ಪರಿಗೊಂಡುವಾಜಿಯೊಳ್: **ಪಂಪಭಾ,** ೮. ೧೦೪); ಪಿತ್ತಕೋಶ (ಬಿಸುನೆತ್ತರ್ ತೊಗಲ್ ಎಲ್ವು ಕರ್ಬಸು ಕರುಳ ಪಿಂದೊಡೆ ಖಂಡಂ ಮಿದುಳ್ ಬಸೆ ಶುಕ್ಲಂ ಕ್ರಿಮಿ ಕೀವು: **ಪುಷ್ಪದಂಪು,** ೧೩. ೪೯)

**ಕರ್ಬಾಳ** – ಕಪ್ಪು ಬಾಳದ ಬೇರು, ಲಾವಂಚ (ಮದನರಾಗವರ್ಧನಕರಮೀ ಮರುವಂ ಕರ್ಬಾಳಮಮುಂ ಇರೆ: **ಆದಿಪು,** ೧೧. ೧೨೭)

**ಕರ್ಬುನ** – ಕಬ್ಬಿಣ (ಕರ್ಬುನಮುಮಂ ಇತರಮುಮಂ ಅದೊಂದಿನಿಸಾನುಂ ಕ್ರಿಯೆಯಿಂ ಆಗುಮಾಡುವ ತೆಱದಿಂ: **ಸಮಯಪ,** ೧೫. ೭೦)

**ಕರ್ಬುರ** – ಬೂದುಬಣ್ಣ, ಶ್ಯಾಮಲವರ್ಣ (ಕರ್ಬುರಘನಕಾಂತಿಕಾಂತಕಬರೀಭರೆ ಮಾರುತಯಾನಯಾನೆ ಭಾಸುರ ಸುರಚಾಪ ಚಿತ್ರವಸನಾವೃತೆ ನೀರದಲಕ್ಷ್ಮಿ ರಾಜಿಪಳ್: **ಶಾಂತೀಶ್ವಪು,** ೧೨. ೫೧); ಬಂಗಾರ (ಉಲಿವ ದಯಾತರಂಗಿಣಿಯ ಪಾವಸೆ ಕರ್ಬುರ ಕಾಯದೀಪ ಕಜ್ಜಲಂ: **ನೇಮಿನಾಪು,** ೧. ೮೭)

**ಕರ್ಬುರಿತ** – ವಿವಿಧ ಬಣ್ಣಗಳು ಸೇರಿದ (ನವೀನ ಪ್ರಸೂನ ಮಧು ವಿಲೀನ ಮಧುಕರ ಪಟಲ ಕರ್ಬುರಿತ ರತ್ನ ಪಟಲಿಕೆಗಳಿಂ: **ಪಂಪರಾ,** ೧೨. ೨ ವ)

**ಕರ್ಬೂರ** – ಕಪ್ಪು ಬಣ್ಣ (ಶ್ಯಾಮಳಂ ಅಸಿತಂ ಕೃಷ್ಣಂ ಶ್ಯಾಮಂ ಕಾಲಂ ಶಿತಿಯೆ ನೀಳಂ ತಾನಂತಾ ಮೇಚಕರುಚಿ ಪಾಂಡುಶ್ಯಾಮಂ ಕಲ್ಮಾಷಮದುವೆ ದಲ್ ಕರ್ಬೂರಂ: **ಅಭಿಧಾವ,** ೨. ೧. ೬೩)

**ಕರ್ಬೊನ್** – ಕಬ್ಬಿಣ (ಕಾಯ್ದ ಕರ್ಬೊನ್ನ ಸೂಜಿಗಳಂ ಬೆರಲ್ಗಳೊಳ್ ಬೆಟ್ಟುವರುಂ: **ಆದಿಪು,** ೫. ೮೫ ವ)

**ಕರ್ಬೊನ್ನ ಕಡಲೆ** – ಕಬ್ಬಿಣದ ಕಡಲೆ, ತುಂಬ ಕ್ಲಿಷ್ಟಕರವಾದ (ಓದಿದೊಡೆ ಕಲ್ಲಮಾಲೆಯನಾದಂ ಕರ್ಬೊನ್ನ ಕಡಲೆ ವಾದಿಸೆ ರಸಮಂ ಸೋದಿಸೆ ಉರ್ಕಿನ ಪುಡಿ ಎನಿಪಾ ದುಷ್ಕವಿತೆಗಳಂ ಎಣಿಸಲೇಕೀ ಕೃತಿಯೊಳ್: **ಗಿರಿಜಾಕ,** ೧. ೨೨)

**ಕರ್ಮ** – [ಜೈನ] ಜೀವವನ್ನು ಪರತಂತ್ರಗೊಳಿಸುವ ಪಾಪ–ಪುಣ್ಯಗಳು (ಅನಂತನಾಮಂ ಉದ್ದಾಮ ಅನಂತ ಕರ್ಮಜಯದಿಂ ದೊರೆವೆತ್ತುದು: **ಅನಂತಪು,** ೧. ೧)

**ಕರ್ಮಕಾರ** – ಕೆಲಸ ಮಾಡುವವನು (ಒಂದು ದಿವಸಂ ಮಧ್ಯಾಹ್ನ ಸಮಯಮಪ್ಪನ್ನೆಗಂ ಭರಂಬಟ್ಟು ಕೆಲಸಂಗೈದಲ್ಲಿಯ ಬಿನ್ನಣಿಗರುಂ ಕರ್ಮಕಾರರುಂ ತಮ್ಮ ತಮ್ಮ ಮನೆಗೆ ಉಣಲ್ ಪೋಪುದುಂ: **ಪಂಚತಂತ್ರ,** ೮೨ ವ)

**ಕರ್ಮಕ್ಷಯ** – [ಜೈನ] ಇರುವ ಕರ್ಮಗಳನ್ನು ನಾಶಗೊಳಿಸುವುದು ಮತ್ತು ಬರುವ ಕರ್ಮಗಳನ್ನು ನಿವಾರಿಸುವುದು (ಪ್ರಾಯೋಪಗಮನದಿಲುಂ ಸಂನ್ಯಸನಂ ಗೆಯ್ದು ಕರ್ಮಕ್ಷಯಂಗೆಯ್ದು ಮೋಕ್ಷಕ್ಕೆವೋದ: **ವಡ್ಡಾರ,** ಪು. ೧. ಸಾ. ೧೦)

**ಕರ್ಮನಿರ್ಜರೆ** – [ಜೈನ] ಕರ್ಮಕ್ಷಯ (ತಚ್ಚರಿತಮಂ ಕಾವ್ಯಂಗಳೊಳ್ಕೂಡೆ ಬಣ್ಣಿಸಿ ಪೇೞ್ವಾತನ ಕರ್ಮನಿರ್ಜರೆಯನಂತಿತಿಂತೆನಲ್ ಬರ್ಕುಮೇ: **ಆದಿಪು,** ೧. ೩೭)

**ಕರ್ಮಪಾಕ** – ಪೂರ್ವಜನ್ಮದ ಕರ್ಮಗಳ ಫಲ (ಸ್ಥಾವರನಾಮ ಕರ್ಮಪಾಕಾಧೀನಂಗಳ್ ಸ್ಥವರಂಗಳ್: **ಆದಿಪು,** ೧೦. ೬೧ ವ)

**ಕರ್ಮಭೂಮಿ** – [ಜೈನ] ಅವಸರ್ಪಿಣಿ ಕಾಲದ ಐದು–ಆರನೆಯ ವಿಭಾಗಗಳಿಗೆ ಸಂಬಂಧಿಸಿದ ಭೂಮಿ, ಭಾರತ ಮತ್ತು ಐರಾವತ ಕ್ಷೇತ್ರಗಳೊಳಗಿನ ಆರ್ಯಖಂಡ (ಇದು ಕರ್ಮಭೂಮಿಯಂದಂ ಪೊದಳ್ದು ತೋಱಿದುದು ಭೋಗಭೂಮಿಸ್ಥಿತಿ ಕುಂದಿದುದು: **ಆದಿಪು,** ೬. ೬೩)

**ಕರ್ಮವಿಪಾಕ** – [ಜೈನ] ಪೂವಾರ್ಜಿತ ಕರ್ಮದ ಫಲ (ನಾನಾವಿಧಕರ್ಮವಿಪಾಕವಿಚಯಮುಮಂ ಊರ್ಧ್ವ ಅಧೋ ಮಧ್ಯಗತಾಸಮಸ್ಥಿತಿಯ ಲೋಕಸ್ಥಿತಿ ಸ್ಮರಣ ಪರಿನತ ಸಂಸ್ಥಾನವಿಚಯಮುಮಂ; **ಶಾಂತಿಪು,** ೯. ೧೧೮ ವ)

**ಕರ್ಮಾಯತ್ತ** – ಕರ್ಮವಶ (ಪುರಾತನ ಕರ್ಮಾಯತ್ತಮಲ್ತೆ ದೇಹಿಗಳೆಸಕಂ: **ಪಂಪರಾ,** ೯. ೯೬)

**ಕರ್ವು** – ಕಬ್ಬು (ಮದನಂಗುಪ್ಪರವಟ್ಟಮಾಗದ ತಳಿರ್ ಕಾಮಂಗೆ ಕೋದಂಡಮಾಗದ ಕರ್ವು .. .. ಮಱಿದು ಆಗವೆಂಬ ವಿವಿಧೋದ್ಯಾನಂಗಳ ಆ ದೇಶದೊಳ್: **ನೇಮಿನಾಪು,** ೧. ೬೪)

**ಕರ್ವುಗೋಲ್** – ಕಬ್ಬಿನ ಜಲ್ಲೆ (ಪರಿವ ಕಾಲ ಕರ್ವುಗೋಲ ಚೆಲ್ವನಾಂತು ತೋರ್ಪ ಬನದ ನಡುವೆ: **ಕಬ್ಬಿಗಕಾ,** ೩೪೩)

**ಕರ್ವುದೋಂಟ** – ಕಬ್ಬಿನ ತೋಟ (ಈ ಕೆಂದಳಿರ ತುಱುಗಲ್ ಈ ಅಂಚೆ ಈ ಕರ್ವುದೋಂಟಂ: **ಕಬ್ಬಿಗಕಾ,** ೧೧೬)

**ಕರ್ವುವಿಲ್** – ಕಬ್ಬಿನ ಬಿಲ್ಲು, ಮನ್ಮಥನ ಬಿಲ್ಲು (ಕರ್ವುವಿಲ್ಗದೇಂ ನಿಲ್ಲದೆ ಕಂತು ಮಾಡಿದನೊ ತೋಮರದು ಉಪ್ಪರವಟ್ಟದೊಪ್ಪಮಂ: **ಆಚವರ್ಧ,** ೨. ೬)

**ಕರ್ವುವಿಲ್ಲ** – ಮನ್ಮಥ (ಸೋಗೆ ದನಿಯೆತ್ತದಿರು ಒಯ್ಯನೆ ಬಂದು ಕುಳ್ಳಿರು.. .. ಎಂದು ಗಿಳಿಗಳ್ ಕಡುಪಿಂ ನಡೆತಂದು ಸುತ್ತಲುಂ ಪಡಿಯಱರಾಗಿ ಚಪ್ಪರಿಪವೋಲಗದೊಳ್ ಸಲೆ ಕರ್ವುವಿಲ್ಲನಾ: **ಕಬ್ಬಿಗಕಾ,** ೧೦೦)

**ಕರ್ವೆಟ್ಟು** – ಕಪ್ಪು ಬೆಟ್ಟ, ನೀಲಾಚಲ (ಜೀವಂಬಿಟ್ಟು ಬಾಯಂ ನಯನಯುಗಳಮಂ ಬಿಟ್ಟು ಕರ್ವೆಟು ಬೀೞ್ವಂತಿರೆ ಬಿಟ್ಟಂ ಭೂಮಿಯೊಳ್: **ಪಂಪರಾ,** ೧೩. ೧೨೮)

**ಕರ್ವೊನ್** – ಕರ್ಬೊನ್, ಕಬ್ಬಿಣ (ಅವಳೆಳಸಿ ಪೊಕ್ಕ ಪೂಗೊಳಂ ಕಾಯ್ದ ಕರ್ವೊನ್ನ ಪುತ್ಥಳಿಯನಿಕ್ಕಿದಂತಿರೆ ಉರ್ಕುವುದುಂ: **ಆಚವರ್ಧ,** ೪. ೫೮ ವ)

**ಕರ್ಶನ** – ಸೊರಗುವಿಕೆ (ಕರ್ಶನಮಘಸಮಿತಿಗೆ ಸದ್ದರ್ಶನದಿಂದಪ್ಪುದಕ್ಕೆ ನಿಮಗಕ್ಕೆ ಪುನರ್ದರ್ಶನಂ: **ಆದಿಪು,** ೫. ೬೪)

**ಕರ್ಷ** – ಎಳೆಯುವಿಕೆ (ಈ ಪರಮಕರ್ಷಮೋ ಪಲಕಾಲಂ ತಾನಿರ್ದಂದದ ಚಿಂತಾಗ್ಲಾನಿಮನಂಬೊಕ್ಕುದರಸಿಗೆ: **ಪುಷ್ಪದಂಪು,** ೩. ೭೮)

**ಕರ್ಷಕ** – ರೈತ (ಕೃಷಿಕಂ ಕ್ಷೇತಾಜೀವಂ ಕೃಷೀವಳಂ ಕರ್ಷಕಂ: **ಅಭಿಧಾವ,** ೧. ೧೧. ೬೭)

**ಕರ್ಷಣ** – ಸೆಳೆತ (ದುಸ್ಸ್ವಪ್ನದರ್ಶನಕರ್ಷಣಾರ್ಥಮಾಗಿ .. .. ಶಾಂತಿಕ್ರಿಯೆಗಳಂ ನೆಗೞ್ದು: **ಆದಿಪು,** ೧೫. ೪೮ ವ)

**ಕಷೋಪಲ** – ಒರೆಗಲ್ಲು (ತಂಬೆಲರೆಂಬ ಪೊಂಬರದನಲರ್ಪೊನ್ನಂ ಪರ್ಣಕಷೋಪಲದೊಳ್ ಒರೆಯೆ ಸುರಿದು ಪರಿದ ಪೊಂಬುಡಿಯೆಂಬಂತೆ: **ಶಬರಶಂ,** ೨. ೪೨ ವ)

**ಕಲ್** – ಅಭ್ಯಾಸಮಾಡು (ಎಮ್ಮನ್ನರಪ್ಪ ಋಷಿರೂಪಕರ್ಗಲ್ಲದೆ ಕಲಲುಂ ಕಲಿಸಲುಂ ಬಾರದು: **ಸುಕುಮಾಚ,** ೩. ೨೮ ವ); ಕಲ್ಲು, ಬಂಡೆ (ಅಂಜದೆ ಬಿಲ್ಲಂ ಕಲ್ಲೆಂಬುದುಂ ದ್ರೋಣಾಚಾರ್ಯರೊಳಾದ ಕಾರುಣ್ಯಕ್ಕೆ ಮೆಚ್ಚಿ: **ಧರ್ಮಾಮೃ,** ೧೩. ೨೭ ವ)

**ಕಲ** – ಪಾತ್ರೆ (ಕಲನೊಂದಂ ತೀವಿ ನೀರಂ ಪೊಸೆದು .. .. ಒಣಗಿದ ಭೂಜಕ್ಕೆ ನೀರ್ವೊಯ್ವುದುಂ .. .. ನಿಷ್ಫಲೋದ್ಯೋಗಂ: **ಪಂಪರಾ,** ೧೬. ೫೫); ಇಂಪಾದ (ಅರಳೆಲೆ ಪೊಂಗುನೂಲ್ ಪುಲಿಯುಗುರ್ ಮಣಿಕಿಂಕಿಣಿ ಗೆಜ್ಜೆ ರಕ್ಕೆ ಕುಂಡಲಯುಗ ಮುತ್ತು ಕಾಲ್ಗಡಗಂ ಅಂದುಗೆ ಕಂಕಣ ಕಿಂಕಿಣೀಗಣಂ ಕಲ ಮಣಿನೂಪುರಂ ತನಗೊಡಂಬಡೆ: **ಅಜಿತಪು,** ೫. ೬೨)

**ಕಲಂಕು** – ಕಲಕು, ಮಥನಮಾಡು (ಒದವಿ ತಗುಳ್ದ ಗಗ್ಗರಿಕೆ ಸೂಸುವ ಕಣ್ಬನಿ ಕಣ್ಗಳೊಳ್ ಕಲಂಕಿದ ಬೆಳರ್ಗಂಪು: **ಆದಿಪು,** ೧೨. ೨೫)

**ಕಲಂಬಡೆ** – ಶಕ್ತಿ ಹೊಂದು, ಆರೋಗ್ಯ ಪಡೆ (ಪಡೆಯದೆ ಮನುಷ್ಯಗತಿಯಂ ಪಡೆದುಂ ರತ್ನತ್ರಯಂಗಳಂ ಪಡೆಯದೊಡೇ ಪಡೆಮಾತೊ ಬೇಗಮರ್ದುಂಬಡೆದುಂ ಕಲಂಬಡೆಯದಂತೆ ನಿಷ್ಫಲಮಲ್ತೇ: **ಸುಕುಮಾಚ,** ೧೨. ೫೯)

**ಕಲಕಾಂಚಿ** – ಇಂಪಾದ ಶಬ್ದಮಾಡುವ ಒಡ್ಯಾಣ (ಉಲಿಯೆ ಕಲಕಾಂಚಿ ಮುಡಿಯಿಂದಲರುಗೆ: **ರಾಜಶೇವಿ,** ೧೦. ೭)

**ಕಲಕಾಂಚೀದಾಮ** – ಡಾಬು (ನಿತಂಬಂ ಕಲಕಾಂಚೀದಾಮಶೂನ್ಯಂ ಚರಣಯುಗಳಮುಂ ನೂಪುರಾಳಾಪಶೂನ್ಯಂ: **ಆದಿಪು,** ೩. ೧೩)

**ಕಲಡು** – ಕೆಸರಾಗು (ಕಲಡು–ಕಲುಷೇ: **ಶಬ್ದಮದ,** ಧಾ ೨೯೨)

**ಕಲತ್ರ** – ಹೆಂಡತಿ (ಅವರವರ ದೆಸೆಯೊಳ್ ಪರಿವಾರ ಕಲತ್ರ ಪುತ್ತರ ಶಸ್ತ್ರಸಮೇತಂ ಇರಿಸಿ: **ಅನಂತಪು,** ೫. ೫೪ ಮತ್ತು ೫೫)

**ಕಲಧೌತ** – ಚಿನ್ನ (ವಿರಾಜಿತ ಘಂಟಂ ಕಲಧೌತತುಂಗಕಳಶಂ ಚೆಲ್ವಾಯ್ತು ರಾಜಾಲಯಂ: **ಆದಿಪು,** ೬. ೧೦೭)

**ಕಲಧೌತಸ್ಥಾಸಕ** – ಚಿನ್ನದ ಲೇಪ (ಅತ್ಯಂತಧೌತ ಕಲಧೌತಸ್ಥಾಸಕಾಳಂಕೃತನಕ್ಷತ್ರಮಾಳಾಪರಿಕಲಿತಕರೀಂದ್ರಗಳೆ: **ಆದಿಪು,** ೧೩. ೬ ವ)

**ಕಲಂ** – ಪಾತ್ರೆ (ಮದಗಜಕುಂಭಕೋಟಿಯ ಕಲಂ ಕರಿದಂತದಕೇ ತರಪ್ಪು ಚರ್ಮದ ತೆರೆಸುತ್ತು: **ನೇಮಿನಾಪು,** ೩. ೫೧)

**ಕಲಮಕ್ಷೇತ್ರ** – ಬತ್ತದ ಗದ್ದೆ (ಮತ್ತಮಾ ವಿಚಿತ್ರಶೋಭೆಯಂ ತಳೆದ ಕಲಮಕ್ಷೇತ್ರಂಗಳೊಳ್; **ಮಲ್ಲಿನಾಪು,** ೨. ೧೪ ವ)

**ಕಲಲ** – ಮಾಸಲು ಬಣ್ಣ (ಆ ನರಕಯೋನಿಯೊಳ್ ಪಿರಿದಾನುಂ ನಿರ್ಗಳಿತ ಪೂತಿಗಂಧವ್ರಾತಸ್ಥಾನಂಗಳ್ ಕಲಲಪರಿಮ್ಲಾನಂಗಳ್ ಪೇಸುಪತದ ಸಂತಾನಂಗಳ್: **ಶಾಂತೀಶ್ವಪು,** ೯. ೭೬)

**ಕಲಶಜ** – ದ್ರೋಣ (ಅಂತೆ ಗೆಯ್ವೆಂ ಎಂದು ಕಲಶಜಂ ಅನಿಬರ ಮೊಗಮಂ ನೋಡಿ: **ಪಂಪಭಾ,** ೨. ೫೩ ವ)

**ಕಲಸುಗೂಳ್** – ಕಲಸಿದ ಅನ್ನ (ಕಲಸಗೂಳ್ಗಟ್ಟಿ ಮಹಾಚಳಕದಿಂ ಸತ್ ಶಕುನಂಗಳಿಂ ಒಲವಿಂ ನಡೆದತ್ತು ಪಾಂಥರ್ ಅರುಣೋದಯದೊಳ್: **ತ್ರಿಷಷ್ಟಿಪು,** ೨೪. ೨೨೦)

**ಕಲಹಕೃಷ್ಣಕ** – ಜಗಳಗಂಟ (ಆಕೆಯ ಮನದ ಮಾತ್ಸರ್ಯಚೇಷ್ಟೆಯಂ ಕಲಹಕೃಷ್ಣಕಂ ನಾರದನಜೆದು: **ಜಗನ್ನಾವಿ,** ೧೨. ೬೬ ವ)

**ಕಲಹಲಂಪಟ** – ಕಲಹಕೃಷ್ಣಕ (ಅಂಬರತಳದೊಳ್ ಕಲಹಲಂಪಟಂ ನಾರದನಾರ್ದಿರೆ: **ಗಿರಿಜಾಕ,** ೮. ೨೬)

**ಕಲಾಪ** – ಸಮೂಹ (ಅಂತು ವಲ್ಕಲಾವೃತ ಕಟಿತಟನುಮಾಗಿರ್ದ ಜಟಾಕಲಾಪನುಂ ಆಗಿ ತಪೋವನಕ್ಕೆ ಪೋಪ ಭಾರ್ಗವಂ: **ಪಂಪಭಾ,** ೨. ೪೫ ವ); ಚಂದ್ರ (ಕರುಣಿಸು ಕಾಲಸಂಹರ ಕಲಾಪಕಲಾಧರ ಸಾರಸ್ತ್ಕೃಪಾಕರ: **ಶಬರಶಂ,** ೫. ೨೦)

**ಕಲಾಪತಿ** – ಚಂದ್ರ (ಅಪರಾಶಾಪರ್ವತದಗ್ರದೊಳೆ ಕಲಾಪತಿ ಕಲೆ ಸಂಜೆ ಸರಿಯೆ ತೋರ್ಪವೊಲೆಸೆಗುಂ: **ರಾಜಶೇವಿ,** ೧೦. ೮೯)

**ಕಲಾಪಮಾಲೆ** – ನವಿಲುಗರಿಗಳ ಕಟ್ಟು (ಬಲ್ಮುಡಿ ತೋಱೆ ಕಲಾಪಮಾಲೆ ಸಂಗಳಿಸೆ .. .. ಎಳ್ತರುತಿರ್ದರ್ ಅಮರ್ತ್ಯನಾರಿಯರ್: **ಶಬಶಂವಿ,** ೩. ೧೫)

**ಕಲಾಪಿನೀ** – ಹೆಣ್ಣು ನವಿಲು (ಭೋರೆನೆ ಪೊಯ್ವುದುಂ ಆಱುಂ ಭೇರಿಗಳುಂ ಕನಕ ಕೋಣ ಹತಿಯಿಂದಂ ಬಂಭಾರವಮೇಂ ನೆಗೆದುದೊ ರಘುವೀರ ಕಲಾಪಿನೀ ಮೇಘರವಂ; **ಪಂಪರಾ,** ೧೨. ೨೦)

**ಕಲಾಪಿವಾಹಿ** – ನವಿಲನ್ನು ವಾಹನವಾಗಿಸಿಕೊಂಡವನು, ಷಣ್ಮುಖ (ವೀತದಂಭ ಹೇರಂಭ ಕಲಾಪಿವಾಹಪಿತ ತುಂಬುರಕಂಬಲಗಾನಲೋಲ: **ಶಬರಶಂ,** ೨. ೫)

**ಕಲಾಪಿಸ್ತ್ರೀ** – ಹೆಣ್ಣು ನವಿಲು (ಅಘದಿಂ ಬೀಜಾವಾಪಮೆನೆ ಜನ್ಮಲತೆಗೆ ಕಲಾಪಿಸ್ತ್ರೀಯುದರದಲ್ಲಿ ವಿಂಧ್ಯದೊಳೊಗೆದಂ: **ಯಶೋಧಚ,** ೩. ೩೪)

**ಕಲಾಭಾಗ** – ಆನೆಯ ಜಘನಪ್ರದೇಶದ ಕೆಳಗಿರುವ ಭಾಗ (ಸಮಪಾರ್ಶ್ವನುಂ ಮಾಂಸಕಲಾಭಾಗನುಂ: **ಅಜಿತಪು,** ೪. ೨೦ ವ)

**ಕಲಿ** – ಶೂರ (ಕಲಿಯನೆ ಪಂದೆ ಮಾಟ್ಟಿ ಕಡುವಂದೆಯಂ ಒಳ್ಗಲಿ ಮಾಟ್ಟಿ: **ಪಂಪಭಾ,** ೧೨. ೯೨)

**ಕಲಿಕೆ** – ಚಾತುರ್ಯ (ಅಂತು ಮುಂಬಗಲ್ವರಂ ತುಮುಱ ಕಾದುವ ಸಮರಭರಂ ಮನೋರಾಗಮಂ ಮಾಡೆಯುಂ ಮಮ್ಮಟಿಸಿ ಪಾಂಡವಕೌರವಬಲದ ಕಲಿಕೆಯ ಪ್ರಧಾನನಾಯಕರ್ಕಳ್: **ಪಂಪಭಾ,** ೧೩. ೩೭ ವ)

**ಕಲಿಗಂಟು** – ವೀರರ ಕೂದಲು ಗಂಟು (ಬೆನ್ನಪ್ಪಳಿಪ ಸೋರ್ಮುಡಿಯಂ ಕಲಿಗಂಟನಿಕ್ಕಿ: **ಸೂಕ್ತಿಸುಧಾ,** ೧೪. ೩೬)

**ಕಲಿಗೂಂಟಣೀ** – ಗಟ್ಟಿಯಾದ ಕುಂಟಲಗಿತ್ತಿ (ಮತ್ತೊಂದೆಡೆಯೊಳ್ ಒರ್ವಳ್ ಸಱೆಯಂ ತಳ್ಕೈಸಿದಂತಪ್ಪ ಕಲಿಗೂಂಟಣಿ: **ಲೀಲಾವತಿ,** ೨. ೬೫ ವ)

**ಕಲಿಗೋಂಟೆ** – ಭದ್ರವಾದ ಕೋಟೆ (ಪೋಗದ ಕಲಿಗೋಂಟೆ ಸಿಲ್ಕದ ವಿರೋಧಿ ಕುಟುಂಬಂ: **ಪುಷ್ಪದಂಪು,** ೫. ೫೫)

**ಕಲಿತನ** – ಪೌರುಷ; ಬಂಟತನ (ಕಲಿತನದಿಂದಂ ಲೀಗರ್ ಪುಲಿಯಂ ಪಿಡಿದೊಡೆ ಅದೇಂ ಬಿಡೆಂಬರ್: **ಧರ್ಮಾಮೃ,** ೧. ೧೩೩)

**ಕಲಿದ್ರುಮ** – ಕಲಿ ಸೇರಿಕೊಂಡ ಮರ, ತಾಳೆಯ ಮರ (ವಿಭೀತಕಮಕ್ಕುಂ ಕಲಿದ್ರುಮಂ ಭೂತಗೃಹಂ: **ಅಭಿಧಾವ,** ೧. ೮. ೧೨)

**ಕಲಿಯುಗಾಭ್ಯರ್ಣ** – ಕಲಿಯುಗದ ಹತ್ತಿರ (ಕಲಿಯುಗಾಭ್ಯರ್ಣದೊಳ್ ದ್ರವ್ಯಲೋಭಾತುರರ್ ಉನ್ಮಾರ್ಗೋಪದೇಶೋದ್ಯತಮತಿಗಳ್ ಅತಿಕ್ರೂರರಪ್ಪರ್ ದ್ವಿಜನ್ಮರ್: **ಆದಿಪು,** ೧೫. ೨೬)

**ಕಲಿಲ** – ಕೊಳಕು (ಸಲಿಲಂ ಕಲಿಲಂಗಳಾಗವೆಂದು ದೇವರ್ಕಳಂ ಇಂದ್ರಂ ಹಸ್ತಸಂಜ್ಞೆಯಿಂ ಬಾರಿಸಿದಂ: **ಅನಂತಪು,** ೫. ೭೨); ನಿಬಿಡವಾದ (ಕಲಿಲಘನಫೇನಬುದ್ಬುದಾದಿ ಪರಿಣತಿಯಿಂ: **ಆದಿಪು,** ೫. ೪೧ ವ)

**ಕಲಿಸು** – ಹೇಳಿಕೊಡು (ಎಮ್ಮನ್ನರಪ್ಪ ಋಷಿರೂಪಕರ್ಗಲ್ಲದೆ ಕಲಲುಂ ಕಲಿಸಲುಂ ಬಾರದು: **ಸುಕುಮಾಚ,** ೩. ೨೮ ವ)

**ಕಲುಂಬು** – ಕಲಕು; ಕೊಳೆ, ಕಿಲುಬು (ಈ ಎರಡುಂ ದುರ್ಣಯವೆನ್ನ ಕೀರ್ತಿಗೆ ಕಲುಂಬಂ ಮಾಡುಗುಂ: **ಪಂಪರಾ,** ೬. ೧೧೫)

**ಕಲುವಾದರಿ** – ಒಂದು ಬಗೆಯ ಪಾದರಿ ಹೂ (ಬೇಲ ಸೆಳ್ಳು ಸೀಗುರಿ ಒಡವರ ಬನ್ನಿ ಕಲುವಾದರಿ ಪಾದರಿ ಆದಿಯಾದ ಪೆರ್ಮರಗಳ್: **ಪುಣ್ಯಾಸ್ರ,** ೩. ೭೩)

**ಕಲುಷ** – ವೈರ (ಪಿರಿದುಂ ಕಾಯ್ಪಿನೊಳ್ ಎಯ್ದೆ ಕಾಯ್ವ ಸಮಕಟ್ಟಂ ದೋಷಮಲ್ತು ಅಕ್ಕ ಮಚ್ಚರಮುಂ ಮೋಘಂ ಎಡಂಬಡುಂ ಕಲುಷಮುಂ ಮುನ್ನುಳ್ಳುದು .. .. ನಿಷ್ಕಾರಣಂ ಕಾಯ್ವರೇಂ: **ಪಂಪಭಾ,** ೭. ೩೫); ರೋಷ, (ಕದಡು ಕೋಪಾಗ್ನಿ ಕೆಯ್ಗಣ್ಮೆ ಕಣ್ಮಲರೊಳ್ ಬಂದಿರೆ ನೋಡಿದಂ ಕಲುಷದಿಂ ಗಾಂಡೀವಿ ಗಾಂಡೀವಮಂ: **ಪಂಪಭಾ,** ೭. ೭); ಕಳಂಕ (ನೆನೆಯದೆ ಕಲುಷವಶಂ ನಚ್ಚಿನ ವಿದ್ಯೆಗಳಂ ಕಡಂಗಿ ಕಾಯುವ ಪದದೊರ್ಳ: **ಪಂಪರಾ,** ೧೦. ೨೯)

**ಕಲುಷಕಂಪಿತಕಟಂ** – ಕೋಪದಿಂದ ನಡುಗುತ್ತಿರುವ ಕಟವಾಯಿ (ಕೋಪಗ್ರಹಗ್ರಸ್ತನಾಗಿ ಕಲುಷಕಂಪಿತಕಟಂ ಮರ್ಕಟಂ ಆ ಪಕ್ಕಿಯಂ ಪಿಡಿದು ಕೊಂದಿಕ್ಕಿತ್ತು: **ಪಂಚತಂತ್ರ,** ೩೪೦ ವ)

**ಕಲೆಗಟ್ಟು** – ಗಾಯ ಮಾದು ಗುರುತು ಬೀಳು (ವ್ರಣಸಂದೋಹಿಣಿಯೆಂಬ ಘುಟಿಕೆಯ ಸಾಮರ್ಥ್ಯದಿಂ ಪುಣ್ಣೆಲ್ಲಂ ಕಲೆಗಟ್ಟಿ ಮೆಲ್ಲನೆ ಕಣ್ಣಂ ತೆಱೆದು ನೋಡಿ: **ಪುಣ್ಯಾಸ್ರ,** ೪. ೧೩ ವ)

**ಕಲ್ಕ** – ಕೊಳೆ, ಪಾಪ (ವ್ಯಪಗತರಜಃಕಲ್ಕಂ ಸಿಲ್ಕಿಲ್ಲದಾದ ವಿರೋಧಿಯಿಂದುಪಶಮಯುತಸ್ವಾಮತಂ: **ವರ್ಧಮಾಪು,** ೭. ೫೨); ಕಳ್ಳು, ಹೆಂಡ (ಮೈರೇಯಮಾಸವಂ ಮಧು ವಾರಂ ಮದ್ಯಂ ಪ್ರಸನ್ನೆ ಹಾಲಂ ಕಲ್ಯಂ ।ವಾರುಣಿ ಕಾದಂಬರಿಯದು ಸೀರಿಪ್ರಿಯೆ ಸೀಧು ಮದಿರೆ ಸುರೆ ಜಗಳಂ ಕಳ್: **ಅಭಿಧಾವ,** ೧. ೧೬. ೫)

**ಕಲ್ಗೆ** – ಕಲಿಯಲಿ (ತನ್ನ ಕೃತಿ ಕಲ್ಪಾಂತಸ್ಥಾಯಿಯೆನಿಸುವೊಡೆ ಬಲ್ಲರ ಬಾಯಂ ಪೊಕ್ಕು ಓದಿ ಕಲ್ಗೆ ಕವಿ ಸಕಲಮುಮಂ: **ನೇಮಿನಾಪು,** ೧. ೩೪)

**ಕಲ್ನೆಲೆ** – [ಜೈನ] ಬೇಸಗೆಯಲ್ಲಿ ಕಲ್ಲ ಮೇಲೆ ನಿಂತು ಮಾಡುವ ತಪಸ್ಸು (ಪೊತ್ತ ನೆಲಂ ನೆಲದೊಡನಡೆಯೊತ್ತಿದಪುದು ಸೆಲೆಯ ಮೇಲೆ ಸೂರ್ಯಾಂಶುಗಳಟ್ಟುತ್ತುಮಿರೆ ನಿಯಮನಿಶ್ಚಲಚಿತ್ತಂ ಬೇಸಗೆಯೊಳಂದು ಕಲ್‌ನೆಲೆ ನಿಂದಂ: **ಅಜಿತಪು,** ೧೨. ೪)

**ಕಲ್ನೆಲೆನಿಲ್** – 'ಕಲ್ನೆಲೆ' ತಪಸ್ಸಿಗೆ ನಿಲ್ಲು (ನಿಂದುರಿವ ನಿದಾಘದೊಳ್ ಋಷಿಯರಂದದೆ ಕಲ್ನೆಲೆನಿಲ್ವನಾವವಂ: **ಸಮಯಪ,** ೭. ೩)

**ಕಲ್ಪ** – [ಜೈನ] ಸೌಧರ್ಮ, ಈಶಾನ, ಸನತ್ಕುಮಾರ, ಮಾಹೇಂದ್ರ, ಬ್ರಹ್ಮ, ಬ್ರಹ್ಮೋತ್ತರ, ಲಾಂತವ, ಕಾಪಿಷ್ಠ, ಶುಕ್ರ, ಮಹಾಶುಕ್ರ, ಶತಾರ, ಸಹಸ್ರಾರ, ಆನತ, ಪ್ರಾಣತ, ಅರುಣ, ಅಚ್ಯುತ ಎಂಬ ಹದಿನಾರು ಬಗೆಗಳ ಸ್ವರ್ಗ (ಅನ್ನೆಗಮಿತ್ತ ನಾಲ್ಕನೆಯ ಕಲ್ಪದ ಅನಲ್ಪಮೆನಿಪ್ಪ ಸೌಖ್ಯಮಂ .. .. ಪೀರ್ದು: **ಕರ್ಣನೇಮಿ,** ೨. ೨); [ಜೈನ] ಉತ್ಸರ್ಪಿಣಿ ಅವಸರ್ಪಿಣಿಗಳ ಒಟ್ಟು ಕಾಲಾವಧಿ (ಉತ್ಸರ್ಪಿಣಿಯುಂ ಅವಸರ್ಪಿಣೀಯುಂ .. .. ಅವೆರಡುಂ ಕೂಡಿದೊಡೆ ಕಲ್ಪಮೆಂಬುದಕ್ಕುಂ: **ಅಜಿತಪು,** ೩. ೧೫ ವ)

**ಕಲ್ಪಕುಜ** – ಕಲ್ಪವೃಕ್ಷ; [ಜೈನ] ಬೇಕಾದ್ದನ್ನು ಕೊಡುವ ಹತ್ತು ಬಗೆಯ ಕಲ್ಪವೃಕ್ಷಗಳು (ಈಡಿತ ಜಿನವರ ಶಾಸನ ಚೂಡಾಮಣಿ ಬುಧರ್ಗೆ ಅನಲ್ಪ ಕಲ್ಪಕುಜಂ ಕೆಯ್ ನೀಡಿದ ಬೇಟ್ಟಿರ ನೆರವಿಗೆ ನೀಡಿಲ್ಲದೆ ಕುಡುವ ಉದಾತ್ತಂ ಆ ಜಿನಚಂದ್ರಂ: **ಶಾಂತಿಪು,** ೧. ೩೨); ನೋಡಿ, 'ಅಂಗಕಲ್ಪಕುಜ'

**ಕಲ್ಪಜಪತಿ** – ದೇವೇಂದ್ರ (ಮನಂ ನಡುಗಿತ್ತೆ ಪೇಟಿ ಕಲ್ಪಜಪತಿಗೆಂದು ತಮ್ಮೊಳುಲಿದರ್ ಸುರರ್: **ಚಂದ್ರಪ್ರಪು,** ೯. ೫೭)

**ಕಲ್ಪತರು** – ಕಲ್ಪಕುಜ (ಎಡಱು ಅಱಿದು ಈವ ಕಲ್ಪತರುವೆಂದು ವನೀಪಕಕೋಟಿ ಸಂತಸಂಬಡೆ ಪೊಡೆವ ಒಂದಕಾಳ ವಿಳಯಾಶನಿ ಎಂದು ವಿರೋಧಿಗಳ್ ಮನಂಗಿಡೆ: **ಪಂಪಭಾ,** ೨. ೯೮)

**ಕಲ್ಪನೋಕ್ತಿ ಕಷ್ಟ** – ಕವಿಯ ಆಶಯವನ್ನು ತಿಳಯಲು ಕಷ್ಟವಾದಂಥದು, ಒಂದು ಕಾವ್ಯ ದೋಷ (ಶ್ರುತಿದುಷ್ಟಂ ಅರ್ಥದುಷ್ಟಂ ಶ್ರುತಿಕಷ್ಟಂ ಕಲ್ಪನೋಕ್ತಿಕಷ್ಟಂ ಎಂದೀ .. .. ನಾಲ್ಕುಮಿಲ್ಲಿ ಕೃತಿದೋಷಂಗಳ್: **ಕವಿರಾಮಾ,** ೧. ೬೨)

**ಕಲ್ಪಪಾರ್ಥಿವ** – ಕಲ್ಪವೃಕ್ಷ (ಬೆಳ್ಕುತ್ತಿನಿಸಿರ್ದ ಪಾರ್ಥಿವರೊಳೇಂ ದೊರೆಯಾದುದೊ ಕಲ್ಪಪಾರ್ಥಿವಂ: **ಆದಿಪು,** ೭. ೪೯)

**ಕಲ್ಪಭೂಜ** – ಕಲ್ಪವೃಕ್ಷ (ನಡೆನುಡಿಗಲಿಯದ ಮುನ್ನಂ ಕುಡಗಲ್ತಂ ಕಲ್ಪಭೂಜಮೆನೆ ಖಚರಸುತಂ: **ಧರ್ಮಪ,** ೧. ೭೨)

**ಕಲ್ಪಲತೆ** – ಕಲ್ಪಕುಜ (ಪೊಸ ಮದದದಾನೆಯಂ ನಸೆಯ ಪೆರ್ಬಿಡಿ ಜಂಗಮ ಕಲ್ಪವೃಕ್ಷಮಂ ಮಿಸುಗುವ ಅನಲ್ಪ ಕಲ್ಪಲತೆ ನೀರದಮಂ ಕುಡುಮಿಂಚುಪೊರ್ದಿ ಶೋಭಿಸುವವೊಲ್; **ಶಾಂತಿಪು,** ೭. ೨೯)

**ಕಲ್ಪವಾಸಿಗ** – [ಜೈನ] ಸ್ವರ್ಗವಾಸಿ, ದೇವತೆ (ನವಗ್ರಹಮಂಡಲಮಲ್ತು ಕಲ್ಪವಾಸಿಗರ ವಿಮಾನಮಲ್ತು ಜನಕಂ ಬರುತಿರ್ದಪಂ: **ಪಂಪರಾ,** ೫. ೨೭)

**ಕಲ್ಪವೃಕ್ಷ** – ಬೇಡಿದ್ದನ್ನು ನೀಡುವ ಮರ (ಪೊಸ ಮದದದಾನೆಯಂ ನಸೆಯ ಪೆರ್ಬಿಡಿ ಜಂಗಮ ಕಲ್ಪವೃಕ್ಷಮಂ ಮಿಸುಗುವ ಅನಲ್ಪಕಲ್ಪಲತೆ ನೀರದಮಂ ಕುಡುಮಿಂಚುಪೊರ್ದಿ ಶೋಭಿಸುವವೊಲ್; **ಶಾಂತಿಪು,** ೭. ೨೯); [ಜೈನ] ಚಕ್ರವರ್ತಿಗಳು ಮಾಡುವ ಒಂದು ಪೂಜೆ; ದೀಪಗಳನ್ನು ಒದಗಿಸುವ ಕಲ್ಪವೃಕ್ಷ; ಇದರಲ್ಲಿ ಹತ್ತು ವಿಧ: ಮದ್ಯಾಂಗ, ಭೂಷಣ, ವಸ್ತ್ರ, ತೂರ್ಯ, ಮಾಲ್ಯ, ಗೃಹ, ಭಾಜನ, ಭೋಜನ, ಜ್ಯೋತಿರ್, ದೀಪ (ಜಗಜ್ಜನಜಂಗಮ ಕಲ್ಪವೃಕ್ಷಂ ಕಲ್ಪವೃಕ್ಷಮೆಂಬ ಮಹಾಮಹಿಮೆಯಂ ಪಹಾಪೂತ ಜಿನಾಲಯದೊಳ್ ಮುನ್ನಂ ಮಾಡಿ: **ಆದಿಪು,** ೩. ೩೦ ವ)

**ಕಲ್ಪಾಂಘ್ರಿಪ** – ಕಲ್ಪಕುಜ (ಮೇರುವ ಪೊಂ ಕಲ್ಪಾಂಘ್ರಿಪದ ಆರವೆ ರಸದ ಒಱವು ಪರುಸವೇದಿಯ ಕಣಿ ಭಂಡಾರದೊಳ್ ಉಂಟೆನೆ ಕುಡುವ ಅನಿವಾರಿತ ದಾನಕ್ಕೆ ಪೋಲ್ವರಾರ್ ಬದ್ದೆಗನಂ: **ಪಂಪಭಾ,** ೧. ೨೮)

**ಕಲ್ಪಾಂತ** – ಕಲ್ಪದ ಕೊನೆ (ಕಲ್ಪಾಂತ ಕೃತಾಂತನಂತೆ ಮಾಮಸಕಂ ಮಸಗಿ ಪೊಡೆವ ಸಿಡಿಲಂತೆ ಸಿಡಿಲ್ದು: **ಪಂಪರಾ,** ೧೧. ೧೪೩ ವ)

**ಕಲ್ಪಾಂತಕಾಲ** – ಪ್ರಳಯಕಾಲ (ಕಲ್ಪಾಂತಾಲಂ ನೆಗಟ್ಟುದು ಸಮರಂ ಭೀಮದುರ್ಯೋಧನೀಯಂ: **ಗದಾಯು,** ೮. ೨೦)

**ಕಲ್ಪಾಂತರ** – ಚಿರಕಾಲ (ಶ್ರುತ್ತೋನ್ನತಿಯಿಂ ಕಾವ್ಯಕಳಾವಿದಂಗೆ ಕವಿತಾಖ್ಯಾತಂಗೆ ಕಲ್ಪಾಂತರಸ್ಥಿತಿಯಪ್ಪಂತಿರೆ ಮಾಟ್ಟುದು: **ಮಲ್ಲಿನಾಪು,** ೧. ೪೬)

**ಕಲ್ಪಾಂತರಸ್ಥಾಯಿ** – ಕಲ್ಪಾಂತರಗಳವರೆಗೆ ಇರುವ (ಪೂಣ್ದು ನಿಲ್ಲದಿಕೆಯಿಂ ಬಾಟ್ಟಂತು ವಿಖ್ಯಾತ ಕೀರ್ತಿಯವೋಲ್ ಈ ಒಡಲ್ ಅಬ್ಬೆ ಪೇಟಿಮ್ ಎನಗೇಂ ಕಲ್ಪಾಂತರಸ್ಥಾಯಿಯೇ: **ಪಂಪಭಾ,** ೯. ೮೪)

**ಕಲ್ಪಾಮರ** – [ಜೈನ] ಕಲ್ಪಗಳಲ್ಲಿರುವ ದೇವತೆ (ಅದೇಂ ನಲಿದನೋ ಕಲ್ಪಾಮರಂ ಕಲ್ಪದೊಳ್: **ಸುಕುಮಾಚ,** ೯. ೩೫)

**ಕಲ್ಪಿ** – ಕಲಿಯುವಿಕೆ (ದಾಯಿಗರತ್ತಣಿನಪ್ಪ ಅಪಾಯಕೋಟಿಗೆ ಪವಣಿಲ್ಲ ಕಲ್ಪಿಗೆ ಎಡೆಯಾವುದೊ ಪಾಟಿಯ ಬಟ್ಟೆದಪ್ಪಿ ಮುಂ ನೆಗಟ್ದೆಡೆಯಿಲ್ಲ ಪೋಗು ಜಯಮಕ್ಕೆ ಶುಭಂ ನಿಮಗಕ್ಕೆ ಮಂಗಳಂ: **ಪಂಪಭಾ,** ೭. ೨೧); ವಿದ್ಯೆ, ಕಲೆ, ಕುಶಲವಿದ್ಯೆ (ತಂದೆ ಕಡಂಗಿ ಕಲ್ಪಿಸುವ ಕಲ್ಪಿಯನೊಲ್ಲದೆ ತಾಯ್ಮೆಗುಟ್ಟು ನಿರ್ವಂದದಿಂ ಎಯ್ದೆ ಬಗ್ಗಿಸುವ ಬಗ್ಗಣೆಗಳ್ಕದೆ: **ಸುಕುಮಾಚ,** ೨. ೮)

**ಕಲ್ಪಿಸು** – ಕಲಿಸು, ಹೇಳಿಕೊಡು (ಮೆಲ್ಲಗೆ ನೀಂ ಕಲ್ಪಪ್ಪುದೆಮ್ಮಂ ನೆನೆದೆರ್ದೆಗಿಡದಂತಾಗೆ ಪಾಲಿಪ್ಪುದು: **ಆದಿಪು,** ೪. ೫೫)

**ಕಲ್ಮಾಷ** – ಬೂದುಬಣ್ಣ (ಕಲ್ಮಾಷೋಲ್ವಣಚ್ಛಾಯೆ ಕಣ್ಗೆಸೆದಿರ್ದತ್ತು ವಿನಿರ್ಮಳಪ್ರಕೃತಿರೋದಂ ಶಾರದಂ ಶಾರದಂ: **ವರ್ಧಮಾಪು,** ೯. ೪೮)

**ಕಲ್ಮೆಯ್** – ಕಲ್ಲಿನಂತಹ ಗಟ್ಟಿ ಮೈ (ಆರಾರ ಕಲ್ಮೆಯ್ಗಳೊಳ್ ನಾಂಟವು ಎನುತ್ತಂತೆಲ್ಲಮಂ ಬಾಯ್ವಿಡೆ ಗಡಣದೆ ಪೋಗೋಲ್ಗಳ್ಗೆತಂದುವಾಗಳ್: **ಕಬ್ಬಿಗಕಾ,** ೩೦೩)

**ಕಲ್ಯಾಣ** – ಚಿನ್ನ (ಕಲ್ಯಾಣಭೂಭೃತ್ಸದನ ಧನದಮಿತ್ರಂ ಮಾರ್ಳಕೆ ಎಮಗೆ ಅನವರತಂ ನಂಧಿಕೇಶಂ ಮಹೇಶಂ: **ರಾಜಶೇವಿ,** ೧. ೧)

**ಕಲ್ಯಾಣಕ** – ಹಿತಕರವಾದ (ಕೆಲಕೆಲ್ಲಂ ಭರತೇಶನಾರೋಗಿಸಿದಂ ಕಲ್ಯಾಣಕ ಆಹಾರಮಂ: **ಆದಿಪು,** ೧೧. ೨೭)

**ಕಲ್ಯಾಣಗರ್ಭ** – ಹಿರಣ್ಯಗರ್ಭ, ಬ್ರಹ್ಮ (ಕಲ್ಯಾಣಗರ್ಭನಾಗಿಯುಂ ಅಜನಂತಿರೆ ಜಡಜಜನೆನಿಸದೆ ತದ್ಗುರು ಕರಕಂಜಾತನೆನಿಸಿದನೀತಂ: **ರಾಜಶೇವಿ,** ೧. ೬೪)

**ಕಲ್ಲನೆ ಕನಲು** – ಬಹಳವಾಗಿ ಕೋಪಗೊಳ್ಳು (ಕಲ್ಲೆನ್ನದೆ ಬೆಳೆದ ಪಸುರ್ವುಲ್ಲೆಂದು ಆಸೆಯೊಳ್ ಸಾರ್ದು ಮರಕತದ ಒಡ್ಡುಂಗಲ್ಲನೆ ಕಾರ್ದು ಮೃಗಂಗಳ್ ಕಲ್ಲನೆ ಕನಲುತ್ತುಮಿರ್ಪುವು ಆ ಖಗನಗದೊಳ್: **ಅಜಿತಪು,** ೯. ೨೩)

**ಕಲ್ಲವಿಲ** – ಕೂಗಾಟ (ನುಡಿದೊಡೆ ಕಲ್ಲವಿಲಮಂ ಮಾಡಿ ಬಾಯ ಕೆಂಪಂ ಕೊಳ್ವಳ್: **ಲೀಲಾವತಿ,** ೨, ೮೮)

**ಕಲ್ಲಸರ** – ಕಠಿಣ ಮಾತು (ಆವುದುಮಂ ನಾನೆ ಬಲ್ಲೆಂ ನೀನುಸಿರದಿರ್ ಎಂದು ವಲ್ಲಭೆಯಂ ಕಲ್ಲಸರದಿಂ ನುಡಿದು ಮಾಣಿಸುವುದುಂ: **ಪಂಚತಂತ್ರ,** ೨೨೫ ವ)

**ಕಲ್ಲಾಯ್ತ** – ಕಲಿಸುವವನು, ಗುರು (ಅರಮನೆಯೊಳಗೆ ಪುಗುವ ಪೋಱಮಡುವ ಝಳಂಬಾಯ್ತರ ಸೂಱಾಯ್ತರ ಕಲ್ಲಾಯ್ತರ ಡಂಗಾಯ್ತರ ಅಚ್ಚುಳಾಯ್ತರ ರಭಸಂ: **ಶಬ್ದಮದ,** ೨೦೯, ಪ್ರ ೨)

**ಕಲ್ಲಿ** – ಹೆಣೆದ ಬಲೆ (ಕಲ್ಲಿ ಸುತ್ತಿದ ಪುಲಿವಾಲದ ತಲೆಸುತ್ತುಗಳೆಸೆಯಲ್ಕೆ ಅಧಟಿಂದಂ ಲುಬ್ಧಕರ್ ಬರುತಿರ್ದರ್: **ತ್ರಿಷಷ್ಟಿಪು,** ೨೭ ೪೪)

**ಕಲ್ಲುರಿಗ** – ಇಟ್ಟಿಗೆ ತಯಾರಿಸುವವನು (ಲೋಲುಪನೆಂಬೊಂ ಕ್ಲಲುರಿಗನಾಗಿ ಪೊಱಲ .. .. ಬಸದಿಗೆ ಬಿಟ್ಟಿಟ್ಟಿಗೆಗಳಂ ಪೂರಿಗೆಯಂ ಕೊಟ್ಟು: **ಚಾವುಂಪು,** ಪು. ೧೮೦, ಸಾ. ೧೬)

**ಕಲ್ಲೆ** – ಬೇಲಿ, ಎಲ್ಲೆ (ಆಕಾಶದ ಕವಿಯುಂ ನೆಲದ ಕಲ್ಲೆಯುಂ ಮುನ್ನಮೆ ಮೇರೆದಪ್ಪುವುದುಮಂ ತನ್ನೊಳ್ ಅಳವಡಿಸಿಕೊಂಡು ತಾಗಿದಾಗಳ್: **ಪಂಪಭಾ,** ೧೨. ೧೯ ವ)

**ಕಲ್ಲೆಯುಂ ಕವಿಲೆಯುಂ** – ಅಲ್ಲೋಲ ಕಲ್ಲೋಲ (ಅಂತು ಸಮುದ್ರಂ ಬಹಿತ್ರಂ ಬೆದಱುವಂದು ತಿಟ್ಟನೆ ತಿಱಿದು ಕ್ಲೆಲಯುಂ ಕವಿಲೆಯುಂ ಆಗೆ: **ಹರಿವಂಶ,** ೪. ೧೪ ವ)

**ಕಲ್ಲೋಳ** – ಅಲೆ, ತೆರೆ (ಸ್ತ್ರೀಕುಚಕುಂಭಕುಂಕುಮರಜಃಕಲ್ಲೋಳದಿಂ ಬಣ್ಣವಣ್ಣದ ಚೆಲ್ವಂ ಗೆಡೆಗೊಂಡು: **ಆದಿಪು,** ೧೧. ೧೫೪)

**ಕಲ್ವಟೆ** – ಕಲ್ಲುಗಳಿರುವ ದಾರಿ, ಕಲ್ಲಿನ ಪ್ರದೇಶ (ನೆತ್ತರ ತೆರೆಗಳ್ ಸುಟಿಸುಟಿದು ಒಡವರಿದುವು ಕಲ್ವಟೆಯೊಳ್ ಭೋರ್ಗರೆದು ಪರಿವ ತೊಱೆಗಳ ತೆಱದಿಂ: **ಪಂಪಭಾ,** ೧೧. ೩೬)

**ಕಲ್ಹಾರ** – ಒಂದು ಬಗೆಯ ನೈದಿಲೆ, ಸೌಗಂಧಿಕಾ ಪುಷ್ಪ (ನಡೆ ನೋಡಿ ಕಂಜಮುಖಿಯರ್ ಮಂಜುಕುಂಜಮಂ ನಿಡುಗಣ್ಣ ನೀಱೆಯರ್ ಕಲ್ಹಾರಪುಂಜಮಂ: **ಉದ್ಭಟಕಾ,** ೯. ೫೧)

**ಕವ** – ಕ್ರಮ (ಕಣ್ಗಳೊಳ್ ಅಂಗನೆಯೆಚ್ಚಿಕೊಳ್ವ ಕಾಡಿಗೆಯುದಿರ್ದಂತೆ ಕರ್ಪು ಕವದಿಂದ ಅಡಿಯಿಟ್ಟುದು ಭೃಂಗಭಾಸುರಂ: **ನೇಮಿನಾಪು,** ೨. ೨೩)

**ಕವಚಹರ** – ಪ್ರಾಪ್ತವಯಸ್ಕನಾಗು (ಕವಚಹರನಾದ ತನಯನೊಳ್ ಅವನೀಭರಮೆಂಬ ಕನಕಮಣಿಮಂಡನ ಭಾರಮನಿಱಿಪಿ: **ಯಶೋಧಚ,** ೨. ೧೦)

**ಕವಡಿಕೆ** – ಮೋಸ (ಭಂಡಾರಿಗನಂತೆ ಆಯಮಂ ಪಿಡಿದು ಜೂದುಗಾಱನಂತೆ ಕವಡಿಕೆಯಂ ತೆಗೆದು ತುರಗಾರೋಹಕನಂತೆ ಆರೂಢಕ್ರಮಮಂ ಅಱಿದು: **ಸುಕುಮಾಚ,** ೩. ೬ ವ); ಸಣ್ಣ ಕವಡೆ (ಬೂತಿಂಗೆ ದ್ರಮ್ಮಮಂ ಕೊಟ್ಟು ಒಡಂಬಡಿಸಿ ತಲೆಯಂ ಕಿರಿಸಿ ಕರಿಯ ಕೋವಣವನುಡಿಸಿ ಪಲ್ಗಳೊಳ್ ಕವಡಿಕೆಯಂ ಕಟ್ಟಿಸಿ ಕುಂಚಮಂ ಕೊಟ್ಟು: **ವಡ್ಡಾರಾ,** ಪು ೧೭೭, ಸಾ ೧೭)

**ಕವಚಹರ** – ಕವಚ ತೊಡುವವನು, ಪ್ರಾಪ್ತವಯಸ್ಕ (ನಿಜಾಪ್ತವರ್ಗಮುಮಂ ಸಾಮಂತವರ್ಗಮುಮಂ ಬರಿಸಿ ಕವಚಹರನಾದ ನಿಜಸುತನತಿಬಳಕುಮಾರನಂ ರಾಜ್ಯಭಾರದೊಳ್ ನಿಱಿಸಿ: **ಆದಿಪು,** ೨. ೪೯ ವ)

**ಕವಣೆ** – ಕಲ್ಲು ಹೊಡೆಯಲು ಬಳಸುವ ದಾರದಿಂದ ಮಾಡಿದ ಸಾಧನ (ಪುದಿದ ಅಸಿಘಟ್ಟನದಿಂ ಪುಟ್ಟಿದ ಕಿಡಿಯುಂ ಕವಣೆಗಲ್ಗಳುಂ ಕೆಯ್ಗಲ್ಲುಂ .. .. ಕೆಂಡದ ಕಲ್ಲ ಮೞೆಯನನುಕರಿಸಿರ್ಕುಂ: **ಪಾರ್ಶ್ವನಾಪು,** ೩. ೧೪೦)

**ಕವರ್** – ಸೂರೆ ಮಾಡು (ಇಳೆಯಂ ಘಾತಿಸಿ ತಕ್ಕರಂ ಕವರ್ದುಕೊಂಡು ಆದ ಅರ್ಥಮಂ ಪೂಣ್ದು: **ಆದಿಪು,** ೨. ೧೫); ಸೆರೆ ಹಿಡಿ;, ಆಕರ್ಷಿಸು (ಕವರ್ದವರುಂ ಒಳರೆ ಕವಿಯಲ್ಲದರಂ: **ಕವಿರಾಮಾ,** ೧. ೧೨); ಕವಲು ಮರ, ಕವೆ; ರಥದ ಒಂದು ಭಾಗ (ಉಡಿದ ನೊಗಂ ಧ್ವಜಂ ಪಲಗೆ ಕೀಲ್ ಕವರ್ ಅಚ್ಚು ತುರಂಗಮಂ ರಥಂ ಕಿಡೆ ಕವರಿಂದಗುರ್ವಂ ಒಳಗೊಂಡಿರೆ ತಳ್ತಿಱಿದರ್ ಮಹಾರಥರ್: **ಪಂಪಭಾ,** ೧೧. ೩೮)

**ಕವರ್ಗಟ್ಟು** – (ಕಂಕೇಲ್ಲಿ ಕವರ್ಗಟ್ಟುಗಳಿಂ ನಂದ್ಯಾವರ್ತದ ನವಪದಂಗಳಿಂ ಚಂಪಕದ ಚಂಚುಲೋವೆಗಳಿಂ: **ಕುಸುಮಾಕಾ,** ೧೨. ೧೫೭ ವ)

**ಕವರ್ತೆ** – ಬಲಾತ್ಕಾರದಿಂದ ಕಿತ್ತುಕೊಳ್ಳುವುದು, ಲೂಟಿ (ಮನಮೆಲ್ಲಮಂ ಕವರ್ದಪಂ ತನುವಂ ಬಡಮಾಡಿ ಕಡಿ ದಂಡಿಸಿದಪಂ ಅಂಗಜನ್ಮನ ಕವರ್ತೆಯ ದಂಡದ ಪಾಂಗು ಇದೆಂತುಟೋ: **ಪಂಪಭಾ,** ೫. ೧೩)

**ಕವರ್ತೆವೋಗು** – ಕವರ್ತೆಪಡು, ಸುಲಿಗೆಗೆ ಒಳಗಾಗು (ಅರಸರ ದೆಸೆಯಿಂ ಮನೆಯುಂ ಕವರ್ತೆವೋಪುದುಂ: **ಆದಿಪು,** ೩. ೩೪ ವ)

**ಕವರ್ದುಕೊಳ್** – ಬಲವಂತದಿಂದ ವಶಪಡಿಸಿಕೊ (ನಕುಳನುಂ ತೆಂಕಣ ದೆಸೆಯ ಮಲೆಪರಂ ಮಂಡಳಿಕರುಮಂ ಅಸಿಯರಾಗೆ ಕವರ್ದುಕೊಂಡು ಲಂಕೆಯ ಮೇಗೆ ನಡೆದು: **ಪಂಪಭಾ,** ೬. ೩೨ ವ)

**ಕವಲ್** – ಕೊಂಬೆ ಒಡೆ (ತೊಟ್ಟನೆ ಬೇರೂಱಿದುವೋ ಕವಲ್ತುವೊ ಚಳದ್ವಿದ್ಯುಲ್ಲತಾದೀಪ್ತಿಯೆಂಬಿನಂ: **ಆದಿಪು,** ೭. ೨೪); ಟಿಸಿಲು (ಆತ್ಮವಿಟತ್ತ್ವಮಂ ಉಂಟೊಡೆತಾಗಿ ಮಾಡಿ ಬಾಂದೊಱೆಯನೆ ಪೊತ್ತು ಗೌರಿಗೆ ಕವಲ್ದೊಱೆಗೆಯ್ದಿದಂ ಈ ಪ್ರದೇಶದೊಳ್: **ಪಂಪಭಾ,** ೭. ೭೫)

**ಕವಲಂಬು** – ಕವಲಾದ ಬಾಣ (ಪೆಱೆಯಮುಱಿಗಂ ಕಣಕೆನೆ ವೋಪಂಬು ಕವಲಂಬುವೆಂಬಂಕದಂಬೆತ್ತಲುಂ: **ಪಂಪಭಾ,** ೧೩. ೩೯)

**ಕವಲಿಱಿ** – ಕವಲೊಡೆದು ಹಬ್ಬು (ರವಿಕರಕ್ಕೆ ಎಡೆಗುಡದೆ ಇಡಿದಿಡಿದು ಸುತ್ತಿಮುತ್ತಿ ಕವಲಿಱಿದು ಕವಿದ ಲತಾಂತಜಾಳದ: **ಗಿರಿಜಾಕ,** ೭. ೧೧ ವ)

**ಕವಳ** – ಎಲೆಯಡಿಕೆ (ಕಪ್ಪುರದಿಂದಂ ಬೆರಸಿ ಮಿಸುಪ ನಿನ್ನಯ ತಂಬುಲದ ಈ ಕವಳದಿಂದೆ ಮುಚ್ಚುಗುಮಲ್ತೇ: **ಪಾರ್ಶ್ವನಾಪು,** ೩. ೧೦೦)

**ಕವಳಿಗೆ** – ಕಡತದ ಕಟ್ಟು (ಅಜಿತಂ ತನ್ನ ತಂದೆಗೆ ಪರಲೋಕಕ್ರಿಯೆಗಳಂ ಮಾಡಿ ಬಟಿಕ್ಕಂ ತಮ್ಮಯ್ಯಂ ಮಡಗಿಟ್ಟ ವಸ್ತುವಂ ನೋೞ್ಪೆನೆಂದು ಕವಳಿಗೆಯಂ ಬಿಟ್ಟು ನೋೞ್ಪನ್ನೆಗಂ: **ಪಂಚತಂತ್ರ,** ೨೬೨ ವ); ಜೋಳಿಗೆ (ಒಂದು ಸುರಗಿಯಂ ಕವಳಿಗೆಯೊಳ್ ಸಲೆ ಬೈತು ಕಂಕುಳೊಳ್ ತಳೆದು: **ತ್ರಿಷಷ್ಟಿಪು,** ೨೫. ೧೩)

**ಕವಾಟ** – ಬಾಗಿಲು (ಕವಿಗಳ್ ಉರಃಕವಾಟ ಕವಚಂಗಳ ಕಟ್ಟಿಲೆಯೊಳ್ .. .. ಬರುತಿರ್ದಪಳ್ .. .. ರಾಜ್ಯಲಕ್ಷ್ಮಿ: **ಕಾದಂಬ,** ೧. ೧೩)

**ಕವಾಟಪುಟ** – ಬಾಗಿಲ ರೆಕ್ಕೆ, ಕದ (ಜತುಗೃಹ ಕವಾಟಪುಟಸಂಧಿಗಳೊಳ್: **ಪಂಪಭಾ,** ೩. ೪ ವ)

**ಕವಾಟಕ್ರಿಯೆ** – ಕೇವಲಿಯ ಆತ್ಮವು ಮೂಲಶರೀರದಿಂದ ಮೂರರಷ್ಟು ದಪ್ಪವೂ ಏಳು ರಜ್ಜು ಅಗಲವಾಗಿಯೂ

ವ್ಯಾಪಿಸುವುದು (ದಂಡಕ್ರಿಯಾನಂತರಸಮಯದೊಳ್ ಪೂರ್ವೋಕ್ತ ಬಾಹುಲ್ಯದಿಂ ಲೋಕಾಕಾಶವ್ಯಾಪಕ ಕವಾಟಕ್ರಿಯೆಯಂ ನೆಱಪಿ: **ಆದಿಪು,** ೧೬. ೪೯ ವ)

**ಕವಾಟಪುಟ** – ಬಾಗಿಲ ಕದ (ಇದಱ ಪೆಸರ್ ದೇವದತ್ತಮೆಂಬುದು ನಿನಗೆ ಅಭ್ಯುದಯಕರಂ ಶಂಖಂ ರಿಪುಹೃದಯ ಕವಾಟಪುಟವಿಘಟನಂ ನೋಡರಿಗಾ: **ಪಂಪಭಾ,** ೬. ೪)

**ಕವಿ** – ಆವರಿಸುವುದು (ಕವಿ–ಆಚ್ಛಾದನೇ: **ಶಬ್ದಮದ,** ಧಾ ೬೬೭); ತುಂಬು, ದಟ್ಟವಾಗು (ಕವಿದ ಪುರ್ವುಂ ತೋರಮಾಗಿ ನಿರ್ಮಾಂಸಮಪ್ಪ ಕಾಲ್ಗಳುಂ: **ಪಂಪಭಾ,** ೫. ೪೬ ವ); ಮೇಲೆ ಬೀಳು ಮದುವೆಯ ನೆರವಿಯಂ ಕಡಂದುಱು ಕವಿದಂತೆ: **ಧರ್ಮಾಮೃ,** ೨. ೪೨ ವ); ಧರಿಸು (ತನ್ನ ರತ್ನವಿಸ್ಫುರಿತ ಕಿರೀಟಮಂ ಕವಿದು ತಾನೆ ನರಂಗೆ ಕಿರೀಟಿನಾಮಮಂ ಸರಸದಿಂ ಆಗಳುಚ್ಚರಿಸಿ ಸಾಹಸಮಂ ಪೊಗೞ್ದಂ ಸುರಾಧಿಪಂ: **ಪಂಪಭಾ,** ೫. ೧೦೩); ಮುಚ್ಚಳ (ಆಕಾಶದ ಕವಿಯುಂ ನೆಲದ ಕಲ್ಲೆಯುಂ ಮುನ್ನಮೆ ಮೇರೆದಪ್ಪುವುದುಮಂ ತನ್ನೊಳ್ ಅಳವಡಿಸಿಕೊಂಡು ತಾಗಿದಾಗಳ್: **ಪಂಪಭಾ,** ೧೨. ೧೯ ವ); ಕಬ್ಬಿಗ (ಕವಿ ಗಮಕಿ ವಾದಿ ವಾಗ್ಮಿ ಪ್ರವರರ ಪಂಡಿತರ ನೆಗೞ್ದ ಸಬ್ಬವದವರೊಡನೆ ಅಂತು ಒಸೆದ ಅನ್ನವಾಸದೊಳ್ ಇರ್ದನಾಗಳ್ ಹರಿಗಂ: **ಪಂಪಭಾ,** ೩. ೮೦); ನೀರ ಹಕ್ಕಿ, ಶುಕ್ರಾಚಾರ್ಯ (ಆ ಸಮುದ್ರಂ .. .. ಕುವಳಯಾನುವರ್ತಿಯು ದನುಜೇಂದ್ರ ಸಭೆಯಂತೆ ಕವಿಘೋಷಭೂಷಣಮಾಗಿಯುಂ .. .. ಆಗಿರ್ಪುದು: **ಶಾಂತೀಶ್ವಪು,** ೧. ೬೯ ವ)

**ಕವಿಕೆ** – ಕಡಿವಾಣ (ಕವಿಕೆ ಖಲೀನಂ: **ಅಭಿಧಾವ,** ೧. ೧೪. ೨೫)

**ಕವಿಪದ** – ಕವಿ ಪಟ್ಟ (ಕವಿಪದಮೀವ ಜನ್ನಿವರಮಂ ಬಲಮುಯ್ವಿನೊಳಿಕ್ಕಿ ನೋೞ್ಪ ಕೆಟ್ಟವರೊಡಗೂಡುತಿರ್ಪ ಪೆಱನನ್ನಂ: **ಸಮಯಪ,** ೬. ೩೭)

**ಕವಿಲ್** – [ಕಪಿಲ] ಮಾಸಲು ಕೆಂಪು (ಸುರಿವಜರಪ್ರಸೂನ ರಜದಿಂ ಕವಿಲಾದ ಶಿರೋರುಹಂ: ಪಂಪಭಾ, ೧೨. ೨೨೧); ಮಾಸಲು ಕೆಂಪು ಬಣ್ಣವಾಗು (ಭೂತಾಂಗನಾನಿಕರಂ ಶೋಣಿತವಾರಿಯಂ ಕುಡಿದು ಅಗುರ್ವಪ್ಪನ್ನೆಗಂ ಸೂಸೆ ನೋಡ ಕವಿಲ್ತಿರ್ದುದು ಕೂಡೆ ಸಂಜೆಗವಿದಂತಾ ದ್ರೋಣನಿಂ ಕೊಳ್ಗುಳಂ: **ಪಂಪಭಾ,** ೧೨. ೨೫); ಆವರಿಸು (ಬಿಸಿಗದಿರ್ಗಳ್ ದೆಸೆಗೆ ಕವಿಲ್ತೊಡನೆ ಸೂಸಿದುವಾದಮೆ ಸುಪ್ರಭಾತದೊಳ್: **ಸೂಕ್ತಿಸುಧಾ,** ೯. ೭೮)

**ಕವಿಲೆ** – [ಕಪಿಲೆ] ಹಸು (ಕಿರ್ಚು ಕವಿಲೆ ಮರಂ ಆಯುಧಂ ಎಂಬಿನಿತರ್ಕಂ ಪೊಡೆವಡುವುದುಂ ಅನೇಕಮಿವುಬಗೆಯೆ ದೇವತಾಮೂಢಂಗಳ್: **ಸಮಯಪ,** ೯. ೩)

**ಕವಿಲ್ಗೆಂಪು** – ಮಾಸಲುಗೆಂಪು (ಸುತ್ತಂ ಸೂಸಿದೀಶಾನನ ಜಡೆಗಳವೊಲ್ ಕಾಯ್ದ ಪೊನ್ನೀರ್ ಕವಿಲ್ಗೆಂಪಿನ ಪೆಂಪಂ ಸಿಂಪಿಸುತ್ತಿರ್ದ ಹಿಮರುಚಿಗಳಂ ತಿಗ್ಮರುಙ್ಮಾಲಿಬಿಂಬಂ: **ಕಾದಂಬ,** ೮. ೮. ೬೯)

**ಕವಿಯುಂ ಕಲ್ಲೆಯುಂ** – ಅಲ್ಲೋಲ ಕಲ್ಲೋಲ (ಕವಿಯುಂ ಕಲ್ಲೆಯುಂ ಆಗಲಿರ್ದುದವನೀಭಾಗಂ ದಿಶಾದಂತಿಗಳ್ ದಿವಸಂ ತೂಳ್ದಗಿದೊಡ್ಡಲಿರ್ದುದು: **ವರ್ಧಮಾಪು,** ೪. ೫೨)

**ಕವಿಲ್ಗೆಂಪು** – ಮಾಸಲುಗೆಂಪು (ಕವಿಲ್ಗೆಂಪಿನ ಪೆಂಪಂ ಸಿಂಪಿಸುತ್ತಿರ್ದ ಹಿಮರುಚಿಗಳಂ ತಿಗ್ಮರುಙ್ಮಾಲಿಬಿಂಬಂ: **ಕಾದಂಬ,** ೮. ೬೯)

**ಕವುಂಕಟ** – ಕೊಂಕುಳ (ಪಾಯ್ವ ಕುಚಂಗಳಂ ಮಿಡಿದು ನೋಡಿ ಕವುಂಕಟಿನೆತ್ತಿ ಕಂಪನಾಯ್ವುದುಂ .. .. ಕೈಗೆ ಸೆಳೆಯಂ ಸಖಿ ಕೊಟ್ಟಳ್: **ನೇಮಿನಾಪು,** ೨. ೧೦)

**ಕವುಂಗು** – ಅಡಕೆ (ದೊರೆವೆತ್ತು ಮಡಲ್ತ ಬಳ್ಳಿಮಲ್ಲಿಗೆಗಳ ಬಳ್ಳಿಮಾವುಗಳ ಬಳ್ಳಿಗವುಂಗಿನ ಬಳ್ಳವಳ್ಳಿಯ ಒಂದಗಣಿತಲೀಲೆ: **ಸುಕುಮಾಚ,** ೧. ೭೨)

**ಕವುಂದಿ** – ಕವುದಿ, ತುಂಡು ಬಟ್ಟೆಗಳಿಂದ ಹೊಲಿದ ಹಚ್ಚಡ (ಕಜಕಂ ಕಂಥೆ ಕವುಂದಿ: **ಅಭಿಧಾವ,** ೧. ೧೦. ೩೧)

**ಕವೇರಜೆ** – ಕಾವೇರಿ ನದಿ (ಫೇನದೊಬ್ಬುಳಿಯುಡೆಯಾಗೆ ಭೂನುತೆ ಕವೇರಜೆಯೊಪ್ಪುವಳ್: **ತ್ರಿಷಷ್ಟಿಪು,** ೨. ೨೪)

**ಕವ್ವರೆಗೊಳ್** – ಸಡಗರಗೊಳ್ಳು (ಪುಲ್ಲವಡಿಗಿತಿಯರೆತ್ತಿ ಪಿಡಿದ ಮಾಲೆಪೂವಿನ ನಱುಗಂಪಿಂಗೆ ಕವ್ವರೆಗೊಡು ಮುತ್ತಿ ಮುಸುಱೆ ಮೊರೆವ ಮಱಿದುಂಬಿಗಳ ಇಂಚರದೊಳಂ: **ಕಬ್ಬಿಗಕಾ,** ೩೭ ವ)

**ಕಶಾ** – ಚಾವಟಿ (ಕಶಾರವಂ ಬಳಸಿ ನಭಃಸ್ಥಲಕ್ಕೆ ಬಳೆಯುತ್ತಿರೆ ತಾಗಿದುದಾಜಿರಂಗದೊಳ್: **ಗಿರಿಜಾಕ,** ೬. ೭೦)

**ಕಶೆ** – ಕಶಾದಂಡ (ಶೃಂಗಕರದಿಂ ಕಶೆಯಿಂ ಕಡುಕಾಯ್ದು ಪೊಯ್ದವೋಲಿರೆ ಸೆಳೆಮಿಂಚು .. .. ಒಪ್ಪೆ: **ರಾಜಶೇಖಿ,** ೧. ೧೧೮)

**ಕಷಣ** – ಉಜ್ಜುವಿಕೆ (ಮಾದ್ಯತ್ ಗಜಗಂಡಕಷಣ ಪ್ರೋದ್ಭೇದದಿಂ ಸಾರ್ದು ಬಂದು ಇದಿರೊಳ್ ಕೂಡುವುದಿಲ್ಲಿ ಚಂದನರಸಂ ಕೆಂಬೊನ್ನ ಟಂಕಂಗಳೊಳ್: **ಪಂಪಭಾ,** ೪. ೨೨)

**ಕಷಾಯ** – ಸುವಾಸನೆಯಿಂದ ಕೂಡಿದ, ಸುಗಂಧ (ಕಮಳೋದ್ದಾಮ ಕಷಾಯಸೌರಭಮಿಳನ್ಮತ್ತಾಳಿನೀಗಿತ ಪಂಚಮಹಾಶಬ್ದವಿಜೃಂಭಿತ: **ಆದಿಪು,** ೧೨. ೪೮); [ಜೈನ] ಸುಖದುಃಖಗಳನ್ನುಂಟುಮಾಡುವ ನಾಲ್ಕು ಬಗೆಯ ದೋಷ: ಕ್ರೋಧ, ಮಾನ, ಮಾಯಾ, ಲೋಭಗಳು (ಕಷಾಯಭಟರಂ ಬೆನ್ನಟ್ಟಲೊಪ್ಪಿ ಮಹಾವ್ಯವಸಾಯಂ ತಮಗಾಗೆ ಭವ್ಯಕಜನಕೆಲ್ಲಂ ಶಾಂತಿಮಿಚ್ಛಂತಿ ಸಾಧವ ಎಂಬುತ್ತಮ ಸಾಧುವರ್ಗಮೆನೆರಂ ಸ್ವರ್ಗಾಪವರ್ಗಂಬರಂ: **ಅಜಿತಪು,** ೧. ೫)

**ಕಷಾಯಕಂಠ** – ಮಧುರಧ್ವನಿಯ ಒಗರು ಕಂಠ (ಕಳಿಕೆಗರ್ಚಿದ ಕಷಾಯಕಂಠಮಾದ ಕಳಕಂಠದ ಕುಂಠಕಂಠಮುಮಂ: **ಮಲ್ಲಿನಾಪು,** ೬. ೧೬ ವ)

**ಕಷಾಯಚತುಷ್ಟಯ** – [ಜೈನ] ಸುಖದುಃಖಗಳನ್ನುಂಟುಮಾಡುವ ನಾಲ್ಕು ಬಗೆಯ ದೋಷ: ಕ್ರೋಧ, ಮಾನ, ಮಾಯಾ, ಲೋಭಗಳು (ಕಷ್ಟತರಮಂ ಕಷಾಯಚತುಷ್ಟಯದೆಡೆಗಿಡಿಸಿ ದೇವ ಕಿಡಿಸಿಯೆ ಭವಚಾತುಷ್ಟಯಮಂ ಇನ್ನನಂತ ಚತುಷ್ಟಯಮಂ ಪೊರ್ದು ಪೊರ್ದದಿರು ಸಂಸೃತಿಯಂ: **ಅಜಿತಪು,** ೬. ೭೩)

**ಕಷಾಯಾಕ್ಷ** – ಕೆಂಪು ಕಣ್ಣುಗಳುಳ್ಳವನು (ಮುನಿದೊಡನೆ ಕೆಳರ್ದು ನುಡಿದ ಅನುಜನಂ ಕಷಾಯಾಕ್ಷನಂ: **ಶಾಂತಿಪು,** ೩. ೯೦)

**ಕಷಾಯಿತ** – ಒಗರಾದ, ಕಹಿಯಾದ (ಅಂತು ಪುರೋಡಾಶಪವಿತ್ರೋದರನುಂ ಸೋಮಪಾನ ಕಷಾಯಿತ ಉದರನುಂ ಆಗಿ ಮೂವತ್ತೆರಡು ದಿವಸದೊಳ್ ಕ್ರತುವಂ

ನಿರ್ವರ್ತಿಸಿ ಮಹಾದಾನಂಗೆಯ್ದು ದಕ್ಷಿಣಾಕಾಲದೊಳ್: **ಪಂಪಭಾ,** ೬. ೩೮ ವ)

**ಕಷಾಯೋದಕ** – ಐದು ಮರಗಳ ತೊಗಟೆಗಳಿಂದ ಕಾಯಿಸಿದ ನೀರು (ಅಯ್ದು ಕಷಾಯೋದಕದೊಳ್ ತೊಯ್ದು: ಶಾಂತಿಪು, ೨. ೭೩)

**ಕಷೋಪಲ** – ಒರೆಗಲ್ಲು (ಕನಕಾಬ್ಜರಜಂ ನಯದಿಂದೆ ಬರ್ಪ ನೀಳ್ದೆರೆಗೆರೆಗೊಂಡು ನಿಂದು ಸರಮೆಂಬ ಕಷೋಪಲದಲ್ಲಿ ವಾಸರೇಶ್ವರಕರಮೆಂಬ ಪೊನ್ನೊಳೆವೊಲೊಪ್ಪಿರೆ: **ರಾಜಶೇವಿ,** ೧೨. ೩೭)

**ಕಷ್ಟತಿಕೆ** – ತೊಂದರೆ (ಲೋಕದೊಳ್ ದಾರಿದ್ರ್ಯದಿಂ ಬಿಟ್ಟು ಕಷ್ಟತಿಕೆಯೊಂದುಮಿಲ್ಲ ಅದುವೆ ಲೋಕದೊಳ್ ಮಹಾಪಾತಕಂ: **ವಡ್ಡಾರಾ,** ೧೮೫, ೧)

**ಕಷ್ಟನ್** – ಕಷ್ಟ ಕೊಡುವವನು (ಯೋಗಿಯೆಂಬುದೆ ಸನ್ಮಾರ್ಗವಿಹೀನನಂ ಕಪಟನಂ ಪಾಪಿಷ್ಠನಂ ಕಷ್ಟನಂ: **ಸಮಯಪ,** ೧೪. ೩೬)

**ಕಸಕಿಲ** – ಕಸಪೊರಕೆ (ಕೆರದಲೆಯ ಕೈಯ ಕಸಕಿಲ ನಿರುತಂ ಕೊಳೆವಲ್ಲ .. .. ದೂಸಕ ಸವಣರ್: **ತ್ರಿಷಷ್ಟಿಪು**೩೩. ೩೪)

**ಕಸರ್** – ಗಂಟಲು ಕೆರೆ (ಕಸರ್–ಗಲಕಂಡೂತೌ: **ಶಬ್ದಮದ, ಧಾ** ೫೫೮)

**ಕಸವರ** – ಧನ, ಚಿನ್ನ (ಕಸವರಮೆಂಬುದು ನೆಱೆ ಸೈರಿಸಲಾರ್ಪೊಡೆ ಪರವಿಚಾರಮಂ ಧರ್ಮಮುಮಂ: **ಕವಿರಾಮಾ,** ೩. ೧೭೬)

**ಕಸವು** – ಕಸ (ವಿಸಸನದೊಳ್ ವಿರೋಧಿನೃಪರಂ ತಱಿದೊಟ್ಟಲುಂ ಅರ್ಥಿಗೆ ಅರ್ಥಮಂ ಕಸವಿನ ಲೆಕ್ಕಮೆಂದು ಕುಡಲುಂ: **ಪಂಪಭಾ,** ೧. ೧೧೭); ಕೇಡಿಗ, ದುಷ್ಟ (ಕಸವಿಂಗಂ ಕಳುಚೆಂಗಂ ಡಸಿಕಿಂಗಂ ದೂರ್ತವಡೆಗಂ ಅತಿಚಪಳರ್ಗಂ ಪುಸಿರ್ವ್ಗಂ ಸಿತಗರ್ಗಂ ವಸುಧೇಶ್ವರ ಕೇಳ ಕುಡುವನುರ್ಕಿ ಕುಮಾರಂ: **ಧರ್ಮಾಮೃ,** ೨. ೪೨)

**ಕಸಱಿಸು** – ಅಸಹ್ಯಕರವಾಗಿಸು (ಬಸನಿಗಳ ಗೊಟ್ಟಿತನಗಾಗಿಸೆ ಸಂತಸದ ಒದವಂ ಉತ್ತಮರ ಗೊಟ್ಟಿ ಕರಂ ಕಸಱಿಸಿದುದು: **ಆಚವರ್ಧ,** ೨. ೩೫)

**ಕಸೆ** – ಚಾವಟಿ (ಕಸೆಯಂ ಇನಿಸಱಿಪಿ ಕುಡೆ ಲಂಘಿಸಿದುದು ಪನ್ನೆರಡುಯೋಜನನಂಬರಂ: **ಆದಿಪು,** ೧೩. ೩೯); ಅಂಗಿಯ ಲಾಡಿ (ಚಾಗದಪೆಮೇಯಿಂ ಮೆಱೆವ ಬೊಜಂಗರಿಕ್ಕಿದ ಎಕ್ಕಸರದ ಕಸೆಯುಮಂ ಸೆಳೆದು: **ಮಲ್ಲಿನಾಪು,** ೭. ೨ ವ)

**ಕಸ್ತಿ** – ಆವೇಶ (ಕಸ್ತಿಯೊಳ್ ಮುಳಿ ತಿಳಿ ಎಂಬ ದೂದವಿಯ ಜಾಣ್ಮೆಗೆ ಮೆಚ್ಚಿದಂ ಉರ್ವರೇಶ್ವರಂ: ೨೪. ೧೭೫)

**ಕಸ್ತೂರಕಾಂಡಕ** – ಕಸ್ತೂರಿಮೃಗದ ಬೀಜಕೋಶ (ಕಸ್ತೂರಿಕಾಂಡಕಂ ಮನಹಸ್ತಿರದಂ ಹಸ್ತಿಮಸ್ತಕೋದ್ಭವ ಮುಕ್ತಾವಿಸ್ತಾರಂ ಎಂದು: **ಆದಿಪು,** ೧೨. ೬೭)

**ಕಹಕಹಧ್ವನಿ** – ಕಹಕಹ ಎಂಬ ಶಬ್ದ (ಪರೆದ ಉರಿಗೇಸಂ ಅವ್ವಳಿಪ ನಾಲಗೆ ಮಿಂಚುವ ದಾಡೆ ಬಿಟ್ಟ ಕಣ್ ತಿರುಪಿದ ಮೀಸೆ ಕೊಂಕಿದ ಸಟಂ ಕಡು ನೆಕ್ಕ ಕದಂಪು ನೀಳ್ದ ತಾಳ್ಮೆರದವೊಲಪ್ಪ ಒಡಲ್ ಕಹಕಹಧ್ವನಿ ಕೌಳಿಕನಾದಂ ಆದುದು ಆಸುರತರಮಾಗೆ ಬಂದು ಕವಿದತ್ತು ಘಟೋತ್ಕಚರೌದ್ರಸಾಧನಂ: **ಪಂಪಭಾ,** ೧೨. ೭)

**ಕಹಕಹಹಸನ** – ಗಹಗಹಿಸುವ ನಗು (ಮೃತ್ಯುದೇವೀ ಕಹಕಹಹಸನಧ್ವಾನಂ ಎಂಬನ್ನೆಗಂ ಕೃಷ್ಣನಿನಾ ಕೋದಂಡಭಂಗಧ್ವನಿ ನೆಗಳ್ದುದು: **ಜಗನ್ನಾವಿ,** ೬. ೩೨)

**ಕಳ್** – ಕದಿ, ಕಳ್ಳತನಮಾಡು (ಕಳ್–ಸ್ತೇಯೇ: **ಶಬ್ದಮದ,** ಧಾ ೯೪೯); ಮದ್ಯ, ಕಳ್ಳು (ಮಧು ಸೀಧು ಕಟು ಸೀಧು ಪೋ ಪುಳಿತ ಕಳ್ಗಳುಂ ಕರಂ ಕಯ್ತು ಬರ್ಪುದು: **ಪಂಪಭಾ,** ೪. ೮೮, 'ಮಧು ಸೀಧು' ಡಿಎಲ್ಎನ್ ಒಪ್ಪಿದ ಪಾಠ); ವಂಚಿಸು (ಪತಿಶೋಕೋದ್ಭೂತದುಃಖಾನಳಾಕ್ರಾಂತೆ ತದುಗ್ರಸೇನ ನೃಪನಂ ಕಳ್ದೆಯ್ದಿದಳ್ ಪೋಗಿ: **ಕರ್ಣನೇಮಿ** , ೭. ೩)

**ಕಳ** – ಯುದ್ಧರಂಗ (ಇಂ ತಡೆವೆನೆ ಕಟ್ಟಿದುದೆ ಸುರಿಗೆ ಮೆಟ್ಟಿದುದೆ ಕಳಂ: **ಆದಿಪು,** ೩. ೭೨); ಇಂಪಾದ (ಕಳಮಂಗಳ ಗೀತಂಗಳಂ ಅಳವಡೆ ಪಾಡುತ್ತುಂ ಆಡುತುಂ: **ಪಾರ್ಶ್ವನಾಪು,** ೧೪. ೩೧)

**ಕಳಂಕ** – ಕಲೆ, ದೋಷ (ನಿರ್ಮಳಮಪ್ಪ ನಿಜಾನ್ವಯಕ್ಕೆ ಕಳಂಕ ಪಂಕಾದ್ಯನೇಕ ಅಪವದವಾದುದು: **ಸುಕುಮಾಚ,** ೨. ೩೨ ವ)

**ಕಳಂಚು** – ಮೋಸ (ಇಂಚೆಯ ಪಸವಿನ ಬಱದ ಕಳಂಚಿನ ಡಾವರದ ಬಾಧೆಯಿಲ್ಲದ ಪದದೊಳ್ ಮುಂಚದೆ ಪಿಂಚದೆ ಬಳೆದು ವಿರಿಂಚಿಯ ಕೆಯ್ಪಿಡಿವೊಲಾದುವಾ ನಾಡ ಊರ್ಗಳ್: **ಪಂಪಭಾ,** ೮. ೫೧)

**ಕಳಂಬ** – ಬಾಣ (ಆ ಕಳಂಬಮನಿತಂ ನಿನ್ನಿಷ್ಟಮಾದಸ್ತ್ರಮಂ ತವೆ ನೋಡೆಂದವನಲ್ಲಿ ತೋಱುವವೊಲ್ ಆತಂಗೆಚ್ಚಂ ಉಗ್ರಾಂಬಕಂ: **ಶಬರಶಂ,** ೪. ೫೨)

**ಕಳಂಬೇಟ್** – ಕಳವೇಟ್, ರಣರಂಗವನ್ನು ಗೊತ್ತುಪಡಿಸು (ಒರ್ವ ಗಂಧರ್ವನೊಳೆ ಚಿತ್ರಾಂಗದಂ ದ್ವಂದ್ವಯುದ್ಧಮಂ ಪೊಣರ್ಚಿ ಕುರುಕ್ಷೇತ್ರಮಂ ಕಳಂಬೇಟ್ಟು: **ಪಂಪಭಾ,** ೧. ೭೩ ವ)

**ಕಳಕಂಠ** – ಇಂಪಾದ ಧ್ವನಿಯುಳ್ಳುದು, ಕೋಗಿಲೆ (ಕಳಕಂಠಕ್ಕೆ ಅತನುಗೆ ಚಾಪಳತಾರೋಹಣವಿಕಾರವಳಿಗೆ ಆಮ್ರಕುಜಾವಳಿಗೆ ಮಧುವಿಕೃತಿ ಮಾನವಕುಳಕ್ಕೆ ಕನಸಿನೊಳಂ ಇಂತಿವಿಲ್ಲಾ ನಾಡೊಳ್: **ಮಲ್ಲಿನಾಪು,** ೨. ೨೦)

**ಕಳಕಂಠಗೀತಂ** – ನುಣ್ಗೊರಲ ಹಾಡು (ಕಳಕಂಠಗೀತಂ ಬಗೆಗೊಳೆಯುಂ ವೀಣಾಕ್ವಣಂ ಮನಂಗೊಳೆಯುಂ: **ಆದಿಪು,** ೧೧. ೨೮)

**ಕಳಕಂಠಿ** – ಇಂಪಾದ ಕಂಠವುಳ್ಳ, ಹೆಣ್ಣು ಕೋಗಿಲೆ (ಸ್ಮರಶರಮೇವುವೆಂಬ ಶಿಶಿರಾಶುವ ತಣ್ಗದಿರೇವುವೆಂಬ ತೆಂಬೆರಲರಲೇವುವೆಂಬ ಕಳಕಂಠಿಯ ಬಗ್ಗಣೆಯೇವುವೆಂಬ.. ..ಬದ್ದರಂ ಅಱೆಯಟ್ಟಿ ಸಂತಮಿರಲೀಯದೆ ಬಾಳಬಸಂತವಾರಣಂ: **ಅಜಿತಪು,** ೬. ೨೬)

**ಕಳಕಳಿಕ್ಕೆ** – ಗಜಿಬಿಜಿ, ಕೋಲಾಹಲ (ಆ ವಿವಿಧ ಕಳಕಳಿಕ್ಕೆ ವನಾವಳಿಯಿಂ ಪಾಱೆ ಮೊಱೆವ ಮಧುಪಶ್ರೇಣೀರಾವದ ಘೋಷಣೆ ಕಳೆದುದು ಇಳಾವಲ್ಲಭಸುತನ ಪಡೆಯ ಮಥನಶ್ರೀಯಂ: **ಶಾಂತಿಪು,** ೮. ೬)

**ಕಳಕುಳ** – ಅಸ್ತವ್ಯಸ್ತ (ತಳದಳಿಪ ಮುಗಿಲ್ಗಳ್ ಕಳಕುಳಮಪ್ಪಿನಂ ಅಳರ್ದು ಜಯನ ಶರತತಿ ಕೊಳೆ: **ಆದಿಪು,** ೧೩. ೬೫)

**ಕಳಕ್ಕಳ** – ಸಂಭ್ರಮಪಡು (ಕಳಕ್ಕಳಿಸಿ ಸಂತಸವಾತಿನ ಪೂರ್ಣಪಾತ್ರಮಂ ಕೊಳ್ವವೊಲ್ ಈಟ್ಟುಕೊಂಡುವಳಿಗಳ್ ಸುಮನೋಮಕರಂದಮಂ: **ಅಜಿತಪು,** ೬. ೬೯)

**ಕಳಕ್ವಣಿತ** – ಇಂಪಾದ ಧ್ವನಿ (ಮದನಡಿಂಡಿಮ ರವಾಡಂಬರಂ ಆಳೋಳತುಳಾಕೋಟಿಕಳಕ್ವಣಿತಮೆ ನಿಗಳಾಂದುಕಾರಮಾಗೆ: **ಆದಿಪು,** ೧೧. ೨೦ ವ)

**ಕಳಚಂ ಕೊಡಹು** – ಕಳಚಿಕೊಂಡು ಬೀಳುವಂತೆ ಕೊಡಹು (ತಲೆಯಂ ಕಳಚಂ ಕೊಡಹಲ್ ಕಂಡು ಆಗಳೆ ಪಿಡಿ ಶುಂಡಮನೆ ಪಿಡಿದು ಬಿದಿರಿತ್ತಿಳೆಯೊಳ್: **ತ್ರಿಷಷ್ಟಿಪು,** ೨೭. ೩೧)

**ಕಳತ್ರ** – ಹೆಂಡತಿ (ಪೋಗು ಕೆಟ್ಟಪುದು ಮೋಹಮಯ ನಿಗಳಂ ಕಳತ್ರಮೆಂದಱಿಪದೆ ನಟ್ಟಿರುಳ್ ಮಱೆದು ಸಾರ್ಚಿದ ನಲ್ಲಳ ತಳ್ತ ತೋಳ್ಗಳಂ: **ಪಂಪಭಾ,** ೪. ೧೨)

**ಕಳಧೌತ** – ಚಿನ್ನ (ಚತುರ್ದಶ ಮಹಾನದಿಗಳ ನೀರುಮಂ ತಟತಟ ತೊಳಗುವ ಕಳಧೌತಕಳಶಂಗಳೊಳ್ ತೆಕ್ಕನೆ ತೀವಿ ತಂದ ವಾರವನಿತಾಜನಕ್ಕಂ: **ಪಂಪಭಾ,** ೧೪. ೧೭ ವ) ಬೆಳ್ಳಿ, ಬಿಳಿ ಬಣ್ಣ ಶ್ವೇತಂ ರಜತಂ ತಾಂ ಕಳಧೌತಾಖ್ಯಂ: **ಅಭಿಧಾವ,** ೧. ೬. ೮)

**ಕಳಧೌತಘಟ** – ಚಿನ್ನದ ಬಿಂದಿಗೆ (ಕಳಧೌತಘಟಂ ಮುಕ್ತಾಫಳಾಂಚಿತಗ್ರೀವಂ ಎಟೆದುಕೊಂಡುದು .. .. ನವಸಂಧ್ಯಾಜಳದದ ಗಾಡಿಯಂ: **ಆದಿಪು,** ೭. ೮೪)

**ಕಳನೇಱು** – ಯುದ್ಧಕ್ಕೆ ತೊಡಗು (ಗುಣಾರ್ಣವನಂ ಸೆಜ್ಜೆಗೆ ಬಿಜಯಂಗೆಯ್ಯಿಮೆನೆ ಕಾಮಂ ಕಳನೇಱುವಂತೆ ಸೆಜ್ಜೆಯನೇಱೆ ಸೆಡೆದಿರ್ದ ನಲ್ಲಳಂ ನೋಡಿ: **ಪಂಪಭಾ,** ೩. ೮೧ ವ)

**ಕಳಭ** – ಆನೆಯ ಮರಿ (ಕಳಭಂ ವನಪಥಮಂ ಯುಧಪತಿಗೆ ತೋರ್ಪಂತಕ್ಕುಂ: **ಆದಿಪು,** ೮. ೧೨)

**ಕಳಮ** – ಬತ್ತದ ಪೈರು (ಪೂರ್ಣಕಳಶ ಕಳಮಾವೃತಕರ ಪಲ್ಲವೆಯರಪ್ಪ ಪುರಂಧ್ರಿಯರಂ: **ಪಂಪಭಾ,** ೩. ೨ ವ)

**ಕಳಮ ಧವಳಾಕ್ಷತ** – ಅಕ್ಕಿಯ ಬಿಳಿಯ ಅಕ್ಷತೆ (ಕಳಮಧವಳಾಕ್ಷತಂಗಳ ಪೊಳೆವಲರ್ಗಳ ಚಂದನದ್ರವೋನ್ಮಿಶ್ರಜಲಂಗಳ: **ಆದಿಪು,** ೭. ೮೦ ವ)

**ಕಳಮಕ್ಷೇತ್ರ** – ಬತ್ತದ ಗದ್ದೆ (ಕಳಮಕ್ಷೇತ್ರದ ಉಪಾಂತನಂದನದೊಳ್: **ಜಗನ್ನಾವಿ,** ೨. ೬)

**ಕಳಮಾಕ್ಷತೆ** – ಅಕ್ಕಿಯ ಕಾಳು, ಅಕ್ಷತೆ ಕಾಳು (ಸುಧೆ ಸಿರಿಗಂಪು ಕುಂಕುಮರಸಂ ಕಳಮಾಕ್ಷತೆ ರತ್ನದರ್ಪಣಂ ವಿಧುಮಣಿ: **ರಾಜಶೇವಿ,** ೮. ೧೧)

**ಕಳಮೆವನ** – ಬತ್ತದ ಗದ್ದೆ (ಕಳಮೆವನಕ್ಕಾಗಿ ತೆಱಂಬೊಳೆವ ಬಕಂ ಸುೞಿವ ಸೋಗೆ ಜಡಿವರಗಿಳಿಗಳ್ ವಿಳಸಿತ ರವದಿಂ ಪಾಂಥ ಪ್ರಬಲಮನೋರಥವಿಘಾತಮಂ ಮಾಡುತ್ತುಂ: **ಸುಕುಮಾಚ,** ೯. ೫೩)

**ಕಳರವ** – ಸಪ್ಪುಳ (ಆಕೆಯ ಕಳರವದೊಡನೆ ಮಚ್ಚರಿಸಿ ಸೆಱೆಗೆ ವಂದಂತಿರ್ದ ಪಂಜರ ಶುಕಶಾರಿಕೆಗಳುಂ .. .. ರಮಣೀಯಮಾಗೆ: **ಮಲ್ಲಿನಾಪು,** ೧೧. ೭೨ ವ)

**ಕಳರುತಿ** – ಮಧುರ ಧ್ವನಿ (ಉನ್ನತ್ತ ಅಳಿಕೀರಂಗಳ ಕಳರುತಿಯಂ ಪೋಲ್ವಿನಂ ತನ್ನಿತಂಬಸ್ಥಳದೊಳ್ ತಾಳ್ದಿತ್ತು ಚಿತ್ರಾಂಬರವಿಳಸನಮಂ ಭದ್ರಶಾಳಂ ವಿಶಾಳಂ: **ಮಲ್ಲಿನಾಪು,** ೧೨. ೫೯)

**ಕಳವಳಿಗ** – ವಿಷಯಲಂಪಟ, ಕಾತರಿಸುವವನು (ಅತಿ ಕಾಮಾತುರನೆನಿಪಂ ಸಿತಗಂ ಕಳವಳಿಗಂ ಏಣಗೋಣಂ ಮೂರ್ಖಂ: **ಸಮಯಪ,** ೩. ೩೪)

**ಕಳವು** – ಕಳ್ಳತನ (ಹಿಂಸೆ ಪುಸಿ ಕಳವು ರತಿರಾಗಂ ಸಕಳಪರಿಗ್ರಹಂಗಳೆಂಬುದಂ .. .. ತೊಱೆವುವುದು: **ಶಾಂತಿಪು,** ೬. ೪೯)

**ಕಳವೇಟ್** – ಯುದ್ಧರಂಗವನ್ನಾಗಿ ಮಾಡಿಕೊ (ಕೆಲರ್ದು ಅಂದುಗ್ರರಣಾಗ್ರಹಪ್ರಣಯದಿಂದಾಗಳ್ ಕುರುಕ್ಷೇತ್ರಮಂ ಕಳವೇಟ್ಟು ಇರ್ವರುಂ ಐಂದ್ರವಾರುಣದೆ ವಾಯವ್ಯಾದಿ ದಿವ್ಯಾಸ್ತ್ರಸಂಕುಳದಿಂದ ಒರ್ವರಂ ಒರ್ವರ್ ಎಚ್ಚು: **ಪಂಪಭಾ,** ೧. ೭೯)

**ಕಳಶ** – ಕೊಡ (ಸ್ನಾನಾರ್ಥಂ ಒಂದು ಕಳಶಮಂ ನಿಯಮನಿಧಾನಂ ಎಟಿಲೆ ಪಿಡಿದು ಅಮಳಿನ ಗಂಗಾನದಿಗೆ ವಂದು ಸುರತನಿಧಾನಿ ಅಮರೇಂದ್ರಗಣಿಕೆಯಂ ಮುನಿ ಕಂಡಂ: **ಪಂಪಭಾ,** ೨. ೪೧)

**ಕಳಶಕೇತನ** – ದ್ರೋಣ (ಅರಿನೃಪಕೋಟಿಯಂ ಆಟರಲೆಂದು ಆಸ್ಫೋಟಿಸಿ ನಿಶಿತಶರಕೋಟಿಯೊಳ್ ತಟೆಗೋಂಟಿಯನಿಕ್ಕಿ ವೀರರಸನಿಕೇತನನಾಗಿರ್ದ ಕಳಶಕೇತನನಂ ನೋಡಿ ದ್ರುಪದಂ ಸೈರಿಸದೆ: **ಪಂಪಭಾ,** ೧೨. ೧೮ ವ)

**ಕಳಶಪ್ರೋದ್ಭೂತ** – ಕಲಶಜ, ದ್ರೋಣ; ಅಗಸ್ತ್ಯ (ಎನ್ನೊಳ್ ವಿಷಂ ಪುಟ್ಟಿತ್ತು ಎನ್ನಂ ಕಳಶಪ್ರೋದ್ಭೂತಂ ಅಂದು ಈಂಟಿದಂ ಅಕಟಎಂದು .. .. ಅಂಭೋರಾಶಿ: ೧. ೧೦೨)

**ಕಳಶಸಂಭವ** – ದ್ರೋಣ (ಒಸೆದು ಅರ್ಜುನಂಗೆ ಮುಂ ಕಳಶಸಂಭವಂ ಮಾನ್ಯಪದವಿಯಂ ಮಾಡಿದೊಡಂ ಬೆಸುಗೆಗಿಡೆ ಪಾಟೆಗಿಡೆ ತನ್ನಸುವಂ ತೆಲ್ಲಟಿಗೆಗುಡುವ ತೆಱದೊಳ್ ಕೊಟ್ಟಂ: **ಗದಾಯು,** ೨. ೧೫)

**ಕಳಸ್ವನ** – ಇಂಪಾದ ಧ್ವನಿ (ಇಳಿವ ಜಡೆ ಬಳೆವ ವೀಣಾ ಕಳಸ್ವನಂ ಭಸಿತಗಾತ್ರಂ .. .. ಒಪ್ಪೆ ನಾರದಂ ನಡೆತಂದಂ: **ಗಿರಿಜಾಕ,** ೪. ೩೮)

**ಕಳಹಂಸಿ** – ಕಂದುಬಣ್ಣದ ರೆಕ್ಕೆಗಳಿರುವ ಹೆಣ್ಣು ಹಂಸ (ಬೆಡಗನುಂಟುಮಾಡಿದ ಕಳಹಂಸಿಯಂತೆ ಉಭಯಪಕ್ಷವಿಶುದ್ಧಿಯಂ ಅಪ್ಪುಕೆಯ್ದು: **ಮಲ್ಲಿನಾಪು,** ೪. ೯೫)

**ಕಳಱು** – ಹೆದರು (ಕಳಱು ಪೆಳಱು ಮಱುಕುಳಿ ಅಳಿಯಂ ಕುಳಿಯಂ: **ಶಬ್ದಮದ,** ೩೬); ಸವಳು ನೆಲ (ನೆಳಱುಮಂ ಕಳಱುಮಂ ಎಱುಗಲುಮಂ ಗಿಡದುಱುಗಲುಮಂ .. .. ಜಕಳೆದು ಪೋಗಿ: **ಲೀಲಾವತಿ,** ೧೬. ವ)

**ಕಳಾಕಳಿತ** – ಕಲಾಕಲಿತ (ಮೃದುಪಾದಮಾದ ವಾಕ್ತ್ರೀಸುಭಗಂ ಕಳಾಕಳಿತಮೆಂಬ ನೆಗೞ್ತೆಯನಾಳ್ದ ಕಬ್ಬಮಂ ಕೂಸುಮಂ ಈವುದು ಈವುದರಿಕೇಸರಿಗಲ್ಲದೆ ಅವಸ್ತುಗೀವುದೇ: **ಪಂಪಭಾ,** ೧. ೯)

**ಕಳಾಪ** – ಸಮೂಹ (ಔರ್ವಜ್ವಳನ ಕಳಾಪೋದ್ಗಮನನುಗುಣಂ ಮಾಡುತುಂ: **ಆದಿಪು,** ೧೧. ೨); ಡಾಬು (ಪಾರದೆ ಬರ್ಪ ದೂದವಿಯರಂ ತವಕದಿಂ ತಲೆಮಿಕ್ಕು ನೀವಿಯಂ ಚಾರು ಕಳಾಪದೊಳ್ ನಿಲಿಸುತುಂ .. .. ಜಾರೆಯರೆಯ್ದುತಿರ್ದರ್ ಉಪಕಾಂತರನಾ ಬಹಳಾಂಧಕಾರದೊಳ್: **ಶಾಂತೀಶ್ವಪು,** ೧೧. ೨೪); ನವಿಲುಗರಿ (ನವಿಲಿಂಗೆ ಕಳಾಪವರ್ಣಂ ಅಂತಮರ್ದ ಮುಗಿಲ್ಗೆ ಶಕ್ರಧನುವೋಲ್ .. .. ರಾಜಸನುಗೆಸೆದತ್ತು ನವಯೌವನೋದಯಂ: **ಕಾದಂಸಂ,** ೨. ೩೪)

**ಕಳಾಪಿ** – ಹೆಣ್ಣು ನವಿಲು (ಆ ಪುರದ ರತ್ನಭವನ ಕಳಾಪದ್ಯುತಿ ನೆಗೞೆ ಗಗನತಳದೊಳ್ ಬಲಭಿಚ್ಚಾಪರುಚಿಗೆತ್ತು ಮತ್ತೆ ಕಳಾಪಿಗಳಾಡುವುದು ಮಧುರಕೇಕಾರವದಿಂ: **ಅಜಿತಪು,** ೨. ೧೭)

**ಕಳಾಪಿನಿ** – ಕಳಾಪಿ (ಕಳವಿಳಸತ್ ಕಳಾಪಿನಿಗೆ .. .. ಆದುದು ಗಡಂಂಗಜತಾಪಂ: **ಲೀಲಾವತಿ,** ೧೧. ೧೩)

**ಕಳಾಭೃತ** – ಚಂದ್ರ (ಅಭವಂ ಅತಿವೃದ್ಧಂ ಕಳಾಭೃತ್ ಕಳಂಕಂ ಹರಿ ಗೋಪಂ ಮಾರುತಂ ಚಂಚಳಂ: **ತ್ರಿಷಷ್ಟಿಪು,** ೨೪. ೧೪೪)

**ಕಳಾವಿದುರ** – ಕಲಾಭಿಜ್ಞ (ನಾನಾ ವಸ್ತುಗಳಂ ನೆಱಪಿ ಕಳಾವಿದುರಂ ಧನದಂ ಒಸೆದು ಸಮೆದಂ ಸಭೆಯಂ: **ಪಾರ್ಶ್ವನಾಪು,** ೧೬. ೮)

**ಕಳಾಸ** – ನೃತ್ಯಭಂಗಿ (ನೇರು ಲಾಗು ಲವಣಿ ಅಡಪು ತಿರುಪು ಕೈಮುಱಿ ಕಳಾಸ ಕೂಟಮಾನಂಗಳಂ ಸಂಗಳಿಸಿ: **ರಾಜಶೇವಿ,** ೫. ೧೯ ವ)

**ಕಳಿ** – ಹರಿ, ಚಿಮ್ಮು (ಸುಖಜಳಂ ಅಕ್ಷಿಗಳಿಂ ಕಳಿದಿಳಿದುದು ಮೆಲ್ಲಗೆ ಬೆಮರುಣ್ಮಿದುದು ಸಚಿವಸುತನೃಪಸುತರಾ: **ರಾಜಶೇವಿ,** ೪. ೯೮)

**ಕಳಿಂಕೆ** – ಮೊಗ್ಗು, ಚಿಗುರು (ವನತರುಗಳ ಪಣ್ಣೆಲೆಗಗಳ್ ಕಱಲೆ ಕಳಿಂಕೆಗಳ್ ತಾರಕೆಗಳಂತೆ ಒಗೆಯೆ: **ಹರಿವಂಶ,** ೫. ೫ ವ)

**ಕಳಿಂಚು** – ಮೋಸ, ವಂಚನೆ (ಇಂಚೆಯ ಪಸವಿನ ಬಱದ ಕಳಂಚಿನ ಡಾವರದ ಬಾಧೆಯಿಲ್ಲದ ಪದದೊಳ್ ಮುಂಚದೆ ಪಿಂಚದೆ ಬಳೆದು ವಿರಿಂಚಿಯ ಕೆಯ್ಪಿಡಿವೊಲಾದುವಾ ನಾಡ ಊರ್ಗಳ್: **ಪಂಪಭಾ,** ೮. ೫೧)

**ಕಳಿಂದಕನ್ಯೆ** – ಯಮುನಾ ನದಿ (ದೇಸೆಗಾಯ್ತು ಕರ್ಪಿದಱೊಳ್ ಎನಲ್ಕೆ ದಾಂಟಿದುದು ಕೃಷ್ಣನ ಬೀಡು ಕಳಿಂದಕನ್ಯೆಯಂ: **ಜಗನ್ನಾವಿ,** ೧೬. ೭೧)

**ಕಳಿಂದಜಾ[ಜೆ]** – ಕಳಿಂದಕನ್ಯೆ, ಯಮುನಾ ನದಿ (ಕಳಿಂದಜಾ ಅಂಬುವಿಸ್ಫುರಿತಪದಾಂಬುಜಾತೆ ಕರಿರಾಣ್ಮುಖಿಷಣ್ಮುಖಿಮಾತೆ: **ಶಬರಶಂ,** ೧. ೨)

**ಕಳಿಂದನಂದನೆ** – ಯಮುನಾ ನದಿ (ಕಳಿಂದನಂದನೆಯ ತಟದೊಳ್ ಅಂಬಿಯದ ಪೊರ್ದುಗೆಯಿಂ ಪೊಱೆಯೊಳಿರ್ದಳ್: **ಕರ್ಣನೇಮಿ,** ೧೪. ೯ ವ)

**ಕಳಿಕ** – ಜೋಳ (ನವಕಳಿಕಾಂಕುರಪ್ರಕರಮಂ ನವಕೋಕಿಲ ಕುಟ್ಮಲಂಗಳಂ .. .. ಅಂಗಜಂಗೆ ಲೆಕ್ಕವಣಿಗೆದೋಱುವಂತೆಸೆದು ತೋಱಿದುವಂದಿನ ಬಂದ ಮಾವುಗಳ್: **ಅಜಿತಪು,** ೬. ೨೪)

**ಕಳಿಕಾ** – ಮೊಗ್ಗು, ಚಿಗುರು (ಸುತಮುಖನಿರೀಕ್ಷಣಸಮಯ ಸಮುಪಜನಿತಪುಳಕಕಳಿಕಾಕಳಿತ ಕಲ್ಪವೃಕ್ಷನಪ್ಪ ನಾಭಿರಾಮಹೀಜಂ: **ಆದಿಪು,** ೭. ೧೧೦ ವ)

**ಕಳಿಕಾಕಳಿತ** – ಹೂಗೊಂಚಲಿನಿಂದ ಕೂಡಿದ (ಫಳಲಲಿತಂ ವಿನೂತಕಳಿಕಾಕಳಿತಂ ಕಡುರಯ್ಯಮಾಯ್ತು ಕೋಮಲ ಲತೆಯೆಂಬಿನಂ: **ಆದಿಪು,** ೮. ೪೫)

**ಕಳಿಕೆ** – ಚಿಗುರು (ತೆಂಬೆಲರಲೆಪಿಂ ಕಳಿಕೆಯೊಳೆ ತುಱುಗಿ ತಳಿರೊಳೆ ತಳತಳಿಸಿದುದು: **ಆದಿಪು,** ೮. ೨೯); ಮೊಗ್ಗು (ತಳಮಿವು ತಳಿರಿವು ಬೆರಲಿವು ಕಳಿಕೆಗಳಿವು ನಖಮಿವು ಅಲರಿವು ಎಂದಱಿಯದೆ ಕೋಮಳೆ ಪೂಗೊಯ್ವೆಡೆಯೊಳ್ ಪಳಪಳಿಸಿದಳ್ ಅತಿಮುಗ್ಧೆ ಮಾವಿನೊಳ್ ಮತ್ತೊರ್ವಳ್: **ಶಾಂತೀಶ್ವಪು,** ೧೦. ೧೨೬); ಸೊಡರ ಕುಡಿ (ಬಾಷ್ಪಾಯಮಾನ ನಯನಪುಟ ಕೋಟಿಯೊಳ್ ಮಿಱುಗುವ ಅರುಣಿತ ಅಪಾಂಗ ಕಳಿಕೆಯುಂ: **ಆಚವರ್ಧ,** ೭. ೪೧ ವ)

**ಕಳಿಕೆಗರ್ಚು** – ಚಿಗುರ[ಮೊಗ್ಗ]ನ್ನು ಕಚ್ಚು (ಇಚ್ಚೆಯಂ ಸಲಿಸಿ ಬಸಂತದೊಳ್ ಕಳಿಕೆಗರ್ಚಿದ ಕೋಗಿಲೆಯಂತೆ: **ಆದಿಪು,** ೨. ೯)

**ಕಳಿತ** – ಕೂಡಿದ (ಅಧಿಕಬಳನಳಕರತಳಗಳಿತ ಕುಳಶೈಲಸಹಸ್ರ ಸಂತಾನ ಕಳಿತ ಸೇತುಬಂಧುರಮಪ್ಪ ದಕ್ಷಿಣಸಮುದ್ರದ ತಡಿವಿಡಿದುಬಂದು: **ಪಂಪಭಾ,** ೪. ೧೮ ವ)

**ಕಳಿತರ್** – ಹರಿದು ಬರು (ಕಳಿತಪ್ಪ ಕಣ್ಣ ನೀರ್ಗಡಲೊಳಂ ಆೞದಾಯ್ತು ಅಬಲೆಯ ಅಂಗಜತಾಪಂ: **ಲೀಲಾವತಿ,** ೧೧. ೩೬)

**ಕಳಿಮಳಿನ** – ಕಲಿಕಾಲದ ಕಳಂಕ (ಕಳಿಮಳಿನ ಕುಮತಸಂಗತ ಕಳಂಕಮಂ .. .. ದುರುಕ್ತಿಗಳ್ ಕಳೆದಪುವೇ: **ಸಮಯಪ,** ೩. ೪೫)

**ಕಳಿಸು** – ಕಳ್ಳತನ ಮಾಡಿಸು (ತುಱುವಂ ಕಳಿಸುವ ಕೃಷ್ಣೆಯ ನಿಱೆಯಂ ಪಿಡಿದುರ್ಚವೇೞ್ಪ: **ಗದಾಯು,** ೬. ೧೦)

**ಕಳುಚು** – ಮೋಸಗಾರ (ಕಸವಿಂಗಂ ಕಳುಚಿಂಗಂ ಡಸಿಕಿಂಗಂ ದೂರ್ತವಡೆಗಂ ಅತಿಚಪಳರ್ಗಂ ಪುಸಿವ್ರ್ಪಂ ಸಿತಗರ್ಗಂ ವಸುಧೇಶ್ವರ ಕೇಳ ಕುಡುವನುರ್ಕಿ ಕುಮಾರಂ: **ಧರ್ಮಾಮೃ,** ೨. ೪೨)

**ಕಳೆ** – ಹೋಗಲಾಡಿಸು (ಬರೆಯಿಸಿದಂ ಪೂರ್ವಮಹೀಶ್ವರ ನಾಮಮಂ ಎಯ್ದೆ ಕಳೆದು ವೃಷಭಾಚಲದೊಳ್ ಭರತಂ ನಿಜನಾಮಮಮಂ: **ಆದಿಪು,** ೧೪. ೭೩); ಕಳುಹಿಸು (ಮೆಲ್ಲಮೆಲ್ಲನೆ ಕೆಲಕ್ಕೆ ವಂದು ಕುಂಚದ ಅಡಪದ ಡವಕೆಯ ಪರಿಚಾರಿಕೆಯರೆಲ್ಲರುಮಂ ಕಣ್ಗೆತ್ತಿ ಕಳೆದು: **ಪಂಪಭಾ,** ೪. ೬೧ ವ); ಒಂದು ಕಾಲ ಪರಿಮಾಣ (ಹದಿನೆಂಟು ನಿಮೇಷದಿನಂತದೊಂದು ತಾಂ ಕಾಷ್ಠೆ ಕಾಷ್ಠೆ ಮೂವತ್ತಾಱೆಂದದು ಕಳೆ: **ಅಭಿಧಾವ,** ೧. ೨. ೨)

**ಕಳೆಗೆಡು** – ಕಾಂತಿಗುಂದು (ಉರೆ ಚಿಂತೆಯಂ ಆಳ್ವಂತೆವೊಲ್ ಓಷಧೀಶ್ವರಂ ಕಳೆಗೆಟ್ಟಂ: **ರಾಜಶೇವಿ,** ೧೨. ೧೩)

**ಕಳೆದುಕೊಳ್** – ತೆಗೆದುಕೊ (ಆ ಲೇಖನಮಂ ಕಳೆದುಕೊಂಡು ನಿಮಿರ್ಚಿ ನೋಟ್ಪನ್ನೆಗಂ: **ಕಾದಂಸಂ,** ೪. ೩೬ ವ)

**ಕಳೇವರ** – ಮೈ, ದೇಹ (ಧೃತರಾಷ್ಟ್ರನ ಬೆಸದೊಳ್ ವಾರಣಾವತಕ್ಕೆ ಪೋಗಿ ತದರ್ಧದಗ್ಧ ಕಳೇವರಂಗಳಂ ಸಂಸ್ಕರಿಸಿ ಜಳದಾನಾದಿ ಕ್ರಿಯೆಗಳಂ ಮಾಡಿ: **ಪಂಪಭಾ,** ೩. ೮ ವ)

**ಕಳೋನ್ನತ** – ಕಲೆಗಳಿಂದ ವೃದ್ಧಿಗೊಂಡವನು, ಚಂದ್ರ (ತನ್ನಯ ತನಯನನಮಳ ಕಳೋನ್ನತಮಂ ನೋಡಿ ವಾರ್ಧಿ ಪೆರ್ಚುವ ತೆಱದಿಂ ತನ್ನ ತನಯನನಮಳ ಕಳೋನ್ನತಮಂ ನೋಡಿ ಪೆರ್ಚುವಂ ನೃಪತಿಳಕಂ: **ಚಂದ್ರಪ್ರಪು,** ೫. ೨)

**ಕಳ್ಗುಡಿ** – ಹೆಂಡ ಕುಡಿ (ಕಳ್ಗುಡಿದವರಂದದಂ ಇಂತು ಸಿರಿ ಸಾರ್ತರೆ ಸಾರ್ವುದು: **ಪಂಪಭಾ,** ೨. ೪೯)

**ಕಳ್ಗುಡಿಕಿ** – ಹೆಂಡ ಕುಡುಕ (ಕಳ್ಗುಡಿಕಿಗಳುಂ ನಿರ್ದಯರುಂ ಮಡದ ಪಾಪಮಿಲ್ಲ: **ಧರ್ಮಾಮೃ,** ೧೨. ೯೭ ವ)

**ಕಳ್ಗುಡಿಹ** – ಹೆಂಡಕುಡುಕ (ಶುಂಡಾಪನಂ ಕಳ್ಗುಡಿಹ: **ಅಭಿಧಾವ,** ೧. ೧೬. ೬)

**ಕಳ್ಳತನಬ್ರತ** – ಅಸ್ತೇಯವ್ರತ (ಕಳ್ಗರ್ಗಡೆಗುಡುವುದುಂ ಅದು ಕಳ್ಳತನಬ್ರತದ ಹಾನಿಯೆಂಬಂ ಜೈನಂ: **ಸಮಯಪ,** ೫. ೪೪)

**ಕಳ್ಳದ** – ಕಳ್ಳತನಮಾಡದ, ಅಸ್ತೇಯ (ಕೊಲ್ಲದ ಪುಸಿಯದ ಕಳ್ಳದ ಸ್ವದಾರ ಸಂತೋಷಂ ಪರಿಮಿತ ಪರಿಗ್ರಹಂ ಇಂತು ಅಯ್ದು ಅಣುವ್ರತಂಗಳಂ: **ವಡ್ಡಾರಾ,** ಪು ೨೨, ಸಾ ೧೭)

**ಕಳ್ಳ ಬೆಳ್ಳಿವಟ್ಟಲ್** – ಕಳ್ಳು ತುಂಬಿದ ಬೆಳ್ಳಿಯ ಬಟ್ಟಲು (ಬೆನ್ನೊಳ್ ಬಿಚ್ಚಿರೆ ಮುಡಿ ಬಾಯೊಳ್ ಕಳ್ಳ ಬೆಳ್ಳಿವಟ್ಟಲ್ ಬೆಚ್ಚಂತಿರೆ: **ಸೂಕ್ತಿಸುಧಾ,** ೧೩. ೬)

**ಕಳ್ಳವತಿ** – ಹೆಂಡ ಮಾಡಿ ಮಾರುವವಳು (ಕೌಶಂಬಿಯ ಕಳ್ಳವತಿ ಮಂಡೋದರಿಯ ಮಗನೆಂಬುದುಂ: **ನೇಮಿನಾಪು,** ೬. ೬೭ ವ)

**ಕಳ್ಳವತ್ತಿಗೆ** – ಕಳ್ಳವತಿ (ನಿನ್ನಂ ಚಕ್ರವರ್ತಿಚಕ್ಕನೆ ಪಿಡಿದು ತರವೇಟ್ಟಿನೆನೆ ಪಿಡಿವೆತ್ತ ಕಳ್ಳಂತೆ ಕಳ್ಳವತ್ತಿಗೆ ತಳವೆಳವೋಗೆ: **ನೇಮಿನಾಪು,** ೬. ೬೯ ವ)

**ಕಳ್ಳವಳ** – ಹೆಂಡ ಮಾಡಿ ಮಾರುವವನು (ಆ ಪೊೞಲ ಕಳ್ಳವಳನೊರ್ವಂ ಆ ವನದೊಳ್ ಏನಾನುಂ ನಿಮಿತ್ತದೆ ತೊೞಲ್ವಂ: **ಕರ್ಣನೇಮಿ,** ೩. ೭೦ ವ)

**ಕಳ್ಳಸಿಗ** – ಹೆಂಡ ಮಾಡುವವನು (ಒರ್ವಂ ಕಳ್ಳಸಿಗಂ ಕಳ್ಳಂ ಕೊರ್ವಿಸುವ ಬೇರುಂ ಬಿಕ್ಕೆಯುಮಂ ಬೆರಂಟುಂತ್ತುಂ: **ನೇಮಿನಾಪು,** ೪. ೧೧೪ ವ)

**ಕಳ್ಳಸಿಗಗೇರಿ** – ಹೆಂಡ ಮಾರುವವರ ಬೀದಿ (ಕಳ್ಳಸಿಗಗೇರಿಯೊಳಗಣ ಕಳ್ಳೆಲ್ಲಮಂ ಎೞೆದು ತರಿಸಿ: **ಧರ್ಮಾಮೃ,** ೨. ೧೮)

**ಕಳ್ಳಿ** – ಎಲೆ ಕಿತ್ತರೆ ಮಂದ ಹಾಲು ಬರುವ ಗಿಡ (ಕಳ್ಳಿಯಂ ನಂಬಿ ಕೌಂಗಿನ ತೋಟವಂ ಕಡಿವ ತೋಂಟಿಗನುಮಂ: **ಧರ್ಮಾಮೃ,** ೮.೩೧ ವ)

**ಕಳ್ಳುಣಿ** – ಹೆಂಡಗುಡುಕ (ಖಳನುಂ ಕಳ್ಳುಣಿಯುಂ ಘಳುಮ್ಮನಿಟೆಗುಂ ಶ್ವಭ್ರಾಂತಮಂ ತಾಪಿನಂ: **ಆದಿಪು,** ೫. ೮೧)

**ಕಱಂಗು** – ಕಪ್ಪಾಗು (ಧೈರ್ಯಮಂ ಪದುಂಗೊಳಿಸಿ ಸುರುಳ್ದು ಕರ್ಗಿದ ಕಱಂಗಿದ ಖೇಚರನಂಗಮಂ: **ಆದಿಪು,** ೨. ೫೯)

**ಕಱಂಡು** – ಒರಟು (ಮುಳಿಸಿನೊಳಂ ಇಟೆಯಿಕ್ಕಿ ಕಾಡುವ ಕಱಮಡು ಬೊಜಗನಂ ಪಿಡಿದು: **ಲೀಲಾವತಿ,** ೨. ೧೦೯)

**ಕಱಮೆ** – ಹುಣ್ಣು, ಗಾಯ (ಬೆನ್ನೊಳ್ ನಾಳಿಬಿರ್ದು ಕಱಮೆಯಾಗಿ ಪುೞಿತು ನಮೆದು ಸತ್ತು ಮತ್ತಮಾ ಪೊೞಲೊಳ್ ಪೇಪಂದಿಯಾಗಿ ಪುಟ್ಟಿ: **ವಡ್ಡಾರಾ,** ಪು ೯, ಸಾ ೨)

**ಕಱು** – ಮಗು, ಚಿಕ್ಕದು (ಪಗೆವಡೆಯೊಡ್ಡುಗಳಂ ಒಡೆಯಲ್ಕೆ ವೇೞ್ದಿರ್ದ ಧಗಮೆನೆ ಸೈರಿಸುವ ಉಪಾಯಮಾವುದು ಕಱುವೇ: **ಪಂಪಭಾ,** ೧೧. ೯೧); ಕೋಪಗೊಳ್ಳು, ಕೆರಳು (ಶರೀರಮಂ ಕಱುತ್ತು ಇನಿವಿರಿದೊಂದು ಘೋರತಪಕ್ಕೊಡ್ಡಿದೆ; **ಕಾದಂಬ,** ೫. ೨೦೧)

**ಕಱುಕೆ** – ಗರಿಕೆ (ಕಱುಕೆ ತವೆ ಮಱುಗಿ ಮೊಗಮಂ ತುಱುಕುವ ಮೃಗಶಿಶುಗೆ ಕರದ ತಂಬುಲಮದೆಲೆಯಂ ಮಱೆದಿತ್ತಪಂ: **ಲೀಲಾವತಿ,** ೪. ೨೦)

**ಕಱುಕೆಯೆಸಟ್‌** – ಗರಿಕೆಯ ಹುಲ್ಲು (ಕಱುಕೆಯೆಸಟಿಂ ಕಮಳನಾಳದಿನವಂ ಸುತ್ತಿ: **ಲೀಲಾವತಿ,** ೧೧. ೧೧)

**ಕಱುಂಕೆ** – ಗರಿಕೆ (ಅಲ್ಲಿಯ ಮಹಾನಾಗಂಗಳ ವಿಷಂಬೆರಸು ಸುಯ್ವ ಸುಯ್ಯ ಪೊಗೆಯೊಳಂ ಕಱಂಗಿ ಕಟ್ಟಿದ ಮೆಯ್ಯುಮಂ: **ಪಂಪಭಾ,** ೫. ೧೦೩ ವ)

**ಕಱುಂಗು** – ಕಪ್ಪಾಗು (ಕಾರ್ಮುಗಿಲೆ ಪರ್ವಿದುದು ಎಂಬಿನೆಗಂ ಕಱಂಗಿ ಕಟ್ಟಿಲಿಪ ತಮಾಲಪಾದಪದ ಪಲ್ಲವಮಂ .. .. ನೋಡಿ: **ಕಾದಂಸಂ,** ೪. ೩೫)

**ಕಱುಂಬ** – ಹೊಟ್ಟೆಕಿಚ್ಚಿನವನು (ಮಲೆಪರ್ ಮಂಡಳಿಕರ್ ಕಱುಂಬರ್ ಅದಟರ್ ವೀರರ್ಕಳುಂ: **ಪಂಪಭಾ,** ೯. ೧೦)

**ಕಱುಂಬು** – ಕರುಬು, ಮತ್ಸರಿಸು (ಕಱುಂಬು–ಅಸೂಯಾಯಾಂ: **ಶಬ್ದಮದ, ಧಾ** ೪೭೯)

**ಕಱುತ್ತು** – ಕೋಪಿಸಿಕೊಂಡು (ತವೆ ಮಾಱಾಂತ ಬಲಂ ಕಱುತ್ತಿಱಿದು ತನ್ನಾಳ್ದಂ ಕರಂ ಮೆಚ್ಚೆ ಗೆಲ್ದವನಂ ಶ್ರೀವಧು ಪತ್ತುಗುಂ: **ಪಂಪಭಾ,** ೧೦. ೪೪)

**ಕಱುಪು** – ಅಸಹನೆ, ಕೋಪ (ಕಱುಪುಮಂ ಕಾಯ್ಪುಮಂ ಉಂಟುಮಾಡಿ ನೆಲನಂ ದುರ್ಯೋಧನಂ ತಾಗಿ ತಳ್ತಿಱಿದಂದಲ್ಲದೆ ಕೂಡಂ: **ಪಂಪಭಾ,** ೯. ೯೨); ರಭಸ (ಕುಡುಗೋಲಂ ಕೂಱೆಗೆಯಂ ಕೊಡಲಿ ಕುರುಂಜಿಗೆಯಂ ಉಱುವ ಪರಗುವ ಕಱುಪಿಂ ಬಿಡದೆಯಗುೞ್ದಾ ಮುಟ್ಟಂ ಕುಡರ್ ಎರವಂ ಪೆಱರ್ಗೆ: **ಸಮಯಪ,** ೫. ೧೭)

**ಕಱುಮೆ** – ಹುಣ್ಣು (ಲಂಗಿಗರ ಮನೆಯೊಳ್ ಪೆಣ್ಗತ್ತೆಯಾಗಿ ಪಿರಿಯ ಪೊಱೆಗಳಂ ಪೊತ್ತು ಪೋಗಿ ಬೆನ್ನೊಳ್ ಕಱುಮೆಯಾಗಿ ನಾಳಿ ಬಿರ್ದು: **ವಡ್ಡಾರಾ,** ಪು ೧೩, ಸಾ ೪)

**ಕೞಿ** – ಹಾಲು ಹಿಂಡು (ಆಶ್ರಮಿಗಳ ಹೋಮಕಾರ್ಯಕ್ಕೆ ಕಱೆವ ಕಾಮಧೇನುಗಳಂತೆ ಕಱೆವ ಹೋಮಧೇನುಗಳಂ ಕಿಡಲೀಯದೆ ಕಾದು: **ಪಂಚತಂತ್ರ,** ೧೯೦ ವ); ಸುರಿ (ಪೊಸಮಸೆಯಂಬು ಕಾರ ಮೞೆವೊಲ್ ಕೞೆಯುತ್ತಿರೆ: **ಪಂಪಭಾ,** ೧೧. ೧೩೫); ಕಪ್ಪು ಕಲೆ, ಕುಂದು (ಬಿನ್ನನೆ ಕುರುಳ ನೆೞಲ್ಗಳ್ ತನ್ನೊಳೆ ತಳ್ಪೊಯ್ದು ನೆಗೞ್ದ ಕೞೆಯನೆ ಪೋಲ್ತು: **ಆದಿಪು,** ೭. ೧೦)

**ಕೞೆಗಂದು** – ಕಪ್ಪಾಗು (ಬಿರಯಿಗಳ ಮೆಯ್ ಸುಯ್ಯ ಬೆಂಕೆ ಸೋಂಕೆ ಕೞೆಗಂದಿದಂತೆ: **ಪುಷ್ಪದಂಪು,** ೨. ೩೯ ವ)

**ಕೞೆಗಟ್ಟು** – ಕಲೆಯಾಗು (ಪುಣ್ಗಳಿನೆಡೆಯುಡುಗದೆ ರುಧಿರಮೊೞೆತು ಕೞೆಗಟ್ಟುವಿನಂ: **ಸುಕುಮಾಚ,** ೪. ೫೮)

**ಕೞೆಗರ್ಚು** – ಕಳಂಕವನ್ನು ತೊಡೆದುಹಾಕು (ಚರ್ಚಲ್ ಶಶಿಶಿಶುವಂ ಕೞೆಗರ್ಚಲ್ ಘನಘಟೆಯನುರ್ಚಲ್: **ಕಾವ್ಯಾವಲೋ,** ೫೫೬)

**ಕೞೆಗೊರಲ** – ಕಪ್ಪು ಕೊರಳುಳ್ಳವನು, ಶಿವ (ಹರಿಸದೆ ಸಗ್ಗದ ಜತಿಗಳ್ ನೆರೆದಂತೆರಡುಂ ಕೆಲಂಗಳೊಳ್ ತರದಿಂ ಕುಳ್ಳಿರೆ ಕುಳ್ಳಿರ್ದಂ ನಡೆನೋಟ್ಟಿರ ಕಣ್ಗಳ ಹಬ್ಬಮೆಂಬಿನಂ ಕೞೆಗೊರಲಂ: **ಕಬ್ಬಿಗಕಾ,** ೧೩೧)

**ಕೞೆದೊವಲ್** – ಹದಮಾಡಲು ಕಪ್ಪು ಬಣ್ಣ ಬಳಿದ ಚರ್ಮ (ಕೞೆದೊವಲ ಪೞೆಯ ಕುೞಿಯಂ ತೆಱೆದಂದಂ ಮೆಯ್ಯ ನಾತಂ: **ಯಶೋಧಚ,** ೨. ೩೯)

**ಕೞೆಹ** – ಹಾಲು ಕರೆಯುವಿಕೆ (ಸೂಳೆಯ ಕರೆಹದಂತೆ ಕುಂಟಣಿಯ ಕೂರ್ಮೆಯಂತೆ ಪಶುವಿನ ಕೞೆಹದಂತೆ: **ಧರ್ಮಾಮೃ,** ೭. ೭೧ ವ)

**ಕಟಕುಟ** – ಅಸ್ತವ್ಯಸ್ತತೆ, ದಿಗ್ಭ್ರಾಂತಿ, ಅಲ್ಲೋಲಕಲ್ಲೋಲ (ಅಂತು ಗುರುನಂದನಂ ಮರುನ್ನಂದನವಿರಚಿತ ನಿಶಾತವಿಶಿಖ ಪಂಜರಮನಟೆದು ಕಟಕುಟಂ ಮಾಡಿಯುಂ ಅನಿತಱೊಳ್ ಮಾಣದೆ: **ಪಂಪಭಾ,** ೧೨. ೬೮ ವ)

**ಕಟಕಟಿಸು** – ಹೊಳೆ, ಪ್ರಕಾಶಿಸು (ಒಂದರ್ಥಕ್ಕೆ: ಕಟಕಟಿಸಿದನರ್ಕಂ: **ಶಬ್ದಮದ,** ೩೩ ವೃತ್ತಿ)

**ಕಟಿಮೆ** – ಬತ್ತ (ಬೆಳೆದೊಱಗಿದ ಪೊಸ ಕಟಿಮೆಯ ಪೊಸತರಲ್ದ ತಾವರೆಗಳ: **ಆದಿಪು,** ೧೧. ೬)

**ಕಟಿಲ್** – ಕಳಚು, ಜಾರಿ ಬೀಳು (ಪ್ರಣತಾರಿ ಘಟಿತ ಮುಕ್ತಾಮಣಿಗಣಂ ಉತ್ತುಂಸದಿಂ ಕಟಿಲ್ದುದು: **ಕವಿರಾಮಾ,** ೩. ೧೮೦); ಸಡಿಲಗೊಳ್ಳು (ಕಟಿಲ್ದುಂ ಪಳಂಚಲೆದುಂ ಮುಟ್ಟಿದ ಸೀಯನಪ್ಪ ದನಿಯುಂ: **ಆದಿಪು,** ೧೨. ೨೩); ಮಜ್ಜಿಗೆ (ಇದು ಬಾಟಿಕ್ಕೊಸರ್ ಇದು ಕಟಿಲ್ ಇಂತಿದು ರುಚಿವೆತ್ತಿರ್ದ ಪಾನಂ ಇದು ಮಜ್ಜಿಗೆ ತಾನಿದು ಶಿಖರಿಣಿ ಎನುತುಂ ತಿಂಬಿದಿಂಬಿ ತಂದೆಱದರಬಲೆಯರ್ ಸಿರ್ಪ್ಪುಗಳಿಂ: **ಸುಕುಮಾಚ,** ೧೧. ೩೧); ಕಾಲಂದುಗೆ (ಕಟಿಲ್–ತನುತ್ರೇ ತಕ್ರಮಂಜೀರಯೋಃ: **ಶಬ್ದಮದ, ಧಾ,** ೬೨೪)

**ಕಟಿಲಿಸು** – ಸಡಿಲಗೊಳಿಸು (ಮರಗಳೊಳ್ ಎಲೆಯಂ ಕಟಿಲಿಸದೆ ಪೂತ ಗಿಡುಗಳೊಳ್ ಅರಲಂ ಸಲೆ ಬಿರ್ಚದೆ ತಳ್ತ ಲತಾವಳಿಯೊಳೊಳ್ಗುಡಿಯನೂದುಗುಂ ಗಂಧವಹಂ: **ಚಂದ್ರಪ್ರಪು,** ೧೪. ೨೨)

**ಕಟಿಲುಳಿ** – ಕಾಲಂದುಗೆಯ ಧ್ವನಿ (ಮಱಿದುಂಬಿಗಳ ಗಾವರಕ್ಕೆ ಜತಿಯನುಗ್ಗಡಿಸುವಂತೆ ಕಟಿಲುಳಿಯನುಲಿವ ಪಾರಿವಂಗಳಂ: **ಚಂದ್ರಪ್ರಪು,** ೧೨. ೧೧ ವ)

**ಕಟಿಲೆ** – ಮುಳ್ಳುಗಳಿಂದ ಕೂಡಿದ ಸಣ್ಣ ರೆಂಬೆ (ಒಂದರ್ಥಕ್ಕೆ: ಕಟಿಲೆಯೆಂದು ಮುಳ್ವರಸಿದ ಗುಜುಜುಗೊಂಬು: **ಶಬ್ದಮದ,** ೩೩ ವೃತ್ತಿ)

**ಕಟಿಲೆಬೀಟ್** – ಎಲೆಯುದುರಿ ಬರಲಾಗು (ಕರೆದುವು ಸೀರುಡುಗಳ್ ಪೆರ್ಮರಂಗಳೆಲೆಯಿಕ್ಕಿ ಕಟಿಲೆಬಿಟ್ಟುವು ತೊಱೆಗಳ್ ಪರಿಗೆಟ್ಟುವು: **ಪಂಪರಾ,** ೭. ೮೬)

**ಕಟಿಲ್ಚು** – ಸಡಿಲಿಸು, ಬಿಚ್ಚು (ಬಿರುದರಂ ಒತ್ತಿ ಬೀರರಂ ಅಡಂಗಿಸಿ ಕೊಂಕಿಗರಂ ಕಟಿಲ್ಚಿ ಚೆನ್ನರಂ ಅಡಿಗೊತ್ತಿ ಮಂಡಳಿಕರಂ ಬೆಸಕಯ್ಸಿ .. .. ಮಾಡಿರೆ ರಾಜಸೂಯಮಂ: **ಪಂಪಭಾ,** ೭. ೧೮); ಕಿತ್ತುಕೊ, ವಸೂಲು ಮಾಡು (ನಿನಗೆ ಎರಡಿಲ್ಲದೆ ಒಲ್ದವಳೆ ನಾಂ ಪ್ರಿಯ ನಿನ್ನಯ ಸಂಗಸೌಖ್ಯಂ ಇಂತೆನಗೆ ಧನಂ ದಿಟಂ ಮನೆಯವರ್ ಸಲ್ಲರ್ ಅದಕ್ಕೆ ನೀನವರ್ ಮನಮೊಸೆದಿರ್ಪನಂ ಕಿಱಿದು ವಸ್ತುವನಿತ್ತೊಡೆ ಸಾಲ್ದುದು ಎಂದು ಮೆಲ್ಲನೆ ನುಡಿದು ಅರ್ಥಮಂ ನೆಱೆ ಕಟಿಲ್ಚುವುದು ಆತನೊಳ್ ಅಂಬುಜಾನನೇ: **ಶಾಂತೀಶ್ವಪು,** ೧೧. ೭೬); ತೊಳೆಯುವುದು (ಚಾರು ಚರಿತ್ರ ತೀರ್ಥಜಲದಿಂದೆ ಅಘಕರ್ದಮಮಂ ಕಟಿಲ್ಚಿ: **ಮಲ್ಲಿನಾಪು,** ೧. ೧೭)

**ಕಟಿವೆ** – ಬತ್ತ (ಉಱೆ ಕಾಯ್ವ ಬಿಸಿಲೊಳ್ ಎಮ್ಮಂ ಮಱೆದುಂ ಕೊರಗಿಸದೆ ಪೊರೆದುದೆಂದೊಲವಿಂ ಬಂದೆಱಗುವವೋಲ್ ತೆನೆಯಂ ಕಾಲ್ಗೆಱಗುವ ಕಟಿವೆಗಳವೆಲ್ಲಿಯು ಸೊಗಯಿಸುಗುಂ: **ಕಬ್ಬಿಗಕಾ,** ೨೨)

**ಕಟಿ** – ಸಾಯಿ (ಕಟಿದವರ್ಗೆ ಅೞ್ವುದು ಅೞಿತ್ತೊಡೆ ಅವರ್ ಏಟಿತ್ತೊಡಂ ಅಂತವರಿಂ ಬಟಿಕ್ಕೆ ತಾಂ ಉಟಿವೊಡಂ: **ಪಂಪಭಾ,** ೨. ೨೭); ಹರಿದು ಹೋಗು (ಕಟಿದ ನೀರ್ಗೆ ಬಂದಪುದೆ ಬಟಿಕ ಜರೆಗಂ ತಿರ್ದಲ್: **ಅಜಿತಪು,** ೨. ೫೯); ಗಂಜಿ (ಎಮ್ಮ ಮಾವಂ ಬೈಕಂದಿರಿದು ತಂದ ಕೂಟ್ಗೆ ನೆರಂ ಎಣ್ಣೆಯನಕ್ಕೆ ಉಪ್ಪನಕ್ಕೆ ಕಟಿಯನಕ್ಕೆ ಎಂದೊಪ್ಪೊಡಂ ಎಱೆಯಿಸಿಯಱಿಯಂ: **ವಡ್ಡಾರಾ,** ಪು ೪, ಸಾ ೧೪); ದಾಟು (ಅತಿಗಂಭೀರಂ ಭವಾಂಭೋನಿಧಿ ಕಲ್ಪಇಯಲಣಂ ಬಾರದು: **ಸಮಯಪ,** ೧. ೧೯೯); ಗೂಟ (ಪಡುವಣ ವಾರ್ಧಿಯಲ್ಲಿ ನೊಗನಂ ಕಟಿಯಂ ಗಡ ಮೂಡಣಬ್ಧಿಯಲ್ಲಿಡಿಕಿದೊಡೆ: **ಜೀವಸಂ,** ೧೧. ೨೪)

**ಕಟಿಪು** – ದಾಟು (ಸಂಸಾರಸಮುದ್ರಮಂ ಉಪಾಯದಿಂ ಕಟಿಪುವುದು: **ಧರ್ಮಾಮೃ,** ೬. ೧೪೮ ವ); ಬೀಳ್ಕೊಡು ನಾಶಮಾಡು (ಧನಮೆಂಬುದು ವಿಭುಗೆ ಯಶೋಧನನಂದನಿಂತಳಿಪಿ ಕಟಿಪಿ ಕಿಡೆ ಮಾಡಿರ್ದಾತನ ಪಡೆದ ಧನಮದೇತಱ ಧನಂ: **ಆದಿಪು,** ೧೪. ೭೪); ಕಾಲ ಸರಿ (ಇಂದಿನಿಂದಿರುಳಂ ಕಟಿಪು ನಾಳೆ ನಿಮ್ಮ ನಿಮ್ಮ ನೆಗೞ್ವುದಂ ನೆಗೞ್ವುದು: **ಗದಾಯು,** ೬. ೬ ವ); ಕಳಂಕ (ಕಟಿಪಂ ತಂದು ನಿಂಕಮಿಂ ಕಟಿಪಂ ಕಳಿವಂ ಚಲ ಕಟಿಪಂ ಕಂಜನೇತ್ರ .. .. ಕಟಿಪಂ ಬಟಿಕಾತಂ: **ಕವಿರಾಮಾ,** ೨. ೧೩೧); ಕಳಪೆ (ಆ ರಾಜಕುಮಾರಂ ಬಟಿಕಾ ರೂಪಿನ ಪೆಂಡಿರಿಂತು ಕಟಿಪಾದೊಡೆ ಕೂರ್ಪ ಮಾತಂ ಮಾರಿಗೆ ಕುಡು ಸಿರಿಯನೊಟ್ಟಿ ಸುಡು ಹೋಗೆಂದಂ: **ಯಶೋಧಚ,** ೨. ೬೩)

**ಕಟಿಯಲರ್** – ಬಾಡಿದ ಹೂವು (ಕಟಿಯಲರಾದ ಸಂಪಗೆಯ ಬಣ್ಣದವೋಲೆ ಬೆಳರ್ತ ಬಣ್ಣದೊಳ್: **ಪಂಪಭಾ,** ೪. ೬೬)

**ಕಟಿಯುಣ್** – ಹೆಚ್ಚು ಊಟಮಾಡು (ಜೀವಶ್ರಾದ್ಧಕ್ಕುಟಿದಿರ್ದ ಮಾಜನಂಗಳ್ ಕಟಿಯುಂಡು ಆಪೋಶಿಪಲ್ಲಿ ನೆನೆದುದು ತನ್ನಂ: **ಯಶೋಧಚ,** ೩. ೫೧)

**ಕಟಿಯೇಱ್** – ದೊಡ್ಡ ಗಾಯ (ಕಟಿಯೇಱ್ ಪೆತ್ತ ಇಭವೈರಿಯಂ ಎಟಿಕೆ ಶಿರಂ ಮಾಟ್ಪುವೋಲ್ ಅವಂ ಮುಳಿಯಿಸೆ ಕೆಯ್ಗುಟಿಯೆ ಮುನಿಪತಿಯ ಕಣ್ಗಳೊಳ್ ಇಟಿವೋದುವು ತೀವಿ ಕೋಪರಸದ ಪೊನಲ್ಗಳ್: **ಶಾಂತಿಪು,** ೭. ೬೧)

**ಕಟಿಯೋದು** – ಹೆಚ್ಚು ಓದು, ಪಂಡಿತನಾಗು (ಪಟಗಾಂಪರ ನುಡಿ ಮುತ್ತುಂ ಮೆಟಿಸುಂಗೋದುದಕ್ಕೆ ಭಾಷ್ಯಮಂ ಒರ್ವಂ ಕಟಿಯೋದಿದಾತನಲ್ಲದೆ ಬಟಿವಟಿಯಿಂ ಬಂದು ಬರೆಯಲಾಗದು ಅಗಣ್ಯಂ: **ಶಾಂತಿಪು,** ೧೦. ೧೮೧)

**ಕಟಿಲೆ** – ಬಿದಿರ ಕುಡಿ (ನಿಡು ಕಟಿಲೆಯ ಮೊನೆಯುರ್ಚಿದ ಜಡಧರಮೆಸೆದುದು ನಗಾಹಿತಪ್ರಣೀಧಿಯಿದೆಂದು ಅಡರ್ದು ಅತಿರೋಷದಿಂ: **ಶಬರಶಂ,** ೩. ೩೭)

**ಕಟಿವಣ್** – ತೀರ ಮಾಗಿದ ಹಣ್ಣು (ಫಳವೆಂದುಂ ಕಟಿವಣ್ಗಳಗವಲರೆಂದುಂ ಬೀಯವು: **ಜಗನ್ನಾವಿ,** ೨. ೧೬)

**ಕಟಿವದ** – [ಕಟಿ+ಪದ] ಹದವಾಗಿ ಮಾಗಿದ ಸ್ಥಿತಿ ಕಟಿವದನಾ ಮಚ್ಚು .. .. ಬೇಟದಿಂ ಪಟಿದಟಿನೆಣ್ಣೆನೊಳ್ ತೊಡರ್ದು: **ಸೂಕ್ತಿಸುಧಾ,** ೮. ೩೪೪)

**ಕಟಿವು** – ಸಾವು (ಕಟಿವುಟಿವುಂ ಕಾಮಂ ಮೇಮಂ ತೋಡುಂ ಬೀಡುಂ: **ಪಂಪಭಾ,** ೫. ೪೩ ವ); ಅಳಿವು (ದುರ್ಯೋಧನಂ ಬಂದಿಕಾಱನಂತೆ ಸೆಱೆಗೆಯ್ದುಂ ವ್ರಣವೈದ್ಯನಂತೆ ಕೊಡಸಾರಿಯಂ ಪಿಡಿದುಂ ಸೂಳೆಯಂತೆ ಕಟಿವು ಉಟಿವನಱಿದುಂ ರಸವಾದಿಯಂತೆ ಕಟ್ಟಿಯುಂ ಪೆಱೋರ್ಡೆಯಂತೆ ನುಣ್ಣಿತಂ ವೇೞ್ದು: **ಪಂಪಭಾ,** ೬. ೭೨ ವ); ಪರಾಭವ, ದುಃಸ್ಥಿತಿ (ಪರಶುರಾಮನಿಂ ರಘುರಾಮನಿಂ ಸರಿತ್ಪತಿ ಕುವರಾಂಕರಾಮನಿಂ ಇದೇಂ ಕಟಿವಾದುದೊ ಮೂಱು ಸೂಟಿಳಂ: **ಗದಾಯು,** ೧. ೨೪)

**ಕಟಿವೂ** – ಬಾಡಿದ ಹೂ (ಎರಟ್ಟಡಿಯ ಪೂಮರದಿಂ ಕಟಿವೂಗಳತ್ತಮಿತ್ತ ಕವಿದಲ್ಲಿ: **ಆದಿಪು,** ೧. ೬೧)

**ಕಟ್ಕನೆ** – ಇದ್ದಕ್ಕಿದ್ದಂತೆ (ಒಂದರ್ಥಕ್ಕೆ: ಕಟ್ಕನೆಯೆಂದು ಆಕಸ್ಮಿಕಂ: **ಶಬ್ದಮದ,** ವೃತ್ತಿ, ೨೮)

**ಕಟ್ಟು** – ಕಪ್ಪಾಗು, ಕಪ್ಪಿಡು (ಅಲ್ಲಿಯ ಮಹಾನಾಗಂಗಳ ವಿಷಂಬೆರಸು ಸುಯ್ವ ಸುಯ್ಯ ಪೊಗೆಯೊಳಂ ಕಱಂಗಿ ಕಟ್ಟಿದ ಮೆಯ್ಯುಮಂ: **ಪಂಪಭಾ,** ೫. ೧೦೩ ವ)

**ಕಟ್ಟಿಲಿಸು** – ಕತ್ತಲೆಯುಂಟುಮಾಡು, ಕತ್ತಲೆಯಾಗು (ಇಮ್ಮಾವು ಕಟ್ಟಿಲಿಸಿರ್ದತ್ತು ಎಲೆವಳ್ಳಿ ಕಾಯ್ತು ಕರೆವಂತಿರ್ದತ್ತು: **ಆದಿಪು,** ೧೧. ೬೮)

**ಕಟ್ಟಿಲೆ** – ಕತ್ತಲೆ, ಮಬ್ಬು (ಒಂದರ್ಥಕ್ಕೆ: ಕಟ್ಟಿಲೆಯೆಂದು ಮರ್ವು: **ಶಬ್ದಮದ,** ವೃತ್ತಿ, ೨೯)

**ಕಟ್ಟಿಲೆವಕ್ಕಿ** – ಕತ್ತಲೆಯ ಹಕ್ಕಿ, ಗೂಬೆ (ಇಕ್ಕಿದ ತತ್ತಿಗೆ ಕಟ್ಟಿಲೆವಕ್ಕಿ ಭಯಂಬಿಟ್ಟು ರವಿಕರಾಹಿಯ ದೆಸೆಯಿಂ ಪಕ್ಕದೆ ಪೊದೆಯಿಸುತು: **ಲೀಲಾವತಿ,** ೭. ೧೧೫)

**ಕಟ್ಟೆ** – ಕತ್ತೆ, ರಾಸಭ (ಸಡಹುಡನಪ್ಪ ಕಟ್ಟೆ ಕೊಡೆ ಸಂತಸದಿಂ ಪೆಱಗೇಱೆ ಬರ್ಪ ಕನ್ನಡಿವಿಡಿದಾಕೆ ಚಿನ್ನದ ಸವಂಗಂ ಅಪೂರ್ವದ ಮೊಚ್ಚೆಯಂ ಪವಣ್ಗೆಡದ ಸುವರ್ಣಪಾರಿವದ ಕುಪ್ಪಸಮೊಪ್ಪೆ: **ಪಂಪಭಾ,** ೯. ೧೦೩)

**ಕಟ್ಟೆಕುಟಿಗ** – ಕತ್ತೆ ಕಾಯುವವನು (ಕುಟಿಗ ಪ್ರತ್ಯಯಕ್ಕೆ: ಕಲ್ಕುಟಿಗಂ, ಮರಕುಟಿಗಂ, ನೀರ್ಕುಟಿಗಂ, ಕಟ್ಟೆಕುಟಿಗಂ: **ಶಬ್ದಮದ,** ೨೧೨, ಪ್ರ)

**ಕಟ್ದಿಂಗಳ್** – ಕರ್ದಿಂಗಳ್, ಅಮಾವಾಸ್ಯೆ (ಇರುಳ್ ಕಟ್ದಿಂಗಳ್ ಕಡುಗತ್ತಲೆಯೊಳ್ ಬಂದು ಕಿಚ್ಚಂ ತಗುಳ್ಚಿ ಪೋದೊಂ: **ವಡ್ಡಾರಾ,** ಪು ೧೫೬, ಸಾ ೯)

**ಕಟ್ಬಪ್ಪು** – [ಕಟವಪ್ರ] ಶ್ರವಣಬೆಳುಗೊಳ (ಕಟ್ಬಪ್ಪು ನಾಡದನೆಯ್ದಿ ಪೋಗುತ್ತಂ ಭದ್ರಬಾಹು ಭಟ್ಟಾರರ್ ತಮ್ಮಾಯುಷ್ಯಪ್ರಮಾಣಂ ಅಱಿದಾಮಿಲ್ಲಿ ಸಂನ್ಯಸನಂ ಗೆಯ್ದಪ್ಪೆವು .. .. ಎಂದು: **ವಡ್ಡಾರಾ,** ಪು ೮೮, ಸಾ ೧೭)

**ಕಾ** – ಕಾಪಾಡು (ಏಮಾತೊ ತನ್ನನೆ ನಚ್ಚಿರ್ದುದು ಕಾಗುಂ ಎಂಬ ಬಗೆಯಿಂದಿಂತೀ ಮಹೀಮಂಡಲಂ: **ಆದಿಪು,** ೪. ೮೩); ಕಾಯಿಬಿಡು (ನವಕುಂದವೃಂದು ಒಲವಿಂದಂ ಪೂತುವು ನೇಱಿಲ ಮರಗಳ್ ಕಾತುವು ಕಾರ್ಗಾಲಮೆಯ್ದಲ್: **ತ್ರಿಷಷ್ಟಿಪು,** ೮. ೨೨)

**ಕಾಂಕ್ಷಿಸು** – ಅಪೇಕ್ಷಿಸು (ಕಾಂಕ್ಷಿಸಿ ತನ್ನ ಮೆಚ್ಚಿದ ಆಹಾರಮುವಕ್ಕೆ ಬಂದೊಡರೆ: **ಧರ್ಮಾಮೃ,** ೪, ೫೪)

**ಕಾಂಕ್ಷೆ** – ಬಯಕೆ (ಇನಿಯನ ರೂಪ ವಿದ್ಧಮಂ ಅದಂ ಬರೆದೀಕ್ಷಿಪ ಕಾಂಕ್ಷೆವೆತ್ತು ಭೋಂಕೆನೆ ಬಳಪಕ್ಕೆ ನೀಡೆ ಕರಪಂಕರುಹಂ: **ಶಾಂತೀಶ್ವಪು,** ೫. ೧೧೮)

**ಕಾಂಚನ** – ಚಿನ್ನ (ಧನದನ ಕಾಂಚಣಂ ಇವರನನುದಿನಮೊರೆವ ಸುವರ್ಣರಜದ ತೂಕಕ್ಕೆ ವರಲ್ ಕನಸಿನೊಳಂ ಆಱದು: **ಪುಷ್ಪದಂಪು,** ೨. ೮೭)

**ಕಾಂಚನದ ದಂಡ** – ಚಿನ್ನದ ಹಿಡಿ (ಚೇಟಿಕೆ ಬೀಸುವ ಕುಂಚಂ ಎಯ್ದೆ ಮೆಯ್ದೋಱುವ ಗಾಡಿ ಕಾಂಚನದ ದಂಡದ ಸೀಗುರಿ ನೋಟಿಪ್ಪೊಡೆ ಆರುಮಂ ಮಾಱೆ ಮನೋಜನ ಒಡ್ಡು ಎನಿಸಿದರ್: **ಪಂಪಭಾ,** ೯. ೧೦೦)

**ಕಾಂಚಿ** – ಡಾಬು (ವಳಿ ರತ್ನಕಾಂತಿಯಿಂದ ಓಸರಿಪಂತು ಕಾಂಚಿಯಂ ಅಮರ್ಚಿ ಮೃಗೋದ್ಭವದಿಂ ಕುಚಾಗ್ರಮಂ ಬಾಸೆಯನ್ ಅಣ್ಕೆಗೈದು; **ಮಲ್ಲಿನಾಪು,** ೧೧. ೯೦)

**ಕಾಂಚೀಕಳಾಪ** – ಕಾಂಚಿ (ಬಳೆದ ನಿತಂಬದೆ ಕಾಂಚೀಕಳಾಪಮಂ ಕಟ್ಟಲಣಮೆ ನೆಱೆಯದು ಎಂದಗ್ಗಳಿಸಿ ಕುಳಿಕೆಗಳಿನೇಂ ಕಣ್ಗೊಳಿಸಿದುದೋ ಸುಭಗೆಯಾದ ಸುದತಿಯ ಗರ್ಭಂ: **ಪಂಪಭಾ,** ೧. ೧೪೩)

**ಕಾಂಚೀಲತೆ** – ಒಡ್ಯಾಣ (ಈ ಸಡಿಲ್ವ ಕಾಂಚೀಲತೆ ಬೇಱೆ ತಳ್ತು ತೊಡೆ ಸಂಕಲೆಯಾದಪುದು: **ಪುಷ್ಪದಂಪು,** ೫. ೨೯)

**ಕಾಂಡ** – ದೇಟು (ಆಕೆಯ ಭರ್ತಾರಂ ನಿಜಮಂದಿರಕ್ಕೆ ಬಂದವರಂ ಕಂಡು ಇವರನೇಕಿಲ್ಲಿ ಪುಗಲಿತ್ತೆ ಎಂದು ಅರ್ಘ್ಯಪಾನೀಯ ಪಲಾಶ ಕಾಂಡ ಕುಶಕುಸುಮ ಹಸ್ತಪ್ರಶಸ್ತಂ ಕೆಡೆನುಡಿಯೆ: **ಪಂಪರಾ,** ೭. ೧೨೫ ವ); ಬಾಣ (ಎಂಬತ್ತುನಾಲ್ಕು ಲಕ್ಕ ಬಂಡಿಯೊಳ್ ತಡತಂಡದೆ ತೀವಿದ ಕಾಂಡಪ್ರಳಯಾನಳ ವಿಸ್ಫುಲಿಂಗೋಪಮಾನಂಗಳಪ್ಪ ನಿಶಿತಕಾಂಡಂಗಳಿಂದ ಒಡ್ಡಿದ ಚತುರ್ಬಲಂಗಳ ಮೆಯ್ಯೊಳ್: **ಪಂಪಭಾ,** ೧೧. ೧೯ ವ)

**ಕಾಂಡಧಿ** – ಬತ್ತಳಿಕೆ (ಕಾಂಡಧಿಯಿನೇಣವಾಹನ ಬಾಣಮಂ ತೆಗೆದು: **ಜಗನ್ನಾವಿ,** ೧೩. ೧೦೪)

**ಕಾಂಡಪಟ** – ತೆರೆ, ಪರದೆ (ಬಳಸಿದ ಪೊನ್ನ ಕೋಂಟೆ ಪುರಲಕ್ಷ್ಮಿಯ ಕೈಗೆಯಲಿರ್ದ ತಾಣದೊಳ್ ಬಳಸಿದ ಕಾಂಡಪಟದಂತಿರೆ: **ಆದಿಪು** ನರಸಿಂ, ೧. ೭೧); ವಧು–ವರರ ನಡುವಣ ತೆರೆ (ದುಗುಲದ ಕಾಂಡಪಟಮೆ ಚಂದ್ರಿಕಾಪಟಳಮಾಗೆಯುಂ .. .. ನಡೆತಂದು ತದ್ವಿವಾಹಮಂಡಪಮಂ ಪುಗುವನ್ನೆಗಂ: **ಆಚವರ್ಧ,** ೭. ೨ ವ)

**ಕಾಂಡಾಸನ** – ಬಿಲ್ಲು (ಷಟ್ಪಿತಕಾಂಡಾಸನೋತ್ಸೇಧಶರೀರನುಂ: **ಆದಿಪು,** ೬. ೬೦ ವ)

**ಕಾಂತ** – ಮನೋಹರ (ತನಯಂ ಅಧಿಕ ತೇಜೋವಂತಂ ಇಳಾವಂತಂ ಇಂದುಮಂಡಳ ಕಾಂತಂ: **ಪಂಪಭಾ,** ೪. ೧೮); ಪ್ರಿಯಕರ (ಕರಂ ಕಾಂತಂ ಕಾಲಂಗಳೊಳೆ ಸಲಿಲಾವರ್ತಶರದಂ: **ಲೀಲಾವತಿ,** ೫. ೨೦)

**ಕಾಂತಾತತಿ** – ಹೆಂಗಸರ ಗುಂಪು (ಯೌವನಶ್ರೀಧರಂ ಸಲೆ ಕಾಂತಾತತಿಗೆಲ್ಲಂ: **ಜಗನ್ನಾವಿ,** ೨. ೩)

**ಕಾಂತಾರ** – ಕಾಡು (ಶಾಂತರಸಂ ಪೊಂಪುಟೆವೋದುದಾ ಮುನಿಪನಿಂ ತತ್ ಕಾಂತಾರದೊಳ್: **ಆದಿಪು,** ೯. ೯೭)

**ಕಾಂತಾರಚರ್ಯೆ** – [ಜೈನ] ಕಾಡಿನಲ್ಲಿ ಭಿಕ್ಷೆಗಾಗಿ ಸಂಚರಿಸುವುದು (ಮಾಸೋಪವಾಸದ ಪಾರಣೆಯೊಳ್ ಕಾಂತಾರಚರ್ಯೆಗೆ ಬರ್ಪುದುಂ: **ಪಂಪರಾ,** ೮. ೭೭)

**ಕಾಂತಾರಭಿಕ್ಷೆ** – ಕಾಂತಾರಚರ್ಯೆ (ಯೋಗ್ಯಫಲಾಪೇಕ್ಷೆಯಿಂ ಕಾಂತಾರಭಿಕ್ಷೆಗೆ ಬರುತಿರೆ: **ಪಂಪರಾ,** ೨. ೫೨ ವ)

**ಕಾಂತೆ** – ಸ್ತ್ರೀ (ಕಾಂತೆ ಪೊದಳ್ದ ನಾಣ ಭರದಿಂದ: **ಪಂಪಭಾ,** ೩. ೭೮)

**ಕಾಂತ್ಯಾಕರ** – [ಕಾಂತಿ+ಆಕರ] ಚಂದ್ರ (ಸರಸಿಜವಿರೋಧಿ ಕಾಂತ್ಯಾಕರಂ ಅಮೃತಮಯಂ: **ಕವಿರಾಮಾ,** ३. ೧೦೨)

**ಕಾಂದಶೀಕ** – ? (ಇಂತೆಂದಾ ಕಾಂದಿಶೀಕನ ಮಾತುಗೇಳ್ದು ಮಹೀನಾಥಮನೋಜಂ ದರಸ್ಮಿತ ಮುಖನೀರೇಜನಾಗಿ: **ಕುಸುಮಾಕಾ,** ೧೧. ೨೧ ವ)

**ಕಾಂಸ್ಯ** – ಕಂಚು (ಇಟ್ಟಳಂ ಇಟ್ಟವೋಲಿರದೆ ಬಾಜಿಪ ಕಾಂಸ್ಯಂ ಉತ್ತಮೋತ್ತಮಂ: **ಸಮಯಪ,** ೧೪. ೧೧೭)

**ಕಾಂಸ್ಯತಾಳ** – ಕಂಚಿನ ತಾಳ (ಪೂರ್ವಪದಾಂತ್ಯಕ್ಕೆ ದೀರ್ಘಮುಮುತ್ತರಪದದಾದಿಗೆ ಲೋಪಮುಮಾಗಿ ಧರ್ಮಪಾನೀಐಕ್ಕೆ ದಮ್ಮಾಣಿಯೆಂದಾಯ್ತು ಕಾಂಸ್ಯತಾಳಕ್ಕೆ ಕಂಸಾಳಮೆಂದಾಯ್ತು: **ಶಬ್ದಮದ,** ೩೦೮ ಪ್ರ)

**ಕಾಂಸ್ಯಮಂಜೂಷೆ** – ಕಂಚಿನ ಪೆಟ್ಟಿಗೆ (ಅರಸಂ ಲೇಖಪತ್ರಮಂಬೆರಸು ಕಾಂಸ್ಯಮಂಜೂಷೆಯೊಳಿಕ್ಕಿ ಜಗುನೆಯೊಳ್ ಬಿಡಿಸೆ: **ಚಾವುಂಪು,** ಪು. ೪೦೭. ಸಾ. ೧)

**ಕಾಕ** – ಕಾಗೆ (ಪರಿಗಳಿತ ಪೂತಿಗಂಧರ್ ಖರ ಕಾಕ ಸೃಗಾಲ ಕರಭ ಕೌಶಿಕ ವೃಕ ವಾನರ ವಿಷದಂಷ್ಟ್ರೋತ್ಕರ ಕುರ್ಕುರ ಕೀಟಕ ಭಲ್ಲನಿಕರ ನಿಷ್ಠುರನಿನದರ್: **ಶಾಂತೀಶ್ವಪು,** ೯. ೧೦೬)

**ಕಾಕತಾಳೀಯ** – ಅನಿರೀಕ್ಷಿತ ಘಟನೆ (ನುಡಿವ ಪೆಂಪು ವಿಚಾರಿಪೊಡಂತು ಕಾಕತಾಳಿಯಮೆ: **ಪುಷ್ಪದಂಪು,** ೧. ೭೮)

**ಕಾಕಪಕ್ಷ** – ಜುಟ್ಟಿನ ಒಂದು ಶೈಲಿ (ಶಿಖೆ ಶಿಖಂಡಂ ಚೂಳಾಖ್ಯಂ ಕಾಕಪಕ್ಷಮೆಂಬುದದಕ್ಕುಂ: **ಅಭಿಧಾವ,** ೧. ೧೨. ೨೧)

**ಕಾಕಳಿ** – ಇಂಪಾದ ದನಿ (ಜಿನುಗುವ ತುಂಬಿಯಿಂಚರಮೆ ಗಾಣರ ಕಾಕಳಿ ಕೂಡೆ: **ಆದಿಪು,** ೧೩. ೬)

**ಕಾಕಾಕ್ಷಿಗೋಳಕನ್ಯಾಯ** – ಒಂದೇ ಕಣ್ಣನ್ನು ಹೊರಳಿಸಿ ಕಾಗೆ ಎಲ್ಲಡೆ ನೋಡಿವ ಬಗೆ, ಒಂದು ಯುಕ್ತಿಯಿಂದ ಹಲವು ಫಲಸಿದ್ಧಿಯಾಗುವುದು (ತನ್ನ ಮನಮಂ ಎನ್ನರುಂ ಅಱಿಯದಂತು ಕಾಕಾಕ್ಷಿಗೋ ಲಕನ್ಯಾಯದಿಂದಿರ್ಪುದುಂ ದ್ವೈಧೀಭಾವಮೆಂಬುದಕ್ಕುಂ: **ಪಂಚತಂತ್ರ,** ೩೦೭ ವ)

**ಕಾಕಿಣಿರತ್ನ** – [ಜೈನ] ಒಂದು ಜೀವರತ್ನ, ಉಜ್ಜಿದರೆ ಬೆಳಕು ಬೀರುವ ರತ್ನ (ಚಿಂತಾಜನನಿಯೆಂಬ ಕಾಕಿಣಿರತ್ನಮುಂ .. .. ಎಂದಿಂತು ಜೀವಾಜೀವರತ್ನಂ: **ಆದಿಪು,** ೧೧. ೩ ವ)

**ಕಾಕಿಣೀಮಣಿ** – ಕಾಕಿಣಿರತ್ನ (ಚಮೂಪತಿ ಕಾಕಿಣೀಮಣಿಸ್ಯಂದನದಿಂದಂ ಇರ್ದೆಸೆಯೊ ಕೇರ್ಗಳೊಳಂ ಬರೆದು: **ಶಾಂತಿಪು,** ೧೧. ೪೬)

**ಕಾಕೋದರ** – ಸರ್ಪ (ದಂಡಭೃತ್ ಚಂಡ ಕಾಕೋದರ ಮೇಘಜ್ಯೋತಿಪಂಚಾಕ್ಷರಂ ಇದು ಶಿವತಂತ್ರೋದಿತಂ ದಿವ್ಯಮಂತ್ರಂ: **ರಾಜಶೇವಿ,** ೪. ೯೨)

**ಕಾಕೋಳ** – ಕಾಗೆ (ಮೌಕುಳಿ ಕೃಷ್ಣಧ್ವಾಂಕ್ಷಂ ಕಾಕೋಳಂ ದ್ರೋಣಂ ಇನತನೂಜನೆನಿಕ್ಕುಂ: **ಅಭಿಧಾವ,** ೧. ೯. ೧೫)

**ಕಾಗಿಣಿ** – ನಾಲ್ಕು ವೀಸ ಬೆಲೆಯ ಒಂದು ನಾಣ್ಯ (ಕಾಗಿಣಿಗೆ ಮರಂ ಬೀಟಿಲ್ವೋಗಿರ್ಕುಂ ಕಡಲ ಕಡೆವರಂ ನಿಮಿರ್ದ ಮಹೀಭಾಗಮಂ ಅನುಜಂಗಿತ್ತಂ ಭಾಗಿಗಳಾರ್ ಸೀರಪಾಣಿಯ ಒರೆಗಂ ದೊರೆಗಂ: **ಪಂಪರಾ,** ೬. ೧೩೪)

**ಕಾಗೆದೊಂಡೆ** – ಗುಲಗಂಜಿ (ಕಾಗೆದೊಂಡೆ ಹಣ್ಣಿನಂತೆ ಒಳಗಶುಭವಂ ಪೊಱಗೆ ರಮಣೀಯಮುಂ ಅಪ್ಪಂತು ನೆಗಟ್ದು: **ಧರ್ಮಾಮೃ,** ೬. ೨೪ ವ)

**ಕಾಚ** – ಗಾಜು (ನೆಟಿಲೇನಿದುವೊ ಕಾಚ ಕುಟ್ಟಿತಳಾಂತರ್ದೇಶದೊಳ್: **ಲೀಲಾವತಿ,** ೨. ೧೨೭)

**ಕಾಚಮೇಚಕ** – ಗಾಜಿನ ಕಪ್ಪುನೀಲಿ ಮಿಶ್ರಣ (ಕಾಚಮೇಚಕಚಯಚ್ಛಾಯಾಂಬುವಿಂ ಗುಣ್ಪಿನಿಂ ಪುದಿದಿರ್ದತ್ತು ಸರೋವರಂ ಬಕಬಲಾಕಾನೀಕ ರಾವಾಕುಳಂ: **ಪಂಪಭಾ,** ೧೩. ೭೨)

**ಕಾಚವಳಯ** – ಗಾಜಿನ ಬಳೆ (ಗಾಂಧಾರವಿಷಯದೊಳ್ ಕಾಚವಳಯಂಗಳಂ ಕೊಮಡು ವೇತ್ರಪರ್ವತದ ಶಿಳಾಭೀಧಾನಗುಹೆಯೊಳಗನುರ್ಚಿ ಪೋಗಿ: **ಹರಿವಂಶ,** ೪. ೩೨ ವ)

**ಕಾಜು** – ಗಾಜು (ತುದಿಯೊಳ್ ಕಾಜು ಕಾಜೆ ಮಣಿ ಮಣಿಯೆ ವಲಂ: **ಸಮಯಪ,** ೮. ೨೪೪)

**ಕಾಜುವೀಟಿಲ್** – ಕರಗಿ ಬೀಳು (ಗ್ರಾವಸ್ಥಲಂ ಲೋಹವಾದುವು ರೇಣುಸ್ಥಲಿ ಕಾಜುವಿಟ್ಟುವು ನಿಧಾನದ್ರಾಘಿಮೋದ್ರೇಕದೊಳ್: **ಪಂಪರಾ,** ೭. ೯೭)

**ಕಾಟ** – ಪೀಡೆ; ಒಂದು ಕ್ಷುದ್ರ ದೇವತೆ (ವರಮೀಗುಮೆ ಮೈಲಾರಂ ಕೇತಂ ಕಾಟಂ ಮಾರಿಗೆ ಮಸಣಿಗೆಯೆನಿಪ್ಪ ಕೋಟಿದೆಯ್ವಂಗಳ್: **ಸಮಯಪ,** ೯. ೧೨೭)

**ಕಾಟಿ** – ಒಂದು ಕ್ಷುದ್ರ ದೇವತೆ (ಹೂಂಕೃತಿಗೈವ ಭೈರವಂ ನೊಸಲುರಿಗಣ್ಣನಾಳ್ವ ಚೌಡೇಶ್ವರಿ ಕೂಂಕಿಜಿದಾರ್ವ ಕಾಟಿಯುಂ: **ಪಾರ್ಶ್ವನಾಪು,** ೧೫. ೧೧೩)

**ಕಾಣ** – ಒಕ್ಕಣ್ಣ (ತತ್ ಕಾಣಂ ತಿದಿಯಂ ಬಿಸುಟುಂ ಪೂಣಿಸಿ ತಗುಳ್ದೆಯ್ದಿ ಮತ್ತೆ ತಿದಿಯಂ ಪಿಡಿಗುಂ: **ಕರ್ಣನೇಮಿ** , ೪. ೧೦೭)

**ಕಾಣಿ** – ಕಡಿಮೆ ಬೆಲೆಯ ನಾಣ್ಯ (ಜ್ಞಾನೇತರಂ ಕುದೃಷ್ಟಿ ಕುಲೀನಂಗಂ ಕೊಟ್ಟ ಕಾಣಿ ನೋವಂ ಮಾಟ್ಕುಂ: **ಸಮಯಪ,** ೭. ೬೯)

**ಕಾಣ್ಕೆ** – ಕಾಣುವಿಕೆ, ನೋಟ (ವಿತ್ರಸ್ತಕರ್ಮರಿಪುವ ಜಗತ್ತ್ರಯದೀಪಕನ ಕಾಣ್ಕೆಗೊಳಗಾದುದು ಲೋಕತ್ರಯಂ: **ಆದಿಪು,** ೧. ೪೭); ಕಾಣಿಕೆ [ಉಡುಗೊರೆ] (ಆ ಗಿರಿರಾಜವಿಲಾಸಮಟ್ತೆಯಂ ತಂದುದು ಕಾಣ್ಕೆಯಂ ತನಗೆ ತರ್ಪವೊಲ್: **ಶಾಂತಿಪು,** ೫. ೨); ರಾಜರಿಗೆ ಕೊಡಬೇಕಾದ ನಜರು (ಅಱಿವಂತು ಕಾಣ್ಕೆಯಂ ಕೊಟ್ಟೆಱಗಿಸೆ: **ಕುಸುಮಾಕಾ,** ೧೨. ೧೩)

**ಕಾಣ್ಕೆಮಾಡು** – ಕಾಣುವಂತೆ ಮಾಡು (ತಾಮರೆಗಂ ಚಂದ್ರಂಗಂ ತಾಮಸಮಂ ಕಳೆದು ಕಾಣ್ಕೆಮಾಟ್ಪಂತೆವೊಲ್: **ಆದಿಪು,** ೭. ೯)

**ಕಾದಂಬ** – ಕಳಹಂಸ (ಕಳಹಂಸಂ ಕಾದಂಬಂ: **ಅಭಿಧಾವ,** ೧. ೯. ೧೩)ಕದಂಬವೃಕ್ಷ (ಆ ಘನಸಮಯಂ .. .. ನಳಿನಭವಾಂಗದಂತೆ ಕಾದಂಬವಿತತಾಮೋದವಾಹಮುಂ .. .. ಎನಿಸಿರ್ದುದು: **ರಾಜಶೇವಿ,** ೮. ೧೧೮ ವ)

**ಕಾದಂಬರಿ** – ಕಳ್ಳು, ಹೆಂಡ (ಮೈರೇಯಮಾಸವಂ ಮಧು ವಾರಂ ಮದ್ಯಂ ಪ್ರಸನ್ನೆ ಹಾಲಂ ಕಲ್ಯಂ ।ವಾರುಣಿ ಕಾದಂಬರಿಯದು ಸೀರಿಪ್ರಿಯೆ ಸೀಧು ಮದಿರೆ ಸುರೆ ಜಗಳಂ ಕಳ್: **ಅಭಿಧಾವ,** ೧. ೧೬. ೫)

**ಕಾದಂಬಿನಿ** – ಮುಗಿಲು (ನಿತಂಬಿನಿ ಕಾರೊಳೆಸೆವ ಕಾದಂಬಿನಿಯಂದದೆ ಮಂದಮಂದಗಮನದೆ ನಡೆದಳ್: **ಕಾದಂಬ,** ೨. ೭೭)

**ಕಾದಂಬಿನೀನಾಥ** – ಮುಗಿಲಿನ ಒಡೆಯ, ಇಂದ್ರ (ಕೂಡು ನಲ್ಲನೊಳ್ ಸಾರ ಕಾದಂಬಿನೀನಾಥನಾ ಗೂಢಗುಣಧಾಮನೊಳ್: **ಕವಿರಾಮಾ,** ೨. ೧೨೨)

**ಕಾದಲ** – ಪ್ರಿಯ, ನಲ್ಲ, ಇನಿಯ (ಆನನಾಂಬುಜಮನೊಯ್ಯನೆ ಬಾಗಿರೆ ಕಾದಲಂಗೆ ಸಯ್ತಂತಿರು ನಾಣ್ಚದೆ ಎಂದು ಅಣುಗೆಯರ್ ಪಿಡಿದು ಅಟ್ಟಿಱೊಳ್ ಎತ್ತಿ ಬುದ್ಧಿವೇಟ್ಪಂತೆ: **ಪಂಪಭಾ,** ೩. ೭೮)

**ಕಾದಲಳ್** – ನಲ್ಲೆ (ಏಲೆ ಮಲಯಾವತಿ ಹಾ ಎನ್ನ ಕಾದಲಳೆ ನೀನೀಗಳ್ ಎಲ್ಲಿದೇ ಎಂದು ಪಾಡುವುದುಂ: **ವಡ್ಡಾರಾ,** ಪು ೩೯, ಸಾ ೨೫)

**ಕಾದಲಿಸು –** ಪ್ರೇಮಿಸು (ಕಣ್ಣಿಂದೆ ಕಾದಲಿಸುತ್ತ ಅಂತೆ .. .. ಅಬಲೆಯಾ ವಕ್ತ್ರಾಬ್ಜಮಂ ಪೀರ್ದಂ ಅಂದು ಒಲವಿಂದೆ: **ಲೀಲಾವತಿ,** ೧೨. ೧೬೦)

**ಕಾದಲೆ –** ಪ್ರಿಯೆ, ನಲ್ಲೆ (ಅಲರ್ಗಣ್ಣೊಳ್ ಸ್ಮರನಿರ್ದಪನಕ್ಕುಂ ಎಡೆವೋಪಾ ಜೋಡೆ ಕಾಮಂಗೆ ಕಾದಲೆಯಕ್ಕುಂ: **ಪಂಪಭಾ,** ೪. ೮೪)

**ಕಾದಲ್ಮೆ –** ಪ್ರೇಮ (ಮೈಮಱೆದಂ ಕಾಯ್ದು ಕಡಂಗಿ ಕೀರಮಿಥುನಂ ಕೂಡಿತ್ತೊ ಕಾದಲ್ಮೆಯಿಂ: **ಲೀಲಾವತಿ,** ೬. ೧೦೪)

**ಕಾದಿಗೆ –** [ಖಾತಿಕಾ] ಅಗಳು, ಕಂದಕ (ಸಾರವಸ್ತುಗಳಿಂ ನೆಱೆದ ಅಂಭೋರಾಶಿಯೆ ಕಾದಿಗೆ ಕಾವನುಂ ಸೀರಪಾಣಿ ವಿಳಾಸದಿನಾಳ್ದಂ ಚಕ್ರಧರಂ: **ಪಂಪಭಾ,** ೪. ೩೨)

**ಕಾದು –** ಹೋರಾಡು (ಅಂತು ಕಿಱಿದು ಪೊೞ್ತು ಕೆಯ್ಗಾಗದು ಕಾದೆ ಸರಿತ್ಸುತನ ಸುರಿವ ಸರಲಮೞೆಯೊಳ್ ಅೞಿದ ನಿಜವರೂಥಿನಿಯ ಸಾವುಂ ನೋವುಂ ಏವಮಂ ಮಾಡೆ: **ಪಂಪಭಾ,** ೧೧. ೧೮ ವ)

**ಕಾದ್ರವೇಯ –** ಹಾವು (ಅದಿರದೆ ಇದಿರೇೞುವ ಎಕ್ಕಲವಂದಿಯಂ ಕಂಡು ಕಿಟಿ ಕಾದ್ರವೇಯಸೌಪರ್ಣಂ: **ಲೀಲಾವತಿ,** ೬. ೧೪ ವ)

**ಕಾನಕಭವನ –** ಚಿನ್ನದ ಮನೆ (ಕಾನಕಭವನ ವ್ಯಾಭಾಸಿಸತ ರತ್ನಚಯಂ ಶೋಭಾವತಿಎಂಬ ಪುರವರಂ ರಂಜಿಸುಗುಂ: **ಪಂಚತಂತ್ರ,** ೨೫೧)

**ಕಾನನ –** ಕಾಡು, ಅಡವಿ (ಖೇಚರಿಯೋ ಭೂಚರಿಯೋ ನಿಶಾಚರಿಯೋ ರೂಪು ಬಣ್ಣಿಸಲ್ಕೆ ಆರ್ಗಂ ಅವಾಗ್ಗೋಚರಂ ಈ ಕಾನನಮುಂ ಅಗೋಚರಂ ಇವಳ್ ಇಲ್ಲಿಗೇಕೆ ಬಂದಳೊ ಪೇೞೆಂ: **ಪಂಪಭಾ,** ३. ೧೪)

**ಕಾನೀಕ –** ಕಿವಿ (ಉಲುಱ್ದು ಇಭಮದಕರ್ದಮಮಂ ಕ್ರಮದೊಳೆ ಕಾನೀನಜಾನುದಘ್ನಮನೆ ತುರಂಗಮ ಲಾಳಾಜಳದ ಪೊನಲ್ ತೆಮಳ್ದಿ ತೊಳೆದಪುದು: **ನೇಮಿನಾಪು,** ३. ೮೬)

**ಕಾನೀನ –** ಕನ್ಯೆಯಲ್ಲಿ ಹುಟ್ಟಿದವನು, ಕರ್ಣ (ಆಂ ಏೞಿಪೆನೆಂದು ಕಾನೀನಂ ಬಂದೆತ್ತಿ ಬಿಲ್ಲನೇಱಿಸಿ ತೆಗೆಯಲ್ ತಾನಾರ್ತನಿಲ್ಲ : **ಪಂಪಭಾ,** ३. ೬೦)

**ಕಾನೀನಸೂನು –** ಕರ್ಣನ ಮಗ, ವೃಷಸೇನ ಆಗಳ್ ಕಾನೀನಸೂನು ವೃಷಸೇನಂ ಏನುಂ ಮಾಣದೆ ಕಾದುತ್ತಿರ್ದಂ; **ಪಂಪಭಾ,** ೧೧. ೯೬ ವ)

**ಕಾಪಿನ ಪೊಲ –** ಮೀಸಲು ಹೊಲ (ಅರಸರ ಕಾಪಿನ ಪೊಲನಂ ಪೊಕ್ಕುವೆಂದು ಉಂಡಿಗೆಯೊತ್ತಿಕೊಳುತ್ತುಂ ಊಟಿಗವಾದೆಡೆಗಳೊಳ್ ಝಾಳೆಯಂಗೊಳುತ್ತುಂ: **ಸುಕುಮಾಚ,** ೭. ३೫ ವ)

**ಕಾಪಿನ ಬಂಟು –** ಕಾವಲು ಭಟ (ತುರಗಮುಂ ಒಂದು ಸತ್ತಿಗೆಯುಂ ಒಂದಿರೆ ಕಾಪಿನ ಬಂಟು ಸುತ್ತಲುಂ ಬರೆ: **ಆದಿಪು,** ೧೧. ೪೬)

**ಕಾಪಿನವಂ –** ಕಾವಲುಗಾರ (ಇರ್ವರ್ ಪದಿರಿನಿಂ ನುಡಿವ ಸೂಟಾತುಗಳಂ ಕಾಪಿನವರುಂ ಪೊೞಲ ಜನಮುಂ ಕೇಳ್ದು: **ವಡ್ಡಾರಾ,** ಪು ೧೨೫ ಸಾ ೧೦)

**ಕಾಪಿಶಾಯನ –** ಮದ್ಯ (ಅಂತು ಪೀಯೂಷ ಕಾಪಿಶಾಯನಮಂ ಕಂಡಿನ್ನು ಅತಿಮಥನಮಪ್ಪದು ಎಂದದಂಮಾಣ್ದು: **ತ್ರಿಷಷ್ಟಿಪು,** ೧೬. ೨೨ ವ)

**ಕಾಪಿಷ್ಠ –** [ಜೈನ] ಹದಿನಾರು ಕಲ್ಪಗಳಲ್ಲಿ ಒಂದು (ಸೌಧರ್ಮ ಈಶಾನ ಸನತ್ಕುಮಾರ ಮಾಹೇಂದ್ರ ಬ್ರಹ್ಮ ಬ್ರಹ್ಮೋತ್ತರ ಲಾಂತವ ಕಾಪಿಷ್ಠ ಶುಕ್ರ ಮಹಾಶುಕ್ರ ಶತಾರ ಸಹಸ್ರಾರ ಆನತ ಪ್ರಾಣತ ಅರಣ್ಯ ಅಚ್ಯುತಮೆಂಬ ಪದಿನಾಱುಂ ಕಲ್ಪಂಗಳೊಳಂ: **ವಡ್ಡಾರಾ,** ಪು ೯೭, ಸಾ ೨೬)

**ಕಾಪು –** ರಕ್ಷಣೆ, ಕಾವಲು (ಅರಸನ ಕೋಷ್ಠಾಗಾರದ ಕರಣಂಗಳ ಕಾಪನೆಯ್ದೆ ಬಂಚಿಸಿಕಳ್ದಂ: **ಆದಿಪು,** ೫. ೧೫)

**ಕಾಪುಗಾಡು –** ಕಾಯ್ದಿಟ್ಟ ಕಾಡು (ಕಾಪುಗಾಡಿನೊಳ್ ಸೋಹಿನ ಬೇಂಟೆಯ ಬಿನದದಿನೀರ್ವರ ರಥಮುಂ ಬೇಱೆವೇಱಾದಲ್ಲಿ: **ಅನಂತಪು,** ೧೧. ೪೦ ವ)

**ಕಾಪುರುಷ –** ಹೀನ ವ್ಯಕ್ತಿ (ಕಿನ್ನರರ್ ಇನ್ನಾರ ಮಱೆಯಂ ಪುಗುವವೆನೆಯುಂ ಕಿಂಪುರುಷರ್ ಕಾಪುರುಷರಂತೆ ಬಾಯಂಬಿಡೆಯುಂ: **ಪಂಪಭಾ,** ೫. ೮೮ ವ)

**ಕಾಮ –** ಮನ್ಮಥ (ಆ ರತಿ ಪಾಪಮುಂ ಪಡಣಮುಂ ಪೋಪಂತೆ ಕಾಮಂಗೆ ಮಜ್ಜನಕೆ ಎಂದೆತ್ತಿದ ಚಂದ್ರಕಾಂತ ಘಟದೊಳ್ ತಂದು ಅಟ್ಟೆಯಿಂ ಪುಷ್ಪವಾಸನೆಗೆಂದಿಕ್ಕಿದ ನೀಳನೀರರುಹಮಂ ಪೋಲ್ದತ್ತು ಕಟ್ಟಿಂದುವಾ: **ಪಂಪಭಾ** ಪರಿಷತ್ತು, ೪. ೫೧); ಹಣ (ಅವರ ಕಾಮಂ ಇಮ್ಮಡಿಯಂ ಪಡೆದಲ್ಲದೆ ಬಪ್ಪೆನಲ್ಲೆಂ ಎಂದು ಕಪ್ಪಡಮಂ ಸೀಟಾಗ: **ಹರಿವಂಶ,** ೪. ೭ ವ)

**ಕಾಮಕರ –** ಗರ್ವಪಡುವವನು (ಇನೆಗಂ ಎಂಬುದರ್ಕೆ: ಕಾಮಕರಂ ಕರಮಡಂಗಿ ನುರ್ಗಪ್ಪಿನೆಗಂ ಕಾಮದನಡಂಗೆವೊಯ್ದಂ: **ಶಬ್ದಮದ, ಪ್ರ** ೧)

**ಕಾಮಕಾಂತೆ –** ರತಿದೇವಿ (ಕಾಮಕಾಂತೆ ಬೞೆಯಂ ತನ್ನಿಚ್ಚೆಯಿಂ ಮೆಚ್ಚಿ ಬಣ್ಣವುರಂ ತೀವಿದ ಮಾಟ್ಕೆಯಾಯ್ತು ನವಿಲಿಂ ಕುಂದಂಗಳಿಂ ಇಂದ್ರಗೋಪವಿಳಾಸಂಗಳಿಂ ಆಲಿಕಲ್ಲ ಪರಲಿಂ ಕಾರೊಳ್ ಮಹೀಮಂಡಲಂ: **ಪಂಪಭಾ,** ೭. ೨೪);

**ಕಾಮಕಾಮಿನಿ –** ವಿಷಯಾಸಕ್ತೆ (ಕಾಮಕಾಮಿನಿಯರ ಕಡೆಗಣ್ಣ ನೋಟದಿಂ ಪುಳಕಿಸದ ತಿಳಕಮಿಲ್ಲ: **ಪುಷ್ಪದಂಪು,** ೯. ೨೧ ವ)

**ಕಾಮಕಾರ್ಮುಕ –** ಮನ್ಮಥನ ಬಿಲ್ಲು (ಕಳಕಳಿಪಮರಿಯರಂ ಕಣ್ಗೊಳೆ ಬಗ್ಗಿಸುವಲ್ಲಿ ಕಾಮಕಾರ್ಮುಕಕರಸಂ ಚಳನಮನೆ ಪೋಲ್ತು: **ಆದಿಪು,** ೭. ೧೫)

**ಕಾಮದುಘ –** ಬಯಸಿದ್ದನ್ನು ಕೊಡುವ ಹಸು, ಕಾಮಧೇನು (ಚಂದ್ರನಿಂದೊಸರ್ದ ಚಂದ್ರಾಶ್ಮು .. .. ಕಾಮದುಘಂ ಉದ್ಯತ್ ಕ್ಷೀರಮಂ ಕೆಚ್ಚಲಿಂ ಸುರಿಯಲ್: **ರಾಜಶೇವಿ,** ೧. ೧೭)

**ಕಾಮದೇವ –** ಮನ್ಮಥ (ಆಗಳ್ ಆಱುಂ ಋತುಗಳ ಪೂಗಳಂ ಒಂದುಮಾಡಿ ಪೂವಿನಂಬುಗಳಂ ಪಣ್ಣಲೆಂದು ಕಾಮದೇವಂ ಮಾಡಿದ ಓಜನ ಸಾಲೆಯಿರ್ಪಂತಿರ್ಪ ಪೂವಿನ ಸಂತೆಯೊಳ್: **ಪಂಪಭಾ,** ೪. ೮೦ ವ)

**ಕಾಮಧೇನು –** ಕಾಮದುಘ (ಆ ಕಾಮಧೇನುವೆ ಕೈಸಾದೊಡಂ: **ಅನಂತಪು,** ೧. ೬೦)

**ಕಾಮಧ್ವಂಸಿ –** ಜಿತೇಂದ್ರಿಯ, ಶಿವ (ಕಾಮಧ್ವಂಸಿಯಾಗಿಯುಂ ತ್ರಿಲೋಚನನಲ್ತು: **ಜಗನ್ನಾವಿ,** ೮. ೧೦ ವ)

**ಕಾಮನ ಕಾರ್ಮುಕ** – ಕಾಮನಬಿಲ್ಲು (ಪೊನಲ್ಗಳ ಕೆಂಪು ಪಸುರ್ಪು ಕರ್ಪು ಬೆಳ್ಪು ಒಳಕೊಳೆ ಶಕ್ರಕಾರ್ಮುಕವಿಳಾಸಮಂ ಏನೆರ್ದೆಗೊಂಡು ಬೇಟದತ್ತಳಗಮಂ ಉಂಟುಮಾಡಿದುದೋ ಕಾಮನ ಕಾರ್ಮುಕದಂತೆ ಕಾರ್ಮುಕಂ: **ಪಂಪಭಾ,** ೭. ೨೫)

**ಕಾಮನಿರ್ಜರೆ** – [ಜೈನ] ಕಾಮನಾಶವಾಗುವುದು (ತರದಿಂದೆ ಕಾಮನಿರ್ಜರೆ ಸರಾಗ ಸಂಯಮಗುಣಂ ಸ್ವಭಾವಮೃದುತ್ವಂ .. .. ಆಸ್ರವಮಕ್ಕುಂ: **ಸುಕುಮಾಚ,** ೮. ೨೧)

**ಕಾಮಪಾಳ** – ಬಲರಾಮ (ಬಲಭದ್ರಂ ಮುಸಳಿ ಕಾಮಪಾಳಂ ರಾಮಂ: **ಅಭಿಧಾವ,** ೧. ೧ ೨೫)

**ಕಾಮರ** – ಕಾಡು ಮರ (ಸುಜನರ್ಗೆ ಅಭೋಜ್ಯಮಪ್ಪ ತಾಳಿಂಬೇರ್ಮೊದಲಾದ ಕಾಮರಂಗಳಂ: **ತ್ರಿಷಷ್ಟಿಪು,** ೭. ೬ ವ)

**ಕಾಮರೂಪಿ** – ಬೇಕಾದ ರೂಪ ಧರಿಸಬಲ್ಲವನು (ಕಾಮರೂಪಿಯುಂ ಕಮಾಚಾರಿಯುಂ ಅಪ್ಪ ವಿಜಯಪರ್ವತಮೆಂಬ ಯಾಗ ಹಸ್ತಿರತ್ನಮಂ: **ಆದಿಪು,** ೧೧. ೩ ವ)

**ಕಾಮಶಿಳೀಮುಖ** – ಕಾಮಬಾಣ (ಕಾಮಶಿಳೀಮುಖಕ್ಕೆ ಕೋಮಳೆ ಸುಗಿದಿರ್ದಳ್: **ಪುಷ್ಪದಂಪು,** ೬. ೩೯)

**ಕಾಮಾಂಗ** – ಕಾಮ ಕೆರಳಿಸುವ ಮದ್ಯ (ಈ ಕಕ್ಕರಕ್ಕಿಂತುಟಪ್ಪುದು ಕಳ್ಳಪ್ಪುದು ತಪ್ಪದೆಂದು ಕುಡಿದರ್ ಕಾಮಾಂಗಮಂ ಕಾಂತೆಯರ್: **ಪಂಪಭಾ,** ೪. ೮೮)

**ಕಾಮಾಂಧ** – ಕಾಮದಿಂದಾಗಿ ವಿವೇಕವನ್ನು ಕಳೆದುಕೊಂಡವನು (ಕಂತುವೆ ಪರಮಾತ್ಮನಾಗೆ ತನ್ಮತಮೆ ಸಿದ್ಧಾಂತಮಾಗೆ ಕಾಮುಕೀಕಾಮುಕರೆ ಸಧರ್ಮರಾಗೆ .. .. ಕಾಮಾಂಧರಾಗಿ: **ಶಾಂತಿಪು,** ೭. ೧೦ ವ)

**ಕಾಮಾಗ್ನಿ** – ಕಾಮವೆಂಬ ಬೆಂಕಿ (ಮನಂ ಆರಾಧಿತ ಹೋಮಭೂಮಿ ಪಶುಗಳ್ ಕಾಮಾತುರರ್ ಬಂದ ಮಾವನಿತುಂ ಸ್ಥಾಪಿತ ಯೂಪಕೋಟಿ ಬಳವತ್ಕಾಮಾಗ್ನಿ ಹೋಮಾಗ್ನಿ ಚಂದನ ಕರ್ಪೂರ ಮೃಣಾಳನಾಳಮೆ ಪೊದಲ್ದ ಇಧ್ಮಂಗಳ್ ಇಂತಾಗೆ ತಾನಿನಿತುಂ ಕಾಮನ ಬೇಳ್ವೆಯೆಂದು ಸುಗಿದಳ್ ತನ್ವಂಗಿ ಬೆಳ್ದಿಂಗಳೊಳ್; **ಪಂಪಭಾ,** ೪. ೫೯)

**ಕಾಮಾರ್ಥ** – ಪುರುಷಾರ್ಥಗಳಲ್ಲಿ ಮೂರನೆಯದದು, ಇಂದ್ರಿಯಸುಖ (ಪಟುವಪ್ಪ ಇಂದ್ರಿಯವರ್ಗದಿಂ ತನಗೆ ಮುಂ ಕಾಮಾರ್ಥಂ: **ಶಾಂತಿಪು,** ೭. ೬೭)

**ಕಾಮಿಸು** – ಬಯಸು (ನೃಪಕಾಂತೆಯಂ ಪದೆದು ಕಾಮಿಸಿ ನೋಡಿ ಪೊರ್ದುವ ಗಾಂಪನುಂ ಮರುಳಲ್ಲನೇ: **ಧರ್ಮಾಮೃ,** ೬. ೬೪)

**ಕಾಮುಕ** – ವಿಷಯಲಂಪಟ (ಕಾಮುಕೀಕಾಮುಕರೆ ಸಧರ್ಮರಾಗೆ .. .. ಕಾಮಾಂಧರಾಗಿ: **ಶಾಂತಿಪು,** ೭. ೧೦ ವ)

**ಕಾಮ್ಯ** – ಬಯಸುವ (ಸುತದೋಹಳಾನುಕೂಲಮಪ್ಪ ಶಿಳೀಮುಖ ಕಾಮ್ಯಫಲಜನ್ಮಾವಾಸಮಂ ಉತ್ತರೋತ್ತರಮೆನೆ ನೆಗಟುತ್ತುಂ: **ಮಲ್ಲಿನಾಪು,** ೪. ೩೬ ವ)

**ಕಾಯ್** – ಬಿಸಿಯಾಗು (ಕಾಯ್ದ ಬೆನ್ನೀರ್ ಮನೆ ಸುಡದು ಎಂಬೊಂದು ನುಡಿಯವೋಲ್: **ಪಂಪಭಾ,** ೯. ೩೮); ಕಾಯಿಬಿಡು (ಇಡಿದಡರೆ ಕಾಯ್ತ ಚೂತಮನಡಸಿ ಸಿಡಿಲ್ ಪೊಯ್ದುದೆನಿಸೆ: **ಆದಿಪು,** ೩. ೩೪); ಕಾಯಿ ಬಿಡು (ತಳಿರ್ತು ಪೂತು ಕಾಯ್ತಲಸದೆ ಪಲ್ಲಪಾದಪದ ತಣ್ನೆಳಲಲ್ಲಿ: **ನೇಮಿನಾಪು,** ೧. ೯); ಕಾಪಾಡು (ಕಾಯ್ವ ಅಟಲ್ ಉೞ್ ಜತುಗೃಹದೊಳಗೆ ಅಯ್ವರುಮಂ ಮಂತ್ರಬಲದೆ ಸುಟ್ಟೊಡಂ ಅವರಂ ದೆಯ್ವಬಲಮೊಂದೆ ಕಾದುದು ದೆಯ್ವಮಂ ಆರಯ್ಯೆ ಮೀಱೆ ಬಾಟಿಲ್ ನೆಱೆವರ್: **ಪಂಪಭಾ,** ೪. ೩); ಕೋಪಿಸಿಕೊ (ಸಾಧುಸಂಕುಳಮಂ ಕಂಡೊಡೆ ಕಾಯ್ವನುಂ ಪಟಿವನುಂ ಧರ್ಮಕೃತಿದ್ರೋಹನುಂ: **ಆದಿಪು,** ೫. ೮೧)

**ಕಾಯಕ್ಲೇಶ** – [ಜೈನ] ಬಾಹ್ಯತಪಸ್ಸುಗಳಲ್ಲಿ ಆರನೆಯದು (ಕಾಯಕ್ಲೇಷಮೆಂಬ ಆಱನೆಯ ತಪಮನೆತ್ತಿಕೊಂಡು: **ಆದಿಪು,** ೬. ೩೦ ವ)

**ಕಾಯಪ್ರವೀಚಾರ** – ಮನುಷ್ಯರಂತೆ ದೇಹಸುಖ ಪಡೆಯಬಲ್ಲ ದೇವತೆ, ಸುರತಾಸಕ್ತ ದೇವತೆ (ಸುರಭಿ ನಿಶ್ವಾಸನುಂ ಕಾಯಪ್ರವೀಚಾರನುಂ ಅಪರಿಮ್ಲಾನ ದಿವಿಜಕುಸುಮಶೇಖರನುಮಾಗಿ: **ಕರ್ಣನೇಮಿ,** ೧. ೧೦೪ ವ); ಈಶಾನಕಲ್ಪದವರೆಗೆ ಅಮರರು ದೈಹಿಕವಾಗಿ ಮೈಥುನ ಸುಖವನ್ನುಭವಿಸುವರು, ಆ ಮೇಲಣ ಲೋಕಗಳವರು ಮನಃಪ್ರವೀಚಾರ – ಮನಸ್ಸಿನಿಂದ ಮೈಥುನಸುಖ – ಅನುಭವಿಸುವರು (ಅರ್ಧಮಾಸನಿರ್ಯತ್ ಸುರಭಿನಿಶ್ವಾಸನುಂ ಕಾಯಪ್ರವೀಚಾರನುಂ .. .. ಆಗಿ: **ಆದಿಪು,** ೨. ೬೯ ವ)

**ಕಾಯಮಾನ** – ಚಪ್ಪರ, ಮಂಟಪ (ವಿಳಾಸಿನೀವಾಟದೊಳ್ ಎಂದೆಡೆಯೊಳ್ ಒಂದು ಕಮನೀಯ ಕಾಯಮಾನ ಅಭ್ಯಂತರ ಚಂಚತ್ ಕಾಂಚನಮಂಚೋಪಶೋಭಿತ ಮೃದುತಳ್ಪದೊಳ್: **ಆದಿಪು,** ೧೨. ೧೨ ವ)

**ಕಾಯಸ್ಥಿತಿ** – [ಜೈನ] ದೇಹ ಕಾಪಾಡಲು ಮಾಡಬೇಕಾದ ಆಹಾರಸೇವನೆ (ಪತಿವಿಗಮದೊಳ್ ಅಸಿಧಾರಾವ್ರತಂಗಳಂ ತಾಳ್ದಿ ಧರ್ಮಮಂ ಮಾಡುವ ಸಂತತಿಯಂ ಕಾಯುತೆ ಕಾಯಸ್ಥಿತಿಯಂ ತಾನತ್ತಿಮಬ್ಬೆ ಮಾಣ್ಬಳೆ ಮಾಣಳ್: **ಅಜಿತಪು,** ೧. ೫೦)

**ಕಾಯೋತ್ಸರ್ಗ** – [ಜೈನ] ಕೈ ಇಳಿಬಿಟ್ಟುಕೊಂಡು ನೇರವಾಗಿ ಮತ್ತು ನಿಶ್ಚಲವಾಗಿ ನಿಂತಿರುವುದು (ಭರತಂ ಕಾಯೋತ್ಸರ್ಗದೊಳಿರೆ ಚಿತ್ತನಿರೋಧದಿಂ ಸಡಿಲ್ದೊಡೆ ತನು: **ಆದಿಪು,** ೧೬. ೩೭)

**ಕಾಯ್ಗೊಂಡ** – ನೀರು ಕಾಯಿಸುವ ಹಂಡೆ (ಸರೋವರಜಲಮೋರಂತಿರೆ ಕಾಯ್ಗೊಂಡದ ನೀರಂತಿರೆ ಕುದಿದತ್ತು: **ಆದಿಪು,** ೧೧. ೪೮)

**ಕಾಯ್ತು** – ಕಾಯಿ ಬಿಟ್ಟ (ಬೇರಿಂದಂ ಕೊನೆಮುಟ್ಟೆ ಕಾಯ್ತ ಪಲಸು .. .. ಪಣ್ತ ಚೂತತತಿಯಿಂ ಚೆಲ್ವಾದುದಾ ನಂದನಂ: **ಧರ್ಮಪ,** ೧. ೪೮)

**ಕಾಯ್ದ ಪುಡಿ** – ಕಾದ ಮಣ್ಣು (ಅಂತಾ ಬಾಲೆ ಕಾಯ್ದ ಪುಡಿಯೊಳಗೆ ಬಿಸುಟ್ಟ ಎಳವಾಳೆಯಂತೆ ಸುರತ ಮಕರಧ್ವಜನೊಳಾದ ಬೇಟದೊಳ್ ಮಮ್ಮಲ ಮಱುಗುತಿರ್ದಳ್: **ಪಂಪಭಾ,** ೫. ೧೦ ವ)

**ಕಾಯ್ದುಱುಗಲ್** – ಕಾಯಿಗಳ ಗೊಂಚಲು (ಅಗರುವ ಧೂಮಲತಾಶಾಖೆಗಳೊಳ್ ಕಾಯ್ದುಱುಗಲೆಂದು .. .. ಮೊಗಸಿದುವು ಮಧುಕರಪ್ರಕರಂಗಳ್: **ಪಂಪರಾ,** ೧೨. ೯)

**ಕಾಯ್ವಾಱು** – ಕಾವು [ಕೋಪ] ಕಡಿಮೆಯಾಗು (ವಯಲ್ಗೆ ಮೆಯ್ಯೊಡ್ಡೀಱುವೆವೆಂಬ ಪೂಣಿಗರ್ ಅಡಂಗಿ ಕುನುಂಗಿ ಸಿಡಿಲ್ದು ಜೋಲ್ದು ಕಾಯ್ವಾಱೆ ನಭಕ್ಕೆ ಪಾಱೆದುದು: **ಪಂಪಭಾ,** ೧. ೧೦೯)

**ಕಾಯ್ಪು** – ಶಾಖ (ಅರ್ಕಬಿಂಬದಿಂ ಪೊಱಪೊಣ್ಮುತ್ತ ಒಂದೊಂದನೊರಸಿ ಕಿಡಿವಿಡುವಂದದೆ ಕಡುವಿಸಲ ಪೊಳೆಪುವಡೆದುದು ಕಾಯ್ಪಂ: **ಲೀಲಾವತಿ,** ೫. ೩೫); ಕೋಪ, ಉಗ್ರತೆ (ಪಿರಿದುಂ ಕಾಯ್ಪಿನೊಳ್ ಎಯ್ದೆ ಕಾಯ್ವ

ಸಮಕಟ್ಟಿಂ ದೋಷಮಲ್ತು ಅಕ್ಕ ಮಚ್ಚರಮುಂ ಮೋಘಂ ಎಡಂಬಡುಂ ಕಲುಷಮುಂ ಮುನ್ನುಳ್ಳುದು .. .. ನಿಷ್ಕಾರಣಂ ಕಾಯ್ವರೇಂ: **ಪಂಪಭಾ,** ೭. ೩೫); ತೀವ್ರತೆ (ಮದನನ ಕಾಯ್ಪು ಮಾಣ್ಗೆ ಸರಸೀರುಹಜನ್ಮನ ಮೆಚ್ಚು ತೀರ್ಗೆ ಕೋಳ್ಗುದಿ ಮನದಿಂದಂ ಇಂದು ಪೊಱಮಾಱುಗೆ: **ಪಂಪಭಾ** ಪರಿಷತ್ತು, ೫. ೧೮)

**ಕಾಯ್ವಾತ** – ಕೋಪಿಷ್ಠ (ಮಿತ್ರನಾದೊಡಮದೇಂ ಕಾಯ್ವಾತನಂ ಕೂರ್ಪರಾರ್: **ರಾಜಶೇಖಿ,** ೫. ೪೮)

**ಕಾರ್** – ತಿನ್ನು (ಕಲ್ಲೆನ್ನದೆ ಬೆಳೆದ ಪಸುರ್ವುಲ್ಲೆಂದು ಆಸೆಯೊಳ್ ಸಾರ್ದು ಮರಕತದ ಒಡ್ಡುಂಗಲ್ಲನೆ ಕಾರ್ದು ಮೃಗಂಗಳ್ ಕಲ್ಲನೆ ಕನಲುತ್ತುಮಿರ್ಪುವು ಆ ಖಗನಗದೊಳ್: **ಅಜಿತಪು,** ೯. ೨೩); ಮಳೆಗಾಲ (ಕಾಮಕಾಂತೆ ಬಟೆಯಂ ತನ್ನಿಚ್ಚೆಯಿಂ ಮೆಚ್ಚಿ ಬಣ್ಣವುರಂ ತೀವಿದ ಮಾಟ್ಕೆಯಾಯ್ತು ನವಿಲಿಂ ಕುಂದಂಗಳಿಂ ಇಂದ್ರಗೋಪವಿಳಾಸಂಗಳಿಂ ಆಲಿಕಲ್ಲ ಪರಲಿಂ ಕಾರೊಳ್ ಮಹೀಮಂಡಲಂ: **ಪಂಪಭಾ,** ೭. ೨೪); ಮಳೆ (ಗೋದಾಮೆಗಂಡ ನವಿಲಂತಾದುದು ಕಾರ್ ಕಂಡ ಹಂಸನವೊಲಾದುದು: **ಯಶೋಧಚ,** ೩. ೧೦)

**ಕಾರಂಡ** – ಬಾತುಕೋಳಿ (ಶುಕ ಕಾರಂಡ ಚಕೋರ ಸಾರಸ ಮಯೂರಾಕಾರದಿಂ ವ್ಯಾಘ್ರ ಸಿಂಹ ಕುರಂಗಾಂಬುಜ ವಕ್ರ ಮತ್ಸ್ಯ ಮಕರೇಭಾಕಾರದಿಂ ಚೆಲ್ವುವೆತ್ತು: **ಸುಕುಮಾಚ,** ೧೦. ೫೩)

**ಕಾರಕ** – ರಚಿಸುವವನು (ಕಾರಕ ಪೂರಕ ವಸ್ತುವಿಚಾರಕ ನಿಸ್ತಾರಕರ್ಕಳೋಳಿಯೆ ಸಭೆಗೊಟ್ಟೋರಂತೆ ನಾಲ್ವರಿರ್ದು ವಿಚಾರಂಬೇಟ್ಟಂತೆ ಪೇಟ್ದಿ ಕೃತಿಯಂ ಕೃತಿಯೇ: **ಅಜಿತಪು,** ೧. ೮೭)

**ಕಾರಣೆ** – ಲೇಪನ (ಅನುಪಮಮಪ್ಪ ಕತ್ತುರಿಯ ಸಾರಣೆ ಮುತ್ತಿನ ರಂಗವಲ್ಲಿ ಘನಸಾರ ಕರ್ಪೂರದ ಕಾರಣೆ: **ಧರ್ಮಪ,** ೧. ೫೯)

**ಕಾರಿರುಳ್** – ಮಳೆಗಾಲದ ರಾತ್ರಿ (ನಿಚ್ಚಲಿ ಕಾರಿರುಳೊಳ್ ಪೊಱಪಚ್ಚಮಂ ಉಟ್ಟಿರ್ದು ಇಱುಂಕಿ ಕಕ್ಷದೊಳ್ ಆ ಪಾಟಚ್ಚರ ಭಯದಿಂದುಟ್ಟು ಪಟಚ್ಚರಮಂ ಮನೆಗೆ ವಂದು ನಿಂದು ಅಂಗಣದೊಳ್: **ಶಾಂತಿಪು,** ೬. ೬೫); ಕತ್ತಲೆ ತುಂಬಿದ ರಾತ್ರಿ (ಕಾರಿರುಳ ತಿರುಳ ಬಣ್ಣ ಕೂರಿದುವೆನೆ ತೊಳಪ ದಾಡೆ ಮಿಳಿರ್ವ ಉರಿಗೇಸಂ ಪೇರೊಡಲ್ ಎಸೆದಿರೆ ಪುಟ್ಟಿದಂ ಆರುಂ ಅಗುರ್ವಿಸೆ ಮಗಂ ಘಟೋತ್ಕಚನೆಂಬಂ: **ಪಂಪಭಾ,** ೩. ೨೦)

**ಕಾರಿವ** – ಸುಳ್ಳು, ಕೃತಕ (ಕಾಣ್ಬುದಾವುದು? ಒಡಲಲ್ತು ಕಾರಿವಂ: **ಆದಿಪು,** ನರಸಿಂ, ೧೨. ೩೫)

**ಕಾರುಕ** – ಕಮ್ಮಾರ (ಮದನನ ಬಾಣಾವಳಿಯಂ ಕಾಸಲ್ ಚೈತ್ರೋಜ್ವಳ ಕಾರುಕನಿಟ್ಟ ಕಮ್ಮಟಂಬೊಲದೆಸೆಗುಂ: **ರಾಜಶೇಖಿ,** ೨. ೫೬); ಬಡಗಿ, ಕೈಕೆಲಸಗಾರ (ಕರ್ಮದಿಂ ಕಾರುಕನಪ್ಪುದೊಂದು ಎಡೆಯೊಳ್ ಉತ್ತಮ ಜಾತಿಯುಮಾಗಿ ಪುಟ್ಟುಗುಂ: **ಜೀವಸಂ,** ೫. ೨೪)

**ಕಾರುಣಿಕ** – ಕರುಣೆಯುಳ್ಳವನು (ಸದಯಂ ಘೃಣಿ ಕಾರುಣಿಕಂ: **ಅಭಿಧಾವ,** ೨. ೧. ೧೮); ಒಂದು ಧಾರ್ಮಿಕಪಂಥದವನು (ಮತ್ತಂ ಅನೇಕ ಉಪಪತ್ತಿಗಳಿಂ ಚಾರ್ವಾಕ ಕಾರುಣಿಕ ವಾವದೂಕನಂ ಕರುಣರಸಾಸ್ಪದಂ ಮಾಡಿ: **ಶಾಂತಿಪು,** ೮ ೧೪೭ ವ)

**ಕಾರೊಱಿ** – ಕಪ್ಪು ಬಣ್ಣದ ಒರೆ (ಮದನನಲ್ಲಿಯೆ ಸಾರ್ಚಿದ ಕಾರೊಱೆಗಳಂತೆ ಪುರ್ಬುಗಳೆಸೆಗುಂ: **ಲೀಲಾವತಿ,** ೭. ೭೪)

**ಕಾರೋಹಣ** – ಈ ಹೆಸರಿನ ಊರಿನಲ್ಲಿ ತಯಾರಾದ ವಸ್ತ್ರ (ಕಾರೋಹಣದ ಕಕ್ಕರವಳಯಿಗೆಯ ಚಿತ್ರಾವಳಿಯ .. .. ಜವಳಿಗಳನೆ ಮೊಗಂ ನೋಡದೆ ಸೂಸಿದಾಗಳ್: **ಆದಿಪು,** ೪. ೩೪ ವ)

**ಕಾರ್ಕೋಳಿ** – ಕಾಡು ಕೋಳಿ (ಕಪಿ ಕಾರ್ಕೋಳಿಯಂತೆ ಪುಲ್ಲೆ ಕೈಲಾದಂತೆ: **ಹರಿವಂಶ,** ೨. ೩೮ ವ)

**ಕಾರ್ಗಾಲ** – ಮಳೆಗಾಲ (ಕಾರ್ಗಾಲದ ಬರವಂ ಚಾದಗೆ ಪಾರ್ವಂತೆ: **ಪಂಪಭಾ,** ೮. ೩೬ ವ)

**ಕಾರ್ಗೆಯ್** – ಮಳೆಗಾಲದಲ್ಲಿ ಸಾಗುಮಾಡುವ ಗದ್ದೆ (ಕಾರ್ಗೆಯ್ಯ ಮೇರೆಯೊಳಿಟ್ಟ ಕೆಕ್ಕರಿಕೆ ಬಿರಿವಂತೆ: **ಶಾಂತಿಪು,** ೭. ೯೨)

**ಕಾರ್ತಸ್ವರ** – ಚಿನ್ನ (ಅಲ್ಲಿಂದತ್ತ ಕಾರ್ತಸ್ವರ ವೇದಿಕಾವಿಭೂಷಣಂಗಳುಂ ನಾಗದೌವಾರಿಕಾ ಅಭಿರಾಮಂಗಳುಂ: **ಆದಿಪು,** ೧೦. ೩೪ ವ)

**ಕಾರ್ತಸ್ವರಗಿರಿ** – ಮೇರುಪರ್ವತ (ದೂರಾಂತರದೊಳೆ ಕಂಡಂ ಕಾರ್ತಸ್ವರಗಿರಿಯಂ ಪೋಲ್ತು ನಿಂದ ನಿಶ್ಚಳತನುವಂ: **ಆದಿಪು,** ೯. ೧೦೦)

**ಕಾರ್ತಾಂತಿಕ** – ಮೌಹೂರ್ತಿಕ (ಗಾಂಭಿರ್ಯಾದಿ ಗುಣಲಕ್ಷಣನುಮಪ್ಪ ಸಂಭಿನ್ನನೆಂಬ ಕಾರ್ತಾಂತಿಕೋತ್ತಮನಂ ಬರಿಸಿ: **ಆಚವರ್ಧ,** ೩. ೭೦ ವ)

**ಕಾರ್ತಿಕೇಯ** – ಷಣ್ಮುಖ, ಕುಮಾರಸ್ವಾಮಿ, ಸ್ಕಂದ (ಎಂದು ಬಿನ್ನಪಂಗೆಯ್ದು ಬೇಂಟೆಯಾತಂಗೆ ಮೃಗವ್ಯಾಯಾಮ ಕಾರ್ತಿಕೇಯಂ ಮೆಚ್ಚಿ ಮೆಚ್ಚುಗೊಟ್ಟು ತೊವಲನಿಕ್ಕೆಂದು ಮುಂದೆ ಪೇಟ್ದಟ್ಟೆ ನಾರಾಯಣನುಂ ತಾನುಂ .. .. ಬೇಂಟೆಗೆ ಪೊಱಮಟ್ಟು: **ಪಂಪಭಾ,** ೫. ೪೭ ವ)

**ಕಾರ್ಪಾಸ** – ಹತ್ತಿ (ಕುಸುಂಭ ಕಾರ್ಪಾಸ ಸರ್ಷಪ ಜೀರಕ ಧಾನ್ಯಕಾದಿ ವಿವಿಧ ಧಾನ್ಯಭೇದಂಗಳುಂ: **ಆದಿಪು,** ೬. ೭೨ ವ)

**ಕಾರ್ಪಾಸಚಾಪ** – ಹತ್ತಿ ಹಿಂಜುವ ಬಿಲ್ಲು (ಬೆಸೆ–ಗರ್ವೇ ಕಾರ್ಪಾಸಚಾಪೇ ಚ: **ಶಬ್ದಮದ, ಧಾ** ೭೦೮)

**ಕಾರ್ಬೊನ್** – ಕರಿಯ ಲೋಹ, ಕಬ್ಬಿಣ (ಕಾರ್ಬೊನ್ನಂ ತಿರುಗಿದಪುದು ಅಯಸ್ಕಾಂತಶಕ್ತಿ ಎಲ್ಲಿತ್ತದಱೊಳ್: **ಕಾದಂಬ,** ೯. ೮೭)

**ಕಾರ್ಮುಕ** – ಬಿಲ್ಲು (ಕನಕಪತ್ರಾಂಕಿತ ಕಾರ್ಮುಕಲತಾ ಲಂಬನಂಗಳುಂ: **ಆದಿಪು,** ೧೪. ೪೬ ವ); [ಕಾರ್+ಮುಖ] ಮಳೆಗಾಲದ ಆರಂಭ (ಪೊನಲ್ಗಳ ಕೆಂಪು ಪಸುರ್ಪು ಕರ್ಪು ಬೆಳ್ಪು ಒಳಕೊಳೆ ಶಕ್ರಕಾರ್ಮುಕವಿಳಾಸಮಂ ಏನೆರ್ದೆಗೊಂಡು ಬೇಟದತ್ತಳಗಮಂ ಉಂಟುಮಾಡಿದುದೋ ಕಾಮನ ಕಾರ್ಮುಕದಂತೆ ಕಾರ್ಮುಕಂ: **ಪಂಪಭಾ,** ೭. ೨೫)

**ಕಾರ್ಮುಕಗುಣ** – ಬಿಲ್ಲಿನ ಹಗ್ಗ (ಇದಱ ದನಿ .. .. ಮನೋಜಗುಣಕಾರ್ಮುಕನಾದದೊಳಂ ಸೆಣಸುವುದೆನೆ: **ಆದಿಪು,** ೭. ೨೦)

**ಕಾರ್ಮುಕಯಷ್ಟಿ** – ಬಿಲ್ಲಿನ ಕಾಂಡ (ಆ ಕಾಮಕಾರ್ಮುಕಯಷ್ಟಿಮುಷ್ಟಿಸಮಾಯತ ಜಘನೆಯರೊಳ್: **ಆದಿಪು,** ೮. ೨೩ ವ)

**ಕಾರ್ಮುಗಿಲ್** – ಮಳೆಗಾಲದ ಮೋಡ, ಕಪ್ಪು ಮೋಡ (ಪೊಳೆವ ಅಮರೇಂದ್ರಗೋಪದ ಪಸುರ್ತೆಳವುಲ್ಗಳ ತಳ್ತ ಕಾರ್ಮುಗಿಲ್ಗಳ ಕಿಱುಗೊಂಕುಗೊಂಕಿದ ಪೊನಲ್ಗಳ: **ಪಂಪಭಾ,** ೭. ೨೫)

**ಕಾರ್ಶ್ಯಮ** – ತೆಳ್ಳಗಾಗುವಿಕೆ (ಅಳಿಪು ಚಿಂತೆ ಸುಯ್ವು ತಾಪಂ ಎಯ್ದೆ ಕಾರ್ಶ್ಯಮಕ್ರಿಯಾವಳಿ: **ಅನುಭವ,** ೨೯)

**ಕಾರ್ಷ್ಣ್ಯ** – ಕಪ್ಪು ಬಣ್ಣ (ಮೇಘಂ ಮುಸುಂಕುತ್ತೆ ಕಾರ್ಷ್ಣ್ಯವಿಶಿಷ್ಟಂ ತಟಿದಂಕುರಾಲ್ಪರುಚಿಯಂ ಬೀಱಿತ್ತು: **ರಾಜಶೇವಿ,** ೮. ೯೯)

**ಕಾಲ್** – ಕಾಲುವೆ (ತೋಱೆ ಪೊರ್ದಿದ ಕಾಲ್ ತಾಂ ಕುಲ್ಯಾಹ್ವಂ: **ಅಭಿಧಾವ,** ೧. ೪. ೧೧); ಪಾದ (ನಿಮ್ಮ ಕಾಲಂ ತೊಳೆವೆಮೆಂದು ಮಹಾದೇವಿ ತಾನೆ ಕಾಲಂ ಕರ್ಚಿ: **ವಡ್ಡಾರಾ,** ಪು. ೭೮. ಸಾ. ೧೧)

**ಕಾಲಕ್ಷೇಪ** – ತಡಮಾಡುವುದು (ಕಾಲಕ್ಷೇಪಂ ಮಾಡಿ ನೀನಿರೆ ದೈತ್ಯೇಂದ್ರಂ ಅಘಯಮಮಂ ನಿನಗೆ ಮಾಟ್ಕುಂ: **ಪಂಪರಾ,** ೧೧. ೧೧೦)

**ಕಾಲಕ್ಷ್ವೇಳ** – ವಿಷಪೂರಿತ (ಜಗಮಂ ನುಂಗಲ್ಕೆ ಎೞ್ತರ್ಪ ರೌದ್ರಾಕರ ಕಾಲಕ್ಷ್ವೇಳಮಂ ನೀಂ ತಳೆದು ಸಲುಪಿದಯ್ ವಿಶ್ವಮಂ ವಿಶ್ವನಾಥಾ: **ಶಬರಶಂ,** ೨. ೧೦)

**ಕಾಲಜ್ಞಾನ** – ಭವಿಷ್ಯಜ್ಞಾನ (ಕಾಲಜ್ಞಾನಮಂ ಕಾಲಜಯಮುಮಂ ಬಲ್ಲ ಪರಮಯೋಗಿಯಂತೆ ತನಗೆ ಆಸನ್ನಕಾಲಾಪಾಯಕ್ಕೆ ಜಯೋಪಾಯಮಂ ಮನದೊಳಗೆ ಬಗೆದು: **ಪಂಚತಂತ್ರ,** ೧೪೪ ವ)

**ಕಾಲಡಿ** – ಪಾದ (ಇವರ ಕಾಲಡಿಗಳಂ ಎಮ್ಮ ತಲೆಗಳೆಂಬ ತಾಮರೆಯ ಪೂಗಳಿಂದರ್ಚಿರ್ಚಿಸಿದೊಡಲ್ಲದೆ ಪಾಪಂ ಪಿಂಗದು: **ವಡ್ಡಾರಾ,** ಪು. ೯೯ ಸಾ. ೧೬)

**ಕಾಲತ್ರಯ** – ಭೂತ, ವರ್ತಮಾನ, ಭವಿಷ್ಯತ್ ಕಾಲಗಳು (ಅಪಗತಕಾಲತ್ರಯಂ ಅನಾಪ್ತಗತಗುಪ್ತಿತ್ರಯಂ: **ಪುಷ್ಪದಂಪು,** ೧೪. ೧೫); ಮೂರು ಹೊತ್ತು (ಕಾಲತ್ರಯ ಋತುಷಟ್ಕ ಉಚಿತಂಗಳಪ್ಪ ಫಲಪ್ರಸವಂಗಳೇಕ ಸಮಯ ಪ್ರಸವಮೆಂತಾದುದೆಂದು ವಿಸ್ಮಯಂಬಟ್ಟು: **ಚಂದ್ರಪ್ರಪು,** ೨. ೭೮)

**ಕಾಲತ್ರಯವೇದಿ** – ಕಾಲತ್ರಯಗಳನ್ನು ತಿಳಿದವನು, ತ್ರಿಕಾಲಜ್ಞಾನಿ (ವೇದವಿದಂ ಕಾಲತ್ರಯವೇದಿ ಬಹುಶ್ರುತಂ .. .. ಪರಹಿತಂ ಪುರೋಹಿತನಕ್ಕುಂ: **ಸೂಕ್ತಿಸುಧಾ,** ೧೬. ೫೩)

**ಕಾಲದಂಡ** – ಯಮನ ದಂಡಾಯುಧ (ಕಾಲದಂಡಪ್ರಚಂಡಮಪ್ಪ ತನ್ನ ಗದಾದಂಡಮಂ ಭುಜಾದಂಡದೊಳ್ ಅಳವಡಿಸಿಕೊಮಡು: **ಗದಾಯು,** ३. ೪೯ ವ)

**ಕಾಲದಂತಕ** – ಪ್ರಳಯ ಕಾಲದ ಯಮ (ಚಾರಿಸಿ ಬಾಳಾಗಮಮಂ ಅವತಾರಂಗೆಯ್ದಂತೆ ಕಾಲದಂತಕನನೆ ಪೋಲ್ತು ಆರುತ್ತುಂ ಕವಿವ ಅದಟರಂ ಓರೊಂದೋರೊಂದೆ ಪೊಯ್ದು ಕೊಂದರ್ ಪಲರಂ: **ಪಂಪಭಾ,** ೧೦. ೮೩)

**ಕಾಲದ್ರವ್ಯ** – [ಜೈನ] ಷಡ್‌ದ್ರವ್ಯಗಳಲ್ಲಿ ಒಂದು (ಜೀವದ್ರವ್ಯ ಪುದ್ಗಲದ್ರವ್ಯ ಧರ್ಮದ್ರವ್ಯ ಅಧರ್ಮದ್ರವ್ಯ ಆಕಾಶದ್ರವ್ಯ ಕಾಲದ್ರವ್ಯಮೆಂಬ ಷಡ್ದ್ರವ್ಯಂಗಳ: **ಸುಕುಮಾಚ,** ३. ३೯ ವ)

**ಕಾಲಪರಿವರ್ತನ** – [ಜೈನ] ಉತ್ಸರ್ಪಿಣೀ – ಅವಸರ್ಪಿಣೀ ಕಾಲಗಳ ಎರಡು ಆವೃತ್ತಿಗಳಲ್ಲೂ ಮೊದಲಿಂದ ಕಡೆತನಕ ಜನನಮರಣ ಗಳನ್ನನುಭವಿಸುವುದು (ಪರಿವರ್ತಿಸುವ ಉತ್ಸರ್ಪಿಣಿ ಅವಸರ್ಪಿಣೀಕಾಲಂಗಳೊಳ್ .. .. ಸಮಯೋತ್ತರ ವೃದ್ಧಿಯಿಂ ಪರಿಸಮಾಪ್ತಮಾಗೆ ನೆಱಮೆಯ್ದಿಸುವುದು ಕಾಲಪರಿವರ್ತನಮೆಂಬುದು: **ಸುಕುಮಾಚ,** ೯. ೬ ವ)

**ಕಾಲಪುರುಷ** – ಕಾಲಕ್ಕೆ ಅಧಿಪತಿಯಾದ ದೇವತೆ, ಯಮದೂತ (ಕಣ್ಬೊಲದೊಳ್ ಸುೞಿವ ಕಾಲಾಯಸ ಕಾಲಪುರುಷನಂ: **ಪಂಪರಾ,** ೧೪. ೧೨೦ ವ)

**ಕಾಲಮುಖ** – ಯಮನ ಬಾಯಿ, ಮೃತ್ಯುಮುಖ (ಪಲಗೆಗಳೆರಡುಂ ತೊಟ್ಟನೆ ಮರ್ಮಪ್ರದೇಶವಂ ಔಂಕುವುದುಂ ಆ ಬಲಿಮುಖಂ ಕಾಲಮುಖಮಂ ಎಯ್ದಿತ್ತು: **ಪಂಚತಂತ್ರ,** ೮೨ ವ)

**ಕಾಲರಾಜ** – ಕಾಲಪುರುಷ (ಕಾಲರಾಜನ ಜಗದ್ಗೃಹಪ್ರವೇಶಕ್ಕೆ ನಿಱಿಸಿದ ಕನಕ ಕಳಶಯುಗಳಮುಮಂ: **ಆದಿಪು,** ೬. ೫೧ ವ)

**ಕಾಲಲಬ್ಧಿ** – [ಜೈನ] ಲಬ್ಧಿಪಂಚಕಗಳಲ್ಲಿ ಒಂದು; ಆಧ್ಯಾತ್ಮಿಕ ಜೀವನದ ಆರಂಭಕ್ಕೆ ಪಕ್ವವಾದ ಕಾಲ ಬರುವುದು (ನಿಮ್ಮ ಮನದಿಂ ಮಿಥ್ಯಾಕಳಂಕಂ ತೆರಳ್ದಿನಿತುಂ ಪೋಗದು ಕಾಲಲಬ್ಧಿ ದೊರೆಕೊಂಡಂದಲ್ಲದೇಂ ಪೋಕುಮೇ: **ಆದಿಪು,** ೨. ೨೨)

**ಕಾಲಸಂಹರ** – ಯಮನನ್ನು ಸಂಹರಿಸಿದವನು, ಶಿವ ಶಿವಾ .. .. ಕಾಲಸಂಹರಾ: **ಶಬರಶಂ,** ೫. ೨೮)

**ಕಾಲಹರ** – ಮರಣವನ್ನು ನಿವಾರಿಸುವವನು (ಕಾಲಹರನುದಯಮಿದಱೊಳ್ ಕಾಲಂಬಾರುತ್ತಿರಲ್: **ಚಂದ್ರಪ್ರಪು,** ೧೨. ३೪)

**ಕಾಲಾಂತ** – ಆಯುಸ್ಸಿನ ಕೊನೆ, ಮರಣ (ಪೊರ್ದಿದಂ ಉರ್ಕಿಂ ನಿಜ ತಾತ ದಿಗ್ವಿಜಯದೊಳ್ ನಿಂದು ಆಂತು ಕಾಲಾಂತಮಂ: **ಪುಷ್ಪದಂಪು,** ೫. ೬೧)

**ಕಾಲಾಂತಕ** – ಕಾಲಸಂಹರ (ಆಗಳ್ ಕುರುಧ್ವಜಿನಿಯುಂ ಅನೇಕ ಶಂಖ ಕಾಹಳ ಭೇರೀ ಪಣವ ಝುಲ್ಲರೀ ಮೃದಂಗ ತೂರ್ಯಂಗಳ್ ಅಂತ ಕಾಲಾಂತಕ ವಿಕಟಾಟ್ಟಹಾಸಂಗಳ್ ಎಂಬಂತೆ ಮೊೞಗೆ: **ಪಂಪಭಾ,** ೧೧. ३३ ವ)

**ಕಾಲಾಂತರ** – ಕಾಲಕ್ರಮೇಣ (ದುಃಖದೊದವಿಂ ಬಾಯ್ವಿಟ್ಟು ಗೋಳಿಟ್ಟು ಪೇಂಕುಳಿಗೊಂಡು ಆದ ವಿಷಾದದಿಂ ಪುೞಿತು ಸತ್ತು ಇತ್ತ ಅಂತೆ ಕಾಲಾಂತರದೊಳ್: **ಸುಕುಮಾಚ,** ೫. ೨೦)

**ಕಾಲಾಗರು** – ಕರಿಯ ಅಗರು (ಕತ್ತುರಿ ಕಾಲಾಗರು .. .. ಎಂಬೀವನಾಂತರ ಸಂಜಾತಮಂ: **ಪುಷ್ಪದಂಪು,** ೫. ೧೦೨)

**ಕಾಲಾಗ್ನಿ** – ಪ್ರಳಯಕಾಲದ ಬೆಂಕಿ (ಕಾಲಾಗ್ನಿಯಂ ಕೀಡಿ ಸುತ್ತುವಂತೆ ಕರ್ಣನಂ ಸುತ್ತಿ ಮುತ್ತಿಕೊಂಡು ಕಣೆಯ ಕಂಪಣ ಮುಸಲ ಮುಸುಂಡಿ ಭಿಂಡಿವಾಳ ತೋಮರ ಮುದ್ಗರ ಮಹಾ ವಿವಿಧ ಆಯುಧಂಗಳೊಳಿಟ್ಟುಂ ಇಱಿದುಂ: **ಪಂಪಭಾ,** ೧೨. ೧೧೮ ವ)

**ಕಾಲಾಗ್ನಿರುದ್ರ** – ಪ್ರಳಯಕಾಲದ ಬೆಂಕಿಯುಗುಳುವ ರುದ್ರ (ರಸೆಯೊಳ್ ಕಾಲಾಗ್ನಿರುದ್ರಂ ಜಲಶಯನದೊಳ್ ಅಂಭೋಜನಾಭಂ ಪೊದಳ್ದು ಆಗಸದಿಂ ಸುತ್ತಿರ್ದ ಅಜಾಂಡೋದರದೊಳ್ ಅಜಂ ಅಡಂಗಿರ್ಪವೋಲ್; **ಪಂಪಭಾ,** ೮. ೮೬)

**ಕಾಲಾಧ್ವ** – ಆಗ್ನೇಯ (ಒಪ್ಪುಗುಂ ಭೀಷ್ಮದಂಷ್ಟ್ರಂ ಅನಂತಂ ರುರುಭೈರವಂ ಹರಪುರೀ ಕಾಲಾಧ್ವ ದಿಗ್‌ದ್ವಾರದೊಳ್: **ಶಬರಶಂ,** ೧. ೫೮)

**ಕಾಲಾನಲ** – ಪ್ರಳಯಕಾಲದ ಬೆಂಕಿ (ಅಂತು ಪೊಱಮಡುವ ಅರಾತಿ ಕಾಲಾನಲನಂ ಕಂಡು ಕಡ್ದುವಂದ ದೊಡ್ಡರೆಲ್ಲಂ ಮುಸುಱೆ: **ಪಂಪಭಾ,** ३. ೬೧ ವ)

**ಕಾಲಾಯಸ** – ಕಪ್ಪು ಲೋಹ, ಕಬ್ಬಿಣ (ಕಾಲಾಯಸದಿಂ ವಿನಿರ್ಮಿಸಿದ ಕಂಠಿಕೆ ಕಾಂಚನ ಮಾಲೆಯಂತೆ ಉಪಾದೇಯಮೆನಿಕ್ಕುಮೇ: **ಪಂಪರಾ,** ೧. ೩೭)

**ಕಾಲಾರಿ** – ಶಿವ (ಕಾಶಿಗೆ ಕಾಲಾರಿಗೆ ಪೋಗಿ ಜಹ್ನುಜಾಮಬುಗಳಿಂದಂ ತುಂಬಿ ಸಹಸ್ರಕುಂಭದಭಿಷೇಕಮಂ ಆಗಿಪೆಂ: **ರಾಜಶೇವಿ,** ೩. ೨೮ ಮತ್ತು ೨೯)

**ಕಾಲಾಹಿ** – ಕೃಷ್ಣಸರ್ಪ (ಕಾಲಾಹಿ ಚಂದ್ರಬಿಂಬಂಮನಾಲಂಬಿಸಿ ತುಡುಕಿದಂತದೇನೊಪ್ಪಿದುದೋ: **ರಾಜಶೇವಿ,** ೧೦. ೭೮)

**ಕಾಲಾಳ್** – ಪದಾತಿ (ಕಾಲಾಳೊಳಂ ಕುದುರೆಯೊಳಂ ಒಳಗಂ ಬರಲಾನೆ ಬಲ್ಲೆಂ: **ಪಂಪಭಾ,** ೫. ೪೩ ವ)

**ಕಾಲಿಕೆ** – ಕಷ್ಮಲ (ಪ್ರಕೃತಿಗಳಗಲ್ಕೆಯಿಂ ಶುಕ್ತಿಕೆಯಿಂ ಪೊಱಮಟ್ಟ ಮೌಕ್ತಿಕಂ ನೀರದ ಮಾಲಿಕೆಯಿಂ ತೊಲಗಿದ ಶಶಿ ಕಾಲಿಕೆಯಿಂ ಬೇರ್ಪಟ್ಟ ಕನಕಮಿರ್ಪಂತಿರ್ದಂ: **ಪಂಪರಾ,** ೧೬. ೮೧)

**ಕಾಲುಡಿ** – ಕಾಲುಮುರಿ (ಬಸವಂ ಕೆಯ್ಯಂ ಪೊಕ್ಕೊಡೆ ಬಸವನ ಕಾಲುಡಿಯೆ ಬಡಿದು ಕುಡಿಯಂ ಬಯ್ವಂ: **ಸಮಯಪ,** ೧೧. ೧೨೮)

**ಕಾಲುರಿಚ** – ಹಳ್ಳಿಗ, ಮೂರ್ಖ (ಅಳಿಗಬ್ಬಮಂ .. .. ಕೇಳಿಸುತ್ತೆ ಕಾಲುರಿಚರ ತೋರ್ಪ ದುಷ್ಕವಿ ಮಹಾಕವಿಮಧ್ಯದೊಳ್ ಒಪ್ಪಲಾರ್ಪನೇ: **ರಾಜಶೇವಿ,** ೧. ೨೩)

**ಕಾಲುಷ್ಯ** – ಕದಡಿದ (ಕಾಲುಷ್ಯ ಸಂಭವಮೇನಲ್ಲವೆ ಮಾದ್ಯತ್ ಇಂದ್ರಿಯಗಜಕ್ರೀಡಾವನಂ ಯವ್ವನಂ: **ಲೀಲಾವತಿ,** ೪. ೫೪)

**ಕಾಲೂರ್** – ಚಿಕ್ಕ ಹಳ್ಳಿ, ಕುಗ್ರಾಮ (ಕಾಲೂರ್ಗಳ ಗಂಡರ ಪೆಂಡಿರ ನಡೆಯ ಉಡೆಯ ನುಡಿಯ ಮುಡಿಯ ಗಾಂಪಿಂಗೆ ಮುಗುಳ್ನಗೆ ನಗುತ್ತುಂ ಅಲ್ಲಿಗಲ್ಲಿಗೆ ಒಡೆದ ಕೆಱೆಗಂ ಅಟಿದ ಆಯತನಕ್ಕಂ ಧನಮನಿತ್ತು ಜೀರ್ಣೋದ್ಧಾರಂಗಳಂ ಮಾಡಿಸುತ್ತುಂ: **ಪಂಪಭಾ,** ೨. ೯೭ ವ)

**ಕಾಲೂಱು** – ನೆಲೆ ನಿಲ್ಲು (ಆ ವಾರಣದ ತೋರಹತ್ತಂ .. .. ರೌದ್ರರಸಮಂ ಕಱೆವ ಕಾರಮುಗಿಲೊಡ್ಡು ಕಾಲೂಱಿದಂತಿರ್ಪುದು: **ಅನಂತಪು,** ೧೩. ೨೦ ವ)

**ಕಾಲೆಡೆ** – ಕಾಲಿನ ಬಳಿ (ಅಂತವರ ಕಾಲೆಡೆಗಳೊಳ್ ನುಗುಟ್ವುಗುಜ್ಜರಿಂ: **ಅಜಿತಪು,** ೪. ೭)

**ಕಾಲ್ಗರ್ಚು** – ಕಾಲು ತೊಳೆ (ಮಿಂದು ಒಲ್ಲಣಿಗೆಯ ಪಿಟೆನೀರಿಂದಂ ಕಾಲ್ಗರ್ಚಿ .. .. ಪಿತೃತುಷ್ಟಿಯನಿಕ್ಕುಮೆಂಬರ್ ಪಾರ್ವರ್: **ಸಮಯಪ,** ೧೧. ೧೨೬)

**ಕಾಲ್ಗಾಪು** – ಪದಾತಿ (ಆದಿತ್ಯಂ ಮಸುಳ್ವನ್ನೆಗಂ ಧ್ವಜಘಟಾಟೋಪಂಗಳಿಂದಂ ಲಯಾಂಭೋದಂಗಳ್ ಕವಿವಂತೆವೋಲ್ ಕವಿವುದುಂ ಕಾಲ್ಗಾಪು ಕಾಲ್ಗಾಪಿನೊಳ್ ಜೋದರ್ ಜೋದರೊಳ್ .. .. ಅಗುರ್ವಪ್ಪನ್ನೆಗಂ: **ಪಂಪಭಾ,** ೧೦. ೯೩); ಬೆಂಗಾವಲು (ಚಾಮರಮಂ ಕನ್ನೆಯರಿಕ್ಕೆ ಲೋಹಖುರವಾಹಂ ಸುತ್ತಿ ಕಾಲ್ಗಾಪಿನೊಳ್ ಬರೆ ಬಂದಂ ಧವಳಾತಪತ್ರದಡಿಯೊಳ್: **ಪಂಪರಾ,** ೨. ೧೧)

**ಕಾಲ್ಗುತ್ತು** – ಕಾಲಿನಿಂದ ಕುಕ್ಕು, ಬೆದಕಿ ಪರೀಕ್ಷಿಸು (ಅವನೀನಾಥನ ಗೆಯ್ದ ಪೊಲ್ಲಮೆಗಂ ಎನ್ನ ಒಳ್ಪಿಂಗಂ ಇಂ ಸಕ್ಕಿಯಾಗಿ ಅವಂ ಈವಂತುಟಂ ಅದಂ ಬಲ್ಲಂತು ಕಾಲ್ಗುತ್ತಿ ನೋಡು: **ಪಂಪಭಾ,** ೯. ೨೬)

**ಕಾಲ್ಗೆಡು** – ಶಕ್ತಿಗುಂದು (ಕಾಗೆಯಂತೆ ಮತಿಯಿಲ್ಲದೆ ರಂಡೆಯಂತೆ ಪತಿಯಿಲ್ಲದೆ ಕಾಲ್ಗೆಟ್ಟನಂತೆ ಗತಿಗೆಟ್ಟು: **ಧರ್ಮಾಮೃ,** ೨, ೬೭ ವ)

**ಕಾಲ್ಗೋ** – ಕಾಲುಜೊಡಿಸು (ನಿಱಿಸಿ ಕಾಲ್ಗೋದಂತೆಯುಂ ನೆರ್ಮಿದಂತೆಯುಂ ಇರ್ಕುಂ ಜಿನಬಾಲರೂಪಮೆರ್ದೆಯೊಳ್ ಮುಂಕಂಡಗಲ್ದಿರ್ದರಾ: **ಶಾಂತಿಪು,** ೧೦. ೮೫); ವಾಹನವನ್ನೇರು (ಬಂದಂ ಧವಳಾತಪತ್ರದಡಿಯೊಳ್ ಕಾಲ್ಗೋದು ಗಂಧಾಂಧ ಸಿಂಧುರಮಂ ಮೆಯ್ಗಲಿ ವಜ್ರಬಾಹುಮಹಿಪಂ: **ಪಂಪರಾ,** ೨ ೧೧); ಹಿಂಬಾಲಿಸು (ವೈಹಾಳಿಯೊಳ್ ದಿಗ್ಗಜಂ ಬೆಂಬಟಿಯೊಳ್ ಕಾಲ್ಗೋದೊಡೀ ಕಟ್ಟಣಕದ ಮದದೊಳ್ ಕರ್ಬೊಲರ್ಕಾವ ರೂಪಮಂ ಸುಟಿದೋಡಿತ್ತಾದೊಡೆ: **ಅನಂತಪು,** ೨. ೩೦)

**ಕಾಲ್ವಟ್ಟೆ** – ಕಾಲುದಾರಿ (ಕಾಡೊಳಿರ್ದ ಕಲ್ವಟ್ಟೆಗಳೆಲ್ಲಂ ಎಯ್ದುವುವು ನೀರ್ನೆಲೆಯಂ: **ಸೂಕ್ತಿಸುಧಾ,** ೧೦. ೯೩)

**ಕಾಲ್ವಳ್ಳಿ** – ಸಣ್ಣ ಹಳ್ಳಿ (ನೆಯ್ದಿಲ ಪೂವಿಂ ಪೊಲನೆತ್ತುವೆತ್ತ ಬೆಳಸಿಂದ ಊರೂರ ಕಾಲ್ವಳ್ಳಿಗಳ್ ನೆಲೆಮಾಡಂಗಳಿಂ ಒಪ್ಪೆ ಬೇಱ್ ನೆಲೆವೀಡಾಯ್ತು ಅಂಗಜಂಗೆ ಆ ನೆಲಂ: **ಮಲ್ಲಿನಾಪು,** ೨. ೧೧)

**ಕಾಲ್ವಟಿ** – ಸಾರಣೆ (ಪನ್ನೀರ ನೀರ್ದಳಿಪದಿಂ ಕತ್ತುರಿಯ ಕಾಲ್ವಟಿಗಳಿಂ ಕಪ್ಪುರವಳುಕಿನ ಕಡೆಗಳಿಂ: **ಶಾಂತೀಶ್ವಪು,** ೧೦. ೧೧೭ ವ)

**ಕಾಲ್ವಟಿಗೊಳ್** – ಸಾರಣೆ ಮಾಡು (ಪೂವಲಿಗೆಯ್ವ ರಂಗವಲಿಯಿಕ್ಕುವ ಕಾಲ್ವಟಿಗೊಳ್ವ ಬಾಯಿನಂದೀವುವ: **ಆಚವರ್ಧ,** ೭. ೩)

**ಕಾಲ್ವೊನಲ್** – ಕಾಲುವೆಯ ಪ್ರವಾಹ (ಕಣೀಶಾಗ್ರಭಾಗದಿಂ ಭೋರನೆ ಸೋರ್ವ ಪಾಲ್ವೊನಲೆ ಕಾಲ್ವೊನಲಾಗೆ: **ಕುಸುಮಾಕಾ,** ೨. ೪೫)

**ಕಾಲ್ವೊಱೆ** – ಕಾಲಿನ ಹೊರೆ, ಭಾರ (ಸೊರ್ಕಾನೆಗಳ ಕಾಲ್ವೊಱೆಗೆ ನೆಲನೊಂದೆಸೆಗೊಲೆದು: **ಕಬ್ಬಿಗಕಾ,** ೨೮೮)

**ಕಾವ** – [ಕಾಮ] ಮನ್ಮಥ (ಕಾವನ ಅಂಬು ಅವಱ ಬಿಣ್ಪಿನೊಳ್ ಒಯ್ಯನೆ ಜೋಲ್ದವೋಲೆ ತಾಂಬೂಲ ಕರಂಕವಾಹಿನಿಯ ಮೇಲೆ ನೆಱಲ್ದಿರೆ ಬಾಲೆ ಲೀಲೆಯಿಂ: **ಪಂಪಭಾ,** ೪. ೪೩)

**ಕಾವಂ** – ಕಾಪಾಡುವವನು (ಕಾವರೆ ಕಣೆಗೊಳ್ವೊಡೆ ಅಬ್ಬೆ ಬಾರಿಪರೊಳರೇ: **ಯಶೋಧಚ,** ೩. ೧೯)

**ಕಾವಡಿ** – ಕಂಬಿ (ಕಡು ಮುದದಿಂ ಧೂಪದ ಕಾವಡಿಯಂ ಪೊತ್ತಿರದೆ ಚೆಚ್ಚರಂ ಬರೆ: **ಉದ್ಭಟಕಾ,** ೧೧. ೧೦೩)

**ಕಾವಡಿಗಾಱ** – ಕಂಬಿ [ಅಡ್ಡೆ] ಹೊರುವವನು (ಕಾವಡಿಗಾಱನಂತೆ ಪಲ್ಲಂ ಸುಲಿವರಂತೆ ಮುನ್ನಿನ ದರ್ಶನಮುಂ ನಿಶ್ಶಂಕೆಯೆಂಬೆರಡುಮಂ ಲೇಸು ಮಾಡುವುದು: **ಧರ್ಮಾಮೃ,** ೨. ೨ ವ)

**ಕಾವಣ** – [ಕಾಯಮಾನ] ಚಪ್ಪರ, ಹಂದರ (ಪೊಸದಳಿರ ಕಾವಣದೊಳಗೆ ನೃಪೇಶ್ವರನ ಘರ್ಮಜಳಕಣಗಣಮಂ ಕಳೆದುದು .. .. ಜಳಾರ್ದ್ರಸಮೀರಂ: **ಆದಿಪು,** ೧೧. ೭೪)

**ಕಾವರಿಸು** – ಕಾತರಿಸು (ಈಕಿಱುಗೂಸಂ ಪೆತ್ತ ತಾಯ್ ಕಾವರಿಸುವ ಇನಿಯಳಂ: **ವರ್ಧಮಾಪು,** ೩. ೭೩)

**ಕಾವಲಿ** – ಬಾಣಲಿ, ಹುರಿಯುವ ಹೆಂಚು (ಸಾಗರಮೊಂದು ಕಂಕಣದಿಂ ಉರ್ವರೆ ಕಾವಲಿಯಿಂ .. .. ಕರಂ ಕಿಱಿಯವಾದುವು ಕಣ್ಗೆ ಗುಣಾವಲೋಕನಂ: **ನೇಮಿನಾಪು,** ೬. ೪)

**ಕಾವಳಗೊಳ್** – ಕತ್ತಲಲ್ಲಿ ಸೇರು, ಅಡಗಿಕೊ (ದಿವಸೋಳ್ಕಸಂಕುಳಂ ತೊಟ್ಟನೆ ಬಿಟ್ಟುವು ಉಣ್ಮಿದುದು ಕಾವಳಗೊಂಡುವು ರಕ್ತವೃಷ್ಟಿಗಳ್: ಜಗನ್ನಾವಿ, ೧೨. ೪)

**ಕಾವು–** ದಂಟು, ದೇಟು (ಇದು ಭೂಪದ್ಮದ ಕರ್ಣಿಕಾವಿಳಾಸಂ ಮೇಣ್ ಇಂತಿದು ಆಕಾಶಪದ್ಮದ ಕಾವು ಎಂಬಿನಂ: **ಅಜಿತಪು,** ೧೧. ೬); ಹಿಡಿಕೆ (ಎಡದ ಕೆಯ್ಯೊಳ್ ಪೊಳೆಪ ಚೆಂಬೊನ್ನ ಕಾವಿನ ಚಾಮರಂ: **ಪಂಪಭಾ,** ೧೩. ೧೦೮)

**ಕಾವ್ಯ** – ಕಬ್ಬ, ಕವಿತೆ (ಇರೆ ಶಬ್ದಾರ್ಥಂಗಳ್ ತತಪ್ರತೆಯಿನದು ಕಾವ್ಯಂ: **ಕಾವ್ಯಾವಲೋ,** ೪೩೦); ಶುಕ್ರಾಚಾರ್ಯ (ಕಾವ್ಯಂಗೆ ವಾಚಸ್ಪತಿಗೆ ಸುಮತಿಯಂ ಕೂರ್ಮೆಯಿಂ ನೀಲಕಂಠಾ: **ಶಬರಶಂ,** ೨. ೧೬)

**ಕಾವ್ಯಪ್ರಯೋಗ** – ಕಾವ್ಯರಚನೆ, ಕಾವ್ಯೋಕ್ತಿಗಳನ್ನು ಪ್ರಯೋಗಿಸುವುದು, ಉಲ್ಲೇಖಿಸುವುದು (ಕುಱಿತೋದದೆಯುಂ ಕಾವ್ಯಪ್ರಯೋಗಮತಿಗಳ್: **ಕವಿರಾಮಾ,** ೧. ೩೮)

**ಕಾವ್ಯಬಂಧ** – ಕಾವ್ಯದ ಶಯ್ಯೆ(ಬೆರಸಿರೆ ಸಮಾಸದೊಳ್ ಬಂಧುರಮಾಗದು ಕಾವ್ಯಬಂಧಮೆಂದುಂ ಕೃತಿಯೊಳ್: **ಕವಿರಾಮಾ,** ೨. ೯೨)

**ಕಾಶ** – ಕಾಂತಿ (ಶಂಖ ಶಾಂಕ ಕಾಶ ನಿಕಾಶ ಸುವಿನಿರ್ಮಳ ರುಚಿರವರ್ಣನಂ ಸಲೆ ತಳೆದಂ ಹಳಿ: **ವರ್ಧಮಾಪು,** ೩. ೮); ಜೊಂಡುಹುಲ್ಲು (ಆಗಳ್ ಉಭಯಪಾರ್ಶ್ವದೊಳಂ ಚಾಮರಗ್ರಾಹಿಣಿಯರ್ಕಳ್ ಕಾಶಕಣಿಶಂಗಳಿಂದೆಸೆವ ಶರಲಕ್ಷ್ಮಿಯಂ ನೆನೆಯಿಸೆ: **ಪಂಪರಾ,** ೩. ೮೩ ವ)

**ಕಾಶಾಂಬರ** – ಕಾವಿಯ ಬಟ್ಟೆ (ಅಂಬರವಧು ಮಿತ್ರವಿಯೋಗಂ ಬೇಗದೊಳ್ ಆಗಲ್ ಆಗಳ್ ಉಬ್ಬೆಗದಿಂ ಕಾಶಾಂಬರಮಂ ತಳೆದುದು ತಾನೆಂಬಿನಂ ಆ ಸಂಜೆಗೆಂಪಿನಿಂ ರಂಜಿಸುಗುಂ: **ಶಾಂತೀಶ್ವಪು,** ೧೧. ೧೬)

**ಕಾಶ್ಮೀರ** – ಕುಂಕುಮ ಕೇಸರಿ (ಏನಲೆದುದೊ ಬೈತುಗದಂತಿರೆ ತಲೆಗೇಱುವ ಕುಸುಮನಿಚಯಂ ಕಾಶ್ಮೀರಂ: **ಆದಿಪು**. ನರಸಿಂ, ೧೧. ೧೨೬)

**ಕಾಶ್ಮೀರರಾಗ** – ಕುಂಕುಮಕೇಸರಿಯ ಬಣ್ಣ (ಆ ಪ್ರಸ್ತಾವದೊಳ್ ಅಂತಃಪುರದ ಪೂಸಿದ ಕಾಶ್ಮೀರರಾಗಮುಂ ಉಟ್ಟ ಕೌಸುಂಭಾಂಬರರುಚಿಯುಂ: **ಆದಿಪು,** ೧೨. ೧ ವ)

**ಕಾಶ್ಯ** – ಪ್ರಕಾಶ, ತೇಜಸ್ಸು (ತೇಜೋವಾಚಕಮಪ್ಪ ಕಾಶ್ಯಮಂ ಪಾಲಿಸುವುದಱಿಂ ಕಾಶ್ಯನುಂ: **ಆದಿಪು,** ೮. ೭೫ ವ); ಹೆಂಡ

**ಕಾಶ್ಯಪೀ** – ಭೂಮಿ (ಜಲಧಿವ್ಯಾವೃತ ಕಾಶ್ಯಪೀ ಜನಮನೋಬ್ಜಾನಂದನಂ ಕಂದನಂ: **ಕುಸುಮಾಕಾ,** ೬. ೬೩)

**ಕಾಷ್ಠ** – ಕಟ್ಟಿಗೆ (ತಱಿದೊಡೆ ಕಡಿದೊಡೆ ಸೀಳ್ದೊಡೆ ಪೊಱಮಡುವುದೆ ಕಿಚ್ಚು ಕಾಷ್ಠದಿಂ ಪೊಸೆಯಲೊಡಂ ಪೊಱಮಡುವುದು: **ಯಶೋಧಚ,** ೪. ೨೩)

**ಕಾಷ್ಠೆ** – ಒಂದು ಕಾಲ ಪರಿಮಾಣ (ಹದಿನೆಂಟು ನಿಮೇಷದಿನಂತದೊಂದು ತಾಂ ಕಾಷ್ಠೆ: **ಅಭಿಧಾವ,** ೧. ೨. ೨)

**ಕಾಷ್ಠಾಂಬರ** – ದಿಗಂಬರ (ಅಪ್ರೌಢರಂತಿರೆ ಕಾಷ್ಠಾಂಬರನಾಗಿ ಮುಟ್ಟುಗಿಡೆ ವಂಶಂಗೆಟ್ಟು: **ಸುಕುಮಾಚ,** ೬. ೪೭)

**ಕಾರ್ಷ್ಣ್ಯ** – ಕಪ್ಪು ಬಣ್ಣ (ನೀಂ ಪರಪುಟ್ಟನಾದೆ ನೋಡೀಗಳಿದರ್ಕೆ ನಿನ್ನ ತನುಕಾರ್ಷ್ಣ್ಯಮೇ ಸೂಚಕಂ: **ಜಗನ್ನಾವಿ,** ೧೭. ೪೧)

**ಕಾಸಟ** – [ಕಾರ್ಪಾಸಪಟ] ಹತ್ತಿಯ ಬಟ್ಟೆ (ಸಾಸಿರ ಪೊಂಗೆಯ್ದುಂ ಚೀ ಕಾಸಟಮೆಂದು ಒಂದು ಲಕ್ಕಗೆಯ್ದುದಿದರ್ಕಂ ಮಾಸರಂ ಉಡಲೆಂದು ಅಧಿಕ ವಿಳಾಸದಿಂದ ಉಡಲಿಕ್ಕಿ ನೆಱೆಯೆ ಬಿಯಮಂ ಮೆಱೆದಂ: **ಪಂಪಭಾ,** ೩. ೪೪)

**ಕಾಸರಪತಿ** – ಕಾಡು ಕೋಣ (ನೀರಡಸಿದ ಕಾಸರಪತಿ ಕೇರೆಯಂ ಅಗದೊಸರೆಗೆತ್ತು ನೆಕ್ಕುವುದು: **ನೇಮಿನಾಪು,** ೩. ೪೫)

**ಕಾಸಾರ** – ಕೊಳ (ಮುಂದೆ ಅಪ್ಸರೋನಿವಹಂ ಮಾಡಿದುದು ಇಂದ್ರನಚ್ಚಿಗೆ ನಭಕಾಸಾರಮಂ ಸಾರಮಂ: **ಅನಂತಪು,** ೫. ೪೧)

**ಕಾಸು** – ಬಿಸಿಮಾಡು, ಕರಗಿಸು (ಕಾಸು–ದಾಹೇ: **ಶಬ್ದಮದ,** ಧಾ ೬೮೯); ತಾಮ್ರದ ನಾಣ್ಯ (ಹಾಸು – .. .. ವಿವರ್ಧೇ ಚ: **ಶಬ್ದಮದ,** ಧಾ ೬೮೯); ಅಡ್ಡೆ, ಕಾವಡಿ (ಕೋಟಿಲಿಂಗಂಗಳಂ ಅನವರತಂ ಕಾಸಿನೊಳ್ ಪೊತ್ತ ಬಾಣಾಸುರನೆಂಬಂ ಪ್ರೀತಿಯಿಂ ಪೂಜಿಸುತಿರೆ: **ಸಮಯಪ,** ೧೦. ೫೮)

**ಕಾಸೆ** – ಕಚ್ಚೆ (ಇವನಾನುಟ್ಟಪೆನೆಂಬುವ ಮುನ್ನ ಉಳ್ಳುಟ್ಟುದುಮಂ ಸುಲಿದು ದೇಸೆಯಂ ಕಾಸೆಯುಮಂ: **ನೇಮಿನಾಪು,** ೮. ೭೮); ಕಾವಿ ಬಟ್ಟೆ (ಪೊಟಲಿಂ ಪೊಱಮಟ್ಟು ಪೋಗಿ ಪನ್ನೆರಡು ವರುಷದೊಳಗೆ ಮಹಾಪದ್ಮನಂ ಕಿಡಿಸಿದಲ್ಲದೆ ಕಾಸೆಗಳಂ ಕಳೆಯೆಂ: **ವಡ್ಡಾರಾ,** ಪು ೧೮೬, ಸಾ ೬)

**ಕಾಸ್ಯ** – ಬಡವ (ತಮ್ಮೊಳ್ ಸಮಶ್ರೀಯಾಂತನಪ್ಪ ನಿಸ್ತಾರಮಪ್ಪ ಕಾಸ್ಯಮಂಗೆ ಕನ್ಯಾಭೂಮಿ ಸುವರ್ಣ ಹಸ್ತಿ ಅಶ್ವ ರತ್ನಾದಿಗಳಂ ಕುಡುವುದು: **ಅಜಿತಪು,** ೧೨. ೧ ವ)

**ಕಾಹಳ** – ದೊಡ್ಡ ಭೇರಿ, ನಗಾರಿ (ಆಗಳ್ ಕುರುಧ್ವಜಿನಿಯುಂ ಅನೇಕ ಶಂಖ ಕಾಹಳ ಭೇರೀ ಪಣವ ಝಲ್ಲರೀ ಮೃದಂಗ ತೂರ್ಯಂಗಳ್ ಅಂತ ಕಾಲಾಂತಕ ವಿಕಟಾಟ್ಟಹಾಸಂಗಳ್ ಎಂಬಂತೆ ಮೊಳಗೆ: **ಪಂಪಭಾ,** ೧೧. ೩೩ ವ)

**ಕಾಹಳಿಕಾ** – ಕಾಹಳ (ಕಳಕಂಠ ಕಾಹಳಿಕಾ ರವಂ ವಿಜೃಂಭಿಸೆ ಶುಕವಂದಿವೃಂದಂ ಪೊಗೞೆ: **ಶಬರಶಂ,** ೨. ೪೨ ವ)

**ಕಾಹಳೌಘ** – ಕಹಳೆಗಳ ಸಮೂಹ (ಕಿವಿಯಂ ಮುಟ್ಟಿತ್ತು ವಿವಿಧಗತಿಪ್ರೋಚ್ಚಳತ್ ಕಾಹಳೌಘಂ: **ಆದಿಪು,** ೧೪. ೯೪)

**ಕಾಹುರ** – ಪ್ರವಾಹ (ಗಂಧರ್ವವಾಹಕಸಮೂಹದ ಸಾಹಸದಾಹವದ ಮೋಹರಮಂ ಕಾಹುರದ ಮೋಡಿಯಿಂ ನೋಡಿ: **ರಾಜಶೇವಿ,** ೬. ೬೫ ವ)

**ಕಾಳಕೂಟ** – ಕಡು ವಿಷ (ಅಗಲ್ಕೆ ಮುಳಿಸು ಎಂಬೆರಡುಂ ಗಡ ಕಾಳಕೂಟಂ: **ಆದಿಪು,** ೧೨. ೨೭)

**ಕಾಳರಕ್ಕಸ** – ಕಪ್ಪುಬಣ್ಣದ ರಾಕ್ಷಸ (ಕಾರೋ ಮೇಣ್ ಕಾಳರಕ್ಕಸನೋ ಪೇೞೆನೆ ಬಂದು ತಾಗೆ: **ಪಂಪಭಾ,** ೭. ೨೭)

**ಕಾಳಭಾಗ** – ಆನೆಯ ಜಘನಭಾಗ (ಅಂಸಳ ಕಾಳಭಗನುಂ .. .. ಸಪ್ತದ್ವಾಸ್ಥಿತನುವುಮಪ್ಪ ವಿಜಯಪರ್ವತಗಜೇಂದ್ರಂ: **ಆದಿಪು,** ೧೨. ೫೬ ವ)

**ಕಾಳರಾಜ** – ಸಾವು (ಜರೆ ಬಂದೊಟ್ಟೈಸೆ ಮಾಣ್ದಿರ್ದಳಿಪೆನಗಿದೆ ಮುಂ ಸಾಲದೇ ಕಾಳರಾಜಂ ಬರೆಯುಂ ಮಾಣ್ದಿರ್ಪನೇ: **ಆದಿಪು,** ೨. ೪೯)

**ಕಾಳರಾತ್ರಿ** – ಮಾರಿ (ಕಡುಮುಳಿದು ಸೌಮಿತ್ರಿ ಲಯ ಸಮಯದ ಕಾಳರಾತ್ರಿಯಂತೆ ಸಾಗರಾವರ್ತಮಂ ಜೇವೊಡೆಯೆ: **ಪಂಪರಾ,** ೭. ೧೧೫ ವ)

**ಕಾಳವಟ್ಟ** – ಕರ್ಣನ ಬಿಲ್ಲಿನ ಹೆಸರು (ಶಲ್ಯನಂ ರಥಮಂ ಎಸಗಲ್ವೇಟ್ಟು ದಿವ್ಯಾಸ್ತ್ರಂಗಳ ದೊಣೆಗಳಂ ಎರಡುಂ ದೆಸೆಯೊಳಂ ಬಿಗಿದು ಕಾಳವಟ್ಟದ ಬಿಲ್ಲಂ ಕೆಂದಳದೊಳ್ ಅಮರೆ ಪಿಡಿದು ನೀವಿ ಜೇವೊಡೆದಾಗಳ್: **ಪಂಪಭಾ,** ೧೨.

೧೩೫ ವ); ಕತ್ತಿಯುದ್ಧದ ಒಂದು ವರಸೆ (ಅವಟಂತದ ಮುಳಿತಂ ಕಾಳವಟ್ಟ ಉಬ್ಬರಮೆನಿಪ್ಪ ಬಹುವಿಧದೇಱುಂ ಜವನುಂಡು ಕಾಱೆ ಕಡಲಿಟ್ಟವೊಲಾಗಿರೆ: **ವರ್ಧಮಾಪು,** ೪. ೭೫)

**ಕಾಳಸುತ** – ಧರ್ಮರಾಯ (ಅರ್ಜುನನಂ ತತ್ ಕಾಳಸುತಂ ಅಟ್ಟೆ ಪೋಗಿ ವಿಶಾಳಬಳಂ ಕಾದಿ ತಂದೊಪ್ಪಿದಿಂ: **ಕರ್ಣನೇಮಿ ,** ೯. ೩೦)

**ಕಾಳಸೆ** – ಸೇರುವಿಕೆ, ಬೆಸುಗೆ (ಅನಿಲಪಥಂ ಧಾರಿಣೀಚಕ್ರದೊಳ್ ಕಾಳಸೆಗೊಂಡಿತ್ತೆಂಬಿನಂ: **ಆದಿಪು,** ೧೪. ೯೫); ಗಾಢತೆ (ಸೊಪ್ಪಡಗಿರ್ದ ಕಾದಲನ ಕಾಳಸೆಗಾಱೆ ಪೊಕ್ಕ ಮೆಯ್ಯೊಪ್ಪಿರೆ: **ಲೀಲಾವತಿ,** ೧೩. ೧೭): ಮೇಳವಾಗುವಿಕೆ, ಹೊಂದಾವಣೆ (ಭಣಿತೆ ಬೆಡಂಗು ಕಾಕು ಖಚರಂ ಗಮಕಂ ತಿರುಪಿಂಪು ನಿಣ್ಪು ನೇವಣೆ ಕಣೆ ಬಣ್ಣದೊಡ್ಡವಣೆ ಕಾಳಸೆ ಬೈಸಿಕೆ ಪಟ್ಟಿಕಾಂತಿ ಕೊಂಕಣುಕನುಜಾಯಿ ಗೀತಿ ಜತಿ ಜೋಕೆ ನಯಂ ಬಹುಲಾಯಿ ದೇಸೆ ಪೆಲ್ಲಣೆ ಕಳೆಯೆಂಬಿವಂ ಮೆಱೆದು ಬಶಜಿಸಿದಂ ಮುರವೈರಿ ವಾಸಮಂ: **ಜಗನ್ನಾವಿ,** ೫. ೩)

**ಕಾಳಸೆಗೊಳ್** – ಅಂಟಿಕೊಳ್ಳು (ಕರ್ಪು ಕಾಳಸೆಗೊಂಡ ತಮಾಳಮಾಳೆಗಳ: **ಅನಂತಪು,** ೧. ೯೦ ವ)

**ಕಾಳಹಸ್ತ** – ಯಮನ ಕೈ, ಮೃತ್ಯುಹಸ್ತ (ಕಾಳಹಸ್ತಮಲ್ಲದೆ .. .. ಕೇಶಹಸ್ತಮಕ್ಕುಮೆ: **ಗದಾಯು,** ೧. ೬೭)

**ಕಾಳಾಂಬುವಾಹ** – ಕರಿಯ ಮೋಡ (ಕಾಳಾಂಬುವಾಹಂ ಒರ್ಮೊದಲೆ ಕಳೆವ ತೆಱದಿಂ: **ಶಾಂತಿಪು,** ೧೧. ೧೨)

**ಕಾಳಾಗರು** – ಕರಿಯ ಅಗಿಲು (ಅತಿಬಹುಳ ಕಾಳಾಗರುಧೂಪ ಧೂಮಾಮೋದದೊಳ್: **ಆದಿಪು,** ೫. ೨೨ ವ)

**ಕಾಳಾನಳ** – ಪ್ರಳಯಕಾಲದ ಬೆಂಕಿ (ಕೆಳೆಯುಂ ಗುಱೆಯುಂ ಗೊಟ್ಟಿಯುಂ ಅಳವಿಗೆ ಪಿರಿದಾಗೆ ತನಗೆ ದುರ್ಯೋಧನನೊಳ್ ಮುಳಿಸುಂ ನೋವುಂ ಕಲುಷಮುಂ ಅಳುಂಬಂ ಎನೆ ತನಗೆ ಅರಾತಿಕಾಳಾನಳನೊಳ್; **ಪಂಪಭಾ,** ೨. ೫೮)

**ಕಾಳಾಯಸವಳಯ** – ಕಬ್ಬಿಣದ ಬಳೆ (ಕಾಳಾಯಸವಳಯ ಭಯಂಕರಕರದ್ವಯಮುಂ: **ಆದಿಪು,** ೧೩. ೪೫ ವ)

**ಕಾಳಿಂದಿ** – ಯಮುನಾ ನದಿ (ಕಂಸಂ ತನ್ನ ಪುಟ್ಟಿದಂದೆ ಕಾಳಿಂದಿಯ ಮಡುವಿನೊಳ್ ಬಿಟ್ಟುದುಮಂ ಪೂರ್ವಭವದ ವೈರಮುಮಂ ನೆನೆದು: **ಚಾವುಂಪು,** ಪು. ೪೦೭. ಸಾ. ೧೩)

**ಕಾಳಿಂದೀಸೋದರ** – ಯಮ (ಏಕಾಂಗದಿಂ ಯುದ್ಧಕೇಳಿಗೆ ಬಂದ ಕಾಳಿಂದೀಸೋದರರನಂ ನೋಡಿ; **ಜಗನ್ನಾವಿ,** ೭. ೨೫)

**ಕಾಳಿಕೆ** – ಕಲ್ಮಷ (ಮುಗಿಲ ಮಱೆ ಪೋದ ಚಂಡಾಂಶುಗೆ ಕಾಳಿಕೆ ಪೋದ ಪೊಂಗೆ ಪೋಗೆ ಪೋದ ಕೃಶಾನುಗೆ ಸಮನಾದಂ ಮೋಹಂ ಬಗೆಯಿಂ ಪೊಱಮಟ್ಟು ಪೋಗೆ ದಶರಥರಾಮಂ: **ಪಂಪರಾ,** ೧೬. ೫೭);

**ಕಾಳಿಮ** – ಕಪ್ಪುಬಣ್ಣ (ಮನಸಿಜನ ವಶೀಕರಣ ಅಂಜನಪುಂಜದ ಪುತ್ರಿಕಾಳಿಯೆನೆ ಕಾಳಿಮಮಂ ತನಿಗೆದಱುವ ತನುರುಚಿ ಮೋಹನಮಯಮಾಗಿರ್ದರ್ ಎಸೆವ ಶಬರಾಂಗನೆಯರ್: **ಶಾಂತಿಪು,** ೩. ೭೯)

**ಕಾಳಿಯ ನಾಗ** – ಕೃಷ್ಣಸರ್ಪ (ವಿಷಂ ಒಳ್ಳೆಗುಳ್ಳೊಡಂ ಅದು ಒಳ್ಳೆಯೆ ಕಾಳಿಯ ನಾಗನಾಗದು: **ಪಂಪಭಾ,** ೧೨. ೪೧)

**ಕಾಳು** – ಕೆಟ್ಟ (ಕಾಳಾಗಮಮಂ ಪಿಡಿದು ಪುಸಿನುಡಿವ ಧೂರ್ತರ ಪೆಡತಲೆಯಿಂ ತೆಗೆವರ್ ಇರ್ಕುಟಿಯೊಳ್ ನಾಲಗೆಯಂ: **ಪಾರ್ಶ್ವನಾಪು,** ೬. ೯೧)

**ಕಾಳೆ** – ಕಹಳೆ (ರುಂಜೆಯ ದನಿ ದಿಕ್ಪಾಲರನಂಜಿಸೆ ತಳ್ತೊಗೆವ ಕೋಡ ಕಾಳೆಯ ದನಿ ದಿಕ್ಕುಂಜರಮಂ ಬೆದಱಿಸೆ ನಭಮಂ ಜೇವೊಡೆಯುಲಿಪು ಸುತ್ತುಮುತ್ತಿತ್ತಾಗಳ್: **ಪಂಪರಾ,** ೪. ೫೬)

**ಕಾಳೋದಕವಾರ್ಧಿ** – [ಜೈನ] ಪ್ರಳಯಕಾಲದಲ್ಲಿ ಉಕ್ಕಿಬರುವ ಧಾತಕೀ–ಪುಷ್ಕರ ದ್ವೀಪಗಳ ನಡುವಣ ಸಮುದ್ರ (ಆಗಟಿಾ ಭಾಗಂ ಲವಣಾಬ್ಧಿಗೆ ಗುಣ್ಪಿನ ತಿಣ್ಪು ನೆಗೆಟ್ಟೆ ಕಾಳೋಧಕವಾರ್ಧಿಗೆ ನೀರ ತೆಳ್ಪು ದುಗ್ಧಾಬ್ಧಿಗೆ ದೊರೆ ಸರಿ ಪೋಲ್ವೆಯೆಂಬೆನಱೆಯಲ್ ಪೊಗಟಲ್: **ಶಾಂತಿಪು,** ೩. ೫)

**ಕಾಳೋರಗ** – ಕೃಷ್ಣಸರ್ಪ, ಕರಿನಾಗ (ಕಡಂಗಿ ಕಾಳೋಗರನಂ ಕೂಸು ಪಿಡಿವಂತೆ .. .. ಪಿಡಿದಂ .. .. ಸತೆಯಂ ದಶಕಂಠಂ: **ಪಂಪರಾ,** ೯. ೧೬೧)

**ಕಾಳ್ಗೆಡೆ** – ಹೀಯಾಳಿಸು (ಅನ್ಯಕಾವ್ಯರುಚಿರಪದ್ಯಮಂ ಪಠಿಸಿಸತ್ಕವಿನಿರ್ಮಿತ ಪದ್ಯಂ ಇಂತಿದಕ್ಕೊರೆಯೇ ಎನುತ್ತೆ ಕಾಳ್ಗೆಡೆವನಂ ನಗದಿರ್ಪರೇ ಬಲ್ಲ ಕಬ್ಬಿಗರ್; **ರಾಜಶೇವಿ,** ೧. ೩೬)

**ಕಾಳ್ಪುರ** – ಪ್ರವಾಹ (ಮುಂಬಿಡದೊಕ್ಕು ಕಾಳ್ಪುರಮಾದ ಮದೋದಕದೊಂದುಗೂಡಿ ರಕ್ತಾಂಬು: **ರಾಜಶೇವಿ,** ೬. ೭೪)

**ಕಾಱ್** – ಕಾರು, ಕಾಱು, ಕಕ್ಕು (ಇಂತಿದೇಕೆ ಮಧುವಂ ನೆಱೆ ಕಾಱೆದ ನೈದಿಲಂದದಿಂ ನೆರದುವು ನೀಳ್ದ ಕಣ್ಪೊಂಬರ್ಗಳ್: **ನೇಮಿನಾಪು,** ೧. ೧೧೩)

**ಕಾಱೆ** – ಕೊರಳಲ್ಲಿ ಧರಿಸುವ ಒಂದು ಆಭರಣ (ಕಾಱೆಯಂತೆ ಕೊರಲಂ ಪತ್ತಿ ಕೊಯ್ವರ್ ಗರಗಸದಂತೆ ಮೆಯ್ಯಂ ಕೊಱೆವರ್: **ಧರ್ಮಾಮೃ,** ೪೩ ವ)

**ಕಾಟ್** – ಕೆಟ್ಟದ್ದು (ಕಾಟಾದ ವಾಟ್ತೆಗೊಂಡೊಡೆ ಪಾಟಾದುದು ಮನಮುಂ ಎರ್ದೆಯುಂ ಏನಂ ಪೇಟ್ವೆಂ: **ಪಂಪಭಾ,** ೪. ೬೬)

**ಕಾಟ ನಾಯ್** – ಕಾಡುನಾಯಿ (ಕಾಟನಾಯಂತೆ ವಿಶಾಖನಂದಿ ತಿರಿಗುಂ ಪುರವೀದಿಗಳೊಳ್ ನಿರಂತರಂ: **ವರ್ಧಮಾಪು,** ೨. ೩೦)

**ಕಾಟ್ಟಬ್ಬ** – ಕೀಳು ಕಾವ್ಯ (ಕ್ರಮದಿಂ ಪೇಟದೆ ಬಾಯ್ಗೆ ವಂದುದಂ ಪೇಟ್ವುದಱಿಂ ಕಾಟ್ಟಬ್ಬಮೆನಿಕುಂ ವೇದಂ: **ಸಮಯಪ,** ೧೧. ೧೦)

**ಕಾಟ್ಗಬ್ಬು** – ಕಾಡು ಕಬ್ಬು (ಕಬ್ಬು ಎಂಬ ಆಭಿಧಾನಂ ಕಾಟ್ಗಬ್ಬಿಂಗಂ ನೆಗೆಟ್ದೆ ಮೆಲ್ವ ಕಬ್ಬಿಂಗಂ: **ಧರ್ಮಾಮೃ,** ೧. ೧೪೪)

**ಕಾಟ್ಗರಡ** – ಕಾಡು ಹುಲ್ಲು (ಮಸಗಿರ್ದ ಲೋಹಿತಾಶ್ವ ಪ್ರಸರಂ ಕಾಟ್ಗರಡಮಲ್ಲಂ ಮೆಯೆ: **ಜಗನ್ನಾವಿ,** ೧೭. ೬೩)

**ಕಾಟ್ಗಿಚ್ಚು** – ಕಾಡು ಕಿಚ್ಚು, ದಾವಾನಲ (ಅನ್ನೆಗಂ ಕಾಟ್ಗಿಚ್ಚು ಮೂವಳಸಂ ಬಳಸಿಯುಂ ತಗುಳ್ದು ತಮ್ಮಂ ಸುಡೆ: **ವಡ್ಡಾರಾ,** ಪು ೧೭೪, ಸಾ ೬)

**ಕಾಟ್ತುಱು** – ಕಾಡು ದನ (ಕಾಟ್ತುಱು ಮಸಗಿದಂತೆ .. .. ಓಜೆಯೊಳೆರಡುಂ ಪಡೆಗಳ ಪಡೆವಳರ್ಕಳ್ ಕುರುಕ್ಷೇತ್ರದೊಳ್ ಚಿತ್ರಿಸಿದಂತೆ ಒಡ್ಡಿ ನಿಂದಾಗಳ್: **ಪಂಪಭಾ,** ೧೦. ೫೧ ವ)

**ಕಾಟ್ಪಿತ್ತೆ** – ಅಡವಿಯ ಹತ್ತಿ, ಕರಿಯ ಹತ್ತಿ (ಕಾಟ್ಪಿತ್ತೆಯ ಬತ್ತಿಯೊಳಂ ಕೌಱೆಣ್ಣೆಯೊಳ್ ಪೊತ್ತಿಸಿದ ದೀಪಂಗಳುಂ: **ಲೀಲಾವತಿ,** ೭. ೬೮ ವ)

**ಕಾಟ್ಪಲಸು** – ಕಾಡು ಹಲಸು (ಕಾಡೆಮ್ಮೆಯುಂ ಊರೆಮ್ಮೆಯುಂ ಕಾಟ್ಪಸುಂ ಊರ ಪಲಸುಂ: **ಧರ್ಮಾಮೃ,** ೯. ೪೧ ವ)

**ಕಾಟ್ಪುರ** – ಕಾಡಿನ ತೊರೆ, ಪ್ರವಾಹ (ಕೆಲರ್ ಕುದುಕುಳಿ ರಕ್ಕಸರ್ ಬಿಸುಗೆಗಳ್ವೆರಸು ಉಗ್ರ ಮಹಾಗಜಂಗಳಂ ಚದುರ್ಗಿಡೆ ನುಂಗಿ ಬಿಕ್ಕಿ ಕುಡಿದರ್ ಬಿಸುನೆತ್ತರ ಕಾಟ್ಪುರಂಗಳಂ: **ಪಂಪಭಾ,** ೧೨. ೮)

**ಕಾಟ್ಪುರಂಗೊಳ್** – ಉಕ್ಕಿ ಹರಿ, ದೊಡ್ಡ ಪ್ರವಾಹವಾಗಿ ಹರಿ (ಬಾಷ್ಪಂ ಕಾಟ್ಪುರಂಗೊಡ ವಕ್ತ್ರಸರೋಜಂ: **ಕುಸುಮಾಕಾ,** ೧೩. ೧೦೬)

**ಕಾಟ್ಬೆಕ್ಕು** – ಕಾಡಿನ ಬೆಕ್ಕು (ಕಾಟ್ಬೆಕ್ಕಿಗೂಡುವವೋಲ್ ತುಯ್ಯಲಂ: **ಅನಂತಪು,** ೧. ೬೦)

**ಕಾಟ್ಬೆಱಣೆ** – ಕಾಡ ಸೆಗಣಿ (ಕಾಟ್ಬೆಱಣೆಗಳಂ ತೊಟ್ಟನೆ ಪಱೆಸೀರೆಗಳಂ ಬೆಟ್ಟಾಗಿರೆ ಗುಹೆಯ ಬಾಗಿಲೊಳ್ ತೀವಿಸಿದಂ; **ಧರ್ಮಾಮೃ,** ೯. ೧೧೬)

**ಕಾಟ್ಮನ** – ಕೀಳು ಮನಸ್ಸು (ನಿನ್ನ ಕಾಟ್ಮನದ ಕೆಯ್ವಿಡಿದಾಕೆಯುಂ ಎಲ್ಲಿಂ ಎಂದವಳ್ ನುಡಿವುದುಂ: **ಲೀಲಾವತಿ,** ೧೪. ೩೪)

**ಕಾಟ್ವಟ್ಟೆ** – ಕಾಡು ದಾರಿ (ಕಾಟ್ವಟ್ಟೆಯ ಬೆಂಚರವಟ್ಟೆಗೆ ತಲೆಯುಟ್ಟು ಬರ್ಪ ಕಾಡೆಮ್ಮೆಯ: **ಮಲ್ಲಿನಾಪು,** ೭. ೨ ವ)

**ಕಾಟಿಸ್ವಾನಲ್** – ಕಾಟ್ಪುರ (ಕೆನ್ನೀರ್ಗಳ ಕಾಟಿಸ್ವಾನಲ್ ಮಸಗಿ ಕೂಡಿ: **ಕಬ್ಬಿಗಕಾ,** ೨೭೮)

**ಕಿಂಕರಣ** – ಕಿಂಕರತೆ, ಆಳಾಗಿರುವಿಕೆ (ಪುಷ್ಕರಂ ನೆಗಟ್ವ ಕಿಂಕಿರಣಂ ಬೆರಸಿದ್ರವಂದಿತಂಗೆಱಗಿದ ದಿವ್ಯದಂತಿ: **ಅನಂತಪು,** ೫. ೨೮)

**ಕಿಂಕರಭಾವ** – ಸೇವಕನಂತೆ ಇರುವುದು (ಈತನೊಳ್ ತೊಟ್ಟ ಕಿಂಕರಭಾವಂ ಎಮಗಕ್ಕಿಗೊಟ್ಟು ಮಡಗೂಱುಣ್ಬಂದಮಂ ಪೋಲದೇ: **ಆದಿಪು,** ೧೪. ೩೨)

**ಕಿಂಕಿರಾತ** – ಗೋರಂಟಿ (ಸುಳಲಿತ ಕಿಂಕಿರಾತ ನವಮಂಜರಿಯಂತಿರೆ ಕರ್ಣಪಾಳಿ ಕೆಂದಳಿರ ತುಱುಂಬಿನಂತೆಸೆಯೆ ಸೋರ್ಮುಡಿ: **ಲೀಲಾವತಿ,** ೧೩. ೧೪೧)

**ಕಿಂಕಿರಾತಶೇಖರ** – ಕೆಂಪು ಗೋರಂಟಿಯ ಹೂದಂಡೆ (ಪುರಜನಮತ್ತೆಯಿಂ ಮುಡಿವ ಕೂಡೆ ತುಱುಂಬುವ ಕಿಂಕಿರಾತಶೇಖರರಜದಿಂದೆ ಚಾರುಪಟವಾದದ ಧೂಳಿಯ ಪಟದಿಂದೆ: **ಆದಿಪು,** ೭. ೧೧೪)

**ಕಿಂಕರ್ತವ್ಯತಾಮೂಢೆ** – ದಿಕ್ಕು ತೋಚದಿರುವವಳು (ಕಟ್ಟಲೆ ಕವಿಯೆ ಕಿಂಕರ್ತವ್ಯಮೂಢೆಯಾಗಿ ತರಳಿಕೆಯಂ ಇಂತೆಂದೆಂ: **ಕಾದಂಬ,** ೫. ೧೩೦ ವ)

**ಕಿಂಕಿಣಿ** – ಕಿರುಗೆಜ್ಜೆ (ಮಧುಕರನಿಕರಂಗಳೆಂಬ ಕಿಂಕಿಣಿಗಳ ನುಣ್ಚರಂಗಳಿಂದೆಸೆವ ಅಲರುಯ್ಯಲೆಗಳುಂ: **ಕಾದಂಬ,** ೭. ೨೧ ವ)

**ಕಿಂಕಿಣಿಕಾ** – ಕಿಂಕಿಣಿ, ಕಿರುಗೆಜ್ಜೆ (ಅಳಿಕುಳಝೇಂಕೃತೀಪ್ರಚುರ ಕಿಂಕಿಣಿಕಾರಣಿತಂ .. .. ಕೋಕಿಳರವಶೃಂಗಂ ಎಸೆದಂ ರಸಾಲಭೈರವಂ: **ರಾಜಶೇವಿ,** ೯. ೫೫)

**ಕಿಂಕಿಣೀಕ್ವಣಿತ** – ಕಿರುಗೆಜ್ಜೆಯ ನಾದ (ಸಿಂಜಾನಮಣಿ ಕಿಂಕಿಣೀಕ್ವಣಿತದೊಳ್: **ಶಾಂತಿಪು,** ೧೯. ೭೭ ವ)

**ಕಿಂಕಿಣೀದಾಮ** – ಕಿರುಗೆಜ್ಜೆಗಳುಳ್ಳ ನಡುಕಟ್ಟು (ಕಟಿತಟದೊಳ್ ಮಾಣಿಕ್ಯಮಣಿ ಕಿಂಕಿಣೀದಾಮಮಂ ತಗುಳ್ಚಿ: **ಆದಿಪು,** ೭. ೧೦೫ ವ)

**ಕಿಂಕಿಣೀರವ** – ಕಿಂಕಿಣಿ ರವ (ಮಣಿ ನೂಪುರಯುಗಮಣಿ ಕಿಂಕಿಣಿರವಂ ನೆಗಟೆ: **ಅಜಿತಪು,** ೫. ೭೩)

**ಕಿಂಕಿಣೀರುತಿ** – ಕಿಂಕಿಣಿ ರವ (ಮಂಜುಮಂಜೀರ ಕಂಕಣ ಕಿಂಕಿಣೀರುತಿ ಪೊಣ್ಮೆ: **ಜಗನ್ನಾವಿ,** ೩. ೫೨)

**ಕಿಂಕಿರಾತ** – ಅಶೋಕವೃಕ್ಷ (ವಿನುತರಚಿತ ಚಂಚತ್ ಕಿಂಕಿರಾತಂ ಕಿರಾತಂ: **ಅಜಿತಪು,** ೯. ೩೨); ಗೋರಂಟಿ (ಮಾತೇನೋ ಕಿಂಕಿರಾತಂ ಪೂತಂತೆ ಕಿರಾತಸೇನೆ ಪುಣ್ಪಡೆ ಶರಸಂಘಾತದ ಸವಿದೋರ್ಕುಂ: **ಪಂಪರಾ,** ೪. ೪೯)

**ಕಿಂಕಿರಿವೋಗು** – ಕಿರಿಕಿರಿಗೊಳ್ಳು, ಸಿಡಿಮಿಡಿಗೊಳ್ಳು (ಪರಿದನಿಬರುಂ ಒಡನೆ ಅಡರ್ದಿರೆ ಮಮರನಂ ಮುಟ್ಟಲ್ಕೆ ಪಡೆಯದೆ ಅನಿಬರ್ಗಂ ಕಿಂಕಿರಿವೋಗಿ ಭೀಮಸೇನಂ ಪಿಡಿದಲ್ಗೆ ಪಣ್ವೊಲ್ ಅನಿಬರುಂ ಉದಿರ್ದರ್: **ಪಂಪಭಾ,** ೨. ೩೧)

**ಕಿಂಕುರ್ವಾಣ** – ಸೇವಾಭಾವ (ಕಾಣಿಯಂ ಕಿಂಕುರ್ವಾಣದಿಂ ಈವರಲ್ಲರ್: **ಸಮಯಪ,** ೪. ೩೩)

**ಕಿಂಕುರ್ವಾಣಂಗೆಯ್** – ಸೇವೆ ಮಾಡು (ಪೆಱರ್ಗೆ ಕಿಂಕುರ್ವಾಣಂಗೆಯ್ವುದುಂ ಸವತಿಯತು ಗೆಯ್ವ ಅವಮಾನಕ್ಕೆ ಮಾನಭಂಗಂ ಸೈರಿಸುವುದುಂ: **ಚಾವುಂಪು,** ಪು. ೩೮೦. ಸಾ. ೧)

**ಕಿಂಕುರ್ವಾಣತೆ** – ಅಸಹಾಯ ಪರಿಸ್ಥಿತಿ, ದಿಗ್ಭ್ರಮೆ (ಟಂಕಾರಾಲ್ಪಧ್ವನಿಯಿಂ ಕಿಂಕುರ್ವಾಣತೆಯನೆಯ್ದುವರ್ ಮುನಿಗಳ್: **ಗಿರಿಜಾಕ,** ೮. ೩೬)

**ಕಿಂಕುರ್ವಾಣಪ್ರವಣ** – ಸೇವಾತತ್ಪರ (ಕಿಂಕುರ್ವಾಣಪ್ರವಣರರೆಬರ್ ಬರ್ಪಿನಂ ಕಾದು .. .. ಅರ್ಘ್ಯಮಂ ಯಕ್ಷಂ ಕೊಟ್ಟಂ: **ಪಂಪರಾ,** ೩. ೧೩೧)

**ಕಿಂ ಕೇನ ಸಂಗತಂ** – ಯಾವುದು ಯಾವುದಕ್ಕೆ ಸಂಬಂಧ (ಕಿಂಕೇನ ಸಂಗತಂ ಎಂಬಂತಿರೆ ಪೇೞ್ದು ಧರ್ಮಕಥೆಯಂ ಪಾಪಕ್ಕೆ ಪಕ್ಕಪ್ಪುದೇ: **ಅಜಿತಪು,** ೧. ೯೩)

**ಕಿಂಕೊಟಿ** – ಕೆಸರು (ಕರಿಘಟೆಯನುಡಿಯೆ ಬಡಿಬಡಿದೆತ್ತಂ ಕಿಂಕೊಟಿಮಾಟ್ಟುದುಂ: **ಪಂಪಭಾ,** ೧೧. ೧೦೨); ಹಿಂಸೆ, ತೊಂದರೆ, ಸಂಕಟ (ಬೆಂಕೊಳೆ ಕಳಿಂಗರಾಜನ ನೂಂಕಿದ ಕರಿಘಟೆಯಂ ಉಡಿಯೆ ಬಡಿಬಡಿದೆತ್ತಂ ಕಿಂಕೊಟಿ ಮಾಟ್ಟುದುಂ ಉಱದೆಚ್ಚಂ ಕರ್ಣಂ ನಿಸಿತಶರದಿಂ ಎರಡುಂ ಕರಮಂ: **ಪಂಪಭಾ,** ೧೧. ೧೦೨); ಅಳಿವು, ಧ್ವಂಸ (ಕೆಡೆದ ರಥಂಗಳ್ ಕಿಂಕೊಟಿಯಾಗಿ ಪೆತ್ತ ಕೆನ್ನೆತ್ತರೊಳ್ ಮೆತ್ತಿ ರೂಪಱೆಯಲಾಗದಂತಿರ್ದ ವೀರಭಟರಗುರ್ವಂ ಪಡೆಯೆ: **ಪಂಪಭಾ,** ೧೨. ೬೦ ವ)

**ಕಿಂಚಾನರ್ಘ್ಯಂ ಯದವಸರೇ ದತ್ತಂ** – ಸಕಾಲದಲ್ಲಿ ಕೊಟ್ಟ ಯಾವುದೇ ಅರ್ಘ್ಯವು ಗುರಿ ತಲುಪುತ್ತದೆ (ಮುಂಚುವುದು ಎರವೆನಂ ಈವಂ ಕಿಂಚಾನರ್ಘ್ಯಂ ಯದವಸರೇ ದತ್ತಂ ಎನುತ್ತುಂ ಚಲದಿನೀವುದಲ್ಲದೊಡೇಂ ಚಾಗಿಯೇ: **ಲೀಲಾವತಿ,** ೬. ೫೮)

**ಕಿಂಚಿತ್ಕರ** – ಅಲ್ಪ, ಸಣ್ಣ ವಿಷಯ (ಚರಿತಾರ್ಥರ್ ಆವ ಕಿಂಚಿತ್ಕರವಂ ಅನ್ಯಮೆನುತ್ತಂ ಆತ್ಮಗತದೊಳ್ ಬಗೆವರ್: **ಕಾದಂಬ,** ೧೦. ೮೬)

**ಕಿಂಚುಳಕ** – ಎರೆಹುಳು (ಕುಳೀರಾರ್ಭಕಸಂಘಂ ಪ್ಲವಂ ಕಿಂಚುಳಕಚಯಮಿರಲ್ ತೋರ್ಕುಂ ಅಂಭೋನಿನಾದಂ: **ಉದ್ಭಟಕಾ,** ೧. ೩೭)

**ಕಿಂಜಲ್ಕ –** ಕೇಸರ, ಹೂವಿನ ಕುಸುರು (ತೋಱಿತ್ತು ಕೊಳಂ ಪರಿವಿಕಸಿತ ಕನಕಕಂಜ ಕಿಂಜಲ್ಕಪುಂಜ ಪಿಂಜರಿತಜಳಂ: **ಪಂಪಭಾ,** ೮. ೩೮)

**ಕಿಂಪಾಕ** – ಒಂದು ವಿಷದಹಣ್ಣಿನ ಮರ, ಕಾರಸ್ಕರ ವೃಕ್ಷ (ಪಾಕದೊಳತಿವಿಷಮಂ ಕಿಂಪಾಕಫಳಪ್ರತಿಮಂ ಅಖಿಳವಿಷಯಸುಖಂ: **ಆದಿಪು,** ೪. ೭೪)

**ಕಿಂಪಾಕಪರಿಪಾಕ –** ಕಿಂಪಾಕದ ಪರಿಣಾಮ, ಕೆಟ್ಟ ಪರಿಣಾಮ (ಇದನವಜ್ಞೆಗೆಯ್ವುದುಂ ನಿರಾಕರಿಸುವುದುಂ ಕಿಂಪಾಕಪರಿಪಾಕನೀಕಾಶಂ: **ಶಾಂತಿಪು,** ೪. ೯೮ ವ)

**ಕಿಂಪುರುಷ –** ಕುದುರೆಯ ತಲೆ ಮತ್ತು ಮನುಷ್ಯನ ದೇಹದ ದೇವತೆ, ಕಿನ್ನರ (ಕಿನ್ನರರ್ ಇನ್ನಾರ ಮಱೆಯಂ ಪುಗುವಮೆನೆಯುಂ ಕಿಂಪುರುಷರ್ ಕಾಪುರುಷರಂತೆ ಬಾಯಂಬಿಡೆಯುಂ: **ಪಂಪಭಾ,** ೫. ೮೮ ವ)

**ಕಿಂ ಮಿತ್ರಂ ಯತ್ ನಿವರ್ತಯತಿ ಪಾಪಾತ್ –** ಮಿತ್ರ ಯಾರು, ಪಾಪದಿಂದ ಯಾರು ತಿರುಗಿಸುವನೋ ಅವನು: (ಕೆಮ್ಮಗೆ ಬಾಳಂ ಕಿಟ್ಟಿಯ್ ಕಿಂ ಮಿತ್ರಂ ಯತ್ ನಿವರ್ತಯತಿ ಪಾಪಾತ್ ಎಂದಾಂ ಮಾಣಿಸದೊಡೆ ದೇವ ನಿನಗೆ ದುರಿತಶತಂಗಳ್: **ಯಶೋಧಚ,** ೪. ೪೫)

**ಕಿಂರಾಜ** – ಚಿಲ್ಲರೆ ರಾಜ, ಅನಾಮಧೇಯ ರಾಜ (ರಾಜವತಿಯಾತ್ತು ಧರೆ ಕಿಂರಾಜರ್ ಪರಿಪಾಲಿಸುತ್ತುಮಿರೆ: **ಅಜಿತಪು,** ೯. ೮)

**ಕಿಂವಾರ್ತೆ –** ಯಾರ ಸಮಾಚಾರ (ತ್ಯದಾದಿಗೆ: ಕಿಂವಾರ್ತಾ [ಕಿಂವಾರ್ತೆಎಂದಾರ ವಾರ್ತೆ ಎಂಬರ್ಥಂ]; **ಶಬ್ದಮದ,** ೯೧ ಪ್ರ)

**ಕಿಂಶುಕ –** ಮುತ್ತುಗ (ವಾರಣರಕ್ತಸಿಕ್ತಮೃಗರಾಜಯುಗಕ್ಕೆ ನವ ಪ್ರಸೂನರಾಗಾರುಣ ಕಿಂಶುಕ ದ್ರುಮಯುಗಕ್ಕೆ .. .. ಅಣ್ಮಿ ಕಾದಿದರ್ ಕೌರವರಾಜನುಂ ಕುರುಕುಲಾಂತಕನುಂ: **ಗದಾಯು,** ೮. ೧೭)

**ಕಿಕ್ಕಿಱಿ –** ಕಿಕ್ಕಿರಿ, ದಟ್ಟವಾಗು (ತೋಳ ಮೊದಲ್ಗೆ ತೀವಿ ಕಿಕ್ಕಿಱಿದ ಕುಚಕ್ಕೆ ಕಣ್ಬರಿದು: **ಅನಂತಪು,** ೧. ೮೩)

**ಕಿಕ್ಕಿಱಿಗಿಱಿ –** ದಟ್ಟೈಸು (ಸಿಡಿಲ್ದ ಬಾಳ ಮೊನೆಯಂಬಿನ ತಿಂತಿಣಿಯೊಳ್ ತಗುಳ್ದು ಕಿಕ್ಕಿಱಿಗಿಱಿದಿರ್ದ ಕೊಳ್ಗುಳದೊಳಂ ನಡೆವೀ ನಡೆಗೆಂತು ನೋಂತೆಯೋ: **ಪಂಪಭಾ,** ೧೩. ೫೨)

**ಕಿಗ್ಗಟ್ಟು** – ಕಿರಿಯ ಕಟ್ಟು (ಬಡಿಕೋಲ್ ಕಿಗ್ಗಟು ಹಾಸಂ ಶುನಕವಿತತಿ ಹೇರಿಟ್ಟಿ .. .. ಒಪ್ಪೆ .. .. ನಡೆದುದು ಉದ್ಯತ್ ಕಿರಾತಪ್ರಪಂಚಂ: **ಗಿರಿಜಾಕ,** ೧. ೭೯)

**ಕಿಚ್ಚು –** ಬೆಂಕಿ (ಕೀಲೊಳೆ ಕಿಚ್ಚು ಪುಟ್ಟಿ ಭೋರ್ಗರೆದು ಉರಿದಂತೆ: **ಪಂಪಭಾ,** ೭. ೧೬)

**ಕಿಚ್ಚೇಟಿಟ್ –** ಬೆಂಕಿ ಹೊತ್ತಿಕೊ (ಕಿಚ್ಚೆದ್ದೊಡೆ ಬಾವಿ ತೋಡುವವಂ: **ಸಮಯಪ,** ೬. ೯೦)

**ಕಿಟ** – ಕಾಡು ಹಂದಿ, ಎಕ್ಕಲ (ಅದಿರದೆ ಇದಿರೇಱುವ ಎಕ್ಕಲವಂದಿಯಂ ಕಂಡು ಕಿಟಿ ಕಾದ್ರವೇಯಸೌಪರ್ಣಂ: **ಲೀಲಾವತಿ,** ೬. ೧೪ ವ)

**ಕಿಟ್ಟ –** ಲೋಹಗಳ ಕಿಲುಬು, ತುಕ್ಕು (ಮುಟ್ಟಿದೊಡೆ .. .. ಪುಟ್ಟಂ ಕೀಲಿಗನಪ್ಪಂ ಕಿಟ್ಟಂ ನಿರ್ಮಾಲ್ಯಂ ಎಂಬರ್ ಇದು ಬಿಸವಂದಂ: **ಸಮಯಪ,** ೮. ೧೪)

**ಕಿಟ್ಟಳ –** ಸೊಕ್ಕು, ಮದ (ಕಟ್ಟಾನೆಗೆ ಕಿಟ್ಟಳಮಾದುದೇಮಾನೆಯುಂ ಇದಿರ್ವಪ್ಪುದನಾರ್ಪಡೆವರೆನೆ: ನೇಮಿನಾಪು, ೮. ೯೪ ವ)

**ಕಿಟ್ಟು –** ತಾಗು, ಸೋಂಕು, ಸ್ಪರ್ಶ (ಚರಣದ್ವಯದೊಳ್ ಮುನ್ನೆಂದುಂ ನೆಲನಂ ಕಿಟ್ಟಿಯಱಿಯದೊಂ ಕಠಿಣಭೂಮಿಯೊಳ್ ನಡೆದೊಡೆ: **ವಡ್ಡಾರಾ,** ಪು ೨೯, ಸಾ ೯)

**ಕಿಡಕಿ** – ಜಾರೆ (ಕಡುಬಸನದಿಂದೆ ಕಿಡಕಿಯರೊಡನಾತ್ತಿರ್ಪವಂಗಂ .. .. ಅಟ್ಟೆಯೇ ಜಿನಧರ್ಮಂ: **ಸಮಯಪ,** ೧೫. ೪೬)

**ಕಿಡಿ –** ಬೆಂಕಿಯ ಚೂರು (ಕಿಚ್ಚುಂ ಕಿಡಿಯುಮಾಗಿ ಕಾದುತ್ತಿರೆ: **ಧರ್ಮಾಮೃ,** ೧. ೧೫೫ ವ)

**ಕಿಡಿಗುಟ್ಟು –** ಕಿಡಿ ಹಾರಿಸು (ಎರಡುಂ ಕಿಡಿಗುಟ್ಟಿ ಸಿಡಿಲ್ ಸಿಡಿಯೆ ಪೋರ್ದುವು: **ಪಂಪಭಾ,** ೧೧. ೨೨)

**ಕಿಡಿವಣ್ಣ –** ಕಿಡಿಯ ಬಣ್ಣ, ಕೆಂಪು ಬಣ್ಣ (ಕನಲ್ದ ಕಿಡಿವಣ್ಣದ ಕಣ್: ಚಂದ್ರಪ್ರಪು, ೯. ೯೩)

**ಕಿಡಿವಿಡು –** ಕಿಡಿ ಸೂಸು (ಕಿಡಿವಿಡೆ ಪಳಂಚುವ ಕಯ್ದುಗಳ ಕರ್ಕಶ ಖಣತ್ಕೃತಂಗಳು: **ಆಚವರ್ಧ,** ೧೧. ೪೭ ವ)

**ಕಿಡು –** ಕೆಡು (ಹಿರಣ್ಯಗರ್ಭಬ್ರಹ್ಮರಿಂ ತಗುಳ್ದು ಅವ್ಯವಚ್ಛಿನ್ನಮಾಗಿ ಬಂದ ಸೋಮವಂಶಂ ಈಗಳ್ ಎಮ್ಮ ಕುಲಸಂತತಿಗಂ ಆರುಮಿಲ್ಲದೆ ಎಡವಱಿದು ಕಿಡುವಂತಾಗಿರ್ದುದು: **ಪಂಪಭಾ,** ೧. ೮೪ ವ)

**ಕಿಡುಕ** – ಕೆಡುಕ (ಪವಿತ್ರಾತ್ಮನೆನಿಪ್ಪ ನರಂ ಕಿಡುಕಂ ಗಡ ಪೊಲೆಯನಂದದಿಂ ಪೇಸದೆಸಪಂ ಉತ್ತಮನೆ ಗಡಂ: **ಸಮಯಪ,** ೧೩. ೨೭)

**ಕಿಡುತರ್ –** ಕ್ರಮವಾಗಿ ಕಳೆದುಹೋಗು, ನಿವಾರಣೆಯಾಗು (ಕಿಡುತಂದುದು ಮನದಱಿಯಮೆ ನುಡಿಯ ತೊದಳ್ ಪಿಂಗೆಪೋಯ್ತು: **ಚಂದ್ರಪ್ರಪು,** ೪. ೨)

**ಕಿಡೆ ನುಡಿ –** [ಕೆಲಸ] ಕೆಡಿಸುವ ಮಾತಾಡು (ಕುಡುವಂ ಗುರು ಪಡೆವರ್ ಪೆಱರ್ ಎಡೆಯೊಳ್ ನೀಮಾರ್ಗೆ ಇದೇಕೆ ಕಿಡೆನುಡಿದಪಿರ್: **ಆದಿಪು,** ೯. ೧೦೭)

**ಕಿಣ –** ಘರ್ಷಣೆಯಿಂದಾದ ಚರ್ಮದ ದಡ್ಡು, ಗಾಯದ ಗುರುತು (ಮಣಿಭೂಷಣ ಭರದಿಂ ತನು ಕಿಣಮಪ್ಪುದದೇಕೆ ನಿನ್ನ ನಿರ್ಮಲ ಗುಣ ಭೂಷಣಮಂ ದಯೆಗೆಯ್ ಪಡೆವೆಂ ಪ್ರಣಯಮಂ ಅಪವರ್ಗ ಲಕ್ಷ್ಮಿಗೆ ಅದಱಿಂದರುಹಾ: **ಪಂಪರಾ,** ೭. ೪೩)

**ಕಿಣಕರ** – ದಡ್ಡುಗಟ್ಟಿಸುವಂತಹ (ವಪುಃ ಕಿಣಕರಮಂ ನಿರರ್ಥಮಮರ್ತ್ಯತೆಯೊಳ್ ಸಲೆ: **ಚಂದ್ರಪ್ರಪು,** ೪. ೮೨)

**ಕಿಣಭ್ರಾಜತ್** – ಜಡ್ಡುಗಟ್ಟಿದ (ಕರಾಳ ಚಾಪಚಟುಳಂ ಸದ್ಬಾಣತೂಣೀರಬದ್ಧಾಳಂಬಂ ಗುಣಕೃಷ್ಟಕಿಣಭ್ರಾಗತ್ ಭುಜಂ: **ಪುಷ್ಪದಂಪು,** ೮. ೪೩)

**ಕಿಣಿ –** ಹಲ್ಲಿನ ಕೊಳೆ (ನಿಚ್ಚಂ ಕತ್ತುರಿಯೊಳ್ ಮೀವಾತನೆ ವಿಷ್ಟದ ಮಲಮಂ ಪೊತ್ತಿರ್ಪಾ ಪಲ್ಲಂ ನಿಚ್ಚಂ ಸುಲಿವಾ ಚೆನ್ನಿಗನ್ನೈ ಕಿಣಿವೆರಸಿರ್ಪಾ: **ಹರಿವಂಶ,** ೧೪. ೧೪ ವ)

**ಕಿಣೀಕೃತ** – ಜಿಡ್ಡುಗಟ್ಟಿದ (ನಂಟರ್ ನಿಮಗೆಮ್ಮಿಂದಗ್ಗಳಮಾರ್ ಸಮಸ್ತಸುರಮಕುಟಮಣಿ ಕಿಣೀಕೃತಚರಣಾ: **ಆದಿಪು,** ೯. ೯೯)

**ಕಿತ –** ಮೋಸ (ಕಿತ ದೇವತೆಗೇಕೆ ಪೇಟ್ ಅರಸಿ ಗಂಡಂ ಬೇಡಿಕೊಂಡೆನ್ನ ಪೆಂಡತಿಗಿತ್ತೆ ಪುಟಿತೊಂದು ಪೆಣ್ಣಂ: **ನೇಮಿನಾಪು,** ೭. ೫೦)

**ಕಿತವ** – ಜೂಜುಗಾರ, ಮೋಸಗಾರ (ಅಗ್ನಿಮುಖನೆಂಬ ಪರದಂಗಂ ಆತನ ಪರದಿತಿ ಶಕುನಿಗಂ ಮೃದುಮತಿವೆಸರ

ಸುತನಾಗಿ ಕಿತವನಾಗೆ ಪೋಱಮಡಿಸಿ ಕಟೆದು ಪೋಗಿ: **ಪಂಪರಾ,** ೧೫. ೪೭ ವ)

**ಕಿತ್ತನ್** – ಚಿಕ್ಕವನು, ಸಣ್ಣವನು (ಮನೆಯನಿವಂ ಮನೋಭವನಿವಂ ಪೊಸಸುಗ್ಗಿಯೊಳ್ ಆದ ಅದೊಂದು ಕಿತ್ತಂ ಇವಂ: **ಪಂಪಭಾ,** ೪. ೯೭)

**ಕಿತ್ತಂಬು** – ಕಿರಿದಾದ ಬಾಣ (ಅಂಬರಮೆಲ್ಲಂ ಅಂಬಿನೊಳೆ ಪೂಟೆ ಮಹೀಭುಜರ್ ಎತ್ತಂ ಎಚ್ಚ ಕಿತ್ತಂಬುಗಳ್ ಎತ್ತಂ ಅವ್ವಳಿಸೆ: **ಪಂಪಭಾ,** ೧೧. ೪೨)

**ಕಿತ್ತಡ** – ಅಸಹ್ಯಕರ (ನುಡಿ ಕಿತ್ತಡವೆನಿಸದೆ ನೇರ್ಪಡುಗಿಡದೆ ನರೇಂದ್ರನಾಜ್ಞೆಯಿಂದಿರ್ಪುದಿದಂ ಕಡೆಗಣಿಸೆ ಬಟೆಕ್ಕಣ್ಣನ ತುಡುವ ಶಿಲೀಮುಖದೊಳುಂಟೆ ಮುಖದಾಕ್ಷಿಣ್ಯಂ: **ಪಂಪರಾ,** ೭. ೮೧)

**ಕಿತ್ತಡಿ** – ಚಿಕ್ಕ ಪಾದ (ಪಡೆದುವೆ ಸಮುನ್ನತಿಯಂ ಮಡದಿಯ ಪಾದಾಶ್ರಿತಂಗಳಾಗಿಯುಂ ಇಂತೀ ಮಡಮುಂ ಬೆರಲ್ಗಳುಂ ಕಿತ್ತಡಿಯುಂ: **ಪುಷ್ಪದಂಪು,** ३. ೨೯); ಋಷಿ, ಮುನಿ (ಈಗಳ್ ಸಿವನೆಂಬ ದುಟ್ಟಗೊರವಂ ಮಂಜುವೆಟ್ಟಮಂ ಗೊಟ್ಟಂ ಮಾಡಿ ಕಿತ್ತಡಿಗಳಂ ಮರುಳ್ವಡೆಗಳಂ ಕೂಡಿಕೊಂಡು .. .. ಮೆಯ್ಯಱಿಯದಿರ್ಪಂ: **ಕಬ್ಬಿಗಕಾ,** ೧೧೪ ವ)

**ಕಿತ್ತನಿವ** – ಕಿರುಕುಳ, ಪೀಡೆ (ಕಾರಣಮಿಲ್ಲ ಜಗದ್ವ್ಯಾಪಾರಂ ಪರಮಂಗೆ ನಿಮ್ಮ ಕಿತ್ತನಿವಮನಿದೇಂ ದೂರಂ ಯುಕ್ತಾಯುಕ್ತವಿಚಾರಂ ವಿಷಯಾರ್ಥಿಗೆಂಬುದಂ ಮಾಡುವಿರೇ: **ಆದಿಪು,** ೯. ೧೦೨)

**ಕಿತ್ತಯ್ಯ** – ಚಿಕ್ಕ ಒಡೆಯ, ಮರಿ ಸ್ವಾಮಿ (ಕಿತ್ತಯ್ಯಂಗಳನೊಡಗೊಂಡು ಬಂದು ಪಕ್ಕದಿರ್ದು ಪಾನಿಗಟ್ಟಿ ಮಾರ್ಗಮಂ ತೋಱೆ ಮಗುೞೆ ಬಿಜಯಂಗೆಯ್ಯಿಂ ಎನೆ: **ವಡ್ಡಾರಾ,** ಪು ೮೧, ಸಾ ೧)

**ಕಿತ್ತಲಗು** – ಬಿಚ್ಚುಗತ್ತಿ (ಮಗಮಗಿಸಿತ್ತು ಕತ್ತುರಿಯ ಕಿತ್ತಲಗು; **ಲೀಲಾವತಿ,** ೨. ೫೬)

**ಕಿತ್ತೀಳೆ** – ಕಿತ್ತಿಳೆ ಮರ, ಹಣ್ಣು (ಕಿತ್ತೀಳೆಯ ಪಣ್ಣದೊಂದು ರುಚಿ ಬೇವಿನ ಪಣ್ಣೊಳಗುಂಟೆ: **ಧರ್ಮಾಮೃ,** ೪. ೭೪)

**ಕಿತ್ತುಸಿರ್** – ಸಣ್ಣ ಮೇಲುಸಿರು (ತೇರಯ್ವ ಬಾಯ್ ತಪ್ಪಿ ಬರ್ಪ ಅರೆವಾತು ಉಣ್ಮುವ ಕಿತ್ತುಸಿರ್: **ಆಚವರ್ಧ,** ೪. ೬೧)

**ಕಿನಿಸು** – ಕೋಪಿಸಿಕೊ (ಬೆಸಕಯ್ ನಿಜವಲ್ಲಭಂ ಏನನೆಂದೊಡಂ ಕಿನಿಸದಿರ್ ಒಂದಿದ ಅಗ್ರಮಹಿಷೀ ಪದದಲ್ಲಿ ಪದಸ್ಥೆಯಾಗು: **ಆದಿಪು,** ೪. ೫೬); ಕೋಪ (ಎನ್ನ ನೆತ್ತಿಯೊಳ್ ಉರಿ ಮಸಗಿದಂತಾಗೆ ಕಿನಿಸು ಕಯ್ಗಣ್ಮೆ ಕಣ್ಗಳಿಂದ ಉಗುತರ್ಪ ಕಣ್ಬನಿಗಿಡಿಗಳಿಂದ ಉರಿಪುವಂತೆ ಅವನಂ ನೀಡುಂ ನೋಡುತ್ತ: **ಕಾದಂಸಂ,** ೭. ೨೨ ವ)

**ಕಿನಿಸುವೋದು** – ಕೋಪವನ್ನು ಬೋಧಿಸು (ಎಮ್ಮ ನುಡಿ ಮುನಿಗೆ ಕಿನಿಸುವೋದರೆಂಬ ನುಡಿಯನೆ ಪೋಲ್ತುದು: **ಶಾಂತಿಪು,** ೧೦. ೧೦೨ ವ)

**ಕಿನ್ನ** – [ಖಿನ್ನ] ದುಃಖಗೊಂಡ (ಪೆಱನಾಡೆಱೆಯಂ ನಿನ್ನ ಕೈಯೊಳ್ ಬನ್ನಂಬಡೆದು ಕಿನ್ನನಾಗೆ: **ಕಬ್ಬಿಗಕಾ,** ೮೯)

**ಕಿನ್ನರ** – ಕುದುರೆಯಂತೆ ಮುಖ ಹಾಗೂ ಮನುಷ್ಯನಂತೆ ಶರೀರವುಳ್ಳ ಒಂದು ಅತಿಮಾನುವ ಜೀವಿ (ಕಿನ್ನರರ್ ಇನ್ನಾರ ಮಱೆಯಂ ಪುಗುವಮೆನೆಯುಂ ಕಿಂಪುರುಷರ್ ಕಾಪುರುಷರಂತೆ ಬಾಯಂಬಿಡೆಯುಂ: **ಪಂಪಭಾ,** ೫. ೮೮ ವ)

**ಕಿನ್ನೀರ್** – ತಳದ ಜಲ (ಕಿನಾದೇಶಕ್ಕೆ: ಕಿನ್ನೀರ್, ಕಿನ್ನೆಲಂ: **ಶಬ್ದಮದ,** ೧೯೭ ಪ್ರ ೨)

**ಕಿನ್ನೀರ್ಗಾಣ್** – ಬತ್ತಿ ಹೋಗು (ಕಿನ್ನೀರ್ಗಂಡಂತೆ ಅದೇನದ್ಭುತಮೊ ಶತಮುಖಂ ಮಾಟ್ಪ್ ಜನ್ಮಾಭಿಷೇಕಂ: **ಮಲ್ಲಿನಾಪು,** ೧೨. ೯೫)

**ಕಿನ್ನೆಲ** – ತಗ್ಗು (ನೀರ್ ಕಿನ್ನೆಲದಂತಿರೆ ಪರೆದು ಪುದಿಯೆ ಕಿಂಜಲ್ಕಂಗಳ್: **ಲೀಲಾವತಿ,** ೫. ೨೮)

**ಕಿಬ್ಬರಿ** – ಪಕ್ಕೆ (ನಡುಗುವ ಕಾಲ್ಗಳ್ ಉಬ್ಬರಿಪ ಕಿಬ್ಬರಿಗಳ್ ಪೊಡೆವ ಅಳ್ಳೆ: **ಶಬರಶಂ,** ३. ೫೧)

**ಕಿಮುಟ್ಟು** – ಕಿವಿಚು, ಹಿಂಡು (ಕಿಮುಟು–ಹಸ್ತಮರ್ದನೇ: **ಶಬ್ದಮದ, ಧಾ** ೧೭೬); ಪುಡಿಮಾಡು (ಒಂದರ್ಥಕ್ಕೆ: ಕಿಮುಟ್ಟಿದನೆಂದು ಚಿಕ್ಕಣಮಾಗಿ ಮಾಡಿದಂ: **ಶಬ್ದಮದ,** ३३ ವೃತ್ತಿ, ३೧)

**ಕಿಮುಟ್ಟುಟೆ** – ಪುಡಿಯಾಗುವಂತೆ ತುಳಿ (ಕಿಮುಟ್ಟುಟೆದನೆಂದು ಸಣ್ಣಮಾಗಿ ತುಟೆದಂ: (ಒಂದರ್ಥಕ್ಕೆ: ಕಿಮುಟ್ಟಿದನೆಂದು ಚಿಕ್ಕಣಮಾಗಿ ಮಾಡಿದಂ: **ಶಬ್ದಮದ,** ३३ ವೃತ್ತಿ, ३೨)

**ಕಿಮ್ಮೀರ** – ಭೀಮನಿಂದ ಸತ್ತ ಒಬ್ಬ ರಾಕ್ಷಸ (ತದ್ವನಾಧಿಪತಿಯಪ್ಪ ದೈತ್ಯಂ ಕಿಮ್ಮೀರಂ: **ಪಂಪಭಾ,** ೭. ೨೬ ವ)

**ಕಿಮ್ಮೀರವೈರಿ** – ಭೀಮ (ಮೂರ್ಛಾಗತನಾಗಿರ್ದ ಕುರುಕುಳಚೂಡಾಮಣಿಯಂ ಏನುಂ ಮಾಣದೆ ಕಿಮ್ಮೀರವೈರಿ ಮುಟ್ಟೆವಂದಾಗಳ್: **ಪಂಪಭಾ,** ೧३. ೯೭ ವ)

**ಕಿಮ್ಮೀರಿತ** – ಹೊಳೆಯುವ (ವಿಚಿತ್ರವಸ್ತುರಚನಾ ಕಿಮ್ಮೀರಿತಂ ಬಂದುದು ಅಂಬರದಿಂ ಭೋಂಕನೆ ವಿಶ್ವಕರ್ಮರಚಿತಂ ದಿವ್ಯಂ ಮಹಾಮಂಟಪಂ: **ಜಗನ್ನಾವಿ,** ೮. ೧೧೧)

**ಕಿರಣ** – ಬೆಳಕಿನ ಕಾಂತಿ (ಪಸರಿಪ ಇನಕಿರಣಂಗಳ್: **ಪಂಪಭಾ,** ೧೨. ೧೦೮)

**ಕಿರಾಟ** – ವ್ಯಾಪಾರಿ (ಅವರ ಶಿರಂಗಳಂ ಕಿರಾಟಂ ಲಕುಟದಿಂ ಬಿರಿಯೆ ಪೊಯ್ಯಲ್: **ಪಂಚತಂತ್ರ,** ೨೬೧ ವ)

**ಕಿರಾತ** – ಕಾಡಿನ ವಾಸಿ, ಬೇಡ (ಆ ಕಿರಾತಂ ಕಂಡು ಪೊಡೆವಟ್ಟು ಮನೆಗೆ ಒಡಗೊಂಡು ಉಯ್ದು ಶಿವಭೂತಿಗೆ ಅಭ್ಯಾಗತಕ್ರಿಯೆಯಂ ಮಾಡಲುಪಾಯಮಿಲ್ಲದೆ ಉಸಿರದಿರ್ಪನಂ ಕಂಡು: **ಪಂಚತಂತ್ರ,** ೧೮३ ವ)

**ಕಿರಾತಸತಿ** – ಬೇಡ ಹೆಂಗಸು, ಬೇಡಿತಿ (ಪಾಡಿದರ್ ಮದವತಿಯರ್ ಕಿರಾತಸತಿಯರ್: **ಪುಷ್ಪದಂಪು,** ೫. ೯೨)

**ಕಿರಿ** – ಕೂದಲನ್ನು ತೆಗೆ ಹಾಗೂ ದಾರದ ಗಂಟು (ಕಿರಿ–ವಪನೇ ತಂತುಗ್ರಂಥೌ ಚ: **ಶಬ್ದಮದ,** ಧಾ ೫೬೦); ಹಂದಿ (ಗಣತತಿ ಕಿರಿಯಂ ಸದೆಯಲ್ ಕಣೆದುಡುತಿರೆ ಪುರ್ಬಿನಿಂದೆ ಜರ್ಬುತೆ .. .. ಅಭವಂ: **ಶಬರಶಂ,** ೪. ೧೯)

**ಕಿರಿಸು** – ಕ್ಷೌರ ಮಾಡಿಸು (ಬೂತಿಂಗೆ ದ್ರಮ್ಮಮಂ ಕೊಟ್ಟು ಒಡಂಬಡಿಸಿ ತಲೆಯಂ ಕಿರಿಸಿ ಕರಿಯ ಕೋವಣವನುಡಿಸಿ ಪಲ್ಗಳೊಳ್ ಕವಡಿಕೆಯಂ ಕಟ್ಟಿಸಿಕುಂಚಮಂ ಕೊಟ್ಟು: **ವಡ್ಡಾರಾ,** ಪು ೧೭೭, ಸಾ ೧೭)

**ಕಿರೀಟ** – ರಾಜರ ತಲೆಯ ರತ್ನಖಚಿತ ಟೊಪ್ಪಿಗೆ (ತನ್ನ ರತ್ನವಿಸ್ಫುರಿತ ಕಿರೀಟಮಂ ಕವಿದು ತಾನೆ ನರಂಗೆ ಕಿರೀಟಿನಾಮಮಂ ಸರಸದಿಂ ಆಗಳುಚ್ಚರಿಸಿ ಸಾಹಸಮಂ ಪೊಗಟ್ದಂ ಸುರಾಧಿಪಂ: **ಪಂಪಭಾ,** ೫. ೧೦३)

**ಕಿರೀಟಿ** – ಅರ್ಜುನ (ತನ್ನ ರತ್ನವಿಸ್ಫುರಿತ ಕಿರೀಟಮಂ ಕವಿದು ತಾನೆ ನರಂಗೆ ಕಿರೀಟಿನಾಮಮಂ ಸರಸದಿಂ ಆಗಳುಚ್ಚರಿಸಿ ಸಾಹಸಮಂ ಪೊಗಟ್ದಂ ಸುರಾಧಿಪಂ: **ಪಂಪಭಾ,** ೫. ೧೦३)

**ಕಿರ್ಗಣ್ಣಿಕ್ಕು** – ಕೆಳಗಣ್ಣಿನಿಂದ ನೋಡಿ (ಕಿರ್ಗಣ್ಣಿಕ್ಕುತ್ತ ಒಳಮೊಕ್ಕ ಜಾಯಿಲನ ಬಡನಡುವಂ ಚಕ್ಕನೆ ತುಂಡಿಸಿ: **ಗಿರಿಜಾಕ,** ೧. ೧೦೫)

**ಕಿರ್ಗಿದು** – ಚೆಲುವಾದುದು (ಸಿಂಹಾಸನದ ಇಕ್ಕೆಲದೊಳಂ ಕಿರ್ಗಿದುವಾಗಿರ್ದ ಮಣಿಮಯಭದ್ರಾಸನದೊಳ್ ಸೌಧರ್ಮ ಈಶಾನೇಂದ್ರರಿರ್ದು ವಿರಚಿಸೆ: **ಶಾಂತಿಪು,** ೧೦. ೨೯ ವ)

**ಕಿರ್ಚು** – ಬೆಂಕಿ (ವೇದಂ ಕಿರ್ಚನೆ ಪೊಗಟ್ಟುದು ಮಾದೇವಂಗೆ ಇಷ್ಟದೈವಮುಂ ಕಿರ್ಚಕ್ಕುಂ: **ಸಮಯಪ,** ೮. ೧೧೬); ತಾಪ

**ಕಿಲಕಿಂಚಿತ** – ಶೃಂಗಾರ ಚೇಷ್ಟೆ ; (ಕನ್ನೆ ತಳೆದಳ್ ಕಿಲಿಕಿಂಚಿತ ಭಾವಚೇಷ್ಟೆಯಂ: **ಚಂದ್ರಪ್ರಪು,** ೫. ೧೨೨)

**ಕಿಲಕಿಂಚಿತೆ** – ಶೃಂಗಾರಚೇಷ್ಟೆಯನ್ನು ಮಾಡುವವಳು (ಇವಳುಂ ಕಿಲಕಿಂಚಿತೆಯಕ್ಕುಂ ಎಂದು ವಿಟಂ ನುಡಿವುತ್ತಿರೆ: **ರಾಜಶೇವಿ,** ೧೧. ೧೨೮ ವ)

**ಕಿಲಿ** – ಆನೆಯ ಬಾಲದ ಮಧ್ಯಭಾಗ (ಅಪೂರ್ವಲಾಂಗೂಲನುಂ ಕಚಕಿಲೀ ಸಂವರ್ತಕನುಂ: **ಶಾಂತಿಪು,** ೧೦. ೧೪೨ ವ)

**ಕಿಲುಂಬು** – ಕಿಲುಬು, ಕೊಳೆ, ಕಿಟ್ಟ (ಕಿಸುವಿಂ ಜಿನರೂಪಂ ಮಾಡಿಸಿ ಪೂಜಿಸೆಯುಂ ಕಿಲುಂಬು ಮಾಣದ ತೆಱದಿಂ: **ಧರ್ಮಾಮೃ,** ೫. ೧೧೨)

**ಕಿಲುಂಬುಗೊಳ್** – ಕಿಲುಬುಗಟ್ಟು (ಕರಂಗಳಡಂಗಿ ಕಿಲುಂಬುಗೊಂಡ ಕನ್ನಡಿಗೆಣೆಯಾಯ್ತು ಭಾನುವಳಯಂ ದಿವಿಜಾಪಗೆ ನೋಡೆ ನೋಡೆ ಕರ್ಪಡರ್ದೆಣೆಯಾದುದು ಆ ಯಮುನೆಗೆ ಅಗ್ಗದ ಯಾಗದ ಧೂಮದ ಏಟ್ಗೆಯೊಳ್: **ಪಂಪಭಾ,** ೬. ೩೬)

**ಕಿಲುಂಬೇಱು** – ಕಿಲುಬುಗಟ್ಟು (ಕಿಲುಂಬೇಱಿದ ವಕ್ತ್ರದರ್ಪಣಂ: **ಪಾರ್ಶ್ವನಾಪು,** ೧೩. ೮೩)

**ಕಿಲ್ಬಿಷ** – ಕೊಳೆ, ಕಳಂಕ; ಪಾಪ (ಕಿಲ್ಬಿಷವಿಷಂ ಪುದಿದಿರ್ಪ ಕುದೃಷ್ಟಿಗೆ ಆತ್ಮತತ್ತ್ವಮೆ ಮೃಷತತ್ತ್ವಮಾಗಿ .. .. ತೋರ್ಕುಂ: **ಸಮಯಪ,** ೧೧. ೧೫೪); ಕಪಟ (ಕಿಲ್ಬಿಷರೊಡನೆ ಬಂದು ಮುಂದೆ ನಿಲ್ವುದುಂ: **ಆದಿಪು,** ೭. ೪೧ ವ)

**ಕಿಲ್ಬಿಷಿಕ** – [ಜೈನ] ದೇವತೆಗಳಲ್ಲಿ ಒಂದು ವರ್ಗ (ಆತ್ಮರಕ್ಷಕ ಲೋಕಪಾಲಾಭಿಯೋಗ್ಯ ಕಿಲ್ಬಿಷಕ ಪ್ರಯುಕ್ತರಾಗಿ: **ಕರ್ಣನೇಮಿ,** ೮. ೧೧೯ ವ)

**ಕಿಲ್ಮಿಷಿಕ** – ಕಿಲ್ಬಿಷ (ಆತ್ಮರಕ್ಷಾಭಿಯೋಗ್ಯ ಕಿಲ್ಮಿಷಿಕಾದಿ ಪರಿವಾರ ಪರೀತರಾಗಿ: **ಶಾಂತಿಪು,** ೧೦. ೩ ವ)

**ಕಿವರಿತನ** – ಚೌಕಾಸಿ (ಅವಳೀ ಕಿವರಿತನಕ್ಕಂ ನಗುತ್ತುಂ ಪೋಗೆವೋಗೆ ಮುಂದೊಂದೆಡೆಯೊಳ್: **ಕುಸುಮಾಕಾ,** ೧೧. ೧೫೪ ವ)

**ಕಿವಿಯಾರ್** – ಕಿವಿಗೆ ತೃಪ್ತಿಯಾಗು, ಕಿವಿ ತುಂಬು (ಗಂಡರೊಳ್ ನೀಱನೆಂಬರ ಮಾತಂ ಕಿವಿಯಾರೆ ಕೇಳ್ದು ಕಿವಿವೇಟಂಗೊಂಡು: **ಪಂಪರಾ,** ೮. ೧೨)

**ಕಿವಿಯೀ** – ಕಿವಿಗೊಡು (ಭಾವಿಸಿ ವಂದಿಜನಂ ಪ್ರಸ್ತಾವದೊಳ್ ಉಪಹಾಸಲವಮನೊಡರಿಸೆ ಕಿವಿಯಿತ್ತಾ ವಚನಕ್ಕೆ: **ಶಾಂತಿಪು,** ೩. ೫೦)

**ಕಿವಿಲುತನ** – ಕೀಳ್ತನ, ಅಲ್ಪತೆ (ಆ ಕೂಂಟಣಿಯ ಕಿವಿಲುತನಮಂ ಕಂಡು ಕಂಟಣಿಸಿ: **ಶಾಂತೀಶ್ವಪು,** ೧೧. ೭೯ ವ)

**ಕಿವಿವೆಱು** – ಕೇಳುವ ಶಕ್ತಿ ಪಡೆ (ಕಿವಿವೆತ್ತಂದದಿಂದೆಮ್ಮೊಳ್ ತೊಡರ್ದಿಱಿದಪೆಮೆಂಬನ್ನರಂ ಕೇಳ್ದೆನಿಲ್ಲೆಂದುವರಂಬೊಲ್ ಚೋದ್ಯಮೇಂ: **ಅನಂತಪು,** ೧೩. ೭೮)

**ಕಿವಿವೇಟ** – ಕೇಳುವುದರಿಂದ ಉಂಟಾಗುವ ಮೋಹ, ಧ್ವನಿ ಕೇಳಿ ಮೋಹಿಸುವುದು (ತದೀಯ ವಿಳಾಸದ ಏಟ್ಗೆಯಂ ಬೇಗದೆ ಪೇಟೆ ಕೇಳ್ದು ಕಿವಿವೇಟಮೆ ಪಲ್ಲವಿಸುತ್ತುಮಿರ್ಪುದುಂ: **ಆಚವರ್ಧ,** ೪. ೩)

**ಕಿವಿವೇಂಟಗೊಳ್** – ಕಿವಿವೇಟ ಹೊಂದು (ಗಂಡರೊಳ್ ನೀಱನೆಂಬರ ಮಾತಂ ಕಿವಿಯಾರೆ ಕೇಳ್ದು ಕಿವಿವೇಟಂಗೊಂಡು: **ಪಂಪರಾ,** ೮. ೧೨)

**ಕಿವಿವೊಗು** – ಕಿವಿಯನ್ನು ಪ್ರವೇಶಿಸು, ಕೇಳಿಸು (ಇಂಪನಾರ್ಪದ ಗೇಯಂ ಕಿವಿವೊಕ್ಕೊಡಂ: **ಪಂಪಭಾ,** ೪. ೩೦)

**ಕಿವಿಸವಿ** – ಕಿವಿಗೆ ಹಿತಕರವಾದ (ಕಿವಿಸವಿ ದನಿ ಕಣ್ಣವಿ ರೂಪು ಅವಧರಿಸೆಲೆ ಗಜವೆಡಂಗ ನಿನ್ನುಟಿದೊಡೆ ಸಾವವಳ್: **ಯಶೋಧಚ,** ೨. ೫೨)

**ಕಿವುಂಡುವಡಿಸು** – ಕಿವುಡಾಗುವಂತೆ ಮಾಡು (ಬಲ್ಲುಲಿಯ ಸಡಗರಮೆಲ್ಲಾ ದೆಸೆಗಳಂ ಕಿವುಂಡುವಡಿಸೆ: **ಕಬ್ಬಿಗಕಾ,** ೨೫೧)

**ಕಿವುಡ** – ಕಿವಿ ಕೇಳಿಸದವನು (ಕಿವುಡಂ ಪಂಗು ಮೂಕಂ: **ವಡ್ಡಾರಾ,** ಪು. ೯. ಸಾ. ೨)

**ಕಿವುಡು** – ಕಿವಿ ಕೇಳಿಸದಿರುವುದು (ಉಕಾರಕ್ಕೆ: ಕಿವುಡು, ಕೆಂಚು, ಗುಜ್ಜು, ಬೆಜ್ಜು: **ಶಬ್ದಮದ,** ೨೨೩, ಪ್ರ)

**ಕಿವುಡುವಡಿಸು** – ಕಿವುಡಾಗಿಸು (ಪರುಷತರ ಶರಭಕೇಸರಿವಿರಾವದಿಂ ಕಿವುಡುವಡಿಸುತ್ತಂ: **ಚಂದ್ರಪ್ರಪು,** ೫. ೪೬)

**ಕಿವುಡುವಡು** – ಕಿವುಡಾಗು (ಕಿವುಡುವಟ್ಟುವಾ ಸರಿವಟೆಯೊಳ್: **ಕುಸುಮಾಕಾ,** ೬. ೨೯)

**ಕಿವುಟೆದುಟೆ** – ಅಜ್ಜುಬಜ್ಜಾಗುವಂತೆ ತುಳಿ (ಅನ್ನೆಗಂ ಅತ್ತ ಸಂಸಪ್ತಕಬಲಮೆಲ್ಲಮಂ ಅಳಱೆ ಪೆಳಱೆ ಕಿವುಟೆದುಟೆದು ಕೊಲ್ವಲ್ಲಿ ವಿಕ್ರಮಾರ್ಜುನಂ ಮುರಾಂತಕನೊಳ್ ಇಂತೆಂದಂ: **ಪಂಪಭಾ,** ೧೧. ೧೦ ವ)

**ಕಿವುಟ್ಕೇಳ್** – ಕಿವುಡುಗೇಳು, ಕೇಳಿದರೂ ಕೇಳಿಸದಂತಿರು (ಬಿಡದೆ ಕಡುಕೆಯ್ದು ದಿವ್ಯದ ನುಡಿಗೆ ಕಿವುಟ್ಕೇಳ್ದು ಕುಡಿದು ನೀರಂ ಭೀಮಂ ಗದೆವೆರಸು ಭೋಂಕೆನೆ ಕೆಡದಂ ಗಿರಿಶಿಖರದೊಡನೆ ಕೆಡೆವಂತಾಗಳ್: **ಪಂಪಭಾ,** ೮. ೪೨)

**ಕಿಶೋರ** – ಮರಿ, ಮಗು (ತಮ್ಮೊಡನೆ ನಲಿದಾಡುವ ಕಿಶೋರಕೇಸರಿಗಳಂ ತೆಗೆವ ಕರಿಕಳಭಂಗಳುಮಂ ಆ ಪೞವಂಗಳಿಂದೆ ಪಾಯ್ವ ಪುಲಿಗಳ ಮಱಿಗಳೊಳ್ ಪರಿದಾಡುವ ತರುಣ ಹರಿಣಂಗಳುಮಂ: **ಪಂಪಭಾ,** ೧. ೧೧೫ ವ); ಮರಿಗುದುರೆ (ಮತ್ತೊರ್ವ ದೇವತೆ ಕಿಶೋರಮಾಗಿ ಕೇಶವಂಗೆ ಕೆಳಱ ಕಿವಿಯುಂ ಬಾಯುಮಂ ತೆಱೆದುಕೊಂಡು: **ನೇಮಿನಾಪು,** ೭. ೭೮ ವ)

**ಕಿಶೋರಕ** – ಕಿಶೋರ (ಪಂಜರಸ್ಥಿತ ಮದಕೇಸರಿಕಿಶೋರಕದಂತೆ ಗೆಯ್ದು ಅಖಿಳ ವಿದ್ಯಾಭ್ಯಾಸಂಗೆಯ್ಯುತ್ತುಮಿರೆ: **ಕಾದಂಸಂ,** ೨. ೨೮ ವ)

**ಕಿಸಲಯ** – ಚಿಗುರು (ನಳಿತೋಳಿಂ ಸೆಳೆಗೊಂಬಂ ತೆಗೆದೊರ್ವಳ್ ವಿಳಾಸವತಿ ತಿಱಿದಳ್ ಆಮ್ರನವಕಿಸಲಯಮಂ: **ಆದಿಪು,** ೧೧. ೧೦೫)

**ಕಿಸಿ** – ಹಿಗ್ಗಿಸು, ಅಗಲಗೊಳಿಸು (ಕಿಸಿ–ವಿಕಸನೇ: **ಶಬ್ದಮದ, ಧಾ** ೬೯೦)

**ಕಿಸು** – ಕೆಂಪು ಬಣ್ಣ (ಪವಳದ ಕಂಬಂ ಪಳಿಕಿನೆಸೆವ ತೊಲೆ ವಜ್ರದ ಮತ್ತವಾರಣಂ ಮುತ್ತಿನ ಮಂಡವಿಗೆ ಕಿಸುಗಲ್ಲ

ಬೋದಿಗೆ ನವಮರಕತರತ್ನ ತೋರಣಂ ಪ್ರಾಕಾರಂ: **ಸುಕುಮಾಚ,** ೧೦. ೪೫); ತಾಮ್ರ (ಪೊನ್ನೆ ಕಿಸುವಪ್ಪೊಡೆಂಬುದು ತನ್ನಾಪ್ತಂ ಶುದ್ಧನಪ್ಪೊಡೆನಲಾಗಜೆವಂ: **ಸಮಯಪ,** ೮. ೨೨೧)

**ಕಿಸುಕುರಿ –** ಒಂದು ಬಗೆಯ ಹುಲ್ಲು (ಕಱುಕೆ ಮರಗಱುಕೆ .. .. ಹಂಚೆ .. .. ಕಿಸುಕುರಿ .. .. ಕಲ್ವುಲ್: **ಸೂಕ್ತಿಸುಧಾ,** ೩. ೨೯)

**ಕಿಸುಗಣ್ಚು –** ಕಣ್ಣು ಕೆಂಪಾಗಿಸಿಕೊ, ಕೋಪಿಸಿಕೊ (ನೀಳ್ವಂ ಬೆಳ್ಪುಮಂ ತಾಳ್ದಿ ಪರವನಿತೆಯರ ದೆಸೆಗೆ ಕಿಸುಗಣ್ಚಿದಂತೆ ಕಿಸುಸೆರೆವೆರಿದು ಸೊಗಯಿಸುವ ಶೌಚಾಂಜನೇಯನ ಕಣ್ಗಳ್: **ಪಂಪಭಾ,** ೨. ೩೯ ವ)

**ಕಿಸುಗಣ್ಣ –** ಕೋಗಿಲೆ (ಪುಗಿಲ್ ಪುಗಿಲೆಂದು ಬಿಡೆ ಬಗ್ಗಿಸುವ ಕಿಸುಗಣ್ಣನ ಜಡಿಪಕ್ಕೆ ಅಗಿದು ನಿಂದು: **ಲೀಲಾವತಿ,** ೧೪. ೭೫ ವ)

**ಕಿಸುಗಣ್ಬಿಡು –** ಕೆಂಗಣ್ಣಿನಿಂದ ನೊಡು, ಕೋಪಿಸಿಕೊ (ಔಡುಗಚ್ಚಿ ಕಿಸುಗಣ್ಬಿಟ್ಟಚ್ಯುತಂ ರಂಜಿಕುಂ: **ಜಗನ್ನಾವಿ,** ೩. ೬೦)

**ಕಿಸುಗಲ್ –** ಕೆಂಪು ಕಲ್ಲು, ಮಾಣಿಕ್ಯ (ರಸರಸದ ಬಾವಿ ಮನೆಮನೆಗೆ ಬೇಱ ಕಿಸುಗಲ್ಗಳ ರಜದ ಕಣಿವೆರಸು ತೋಱೆ: **ಪಂಪಭಾ,** ೪. ೧೦)

**ಕಿಸುಗಾಡು –** ಕೆಂಪು ಕಾಡು, ಕೆಂಪು ಮಣ್ಣಿನ ಭೂಮಿ (ಕಿಸುಗಾಡ ನೆಲಂಗಳ್ ಎಳದಳಿರ ಬಣ್ಣಮಂ ಕೆಯ್ಕೊಂಡು ವಿರಹಿಗಳ ಮನಮನೊಲಿಸುವಂತೆ ಜಲಜಲನೆ ಪರಿವ ಜರಿವೊನಲ್ಗಳುಮಂ .. .. ಪಯಣಂ ಬಂದು: **ಪಂಪಭಾ,** ೭. ೨೫ ವ)

**ಕಿಸುಗುಳ –** ಕೊಳೆ, ಹೊಲಸು (ಬಸಿಱೋಲಗೆ ಪಲವು ಪುೞುವಿನ ಕಿಸುಗುಳದೊಳಗಟ್ಟು ನಮೆದು ನವಮಾಸಂ ಸೈರಿಸಿ: **ಸಮಯಪ,** ೮. ೧೭೭); ಹೊಲಸು ವ್ಯಕ್ತಿ (ಮೀಂಬೊಲಸು ನಾರ್ಪ ಮೆಯ್ಗಮಳುಂಬಂ ತೂಂಬುರ್ಚಿದಂತೆ ಸುರಿವರುಣಜಳಕ್ಕಂ ಬಿಡದೆ ಕಾಗೆಯುಂ ಪರ್ದುಂ ಬಳಸುವವೆಂದೊಡೆ ಇಂತು ಕಿಸುಗುಳರೊಳರೇ: **ಸುಕುಮಾಚ,** ೪. ೫೯)

**ಕಿಸುಗುಳಿ –** ಹೊಲಸು ವ್ಯಕ್ತಿ (ಕುಲಹೀನಂ ತೊನ್ನಂ ಕಿಸುಗುಳಿಗಂ .. .. ಲೇಸುಮಾಟ್ಟಿನೆ ಜೈನಂ: **ಸಮಯಪ,** ೪. ೩೧)

**ಕಿಸುಗುಳೆ –** ಹೊಲಸು ಹೆಂಗಸು (ಕಿಸುಗುಳೆಯರನಜೆವೊಡೆ ಪೋಲಿಪುದೆ ಧರ್ಮರತ್ನಾಕರೆಯಂ: **ಧರ್ಮಾಮೃ,** ೧೦. ೫೮)

**ಕಿಸುಪು –** ಕೆಂಬಣ್ಣ (ಕಿಸುಪೇಜಿದ ಕೇಕರಕಾಮಪಾಶದಿಂ ಕೊಲ್ವವೊಲ್ ಅಗ್ಗದಾನೆಗೊಲೆಯಂ .. .. ಕೊಲಲಕ್ಕುಮೆ ನಿನ್ನ ಪದಾಬ್ಜದಾಸನಂ: **ಲೀಲಾವತಿ,** ೧೪. ೬೭)

**ಕಿಸುರ್ –** ಅಸಹ್ಯವಾಗಿರು, ಹೇಸಿಗೆ (ಕಿಸುರ ಕಸಗಳಿದು .. .. ಪೂಸಿ ರಾಗರಸದಿಂ .. .. ಬಿಸುಟೆರ್ದೆಯಂ ಸ್ಮರನೆ ಪುಗುವವೊಲ್ ಪಾಟ್ಮಿನೆಯಂ: **ನೇಮಿನಾಪು,** ೪. ೧೪೯); ಮತ್ಸರ (ಎಮ್ಮ ಕಿಸುರ್ ಪಿಂಗುಗುಂ ಅಗಲ್ವೆಡೆಯೊಳ್ ಕೆಳೆ ಸಂಗಳಿಸುಗೆ: **ಆದಿಪು,** ೧೧. ೧೩೩); ವಿರೋಧ (ಆನೆ ಪೂಣ್ದು ಇಡುವಗೆಗೆ ಎನ್ನೊಳಾದ ಕಿಸುರ್ ಎನ್ನೊಡವೋಪುದು ಒಳ್ಳಿತು: **ಪಂಪಭಾ,** ೧೩. ೧೮)

**ಕಿಸುರಳಿಪ –** ಕಲಹವನ್ನು ಬಯಸುವವನು (ಪೊಕ್ಕಂ ಕಿಸುರಳಿಪಂ ಪಿಸುಣ ಪಸರಿಗಂ ನೃಪಸಭೆಯಂ: **ಪಂಪರಾ,** ೩.. ೧೯)

**ಕಿಸುವಲಗೆ –** ತಾಮ್ರದ ಹಲಗೆ, ತಾಮ್ರಪಟ (ಕಿಸುವಲಗೆಗಳಿಂ ಬರೆದೆತ್ತಿದ ಶಾಸನಕೇ ದೊರೆಯಾದುವೊ: **ಮಲ್ಲಿನಾಪು,** ೬. ೨೧)

**ಕಿಸುವುಡಿ –** ಕೆಂಪು ಪುಡಿ (ಕೇಶದ ಕೊನೆಯೊಳ್ ಕೇಸರದ ಕಿಱುವುಡಿಯಂ ಕೆದಱರ: **ನೇಮಿನಾಪು,** ೫. ೫೫ ವ)

**ಕಿಸುವೊನ್ –** ಕೆಂಪು ಲೋಹ, ತಾಮ್ರ (ಪೊನ್ನೆಂಬ ಪೆಸಱರೊಳ್ ಕರ್ಬೊನ್ನುಂ ಕಿಸುವೊನ್ನುಂ ಎಯ್ದಲಾರ್ಕೆಮೆ ಪೇೞ್: **ಸಮಯಪ,** ೧. ೧೨೯)

**ಕಿಸುವೊಟಲ್ –** ಒಂದು ಊರಿನ ಹೆಸರು (ಅದಱೊಳಗಂ ಕಿಸುವೊಟಲ್ ಆ ವಿದಿತ ಮಹಾ ಕೊಪಣನಗರದಾ .. .. ನಾಡೆ ಕನ್ನಡದ ತಿರುಳ್: **ಕವಿರಾಮಾ,** ೧. ೩೭)

**ಕಿಸುಸಂಜೆ –** ಕೆಂಪಾದ ಸಂಜೆ (ಕಿಸುಸಂಜೆವೆರಸು ಕಟ್ಟಿಲೆ ಪಸರಿಸಿದಪುದೆನಿಸಿ ಕಣ್ಣ ಕೆಂಪುಂ ಭ್ರುಕುಟಿ ಪ್ರಸಾರಾಂಧಕಾರಮುಂ ದೆಸೆದೆಸೆಗೆಸೆದವು: **ಆದಿಪು,** ೧೪. ೮೩)

**ಕಿಸುಸಂಜೆವೊರೆ –** ಸಾಯಂಕಾಲದ ಕೆಂಬಣ್ಣ ಕೂಡಿರು (ಕಿಸುಸಂಜೆವೊರೆದ ಚಂದ್ರಿಕೆ ಪಸರಿಸಿದಪುದೆನಿಸಿ ರಾಮಚಂದ್ರಂ: **ಪಂಪರಾ,** ೧೦. ೬೪)

**ಕಿಸುಸೆರೆ –** ಕೆಂಪಾದ ನರ (ಯಶಃಪ್ರಸರದೊಡನೆ ನೀಳ್ವಂ ಬೆಳ್ಪುಮಂ ಒಳಕೊಂಡು ಕಿಸುಸೆರೆವರಿದ ಕಣ್ಗಳುಂ: **ಆದಿಪು,** ೩. ೯ ವ)

**ಕಿಸುೞ್ –** ಕಲಹ, ಅಸಹನೆ (ನಿನಗಪ್ಪ ಅರಸಂ ದುರ್ಯೋಧನನ ಒಲವಂ ಮುಂದುಗೆಯ್ದು ಬೆಸಕೆಯ್ವರೆ ನಿನ್ನನುಜರ್ ಎರಟ್ಟೆಸೆಗಂ ಕಿಸುಜೆನಿಸಾಗದು ಮಗನೆ: **ಪಂಪಭಾ,** ೯. ೮೩)

**ಕಿಳಕಿಂಚಿತ –** ಶೃಂಗಾರಚೇಷ್ಟೆ (ಅಂತಃಪುರೀಜನಂಗಳ ಲೀಲಾ ಕಿಳಕಿಂಚಿತ ಲಲಿತವಿಹೃದ್ವಿಳಾಸ ವಿಚ್ಛಿತ್ತಿವಿಭ್ರಮಾದಿಗುಣಂಗಳ್: **ಆದಿಪು:** ೧೧. ೧೪೨)

**ಕಿಳಿರ್ –** ನಿಮಿರು (ಎಳೆಯಳ ಸೆಳೆವೊಳ್ನಡುವುಂ ಸೆಳೆಮಂಚಮುಮೊಡನೆ ಸೆಳೆಯೆ ಪುರ್ವುಂ ಕುರುಳುಂ ಕಿಳಿರೆ: **ಸೂಕ್ತಿಸುಧಾ,** ೧೪. ೨೭)

**ಕಿಳಿಱು –** ಕುದುರೆಯ ಕೆನೆತ (ಮತ್ತೊರ್ವ ದೇವತೆ ಕಿಶೋರಮಾಗಿ ಕೇಶವಂಗೆ ಕಿಳಿಱ ಕಿವಿಯುಂ ಬಾಯುಮಂ ತೆಱೆದುಕೊಂಡು: **ನೇಮಿನಾಪು,** ೭. ೭೮ ವ); ಕೆನೆ (ಕಿಳಿಱೆ ಹಯಂಗಳ್ ಗರ್ಜಿಸೆ ಜಳದನಿಭಂಗಳ್ ಗಜಂಗಳ್: **ಶಬ್ದಮದ,** ೧೫ ಪ್ರ ೧)

**ಕಿಳ್ವಾಳವಳ್ –** ಬಿಚ್ಚುಗತ್ತಿಯವಳು (ಕಿಳ್ವಾಳವಳ್ ಮೆಲ್ಲನೆ ಕರತಳಪದ್ಮಂಗಳಿಂ ಪಾದಪದ್ಮಂಗಳಂ ಒತ್ತುತ್ತಿರಲ್: **ಕಾದಂಬ,** ೧. ೬೯)

**ಕಿಟಿ –** ಅಡಗಿ ಹೋಗು (ಬಜಿದಾದುದು ಜಲಧಿಜಲಂ ಕಿಜಿದಿರ್ದುದು ಮೇರು ನಿನ್ನ ಭರದಿಂ: **ಅಜಿತಪು,** ೮. ೬)

**ಕಿಜಿಗೆಯ್ –** ಸಣ್ಣದಾಗಿ ಮಾಡು, ತೆಗಳು (ಲಕ್ಷ್ಮಣನ ಮಾತು ಕಿಜಿಗೆಯೆ ಚಿತ್ತವಿತ್ತು ಇಂತೆಂದರ್: **ಪಂಪರಾ,** ೧೪. ೯೪)

**ಕಿಜಿಚು –** ಚೀರು, ಕೂಗು (ನಗದಿರ್ ಬಾಯ್ಕಡಿಗೊಳ್ಳದಿರ್ ಕಿಜಿಚದಿರ್: **ಕಬ್ಬಿಗಕಾ,** ೧೬೬)

**ಕಿಜಿದು –** ಚಿಕ್ಕದಾದದ್ದು, ಸಣ್ಣದು (ನಿಮಗನಿಬರ್ಗಂ ಕಿಜಿದೆಯಾಯುಷ್ಯಮೆಂದು ಪೇೞ್ದೊಡೆ: **ವಡ್ಡಾರಾ,** ಪು. ೧೦೦ ಸಾ ೨೪)

**ಕಿಜಿಪು –** ತುರುಕು (ಕಿಜಿಪುವ ಗೇಣಕೇನಮಿನರಿಂ ನವಯೌವವನಯೋಗ್ಯಮಯ್ತು: **ಪುಷ್ಪದಂಪು,** ೨. ೬೧);

ಚಿಕ್ಕದಾಗು (ಸುತ್ತಿ ಪತ್ತಿದ ಕುಡಿವಾಲಮೊಪ್ಪೆ ಕಿವಿಗಳ್ ಕಿಱಿಪುತ್ತಿರೆ ಪಾಯ್ದು ದೇವಕೂಟದ ಕೇಸರಿವೊಲಿರ್ದುದು: **ಲೀಲಾವತಿ,** ೮. ೨೧): ಕತ್ತಿವರಸೆ (ದೊಣೆಯಿಲ್ಲದ ಬಿಲ್ಲಾಳ್ ಬಿನ್ನಣಮಿಲ್ಲದ ಕಿಱಿಪು ಮಂತ್ರಿಯಿಲ್ಲದರಸು ಮನ್ನಣೆಯಿಲ್ಲದ ನೃಪನೋಲಗಂ ಎಣೆಯಿಲ್ಲದ ಜಕ್ಕವಕ್ಕಿ ಸೊಗಯಿಸಿದಪುದೇ: ಅಜಿತಪು, ೬. ೯೭)

**ಕಿಱಿಯಮ್ಮ** – ಚಿಕ್ಕಪ್ಪ (ಹಿರಣ್ಯವರ್ಮಂ ತಮ್ಮ ಕಿಱಿಯಮ್ಮನ ಪಕ್ಕದೆ ಬಂದಿರ್ದೊಡೆ: **ಚಾವುಂಪು,** ಪು. ೪೮೭. ಸಾ. ೧೫)

**ಕಿಱು** – ಮುಚ್ಚು, ಆವರಿಸು (ತೆಱೆಯವೆ ಮುನ್ನ ಕೆತ್ತ [√ಕಿಱು] ಪಡಿಗಳ್ ನವಸೌರಭಮುಣ್ಮೆ ಮೊಕ್ಕಳಂ ತೆಱೆದುವು ರತ್ನತೋರಣಗಣಂಗಳ್: **ಆದಿಪು,** ೨. ೬೩)

**ಕಿಱುಕುಣಿಕೆ** – ಕಿರುಬೆರಳು (ಎನ್ನ ಎಡಗೈಯ ಕಿಱು ಕುಣಿಕೆಯ ಮಡಿಯೊತ್ತಿರೆ ನೋಟ್ಪೆಮೆಂದು ನೀಡಿದ ಬೆರಲಂ: **ಹರಿವಂಶ,** ೧೩. ೨೦)

**ಕಿಱುಕುಳ** – ಕ್ಷುದ್ರ (ಆ ಮನುಜರ್ಗೆಂ ಕಿಱಿಯನೆ ನೀಂ ವನರುಹನಾಭಂಗೆ ಚಂದ್ರನೇಂ ಕಿಱುಕುಳನೇ: **ಕಾದಂಸಂ,** ೭. ೫೮)

**ಕಿಱುಕುಳಬೊಜಂಗ** – ಸಾಮಾನ್ಯನಾದ ವಿಟ, ಅಲ್ಪ ವಿಟ, ಕ್ಷುಲ್ಲಕನಾದ ವಿಟ (ಮತ್ತಮಲ್ಲಿ ಕೋಟಿ ಪೊಂಗೆ ಘಂಟೆಯಲುಗುವ ಕಿಱುಕುಳಬೊಜಂಗರುಮಂ ಸುಣ್ಣದೆಲೆಯಂ ಒತ್ತೆಯಿಟ್ಟು ಮದದಾನೆಯುಮಂ ಮಾಣಿಕಮುಮಂ ಒತ್ತೆಯಿಡಿಸಲಟ್ಟುವ ಚಿಕ್ಕ ಪೋಕರ್ಳಿಬೊಜಂಗರುಂ: **ಪಂಪಭಾ,** ೪. ೮೭ ವ)

**ಕಿಱುಗಣ್ಮು** – ಕಿರಿದಾಗಿ ಕಾಣು, ಕಡೆಗಣಿಸು (ಲೋಧ್ರಿಗೆ ಮೊಲ್ಲೆಗೆ ಸಿಂಧುವಾರ ಮಲ್ಲಿಗೆ ಕಿಱುಗಣ್ಚಿ ಮೆಟ್ಟಿ ಜಡಿದೂಳ್ದುವು ಕೋಗಿಲೆ: **ಅನಂತಪು,** ೬. ೮೩)

**ಕಿಱುಗುಳ** – ಅಲ್ಪ, ಕೀಳು ವ್ಯಕ್ತಿ (ಕಿಱುಗುಳರೆ ಚಲಕ್ಕೆ ಪೂಣಿಗರ್: **ಆಚವರ್ಧ,** ೭. ೬೦)

**ಕಿಱುಗೂಸು** – ಸಣ್ಣ ಮಗು (ಎನ್ನಱಿವಂದದೆ ವರ್ಣಿಸುವೆಂ ಕಿಱುಗೂಸೆಣಿಪಂತೆ ತೊಳಪ ತಾರಾಗಣಮಂ: **ಕುಸುಮಾಕಾ,** ೧. ೯)

**ಕಿಱುಗೂಳಿ** – ಮೀನು ಹಿಡಿಯುವ ಸಣ್ಣ ಬುಟ್ಟಿ (ಕೆಯ್ವಿಡೆ ಗಾಳಂ ಕಿಱುಗೂಳಿ ಬೀಸುವಲೆ ಬೆಳ್ಳಾರಂ: **ಶಬರಶಂ,** ೩. ೨೩)

**ಕಿಱುಗೇಣ್** – ಚಿಕ್ಕ ಕತ್ತಿ, ಕಿರುಗತ್ತಿ (ಮದನನ ಕಟ್ಟಿದ ಕಿಱುಗೇಣಿದು ಸಂದೆಯಮಾವುದು ಎನಿಸಿ ನುಣ್ಗರ್ಪಿಂ ಉಣ್ಮಿದ ಬಾಸೆಯ: **ಪುಷ್ಪದಂಪು,** ೩. ೩೬)

**ಕಿಱುಗೊಂಕುಗೊಂಕು** – ಸಣ್ಣ ಸಣ್ಣ ಡೊಂಕು (ಕಿಱುಗೊಂಕುಗೊಂಕಿದ ಪೊನಲ್ಗಳ ಕೆಂಪು ಪಸುರ್ಪು ಕರ್ಪು: **ಪಂಪಭಾ,** ೭. ೨೫)

**ಕಿಱುಗೊಂಬು** – ಸಣ್ಣ ಕೊಂಬೆ (ಆ ಮರದ ಪುಟ್ಟ ಕಿಱುಗೊಂಬಂ ಮುಱಿದುಕೊಂಡು ತನ್ನ ಕಾಲಧೂಲಿಯಂ ತೊಡೆದು: **ಚಾವುಂಪು,** ಪು. ೪೪೯. ಸಾ. ೩೦)

**ಕಿಱುದುಪ್ಪುಟ್** – ಚಿಕ್ಕ ತುಪ್ಪುಳು (ಕಂಠೋಪಕಂಠದೊಳ್ನಿಂದ ಮೞೆಯ ಕೊರಲ ಕಿಱುದುಪ್ಪುಟಂ ಚಂಚುಮುಖದಿಂ ಅಣ್ಕೆಗೆಯ್ದು: **ಮಲ್ಲಿನಾಪು,** ೩. ೮೫ ವ)

**ಕಿಱುಪು** – ಅದುರು, ಹಾರು (ಪುರ್ವು ಕುಱುಪೆ ಕಡುಬಂ ಕುರುಪತಿ ಭೀಷ್ಮಂಗೆ ಕಿನಿಸಿ ಕಿಂಕಿಱಿವೋದಂ: **ಹರಿವಂಶ,** ೧೧. ೩೪)

**ಕಿಱುಬ** – ಕಿರಿಯವನು, ಚಿಕ್ಕವನು (ಕಿಱುಬರೆಲ್ಲರ್ ಪಂಡಿತರ್: **ಅನಂತಪು,** ೧೧. ೧೨)

**ಕಿಱುವಡಿಗಾಲ** – ಚಿಕ್ಕಂದಿನ ಕಾಲ, ಬಾಲ್ಯ (ಒಡನಾಡಿಗಳ್ ಎನಿಬರ್ ಕಿಱುವಡಿಗಾಲದ ಕೆಳೆಯರ್ ಎನಿಬರ್ ಒಡವರೆಯದ ತನ್ನೆಡೆಗಳ್ ಎನಿಬರ್ ಪಸಾಯಂಬಡೆವ ಅರಸರ ಮಕ್ಕಳ್ ಎನಿಬರ್ ಅನಿಬರುಂ ಎಟ್ಟಿದರ್ **ಶಾಂತಿಪು,** ೮. ೧೧)

**ಕಿಱುವಱುಗುಲ್** – ಚಿಕ್ಕ ಹರಿಗೋಲು (ಗಂಟಿಕ್ಕಿದ ಪುರ್ವುಗಳುಂ ಪೊಸಪೂರದೊತ್ತಿನೊಳ್ ಕಿಱುವಱುಗುಲೆನಿಸಿ: **ಆಚವರ್ಧ,** ೭. ೪೧ ವ)

**ಕಿಱುವೀೞು** – ಸ್ವಲ್ಪ ಜಾರು (ಅನ್ನೆಗಂ ಇತ್ತ ಸಂಸಪ್ತಕ ನಿಕುರುಂಬದೊಳಗೆ ಒರ್ವರುಮಂ ಕಿಱುವೀೞಲೀಯದೆ ರಸಮಂ ಕೊಲ್ವಂತೆ ಎಂತಾನುಂ ಕೊಂದು: **ಪಂಪಭಾ,** ೧೨. ೧೨೦ ವ)

**ಕಿಱುವೇಂಟೆ** – ಒಂದು ಬಗೆಯ ಬೇಟೆ (ಕಿಱುವೇಂಟೆಯ ನಾಯ್ಗಳಿಂದ ಮುಟ್ಟುಪಟ್ಟ ಪೆಣ್ಮೊಲನಂತೆ ಭಯಮಂ ಎಡೆಗಲಿಸಿ ಬೆಳ್ಪೋಟಂ ಓಡಿ ಜವಂಗೆಟ್ಟು ಕಾಲ್ ಪೆಡಂಗಲಿಸೆ ಬೀೞುತ್ತುಂ ಏೞುತ್ತುಂ ಎಂತಾನುಂ ಎಯ್ದಿ: **ಶಾಂತಿಪು,** ೭. ೯೧ ವ)

**ಕಿಱುಳ** – ಸಾಮಾನ್ಯ ವ್ಯಕ್ತಿ (ಚಿತ್ತದ ಅಲಂಪಿನಿಂ ಕಿಱುಳನಂತಿರಲ್ ಎನ್ನಯ ಮಾಯ್ದ ಕಾಲ್ಗಳಂ ನೆತ್ತಿಯೊಳಿಟ್ಟುಕೊಂಡು ಅೞುತುಮಿರ್ದಂ: **ಕಾದಂಸಂ,** ೮. ೧೫); ಚಿಕ್ಕದು, ಮರಿ (ಗಜಿವೊಯ್ಯದ ಕಣ್ದೆಱೆಯದ ಕಿಱುಳಂ ತನ್ನೊಡೆದ ಶಕ್ತಿಯೊಳ್ ಭೇರುಂಡಂ: **ಜಗನ್ನಾವಿ,** ೧೬. ೧೩)

**ಕಿಟಿಂಗು** – ಗೇಣಸು (ಕಿಟಿಂಗೆನೆ ಗೆಳಸು: **ರನ್ನನಿಘಂಟು,** ೨)

**ಕಿಟಿಪು** – ಕಿಟಿಸು, ಕೀಳಿಸು, ಕೀಳುವಂತೆ ಮಾಡು (ಮಾರ್ಗದೊಳ್ ಸಮನಿಸಿದಂದದಿಂ ಕಿಟಿಪಿದಂ ಕುಟಿಲಾಳಕಜಾಳಕಂಗಳಂ: **ಅನಂತಪು,** ೯. ೭೨)

**ಕಿಟಿಂದಲೆ** – ಬಾಗಿದ ತಲೆ (ಪುರವಣಿಗುರ್ವಿ ಕಿಟ್ಟಿಲೆ ಕಿಟಿಂದಲೆಯಾಗಿರೆ ಪೊರ್ದುವಾನೆಗಳ್: **ಆಚವರ್ಧ,** ೮. ೫೭)

**ಕಿಟ್ಕಿಡಲ್** – ಪೂರ್ವ ಸಮುದ್ರ (ಕಿಟಾದೇಶಕ್ಕೆ: ಕಿಟ್ಕೊಂಬು ಕಿಟ್ವಿಲ್, ಕಿಟ್ಕಿಣೆ, ಕಿಟ್ಕಿಟ್ಟು, ಕಿಟ್ಕಿಡಲ್: **ಶಬ್ದಮದ,** ೧೮೭, ಪ್ರ ೨)

**ಕಿಟ್ಕಿವಲ್** – ಕೆಳಗಿನ ಕೊಂಬೆ, ರೆಂಬೆ ಪೂರ್ವ ಸಮುದ್ರ (ಕಿಟಾದೇಶಕ್ಕೆ: ಕಿಟ್ಕೊಂಬು ಕಿಟ್ವಿಲ್, ಕಿಟ್ಕಿಣೆ, ಕಿಟ್ಕಿಟ್ಟು, ಕಿಟ್ಕಿಡಲ್: **ಶಬ್ದಮದ,** ೧೮೭, ಪ್ರ ೨)

**ಕಿಟ್ಕಿವಳಿಗೆ** – ನಮ್ರತೆಯಿಂದ ಕೆಳಗೆ ಹಿಡಿದ ಕರಂಡಕ (ಕವಿತೆಗೆ ವಾಗ್ದೇವತೆ ಕಿಟ್ಕಿವಳಿಗೆವಿಡುವಂತೆ ತಂಬುಲದಿಂದೀವಿದ ಪೊಂಗವಳಿಗೆಯಂ ಪಿಡಿದು ಅಂಬಿಕೆಗೆ ಅವಟಯ್ದಿದಳ್ ಒರ್ವಳ್ ಇಂದ್ರವಧು ತಂಬುಲಮಂ: **ಶಾಂತಿಪು,** ೯. ೧೮೦)

**ಕಿಟ್ಕೊಂಬು** – ಕೆಳಗಿನ ಕೊಂಬೆ (ಕಿಟಾದೇಶಕ್ಕೆ: ಕಿಟ್ಕೊಂಬು ಕಿಟ್ವಿಲ್, ಕಿಟ್ಕಿಣೆ, ಕಿಟ್ಕಿಟ್ಟು, ಕಿಟ್ಕಿಡಲ್: **ಶಬ್ದಮದ,** ೧೮೭, ಪ್ರ ೨)

**ಕಿಟ್ಗಿಣ್** – ಕಿಕ್ಕಣ್ಣು, ಕಿಗ್ಗಣ್ಣು, ಕೆಳಗೆ ನೋಡುವ ಕಣ್ಣು, ಕೀಳಾಗಿ ನೋಡುವುದು (ನಿನ್ನನೆ ಕಿಟ್ಗಿಣ್ಣೊಳೆ ನೋಡುತಿರ್ಪನವಂ: **ಪಂಪಭಾ,** ೩. ೫೪)

**ಕಿಟ್ಗಿದ** – ಕುಳ್ಳ (ಒಂದರ್ಥಕ್ಕೆ: ಕಿಟ್ಗಿದನೆಂದು ಕುಸಿದಂ ಗುಜ್ಜಂ: **ಶಬ್ದಮದ,** ೩೩ ವೃತ್ತಿ)

**ಕಿೞ್ಸೈವೆಸ** – ಸೇವಕರ ಕೆಲಸ (ಪೂಸುವ ಬೀಸುವ ಮಡಿಯಂ ಪಾಸುವ ನೀರ್ಗುಡಿಯಲೆಱೆವ ಕಿೞ್ಸೈವೆಸದೊಳ್: **ಸೂಕ್ತಿಸುಧಾ,** ೧೦. ೧೪೦)

**ಕಿೞ್ಜಾತಿ** – ಕೆಳಕುಲದ ವ್ಯಕ್ತಿ, ಹೀನನಾದವನು (ಮನ್ನಣೆವಡೆದ ಕಿೞ್ಜಾತಿಯಂತೆ ಪೂಜೆವಡೆದ ವ್ಯಂತರಿಯಂತೆ: **ಧರ್ಮಾಮೃ,** ೫. ೮೩ ವ)

**ಕಿೞ್ತಿಲೆ ಕಿಟಂದಲೆ** – ಅಸ್ತವ್ಯಸ್ತ, ಗೊಂದಲ (ಪುರವಣೆಗುರ್ವಿ ಕಿೞ್ತಿಲೆ ಕಿಟಂದಲೆಯಾಗಿರೆ ಪೊರ್ದುವಾನೆಗಳ್: **ಆಚವರ್ಧ,** ೮. ೫೭)

**ಕಿೞ್ನುಡಿ** – ಕೀಳು ಮಾತು, ಹೀನ ನುಡಿ (ಏಱುಭವದ ಕೇಡಡಸುವ ಕಿೞ್ನುಡಿಯಂ ನುಡಿದಳ್: **ಯಶೋಧಚ,** ೩. ೧೨)

**ಕಿೞ್ನೆಲೆ** – ಕೆಳಗಿನ ಪ್ರದೇಶ (ಭೂಮಿಕಾವ್ರಜದ ಕಿೞ್ನೆಲೆಯೊಪ್ಪುವ ಮತ್ತವಾರಣವ್ಯಾವೃತ ಘಂಟಿಕಾವಳಯ ನಾದಂ: **ಕುಸುಮಾಕಾ,** ೨. ೮೩)

**ಕಿೞ್ಪಡಿಸು** – ಕೀಳ್ಪಡಿಸು, ಸೋಲಿಸು (ಕಿೞ್ಪಡಿಸಿದ ವಿದ್ಯಾಧರರಾಜನ ಸಭಾಮಂಡಳಂ: **ಶಾಂತಿಪು** ೩. ೬೬ ವ)

**ಕಿೞ್ಪಡು** – ಹೀನವಾಗು, ಸೋಲು (ಎನ್ನೀ ಭೋಗಮೆ ಭೋಗಂ ಎಳೆಗೆ ಕಿೞ್ಪಟ್ಟ ಫಣೀಂದ್ರಾಭೋಗಂ ಭೋಗಮೆ: **ಶಾಂತಿಪು,** ೨. ೧೨)

**ಕಿೞ್ಪೋಗು** – ಹೀನ ಕುಲದ, ಅಲ್ಪರಿಗೆ ತಕ್ಕುದಾದ (ಕಿೞ್ಪೋಗಿನ ನೃಪರಂದದೆ ಮೆಟ್ಟಿಟ್ಟೋಡದಿರೆವೇೞು ನೀಂ ಧರಧರೆಯೊಳ್: **ಕರ್ಣನೇಮಿ,** ೫. ೮೩)

**ಕಿೞ್ಬರಿ** – ಬೆಟ್ಟದ ಕಿಬ್ಬಿ (ಕಿೞ್ಬರಿಗಳೊಳ್ ಬೆಳದಸುಗೆಯ ಬನಮನಿರ್ಕೆಮಾಡಿ ಬಿಡದೂಱ್ವ ಪೆಣ್ಗೋಗಿಲೆಯ ಸರಂಗಳಿಂ: **ಕಬ್ಬಿಗಕಾ,** ೪೫ ವ)

**ಕಿೞ್ಬಸಿಱ್** – ಕೆಳ ಹೊಟ್ಟೆ, ಕಿಬ್ಬೊಟ್ಟೆ (ಗಂಟಲನೊತ್ತಿ ಕಿೞ್ಬಸಿಱ್ ತಿದಿಯವೊಲಾಗೆ .. .. ಜವಂಗೆ ಬಿರ್ದನಿಕ್ಕಿದಂ: **ಮಲ್ಲಿನಾಪು,** ೧೦. ೪೯)

**ಕಿೞ್ಮಣಿ** – ಕೀಳಾಗು (ಮಣಿಕುಟ್ಟಿಮಭೂಮಿಗೆ ಕಿೞ್ಮಣಿಯದಿದೆನೆ ಪೋಲೆ ನಿಮಿರೆ ಪಾಸಿನ ಕಾರೋಹಣದಿಂ ನೃಪೇಂದ್ರಭವನಂಗಣಮೊಪ್ಪಿದುದು ಉರ್ವರಾಸ್ಯತಿಲಕನ ಬರವಿಂ: **ಶಾಂತಿಪು,** ೧೦. ೭೧)

**ಕಿೞ್ವಾಳಿವಳ್** – ಬಿಚ್ಚುಗತ್ತಿ ಹಿಡಿದ ಅಂಗರಕ್ಷಕಳು (ಶಯ್ಯಾತಲದೊಳ್ ಕಿೞ್ವಾಳಿವಳ್ ಮೆಲ್ಲನೆ ಕರತಳಪದ್ಮಂಗಳಂ ಅಂದು ಒತ್ತುತ್ತಿರಲ್: **ಕಾದಂಸಂ,** ೧. ೨೮)

**ಕೀಚಕ** – ಬಿದಿರು (ಉಚ್ಚರತ್ ಕೀಚಕ ಪ್ರಸ್ವನಿತಂ ವಾನೇಯನಾಗಸ್ಫುಟಿತ ಕಟಮದಾಮೋದಭಾವಂ ಸಮೀರಂ: **ನೇಮಿನಾಪು,** ೫. ೯೬)

**ಕೀಟ** – ಹುಳು, ಕೀಡೆ (ದ್ರುಣಂ ಕ್ರಿಮಿ ಕೀಟಂ: **ಅಭಿಧಾವ,** ೧. ೯. ೮); ಕ್ಷುದ್ರ ಜೀವಿ (ನರಕೀಟದ್ವಯಸಂಗರಕ್ಕೆ ಖಚರೇಂದ್ರಾಧೀಶಂ ಇಂತೇಕೆ ಕಾತರನಪ್ಪೊಂ ಗಡಂ; **ಶಾಂತಿಪು,** ೩. ೯೮)

**ಕೀಟಕ** – ಹುಳುಹುಪ್ಪಟೆ (ಪರಿಗಳಿತ ಪೂತಿಗಂಧರ್ ಖರ ಕಾಕ ಸೃಗಾಲ ಕರಭ ಕೌಶಿಕ ವೃಕ ವಾನರ ವಿಷದಂಷ್ಟ್ರೋತ್ಕರ ಕುರ್ಕುರ ಕೀಟಕ ಭಲ್ಲನಿಕರ ನಿಷ್ಠುರನಿನದರ್: **ಶಾಂತೀಶ್ವಪು,** ೯. ೧೦೬)

**ಕೀಡಿ** – ಕೀಟ, ಹುಳು (ಕಾಲಾಗ್ನಿಯಂ ಕೀಡಿ ಸುತ್ತುವಂತೆ ಕರ್ಣನಂ ಸುತ್ತಿ ಮುತ್ತಿಕೊಂಡು ಕಣೆಯ ಕಂಪಣ ಮುಸಲ ಮುಸುಂಡಿ ಭಿಂಡಿವಾಳ ತೋಮರ ಮುದ್ಗರ ಮಹಾ ವಿವಿಧ ಆಯುಧಂಗಳೊಳಿಟ್ಟುಂ ಇಱಿದುಂ: **ಪಂಪಭಾ,** ೧೨. ೧೧೮ ವ)

**ಕೀನಾಶ** – ಯಮ (ಆಗಳ್ ಅಂಧ್ರಕಸಂಕೇಶರ್ ಕೀನಾಶರಂತೆ ದೆಸೆದೆಸೆಗೆ ಮಸಗಿ ಕಿಷ್ಕಿಂಧನುಮಂ ಶ್ರೀಮಾಲೆಯುಮಂ ಕಿಷ್ಕಿಂಧಪುರಕ್ಕೆ ಕಟಿಪಿ ಕಡುಕೆಯ್ದು ಕಾದುವಾಗಳ್: **ಪಂಪರಾ,** ೧೦. ೧೨೫ ವ)

**ಕೀನಾಶಪಾಶ** – ಯಮಪಾಶ (ನಿನ್ನೀ ಕೇಶಪಾಶಂ ಕುರುಕುಲಪತಿಗಾಯ್ತಲ್ತೆ ಕೀನಾಶಪಾಶಂ: **ಗದಾಯು,** ೮. ೪೯)

**ಕೀನಾಶವಿನಾಶಕರಂ** – ಯಮನನ್ನು ಸಂಹರಿಸಿದವನು, ಶಿವ (ಕೀನಾಶವಿನಾಶಕರಂ ತ್ರಿಪುರಪ್ರಭಂಜನಂ .. .. ಶೂಲಧರಂ ಕೈಲಾಸಕ್ಕೆ ಬಿಜಯಂಗೆಯ್ದಂ: **ಗಿರಿಜಾಕ,** ೧೦. ೮ ವ)

**ಕೀರ** – ಗಿಳಿ (ದುಃಖದಿಂ ಗಡ ಕೀರ ಪ್ರಿಯಕಾಂತೆ ಸುಯ್ದು ಸುರಿದಳ್ ಭೋರೆಂದು ಬಾಷ್ಪಾಂಬುವಂ: **ಲೀಲಾವತಿ,** ೬. ೯೩)

**ಕೀರಕಿಶೋರ** – ಗಿಳಿ ಮರಿ (ದಾಡಿಮದ ಬೀಡೆಯೊಳ್ ಚಂಚುಪುಟಂ ತೊಡರ್ದೊಡೆ ಕೀರ್ ಕೀರೆನುತುಂ ಸಿಡಿಮಿಡಿಗೊಳುತಿರ್ದುದು ಒಂದು ಕೀರಕಿಶೋರಂ: **ಶಾಂತೀಶ್ವಪು,** ೧೦. ೮೦)

**ಕೀರೆ** – ಒಂದು ಸೊಪ್ಪು (ಸುರುಚಿರ ಚಕ್ಕವತಂ ಚಿರಿಕೆ ರಾಜಗಿರಿ ಕೆಸವು ಕೀರೆ ದೊಗ್ಗಳೆಯೆಲೆ ವಾದುರವಂ ಬಡಿಸಿದರ್: **ಧರ್ಮಾಪ,** ೨. ೫೮)

**ಕೀರೋತ್ಕಾರ** – ಗಿಳಿಗಳ ಚಪ್ಪರಣೆ (ಕೀರೋತ್ಕಾರದಿಂ ಚಕ್ರಮಂಜುಳಚೀತ್ಕಾರದಿಂ ಉತ್ಕಹಂಸಮಿಥುನ ವ್ಯಾಪಾರದಿಂ: **ಮಲ್ಲಿನಾಪು,** ೧೪. ೧೧೧)

**ಕೀರ್ಣ** – ತುಂಬಿದ, ಮುಸುಕಿದ (ದಕ್ಷಿಣೋತ್ತರ ದಿಶಾಖಂಡಂಗಳೊಳ್ ನೀಳ್ದು ಬಿತ್ತರದಿಂದೊಪ್ಪುವ ಬೀದಿಗಳ್ ಸುಜನಚಿತ್ತಾಹ್ಲಾದಿಗಳ್: **ಪುಷ್ಪದಂಪು,** ೨. ೬೯)

**ಕೀರ್ತಿಗೆ** – ಒಬ್ಬ ಕ್ಷುದ್ರ ದೇವತೆಯ ಹೆಸರು (ಕೃತಾಂತನಂತಾಕಾರಮಾಗಿ ತಟತಟಿಸಿ ಪೊಳೆವ ಕತ್ತಿಗೆಯಂ ಬೆರಸು ಪೊಱಮಟ್ಟು ಕೀರ್ತಿಗೆಯೆಂಬ ಉಗ್ರದೇವತೆ: **ಪಂಪಭಾ,** ೮. ೪೨ ವ)

**ಕೀರ್ತಿಮುಖ** – ಕೀರ್ತಿವೆತ್ತ ಮುಖ ಮತ್ತು ಆನೆಯ ಕೊಂಬಿನ ಗೊಣಸು, ಒಂದು ಆಭರಣ (ನಿನ್ನ ಕೀರ್ತಿಮುಖಂ ಕೀರ್ತಿಮುಖಂಬೊಲೇಂ ಎಸೆದುದೋ ದಿಗ್ದಂತಿ ದಂತಂಗಳೊಳ್: **ಪಂಪಭಾ,** ೬. ೬೬)

**ಕೀರ್ತಿಲತಾಂಗಿ** – ಕೀರ್ತಿ ಎಂಬ ಸುಂದರಿ (ಕುಲನಗಮಂ ಅಡರ್ವ ಜಲನಿಧಿ ಜಲಮಂ ಪಾಯ್ವ ಅಹಿನಿವಾಸಮಂ ಪುಗುವ ಮರುನ್ನಿಲಯಕ್ಕೆ ಒಗೆವೀತನ ಕೀರ್ತಿಲತಾಂಗಿ ಚಲಾಂಗಿ ಖಚರಂ ಅಚಳಿತಂ ಅಬಲೇ: **ಶಾಂತಿಪು,** ೫. ೧೫೪)

**ಕೀರ್ತಿಸು** – ಹೊಗಳು, ಸ್ತುತಿ ಮಾಡು (ಅರಸುಗಳೆಲ್ಲಂ ಬಾಯ್ಕೇಳ್ದರೆಂದು .. .. ಧರಣೀತಳಂ ಕೀರ್ತಿಸೆ: **ಆದಿಪು,** ೧೪. ೪೯)

**ಕೀರ್ತಿಸ್ತಂಭ** – ಯಶಸ್ಸಿನ ಸ್ಮಾರಕ ಕಂಬ (ಈ ಸಿಂಧುವ ತೀರದೊಳ್ ನಿಱಿಸಿ ಕೀರ್ತಿಸ್ತಂಭಮಂ: **ಪುಷ್ಪದಂಪು,** ೬. ೧೬)

**ಕೀರ್ತ್ಯನ್ವಿತ** – [ಕೀರ್ತಿ+ಅನ್ವಿತ] ಯಶಸ್ಸಿನಿಂದ ಕೂಡಿದವನು (ತನ್ನಂ ಸತತಂ ಕೂರ್ತಿತ್ತುಕೊಂಡಂ ಗುಣನಿಧಿ ಗುಣವರ್ಮಂಗೆ ಕೀರ್ತ್ಯನ್ವಿತ ಸತ್ಕೃತಿ ಲಕ್ಷ್ಮೀಕಾಂತೆಯಂ: ಪುಷ್ಪದಂಪು, ೧. ೭೨)

**ಕೀಲ್** – [ಕೀಲ] ಕಡಾಣಿ (ಉಡಿದ ನೊಗಂ ಧ್ವಜಂ ಪಲಗೆ ಕೀಲ್ ಕವರ್ ಅಚ್ಚು ತುರಂಗಮಂ ರಥಂ ಕಿಡೆ ಕವರಿಂದಗುರ್ವಂ ಒಳಗೊಂಡಿರೆ ತಳ್ತಿಜೆದರ್ ಮಹಾರಥರ್: **ಪಂಪಭಾ,** ೧೧. ೩೮); ಅಗುಳಿ, ಬೆಣೆ (ಒಂದು ಗೋಲಾಂಗೂಲಂ ಬಂದು ಕರಗಸಿಗರೊಂದು ಭಾಗಂಬರಂ ಸೀಳ್ದು ನೂಲ ತಲೆಯೊಳ್ ಕೀಲಂ ಬೆಟ್ಟಿರ್ದ ಮರನಂ ಕಂಡು: **ಪಂಚತಂತ್ರ,** ೮೨ ವ)

**ಕೀಲಣೆ** – ಜೋಡಿಸುವಿಕೆ (ಮಿಸುನಿಯ ಕಂಬದಿಂದ ಅಖಿಳರತ್ನದ ಕೀಣೆಯಿಂ .. .. ಎಸೆವುದು ಸಂತತಂ ಖಚರನೋಲಗಶಾಲೆ: **ಧರ್ಮಪ,** ೨. ೧೫)

**ಕೀಲಣೆವೆಱು** – ಕಟ್ಟಿಗೆ ಒಳಗಾಗು, ಬಂಧನಕ್ಕೆ ಸಿಕ್ಕು (ಬಿಟ್ಟಿರನೆತ್ತಿ ಕೀಲಣೆವೆತ್ತಂ ಕಟಲ್ವಿ: **ಕರ್ಣನೇಮಿ:** ೭. ೨೦೪ ವ)

**ಕೀಲಾಕ್ಷಿ** – ಬೆಂಕಿಯ ಜ್ವಾಲೆಯಿರುವ ಕಣ್ಣು, ಕೆಂಡಗಣ್ಣು (ಅದ್ಭುತನಟನಿಟಿಲಾಲೋಲಕೀಲಾಕ್ಷಿವೊಲ್ ದಳ್ಳಿಸೆ ಕೋಪಾರಕ್ತನೇತ್ರಂ ನಿಜಭುಜಗದೆಯಂ ತೂಗಿದಂ ಧಾರ್ತರಾಷ್ಟ್ರಂ: **ಗದಾಯು,** ೭. ೩೦)

**ಕೀಲಾರ** – [ಕ್ಷೀರಾಗಾರ] ಗೋಶಾಲೆ, ಕೊಟ್ಟಿಗೆ (ಚಂದ್ರಮತೀ ಮಹಾದೇವಿಯ ಕೀಲಾರದ ಧೇನುಗಳಂ ಸೂಱೆಗೊಳ್ವಂತೆ ಕೊಂಡುವೋದೊಡೆ: **ಸುಕುಮಾಚ,** ೭. ೩೫ ವ)

**ಕೀಲಾರಿಗ** – ಕೊಟ್ಟಿಗೆ ನೋಡಿಕೊಳ್ಳುವವನು, ದನಗಾಹಿ (ಚಂದ್ರವಾಹನನ ಕೀಲಾರಿಗಳ ವೀರಪೂರ್ಣನೆಂಬೊಂ ಒಂದು ದಿವಸಂ ಅಲ್ಲಿಯ ತುಱುಪಳ್ಳಿಯ ಗೋವುಳಿಗರೊಳ್ ತೋಟಿಗೆಯ್ದು: **ಸುಕುಮಾಚ,** ೭. ೩೫ ವ)

**ಕೀಲಾಲ** – ರಕ್ತ (ಅನವರತ ನಿಹತ ನರ ಕರಿ ತುರಗ ನಿಕುರುಂಬ ಕೀಲಾಲ ಕಲ್ಲೋಲಪ್ರವರ್ತನ ಅನೇಕ ನದ ನದೀ ಪ್ರವಾಹಬಾಹುಳ್ಯದುಸ್ತರಾವತರಣ ಮಾರ್ಗಮಂ: **ಪಂಪಭಾ,** ೧೩. ೫೧ ವ); ನೀರು (ಪ್ರಬಲ ಕೀಲಾಲ ಕ್ಷಣರುಚಿಯುತಮಾಗಿಯುಂ ವನಸಮೃದ್ಧಮುಂ .. .. ಎನಿಸಿರ್ದುದು: **ರಾಜಶೇವಿ,** ೮. ೧೧೮ ವ)

**ಕೀಲಾಲಪ** – ಅಮೃತ ಕುಡಿಯುವವನು, ದೇವತೆ ಮತ್ತು ರಕ್ತ ಕುಡಿಯುವವನು ಪಿಶಾಚ (ಕೀಲಾಲಪ ವಕ್ಷಸ್ಥಲ ಕೀಲಾಲಪನಪ್ಪೆನಗೆ ಕಾಕಪಕ್ಷಧರಿಯೊಳ್ ಸಾಮವಪ್ಪುದಕಾರ್ಯಮಂ: **ಜಗನ್ನಾವಿ,** ೫. ೬೧ ವ)

**ಕೀಲಾವಳಿ** – ಜ್ವಾಲೆಗಳ ಸಮೂಹ (ಚಳತಟನ್ಮಾಳಿಕಾಲೋಲ ಕೀಲಾವಳಿ ಸಂಜಾತ ಇಂದ್ರಗೋಪಪ್ರಸರದರ್ಚಿಃಕಣಂ: **ಚಂದ್ರಪ್ರಪು,** ೪. ೨೯)

**ಕೀಲಿಗ** – ಬೆಸ್ತ (ಉತ್ತಮರೊಳ್ ಪಾರ್ವಂಗಂ ಮತ್ತತ್ತಲ್ ಕೀಲಿಗಂಗಂ ಒಂದಂದಂ: **ಸಮಯಪ,** ೧೫. ೭)

**ಕೀಲಿತ** – ಜೋಡಿಸಿದ (ರಾಜಕಿರೀಟಕೀಲಿತ ಹರಿನೀಲ ಮದಾಳಿಮಾಲಾಪರಿಚುಂಬಿತ ಚರಣಾರವಿಂದಂ: **ಪಂಪರಾ,** ೩. ೧೭ ವ)

**ಕೀಲಿಸು** – ಬಿಗಿದು ಕಟ್ಟು (ತುಟಿಲಾಳ್ಗಳಡ್ಡಣದೊಳ್ ಎಡ್ಡಮಾಗೆ ಕೀಲಿಸಿದ ಕಿಱುಗೆಜ್ಜೆಯ ದನಿಗಳೊಳಂ: **ಕಬ್ಬಿಗಕಾ,** ೩೭); ಮೊಳೆ ಹೊಡೆದಂತೆ ಸ್ತಬ್ಧವಾಗು (ಇಸೆ ಮಸಗಿ ಭೀಮಂ ಈರಯ್ದು ಶಿತಾಸ್ತ್ರದಿಂ ಉರುಳೆ ಸೂತಂ ಉಡಿಯೆ ರಥಂ ಕೀಲಿಸೆ ಕುದುರೆ ಮುಱಿಯೆ ಪಱವಿಗೆ ಮಸಕದಿಂ ಎಚ್ಚೆಚ್ಚಂ ಒಂದೆ ಸರಲೊಳ್ ನೊಸಲಂ: **ಪಂಪಭಾ,** ೧೦. ೯೯)

**ಕೀಲ್ಗುಡು** – ಆಧಾರ ನೀಡು, ಬಿಗಿದು ಕಟ್ಟು (ನಿಲ್ಲದ ಎಲ್ವಂ ನಟ್ಟು ಕೀಲ್ಗೊಟ್ಟಿಂತಿರ್ದ ವಜ್ರಕಂಟಕಂಗಳ್ವೆರಸು: **ಶಾಂತಿಪು,** ೭. ೯೧ ವ)

**ಕೀಲ್ಗೊಳ್** – ಜೋಡಣೆಯಾಗು, ಸೇರು (ನೆಲಕ್ಕಂ ಆಗಸಕ್ಕಂ ಕೀಲ್ಗೊಂಡಂತಪ್ಪ .. .. ಏಟಿಂಟಾನೆಯಂ ಒಂದುಮಾಡಿದಂತಪ್ಪ ತೋರಮುಂ ಎರಡು ತೊಡೆಯುಂ ತೋಱೆ: **ನೇಮಿನಾಪು,** ೮. ೬೭ ವ)

**ಕೀವಿಲ** – ಕೀಳಾದ, ಕೊಳಕು (ಮೆಯ್ಯಂ ಪೂಸುವ ಕೀವಿಲನಾಶ್ರಿಯಿಸಿ ಪೇಟ್ದು ಕೇಳ್ವರ್ ಮೂರ್ಖರ್: **ಸಮಯಪ,** ೧೨. ೨೨)

**ಕೀವಿಲಿ** – ಕೊಳಕು ಹೆಂಗಸು (ಸಾವಾಗ ಕಾಯಲಾಱದ ಕೀವಿಕಿ ಪೇಟ್ ಪೆಱರ್ಗೆ ಮಾಡಲಾರ್ಪಳೆ ಸುಖಮಂ: **ಸಮಯಪ,** ೯. ೧೦೯)

**ಕೀಸು** – ಕೃಶವಾಗಿ ಮಾಡು (ಕೀಸು–ಕೃಶೀಕರಣೇ: **ಶಬ್ದಮದ, ಧಾ** ೬೯೧); ಕೆತ್ತು, ಕೊರೆ (ಗಾಣದೊಳಿಕ್ಕಿ ಪಿಱಿವ ಸಾಸಿವೆಯಂ ಬಱಿವ: **ವರ್ಧಮಾಪು,** ೧೧. ೪೭ ವ); ಕಿವಿಯಲ್ಲಿಟ್ಟುಕೊಳ್ಳುವ ತಾಳೆಯ ಗರಿ (ಕೀಸು– .. .. ಕರ್ಣಪತ್ರೇ ಚ: **ಶಬ್ದಮದ, ಧಾ** ೬೯೧)

**ಕೀಳ** – ಜ್ವಾಲೆ (ಎಲೆ ಶೀತಪ್ರಭ ನಿನ್ನ ಜನ್ಮನಿಳಯಂ ತಾನಪ್ಪ ಮದ್ಗರ್ಭಮಂ ಸಲೆ ಕಾಯ್ವಿಂ ಬಿಡದಿಂತು ಶೋಷಿಸುವ ಕೀಳ ಆಭೀಳನಂ ಬಾಡವಾನಲನಂ ಬಾರಿಸು ನೀಂ ಎನುತ್ತುಂ ಎನಿತಾನುಂ ಪೇಟಲೆಟ್ತುಂದುದು ಉಜ್ವಲ ದುಗ್ಧಾಂಬುಧಿಯೆಂಬಿನಂ ಭುವನಮಂ ಪರ್ವಿತ್ತು ಚಂದ್ರಾತಪಂ: **ಶಾಂತೀಶ್ವಪು,** ೧೧. ೪೪)

**ಕೀಳಾಳ** – ರಕ್ತ (ಯಾದವ ಬಲಂ ಆಭೀಳತರಮಾಗಿ ಕೊಲೆ ಕೀಳಾಳದ ನದಿ ಪರಿಯೆ ಮಾಗಧರ್ ಬೆನ್ನಿತ್ತರ್: **ಕರ್ಣನೇಮಿ,** ೭. ೮)

**ಕೀಳಿಡು** – ಅರಚು, ಕೂಗು (ಕೀಳಿಡೆಯಿಡೆ ಗಂಟಲಂ ಮುಱಿದಂ ಒರ್ಮೆಯೆ ನೀರ್ಘೃಣಂ ಎನ್ನ ತಂದೆಯಂ: **ಕಾದಂಬ,** ೧. ೧೫೩)

**ಕೀಱೆ ಕಾಣ್** – [ಬರೆದು] ಸ್ಪಷ್ಟವಾಗಿ ತಿಳಿದುಕೊ (ಮುಕ್ತಿಮಾರ್ಗಮನೆ ಕೀಱೆ ಕಂಡೈ: **ಆದಿಪು,** ೧೩. ೮೫)

**ಕೀಱು** – ಕಿರಿಚು (ಬಡವರುಡಬಾರದೆನೆ ಮುಕುಂದನಿವನಂದಮಕ್ಕುಂ ಎಂದು ಮತ್ತಂ ಕೀಱೆ ಬೇಡೆ: **ನೇಮಿನಾಪು,** ೮. ೭೬ ವ); ಸಿಟ್ಟಾಗು (ಕೀಱೆ ನೆತ್ತಿಯೊಳ್ ಬಾಳಂ ನಿರ್ನೆರಮೂಱೆ ಚಲದಿನೆಱಗಿಸಲಿರೆ ಭರತಂಗೆಱಗುವೆಱಕಂ ಅಂಜಮೆಯಲ್ತೆ: **ಆದಿಪು,** ೧೪. ೭೫); ಘೋಷಿಸು (ಅತೀಂದ್ರಿಯಸುಖಾಮೃತಾಂಬುಧಿ ನಿವಾಸದೊಂದನಾತ್ಮತತ್ವವಿದ ಮುಕ್ತಿಮಾರ್ಗಮನೆ ಕೀಱೆ ಕಂಡೈ ಪೆಱರ್ ಚತುರ್ಗತಿಯ ಬಟ್ಟೆಯಂ ನೆಱೆಯೆ ಕಂಡರ್: **ಆದಿಪು,** ೧೩. ೮೫); ನುಗ್ಗು (ಮಂದರ ಕಂದರಮೆಂಬೀ ಸಂದೆಗದಿಂ ಮೀಱೆ ಸೂತನಂ ಕೀಱೆ ನಿಜಸ್ಯಂದನಮಂ ಕೋಂಟೆಗೆ ಭರದಿಂದೆಟೆಗುಂ ಕರ್ಚಿ ಕೀಟನಿನನ ಹಯಂಗಳ್: **ಪಂಪರಾ,** ೧. ೧೧೫); ಗಟ್ಟಿಯಾಗಿ ಕೂಗು (ಇತ್ತುಂ ತೆತ್ತುಂ ಬಾಟ್ವಿ ಮಂಡಲಮಲ್ಲದೆ ಕೀಱೆಯುಂ ಮೀಱೆಯುಂ ನೆಗಟ್ವಿ ಮಂಡಲಮಿಲ್ಲ: **ಪಂಪಭಾ,** ೬. ೬೭ ವ); ಬಲಾತ್ಕರಿಸು, ಒತ್ತಾಯಿಸು (ಸಂಕಿಸದೆ ಪೇಟ್ ಎಂದು

ಕೀಱಿ ಬೆಸಗೊಂಡೊಡೆ ಇಂತೆಂದಳ್: **ಹರಿವಂಶ,** ೫. ೩೮ ವ)

**ಕೀಟ್** – ಕಿಟ್, ಕುದುರೆ ಬಾಯ ಕಬ್ಬಿಣದ ತುಂಡು, ಕಡಿವಾಣ (ಕೀಟಂ ಕರ್ಚಿ ಪುಡಿಯೊಳ್ ಪೊರಳ್ದುವು ನಚ್ಚಿನ ಕಾಂಭೋಜವಾಜಿಗಳ್ ಕೆಲವಾಗಳ್: **ಪಂಪಭಾ,** ೮. ೯೪); ಒರೆಗೆ ಹಚ್ಚದ ಬಂಗಾರ, ಕೀಳು ಕುಲದವನು, ಕೆಳಗು (ನಾಲ್ಕರ್ಥಕ್ಕೆ: ಕೀಟೆಂದು ಒರೆಯಿಲ್ಲದ ಬಂಗಾರಮುಂ ತುರುಗಮುಖದ ಲೋಹಮುಂ ಕ್ಷೀಣಕುಲನುಂ ಕೆಟಗುಂ ಅಕ್ಕುಂ; **ಶಬ್ದಮದ,** ३३ ವೃತ್ತಿ ೧೭೮))

**ಕೀಟಾಳ್** – ಊಳಿಗದವನು, ಕಡಿಮೆ ದರ್ಜೆಯ ಸೇವಕ (ಕೋಪಾನಳಶಿಖಾಕಳಾಪದಹ್ಯಮಾನಮಾನಸನಾಗಿ ಪೆಱತೇನುಮಂ ಕಾಣದೆ ಕೀಟಾಟಿನ ಕೈಯೊಳಿರ್ದ ಬಾಳಂ ಕೊಂಡು ಎತ್ತಿ ಪೊಯ್ವುದುಂ: **ಪಂಚತಂತ್ರ,** ೨೬೪ ವ)

**ಕೀಟಿಡು** – ಕಡಿವಾಣವನ್ನು ತೊಡಿಸು (ಕಾಗೆಯಂತೆ ಕಡೆಗಣ್ಣೊಳೆ ನೋಡುತ್ತುಂ ಕೀಟಿಟ್ಟ ಕುದುರೆಯಂತೆ ಬಾಯಂ ಪೊಳಕಿಸುತ್ತುಂ: **ಧರ್ಮಾಮೃ,** ೫. ೯೧ ವ)

**ಕೀಟಿಲ್** – ಸೇವಕರಿರುವ ಮನೆ (ಪೆಱರ ಕೀಟಿಲೊಳ್ ಎಮ್ಮೆಬ್ಬೆಯುಂ ಮುತ್ತಬ್ಬೆಯುಂ ಸಾರ್ದು ಬದಗುಗೆಯ್ದುಣೆ ನವಮಾಸಂ ನೆಱೆದು ಆಂ ಪುಟ್ಟುವುದುಂ: **ಆದಿಪು,** ३४ ವ)

**ಕೀಟಿಕ್ಕೈದುಗೊಳ್** – ಬಿಚ್ಚುಗತ್ತಿ ಹಿಡಿದುಕೊ (ಮಣಿಯದೆ ಕೀಟ್ಕೈದುಗೊಂಡು ಕಡುಮುಳಿಸಿಂ ಬಿಲ್ಲಣಿ ತಳ್ತಿಱಿಯುತ್ತಿರ್ದುದು: **ಕಬ್ಬಿಗಕಾ,** ೨೭೦)

**ಕೀಟ್ಬಿಡು** – ಹೀನೈಸಿಕೊ (ನೀವಿಂತು ಕೀಟ್ಬಿಟ್ಟು ನುಡಿಯೆ ಕಾದಂಬರೀದೇವಿ ಖೇದಿಸುವಳ್: **ಕಾದಂಸಂ,** ೫. ೬೨ ವ)

**ಕೀಟ್ಪೊಕ್ಕು** – ಹೀನ ಭಾವನೆ (ಕೀಟ್ಪೊಕ್ಕಿನೊಳ್ ತೊಟ್ಟುಕೊಂಡಿರದೆ ಎಮ್ಮೆಂದುದಂ ಇಂಬುಕೆಯ್ ಮನದೊಳ್ಪಿಂ ಶಾಂತಿವಿಶ್ರಾಂತಿಸೋದರಂ ಎಂಬಂತು ಉಪಶಾಂತಿಯಂ; **ಗದಾಯು,** ೭. ४೫)

**ಕೀಟ್ಪೋಗು** – ಹೀನ ನಡವಳಿಕೆ (ಕೀಟ್ಪೋಗಿನ ನೃಪರಂದದೆ ಮೆಟ್ಟಿಟ್ಟು ಓಡದಿರವೇಟು ನೀಂ ಧುರಧರೆಯೊಳ್: **ಕರ್ಣನೇಮಿ,** ೫. ೮३)

**ಕೀಟ್ಮಣಿ** – ಕೆಳಕ್ಕೆ ಬಾಗು, ಶರಣಾಗು (ಚಿಳಾವರ್ತರಳ್ಕುತ್ತೆ ಕಿಟ್ಮಣಿದು ಇನ್ನೆಂದುದಂ ಎಂಬೆವು ಎಂದೆಱಗಿದರ್: **ಆದಿಪು,** ೧३. ೬೭)

**ಕೀಟ್ಮೇಲ್** – ತಾರತಮ್ಯ (ಭಾವಿಸುವೊಡೆ ಸಮಾನಮನಿತಱೊಳೆ ಸಮಾನರೆ ಮನುಜರಣ್ಣ ಕೀಟ್ಮೇಲಿಲ್ಲಾ: **ಧರ್ಮಾಮೃ,** ४. ೧೭)

**ಕೀಟ್ಮೊನೆ** – ಕೆಳತುದಿ (ಎಱಗಿದರಂ ತಳ್ತು ಬಾಳ ಕೀಟ್ಮೊನೆಯಿಂ: **ಪಂಪಭಾ,** ೧೦. ೮೨)

**ಕೀಟ್ಪಿದುವ** – ತಗ್ಗಾಗಿರುವ ಬದು (ಬಂಧೂಕದ ಬಾರವಟ್ಟೆಗಳಿಂ ಕೇತಕಿಯ ಕಂಟವಲಗೆಗಳಿಂ ಕುರುವಕದ ಕೀಟ್ಪಿದುವಂಗಳಿಂ: **ಕುಸುಮಾಕಾ,** ೧೨. ೧೫೭ ವ)

**ಕೀಟ್ವಾಳ** – ಬಿಚ್ಚುಗತ್ತಿಯ ಭಟ, ಅಂಗರಕ್ಷಕ (ಪಕ್ಕದ ಕೀಟ್ವಾಳನ ಕೈಯೊಳಿರ್ದ ಬಾಳಂ ಕೊಂಡು ಆಣೆಟ್ವುದುಂ: **ಜಗನ್ನಾವಿ,** ೨. ४೮)

**ಕುಂಕುಮರಾಗ** – ಕೆಂಪು ಬಣ್ಣ (ದಿನಪಂ ರಕ್ತತ್ವದಿಂ ಪೋಗೆ ರಾಗಮೆ ತತ್ಕುಂರಾಗಮದುದು ಅಪರಾಲಂಕಾರವಿಸ್ತಾರದೊಳ್: **ಶಾಂತಿಪು,** ೮. ೬೦)

**ಕುಂಕುಮವಾರಿ** – ಕೆಂಪು ನೀರು, ಓಕುಳಿ (ಜನಪತಿ ಕುಂಕುಮವಾರಿಯಂ ಅನುನಯದಿಂ ಪೊಯ್ಯೆ ರಯ್ಯಮಾಗಿರ್ದಳ್ ದೇವಿ ನಿಜಸ್ವಾಂತದೊಳ್ ಉಳ್ಕಿದ ಅನುರಾಗಂ ತನುವಿನಲ್ಲಿ ತಲೆದೋಱಿದವೊಲ್; **ಶಾಂತೀಶ್ವಪು,** ೧೦. ೧೭४)

**ಕುಂಕುವ** – ಕುಂಕುಮ (ಎಳವೆಂಡಿರ ಮೆಯ್ಯ ಕುಂಕುವದಿಂದೊಂದಿದ ಕೆಂದಾವರೆ ಹೂಗಳಂ ತಳೆದು: **ಕಬ್ಬಿಗಕಾ,** ३೦)

**ಕುಂಗ** – ಮೀನುಗಾರ (ಕುಂಗರೆಂದು ಬೆಸೆದವರ್: **ಶಬ್ದಮದ,** ಪ್ರಸಾ ೫೭)

**ಕುಂಚ** – ಗೊಂಚಲು, ನವಿಲುಗರಿಯ ಸಣ್ಣ ಚಾಮರ (ಸಿವಿಗೆ ತಟಿದುಱುಗೊಡನಿಕ್ಕುವ ಕುಂಚಂ: **ಆದಿಪು,** ೧೧. ३೯)

**ಕುಂಚಣಿಗೆ** – ಜೈನ ಮುನಿಗಳ ಕೈಯಲ್ಲಿರುವ ನವಿಲುಗರಿಯ ಕುಂಚ (ಮುನಿಗಳ ಕೆಯ್ಯ ಕುಂಚಣಿಗೆ ಚಾಂದ್ರಮಸೀದಳಕುಂಡಿಕಾಳಿ ತಜ್ಜಿನಭವನಕ್ಕೆ ದುಗ್ಧನಿಧಿ ಕಟ್ಟಿದ ಪೊಟ್ಟಣವಾರಿಗಟ್ಟಿದತ್ತೆನಿಸಿತು: **ಅನಂತಪು,** ३३೧)

**ಕುಂಚವಡಿಗ** – ಚಾಮರ ಬೀಸುವ ಆಳು (ವಡಿಗಕ್ಕೆ: ಕುಂಚವಡಿಗಂ ಪುಲ್ಲವಡಿಗಂ ಕಳಸವಡಿಗಂ: **ಶಬ್ದಮದ,** ೨೦೯ ಪ್ರ)

**ಕುಂಚಿ** – ಕುಚ್ಚು, ಗೊಂಚಲು (ಆಗಳೆ ಕಱಂಗಿಸಿದ ಮಸಿಯ ಕುಂಚಿಗಳೆನಿಸಿ ನೊಸಲಂ ಮುಸಂಕಿದಳಕವಲ್ಲರಿಗಳೊಳಂ: **ಆಚವರ್ಧ,** ೯. ೬೦ ವ)

**ಕುಂಚಿಕೆ** – ಗೊಣಸು (ಅಪಸರಕೃತಿಗೆಯ್ವ ಆಹರಿ ನೀಳ ಕುಂಚಿಕೆಗಳೆನೆ ತರಳಾಕ್ಷಿಯ ಕೊಂಕಿ ನಿಮಿರ್ದ ಮುರ್ಬುಗಳೆಸೆಗುಂ: **ಶಾಂತೀಶ್ವಪು,** ೧३. ೧೯೯); ಬೀಗದಕೈ (ಇಂತು ಉದಯಿಸಿದ ಆ ಮಹಾನುಭಾವನ ಪುಣ್ಯಪ್ರಭಾವ ಕುಂಚಿಕೆಯಿಂ ತೆಱೆದಂತೆ ಕೆತ್ತಪಡಿಗಳ್ ಎತ್ತಂ ತೆಱೆದು: **ಶಾಂತೀಶ್ವಪು,** ೭. ೫೭ ವ)

**ಕುಂಚಿಗೆ** – ಕುಂಚ (ಅಮೃತಾಂಶುರಶ್ಮಿಗಳ ಕುಂಚಿಗೆಯಿಂದಮೆ ಕರ್ಚಿ ಪಾರದಂದೊಡೆದರೊ .. .. ಕಣ್ಗೆಸೆದಿರ್ದುದು ರೂಪು ಕಾಂತೆಯಾ: **ಕಾದಂಸಂ,** ३. ೨४)

**ಕುಂಚಿತಕೇಶಪಾಶ** – ಗುಂಗುರು ಕೂದಲು (ಪಾಂಚಾಲೀ ಕುಂಚಿತಕೇಶಪಾಶಾಕೃಷ್ಟಿ ಪಾತಕ ಪ್ರಧಾನನಿಹಿತಹಿನಂ ಎನಿಸಿದ: **ಗದಾಯು,** ೭. ೬೨)

**ಕುಂಜ** – ಬಳ್ಳಿಮಾಡ, ಲತಾಗೃಹ (ಲತಾಕುಂಜಂಗಳೊಳ್ ಭೂವಿವರ ಕುಹರದೊಳ್: **ಪಂಪರಾ,** ೯, ೧३೭)

**ಕುಂಜರ** – ಆನೆ (ನಿಜವಿಜಯಕುಂಜರಂಗಳಂ ವಿಹಾರಿಸಿ ಬಂದು: **ಆದಿಪು,** ೧३. ३ ವ)

**ಕುಂಜರಕುಂಭೀರ** – ಆನೆಯಂಥ ಮೊಸಳೆ (ಮತ್ತಕುಂಜರಕುಂಭೀರಕುಳಂ ಚಳತ್ಕದಳಿಕಾಮಾಳಂ: **ಆದಿಪು,** ೧४. ೯೨)

**ಕುಂಜರಾರಿ** – ಕುಂಜರಾರಾತಿ (ನೀನಿತು ಅಂಜಿದೊಡಂ ಕುಂಜರಾರಿ ಕೊಲ್ಲದೆ ಮಾಣಂ ಕಂಜೋದರನುಂ ಹರನುಂ ಕಂಜಾಸನನುಂ ಕಡಂಗಿ ಕಾವೊಡಮೀಗಳ್: **ಪಂಚತಂತ್ರ,** ೨३೧)

**ಕುಂಜೋಪಾಂತ** – ಹೊದರಿನ ಅಂಚು (ಇವಱ ಕುಂಜೋಪಾಂತಂ ಥಳಥಳಿಸಿ ಬೆಳಗೆ ಕುಳೀಶಾಶ್ಮಂಗಳ್: **ಶಾಂತಿಪು,** ೨. ೧೧೫)

**ಕುಂಟಣಿ** – [ಕುಟ್ಟಿನೀ] ತಲೆಹಿಡುಕಿ (ಮತ್ತಂ ಒಂದೆಡೆಯೊಳ್ ಕುಂಟಣಿಯ ಉಪರೋಧಕ್ಕೆ ಪಿರಿದೀವ ಮುದುಪನಂ ಉೞಿಯಲಂಜಿ ತನ್ನ ಬೇಸಱಿಂ ತನ್ನ ಸಬ್ಬವದಾಕೆಗೆ ಇಂತೆಂದಳ್: **ಪಂಪಭಾ,** ೪. ೯೯ ವ)

**ಕುಂಠ** – ಸೋಮಾರಿ, ಅಲಸಿ (ಕಳಿಕೆಗರ್ಚಿದ ಕಷಾಯಕಂಠಮಾದ ಕಳಕಂಠದ ಕುಂಠಕಂಠಮುಮಂ ಶ್ರುತಿಪಥಕ್ಕತಿಥಿಮಾಡಿ: **ಮಲ್ಲಿನಾಪು,** ೬. ೧೬ ವ)

**ಕುಂಡಲ** – ಕಿವಿಯ ಒಂದು ಆಭರಣ (ಅರಳೆಲೆ ಪೊಂಗುನೂಲ್ ಪುಲಿಯುಗುರ್ ಮಣಿಕಿಂಕಿಣಿ ಗೆಜ್ಜೆ ರಕ್ಕೆ ಕುಂಡಲಯುಗ ಮುತ್ತು ಕಾಲ್ಗಡಗಂ ಅಂದುಗೆ ಕಂಕಣ ಕಿಂಕಿಣೀಗಣಂ ಕಲ ಮಣಿನೂಪುರಂ ತನಗೊಡಂಬಡೆ: **ಅಜಿತಪು,** ೫. ೬೨)

**ಕುಂತ** – ಈಟಿ, ಭರ್ಜಿ (ನಕುಲ ಕುಂತ ಕಬಳಿತ ಶರೀರನಾಗಿರ್ದ ದಂದಶೂಕನೆನಿಸಿದ ಶತಬಿಂದುವಿನ ಸುತಪಂಚಕಮುಮಂ: **ಗದಾಯು,** ೪. ೬೩ ವ); ಅಂಕುಶ (ಕಂತುದಂತಿ ಕುಂತಾನುಕಾರಿಯಪ್ಪ ಇರುವಂತಿ ನೀಳ್ದುವೆತ್ತ ನನೆಯ ತುಱುಂಗಲುಮಂ: **ಶಾಂತೀಶ್ವಪು,** ೧೦, ೧೬ ವ)

**ಕುಂತಲ** – ಕುಂತಣ, ಕೂದಲು (ಸೋಗೆ ನವಿಲ್ ಬಟಲ್ಮುಡಿಗೆ ಭೃಂಗಂ ಕುಂತಳಕ್ಕೆ .. .. ಎಳಸೆ: **ಮಲ್ಲಿನಾಪು,** ೨. ೧೫)

**ಕುಂತಹಸ್ತ** – ಕುಂತವನ್ನು ಹಿಡಿದವನು (ಸರಲ ಕುಂತಹಸ್ತಮಹಾಹಯಾರೋಹಂ .. .. ಇದು ಲಾಟಬಲಂ: **ಆದಿಪು,** ೧೩. ೪೫ ವ)

**ಕುಂತಳ** – ತಲೆಗೂದಲು (ಬಳಸಿರ್ದ ಮದಾಳಿಸಂಕುಲಂ ವಿಷಯಾಂಗನಾಲುಳಿತ ಕುಂತಳದಂತೆವೊಲ್ ಒಪ್ಪಿ ತೋಱುಗುಂ: **ಪಂಪಭಾ,** ೧. ೫೩); ಒಂದು ಮೂಲಿಕೆ

**ಕುಂತಳಭರ** – ಉದ್ದವಾದ ಜಡೆ (ಮಲ್ಲಿಕಾಕುಸುಮಮನಾಂತ ಕುಂತಳಭರಂ: **ಜಗನ್ನಾವಿ,** ೨. ೭೧)

**ಕುಂತಳಿಕೆ** – ಒಂದು ಜಾತಿಯ ಪಕ್ಷಿ (ಪೊನ್ನ ಬೆಳ್ಳಿಯ ಪದ್ಮರಾಗದ ಪಚ್ಚೆಯ ಗಿಳಿಯ ಕೋಗಿಲೆಯ ಕೊಂಚೆಯ ಅಂಚೆಯ ಕುಂತಳಿಕೆಯ ಮಾಟ್ಕೆಯ ಸಿಪ್ಪುಗಳೊಳ್ ತೀವಿ: **ಪಂಪಭಾ,** ೪. ೮೭ ವ)

**ಕುಂತಾಕುಂತಿ** – ಕುಂತಗಳಿಂದ ಮಾಡುವ ಯುದ್ಧ (ಕುಂತಾಕುಂತಿಯುಂ ಶಸ್ತ್ರಾಶಸ್ತ್ರಿಯುಂ ಖಟ್ವಾಖಟ್ವಿಯುಂ ಆದ ಕಾಳಗದ: **ಅನಂತಪು,** ೧೪. ೨ ವ)

**ಕುಂತಾಹತಿ** – ಈಟಿಯ ಹೊಡೆತ (ನೆರೆದ ತಿಮಿರಂ ನಿಶಾಕರ ಕುಂತಾಹತಿಗೆ ಬೆರ್ಚಿ: **ಚಂದ್ರಪ್ರಪು,** ೮. ೨೯)

**ಕುಂಥು** – ಒಂದು ಬಗೆಯ ಕೀಟ (ಸ್ಥೂಳಾಂಗದೊಳ್ ಮೊದಲ್ ಶುಂಡಾಳಂ ತನುತನುಗಳಲ್ಲಿ ಕಂಥುವೆ ಕಡೆ ಜೀವಾಳಿಯೊಳ್: **ಪಾರ್ಶ್ವನಾಪು,** ೬. ೭೦)

**ಕುಂದ** – ಮೊಲ್ಲೆ ಹೂ (ಕುಂದ ಮುಚುಕುಂದ ಮಂದಾರ ಇಂದೀವರ ನಂದ್ಯಾವರ್ತ ತ್ರಿಸಂಧ್ಯಾ ಬಂಧೂಕ ಕದಂಬ ಕನಕ ಕರವೀರ ಕರ್ಣಿಕಾರ ಕುಮುದವನವಕುಳ ಕುರವಕ ಕಮಲ ತಿಲಕ ಚಂಪಕ ಪಾಟಲಿ ಪಾರಿಜಾತ ಜಾತಿ ಪುನ್ನಾಗ ಮಲ್ಲಿಕಾದಿ ಅನೇಕ ಸುರಭಿಕುಸುಮಂಗಳಂ: **ಪಂಚತಂತ್ರ,** ೧೯೦ ವ); ಅಪರಂಜಿ (ಕುಂದದಳಧವಳದಶನಾಂಶು ಪೊಳೆವಿನಂ: **ಆದಿಪು,** ೭. ೨೭ ರಗಳೆ)

**ಕುಂದುರುಷ್ಕ** – ಕುಂದುರಗ, ಒಂದು ಬಗೆಯ ಸುಗಂಧದ ಬೇರು (ಅಭಿಷೇಕಂಗೆಯ್ದು ಕರ್ಕೋಳ ಜಾತೀಫಲ ಜಾತೀಪತ್ರ ಗೋಶೀರ್ಷ ಚಂದನ ಲವಂಗ ಕುಂದುರುಷ್ಕಾದಿ ಸುಗಂಧದ್ರವ್ಯಸಹಿತನಾಗಿ: **ಅಜಿತಪು,** ೪. ೭೦ ವ)

**ಕುಂಬ** – [ಕುಂಭ] ಗಡಿಗೆ (ಭಕಾರಕ್ಕೆ ಬಕಾರಂ: ಕುಂಭಂ–ಕುಂಬ, ರಂಭೆ–ರಂಬೆ: ಶಬ್ದಮದ, ೨೬೯ ಪ್ರ)

**ಕುಂಬಕಂಬಾಯ್** – ಉಸಿರು ಕಟ್ಟಿಕೊಂಡು ಹಾಯು (ಅಂತು ಪೊಱುವಾತಂ ಕುಂಬಕಂಬಾಯ್ದು ಮಿಡುಕಾಡಿಯುಂ ಏೞಿಸಿಯುಂ .. .. ಗೆಡೆವೊಕ್ಕಿರೆ: **ಶಾಂತಿಪು,** ೯. ೮೦ ವ)

**ಕುಂಬಗಾಱಸಾಲೆ** – ಕುಂಬಾರಸಾಲೆ, ಕುಂಬಾರನ ಮನೆ (ಅಸಮಾನಂ ಕುಂಬಗಾಱಸಾಲೆಯೊಳಿರ್ದಂ: **ಕರ್ಣನೇಮಿ,** ೩. ೧೬೮)

**ಕುಂಬತಳ** – [ಕುಂಭಸ್ಥಲ] ಆನೆಯ ನೆತ್ತಿ (ಜಾಱದೆ ತನ್ನಾನೆಯಿಂ ಆ ಮಾಱಾನೆಯ ಕುಂಬತಳಕೆ ಪಾಯ್ದಳವಿಂ ಕೈದೋಱಿ ಮಱುವಾನಿಸಂ ಮೆಯ್ಯೇಱಿಂ ಕಂಡಗಿದು ಜೋಲೆ ಕೊಂದನದೊರ್ವಂ: **ಕಬ್ಬಿಗಕಾ,** ೨೨೧)

**ಕುಂಬಱ** – ಕುಂಬಾರ (ಪಾಡಿದೊಡೆ ಪಾಡುವಂ ಮತ್ತಾಡಿದೊಡೆ ಆಡುತಿರ್ಪಂ ಆ ಕುಂಬಱನಿಂ ಕೂಡಿರ್ಪನೀಶಂ: **ಸಮಯಪ,** ೯. ೨೮)

**ಕುಂಬಾಱ** – ಕುಂಬಾರ (ಕುಸುಱೆಯಂತೆ ಕಟ್ಟಿಂಗೆವಂದು ಪುಲ್ಲಂತೆ ಸೂಡಿಂಗೆವಂದು ಕುಂಬಾರಾನ ಮಣ್ಣಂತೆ ಮಿದಿಹಕ್ಕೆವಂದು: **ಧರ್ಮಾಮೃ,** ೩. ೪೬ ವ)

**ಕುಂಬಿಡು** – ನಮಸ್ಕರಿಸು, ಬಾಗು (ಶಿಲಾತಳದೊಳ್ ಬರೆದ ಮೃಡನ ಪಡಿವರಿಜಂ ಕಂಡು ಕುಂಬಿಟ್ಟು: **ಕಾದಂಬ,** ೫. ೧೧ ವ)

**ಕುಂಬು** – ಬಾಗು, ನಮಸ್ಕರಿಸು, ಸ್ತುತಿಸು (ರಿಪುಖಗಪತಿಗಳ್ .. .. ಕೂಗಡಗಿ ಬೀತ ಮಾವಿನ ಕೋಗಿಲೆಯೊಲ್ ಕೊಂಬುಗೊಂಡು ಕುಂಬುತ್ತಿರ್ಪರ್: **ನೇಮಿನಾಪು,** ೨. ೮೬)

**ಕುಂಭ** – ಆನೆಯ ಕುಂಭಸ್ಥಳ (ಉತ್ಕರ್ಷಪರಿಪೂರ್ಣಮುಖನುಂ ಮಾನೋನ್ನತ ಅವನತಕುಂಭನುಂ: **ಆದಿಪು,** ೧೨. ೫೬ ವ); ಕೊಡ, ಕಳಶ

**ಕುಂಭಕ** – ಉಸಿರನ್ನು ತಡೆಹಿಡಿಯುವಿಕೆ (ರೇಚಕಪೂರಕ ಕುಂಭಕ ಕ್ರಿಯಾಮನಮಿರೆ: **ಗದಾಯು,** ೬. ೧೫)

**ಕುಂಭಕಾರಕ** – ಕುಂಬಾರ (ಮೃತ್ ಚಕ್ರ ದಂಡ ತೋಯದಿಂ ಅಚ್ಚಿಱಿಗುಂ ಕುಂಬಕಾರಕಂ ಮಡಕೆಗಳಂ: **ಸಮಯಪ,** ೧೦. ೨೨)

**ಕುಂಭಕೂಟ** – ಆನೆಯ ಕುಂಭದ ತುದಿ (ಕಡೆದಂದದೊಳೊಂದಿದ ಕುಂಭಕೂಟದ: **ಚಂದ್ರಪ್ರಪು,** ೯. ೯೩)

**ಕುಂಭಜ** – ಅಗಸ್ತ್ಯ (ಅದೇಂ ಪಳಂಚಲೆದುದೊ ರಾಜರಾಜಸಭೆ ಕುಂಭಜನೀಂಟಿದ ತೋಯರಾಶಿಯಂ: **ಪಂಪರಾ,** ೬. ೭೪)

**ಕುಂಭತಟ** – ಆನೆಯ ಕುಂಭಸ್ಥಳ (ಕುಂಭತಟಂ ಕುಳಭೂಧರಂಗಳಂತಳವಡೆ: **ರಾಜಶೇವಿ,** ೬. ೯೦)

**ಕುಂಭಧ್ವಜ** – ದ್ರೋಣ (ಶೋಣಾಶ್ವಂಗಳ್ ರಜತರಥಮಂ ಪೂಡೆ ಕುಂಭಧ್ವಜಂ ಗೀರ್ವಾಣಾವಾಸಂಬರಂ ಅಡರೆ ಮಾಱಿಪೊಡ್ಡು ದಲ್ ಸಾಲದು ಎನ್ನೀ ಬಾಣಾವಾಸಕ್ಕೆ ಎನುತುಂ: **ಪಂಪಭಾ,** ೧೧. ೫೬)

**ಕುಂಭಭೇಧನ** – ಆನೆಯ ಕುಂಭಸ್ಥಳವನ್ನು ಸೀಳುವುದು (ಸಮದೇಭಕುಂಭಭೇದನ ಸಮಯೋಗ್ರನಖಂಗೆ ಹರಿಗೆ ಮೃಗರಿಪುವೆಸರುಂ ಉತ್ತಮಿಕೆಯೆ: **ಗದಾಯು,** ೨. ೨)

**ಕುಂಭಸಂಭವ** – ದ್ರೋಣ (ದಿವಿಜ ಅಶ್ವ ತ್ಥಾಮದೊಳ್ ಈ ಭುವನಂಗಳ್ ನಡುಗೆ ಶಿಶು ನಕ್ಕು ಸರಂಗೆಯ್ದೊಡೆ

ಕುಂಭಸಂಭವಂ ಇವಂ ಅಶ್ವತ್ಥಾಮನೆಂದು ಪೆಸರಿಡೆ ನೆಗಟ್ದಂ: **ಪಂಪಭಾ,** ೨. ೪೪)

**ಕುಂಭಾಂಬು** – ಕೋಡದ ನೀರು (ಕುಂಭಾಂಬುವಿಂದಂ .. .. ಅಬುಧಿಜಳಂ ಪಿರಿದು: **ಜಗನ್ನಾವಿ,** ೧. ೧೯)

**ಕುಂಭಾಗ್ರನಿರ್ಯತ್** – ಕುಂಭದ ತುದಿಯಿಂದಹರಿಯುತ್ತಿರುವ (ಸಂಜೀವಕಂಗೆ ಒಲ್ದು ನೀಡಿದ ಉದ್ಭಿನ್ನ ಮದಾಂಧಸಿಂಧುರ ಘಟಾಸಂಘಟ್ಟ ಕುಂಭಾಗ್ರನಿರ್ಯತ್ ಅಸೃಕ್ ಕುಂಕುಮ ಪಂಕಪಂಕಿಳಸಟಾಜಾಳಂ ಮೃಗಾಧೀಶ್ವರಂ: **ಪಂಚತಂತ್ರ,** ೧೧೦)

**ಕುಂಭಿ** – ಆನೆ (ಅಂಬರಕೇಶ ಶಂಬರವಿಪಕ್ಷ ಮದಾಂಬುಜ ಕುಂಭಿಜೃಂಭಿತಾಶಾಂಬರ: **ಶಬರಶಂ,** ೨. ೫)

**ಕುಂಭಿನಿ** – ಹೆಣ್ಣಾನೆ (ಅನುವಶೆಯುಂ ಮಾಡಿರಿಸಿದನಾ ರಾಜಕುಂಜರಂ ಕುಂಭೀನಿಯಂ: **ಧರ್ಮಮಧು,** ೧೧. ೮೨)

**ಕುಂಭಿನೀಪತಿ** – ರಾಜ (ಸೌಂದರಾಗನುಂ ನಂದನುಂ ಎಂಬ ಕುಂಭಿನೀಪತಿಗಳಂ ಜರಾಸಂದನನುಜಾತಂ .. .. ನೂಂಕೆ ತಾಗೆ: **ಕರ್ಣನೇಮಿ** , ೧೨. ೧೩೫ ವ)

**ಕುಂಭೀನಸ** – ಹಾವು (ಆ ಕುಂಭೀನಸ ವಿಜೃಂಭಣಕ್ಕೆ ನೆರೆದ ನೆರವಿಯೆಲ್ಲಂ ಒಲ್ಲನೊಲ್ಲನೆ ಉಲಿದೋಡೆ: **ನೇಮಿನಾಪು,** ೮. ೩೩ ವ)

**ಕುಂಭೀರ** – ಮೊಸಳೆ (ಮದ ಕುಂಭೀರಕುಳಪ್ರಚಾರವಿಚಳತ್ ವಾಚಾಳವೀಚೀಚಯಾಸ್ಪದಮಂ .. .. ನಿಂದು ನೋಡಿದಂ: **ಅಜಿತಪು,** ೯. ೧೯)

**ಕುಂಭೋದ್ಭವ** – ದ್ರೋಣ (ಈ ಕೂಸುಗಳ್ ಯೋಗ್ಯರಪ್ಪುದಂ ಇನ್ನೊಲ್ವೊಡೆ ಶಸ್ತ್ರವಿದ್ಯೆಗೆ ಒವಜಂ ನೀನಾಗು ಕುಂಭೋದ್ಭವಾ: **ಪಂಪಭಾ,** ೨. ೫೩)

**ಕುಕವಿ** – ಕೀಳು ಕವಿ, ಕೆಟ್ಟ ಕವಿ (ತಾಮೇಂ ಗಣನೀಯರೆ ಕುಕವಿಗಳ್: **ಪುಷ್ಪದಂಪು,** ೧. ೪೫)

**ಕುಕಿಲ್** – ಕೋಗಿಲೆಯ ಕೂಜನ (ಸೊಗಯಿಸಿ ಬಂದ ಮಾಮರನೆ ತಳ್ತ ಎಲೆವಳ್ಳಿಯೆ ಪೂತ ಜಾತಿಸಂಪಗೆಯೆ ಕುಕಿಲ್ವ ಕೋಗಿಲೆಯೆ ಪಾಡುವ ತುಂಬಿಯೆ ನಲ್ಲರ ಒಳ್ಮೊಗಂ ನಗೆಮೊಗದೊಳ್ ಪಳಂಚಲೆಯೆ ಕೂಡುವ ನಲ್ಲರೆ ನೋಟಿಪ್ಪೊಡೆ: **ಪಂಪಭಾ,** ೪. ೨೮); ಕೂಗು (ಕೂಡೆ ಕೂಕಿಡುವ ಕುಕಿಲ್ವ ಬಿಕ್ಕುಳಿಪ ತೇಗುವ: **ಪಂಪಭಾ,** ೪. ೯೦)

**ಕುಕ್ಕಿರಿ** – ದೇಹವನ್ನು ಕುಗ್ಗಿಸು (ಕಡು ಪಿಳಿಕಿಕ್ಕಿ ಕುಕ್ಕಿರಿದು ಬಿಲ್ಗಳನೇಱಿಸಿ ನೀವಿ ತಾಳ್ದು: **ತ್ರಿಷಷ್ಟಿಪು,** ೨೪. ೩೦೫)

**ಕುಕ್ಕಿಱಿ** – ಹಾರು (ನಿನ್ನ ಪೊರೆಯೊಳಿರ್ದಪೆನೆಂಜದಿರೆಂದು ನಂಬುಗೆಯಂ ಕೊಟ್ಟು ಉರ್ಕಿ ಕುಕ್ಕಿಱಿದಣೆರ್ದಾಡಿದರ್: **ತ್ರಿಷಷ್ಟಿಪು,** ೨೭. ೧೨೦ ವ)

**ಕುಕ್ಕು** – ಕೊಕ್ಕಿನಿಂದ ಕುಟುಕು (ಕಾಗೆ ಕುಕ್ಕಿ ಕೊಕ್ಕಿಂ: ರಾಜಶೇಖ, ೯. ೨೬); ಕೊಕ್ಕರೆ (ತ್ರಿದಶಶರಾಸನಂ ತಳಿರ ತೋರಣಮಾಗಿರೆ ಕುಕ್ಕಿನೋಳಿ ಚೆಲ್ವಿದಿರ್ಗೊಳೆ: **ಆದಿಪು,** ೬. ೭೧)

**ಕುಕ್ಕುಟ** – ಹುಂಜ (ಎಱಕೆಗಳಂ ಮೆಲ್ಲನೆ ಉರ್ಚುತ್ತೆ ನಿಂದು ಒಯ್ಯನೆ ಸಾರ್ದು ಆ ತ್ರೋಟಿಯಿಂದಂ ತೊಡೆದು ಗಱೆಗಳಂ ನುಣ್ಣವಿರ್ ಬಿರ್ಚಿ ಮೆಯ್ಯಂ ತೊನೆದು ಉದ್ದಂ ನೀಡಿ ಗೋಣಂ ನವ ದಿನಮುಖದೊಳ್ ಕುಕ್ಕುಟಂ ಕೂಗಿತಾಗಳ್: **ಶಾಂತೀಶ್ವಪು,** ೧೧. ೯೬); ಮೋಸ, ಕಪಟ (ಕುಕ್ಕುಟಮಂ ಮಾಡುವರೊಳ್ ನಂಬುಗೆಯಿಂ ಕೂಡಿದೊಡೆ ಏನಾನುಮೊಂದು ದೋಷಂ ಸಾರ್ಗುಂ: **ಧರ್ಮಾಮೃ,** ೬. ೫೯)

**ಕುಕ್ಕುಟಮಲ್ಲಮೇಷಮಹಿಷೇಭದ್ವಂದ್ವಯುದ್ಧಕ್ರಿಯಾಪರ** – ಹುಂಜ ಮಲ್ಲರು ಟಗರುಗಳು ಕೋಣಗಳು ಆನೆಗಳು ಇವುಗಳ ದ್ವಂದ್ವಯುದ್ಧದಲ್ಲಿ ನಿರತನಾಗಿರುವವನು (ಸುರತಾಸಕ್ತನಂ ಅನ್ಯಕಾರ್ಯಪರನಂ ನಿದ್ರಾಳುವಂ .. .. ಕುಕ್ಕುಟಮಲ್ಲಮೇಷಮಹಿಷೇಭದ್ವಂದ್ವಯುದ್ಧಕ್ರಿಯಾ ಪರನಂ ಭುಪನಂ ಎಯ್ದಿ ಬಿನ್ನವಿಸಬೇಡ: **ಪಂಚತಂತ್ರ,** ೮೩)

**ಕುಕ್ಕುಟಾಸನ** – ಯೋಗಾಸನದ ಒಂದು ಪ್ರಕಾರ, ಕೋಳಿಯಂತೆ ಕುಳಿತುಕೊಳ್ಳುವುದು (ಬಂದಂ ಚರಿಗೆಗೆ ಬನದಿಂ ಮಂದಾನಿಲದಂತೆ ಕುಕ್ಕುಟಾಸನದೇವಂ: **ನೇಮಿನಾಪು,** ೧. ೮೨)

**ಕುಕ್ಕುಟೇಶ್ವರ** – ಗೊಮ್ಮಟೇಶ್ವರ (ಉನ್ನತ ಕುಕ್ಕುಟೇಶ್ವರ ಜಿನೇಶ್ವರನಂ ಜಿನಭಕ್ತೆ ಪೋಗಿ ಕಾಣ್ಬನ್ನೆಗಂ.. ..ಅತ್ತಿಮಬ್ಬೆಗೆ ಪಥಶ್ರಮಮಾದುದು ಅಕಾಲವೃಷ್ಟಿ: **ಅಜಿತಪು,** ೧. ೬೦)

**ಕುಕ್ಕುರ** – ನಾಯಿ (ಊಳ್ವ ಕುಕ್ಕುರಕುಳಮಂ ಲೆಕ್ಕಿಪುದೆ ಪೋಪ ಮದಶುಂಡಾಲಂ: **ಉದ್ಭಟಕಾ,** ೧. ೨೫)

**ಕುಕ್ಕುರಿ** – ಹೆಣ್ಣು ನಾಯಿ (ಕರಹಟದೊಳ್ ಬೇಂಟೆಯ ಕುಕ್ಕುರಿಯಾದಳ್ ಸತ್ತು ಚಂದ್ರಮತಿಇಯುಂ ಬಟಿಕ: **ಯಶೋಧಚ,** ೩. ೩೮)

**ಕುಕ್ಕುಱಿಸು** – ಕುಕ್ಕರಿಸು, ಕುಸಿದು ಬೀಳು (ತಳ್ತು ಕುಕ್ಕುಱಿಸದ ವೀರರಿಲ್ಲ ನತರಾಗದ ಬಲ್ಲಿದರಿಲ್ಲ .. .. ಎನೆ ಬಾಳ್ವ ನಗಾಧಿನಾಯಕರ್: **ಗಿರಿಜಾಕ,** ೨. ೧೦೪)

**ಕುಕ್ಕುಱುಗುದಿ** – ಅನ್ನ ಕುದಿಯುವಂತೆ ಕುದಿ (ಎನಿತಂ ಕುಕ್ಕುಱುಗುದಿದಪೆ ಎನಿತಂ ಕಕ್ಕಳಗಱಲ್ದಪಯ್ ಜೀವನೆ ನೀನೆನಿತಂ ಮಲ್ಮಲ ಮಱುಗುವೆ ಎನಿತಂ ಸಂಸಾರದೊಳಗೆ ತಿಱ್ಱನೆ ತಿರಿವಯ್: **ಅಜಿತಪು,** ೨. ೬೧); ತಳಮಳಪಡು (ಸುಟಿಯೊಳಗಿರ್ದು ಬೆಟ್ಟು ಪೊಱಪೊಣ್ಮುವಿನಂ ಲವಣಾಂಬುರಾಶಿ ಕುಕ್ಕುಱುಗುದಿವಲ್ಲಿ ಕೊಟ್ಟುದಿಯೆ ಮೇಗೆ ಸಿಡಿಲ್ದಗುಳಂತೆ ಕೂಡೆ: **ಪಂಪಭಾ,** ೧೧. ೧೫೩)

**ಕುಕ್ಷಿ** – ಹೊಟ್ಟೆ (ಬಸಿಱ್ ಉದರಂ ಜಠರಂ ಕುಕ್ಷಿಸಮಾಹ್ವಂ: **ಅಭಿಧಾವ,** ೧. ೧೨. ೬)

**ಕುಕ್ಷಿನಿವಾಸ** – ಗುಹೆಯಲ್ಲಿನ ವಾಸಸ್ಥಳ (ಇಪ್ಪತ್ತೆಣ್ಟಾಶಿರ ದುರ್ಗಭೂಮಿಗಳಿಂದಂ ನೂಱು ಕುಕ್ಷಿನಿವಾಸಗಳಿಂದಂ: **ಶಾಂತಿಪು,** ೧೧. ೮೪ ವ)

**ಕುಕ್ಷಿನಿವಾಸಿ** – ಗುಹೆಯಲ್ಲಿ ವಾಸಿಸುವವನು (ಪ್ರತ್ಯಂತನಿವಾಸಿಗಳಪ್ಪ ಏಳ್ನೂಱು ಕುಕ್ಷಿನಿವಾಸಿಗಳುಂ: **ಆದಿಪು,** ೧೫. ೩ ವ)

**ಕುಕ್ಷಿವಾಸ** – ರತ್ನವಿಕ್ರಯಸ್ಥಾನ (ಪ್ರತ್ಯಂತವಾಸಿಗಳಪ್ಪ ಏೞ್ನೂಱು ಕುಕ್ಷಿನಿವಾಸಿಗಳುಂ: **ಆದಿಪು,** ೧೫. ೩ ವ)

**ಕುಚ** – ಮೊಲೆ, ಕೆಚ್ಚಲು (ಸುರಭಿಯ ತೊರೆದ ಕುಚಂಗಳ ಬೆರಗಂ ಬೆರಲಿಳಿಸೆ: **ಪುಷ್ಪದಂಪು,** ೩. ೧೧೯)

**ಕುಚಂದನ** – ಕೆಂಪು ಗಂಧದ ಮರ (ತಮಾಳ ಕುಚಂದನ ಚಂದ ನಾಗ ಜಂಬಿರ ಪನಸು ಆಮ್ರ ನಿಂಬ ಕುಟಜಾದಿ ಮಹಾಕುಜಸಂಕುಳಂಗಳಂ: **ಹರಿವಂಶ,** ೭. ೭)

**ಕುಚಚೂಚುಕ** – ಮೊಲೆಯ ತೊಟ್ಟು (ಬಸಿಱ ತಳ್ಪಳಿದತ್ತೆ ಮೊಗಂ ಬೆಳ್ಪೇಱಿದುದೇ ಕುಚಚೂಚುಕಂ ಮಸುಳ್ದುವೇ: **ಆದಿಪು,** ೭. ೩೧)

**ಕುಚಾನನ** – ಕುಚಚೂಚುಕ (ಪೀನ ಕುಚಾನನದೊಳ್ ಕಪು ಆನನದೊಳ್ ಬೆಳ್ಪು ತೋಱೆ: **ಪಂಪರಾ,** ೨. ೩೩)

**ಕುಚ್ಚ** – ಒಂದು ಬಗೆಯ ಮೀನು (ಬಾಳೆಮೀನ್ ಪಾವುಮೀನ್ ಕಿಱುಮೀನ್ ಕೆಂಗಣೆಯಚ್ಚೆ ಕುಚ್ಚ ಲತಿಗಂ ಕಾಗೆಂಡೆ .. .. ಎನಿಪಿವೆಲ್ಲಂ ಬೀಳ್ದುವು: **ರಾಜಶೇವಿ,** ೫. ೧೧೫)

**ಕುಜ** – ಮರ (ಉರಿ ಕೊಳೆ ದೆಸೆಗಾಣದೆ ದೆಸೆವರಿವರಿದು ಕುಜಂಗಳಂ ಪಡಲ್ವಡಿಸಿ ಭಯಂಬೆರಸು ಒಳಱೆ ನೆಗೆದುದಾ ವನ ಕರಿ ಶರಭ ಕಿಶೋರಕಕಂಠಗರ್ಜನೆ ಬನದೊಳ್: **ಪಂಪಭಾ,** ೫. ೯೧); ಮಂಗಳ ಗ್ರಹ (ಚಂದ್ರ ಕುಜ ಬುಧ ಅಮರಗುರು ದೈತ್ಯಾರಾಧ್ಯಂಫಣಿಗೆಳಂ ಆರಾಧಿಪಂ ಒಂದು ಮಣೆಗೆ ತಂದು: **ಸಮಯಪ,** ೮. ೧೬೩)

**ಕುಜಾತ** – ಭೂಮಿಯಿಂದ ಹುಟ್ಟಿದುದು, ಮರ (ವಸಂತಮನಾಂತ ಕುಜಾತಪಲ್ಲವಪ್ರಸರದಿಂ ಆ ವಸಂತಮಯ ಕುಸುಮಾವಳಿಯಿಂದೆ .. .. ರಂಜಿಸುವಂತಿರಲ್: **ಕಾದಂಸಂ,** ೪. ೪)

**ಕುಟ** – ಕೊಡ (ಘಟಂ ಕುಟಂ ಕಳಶ: **ಅಭಿಧಾವ,** ೧. ೧೦. ೨೯); ಮರ (ವನಸ್ಪತಿ ಮರಂ ನಗಂ ಕುಟ; **ಅಭಿಧಾವ,** ೧. ೭. ೧); ಸುತ್ತಿಗೆ

**ಕುಟುಂಬಿನಿ** – ಹೆಂಡತಿ (ದೇವಿಲನೆಂಬ ಗ್ರಾಮಕೂಟಂಗಂ ಆತನ ಕುಟುಂಬಿನಿ ವಸುಮತಿಗಂ: **ಆದಿಪು,** ೩. ೩೮ ವ)

**ಕುಟಜ** – ಕೊಡಸಿಗೆ ಹೂ (ವಿರಹಿಜನಕ್ಕೆ ಕುಟಜ ಕುಂದ ನವೋದ್ಗಮವಾಟ ರಾಗಮಂ ವಿರಹಿಜನಕ್ಕೆ ಮಾಡಿದುದು: **ಕಾದಂಬ,** ೯. ೯೭)

**ಕುಟಿ** – ಗುಡಿಸಲು (ಏಪೊಟ್ಟುಂ ಉಱೆಗುಮೋ .. .. ಸುಕವಿಯಶೋದೀಪಾಂಕುರದಗ್ಧ ಕರ್ಣಕೋಟರ ಕುಟಿಗಳ್: **ಲೀಲಾವತಿ,** ೧. ೨೭)

**ಕುಟಿಲಾಲಕ** – ಗುಂಗುರು ಕೂದಲು (ಕುಟಿಲಾಲಕಮಂ ಪಿಡಿದೀಟ್ದು ತಂದು ಮಂಡೋದರಿಯಂ; **ಪಂಪರಾ,** ೧೪. ೧೦೩)

**ಕುಟಿಳ** – ವಕ್ರವಾದ (ವಕ್ರಶೀಳಂ ಕುಟಿಳಂ: ಅಭಿಧಾವ, ೧. ೨. ೧. ೨೧)

**ಕುಟಿಳಾಳಕಿ** – ಗುಂಗುರು ಕೂದಲುಳ್ಳವಳು (ಅರೆಬರ್ ಕುಟಿಳಾಳಕಿಗೊಲ್ದು ಕಂಕಣಂಗಳನಿಟ್ಟರ್: **ಪುಷ್ಪದಂಪು,** ೮. ೫೬)

**ಕುಟೀರಕ** – ಸಣ್ಣ ಗುಡಿಸಲು (ಎಱಗಿರ್ದುವು ಷಟ್ಪದಂಗಳ್ ಉತ್ಕೇಸರಕೋಟಿ ಸಂಕಟ ಕುಶೇಶಯ ಕೋಶ ಕುಟೀರಕಂಗಳೊಳ್: **ಪಂಪಭಾ,** ೪. ೪೭)

**ಕುಟುಂಬಿನಿ** – ಮನೆಯ ಒಡತಿ ನೀಂ ಬೇವಾದೊಡೆ ನಿನ್ನ ಕುಟುಂಬಿನಿಯುಂ ಪಯ್ಪೆ ಸೊರೆಯ ಕುಡಿಯೇಂ ಮಿಡಿಯೇಂ: **ಸುಕುಮಾಚ,** ೪. ೨೮)

**ಕುಟುಕು** – ಹಕ್ಕಿ ಮರಿಗೆ ಕೊಡುವ ಗುಟುಕು (ಆತಂ ಎನಗೆ ಕುಟುಕನಿಕ್ಕಿ ಮಿಕ್ಕುದಂ ತನಗೆ ಅಶನಂ ಮಾಡಿ ಜೀವಿಸುತ್ತುಂ ಇರೆ: **ಕಾದಂಬ,** ೧. ೧೧೩ ವ)

**ಕುಟ್ಟಿನಿ** – ಕುಂಟಣಿ (ಎಂದು ಕುಟ್ಟಿನಿ ಕೆಯ್ಗಳಂ ಮುಱೆದು ಬಯ್ದಳ್ ಅನಂಗನನ್ ಆ ಪ್ರಸಂಗದೊಳ್: **ನೇಮಿನಾಪು,** ೪. ೧೫೦)

**ಕುಟ್ಟಿಮ** – ನೆಲಗಟ್ಟು (ಇಂದ್ರನೀಲಮಣಿಕುಟ್ಟಿಮ ಸಂಕ್ರಾಂತಮೌಕ್ತಿಕದಾಮಾಭಿರಾಮದೊಳ್: **ಆದಿಪು,** ೮. ೬೭ ವ); ಜಗಲಿ (ನೀಳಾಭ್ರವಿಭ್ರಮಕುಟ್ಟಿಮದೊಳ್ ಅಮಳ ಹರಿನ್ಮಣಿಮಯೂಖರೇಖಾಜಟಿಳೋದಾತ್ತ ಚಿತ್ತಭಿತ್ತಿವಿಭ್ರಾಜಿತ: **ಸುಕುಮಾಚ,** ೧೨. ೪೨ ವ)

**ಕುಟ್ಟು** – ಗುದ್ದು, ಹೊಡೆ (ಕುಟ್ಟು–ತಾಡನೇ: **ಶಬ್ದಮದ,** ಧಾ ೨೪೦)

**ಕುಟ್ಮಲ** – ಮೊಗ್ಗು (ಸದಮಳ ಮುಕ್ತಾವಳಿಯಿಂ ಪೊದೆಯಿಸಿದನೊ ಚೈತ್ರನೆನೆ ತದೀಯ ಲತಾವಾಸದ ವಿಚಕಿಲಕುಟ್ಮಲ ವಿಸರದ ಪದಪು ಅದಂ ದೇವಿ ನಾಡೆ ನೋಡುತ್ತಿರ್ದಳ್: **ಶಾಂತೀಶ್ವಪು,** ೫. ೧೨೫)

**ಕುಟ್ಮಳ** – ಕುಟ್ಮಲ, ಮೊಗ್ಗು (ವಿಭಿನ್ನ ಕುಟ್ಮಾಗ್ರ ಆಸವಗಂಧದಿಂ ಕಳಿಯೆ ಸೊರ್ಕಿಸಿತೀ ಜಗಮಂ: **ಲೀಲಾವತಿ,** ೯. ೧೧೭)

**ಕುಠಾರ** – ಕೊಡಲಿ, ಒಂದು ಆಯುಧ (ಶಠಪ್ರಕೃತಿ ನಿರ್ಗುಣಂ ಸಕಲಧರ್ಮಭೂಜಾವಳೀಕುಠಾರಂ ಇರದೆ ಎಯ್ದಿದಂ: **ಪಂಚತಂತ್ರ,** ೧೫೦)

**ಕುಡಿ** – ಸೇವಿಸು (ಉಣ್ಬುದಿಲ್ಲ ಕುಡಿವುದಿಲ್ಲ ಉಪವಾಸಂಗೆಯ್ದಿರ್: **ವಡ್ಡಾರಾ,** ಪು. ೭೬, ಸಾ. ೬); ಚಿಗುರು (ನಿಮಿರ್ದ ಕುಡಿಯೊಳ್ ಗಿಳಿ ಪಾಯ್ದತ್ತೆನಿಸಿ ಸತಿಗೆ ತಂಬುಲಮಿತ್ತಳ್: **ಆದಿಪು,** ೭. ೧೨)

**ಕುಡಿಗೈ** – ಸೊಂಡಿಲಿನ ತುದಿ (ಜಲಂಗಳಂ ಕುಡಿಗೈಗಳಿನೊಯ್ದು ತಂದು ಮುಂಗುಡುವುವು ಹಸ್ತಿ: **ಸೂಕ್ತಿಸುಧಾ,** ೭. ೧೭೩)

**ಕುಡಿಗೊಳ್** – ಚಿಗುರೊಡೆ (ಮೆಲ್ಲುಗೊಂಡುದು ಸರಂ ಕುಡಿಗೊಂಡುದು ಕುಂತಳೋತ್ಕರಂ: **ಸೂಕ್ತಿಸುಧಾ,** ೭. ೫೪)

**ಕುಡಿತೆ** – ಬೊಗಸೆ (ಕುಡಿತೆಯ ನೀರಂತುಗಲುಂ ಕುಡಿಯಲ್ಕೆ ಉಂಟೆನಗೆ ಲವಣವಾಧಿಯ ನೀರಂ: **ಆದಿಪು,** ೧೨. ೮೭)

**ಕುಡಿಮಿಂಚು** – ಬಳ್ಳಿಮಿಂಚು, ಕುಡಿಯಂತಹ ಮಿಂಚು (ನೆನೆಯಿಸಿದನೆಸೆದು ಬಾಲಕನೆನಸುಂ ಕುಡಿಮಿಂಚು ನಿಮಿರ್ದ ಕೆಮ್ಮುಗಿಲಿರವಂ: **ಕುಸುಮಾಕಾ,** ೬. ೯೩)

**ಕುಡಿಮುಂಜೆರಗು** – ಮುಂಜೆರಗಿನ ತುದಿ (ಚೆನ್ನಪೊಂಗರ ಕುಡಿಮುಂಜೆಱಗು ನಿಡುಬಯ್ತಲೆ ಬಾರ್ತೆಯೆ: **ಅನಂತಪು,** ೮. ೪೯)

**ಕುಡಿಯ** – ಒಕ್ಕಲಿಗ (ಬಸವಂ ಕೆಯ್ಯಂ ಪೊಕ್ಕೊಡೆ ಬಸವನ ಕಾಲುಡಿಯೆ ಬಡಿದು ಕುಡಿಯಂ ಬಯ್ವಂ: **ಸಮಯಪ,** ೧೦. ೧೨೮)

**ಕುಡಿಯಳ್ಳೆ** – ಪಕ್ಕೆಯ ತುದಿ (ತೊಡೆಸಂಕಲೆಯಿಕ್ಕಿದವೊಲ್ ಕುಡಿಯಳ್ಳೆಗಳಿಂದ ಸುರಿದುವು ಇಕರ್ಱಲಕೆ ಕರುಳ್ಗಳ್: **ಶಬ್ದಮದ,** ೧೧೭ ಪ್ರ ೪)

**ಕುಡಿಯಿಡು** – ಚಿಗುರೊಡೆ (ಶಶಿಯ ತಣ್ಗದಿರ್ಗಳ್ ಕುಡಿಯಿಟ್ಟುವೆಂಬಿನಂ ಪಸರಿಸಿ ದಂತಕಾಂತಿ: **ಕುಸುಮಾಕಾ,** ೨. ೨೮)

**ಕುಡಿವರಿ** – ಹಬ್ಬು (ಹೃದಯದೊಳಂಕುರಿಸಿ ಮುಖಾಗ್ರದಿಂದೆ ಕುಡಿವರಿವ ಕೋಪ: **ಜಗನ್ನಾವಿ,** ೧೧. ೮೮)

**ಕುಡಿವಾಲ** – ಬಾಲದ ತುದಿ (ಅಗ್ಗದ ನಿಡುಗೋಡು ಮೇಡುವಂ ಅಮರುತ್ತುಂ ಇಱುಂಕಿದ ಕೆಚ್ಚಲ್ ಎತ್ತಮೆತ್ತಿದ ಕುಡಿವಾಲಮಂದೆಸೆಯೆ ಕರ್ಬುಸುಗಳ್ ಪರಿಗೊಂಡುವು ಆಜಿಯೊಳ್: **ಪಂಪಭಾ,** ೮. ೧೦೪)

**ಕುಡು** – ಹೊಡೆ (ಕಸೆಯನಿನಿಸಱುಪಿ ಕುಡೆ ಲಂಘಿಸಿದುದು ಪನ್ನೆರಡುಯೋಜನಮಂಬರಂ: **ಆದಿಪು,** ೧೩. ೩೯); ವಕ್ರವಾಗಿರುವಿಕೆ (ಕುಡುದಾಡೆಯಿಂದ ಇಱೆದುದು ಎತ್ತಿದುದು

ಇರ್ಬಗಿಯಾಗಿ ಕಾಯನೊಟ್ಟಿದುದು ಅವರಟ್ಟೆಯಂ ಕೊಱೆದು ತಿಂದುದು ತೇಗಿದುದು ಉಗ್ರಸೂಕರಂ: **ಶಬರಶಂ,** ೪. ೧೬); ನೀಡು (ಕುಡು–ಪ್ರದಾನೇ ವಕ್ರೇ ಚ: **ಶಬ್ದಮದ, ಧಾ** ೨೯೭)

**ಕುಡುಕಿಕ್ಕು –** ಕುಟುಕು ಇಡು (ಅಂಗಕಾಂತಿಯಂ ತಾಮ ಕುಡುಕಿಕ್ಕುವಂ ಯುವತಿನೇತ್ರಚಕೋರಚಯಕ್ಕೆ: **ನೇಮಿನಾಪು,** ೪. ೧೩೬

**ಕುಡುಕು –** ಕುಟುಕು, ಗುಟುಕು (ಅಂಚೆ ಚಂಚುವಿಂ ಕಿರಕಿರವಾಗಿ ಕರ್ಚಿ ಕುಡುಕಂ ಮಱೆಗಿತ್ತಪುವು ಎಂಬ ಬಲ್ಮೆ ಕಣ್ದೆಱೆದವೊಲಿರ್ದ ಚಿತ್ರಕನ ಚಿತ್ರದ ಚಿತ್ರವಿಧಕ್ಕೆ ಮೆಚ್ಚಿದಂ: **ಮಲ್ಲಿನಾಪು,** ೫. ೨೯)

**ಕಡುಕುಂದಱೆ –** ಹಲ್ಲುಗಳುಳ್ಳ ಕತ್ತಿ, ತಿವಿವ ದಸಿ (ದಕಾರಕ್ಕೆ: ಕುಡುಕುಂದಱೆ, ಉರ್ಕುಂದೊಱೆ: **ಶಬ್ದಮದ,** ೧೮೧, ಪ್ರ, ೨)

**ಕುಡುಕುಗೊಳ್ –** ಕುಕ್ಕಿ ತಿನ್ನು ಸಾರ್ತಂದು ಅಗಲ್ಚಲುರ್ಚಿದ ಕಟ್ಟಿಲೆಯಂ ಕುಡುಕುಗೊಳ್ವ ಕೋಕದ್ವಯಮಂ: ಲೀಲಾವತಿ, ೧೩. ; ತುತ್ತುಗೊಳ್ಳು

**ಕುಡುಗುರುಳ್ –** ಮುಂಗುರುಳು (ಕುಡುಗುರುಳೆಂಬ ತೆಂಬೆಲರ ಬೆಂಬಿಡಿದು ಪೊಸವೇಟಮೆಂಬ ಚಿಲ್ವಿಡಿದು: **ಆದಿಪು,** ೧೨. ೨೮)

**ಕುಡುಗೂಸು –** ಕನ್ಯೆ, ಮದುವೆಯಾಗದವಳು (ಆಂ ಕುಡಗೂಸಪ್ಪೆನದು ಕಾರಣದಿಂ ಎಮ್ಮ ತಾಯಲ್ಲಿಗೆ ಪೋಗಿ ಬೇಡಿಂ ಎನೆ; **ಪಂಪರಾ,** ೮. ೬೧ ವ)

**ಕುಡುಗೋಲ್ –** ಕುಡಿಲು (ಕುಡುಗೋಲಂ ಕೂಱೆಗೆಯಂ ಕೊಡಲಿ ಕುರುಂಜಿಗೆಯಂ ಉಱುವ ಪರಗುವ ಕಱುಪಿಂ ಬಿಡದೆಯಗುಟ್ದಾ ಮುಟ್ಟಂ ಕುಡರ್ ಎರವಂ ಪೆಱರ್ಗೆ: **ಸಮಯಪ,** ೫. ೧೭)

**ಕುಡುದಾಡೆ –** ಕೋರೆ ಹಲ್ಲು (ಪೊಳೆದು ಉಳ್ಕುವ ಕುಡುದಾಡೆಯ ಪೊಳಪು ನೊಸಲ್ಗಡರ್ದು ಪೊಡರ್ವ ಪುರ್ವಸೆವಿನಂ ಅವ್ವಳಿಸುವ ಮುಳಿಸಿನ ದಳ್ಳುರಿಗಳಂ ಉಗುಟ್ದುವೊಲ್ ಉಗುಟ್ದಿಂ ಅಸುರಂ ಉರಿವ ಪಟಿಗಳಂ; **ಪಂಪಭಾ,** ೬. ೫೯)

**ಕುಡುಪು –** ಕುಡುವು, ಕುಡುಹು, ಡೊಂಕು; ವಾದ್ಯ ಬಾರಿಸುವ ಕೋಲು (ಕುಡುಪುಂ ಕಯ್ಯುಂ ಜತಿಯೊಳ್ ತಡತಡವರೆ ವಾದಕಂಗೆ ಪುರ್ವಿಂ ಜತಿಯಂ ತೊಡರದೆ ನಡೆಯಿಸಿ: **ಆದಿಪು,** ೯. ೩೨); ಭೇರಿಯನ್ನು ಹೊಡೆಯಲು ಬಳಸುವ ಕೋಲು (ಸಮರಸನ್ನಾಹಭೇರಿಯಂ ಪೊನ್ ಕುಡುಪಂ ಪಿಡಿದಡಸಿ ಪೊಡೆಯಲೊಡನೆ: **ರಾಜಶೇಖ,** ೬. ೩೦ ವ)

**ಕುಡುಮಿಂಚು –** ಕೊಂಕಾದ ಮಿಂಚು (ಕುಡುಮಿಂಚು ಮಸೆದನ್ನರಪ್ಪ ಪಲರೊಳ್ವೆಂಡಿರ್ ಮನಂಗೊಂಡು ಬಂದೊಡಂ: **ಆದಿಪು,** ೩. ೧೨)

**ಕುಡುವಿಲ್ –** ಕುಡುಬಿಲ್ಲು, ಡೊಂಕಾದ ಬಿಲ್ಲು (ಕುಡುವಿಲ್ಲ ಜೇವಡೆಗೆ ಬಿಗುರ್ತಂತೆ ಕಣ್ ಮುಕುಳಿಸಿದುದು: **ಕಾದಂಬ,** ೧೦. ೫೫ ವ)

**ಕುಡುವಿಲ್ಲ –** ಮನ್ಮಥ, ಕಾಮ (ಕುಡುವಿಲ್ಲನೆಚ್ಚ ಸರಲುಂ ನಡದು ದಲಂದೊರ್ವನೆರ್ದೆಯಂ: **ಕಾವ್ಯಾವಲೋ,** ೨೧೯)

**ಕುಡುವುರ್ವು –** ಕುಡಿ ಹುಬ್ಬು (ರೌದ್ರರಸಮಂ ನಿಱೆಸಿದ ಕುಡುವುರ್ವು ಕರ್ಚಿದ ಔಡು ಉರ್ಚಿದ ಬಾಳ್: **ಗದಾಯು,** ೪. ೨೭)

**ಕುಡುವೆಱೆ –** ಕೊಂಕಿದ ಚಂದ್ರ (ಕುಡುವೆಱೆಯಂತೆ ತೋರ್ಪ ಕುಡುದಾಡೆ: **ಶಬ್ದಮದ,** ೧೯೫ ಪ್ರ ೩)

**ಕುಡ್ಯ –** ಗೋಡೆ (ಗಗನಸ್ಫಟಿಕಪ್ರಾಕಾರವೇದಿಕಾಕುಡ್ಯದ್ವಯ ಉಪಶೋಭಿತಮುಂ: **ಆದಿಪು,** ೧೦. ೩೫ ವ)

**ಕುಣಪ –** ಹೆಣ (ಎತ್ತಲುಂ ದುರ್ಮೃತಿವೆತ್ತು ಬಿಟ್ದಿ ತನುಭೃತ್ ಕುಣಪಾವಳಿ ಕಾಣಲಾಯ್ತು: **ಆಚವರ್ಧ,** ೩. ೪೩)

**ಕುಣಪಾಲಯ –** ಶ್ಮಶಾನ (ಬೇತಾಳಂ ಸ್ಥೂಲಶಿರನಾರ್ದು ಕುಣಿದಂ ಶೂಲದ ತಲೆ ಕುಣಿವ ತೆಱದೆ ಕುಣಪಾಲಯದೊಳ್: **ನೇಮಿನಾಪು,** ೫. ೨೭)

**ಕುಣಿ –** ನೆಗೆ, ನರ್ತಿಸು (ಇರದನುರಾಗದಿಂ ಕುಣಿಯುತಿರ್ಪವೊಲಿರ್ದುದು ವೀಚಿಬಾಹುಗಳ್: **ಅಜಿತಪು,** ೬. ೧೨೮); ಮೊಂಡುಗೈಯ, ಕುಂಟ (ವಿಲಾಮಗಂ ಪೋಗಂಡಂ ಶುಕರಂ ಕುಣಿ ಪಂಗು ಪೆಱವನೆನಿಕುಂ: **ಅಭಿಧಾವ,** ೧. ೧೨. ೩೯)

**ಕುಣಿಕೋಲ್ –** ಕೋಲಾಟದ ಕೋಲು (ಮುಂದೊಂದೂರ ಸಮೀಪದೊಳ್ ಆಡುವ ಮಕ್ಕಳು ಕುಣಿಕೋಲಂ ಪೊಯ್ಯಲ್: **ಪುಣ್ಯಾಸ್ರ,** ೫. ೬೭ ಗಾಹೆ ವ)

**ಕುಣಿಲ್ವಾಱು –** ನೆಗೆದಾಡು (ಕಡಿಕಂಡಮಾದ ಮೆಯ್ಯುಂ ಕುಣಿಲ್ವಾಱುವ ಮುಂಡಮುಂ ಮುಂಡುವೋದ ಕಯ್ಯುಂ ಕಂಡುವೋದ ತೊಡೆಯುಂ ಪಿಸುಟ್ದಿ ಕಿಱಿಪ್ಪೊಡೆಯುಂ ಕಣೆವೋದ ಕಣಕಾಲುಂ ದೊಣೆವೋದ ಮೇಗಾಲುಂ: **ಪಂಪರಾ,** ೧೩. ೫೪ ವ)

**ಕುಣುಕು –** ಕುಟ್ಟು, ಪುಡಿಮಾಡು, ಅಗುಳಿ (ಕುಣುಕು– ಮುಸಲಕ್ರಿಯಾಯಾಂ ಕೀಲೇ ಚ: **ಶಬ್ದಮದ, ಧಾ** ೨೪)

**ಕುತಪ –** ಕೆಟ್ಟ ತಪಸ್ಸು (ಇತರ ಮುನಿ ನಿಜ ಕುತಪದೊಳಂ ನಿಲ್ಲದವನೇಂ ನಿಂದಪನೇ: **ಸಮಯಪ,** ೭. ೬)

**ಕುತಕಪ್ರತತಿ –** ಗಾಯಕ ವಾದಕ ನರ್ತಕರ ಸಮೂಹ (ವೈಣಿಕ ಪಾಣಿವಿಕ ವಾಂಶಿಕ ಮಾರ್ದಂಗಿಕ ಗಾಯಕ ನರ್ತಕಾದಿ ಕುತಪಪ್ರತತಿಯುಂ: **ಚಂದ್ರಪ್ರಪು,** ೬. ೭೫ ವ)

**ಕುತಪಿ –** ವಾದ್ಯಗಾರ (ಸಂಗೀತಮಂ ತೋಱೆ ಮೆಚ್ಚಿಸಲ್ ಓರಂತೆ ಸಮಸ್ತದೇವಕುತುಪಿವ್ಯೂಹಂ ತೆರಳ್ಚಿರ್ದುದು: **ಆದಿಪು,** ೯. ೧೨೦

**ಕುತೀರ್ಥ –** ಕೆಟ್ಟಮತ (ಪಸರಿಸಿದ ಕುತೀರ್ಥಧ್ವಾಂತಮಂ ತೂಳ್ದಿ: **ಅಜಿತಪು,** ೧. ೧೬)

**ಕುತ್ಕೀಲ –** ಬೆಟ್ಟ (ಬರವೇಟ್ದಿಟ್ಟಿದಂ ಇಂದ್ರಕೀಲ ಹಿಮವತ್ ಕುತ್ಕೀಲ ವಿಂಧ್ಯಾವನೀಧರ ಕೈಲಾಸಕುಭೃತ್ತ್ರಿಕೂಟಧರ .. .. ಸಂದೋಹಮಮಂ: **ಪಂಚತಂತ್ರ,** ೩೬೪)

**ಕುತ್ಕೀಲಕೂಟ –** ಗಿರಿಶಿಖರ ಪ್ರಿಯಹಂಸೀಯುತಹಂಸನಾದೆಯ ಮಹಾಕುತ್ಕೀಲಕೂಟಪ್ರಭೇದೆಯ: **ಆದಿಪು,** ೧. ೫೪)

**ಕುತ್ಕೀಳ –** ಕುತ್ಕೀಲ (ವೇಳಾವನಂಗಳುಂ ಕುತ್ಕೀಳಗಳುಂ ಆವ ನೃಪನ ಪಡೆ ನಡೆವೆಡೆ ನಿರ್ಮೂಳಂಗಳಾದುವು: **ಆದಿಪು,** ೧೩. ೭೫)

**ಕುತ್ತ –** ರೋಗ (ಆಯಿಲದ ಅಳುಪಿನ ಇಟೆವಿಟೆಯುಂ ಕುತ್ತದ ಮಱುಕದ ಚಿತ್ತವೃತ್ತಿಯುಂ ಅಪಮೃತ್ಯುವಿನ ಸತ್ವಬಾಧೆಯ ಗಂಧಾಗಂಧಮುಂ ಇಲ್ಲ: **ಶಾಂತಿಪು,** ೬. ೧೦೨ ವ)

**ಕುತ್ತಂಗುಳಿ –** ರೋಗಿ (ಕುತ್ತಂಗುಳಿಗಂ ಗರ್ಭಮದು ಒತ್ತಂಬದಿಂ ಅಕ್ಕುಮಲ್ಲಿ ನೆಲಸಲ್ ಜೀವಂ: **ಸಮಯಪ,** ೧೨. ೩೮)

**ಕುತ್ತಂಗೊಳ್ –** ರೋಗಪೀಡಿತನಾಗು (ಗಂಡುಮಂ .. .. ಪೆಣ್ಣುಡೆಯುಡಿಪರ್ .. .. ಕುತ್ತಂಗೊಂಡು ಬರ್ದುಂಕಿದೊಡೆ ದೇವಿ ಕಾದಳೆನುತ್ತುಂ: **ಸಮಯಪ,** ೯. ೧೨೧)

**ಕುತ್ತಂಬಟ್ಟಂ** – ರೋಗಿ (ಬೆಱಟಿಗಳಂ ಇಱಿಯಿಸುವರ್ ಕುತ್ತಂಬಟ್ಟಂ ಕರ್ಮಾಯತ್ತದೊಳೆ ಬರ್ದುಕಿದೊಡೆ ಮೂಢರೀ ಪರಕೆಗಳಿಂ: **ಸಮಯಪ,** ೯. ೧೨೨)

**ಕುತ್ತಂಬಡು** – ರೋಗಪೀಡಿತನಾಗು (ಮಠದೊಳ್ ಪೊನ್ನಂ ಪೂಱ್ದು ಪಲವು ಕಾಲಮಿರ್ದು ಕುತ್ತಂಬಟ್ಟು ಅರ್ಥಧ್ಯಾನದಿಂ ಸತ್ತು: **ಪಂಚತಂತ್ರ,** ೪೩೪ ವ)

**ಕುತ್ತಿಸಿಱು** – ಚುಚ್ಚುವ [ಆನೆ ಹಂದಿಗಳ] ಕೋಡು (ಮತ್ತಂ ಕೊಂತಂಗಳಿಂದಂ ಇಟ್ಟಿಗಳಿಂದಂ ಕುತ್ತಿಸಿಱಿಂದಂ ಕರುಳ್ ಮಾಲೆಗಳ್ ನೆಲದೊಳ್ ಸುರಿಯೆ: **ವಡ್ಡಾರಾ,** ಪು ೧೨೭, ಸಾ ೧೩)

**ಕುತ್ತಿಱೆ** – ಚೆನ್ನಾಗಿ ಇರಿ (ಶ್ರೀಕರಾಸಾರದ ಮಂಜು ಸುತ್ತಿಱಿದು ಕುತ್ತಿಱಿಯುತ್ತಿರೆ: **ಅನಂತಪು,** ೪. ೨೦)

**ಕುತ್ತು** – ಚಾಚು (ಮಡಗಿಡಲೆಂದು ಪುತ್ತಿನೊಳಗೊಯ್ಯನೆ ಕುತ್ತಿದ ಕಯ್ಯಂ: **ಆದಿಪು,** ೨. ೪೦); ಚುಚ್ಚು (ಕೊಂತಂಗಳಿಂದಂ ಇಟ್ಟಿಗಳಿಂದಂ ಕರುಳ್ಗಳಂ ಕುತ್ತುವುದದುಂ: **ವಡ್ಡಾರಾ,** ಪು ೯೬, ಸಾ ೨೮); ಕಣ್ಣು ಕೋರೈಸು (ಕಣ್ಣಂ ಕುತ್ತುವ ಚಿಲ್ಲಮನಾಡಿ ಧೂರ್ತನೆನ್ನ ಕೈಯಂ ಕೊಂಡೆನ್ನ ಕಣ್ಣಂ ಕುತ್ತುವಂತೆ: **ಧರ್ಮಾಮೃ,** ೯. ೧೪೦ ವ) ಬಾಗು, ಕುಸಿ (ಪೊಳೆದು ಪರಿವ ಪೊಳೆವುಲ್ಲೆಗಳುಮಂ ತಲೆಯಂ ಕುತ್ತಿ ವಿಶಾಲಂಬರಿವ ಕರಡಿಗಳುಮಂ ಅಡಂಗಿ ಪರಿವ ಪುಲಿಗಳುಮಂ ಸೋಂಕಿ ಪರಿವೆಯ ಎಯ್ಗಳುಮಂ ತಡಂಮೆಟ್ಟಿ .. .. ಪಲವನೆಚ್ಚು: **ಪಂಪಭಾ,** ೫. ೪೮ ವ); ತೊಡು, ಧರಿಸು; ಹೊಡೆ (ಎನ್ನ ಕಾಮಪರವಶತೆಗೆ ಆಂ ನೆಲದೊಳ್ ತಲೆಯಂ ಕುತ್ತಿ .. .. ಲಜ್ಜೆಯಿ ಕಱಗುವಂತೆಯುಂ .. .. ಆಗಿ: **ಕಾದಂಸಂ,** ೮. ೨ ವ); ಏಟು, ಹೊಡೆತ (ಚಮ್ಮಟಿಗೆ ಕುತ್ತುಗಳುಮಂ .. .. ಎಂತು ಸೈರಿಸಿದೆ: **ಕಾದಂಬ,** ೧೦. ೩೦ ವ); ಆಪತ್ತು (ಎನೆ ಕೇಳ್ದ ಕಂಸಂ ಮೊಳ್ಗಗಂ ಕೇಳ್ದ ಹಂಸನಂತೆ ಕುತ್ತು ಪಡೆದಂತಾಗಿ: **ನೇಮಿನಾಪು,** ೭. ೧೬ ವ)

**ಕುತ್ತುಂಗಱೆ** – ಚುಚ್ಚುವ ರೆಕ್ಕೆ ಬಿರಿಮುಗುಳ ಬೆರಕೆವಾಸಿಗಮಂ ತಲೆಸುತ್ತಿ ಕೇದಗೆಯ ಕತ್ತುಂಗಱೆಗಳಂ ಕುತ್ತಿ: **ನೇಮಿನಾಪು,** ೫. ೫೫ ವ); ಒಂದು ಆಭರಣ (ಹಂಸತಿಳಕದ ಪಱಿಯ ಕುತ್ತುಂಗಱೆಯ ಮತ್ತಂ ಪಲತೆಱದ ಪೆಸರ ಪಚ್ಚಮಂ ಸವೆಯೆ: **ಮಲ್ಲಿನಾಪು,** ೬. ೫೮ ವ); ಕಿರಿದಾದ ಎಸಳು (ವಧೂಜನದ ಸೋರ್ಮುಡಿಯಿಂ ಸೂಸಿದ ಪೊಂಗೇದಗೆಯ ಕುತ್ತುಂಗಱೆಯ ತುಱುಂಗಲುಮಂ: **ಪಂಪರಾ,** ೨, ೧೩ ವ)

**ಕುತ್ತುನವಿರ್** – ನಿಮಿರಿದ ಕೂದಲ್ ಒತ್ತುತ್ತಂ ಪರೆದಿರ್ದ ಕುತ್ತುನವಿರಂ ದಿಗ್ಭಿತ್ತಿಯಂ ಬೆರ್ಚಿ ನೋಡುತ್ತ ಉತ್ತುಂಗ ನಿತಂಬೆ: **ಸೂಕ್ತಿಸುಧಾ,** ೮.. ೧೬೪)

**ಕುತ್ತುಪೆನ** – ಜಗಳ, ಕದನ (ಕುತ್ತುಪೆನಮೆಂದು ಜಗಳಂ: **ಶಬ್ದಮದ,** ಪ್ರಸಾ ೪೫)

**ಕುತ್ತುವಡೆ** – ಪೆಟ್ಟು ತಿನ್ನು (ವಿಕಾರಿತನಮಂ ಒಂದಂ ಕೋಡಂಗಗಳೊಳ್ ಕಂಡೆಂ ಒಂದಂ ನಿನ್ನೊಳ್ ಕಂಡೆನೆನೆ ಕುತ್ತುವಡೆದಂತೆ ನೊಂದು: **ನೇಮಿನಾಪು,** ೫. ೭ ವ)

**ಕುತ್ತುಱು** – ಪೊದರು, ಪೊದೆ (ತಲೆವೊಲದ ನಾನಲ್ವಳ್ಳದ ದರಿಯ ಕುತ್ತುಱಿಂಗೆ ಕೊಣಕಿಡುವ ಪುಲ್ಲೆ ಎರಲೆಯ ಜವಕ್ಕೆ ಪಕ್ಕುಗೊಟ್ಟು: **ಮಲ್ಲಿನಾಪು,** ೭. ೨ ವ)

**ಕುತ್ತೆಸಟ್** – [ಕಿಱಿದು+ಎಸಟ್] ಸಣ್ಣ ಎಸಳು (ಕೇದಗೆಯ ಕುತ್ತೆಸಳ್ಗೋಳಿಯನೆತ್ತ ಸುತ್ತಲುಂ ಸೊಗಯಿಸುತಿರ್ಪ ಬಾಸಿಗಮನೆತ್ತುವರ್ ಅಗ್ಗದ ಮಾಲೆಗಾರ್ತಿಯರ್: **ಕಬ್ಬಿಗಕಾ,** ೩೫)

**ಕುತ್ಸಿತ** – ದೂಷಿತ, ನಿಂದ್ಯ ವಸ್ತು (ಅತಿಶಯ ತೋಷಮಿರ್ಪ ಮತಮಿರ್ಪೆಡೆಯೊಳ್ .. .. ಕಾಂಕ್ಷೆಯಿರ್ಪ ಕುತ್ಸಿತಮತಮಿರ್ಪುದಲ್ತು: **ನೇಮಿನಾಪು,** ೧. ೫೯)

**ಕುತ್ಸಿತಯೋನಿ** – ಹೀನಜನ್ಮ, ಪಶುಪಕ್ಷಿ ಮುಂತಾದವು (ಜಿನಮತದೊಳ್ ವತ್ಸಲತೆಯನುಂಟುಮಾಡಿ ಕುಮತದೊಳಂ ಅವರ್ ಕುತ್ಸಿಯತೋನಿಗಳೊಳ್ .. .. ತಿರಿತರುತಿರ್ದರ್: **ಪಂಪರಾ,** ೧೫. ೪೧)

**ಕುತ್ಸಿತತ್ವ** – ಕೀಳುತನ (ಕ್ಷುದ್ರಾದಿ ಬಹುದುಃಖೋದ್ರೇಕಮುಂ ಕುತ್ಸಿತತ್ವಮುಂ: **ಸುಕುಮಾಚ,** ೫. ೩೫)

**ಕುಥ** – ಆನೆಯ ಬೆನ್ನ ಮೇಲೆ ಅಲಂಕಾರಕ್ಕಾಗಿ ಹೊದಿಸುವ ಬಣ್ಣದ ಬಟ್ಟೆ (ವರ್ಣಂ ಕುಥಮಾಸ್ತಾರಣಂ: **ಅಭಿಧಾವ,** ೧. ೧೪. ೩೬); ದರ್ಭೆ (ಕುಶಂ ಕುಥಂ ಬಹಿಪವಿತ್ರದರ್ಭಂ: **ಅಭಿಧಾವ,** ೧. ೮. ೩೭)

**ಕುದಿ** – ಬೇಯು (ಕುದಿದತ್ತು ಪೊಳೆಯೆ ಜಲಚರನಿಕರಂ: **ಆದಿಪು,** ೧೧. ೪೮); ಮರಳುವಿಕೆ (ತತ್ತಱುಗುದಿಯುತ್ತುಮಿರ್ಪ ಕುದಿಯೊಳ್ ಸಿಡಿದಲ್ಲಿಯ ಮುತ್ತುಗಳ್: **ಪಂಪಭಾ,** ೧೧. ೧೫೩); ಮಾನಸಿಕವಾಗಿ ನೋಯು (ಮರಗಳೆ ಮುನ್ನಿತ್ತಿನಿಸಂ ಮರವಟ್ಟುವು ಪೆಟ್ಟುವೆರ್ಚಿ ಕುದಿದಿತ್ತು: **ಆದಿಪು,** ೬. ೫೦); ಸಂಕಟಪಡು (ಕುದಿ–ಸಂತಾಪೇ: **ಶಬ್ದಮದ, ಧಾ** ೪೦೨); ಬಾಯಿಗೆ ಬಂದಂತೆ ಮಾತನಾಡು (ಕೆಮ್ಮನೆ ಕುದಿವರ್ ತೆಱವಲಿತನದಿಂದೆ ಬಾಯ್ಗವಂದಂತೆ ಕೆಲರ್: **ಧರ್ಮಾಮೃ,** ೯. ೨೮); ಕೋಪದಿಂದ ಕೆರಳು (ರಥಮಂ ಪುದಿದು ಕುದಿದು ಬರೆ ಕೆಲರೆ ಭಟರ್: **ಶಾಂತಿಪು,** ೪. ೩೮)

**ಕುದಿಗೊಳ್** – ಮರಳು (ನೀರುರಿಯೆ ಪೊಗೆಯೆ ಕಾಯ್ದು ಕುದಿಗೊಳೆ ನೀರೊಳಗಣ ರೂಪು ನುಡಿಯೆ .. .. ಮಾರಿ ತಗುಟ್ಟಿಟ್ಟಿ ತಿಂಗುಮಾ ಜನಪಪದಮಂ; **ಲೋಕೋಪಕಾ,** ೪. ೫೦); ಸಂಕಟಪಡು (ಪೊಕ್ಕ ಪೂಗೊಳಂ ಪಾಡಟಿದೆಯ್ದೆ ಕಾಯ್ದು ಕುದಿಗೊಂಡುದು: **ಕಬ್ಬಿಗಕಾ,** ೩೧೪)

**ಕುದಿಪ** – ಕುದಿಯುವಿಕೆ, ಅಂತಃಸ್ತಾಪ (ಆಸತ್ತು ತಿರಿದ ಅರಣ್ಯಾವಾಸದ ಪರಿಭವದ ಕುದಿಪಮಂ ನೀಗಿ ಸುಖಾವಾಸಮಂ ಎಯ್ದಿಸಿದುದು ದುಶ್ಶಾಸನನಿರ್ದಿರವು ಮನದೊಳಾ ದ್ರೌಪದಿಯಾ: **ಪಂಪಭಾ,** ೧೨. ೧೫೨); ತೀವ್ರ ಬಯಕೆ

**ಕುದಿಪು** – ದಾರುಣತೆ (ನಿಂದುಣಿಸಿನಿಂದ ಒಡಲದೊಂದು ತಿನಿಸಿಂ ತೃಷೆಯದೊಂದು ಕುದಿಪುಂ .. .. ಬಸುಭೂತಿ ಸೆಡೆದಳ್ಕಿ ಬಡವಾದಂ: **ಧರ್ಮಾಮೃ,** ೧. ೧೨೯)

**ಕುದಿರ್** – ಹಗೇವು (ಕುದಿರೊಳ್ ಕಳ್ಳನನಿಕ್ಕಿಸಿ ಸೊದೆಯಿಟ್ಟರೆ ಬಟಿದು ಬಟಿಕೆ ತೆಱಿದು ಒಳಗಂ ನೋಡಿದೆಂ ಆತ್ಮನಿಲ್ಲ: **ಯಶೋಧಚ,** ೪. ೨೦)

**ಕುದಿಱು** – ಕುದುರು, ಬಿದಿರಿನ ಅಥವಾ ಮಣ್ಣಿನ ಕಣ (ಕುದಿಱನೆನಿತು ಕರ್ಚುವೊಡಂ ಅನಿತನಿತೆ ಕೆಸಱ್ ನೆಗೆವಂತೆ: **ಜೀವಸಂ,** ೩. ೧೮)

**ಕುದುಕುಳಿ** – ವ್ಯಾಕುಲಗೊಂಡವನು ಕುದುಕುಳಿ ಭೀತಚಿತ್ತಂ ಆರ್ತವಚನಂ ಗಳಿತಾಶಶ್ರು ವಿಷಣ್ಣಂ .. .. ಎಂತುಂ ಒಳ್ಳಿದಂ: **ಲೋಕೋಪಕಾ,** ೧೦. ೫); ಮತ್ಸರಗೊಂಡವನು (ಕುದುಕುಳಿ

ದಾನವಂ ನಿಜವಿಮೋಹನ ವಿದ್ಯದಭೇದ್ಯ ಶಕ್ತಿಯಿಂದೊದವಿಸೆ ಮೋಹಮಂ ಹೃದಯದೊಳ್: **ಚಂದ್ರಪ್ರಪು,** ೫. ೫); ಆತುರಪಡುವವನು (ಕೆಲರ್ ಕುದುಕುಳಿ ರಕ್ಕಸರ್ ಬಿಸುಗೆಗಳ್ವೆರಸು ಉಗ್ರ ಮಹಾಗಜಂಗಳಂ ಚದುರ್ಗಿಡೆ ನುಂಗಿ ಬಿಕ್ಕಿ ಕುಡಿದರ್ ಬಿಸುನೆತ್ತರ ಕಾಟ್ಪುರಂಗಳಂ: **ಪಂಪಭಾ,** ೧೨. ೮)

**ಕುದುರ್** – ಗೋಡೆ (ಕುದಿರೊಳ್ ಕಳ್ಳವನಿಕ್ಕಿಸಿ: **ಯಶೋಧಚ,** ೪. ೨೦)

**ಕುದುರೆಗಂಡಿ** – ಕೋಟೆಯಲ್ಲಿ ಕುದುರೆ ನುಗ್ಗುವಷ್ಟು ಅವಕಾಶ, ಕಿಂಡಿ (ನೀರಕಂಡಿಯ ಕುದುರೆಗಂಡಿಯ ತೆಱಪುಗಳುಮಂ ವಸುಷೇಣಂ ಬಳಸಿ ನೋಡುತ್ತುಂ: **ಅನಂತಪು,** ೧೧. ೮೨ ವ)

**ಕುದುರೆಗಾಲಿಕ್ಕು** – ಕುದುರೆಯಂತೆ ಕಾಲನ್ನಿಡು (ಮೂಱುಂ ದೇವರಂ ಬಂದಿಸುತ್ತುಂ ಮತ್ತಂ ಕುದುರೆಗಾಲಿಕ್ಕುತ್ತುಂ: **ಧರ್ಮಾಮೃ,** ೫. ೯೧ ವ)

**ಕುದೃಷ್ಟಾಂತ** – ಕೆಟ್ಟ ದೃಷ್ಟಾಂತ, ಸರಿಯಲ್ಲದ ನಿದರ್ಶನ (ತದುಪನ್ಯಸ್ತಕುಹೇತು ಕುದೃಷ್ಟಾಂತಾನರ್ಥಕ ವಚನರಚನಾಪ್ರಳಾಪಮಂ: **ಆದಿಪು,** ೨. ೯ ವ)

**ಕುದೃಷ್ಟಿ** – ಮಿಥ್ಯಾಜ್ಞಾನ (ಒಳ್ಳಿತ್ತು ಪೊಲ್ಲದೆಂಬುದಂ ಎಳ್ಳನಿತುಂ ತಿಳಿಯದಾ ಕುದೃಷ್ಟಿಯೆ ಕಷ್ಟಂ: **ಸಮಯಪ,** ೪. ೧೫೨); ದೋಷಯುಕ್ತ ವಿಚಾರದವನು (ಕುಶೀಲ ಕುತ್ಸಿತಾಚಾರ ಕುವೇಷಕುದೃಷ್ಟಿಗಳುಂ: **ಆದಿಪು,** ೫. ೪೧ ವ)

**ಕುದ್ದಾಳ** – ಗುದ್ದಲಿ (ಎಚ್ಚರಿಸಲ್ ನಿಂದಕದೈವ ಕಂದಕುದ್ದಾಳನಪ್ಪ ಪುರಹರಂ ಮೆಚ್ಚಿ: **ತ್ರಿಷಷ್ಟಿಪು,** ೩೨. ೩೮ ವ)

**ಕುದ್ರಕ** – ಒಂದು ನೃತ್ಯಭಂಗಿ (ವಿದ್ರುಕ ಕುದ್ರಕಮೆಂಬ ಭೇದದೊಳ್ ಪರಿಣತಿ ರಂಜಿಸುತ್ತುಮಿರೆ ನರ್ತಿಸಿದರ್ ಪೊಸ ದೇಸೆಕಾರ್ತಿಯರ್: **ಅಜಿತಪು,** ೫. ೬೧)

**ಕುಧರ** – ಬೆಟ್ಟ, ಪರ್ವತ (ಮಂದರಕುಧರ ಸಮಾನ ಸುಮಂದಿರ ಗುರುಪಾದಸೇವೆಗೆಯ್ವ .. .. ಉತ್ತಮ ತಪಃಶ್ರಿತಂ ಶ್ರೀಚಂದ್ರಂ: **ನೇಮಿನಾಪು,** ೪. ೩೧)

**ಕುಧರಾಗ್ರವಾಸಿ** – ಶಿವ (ಕುಂಜರಭಂಜನ ಶೌರ್ಯಸಮಂಜಸ ಕುಧರಾಗ್ರವಾಸಿ ಪಂಚಾಸ್ಯಂ: **ರಾಜಶೇವಿ,** ೧೪. ೧೩೨)

**ಕುನಯೋಪಪತ್ತಿ** – ಕೆಟ್ಟ ತತ್ವದ ತರ್ಕ (ಪೂರ್ವಪಕ್ಷಸ್ವರೂಪ ನಿರೂಪಣಾ ಪ್ರತಿಜ್ಞಾನಂತರಂ ಕುನಯೋಪಪತ್ತಿಗಳಿಂ ಪಕ್ಷಪ್ರತಿಷ್ಠಾಪನೆಗೆಯ್ದು: **ಶಾಂತಿಪು,** ೮. ೧೩೪ ವ)

**ಕುನಿ** – ಅಡಗು (ಕರಣತತಿ ವಾಯುವಿನೊಳ್ ಕುನಿದಿರೆ ಪದ್ಮಾಸನದೊಳ್ ತನುವಿರೆ: **ಯಶೋಧಚ,** ೪. ೧೩); ತಲೆ ಬಾಗು (ಕುನಿಕುನಿದು ವನದ ಗಿಡುಗಿಡುವಿನ ಮಱೆ ವಱೆಯಲ್ಲಿ ಸುಳಿದು ಸುಳಿದೋಡುವ ಟಕ್ಕಿನ ಹರಿಣನಂ: **ಗಿರಿಜಾಕ,** ೧. ೯೨); ಗುಳಿ ಬಿದ್ದ ನೆಲ(ಕುನಿ–ಆಕುಂಚನೇ ವಕ್ರಭೂಮೌ ಚ: **ಶಬ್ದಮದ,** ಧಾ ೪೩೩)

**ಕುನುಂಗು** – ಕುಗ್ಗು (ಸುಣಿಸೊಕ್ಕೆ ಕೊಣಕುತುಂ ಪಾಱೆ ದೆಸೆದೆಸೆಗೆ ಪರಿದು ಪಿರಿಯ ಮರಂಗಳನುಱದೆ ಕೊಂಡು ನೂಂಕಿ ಪರಿಯುತ್ತುಂ ಪೊಣರ್ದುರ್ದಂ ನೆಗೆದು ಕುನುಂಗಿ: **ಪಂಚತಂತ್ರ,** ೯೮ ವ); ಸುರುಟು (ಕರಣಗಣಂ ಕುನುಂಗಿರೆ ಮನಂ ನೊಸಲಲ್ಲಿರೆ ಲೋಚನಂಗಳ್ ಉಳ್ಳರೆಮುಗುಟ್ದಿಂಬುವೆತ್ತಿರೆ: **ಆದಿಪು,** ೧೦. ೧೪); ಬಾಗು (ವಯಲ್ಗೆ ಮೆಯ್ದೋಱುವೆವೆಂಬ ಪೂಣಿಗರ್ ಅಡಂಗಿ ಕುನುಂಗಿ ಸಿಡಿಲ್ದು ಜೋಲ್ದು ಕಾಯ್ಪಾಱೆ ನಭಕ್ಕೆ ಪಾಱೆದುದು: **ಪಂಪಭಾ,** ೧. ೧೧೯); ಕುಸಿ (ಪಿರಿಯ ಮರಂಗಳನುಱದೆ ಕೊಂಡು ನೂಂಕಿ ಪೊತ್ತುಂ ಪರಿಯುತ್ತುಂ ಪೊಣರ್ದುರ್ದಂ ನೆಗೆದು ಕುನುಂಗಿ ಭರದಿಂ ತಲೆಯೆತ್ತಿಲುರ್ಬಿ ನಭಮಂ ನುಂಗಲೊಡರ್ಚಿದಂತೆ ಮೇಘಮಂ ನೋಡಿ: **ಪಂಚತಂತ್ರ,** ೯೮ ವ)

**ಕುನ್ನಗೆಯ್** – ಮುರಿದ ಕೈ, ಕತ್ತರಿಸಿದ ಕೈ (ಕರಮೆರಡುಂ ಪಱಿವುದುಂ ಆತುರದಿಂದಂ ತನ್ನ ಕುನ್ನಗೆಯ್ಯೊಳೆ ಕೊಂಡು ಉದ್ಧರಚಕ್ರದಿಂ ಇಟ್ಟಂ ತಿರಿಪಿ ನರಪ್ರಿಯತನೂಜನ ಅಕ್ಷೋಹಿಣಿಯಂ: **ಪಂಪಭಾ,** ೧೧. ೧೦೩)

**ಕುನ್ನಿ** – ನಾಯಿ; ಯಾವುದೇ ಪ್ರಾಣಿಯ ಮರಿ (ಬಟೆಸಂದುದಾ ಶಬರನಾಯಕನಂ ಕಿಱುನಾಯ ಕುನನಿಗಳ್: **ಕಾದಂಬ,** ೧. ೧೪೦)

**ಕುಪಥ** – ಕೆಟ್ಟ ದಾರಿ, ಕೆಟ್ಟ ಮತ (ಕುಪಥಮಲನಿಲಯನಂ ಪಂಚಪರಮಗುರುಭಕ್ತಿನಿರತಂ ಆ ಗೃಹಚಂದ್ರಂ: **ಶಾಂತಿಪು,** ೧. ೩೪)

**ಕುಪಿತಾಕೃತಿ** – ಕೋಪಗೊಂಡವನ ರೂಪ (ಪದ್ಮಿನಿವೋಲ್ ಉಪಗತವಿಭ್ರಮರಹಿತಂ ಕುಪಿತಾಕೃತಿಯೆಂಬುದುಪಮೆ ಸಂಧನಾಮಕಂ: **ಕವಿರಾಮಾ,** ३. ೮३)

**ಕುಪೂಯ** – ನೀಚವಾದ, ತುಚ್ಛ (ಅವದ್ಯಂ ಕುತ್ಸಿತಂ ಕುಪೂಯಂ: **ಅಭಿಧಾವ,** ೨. ೧. ೫೯)

**ಕುಪ್ಪ** – ಸೇನೆಯ ಶಿಬಿರದ ಡೇರೆ (ಅದಿರ್ಮುತ್ತೆಯ ಕುಪ್ಪಂ ಒಪ್ಪಿತೋಱೆದುವು ಮನೋಜರಾಜ ಶಿಬಿರಂಗಳೆಂಬಿನಂ: **ಚಂದ್ರಪ್ರಪು,** ೭. ೬೨)

**ಕುಪ್ಪಕುಱೆ** – ಮಕ್ಕಳ ಒಂದು ಆಟ (ಜಿನಭಕ್ತಂ ಹರಿಕಾಂತನಂತೆ ಮುಯ್ಯಂ ನೋಡದೆ ಕುಪ್ಪಕುಱೆಯಾಡುವ ಮಕ್ಕಳಂತೆ ತನ್ನಂ ಪೊಗಟ್ದುಕೊಳ್ಳದೆ: **ಧರ್ಮಾಮೃ,** ೧३. ೪೫ ವ)

**ಕುಪ್ಪಸ** – (ಕೂರ್ಪಾಸ) ಕಂಚುಕ, ಒಂದು ಉಡುಪು (ಸುವರ್ಣಪಾರಿವದ ಕುಪ್ಪಸಮೊಪ್ಪೆ ಬೆಡಂಗನಾಳ್ದು .. .. ವಿಳಾಸದ ಸೂಳೆಯರೊಪ್ಪಿ ತೋಱೆದರ್: **ಪಂಪಭಾ,** ೯. ೧೦३)

**ಕುಪ್ಪಳಿ** – (ಕಿರಾತ ಬಳಮಾಗಳೆ ಕಾದಿದುವು ಅಸ್ತ್ರವಾರಿ ಧಾರಾವಳಿ ಕಂಠದೊಳ್ ಪರಿಯೆ ಮುಂಡದ ಕುಪ್ಪಳಿ ಶೈಲಮಪ್ಪಿನಂ: **ಕುಸುಮಾಕಾ,** ೧೪. ೯೮)

**ಕುಪ್ಪಳಿಸು** – ಹಾರು, ಜಿಗಿ (ತೆಮಳ್ದು ಕುಪ್ಪಳಿಸುವ ಅಂದುಗೆಯ ತೊಡರಲ್ಲಿಗೆ ಬಲ್ಲುಲಿಗಂ ಸುಟ್ಟುರೆ ಮಸಗಿ: **ಅನಂತಪು,** ೨. ೨೯ ವ)

**ಕುಪ್ಪಿ** – ಬತ್ತಳಿಕೆ; ಭರಣಿ (ರೂಪ್ಯದ ಕುಪ್ಪಿಗಳೊಳಂ ಪಳಿಕಿನ ಮಟಿಕೆಗಳೊಳಂ .. .. ತೀವಿದ ಎನಿತಾನುಂ ತೆಱದ ಬಂಧುರ ಸುಗಂಧವಸತು ಸಂದೋಹಮಂ ಪಿಡಿದು: **ಜಗನ್ನಾವಿ,** ೬. ೧೮ ವ)

**ಕುಪ್ಪಿಗೆ** – ಪಾತ್ರೆ, ಭರಣಿ (ಅಪ್ಪು ಕಣಿಸಿದುವು ಕಂಪಿನ ಕುಪ್ಪಿಗೆಗಳ್ .. .. ಉಪ್ಪಳಮಂ ಆಯ್ದುಕೊಂಡು ಬೆಳಪ್ಪ ಸರೋವರದಿಂ ಅವನಿಪತಿ ಪೊಱಮಟ್ಟಂ: **ಲೀಲಾವತಿ,** ೮. ೮೧)

**ಕುಪ್ಪಿಸು** – ಒಟ್ಟುಗೂಡಿಸು (ಮುಂದೆ ಕುಪ್ಪಿಸಿ ಕುಪ್ಪೆಯಾಗಿ ಮಾನಸರಂ ತೆಗಿಸಿ ರಕ್ಕಸರ ಮುಂದೆ ರಾಸಿಗೆಯ್ದಂತೆಯುಂ: **ಲೀಲಾವತಿ,** ೬.೧೪ ವ)

**ಕುಪ್ಪು** – ರಾಶಿಮಾಡು, ಪುಂಜೀಕರಣ ಹಾಗೂ ಒಂದು ರೋಗ (ಕುಪ್ಪು–ಪುಂಜೀಕರಣೇ ರೋಗಭೇದೇ ಚ: **ಶಬ್ದಮದ,** ಧಾ

೫೪೬); ಹಾರು, ನೆಗೆ (ಸುರಗಿ ಸುರಹೊನ್ನೆ ಮೊದಲಾದ ಅಲರ್ಗಳೊಳ್ ಕುಪ್ಪಿ: **ಉದ್ಭಟಕಾ,** ೧೦. ೧೨೧)

**ಕುಪ್ಪೆ** – ಕುಪ್ಪಿ, ಗುಟ್ಟೆ, ರಾಶಿ (ಕೆಲದೊಳ್ ಕುಪ್ಪೆಗೊಂಡ ಮಾಣಿಕಂಗಳ ಬೆಳಗಿನೊಡನೆ ಬಾಳಕನ ಮೆಯ್ವೆಳಗು ದಳವೇಱೆ: **ನೇಮಿನಾಪು,** ೪. ೯೫ ವ)

**ಕುಪ್ಪೆವಾಯ್** – ನೆಗೆ, ಹಾರು (ಕುಪ್ಪೆವಾಯ್ವ ಕಪಿ ಮೂಡಿ ಮುೞುಂಗುವ ಜಕ್ಕವಕ್ಕಿ: **ಸೂಕ್ತಿಸುಧಾ,** ೪. ೪೧)

**ಕುಪ್ಯ** – ಬೆಳ್ಳಿ ಚಿನ್ನಗಳ ಹೊರತಾದ ಇತರ ಲೋಹ (ಇರೆ ಕುಪ್ಯ ನಿವೇಶನ ಧನವರ ಧಾನ್ಯ ಕ್ಷೇತ್ರಮುಖ್ಯಮೆಂಬಿವು: **ಸುಕುಮಾಚ,** ೬. ೧೭)

**ಕುಪ್ಯಸಾರ** – ಲೋಹದ ನಾಣ್ಯ (ಅತಿಭಯಂ ತಮಗೆ ಚಮೂಪತಿ ಮಾಡಿದೊಡೆ ಅಳ್ಕಿ ಕುಪ್ಯಸಾರಾದಿ ಧನಪ್ರತತಿಯಂ ಇತ್ತೆಂ: **ಆದಿಪು,** ೧೨. ೬೬)

**ಕುಬೇರ** – ಅಷ್ಟದಿಕ್ಪಾಲಕರಲ್ಲಿ ಒಬ್ಬ, ಉತ್ತರ ದಿಕ್ಕಿನ ಅಧಿಪತಿ, ಧನಪತಿ (ಶತಮಖ ಹುತವಹ ಯಮ ನೈರುತಿ ವರುಣ ಮರುತ್ ಕುಬೇರ ಶೂಲಧರರ್ ದಿಕ್ಪತಿಗಳ್: **ಅಭಿಧಾವ,** ೧. ೧. ೪೮)

**ಕುಬೇರಕಾಂತ** – [ಜೈನ] ಚಕ್ರವರ್ತಿಯ ಬಳಿಯ ಅಕ್ಷಯ ಭಂಡಾರ (ಕುಬೇರಕಾಂತಮೆಂಬ ತವದ ಭಂಡಾರಮುಮಂ: **ಆದಿಪು,** ೧೫. ೩ ವ)

**ಕುಬೇರಾದ್ರೀಂದ್ರ** – ಕುಬೇರನ ಬೆಟ್ಟ, ಕೈಲಾಸಪರ್ವತ ಕೇವಲಿ ಕುಬೇರಾಂದ್ರೀಂದ್ರಮಂ ಮುಟ್ಟಿದಂ: **ಪಂಪರಾ,** ೧೬. ೭೮)

**ಕುಬ್ಜ** – ಕುಳ್ಳಾದವನು, ಗಿಡ್ಡ (ಗಡುಲಂ ತಾಂ ಕುಬ್ಜಂ ಅಲ್ಪಸ್ವತನುಪರಿಗತಂ: **ಅಭಿಧಾವ,** ೧. ೧೨. ೪೦)

**ಕುಭಾಷ್ಯ** – ಕೆಟ್ಟ ವ್ಯಾಖ್ಯಾನ (ಬಿಸುಟು ಮಿಥ್ಯಾಮಾರ್ಗಮಂ .. .. ಕುತ್ಸಿತ ಕುಭಾಷ್ಯಾದಿ ದೋಷಂಗಳಂ: **ಸುಕುಮಾಚ,** ೧. ೪೬)

**ಕುಭ್ರಜ್ಜಾತೆ** – [ಕುಭೃತ್+ಜಾತೆ] ಪರ್ವತರಾಜನ ಮಗಳು, ಪಾರ್ವತಿ (ಆತನ ಸತಿ ವಿಶದಗುಣವ್ರಾತಾನ್ವಿತೆ ಧರ್ಮಮೂರ್ತಿ ಪತಿಭಕ್ತಿಯೊಳ್ ಆ ಸೀತೆಗೆ ಅರುಂಧತಿಗೆ ಕುಭೃಜ್ಜಾತೆಗೆ ದೊರೆ ರೇವಕಬ್ಬೆಯೆಂಬೊಳ್ ಪೆಸರಿಂ: **ಪಂಚತಂತ್ರ,** ೪೫)

**ಕುಭೃತ್** – ಬೆಟ್ಟ, ಪರ್ವತ (ಸಧಾತುಕುಭೃದ್ಯುಗಕ್ಕೆ ಸಿಂದೂರಿತ ಗಂಧಸಿಂಧುರಯುಗಕ್ಕೆ ಎಣೆಯೆಂಬಿನಂ ಅಣ್ಮಿ ಕಾದಿದರ್ ಕೌರವರಾಜನುಂ ಕುರುಕುಲಾಂತಕನುಂ: **ಗದಾಯು,** ೮. ೧೭); ರಾಜ (ಕಲಿಮಲಿನ ಕುಭೃತ್ ಸಂಗದ ಕಳಂಕಮಂ ಕರ್ಚಿ ಕಳೆಯಲೆಂದು ಆ ಭೂಮಂಡಳಪತಿಯ ಖಡ್ಗಧಾರಾಜಳದೊಳ್ ಸಾಮ್ರಾಜ್ಯಲಕ್ಷ್ಮಿ ಸಲ ನೆಲಸಿರ್ದಳ್: **ಕಾದಂಸಂ,** ೧. ೭)

**ಕುಭೃತ್ಪಕ್ಷ** – ಬೆಟ್ಟದ ರೆಕ್ಕೆ, ರಾಜರ ಪಕ್ಷ (ಆ ಮಹಾಪುರುಷಂ ಕುಭೃತ್ಪಕ್ಷವಿಚ್ಛೇದನನಾಗಿಯುಂ ವಜ್ರಧರನಲ್ಲು: **ಜಗನ್ನಾವಿ,** ೯. ೧೦ ವ)

**ಕುಭೃತ್ಪತಿ** – ರಾಜೇಂದ್ರ (ನೆರೆದ ಕುಭೃತ್ಪತಿ ಪ್ರತತಿ ಬೀಡುವಿಡಲ್ಕೆ ಎಡೆಯಿಲ್ಲದಂತು ಬಂದಿರೆ: **ಕರ್ಣನೇಮಿ** , ೧೧. ೩೭)

**ಕುಭೃತ್ಸುತೆ** – ಕುಭೃಜ್ಜಾತೆ (ಕುಭೃತ್ಸುತೆ ಗಂಗೆ ದಕ್ಷಸುತೆ ಭವಸತಿಯರ್ ಸಮನಪ್ಪಡಕ್ಕೆ ಮಲ್ಲಪಸುತೆಯೊಳ್: **ಅಜಿತಪು,** ೧. ೭೧)

**ಕುಮತ** – ಕೆಟ್ಟ ಮತ (ಶ್ರೀಗಂ ವಾಕ್ಶ್ರೀಗಂ ಇಂತೀಕೆಯೆ ಮಿಗಿಲೆನಿಪ ಐಶ್ವರ್ಯಸಂಪನ್ನೆಯಂ ಸಂವೇಗವ್ಯುತ್ಪನ್ನೆಯಂ ದುರ್ಧರ ಕುಮತನಗ ಉದ್ಭಿನ್ನೆಯಂ: **ಸುಕುಮಾಚ,** ೭. ೪೮)

**ಕುಮತಿ** – ದುಷ್ಟ ಭಾವನೆ (ಆ ವರ್ಣಚತುಷ್ಕಮಂ ಕುಮತಿಗಳ್ ತತ್‌ಸ್ಥಾನದೊಳ್ ಮುನ್ನ ಪುಟ್ಟಿದುವೆಂಬರ್: **ಆದಿಪು,** ೪. ೭೩)

**ಕುಮಾನುಷತ್ವ** – ಕೆಟ್ಟ ಮನುಷ್ಯ ಜನ್ಮ (ತಿರ್ಯಗ್ಜಾತಿತ್ವಮುಮಂ ಅಂತರ್ದ್ವೀಪಂಗಳೊಳ್ ಕುಮಾನುಷತ್ವಮುಮಂ ಮಾಡುಗುಂ: **ಆದಿಪು,** ೧೦. ೧೦ ವ)

**ಕುಮಾರ** – ಷಣ್ಮುಖ (ಮತ್ತಮಲ್ಲಿ ಕುಮಾರನ ಮಯೂರಮಂ ಕೂರಿಸದ ಸೋಗೆವೆಣ್ಣಿಲ್ಲ: **ಪುಷ್ಪದಂಪು,** ೯. ೨೧ ವ)

**ಕುಮಾರಕ** – ಹುಡುಗ (ಗೋಪ ಕುಮಾರಕರೊಡನೆ ಆಡಿ; **ಜಗನ್ನಾವಿ,** ೫, ೫೨ ವ); ರಾಜಕುಮಾರ (ಸುಕುಮಾರಕಂ ಕುಮಾರಕನೆಂದಾ ಜಯವಧುಗಂತವೀರ್ಯಂ ಪ್ರಿಯನಾದೊಂ: **ಶಾಂತಿಪು,** ೪. ೪೭)

**ಕುಮಾರಕಾಲ** – ಹದಿನಾರು ವರ್ಷದೊಳಗಿನ ಹರಯ. ಕೌಮಾರ್ಯ (ರಾಮನೆಂಬೊಂ ಮಗಂ ಆತನ ಕುಮಾರಕಾಲದೊಳ್ ನಿಜಜನನಿವಿಯೋಗ ನಿರ್ವೇಗದೊಳ್: **ಚಾವುಂಪು,** ಮು. ೩೪೩. ಸಾ. ೧೦)

**ಕುಮಾರಭೃತ್ಯ** – ಬಾಲಸೇವಕ (ಕುಮಾರಭೃತ್ಯಕುಶಲ ಭಿಷಕ್ಪರಿಷತ್ಸಂಪಾದಿತಕಲ್ಯಾಣಾಮೃತಾಹಾರಂಗಳಿರ್ದಂತೆ: **ಆದಿಪು,** ೮. ೩೨ ವ)

**ಕುಮಾರಿ** – ಕನ್ಯೆ; ಹುಡುಗಿ (ನೋಡೆ ಕುಮಾರಿಯ ಬಳ್ಕುವ ಮಧ್ಯಂ ನಾಡೆ ಮನೋಜ್ಞಂ ಪೊಗೞಲಸಾಧ್ಯಂ: **ಸುಕುಮಾಚ,** ೫. ೫೧)

**ಕುಮಾರಿಕೆ** – ಋತುಮತಿಯಾಗದ ಹುಡುಗಿ, ಕುಮಾರಿ (ಕನ್ನೆ ಕುಮಾರಿ ಕನ್ನಿಕೆ .. .. ಸಂಪನ್ನ ಋತುವಾಗದನ್ನಂ: **ಅಭಿಧಾವ,** ೧. ೧೧. ೧೦)

**ಕುಮುದ** – ಬಿಳಿಯ ನೈದಿಲೆ (ಕುಮುದ ಕುವಲಯ ವನದಿಂ ಸೊಗಯಿಪುದು ದೀರ್ಘಿಕಾನಿಕುರುಂಬಂ: **ಕಾದಂಬ,** ೧. ೧೮೪); ದಿಗ್ಗಜಗಳಲ್ಲಿ ಒಂದು, ನೂರುತ್ಯದ ದಿಗ್ಗಜ (ಘನರಾಜತೇಜದಿಂರ್ಪನಗಂ ಮುದಮೆನ್ನನಕಟ ಕುಮುದಾಖ್ಯಮಂ ಇಟ್ಟಂ ಅಜಣ: **ತ್ರಿಷಷ್ಟಿಪು,** ೨೪. ೧೧೫)

**ಕುಮುದಕರ** – ಚಂದ್ರ; ಸಂತೋಷ ನೀಡುವವನು (ಕುಮುದಕರಂ ಮೃದುತರ ಕರಂಗಳಿಂದತಿಮುದಮಂ ಲೋಕಕ್ಕೆ ಪಡೆಗುಂ ಇಂತೀ ರಾಜಂ: **ಕವಿರಾಮಾ,** ೩. ೧೦೯)

**ಕುಮುದಪ್ರಿಯಾತಪ** – ಚಂದ್ರನ ಬೆಳಕು, ಬೆಳದಿಂಗಳು (ಕುಮುದಪ್ರಯಾತಪಂ ನಾವ್ಯಮಂಜಳಿಗ್ರಾಹ್ಯಮೆನೆಯುಂ ಇಷ್ಟಮಿವಕ್ಕುಂ: **ಕಾವ್ಯಾವಲೋ,** ೮೫೩)

**ಕುಮುದಬಂಧು** – ಚಂದ್ರ (ಮಂಜಿನ ಮಱೆಯೊಳ್ ಮಸುಳ್ದಿರೆ ಕಂಜಪ್ರಿಯಕುಮುದಬಂಧುಗಳ್: **ಆದಿಪು,** ೬. ೬೧)

**ಕುಮುದವನ** – ನೈದಿಲೆಗಳ ಸಮೂಹ (ಅತನುಶ್ರೀಜನ್ಮಗೇಹಂ ಕುಮುದವನಸಖಂ ತಾರಕಾನೀಕಲಕ್ಷ್ಮಪತಿಸದ್ವ್ಯೋಮಂ.. .. ರೋಹಿಣೀಜೀವಿತೇಶಂ .. .. ಈಗೆ ಆಗಳುಂ ಅತಿಮುದಮಂ: **ಪಂಚತಂತ್ರ,** ೫)

**ಕುಮುದಿನಿ** – ನೈದಿಲೆ (ಆಗಳಮೃತಕಿರಣನಮೃತಜಲಂಗಳಿಂ ಕುಮುದಿನಿಗಳಂ ತಳಿವಂತೆ: **ಆದಿಪು,** ೧೧. ೧೪೭ ವ); (ಕಮಳಿನಿ ಬಿಸಜಿನಿ ಕುಮುದಿನಿ ಕುಮುದ್ವತಿಯದುಂ ತದೀಯಸಂಹತಿ ಷಂಡಂ: **ಅಭಿಧಾವ,** ೧. ೪. ೨೩)

**ಕುಮುದ್ವತಿ** – ಕೊಳ (ಕಮಳಿನಿ ಬಿಸಜಿನಿ ಕುಮುದಿನಿ ಕುಮುದ್ವತಿಯದುಂ ತದೀಯಸಂಹತಿ ಷಂಡಂ: **ಅಭಿಧಾವ,** ೧. ೪. ೨೩)

**ಕುಮ್ಮರಿ** – ಕಾಡನ್ನು ಕಡಿದು ವ್ಯವಸಾಯಕ್ಕೆ ಯೋಗ್ಯವನ್ನಾಗಿ ಮಾಡಿದ ಜಾಗ (ಕುಮ್ಮರಿಯಂ ಸುಡಲೆಂದು ತುಂಗಭದ್ರನೆಂಬ ಪೋಡುಂಗಾಱಂ ಸೊರ್ಕಿ ತೂಂಕಡಿಂದ ಇರುಳ್ ಕಟ್ಟಿಂಗಳ್ ಕಡುಗತ್ತಲೆಯೊಳ್ ಬಂದು: **ವಡ್ಡಾರಾ,** ಪು ೧೫೬, ಸಾ ೧೮)

**ಕುಮ್ಮರಿಗಡಿ** – ಬೇಸಾಯಕ್ಕಾಗಿ ಕಾಡನ್ನು ಕಡಿ (ಪರಶುಶರನಿಕರದಿಂ ಕುಮ್ಮರಿಗಡಿದವೊಲ್ ಒಡನೆ ಕಡಿಯೆ ರಥಿಗಳ್ ರಥದಿಂ ಧರೆಗಿೞಿದು: **ಪಂಪಭಾ,** ೧೦. ೮೮)

**ಕುಮ್ಮರಿಯಂ ಸುಡು** – ಕಾಡಿನಲ್ಲಿ ಮರಗಳನ್ನೊಟ್ಟಿ ಸುಡು (ಅನ್ನೆಗಂ ಕುಮ್ಮರಿಯಂ ಸುಡಲೆಂದು ತುಂಗಭದ್ರನೇಮಬ ಪೋಡುಂಗಾಱಂ ಸೊರ್ಕಿ ತೂಂಕಡಿಂದಿರುಳ್ ಕಟ್ಟಿಂಗಳ್ ಕಡುಗತ್ತಲೆಯೊಳ್ ಬಂದು ಕಿಚ್ಚಂ ತಗುಳ್ಚೊ ಪೋದೊಂ: **ವಡ್ಡಾರಾ,** ಪು. ೧೫೬, ಸಾ. ೭)

**ಕುಮ್ಮು** – ಒನಕೆಯಿಂದ ಕುಟ್ಟು (ಕುಮ್ಮು–ಮುಸಲಕ್ರಿಯಾಯಾಂ: **ಶಬ್ದಮದ,** ಧಾತು ೫೦೩); ಬೀಳು (ಕೊರೆವೊಡೆ ಬೆಟ್ಟುಗಳ್ ಬಿರಿವುವು ಉಣ್ಮುವ ಲಾಳೆಯ ಲೋಳೆಗಳ್ ಪೊನಲ್ವರಿವುವು ಕೆಮ್ಮಿ ಕುಮ್ಮಿದೊಡೆ ತೋಳೊಳೆ ಜೀವವಿಯೋಗಮಪ್ಪುದು: **ಪಂಪಭಾ,** ೪. ೧೦೦); ಕುಕ್ಕರಿಸಿ ಬೀಳು (ಮದಾಕೃತಿಯಂ ಮಾಸಿಸಿ ಮುಪ್ಪು ಚಪ್ಪರಿಸೆಯುಂ ಚಿಃ ಕೆಮ್ಮಿನೊಳ್ ಕುಮ್ಮಿ ಸಂಸೃತಿಯೊಳ್ ಮತ್ತೆ ಗಡಂ ಕಡಂಗಿ ತೊಡರ್ದುಃ **ಆದಿಪು,** ೧. ೮೧); ತಿವಿ (ತಿವಿದು ಕಡುಇಂ ಕೆಡಪಿ ಕೊಪ್ಪರದೊಳ್ ಕಮ್ಮಿ: **ಗಿರಿಜಾಕ,** ೨. ೧೦೫ ವ)

**ಕುಯಕ** – [ಕುಹಕ] ಕಪಟ, ಮೋಸ (ಕಂಸನೆಸಗುವ ಕುಯಕಂ ಕೊಳ್ಗುಮೆ ಪರಾಕ್ರಮೋನ್ನತ ನಿನ್ನಂ: **ನೇಮಿನಾಪು,** ೮. ೫೧)

**ಕುಯೋನಿ** – ಪಶು ಪಕ್ಷಿ ಮೊದಲಾದ ಕೆಳವರ್ಗದ ಜನ್ಮ (ನೀನತಿಲೋಭದೊಳಿಲ್ಲಿ ಕುಯೋನಿಯೋಲ್ ಅಜಗರನೆಯಾದೆ: **ಆದಿಪು,** ೨. ೧೬)

**ಕುರಂಗ** – ಜಿಂಕೆ, ಚಿಗರೆ (ಕರಶಾರ್ದೂಲಕುಳಂ ಕುರಂಗಕುಲದೊಳ್ ತಳ್ಪೊಯ್ದು ಬಂದಾಡೆ: **ಆದಿಪು,** ೯. ೯೭)

**ಕುರಂಗನಾಭಿ** – ಕಸ್ತೂರಿ, ಮೃಗನಾಭಿ (ಕುರಂಗನಾಭಿಯಂ ಉರೋಜಕೆ ಲೇಪಿಸಿ ಪಲ್ಲವಂಗಳಂ ಜೋಡಿಸಿ ಕಟ್ಟಿ: **ರಾಜಶೇಖ,** ೫. ೧೦೭)

**ಕುರಂಗರಿಪು** – ಜಿಂಕೆಯ ಶತ್ರು, ಹುಲಿ (ಉರಗಿಯಂ ಎಯ್ ಪಿಡಿದೊಡೆ ಅದಂ ಕುರಂಗರಿಪು ಬೆಕ್ಕು ಕೊಕ್ಕನಂ ತವೆ ಪಿಡಿವಂತಿರೆ ಪಿಡಿದುದು: **ಯಶೋಧಚ,** ३. ४೬)

**ಕುರರ** – ಕುರವಕ್ಕಿ, ಒಂದು ನೀರ ಹಕ್ಕಿ (ಬಕ ಕುರರ ಪಕ್ಷವಿಕ್ಷಿಪ್ತ ಕಂಜ ಕಿಂಜಲ್ಕ ಪುಂಜಪಿಂಜರಿತ ಅಚ್ಛೋದಕಪರಿಪೂರ್ಣ: **ಆದಿಪು,** ೧. ೫೮)

**ಕುರರಿ** – ಕುರರ (ಸಾರಸ ಮಯೂರ ಕುರರೀ ಪಾರಾವತ ಹಂಸ ಬಕ ಬಳಾಶಕಾದಿ: **ವರ್ಧಮಾಪು,** ೧. ೫೫)

**ಕುರವ** – ಪ್ರದೇಶ (ಸಿಡಿಲ್ವೊಡೆಯೆ ಸತ್ತು ಇರ್ವರುಂ ಮಂದರದ ತೆಂಕಣ ಕುರವದೊಳ್ ಮೂಱು ಪಳಿತೋಪಮಾಯುಷ್ಯರಾಗಿ ಪುಟ್ಟಿದರ್: **ಪಂಪರಾ,** ೧೬. ೭೧ ವ)

**ಕುರವಕ** – ಮದರಂಗಿ (ರಂಜಿಸಿತು .. .. ನವಾಮ್ರವಲ್ಲರಿ ಕೊನರಿಂದ ಅಶೋಕ ತಳಿರಿಂ ತಿಳಕಂ ಕಳಿಕಾಕದಂಬದಿಂ ಕುರವಕ ಅಂಕುರಪ್ರಕರದಿಂ ವಕುಳಂ ಮುಕುಳಪ್ರತಾನದಿಂ: **ಮಲ್ಲಿನಾಪು,** ೫. ೨೧)

**ಕುರವಿ** – ಗುಬ್ಬಚ್ಚಿ (ಆ ಕೋಡಗಿ ಕಾಡಕೂಡಿ ಕುರವಿಯಾಗಿರ್ದುದುಳ: **ಪುಣ್ಯಾಸ್ರ:** ೪. ೫३ ವ)

**ಕುರು** – ಮೈಮೇಲೆ ಏಳುವ ಗುಳ್ಳೆ (ಕರಗುಂ ಏೞ್ವೊರೆಯೆನಿಪ್ಪ ಕುರುವುಂ ಕ್ಷಣದೊಳ್: **ಕಾವ್ಯಾವಲೋ,** ೨೭೧)

**ಕುರುಂಜಿಗೆ** – ಕುರ್ಚಿಗೆ, ಹುಲ್ಲನ್ನು ತೆಗೆಯುವ ಸಲಕರಣೆ (ಕುಡುಗೋಲಂ ಕೂಜೆಗೆಯಂ ಕೊಡಲಿ ಕುರುಂಜಿಗೆಯಂ ಉೞುವ ಪರಗುವ ಕೞಿಪಿಂ ಬಿಡದೆಯಗುೞ್ದಾ ಮುಟ್ಟಂ ಕುಡರ್ ಎರವಂ ಪೆೞರ್ಗೆ: **ಸಮಯಪ,** ೫. ೧೭)

**ಕುರುಕುರುಕಾರ** – ಅಕ್ಕಸಾಲಿಗ (ಐರಣಿಕಂ ಕುರುಕುರುಕಾರಂ ತದಧ್ಯಕ್ಷಂ ಭೌರಿಕನೆನಿಕುಂ: **ಅಭಿಧಾವ,** ೧. ೧೧. ೮೦)

**ಕುರುಕುಲ** – ಕುರುವಂಶ (ಕುರುಕುಲ ಜೀವಾಕರ್ಷಣ ಪರಿಣತಮಿದು ಕಾಳ ಹಸ್ತಮಲ್ಲದೆ ಪರಮೇಶ್ವರಿ ಕೇಶಹಸ್ತಮಕ್ಕುಮೇ: **ಗದಾಯು,** ೧. ೬೭)

**ಕುರುಕುಳ** – ಕುರುಕುಲ (ಕುರುಕುಳ ಚೂಡಾಮಣಿಯನೇನುಂ ಮಾರದೆ: **ಪಂಪಭಾ,** ೧३. ೯೭ ವ)

**ಕುರುಕ್ಷೇತ್ರ** – ಪಾಂಡವ–ಕೌರವರು ನಡೆಸಿದ ಯುದ್ಧದ ಜಾಗ (ಕಾೞ್ಚುೞು ಮಸಗಿದಂತೆ ಮಸಗಿದ ದುರ್ಧರ ಧನುರ್ಧರಬಲಮುಮಂ ಶ್ವೇತ ಭೀಷ್ಮರ ಪೇೞ್ದಿ ಓಜೆಯೊಳೆರಡುಂ ಪಡೆಗಳ ಪಡೆವಳರ್ಕಳ್ ಕುರುಕ್ಷೇತ್ರದೊಳ್ ಚಿತ್ರಿಸಿದಂತೆ ಒಡ್ಡಿ ನಿಂದಾಗಳ್: **ಪಂಪಭಾ,** ೧೦. ೫೧ ವ)

**ಕುರುಜು** – ಬಿದಿರ ಮೆಳೆ (ಸರಿಯೂದಿನ ಬೞೆಸುಗಟ್ಟಿ ರಚಿಸಿದ ಕುರುಜು ಎಂಬಂತಿರೆ ಅಲರ್ವುಡಿಯಿಂ ಸೂಸುವ ಕನಕರುಚಿನಿಚಿತಸುಮನೋಗಣದಿಂ: **ಶಬರಶಂ,** ೨. ४೨ ವ)

**ಕುರುಣೆ** – ಪ್ರಾಣಿಪಕ್ಷಿಗಳ ಮರಿ (ಕಾರ್ಮುಗಿಗಳ್ ಇಕ್ಕಿದ ಕುರುಣೆಗಳೆನೆ ಕರಿಗಳಿರ್ದುವಾ ಗಿರಿತಟದೊಳ್: **ಲೀಲಾವತಿ,** ೮. ೨)

**ಕುರುವಿಂದ** – ಪಾದರಸದಿಂದಾದ ಅದಿರು, ಇಂಗಲೀಕ (ಜಳದಂ ಮುಸ್ತೆಮುಸ್ತಕಂ ಕುರುವುಂದಂ: **ಅಭಿಧಾವ,** ೧. ೮. ೨३)

**ಕುರುಳ್** – ಕೂದಲು, ಮುಂಗೂದಲು (ಮೃಗಭೂ ಖುದ್ಧ ವಿಳಾಸಿನೀ ಕಬರಿಕಾಬಂಧಗಳಂ ಪೊತ್ತು ಮಲ್ಲಿಗೆಯೊಳ್ ಭಾವಿಸಿ ಧೂಪದೊಳ್ ಪೊರೆದು ತತ್ಕಾಂತಾ ರತಿಸ್ವೇದಬಿಂದುಗಳೊಳ್ ನಾಂದು ಕುರುಳ್ಗಳೊಳ್ ಸುೞಿದು ಮುಂದೊಂದಿರ್ದ ಸೌಭಾಗ್ಯಘಂಟೆಗಳೊಂದಿ ಇಂಚರದೊಳ್ ಪಳಂಚಿ ಸುೞಿದತ್ತು ಅಂದೊಂದು ಮಂದಾನಿಳಂ: **ಪಂಪಭಾ,** ४. ೮೦)

**ಕುರುಳಿ** – ಚಿಕ್ಕ ಮಣ್ಣಿನ ಕುಡಿಕೆ ಕುರುಳಿಯೊಳ್ ಉದಕಮಂ ದಿನಂಪ್ರತಿ ನೀಡುತ್ತಂ ಬರಲ್: **ಪುಣ್ಯಾಸ್ರ:** ೯. ೬ ವ)

**ಕುರುಳಿಗೊಳ್** – ಗುಳಿ ಬೀಳು (ಅಂಘ್ರಿಕ್ಷೇಪದಿಂದಂ ಕುಸಿದು ಕುರುಳಿಗೊಂಡ ಉರ್ವಿ ದಾನಾಂಬುವಿಂ ತೀವಿದುದು: **ಆಚವರ್ಧ,** ೮. ೯)

**ಕುರುಳೋಳಿ** – ಕೇಶರಾಶಿ (ಕುರುಳೋಳಿಯಂ ಬಗೆಗೊಳಿಸಿದುದೋರಂತೆ ಮಿಸುಪ ನಗೆಮೊಗಮವಳಾ: **ಕಬ್ಬಿಗಕಾ,** ೭೭)

**ಕುರುಳ್ಚು** – ಅಯುಧ ಝಳಪಿಸು, ಶಸ್ತ್ರ ಸಂಚಾಲನ (ಒೞಿಗಳೇದು ಕುರುಳ್ಚುವ ಕೈದುಗಳ ಬಳ್ಳಿಬೆಳಗಿಂ: **ರಾಜಶೇಖ,** ೧३. ೭೭ ವ)

**ಕುರ್ಕುರ** – ಒಂದು ಬಗೆಯ ನೀರ ಹಕ್ಕಿ (ಕಾಗೆ ಗೂಗೆ ಪರ್ದು ಚಕೋರಂ ಹಂಸೆ ಕುರ್ಕುರ ಗಿಳಿ ಪುರುಳಿ ಪೆಂಗುರು ಕಾರಂಡಂ ಆಂದೆ ಮೊದಲಾಗೊಡೆಯ ಗಗನಚರಂ: **ವಡ್ಡಾರಾ,** ಪು ೯೭, ಸಾ ೯)

**ಕುರ್ಕುಟ** – ಕೋಳಿ (ಕುರ್ಕುಟಾದಿ ಆಗ್ರಹನಿಗ್ರಹದೊಳಂ: **ಅಜಿತಪು,** ೧೧. ೧೧ ವ)

**ಕುರ್ಕುರ** – ನಾಯಿ (ಪರಿಗಳಿತ ಪೂತಿಗಂಧರ್ ಖರ ಕಾಕ ಸೃಗಾಲ ಕರಭ ಕೌಶಿಕ ವೃಕ ವಾನರ ವಿಷದಂಷ್ಟ್ರೋತ್ಕರ ಕುರ್ಕುರ ಕೀಟಕ ಭಲ್ಲನಿಕರ ನಿಷ್ಠುರನಿನದರ್: **ಶಾಂತೀಶ್ವಪು,** ೯. ೧೦೬)

**ಕುಲ** – ಗುಂಪು (ನಿಕುರುಂಬಂ ನಿವಹಂ ವ್ರಂ ಸಮುದಯಂ ಬೃಂದಂ ನಿಕಾಯಂ ಚಯಂ ನಿಕರಂ ಸಂಹತಿ ಸಂಚಯಂ ಸಮಿತಿ ಸಂದೋಹಂ ಸಮಾಜಂ ಕುಲಂ: **ಅಭಿಧಾವ,** ೨. ೧. ೨೭); ಮನೆತನ (ಸಂತತಿ ಗೋತ್ರಂ ಸಂತಾನಂ ಜನನಂ ಅನ್ವವಾಯಂ ಕುಲಂ: **ಅಭಿಧಾವ,** ೧. ೧೧. ೨೯) ಜಾತಿ (ಕುಲಮೆಂಬುದುಂಟೆ ಬೀರಮೆ ಕುಲಮಲ್ಲದೆ ಕುಲಮನಿಂತು ಪಿಕ್ಕದಿರಿಂ ನೀಂ ಒಲಿದಲ್ಲಿ ಪುಟ್ಟಿ ಬಳೆದಿರೊ ಕುಲಮಿರ್ದುದೆ ಕೊಡದೊಳಂ ಶರಸ್ತಂಬದೊಳಂ: **ಪಂಪಭಾ,** ೨. ೮೩)

**ಕುಲಕ** – ಪಡುವಲ ಕಾಯಿ (ಕುಲಕಂ ಪಟೋಳಂ: **ಅಭಿದಾವ,** ೧. ೮. ೩೭)

**ಕುಲಕರ** – [ಜೈನ] ಒಬ್ಬ ಮನುವಿನ ಹೆಸರು (ಕುಳಧರನುಂ ಕುಲಕರನುಂ ಕುಖತಿಳಕಮೆನಿಸಿದ ನಾಭಿರಾಜಂಗೆ: **ಆದಿಪು,** ೬. ೭೯)

**ಕುಲಕ್ಷತಿ** – ಕುಲದ ವಿನಾಶ ಕುಲದ ಕೇಡು (ಈ ಸಮಯದತ್ತಲ್ ಎಱಗಿದೊಡೆ ಕುಲಕ್ಷತಿಯಕ್ಕುಂ: **ಸುಕುಮಾಚ,** ೩. ೩೧)

**ಕುಲಗಿರಿ** – ಮಹೇಂದ್ರ, ಮಲಯ, ಸಹ್ಯ, ಶುಕ್ತಿಮಾನ್, ಋಕ್ಷ, ವಿಂಧ್ಯ ಮತ್ತು ಪಾರಿಯಾತ್ರ ಎಂಬ ಏಳು ಪರ್ವತಗಳು (ಕರುಮಾಡಮಿಳಿಪುದು ಕುಲಗಿರಿಗಳ್ ಬಳಸಿ ನಿಂದ ಮಂದರಗಿರಿಯಂ: **ಪುಷ್ಪದಂಪು,** ೨. ೯೪)

**ಕುಲಗೃಹ** – ತವರು ಮನೆ (ಚೆಲ್ವಿನ ಕುಲಗೃಹಮುಂ ಇರ್ಪಂತಿರ್ದ ವಸಂತಗೃಹಮಂ ಪೊಕ್ಕು: **ಚಂದ್ರಪ್ರಪು,,** ೭. ೯೫ ವ)

**ಕುಲಜ** – ಸತ್ಕುಲದಲ್ಲಿ ಹುಟ್ಟಿದವನು (ಕುಲಜರಂ ಉದ್ಧತರಂ ಭುಜಬಲಯುತರಂ ಹಿತರಂ ಈ ಸಭಾಮಧ್ಯದೊಳ್ ಅಗ್ಗಲಿಸಿದ ಮದದಿಂ ನಾಲಗೆ ಕುಲಮಂ ತುಬ್ಬುವವೊಲ್ ಉಱದೆ ನೀಂ ಕೆಡೆನುಡಿವೈ: **ಪಂಪಭಾ,** ೧೦. ೨೦)

**ಕುಲಟಾಂಗನೆ** – ಹಾದರಗಿತ್ತಿ, ಜಾರೆ (ದುಶ್ಚರಿತಂ ಸಜ್ಜನಮಿರ್ದಂದದೆ ಕುಲಟಾಂಗನೆಯೊಳಗ ನೆರೆಯಲ್ಕೆ ಕರಮೆ ಬಯಸುತುಮಿರ್ಪಂ: **ಸಮಯಪ,** ೫. ೪೮)

**ಕುಲಟೆ** – ಕುಲಟಾಂಗನೆ (ಕುಲಟೆಯರೊಳ್ ನೆರೆದು ಪಟಿಗೆ ನಾಣ್ಚದೆ ಕರಮಗ್ಗಲಿಪವರ್ಗೆ ಅದೆಂದುಂ ನಿಲಲಱಯವು ಮೋಕ್ಷದಾಯಕಂ ಸಚ್ಚರಿತಂ: **ಸಮಯಪ,** ೫. ೭೩)

**ಕುಲದೀಪಕ** – ಕುಲವನ್ನು ಬೆಳಗುವವನು (ಕುಲದೀಪಕ ಎನಿಸಿ ನೆಗಟ್ದನಖಿಳಾವನಿಯೊಳ್: **ಶಾಂತಿಪು,** ೨. ೧೦)

**ಕುಲದೈವ** – ಕುಲದೇವತೆ, ಮನೆದೈವ (ಪುಲುಗಿಲುಂ ಉತ್ತರಣೆಯುಮಂ ಅಂತೆ ಲೊಕ್ಕಿಯುಂ ಮತ್ತೆ ಮುತ್ತಂ ಆ ಎಕ್ಕೆಯುಮಂ ಕೊಲೆಯುಂ ಬನ್ನಿಯ ಮರನಂ ಕುಲದೆಯ್ವಮಿದೆಂದು ಕೊಂಡುಕೊನೆವರ್ ಮೂಢರ್: **ಸಮಯಪ,** ೯. ೫೭)

**ಕುಲಧನ** – ಪಿತ್ರಾರ್ಜಿತ ಆಸ್ತಿ (ಧರ್ಮಪುತ್ರನುಂ ಕುಲಧನಸಂಕುಲಗಳನೆ ತಂದಿಡೆ ಇಟ್ಟವಂ ಆಡಿ ಸೋಲ್ತು: **ಪಂಪಭಾ,** ೬. ೭೨)

**ಕುಲಧರ** – [ಜೈನ] ಒಬ್ಬ ಮನುವಿನ ಹೆಸರು (ಆತನಿಂ ಬೞಯಂ ಮೂಱನೆಯ ಕುಲಧರಂ ಕ್ಷೇಮಂಕರನೆಂಬಂ: **ಪಂಪರಾ,** ೧. ೭೧ ವ)

**ಕುಲಧರಕುಲ** – ಮನುಗಳ ವಂಶ (ತಿರಿತಿರಿದು ಮಾಡಿದಂ ಕುಲಧರಕುಲದೊಳ್ ಪಿರಿದು ಮಹಿಮೆಯಂ ನಿಮ್ಮರಸಂ: **ಆದಿಪು,** ೧೪. ೬೯)

**ಕುಲನಗ** – ಕುಲಗಿರಿ (ಕುಲನಗಮಂ ಅಡರ್ವ ಜಲನಿಧಿ ಜಲಮಂ ಪಾಯ್ವ ಅಹಿನಿವಾಸಮಂ ಪುಗುವ ಮರುನ್ನಿಲಯಕ್ಕೆ ಒಗೆವೀತನ ಕೀರ್ತಿಲತಾಂಗಿ ಚಲಾಂಗಿ ಖಚರಂ ಅಚಳಿತಂ ಅಬಲೇ: **ಶಾಂತಿಪು,** ೫. ೧೫೪)

**ಕುಲಪಾಂಸುಲ** – ಕುಲಕ್ಕೆ ದೂಳಾದ, ಕುಲಕಳಂಕ (ಮಲೆಮಲೆದುರ್ಕಿ ಸೊರ್ಕಿ ಸಭೆಯೊಳ್ ಕುಲಪಾಂಸುಲಂ ಈ ಶಿರೀಷಕೋಮಲೆಯ ವಿಲೋಲ ನೀಲ ಕಬರೀಭರಮಂ ತೆಗೆವಾಗಳ್: **ಪಂಪಭಾ,** ೭. ೫೭)

**ಕುಲವಟಿ** – ವಂಶಪಾರಂಪರ್ಯ ಕ್ರಮ (ನಿಲ್ಲಲೊಲ್ಲದೆ ವೈರಾಗ್ಯಮೆ ಕುಲವಟಿಯೆಂಬಂತೆ ತಂದೆಯಿಂ ಮುನ್ನಂ ನಿರ್ಮಲ ಜಿನದೀಕ್ಷೆಗವರ್ ಪೂಣ್ದು ಅಲಂಘ್ಯ ದಮಮಂ ಧರಿತ್ರಿಯಿಂ ಪೊಗಟೆಸಿದರ್: **ಶಾಂತಿಪು,** ೯. ೫೩)

**ಕುಲವಾಹಿನಿ** – ಕುಲನದಿ (ಪ್ರಸಿದ್ಧ ಕುಲವಾಹಿನಿ ಸೀತೆಯ ವಜ್ರವೇದಿಕಾಮಂಡಿತ ದಕ್ಷಿಣೋತ್ತರ ತಟಂಗಳೊಳ್ .. .. ಕಚ್ಛಕಾವತಿ ಮಹಾವಿಷಯಂ: **ಮಲ್ಲಿನಾಪು,** ೨. ೮)

**ಕುಲಶೈಲ** – ಕುಲಪರ್ವತ (ಉತ್ತಮಕುಲಶೈಲಂ ಉನ್ನತಿಯಂ ಏಳಿದವಾಗೆ ಬಿಸಟ್ಪೊಡಂ ಬಿಸುಟ್ಕೆಮ ಬಿಸುಡೆಂ ಮದೀಯ ಪುರುಷವ್ರತಮೊಂದುಮಂ: **ಪಂಪಭಾ,** ೧. ೮೩)

**ಕುಲಾಯ** – ಹಕ್ಕಿಗೂಡು (ಪಕ್ಷಿತತಿ ಕೂಡೆ ಕುಲಾಯಮನೆಯ್ದೆ ಪಂಶ್ಚಳೀಸಮಿತಿ ಪೊಡರ್ಪನೆಯ್ದೆ ರವಿಯೆಯ್ದಿದಂ ಆಕ್ಷಣಂ ಅಸ್ತಶೈಳಮಂ: **ಶಾಂತೀಶ್ವಪು,** ೩. ೫೪)

**ಕುಲಾಲ** – ಕುಂಬಾರ (ಕುಲಾಲ ಕರನಿರ್ಭರ ಭ್ರಮಿತ ಚಕ್ರ ಲೀಲಾಯಿತಂ: **ಪಂಪಭಾ,** ೪. ೨೭)

**ಕುಲಾಲಚಕ್ರ** – ಕುಂಬಾರನ ಚಕ್ರ, ತಿಗುರಿ (ಧರೆಯೊಳ್ ಕುಲಾಲಚಕ್ರಂ ತಿರಿವಂತಿರೆ ತಿರಿಯೆ ಚಕ್ರಮದಱಯೆ: **ಆದಿಪು,** ೧೪. ೬೯)

**ಕುಲಿಂಗಿ** – ಕೆಟ್ಟ ಚಿಹ್ನೆಗಳುಳ್ಳವನು, ಧರ್ಮಕ್ಕೆ ಹೊರಗಿನವನು (ಪರಮಜಿನತೀರ್ಥದೊಳ್ ಪಲಬರುಮಾಗಿಯುಂ ಏಂ ಕುಲಿಂಗಿಗಳ್ ವಿಕೃತಿಗಳಿಂ ವಿರಹಿತರಪ್ಪರ್: **ಆದಿಪು,** ೧೫. ೩೦)

**ಕುಲಿಕ** – ಒಂದು ಬಗೆಯ ಹಾವು (ಕುಲಿಕಾಟೋಪಮಂ ಅಂತಕಾರಭಟೆಯಂ .. .. ಗೆಲೆವಂದು: **ಜಗನ್ನಾವಿ,** ೫. ೩೬)

**ಕುಲಿಶ** – ವಜ್ರಾಯುಧ (ಕುಲಿಶನಿಭಶಿಲಾಭೇದಿಬಾಣಂಗಳುಂ ಭೇದಿಸವೆಂಬಂತಾಯ್ತು: **ಆದಿಪು,** ೧೪. ೯೫)

**ಕುಲಿಶವಿಘಾತ** – ಮುಷ್ಟಿಯುದ್ಧದ ಒಂದು ಪ್ರಕಾರ (ಕುಲಿಶವಿಘಾತವೆಂಬ ಮುಷ್ಟಿದೃಢಮುಷ್ಟಿವಿಘಾತಮೆಂಬ ದೃಢಮುಷ್ಟಿವಿಘಾತದಿನುಣ್ಮಿ ಪಾಯ್ವಿನಂ: **ಜಗನ್ನಾವಿ,** ೪. ೫೭)

**ಕುಲಿಶಾಸ್ತ್ರ** – ಕುಲಿಶಾಯುಧ (ಕುಲಿಶಾಸ್ತ್ರಭೀತಿಯಿಂ ಬರೆ ಜಲನಿಧಿಮುಂ ಮಱಗೆ ವಂದ ಕುಲಪರ್ವತ ಸಂಕುಲಮಂ ರಕ್ಷಿಸಿ

ತಳೆದತ್ತು ಅಲಘುತರಶ್ರೀಯಂ ಅಸಮಗಂಭೀರತೆಯಂ: **ಪಂಚತಂತ್ರ,** ೧೭೩)

**ಕುಲಿಶಿ** – ಇಂದ್ರ (ವನಜಾತಪ್ರಿಯಬಂಧುಗೆ ಅಂಗಪತಿಯಂ ಧರ್ಮಂಗೆ ನಿನ್ನಂ ಹುತಾಶನಮಿತ್ರಂಗೆ ಬಕಾರಿಯಂ ಕುಲಿಶಿಗಂ ಗಾಂಡೀವಿಯಂ ಪೆತ್ತೆಂ: **ಗದಾಯು,** ೧೦. ೨೧)

**ಕುಲ್ಯ** – ಕುಲಜ (ದಿವಸದಾಯವ್ಯಯ ಸಂಭಾಷಣಂಗಳಿಂ ಕುಲ್ಯರಂ ಸೌಶೀಲ್ಯವೃತ್ತಿಗೆ ಸಲಿಸಿಯುಂ: **ಚಂದ್ರಪ್ರಪು,** ೨. ೬೦ ವ)

**ಕುಲ್ಯಾ** – ಹಳ್ಳ (ಗಜಮದಗಂಧಾಂಬುಕುಲ್ಯಾಪ್ರವಾಹದೊಳ್: **ಆದಿಪು,** ೧೨. ೬೧ ವ)

**ಕುವಲಯ** – ಕನ್ನೈದಿಲೆ (ಆಕೆಯ ಕಣ್ಣ ಬೆಳ್ಪುಗಳ್ ಪಸರಿಸೆ ತುಂಬಿಗಳ್ ಕುವಲಯಂಗಳ್ ಅರಲ್ದುವೆ ಗೆತ್ತು ಮತ್ತೆಯುಂ ಮುಸುಱುವುದುಂ: **ಪಂಪಭಾ,** ೫. ೬೩)

**ಕುವಲಯಾಪೀಡ** – ಒಂದು ಆನೆ (ನಿನ್ನ ಪಗೆಯಂ ಬಗೆಯಂ ತಡೆಯದೆ ತೀರ್ಚುಗುಂ ಇಭದೊಳ್ ಕಡುಗಲಿ ತಾನೆನಿಪ ಕುವಲಯಾಪೀಡೇಭಂ: **ಜಗನ್ನಾವಿ,** ೬. ೩೫)

**ಕುವಳಯ** – ಭೂಮಂಡಲ (ಕುವಳಯಬಾಂಧವನೆಸೆವನೆ ಕುವಳಯಂ ಬೆಳಗಿ ಕುವಳಯಂ ಪೊಱಗೆನೆ ಪಾಂಡವರೆ ಪೊಱಗಾಗೆ ನಿನಗೀ ಕುವಳಯಪತಿಯೆಂಬ ಪೆಂಪೊಡಂಬಡೆ ನೃಪತೀ: **ಪಂಪಭಾ,** ೯. ೩೭); ಕನ್ನೈದಿಲೆ (ಕುವಳಯದಳ ವಿಲೋಲಲೋಚನೆಯಪ್ಪ ರತ್ನಮಾಲಾಮಹಾಮಹಿಳೆಗೆ ಉದಯಿಸೆ: **ಅನಂತಪು,** ೯. ೨ ವ ಮತ್ತು ೩)

**ಕುವಳಯಪತಿ** – ಚಂದ್ರ; ಭೂಮಂಡಲದ ಅಧಿಪತಿ (ಕುವಳಯಬಾಂಧವನೆಸೆವನೆ ಕುವಳಯಂ ಬೆಳಗಿ ಕುವಳಯಂ ಪೊಱಗೆನೆ ಪಾಂಡವರೆ ಪೊಱಗಾಗೆ ನಿನಗೀ ಕುವಳಯಪತಿಯೆಂಬ ಪೆಂಪೊಡಂಬಡೆ ನೃಪತೀ: **ಪಂಪಭಾ,** ೯. ೩೭)

**ಕುವಳಯರಿಪು** – ಚಂದ್ರ (ಪಾಪಗ್ರಹಮೆಂದು ಪೆರನಿಡೆ ಸಂದಂ ಸಂತಾಪಕರಂ ಕುವಳಯರಿಪು ಶಾಪಂಬೆತ್ತಾತಂ ಆಪ್ತನೆನಲಾಗಲಱಿವಂ: **ಸಮಯಪ,** ೮. ೧೬೧)

**ಕುವಳಯಬಾಂಧವ** – ನೈದಿಲೆಯ ನಂಟ, ಚಂದ್ರ (ಕುವಳಯಬಾಂಧವನೆಸೆವನೆ ಕುವಳಯಂ ಬೆಳಗಿ ಕುವಳಯಂ ಪೊಱಗೆನೆ ಪಾಂಡವರೆ ಪೊಱಗಾಗೆ ನಿನಗೀ ಕುವಳಯಪತಿಯೆಂಬ ಪೆಂಪೊಡಂಬಡೆ ನೃಪತೀ: **ಪಂಪಭಾ,** ೯. ೩೭)

**ಕುವಳಯಸಖಧರ** – ಶಿವ (ಕುವಳಯಸಖಧರನಂತಿರೆ ಭುವನೋದರಮೆನಿಸಿ ಮೂಱು ಕಣ್ಣಂ ಸಲೆ ತಾಳ್ದು: **ತ್ರಿಷಷ್ಟಿಪು,** ೨. ೧೨೭)

**ಕುವಾರಿ** – ಕೊಳಕು ನೀರು (ಘನರಸಮಂ ಪದೆದೀಂಟುವ ವಿನುತಂ ಚಾದಗೆ ಕುವಾರಿಯಂ ಕುಡಿವುದೆ: **ಶಬರಶಂ,** ೧. ೨೨)

**ಕುವಿಂದ** – ನೇಯ್ಗೆಯವನು, ನೇಕಾರ (ಕುವಿಂದಾಖ್ಯೆ ತಂತುವಾಯಂಗಕ್ಕುಂ: **ಅಭಿಧಾವ,** ೧. ೧೧. ೮೭)

**ಕುವೇಣಿ** – ಮೀನು ಹಿಡಿಯುವ ಬಲೆ (ಮೃಗಬಂಧಿನಿ ವಾಗುರೆ ಬಲೆ .. .. ಕುವೇಣಿ ಬಡಿಶಂ ಜಾಳಂ: **ಅಭಿಧಾವ,** ೧. ೧೦. ೩೫)

**ಕುಶ** – ದರ್ಭೆಹುಲ್ಲು (ಪಾಲಾಶ ಅಶ್ವತ್ಥ ಅರ್ಕ ಔದುಂಬರ ನ್ಯಗ್ರೋಧ ಶಮಿ ಅಪಾಮಾರ್ಗ ಖದಿರ ಆದಿ ಶುಷ್ಕಸಮಿತ್ತುಗಳುಮಂ ಕುಶ ಅಶ್ವಲಾಯನ ವಿಶ್ವಾಮಿತ್ರಾದಿ ದೂರ್ವಾಂಕುರಪವಿತ್ರವಸ್ತುಗಳುಮಂ ಕೊಂಡು: **ಪಂಚತಂತ್ರ,** ೧೯೦ ವ); ನೀರು (ಗುಡಿ ಪಸೆ ವೇದಿಕೆ ಪಂದಲ್ ಕಡೆಯವೆ ಭೃಂಗಾರಿ ಲಾಜೆ ಜಾಗಂ ಕುಶ ಕನ್ನಡಿ ತೋರಣ ಫಲಂ: **ತ್ರಿಷಷ್ಟಿಪು,** ೩೫. ೧೭)

**ಕುಶಲ** – ನಿಪುಣ (ಮಸೆವುದು ಮಾಸಲಿರ್ದ ಪಟವೇಟಮಂ ಇಚ್ಛೆಯ ಬಿಚ್ಚತಿಕ್ಕೆಯಂ ಪೊಸೆಯಿಪುದು ಒಳ್ಕಮಂ ನಡೆಪುತಿರ್ಪುದು ಧಾತುವಂ ಒಳ್ಳಿತೆಯ್ದೆ ಪಾಟಿಸುವುದು ಕೂಟದೊಳ್ ಕುಶಲನಪ್ಪುದು: **ಶಾಂತಿಪು,** ೮. ೯೧)

**ಕುಶಲವ** – ನೀರಾಟ, ಜಲಕ್ರೀಡೆ; ತುತುರು ಹನಿ (ಸರಸೀ ಸ್ವಚ್ಛಾಂಬು ಶುಂಭತ್ ಕುಶಲವ ವಿಸರಸ್ಪರ್ಶನಾರ್ದ್ರಂ.. ..ತೀಡಿತ್ತು ಜ್ಯೋತಿರ್ವಣಜನಿತವಾಮೋದಸಾರಂ ಸಮೀರಂ: **ಶಾಂತೀಶ್ವಪು,** ೫. ೯೦)

**ಕುಶಲಿಕೆ** – ಕುಶಲತೆ (ನವಪದಾರ್ಥಂಗಳುಂ ಪಂಚಾಸ್ತಿಕಾಯ ಷಡ್ದ್ರವ್ಯಂಗಳುಂ ಎಂಬಿವಱೊಳ್ ಆದಮಾನುಂ ಅಱಿತಮುಂ ಕುಶಲಿಕೆಯುಂ ನಂಬುಗೆಯುಂ ಆಗಿ: **ವಡ್ಡಾರಾ,** ಪು ೬, ಸಾ ೧೯)

**ಕುಶಾಗ್ರಬುದ್ಧಿ** – [ಹುಲ್ಲಿನ ಅಲಗಿನಂತೆ] ಹರಿತವಾದ ಬುದ್ಧಿಯುಳ್ಳವನು (ಮತ್ತುಟಿದ ವಿದ್ಯೆಗಳ್ ಓಜರೆ ಚಟ್ಟರ್ ಎಂಬಿನಂ ನೆರೆದುವು ಗಳ ತನ್ನೊಳಾರ್ ದೊರೆ ಗುಣಾರ್ಣವನಂತು ಕುಶಾಗ್ರಬುದ್ಧಿಗಳ್: **ಪಂಪಭಾ,** ೨. ೩೪)

**ಕುಶಾಗ್ರೀಯಬುದ್ಧಿ** – ಕುಶಾಗ್ರಮತಿ (ಕುಶಾಗ್ರೀಯಮತಿ ಕವಿಜನಾಭಿಪ್ರಾಯಮಱಿವಂತೆ ಪೆಱಂ ಅದೇನಱಿದಪನೇ: **ಲೀಲಾವತಿ,** ೧. ೧೫)

**ಕುಶಿರ** – ನೇಗಿಲ ಗುಳ (ಪಾಳಂ ಕುಶಿರಂ: **ಅಭಿಧಾವ,** ೧೧. ೬೮

**ಕುಶೀಲವರ್** – ಚಾರಣರು, ನಟರು, ಸ್ತುತಿಪಾಠಕರು (ಕುಶೀಲವರ್ ಚಾರಣರಪ್ಪರ್: **ಅಭಿಧಾವ,** ೧. ೧೧. ೮೦)

**ಕುಶೂಳ** – ಧಾನ್ಯದ ಕಣಜ (ಕುಶೂಳಂ ಕುದಿರ್ ಅಱಿಗೆ: **ಅಭಿಧಾವ,** ೧. ೧೦. ೨೭)

**ಕುಶೆ** – ದರ್ಭೆ (ಭೂತಿ ವಿಲಸದಕ್ಷಮಾಲೆ ಕುಶೆಯುಂ ಮಗುಟ್ದೀನಿದು ಯೋಗಿಧರ್ಮಮೇ: **ಶಬರಶಂ;** ೨. ೧೦೮); ಕಡಿವಾಣದ ಹಗ್ಗ (ಕುಶೆ ರಶ್ಮಿಪ್ರಗ್ರಹಮದು .. .. ಚರ್ಮಯಷ್ಟಿ: **ಅಭಿಧಾವ,** ೧೪. ೨೫)

**ಕುಶೇಶಯ** – ನೀರಿನಲ್ಲಿರುವುದು, ತಾವರೆ (ಅಂತು ನಿಟಿಲತಟಘಟಿತ ಕರಕುಶಲ ಕುಶೇಶಯಕುಟ್ಮಲನಾಗಿ: **ಆದಿಪು,** ೧೪. ೧೩೭ ವ)

**ಕುಶೇಶಯಗರ್ಭ** – ಕಮಲದಲ್ಲಿ ಜನಿಸಿದವನು, ಬ್ರಹ್ಮ (ಆ ಮಹಾಪ್ರಕಾಶಮಂ ಕುಶೇಶಯಗರ್ಭಂ ನೋಡಲಳ್ಕಿ ಬಳ್ಕುತ್ತ ಉನ್ಮೀತನೇತ್ರನಾಗಿ: **ಜಗನ್ನಾವಿ,** ೧. ೪೭ ವ)

**ಕುಶೇಶಯವಿಲಾಸಿನೀ** – ಕಮಲಾಸನೆ, ಲಕ್ಷ್ಮೀ (ಜಗತ್ ಕುಶೇಶಯವಿಲಾಸಿನೀಪ್ರಮದಮುಷ್ಟಿಪಿಷ್ಟಾತಕಂ: **ಆದಿಪು,** ೧೧. ೧೫)

**ಕುಷ್ಠಿ** – ಕುಷ್ಠರೋಗ (ಮುದಿರ್ತು ಕುಷ್ಠಿ ಕೊಳೆ ಪಂಚಮ ನರಕದೊಳ್ ಅಟ್ಟಿದ್ಳ್ ಅರಸ ಧೂಮಪ್ರಭೆಯೊಳ್: **ಯಶೋಧಚ,** ೪. ೫೬)

**ಕುಸಿ** – ಶಕ್ತಿಗುಂದು, ಕುಗ್ಗು (ಕಣ್ ತುಮುಟ್ದು ಉಸಿರ್ ಕುಸಿದು .. .. ಜೋಲ್ದನಭಿಮನ್ಯು: **ಪಂಪಭಾ,** ೧೧. ೧೦೯); ಕ್ಷೀಣತ್ವ; ಹಿಂತೆಗೆ, ಹಿಮ್ಮೆಟ್ಟು (ಯುದ್ಧರಂಗದೊಳ್ ಕುಸಿಯದೆ: **ಗದಾಯು,** ೮. ೫೯); ನಿರೋಧಿಸು (ಪರಿವ ಕಟಾಕ್ಷಂಗಳಿನೋಸರಿಸುತ್ತುಂ ನಿಮಿರ್ವ ಸುಯ್ಗಳಂ

ಕುಸಿಯುತ್ತಂ: **ಆದಿಪು,** ೮. ೫೧); ಹಿಡಿದು ಕಿತ್ತು ಹಾಕು (ಪುಸಿಬಸನಮೆಂದು ಕೆಲಬರ್ ಕುಸಿವರ್ ನಾಲಗೆಯನಿಕ್ಕುಳೊಳ್: **ಆದಿಪು,** ೫. ೮೭); ಕೆಳಕ್ಕೆ ಇಳಿಬೀಳು (ಸುರರೆಲ್ಲಂ ಬಡಗಲು ನೆರೆದಿರಲ್ ಆ ದೆಸೆ ಕುಸಿದು ತೆಂಕ ನೆಗೆದೊಡೆ: **ಸಮಯಪ,** ೧೦. ೧೧೩); ಅಗುಳಿ (ಕುಸಿ– .. .. ಕವಾಟ ಶಲಾಕಾಯಾಂ ಚ: **ಶಬ್ದಮದ,** ಧಾ ೩೯೨)

**ಕುಸೀದ** – ಹಣವನ್ನು ಬಡ್ಡಿಗೆ ಕೊಟ್ಟು ಜೀವಿಸುವವನು (ವೃದ್ಧಿಯಿನುಪಜೀವಿಸಿರ್ಪುದಱೆಗೆ ಕುಸೀದಂ: **ಅಭಿಧಾವ,** ೧. ೧೧. ೬೫)

**ಕುಸುಂಕು** – ಬಟ್ಟೆಯನ್ನು ಕುಕ್ಕು, ಘಾತನ (ಕುಸುಕು ಕುಸುಂಕು– ಘಾತನೇ: **ಶಬ್ದಮದ, ಧಾ** ೨೭)

**ಕುಸುಂಕುಱು** – ಪೊದರು, ಒತ್ತಾಗಿರು (ತಲೆಯುದ್ದಮಾಗಿ ತುಱುಗಿ ಬೆಳೆದೊಱಗಿ ರಾಜಿಸುವ ರಾಜಾನ್ನದ ಕುಸುಂಕುಱೊಳಗೆ: **ಲೀಲಾವತಿ,** ೫. ೭೨ ವ)

**ಕುಸುಂಬೆ** – ಕುಸುಂಭ, ಒಂದು ಬಗೆಯ ಗಿಡ (ಕುಸುಮೆ ಕುಸುಂಬಂ: **ಅಭಿಧಾವ,** ೧. ೧೬. ೧೮)

**ಕುಸುಕು** – ಉಜ್ಜು, ಕುಕ್ಕು (ತದಂಗನಾನಿವಹ ಕುಚಾಗ್ರಮಂ ಕುಸುಕುತಿರ್ದುದು ಕಾಮುಕನಂದದಿಂ ಆ ನವ ಸರಸೀ ಸುಗಂಧ ಸಲಿಲೋತ್ಕರಂ: **ಕುಸುಮಾಕಾ,** ೫. ೧೩೪)

**ಕುಸುಕುಱುಕೋಣೆ** – ಇಕ್ಕಟ್ಟಾದ ಕೋಣೆ (ಕುಸುಕುಱಕೋಣೆಗಳೊಳ್ವಒತ್ತುಗೊಂಡ ಕಟ್ಟಿಲೆಯ ಮೊತ್ತಕ್ಕೆ ಮಾರ್ತಂಡಂ ಕ್ಷೀಣಮಾದುದಂ ಪೇೞ್ದು: **ಆಚವರ್ಧ,** ೬. ೨೩ ವ)

**ಕುಸುಕುಱುಧರ್ಮ** – ಸಂಕುಚಿತ ಧರ್ಮ (ಮಹಾಧರ್ಮಮಂ ಬಿಸುಟು ಅಹಹ ನೋಡ ಕೋಣೆಯ ಕುಸುಕುಱು ಧರ್ಮಮನದೆಂತು ನಂಬಿದನೀತಂ: **ಧರ್ಮಾಮೃ,** ೧. ೮೭)

**ಕುಸುಮ** – ಹೂವು (ಸಮಂತು ಅಲಂಕರಿಸಿದಂ ಶಾಂತೀಶನಂ ದಿವ್ಯಗಂಧ ದರಸ್ಮೇರ ನಮೇರು ಚಾರು ಕುಸುಮ ಕ್ಷೌಮಾಂಶುಕ ಅನರ್ಘ್ಯ ಭಾಸ್ವದನೇಕೋತ್ತಮ ಭೂಷಣಾವಳಿಗಳಿಂ ಸಂಕ್ರಂದನಾನಂದದಿಂದಂ: **ಶಾಂತೀಶ್ವಪು,** ೧೬. ೩)

**ಕುಸುಮಕಳಂಬ** – ಹೂಬಾಣದವನು, ಮನ್ಮಥ (ಕುಸುಮಕಳಂಬನ ಕೇಳೀನಿಲಯದಂತೆ: **ರಾಜಶೇವಿ,** ೮. ೫ ವ)

**ಕುಸುಮಲಿಡ್ಭಾಮೆ** – [ಕುಸುಮಲಿಟ್+ಭಾಮೆ] ಹೆಣ್ಣು ದುಂಬಿ (ತೀಡಿತ್ತು ಸಲ್ಲಲಿತೋಪತ್ಯಕಸಂಚರಂ ಕುಸುಮಲಿಡ್ಭಾಮಾರುತಂ ಮಾರುತಂ: **ಶಾಂತೀಶ್ವಪು,** ೮. ೯)

**ಕುಸುಮಶರ** – ಕಾಮ (ಕುಸುಮಶರಂ ಕೆಯ್ವಲದಾಂಕೆಗೊಟ್ಟ ನೀಲದ ಸಲಗೆಯಿದೆನೆ ರೋಮರಾಜಿ ರಾಜಿಸಿ ತೋರ್ಕುಂ: **ನೇಮಿನಾಪು,** ೧. ೭೪)

**ಕುಸುಮಶೇಖರ** – ಹೂ ಮುಡಿದವನು (ಸಿತಕುಸುಮಶೇಖರಂ ಚರ್ಚಿತಚಂದನಂ ಅತಿವಿಳಾಸವಿಧೃತದುಕೂಲಂ: **ಆದಿಪು,** ೧೩. ೧೨)

**ಕುಸುಮಾಪಚಯ** – ಹೂ ಬಿಡಿಸುವುದು (ಕುಸುಮಾಪಚಯವ್ಯಸನಾ ಅವಸಕ್ತಸುರಯುವತಿ ಪಾಣಿಪಲ್ಲವರಾಗಂ: **ಆದಿಪು,** ೬. ೯೬)

**ಕುಸುಮಾಮೋದ** – ಹೂವಿನ ಪರಿಮಳ (ನಂದನವನಪವನಂ ಬಟೆವಂದೊಡಗೊಂಡೊಯ್ದು ಪುಗಿಸೆ ಬನಮಂ ಪುಗಲ್ ಎಂಬೊಂದು ಅನ್ಯಭ್ರತಕ್ಕಾಣಿವಂದಂತಾಯ್ತು ಬೆಸಸೆ ಕುಸುಮಾಮೋದಂ: **ಶಾಂತಿಪು,** ೮. ೩)

**ಕುಸುಮಿತ** – ಹೂ ಬಿಟ್ಟ (ಕುಸುಮಿತ ಬಹಿರುಪವನ ಭೂಪ್ರಸರದೊಳಿರ್ದ ಅಮಿತಕೀರ್ತಿಕೇವಳಿಯಂ ಬಂದಿಸಿ ಮತ್ ಭವಪದ್ಧತಿಯಂ ಬೆಸಗೊಳೆ ಬೆಸಸಿದನಘಾರಿ ದಿವ್ಯಧ್ವನಿಯಿಂ: **ಶಾಂತಿಪು,** ೬. ೮೫)

**ಕುಸುಮೆ** – ಕುಸುಂಬೆ ಎಂಬ ಗಿಡ (ಕುಸುಮೆ ಕುಸುಂಬಂ: **ಅಭಿಧಾವ,** ೧. ೧೬. ೧೮)

**ಕುಸುಮೇಷು** – ಹೂಬಾಣ, ಮನ್ಮಥ (ಆ ನಾಡು ದಿವಕ್ಕೆ ತೋಱು ಕುಸುಮೇಷುಗೆ ಬೀಱು: **ಪುಷ್ಪದಂಪು,** ೯. ೧೮)

**ಕುಸುಮೋಪಹಾರ** – ಹೂಗಳ ಕಾಣಿಕೆ, ಹೂ ಚೆಲ್ಲುವುದು (ಮಧುಕರನುಕರಝುಂಕಾರಹಾರಿ ಕುಸುಮೋಪಹಾರಮುಂ: **ಆದಿಪು,** ೮. ೩೫ ವ)

**ಕುಸುರಿ** – ಹೂವಿನ ಮೃದುವಾದ ಭಾಗ (ಕುಸುರಿಯ ರೂಪನೆಯ್ದೆ ಪೊಗೞಲ್ಕಱೆಯೆಂ ನಡು ಪುರ್ವು ಬಾಸೆ ಕಣ್ಪೊಗಸೆಗೆಯಂ ಉಂಟುಮಾಟ್ಟ ಜಘನಂ ಬೆಳರ್ವಾಯ್.. ..ಅಂಬುಜಾಕ್ಷಿಯಾ: **ಪಂಪಭಾ,** ೪. ೭೨); ಆಭರಣ (ಮೇಗಾಲ್ ತುಡುಗೆಯ ಕುಸುರಿಯೊಳೆ ತೊಡರೆ ಕಾಮಿನಿ ಮಿಡುಕಲ್ವಡೆಯದೆ: **ಕಾದಂಬ,** ೬. ೧೪೧); ಸೂಕ್ಷ್ಮ ಕೆಲಸ (ಪುಸಿ ನಸುವಂಚನೆ ನೋರ್ಪು ಅಸಿದು ಅಗಲಿತು ತಕ್ಕು ದಕ್ಕು ಪಗೆ ಕೆಯ್ಬಗೆ ಕೆಯ್ ಕುಸುರಿ ನುಸುಳೆಂಬ ಕೇಣದ ಕುಸುರಿಯಂ ಅಱೆದು ಇಱೆದು ಮೆಱೆದು ಉಱದೆ ಅರೆಬರ್: **ಪಂಪಭಾ,** ೧೦. ೮೧); ಚಾತುರ್ಯ (ಪಸಿದುಣವೇಡಿದಂ ಬಡವಂ ಆಂ ಉಣಲಿತ್ತೆಂ ಅಲ್ಲದಿಲ್ಲಿ ದಲ್ ಕುಸುರಿಯ ಮಾತುಗಾಣೆಂ: **ಪಂಪಭಾ,** ೫. ೭೨); ಕುಗ್ಗು(?)

**ಕುಸುರಿದಱೆ** – ಸಣ್ಣದಾಗಿ ಕತ್ತರಿಸು (ಮಾವಿನಡಿಮಂಚಿಕೆಯೊಳ್ ಕುಸುರಿದಱಿದ ಅಡಗಿನಂತೆವೊಲೆಸೆದುವು ತದ್ವನದೊಳ್ ಉದಿರ್ದ ಮುತ್ತಿನ ಮುಗುಳ್ಗಳ್: **ಯಶೋಧಚ,** ೧. ೩೭)

**ಕುಸುರಿವಾತು** – ನಾಜೂಕು ಮಾತು (ಬಣ್ಣನೆಯ ಕುಸುರಿವಾತುಗಳ್ ಅಣ್ಣದಿರ ತೆಱದೆ ನನ್ನದು ಇನ್ನದು ಎನುತ್ತಾಂ ಬಣ್ಣಿಸಲಱೆಯೆಂ: **ಧರ್ಮಮಧು,** ೧. ೭೦)

**ಕುಸೂಲಗೃಹ** – ಉಗ್ರಾಣದ ಮನೆ (ಅಂತರ್ಗೃಹಂ ಕುಸೂಲಗೃಹಂ ಅಂತರ್ದೇಶಂಗಳ್ ಅಱೆಗೆ ಕೋಷ್ಠಮದಕ್ಕುಂ: ಅಭಿಧಾವ, ೩. ೧ ೮೭)

**ಕುಸೃತಿ** – ವಂಚನೆ, ಕೆಟ್ಟ ನಡತೆ (ಇದೇಂ ವೃಜಿನಬಂಧಮೋ ಕುಸೃತಿಬಂಧಸಂಬಂಧಂ ಎಂದದೇಂ ತಳೆದನೋ ಮುನಿಪ್ರವರನಾಗಳ್ ಉದ್ವೇಗಮಂ: **ಸುಕುಮಾಚ,** ೪. ೬೧)

**ಕುಸೃತಿಬಂಧ** – ಇಂದ್ರಜಾಲದ ಕಟ್ಟು (ಇದೇಂ ವೃಜಿನಬಂಧಮೋ ಕುಸೃತಿಬಂಧಸಂಬಂಧಮೆಂದದೇಂ ತಳೆದನೋ ಮುನಿಪ್ರವರಂ: **ಸುಕುಮಾಚ,** ೪. ೬೧)

**ಕುಹಕಾಟ್ಟಹಾಸ** – ವ್ಯಂಗ್ಯದಿಂದ ಅಬ್ಬರಿಸಿ ನಗುವುದು (ಕುಹಕಾಟ್ಟಹಾಸಂಗೆಯ್ದು ವಿವಿಧೋಪಸರ್ಗದಿನೆಂತುಂ ಚಾಳಿಸಲಾಱದತಿಹಾವೀರನೆಂದು ಪೆಸರನಿಟ್ಟು ಪೋದಂ: **ಚಾವುಂಪು,** ಪು ೪೪೫ ಸಾ.೧೩)

**ಕುಹರ** – ಬಿಲ, ಗುಹೆ (ಉದಯಗಿರಿ ಕಟಕ ಕುಹರ ಪರಿಕರ ನಿಶಾಕರಂ ಹರಿದಳಿತ ನಿಜಹರಿಣ ರುಧಿರನಿಚಯ ನಿಚಿತಮಾದಂತೆ ಲೋಹಿತಾಂಗನಾಗೆ: **ಪಂಪಭಾ,** ೪. ೪೯ ವ); ತೂತು

**ಕುಹರಣ** – ಸುರತಧ್ವನಿ (ಏತತ್ ಪತಗ ಕುಹರಣಶ್ರೀಯಂ ಊಟ್ಟೆತ್ತುತುಂ ಭೋಂಕನೆ ಪರ್ಬಿತ್ತುರ್ಬಿ ದೇವಾಯತನ ಶಂಖಪ್ರಭೂತ ಪ್ರಣಾದಂ: **ಕುಸುಮಾಕಾ,** ೪. ೭೩)

**ಕುಹಳ** – ಹೊಂಬಾಳೆ (ತದೀಯ ಕುಹಳಸ್ಥಿತಸತ್ಫಳರಾಜಿ ಸೂಸುವಂತೆ: **ಉದ್ಭಟಕಾ,** ೮. ೬೧)

**ಕುಳ** – ಕನ್ನಡ ವರ್ಣಮಾಲೆಯ 'ಳ' ಎಂಬ ಅಕ್ಷರ (ಕುಳಮೆಂದೊಡೆ ಕನ್ನಡ ಶಬ್ದದ್ಲಿ ಇರ್ದ ಳಕಾರಂ: **ಶಬ್ದಮದ,** ೧೫ ವಿಚಾರ); ಕನ್ನಡದ ದೇಶ್ಯಪದಗಳಲ್ಲಿನ ಳಕಾರ (ಕುಳದ ನಿಯಾಮದೊಳೆಂದುಂ ಕ್ಷಳಕ್ಕೆ ಲಾಕ್ಷರಮಿಲ್ಲ: **ಶಬ್ದಮದ,** ೧೫)

**ಕುಳಂ** – ಕುಲವ್ಯವಸ್ಥೆಯುಳ್ಳವರು (ತಂದಿತ್ತು ಕೆಯ್ಸೆಱೆಯಂ ಕೊಟ್ಟಳವಟ್ಟು ಸಾರಧನಮಂ ಮೂವಿಟ್ಟಿಗಂ ಪೂಣ್ದು ಕಾಲ್ಗೆ ಎಱಗಿತ್ತು ಅಂತು ಅರಿಗಂಗೆ ಬೆರ್ಚಿ ಭಯದಿಂ ಗ್ರಾಮಂ ಕುಳಂ ರಾಜಕಂ: **ಪಂಪಭಾ,** ೬. ೩೯೦)

**ಕುಳಮಂದಿರ** – ತವರುಮನೆ (ಬಳೆದುವು ತೋಳ್ಗಳ್ ಎಕ್ಕೆಯಿಂ ಅಮಳ್ಗಳ್ ಬಳೆವಂತಿರೆ ಮುಯ್ವುಗಳ್ ಕುಳಾಚಳಶಿಖರಂಗಳಂ ಮಸುಳೆವಂದುವು ಪರ್ವಿದ ವಕ್ಷಮೀ ಕ್ಷಮಾತಳ ಕುಳಲಕ್ಷ್ಮಿಗಾಯ್ತು ಕುಳಮಂದಿರಂ: **ಪಂಪಭಾ,** ೨. ೩೭)

**ಕುಳವಟಿ** – [ಕುಳ+ಬಟಿ] ವಂಶಪರಂಪರೆ (ಕುಳವಟಿಯಂ ಬಂದ ದಾಸತ್ವಂ ಅರ್ಹದ್ದಾಸಂಗೇನಣ್ಣನಾಟ್ವರ್ತನಮೆ: **ನೇಮಿನಾಪು,** ೧. ೭೦)

**ಕುಳಾಚಳ** – ಕುಲಗಿರಿ (ಬಳೆದುವು ತೋಳ್ಗಳ್ ಎಕ್ಕೆಯಿಂ ಅಮಳ್ ಬಳೆವಂತಿರೆ ಮುಯ್ವುಗಳ್ ಕುಳಾಚಳಶಿಖರಂಗಳಂ ಮಸುಳೆವಂದುವು ಪರ್ವಿದ ವಕ್ಷಮೀ ಕ್ಷಮಾತಳ ಕುಳಲಕ್ಷ್ಮಿಗಾಯ್ತು ಕುಳಮಂದಿರಂ: **ಪಂಪಭಾ,** ೨. ೩೭)

**ಕುಳಾಯ** – ಹಕ್ಕಿಗೂಡು (ತಳರ್ದಾ ಕುಳಾಯದಿಂ ಬಿದಿರ್ದೆಱಂಕೆಯ ನೀರ್ವನಿಯಂ .. .. ದನಿಗೆಯ್ಯುತಿರ್ದುವು ಮುಂಬಗಲ್ವರಲ್: **ಜಗನ್ನಾವಿ,** ೧೪. ೧೦)

**ಕುಳಿಕ** – ವಿಷಸರ್ಪ (ದುರ್ಯೋಧನಂ ದಾಡೆಗಳಿದ ಕುಳಿಕನಂತೆಯುಂ ಕೋಡುಡಿದ ಮದಹಸ್ತಿಯಂತೆಯುಂ ನಖಮುಡಿದ ಸಿಂಹದಂತೆಯುಂ ಗಳಿತಗರ್ವನಾಗಿ: **ಪಂಪಭಾ,** ೭. ೩೯ ವ)

**ಕುಳಿಕೆ** – ಕುಣಿಕೆ (ಬಳೆದ ನಿತಂಬದೆ ಕಾಂಚೀಕಳಾಪಮಂ ಕಟ್ಟಲಣಮೆ ನೆಱೆಯದು ಎಂದಗ್ಗಳಿಸಿ ಕುಳಿಕೆಗಳಿನೇಂ ಕಣ್ಗೊಳಿಸಿದುದೋ ಸುಭಗೆಯಾದ ಸುದತಿಯ ಗರ್ಭಂ: **ಪಂಪಭಾ,** ೧. ೧೪೩)

**ಕುಳಿಯ** – ಮೂಢ (ಪುಸಿನುಡಿವ ಜಱುಚರ ತೆಱನಂ ಕಂಡಱೆಯದಂತು ಕುಳಿಯರುಮೊಳರೇ: **ಕಾವ್ಯಾವಲೋ,** ೩೯೩)

**ಕುಳಿರ್** – ಶೀತಲವಾಗು, ತಂಪಾಗು (ಕುಳಿರುತ್ತಿರ್ಪ ಅಮೃತಾಂಶುಮಂಡಲದೊಳಿರ್ದು ಆದಂ ಸುಧಾಮೋದಮಂ ತಳೆದಂಗಂ ಬೆಳೆರ್ಗಂಪನಾಳ್ದಿರೆ: **ಕಾದಂಸಂ,** ೮. ೫೫)

**ಕುಳಿರ್ಕೋಡಿಸು** – ತಂಪು ಮಾಡು, ಸಂತಸಗೊಳಿಸು (ಕಾಯ್ದುರಿವ ಭುವನಮಂ ವಿಜಯಯಶಶ್ಚಂದನರಸದಿಂದು ಮುರದ್ವಂಸಿ ನೀಂ ಕುಳಿರ್ಕೋಡಿಸಿದ್ಯೆ: **ಜಗನ್ನಾವಿ,** ೬. ೮೧)

**ಕುಳಿರ್ಕೋಡು** – ತುಂಬ ತಂಪಾಗು (ಕುಳಿರ್ಕೋಟ್ಟಿ ನಂದನಕಂ ಚಂದನಕಂ ಪಸುರ್ಪೆಸೆವ ಬಾಟಿಜ್ಹಿಂಪಕ್ಕಂ: **ಆದಿಪು,** ೧. ೭೫; ಚಳಿಯ ನಡುಕ (ನೀನಿರ್ಪಯ್ ಕುಳಿರ್ಕೋಡುತಂ: **ಸಮಯಪ,** ೧೫. ೧೦೩; ತೃಪ್ತನಾಗು; ಹಿಗ್ಗು (ಧರಾಮಂಡನನ ಹೃದಯ ಸುಧಾಕರಕಾಂತಮೊಸರ್ದು ಘಳಿಲೆನೆ ಕುಳಿರ್ಕೋಡುವಿನಂ: **ಧರ್ಮಮಧು,** ೫. ೪ ವ) ; ತಣಿಸು

**ಕುಳಿಲ್** – ಮರಕೋತಿ ಆಟ (ಹರಿವರಿ ಪಾಱುಂಬಳೆ ಮರಗೆರಸಿ ಕುಳಿಲ್ ಸೆಂಡು ಬಟ್ಟು ತಿಟಿಕಲ್ಲು ಅಟ್ಟುಂಗರೆ ಪೊಣೆಗುಂಡು ಎಂಬಿವಂ: **ಜಗನ್ನಾವಿ,** ೪. ೪೪)

**ಕುಳಿಶ** – ಕುಲಿಶ, ವಜ್ರಾಯುಧ (ಕೊಳದ ತಡಿಯೊಳ್ ಹಳಿಕುಳಿಶಶಂಖಚಕ್ರಲಾಂಛಿತಮಪ್ಪ ಅಡಿವಜ್ಜೆಯಂ ಕಂಡು: **ಪಂಪಭಾ,** ೧೩. ೭೬ ವ);

**ಕುಳಿಶಾಯುಧಂ** – ಇಂದ್ರ (ದೀಪಪ್ರದೀಪಧೂಪಫಲಂಗಳ್ ಕುಳಿಶಾಯುಧಂ ಅರ್ಚಿಸೆ ತೊಳತೊಳಗಿದುವೆಳಸಿ ಬಳಸಿ ಜಿನಡಿದಳಿರೊಳ್: **ಆದಿಪು,** ೭. ೧೦೫)

**ಕುಳಿಶಾಶ್ಮ** – ವಜ್ರಶಿಲೆ (ಇದಱ ಕುಂಜೋಪಾಂತಂ ಥಳಥಳಿಸಿ ಬೆಳಗೆ ಕುಳಿಶಾಶ್ಮಂಗಳ್: **ಶಾಂತಿಪು,** ೨. ೧೧೫)

**ಕುಳಿಶಾಸ್ತ್ರ** – ಇಂದ್ರ (ಸಿಂಹಾಸಂದಿಯೊಳ್ ಬಾಲನಂ ಕುಳೀಶಾಸ್ತ್ರಂ ಪಿರಿದುಂ ವಿಭೂತಿವೆರಸಿ ಇಟ್ಟೇಂ ಸಂತಸಂಬಟ್ಟನೋ: **ಆದಿಪು,** ೭. ೧೧೦)

**ಕುಳಿಸ** – ವಜ್ರ (ಮುತ್ತುಂ ಪಚ್ಚೆವರಲ್ಗಳುಂ ಕುಳಿಸಮುಂ ಮುಂತಾಗಿ ಕುಂದಿಲ್ಲದೊಂಬತ್ತು ರನ್ನದ ನುಣ್ಗದಿರ್ ನೆಗೆದು: **ಕಬ್ಬಿಗಕಾ,** ೩೨)

**ಕುಳೀರ** – ಏಡಿ, ನಳ್ಳಿ (ಮತ್ಸ್ಯ ಮಕರ ಕುಲಿಶ ಕುಳೀರ ವರಾಹ ವಾನರ ಕಂಠೀರವ ಚಮೂರು ಮಯೂರ: **ಆದಿಪು,** ೧೧. ೨೮ ವ)

**ಕುಳು** – ಕುಳಿತುಕೊ (ಕಡಕುಂ ಪೆಟ್ಟೆಯುಂ ಒತ್ತೆ ಮೆಲ್ಲಡಿಗಳಂ ಬಳ್ಕುತ್ತುಂ ಅಳ್ಕುತ್ತುಂ ಓರಡಿಗೆ ಒರ್ಮೊರ್ಮೆ ಕುಳುತ್ತುಂ ಏಱುತಿರೆ: **ಪಂಪಭಾ,** ೩. ೯)

**ಕುಳುಂಪೆ** – ನೀರು ನಿಂತ ಗುಂಡಿ, ಕುಂಟೆ (ಸುರಭೂರುಹಮಿರೆ ಮತ್ತಿನ ಮರನಂ ಜಳರಾಸಿಯಿರೆ ಕುಳುಂಪೆಯ ನೀರಂ ಎರೆವಮೆ: **ಆದಿಪು,** ೯. ೧೦೮)

**ಕುಳುಂಪೆಗೊಳ್** – ಗುಂಡಿಯಾಗು, ಕೆಸರಾಗು (ಕುಳುಂಪೆಗೊಂಡ ನೆತ್ತರ ಪೊಸವಜ್ಜೆಯೊಳ್ ಕೆದಱೆ ಕಣ್ಗೆಸೆದಿರ್ದುವು: **ಮಲ್ಲನಾಪು,** ೧೦. ೯೫)

**ಕುಳುತ್ಥಕ** – ಹುರುಳಿ ಕಾಳು (ಕುಳುತ್ಥಕಂ ಕೊಳ್ಳು: **ಅಭಿಧಾವ,** ೧. ೧೬. ೧೮)

**ಕುಱಿ** – ಉದ್ದೇಶಿಸು (ಕುಱಿತೋದದೆಯುಂ ಕಾವ್ಯಪ್ರಯೋಗಮತಿಗಳ್: **ಕವಿರಾಮಾ,** ೧. ೩೮); ಗುರುತು (ಕುಱಿಯೆಂದು ಕುಱುಪು: **ಶಬ್ದಮದ,** ಪ್ರಸಾ ೫೯); ಆಲೋಚಿಸು, ನಿಶ್ಚೈಸು (ನಿಜಾಭಿಖ್ಯಾತಿಯಂ ಇಳೆಯೊಳ್ ನಿಱಿಸಲ್ಕೀ ತೆಱದ ಇತಿಹಾಸಕಥೆಯಂ ಒಪ್ಪಿಸೆ ಕುಱಿತಂ: **ಪಂಪಭಾ,** ೧೪. ೫೧); ಮೈತುಂಬ ತುಪ್ಪುಳವುಳ್ಳ ಒಂದು ಪ್ರಾಣಿ (ಕುಱಿಯಂ ಕೊಂದು ಸುಟ್ಟು ತಿಂಬರ್: **ವಡ್ಡಾರಾ,** ಮು. ೧೨, ಸಾ. ೧೯)

**ಕುಱಿಗೊಳ್** – ಒಂದು ವಿಷಯದ ಮೇಲೆ ಲಕ್ಷ್ಯವಿಡು, ಗುರಿಯಾಗಿಟ್ಟುಕೊ (ಕುಱಿಪಂ ಕುಱಿಗೊಂಡು ಕವೀಶರ್ ಆರ್ಪಂತು ಪಿಂಗಿಸುಗೆ ಕಾವ್ಯದಿಂ ಆ ಲಘುದೋಷಮಂ: **ಕವಿರಾಮಾ,** ೧. ೧೨೯)

**ಕುಱಿದಱಿದಱಿ** – ಕುರಿಯನ್ನು ಮಾಡಿದಂತೆ ಸಣ್ಣದಾಗಿ ಕತ್ತರಿಸು (ವಿಷಪನ್ನಗನಂ ಪನ್ನತನನೆಡೆಯೊಳ್ ಅರಿಗಂ ತನ್ನಯ ಗರುಡಾಸ್ತ್ರದಿಂದೆ ಕುಱಿದಱಿದಱಿದಂ: **ಪಂಪಭಾ,** ೧೨. ೨೦೫)

**ಕುಱಿದಱಿಮಾಡು** – ಕುಱಿದಱಿದಱಿ (ಆಡಂ ಕೊಂದುಂ ಕುಱಿದಱಿಮಾಡಿದರಂ ಮುಟ್ಟೆ .. .. ಮೀವರೆಂಬರ್ ಪಾರ್ವರ್: **ಸಮಯಪ,** ೧೧. ೧೧೨)

**ಕುಱಿಪ** – ಮನಸ್ಸಿನ ಗುರಿ (ಎಂದು ಮನದ ಮಱುಕಮುಮಂ ಎರ್ದೆಯ ಕುದಿಪಮುಮಂ ಬಗೆಯ ಕುಱಿಪಮುಮಂ ಮೆಯ್ಯ ಬಡತನಮುಮಂ ಅಱಿಯೆ ತೋಱಿ ನುಡಿದೊಡೆ: **ಪಂಪಭಾ,** ೪. ೬೮ ವ)

**ಕುಱಿಪು** – ಗುರುತು, ಚಿಹ್ನೆ (ಅಮಿತಾಂಭೋನಿಧಿ ವಾಳುಕಪ್ರಕರಮಂ ಪುಂಜೀಕೃತಂ ಮಾಡಿ ಚೋದ್ಯಮದಾಗಲ್ ಮಱಲೊಂದನಲ್ಲಿ ಕುಱಿಪಂ ಮಾಡಿಟ್ಟು: **ಸುಕುಮಾಚ,** ೫. ೩೩); ಲಕ್ಷಣ (ಕುಱಿಪಂ ಕುಱಿಗೊಂಡು ಕವೀಶರ್ ಆರ್ಪಂತು ಪಿಂಗಿಸುಗೆ ಕಾವ್ಯದಿಂ ಆ ಲಘುದೋಷಮಂ: **ಕವಿರಾಮಾ,** ೧. ೧೨೯); ವರ್ಣನೆಯ ವಿಷಯ (ಇಂದ್ರನ ಬೆಸದಿಂ ಬಂದುವೆಂದೊಡೆ ಉಪವನಮಂ ಬಣ್ಣಿಸಲ್ಕೆನಗೆ ನಾಡೆಯುಂ ಕುಱಿಪಲ್ತೇ: **ಆದಿಪು,** ೬. ೯೨)

**ಕುಱಿಮಾಡು** – ಗುರುತುಮಾಡು (ಮತ್ತದನೆ ಪೋಲ್ವುದಂ ಕುಱಿಪುಗಳಿಂ ಕುಱಿಮಾಡಿ ಪೇೞ್ವುದು: **ಕವಿರಾಮಾ,** ३. ೧೨೬)

**ಕುಱಿವಡ** – ಸಣ್ಣ ಮಡಿ ಬಟ್ಟೆ (ಬಡಗನಾಡವರ್ ವಪ್ರಪಾಳನ ರಾಜ್ಯದೊಳ್ ಅರ್ಧಗಪ್ಪಡವಂ ಬಿಸುಟ್ಟು ಕಚ್ಚೆಗಟ್ಟದೆ ಸಯ್ತುಡುವರುಂ ಕಱಿವಡವಂ ಪೊದೆವರುಂ ಆದೊರ್: **ವಡ್ಡಾರಾ,** ಪು ೯೩, ಸಾ ೧೮)

**ಕುಱುಂಕು** – ಕುರುಕು, ತಿನ್ನು (ಹಳಹಳನಿರ್ದ ತಾರೆಗಳನಾಯ್ದು ಕುಱುಂಕುತುಂ ಅಂತೆ ಪೂಣ್ದು ಬೆಂಬಳಿವಿಡಿದೊತ್ತಿಕೊಂಡು ಹಱಿಗಟ್ಟಲೆಯಂ ತವೆ ಪೀಱುತುಂ: **ಕುಸುಮಾಕಾ,** ೧೪. ೨೧)

**ಕುಱುಂಬ** – ಕುರುಬ, ಕುರಿ ಸಾಕುವವನು ಕುರುಂಬರ ಪಳ್ಳಿಗೆವೋಗಿ ಕುಱಿಯಂ ಕಳ್ದು ತಂದು: **ಸುಕುಮಾಚ,** ೬. ೨೭ ವ); ಅಂಜುಕುಳಿ (ಕುದುರೆಯೇರ್ದ ಕುಱುಂಬನಂತೆ ನಡುಗುತ್ತುಂ: **ಧರ್ಮಾಮೃ,** ೧. ೧೧೬. ವ); ಕೋಟೆಯ ಕಾವಲುಗಾರ (ಮಲೆಪರ್ ಮಾಱಾಂಪರಿಲ್ಲ ಕ್ರಮದಿನದಟರ್ ಆದಟಂದರಿದರಿಲ್ಲ ಉರ್ಕಿ ಬೇಡರ್ಚಲದಿಂ ಮಾರ್ಕೊಂಡರಿಲ್ಲ ಒಟ್ಟಜೆವೆರಡು ಕುಱುಂರ್ತಱುಂಬಿಧರಿಲ್ಲ: **ಸುಕುಮಾಚ,** ೧. ೮೦)

**ಕುಱುಂಬಿತಿ** – ಕುರುಬಿತಿ, ಕುರುಬ ಹೆಂಗಸು (ಇತಿಗೆ: ಚಾಮರಿಗಿತಿ .. .. ಕನ್ನಡಿಗಿತಿ .. .. ಕುಱುಂಬಿತಿ: **ಶಬ್ದಮದ,** ೨೯೯, ಪ್ರ)

**ಕುಱುಂಬು** – ಸಣ್ಣ ಪಾಳೆಯ ಪಟ್ಟು (ಮಲೆ ತಲೆದೋಱಿದೆಂದುದನೆ ಕೊಟ್ಟುದು ಡಂಗಮಡಂಗಿ ಬಂದುದು ಒಕ್ಕಲಿಗವೆಸರ್ಗೆ ಪೂಣ್ದುದು ಕುಱುಂಬು ತಱುಂಬದೆ ಮಿಕ್ಕ ಶತ್ರುಮಂಡಳಿಕರೆ ಮಿತ್ರಮಂಡಳಿಕರಾದರ್: **ಪಂಪಭಾ,** ೨. ೯೦)

**ಕುಱುಂಬುಗೊಳಿಸು** – ಕಿರಿದುಗೊಳಿಸು (ಪನ್ನೆರಡು ಯೋಜನಂ ನೀಳಂ ನವಯೋಜನದಗಲಮೆನೆ ಬಿಡಿಸಲ್ .. .. ಪಡೆವಳ್ಳಂ ನೆಱೆಯೆ ಕುಱುಂಬುಗೊಳಿಸಿ ಬಿಡಿಸಿದನಾಗಳ್: **ಪಾರ್ಶ್ವನಾಪು,** ೧೦. ೮೯)

**ಕುಱುಕು** – ತಿನ್ನು (ಮೆದೆಯಂ ಸುಟ್ಟು ಅರಳಂ ಕುಱುಕುವ ತುಪ್ಪಮನೊಕ್ಕು ಸಗಣಮಂ ಕೊಳ್ವ: **ಧರ್ಮಾಮೃ,** ३. ೧೧ ವ)

**ಕುಱುಕುಣಿಕೆ** – ಕಿರುಬೆರಳು (ಬಲ್ಪಿನೊಳ್ ಎನ್ನೀ ಕುಱುಕುಣಿಕೆಗೆ ನೆಱೆಯ್ಕೆ ಪೊಚ್ಚಱಿನೊಳಿದೇಂ ಪೊಣರ್ದು ನೋಡಲಾಗದೆ ಕೆನ್ನಂ: **ಹರಿವಂಶ,** ೧೦. ३४)

**ಕುಱುಕಿಚಿಗ** – ಕರುಗಳನ್ನು ಕಾಯುವವನು (ಕುಱುಕುಚಿಗನವರ್ಗೆ ಪಲ್ಮೊಱೆದು ಕನಲ್ದೊನಲ್ದು ಬಡವಾಗಿರ್ದು: **ಜೀವಸಂ,** ೧೧. ೪೨ ವ)

**ಕುಱುಕುಱುಂಮೆಟ್ಟು** – ನಿಧಾನವಾಗಿ ಹೆಜ್ಜೆ ಹಾಕು (ಜಂಝಾನಿಳನೊತ್ತುವಂತೆ ಕುಱುಕುಱುಂಮೆಟ್ಟಿ ನಡೆಯಿಸುತ್ತುಂ: **ಅನಂತಪು,** ೨. ೨೯ ವ)

**ಕುಱುಕುಱುಮೆಟ್ಟು** – ಸಣ್ಣ ಹೆಜ್ಜೆ ಹಾಕು (ಪೋಗಲುಮಱಿಯದೆ ಕುಱುಕುಱುಮೆಟ್ಟುತ್ತುಮಿರ್ಪಿನಂ: **ನೇಮಿನಾಪು,** ೭. ೪೪ ವ)

**ಕುಱುಜು** – ಕುಳ್ಳಾಗಿರುವಿಕೆ (ಮದನಿಯ ಪೊಸಮಾಲೆಗಳ ಮೆಳೆಗಳಿಂದ ಅರ್ದುಗಂಚಿಯ ಕುಱುಜುಗಳ ಕಳೆಗಳಿಂ: **ಉದ್ಭಟಕಾ,** ೫. ೨೨)

**ಕುಱುಪು** – ಕುಱಿಪು, ಗುರುತು (ಕುದುರೆಯ ಬಣ್ಣದಿಂ ರಥದ ತೋರ್ಕೆಯಿಂ ಎತ್ತಿದ ಚಿತ್ರಕೇತುವೃಂದದ ಕುಱುಪಿಂದ ಉದಗ್ರ ರಥಚೋದಕಚಿಹ್ನದಿಂ ಈತನೆಂಬುದಂ ಅಱಿದು: **ಪಂಪಭಾ,** ೧೦. ೮೭)

**ಕುಱುವ** – ದ್ವೀಪ, ನಡುಗಡ್ಡೆ (ಒಂದು ಕುಱುವದೆಡೆಯೊಳ್ ವನತರುಗಳ ತುಱುಗಳಿಂದೊಪ್ಪಿರ್ದ ಅರಣ್ಯ ಪ್ರದೇಶದೊಳ್: **ಹರಿವಂಶ,** ३. ೧೧ ವ)

**ಕುಱುವಡಿ** – {ಕುಱು+ಮಡಿ] ಸಣ್ಣ ಮಡಿಬಟ್ಟೆ (ತೆಱಪುವಡೆದು ಅಂಗಜಂ ಕೆಯ್ಸಱೆಗೊಳೆ ನೋಟಕರ ಮನಮನಾಗಳ್ ಕೊಳದಿಂ ಪೊಱಮಡೆ ಜಿಗಿಲ್ತು ಪತ್ತಿದ ಕುಱುವಡಿಗಳೆ ಮೆಱೆದುದು ಅವರ ನಾಣ್ಗಳ ತೆಱಪಂ: **ಪಂಪಭಾ,** ೫, ೬೭)

**ಕುಱುವಳ್ಳ** – ಸಣ್ಣ ಹಳ್ಳ (ಮನುಜರ್ಗಾರ್ಗಂ ಅಲಂಘ್ಯಮೆಂದು ನೆಱೆ ತಾಂ ನಚ್ಚಿ ಲಂಕಾಧಿನಾಥನವಂ ವೈರಮನೋವದಿರ್ಪಿನೆಗಂ ಅಂತಾ ರಾಮಸೈನ್ಯಕ್ಕೆ ನೆಟ್ಟನೆ ದಾಂಟಲ್ ಕಿಱುವಳ್ಳಮಾಯ್ತು: **ಶಾಂತೀಶ್ವಪು,** ೧३. ೧३೦)

**ಕುಱುವೆ** – ಒಂದು ಬಗೆಯ ಬತ್ತ (ಬೀಸುವ ಕುಱುವೆಯ ಬಿಜ್ಜಣಿಗೆಯೊಳಂ ಪಾಸುವ ಬಾಳ ಪ್ರವಾಳ ತಳ್ಪದೊಳಂ .. .. ಮೆಱೆಯೆ: **ಅನಂತಪು,** ೧೧. ೨೯ ವ)

**ಕುಱುವೆಲೆ** – ಕಡಿಮೆ ಬೆಲೆ (ಕುಱುವೆಲೆ ಪಸುವಂ ಬೆಲೆಯಾಸೆಯಿಂದೆ ತಿಂದಪರಲ್ತೇ: **ಸಮಯಪ,** ೯. ೧೧೫)

**ಕುಱುಳೆವಱಿ** – ಎಳೆಯ ಮರಿ (ಗೂಡುಗಳೊಳ್ ಗೂಡುಗೊಂಡಿರ್ದ ಕುಱುಳೆವಱಿಗಳ್ಗೆ ಕುಟುಂಕನಿಕ್ಕಿ: **ಚಂದ್ರಪ್ರಪು,** ೯. ೪ ವ)

**ಕುಟಿ** – ಕಬ್ಬಿಣದ ಸಲಾಕೆ (ದೋಷಿ ಪಿಡಿವಂತೆ ದಿವ್ಯದ ಕಾಸಿದ ಕುಟಿವಂ ಕಡಂಗಿ ಕಾಳೋರಗನಂ ಕೂಸು ಪಿಡಿವಂತೆ ಪಿಡಿದಂ ಸಾಸಿಗನವಿವೇಕಿ ಸೀತೆಯಂ ದಶಕಂಠಂ: **ಪಂಪರಾ,** ೯. ೧೦೧)

**ಕುಟಿ** – ಗುಂಡಿ, ಹಳ್ಳ (ಅಗುಟ್ದಿರಲ್ ಆ ಕುಟಿಯೊಳ್ ತೊಟ್ಟಗೆ ನಿಧಿಗಂಡಂತೆ ವಸುಧೆಗೆ ಅಸದಳಮಾಯ್ತು ಆ ಮಗನ ಅಂದಂ: **ಪಂಪಭಾ,** ೧. ೯೭); ತೋಡು, ಖನನ (ಕುಟಿ– ಖನನೇ: **ಶಬ್ದಮದ,** ಧಾ ೯೨೨)

**ಕುಟಿಗೊಳ್** – ಕುಗ್ಗು (ಪೊಸವೇಟಕಾಱರ ಎರ್ದೆಗಳ್ ಪೊಸಕಾರ ಪೊಡರ್ಪುಗಂಡದೇಂ ಕರಿತುವು ಅದೇಂ ಕಲಂಕಿದುದು ಅದೇಂ ಕುಟಿಗೊಡುವು ಅದೇಂ ಕನಲ್ದುವೋ: **ಪಂಪಭಾ,** ೭. ೨३); ಛಿದ್ರವಾಗು

**ಕುೞಿನೊಸಲ್ –** ಗುಳಿಬಿದ್ದ ಹಣೆ (ಪಱಿದಲೆ ಕುೞಿನೊಸಲ್ ಅೞಿಗಣ್ ಒಱೆವಾಯ್ ಹಪ್ಪಳಿಕೆ ಮೂಗು: **ಯಶೋಧಚ,** ೨. ೩೮)

**ಕುೞಿವಳ್ಳ –** ಆಳವಾದ ಹಳ್ಳ (ದರಿಯ ಕುಳಿಯ ಕುತ್ತುಱು ಕುೞಿವಳ್ಳಮಂ ಕಂಡು: **ಲೀಲಾವತಿ,** ೬. ೪೨ ವ)

**ಕುೞಿವುಗು –** ಶುದ್ಧಿಸ್ನಾನ ಮಾಡು (ಕುೞಿವುಗದೆ ನಾಣ್ಚಿ ನಿನ್ನೊಡಲೊಳ್ ನೀನೋಡಿ ಪುಗುವುದುಂ: **ಲೀಲಾವತಿ,** ೭. ೩೯ ವ)

**ಕುೞಿವೊಗು –** ಶುದ್ಧಿಸ್ನಾನ ಮಾಡು (ಜಳಜಾನನೆಗೆ ಕುೞಿವೊಗೆ .. .. ಅನುರಾಗರಸದ ಓಕುಳಿಮಾಡಿದುದಾಗಖಿಳ ಬಾಂಧವನಿವಹಂ: **ಪಾರ್ಶ್ವನಾಪು,** ೭. ೮೬)

**ಕುಱು –** ಕುಳ, ನೇಗಿಲ ಗುಳ (ಮನೆಮುಟ್ಟುಂ ಕುಱುಗಳುಂ ಇಂತನೇಕಮೊಳವೊಂದು ದೆಯ್ವಮಲ್ಲವು ನಿರುತಂ: **ಸಮಯಪ,** ೯. ೧೩೪); ಕಬ್ಬಿಣದ ಸಲಾಕೆ (ದಿವ್ಯದ ಕಾಸಿದ ಕುಱುವಂ ದೋಷಿ ಪಿಡಿವಂತೆ: **ಪಂಪರಾ,** ೯. ೧೦೧)

**ಕೂಂಕು –** ನೆಗೆ, ಹಾರು (ಕೂಂಕು–ಉತ್ಸರ್ಪಣೇ: **ಶಬ್ದಮದ,** ಧಾ ೨೮); ತಳ್ಳು (ಸುರಭಿಗಳ ಮೊಲೆಗಳನುಣ್ಬ ಅವಱ ಮಱೆಗಳಂ ಪೋಗೆ ನೂಂಕಿ ಕೂಂಕಿ ಮೊಲೆಗಳನುಣ್ಬ ಕಿಶೋರಕೇಸರಿಗಳುಮಂ: **ಪಂಪಭಾ,** ೧. ೧೧೫ ವ); ತಳ್ಳು, ಒತ್ತು (ಆ ಸಕಲ ಲಕ್ಷ್ಮೀನಿವಾಸವಿಶಾಲವಕ್ಷಸ್ಥಲನಂ ತಮ್ಮ ನಿಬಿಡನಿಬದ್ಧಪೀವರಸ್ತನಂಗಳಿಂ ಕೂಂಕಿಯುಂ: **ಸುಕುಮಾಚ.** ೧೦. ೧೦೧ ವ); ಪಲಾಯನ ಮಾಡು (ಕೋಡುವ ಕೂಂಕುವ ಚೆಂದಂ ನೋಡಿರೆ ಕಾಳೆಗಕೆ ಬೆಂಬಲಂ ಗಡ ಪೆಂಡಿರ್ ಸೂಡುವಲರಂಬು ಗಡ ಪಿಡಿದಾಡುವ ಕರ್ಬು ಗಡ ಬಿಲ್ಲು ಇದೇನಚ್ಚರಿಯೋ: **ಕಬ್ಬಿಗಕಾ,** ೧೪೩); ಕುಕ್ಕು (ಕೂಂಕಿ ಕೊಡಂಕೆಯಂ ಮುಗ್ಗುವಂ: **ನೇಮಿನಾಪು,** ೭. ೭೮)

**ಕೂಂಟಣಿ –** ಕುಂಟಣಿ (ಸಂಗದಾಳುಗಳಂ ಕೂಂಟಣಿಯರ್ಕಳಂ ಪಲರುಮಂ ಕಂಡರ್ ವಣಿಜ್ನಂದನರ್: **ಹರಿವಂಶ,** ೩. ೩೩)

**ಕೂಂಟಿ –** ಕುಂಟಿ, ಅಂಗಹೀನೆ (ಎಂದವಳಂ ಮುಗುೞೊತ್ತೆಗೆ ಪೊಱಮಡದಂತು ಕೂಂಟಿಮಾಡಿ ಜಗತೀಪತಿಯ ಮೊಗಕ್ಕೆ ಮುಗುಳ್ನಗೆಯನೋಲಗಿಸುತ್ತುಂ: **ಪಾರ್ಶ್ವನಾಪು,** ೧೦. ೭೧ ವ)

**ಕೂಂದಲ್ –** ಕೂದಲು (ಸೋಗೆ ಕೂಂದಲ್ವೊಱೆಯಂ ಕಾಳೋರಂಗೆತ್ತು ಎಳಸಿದಪುದು: **ಲೀಲಾವತಿ,** ೧೩. ೮)

**ಕೂಕಿಡು –** ಕೂಗು, ಧ್ವನಿಗೈ (ಕೂಕಿಡುವ ಕುಕಿಲ್ವ ಬಿಕ್ಕುಳಿಪ ತೇಗುವ: **ಪಂಪಭಾ,** ೪. ೯೦)

**ಕೂಕಿಱಿ –** ಕುಕ್ಕಿಱಿ, ಆರ್ಭಟಿಸು (ಕೆನ್ನೆತ್ತರೊಳ್ ಒರ್ವರೊರ್ವರಂ ತಳ್ಕಿಱಿದುಂ ಬೊಬ್ಬಿಱಿದುಂ ತ್ರಿಪುಂಡ್ರಮಿಟ್ಟುಂ ಕೂಕಿಱಿದುಂ ತೇಗಿಯುಂ ಸಸಿನೆವರಿದುಂ [ಡಿಎಲ್ಎನ್ ಒಪ್ಪಿದ ಪಾಠ] ಬವಳಿವರಿದುಂ ಬಾನಂಗುಳಿಗೆವರಿದುಂ ಸೂಟ್ಟಿರಿದುಂ ಆಡುವಾಗಳ್ ಉಭಯಬಲಂಗಳ್: **ಪಂಪಭಾ,** ೧೨. ೧೫೮ ವ)

**ಕೂಗರಿ –** ಅವರೆ (ತೊಂಡೆ ಪಡಲಂ ಮೋಚಂ ಕೂಗರಿ ಬದನೆ ಎನಿಪ ಮೇಲೋಗರಮಂ ಪಲವನಿಕ್ಕಿದರ್ ಶಶಿಮುಖಿಯರ್: **ತ್ರಿಷಷ್ಟಿಪು,** ೧೦. ೩೨)

**ಕೂಗಿಡು –** ಗಟ್ಟಿಯಾಗಿ ಕೂಗು (ಕೂಗಿಡೆಯಿಡೆ ದಱದಱಮೆಂದೆೞೆದು ಪುಯ್ಯಲಿಡೆಯಿಡೆ: **ಅಜಿತಪು,** ೧೦. ೨೮)

**ಕೂಗುರಿ –** ಅವರೆ (ಹಾಗಲ ಹಡಲಂ ಗುಳ್ಳಂ ಕೂಗುರಿ ಕೂಷ್ಮಾಂಡ ಅವರೆ ಬದಣೆಗಳಿಂ ಲೇಸಾಗಿರೆ: **ಧರ್ಮಪ,** ೨. ೫೮)

**ಕೂಚಿಪತ್ರ –** ವಿಷಯವನ್ನು ಬರೆದಿರುವ ಪತ್ರ (ಅಗ್ಗಳಿಕ್ಕೆಯ ಮಹಾರತ್ನಂಗಳಾಗಳ್ ತೆಱಂಬೊಳೆದುಂ ತೊಟ್ಟನೆ ಕೂಚಿಪತ್ರಸಹಿತಂ ಬಂದೊಕ್ಕುದಂ ಕಂಡು: **ಜೀವಸಂ,** ೧೧. ೩೦)

**ಕೂಜನ –** ಕೂಗು, ಕುಕಿಲು (ಕಂತುಕಾಂತೆಯ ಕಳ ಕೂಜನದ ಗುಣನೆಯಂತಿರ್ಪ ಸಾರಸ ಸಿತಕಮಳ ಕುವಳಯಷಂಡಂಗಳಿಂ: **ನೇಮಿನಾಪು,** ೪. ೬೮ ವ)

**ಕೂಜಿತ –** ಕೂಜನ (ಕಾದಲರ ಕಾಮಕೇಳಿ ಕೂಜಿತದೊಳ್ ಕೂಡಿ: **ಚಂದ್ರಪ್ರಪು,** ೮. ೬೬ ವ)

**ಕೂಜಿಸು –** ಹಕ್ಕಿಯಂತೆ ಕೂಗು (ಕಂಠಮಂ ತೂಗಿ ತೊನೆದು ನಡೆದು ನಲಿನಲಿದು ನೆರೆದು ಕೂಜಿಸುವ ಕಪೋತಂಗಳುಮಂ: **ಲೀಲಾವತಿ,** ೫. ೭೨ ವ)

**ಕೂಟ –** ಶಿಖರ, ತುದಿ (ಕಳಧೌತೋಜ್ಜ್ವಳ ಕೂಟಕೋಟಿಘಟಿತಶ್ರೀಗೇಹದಿಂ ಮುಂದೆ: **ಆದಿಪು,** ೭. ೧೧೦); ಸೇರುವಿಕೆ (ಕೂರ್ಮೆಯಿಂದಿರ್ವರುಮಿರ್ಪರ್ ಪಾಲ ನೀರ ಕೂಟದ ತೆಱದಿಂ: **ಧರ್ಮಾಮೃ,** ೨. ೧೦೩); ಸಮುದಾಯ (ಕೂಟಂ ಪುಂಜೀಭೂತಂ: **ಅಭಿಧಾವ,** ೩. ೧. ೯೭); ಕಪಟ (ಕೂಟಂ ಕಪಟಂ: **ಅಭಿಧಾವ,** ೩. ೧. ೯೭); ಸಂಭೋಗ (ಮಸೆವುದು ಮಾಸಲಿರ್ದ ಪಱಿವೇಟಮಂ ಇಚ್ಚೆಯ ಬಿಚ್ಚತಿಕ್ಕೆಯಂ ಪೊಸೆಯಿಪುದು ಒಳ್ಕಮಂ ನಡೆಪುತಿರ್ಪುದು ಧಾತುವಂ ಒಳ್ಳಿತೆಯ್ದೆ ಪಾಟಿಸುವುದು ಕೂಟದೊಳ್ ಕುಶಲನಪ್ಪುದು: **ಶಾಂತಿಪು,** ೮. ೯೧); ಕೊಂಬು ಮುರಿದ ಪ್ರಾಣಿ (ನಿರ್ಭಗ್ನಶೃಂಗನಕ್ಕುಂ ಕೂಟಂ: **ಅಭಿಧಾವ,** ೧. ೧೫. ೫); ರಾಶಿ (ಉಪಸಹೃತಮಾದುದು ರಾಶಿ ಪುಂಜಂ ಉತ್ಕರ ಸಮುಚ್ಚಯಂ ಕೂಟಂ: **ಅಭಿಧಾವ,** ೨. ೧. ೨೯)

**ಕೂಟಕುಳಿಗಳ್ –** ಗುಂಪು ಸೇರಿ ಕಾಲ ಕಳೆಯುವ ಜನ (ಜನಮೆಲ್ಲಂ ನೆರೆದು ಅಕ್ಕಟ ಅಣ್ಣರಿವರ್ ಏವಂದರ್ ಏವೋದರ್ ಎಂಬಿನಂ ಏಂ ಪೋಪಮೆ ನಾಡ ಕೂಟಕುಳಿಗಳ್ಗೆ ಏ ದೋಸಂ ಏಂ ಬನ್ನಂ: **ಪಂಪಭಾ,** ೩. ೬೫)

**ಕೂಟಪಾಕಳ –** ಆನೆಗೆ ಬರುವ ಒಂದು ಬಗೆಯ ಜ್ವರ, ಪಿತ್ತ ಜ್ವರ (ಆನೆಗೆ ಕೂಟಪಾಕಳಂ ಕುದುರೆಏ ಕರ್ಣದೂಷಿಕೆ ರಥಕ್ಕೆ ಸಿಡಿಲ್ ಭಟಮಂಡಲಕ್ಕೆ ಕೆಂಡದ ಮೞೆಯೆಂಬಿನಂ ಕೞಿದಂ ಅಂಬಿನ ಪೆರ್ಮೞೆಯಂ ಹಲಾಯುಧಂ: **ಪಂಪರಾ,** ೪. ೬೬)

**ಕೂಟಶಾಲ್ಮಲಿ –** ಬೂರುಗದ ಮರದ ಒಂದು ಬಗೆ (ಕೂಟಶಾಲ್ಮಲಿಗಳಂ ಅಡರವೇಟ್ಟು ಇದಿರಂ ಬೞಿಯಂ ಉರ್ಚುವರುಂ: **ಆದಿಪು,** ೫. ೮೫ ವ)

**ಕೂಟಾಕ್ಷರ –** ಮೋಸದ ಬರವಣಿಗೆ (ಪರಿವಾದಂ ಪೈಶೂನ್ಯಂ ಪರಮರಹಸ್ಯಪ್ರಕಾಶಕರಣಂ ಕೂಟಾಕ್ಷರ ನಿಧಿನಿಕ್ಷೇಪಾದಿ ಅಪಹರಣಂ ಸತ್ಯವ್ರತಕ್ಕತೀಚಾರಂಗಳ್: **ವರ್ಧಮಾಪು,** ೭. ೯)

**ಕೂಡು –** ಒಂದಾಗು, ಸಮ್ಮೇಳ (ಮಾದ್ಯತ್ ಗಜಗಂಡಭಿತ್ತಿ ಕಷಣ ಪ್ರೋದ್ಭೇದದಿಂ ಸಾರ್ದು ಬಂದು ಇದಿರೊಳ್ ಕೂಡುವುದಿಲ್ಲಿ ಚಂದನರಸಂ ಕೆಂಬೊನ್ನ ಟಂಕಂಗಳೊಳ್: **ಪಂಪಭಾ,** ೪. ೨೨); ಸಾಧ್ಯವಾಗು (ಎಲ್ಲಿರ್ದೊಡಂ ಕೂಡದಾಗಳಣಂ ಕೂಡದು ಬಾಟ್ವಿ ಮಾತೆನಗೆ: **ಆದಿಪು,** ೩. ೪೧);

ಸಂಭೋಗಿಸು (ದಿವ್ಯಮುನಿಯುಂ ಮೃಗಮಾಗಿ ಮರಲ್ದು ಕೂಡೆ: **ಪಂಪಭಾ,** ೧೦. ೧೧೧); ಸೇರಿಸು (ಆಂ ನಿಮ್ಮಡಿಯ ಭಯಮಂ ಕಳೆಯಲೆಂದಾ ಮಹಾಸತ್ತ್ವಸಂಪನ್ನನಂ ನಿಮ್ಮೊಳ್ ಕೂಡುವುದುಮಂ ಕೂಡಿದೊಡಾ ಪಾಪಕರ್ಮಂ ಪೊಲೆಗೆಳೆಯಂತೆಯುಂ: **ಪಂಚತಂತ್ರ,** ೧೫೧ ವ)

**ಕೂಡುಕುಳಿ ದೇವರು** – ಜಂಗುಳಿ ದೇವರು (ನಾಡೊಳಗುಳ್ಳ ಕೂಡುಕುಳಿ ದೇವರನೋಲಗಿಸುತ್ತುಂ ಇರ್ದೊಡೇಂ ಕೂಡುಗುಮೆ ಸುಖಾಸ್ಪದಂ: **ಸಮಯಪ,** ೮. ೨೪೭)

**ಕೂಡುವೊಂ** – ಕೂಡುವ ಲೆಕ್ಕ ಮಾಡುವವನು (ಪಡೆದ ಧನಕ್ಕೆ ಲೆಕ್ಕಮಿಡಲ್ ಇಂದ್ರನಗಂ ಬಳಪಂ ಧರಾತಳಂ ಕಡಿತಂ ಅಹೀಶ್ವರಂ ತಗುಳೆ ಬಾಚಿಸುವೊಂ ಸುರಮಂತ್ರಿ ಕೂಡುವೊಂ: **ಶಾಂತಿಪು,** ೯. ೧೪೭)

**ಕೂನ್** – ಬಾಗು (ಕೂನ್–ಆನಮ್ರೇ: **ಶಬ್ದಮದ,** ಧಾ ೪೩೪)

**ಕೂನ** – ಕುಬ್ಜ (ಮದನನದುವಂ ಬಿಸಿಟು ಕೂನನುಂ ಕಣ್ಣನುಮಾಗಿ ಬರೆ: **ಕರ್ಣನೇಮಿ,** ೭. ೧೮೨ ವ); ಗುರುತು (ಮತ್ತಂ ಅವರಿದರ್ಕೊಂದು ಕೂನಮಂ ಪೇಟ್ದರ್: **ನೇಮಿನಾಪು,** ೨. ೩)

**ಕೂನಿಸು** – ಬಾಗಿಸು (ಕೆಯ್ಗಳನೆ ಕೂನಿಸಿ ಕುರ್ಗುತೆ ಏಡಿಸುತ್ತೆ ತಾಂ ನೆಱೆ ನಗಿಸಿತ್ತು .. .. ಒಂದು ಮರ್ಕಟಂ: **ಗಿರಿಜಾಕ,** ೫. ೨೦)

**ಕೂಪ** – ಸೇದುವ ಬಾವಿ (ವಾಪಿ ತಟಾಕಂ ದೀರ್ಘಿಕೆ ಕೂಪಂ ನಿಮ್ನಗೆ ಮಹಾಹ್ರದಂಗಳ್: **ತ್ರಿಷಷ್ಟಿಪು,** ೨. ೨೯); ಹಳ್ಳ (ನೆರೆದಿಸುತಿರೆ ತೋಲ್ವುಲ್ಲೆಯಂ ಇರದೆ ಅದು ಬಿಟ್ಟೊಡೆ ಪುರಾಣಕೂಪದೊಳ್ ಅದಂ ಇನ್ನು ಅರಿದು ತೆಗೆವಂದಂ ಎಂದವರಿರೆ ಬಳಸಿಯುಮಲ್ಲಿ ಕಂಡು ನಕ್ಕಂ ದ್ರೋಣಂ: **ಪಂಪಭಾ,** ೨. ೫೧); ಪ್ರಿಯ (ಕೂಪನೆನಿಪ್ಪ ರಾಜಶುಕನೊಳ್ನುಡಿಗೆ ಉತ್ತರಮೀಯದದಂದು: **ಉದ್ಭಟಕಾ,** ೭. ೭೦)

**ಕೂಪಾರ** – ಸಮುದ್ರ (ಆ ಪೂರ್ವ ದಕ್ಷಿಣಾಪರ ಕೂಪಾರದ ರಜತಗಿರಿಗುಹಾದ್ವಯದೆಡೆಯೊಳ್: **ಆದಿಪು,** ೧೪. ೮)

**ಕೂಪಾರಾರವ** – ಸಮುದ್ರದ ಭೋರ್ಗರೆತ (ವಿಳಯಾನಿಳೋಚ್ಚಳಿತ ಕೂಪಾರಾರವಂ ಖೇಚರೇಂದ್ರಂ ದಷ್ಟಾಧರನಾತ್ಮಪೀಠತಳಮಂ ಪೊಯ್ದೆಟ್ಟು: **ಶಾಂತಿಪು,** ೫. ೪೫)

**ಕೂಬರ** – ಬಂಡಿಯ ಮೂಕಿ (ಯುಗಂಧರೋದ್ದೇಶದಲ್ಲಿ ಕೂಬರಮಕ್ಕುಂ: **ಅಭಿಧಾವ,** ೧. ೧೪. ೨೯)

**ಕೂರ್** – ಪ್ರೀತಿಸು, ಮೋಹಿಸು (ನೀಂ ಎನ್ನಿನಿತಂ ಕೂರದೊಡಂ ನಿನ್ನ ನುಡಿಯಂ ಆಜಿರಂಗದೊಳ್ ಮೀಱುವೆನೇ: **ಪಂಪಭಾ,** ೧೨. ೯೫); ಹರಿತವಾದ (ಕುರುಳಂ ಕೂರುಗುರಿಂದೆ ನೇವರಿಸುತಂ ಹಸ್ತಾಬ್ಜಲೀಲಾಬ್ಜಮಂ ತಿರುಪುತ್ತಂ: **ರಾಜಶೇವಿ,** ೭. ೧೦)

**ಕೂರಂಕುಸ** – ಹರಿತವಾದ ಅಂಕುಶ (ಮಿಂಚಿಂ ಪುದಿದಿತ್ತೆಂಬಂತೆ ಕೂರಂಕುಸದ ಪೊಳಪನಾ ತೋಱುವಂ ವಜ್ರಜಂಘಂ: **ಆದಿಪು,** ೪. ೨೫)

**ಕೂರಂಗಿ** – ಒಂದು ಕಾಡು ಪ್ರಾಣಿ (ಕರಡಿ ಮೊಲಂ ಕೋಡಂಗುರಿ ನರಿದರಿ ಕರಂಗಿ ಬೆಕ್ಕು ಹೇರುಡು ಕಾಕಂ: **ಸೂಕ್ತಿಸುಧಾ,** ೩. ೧೪೯)

**ಕೂರಕಮ್ಮ** – ಕ್ರೂರ ಕರ್ಮ (ಓವದೆ ಕಾಯದೆ ಕೂರಕಮ್ಮದಿಂ ಸೊನೆ ಸುರಿವನ್ನೆಗಂ ಪಱಿದು ನೋಯಿಸಿ ಕಾಡಿದೆವು: **ಆದಿಪು,** ೧೧. ೧೩೨)

**ಕೂರಗೆ** – ಕೂರಂಗಿ (ಆಂ ಪೋಗಿ ಕೂರಗೆವಿಂಡಂ ಗಜವೈರಿವೊಕ್ಕವೊಲ್ ಅರಿಪ್ರಧ್ವಂಸಮಂ ಮಾಡುವೆಂ: **ಶಾಂತಿಪು,** ೭. ೫೪)

**ಕೂರದ** – ಪ್ರೀತಿಸದವನು, ಹಗೆ (ಕೂರದದನಿಂ ಒಡ್ಡಿದಂ ಪಗೆಗೆ ಸಂತಸಮಾಗಿರೆ ಮರಿ ಸುಯ್ಯುಗ್ಗಮೇ: **ಪಂಪಭಾ,** ೩. ೪)

**ಕೂರಸಿ** – ಹರಿತವಾದ ಕತ್ತಿ (ತಿಸುಳದೊಳ್ ಉಚ್ಚಳಿಪ್ಪ ಪೊಸನೆತ್ತರೆ ಕೆಂದಳಿರಾಗೆ ಕಣ್ಗೆ ಅಗುರ್ವಿಸುವಿನಂ ಒಕ್ಕು ನೇಲ್ವ ಕರುಳ್ತೋಳಿಯೆ ಬಾಳಮೃಣಾಳಮಾಗೆ ಮಿಕ್ಕಸುರರ ಮೆಯ್ಯೊಳಾದ ವಿರಹಾಗ್ನಿಯಂ ಆಱಿಸುತಿಂತೆ ತನ್ನ ಕೂರಸಿಯೊಳ್ ಅಡರ್ತು ಕೊಂದಸಿಯಳ್ ಇರ್ಕೆ ಅಸಿಯೊಳ್ ಪಡೆಮೆಚ್ಚೆ ಗಂಡನಾ: **ಪಂಪಭಾ,** ೧. ೬)

**ಕೂರಾಳ್** – ಪರಾಕ್ರಮಿ (ಬನಗಳೊಳ್ ತಾಣಂದರಮಾಗಿರ್ಪ ಕೆಂಗಣ್ವಕ್ಕಿ ಅಲರ್ವಕ್ಕಿ ಕನ್ನಡವಕ್ಕಿ ಪೊಣರ್ವಕ್ಕಿ ಮೊದಲಾದ ದಟ್ಟಿಯ ಕೂರಾಳ್ಗಳುಂ: **ಕಬ್ಬಿಗಕಾ,** ೧೫೩ ವ)

**ಕೂರಿದುದು** – ಕೂರಿತ್ತು (ಎಡವಱದೊಳ್ ಎಱಗಿ ಬಱಸಿಡಿಲ್ ಇಡುಮುಡುಕನೆ ಪೊಡೆದುದೆನಿಸಿ ಪಾಂಡ್ಯನ ರಥದ ಅಚ್ಚು ಉಡಿದು ಅಟ್ಟಿಗೆಟ್ಟಿ ಕೊಂಡುವು ಕಡುಗೂರಿದುವೆನಿಪ ಗುರುತನೂಜನ ಕಣೆಗಳ್: **ಪಂಪಭಾ,** ೧೨. ೮೨)

**ಕೂರಿಲಿ** – ಹರಿತವಲ್ಲದ, ಮೊಂಡು (ಸೊಗಯಿಸುಗುಮೆ ಪಲ್ಲಿಲಿವಾಯ್ ಅಗಿಲಿಲಿಗಂಧಂ ಸಮಂತು ಕೂರಿಲಿ ಕುರುಗೋಲ್: **ಕಾವ್ಯಾವಲೋ,** ೨೫೭)

**ಕೂರಿಸು** – ಪ್ರೀತಿಸು (ಕೂರಿಸೆ ಗುರುಶುಶ್ರೂಷೆಯೊಳ್ ಆ ರಾಮನಂ ಉಗ್ರ ಪರಶುಪಾಟಿತರಿಪುವಂಶಾರಾಮನಂ ಇಷುವಿದ್ಯಾಪಾರಗನೆನಿಸಿದುದು ಬಲ್ಮೆ ವೈಕರ್ತನನಾ: **ಪಂಪಭಾ,** ೧. ೧೦೪)

**ಕೂರ್ಗಣೆ** – ಹರಿತವಾದ ಬಾಣ (ಎರಡುಂ ಬಲದ ಕಡುವಿಲ್ಲರ್ ಭೋರ್ಗರೆದು ಇಸೆ ಕೂರ್ಗಣೆಯೊಳ್ ಪಂದರ್ ಇಕ್ಕಿದಂತಾಯ್ತು ಗಗನಮಂಡಲಮೆಲ್ಲಂ: **ಪಂಪಭಾ,** ೧–. ೭೨)

**ಕೂರ್ಚ** – ಗಡ್ಡ (ಲಂಬೋದರಂ ಲಂಬ ಕೂರ್ಚಕಲಾಪಂ ಸಿತಕಂಚುಕಂ ತ್ವರಿತದಿಂ ಬಂದಂ ಪ್ರತೀಹಾರಕಂ: **ಪಂಪರಾ,** ೨. ೨); ಕುಂಚ (ಸುಧಾರ್ದ್ರಂಗಳಪ್ಪ ಕರಕೂರ್ಚಂಗಳಿಂ ದಿಗ್ಭಿತ್ತಿಗಳಂ ಧವಳಿಸುತ್ತಿರ್ದ ಸುಧಾಮಯೂಖನಂ ನೀಡುಂ ನೋಡಿ: **ಕಾದಂಬ,** ೯. ೩೪ ವ)

**ಕೂರ್ಚಕ** – ಗಡ್ಡ (ಮುಖರೋಮಂ ಶ್ಮಶ್ರು ಕೂರ್ಚಕಂ: **ಅಭಿಧಾವ,** ೧. ೧೨. ೨೨)

**ಕೂರ್ಚಕಳಾಪ** – ಗಡ್ಡ ಉಳ್ಳವನು (ನಾಭಿಕೂಪಾವಲಂಬಿ ಕೂರ್ಚಕಳಾಪಂ ಲಲಾಟನಿಹಿತಕೌಸುಂಬಾಂಶುಪಟ್ಟಕಪ್ರಾಂತ: **ಆದಿಪು,** ೧೩. ೪೫ ವ)

**ಕೂರ್ಚಾಳ** – ಗಡ್ಡಮೀಸೆ ಇರುವ (ಕೂರ್ಚಾಳತುಂದಿಳ ಜರತ್ಸಾಮಂತಸಂದೋಹಕಪ್ಪಯಿಸಿ: **ಆದಿಪು,** ೪. ೯೧ ವ)

**ಕೂರ್ಚಿಕೆ** – ಕೀಲಾಟವೆಂಬ ಹಾಲಿನಿಂದ ಮಾಡಿದ ತಿಂಡಿ (ಕೂರ್ಚಿಕೆವೆಸರಿಂ ಕೀಲಾಟಮಕ್ಕುಂ: **ಅಭಿಧಾವ,** ೧. ೧೬. ೧೨)

**ಕೂರ್ತಂ** – ಪ್ರೀತಿಸಿದವನು (ಸೂರ್ಯತನಯಂ ತೇಜೋಗ್ನಿಯಿಂದಂ ದ್ವಿಷದ್ಬಲಮಂ ಸುಟ್ಟಂ ಉದಾತ್ತಪುಣ್ಯನವಂ ಚೈತಾಗ್ನಿಯಿಂ ಸುಟ್ಟನಿಲ್ಲ ಒಲವಿಂದ ಇಂದಿಂತು ಎರ್ದೆಮುಟ್ಟಿ ಕೂರ್ತನೊಳನೇ ಕರ್ಣಂಗೆ ದುರ್ಯೋಧನಂ: **ಪಂಪಭಾ,** ೧೩. ೬೦)

**ಕೂರ್ನಾಯ್** – ಉಗ್ರವಾದ ನಾಯಿ, ಬೇಟೆಯ ನಾಯಿ (ಧನುರ್ಬಾಣಮಂ ತಾಳ್ದು ಕೆರ್ಪಂ ನಲವಿಂ ಮೆಟ್ಟುತ್ತೆ ಕೂರ್ನಾಯ್ವೆರಸಿ ಶಬರರೊಂದಾಗಿ ಬಂದಂ ಪುಳಿಂದಂ: **ರಾಜಶೇವಿ,** ೫. ೫೧)

**ಕೂರ್ಪ** – ಪ್ರೀತಿಸುವವನು (ಎಯ್ದೆ ಬಾರದುದುಂ ಕಜ್ಜಂಗಳಂ ಅಱಿಪದುದುಂ ಸಚಿವಂಗಂ ಕೂರ್ಪಂಗಂ ಎಂದುಮಿವು ಗುಣದೊಳಗೇ: **ಪಂಚತಂತ್ರ,** ೮೬)

**ಕೂರ್ಪವರ್** – ಒಲಿದವರು (ಕೂರ್ಪರವರಿಂ ಪೇಟ್ಟುವುದು ಬುದ್ಧಿಯನೆಂದು ದೂಱುತ್ತಿರ್ಪರ್ ಪೆಂಡಿರ್: **ಸಮಯಪ,** ೫. ೯೭)

**ಕೂರ್ಪಾಸ** – ಕುಪ್ಪುಸ (ಕೂರ್ಪಾಸಮಂ ತೊಟ್ಟು ಕಟ್ಟುತ್ತೆ ಲತಾಸಂದೋಹದಿಂ ಕೇಶಮಂ .. .. ಬಂದಂ ಪುಳಿಂದಂ: **ರಾಜಶೇವಿ,** ೫. ೧೦)

**ಕೂರ್ಪು** – ಹರಿತತೆ (ಸೂಜಿಯ ಕೂರ್ಪು ಕುಂಬಳದೊಳ್ ಅಡಗುವಂತೆ ನಿನ್ನೊಂದೆ ಮೆಯ್ಯೊಳಾದ ಕೂರ್ಪು ಪಗೆವರ ದರ್ಪಮನದಿರ್ಪದಲ್ತೆ: **ಪಂಪಭಾ,** ೧೩. ೬೫ ವ); ಕಲಿತನ (ಸೂಜಿಯ ಕೂರ್ಪು ಕುಂಬಳದೊಳ್ ಅಡಗುವಂತೆ ನಿನ್ನೊಂದೆ ಮೆಯ್ಯೊಳಾದ ಕೂರ್ಪು ಪಗೆವರ ದರ್ಪಮನದಿರ್ಪದಲ್ತೆ: **ಪಂಪಭಾ,** ೧೩. ೬೫ ವ)

**ಕೂರ್ಮ** – ಆಮೆ (ಕರಿಕೂರ್ಮ ದರ್ದುರಪ್ರಚಯಂ ಉಗ್ರವಾರ್ಘಣಿ .. .. ಘೋಷವಿಜೃಂಭಿತ ಘೂರ್ಣಿತ ಅರ್ಣವಂ: **ಧರ್ಮಪ,** ೧. ೩೯); ವಿಷ್ಣುವಿನ ಒಂದು ಅವತಾರ (ಆನೆ ಮೆಟ್ಟಿದೆಸರ್ಮುಚ್ಚೆವೋಗೆ ಕೂರ್ಮನೊಡೆದಂ: **ಜಗನ್ನಾವಿ,** ೧. ೩೦)

**ಕೂರ್ಮೆ** – ಪ್ರೀತಿ (ಇನಿವಿರಿದೊಂದು ಮೇಳಮುಂ ಒಡಂಬುವ ಅಟ್ಕಱುಂ ಎನ್ನ ನಿನ್ನ ಮುನ್ನಿನ ಭವದೊಂದು ಕೂರ್ಮೆಯೊಳೆ ಕೂಡಿದುದು: **ಅದಿಪು,** ೪. ೫೨)

**ಕೂರ್ವಾಳ್** – ಕೂರಸಿ (ಆಳಾಗಿ ಬರ್ದುಂಕದೆ ಬಿಲ್ಲಾಳಾಗಿ ಬರ್ದುಂಕಲೊಡರಿಪೊಡೆ ಭರತನ ಕೂರ್ವಾಳ ನಸುಮಸೆಗೆ ಬಾಲಮೃಣಾಳಂ ರಿಪುನೃಪರ ಕಂಠನಾಳಂ ಧುರದೊಳ್: **ಪಂಪರಾ,** ೮. ೨೭)

**ಕೂರ್ಸೊಕ್ಕು** – ಬಲವಾದ ಆಕರ್ಷಣೆ (ಶ್ರೇಣಿಯ ಮಡುಗಳ ಮೀಂಗಳ್ಗೆ ಕೋರ್ಸೊಕ್ಕನಿಕ್ಕಿ: **ಕುಸುಮಾಕಾ,** ೧೪. ೨೮)

**ಕೂಲ** – ತೀರ (ಆಕೆಯುಂ ಆ ಕಾಂತಾರನದೀಕೂಲದೊಳಿರ್ದು: **ಪಂಪರಾ,** ೧೪. ೫೪)

**ಕೂವಕಂಭ** – ಹಡಗಿನ ಪಟಕಂಬ (ಕಲ್ಲೆಯುಂ ಕವಿಲೆಯುಂ ಆಗೆ .. .. ಕೂವಕಂಭಂ ಮುಱಿಯೆ ಬಂಧಂ ಬಿರಿಯೆ ರಣಂ ಮುಱಿಯೆ: **ಹರಿವಂಶ,** ೪. ೧೪ ವ)

**ಕೂಷ್ಮಾಂಡ** – ಕುಂಬಳ (ಹಾಗಲ ಹಡಲಂ ಗುಳ್ಳಂ ಕೂಗುರಿ ಕೂಷ್ಮಾಂಡ ಅವರೆ ಬದಣೆಗಳಿಂ ಲೇಸಾಗಿರೆ: **ಧರ್ಮಪ,** ೨. ೫೮); ಒಂದು ಪಿಶಾಚಿ

**ಕೂಷ್ಮಾಂಡಿ** – [ಜೈನ] ಒಬ್ಬ ಯಕ್ಷಿ (ಕೂಷ್ಮಾಂಡಿಯಂಬಿಕೆ ಯಕ್ಷೇಶ್ವರಿ ಕೂರ್ತು ರಕ್ಷಿಸುಗೆ: **ಸುಕುಮಾಚ,** ೧. ೮)

**ಕೂಸ** – ಚಿಕ್ಕವನು (ಮಗನೆ ನೀನಿನ್ನುಂ ಕೂಸನೈ: **ವಡ್ಡಾರಾ,** ಪು. ೧೧೩, ಸಾ. ೬)

**ಕೂಸಂ ಬೇಡು** – ಮದುವೆ ಮಾಡಿಕೊಡಲು ಹೆಣ್ಣು ಕೇಳು (ಶಂತನು ಪೊಟಿಲ್ಗೆ ಮಗುಟ್ದು ವಂದು ಅವರಯ್ಯನಪ್ಪ ದಾಶರಾಜನಲ್ಲಿಗೆ ಕೂಸಂ ಬೇಡೆ ಪೆರ್ಗಡೆಗಳಂ ಅಟ್ಟಿದೊಡೆ: **ಪಂಪಭಾ,** ೧. ೭೦ ವ)

**ಕೂಸಾಟ** – ಮಕ್ಕಳ ಆಟ (ಕಣ್ಗಟ್ಟಱಂ ಕೂಸಾಟದ ಚೆಲ್ವುಗಳ್ ಕುಡೆ ಪಿತೃದ್ವಂದ್ವಕ್ಕೆ ನಿಚ್ಚಂ: **ಆದಿಪು.** ೭. ೧೨೯)

**ಕೂಸು** – ಹೆಣ್ಣುಮಗು, ಕನ್ಯೆ (ಎಮ್ಮ ಪಟಂ ಎಮ್ಮಯ ಕೂಸಿನ ಚಿತ್ರಂ ಎಯ್ದೆ ಪೇಟ್ಟಾಕೆಯ ತನ್ನ ಬಯ್ಕೆಯವಿನಾಣಮಂ: **ಆದಿಪು,** ೩. ೮೯); ಹುಡುಗ (ಅಯ್ವರ್ ಕೂಸುಗಳುಂ ಏಟ್ಗೆವಾಡಿವದ ಚಂದ್ರನಂತೆ ಉತ್ತರಾಭಿವೃದ್ಧಿಯೊಳ್ ಸೊಗಯಿಸಿ ಬಳೆಯೆ: **ಪಂಪಭಾ,** ೨. ೩)

**ಕೂಳ** – ದಡ (ತೊಱೆಗಳ್ ಕೂಳಂಗಳಿಂದೋಡೆ ತಣ್ಣೀಳಲೆತ್ತಂ ಬಿಡೆ: **ವರ್ಧಮಾಪು,** ೯. ೩೯)

**ಕೂಳೆ** – ಮೀನು ಹಿಡಿಯುವ ಬಲೆ (ಪುಲ್ದಂಡೆ ಬೆಳ್ಳಾರ್ಪಟಂ ಅರೆಬಲೆಗಳ್ ಸಾಳುವಂ ಕೂಳೆಗಾಳಂ: **ಗಿರಿಜಾಕ,** ೧. ೭೯); ಕೀವು

**ಕೂಱಿಗೆ** – ಬೀಜ ಬಿತ್ತುವ ಸಾಧನ (ಕುಡುಗೋಲಂ ಕೂಱಿಗೆಯಂ ಕೊಡಲಿ ಕುರುಂಜಿಗೆಯಂ ಉಱುವ ಪರಗುವ ಕಱುಪಿಂ ಬಿಡದೆಯಗುಟ್ಟಾ ಮುಟ್ಟಂ ಕುಡರ್ ಎರವಂ ಪೆಱರ್ಗೆ: **ಸಮಯಪ,** ೫. ೧೭)

**ಕೂಱು** – ಕೊಳಕು ಬಟ್ಟೆ (ತೋಱಿಸುಗುಮೆಮಗೆ ತೋರ್ಪೀ ಕೂಱುಷೆಯ ದೇವಕಿಯ ತನಯಂ: **ನೇಮಿನಾಪು,** ೭. ೯)

**ಕೂಟ್** – ಅನ್ನ (ನೀನುಂ ಮೆಟ್ಟಟ್ಟು ವಿದುರನೆಂಬೀ ತೊಟ್ಟುಟ್ಟಿಯ ಮನೆಯ ಕೂಟ್ ನುಡಿಯಿಸೆ ನುಡಿದೈ: **ಪಂಪಭಾ,** ೯. ೫೮)

**ಕೂಟ** – [ಖೂಳ] ಮೂರ್ಖ (ಒಂದರ್ಥಕ್ಕೆ: ಕೂಟನೆಂದೆಗ್ಗಂ: **ಶಬ್ದಮದ,** ೩೩ ವೃತ್ತಿ)

**ಕೂಟ್ಕಿರ್ಮಿ** – ಕ್ರೂರಕರ್ಮಿ, ಕ್ರೂರ ಕೆಲಸ ಮಾಡುವವನು (ಎರಡು ಪದಂಗಳಪಭ್ರಂಶಕ್ಕೆ: ಕ್ರೂರಕರ್ಮಿ–ಕೂಟ್ಕಿರ್ಮಿ: **ಶಬ್ದಮದ,** ೩೦೪ ಪ್ರ)

**ಕೂಟ್ಗುದಿ** – ಅನ್ನ ಕುದಿಯುವಂತೆ ಕುದಿ (ಸುಟಿಯೊಳಗಿರ್ದು ಬೆಟ್ಟು ಪೊಱಪೊಣ್ಮುವಿನಂ ಲವಣಾಂಬುರಾಶಿ ಕುಕ್ಕುಟಗುದಿವಲ್ಲಿ ಕೂಟ್ಗುದಿಯೆ ಮೇಗೆ ಸಿಡಿಲ್ದಗುಳಂತೆ ಕೂಡೆ: **ಪಂಪಭಾ,** ೧೧. ೧೫೩)

**ಕೂಟ್ಗುದಿಗೊಳ್** – ಅನ್ನ ಕುದಿವಂತೆ ಕುದಿ, ತಳಮಳಿಸು (ಶೋಖ ವಿಹ್ವಲದಿಂ ಕೂಟ್ಗುದಿಗೊಂಡುದಾ ಕುರುಕುಲ ಕ್ಷ್ಮಾಪಾಲನಂತಃಪುರಂ: **ಗದಾಯು,** ೧೦. ೧೩)

**ಕೂಟ್ವಣಿಗ** – ತಿನಾಳಿ, ಕೂಳಬಡಕ (ವಣಿಗ ಪ್ರತ್ಯಯಕ್ಕೆ: ಕೂಟ್ವಣಿಗಂ; ಮತ್ತೆ ಕೆಲವಱೊಳುಂಟು: ಲಂಚವಣಿಗಂ,, ಸಾಲವಣಿಗಂ, ಗಂಧವಣಿಗಂ: **ಶಬ್ದಮದ,** ೨೧೭, ಪ್ರ)

**ಕೂಟ್ವೇಡು** – ಆಹಾರವನ್ನು ಬೇಡು, ಭಿಕ್ಷೆ ಬೇಡು (ಕೂಟ್ವೇಟ್ವ ಬಾರಿಕನಂತೆ ದಂಡುವೇಟ್ಟರಸಿನಂತೆ ತೂಗಿಬಿಡುವ ನಾಯಕನನಂತೆ: **ಧರ್ಮಾಮೃ,** ೯. ೧೩ ವ)

**ಕೃಂತನ** – ಭೇದನ, ತುಂಡರಿಸುವುದು (ಅರಿ–ಕೃಂತನೇ: **ಶಬ್ದಮದ, ಧಾ** ೫೩೪)

**ಕೃಕವಾಕು** – ಕೋಳಿ (ಪೊಡೆಯೆ ಕೃಕವಾಕು ನಿನದಂ ಬಿಡದೆ ಉಣ್ಮುತಿರಲ್ಕೆ ಕಯ್ಯ ಬಾಳ್ ಬೀೞ್ತಿರೆ .. .. ಯಶೋಧರಂ ಬೆಱಗಾದಂ **ಯಶೋಧಚ,** ೩. ೨೬):

**ಕೃಕಾಟಿಕೆ –** ಹೆಕ್ಕತ್ತು (ಅವಟು ಕೃಕಾಟಿಕೆ ಘಾಟಾಹ್ವಯವದಕ್ಕುಂ: **ಅಭಿಧಾವ,** ೧. ೧೨. ೧೮)

**ಕೃಚ್ಛ್ರ –** ಕಠಿಣವಾದ ಒಂದು ವ್ರತ, ತಪಸ್ಸು (ಕೃಚ್ಛ್ರ ಅತಿಕೃಚ್ಛ್ರ ಚಾಂದ್ರಾಯಣ ಸಾಂತಪನಾದಿ ಮಹಾತಪಂಗಳಿಂ: **ಪಂಚತಂತ್ರ,** ೧೯೦ ವ)

**ಕೃತ –** ಕೆಲಸ (ಸುಯೋಧನಂ ಎನಗೆ ಒಳ್ಳಿಕೆಯ್ದ ಕೃತಮಮಂ ಪೆಱಗಿಕ್ಕಿ ನೆಗೞ್ದ್ ಮಾಸೆ ನಣ್ಪಿನ ನೆವದಿಂದೆ ಪಾಂಡವರಂ ಆಂ ಒಳವೊಕ್ಕಡೆ ನೀಮೆ ಪೇಸಿರೇ: **ಪಂಪಭಾ,** ೯. ೬೮); ಮಾಡಿದ್ದು (ಮೊಱೆಯಱಿಯಂ ಆಗಳುಂ ಕೃತಮಱಿಯಂ ಕಳ್ಗುಡಿದ ಪಾತಕಂ: **ಸಮಯಪ,** ೧೪. ೫೯)

**ಕೃತಕ –** ಸ್ವಾಭಾವಿಕವಲ್ಲದ, ಕಪಟ (ಅಂಧನೃಪಂ ತನ್ನಯ ಜನದೊಳ್ ಕೆಲನಱಿಯೆ ಕೃತಕ ಶೋಕಂಗೆಯ್ದಂ: **ಪಂಪಭಾ,** ೩. ೮); ನಿರ್ಮಿಸಿದ (ಕೂಗಿದುದೇಕೆ ಈ ಕೃತಕ ತಾಮ್ರಚೂಡಂ .. .. ಅಱಿವರಯ್ಯ ವಿಧಿವಿಳಸನಮಂ: **ಯಶೋಧಚ,** ೩. ೨೭)

**ಕೃತಕದ್ಯೂತ –** ಮೋಸದ ಪಗಡೆ ಆಟ (ಜತುಗೇಹಾನಲದಾಹದಿಂ ವಿಷವಿಶೇಷಾಲಿಪ್ತ ಗುಪ್ತಾನ್ನದಿಂ ಕೃತಕದ್ಯೂತವಿನೋದದಿಂ ದ್ರುಪದಜಾ ಕೇಶಾಂಬರ ಆಕೃಷ್ಟಿಯಿಂ ಧೃತರಾಷ್ಟ್ರಾತ್ಮಜ ಪಾಂಡುರಾಜಸುತರಂ ಮುನ್ನಂ ಕೊಲಲ್ಕೊಡ್ಡಿದಯ್: **ಗದಾಯು,** ೭. ೪೧)

**ಕೃತಕರ್ಮ –** ಸಮರ್ಥ, ಜಾಣ (ಕೃತಕರ್ಮಂ ಕೋವಿದಂ ಜ್ಞಂ ಜಾಣಂ: **ಅಭಿಧಾವ,** ೨. ೧. ೫)

**ಕೃತಶೋಕ –** ಕಪಟ ದುಃಖ (ಮನದೊಳ್ ತ್ರೈಭುವನಮಂ ಆಳ್ದನಿತುವರಂ ತನಗೆ ಸಂತಸಂ ಪೆರ್ಚಿಯುಂ ಅಂದು ಇನಿಸು ಅಂಧನೃಪಂ ತನ್ನಯ ಜನದೊಳ್ ಕೆಲನಱಿಯೆ ಕೃತಕಶೋಕಂಗೆಯ್ದಂ: **ಪಂಪಭಾ,** ೩. ೮)

**ಕೃತಕೃತ್ಯತೆ –** ಕರ್ತವ್ಯ ನಿರ್ವಹಿಸಿದ ಸಮಾಧಾನ (ಇಂದು ಪಯೋಜಜಂಗೆ ಕೃತಕೃತ್ಯತೆ ಸಾರ್ದುದು: **ಚಂದ್ರಪ್ರಪು,** ೬. ೭೯)

**ಕೃತಘ್ನ –** ಉಪಕಾರ ಸ್ಮರಣೆಯಿಲ್ಲದವನು (ಶಿವಭೂತಿಗೆ ತೊಟ್ಟನೆ ಬಗೆದಂ ಅಹಿತಮಂ ತದ್ವನಚರಂ ಎಂತುಂ ಕೃತಘ್ನರೇನಂ ಮಾಡರ್: **ಪಂಚತಂತ್ರ,** ೧೮೪)

**ಕೃತನಾಶಿ –** ಕೃತಘ್ನ (ಕೃತಘ್ನಂ ಕೃತನಾಶಿ; **ಅಭಿಧಾವ,** ೨. ೧. ೨೧)

**ಕೃತಮತಿ –** ವಿವೇಕಿ (ಕೃತಮತಿ ನಿಪುಣಂ ವಿಜ್ಞಂ: **ಅಭಿಧಾವ,** ೨. ೧. ೫)

**ಕೃತಯುಗ –** ಚತುರ್ಯುಗಗಳಲ್ಲಿ ಮೊದಲನೆಯದು, ಮಾನವರ ಹದಿನೇಳು ಲಕ್ಷ ಇಪ್ಪತ್ತೆಂಟು ಸಾವಿರ ವರುಷಗಳ ಕಾಲಪ್ರಮಾಣವುಳ್ಳುದು (ಭಗವತ್ಕೃತಯುಗಮಾದುದಱಿಂದಂ ಕೃತಯುಗಮೆಂಬರ್: **ಆದಿಪು,** ೮. ೬೬)

**ಕೃತವಿದ್ಯ –** ವಿದ್ಯೆಯನ್ನು ಚೆನ್ನಾಗಿ ಬಲ್ಲವನು (ಕೃತವಿದ್ಯರ ಭೀಕರಶರತತಿನಮೊಳೆ ತೇವಂತೆ ಸಮೆದು ಬಿಱಿ ಸಂಗರದೊಳ್: **ಗದಾಯು,** ೪. ೩೩)

**ಕೃತಹಸ್ತ –** ಪ್ರವೀಣ (ಕೃತಹಸ್ತಂ ಕುಶಲಂ ಶಿಕಷಿತಂ ಪ್ರವೀಣ: **ಅಭಿಧಾವ,** ೨. ೧. ೫)

**ಕೃತಾಂಜಲಿ –** ಭಕ್ತಿಯಿಂದ ಮುಗಿದ ಕೈಗಳು (ನಿಂದು ಕೃತಾಂಜಲಿಗಳಾಗಿ ಕಾಳಿಯ ಸತಿಯರ್: **ಜಗನ್ನಾವಿ,** ೩. ೧೦೨)

**ಕೃತಾಂತ –** ಯಮ (ಕಡುಕೆಯ್ದು ಕೃತಾಂತನಿಂತು ನಿರ್ನೆರಮೆಱೆದುಯ್ಯೆ ಬಾರಿಸದೆ ಕೆಮ್ಮನುಪೇಕ್ಷಿಸಿ ನೋಡುತಿರ್ಪಿರೇ: **ಆದಿಪು,** ೩. ೪)

**ಕೃತಾನುಶಯ –** ಪಶ್ಚಾತ್ತಾಪಗೊಂಡವನು (ಕೃತಾನಶಯಂ ತತ್ಕಾಲೋಚಿತ ಪ್ರಾಯಶ್ಚಿತ್ತನಿರತಂ: **ಶಾಂತಿಪು,** ೪. ೫೯ ವ)

**ಕೃತಾರ್ಥ –** ಕೃತಕೃತ್ಯ, ಸಾರ್ಥಕ (ಅಮತ್ಸರಂ ವಾಕ್ಪ್ರೀಯುತನಾದೊಡೆ ಕೃತಾರ್ಥರಾಗದೆ ಕವಿಗಳ್: **ಗದಾಯು,** ೧. ೪೯)

**ಕೃತಾವದಾನ –** ಶೌರ್ಯದ ಕೆಲಸ ಮಾಡಿದವನು (ಎ<ತಾನುಂ ಕೃತವದಾನರಾಗಿ ಪೆಱಗಿರ್ದ ತನ್ನಾಳ್ದನುಮನುಱಿದೆ ಮುಂದಿರ್ದ ಪಾಪೇಭಕಂಠೀರವನುಮಂ ಬಗೆದು ತೆಗೆದಿಸುವುದುಂ: **ಶಾಂತಿಪು,** ೪. ೧೧ ವ)

**ಕೃತಾಸ್ತ್ರ –** ಅಸ್ತ್ರವಿದ್ಯೆಯನ್ನು ಚೆನ್ನಾಗಿ ಬಲ್ಲವನು (ಕೃತಾಸ್ತ್ರಮನವರಿದಿರೊಳ್ ತೊಟ್ಟಗೆ ನಿಂದು ಕೆಡಿಸುಗುಂ: **ಶಾಂತಿಪು,** ೫. ೧೨೩)

**ಕೃತಿ –** ಕಾವ್ಯ (ಕೃತಿ ನರೆಗೞ್ದ ಗದಾಯುದ್ಧಂ: **ಗದಾಯು,** ೧. ೩೨); ವಿದ್ವಾಂಸ (ಕೃತಿ ಕೃಷ್ಟಿ ಸಭಾಸ್ತಾರಂ ಸಭ್ಯಂ ಸಭಾಸದಂ ವಿದ್ವಾಂಸಂ: **ಅಭಿಧಾವ,** ೨. ೧. ೪)

**ಕೃತಿವೇೞ್ –** ಕೃತಿಯನ್ನು ಹೇಳು, ಗ್ರಂಥ ರಚಿಸು (ಕೃತಿವೇೞ್ದಂ ಸುಕವಿ ರುದ್ರಂ: **ಜಗನ್ನಾವಿ,** ೧. ೨೧)

**ಕೃತ್ತ –** ಕತ್ತರಿಸಲ್ಪಟ್ಟ (ಮಹಾಗುಣಬಂಧುರ ಶೂಲಕೃತ್ತಸಿಂಧುರ ಕನಕಾದ್ರಿಕಂದರವಿರಾಜಿತ ಮಂದಿರ ಕಾಲಕಂಧರಾ: **ಶಬರಶಂ,** ೫. ೨೦)

**ಕೃತ್ತಿ –** ಚರ್ಮ, ಅಜಿನ (ಪಶುಪಾಲಂ ಕೃತ್ತಿಚೇಲಂ ಸುರಗಿರಿವರಚಾಪಂ .. .. ಪಿನಾಕಂ ದಲ್ ಒಪ್ಪಿರ್ದಂ ಏಕಂ: **ಉದ್ಭಟಕಾ,** ೧೨. ೧೩೬)

**ಕೃತ್ರಿಮ –** ಮಾಯೆ (ಅನನಿರವೇೞ್ದು ಕೃತ್ರಿಮದಿಂದಂ: **ಸುಕುಮಾಚ,** ೭. ೨೮)

**ಕೃತ್ಸ್ನ –** ಸಂಪೂರ್ಣ (ಆ ಕೃತ್ಸ್ನದ ಬೆಲೆಯಂ ಕೊಟ್ಟೊಡೆ ಕೃತ್ಸ್ನದ ಫಲಮುಕ್ಕುಮೆಂದು ಕೊಳ್ವರ್ ತಕ್ಕರ್: **ಸಮಯಪ,** ೧೧. ೮೪)

**ಕೃಪಣ –** ತುಚ್ಛವಾದ; ವಿವೇಕಹೀನವಾದ; ಜಿಪುಣ; ದೀನ (ಅದೃಷ್ಟಪೂರ್ವಂಗಳುಂ ಅತಿಕೃಪಣಂಗಳುಂ ಅಪ್ಪ ಚಾಟುಸಹಸ್ರಂಗಳೊದವೆ: **ಕಾದಂಸಂ,** ೪. ೯೬ ವ)

**ಕೃಪಾಣ –** ಕತ್ತಿ (ಕೃಪಾಣಖೇಟಕಪಾಣಿಗಳ್ ಬಂದು .. .. **ಆದಿಪುರುಷನ** ಪದಪಯೋಜಂಗಳನರ್ಚಿಸಿ: **ಆದಿಪು,** ೯. ೯೭ ವ)

**ಕೃಪಾಣಿ –** ಕತ್ತರಿ (ಕರ್ತ್ರರಿ ತಾಂ ಕೃಪಾಣೀ; **ಅಭಿಧಾವ,** ೧.೧೧. ೩೬)

**ಕೃಶಾನು –** ಅಗ್ನಿ (ಕೃಶಾನುವ ನೆಱಲ್ ಅಳುರದಂತೆವೊಲ್ ಕನ್ನಡಿಯಂ: **ಆದಿಪು,** ೭. ೩೨)

**ಕೃಶಾನುಪೃಷತ್ಕ –** ಬೆಂಕಿಯುಗುಳುವ ಬಾಣ (ವಿಯಚ್ಚರಾಧಪತಿಯೆಚ್ಚ ಕೃಶಾನುಪೃಷತ್ಕಮಂ ಇರದೆಚ್ಚು ತೂರ್ಚಿದಿದಂ: **ಚಂದ್ರಪ್ರಪು,** ೬. ೫೯)

**ಕೃಶಾನುಶಿಖೆ –** ಬೆಂಕಿಯ ಜ್ವಾಲೆ (ಕೃಶಾನುಶಿಖೆ ದೆಸೆದೆಸೆಯೊಳ್ ಜಿನಪತಿಯ ಜನನಿ ಪರಿವೀಕ್ಷಿಸಿದಳ್: **ಶಾಂತಿಪು,** ೯. ೨೦೮)

**ಕೃಶಾಶ್ವಿ –** ನಟ, ನರ್ತಕ (ನಟಂ ತಾಂ ಭರತಂ ಶೈಲೂಷಾಹ್ವಂ ಕೃಶಾಶ್ವಿ ಜಾಯಾಜೀವಂ: **ಅಭಿಧಾವ,** ೧. ೧೧. ೭೪)

**ಕೃಷಿ** – ಬೇಸಾಯ (ಕೃಷೀವಲ ಕುಲೋಚಿತಮಪ್ಪ ಕೃಷಿಯುಮಂ: **ಆದಿಪು,** ೮. ೬೪ ವ)

**ಕೃಷೀಕುತೂಹಳ** – ಕೃಷಿಯಲ್ಲಿ ಆಸಕ್ತರಾದ (ಮುಳಿದ ವಿಯುಕ್ತವಲ್ಲಭಜನಂ ತಳುವಿಲ್ಲದೆ ತಕ್ಕೆಗೊಂಡುದು ಅಸ್ಖಳಿತ ಕೃಷೀಕುತೂಹಳಜನಂ ಮರವಟ್ಟಿರುತಿರ್ದುದು .. .. ಏನಳವಿಗಳುಂಬಮೋ ಪುದಿದ ಮಾಗಿಯ ಶೀತವಿಜೃಂಭಪಾತನಂ: **ಶಾಂತೀಶ್ವಪು,** ೧೨. ೮೬)

**ಕೃಷೀವಲ** – ಕೃಷಿಕ, ರೈತ (ಕೃಷೀವಲ ಕುಲೋಚಿತಮಪ್ಪ ಕೃಷಿಯುಮಂ: **ಆದಿಪು,** ೮. ೬೪ ವ)

**ಕೃಷ್ಟಪಾಕ** – ನರಕದ ದುಃಖ (ಮೃಗಯಾವ್ಯಾಪಾರದೆ ಮಱುಗುವ ಅವನಿಪತಿಯರ್ ಕುಂಭೀಪಕಕ್ಕೆ ಕೃಷ್ಟಪಾಕವ್ಯಾಪನ್ನರ್: **ಶಾಂತಿಪು,** ೭. ೧೦೨)

**ಕೃಷ್ಟಿ** – ಪಂಡಿತ (ಕೃತಿ ಕೃಷ್ಟಿ ಸಭಾಸ್ತಾರಂ ಸಭ್ಯಂ ಸಭಾಸದಂ ವಿದ್ವಾಂಸಂ: **ಅಭಿಧಾವ,** ೨. ೧. ೪)

**ಕೃಷ್ಟಿಕ್ರಿಯೆ** – [ಜೈನ] ನರಕದುಃಖಕಾರಕ ಕ್ರಿಯೆ ದ್ವಾದಶಸಂಗ್ರಹ ಕೃಷ್ಟಿಗಳಂ ಮಾಡುತ್ತಂ: **ಚಂದ್ರಪ್ರಪು,** ೧೪. ೭೧ ವ)

**ಕೃಷ್ಣ** – ಕಪ್ಪು ಬಣ್ಣ (ಶ್ಯಾಮಳಂ ಅಸಿತಂ ಕೃಷ್ಣಂ: **ಅಭಿಧಾವ.** ೨. ೧. ೬೩); ವಿಷ್ಣುವಿನ ಎಂಟನೆಯ ಅವತಾರ (ದಾಮೋದರಂ ಕೃಷ್ಣಂ ಅಬ್ಧಾವಾಸಾಪತಿ: **ಅಭಿಧಾವ,** ೧. ೧. ೨೨)

**ಕೃಷ್ಣದ್ವೈಪಾಯನ** – ವ್ಯಾಸ ಮಹರ್ಷಿ (ಗಾಂಗೇಯನಂ ಏಗೆಯ್ದುಂ ಒಡಂಬಡಿಸಲಾಱದೆ ಸತ್ಯವತಿ ತಾನುಂ ಆತನುಂ ಆಳೋಚಿಸಿ ನಿಶ್ಚಿತಮಂತ್ರರಾಗಿ ಕೃಷ್ಣದ್ವೈಪಾಯನನಂ ನೆನೆದು: **ಪಂಪಭಾ,** ೧. ೮೫)

**ಕೃಷ್ಣಧ್ವಾಂಕ್ಷ** – ಕಾಗೆ ಜಾತಿಯ ಹಕ್ಕಿ (ಮೌಕುಳಿಕೃಷ್ಣಧ್ವಾಂಕ್ಷಂ ಕಾಕೋಳಂ: **ಅಭಿಧಾವ,** ೧. ೯. ೧೫)

**ಕೃಷ್ಣನವಮಿ** – ಕೃಷ್ಣಪಕ್ಷದ ನವಮಿ (ಫಾಲ್ಗುಣಮಾಸ ಕೃಷ್ಣನವಮೀರಾತ್ರ್ಯಂತದೊಳ್; **ಪುಷ್ಪದಂಪು,** ೯. ೧೧೩)

**ಕೃಷ್ಣಪಕ್ಷ** – ಬಹುಳ, ಪೌರ್ಣಮಿಯ ಮಾರನೇ ದಿನದಿಂದ ಅಮಾವಾಸ್ಯೆಯವರೆಗಿನ ಪಕ್ಷ (ಒಂದು ದಿನಂ ಕೃಷ್ಣಪಕ್ಷದಿರುಳ್ ಮಣಿಮಾಡದೊಳಿರ್ದು: **ಪಂಪರಾ,** ೧೬. ೪೨ ವ)

**ಕೃಷ್ಣಭೂಮಿ** – ಎರೆಭೂಮಿ, ಕಪ್ಪುಮಣ್ಣಿನ ಪ್ರದೇಶ (ಎರೆಯುಳ್ಳುದೊಂದು ಭೂಮ್ಯಂತರಮದು ತಾಂ ಕೃಷ್ಣಭೂಮಿಯಕ್ಕುಂ: **ಅಭಿಧಾವ,** ೧. ೪. ೪)

**ಕೃಷ್ಣಮೃಗ** – ಕಪ್ಪು ಬಣ್ಣದ ಜಂಕೆ (ಕನಕಪಿಂಗಳ ಜಟಾಬಂಧಕಳಾಪನುಂ ದಂಡಕಪಾಳಹಸ್ತನುಂ ಕೃಷ್ಣಮೃಗತ್ವಕ್ ಪರಿಧಾನನುಂ ಆಗಿ: **ಪಂಪಭಾ,** ೧. ೬೯ ವ)

**ಕೃಷ್ಣಲಾ[ಲೆ]** – ಗುಲಗಂಜಿ (ಗುಂಜಿಯದು ಕೃಷ್ಣಲಾಭಿಖ್ಯಂ: **ಅಭಿಧಾವ,** ೧. ೮. ೨೩)

**ಕೃಷ್ಣಲೇಶ್ಯಾ[ಶ್ಯೆ]** – [ಜೈನ] ಆರು ವಿಧವಾದ ಲೇಶ್ಯೆಗಳಲ್ಲೊಂದು, ಕ್ರೋಧ (ನಾಗಶ್ರೀಯುಂತು ಪೋಗಿ ಕೃಷ್ಣಲೇಶ್ಯಾಪರಿಣಾಮದಿಂ ಸತ್ತು: **ಕರ್ಣನೇಮಿ,** ೧೪. ೧೨೫ ವ)

**ಕೃಷ್ಣಲೋಹ** – ಕರಿಯ ಲೋಹ, ಕಬ್ಬಿಣ (ಜೀವಂ ತಿಱಿವನೆ ತಿಱಿವುದು ಅಯಸ್ಕಾಂತದ ಬಱಿವಿಡಿದ ಕೃಷ್ಣಲೋಹದ ತೆಱದಿಂ: **ಚಂದ್ರಪ್ರಪು,** ೭. ೨೦)

**ಕೃಷ್ಣವರ್ತ್ಮ** – ಕಪ್ಪು ಹಾದಿಯುಳ್ಳವನು, ಅಗ್ನಿ (ಹುತಾಶಂ ಕೃಷ್ಣವರ್ತ್ಮಂ ವಿಭಾವಸು ಸಪ್ತಾರ್ಚಿ ಕೃಶಾನು ಅಗ್ನಿ: **ಅಭಿಧಾವ,** ೧. ೧. ೩೯)

**ಕೃಷ್ಣಸಾರ** – ಕಪ್ಪು ಬಣ್ಣದ ಜಿಂಕೆ, ಶ್ರೀಕೃಷ್ಣನ ಶಕ್ತಿ (ವಸುದೇವಭವನದಂತೆ ಅನಿರುದ್ಧ ಬಲ ಕೃಷ್ಣಸಾರಸಮಂಚಿತಮುಂ: **ರಾಜಶೇವಿ,** ೫. ೭೪ ವ)

**ಕೃಷ್ಣಾಂಬರ** – ದ್ರೌಪದಿಯ ವಸ್ತ್ರ (ದ್ರೋಣ ಭೀಷ್ಮೋಚಿತ ವಾಕ್ಯದ್ವೇಷಿ ಕೃಷ್ಣಾಂಬರ ಕೇಶಾಕೃಷ್ಟಿಯಂ ಮಾಡಿಸಿದ ಮದಮದೆಲ್ಲಿತ್ತೋ: **ಗದಾಯು,** ೭. ೧೪)

**ಕೃಷ್ಣಾಗರುಧೂಪ** – ಒಂದು ಪರಿಮಳದ್ರವ್ಯ (ಕೃಷ್ಣಾಗರುಧೂಪ ಧೂಮಪಟಳೀಸೌಗಂಧ್ಯಮಂದೀಕೃತ ಭ್ರಮರಂ ತೆಕ್ಕನೆ ತೀವೆ: **ಪುಷ್ಪದಂಪು,** ೧೦. ೯೧)

**ಕೃಷ್ಣಾಜಿನ** – ಕೃಷ್ಣಮೃಗದ ಚರ್ಮ (ಒರ್ವ ಪಾರ್ವಂ ವಿಸ್ತೀರ್ಣ ಜೀರ್ಣ ಕರ್ಪಟಾವೃತ ಕಟಿತಟನುಂ ಆಗಿ ಬಂದು ಕಣ್ಮುಚ್ಚಲ್ ಎಡೆವೇಡೆ ತನಗವರ್ ಪಾಸಲ್ಕೊಟ್ಟ ಕೃಷ್ಣಾಜಿನಮಂ ಪಾಸಿ ಪಟ್ಟಿರ್ದನಂ: **ಪಂಪಭಾ,** ೩. ೩೧ ವ)

**ಕೃಷ್ಣಾಹಿ** – ಕಾಳಸರ್ಪ (ಕೃಷ್ಣಾಹಿ ಶಂಕಾತುರ ಗೃಹಶಿಖಿಚೋಚುಂಬ್ಯಮಾನೇಂದ್ರ ಲೀಲಾಂಶುವಿಶೇಷಂ .. .. ಸೊಯಿಸುಗುಂ: **ಚಂದ್ರಪ್ರಪು,** ೧. ೧೪೫)

**ಕೃಷ್ಣಿಕೆ** – ಕಪ್ಪು ಕಲೆ (ಪೊಳೆವ ಸುಲಿಪಲ್ಲ ನುಣ್ಬೆಳಗೆಳಸಿದ ತಾಂಬೂಲಬದ್ಧ ಕೃಷ್ಣಿಕೆಯಿಂ: **ಕಾದಂಬ,** ೬. ೧೩೯)

**ಕೃಷ್ಣೆ** – ದ್ರೌಪದಿ (ಕೃಷ್ಣೆಗಿಂದು ಧಮ್ಮಿಲ್ಲಮಂ ಇಂಬಿನಿಂ ಮುಡಿಸಿ ಕೌರವನಾಯಕನ ಊರುಭಂಗಮೊಂದಲ್ಲದೆ ಎಲ್ಲಮಂ ನೆಱಪಿದೆಂ ಗಡಂ ಓಳಿಯೆ ಕೇಳಿಮ್ ಎಲ್ಲರುಂ: **ಪಂಪಭಾ,** ೧೨. ೧೬೦)

**ಕೃಷ್ಣೋರಗ** – ಕಾಳಸರ್ಪ (ಕೊಂಡುದು ಕೃಷ್ಣೋರಗನಾ ಮತಂಗಶಿಶುವಂ: **ಸುಕುಮಾಚ,** ೫. ೪೫)

**ಕೃಷ್ಯ** – ಬೇಸಾಯಯೋಗ್ಯ ಭೂಮಿ (ಹಿರಣ್ಯ ಧನ ಧಾನ್ಯ ಕೃಷ್ಯಫಲದೃಷ್ಟಿ ಸಂಪೂರ್ಣಮಂ ಧರಾವಳಯಮಂ: **ಮಲ್ಲಿನಾಪು,** ೩. ೧೨)

**ಕೆಂಕ** – ಕೆಂಬಣ್ಣ (ಅಭಿಮನ್ಯು ಮರಣವಾರ್ತಾಪ್ರಭೂತ ಶೋಕಾಗ್ನಿ ಧರ್ಮತನಯನಂ ಇರದಂದು ಅಭಿಭವಿಸಿ ತನ್ನಂ ಅಳುರ್ದಂತೆ ಭಾಸ್ಕರಂ ಕೆಂಕಮಾದಂ ಅಸ್ತಾಚಲದೊಳ್: **ಪಂಪಭಾ,** ೧೧. ೧೦೬)

**ಕೆಂಕಲ್** – ಒಂದು ಜಾತಿಯ ಮೀನು (ಕುಚ್ಚಲತಿಗಂ ಕಾಗೆಂಡೆ ಕೆಂಕಲ್ ಸರಿತ್‌ಕೊಱಪಂ ಚೇಳ್ವಸಿಗಂ: **ರಾಜಶೇವಿ,** ೫. ೧೧೫)

**ಕೆಂಗಣ್ವಕ್ಕಿ** – ಕೆಂಪು ಕಣ್ಣಿನ ಹಕ್ಕಿ, ಕೋಗಿಲೆ (ಬನಗಳೊಳ್ ತಾಣಂದರಮಾಗಿರ್ಪ ಕೆಂಗಣ್ವಕ್ಕಿ ಅಲರ್ವಕ್ಕಿ ಕನ್ನಡವಕ್ಕಿ ಪೊಣರ್ವಕ್ಕಿ ಮೊದಲಾದ ದಟ್ಟಿಯ ಕೂರಾಳ್ಗಳುಂ: **ಕಬ್ಬಿಗಕಾ,** ೧೫೩ ವ)

**ಕೆಂಗದಿರ್** – ಕೆಂಪು ಕಿರಣ (ಕೆಂಗದಿರನುಗುಳ್ವ ಕಣ್ಗಳೊಳಂ: **ಆಚವರ್ಧ,** ೧೦. ೫ ವ)

**ಕೆಂಗದಿರ** – ಸೂರ್ಯ (ಕೆಂಗದಿರನ ಪರಿಕಿಸಲಯ ಸಂಗದಿನಾರಕ್ತಮಾದ ಕೆಂದಾವರೆಗಳ್: **ಸೂಕ್ತಿಸುಧಾ,** ೯. ೪೩)

**ಕೆಂಗಲಿಸು** – ಕೆಂಪಾಗು (ಕೆಂಗಲಿಪ ಕಟಾಕ್ಷದಿಂದಡರೆ ನೋಡುವ ಕಾಡುವ ದಾರೆಗುಟ್ಟುವ ಅಗ್ಗಲಿಸಿ ತೊಡಂಕುವ .. .. ಸೂಕರಂ: **ಶಬರಶಂ,** ೪. ೧೨)

**ಕೆಂಗಲೆ** – ಕೆಂಪು ಗುರುತು (ಬೆರಲೊಳ್ ಬೀಣೆಯ ತಂತಿಗಳ್ ಒರಸಿದ ಕೆಂಗಲೆಗಳ್ ಅಕ್ಷಮಾಲೆಯೊಳ್ ಎಸೆದಂತಿರೆ ಪೊಸೆಯೆ ಮುತ್ತು ಪವಳಂ ಬೆರಸಿದವೊಲಾಯ್ತು ಚೆನ್ನ ತಪಸಿಯ ಕೆಯ್ಯೊಳ್: **ಪಂಪಭಾ,** ೬. ೧೦)

**ಕೆಂಗಱಿ** – [ಬಾಣದ ಹಿಂಭಾಗದಲ್ಲಿ ಕಟ್ಟಿರುತ್ತಿದ್ದ] ಕೆಂಪು ಗರಿ (ಕೆಂಗಱಿಯ ಮೊನೆಯಂಬುಗಳ್ ಕಣ್ದೆಱೆಯಿಸಿದುವು ಪೊಣರ್ವ ಬಿಲ್ಲ ಕಡುವಿತ್ತೆಗರಂ: **ಪಂಪಭಾ,** ೧೦. ೭೩)

**ಕೆಂಗಟಿವೆ** – ಕೆಂಪು ಅಕ್ಕಿ, ಅದರ ಬತ್ತ (ಲೋಕದ ನೆಲ್ಗೆ ಕೆಂಗಟಿವೆಯಂ .. .. ಪ್ರತಿಮಾಡಿದಂ ಒರ್ವ ಜೀಯಂ: **ಸಮಯಪ,** ೧೦. ೧೧೯)

**ಕೆಂಗುಡಿ** – ಕೆಂಪು ಧ್ವಜ (ಸಿಂಗಂ ಮಸಗಿದವೋಲ್ ನರಸಿಂಗಂ ತಳ್ತಿಱಿಯೆ ನೆಗೆದ ನೆತ್ತರ್ ನಭದೊಳ್ ಕೆಂಗುಡಿ ಕವಿದಂತಾದುದು ಇದೇಂ ಗರ್ವದ ಪೆಂಪೊ ಸಕಲಲೋಕಾಶ್ರಯನಾ: **ಪಂಪಭಾ,** ೧. ೩೪); ಕೆಂಪು ಚಿಗುರು; ಹವಳ

**ಕೆಂಗೋಲ್** – ಕೆಂಪುಗರಿಯ ಬಾಣ (ಅಸದೃಶಮಾಗಿಯೆ ಕೆಂಗೋಲ್ ಮಸಗಿದ ವೃಷಭಂಗೆ ಪೊಕ್ಕಡರಿ ಭಯದಿಂದಂ .. .. ಕಾಮಧೇನುವನಿತ್ತಂ: **ಹರಿವಂಶ,** ೮. ೪೨)

**ಕೆಂಗೋಲ್ಗೊಳ್** – ಕೆರಳು, ಉದ್ರೇಕಗೊಳ್ಳು (ಕವಿತರ್ಪ ನೆರವಿಯಂ ಕನಲವೋರಿಗಳ್ಕಂಡು ಬೆರ್ಚಿ ಕೆಂಗೋಲ್ಗೊಂಡೋಡುವುದಂ ಇದೇನೆಂದು ಕೊಡವಿ ಬೆಸಗೊಳೆ ನಾಗಶರ್ಮನ್ ಅದಂ ಅಱಿದು ಇಂತೆಂದಂ: **ಸುಕುಮಾಚ,** ೭. ೨)

**ಕೆಂಗೋಲ್ಮಸಗು** – ಕೆರಳು (ಕೆಂಗೋಲ್ಮಸಗಿದ ಸಿಂಹಕ್ಕೆ ಪೂಣಿಗತನದಿಂದ ಏನಾನುಮೊಂದಂ ನುಡಿದೆನಪ್ಪೊಡೆ ಎನ್ನನೆ ಮುನ್ನಂ ಆಪೋಶನಂಗೊಳ್ಗುಂ: **ಪಂಚತಂತ್ರ,** ೨೩೦ ವ)

**ಕೆಂಜಡೆ** – ಕೆಂಪು ಜಡೆ (ಚಿನ್ನಪೂಗಳೊಳ್ ತುಱುಗಿದ ಚೆನ್ನ ಕೆಂಜಡೆ: **ಸುಕುಮಾಚ,** ೯. ೯೯)

**ಕೆಂದಳ** – ಕೆಂಪಾದ ಕೈ (ಇನಿಯನ ಕೆಂದಳಂ ತಳಮಂ ಒಯ್ಯನೆ ಸೋಂಕೆ ಪೊದಳ್ದ ನಾಣ ಪೆಂಪಿನೊಳೊಗೆತರ್ಪ ಘರ್ಮಜಲಬಿಂದುಗಳಿಂ: **ಆದಿಪು,** ೪. ೪೯); ಕೆಂಪಾದ ಎಸಳು

**ಕೆಂದಳಿರ್** – ಕೆಂಪು ಚಿಗುರು (ತಿಸುಳದೊಳ್ ಉಚ್ಚಳಿಪ್ಪ ಪೊಸನೆತ್ತರೆ ಕೆಂದಳಿರಾಗೆ ಕಣ್ಗೆ ಅಗುರ್ವಿಸುವಿನಂ ಒಕ್ಕು ನೇಲ್ವ ಕರುಳೋಳಿಯೆ ಬಾಳಮೃಣಾಳಮಾಗೆ ಮಿಕ್ಕಸುರರ ಮೆಯ್ಯೊಳಾದ ವಿರಹಾಗ್ನಿಯಂ ಆಱಿಸುತಿಂತೆ ತನ್ನ ಕೂರಸಿಯೊಳ್ ಅಡರ್ತು ಕೊಂದಸಿಯಳ್ ಇರ್ಕೆ ಅಸಿಯೊಳ್ ಪಡೆಮೆಚ್ಚೆ ಗಂಡನಾ: **ಪಂಪಭಾ,** ೧. ೬)

**ಕೆಂದಾಮರೆ** – ಕೆಂಪು ತಾವರೆ (ವಾಮಂ ಕರತಳಮದು ಕೆಂದಾಮರೆಯರಲೆನಿಪುದು: **ಅದಿಪು,** ೫. ೬೯)

**ಕೆಂದು** – ಅನುರಾಗ, ರತಿಕ್ರೀಡೆ (ಅಂತು ಆ ಇರುಳ ನಾಲ್ಕು ಜಾವಮುಮಂ ಕಾಮನ ಜಾಗರದಂತೆ ಅವರ್ಗೆ ಕೆಂದಿನೊಳೆ ಬೆಳಗಾಗೆ: **ಪಂಪಭಾ,** ೩. ೮೩ ವ); ಆತುಕೊಳ್ಳು, ಆಶ್ರಯಿಸು (ಧ್ಯಾನದೊಳ್ ಅಭವಂ ನೆಱೆದು ಇನಿಸಾನುಂ ಅರೆಮುಚ್ಚಿ ಕಣ್ಗಳಂ ನಿಶ್ಚಳಿತಂ ತಾನಿರ್ದು ಮಱೆದು ಕೆಂದಿದ ಮೀನಂ ತಳ್ತಾಡದಿರ್ದ ಮಡುವಂ ಪೋಲ್ತಂ: **ಪಂಪಭಾ,** ೮. ೧೩)

**ಕೆಂಪು** – ಕೆಂಪು ಬಣ್ಣ (ಪೊನಲ್ಗಳ ಕೆಂಪು ಪಸುರ್ಪು ಕರ್ಪು ಬೆಳ್ಪು ಒಳಕೊಳೆ ಶಕ್ರಕಾರ್ಮುಕವಿಳಾಸಮಂ ಏನೆರ್ದೆಗೊಂಡು ಬೇಟದತ್ತಳಗಮಂ ಉಂಟುಮಾಡಿದುದೋ ಕಾಮನ ಕಾರ್ಮುಕದಂತೆ ಕಾರ್ಮುಕಂ: **ಪಂಪಭಾ,** ೭. ೨೫)

**ಕೆಂಬಟ್ಟೆ** – ಕೆಂಪು ಬಟ್ಟೆ, ಕೆಂಪು ರೇಷ್ಮೆ (ಕೊರಲೊಳಿಕ್ಕಿದ ಎಕ್ಕಸರದ ಕೆಂಬಟ್ಟೆಯ ತೊಂಗಲನಂಗ ಜಂಗಮಲತೆಯ ತರಳಿ ತೊಂಗಲಂತೆ ಪೊಳೆಯೆಯುಂ: **ಪಂಪರಾ,** ೩. ೬೭ ವ)

**ಕೆಂಬರಲ್** – ಕೆಂಪು ಹರಳು, ಮಾಣಿಕ್ಯ, ಪದ್ಮರಾಗ (ಜೈನರಲ್ಲಿ ವಾಕ್ಯಮದೊಂದಂ ಪರಿಕಿಸಿ ನೋಟ್ಪಾಗಳ್ ಕೆಂಬರಲಿನ ಪೆರ್ಗಲ್ಲ ತೆಱಂ ಅದೆಂತು ಅಂತೆ ವಲಂ: **ಸಮಯಪ,** ೩. ೯೧)

**ಕೆಂಬೊನ್** – ಚಿನ್ನ (ಮಾದ್ಯತ್ ಗಜಗಂಡಕಷಣಪ್ರೋದ್ಭೇದದಿಂ ಸಾರ್ದು ಬಂದು ಇದಿರೊಳ್ ಕೂಡುವುದಿಲ್ಲಿ ಚಂದನರಸಂ ಕೆಂಬೊನ್ನ ಟಂಕಂಗಳೊಳ್: **ಪಂಪಭಾ,** ೪. ೨೨)

**ಕೆಕ್ಕಡೆ** – ಕಕ್ಕಡೆ, ಕಠಾರಿ (ಕೆಕ್ಕಡೆ ಸಬಳಂ ರಥಾಂಗಂ ಉರುಪಾಶಮೆನಿಪ್ಪವಱಿಂದಂ ಆಗಳ್ ಆರ್ದು: **ತ್ರಿಷಷ್ಟಿಪು,** ೫. ೯)

**ಕೆಕ್ಕರಿ** – ಕರ್ಬೂಜ, ಕೆಕ್ಕರಿಕೆ (ಪಣ್ತ ಕೆಕ್ಕರಿಯಂತೆ ಬಿಕ್ಕನೆ ಬಿರಿರಿದ ಮೆಯ್ಯುಂ ಬಳೆಯೆ: **ವರ್ಧಮಾಪು,** ೫. ೩೫ ವ)

**ಕೆಕ್ಕರಿಕೆ** – ಒಂದು ಹಣ್ಣು, ಕರ್ಬೂಜ (ಕಾರ್ಗಯ್ಯ ಮೇರೆಯೊಳಿಟ್ಟ ಕೆಕ್ಕರಿಕೆ ಬಿರಿವಂತೆ: **ಶಾಂತಿಪು,** ೭. ೬೨)

**ಕೆಕ್ಕರಿಸು** – ಕೆಂಪೇರು (ನೆಗಪಿದ ಪುರ್ಬು ಕೆಕ್ಕರಿಪ ದಿಟ್ಟಿಗಳ್ ಎತ್ತಿದ ಮೀಸೆ ನೀಳ್ದ ನಾಲಗೆ: **ತ್ರಿಷಷ್ಟಿಪು,** ೨೬. ೧೪); ಕೋಪಗೊಳ್ಳು; ಹೆದರು (ಬಟಿ ಸಲ್ವ ಮಱಿಗಳ್ವೆರಸು ಕಳಕಳಕ್ಕಕೆ ಕೆಕ್ಕರಿಸಿ ಪರಿವುತುಂ: **ಕಾದಂಬ,** ೧. ೧೩೫ ವ)

**ಕೆಕ್ಕಳಗೆಳರ್** – ಕೆಕ್ಕರೆಗೆರಳು (ಮಡಗಿದೊಡಮೆಯಂ ಕಾಣದೆ ಕಟ್ಕೋಣಂಗಳಂತೆ ಕೆಕ್ಕಳಗೆಳರ್ದು: **ನೇಮಿನಾಪು,** ೪. ೧೧೪)

**ಕೆಕ್ಕು** – ಹಸು ಕಾಯುವಾಗ ಕೂಗು (ಕೆಕ್ಕು–ಗೋಶಿಕ್ಷಾಧ್ವನೌ: **ಶಬ್ದಮದ, ಧಾ** ೨೯)

**ಕೆಚ್ಚಗೆ** – ಕೆಂಪಗೆ (ಕೆಚ್ಚಗೆ ಮೊಗಮಾಗೆ ಸಂಪಗೆವೊಲೇಂ ಬಗೆಯಾಂಪುದೆ ಬುದ್ಧಿವಂತೆಯರ್: **ಲೀಲಾವತಿ,** ೧೪. ೪೨)

**ಕೆಚ್ಚನೆ** – ಕೆಂಪಾಗಿ (ಆತಂ ಕ್ರೋಧಾನಲದಿಂ ಎನ್ನುರಿಪುವಂತು ಕೆಚ್ಚನಾಗೆ ಬಿಚ್ಚನೆ ಬಿಟ್ಟ ದಿಟ್ಟಿಗಳಿಂ ನೋಡಿ: **ಕಾದಂಸಂ,** ೭. ೪೫ ವ)

**ಕೆಚ್ಚಲ್** – ಹಸುವಿನ ಮೊಲೆ, ಕೆಚ್ಚಲು (ಹರಿಪೋತಮಂ ಬೆದಱುತುಂ ಕರಿಪೋತಂ ಅವುಂಡುಗರ್ಚಿ ಕೇಸರಿಣಿಯಂ ಕೆಚ್ಚಲಂ ತುಡುಕುತಂ ಪರಿದತ್ತು: **ಪಂಪಭಾ,** ೭. ೮೦)

**ಕೆಚ್ಚುಗಟ್ಟು** – ಗಟ್ಟಿಯಾಗು, ದೃಢವಾಗು (ಭೂತಳದೊಳ್ ಬಿಳ್ದು ಕೆಚ್ಚುಗಟ್ಟಿದಳಲಿಂ ಮುಚ್ಚೆವೋಗಿ: **ಗಿರಿಜಾಕ,** ೮. ೭೭ ವ)

**ಕೆಚ್ಚುವೀಟಿ್** – ಕೂಡಿಕೊಂಡಿರು, ಹೆಣೆದುಕೊಂಡಿರು (ಎಂದು ಕೆಚ್ಚುವಿರ್ದಮಚ್ಚುಮನುರ್ಚಿಪೋದ ಮೇಳಮುಮಂ ಅಳವಿಗೆಟಿದಲಂಪುಮಂ: **ಆದಿಪು,** ೪. ೫೨ ವ)

**ಕೆಡು** – ಹಾಳಾಗು, ನಾಶವಾಗು (ಒಡಲೊಡಮೆಯಿಂಬಿವೆರಡುಂ ಕೆಡಲಿರ್ಪುವು ಕೆಡೆದ ಕಸವರಂ ಜಸಂ: **ಗದಾಯು,** ೨. ೪); ಕಳೆದುಹೋಗು (ಏನಾನುಂ ಕೆಟ್ಟುದುಮಂ ಅಱಸುವವೋಲ್ ಕೂಡೆ ನೋಡುತ್ತಮಿರ್ದಂ: **ಕಾದಂಬ,** ೧. ೧೧೭); ನಿವಾರಣೆಯಾಗು (ಆ ಮರ್ದಿನ ಬಾವಿಯ ನೀರಂ ಮಿಂದೊರ್ಗೆಲ್ಲಂ ಕುತ್ತಂಗಳ್ ಕೆಡುವುವು: **ವಡ್ಡಾರಾ,** ಪು. ೭೦, ಸಾ. ೧೦); ದುರ್ಗತಿಗೀಡಾಗು ; ಚೆದುರಿ ಹೋಗು; ಮೀರು, ಉಲ್ಲಂಘಿಸು (ಮತ್ತೊರ್ವನಿದಿರೆ ಬಂದೆಲೆ ಭಟ್ಟರೇ! ಬ್ರಾಹ್ಮಣಂ ನಾಯಂ ಮುಟ್ಟಲಾಗದೆಂಬರದು ಕೆಟ್ಟು ಪೊತ್ತುಕೊಂಡು ಪೋದಪೆ, ನೀವೆತ್ತಾನುಂ ಮರುಳ್ಗೊಂಡಿರೋ ಮರುಳಿಕ್ಕಿ ಅಟ್ಟುದನುಂಡಿರೋ ಪೇಟಿಂ: **ಪಂಚತಂತ್ರ,** ೨೧೧ ವ); ಕೈತಪ್ಪು (ಅಱಿವನೆಡೆವಱಿದು ಕೆಟ್ಟುದನಱಸಲ್

ಪೋಪಂತೆ ಮುಚ್ಚೆವೋಪುದುಂ: **ಶಾಂತಿಪು,** ೪. ೯೯); ಹಾಳಾಗು (ಆರುಂ ದುರ್ಜನರ ಕೂಟದಿಂದಂ ಕೆಡರೇ: **ಧರ್ಮಾಮೃ,** ೨. ೪೭); ಹದಗೆಡು (ಒಡಲೆಲ್ಲಂ ಕೆಟ್ಟುದು ಮೆಯ್ ಬಡವಾದುದು ಕಾಲ ಕೈಯ ಬೆರಲೆಲ್ಲಂ ತಮ್ಮೆಡೆಯಿಂ ಪೋದುವು: **ಧರ್ಮಾಮೃ,** ೪. ೫೦)

**ಕೆಡುವೊಡಲ್** – ನಾಶಗೊಳ್ಳುವ ದೇಹ (ಕೆಡುವೊಡಲೊಡಮೆಯನೆಂದುಂ ಕೆಡದೊಡಮೆಗೆ ಮಾಱುಗುಡುವುದು: **ಗದಾಯು,** ೨. ೪)

**ಕೆಡೆ** – ಬೀಳು (ಬಿಡದೆ ಕಡುಕೆಯ್ದ ದಿವ್ಯದ ನುಡಿಗೆ ಕಿವುಟ್ಕೇಳ್ದು ಕುಡಿದು ನೀರಂ ಭೀಮಂ ಗದೆವೆರಸು ಭೋಂಕನೆ ಕೆಡದಂ ಗಿರಿಶಿಖರದೊಡನೆ ಕೆಡೆವಂತಾಗಳ್: **ಪಂಪಭಾ,** ೮. ೪೨); ಮಲಗು (ಸೊಕ್ಕಿ ಮೈಯಱಿಯದೆ ಟಕ್ಕನಿಕ್ಕಿದಂತು ಕೆಡೆದು ನಿದ್ರೆಗೆಯ್ವುದುಂ: **ಧರ್ಮಾಮೃ,** ೧೧. ೯೭ ವ)

**ಕೆಡೆನುಡಿ** – ಕೆಟ್ಟ ಮಾತಾಡು (ಕುಲಜರಂ ಉದ್ಧತರಂ ಭುಜಬಲಯುತರಂ ಹಿತರಂ ಈ ಸಭಾಮಧ್ಯದೊಳ್ ಅಗ್ಗಲಿಸಿದ ಮದದಿಂ ನಾಲಗೆ ಕುಲಮಂ ತುಬ್ಬುವವೊಲ್ ಉಱದೆ ನೀಂ ಕೆಡೆನುಡಿವೈ: **ಪಂಪಭಾ,** ೧೦. ೨೦)

**ಕೆಡೆಮೆಟ್ಟು** – ಮೆಟ್ಟಿ ತುಳಿ (ಎನಗೆ ಪೊಡರ್ಪುದೋರ್ಪುದುದಿದು ತಾನೆನುತುಂ ಕೆಡೆಮೆಟ್ಟಿ: **ಕರ್ಣನೇಮಿ,** ೬. ೧೧೮)

**ಕೆಡೆಯಿಕ್ಕು** – ಬೀಳಿಸು (ಕಳ್ಳನೆ ಕೆಡೆಯಿಕ್ಕಿ ಬಾಯೊಳ್ ಎಱೆವ .. .. ಚರ್ಚೆ ಬಾತೆಯೇ: **ಸಮಯಪ,** ೧೧. ೭೪)

**ಕೆಡೆಯೆಚ್ಚು** – ಬೀಳುವಂತೆ ಬಾಣದಿಂದ ಹೊಡೆ (ರಾವಣಂ ವಿಷ್ಣುವಿನೊಳ್ ಪೊಡರ್ದು ಇಱೆದುಂ ಗಡ ತನ್ನಂ ಕೆಡೆಯೆಚ್ಚೊಡೆ ಸತ್ತಂ: **ಸಮಯಪ,** ೧೦. ೫೭)

**ಕೆಣಕು** – ರೇಗಿಸು (ಪೆರ್ಬಲೆಯಂ ಪೃಷಿದಿಕ್ಕಿ ಕೇಣದಿಂ ಕೆಣಕಿದ ಧೀವರಾಮರರಂ ಎಕ್ಕಲನುರ್ಬುತೆ ಸೀಳ್ದುದಾರ್ಪಿನಿಂ: **ಶಬರಶಂ,** ೪. ೧೦)

**ಕೆತ್ತಪಡಿ** – (ಇಂತು ಉದಯಿಸಿದ ಆ ಮಹಾನುಭಾವನ ಪುಣ್ಯಪ್ರಭಾವ ಕುಂಚಿಕೆಯಿಂ ತೆಱೆದಂತೆ ಕೆತ್ತಪಡಿಗಳ್ ಎತ್ತಂ ತೆಱೆದು: **ಶಾಂತೀಶ್ವಪು,** ೭. ೫೭ ವ)

**ಕೆತ್ತು** – ಅದಿರು, ಮಿಡುಕು (ಇಳಾವಿಖ್ಯಾತನಂ ಕೂರ್ತು ನೋಡಲುಂ ಅಟ್ಟಿರ್ತು ಅಮರ್ದು ಅಪ್ಪಲುಂ ಪಡೆವೆ ಇಂದು ಎಂಬಂತೆ ಕೆತ್ತಿತ್ತು ದಲ್ ಬಲಗಣ್ಣುಂ ಬಲದೋಳುಂ ಆ ಬಲಿಬಲಪ್ರಧ್ವಂಸಿಗೆ ಅಂದು ಇಟ್ಟಳಂ: **ಪಂಪಭಾ,** ೪. ೩೩); ಸ್ಪಂದನ (ಕೆತ್ತ–ಸ್ಪಂದನೇ: **ಶಬ್ದಮದ,** ಧಾ ೩೮೪); ಮೇಲ್ಭಾಗವನ್ನು ಸೀಳು (ಕುಪ್ಪಸದಂತೆ ಬೆನ್ನಂ ಪತ್ತಿ ಕೆತ್ತುವರ್: **ಧರ್ಮಾಮೃ,**, ೩. ೪೩ ವ); ಮುಚ್ಚು (ಪಡಿಯಂ ಕೆತ್ತಿ ಅಗುಳಿಯನಿಕ್ಕಿ .. .. ಪಂಜರದ ಪಡಿಕೆಯೊಳಿರ್ದ ಎನ್ನೊಳ್ ಇಂತೆಂದಂ: **ಕಾದಂಬ,** ೧೦. ೪೪ ವ)

**ಕೆತ್ತುಗುಂದು** – ಡವಗುಟ್ಟುವಿಕೆ ನಿಲ್ಲು (ಇಂಗದ ಬೆಮರ್ ಮಿಡುಕೋಡದ ಪುರ್ವು ಬೀಗಿ ಬೀಯದ ತುಟಿ ಕೆತ್ತುಗುಂದದ ಕುಚಂ ನಡುಕಂಗಿಡದೂರು: **ಲೀಲಾವತಿ,** ೩. ೧೫); ಸ್ಪಂದನವಿಲ್ಲದಿರು (ತೊಡೆ ಕಡುಕಂಪಿಸುತ್ತಮಿದೆ ಮೈ ಬೆವರುತ್ತಿದೆ ಕೆತ್ತುಗುಂದದೆ ಇಟ್ಟೆಡೆ ಮೊಲೆ ಮೋಹಿಸುತ್ತಿದೆ: **ರಾಜಶೇವಿ,** ೧೧. ೩೩)

**ಕೆದಱಿಸು** – ಚೆದುರಿಸು, ಹರಡು (ರಮಣೀಯ ರಮಣೀಜನಂ ಬೆರಸು ಪಂಚರತ್ನಂಗಳಿಂ ಕೆದಱಿಸಿ ಸಾಂದಿನ ಸೌಸವದ ಕುಂಕುಮದ ಕತ್ತುರಿಯ ಕದಡಂ ಕದಡಿ: **ಪಂಪಭಾ,** ೫. ೬೦ ವ); ಚೆಲ್ಲಾಪಿಲ್ಲಿಯಾಗಿಸು

**ಕೆದಱು** – ಕೆದರು, ಚೆದುರು (ಪನಿಪುಲ್ಲಂಬುಕಣಂಗಳಂ ಕೆದಱುತುಂ .. .. ತಣ್ಣನೆ ತೀಡಿತ್ತೆನಸುಂ ಪ್ರಭಾತಮಯ ಪ್ರೋದ್ಭೂತ ಶೀತಾನಿಳಂ: **ಶಾಂತೀಶ್ವಪು,** ೧೧. ೯೪)

**ಕೆನ್ನಂ** – ಹೆಚ್ಚಾಗಿ, ವೆಗ್ಗಳವಾಗಿ; ವ್ಯರ್ಥವಾಗಿ (ಎನ್ನೀ ಕುಱುಕುಣಿಕೆಗೆ ನೆಱೆಯ್ಯೆ ಪೊಚ್ಚಱೆನೊಳಿದೇಂ ಪೊಣರ್ದು ನೋಡಲಾಗದೆ ಕೆನ್ನಂ: **ಹರಿವಂಶ,** ೧೦. ೩೪)

**ಕೆನ್ನನೆ** – ಸುಮ್ಮನೆ (ಪೇೞ್ ಕೆನ್ನನೆ ಎನ್ನೊಡನೆ ಎಂದಿನಂದದೊಳ್ ಅಂದಲೊಲ್ಲದೆ ರಾಗದಿಂ: **ಧರ್ಮಾಮೃ,** ೮. ೯)

**ಕೆನ್ನೀರ್** – ಕೆಂಪು ನೀರು, ರಕ್ತ (ಅದಱ ಕೆನ್ನೀರ್ ಭರದಿಂ ಬೆಚ್ಚನೆ ಪಾಯ್ತರೆ ಕಣ್ಣರೆ ಮುಚ್ಚುತ್ತುಂ ಮೂರ್ಛೆವೋದುದಲ್ಲಿ ವರಾಹಂ: **ಶಬರಶಂ,** ೪. ೨೨)

**ಕೆನ್ನೆತ್ತರ್** – ಕೆಂಪು ರಕ್ತ (ಕೆನ್ನೆತ್ತರೊಳ್ ಒರ್ವರೊರ್ವರಂ ತಳ್ಕಿಱಿದುಂ ಬೊಬ್ಬಿಱಿದುಂ ತ್ರಿಪುಂಡ್ರಮಿಟ್ಟುಂ ಕೂಕಿಱಿದುಂ ತೇಗಿಯುಂ ಸಸಿನೆವರಿದುಂ [ಡಿಎಲ್ಎನ್ ಒಪ್ಪಿದ ಪಾಠ] ಬವಳಿವರಿದುಂ ಬಾನಂಗುಳಿಗೆವರಿದುಂ ಸೂಟ್ಟಿರಿದುಂ ಆಡುವಾಗಳ್ ಉಭಯಬಲಂಗಳ್: **ಪಂಪಭಾ,** ೧೨. ೧೫೮ ವ)

**ಕೆಮ್ಮಗೆ** – ಸುಮ್ಮನೆ, ಮೌನವಾಗಿ (ಇನ್ನಂತುಟು ಪೇೞ್ದು ಕೆಮ್ಮಗಿರೆ ಗಮ್ಮನೆ ಕಮ್ಮಱೆಯೋಜನಾಗನೇ: **ಆದಿಪು,** ೨. ೬೧)

**ಕೆಮ್ಮಡ** – ಕೆಂಪಾದ ಹಿಮ್ಮಡಿ (ಪಾದಾಗ್ರದಿಂ ತೇದು ಕಾಯ್ದೊದೆದಳ್ ಕೆಮ್ಮಡದಿಂದಂ ಇಟ್ಟೊರೆಸಿದಳ್ .. .. ಸಕಂಪೆ ಕೋಪವಶದಿಂ ಈಡಾಡಿದಳ್: **ಲೀಲಾವತಿ,** ೧೪. ೩೩)

**ಕೆಮ್ಮನೆ** – ಕೆಮ್ಮಗೆ, ಸುಮ್ಮನೆ (ಕೃತಾಂತನಿಂತು ನಿರ್ನೆರಮೆಱೆದುಯ್ಯೆ ಬಾರಿಸದೆ ಕೆಮ್ಮನುಪೇಕ್ಷಿಸಿ ನೋಡುತಿರ್ಪರೇ: **ಆದಿಪು,** ೩. ೪); ವಿಚಾರ ಮಾಡದೆ (ಗಾಳು ಗೊರವಂ ತಗುಳ್ಚಿ ಪಳಾಳಮಂ ಏನೊಂದನಪ್ಪೊಡಂ ಗಱಿಪಿದೊಡೆ ಆ ಬೇಳುನುಡಿ ಕೇಳ್ದು ಕೆಮ್ಮನೆ ಬೇಳಲ್ ನಿಮಗಂತು ರಾಜಸೂಯಂ ಮೊಗ್ಗೇ: **ಪಂಪಭಾ,** ೬. ೨೪)

**ಕೆಯ್** – ಮಾಡು (ನೆರೆದ ಪಂಡಿತಕ್ಕೊಡನೆ ವಾದಂಗೆಯ್ದು ಗೆಲ್ದು: **ವಡ್ಡಾರಾ,** ಪು. ೬೮, ಸಾ. ೧೯); ಹಸ್ತ (ಕೆಯ್ಯಂ ನೇಱುಮನಳವಿಯೊಳ್ ಕೂಡಿ ನಡೆಯಲ್ವೇಟ್ಟು: **ಪಂಪಭಾ,** ೫. ೪೭ ವ); ಸೊಂಡಿಲು (ತಳರ್ದುದು ಕರ್ಣತಾಳ ಪವನ ಆಹತಿಯಿಂ ಜಳರಾಶಿ ಕೆಯ್ಯ ಬಳ್ವಳಿಕೆಗೆ ದಿಗ್ಗಜಂ ದೆಸೆಯಿನತ್ತ ತೆರಳ್ದುವು ಕಾಯ್ಪಿನಿಂ: **ಪಂಪಭಾ,** ೧೧. ೭೧); ಹೊಲ (ತನ್ನ ಕೆಯ್ಯನುಟಲೆಂದು ಪೋಗಿ: **ವಡ್ಡಾರಾ,** ಪು. ೧೪೪, ಸಾ. ೯); ಬೆಳೆ, ಪೈರು (ಪಂದಿ ಕೆಯ್ಯಂ ತಿಂದೊಡೆ ಕತ್ತೆಯ ಕಿವಿಯಂ ಕೊಯ್ದರೆಂಬಂತೆ: **ಧರ್ಮಾಮೃ,** ೭. ೪೨ ವ)

**ಕೆಯ್ಯುಸುರಿ** – ಕೈಚಳಕ (ಪುಸಿ ನಸುವಂಚನೆ ನೋರ್ಪು ಅಸಿದು ಅಗಲಿತು ತಕ್ಕು ದಕ್ಕು ಪಗೆ ಕೆಯ್ಬಗೆ ಕೆಯ್ಯುಸುರಿ ನುಸುಳೆಂಬ ಕೇಣದ ಕುಸುರಿಯಂ ಅಱೆದು ಇಱೆದು ಮೆಱೆದು ಉಱೆದ ಅರೆಬರ್: **ಪಂಪಭಾ,** ೧೦. ೮೧)

**ಕೆಯ್ಕೊಳ್** – ಕೈಗೊಳ್ಳು, ಸ್ವೀಕರಿಸು (ಗುಣಮಂ ಕೆಯ್ಕೊಂಡು ದೋಷಮಂ ನೆಱೆ ಬಿಡುವಾ ಗುಣವಂತನ ಮುಂದೆ ಓದುಗೆ: **ಸಮಯಪ,** ೧. ೬೫); ತನ್ನದಾಗಿಸಿಕೊ (ಇನ್ನಿಲ್ಲಿ ಪೆಂಪು ಎಱಕಂಬೆತ್ತಿರೆ ಕಾವೆನೆನ್ನ ನುಡಿಯಂ ಕೆಯ್ಕೊಂಡ ಕಟ್ಟಾಯಮಂ: **ಪಂಪಭಾ,** ೧೨. ೧೯೮); ಒಡಂಬಡು (ಇದಂ ನೀಂ ನೃಪ ಕೆಯ್ಕೊಳ್ಳ ತಂದೆಯೆಂದುದಂ: ಗದಾಯು, ೪. ೮); ವಶಪಡಿಸಿಕೊ (ಈ ಲೋಕಮಂ ಹೈಮನಗಂ ಕೆಯ್ಕೊಂಡುದೆಂಬನ್ನೆಗಂ: **ಸುಕುಮಾಚ,** ೪. ೧೧)

**ಕೆಯ್ಗಟ್ಟಲೆ** – ಕೈಯ ಅಳತೆ, ಕೈ ಹಿಡಿಯುವಷ್ಟು (ಒಟ್ಟಿದ ಪೊನ್ನ ಬೆಟ್ಟುಗಳಂ ಈರೆಡೆಗೇವುದೊ ತೂಕಮೆನ್ನ ಕೆಯ್ಗಟ್ಟಳೆ ಕೊಳ್ಳಿಂ: **ಪಂಪಭಾ,** ೬. ೩೯)

**ಕೆಯ್ಗಟ್ಟಿ** – ಕೈಗಟ್ಟಿ, ತೆಯ್ದ ಗಂಧ, ಕೈಗೆ ಹಚ್ಚಿಕೊಳ್ಳುವ ಗಂಧ (ದಿವ್ಯಾಹಾರಂಗಳಂ ಆರೋಗಿಸಿ ಕೆಯ್ಗಟ್ಟಿಗೊಂಡು ತಂಬುಲಂಗೊಂಡು ಇಂ ಬೞಿಯಂ ಅಚ್ಯುತಂ ವಿಕ್ರಮಾರ್ಜುನನ ಕೆಯ್ಯಂ ಪಿಡಿದುಕೊಂಡು: **ಪಂಪಭಾ,** ೫. ೬೭ ವ)

**ಕೆಯ್ಗಣ್ಮು** – ಕೈಗಣ್ಮು, ಮಿತಿಮೀರು, ಕೈಮೀರು (ಕೋಪಾಗ್ನಿ ಕೆಯ್ಗಣ್ಮೆ ಕಣ್ಮಲರೊಳ್ ಬಂದಿರೆ ನೋಡಿದಂ ಕಲುಷದಿಂ ಗಾಂಡೀವಿ ಗಾಂಡೀವಮಮಂ: **ಪಂಪಭಾ,** ೭. ೭)

**ಕೆಯ್ಗಯ್** – ಅಲಂಕರಿಸಿಕೊ (ನಾಳೆ ಸಯಂಬರಮೆನೆ ಪಾಂಚಾಳ ಮಹೀಪಾಳಂ ಅಖಿಳ ಭೂಭೃತ್ ನಿಕರಕ್ಕೆ ಓಳಿಯೆ ಸಾಱೆದೊಡೆ ಅವನೀಪಾಲರ್ ಕೆಯ್ಗಯ್ಯಲೆಂದು ಪಱಿಮಱಿಯಾದರ್: **ಪಂಪಭಾ,** ೩. ೪೨)

**ಕೆಯ್ಗರ್ಚಿಕೊಳ್** – ಕೈ ತೊಳೆದುಕೊ (ಮುಟ್ಟಲ್ಕೆ ಅಣಂ ಆಗದುದಂ ಮುಟ್ಟಿಯೆ ಕೆಯ್ಗರ್ಚಿಕೊಳ್ವ ತೆಱದಿಂ ಭಕ್ತಂ ಮುಟ್ಟಿದೊಡೆ ಕರ್ಚುತಿರ್ಪರ್: **ಸಮಯಪ,** ೮. ೧೭)

**ಕೆಯ್ಗೞ** – ಕೈಗಱೆ, ಕೈಮೀರು, (ಭೀಮಸೇನನ ಮಹಾಪ್ರತಿಜ್ಞೆಯುಮಂ ಆರ್ಗಂ ಬಾರಿಸಲ್ಬಾರದು ಕೆಯ್ಗೞೆದ ಮನೆವಾೞ್ತೆ ಬುದ್ಧವೇೞಲೆಡೆಯಿಲ್ಲ: **ಪಂಪಭಾ,** ೭. ೧೬ ವ); ಅತಿಯಾಗು (ಕೆೞಗಣ ಕೆಂದಳಿರ್ ಪುದಿದ ಮೇಗಣ ಪಂದಳಿರ್ ಒಂದಿದೊಂದು ಕೆಯ್ಗೞೆದ ಪಸುರ್ಪುಮಂ ಪೊಳೆವ ಕೆಂಪುಮಂ ಆಳ್ದಿರೆ: **ಪಂಪಭಾ,** ೫. ೩೧)

**ಕೆಯ್ಗಾ** – ಕೈಗಾಯ್, ನಿಧಾನಿಸು (ಅಂತು ಕಿೞಿದು ಪೊಟ್ಟು ಕೆಯ್ಗಾದು ಕಾದೆ ಸರಿತ್ಸುತನ ಸುರಿವ ಸರಲಮೞೆಯೊಳ್ ಅೞಿದ ನಿಜವರೂಥಿನಿಯ ಸಾವುಂ ನೋವುಂ ಏವಮಂ ಮಾಡೆ: **ಪಂಪಭಾ,** ೧೧. ೧೮ ವ); ಕಾವಲು ಕಾಯಿ (ಸಂತಂ ಕಿೞ್ಕೆೞೆಗಳೋರಂತಿರೆ ಕೆಯ್ಗಾವವಳಿದಿರಂ ನೋೞ್ಪಿವರಂ: **ಕಾವ್ಯಾವಲೋ,** ೨೧೩)

**ಕೆಯ್ಗೂಡು** – ಕೈಗೂಡು, ಒದಗು, ದೊರಕು (ಕಾಡೊಮವೇಳೆ ಸಲೆ ಕೆಯ್ಗೂಡಿದುದೆನೆ; **ಪಂಪಭಾ,** ೫. ೪೦); ಸ್ವಾಧೀನವಾಗು (ಇಟ್ಟಳಮಾಯ್ತು ದೇಸಿ ಕೆಯ್ಗೂಡಿದುದಿಲ್ಲ ಮಾರ್ಗಂ ಎನೆ ವಿಸ್ಮಯಮಾಗಿರೆ ತನ್ನ ಮುಂದೆ ಆಡಿದಳಾ ತಿಳೋತ್ತಮೆಯಂ ಒಲ್ದನುಮಿಲ್ಲ ನರೇಂದ್ರತಾಪಸಂ: **ಪಂಪಭಾ,** ೭. ೯೧)

**ಕೆಯ್ಗೆಮಾಡು** – ಕೈಗೆಮಾಡು, ತನ್ನದಾಗಿಸಿಕೊ, ಸ್ವಾಧೀನಪಡಿಸಿಕೊಳ್ಳು (ಇನ್ನಾವ ಮಾೞ್ಕೆಯೊಳ್ ಪಗೆಯಂ ಕೆಯ್ಗೆಮಾಡುವಂ ಪೇೞಿಂ ಎನೆ ಶಕುನಿಯಿಂತೆಂದಂ: **ಪಂಪಭಾ,** ೬. ೬೭ ವ)

**ಕೆಯ್ಗೆಯ್** – ಅಲಂಕರಿಸು, ಅಲಂಕರಿಸಿಕೊ (ಪೆಣ್ದಿರೋೞಿವಿಡಿಯಂ ಕೆಯ್ಗೆಯ್ದು ಬಂದೇೞೆ: **ಪಂಪರಾ,** ೨. ೧೧)

**ಕೆಯ್ಗೆಯ್ಸು** – ಅಲಂಕರಿಸು (ಕೂಸಂ ನೆೞೆಯೆ ಕೆಯ್ಗೆಯ್ಸಿಂ ಎಂದು ಮುನ್ನಂ ಕೆಯ್ಗೆಯ್ಸುತಿರ್ದ ತಱದ ಗುಱಗೆಯರಪ್ಪ ಅಂತಃಪುರ ಪುರಂಧ್ರಿಯರಂ ಕರೆದು ಪೇೞ್ವುದುಂ: **ಪಂಪಭಾ,** ೩. ೪೪ ವ)

**ಕೆಯ್ಗೊಡು** – ಕೈಗೊಡು, ಕೈ ನೀಡು (ಕಂತುಗೆ ಕೆಯ್ಗೊಟ್ಟವೊಲಿರ್ದುದು ಇಟ್ಟಳದೆ ಕೈಬಂದ ಒಂದು ಚೂತದ್ರುಮಂ: **ಶಾಂತೀಶ್ವಪು,** ೧೦. ೧೧೦)

**ಕೆಯ್ತ** – ಕೈತ, ಕೆಲಸ (ಚಿನ್ನಪೂಗಳಂ ಅವಯವದೊಳೆ ಸಯ್ತುಮಾಡುವ ಕೆಯ್ತುಮುಮಂ: **ಆದಿಪು,** ೪. ೯ ವ); ವರ್ತನೆ (ಗಾಡಿಯೊಳ್ ಪೆಣೆದು ವಿಳಾದೊಳ್ ತೊಡರ್ದು ಕೆತ್ಮಲಂಪನೆ ಮಾಡೆ: **ಆದಿಪು,** ೨. ೭೦)

**ಕೆಯ್ದೀವಿಗೆ** – ಕೈದೀವಿಗೆ, ಕೈ ದೀಪ (ಹಸ್ತಿಯ ಬೆಂಗೆ ವಂದು ಸುತ್ತಿೞಿದು ಪಗಲಂ ತಡವಿಕ್ಕಿದಂತೆ ಬೆಳಗುವ ಕೆಯ್ದೀವಿಗೆಗಳ ಬೆಳಗೆ ಬೆಳಗಾಗೆ: **ಪಂಪಭಾ,** ೧೨. ೫೨ ವ)

**ಕೆಯ್ದು** – ಕೈದು, ಆಯುಧ (ಗಂಗಾಸುತನ ವಾಮಭಾಗದೊಳ್ ಅಂಬರಭಾಗಂ ಆ ತಟ್ಟಿ ಮೆಡಱಿದಂತಾಗಿ ತನ್ನ ರಥದೊಳೊಟ್ಟಿದ ಕೆಯ್ದುಗಳ ಬೆಳಗೆ ಬೆಳಗಾಗೆ: **ಪಂಪಭಾ,** ೧೦. ೫೬)

**ಕೆಯ್ದುಗೆಯ್** – ಆಯುಧಪ್ರಯೋಗ (ನಿಲ್ಲದೆ ತೊಲಗಿದಿರಿಂದಂತಲ್ಲದೞ್ದಾರ್ದು ಕೆಯ್ದುಗೆಯ್ದು ಕಡುಗೆಯ್ ನೀನೀಗಳ್: **ಕವಿರಾಮಾ,** ೩. ೧೯೯); [ಯುದ್ಧ] ಮಾಡು (ಎನಿತು ಮದವಾರಣಂ ಕ್ರೋಧಿನಿ ಮೊಕ್ಕಂ ಸಿಂಪೋಹತಮಂ ಗೆಲ್ಗುಮೆ ಮಾತಿನೊಳೇನೊ ಕೆಯ್ದುಗೆಯ್ ಬಱುವನಂ ಆಜಿಶ್ರಾಂತನಂ ಯಶೋಧನಂ ಇಱೆಯಂ: **ಶಾಂತಿಪು,** ೪. ೫೧)

**ಕೆಯ್ನಿೞೆ** – ಕೈನಿಱೆ, ಕೈ ನಿಮಿರು (ಸುರಪತಿ ಕೆಯ್ನಿೞಿದು ಚರಾಚರಗುರುಗಂ ಗುರುಗಳೆನಿಸಿದಾ ಇರ್ವರ್ ಮುನ್ನೆರಪಿರ್ದ ಅಗಣ್ಯಪುಣ್ಯಸ್ಥಿರತ್ವಮಂ ನೆಗೞೆ ಪೊಗೞಲಱಿಯಂ ಸಭೆಯೊಳ್: **ಶಾಂತಿಪು,** ೧೦. ೭೬)

**ಕೆಯ್ನೀಡು** – ಕೈನೀಡು, ಕೈಯೊಡ್ಡು (ಈಡಿತ ಜಿನವರ ಶಾಸನ ಚೂಡಾಮಣಿ ಬುಧರ್ಗೆ ಅನಲ್ಪ ಕಲ್ಪಕುಜಂ ಕೆಯ್ನೀಡಿದ ಬೇಟ್ಟರ ನೆರವಿಗೆ ನೀಡಿಲ್ಲದೆ ಕುಡುವ ಉದಾತ್ತಂ ಆ ಜಿನಚಂದ್ರಂ: **ಶಾಂತಿಪು,** ೧. ೩೨)

**ಕೆಯ್ನೀರ್** – ಕೈನೀರ್, ಕೈಗೆ ಸುರಿವ ನೀರು, ಧಾರೆಯ ನೀರು (ಮಂಗಳತೂರ್ಯನಾದಂ ಎಸೆಯುತ್ತಿರ್ಪನ್ನೆಗಂ ಚಕ್ರಿ ರಾಗಿಸಿ ಕೆಯ್ನೀರ್ ಎಱೆದಂ ಗುಣಾರ್ಣವ ಮಹೀಪಾಲಂಗಂ ಆ ಕನ್ನೆಯಂ: **ಪಂಪಭಾ,** ೫. ೨೫)

**ಕೆಯ್ನೀರೆಱೆ** – ಕೈನೀರೆಱೆ, ಧಾರೆ ಎರೆ (ಪುರಿಪುಂಡರೀಕಿಣೀಶಂ ಗುರುತರಶರ್ಯಾಂಬುನಿಧಿಗೆ ಜಯವಂನೃಪಂ .. .. ಕೆಯ್ನೀರೆಱೆದಂ: **ಪುಷ್ಪದಂಪು,** ೮. ೬೦)

**ಕೆಯ್ಪೞೆ** – ಕೈಪಱೆ, ಚಪ್ಪಾಳೆ (ನಿತ್ಯಗ್ರಹಮಂ ಪಾರಯ್ಸೆ ಕುಣಿದರರೆಬರ್ ಭೋರೆನೆ ಕಯ್ಪೞೆ ರಂಜಿವೞೆಯನೆ ವನದೊಳ್: **ಪುಷ್ಪದಂಪು,** ೫. ೯೮)

**ಕೆಯ್ಪಿಡಿ** – ಕೈಪಿಡಿ, ಕನ್ನಡಿ (ಇಂಚೆಯ ಪಸವಿನ ಬಱದ ಕಳಂಚಿನ ಡಾವರದ ಬಾಧೆಯಿಲ್ಲದ ಪದದೊಳ್ ಮುಂಚದೆ ಪಿಂಚದೆ ಬಳೆದು ವಿರಿಂಚಿಯ ಕೆಯ್ಪಿಡಿವೊಲಾದುದು ನಾಡ ಊರ್ಗಳ್: **ಪಂಪಭಾ,** ೮. ೫೧)

**ಕೆಯ್ಪೊಡೆ** – ಬಾಣದ ಗರಿ (ಕತ್ತುರಿಯಣ್ಕೆ ಕೆಂದಳಿರ ಕೆಯ್ಪೊಡೆ ಕೇದಗೆಯೊತ್ತೆ.. .. ತೋೞಲ್ದನಂಗನಾ ಚಿತ್ತದೊಳಂ .. .. ಮನ್ಮಥಂ: **ನೇಮಿನಾಪು,** ೪. ೧೩೭); ಕೈಚೀಲ (ತಳಿರುಡೆ .. .. ಮಾಂದಳಿರ ಕೆಯ್ಪೊಡೆ ರಂಜಿಸೆ ಬೇಂಟೆಯಾಡಿ .. .. ಪುಳಿಂದಿ ವೀರಸಿರಿಯಂತಿರೆ ಬೆನ್ನನೆ ಬಂದಳೋಪನಾ: **ನೇಮಿನಾಪು,** ೩. ೬೨); ಬಿಲ್ಲಿನ ಹೆದೆ ತಾಗದಂತೆ ಮುಂಗೈಗೆ ಹಾಕುವ ಗೌಸು (ಪಿಡಿಕೆಯ್ ತೀವಿದ ಕೂರ್ಗಣೆ ಮಡಕಾಲ್ವರಂ ಅಲೆವ ಕಚ್ಚೆ ನಿಡಿಯಸಿಯ ಒೞೆ ಕರ್ಪಿಡಿದ

ಪಣೆಕಟ್ಟು ಕೆಯ್ಪಡೆ ಬೆಡಂಗನೊಳಕೊಳೆ ಧನುರ್ಧರರ್ ಪೆಣೆದೆಚ್ಚರ್: **ಪಂಪಭಾ,** ೧೦. ೭೧)

**ಕೆಯ್ಬಗೆ** – ಕೈಸಂಚಲನದ ರೀತಿಗಳು (ಪುಸಿ ನಸುವಂಚನೆ ನೋರ್ಪು ಅಸಿದು ಅಗಲಿತು ತಕ್ಕು ದಕ್ಕು ಪಗೆ ಕೆಯ್ಬಗೆ ಕೆಯ್ ಕುಸುರಿ ನುಸುಳೆಂಬ ಕೇಣದ ಕುಸುರಿಯಂ ಅಱೆದು ಇಱೆದು ಮೆಱೆದು ಉಱೆದೆ ಅರೆಬರ್: **ಪಂಪಭಾ,** ೧೦. ೮೧)

**ಕೆಯ್ಮಿಗು** – ಕೈಮಿಗು, ಹೆಚ್ಚಾಗು (ವಿಜಯಂ ಅಶ್ವಗ್ರೀವನ ಮಗನಪ್ಪ ವಿಪುಳಕಂಠನಂ ತನ್ನವಾರ್ಯವೀರ್ಯಕ್ಕೆ ಮುಡಿಗಿಕ್ಕುವಂತಿಕ್ಕಿ ಕೆಯ್ಮಿಕ್ಕು ಅಱಲೊಳ್ ಅನಿಬರುಂ ಒಂದಾಗಿ ಬಂದು ತಾಗೆ: **ಶಾಂತಿಪು,** ೫. ೫೫ ವ); ಮಿತಿ ಮೀರು (ಕರಂ ಕಾಯ್ವಿನಿಂ ಕಯ್ಮಿಗುತುಂ ಬಂದತ್ತು ಅದೊಂದು ಅದ್ಭುತಮೊದವಿದ ಅಮೋಘಂ ವಿಮೇಘಂ ನಿದಾಘಂ: **ಶಾಂತೀಶ್ವಪು,** ೧೨. ೧೭)

**ಕೆಯ್ಯಿಕ್ಕು** – ಕೈ ಇಳಿಬಿಟ್ಟುಕೊಂಡು ಕದಲದಿನಿರು (ಇನನಸ್ತಂಗತನಾಗೆ ತತ್ಸಮಯದೊಳ್ ಕೆಯ್ಯಿಕ್ಕಿ .. .. ಪೇಟ್ದಿ ಸ್ಯೆರಣೆಯ ಮಾನುಷ್ಯರ್: **ಸಮಯಪ,** ೧. ೫)

**ಕೆಯ್ಯೆಡೆ** – ಕೈಯೆಡೆ, ಒತ್ತೆ, ಕೈಗೆ ಕೊಟ್ಟದ್ದು (ಪಡೆದರ್ ತಾಯುಂ ತಂದೆಯುಂ ಒಡಲಂ ಪ್ರಾಣಮುಮಂ ಅವು ಅವರವು ಕೆಯ್ಯೆಡೆಯಂ ಕುಡುವುದು ಅರಿದಾಯ್ತೆ: **ಪಂಪಭಾ,** ೯. ೮೧)

**ಕೈಯೆಡೆವೇಟ್** – ದಾನ ಕೊಡು, ಒಪ್ಪಿಸು (ನೀನೀಕೆಯಂ ಕಾವುದೆಂದು ಪೇೞ್ವುದುಂ ಕೌಮುದಿನಿಗೆ ಕುಮುದಿನಿಯಂ ಕೆಯ್ಯೆಡೆವೇೞ್ವಂತಕ್ಕುಂ: **ಲೀಲಾವತಿ,** ೧೧. ೭ ವ)

**ಕೆಯ್ವಟೆ** – ಕೈವಟೆ, ಹೊಲಗದ್ದೆಗಳ ಪ್ರದೇಶ (ಸುೞಿಯದು ಗಾಳಿ ಮೃಗಂ ಕೆಯ್ವಟೆಗಳ ಮೇತದೊಳೆ ತಣಿದಪುವು ಪಂದಿಗಳುಂ ಪಟಿನವಿರ್ ಇಕ್ಕಿದುವು ಆದಂ ಪಟು ಪರಿದಾಡಲ್ ಕರಂ ಬೆಡಂಗವನಿಪತೀ: **ಪಂಪಭಾ,** ೫. ೩೮)

**ಕೆಯ್ವರ್** – ಕೈಗೆ ಬರು, ದೊರಕು (ಮಂದಾರಂ ಕೆವಂದವೊಲೆಂದಿತ್ತೆಸಗುವನೊ ನೃಪತಿ ಜನನೋತ್ಸವಮಂ: **ಪುಷ್ಪದಂಪು,** ೩. ೯೦); ಚಿಗುರು (ಕೆಯ್ವಂದುದು ಸಹಕಾರಂ ಕೆಯ್ವಾರ್ವುದು ಸಮಯಮಲ್ಲದೆಂದು ಮನೋಜಂ ಮುಯ್ವಂ ನೋಡಿ: **ಮಲ್ಲಿನಾಪು,** ೫. ೯)

**ಕೆಯ್ವಲ** – ಕೈವಲ, ಕೈಯ ಶಕ್ತಿ, ಭುಜಬಲ (ಕುಸುಮಶರಂ ಕೆಯ್ವಲದಾಂಕೆಗೊಟ್ಟ ನೀಲದ ಸಲಗೆಯಿದೆನೆ ರೋಮರಾಜಿ ರಾಜಿಸಿ ತೋರ್ಕುಂ: **ನೇಮಿನಾಪು,** ೧. ೭೪)

**ಕೆಯ್ವೀಸು** – ಕೈವೀಸು, ಯುದ್ಧಾರಂಭಕ್ಕೆ ಕೈ ಬೀಸಿ ಸನ್ನೆ ಮಾಡು, ಹಸ್ತಸೂಚನೆ (ಉಭಯಬಲದರಸುಗಳ್.. .. ಕೆಯ್ವೀಸೆ ಲಯಕ್ಷುಭಿತ ಜಲನಿಧಿನಿನಾದಮಂ ಅಭಿನಯಿಸಿದುದು ಒಗೆದು ನೆಗೆದ ಸಮರ ಆರಾವಂ: **ಪಂಪಭಾ,** ೧೧. ೩೪)

**ಕೆಯ್ವೊಲ** – ಗದ್ದೆ (ಬೆಳೆದೆಱಗಿರ್ದ ಕೆಯ್ವೊಲನೆ ಕೆಯ್ವೊಲನಂ ಬಳಸಿರ್ದ ಪೂತ ಪೂಗೊಳಗಳೆ ಪೂತ ಪೂಗೊಳಗಳಂ ಬಳಸಿರ್ದ ವಿಚಿತ್ರನಂದನಾವಳಿಗಳೆ ನಂದನಾವಳಿಗಳಂ ಬಳಸಿರ್ದ ಮದಾಳಿಸಂಕುಲಂಗಳೆ ವಿಷಯಾಂಗನಾಲುಳಿತ ಕುಂತಳದಂತೆವೊಲ್ ಒಪ್ಪಿ ತೋಱುಗುಂ: **ಪಂಪಭಾ,** ೧. ೫೩)

**ಕೆಯ್ಸಾರ್** – ಕೈಸಾರ್, ಈಡೇರು (ರಥದಿಂ ಧಾತ್ರಿಗೆ ಪಾಯ್ದು ಕೊಂಡು ಗದೆಯಂ ಕೆಯ್ಸಾರ್ದುದು ಅಸ್ಮತ್ ಮನೋರಥಂ ಇಂದು ಎಂದು ಕಡಂಗಿ: **ಪಂಪಭಾ,** ೧೧. ೬೬)

**ಕೆಯ್ಸೆಱೆ** – ಸೆರೆಯಾಳು (ತಂದಿತ್ತು ಕೆಯ್ಸೆಱೆಯಂ ಕೊಟ್ಟಳವಟ್ಟು ಸಾರಧನಮಂ ಮೂವಿಟ್ಟಿಗಂ ಪೂಣ್ದು ಕಾಲ್ಗೆ ಎಱಗಿತ್ತು ಅಂತು ಅರಿಗಂಗೆ ಬೆರ್ಚಿ ಭಯದಿಂ ಗ್ರಾಮಂ ಕುಳಂ ರಾಜಕಂ: **ಪಂಪಭಾ,** ೬. ೩೯೦)

**ಕೆಯ್ಸೆಱೆಗೊಳ್** – ಸೆರೆಹಿಡಿ, ಬಂಧಿಸು (ತೆಱಪುವಡೆದು ಅಂಗಜಂ ಕೆಯ್ಸೆಱೆಗೊಳೆ ನೋಟಕರ ಮನಮನಾಗಳ್ ಕೊಳದಿಂ ಪೊಱಮಡೆ ಜಿಗಿಲ್ತು ಪತ್ತಿದ ಕುಱುವಡಿಗಳೆ ಮೆಱೆದುದು ಅವರ ನಾಣ್ಗಳ ತೆಱಪಂ: **ಪಂಪಭಾ,** ೫, ೬೭)

**ಕೆರಂಕು** – ಕಜ್ಜಿ, ತುರಿ (ಸಿಂಬುೞು ಕೀವು ಕೆರಂಕು ಅಸೃಗಂಬು ಮಲಂ ಮೂತ್ರಂ ಆ ಪುರೀಷಂ ಜೀವಂ ಬೆಂಬಿಡದೀ ಪಂದೊವಲ ಪಸುಂಬೆಯೊಳ್ ಈ ಒಡಲೊಳಾವ ಸುಖಮಿರ್ದಪುದೋ: **ಅಜಿತಪು,** ೬. ೫೪)

**ಕೆರಂಟು** – ಉಗುರಿನಿಂದ ಗೀಚು (ಕೆರಂಟು–ನಖ ಖನನೇ: **ಶಬ್ದಮದ, ಧಾ** ೨೪೨)

**ಕೆರಕು** – ಕಜ್ಜಿ, ತುರಿ (ಕೆರಕುಂ ತುಱೆಯುಂ ತೊನ್ನುಂ ತೋಱೆ .. .. ಅರ್ಚಿಪರ್ ಪುತ್ತುಗಳಂ: **ಸಮಯಪ,** ೯. ೭೬);

**ಕೆರಸಿ** – ಚೌಕಾಕಾರದ ಬಿದಿರ ಕುಕ್ಕೆ, ಮೊರ; ವದಂತಿ ಹಬ್ಬಿಸುವವನು (ಕೆಲಬರಿಂ ಬರ್ಕುಂ ಕೆರೆಯ ಬಾಯಂ ಮುಚ್ಚಲ್ ಕೆರಸಿಯ ಬಾಯಂ ತಾಂ ಮುಚ್ಚಲಾರ್ಗುಮೇಂ ಬಂದಪುದೇ: **ನೇಮಿನಾಪು,** ೫. ೪೩)

**ಕೆರ್ಚು** – ಕೆಚ್ಚು (ಭವ ಭವದೊಳ್ ಪೆರ್ಚಿದ ಕೆರ್ಚುವಿರ್ದ ಮಿಥ್ಯಾತ್ವದವರ್ಗೆ ಜಿನಧರ್ಮಕಥಾಶ್ರವಣಂ ಪೈತ್ತಿಕಮಾಗಿರ್ದವರ್ಗೆ ಪಾಲ್ ಕೈಪೆಯಪ್ಪವೊಲ್ ಕೈಪೆವಲಂ: **ಅಜಿತಪು,** ೨. ೯೨)

**ಕೆರ್ಚುವೀಟ್** – ದಡ್ಡುಗಟ್ಟು (ಭವಭವದೊಳ್ ಕೆರ್ಚುವಿರ್ದ ಮಿಥ್ಯಾತ್ವದವರ್ಗೆ ಜಿನಧರ್ಮಕಥಾಶ್ರವಣಂ .. .. ಕೈಪೆವಲಂ: **ಅಜಿತಪು,** ೨. ೯೨)

**ಕರ್ಚೇಱು** – ಗಟ್ಟಿಯಾಗು (ಕೆರ್ಚೇಱಿದ ವೈರಾಗ್ಯದ ಪೆರ್ಚಿಂ: **ಪಂಪರಾ,** ೮. ೩೫)

**ಕೆರ್ಪು** – ಪಾದರಕ್ಷೆ (ಸೊಸೆವಿರ್ಕಳ್ಗೆ ಪಚ್ಚುಗೊಟ್ಟೊಡೆ ಅವರುಂ ತಂತಮ್ಮ ಕೆರ್ಪುಗಳೊಳ್ ತಗುಳ್ಚಿದರ್: **ವಡ್ಡಾರಾ,** ಪು ೨೫, ೨೮)

**ಕೆಲ** – ಪಕ್ಕ (ಅಂಬುರುಹಮಿತ್ರ ಬಿಂಬಾಡಂಬರಮಂ ಮಿಕ್ಕು ಚಕ್ರಮಿರೆ ಕೆಲದೊಳ್ ಪೀತಾಂಬರಂ ಈಕ್ಷಿಸಿದಂ ನೀಲಾಂಬರನ ಮುಖಾರವಿಂದಮಂ ಮುದದಿಂದಂ: **ಶಾಂತೀಶ್ವಪು,** ೮. ೧೧೫); ಪಕ್ಕದಲ್ಲಿರುವವನು (ಮನದೊಳ್ ತ್ರೈಭುವನಮಂ ಆಳ್ದನಿತುವರಂ ತನಗೆ ಸಂತಸಂ ಪೆರ್ಚಿಯುಂ ಅಂದು ಇನಿಸು ಅಂಧನೃಪಂ ತನ್ನಯ ಜನದೊಳ್ ಕೆಲನಱೆಯೆ ಕೃತಕಶೋಕಂಗೆಯ್ದಂ: **ಪಂಪಭಾ,** ೩. ೮); ಪ್ರದೇಶ, ಸ್ಥಳ (ಇಲಿಯ ಬಿಲದ್ವಾರಂಗಳ ಕೆಲದೊಳ್ ಕೆಂಪೆಸೆದು ಮಿಸುಪ ಕನಕದ ರಜಮಂ ಲಲಿತಾಂಗಿ ಕಂಡು: **ಪಂಚತಂತ್ರ,** ೨೨೧); ಕೆಲವು (ಸಂಧಿಗಳುಂ ಕೆಲವೆಡೆಯೊಳ್ ಬಂದು: **ಕವಿರಾಮಾ,** ೧. ೯೮)

**ಕೆಲನ್** – ಪಕ್ಕಕ್ಕೆ (ಕೆಲನಂ ನೋಂತೆ ನೀಱರಂ ನೋಡುವುದುಂ ಮೊಲೆಗೆಲನಂ ತೋಱುವುದುಂ ಕುಲಟೆಯರ್ಗಿವೆ ಮೊದಲ ವಿದ್ಯೆ: **ಸಮಯಪ,** ೫. ೫೨)

**ಕೆಲಂಬರ್** – ಸ್ವಲ್ಪ ಜನ (ಜಗಮಂ ಬಸಿಱೊಳಗಿಡುವಂ ನಗಧರನೆಂಬರ್ ಕೆಲಂಬರ್: **ಸಮಯಪ,** ೧೦. ೧೦. ೪೫)

**ಕೆಲಗೆಲ** – ಅಕ್ಕಪಕ್ಕ (ಸುರರಾಜಂ ತನ್ನ ಗಂದೇಭದ ಕೆಲಗೆಲದೊಳ್ ಸಿಂಧುರಾರೂಢರೆತ್ತಂ ಬರೆ: **ಆದಿಪು,** ೯. ೯)

**ಕೆಲಜಂಕೆ** – ಮಗ್ಗುಲನ್ನು ಹೆದರಿಸುವುದು, ಕಾಳಗದ ಒಂದು ವರಸೆ (ಪಸುಗೆ ನೆಲಂ ಜಲಂ ಹಯದೊಡಂಬಡು ವಂಚನೆ ಕೇಣಂ ಆಸನಂ ಕೊಸೆ ದೆಸೆ ದಿಟ್ಟಿ ಮುಟ್ಟಿ ಕೆಲಜಂಕೆ ನಿವರ್ತನೆ ಕಾಣ್ಕೆ ಪರ್ವಿದ ಏರ್ವೆಸನದೊಳಾದ ಬಲ್ಮೆಯೊಳ್ ಒಡಂಬಡೆ ತಳ್ತಿಱೆವಲ್ಲಿ ಮಿಂಚಿನೊಳ್ ಮುಸುಕಿದ ಮಾಟ್ಕೆಯಾಯ್ತು ಸಮರಾಂಗಣಂ ಉಳ್ಕುವ ಬಾಳ್ಗಳ ಉಳ್ಕದಿಂ: **ಪಂಪಭಾ,** ೧೦. ೭೮)

**ಕೆಲಪು** – ಗುಟುರು, ಕೆಲೆಯುವಿಕೆ (ಕ್ರೂರ ಶೂರ ಸೌರಭೇಯಂಗಳೊಂದು ದಿವಸಂ ಒಂದೊಂದಂ ಕೆಲಪಂ ಕೇಳ್ದು ಕೆಳರ್ದು: **ನೇಮಿನಾಪು,** ೪. ೧೨೩ ವ)

**ಕೆಲವಾಱು** – ನೆರೆಹೊರೆಯವರ ಮೋಸ (ಶೀತೋಷ್ಣದಿಂ ಕೆಲವಾಱೆನಿಂ ಕುಜನ ನೆರವಿಂ ಸ್ತ್ರೀಯಿಂದ: **ಧರ್ಮಾಮೃ:** ೭. ೫೬)

**ಕೆಲೆ** – ಗುಟುರು ಹಾಕು (ಘನನಿನದಕ್ಕನುರೂಪಂ ಇದೆನೆ ಸಂಜೀವಕಂ ಅಳುರ್ಕೆಯಿಂ ಕೆಲೆಯೆ ಮಹಾಧ್ವನಿಯಿಂ: **ಪಂಚತಂತ್ರ,** ೮೦); ಉತ್ಸಾಹದಿಂದ ಕೂಗು (ಕೆಲ್– ಉತ್ಸಾಹಧ್ವನೌ: **ಶಬ್ದಮದ,** ಧಾ ೬೨೬)

**ಕೆಲ್ಲಂಬು** – ಈಟಿಯಂತಹ ಬಾಣ (ಒಂದೆ ಕೆಲ್ಲಂಬಿನಿಂ ಮೆಲ್ಲಗೆ ಪಾರ್ದು ಆರ್ದು ಎಚ್ಚಂ ಏಸಿಂ ತಲೆ ಪಱಿದು ಸಿಡಿಲ್ದತ್ತ ಬೀೞ್ವಿನ್ನಮಾಗಳ್: **ಪಂಪಭಾ,** ೧೨. ೧೮)

**ಕೆಲ್ಲಯಿಸು** – ಕೆಲ್ಲೈಸು, ಬೆದರು, ಗಾಬರಿಗೊಳ್ಳು (ಕೆಲ್ಲಯಿಸಿ ಕೆಲಕೆ ತೊಲಗುತುಂ ಅಲ್ಲಲ್ಲಿಗೆ ನಿಂದು ತತ್ಕುಮಾರಕನಂ ನೋೞ್ಪಲ್ಲಿ ಮನೋಜನ ದೀವದ ಪುಲ್ಲೆಗಳೆನಿಸಿದವು ಪೆಂಡಿರ ತಂಡಂ: **ಸುಕುಮಾಚ,** ೧೧. ೨೧)

**ಕೆಸರ್ಮಸಗು** – ಸೇರಿಸು, ಬಗ್ಗಡಗೊಳ್ಳು (ಪರಿಮಳದ ಕೆಸರ್ಮಸಗಿದ ವನಸ್ಥಳದೊಳ್ ಬಿನದದಿಂ ನಡೆವಲ್ಲಿ: **ಗಿರಿಜಾಕ,** ೨. ೭೧ ವ)

**ಕೆಸವು** – ಒಂದು ಸಸ್ಯ (ಸುರುಚಿರ ಚಕ್ಕವತಂ ಚಿರಿಕೆ ರಾಜಗಿರಿ ಕೆಸವು ಕೀರೆ ದೊಗ್ಗಳೆಯೆಲೆ ವಾದುರವಂ ಬಡಿಸಿದರ್: **ಧರ್ಮಪ,** ೨. ೫೮)

**ಕೆಸಱ್** – ಕೆಸರು, ರಾಡಿ (ಧರೆಗಳ್ ವಿಶಾಲಮಾದುವು ಕೆಸಱಿಂ ಪಿಂಗಿತ್ತು ಧರಣಿ: **ಕವಿರಾಮಾ,** ೨. ೬೧)

**ಕೆಳಗಿವಿಗೇಳ್** – ಅಲಕ್ಷ್ಯಮಾಡು (ಎಂಬ ಅತಿಪ್ರಿಯಸಖನ ಮಾತಂ ಕೆಳಗಿವಿಗೇಳುತ್ತುಂ: **ಲೀಲಾವತಿ,** ೧೪. ೫೧ ವ)

**ಕೆಳರ್** – ಬಾಯಿಬಿಡು (ಪರಿವ ಗಾಲಿಯ ಕೋಳ್ಗೆ ಕೆಳರ್ತು ಬೆಟ್ಟುಗಳ್ ಕೂಡೆ ಸಡಿಲ್ವಿನಂ ಪೊಡೆವ ಬೀರರ ಜಂಕೆಗೆ ಗೊಂಟಿನಾನೆಗಳ್ ಕೋಡುವಿನಂ ಕಡಂಗಿ ಪರಿತಂದುವು ತೋರ್ಕೆಯ ತೇರ್ಗಳೋಳಿಯಿಂ: **ಕಬ್ಬಿಗಕಾ,** ೧೬೦); ವ್ಯಾಪಿಸು (ಸ್ಫುರತ್ ಯದ್ಯತ್ ಧೂಳಿಯಂ ಮೇಣ್ ಕೆಳರುತ ಉಱು ಉರು ಕಲಂಕುತ್ತ: **ಉದ್ಭಟಕಾ,** ೯. ೧೩೨); ಆಕಳಿಸು (ಕೆಳರ್–ವಿಜೃಂಭಣೇ: **ಶಬ್ದಮದ,** ಧಾ ೫೬೬); ಕೋಪಿಸಿಕೋ (ಕೆಳರ್ದು ಅಂದುಗ್ರರಣಾಗ್ರಹ ಪ್ರಣಯದಿಂದಾಗಳ್ ಕುರುಕ್ಷೇತ್ರಮಂ ಕಳವೇಱ್ದು ಇರ್ವರುಂ ಐಂದ್ರವಾರುಣದೆ ವಾಯವ್ಯಾದಿ ದಿವ್ಯಾಸ್ತ್ರಸಂಕುಳದಿಂದ ಒರ್ವರಂ ಒರ್ವರ್ ಎಚ್ಚು: **ಪಂಪಭಾ,** ೧. ೭೯)

**ಕೆಳರ್ಚು** – ಕೆರಳಿಸು, ರೇಗಿಸು (ಮನದ ಪಿಶಾಚಕ್ಕೆ ವನಚರನಾಮರೂಪಮಂ ತೋಱೆ ವಿರಹವಿಕಾರಮಂ ಕೆಳರ್ಛಿ: **ಅನಂತಪು,** ೧೧. ೩೭ ವ)

**ಕೆಳವಾಡಿ** – ಒಂದು ಬಗೆಯ ಕಬ್ಬು (ಪೂಲ್ಲಶರಂ ಕೆಳವಾಡಿಯ ಬಿಲ್ಲಂತಿರ್ದೆಸಗದರಲ ಸರಲಂ ಸುರಿದಂ: **ಪಂಪರಾ,** ೮. ೧೪)

**ಕೆಳಸಾರ್** – ಕೆಳಕ್ಕೆ ಹೋಗು (ಕ್ರಿಯಾಸಮಾಸಕ್ಕೆ: ಕೆಳಗು ಸಾರ್ದಂ–ಕೆಳಸಾರ್ದಂ: **ಶಬ್ದಮದ,** ೧೮೮ ಪ್ರ ೪)

**ಕೆಳಿ** – ಒಂದು ಸುಗಂಧದ್ರವ್ಯ (ಮಣಿಮಯಭಾಜನಂಗಳೊಳ್ ತೆಕ್ಕನೆ ತೀವಿದ ಪಂಚರತ್ನದ ಕೆಳಿಯ ಕತ್ತುರಿಯ ಕೊೞತದ ಕಪ್ಪುರದ ಪಳಿಕಿನ ಬಾಯಿನಂಗಳಂ: **ಆದಿಪು,** ೪. ೩೪ ವ)

**ಕೆಳೆ** – ಸ್ನೇಹ, ಗೆಳೆತನ (ಕೆಳೆಯುಂ ಗುಱೆಯುಂ ಗೊಟ್ಟಿಯುಂ ಅಳವಿಗೆ ಪಿರಿದಾಗೆ ತನಗೆ ದುರ್ಯೋಧನನೊಳ್ ಮುಳಿಸುಂ ನೋವುಂ ಕಲುಷಮುಂ ಅಳುಂಬಂ ಎನೆ ತನಗೆ ಅರಾತಿಕಾಳಾನಳನೊಳ್; **ಪಂಪಭಾ,** ೨. ೫೮)

**ಕೆಳೆಗೊಳ್** – ಸ್ನೇಹಮಾಡು, ಜೊತೆಗೂಡು (ಪಣ್ಯಾಂಗನಾನೀಕದೊಳ್ ಕೆಳೆಗೊಂಡಾಡುತುಂ .. .. ಸುಟಿವೃತ್ತಿರ್ಪವರ್: **ಸಮಯಪ,** ೬. ೩೯)

**ಕೆಳೆತನ** – ಗೆಳೆತನ, ಸ್ನೇಹ (ಮುನ್ನಿನ ಕೆಳೆತನಂ ಕಾರಣಮಾಗೆ ಲಕ್ಷ್ಮಣನೊಳ್ ಬಂದು ಕೂಡಿದಂ: **ಪಂಪರಾ,** ೧೬. ೩೯ ವ)

**ಕೆಳೆಯ** – ಸ್ನೇಹಿತ, ಜೊತೆಗಾರ (ತುರಂಗತ್ವಂ ಎನಗೆ ಮೂಡಿದೊಡಂ ಎನ್ನ ಕೆಳೆಯನೊಡಗೂಡಿ ಕಾಲಮಂ ಕಳೆಪುವಂತು .. .. ನೋಡಿ: **ಕಾದಂಸಂ,** ೭. ೪೭ ವ)

**ಕೇಱು** – ಮುಚ್ಚು (ಮನೆಮನೆದಪ್ಪದೋಡಿ ಪಡಿಯಂ ಕೇಱುತಿರ್ಪ ಗೃಹಂಗಳಗ್ರಮಂ ತನತನಗೇಱುತಿರ್ಪ .. .. ಬೀದಿಯೊಳಾದುದದ್ಭುತಂ: **ಆಚವರ್ಧ,** ೩. ೫)

**ಕೇಱಿ** – ತಟಾಕ, ಕಟ್ಟೆ ಹಾಕಿ ನೀರು ನಿಲ್ಲಿಸಿದ ಸ್ಥಳ (ನೀರಿಲ್ಲದ ಕೇಱಿಯ ನಡುವುದುಂ: **ವಡ್ಡಾರಾ,** ಪು. ೮೫, ಸಾ. ೨೬)

**ಕೇಱಿಲ್ದ** – ಬಡವಾದವನು, ಅಗಲಿದವನು (ಎರಡರ್ಥಕ್ಕೆ: ಕೇಱಿಲ್ದನೆಂದು ಬಡವಾದನುಂ ಅಗಲ್ದನುಂ ಅಕ್ಕುಂ: **ಶಬ್ದಮದ,** ೩೩ ವೃತ್ತಿ)

**ಕೇಱಿಗಡೆ** – ತಳಭಾಗ (ಸೆಡೆವಂ ನಾಗೇಂದ್ರನತ್ತಂ ಕೇಱಿಗಡೆ ಪೊಡೆವಳ್ ಧಾತ್ರಿ ಮೇಲೆತ್ತಲತ್ತಲ್: **ಜಗನ್ನಾವಿ,** ೬. ೩೦)

**ಕೇಱಿಗಿವಿಗೆಯ್** – ಅಲಕ್ಷಿಸು, ಅನಾದರ ತೋರು (ಕೌಳಾಧೀಶರಂ ಸಾಧಿಸಿ ಕಿಂಪುರುಷರಂ ಕಾಪುರುಷರ್ ಮಾಡಿ ಬಾಹ್ಲಿಕರಂ ಅನನೀಕರ್ ಎನಿಸಿ ಮಾಳವಿಗರಂ ಕೇಱಿಗಿವಿಗೆಯ್ಯಲ್ ಈಯದೆ: **ಪಂಪಭಾ,** ೬. ೨೯ ವ)

**ಕೇಱಿಗಿವಿಗೇಳ್** – ಕೇಳಿದರೂ ಕೇಳದಂತಿರು (ಅತಿಪ್ರಿಯಸಖನ ಮಾತಂ ಕೇಱಿಗಿವಿಗೇಳುತ್ತಂ: **ಲೀಲಾವತಿ,** ೧೪. ೫೧ ವ)

**ಕೇಱಿವ** – ಮುದುಕ (ಒಂದರ್ಥಕ್ಕೆ: ಕೇಱಿವನೆಂದು ಮುದುಕಂ: **ಶಬ್ದಮದ,** ೩೩ ವೃತ್ತಿ)

**ಕೇ** – ಮಲಗು, ರತಿಕ್ರೀಡೆ ಮಾಡು (ಕೇ–ಶಯನೇ ನಿಧುವನೇ ಚ: **ಶಬ್ದಮದ, ಧಾ** ೩೧)

**ಕೇಕರ** – ಓರೆಗಣ್ಣು, ಕುಡಿನೋಟ (ನಮೇರು ಮಹೀರುಹಕ್ಕೆ ಬಂದೆಱಗುವ ಚಂಚರೀಕದವೋಲ್ ಆಕೆಯ ಕೇಕರಂ ಅನ್ಯರಾಜಕಕ್ಕೆಱಗದೆ ರಾಘವಂಗೆಱಗೆ: **ಪಂಪರಾ,** ೫. ೭೧)

**ಕೇಕರಿಸು** – ಓರೆಗಣ್ಣಿನಿಂದ ನೋಡು (ಗ್ರಾಮಕೋಣಂಗಳೊಳಮಯವಮಂ ಕಂಡು ಕಾಡಾನೆಯುಂ ಕೇಕರಿಸುತ್ತುಂ: **ನೇಮಿನಾಪು,** ೩. ೬೩)

**ಕೇಕಾರವ –** ನವಿಲು ಕೇಗುವ ಧ್ವನಿ (ಧವಳಾಪಾಂಗಂ ಕೇಕಾರವ ಮುಖರಂ.. .. ನವಿಲಾಟಂ ಸೊಗಯಿಸುಗುಂ: **ಕವಿರಾಮಾ,** ೩. ೭)

**ಕೇಕಿ –** ನವಿಲು (ಘನಪಥಮಂ ಪಳಂಚಲೆವ ಸೌಧಚಯಂಗಳಿಂ ಆಡುತಿರ್ಪ ಕೇತನತತಿಯಿಂ ಕರೀಂದ್ರ ಗಳಗರ್ಜನೆಯಿಂ ಪಟಹಪ್ರಣಾದಮಂ ಘನರವಮೆಂದೆ ನರ್ತಿಸುವ ಕೇಕಿಗಳಿಂ: **ಪಂಪಭಾ,** ೪. ೫)

**ಕೇಕಿತಾಂಡವ –** ನವಿಲ ನೃತ್ಯ (ಕುವಲಯ ಪಾಂಡುರಂ ಕನಕಪಂಕಜಷಂಡವಿರಾಜಿ ಕೇಕಿ ತಾಂಡವರಮಣೀಯ ಕಲ್ಪಲತಿಕಾವನಂ: **ಆದಿಪು,** ೧೩. ೭೦)

**ಕೇಕಿವಿಳಾಸ –** ಕೇಕಿತಾಂಡವ (ಕೇಕಿವಿಳಾಸದ ಅರ್ಭಕೋದರೆಯ ವಿಲೂನನಾಸೆಯ ಸುರೂಪೆಯ ಪಾಣ್ಬೆಯ .. .. ಭೂರುಹಮೊಪ್ಪುಗುಂ: **ರಾಜಶೇವಿ,** ೫. ೫೭)

**ಕೇಗು –** ನವಿಲ ಕೂಗು (ಉತ್ಕಂಠಂಗಳಾದ ಸೋಗೆಗಳ ಕೇಗುಗಳ್ಗೆ ಅಗಿದು ಅವರ ಕೊರಲಂ ಬಿಗಿದಂತೆ: **ಕಾದಂಬ,** ೭. ೧೩ ವ)

**ಕೇಡಾಕುಳಿ –** ನೀರಾಟವಾಡಲು ಮಾಡಿದ ಗುಂಡಿ (ಎಲ್ಲಮಂ ಕೊಂದು ಆ ನೆತ್ತರಿಂ ಕೆಡಾಕುಳಿಯಂ ಮಾಡಿ ಅಲ್ಲಿ ನೀಡುವೋಲಾಡೆ: **ಪುಣ್ಯಾಸ್ರ:** ೯. ೩೫ ವ)

**ಕೇಡಾಳಿ –** ಕೇಡಿಗ (ಆ ಬಾಲಕರ್ .. .. ಮಾತಾಪಿತೃಗಳ ಮಾತಂ ಕೈಗೊಳ್ಳದೆ ಸರ್ವಸ್ವಮಂ ಕೊಂಡು ಕೇಡಾಳಿಗಳಾಗೆ: **ಸುಕುಮಾಚ,** ೨. ೫ ವ)

**ಕೇಡು –** ಅಪಾಯ (ಕೇಡಡಸಿದಂದು ಬಗೆಯಂ ಮಾಡದು ಕೂಡಿದುಮಟೆದು ವಿಪರೀತಮುಮಂ: **ಕವಿರಾಮಾ,** ೧. ೭೨); ವಿನಾಶ (ನಿಮ್ಮಡಿ ನಿಮಗೆ ಭ್ರಾಂತಿಜ್ಞಾನಮಿನ್ನುಂ ಪೋದುದಿಲ್ಲ, ಶರೀರಕ್ಕಲ್ಲದೆ ಶರೀರಿಗೆಲ್ಲಿಯುಂ ಕೇಡಿಲ್ಲ: **ಪಂಚತಂತ್ರ,** ೨೧೦ ವ); ಚೆಲ್ಲುವಿಕೆ (ನೆತ್ತಮನಾಡಿ ಭಾನುಮತಿ ಸೋಲ್ತೊಡೆ ಸೋಲಮನೀವುದೆಂದು ಕಾಡುತ್ತಿರೆ ಲಂಬಣಂ ಪಱಿಯೆ ಮುತ್ತಿನ ಕೇಡನೆ ನೋಡಿ ನೋಡಿ ಬಳ್ಕುತ್ತಿರೆ ಏವಮಿಲ್ಲದೆ ಇವಂ ಆಯ್ದುವೊ ತಪ್ಪದೆ ಪೇಳಿಂ ಎಂಬ ಭೂಪೋತ್ತಮನಂ ಬಿಸುಟ್ಟು ಇರದೆ ನಿಮ್ಮೊಳೆ ಪೊಕ್ಕೊಡೆ ಬೇಡನಲ್ಲನೇ: **ಪಂಪಭಾ,** ೯. ೬೯)

**ಕೇಡೆಯ್ದಿಸು –** ಕೆಡನ್ನುಂಟುಮಾಡು (ಬೆಳ್ಳಾಳಂ ಪೋಲನೆ ಮಂತ್ರವೈದ್ಯದಳಿಪಿಂ ಕೇಡೆಯ್ದಿಪಂ ಧರ್ಮಮಂ: **ಧರ್ಮಾಮೃ,** ೪. ೨೮)

**ಕೇಣ –** ರೋಷ (ಪುಸಿ ನಸುವಂಚನೆ ನೋರ್ಪು ಅಸಿದು ಅಗಲಿತು ತಕ್ಕು ದಕ್ಕು ಪಗೆ ಕೆಯ್ಬುಗೆ ಕೆಯ್ ಕುಸುರಿ ನುಸುಳೆಂಬ ಕೇಣದ ಕುಸುರಿಯಂ ಅಱಿದು ಇಱಿದು ಮೆಱೆದು ಉಱಿದೆ ಅರೆಬರ್: **ಪಂಪಭಾ,** ೧೦. ೮೧); ಆಲೋಚನೆ (ಅಱಿಯಂ ಕೇಣದಿಂ ಏನುಮಂ ಮುನಿಕುಮಾರಂ: **ಕಾದಂಬ,** ೫. ೧೨೩)

**ಕೇಣಂಬಡೆ –** ಮತ್ಸರಿಸು, ಸ್ಪರ್ಧಿಸು (ಅಭವಂ .. .. ಕೇಣಮಬಡೆದೊತ್ತಿ ಮೆಟ್ಟಿದಂ ಗಾಂಡಿವಿಯಂ: **ಶಬರಶಂ,** ೪. ೮೭)

**ಕೇಣಕಾಱ –** ಜಿಪುಣ (ಕೇಣಕಾಱನನದೇಕೆಗಕಾವ್ಯೆ ನಾಣಪುತ್ತನಗೆಯಂ ನೀಂ ಬಗೆಯೈ: **ಕಾವ್ಯಾವಲೋ,** ೪೮೪)

**ಕೇಣಿ –** ಕೊಳ್ಳುವುದು ಮಾರುವುದು (ಪರಿವೃತ ರೇಫಲೋಪಕ್ಕೆ: ಕ್ರೇಣಿ–ಕೇಣಿ: **ಶಬ್ದಮದ,** ೨೭೫ ಪ್ರ) ; [ಗೇಣಿ] ಗುತ್ತಿಗೆ (ಇಂತು ಶುನಿಯಂತಿರೆ ನಿಲ್ವರೆ ಸೂಳೆ ಕೇಣಿಯೆ: **ಲೀಲಾವತಿ,** ೨. ೧೨೧); ಸಾಲು (ಕುದುರೆಯ ಬಿಲ್ಲ ಬಲ್ಲಣಿಯ ಕೇಣಿಯನಲ್ಲಿ ಕೆಲರ್ ನಿಶಾಟರುಣ್ಮಿದ ನೆತ್ತರೊಳ್ ಮಿದಿದು: **ಪಂಪಭಾ,** ೧೨. ೮)

**ಕೇಣಿಕ –** ಗಿರವಿ, ನ್ಯಾಸ (ಕೇಣಿಕಮಿಕ್ಕುವ ಪರದಂ ಒತ್ತೆಯಂ ಬಿಡಿಸುವಂತೆ ನಡೆವ ಬಟ್ಟೆಯೊಳ್ ಪೊಂಗೆಡಿಸಿ ಅರಸುವನಂತೆ: **ಧರ್ಮಾಮೃ,** ೧೪. ೭೫)

**ಕೇಣಿಕಾವಾಸ –** ಡೇರೆಯ ವಾಸ (ಕಾರಭವನಂಗಳೊಳಂ ಎಳಲತೆಯ ಕೇಣಿಕಾವಾಸಂಗಳೊಳಮಿಂಬಱೆದು ಬೀಡಂ ಬಿಟ್ಟರ್: **ಆದಿಪು,** ೪. ೯೨ ವ)

**ಕೇಣಿಗೊಳ್ –** ಸಾಲುಗಟ್ಟು (ಸಕಳಭುವನಂ ಒಂದೊಂದಱೊಳ್ ಕೇಣಿಗೊಂಡು ಉಚ್ಚಳಿಸಲ್ ಸೂಸಲ್ ಪಳಂಚಲ್ ಪಿಡಿದು ಒಡೆದು ಅಳಱಲ್ ಪಾಱೆ ಜೀಱೇಟಿಲ್ ಅಂದು ಉಮ್ಮಳಿಸುತ್ತೆ ಅತ್ತಿರ್ದೊಡೆ ಆವಂ ಹರಿಗನೊಳ್ ಇದಿರ ಮೀಱೆ ಮಾಱಾಂಪ ಗಂಡಂ: **ಪಂಪಭಾ,** ೧೦. ೬೫)

**ಕೇತ –** ಒಂದು ಕ್ಷುದ್ರ ದೇವತೆ (ವರಮೀಗುಮೆ ಮೈಲಾರಂ ಕೇತಂ ಕಾಟಂ ಮಾರಿಗೆ ಮಸಣಿಗೆಯೆನಿಪ್ಪ ಕೊಟಿದೆಯ್ವಂಗಳ್: **ಸಮಯಪ,** ೯. ೧೨೭)

**ಕೇತಕ –** ಕೇದಗೆ ಹೂ (ಕೇತಕಾಹ್ವಯಂ ಕೇದಗೆ: **ಅಭಿಧಾವ,** ೧. ೮. ೩೪)

**ಕೇತನ –** ಧ್ವಜ (ದಿವಮಂ ಏಳಿಪಂತು ಮಿಳಿರ್ವ ವಿವಿಧಕೇತನಂಗಳಿಂ ಸದಾನಿಕೇತನಂಗಳಿಂ: **ಪಂಪಭಾ,** ೧. ೫೮)

**ಕೇತು –** ನವಗ್ರಹಗಳಲ್ಲಿ ಒಂದು (ಈತನೆ ನಮ್ಮ ಕುಲಕ್ಕಂ ಕೇತು ದಲ್ ಆನಱಿವೆಂ ಅಲ್ಲದೆ ಏಕಿಂತು ಉತ್ಪಾತಂ ತೋರ್ಪುವು: **ಪಂಪಭಾ,** ೧. ೧೩೩); ರಕ್ಕಸ ಬಾಳೆ, ಕತ್ತಾಳೆ (ವರುಣನ ಕುಂತದುತ್ಕರದ ಕೇತುವ .. .. ಭೂರುಹಂ ಒಪ್ಪುಗುಂ: **ರಾಜಶೇವಿ,** ೫. ೫೭); ಬಾವುಟ (ತಟ್ಟು ಚುಂಬಿಸುತುಂ ವ್ಯೋಮಕೇತುಚಯದಿಂ ನೀಲಾಭ್ರಮಂ: **ಲೀಲಾವತಿ,** ೭. ೬)

**ಕೇತುದಂಡ –** ಧ್ವಜಸ್ತಂಭ (ಆಳ್ದನ ಕಜ್ಜಮಂ ಒಕ್ಕು ಸತ್ತರಂ ನಗುವವೊಲಿರ್ದಂ ಅಂಗಪತಿ ನೆಮ್ಮೀ ನಿಜೋನ್ನತ ಕೇತುದಂಡಮಂ: **ಗದಾಯು,** ೫. ೧೦)

**ಕೇತುಪಟ –** ಬಾವುಟ, ಧ್ವಜ (ತದೀಯ ಸಿತಕೇತುಪಟಂ ಬರೆದಿಟ್ಟ ತಿಟ್ಟದ ಒಪ್ಪುವ ಪಟದಂತೆ ನಿಶ್ಚಳಿತಮಾದುದು ವೇಗಮರುತ್ಪ್ರಯೋಗದಿಂ: **ಶಾಂತಿಪು,** ೪. ೬೦)

**ಕೇತುಹಸ್ತ –** ಕೇತುದಂಡ (ಪುರಶ್ರೀ ಪುರುಹೂತ ಆಹೂತಿಗೆಯ್ವಂತಿರೆ ಸೊಗಯಿಸುಗುಂ ಕೇತುಹಸ್ತಂಗಳಿಂದಂ: **ಅಜಿತಪು,** ೨. ೨೧)

**ಕೇದಗೆ –** ಕೇತಕಿ (ಇಂಪಿಲ್ಲದ ಕೇದಗೆಯಂ ಕಂಪಿಲ್ಲದ ಪೂ ಸುಪುತ್ರನಿಲ್ಲದ ಭವನಂ .. .. ಏನೊಪ್ಪುಗುಮೇ: **ಅಜಿತಪು,** ೬. ೯೨)

**ಕೇದಾರ –** ಗದ್ದೆ (ಸರಸೋದ್ಯತ್ ಕಣಿಶಾವಳೀ ಘೃಣಿಮಯಂ ಕೇದಾರಜಾಲಂ ಲಸತ್ ಸರಸೀಜಾತಮಯಂ ಸರೋವರಚಯಂ: **ಶಾಂತೀಶ್ವಪು,** ೧೩. ೧೩೭); ಹೊಲ (ಕೇದಾರ ಭೂಮಿ ವಪ್ರಂ ಕ್ಷೇತ್ರಂ: **ಅಭಿಧಾವ,** ೧. ೧೧. ೬೭)

**ಕೇದಾರವನ –** ಬತ್ತದ ಗದ್ದೆ (ಪರಿಕಾಲ್ಗಳ ನೀರನುಣ್ಬ ಕೇದಾರವನಂ ಮನಂಗೊಳಿಸುತಿರ್ಪುದು: ಜಗನ್ನಾವಿ, ೨. ೪)

**ಕೇಯೂರ** – ಕಡಗ, ತೋಳುಬಂದಿ (ವಿಜಯಶ್ರೀನಿವಾಸ ಬಾಹುಬಾಹುಯುಗಳಕ್ಕೆ ಕೇಯೂರ ಹಾರ ಅಂಗದಕಟಕಾಳಂಕಾರಂ ಮಾಡಿ: **ಆದಿಪು,** ೭. ೧೦೬ ವ)

**ಕೇರ್** – ಗೋಡೆ (ನೋಟಕ್ಕೆ ಎರಡನೆಯ ನಾಕಲೋಕದ ವಿರಚನೆಯೆನೆ ಪಡೆವುದದಱ ರನ್ನದ ಕೇರ್ಗಳ್: ಅದಿಪು, ೬. ೩೭)

**ಕೇರಳಿ** – ಕೇರಳದ ಹೆಂಗಸು (ಕೇರಳೀಕೇಳೀಕಂದರ್ಪಂ: **ಪಂಪಭಾ,** ೧. ೧೪೮ ವ)

**ಕೇರಿ** – ಬೀದಿ (ಊರಿಲ್ಲ ಕೇರಿಯಿಲ್ಲ ಎಲ್ಲಿ ಚರಿಗೆವುಗುವಂ ಅಂತು ಕೆಮ್ಮನೇಕೆ ಎಮ್ಮಂ ತಾಂಗಿದಪಿರಿ ಎಂದೊಡೆ: **ವಡ್ಡಾರಾ,** ಪು ೯೦, ಸಾ ೨೯)

**ಕೇರೆ** – ಒಂದು ಜಾತಿಯ ಹಾವು (ನೀರಡಸಿದ ಕಾಸರಪತಿ ಕೇರೆಯಂ ಅಗದೊಸರೆಗೆತ್ತು ನೆಕ್ಕುವುದು: **ನೇಮಿನಾಪು,** ೩. ೪೫)

**ಕೇರ್ಗಟ್ಟು** – ಗೋಡೆಯನ್ನು ಕಟ್ಟು (ಕೆಂದಳಿರಿಂ ಕೇರ್ಗಟ್ಟಿದವೊಲ್ ಬಳಯಿಸಿ ಮುರಿದಪುದು ನೋಡೆ ಮುನಿಪುಂಗವರಂ: **ನೇಮಿನಾಪು,** ೨. ೭೦); ತಡಿಕೆ (ಸಂಪಗೆಯ ಮುಗುಳ ಕೇರ್ಗಟ್ಟಿನಂತಿರ್ದ ಮಣಿಭಿತ್ತಿಗಳುಂ: **ಚಂದ್ರಪ್ರಪು,** ೧೨. ೧೧ ವ)

**ಕೇಯೂರ** – ಭುಜಕೀರ್ತಿ (ಶ್ರೀಯಂ ಅಗಲುರದ ಮುತ್ತೆನೆ ಕೇಯೂರಂ ಬೀರ ಸಿರಿಯ ಕಣ್ಬೆಳಗೆನೆ .. .. ಜೀಯೆನಿಸಿದಂ ಅಮಳಮೂರ್ತಿ: **ನೇಮಿನಾಪು,** ೩. ೧)

**ಕೇಲ್** – ಮಣ್ಣಿನ ಹರವಿ (ಹರಿನೀಲದ ಕೇಲ್ಗಳಿಂ ಕುಂಕುಮವಾರಿಪೂರಮಪ್ಪ ಕನಕ ಕಟಾಹಲಟಹಂಗಳಿಂ .. .. ರಂಜಿಸುವ ಸುದರ್ಶನ ಸರೋವರಮನೆಯ್ದಿ ವಂದಾಗಳ್: **ಶಾಂತೀಶ್ವಪು,** ೧೦, ೧೫೨ ವ)

**ಕೇವಣ** – [ಕ್ಷೇಪಣ] ಕುಂದಣಗೆಲಸ (ಕೇವಣದೊಳ್ ತೊಡರ್ದ ಅಳಿನೀಲದ ಪರಲ್ ಎನೆ ಮೃಡರಿಪು ಮುದ್ರಿಕೆವೊಲಾಯ್ತು ಕನಕಾಂಬುರುಹಂ: **ಗದಾಯು,** ೬. ೪೩)

**ಕೇವಣಿಸು** – ಲೇಪಿಸು (ಕೇಸಡಿಗಳ ಪೆಂಪಿಂಗೆ ಕೆಂದಳಿರ ಕೆಂಪಂ ಕಢವಣಿಸಿದಂತೆ: **ಪುಣ್ಯಾಸ್ರ,** ೨. ೩೨ ವ) ಪೋಣಿಸು (ತೂಗಿ ಕೊಂಡು ಕೇವಣಿಸದೆ ವೆಜ್ಜಮಂ ಕಳೆದು ಕೋಯದೆ .. .. ಸದ್ಗುಣಮಣಿಯೆಂಬ ಭೂಷಣದಿಂದ ಆವಂ ಅಲಂಕೃತಂ ಆ ಮಹಾತ್ಮನಂ: **ಲೀಲಾವತಿ,** ೧. ೬೦)

**ಕೇವಲ** – ಸಾಧಾರಣ (ಅಚಾಮ್ಲುವರ್ಧನಂ ಪುಣ್ಯವರ್ಧನಂ ಕೇವಲಮೇ: **ಸುಕುಮಾಚ,** ೯. ೧೩)

**ಕೇವಲಜ್ಞಾನ** – [ಜೈನ] ಸರ್ವಜ್ಞತ್ವ (ಕೇವಲಜ್ಞಾನ ದೀಪಿಕೆಯೊಳ್ .. .. ಅಂತರ್ಧ್ವಾಂತವಿಚ್ಛಿತ್ತಿಗೆ ಉತ್ಸುಕನೆಂ: **ನೇಮಿನಾಪು,** ೧. ೧೧)

**ಕೇವಲದರ್ಶನಾವರಣೀಯ** – [ಜೈನ] ಕೇವಲದರ್ಶನಕ್ಕೆ ಆವರಣವನ್ನುಂಟು ಮಾಡುವ ಕರ್ಮ (ಕೇವಲದರ್ಶನಾವರಣೀಯಂನ ನಿದ್ರಾ ನಿದ್ರಾನಿದ್ರಾ ಪ್ರಚಲಾಪ್ರಚಲಾ ಸ್ತ್ಯಾನಗೃದ್ಧಿಭೇದದಿಂ ನವವಿಧ ಭೆದಮಪ್ಪ ದರ್ಶನಾಬವರಣಿಯಮುಮಂ: **ಸುಕುಮಾಚ,** ೩. ೩೯ ವ)

**ಕೇವಲಬುದ್ಧಿ** – ಕೇವಲಜ್ಞಾನ (ಆರುಹಂತರ ಕೇವಲಬುದ್ಧಿ ಸಿದ್ಧರ ಆತ್ಮಾಯತಬೋಧಸಿದ್ಧಿ .. .. ಪ್ರಕರ್ಷಮೆಮಗೀಗೆ ಸಮಸ್ತಮತಿಪ್ರಕಾಶಮಂ: **ನೇಮಿನಾಪು,** ೧. ೭)

**ಕೇವಲಬೋಧ** – ಕೇವಲಜ್ಞಾನ (ಕೇವಲಬೋಧಯಮೆಂಬೀ ವಿಭವಂಬೆತ್ತು ಸಕಲರೂಪ ವ್ಯಾಪಾರಾವಗಮ ಸಂಪದಂ ಸರ್ವಾವಧಿ ಪುಟ್ಟಿತ್ತು ರಾಘವ ವ್ರತಪತಿಗಳ್: **ಪಂಪರಾ,** ೧೬. ೬೨); ಜ್ಞಾನಿ (ಕುಲಹೀನನೆ ಅಪ್ಪೊಡೆ ಕೇವಲಬೋಧಂ ಪರಶುರಾಮಂ ಏನೀಗುಮೆ ನಿರ್ಮಲಿನಕುಲಂಗಲ್ಲದೆ ಪಿಡಿಯಲಲ್ಲದೆ ಅಂತಪ್ಪ ದಿವ್ಯಬಾಣಾವಳಿಯಂ: **ಪಂಪಭಾ,** ೧೨. ೯೭)

**ಕೇವಲಲಬ್ಧಿ** – [ಜೈನ] ಪಂಚ ಪರಮೇಷ್ಠಿಗಳ ಒಂಬತ್ತು ಲಬ್ಧಿಗಳಲ್ಲಿ ಒಂದು (ಅನಂತಜ್ಞಾನಾದಿ ನವಕೃವಲಲಬ್ಧಿವಡೆವುದುಂ: **ಪಂಪರಾ,** ೮. ೬೯ ವ)

**ಕೇವಲವಿಭೂತಿ** – ಕೇವಲಜ್ಞಾನ (ಘಾತಿಕರ್ಮಂಗಳಂ ಘಾತಿಸಿ ಕೇವಲವಿಭೂತಿಯಂ ಪಡೆದು: **ಸುಕುಮಾಚ,** ೪. ೨ ವ)

**ಕೇವಲಿ** – ಕೇವಲಜ್ಞಾನಿ (ಶ್ರುತಕೇವಲಿ ವಿಷ್ಣುವ್ರತಿಪತಿ ಚರಣಂ ನಂದಿ ಪರಮಮುನಿ ಪದಂ ಅಪರಾಜಿತ ಪಾದಂ ಗೋವರ್ಧನಯತಿ ಕ್ರಮಂ ಭದ್ರಬಾಹು ಚರಣಂ ಶರಣಂ: **ಪಂಪರಾ,** ೧. ೮)

**ಕೇವಳ** – ಸಮಗ್ರ (ಆವುದು ಬಾಗಿದುದುಂ ಅಧಿಕಂ ಬಸನಂ ಕೇವಳಮಾಗೆ ನೆಗೆವುದು ಚಿತಾವಯಮಂ: ಕವಿರಾಮಾ, ೨. ೧೫೦)

**ಕೇವಳಾಗಮ** – ಕೇವಲಜ್ಞಾನ (ಕೇವಳಾಗಮ ಸುಲೋಚನನಾದೊನನೆಯ್ದೆ ಕಂಡನಶ್ರಮಗತಿವರ್ತಿ ಕೀರ್ತಿದರ ಕೇವಳಿಯಂ ಹಳಿ ದೇವದೇವನಂ: **ಶಾಂತಿಪು,** ೪. ೬೩)

**ಕೇವಳಿ** – ಕೇವಲಜ್ಞಾನಿ (ಕೇವಳಿ ಪ್ರಾಜ್ಯ ಪೂಜಾ ಪರಮೋತ್ಸವಮಂ ಮಾಡಲ್ಬರ್ಪ ಪುರುಹೂತನ .. .. ದುಂದುಭಿಧ್ವಾನಾಹೂತನಾಗಿ: **ನೇಮಿನಾಪು,** ೪. ೧೧೧ ವ)

**ಕೇಶಕಳಾಪ** – ಕೇಶರಾಶಿ (ಆ ಪುರಲಲನೆಯ ಕೇಶಕಳಾಪದವೊಳ್ ಮಧುಪನಿಕರನಿಳಯಂ ಸುಮನಶ್ರೀಪರಿಪೂರ್ಣಮಂ ಅನಂಗನ ಕಾಪೆನೆ: **ಆದಿಪು,** ೬. ೯೧)

**ಕೇಶಪಾಶ** – ಸಮೃದ್ಧ ತಲೆಗೂದಲು (ಪೇಟಿ ಸಾಮಾನ್ಯಮೇ ಬಗೆಯೆ ಭವತ್ ಕೇಶಪಾಶಪ್ರಪಂಚಂ: **ಪಂಪಭಾ,** ೧೨. ೧೫೬)

**ಕೇಶಬಂಧ** – ತಲೆಗೂದಲು ಕಟ್ಟುವಿಕೆ, ಮುಡಿ (ಕಿಜೆವೀಲಿಯ ಪೆಂಚೆಯದ ಕೇಶಬಂಧದೊಳಂ: **ಜಗನ್ನಾವಿ,** ೪. ೮೦)

**ಕೇಶಹಸ್ತ** – ಕೇಶಪಾಶ (ಕಾಳಹಸ್ತಮಲ್ಲದೆ ಪರಮಮೇಶ್ವರಿ ಕೇಶಹಸ್ತಮಕ್ಕುಮೆ: **ಗದಾಯು,** ೧. ೬೭)

**ಕೇಶಾವಾಪ** – [ಜೈನ] ಐವತ್ಮೂರು ಗರ್ಭಾನ್ವಯಕ್ರಿಯೆಗಳಲ್ಲಿ ಒಂದು (ಕೇಶಾವಾಪ .. .. ಎಂಬ ಅಯ್ವತ್ತಮೂಱು ಗರ್ಭಾದಿನಿರ್ವಾಣ ಪರ್ಯಂತಂಗಳಪ್ಪ ಅಯ್ವತ್ತಮೂಱು ಗರ್ಭಾನ್ವಯಕ್ರಿಯೆಗಳಂ: **ಆದಿಪು,** ೧೫. ೧೫ ವ)

**ಕೇಶಿಸೂದನ** – ಕೇಶಿ ಎಂಬ ರಾಕ್ಷಸನ್ನು ಕೊಂದ ಕೃಷ್ಣ (ಅನ್ನೆಗಂ ಕೇಶಿಸೂದನಪ್ರಲಂಬಾಂತಕರ್ ಅಲ್ಲಿಂ ತಳರ್ದು .. .. ಬರುತ್ತಿರ್ಲ್: **ಜಗನ್ನಾವಿ,** ೮. ೬೫ ವ)

**ಕೇಶೋತ್ಪಾಟನ** – [ಜೈನ] ಕೇಶಾವಾಪ (ಕೇಶೋತ್ಪಾಟನದಂದು ಭಾವಿಸೆ ನಮಸ್ಸಿದ್ಧೇಭ್ಯ ಎಂದಾದಿ ತೀರ್ಥೇಶರ್ ವಂದಿಸಿ ದೀಕ್ಷೈೖದರ್: **ಶಾಂತಿಪು,** ೧. ೨)

**ಕೇಸಕ್ಕಿ** – ಕೆಂಪು ಅಕ್ಕಿ (ಕೇಸಕ್ಕಿಯಂತೆ ತಳಿಸಿದಕ್ಕಿಯಂತೆ ಕರ್ಚಿದಕ್ಕಿಯಂತೆ: **ಧರ್ಮಾಮೃ,** ೧೨. ೧೪ ವ)

**ಕೇಸಡಗು** – ಕೆಂಪು ಮಾಂಸ (ಮೃಗಶಾಬನೀಕಮಂ ಕೊಂಡು ಕೇಸಡಗಂ ಸೂಡುವರ್: **ನೇಮಿನಾಪು,** ೩. ೫೦)

**ಕೇಸಡಿ** – ಕೆಂಪಾದ ಅಡಿ (ಮಿಱುಪ ಕುರುಳೋಳಿ ಮೂಡುವ ಕಿಱುಮೊಲೆ ತಳತಳಿಸಿ ಪೊಳೆವ ಕೇಸಡಿ ನೀಡುಂ ತುಱುಗಿದೆವೆ ಚೊಲ್ಲೆಯಂ ಮಿಗೆ ಮೆಱೆವಿನಂ ಎಳವೆಂಡಿರಿರ್ದರ್ ಎರಡುಂ ಕೆಲದೊಳ್: **ಕಬ್ಬಿಗಕಾ,** ೧೦೪)

**ಕೇಸರ** – ಕೋಳಿ, ಕುದುರೆ ಅಥವಾ ಸಿಂಹದ ಕುತ್ತಿಗೆಯ ಕೂದಲು (ವಿಸರುಹದಂತೆ ಕೇಸರಮನಾಂತುದು ಮೆಯ್ಗಲಿಯಂತಿರೆ ಆರೆ ಕೂರ್ಪಸೆದುದು: **ಯಶೋಧಚ,** ೩. ೭೮)

**ಕೇಸರದ್ರುಮ** – ಬಕುಳದ ಮರ (ಕೇಸರದ್ರುಮಮೆ ನಿನ್ನುಮನಾಸವಸೀಧುವಿಂದೆ ಪೂಬ್ದುದೊ ಕೈತಮಾವುದಿಂ ಮಱೆವುದು: **ಆದಿಪು,** ೧೧. ೧೨೯)

**ಕೇಸರಫಲ** – ಬಕುಳದ ಹಣ್ಣು (ಮಣಿಕುಂಡಲಂ ನಾಳಸಮೇತಮಪ್ಪ ಕೇಸರಫಲದಂತಿರಿರ್ದುದು: **ಕಾದಂಬ,** ೫. ೨೫)

**ಕೇಸರಿ** – ಕೇಸರವನ್ನುಳ್ಳುದು, ಸಿಂಹ (ಪವನತನೂಜನ ಕೇಸರಿಕೇತನಮಪ್ಪ ಪಱಯಿಗೆಯಂ ಕಂಡು ಮುಟ್ಟೆವೆರ್ಪನ್ನೆಗಂ: **ಪಂಪಭಾ,** ೧೨. ೧೨೦ ವ)

**ಕೇಸರಿಕಿಶೋರ** – ಸಿಂಹದ ಮರಿ (ಪಂಜರಸ್ಥಿತ ಮದ ಕೇಸರಕಿಶೋರದಂತೆ ಗೆಯ್ದು ಅಖಿಳ ವಿದ್ಯಾಭ್ಯಾಸಂಗೆಯ್ಯುತ್ತುಮಿರೆ: **ಕಾದಂಬ,** ೨. ೧೧೮ ವ)

**ಕೇಸರಿಕೇತನ** – ಸಿಂಹದ ಚಿಹ್ನೆಯ ಧ್ವಜ; ಭೀಮ (ಪವನತನೂಜನ ಕೇಸರಿಕೇತನಮಪ್ಪ ಪಱಯಿಗೆಯಂ ಕಂಡು ಮುಟ್ಟೆವೆರ್ಪನ್ನೆಗಂ: **ಪಂಪಭಾ,** ೧೨. ೧೨೦ ವ)

**ಕೇಸರಿಣಿ** – ಹೆಣ್ಣು ಸಿಂಹ (ಹರಿಪೋತಮಂ ಬೆದಱುತುಂ ಕರಿಪೋತಂ ಅವುಂಡುಗರ್ಚಿ ಕೇಸರಿಣಿಯಂ ಕೆಚ್ಚಲಂ ತುಡುಕುತಂ ಪರಿದತ್ತು: **ಪಂಪಭಾ,** ೭. ೮೦)

**ಕೇಸರಿಸು** – ಕೆಂಪಗೆ ಮಾಡು (ಕಂಡು ಕಾಡಾನೆಯಂ ಕೇಸರಿಸುತ್ತುಂ ಕಣ್ಗಂ ತಾಗುವ ಬಿಸುಗದಿರಂ ಪೊಯ್ಯುತುಂ: **ನೇಮಿನಾಪು,** ೩. ೬೩)

**ಕೇಸುರಿ** – ಕೆಂಪಾದ ಉರಿ (ಅರಿಗನ ಬೇಟದೊಂದೆ ಪೊಸಬೇಟದ ಕೇಸುರಿಯಿಂದಂ ಎಯ್ದೆ ದಳ್ಳುರಿ ನೆಗೆದಂದುದು ಕೆಂದಳಿರ ಪಾಸುಗಳಿಂ; **ಪಂಪಭಾ,** ೫. ೮)

**ಕೇಳ** – ನರ್ತಕ (ಶರದದ ಗೊಟ್ಟಿಗಾಯಕರ ಕೇಳರ ಕೇರಿಯೊಳಿಂದು ಕಾಂತಾಮಂದಿರದೊಳಗಿರ್ದು: **ಅನಂತಪು,** ೧. ೧೧೦)

**ಕೇಳಿ** – ಆಟ (ಲೀಲಾಕೇಳಿಗಳೆ ವಿಳಾಸಕೇಳಿಗಳೆ ನೃಪಸತಿಯಾ: **ಅಜಿತಪು,** ೩. ೯); ರತಿಕ್ರೀಡೆ (ಬಸನಿಯೆ ಗೆಲ್ಲಕಾಱನ ನೆಗೞ್ತೆಗೆ ಕೇಳಿಗೆ ನಾಡೆ ಗೆಂಟದಂ ಬೆಸಗೊಳವೇಡ: **ಆದಿಪು,** ೧೨. ೧೭)

**ಕೇಳಿಕೆ** – ಆಟ (ಸಹಜದ ಚೆಲ್ವಿನೊಳ್ ರತಿಯ ಸೋಲದ ಕೇಳಿಕೆಯೊಳ್ ಪೊದಳ್ದು ಸನ್ನಿಹಿತವೆನಿಪ್ಪ ಅಪೂರ್ವಶುಭಲಕ್ಷಣದೇಹದೊಳ್: **ಪಂಪಭಾ,** ೧. ೪)

**ಕೇಳಿಕೆವಿಡಿ** – ನೃತ್ಯಮಾಡು (ಸಾರಸಂಗೀತಮಂ ಕೇಳಿಪ ಕೇಳಿಕೆವಿಡಿದ ಭಾರತಿಯಿಂ: **ಶಬರಶಂ,** ೧. ೭೯ ವ)

**ಕೇಳಿನಿವಾಸ** – ನೃತ್ಯಮಂದಿರ (ಕೇಳಿನಿವಾಸದಲ್ಲಿ ನರ್ತನಮನೊಡರ್ಚಿ: **ಪುಷ್ಪದಂಪು,** ೧. ೭)

**ಕೇಳಿಲೀಲೆ** – ಶೃಂಗಾರಲೀಲೆ (ಕವಿಕುಳಸೇವ್ಯಮಾನ ಕವಿತಾಕಳಹಂಸೆಗೆ ಕೇಳಿಲೀಲೆ: **ಚಂದ್ರಪ್ರಪು,** ೧. ೫೦)

**ಕೇಳಿವಟ್ಟಲ್** – ತೆಂಗಿನ ಚಿಪ್ಪು (ಹೃದ್ಯಮಪ್ಪ ಮದ್ಯಮಂ ಕೇಳಿವಟ್ಟಲೊಳೆಱೆದು ಕುಡಿಯಲುಜ್ಜುಗಂಗೈವುದುಂ: **ಜಗನ್ನಾವಿ,** ೪. ೩೯ ವ)

**ಕೇಳಿಶೀಳ** – ಆಟವೇ ಶೀಲವಾಗಿರುವವನು, ಆಟಗುಳಿ (ಮನಃಪ್ರಹ್ಲಾದಮಂ ತಾಳ್ದುವನನವರತಂ ಶ್ರೀಧರಂ ಕೇಳಿಶೀಳಂ: **ಚಂದ್ರಪ್ರಪು,** ೪. ೭೬)

**ಕೇಳಿಸು** – ಕೇಳುವಂತೆ ಮಾಡು (ಪಾಂಡವರನಿಕ್ಕಿದ ಒಸಗೆವಾತುಗಳಂ ಈಗಳ್ ಕೇಳಿಸುವೆಂ: **ಪಂಪಭಾ,** ೧೬. ೧೦೫ ವ); ವಾದ್ಯ ನುಡಿಸು (ಜಾಣೆ ಬೀಣೆಯಂ ಕೇಳಿಸುವಳ್: **ಗಿರಿಜಾಕ,** ೩. ೯೮)

**ಕೇಳೀದೋಹಳ** – ಆಟದ ಬಯಕೆಯುಳ್ಳವನು (ಸುಭಟಸಂಘಟ್ಟದೋರ್ಗರ್ವ ವಿಧ್ವಂಸನಕೇಳೀದೋಹಳ: **ಆದಿಪು,** ೧೪. ೧೯)

**ಕೇಳೀವನ** – ಆಟಕ್ಕಾಗಿ ಇರುವ ಉದ್ಯಾನ (ಪ್ರಿಯವಾದುವು ಪಡಿಯಱವಕ್ಕಿಯ ಜಡಿಪುಂ ಜಕ್ಕವಕ್ಕಿಯುಲಿ ಸಾರಸವಕ್ಕಿಯ ಕುಹಕಂ ಪಂಡಿತವಕ್ಕಿಯ ಪಠನಂ ನೃಪನ ಕಿವಿಗೆ ಕೇಳೀವನದೊಳ್: **ಮಲ್ಲಿನಾಪು,** ೬. ೭)

**ಕೇಳೀಸರ** – (ವಿಭಾಸ್ವದ್ವಾರಿ ಕೇಳೀಸರಕ್ಕಿದು ಎನುತ್ತಾಗಳೆ ಬೇಱೆವೇಱೆ ಪೆರ್ಗೊಂಡಿತ್ತಂ ಪಸಾಯಂಗಳಂ: **ಕುಸುಮಾಕಾ,** ೫. ೧೬೩)

**ಕೇಳ್ವಿ** – ಕೇಳುವಿಕೆ (ತಾಯ್ತಂದೆವಿರ ಕೇಳ್ವಿಯಂ ಗೆಯ್ಯದೆ ಆ ವೇದಂ ಮೊದಲಾಗೊಡೆಯ ಶಾಸ್ತ್ರಂಗಳ ಓದದೆ: **ವಡ್ಡಾರಾ,** ಮ ೨, ಸಾ ೧೪)

**ಕೇಱಿಸು** – ನಿರ್ಮಿಸು (ಮೃಗಗಣಮಂ ಒಂದೆಡೆಯೊಳ್ ಪುಗಿಸಿ ಪೊಱಗೆ ಪೆರ್ಬೇಲಿಯಂ ಕೇಱಿಸೆ: **ಚಾವುಂಪು,** ಪು. ४೧३. ಸಾ. ೧೯)

**ಕೇಱು** – ಕಾಳುಕಸಗಳನ್ನು ಬೇರ್ಪಡಿಸು (ಕೇಱು–ಶೂರ್ಪಕರಣೇ: **ಶಬ್ದಮದ, ಧಾ** ೮೫೮)

**ಕೇಟಿ** – ಸಾಲು, ಪಂಕ್ತಿ (ಮುತ್ತಿನ ಪಚ್ಚೆ ಮಾಣಿಕದ ವಜ್ರದ ಕೇಟಿಯೊಳ್ ಒಂದಿ ಸಾಂದಿನೊಳ್ ಕತ್ತುರಿಯೊಂದು ಕೋಟ್ಗೆಸಱೊಳ್ ಓಕುಳಿ ಚಂದನ ಗಂಧವಾರಿಯೊಳ್ ಸುತ್ತಲುಂ ಅಟ್ಟೞುಂ ಪಡೆವ ಗೇಯದ ಪೆಂಪಿನ ಅಲಂಪಂ ಆರ್ಗಂ ಆರ್ತಿತ್ತುದು ಪಟ್ಟಬಂಧ ಮಹೋತ್ಸವಂ ಆ ಪಡೆಮೆಚ್ಚೆ ಗಂಡನಾ: **ಪಂಪಭಾ,** ೧೪. ೨೦)

**ಕೈ** – ಹಸ್ತ (ಬಂದು ಮುಂದು ನಿಂದು ಕೈಗಳಂ ಮುಗಿದು: ವಡ್ಡಾರಾ, ಪು. ೭೩, ಸಾ. ೬); ಆನೆಯ ಸೊಂಡಿಲು (ಮುಖಂ ಕಮಲಮಂ ಕೀೞ್ಮಾಡುಗುಂ ಕೈಗಳ್ ಆನೆಯ ಕೈಯಂ ನಖಂ ಇಂದುವಂ ನಗುಗುಂ: **ಪಂಪರಾ,** ೧. ೯೫); ಅಲಂಕಾರ (ಮುತ್ತಿನ ಕೈಯಿಂದಡಿಕಿಲ್ವೆತ್ತ ಉರುಶೃಂಗಾರಘಟಕವಿತತಿಯಿಂ ತಳೆದ ಒಳ್ಗತ್ತುರಿನೀರಿಂ: **ಉದ್ಭಟಕಾ,** ೮. ೬)

**ಕೈಕೊಳ್** – ಲೆಕ್ಕಿಸು, ಗಮನಿಸು (ಕನ್ಯಾರ್ಥದಿಂ ಬಂದ ಪಾರ್ಥಿವಂ ಉದ್ಯತ್ ಭುಜಗರ್ವದ ಒದವುಮಂ ಕೈಕೊಳ್ಳದೆ ಇಂತೊಯ್ದು ಮಾನವನೊಳ್ .. .. ಕಾದುವುದು ಅಯುಕ್ತಂ: **ಕರ್ಣನೇಮಿ,** ೭. ४೭)

**ಕೈಗಣ್ಮು** – ಪ್ರಕಟವಾಗು (ಇನಿತೆಂದು ಇನ್ನವೆಂದುಂ ಈ ವಿಧದವೆಂದು ಆರ್ ಬಣ್ಣಿಸಲ್ಬಲ್ಲರೆಂಬುನೆಗಂ ನಿರ್ಭರಭಕ್ತಿ ತಮ್ಮ ಮನದೊಳ್ ಕೈಗಣ್ಮೆ: **ಆದಿಪು,** ೧೦. ४೬); ವಶವಾಗು

(ಶಕ್ತಿಸ್ಫುರಣಂ ಕೈಗಣ್ಮೆ ತಂತ್ರೋದಿತಗುಣಗಣಮಂ ತಾಳ್ದು ಅಮೋಘಂ ಪ್ರಭುತ್ವಂ ದೊರೆಕೊಂಡು: **ರಾಜಶೇವಿ,** ೧. ೧೩)

**ಕೈಗಟಿ** – ಮಿತಿ ಮೀರು (ಪಟಿಗೆ ಮೇನ್ ಪೊಗಟ್ಗೆ ಮೇಣ್ ನೆವಮಿಲ್ಲಡೆ ಇಂತು ಕೈಗಟಿಯೆ: **ಕವಿರಾಮಾ.** ೧. ೧೩೭)

**ಕೈಗಟಿವು** – ಕೈ ಮೀರಿಕೆ, ಅತಿಶಯ (ನಿನ್ನ ಒರಂಟುತನಂ ಕೈಗಟಿವಾಯ್ತು ಅದಪ್ಪೊಡೆ ಮಹಾಭಾರಾವತಾರಂ ರಣೋದ್ಯತನಾಗು ಎಂಬುದಂ ಎಮ್ಮಂ ಅನ್ಯರವೊಲೇಂ ನೀಂ ಪ್ರಾರ್ಥಿಸಲ್ವೇಟ್ಟುದೇ: **ಪಂಪಭಾ,** ೧೦. ೧೦)

**ಕೈಗುಡು** – ನೆರವಾಗು (ಆದ್ಯರಾರೀ ಕೃತಿಯಂ ಕೃತಿಮಾಡಿದರ್ ಅವರ್ಗಳ ಸನ್ಮತಿ ಕೈಗುಡುಗೆ ಎಮಗೆ ಸರಸಪದಪದ್ಧತಿಯೊಳ್: **ಯಶೋಧಚ,** ೧. ೫)

**ಕೈಗೆಯ್** – ಅಲಂಕರಿಸಿಕೊ (ವಿದ್ಯಾಧರಪ್ರಸಾಧನಂ ಎನಗಿಂದಿನೊಳಿನಿತೆಂಬಂತೆ ನೆಱೆಯೆ ಕಯಗೆಯ್ದು: **ಆದಿಪು,** ೨. ೫೦ ವ); ಇದಿರಿನಲ್ಲಿಯೇ (ಸುಪಾತ್ರದಾನದ ಫಲಂ ಕೈಗೆಯ್ಯಲಿಂತೂಡಿತೋ: **ಸಮಯಪ,** ೧೦. ೯೭)

**ಕೈಗೆಯಿಸು** – ಅಲಂಕರಿಸು (ಪದ್ಮಪುರಿಯಂ ಕೈಗೆಯಿಸವೇಟ್ಟು ಬಳಹಕನಂ ಕಟಿಪಿ: **ಕುಸುಮಾಕಾ,** ೧೧. ೯ ವ)

**ಕೈಗೊಂಬಾಳ** – ಚಪ್ಪಾಳೆ ತಟ್ಟಿ ಕುಣಿಯುವುದು (ಕೈಗೊಂಬಾಲದಿಂ ಪೋದ ಮೆಯ್ವಲಗಂಬೆತ್ತಿರೆ ಬಾಹು ಪೋರಗದೆ ಪೊಯ್ದು ಭೂಪನಾ ವೀರನಂ: **ಅನಂತಪು,** ೨. ೩೦)

**ಕೈಘಟ್ಟ** – ಪರಿಮಳ (ಮಾಳತಿಕೆಯಂ ಬಡ್ಡಿಸಲುಂ ಉತ್ಪಳಿಕೆಯಂ ಕೈಘಟಿ ನೀಡಲುಂ: **ಆದಿಪು,** ೭. ೨೧ ವ)

**ಕೈಟಭಾರಾತಿ** – ಕೈಟಭನ ಶತ್ರು, ವಿಷ್ಣು (ಹರಜಟಾಜೂಟಕ್ಕೆ ಚಂದ್ರಲೇಖೆಯಿರ್ಪಂತೆ ದಿಕ್ಕರಿಕಟತಟಕ್ಕೆ ಮದಲೇಖೆಯಿರ್ಪಂತೆ ಕೈಟಭಾರಾತಿಯ ವಿಶಾಲೋರುಸ್ಥಳಕ್ಕೆ ಕೌಸ್ತುಭಮಿರ್ಪಂತೆ ಸೊಗಯಿಸುತಿರ್ದುದು: **ಪಂಪಭಾ,** ೧. ೫೭ ವ)

**ಕೈತ** – ಮಾಡಿದ, ರಚಿಸಿದ, ರಚನೆ (ಪುದಿದ ಜಸಂ ಪೊದಳ್ದ ಚಳಂ ಒಂದಿದ ಅಳಂಕೃತಿ ಕೈತ ದೇಸಿ ಎಂಬುದಂ ಎನೆ ವಸ್ತುವಿದ್ಯೆಯೆನೆ ಕಬ್ಬಮೆ ಮುನ್ನಂ ಅವಂತಿವಲ್ಲದಲ್ಲದೆ ಪೆಱವಿಲ್ಲ ಕಬ್ಬಂ ಎನೆ ಮುನ್ನಿನ ಕಬ್ಬಮನೆಲ್ಲಮಂ ಇಕ್ಕಿಮೆಟ್ಟಿದುವು ಸಮಸ್ತಭಾರತಮುಂ ಆದಿಪುರಾಣ ಮಹಾಪ್ರಬಂಧಮುಂ: **ಪಂಪಭಾ,** ೧೪. ೫೯)

**ಕೈತಕ** – ಕೇತಕಿ ಪುಷ್ಪ (ಸೊಗಯಿಸಿತ್ತಾ ತಾಣದೊಳ್ ಕೈತಕಂ: **ರಾಜಶೇವಿ,** ೨. ೫೭)

**ಕೈತವ** – ಮೋಸ (ನುಡಿವೊಡೆ ಲಲ್ಲೆಯೆಂಗುಂ ಎರ್ದೆವೇಟ್ಟೊಡೆ ಕೈತವಮೆಂಗುಂ ಆಸೆಯಿಂ ಪಿಡಿದೊಡೆ ಸೇದೆಯೆಂಗುಂ: **ಆದಿಪು,** ೧೨. ೭೨); ನೆಪ (ಕುಸುಮನಿಕಾಯಮಂ ತಿರಿವ ಕೈತವದಿಂದೆ ತದುರ್ವಿಪಾಲನಿರ್ಪ ಅಸುಗೆಯ ಭೂಮಿಜಾತಮನೆ ಮೆಲ್ಲನೆ ಸಾರ್ದು: **ಉದ್ಭಟಕಾ,** ೭. ೨೨)

**ಕೈತವೋದರ** – [ಕೈತವ+ಉದರ] ಮಾಯಾ ಶರೀರ (ಪೆಱಸಾರ್ವ ಕೈತವೋದರಮೃಗಂ ಆಗಳ್ ಅಂತೆ ಸೆರೆಗೊಂಡುದು ಕಣ್ಮಲರಂ ಲತಾಂಗಿಯಾ: **ಶಾಂತೀಶ್ವಪು,** ೫. ೧೫೩)

**ಕೈತಾಳಂಗುಟ್ಟು** – ಚಪ್ಪಾಳೆ ತಟ್ಟು (ಈಶ್ವರಂ ಎಮಗಂ ಪೊಱಗೆ ಎಂದು ಕೈತಾಳಂಗುಟಿ ಮೆಱೆಮಿಂಡ ಮಾಹೇಶ್ವರಂ: **ತ್ರಿಷಷ್ಟಿಪು,** ೬. ೫ ವ)

**ಕೈದವ** – [ಕೈತವ] ಕಪಟ (ಎಂದು ಕೈದವಮಿಲ್ಲದ ನಲ್ಮೆಯಂ ನಾಲಗೆಯ ತುದಿಗೆ ತಂದು ನುಡಿದಳ್ ಮತ್ತೊರ್ವಳ್ ತನ್ನ ಆಣ್ಮನ ದೋರ್ವಲದ ಅಗುರ್ವಂ ನಚ್ಚಿ: **ಪಂಪಭಾ,** ೧೦. ೪೫ ವ)

**ಕೈದಳ** – ಕೈಬೆರಳು (ಕೈತ ಕೈದಳಮಂ ತುದಿಗೊಂಡು ಕರಜಮೊಪ್ಪಿದುದವಳಾ: **ರಾಜಶೇವಿ,** ೭. ೪೨)

**ಕೈದು** – ಆಯುಧ (ತೆರೆಗಳ ಬಂಬಲಂ .. .. ಕರಿಗಳ್ ತೆಱಂಬೊಳೆವ ಮೀಂಗಳಂ ಉಳ್ಕುವ ಕೈದುಗಳ್ ನಿರಾಕರಿಸಿರೆ ಮೇರೆದಪ್ಪಿ ಕವಿದತ್ತು ನರಾಧಿಪಸೈನ್ಯಸಾಗರಂ: **ಪಂಪಭಾ,** ೩. ೬೮)

**ಕೈದುಡುಂಕು** – ಕೈಯೊಡ್ಡು (ಕಿಱಿಯ ಕೃತಿ ಪಿರಿದೆನಿಕ್ಕುಂ ಪೆಱರರ್ಥಕೆ ಕೈದುಡುಂಕದಿರೆ ಸತ್ಕವಿಗಂ: **ರಾಜಶೇವಿ,** ೧. ೩೨)

**ಕೈದುಬಿನ್ನಣ** – ಶಸ್ತ್ರಕೌಶಲ (ಇಸುವಿಡುವ ಪೊಯ್ವ ಕುತ್ತುವ ಮಸೆಯಂ ಪತ್ತಿಸುವ ಕೈದುಬಿನ್ನಣಮಂ ಈಕ್ಷಿಸಲಾಗ: **ಸಮಯಪ,** ೫. ೧೨೪)

**ಕೈನಿಱೆ** – ಕೈಯನ್ನು ಮೇಲೆತ್ತು (ಭಾರತಿಕನಾಗೆ ನಮಂದ ಸಮೀರಂ ಕೈನಿಱೆದುವುತ್ಸವ ಧ್ವಜ ತತಿಗಳ್: **ಪಂಪರಾ,** ೪. ೨೬)

**ಕೈನೀರ್** – ಕೈಧಾರೆ (ಕನಕಕಳಶಮಂ ತಾನೆ ಬಂದೆತ್ತಿ ಕೈನೀರೆಱೆದಂ ಶ್ರೀವಜ್ರದಂತಕ್ಷಿತಿಪತಿ: **ಆದಿಪು,** ೪. ೪೮)

**ಕೈಪಱೆ** – ಕೈಯ ತಮಟೆ, ಚಪ್ಪಾಳೆ (ನಾಣಟೆದು ಕಣ್ ನಸು ಮುಚ್ಚಿರೆ ತೇಗಿ ತೇಗಿ ಮಾರ್ಮಲೆದಿದಿರಾಗಿ ಕೈಪಱೆಯೊಳಾಡುವ ರಕ್ಕಸಿಯರ್ಕಳೊಪ್ಪಿದರ್: **ಕಬ್ಬಿಗಕಾ,** ೨೨೩)

**ಕೈಪಱೆಗುಟ್ಟು** – ಚಪ್ಪಾಳೆ ತಟ್ಟು (ಕರಪ್ರಹಾರದಿಂ ಪೆಱಮೆಟ್ಟುವಾಗಳ್ ಎಡಪಿ ಕೆಡೆಯೆ ಕಂಡು ಕೈಪಱೆಗುಟ್ಟಿ ನೆರೆದ ಜನಮೆಲ್ಲಂ ನಗೆ: **ಚಾವುಂಪು,** ೪೦೩. ಸಾ. ೧೩)

**ಕೈಪಿಡಿ** – ಕನ್ನಡಿ (ಅದು ಅಂಗಜಚಕ್ರವರ್ತಿಎತ್ತಿದ ಪೊಸವಟ್ಟಂ ಅಂತದು ಮನೋಜನ ಕೈಪಿಡಿ: **ಆದಿಪು,** ೨. ೭೪)

**ಕೈಪೆ** – ಕಹಿ (ಭವ ಭವದೊಳ್ ಪೆರ್ಚಿದ ಕೆರ್ಚುವಿರ್ದ ಮಿಥ್ಯಾತ್ವದವರ್ಗೆ ಜಿನಧರ್ಮಕಥಾಶ್ರವಣಂ ಪೈತ್ತಿಕಮಾಗಿರ್ದವರ್ಗೆ ಪಾಲ್ ಕೈಪೆಯಪ್ಪವೊಲ್ ಕೈಪೆವಲಂ: **ಅಜಿತಪು,** ೨. ೯೨)

**ಕೈಪೊಡೆ** – ಚರ್ಮದ ಕೈಪಟ್ಟಿ (ಮದನನ ಕೈದುವೆಲ್ಲಿದಂ ಅನಂಗನ ಕೈಪೊಡೆಯೆಲ್ಲಿದಂ ವಿಳಾಸದ ಕಣಿಯೆಲ್ಲಿದಂ: **ಆದಿಪು,** ೩. ೧೫); ಬಾಣದ ಗರಿ (ಮುಱಿದ ಬಿಲು ಪಱಿದ ಕೈಪೊಡೆ ತಱಿದ ಸರಲ್ ತಪ್ಪ ನಾರಿ: **ಹರಿವಂಶ,** ೯. ೧೪)

**ಕೈಬರ್** – ಚಿಗುರಿಡು (ಕಂತುಗೆ ಕೆಯ್ಗೊಟ್ಟವೊಲಿರ್ದುದು ಇಟ್ಟಳದೆ ಕೈಬಂದ ಒಂದು ಚೂತದ್ರುಮಂ: **ಶಾಂತೀಶ್ವಪು,** ೧೦. ೧೧೦)

**ಕೈಮಳೆ** – ಗಿಂಡಿ (ತಳಿಗೆ ಕನ್ನಡಿ ಸಿಪ್ಪು .. .. ಕೈಮಳೆ ತಾಳಂ .. .. ಕುಡುವಂ ನೃಪಾತ್ಮಜಂ ಅರ್ತಿಯಿಂ: **ಧರ್ಮಾಮೃ,** ೨. ೧೭)

**ಕೈಮಱೆ** – ಹಸ್ತಮುದ್ರೆ (ಲಾಗು ಲವಣಿ ಅಡಪು ತಿರುಪು ಕೈಮಱೆ ಕಳಾಸ ಕೂಟಮಾನಂಗಳಂ ಸಂಗಳಿಸಿ ರಸಭಾವವಂದಪ್ಪದೆ .. .. ಚತುರ್ವಿಧ ನರ್ತನಮಂ: **ರಾಜಶೇವಿ,** ೫. ೧೯ ವ)

**ಕೈಮುರಿಗೆ** – ಕೈಯ ಸುತ್ತ ಕಟ್ಟಿದ ಹುಲ್ಲು ಅಥವಾ ಬಟ್ಟೆ (ಬೇಡಂ ದಂಡೆಯಂ ಕೊಂಡು ನಿಂದು ಇದಿರೊಳ್ ಪಾಯ್ದು

ಅದಕಿತ್ತು ಕೈಮುರಿಗೆಯಂ ಕೈಗಣ್ಮಿ ಪೊಕಕು ಎತ್ತಿ ಖಡ್ಗದೆ .. .. ತಿವಿದಂ: **ರಾಜಶೇವಿ,** ೫. ೯೯)

**ಕೈಯಳವಿ –** ಕೆಯ್ಯಳವಿ, ಶಕ್ತಿಸಾಧ್ಯ (ಇಱಿದು ತವಿಸುವೊಡೆ ಪಡೆ ನಾಡಱಿಯರ ಕೈಯಳವಿಯಲ್ತು: **ಪಂಪರಾ,** ೪. ೩೬)

**ಕೈಯಾನ್ –** ಕೈ ಚಾಚು, ಯಾಚಿಸು (ಯಮಪಾಶಂ ಪಗೆವಂಗೆ ಕಲ್ಪಲತೆ ಕೈಯಾಂತಗೆ: **ಪಂಪರಾ,** ೧೨. ೬೦)

**ಕೈಯಾಣೆಯಿಡು –** ಕೈ ಮೇಲೆ ಕೈಯಿಟ್ಟು ಭಾಷೆ ಕೊಡು, ಪ್ರತಿಜ್ಞೆ ಮಾಡು (ಬಿರುದಂ ಮೇಳಯದೊಳ್ತೊಡರ್ಚಿ ಬಿರುದಂಕಂ ಮೆಚ್ಚುತುಂ ಸಾಜಿ ಮಚ್ಚರದಂಕಂ ಕಳದಲ್ಲಿ ನೋಡು ಬಯಲೊಳ್ಬೇಡೆಂದು ಕೈಯಾಣೆಯಿಟ್ಟರ ಸಂಕಂ ಪಱಿಗುಟ್ಟಿ ಮಾಸವಳದಂಕಂ ಬಾಸೆಯಂ ಸಾಜಿ ಬಿತ್ತರದಿಂದಿರ್ದುದು ಮೊತ್ತದಿಂದೆ ಭೃಗುವಿದ್ಯಾಮೂರ್ತಿ ಮಾರ್ತಟ್ಟಿವೊಲ್; **ಅನಂತಪು,** ೨. ೨೯)

**ಕೈಯೆಡೆ –** ನ್ಯಾಸ, ಒತ್ತೆ (ಕೇಯೆಡೆ ನಿಮಗೆಂದೊಡಂಬಡಿಪ ನಲ್ಲರಗಲ್ಕೆಗೆ ಕಣ್ಣ ನೀರ್ಗಳಂ ಮಿಡಿವ: **ಆದಿಪು,** ೪. ೫೭)

**ಕೈಯೆಡೆಗುಡು –** ಒತ್ತೆಯಾಗಿರಿಸು (ಈ ಪಟಮಂ ಪ್ರಾಣಮನೆ ಕೈಎಡೆಗುಡುವಂತೆ ಎನ್ನ ಕೈಯೊಳಿಟ್ಟು: **ಆದಿಪು,** ೪. ೨೧ ವ)

**ಕೈಯ್ಯನೊಡ್ಡು –** ಕೈಯನ್ನು ಒಡ್ಡಿ ಬೇಡಿಕೊ (ಈತಂಗಿನಿತು ವಿಭವಮುಮೆಂತಾದುದು ನಿಮ್ಮಡಿಗಂ ಕೈಯನೊಡ್ಡಿ ಪುರುಷಭೈಕ್ಷೆಯಂ ಬೇಡಿ ದೀಕ್ಷೆಯುಮಂ ನಿಸರ್ಗಸ್ನೇಹಿತೆಯಾದ ಕಾರಣಮುಮಂ ಇದನಱಿಯೆ ಬೆಸಸುವುದು ಎನೆ: **ಶಾಂತಿಪು,** ೯. ೮೩ ವ)

**ಕೈರಂದಱಿ –** ತುಂಡು ಮಾಡು (ಇಱಿವ ಬಲಿಗುಡುವ ಕೈರಂದಱಿವ ಉರ್ದಂ ಸೀಳ್ವ ಪೋಳ್ವ ಪರಪುವ ಗೊಟ್ಟಂಗೊಱೆವ ಅಗುಟ್ದು ನಟ್ಟು ಪರೆಪುವ ಪೆಱವುಂ ಅಗುರ್ವಪ್ಪ ಚಿತ್ರವಿಧ ವಧೆಯಿಂದಂ: **ಶಾಂತಿಪು,** ೭. ೯೦)

**ಕೈರವ –** ಬಿಳಿಯ ನೈದಿಲೆ (ದಿವಿಜಸ್ತ್ರೀಜಘನಾಭಿರಾಮರಶನಂ ದೇವಾಂಗನಾಪಾಂಗ ಕೈರವಚಂದ್ರಂ: **ಸುಕುಮಾಚ,** ೯. ೩೫)

**ಕೈರವಗಂಧಿ –** ಬಿಳಿ ನೈದಿಲೆಯ ಸುಗಂಧವಿರುವವರು (ಭೃಂಗಕುಂತಳೆಯರ್ ಕೈರವಗಂಧಿಯರ್: **ಪುಷ್ಪದಂಪು,** ೧೨. ೧೧೨)

**ಕೈರಾತ –** ಕಿರಾತರಿಗೆ ಸಂಬಂಧಿಸಿದ (ಪೊಣ್ಮೆತ್ತು ವಿಂಧ್ಯಂ ನಡುಗೆ ಘನರವಸ್ಪರ್ಧಿ ಕೈರಾತಘೋಷಂ: **ಕಾದಂಸಂ,** ೧. ೪೬)

**ಕೈಲಾಸವಾಸಿ –** ಶಿವ (ಆರೂಢ ಸಮರರಸನುಂ ಉಪಾರೂಢಕನಕರಥನುಂ ಆಗಿ ಕೈಲಾಸವಾಸಿಗೆ ಪೊಡೆವಟ್ಟು ಬಿಲ್ಲಂ ಕೊಂಡು ಗಂಗಾಸುತಂಗೆ ಅದಿರದೆ ಇದಿರ್ಚಿ ನಿಂದಾಗಳ್: **ಪಂಪಭಾ,** ೧೦. ೫೨ ವ)

**ಕೈವಟ್ಟಲ್ –** ಕೈ ಬಟ್ಟಲು, ಸೌಟು (ಕೈವಟ್ಟಲ್ ಸಟ್ಟುಗ: **ರನ್ನ ನಿಘಂಟು,** ೧೦)

**ಕೈವರ್ –** ಫಲಿಸು (ಜಗತೀ ಜಂಗಮ ಕಲ್ಪವೃಕ್ಷಮಿದೆ ಕೈವಂದತ್ತು ಎನಲ್ .. .. ಭೂಪಂ .. .. ಕೈನೀರೆಱೆದಂ: **ಪಂಪರಾ,** ೫. ೧೨೯)

**ಕೈವರ್ತ –** ಬೆಸ್ತ, ಮೀನುಗಾರ (ಮೀನಂ ಕೈವರ್ತನೀಯೆ ತನಗಿತ್ತವನಂ ಮಾನವಪತಿ ದಂಡಿಸೆ: **ಸಮಯಪ,** ೯. ೨೯)

**ಕೈವಲ್ಯ –** ಮೋಕ್ಷ, ನಿರ್ವಾಣ (ಸಾಧುಪದಂಗಳ್ ನಮಗೀಗೆ ಸಾಧುಪದಮಂ ಕೈವಲ್ಯ ಮಾಂಗಲ್ಯಮಂ: **ಪಂಪರಾ,** ೧. ೫)

**ಕೈವಾರ –** ಸ್ತೋತ್ರ, ಹೊಗಳಿಕೆ (ಬೀರವಟ್ಟಮಂ ಆನಿರೆ ನೀಂ ಈ ಸೂತಸುತಂಗೆ ಎಡೆಗೊಂಡು ಕೈವಾರದಿಂದ ಒಸೆದು ಇತ್ತೊಡಂ ಏನಾಯ್ತು: **ಪಂಪಭಾ,** ೧೨. ೪೩)

**ಕೈವಿಡಿ –** ಮದುವೆಯಾಗು (ಆ ಕನೆನಯ ಕೈವಿಡಿದಂ ಸ್ವೀಕೃತ ಗಂಧರ್ವರಾಜ್ಯಮಹಿಮೋದಯಂ .. .. ಚಿತ್ರರಥಂ: **ಕಾದಂಬ,** ೬. ೨)

**ಕೈವೀಣ –** ಒಂದು ಬಗೆಯ ಆಯುಧ (ಬಲದೊಳ್ ಪತ್ತಿದ ಚಮ್ಮಟಿಗೆ ಕೈವೀಣಂ ಬೆಡಂಗಾಗೆ: **ಅನಂತಪು,** ೧೧. ೬೨)

**ಕೈವೀಸು –** ಯುದ್ಧಕ್ಕೆ ಸಿದ್ಧದವಾಗಿರುವುದನ್ನು ಸೂಚಿಚಿಲು ಕೈಯನ್ನು ಬೀಸು (ತೇಜಂ ಇಲ್ಲಾದೊಡಂ ಸೂಱಂ ಮಾಡಿದನೊಳ್ ಕಾದಲೆವೇಟ್ಕುಂ ಎಂದು ದಮಿತಾರಿ ಕೈವೀಸೆ: **ಶಾಂತಿಪು,** ೪. ೭ ವ)

**ಕೈವೋಗು –** ಗುರಿತಪ್ಪು ಗರ್ವೋದ್ಧತನಂ ಕೈವೋಗದೆಚ್ಚಂ: **ಚಂದ್ರಪ್ರಪು,** ೭. ೬೭); ಚಿಗುರು (ಆ ದೇವಿಯ ಜಾತ್ರೆಗೆ ಮೊಳೆವೋದ ಎಳೆವೆಱೆ ಸಿರದ ಗಾಳಂ ಉರಿಯುಯ್ಯಲೆ ಕೈವೋದ ಅಸುಕೆ: **ಯಶೋಧಚ,** ೧. ೩೬)

**ಕೈಶಿಕ –** ಒಂದು ರಾಗ (ಉದ್ಗೀಯಮಾನ ಮಂಗಳ ಕೈಶಿಕ ನದಾಕರ್ಣನೋತ್ತನ್ನೈಕ ಕರ್ಣಸ್ಪಂದಿ: **ಚಂದ್ರಪ್ರಪು,** ೩. ೯೬ ವ)

**ಕೈಶಿಕೀವೃತ್ತಿ –** ಶೃಂಗಾರಕ್ಕೆ ತಕ್ಕ ನಡವಳಿಕೆಯನ್ನು ಸೃಜಿಸುವ ಒಂದು ವೃತ್ತಿ (ಅಂತು ಕೈಶಿಕೀವೃತ್ತಿರ್ತನೋಪೇತಮುಂ .. .. ಅಷ್ಟಲಾಸ್ಯಮುಂ: **ಶಾಂತಿಪು,** ೭. ೩೨ ವ)

**ಕೈಸಾಣೆ –** ಚಿಕ್ಕ ಸಾಣೆ ಕಲ್ಲು (ಕೈಸಾಣೆಗಳಿಂದಂ ನಾಲ್ಕುಂ ದಾಡೆಗಳಂ ಉರ್ದಿಸಿ ಕಳೆದು ಮಟ್ಟಂ ಮಾಡಿದೊ: **ವಡ್ಡಾರಾ,** ಪು ೧೮೩, ಸಾ ೧೩)

**ಕೊಂಕ –** ವಕ್ರ (ನರಕದೊಳ್ ಮೂಱು ಸಾಗರೋಪಮಾಯುಷ್ಯಮನೊಡೆಯ ನಾರಕನಾಗಿ ಪುಟ್ಟಿ ಸತ್ತು ಬಂದು ಇಲ್ಲಿ ಕೊಂಕನಾಗಿ ಪುಟ್ಟಿ: **ವಡ್ಡಾರಾ,** ಪು ೧೭೮, ಸಾ ೨೭); ಒಂದು ಕಾಡುಪ್ರಾಣಿ (ಬಲೆವಱಿದ ಕೊಂಕನಂತೆ ಮನೆಯೆ ಗುಱಿಯಾಗಿರ್ಪುದುಂ: **ಧರ್ಮಾಮೃ,** ೭. ೧೦೫ ವ)

**ಕೊಂಕಾಡು –** ಕೊಂಕು ಮಾತಾಡು; ಚಮತ್ಕಾರದ ಮಾತಾಡು (ಪಾಡುವಾಡುವ ಕೊಂಕಾಡುವ ಮಡುವೊಂದು ದಿವಸಂಗಳ್ಗಟ್ಟಿದಂ ದೇವ ವಾರವಧೂವರ್ಗಮಂ: **ಅನಂತಪು,** ೪. ೭೧)

**ಕೊಂಕಿಗ –** ವಕ್ರವಾದ ಸ್ವಭಾವವುಳ್ಳವನು (ಬಿರುದರಂ ಒತ್ತಿ ಬೀರರಂ ಅಡಂಗಿಸಿ ಕೊಂಕಿಗರಂ ಕಟಲ್ಚಿ ಚೆನ್ನರಂ ಅಡಿಗೊತ್ತಿ ಮಂಡಳಿಕರಂ ಬೆಸಕಯ್ಸಿ .. .. ಮಾಡಿರೆ ರಾಜಸೂಯಮಂ: **ಪಂಪಭಾ,** ೭. ೧೮)

**ಕೊಂಕು –** ವಕ್ರವಾಗು (ಪುರುಡುವೆರೆಸಿದ ಕೊಂಕಿಂಗಂ ಕಡ್ಡವಣೆವೆರಸಿದ ಸೋಂಕಿಗಂ: **ಪಂಪಭಾ,** ೪. ೧೭ ವ); ವಕ್ರತೆ (ಪದಕೊರಲ್ ಇಂಪಂ ಅಪ್ಪುಕೆಯೆ ಕೊಂಕು ನಯಂ ಗಮಕಂಗಳಿಂ ಪೊಡರ್ ಕೊದಲ್ ಎಟೆದಿಕ್ಕಿದಂತೆ ಸುತಿಯೊಳ್ ಸಮವಾಗಿರೆ .. .. ಮೇನಕೆ ಸರಸ್ವತಿ ಬಾಯ್ದೆಱೆದಂತೆ ಪಾಡಿದಳ್: **ಪಂಪಭಾ,** ೭. ೮೮); ವ್ಯಂಗ್ಯ (ಅಕಟಕಟ ನೊಂದಳ್ ಎತ್ತಿರೆ ಸುಕುಮಾರಿಯಂ ಎನುತುಂ ಇನಿತು ಕೊಂಕಿಂ ನುಡಿದಂ: **ಯಶೋಧಚ,** ೨. ೬೮)

**ಕೊಂಗ –** ಒಂದು ದೇಶದ ಹೆಸರು (ಅಂಗ ವಂಗ ಕಳಿಂಗ ಕೊಂಗ .. .. ದೇಶಾಧೀಶ್ವರರುಂ: **ಪಂಪಭಾ,** ೯. ೯೫ ವ)

**ಕೊಂಚಲ** – ಗೊಂಚಲು (ಮಣಿಮಂಜರಿಯನಿಟಿಕೆಯ್ವ ಮಾಮಿಡಿಯ ಕೊಂಚಲನಂ ಆ ವಸುಧಾಧಿಪತಿಗೆ ಕಾಣ್ಕೆಯಂ ಒಸೆದಿತ್ತು: **ಕುಸುಮಾಕಾ,** ೫. ೨೪)

**ಕೊಂಚೆ** – [ಕ್ರೌಂಚ] ಒಂದು ಬಗೆಯ ಹಕ್ಕಿ (ಪೊನ್ನ ಬೆಳ್ಳಿಯ ಪದ್ಮರಾಗದ ಪಚ್ಚೆಯ ಗಿಳಿಯ ಕೋಗಿಲೆಯ ಕೊಂಚೆಯ ಅಂಚೆಯ ಕುಂತಳಿಕೆಯ ಮಾಟ್ಕೆಯ ಸಿಪ್ಪುಗಳೊಳ್ ತೀವಿ: **ಪಂಪಭಾ,** ೪. ೮೭ ವ)

**ಕೊಂಚೆಯ** – ಚಪ್ಪರ, ಬಳ್ಳಿಮಾಡ (ತಮಾಳಲತೆಯ ಕೊಂಚೆಯಂಗಳೊಳಂ ತಾಂಬೂಲಲಲತೆಯೊಳಂ: **ಆದಿಪು,** ೯೨ ವ)

**ಕೊಂಡ** – ಅಗ್ನಿಕುಂಡ (ಅಂತು ಒರ್ವರೊರ್ವರ ಕಿಱುಕುಣಿಕೆಗಳಂ ಪಿಡಿದು ರತಿಯುಂ ಕಾಮದೇವನುಂ ಬರ್ಪಂತೆ ಬೇಳ್ವೆಯ ಕೊಂಡದ ಮೊದಲ್ಗೆ ವಂದು: **ಪಂಪಭಾ,** ३. ೭೫ ವ)

**ಕೊಂಡಾಡು** – ಪ್ರಖ್ಯಾತಿಪಡಿಸು (ಅಮಳ್ವೆತ್ತಂತೆ ಸಮಾನಮಾಗೆ ಭರತಂ ಕೊಂಡಾಡಿದಂ ಕ್ಷತ್ರಧರ್ಮಮುಮಂ ಧರ್ಮಮುಮಂ: **ಪಂಪರಾ,** ೭. ೨೪)

**ಕೊಂಡಾಟ** – ಗೌರವ (ಪಿರಿಯಣ್ಣನೇಂ ಜನಕನೇಂ ಎಂಬೊಂದು ಕೊಂಡಾಟದಿಂ ವಿನಯಂ ಸಲ್ವುದು: **ಆದಿಪು,** ೧೪. ೩೧); ಮುದ್ದಾಟ (ಪಂಡಿತೆಯೆಬ ನೆಗಟ್ತೆಯ ಕೊಂಡಾಟದ ದಾದಿ ತನ್ನನೋದಿಸುತಿರೆ: **ಆದಿಪು,** ३. ೨೧)

**ಕೊಂಡುಕೊನೆ** – ಸಂತೋಷಿಸು; ಹೊಗಳು (ಅಂಬಿಕೆ ಸರಸ್ವತಿ ಮತ್ ಮುಖಪದ್ಮರಂಗದ ಏಟ್ಗೆಯಂ ಎಡೆಗೊಂಡು ಕೊಂಡುಕೊನೆದು ಈಗೆ ಅರಿಗಂಗೆ ವಿಶುದ್ಧಬುದ್ಧಿಯಂ: **ಪಂಪಭಾ,** ೧. ೫)

**ಕೊಂತ** – ಸಬಳ, ಒಂದು ಆಯುಧ (ಕೊಂತಂಗಳಿಂದಂ ಇಟ್ಟಿಗಳಿಂದಂ .. .. ಕುತ್ತುವುದುಂ: **ವಡ್ಡಾರಾ,** ಪು. ೯೬ ಸಾ. ೨೮)

**ಕೊಂತಗಾಱ** – ಭರ್ಜಿಗಾರ, ಕೊಂತ ಹಿಡಿದು ಹೋರಾಡುವವನು (ಅರಗಿಳಿವಿಂಡು ವಾರುವದ ಮೋಹರ ಆಱಡಿವಿಂಡು ಬೀರರ ಪಡೆ ಕೊಂಚೆವಿಂಡು ಪಲವಡ್ಡಣದೊಡ್ಡು ಅಮಳ್ವಕ್ಕಿವಿಂಡು ಮೆಯ್ವೆರಸುವ ಕೊಂತಗಾಱರ್: **ಕಬ್ಬಿಗಕಾ,** ೧೫೭)

**ಕೊಂದಸಿಯಳ್** – ಕೊಂದ ಕೃಶಾಂಗಿ, ದುರ್ಗಿ (ತಿಸುಳದೊಳ್ ಉಚ್ಚಳಿಪ್ಪ ಪೊಸನೆತ್ತರ್ ಕೆಂದಳಿರಾಗೆ ಕಣ್ಗೆ ಅಗುರ್ವಿಸುವಿನಂ ಒಕ್ಕು ನೇಲ್ವ ಕರುಳೋಳಿಯೆ ಬಾಳಮೃಣಾಳಮಾಗೆ ಮಿಕ್ಕಸುರರ ಮೆಯ್ಯೊಳಾದ ವಿರಹಾಗ್ನಿಯಂ ಆಱಿಸುತಿಂತೆ ತನ್ನ ಕೂರಸಿಯೊಳ್ ಅಡರ್ತು ಕೊಂದಸಿಯಳ್ ಇರ್ಕೆ ಅಸಿಯೊಳ್ ಪಡೆಮೆಚ್ಚೆ ಗಂಡನಾ: **ಪಂಪಭಾ,** ೧. ೬)

**ಕೊಂಬಳಿ** – ಕೊಂಬೆ, ರೆಂಬೆ (ಅಳಿವೃತಮಪ್ಪ ಕೊಂಬಳಿಯೆ ಸೆಂಬುಳಿಗೋಲ್ ವಸನಂ ಮಿಸುರ್ವ **ಕೆಂದಳಿರ್**: ಶಾಂತಿಪು, ೭. ೧३೬)

**ಕೊಂಬು** – ಸಂಕೇತಸ್ಥಳ (ಕೊಂಬೆಂದು ಸಂಕೇತಸ್ಥಳಂ: **ಶಬ್ದಮದ,** ಪ್ರಸಾ ೬೮); ಕೊಂಬೆ (ಫಳಭರದಿಂದ ಅತಿಭರವಾಯ್ತು ಎಳಮಾವಿಂಗೆನಿಸೆ ನೇಲ್ವ ಕೊಂಬುಗಳೆಸೆಗುಂ: **ಅಜಿತಪು,** ೬. ೧೫); ಮರದ ಕೊಂಬೆ (ಎಲೆ ಗಾವಿಲಾ! "ಕೋಡಗದೆರ್ದೆ ಕೊಂಬಿನ ಮೇಲೆ" ಎಂಬುದು ಪ್ರಸಿದ್ಧಮಿದಂ ನೀಂ ಮುನ್ನ ಕೇಳ್ದಱಿವುದಿಲ್ಲಕ್ಕುಮೆ, ಮೇಣ್ "ಹಿತ್ತಲ ಗಿಡು ಮರ್ದಲ್ಲ". ಎಂದೇಳಿದಂಗೆಯ್ದೆಯಕ್ಕುವಂ: **ಪಂಚತಂತ್ರ,** ४೦೪ ವ)

**ಕೊಂಬುಗೊಡು** – ಆಶ್ರಯ ನೀಡು (ತಮಮಂ ಸೆರೆಗೆಯ್ದು ಹಿಮಕ್ಕೆ ಕೊಂಬುಗೊಟ್ಟು ಆಲಮನಗ್ರ ಪಲ್ಲವ ಕರಾಗ್ರ ನಿರುದ್ಧ ಮರುತ್ತರಂಗಿಣೀ ಕೂಲಮನೆಯ್ದಿದರ್ ವಿಜಿತ ಚಂಡಮರೀಚಿ ಮರಿಚಿ ಜಾಲಮಂ: **ಪಂಪರಾ,** ೭. ೧೨೭)

**ಕೊಂಬುಗೊಳ್** – ಸಂಕೇತಸ್ಥಾನವಾಗಿ ಮಾಡಿಕೊ (ಮದನಂ ಕೊಂಬುಗೊಳಲ್ಕೆ ನಚ್ಚುವ ನವಾಮ್ರಂ: **ಚಂದ್ರಪ್ರಪು,** ೧. ೧೦೪); ಆಶ್ರಯ ಪಡೆ (ನೆಗಟ್ದೀ ಕರ್ಪೂರ ಕಾಳಾಗರು ಮಳಯಮಹೀಜಂಗಳ್ ಏಳಾಲತಾಳೀ ಸ್ಥಗಿತಂಗಳ್ ಕಣ್ಗೆವಂದಿರ್ದುವಂ ಇವನೆ ವಲಂ ಕೊಂಬುಗೊಂಡ ಅಂಗಜಂ .. .. ಎಚ್ಚು ಮೆಚ್ಚಂ ಸಲಿಸುವಂ: **ಪಂಪಭಾ,** ४. ೨३)

**ಕೊಂಬುಟಿ** – ಕೊಂಬೆಯನ್ನು ಬಿಡು, ಆಶ್ರಯ ತಪ್ಪು (ಸಾಹಸಮತಿಗೆಟ್ಟು ಕೊಂಬುಟಿದ ಕೋಡಗದಂತೆ ಕಣ್ಗೆಟ್ಟಪ್ಪಂ: **ಪುಣ್ಯಾಸ್ರ,** ೫. ३೫)

**ಕೊಕ್ಕ** – ಕೋಳಿ (ಉರಗಿಯಂ ಎಯ್ ಪಿಡಿದೊಡೆ ಅದಂ ಕುರಂಗರಿಪು ಬೆಕ್ಕು ಕೊಕ್ಕನಂ ತವೆ ಪಿಡಿವಂತಿರೆ ಪಿಡಿದುದು: **ಯಶೋಧಚ,** ३. ४೬)

**ಕೊಕ್ಕರಿಕೆ** – ಜಿಗುಪ್ಸೆ, ಹೇಸಿಕೆ (ಇನಿತಂ ನಿಮ್ಮ ಮನಕ್ಕೆ ಕೊಕ್ಕರಿಕೆಯಂ ಮಾಡಿರ್ದ ಸಾಮ್ರಾಜ್ಯಂ ಎಂತೆನಗೊಳ್ಪಂ ಪಡೆದಪ್ಪುದು: **ಆದಿಪು,** ४. ೭೯)

**ಕೊಕ್ಕರಿಕ್ಕೆ** – ಕೊಕ್ಕರಿಕೆ (ಅಲ್ಲಿರ್ದು ನಿಮ್ಮ ಮನಕ್ಕೆ ಕೊಕ್ಕರಿಕ್ಕೆಯಾಗಿಯುಂ ಪಾಟಿಗೆ ಗೆಂಟಾಗಿಯುಂ ನೆಗಟ್ವಂ ಎಂದು ಪೊಡೆವಟ್ಟು: **ಪಂಪಭಾ,** ೭. ೨೧ ವ)

**ಕೊಕ್ಕರಿಸು** – ಕೊಕ್ಕರಿಕೆವೆಱು, ಅಸಹ್ಯಪಡು (ಇವು ದೂರಫಲಂಗಳ್ ಸ್ವಪ್ನವಿಷಯಂಗಳ್ ತನೂಜ ಕೊಕ್ಕರಿಸದಿರು: **ಆದಿಪು,** ೧೫. ४೭)

**ಕೊಕ್ಕಱಿಕೆ** – ಜಿಗುಪ್ಸೆ (ಕೊಕ್ಕಱಿಕೆಗೆ ಇಕ್ಕೆಯಾದ ಮಾಂಸ ಅಸ್ಥಿ ಶಕಲಂಗಳ್‌ಪರಡಿರೆ: **ತ್ರಿಷಷ್ಟಿಪು,** ೨೭. ೧४೦ ವ)

**ಕೊಕ್ಕು** – ಚಂಚು, ಹಕ್ಕಿಯ ಚೂಪು ಬಾಯಿ (ಕೊನರನೆ ಕೊಕ್ಕಿನಿಂ ಸೆಳೆದು ಖಂಡಿಸಿ: **ರಾಜಶೇವಿ,** ೯. ೭४)

**ಕೊಗ್ಗನೆ** – ಕಗ್ಗನೆ, ಸುರುಟಿಕೊಂಡು (ತಱಿದಿಕ್ಕಿದ ತಳಿರಂತೆ ಕೊಗ್ಗನೆ ಕರಗಿ: **ಸುಕುಮಾಚ,** ೧೨. ೨४)

**ಕೊಗ್ಗಿ** – ಒಂದು ಔಷಧಿಸಸ್ಯ (ತೀವಿದ ಕೊಗ್ಗಿಯ ಕತ್ತುರಿಯುಂ ಕತ್ತುರಿಯೊಳಂಟಪರಿಚೆಯಂ: **ಆದಿಪು,** ४. ४೧ ವ); ಕಿವಿಯ ಕೊಳೆ (ವೈಕುಂಠನ ಕಿವಿಯ ಕೊಗ್ಗಿಯಿಂದಂ ಅಂದು ಒಗೆತಂದಾ ಕೈಟಭನಿವನೆನೆ .. .. ನೆಗಟ್ದಂ ಅತಿಬಳಂ: **ಜಗನ್ನಾವಿ,** ೭. ೧೯)

**ಕೊಗ್ಗು** – ಕಡಿಮೆಯಾಗು (ಮದಂ ಅದಿರ್ದು ಕೋಪಂ ಕೊಗ್ಗಿದುದು ಅಳಿಪು ಒಳಸೋರ್ದುದು .. .. ಏಂ ಉದಾರಗುಣಗಣಗರಿಷ್ಠನೋ ವೀರಜಿನಂ: **ಅಚವರ್ಧ,** ೧४. ೮४)

**ಕೊಟಕ** – ನೋಡುಗ (ಕುರುಭೂಮಿಯೆ ಖಡ್ಗಡಿಗಳ್ ಸುರಿಯಿಗಳೆ ಬಿಜ್ಜೋದರ್ ಆ ಗಿಳಿಗಳೆ ಕೊಟಕರಾಗಿರೆ ಮುಂಬುಗಳೆದು ಕಾದಿದರ್ ಅರಿಬಿರುದರ್: **ಗದಾಯು,** ೮. ೧४)

**ಕೊಟಕಿಡು** – ನೆಗೆದಾಡು (ಮೇದು ತಣಿದು ಕೊಟಕಿಟ್ಟಾಡುವ ಮೃಗಂಗಳೊಳ್: **ಅನಂತಪು,** ೧೧. ३೯ ವ)

**ಕೊಟ್ಟಗೆ** – ಚಿಕ್ಕ ಕೊಠಡಿ (ಕೊಟ್ಟಗೆಯ ಗುಡಿಯ ಜಳಗುಡಿಯ ಗೊಲ್ಲಣಿಗೆಯ ಮಂಡವಿಗೆಯ ವಿಳಾಸನಿವಾಸಂಗಳಿಂದಂ: **ಶಾಂತಿಪು,** ೧೦. ೧೪೭ ವ)

**ಕೊಟ್ಟಜ** – ಕಪ್ಪ, ಕಾಣಿಕೆ (ಕೊಟ್ಟಜಮೆಂದು ಕಪ್ಪಂ: **ಶಬ್ದಮದ,** ಪ್ರಸಾ ೬೬)

**ಕೊಟ್ಟಜಂಗೊಡು** – ಕಪ್ಪ ಕೊಡು (ವರುಣನೆ ಕೊಟ್ಟಜಂಗೊಟ್ಟಂತೆ ಪುಂಜಿಸಿರ್ದ ಪಂಚರತ್ನ ರಾಶಿಗಳುಮಂ ತೋಱುತ್ತುಂ: **ಶಾಂತಿಪು,** ೩. ೧೫ ವ)

**ಕೊಟ್ಟಸು** – ಸುಟ್ಟ ಮಾಂಸ (ಕೊಟ್ಟಸುಗಟ್ಟುಗಳಿಂದಂ ತೊಟ್ಟನೆ ಪಱಿಪಟ್ಟು ಬೀೞ್ವವೊಲ್ ಬಿರ್ದು: **ಆದಿಪು,** ೫. ೮೪)

**ಕೊಟ್ಟಾರ** – [ಕೋಷ್ಠಾಗಾರ] ಕಣಜ, ಭಂಡಾರ (ಕೊಟ್ಟಾರದ ಶಸ್ತ್ರದ ಸೆಜ್ಜೆವನೆಗಳ್ ಅತಿ ರಂಜಿಸುಗುಂ: **ತ್ರಿಷಷ್ಟಿಪು,** ೨೮. ೩೬)

**ಕೊಟ್ಟಿಗೆ** – ಹೊರೆ ಹೊರುವ ಎತ್ತು, ಹೇರೆತ್ತು (ಸಾರದ್ರವ್ಯಸಂಚಯಕ್ಕೆ ಬಂಡಿಯಂ ಕೊಟ್ಟಿಗೆಯಂ ಒಟ್ಟೆಯಂ ಪೊಱೆಯಾಳುಂ ನೆಱೆಯದೆ: **ಪುಷ್ಪದಂಪು,** ೩. ೧೨೯ ವ)

**ಕೊಟ್ಟು** – ನವಿಲು, ಕೋಳಿಗಳ ತಲೆಯ ಮೇಲಿನ ತುರಾಯಿ (ಕೊಟ್ಟು ಅಲ್ಗೆ ಕೇಸರಂ ಉಬ್ಬಲ್ ಕೊರಲೆತ್ತಿ ಬಾಯ್ದೆಱೆದು ಕುಕ್ಕೂಕೂ ಎನುತ್ತ .. .. ಕೋಳಿ ನಲವಿಂ ಕೂಗಿತ್ತು: **ತ್ರಿಷಷ್ಟಿಪು,** ೨೪. ೨೧೮); ಚೂಚುಕ (ವಿಸರುಹದಂತೆ ಕೇಸರಮನಾಂತುದು ಮೆಯ್ಗಲಿಯಂತಿರೆ ಆರೆ ಕೂರ್ಪಸೆದುದು ಚಾಗಿಯಂತೆ ನೆಱೆ ಕೊಟ್ಟು ಎಸೆದೊಪ್ಪಿತು: **ಯಶೋಧಚ,** ೩. ೭೮)

**ಕೊಡ** – ಗಡಿಗೆ, ಬಿಂದಿಗೆ (ಕುಲಮೆಂಬುದುಂಟೆ ಬೀರಮೆ ಕುಲಮಲ್ಲದೆ ಕುಲಮನಿಂತು ಪಿಕ್ಕದಿರಿಂ ನೀಂ ಒಲಿದಲ್ಲಿ ಪುಟ್ಟಿ ಬಳೆದಿರೊ ಕುಲಮಿರ್ದುದೆ ಕೊಡದೊಳಂ ಶರಸ್ತಂಬದೊಳಂ: **ಪಂಪಭಾ,** ೨. ೮೩)

**ಕೊಡಂಕೆ** – ಕಿವಿ (ಚೆಲ್ವಿಂ ನಿಮಿರ್ದಂಗಂ ಎತ್ತಿದ ಕೊಡಂಕೆ ಜವಂಗೆಡದೇೞ್ವ ರೋಮಹರ್ಚಂ: **ಶಬರಶಂ,** ೨. ೪೦)

**ಕೊಡಕೆ** – ಕಿವಿ (ಕೊಡಕೆಗೆ ಸಾರ್ಚಿ ಕೆನ್ನೆಯಳಕಂಗಳನೆತ್ತಿ ಕುಚೋರುಹಾರಮಂ ಮುಡುಪಿನ ಪಿಂದಣಕ್ಕಿಟಿಪಿ.. ..ತೊಡರಿಸಿದರ್ ತದೀಯ ಸವನಕ್ರಿಯೆಯಂ ಸಲೆ ದೇವಕಾಂತೆಯರ್: **ಶಾಂತೀಶ್ವಪು,** ೧೪. ೬)

**ಕೊಡಂತಿ** – ಕೊಡತಿ, ಮರಗೆಲಸದ ಸಾಧನ (ಕರ್ಣನ ಎರಡುಂ ತೊಡೆಯುಮಂ ಉಳಿಯಂ ಊಱಿ ಕೊಡಂತಿಯೊಳ್ ಬೆಟ್ಟಿದಂತೆ ಅತ್ತಂ ಇತ್ತಂ ಉರ್ಚಿಪೋಗೆಯುಂ: **ಪಂಪಭಾ,** ೧. ೧೦೪ ವ)

**ಕೊಡಂಬೆ** – ಮೀನು ಹಿಡಿಯಲು ಬಳಸುವ ಬುಟ್ಟಿ (ಕೆಲವು ಪದಂಗಳ್ ಸ್ವಭಾವದಿಂ ನಿತ್ಯಬಿಂದುಗಳಪ್ಪುವು ಅದರ್ಕೆ ಪ್ರಯೋಗಂ; ಕೊಡಂಬೆ: **ಶಬ್ದಮದ,** ೪೬ ವೃತ್ತಿ, ೧೬)

**ಕೊಡಗೂಸು** – ಎಳೆಯ ಹುಡುಗಿ, ಕನ್ಯೆ (ಮಗಳಂ ಈವೆನಪ್ಪೊಡೆ ಕೊಡಗೂಸೆಂಬುದು ಪೆಱರೊಡವೆ ಮಗನಂ ಈವೆನಪ್ಪೊಡೆ ಸಂತತಿಚ್ಛೇದಮುಂ ಪಿಂಡಚ್ಛೇದಮುಂ ಅಕ್ಕುಂ: **ಪಂಪಭಾ,** ೩. ೨೫ ವ)

**ಕೊಡಗೂಸುತನ** – ಕನ್ನೆತನ (ಎಸೆದುದು ನಿಸದಮಳ ಕೊಡಗೂಸುತನಂ: **ಆಚವರ್ಧ,** ೯. ೧೯)

**ಕೊಡಪು** – ಕೊಡವು, ಜಾಡಿಸು (ಕೊಡಪು–ಕರವಿಕೀರ್ಣೇ: **ಶಬ್ದಮದ, ಧಾ** ೪೫೮)

**ಕೊಡಲಿ** – ಮರ ಕಡಿಯುವ ಸಾಧನ (ಕಾವಿಲ್ಲದ ಕೊಡಲಿಯೊಳ್ ಮರನಂ ಕಡಿವೆನೆಂಬ ಭಾಯೇಯಲ್ಲದೆ ಮಗನಂ ಪಡೆವೆನೆಂಬ .. .. ಪೆರ್ಗಾವಿಲನಂ ಪೋಲ್ಕುಂ: **ಧರ್ಮಾಮೃ,** ೫. ೬೯ ವ)

**ಕೊಡವಿ** – ಮದುವೆಯಾಗದ ಹೆಣ್ಣು, ಕನ್ಯೆ (ಕವಿತರ್ಪ ನೆರವಿಯಂ ಕನಲವೋರಿಗಳ್ಕಂಡು ಬೆರ್ಚಿ ಕೆಂಗೋಲ್ಗೊಂಡೋಡುವುದಂ ಇದೇನೆಂದು ಕೊಡವಿ ಬೆಸಗೊಳೆ ನಾಗಶರ್ಮನ್ ಅದಂ ಅಱಿದು ಇಂತೆಂದಂ: **ಸುಕುಮಾಚ,** ೭. ೨)

**ಕೊಡಸಾರಿ** – ಒಂದು ಮೂಲಿಕೆ (ದುರ್ಯೋಧನಂ ಬಂದಿಕಾಱನಂತೆ ಸೆಱೆಗೆಯ್ದುಂ ವ್ರಣವೈದ್ಯನಂತೆ ಕೊಡಸಾರಿಯಂ ಪಿಡಿದುಂ ಸೂಳೆಯಂತೆ ಕಟಿವುಟಿವನಱಿದುಂ ರಸವಾದಿಯಂತೆ ಕಟ್ಟಿಯುಂ ಪೆರ್ಜೋಡೆಯಂತೆ ನುಣ್ಣಿತಂ ವೇೞ್ದು: **ಪಂಪಭಾ,** ೬. ೭೨ ವ)

**ಕೊಡಸಿಗೆ** – ಒಂದು ಬಗೆಯ ಸಸ್ಯ (ಅಂಗಾರವಲ್ಲಿ ಕೊಡಸಿಗೆ: **ಅಭಿಧಾವ,** ೧. ೮. ೨೭)

**ಕೊಡುಕಿಸು** – ಕುಡಿಸು, ನೀರೂಡು (ಲವಂಗಪಲ್ಲವಮನಿತ್ತು ತಮಾಲದ ಮೂಲವಿಂಡಿಯೊಳ್ ಕೊಡುಕಿಸಿ ನೀಳ್ದುರೋದಕಮಂ ಊಡಿಸಿ: **ಸೂಕ್ತಿಸುಧಾ,** ೩. ೫೯)

**ಕೊಡೆ** – ಛತ್ರಿ (ಸೀಗುರಿಗಳುಮಂ ಕೊಡೆಗಲೂಮಂ ಪಿಡಿಯಿಸಿ: **ವಡ್ಡಾರಾ,** ಪು. ೭೪, ಸಾ. ೧೧)

**ಕೊಡೆನೆಗೆ** – ಒಂದು ಕಡೆಯ ಭಾರದಿಂದ ಮತ್ತೊಂದು ಕಡೆ ಮೇಲಕ್ಕೇಳು (ನಡೆಗಲ್ವಂದುಂ ಬಿಣ್ಪಿಂ ಕೊಡೆನೆಗೆದಪುದು ಉರ್ವಿಯೆಂದು ವಾಸುಗಿ ಪಲವುಂ ಪೆಡೆಯಂ ಶಿಶು ನಡೆವೆಡೆಯೊಳ್ ಪಡೆದಾಂತು ಸಹಸ್ರಫಣನೆನಲ್ ಪೆಸರ್ವಡೆದಂ: **ಪಂಪರಾ,** ೩. ೧೨೯)

**ಕೊಡೆಯೆಲೆ** – ದೊಡ್ಡ ಎಲೆ (ಕೊಡೆಯೆಲೆಯ ಕೆಲಗಿರ್ದ ರಾಜಹಂಸಿಯಂ ವಿಲಾಸಮಂ ನೆನೆಯಿಸಿದಳ್: **ಶಾಂತಿಪು,** ೯. ೧೭೮)

**ಕೊಡೆಯೊಡೆಯ** – ಕೊಡೆಯ ಒಡೆಯ, ರಾಜ (ಒಡೆಯ ಪ್ರತ್ಯಯಕ್ಕೆ: ಚಾಗದೊಡೆಯಂ ಕೊಡೆಯೊಡೆಯಂ ಜಾಣೊಡೆಯಂ: **ಶಬ್ದಮದ,** ೨೧೭ ಪ್ರ)

**ಕೊಣಕಿಡು** – ನೆಗೆದಾಡು, ಕುಪ್ಪಳಿಸು (ತಲೆವೊಲದ ನಾನಲ್ವಳ್ಳದ ದರಿಯ ಕುತ್ತುಱೆಂಗೆ ಕೊಣಕಿಡುವ ಪುಲ್ಲೆ ಎರಲೆಯ ಜವಕ್ಕೆ ಪಕ್ಕುಗೊಟ್ಟು: **ಮಲ್ಲಿನಾಪು,** ೭. ೨ ವ)

**ಕೊಣಕು** – ಕೊಣಕಿಡು (ಸುಣಿಸೊಕ್ಕೆ ಕೊಣಕುತುಂ ಪಾಱಿ ದೆಸೆದೆಸೆಗೆ ಪರಿದು ಪಿರಿಯ ಮರಂಗಳನುಱಿದೆ ಕೊಂಡು ನೂಂಕಿ ಪರಿಯುತ್ತುಂ ಪೊಣದುರ್ದ್ದಂ ನೆಗೆದು ಕುನುಂಗಿ: **ಪಂಚತಂತ್ರ,** ೯೮ ವ)

**ಕೊಣಕೋಲ್** – ಒಂದು ಬಗೆಯ ಬಾಣ (ಗುರುಗಂಜಿಯ ಬಣ್ಣದಂತಿರ್ಪ ಕಣ್ಣುಂ ಕೊಣಕೋಲಂತಪ್ಪ ಬಾಲಮುಂಬೆರಸು ಬಿಲದೊಳ್ ಪೊಕ್ಕು: **ಪಂಚತಂತ್ರ,** ೪೩೪ ವ)

**ಕೊಣಸು** – ಜಿಂಕೆಯ ಮರಿ (ಕೊಣಕಿಡುವ ಕೊಣಸುಗಳಂ ಪಿಡಿದು ಮುದ್ದಾಡಿಸುತ್ತುಂ: **ನೇಮಿನಾಪು,** ೧. ೯೨ ವ)

**ಕೊತ್ತಳ** – ಕೋಟೆಯ ಬುರುಜು (ಸುತ್ತುಂ ಪರಿವಡೆದುದು ಪುರಜನಂ ಆಳ್ವರಿಗಳ ಕೊತ್ತಳದ ಮದಿಲ ಮಾಡದ ಮೇಲಂ: **ಆಚವರ್ಧ,** ೫. ೫೨)

**ಕೊತ್ತಟಿ** – ಕಾಗೆಗಳ ಗುಂಪು, ಆಜ್ಞೆಮಾಡುವವರ ಗುಂಪು (ಎರಡರ್ಥಕ್ಕೆ: ಕೊತ್ತಟಿಯೆಂದು ಕಾಗೆಯ ಮೊತ್ತಮುಂ ಬೆಸೆದವರ ನೆರವಿಯುಮಕ್ಕುಂ: **ಶಬ್ದಮದ,** ೩೩ ವೃತ್ತಿ ೧೪೧)

**ಕೊತ್ತು** – ಕೊಚ್ಚಿ ಹಾಕು (ಅಣೆದುದು ಕೊತ್ತಿ ನೂಂಕಿದುದು ಪೊಕ್ಕೊಡನೆ ಇಕ್ಕಿದುದು ಏಱಿ ಬಾಯ್ಗಳಿಂ ನೆಣನುಗೆ ನೆತ್ತರುಚ್ಚಳಿಸೆ ಜಾದಿನ ಬೆಟ್ಟ ಮಗುಳ್ಚುವಂತೆ: **ಕಬ್ಬಿಗಕಾ,** ೨೨೨)

**ಕೊದಳ್** – ಮಧುರವಾದ ಮಾತು (ಪದಕೊರಲ್ ಇಂಪಂ ಅಪ್ಪುಕೆಯೆ ಕೊಂಕು ನಯಂ ಗಮಕಂಗಳಿಂ ಪೊಡರ್ ಕೊದಳ್ ಎಟೆದಿಕ್ಕಿದಂತೆ ಸುತಿಯೊಳ್ ಸಮವಾಗಿರೆ .. .. ಮೇನಕೆ ಸರಸ್ವತಿ ಬಾಯ್ದೆಱೆದಂತೆ ಪಾಡಿದಳ್: **ಪಂಪಭಾ,** ೭. ೮೮)

**ಕೊದಳಿ** – ಎಳ್ಳುಗಿಡದ ಸಿಪ್ಪೆ (ಪರಮಾರ್ಥದಿಂ ಜಿನಾಧೀಶ್ವರಂ ಎಳ್ಳಂ ಕೊದಳಿವೆರಸು ಮೆದ್ದವನಕ್ಕುಂ: **ಸಮಯಪ,** ೪. ೧೪೩)

**ಕೊನರ್** – ಚಿಗುರು (ಓರೊರ್ವರ ಮೆಯ್ಯೋಲೋಗೆಯೆ ರೋಮಾಂಚಂ ಶೃಂಗಾರ ಸುಧಾರಸ ವಾರಿಧಿಯ ತೀರ ಲತಾದ್ರುಮದೊಳೊಗೆದ ಕೊನರೆಂಬಿನೆಗಂ: **ಪಂಪರಾ,** ೩. ೮೦); ಅಭಿವೃದ್ಧಿ ಹೊಂದು

**ಕೊನರಿಸು** – ಚಿಗುರಿಸು (ಕಾಷ್ಠಮಂ ಕೊನರಿಪರ್ ಕಲ್ಲಲ್ಲಿ ನಾರೆತ್ತುವರ್ .. .. ಕವಿಗಳೊಳ್ ಪೀಯೂಷಮಂ ಪಿಂಡುವರ್ .. .. ಕವಿಪ್ರವೇಕರೆ ವಲಂ: **ಲೀಲಾವತಿ,** ೧. ೧೩)

**ಕೊನೆ** – ಹೊಗಳು (ಖಡ್ಗವಿದ್ಯೆ ತಮ್ಮೊಳೆ ನೆಲಸಿತ್ತೆನಲ್ ಕೊನೆಯ ಕಾಳೆಗದಿಂ ಶಿಶುಪಾಲ ದೈತ್ಯನೊಳ್ಬಲಿರಿಪು ಕಾದಿದಂ: **ಜಗನ್ನಾವಿ,** ೭. ೯೮); ಸಂತೋಷಪಡು (ಕುವಲಯದ ಅಲರಂ ಕೌಮುದಿಯ ವಿಭವಮಂ ಕಂಡಕೊಂಡು ಕೊನೆವಂ ಕವಿಯೋ ರವಿಯೋ: **ನೇಮಿನಾಪು,** ೧. ೩೩); ಹೆಮ್ಮೆಪಡು ಕೊನೆದು ಕೊಣಕಿಟ್ಟು ಕೋಣನನೇಜಿದ ಭಗವತಿಯಂತೆ ಬಿಱ್ಱನೆ ಬೀಗಿ: **ನೇಮಿನಾಪು,** ೩. ೧೮ ವ); ತುದಿ, ಅಗ್ರ ಹಾಗೂ ಚಿಗುರು (ಕೊನೆ–ಸ್ವೀಕೃತಾರ್ಥ ವರ್ಧನೇ ಅಗ್ರೇ ಚ: **ಶಬ್ದಮದ,** ಧಾ ೪೩೫)

**ಕೊಪ್ಪರ** – ಮೊಳಕೈ (ಕಡುಪಿಂ ಕೆಡಪಿ ಕೊಪ್ಪರದೊಳ್ ಕುಮ್ಮಿ ಮಂಡಿಯೊಳ್ ಮಿಡಿದು: **ಗಿರಿಜಾಕ,** ೨. ೧೦೫ ವ)

**ಕೊಪ್ಪರಿಕೆ** – ಕೊಪ್ಪರಿಗೆ, ಅಗಲ ಬಾಯಿಯ ದೊಡ್ಡ ಪಾತ್ರೆ (ಬ್ರಹ್ಮಾಂಡಮೆಂಬ ಕೊಪ್ಪರಿಕೆಯ ಮಧ್ಯದಲ್ಲಿ ಸೂರ್ಯನೆಂಬಗ್ನಿಯಿಂ ಪಗಲಿರುಳೆಂಬ ಅಡುಗರ್ಬುಗಳಿಂ ಮಾಸಋತುಗಳೆಂಬ ಸಟ್ಟುಗದಿಂ ತೊಳಸುತ್ತುಂ: **ಪಂಚತಂತ್ರ,** ೧೧೭, ಶ್ಲೋಕ ೩೩ ಅ ಟೀಕೆ)

**ಕೊಪ್ಪು** – ಬಿಲ್ಲಿನ ತುದಿ (ಆಗಳ್ ವಿಕ್ರಾಂತತುಂಗಂ ಬಿಲ್ಲ ಕೊಪ್ಪಿನ ಮೇಲೆ ಕೆಯ್ಯನೂಜಿ ಮುಗುಳ್ನಗೆ ನಗುತ್ತುಂ ಪಾಂಚಾಳರಾಜತನೂಜೆಗಿಂತೆಂದಂ: **ಪಂಪಭಾ,** ೩. ೭೨ ವ); ಒಂದು ಕಿವಿಯ ಆಭರಣ (ಕಿವಿಯ ಕೊಪ್ಪಂ ನೀಂ ಕೊಳ್ವೊಡೆ ನೋಯದಂತೆ ತೆಗೆ: **ಧರ್ಮಪ,** ೯. ೨೧); ಜಡೆಬಿಲ್ಲೆ (ಕರ್ಣಕುಂಡಲಂ ಕೊಪ್ಪು ಸರಿಗೆ .. .. ಎಂಬ ಭೂಷಾನಿಕರಮಂ: **ಆದಿಪು,** ೫. ೩೩)

**ಕೊಯ್** – ಕತ್ತರಿಸು (ಶಾಡ್ವಲ ತೃಣತತಿ ಖಡ್ಗದಿಂ ಇಳಾಧಿಪಂ ಕೊಯ್ದು ನಿರ್ದಯದಿಂ ಪೀಡಿಸಿ: **ಸುಕುಮಾಚ,** ೭. ೨೯); ಹೂಬಿಡಿಸು (ಆಮೋದ ಕುಸುಮಸಮಿತಿಯಂ ಆ ಮರಗಳೊಳಾಯ್ದು ಕೊಯ್ದುಂ ಇಲ್ಲಿಗೆ ಬರ್ಪೆಂ: **ಕವಿರಾಮಾ,** ೩. ೧೩೨)

**ಕೊಯ್‌ತಲೆಯಧಮಾ** – ಕೊಯ್ದ ತಲೆಯ ನೀಚನೇ, ಎಂದರೆ ಎರಡು ತಲೆಯ ನೀಚನೇ (ಕೊಯ್‌ತಲೆಯಧಮಾ ನೀಚಾ ಸ್ವಾಮಿಯಂ ಇಂತೆಂದಾ ಎಂದವನಂ ಬಯ್ದೊಡೆ ಭಟ್ಟಾರರ್ ಎನ್ಗುಂ: **ವಡ್ಡಾರಾ,** ಪು ೭, ಸಾ ೨೧)

**ಕೊರಗಿಸು** – ಕುಗ್ಗಿಸು, ಬಾಡಿಸು (ತಂಗಾಳಿಯುಂ ನಂಜಿನ ಘಾಳಿಯೆನಿಸಿ ವನಕುಸುಮ ಕಿಸಲಯ ಪ್ರಕರಮುಂ ಕೊರಗಿಸುವುದು: **ಆಚವರ್ಧ,** ೪. ೫೮)

**ಕೊರಗು** – ನಿಸ್ಸಾರವಾಗು (ಸೀಕರಿವೋದತ್ತು ಮೃಣಾಳತಂತು ರಚಿತ ಜ್ವಾಲೇಖೆ ಮೀನಧ್ವಜಂ ಕೊರಗಿತ್ತು ಅಗ್ಗದ ಕಂತು ಸೀದ ಕರಿಯಂತಾದಂ: **ಪಂಪರಾ,** ೧. ೧೬)

**ಕೊರಟು** – ಒಣಗಿ ಸುರುಟಿಹೋದದ್ದು (ಕೊರಟಾದುರಿಗೇಶದೊಳಿರ್ದ ಪೇನ್ಗಳಂ: **ಕರ್ಣನೇಮಿ,** ೩. ೧೧೨)

**ಕೊರಡು** – ಕಾಮನ ಬಿಲ್ಲು (ಮೇಲಲೆವ ಮುಗಿಲ ಹೊದಜಿನ ಮೂಲೆಗಳಂ ನೆಗೆದ ಕೊರಡು ಕೊಂಡವೊಲ್: **ಅನಂತಪು,** ೯. ೮)

**ಕೊರಪುಳ್ಳಿ** – ಸೌದೆಯ ತುಂಡು (ಕೂರ್ಮಂ.. ..ಬಾಯಂ ತೆಗೆವುದುಂ .. .. ಮಾಂಸಾಹಾರಿಗಳ್ ಕಂಡು ಕೊರಪುಳ್ಳಿಯೊಳ್ ಮೋದಿ ಕೊಂದರ್: **ಪಂಚತಂತ್ರ,** ೨೨೪ ವ)

**ಕೊರಲ್** – ಕೊರಳು (ಬಳ್ಳಿಯಂ ಕೊರಲೊಳ್ ತಗುಳ್ಚಿ: ವಡ್ಡಾರಾ, ಪು. ೧೨೦, ಸಾ. ೧೬); ಧ್ವನಿ (ಅಂತೊಂದೆ ಕೊರಲೊಳ್ ಕೊಳೆ ಪಾಡುವ ಬರ್ಬರ ಕಿರಾತೆಯರಿಂಗೊರಲೊಳೊದವಿ ಬಂದು: **ಶಾಂತಿಪು,** ೨. ೨೨ ವ); ಮಾತು, ನುಡಿ (ಒಪ್ಪಂಬೂಸಿದವೋಲ್ ತೆಱಂಬೊಳೆವ ಕೊಂಕಂ ಪಾಲೊಳೊಂದಿರ್ಪವೋಳ್ ಒಪ್ಪಂಬೆತ್ತಿನಿದಾದ ಬರ್ದುನುಡಿಯಂ ತಳ್ತು .. .. ಕೊರಲ್ಗೊಳ್ಳದೇ: **ಕಬ್ಬಿಗಕಾ,** ೫)

**ಕೊರಲಿಟೆವು** – ದನಿ ಬಿದ್ದುಹೋಗಿರುವುದು (ಸುರಿವಶ್ರುವ ಕೊರಲಿಟೆವಿನೆಗಂ ಮಟ್ಟಿಗದಟ್ಟ ಮೊಱಗಿಂಗಂ: **ಶಾಂತಿಪು,** ೬. ೮೯)

**ಕೊರಲುದ್ದಂ** – ಕಂಠ ಪೂರ್ತಿ, ಕೊರಳಿನವರೆಗೆ (ಬಿರಿದೊಳ್ದಾವರೆಗಂಪಂ ಕೊರಲುದ್ದಂ ಪೀರ್ವ ತುಂಬಿಯೆನೆ: **ಕಬ್ಬಿಗಕಾ,** ೧೮)

**ಕೊರಲ್ಚು** – ಹುಯ್ಯಲಿಡು, ಆಕ್ರೋಶ ಮಾಡು (ಕೊರಲ್ಚು–ಆಕ್ರೋಶಧ್ವನೌ: **ಶಬ್ದಮದ, ಧಾ,** ೧೮೦)

**ಕೊರಸು** – ಒಂದು ಬಗೆಯ ಹಕ್ಕಿ (ನಿನ್ನ ಭರ್ತಾರಂ ಬೇಂಟೆಯಾಡಿ ಪಲವುಂ ಲಾವುಗೆಯುಂ ಉಂಕೆ ಕೊರಸುಂ ಮೊದಲಾಗೊಡೆಯ ಪಕ್ಷಿಜಾತಿಗಳಂ ಬಲೆಯನೊಡ್ಡಿ ಪಿಡಿದು: **ವಡ್ಡಾರಾ,** ಪು ೧೫೧, ಸಾ ೩)

**ಕೊರೆ** – ಗೊರಕೆ ಹೊಡೆ (ಕೊರೆವೊಡೆ ಬೆಟ್ಟುಗಳ್ ಬಿರಿವುವು ಉಱುವ ಲಾಳೆಯ ಲೋಳೆಗಳ್ ಪೊನಲ್ವರಿವುವು ಕೆಮ್ಮಿ ಕುಮ್ಮಿದೊಡೆ ತೋಳೊಳೆ ಜೀವವಿಯೋಗಮಪ್ಪುದು: **ಪಂಪಭಾ,** ೪. ೧೦೦)

**ಕೊರ್ಬು** – ಹೆಚ್ಚಾಗು (ಕೊರ್ವು–ಸಮೃದ್ಧೌ: **ಶಬ್ದಮದ,** ಧಾ ೪೮೧); ಗರ್ವ (ಅಣಂ ಮಟ್ಟಿದುದು ಉರಿವ ಮದನಾರಿಯ ಕೊರ್ಬು: **ಆದಿಪು,** ೯. ೫೬)

**ಕೊರ್ಬುಗುಡು** – ಕೊಬ್ಬಿಸು (ತಮಮಂ ಸೆಱೆಗೆಯ್ದು ಹಿಮಕ್ಕೆ ಕೊರ್ಬುಗೊಟ್ಟು ಆಲಮಂ: **ಪಂಪರಾ,** ೭. ೧೨೭)

**ಕೊರ್ಬುವಡೆ** – ಹೆಚ್ಚಾಗು (ಸೂಕ್ತಿಸುಧಾಪ್ರವಾಹದೊಳ್ ಕೊರ್ಬುವಡೆದು: **ಕುಸುಮಾಕಾ,** ೧೫. ೮೯)

**ಕೊರ್ವಿಸು** – ಕೊಬ್ಬಿಸು (ಲಕ್ಷ್ಮಣಂ ಮಣಿ ಕಿರೀಟ ಕಿರಣದಿಂ ತದೀಯ ಪದನಖ ಮಯೂಖಮಂ ಕೊರ್ವಿಸೆ: **ಪಂಪರಾ,** ೬. ೧೭೫ ವ)

**ಕೊರ್ವು** – ಸೊಕ್ಕು (ಬಸವಂಗಳ್ ಕೊರ್ವಿ ಕರಂ ಬಸಮಲ್ಲದೆ ಪೊರ್ದಿ ಸಾಗು ಮೇಣ್ ಇಱಿಗುಂ: **ಸಮಯಪ,** ೧೧. ೧೨೯); ಉಬ್ಬು, ದಪ್ಪನಾಗು (ಉರ್ವಿದ ಮುಯ್ವು ಕೊರ್ವಿದ ಪೆಗಲ್: **ಪುಷ್ಪದಂಪು,** ೩. ೧೫); ಅಹಂಕಾರ ಬಲ್ಲಾಳಪ್ಪನ ಕೊರ್ವುಂ ಜಡಿದಾಳಾಪಂಗೆಯ್ದು ಕೆಡಿಸದಂ ನೃಪಸುತನೇ: **ಧರ್ಮಾಮೃ,** ೨. ೫೬)

**ಕೊಲ್** – ಪ್ರಾಣ ತೆಗೆ (ಕೊಲ್ಲದುದೆ ಧರ್ಮಮೆಂದಿಂತು ನಂಬಿ: **ವಡ್ಡಾರಾ,** ಪು. ೧೧, ಸಾ. ೨೬); ಪೀಡಿಸು, ಹಿಂಸೆ ಮಾಡು (ಕೊಲ್–ಹಿಂಸಾಯಾಂ: **ಶಬ್ದಮದ,** ಧಾ ೬೨೭); ಮರ್ದಿಸು (ಅನ್ನೆಗಂ ಇತ್ತ ಸಂಸಪ್ತಕ ನಿಕುರುಂಬದೊಳಗೆ ಒರ್ವರುಮಂ ಕಿಱುವೀೞಲೀಯದೆ ರಸಮಂ ಕೊಲ್ವಂತೆ ಎಂತಾನುಂ ಕೊಂದು: **ಪಂಪಭಾ,** ೧೨. ೧೨೦ ವ)

**ಕೊಲೆಯಡಗು** – ಪ್ರಾಣಿಯನ್ನು ಕೊಂದು ಸಿದ್ಧಪಡಿಸಿದ ಮಾಂಸ (ಕೊಲೆಯಡಗ ತಿಂಬುದಂ ಪರಲಲನೆಯರೊಳ್ ನೆರೆವುಪಾಯಮನೆ ಪೇೞ್ವುದಱಿಂ ಕೆಲಬರೆ ವೇದಮನೊಲ್ಲರ್: **ಸಮಯಪ,** ೧೧. ೧೪೨)

**ಕೊಲ್ಲಟಿಗ** – ಕೊಲ್ಲಟಿ, ದೊಂಬ (ಕಾಲ್ಗಟ್ಟಿ ಮೇಲ ಕಟ್ಟೆಯ ಸಾಲ್ಗಳ್ ಇರಲ್ ಬೀಡೆಸೆದುದು ಕೊಲ್ಲಟಿಜನರಾ: **ಉದ್ಭಟಕಾ,** ೫. ೧೦೧)

**ಕೊಲ್ಲಣಿಗೆ** – ವಿನೋದ, ಆಟ (ತದ್ದಿಗ್ವಿಜಯಯಾತ್ರೋದ್ಯೋಗದೊಳ್ ಕೊಲ್ಲಣಿಗೆ ಮೆಱೆಯೆ ಬರ್ಪಲ್ಲಿ ಭೂಪಾಲಸಿಂಹರ್: **ಅನಂತಪು,** ೧೩. ೭೫); ಗುಂಪು (ಐರಾವತದ ಕಾಲಾಟಕ್ಕೆಡೆಯಪ್ಪಂತು ಕೊಲ್ಲಣಿಗೆಯೊಳ್ ಬರ್ಪನೇಕ .. .. ವಾಹನಂಗಳಂ ತೆರಳೆ ತೂಳ್ದಿ ತೆಱಪಂ ಮಾಡಿಯುಂ; **ಚಂದ್ರಪ್ರಪು,** ೧೨. ೮೩ ವ)

**ಕೊಲ್ಲಿನೋಟ** – ವಕ್ರ ನೋಟ, ಓರೆನೋಟ (ಎಂದು ಕವಿರಾಜಮಲ್ಲಂಗೆ ಕೊಲ್ಲಿನೋಟಮಂ ಪಸಾಯಮಿತ್ತು ಲೀಲಾವತಿಯಿಂತೆಂದಳ್: **ಲೀಲಾವತಿ,** ೧೩. ೫೯ ವ)

**ಕೊಸಗು** – ಬೆಟ್ಟದಾವರೆ, ಕರ್ಣಿಕಾರ (ಪೊಸತಲರ್ದ ಕೊಸಗು ತಳಿರ್ವೊದ ಅಸುಗೆ ಪಸುರ್ನನೆಯೊಳಿಡಿದ ಮಲ್ಲಿಗೆ: **ಆದಿಪು,** ೧೧. ೮೫)

**ಕೊಸಱು** – ಮೋಹಗೊಳಿಸು (ವಿಟನಂ ಕೂಟದೊಳ್ ಕೊಸಱಿ ಬೇಟದೊಳ್ ಬಳೆಯಿಸಿ: **ಗಿರಿಜಾಕ,** ೨. ೧೦೫ ವ)

**ಕೊಸೆ** – ಕುದುರೆ ಸವಾರಿಯ ಒಂದು ಬಗೆ (ಪಸುಗೆ ನೆಲಂ ಜಲಂ ಹಯದೊಡಂಬಡು ವಂಚನೆ ಕೇಣಂ ಆಸನಂ ಕೊಸೆ ದೆಸೆ ದಿಟ್ಟಿ ಮುಟ್ಟಿ ಕೆಲಜಂಕೆ ನಿವರ್ತನೆ ಕಾಣ್ಕೆ ಪರ್ವಿದ ಏರ್ವಸನದೊಳಾದ ಬಲ್ಮೆಯೊಳ್ ಒಡಂಬಡೆ ತಳ್ತಿಱಿವಲ್ಲಿ ಮಿಂಚಿನೊಳ್ ಮುಸುಕಿದ ಮಾಟ್ಕೆಯಾಯ್ತು ಸಮರಾಂಗಣಂ ಉಳ್ಕುವ ಬಾಳ್ಗಳ ಉಳ್ಕದಿಂ: **ಪಂಪಭಾ,** ೧೦. ೭೮); ಕಡಿವಾಣ ನಿಶ್ಶಂಕೆಯಿನಂತಂಗೊಂಡು ಭೋಮಕನೆಡೆದ ಕೊಸೆಯಂ ತೆಗೆದು ನಿರ್ವರ್ತಿಸಲೆಂದು ನೆಗಪಿ ಮುರಿವುದುಂ: **ಕರ್ಣನೇಮಿ,** ೪. ೧೦೪ ವ); ಸಂಭೋಗಗಿಸು (ಕೊಸೆ– ನಿಧುವನಕರಣೇ: **ಶಬ್ದಮದ,** ಧಾ ೬೯೩); ಪ್ರಾಣಿಗಳ ಬೆದೆ (ಕಟಿವುಂ ಉಟಿವುಂ ಕಾಪುಂ ಮೇಪುಂ ತೋಡುಂ ಬೀಡುಂ ದೆಸೆಯುಂ ಕೊಸೆಯುಂ: **ಪಂಪಭಾ,** ೫. ೪೩ ವ); ವಾಹನವನ್ನು ಹತ್ತುವ ಒಂದು ರೀತಿ (ಕೊಸೆ– .. .. ವಾಹಾರೋಹ ಭೇದೇ ಚ: **ಶಬ್ದಮದ,** ಧಾ ೬೯೩))

**ಕೊಸೆಗೊಳ್** – ಕಡಿವಾಣ ಹಿಡಿ (ಸಾರಥಿ ಕಣ್ಣಱಿದು ಒಯ್ಯನೆ ತೇರಂ ಕೊಸೆಗೊಂಡು ಚಕ್ರಿಯಂ ಬಿನ್ನವಿಕುಂ: **ಆದಿಪು,** ೧೧. ೫೭)

**ಕೊಳ್** – ತೆಗೆದುಕೊ, ವಶಪಡಿಸಿಕೊ (ಕಳ್ಳದಿರಿಂ ಪೆಱರ ವಸ್ತುವಂ ಕೊಳ್ದಿರಿಂ: **ವಡ್ಡಾರಾ,** ಪು. ೧೭೦ ಸಾ. ೭); ತಾಗು (ಪೂವಿನೊಳ್ ಪೊರೆದ ಪೊಣ್ಮಿದ ಕಂಪು ಮೊಗಂಗಳಂ ಚಳಿಲ್ಲನೆ ಕೊಳೆ: **ಪಂಪಭಾ,** ೫. ೩೪); ಹಾವು ಕಚ್ಚು (ಮಹೋರಗನೆಯ್ದೆ ಪಲ್ಗಳರ್ದೊಡೆ ಕಿಡಿವೀೞೆ ನೆತ್ತರೊಱೆದುರ್ಚುಗೆ ಕೊಂಡುದು ತತ್ತಪಸ್ವಿಯಂ: **ಆದಿಪು,** ೨. ೪೦); ಬಲಿ ತೆಗೆದುಕೊ (ನಿಶತ ಶರಾಳಿಗಳಿಗೆಯ್ದೆ ಚಕುಚಕ್ಕನೆ ಕೊಳೆ ಮೊಕ್ಕುಮೊಕ್ಕನೆ ಶಿರಂಗಳುರುಳ್ದುವು ವೈರಿಭೂಪರಾ: **ಪಂಪಭಾ,** ೧೨. ೧೯೯); ನೆರವೇರು (ಜಿನರಂ ಪೂಜಿಸದೆ ಅಮರೇಂದ್ರನ ಸುಖಮಂ ಖೇಚರೇಂದ್ರನ ಅತ್ಯುನ್ನತಿಯಂ ಮನುಜೇಂದ್ರನ ವಿಭವಮಂ ಆವನಾದೊಡಂ ಬಯಸಿ ಮಱುಗಿದೊಡೆ ಕೊಂಡಪುದೇ: **ಧರ್ಮಾಮೃ,** ೬. ೯೫); ಸಂಪಾದಿಸು; ಆವರಿಸು (ಮನುಜಂ ಎನ್ನನೀಕ್ಷಿಸಿ ಭವಾದ್ರಿಯನೇಱದೆ ನಾಡೆ ನೋಡಿ ನೆಟ್ಟನೆ ಕೊಳೆ: **ಕಾದಂಸಂ,** ೩, ೩೪); ಉಂಟಾಗು (ಬಿಂಜದಡವಿಯೊಳಗೆಲ್ಲಂ ನಂಜಿನ ಮೞೆ ಕೊಂಡು [√ಕೊಳ್] ಬಿಟ್ಟ ತೆಱದಿನಾಯ್ತಾಗಳ್: **ಕಾದಂಸಂ,** ೧. ೪೮)

**ಕೊಳ** – ಕೆರೆ ಕೊಳದೊಳಗೇನಂ ನೋೞ್ಪೆಗ ವಿಳಾಸಿನೀ ನಿನ್ನವೋಲದೇನತಿಶಯಮೇ: **ಕವಿರಾಮಾ,** ೧. ೮೯)

**ಕೊಳಂಗಟ್ಟು** – ದಟ್ಟವಾಗು (ದೀಧಿತಿಯೆ ಕೊಳಂಗಟ್ಟಿ ತುಳುಂಕಾಡುವಂತೆ ತಿಳಿದೊಪ್ಪುವ ಸರೋವರದ ತಡಿಗಳೊಳ್: **ಜಗನ್ನಾವಿ,** ೧೬. ೩೪ ವ)

**ಕೊಳಂಗೊಳ್** – ಮಡುಗಟ್ಟು (ಕದಪಿನೊಳ್ ಪೊಂಪುಟಿವೋಗಿಯುಂ ಭ್ರೂವಿಭ್ರಮದೊಳ್ ಪೊನಲ್ವರಿದುಂ ಅರುಣಾಧರದೊಳ್ ಕೊಳಂಗೊಂಡುಂ: **ಆದಿಪು,** ೭. ೧೨೬ ವ)

**ಕೊಳಗ** – ಒಂದು ಅಳತೆ (ಪಿರಿದಪ್ಪ ಕೋಲ್ಗಳಿಂದಂ ಪಿರಿದೆನಿಸಿದ ಕೊಳಗದಿಂದಮುಂ ತಾಂ ಕೊಂಡಂತೆ: **ಸಮಯಪ,** ೫. ೪೬); ಲೋಹದ ದೊಡ್ಡ ಪಾತ್ರೆ (ಪಿರಿದೆನಿಸಿದ ಕೊಳಗದಿಂದ ಮುಂ ತಾಂ ಕೊಂಡಂತಿರೆ ಪರರ್ಗೆ ಕುಡಿಸಿ: **ಸಮಯಪ,** ೫. ೪೫)

**ಕೊಳಗು** – ಗೊರಸು (ಭೂತಳಮಂ ಕೊಳಗಿಂ ಪರಡುತ್ತಂ ಮನಂ ಬಾಯಿಗೆ ಮಿದಿಲ್ದುಕ್ಕೈಯಿಕ್ಕುವ ಸೊರ್ಕಾನೆಗಳಂತೆ: **ನೇಮಿನಾಪು,** ೪. ೧೨೩ ವ)

**ಕೊಳಗುಳ** – ಯುದ್ಧರಂಗ (ಕೆಂಡಂಗಳೊಳ್ ಸುಟಿದು ಬೇವ ಪೆಣಂಗಳ್ ಕಂಪುನಾಱುವುದರ್ಕೆ ಸೈರಿಸಲಾರದೆ ಕೋಳ್ದಾಂಟಿನೊಳ್ ಕೊಳುಗುಳವಂ ಕಟಿದು ಪೋಗಿ: **ಪಂಪಭಾ,** ೧೩. ೭೧ ವ)

**ಕೊಳತ** – ಸುಗಂಧ (ಬಿಡುಮುತ್ತಿನ ಪಚ್ಚೆಸಾರದ ಕಾಶ್ಮೀರದ ಯಕ್ಷಕರ್ದಮಪಿಂಡದ ಕತ್ತುರಿಯ ಕೊಳತದ ಕರ್ಪುರವಳಿಕಿನ ಬಾಯಿನಂಗಳನೆ ಬೀಱೆ; **ಸುಕುಮಾಚ,** ೧೦. ೮೯ ವ)

**ಕೊಳರ್ವಕ್ಕಿ** – ನೀರು ಹಕ್ಕಿ, ಸಾರಸ (ಕಮಳಿನಿಗೆ ಪುಟ್ಟಿದ ಅಟ್ಟಹಾಸಮಂ ಉದಾಸೀನಂ ಮಾಟ್ಪಿ ಕೊಳರ್ವಕ್ಕಿಯ ಕಳಕಳಧ್ವನಿಯಮುಂ ಅನುಕೂಲಮಾಗೆ: **ಪಂಪರಾ,** ೩. ೮೧ ವ)

**ಕೊಳವೇರ್** – ಕೊಳರ್, ಲಾಮಂಚ (ಕೊಳವೇರ್ಗಳಂ ಕಿಱ್ತು ಮೊಱೆವ ನೆವದಿಂದಟ್ಟು: **ಲೀಲಾವತಿ,** ೧೧. ೧೧)

**ಕೊಳಿಸು** – ಕಚ್ಚುವಂತೆ ಮಾಡು (ಪಾವುಗಳಂ ಕೊಳಿಸಿ ಮಹಾಗ್ರಾವಮಂ ಉಱದೆ ಅಡಸಿ ಕಟ್ಟಿ ಕೊರಲೊಳ್ ಗಂಗಾದೇವಿಯ ಮಡುವಿನೊಳ್ ಅಟ್ಟಿದರ್ ಏವಯಿಸದೆ ತಮ್ಮ ಕುಲಮಂ ಅಡಿಗಟ್ಟುವವೋಲ್: **ಪಂಪಭಾ,** ೨. ೩೨)

**ಕೊಳುಕ್** – ಕಳಕ್ ಎನ್ನುವ ಅನುಕರಣ ಶಬ್ದ (ಭೋಂಕನೆ ಕೇಳ್ದು ಎರ್ದೆ ಕದಡಿ ಕಲಂಕಿದ ಬಗೆವೆರಸು ನೆಗೆದು ನಾಲ್ಕುಂ ದೆಸೆಯಂ ಶಂಕಾಕುಳಿತಂ ನೋಡಿ ಮನಂ ಕೊಳುಕ್ ಎನೆ ಮುಱುಗಿ ನೆಗೆದ ಹರಿಯಂ ನುಡಿದಂ: **ಪಂಪಭಾ,** ೧೧. ೧೧೨)

**ಕೊಳೆಗಬ್ಬಿಗ** – ಕೀಳು ಕವಿ (ಮಹಾಕವೀಂದ್ರ ಮಾಧವನೆಣೆಯಪ್ಪೆನೆಂಬ ಕೊಳೆಗಬ್ಬಿಗ ನಿನ್ನಯ ಗರ್ಬಮೆಂತುಟೋ: **ಧರ್ಮಮಧು,** ೧. ೬೬)

**ಕೊಳ್ಳುಬಳ್ಕು** – ದಟ್ಟಡಿ (ಅಡಿಗಳಂ ತಡವಿಟ್ಟು ಕೊಳದಿಂದೆ ಪೊಱಮಟ್ಟು ಕೊಳ್ಳುಬಳ್ಕೆನೆ ನಡೆದು: **ಲೀಲಾವತಿ,** ೧೧. ೧೧)

**ಕೊಳ್ಕೊಡೆ** – ಹೆಣ್ಣು ಕೊಡುವ ಮತ್ತು ತೆಗೆದುಕೊಳ್ಳುವ ವ್ಯವಹಾರ, ನಂಟಸ್ತಿಕೆ (ನಮ್ಮ ಕೊಳ್ಕೊಡೆಯಂ ಸಮಕಟ್ಟಿ ಕೊಟ್ಟನೇಂ ಧನ್ಯನೊ ಧಾತ್ರನೆಂದು ನುಡಿದಂ ಪ್ರಿಯಮಂ ವಿಜಯಾಂಗನಾಪ್ರಯಂ: **ಪಂಪರಾ,** ೨. ೭)

**ಕೊಳ್ಕೊಳಿಸು** – ಕಚ್ಚುವ ಹಾಗೆ ಛೂ ಬಿಡು (ಮುನಿದು ಐನೂಱುಂ ಕುನನಿಗಳನಿತುಮಂ ಒರ್ಮೊದಲೆ ತೋಱೆ ಕೊಳ್ಕೊಳಿಸೆ ಮಹಾಮುನಿ ತಳರದೆ ಮೇರುವೊಲಿರೆ: **ಯಶೋಧಚ,** ೪. ೪೩)

**ಕೊಳ್ಗಾರ್** – ಧಾರಾಕಾರ ಮಳೆ (ಆಲಿವರಲ್ವೆರಸು ತೋರವನಿ ಕೊಳ್ಗಾರೊಳ್: **ಅನಂತಪು,** ೯. ೮)

**ಕೊಳ್ಗುಳ** – ಯುದ್ಧ (ತನ್ನ ಕೊಂದ ಕೊಳ್ಗುಳಕ್ಕೆ ಬಂದ ಸ್ವಯಂಪ್ರಭೆಗೆ: **ಶಾಂತಿಪು,** ೫. ೬೩ ವ); ಯುದ್ಧರಂಗ (ಭೂತಾಂಗನಾನಿಕರಂ ಶೋಣಿತವಾರಿಯಂ ಕುಡಿದು ಅಗುರ್ವಪ್ಪನ್ನೆಗಂ ಸೂಸೆ ನೋಡ ಕವಿಲ್ತಿರ್ದುದು ಕೂಡೆ ಸಂಜೆಗವಿದಂತಾ ದ್ರೋಣನಿಂ ಕೊಳ್ಗುಳಂ; **ಪಂಪಭಾ,** ೧೨. ೨೫)

**ಕೊಳ್ದಪ್ಪು** – ಹಿಡಿತ ತಪ್ಪು (ಕೊಳ್ದಪ್ಪಿದ ಉರಗಕಾಂತೆಯಂತೆ ಕಡುಬಿಸಮನುಗುಟ್ಟು .. .. ಕೆರಳ್ದು ಪೋಪ ಕೆಳದಿಯಂ ಬೞಿಸಂದು: **ಲೀಲಾವತಿ,** ೧೪. ೩೩ ವ)

**ಕೊಳ್ಳ** – ತಗ್ಗು ಪ್ರದೇಶ, ಹಳ್ಳ (ಧರೆ ತಗ್ಗಿ ಬಟಿಕ್ಕದು ಕೊಳ್ಳವಾದುದು: **ಕರ್ಣನೇಮಿ,** ೧೧. ೫೬); ಗುಹೆ, ಗಹ್ವರ (ಗಹ್ವರಂ ಗುಹಾಕುಹರಂ ಅದ್ರಿಕುಂಜಂ ಕೊಳ್ಳಂ: **ಅಭಿಧಾವ,** ೧. ೬. ೩)

**ಕೊಳ್ಳಿ** – ಉರಿಯುವ ಕಟ್ಟಿಗೆ (ನಮಗರಿಯಾಗಿರ್ದ ಅರಿಮರ್ದನನಂ ಒಂದೆ ಕೊಳ್ಳಿಯೊಳ್ ಸುಟ್ಟಪೆಂ: **ಪಂಚತಂತ್ರ,** ૩೭೫ ವ)

**ಕೊಳ್ಳಿವೀಸು** – ಯುದ್ಧಾರಂಭವಾಗಲೆಂದು ಕೊಳ್ಳಿಯನ್ನು ಬೀಸು (ಕೊಳ್ಳಿವೀಸೆ ಪಡೆಯದೆರಡುಂ ದಿಗಧೀಶರೊಡಿದರ್: **ಕರ್ಣನೇಮಿ,** ೧೧. ೧೨೩)

**ಕೊಳ್ಳು** – ಹುರುಳಿ (ಅಲಸಂದೆ ರಾಜಮಾಷಂ ಕುಳುತ್ಥಕಂ ಕೊಳ್ಳು **ಅಭಿಧಾವ,** ೧. ೧೬. ೧೮)

**ಕೊಳ್ಳೆಂದೆತ್ತು** – ಉರಿದು ಬೀಳು (ಉಳ್ಳುದಂ ಉರ್ಳಂತೆಂದೊಡೆ ಕೊಳ್ಳೇಂದೆತ್ತಲ್ಕವೇಡ ಮತಿವಂತರ್: **ಸಮಯಪ,** ೮. ೨೧೮)

**ಕೊಱಂಡು** – ಕೊರಡು, ಒಣಮರದ ತುಂಡು (ತಱಗೆಲೆಯ ತುಱುಗಲಂ ಕಿಱುವಕ್ಕಿವಿಂಡೆಂದು ಕೊಱಂಡುಗಳಂ ಮಡು ಮಿಡಿವಿಲ್ಲೊಳ್ ಇಸಲೆಸಗಿ ಮಱುಗುವ ತುಱುಗಾವ ಕಿಱುಕುಳದ ಕೆಳೆಯರುಮಂ ನೋಡುತ್ತುಂ: **ಕಬ್ಬಿಗಕಾ,** ೧೮೧ ವ)

**ಕೊಱಂತೆ** – ಕೊರತೆ, ಅರೆಕೊರೆ (ಕೆಲವು ಪದಂಗಳ್ ಸ್ವಭಾವದಿಂ ನಿತ್ಯಬಿಂದುಗಳಪ್ಪುವು ಅವರ್ಕೆ ಪ್ರಯೋಗಂ: ಕೊಡಂಬೆ ಕೊಱಂತೆ ಗಂಟುಗೆ: **ಶಬ್ದಮದ,** ೪೬ ವೃತ್ತಿ)

**ಕೊಱಚಾಟ** – ಅಣಕದ ಮಾತು, ತಿರಸ್ಕಾರದ ನುಡಿ (ಜಗಮಂ ಮಱುಗಿಸಿ ಕೊಱಚಾಟ ಗೆಯಲ್ ನೆಱೆ ನಾಡೆ ಕೂಡುವ ಬಗೆಯಿಂ .. .. ಬಿದಿ ಮಿಗೆ ಮಾಡಿದಂ .. .. ರೂಪು ಮಾದಂಗಿತಿಯಾ: **ಹರಿವಂಶ,** ೫. ೮)

**ಕೊಱಚಾಡು** – ಕಡೆಗಣಿಸಿ ಮಾತಾಡು, ಚುಚ್ಚು ಮಾತಾಡು (ಎಂದು ಆತನಂ ಆಕೆಗಳ್ ಕಾಡಿ ಕೊಱಚಾಡಿ ಕಳೆದರ್: **ಪಂಪಭಾ,** ೪. ೯೬ ವ); ಪೀಡಿಸು (ಇನಿಯರಗಲ್ಕೆಯೊಳ್ ಕಡುಪಿನಿಂ ಕೊಱಚಾಡಿದನೆಂದು ಕಂತುವಂ ತನತನಗೆಯ್ದೆ ಮೂದಲಿಸಿ ಬಗ್ಗಿಸಲ್ ಇಂತು ಪುಗುತ್ತುಮಿದರ್ದುದೆಂಬಿನಂ: **ಶಾಂತೀಶ್ವಪು,** ೧೦. ೧೨೩)

**ಕೊಱಡು** – ಒಣಗಿದ ಮರದ ತುಂಡು (ಕೆಱೆಯನಗಟ್ಟಿಡೆ ಕೊಱಡಂ ಕಡಿಯಲ್ವೇಟ್ಕುಮೆ ಪೇೞೆನೆ ನಡೆದಂ ಬಲ್ಲಿದರ ಮೇಲೆ ಮುಂ ಚಕ್ರಧೃಂ: **ಪಾರ್ಶ್ವನಾಪು,** ೯. ೯೮)

**ಕೊಱಡುಗೊಳ್** – ಜಡ್ಡುಗಟ್ಟು (ಕಂಟಣಿಸಿದಂ ಅಲರಿಸಿದಂ ಕುಂಟಣಿಯರ ಕೊಱಡುಗೊಂಡ ಮನಮಂ ಮದನಂ: **ನೇಮಿನಾಪು,** ೪. ೧೪೮)

**ಕೊಱಡೇಱು** – ಕೊಱಡುಗೊಳ್ (ಸಂದ ಪಂಚಪದಮಂತ್ರಂಗಳಂ ಪಠಿಸುತ್ತ ವಂದ ನಲಗೆ ಕೊಱಡೇಱೆ: **ಪುಣ್ಯಾಸ್ರ:** ೮. ೨೯)

**ಕೊಱೆ** – ಕೊಯ್ಯಿ (ಕೊಱೆ ಕೊಱೆ ಸೀಳ್ ಸೀಳೆನುತ್ತೆ: **ಸುಕುಮಾಚ,** ೧೧. ೪೧); ಕೊರಲೆ ಎಂಬ ಧಾನ್ಯ (ಜವೆ ಜೋಳಂ ಕೊಱೆ ಮೊದಲಾದವರ್ಕೆ: **ಲೋಕೋಪಕಾ,** ೪. ೫೬)

**ಕೊಱೆವಲ್** – ಕೋರೆಯ ಹಲ್ಲು, ಹರಿತವಾದ ಹಲ್ಲು (ಕೊಱೆವಲ್ ಬತ್ತಿದ ಕಾಲ್ ಪಿಂಬಟಿಗೇಸಂ ನೆಕ್ಕ ಕದಪು: **ಕಾವ್ಯಾವಲೋ,** ೪೫೫)

**ಕೊಟಿತ** – ಹೊಸತಾದ, ಎಳೆಯದಾದ (ಪೊಳೆವಲರಮರ್ದಿನ ಕಪ್ಪುರವಳುಕಿನ ಕತ್ತುರಿಯ ಕೊಟಿತ ದೂರ್ವಾಭರಣಂ: **ಆದಿಪು,** ೧೧. ೪೩)

**ಕೊೞಲ್** – ಕೊಳಲು, ವೇಣುವಾದ್ಯ (ದಂಟನೂದುವಂಗೆ ಕೊೞಲ್ ದೊರೆಕೊಂಡುದೆಂಬಂತೆ: **ಧರ್ಮಾಮೃ,** ೧೦ ೧೮೫ ವ)

**ಕೊೞೆ** – ಕೊಳೆತು ನಾರು (ಎನಿತೊಳವು ಕೊೞೆವ ಪಡುಕೆಗಳ್ ಅನಿತಱ ದುರ್ಗಂಧಂ: ಅವರ ಮೆಯ್ಯ .. .. ನಾತಮಂ: **ಶಾಂತಿಪು,** ೭. ೧೦೦); ಹೊಲಸು (ತೊಳೆದೊಡಂ ಅದಕ್ಕೆ ಕೊೞೆ ಸಹಜಂ: **ಸಮಯಪ,** ೬. ೩೦)

**ಕೊೞೆಗಬ್ಬ** – ಕೀಳು ಕಾವ್ಯ (ನಿರರ್ಥಮಪ್ಪ ಕೊೞೆಗಬ್ಬಮಂ ಉಬ್ಬರಮಾಟ್ಟಿ ಗರ್ವದಿಂದೆಸೆವನಂ ಇಕ್ಕು ಕಿಚ್ಚಿನೊಳಗೆ: **ಸೂಕ್ತಿಸುಧಾ,** ೧. ೭೪)

**ಕೊೞೆಗಬ್ಬಿಗ** – ಕೀಳು ಕವಿ (ಮಹಾಕವಂಧ್ರ ಮಾಧವನೆಣೆಯಪ್ಪೆನೆಂಬ ಕೊೞೆಗಬ್ಬಿಗ ನಿನ್ನಯ ಗರ್ವಂ ಎಂತುಟೋ: **ಧರ್ಮಮಧು:** ೧. ೬೬)

**ಕೊೞೆದೆಯ್ವ** – ಕ್ಷುದ್ರದೇವತೆ (ವರಮೀಗುಮೆ ಮೈಲಾರಂ ಕೇತಂ ಕಾಟಂ ಮಾರಿಗೆ ಮಸಣಿಗೆಯೆನಿಪ್ಪ ಕೊೞೆದೆಯ್ವಂಗಳ್: **ಸಮಯಪ,** ೯. ೧೨೭)

**ಕೊೞೆನಾಱು** – ಕೊಳೆತು ದುರ್ಗಂಧ ಬೀರು (ಮೂವರುಂ ಅಮಾತ್ಯರರಸುಂಗೊಳೆ ಕಟ್ಟಿ ತಂದು ಅಗುರ್ವಿನ ಕೊೞೆನಾರ್ಪ ಕೋಟ್ಕೆಸಱ ಬಾವಿಯೊಳರ್ದೆ: **ಆದಿಪು,** ೨. ೪೩)

**ಕೊೞೆವಾವು** – ಕೊಳಕುಮಂಡಲ (ತಿಳಿಗುಮೆ ಕೊೞೆವಾವಿಂಗೆ ಎನಿತನೋದೆಯುಂ ಗಾರುಡಮಂ: **ಸಮಯಪ,** ೧೩. ೬೦)

**ಕೊೞೆಸಕ್ಕದ** – ಹಳೆಯ ಸಂಸ್ಕೃತ (ಪೞಗನ್ನಡಂ ಪುದುಂಗೊಳೆ ಕೊೞೆಸಕ್ಕದಮಂ ತಗುಳ್ಚಿ .. .. ಪೇಟ್ವಿೞಿಗವಿಗಳ ಕವಿತೆ ಬುಧರನೆರ್ದೆಗೊಳಿಸುಗುಮೇ: **ಕಾವ್ಯಾವಲೋ,** ೫೫)

**ಕೋ** – ಪೋಣಿಸು (ಬೂದಿ ಜೆಡೆ ಲಕ್ಕಣಂ ತಪಕೆ ಆದುವು ಎರಟ್ದೊಣೆ ಶರಾಸನಂ ಕವಚಂ ಇದೆಂತಾದುವೋ ಮುತ್ತುಂ ಮೆಟಸುಂ ಕೋದಂತುಟೆ ನಿನ್ನ ತಪದ ಪಾಂಗೆಂತು ಗಡಾ: **ಪಂಪಭಾ,** ೭. ೯೨); ಸಿಕ್ಕಿಸು (ರಥದ ಕೋಲ್ ಮುಱಿದಾಗಳೆ ಕೈಯನಲ್ಲಿ ಕೋದೆಸಗುವ ಸೂತರ್: **ಪಂಪಭಾ,** ೧೧. ೬೫); ಸೇರಿಕೊಳ್ಳು (ಅಂತಿಂತುಗಳ್ ಪದಾಪೂರಣದೊಳ್ ಕೋವುವು: **ಶಬ್ದಮದ,** ೩೩೨)

**ಕೋಂಟೆ** – ಕೋಟೆ, ದುರ್ಗ (ಪೊೞಲ ನಡುವಣ ದೆಸೆಯ ಕೋಂಟೆಯ ಪೊಱಗಣ ದೆಸೆಯೊಳ್: **ವಡ್ಡಾರಾ,** ಪು. ೧೩೪, ಸಾ. ೧೭)

**ಕೋಂಟೆಗಾಳಗ** – ಕೋಟೆಯ ಕಾಳಗ (ಲಗ್ಗೆ ಮಾಡುವ ಭಟಕೋಟಿ ಕೋಟಲೆಯನಾಳ್ದಿರೆ ನೀಳ್ದುದು ಕೋಂಟೆಗಾಳಗಂ: **ಪುಷ್ಪದಂಪು,** ೭. ೭೪)

**ಕೋಕ** – ಚಕ್ರವಾಕ (ಪನಿಪುಲ್ಲಂಬುಕಣಂಗಳಂ ಕೆದಱುತುಂ ಕೋಕಂಗಳೊಳ್ ರಾಗಮಂ ನನೆವೊಯ್ದು ಉಣ್ಮಿಸುತುಂ ಪತತ್ರಿಗಳೊಳಗಿರ್ಪಾ ತೂಂಕಡಂ ನೂಂಕುತುಂ ತಣ್ಣನೆ ತೀಡಿತ್ತೆನಸುಂ ಪ್ರಭಾತಮಯ ಪ್ರೋದ್ಭೂತ ಶೀತಾನಿಳಂ: **ಶಾಂತೀಶ್ವಪು,** ೧೧. ೯೪); ತೋಳ (ಕಾವ ನಾರಾಯಣನ ಸುದರ್ಶನಮೆಂಬ ಚಕ್ರದ ಕೋಳುಮಂ ವಿಕ್ರಮಾರ್ಜುನನ ದಿವ್ಯಾಸ್ತ್ರಂಗಳ ಕೋಳುಮಂ ಅಗ್ನಿದೇವನ ಶಿಖಾಕಳಾಪದ ಕೋಳುಮಂ ಎಂತಾನುಂ ಬಂಚಿಸಿ ಬಲೆಪಱಿದ ಕೋಕನಂತೆ ಒರ್ವ ವನಪಾಲಕಂ ಪೋಗಿ ದೇವೇಂದ್ರನಂ ಕಂಡು: **ಪಂಪಭಾ,** ೫. ೯೩ ವ); ಕೋಗಿಲೆ (ಗಗನತಳಮೆ ಪಱಿದು ಬಿೞ್ದುದೆನಿಪ ಬಹುತಟಾಕದಿಂ ಕುಕಿಲ್ವ ನಲಿವ ಕೋಕದಿಂ: **ಪಂಪಭಾ,** ೧. ೫೮)

**ಕೋಕನದ** – ಕೆಂದಾವರೆ (ಬೞಿಕ್ಕಾಳೋಕಿಪುದಾಯ್ತುದಂ ಉತ್ಪಳಕೋಕನದಾಕರಮೆ ಗೆತ್ತು ವಿಸ್ಮಯದಿಂದಂ: **ಆದಿಪು,** ೭. ೬೦)

**ಕೋಕನದಗರ್ಭ** – ತಾವರೆಯಲ್ಲಿ ಹುಟ್ಟಿದವನು, ಬ್ರಹ್ಮ (ಕೋಕನದಗರ್ಭನಿಂ .. .. ಸಂದತ್ತೀ ಲೋಕಕ್ಕೆ ನಾನ್ನೃಷಿ ಕುರುತೇ ಕಾವ್ಯಂ ಎನಿಪ್ಪ ಮಹಿಮೆ: **ಜಗನ್ನಾಪಿ,** ೧. ೭)

**ಕೋಕಿಲ** – ಪರಪುಟ್ಟ, ಕೋಗಿಲೆ (ಪಡಿಯಱವಕ್ಕಿಯೆನೆಯನಲ್ಕೆ ಕೋಕಿಲಮಕ್ಕುಂ: **ರನ್ನನಿಘಂಟು,** ೯)

**ಕೋಗಿಲೆ** – ಕೋಕಿಲ (ಮಾವಿನಂಕುರಮನೆ ಕರ್ಚಿ ಬಿಚ್ಚಱಿಪ ಕೋಗಿಲೆ: **ಪಂಪಭಾ,** ೫. ೧೧)

**ಕೋಗಿಲೆವೆಣ್** – ಹೆಣ್ಣು ಕೋಗಿಲೆ (ಮದೋತ್ಸವದೆ ಕೋಗಿಲೆವೆಣ್ ನೆಗಟ್ಟುವಂತೇ; **ಜಗನ್ನಾಪಿ,** ೧೬. ೧೧೭)

**ಕೋಟರ** – ಮರದ ಪೊಟರೆ (ಜೀರ್ಣಕೋಟರ ವಿರಳಾಭ್ಯಂತರದೊಳ್ ಇರ್ದುದೊಂದು ಶುಕಂ ತನ್ನಯ ಜಾಯೆವೆರಸು ಪರಿಣತವಯಸಂ: **ಕಾದಂಸಂ,** ೧. ೪೨); ಗೂಡು (ಮುಗಿವ ಸರಸಿರುಹಷಂಡಮಂ ಅಗಲ್ವ ಚಕ್ರಪ್ರತಾನಮಂ ಕೋಟರದೊಳ್ ಪುಗುವ ವಿಹಗಂಗಳಂ: **ಗಿರಿಜಾಕ,** ೪. ೭೦); ರಂಧ್ರ (ದುರ್ಜನ ಪ್ರಕರದ ಕರ್ಣಕೋಟರಮನೇಕೆಯೊ ಮಾಡಿದನಬ್ಜವಿಷ್ಟರಂ: **ಪಂಪರಾ,** ೧. ೩೧)

**ಕೋಟಲೆ** – ತೊಂದರೆ (ಕೋಟಲೆವಟ್ಟು ಈ ನಿಷ್ಫಲೋದ್ಯೋಗಮನೊಡರಿಪುದೇಂ: **ಪಂಪರಾ,** ೧೬. ೫೫)

**ಕೋಟಲೆಗೊಳ್** – ಯಾತನೆ ಅನುಭವಿಸು (ಭೂಭಾಗದೊಳ್ ತಂದು ತಾಟಿಸುತುಂ ಕೋಟಲೆಗೊಳ್ವ ರತ್ನಮಕುಟದ್ಯೋತೋತ್ತಮಾಂಗಂ ವಿರಾಜಿಸುವನ್ನಂ ಪೊರಳ್ವ ಪಗೆಯಂ ಕಣ್ಣಾರ್ವಿನಂ ನೋಡಿದಳ್: **ಪಂಪಭಾ,** ೧೨. ೧೫೧)

**ಕೋಟಾಚಕ್ರ** – ಕೋಟೆಯ ಸುತ್ತು (ಸುರುಚಿರ ಕೋಟಾಚಕ್ರದ ತರವಿಡಿದಿಡಿದೆಸೆವ ಬಟ್ಟದೆನೆಯೆಡೆಯೆಡೆಯೊಳ್: **ರಾಜಶೇಪಿ,** ೨. ೮೯)

**ಕೋಟಾಯಂತ್ರ** – ಕೋಟೆಯನ್ನು ಒಡೆಯುವ ಯಂತ್ರ (ಪಡಿಗೋಂಟೆಯೆಂಬ ಬಹು ಕೋಟಾಯಂತ್ರಸಾಮಗ್ರಿ ತಿಂತಿಣಿಗೊಂಡಾಂತಿರೆ: **ಅನಂತಪು,** ೧. ೮೩)

**ಕೋಟಿ** – ಅಸಂಖ್ಯ, ಅಪಾರ (ಉದಾತ್ತನಾರಾಯಣನಾದ ದೇವಂ ಎಮಗೀಗೆ ಅರಿಕೇಸರಿ ಸೌಖ್ಯಕೋಟಿಯಂ: **ಪಂಪಭಾ,** ೧. ೧); ತುದಿ, ಮೊನೆ (ಮುನಿಜನಂಗಳ ಬೇಳ್ವೆಗೆ ಉಪದ್ರವಂಗೆಯ್ವ ನಿಶಾಟಕೋಟಿಯಂ ನಿಶಿತಶರ ಕೋಟಿಯಿಂದಂ ಉಚ್ಚಾಟಿಸಿ: **ಪಂಪಭಾ,** ೪. ೧೫ ವ)

**ಕೋಟಿಕಶಿಲೆ** – [ಜೈನ] ಸಿದ್ಧಶಿಲೆ (ವಟ್ಟಂದೆತ್ತುದು ಬೆಳ್ಳಿಯ ಬೆಟ್ಟಂ ಬಿಣ್ಪಿಂಗೆ ಎನಿಪ್ಪ ಕೋಟಿಕಶಿಲೆಯಂ ಬಟ್ಟಾಡಿದ ಬಾಹಾಬಲಂ ಇಟ್ಟಳವು ಎಂಟನೆಯ ಕೇಶವಂಗಿದಿರುಂಟೇ: **ಪಂಪರಾ,** ೧೨. ೬೮)

**ಕೋಟೀರ** – ಕಿರೀಟ (ಸಮಸ್ತನೃಪಾಲಕೋಟೀರ ಕೋಟಿ ಸಘಷ್ಟ ವಿಶಿಷ್ಟಚರಣಪಲ್ಲವಂ: **ಉದ್ಭಟಕಾ,** ೨. ೨೧ ವ); ಆಶ್ರಯ (ಶಂಭುವಂ ಇಂದ್ವರ್ಧಾಂಕಕೋಟೀರನಂ ಅನಘನಂ ಆನಂದದಿಂ ತನ್ನೃಪಾಲಂ: **ರಾಜಶೇಪಿ,** ೧೩. ೪೭)

**ಕೋಟೀಶ** – ಹಲಬೆ (ಲೋಷ್ಕಸಮಾಹ್ವಯಂ ಕೋಟೀಶಂ: **ಅಭಿಧಾವ,** ೧. ೧೧. ೭೦)

**ಕೋಟೆವಟಿ** – ಕೋಟೆಯ ಬಳಿಯ ಪ್ರದೇಶ (ಕಟ್ಟಂಎಯೆನಿಸಿದುದಿಟ್ಟಳಮೆನೆ ಕೋಟೆವಟಿಯ ಸೆಱೆಗೆಯ್ದುಱೆಗಳ್: **ಪಾರ್ಶ್ವನಾಪು,** ೬. ೧೩೨)

**ಕೋಟ್ಟಾಗಾರ** – [ಕೋಷ್ಠಾಗಾರ] ಕಣಜ (ಭಂಡಾರಕ್ಕೆ ಮಂತ್ರಕ್ಕೆ ಕೋಟ್ಠಗಾರಕ್ಕೆ ಅನುಮಂಡನಕ್ರಿಯೆಗೆ ಕೀಲಾರಕ್ಕೆ ಗೂಡಾರಂ ಕುಟೀಮಂಡಳಂ: **ಪುಷ್ಪದಂಪು,** ೬. ೨೨)

**ಕೋಡಂ ಕಾಣಿಸು** – ತಿವಿ (ಕೋಡಂ ಕಾಣಿಸಿ ಪಿಡಿದೀಡಾಡುವುದೆಂಬಿನೆಗಂ ಆಡಿ ರಂಜಿಸಿದಳ್: **ಆದಿಪು,** ೯. ೩೭)

**ಕೋಡ ಕಾಳೆ** – ಕೊಂಬಿನಿಂದ ಮಾಡಿದ ಕಹಳೆ (ಗೋನಿಯೋಗ ದಂಡಧರರುಮಾಗಿ ಕೆಲಬರ್ ಕೋಡ ಕಾಳೆಗಳನೂದುತ್ತುಂ: .. .. ಬರೆ: ಜಗನ್ನಾವಿ, **ಜಗನ್ನಾವಿ,** ೪. ೮೦ ವ)

**ಕೋಡಗ** – ಕೋತಿ (ಕರಿಪತಿಯನೇಱೆ ಕೋಡಗಮಿರೆಕಂಡಿದಱೆಂದೆ: **ಆದಿಪು,** ೧೫. ೩೪)

**ಕೋಡಗಗಟ್ಟು** – ಕಪಿಯನ್ನು ಕಟ್ಟುವಂತೆ ಕಟ್ಟು, ಹೆಡಮುರಿಗೆ (ಅಡುರ್ತು ಒಡನೆ ಅಡಸಿ ಪಿಡಿದು ದರ್ಪಂಗಿಡೆ ಕೋಡಗಗಟ್ಟುಗಟ್ಟಿದಂ ಕುಸುಮಶರಂ: **ಹರಿವಂಶ,** ೮. ೭೩)

**ಕೋಡಗಗಟ್ಟುಗಟ್ಟು** – ಹೆಡಮುರಿಗೆ ಕಟ್ಟು (ಉಱದೆ ಎನ್ನಂ ಕುಡಲಿರ್ದ ಕೂಸಂ ಒಡಗೊಂಡು ಉಯ್ವಾತನಂ ತಾಗಿ ತಳ್ತಿಱೆಯಲ್ ಕೋಡುಗಗಟ್ಟುಗಟ್ಟಿ ತರಲ್: **ಪಂಪಭಾ,** ೫. ೨೧)

**ಕೋಡ ಸೇಡು** – ಚಳಿಯ ಸೆಡೆತ (ನೀಂ ಕೊಳದೊಳೆ ಮುಟುಗಿರ್ದಕ್ಕಟಾ ಕೋಡಸೇಡಿಂಗೊಳಗಾದಯ್: ೭. ೧೩)

**ಕೋಡಿ** – ಕೆರೆಯ ಹೆಚ್ಚಿನ ನೀರನ್ನು ಬಿಡುವ ಮಾರ್ಗ ಉದಕೋಛ್ವಾಸಂ ಕೋಡಿ: **ಅಭಿಧಾವ,** ೧. ೪. ೧೬)

**ಕೋಡಿಡು** – ಕೊಂಬಿನಿಂದ ತಿವಿ, ಸ್ಪರ್ಧಿಸು (ಕೋಡಿಡೆ ವಾಸುಪೂಜ್ಯಮುನಿಯೊಳ್ ಮರುಳಾದಪೆ ಚಿತ್ತಜನ್ಮ ನೀಂ ನೋಡ: **ಪಂಪರಾ,** ೧. ೨೩)

**ಕೋಡಿಸು** – ತಂಪಾಗಿಸು (ಮೃಗಂಗಳಂ ಕೋಡಸುತುಂ .. .. ತೀಡಿತು ಪ್ರಭಾತಸಮಯ ಪ್ರಭವಾತುಳಶೀತಮಾರುತಂ: **ಕುಸುಮಾಕಾ,** ೧೪. ೨೦)

**ಕೋಡು** – ತಂಪಾಗು (ಪಾಡುವ ತುಂಬಿ ಕೋಡುವ ಪುಟೆಲ್: **ಪಂಪಭಾ,** ೩. ೩೭); ಭಯಪಡು (ಪರಿವ ಗಾಲಿಯ ಕೋಳ್ಗೆ ಕೆಳರ್ತು ಬೆಟ್ಟುಗಳ್ ಕೂಡೆ ಸಡಿಲ್ವಿನಂ ಪೊಡೆವ ಬೀರರ ಜಂಕೆಗೆ ಗೊಂಟಿನಾನೆಗಳ್ ಕೋಡುವಿನಂ ಕಡಂಗಿ ಪರಿತಂದುವು ತೋರ್ಕೆಯ ತೇರ್ಗಳೋಳಿಯಿಂ: **ಕಬ್ಬಿಗಕಾ,** ೧೬೦); ತಣ್ಣಗಿರುವಿಕೆ (ಕುಳಿರ್ವ ಪುಳಿನಂಗಳೊಳಂ ಕೋಡುವ ಧಾರಾಗೃಹಂಗಳೊಳಂ ವಿಶ್ರಮಿಸಿ: **ಆದಿಪು,** ೧೧. ೭೪ ವ); ದಾನ, ಕೊಡುವಿಕೆ (ಎಂದು ತನಗೆ ಕೊಟ್ಟ ಕೋಡಿಂಗೆ ಒಡಂಬಟ್ಟ ದಿತಿಜಕುಲ ದಾವಾನಲನನುಮಂ ಅರಾತಿಕುಲಾನಲನುಮಂ ಅನಲಂ ಇಷ್ಟಾರ್ಥಸಿದ್ಧಿಯಕ್ಕುಂ ಎಂದು ಪರಸಿ: **ಪಂಪಭಾ,** ೫. ೭೭ ವ); ಪ್ರಾಣಿಯ ಕೊಂಬು (ಮುನಿಜನಂಗಳ್ಗೆ ಕೋಡುಗಳಿಂ ಕಂದಮೂಲಫಲಂಗಳಮ ಉಗುಳ್ದು ಕೊಡುವ ವನಹರಿಣಿಗಳಿಂ: ಕಾದಂಬ, ೧. ೧೮೫ ವ); ಆನೆಯ ದಂತ (ಆ ಮೊಗಮೊಂದೊಂದಱೊಳ್ ಎಂಟು ಕೋಡು ಅವಱೊಳ್ ಅಂತೊಂದೊಂದಱೊಳ್ ಪೂಗೊಳಂ: **ಆದಿಪು,** ೭. ೫೩); ಮರದ ಕೊಂಬೆ (ಮಾವಿನ ಬಂದ ಕೋಡೆ ಕೋಡಾಗಿರೆ ಕೋಡುಗೊಂಡು ಪರಿದತ್ತು ವಸಂತಗಜಂ ವಿಯೋಗಿಯಂ: **ಪಂಪಭಾ,** ೨. ೧೫) ಶಿಖರ, ತುದಿ (ಏಂ ತುಱುಗಿರ್ದುವೊ ತುದಿ ಕೋಡೊಳ್ ಮಱೆ ಬೆಱೆತಿರೆ ನೋಡಿ ಬಾಡುತಂ ವಿಹಗಂಗಳ್: **ರಾಜಶೇವಿ,** ೯. ೨೮)

**ಕೋಡುಂಗಲ್** – ಬೆಟ್ಟದ ತುದಿಯ ಕಲ್ಲು (ಮೂಡುವೆಟ್ಟಿನ ಕೋಡುಂಗಲ್ ನಡೆದು ಬರ್ಪಂತೆ ಬಂದು: **ಅನಂತಪು,** ೨. ೨೯ ವ)

**ಕೋಡುಗುಟ್ಟು** – ಕೊಂಬಿನಿಂದ ತಿವಿದಾಡು (ಮುಂತೆ ಲುಲಾಯಸಂತತಿಗಳಾಗಿ ಕರಂ ಪುಗೆ ಕೋಡುಗುಟ್ಟಿಯುಂ ದಂತಿಗಳಾಗಿ ಬಂದು ಮೊಗಮಿಕ್ಕಿಯುಂ ಅಂಕದ ಮಲ್ಲರಾಗಿ ಪೋರ್ದುಂ ತಗರಾಗಿ ತಾಗಿಯುಂ ಲಾವಗೆಯಾಗಿ ಕಾದಿಯುಂ ತಮತಮಗಿಂತು ಚಿತ್ತಮಱೆದು ಓಲಗಿಪರ್ ದಿವಿಜರ್ ಕುಮಾರನಂ: **ಮಲ್ಲಿನಾಪು,** ೧೩. ೫೦)

**ಕೋಡುಗೈ** – ಮರದ ಕೊಂಬೆ, ದಾನಮಾಡುವ ಕೈ (ಬಾನಂತೆ ಮೀನ್ಗಳಂ ತಳೆದುಂ ಮುನ್ನೀರೆನಿಸಂ, ಮಾವಿನಂತೆ ಕೋಡುಗೈಯೊಂದಿಯುಂ ಸೊರ್ಕಾನೆಯೆನಿಸಂ: **ಕಬ್ಬಿಗಕಾ,** ೪೩ ವ)

**ಕೋಡುಗೊಳ್** – ದಂತದಿಂದ ತಿವಿ (ಮಾವಿನ ಬಂದ ಕೋಡೆ ಕೋಡಾಗಿರೆ ಕೋಡುಗೊಂಡು ಪರಿದತ್ತು ವಸಂತಗಜಂ ವಿಯೋಗಿಯಂ: **ಪಂಪಭಾ,** ೨. ೧೫)

**ಕೋಡುಸೇಡುಗೊಳ್** – ಶೈತ್ಯದ ಸೆಡೆತಕ್ಕೊಳಗಾಗು (ತಳರ್ಚಿ ತಣ್ಮಲೆವಲರೀ ಅಲೆದಪುದು ಎಮ್ಮಂತಃಪುರ ಲಲನೆಯರಂ ಕೋಡುಸೇಡುಗೊಳ್ವಿನಮೀಗಳ್: **ಆದಿಪು,** ೧೧. ೯೦)

**ಕೋಡೆಱಂಕೆ** – ಗರಿಯ ತುದಿ, ತುದಿರೆಕ್ಕೆ (ಮದನನ .. .. ಕೋಡೆಱಂಕೆ ಸೀದುದು ಇರ್ದುದು ರಾಮಚಂದ್ರಮುನಿನಾಥನ ಶಾಂತಿರಸಾತಿರೇಕದಿಂ: **ಅನಂತಪು,** ೧. ೨೪)

**ಕೋಡೇಱು** – ಕೋಡಿನ ತಿವಿತದ ಗಾಯ (ತಮೋಗಜದ ಕೋಡೇಱೆಂದಮೇಂ ನೊಂದುದೋ ಹರಿಣಂ: **ಆದಿಪು,** ೧೨. ೬)

**ಕೋಣ್** – ಮೂಲೆ; ದಿಕ್ಕು (ದ್ವಿತೀಯ ಪ್ರಾಕಾರದೊಳಗೆ ಪಾವಕ ಪುಜ್ಯಜನ ಪವಮಾನ ಪಶುಪತಿಗಳ ವಿನೋದವಿಹಾರ ಯೋಗ್ಯಂಗಳಪ್ಪ ನಾಲ್ಕುಂ ಕೋಣ್ಗಳ ಸೌವರ್ಣಸೌಧಂಗಳೊಳಂ: **ಶಾಂತೀಶ್ವಪು,** ೧೬. ೩೧ ವ)

**ಕೋಣ** – ಎಮ್ಮೆಯ ಜಾತಿಯಲ್ಲಿ ಗಂಡು, ಮಹಿಷ (ಕೋಣಂ ಪೊಕ್ಕ ಮಡುವಿನಂತೆ ಮನದೊಳ್ ಕದಡಿ: **ಧರ್ಮಾಮೃ,** ೧೦. ೨೬ ವ); ತಮಟೆ ಬಾರಿಸುವ ಕೋಲು (ಭೋರೆನೆ ಪೊಯ್ವುದುಂ ಆಱುಂ ಭೇರಿಗಳುಂ ಕನಕ ಕೋಣ ಹತಿಯಿಂದಂ ಬಂಭಾರವಮೇಂ ನೆಗೆದುದೊ ರಘುವೀರ ಕಲಾಪಿನೀ ಮೇಘರವಂ; **ಪಂಪರಾ,** ೧೨. ೨೦); ವೀಣೆ ನುಡಿಸುವ ಸಾಧನ (ವೀಣೆಯೆಂಬ ಕರ್ಬಿನ ಬಿಲ್ಲನೇಱೆಸುವಂತೆ ಕಳೆಯನೇಱೆಸಿ .. .. ನನಗಣೆಯಂ ಕೊಳೌಂತೆ ಕೋಣಮಂ ಕೊಂಡು: **ನೇಮಿನಾಪು,** ೬. ೧೯ ವ); ವಾದ್ಯ ನುಡಿಸುವ ಸಾಧನ (ಕೋಣಪ್ರಹತ ಬಹುಳ ಭಾಂಕಾರ ಭೇರಿ ನಿನಾದಂ: ಪಂಪರಾ, ೧೨. ೨೦);

**ಕೋಣಪ** – ಒಬ್ಬ ದಿಕ್ಪಾಲಕ, ನಿರುತಿ (ಕೋಣಪ ನೈಋತ: **ಅಭಿಧಾವ**, ೧. ೧. ೪೨); ರಾಕ್ಷಸ (ಬಂದಂ ತದಗ್ರದೇಶಕ್ಕೆ ಕೋಣಪಂ ವಿಗತಕೃಪಂ: **ಚಂದ್ರಪ್ರಪು,** ೫. ೪೨)

**ಕೋಣೆ** – ಮೂಲೆ, ಸಂದು (ರಸೆಗಿಟಿದನೊ ಮೇಣ್ ನಾಲ್ಕುಂ ದೆಸೆಗಳ ಕೋಣೆಗಳೊಳ್ ಉಟಿದನೋ ಖಳಂ: **ಗದಾಯು,** ೬. ೨೧)

**ಕೋಣ್ಗೋಣ್** – ಮೂಲೆ ಮೂಲೆ (ಶೋಣಮಣಿದಿಪ್ತಿರುಚಿ ಕೋಣ್ಗೋಣೊಳ್ ಪಜ್ಜಳಿಸೆ ರತ್ನದೀಪ್ತಿ ಸುವರ್ಣಕ್ಷೋಣೀಧರಮೆನಿಪುದು ನೇರಾಣಿಯ ಪೊಂಬೆಸೆದ ಸಮೆದ ರಾಣೀವಾಸಂ: **ಅಜಿತಪು,** ೨. ೧೯)

**ಕೋದಂಡ** – ಬಿಲ್ಲು (ಮದನಂಗೆ ಉಪ್ಪರವಟ್ಟಮಾಗದ ತಳಿರ್ ಕಾಮಂಗೆ ಕೋದಂಡಮಾಗದ ಕರ್ವು .. .. ಮಱುದು ಅಗವು ಎಂಬ ವಿವಿಧೋದ್ಯಾನಂಗಳಾ ದೇಶದೊಳ್: **ನೇಮಿನಾಪು,** ೧. ೬೪)

**ಕೋದಂಡಕೋಟಿ** – ಬಿಲ್ಲಿನ ತುದಿ (ನಿಜವಾಮಕರಕಲಿತ ಪ್ರಚಂಡ ಕೋದಂಡಕೋಟಿಯೊಳ್ ಮಂಜುಸಿಂಜಿನಿಯಂ ಅಮರ್ಚಿ: **ಶಬರಶಂ,** ೪. ೧೭ ವ)

**ಕೋದ್ರವ** – ಹಾರಕ ಎಂಬ ಧಾನ್ಯ (ಯಾವನಾಳ ಕಂಗು ಕೋದ್ರವಾದಿ ಸರ್ವೌಷಧಿಗಳುಂ: **ಆದಿಪು,** ೮. ೬೧ ವ)

**ಕೋಪಗರ್ಭಸ್ಮಿತ** – ಕೋಪವನ್ನು ಒಳಗಿಟ್ಟುಕೊಂಡು ತೋರುವ ಮುಗುಳ್ನಗು (ಗಂಧಸಿಂಧುರೇಂದ್ರಮನನುಕರಿಸಿ ಕೋಪಗರ್ಭಸ್ಮಿತಂ ಬೆರಸು: **ಆದಿಪು,** ೧೪. ೬೩ ವ)

**ಕೋಪಪಾಟಳ** – ಕೋಪದಿಂದ ಕೆಂಪಾದ (ಅಧಿಕ ಕೋಪಪಾಟಳ ಪರುಷೇಕ್ಷಣರೆನಿಸಿ ದೃಷ್ಟಿಯುದ್ಧಂಗೆಯ್ದರ್: **ಗದಾಯು,** ೮. ೨)

**ಕೋಪರಸ** – ರೌದ್ರರಸ (ಪೆರ್ಚಿದ ಶೋಕರಸಮಂ ಕೋಪರಸದ ಮೇಲಿಕ್ಕಿ: **ಪಂಪಭಾ,** ೧೩. ೬೧ ವ)

**ಕೋಪಾಗಾರ** – ಕೋಪಗೃಹ (ಆ ಸುಭಗರೂಪೆ ಕೋಪಾಗಾರಮಂ ಪೊಕ್ಕಿರ್ದುದಂ ಕಂಡು: **ಜಗನ್ನಾವಿ,** ೧೨. ೮೦ ವ)

**ಕೋಪಾರಕ್ತ** – ಕೋಪದಿಂದ ಕೆಂಪಾದ (ಕೋಪಾರಕ್ತನೇತ್ರಂ ನಿಜಭುಜಗದೆಯಂ ತೂಗಿದಂ ಧಾರ್ತರಾಷ್ಟ್ರಂ: **ಗದಾಯು,** ೭. ೩೦)

**ಕೋಪು** – ಒಂದು ಬಗೆಯ ಬೇಟೆ ಸೋಪಿನ ತೋಪಿನ ಪಳಹದ ಕೋಪಿನ ಪಾಳಿವದ ಗೋರೆವೇಂಟೆಗೆ .. .. ನಡೆತಂದರಲ್ಲಿ ಪುಳಿಂದರ್: **ಸೂಕ್ತಿಸುಧಾ,** ೩. ೧೦೪)

**ಕೋಮಲಾಂಕುರ** – ಕೋಮಲವಾದ ಚಿಗುರು (ವಿಟಿಗಳೊಳ್ ವಿಲಸಿತ ಕಳಿಕಾಕುಳಿ ಕೋಮಲಾಂಕುರಮನಂತೆ ಪಡೆಗುಂ: **ಕವಿರಾಮಾ,** ೩. ೫೪)

**ಕೋಮಳ** – ನೀರು (ವಾರಿ ಕೋಮಳಂ ಅರ್ಣಂ .. .. ತಱಿಸಲ್ಕೆ ನೀರ್ಗೆ ಪೆಸರಂ ಪರ್ಯಾಯದಿಂ ವಾಗ್ವಿದರ್: **ಅಭಿಧಾವ,** ೧. ೪. ೧); ಮೃದು (ಮೃದು ಸುಕುಮಾರಂ ಕೋಮಳಂ: **ಅಭಿಧಾವ,** ೨. ೧. ೪೫)

**ಕೋಮಳವಂಶ** – ಎಳೆಯ ಬಿದಿರು (ಪಕ್ವಬಿಂಬಾಧರಂ ಕೋಮಳವಂಶಶ್ಯಾಮಂ ಅಂಬೋಧರರವನಳಿನೀಕುಂತಲಂ: **ಆದಿಪು,** ೮. ೫೧)

**ಕೋಮಳೆ** – ನೈದಿಲೆ (ಕೋಮಳೆಯೆಂದು ನೆಯ್ದಿಲ್: **ಶಬ್ದಮದ,** ಪ್ರಸಾ ೭೨)

**ಕೋರಕ** – ಮೊಗ್ಗು (ಅಳಿಭರದಿಂ ಶುಕಕೋಕಿಳಕುಳಭರದಿಂ ಕೋರಕ ಅಂಕುರೋತ್ತರಭರದಿಂ ಫಳಭರದಿಂದ ಅತಿಭರವಾಯ್ತು ಎಳಮಾವಿಂಗೆನಿಸೆ ನೇಲ್ವ ಕೊಂಬುಗಳೆಸೆಗುಂ: **ಅಜಿತಪು,** ೬. ೧೫)

**ಕೋರಕಗ್ರಂಥಿ** – ಮೊಗ್ಗಿನ ಗಂಟು (ಲತಾಕೋರಕಗ್ರಂಥಿ ನೀರೇಱಿದುವು: **ಮಲ್ಲಿನಾಪು,** ೫. ೩)

**ಕೋರಕಿತ** – ಮೊಗ್ಗು ಬಿಟ್ಟಿರುವ (ಕೋರಕಿತ ಅಂಕುರಿತ ಪಲ್ಲವಿತ ಮುಕುಳಿತ ವಿಸ್ಫಾರಿತ ರಮ್ಯಾಶೋಕಮಹೀರುಹಮುಮಂ: **ಆದಿಪು,** ೧೦. ೪೧)

**ಕೋರಡಿಗ** – ಮೂರ್ಖ (ದುಷ್ಟನಾಯಕರಿಂ ಬಟಿಕೆ ನಿನ್ನಂ ಆಕೆಗಳ ಕೂರ್ಪ ಕೋರಡಿಗರ್ ಏಱಿಸಿದೊಡೆ ಆಂ ಮೆಚ್ಚುವೆನೆ: **ಅನಂತಪು,** ೮. ೭ ವ)

**ಕೋರಯಿಸು** – ಕೋರೈಸು, ಕಣ್ಣು ಕುಕ್ಕು, ನಾಚಿಕೆಪಡು (ಇಂತಿದು ಅಯುಕ್ತಂ ಯತಿಗಳ್ಗೆಂತುಂ ಎನಿಪ್ಪ ಅಳಿತನಕೆ ಕೋರಯಿಸದೆ ಮೆಯ್ಯಂತುಟಕೆ ನಾಣ್ಚಿ: **ಆಚವರ್ಧ,** ೧೦. ೪೩)

**ಕೋರಯ್ಸು** – ಕಣ್ಣು ಕುಕ್ಕು (ಮಾಣ್ಕುಟಿದರ ಮೆಯ್ವುಳಗೆನೆ ಕಣ್ಗಳ್ ಕೋರಯ್ಸೆ ತೊಳಗಿ ಬೆಳಗುತ್ತುಂ: **ಕಾದಂಸಂ,** ೮. ೪೩)

**ಕೋರೈಸು** – ತಲ್ಲಣಿಸು (ಶರತ್ತಪನತಾಪದಿಂ ಕೊರಗಿ ಕೂಡೆ ಕೋರೈಸಿದಾ ನರೇಶ್ವರವಧೂಕದಂಬಕಮಂ ಆಱಿಸಲ್ಕೆ: **ಆದಿಪು,** ೧೧. ೫೫); ಕಣ್ಣು ಕುಕ್ಕು (ಕೂರೆಲೆಗಳ ಬಾಯ್ದಾರೆಗೆ ಕೋರೈಸಿ ಮುಸುಂಕಿದಂತೆ ಪರಿಲಾಲ್ಗಳ ಪಂಕೇರುಹರಜದೊಳ್ ಪೊರೆದು ಸಮೀರಂ ನವಗಂಧಶಾಳಿವನದೊಳ್ ಸುಟಿಗುಂ: **ಆಚವರ್ಧ,** ೧. ೪೧)

**ಕೋಲ್** – ಅಳತೆಯ ಕೋಲು (ಪಿರಿದಪ್ಪ ಕೋಲ್ಗಳಿಂದಂ ಪಿರಿದೆನಿಸಿದ ಕೊಳಗದಿಂದಮುಂ ತಾಂ ಕೊಂಡಂತೆ: **ಸಮಯಪ,** ೫. ೪೬) ದೊಣ್ಣೆ (ಕಿಱುಗೂಸು ಕೋಲಂ ಪಿಡಿದು ನಿಮ್ಮಂ ಬಡಿಯಲ್ಕೆಂದು ಬಂದೊಡೆ: **ವಡ್ಡಾರಾ,** ಪು. ೯೪, ಸಾ. ೮); ಬಾಣ (ಅಂತೆರಡು ಬಲದ ದಳಂಗಳ್ ಕೋಲಾಟಮಾಡುವಂತೆ ಕಿಱಿದಾನುಂ ಬೇಗಂ ತಟ್ಟುಪೊಟ್ಟೆಂದು ಕೋಲ್ಕುಟ್ಟಿ: **ಪಂಪಭಾ,** ೧೦. ೮೦ ವ)

**ಕೋಲ** – ಎಲಚಿ ಗಿಡ (ಕೋಲಂ ಕರ್ಕಂಧು ಬದರಿ ಕೋಲೀ ನಾಮಂ: **ಅಭಿಧಾವ**. ೧. ೮. ೧೧)

**ಕೋಲಾಟ** – ಕೋಲು ಹೊಯ್ದು ಮಾಡುವ ಕುಣಿತ (ಕೋಲಾಟವನಾಡಲ್ ಕೆಲರಾಟಂದು ವಿನೋದದೆ ಕನಕದಂಡಮಂ ಪಿಡಿದೆಸೆದರ್: **ಜಗನ್ನಾವಿ,** ೫. ೧೨)

**ಕೋಲ್ಬೆಳೆ** – ನೇರವಾಗಿ ಬೆಳೆದ ಬೆಳೆ (ಕೇದಗೆಯ ಕೋಲ್ಬೆಳೆಯಂತಿರೆ ನಿರುತಿ ನಿರುತಮೇನೆಸದಪನೋ: **ಲೀಲಾವತಿ,** ೪. ೧೦೩)

**ಕೋವಣ** – [ಕೌಪೀನ] ಲಂಗೋಟಿ (ಸರಿಗೆಯೊಳ್ ಸಮೆದ ಅಕ್ಷಮಾಲಿಕೆ ಪೊನ್ನ ಮುಂಜಿ ತೊಳಪ್ಪ ಕಪ್ಪುರದ ಭಸ್ಮರಜಃ ತ್ರಿಪುಂಡ್ರಕಂ ಒಪ್ಪೆ ಪಿಂಗಜಟಾಳಿ ತಾವರೆಯ ಸೂತ್ರದೊಳಾದ ಜನ್ನವಿರಂ ದುಕೂಲದ ಕೋವಣಂ ಕರಂ ಒಡಂಬಡೆ ನೋಟಕರ್ಕಳಂ ಆ ತಪಸ್ವಿ ಮರುಳ್ಚಿದಂ: **ಪಂಪಭಾ,** ೬. ೮)

**ಕೋವರ್** – ಕುಂಬಾರ (ಕೋವರೆಂದು ಕುಂಬಱರ್: **ಶಬ್ದಮದ,** ಪ್ರಸಾ, ೭೩)

**ಕೋವರ ಚಕ್ರ** – ಕುಂಬಾರನ ಚಕ್ರ (ಕುರುರಾಜಂ ವಿದ್ಯಾಧರಕರಣದೆ ನೆಗೆದು ಅಂಬರಕ್ಕೆ ಗದೆಯಂ ಕ್ರಮದಿಂ

ತಿರುಪೆ ಧರಾಚಕ್ರಂ ಕೋವರಚಕ್ರಂ ತಿರಿವ ತೆಱದೆ ತಿರಿದತ್ತು ಎನಸುಂ: **ಗದಾಯು,** ೮. ೨೪)

**ಕೋವಿದ –** ವಿದ್ವಾಂಸ (ಆಗಮಾದಿ ಶಾಸ್ತ್ರೌಘಕಳಾ ಕೋವಿದಂ ಅರುಹಾಂಘ್ರಿದ್ವಯ ಸೇವಕಂ: **ಧರ್ಮಪ,** ೧೦ ೧)

**ಕೋಶ –** ಒರೆ (ಕೋಶಂ ಖಡ್ಗಪಿಧಾನಂ: **ಅಭಿಧಾವ,** ೩. ೧. ೧೦೦); ಅಂಡಕೋಶ (ಕಾರ್ಮುಗಿಲ ನೀರ್ವೊಲ್ ಕೋಶದಿಂದಂ ಮದಂ ಸುರಿಯುತ್ತಿರ್ಪುದುಂ: **ಆದಿಪು,** ೧೨. ೫೮); ಶಿಶ್ನ (ಲಿಂಗಕ್ಕೆ ಪೆಸರ್ ಕೋಶಂ: **ಸಮಯಪ,** ೮. ೨೦): ಭಂಡಾರ (ಅರಸಂ ಪೆರ್ಗಡೆ ಜನಪದ ಅರಿದೆನಿಸುವ ಕೋಟೆ ಕೋಶಮಾಯತ್ತಂ ಬಂಧುರವೃತ್ತ ಮಿತ್ತನೆಂಇಂತು ರಾಜ್ಯಮಕ್ಕುಂ ವಿಚಾರಿಸಲ್ ಸಪ್ತಾಂಗಂ: **ಅಭಿಧಾವ,** ೧. ೧೧. ೪೮)

**ಕೋಶಗೃಹ –** ಭಂಡಾರ, ಬೊಕ್ಕಸ (ಕೋಶಗೃಹದಂತೆ ಅಷ್ಟಪದಾಧಿಷ್ಠಿತಂ: **ಪುಷ್ಪದಂಪು,** ೫. ೬೮)

**ಕೋಶಪಾನ –** 'ದಿವ್ಯ'ದ ್ಒಂದು ಪ್ರಭೇದ: ದೇವತಾವಿಗ್ರಹಕ್ಕೆ ಅಭಿಷೇಕ ಮಾಡಿದ ನೀರನ್ನು ಕುಡಿಯುವುದು (ಶಪಥಮಂ ಮಾಟಿಸ್ವಾಗಳ್ ಕೋಶಪಾನಮಂ ಮಾಟ್ಟಿರೆಂಬರ್: **ಸಮಯಪ,** ೮. ೨೦)

**ಕೋಶವಿಭೂತಿ –** ಹೂವಿನ ಕರ್ಣಿಕೆಯ ಸಮೃದ್ಧಿ, ಭಂಡಾರದ ಸಿರಿ (ಕೋಶವಿಭೂತಿ ವಿಕ್ರಮದ ಸೊಂಪು ಉದ್ಯಾನದೊಳ್ ಪೀನಮೊಪ್ಪುಗುಂ ಉರ್ವಿಶರೊಳ್ ಒಪ್ಪೆಂದೆನಿಸಿದಂ ತನ್ನೇಟ್ಗೆಯಿಂ ಪದ್ಮಜಂ: **ಪುಷ್ಪದಂಪು,** ೫. ೫೬)

**ಕೋಶಾಗಾರ –** ಕೋಶಗೃಹ (ಒಪ್ಪುವುವಲ್ಲಿ ಶಸ್ತ್ರಕುಟಿ ಕೋಶಾಗಾರಂ ಏಕಾಂತಮಂದಿರಂ ಅಭ್ಯಾಸನಿಕೇತನಂ ಪಚನಧಾಮಂ ಸ್ನಾನಸದ್ಮಂ ಮನೋಹರ ಶಯ್ಯಾವಸಥಂ ವಿಭೂಷಣಗೃಹಂ ದೇವಾರ್ಚನಾವಾಸಂ ಅಂಬರವೇಶ್ಮಂ ವರ ಭೋಜನೌಕಂ ಅವರೋಧಸ್ತ್ರೀನಿವಾಸಾಸ್ಪದಂ: **ಶಾಂತೀಶ್ವಪು,** ೧. ೧೩೭)

**ಕೋಶಾತಕಿ –** ಪಡುವಲ ಕಾಯಿ (ಪೆಱರಜೆಯದಂತು ಸರ್ವಸಂಭರಸಮ್ಮಿಶ್ರಮಪ್ಪ ಕೋಶಾತಕೀಫಳಮಂ ಚರಿಗೆವೊಕ್ಕ ಸುಧರ್ಮಮುನಿಗಿಕ್ಕಿದೊಡೆ: **ಚಾವುಂಪು,** ಪು. ೪೧೭. ಸಾ. ೧೪)

**ಕೋಶಾಧಿಪ –** ಕೋಶಾಧ್ಯಕ್ಷ, ರಾಜಭಂಡಾರದ ಮುಖ್ಯಸ್ಥ (ವಿಷಯ ಗೃಹಾಮಾತ್ಯ ದಂಡಾಧಿನಾಥಾವಳಿ ಧರ್ಮಾಧ್ಯಕ್ಷ ಕೋಶಾಧಿಪ ತಳವರ ಹಾಸ್ಯಾದಿ ತಂತ್ರಾಳಿಪಾಳಾವಳಿ ರಾಜಶ್ರೇಷ್ಠಿ ಸೇನಾಪರಿಕರಣ ಪುರೋಧೋಧಿಕಾರ ಅಂಗರಕ್ಷಾವಳಿ ಮುಖ್ಯಂಬೆತ್ತ ಬಾಹತ್ತರದೆಸಕದ ನಾನಾ ನಿಯೋಗಿಪ್ರತಾನಂ: **ಶಾಂತೀಶ್ವಪು,** ೧೫. ೯೦)

**ಕೊಶೋಪನತ –** ಮಾಂಡಳಿಕ, ಸಾಮಂತ (ಕಳಿಂಗರಾಜಂಗೆ ಕೋಶೋಪನತವೃತ್ತಿಯನಿತ್ತು ಸರ್ವಸ್ವಮಂ ಕೊಡು ಆಜ್ಞಾವಿಧೇಯಮಂ ಮಾಡಿ ಮಹೇಂದ್ರ ಉಪಕಂಠದೊಳ್ ಮೂಱು ಉಪ್ಪಯಣಂಗೆಯ್ದು: **ಶಾಂತಿಪು,** ೧೦. ೧೬೫)

**ಕೋಷ್ಠ –** ಒಳಕೊಠಡಿ (ಪದಿನಾಱುಂ ಭಿತ್ತಿಗಳೊಳ್ ನಾಲ್ಕು ವೀಧಿಗಳುಟೆಯೆ ನೆಗಟ್ದ ಪನ್ನೆರಡು ಕೋಷ್ಠಂಗಳೊಳ್: **ಆದಿಪು,** ೧೦. ೩೫ ವ); ಸುತ್ತುಗೋಡೆ (ನೃಪಾಲಾಂತರ್ಗತ ಕಕ್ಷೆ ಕೋಷ್ಠಂ: **ಅಭಿಧಾವ,** ೧. ೧೦. ೧೪); ಕಣಜ (ಅಂತರ್ಗೃಹಂ ಕುಸೂಗೃಹಾಂತರ್ದೇಶಂಗಳಱಿಗೆ ಕೋಷ್ಠಂ: **ಅಭಿಧಾವ,** ೩. ೧. ೯೭); ಪೀಠ (ಕಿರೀಟಮನೆಡಗೆಯ್ಯಂದೋಸರಿಸುತ್ತುಂ ಉಚಿತಕೋಷ್ಠದೊಳ್ ಅವರ್ಗಳ್ ಕುಳ್ಳಿರ್ದು: **ಚಂದ್ರಪ್ರಪು,** ೭. ೧೭ ವ)

**ಕೋಷ್ಠಾಗಾರ –** ಉಗ್ರಾಣದ ಮನೆ (ಅರಸನ ಕೋಷ್ಠಾಗಾರದ ಕರಣಂಗಳ ಕಾಪನೆಯ್ದೆ ಬಂಚಿಸಿ: **ಆದಿಪು,** ೫. ೧೫)

**ಕೋಸು –** ದಾರದಲ್ಲಿ ಪೋಣಿಸು (ಕೋಸು–ಸೂತ್ರಪ್ರವೇಶೇ: **ಶಬ್ದಮದ, ಧಾ** ೬೯೪)

**ಕೋಸುವಲೆ –** ಒಂದು ಬಗೆಯ ಬಲೆ (ಕೋಸುವಲೆ ದೋಂಟಿವಲೆ ಬಾಣಾಸನವಲಗಂಬು ಕ್ಷಲಿ ಕೈಪೊಡೆ ಗಾಳಂ: **ಸೂಕ್ತಿಸುಧಾ,** ೩. ೧೦೩)

**ಕೋಳ್ –** ಹೊಡೆತ (ರಾಜಪುತ್ರಸ್ಮಿತ ಮಧುರ ಮಧುರಾಪಾಂಗಜಾಸ್ತ್ರಂಗಳ ಕೋಳಂ ನೂತನಪ್ರೇಮದೆ ನಿಮಿರ್ವೆಡೆಯೊಳ್: **ಆದಿಪು,** ೪. ೫೧); ಹಿಡಿತ (ಮನಂಬುಗೆ ನಳಿತೋಳ ಕೋಳೆಸೆಯೆ ಘಟ್ಟಿಮಗುಟ್ಟುವ ಘಟ್ಟಿವಟ್ಟಿಯಂ ಭೋಂಕನೆ ಕಂಡು ಕೀಚಕಂ: **ಪಂಪಭಾ,** ೮. ೫೯ ಮತ್ತು ೫೯ ವ); ಲೂಟಿಯ ಹಣ (ಮನ್ನೆಯರಾಳಂತೆ ಕೋಳಿಂಗಾಸೆಗೆಯ್ಯದೆ ಬಯಲ ನೀರಂತೆ ಮಾರ್ಗಂ ಬಿಟ್ಟು ನಡೆಯದೆ: **ಧರ್ಮಾಮೃ,** ೫. ೬೪ ವ); ಆಕರ್ಷಣೆ (ನಳಿತೋಳ ಕೋಳೆಸೆಯೆ ಘಟ್ಟಿಮಗುಟ್ಟುವ ಘಟ್ಟಿವಳ್ತಿಯಂ: **ಪಂಪಭಾ,** ೮. ೫೯); ಪ್ರದೇಶ, ಕಡೆ (ವಿರಾಟಂ ಶ್ವೇತನುತ್ತರಂ ಶಂಖನೆಂಬ ಮೂವರ್ ಮಕ್ಕಳುಂ ಶತಾನೀಕ ಶತದ್ಯುಮ್ನ ಶತಚಂದ್ರಂ ಮೊದಲಾಗಿ ಪನ್ನೊರ್ವರ್ ತಮ್ಮಂದಿರುಂ ಬೆರಸು ನೆಲನದಿರೆ ಮುಂ+ಕೋಳೊಳ್ ನಡೆಯೆ: **ಪಂಪಭಾ,** ೯. ೯೫ ವ); ರಭಸ (ಪರಿವ ಗಾಲಿಯ ಕೋಳ್ಗೆ ಕೆಳರ್ತು ಬೆಟ್ಟುಗಳ್ ಕೂಡೆ ಸಡಿಲ್ವಿನಂ ಪೊಡೆವ ಬೀರರ ಜಂಕೆಗೆ ಗೊಂಟಿನಾನೆಗಳ್ ಕೋಡುವಿನಂ ಕಡಂಗಿ ಪರಿತಂದುವು ತೋರ್ಕೆಯ ತೇರ್ಗಳೋಳಿಯಿಂ: **ಕಬ್ಬಿಗಕಾ,** ೧೬೦)

**ಕೋಳಕ –** ಮೆಣಸು (ನೀರೆಲ್ಲಂ ತೆಳ್ಳನೆ ತಿಳಿದು ಸಕಳಕಾಲೀನ ಕೋಳಕಾಂಕುರ ಪ್ರವಾಳಕುಳಪ್ರಸೂನ ಫಳಪರಿಣಾಮದಿಂ: **ವರ್ಧಮಾಪು,** ೧೩. ೩೪ ವ)

**ಕೋಳಿಕಾಳಿಕಾಱ –** ವಾಮಾಚಾರದ ಶಾಕ್ತೇಯ ಮತದ ವಂಚಕ (ಜಾತ್ಯಶ್ವದಂತೆ ಬೇಗಮಾಗಿ ಕೋಳಿಕಾಳಿಕಾಱನಂತೆ ಬಟಿವಟಿವಿಡಿದು ತುಂಬಿನ ನೀರಂ ಉರ್ಚಿದಾಗಳಂತೆ ಪರಿದು ಅಳುರ್ದುಕೊಳ್ವುದಿದು ಪಂದಿವೇಂಟೆಯ ನಾಯ್: **ಪಂಪಭಾ,** ೫. ೪೬ ವ)

**ಕೋಳು –** ಆಕ್ರಮಣ (ಕಾವ ನಾರಾಯಣನ ಸುದರ್ಶನಮೆಂಬ ಚಕ್ರದ ಕೋಳುಮಂ ವಿಕ್ರಮಾರ್ಜುನನ ದಿವ್ಯಾಸ್ತ್ರಂಗಳ ಕೋಳುಮಂ ಅಗ್ನಿದೇವನ ಶಿಖಾಕಳಾಪದ ಕೋಳುಮಂ ಎಂತಾನುಂ ಬಂಚಿಸಿ ಬಲೆಪಱಿದ ಕೋಕನಂತೆ ಒರ್ವ ವನಪಾಲಕಂ ಪೋಗಿ ದೇವೇಂದ್ರನಂ ಕಂಡು: **ಪಂಪಭಾ,** ೫. ೯೩ ವ)

**ಕೋಳ್ಗುದಿ –** ತುಂಬ ವ್ಯಥೆ (ನನೆಗಣೆಯಿಂ ತೀವಿದ ದೊಣೆಯಾಗೆರ್ದೆ ಕೋಳ್ಗುದಿಗೊಳೆ: **ಶಾಂತಿಪು,** ೬. ೭೫); ಪ್ರೇಮಾಕ್ರಮಣದ ಕುದಿತ (ಮದನನ ಕಾಯ್ಪು ಮಾಣ್ಗೆ ಸರಸೀರುಹಜನ್ಮನ ಮೆಚ್ಚು ತೀರ್ಗೆ ಕೋಳ್ಗುದಿ ಮನದಿಂದಂ ಇಂದು ಪೊಱಮಾಱುಗೆ: **ಪಂಪಭಾ** ಪರಿಷತ್ತು, ೫. ೧೮); ತಿವಿತದ ಸಂಕಟ (ಸರಳ ಮೊದಳ್ದ ಬಲ್ಸರಿಯ ಕೋಳ್ಗಿರಲಾಱದೆ ತೆರಳ್ದು ದುರ್ಧರ ಹಯಂ ಅಟ್ಟೆ ಸಂದಣಿಸಿ ಸಂದಣಿ ಕೋಳ್ಗುದಿಗೊಂಡು: **ಪಂಪಭಾ** ಪರಿಷತ್ತು, ೩. ೭೦)

**ಕೋಳ್ಗುದಿಗೊಳ್** – ಸಂಕಟ ಅನುಭವಿಸು (ಕರಮೊತ್ತಿ ಕುತ್ತಂ ಅದು ಅರ್ವಿಸುತಿರೆಯುಂ ಅಳಿವೆಯ್ತರೆ ಕೋಳ್ಗುದಿಗೊಳುತಿರೆಯುಂ: **ಹರಿವಂಶ,** ೧೦. ೧೦)

**ಕೋಳ್ದಾಂಟು** – ದಾಪುಗಾಲು ಹಾಕಿ ದಾಟು ಪೆಣಂಗಳ ಕಂಪು ನಾಱುವುದರ್ಕೆ ಸೈರಿಸಲಾಱದೆ ಕೋಳ್ದಾಂಟಿನೊಳ್ ಕೊಳುಗುಳವಂ ಕಟೆದುಪೋಗಿ: **ಪಂಪಭಾ,** ೧೩. ೭೧ ವ); ವ್ಯಾಪಿಸುವಷ್ಟು ದೂರ (ಕೆಂಡಂಗಳೊಳ್ ಸುಟೆದು ಬೇವ ಪೆಣಂಗಳ್ ಕಂಪುನಾಱುವುದರ್ಕೆ ಸೈರಿಸಲಾರದೆ ಕೋಳ್ದಾಂಟಿನೊಳ್ ಕೊಳುಗುಳವಂ ಕಟೆದು ಪೋಗಿ: **ಪಂಪಭಾ,** ೧೩. ೭೧ ವ)

**ಕೋಳ್ಪಡು** – ಸೂರೆಯಾಗು (ಶ್ರೀದಿವ್ಯಕಾಂತಾಜನಂ ತೊಡವು ಎಂಬೊಂದುಮಂ ಆ ಸುರಾಸುರರಿಂ ಆ ಗೋವಿಂದನಿಂ ಮುನ್ನೆ ಕೋಳ್ಪಡೆದು ಅಂಭೋನಿಧಿಯಂತೆ ಬಂದು ನೆಗಟ್ದು ಇಂದ್ರಪ್ರಸ್ಥಮಂ ಧರ್ಮಜಂ: **ಪಂಪಭಾ,** ೪. ೯)

**ಕೋಳ್ಪಾಂಗು** – ಬೇಟೆ ವಶವಾಗುವ ರೀತಿ (ಬರವಂ ಕಾಡಂ ಬೇಗೆಗೆ ಕರಮಜೆದು ಎರಡುಂ ಮೃಗಂಗಳುಂ ತಣ್ಬುಟಿಲೊಳ್ ನೆರೆದು ಒಡವಂದುವು ತಪ್ಪದೆ ಇದ ಅರಿಕೇಸರಿ ಕಂಡು ಮೆಚ್ಚುವ್ಯೆ ಕೋಳ್ಪಾಂಗಂ: **ಪಂಪಭಾ,** ೫. ೩೯)

**ಕೋಳ್ಪೋಗು** – ಸೂರೆ ಹೋಗು (ಚಾಗದ ಕಂಬಮಂ ನಿಜೆಸಿ ಬೀರದ ಶಾಸನಮಂ ನೆಗಟ್ಚೆ ಕೋಳ್ಪೋಗದ ಮಂಡಲಂಗಳನೆ ಕೊಂಡು ಜಗತ್ರಿತಯಂಗಳೊಳ್ ಜಸಕ್ಕೆ ಆಗರಮಾದ ಬದ್ದೆಗನಿಂ ಆ ನರಸಿಂಹನಿಂ ಅತ್ತ ನಾಲ್ವರಲ್ ಮೇಗು ಪೊದಳ್ದ ಚಾಗದೊಳಂ ಒಂದಿದ ಬೀರದೊಳಂ ಗುಣಾರ್ಣವಂ: **ಪಂಪಭಾ,** ೧. ೫೦)

**ಕೋಳ್ಮಸಗು** – ಸೆರೆ ಸಿಕ್ಕು (ಕೋಳ್ಮಸಗಿದ ಪುಲಿಯ ಪಿಂಡುಗಳುಮಂ ಅನುಕರಿಸಿ ನಡೆವಣಿಯ ಸಂದಣಿಯುಮಂ ಕಾಟ್ಟುಱು ಮಸಗಿದಂತೆ ಮಸಗಿದ ದುರ್ಧರಧನುರ್ಧರ ಬಲಮುಮಂ: **ಪಂಪಭಾ,** ೧೦. ೫೧ ವ)

**ಕೋಳ್ಮಿಗ** – ಹಿಂಸ್ರಜಂತು [ಕೋಳ್=ಬೇಟೆಯಾಡಿ ಪ್ರಾಣಿಗಳನ್ನು ಕೊಲ್ಲುವುದು] (ಅಲ್ಲಿ ಕೋಳ್ಮಿಗದ ವನೇಚರಾಧಿಪರ ದಾಯಿಗರತ್ತಣಿಂ ಅಪ್ಪ ಅಪಾಯಕೋಟಿಗೆ ಪವಣಿಲ್ಲ: **ಪಂಪಭಾ,** ೭. ೨೧)

**ಕೋಳ್ಮೊಗ** – ಕೊಂಬು ಮೂಡಿದ ಮುಖ (ಪುತ್ರ ವಿಶೇಷದಿಂದಾಕೆ ಕೋಟ್ಮೊಗಂಗೊಂಡು ಕೊಂಡಾಡಿ ನಡಪೆ: **ನೇಮಿನಾಪು,** ೪. ೯೬ ವ)

**ಕೋಳ್ವಡು** – ಸೂರೆಗೊಳಗಾಗು (ಶ್ಲೋಕಾರ್ಥಮೆನ್ನೊಳ್ ಸನ್ನಿದಮಾದುದು ಅದುಕಾರಣದಿಂದರ್ಥಮಂ ಕೋಳ್ವಟ್ಟು ಬಂದೆನೆಂದು ಪೇಟ್ವುದುಂ: **ಪಂಚತಂತ್ರ,** ೪೩೬ ವ)

**ಕೋಳ್ವೋಗು** – ಸೂರೆವೋಗು (ಮಾನಿನಿಯ ಸುರತರತ್ನನಿಧಾನಂ ಚಾತುರ್ಯದೀಪವರ್ತಿನಿಯಿನದೆಂತಾನುಂ ಕೋಳ್ವೋಯ್ತು: **ಜಗನ್ನಾವಿ,** ೧೦. ೧೪೨)

**ಕೋಱು** – ಬೇಡು, ಪ್ರಾರ್ಥಿಸು (ಪಾಂಡುರಾಜಸುತರಂ ಮುನ್ನಂ ಕೊಲಲ್ ಕೋಱಿದೈ: **ಗದಾಯು,** ೭. ೪೦)

**ಕೋಟ್** – ಚಳಿ, ಶೈತ್ಯ (ಗದೆಯ ಗಾಳಿಯ ಕೋಟ್ ಎಟ್ಚಿಱಿಸಿದುದು ಭೀಮನಂ ಮೆಯ್ಮಱೆದವನಂ ತಂದೆ ಸುತರ್ಗೆ ಕೂರದರೊಳರೇ: **ಗದಾಯು,** ೮. ೩೨); ಕೊಂಬಿನ ತಿವಿತ (ಪೋರ್ದುವು ಕೋಡ ಕೋಟೊಳಲ್ಲುಗುತರೆ ಮಸ್ತಕ ಪಿಂಡದ ಮೌಕ್ತಿಕೋತ್ಕರಂ: **ಪಂಪರಾ,** ೧೩. ೭೪)

**ಕೋಟಿ** – ಕೋಳಿ (ಕುಕ್ಕುಕ್ಕೂ ಎಂದು ಕೋಟಿ ಕೂಗಿದುದಾಗಹಳ್: **ಕಾವ್ಯಾವಲೋ,** ೧೧)

**ಕೋಟ್ಕಂಪು** – ಆಕರ್ಷಕವಾದ ಸುವಾಸನೆ (ಕಿಂಜಲ್ಕದ ಕದಡುತ್ತಲ ಮಂಜದ ಕೋಟ್ಕಂಪಿನ ಒಳ್ಗೆಸರ್ .. .. ಸೊಗಯಿಸಿತೋ: **ಲೀಲಾವತಿ,** ೬. ೭೪)

**ಕೋಟ್ಕಿಳ್** – ಕೊಂಬುಗಳು (ಕೋಟ್ಕಳನಾದಮಾನುಂ ಬಿಗಿದಪ್ಪಿಕೊಂಡು ಸತ್ತುದರ್ಕ್ಕಿದು ಕಾರಣಂ: **ವಡ್ಡಾರಾ,** ಪು ೩೮, ಸಾ ೧೬)

**ಕೊಟ್ಟುಕಟ್ಟು** – ಕೋಡ ಕುಟ್ಟು, ಕೊಂಬಿನಿಂದ ತಿವಿ (ಕೋಪಾಕುಳದಿಂ ಕೋಟ್ಟುಟ್ಟೆ ಕೆಂಡಂಗೆದಜೆರು ಅತುಳರೋಮಪ್ರರೋಹಂ ವರಾಹಂ: **ಕುಸುಮಾಕಾ,** ೧೪. ೩೮)

**ಕೋಟ್ಕೆಸಱ್** – ತಂಪಾದ ಗಟ್ಟಿ ಕೆಸರು, ತಂಪಾದ ಲೇಪನ (ಅಗುರ್ವಿನ ಕೊಟ್ಟೆನಾರ್ಪ ಕೋಟ್ಕೆಸಱ ಬಾವಿಯೊಳರ್ದೆ: **ಆದಿಪು,** ೨. ೪೩)

**ಕೋಟ್ಗೆಸಱ್** – ಕೋಟ್ಕೆಸಱ್ (ಮುತ್ತಿನ ಪಚ್ಚೆ ಮಾಣಿಕದ ವಜ್ರದ ಕೇಟೆಯೊಳ್ ಒಂದಿ ಸಾಂದಿನೊಳ್ ಕತ್ತುರಿಯೊಂದು ಕೋಟ್ಗೆಸಱೊಳ್ ಓಕುಳಿ ಚಂದನ ಗಂಧವಾರಿಯೊಳ್ ಸುತ್ತಲುಂ ಅಟ್ಕಱಂ ಪಡೆವ ಗೇಯದ ಪೆಂಪಿನ ಅಲಂಪಂ ಅರ್ಗಂ ಆರ್ತಿತ್ತುದು ಪಟ್ಟಬಂಧ ಮಹೋತ್ಸವಂ ಆ ಪಡೆಮೆಚ್ಚೆ ಗಂಡನಾ: **ಪಂಪಭಾ,** ೧೪. ೨೦)

**ಕೋಟ್ಮಸಗು** – ವಿಪರೀತ ಕೆರಳು (ಎಳಸಿ ಬಳಸಿರ್ಪ ಮೃಗಸಂಕುಳಂದನಿತುಂ ಒಡನೆ ಕೋಟ್ಮಸಗಿದೊಡೆ: ಅದಿಪು, ನರಸಿಂ. ೬. ೫೬)

**ಕೋಟ್ಮಿಗ** – ಕ್ರೂರ ಮೃಗ (ರವಿಶಶಿಗಳಿಂ ಪುಟ್ಟಿಸಿ ರವಿಕಾಂತೋಪಲ ಕೃಶಾನುವಂ ಕೋಟ್ಮಿಗಮಂ ದಿವಸದ ಅವಸಾನಸಮಯದೊಳ್ ಅವನಂಜಿಸುವೊಂದುಪಾಯಮಂ ಪ್ರಜೆಗಿತ್ತಂ: **ಪಂಪರಾ,** ೧. ೭೩)

**ಕೋಟ್ಮಿದುಳ್** – **ಹಸಿಯಾದ ಮಿದುಳು** (ಬರ್ಕವಲಸುಗಳೊಳ್ ಅಸುರರ ತೆರ್ಕೆಯನೆಟ್ಬುಟ್ಟಿ ಪೊಯ್ವುದುಂ ಕೋಟ್ಮಿದುಳುಂ ಬರ್ಕೆಯ ತೊಳೆಯುಂ ಸೂಸಿದುವು ಆರ್ಕಡುಕೆಯ್ದು ಅನಿಲಜಂಗೆ ಕೂರ್ಪಂ ತೋರ್ಪರ್: **ಪಂಪರಾ,** ೧೧. ೧೨೦)

**ಕೋಟ್ಮೊಗಗೊಳ್** – [ಕೋಡು ಹುಟ್ಟಿದ ತಲೆ ಕಾಣಿಸಿಕೊಳ್ಳು] ಸಂತೋಷದ ಮುಖ ಹೊಂದು (ಮಗನಾದನಾಗಿ ಚಾಗದ ನೆಗಟ್ತೆಯೊಳ್ ಬೀರದ ಏಟ್ಗೆಯೊಳ್ ನೆಗಟ್ ಮಗಂ ಮಗನೆನೆ ಪುಟ್ಟಲೊಡಂ ಕೋಟ್ಮೊಗಗೊಂಡುದು ಭುವನಭವನಂ ಅರಿಕೇಸರಿಯೊಳ್: **ಪಂಪಭಾ,** ೧. ೪೨)

**ಕೋಟ್ವಡು** – ಲೂಟಿಗೊಳಗಾಗು (ವನಯಾತ್ರಾಪರನಾಗಿ ಧನಮಂ ಕೋಟ್ವಟ್ಟು ತದ್ವೀರದತ್ತನುಂ ಅಂದು ಎಯ್ದಿದಂ .. .. ಕೌಶಾಂಬಿಯಂ: **ಕರ್ಣನೇಮಿ,** ೨. ೭೫)

**ಕೌಂಗು** – [ಕ್ರಮುಕ] ಅಡಕೆ (ತೂಗಿ ಪಣ್ಗೊಲೆಯಿ ಬಳ್ಕುವ ಕೌಂಗು ಕಾಯ್ದುಱುಗಲಂ ಪೇಟಿರ್ದ ಚೆಂದೆಂಗು: **ಆದಿಪು,** ೧. ೬೭)

**ಕೌಂತೇಯ** – ಕುಂತಿಯ ಮಗ, ಪಾಂಡವ (ಕೌಂತೇಯರಂ ಕಾಂತಾರದೊಳ್ ತಿಱ್ಱನೆ ತಿರಿಪಿದ ಸೊರ್ಕಿಗಳೇನಾದುವು: **ಗದಾಯು,** ೭. ೧೪)

**ಕೌಕ್ಷೇಯಕ** – ಕತ್ತಿ (ಸಂಗ್ರಾಮಭೂಮಿಯ ನಡುವೆ ಧೃಷ್ಟದ್ಯುಮ್ನ ಕಚಗ್ರಹವಿಲುಳಿತಮೌಳಿಯುಂ ತದೀಯ ಕೌಕ್ಷೇಯಕ ಧಾರಾವಿದಾರಿತಶರೀರನುಂ ಆಗಿ ಬಿಟ್ಟಿರ್ದ ಶರಾಚಾರ್ಯರಂ ಕಂಡು: **ಪಂಪಭಾ,** ೧೩. ೫೫ ವ)

**ಕೌಟವಿ** – ಬತ್ತಲೆ ಹೆಣ್ಣು (ನಗ್ನತ್ವದಿಂ ಕೌಟವಿ ಬಂದಡ್ಡಂ ನಿಲ್ಚೀ ಸುಡುಸುಡು ತೊಲಗು ಎಂದಾ ಮುರಧ್ವಂಸಿ ಪೇಸುತ್ತವೆ: **ಗಿರಿಜಾಕ,** ೧೮. ೪೨)

**ಕೌಟಿಲ್ಯ** – ವಕ್ರತೆ, ಕೊಂಕುತನ[ವುಳ್ಳವನು] ಕೃಷ್ಣನಂ ಪೊಲ್ಲಕೆಯ್ದನ್ನೋಡಿದಂ ವಸುದೇವಂ ಇಂತೆನಗೆ ಕೌಟಿಲ್ಯರ್ ಏಗೆಯ್ಯರೋ: **ಜಗನ್ನಾವಿ,** ೫. ೫೯)

**ಕೌಟಿಲ್ಯವೃತ್ತಿ** – ವಕ್ರವಾಗಿರುವಿಕೆ ಕುಂತಳ ಕೌಟಿಲ್ಯವೃತ್ತಿ ಪಿಂಗಿದುದು ಅಬಳಾಸಂತತಿಗೆ ಪಯಃಕೇಳಿಯೊಳ್: **ಚಂದ್ರಪ್ರಭ,** ೭. ೧೪೫); ಕಪಟ ನೀತಿ

**ಕೌಡುಡೆ** – ಸುಂದರ ವಸ್ತ್ರ (ಪೊಸ ರಂಗದ ಪರಿಯಂಕಂ ಮಿಸುಕುವ ಕೌಡುಡೆ ಮರಾಳತಳ್ಪಂ: **ತ್ರಿಷಷ್ಟಿಪು,** ೧೯. ೮)

**ಕೌಣಪ** – ಹೆಣ ತಿಂದು ಬದುಕುವವನು, ರಾಕ್ಷಸ (ಈ ಕೋದಂಡದಿಂ ದಂಡಧರನಂ ಈ ಕೃಪಾಣಣದಿಂ ಕೌಣಪರಂ .. .. ಗೆಲ್ದನೆಂದು ಬೇಱಬೇಱ ಪೆಸವೆಸರೊಳ್ ತೋಱ: **ಜಗನ್ನಾವಿ,** ೬. ೨೮ ವ)

**ಕೌತುಕ** – ಕುತೂಹಲಕರ (ನೋಡೆ ಕೌತುಕಮೀ ಕೂಸಿನ ಪಾಪಂ: **ಜಗನ್ನಾವಿ,** ೩. ೩೦); ಕುತೂಹಲ (ಇದು ಎಂತಪ್ಪ ಕೋಲಾಹಳಂ ಕೌತುಕಂ ಇಂದ್ರಂ ಪಾಯ್ದನಕ್ಕುಂ: **ಜಗನ್ನಾವಿ,** ೩. ೧೩)

**ಕೌತುಕತ್ವ** – ಕುತೂಹಲ, ಪ್ರೀತಿ (ಎಯ್ದಿದರ್ ಆದಮೆ ಕೌತುಕತ್ವಮಂ ಭೂಪ ಮನೋಭವನುಂ ಲತಾಂಗಿ ಕುಸುಮಾವಳಿಯುಂ: **ಕುಸುಮಾಕಾ,** ೧೫. ೧೪)

**ಕೌತೂಹಲಳ** – ಚಿಂತೆ (ನಿಮಗಿನಿವಿರಿದು ಕೌತೂಹಳಂ ಆರಿಂದಾಯ್ತು ಎಂದು ಬೆಸಗೊಳ್ವುದುಂ: **ಸುಕುಮಾಚ,** ೨. ೩೧)

**ಕೌದ್ರವೀಣ** – ಹಾರಕದ ಹೊಲ (ಶಾಲೇಯಂ ವ್ರೈಹ್ರೇಯಂ ತೈಲೀನಂ ಕೌದ್ರವೀಣಮ ಔಮ್ಯಂ ಯವ್ಯಂ; **ಚಂದ್ರಪ್ರಭ,** ೧. ೮೭)

**ಕೌಪೀನಧಾರಿ** – ಕೌಪೀನ ಧರಿಸಿದವನು, ಸನ್ಯಾಸಿ (ವಲ್ಕಲವಸನರುಂ ಕೌಪೀನಧಾರಿಗಳುಂ .. .. ಪರಿವ್ರಾಜಕರುಂ ಆಗಿ: **ಆದಿಪು,** ೯. ೯೩ ವ)

**ಕೌಮುದಿ** – ಬೆಳುದಿಂಗಳು (ಮಧುಕರ ಝೇಂಕಾರಮಂ ಕೌಮುದೀಸಂಪದಮಂ ಪುಂದಸ್ಕೋಕಿಲ ಆಲಾಪಮಂ ಅಲೆವ ಎಲರಂ ಬಾರ್ತೆಗೆಯ್ಯಂ ಮನೋಜಂ: **ಮಲ್ಲಿನಾಪು,** ೩. ೨೬)

**ಕೌಮುದಿನಿ** – ಚಂದ್ರ (ನೀನೀಕೆಯಂ ಕಾವುದೆಂದು ಪೇೞ್ವುದುಂ ಕೌಮುದಿನಿಗೆ ಕುಮುದಿನಿಯಂ ಕೆಯ್ಯೆಡೆವೇೞ್ವಂತಕ್ಕುಂ: **ಲೀಲಾವತಿ,** ೧೧. ೭ ವ)

**ಕೌಮುದೀಮಹೋತ್ಸವ** – ಬೆಳದಿಂಗಳ ಒಂದು ಹಬ್ಬ, ಆಚರಣೆ (ನಾಗರಿಕ ರಮಣರಮಣೀಜನಂಗಳ್ ಕೌಮುದೀಮಹೋತ್ಸವ ಉತ್ಸುಕರಾಗಿ ನೆರದಲ್ಲಿ: **ಆದಿಪು,** ೧೨. ೧೧ ವ)

**ಕೌಮೋದಕಿ** – ವಿಷ್ಣು ಅಥವಾ ಕಷ್ಣನ ಗದೆ (ಕೌಮೋದಕಿಯೆಂಬ ಗದೆಯುಮಂ .. .. ಕೌಸ್ತುಭಮೆಂಬ ಆಭರಣಮುಮಂ ಪೂಜಿಸಿ: **ಶಾಂತಿಪು,** ೫. ೬೪ ವ)

**ಕೌರವನಾಯಕ** – ಕೌರವರ ಹಿರಿಯ, ದುರ್ಯೋಧನ (ಕೃಷ್ಣೆಗಿಂದು ಧಮ್ಮಿಲ್ಲಮಂ ಇಂಬಿನಿಂ ಮುಡಿಸಿ ಕೌರವನಾಯಕನ ಊರುಭಂಗಮೊಂದಲ್ಲದೆ ಎಲ್ಲಮಂ ನೆಱಪಿದೆಂ ಗಡಂ ಓಳಿಯೆ ಕೇಳಿಮ್ ಎಲ್ಲರುಂ: **ಪಂಪಭಾ,** ೧೨. ೧೬೦)

**ಕೌರವಾಂತಕ** – ಭೀಮ (ನಮ್ಮರಸಂ ಮರಳ್ದು ಇಂಬುಕೆಯ್ಗುಂ ಎಂದು ಅನುಶಯಮಾದುದು ಇಂದೆನಗೆ ಸಂಶಯಮಂ ಕಳೆ ಕೌರವಾಂತಕಾ: **ಗದಾಯು,** ೧. ೫೬)

**ಕೌರವ್ಯ** – ಕೌರವರಿಗೆ ಸಂಬಂಧಿಸಿದ (ಅಂತು ದ್ರೋಣಂ ಎಟಿಗೋಣಸಾವಂ ಸಾವುದುಂ ಭೋರ್ಗರೆದಾರ್ದ ಪಾಂಡವ ಪತಾಕಿನಿಯುಮಂ ಒಂದು ತಲೆಯಾಗೋಡುವ ಕೌರವ್ಯ ಧ್ವಜಿನಿಯುಮಂ ಬೇಱೊಂದು ಮೊನೆಯೊಳ್ ಕಾದುತಿರ್ದ ಅಶ್ವತ್ಥಾಮಂ ಕಂಡು: **ಪಂಪಭಾ,** ೧೨. ೩೦ ವ)

**ಕೌರವ್ಯಕೋಳಾಹಳ** – ಕೌರವನಲ್ಲಿ ತಳಮಳ ಉಂಟುಮಾಡುವವನು, ಭೀಮಸೇನ ಕೊಲಲಾಱದಂದು ತೃಷಿಸಂದು ಆಂ ಎನ್ನ ಸಂದಗ್ನಿಗಾಹುತಿ ಮಾೞ್ಪೆಂ ಗಡಂ ಎಂದು ಪೂಣ್ದಂ ಕೌರವ್ಯಕೋಳಾಹಳಂ: **ಗದಾಯು,** ೬. ೨೪)

**ಕೌರವ್ಯಕ್ರವ್ಯಹವ್ಯ** – ಕೌರವನ ಮಾಂಸವೆಂಬ ಹವಿಸ್ಸು (ಸುಹುತಂ ಕೌರವ್ಯಕ್ರವ್ಯಹವ್ಯದಿಂದೆನ್ನ ಕೋಪಹವ್ಯವಹಂ: **ಗದಾಯು,** ೮. ೪೭)

**ಕೌರು** – ಸೆಳೆ (ಅಸ್ಥಿಜಾಲಮಂ ಕೌರ್ವ ಶೃಗಾಲವು ಆಸುರದಿಂ ಆ ರಣರಂಗದೊಳ್ ಒಪ್ಪಿ ತೋಱುಗುಂ: **ತ್ರಿಷಷ್ಟಿಪು,** ೨೪. ೩೬೩)

**ಕೌಲೇಯಕ** – ನಾಯಿ (ಅಂತಾ ಸೃಗಾಲನಂ ಸೃಗಾಲ ಕೌಲೇಯಕ ಕಾಕ ಗೃಧ್ರಸಮಾಜಕ್ಕೆ ಭಾಜನಂ ಮಾಡಿ: **ಜಗನ್ನಾವಿ,** ೮. ೭೫ ವ)

**ಕೌವರೆ** – ಸಡಗರ (ಇಂತು ನಗರ ನಾರೀಜನಂ ಕೌವರೆಗೊಂಡು ನೆರೆದು ಮನೋಡುತ್ತಿರ್ಪುದುಂ: **ಸುಕುಮಾಚ,** ೧೧. ೨೨ ವ)

**ಕೌರೆಗೊಳ್** – ಸಂಭ್ರಮಿಸು (ಪೊಂಗೇದಗೆಯ ಪರಿಮಳಕ್ಕೆ ಕೌರೆಗೊಂಡು ಬರ್ಪ ತುಂಬಿವಿಂಡಿನ ಝೇಂಕಾರಮೆ ಗೀತಮಾಗೆ: **ಧರ್ಮಪ,** ೧. ೪೬ ವ)

**ಕೌಶಿಕ** – ಗೂಬೆ (ಪರಿಗಳಿತ ಪೂತಿಗಂಧರ್ ಖರ ಕಾಕ ಸೃಗಾಲ ಕರಭ ಕೌಶಿಕ ವೃಕ ವಾನರ ವಿಷದಂಷ್ಟ್ರೋತ್ಕರ ಕುರ್ಕುರ ಕೀಟಕ ಭಲ್ಲನಿಕರ ನಿಷ್ಠುರನಿನದರ್: **ಶಾಂತೀಶ್ವಪು,** ೯. ೧೦೬); ಇಂದ್ರ (ವಾಸವನುಂ ಕೌಶಿಕನೆನಿಕುಂ: **ಅಭಿಧಾವ,** ೩. ೧. ೩)

**ಕೌಶೇಯ** – ಕೋಶದಿಂದ ಬಂದದ್ದು, ರೇಷ್ಮೆ (ಕ್ರಿಮಿಜಂ ಕೌಶೇಯಂ ತ್ವಕ್ಸಮುದ್ಭವಂ ತಾಮ ಅವುಂ ದುಕೂಲಮುಮಕ್ಕುಂ: **ಅಭಿಧಾವ,** ೧. ೧೩. ೧೮)

**ಕೌಸುಂಭ** – ಕುಸುಬೆ ಗಿಡಕ್ಕೆ ಸಂಬಂಧಿಸಿದ; ಕೆಂಪು (ಕೌಸುಂಭಾಂಬರಗಳನುಟ್ಟು ಪದ್ಮರಾಗಮಯಮಪ್ಪ ಆಭರಣಂಗಳಂ ತೊಟ್ಟು: **ಹರಿವಂಶ,** ೧. ೩೯ ವ)

**ಕೌಸುಂಭರಾಗ** – ಕುಸುಬೆ ಹೂವಿನ ಕೆಂಪು ಬಣ್ಣ (ಕಿರೀಟರಾಗಪ್ರಭೆಗಳ್ ಪರೆವಂತೆ ಪರೆದು ಕೌಸುಂಭರಾಗರಮಣಿಯಮಾಯ್ತು ಸಂಧ್ಯಾರಾಗಂ: **ಆದಿಪು,** ೧೨. ೪)

**ಕೌಸುಂಭಾಂಬರ** – ಕುಸುಬೆ ಹೂವಿನ ಬಣ್ಣದ ಬಟ್ಟೆ (ಉಟ್ಟ ಕೌಸುಂಭಾಂಬರರುಚಿಯುಂ ತೊಟ್ಟ ಪದ್ಮರಾಗಾಭರಣ ಕಿರಣಂಗಳುಂ: **ಆದಿಪು,** ೧೨. ೧ ವ)

**ಕೌಸ್ತುಭ** – ವಿಷ್ಣುವಿನ ಎದೆಯ ಮೇಲಿರುವ ರತ್ನ (ಹರಜಟಾಜೂಟಕ್ಕೆ ಚಂದ್ರಲೇಖೆಯಿರ್ಪಂತೆ ದಿಕ್ಕರಿಕಟತಟಕ್ಕೆ ಮದಲೇಖೆಯಿರ್ಪಂತೆ ಕೈಟಭಾರಾತಿಯ ವಿಶಾಲೋರುಸ್ಥಳಕ್ಕೆ ಕೌಸ್ತುಭಮಿರ್ಪಂತೆ ಸೊಗಯಿಸುತಿರ್ದುದು: **ಪಂಪಭಾ,** ೧. ೫೭ ವ)

**ಕೌಳ** – ಒಂದು ವಾಮಾಚಾರ ಶೈವ ಪಂಗಡ (ಎಕ್ಕಲದೇವಿಗಂ ಆ ಮಾಲಕ್ಕನಿಗಂ ಬನದ ಬಳರಿಗಂ ಮೈಲಾರಂಗೆ ಅಳ್ಕದೆ ಜಾತ್ರೆಯ ಮಾಟ್ಪಂ .. .. ಆತಂ ಕೌಳಂ: **ಸಮಯಪ,** ೪. ೧೨೩)

**ಕೌಳಾಚಾರ್ಯ** – ಕೌಲ ಎಂಬ ಶಾಕ್ತಪಂಥದ ಗುರು (ಕೌಳಾಚಾರ್ಯರ್ ಸೇವಿಪರೆಂದೊಡೆ ಮದ್ಯಮಂ ಏವೊಗಟ್ಟುವೋ ದೂಷಿಸಲ್ಕೆ ಸಲ್ಲದನೆಂಬರ್: **ಸಮಯಪ,** ೧೪. ೫೬)

**ಕೌಳಿಕ** – ಜಾಣ್ಮೆ (ಕೌಳಿಕಂಬಿಡಿದು ಕಣ್ಮಲರಿಂ ಸೊಗಸಿಕ್ಕಿ ಕಸ್ತಿಯೊಳ್ ಮುಳಿ ತಿಳಿ ಎಂಬ ದೂದವಿಯ ಮಾತಿಗೆ ಮೆಚ್ಚಿದಂ ನೃಪಂ: **ತ್ರಿಷಷ್ಟಿಪು,** ೨೪. ೧೭೬); ಕಟುಕ

**ಕೌಳಿಕನಾದ** – ಕುಲಸಂಬಂಧಧ ಧ್ವನಿ, ಸಾಮೂಹಿಕ ಶಬ್ದ (ಪರೆದ ಉರಿಗೇಸಂ ಅವ್ವಳಿಪ ನಾಲಗೆ ಮಿಂಚುವ ದಾಡೆ ಬಿಟ್ಟ ಕಣ್ ತಿರುಪಿದ ಮೀಸೆ ಕೊಂಕಿದ ಸಟಂ ಕಡು ನೆಕ್ಕ ಕದಂಪು ನೀಳ್ದ ತಾಟ್ಮರದವೊಲಪ್ಪ ಒಡಲ್ ಕಹಕಹಧ್ವನಿ ಕೌಳಿಕನಾದಂ ಆದುದು ಅಸುರತರಮಾಗೆ ಬಂದು ಕವಿದತ್ತು ಘಟೋತ್ಕಚರೌದ್ರಸಾಧನಂ: **ಪಂಪಭಾ,** ೧೨. ೭)

**ಕೌಳುಡೆ** – ದಿಂಬು (ಪರ್ಯಂಕಮಂಡಳದೊಳ್ ಬೆಳ್ಪೆಸೆದಿರ್ದ ಕೌಳುಡೆಯನೊಂದಂ ನೆಮ್ಮಿ ಕುಳ್ಳಿರ್ದ ಕೋಮಳೆಯಂ .. .. ಕಂಡನರಸಂ: **ಕಾದಂಸಂ,** ೫. ೧೮)

**ಕೌಳೇಯಕತತಿ** – ನಾಯಿಗಳ ಗುಂಪು (ಆ ಯತಿಗಾಯತಿಗಿಡೆ ಕೌಳೇಯಕತತಿ ನೃಪತಿ ಕೆಳರ್ದು ಮುಳಿದು ಉರ್ಚಿದ ಕೌಕ್ಷೇಯಕದೆ ಪೊಯ್ಯಲ್: **ಯಶೋಧಚ,** ೪. ೪೪)

**ಕೌಱೆಣ್ಣೆ** – ಕರಿದ ಎಣ್ಣೆ, ಕಮಟು ವಾಸನೆಯ ಎಣ್ಣೆ (ಕಾಟ್ಟಿಟ್ತಿಯ ಬತ್ತಿಯೊಳಂ ಕೌಱೆಣ್ಣೆಯೊಳ್ ಪೊತ್ತಿಸಿದ ದೀಪಂಗಳುಂ: **ಲೀಲಾವತಿ,** ೭. ೬೮ ವ)

**ಕ್ರಂದತ್** – ಶಬ್ದ ಮಾಡುತ್ತಿರುವ (ಕ್ರಂದತ್ ಸ್ಯಂದನ ಜಾತ ನಿರ್ಗತ ಶಿಖಿಜ್ವಾಳಾಸಹಸ್ರಂಗಳ್ ಆಟಂದೆತ್ತಂ ಕವಿದೆೞ್ದು ಬೇವ ಶವಸಂಘಾತಂಗಳಂ: **ಪಂಪಭಾ,** ೧೩. ೭೧)

**ಕ್ರಂದನ** – ಅಳುವಿನ ಶಬ್ದ (ಒರ್ವಂ ನೂಂಕಿಕೊಂಡುಯ್ವ ಮಾರ್ಗದೆ ಪೋದೆಂ ಬಳಿಕ ಆತನಿರ್ದೆಡೆಗೆ ಹಾಹಾಕ್ರಂದನಂಗೆಯ್ಯುತುಂ: **ಕಾದಂಸಂ,** ೪. ೮೮)

**ಕ್ರಕಚ** – ಗರಗಸ, ಕರಗಸ (ಅನಂತಬೋಧರೆನಿಸಿದ ದುರಿತಕ್ರಕಚಮುನಿಗೆ ಬುಧಜನನಿಕರಸ್ತುತನೆಱಗಿ ಭಕ್ತಿಯಿಂ ವಂದಿಸಿದಂ: **ಪುಷ್ಪದಂಪು,** ೭. ೧೭); ಮೊಸಳೆ (ಅದಂ ಕ್ರಕಚಂ ಕಂಡು ಏಂ ಗಡ ಭಾವಾ! ನೀನಿದೇಂ ನಿಂದಲ್ಲಿ ಱೋಡಗತನಂಗೆಯ್ದಾಡುತಿರ್ಪ: **ಪಂಚತಂತ್ರ,** ೪೦೪ ವ)

**ಕ್ರಕಚವಿದಾರಣ** – ಗರಗಸದಿಂದ ಕೊಯ್ಯುವುದು (ಅತಿದಾರುಣ ಕ್ರಕಚವಿದಾರಣದೊಳಂ ಅತಿ ಕರಾಳ ಶೂಲಾರೋಹಣದೊಳಂ: **ಅಜಿತಪು,** ೧೧. ೧೦೮)

**ಕ್ರತು** – ಯಜ್ಞ (ಸುತದಾಯಕಮಪ್ಪ ಮಹಾ ಕ್ರತು ಕ್ರಿಯಾರ್ಥೋಚಿತಾಸನಂ .. .. ನೆಗೞ್ದಂ ಸುಧರ್ಮಾಚಾರ್ಯಂ: **ಕುಸುಮಾಕಾ,** ೪. ೧೩೨)

**ಕ್ರಮ** – ಪಾರಂಪರ್ಯದ ರಾಜ್ಯ (ಕ್ರಮಮಂ ಕೆಯ್ಕೊಳಲೆಂದು ಪುಟ್ಟಿ ರಣದೊಳ್ ಸಾವನ್ನೆಗಂ ಮಾಣ್ದೊಡೆ ಅಕ್ರಮಮಕ್ಕುಂ ಕ್ರಮಮಕ್ಕುಮೇ: **ಪಂಪಭಾ** ೧೧. ೯೨); ಪಾದ (ನಿಮ್ಮೀ ಕ್ರಮಕಮಲಕ್ಕೆ ಎಱಗದೆ ವಕ್ರಿಸಿ ಭೂಚಕ್ರದೊಳಗೆ ಬಾೞ್ವರುಂ ಒಳರೇ: **ಪಂಪಭಾ,** ೧೧. ೩೦); ರೀತಿ ಕ್ರಮದಿಂ ಪೂಜಿಸುವಂ ಶತಕ್ರತುವೆ: **ಪುಷ್ಪದಂಪು,** ೧೧. ೯೨); ಪದ್ಧತಿ (ಕುರುರಾಜಂ ವಿದ್ಯಾಧರಕರಣದೆ ನೆಗೆದು ಅಂಬರಕ್ಕೆ ಗದೆಯಂ ಕ್ರಮದಿಂ ತಿರುಪೆ ಧರಾಚಕ್ರಂ ಕೋವರಚಕ್ರಂ ತಿರಿವ ತೆಱದೆ ತಿರಿದತ್ತು ಎನಸುಂ: **ಗದಾಯು,** ೮. ೨೪)

**ಕ್ರಮಂದಪ್ಪು** – ನಿಯಮ ತಪ್ಪು (ಮಂತ್ರಿಗಣಮಂ ಸನ್ಮಾನಪುರಸ್ಸರಂ ಕ್ರಮಂದಪ್ಪದೆ ವಿಸರ್ಜಿಸಿ: **ಶಾಂತಿಪು,** ೨. ೭೦ ವ)

**ಕ್ರಮಕ್ರಮಳ** – ಪಾದಕಮಲ (ಭವತ್ ಕ್ರಮಕ್ರಮಳಸೇವೆಯಿಂದೆಂತುಂ ಅನಂತಂ ಗೀತವಾದಿತಂ ಫಲಮಲ್ತೇ: **ಆದಿಪು,** ೯. ೧೧)

**ಕ್ರಮಗಣನೆ** – ಎಣಿಕೆ, ಅನುಕ್ರಮ (ಕ್ರಮಗಣನೆಗೆ ತಾನುಂ ಮಧ್ಯಮಪಾಂಡವನಾದಂ: **ಗದಾಯು,** ೭. ೬೩)

**ಕ್ರಮವಿಕ್ಷೇಪ** – ಅಡಿಯಿಡುವಿಕೆ, ಹೆಜ್ಜೆ ಹಾಕುವಿಕೆ (ಕ್ರಮವಿಕ್ಷೇಪದಿನಂಚೆಗೆ ಸಮನಿಸೆ ದೈನ್ಯಂ ಲತಾಂಗಿ ಸೀತೆಗೆ ಚೆಲ್ವಿಂಗೆ ಸಮನಧಿಕಮೆಂಬ ಕೌತುಕಮಮರ್ದಿರೆ ನಡೆತಂದು ಪಾರ್ಶ್ವದೊಳ್ ಕುಳ್ಳಿರ್ದಳ್: **ಪಂಪರಾ,** ೭. ೧೦೮)

**ಕ್ರಮವಿಪರ್ಯಯ** – ಕ್ರಮ ತಪ್ಪು, ರೂಢಿಗೆ ವಿರುದ್ಧವಾಗು (ತನೂಜ ನೀಂ ಕ್ರಮವಿಪರ್ಯಯಂ ಮಾಡುವುದೇ: **ಗದಾಯು,** ೪. ೬೧)

**ಕ್ರಮವಿಹಿತ** – ಕ್ರಮಾನುಗತವಾಗಿ (ಲೀಲಾಕ್ರಮವಿಹಿತ ಜಲಕ್ರೀಡಾವಿನೋದಾದಿನೀತಂ: **ಕವಿರಾಮಾ,** ೩. ೨೧೧)

**ಕ್ರಮಸಂಧಾನ** – ಕ್ರಮವಾಗಿ ಜೋಡಿಸುವುದು (ಬಟಿಕೊಳ್– ಕ್ರಮಸಂಧಾನೇ: **ಶಬ್ದಮದ,** ಧಾ ೯೭೦)

**ಕ್ರಮಾಂಭೋರುಹ** – ಪಾದಕಮಲ (ಆರ್ಹಂತ್ಯಲಕ್ಷ್ಮೀಧಾಮಂ ಮಾಟ್ಕೆಮ್ಮ ಹೃತ್ಪದ್ಮಮಂ ಅಜಿತ ಜಿನೇಂದ್ರ ಕ್ರಮಾಂಭೋರುಹಶ್ರೀ: **ಅಜಿತಪು,** ಅ.ಅ)

**ಕ್ರಮಾಧಿಕ** – ಸನ್ನಡತೆಯಿಂದ ಶ್ರೇಷ್ಠನಾದವನು (ಉತ್ಸಾಹಮಂ ಮಾಡದಿರ್ಪುದೆ ಸನ್ಮಾರ್ಗದೊಳಂ ಕ್ರಮಾಧಿಕರೊಳ್ ಉದ್ಯಾನಸಂಪ್ರೀತಿಯುಂ: **ಪುಷ್ಪದಂಪು,** ೧೦. ೧೧)

**ಕ್ರಮುಕ** – ಅಡಿಕೆ (ತಾಂಬೂಲಲತಿಕಾಲಂಬಕ್ರಮುಕಮುಂ ಆಕಂಪಿತ ಮಧುಕರನಿಕರಾನುಕಾರಿ ಲತಾಗೃಹ ಪ್ರದೀಪಚಂಪಕಮುಂ: **ಆದಿಪು,** ೧೩. ೩ ವ)

**ಕ್ರಮೇಳಕ** – ಒಂಟೆ (ಪರಪ್ರೇಯಸೀವಿಕಲಂ ದುರ್ಗತಿಯೊಳ್ ಕಯಂ ತಿರಿತರುತ್ತುಂ ಬಂದು ಮತ್ತಂ ಕ್ರಮೇಳಕನಾದಂ: **ಪಂಪರಾ,** ೬. ೩೭)

**ಕ್ರವ್ಯ** – ಬೇಯಿಸದ ಮಾಂಸ, ಹಸಿಮಾಂಸ (ಸುಹುತಂ ಕೌರವ್ಯ ಕ್ರವ್ಯ ಹವ್ಯದಿಂದೆನ್ನ ಕೋಪಹವ್ಯವಹಂ ದುರ್ವಹದುರ್ಯೋಧನದೇಹ ಪ್ರಹರಣಲೋಹಿತದಿಂ ಆದುದು ಅವಭೃಥಸವನಂ: **ಗದಾಯು,** ೮. ೪೭)

**ಕ್ರವ್ಯಾದ** – ರಾಕ್ಷಸ (ಕ್ರವ್ಯಾದ ಸಂಹನನ ಕ್ರವ್ಯಾದನಪ್ಪೆನಗೆ ಅನಭ್ಯಸ್ಥಶಸ್ತ್ರದೊಳ್ ಯುದ್ಧವತಿನಿಷಿದ್ಧಮುಂ: **ಜಗನ್ನಾವಿ,** ೫. ೬೧ ವ)

**ಕ್ರಾಂತಿ** – ತಳಮಳ (ಅಂತಃಪೀಡಾ ಕ್ರಾಂತಿಯಿಂ ಒಂದಿನಿತು ಪೊೞ್ತು ಮರವಟ್ಟಿರ್ದಳ್: **ಕಾದಂಸಂ,** ೬. ೧೮)

**ಕ್ರೀಡಾನುಶೀಲೆ** – ಆಟದಲ್ಲಿ ಅಸಕ್ತಳಾದವಳು (ಅಂತು ಬಂದ ಬಸಂತದೊಳ್ ಮದ್ರಿ ತಾಂ ಗರ್ವಾವ್ಯಾಲೆಯುಂ ಕ್ರೀಡಾನುಶೀಲೆಯುಂ ಅಪ್ಪುದಱಿಂ ವನಕ್ರೀಡಾನಿಮಿತ್ತದಿಂ ಪೋಗಿ: **ಪಂಪಭಾ,** ೨. ೧೫ ವ)

**ಕ್ರೀಡಮಾನ** – ಆಡುತ್ತಿರುವ, ಆಡಿಸುತ್ತಿರುವ (ಮಂಗಳ ಚರಿತಂ ಕ್ರೀಡಮಾನನೆಸೆದಂ ಕೃಷ್ಣಂ: **ಜಗನ್ನಾವಿ,** ೪. ೪೩)

**ಕ್ರೀಡಾಗೋಳಕ** – ಆಟದ ಚೆಂಡು (ಕನಕಕಳಶಯುಗಳಮುಮಂ ಪೌರ್ಣಮಾಸೀಸುಂದರಿಯ ಸಿಂದೂರಾರುಣ ಕ್ರೀಡಾಗೋಳಕಂಗಳುಮಂ ಪೋಲ್ತು: **ಆದಿಪು,** ೬. ೫೧ ವ)

**ಕ್ರೀಡಾಚಳ** – ಆಟಕ್ಕಾಗಿ ಮಾಡಿದ ಬೆಟ್ಟ (ನಿಸರ್ಗಸಂದರ ಕ್ರೀಡಾಚಳಕೇಳಿಸಮಭಿರಾಮಮುಮಾಗಿ: **ಆದಿಪು,** ೧೦. ೨೫ ವ)

**ಕ್ರೀಡಾರಸ** – ಆಟದಿಂದಾಗುವ ಸಂತೋಷ (ಪಪರಿಜನಮುಂ ಪುರಜನಮುಂ ಒಸಗೆ ಮರುಳ್ಗೊಂಡು ನಿರ್ಭರ ಕ್ರೀಡಾರಸಪರವಶರಾದರ್: **ಆದಿಪು,** ೭. ೧೧೧ ವ)

**ಕ್ರೀಡಿಸು** – ಆಟವಾಡು (ಬಂದು ಸ್ವಚ್ಛ ವಿಚ್ಛಳಾಕಾರಮಪ್ಪ ಮಡುವಂ ಪೊಕ್ಕು ಮನೋಹಾರಿಗಳಪ್ಪ ಕರಿಣೀಗಣದೊಡನೆ ಕ್ರೀಡಿಸುವುದುಂ: **ವಡ್ಡಾರಾ,** ಪು ೩೬, ಸಾ ೨೧); ಸಂಭೋಗಿಸು (ಪುರದ ಸೂಳೆಯರ್ವೆರಸು ಅಸಹಾಯಮ ಮನಕೆ ಬಂದವೋಲ್ ಕ್ರೀಡಿಸುವಂ: **ಧರ್ಮಾಮೃ,** ೨. ೨೦)

**ಕ್ರೀಡೆ** – ಸಂಭೋಗ (ರಮಿಸು [ರಮಿಯಿಸು]–ಕ್ರೀಡಾಯಾಂ: **ಶಬ್ದಮದ, ಧಾ** ೭೪೩)

**ಕ್ರುದ್ಧ** – ಕೋಪಗೊಂಡ (ಅಂತು ಭೂಧರವಿರೋಧಿ ಭೂಧರಧರಂಗೆ ಕ್ರುದ್ಧನಾಗಿ: **ಜಗನ್ನಾವಿ,** ೪. ೮೪ ವ)

**ಕ್ರೇಂಕಾರ** – ಪಕ್ಷಿಯ ಕೂಗು (ಕ್ರೇಂಕಾರಂ ಶಕುನಿಗಳೊಳ್ ಝುಂಕಾರಂ ತುಂಬಿಯೊಳ್ ಧನುರ್ಜ್ಯಾರುತಿಯೊಳ್ ಟಂಕಾರಂ: **ಅಭಿಧಾವ,** ೧. ೧೩. ೩೯)

**ಕ್ರೋಡ** – ಎದೆ (ವಾರ್ಧಿಕ್ರೋಡಾವಗೂಢಂ ಹರಿ ಬಡಗೊರವಂ ನಂಟನೀ ಯಾಮಿನೀನಾಥಾರ್ಧ ಪ್ರೋತ್ತಂಸನೆಂಬೊಂ: **ಜಗನ್ನಾವಿ,** ೧೭. ೮೪); ಹಂದಿ (ನನೆಯಂಬಂ ಮಿಗೆ ಕಣ್ಮಲರ್ ಮಕರಮಂ ಕ್ರೋಡಧ್ವಜಂ ಪೋಲೆ ಕರ್ಬಿನ ಬಿಲ್ಲಂ ಗೆಲೆ ಪುರ್ಬು .. .. ನೂತನಕಂದರ್ಪಂ: **ಗದಾಯು,** ೧. ೬); ಶನಿಗ್ರಹ (ಗ್ರಹಗಣದಂತೆ ಅತಿಬಳ ಕ್ರೋಡ ಸಮೇತಮುಂ: **ತ್ರಿಷಷ್ಟಿಪು,** ೧. ೪೭ ವ)

**ಕ್ರೋಡಧ್ವಜ** – ವರಾಹಧ್ವಜ (ನನೆಯಂಬಂ ಮಿಗೆ ಕಣ್ಮಲರ್ ಮಕರಮಂ ಕ್ರೋಡಧ್ವಜಂ ಪೋಲೆ ಕರ್ಬಿನ ಬಿಲ್ಲಂ ಗೆಲೆ ಪುರ್ಬು .. .. ನೂತನಕಂದರ್ಪಂ: **ಗದಾಯು,** ೧. ೬)

**ಕ್ರೋಡೀಕೃತ** – ಒಟ್ಟುಗೂಡಿಸಿದ (ವಿಯನ್ ಮಧ್ಯಸ್ಥಂ ಅಂತಸ್ಥಂ ಕರ್ಮವಶಭ್ರಾಮ್ಯದನೇಕ ಜೀವನಿವಹ ಕ್ರೋಡೀಕೃತಾಭ್ಯಂತರಂ: **ಆದಿಪು,** ೧. ೪೩)

**ಕ್ರೋಧ** – ಕೋಪಾತಿರೇಕ (ಅನಂತಾನುಬಂಧಿ ಕ್ರೋಧಮಾನ ಮಾಯಾಲೋಭಂಗಳಂ ವಿಸಂಯೋಜಿಸಿ: **ಆದಿಪು,** ೧೦. ೧೪ ವ)

**ಕ್ರೋಧನ** – ಕ್ರುದ್ಧನಾದವನು (ಕ್ರೋಧನನುದ್ಧತಕೋಪಂ: **ಅಭಿಧಾವ,** ೨. ೧. ೨೨)

**ಕ್ರೋಧನಿ** – ಆನೆಯ ಏಳು ಮದಾವಸ್ಥೆಗಳಲ್ಲಿ ಐದನೆಯದು (ಎನಿತು ಮದವಾರಣಂ ಕ್ರೋಧನಿ ಪೊಕ್ಕುಂ ಸಿಂಪೋಹತಮಂ ಗೆಲ್ಗುಮೆ ಮಾತಿನೊಳೇನೊ ಕೆಯ್ದುಗೆಯ್ ಬೞುವನಂ ಆಜಿಶ್ರಾಂತನಂ ಯಶೋಧನಂ ಇಱಿಯಂ: **ಶಾಂತಿಪು,** ೪. ೫೧)

**ಕ್ರೋಶ** – ಒಂದು ಹರದಾರಿ (ಕ್ರೋಶ ದ್ವಿಕ್ರೋಶ ಸೀಮಾಭಾಗಯೋಜನ ಪಂಚಶತಕುಟುಂಬಕುಲ ಆವಿರ್ಭವಿತ ಅಧಮೋತ್ತಮ ಭೇದಂಗಳುಮಂ: **ಆದಿಪು,** ೮. ೬೩ ವ)

**ಕ್ರೋಷ್ಟು** – ನರಿ (ವರುಣಂಗಂ ಕ್ರೋಷ್ಟುಗಂ ಜಂಬುಕನೆನಿಸುವ ಸಂಜ್ಞಾಂತರಂ: **ಅಭಿಧಾವ,** ೩. ೧. ೭)

**ಕ್ರೌಂಚ** – ಆ ಹೆಸರಿನ ಪರ್ವತ (ಆರ್ದು ಎಚ್ಚಂ ಎಚ್ಚಂತೆ ಮುಂ ಧೂರ್ಜಟಿಪುತ್ರಂ ಕ್ರೌಂಚಮಂ: **ರಾಜಶೇವಿ,** ೬. ೮೯)

**ಕ್ರೌಂಚಾರಾತಿ** – ಕ್ರೌಂಚವೆಂಬ ಪರ್ವತದ ವೈರಿ, ಷಣ್ಮುಖ (ಕ್ರಂಚಾರಾತಿಯಾಗಿಯುಂ ಷಣ್ಮುಖನಲ್ತು: **ಜಗನ್ನಾವಿ,** ೮. ೧೦ ವ)

**ಕ್ರೌಂಚಾರಿ** – ಷಣ್ಮುಖ (ಕ್ರೌಂಚಾರಿಗೆ ತಿಳಿವಂತು ಸೌರಸಂಹಿತೆಯಂ ವಿಸ್ತಾರದೆ ಪೇೞ್ದಂ ಕ್ರಮದಿಂ ಗೌರೀಪತಿ: **ಸಮಯಪ,** ೮. ೧೧೫)

**ಕ್ಲಮಥು** – ಬಳಲಿಕೆ (ಕ್ಲಮಥು ವೇಪನಂ: **ಅಭಿಧಾವ,** ೧. ೧೨. ೩೪)

**ಕ್ಲಿನ್ನ** – ನೆನೆದ (ಭುಜದಂಡ ಆವಿದ್ಧ ದಿಕ್ಚಕ್ರದೊಳ್ ಇಭಮದ ಧಾರಾ ಜಲ ಕ್ಲಿನ್ನ ವೀರಧ್ವಜಿನೀಪಾದ ಆಹತವಲಯಮೃದಿತ ಮೃತ್ಪಿಂಡಮಂ: **ಅಜಿತಪು,** ೯. ೯)

**ಕ್ಲಿಶ್ಯಮಾನ** – ತೊಂದರೆಗೊಳಗಾದ; ದುಃಖದಲ್ಲಿರುವ (ಸತ್ವಂಗಳೊಳ್ ಮೈತ್ರಿಯುಂ ಗುಣಾಧಿಕರೊಳ್ ಪ್ರಮೋದಮುಂ ಕ್ಲಿಶ್ಯಮಾನರೊಳ್ ಕಾರುಣ್ಯಮುಂ: **ಅಜಿತಪು,** ೭. ೮ ವ)

**ಕ್ಲಿಷ್ಟಕ** – ಪೀಡಕ (ಕುಟಿಲಂ ಕ್ಲಿಷ್ಟಕಂ ಸಾಧುದುಷ್ಟಂ ಪಿಸುಣರ್ ಮತ್ತಾರೋ ಪೇೞ್ ನಾರದಮುನಿಯವೋಲ್: **ಜಗನ್ನಾವಿ,** ೨. ೪೫)

**ಕ್ಲೀಬ** – ನಪುಂಸಕ (ನೀರೊಲಿರ್ದೊಡೆಂತುಂ ಕೊಲ್ಲೆಂ ಕ್ಲೀಬನೆ ನಿನ್ನಂ: **ಕರ್ಣನೇಮಿ,** ೧೨. ೧೮೫)

**ಕ್ಲೇಶಂಗೊಳಿಸು** – ತೊಂದರೆ ಕೊಡು (ಸೂಱೆಗಾಱನಂತೆ ಪೆಱರಂ ಕ್ಲೇಶಗೊಳಿಸದೆ ಬಟ್ಟೆಗುತ್ತನಂತೆ ಉಪವಾಸಮಂ ತೋಱೆ ಕಾಡದೆ: **ಧರ್ಮಾಮೃ,** ೫, ೬೪ ವ)

**ಕ್ಲೇಶಧುರಂಧರ** – ಕಷ್ಟಗಳನ್ನೇ ಅನುಭವಿಸುವವನು (ಕ್ಲೇಶಧುರಂಧರನಾಗಿರ್ದು ಒಳ್ಪನಱಿಯದೆ ಆವದಿವಡುವಾ ನರಪಶುವಂ .. .. ಶಿಕ್ಷೆಗೊಳಿಪರ್ ಎಂತುಂ ಖುಷಿಯರ್: **ಸಮಯಪ,** ೭. ೪೩)

**ಕ್ವಚಿತ್ತ್ರಯೋಗ** – ಅಪರೂಪವಾಗಿ ಬಳಸಲ್ಪಡುವುದು (ಇಂತು ಲಿಂಗತ್ರಯಂ ಕನ್ನಡದೊಳ್ ಪಿರಿದುಂ ಪ್ರಸಿದ್ಧಮಾಗುರ್ಪುವು; ಮಿಕ್ಕ ಲಿಂಗಗಳೆಲ್ಲಂಕ್ವಚಿತ್ತ್ರಯೋಗಂಗಳೆ: **ಶಬ್ದಮದ,** ೧೦೧ ಪ್ರ)

**ಕ್ವಣ** – ಆಭರಣ ಅಥವಾ ವಾದ್ಯದ ಧ್ವನಿ (ಕಳಕಂಠಗೀತಂ ಬಗೆಗೊಳೆಯುಂ ವೀಣಾಕ್ವಣಂ ಮನಂಗೊಳೆಯುಂ: **ಆದಿಪು,** ೧೧. ೨೮)

**ಕ್ವಣನ** – ಶಬ್ದ (ಸಂಚರತ್ ಚಂಚರೀಕಕ್ವಣನ ಜ್ಯಾಸಂಗಚಿತ್ತೋದ್ಭವಭುವನಜಯೋತ್ಪಾದನ ಪ್ರೌಢ ಸೇನಾಗ್ರಣಿ ಚೇತಃಪ್ರೀತಿಯಂ ಪೆರ್ಚಿಸುವುದು .. .. ಸಮೀರಂ: **ಮಲ್ಲಿನಾಪು,** ೨. ೩೧)

**ಕ್ವಣರುಚಿ** – ಮಿಂಚು (ಮಹೇಶ್ವರಂ ವ್ಯೋಮದಂತೆ ವೀತಕ್ಷಣರುಚಿ ಮಹಾಧ್ವನಿಯುಕ್ತ ಘನಗಣಸಮೇತನುಂ: **ಶಬರಶಂ,** ೧. ೭೮ ವ)

**ಕ್ವಣಿತ** – ನಾದ, ಧ್ವನಿ (ಬಕ ಕಲಹಂಸ ಬಲಾಕ ಪ್ರಕರ ಮೃದುಕ್ವಣಿತರಮ್ಯಮಿದಿರೊಳ್ ತೋಱಿತ್ತು ಕೊಳಂ ಪರಿವಿಕಸಿತ ಕನಕ ಕಂಜಕಿಂಜಲ್ಕಪುಂಜಪಿಂಜರಿತಜಳಂ: **ಪಂಪಭಾ,** ೮. ೩೮)

**ಕ್ಷಣ** – ಒಂದು ಸಣ್ಣ ಕಾಲ ಪರಿಮಾಣ (ಕಳೆಗಳ್ ಮೂವತ್ತು ಅದು ಕ್ಷಣಂ: **ಅಭಿಧಾವ.** ೧. ೨. ೨)

**ಕ್ಷಣತ್ವಿಟ್** – ಮಿಂಚು (ನಿಜಾಪಾಂಗದಿಂದಂ ಕ್ಷಣತಿಟ್ ತತಿಯಂ .. .. ಗೆಲ್ವುದು ಆಶ್ಚರ್ಯಮೇ ದಲ್: **ರಾಜಶೇವಿ,** ೭. ೬೨)

**ಕ್ಷಣಭಂಗವೃತ್ತಿ** – ಅತ್ಯಲ್ಪ ಕಾಲದಲ್ಲಿ ನಾಶವಾಗುವ (ಕ್ಷಣಭಂಗವೃತ್ತಿ ತನುಭೃದ್ಗುಣ ಜೀವನಂ: **ಚಂದ್ರಪ್ರಪು,** ೧. ೧೩೬)

**ಕ್ಷಣಮಾತ್ರ** – ಒಂದು ಕ್ಷಣಕಾಲಕ್ಕೆ ಮಾತ್ರ (ಆಕೆಗಂ ಅರಸಂಗಂ ಕ್ಷಣಮಾತ್ರ ವಿದ್ವೇಷಕಾರಿಯಪ್ಪ ಪುಚ್ಚಮಾಲೆಯಂ: **ಶಾಂತಿಪು,** ೯. ೫೦ ವ)

**ಕ್ಷಣರುಗ್ಮಾಲೆ** – [ಕ್ಷಣರುಕ್+ಮಾಲೆ] ಮಿಂಚಿನ ಬಳ್ಳಿ (ಕ್ಷಣರುಗ್ಮಾಲಾಮಯ ಅಬ್ದಕ್ಕೆಣೆಯೆನಿಸೆ ಚಳತ್ಕಾಂತಿಯುಕ್ತ ಅಂತರಂಗೋಲ್ಬಣೆ ನಕ್ರಾರೂಢೆ .. .. ಆ ಮಹಾಮನಸೀಯಕ್ಷಿಣಿಯೆಂದುಂ ಮಾಟ್ಕೆ ಶಾಂತೀಶ್ವರ ಚರಿತಕರತಿಶ್ರೀಗೆ ಸೌಭಾಗ್ಯದೊಳ್ಪಂ: **ಶಾಂತೀಶ್ವಪು,** ೧. ೧೦)

**ಕ್ಷಣರುಚಿ** – ಮಿಂಚು (ಅನೇಕ ಮಣೀಭೂಷಣ ಕ್ಷಣರುಚಿಪ್ರಭಾಶೋಭೆವೆತ್ತ .. .. ಶಕ್ರಾಂಬುದಂ: **ಮಲ್ಲಿನಾಪು,** ೧೨. ೧೦೧)

**ಕ್ಷಣವಿಳಂಬಿ** – ಅತ್ಯಲ್ಪ ಕಾಲ ಮಾತ್ರ ಇರುವ (ಸ್ಕಂಧಂಗಳ್ ದಿಪಶಿಖಾರೂಪದಿಂ ಕ್ಷಣವಿಳಂಬಿಗಳ್: **ಶಾಂತಿಪು,** ೮. ೧೪೨ ವ)

**ಕ್ಷಣಾರ್ಧ** – ಅತ್ಯಲ್ಪ ಸಮಯ (ಗುಣಿ ದೂಷಿಸೆ ಯುಕ್ತಿಗಳಿಂ ಕ್ಷಣಾರ್ಧಮುಂ ನಿಲ್ಲದಲ್ಲಿದಕ್ಕನುಮಾನಂ: **ಶಾಂತಿಪು,** ೮. ೧೪೪)

**ಕ್ಷಣಿಕತ್ವ** – ಕ್ಷಣಿಕವಾಗಿರುವಿಕೆ (ಪೂರ್ವಕಾಲಂ ಭಾವಿ ವಿಜ್ಞಾನಂ ಉತ್ತರಕಾಲಾದಿಗಳೊಳ್ ನೆಗೆದು ಕ್ಷಣಿಕತ್ವದಿಂದಮಾಗಳ್ ಆ ವಿಜ್ಞಾನಂ ನಿಲ್ಲದು: **ಶಾಂತಿಪು,** ೮. ೧೪೨)

**ಕ್ಷತ** – ಗಾಯ (ಅತಿವಿಶದವಿಶಾಲೋರುಕ್ಷತದಿಂದೊಱೆದನಿತು ಜಡೆಯುಮಂ ನಾಂದಿ ಮನಃಕ್ಷತದೊಡನೆ ಎಚ್ಚರಿಸಿದುದು ಉತ್ಥಿತಂ ಆ ವಂದಸ್ರಮಿಶ್ರಗಂಧಂ ಮುನಿಯಂ: **ಪಂಪಭಾ,** ೧. ೧೦೫)

**ಕ್ಷತಜ** – ರಕ್ತ (ಕ್ಷತಜಂ ರುಧಿರಂ: **ಅಭಿಧಾವ,** ೧. ೧೨. ೨೭)

**ಕ್ಷತತ್ರಾಣ** – ಕಷ್ಟದಿಂದ ರಕ್ಷಣೆ (ಕ್ಷತತ್ರಾಣಾದಿ ಗುಣೋಪೇತಮಪ್ಪ ನಿಖಿಲ ಕ್ಷತ್ರಿಯ ಸಮೂಹಕ್ಕೆ ಶಸ್ತ್ರಕರ್ಮಮುಮಂ: **ಶಾಂತಿಪು,** ೮. ೬೪ ವ)

**ಕ್ಷತ್ರ** – ನಾಲ್ಕು ವರ್ಣಗಳಲ್ಲಿ ಒಂದು; ಕ್ಷತ್ರಿಯ; ಕಷ್ಟಗಳಿಂದ ಪಾರುಮಾಡುವವನು; ಕ್ಷತ್ರಿಯ ಗುಣಗಳಾದ ಶೌರ್ಯಪ್ರತಾಪ ಮುಂತಾದವು (ಕ್ಷತ್ರಂ ತೇಜೋಗುಣಂ ಆ ಕ್ಷತ್ರಿಯರೊಳ್ ನೆಲಸಿ ನಿಂದುದು: **ಪಂಪಭಾ,** ೧. ೨೧)

**ಕ್ಷತಚಕ್ರ** – ಕ್ಷತ್ರಿಯರ ಗುಂಪು (ಹತವೈರಿ ಕ್ಷತ್ರಚಕ್ರಂ ಭಯಚಕಿತ ಜಗದ್ವೀರಚಕ್ರಂ: **ಆದಿಪು,** ೧೪. ೩)

**ಕ್ಷತ್ರಿಯ** – ಚತುರ್ವರ್ಣಗಳಲ್ಲಿ ಎರಡನೆಯದು (ಕ್ಷತ್ರಂ ತೇಜೋಗುಣಂ ಆ ಕ್ಷತ್ರಿಯರೊಳ್ ನೆಲಸಿ ನಿಂದುದು: **ಪಂಪಭಾ,** ೧. ೨೧)

**ಕ್ಷಪಕಶ್ರೇಣಿ** – [ಜೈನ] ಕರ್ಮಕ್ಷಯಮಾಡಿ ಉತ್ತಮಗತಿಗೆ ಹೋಗುವ ಒಂದು ಮಾರ್ಗ (ಸಹಸ್ರ ಕ್ಷಪಕಶ್ರೇಣಿ ಪ್ರಾಯೋಗ್ಯಾಧಃಪ್ರವೃತ್ತ ಕರಣ ಕ್ಷಪಕನಾಗಿ: **ಶಾಂತಿಪು,** ೧೧. ೧೧೧ ವ)

**ಕ್ಷಪಣಕ** – ಕ್ಷಪಣ (ಅನೇಕ ಕ್ಷಪಣಕರ್ಗೆ ತರ್ಕ ತಂತ್ರ ವ್ಯಾಕರಣಾದಿಗಳಂ ಶಿಕ್ಷಿಸುತ್ತಂ ವಿಖ್ಯಾತಿವೆತ್ತಿರ್ಪುದುಂ: **ತ್ರಿಷಷ್ಟಿಪು,** ೨೯. ೩ ವ)

**ಕ್ಷಪಣೆ** – ಇಲ್ಲದಿರುವಿಕೆ (ತಪನಾತಪದಿಂ ಚೇಷ್ಟಾಕ್ಷಪಣೆಯನೊಳಕೊಂಡು ಕೋಟ್ಮೆಗಂ ಬೆಳ್ಮೆಗಮಾತ್ಮ ಪುರೋಭಾಗದೊಳ್ ಇರ್ದೊಡಂ ಉಪಶಮಿಸಿದುದು ಒಳ್ಪನೀಗುಂ ಆತಪ ಯೋಗಂ: **ಪಂಪರಾ,** ೭. ೯೫); ಕರ್ಮಕ್ಷಯ

**ಕ್ಷಪಿತ** – ಕಳೆದ, ಕ್ಷೀಣಗೊಂಡ (ಭಾರತವರ್ಷದ ರಾಜನುಂ ಕ್ಷಪಿತ ಪ್ರಜಾಪೀಡನುಂ ಎನಿಸಿದ ತಾರಾಪೀಡನರೇಂದ್ರಂಗೆ ನಂದನಂ: **ಕಾದಂಸಂ,** ೫. ೨೩ ವ)

**ಕ್ಷಪಿಯಿಸು** – ಕುಗ್ಗಿಸು, ಕೃಶಗೊಳಿಸು (ಉಪವಾಸವ್ರತಪ್ರಚುರತೆಯಿಂ ವಪು ಗಿಡಿಗಿಡಿಜಂತ್ರಮಾದುದೆಂಬನ್ನೆವರಂ ಕ್ಷಪಿಯಿಸಿ ಮುನೀಂದ್ರಂ ಅನಶನತಪದೊಳ್ ತಱಿಸಂದ ಸಲವು ಅದೊಂದಾಶ್ಚರ್ಯಂ: **ಸುಕುಮಾಚ,** ೩. ೪)

**ಕ್ಷಮ** – ಸಮರ್ಥನಾದ (ಪರಿಭವಂಬಟ್ಟು ಚಿಂತಿಸುತ್ತಿರ್ದ ಎನ್ನಂ ಕಂಡು ಈತಂ ವಿತರ್ಕಂ ಕ್ಷಮನಲ್ಲ ಎಂದು ಎನ್ನ ಪರಿಗ್ರಹಂ ಪರೆದು ಪೋದುವು: **ಪಂಚತಂತ್ರ,** ೪೩೬ ವ)

**ಕ್ಷಮತೆ** – ಶಕ್ತಿ, ಸಾಮರ್ಥ್ಯ (ದುಷ್ಟನಿಗ್ರಹ ಶಿಷ್ಟಪರಿಪಾಲನಾಕ್ಷಮತೆಯಂ ಕೈಗಾಯದೆ: **ಪಂಪರಾ,** ೯. ೮೬)

**ಕ್ಷಮಾಗುಣ** – ಕ್ಷಮಿಸುವ ಗುಣ (ಎನಸುಂ ಪೋತ್ರಾಭಿಘಾತಂ ಪಡೆದು ಬಿಡದೆ ಪೆತ್ತಳ್ ಕ್ಷಮಾವೃತ್ತಿಯಿಂದೆಮ್ಮನೆ ತಾನಿಂತು ತಾಯಪ್ಪ ಅವನಿಗೆರಗಿ ತಾವಿರ್ದುವೆಂಬಂದದಿಂ.. ..ರಯ್ಯಮಾಗಿರ್ಪುವು ಕರಂ ಮಾತಳಂಗದ್ರುಮಂಗಳ್: **ಶಾಂತೀಶ್ವಪು,** ೧೩. ೧೩೩)

**ಕ್ಷಮಾಜ** – ಭೂಮಿಯಲ್ಲಿ ಹುಟ್ಟಿದುದು, ಗಿಡ, ಮರ (ವಿವಿಧಪ್ರಕಾರ ಶಾಖಾನಿವಹಮಂ ಉದ್ಯತ್ ವಿಚಿತ್ರಪತ್ರಮಂ ಉದ್ದಾಮ ವಟಕ್ಷಮಾಜಮಂ ಶಬರವಲ್ಲಭಂ ಮೆಲ್ಲಮೆಲ್ಲನೆಯ್ದಿದನಾಗಳ್: **ಪಂಚತಂತ್ರ,** ೩೪೪)

**ಕ್ಷಮಾತಳ** – ಭೂಮಂಡಲ (ಬಳೆದುವು ತೋಳ್ಗಳ್ ಎಕ್ಕೆಯಿಂ ಅಮಳ್ ಬಳೆವಂತಿರೆ ಮುಯ್ವುಗಳ್ ಕುಳಾಚಳಶಿಖರಂಗಳಂ ಮಸುಳೆವಂದುವು ಪರ್ವಿದ ವಕ್ಷಮೀ ಕ್ಷಮಾತಳ ಕುಳಲಕ್ಷ್ಮಿಗಾಯ್ತು ಕುಳಮಂದಿರಂ: **ಪಂಪಭಾ,** ೨. ೩೭)

**ಕ್ಷಮಾಧರ** – ಭೂಮಿಯನ್ನು ಧರಿಸಿರುವುದು, ಬೆಟ್ಟ (ದುರ್ಯೋಧನ ಊರು ಕ್ಷಮಾಧರ ವಜ್ರಂ ಕುರುರಾಜರತ್ನ ಮಕುಟ ಉತ್ಕೂಟ ಅಂಘ್ರಿ ಸಂಘಟ್ಟಸಂಗರಂ ಎಂದು

ಅಭಿವರ್ಣಿಪೆಂ ರಣಯಶ್ರೀರಾಮನಂ ಭೀಮನಂ: **ಗದಾಯು,** ೧. ೫೨); ಭೂಮಿಯನ್ನು ಹೊತ್ತಿರುವವನು, ಆದಿಶೇಷ (ಕ್ಷಮಾಧರಮನೀಗಳೆತ್ತಿ ಮೆಱೆದಂ ಮುಕುಂದಂ ನತಕ್ಷಮಾಧರನಾತನಂ ಕ್ಷಮೆಗೊಳಲ್ಕೆವೇಟ್ಟುಂ: **ಜಗನ್ನಾವಿ,** ೪. ೯೮)

**ಕ್ಷಮಾಧರನಿವಾಸ** – ಆದಿಶೇಷನ ವಾಸಸ್ಥಳ, ಪಾತಾಳ (ಕ್ಷಮಾಧರಮನೀಗಳೆತ್ತಿ ಮೆಱೆದಂ ಮುಕುಂದಂ: **ಜಗನ್ನಾವಿ,** ೪. ೯೮)

**ಕ್ಷಮಾಪರ** – ಕ್ಷಮಾಗುಣವುಳ್ಳವನು, ಸಹಿಷ್ಣು (ಅಹಿತಸಿಂಹನಾಗಿಯುಂ ಆರ್ಗಂ ನಿಜದಿಂ ಕ್ಷಮಾಪರನುಂ: **ಶಾಂತಿಪು,** ೨. ೯)

**ಕ್ಷಮಾಭರ** – ಭೂಭಾರ (ಹಿಮಾದ್ರಿವಾರಿಧಿನಿರುದ್ಧೈಕ ಆತಪತ್ರಕ್ಷಮಾಭರಮಂ ಭೂರಿಭುಜಾಗ್ರದೊಳ್ ನಿಜೆಸಿ: **ಆದಿಪು,** ೯. ೬೪)

**ಕ್ಷಮಾವಲ್ಲಭ** – ಕ್ಷಮಾಪ, ರಾಜ (ನಿಜಪರಿರಕ್ಷಣಕ್ಷಮಾವಲ್ಲಭಲಾಭ ಪ್ರಮುದಿತ ಮೇದಿನೀಹೃದಯದಂತೆ: **ಆದಿಪು,** ೭. ೩೬ ವ)

**ಕ್ಷಮಿಯಿಸು** – ಸೈರಿಸು, ಅಪರಾಧ ಮನ್ನಿಸು (ದೇವರೆನಗೆ ಕಾರುಣ್ಯಂಗೆಯ್ವೊಡೆ ಒಂದಂ ಕ್ಷಮಿಯಿಸುವುದು: **ಪಂಪರಾ,** ೧೬. ೭ ವ)

**ಕ್ಷಮೆ** – ಸಹನೆ (ಸಹಿಷ್ಣುತೆಯಂತಾ ಕ್ಷಮೆ: **ಅಭಿಧಾವ,** ೨. ೨. ೮)

**ಕ್ಷಯ** – ನಾಶ (ಕ್ಷಯಮಣಮಿಲ್ಲ ಕೇಳ್ದು ಕಡೆಗಂಡವಂ ಆವನುಮಿಲ್ಲ ಎನಲ್: **ಪಂಪಭಾ,** ೧.೫); ಪ್ರಳಯ (ಯುಗಾಂತಂ ವಿಳಯಂ ಅಂತಕಾಲಂ ಕಲ್ಪಂ ಕ್ಷಯಂ: **ಅಭಿಧಾವ,** ೧. ೨. ೧೭); ಕ್ಷಯ, ಸ್ಥಾನ, ವೃದ್ಧಿ ಎಂಬ ತ್ರಿವರ್ಗದಲ್ಲಿ ಒಂದು (ಕ್ಷಯವೃದ್ಧಿಗಳಾದೊರೆಯನಿವೊರೆದು ಮುನ್ನೆ ಪರಿಕಿಪುದಱಿದೊಂ: **ಶಾಂತಿಪು,** ೨. ೪೦)

**ಕ್ಷಯವೃಜಿನ** – ಪಾಪನಾಶಕ (ಕ್ಷಯವೃಜಿನಂ ಜಿನಸಮಯಂ: **ಸುಕುಮಾಚ,** ೧. ೫೧)

**ಕ್ಷಯಾಶುಶುಕ್ಷಣಿ** – ಪ್ರಳಯಕಾಲದ ಬೆಂಕಿ (ಐರಾವತ ಪ್ರಭವದೊಳಂ ಕ್ಷಯಾಶುಶುಕ್ಷಣಿ ಕ್ಷೇಪದೊಳಂ ಪ್ರಳಯಜಲಧರ .. .. ಎನಿಸಿ: **ಜಗನ್ನಾವಿ,** ೬. ೩೫ ವ)

**ಕ್ಷಯೋಪಶಮ** – [ಜೈನ] ಆತ್ಮನ ಐದು ಭಾವಗಳಲ್ಲಿ ಒಂದು (ಜಾತಿಸ್ಮರನಾದಂ ಕ್ಷಯೋಪಶಮದಿಂದಂ: **ಸುಕುಮಾಚ,** ೧೦. ೨೮)

**ಕ್ಷರ** – ಅಶಾಶ್ವತ (ಕ್ಷರಂ ಅಕ್ಷರಂ ಎನಿಪ ಅಗಣಿತ ವಿರುದ್ಧಗುಣ ನಿನ್ನ ನಿಜವದೇಂ ಕೇವಳಮೇ: **ಜಗನ್ನಾವಿ,** ೩. ೯೭)

**ಕ್ಷರಣೆ** – ಸೋರುವಿಕೆ (ಅಂತು ಕಂತುಶರಪರವಶನಾಗಿ ಧೈರ್ಯಕ್ಷರಣೆಯುಂ ಇಂದ್ರಿಯಕ್ಷರಣೆಯುಂ ಒಡನೊಡನಾಗೆ: **ಪಂಪಭಾ,** ೨. ೪೨ ವ)

**ಕ್ಷರತ್ಕರಟ** – ಸ್ರವಿಸುವ ಆನೆಯ ಕುಂಭ (ಕ್ಷರತ್ಕರಟಂ ಪ್ರಾಂಶುಮುಖಂ ದಶದ್ವಯನಖಂಕ್ರೋಧೋದ್ಧುರಂಸಿಂದುರಂ: **ಚಂದ್ರಪ್ರಪು,** ೯. ೯೯)

**ಕ್ಷವ** – ಸೀನು (ಸೀನಕ್ಕುಂ ಕ್ಷುತ್ ಕ್ಷವಂ ಕಿಳಾಸಂ ಸಿಧ್ಮಂ: **ಅಭಿಧಾವ,** ೧. ೧೨. ೩೫)

**ಕ್ಷವಥು** – ಸೀನು, ಕೆಮ್ಮು (ಕ್ಷವಥುವದವಸಾದಂ: **ಅಭಿಧಾವ,** ೧. ೧೨. ೩೪)

**ಕ್ಷಳ** – ಸಂಸ್ಕೃತ ಪದಗಳು ಕನ್ನಡಕ್ಕೆ ತದ್ಭವಾಗಿ ಬರುವಾಗ ಅವುಗಳಲ್ಲಿನ 'ಲ'ಕಾರಕ್ಕೆ ಬದಲಾಗಿ ಬರುವ 'ಳ'ಕಾರ (ಸಂಸ್ಕೃತ ಶಬ್ದನಿಯುಕ್ತ ಲಕಾರದ ನೆಲೆಗೆ ನಿಂದು ಸರಿಯಾಗಿ ಸಲ್ವುದಂ ಕ್ಷಳನೆಂಬರ್: **ಶಬ್ದಮದ,** ೨೬)

**ಕ್ಷಾಂತಿ** – ತಾಳ್ಮೆ, ಕ್ಷಮೆ (ಕಟ್ಟಿದ ಪಟ್ಟಂ ಬರ್ಪ ಮುಪ್ಪಂ ಮಱೆಯಿಸಿತಧಿಕಕ್ಷಾಂತಿಯಂ ವಿಪ್ರವರ್ಗಾಸ್ಪದ ದರ್ಭಾನೀಕ ಸಮ್ಮಾರ್ಜನಿ ಕಳೆದುದೆಂದೆನಲ್ ದುಷ್ಪರಪ್ಪರ್ ನೃಪಾಲರ್: **ಕಾದಂಬ,** ೩. ೮೭)

**ಕ್ಷಾತ್ರಭಾರ** – ರಾಜ್ಯದ ಹೊಣೆ (ಸಮಸ್ತ ಕ್ಷಾತ್ರಭರಮಂ ಜಿತಶತ್ರುವೆಂಬ ಪುತ್ರನೊಳ್ ನಿಜೆಸಿ: **ಚಂದ್ರಪ್ರಪು,** ೯. ೪೧ ವ)

**ಕ್ಷಾಮ** – ತೆಳುವು (ಕ್ಷಾಮಂ ಲಲನಾಮಧ್ಯದೊಳ್ಲದಾ ಸುದೇಶದೊಳುಂಟೇ: ಗಿರಿಜಾಕ, ೨. ೮)

**ಕ್ಷಾಮಿತ** – ಸೊರಗಿದ (ವನಕಿಸಲಯ ಪ್ರಸನ್ನ ಕಷಾಯಕ್ಷಾಮಿತ ಕಳಕಂಠಸಂಜನಿತ ಮಂಜುಳನಿನಾದ ಅವಲಂಬಿತ: **ಉದ್ಭಟಕಾ,** ೯. ೭೧ ವ)

**ಕ್ಷಾಯಿಕ** – [ಜೈನ] ಆತ್ಮನ ಐದು ಭಾವಗಳಲ್ಲಿ ಒಂದು, ಕರ್ಮದಿಂದ ಪೂರ್ಣ ಬಿಡುಗಡೆ ಹೊಂದಿದ ಸ್ಥಿತಿ (ತಪ್ಪದೆ ನಿನ್ನ ಹೃದಯದೊಳ್ ನೆಲಸಿದೊಡಕ್ಕುಂ ಕ್ಷಾಯಿಕಂ ಸುದರ್ಶನರತ್ನಂ: **ಪಾರ್ಶ್ವನಾಪು,** ೫. ೪೭)

**ಕ್ಷಾರವಾರಿ** – ಉಪ್ಪು ನೀರು (ಒಳ್ಪನುರಿವ ಮುಣ್ಗಳೊಳ್ ಕ್ಷಾರವಾರಿಗಳಂ ಎಱೆದೊರಸಿ ಕರ್ಚುವರುಂ: **ಆದಿಪು,** ೫. ೮೫ ವ)

**ಕ್ಷಾಲನ** – ಕ್ಷಾಲ (ತದ್ದೋಷ ಪಂಕಿಲತಾ ಕ್ಷಾಲನ ತತ್ಪರಂ: **ಪಂಪರಾ,** ೭. ೧೧೭)

**ಕ್ಷಾಲಿಸು** – ತೊಳೆ, ಶುಚಿಗೊಳಸು (ಸಕಲಲೋಕಾಘ ನಿಷದ್ವರಮಂ ಕ್ಷಾಲಿಪ ನಿರ್ಮಲಚರಿತಂ ಗಣಧರ ಚಾರುಚರಣಂ ಶರಣಂ: **ಶಾಂತೀಶ್ವಪು,** ೧. ೮)

**ಕ್ಷಿತಿ** – ಭೂಮಿ (ಲತೆಗಳ್ ಜಂಗಮರೂಪದಿಂದೆ ನೆರದುವೋ ದಿವ್ಯಾಪ್ಸರೋವೃಂದಂ ಈ ಕ್ಷಿತಿಗೇಂ ಇಂದ್ರನ ಶಾಪದಿಂದ ಇೞಿದುವೋ ಪೇೞೆಂಬ ಶಂಕಾಂತರಂ ಮತಿಗಂ ಪುಟ್ಟುವಿನೆಗಂ: **ಪಂಪಭಾ,** ೪. ೩೯); ಸ್ಥಳ (ಕ್ಷಿತಿಪತಿಯ ಪಾದಪೀಠಕ್ಷಿತಿಯೊಳ್ ನತರಾಗಿ: **ನೇಮಿನಾಪು,** ೧೩. ೨೯)

**ಕ್ಷಿತಿಚಕ್ರ** – ಭೂಮಂಡಲ (ಹತವೈರಿಕ್ಷತ್ರಚಕ್ರಂ .. .. ವಿನಮ್ರಕ್ಷಿತಿಚಕ್ರಂ; **ಆದಿಪು,** ೧೪. ೩)

**ಕ್ಷಿತಿಜಾತ** – ಭೂಮಿಯಲ್ಲಿ ಹುಟ್ಟಿದುದು, ಮರ (ಚೈತ್ಯ ಕ್ಷಿತಿಜಾತ ಪ್ರಾಂತದೇಶಸ್ಥಿತ ಕನಕಮಯ .. .. ಪ್ರತಿಬಿಂಬಭ್ರಾಂತಿಯಂ ಮಾಡಿದಂ: **ಚಂದ್ರಪ್ರಪು,** ೨. ೮೨)

**ಕ್ಷಿತಿಧರ** – ಭೂಮಿಗೆ ಆಧಾರವಾದದ್ದು, ಬೆಟ್ಟ (ತಮಿಸ್ರಗುಹೆಯ ವಜ್ರದ ಪಡಿ ತತ್ ಕ್ಷತಿಧರದೆರ್ದೆಯಂತೆ ಚಮೂಪತಿಯಿಂ: **ಆದಿಪು,** ೧೪. ೫೭)

**ಕ್ಷಿತಿಪ** – ಭೂಮಿಯ ಒಡೆಯ, ರಾಜ (ವೀರವೈರಿಕ್ಷಿತಿಪ ಗಜಘಟಾಟೋಪ ಕುಂಭಸ್ಥಳೀಭೇದನಂ ಉದಗ್ರ ಉದ್ಘ ಅಸಿ ಭಾಸ್ವತ್ ಭುಜಪರಿಘನಂ ಆರೂಢಸರ್ವಜ್ಞನಂ: **ಪಂಪಭಾ,** ೧. ೫೧)

**ಕ್ಷಿತಿಭೃತ್** – ಪರ್ವತ (ವೃಕ್ಷ ಕ್ಷುಪವೀರುಧ ಔಷಧಪರೀತಸಮುನ್ನತಕೂಟಕೋಟಿರೌದ್ರ ಕ್ಷಿತಿಭೃತ್ ಗುಹಾಗಹನಮಂ ಕಳಿದು ಆ ಮೃಗಧೂರ್ತಂ ಎಯ್ದಿದಂ: **ಪಂಚತಂತ್ರ,** ೯೭)

**ಕ್ಷಿತಿಭೃತ್ತಟ** – ಬೆಟ್ಟದ ತಪ್ಪಲು (ಇರ್ದಂ ಕ್ಷೇಮದಿಂ ಪ್ರಚಂಡಬಲ ಕ್ಷಿತಿಭೃತ್ತಟದೊಳ್ ಅಖಿಳಕಾಕಾಧೀಶಂ: **ಪಂಚತಂತ್ರ,** ೩೩೬)

**ಕ್ಷಿತಿರಸ** – ಭೂಮಿಯಲ್ಲಿನ ನೀರು (ಕ್ಷಿತಿರಸಮಂ ರವಿದ್ಯುತಿ ನಿಜದ್ಯುತಿಯಿಂ ತೆಗೆವಂತೆ: **ಸುಕುಮಾಚ** ೮. ೭೧)

**ಕ್ಷೀಣ** – ಕುಗ್ಗಿದ (ಕ್ಷೀಣಂ ಜೀನಂ ಜೀರ್ಣಂ: **ಅಭಿಧಾವ,** ೨. ೧. ೪೨)

**ಕ್ಷೀಣಧನ** – ಬಡವ (ಅತಿವ್ಯಸನ ಕ್ಷೀಣಧನ ಜನಂಗಳಂ ಮೂಲಧನ ದಾನದಿಂ ಸಂಭಾವಿಸಿಉಂ: **ಚಂದ್ರಪ್ರಪು,** ೨. ೬೦ ವ)

**ಕ್ಷೀಬ** – ಮದಿಸಿದ (ಸಕಲ ಜಗಜ್ಜನಂ ಮಕರಕೇತು ಗೆಲೆ ಮದನನೃಪನ ನಾಟಕವಿಜಯಾನಕರವದಂತೆಸೆಗುಂ ಕ್ಷೀಬಕೀರ ಮತ್ತಾಳಿ ಪರಭೃತಪ್ರಭವರಂ: **ಅಜಿತಪು,** ೬. ೧೦)

**ಕ್ಷೀರ** – ಹಾಲು (ಕ್ಷೀರಂ ದುಗ್ಧಂ ಪಾಲ್: **ಅಭಿಧಾವ,** ೧. ೧೬. ೧)

**ಕ್ಷೀರಜಲಾಕರ** – ಹಾಲಿನ ಸಮುದ್ರ (ಕ್ಷೀರಜಲಾಕರಮಂ .. .. ಆ ಕಾಮತೆ ನಿಶೆಯ ಕಡೆಯೊಳ್ ಕಂಡಳ್: **ಪುಷ್ಪದಂಪು,** ೩. ೧೨೦)

**ಕ್ಷೀರನೀರನ್ಯಾಯ** – ಹಾಲು ಮತ್ತು ನೀರು ಬೆರೆಯುವ ರೀತಿ (ಕರ್ಮದ ಜೀವನ ಕ್ಷೀರನೀರನ್ಯಾಯಸಂಬಂಧಂ ಬಂಧಮೆಂಬುದು: **ಆದಿಪು,** ೧೦. ೬೩ ವ)

**ಕ್ಷೀರನೀರಾಕರ** – ಹಾಲುಗಡಲು (ರತ್ನವೇಳಾ ವಿಳಸಿತ ಕ್ಷೀರನೀರಾಕರದಂತೆ: **ಮಲ್ಲಿನಾಪು,** ೧೧. ೭೬ ವ)

**ಕ್ಷೀರಪಯೋಧಿ** – ಕ್ಷೀರನೀರಾಕರ (ಕೊಡಂಬೆರಸು ಆಳಿಗಟ್ಟಿ ಭೋರ್ ಭೋರೆನೆ ಪೋಪ ಬರ್ಪ ಅಮರಸಂಹತಿ ಪೋಲ್ತುದು ಮಂದರಾದ್ರಿಗಂ ಕ್ಷೀರಪಯೋಧಿಗಂ ಹರಿಯ ಕಟ್ಟಿದ ಜಂಗಮಸೇತುಬಂಧಮಂ: **ಶಾಂತಿಪು,** ೧೦. ೪೫)

**ಕ್ಷೀರಾವನಿಜಾತ** – ಹಾಲು ಮರ (ಪೂವಿನ ಬಾಡುಗಳಂ ಕ್ಷೀರಾವನಿಜಾತದ ಫಲಂಗಳಂ .. .. ಶ್ರಾವಕಂಗಾಗದು ಸೇವಿಸಲ್: **ಸಮಯಪ,** ೬. ೮)

**ಕ್ಷೀರೋದಭವ** – ಹಾಲುಗಡಲಿನಲ್ಲಿ ಹುಟ್ಟಿದವನು, ಚಂದ್ರ (ಕ್ಷೀರೋದಭವ ಅತ್ರಿಜೇಂದುಗಳ್ಗಂ: .. .. ಐಕ್ಯಂ: **ಕಾವ್ಯಾವಲೋ;** ೯೦೬)

**ಕ್ಷೀರೋದವಾರಿ** – ಹಾಲುಗಡಲ ನೀರು (ಕ್ಷೀರೋದವಾರಿಧಾರಾಪೂರದ ಚೆಲ್ವಿಂಗೆ ಸೆಣಸುವಂತೆ: **ಆದಿಪು,** ೭. ೭೪)

**ಕ್ಷುಣ್ಣ** – ಮೆಟ್ಟಿದ, ತುಳಿಯಲ್ಪಟ್ಟ (ಸಹಜವಿಭೂಷಣದಂತಿರೆ ಮಹನೀಯಕ್ಷುಣ್ಣಲಕ್ಷಣಂ ಮಿಸುಗೆ ಶುಭಾವಹನೆನಿಸಿದನಂ ಕಂಡಂ: **ಕಾದಂಸಂ,** ೨. ೨೧)

**ಕ್ಷುತ್** – ಸೀನು (ಸೀನಕ್ಕುಂ ಕ್ಷುತ್ ಕ್ಷವಂ ಕಿಳಾಸಂ ಸಿಧ್ಮಂ: **ಅಭಿಧಾವ,** ೧. ೧೨. ೩೫); ಹಸಿವು (ಕ್ಷುತ್ ಭುಭುಕ್ಷೆಗಳ್ ಪಸಿವೆನಿಕುಂ: **ಅಭಿಧಾವ,** ೧. ೧೬. ೮)

**ಕ್ಷುತ** – ಸೀನು (ಪಿತೃದ್ವಂದ್ವಂ ಕ್ಷುತಜೃಂಭಣವ್ಯಾಜದಿಂ ಪರಾಸುಗಳಕ್ಕುಮೆಂದು ಪೇೞಿ: **ಚಂದ್ರಪ್ರಪು,** ೩. ೩೮ ವ)

**ಕ್ಷುತವಿಜೃಂಭಣವ್ಯಾಜ** – ಸೀನುವ ನೆಪ (ಫಳಾಪಾಕಾಂತದೊಳ್ ಕ್ಷುತವಿಜೃಂಭಣವ್ಯಾಜದಿಂ ಲೋಕಾಂತರಿತರಾಗಿ: **ಆದಿಪು,** ೫. ೬೯ ವ)

**ಕ್ಷುತ್ಕ್ಷಾಮ** – ಹಸಿವೆಯಿಂದ ಬಳಲಿದ (ದಿಶೆಯೆಂಬತ್ತಱ ದಿವಿಜನಿಕಾಯಮನಿಕ್ಕುವಂ ಜವಂ ಕ್ಷುತ್ಕ್ಷಾಮಮಂ: **ಮಲ್ಲಿನಾಪು,** ೧೩. ೯೨)

**ಕ್ಷುಧಾಪೀಡೆ** – ಹಸಿವಿನ ಬಾಧೆ (ನಿಮಗಂ ಪುಣ್ಣ ಬೇನೆ ತಿಣ್ಣಂ ಅದಱಿಂ ಮೇಲೆ ಕ್ಷುಧಾಪೀಡೆಯಾದುದಪ್ಪೊಡೆ ಶರೀರಮಂ ಸಂಹರಿಸಲ್ಬಾರದು: **ಪಂಚತಂತ್ರ,** ೨೧೦ ವ)

**ಕ್ಷುದ್ರ** – ಜಿಪುಣ, ಕ್ರೂರವಾದ, ಅಲ್ಪನಾದವನು (ಕೃಪಣ ಅಲ್ಪ ಕ್ರೂರಾರ್ಥ ವ್ಯಪದೇಶಂ ಕ್ಷುದ್ರಶಬ್ದ: **ಅಭಿಧಾವ,** ೩. ೧. ೯೨); ಚಾಡಿಕೋರ (ಕ್ಷುದ್ರಂ ಪಿಶುನಂ ಸೂಚಕಂ ಎಂದುಱಿದುಕೊಳ್ಗೆ ಕರ್ಣೇಜಪನಂ: **ಅಭಿಧಾವ,** ೨. ೧. ೧೩)

**ಕ್ಷುಪ** – ಪೊದರು (ವೃಕ್ಷ ಕ್ಷುಪವೀರುಧ ಔಷಧಪರೀತ ಸಮುನ್ನತಕೂಟಕೋಟಿರೌದ್ರಕ್ಷಿತಿಭೃದ್ಗುಹಾಗಹನಮಂ ಕಳಿದು ಆ ಮೃಗಧೂರ್ತಂ ಎಯ್ದಿದಂ: **ಪಂಚತಂತ್ರ,** ೯೭)

**ಕ್ಷುಭಿತ** – ಕಲಕಿದ (ಬಧಿರಿತ ಸಮಸ್ತ ದಿಕ್ತಟಂ ಅಧಿರಿತ ಸರ್ವ ಇಭ್ಯಗರ್ವಿತಂ ಕ್ಷುಭಿತಾಂಭೋಸಲಿಲಂ ಪರೆದುದು ಧುರವಿಧಾನ ಪಟುಪಟಹ ಕಹಳ ಭೇರೀರಭಸಂ: **ಪಂಪಭಾ,** ೧೨. ೧೭೧); ಬಿರುಸಾದ (ಇಭೋದ್ಯತ್ ಕರ್ಣತಾಳ ಕ್ಷುಭಿತ ಪವನವಿಕ್ಷೇಪದಿಂ ವಾರ್ಧಿಯಿಂ ತುಳ್ಕುವ ಸೇನಾಚಕ್ರಮಂ ಸಕಳ ಮಹೀವಲ್ಲಭಂ ಮುಟ್ಟೆವಂದಂ:: **ಮಲ್ಲಿನಾಪು,** ೯. ೧೮); ಕಳವಳಗೊಂಡ (ಮಂಗಳಪಾಠಕರ ಜಯಜಯಾದಿ ಮಧುರರವಂಗಳೊಳಂ ಅಙಕ್ಷುಭಿತಮಾದ ಆಸ್ಥಾನಮಂಟಪದಿಂ .. .. ಪೊಱಮಟ್ಟು: **ಕಾದಂಸಂ,** ೧. ೨೭ ವ)

**ಕ್ಷುಭಿತಚಿತ್ತ** – ಕ್ಷೋಭೆಗೊಂಡ ಮನಸ್ಸಿನವನು (ಆಗಳ್ ಅರಸಂ ಅತಿ ಸಂಭ್ರಮರಸ ಕ್ಷುಭಿತಚಿತ್ತನಾಗಿ: **ಮಲ್ಲಿನಾಪು,** ೪. ೧೨ ವ)

**ಕ್ಷುರ** – ಸಣ್ಣ ಕತ್ತಿ, ಸುರಿಗೆ (ಕರತಳಂ ಒಪ್ಪುಗುಂ ಎಸೆದೋರಂತಿರೆ ಕರಶಾಖೆಗಳ್ ಅತನುಕ್ಷುರದಂದಂ: **ಸುಕುಮಾಚ,** ೫. ೫೧); ಗೊರಸು

**ಕ್ಷುರಕ** – ತಿಲಕದ ಮರ (ತಿಲಕಂ ಕ್ಷುರಖಾಖ್ಯಂ: **ಅಭಿಧಾವ,** ೧. ೮. ೨)

**ಕ್ಷುರಭಾಂಡ** – ನಾಯಿಂದನ ಹಡಪ (ದೂದವಿಯ ಗಂಡಂ ಬಂದು ಅರಸರ್ ಬೆಸವೇೞ್ದರ್ ಬೇಗಂ ಕ್ಷುರಭಾಂಡಮಂ ಈಯೆದು ಬೇಡಿಕೊಂಡು: **ಪಂಚತಂತ್ರ,** ೧೩೭ ವ)

**ಕ್ಷುರಿಕಾ[ಕೆ]** – ಸುರಿಗೆ (ಕ್ಷುರಿಕಾಸಿಧೇನು ಸಂಜ್ಞಾಂತರಂ ಅದು ತಾಮ ಸುರಿಗೆ ಕೊಮತವೆನಿಕುಂ: **ಅಭಿಧಾವ,** ೧. ೧೪. ೧೫)

**ಕ್ಷುಲ್ಲಕ** – ಚಿಕ್ಕದಾದ (ಪೊಲಲ ನಡುವಣ ಕ್ಷುಲ್ಲಕದ್ವಾರದಿಂ ಪೊಱಮಟ್ಟು: **ಪಂಪರಾ,** ೭. ೭ ವ)

**ಕ್ಷೂಣತೆ** – ಕೊರತೆ, ನ್ಯೂನತೆ (ಈ ಕ್ಷೂಣತೆಯಾದುದು ಆ ಸವಣನಿಂದೆನಗೆ ಎಂದು: **ಕರ್ಣನೇಮಿ,** ೬. ೫೪ ವ)

**ಕ್ಷೇತ್ರ** – ಹೊಲ (ಭೂಮಿ ವಪ್ರಂ ಕ್ಷೇತ್ರಂ: **ಅಭಿಧಾವ,** ೧. ೧೧. ೬೭); ಹೆಂಡತಿ (ಸಹಧರ್ಮಿಣಿ ಪತ್ನಿ ಜಾಯೆ ದಾರಂ ಕ್ಷೇತ್ರಂ: **ಅಭಿಧಾವ,** ೧. ೧೧. ೩); ದೇಹ ; [ಜೈನ] ಕಥೆಯ ಸಪ್ತಾಂಗಗಳಲ್ಲಿ ಒಂದು

**ಕ್ಷೇತ್ರಜ** – ದೊಡ್ಡವರ ಅನುಗ್ರಹದಿಂದ ಹೆಂಡತಿಯಲ್ಲಿ ಹುಟ್ಟಿದವನು (ಲೋಗರಿಂ ಕ್ಷೇತ್ರಜನಂ ವನಿತೆ ಪಡೆದಂದು ತತ್ಪುತ್ರನೆ ಸಗ್ಗಕ್ಕೊಯ್ವನೆಂದುಂ ಊಳ್ವರ್ ಪಾರ್ವರ್: **ಸಮಯಪ,** ೧೧. ೩೨); [ಜೈನ] ಐದು ಬಗೆಯ ದುಃಖಗಳಲ್ಲಿ ಒಂದು (ಶಾರೀರ ಮಾನಸ ಕ್ಷೇತ್ರಜ

ಪರಸ್ಪರೋದೀರಿತ ದನಜೋದಿತಂಗಳೆಂಯ್ದು ತೆಱದ ದುಃಖಂಗಳೊಳ್: **ಆದಿಪು,** ೫. ೮೮ ವ)

**ಕ್ಷೇತ್ರಜ್ಞ** – ಆತ್ಮ (ಕದಷೇತ್ರಜ್ಞಂ ಚೇತನಂ ಆತ್ಮಂ: **ಅಭಿಧಾವ,** ೧. ೩. ೩)

**ಕ್ಷೇತ್ರಾಕರ್ಷ** – ಹೊಲ ಉಳುವಿಕೆ (ಕ್ಷೇತ್ರಾಕರ್ಷದಂತೆ ಪೋತ್ರಿಪ್ರೋತ್ರಾಹತ ಧರಣಿತಳಮುಂ ಗೃಹೀತ ಗೋಲಾಂಗೂಲಮುಂ: **ಚಂದ್ರಪ್ರಪು,** ೫. ೫೨ ವ)

**ಕ್ಷೇಪ** – ಎಸೆಯುವುದು, ಚೆಲ್ಲುವುದು: ನಿಂದನೆ (ಅಪವಾದಂ ಕ್ಷೇಪಂ ನಿಂದೆ .. .. ಬಯ್ಗುಳ್ ತಾನಕ್ಕುಂ: **ಅಭಿಧಾವ,** ೧. ೧೩. ೩೪)

**ಕ್ಷೋಣೀಧ್ರ** – ಬೆಟ್ಟ (ಬರವೇಟ್ದಂ .. .. ಶ್ರೀಮನ್ಮಹಾಮೇರು ಮಂದರ ಮೈನಾಕ ಮಹೀಧರ ನೀಲನಿಷಧ ಕ್ಷೋಣೀಧ್ರಸಂದೋಹಮಮಂ: **ಪಂಚತಂತ್ರ,** ೩೬೪)

**ಕ್ಷೋಣೀಶ್ವರ** – ಭೂಮಿಯ ಒಡೆಯ, ರಾಜ (ಆ ಕ್ಷೋಣೀಶ್ವರವಲ್ಲಭೆ ಋಕ್ಷಜ ಸೂರ್ಯಜ ತನೂಜರಂ ಪಡೆದು: **ಪಂಪರಾ,** ೧೦. ೧೨೮)

**ಕ್ಷೋದ** – ಕುಟ್ಟುವುದು; ಪರಿಮಳ (ಕುಂಕುಮಕ್ಷೋದಮಂ ಘನಸ್ತನಕೆ ಲೇಪಿಸುತ್ತ ಒಡನೆ ತಾಳ್ದು ಪೊಂಬಟ್ಟೆಯಂ: **ರಾಜಶೇವಿ,** ೭. ೭)

**ಕ್ಷೋದನೀಯ** – ಪುಡಿಮಾಡುವ; ಪುಡಿಮಾಡಲು ಯೋಗ್ಯವಾದ (ಅತ್ಯಂತಕೋಮಳತಾಳುತಳ ಸಂಘಟ್ಟಮಾತ್ರ ಕ್ಷೋಧನೀಯ ಮೋದಕಮುಂ: **ಆದಿಪು,** ೧೧. ೨೬ ವ)

**ಕ್ಷೋಭ** – ಕಲಕುವಿಕೆ (ಸ್ತೋಭಂಗೊಂಡಂತೆ ಪುರಂ ಕ್ಷೋಭಮಾಗೆ: **ಸುಕುಮಾಚ,** ೧೦. ೭ ವ); ಉದ್ವಿಗ್ನತೆ (ರಥಮಂ ಅತಿ ಕ್ಷೋಭದಿಂದ ಏಱೆಬಂದಂ: **ಪಂಪರಾ,** ೧೪. ೧೨೯); ಕ್ರೋಧ (ರಾಸಭ ರಾಕ್ಷಸಂ ಅತಿಕ್ರೋಭಮಂ ತಳೆದು: **ಜಗನ್ನಾವಿ,** ೪. ೪೦ ವ)

**ಕ್ಷೌದ್ರ** – ಜೇನುತುಪ್ಪ (ಕುಸುಮರಸಂ ಆಕ್ಷಿಕಂ ಕ್ಷೌದ್ರ ಸಾರಕಾಖ್ಯಾತಿ ಮಧುವಿನೊಲ್ ವರ್ತಿಸುಗುಂ; **ಅಭಿಧಾವ,** ೧. ೧೬. ೧೩)

**ಕ್ಷೌದ್ರಪಟಳ** – ಜೇನುಹುಟ್ಟು, ಜೇನುಗೂಡು (ನೃಪಸೇನಾಪತಿ ಸರಘಾಳಿಪರೀತಕ್ಷೌದ್ರಪಟಳದಿಂದ ಎಳೆಯಂ ಪಾಳಿಪವೊಲ್ ಭಲ್ಲಚ್ಛಿನ್ನಾದಿಪಂ ಮೂರ್ಧಾಳಿಯಿಂದ ಆಚ್ಛಾದಿಸಿದಂ: **ಶಾಂತಿಪು,** ೧೧. ೨೪)

**ಕ್ಷೌಮದುಕೂಲ** – ರೇಷ್ಮೆ ವಸ್ತ್ರ, ದುಕೂಲ (ಅನೇಕಧಾನ್ಯಸದನಂಗಳುಂ ಕ್ಷೌಮದುಕೂಲಾದಿ ದಿವ್ಯವಸನ ವಿವಿಧ ಪ್ರಾವರಣ ವಿಶೇಷಂಗಳುಂ: **ಆದಿಪು,** ೧೫. ೩ ವ)

**ಕ್ಷೌಮಾಂಬರ** – ರೇಷ್ಮೆ ವಸ್ತ್ರ (ಸಜ್ಜೆವನೆಯೊಳ್ ಕ್ಷೌಮಾಂಬರಾಚ್ಛಾದ ಬಂಧುರ ಪರ್ಯಂಕದೊಳಿರ್ದ ಗರ್ಭವತಿಯಂ ಕಂಡಂ ಕ್ಷಮಾವಲ್ಲಭಂ: **ಕುಸುಮಾಕಾ,** ೫. ೫೫)

**ಕ್ಷೌಮಾಂಶುಕ** – ರೇಷ್ಮೆ ವಸ್ತ್ರ (ಸಮಂತು ಅಲಂಕರಿಸಿದಂ ಶಾಂತೀಶನಂ ದಿವ್ಯಗಂಧ ದರಸ್ಮೇರ ನಮೇರು ಚಾರು ಕುಸುಮ ಕ್ಷೌಮಾಂಶುಕ ಅನರ್ಘ್ಯ ಭಾಸ್ವದನೇಕೋತ್ತಮ ಭೂಷಣಾವಳಿಗಳಿಂ ಸಂಕ್ರಂದನಾನಂದದಿಂದಂ: **ಶಾಂತೀಶ್ವಪು,** ೧೬. ೩)

**ಕ್ಷ್ವೇಡ** – ವಿಷ (ನಿರ್ಮಲಗುಣನಿಧಿಯಂ ಪೆತ್ತೆಂ ಒತ್ತಿರ್ದ ಧೂರ್ತೋಕ್ತಿ ತರಂಗಕ್ಷ್ವೇಡಮಂ ನುಂಗುವಿನಂ: **ಲೀಲಾವತಿ,** ೧. ೭೧)

**ಕ್ಷ್ಮಾ** – ಭೂಮಿ (ಉತ್ತುಂಗಭಂಗುರತರತ್ತರಂಗ ಸಂಘಾತಾರ್ಣವಂ ಅಪರೀತ ಅಶೇಷ ಕ್ಷ್ಮಾಚಕ್ರಸಂರಕ್ಷಣ ದಕ್ಷದಕ್ಷಿಣಭುಜೋತ್ಖಡ್ಗಂ: **ಸುಕುಮಾಚ,** ೧. ೭೯ ವ)

**ಕ್ಷ್ಮಾಚರ** – ಭೂಮಿಯ ಮೇಲೆ ತಿರುಗುವವನು, ಮನುಷ್ಯ (ಗಗನಕ್ಷ್ಮಾಚರರೊಳ್ ಸ್ವಯಂವರದೊಳೀ ಸ್ತ್ರೀರತ್ನಮಂ ಕನ್ನೆಯಂ ಬಗೆಗೊಂಡಂತೊಳಗೊಳ್ವೆವು: **ಶಾಂತಿಪು,** ೬. ೨೩)

**ಕ್ಷ್ಮಾಚಳ** – ಬೆಟ್ಟ, ಪರ್ವತ (ಮೇರುಕ್ಷ್ಮಾಚಳಂ ಬಂದಪುದೆನೆ .. .. ನಂದಿಷೇಣಕ್ಷಿತಿಪತಿಯ ಗೃಹದ್ವಾರದೇಶಕ್ಕೆ ವಂದಂ: **ಮಲ್ಲಿನಾಪು,** ೧೩. ೧೪೮)

**ಕ್ಷ್ಮಾಜ** – ಮರ (ಏಂ ಮತಮಱೆದು ಓಲಗಿಪುದೊ ದಂಪತಿಗೆಂದುಮವಾರ್ಯವೀರ್ಯತೂರ್ಯಕ್ಷ್ಮಾಜಂ: **ಆದಿಪು,** ೫. ೩೫)

**ಕ್ಷ್ಮಾಜಾತ** – ಮರ ತಟಕ್ಷ್ಮಾಜಾತ ಪುಷ್ಪವ್ರಜರಜಂ: **ರಾಜಶೇವಿ,** ೨. ೬೪)

**ಕ್ಷ್ಮಾಧರ** – ಬೆಟ್ಟ (ಕುಳಶೈಳವ್ರಾತದಿಂದಂ ಬಳಸಿದ ಕನಕಕ್ಷ್ಮಾಧರೇಂದ್ರಂ .. .. ಎಂಬಂದದಿಂ ಕಣ್ಗೊಳಿಸುತ್ತುಂ ಯೋಗಿವೃಂದಾರಕರ ನಡುವೆ ಜಾಬಾಲಿಯೋಗೀಂದ್ರನಿರ್ದಂ: **ಕಾದಂಸಂ,** ೧. ೭೪)

**ಕ್ಷ್ಮಾಧವ** – ರಾಜ (ಅಮಳಸ್ವಾಮತಂ ಪರಕ್ಷ್ಮಾಧವಸ್ತವನೀಯಂ: **ರಾಜಶೇವಿ,** ೩. ೨೨)

**ಕ್ಷ್ಮಾಧ್ರ** – ಕ್ಷ್ಮಾಧರ, ಬೆಟ್ಟ (ಜೃಂಭದ್ದಂಭೋಳಿ ಹಸ್ತಾಹಸ್ತಚಕಿತಗತ ಕ್ಷ್ಮಾಧ್ರ ವಿಸ್ಫಾರವಿದ್ಯುತ್ಸಂಭಿನ್ನ .. .. ಫೇನಪ್ರತಾನಂ: **ರಾಜಶೇವಿ,** ೧. ೯೦)

**ಕ್ಷ್ಮಾಪ** – ದೊರೆ (ಸಕಳಕ್ಷ್ಮಾಪಶಿರೋರತ್ನಾಂಶುವ್ಯಾಪಿತ ಚರಣಂ ಸರಸ್ವತೀಮಣಿಹಾರಂ: **ಆದಿಪು,** ೧೧. ೧)

**ಕ್ಷ್ಮಾಪಾಲ** – ಕ್ಷ್ಮಾಪ (ಶ್ರೀಪತಿಗೆ ಯುದ್ಧಮಲ್ಲ ಮಹೀಪತಿಗೆ ನೆಗೞ್ತೆ ಪುಟ್ಟೆ ಪುಟ್ಟಿದಂ ಅಖಿಳ ಕ್ಷ್ಮಾಪಾಲಮೌಳಿಮಣಿಕಿರಣ ಆಪಾಳಿತ ನಖಮಯೂಖ ರಂಜಿತಚರಣಂ: **ಪಂಪಭಾ,** ೧. ೧೮)

**ಕ್ಷ್ವೇಡ** – ನಂಜು, ವಿಷ (ನಿಜವಕ್ತೋನಿಕ್ಷಿಪ್ತ ಕ್ಷ್ವೇಡಪೀಡಿತ ಲೋಕಘಾತಿನಿಯಪ್ಪ ಪೂತನಿಯುಮಂ .. .. ಕರೆದು: **ಜಗನ್ನಾವಿ,** ೩. ೨೨ ವ); ಸಿಂಹಗರ್ಜನೆ (ವಿಷಮುಂ ಸಿಂಹಸ್ವರಮುಂ ಕ್ಷ್ವೇಡಾಮಕಂಗಳ್: **ಅಭಿಧಾವ,** ೨. ೧. ೬೯)

**ಕ್ಷ್ವೇಳ** – ಕ್ಷ್ವೇಡ, ವಿಷ (ಪರಿಪೂಜ್ಯಂ ಕ್ಷ್ವೇಳಭೋಜ್ಯಂ ನಿಗಮತತಿಗಸಾಧ್ಯಂ: **ಉದ್ಭಟಕಾ,** ೧೨. ೧೩೬)

# ಖ

**ಖ** – ಆಕಾಶ (ಸುರಸರಣಿ ವಿಷ್ಣುಪದಂ ಅಂಬರಮ ವಿಯತ್ ಖ ವಿಹಾಯಸಂ ಗಗನಂ ಪುಷ್ಕರಂ ಆಕಾಶಂ ನಭಂ ಅಂತರಿಕ್ಷಂ ಅಂಭೋದಮಾರ್ಗಂ ಅಭ್ರಂ ವ್ಯೋಮಂ: **ಅಭಿಧಾವ,** ೧. ೧. ೫೭); ಇಂದ್ರಿಯ (ಖಂ ಇಂದ್ರಿಯ ಸ್ಪರ್ಶ ರೂಪ ರಸ ಗಂಧ ಶಬ್ದ ವಿಷಯಪ್ರವರಂ: **ಅಭಿಧಾವ,** ೧. ೧೨. ೨೩)

**ಖಂಜ** – ಕುಂಟ (ಪ್ರವೃತ್ತ ಖಂಜ ಮೂಕ ಕುಬ್ಜ ವಾಮನ ಕಿರಾತಜನಪುರಸ್ಸರಮುಂ .. .. ಎನಿಸಿದ ರಾಜಪರಿವಾರಮುಂ .. .. ಬರೆವರೆ (**ಕಾದಂಬ,** ೨. ೧೧೫ ವ)

**ಖಂಜನ** – ಗೀಜುಗ ಪಕ್ಷಿ (ಸಲಕ್ಷಣಸಂದರ್ಯಸ್ತ್ರೀಜನ ನೇತ್ರಚಾಂಚಲ್ಯೋಪಮೆಗೆ ಬಣ್ಣಿಸಲ್ ಯೋಗ್ಯಮಪ್ಪ ಖಂಜನಪುಂಜಮುಂ: **ಪಂಚತಂತ್ರ,** ೩೨೦ ವ)

**ಖಂಡ** – ತುಂಡು (ರತ್ನಕಂಬಳಮಗಳಂ ಕೊಂಡೋರ್ ಒಂದಱಿೊಳಂ ನಾಲ್ಕು ಖಂಡಮಾಗೆ ಮೂವತ್ತೆರಡು ಖಂಡಂಗಳಂ ಮಾಡಿ ಸೊಸೆವಿರ್ಗೆ ಪಚ್ಚುಗೊಟ್ಟೊಡೆ: **ವಡ್ಡಾರಾ,** ಪು ೨೫ ಸಾ ೨೮); ಗುಂಪು, ಸಮೂಹ (ನಾಗರ ಖಂಡಂಗಳಂ ಆ ನಾಗರ ಖಂಡದೊಳೆ ತೊಡರೆ ನರಂ ಇಸುವುದುಂ ನಾಗರ ಖಂಡಂಗಳುಮಂ ನಾಗರ ಖಂಡಮುಮಂ ಅಳುರ್ದುಕೊಂಡಂ ದಹನಂ: **ಪಂಪಭಾ,** ೮೯)

**ಖಂಡನೀಯ** – ಕತ್ತರಿಸಲು ಶಕ್ಯವಾದ; ಒಡೆಯುವುದು ಅಲ್ಪದಶನಮಾತ್ರಖಂಡನೀಯ ಮಂಡಕಮುಮಂ: **ಆದಿಪು,** ೧೧. ೨೬ ವ)

**ಖಂಡಪರಶು** – ಪರಮೇಶ್ವರ (ಎಲೆ ಖಂಡಪರಶುವೆ ಕೇಳ್ ಸದಾಚಾರ ನಿಯತಾಚಾರ ಗಣಾಚಾರಂ ಎಂದು ಆಚಾರತ್ರಯಂಗಳ್: **ತ್ರಿಷಷ್ಟಿಪು,** ೨೨. ೪ ವ)

**ಖಂಡಪ್ರಾಸ** – ಆದಿಪ್ರಾಸ (ದೇಸಿಯನೆ ನಿಱಿಸಿ ಖಂಡಪ್ರಾಸಮಂ ಅತಿಶಯಮಿದೆಂದು ಯತಿಯಂ ಮಿಕ್ಕರ್: **ಕವಿರಾಮಾ,** ೧. ೭೫)

**ಖಂಡುಗ** – ಒಂದು ಅಳತೆ (ಪಿಂಡಿಯಂ ಬಿಡಿಸವೋದ ಮರುಳ್ ಖಂಡುಗ ಎಣ್ಣೆಯನಾಂತು ಬಂದುದು ಎಂಬ ನಾಣ್ಣುಡಿಯಂತೆ: **ಧರ್ಮಾಮೃ,** ೫. ೫೦ ವ)

**ಖಂಡೆಯ** – ಒಂದು ಆಯುಧ (ತನತೊಪ್ಪುವ ಖಂಡೆಯ ರಾಯನೆನಿಪ್ಪ ಅಭಿದಾನಮಂ ದಿಟಂ ಪ್ರಕಟಿಪವೋಲ್: **ಕುಸುಮಾಕಾ,** ೭. ೬೭)

**ಖಂಡೇಂದುಧರ** – ಅರ್ಧಚಂದ್ರನನ್ನು ಧರಿಸಿದವನು, ಶಿವ (ಖಂಡೇಂದದುಧರನನರ್ಚಿಸಿ ಇಂಡೆಗಳುಚ್ಚಳಿಸಿ ಕೆಯ್ಗೆ ಬಾರದೊಡೆ ಮಂಡೆಯನಱಿದೇಱಿಸುವಂ: **ಸಮಯಪ,** ೯. ೩೮)

**ಖಂದ** – ಕಂದ[ಪದ್ಯ] (ಉತ್ಕಳಿಕೆ ಚೂರ್ಣಿಕೆ ಲತಿಕೆ ಖಂದಂ ವೃತ್ತಗಂಧಿ ಚಿತ್ರಮೆಂಬ ಗದ್ಯ[?]ಬಂಧದೊಳಂ: **ಅನಂತಪು,** ೧೦. ೩೦ ವ)

**ಖಗ** – ಆಗಸದಲ್ಲಿ ಚರಿಸುವುದು, ಪಕ್ಷಿ (ಖಗಂ ಅಂಡಜಂ ಪತತ್ರಿ ಪತಂಗಂ ವಿಕಿರಂ ಪಕ್ಷಿ: **ಅಭಿಧಾವ,** ೧. ೯. ೯); ಬಾಣ (ಶಿಲೀಮುಖ ಕಂಕಪತ್ರ ಮಾರ್ಗಣ ಖಗ ಬಾಣ ಶರೇಷು ಸಂಜ್ಞಮಱಿಗೆ ಅಂಬು: **ಅಭಿಧಾವ,** ೧. ೧೪. ೧೮); ಖೇಚರ (ಅಗಸೂದನನೆಚ್ಚ ಮಹೋರಗಶರಮಂ .. .. ಖಗರಚ್ಚರಿವಡೆ ತಱಿದಂ ಖಗಪತಿ ಖಗದಿಂ ಖಗೇಂದ್ರವಾಹನನೆಡೆಯೊಳ್: **ಜಗನ್ನಾವಿ,** ೧೩. ೧೦೩); ಸೂರ್ಯ (ರವಿ ಮಾರ್ತಂಡಂ ಪತಂಗಂ ತಪಿ ತಪಂ ಇನಂ ಪೂಷಂ ಸಹಸ್ರಾಂಶು ವಿವಸ್ವಂತಂ ಖಗಂ ಭಾಸ್ಕರಂ ಅಹಿಮಕರಂ ಸೂರ್ಯಂ: **ಅಭಿಧಾವ,** ೧. ೧. ೬೮); ನಕ್ಷತ್ರ (ಪೆರ್ಬಳುವಂ ಕಾನನವಹ್ನಿ ನುಂಗೆ ಖಗಮಂ ಚಕ್ರಾಂಶುಗಳ್ ನುಂಗೆ ಕಣ್ಗೊಳಿಪ ಏಣಬ್ರಜಮಂ ಮಾರಕರಾಳೀ ನುಂಗೆ: **ತ್ರಿಷಷ್ಟಿಪು,** ೧೨. ೭)

**ಖಗಕುಳ** – ಪಕ್ಷಿಸಮೂಹ (ಭೂತಿಳಕನಂ ಆ ಖಗಕುಳಕಲಂಕೆ ವಿದ್ಯೆಯೊಳೆ ಮಾಡಿದಳ್ ಕುರವಕಮಂ: **ಲೀಲಾವತಿ,** ೧೪. ೧೧೭)

**ಖಗನಗ** – [ಜೈನ] ಖೇಚರರು ವಾಸಿಸುವ ಪರ್ವತ, ವಿಜಯಾರ್ಧಪರ್ವತ (ಕಲ್ಲೆನ್ನದೆ ಬೆಳೆದ ಪಸುರ್ವುಲ್ಲೆಂದು ಆಸೆಯೊಳ್ ಸಾರ್ದು ಮರಕತದ ಒಡ್ಡುಂಗಲ್ಲನೆ ಕಾರ್ದು ಮೃಗಂಗಳ್ ಕಲ್ಲನೆ ಕನಲುತ್ತುಮಿರ್ಪುವು ಆ ಖಗನಗದೊಳ್: **ಅಜಿತಪು,** ೯. ೨೩)

**ಖಗಪತಿಖಗ** – ಗರುಡಾಸ್ತ್ರ (ಮಹೋರಗಶರಮಂ .. .. ತಱಿದಂ ಖಗಪತಿಖಗದಿಂ ಖಗೇಂದ್ರವಾಹನನೆಡೆಯೊಳ್: **ಜಗನ್ನಾವಿ,** ೧೩. ೧೦೩)

**ಖಗಬಂಧ** – ಹಕ್ಕಿಗಳನ್ನು ಹಿಡಿಯುವ ಬಲೆ (ಜಾಳಂ ಖಗಬಂಧಂ: **ಅಭಿಧಾವ,** ೧. ೧೦. ೩೫)

**ಖಗರಾಜ** – ಗರುಡ (ಜಗದೊಳ್ ಪತಿಹಿತದೆಡೆಯೊಳ್ ನೆಗಟ್ದಿ ಇನಜನಿಂ ಏಕದಂತನಿಂ ಪವನಜನಿಂ ಖಗರಾಜನಿಂ ದುರ್ಗಂ ದ್ವಿಗುಣಂ ತ್ರಿಗುಣಂ ಚತುರ್ಗುಣಂ ಪಂಚಗುಣಂ: **ಪಂಚತಂತ್ರ,** ೫೫)

**ಖಗರಾಜಾಸ್ತ್ರ** – ಗರುಡಾಸ್ತ್ರ (ಅತಿವಿಷೋಗ್ರಾಸ್ತ್ರಮಂ ಖಗರಾಜಾಸ್ತ್ರನಿಪಾತದಿಂ ಕಿಡಿಸಿ: **ಪಂಪರಾ,** ೧೪. ೨೦)

**ಖಗರಾಜೇಂದ್ರ** – ಖೇಚರರ ಒಡೆಯ (ಖಗರಾಜೇಂದ್ರ ರುಂದ್ರ ಘಟೆಗಂದೆಚ್ಚಂಬುಗಳ್: **ಶಾಂತಿಪು,** ೪. ೨೧)

**ಖಗಾದ್ರಿ** – ಖಗನಗ (ನೆಗಟ್ದಮರನಗೇಂದ್ರನಾದಿಗಿಭೇಂದ್ರಂ ಪೊರ್ದಿದಲ್ಲಿ ಸುರತೂರ್ಯರವಂ ನೆಗಟ್ವೆನೆಗಂ ಕನಕಾದ್ರಿಗೆ ಖಗಾದ್ರಿ ಸಂತಸದೆ ಬಿರ್ದುವಂದಂತಿರ್ಕುಂ: **ಅಜಿತಪು,** ೪. ೨೬)

**ಖಗೇಂದ್ರವಾಹನ** – ಗರುಡನನ್ನು ವಾಹನವನ್ನಾಗಿ ಉಳ್ಳವನು, ವಿಷ್ಣು (ಖಗರಚ್ಚರಿವಡೆ ತಱಿದಂ ಖಗದಿಂ ಖಗೇಂದ್ರವಾಹನನೆಡೆಯೊಳ್: **ಜಗನ್ನಾವಿ,** ೧೩. ೧೦೩)

**ಖಚರ** – ಖೇಚರ (ಅವಯವಮೆ ನಾದಜೂದೆನೆ ದಿವಿಜೋರಗ ಖಚರವಧುಗಳಂ ಗೆಲ್ದೊಡೆ ಅವರರ್ಕಿವುಗೆಲ್ಲದ ರೇಖೆಗಳೆನೆ ಕುವಲಯನೇತ್ರೆಯ ವಳಿತ್ರಯಂ ಸೊಗಯಿಸುಗುಂ: **ಮಲ್ಲಿನಾಪು,** ೩. ೪೯)

**ಖಚರಿ** – ದೇವಾಂಗನೆ (ಲಸತ್ ಜಲಕಣಮಂ ಅಮಳಮುಕ್ತಾಫಳಮೆಂದು ಉಱೆ ಮುಗ್ಧ ಖಚರಿಯರ್ ಕೈಯಿಡುವರ್: **ರಾಜಶೇವಿ,** ೧. ೯೩)

**ಖಚಿಯಿಸು** – ಕುಂದಣಿಸು (ಮುಖಾಗ್ರಪ್ರಚುರ ಶ್ರೀಬಿಸಲತೆಯನೆ ಖಚಿಯಿಸಿದವೊಲಿಕ್ಕೆ ಹಾರಮೆಸೆದುದು ಕೊರಲೊಳ್: **ಪುಷ್ಪದಂಪು,** ೮. ೫೭)

**ಖಜಕ** – ಕಡೆಗೋಲು (ಮಂಥಣಿ ಗರ್ಗರಿ ಕಡೆಗೋಲ್ ಮಂಥಾನ ಮಂತು ಅವಂತೆಲ್ಲಂ ಖಜಕಂ: **ಅಭಿಧಾವ,** ೧. ೧೦. ೩೧)

**ಖಜಿಕಾ[ಕೆ]** – ಸೌಟು (ತದ್ರು ತಾಂ ದರ್ವಿ ದಾರುಹಸ್ತಕಮೆನಿಪ್ಪುದದು ಖಜಿಕಾಖ್ಯಂ: **ಅಭಿಧಾವ,** ೧. ೧೦. ೩೩)

**ಖಜ್ಜಯ** – ಕಜ್ಜಾಯ (ತಿಂಬರ್ ಖಜ್ಜಯಮಂ ಶೀತಾಂಬುಗಳಂ ಕುಡಿವರ್ ಅಱಿತಮಿಲ್ಲದ ಶೈವರ್: **ಸಮಯಪ,** ೧೪. ೯)

**ಖಟ್ವಾಂಗ** – ತುದಿಯಲ್ಲಿ ತಲೆಯುಳ್ಳ ಶಿವನ ಆಯುಧ (ಖಟ್ವಾಂಗ ಭಯಂಕರಶೂಲ ಶಕ್ತಿ ಡಮರುಗ ರುದ್ರಾಕ್ಷ .. .. ಉಳ್ಳವಂ ಸದಾಶಿವನಲ್ಲಂ: **ಸಮಯಪ,** ೮. ೨೨); ಶಿಂಶು ಎಂಬ ಮರ (ಶಿಂಶುವಾಭಿಖ್ಯಂ ಖಟ್ವಾಂಗಂ: **ಅಭಿಧಾವ,** ೧. ೧. ೮. ೧೭)

**ಖಟ್ವಾಂಗಧರ** – ಶಿವ (ಗಂಗಾಧರಂ ಕಪಾಳಧರಂ .. .. ಖಟ್ವಾಂಗಧರಂ: ಅಭಿಧಾವ, ೧. ೧. ೧೪)

**ಖಡ್ಗ** – ಕತ್ತಿ (ಅಸಿ ಖಡ್ಗ ಬಾಳ್: **ಅಭಿಧಾವ,** ೧. ೧೪. ೧೬)

**ಖಡ್ಗಧೇನುಕ** – ಕಿರುಗತ್ತಿ, ಸುರಗಿ (ಗುಪ್ತಗುಲ್ಮಾಂತರಪ್ರಾಪ್ತ ಖಡ್ಗಧೇನುಕಮಾಂಧ್ರದಾನುಷ್ಕಬಳಂ: **ಆದಿಪು,** ೧೩. ೪೫ ವ)

**ಖಡ್ಗಪಿಧಾನ** – ಕತ್ತಿಯ ಒರೆ (ಕೋಶಂ ಖಡ್ಗಪಿಧಾನಂ: **ಅಭಿಧಾವ,** ೩. ೧. ೧೦೦)

**ಖಡ್ಗರತ್ನ** – [ಜೈನ] ಚಕ್ರವರ್ತಿಗಳಿಗೆ ಸಹಜವಾಗಿ ಒದಗುವ ಏಳು ಜೀವರತ್ನಗಳಲ್ಲಿ ಒಂದು (ಜವನ ನಾಲಗೆಯ ಪೋಲ್ವೆಯಾದ ಸೌಗಂಧಕಮೆಂಬ ಖಡ್ಗರತ್ನಮುಂ: **ಚಂದ್ರಪ್ರಪು,** ೬. ೧೦೧ ವ)

**ಖಡ್ಗಾಂಶು** – ಕತ್ತಿಯ ಹೊಳಪು (ಧರೆಯಂ ಖಡ್ಗಾಂಶುಜಾಲಂ ಬೆಳಗೆ: **ಚಂದ್ರಪ್ರಪು,** ೧೦. ೫೪)

**ಖಡ್ಗಾಖಡ್ಗಿ** – ಕತ್ತಿ ಹಾಗೂ ಯುದ್ಧ (ಖಡ್ಗದಿಂ ಖಡ್ಗದಿಂ ಮಾಡುವುದಾವೊಂದು ಯುದ್ಧಂ ಅದು ಖಡ್ಗಾಖಡ್ಗಿ: **ಶಬ್ದಮದ,** ೧೯೬ ಪ್ರ)

**ಖಡ್ಗಿ** – ಖಡ್ಗಮೃಗ (ಇಭಖಡ್ಗಿವ್ರಾತ ನಾನಾ ಹರಿಮಯ ಕಟಕಭ್ರಾಂಜಿತ ತುಂಗವಂಶಪ್ರಭವಂ: **ಆದಿಪು,** ೧೩. ೪೬)

**ಖದಿರ** – ಕಗ್ಗಲಿ ಮರ, ಕಾಚಿನ ಮರ (ಪಾಲಾಶ ಅಶ್ವತ್ಥ ಅರ್ಕ ಔದುಂಬರ ನ್ಯಗ್ರೋಧ ಶಮಿ ಅಪಾಮಾರ್ಗ ಖದಿರ ಆದಿ ಶುಷ್ಕಸಮಿತ್ತುಗಳುಮಂ ಕುಶ ಅಶ್ವಲಾಯನ ವಿಶ್ವಾಮಿತ್ರಾದಿ ದೂರ್ವಾಂಕುರಪವಿತ್ರವಸ್ತುಗಳುಮಂ ಕೊಂಡು: **ಪಂಚತಂತ್ರ,** ೧೯೦ ವ)

**ಖದಿರು** – ಖದಿರ (ಬಿದಿರುಮಂ ಖದಿರುಮಂ ಬೆತ್ತಮುಮಂ ಮುತ್ತಮುಮಂ ಬಳ್ಳಿಯುಮಂ ಕಳ್ಳಿಯುಮಂ ಕಳೆದು ಪೋಗಿ: **ಲೀಲಾವತಿ,** ೬. ೧೬ ವ)

**ಖದಿರಗುಳಿಕೆ** – ಕಾಚಿನ ಗುಳಿಗೆ (ಮೃಗಮದಖದಿರಗುಳಿಕಾ ಬಹಳಕರ್ಪೂರಪಾಳೀಸಂಮಿಶ್ರತಾಂಬೂಲದ್ವಿಗುಣಿತವದನಾರವಿಂದಾಮೋದನುಮಾಗಿ: **ಆದಿಪು,** ೧೧. ೨೭ ವ)

**ಖದ್ಯೋತ** – ಸೂರ್ಯ (ದೇವರನುಂ ಬೋಧಿಪೊಡೆ ಅಳ್ಕಱೊಳ್ ನೆರೆಯದೇ ಖದ್ಯೋತಮುದ್ಯೋತಮಂ: **ಅನಂತಪು,** ೯. ೫೩); ಮಿಣುಕು ಹುಳು (ಸಮಸ್ತ ಉರ್ವೀಧರ ಅಶೇಷ ಶೇಷ ಮಹಾನಾಗಫಣಾಮಣಿ ದ್ಯುತಿಯನೇಂ ಖದ್ಯೋತದೊಳ್ ಕಾಣ್ಬರೇ: **ಪಂಪಭಾ,** ೫. ೭೬)

**ಖನನ** – ತೋಡುವಿಕೆ, ಅಗೆತ (ಎನಗೆ ಇಂದಿಂಗೆ ಆಱುತಿಂಗಳ್ ಸಮನಿಸಿದಪುದಿಲ್ಲ ಎಲ್ಲಿಯುಂ ಬಂದಿಮಂಚಲ್ ಖನನಪ್ರಾರಂಭ ಚೌರ್ಯಾದಿಗಳ್ ಅನಶನಂ ಈಗಳ್ ಚತುರ್ವಾಸರಂ **ಸುಕುಮಾಚ,** ೭. ೧೮); ಕನ್ನ ಕೊರೆಯುವುದು (ಇಲ್ಲೆಲ್ಲಿಯುಂ ಬಂದಿ ಮಂಚಲ್ ಖನನ ಪ್ರಾರಂಭ ಚೌರ್ಯಾದಿಗಳ್: **ಸುಕುಮಾಚ,** ೭. ೧೮)

**ಖನಿ** – ಗಣಿ; ಮಿಂಚು (ಪುಳಿಗರ್ಚಿದ ಪಳಿಕಿನ ಪುತ್ತಳಿ ಕಪ್ಪುರದೊಪ್ಪ ಸಲಗೆಯಿಂ ಖನಿಮಿನುಕಂ ತಳೆದಂತಿರೆ ಪರಿಜಂ ಕಣ್ಗೊಳಿಸಿದುದು ಆ ಕಾಂತೆ ತಳೆದ ಬೆಳ್ವಸದನದೊಳ್: **ಶಾಂತೀಶ್ವಪು,** ೧೪. ೧೬)

**ಖನಿತ್ರ** – ಗುದ್ದಲಿ (ಪರಿಹರಿಸುತ್ತೆ ಸಂಶಯವಿಮೋಹನ ವಿಭ್ರಮಮಂ ಸ್ವಕೀಯ ವಾಕ್‌ಸ್ಫುರಿತ ಖನಿತ್ರದಿಂ: **ಪಾರ್ಶ್ವನಾಪು,** ೫. ೩೫)

**ಖಪುಷ್ಪ** – ಆಕಾಶದ ಹೂವು, ಗಗನ ಕುಸುಮ, ಅಸಂಭವ (ಇವರಜೆಯದ ಕಳೆ ಭಾವಿಸೆ ಭುವನಾಂತರಾಳದೊಳ್ ಖಪುಷ್ಪ ವಂಧ್ಯಾಗ್ರತನೂಭವಂ ಖರವಿಷಾಣನಿಭಂ: **ಆಚವರ್ಧ,** ೩. ೩೪)

**ಖಮ್ಮರಿ** – ಮಲ್ಲಯುದ್ಧದ ಒಂದು ಪಟ್ಟು (ಖಮ್ಮರಿ ಕತ್ತರಿ ಖೋಡವಂಕುಶಂ ಸಸಿಕುವೆನಿಪ್ಪ ಜೆಟ್ಟಿಗನ ನಚ್ಚಿನ ಬಿನ್ನಣಮೊಪ್ಪೆ ಕಾದಿದರ್: **ಚಂದ್ರಪ್ರಪು,** ೫. ೭೮)

**ಖರ** – ತೀಕ್ಷ್ಣವಾದ (ಭರತನ ಮುಖದೊಳ್ ಪರ್ವಿದ ಖರಕೋಪಾನಳನನೆಯ್ದೆ ನಂದಿಸುವವೊಲ್: **ಆದಿಪು,** ೧೪. ೧೦೭); ಹೇಸರಗತ್ತೆ (ಪರಿಗಳಿತ ಪೂತಿಗಂಧರ್ ಖರ ಕಾಕ ಸೃಗಾಲ ಕರಭ ಕೌಶಿಕ ವೃಕ ವಾನರ ವಿಷದಂಷ್ಟ್ರೋತ್ಕರ ಕುರ್ಕುರ ಕೀಟಕ ಭಲ್ಲನಿಕರ ನಿಷ್ಠುರನಿನದರ್: **ಶಾಂತೀಶ್ವಪು,** ೯. ೧೦೬)

**ಖರಕರ** – ತೀಕ್ಷ್ಣಕಿರಣ[ಗಳುಳ್ಳವನು] ಸೂರ್ಯ (ಖರಕರಸಮಪ್ರಭಂ ಚಕ್ರರತ್ನಂ ಒಡವುಟ್ಟಿ ಪುಟ್ಟಿದೆರಡೊಸಗೆಯೊಳಂ: **ಆದಿಪು,** ೩. ೨೭)

**ಖರಕಿರಣ** – ಸೂರ್ಯ (ಖರಕಿರಣಸ್ಫುರಿತಕ್ಕಿದಿರುರಿವಂತಿರೆ ಸಾಮದಿಂದಳವಡಿಸಿ ನೋಡುವೆಂ: **ಆದಿಪು,** ೧೪. ೪೨)

**ಖರಖುರ** – ಗಟ್ಟಿಯಾದ ಗೊರಸು (ಖರಖುರಹತಿಯಿಂ ಖರಮಂ ಕರಭಂಗಳನಟ್ಟಿ ಮುಟ್ಟಿ: **ಪಂಪರಾ,** ೪. ೧೦೯)

**ಖರತನ** – ತೀಕ್ಷ್ಣತೆ, ಉಗ್ರತೆ (ಖರಕಿರಣಂಗಳ ಕಾಯ್ಪಿನ ಖರತನದಿಂ ಚಂದ್ರಕಿರಣದುಜ್ವಳಿಕೆಯಿಂ: **ಆದಿಪು,** ೧೧. ೭)

**ಖರತಾ** – ಉಗ್ರತೆ (ಲಯಶಂಕಾಶಕಟಾಪಕಾರಿ ಖರತಾ ಚಕ್ರೀವಜೀವಾಪಹಂ .. .. ಶ್ರೀಗಂಡ ಗೋಪಾಳನಾ: **ನೇಮಿನಾಪು,** ೭. ೯೩)

**ಖರದಂಡ** – ಒರಟಾದ ದಂಟಿರುವುದು, ತಾವರೆ (ಕೆಸಱೊಳ್ ಪುಟ್ಟಿದುದು .. .. ಮಧುಪಪ್ರಸಂಗಿ ಖರದಂಡಂ ಮತ್ತೆನುತಬ್ಜಮಂ ಬಿಸುಟು: **ಜಗನ್ನಾವಿ,** ೧. ೩)

**ಖರದಂಡಪ್ರಿಯ** – ಕಮಲಗಳಿಗೆ ಪ್ರಿಯನಾದವನು, ಸೂರ್ಯ (ಖರಕರನಂತೆ ಖರದಂಡಪ್ರಿಯರುಂ ಉದಧಿಯಂತೆ ಜಡಸ್ವಭಾವರುಂ: **ಸುಕುಮಾಚ,** ೨. ೫ ವ)

**ಖರಪರುಷ** – ಕತ್ತೆಯ ದನಿಯಂತೆ ಕರ್ಕಶವಾದ (ಖರಪರುಷನಿನಾದರ್ ನಾರಕರ್ ಬರ್ದುತಿರ್ಪರ್: **ಆದಿಪು,** ೫. ೮೯)

**ಖರವಿಷಾಣ** – ಕತ್ತೆಯ ಕೊಂಬು, ಅಸಂಭವ (ಜೀವಮೆಂಬುದುಂ ಅಂಬರಕುಸುಮ ಸಮಾನಮುಂ ಪರಲೋಕಮೆಂಬುದು ಖರವಿಷಾಣ ನಿರ್ವಿಶೇಷಂಗಳುಂ: **ಶಾಂತಿಪು,** ೮. ೧೩೨ ವ)

**ಖರಶಾಣ** – ಮಸೆಗಲ್ಲು, ರತ್ನಗಳ ಸಾಣೆ ಕಲ್ಲು (ಖರಶಾಣಕಷಣದಿಂ ಮಣಿಗುರುತೇಜೋವೃತ್ತಿ ನೆಗಟ್ವವೋಲ್: **ಚಂದ್ರಪ್ರಪು,** ೧. ೪೪)

**ಖರಸಾಣೆ** – ಸಾಣೆ ಹಿಡಿ (ಮದನಾಸ್ತ್ರಂ ಖರಸಾಣೆಗಾಣಿಸಿದುದು ಎಂಬಂತಾಗೆ ನಿನ್ನೊಂದು ಕಂದಿದ ಮೆಯ್ ಎನ್ನಯ ತೋಳೊಳೊಂದೆ ಸಿರಿಯಂ ನೀನುಯ್ದು ತೊಟ್ಟಿತ್ತಳ್ದ ರಾಗದಿಂ ಎನ್ನೊಳ್ ಸುಕಮಿರ್ಪುದು: **ಪಂಪಭಾ,** ೮. ೬೬)

**ಖರಾಂಶು** – ಖರಕರ (ಬೇಸಱಿ ಲೋಕಮಂ ತಗುಳ್ದು ಸುಟ್ಟ ಅಟಲಿಂದೆ ಖರಾಂಶು ನಾರಕಾವಾಸದೊಳ್ ಆಟ್ಟವೋಲ್ ಅಪರವಾರ್ಧಿಯೊಳ್ ಆಟ್ಟುದುಂ: **ಪಂಪಭಾ,** ೩. ೮೧)

**ಖರ್ಪರ** – ಕಪಾಲ, ತಲೆಬುರುಡೆ (ಮೇಲಿಕ್ಕಿದ ಘನತರ ಖರ್ಪರದ ತೆಱದಿನಿರ್ದುದು ಗಗನಂ: **ತ್ರಿಷಷ್ಟಿಪು,** ೨೪. ೨೨೩); ಆಮೆಯ ಚಿಪ್ಪು (ಕೂರ್ಮನ ಖರ್ಪರದೆಲ್ವು ನುರ್ಗಿ ಬೆನ್ನೋಗುಟೆದತ್ತು: **ಪುಷ್ಪದಂಪು,** ೫. ೩೬)

**ಖರ್ವ** – ಕುಬ್ಜ (ಖರ್ವಂ ಕುಬ್ಜಂ ಆನತಂ: **ಅಭಿಧಾವ,** ೨. ೧. ೩೭)

**ಖರ್ವಟ** – ಕೋಟೆಯಿರುವ ಊರು (ವಿವಿಧ ಗ್ರಾಮಂಗಳಂ ಪಟ್ಟಣಂಗಳಂ ಖೇಡಂಗಳಂ ಖರ್ವಟಂಗಳಂ ದಾಂಟಿ: **ಉದ್ಭಟಕಾ,** ೨. ೩೩ ವ)

**ಖರ್ವಡ** – ಖರ್ವಟ, ನಗರ–ಹಳ್ಳಿಗಳ ನಡುವಣ ಸ್ಥಿತಿಯ ಮತ್ತು ಬೆಟ್ಟಗಳ ನಡುವಿರುವ ಊರು (ಉರ್ವೀಧರನಿರುದ್ಧಂಗಳಪ್ಪ ಖರ್ವಡಂಗಳುಮಂ: **ಆದಿಪು,** ೮. ೬೩ ವ)

**ಖರ್ವಿತ** – ನೆಗ್ಗಿದ, ಅಗೆದ (ಮತ್ತ ಮಾತಂಗ ಪದನಖ ಖರ್ವಿತ ಉರ್ವೀತಳಮುಂ ಪ್ರಚಂಡ ಮಾರ್ತಂಡ ಮರೀಚಿ ತೀವ್ರ ಜ್ವಳನ ಆಸ್ಫಾರ ಕರಾಳ ಕರವಾಳ ಭಾಮಂಡಳ ಪರೀತ ಉದ್ಯತ ದೋರ್ದಂಡ ಚಂಡಪ್ರಚಂಡ ಸುಭಟ: **ಪಂಪಭಾ,** ೧೩. ೫೧)

**ಖಲ** – ನೀಚ (ಕಂಡಱೆದುಂ ಕೇಳ್ದಱೆದುಂ ಮಾನ್ಯರನೆ ಖಲನುಮೇಂ ಮನ್ನಿಸನೇ: **ಶಾಂತಿಪು,** ೨. ೭೬)

**ಖಲನ್ಯಾಯ** – ಕೆಟ್ಟ ನಡತೆ (ಖಲನ್ಯಾಯಮನಾರಯ್ದು ನೋಡಿಕೊಳ್ಳಿಂ ನಿಮ್ಮೊಳ್: **ಪಂಪರಾ,** ೧೧. ೧೩೮)

**ಖಲೀನ** – ಕಡಿವಾಣ (ಖಣಖಣಾಯಿತ ಲೀನಸಂಘಟ್ಟ ಸ್ಕಂದಮಾನ ಫೇನ ಸಲಿಲಸ್ರೋತಶ್ಶತಂಗಳಿಂದಂ: **ಆದಿಪು,** ೧೪. ೯೫ ವ)

**ಖಲ್ಲಾಯಿತ** – ಚರ್ಮದ ನೀರಿನ ಚೀಲದಲ್ಲಿ ನೀರನ್ನು ತುಂಬಿ ಸಾಗಿಸುವವನು ಪಸರಿಸಿದ (ಕುಸುಮದೆಸಟ ಕಸವರಂ ದೆಸೆದೆಸೆಗೆ ಮಸುಳೆ ಮಲಯಾನಿಳಂ ಬೀಸಿ ಕಳೆಯೆ ತ್ರಿಕಾಲದೊಳಂ ಖಲ್ಲಾಯಿತನಂತೆ ಗಂಗಾಜಲಮಂ ತಂದು ತಳಿವ ಬೆಳ್ಮುಗಿಲ್ಗಳುಮಂ: **ಪಂಚತಂತ್ರ,** ೧೯೦ ವ)

**ಖಲ್ವಬಿಲ್ವ ಸಂಯೋಗ** – ಖಲ್ವಾಟ ಬಿಲ್ವೀಯ ನ್ಯಾಯದ ಸಂಕ್ಷಿಪ್ತ ರೂಪ [ಬೋಳುತಲೆಯವನು ತನ್ನ ಪಾಡಿಗೆ ತಾನು ಹೋಗುತ್ತಿರುವಾಗ ಅವನ ತಲೆಯ ಮೇಲೆ ಬಿಲ್ವದ ಕಾಯಿ ಬಿದ್ದಂತೆ; ಅರ್ಥಾತ್ ಭಾಗ್ಯಹೀನನು ಎಲ್ಲಿಗೆ ಹೋದರೂ ವಿಪತ್ತು ಕಾದಿರುತ್ತದೆ] (ಕರ್ಮವಶದಿಂ ಖಲ್ವಬಿಲ್ವ ಸಂಯೋಗದಂತೆ ಪೊಟಲೊಳಗೆ ತೊಟಲ್ವರಸನ ತಳಾಱರ್ ಓಡುವ ಮಾಯಾವಿಯ ಕೈಯೊಳಗಬಾಲಾರ್ಕನಂತೆ ಪ್ರಜ್ವಿಸುವ ರತ್ನದ ಬೆಳಗಂ ಕಂಡು ಕಳಕಳರವಮಂ ಮಾಡುವುದುಂ: **ಧರ್ಮಾಮೃ,** ೬. ೫೩ ವ)

**ಖಲ್ವಬಿಲ್ವಸಮುಯುಕ್ತಿ** – ಕಾಕತಾಳನ್ಯಾಯ (ಖಲ್ವಬಿಲ್ವಸಮಯುಕ್ತಿ ಕಾಕತಾಳನ್ಯಾಯಂ: **ಅಭಿಧಾವ,** ೨. ೨. ೩೩)

**ಖಳಕರ್ಮಾಷ್ಟಕ** – [ಜೈನ] ಎಂಟು ಬಗೆಯ ದುಷ್ಟಕರ್ಮಗಳಲ್ಲಿ ಒಂದು (ಖಳಕರ್ಮಾಷ್ಟಕಮಂ ಪಡಲ್ವಡಿಸಿ: **ಆದಿಪು,** ೧೬. ೫೫)

**ಖಳನ್ಯಾಯ** – ಸಂಗ್ರಹ ನೀತಿ (ಖಳನ್ಯಾಯದಿನೆಲ್ಲಮಂ ನೆಱೆಯೆ ಕಲ್ತು ಉಪದೇಶಕನಾಗು ಲೋಕದೊಳ್: **ಕಾವ್ಯಾವಲೋ,** ೪೦೨)

**ಖಳಸಂಸೃತಿ** – ಕಷ್ಟಸಂಸರಣ (ಖಳಸಂಸೃತಿಯೆಂಬ ಮಹಾಜಳನಿಧಿಯೊಳಗೆ .. .. ಮುಟುಗುತ್ತಲಿರ್ಪ ಜೀವಾವಳಿಗೆಲ್ಲಂ ಯಾನಪಾತ್ರಂ ಅರ್ಹತ್‌ಪ್ರೋಕ್ತಂ: **ಸಮಯಪ,** ೩. ೨೫)

**ಖಳೂರಿಕಾ[ಕೆ]** – ಗರಡಿಯ ಮನೆ, ಶಸ್ತ್ರಾಭ್ಯಾಸಶಾಲೆ (ಪುರದ ಪೊರವೊಟಲ ಖಳೂರಿಕಾ ನಿಕಾಯಕ್ಕೆ ಬಂದು: **ಕುಸುಮಾಕಾ,** ೭. ೫೮ ವ)

**ಖಱ್ಱನೆ** – ಕಪ್ಪಾಗಿ, ಕರ್ರನೆ (ತಿಱ್ಱನೆ ತಿರಿತಂದು ಖಳಂ ಖಱ್ಱನೆ ತನು ಕುಂದಿ ಭಯವಶದಿಂದಂ: **ಧರ್ಮಾಮೃ,** ೧೨. ೧೦೧)

**ಖಟ್ಗ** – ಖಡ್ಗ, ಕತ್ತಿ (ಒಣಗಿದುದೊಂದು ಪೆರ್ವಿದಿರ ಪೆರ್ವೊದಱೆಂ ಮೊರೆದು ಉರ್ವಿದ ಆಶುಶುಕ್ಷಣಿಯವೊಲ್ ಆಂತ ಖಟ್ಗನಿವಹಕ್ಕೆ .. .. ಉರ್ಚಿಮುಕ್ಕಲುಂ ಇದೇಂ ನೆಱೆ ಕಲ್ತುವೋ: **ಪಂಪಭಾ** ಪರಿಷತ್ತು, ೧೧. ೯೪)

**ಖಟ್ಗಾಖಟ್ಗಿ** – ಖಡ್ಗಾಖಡ್ಗಿ ಚಕ್ರಾಚಕ್ರಿಯುಂ ಖಟ್ಗಾಖಟ್ಗಿಯುಮಾಗೆಯುಂ ಪೆಣೆದಿಱೆವ ಪದದೊಳ್: **ಶಾಂತಿಪು,** ೬. ೮೨ ವ)

**ಖಟ್ಗೆ** – ಖಡ್ಗಧಾರಿ, ಖಡ್ಗಮೃಗ (ಹೇಳೋನ್ಮೀಳಿತವೈರಿವರ್ಗ ವನದುರ್ಗಂ ಖಟ್ಗೆ ನಿರ್ಭಿನ್ನ ಶುಂಡಾಳಂ ನಿರ್ದಳಿತಾದ್ರಿದುರ್ಗನಿವಹಂ: **ಪಾರ್ಶ್ವನಾಪು,** ೧೧. ೪೯)

**ಖಾಂಡವ** – ಕುರುಕ್ಷೇತ್ರದ ಒಂದು ವನ ಪಾವಕನಟ್ವೆ ಖಾಂಡವವನಮನುಂಡಪಂ: **ಪಂಪಭಾ,** ೫. ೭೮)

**ಖಾಣ** – ಪ್ರಾಣಿಗಳ ಮೇವು (ವರ್ಗ ದ್ವಿತೀಯಾಕ್ಷರಂಗಳ್ಗೆ – ಖೊಪ್ಪರಂ, ಖಾಣಂ, ಖಾರಿಗೆ: **ಶಬ್ದಮದ,** ೨೫ ವೃತ್ತಿ)

**ಖಾತ** – ಕಂದಕ (ತೃಷಿತ ಪಥಿಕ ಪುಷ್ಪಾಯುಧ ಖಾತಾವಟಮೆನಲ್ ಎನಸುಂ ಕುಸುಮಾವಳಿಯ ಗಭೀರ ನಾಭಿಮಂಡಳಮೆಸೆಗುಂ: **ಕುಸುಮಾಕಾ,** ೧೨. ೫೩); ಆಳ (ದಂಡಕ ಗಿರಿಯ ಗುಹಾಗೇಹದೊಳೊಂದು ಯೋಜನದೆಂಟನೆಯ ಭಾಗಂ ಖಾತಮಾದಲ್ಲಿ ಪಾತಾಳಲಂಕೆಯೆಂಬ ಪುರಮಿರ್ಪುದು: **ಪಂಪರಾ,** ೯. ೧೬ ವ)

**ಖಾತಿಕಾ** – ಕಂದಕ, ಅಗಳು ಸರೋವರ (ಸುರಭಿತರ ಪ್ರಕೀರ್ಣ ವನರಾಜಿಗಳಿಂ ಕಮನೀಯ ಪದ್ಮಸುಂದರ ಜಲಖಾತಿಖವಳಯದಿಂ .. .. ಸೊಗಸಿಪ್ಪುದಂ .. .. ವಿರಾಟಪುರಮಂ: **ಹರಿವಂಶ,** ೧೧. ೩೨)

**ಖಾತ್ವಾಸಮೀಕರಣ** – 'ಅಗೆದು ಮುಚ್ಚುವುದು', ನಿರರ್ಥಕತೆಯನ್ನು ಸೂಚಿಸುವ ಒಂದು ಲೌಕಿಕನ್ಯಾಯ (ಈ ಧರಣೀಭಾರಮನಾಂ ಬಿಸುಟಪ್ಪೊಡದು ಚೀಃ ಲೋಕಕ್ಕೆ ಖಾತ್ವಾಸಮೀಕರಣಂ: **ಆದಿಪು,** ೪. ೮೧)

**ಖಾಸ** – ಕೆಮ್ಮು (ಗುಲ್ಮಮುಂ ವಾತಮುಂ ಶ್ವಾಸಮುಂ ಖಾಸಮುಂ ಪೊರ್ದಿದಾಗಳ್: **ಹರಿವಂಶ,** ೧೩. ೩೧ ವ)

**ಖುರ** – ಗೊರಸು (ಕುದುರೆಯ ಖುರಂಗಳನಿಸಾಟಿದೆಯುಂ ಚಕ್ರಂಗಳದ್ರ್ದು ಬಾರದೆಯುಂ: **ಆದಿಪು,** ೧೨. ೮೨)

**ಖುರಮಣಿಕೆ** – ಕುದುರೆ ಕಾಲಿಡಲು ಹಾಕಿರುವ ಮಣೆ (ಖುರಮಣಿಕೆಯೊಳ್ ಕಾಲನಿಕ್ಕಿ ಮಂದುರಿವ ಮುಂಡಿಗೆಯಂ ಮಲಂಗಿ .. .. ಕೇಯೂರಕನಿಂತೆಂದಂ: **ಕಾದಂಬ,** ೭. ೯ ವ)

**ಖುರಳಿ** – ಶಸ್ತ್ರಾಭ್ಯಾಸ (ಶಸ್ತ್ರಾಭ್ಯಾಸಮಂ ಬಿತ್ತರಿಪ ಖುರಳಿಯೊಳ್ ಸಾಧನಂಗೆಯ್ದು: **ಕುಸುಮಾಕಾ,** ೨. ೮೨)

**ಖುರಾಹತಿ** – ಗೊರಸಿನ ಪೆಟ್ಟು (ಅತಿಮಲಿನಾಮಗಮಾದ ಜಗಮಂ ಭವದೀಯ ಹಯಸ್ಫುರತ್ ಖುರಾಹತಿಯಂ .. .. ಲಯಮೆಯ್ದಿಸುವಲ್ಲಿ: **ಜಗನ್ನಾವಿ,** ೧. ೬೪)

**ಖೇಚಕ್ರ** – ಹಕ್ಕಿಗಳು ಆಕಾಶದಲ್ಲಿ ಹಾರುತ್ತ ನಿರ್ಮಿಸುವ ವರ್ತುಲ (ಕೃಷಿನಿರತನಂತೆ ರಾಸಿಯಂ ನಿಲಿಸಿ ವಿಹಗದಂತೆ *ಖೇಚಕ್ರಮಂ* ವರ್ತಿಸಿ: **ಸುಕುಮಾಚ,** ೩. ೬ ವ)

**ಖೇಚರ** – ಗಂಧರ್ವ, ವಿದ್ಯಾಧರ ಮೊದಲಾದ ಆಕಾಶಸಂಚಾರಿಗಳು (ಸುರಮುನಿ ಸಿದ್ಧ *ಖೇಚರರೊಳ್* ಆವಕುಲಂ: **ಕಾದಂಬ,** ೪. ೬೯)

**ಖೇಚರವಾರವಧು** – ದೇವಲೋಕದ ವೇಶ್ಯೆ (ಚತುರ *ಖೇಚರವಾರವಧೂ* ನಿಧಾನಮಾದಿತ್ಯಪುರಂ ಪುರಂದರಪುರಪ್ರತಿಮಂ: **ಚಂದ್ರಪ್ರಭ,** ೬. ೫)

**ಖೇಚರಿ** – ದೇವತಾ ಸ್ತ್ರೀ (*ಖೇಚರಿಯೋ* ಭೂಚರಿಯೋ ನಿಶಾಚರಿಯೋ ರೂಪು ಬಣ್ಣಿಸಲ್ಕೆ ಆರ್ಗಂ ಅವಾಗ್ಗೋಚರಂ ಈ ಕಾನನಮುಂ ಅಗೋಚರಂ ಇವಳ್ ಇಲ್ಲಿಗೇಕೆ ಬಂದಳೊ ಪೇಟಿಂ: **ಪಂಪಭಾ,** ೩. ೧೪)

**ಖೇಚರೀಜ** – *ಖೇಚರಿಯ* ಮಗ, ಭೀಷ್ಮ (ಆರಯ್ಯೆ *ಖೇಚರೀಜನ* ಅಪಾರಮಹಾದಿವ್ಯಶಸ್ತ್ರನಿಚಯಂ ಅಜೇಯಂ: **ಕರ್ಣನೇಮಿ,** ೧೨. ೯೯)

**ಖೇಟ** – ಹಳ್ಳಿ (ಗಿರಿಸರಿತ್ಸರುದ್ಧಗಳಪ್ಪ *ಖೇಟಂಗಳಿಂ*: **ಆದಿಪು.** ನರಸಿಂ, ೮. ೬೩ ವ); ಗುರಾಣಿ, ಢಾಲು (ನೀಲೋತ್ಪಲಂ ಪಾಶಂ ಉತ್ತಮ *ಖೇಟಂ* ಧನುಸ್ ಇಕ್ಷುಚಾಪವೆಡಗೆಯೊಳ್ ತೋಱೆ: **ಧರ್ಮಾಪ,** ೧. ೭)

**ಖೇಟಕ** – *ಖೇಟ*, ಗುರಾಣಿ (ಪ್ರಯತ್ನದೆ ಬಿಗಿದಿರ್ದ ಎರಟ್ಬೊಣೆ ಮಿಸುಪ್ಪ ಅಸಿ *ಖೇಟಕಂ* ಇಂತಿವು ಒಂದುಗುಂದದೆ ನಿಲೆ ನೋಟ್ಟಿ ನೋಟಕರ್ಗೆ ಸೌಮ್ಯಭಯಂಕರನಾದಂ ಅರ್ಜುನಂ: **ಪಂಪಭಾ,** ೭. ೭೯)

**ಖೇಡ** – ಎತ್ತರವಾದ ಕೋಟೆಯಿರುವ ಊರು (ನಗರ *ಖೇಡ* ಖರ್ವಡ ಮಡಂಬ ಪತ್ತನಂ ಅವೆತ್ತಲುಂ ಸುತ್ತಿಱೆಗುಂ: **ಸುಕುಮಾಚ,** ೧. ೭೫)

**ಖೇಡಕುಟಿ** – ವಿಹಾರದ ಕೊಳ (ಜಳಜಾನನೆ ಕುಟಿವೊಗೆ ಕಣ್ಗೊಳಿಸುವ *ಖೇಡಕುಟಿವೊಕ್ಕಳೆಂ*ಬಂತೆವೊಲ್: **ಪಾರ್ಶ್ವನಾಪು,** ೭. ೮೬)

**ಖೇಡನ** – ಆಟ, ಲೀಲೆ (*ಖೇಡನ* ನರ್ತನ ಹಾಸ್ಯವನಾಡಂಬರ ನಟನ ವಾದನ ಗೇಯ ಕ್ರೀಡೆಗಳಿಂ: **ಜಗನ್ನಾವಿ,** ೪. ೪೮)

**ಖೇದ** – ದುಃಖ (*ಖೇದಂ* ಮಾಣ್ಗೆ ಶುಭೋದಯಂ ಸಮನಿಕುಂ: **ಪಂಪರಾ,** ೧೦. ೮೬)

**ಖೇದಾಂಧತೆ** – ದುಃಖದಿಂದ ಕಂಗೆಡುವಿಕೆ (ಏಂ ಬಾಟ್ಟೆ ನಿನಗೆಂದಟಿಲ್ದಳ್ ತಟ್ಟುರೆ ಸತಿ ಸುಮತಿ ಕುಮತಿ *ಖೇದಾಂಧತೆಯಿಂ*; ಶಾಂತಿಪು, ೬. ೩೪)

**ಖೇಯ** – ಕಂದಕ (ಮೂವಳಸುವಳಸಿ ಸುತ್ತಿರ್ದುದು ಅಂಬೋಧಿಯೆಂಬಂತೆ ಗಭೀರಾರಾವದಿಂ ಪಲ್‌ಮೊರೆವವೊಲ್ ಎಸೆಗುಂ ಸುತ್ತಿ ಪಾನೀಯ*ಖೇಯಂ*: **ಸುಕುಮಾಚ,** ೯. ೫೭)

**ಖೇಲನ** – ಆಟ. ಕ್ರೀಡೆ (ಮತ್ತಮೊಂದು *ಖೇಲನ*ವಿಲಾಸ ವಾಸಾಂಗಣದೊಳ್ ಒರ್ವಲ್: **ಅನಂತಪು,** ೮. ೫ ವ)

**ಖೇಳೋಷಧಿ** – [ಜೈನ] ಯತಿಯ ಎಂಜಲಿನಿಂದ ರೋಗ ವಾಸಿಯಾಗುವ ಔಷಧರ್ಧಿ (ಉಗ್ರೋಗ್ರ ತಪದಿಂ ದೀಪ್ತತಪಂ ಮಹಾತಪಂ ಘೋರತಪಂ ಎಂದಿವು ಮೊದಲಾಗೊಡೆಯ ತಪಂಗಳಂ ಗೆಯ್ಯೆ ತಪದ ಮಾಹಾತ್ಮ್ಯದಿಂದಂ ಆಮೋಷಧಿ *ಖೇಳೋಷಧಿ* ಜವೋಷಧಿ ವಿಪ್ರೋಷಧಿ ಸರ್ವೋಷಧಿಯೆಂದಿವು ಮೊದಲಾಗೊಡೆಯ ಋದ್ಧಿಗಳ್ ಪುಟ್ಟಿದೊಡಂ: **ವಡ್ಡಾರಾ,** ಪು ೬೯, ಸಾ ೩)

**ಖ್ಯಾತಕರ್ಣಾಟಕ** – ಕನ್ನಡದಲ್ಲಿ ಪ್ರಖ್ಯಾತವಾದ ಆರು ಅಕ್ಷರವೃತ್ತಗಳು; ಉತ್ಪಲಮಾಲೆ, ಚಂಪಕಮಾಲೆ, ಶಾರ್ದೂಲವಿಕ್ರೀಡಿತ, ಮತ್ತೇಭವಿಕ್ರೀಡಿತ, ಸ್ರಗ್ಧರೆ ಮತ್ತು ಮಹಾಸ್ರಗ್ಧರೆ

**ಖ್ಯಾತಿವಡೆ** – ಖ್ಯಾತಿಗಳಿಸು (*ಖ್ಯಾತಿವಡೆ*ದಿರ್ದ ನಾಲ್ಕುಂ ಜಾತಿಗಳೊಳ್ ಮದುವೆಯಾಗಲಕ್ಕುಂ ಪಾರ್ವರ್ಗೆ: **ಸಮಯಪ,** ೬. ೯೪)

# ಗ

**ಗಂಗಾಜಾತ** – ಭೀಷ್ಮ (ಶ್ವೇತನ *ಗಂಗಾಜಾತನ* ಮಾತನೆ ಪಾರ್ದು ಎರಡು ಒಡ್ಡಣಂ ಕಾದಲ್ಕೆಂದೀ ತೆಱದಿನೊಡ್ಡಿ ನಿಂದುವು ಭೂತಳಮಳ್ಳಾಡೆ ಕೆಸಱ ಕಡಿತದ ತೆಱದಿಂ: **ಪಂಪಭಾ,** ೧೦. ೫೩)

**ಗಂಗಾಧರ** – ಈಶ್ವರ (ಗಾಂಡಿವಧರಂ *ಗಂಗಾಧರಂ* ತುಂಗಶಕ್ತಿಧರಂ ವಜ್ರಧರಂ ಧರಾಧರಧರಂ ಶ್ರೀಕೀರ್ತಿವಿದ್ಯಾಧರಂ: **ಪಂಚತಂತ್ರ,** ೩೭)

**ಗಂಗಾಸುತ** – ಗಂಗೆಯ ಮಗ, ಭೀಷ್ಮ (ಆರೂಢ ಸಮರರಸನುಂ ಉಪಾರೂಢಕನಕರಥನುಂ ಆಗಿ ಕೈಲಾಸವಾಸಿಗೆ ಮೊಡೆವಟ್ಟು ಬಿಲ್ಲಂ ಕೊಂಡು *ಗಂಗಾಸುತಂಗೆ* ಅದಿರದೆ ಇದಿರ್ಚಿ ನಿಂದಾಗಳ್: **ಪಂಪಭಾ,** ೧೦. ೫೨ ವ)

**ಗಂಟಲ್** – ಕಂಠ, ಕೊರಳು (ಮೃಗಕುಲಂ ಆಸೆಗೆಯ್ದು ಮೃಗತೃಷ್ಣಿಕೆಯಂ ಜಲಮೆಂದು ತೃಷ್ಣೆಯಿಂ ಪಗಲಿಟಿವನ್ನೆಗಂ ಪರಿದು *ಗಂಟಲ್* ಉರಂಬರಂ ಆಱೆ: **ಪಂಪರಾ,** ೭. ೯೩)

**ಗಂಟಿ** – ತೊಂಡುದನ (*ಗಂಟಿಯಂ* ಪುಗಲೀಯದಿಕ್ಕಿದ ಬೇಲಿ ಕಿಚ್ಚುಕೊಳೆ ಕಾಗುಮೆ: **ಜೀವಸಂ,** ೨. ೫ ವ)

**ಗಂಟಿಕ್ಕು** – ಕಟ್ಟು, ಗಂಟು ಹಾಕು (ಬಂಧಿಸು ಗಾಳಿಯಂ *ಗಂಟಿಕ್ಕುವಂತೆ* ಮಾಯಾವ್ಯವಹಾರ: ಧರ್ಮಾಮೃ; ೯. ೨೫ ವ); ಜೋಡಿಸು (ಧಾತ್ರಿಯುಂ ಗಗನಮುಂ *ಗಂಟಿಕ್ಕಿ*ದಂತಲ್ಲಿ ಪೇರ್ವಡೆಯಿಯಿರ್ದತ್ತು: **ಪಾರ್ಶ್ವನಾಪು,** ೧೧. ೮೪)

**ಗಂಟು** – [ಗ್ರಂಥಿ] ಕಬ್ಬು, ಬಿದಿರು ಮುಂತಾದವುಗಳ ಗೆಣ್ಣು (ಬಿದಿರ *ಗಂಟುಗಳಂ* ಕಳೇವಂತೆ: **ಪಂಪಭಾ,** ೧೨. ೧೦೩); ಕಟ್ಟಿದುದು (ಪರಾಕ್ರಮಧವಳನ ಶರಪರಿಣತಿಯಂ ಕಂಡು ದುರ್ಯೋಧನನ ಮೊಗಂ ತಲೆನವಿರ *ಗಂಟಿಂ* ಕಿಱಿದಾಗೆ: **ಪಂಪಭಾ,** ೨. ೭೭ ವ)

**ಗಂಟೆ** – [ಘಂಟಾ] ಶಬ್ದ ಉಂಟುಮಾಡುವ ಸಾಧನ (ಗಗನಗಜಕ್ಕಿಕ್ಕಿದ ಪೊನ್ನ *ಗಂಟೆ*ಯೆರಡೆನಲು: **ಆದಿಪು,** ೬. ೫೨)

**ಗಂಟೊಡೆ** – ಗೆಣ್ಣು ಒಡೆ, ಗಂಟಿನಲ್ಲಿ ಮೊಳಕೆ ತೋರು ಮುಗುಳ ತೊಡಂಬೆ *ಗಂಟೊಡೆಯೆ* ಮೊಲ್ಲೆಗೆ ಬೆಳ್ಸುಟಿ ಪುಟ್ಟೆ: **ಪಂಪರಾ,** ೭. ೧೩೯)

**ಗಂಡ** – ಗಂಡುಸು (ಕುಲಮುಂ ಚಲಮುಂ ದೊರೆಯುಂ ಕಿಡೆ ಬಾಟ್ವಂ *ಗಂಡ*ರೂಪಿನೊಳ್ ಗಂಡನಲ್ತು ಪೆಂಡತಿಯೆ ವಲಂ: **ಆದಿಪು,** ೧೨. ೯೬); ಶೂರ (ಶ್ರೀಯುವತಿಯಂ ಆ

ವೀರಶ್ರೀಯುವತಿಗೆ ಸವತಿ ಮಾಟ್ಪೆನೆಂದು ಅರಿನೃಪರಂ ಉಳ್ಳಾಯವೆರಸು ಎಱೆದುಕೊಂಡು ಧರಾಯುವತಿಗೆ ನೆಗಟ್ದಿ ಹರಿಗನೊರ್ವನೆ ಗಂಡಂ: **ಪಂಪಭಾ,** ೧೧. ೧); ಕಾಂತ, ಪತಿ (ಇನಿಯರ ಮೇಗಣ ಮೋಹದಿಂ ಅಱುಜರ ಬಂಧುಗಳ ತಾಯ ತಂದೆಯ ಮಾತಂ ಮನದೊಳ್ ಭಾವಿಸಲೊಲ್ಲದೆ ಗಂಡರೊಡನೆ ಕೆಟ್ಟೋಡವಂದರ್: **ಧರ್ಮಾಮೃ,** ೨. ೧೦೭);; ಆನೆಯ ಕುಂಭಸ್ಥಳ (ಮಾದ್ಯತ್ ಗಜ ಗಂಡಕಷಣಪ್ರೋದ್ಭೇದದಿಂ ಸಾರ್ದು ಬಂದು ಇದಿರೊಳ್ ಕೂಡುವುದಿಲ್ಲಿ ಚಂದನರಸಂ ಕೆಂಬೊನ್ನ ಟಂಕಂಗಳೊಳ್: **ಪಂಪಭಾ,** ೪. ೨೨); ಕುರು, ಬೊಕ್ಕೆ (ಗಂಡ ಸ್ಫೋಟಕ ಸಮಾಹ್ವಯಂ: **ಅಭಿಧಾವ,** ೧. ೧೨. ೩೬)

**ಗಂಡಕ –** ಖಡ್ಗಮೃಗ (ದಾನಧಾರೆಯಂತೆ ಪುಂಡರೀಕ ಗಂಡಕ ಮಂಡಿತಮುಂ: **ರಾಜಶೇಖರ,** ೫. ೭೪ ವ)

**ಗಂಡಗತ್ತರಿ** – ಒಂದು ಆಯುಧ (ತೊಲಗದ ಕಂಬದಾನೆಯ ಪಸುಂಬದ ಪಕ್ಕಿಯ ಸೂಲ ಸೂಲದಿಂ ಗಿಲಿತದ ಗಂಡಗತ್ತರಿಯ ಗೂಳಿಯ ಪಂದಿಯ: **ಕಬ್ಬಿಗಕಾ,** ೨೧೧)

**ಗಂಡಗರ್ವ –** ಶೂರನೆಂಬ ಹೆಮ್ಮೆ (ಈ ಗಂಡಗರ್ವಮುಂ ಅಂದೆಲ್ಲಿಗೆ ಪೋಯ್ತು: **ಗದಾಯು,** ೭. ೩೨)

**ಗಂಡಗಾಡಿ –** ಪೌರುಷದ ಸೊಬಗು (ಪಡೆಮೆಚ್ಚೆ ಗಂಡನ ಗಂಡಗಾಡಿಯಂ ಕಂಡು ಫಣೀಂದ್ರನ ಕನ್ನೆ ಕನಕಲತೆಯೆಂಬ ನಾಗಕನ್ನೆ ಕಣ್ಬೇಟಗೊಂಡು: **ಪಂಪಭಾ,** ೪. ೧೫ ವ)

**ಗಂಡಗಾಳಿಕೆ –** ಪೌರುಷದ ಕೆಟ್ಟತನ (ಅಳುರ್ವ ನಿಜವಿಜಯ ತೇಜೋಬಳದಿಂ ಪರನೃಪರ ಗಂಡಗಾಳಿಕೆಯಂ ಸದೇಂ ಕಳೆದನೋ ನೃಪತಿ: **ಯಶೋಧಚ,** ೨. ೧೬)

**ಗಂಡಪಾಳಿ –** ಕೆನ್ನೆ, ಗಲ್ಲ (ಚೆಲ್ವ ಗಂಡಪಾಳಿಗೆ ಚಂಚತ್ ನವ ಪತ್ರಭಂಗಂ ಏಕಿಲ್ಲಬಲೇ: **ತ್ರಿಷಷ್ಟಿಪು**೧೭. ೭೫)

**ಗಂಡಭಿತ್ತಿ –** ಕೆನ್ನೆಯೆಂಬ ಗೋಡೆ (ಮಾದ್ಯತ್ ಗಜಗಂಡಭಿತ್ತಿ ಕಷಣ ಪ್ರೋದ್ಭೇದದಿಂ ಸಾರ್ದು ಬಂದು ಇದಿರೊಳ್ ಕೂಡುವುದಿಲ್ಲಿ ಚಂದನರಸಂ ಕೆಂಬೊನ್ನ ಟಂಕಂಗಳೊಳ್: **ಪಂಪಭಾ,** ೪. ೨೨)

**ಗಂಡಮಂಡಳ –** ಕಪೋಲ (ಗಂಡಮಂಡಳಮದಾಳಿಗೆ ಪಾರ್ದೞಿಪ ಉನ್ಮದಾಳಿ: **ರಾಜಶೇಖರ,** ೧. ೭)

**ಗಂಡಮಚ್ಚರ –** ಪರಾಕ್ರಮಿಯ ಅಸೂಯೆ (ಅಂತು ಮುಳಿಸಿನ ಮೋಪಿನ ಗಂಡಮಚ್ಚರದ ಮೆಚ್ಚವಣಿಗೆಯ ಅಂಕಕಾಱರ್ ಎಕ್ಕತುಳಕ್ಕೆ ಎಕ್ಕೆಯಿಂ ಸೂಟೇಱಿಱಿವಂತೆ ಒರ್ವರ್ ಒರ್ವರೊಳ್ ಕಾದೆ: **ಪಂಪಭಾ,** ೧೨. ೭೬ ವ)

**ಗಂಡರೂಪು** – ಗಂಡಸಿನ ಆಕೃತಿ, ಗಂಡಿನ ವೇಷ (ಕುಲಂ ಚಲಮುಂ ದೊರೆಯುಂ ಕಿಡೆ ಬಾಟ್ವಂ ಗಂಡರೂಪಿನೊಳ್ ಗಂಡನಲ್ತು ಪೆಂಡತಿಯೆ ವಲಂ: **ಆದಿಪು,** ೧೨. ೯೬);

**ಗಂಡವರ್ಕಳ್ –** ಶುರರು (ಸಜ್ಜನವೆಂಡಿರ ತುಡುಗೆಯಂ ಗಂಡವರ್ಕಳಾಯುಧಮಂ ಕೊಳ್ವುದು ಪುರುಷಾರ್ಥಮಲ್ಲ ಎಂದು ಮಗುಳೆ ಕೊಟ್ಟು: **ಹರಿವಂಶ,** ೪. ೩ ವ)

**ಗಂಡವಳ್ತಿ –** ಗಂಡುಬೀರಿ (ವಿವಿಧಗಂಧಂಗಳಂ ಆಂ ಅವಯವದೊಳ್ ಮಾಡುವ ಘಟ್ಟಿವಳ್ತಿಯಂ ದೇವಿ ಗಂಡವಳ್ತಿಯೆಂ ಅಲ್ಲೆಂ: **ಪಂಪಭಾ,** ೮. ೫೬)

**ಗಂಡವಾತು –** ಶೌರ್ಯದ ಮಾತು (ನಿನಗಪ್ಪುದು ಈ ಅಟೆನುಡಿ ಬರ್ಕೆ ನಿನ್ನ ಪಿರಿಯಣ್ಣನೆ ಪಣ್ಣನೆ ನೋಟ್ಪಂ ಆತನ ಒಡ್ಡಟಿಯದ ಗಂಡವಾತಂ: **ಪಂಪಭಾ,** ೩. ೧೬)

**ಗಂಡಶೈಲ –** ಹೆಬ್ಬಂಡೆ, ಉರುಳಿಬಿದ್ದ ಕಲ್ಲು (ವಿದ್ವಿಷತ್ಸೇನೆಯೊಳ್ ಆನೆಯಂ ಕುದುರೆಯಂ ರಥಮಂ ಪೃಥು ಗಂಡಶೈಲ ಸಂತಾನದಿನಿಟ್ಟು ಮೋದಿ ತರುರಾಜಿಗಳಂ ತವೆ ಕೊಂದಂ: **ಪಂಪರಾ,** ೧೦. ೨೧೮)

**ಗಂಡಸ್ಥ –** ದವಡೆ, ಕಪೋಲ ಪ್ರದೇಶ (ದಿವ್ಯಸಂಭವಂಗಳಪ್ಪ ಶ್ವೇತಾಶ್ವಂಗಳೊಳ್ ಪೂಡಿದ ದಿವ್ಯರಥಮುಮಂ ದಧೀಚಿಗಂಡಸ್ಥಮಪ್ಪ ಗಾಂಡೀವಮೆಂಬ ಬಿಲ್ಲುಮಂ .. .. ಕೆಯ್ಕೊಂಡು: **ಪಂಪಭಾ,** ೫. ೭೭ ವ)

**ಗಂಡಸ್ಥಲ –** ಕಪೋಲ ಪ್ರದೇಶ, ಕೆನ್ನೆ (ಗಂಡಸ್ಥಲದೊಳ್ ಪಸರಿಸೆ ಬೆಮರ್ವನಿಗಳ್: **ಪಂಪರಾ,** ೧೧. ೧೩೫)

**ಗಂಡಸ್ಥಳಿ –** ಗಂಡಸ್ಥಲ (ಉರದೊಳ್ ಹಾರಾಂಶು ಗಂಡಸ್ಥಲಿಯೊಳ್ ಅಮಳ ಕರ್ಣಾವತಂಸಾಂಶು: **ಚಂದ್ರಪ್ರಪು,** ೬. ೭೦)

**ಗಂಡಸ್ಯೋಪರಿ ಸ್ಫೋಟಕಂ –** ಕುರುವಿನ ಮೇಲೆ ಬೊಕ್ಕೆ (ಆಗಳದಂ ಸಂಜಯಂ ಕಂಡು ಗಂಡಸ್ಯೋಪರಿ ಸ್ಫೋಟಕಂ ಎಂಬಂತೆ ನಿಜಪ್ರಿಯತನೂಜಾನುರ ಶೋಕದಿಂ ವಿಹ್ವಳೀಕೃತನಪ್ಪ ಭೂತಳೇಶ್ವರಂಗೆ: **ಗದಾಯು,** ೫. ೯ ವ)

**ಗಂಡಾಳ್ತನ –** ಪೌರುಷ (ಗಂಡಾಳ್ತನಂ ಏವುದು ಆಸ್ರಯಿಸುವಂ ಶ್ರೀಪಾದಮಂ ಕೃಷ್ಣನಾ: **ಜಗನ್ನಾಥ,** ೮. ೯೫)

**ಗಂಡಿಕೆ –** ಗಂಡತನ (ಬಗ್ಗದ ಗಂಡಿಕೆಗಂಡು ನೆತ್ತಿಯಗ್ರದೆ ಮೊನೆಯುರ್ಚೆ ಕೆಯ್ಸುರಿಗೆಯಿಂದ ಇರದೆ ಇಕ್ಕಿದನಾ ವನೇಚರಂ: **ಶಬರಶಂ,** ೩. ೫೪); ಊಬು

**ಗಂಡು –** ಪೌರುಷ (ಒಗೆದ ಸುತಶೋಕದಿಂದ ಆವಗೆಯಂತೆ ಒಳಗು ಉರಿಯೆ ಭೋಂಕನೆ ಎರ್ದೆ ತೆಱೆಯಲ್ ಹಾ ಮಗನೇ ಎಂದು ಅಶ್ರುಜಲಾರ್ದ್ರಗಂಡಂ ಆ ಗಂಡಿನೊಡನೆ ಬಿಸುಟಂ ಬಿಲ್ಲಂ: **ಪಂಪಭಾ,** ೧೨. ೨೮)

**ಗಂಡುಗೆಡು –** ಧೈರ್ಯಗುಂದು (ಬಿಡೆ ಪಿಣಿಲಂ ಕುರುಧ್ವಜಿನಿ ತೊಟ್ಟನೆ ಬಾಯನೆ ಬಿಟ್ಟುದು ಅಂದು ಗಂಡುಡೆಯುಡೆ ಗಂಡುಗೆಟ್ಟುದು: **ಪಂಪಭಾ,** ೮. ೧೦೧)

**ಗಂಡುತನ –** ಪೌರುಷ (ತುಱುಗೋಳೊಳ್ ಪೆಣ್ಬುಯ್ಯಲೊಳ್ ಎಱೆವೆಸದೊಳ್ ನಂಟನ ಎಡಱೊಳ್ ಊರಟುವಿನೊಳಂ ತಱಿಸಂದು ಗಂಡುತನಮನೆ ನೆಱಪಿದವಂ ಗಂಡನಲ್ಲಂ ಎಂತುಂ ಷಂಡಂ: **ಗದಾಯು,** ೨. ೨೪)

**ಗಂಡುವರಿಜು –** ಪುರುಷ ರೂಪ (ನಯನಾಕರ್ಷಣವಿದ್ಯೆ ಗಂಡುವರಿಜಂ ಕೈಕೊಂಡುದೋ ಗಂಡಗಾಡಿಯಂ ಈತಂಗೆ ಮನೋಜನೊಪ್ಪಿಸಿದನೋ ಪೇೞೆಂಬಿನಂ.. .. ಬೆಡಂಗು ಕಣ್ಗೊಳಿಸೆ: **ಪಂಪರಾ,** ೩. ೩೮)

**ಗಂಡುವೇಷ –** ಸೇವಕನ ವೇಷ (ಬೋಟದಲೆಯುಂ ಪಱಿದ ಕಪ್ಪಡಮುಂ ಬಡಮೆಯ್ಯುಂ ಕೋಲು ಕರಂಕೆಯುಂ ಬೆರಸು ಗಂಡುವೇಷಂ ತನಗಮರೆ: **ಹರಿವಂಶ,** ೯. ೩೦ ವ)

**ಗಂಡೂತಿಬಾಧೆ –** ನವೆ (ಪಾರ್ವನದನೆರಡು ಕೈಯೊಳಮರ್ಚಿ ಕಾಲೊಳೊರಸುವುದುಂ ಅಸಹ್ಯಮಪ್ಪ ಗಂಡೂತಿಬಾಧೆಯಿಂ: **ಚಾವುಂಪು,** ಮ. ೪೫೦. ಸಾ. ೫)

**ಗಂಡೂಪದ –** ಎರೆ ಹುಳು (ಗಂಡೂಪದಾಖ್ಯಮದು ಕಿಂಚುಳಕಂ; **ಅಭಿಧಾವ,** ೧. ೪. ೮)

**ಗಂಡೂಷ –** ಬಾಯಿ ಮುಕ್ಕುಳಿಸುವಿಕೆ (ವಿರಹಿಜನ ನಿಚಯ ನಿಚಿತ ಮಾನಸ ಉನ್ಮತ್ತ ಕಾಮಿನೀ ಗಂಡೂಷ ಸೀಧು ಸೇಕ ಪುಳಕಿತ: **ಪಂಪಭಾ,** ೫. ೧೦ ವ)

**ಗಂತಿ** – ಜೈನ ಸನ್ಯಾಸಿನಿ (ಶೀಲವತೀ ಮಹಾದೇವಿಯುಂ ಸುವ್ರತಗಂತಿಯರಲ್ಲಿ ದೀಕ್ಷೆಯಂ ಕೈಕೊಂಡು: **ಧರ್ಮಾಮೃ,** ೪.೧೬೦ ವ)

**ಗಂದಿಗವಸರ** – [ಗಂದಿಗ+ಪಸರ] ಸುಗಂಧದ್ರವ್ಯಗಳ ಅಂಗಡಿ (ಗಂದಿಗವಸರದೊಳಂ ಕ್ರಯವಿಕ್ರಯಂಗೆಯ್ವುತ್ತಮಿರ್ದು ಪೋಪುದುಂ: **ಹರಿವಂಶ,** ೪. ೧೦ ವ)

**ಗಂದೆ** – ಗುಳ್ಳೆ, ಬೊಬ್ಬೆ (ಅಲರ್ವಸೆಯೊತ್ತೆ ಪತ್ತಿದೆಸಳಿಂದೆಸೆವ ಅಂಗದ ಗಂದೆ: **ಲೀಲಾವತಿ,** ೪. ೧೪೪)

**ಗಂಧ** – ಪರಿಮಳ (ವಿವಿಧಗಂಧಂಗಳಂ ಆಂ ಅವಯವದೊಳ್ ಮಾಡುವ ಘಟ್ಟಿವಳ್ತಿಯೆಂ ದೇವಿ ಗಂಡವಳ್ತಿಯೆಂ ಅಲ್ಲೆಂ: **ಪಂಪಭಾ,** ೮. ೫೬)

**ಗಂಧಕುಟಿ** – ಶ್ರೀಗಂಧದ ಕುಟೀರ; [ಜೈನ] ಸಮವಸರಣದಲ್ಲಿ ಅರ್ಹಂತನು ಕುಳಿತುಕೊಳ್ಳುವ ಮಂಟಪ (ನಿರ್ಭರಗಂಧಂ ಗಂಧಕುಟಿ ಕರಂ ಸೊಗಯಿಸುಗುಂ: **ಆದಿಪು,** ೧೦. ३೭)

**ಗಂಧಗಜ** – ಮದೋದಕವನ್ನು ಸುರಿಸುವ ಆನೆ (ತಪೋವನಮಂ ಗಂಧಗಜಂ ವನಂಬುಗವವೊಲ್ ಪೊಕ್ಕು: **ಆದಿಪು,** ೮. ೭)

**ಗಂಧಚಾರಿಣಿ** – ಆನೆಯ ಏಳು ಮದಾವಸ್ಥೆಗಳಲ್ಲಿ ಒಂದು (ಗಂಧಚಾರಿನಿಯಿಂ ಉನ್ಮತ್ತಾಳಿಸಂದೋಹ ಸಮ್ಮದ ಸಂದಾರಿಣಿಯಂ ವಿರಾಜಿಸುತಮಿರ್ಕುಂ ವಜ್ರಘೋದ್ವಿಪಂ: **ಪಾರ್ಶ್ವನಾಪು,** ೪. ೧೨೨)

**ಗಂಧದಾಯಕಿ** – ಗಟ್ಟಿವಳ್ತಿ (ಸೊಕಮಿರ್ಕೆ ಅಕ್ಕಟ ದರ್ಭಪಾಣಿ ಯಮಜಂ ದರ್ವೀಕರಂ ವಾಯುಪುತ್ರಕನುಂ ಜರ್ಜರಹಸ್ತಂ ಇಂದ್ರತನಯಂ ದಸ್ರಾತ್ಮಜರ್ ದಂಡಮುಷ್ಟಿಕರರ್ ಶಸ್ತ್ರವಿಡಂಬಂ ಏವುದವರ್ಗಂ ಪಾಂಚಾಲಿಯುಂ ಗಂಧದಾಯಕಿಯಾಗಿರ್ಪಿನಂ ಅಂದು ಮತ್ಸ್ಯಗೃಹದಿಂದ ಈ ನಿಗ್ರಹಂ ಪೊಲ್ಲದೇ: **ಗದಾಯು,** ३. ३೪)

**ಗಂಧದ್ವಿಪ** – ಗಂಧಗಜ (ಗಂಧದ್ವಿಪಗಣಘನಘಂಟಾಪ್ರಘೋಷಂ .. .. ಕರಂ ರಂಜಿಸೆ ಬಗೆಗೊಳಿಕುಂ ತತ್ಪುರೀರಾಜಮಾರ್ಗಂ: **ರಾಜಶೇವಿ,** ೨, ೧೧೨)

**ಗಂಧಮಾದನ** – ಕುಲಪರ್ವತಗಳಲ್ಲಿ ಒಂದು (ಆ ಮುಚುಕುಂದನಾ ಮಹಾಗುಹಾದ್ವಾರಮಂ ಪೊಜಮಟ್ಟು ಗಂಧಮಾದನ ನಗೇಂದ್ರೋಪಾಂತದ ಬದರಿಕಾಶ್ರಮ: **ಜಗನ್ನಾವಿ,** ೯. ೫३ ವ)

**ಗಂಧಯುಕ್ತಿ** – ಸುಗಂಧದ್ರವ್ಯಗಳನ್ನು ಮಿಶ್ರಣಮಾಡುವ ವಿದ್ಯೆ, ಅರವತ್ತು ನಾಲ್ಕು ಕಲೆಗಳಲ್ಲಿ ಒಂದು (ಬರೆಪಂ ಬಾಜನೆ ಗಂಧಯುಕ್ತಿ ಗಣಿತಂ .. .. ಚಿತ್ರವಿವಕ್ಷೆ ವಾಸ್ತುಶಕುನಜ್ಞಾನಂ ರಥಾರೋಹಣಂ: ಪುಷ್ಪದಂಪು, ೪. ೫೯)

**ಗಂಧರ್ವ** – ಒಂದು ದೇವಜಾತಿ (ಅಂಗದರ್ಪಣನೆಂಬ ಗಂಧರ್ವಂ ಜಳಕ್ರೀಡೆಯಾಡುತಿರ್ದಂ: **ಪಂಪಭಾ,** ३. ३३ ವ); ಕುದುರೆ (ಪೊಣರ್ವ ಸಗರ್ವ ಗಂಧರ್ವ ವಾಹಕ ಸಮೂಹದ ಸಾಹಸದಾಹವದ ಮೋಹರಮಂ ಕಾಹುರದ ಮೋಡಿಯಿಂ ನೋಡಿ: **ರಾಜಶೇವಿ,** ೬. ೬೫ ವ)

**ಗಂಧರ್ವವಿದ್ಯೆ** – ಗಾಯನ ವಿದ್ಯೆ (ರಾಗೋಚ್ಚರಣಾಲಯಗೀತಮಾಯ್ತುಚ್ಚರಿ ತತ್ ಗಂದೌವಿದ್ಯೆ ಸುರಸುಂದರಿಯಾ: **ಚಂದ್ರಪ್ರಪು,** ೧೧. ೧೪೦)

**ಗಂಧರ್ವವಿವಾಹ** – ಪರಸ್ಪರರು ಮೆಚ್ಚಿಕೊಂಡು ಮಾಡಿಕೊಳ್ಳುವ ಮದುವೆ (ಗಂಧರ್ವವಿವಾಹಮನಾ ಬಂಧೂಕಾಧರೆಯವರ್ಗೆ ಮಾಡಿದರೊಲವಿಂ: **ಲೀಲಾವತಿ,** ೧३. ೪)

**ಗಂಧಲಂಪಟತೆ** – ಸುಗಂಧದಲ್ಲಿ ಅತಿ ಆಸಕ್ತಿ (ರಟತ್ ಅಳಿಸಂದೋಹಂ ಎಂತೆಜಗುಗುಂ ದಳಿತಾಂಬುರುಹಕ್ಕೆ ಗಂಧಲಂಪಟತೆಯಿಂ: **ಆದಿಪು,** ३. ೯೦)

**ಗಂಧವಹ** – ಗಂಧವನ್ನು ಹೊತ್ತೊಯ್ಯುವುದು, ಗಾಳಿ (ವನಲತಾಳಿಪ್ರಸೂನಾವಳೀ ಗಂಧವಹಂ ಮೆಲ್ಪಿಂದೆ ದಲ್ .. .. ತಣ್ಣಂಪನೀ ಬೀಜಿದಪುದು: **ಕಾದಂಸಂ,** ೮. ೬)

**ಗಂಧವಹನ** – ಗಂಧವಹ (ವಿಷಾಹಾರಂ ಹಾರಂ ಹೃದಯದಹನಂ ಗಂಧವಹನಂ .. .. ವನಿತೆಗವನಿಂ ಚಿತ್ತಭವನಿಂ: **ಲೀಲಾವತಿ,** ೭. ೮३)

**ಗಂಧವಾರಣ** – ಗಂಧಗಜ (ಅನ್ಯ ನರೇಂದ್ರ ಗಂಧವಾರಣ ಮದವಾರಣಂ ವಿಜಯಕಾರಣಂ ಅಮ್ಮನಗಂಧವಾರಣಂ: **ಗದಾಯು,** ೧. ೧೭)

**ಗಂಧವಾಹ** – ಗಂಧವಹ (ಆಮೋದದಿಂ ಎತ್ತಂ ಗಂಧವಾಹಂ ಮಗಮಗಿಸೆ ಬೆಡಂಗೀ ನಗೇಂದ್ರೋಪಕಂಠಂ: **ಆದಿಪು,** ೧३. ೬೮)

**ಗಂಧಶಾಲಿ** – ಒಂದು ಬಗೆಯ ಸುವಾಸನೆಯ ಬತ್ತ (ಪೊನ್ನ ನೀರ್ಗಳಂ ಪರಿಯಿಸಿದಂತೆ ಕಂಪುವಡೆದೇಂ ಪಸುರ್ಗೊಂಡುವೊ ಗಂಧಶಾಲಿಗಳ್: **ಲೀಲಾವತಿ,** ೬. ೧३೦)

**ಗಂಧಶಾಳಿವನ** – ಗಂಧಶಾಲಿಯ ಗದ್ದೆ (ಪೊಂಬಣ್ಣದ ಕೆಂಪಿಡಿದಿರೆ ಸೊಗಯಿಪುವು ಗಂಧಶಾಳಿವನಂಗಳ್: **ಆದಿಪು,** ೧. ೬೦)

**ಗಂಧಸಿಂಧುರ** – ಗಂಧಗಜ (ಸಾಮತಾಂತಃಪುರ ಪರಿಮಿತಪರಿವಾರಪರಿವೃತನುಂ ಬಂಧುರ ಗಂಧಸಿಂಧುರಾರೂಢನುಂ ಆಗಿ: **ಆದಿಪು,** ೪. ೨३ ವ)

**ಗಂಧಹಸ್ತಿ** – ಗಂಧಸಿಂಧುರ (ಚಂಚರೀಕತತಿ ಗಂಧಹಸ್ತಿಯೊಳ್ ನೆಲಸುವವೋಲ್: **ಶಾಂತಿಪು,** ೫. ೯೬)

**ಗಂಧಾಂಧಸಿಂಧುರ** – ಮದದಿಂದ ಕುರುಡಾದ ಆನೆ (ಬಂದಂ ಧವಳಾತಪತ್ರದಡಿಯೊಳ್ ಕಾಲ್ಗೋದು ಗಂಧಾಂಧ ಸಿಂಧುರಮಂ ಮೆಯ್ಗಲಿ ವಜ್ರಬಾಹು: **ಪಂಪರಾ,** ೨. ೧೧)

**ಗಂಧಾಕುಳ** – ಗಂಧದಿಂದ ಆವೃತವಾದ (ಬಂದುದು ದಾನಬಂಧುರ ಗಂಧಾಕುಳ ಭೃಂಗಮಂಗಜಗಜಂ ಬರ್ಪಂತೆ: **ಚಂದ್ರಪ್ರಪು,** ೭. ३೮)

**ಗಂಧಾಗಂಧ** – ಸುಳಿವು, ಕುರುಹು (ಅಪಮೃತ್ಯುವಿನ ಸತ್ವಬಾಧೆಯ ಗಂಧಾಗಂಧಮುಂ ಇಲ್ಲ: **ಶಾಂತಿಪು,** ೬. ೧೦೨ ವ)

**ಗಂಧಾಪಣ** – ಗಂಧದ ಅಂಗಡಿ (ಉತ್ಪಾದಿತ ಘ್ರಾಣೇಂದ್ರಿಯಪ್ರಾಪಣಂಗಳಪ್ಪ ಗಂಧಾಪಣಂಗಳೊಳ್: **ಚಂದ್ರಪ್ರಪು,** ೧. ೧೪೯)

**ಗಂಧೇಭ** – ಗಂಧಸಿಂಧುರ (ಕೌರವ್ಯ ಗಂಧೇಭ ಕೇಸರಿ: **ಗದಾಯು,** ೧. ೫೨)

**ಗಂಧೋದಕ** – ಸುಗಂಧದ ನೀರು, ಪನ್ನೀರು (ಗಂಧೋದಕಾದಿಗಲಿಂ ಮಾಡುವ ಸವನಮುಂ: **ಆದಿಪು,** ೧೫. ೧३ ವ)

**ಗಂಧೋದ್ಗಾರಿ** – ಗಂಧವನ್ನು ಸೂಸುವ (ಹಿಮಗಂಧೋದ್ಗಾರಿಯಾಯ್ತುಂದು ಗಾಳಿ: **ಪುಷ್ಪದಂಪು,** ೧೦. ३)

**ಗಂಪಲ್** – ಕೆಸರು (ವರವಜ್ರಘೋಷಕರಿ ಪೋಗುತೆ ತತ್ತಟದ ಆನೆ ಗಂಪಲೊಳ್ ಭಾವಿಸದೆಯ್ದೆ ಪೊಕ್ಕು ಬಳವಟ್ಟಿಗೆ ಕಂಡತಿರೋಷದೂಷಿತಂ: **ಪಾರ್ಶ್ವನಾಪು,** ೫. ೬೧)

**ಗಂಭೀರ** – ಆಳವಾದ (ಕಣ್ಗೊಪ್ಪಿ ತೋರ್ಪುದಿದು ಉತ್ಪ್ರೇಂಖತ್ ಅಸಂಖ್ಯ ಶಂಖಧವಳಂ ಗಂಭೀರನೀರಾಕರಂ: **ಪಂಪಭಾ,** ೪. ೨೪)

**ಗಂಭೀರವೇದಿ** – ತೊಂಡು ಆನೆ (ಪ್ರವರಾಂಕುಶಮಂ ಗಂಭೀರವೇದಿ ಶಿರದೊಳ್ ನಿಷಾದಿ ನಿಱೆಸುವ ತೆಱದಿಂ: **ಶಾಂತಿಪು,** ೧೦. ೧೬೨)

**ಗಗನ** – ಆಕಾಶ (ನೀಲಾಭ್ರಘಟೆಯೆ ಗಗನಮನೆಡೆಗೊಂಡವೋಲಾಯ್ತು: **ಜಗನ್ನಾಎ,** ೪. ೫೪)

**ಗಗನಕುಸುಮ** – ಆಕಾಶದ ಹೂ, ನೆರವೇರದ ಆಸೆ (ಗಗನಕುಸುಮನತ್ಯಂತಾಭಾವಮಂ ನಿಷೇಧಮಾತ್ರದಿಂದಂ ಉಂಟುಮಾಡಲಕ್ಕುಮೆ: **ಶಾಂತಿಪು,** ೮. ೧೩೮ ವ)

**ಗಗನಗಂಗೆ** – ಆಕಾಶಗಂಗೆ (ಘನವಹ್ನಿಜ್ವಾಲಧೂಮಾವಳಿ ಗಗನಗಂಗಾತಟೋದ್ಯುತ್ತಮಾಳೀವನಮೋ: **ಚಂದ್ರಪ್ರಪು,** ೪. ೩೧)

**ಗಗನಗಜ** – ಆಕಾಶದ ಆನೆ, ಐರಾವತ (ಗಗನಗಜಕ್ಕಿಕ್ಕಿದ ಪೊನ್ನ ಗಂಟೆಯೆರಡೆನಲು: **ಆದಿಪು,** ೬. ೫೨)

**ಗಗನಗತಿ** – ಆಕಾಶಗಮನ (ಗಗನಗತಿ ಶ್ರಮಮಂ ನೆಟ್ಟಗೆ ಕಳೆವರ್: **ಕುಸುಮಾಕಾ,** ೨. ೭೭)

**ಗಗನಗಾಮಿನೀವಿದ್ಯೆ** – ಆಕಾಶಗತಿಯ ವಿದ್ಯೆ, ಖೇಚರವಿದ್ಯೆ (ಕನಕಶ್ರೀಯಂ ಗಗನಗಾಮಿನೀವಿದ್ಯೆಯಿಂ ಒಯ್ದು: **ಶಾಂತಿಪು,** ೩. ೬೦ ವ)

**ಗಗನಚರ** – ಆಕಾಶದಲ್ಲಿ ಚರಿಸುವುದು, ಹಕ್ಕಿ (ಕಾಗೆ ಗೂಗೆ ಪರ್ದು ಚಕೋರಂ ಹಂಸೆ ಕುರ್ಕು ಗಿಳಿ ಪುರುಳಿ ಪೆಂಗುರು ಕಾರಂಡಂ ಆಂದೆ ಮೊದಲಾಗೊಡೆಯ ಗಗನಚರಂ: **ವಡ್ಡಾರಾ,** ಪು ೯೭, ಸಾ ೯); ಖೇಚರ ಗಗನಚರಂ ಲಕ್ಷ್ಮೀಧರನಗಣ್ಯಪುಣ್ಯಪ್ರಭಾವದಿಂ: **ಪಂಪರಾ,** ೧೪. ೪೬)

**ಗಗನಚರಭುಜಗ** – ಗ್ರಹಗಳನ್ನು ಹಿಡಿಯುವ ಹಾವು, ರಾಹು (ಭಾನುರಿಪು ಸಿಂಹಿಕಾಪ್ರಿಯಸೂನು ತಮಂ ರಾಹು ಗಗನಚರಭುಜಗಂ: **ಅಭಿಧಾವ,** ೧. ೧. ೭೫)

**ಗಗನಚರಾಧೀಶ** – ಖೇಚರರರಾಜ (ಇದಿರೆದ್ದು ಭಕ್ತಿಪುರಸ್ಸರಂ ಮನದೆಱಕದಿನೆಱಗಿದ ಗಗನಚರಾಧೀಶನಂ ಯತಿ ಪರಸಿ: **ಶಾಂತಿಪು,** ೨. ೨೧)

**ಗಗನಚರಿ** – ಆಕಾಶದಲ್ಲಿ ಸಂಚರಿಸುವವಳು, ಖೇಚರಿ (ಅದಂ ಕೇಳ್ದ ಗಗನಚರಿಯೊರ್ವಳ್ ಬಂದು ಅರಸಂಗೆಱಗಿ ಪೊಡೆವಟ್ಟು ಎನಗೆ ಭರ್ತೃಭೈಕ್ಷಮಂ ದೇವರ್ ಇಕ್ಕಲೆವೇಱ್ಕುಂ ಎಂಬುದುಂ: **ಶಾಂತಿಪು,** ೯. ೮೨ ವ)

**ಗಗನತಳ** – ಬಾಂದಳ, ಅಂತರಿಕ್ಷ (ಗಗನತಳಮೆ ಪಱೆದು ಬಿಱ್ದುದೆನಿಪ ಬಹುತಟಾಕದಿಂ ಕುಕಿಲ್ವ ನಲಿವ ಕೋಕದಿಂ: **ಪಂಪಭಾ,** ೧. ೫೮)

**ಗಗನಮಂಡಲ** – ಆಕಾಶ ಪ್ರದೇಶ (ಎರಡುಂ ಬಲದ ಕಡುವಿಲ್ಲರ್ ಭೋರ್ಗರೆದು ಇಸೆ ಕೂರ್ಗಣೆಯೊಳ್ ಪಂದರ್ ಇಕ್ಕಿದಂತಾಯ್ತು ಗಗನಮಂಡಲಮೆಲ್ಲಂ: **ಪಂಪಭಾ,** ೧. ೭೨)

**ಗಗನವಿವರ** – ಆಕಾಶದ ವಿಸ್ತಾರ (ಪರೆದಿರೆ ಸಂಧ್ಯಾರಾಗಂ ನಿರಂತರಂ ಗಗನವಿವರವನೊಪ್ಪಿತ್ತೆಂದಾದರದಿಂ ಪೇಟಿಲ್ಪಗೆದಂತಿರೆ: **ಕವಿರಾಮಾ,** ೧. ೧೦೨)

**ಗಗನವಿಹಾರ** – ಆಕಾಶಯಾನ (ಗಗನವಿಹಾರಂ ತನಗೊಪ್ಪೆ ವಿಹಾರಿಸಿಯುಂ: **ಶಾಂತಿಪು,** ೧೨. ೨೦)

**ಗಗನಸ್ಥಳಿ** – ಗಗನಮಂಡಲ (ದಾಂಧಳಂಧಳಧ್ವನಿಯಳುರ್ಕೆಗೊಳೆ ಶಬ್ದಗುಣಂ ತಿಳಿವೊಡಾಯ್ತು ಗಗನಸ್ಥಳಿಗೆ: **ರಾಜಶೇಖಿ,** ೬. ೪೪)

**ಗಗನಾಪಗೆ** – ದೇವಗಂಗೆ (ಮುಗಿಲಟ್ಟಳೆಗಳ ಪಚ್ಚೆಯ ಪೊಗರ್ವೆಳಗು .. .. ಗಗನಾಪಗೆಯಂ ಜಗುನೆಯ ಕರ್ಮಡುವಱಿಸಲ್ ನೆಗೆವಂತೊಪ್ಪುವುದು: **ಪುಷ್ಪದಂಪು,** ೨. ೬೬)

**ಗಗನಾಭೋಗ** – ಆಕಾಶದ ವಿಸ್ತಾರ (ಗಗನಾಭೋಗಮಂ ಎಯ್ದೆ ನೀಳ್ದ ಮಣಿಕೂಟಾಟೋಪಮೆಂಬಂತೆ ದಿಟ್ಟಿಗೆ ಮುನ್ನಂ ಬರೆ: **ಆದಿಪು,** ೧೩. ೧೦)

**ಗಗ್ಗರಿಕೆ** – ಗದ್ಗದ ಸ್ವರ (ಒದವಿ ತಗುಳ್ದ ಗಗ್ಗರಿಕೆ ಸೂಸುವ ಕಣ್ಬನಿ ಕಣ್ಗಳೊಳ್ ಕಲಂಕಿದ ಬೆಳರ್ಗೆಂಪು: **ಆದಿಪು,** ೧೨. ೨೫)

**ಗಗ್ಗರಿಕೆಗೊಳ್** – ಗದ್ಗದಗೊಳ್ಳು (ಎಂದು ಗಗ್ಗರಿಕೆಗೊಳ್ವ ಸರಮಂ ಕರ್ಣಪರಂಪರೆಯಿಂ ಕೇಳ್ದು ಸಿಂಹಬಲನ ಒಡವುಟ್ಟಿದರ್ ನೂರ್ವರ್ ಕೀಚಕರುಂ ಪರಿತಂದು ಮುಳಿಸಿನೊಳ್: **ಪಂಪಭಾ,** ೮. ೭೯ ವ)

**ಗಜಕ್ರೀಡೆ** – ಆನೆಯ ಆಟ (ಮುನ್ನಿನ ಗಂಧಹಸ್ತಿಯೊಡನೆ ಬಾರಿಯೊಳ್ ಮೂವತ್ತೆರಡು ಗಜಕ್ರೀಡೆಗಳಿಂದಂ ನೀಡುಂ ಬೇಗಂ ಕ್ರೀಡಿಸಿ: **ವಡ್ಡಾರಾ,** ಪು. ಸಾ )

**ಗಜಗಮನೆ** – ಮಂದಗಾಮಿನಿ, ಆನೆಯಂತೆ ನಿಧಾನ ನಡಿಗೆಯವಳು (ಗಜಗಮನೆಯರ್ಗಿದು ಗಜಗಮನಮೆನುತ್ತೆ ಕೀರ್ತಿಸುತ್ತಿರೆ ಸುಜನರಂ: **ಪಾರ್ಶ್ವನಾಪು,** ೮. ೮೯)

**ಗಜಗಲಿಸು** – ಪ್ರಕಾಶಿಸು (ನಚ್ಚುವರಂ ನಗುವಂತು ಗಜಗಲಿಸುತ್ತುಮಿರ್ದ ಕಾಂಚನಪಚರತ್ನಸಂಚಯಮಂ: **ನೇಮಿನಾಪು,** ೪. ೧೧೪ ವ)

**ಗಜಘಟೆ** – ಆನೆಗಳ ಸಮೂಹ, ಆನೆಯ ಪಡೆ (ಗಜಘಟೆಗೆ ನಾಥನಾಗಿಯುಂ: **ಶಾಂತಿಪು,** ೨. ೯)

**ಗಜಢಕ್ಕೆಯ** – ಆನೆಯ ಮೇಲಿಟ್ಟು ಹೊಡೆಯುವ ನಗಾರಿ, ಒಂದು ರಾಜಚಿಹ್ನೆ (ಗಜಢಕ್ಕೆಯ ಪಾಟಿ ಮಹಾಧ್ವಜದೊಜ್ಜರದೇಕಶಂಖ ರವಿಶಶಿಬಿಂಬ ಧ್ವಜದ ಧವಳಾತಪತ್ರದೊಳಗನೆ: **ಶಾಂತಿಪು,** ೧೦. ೧೫೦)

**ಗಜತೆ** – ಆನೆಗಳ ಸಮೂಹ (ಕರಿಬೃಂದಂ ಗಜತೆ ಹಾಸ್ತಿಕಂ ತಾನಕ್ಕುಂ: **ಅಭಿಧಾವ,** ೧. ೧೪. ೩೨)

**ಗಜನಿಮೀಲನ** – ಆನೆಯಂತೆ ಮದದಿಂದ ಕಣ್ಣುಮುಚ್ಚಿಕೊಳ್ಳುವುದು (ನಯಂ ಕಿಡಲ್ ಗಜನಿಮೀಲನದಿಂದ ಅವದಧೀರಿಸುತ್ತೆ: **ಕಾದಂಬ,** ೩. ೭೮)

**ಗಜಬಜಿಸು** – ಗದ್ದಲಮಾಡು (ಊರುಗಳಿಂ ಮಿಗುವ ವೃಷಭೇಂಧ್ರನಂ ಔಂಕುತ್ತಗಲದೆ ನಿಜಮೂರ್ತಿಯೊಳಗೆ ಗಜಬಜಿಸುತ್ತುಂ: **ಗಿರಿಜಾಕ,** ೯. ೯೮)

**ಗಜಮೌಕ್ತಿಕ** – ಆನೆಯ ಕುಂಭಸ್ಥಳದಲ್ಲಿ ಸಿಕ್ಕುವುದೆಂದು ಹೇಳಲಾದ ಮುತ್ತು (ಮಿಡಿವಿಲ್ವಿಡಿದು ಪುಳಿಂದಿಯಂತೆ ಗಜಮೌಕ್ತಿಕದ ಮೋಂಟೆಯಂಬರದೆಡೆಯೊಳ್ನಡೆದು: **ರಾಜಶೇಖಿ,** ೫. ೮೦)

**ಗಜರಿಪು** – ಆನೆಯ ಶತ್ರು, ಸಿಂಹ (ಗಜಮಸ್ತಕಮಸ್ತಿಷ್ಕದಿಂ ಅಜೀರ್ಣಮಾಯ್ತೆಂದು ಲಂಘನಂಗೆಯ್ವವೋಲೇಂ ಗಜರಿಪು ಲಂಘಿಸಿದುದೊ ಪವನಜವದೆ ಶಿಖರಕ್ಕೆ ಶಿಖರದಿಂ ಖಗನಗದಾ: **ಅಜಿತಪು,** ೯. ೨೭)

**ಗಜವಶಾ** – ಹೆಣ್ಣಾನೆ (ಗಜವಶಾರೂಢನಾಗಿ ಬರೆ: ಶಾಂತಿಪು, ೮. ೬೩ ವ)

**ಗಜವೇಡಂಗ** – ಆನೆಯನ್ನು ಪಾಲಿಸುವುದರಲ್ಲಿ ಜಾಣನಾದ ಮಾವುತ (ಗಜವೇಡಂಗ ನೀನುಳಿದೊಡೆ ಸಾವವಳ್: **ಯಶೋಧಚ,** ೨. ೫೨)

**ಗಜವ್ರಜ** – ಆನೆಯ ಹಿಂಡು (ಅಂಬಿನ ಬಂಬಲೊಳಂ ಜೋಡಾಗಿ ಕೋಡನೂಱೆ ಕೆಡೆದ ಗಜವ್ರಜಂಗಳ ಡೊಣೆವುಗಳಿಂದ ಒಱೆತು ಪರಿವ ನೆತ್ತರ ಕಡಲ್ಗಳೊಳ್ ಮಿಳಿರ್ವ: **ಪಂಪಭಾ,** ೧೦. ೧೧೬ ವ)

**ಗಜಶಿಕ್ಷೆ** – ಆನೆಯನ್ನು ಪಳಗಿಸುವುದು (ತುರಗಾರೋಹಣದಿಂದೊರ್ಮೆ ಗಜಶಿಕ್ಷಾಲೀಲೆಯಿಂದೊರ್ಮೆ: **ಚಂದ್ರಪ್ರಪು,** ೪. ೨೮)

**ಗಜಱು** – ಗದರು (ದೆಸೆಗೆತ್ತಂ ಗಜಱುತ್ತುಮಿರ್ಪ ಪುಲಿಯಿಂ ನೀಳಾಭ್ರಮಂ ದಂತಿಗೆತ್ತು ಸಿಡಿಲ್ದು ಆಗಸಕೆ ಎಯ್ದೆ ಪಾಯ್ವ ಪಲವುಂ ಸಿಂಗಂಗಳಿಂದೆತ್ತಗುರ್ವಿಸಿ: **ಪಂಪಭಾ,** ೭. ೨೬); ಗದರಿಕೆ

**ಗಜಾರಾತಿ** – ಗಜವೈರಿ, ಸಿಂಹ (ಗಜಾರಾತಿಯನಾಂತ ದಂತಿಗೆಣೆಯಾಗಾಂ ಮಾಡಿ ನಿನ್ನಂ .. .. ಮಾಡುವೆಂ: **ಚಂದ್ರಪ್ರಪು,** ೫. ೭೫)

**ಗಜಾರಿ** – ಗಜಾರಾತಿ (ಗಜಮಸ್ತಕದೊಳ್ ಪಾಯ್ದುವು ಗಜಾರಿ ಪಾಯ್ವಂತೆ ನಿಶಿತ ಬಾಣಾವಳಿಗಳ್: **ಶಾಂತಿಪು,** ೪. ೧೮)

**ಗಜೆ** – ಗದೆ (ವರುಣಂ ಪೊಱಮಡುವಂತೆ ನಾನಾಭರಣಾಳಂಕೃತ ಮಣಿಮಕುಟ ವಿರಾಜಿತಂ ಗಜೆಯಂ ಪಿಡಿದು ಪೊಱಮಟ್ಟಾಗಳ್: **ಹರಿವಂಶ,** ೧೨. ೪೬ ವ)

**ಗಜೋನ್ಮೀಲನ** – ಆನೆ ಕಣ್ಣು ತೆರೆಯುವುದು, ಸರಿಯಾಗಿ ನೋಡುವುದು (ಅಪರಾಜಿತಂ .. .. ಕಿಱಿದು ಲೋಕಜ್ಞತೆಯೊಂದಿರ್ಪುದಱಿಂ ರಸಭಂಗಂ ಮಾಡದೆ ಗಜೋನ್ಮೀಲನಂಗೆಯ್ದು: **ಶಾಂತಿಪು,** ೨. ೨೨ ವ)

**ಗಜೋಪಜೀವಿ** – ಮಾವತಿಗ (ಸರ್ವದೋಷ ಪ್ರದುಷ್ಟ ಗಜಂಗಳಂ ಉಪಲಾಲನೆಯೊಳಂ ಇಚ್ಛಾನುವರ್ತನದೊಳಂ ಅಳವಡಿಸುವ ಕುಶಲ ಗಜೋಪಜೀವಿಯಂತೆ: **ಶಾಂತಿಪು,** ೩. ೭೨ ವ)

**ಗಟ್ಟ** – ಬೆಟ್ಟ ಸಾಲು (ಕುರುಡನಪಪ್ಪ ಪೊಲಂಬಿಗನಂ ನಂಬಿ ಗಟ್ಟದ ಇಟ್ಟೆಡೆಯೊಳ್ ಇರುಳ್ ದೂರದೇಶಕ್ಕೆ ಪಯಣಂಬೋಪನೆಂಬಾತನುಂ: **ಧರ್ಮಾಮೃ,** ೭. ೨೨ ವ)

**ಗಟ್ಟಿಗೆ** – ಒಂದು ನದಿಯ ಹೆಸರು, ಘಟಪ್ರಭೆ (ಅಱೆಕೆಯ ಗಟ್ಟಿಗೆಯುಂ ಪೆರ್ದೊಱೆಯುಂ ಪರಿದಲ್ಲಿ ತದ್ದವಡಿಗೆ ತೆಂಕಲ್ .. .. ಬೆಳುಗಲಿ ದೇಶಂ: **ಅಜಿತಪು,** ೧೨. ೪೪)

**ಗಟ್ಟಿಮಗುಟ್ಚು** – ಗಂಧವನ್ನು ತೇಯಿ (ಸುಯ್ಯೆಲರ್ಗಂಪುಗಳ್ ದಳಂಗಳನಧಿವಾಸಿಸುತ್ತುಮಿರೆ ಗಟ್ಟಿಮಗುಟ್ಚುವುದಂಗನಾಜನಂ: **ಚಂದ್ರಪ್ರಪು,** ೧. ೧೨೧)

**ಗಟ್ಟಿವಳ್ತಿ** – ಗಂಧ ತೇಯುವವಳು (ಪೊಸಜವ್ವನೆ ನಡೆತಂದಳ್ ಕುಸುಮಾಸ್ತ್ರನ ಗಟ್ಟಿವಳ್ತಿಯೊರ್ಬಳ್ ಭರದಿಂ: **ಗಿರಿಜಾಕ,** ೭. ೮)

**ಗಟ್ಟಿಸು** – ದಮ್ಮಸ್ಸು ಮಾಡು (ಗಟ್ಟಿಸಿ ಸೆಂದುರದೊಳ್ ನೆಲಗಟ್ಟಿಸಿ ಚೆಂಬೊನ್ನ ನೆಲೆಯ ಚೌಪಳಿಗೆಗಳೊಳ್ ಕಟ್ಟಿಸಿ ಪಟಯಿಗೆಗಳಂ: **ಪಂಪಭಾ,** ೨. ೬೬); ಹೊಡೆ (ಅವಳ ಮುನಿಸಱಿದು ಏಂ ಗಟ್ಟಿಸಿದುದೊ ಪಲಗೆಯನೆನೆ ಬಾಷ್ಪಸಲಿಲಮಂ ತಳೆದು ನೇತ್ರಪುತ್ರಿಕೆ ಕರದಿಂ: **ಲೀಲಾವತಿ,** ೧೪. ೩೨)

**ಗಡಂ** – ಮೆಚ್ಚಿಗೆ, ಆಕ್ಷೇಪ, ಸಂತೋಷ, ಆಕ್ಷೇಪ ಮುಂತಾದದವುಗಳನ್ನು ಸೂಚಿಸುವ ಅವ್ಯಯ (ರಂಜಿಪುವು ಗಡ ಗಳ ಗಡಂಗಳುಂ ಉಪಚಿತವಾರ್ತೆಯೊಳಂ ಉಚಿತಸಂಭಾಷಣೆಯೊಳ್: **ಶಬ್ದಮದ,** ೩೩೩)

**ಗಡಗೆ** – ಮಣ್ಣಿನ ಕೊಡ, ಬಿಂದಿಗೆ (ಘಕಾರಕ್ಕೆ ಗಕಾರ ಪ್ರಯೋಗಂ: ನಿಘಂಟು–ನಿಗಂಟು, ಘಟಕಂ–ಗಡಗೆ: **ಶಬ್ದಮದ,** ೨೯೯, ಪ್ರ)

**ಗಡಣ** – ಸಮೂಹ (ಪಿಡಿದನೆ ಪುರಿಗಣೆಯಂ ಎರಟ್ಟುಡಿದನೆ ಬಳ್ಕಿದನೆ ತಾನೆ ತನ್ನನೆ ಚಲಮಂ ಪಿಡಿದು ಅಟಿದಂ ಎಂದು ದೇವರ ಪಡೆ ಗಡಣದೆ ಪೊಗಟ್ದುದು ಇನತನೂಜನ ಗಂಡಂ: **ಪಂಪಭಾ,** ೧೨. ೨೧೬)

**ಗಡಣಂಬಡೆ** – ಒಟ್ಟಾಗಿರು, ಗುಂಪಾಗು (ರದನಂ ಗಡಣಂಬಡೆದಾರದನಂಗನ ಕೀರ್ತಿಲತೆಯ ಬಿತ್ತೆನಿಸಿರ್ದುಂ: **ಜಗನ್ನಾವಿ,** ೧೦. ೩೭)

**ಗಡಣಿಸು** – ಸೇರು, ಗುಂಪಾಗು (ಪರಿಚಾರಿಕೆಯರ್ ಗಡಣಿಸಿ ಬರೆ: **ಪುಣ್ಯಾಸ್ರ:** ೭. ೪೯)

**ಗಡಣೆ** – ಮೇಳ, ಗಾನಗೋಷ್ಠಿ (ಕನಕಗೋಪುರಂಗಳೊಳಗಣೆರಡು ದೆಸೆಯ ಗುಣಣೆಯಿಂ ವಿಳಾಸನಿಯರ ಗಡಣೆಯಿಂ: **ಪಂಪಭಾ,** ೧. ೫೮)

**ಗಡಪ** – ವೇಗ, ತ್ವರಿತ (ಗಡಪದಿಂ ಐದು ಯೋಜನಮಂ ಒರ್ವನೆ ಸಂಧಿಸಿ ಪೋದಂ: **ಕಾದಂಬ,** ೪. ೪)

**ಗಡಿ** – ಎಲ್ಲೆ; ವೇಗಶಾಲಿ (ಕಡು ಗಡಿಯಪ್ಪ ಎರಡಾನೆಗಳ್ ತಮ್ಮೊಳ್ ಪೋರಲ್ ಸಾರ್ದುಂ ಪೆಱಪಿಂಗಿ ಪೋದುದುಮಂ: **ವಡ್ಡಾರಾ,** ಪು ೮೫, ಸಾ ೨೫)

**ಗಡಿಂ** – ದಿಟವಾಗಿಯೂ (ಇದಂ ಪುಗಲಿಂ ಗಡಿಂ ಎಂದು ಬೇಟಕಾಱರಂ ಇರದೆ ಊಱೆ ಸಾಱೆ ಜಡಿವಂತೆ ಎಸೆಗುಂ ಸಹಕಾರಕೋಮಳ ಅಂಕುರಪರಿತುಷ್ಟ ಪರಪುಷ್ಟಗಳ ಧ್ವನಿ ನಂದನಂಗಳೊಳ್: **ಪಂಪಭಾ,** ೨. ೧೩)

**ಗಡಿಗೆಡು** – ಎಲ್ಲೆಮೀರು, ಮಿತಿಮೀರು ಗಡಿಗೆಟ್ಟು ಅಜಾಂಡಕೋಟಿಯಂ ಎಡೆಯುಡುಗದೆ ನುಂಗಿಯುಗುಟ್ವ ನಿನಗೀ ಪಗೆಯಂ ಮಡಿಪುವುದು ಪಿರಿದೇ: **ಜಗನ್ನಾವಿ,** ೬. ೮೨)

**ಗಡುಲ** – ಕುಬ್ಜ (ಗಡುಲಂ ತಾಂ ಕುಬ್ಜಂ ಅಲ್ಪಸ್ವತನುಪರಿಗತಂ: **ಅಭಿಧಾವ,** ೧. ೧೨. ೪೦):

**ಗಡುಳ** – ಗೂನ (ಹಾಸ್ಯರಸಾಸಾದಿತ ವಾಮನ ಕುಬ್ಜ ಖಂಜ ಗಡುಳ ಮೂಕ ಬಧಿರ ಕಿರಾತಸಮುದಾಯಮುಮಂ: **ತ್ರಿಷಷ್ಟಿಪು,** ೧೮. ೫೪ ವ)

**ಗಡ್ಡೆಯಂಬೋಗು** – ಮರಗಟ್ಟಿ ಹೋಗು ಪೋದ ಒಲವು ಎಯ್ದೆ ಮತ್ತೆ ಪೊಸನಾದುವು ನೀರಸವಾಗಿ ಗಡ್ಡೆಯಂಬೋದ ಮನಂ ಕೊನರ್ತುವು: **ಚಂದ್ರಪ್ರಪು,** ೭. ೬೬)

**ಗಣ** – ಗುಂಪು, ಸಮೂಹ (ಸಂಕುಲಂ ಉತ್ಕರಂ ತತಿ ಗಣಂ: **ಅಭಿಧಾವ,** ೨. ೧. ೨೭); ಚತುರಂಗ ಸೈನ್ಯದ ಒಂದು ನಿರ್ದಿಷ್ಟ ಗುಂಪು (ಒಂದು ಸಾಮಜಮಂದು ತೇರ್ ಮೂಱಶ್ವಂ ಅಯ್ದು ಕಾಲಾಳ್ಗಳ್ ಪತ್ತಿಯಕ್ಕುಂ ಸಂದ ಪತ್ತಿ ಮೂಱಾಗೆ ಸೇನಾಮುಖಂ ಆ ಮೂಱು ಗುಲ್ಮಂ ಮೂಱುಗುಲ್ಮಕ್ಕೊಂದು ಗಣಂ: **ಅಭಿಧಾವ,** ೧. ೧೪. ೮);

**ಗಣಕ** – ಜೋಯಿಸ, ಮುಹೂರ್ತ ನಿಶ್ಚೈಸುವವನು (ಶಾರದಶ್ರೀಯನಿದಿರ್ಗೊಂಡು ಅನೇಕ ಗಣಕಗಣಗಣಿತ ಶುಭದಿನನಕ್ಷತ್ರಮುಹೂರ್ತದೊಳ್: **ಆದಿಪು,** ೧೧. ೯ ವ);

ಲೆಕ್ಕಿಗ (ಗಣಕನ ಕೈಯೊಳ್ ಕುಡಲ್ ಆತಂ ಸಭಾಜನಂ ಕೇಳ್ವುದು ಎಂದೋದಿದಂ: **ತ್ರಿಷಷ್ಟಿಪು,** ೨. ೯೮ ವ)

**ಗಣಗ್ರಹಣ** – [ಜೈನ] ದೀಕ್ಷಾನ್ವಯಕ್ರಿಯೆಗಳಲ್ಲಿ ಒಂದು (ಮತ್ತಮವತಾರವೃತ್ತಿ ಲಾಭಸ್ಥಾನಗಣಗ್ರಹಣ ಪೂಜಾರಾಧ್ಯ ಪುಣ್ಯ .. .. ಎಂಬೆಂಟುಂಬೆರಸು: **ಆದಿಪು,** ೧೫. ೧೬ ವ)

**ಗಣಧರ** – [ಜೈನ] ತೀರ್ಥಂಕರನ ಶಿಷ್ಯರ ಗುಂಪಿನ ಮುಂದಾಳು, ತೀರ್ಥಂಕರನ ದಿವ್ಯಧ್ವನಿಯನ್ನು ಭವ್ಯರಿಗಾಗಿ ಅರ್ಥವಿಸುವವನು (ಜಿನವಚೋಮೃತಮಂ ಭವ್ಯಾವಳಿಗೆ ಕಱೆದ ಗಣಧರದೇವರ್ ದಯೆಗೆಯ್ಗೆ ನಮಗೆ ಸಕಲಶ್ರುತಮಂ: **ನೇಮಿನಾಪು,** ೧. ೧೨)

**ಗಣನಾತೀತ** – ಎಣಿಕೆಗೆ ಮೀರಿದ (ಗಣನಾತೀತಾಜ್ಯಾಹುತಿ ಗಣದಿಂದಂ ತಣಿಯೆ ಜಾತವೇದಂ: **ಪಂಪಭಾ,** ೬. ೩೭)

**ಗಣನಾಥ** – ಗುಂಪಿ ಯಜಮಾನ (ಗಣನಾಥರ್ ಜಯಮುಖ್ಯರ್ ಅರ್ಧಶತಕಂ; **ಅನಂತಪು,** ೧೪. ೪೪)

**ಗಣನೆ** – ಎಣಿಕೆ, ಲೆಕ್ಕ (ಸುಕವಿಜನಗಣನೆಯೊಳ್ .. .. ಕಾಳಿದಾಸಂ ಮೊದಲೆಂದು ಕರಂ ಬಣ್ಣಿಪರ್: **ಜಗನ್ನಾವಿ,** ೧. ೯)

**ಗಣಿಕಾಜನ** – ವೇಶ್ಯೆ (ತನಗೆನ್ನದ ನಿಶ್ಚಯಮಪ್ಪ ದಾನಮೆಂಬಿನಿತಿಲ್ಲದೊಡೆ ಗಣಿಕಾಜನಸಾಧನಸಿದ್ಧಿಯಕ್ಕುಮೇ: **ಶಾಂತಿಪು,** ೮. ೯೯)

**ಗಣಿಕಾವಾಟ** – ಸೂಳೆಗೇರಿ (ಗಂಡೆರಲೆಗಳಂ ಬೆಳ್ಳೆರಲೆಗಳೆನಿಸಿಯುಂ ಗಣಿಕಾವಾಟಿಯೊಳ್ ಸುಟಿವ ಬೊಜಗರ: **ಕುಸುಮಾಕಾ,** ೪. ೪೫ ವ)

**ಗಣಿಕೆ** – ಸೂಳೆ (ಸ್ನಾನಾರ್ಥಂ ಒಂದು ಕಳಶಮಂ ನಿಯಮನಿಧಾನಂ ಎಟಲೆ ಪಿಡಿದು ಅಮಳಿನ ಗಂಗಾನದಿಗೆ ವಂದು ಸುರತನಿಧಾನಿ ಅಮರೇಂದ್ರಗಣಿಕೆಯಂ ಮುನಿ ಕಂಡಂ: **ಪಂಪಭಾ,** ೨. ೪೧)

**ಗಣಿದ** – [ಗಣಿತ] ಎಣಿಕೆ, ಲೆಕ್ಕ (ಗಣಿದಮಿದೊಂದುಮಿಲ್ಲ ನಿನಗೆ ಈ ಖಳಸಂಸ್ಕೃತಿಯೆಂಬುದೊಂದು ಱಾಟಣದೊಳಗೆ: **ಆದಿಪು,** ೩. ೭೧)

**ಗಣಿದಂಗೆಯ್** – ಎಣಿಸು, ಲೆಕ್ಕಹಾಕು (ತೃಣವತ್ ಲಘುವಾಗಿಯೆ ತತ್ ಕ್ಷಣದಿಂ ಖಚರೇಂದ್ರಪದವಿಯಂ ನೆಱೆ ಬಿಟ್ಟಂ ಗಣಿದಂಗೆಯ್ಯದೆ ಖಚರಾಗ್ರಣಿಯೆನೆ ವೈರಾಗ್ಯ ವಿಭವದಿಂ ಪೆಱತುಂಟೇ: **ಶಾಂತೀಶ್ವಪು,** ೯. ೧೩೩)

**ಗಣಿದಂಗೊಳ್** – ಗಣಿದಂಗೆಯ್ (ಗಣಿದಂಗೊಳ್ವೊಡೆ ಮಿಕ್ಕಿನಕ್ಕರದ ಮಾತಂತಿರ್ಕೆ ತನ್ನಾಣೆಗೋಸಣೆ ಸಲ್ಗುಂ; **ಧರ್ಮಮಧು,** ೧. ೬೯)

**ಗಣಿದಿಗ** – ಗಣಿತಜ್ಞ (ಗಣಿದಿಗನಿನಿತನಿತಕ್ಷೌಹಿಣಿಯೆಂದೆಣಿಸಲ್ ಸಮರ್ತನಕ್ಕೆಮ: **ಪಂಪರಾ,** ೧೩. ೧೦)

**ಗಣಿಯಾನೆ** – ಹಿಂಡಿನ ಆನೆಗಳು (ಒಂದು ದಿನಂ ಅಡವಿಯ ಸೊರ್ಕಿದಾನೆ ಗಣಿಯಾನೆಗಳ್ವೆರಸು ಬಂದು ಬಾವಿಯಂ ಪೊಕ್ಕೊಡೆ: **ವಡ್ಡಾರಾ,** ಪು ೧೧೧, ಸಾ ೧೯)

**ಗತಕ** – ಚಾಂಚಲ್ಯ (ಜೊತ್ತು ಗತಕಂ ಗನ್ನಂ ಕಜಾಕರ್ಷಣಂ ಸರಸಂ ಚಾರು ನಖಕ್ಷತಂ .. .. ಪಿರಿದುಣ್ಮಲ್ ವಧು ನಲ್ಲನೊಳ್ ನೆರೆವುತಿರ್ದಳ್: **ತ್ರಿಷಷ್ಟಿಪು,** ೨೪. ೧೮೦)

**ಗತಕಿ** – ಕೃತಕಿ, ಕಪಟಿ (ಖುತ್ವಕ್ಕತ್ವಂ: ಕೃತಕಿ–ಗತಕಿ, ಗದಗಿಯುಮಕ್ಕುಂ: **ಶಬ್ದಮದ, ಪ್ರ**)

**ಗತಜೀವಿತ** – ಸತ್ತವನು (ಕೆಲರ್ .. .. ದೆಸೆಯನೆ ನೋಡಿ ನೋಡಿ ಗತಜೀವಿತರಾದರ್: **ಶಾಂತಿಪು,** ೪. ೩೦ ವ)

**ಗತಪ್ರಜ್ಞ** – ಪ್ರಜ್ಞಾಹೀನ (ನಿರೀಕ್ಷಿಸಿ ನಿಕೃಷ್ಟದುಷ್ಟಗಣರಂ ಗತಪ್ರಜ್ಞರಂ: **ಸುಕುಮಾಚ,** ೨. ೧೮)

**ಗತಪ್ರತ್ಯಾಗತ** – ಮೊದಲಿನಿಂದ ಕಡೆಯವರೆಗೆ ಹಾಗೂ ಕೊನೆಯಿಂದ ಆರಂಭದವರೆಗೆ (ಶ್ರುತಕೀರ್ತಿ ತ್ರೈವಿದ್ಯವ್ರತಿ ರಾಘವಪಾಂಡವೀಯಮಂ ವಿಬುಧ ಚಮತ್ಕೃತಿಯೆನಿಸಿ ಗತಪ್ರತ್ಯಾಗತದಿಂ ಪೇಟ್ದು ಅಮಲಕೀತಿಯಂ ಪ್ರಕಟಿಸಿದಂ: **ಪಂಪರಾ,** ೧. ೨೫)

**ಗತವೇದ** – [ಜೈನ] ಇಂದ್ರಿಯಾಭಿಲಾಷೆಯನ್ನು ಕಳೆದುಕೊಂಡವನು (ವೇದನಬಂಧಮಂ ಸಮಯೋನದ್ವಾವಳಿಕಾ ಸಮಯಂಗಳಿಂ ವಿದಾರಿಸಿ ಗತವೇದನಾಗಿ: **ಶಾಂತಿಪು,** ೧೧. ೧೧೧ ವ)

**ಗತಶ್ರೀಕ** – ಸಂಪತ್ತು ಕಳೆದುಕೊಂಡವನು, ದುರದೃಷ್ಟವಂತ (ಗತಶ್ರೀಕನಪ್ಪನಂ ಸೇವಿಪರಾರ್: **ರಾಜಶೇವಿ,** ೯. ೬೫)

**ಗತಿ** – ಗಮನ (ಮಿತ್ರನ ತೇಜಕ್ಕಡ್ಡಲಾದೆಂ ದ್ವಿಜಗತಿಗೆಡಿಸಿರ್ದಂ: **ರಾಜಶೇವಿ,** ೬. ೪); ಆಧಾರ (ಗತಿಯುಂಟೋ ದಯೆಯುಂಟೋ ಮತಿಯುಂಟೋ ಸಂಗತಿಯುಂಟೋ .. .. ಅನ್ಯರ ಸತಿಗಲುಪಿದ ನರಂಗೆ ವಸುಧಾತಳದೊಳ್: **ಧರ್ಮಾಮೃ,** ೧೩. ೧೦೯)

**ಗತಿಗೆಡು** – ನಡೆಗೆಡು, ಹಾಳಾಗು (ಕಾಲ್ಗೆಟ್ಟನಂತೆ ಗತಿಗೆಟ್ಟು ಬೆಸನಿಯಂತೆ ಪೆಂಪುಬಿಟ್ಟು: **ಧರ್ಮಾಮೃ,** ೨. ೬೭ ವ)

**ಗತಿಚತುಷ್ಟಯ** – [ಜೈನ] ಕರ್ಮಾನುಗುಣವಾಗಿ ಜೀವನಿಗೆ ಒದಗುವ ನಾಲ್ಕು ವಿಧದ ಜನ್ಮಗಳು (ನಾರಕ ತಿರ್ಯಕ್ ನರ ಬೃಂದಾರಕರೆನೆ ಗತಿಚತುಷ್ಟಯಂಗಳ್: **ಪುಷ್ಪದಂಪು,** ೧೩. ೫೬)

**ಗತಿಸಂರೋಧನ** – ಮುಗ್ಗರಿಸುವಿಕೆ, ಅಡ್ಡಿ (ಉನ್ಮಗ್ನ ನಿಮಗ್ನ ಜಲಾಪಗಾಯುಗಂ ಗತಿಸಂರೋಧನಮಾಗೆ: **ಶಾಂತಿಪು,** ೧೧. ೫೦)

**ಗತಿಸ್ತಂಭ** – ಗತಿಸಂರೋಧನ (ಏಱುದರ ಮೆಯ್ಯಳ್ಕಾಡೆ ತೂಗಿ ತೊನೆವಿನಂ ನಿಂದ ವಿಮಾನ ಗತಿಸ್ತಂಭಮಂ ಕಂಡು: **ಶಾಂತಿಪು,** ೪. ೬೧ ವ)

**ಗದ** – (ಕಾಂತಿಯಂ ಬಿಚ್ಚಳಿಪ ಅಚ್ಚಬಜ್ಜರಗದಂ ನವಮೌಕ್ತಿಕಸೌಧಮಾಲೆ .. .. ರಯ್ಯಮಲ್ಲಿಯ ಸೂಳೆಗೇರಿಯೊಳ್: **ರಾಜಶೇವಿ,** ೨. ೧೧೬)

**ಗದಕಿ** – ಕೃತಕಿ, ಕಪಟಿ (ಖುತ್ವಕ್ಕತ್ವಂ: ಕೃತಕಿ–ಗತಕಿ, ಗದಗಿಯುಮಕ್ಕುಂ: **ಶಬ್ದಮದ, ಪ್ರ**)

**ಗದಗಂಪಂಗೊಳ್** – ಗಡಗಡ ನಡುಗು (ಗದಗಂಪಂಗೊಳುತುಂ ಪುಳಿಂದ ಸಮರೋದ್ಯದ್ಗೀತಿಯಿಂ ಸೋರ್ವಾ ಬಾಷ್ಪದಗುರ್ವಿಂದಮೆ ಮುಂದುಗಾಣದೆ: **ಕುಸುಮಾಕಾ,** ೧೪. ೧೦೧)

**ಗದಱು** – ಗರ್ಜಿಸು (ಗಜಱು [ಗದಱು]–ಗರ್ಜನೇ: **ಶಬ್ದಮದ, ಧಾ** ೮೬೦)

**ಗದಾಂಗ** – ವೈದ್ಯಶಾಸ್ತ್ರ (ಚಿಕಿತ್ಸಾಗೂಢ ಪ್ರೌಢಮಪ್ಪ ಗದಾಂಗಮುಮಂ ಪೆಱವುಂ ವಿದ್ಯಾಕಳಾ ಕಳಾಪಮುಮಂ ತ್ರಿದಶವರ್ಗಕ್ಕುಪದೇಶಂಗೆಯ್ಯುತ್ತುಂ ಬಾಲಭಾವಮಂ ಪೆಱಗಿಕ್ಕಿ ಯೌನಪ್ರಾದುರ್ಭಾವಕ್ಕೆ ಇದಿಱಾಗಿ: **ಶಾಂತಿಪು,** ೧೦. ೯೦ ವ)

**ಗದಾಹತಿ** – ಗದೆಯ ಹೊಡೆತ (ಮಹಾಪ್ರಳಯ ಉಲ್ಕೋಪಮ ಮತ್ ಗದಾಹತಿಯಿಂ ಅತ್ಯುಗ್ರ ಆಜಿಯೊಳ್ ಮುನ್ನಂ ಈ ಖಳ ದುಶ್ಶಾಸನನಂ ಮೊರಳ್ಚಿ ಬಸಿಱಂ ಮೋಟ್ದಿಕ್ಕಿ

ಬಂಬಲ್ಗುರುಳುಗಳಂ ಆನಲ್ತೆ ವಿಳಾಸದಿಂ ಮುಡಿಯಿಪೆಂ ಪಂಕೇಜಪತ್ರೇಕ್ಷಣೇ: **ಪಂಪಭಾ,** ೭. ೧೨)

**ಗದಿತ** – ಹೇಳಿದ, ನುಡಿದ (ಜಿನ ಗದಿತ ಮಾರ್ಗದಿಂ ಜಿನಮುನಿಗನ್ನಮನಿತ್ತು ದೇವ ಕುರು ಭೂತಲ ಸಂಜನಿತಂ ತತ್ಸುತರೊಳ್ ತಣ್ಣನೆ ತಣಿದು ಈಶಾನ ಕಲ್ಪದೊಳ್ ಜನಿಯಿಸಿದಂ: **ಪಂಪರಾ,** ೧೫. ೪೩)

**ಗದಿಸು** – ಹೇಳು, ನುಡಿ (ಸತ್ಕೃತಿಸಂಚಯಂ ಈ ಧರಿತ್ರಿಯೊಳ್ ಪುದಿದಿರೆ ನೋಡಿ ತುಷ್ಟಿವಡಲೊಲ್ಲದೆ ಕಬ್ಬಿಗರೇಕೆ ಕಬ್ಬಮಂ ಗದಿಪರೊ ಬೇಱೆ: **ರಾಜಶೇವಿ,** ೧. ೩೫)

**ಗದುಗು** – ಗಜ್ಜುಗ (ಶಿವಭಕ್ತಜನಂಗಳೊಳ್ ಪೊನ್ನ ಗದುಗುಗಳೊಡ್ಡಿ ಇಟ್ಟಾಡುತ್ತಿರಲ್: **ತ್ರಿಷಷ್ಟಿಪು,** ೨. ೧೬೩ ವ)

**ಗದೆ** – ಒಂದು ಬಗೆಯ ಆಯುಧ (ಗದೆ ಗದೆಯಂ ಘಟ್ಟಿಸೆ ಪುಟಿದ ಕೆಂಡದ ಕಿಡಿಯ ತಂಡ ಎಂಟುಂ ದೆಸೆಯಂ ಪುದಿಯೆ: **ಗದಾಯು.** ೮. ೧೩)

**ಗದ್ಗದ** – ಧ್ವನಿ ನಡುಕ (ತೃಷ್ಣಾತುರ ಗದ್ಗದಕಾಂತೆಯನಾ ತಾಪಸಂ ಆಗಳ್ ಅವಳನಿದಿರೊಳೆ ಕಂಡಂ: **ಸುಕುಮಾಚ,** ೪. ೫೬)

**ಗದ್ಗದಿಕೆ** – ಗದ್ಗದಸ್ವನ (ಆ ಕಾಂತೆ ಅನುಪಸಂಹೃತಮನ್ಯುವೇಗೆಯುಂ ಗದ್ಗದಿತ ಅವಗೃಹ್ಯಮಾಣಕಂಠೆಯುಂ ಆಗಿ ಕುಮಾರನಂ ಇಂತೆಂದಳ್: **ಕಾದಂಸಂ,** ೭. ೯ ವ)

**ಗದ್ದುಗೆ** – ಜಗುಲಿ (ತಪೋಧನರ್ಗಿರದೆ ಗದ್ದುಗೆಗಳಂ ಕಟ್ಟಿ ಧೂಪದೀಪಂಗಳುಮಂ ಕೊಟ್ಟು ಪರಿಯಷ್ಟಿಗೆಯ್ವ ಪಟುತರ ಮರ್ಕಟಸಮೂಹಂಗಳುಮಂ: **ಪಂಚತಂತ್ರ,** ೧೯೦ ವ)

**ಗದ್ದುಗೆವೊಯ್** – [ಕೋಪದಿಂದ] ಕುಳಿತ ಪೀಠವನ್ನು ಹೊಡೆ (ಗದ್ದುಗೆವೊಯ್ದು ಕಣ್ಣ ಕೆಂಪು ಕಿಸುಸಂಜೆಯಂ ಪಸರಿಸೆ: **ಕಬ್ಬಿಗಕಾ,** ೧೯೩)

**ಗದ್ಯಕಥಾ[ಥೆ]** – ಗದ್ಯಪದ್ಯಗಳಿಂದ ಕೂಡಿದ ಕಾವ್ಯ (ಅಗಣಿತಗುಣ ಗದ್ಯಪದ್ಯಸಮ್ಮಿಶ್ರಿತಮಂ ನಿಗದಿಸುವರ್ ಗದ್ಯಕಥಾಪ್ರಗೀತಿಯಿಂ ತಚ್ಚಿರಂತನಾಚಾರ್ಯರ್ಕಳ್: **ಕವಿರಾಮಾ,** ೧. ೨೭)

**ಗದ್ಯಣ** – ಒಂದು ಚಿನ್ನದ ನಾಣ್ಯ (ಪಲಗೆಗೆ ಪತ್ತು ಸಾಯಿರಮೆ ಗದ್ಯಣಂ ಎಂದಿರದೆ ಒಡ್ಡಿ ತಾಮ್ ಎರಟ್ಟಿಲಗೆಯಂ ಆಡಿ ಸೋಲ್ತೊಡೆ: **ಪಂಪಭಾ,** ೬. ೭೨)

**ಗದ್ಯಾಣ** – ಗದ್ಯಣ (ನಿಚ್ಚಮಿರ್ವರ ಭೋಗಕ್ಕಂ ಮನೆಯ ಬಿಯಕ್ಕಂ ಸಾಸಿರ ಗದ್ಯಾಣಂ ಬೇಟ್ಕೆಂದಟ್ಟಿ ತರಿಸಿಕೊಳ್ಗುಂ: **ಹರಿವಂಶ,** ೪. ೧ ವ)

**ಗಬ್ಬರಿಸು** – ನೆಲವನ್ನು ಅಗೆ (ಗಬ್ಬರಿಸು–ಖನನೇ: ಶಬ್ದಮದ, ಧಾ ೭೭೨)

**ಗಭಸ್ತಿ** – ಕಿರಣ, ಕಾಂತಿ (ಮುಗಿಲಟ್ಟಳೆಗಳ ಹರಿನೀಲ ಗಭಸ್ತಿಧ್ವಾಂತಪಟಲದೊಳ್ .. .. ಮುಗಿದುವು ದಿನಕರನ ಕೆಯ್ಯ ಕೆಂದಾವರೆಗಳ್: **ಮಲ್ಲಿನಾಪು,** ೨. ೪೧)

**ಗಭಸ್ತಿಮಾಲಿ** – ಸೂರ್ಯ (ತ್ರಯೀಮಯನುಂ ನಿತ್ಯೋದಯನುಮಪ್ಪ ಗಭಸ್ತಿಮಾಲಿಗೆ ಅರ್ಘ್ಯಮನೆತ್ತಿದ ಹಸ್ತಕಮಲದೊಳ್: **ಪಂಚತಂತ್ರ,** ೩೫೭ ವ)

**ಗಭಸ್ತಿಹಸ್ತ** – ಗಭಸ್ತಿಕರ (ಅಂತಾ ಸಮಯದೊಳ್ ದಮಿತಾರಿಯ ತೇಜೋಸ್ತಮಯಂ ಇಂತಪ್ಪುದೆಂದು ಅಱಿಪುವಂತೆ ಗಭಸ್ತಿಹಸ್ತಂ ಅಸ್ತಾದ್ರಿಯಂ ಎಯ್ದೆಪೋಗೆ: **ಶಾಂತೀಶ್ವಪು,** ೮. ೪೫ ವ)

**ಗಭೀರ** – ಗಂಭೀರವಾದ, ಆಳವಾದ (ಸತತ ಗಭೀರವೃತ್ತಿಯಿಂ ಉದಾರತೆಯಿಂ .. .. ದಯೆಗೆಯ್ಗೆ ನಮ್ಮೊಳನುಕೂಲತೆಯಿಂದವೆ ನಿರ್ಮಳತ್ವಮಂ: **ಕಾದಂಸಂ,** ೧. ೨)

**ಗಭೀರನಿನದ** – ಗಭೀರಧ್ವಾನ (ದುಂದುಭಿ ಗಭೀರನಿನದಂ ದುಂದುಭಿ ಸಂವತ್ಸರೋದ್ಭವಂ: **ಆದಿಪು,** ೧. ೩೩)

**ಗಭೀರೋಕ್ತಿ** – ಗಂಭೀರ ನುಡಿ (ದಿವ್ಯ ಗಭೀರೋಕ್ತಿಯಿಂಗಮಾಗಳ್ ಪೇೞ್ದಂ: **ಜಗನ್ನಾವಿ,** ೪. ೮೧)

**ಗಮಕ** – ಸಂಗೀತ ಸ್ವರ ವಿಶೇಷ (ಪದಕೊರಲ್ ಇಂಪಂ ಅಪ್ಪುಕೆಯೆ ಕೊಂಕು ನಯಂ ಗಮಕಂಗಳಿಂ ಪೊಡರ್ ಕೊದಳ್ ಎಱೆದಿಕ್ಕಿದಂತೆ ಸುತಿಯೊಳ್ ಸಮವಾಗಿರೆ .. .. ಮೇನಕೆ ಸರಸ್ವತಿ ಬಾಯ್ದೆಱೆದಂತೆ ಪಾಡಿದಳ್: **ಪಂಪಭಾ,** ೭. ೮೮)

**ಗಮಕಿ** – ಕಾವ್ಯ ವಾಚಿಸುವವನು (ಕವಿ ಗಮಕಿ ವಾದಿ ವಾಗ್ಮಿ ಪ್ರವರರ ಪಂಡಿತರ ನೆಗೞ್ದ ಸಬ್ಬವದವರೊಡನೆ ಅಂತು ಒಸೆದ ಅನ್ನವಾಸದೊಳ್ ಇರ್ದನಾಗಳ್ ಹರಿಗಂ: **ಪಂಪಭಾ,** ೩. ೮೦)

**ಗಮನ ಪ್ರಾಯಶ್ಚಿತ್ತ** – [ಜೈನ] ಪ್ರಯಾಣದಲ್ಲಿ ಕ್ರಿಮಿಕೀಟಗಳಿಗಾಗುವ ಹಿಂಸೆಗಾಗಿ ಆಚರಿಸುವ ಪ್ರಾಯಶ್ಚಿತ್ತ(ಗಮನಪ್ರಾಯಶ್ಚಿತ್ತ ನಿಮಿತ್ತಂ ಸುದತ್ತಾಚಾರ್ಯರ್ ಪುರೋಪವನಮಂ ಸಾರ್ದರ್: **ಯಶೋಧಚ,** ೧. ೪೪)

**ಗಮ್ಮನೆ** – ಬೇಗನೆ, ತಕ್ಷಣ (ಇನಿಸಾನುಂ ಬೇಗದಿಂ ಗಮ್ಮನೆೞ್ಚತ್ತು: **ಲೀಲಾವತಿ,** ೫. ೧೫ ವ); ಸುವಾಸಿತವಾದ (ಮುಗುಳ್ಗಳ ಮಾಲೆ ಸುಯ್ಯ ನರುಗಂಪಿನೊಳ್ ಇರ್ಮಡಿ ಗಮ್ಮನಾಗೆ: **ಆಚವರ್ಧ,** ೧. ೬೪)

**ಗಮ್ಯ** – ತಿಳಿವಳಿಕೆಗೆ ಸಿಕ್ಕುವ (ಕೇವಲಗಮ್ಯಂ ಸದಾನುಮೇಯಂ ಕಾಲಂ: ಪಂಪರಾ, ೧. ೪೬)

**ಗರ** – ಗ್ರಹ, ದುಷ್ಟ ಶಕ್ತಿ (ಸುರ ದನುಜ ಭುಜಗ ವಿದ್ಯಾಧರ ನರ ಸಂಕುಲದೊಳ್ ಆರನಾದೊಡಂ ಏನೋ ಗರಮುಟ್ಟೆ ಕೊಲ್ಗುಂ ಇದು ನಿಜವಿರೋಧಿಯಂ ಧುರದೊಳ್ ಎಂದು ಶಕ್ತಿಯನಿತ್ತಂ: **ಪಂಪಭಾ,** ೧. ೧೦೩); ವಿಷ (ಅಜಂ ಅಜಗರ ಗರದಿಂದ ಅಭ್ರಜಶಿಖಿರವದಿಂದೆ ಪುಲಿಯ ಕಾಯ್ಪಿಂ .. .. ಕುಜನ ಜನಮಂ ಸೃಜಿಸಿದಂ: **ರಾಜಶೇವಿ,** ೧. ೩೮)

**ಗರಕಾಲಕಂಧರ** – ವಿಷದಿಂದ ಕಪ್ಪಾದ ಕೊರಳುಳ್ಳವನು, ಶಿವ (ಕಾಲಮರ್ದನ ಗರಕಾಲಕಂಧರ ಧರಾಧರ ಧನ್ವ: **ರಾಜಶೇವಿ,** ೧೦. ೫೯)

**ಗರಗರನೆ** – ಚೆಲುವಾಗಿ, ಹಸನಾಗಿ (ಗರಗರನಾಗಿ ಭೋಗಿಪೊಡೆ ಮೇಳಿಸಿ ಮುಗ್ಧೆಯಂ ಆಗುಮಾಟ್ಟುದು: **ನೇಮಿನಾಪು,** ೪. ೮೬)

**ಗರಗರಿಕೆ** – ಚೆಲುವು (ಗರಗರಿಕೆವಡೆದ ಎಳವೆಂಡಿರ ತಂಡದಿಂ ನೆಗೞ್ತೆವಡೆದು ಮೇಲೂರ್ಗಳ ಮುಂಡಾಡುವಂತೆ ಆಗಸಕೆ ನೆಗೆದ ನೆಲವಾಡಂಗಳ: **ಕಬ್ಬಿಗಕಾ,** ೧೭ ವ); ಗರಗರ ಶಬ್ದ, ಗದ್ಗದ (ಎಂದೊಡೆ ದೂದವಿಗೌಳಿಂತೆಂದಳ್ ಗರಗರಿಕೆ ಕೊರಲೊಳ್ ಈಕ್ಷಣದೊಳ್ ವಾರ್ಬಿಂದು ಮಿಡುಕು ಎರ್ದೆಯೊಳ್ ಒದವೆ: **ಯಶೋಧಚ,** ೨. ೪೧)

**ಗರಟಿಗೆ** – ಕಾವಲು (ಗರಟಿಗೆಯ ಜಾವದ ಉಕ್ಕಡದ ಉಲಿ ಮಗ್ಗಿದ ಪೊತ್ತು: **ಯಶೋಧಚ,** ೨. ೨೭) ; ಚಿತ್ತಕ್ಷೋಭೆ

**ಗರಣ** – [ಗ್ರಹಣ] ಹಿಡಿಯುವುದು (ಆ ಗರಣದ ಸಮಯದೆ ವಿಧುಂತುದಂ ಪಿಡಿವುದದಂ: **ರಾಜಶೇವಿ,** ೬. ೨೨)

**ಗರಮೊತ್ತು** – ಗ್ರಹ ಬಡಿ (ಗರಮೊತ್ತಿದಂತೆ ಮುಂದಿರ್ದರಂ ಅಜೆಯದೆ ವಂದಿಸಲ್ಕೆ ನೋಡಲ್: **ತ್ರಿಷಷ್ಟಿಪು,** ೧೯. ೨೯)

**ಗರಧರಗ್ರೀವ** – [ಕೊರಳಲ್ಲಿ] ವಿಷ ಧರಿಸಿದವನು, ಶಿವ (ಜಯಜಯ ಜಗತ್ತ್ರಳಯಕರ ಗರಧರಗ್ರೀವ: **ರಾಜಶೇವಿ,** ೧೪. ೧೩೯ ರಗಳೆ)

**ಗರಲ** – ವಿಷ, ನಂಜು (ಗರಲಂ ನಂಜು ವಿಷಂ: **ಅಭಿಧಾವ,** ೧. ೩. ೮)

**ಗರವ** – ಬಿಂಕ (ಗೋವಳಿಗರ ಗರವಂ ಕಳೆದಾನೆ ತಾನೆ ತೊಲಗಿಸಿದಪ್ಪುದು: **ನೇಮಿನಾಪು,** ೮. ೮೪ ವ)

**ಗರವಟಿಗೆ** – ಗಸ್ತು ತಿರುಗುವುದು (ಅಲ್ಲಲ್ಲಿ ಜಾವಮುಕ್ಕಡದ ಗರವಟಿಗೆ ತಳವಜಿಕೆಯಕ್ಕೆಕ್ಕೆಯೊಳು ಠಾಣಾಂಥರಮಂ ನಿರವಿಸೆಯುಂ: ಪುಷ್ಪದಂಪು, ೭. ೬೯ ವ)

**ಗರವಟಿಗೆವರ್** – ಕಾವಲು ಸುತ್ತು (ಕಾಮನ ಗರವಟಿಗೆವರ್ಪಂತೆ ಸುತ್ತಿರ್ಪೊರ್ವು ಗಿಳಿಗಳ್: ಶಬ್ದಮದ, ೭೭ **ಪ್ರ** ೨೧)

**ಗರವಟಿಸು** – ತೂತುಮಾಡು, ಕೊರೆ (ಕೊಜೆದುದೆಂದು ಗರವಟಿಸಿಡುವುದು: **ಶಬ್ದಮದ,** ಪ್ರಸಾ ೬೯); ತಿರುಗಿಸು (ಭೂಮಿಯಂ ತಿಗುಜೆದಿರುಪಿಯುಂ ಅಬ್ಜೋದರಮೆಂದು ಗಗನಮಂ ಗರವಟಿಸಿಯುಂ: ಜಗನ್ನಾವಿ, ೯. ೫೩ ವ)

**ಗರವಸಂಗೊಳ್** – ಪಹರೆ ಮಾಡು, ಕಾವಲಿರು (ಗರವಸಂಗೊಳ್ವ ಮುಖಮಯೂಖಂಗಳಿಂ ಬೆಳ್ದಿಂಗಳ್ ಬೆಳ್ಳಂಗೆಡೆದಂತೆಯುಂ: **ಲೀಲಾವತಿ,** ೧೨. ೬ ವ)

**ಗರವು** – ಅಪಹರಿಸು (ಗರವು–ಸರ್ವಾಕರ್ಷಣೇ: **ಶಬ್ದಮದ, ಧಾ** ೬೬೮)

**ಗರವೊಡೆ** – ಗರಬಡಿ (ತಡೆಯದೆ ಗರವೊಡೆದಂತೆ ಮೇಲ್ವಾಯ್ದವಪ್ಪೊಡೆ ತಮ್ಮ ಮೇಲೆ ತಾವೆ ಮರಗಡಿದಂರೆಂಬಂತಕ್ಕುಂ: **ಪಂಚತಂತ್ರ,** ೨೮೦ ವ)

**ಗರಿಮ** – ಭಾರ (ಗರಿಮಮದು ತಾಂ ಗುರುತ್ವಂ: **ಅಭಿಧಾವ,** ೨. ೨. ೨೮); ಶ್ರೇಷ್ಠತೆ (ಸ್ಮರ ರಾಗಂ ಮನದೊಳ್ ಬೇರ್ವರಿವಿನೆಗಂ ಬ್ರಹ್ಮಚರ್ಯ ನಿಷ್ಠಾ ಗರಿಮಂ ಕರಗುವಿನಂ ಎಳಸೆ ಕಣ್ಗಳ್ ವರಾಕ ಭಿಕ್ಷಾಕಂ ಆಕೆಗಂದು ಇಂತೆಂದಂ: **ಪಂಪರಾ,** ೮. ೬೧)

**ಗರಿಷ್ಠ** – ಶ್ರೇಷ್ಠ (ತದ್ಗೋಷ್ಠಿಯನುಱಿದು ಮುನೀಂದದ್ರಗರಿಷ್ಠಂ ಜಾಬಾಲಿನಾಮಧೇಯ ಮುನೀಂದ್ರಂ .. .. ಶಯನದೊಳಿರಿಸಿದನೆನ್ನಂ: ೮. ೭ ಮತ್ತು ೮)

**ಗರುಡ** – ಒಂದು ಪಕ್ಷಿ (ಗರುಡಂಗಂ ಪಕ್ಷಿಗಳ್ಗಂ ನೆಗಟ್ಟುಂ ಅನುಗತಾರ್ಥಂ ಗರುತ್ಮಾಹ್ವಂ: **ಅಭಿಧಾವ,** ೩. ೧. ೭); ಕಶ್ಯಪ–ವಿನತೆಯರ ಮಗ ವಿಷ್ಣುವಿನ ವಾಹನ (ಗರುಡಂ ಪೇಟ್ದಂದದಿಂದೊಪ್ಪುವನಿಜಪುರಮಂ ಕೂಡೆ ನೋಡುತ್ತುಂ: **ಜಗನ್ನಾವಿ,** ೯. ೧೩೪)

**ಗರುಡಧ್ವಜ** – ಧ್ವಜದಲ್ಲಿ ಗರುಡನ ಚಿಹ್ನೆಯಿರುವವನು, ವಿಷ್ಣು, ಕೃಷ್ಣ (ಉರಗಧ್ವಜಂ ಗರುಡಧ್ವಜಂ ಸಂಬೋಧಿಸಿ ನುಡಿಯೆ: **ಗದಾಯು,** ೭. ४೧ ವ); [ಜೈನ] ತ್ರಿಷಷ್ಠಿಶಲಾಕಾಪುರುಷರಲ್ಲಿನ ವಾಸುದೇವ (ಗರುಡಧ್ವಜನ ಗಜದ ಮೊಗಚರ್ಮಮನರ್ವಿಸುವಿನಂ ಇಸೆ: **ಶಾಂತಿಪು,** ೫. ೬೦)

**ಗರುಡಪತತ್ರಿ** – ಗರುಡಾಸ್ತ್ರ (ಫಣಿಪ್ರಬಳ ಸಾಯಕದಿಂ ಫಣಿಚಂಡಕಾಂಡಮಂ ಗರುಡಪತತ್ರಿಯಿಂದ ಅಜಿತಸೇನಂ ಆಡುರ್ತಿರದೆಚ್ಚು ತೂಳ್ದಿದಂ: ಚಂದ್ರಪ್ರಪು, ೬. ೩೯)

**ಗರುಡವಾಹಿನಿ** – ಗರುಡಪಕ್ಷಿಗಳ ಸೈನ್ಯ (ಆಗಳೆಱಂಕೆಯ ಬೆಟ್ಟಂ ಬೇಗಂ ಬರ್ಪಂತೆ ಬಂದು ಲಕ್ಷ್ಮಣನ ರಥಂ ತಾಗಿದುದು ಗರುಡವಾಹಿನಿ ಸಾಮರಮುಚ್ಚಳಿಸೆ ಪಕ್ಷಪವನಾಹತಿಯಿಂ: **ಪಂಪರಾ,** ೧४. ೧४೬); [ಜೈನ] ಸರ್ಪಾಸ್ತ್ರವನ್ನು ಪರಿಹರಿಸುವ ಒಂದು ವಿದ್ಯೆ (ಬಹುವಿದ್ಯಾ ಪರಿವಾರಮನುಳ್ಳ ಸಿಂಹವಾಹಿನಿಯುಂ ಗರುಡಬಾಹಿನಿಯುಮೆಂಬೆರಡು ವಿದ್ಯೆಗಳುಮಂ: **ಪಂಪರಾ,** ೧೩. ೧೫೬ ವ)

**ಗರುಡಿ** – ವ್ಯಾಯಾಮಶಾಲೆ (ನಾವೆಲ್ಲಮೊಂದೆ ಗರುಡಿಯೊಳೋದಿದ ಮಾನಸರೆಂ: **ಪಂಪಭಾ,** ೯. ४೮ ವ)

**ಗರುಡೋದ್ಗಾರ[ಮಣಿ]** – ಗರುಡನಂತೆ ವಿಷಪರಿಹಾರಕಮಣಿ, ಗರುಡ ಪಚ್ಚೆ (ಗರುಡೋದ್ಗಾರ ಮಣಿಚ್ಛವಿ ಗರುಡಧ್ವಜನೆನಿಪ ಕೃಷ್ಣನಿದಿರೊಳ್ ಧನು ತನ್ನುರಗಾಕಾರಂ ಅನುಪಮ ಸಂಹರಿಸಿ ನಿಜಾಕೃತಿಯಿರ್ನುದೊಂದಚ್ಚರಿಯೇ: **ಪಂಪರಾ,** ೫. ೯೯)

**ಗರುತ್** – ರೆಕ್ಕೆ (ಪಟವಾಸಚೂರ್ಣಚಯಂ .. .. ಷಟ್ಚರಣ ಗರುತ್ ಸಮೀರಹತಿಯಿಂದೊಗೆದು ಉಜ್ವಳ ಮಲ್ಲಿಕಾರಜೋಭರಿತಮದಾಗಿ ಕಣ್ಗೆಸೆದುದು: **ಶಾಂತೀಶ್ವಪು,** ೫. ೧೨४)

**ಗರುತ್ಮ** – ಗರುಡ (ವನನಿಧಿಯಿಂದಂ ಚಂದ್ರಂ ವಿನತಾ ಉದರದಿಂ ಗರುತ್ಮಂ ಉದಯಾಚಳದಿಂ ದಿನಪಂ ಒಗೆವಂತೆ ಪುಟ್ಟಿದಂ ಅನಿವಾರ್ಯ ಸುತೇಜಂ ಎನಿಪಂ ಇನಜನ ತನಯಂ: **ಪಂಪಭಾ,** ೧. ೧೨೧)

**ಗರುತ್ಮಶರ** – ಗರುಡಾಸ್ತ್ರ (ದಶಕಂಧರನೆಚ್ಚ ರೌದ್ರಪನ್ನಗಶರಮಂ ಗರುತ್ಮಶರದಿಂ ಬಿಱುತೋಡಿಸಿದಂ ಜನಾರ್ದನಂ: **ಪಂಪರಾ,** ೧४. ೧೩೪)

**ಗರುವ** – ಶ್ರೇಷ್ಠ, ಹಿರಿಯ (ಗರುವರ ಗೊಟ್ಟಿಗಾಱರ ನೆಗಟ್ತೆಯ ಮಿಂಡರ ಮೇಳಗಾಱರ ಅಕ್ಕರಿಗರ ಸಂದ ಕಬ್ಬಿಗರ.. ಆಗರಮೆನೆ: **ಕಬ್ಬಿಗಕಾ,** ೩೬)

**ಗರುವಿಕೆ** – ದೊಡ್ಡಸ್ತಿಕೆ (ಗರುವಿಕೆಗೆ ಇಂಬು ಗಾಡಿಗೆ ತವರ್ಮನೆ: **ಕಬ್ಬಿಗಕಾ,** ೩)

**ಗರುಹಣೆ** – ಗರ್ಹಣ, ತೆಗಳಿಕೆ (ರಿಸಿಯರಂ ಕೊಂದೆನೆಂದು ನಿಂದಣೆ ಗರುಹಣೆ ಗೆಯ್ದು: **ವಡ್ಡಾರಾ,** ಪು ೧೫೬, ಸಾ ೧೫)

**ಗರುಹಣಂಗೆಯ್** – ನಿಂದನೆ ಮಾಡು (ವೈದ್ಯಂ ಅನವರತಂ ತಮ್ಮನೋಲಗಿಸುವುದಱಿಂ ತಮಗೆಂದುಂ ಮಾಡಿದ ವೈಯಾಪೃತ್ಯಮಂ ಅಜಿದು ನಿಂದಣ ಗರುಹಣಂಗೆಯ್ದು: **ವಡ್ಡಾರಾ,** ಪು ೧೭೨, ಸಾ ೧೧)

**ಗರೋದಯಸಮಯ** – (ಗರ+ಉದಯ ಸಮಯ) ವಿಷ ಹುಟ್ಟಿದ ಕಾಲ, ಸಮುದ್ರ ಮಥನದ ಸಮಯ (ಆ ಸಮಯಂ .. .. ಗರೋದಯಸಮಯದಂತೆ ಸುರಚಾಪಲತಾನ್ವಿತಮುಂ .. .. ಎನಿಸಿರ್ದು: **ರಾಜಶೇವಿ,** ೮. ೧೧೮ ವ)

**ಗರ್ಗರಿ** – ಕಡೆಗೋಲು (ಮಂಥಣಿ ಗರ್ಗರಿ ಕಡೆಗೋಲ್: **ಅಭಿಧಾವ,** ೧. ೧೦. ೩೧)

**ಗರ್ಘರಿ** – ಪಾತ್ರೆ, ಕೊಡ; ಕಿರುಗೆಜ್ಜೆ (ಕಳನೊಳ್ ಪುಟನೆಗೆವುತ್ತಂ ಫಳಕದ ಗರ್ಘರಿಗಳುಲಿಯೆ ಪಡಿತಳಿಸುತ್ತಂ: **ತ್ರಿಷಷ್ಟಿಪು,** ೨೩. ೧೩)

**ಗರ್ಜಿತ** – ಕೂಗಿದ, ಆರ್ಭಟಿಸಿದ (ಮಧುಮಾಸಕೇಸರಿ ವಿಯೋಗಿಗಳೆಂಬ ಮೃಗಂಗಳಂ ಭಯಂಗೊಳಿಸಿದುದು ಉತ್ಕ ಕೋಕಿಲ ಗರ್ಜಿತತರ್ಜಿತಂಗಳಿಂ: **ಅಜಿತಪು,** ೬. ೨೩)

**ಗರ್ತ** – ತಗ್ಗು (ಸಲಿಲಂ ತೀವೆ ಗರ್ತಂಗಳಂ ಕುಂದುವುದಂಭೋರಾಶಿ ತದ್ಭೀಷಣ ಪವನಘನಾಘಾತದಿಂ: **ಮಲ್ಲಿನಾಪು,** ೧. ೬೨); ನೀರಿನ ಸುಳಿ (ಸಂಸಾರವಾರಾಶಿ ಮಧ್ಯಾಸ್ಪದ ಸರ್ವಗ್ರಾಸಿ ಭೀಮಾಂತಕ ವದನಮಹಾಗರ್ತದೊಳ್ ಮಗ್ನರಾದರ್: **ಆದಿಪು,** ೯. ೫೮)

**ಗರ್ದಭ** – ಕತ್ತೆ (ಗರ್ದಭಂ ತಾನದು ವೇಸರಂ: **ಅಭಿಧಾವ,** ೧. ೧೪. ೩೯)

**ಗರ್ದಭೆ** – ಹೆಣ್ಣು ಕತ್ತೆ (ಎನ್ನ ತಂಗೆಯರಪ್ಪ ಗರ್ದಭೆಯರಿರ್ವರ್ ನಿನ್ನಂತೆ ಭಾರಾಕ್ರಾಂತೆಯಾಗಿರ್ದು ಅಳ್ಕಿ ಚಿಂತಿಸುತ್ತಿರ್ದೊಡೆ: **ಪಂಚತಂತ್ರ,** ೪೦೭ ವ)

**ಗರ್ದುಗು** – ಗಜ್ಜುಗದ ಗಿಡ ಮತ್ತು ಕಾಯಿ (ಗರ್ದುಗೆಎಸೆವಮರ್ದಮರ್ದುವಳ್ಳಿ ಕಂಪಲರ್ದುದು ಎನಲ್ಕೆದೆವಾಯದಿರ್ಮುತ್ತೆ ಪೊದಳ್ದಿರ್ದೆಯೆಂಬಿವು ಸಹಜ ಶಿಥಿಲವೃತ್ತಿಯನಾರ್ಳಗುಂ: **ಶಬ್ದಮದ,** ೫೫)

**ಗರ್ಬ** – ಅಹಂಕಾರ, ಗರ್ವ (ಮಹಾಕವೀಂದ್ರ ಮಾಧವನೆಣೆಯಪ್ಪೆನೆಂಬ ಕೊಳೆಗಬ್ಬಿಗ ನಿನ್ನಯ ಗರ್ಬಮೆಂತುಟೋ: **ಧರ್ಮಮಧು,** ೧. ೬೬)

**ಗರ್ಭ** – ಬಸಿರು (ಬಳೆದ ನಿತಂಬದೆ ಕಾಂಚೀಕಳಾಪಮಂ ಕಟ್ಟಲಣಮೆ ನೆಱೆಯದು ಎಂದಗ್ಗಳಿಸಿ ಕುಳಿಕೆಗಳಿನೇಂ ಕಣ್ಗೊಳಿಸಿದುದೋ ಸುಭಗೆಯಾದ ಸುದತಿಯ ಗರ್ಭಂ: **ಪಂಪಭಾ,** ೧. ೧೪೩); ಭ್ರೂಣ (ಗರ್ಭಂ ಭ್ರೂಣಂ: **ಅಭಿಧಾವ,** ೧. ೧೧. ೧೫)

**ಗರ್ಭಗೃಹ** – ಒಳಕೋಣೆ, ಗರ್ಭವೆಂಬ ಮನೆ (ಗರ್ಭಗೃಹದಿಂದಂ ಮೇಣ್ಪೊಱಮಟ್ಟವೊಲಾ ಗುಹೆಯಿಂ ಪೊಱಮಟ್ಟುದು ಸೈನ್ಯಮಂಬುಧಿಧ್ವನಿಯಿಂದಂ: **ಆದಿಪು,** ೧೩. ೫೪)

**ಗರ್ಭದೋಹಳ** – ಬಸಿರಿ ಬಯಕೆ (ಆ ದಾನಚಿಂತಾಮಣಿಗೆ ಆಹಾರಾಭಯ ಭೈಷಜ್ಯ ಶಾಸ್ತ್ರದಾನದೊಳಂ .. .. ತೀರ್ಥಕರಜನನಿಗೆ .. ..ಗರ್ಭದೋಹಳಂ ನೆಗೞ್ದೆ: **ಅಜಿತಪು,** ೩. ೨೧ ವ)

**ಗರ್ಭಶಯನ** – ಭ್ರೂಣ ಮಲಗುವ ಜಾಗ, ಗರ್ಭಾಶಯ (ಶುಕ್ಲಶೋಣಿತಂಗಳೊಳ್ ಒಂದೊಂದಱೊಳೊಂದಿ ಗಬ್ಭಯನದೊಳ್ ಪರ್ವಿನಿಲೆ: **ಶಾಂತಿಪು,** ೬. ೧೦೪ ವ)

**ಗರ್ಭಶೋಧನ** – [ಜೈನ] ಇಂದ್ರನು ಕಳುಹಿಸುವ ದೇವವನಿತೆಯರು ಹುಟ್ಟಲಿರುವ ತೀರ್ಥಂಕರನಿಗೆ ಕರ್ಮಮಲಗಳ ಲೇಪವಾಗದಂತೆ ಮಾಡುವ ಜಿನಮಾತೆಯ ಗರ್ಭ ಶುದ್ಧೀಕರಣ (ಮನವೊಲ್ದಿಂದ್ರನಿವಾಸಸಂಭವ ಶುಚಿದ್ರವ್ಯಂಗಳಿಂ ಗರ್ಭಶೋಧನಮಂ ದೇವಿಯರಿರ್ದು ಮಾಡೆ: **ಆದಿಪು,** ೭. ೨೩)

**ಗರ್ಭಷಷ್ಠಿ** – ಅರವತ್ತು ದಿನಗಳಲ್ಲಿ ತೆನೆ ಬರುವ (ಆ ಪ್ರಸ್ತಾವದೊಳ್ ಫಳಪಾಕವಿರಾಮಂಗಳಪ್ಪ ಗರ್ಭಷಷ್ಠಿವ್ರೀಹಿ ಯವ ಗೋಧೂಮಾದಿಇ ಮಹೌಷಧಂಗಳುಮಂ: **ಆದಿಪು,** ೮. ೬೧ ವ)

**ಗರ್ಭಸುಖಿ** – ಹುಟ್ಟಿನಿಂದಲೇ ಸುಖವಾಗಿರುವವನು (ಆಗಳ್ ಆ ಗರ್ಭಸುಖಿಯ ಬೆನ್ನೊಳ್ ಪಿರಿಯ ಪರಿಯಾಣಮಂ ಇಟ್ಟು ಇದಂ ತೆಕ್ಕನೆ ತೀವಿ ಬಡ್ಡಿಸಿದೊಡೆ: **ವಡ್ಡಾರಾ,** ಪು ೬೪ ಸಾ ೨೧)

**ಗರ್ಭಸ್ಖಲನ** – ಗರ್ಭಪಾತ (ಆ ಗರ್ಭಸ್ಖಲನದ ಸಮಯಮೆ ಋತುಸಮಯಮಾಗೆ: **ಜಗನ್ನಾವಿ,** ೨. ೭೦ ವ)

**ಗರ್ಭಾನ್ವಯಕ್ರಿಯೆ** – [ಜೈನ] ತೀರ್ಥಂಕರನು ಭೂಮಿಯಲ್ಲಿ ಅವತರಿಸುವುದರಿಂದ ಹಿಡಿದು ನಿರ್ವಾಣಪರ್ಯಂತ ಮಾಡುವ ಐವತ್ತೂರು ಕ್ರಿಯೆಗಳು (ಅಯ್ವತ್ತಮೂಱು ಗರ್ಭಾದಿನಿರ್ವಾಣಪರ್ಯಂತಂಗಳಪ್ಪ ಗರ್ಭಾನ್ವಯಕ್ರಿಯೆಗಳುಂ: **ಆದಿಪು,** ೧೫. ೧೫ ವ)

**ಗರ್ಭಾವತರಣ** – [ಜೈನ] ಜಿನಮಾತೆಯ ಗರ್ಭದಲ್ಲಿ ತೀರ್ಥಂಕರನ ಆಗಮನ, ಪಂಚಕಲ್ಯಾಣಗಳಲ್ಲಿ ಒಂದು(ಉತ್ಸವಪರಂಪರೆಗಳಿಂ ಪರಮನ ಚರಮ ಗರ್ಭಾವತರಣಮನಜಿದು: **ಚಂದ್ರಪ್ರಪು,** ೧೧. ೧೯೯ ವ)

**ಗರ್ಭೇಶ್ವರ** – ಆಗರ್ಭ ಶ್ರೀಮಂತ (ಮತ್ತೊಂದೆಡೆಯೊಳ್ ಒರ್ವಂ ಗರ್ಭೇಶ್ವರಂ ತನ್ನ ಹೃದಯೇಶ್ವರಿಯಂ ಅಗಲ್ದು ಬಂದು ಪೆಱರಾರುಮಂ ಮೆಚ್ಚದೆ ಆಕೆಯಂ ನೆನೆದು: **ಪಂಪಭಾ,** ೪. ೧೦೪ ವ)

**ಗರ್ವವ್ಯಾಲೆ** – ಗರ್ವದಿಂದ ಸೊಕ್ಕಿದವಳು (ಅಂತು ಬಂದ ಬಸಂತದೊಳ್ ಮದ್ರಿ ತಾಂ ಗರ್ವವ್ಯಾಲೆಯುಂ ಕ್ರೀಡಾನುಶೀಲೆಯುಂ ಅಪ್ಪುದಱಿಂ ವನಕ್ರೀಡಾನಿಮಿತ್ತದಿಂ ಪೋಗಿ: **ಪಂಪಭಾ,** ೨. ೧೫ ವ)

**ಗರ್ಹಣ** – ತೆಗಳಿಕೆ (ಗರ್ಹಣಾತಿರೇಕದಿಂ ಗತಶ್ರೀಕನಾಗಿ ನಿಜರಾಜಮಂದಿರಮಂ ಪೊಕ್ಕಂ: **ಜಗನ್ನಾವಿ,** ೨. ೫೪ ವ)

**ಗರ್ಹಿತ** – ದೂಷಣೆಗೊಂಡ (ಗರ್ಹಿತಸ್ಪರ್ಶಸಂಭೋಗದೊಳ್ ಇಂತೀ ದುಷ್ಟ ಚಂಡಾಲರ ಕುಲದೊಳಗೆ ಏಗೆಯ್ದನೋ ದುರ್ವಿವೇಕಂ: **ಕಾದಂಸಂ,** ೧. ೧೬)

**ಗವನಿ** – ಆವರಣ, ಪ್ರಾಕಾರ (ಆ ಮುಗಿಲ ಗವನಿಯಿಂದೊಳಗೆ: **ಮಲ್ಲಿನಾಪು,** ೨. ೫೨ ವ)

**ಗವಸಣಿಗೆ** – ಹೊದಿಕೆ, ಮುಸುಕು (ಗವಸಣಿಗೆಯನೊಯ್ಯನೆ ಕಳೆದು ವಾಸಮಂ ಪಿಡಿದು ಕಳೆಯ ಮಯಣಮನನುವಿಂ ಪವಣಾಗಿರೆ ಪತ್ತಿಸಿ: **ಧರ್ಮಪ,** ೨. ೧೯)

**ಗವಾಕ್ಷ** – ಬೆಳಕಿಂಡಿ (ರಾಜಹಂಸ ಪಾರಾವತ ಮಿಥುನಂಗಳ್ ಉತ್ತುಂಗ ಪ್ರಾಸಾದಶಿಖರ ಮಣಿಗವಾಕ್ಷ ಅಂತರಾಳ ವಿವಿಧ ಗೃಹಾಂತರಗತಂಗಳಾದುವು: **ಪಂಪಭಾ** ಪರಿಷತ್ತು, ೪. ೪೯ ವ)

**ಗವಾಧಿಪ** – ಹಸುಗಳ ಒಡೆಯ, ಎತ್ತು (ಗವಾಧಿಪಂ ಅದೆಲ್ಲಮಂ ಕೇಳ್ದು ಆದೊಡಂ ಇನ್ನೆಂರತು ಶಕ್ತ್ಯನುರೂಪದಿಂ ಸಾಹಸಂಗೈದಪ್ಪೆಂ .. .. ಪೇೞ್: **ಪಂಚತಂತ್ರ,** ೨೩೧ ವ)

**ಗವಿಲ** – ಹಳದಿಮಿಶ್ರ ಕೆಂಬಣ್ಣ (ಮುನಿಯ ದೇಹದ್ಯುತಿಯಿಂ ಕಡುಗವಿಲಮಾಗಿ ಕಾಂಚನದಡವಿಯನನುಕರಿಸಿ ತದ್ವನಂ ಸೊಗಯಿಸುಗುಂ: **ಕಾದಂಬ,** ೫. ೧೮)

**ಗವೇಧುಕ** – ಕಾಡು ಗೋಧಿ (ಅಟವೀಸಂಭವಮದೆ ಗವೇಧುಕಂ ನೀವಾರಂ: **ಅಭಿಧಾವ,** ೧. ೧೬. ೧೯)

**ಗವ್ಯ** – ಗೋವಿನಿಂದ ದೊರಕುವ (ಗೋಪಕದಂಬಕಮಿಂದು ಗವ್ಯಮಾಹಿಷರಸಸಂಕುಳಂ ಬೆರಸು ಕಾರ್ಮುಕಪೂಜೆಗೆ ಬರ್ಪುದು: **ಜಗನ್ನಾವಿ,** ೫. ೬೪)

**ಗವ್ಯೂತಿ** – ಎರಡು ಕ್ರೋಶ ದೂರ, ಒಂದು ಗಾವುದ (ಮತ್ತಂ ಘಾತಿಗಳ ಕೇಡಿನೊಳ್ ಗವ್ಯೂತಿಚತುಷ್ಟಯ ಸುಭಿಕ್ಷತೆ ಮೊದಲಾಗೆ: **ಆದಿಪು,** ೧೦. ೪೨ ವ)

**ಗಸಣಿ** – ಆತಂಕ, ತೊಂದರೆ (ಮಾಡುವ ಕಿಡಿಸುವ ಗಸಣಿಗೆ ನಾಡೆಯುಮದು ಪೊಱಗು ಸಹಜನಿಯತಸ್ಥಿತಿ: **ಆದಿಪು,** ೧. ೪೬)

**ಗಸಿ –** ಗಸಟು, ದ್ರವದ ತಳದಲ್ಲಿನ ಕೊಳೆ (ಮಣ್ವೆರಸಿದ ನೀರುಂ ಕಿಸುವೆರಸಿದ ಪೊನ್ನುಂ ಗಸಿವೆರಸಿದ ಎಣ್ಣೆಯುಂ: **ಧರ್ಮಾಮೃ,** ೧೪. ೯೬ ವ)

**ಗಹನ –** ನುಗ್ಗುವುದಕ್ಕಾಗದ (ಅಂತು ಆ ವನಗಹನಮೆಲ್ಲಂ ದಹನಮಯಮಾದ ಪ್ರಸ್ತಾವದೊಳ್ ವಿಸ್ಮಯಮಾಗೆ: **ಪಂಪಭಾ,** ೫. ೯೭ ವ); ಅಸಾಧ್ಯ (ಎಂಬುದುಂ ಈ ಬೆಸಂ ಅದಾವುದು ಗಹನಂ ಎಂದು ಪೂಣ್ದು ಪೋಗಿ: **ಪಂಪಭಾ,** ೨. ೬೧ ವ); ತಿಳಿಯಲು ಕಷ್ಟಕರವಾದ (ಋಷಿಯರ್ಗೆಂ ಗಳ ಗಹನಮೆ ಸದ್ಗುರುನಿರೂಪಿತ ಬ್ರತನಿಯಮಮಂ: **ಸಮಯಪ,** ೭. ೧೧); ದಟ್ಟವಾದ ಕಾಡು (ಮಹಾ ಗಹನಮಧ್ಯದೊಳ್ ಒಂದು ಸರೋವರಮುಂಟು, ಅಲ್ಲಿ ಕೆಲವು ಮತ್ಸ್ಯಂಗಳಿರ್ಪುದುಂ: **ಪಂಚತಂತ್ರ,** ೧೩೭ ವ)

**ಗಹನಂಗೆಯ್ –** ದೊಡ್ಡದೆಂದು ಭಾವಿಸು (ಲಿಂಗಿಯುಮಂ ಶಿವಭಕ್ತರನುಮಂ ಗಹನಂಗೆಯ್ಯರ್ ಎಮ್ಮ ಸಮಯಿಗಳ್: **ಸಮಯಪ,** ೧೪. ೭೮)

**ಗಹನಪ್ರಚಾರ –** ಕಾಡಿನ ಸಂಚಾರ (ಮುಳ್ಗಳ್ ಅಂಘ್ರಿಯಂ ಬಾರಿಪುದೆಂದು ಬಿಟ್ಟುದೆ ಮದದ್ವರದಂ ಗಹನಪ್ರಚಾರಮಂ: **ರಾಜಶೇವಿ,** ೧೩. ೧೯)

**ಗಹನಭೂಮಿ –** ಅರಣ್ಯಪ್ರದೇಶ (ಇಂದ್ರಿಯಲುಬ್ಧಕಸ್ವಚ್ಛಂದವಿಹಾರ ಗಮಭೂಮಿಯುಂ: **ಆದಿಪು,** ೧೪. ೧೨೨ ವ)

**ಗಹನಾಂತರ –** ಗಗನಭೂಮಿ (ಪಾಪದ ಫಲಮಂ ಸವಿನೋಡೆ ಪೊಕ್ಕೆಂ ಒಡನೊಗೆದ ವಿಚಾರಣಚರಿತಮೆಂಬ ಗಹನಾಂತರಮಂ: **ಆದಿಪು,** ೩. ೩೫)

**ಗಹ್ವರ –** ದೊಗರು, ಬಿಲ, ಗವಿ (ತತ್ ವನಗಹ್ವರದಿಂ ಬಿಸುನೆತ್ತರ್ ಉಣ್ಮೆ ಭೋರ್ಭೋರೆನೆ ಕೊಂದಂ ಅಂಕದ ಬಳಾಧಿಕನಂ ಬಕನಂ ವೃಕೋದರಂ: **ಪಂಪಭಾ,** ೩. ೩೧)

**ಗಳ –** ಕೊರಳು (ಘನಪಥಮಂ ಪಳಂಚಲೆವ ಸೌಧಚಯಂಗಳಿಂ ಆಡುತಿರ್ಪ ಕೇತನತತಿಯಿಂ ಕರೀಂದ್ರ ಗಳ ಗರ್ಜನೆಯಿಂ ಪಟಹಪ್ರಣಾದಮಂ ಘನರವಮೆಂದೆ ನರ್ತಿಸುವ ಕೇಕಿಗಳಿಂ: **ಪಂಪಭಾ,** ೪. ೫)

**ಗಳಂತಿಕಾ –** ಗಡಿಗೆ (ಕರಕಂ ಗಳಂತಿಕಾ .. .. ಘಟಂ: **ಅಭಿಧಾನ,** ೧. ೧೦. ೨೯)

**ಗಳಂತಿಗೆ –** ನೀರು ತುಂಬುವ ಕಳಶ (ಬೆಳಗುವ ಗಳಂತಿಗೆಯಂ ಆದಮಾನುಂ ಒಪ್ಪುತ್ತಿರ್ದುದಂ ಪಿಡಿದು ನಿಂದಿರ್ದೊಳಂ ಅರಸಂ ಕಂಡು: **ವಡ್ಡಾರಾ,** ಪು ೩೩, ಸಾ ೬)

**ಗಳಕಂಬಳ –** ಹಸು–ಎತ್ತುಗಳ ಕೊರಳಿನ ಜೋತಾಡುವ ತೊಗಲು, ಗಂಗೆದೊಗಲು (ಗಳಕಂಬಳಮಕ್ಕುಂ ಪೆಸರ್ಗೊಳಲ್ಕೆ ಸಾಸ್ನಾಖ್ಯೆ: **ಅಭಿಧಾವ,** ೧. ೧೫. ೪)

**ಗಳಗಳಿಕೆ –** ಕೋಮಲತೆ (ಗಳಗಳಿಕೆಯಿಂ ಎಳದಳಿರ್ಗಳಿಂ ಎಳಮಿಡಿಯಿಂ ನೆಱೆಯೆ ತುಱುಗಿದ ಎಳಮಾವುಗಳ್: **ಸುಕುಮಾಚ,** ೧೦. ೬೦)

**ಗಳಗಾಳ –** ಕೊರಳಿಗೆ ಹಾಕುವ ಕೊಕ್ಕೆ, ಗಂಟಲ ಗಾಳ (ಇನ್ನವುಮೊಳವೆ ಪುಸಿ ಗಳಗಾಳಂ: **ಸಮಯಪ,** ೧೦. ೮೮)

**ಗಳಗ್ರಾಹಿತ್ವ –** ಕುತ್ತಿಗೆ ಹಿಡಿಯುವಿಕೆ, ಇಕ್ಕಟ್ಟಿಗೆ ಸಿಲುಕಿಸುವುದು (ಗಳಗ್ರಾಹಿತ್ವಮೇಕಾವಳಿಯೊಳ್ ಕಟಕವಕ್ರಿಮಂ ಬದರದೊಳ್ .. .. ಅಲ್ಲದಿಲ್ಲಮೆಲ್ಲಿಯುಂ: **ಚಂದ್ರಪ್ರಪು,** ೩. ೯ ವ)

**ಗಳತ್ –** ಸುರಿಸು (ಅನವರತ ಗಳತ್ ಮದದುರ್ದಿನಾನನಂ ವರ್ಷಜಳಸಮನ್ವಿತಂ ಅಂಭೋದನಿನಾದಂ: **ಆದಿಪು,** ೧೧. ೨೯)

**ಗಳಪು –** ಹರಟು (ನೀಂ ಗಳಪದಿರ್ ಪಾಂಚಾಳ ಲಾಳಂಗೆ ನೀಂ ತೆಱಪಂ ಮಾಡು ಎನುತಲ್ಲಿ ಕಂಚುಕಿಗಳ್: **ರಾಜಶೇವಿ,** ೫. ೨೧)

**ಗಳಬಳ –** ಗಲಾಟೆ, ಗದ್ದಲ (ಗಳಬಳಮಂ ವಿವರ್ಜಿಸುತುಂ ಆಯತಮೇ ಎನಲಾಯತಂ: **ಗಿರಿಜಾಕ,** ೧೦. ೮೮)

**ಗಳರುತಿ –** ಗಳಗಳ ಧ್ವನಿ (ಗಳರುತಿ ಮಂತ್ರನಾದಮಳಕಸ್ಥಳತಾಡನ ಮುಷ್ಟಿಮುದ್ರೆ .. .. ತಳರ್ಚುವರ್ ಇಚ್ಚೆಗಾರ್ತಿಯರ್: **ಸೂಕ್ತಿಸುಧಾ:** ೧೪. ೨೨)

**ಗಳಹಿಸು –** ಹರಟುವಂತೆ ಮಾಡು (ಇವನಂ ಗಳಹಿಸಿ ನಗುತಿರ್ಪ ವಿನೋದಂ ಸಾಲ್ವುದರಸ: **ಆಚವರ್ಧ,** ೭. ೪೩)

**ಗಳಿಯಿಸು –** ಸುರಿ, ಸ್ರವಿಸು (ಗಳಿಯಿಸುತಿರೆ ಕಬರಿಭರಂ ಗಳಿಯಿಸುತಿರೆ ನಯನವಾರಿ ನಿನ್ನಾನನದಿಂ ನಳಿನಾನನೆ ನೀನಿರೆ ಕುರುಕುಳಾಂತಕಂ ಗಳಿತಕೋಪನೇ ಕಲಿಭೀಮಂ: **ಗದಾಯು,** ೧. ೬೩); ಕಳಚಿ ಬೀಳು (ಎಂದು ಶಿಬಿರರಕ್ಷಕರ ಗರ್ಭಮುಂ ಶಿಬಿರನಿತಂಬಿನಿಯರ ಗರ್ಭಮುಂ ಒಡನೊಡನೆ ಗಳಿಯಿಸೆ ಸಿಂಹಗರ್ಜನೆಯಿಂ ಗರ್ಜಿಸಿ: **ಗದಾಯು,** ೬. ೩೨ ವ); ಕಳೆದು ಹೋಗು (ತವೆ ತೈಲಂ ದೀಪಂ ನಂದುವಂತೆ ಗಳಿಯಿಸೆ ನಿಷೇಕಮಟೆವರ್: **ಪಂಪರಾ,** ೧. ೮೨)

**ಗಳೆವಟೆ –** ತೆಕ್ಕೆ ಹಾಕಿಕೊಂಡಿರುವ (ಸಹಸ್ರಲೋಚನಂ ತೋಯದವಾಹನನ ಬಟೆಯಂ ಗಳೆವಟೆಯ ಪಾವಿನಂತೆ ತಗುಳುತ್ತುಂ ಬಂದು: **ಪಂಪರಾ,** ೯. ೯೧ ವ)

**ಗಳೆಕಾಱ –** ದಂಡ ಹಿಡಿದವನು (ಗಜಱುವ ಗಳೆಕಾಱರ ಚಪ್ಪರಿಸುವ ಒಪ್ಪಕಾಱರ ಕರೆವ ಪರಿಕಾಱರ .. .. ನೆರವಿಗಳಂ: **ಅನಂತಪು,** ೨. ೨೯ ವ)

**ಗಱೆ –** ಹಕ್ಕಿಯ ರೆಕ್ಕೆ (ಪತ್ರ ತನೂರುಹ ವಾಜ ಪತತ್ರಚ್ಛದ ಪಿಂಛ ಪಕ್ಷ ನಾಮಂ ಗಱೆ: **ಅಭಿಧಾವ,** ೧. ೯. ೧೦); ಬಾಣದ ತುದಿಯ ಪುಕ್ಕ (ಬಾಣದ ಪಿಟಿಕದು ಬಾಣದ ಗಱೆ ಪತ್ರಪಾಳಿ ವಾಜಮೆನಿಕ್ಕುಂ: **ಅಭಿಧಾವ,** ೧. ೧೪. ೧೯)

**ಗಱೆವೂ –** ಕೇದಗೆ, ತಾಳೆಹೂ (ಜಡೆಗಳ ಬಂಬಲೇ ತಲೆದಳಿರ್ ಫಣಿ ಸುತ್ತಿದ ಬಳ್ಳಿ ತಾಳ್ದ ಬಾನ್‌ಗಡಲದು ಪುಷ್ಪಮಾಲೆ ಗಱೆವೂ ಗಱೆ: **ಶಬರಶಂ,** ೩. ೩)

**ಗಱೆಸನ್ನೆಗೆಯ್ –** ಯುದ್ಧಾರಂಭದ ಸೂಚನೆಯಾಗಿ ಬಾಣದ ಗರಿಯಿಂದ ಸನ್ನೆ ಮಾಡು (ಗಱೆಸನ್ನೆಗೆಯ್ದು ತೆಗೆನೆಱೆದು ಎಱಗಿ ಪರಂಕಲಿಸಿ ಪರ್ವಿ ಕೂಕಿಱಿದು ಇಸೆ ಕೆಂಗಱೆಯ ಮೊನೆಯಂಬುಗಳ್ ಕಣ್ದೆಱೆಯಿಸಿದುವು ಪೊಣರ್ವ ಬಿಲ್ಲ ಕಡುವಿತ್ತೆಗರಂ; **ಪಂಪಭಾ,** ೧೦. ೭೩)

**ಗಟಗಟಸುರಿ –** ಧಾರೆಯಾಗಿ ಬೀಳು (ಗಟಗಟಸುರಿವಶ್ರುವ ಕೊರಲಿಟೆವಿನೆಗಮಗಿಮಟ್ಟಿದೆಟ್ಟಿ ಮೊಟಗಿಂಗಂ: **ಶಾಂತಿಪು,** ೬. ೮೯)

**ಗಟಗಟೆಸು –** ಒಟ್ಟುಗೂಡಿಸು (ಇಟೆದು ಮರದಿಂದಂ ಆಗಳ್ ಕೆಟಗೆಲ್ಲ ಪರೆದು ಬಿಟ್ದ ಶುಕಸಂತತಿಯಂ ಗಟಗಟೆಸಿ ಕಟ್ಟಿ ನಡುಬೆನ್ನಿಟೆವಿನೆಗಂ ಪೊತ್ತು ಪೋದನಾ ಮುದುಬೇಡಂ: **ಕಾದಂಸಂ,** ೧. ೫೮)

**ಗಟಪ –** ಹರಟುವವನು, ವಾಚಾಳಿ (ವಾಚಾಳಂ ಜಲ್ಪಾಕಂ ವಾಚಾಟಂ ವಾವದೂಕಂ ಅಕ್ಕುಂ ಗಟಪಂ: **ಅಭಿಧಾವ,** ೨. ೧. ೧೩)

**ಗಱಿಪು** – ಹರಟು (ಎಳಸುವ ಪುರುಳಿಯ ಗಱಿಪುವ ಗಿಳಿಯ ತೆಱದಿಂದಿರಿದು ಮೊರೆವ ಪೆಣ್ದುಂಬಿಯಬಿಚ್ಚಳಿಪ ಪರಭೃತದ: **ಆದಿಪು,** ೬. ೯೪)

**ಗಳಿಗೆ** – ಒಂದು ದಿವಸದ ಅರವತ್ತನೇ ಒಂದು ಭಾಗ, ಇಪ್ಪತ್ತನಾಲ್ಕು ನಿಮಿಷಗಳು (ಎರಡು ಗಳಿಗೆಯುಂಟೆನೆ: **ಶಾಂತಿಪು,** ೮. ೧೧೦ ವ); ಗಡಿಗೆ, ಘಟವಾದ್ಯ ಗಳಿಗೆಗೆ ಕರಡೆಯ ಕಾಳದ ಪಟಿವದ ಮದ್ದಳೆಯ ಮಿಕ್ಕ ವಾದ್ಯಮುಮೊಳವೇ: **ಗದಾಯು,** ३. ४९)

**ಗಳಿಗೆಯ ಭಟ್ಟ** – ಮುಹೂರ್ತ ನೋಡಲು ನೇಮಿತನಾದ ಬ್ರಾಹ್ಮಣ (ವನವಿಹಾರ ಪರಿಶ್ರಮಂ ಪೋಗೆ ಮೂಱುಜಾವಂ ಪೋದುದೆಂದು ಗಳಿಗೆಯ ಭಟ್ಟಂ ಬಿನ್ನಪಂಗೆಯ್ವುದುಂ: **ಶಾಂತಿಪು,** ೮. ೨೪ ವ)

**ಗಳಿಗೆವಟ್ಟಲ್** – ಕಾಲ ಅಳೆಯಲು ಬಳಸುತ್ತಿದ್ದ ಪಾತ್ರೆ (ಶಂಕುಶಲಾಕೆಯುಂ ಗಳಿಗೆವಟ್ಟಲುಂ ಒಪ್ಪಿರೆ ವೇದನಾದದೊಳ್ .. .. ಕರೆಯಿಂ ವಧೂವರರಂ ಎಂದುಸಿರ್ದರ್ ಹಿತದೊಳ್ ಪುರೋಹಿತರ್: **ಸೂಕ್ತಿಸುಧಾ,** ೬. ೫೭)

**ಗಱಿಯಿಸು** – ಸಂಪಾದಿಸು (ಕಱಿದವರ್ಗೆ ಅಟ್ಟುದು ಅಱಿತ್ತೊಡೆ ಅವರ್ ಏಱಿತ್ತೊಡಂ ಅಂತವರಿಂ ಬಱಿಕ್ಕೆ ತಾಂ ಉಱಿವೊಡಂ ಏಱಿರ್ ಅಂತು ಅವರ್ ಅಣಂ ತಮಗಂ ಬರ್ದುಕಿಲ್ಲ ಧರ್ಮಮಂ ಗಱಿಯಿಸಿಕೊಳ್ವುದೊಂದೆ ಚದುರ್: **ಪಂಪಭಾ,** ೨. ೨೭)

**ಗಱಿ** – ಗಣೆ, ಗಳು, ಬಿದಿರ ಕೋಲು (ನೀರ್ಳದ ಅಗುರ್ವಿನ ಗಱಿಯೆತ್ತಿ ಬಂದಂ ಅವನೊರ್ವಂ ಅಪೂರ್ವಿಗಂ ಇಂದ್ರಜಾಲಿಗಂ: **ಲೀಲಾವತಿ,** ४. ೬೮); ಕಡೆಗೋಲು (ಎರಡರ್ಥಕ್ಕೆ: ಗಱಿಯೆಂದು ಕಡೆಗೋಲುಂ ಕೊಲ್ಲಟಿಗರಾಡುವುದುಮಕ್ಕುಂ; **ಶಬ್ದಮದ,** ३३ ವೃತ್ತಿ ೧४३)

**ಗಱಿಕಾಱ** – ಬಿದಿರನ್ನು ಬಳಸುವವನು, ದೊಂಬ (ಕಾಱಕ್ಕೆ: ಬಂದಿಕಾಱಂ, ಗಱಿಕಾಱಂ, ಬೇಹುಕಾಱಂ: **ಶಬ್ದಮದ,** ೨೧೦ ಪ್ರ ೧)

**ಗಱಿಗೂಸಾಡು** – (ದೊಂಬ) ಗಳೆಯ ಮೇಲೆ ಮಗುವನ್ನು ಆಡಿಸು (ಗಱಿಗೂಸಾಡುವರ್ ಇಂದ್ರನಂ ಗಿರಿಶನಂ ಸರ್ವಸ್ವಂ ಕೊಂಡುಮುನ್ನುಱಿವರ್: **ಶಬ್ದಮದ,** ೭೫ ಪ್ರ ೨)

**ಗಱಿಯಿಕ್ಕು** – ಬಾಣ ಪ್ರಯೋಗಿಸು (ಗಱಿಯಿಕಕ್ಕಿ ತೊಲಗಿದಂಕದಂತೆ ಪೆಱಮೆಟ್ಟಿ ನಿಲ್ವುದುಂ: **ಶಾಂತಿಪು,** ೮. ३೮ ವ)

**ಗಱಿಯೆತ್ತು** – ಗಳೆಯನ್ನು ಎತ್ತಿ ಹಿಡಿ (ನೀಳ್ದಗುರ್ವಿನ ಗಱೀಯೆತ್ತಿ ಬಂದನವನೊರ್ವಂ ಅಪೂರ್ವಿಗಂ ಇಂದ್ರಜಾಲಿಗಂ: **ಲೀಲಾವತಿ,** ४. ೬೮)

**ಗಱಿವಟ್ಟೆ** – [ಗಱ್+ಬಟ್ಟೆ] ಗಳೆಯ ದಾರಿ (ಗಱಿವಟ್ಟೆಯ ಪಾವಿನಂತೆ ಮೊಗದ ಬಿಗಿಪುಂ ಕಣ್ಣ ಬೀಡುಂಬೆರಸು: **ನೇಮಿನಾಪು,** ೫. ೧೧३ ವ)

**ಗಱಿವಟ್ಟೆಯ ಪಾವು** – ಬಿದಿರ ಗಣೆಯ ಮೇಲೆ ಬರುವ ಹಾವು, ತೆಕ್ಕೆಹಾಕಿಕೊಂಡ ಹಾವು (ಅನ್ನೆಗಂ ಇತ್ತ ನರನಂದನನ ಬಟ್ಟೆವಟ್ಟೆಯಂ ತಗುಳ್ದು ಗಱಿವಟ್ಟೆಯ ಪಾವಿನಂತೆ ಚಕ್ರವ್ಯೂಹಮಂ ಪುಗಲ್ ಎಂದು ಬರ್ಪ ದ್ರುಪದ .. .. ಘಟೋತ್ಕಚಾದಿಗಳೊಡನೆ ಮಲ್ಲಾಮಲ್ಲಿಯಾಗಿ ಕಾದುವ ಕುಂಭಸಂಭವನಲ್ಲಿಗೆ ದುರ್ಯೋಧನಂ ಬಂದು: **ಪಂಪಭಾ,** ೧೧. ೯೬ ವ)

**ಗಟ್ಟಿನೆ ಕೊಳ್** – ಗಕ್ಕನೆ ಹಿಡಿ (ಗಟ್ಟಿನೆ ಕೊಳೆ ಕಡುಗೆಂಪಿನೊಳ್ ಅಟ್ಟಮೆಗೊಳಗಪ್ಪವೆಂದು ಮಧುಪಂಗಳ್: **ಆದಿಪು,** ೧೧. ೧೧೯)

**ಗಾಂಗ** – ಗಂಗೆಗೆ ಸಂಬಂಧಿಸಿದ, ಗಂಗೆಯ (ಗಾಂಗ ತುಂಗ ಪುಳಿನಾಗ್ರದೊಳ್ ನಿರ್ಮಳ ಪುಳಿನಾಗ್ರದೊಳ್ ಮಿಸುಪ ನೀಳ ಸರೋಜ ವನಾಳಿಯಂದದಿಂ: **ಜಗನ್ನಾವಿ,** ೧. ३೯)

**ಗಾಂಗತೋಯ** – ಗಂಗೆಯ ನೀರು (ಗಾಂಗತೀಯದೆಸಖಿಯರ್ ನೃಪಾಂಗನೆಗೆ ಮಂಗಳಮಜ್ಜನಮಂ ನಿಮಿರ್ಚಿದರ್: **ಪುಷ್ಪದಂಪು,** ३. ೧೧೭)

**ಗಾಂಗೇಯ** – ಗಂಗೆಯ ಮಗ, ಭೀಷ್ಮ (ಕೌರವಬಲದ ಸೇನಾನಾಯಕಂ ಗಾಂಗೇಯನಡ್ಡಮಾಗೆ: **ಪಂಪಭಾ,** ೧೦. ೫೨ ವ)

**ಗಾಂಗೇಯಕ** – ಭೀಷ್ಮ, ಷಣ್ಮುಖ, ಚಿನ್ನ (ಲೀಲಾಕ್ರಮೋದಂಚಿತ ನಿರವಧಿ ಗಾಂಗೇಯಕಂ .. .. ರಕ್ಷಿಸುಗೆ ವಸುಧೆಯಂ ಯುದ್ಧರಂಗತ್ರಿಣೇತ್ರಂ: **ಜಗನ್ನಾವಿ,** ೧. ३)

**ಗಾಂಡೀವ** – ಅರ್ಜುನನ ಬಿಲ್ಲು (ಕೋಪಾಗ್ನಿ ಕೆಯ್ಗಣ್ಮಿ ಕಣ್ಮಲರೊಳ್ ಬಂದಿರೆ ನೋಡಿದಂ ಕಲುಷದಿಂ ಗಾಂಡೀವಿ ಗಾಂಡೀವಮಂ: **ಪಂಪಭಾ,** ೭. ೭)

**ಗಾಂಡಿವಧರ** – ಅರ್ಜುನ (ಗಾಂಡಿವಧರಂ ಗಂಗಾಧರಂ ತುಂಗಶಕ್ತಿಧರಂ ವಜ್ರಧರಂ ಧರಾಧರಧರಂ ಶ್ರೀಕೀರ್ತಿವಿದ್ಯಾಧರಂ: **ಪಂಚತಂತ್ರ,** ३೭)

**ಗಾಂಡಿವಿ** – ಅರ್ಜುನ (ಪವನಜನಂತು ಪೂಣ್ದು ಯುವರಾಜನ ನೆತ್ತರನಾರ್ದು ಪೀರ್ದಂ ಇಂತು ಅವಗಡದಿಂ ದಿನೇಶಜನಂ ಅಂಕದ ಗಾಂಡಿವಿ ಕೊಂದಂ: **ಪಂಪಭಾ,** ೧३. ೮)

**ಗಾಂದರ** – ಗಾಂಧಾರ, ಸಂಗೀತದ ಸಪ್ತಸ್ವರಗಳಲ್ಲಿ ಒಂದು (ಸುರಸುದತೀಕದಂಬಕದ ಗಾಂದರದಿಂದನಿಯೊಳ್ ದರಸ್ಮಿತಾಂಬುರುಹಮನೊತ್ತಿ ಚುಂಬಿಸುವ ತುಂಬಿಯ ಗಾವರಮಂ ಪೊಣರ್ಚಿ: **ಅನಂತಪು,** ४. ೧೨೭)

**ಗಾಂಧರ್ವ** – ನರ್ತನ (ಗಾಂಧರ್ವಮೆಂಬುದು ಎಮ್ಮ ಬಾಱ ವಿದ್ಯೆ ಅದಱೊಳೆಮ್ಮಂ ದಂಜಿಸುವನ್ನರ್ ಪ್ರೌಢರಿಲ್ಲ: **ಶಾಂತಿಪು,** ೨. ೨೧ ವ)

**ಗಾಂಧರ್ವವಿದ್ಯೆ** – ಸಂಗೀತವಿದ್ಯೆ (ನಾರದಾದಿ ಪ್ರಣೀತ ಗಾಂಧರ್ವವಿದ್ಯಾವಿಶೇಷಂಗಳೊಳಂ ಭರತಪ್ರಣೀತ ನೃತ್ಯಶಾಸ್ತ್ರದೊಳಂ .. .. ಅತಿಪ್ರವೀಣನುಂ: **ಪಂಪಭಾ,** ೨. ३४ ವ)

**ಗಾಂಧರ್ವಶಾಸ್ತ್ರ** – ಗಾಂಧರ್ವವಿದ್ಯೆ (ವೃಷಭಸೇನಂಗೆ ಗೀತವಾದ್ಯಾರ್ಥಸಂಗ್ರಹಮಪ್ಪ ಗಾಂಧರ್ವಶಾಸ್ತ್ರಮುಮಂ ಅನಂತವೀರ್ಯಂಗೆ ವಿಚಿತ್ರ ಚಿತ್ರಕಳೆಯುಮಂ: **ಆದಿಪು,** ೮. ೬೦ ವ)

**ಗಾಂಧಾರನಾದ** – ಸಂಗೀತಧ್ವನಿ (ಮತ್ತಾಳಿನೀಗೀತ ಪಂಚಮಹಾಶಬ್ದವಿಜೃಂಭಿತಧ್ವನಿ ಲಸತ್ ಗಾಂಧಾರನಾದಂ: **ಆದಿಪು,** ೧೨. ४೮)

**ಗಾಂಪ** – ದಡ್ಡ, ಗಾವಿಲ (ಭೀತನಂ ಅಲಸಿಗನಂ ಕಾರ್ಯಾತುರನಂ ಪಸಿದನಂ ತೃಷಾಪೀಡಿತನಂ ದ್ಯೂತ ಮೃಗವ್ಯಸನಜನೋಪೇತನಂ ಅಱಿಅದಱಿದು ಬಿನ್ನವಿಪ್ಪಂ ಗಾಂಪಂ: **ಪಂಚತಂತ್ರ,** ೮೫)

**ಗಾಂಪು** – ಗಾಂಪತನ (ಪರಿಜನದಿಂದಪ್ಪುದುಂ ಏನೊಂದುಮಿಲ್ಲ ಅಚ್ಚಿಗಮೊಂದುಂಟು ಅಲ್ಲಿ ಗಾಂಪಿಂ ತೊಡರ್ವನೆ: **ಆದಿಪು,** ೬. ೨೬)

**ಗಾಜುಗೋಜು** – ಒಂದರೊಳಗೊಂದು ಸೇರಿಕೊಂಡಿರುವುದು; ಜಟಿಲತೆ (ಗಾಜುಗೋಜಿರದೆ ಇದಿರಾಗಿ ಮೊಗ್ಗರಿಸಿದ ಅಗ್ಗದ ತೇರ್ಗಳ ನುರ್ಗುನುರ್ಗು: **ರಾಜಶೇವಿ,** ೬. ೧೦೪)

**ಗಾಡಿ** – ಚೆಲುವು, ಬೆಡಗು (ಒಲಿಸುವ ರೂಪು ಗಾಡಿಯೊಳೊಡಂಬಡೆ ಗಾಡಿ ವಿಳಾಸದೇಟ್ಗೆಯೊಳ್ ನೆಲಸೆ: **ಆದಿಪು,** ೧. ೭೨)

**ಗಾಡಿಕಾರ್ತಿ** – ಸೊಗಸುಗಾತಿ (ಒಲ್ದು ನೋಡುವ ಗಾಡಿಕಾರ್ತಿಯರ ಕಣ್ಗೆ ಕಾಮನ ಅಡ್ಡಣದಂತೆ ದೊಡ್ಡಿತ್ತಾಗಿ ಮೀಱುವ ಉದ್ದ್ವೃತ್ತವೃತ್ತತೆಯಂ ಈಟ್ಟುಕೊಂಡಂತೆ ಉದ್ದ್ವೃತ್ತಂಗಳಾದುವು: **ಪಂಪಭಾ,** ೨ ೩೯ ವ)

**ಗಾಡಿವೆಱು** – ಸೊಬಗೇರು (ಕಪೋಲದೊಳ್ ನವಧೂಮಲೇಖೆ ಚೆಲ್ವಿದಿರ್ಗೊಳೆ ಗಾಡಿವೆತ್ತು ಅಡರ್ದು ಕತ್ತುರಿಯೊಳ್ ಮದವಟ್ಟೆಯಂ ವಿಳಾಸದೆ ತೆಗೆದಂತೆ: **ಪಂಪಭಾ,** ೩. ೭೬)

**ಗಾಣ** – ಗಾಯನ (ಗೊಟ್ಟಿ ಗಾಣರಿಲ್ಲದ ಕಡೆಪಟ್ಟ ಸೂಳೆವನೆಯಿಲ್ಲದವಿಲ್ಲವು ಸೂಳೆಗೇಜೆಯೊಳ್: **ಮಲ್ಲಿನಾಪು,** ೨. ೪೫)

**ಗಾಣರು** – ಗಾಯಕರು (ಜಿನುಗುವ ತುಂಬಿಯಿಂಚರಮೆ ಗಾಣರ ಕಾಕಳಿ ಕೂಡೆ ಸೋರ್ವ ಮಾವಿನ ಸೊನೆ ಗಂಧಸಿಂಧುರಮದಂ: **ಆದಿಪು,** ೧೩. ೬)

**ಗಾಣತಿಗೆಯ್** – ಹಾಡು (ಅಮರರ ಗಾಣರ ಮುಖರಿಗಳಮರ್ದಂ ಕೆದಱಿದವೊಲೆಳಸೆ ಗಾಣತಿಗೆಯ್ದು .. .. ಪಾಡಿದರ್ ಮಂಗಳಮಂ: **ಶಾಂತಿಪು,** ೧೦. ೩೬)

**ಗಾಣವಿಕ್ಕು** – ಗಾಳಹಾಕು (ನೀಂ ಮತ್ಸ್ಯನಾಗಲ್ ಆನಂದು ಸಮುದ್ಭವಿಸಿದೆನಪ್ಪೊಡೆ ಅದಂ ಗಾಣವಿಕ್ಕಿ ಪಿಡಿದೆನ್ನ ಬಾಸಕ್ಕೊಪ್ಪಿಸನೇ: **ಜಗನ್ನಾವಿ,** ೧೭. ೩೪)

**ಗಾಣಿಕ್ಯ** – ಸೂಳೆಯರ ಗುಂಪು (ಸಕಳಕ್ಷ್ಮಾಚರ ಖೇಚರಾಂಚಿತ ಮಹಾಮಾಣಿಕ್ಯಗಾಣಿಕ್ಯ ಹಾಸ್ತಿಕ ರತ್ನೋರ್ಜಿತ ಚಕ್ರವರ್ತಿವಿಭವಂ: **ಆದಿಪು,** ೧೬. ೮)

**ಗಾಣಿಕ್ಯಗೇಹ** – ಸೂಳೆಯರ ಮನೆಗಳು (ಗಾಣಿಕ್ಯಗೇಹರಾಜಿಯಂತೆ ಪಲ್ಲವಿಕಕ್ರೀಡಾ ಪ್ರಪಂಚಿಯುಂ: **ಜಗನ್ನಾವಿ,** ೧. ೪೪ ವ)

**ಗಾಣಿಕ್ಯಸೌಧ** – ಸೂಳೆಯ ಮನೆ (ಗಾಣೀಕ್ಯಸೌಧಕುಳಂ ಕಾಮನ ಶಸ್ತ್ರಶಾಲೆಗಳವೋಲ್ ವಿಭ್ರಾಜಿಕುಂ: **ತ್ರಿಷಷ್ಟಿಪು,** ೭. ೨೯)

**ಗಾತ್ರ** – ದೇಹ (ನೀಂ ಬರೆ ಪೆಱತೇಂ ಕಂಸಾರೀ ಯುಷ್ಮತ್ ಪದಪಾಂಸುಗಳಿಂದೆ ಆಂ ಪವಿತ್ರಗಾತ್ರನೆಂ ಆದೆಂ: **ಪಂಪಭಾ,** ೯. ೩೨); ಆನೆಯ ಮುಂಗಾಲು (ಹ್ರಸ್ವಚೂಚುಕನುಂ ಸಯವೃತ್ತಾಪಸ್ಕಾರನುಂ ಸುಸಂಚಿತ ಪ್ರೋಹಪಳಿಹಸ್ತ ಗಾತ್ರನುಂ: **ಆದಿಪು,** ೧೨, ೫೬ ವ)

**ಗಾತ್ರಕಂಡೂಯನ** – ದೇಹದ ನವೆ (ಗಾತ್ರಕಂಡೂಯನಂ ಕೈಮುಟ್ಟೆ .. .. ಸಂನ್ಯಾಸನಂ ಪೂಣ್ಕೆಯೆಂದೆಂದೆನಸುಂ ತಾನೇಂ ಪರಿಚ್ಛೇದಿಯೊ; **ಸಮಯಪ,** ೧. ೨೩)

**ಗಾತ್ರಕ್ಷೇತ್ರ** – ದೇಹವೆಂಬ ಭೂಮಿ (ಚಾರುಚಾಟುವಚನಾಮೃತವರ್ಷದಿಂದ ಅರಸಿಯ ಗಾತ್ರಕ್ಷೇತ್ರದೊಳ್ ರೋಮಹರ್ಷಸಸ್ಯಸಮೃದ್ಧಿಯಂ ಮಾಡಿ: **ಪುಷ್ಪದಂಪು,** ೩. ೧೦೭ ವ)

**ಗಾತ್ರತ್ರ** – ದೇಹವನ್ನು ರಕ್ಷಿಸುವುದು, ಕವಚ (ಸುರವಿಧ್ವಂಸಿಯ ಬಿಲ್ಲನೊಂದೆ ಶರದಿಂ ಗಾತ್ರತ್ರಮಂ ಕೃಷ್ಣನಾರ್ದೆರಡಂಬಿಂ ತಱಿದಿಕ್ಕಿ: **ಜಗನ್ನಾವಿ,** ೧೮. ೧೦೩)

**ಗಾತ್ರಾಪರ** – ಆನೆಯ ಮುಂಗಾಲು ಮತ್ತು ಹಿಂಗಾಲು (ಅರ್ಧಚಂದ್ರಾಕಾರವಿಂಶತಿನಖನುಂ ಅಪೂರ್ವೋಚಿತ ಮಾಂಸಸ್ಫೀತನೋಪದಿಗ್ಧ ಗಾತ್ರಾಪರನುಂ: **ಆದಿಪು,** ೧೨. ೫೬ ವ)

**ಗಾತ್ರಿಸು** – ದೇಹದಲ್ಲಿ ಸುರಿ (ಸವಿನೋಡಿದೆಂದು ಗಾತ್ರಿಸುವರ್ ಅನೇಕ ರೂಕ್ಷ ವಿಷತಿಕ್ತ ಕಠೋರಮೆನಿಪ್ಪ ಖಾರಮಂ: **ಅನಂತಪು,** ೯. ೩೬)

**ಗಾದಿಗೆ** – [ಖಾತಿಕಾ] ಕಂದಕ (ಮಧುರಾಪುರಮಂ ಬಿಸುಟ್ಟು ಪೋಗಿ ದ್ವಾರಾವತಿಯಂ ಸಮುದ್ರಮೆ ನೀರ್ಗಾದಿಗೆಯಾಗಿ ಮಾಡಿದೆಂ: **ಪಂಪಭಾ,** ೬. ೨೬ ವ)

**ಗಾನ** – ಗಹನ, ಅಸಾಧ್ಯ (ನೀನೊರ್ವನೆ ಪೋಣರ್ವ ಗಡ ಆಂ ಶೇನನ್ವಿತನಾಗಿ ಕಾದುವರಲ್ಲಿಂ ನೀಂ ಗಾನಮೆ ಪೇಟ್: **ಜಗನ್ನಾವಿ,** ೯. ೬೮); ಹಾಡುವಿಕೆ (ಗೀತಂ ಗಾನಂ ವಾದ್ಯಂ ಅದು ಆತೋದ್ಯಂ: **ಅಭಿಧಾವ,** ೧. ೧೩. ೨೩)

**ಗಾನದೇವತೆ** – ಸಂಗೀತದ ಅಭಿಮಾನಿ ದೇವತೆ (ಬಾಲೆ ಬಾಜಿಸುತೆ ಜಾಣಿಂ ಬೀಣೆಯಂ ಗಾನದೇವತೆವೊಲ್ ಕೇಳಿಸಿದಳ್ ಕಳಾಕುಶಲೆಯಂ: ಲೀಲಾವತಿ, ೧೦. ೧೨)

**ಗಾನಪಾಠ್ಯ** – ಹಾಡಲು ಬಳಸುವ ಪಠ್ಯ, ಸಾಹಿತ್ಯ (ಗಾನಪಾಠ್ಯದೊಳ್ ವಾಚಕಮಂ ತುಂಗಕುಚೆ ಮೆಱೆದಳ್ ಆ ದಿವಿಜಾಂಗನೆಗೆ ಆಹಾರ್ಯ ಸಾತ್ವಿಕಂ ನಿಜಮೆ ವಲಂ: **ಆದಿಪು,** ೯. ೨೮)

**ಗಾನೋದ್ಯೋಗ** – ಹಾಡುವ ಪ್ರಯತ್ನ (ಗಾನೋದ್ಯೋಗದೆ ಪೋಗಿ ಮೌನದೆ ವಲಂ ಜಾನಿಪ್ಪಂ: **ಆಚವರ್ಧ,** ೫. ೨೧)

**ಗಾಮರ** – ಗಾವರ, ನಾದ (ಪಿಂದೋಳದ ಗಾಮರವೆಸೆಯೆ ಕರಂ ನೆರೆದೊಪ್ಪುವರ್ಗೊಗೆಯೆ ರತಿಪ್ರಕರಂ: **ಹರಿವಂಶ,** ೧೩. ೨)

**ಗಾಮಿಲ** – ಹಳ್ಳಿಯವನು (ಬೆಲೆಯಿಂದಕ್ಕುಮೆ ಕೃತಿ ಗಾಮಿಲ ಭುವನದ ಭಾಗ್ಯದಿಂದಮಕ್ಕುಂ: **ನೇಮಿನಾಪು,** ೧. ೪೫)

**ಗಾಮುಂಡ** – [ಗ್ರಾಮಕೂಟ>ಗಾಮಉಡ>ಗಾವುಡ>ಗವುಡ>ಗವುಣ್ಡ] ಗೌಡ (ಮತ್ತೊಂದು ದಿವಸಂ ಖೌಶಳಮೆಂಬೂರ ಗಾಮುಂಡಂ ಜಗದ್ಗೃಹನೆಂಬೊಂ ತನ್ನ ಬತ್ತಮಂ ಚಂಪಾನಗರಕ್ಕೆ ಮಾಱಲೆಂದು ಕೊಂಡು ಪೋಗಿ: **ವಡ್ಡಾರಾ,** ಪು ೨೦, ಸಾ ೧೭)

**ಗಾಯಕ** – ಹಾಡುಗಾರ (ಪ್ರಕಟಿಸಿದತ್ತು ಪದ್ಮಜನ ಪಕ್ಕದೊಳ್ .. .. ಗಾಯಕಪ್ರತತಿ ವಾದಕಮಂಡಳಿ: **ಪುಷ್ಪದಂಪು,** ೫. ೨೧)

**ಗಾಯಕತೆ** – ಹಾಡುಗಾರಿಕೆ (ಶಕುನಿರವಕ್ಕೆ ಕಂಠರುತಿ ಕೂಟದೊಡಂಬಡಿನೊಳ್ ನಿಮಿರ್ಚೆ ಗಾಯಕತೆಯನಾಡೆ: **ಶಾಂತಿಪು,** ೮. ೧೦೧)

**ಗಾಯನಿ** – ಗಾಯಕಿ (ಗಾಯನಿಯರ ಸೀಯನಪ್ಪ ರಸಗೇಯಮನಾಲಿಸುತಿರ್ಪಳ್: **ಪಂಪರಾ.** ೩. ೧೦೭)

**ಗಾಯಿಕಾ[ಕೆ]** – ಗಾಯಕಿ (ಸುರನರಗಾಯಿಕಾನಿಚಯ ಸಂಗತ ಮಂಗಳಗೀತನಾದದಿಂ: **ಚಂದ್ರಪ್ರಪು,** ೧೨. ೧೭೨)

**ಗಾಯಿನಿ** – ಹಾಡುಗಾರ್ತಿ (ಅನಿಮಿಷನಾಯಕಂ .. .. ಈಕ್ಷಿಸಿದಂ ಗಾಯಿನಿಯರ ಮುಖಾಬ್ಜಮಂ: **ಮಲ್ಲಿನಾಪು,** ೧೩. ೧೯)

**ಗಾಯಿಲೆ** – ಕಾಯಿಲೆಗೊಳಗಾದ ವ್ಯಕ್ತಿ (ಗಾಯಿಲೆಯಪ್ಪ ಮಕ್ಕಳಂ ಓವರಿಯೊಳ್ ನೂಂಕಿ ಪಡಿಗೆತ್ತು ಪೊಡೆಕಟ್ಟಿಂ ಕಟ್ಟಿ ಮುಸುಂಕಿಟ್ಟು ಕುಳ್ಳಿರೆಯುಂ: **ನೇಮಿನಾಪು,** ೫. ೨ ವ)

**ಗಾರಣ** – ದೂರು, ಅಪವಾದ ಹೊರಿಸು (ಆತನ ಕಾರಣದಿಂ ಎಲ್ಲರುಂ ಮನೆಗೆ ವಂದು ಗಾರಣಂಗುಡೆ ಯಶೋದೆಯೆಂಬೊಳ್ ಆತನ ತಾಯ್ ಬೇಸತ್ತು: **ಹರಿವಂಶ,** ೬. ೧೨ ವ)

**ಗಾರುಡ** – ಗರುಡಮಂತ್ರ (ಒರ್ವ ನಿರ್ಬುದ್ಧಿ ಗಾರುಡಿಗಂ ಗಾರುಡಮಂ ಕಲ್ತು ವಿದ್ಯಾಪ್ರತ್ಯಯಮಂ ನೋಡಲೆಂದು ಸರ್ಪದಷ್ಟನಂ ಅಱಸುತ್ತುಂ: **ಪಂಚತಂತ್ರ,** ೩೪೯ ವ)

**ಗಾರುಡಮಣಿ** – ಹಸಿರು ರತ್ನ, ಪಚ್ಚೆ (ಗಾರುಡಮಣಿರಚಿತ ಚತುರ್ದ್ವಾರಂ .. .. ಸೊಗಯಿಸುಗುಂ: **ಪಾರ್ಶ್ವನಾಪು,** ೧೩. ೬೪)

**ಗಾರುಡಿಗ** – ವಿಷ ಹೋಗಲಾಡಿಸುವ ವಿದ್ಯೆ [ಬಲ್ಲವನು] (ಅಂತು ಪಾವು ಕೊಳಲೊಡಂ ವಿಷಮವಿಷಧರವಿಷದೂಷಿತನಾಗಿರ್ದ ಕುಮಾರನಂ ಗಾರುಡಿಗರ್ ಬಂದು ಕಂಡು: **ಪಂಚತಂತ್ರ,** ೧೮೫ ವ)

**ಗಾರುತ್ಮತ** – ಪಚ್ಚೆಯ ಮಣಿ; ಗರುಡಮಣಿ (ಗೋಪಾಳಚೂಡಾಮಣಿ ಜೀವಂಬೆತ್ತ ಗಾರುತ್ಮತ ಮಣಿಯವೊಲ್ .. .. ಪಿಡಿಯಲೊಡಂ: **ನೇಮಿನಾಪು,** ೮. ೪೮)

**ಗಾರ್ಹಪತ್ಯ** – ತ್ರೇತಾಗ್ನಿಗಳಲ್ಲಿ ಒಂದು (ಶರೀರ ಸಂಸ್ಕಾರಾದಿ ಗಾರ್ಹಪತ್ಯ ದಕ್ಷಿಣಾಗ್ನ್ಯಾಹವನೀಯವೆಂಬ ಪೆಸರಂ ಪಡೆದ ಅಗ್ನಿತ್ರಯಗಳೊಳ್: **ಆದಿಪು,** ೧೫. ಅ೬ ವ)

**ಗಾಲಿ** – ಚಕ್ರ (ಒಂದೆ ಗಾಲಿಯೊಳ್ ರಥಮಂ ನಡೆಯಿಸುವೆನೆಂಬ ನೀರಿಲ್ಲದೆ ಕೂಱನಡುವೆನೆಂಬ .. .. ಪೆರ್ಗಾವಿಲನಂ ಪೋಲ್ಕುಂ: **ಧರ್ಮಾಮೃ,** ೫. ೬೯ ವ)

**ಗಾವಣ** – ನೆಲೆ (ಅಂಬುಜಸೌರಭಮ ತನಗೆ ಗಾವಣಂ ಜೇವಣಂ ಅತ್ಯಪೂರ್ವಂ ಆಸ್ಯಾಂಬುಜಗಂಧಂ: **ಶಾಂತಿಪು,** ೮. ೮೭)

**ಗಾವರ** – ಝೇಂಕಾರ (ಮತ್ತಮಧುವ್ರತಾಳಿ .. .. ಗಾವರಂ ಘನಸ್ವನಮೆನಲ್ ಅಲ್ಲಿ .. . ಎಳೆಕಾರ್ಮುಗಿಲಂತೆ ರಂಜಿಕುಂ: **ರಾಜಶೇವಿ,** ೮. ೧೨೩) ಧ್ವನಿ (ಉಣ್ಮುವ ಉಯ್ಯಲ ಪೊಸ ಗಾವರಂ ಮುಗಿಲೊಳ್ ಏಂ ಎಸೆದತ್ತೋ ಬಸಂತಮಾಸದೊಳ್: **ಪಂಪಭಾ,** ೨. ೧೨)

**ಗಾವರದುಂಬಿ** – ಝೇಂಕರಿಸುವ ದುಂಬಿ (ಕವಿವ ಗಾವರದುಂಬಿಯಿನಾದ ಗಾವರಂ ತೆಕ್ಕನೆ ತೀವಿ: **ಸೂಕ್ತಿಸುಧಾ,** ೧೧. ೧೦)

**ಗಾವರಿಸು** – ಝೇಂಕರಿಸು (ಸೊವಡೊಳ್ ಕಡುಸೊರ್ಕುಸೊರ್ಕಿ ಗಾವರಿಸುವ ತುಂಬಿ: **ಆದಿಪು,** ೨.೫)

**ಗಾವಸಿಂಗ** – [ಗ್ರಾಮಸಿಂಹ] ನಾಯಿ (ಸಿಂಗಮಲ್ಲದು ಪೋಗು ಆ ಸಿಂಗಂ ತಾಂ ಗಾವಸಿಂಗಮೆಂದುದು ನಿನ್ನಂ: **ಪಂಚತಂತ್ರ,** ೧೪೬)

**ಗಾವಳಿ** – ಗುಂಪು (ಲಕ್ಷ್ಮಣಂ ಬೆರಸು ನಡೆವ ರಾಘವನಂತೆ ಉದಾತ್ತರಾಘವಂ ಗಾವಳಿಯ ಬಟಿಯನೆ ನಡೆಯೆ: **ಲೀಲಾವತಿ,** ೮. ೫ ವ)

**ಗಾವಳಿಸು** – ಗುಂಪುಗೂಡು (ಭ್ರಮರಂಗಳ ಗಾವರಕ್ಕೆ ಗಾವಳಿಸಿ ಚಡಾಳದೊಳ್ ಮೊರೆವುವು: **ಅನಂತಪು,** ೧. ೭೭೦)

**ಗಾವಿಲ** – [ಗ್ರಾಮೀಣ] ಹಳ್ಳಿಗ (ಣತ್ವಕ್ಕಂ ಲತ್ವಂ: ಗ್ರಮಾಣೀಣ– ಗಾವಿಲಂ: **ಶಬ್ದಮದ,** ೨೯೫, ಪ್ರ); ಹೆಡ್ಡ (ಏಂ ಗಾವಿಲನಯೊ ನಿನ್ನಂ ನುಂಗುವುದರ್ಕೆ ಇವರಂ ಎತ್ತವೇಟ್ಕುಮೇ: **ಪಂಪಭಾ,** ೩. ೧೭)

**ಗಾವಿಲತನ** – ಹೆಡ್ಡತನ (ಗಾವಿಲತನದಿಂ ಪೊಕ್ಕಿಒಡೆ ಸಾವಪ್ಪುದು: **ಧರ್ಮಾಮೃ,** ೬. ೩೩)

**ಗಾವಿಲಿಕೆ** – ಗಾವಿಲತನ (ಪೆಱರ ವಿಭವಕ್ಕೆ ಬಯಸುವ ಮಱುಗುವ ಗಾವಲಿಕೆಯೇಕೆ ಪೇಟ್: **ಅಜಿತಪು,** ೧೧. ೪೪)

**ಗಾವಿಲೆ** – ಹಳ್ಳಿಯವಳು, ಹೆಡ್ಡೆ (ಕಂತು ಬೆಳ್ದೆಗೆಯೆ ಬಟಿಕ್ಕೆ ಕೈದೆಗೆವ ಗಾವಿಲೆಗೇವುದೊ ಬೇಟದಚ್ಚಿಗಂ: **ಲೀಲಾವತಿ,** ೧೪. ೩೭)

**ಗಾವುದು** – [ಗವ್ಯೂತ] ಗಾವುದ, ಎರಡು ಹರಿದಾರಿಗಳಷ್ಟು ದೂರ (ನರರಥಂ ತೂಳ್ದು ಆ ಕುರುಕ್ಷೇತ್ರದಿಂ ಪಡುವು ಎಣ್ಗಾವುದು ಪೋಗೆ ಪೋ ಗಡ ಇಸುವೆಂ: **ಪಂಪಭಾ,** ೧೦. ೨೫)

**ಗಾವುಳಿ** – ಸಮೂಹ (ಬಳಸಿ ತನ್ನೊಡನೆ ಒಯ್ಯನೊಯ್ಯನೆ ಬರ್ಪ ದೇವರದೊಂದು ಗಾವುಳಿಯಂ ಇನ್ನಿರಿಂ ಎಂದು ತನ್ನನೆ ನಿಳ್ಕಿ ನೋಟ್ಪರ ಕಣ್ಗೆ: **ಪಂಪಭಾ,** ೬. ೭)

**ಗಾಹು** – ಕಪಟ (ಲೋಲಶ್ಮಶ್ರುಮುಖಂ ತೆಱಂಬೊಳೆವಿನಂ ಗಾಹಿಂಗೆ ಬೀಟ್ಪ; ಗುರಿನ್ನಂ ಆಭೀಳಲೋಕದೆ ಸಾರ್ದು: **ಸೂಕ್ತಿಸುಧಾ,** ೩. ೩೧)

**ಗಾಹ** – ಮುಳುಗುವುದು, ಸ್ನಾನ (ನಿಕಷಾಂಭೋಜಾತರೋತ್ಸಂಗ ಗಾಹದೊಳೋಲಾಡಿ ಪುಟಿಲ್ಗಳೊಳ್ ಸುಳಿದು: **ವರ್ಧಮಾಪು,** ೧೨. ೧೪)

**ಗಾಹೆ** – [ಗಾಥಾ] ಪ್ರಾಕೃತ ಭಾಷೆಯ ಪದ್ಯ, ಹಾಡು (ಲೇಖಮಂ ಪಾವುಡಮಂ ಅನಭಿಜ್ಞನ ಗಾಹೆಯಂತಿರಲ್ ಓದಿಸದೆಯುಂ ಶೋಧಿಸದೆಯುಂ: **ಅನಂತಪು,** ೧೩. ೪೫ ವ)

**ಗಾಳ** – ಮೀನು ಹಿಡಿಯುವ ಕೊಕ್ಕೆ (ಸೂಳೆಯರ್ ಗಾಳದ ಮೀನಂತೆ ಅಳವಳಿಯೆ: **ಧರ್ಮಾಮೃ,** ೨. ೪೧ ವ)

**ಗಾಳಿ** – ದೆವ್ವ (ಗಾಳಿ ಸೋಂಕಿದತ್ತು ಪಿಶಾಚಂ ತೊಡರ್ದುದು ಭೂತಂ ಬನ್ನಂಬಡಿಸಿದುದು: **ಕಾದಂಬ,** ೩. ೯೬)

**ಗಾಳಿಗೊಳ್** – ಗಾಳಿಯ ಮೂಲಕ ವಾಸನೆ ತಿಳಿ (ಅಡವಿಯೊಳ್ ದುಷ್ಪಾಶ್ವಮನೇಱೆ ಪಂದಿಯ ಬಟಿಯಂ ತಗುಳ್ದೊಡೆ ಅದು ಗಾಳಿಗೊಂಡು ಒಂದು ದೆಸೆಗೆ ಪರಿದು ವಿಂಧ್ಯಾಟವಿಯ ನಟ್ಟನಡುವೆ ಸುರಮ್ಯಮೆಂಬ ಬೇಡವಳ್ಳಿಯ ಸಾರೆ: **ವಡ್ಡಾರಾ,** ಪು ೧೬೨, ಸಾ ೧೭)

**ಗಾಳಿವಟ್ಟೆ** – [ಗಾಳಿ+ಬಟ್ಟೆ] ವಾಯುಮಾರ್ಗ, ಆಕಾಶ (ಕನ್ನಡಿಗಳ ಬಳ್ಳಿವೆಳ್ಳು ಕುಡುಮಿಂಚಿನವೋಲಿರೆ ಗಾಳಿವಟ್ಟೆಯೊಳ್ ನಡೆವನ ಕಾಯ್ಪು ತಣ್ಣಗಿರೆ .. .. ಗಡಣಿಸಿ ಬಂದು ಕೋಲ ಮಟಿಯಂ ಕಱೆದರ್ ಮಿಗೆ ಬಿಲ್ಲ ಬಲ್ಲಹರ್: **ಕಬ್ಬಿಗಕಾ,** ೨೦೬)

**ಗಾಳಿವಾತು** – ಬೈಗುಳ (ಗಾಳಿವಾತೆಂದು ಬೈಗುಳ್: **ಶಬ್ದಮದ,** ಪ್ರಸಾ ೭೮)

**ಗಾಳಿವೆಱಗು** – ಗಾಳಿ ಬೀಸುವ ಜಾಗ (ಕಿಱಿದು ಬೇಗಂ ಆ ಗಾಳಿವೆಱಗಿನೊಳೆ ರಥಮಂ ನಿಲಿಸಿ: **ಪುಷ್ಪದಂಪು,** ೫. ೧೦೪ ವ)

**ಗಾಳಿಸು** – ನಿವಾರಿಸು (ಆ ಮುನಿರಾಜಂ ಕರ್ಮಂಗಳ ಗಾಳಿಸಿದಂ ಈ ರಾಜರಾಜಂ ಷಟ್ಖಂಡಮಂಡಳಮಂ ಬಾಯ್ಗೇಳಿಸಿದಂ: **ಆದಿಪು,** ೬. ೨೪ ವ); ಶೋಧಿಸು (ನೀರಂ ಗಾಳಿಪರ್

ಉಂಬ ಆಹಾರಮಂ ಇಂಬಾಗೆ ಸೋದಿಪರ್: **ಸಮಯಪ,** ೧೩. ೩೫)

**ಗಾಳು** – ಕ್ಷುದ್ರ ವ್ಯಕ್ತಿ, ಮೋಸಗಾರ (ಗಾಳುಗಳಪ್ಪ ಗರ್ದಭೆಯರ್ ವಿರೋಧಿಕಾಮಿಗಳಪ್ಪುದಱಿಂ ಕಾತರಿಸಿ ಮೇಲೆ ಮೇಲೆ ಬೀಱಲೊಡಂ ಬಂದೆ: **ಪಂಚತಂತ್ರ,** ೪೦೮ ವ);

**ಗಾಳುಗಣ್** – ಹೊಳೆವ ಕಣ್ಣು (ಚಾಪಳ ಹರಿಣಿವಿಲೋಕನಮಂ ಈಟ್ಟುಳಿಗೊಂಡಳೆನಲ್ಕೆ ಗಾಳುಗಣ್ ಪೊಳೆಯೆ: **ನೇಮಿನಾಪು,** ೩. ೬೧)

**ಗಾಳುಗುಂಟಣಿ** – [ಗಾಳು+ಕುಂಟಣಿ] ಗಾಳಿಗಂಟಲ ಕುಲಟೆ (ಡಾವರ ಡಾಕಿನಿ ಶಾಕಿನಿ ದೇವತೆ ಕತೆವೇಳಲ್ ಅತಿಶಯಂ ಬಲ್ಲಳ್ ನಾನಾವಿಧ ಗಾಳುಗುಂಟಣಿ ಭೂವಳಯದೊಳ್ ಎಸೆವ ಕನ್ನೆಯುಜ್ಜಯಿನಿಯೊಳಂ: **ಪಂಚತಂತ್ರ,** ೨೧೭)

**ಗಾಳುಗೊರವ** – ಕ್ಷುದ್ರ ಜೋಗಿ (ಗಾಳು ಗೊರವಂ ತಗುಳ್ಚಿ ಪಳಾಳಮಂ ಏನೊಂದನಪ್ಪೊಡಂ ಗಱಪಿದೊಡೆ ಆ ಬೇಳುನುಡಿ ಕೇಳ್ದು ಕೆಮ್ಮನೆ ಬೇಳಲ್ ನಿಮಗಂತು ರಾಜಸೂಯಂ ಮೊಗ್ಗೇ: **ಪಂಪಭಾ,** ೬. ೨೪)

**ಗಾಳುತನ** – ಕ್ಷುದ್ರತನ (ಕುಳ್ಳಿರ್ದು ಒಡನೆಯ ಸೂಳೆಗೆ ತನ್ ತಂಗಿಯ ಬೇಳಾದ ಗಾಳುತನಮಂ ಇಂತೆಂದಳ್: **ಅನಂತಪು,** ೮. ೧೩ ವ)

**ಗಾಳುದೊಟ್ಟು** – ಕ್ಷುದ್ರ ದಾಸಿ (ನೀನುಂ ದೇವಾ ಸುರಯುದ್ಧಕ್ಕೆ ಕರಗಂಬೊತ್ತ ಡಾವರಡಾಕಿನಿಯೆನಿಸಿದ ಪಾಂಚಾಲಿಯುಂ ಬುದ್ಧಿಮತಿಯೆಂಬ ಗಾಳುದೊಟ್ಟುಂ ಇಂತೀ ಮೂವರುಂ: **ಗದಾಯು,** ೨. ೮ ವ)

**ಗಾಳ್ದೊಟ್ಟು** – ದುಷ್ಟೆಯಾದ ತೊತ್ತು, ಗಣನೆಗೆ ಬಾರದ ದಾಸಿ (ಒಂದೆಡೆಯೊಳ್ ನಾಲ್ವರಯ್ವರ್ ಗಾಳ್ದೊಟ್ಟಿರ್ ಇರ್ದಲ್ಲಿಗೆ ಒರ್ವಂ ಎಗ್ಗಂ ಗೊಟ್ಟಿಗೆ ವಂದು: **ಪಂಪಭಾ,** ೪. ೯೫ ವ)

**ಗಾಳ್ಮೇಳ್** – ಕ್ಷೋಭೆ (ವನಿತಾಸಂತತಿ ಬಾಯ್ವಿಡುತ್ತೆ ಪಶುಗಳ್ ಗಾಳ್ಮೇಳೆನುತ್ತೆ ಅಂಧರಪ್ಪನಿತುಂ ಬಟ್ಟೆಯೊಳ್ ಅಂತುಮಿಂತುಂ ಎಡಪಿ ಬೀಱುತ್ತೆ ಕೆಡೆಮೆಟ್ಟುತ್ತಿರ್ಪ ಕೋಳಾಹಳಮಂ ಕ್ಷಿತೀಶ ಮದನಂ ಕಂಡಂ: **ಕುಸುಮಾಕಾ,** ೧೧. ೪)

**ಗಾಱಿಕೇಱಿ** – ಗಾಸಿಗೊಳ್ಳು (ಕಾಮಾಗ್ನಿಯಂ ಮಗ್ಗಿಸಲ್ ಮನಮಂ ತಂದ ವಿಯೋಗಿಜಾಲದೆರ್ದೆಯೊಳ್ ನಟ್ಟುರ್ಚಿ ಗಾಱಿಕೇಱಿ: **ಲೀಲಾವತಿ,** ೨. ೪)

**ಗಿಂಡಿ** – ಸಣ್ಣ ಪಾತ್ರೆ (ಬೀದಿಬೀದಿಯೊಳಿಲ್ಲಮೋಕುಳಿಯ ಗಿಂಡಿಯುಂ: **ಅಜಿತಪು,** ೪. ೭)

**ಗಿಜಿಬಿಜಿಮಾಡು** – ನಜ್ಜುಗುಜ್ಜುಮಾಡು (ಭವತ್ ಊರುಯುಗಂಗಳಂ ಆಜಿರಂಗದೊಳ್ ಗಿಜಿಬಿಜಿಮಾಡಲೆಂದು ಅವನ ಪೂಣ್ದುದು ನಿಕ್ಕುವಂ ಆಗದಿರ್ಕುಮೇ: **ಪಂಪಭಾ,** ೯. ೫೨)

**ಗಿಡದುಱುಗಲು** – ಗಿಡಗಳ ತೋಪು (ಎಱುಗಲುಮಂ ಗಿಡದುಱುಗಲುಮಂ .. .. ಬಳ್ಳಿಯುಮಂ ಕಳ್ಳಿಯುಮಂ ಕಳೆದು ಪೋಗಿ: **ಲೀಲಾವತಿ,** ೬. ೧೬ ವ)

**ಗಿಡಿ** – ತುರುಕು (ಅಡಗಿನ ಬಸನಿಗನ್ನೆ ತಿಂ ಪಿಡಿಯೆಂದವನಡಗಂ ಅವನ ಬಾಯೊಳ್ ಗಿಡಿವರ್: **ಆದಿಪು,** ೫. ೮೬)

**ಗಿಡಿಗ** – ಡೇಗೆ ಹಕ್ಕಿ (ಎಡಱಿದ ವಿಪಕ್ಷಬಲಮಂ ಗಿಡಿಗಂ ಕಡುಪಿಂದೆ ಕಿಡಿಸಿ ರಣಬಾಳಕರಂ ... .. ಅಂಜಿಸಿ: **ಪಾರ್ಶ್ವನಾಪು,** ೩. ೧೪೨೦

**ಗಿಡಿಗಿಡಿಜಂತ್ರ** – ಎಲುಬುಗೂಡಾದ ದೇಹ (ಉಪವಾಸವ್ರತಪ್ರಚುರತೆಯಿಂ ವಪು ಗಿಡಿಗಿಡಿಜಂತ್ರಮಾದುದು ಎಂಬನ್ನೆವರಂ ಕ್ಷಪಿಯಿಸಿ ಮುನೀಂದ್ರಂ ಅನಶನತಪದೊಳ್ ತಱಿಸಂದ ಸಲವು ಅದೊಂದಾಶ್ಚರ್ಯಂ: **ಸುಕುಮಾಚ,** ೩. ೪)

**ಗಿಡಿಗಿಡಿಜತ್ರಂ ಮಿಳಿಮಿಳಿ ನೇತ್ರಂ** – ಎಲುಬುಗೂಡಾದ ದೇಹ ಮತ್ತು ಹೊಳೆವ ಕಣ್ಣುಗಳು (ಕಂತಿಯರಾಗಿ ತಪಂಬಟ್ಟು ಗಿಡಿಗಿಡಿಜಂತ್ರಂ ಮಿಳಿಮಿಳಿನೇತ್ರಂಆಗಿ ಘೋರ ವೀರ ತಪಶ್ಚರಣದೊಳ್ ನೆಗೞುತ್ತಿರ್ದರ್: **ವಡ್ಡಾರಾ,** ಪು ೧೩೪, ಸಾ ೩)

**ಗಿಡಿಗೆ** – [ಕೀಟಿಕಾ] ಡೇರೆ (ಸ್ಥಪತಿರತ್ನವಿರಚಿತ ಅಂಬರಗೋಚರ ರಥನಿಕರಂಗಳುಂ ವಜ್ರದ ಗಿಡಿಗೆಗಳುಂ: **ಆದಿಪು,** ೧೩. ೬೦ ವ)

**ಗಿಡು** – ಗಿಡ (ಕಡೆಯೊಳ್ ಕೋಣದ ಪೋರ್ಕುಳಿ ಗಿಡುವಿಗೆ ಮಿತ್ತೆಂಬ ತೆಱದೆ: **ಯಶೋಧಚ,** ೩. ೬೮)

**ಗಿಡುದುಱುಗಲ್** – ಗಿಡಗಳ ಗುಂಪು (ಗಿಡುದುಱುಗಲುಮಂ ದರಿಯುಮಂ ಕುಮ್ಮರಿಯುಮಂ: **ಲೀಲಾವತಿ,** ೬. ೧೬ ವ)

**ಗಿಣ್ಣ** – ಬೆರಳುಗಳು ಉದುರಿಹೋಗುವ ಕುಷ್ಠ (ನಿಂಬದ ಕುಸುಮಂಗಳಂ ಔದುಂಬರಪಂಚಕಮಂ ಅಂತೆ ನವನೀತಮಂ ಆಣಂಬೆಯಂ ಅನಾರತಂ ಬೆಳ್ಗುಂಬಳಮಂ ಗಿಣ್ಣಂ ಉಣ್ಣದಿರ್ಪುದಮೋಘಂ: **ಸುಕುಮಾಚ,** ೬. ೪೩)

**ಗಿಣ್ಣಲ್** – ಸಣ್ಣ ಪಾತ್ರೆ (ತರಂಬಿಡಿದೊಪ್ಪುವ ಪೊನ್ನ ಗಿಣ್ಣಲ್ಗಳ ಘಸೃಣರಸಂ ಮಿಸುಪ ಶುಕ್ತಿಗಳ: **ರಾಜಶೇವಿ,** ೧೩. ೪೫ ವ)

**ಗಿಣ್ಣು** – ದನ ಈದ ಹೊಸತಿನ ಹಾಲು (ಮಧು ಮದ್ಯ ಮಾಂಸಂಗಳಂ ಅಯ್ದು ಪಾಲ್ ಮರನ ಪಣ್ಣುಂ ಗಿಣ್ಣುಂ ಆಳಂಬೆಯುಂ ಇಂತಿವೆಲ್ಲಮಂ ತಿನ್ನದ ಬ್ರತಂಗಳಂ ಕೈಕೊಂಡು: **ವಡ್ಡಾರಾ,** ಪು ೧೫೧, ಸಾ ೧)

**ಗಿರಿ** – ಬೆಟ್ಟ (ಗಿರಿಗಳೆ ಪರಮಾಣುಗಳೆನೆ ಸರೋಜಭವನೀ ಕರೀಂದ್ರಮಂ ಮಾಡಿದಂ: **ಪಂಪರಾ,** ೧೩. ೧೩೬)

**ಗಿರಿಕಾರೂಢ** – ಇಲಿಯನ್ನು ಏರಿದವನು, ಗಣೇಶ (ಗಿರಿಕಾರೂಢಂ ಗದಾ ಖೇಟ ಫಲಕ ಮಹಾಖಡ್ಗಹಸ್ತಂ: **ಶಬರಶಂ,** ೧. ೬೪)

**ಗಿರಿಕುಲ** – ಬೆಟ್ಟಸಾಲು (ಗಿರಿಕುಲಮಂ ತೆರಳ್ದಱುರೆ ವಾರಿಸುವ ಅಬ್ಧಿಯನೊಂದನೊಂದಱೊಳ್ ಬೆರಸುವ: **ಜಗನ್ನಾವಿ,** ೧೩. ೭೧)

**ಗಿಲನ** – ನುಂಗುವುದು (ನುಂಗು–ಗಿಲನೇ: **ಶಬ್ದಮದ, ಧಾ** ೧೨೫)

**ಗಿಳಿಗೆಡಪ** – ಗಿಳಿಯ ಮಾತು (ಆಗಳಾ ಗಿಳಿಯ ಗಿಳಿಗೆಡಪಕ್ಕೆ ಮುಗುಳ್ನಗೆ ನಗುತ್ತುಂ: **ಚಂದ್ರಪ್ರಪು,** ೭. ೮೭ ವ)

**ಗಿಱು** – ಭಾವಿಸು, ಹಾಗೆಂದುಕೊ (ಗಱು–ಪರಿಭಾವನೇ: **ಶಬ್ದಮದ, ಧಾ** ೮೬೧)

**ಗಿಱ್ಱನೆ** – ಬೇಗನೆ (ಕೂಗುವ ನುಡಿಗೆ ಗಿಱ್ಱನೆಯ್ದುವ ಸೊರ್ಕಾನೆಗಳ ಕಾಲಸಂಕಲೆಯ ಗೋಸದೊಳು: **ಕಬ್ಬಿಗಕಾ,** ೪೪)

**ಗೀಜಗ** – ಒಂದು ಜಾತಿಯ ಹಕ್ಕಿ (ಬಿದಿರ ಸುರ್ಪಿನೊಳ್ ತೋರ್ಪುದಲ್ಲಿ ಗೀಜಗನ ಗೂಡಿನಂತೆ ಇನಬಿಂಬಂ: **ಸೂಕ್ತಿಸುಧಾ,** ೩. ೩೦)

**ಗೀರ್ವಾರ** – ದೇವತೆ (ಗೀರ್ವಾರ ಸಮರ್ಚಿತೇ .. .. ಸಶರ್ವತನು ಪಾಲಿಪುದು ಪರ್ವತತನೂಜೇ: **ರಾಜಶೇವಿ,** ೮. ೧೨೭)

**ಗೀರ್ವಾಣ** – ದೇವತೆ (ಪ್ರವಿಮಲಸದ್ಗೀರ್ವಾಣದಾತವ್ಯ ಸಾಯಕ ಸಂಪೂರ್ಣ ಕಳಾಪ್ರವೀಣನಂ .. .. ಅಪ್ಪ ಮಗನಂ ಅಮೋಘಂ ಪಡೆವೆಂ: **ಪಂಪಭಾ,** ೧. ೧೩೪ ಮತ್ತು ೧೩೪ ವ)

**ಗೀರ್ವಾಣನಾಥ** – ಇಂದ್ರ (ಏಕಪಾದತಪದೊಳ್ ನಿಲೆ ಗೀರ್ವಾಣನಾಥಾತ್ಮಜನಲ್ಲಿಗೆ ಗುಹನಂ ಅಹಿಭೂಷಣನ ಅಂಬಂ ಬೇಡಿ ಅಟ್ಟಿದೊಡೆ: **ಪಂಪಭಾ,** ೮. ೧೬ ವ)

**ಗೀರ್ವಾಣಬಾಣಾಸನ** – ಕಾಮನ ಬಿಲ್ಲು (ಮುಗಿಲ್ ಅಂಗಪ್ರಭೆ ನೀಟ್ಟಿರನ್ನದ ಗುಳಂ ಗೀರ್ವಾಣಬಾಣಸನಂ ಮಿಗೆ ದಂತಂ ಕುಡು ಮಿಂಚು: **ಉದ್ಭಟಕಾ,** ೪. ೮೦)

**ಗೀರ್ವಾಣರಮಣೀಜನ** – ದೇವತಾಸ್ತ್ರೀಸಮೂಹ (ಆಗಳ್ ಆ ಸಮಯೋಚಿತ ಸುವಸ್ತು ಸಂಚಯ ಪರಿಕಳಿತ ಪಾಣಿಗಳಪ್ಪ ಗೀರ್ವಾಣರಮಣೀಜನಂ: **ಶಾಂತೀಶ್ವಪು,** ೧೪. ೪ ವ)

**ಗೀರ್ವಾಣವಾರಣ** – ದೇವಗಜ, ಐರಾವತ (ಅಂತು ವಿಕ್ರಿಯಾಬಲದೆ ಗೀರ್ವಾಣವಾರಣಂ ವಿಗುರ್ವಿಸೆ: **ಅಜಿತಪು,** ೪. ೨೩ ವ)

**ಗೀರ್ವಾಣಶರಾಸನ** – ಕಾಮನ ಬಿಲ್ಲು (ಕೇಸರಿ ಗೀರ್ವಾಣಶರಾಸನಂ ನಿಮಿರ್ದ ದಂತದ್ಯೋತಿ ವಿದ್ಯುತ್ಪ್ರಭಸ್ಫುರಿತಂ ಬೃಂಹಿತಮೆ ಸಿಡಿಲ್: **ತ್ರಿಷಷ್ಟಿಪು,** ೨೪. ೨೫೫)

**ಗೀರ್ವಾಣಸುಖ** – ಸ್ವರ್ಗಸುಖ (ವಸುಧೇಶಸುಖಂ ಗೀರ್ವಾಣಸುಖಂ ನಿರ್ವಾಣಸುಖಮುಮಂ ಕ್ರಮದಿಂ ಪೊರ್ದಿಸಲಾರ್ಪ ಧರ್ಮಮಂ: **ಸಮಯಪ,** ೪. ೯೩)

**ಗೀರ್ವಾಣಾವಾಸ** – [ಗೀರ್ವಾಣ+ಆವಾಸ] ಸ್ವರ್ಗ (ಶೋಣಾಶ್ವಂಗಳ್ ರಜತರಥಮಂ ಪೂಡೆ ಕುಂಭಧ್ವಜಂ ಗೀರ್ವಾಣಾವಾಸಂಬರಂ ಅಡರೆ ಮಾಱೊಡ್ಡು ದಲ್ ಸಾಲದು ಎನ್ನೀ ಬಾಣಾವಾಸಕ್ಕೆ ಎನುತುಂ: **ಪಂಪಭಾ,** ೧೧. ೫೬)

**ಗುಂಕ** – ಸೇವಕ (ಬಡವರೆಲ್ಲಂ ಭೋಗಿಗಳ್ ಗುಂಕರುಂ ಚದುರರ್ ಲೆಂಕರುಂ ಆಯಗಾಱರ್: **ಅನಂತಪು,** ೧೧. ೧೨)

**ಗುಂಗುಱು** – ಗುಂಗಾಡು (ತುಂಗತರ ಅವನಿಧರಮಂ ಗುಂಗುಱು ಕಾಯ್ದುವೊಲ್ ಇದಾಯ್ತು .. .. ನಮ್ಮುದ್ಯೋಗಂ: **ಆಚವರ್ಧ,** ೧೫. ೪೦)

**ಗುಂಜತ್** – ಗುಂಯ್ಗುಡುತ್ತಿರುವ (ರಂಜಿಸುವ ಹಂಸರವಮುಂ ರಂಜಿಸದಿನ್ನಿದಱ ಕೆಲದೊಳೆಂಬಿನೆಗಂ ಅದೇಂ ಲಂಜಿಕೆಯರ ಗುಂಜತ್ ಮಣಿ ಮಂಜೀರಕ ಮಂಜುಸಿಂಜಿತಂ ರಂಜಿಸಿತೋ: **ಅಜಿತಪು,** ೫. ೪೨)

**ಗುಂಜಾಗೃಹ** – ಹೆಂಡದಂಗಡಿ (ಆ ಕುಸುಮಗುಚ್ಛ ಗುಂಜಾಗೃಹದೊಳ್ ಟೆಂಟಣಿಸದೆಗಳಪುವವೋಲ್ ನೀಂಟಾದಿಂಚರಮಂ ಎಸಗುತ ಒಪ್ಪದುವಳಿಗಳ್: **ಉದ್ಭಟಕಾ,** ೯. ೨೯)

**ಗುಂಜಾಫಳ** – ಗುಲಗಂಂಜಿ (ಗುಂಜಾಫಳಮೆನೆ ತಳೆದು ಇಭಮುಕ್ತಾವಳಿಯಂ ಮರುಳಮಮ ಶಬರಿಯೆನಿಸಿತ್ತದಱೊಳ್: **ರಾಜಶೇವಿ,** ೬. ೧೦೯)

**ಗುಂಜಿ** – ಗುಲಗಂಜಿ (ಅಸುಕೆಯ ಪುಷ್ಪಮಂಜರಿಯ ಗುಂಜಿಯ ಭೂಷಣಮಂ ವನೇಚರೀವಿಸರದ ವೇಷದಿಂದಂ ಒಸೆದಾಡುವರ್ ಆ ವನದೊಳ್ ಮೃಗಾಕ್ಷಿಯರ್: **ಲೀಲಾವತಿ,** ೧೧. ३)

**ಗುಂಜಿದೊಡವು** – ಗುಂಜಾಭರಣ, ಗುಲಗಂಜಿಯ ಆಭರಣ (ಸೂಡಿದ ಉತ್ಪಳದಳಮಾಲೆ ಗುಂಜಿದೊಡವು ಒಪ್ಪುವ ಪುಲ್ಗಳ ಕಂಕಣಂ: **ರಾಜಶೇವಿ,** ೫. ೧೦೯)

**ಗುಂಡಿಗೆ** – ಕಮಂಡಲು (ಕೊಂದೆನ್ನ ಮಗನಂ ಇಂ ಭಯದಿಂದಂ ರಸೆವೊಕ್ಕುಂ ಅಜನ ಗುಂಡಿಗೆವೊಕ್ಕುಂ ಮಂದರಧರನ ಈ ಪೊರ್ಕುಟಿ ಪೊಂದಾವರೆವೊಕ್ಕು ಮೇಣವಂ ಬರ್ದುಕುವನೇ: **ಪಂಪಭಾ,** ೧೧. ೧೨೧); ಬಿಂದಿಗೆ (ಅತತ್ವದೊಳ್ ನಿಲಿಸದ ಭಾವಂ ಅಟಿಸದ ಪುದ್ಗಳಂ ಇಲ್ಲೆನೆ ಕರ್ಮಬಂಧದಿಂ ಬಲವರುತಿರ್ಪ ಊಟಣದ ಗುಂಡಿಗೆಯಂತಿರೆ: **ಸುಕುಮಾಚ,** ೫. ३೨)

**ಗುಂಡಿಗೆಗಟ್ಟು** – ಉಂಡೆಯಾಗು (ಮಾಲೆಗೊಂಡು ಗುಂಡಿಗೆಗಟ್ಟಿದಂತೆ ತುಂಬಿಗಳ್ ತುಂಬಿ ಮುಸುಱೆ: **ಲೀಲಾವತಿ,** ೮. ೫೨ ವ)

**ಗುಂಡಿಗೆವೊಗು** – ಎದೆ ಸೇರು (ಭಯದಿಂದಂ ರಸೆವೊಲ್ಲುಂ ಅಜನ ಗುಂಡಿಗೆವೊಕ್ಕುಂ .. .. ಮೇಣವಂ ಬರ್ದುಂಕುವನೇ: **ಪಂಪಭಾ,** ೧೧. ೧೨೦)

**ಗುಂಡಿತು** – ಆಳವಾಗಿರುವ (ಅರಸನಂ ಬಯ್ಗು ಇರುಳಿನ ಜಾವದೊಳ್ ಉದ್ಯಾನವನಕ್ಕೊಡಗೊಂಡು ಪೋಗಿ ಗುಂಡಿತಪ್ಪುದೊಂದು ನಾಡೆ ಕೆಸಱನೊಡೆಯ ಪಟವಾವಿಯ ತಡಿಯೊಳ್ ಇಱಿದು ಕೊಂದು: **ವಡ್ಡಾರಾ,** ಪು ೧೮೦, ಸಾ ೨३)

**ಗುಂಡಿತ್ತು** – ಗುಂಡಿತು (ಆದಲೆ ಗುಂಡಿತ್ತೆಂದು ಈದಲೆಯೊಳೆ ನಿಂದು ಸತಿಗೆ ಹರಿಗಂ ತೋಱುತ್ತ ಆದರದೆ ಜಾನುದಘ್ನಂ ಉರೋದಘ್ನಂ ಕಂತದಘ್ನಂ ಎಂಬ ಅಳವಿಗಳಂ: **ಪಂಪಭಾ.** ೫. ೬೨)

**ಗುಂಡು** – ಗುಂಡಗಿನ ಕಲ್ಲು (ಬಡಿಯಿಂ ಗುಂಡಿಂ ಕಲ್ಲಿಂದಿಡುತುಂ ಬೆನ್ನಟ್ಟೆ ಬೆರ್ಚಿ ಭಯವಶದಿಂ ಮೈ ನಡುಗೆ ಮತಿಗೆಟ್ಟು ಕಾಲ್ಗಳ್ ತಡೆದೊಡೆ ಬಿಡದೋಡುವಾತನಾ ನೃಪಸುತನಂ: **ಧರ್ಮಾಮೃ,** ೭. ४೮); ಸಮೂಹ (ಇದಿರೊಳ್ ಕಂಡಂ ನೆರೆದು ನಿಗುಂಬಿಸಿ ತಂಡಂಗೊಂಡಿರ್ದ ನರರ ಖಚರರ ಗುಂಡಂ: **ಆದಿಪು,** ४. ३); ಜಗತ್ತು (ಅಂತು ಗುಂಡೆಲ್ಲಂ ಪೊಗೞೆ ಗುಂಡಮಬ್ಬೆ ಮಹಾಸತೀಸಮುಚಿತಾಚಾರದೊಳಂ ಆಭರಣದೊಳ್ ನೆಗೞೆ: **ಅಜಿತಪು,** ೧. ४೬ ವ)

**ಗುಂಡುಗೊಳ್** – ಹೊಡೆಯಲು ಗುಂಡುಕಲ್ಲು ತೆಗೆದುಕೊ (ತೊಲಗದೆ ಗೋವುಗಳ್ ನೆರೆದು ನಾಯ್ಗಳಣುರ್ಚ್ಚುವ ಕಂಡು ಗುಂಡುಗೊಂಡು ಅಲಸದೆ ನಿಚ್ಚಂ ಆರ್ದಿಡುವ: **ಸುಕುಮಾಚ,** ೫. ೧೮)

**ಗುಂಡುದೀವು** – ಕಲ್ಲುಗಳಿಂದ ತುಂಬು (ಅದೇಂ ನೆಱೆ ಪೋಲ್ತುದೊ ಚಂಡಹುಂಡಸಂಸ್ಥಾನದೆ ಗುಂಡುದೀವಿದ ತಡಂಗಮಂ: **ಆದಿಪು,** ೫. ೯೦)

**ಗುಂಡು ನೆರೆ** – ಗುಂಪುಗೂಡು (ಛಾಂದಸಬ್ರಾಹ್ಮಣನಂ ಕಂಡು ಗುಂಡು ನೆರೆದು ಇದೇನೆಂದು ಬೆಸಗೊಂಡೊಡೆ: **ಪಂಚತಂತ್ರ,** ೨೫೫ ವ)

**ಗುಂಡೋತ್ತರ** – ತಳಪಾಯ (ಗುಂಡೋತ್ತರದ ಮೇಲೆ ಸೊದೆಯಂ ಬಳಿಇವ ಕಂಭನಿನಿಱುಗೆಯಿಲ್ಲದೆ ಜಿನ ಭವನಮಂ ಮಾೞ್ಪ: **ಧರ್ಮಾಮೃ,** ೧೨. ೧४ ವ)

**ಗುಕ್ಕಿಸು** – ನುಂಗು, ತಿನ್ನು (ಕುಱಿವಿಂಡನೆಯ್ದಿ ಮೆಯ್ವಸಂ ಒಳಸೋರ್ವಿನಂ ಪಿಡಿದು ಗುಕ್ಕಿಸಲಾಱಳೆ: **ಸಮಯಪ,** ೯. ೧೧೩)

**ಗುಗ್ಗುಳ** – ಲೋಬಾನ (ಕಡುಪಿಂ ಗುಗ್ಗುಳಮಂ ಪೊತ್ತಿಸೆಯುಂ ಶ್ರಮಮಾಗಿರೆ ಗಿರಿಗಳನಡರಿಸೆಯುಂ: **ಹರಿವಂಶ,** ೧೦. ೧೦)

**ಗುಚ್ಛ** – ಮೂವತ್ತೆರಡು ಎಳೆಗಳುಳ್ಳ ಹಾರ (ವಿಜಯಚ್ಛಂದಹಾರ ದೇವಚ್ಛಂದ ಅರ್ಧಹಾರ ರಶ್ಮಿಕಳಾಪ ಗುಚ್ಛ ನಕ್ಷತ್ರಮಾಳಾ ಅರ್ಧಗುಚ್ಛ: **ಆದಿಪು.** ೮. ೫೪ ವ)

**ಗುಜ್ಜರ** – ಗೂರ್ಜರ ದೇಶ (ಪದದಾದಿಯ ದೀರ್ಘಕ್ಕೆ ಹ್ರಸ್ವಂ: ಗೂರ್ಜರ–ಗುಜ್ಜರ, ಸಾಕ್ಷಿ–ಸಕ್ಕಿ: **ಶಬ್ದಮದ,** ೨೮೪ ಪ್ರ)

**ಗುಜ್ಜರಪಟ್ಟೆ** – ಗೂರ್ಜರ ದೇಶದ ರೇಷ್ಮೆ ಬಟ್ಟೆ (ಪೀನಗ್ರಹಣದಿನಾ ಪಬಮಂಗಳ್ಗೆ ವತ್ವಮಿಲ್ಲ: ಗೂರ್ಜರಪಟ್ಟೆ–ಗುಜ್ಜರಪಟ್ಟೆ: **ಶಬ್ದಮದ,** ೩೦೭ ಪ್ರ)

**ಗುಜ್ಜಿ** – [ಕುಬ್ಜಾ] ಕುಳ್ಳಿ (ದಾದಿ ವಿನಯವತಿ ಎಂಬೊಳ್ ಗುಜ್ಜಿ ವಿರಳದಂತೆ ಆದಮಾನುಂ ವಿರೂಪೆ ಪೇಸೆಪಡುವಳ್ ನೋಡಿದ ಜನಕ್ಕೆ ಭಯಮಂ ಪಡೆವೊಳ್: **ವಡ್ಡಾರಾ,** ಪು ೧೦೬, ಪು ೨೨)

**ಗುಜ್ಜು** – ಕುಳ್ಳು (ಸದ್ಭಾವಮನಾಳ್ದ ಗುಜ್ಜುಪಮೆಗಪ್ಪಿನಂ ಒರ್ವಳನಂಗರಾಜ್ಯಲಕ್ಷ್ಮೀವಿಭವಂ: **ಶಾಂತಿಪು,** ೮. ೩); ಕುಳ್ಳ (ಬಳಸಿದ ಗುಜ್ಜುಗಳ್ ನೆರೆದ ಮೇಳದ ಕನ್ನೆಯರ್: **ಪಂಪಭಾ,** ೪. ೪೦)

**ಗುಜ್ಜುಗರೆ** – ನಿಧಾನವಾಗು (ಹೆಟ್ಟುಗೆಗೆ ಗುಜ್ಜುಗರೆದಂದು ಮೆಟ್ಟುವ ಮೆಲ್ನಡೆ: **ಅನಂತಪು,** ೧೨. ೭೫)

**ಗುಜ್ಜುಗೊಂಬು** – ಗಿಡ್ಡ ಕೊಂಬೆ (ನನೆಯಂ ಪೂಗೊಂಚಲಂ ಕಾಯನಂತೆನಸುಂ ತಾಳ್ದಿದ ಗುಜ್ಜುಗೊಂಬು .. .. ಚೆಲ್ವಾದುದಿಮ್ಮಾವಿನೊಳ್: **ಕಬ್ಬಿಗಕಾ,** ೫೩)

**ಗುಜ್ಜುಗೊಳ್** – ಚಿಕ್ಕದಾಗು (ತರುಣಿಯರಾರಪ್ಪಿದೊಡಂ ಗುರುಕುಚಮಿವು ಗುಜ್ಜುಗೊಂಡುವಲ್ಲದೆ ತಾನಂಕುರಿಸದು: **ಲೀಲಾವತಿ,** ೧೪. ೧೨೭); ಬಾಗು (ಗುಜ್ಜುಗೊಂಡು ಮಾವಿನ ಮರನೋಳಿ ಪೂತ ಫಲದಿಟ್ಟಳದಿಂದೆಸೆದಿರ್ಪುದಾವಗಂ: **ಕುಸುಮಾಕಾ,** ೨. ೫೧); ನಿಧಾನವಾಗು (ಗುಜ್ಜುಗೊಂಡುದು ನಡೆ ಮೆಲ್ಪುಗೊಂಡುದು ಸರಂ: **ಜಗನ್ನಾವಿ,** ೨. ೯೫)

**ಗುಜ್ಜುಮೆಟ್ಟು** – ನಿಧಾನವಾಗಿ ನಡೆ, ಮೆಟ್ಟಿಂಗಾಲಿಡು (ನಿತಂಬಭಾರದ ನೆವದಿಂ ನಿತಂಬಿನಿ ನೆಲಂ ತವದಂತಿರೆ ಗುಜ್ಜುಮೆಟ್ಟಿದಳ್: **ಮಲ್ಲಿನಾಪು,** ೫. ೭೮)

**ಗುಜ್ಜುವಜ್ಜೆ** – ಗುಜ್ಜುಮೆಟ್ಟು (ಅಂಭೋಜಷಂಡಂಗಳಿಂ ನಡೆದಿರ್ಪ ಆಱಿದ ಗುಜ್ಜುವಜ್ಜೆಗಳಿವೇನೆತ್ತಂ ಬೆಡಂಗಾದುವೋ: **ಲೀಲಾವತಿ,** ೧೧. ೫)

**ಗುಜ್ಜೆ** – ಕುಳ್ಳಿ (ಇತ್ತ ಸುಖಾವತಿ ಗುಜ್ಜೆಯಾಗಿ ಬಂದು ಪುಷ್ಪಮಾಲೆಯ ಮೇಲಿಕ್ಕಿ: **ಚಾವುಂಪು,** ೨೨೩, ಸಾ. ೨೫)

**ಗುಡ** – ಬೆಲ್ಲ (ದೇವನೇಂ ನರುಷ್ಕರ ಗುಡಮೋ ವಿಶುದ್ಧ ರಸಭಸ್ಮಮೊ ವರ್ಮ ಕಟುತ್ರಿಕಾದಿಯೋ: **ಸಮಯಪ,** ೯. ೪೮)

**ಗುಡಿ** – [ಕುಟೀ] ಧ್ವಜ, ಬಾವುಟ (ನಗ ಸಾನು ತಲಂ ಮನುಜರ್ಗಗೋಚರಂ ಕಟ್ಟಿ ಗುಡಿಯಂ ಇರ್ದಪರಾರ್ ಅಲ್ಲಿಗೆ ಪೋಗಿ ನೋಟ್ಪಿಂ ಎಂಬೀ ಬಗೆಯಿಂ ಸುಗ್ರೀವನೆಯ್ದಿ ವರ್ಷಾವಸರದೊಳ್: **ಪಂಪರಾ,** ೧೦. ೫೦); ಗುಡಾರ, ಡೇರೆ (ಬೀಡಿಂಗೆ ಬೀಡುವಿಡಲ್ ನೆಲನುಂ .. .. ಗುಡಿಯ ಗೂಂಟಕ್ಕೆ ಬಲ್ಲಡವಿಗಳುಂ: **ಪಂಪಭಾ,** ೯. ೧೦೪ ವ)

**ಗುಡಿಕೆ** – (ಅರಸಿಯ ಬೆಸದಿಣ ಆಕೆಯ ದಾದಿಯು ಬೋನ ಗುಡಿಕೆಯೊಳಿಟ್ಟು ತಂದರಸಿಯೊಳ್ ನೆರಪುವುದುಂ: **ಚಾವುಂಪು,** ಪು. ೪೮೧. ಸಾ. ೪)

**ಗುಡಿಗಟ್ಟು** – ಬಾವುಟ ಕಟ್ಟು (ಅಲ್ಲಿ ಗುಡಿಗಟ್ಟಿದ ಸೀರೆಯಂತೆ ದಕ್ಕುಂದಲೆಗೆ ವಂದರುಂ ಮೆಚ್ಚುಕಯ್ವರಂತೆ ತೂಗುವ ತೂಗುಂದಲೆಗಳುಮಂ ಅಱಸಿ ಕಾಣದೆ: **ಹರಿವಂಶ,** ೨. ೧೧ ವ); ರೋಮಾಂಚಗೊಳ್ಳು (ಜನಕಂ ಬರುತಿರ್ದಪಂ ಎಂದು ಕಣ್ಬೊಲಂ ಬುಗೆ ನಲಿದತ್ತು ದಿಟ್ಟವೆಳಗಿಂ ಗುಡಿಗಟ್ಟಿ ಪುರಾಂಗನಾಜನಂ: **ಪಂಪರಾ,** ೫. ೨೭)

**ಗುಡ** – ಬೆಲ್ಲ (ಪಿಷ್ಟ ಉದಕ ಗುಡ ಧಾತಕೀ ಸಂಯೋಗದಿಂದಂ ಎಂದು ಮದವಿಕಾರಮೆಸೆದಿಪ್ಪುದು: **ಆದಿಪು,** ೨. ೯)

**ಗುಡಿ** – ಬಾವುಟ (ನೆಲೆಮಾಡಂಗಳೊಳ್ ಓಳಿವಟ್ಟ ಗುಡಿಗಳ್ ಗಂಧಾಂಬುವಿಂದಾದ ಪೂವಲಿಯಿಂ ಚೆಲ್ವೆಸೆದಿರ್ದ ಬೀದಿಗಳ್: **ಆದಿಪು,** ೭. ೧೧೩); ಕುಟಿ, ಗುಡಿಸಲು (ಗುಡಿಗಳಣೆಗೆ ಗೂಡಾರಂ ವಡೆಮಾಡಂ ಱೊಂಚಂಮಾಡವೆಡಮೆಂಬಿವಱಿಂ: **ವರ್ಧಮಾಪು,** ೮. ೫೭)

**ಗುಡಿಗಟ್ಟು** – ಸುತ್ತುವರಿ (ನಲಿದಿತ್ತು ದಿಟ್ಟವೆಳಗಿಂ ಗುಡಿಗಟ್ಟಿ ಪುರಾಂಗನಾಜನಂ: **ಪಂಪರಾ,** ೫. ೨೭); ಉತ್ಸಾಹ ಹೊಂದು, ರೋಮಾಂಚನಗೊಳ್ಳು (ಕೋಗಿಲೆಯಕ್ಕೆ ಎಲರಕ್ಕೆ ತುಂಬಿಯಕ್ಕೆ ಅರಗಿಳಿಯಕ್ಕೆ ಬಂದೊಡಂ ಒಱಲ್ದೊಡಂ ಎರ್ದೆಯಾಱುವರೆಂದೊಡೆ ಓತ ದೂತರೆ ಬಂದ ಸಬ್ಬವದ ಮಾತುಗಳಂ ಗುಡಿಗಟ್ಟಿ ಕೇಳರೇ: **ಪಂಪಭಾ,** ೪. ೧೦೧); ಧ್ವಜಗಳನ್ನು ಕಟ್ಟು (ನೀರದಪಥದೊಳ್ ತಗುಳ್ದು ಅರಿಗನಂ ಪೊಗಟ್ಟಾಡಿದಂ ಅಂದು ದಂಡಕಾಷ್ಠದ ತುದಿಯೊಳ್ ಪಳಂಚಲೆಯೆ ಕೋವಣವಂ ಗುಡಿಗಟ್ಟಿ ನಾರದಂ: **ಪಂಪಭಾ,** ೧೨. ೨೧೯)

**ಗುಡಿಯಿಸು** – ರಾಶಿ ಹಾಕು (ಗುಡಿಸು[ಗುಡಿಯಿಸು]– ಪುಂಜೀಕರಣೇ: **ಶಬ್ದಮದ, ಧಾ** ೭೭೩)

**ಗುಡಿಸಿಲ್** – ಜೋಪಡಿ (ಗುಡಿಸಿಲಂತೆ ಬಗಿದ ಬೆನ್ನುಂ ಪುಟ್ಟಿನಂತೆ ಬೆರಳ್ಗಲಿಲ್ಲದ ತಳಮುಂ: **ಧರ್ಮಾಮೃ,** ೪. ೪೭ ವ)

**ಗುಡ್ಡ** – ಶಿಷ್ಯ (ಭಟ್ಟಾರಾ ನಿಮ್ಮ ಕಿಱಿಯ ಗುಡ್ಡನಂ ಪರಸಿ ಪೋಗಲ್ವೇಟ್ಕುಂ: **ವಡ್ಡಾರಾ,** ಪು ೭, ಸಾ ೧೧); ಭಕ್ತ (ನಿಮ್ಮ ಕಿಱಿಯ ಗುಡ್ಡಂ ವಾಯುಭೂತಿಯುಂ ಇರ್ದನೆ ಪರಸಿ ಪೋಪಿರ್ ಬಿಜಯಂಗೆಯ್ಯಿಂ: **ಸುಕುಮಾಚ,** ೪. ೨೩ ವ)

**ಗುಣ** – ಸ್ವಭಾವ (ವಿಪುಳ ಯಶೋವಿತಾನ ಗುಣಮಿಲ್ಲದನಂ ಪ್ರಭುಮಾಡಿ ಪೂರ್ವಭೂಮಿಪರ ಪದಗಳಂ ಪುಗಿಸಿ: **ಪಂಪಭಾ,** ೧. ೧೪); ಸಿದ್ಧಿಗಳು (ಕಿತ್ತಯ್ಯಂಗಳ ತಪಮುಂ ಗುಣಮುಮಂ ಪೊಗೞುತ್ತೆ: ವಡ್ಡಾರಾ, ಪು. ೮೨, ಸಾ. ೪); ಕಾವ್ಯಗುಣ (ಆ ಸಕಳಾರ್ಥಸಂಯುತಂ ಅಳಂಕೃತಿಯುಕ್ತಂ ಉದಾತ್ತವೃತ್ತಿವಿನ್ಯಾಸಂ ಅನೇಕಲಕ್ಷಣ ಗುಣಪ್ರಭವಂ.. .ನೆಗೞ್ತೆಯನಾಳ್ದ ಕಬ್ಬಮಂ: **ಪಂಪಭಾ,** ೧. ೯); ಸದ್ಗುಣ (ಆ ಸಕಳಾರ್ಥಸಂಯುತಂ ಅಳಂಕೃತಿಯುಕ್ತಂ ಉದಾತ್ತವೃತ್ತಿವಿನ್ಯಾಸಂ ಅನೇಕಲಕ್ಷಣ ಗುಣಪ್ರಭವಂ.. .ನೆಗೞ್ತೆಯನಾಳ್ದ .. .. ಕೂಸುಮಂ: **ಪಂಪಭಾ,** ೧. ೯); ಬಿಲ್ಲಿನ ಹಗ್ಗ (ಉರ್ಚಿದ ಬಾಳೊಳ್ ಆತ್ಮಮುಖಬಿಂಬಮಂ ಅಟ್ಟೆಯೆ ನೋಡಲುಂ ಮನಂ ಪೆರ್ಚಿ ಧನುರ್ಲತಾ ಗುಣ ನಿನಾದಮಂ ಆಲಿಸಿ: **ಪಂಪಭಾ,** ೧. ೧೪೨)

**ಗುಣಕಱುಗೊಳ್** – ಪ್ರೀತಿ ಹೊಂದು (ಅಣುಗಿನೊಳ್ ಎನ್ನ ಚಟ್ಟರೊಳಗೆ ಈತನೆ ಜೆಟ್ಟಿಗನೆಂದು ವಿದ್ಯೆಯಂ ಗುಣಕಱುಗೊಂಡು ಕೊಟ್ಟು: **ಪಂಪಭಾ,** ೨. ೬೧)

**ಗುಣಗ್ರಾಮಣಿ** – ಗುಣವಂತನಾದ ಗ್ರಾಮ ಮುಖಂಡ (ಪಾಟಿ ನಿಲೆ ನೆಗೞ್ ಬಾೞ್ವುದು ಬಾೞ್ಂಬುದು ನಿಕ್ಕುವಂ ಗುಣಗ್ರಾಮಣಿಗಳ್: **ಕವಿರಾಮಾ,** ೩. ೧೭೭)

**ಗುಣಘ್ನ** – ಗುಣಹಾನಿ ಮಾಡುವವನು (ನಿಘ್ನಂ ಮಾಡುವೆಮೆಂದು ಗುಣಘ್ನರ್ ಪೊನ್ ಕೊಂಡು ಪಾರ್ವರ್ ಅಸುಗತಿಗಿಟಿದರ್: **ಸಮಯಪ,** ೧೧. ೭೯)

**ಗುಣಚ್ಛೇದಕ** – ಗುಣಗಳನ್ನು ನಾಶಗೊಳಿಸುವವನು (ಅಸ್ಮತ್ ಗುಣಭೇದಕ ಸಮರ್ಥಕನಾಗಿ ಬಂದೀಗಳ್ ಎಮ್ಮ ಗುಣಾಪಹಾರಾರ್ಥಂ .. .. ನುಡಿವುದು: **ಶಾಂತಿಪು,** ೯. ೯೧ ವ)

**ಗುಣಜ್ಞ** – ಗುಣಗಳನ್ನು ತಿಳಿದವನು (ಅವಗುಣಿಗಳ ಗುಣಮಂ ಗುಣಜ್ಞನೇನೆಣಿಸುವುದೇ: **ಸುಕುಮಾಚ,** ೧. ೪೮)

**ಗುಣಣೆ** – ನೃತ್ಯಶಾಲೆ, ಸಂಗೀತಶಾಲೆ (ಕನಕಗೋಪುರಂಗಳೊಳಗಣೆರಡು ದೆಸೆಯ ಗುಣಣೆಯಿಂ ವಿಳಾಸನಿಯರ ಗಡಣೆಯಿಂ: **ಪಂಪಭಾ,** ೧. ೫೮)

**ಗುಣಣಸಾಲೆ** – ಗುಣಣೆ (ಎಸೆವ ಪವಡಿಸುವ ಮನೆ ಚಿತ್ರಸಾಲೆ ಸುರತಾಲಯ ಮಹೀಗೃಹಂ ಆರೋಗಿಸುವ ಮನೆ ಮಂಡಪಂ ಗುಣಣಸಾಲೆ ಎಂಬಿನಿತುಮಂ ಗೃಹಾಂಗಂ ಕುಡುಗುಂ: **ಶಾಂತಿಪು,** ೬. ೧೧೬); ಏಕಾಂತಸ್ಥಳ (ಮನಮೊಲ್ದು ತನ್ನ ಗುಣಣೆಯ ಮನೆಯಂ ಗಜಗಮನೆ ಪೊಕ್ಕು ತದ್ಭಟರಂ ಮೆಲ್ಲನೆ ಬೇೞ್ವೇೞ್ ಬರವೇೞ್ದು ಎನಿತಾನುಂ ತೆಱದ ಲಲ್ಲೆಯಿಂ ಜೊತ್ತಿಸಿದಳ್: **ಸುಕುಮಾಚ,** ೭. ೧೦)

**ಗುಣಪಣ** – ಸದ್ಗುಣವೆಂಬ ಹಣ (ಕಾದಂಬರೀದೇವಿಯ ಗುಣಪಣದಿಂ ಮಾಱುವೋದೆಂ ಇನ್ನಿೀಗಳ್: **ಕಾದಂಸಂ,** ೫. ೫೫)

**ಗುಣಪ್ರಭ** – ಸದ್ಗುಣಗಳಿಂದ ಕಾಂತಿಯುಕ್ತನಾದವನು (ಸುತಪೋವಿಭವಂ ಶಿವಂಕರೋದ್ಯಾನದೊಳಿರ್ದಪಂ ಪರಿವೃತವ್ರತಿವೃಂದಸಭಂ ಗುಣಪ್ರಭಂ; **ಚಂದ್ರಪ್ರಪು,** ೯. ೧೭)

**ಗುಣವ್ರತ** – [ಜೈನ] ಶ್ರಾವಕರು ಹೊಂದಿರುವ ದಿಗ್ವಿರತಿ, ದೇಶವಿರತಿ, ಅನರ್ಥದಂಡವಿರತಿ ಎಂಬ ಮೂರು ವ್ರತಗಳು (ಭಟಾರರ ಪಕ್ಕದೆ ಆಂ ಅಣುವ್ರತ ಗುಣವ್ರತ ಶಿಕ್ಷಾವ್ರತಮೆಂದಿಂತು ದ್ವಾದಶ ವಿಧಮಪ್ಪ ಶ್ರಾವಕ ಧರ್ಮಮುಮಂ: **ವಡ್ಡಾರಾ,** ಪು ೧೨೭, ಸಾ ೨೨); ಹೀಗೆ ಆಚರಿಸುವ ಸದ್ಗುಣಗಳ ವ್ರತ (ಪೋ ವ್ರತಮಾವ ಪೆಂಡಿರೊಳಮಿರ್ದೊಡೇನೊ ವಿಳಾಸಮಾಂತ ನಿತ್ಯವ್ರತಮಾಕೆಯೊಳ್ ಸೊಬಗುವೆತ್ತ ಗುಣವ್ರತ: **ನೇಮಿನಾಪು,** ೧. ೭೬),

**ಗುಣಸ್ಥಾನ** – [ಜೈನ] ಆತ್ಮನ ದರ್ಶನ ಜ್ಞಾನ ಚಾರಿತ್ರಗಳ ವಿಕಾಸಗೊಳ್ಳುವ ಹದಿನಾಲ್ಕು ಅವಸ್ಥೆಗಳು (ಪತ್ತುಂ ಧರ್ಮದೊಳ್ ನೆಱೆದು ಪನ್ನೊಂದು ಗುಣಸ್ಥಾನದೊಳ್ ನೆಱೆದು ನೆಗೞ್ದು .. .. ತಪೋಮಾರ್ಗದೊಳ್: **ಅನಂತಪು,** ೧೨. ೩೨ ವ)

**ಗುಣಾಕೃತಿ** – ನೂಲಿನ ಆಕಾರ (ಪಂಡಿತೋತ್ತಮರ ಗುಣಂ ಗುಣಾಕೃತಿಯನಿರ್ಕೆ ಮದೀಯಮನೋಮೃಣಾಳದೊಳ್: **ಚಂದ್ರಪ್ರಪು,** ೧. ೩೭)

**ಗುಣಾಢ್ಯ** – ಸದ್ಗುಣಗಳುಳ್ಳವನು (ನವಭೂತ ಭಾಷೆಯಿಂ ಕುಱುಪುವೇೞ್ದು ತಾಂ ಅಡ್ಡಗವಿತೆಯಂ ಮಾಡಿ ಮಹಾವ್ಯವಸಾಯಂಗೆಯ್ವ ಮರುಳ್ಗವಿಗಳ್ ತಾವೇಂ ಗುಣಾಢ್ಯರಂ ಮಸುಳಿಸರೇ: **ಗದಾಯು,** ೪. ೪೨)

**ಗುಣಾರ್ಣವ** – ಅರ್ಜುನ (ಗುಣಾರ್ಣವಂಗೆ ಕುಡು ಗೆಲ್ಲಮಂ ಇಂತಿದೆ ಕಜ್ಜದ ಉಜ್ಜುಗಂ: **ಪಂಪಭಾ,** ೫. ೧೦೨)

**ಗುಣಾಷ್ಟಕ** – [ಜೈನ] ಮುಕ್ತಜೀವನಿಗಿರುವ ಅಷ್ಟಗುಣಗಳು (ಉಪಶಿಷ್ಟಗುಣಾಷ್ಟಕರಾದ ಅನಶ್ವರಶ್ರೀವನಿತೇಶರೀಗೆಮಗೆ .. .. ಸೌಖ್ಯಸಿದ್ಧಿಯಂ: **ಚಂದ್ರಪ್ರಪು,** ೧. ೨), ನೋಡಿ 'ಅಷ್ಟಗುಣ'

**ಗುಣೀ** – ಬಟ್ಟೆ, ವಸ್ತ್ರ (ಗುಣಿಯಂ ವಿಭೇಧಿಪಪರಿ ತೀಕ್ಷ್ಣಮುಖಂಗೆ ಸೂಚಿಯಂತಿರೆ ಸಹಜಂ: **ಶಬರಶಂ,** ೧. ೧೬)

**ಗುಣಿಯಿಸು** – ಲೆಕ್ಕಹಾಕು (ಭರತಮನೋದುವ ಸಪ್ತಸ್ವರಮಂ ಗುಣಿಯಿಸುವ ಬೀಣೆವಾಜಿಪ ವಿದ್ದಂಬರೆವ ಪರಚಕ್ರಮಿಕ್ಕುವ ಪರಿಹಾಸದೊಳಿರ್ಪ ಬಿನದಮವರ್ಗಳ ಬಿನದಂ: **ಅಜಿತಪು,** ೩. ೮); ಬಿಲ್ಲಿನ ಠೇಂಕಾರ ಮಾಡು (ಅಂತು ಕುಮಾರರ್ ಬಿಲ್ಲಂ ಗುಣಿಯಿಸುತ್ತಿರೆ ದ್ರೋಣಾಚಾರ್ಯರ ಚಾಪವಿದ್ಯೆಯಂ ಮೆಚ್ಚಿ ಕೃಪಂ: **ಹರಿವಂಶ,** ೧೦. ೩೩ ವ)

**ಗುಣೋತ್ಕರ** – ಗುಣಸಮೂಹ (ಅಣಿಮಾದಿಗುಣೋತ್ಕರಂ ಉಳ್ಳವಂಗೆ ಭುಜವಿಗುರ್ವಣೆ ಪಿರಿದೇ: **ಶಾಂತಿಪು,** ೧೦. ೪೧)

**ಗುಣ್ಪು** – ಗಾಂಭೀರ್ಯ (ಆತನ ಪುರುಷಾರ್ಥದ ಪುರುಳುಂ ಶಕ್ತಿಯಳವುಂ ಕಲಿತನದ ಗುಣ್ಪುಂ ಪರಾಕ್ರಮದ ಬಿಣ್ಪುಂ ಕರತಳಾಮಳಕಮಾಗಿರ್ದಪ್ಪುದು: **ಪಂಚತಂತ್ರ,** ೧೫೬ ವ); ಆಳ (ಮೇರುವಿನುನ್ನತಿ ಜಳನಿಧಿಯ ಗುಣ್ಪು ನಭದ ವಿಭುತ್ವಂ ನಿನ್ನ ಗುಣೋನ್ನತಿ: **ಆದಿಪು,** ೧೦. ೫೬)

**ಗುಣ್ಪುವಡೆ** – ಆಳವಾದ (ಗುಣ್ಪುವಡೆದ ಪೊಕ್ಕುೞೆಂಬ ತಿಳಿಗೊಳಂ ಕಮ್ಮಂಗೋಲನೆಂಬ ಜಕ್ಕವಕ್ಕಿಯಂ ಓಲಾಡಿಸೆಯುಂ: **ಕಬ್ಬಿಗಕಾ,** ೧೨೩)

**ಗುಣ್ಪುವೆಱು** – ಗಾಂಭೀರ್ಯ ಹೊಂದು (ಜಿನಸೇನಾಚಾರ್ಯ ಪರ್ಯಂತಮಾಗಿರೆ ಬಂದೀ ಕಥೆ ಗುಣ್ಪುವೆತ್ತುದು: **ಆದಿಪು,** ೧. ೩೫)

**ಗುದಿಗೆಯ್** – ಪೋಣಿಸಿ ಕಟ್ಟು (ಅಂತವೆಲ್ಲಮಂ ಗುದಿಗೆಯ್ದು ಕಾಳಮೇಘಂ ತಡಿಗೆಯ್ದು ನಿಂದಿರ್ಪಿನಂ .. .. ಒಂದು ಪ್ರಚಂಡ ಕಂಠೀರವಂ: **ರಾಜಶೇವಿ,** ೫. ೧೧೫ ವ)

**ಗುದ್ದಲಿಗೊಳ್** – ಗುದ್ದಲಿಯಿಂದ ಅಗೆಯಲು ತೊಡಗು (ಗುದ್ದಲಿಗೊಂಡಗುೞ್ದು: **ನೇಮಿನಾಪು,** ೫. ೧೮ ವ)

**ಗುಪ್ತಿ** – ಪ್ರಾಕಾರ (ಕಪಿಕೇತು ಕುಲ ಗ್ರಾಮಣಿ ಸುಗ್ರೀವಂ ವಿದ್ಯಾಮಯಮಂ ಸಪ್ತ ಗುಪ್ತಿಯಂ ನಿರ್ಮಿಸಿದಂ: **ಪಂಪರಾ,** ೧೪. ೩೫); [ಜೈನ] ತ್ರಿವಿಧಗುಪ್ತಿ, ಮನೋವಾಕ್ಕಾಯಗಳನ್ನು ನಿಗ್ರಹಿಸುವುದು (ಗುಪ್ತಿಯೆ ತನಗಿಲ್ಲೆ ಕರ್ಮರಿಪುಗೆ ಮುನಿವುದು ಮೊಗ್ಗೇ: **ಆದಿಪು,** ೬. ೨೯)

**ಗುಪ್ತಿಗುಪ್ತ** – [ಜೈನ] ತ್ರಿವಿಧಗುಪ್ತಿಗಳಿಂದ ರಕ್ಷಿತನಾದವನು (ಮನಮಂ ನುಡಿಯಂ ಮೆಯ್ಯಂ ತನಗೆ ವಶಂ ಮಾಡಿ ಗುಪ್ತಿಗುಪ್ತಂ ಮುನಿಯೆಂಬಿನೆಗಂ ನೆಗೞ್ದಂ: **ಆದಿಪು,** ೬. ೨೯)

**ಗುಪ್ತಿತ್ರಯ** – [ಜೈನ] ಮೂರು ಗುಪ್ತಿಗಳು (ಮನೋಗುಪ್ತಿಯುಂ ವಾಗ್ಗುಪ್ತಿಯುಂ ಕಾಯಗುಪ್ತಿಯುಮೆಂಬ ಗುಪ್ತಿತ್ರಯದೊಳಂ: **ಅಜಿತಪು,** ೭. ೮ ವ)

**ಗುಬ್ಬಿ** – ಗುಬ್ಬಚ್ಚಿ (ನುಗ್ಗಿಯ ಬನಕ್ಕೆ ಗುಬ್ಬಿ ಕೋಗಿಲೆಯೆಂಬಂತೆ: **ಧರ್ಮಾಮೃ.** ೭. ೧೫೨ ವ)

**ಗುಬ್ಬಿಗಂಕಣ** – ಚಿಕ್ಕ ಬಳೆ (ಕಂಕಣಕ್ಕೆ; ಪಿಂಡುಗಂಕಣಂ, ಗುಬ್ಬಿಗಂಕಣಂ: **ಶಬ್ದಮದ,** ३೧३ ಪ್ರ)

**ಗುಮ್ಮ** – ಗೋಡೆ ಉರುಳಿಸುವ ಒಂದು ಯಂತ್ರ (ಪಲವು ಮುಖದಿಂ ಗುಮ್ಮನಂ ಸಾರ್ಚಿಯಣ್ಮಿ ಕಾದುವರ ಗುಣ್ಪಂ ಕಿಡಿಸುಂತೆ ಅಗಟಿ ಗುಣ್ಪಂ ಕಿಡಿಸಿಯುಂ: **ಪಾರ್ಶ್ವನಾಪು,** ३. ೧೪೧ ವ)

**ಗುಯ್ಯಲ್** – ತಲಪರಿಗೆ, ನೀರು ಒಸರುವ ಗುಂಡಿ (ಮುದಂ ಊರ ಅಬಲಾಜನಕ್ಕೆ ಪರಿನೀರೂರ ತೋಂಟಕ್ಕೆ ಸಂಪದಂ ಊರೂರ ಗೃಹಕ್ಕೆ ಪಂಕಜದ ಚೆಲ್ವೂರೂರ ಗುಯ್ಯಲ್ಗೆ ಸಂಮದಂ ಊರೂರ ಮದಾಳಿಗೆ ಅಂಚೆಗಳ ಚೆಲ್ವೂರೂರ ಷಂಡಕ್ಕೆ ಪಾಲೊದವೂರೂರ ದನಕ್ಕೆ ಅತರ್ಕ್ಯಮದಜಿಂ ರಮ್ಯಂ ತದುರ್ವೀತಳಂ: **ಕಾವ್ಯಾವಲೋ,** ೨೪೯)

**ಗುರುಕುಲ** – ಗುರುವಿನ ಮನೆ, ವಿದ್ಯಾಕೇಂದ್ರ (ಗುರುಕುಲಮಂ ಬೆಳಗುವ ಭಾಸುರದೀಪಂ ಚರಿತಂ: **ಚಂದ್ರಪ್ರಪು,** ೧. ३३)

**ಗುರುಗಂಜಿ** – ಗುಲಗಂಜಿ (ಈಡಿಜೆವ ಕಾಡಾನೆಗಳ ಕೋಡಪೊಯ್ಲಿಂದುದಿರ್ದೆತ್ತಲುಂ ಪರೆದ ಗುರುಗಂಜಿಯಂ ನೋಡಿ: **ಕಬ್ಬಿಗಕಾ,** ೧೮೧ ವ)

**ಗುರುತನೂಜ** – ದ್ರೋಣನ ಮಗ, ಅಶ್ವತ್ಥಾಮ (ಎಡವಱದೊಳ್ ಎಱಗಿ ಬಱಸಿಡಿಲ್ ಇಡುಮುಡುಕನೆ ಪೊಡೆದುದೆನಿಸಿ ಪಾಂಡ್ಯನ ರಥದ ಅಚ್ಚು ಉಡಿದು ಅಟ್ಟೆತಟ್ಟೆ ಕೊಂಡುವು ಕಡುಗೂರಿದುವೆನಿಪ ಗುರುತನೂಜನ ಕಣೆಗಳ್: **ಪಂಪಭಾ,** ೧೨. ೮೨)

**ಗುರುತಳ್ಪಗತ** – ಗುರುವಿನ ಪತ್ನಿಯನ್ನು ಕೂಡಿದವನು (ಗುರುತಳ್ಪಗತಂಗೆ ಆಯುಧದಿಂದಕಟ ಲಿಂಗವಿಚ್ಛಿತ್ತಿ ಗಡ: **ಸಮಯಪ,** ೧೧. ೭३)

**ಗುರುನಂದನ** – ದ್ರೋಣನ ಮಗ, ಅಶ್ವತ್ಥಾಮ (ಅಂತು ಗುರುನಂದನಂ ಮರುನ್ನಂದನವಿರಚಿತ ನಿಶಾತವಿಶಿಖ ಪಂಜರಮನಟಿದು ಕಟಿಕುಟಿಂ ಮಾಡಿಯುಂ ಅನಿತಱೊಳ್ ಮಾಣದೆ: **ಪಂಪಭಾ,** ೧೨. ೬೮ ವ)

**ಗುರುಪಂಚಕ** – [ಜೈನ] ಪಂಚಪರಮೇಷ್ಠಿಗಳು: ಅರ್ಹಂತ, ಸಿದ್ಧ, ಆಚಾರ್ಯ, ಉಪಾಧ್ಯಾಯ, ಸರ್ವಸಾಧುಗಳು (ಗುರುಪಂಚಕವಜ್ರಪಾತಮಾದಂದು ಕಟಿಲ್ದು ನುಚ್ಚುನುಚಿಯಾಗದೆ ನಿಲ್ಕುಮೇ ಪಾಪಪರ್ವತಂ: **ಸಮಯಪ,** ೧. ೯೮)

**ಗುರುಪೂಜೋಪಲಂಭನ** – [ಜೈನ] ಐವತ್ತಮೂರು ಗರ್ಭಾನ್ವಯಕ್ರಿಯೆಗಳಲ್ಲಿ ಒಂದು; ದೇವತೆಗಳಿಂದ ಪೂಜೆಗೊಳ್ಳುವಿಕೆ (ಕುಲಚರ್ಯಾ ಗೃಹೀಶಿತ್ವ ಪ್ರಶಾಂತಿ ಗೃಹತ್ಯಾಗ .. .. ಗುರುಪೂಜೋಪಲಂಭನ ಯೌರಾಜ್ಯ ಸ್ವರಾಜ್ಯ ಚಕ್ರಲಾಭ .. .. ಎಂಬ ಅಯ್ವತ್ತಮೂಱು ಗರ್ಭಾದಿ ನಿರ್ವಾಣಪರ್ಯಂತಂಗಳಪ್ಪ ಗರ್ಭಾನ್ವಯಕ್ರಿಯೆಗಳಂ: **ಆದಿಪು,** ೧೫. ೧೫ ವ)

**ಗುರುಭಾರ** – ದೊಡ್ಡ ಜವಾಬ್ದಾರಿ (ಆನೆಯಾಳ್ ಗುರುಭಾರಕ್ಕೆ ಇಱಿವಾಳ್ ರಣಕ್ಕೆ ತುಟಿಲಾಲ್ ಕಟ್ಟಾಯದೊಳ್: **ಗದಾಯು,** ೫. ३೫)

**ಗುರುವಚನ** – ಗುರುಮಂತ್ರ; ಹಿರಿಯರ ಮಾತು (ಗುರುವಚನಂ ಅಲಂಘನೀಯಂ ಎನ್ನದೆ ನೀನಾದರದಿಂ ಕೈಕೊಳ್ ಧರ್ಮದೊಳ್ : **ಯಶೋಧಚ,** ३. ೧೭)

**ಗುರೂಪರೋಧ** – [ಗುರು+ಉಪರೋಧ] ಗುರುಗಳ ಒತ್ತಾಯ (ಮನೋರಮೆಯ ಮದುವೆಗಂ ರಾಜ್ಯದ ಪತ್ತುಗೆಗಂ ಗುರೂಪರೋಧಕ್ಕಗಿದು ಮನದಂದಂ: **ಆದಿಪು,** ೬. ೨)

**ಗುರೂಪಾಂತ** – [ಗುರು+ಉಪಾಂತ] ಗುರುಗಳ ಬಳಿ (ಗುರೂಪಾಂತದೊಳ್ ನಿಶ್ಚಳಿತ ತಪಶ್ಚರಣನಿರತನಾದೊಂ: **ಶಾಂತಿಪು,** ೫. ೬೬ ವ)

**ಗುರೋರಪಿ ಗುರು** – ಗುರುವಿನ ಗುರು (ಜಗದ್ಗುರುವಿಗೆ ಗುರುವೆನೆ ಗುರೋರಪಿ ಗುರುವೆನಿಸಿದ ನೀನೆ ಧನ್ಯನೈ ಜಿತಶತ್ರೂ: **ಅಜಿತಪು,** ೬. ೬)

**ಗುರ್ದು** – ಗುದ್ದು, ಮುಷ್ಟಿಯಿಂದ ಹೊಡೆ (ಗುರ್ದುಂ ಪೊರ್ದಿದ ಚಾತುರಂಗ ಬಲಮುಂ ಮೆಯ್ಯಾಗ್ಗಮುಂ ಆ ವೇಳೆಗೊಂಡಿರ್ದ ಅತ್ಯುಗ್ರ ಭಟರ್ಕಳುಂ; **ವಡ್ಡಾರಾ,** ಪು ೧೪३, ಸಾ ೧೫)

**ಗುಲ್ಫ** – ಪಾದದ ಗಂಟು (ಗೂಢ ಗುಲ್ಫ ಪಾರ್ಷ್ಣಿಗಳನೊಳಕೊಂಡ ಮನುಜಮಾಂಧಾತನ ಪೊಱ ಅಡಿಗಳ್ ವಿರೋಧಿ ಭೂಪಾಳರ ಅಡಿಗೆಱಗಿಸಿದ ಸಂತೋಷದೊಳ್: **ಪಂಪಭಾ,** ೨. ३೯ ವ)

**ಗುಲ್ಮ** – ಪೊದೆ (ತರು ಗುಲ್ಮ ಲತಾ ವನಸ್ಥಲಂ ಸರ್ವೃತು ಪ್ರವೇಸದಿಂ ಅಶೇಷಜನಂ ಪರಿಪೂರ್ಣ ಲಕ್ಷ್ಮಿಯಿಂ .. .. ಸರ್ವಸುಖಾವಹಂ ಆ ಮಹೀತಲಂ: **ಪಂಪರಾ,** ೧. ೧೦೨)

**ಗುಹ** – ಷಣ್ಮುಖ (ಏಕಪಾದತಪದೊಳ್ ನಿಲೆ ಗೀರ್ವಾಣನಾಥಾತ್ಮಜನಲ್ಲಿಗೆ ಗುಹನಂ ಅಹಿಭೂಷಣನ ಅಂಬಂ ಬೇಡಿ ಅಟ್ಟಿದೊಡೆ: **ಪಂಪಭಾ,** ೮. ೧೬ ವ)

**ಗುಹಾಂಗಣ** – ಗುಹೆಯ ಮುಂದಿನ ಅಂಗಳ (ಭೋರ್ಗರೆಯಲ್ ಸುರಿತರ್ಪ ನಿರ್ಝರಾಸ್ಫಾಲನ ಶೀಕರಪ್ರಸರದಿಂದೆಸೆದತ್ತು ಬೃಹದ್ಗುಹಾಂಗಣಂ: **ಕಾದಂಸಂ,** ३. ३೮)

**ಗುಹೋತ್ಸಂಗ** – ಗುಹೆಯ ಒಳಭಾಗ (ಗುಹೋತ್ಸಂಗಮಂ ತಾನೊರ್ಬನೆಯ್ದೆವಂದು ತುರಂಗರತ್ನನೇಱೆ: **ಆದಿಪು,** ೧३. ३೫ ವ)

**ಗುಹ್ಯಕ** – ಕುಬೇರ (ತಾಮ್ರಮಯ ಗುಹ್ಯಕಪ್ರತಿರೂಪಂ ಕಿಚ್ಚಿಂಗೆ ತೋಱಿದ ಅರಗು ಕರಗುವಂತೆ ಕರಗಿ ಪೊನಲ್ವರಿಯೆ ಬಿಟ್ಟಿರ್ದ ಇಂದ್ರಾಯುಧಮಂ ಕಂಡು: **ಶಾಂತಿಪು,** ೬. ೨೯ ವ); ಯಕ್ಷ (ವರಸಿದ್ಧಚಯಂ ವಿದ್ಯಾಧರನಿಕರಂ ಗುಹ್ಯಕಾಳಿ ಭೂತಾವಳಿ ಕಿನ್ನರಜಾಳಂ: **ಉದ್ಭಟಕಾ,** ೧೨. ೧३೦); [ಜೈನ] ದೇವತೆಗಳಲ್ಲಿ ಒಂದು ಭೇದ (ಅಂತು ತಾಮ್ರಮಯ ಗುಹ್ಯಕ ಪ್ರತಿರೂಪಂ ಕಿಚ್ಚಿಂಗೆ ತೋಱಿದರಗು ಕರಗುವಂತೆ ಕರಗಿ ಪೊನಲ್ವರಿಯೆ: **ಶಾಂತಿಪು,** ೬. ೨೯ ವ)

**ಗುಹ್ಯಾಖ್ಯ** – ನಾಲ್ಕೂ ಕಡೆಗಳಲ್ಲಿ ದೊಡ್ಡ ಪರ್ವತಶಿಖರಗಳಿದ್ದು ಒಂದೆಡೆ ಮಾತ್ರ ಪ್ರವೇಶಸಾಧ್ಯವಾದ ಭೂಪ್ರದೇಶ (ಗರುಡಂಗಂ ಅಡರಲ್ಬಾರದ ಸಮುತ್ತುಂಗಶಿಖರಂಗಳ್ ನಾಲ್ಕುಂ ದೆಸೆಯೊಳುಮಾಗಿ ಬಾಗಿಲೊಂದೆಯಾಗಿರ್ಪುದು ಗುಹ್ಯಾಖ್ಯಮೆಂಬುದಕ್ಕುಂ: **ಪಂಚತಂತ್ರ,** ೨೯೭ ವ)

**ಗುಳ** – ಪಕ್ಕರಕ್ಷೆ (ಮುಗಿಲ್ ಅಂಗಪ್ರಭೆ ನೀಟ್ದ ರನ್ನದ ಗುಳಂ ಗೀರ್ವಾಣಬಾಣಾಸನಂ ಮಿಗೆ ದಂತಂ ಕುಡು ಮಿಂಚು: **ಉದ್ಭಟಕಾ,** ೪. ೮೦)

**ಗುಳಿಗೆ** – ಉಂಡೆ, ಮಾತ್ರೆ (ಪ್ರಳಯದುರಿ ಕಾಳಕೂಟದ ಗುಳಿಗೆ ಪುರಾಂತಕ ಲಲಾಟನೇತ್ರಾನಳನೊಂದು ಅಳವಿಗಂ ಅಗ್ಗಳಂ ಅವರ್ಗಳ ಮುಳಿಸುಗುಳುಂ: ಪಂಪಭಾ, ೭. ೬೬)

**ಗುಳಿಗೆಯಿಕ್ಕು** – ಉಂಡೆಯಾಗಿ ಮಾಡಿ ನುಂಗು (ಹಾಲಾಹಲಮಂ ಗುಳಿಗೆಯಿಕ್ಕಲುಂ ಉರಿಲಿಂಗಮನಾಲಿಂಗಿಸಲುಂ .. .. ನೆರೆವ ನಿಮ್ಮಿದಿರೊಳೊರ್ವ ಗೋಪಕುಟಿಲಂ ಗಂಡಗರ್ವಮಂ ಮೆಱೆದಪಂ:: **ಜಗನ್ನಾವಿ,** ೭. ೮೪ ವ)

**ಗುಳಿಗೆಯಿಡು** – ಗುಳಿಗೆಯಿಕ್ಕು (ಬಳವೈರಿಯೆಂಬ ಸಾಧಕನಿಳೆಯಂ ಪೊಸ ಮೂಸೆ ಮಾಡಿ ಶಶಿಮಂಡಲಮಂ ಗುಳಿಗೆಯಿಡೆ: **ಅನಂತಪು,** ೭. ೮೫)

**ಗುಳುಚ್ಛ** – ಗೊಂಚಲು (ತನು ಮುನಿಪದರಾಜೀವದ ಕೆಲದೊಳ್ ವೇತ್ರಲತಾವೃತವೆಸೆದತ್ತು ಮಸೃಣಪಿಂಛಗುಳುಚ್ಛಂ: ಚಂದ್ರಪ್ರಭ, ೯. ೨೬)

**ಗುಳ್ಳ** – ಬದನೆಯಂತಹ ಕಾಯಿ (ಕಳ್ಳಿಂ ಕನಕನ ಕಾಯಿಂ ಗುಳ್ಳದ ವಿಷದಿಂದಮಗ್ಗಳಂ ಮಿಥ್ಯಾತ್ವಂ: **ಸಮಯಪ,** ೪, ೧೫೩)

ಗುಳ್ಳೆ – ಕೃತಕ ಮಣಿ (ಅಹಿಮಸ್ತಕಕ್ಕೆ ಮಣಿಯಂ .. .. ಲೋಭಿಯೆಂಬ ಕಾವಲುಮನೊಱಲ್ದು .. . ಮಾಡನದೇಕೆ .. .. ಒಡೆದ ಗುಳ್ಳೆಯಂ .. .. ಅಬ್ಜಸಂಭವಂ: **ಲೀಲಾವತಿ,** ೧. ೪೧)

**ಗುಳ್ಳೆಗೊಟ್ಟಿ** – ಗುಳ್ಳೆಗೋಷ್ಠಿ, ಒಂದು ಆಟ, ಅಟ್ಟಗುಳಿಯಾಟ (ಒಡನಾಡಿಯುಂ ಒಡನೋದಿಯುಂ ಒಡವಳೆದುಂ ಗುಳ್ಳೆಗೊಟ್ಟಿ ಬಟ್ಟು ಉಳಿಸೆಂಡುಂ ಪೊಡೆಸೆಂಡು ಇವಂ ಆಡುತ್ತ ಒಡವಳೆದರ್ ತಮ್ಮೊಳೆಸೆ ತಂತಂಗೆಡೆಗಳ್: **ಪಂಪಭಾ,** ೨. ೩೦)

**ಗುಳ್ಳೆಯ** – ಗುಂಡಾಗಿರುವ (ಬಿಸುನೆತ್ತರ್ ನೆಣಂ ಅಡಗು ಎಲ್ವು ಸಮಸ್ತಂ ಸುರಿಯೆ ಕೈಗೆ ತೊವಲ್ ಉಱೆಯಲ್ ಅಗುರ್ವಿಸಿದುದು ತೀವಿದ ಗುಳ್ಳೆಯ ಪಸುಂಬೆಯ ಸೋರ್ಚಿದಂತೆ ತನು ಕೀಚಕನಾ: **ಪಂಪಭಾ,** ೮. ೭೭)

**ಗುಱಿ** – ಲಕ್ಷ್ಯ, ಉದ್ದೇಶ (ಕೆಳೆಯುಂ ಗುಱಿಯುಂ ಗೊಟ್ಟಿಯುಂ ಅಳವಿಗೆ ಪಿರಿದಾಗೆ ತನಗೆ ದುರ್ಯೋಧನನೊಳ್ ಮುಳಿಸುಂ ನೋವುಂ ಕಲುಷಮುಂ ಅಳುಂಬಂ ಎನೆ ತನಗೆ ಅರಾತಿಕಾಳಾನಳನೊಳ್; **ಪಂಪಭಾ,** ೨. ೫೮)

**ಗುಱಿಯಾಗು** – ಈಡಾಗು (ಮನ್ಮಥಕ್ರೀಡೆಗೆ ನೋಡೆ ನಾಡೆ ಗುಱಿಯಪ್ಪುವು ದಂಪತಿ ಭೋಗಭೂಮಿಯೊಳ್: **ಆದಿಪು,** ೫. ೪೧)

**ಗುಱುಗುಮ್ಮನೆ** – ಸುಮ್ಮನೆ, ನಿಷ್ಕ್ರಿಯವಾಗಿ (ಪಾಟ್ಮನೆಯೊಳ್ ಗುಱುಗುಮ್ಮನೆ ಸುಟಿದಿರದೆ ಪೋಪಂ ಅಜಿತನ ಬಱಿಯಂ: **ಅಜಿತಪು,** ೬. ೧೨೩)

**ಗುಱುಗೆ** – ಹಿರಿಯೆ (ಕೂಸಂ ನೆಱೆಯೆ ಕೆಯ್ಗೆಯ್ಸಿಂ ಎಂದು ಮುನ್ನಂ ಕೆಯ್ಗೆಯ್ಸುತಿರ್ದ ತಱಿದ ಗುಱಗೆಯರಪ್ಪ ಅಂತಃಪುರ ಪುರಂಧ್ರಿಯರಂ ಕರೆದು ಪೇೞ್ವುದುಂ: **ಪಂಪಭಾ,** ೩. ೪೪ ವ)

**ಗುಟಿ** – ಆನೆ ಕುದುರೆಗಳ ಹಕ್ಕರಿಕೆ [ಪಕ್ಷರಕ್ಷೆ] (ನನೆಯೆಸಳಂದಮಾದ ಗುಟಿಮುಂ ಪೊಳೆಯುತ್ತಿರೆ ನೀಳ್ದುವೆತ್ತ ಪೂವಿನ ಪೊಸ ಟೆಕ್ಕೆಯಂ ಮಿಳಿರೆ ಪಕ್ಕದ ಕೋಗಿಲೆಯೆಂಬ ಗಂಟೆಗಳ್ ದನಿಗುಡೆ: **ಕಬ್ಬಿಗಕಾ,** ೧೬೫)

**ಗೂಂಟ** – ಗೂಟ, ಬೆಣೆ (ಮೆಟ್ಟಿಯೆ ನಿಲ್ವ .. .. ಅಂಘ್ರಿಗಳುರ್ಚೆ ಗೂಂಟಮಂ ಬೆಟ್ಟಿದೊಡಂ: **ಸಮಯಪ,** ೧. ೧೭)

**ಗೂಂಟು** – ಕಾಡುಕುದುರೆ (ಅಂತಾ ಗೂಂಟಿನ ಬಾಯೊಳ್ ಗೂಂಠಮಂ ಬೆಟ್ಟಿದಂತಿರ್ದ ಕೆಯ್ಯನುರ್ಚಿಕೊಂಡು: **ನೇಮಿನಾಪು,** ೭. ೭೮ ವ)

**ಗೂಗೆ** – ಗೂಬೆ (ಆಕಸ್ಮಿಕ ನೃಪ ಕರುಣೋದಯಕ್ಕಂ ಅಕಾಲತರುಫಲಕ್ಕಂ ವಿಬುಧಾನೀಕಂ ಬೆರ್ಚುಗುಂ ಅಬುಧನದೇಕಿರ್ಕ್ಕಿಮೊ ಗೂಗೆವೊಂಗುವೊಂಗದೆ ರಜದಿಂ: **ಶಾಂತಿಪು,** ೨. ३೫)

**ಗೂಡಾರ** – [ಗೂಢಗಾರ] ಡೇರೆ (ಗಾಡಿವಡೆದ ಬಕುಳದ ಗೂಡಾರದೊಳಂ ಬೀಗಿ ಪಟಪಟನೆ ಬೆಳದ ಬಾಟೆಯ ತಿವುರಿಯೊಳಂ .. .. ಬಿಟ್ಟ ಬಿಡು ಬರೆದಂತೆ: **ಕಬ್ಬಿಗಕಾ,** ೧೮೪ ವ)

**ಗೂಡುಗೊಳ್** – ಗೂಡಿನ ಒಳಸೇರು (ಕೊಡೆಯ ಚರ್ಮದ ಮಱೆಯೊಳ್ ಗೂಡುಗೊಳುತಿರ್ದ ಶೌರ್ಯಕ್ರೀಡೆಯ ದಿಗ್ವಿಜಯಮೆಸೆದುದು ಎಮ್ಮಗ್ರಜನಂ: **ಆದಿಪು,** ೧೪. ೭೨)

**ಗೂಡುವಾಯ್** – ಎದೆ ಬಡಿದುಕೊ (ಗೂಡುವಾಯ್ದು ಎರ್ದೆಯನೊತ್ತಿ ನಿಷ್ಕಪಪಕ್ಷ್ಮಮನಾಂತು ತರಳಾಕ್ಷಿ ವಿಸ್ಮಯದೆ ಚಕ್ರಿಯಂ ನೋಡಿದಳ್: **ಆದಿಪು,** ೧೧. ೨೦)

**ಗೂಢ** – ಕಾಣದಿರುವ, ಅಡಗಿರುವ (ಗೂಢ ಗುಲ್ಫ ಪಾರ್ಷ್ಣಿಗಳನೊಳಕೊಂಡ ಮನುಜಮಾಂಧಾತನ ಪೊಱ ಅಡಿಗಳ್ ವಿರೋಧಿ ಭೂಪಾಳರ ಅಡಿಗೆಱಗಿಸಿದ ಸಂತೋಷದೊಳ್: **ಪಂಪಭಾ,** ೨. ३೯ ವ)

**ಗೂಢಪದ** – ಸರಿಯಾಗಿ ಅರ್ಥೈಸಲಾಗದ ಶಬ್ದ (ಅಪರಿಮಿತ ವಿದ್ಯರೆನಿಸಿರ್ದ ಪುರಾಣಕವೀಂದ್ರರಖಿಳ ಕಾವ್ಯಂಗಳ ಗೂಢಪದ ಪ್ರಯೋಗಮಂ ನೆರಪಿ ಪದಾರ್ಥಂಗಳನಣಂ ಮನಂಬುಗೆ ಪೇೞ್ವೆಂ: **ಶಬ್ದಮದ,** ३४३)

**ಗೂಢಪುಷ್ಕರ** – ಸೊಂಡಲ ತುದಿಯನ್ನು ಮುಚ್ಚಿಕೊಂಡ ಆನೆ (ಗೂಢಪುಷ್ಕರನಂ ವಿಪುಳಾಯತ ಬಾಹುವಂ ಪೋಱಮಟ್ಟನೇಱೆ ಜಯಮಂ: **ಶಾಂತಿಪು,** ೧೦. ೧೪೨ ವ)

**ಗೂಢಪ್ರಣಿಧಿ** – ಗುಪ್ತಚಾರ (ಯಮಪಟಿಕಾದಿ ಗೂಢಪ್ರಣೀಧಿ ಪ್ರತ್ಯಕ್ಷೀಕೃತ ಕ್ಷಯವೃದ್ಧಿವಿಧಿತ್ರಯನಾಗಿರ್ಪಂ: **ಚಂದ್ರಪ್ರಪು,** ೯. ೧೦೭ ವ)

**ಗೂಥ** – ಅಮೇಧ್ಯ (ದೆಸೆಗೆಟ್ಟ ಜರಾಮರಣದುದ್ದೆಸದಿಂ ನಿಜಗೂಥಮೂತ್ರಸೇವನೆ ಗೆಯ್ವಾ ಕಿಸುಗುಳಿ: **ಸಮಯಪ,** ೧೨. ೨३)

**ಗೂಧ** – ಅಮೇಧ್ಯ (ಪಾಪಿ ಧರ್ಮದತ್ತೆಸಗಂ ಅದೆಂತೆನೆ ಸಂಸ್ಕಾರ ಶತೇನಾಪಿ ನಗೂಧಃ ಕುಂಕುಮಾಯತೇ ಎಂಬುದಱಿಂ: **ಸುಕುಮಾಚ,** ೨. ೭೧)

**ಗೂಳಿಸೊರ್ಕು** – ಗೂಳಿಯಂತೆ ಸೊಕ್ಕಿರು (ಎರಡುಂ ಬಲದ ಕಡಿತಲೆಯ ನಾಯಕರ್ ಕೆಯ್ಕೊಂಡು ಬಳ್ಳುಗೆಡೆದು ಎಕ್ಕೆವಾಱುವಾಱೆ ಪಲಗೆವಾಱೆ ಗೂಳಿಸೊರ್ಕಿ ಮಾರ್ಕೊಂಡು ಕಾದೆ: **ಪಂಪಭಾ,** ೧೦. ೮೦ ವ)

**ಗೂಳೆ** – ವಲಸೆಯ ಹಿಂಡು (ಪಂದಿಯ ಗೊಂದಳದಂತೆಯುಂ ಅಮ್ಮಾವಿನ ತೋಮೆಯಂತೆಯುಂ ತೋಳದ ಗೂಳೆಯಂತೆಯುಂ: **ಪುಷ್ಪದಂಪು,** ३. ೧೨೭ ವ)

**ಗೂಱುಮಾಱಾಳಿ** – ವಸ್ತು ವಿನಿಮಯಗಾರ (ಕಸವರಮಂ .. .. ತನ್ನ ಪೆಂಪನಾತಂಗೆ ಕೊಟ್ಟು ಕೊಂಡಂ .. .. ಇಂತು ಆ ಇರ್ವರುಂ ಗೂಱುಮಾಱಾಳಿಗಳಾದರ್: **ಜೀವಸಂ,** ೯. ೧೫ ವ)

**ಗೃಧ್ರ** – ಹದ್ದು (ಆ ರಥದೊಳ್ ಒಡಂಬಡೆ ಪೂಡಿದ ನಾಲ್ಕೂಱು ಗೊಂಕುಱುಗಟ್ಟೆಯುಂ ಅಂಬರಸ್ಥಲಮನಡರ್ವ ಗೃಧ್ರಧ್ವಜಮುಂ ಅಂಜನಪುಂಜದಂತಾಗಿ: **ಪಂಪಭಾ,** ೧೨. ೭ ವ)

**ಗೃಹಕೋಕಿಳ** – ಹಲ್ಲಿ (ಅನ್ನೆಗಂ ಪರಸ್ಪರಕಲಹಕಲುಷಿತ ಗೃಹಕೋಕಿಳಂಗಳೊಂದೊಂದಂ ತಿನೆ: **ಆದಿಪು** ೨. ೧೪ ವ)

**ಗೃಹಗ್ರಾಮಣಿ** – ಮನೆವಾರ್ತೆಗಾರ (ಗೃಹಗ್ರಾಮಣಿಯನಪೇಕ್ಷಿಸವು ನೃಪಕುಮಾರಗೃಹಂಗಳ್: **ಮಲ್ಲಿನಾಪು,** ೨. ೫೭)

**ಗೃಹತ್ಯಾಗ** – [ಜೈನ] ಒಂದು ಗರ್ಭಾನ್ವಯಕ್ರಿಯೆ, ಆತ್ಮಕಲ್ಯಾಣಕ್ಕಾಗಿ ತನ್ನ ಮನೆಯನ್ನು ತೊರೆಯುವುದು (ವಿವಾಹ ವರ್ಣಲಾಭ ಕುಲಚರ್ಯಾ ಗೃಹೀಶಿತ್ವ ಪ್ರಶಾಂತಿ ಗೃಹತ್ಯಾಗ .. .. ಎಂಬ ಅಯ್ವತ್ತಮೂಱು ಗರ್ಭಾದಿ ನಿರ್ವಾಣಪರ್ಯಂತಂಗಳಪ್ಪ ಗರ್ಭಾನ್ವಯಕ್ರಿಯೆಗಳಂ: **ಆದಿಪು,** ೧೫. ೧೫ ವ)

**ಗೃಹದೀರ್ಘಿಕೆ** – ಅರಮನೆಯ ದೀರ್ಘವಾದ ಕೊಳ (ಗೃಹದೀರ್ಘಿಕೆಯಿಂದೆಟ್ಟರ್ತ ಹಂಸರುತಿ ಮಧುರ ಮಧುಕರೀ ಝುಂಕಾರಂ: **ಮಲ್ಲಿನಾಪು,** ೪. ೪೨)

**ಗೃಹಪತಿ** – ಮನೆವೆಗ್ಗಡೆ (ನೃಪೋತ್ತಮನ ಗೃಹಪತಿಗೆ ರತನಪ್ರಮಾಣ ಗಣಿಕೆಯರ ಬೆಸನೆ ಬೆಸನಾಯ್ತಾಗಳ್: ಶಾಂತಿಪು, ೧೧. ೫೮); [ಜೈನ] ಚಕ್ರವರ್ತಿಗೆ ತಾವಾಗಿ ದೊರೆಯುವ ಜೀವರತ್ನಗಳಲ್ಲಿ ಒಂದು (ಕಾಮವೃಷ್ಟಿಯೆಂಬ ಗೃಹಪತಿರತ್ನಮುಂ: **ಆದಿಪು,** ೧೧. ೩ ವ)

**ಗೃಹಮಯೂರ** – ಸಾಕಿದ ನವಿಲು (ಮಯೂರಿಕೆಯಂ ಧಾರಾಗೃಹಕ್ಕೆ ಗೃಹಮಯೂರಂಗಳಂ ನಡೆಯಿಸಲುಂ: **ಆದಿಪು,** ೭. ೨೧ ವ)

**ಗೃಹಮಹತ್ತರ** – ಮನೆವೆಗ್ಗಡೆ, ಅರಮನೆಯ ಮೇಲ್ವಿಚಾರಕ ಅಧಿಕಾರಿ (ಗೃಹಮಹತ್ತರರಂ ಕರೆದು .. .. ಮಂಗಳೋಪಕರಣಂಗಳಂ ಸಮಕಟ್ಟಿಂ ಎಂದು ಬೆಸಸಿ: **ಕಾದಂಬ,** ೨. ೬೧ ವ)

**ಗೃಹಮೇಧಿ** – ಗೃಹಸ್ಥ (ಗೃಕಮೇಧಿಗದೇವುದೊ ಮಧ್ಯಾಹ್ನದ ಪೊಟ್ಟಿಲ್ಲದ ಪೊಟ್ಟುಂ ಬಂಜೆವೊಟ್ಟು; **ನೇಮಿನಾಪು,** ೧. ೭೯)

**ಗೃಹವನಮಹತ್ತರ** – ಅರಮನೆಯ ಉದ್ಯಾನಗಳ ಉಸ್ತುವಾರಿ ಹೊತ್ತ ಅಧಿಕಾರಿ (ಕಾಂಚನ ಕದಳೀಫಳಮಂ ಗೃಹವನಮಹತ್ತರಂ ತಂದಿತ್ತಂ: **ಮಲ್ಲಿನಾಪು,** ೪. ೨೪)

**ಗೃಹಸ್ಥ** – ಸಂಸಾರಸ್ಥ (ಗೃಹಸ್ಥನೆನ್ನದೆ ಮುಂಬಿಟ್ಟಱಿಸಿ ಕೊಲುತಿರ್ಪ ಜವನೆಂಬಱಿಕೆಯ ಪಗೆವಂಗೆ ಅದೆಂತು ಪಂಗಿಗನಪ್ಪೆಂ: **ಆದಿಪು,** ೪. ೭೭)

**ಗೃಹಾಂಗ** – [ಜೈನ] ಹತ್ತು ಬಗೆಯ ಕಲ್ಪವೃಕ್ಷಗಳಲ್ಲಿ ಒಂದು; ಮನೆಗಳನ್ನು ಕೊಡುವಂಥ ಕಲ್ಪವೃಕ್ಷ (ಎಸೆವ ಪವಡಿಸುವ ಮನೆ ಚಿತ್ರಸಾಲೆ ಸುರತಾಲಯ ಮಹೀಗೃಹಂ ಆರೋಗಿಸುವ ಮನೆ ಮಂಡಪಂ ಗುಣಣಸಾಲೆ ಎಂಬಿನಿತುಮಂ ಗೃಹಾಂಗಂ ಕುಡುಗುಂ: **ಶಾಂತಿಪು,** ೬. ೧೧೬)

**ಗೃಹಾಂಗಣ** – ಮನೆಯ ಅಂಗಳ (ವೇದಿಯಂ ಆತ್ಮ ಗೃಹಾಂಗಣವೇದಿಕೆಯೊಳೆಣೆಯಾಗೆ ಬಗೆದು: **ಆದಿಪು,** ೧೨. ೭೫)

**ಗೃಹಾಂತರಾಳ** – ಮನೆಯ ಒಳಭಾಗ (ತಪಶ್ಚರಣ ಪರಿಣತಾಂತರಂಗನಾಗಿ ತತ್ ಗೃಹಾಂತರಾಳದಿಂ ಪೊಱಮಟ್ಟು ಪೋದೊಡೆ: **ಸುಕುಮಾಚ,** ೧೦. ೮೩ ವ)

**ಗೃಹಾಧಿದೇವತಾ[ತೆ]** – ಮನೆದೇವರು (ಇಳಾಧಿಪಂಗೆ ನೆಲೆವೆರ್ಚಿಸಿದತ್ತು ಗೃಹಾಧಿದೇವತಾ ವಿಲಸದಪಾಂಗದೊಳ್ ನೆರೆದು ಮೂದೆಱದೊಪ್ಪುವ ಬಣ್ಣದಿಂದಂ: **ಚಂದ್ರಪ್ರಪು,** ೩. ೧೦೨)

**ಗೃಹಾಧ್ಯಕ್ಷ** – ಗೃಹಮಹತ್ತರ (ಗೃಹಾಧ್ಯಕ್ಷನಿಂತೀ ರವಂ ದೇವಕಿವೆತ್ತಾ ಕೂಸಿನೊಂದಟ್ಟೆಯ ದನಿಯನೆ ಕೇಳ್ದಲ್ಲಿಗೆಯ್ತಂದು ಕಂಸಂ: **ಜಗನ್ನಾವಿ,** ೩. ೧೩)

**ಗೃಹಾಭ್ಯಂತರ** – ಗೃಹಾಂತರಾಳ (ಆತ್ಮೀಯ ಗೃಹಾಭ್ಯಂತರ ಪ್ರಶಸ್ತಪ್ರದೇಶಂಗಳೊಳಂ .. .. ಅರ್ಹತ್ ಪ್ರತಿಮೆಗಳನಿಱಿಸಿ: **ಆದಿಪು,** ೧೨. ೧೬ ವ)

**ಗೃಹಾಮಾತ್ಯ** – ಮನೆವೆರ್ಗಡೆ (ವಿಷಯ ಗೃಹಾಮಾತ್ಯ ದಂಡಾಧಿನಾಥಾವಳಿ ಧರ್ಮಾದ್ಯಕ್ಷ ಕೋಶಾಧಿಪ ತಳವರ ಹಾಸ್ಯಾದಿ ತಂತ್ರಾಳಿಪಾಳಾವಳಿ ರಾಜಶ್ರೇಷ್ಠಿ ಸೇನಾಪರಿಕರಣ ಪುರೋಧೋಧಿಕಾರ ಅಂಗರಕ್ಷಾವಳಿ ಮುಖ್ಯಂಬೆತ್ತ ಬಾಹತ್ತರದೆಸಕದ ನಾನಾ ನಿಯೋಗಿಪ್ರತಾನಂ: **ಶಾಂತೀಶ್ವಪು,** ೧೫. ೯೦)

**ಗೃಹೀತ** – ಹಿಡಿದ, ಸ್ವೀಕರಿಸಿದ (ಆ ಮಹಾವನಂ .. .. ಕ್ಷೇತ್ರಾಕರ್ಷದಂತೆ ಪೋತ್ರಿ ಪ್ರೋತ್ಸಾಹತ ಧರಣಿತಳಮಂ ಗೃಹೀತಗೋಲಾಂಗೂಲಮುಂ: **ಚಂದ್ರಪ್ರಪು,** ೫. ೫೨ ವ)

**ಗೃಹೋಪಕಂಠ** – ಮನೆಯ ಬಳಿ (ಗೃಹೋಪಕಂಠ ವನಭೂಜಮೆ ಕಲ್ಪಮಹೀಜದೊಪ್ಪಮಂ ತಳೆಯೆ: **ಚಂದ್ರಪ್ರಪು,** ೧೧.೭೨)

**ಗೆಂಟಱ್** – ಸಮೀಪ (ಭರತಂ ಷಟ್ಖಂಡಭೂವಲ್ಲಭನೆನೆ ಸಿರಿಯಂ ಗೆಂಟಱೊಳ್ ಕೇಳ್ದು ರಾಗಂಬೆರೆಸಿರ್ಪ ನಣ್ಪೆ ಸಾಲ್ಗುಂ: **ಆದಿಪು,** ೧೪. ೭೭)

**ಗೆಂಟಾಗಿಸು** – ದೂರಗೊಳಿಸು, ಹೋಗಲಾಡಿಸು (ತ್ರಿಭುವನ ತಿಲಕನ ಮನಮಂ ದಿವಿಜೆಯರೆ ನೆರೆದು ಗೆಂಟಾಗಿಸಿದರ್: **ಅಜಿತಪು,** ೬. ೧೦೨)

**ಗೆಂಟಾಗು** – ದೂರವಾಗು (ಅತ್ತಣಂ ಕಾಣ್ಬೆಡೆಗಂ ಗೆಂಟಾದುದೆಂಬಂತಿರೆ ಗಗನತಳೋದ್ಗಾಮಿಯಾಯ್ತು ಇಂದ್ರಸೈನ್ಯಂ: **ಆದಿಪು,** ೭. ೫೭)

**ಗೆಂಟಿದ** – ದೂರದಲ್ಲಿರುವವನು (ಇದು ಚಕ್ರವ್ಯೂಹಂ ಈ ವ್ಯೂಹಮಂ ಒಡೆವ ಅದಟಂ ಪಾರ್ಥನಂತೆ ಆತನುಂ ಗೆಂಟಿದಂ ಎಮ್ಮೀ ನಾಲ್ವರುಂ ಭೇದಿಸಲಱಿಯೆವು ಇದಂ: **ಪಂಪಭಾ,** ೧೧. ೮೭)

**ಗೆಂಟು** – ದೂರ (ಎಳೆಯೊಳ್ ತೋಱಿದ ರೂಪನಾಗಳೆ ನಭೋಭಾಗಾಗ್ರದೊಳ್ ತೋರ್ಪಂ ಆಗಳೆ ಗೆಂಟು ಆಗಳೆ ಸಾರೆಯಾಗಿ ಪೊಳೆವಂ: **ಆದಿಪು,** ೭. ೧೨೨)

**ಗೆಗ್ಗೆ** – ಯುದ್ಧದಲ್ಲಿ ಬಳಸುತ್ತಿದ್ದ ಒಂದು ಯಂತ್ರ (ಕಾದುವರ ಗುಣ್ಪಂ ಕಿಡಿಸಿಯುಂ ಗೆಗ್ಗೆಯಂ ಪೊಯ್ಸಿಯುಂ ದುರ್ಗದ ನಾಯಕನ ಗರ್ವಮಂ ನುರ್ಗಂ ಮಾಡುವಂತೆ ತೆನೆಗಳಂ ನುರ್ಗುಮಾಡಿಸಿಯುಂ: **ಪಾರ್ಶ್ವನಾಪು,** ೩. ೧೩೯ ವ)

**ಗೆಡೆ** – ಸ್ನೇಹ (ಒಡನಾಡಿಯುಂ ಒಡನೋದಿಯುಂ ಒಡವಳೆದುಂ ಗುಳ್ಳೆಗೊಟ್ಟಿ ಬಟ್ಟು ಉಳಿಸೆಂಡುಂ ಪೊಡೆಸೆಂಡು ಇವಂ ಆಡುತ್ತ ಒಡವಳೆದರ್ ತಮ್ಮೊಳೆಳಸೆ ತಂತಂಗೆಡೆಗಳ್: **ಪಂಪಭಾ,** ೨. ೩೦); ಹರಟು (ಉಂಡ ಪಾರ್ವರ್ ಒಲಿದುದು ಗೆಡೆವರ್ ಪೋಂತಂ ಕೊಂದು ದಿವಕ್ಕದು ಮುಂತಾಗಿಯೆ ಸಲ್ವುದೆಂಬರ್: **ಯಶೋಧಚ,** ೩. ೬೨)

**ಗೆಡೆಗೊಳ್** – ಹೊಂದು (ಸ್ತ್ರೀಕುಚಕುಂಭಕುಂಕುಮ ರಜಃಕಲ್ಲೋಳದಿಂ ಬಣ್ಣವಣ್ಣದ ಚೆಲ್ವಂ ಗೆಡೆಗೊಂಡು: **ಆದಿಪು,**

೧೧. ೧೫೪); ಒಂದುಗೂಡು (ಸೊಡರ್ಗುಡಿ ಒಯ್ಯನಾಗೆ ಪೊಸಮಲ್ಲಿಗೆ ಕಂಪುನಾಱೆ ತಣ್ಪಿಡಿದ ಎಲರ್ ಊದೆ ಗಾವರದ ಮೆಲ್ಲುಲಿ ತುಂಬಿಯ ಗಾವರಂಗಳ ಗೆಡೆಗೊಳೆ: **ಪಂಪಭಾ,** ೪. ೧೧೦); ಸ್ನೇಹಮಾಡಿಕೊ (ಪೊಂಗುವ ಮಲೆಪರ ಮಲೆಗಳ ಡಂಗಂಗಳ್ ಮಲೆವ ಮಂಡಲಂಗಳ್ ಪ್ರತ್ಯಂತಗಳ್ ಎನಲ್ ಒಳವೆ ಪಾಂಡವರಂ ಗೆಡೆಗೊಳೆ ನಿನಗೆ ಕುರುಕುಳಾಂಬರಭಾನೂ: **ಪಂಪಭಾ,** ೯. ೩೯)

**ಗೆಡೆಯಾಗು** – ಜೊತೆಯಾಗು (ಮಿಕ್ಕ ಗೋಪರೆಲ್ಲರ್ಗಂ ಗೋಪಾಲರೊಡನೆ ಗೆಡೆಯಾಗಿ ಲಘುಕ್ರಮದೆ ಸಮಪಾದದಿಂ ಲಂಘಿಸಿ ಗೆಲ್ಲಂಗೊಂಡು: **ಜಗನ್ನಾವಿ,** ೪. ೫೨ ವ)

**ಗೆಡೆವಕ್ಕಿ** – ಜೋಡಿಹಕ್ಕಿ, ಚಕ್ರವಾಕ (ಪಲವು ಕಾಲದಿಂದನುಬಂಧಂಗಿಡದೆ ಒಡಲೆರಡು ಅಸುವೊಂದು ಎನೆ ಗೆಡೆವಕ್ಕಿಗಳಂತೆ ಕೂಡಿ ನಲಿಯುತ್ತಿರ್ದರ್: **ಪಂಪರಾ,** ೪. ೬)

**ಗೆಡೆವಚ್ಚು** – ಜೊತೆಯನ್ನು ಬಿಡು (ಗೆಡೆವಚ್ಚಿರ್ವರ್ ಮನಗೊಂಡು ಒಡನೊಡನೆ ಓರಂತು ತಗುಳ್ದು ಝೇಂಕರಿಸಿದೊಡೆ ಎಲ್ಲಿಡಗಾಗೆ ಮೋದಲೆಂದಿರ್ದ ಎಡೆಯೊಳ್ ಗುರು ತನ್ನ ಮಗನಂ ಎಡೆವುಗವೇೞ್ದಂ: **ಪಂಪಭಾ,** ೨. ೭೩) [ಈ ಶಬ್ದವು **'ಗೆಡೆವೆಚ್ಚು'** ಎಂದಿರಬಹುದೇ ಎಂದು ಡಿ.ಎಲ್‌ಎನ್ ಅನುಮಾನಿಸುತ್ತಾರೆ

**ಗೆತ್ತು** – [√ಗಿಱು=ಭಾವಿಸು] ಭಾವಿಸಿ (ಪೂತ ಕಲ್ಪಲತೆಯಂ ಲಲಿತಾಂಗಿಯೆ ಗೆತ್ತು ಅಲಂಪಿನಿಂದೆಱಗುವುದುಂ; **ಆದಿಪು,** ೪. ೧೩)

**ಗೆಯ್ವೊಗ** – ಕಾರ್ಯವೈಖರಿ (ಬಗೆ ಮತ್ತೊಂದೆನೆಯುಂ ಗೆಯ್ವೊಗಂ ಇತ್ತೊಂದೆನೆಯುಂ ಅಂಗುಳೀ ನಖಚಯಕಾಂತಿಗಳಂ ಅವಟಯ್ಸಿ ಸಲೆ ಪಾಸಗಯದೆಸೆದೆಸೆ ಪೊರಳ್ಚಿದಂ ಮತ್ತೊರ್ವಂ: **ಶಾಂತಿಪು,** ೫. ೧೦೫)

**ಗೆರ್ಬು** – ಸಂಭೋಗಿಸು (ಗೆರ್ಬು–ಮೈಥುನೇ: **ಶಬ್ದಮದ, ಧಾ** ೪೮೨)

**ಗೆಲ್** – ಜಯಿಸು (ಅರಿನೃಪಬಲಮಂ ಗೆಲ್ದು ಉರು ಪರಾಕ್ರಮಕ್ರಮದೆ ಶೌರ್ತಮಂ ಪ್ರಕಟಿಸು ನೀಂ: **ಕವಿರಾಮಾ,** ೧. ೮೨)

**ಗೆಲಿಸು** – ಗೆಲ್ಲುವಂತೆ ಮಾಡು (ಪುಸಿಯೆನೆ ರಥಮಂ ಹರಿ ಚೋದಿಸುವಂತೆವೋಲ್ ಇರ್ದು ಅದೆಂತು ನರನಂ ಗೆಲಿಪಂ ವಿಸಸನದೊಳ್ ಅಂತೆ ನೀಮುಂ ಪೆಸರಂ ಕರ್ಣಂಗೆ ಮಾಡಿ ಗೆಲ್ಲಂಗೊಳ್ಳಿಂ: **ಪಂಪಭಾ,** ೧೨. ೯೧)

**ಗೆಲೆಯಂಬು** – ಒಂದು ಬಗೆಯ ಬಾಣ (ನೆಱನರಿವ ಕಣೆ ಗೆಲೆಯಂಬು ಕಕ್ಕಂಬು ಕೆಲ್ಲಂಬು ಮೊನೆಯಂಬು ತೀವೆ ಕಣ್ಣಿಂ: **ಪಂಪಭಾ,** ೧೩. ೩೯)

**ಗೆಲೆವರ್** – ಜಯಿಸು, ಗೆಲ್ಲು (ಗೆಲೆವಂದಂ ಎನ್ನಂ ನಿಜೋನ್ನತಿಯಿಂದಂ ಈ ಪತಿಯೆಂದು ಮೆಚ್ಚಿ ವಿನಾಯಕಂ ತಾಂ ನಿಮಿರ್ಚುಗೆ ಕಬ್ಬಮಂ ನಯದಿಂ ಗುಣಾರ್ಣವಭೂಪನಾ: **ಪಂಪಭಾ,** ೧. ೭)

**ಗೆಲ್ಲ** – ಗೆಲವು (ಗುಣಾರ್ಣವಂಗೆ ಕುಡು ಗೆಲ್ಲಮಂ ಇಂತಿದೆ ಕಜ್ಜದ ಉಜ್ಜುಗಂ: **ಪಂಪಭಾ,** ೫. ೧೦೨)

**ಗೆಲ್ಲಂ** – ಗೆಲವು (ಅಹೀಂದ್ರಕೇತನನ ಜೂದಿನ ಗೆಲ್ಲಮದೆಂತುಟೆನ್ನ ನಂಜಿನ ಸವಿಯಂತುಟೆಂದೊಡೆ: **ಪಂಪಭಾ,** ೬. ೭೫)

**ಗೆಲ್ಲಂಗುಡು** – ಸೋಲೊಪ್ಪಿಕೊ (ಮಾರ್ಪಡೆ ಗೆಲ್ಲಂಗುಡೆ ತಮ್ಮುತಿರ್ವರುಂ ಅಗುರ್ವುರ್ವೆಟ್ಟಿನಂ ಕಾದಿದರ್:: **ಶಾಂತಿಪು,** ೪. ೩೫): ಗೆದ್ದವನಿಗೆ ಬಹುಮಾನ ನೀಡು (ಗಂಟಲಂ ಮೆಟ್ಟಿದೊಡೆ ಇಟ್ಟೆಡೆಯೊಳ್ಕೊಟ್ಟಂ ಗೆಲ್ಲಂಗುಡುವಂತೆ ನರಂಗೆ ಪಾಶುಪತಮಂ ರುದ್ರಂ: **ಗದಾಯು,** ೩. ೩೯)

**ಗೆಲ್ಲಂಗೊಳ್** – ಗೆಲವನ್ನು ಪಡೆ (ಪುಸಿಯೆನೆ ರಥಮಂ ಹರಿ ಚೋದಿಸುವಂತೆವೊಲ್ ಇರ್ದು ಅದೆಂತು ನರನಂ ಗೆಲಿಪಂ ವಿಸಸನದೊಳ್ ಅಂತೆ ನೀಮುಂ ಪೆಸರಂ ಕರ್ಣಂಗೆ ಮಾಡಿ ಗೆಲ್ಲಂಗೊಳ್ಳಿಂ: **ಪಂಪಭಾ,** ೧೨. ೯೧)

**ಗೆಲ್ಲಂಬಡೆ** – ಗೆಲ್ಲಂಗೊಳ್ (ಗೆಲ್ಲಂಪಡೆದ ಪಂದೆಯಂತೆ ಜವ್ವನಂ ಪಡೆದ ಮುದುಪನಂತೆ: **ಧರ್ಮಾಮೃ,** ೫. ೮೩ ವ)

**ಗೆಲ್ಲಕಾಱ** – ಜಯಶಾಲಿ (ಬಸನಿಯೆ ಗೆಲ್ಲಕಾಱನ ನೆಗಟ್ತೆಗೆ ಕೇಳಿಗೆ ನಾಡೆ ಗೆಂಟು ಅದಂ ಬೆಸಗೊಳವೇಡ: **ಆದಿಪು,** ೧೨. ೧೭)

**ಗೆಲ್ಲವಾಱು** – ಮನಸ್ಸಿನ ಗೆಲುವು ಕಡಿಮೆಯಾಗು (ಉರಗರ್ ಜೀರೇಟೆ ಪಾತಾಳದೊಳಖಿಳದಿಶಾಚಕ್ರಮುಂ ಗೆಲ್ಲವಾಱುತ್ತಿರೆ ಪೊಯ್ದತ್ತು ಅಬ್ಧಿಬಂಭಾರವಂ ಒಗೆಯೆ: **ಜಗನ್ನಾವಿ,** ೬. ೬೨)

**ಗೆಲ್ಲವೀ** – ಗೆಲ್ಲಂಗುಡು, ಗೆಲವನ್ನು ಎದುರಾಳಿಗೆ ಕೊಡು (ಕೃಷ್ಣಮ ರಿಪುಕರಿಗಿನಿತಂ ಗೆಲ್ಲವೀವಂತೆ ಪೋರ್ದಂ ಕಿಱಿದಾನುಂ ಬೇಗದಿಂದೆ: **ಜಗನ್ನಾವಿ,** ೬. ೫೨)

**ಗೆಲ್ವು** – ಜಯಘೋಷ (ಲಕ್ಷ್ಮೀದೇವಿಯರ್ ಮೊದಲಾದ ಲಲನಾಜನಂ ವೀರವಿಭ್ರವಿಜಯೀಭವ ಎಂದು ಗೆಲ್ವನೀಯೆ: **ಗಿರಿಜಾಕ,** ೭. ೭೨ ವ)

**ಗೆಲ್ವೆ** – ವಿಜಯ, ಗೆಲವು (ನೃಪತೀ ಪರೋಪಕಾರೀ .. .. ರಿಪುವರ್ಗಮನಲೆದು ಗೆಲ್ವೆಯಾಗಾಹವದೊಳ್: **ಕವಿರಾಮಾ,** ೨. ೨೪)

**ಗೆಱೆ** – ಗೀಟು (ಕುಸುಮಾಸ್ತ್ರ ಮಂತ್ರದೇವತೆ ಗೆಱೆಯಂ ತೆಗೆವಂತೆ: **ಲೀಲಾವತಿ,** ೧೨. ೬೪)

**ಗೆಱೆಯಾಣೆ** – ಹಾಕಿದ ಗೆರೆ ದಾಟದಂತೆ ಇಡುವ ಆಣೆ (ಕಣ್ಗಂ ಮನಕಂ ಗೆಱೆಯಾಣೆಯಿಟ್ಟ ರೇಖೆಗಳಿರವಂ ವಳಿರೇಖೆ ಕಳೆದುವಳಿಕುಂತಳೆಯಾ: **ಚಂದ್ರಪ್ರಭು,** ೧೧. ೧೦೨)

**ಗೆಟಿಸು** – ಗೆಣಸು, ಗೆಡ್ಡೆ (ಒಂದರ್ಥಕ್ಕೆ: ಗೆಟಿಸೆಂದು ಗೆಡ್ಡೆ: **ಶಬ್ದಮದ,** ೩೩ ವೃತ್ತಿ ೪೭)

**ಗೇಣ್** – ಅಂಗೈ ಅಗಲಿಸಿದಾಗ ಹೆಬ್ಬೆರಳ ತುದಿಯಿಂದ ಕಿರುಬೆರಳ ತುದಿಯವರೆಗಿನ ಉದ್ದ (ಐಕಿಲಭರದೆ .. .. ಗೇಣಾಗಿ ಪಾಂಥರ್ತೊಡೆತೋಳ್ಗಳ್ .. .. ಅದೇನಿರ್ದರೋ ಶೀತಭೀತರ್: **ರಾಜಶೇವಿ,** ೯. ೨೨); ಚೂರಿ (ಗೇಣ್ಗೆ ಅಗ್ಗಳಮೆನಿಪ ಅವಳ ಅಲರ್ಗಣ್ಗಳ ಕೊನೆ ಸಾಲ್ವುದಿಲ್ಲ: **ಮಲ್ಲಿನಾಪು,** ೩. ೬೩)

**ಗೇಯ** – ಸಂಗೀತ, ಹಾಡಿಕೆ (ಸುತ್ತಲುಂ ಅಟ್ಟಱಂ ಪಡೆವ ಗೇಯದ ಪೆಂಪಿನ ಅಲಂಪಂ ಆರ್ಗಂ ಆರ್ತಿತ್ತುದು ಪಟ್ಟಬಂಧ ಮಹೋತ್ಸವಂ ಆ ಪಡೆಮೆಚ್ಚೆ ಗಂಡನಾ: **ಪಂಪಭಾ,** ೧೪. ೨೦)

**ಗೇಯತ** – ನಾದ, ಮೊರೆತ (ಫುಲ್ಲಸರಳ್ ಬಸಂತದ ಪುಗಿಲ್ ನೆಱೆದಿಂಗಳ ತಣ್ಪಿಸಿಲ್ ಮುಗುಳ್ಮಲ್ಲಿಗೆ ಬಂದ ಮಾಮಲೆವ ತೆಂಕಣಗಾಳಿ ವಿಪಂಚಿಯಿಂಚರಂ ನಲ್ಲಳ ಲಲ್ಲೆ ಕೋಹಿಲೆಯ ಬಗ್ಗಣೆ ತುಂಬಿಯ ಗೇಯತಂ ಎಂಬಿನಂ ಬಲ್ಲವರಂ ಮನಂಗೊಳಿಸುಗುಂ ಕೃತಿ ಸತ್ಕೃತಿ ನಾಗಚಂದ್ರನಾ: **ಮಲ್ಲಿನಾಪು,** ೧. ೪೪)

**ಗೇಯರಸ** – ಸಂಗೀತದ ಆನಂದ (ತಗುಳ್ದ ಗೇಯರಸವಚ್ಚಿಜೆದಂತಿರೆ ಬೆಚ್ಚು ಚಿತ್ತದೊಳ್ ನಿಲೆ: **ಶಾಂತಿಪು,** ೪. ೬೮)

**ಗೇಹ** – ಮನೆ (ಎನಿತೊಳವು ಅಪಾಯಕೋಟಿಗಳ್ ಅನಿತರ್ಕಂ ಗೇಹಮಲ್ತೆ ದೇಹಂ: **ಯಶೋಧಚ,** ೧. ೫೧)

**ಗೇಹಾಂಗಣ** – ಮನೆಯ ಅಂಗಳ (ಬೊಂಗದ ನಾರಂಗದ ದೇವಾಂಗದ ಪಲತೆಱದ ಸಕಲ ವಟ್ಟೆಗಳಂ ಗೇಹಾಂಗಣದೊಳ್ ಮೆಟ್ಟುವ ತಾಣಂಗಳೊಳ್ ಓರಂತೆ ಪಾಸಿ: **ಸುಕುಮಾಚ,** ೧೦. ೯೦)

**ಗೇಹಾಜಿರ** – ಗೇಹಾಂಗಣ (ಮದೌಘಕರ್ದಮಿತ ಕಾಂತಂ ರಾಜಗೇಹಾಜಿರಂ: **ಚಂದ್ರಪ್ರಪು,** ೧. ೧೫೧)

**ಗೈರಿಕ** – ಕೆಂಪು ಭೂಮಿ (ಕಿಬ್ಬೆತ್ತಿದಂ ಆ ಹರಿ ತರುಣಂ ಗೋವರ್ಧನಗಿರಿಯಂ ಗೈರಿಕರಜೋವಿರಾಜಿತ ದರಿಯಂ: **ನೇಮಿನಾಪು,** ೮. ೧೪)

**ಗೊಂಕುಱುಗಟ್ಟಿ** – ಹೇಸರಗತ್ತೆ (ಆ ರಥದೊಳ್ ಒಡಂಬಡೆ ಪೂಡಿದ ನಾಲ್ನೂಱು ಗೊಂಕುಱುಗಟ್ಟಿಯುಂ ಅಂಬರಸ್ಥಲಮನಡರ್ವ ಗೃಧ್ರಧ್ವಜಮುಂ ಅಂಜನಪುಂಜದಂತಾಗಿ: **ಪಂಪಭಾ,** ೧೨. ೭ ವ)

**ಗೊಂಕೆ** – ಗೋಣು (ಇರ್ಕುಳೊಳ್ ಒತ್ತೆಯುಂ ಬರಿಯಂ ಸುರಿಯೆಯುಂ ಗೊಂಕೆಯಂ ನುಲಿಯೆಯುಂ ಮೂಗಿಟ್ಟೆಱೆಯೆಯುಂ: **ಅಜಿತಪು,** ೧೧. ೧೧ ವ)

**ಗೊಂಚಲ್** – ಸಮೂಹ, ತೊಂಡೆ (ಭೃತನವಮಂಜರಿ ಗೊಂಚಲ್: **ಅಭಿಧಾವ,** ೧.೭. ೮)

**ಗೊಂಟು** – ದಿಕ್ಕು (ಪರಿವ ಗಾಲಿಯ ಕೋಳ್ಗೆ ಕೆಳರ್ತು ಬೆಟ್ಟುಗಳ್ ಕೂಡೆ ಸಡಿಲ್ವಿನಂ ಪೊಡೆವ ಬೀರರ ಜಂಕೆಗೆ ಗೊಂಟಿನಾನೆಗಳ್ ಕೋಡುವಿನಂ ಕಡಂಗಿ ಪರಿತಂದುವು ತೋರ್ಕೆಯ ತೇರ್ಗಳೋಳಿಯಿಂ: **ಕಬ್ಬಿಗಕಾ,** ೧೬೦); ಕತ್ತು (ಆ ವಿಮಲಾಪುರೀ ನಿರುಪಮೋನ್ನತ ಶೋಭೆಯನೆಯ್ದೆ ಕಂಡು ಲಜ್ಜಾವಹದಿಂದೆ ಗೊಂಟುಡುಗಿದತ್ತು ಅಳಕಾಪುರಿ: **ಕುಸುಮಾಕಾ,** ೨. ೧೨೯)

**ಗೊಂಟುಗೊಳ್** – ಕುಗ್ಗು, ಕಡಿಮೆಯಾಗು (ದಿನದೊಳ್ ಮೂದೆಱನಾಯ್ತು ಭಾನುವಿನ ತೇಜಂ ಗೊಂಟುಗೊಂಡೆಯ್ದಿದಂತೆನಸುಂ ವಹ್ನಿಯ ತೇಜಮೆಟ್ಟು: **ಕುಸುಮಾಕಾ,** ೩. ೬)

**ಗೊಂಟುಗೊಳಿಸು** – ಮೂಲೆ ಸೇರಿಸು, ಪ್ರಾಧಾನ್ಯ ಕಡಿಮೆಗೊಳಿಸು (ಆವಗಮೆಯ್ದೆ ಗೊಂಟುಗೊಳಿಸಿತ್ತು ಅಳಕಾಪುರಿಯಂ ಸಮಗ್ರ ಶೋಭಾವಳಿಯಿಂದೆ ನಮ್ಮ ವಿಳಾಸಪುರಿ: **ಕುಸುಮಾಕಾ,** ೧೧. ೧೩೮)

**ಗೊಂಟುವೊಗು** – ಗೊಂಟುಗೊಳ್ (ಫಣಿಪತಿಪುರಿ ರಸೆಗಿೞಿದುದು ಗೊಂಟುವೊಕ್ಕುದು ಅಳಕಾನಗರಂ: **ಶಾಂತೀಶ್ವಪು,** ೧೩. ೧೭೧)

**ಗೊಂದಣ** – ಗುಂಪು (ಪುಗು ನೀಂ ಬೇಗದೊಳ್ ಆನಿರ್ಪ ಅಗಸೆಯ ಗೊಂದಣದ ಶಾಖೆಯೊಳ್: **ಧರ್ಮಪ,** ೫. ೧೬)

**ಗೊಂದಣಂಗುಣಿ** – ಗುಂಪಾಗಿ ಕುಣಿ (ಅಳವಿಗೞಿದುತ್ಸವದೆ ಗೊಂದಣಂಗುಣಿದ ಗಣಿಕೆಯರ ಪದಪ್ರಚಾರಕ್ಕೆ ಬೆರ್ಚಿ: **ಚಂದ್ರಪ್ರಪು,** ೧೨. ೩೫ ವ)

**ಗೊಂದಣಂಗೂಡು** – ಗುಂಪು ಸೇರು (ಗೋವಳಗಟ್ಟೆಗೆಯ ಗೊಂದಣಂಗೂಡಿ ಗಗನಂ ಕವಿದಂತೆ: **ಗಿರಿಜಾಕ,** ೬. ೫೫ ವ)

**ಗೊಂದಣಬೆಳಗು** – ಕಿರಣಪುಂಜ (ಗೊಂದಣಬೆಳಗುಗಳ ಬಳಗಂಗಳೊಳಾಗಸವಲಯಮೆಲ್ಲಂ ಕುವಳಯಿತಮಾಗೆ ಬಂದು ತಾಗುವುದುಂ: **ಶಾಂತಿಪು,** ೪. ೨೬ ವ)

**ಗೊಂದಣಮಾಡು** – ಗೊಂದಣಂಗುಣಿ (ಸುರೇಂದ್ರತರಹಾರ ಮುಕ್ತಾಫಳಪ್ರತಿಬಿಂಬಿತತನುಗಳಿಂ ವಿದ್ಯಾಧಿದೇವತೆಗಳೆನಿಸಿ ದಿವಿಜಸಂದರಿಯರ್ ಗೊಂದಣಂ ಆಡೆ: **ಆದಿಪು,** ೭. ೧೨೬ ವ)

**ಗೊಂದಣಿಸು** – ಒಟ್ಟುಗೂಡು (ಸೋನೆ ಗೊಂದಣಿಸಿ ಕೆಂದಳಿತೊಳ್ ಗಿಳಿವಿಂಡು ಪಾಯ್ವುದಂ ಸಲಿಸೆ: **ನೇಮಿನಾಪು,** ೭. ೪೨)

**ಗೊಂದಣವೆಕ್ಕಣ** – ಸಮೂಹ ಕಲಾ ಪ್ರದರ್ಶನ, ಒಂದು ಬಗೆಯ ನಾಟಕ (ವಿವಿಧಲಯಂಗಳಿಂ ಕುಣಿವ ಗೊಂದಣವೆಕ್ಕಣಂ ಆಗಳಂತೆ ಕಟ್ಟುವ ಗುಡಿ ಪೊಯ್ವ ಬದ್ದವಣ ಮಿಕ್ಕುವ ಮುತ್ತಿನ ರಂಗವಲ್ಲಿ .. .. ಮೆಱೆವುದು ಉತ್ಸವಮಂ: **ಮಲ್ಲಿನಾಪು,** ೧೨. ೩)

**ಗೊಂದಣಿಸು** – ಒಟ್ಟುಗೂಡು (ಸೋನೆ ಗೊಂದಣಿಸಿ ಕೆಂದಳಿತೊಳ್ ಗಿಳಿವಿಂಡು ಪಾಯ್ವುದಂ ಸಲಿಸೆ: **ನೇಮಿನಾಪು,** ೭. ೪೨)

**ಗೊಂದಳ** – ಸಮೂಹ (ಬೆಳಗುವ ಕೈದೀವಿಗೆಗಳ ಬೆಳಗಂ ತರತರದಿನೊಗೆವ ತಾರಗೆಗಳ ಗೊಂದಳಮುಂ: **ಆದಿಪು,** ೧೨. ೩)

**ಗೊಂದಳಿಸು** – ಒಟ್ಟುಗೂಡು, ಗುಂಪಾಗು (ದೇವಸನೊಳಾವಗಮಾದ ತಮ್ಮಾದರದಿಂ ಮಾಲೆಗಟ್ಟಿ ದುಗ್ಧವಾರಿಪೂರಿತ ಕನಕಕಳಶಂಗಳಂ ತಂದು ಗೊಂದಳಿಸಿ ಸಂದಣಿಸಿ ಸಂದಣಿ ನೀಡಿದಾಗಳ್: **ಆದಿಪು,** ೭. ೮೫ ವ)

**ಗೊಂದಿ** – ಮೂಲೆ (ಗೋಮದಿಯಂ ಮುಳುಗಿ ಬೇಗದೆ ತಾರೆಗಳ್ ಎಯ್ದೆ ಬಂದಪಂ ಜಲರುಹಮಿತ್ರಂ: **ಧರ್ಮಪ,** ೪. ೨೪)

**ಗೊಂದೆ** – ಬಸವ, ಎತ್ತು (ಪೆಳವರದೊಂದು ಗೊಂದೆ ಮೊದಲಾಗೆ ಪಶುತ್ವನಿಬದ್ಧರೂಪಮಂ ತಳೆದ ದುರಾತ್ಮರ್: **ಸಮಯಪ,** ೧೦. ೧೮೭)

**ಗೊಜ್ಜ** – ಶ್ರೇಷ್ಠ (ಎಸಳ ಮೆಲ್ಪಿನಿಂದೊಪ್ಪುವುದು ಉಣ್ಮಿದ ತಣ್ಗಂಪಿಂದೊಪ್ಪುವುದು ಅದೞೆಂದಲರೊಳಗೆ ಗೊಜ್ಜ ಗೊಜ್ಜಗೆಯೆ ವಲಂ: **ಆದಿಪು,** ೧೧. ೧೨೬)

**ಗೊಜ್ಜಗೆ** – ಇರುವಂತಿಗೆ (ಎಸಳ ಮೆಲ್ಪಿನಿಂದೊಪ್ಪುವುದು ಉಣ್ಮಿದ ತಣ್ಗಂಪಿಂದೊಪ್ಪುವುದು ಅದೞೆಂದಲರೊಳಗೆ ಗೊಜ್ಜ ಗೊಜ್ಜಗೆಯೆ ವಲಂ: **ಆದಿಪು,** ೧೧. ೧೨೬)

**ಗೊಜ್ಜಿಗೆ** – ಗೊಜ್ಜಂಗಿ ಹೂ (ಮಜ್ಜನಮಂ ಮಾಡಿ ಮುಡಿಗೆ ಪೊಸಮಲ್ಲಿಗೆಯಂ ಗೊಜ್ಜಿಗೆಯುಮಂ ಏಱೆಸಿ ಸಲೆ ಬಿಜ್ಜೋದರಿ ದಿವ್ಯಸತಿಯನಾರಾಧಿಸಿದಳ್: **ಲೀಲಾವತಿ,** ೧೦. ೧೦)

**ಗೊಜ್ಜೆ** – ಗೊಜ್ಜಗೆ (ಗೊಜ್ಜೆಯ ಸಂಕಡಿಗಳಿಂ ಪನ್ನೀರ ನೀರ್ದಳಿಪದಿಂ ಕತ್ತುರಿಯ ಕಾಳಿಗಳಿಂ: **ಕುಸುಮಾಕಾ,** ೧೨. ೧೫೭ ವ)

**ಗೊಟ್ಟ** – [ಗೋಷ್ಠ] ವಾಸಸ್ಥಾನ (ಈಗಳ್ ಸಿವನೆಂಬ ದುಟ್ಟಗೊರವಂ ಮಂಜುವೆಟ್ಟಮಂ ಗೊಟ್ಟಂ ಮಾಡಿ ಕಿತ್ತಡಿಗಳಂ ಮರುಳ್ವಡೆಗಳಂ ಕೂಡಿಕೊಂಡು .. .. ಮೆಯ್ಯಱೆಯದಿರ್ಪಂ: **ಕಬ್ಬಿಗಕಾ,** ೧೧೪ ವ)

**ಗೊಟ್ಟಂಗುಡಿಯಿಸು** – ಗೊಟ್ಟದಲ್ಲಿ ಸುರಿದು ಬಲವಂತವಾಗಿ ಕುಡಿಸು (ಕರಮೆ ಕರಗಿಸಿದ ಕಾಳಾಯಸರಸಮನೊಟ್ಟಯಿಸಿ ಗೊಟ್ಟಂಗುಡಿಯಿಸುತ್ತೆ: **ಅಜಿತಪು**, ೧೧. ೧೦ ವ)

**ಗೊಟ್ಟಂಗೊಱ್** – ಗೊಟ್ಟದ ಹಾಗೆ ಟೊಳ್ಳಾಗಿ ಮಾಡು (ಇಱಿವ ಬಲಿಗುಡುವ ಕೈರಂದಱಿವ ಉರ್ದಂ ಸೀಳ್ವ ಪೋಳ್ವ ಪರಪುವ ಗೊಟ್ಟಂಗೊಱೆವ ಅಗುಟ್ಟು ನಟ್ಟು ಪರೆಪುವ ಪೆಱವುಂ ಅಗುರ್ವಪ್ಪ ಚಿತ್ರವಿಧ ವಧೆಯಿಂದಂ: **ಶಾಂತಿಪು**, ೭. ೯೦)

**ಗೊಟ್ಟಕ್ಕಿ** – ಗೊಟ್ಟಚ್ಚಿ, ನೆಲಬೇವು ಗಿಡ (ಲೊಕ್ಕಿ ಗೊಟ್ಟಕ್ಕಿ ದಿಂಡಂ ಚಿರಬಿಲ್ವಂ ಬ್ರಹ್ಮವೃಕ್ಷಂ ಕಱಿಕೆ ತಱಿಯದಿಂದೊಪ್ಪುತಿರ್ದರಣ್ಯಂ: **ಗಿರಿಜಾಕ**, ೧. ೭೨)

**ಗೊಟ್ಟಾಟ** – ಕುತಂತ್ರ, ಕಾಟ (ಇದೆಲ್ಲಂ ಈತನ ಗೊಟ್ಟಾಟಮಲ್ಲ ದುಷ್ಕರ್ಮದ ಗೊಟ್ಟಾಟಂ: **ಧರ್ಮಾಮೃ**, ೧೨. ೫೫ ವ)

**ಗೊಟ್ಟಿ** – [ಗೋಷ್ಠಿ] ಮೇಳ (ಚಾಗದ ಭೋಗದ ಅಕ್ಕರದ ಗೇಯದ ಗೊಟ್ಟಿಯ ಅಲಂಪಿನ ಇಂಪುಗಳ್ಗೆ ಆಗರಮಾದ ಮಾನಸರೆ ಮಾನಸರ್: **ಪಂಪಭಾ**, ೪. ೨೯); ಗುಂಪು ಸೇರುವಿಕೆ, ಸಹವಾಸ (ಕೆಳೆಯುಂ ಗುಱಿಯುಂ ಗೊಟ್ಟಿಯುಂ ಅಳವಿಗೆ ಪಿರಿದಾಗೆ ತನಗೆ ದುರ್ಯೋಧನನೊಳ್ ಮುಳಿಸುಂ ನೋವುಂ ಕಲುಷಮುಂ ಅಳುಂಬಂ ಎನೆ ತನಗೆ ಅರಾತಿಕಾಳಾನಳನೊಳ್; **ಪಂಪಭಾ**, ೨. ೫೮)

**ಗೊಟ್ಟಿಗೆವರ್** – ಜೊತೆಗಾಗಿ ಬರು (ಒಂದೆಡೆಯೊಳ್ ನಾಲ್ವರಯ್ವರ್ ಗಾಟ್ಗೊಟ್ಟಿರಿರ್ದು ಅಲ್ಲಿಗೊರ್ವನೆಗ್ಗಂ ಗೊಟ್ಟಿಗೆ ವಂದು ಕಣ್ಣಱಿಯದೆ ಸೋಂಕೆಯುಂ: **ಪಂಪಭಾ**, ೪. ೯೫ ವ)

**ಗೊಟ್ಟಿಗಾಣರ್** – ಗುಂಪಾಗಿ ಹಾಡುವವರು (ಗೊಟ್ಟಿಗಾಣರಂತಿರೆ ಮಱಿದುಂಬಿ ಮೇಳದವರಂತಿರೆ ಸಾರಿಕೆ ರಾಜಗೇಹದಂತಿರೆ ಕೊಳಂ ಅಲ್ಲಿ ತಾಂ ಅರಸರಂತಿರೆ ತಾಮರಸಂಗಳೊಪ್ಪುಗುಂ: **ಪಂಪಭಾ**, ೫. ೫೮)

**ಗೊಟ್ಟಿಗಾಱ** – ಗೋಷ್ಠಿಯಲ್ಲಿ ಭಾಗಿಯಾದವನು (ಗುರುವರ ಗೊಟ್ಟಿಗಾಱರ ನೆಗೞ್ತೆಯ ಮಿಂಡರ ಮೇಳಗಾಱರ .. .. ಸೊಂಪನೊಳಕೊಂಡೆಸೆದಿರ್ಪುವು ಸೂಳೆಗೇಱಿಗಳ್: **ಕಬ್ಬಿಗಕಾ**, ೩೬)

**ಗೊಟ್ಟಿಗೆ** – ಗೋಷ್ಠಿ (ಒಂದೆಡೆಯೊಳ್ ನಾಲ್ವರಯ್ವರ್ ಗಾಳ್ಗೊಟ್ಟಿರ್ ಇರ್ದಲ್ಲಿಗೆ ಒರ್ವಂ ಎಗ್ಗಂ ಗೊಟ್ಟಿಗೆ ವಂದು: **ಪಂಪಭಾ**, ೪. ೯೫ ವ)

**ಗೊಟ್ಟಿಗೆಯ್** – ಗೋಷ್ಠಿ ಸೇರು (ಕಣ್ಣಱಿದು ಗೊಟ್ಟಿಗೆಯ್ವ ಗೊಟ್ಟಿಗಂ: **ಶಾಂತಿಪು**, ३. ೫೯ ವ)

**ಗೊಟ್ಟಿಗೇಯ** – ಗೊಟ್ಟಿಗಾಣ, ಸಮೂಹಗಾನ (ಗೊಟ್ಟಿಗೆಯೊಳ್ ಕುಳ್ಳಿರೆ ಗೊಟ್ಟಿಗೇಯಮಾಗೆ: **ಶಾಂತಿಪು**, ೨. ೨೧ ವ)

**ಗೊಟ್ಟಿಜೂದು** – ಗುಂಪಿನಲ್ಲಿ ಆಡುವ ಜೂಜು (ನೆತ್ತಂ ಚದುರಂಗಂ ಬಾರ್‌ಗುತ್ತಂ ಕಡದೋಂಟಿ ಗೊಟ್ಟಿಜೂದೆಂಬಿವಂ ಆಡುತ್ತುಮಿರಲಾಗದು: **ಸಮಯಪ**, ೬. ೪೮)

**ಗೊಟ್ಟಿರ್** – ಗೋಷ್ಠಿಯಲ್ಲಿ ಭಾಗಿಯಾಗು (ನೆರೆದೆಮ್ಮೊಳಿಂತು ಸದ್ಭಾವದೆ ಗೊಟ್ಟಿರಲ್ ಬಯಸಿ ಬಂದೆ: **ಪಂಪಭಾ**, ೪. ೯೬)

**ಗೊಟ್ಟುಗಟ್ಟು** – ಒಣಗಿ ಕೊರಡಾಗು (ಮದನನ ಕೆಯ್ದು ಗೆಯ್ದ ಕರಶಾಖೆ ಮುರುಂಟಿದುದು ಎಯ್ದೆ ಗೊಟ್ಟುಗಟ್ಟಿದುದು ಸರಲ್ಗೆ ಬೀಗಿ: **ಅನಂತಪು**, ೧. ೨೪)

**ಗೊಡ್ಡ** – [ಪ್ರಾ: ಕ್ರೋಡ್ಡ] ತೊಂದರೆ, ಬಾಧೆ (ಇದು ನಮ್ಮಂ ಆರಯಲೆ ವೈರಿಯ ಮಾಡಿದ ಗೊಡ್ಡಂ ಇಲ್ಲಿ ಮಾಣ್ದಿರಲಾಗ: **ಪಂಪಭಾ**, ೮. ೯೦); ಚೇಷ್ಟೆ (ಆಡದ ಗೊಡ್ಡಂಗಳನೊಲ್ದಾಡಿ ಕೆಲರ್ ಮುನಿಗಳ್ ಅಂತ್ಯದೊಳ್ ಮುಕ್ತಿಯೊಳ್ ಆಂ ಕೂಡುವೆವೆನುತಿರ್ಪರ್: ೧೪. ೧೪); ಕುತಂತ್ರ (ತಂದೆನ್ನಂ ಆ ಸುದತಿಯ ಪೇಟ್ದು ವೈರಿಯೆ ದಲ್ ಇಲ್ಲಿಗೆ ಇದಾತನ ಗೊಡ್ಡವಕ್ಕುಂ: **ಕರ್ಣನೇಮಿ**, ೪. ೧೨)

**ಗೊಡ್ಡಾಟ** – ಉಪಟಳ, ತುಂಟಾಟ (ಯುಧಿಷ್ಠಿರಂ ಕೊಟ್ಟ ನನ್ನಿಯ ಬಲದೊಳ್ ತನಗೆ ಲಯಮಿಲ್ಲದುದಂ ಅಱಿದು ಮೇಗಿಲ್ಲದ ಗೊಡ್ಡಾಟಮಾಡಲ್ ಬಗೆದು: **ಪಂಪಭಾ**, ೭. ೪ ವ)

**ಗೊಡ್ಡು** – ಕರುಹಾಕದ ಹಸು, ಬಂಜೆ (ಕಱೆವಾವಂ ಪೊರೆಯದೆ ಗೊಡ್ಡಂ ಪೊರೆವಂತೆ: **ಧರ್ಮಾಮೃ**, ೧೩. ೮೯ ವ)

**ಗೊಡ್ಡುಗೊಳ್** – ನಿರರ್ಥಕವಾಗು (ರೂಢಿ ಗೊಡ್ಡುಗೊಳೆ ಧರ್ಮಂ ನಿರ್ಮದವಾಗೆ .. .. ಮೆಯ್ಯಮಾಸಾಱದ ಕೂಸಂ ತಲೆಕೆಳಗಾಗೆ ಪಿಎಇದುಕೊಂಡು: **ಜಗನ್ನಾವಿ**, ೨. ೫೩ ವ)

**ಗೊಡ್ಡೆ** – ಅರಸಿಕಳು (ಇದೇಕೆ ತೋಟಿಯಂ ಪಾಟಿಸೆ ತಾವೆ ತಮ್ಮಗಳಂ ಆರಡಿಗೊಳ್ವರೊ ನಾಡ ಗೊಡ್ಡೆಯರ್: **ಲೀಲಾವತಿ**, ೧೪. ೪೦)

**ಗೊಣೆ** – ಬಿಲ್ಲಿನ ಹೆದೆ (ಎಡಗೈಯೊಳೊತ್ತಿ ಬಿಲ್ಲಂ ಪಿಡಿದೊಯ್ಯನೆ ತೀಡಿ ಗೊಣೆಯುಮಂ ಕಡುಪಿಂ ಜೇವೊಡೆವಾಗಳ್: **ಕಬ್ಬಿಗಕಾ**, ೨೩೩)

**ಗೊಣೆಯ** – ಗೊಣೆ (ಹರಿವಕ್ಷಮಂ ಅಟ್ಟಟಿವೋಗೆಯೆಚ್ಚು ಮುಳಿಸವಗಣಿಯಿಸುತಿರೆ ನರನ ಬಿಲ್ಲ ಗೊಣೆಯಮನೆಚ್ಚಂ: **ಪಂಪಭಾ**, ೧೨. ೨೦೯)

**ಗೊತ್ತು** – ಗುರಿ, ನೆಲೆವೀಡು (ಗರುವಿಕೆಗೆ ಇಂಬು ಗಾಡಿಗೆ ತವರ್ಮನೆ ಮೈಮೆಗೆ ಮೇರೆ ನನ್ನಿಗೆ ಆಗರಂ ಅಜಿತಕ್ಕೆ ಗೊತ್ತು ಪೆರ್ವೆತ್ತ ನೆಗೞ್ತೆಗೆ ತಾಣಂ: **ಕಬ್ಬಿಗಕಾ**, ३)

**ಗೊನೆಗೊಳ್** – ಗೊನೆ ಬಿಡು (ಪಣ್ಗೊನೆಗಳಿಂ ಗೊನೆಗೊಂಡ ಕವುಂಗು .. .. ಶೋಭಿಪುದು: **ಸುಕುಮಾಚ**, ೯. ೪೭)

**ಗೊಬ್ಬರ** – ಸಸಿ ಹುಲುಸಾಗಲು ನೆರವಾಗುವ ಕೊಳೆತ ವಸ್ತುಗಳು ಗೊಬ್ಬರದಿಂ ಬೆಳಸು ಪೆರ್ಚುವಂತೆ .. . ತಪೋನುಷ್ಠಾನದಿಂ ಪುಣ್ಯಂ ಪೆರ್ಚುಗುಂ: **ಧರ್ಮಾಮೃ**, ೧೨. ೭೫ ವ)

**ಗೊಮ್ಮುಗರೆ** – ಗುಂಯ್‌ಗುಟ್ಟು (ತನ್ನ ಬಾಯ ನಾತಕ್ಕೆ ನೊಣಂ ಮುಸುರಿ ಗೊಮ್ಮುಗರೆಯೆ: **ಚಾವುಂಪು**, ಪು. ४०२. ಸಾ. ೪)

**ಗೊರವ** – [ಗುರವಃ] ಶೈವ ತಪಸ್ವಿ (ಗೊರವರೆ ಬೂದಿಯುಂ ಜಡೆಯುಮಕ್ಕೆ ತಪಕ್ಕೆ ತನುತ್ರಂ: **ಪಂಪಭಾ**, ೮. ೧೭); ತಿರುಕ (ಈಗಳ್ ಸಿವನೆಂಬ ದುಟ್ಟಗೊರವಂ ಮಂಜುವೆಟ್ಟಮಂ ಗೊಟ್ಟಂ ಮಾಡಿ ಕಿತ್ತಡಿಗಳಂ ಮರುಳ್ವಡೆಗಳಂ ಕೂಡಿಕೊಂಡು .. .. ಮೆಯ್ಯಱಿಯದಿರ್ಪಂ: **ಕಬ್ಬಿಗಕಾ**, ೧೧೪ ವ); ಶೈವಬ್ರಾಹ್ಮಣ (ಆ ಪುರದೊಳ್ ದೇವಶರ್ಮನೆಂಬ ಗೊರವಂ ಉಗ್ರೋಗ್ರತಪೋನುಷ್ಠಾನನಿಶ್ಚಿತಚಿತ್ತನಾಗಿ: **ಪಂಚತಂತ್ರ**, ೧೨೪ ವ)

**ಗೊರವಬ್ಬೆ** – ಶೈವ ಸನ್ಯಾಸಿನಿ (ಪೋಗಲೆ ಸಮಕಟ್ಟಿ ಕಟ್ಟಿ ಮಣಿಯಂ ಗೊರವಬ್ಬೆಯ ವೇಷದೋಱೆಯಂ: **ಜೀವಸಂ**, ೫. ३२)

**ಗೊರವಿ** – ತಿರುಕಿ, ವಿರಕ್ತೆ; ಜೋಗಿಣಿ (ತಾಂ ತಿರಿವ ಗೊರವಿ ಬೆನಕನುಮಂ ತಿರಿಸಿದಳ್ ಎಂಬ ಕಥೆ: **ಸಮಯಪ**, ೧३. ೨३)

**ಗೊಲೆ –** ಗೊನೆ, ತೆನೆ, ಗೊಂಚಲು (ಗೊಲೆಯೊಳ್ ಪಣ್ತುದು ಮೈಂದವಾಟಿ ಪಥಿಕರ್ಬರ್ಕೆಂದು ಭೃಂಗಂಗಳ್ ಇಂದುಲಿವಂತಿರ್ದುದು: **ಆದಿಪು,** ೧೧. ೬೮); ಬಿಲ್ಲಿನ ತುದಿ (ದಿವ್ಯಚಾಪಕ್ಕೆ ಪೊಡೆವಟ್ಟು ಅದಂ ಅವಯವದಿಂ ಎಡಗೈಯ್ಯೊಳೆತ್ತಿಕೊಂಡು ತನ್ನ ಬಗೆದ ಕಜ್ಜಮಂ ಗೊಲೆಗೊಳಿಸುವಂತೆ ಆ ಬಿಲ್ಲ ಗೊಲೆಯಂ ಏಟಿ ನೂಂಕಿ: **ಪಂಪಭಾ,** ೩. ೬೨ ವ)

**ಗೊಲೆಗೆತ್ತು –** ಬಿಲ್ಲಿಗೆ ಹೆದೆಯೇರಿಸು (ಪಲದಿವಸಕ್ಕೆತ್ತಾನುಂ ಕಲಹಂ ದೊರೆಕೊಂಡುದೆಂದು ಕೆಲಬರ್ ಬಿಲ್ಲಂ ಗೊಲೆಗೆತ್ತಿ ತೀವಿ ತೆಗೆದೇಂ ನಲಿವರಿದರೋ ಜವನ ದೂತರೆನಿಸಿ ಕಿರಾತರ್: **ಪಂಪರಾ,** ೪. ೫೭)

**ಗೊಲೆಗೊಳ್ –** [ಹಣ್ಣಿನ] ಗೊನೆ ಬಿಡು (ದೂತವಚನಾಮೃತದೊಳ್ ಗೊಲೆಗೊಂಡ ಬೇಟವೆಂಬಳಲತೆ ಕೂಟದೊಳ್ ಪದೆದು: ಆದಿಪು, ೧೨. ೨೧)

**ಗೊಲೆಗೊಳಿಸು –** ತುದಿ ಮುಟ್ಟಿಸು (ದಿವ್ಯಚಾಪಕ್ಕೆ ಪೊಡೆವಟ್ಟು ಅದಂ ಅವಯವದಿಂ ಎಡಗೈಯ್ಯೊಳೆತ್ತಿಕೊಂಡು ತನ್ನ ಬಗೆದ ಕಜ್ಜಮಂ ಗೊಲೆಗೊಳಿಸುವಂತೆ ಆ ಬಿಲ್ಲ ಗೊಲೆಯಂ ಏಟಿ ನೂಂಕಿ: **ಪಂಪಭಾ,** ೩. ೬೨ ವ)

**ಗೊಲ್ಲ –** ಒಂದು ದೇಶ, ಅಲ್ಲಿನ ವ್ಯಕ್ತಿ (ಕರ್ಣಾಟ ಗೊಲ್ಲ ಕರಹಾಟ ಗೌಳ .. .. ಕಳಿಂಗಾದಿ ವಿಷಯಗಳಂ ಸಾಧಿಸಿ: **ಧರ್ಮಾಮೃ,** ೧೧. ೪೮ ವ)

**ಗೊವರ –** ಕೊಮರ, ಮಗ (ಪೊಸ ಮದವಳುಂ ಆ ಕೊಳ್ವ ಗೊವರನುಂ ಬಡೆದೇಂ ಪತ್ತಿದರೊ ಪದೆದು ಆ ಸಖೀಜನ ಮೃದುಸ್ಮಿತಂ ತಮಗೆ ಸೇಸೆಯನೆ ಸೂಸುವಿನಂ: **ಲೀಲಾವತಿ,** ೧೩. ೨)

**ಗೋಂಟು –** ಮೂಲೆ (ಸುರಪತಿ ಶಿಖಿ ಯಮ ನೈರುತಿ ವರುಣ ಅನಿಳ ಧನದ ಗಿರಿಶರೆಂಬ ದಿಶಾಪಾಳರುಂ ಎಂಟು ಗೋಂಟೊಳ್ ಒಂದಿರ್ಪರು ಸತತಂ: **ತ್ರಿಷಷ್ಟಿಪು,** ೯. ೩೬); ದಿಕ್ಕು (ನಿನ್ನದಟಿಗೆ ಅಗಿದು ಒಂದು ಗೊಂಟಿನೊಳ್ ಸಕ್ರಮಮಿರ್ಪರ್ ಇನ್ನುಂ ಎನೆ ಸಿಂಹನಾಂಪನೆ: **ರಾಜಶೇವಿ,** ೬. ೧೧೧)

**ಗೋಕರ್ಣ –** ಹಾವು (ಶ್ರೀ ಕಾತ್ಯಾಯನಿಯರಸಂ ಗೋಕರ್ಣಾಧೀಶಕಟಕಂ ಅನುಪಮಂ ಅಭವಂ: **ಶಬರಶಂ,** ೪. ೧)

**ಗೋಕುಲ –** ಕೃಷ್ಣ ಇದ್ದ ಹಳ್ಳಿ (ತೀರದೊಳಿರ್ದ ಗೋಕುಲಮನಾನಕ ದುಂದುಭಿ ಪೊಕ್ಕು: **ಜಗನ್ನಾವಿ,** ೩. ೧೧)

**ಗೋಕುಳ –** ದನದ ಮಂದೆ, ಕೃಷ್ಣ ಇದ್ದ ಹಳ್ಳಿ (ಪ್ರಚುರಸುಧಾನಿಳಯಂ ಸಮುಪಚಿತಮನೋಹಾರಿ ಗೋಕುಳಂ: **ಚಂದ್ರಪ್ರಪು,** ೧೧. ೫೦)

**ಗೋಕ್ಷೀರಕ್ಷತಜತ್ವ –** [ಜೈನ] ತೀರ್ಥಂಕರತ್ವ ಬರುವ ಜೀವನ ರಕ್ತವು ಹಸುವಿನ ಹಾಲಿನಂತೆ ಬೆಳ್ಳಗಾಗುವ ಸ್ಥಿತಿ (ಗಕ್ಷೀರತ್ವಜತ್ವಮುಂ ನಿಸ್ವೇದಮುಂ ಸಮಚತುರಶ್ರಮಪ್ಪ ಸಂಸ್ಥಾನ ಸಂಹನನಮುಂ ಅತಿಶಯರೂಪತೆಯುಂ .. .. ತನಗನುಸಂಗತಮೇಗೆ ಯೌವನಪ್ರಾಪ್ತನಾಗಿ: **ಶಾಂತಿಪು,** ೧೦. ೯೪ ವ)

**ಗೋಘ್ನ –** ಹಸುವನ್ನು ಕೊಲ್ಲುವವನು (ಗೋಘ್ನನ ಪಾಪಮುಮಂ ಬ್ರಹ್ಮಘ್ನನ ಪಾಪಮುಮಂ ಎಮಗೆ ಪೊಂಗುಡಿಂ ಈಗಳೆ ನಿಘ್ನಂ ಮಾಡುವೆಂ: **ಸಮಯಪ,** ೧೧. ೭೯)

**ಗೋಚರ –** ಮಾನವ (ನಿಜತನೂಜರೊಡನೆ ಖೇಚರಗೋಚರವಿಭವಮನನುಭವಿಸಿ: **ಆದಿಪು,** ೨. ೧೧ ವ)

**ಗೋಚಾರನಿಯಮ –** [ಜೈನ] ಹಸುವಿನಂತೆ ಆಹಾರಕ್ಕಾಗಿ ಚರಿಸುವ ಸಾಧುವಿನ ಭಿಕ್ಷಾಕ್ರಮ (ನವಕೋಟಿ ಪರಿಶುದ್ಧಮುಂ ಗೋಚಾರಮುಂ ಅಕ್ಷಮ್ರಕ್ಷಮುಂ ಉದರಾಗ್ನ್ಯುಪಶಮನಮುಂ .. .. ಆಗೆ: **ಅಜಿತಪು,** ೭. ೧ ವ);

**ಗೋಜ –** ಕಮಲ (ಗೋಜದಿಂ ಆಗಳುಂ ಸಕೋಮಳತೆಯನಾಂತು ಕಂಗೊಳಿಸುವ ಅರ್ಕದಿಂ ಅರ್ಕದಿನೊಪ್ಪಿತಾ ವನಂ: **ತ್ರಿಷಷ್ಟಿಪು,** ೨೭. ೧೪)

**ಗೋಡೆಯೇಱಿಸು –** ಗೋಡೆಯನ್ನು ಕಟ್ಟು (ಹಿಮಕರ್ದಮಮಂ ಮುದ್ದೆಮಾಡಿ ಗೋಡೆಯೇಱಿಸಿ: **ಲೀಲಾವತಿ,** ೮. ೪೭ ವ)

**ಗೋಣ್ –** ಕೊರಳು (ಎಟಲ್ವ ಪತತ್ರಂ ಎತ್ತಿ ನಸು ನೀಡಿದ ಗೋಣ್ ತೆಱೆದ ಉದ್ಧ ಚಂಚುಮಂಡಳಂ ಅರೆಮುಚ್ಚಿದ ಅಚ್ಚಿ ಮಿಡುಕಾಡುವ ತಾಳುಗೆ: **ಶಾಂತೀಶ್ವಪು,** ೧೨. ೪೬)

**ಗೋಣಿ –** ಗೋಣಿಯ ಚೀಲ (ಕನಸಿನ ಬತ್ತಕ್ಕೆ ಗೋಣಿಯಾಂತವರೊಳರೇ: **ಜಗನ್ನಾವಿ,** ೧೭. ೧೧೨)

**ಗೋಣಡಿಗೊಳ್ –** ತಲೆಕೆಳಕಾಗು (ಕೂರ್ಗಣೆಯಿಂ ಕಡುಗಲಿ ಪಾರ್ಥಂ ನೆಱನಂ ನಡೆ ಗೋಣಡಿಗೊಂಡು ಪಂದಿ ಕೆಡೆದತ್ತಾಗಳ್: **ಶಬರಶಂ,** ೪. ೨೫)

**ಗೋಣ್ಮುರಿ –** ಕತ್ತನ್ನು ತಿರುಗಿಸು (ಕೂಡೆ ಗೋಣ್ಮುರಿದು ಓರೊಂದಱ ನೆತ್ತಿಯಂ ಕರ್ದುಕುತುಂ: **ಕುಸುಮಾಕಾ,** ೧. ೫೩); ಕತ್ತನ್ನು ಮುರಿ (ಬಿಲ್ಮುಱಿದೊಡೆ ಗೋಣ್ಮುರಿಗೆ ತಲೆಯೊತ್ತುತ್ತಿರ್ಪೊಂದು ಉರವಣೆಯಿಂ: **ಚಂದ್ರಪ್ರಪು,** ೧೦. ೭೦)

**ಗೋಣ್ಮುರಿಗೊಳ್ –** ಕತ್ತನ್ನು ತಿರಿಚು (ಆ ಸೈನ್ಯಮಂ ಪರ್ವಿ ಗೋಣ್ಮುರಿಗೊಂಡು ಉರ್ವಿದುವಾ ರಸಾತಳಮುಮಂ ಗಾಂಗೇಯನ ಅಸ್ತ್ರಾಳಿಗಳ್: **ಪಂಪಭಾ,** ೧೧. ೪೦)

**ಗೋತ್ರ –** ವಂಶ (ಅಮೃತಮಯ ಉಜ್ಜ್ವಲ ಆಶಯಮಂ ಆಶ್ರಿತಗೋತ್ರಸಮೇತಮಂ .. .. ಸಲೆ ಪೆರ್ಚನೆಯ್ದಿಪಂ ಕುಮುದವನಪ್ರಿಯಂ: **ಲೀಲಾವತಿ,** ೧. ೯೦); ಬೆಟ್ಟ (ಭವಂ ಭವನ ಗೋತ್ರದಿಂದ ಅಜಂ ಅಜಾಂಡದಿಂ ಭಾನು ಭಾನುವೀಧಿಯಿಂ ಇಳಾತಳಂ ತಳದಿನೆಯ್ದೆ ಕಿಟ್ಟೆಟ್ಟುದು: **ಪಂಪಭಾ,** ೧೧. ೧೩೩); ಬಂಧು ಬಳಗ (ಪಡೆವಂ ಗೋತ್ರಕ್ಕೆಲ್ಲಂ ಕುಡುವಂ ಮಾಲಿಂಗಭಕ್ತಂ: **ಸಮಯಪ,** ೫. ೧೦೫); ದನಗಳ ಮಂದೆ (ಗೋನಿವಹಂ ಗವ್ಯ ಗೋತ್ರ ಸಮಜವೆಯಕ್ಕುಂ: **ಅಭಿಧಾವ,** ೧. ೧೫. ೯); ಹೆಸರು (ನಾಮ ಗೋತ್ರ ಅಭಿಖ್ಯಾಹ್ವಯ ಸಂಜ್ಞೆಗಳ್ ಸಮನಾರ್ಥಂಗಳ್: **ಅಭಿಧಾವ,** ೧. ೧೩. ೩೬)

**ಗೋತ್ರಕರ್ಮ–** [ಜೈನ] ಜೀವನಿಗೆ ಅಂಟಿಕೊಳ್ಳುವ ಎಂಟು ಬಗೆಯ ಕರ್ಮಗಳಲ್ಲಿ ಒಂದು (ಗೋತ್ರಕರ್ಮಂ ಉಚ್ಚನೀಚಮಿರ್ತೆಱನಲಕ್ಕುಂ: **ಶಾಂತಿಪು** ೧೨. ೧೧ ವ)

**ಗೋತ್ರಕಲಹ –** ಮನೆತನದ ಜಗಳ ಭರತಾನ್ವಯದೊಳ್ ಇನ್ನೆವರಂ ಗೋತ್ರಕಲಹಮಾದುದಿಲ್ಲ: **ಗದಾಯು,** ೫. ೪೪ ವ)

**ಗೋತ್ರಜ** – ಒಂದೇ ಗೋತ್ರದವರು, ದಾಯಾದಿಗಳು (ಪುತ್ರಜಂಗಕ್ಕೆ ಗೋತ್ರಜಂಗಕ್ಕೆ ಧರ್ಮಮಂ ಸರ್ವಸ್ವಮುಮಂ ಅಪ್ಪಯಿಸಿ ಕುಡುವುದು: **ಅಜಿತಪು,** ೧೨. ೧ ವ)

**ಗೋತ್ರಧರ** – ಬೆಟ್ಟ ಹೊತ್ತವನು, ಶ್ರೀಕೃಷ್ಣ (ತನ್ನಯ ರೂಪಂ ಗೋತ್ರಧರಂ ತೋಱಲ್: **ಜಗನ್ನಾವಿ,** ೧೧. ೩)

**ಗೋತ್ರಧವಳ** – ಸದ್ವಂಸಜ (ಯಮತನಯಯನಂ ಉಜ್ವಳಿಸಿ ಗೋತ್ರಧವಳನೆನ್ನಂ ಘಮನಮಲಿನಂ ಮಾಡಿದೆ ಕೃಷ್ಣ ನಿನ್ನವೊಲ್ ಶ್ವೇತಕೃಷ್ಣಕಾರಕರುಮೊಳರೇ: **ಗದಾಯು,** ೭. ೫೩)

**ಗೋತ್ರನಗ** – ಕುಲಪರ್ವತ (ಗೋತ್ರನಗಂ ಶತಪತ್ರವನಂಬೆರಸು ನೆಗೆವವೊಲ್: **ಮಲ್ಲಿನಾಪು,** ೧೨. ೪೧)

**ಗೋತ್ರಧಾತ್ರೀಧರ** – ಕುಲಪರ್ವತ (ಪವಿಭಯಭ್ರಾಂತಿಯಿಂದಂ ಶರಣ್ಬೊಕ್ಕುದು ತನ್ನಂ ಗೋತ್ರಧಾತ್ರೀಧರತತಿಯೆನೆ: **ಜಗನ್ನಾವಿ,** ೧, ೪೫)

**ಗೋತ್ರನಗ** – ಕುಲಪರ್ವತ (ಗೋತ್ರನಗಂಗಳ್ ಶಿಖರಂಗಳೊಳ್ ನಿಜೆಸಿ ಸಿಂಧುಬ್ರಾತಮಂ ಪೆಂಪಿನುರ್ಬಿನೊಳಂ ಬೀಗುವುದು: **ಆದಿಪು,** ೯. ೧೧೪)

**ಗೋತ್ರನದಿ** – ಕುಲನದಿಗಳು, ಹದಿನಾಲ್ಕು (ಹಿಮಶೈಲಪ್ರಮುಖಂಗಳಾಱು ಕುಲಶೈಲಂಗಳ್ ವಿಯದ್ವಾಹಿನೀಪ್ರಮುಖಂಗಳ್ ಪದಿನಾಲ್ಕು ಗೋತ್ರನದಿಗಳ್: **ಮಲ್ಲಿನಾಪು,** ೧. ೬೩)

**ಗೋತ್ರಭಿತ್** – ಬೆಟ್ಟವನ್ನು ಕತ್ತರಿಸಿದವನು, ಇಂದ್ರ (ಗೋತ್ರಭಿತ್ ಮದಮಾತಂಗ ಮದಾಂಬುಸಂಗಮ ಕಷಾಯೀಭೂಷೆಯಂ .. .. ಗಂಗೆಯಂ: **ಪಂಚತಂತ್ರ,** ೩೫೭)

**ಗೋತ್ರವೈರಿ** – ಪರ್ವತವೈರಿ, ಇಂದ್ರ ಎನ್ನೊಳೆಣೆಯೇ ಸನ್ಮಿತ್ರರಾಜಭ್ರಮಾಕಳಿತಂ ನಂದಿತ ಗೋತ್ರವೈರಿಯೆನುತುಂ: **ಪುಷ್ಪದಂಪು,** ೪. ೬೭)

**ಗೋತ್ರಸ್ಖಲನೆ** – ಬಾಯಿತಪ್ಪಿ ಬೇರೊಬ್ಬರ ಹೆಸರಿನಿಂದ ಕರೆಯುವುದು (ಗೋತ್ರಸ್ಖಲನೆ ನೆಗಟೆ ಪಕ್ಕಾಗಿ ಪೂಮಾಲೆಯಿಂ ಮೋದುವೆತ್ತಂ: **ಆದಿಪು,** ೪. ೯)

**ಗೋತ್ರಾಚಳ** – ಗೋತ್ರನಗ (ಅನಿತುಂ ಗೋತ್ರಾಚಳಂಗಳ್ ಬಿಡದೊಡನೆ ಅಡಕಿಲ್ದೊಂಡೊಡಂ ತಾನೇ ಮೇಲ್ಲಯ: **ಸಮಯಪ,** ೧೫. ೮೨)

**ಗೋತ್ರಾದ್ರಿ** – ಗೋತ್ರನಗ (ಮಂದರಕ್ಷ್ಮಾಧರದೊಳ್ ಕೆಯ್ಗೂಡಿ ಗೋತ್ರಾದ್ರಿಗಳೆ ಗಜಘಟಾರೂಪದಿಂ ತಾಗೆಯುಂ: **ಆದಿಪು,** ೧೪. ೯೧)

**ಗೋತ್ರಾರಿ** – ಗೋತ್ರವೈರಿ (ಗೋತ್ರಾರಿಯ ಶೈಶವೋಚಿತಕ್ರಿಯೆಗೆಲ್ಲಂ ಧಾತ್ರೀಜನಮಾಗಿಸಿದಂ : **ಪುಷ್ಪದಂಪು,** ೧೨. ೫೪)

**ಗೋದಾನ** – ಗೋವನ್ನು ದಾನವಾಗಿ ಕೊಡುವುದು (ಗೋದಾನ ಅಶ್ವದಾನಂ ಭೂದಾನಂ ಹೇಮದಾನಂ ಇವು ಮುಖ್ಯದ ನಾನಾ ದಾನಂಗಳ್: **ಕುಸುಮಾಕಾ,** ೩. ೭೭)

**ಗೋದಾವನ** – ಗೊಲ್ಲರ ಹಟ್ಟಿ (ಕಂಸನಜೆಯಲೀಯದೆ ಗೋದಾವನದ ನಂದಗೋಪಗೆ ಕೊಟ್ಟು ನಡಪುವಂ ಎಂದು ದೇವಕಿಗಜೆಪಿ: **ಚಾವುಂಪು,** ಪು. ೪೦೮. ಸಾ. ೩)

**ಗೋದಾಮೆ** – ಗೋದಿ ನಾಗರ ಹಾವು (ಗೋದಾಮೆಗಂಡ ನವಿಲಂತಾದುದು ಕಾರ್ಗಂಡ ಹಂಸನವೊಲಾದುದು .. .. ದುರ್ನಯದ ಕಾಣ್ಕೆಗೆ ಎನ್ನಯ ಚಿತ್ತಂ: **ಯಶೋಧಚ,** ೩. ೧೦)

**ಗೋದೋಹನ** – ಹಸುವಿನ ಹಾಲು ಕರೆಯುವುದು (ಗೋದೋಹನಲೀಲೆಯೊಳ್ ಅಬ್ಧೋದರನಿರೆ ಕಂಡು: **ಜಗನ್ನಾವಿ,** ೫. ೭೯)

**ಗೋದೋಹಪ್ಲವ** – ಹಸುವಿನ ಹಾಲಿನ ಧಾರೆ (ಆಹಾರವಿತರಣ ಗೋದೋಹಪ್ಲವ ಅವನೀತಳ ಸಂತರ್ಪಣಾದಿ ಶಾಂತಿಕ್ರಿಯೆಗಳಂ ನೆಗಱ್ದು: **ಆದಿಪು,** ೧೫. ೪೮ ವ)

**ಗೋಧ** – ಉಡು (ಬದ್ಧ ಗೋಧಾಂಗುಳಿತ್ರಾಣ ಯೋಧಸಿಂಧುರಘಟಾ ಸಂಘಟ್ಟಮುಂ: **ಆದಿಪು,** ೧೪. ೯೩ ವ); ಬಿಲ್ಗಾರರು ಕೈಗೆ ಕಟ್ಟಿಕೊಳ್ಳುವ ಚರ್ಮದ ಪಟ್ಟಿ (ಗೋಧಮದುವೆ ದಲ್ ಕೆಯ್ಪೊಡೆಯುಂ: **ಅಭಿಧಾವ,** ೧. ೧೪. ೨೦); ಸ್ನಾಯು (ಗೋಧೋತ್ರಿಷ್ಟನುಂ ಮೋಹಜಘನಾಪರನುಂ ಅನಿಮ್ನನಾಭಿಯುಂ ಹ್ರಸ್ವಚೂಚುಕುನುಂ: **ಆದಿಪು,** ೧೨. ೫೬ ವ)

**ಗೋಧರ್ಮ** – ಪಶುಸ್ವಭಾವ (ಶ್ರೀಧರ್ಮದಾಂಕೆಯಿಲ್ಲದೊಡೆ ಈ ಧರೆಯೊಳ್ ಮಿಕ್ಕ ಪಾಪಕರ್ಮರ ಮತದಿಂ ಗೋಧರ್ಮಮಕ್ಕುಂ: **ಸಮಯಪ,** ೧೧. ೩೫)

**ಗೋಧೂಮ** – ಗೋದಿ (ಗೋಧೂಮಂ ಗೋದುವೆ: **ಅಭಿಧಾವ,** ೧. ೧೬. ೧೭)

**ಗೋನಿಯೋಗ** – ದನಗಾಹಿತನ (ಗೋನಿಯೋಗ ದಂಡಧರರುಮಾಗಿ ಕೆಲಬರ್ ಕೋಡ ಕಾಳೆಗಳನೂದುತ್ತುಂ .. .. ಬರೆ: ಜಗನ್ನಾವಿ, **ಜಗನ್ನಾವಿ,** ೪. ೮೦ ವ)

**ಗೋಪ** – ದನಗಾಹಿ (ಗೋಪರ್ ಇದನಿಂ ಕಂಡು ಅಂಜುವರ್: **ಜಗನ್ನಾವಿ,** ೩. ೩೦)

**ಗೋಪಕುಮಾರ** – ದನಕಾಯುವ ಹುಡುಗ (ಆತನ ಕೆಲದೊಳ್ ಜಾಳಪಟಂ ತೂಂತಿಟ್ಟಂತೆ ಸಂದಣಿಸಿ ನಿಂದ ಗೋಪಕುಮಾರರ ಅಣಿಯ ನಡುವೆ: **ಪಂಪಭಾ,** ೧೦. ೫೭ ವ)

**ಗೋಪತಿ** – ವೃಷಭ (ವೃಷ ಸೌರಭೇಯ ಗೋಪತಿ: **ಅಭಿಧಾವ,** ೧. ೧೫. ೧); ಸೂರ್ಯ (ಸರಸೀರುಹಂ ಮುಗುಳ್ನಗೆ ನಗುವಂತಿರಿರ್ದುವು .. .. ಉದಯಾದ್ರಿಗೆ ಗೋಪತಿ ಬರ್ಪ ಪೊೞ್ತಿನೊಳ್: **ಗಿರಿಜಾಕ,** ೫. ೩)

**ಗೋಪನಂದನ** – ಗೊಲ್ಲನ ಮಗ ಕೃಷ್ಣ ಮತ್ತು ಸೂರ್ಯನ ಮಗ ಯಮ (ದಂತವಕ್ತ್ರಂ ನಿಸರ್ಗವೈರದಿಂದ ಸುರವೈರಿಯ ಪೆಸರ್ಗಳೆ ತನಗಸಹ್ಯಂಗಳಾಗೆ ಹರಿನಾಮಯುಕ್ತನೆಂದು ಶಕ್ರನನಾಕ್ರಮಿಸಿಯುಂ .. .. ಗೋಪನಂದನನೆಂದು ದಂಡಧರನನಂಡಲೆದಂ: **ಜಗನ್ನಾವಿ,** ೯. ೫೩ ವ)

**ಗೋಪಾನಸೀ** – ಲೋವೆ, ತೊಲೆ (ಗೋಪಾನಸೀ ನಾಮಮೆ ಲೋವೆಗಕ್ಕುಂ: **ಅಭಿಧಾವ,** ೧. ೧೦. ೧೪)

**ಗೋಪಾಯಿತ** – ರಹಸ್ಯವಾದದ್ದು (ಗುಪ್ತಂ ಗೋಪಾಯಿತಂ: **ಅಭಿಧಾವ,** ೨. ೧. ೪೧)

**ಗೋಪಾನಸೀಕ** – ಲೋವೆ (ಗೋಪಾನಸೀಕಂಗಳೊಳ್ ಮೈದೊಡವಪ್ಪನ್ನಂ ಮುಗಿಲ್ ಕನ್ನಡಿಪುದು ಕರುಮಾಡಂ ನೃಪಶ್ರೀಯ ಪೆರ್ಚಂ: **ಚಂದ್ರಪ್ರಪು,** ೧. ೧೪೨)

**ಗೋಪಾಳಕ** – ದನಗಾಹಿ (ಗೋಪಾಳಕನೆಂದಿಂತಾಳಾಪಿಸಿದೈ ಗೋಪತನಯನಪ್ಪೆಂ: ಕರ್ಣನೇಮಿ, ೧೨. ೨೩೨)

**ಗೋಪಿ** – ಗೊಲ್ಲಿತಿ (ತನತನಗೆ ಗೋಪಿಯರ್ ಕೃಷ್ಣನಂಕಮಾಲೆಯನೆ ಪಾಡುತುಂ: **ಜಗನ್ನಾವಿ,** ೫. ೯)

**ಗೋಪುರ** – ಗೋವುಗಳ ನಗರ; ಪುರದ್ವಾರ (ಪರಿಖಾವಪ್ರಪ್ರಾಕಾರ ಗೋಪುರ ಅಟ್ಟಾಳಕ ಅಳಂಕೃತಂಗಳಪ್ಪ ರಾಜಧಾನಿಗಳುಮಂ: **ಆದಿಪು,** ೮. ೬೩ ವ)

**ಗೋಭೂಮಿ** – ಮೈದಾನ, (ಭವ್ಯಜನಶರಣಮಾದ ಸಮವಸರಣ ಗೋಭೂಮಿಯೊಳ್: **ಶಾಂತಿಪು,** ೧೨. ೨೨ ವ)

**ಗೋಮಂಡಳ** – ಹಸುಗಳ ಮಂದೆ (ಗೋಮಂಡಳದೊಳ್ ಒಳ್ಳಿದುವಪ್ಪ ಪತ್ತು ಪಯನುಮಂ ಮೂಸಾಸಿರಗಂಡುಗ ಬತ್ತಮುಮಂ ಪ್ರಮಾಣಂ ಮಾಡಿ ಕೊಟ್ಟೊಡೆ: **ವಡ್ಡಾರಾ,** ಪು ೨೨ ಸಾ ೩)

**ಗೋಮಂಡಳಿಗ** – ದನಗಳ ಮಂದೆಯ ಒಡೆಯ (ಶತ್ರುಂಜಯಮಹಾರಾಜ ಗೋಮಂಡಳಿಗಂ ನಂದಮಿತ್ರನ ಗೋಮಂಡಳದೊಳೊರ್ಮೆ ಪೋಜೆಗಳಾಗಿ .. .. ಪೊಣರ್ದು: **ಶಾಂತಿಪು,** ೯. ೪೭ ವ)

**ಗೋಮಯ** – ಸಗಣಿ (ಸಮ್ಮಾರ್ಜನಮಂ ತಂದು ಅದನುಡುಗಿ ಗೋಮಯದಿ ಸಾರಿಸಿ: **ತ್ರಿಷಷ್ಟಿಪು,** ೨೭. ೧೩೧ ವ)

**ಗೋಮಾಯು** – ನರಿ (ಕಳಭೋತ್ಕರಮಂ ತವೆ ಕೊಂದ ಕಾರಣಂ ವಾಯಸ ಗೃಧ್ರಸಂಕುಳ ವೃಕಪ್ರಕರ ಉರುತರ ಋಕ್ಷ ಗೋಮಾಯುನಿಕಾಯಂ ತಣಿಪಿ: **ಪಂಚತಂತ್ರ,** ೧೧೭ ವ)

**ಗೋಮಿನೀ** – ಲಕ್ಷ್ಮಿ (ಮಂಗಳಸವನಾನಂತರಂ ಅಂಗೀಕೃತ ಶುಭವಿಭೂಷರಂ ಮಾಡಿ ಜಿತಾನಂಗನೆನಿಪ ಆ ಕುಮಾರಕನಂ ಗೋಮಿನಿಯೆನಿಪ ಖಚರನಂದನೆಯಂ: **ಶಾಂತೀಶ್ವಪು,** ೨. ೧೩೯)

**ಗೋಮಿನೀಧವ** – ಲಕ್ಷ್ಮೀಪತಿ, ವಿಷ್ಣು (ಹಿರಣ್ಯಾಕ್ಷನಂ ತವೆ ಕೊಂದು ಆದಿವರಾಹರೂಪದೊಳೆ ನೀನಂದೆತ್ತಿದೈ ಗೋಮಿನೀಧವ .. .. ಭೂಗೋಳಮಂ: **ಜಗನ್ನಾವಿ,** ೧. ೫೭)

**ಗೋಮಿನೀಪತಿ** – ಗೋಮಿನೀಧವ (ದಯೆಯಿಂದ ಅಸ್ಮತ್ ಗರ್ಭದೊಳ್ ಗೋಮಿನೀಪತಿ ನೀಂ ಪುಟ್ಟಿದೆ: **ಜಗನ್ನಾವಿ,** ೩. ೫)

**ಗೋಮಿನೀವಲ್ಲಭ** – ರಾಜ (ವನವಾರಿಕ್ರೀಡೆಯಿಂದೊರ್ಮೆ ಚಿತ್ರರುಚಿಪ್ರೀತಿಗಳಿಂದೆ ಪೊಟ್ತುಗಳೆವಂ ಶ್ರೀ ಗೋಮಿನೀವಲ್ಲಭ: **ಚಂದ್ರಪ್ರಪು,** ೪. ೨೮)

**ಗೋಮುಖಿ** – [ಜೈನ] ಒಂದು ನೋಂಪಿ (ಗೋಮುಖಿಯೆಂಬ ನೋಂಪಿಯ ನೆವದಿಂ ದೇವಕಿಯುಂ ವಸುದೇವನುಂ ಬಲದೇವನುಂ ವಾಸುದೇವನ ತುಱುಪಟ್ಟಿಗೆ .. .. ಬಂದು: **ನೇಮಿನಾಪು,** ೮. ೨೦ ವ)

**ಗೋಮೂತ್ರಕ ವೃತ್ತ** – ಗದಾಯುದ್ಧ ಒಂದು ವರಸೆಯಲ್ಲಿನಂತೆ ಗುಂಡಗೆ (ಎಂಬುದುಂ ಆ ಪಂಡಿತಂ ಕನ್ನಗಳ್ಳನಂತೆ ಬಳಪಮಂ ತೆಗೆದು ಕಬ್ಬಿಗನಂತೆ ಗೋಮೂತ್ರವೃತ್ತಾಳಂಕೃತನಾಗಿ: **ಸುಕುಮಾಚ,** ೩. ೬ ವ)

**ಗೋಮೇಧಿಕ** – ನವರತ್ನಗಳಲ್ಲಿ ಒಂದು (ಗೋಮೇಧಿಕದ ಭಿತ್ತಿಯೊಳಂ ಚಂದ್ರಕಾಂತದ ಗವಾಕ್ಷಂಗಳೊಳಂ: **ಪುಷ್ಪದಂಪು,** ೮. ೫೦ ವ)

**ಗೋರ್** – ಬಲೆಯಿಂದ ಮೀನುಹಿಡಿ (ಗೋರ್–ಜಾಲಕರಣೇ: **ಶಬ್ದಮದ,** ಧಾ ೫೬೯)

**ಗೋರಸ** – ಹಾಲು, ಮಜ್ಜಿಗೆ (ಗೋರಸದೊಳ್ ಕೂಡಿರ್ದ ಆಹಾರಮಂ ಆ ಗೋಷ್ಠದಲ್ಲಿ ಗೋವಳನಿಕ್ಕಲ್ಕೆ ಆರೋಗಿಸಲಕ್ಕುಂ: **ಸಮಯಪ,** ೬. ೯೭)

**ಗೋರಿ** – ಆಮಿಷ (ಪಾಟಂ ಕಾಮುಕ ಗಣಮೃಗಕೋಟಿಗೆ ಮನಸಿಜನ ಗೋರಿಗಾಡುವ ಪಾಟಂ: **ಅಜಿತಪು,** ೫. ೪೪); ಬೇಟೆಯಾಡಬೇಕಾದ ಪ್ರಾಣಿಯನ್ನು ಆಕರ್ಷಿಸಲು ಹಾಡುವ ಹಾಡು (ಎರಲೆಗೆ ಪಾಡುವ ಗೋರಿಯಂ ಅರಣ್ಯದೊಳ್ ಮೃಗವಿರೋಧಿಗಂ ಪಾಡುವುದೇ: **ಆದಿಪು,** ೧೪. ೮೦)

**ಗೋರಿಗೊಳ್** – ಬೇಟೆಯ ಮೃಗಗಳು ಆಕರ್ಷಣೆಗೊಳ್ಳು, ಮೋಹಪರವಶವಾಗು (ನುಣ್ಚರಮಂ ನಸುಗೇಳ್ದು ಸೋಲ್ದು ಕಣ್ಮಲರರೆಮುಚ್ಚಿ ಕಂಡು ಕೊಣಕಿಟ್ಟಪುದಲ್ಲಿಗೆ ಗೋರಿಕೊಂಡು ಒಂದೊಂದೆರಳೆಯೊಳ್ ಶಶಿ ತೊಡರ್ಚುವಂ ಆತ್ಮವಟಪ್ರರೋಹದೊಳ್: **ಚಂದ್ರಪ್ರಪು,** ೧. ೧೨೪)

**ಗೋರಿಗೊಳಿಸು** – ಆಮಿಷವೊಡ್ಡು (ಎನ್ನನೆ ಗೋರಿಗೊಳಿಸಿದ ಅತನುವ ನನೆಗೋಲ ಮೊಗಕ್ಕೆ ಪೋದೊಡೆ ಸಾಲ್ಗುಂ: **ಲೀಲಾವತಿ,** ೫. ೧೨)

**ಗೋರಿಯ ಮೃಗ** – ಗಾನಕ್ಕೆ ಬೆರಗಾಗುವ ಜಿಂಕೆ (ಅಂತಾತಂ ಗೋರಿಯ ಮೃಗದಂತೆಳಸಿ ಬರ್ಪುದುಂ: **ಪಂಪರಾ,** ೧೦. ೧೧೧ ವ)

**ಗೋರಿವಲೆ** – ಮೀನು ಹಿಡಿಯುವ ಬಲೆ (ಬಿರ್ಚುವಲೆ ಬಳ್ಳಿವಲೆ ಗೋರಿವಲೆ ಖಂಡವಲೆಗಳೆಂಬಿವಂ: **ರಾಜಶೇವಿ,** ೫. ೧೦೪ ವ)

**ಗೋಲಾಂಗೂಲ** – ಒಂದು ಬಗೆಯ ಕೋತಿ (ಶಾರ್ದೂಲ ವರಾಹ ಗೋಲಾಂಗೂಲ ನಕುಳಂಗಳಂ ನೋಡುತ್ತುಂ: **ಆದಿಪು,** ೫. ೨ ವ)

**ಗೋವ** – ಗೋಪ, ದನ ಕಾಯುವವನು (ಮಚ್ಚರದಿಂ ಒರ್ವರನೊರ್ವರಂ ಉಚ್ಚಳಿಸಿ ತಗುಳ್ದು ಗೋವರ್ ಆರ್ದು ಇಸೆ ಕೀಱಂ ಕರ್ಚಿ ಮುಡಿಯೊಳ್ ಪೊರಳ್ದುವು ನಚ್ಚಿನ ಕಾಂಭೋಜವಾಜಿಗಳ್ ಕೆಲವಾಗಳ್: **ಪಂಪಭಾ,** ೮. ೯೪)

**ಗೋವರ್ಧನ** – ದನಗಾಹಿ (ಗೋವರ್ಧನಪಟು ನಲಿದಂ ಗೋವರ್ಧನಗಿರಿಯೊಳೆಸೆವ ವೃಂದಾವನದೊಳ್: ಜಗನ್ನಾವಿ, ೪. ೧); ಶ್ರೀಕೃಷ್ಣ (ಗೋವರ್ಧನನಂ ಪೂಜಿಸೆನೆಂದಜೆಯದೆ ಭಿಷ್ಮಂ: **ಜಗನ್ನಾವಿ,** ೧೭. ೧೯)

**ಗೋವಳ** – ಗೋಪಾಲಕ (ಗೋರಸದೊಳ್ ಕೂಡಿರ್ದ ಆಹಾರಮಂ ಆ ಗೋಷ್ಠದಲ್ಲಿ ಗೋವಳನಿಕ್ಕಲ್ಕೆ ಆರೋಗಿಸಲಕ್ಕುಂ: **ಸಮಯಪ,** ೬. ೯೭)

**ಗೋವಳಗಟ್ಟಿಗೆ** – ದನ ಕಾಯುವವನ ಕೋಲು (ಸೂಳಜಿದು ಮಸಗಿ ದುವ್ವಾಳಿಸುವ ಗೋವಳಗಟ್ಟಿಗೆಯ ಗೊಂದಣಂಗೂಡಿ: **ಗಿರಿಜಾಕ,** ೬. ೫೫ ವ)

**ಗೋವಳಗಟ್ಟಲೆ** – ಕಗ್ಗತ್ತಲೆ (ಪೆಜಗೆ ಕರಿಕೆರ್ದವೊಲೇಂ ತೀವಿದುದೊ ಭುವನತಳಮಂ ಗೋವಳಗಟ್ಟಲೆ ಸಮಸ್ತಭುವನಾತ್ಮಕಮಂ: **ನೇಮಿನಾಪು,** ೫. ೧೬)

**ಗೋವಳಗೋಲ್** – ಗೋವಳಗಟ್ಟಿಗೆ (ಗೋವರ್ಗಾವಳಿಗೊಂಡು ಗೋವಳಿಗಗೋಲನೆತ್ತಿಕೊಂಡೊಂದಱೆ: **ನೇಮಿನಾಪು,** ೭. ೯೧ ವ)

**ಗೋವಳರಾಯ** – ಗೋಪಾಲಕರ ಒಡೆಯ, ಶ್ರೀಕೃಷ್ಣ (ಗೋವಳರಾಯಂ ಕೊಟಲೂದಿದಂ ನೆಗಟೆನಂ ಮಾದುರ್ಯತೂರ್ಯಸ್ವನಂ: **ಜಗನ್ನಾವಿ,** ೫. ೨)

**ಗೋವಳಿಗ** – ಗೋಪಾಳಕ (ದೇವರಂ ಅಡಿಗಡಿಗೆ ಎಱಗಿಸಿ ಸಕಳ ಅವನಿತಳದ ಅದಟರಂ ಪಡಲ್ವಡಿಸಿದ

ಶೌರ್ಯಾವಷ್ಟಂಭದೊಳ್ ಆನಿರೆ ಗೋವಳಿಗಂಗೆ ಅಗ್ರಪೂಜೆಯಂ ನೀಂ ಕುಡುವಾ: **ಪಂಪಭಾ,** ೬. ೫೭)

**ಗೋವಿ** – [ಗೋಪಿ] ಗೊಲ್ಲಿತಿ (ಗೋವುಗಾದಳವಟಿದಿರ್ದ ಕೃಷ್ಣನೊಡನಿರ್ದುದಲ್ಲಿಇಂದವೆ ಗೋವಿಯಾದೆ: **ಗದಾಯು,** ೯. ೫); ಕೊಳಲು (ಮೃಗಪ್ರಕರಕ್ಕೆ ಗೋವಿಯ ದನಿ ಸಚ್ಚರಿತ್ರಂಗಳೆಂಬ .. .. ಬಣ್ಣಿಪ ಗಾಮಪನಲ್ತೇ: **ಕಾದಂಬ,** ೩. ೮೪)

**ಗೋವಿಕೆ** – ದನ ಕಾಯುವವನ ಸ್ವಭಾವ (ತೊಲಗದೆ ಗೋವುಗಾದ ಕಿಟಿಯಂದಿನ ಗೋವಿಕೆ ನಿನ್ನ ಚಿತ್ತದೊಳ್ ನೆಲಸಿದುದಕ್ಕುಂ: **ಪಂಪಭಾ,** ೯. ೪೪)

**ಗೋವು** – ಹಸು (ಎನ್ನನಾರ್ ಬಾರಿಪರೆಂದು ಗೋವುಮಂ ಅನಾಕುಲಮಿಟ್ಟುಳಿಗೊಂಡು ಪೋದಂ: **ಸುಕುಮಾಚ,** ೭. ೩೬)

**ಗೋವುವಿಂಡು** – ದನಗಳ ಹಿಂಡು (ಗೋವುವಿಂಡಂ ಪುಲಿ ಪೊಕ್ಕಂತೆ ಜೋಳದ ರಾಸಿಯಂ ಪೊನಲ್ಕವಿದಂತೆ: **ಧರ್ಮಾಮೃ,** ೨. ೪೨ ವ)

**ಗೋವುಳಿಗ** – ಗೋಪಾಲಕ (ವಿಜಿಗೀಷುತ್ವದೊಳ್ ಒಂದಿ ಗೋವುಳಿಗನಪ್ಪಂ ಮತ್ಸ್ಯನಾಳಾಗಿಕೊಳ್ಳದಿರ್ಪರೆ ವಾರಿಜನಾಭಂ ಹರಿಯೆಂಬ ದೊಡ್ಡಿವೆಸರಂ ಪೊತ್ತಿರ್ದ ನೀಂ ಮಂತ್ರಿಯಾಗೆ.. ..ರಣದೊಳ್ ಭೂಭಗಮಂ ನೆಟ್ಟನೆ ಒಟ್ಟಜೆಯಿಂದ ಅಂಜಿಸಿ ಕೊಳ್ಳದಿರ್ಪರೆ: **ಪಂಪಭಾ** ಪರಿಷತ್ತು, ೯. ೪೭)

**ಗೋವ್ರಜ** – ಗೊಲ್ಲರ ಹಟ್ಟಿ (ಘೋಷಾಕರಸಂಗ್ರಹಾಕರ ಗೋವ್ರಜಂಗಳುಮಂ: **ಆದಿಪು,** ೮. ೬೩ ವ)

**ಗೋಶೀರ್ಷ** – ಗೋರೋಚನ (ತದನಂತರಮೆ ಸುರೇಂದ್ರಸಮಿತಿ ಸುರತರುಪ್ರಸೂನ ಕರ್ಪೂರ ಪಾಂಸು ಗೋಶೀರ್ಷ ಚಂದನದ್ರವ ಪರಿಮಳ ಸುಗಂಧಿಸಂಭೃತ ಹಾಟಕಘಟಿತ ಘಟಕೋಟಿಗಳಂ ಎತ್ತಿಕೊಂಡು ಸುರಿದಾಗಳ್: **ಆದಿಪು,** ೭. ೧೦೧ ವ)

**ಗೋಷ್ಠ** – ಕೊಟ್ಟಿಗೆ (ಗೋರಸದೊಳ್ ಕೂಡಿರ್ದ ಆಹಾರಮಂ ಆ ಗೋಷ್ಠದಲ್ಲಿ ಗೋವಳನಿಕ್ಕಲ್ಕೆ ಆರೋಗಿಸಲಕ್ಕುಂ: **ಸಮಯಪ,** ೬. ೯೭)

**ಗೋಷ್ಠಾಗಾರ** – ಗೋಷ್ಠ (ಈ ಪೊಟಲೊಳ್ ಸುಪ್ರದೇಶಮಪ್ಪ ಸ್ಥಾನದೊಳ್ ಸುಧಾಧವಳಿತಮಪ್ಪ ಧವಳಾಗಾರಂ ಗೋಷ್ಠಾಗಾರಂ ಮೊದಲಾಗಿ ಪಲವುಂ ಶೋಭಾವಹಂಗಳಪ್ಪ ಗೃಹಂಗಳಂ ಮಾಡಿಸಿ: **ಪಂಚತಂತ್ರ,** ೨೫೪ ವ)

**ಗೋಷ್ಠಿ** – ಗುಂಪು, ಸಭೆ (ನಿಷ್ಠಾಪರಂ ಪ್ರಭಾತಾನುಷ್ಠಾನನಿಮಿತ್ತಂ ಎಟ್ಟಿದನಲ್ಲಿಂ ತದ್ಗೋಷ್ಠಯನುಟಿದು .. ..ಮುನೀಂದ್ರಂ: **ಕಾದಂಸಂ,** ೮. ೭)

**ಗೋಷ್ಠಿಗೆಯ್** – ಸರಸದಿಂದ ಮಾತಾಡು (ಅತ್ತಲ್ ಗೋಷ್ಠಿಗೆಯ್ವ ಅಚ್ಯುತನ ಬಿನದಮಂತೊಂದಗುರ್ವೇನನೆಂಬೆಂ: **ಜಗನ್ನಾವಿ,** ೭. ೯೪)

**ಗೋಷ್ಪದ** – ಹಸುವಿನ ಹೆಜ್ಜೆ (ಎನಗೆ ಪೊಸಂತಿಲೀ ನೆಗಟ್ದ ವಜ್ರದ ವೇದಿಕೆ ಗೋಷ್ಪದಂ ದಲ್ ಈ ವನನಿಧಿ: **ಆದಿಪು,** ೧೨. ೭೧)

**ಗೋಸ** – [ಘೋಷ] ಶಬ್ದ (ಸೊರ್ಕಾನೆಗಳ ಕಾಲ ಸಂಕಲೆಯ ಗೋಸದೊಳಂ: **ಕಬ್ಬಿಗಕಾ,** ೩೭ ವ)

**ಗೋಸಗೆ** – ಬೆಳಗಿನ ಹೊತ್ತು (ಮನಕ್ಕೆ ಗೋಸಗೆಯ ಬೀಸುವೆಲರ್ ಪಡೆದತ್ತಲರ್ಕೆಯಂ: **ಚಂದ್ರಪ್ರಪು,** ೮. ೯೭); ಬೆಳಗಿನ ಊಟ (ಕುತ್ತೆಸಟ್ಟಿಳೊತ್ತಿಂದೋಡಿ ನಿಂದೂಡುವ ಅಬ್ಬಿನಿಯೊಳ್ ಗೋಸಗೆಯುಂಡು ಪಾಡುವಳಿಯಿಂ: **ಅನಂತಪು,** ೮. ೬೯)

**ಗೋಸರ್ಗ** – ದನಕರುಗಳನ್ನು ಮೇವಿಗೆ ಕರೆದೊಯ್ಯುವ ಹೊತ್ತ, ಬೆಳಗಿನ ಹೊತ್ತು (ದಿವಸಮುಖಂ ಪ್ರಾತಃಕಾಲ ಉಷಃಸಮಯಂ ಪ್ರಭಾತಂ ಅದು ಗೋಸರ್ಗಂ: **ಅಭಿಧಾವ,** ೧. ೨. ೪)

**ಗೋಸಣೆ** – ಘೋಷಣೆ, ಸಾರುವುದು (ಆತನ ಬೇಡುವುದೆಲ್ಲಮಂ ಕುಡುವೆನೆಂದು ಯೊಟಲ್ವ ಗೋಸಣೆಯಂ ಗಜಕುಮಾರಂ ಪಿಡಿದೊಡೆ: **ವಡ್ಡಾರಾ,** ಪು ೫೦, ಸಾ ೨೨)

**ಗೋಸಣೆಯಿಡು** – ಗೋಸಣೆಗಳೆ (ಪೊನ್ನರಾಶಿಗಳಂ ಅರ್ಥಿಜನಕ್ಕೆ ಗೋಸಣೆಯಿಟ್ಟು ಕುಡವೇಟ್ಟು: **ಪಂಪಭಾ,** ೧೨. ೫೨ ವ)

**ಗೋಸನೆ** – [ಘೋಷಣಾ] ಸಾರಿ ಹೇಳುವುದು (ಭುವನದೊಳಿಂತು ನಿನ್ನೆಸೆವ ಗೋಸನೆ ಸಂದುದು: **ಆದಿಪು,** ೧೧. ೧೦೮)

**ಗೋಸನೆಗಳೆ** – ಘೋಷಣೆ ಮಾಡು, ಸಾರು (ತನ್ನ ಪೊಟಲೊಳಂ ನಾಡೊಳಂ ಆರಪ್ಪೊಡಂ ಜೀವಂಗಳಂ ಕೊಲ್ಲದಂತು ಗೋಸನೆಗಳೆಯಿಸಿದಂ: **ವಡ್ಡಾರಾ,** ಪು ೧೫೧, ಸಾ ೧೬)

**ಗೋಸನೆಗುಡುಕು** – ಕರೆದು ಕೊಡುವ ಆಹಾರ (ಲಯಮೆಯ್ದಿ ಯದುಬಲಂ ಪಕ್ಕಿಯ ಗೋಸನೆಗುಡುಕು ಜವನ ಕೈಬೋನಂ ಮಾರಿಯ ಬುತ್ತಿ ಮರುಳ್ಗಳ ಕಜ್ಜಯಂ: **ಜಗನ್ನಾವಿ,** ೯. ೬೨)

**ಗೋಸನೆವಿಡಿಸು** – ಘೋಷಣೆ ಹೊರಡಿಸು (ದಿವಿಜಕರೋನ್ಮುಕ್ತಮುಕ್ತಾದಿರತ್ನಂಗಳಂ ಪೊಟಲ್ಗೆಲ್ಲಂ ಗೋಸನೆವಿಡಿಸಿ ನೆಗಟ್ದ ದಾನಾತಿಶಯಕ್ಕೆ ವಿಸ್ಮಯಂಬಟ್ಟು: **ಆದಿಪು** ೧೦. ೭ ವ)

**ಗೋಸನವೋಗು** – ಪ್ರಸಿದ್ಧಿ ಹೊಂದು (ಮಾಂಗಲ್ಯಪ್ರದನಲ್ಲಂ ಅಮಾಂಗಲ್ಯಚರಿತ್ರನೆನಿಸಿ ಗೋಸನೆವೋದಂ: **ಸಮಯಪ,** ೮. ೧೨೨)

**ಗೋಸಾಸ** – [ಗೋಸಹಸ್ರ] {ಗೋಸಾಹಸ} ತುರುಕಾಳಗದಲ್ಲಿ ಹಸುಗಳನ್ನು ಬಿಡಿಸಲು ತೋರುವ ಸಾಹಸ (ಪರಹಿತವ್ಯಸನಿಗಳಲ್ಲದೆ ದುರ್ವ್ಯಸನಿಗಳಿಲ್ಲ ಗೋಸಾಸಮಲ್ಲದೆ ಕನ್ನೆಗೋಸಾಸಮಿಲ್ಲ: **ಅಜಿತಪು,** ೧. ೨೧ ವ)

**ಗೋಸ್ತ** – ದನಗಳ ಕೊಟ್ಟಿಗೆ (ಗೋರಸದೊಳಕ್ಕೂಡಿರ್ದಾಹಾರಮಂ ಅ ಗೋಸ್ತದಲ್ಲಿ ಗೋವಳನಿಕ್ಕಲ್ಕೆ ಆರಗಿಸಲಕ್ಕುಂ ಚಾರಿತ್ರಾನ್ವಿತರ ನೆಯೊಳ್ ಉಣ್ಬರೆ ಪಾರ್ವರ್: **ಸಮಯಪ,** ೬. ೯೭)

**ಗೋಸ್ತನೀ** – ದ್ರಾಕ್ಷಿ (ಚೂತ ಚಳಿಲ್ಲತೆ ಶಸ್ತ ಗೋಸ್ತನೀಲತೆ ಬಹುಬಿಂಬ ಕಂಬುಲತೆ ತಳ್ತೆಸೆದಿರ್ಪುದು: **ಕುಸುಮಾಕಾ,** ೧. ೯೮)

**ಗೋಹಳಿ** – ಸಗಣಿ, ತಿಪ್ಪೆ (ಹಡುಕೆಯ ಕೆಲದೊಳ್ ಗೋಹಳಿಯ ಎಡೆಯೊಳ್ ಭೋರೆಂದು ಸಕಳ ವಿಪ್ರಜನಂಗಳ್ ಬಿಡದೋದುವರ್: **ಸಮಯಪ,** ೧೧. ೧೪)

**ಗೋಹಳಿಯೆಡೆ** – ತಿಪ್ಪೆ (ನಡುಬೀದಿಯೊಳಂ ಗೋಹಳಿಯೆಡೆಗಳೊಳಂ .. .. ಮೆಲ್ವರ್ ಮೂಢರ್: **ಸಮಯಪ,** ೧೨. ೮)

**ಗೋಳಾಂಗೂಳ** – ಕೋತಿ (ಮುನಿಗಣೇಶ್ವರರೊಡನೆ ದಾಳಿವೂಗೊಯ್ವೊಡನೆ ವರ್ಪ ಗೋಳಾಂಗೂಳಂಗಳುಮಂ ನೋಡಿ ತಪೋವನದ ತಪೋಧನರ ತಪಃಪ್ರಭಾವಕ್ಕೆ ಚೋದ್ಯಂಬಟ್ಟು: **ಪಂಪಭಾ,** ೧. ೧೧೫ ವ)

**ಗೋಳಿ** – ಗೋಣಿ, ಆಲದ ಜಾತಿಗೆ ಸೇರಿದ ಒಂದು ಮರ (ಗೋಳಿಯ ಪಣ್ಣಂ ಗೊರವರ ಶಾಪದೊಳೆ ಪುಟಿತವೇ ಪೇಟಿಮಿದಂ: **ಸಮಯಪ,** ೧೦. ೧೨೦)

**ಗೋಳಿಗೆ** – ಹೆಣ್ಣು ಕುದುರೆ (ಶತಧನ್ವನೆಂಬ ಅರಸನ ಮನೆಯೊಳ್ ಗೋಳಿಗೆಯಾಗಿ ಪಲವುಕಾಲಮಿರ್ದಳ್: **ಕಾದಂಬ,** ೩. ೧೩ ವ)

**ಗೋಟಯಿಲ** – [ಘೋಟಾರೂಢ] ಕುದುರೆ ಸವಾರ (ಪಾಯಿಸಿ ಪೊಯ್ಯೆ ಗೋಟಯಿಲರ್ ಒರ್ವರನೊರ್ವರ್ ಅಗುರ್ವು ಪರ್ವೆ .. .. ಪಾಳಿಸಿದತ್ತು ಉಪರಾಗಲೀಲೆಯಿಂ: **ಪಂಪರಾ,** ೧೩. ೬೨)

**ಗೋಟಾಯ್ಲು** – ಗೋಟಯಿಲ (ಸೆರಗಂ ಬೆರಗಂ ಬಗೆಯದೆ ಪೊರೆದಾಳ್ದನ ಜೋಳವಾಳಿ ನಿಲೆ ಗೋಟಾಯ್ಲರ್ ಪರಿಯಿಪುದುಂ ಒಂದೆ ನೇಣ್ಗೊಳ್ ಪರಿವಂತಿರೆ ಪರಿವುದು ಉಭಯ ಬಲದ ಹಯಂಗಳ್: **ಪಂಪರಾ,** ೧೩. ೫೭)

**ಗೋಟೆಗೆ** – ಹೆಣ್ಣು ಕುದುರೆ (ಘೋಟಿಕ–ಗೋಟೆಗೆ: **ಶಬ್ದಮದ,** ೩೧ ಪ್ರ)

**ಗೋಟೆಡಿಸು** – ಗೋಳಾಡಿಸು (ಗೋಟೆಡಿಸಿದಂ ಮಿಗೆ ಮೇಳದ ವಂದಿವೃಂದಮಮಂ: **ಆಚವರ್ಧ,** ೯. ೬೮)

**ಗೋಟೆಡು** – ಗೋಳಾಡು (ಗೋಟೆಡು–ಆಕ್ರೋಶಧ್ವನೌ: **ಶಬ್ದಮದ, ಧಾ** ೩೦೬)

**ಗೋಟುಂಡೆ** – ಅತಿಯಾದ ದುಃಖ (ವನಮೃಗಂಗಳ ಗೋಟುಂಡೆಯಂ ನೆನೆನೆನೆದು ಕರಮಟಲ್ದು: **ಆಚವರ್ಧ,** ೧೧. ೫೪ ವ)

**ಗೋಟುಂಡೆಗೊಳ್** – ಅತಿ ದುಃಖಿತನಾಗು (ಪ್ರತಾಪಕ್ಕೆ ಅಗುರ್ವಿಸೆ ಗೋಟುಂಡೆಗೊಳುತ್ತುಂ ಇರ್ದುದು ದಿಶಾಚಕ್ರಂ ಪೊದಳ್ದ ಆಜ್ಞೆಗಂ ಪೆಸರ್ಗಂ ಮುನ್ನಮೆ ರೂಪುವೋದುದು ವಿಯಚ್ಚಕ್ರಂ: **ಪಂಪಭಾ,** ೧. ೧೧೦)

**ಗೋಟೆಯಿಲ** – ಗೋಟಾಯಿಲ (ಕೆನ್ನೀರಿನ ಕಾಟ್ಪೊನಲ್ ಮಸಗಿ ಕೂಡೆ ಪೆಣಂಗಳನೆತ್ತಿ ಗುಂಪಿನಿಂ ಭೋರ್ಗರೆದೆತ್ತಲುಂ ಪರಿಯೆ ಗೋಟೆಯಿಲರ್ ಕಡುಕೆಯ್ದು ಕಾದಿದರ್: **ಕಬ್ಬಿಗಕಾ,** ೨೧೬)

**ಗೋಟ್ಮುರಿಗೊಳ್** – ಕತ್ತು ತಿರುಗಿಸು (ಆ ಸೈನ್ಯಮಂ ಪರ್ವಿ ಗೋಟ್ಮುರಿಗೊಂಡು ಉರ್ವಿದುವಾ ರಸಾತಳಮುಮಂ ಗಾಂಗೇಯನಸ್ತ್ರಾಳಿಗಳ್: ಪಂಪಭಾ, ೧೧. ೪೦)

**ಗೌತಮಿ** – ಗೋದಾವರಿ ನದಿ (ಶರ್ವನೆ ತನ್ನಂ ತೋರ್ಪಂ ಪರ್ವದೊಳ್ ಆ ತುಂಗೆ ಭದ್ರೆಯೊಳ್ ಗೌತಮಿಯೊಳ್: **ಸಮಯಪ,** ೧೨. ೨೮)

**ಗೌರ** – ಬಿಳಿಯ ಬಣ್ಣ (ಧವಳಾಬ್ಜ ಗೌರಹಂಸಪ್ರವರನ ಮೇಲೆ ಅಬ್ಜರಾಗರುಚಿಯೆನಿಪ ಅಬ್ಜೋದ್ಭವನೇಂ ಬೆಳಗುತ್ತಿರ್ದನೋ: **ಜಗನ್ನಾವಿ,** ೧. ೩೭)

**ಗೌರವತ್ರಯ** – [ಜೈನ] ಶಬ್ದ, ಋದ್ಧಿ, ಸಾತ ಎಂಬ ಮೂರು ಬಗೆಯ ಗೌರವ [ಅಹಂಕಾರ]ಗಳು (ಗತಗೌರವತ್ರಯಂ .. .. ಅಪಗತಕಾಲತ್ರಯನನಾಪ್ತ ಗುಪ್ತಿತ್ರಿತಯಂ: **ಪುಷ್ಪದಂಪು,** ೧೪. ೧೫)

**ಗೌರಿಮ** – ಗೌರವರ್ಣ (ತನು ಸಂದರ್ಭಿತ ಗೌರಿಮದಿಂದೆಸೆದುದಾ ದೇವಕಿಯಾ: **ಜಗನ್ನಾವಿ,** ೨. ೮೯)

**ಗ್ರಂಥಿಪರ್ಣ** – ಮಾಚಿ ಪತ್ರೆ (ಗ್ರಂಥಿಪರ್ಣಚ್ಛದಂ ಕತ್ತುರಿವೆಕ್ಕಂ ಸಲ್ಲಕೀವಲ್ಲವಂ: ಸೊಗಯಿಪುದು ಕಾನನೋದ್ದೇಶಂ: **ಪುಷ್ಪದಂಪು,** ೫. ೬೯)

**ಗ್ರಂಥಿಮ** – ಹೂಮಾಲೆ ಕಟ್ಟುವ ಒಂದು ಬಗೆ (ಗ್ರಂಥಿಮ ವೇಢಿಮ ವೇಧಿಮ ಸಂಪೂರಿಮ ಸಂಘಾಯಿಮಮೆಂಬ ಅಯ್ದುಂ ತೆಱದ ಪುಷ್ಪಮಾಲೆಗಳಂ ಸಮೆದು: **ಹರಿವಂಶ,** ೨. ೨೯ ವ)

**ಗ್ರಥಿತ** – ಕ್ರಮವಾಗಿ ಜೋಡಿಸಿದ (ಗ್ರಥಿತ ಸುರಭಿದಾಮದುಕೂಲಾಂಬರ ವಿಚಿತ್ರಭೂಷಣ ಸುರಭಿಲೇಪನಪ್ರಮುಖ ಭೋಗೋಪಭೋಗಂಗಳೊಳಂ: **ಆದಿಪು,** ೯. ೩ ವ)

**ಗ್ರಸನ** – ತಿನ್ನುವುದು (ಅತ್ಯಂತ ದುಷ್ಟಬಳವಜ್ಜನ ಗ್ರಸನದಿಂ ದುರ್ಬಳಜನಂಗಳೊಳ್ ಮತ್ಸ್ಯನ್ಯಾಯಂ ಪ್ರವರ್ತಿಸುಗುಂ: **ಆದಿಪು,** ೮. ೭೪ ವ)

**ಗ್ರಸ್ತ** – ಅಕ್ಷರಗಳನ್ನು ನುಂಗಿ ಮಾತನಾಡುವುದು (ಲುಪ್ತ ವರ್ಣವಾಕ್ಯಂ ಗ್ರಸ್ತಂ: **ಅಭಿಧಾವ,** ೧. ೧೩. ೩೧)

**ಗ್ರಹಗ್ರಸ್ತ** – ದೆವ್ವದ ಹಿಡಿತಕ್ಕೊಳಗಾದವನು (ಮತ್ತೋರ್ವಂ ಅತ್ಯುಗ್ರಮಂಡಲಾಗ್ರಮಂ ಅನುಗೆಯ್ದು ವೀರಗ್ರಹಗ್ರಸ್ತನಾಗಿ: **ಪಂಪಭಾ,** ಪರಿಷತ್ತು ೧೦. ೪೧ ವ)

**ಗ್ರಹಗ್ರಾಮ** – ಗ್ರಹಗಳ ಸಮೂಹ (ಇದು ದೀಹಾರದ ಗೇಹದಂತೆ ಹರಿಣೀರಮ್ಯಂ ಗ್ರಹಗ್ರಾಮದಂತುದಿತಕ್ರೋಡವಿಭಾಸಿ: **ಪುಷ್ಪದಂಪು,** ೫. ೬೮)

**ಗ್ರಹಣ** – ಸೂರ್ಯಚಂದ್ರರನ್ನು ಗ್ರಹಗಳು ಹಿಡಿಯುವುದು (ಗ್ರಹಣಂ ಗ್ರಹಮುಪಪ್ಲವಂ ರಾಹುಪೀಡೆಯಕ್ಕುಂ: **ಅಭಿಧಾವ,** ೧. ೧. ೭೧)

**ಗ್ರಹಣಸಲ್ಲೇಖನಾಬುದ್ಧಿ** – ಹಿಡಿಯುವ ಮತ್ತು ಬಿಡುವ ಗುಣ (ವಾಗ್ದೇವಿಯೊಡನೆ ಪುಟ್ಟಿದುದಱಿಂ ವಾಚಾಳತೆಯುಂ ಅಮರವೈರಿಯೊಡನೆ ಪುಟ್ಟಿದುದಱಿಂ ಗ್ರಹಣಸಲ್ಲೇಖನಾಬುದ್ಧಿಯುಂ: **ಗದಾಯು,** ೯. ೭ ವ)

**ಗ್ರಹಬಲ** – ನವಗ್ರಹಗಳ ಶಕ್ತಿ (ಗ್ರಹಬಲಮಿಲ್ಲದ ಜನ್ನಿಗನಂತೆ ಪೆರ್ಚಲ್ಲದೆ: **ಶಾಂತಿಪು,** ೪. ೩೦ ವ)

**ಗ್ರಾಮ** – ಹಳ್ಳಿ (ತಂದಿತ್ತು ಕೆಯ್ಸೆಱೆಯಂ ಕೊಟ್ಟಳವಟ್ಟು ಸಾರಧನಮಂ ಮೂವಿಟ್ಟಿಗಂ ಪೂಣ್ದು ಕಾಲ್ಗೆ ಎಱಗಿತ್ತು ಅಂತು ಅರಿಗಂಗೆ ಬೆರ್ಚಿ ಭಯದಿಂ ಗ್ರಾಮಂ ಕುಳಂ ರಾಜಕಂ: **ಪಂಪಭಾ,** ೬. ೩೯೦)

**ಗ್ರಾಮಕೂಟ** – ಹಳ್ಳಿಯ ಮುಖ್ಯಸ್ಥ (ಈ ವಿಷಯದ ಪಳಾಪಳಕೂಟಗ್ರಾಮದೊಳ್ ದೇವಿಲನೆಂಬ ಗ್ರಾಮಕೂಟಂಗಂ ಆತನ ಕುಟುಂಬಿನಿ ವಸುಮತಿಗಂ ಧನಶ್ರೀಯೆಂಬ ಮಗಳಾಗಿ ಪುಟ್ಟಿ: **ಆದಿಪು,** ೩. ೩೮ ವ)

**ಗ್ರಾಮಣಿ** – ಗ್ರಾಮಕೂಟ (ಭೂಮಂಡಲದೊಳ್ ನಿನ್ನಿಂ ಭಾಮಂಡಲಮೆಸೆದು ಪಸರಿಸಿರೆ ನಕ್ಷತ್ರಗ್ರಾಮಣಿಗಳಂ ನೆಗಟ್ದಿ ಹಿಮಕರಾಮೃತಕರರೆಸೆಯಲ್ ಅಜಿತ ಪೇಟಾರ್ತಪರೇ: **ಅಜಿತಪು,** ೮. ೧೨); ಪ್ರಮುಖ (ಬುಧಜನ ಪ್ರೀಣನಾಗ್ರೇಸರಗ್ರಾಮಣಿ ಧರ್ಮಾಂಭೋಜಷಂಡದ್ಯುಮಣಿ: **ಅಜಿತಪು,** ೧೨. ೧೫);

**ಗ್ರಾಮಯಾನ** – ಧರ್ಮಬೋಧೆಗಾಗಿ ಹಳ್ಳಿಗಳಿಗೆ ಹೋಗುವುದು (ವ್ಯೋಮಯಾನಂ ತುಚ್ಛಮೆನೆಯುಂ ಗ್ರಾಮಯಾನಂ ಅತುಚ್ಛಮೆನೆಯುಂ ಧರ್ಮೋಪದೇಶಂಗೆಯ್ಯುತ್ತುಂ: **ಶಾಂತಿಪು,** ೧೨. ೨೩ ವ)

**ಗ್ರಾಮಾಧಿಪ** – ಗ್ರಾಮಣಿ (ಕೋಟಿ ಕೋಟಿ ಗ್ರಾಮಾಧಿಪರೆಱಗೆ ಮುಂದೆ ನುಡಿದು ಜಜಗಚ್ಚೂಡಾಮಣಿಗೆ ಮಕುಟಬದ್ಧ

ಮಹಾಮಂಡಳಾಧಿಪತಿಗಳಾದರ್ ಎಣ್ಬಾಸಿರ್ವರ್: **ಶಾಂತಿಪು,** ೧೦. ೧೦೫)

**ಗ್ರಾಮ್ಯ** – ಹಳ್ಳಿಯವನು (ಗ್ರಾಮೀಣಂ ಗ್ರಾಮ್ಯನೆನಿಸುಗುಂ: **ಅಭಿಧಾವ,** ೧. ೧೦. ೧); ತಿಳಿಯದವರು (ಬೆರಲ್ ಒರಲ್ ಕೊರಲ್ ಸರಲ್ ಅರಲ್ ಪರಲ್ ಮರಲುಂ ಅಂತೆ ನರಲುಂ ಮುಂಗೈಸರಲುಂ ಲಾಂತಂ ಇವಂ ಗ್ರಾಮ್ಯರ್ ಅಱಿಯದುಚ್ಚರಿಸುವರ್ ಕುಳಾಂತಭ್ರಮೆಯಿಂ: **ಶಬ್ದಮದ,** ೩೮)

**ಗ್ರಾಮ್ಯಾಳಾಪ** – ಹಳ್ಳಿಗರ ಮಾತು (ಗೋಪಾಳಬಾಳ ಲಲನಾಚಾಪಳ ವಾಚಾಳ ಕಿತವ ಬಾಹ್ಲೀಕಾದಿ ವ್ಯಾಪಾರಂಗಳ್ ಗ್ರಾಮ್ಯಾಳಾಪಂಗಳ್: **ಕವಿರಾಮಾ,** ೨. ೮೨)

**ಗ್ರಾಮ್ಯೆ** – ಹಳ್ಳಿಯವಳು (ರಾಜಧಾನಿಯ ಚತುರೆಯರಂ ಕಂಡೊಡೆ ಎಮ್ಮನೀ ಗ್ರಾಮ್ಯೆಯರಂ ದಿತಿಜಾರಿ ನೆನೆಗುಮೇ: **ಜಗನ್ನಾವಿ,** ೫. ೯೧)

**ಗ್ರಾಮ್ಯೋಕ್ತಿ** – ನಯವಲ್ಲದ ನುಡಿ, ಒರಟು ಮಾತು (ಗ್ರಾಮ್ಯೋಕ್ತಿಯೊಳೊಂದಾಗಿಸದದನೆ ಪೇೞ್ವುದಿಂತೀ ಸ್ಥಿತಿಯೊಳ್: **ಕವಿರಾಮಾ,** ೨. ೮೪)

**ಗ್ರಾವ** – ಬಂಡೆಗಲ್ಲು (ಪಾವುಗಳಂ ಕೊಳಿಸಿ ಮಹಾ ಗ್ರಾವಮಂ ಉಱದೆ ಅಡಸಿ ಕಟ್ಟಿ ಕೊರಲೊಳ್ ಗಂಗಾದೇವಿಯ ಮಡುವಿನೊಳ್ ಅಟ್ಟಿದರ್ ಏವಯಿಸದೆ ತಮ್ಮ ಕುಲಮಂ ಅಡಿಗಟ್ಟುವವೋಲ್: **ಪಂಪಭಾ,** ೨. ೩೨); ಬೆಟ್ಟ (ಶಿಲೆ ಪಾಷಾಣಣಂ ಗ್ರಾವ ಉಪಲ ಆಶ್ಮ ದೃಷದಾಖ್ಯಮಕ್ಕುಂ: **ಅಭಿಧಾವ,** ೧. ೬. ೪)

**ಗ್ರಾವಸ್ಥಲ** – ಕಲ್ಲಿನ ಪ್ರದೇಶ (ಗ್ರಾವಸ್ಥಲಂ ಲೋಹವಾದುವು ರೇಣುಸ್ಥಲಿ ಕಾಜುವಿಟ್ಟುವು ನಿಧಾನದ್ರಾಘಿಮೋದ್ರೇಕದೊಳ್: **ಪಂಪರಾ,** ೭. ೯೭)

**ಗ್ರಾಸ** — ತುತ್ತು, ಆಹಾರ (ಗ್ರಾಸಂ ಕಬಳಂ ತುತ್ತು: **ಅಭಿಧಾವ,** ೧. ೧೬. ೮)

**ಗ್ರಾಸಂಗೊಳ್** — ಆಹಾರ ನುಂಗು (ಬಂದುರ್ವಿಯೊಳ್ ಸರ್ವ ಗ್ರಾಸಂಗೊಂಡು ನೆಲದೊಳಿಟ್ಟೊರಸುವ ರಾಹುಮಂಡಲದಂತೆ: **ಗಿರಿಜಾಕ,** ೮. ೭೭ ವ)

**ಗ್ರಾಹ** – ಹಿಡಿಯುವುದು; ಮೊಸಳೆ (ವರ್ಧಮಾನನೆಂಬ ಋಷಿಯ ಶಾಪದೊಳ್ ಉಗ್ರ ಗ್ರಾಹಸ್ವರೂಪದೊಳಿರ್ದ ಅಚ್ಚರಸೆಯರುಮಂ ವಿಶಾಪೆಯರ್ ಮಾಡಿ: **ಪಂಪಭಾ,** ೪. ೨೦ ವ)

**ಗ್ರೀವ** – ಕೊರಳು (ಹಂಸಗ್ರೀವನಿಹಿತ ಏಕಪಾದಂ ಇಳಾವಂದ್ಯಂ ಅನಿಂದ್ಯಂ ಅಬ್ಜಗರ್ಭಂ ಬಂದಂ: **ಪಂಪಭಾ,** ೧೨. ೧೩೮)

**ಗ್ರೀಷ್ಮ** – ಬೇಸಗೆ ಕಾಲ (ಜಳದ ಗ್ರೀಷ್ಮ ಹಿಮಂಗಳಿಲ್ಲ ಮೊಳೆವುಲ್ ನಾಲ್ಕಂಗಳುಳಂಗಳ್ವರಂ ಬಳಗಂ ಬಳಗಂ ತಣ್ಪಿನ ಬಿಣ್ಪಿನಂತೆಸಗುಗುಂ: **ಶಾಂತಿಪು,** ೬. ೧೦೨)

**ಗ್ರೀಷ್ಮಾಂಶುಮಾಲಿ** – ಬೇಸಗೆಯ ಸೂರ್ಯ (ಅಶೇಷವಿದ್ಯಾನದೀಶೋಷಣಗ್ರೀಷ್ಮಾಂಶುಮಾಲಿ ಮಯೂಖಮಾಲೆಯುಂ: **ಆದಿಪು**: ೧೪. ೧೨೨ ವ)

**ಗ್ರೈವೇಯಕ** – ಕಂಠಾಭರಣ (ಬಿಸಸೂತ್ರ ತ್ರಿತಯಂ ಯವಾಂಕುರ ಕೃತ ಗ್ರೈವೇಯಕಂ .. .. ಪೂರ್ಣ ಕುಂಬಮೆಸೆದತ್ತಾ ವೇದಿಕಾ ಮಧ್ಯದೊಳ್: **ಪಂಪರಾ,** ೫. ೧೨೪); [ಜೈನ] ಹದಿನಾರನೆಯ ಸ್ವರ್ಗದ ಮೇಲಿರುವ ಸುದರ್ಶನ, ಅಮೋಘ, ಸುಪ್ರಬುದ್ಧ, ಯಶೋಧರ, ಸುಭದ್ರ, ಸುವಿಶಾಳ, ಸುಮನಸ, ಸೌಮನಸ, ಪ್ರೀತಿಂಕರ ಎಂಬ ಒಂಬತ್ತು ವಿಮಾನಗಳು (ನಾಕಮನೇಱೆ ನೋಟ್ಟಿಂ ಏರ್ವೆಂ ಗ್ರೈವೇಯಕಕ್ಕೆ ಎಯ್ದುವೆಂ ಲಲಿತಾನುತ್ತರೆಗೆ: **ನೇಮಿನಾಪು,** ೨. ೫೦)

**ಗ್ಲಪನ** – ಬಾಡುವಿಕೆ (ಅನಿತೊಂದುರ್ಕಿನೊಳ್ ಉರ್ಕಿ ಕೌರವಖಳರ್ ಪಾಂಚಾಳರಾಜಾತ್ಮಜಾನನಪದ್ಮ ಗ್ಲಪನಕಾರಣಪರರ್ ತಾಮಾಗೆಯುಂ: **ಪಂಪಭಾ,** ೭. ೯)

**ಗ್ಲಪಿತಮನ** – ಬಾಡಿದ ಮನಸ್ಸು (ಸಾರ್ದತ್ತು ಜಕ್ಕವಕ್ಕಿಯ ಪೋಣರುಂ ಗ್ಲಪಿತಮನಮ್ ಆಗಳುಂ ಉದ್ದಂಡ ಪುಂಡರೀಕೋಜ್ಜ್ವಳಾತಪತ್ರದ ನೆೞಲಂ: **ಆದಿಪು,** ೧೧. ೫೦)

**ಗ್ಲಾನಿ** – ಮನಸ್ಸಿನ ಜಡತೆ (ಏನುಮನಾರೊಳಂ ನುಡಿಯದೆ ಉಮ್ಮಳದಿಂ ವಿರಹಾಕುಲಂ ಮನೋಗ್ಲಾನಿಯನೊಂದಿ: **ಪಂಪರಾ,** ೪. ೯೭)

**ಗ್ಲೌ** – ಚಂದ್ರ (ಭಾನುಗ್ಲೌವಹ್ನಿನೇತ್ರಂ ತ್ರಿಪುಟವಿರಹಿತಂ ನಿರ್ವಿಕಲ್ಪಂ ಶಿವಂ: **ಉದ್ಭಟಕಾ,** ೧. ೧)

# ಘ

**ಘಂಟಾಜಾಲ** – ಗಂಟಗಳ ಸಮೂಹ (ಕನಕರಜತಮಣಿಮಯ ಘಂಟಾಜಾಲಪ್ರದೀಪಮಾಲೆಗಳಂ ನಿರ್ವರ್ತಿಸಿಯುಂ: **ಅಜಿತಪು,** ೧೨. ೪ ವ)

**ಘಂಟಾಪಥ** – (ಗಂಟೆ ಕಟ್ಟಿದ ಆನೆ ಮುಂತಾದವು ಸಾಗುವ) ಹೆದ್ದಾರಿ (ನೀಳ್ದು ಪರ್ಬಿದ ಘಂಟಾಪಥಂಗಳೊಳ್ ಅಲ್ಲಿಗಲ್ಲಿಗೆ ಪಾಂಥಜನದ ಜೀವನಕ್ಕೆ ಜೀವನವೆನಿಪ್ಪ ಪಾನೀಯಮಂಡಪದೊಳ್: **ತ್ರಿಷಷ್ಟಿಪು,** ೨. ೪೧ ವ)

**ಘಂಟಾರವ** – ಗಂಟೆಯ ಸದ್ದು (ದೇವಲೋಕದೊಳ್ ಶಂಖಪಟಹಕಂಠೀರವ ಘಂಟಾರವಂಗಳ್ ಒರ್ಮೊದಲೆಸೆವುದುಂ: **ಶಾಂತಿಪು,** ೧೦. ೧ ವ)

**ಘಂಟಾರುತಿ** – ಘಂಟಾರವ (ಕಂಠೀರವಸ್ವರ ಘಂಟಾರುತಿಗಳ್ ಯಥಾಕ್ರಮದಿನತ್ಯಾಶ್ಚರ್ಯಮೆಂಬನ್ನೆಗಂ: **ಪುಷ್ಪದಂಪು,** ೧೦. ೧೩)

**ಘಂಟಿಕಾಜಾಲ** – ಕಿರುಗಂಟೆಗಳ ಸಮೂಹ (ಆಲಂಬಿತ ಘಂಟಿಕಾಜಾಲ ಕುಸುಮದಾಮ ಚಾಮರೋದ್ದಾಮ ಚೀನಾಂಬರಾಚ್ಛಾದಿತಂಗಳ್: **ಚಂದ್ರಪ್ರಪು,** ೮. ೪೫ ವ)

**ಘಂಟೆಯಲುಗು** – [ಸೂಳೆಯ] ಮನೆಯ ಮುಂದಿನ ಗಂಟೆಯನ್ನು ಶಬ್ದಮಾಡು (ಮತ್ತಮಲ್ಲಿ ಕೋಟಿ ಪೊಂಗೆ ಘಂಟೆಯಲುಗುವ ಕಿಱುಕುಳಬೊಜಂಗರುಮಂ ಸುಣ್ಣದೆಲೆಯಂ ಒತ್ತೆಯಿಟ್ಟು ಮದದಾನೆಯುಮಂ ಮಾಣಿಕಮುಮಂ ಒತ್ತೆಯಿಡಿಸಲಟ್ಟುವ ಚಿಕ್ಕ ಪೋರ್ಕುಳಿಬೊಜಂಗರುಂ: **ಪಂಪಭಾ,** ೪. ೮೭ ವ)

**ಘಟ** – ಗಡಿಗೆ (ಆ ರತಿ ಪಾಪಮುಂ ಪಡಣಮುಂ ಪೋಪಂತೆ ಕಾಮಂಗೆ ಮಜ್ಜನಕೆ ಎಂದೆತ್ತಿದ ಚಂದ್ರಕಾಂತ ಘಟದೊಳ್ ತಂದು ಅಟ್ಟೆಯಿಂ ಪುಷ್ಪವಾಸನೆಗೆಂದಿಕ್ಕಿದ ನೀಳನೀರರುಹಮಂ ಪೋಲ್ದತ್ತು ಕಟ್ಟಿಂದುವಾ: **ಪಂಪಭಾ** ಪರಿಷತ್ತು, ೪. ೫೧)

**ಘಟಚೇಟಿಕೆ** – ನೀರು ತರುವ ದಾಸಿ (ಕಮಳೆಯಂ ಅಶ್ವತ್ಥಾಮಂ ಮುಂದಿಟ್ಟು ಕುರುಕುಟುಂಬ ಘಟಚೇಟಿಕೆಯಂ ತರ್ಪಂತೆ ತಂದು.. ..ಕೌರವೇಶ್ವರನಂ ಎಯ್ದೆ ಪೋಗಿ: **ಪಂಪಭಾ,** ೧೩. ೧೦೨ ವ)

**ಘಟಜಾತ** – ಗಡಿಗೆಯಲ್ಲಿ ಹುಟ್ಟಿದ ಅಗಸ್ತ್ಯ (ದಿಟದಿಂ ಪಯೋಧಿಯಂ ತಳತಟಮಂ ಸಾರ್ವಿನಂ ಅಮರಕುಳ ಕರಕಳಿತಂ ಘಟಜಾತಂ ಪೀರ್ದೊಡದು ಘಟಜಾತಂ ಪೀರ್ದನೆಂದು ನುಡಿವರ್: **ಚಂದ್ರಪ್ರಪು,** ೧೨. ೧೨೨)

**ಘಟಸರ್ಪ** – ಮಡಕೆಯಲ್ಲಿರುವ ನಾಗರಹಾವು (ತುಡುಕಿದ ದೋಷಿಯನಲ್ಲದೆ ಪಿಡಿಯದು ಘಟಸರ್ಪಂ: **ಜಗನ್ನಾವಿ,** ೧. ೧೨)

**ಘಟಾಂತಿಕೆ** – ಜೈನಯಕ್ಷಿ (ಸರ್ವ ಕಳಾವಿದೆ ಶೌಚ ಘಟಾಂತಿಕೆ ದಾನವಿನೋದೆಯೆಂಬ ಬಿರುದಿಂ ನೆಗಳ್ದಳ್: **ಸಮಯಪ,** ೧. ೪೦)

**ಘಟಾಘಟಿತ** – ಆನೆಯ ಸಮೂಹದಿಂದ ಕೂಡಿದ (ನಾಳೆ ವಿರೋಧಿಸಾಧನ ಘಟಾಘಟಿತ ಆಹವದಲ್ಲಿ ನಿನ್ನ ಕಟ್ಟಾಳಿರೆ ಮುಂಚಿ ತಾಗದೊಡಂ ಅಳ್ಕುಱಿ ತಾಗಿ ವಿರೋಧಿಸೈನ್ಯಭೂಪಾಳರಂ ಒಂದೆ ಪೊಯ್ಯದೊಡಂ: **ಪಂಪಭಾ,** ೧೦. ೩೯)

**ಘಟಾವಣೆ** – ಹೊಂದಿಕೆ (ಯಕ್ಷರಾಕ್ಷಸರ ಕೈಯ ಘಟಾವಣೆ ದಿವ್ಯಯಾತ್ರೆಯೊಳ್ ಕೂಡೆ ಮಹೋತ್ಸವಂಬಡೆದುದಂದು ಸಹೇತುಕ ನಂದನಂಬರಂ: **ಅನಂತಪು,** ೯. ೬೭)

**ಘಟಾಳಿ** – ಆನೆಗಳ ಸಾಲು (ರಣದೊಳರಾತಿ ವಾರಣ ಘಟಾಳಿಯನೊರ್ವನೆ ಗೆಲ್ದಂ: **ಗದಾಯು,** ೧. ೧೭)

**ಘಟಿಕಾಭೇರಿ** – ಸಮಯವನ್ನು ಸೂಚಿಸಲು ಬಾರಿಸುವ ಭೇರಿ (ಉಣ್ಮಿತು ಮಧ್ಯಂದಿನಸೂಚ್ಯಮಪ್ಪ ಘಟಿಕಾಭೇರೀ ಗಭೀರಸ್ವರಂ: **ಕುಸುಮಾಕಾ,** ೧೦. ೧೦೪)

**ಘಟಿಕಾಸ್ಥಾನ** – ಧಾರ್ಮಿಕ ವಿಷಯಗಳುಚ್ಚ ಶಿಕ್ಷಣ ಕೇಂದ್ರ; ಸಿದ್ಧಿಕ್ಷೇತ್ರ (ಇವು ಘಟಿಕಾಸ್ಥಾನಂ ಮತ್ತಿವು ತೀರ್ಥಸ್ಥಾನಮೆಂಬ ರೂಢಿಯ ರೂಢೀಯ ಭಗವದ್ಭವನಕ್ಕೆ ಅಲಂಘ್ಯಮಟಿಲುಂ ತವೆ ಮುಕ್ಕೊಡೆಯನೆತ್ತಿ ಬಿಟ್ಟನಾ ವಸುಷೇಣಂ: **ಅನಂತಪು,** ೧೨. ೩೧)

**ಘಟಿತ** – ಕೂಡಿದ, ಸೇರಿಸಿದ (ಜಟಮಟಿಸಿಕೊಂಡು ನಿಮ್ಮೀ ಘಟಿಯಿಸುವ ಈ ಸಂಧಿ ಕೌರವರ್ಕಳೊಳ್ ಎನ್ನಿಂ ಘಟಿತ ಜರಾಸಂಧ ಉರಸ್ತಟ ಸಂಧಿವೊಲ್ ಒಂದೆ ಪೊಟ್ಟಿಱೊಳ್ ವಿಘಟಿಸದೇ: **ಪಂಪಭಾ,** ೯. ೨೩)

**ಘಟಿಯಿಸು** – ಉಂಟಾಗಲಿರುವ (ಜಟಮಟಿಸಿಕೊಂಡು ನಿಮ್ಮೀ ಘಟಿಯಿಸುವ ಈ ಸಂಧಿ ಕೌರವರ್ಕಳೊಳ್ ಎನ್ನಿಂ ಘಟಿತ ಜರಾಸಂಧ ಉರಸ್ತಟ ಸಂಧಿವೊಲ್ ಒಂದೆ ಪೊಟ್ಟಿಱೊಳ್ ವಿಘಟಿಸದೇ: **ಪಂಪಭಾ,** ೯. ೨೩);

**ಘಟಿಸು** – ಸಂಭವಿಸು (ತಾಯ ಬಟಿಯನುಟಿಯದ ಕಱುವಿನಂತೆ ನಾಮಪದಂಗಳ್ ಅರ್ಥದೊಳ್ ಅನುಗತಂಗಳಾಗೆ ಸಮಾಸಂ ಘಟಿಸುಗುಂ: **ಶಬ್ದಮದ,** ೧೭೩ ವೃತ್ತಿ)

**ಘಟೀಯಂತ್ರ** – ಬಾವಿಯಿಂದ ನೀರೆತ್ತುವ ರಾಟಣ (ಮದನರಾಜವಿಜಯತಂತ್ರಂಗಳೆನಿಪ ಘಟೀಯಂತ್ರಂಗಳುಂ: **ಪುಷ್ಪದಂಪು,** ೯. ೨೨ ವ)

**ಘಟೆ** – ಆನೆಗಳ ಗುಂಪು (ದುಷ್ಪ್ರೇಕ್ಷನುಂ ರಿಪುಘಟಾ ವಿಘಟನ ಮೃಗೇಂದ್ರನುಂ ಅಪ್ಪ ಪೂರ್ಣಚಂದ್ರನುಂ .. .. ಅಖಿಲ ಘೋಟಿಕಾಯಿಲರ್ .. .. ಕದನಕ್ಷೋಣಿಗೆ ನಡೆದರ್: **ಪಂಪರಾ,** ೧೩. ೨೯ ವ)

**ಘಟೋಧ್ನಿ** – ದೊಡ್ಡ ಕೆಚ್ಚಲುಳ್ಳ ಹಸು (ಕಾಡಿ ಕಱೆಯದ ಘಟೋಧ್ನಿಯ ಕೋಡಿಯನೋಡಿಸದ ಕೆಱೆಯ ಕೇಡಂ ಕಾಣರೆ: **ಲೀಲಾವತಿ**೧. ೪೮)

**ಘಟ್ಟಾಘಟ್ಟಿ** – ಪರಸ್ಪರ ಹೊಡೆದಾಟ (ಇಲ್ಲಿ ಘಟ್ಟಾಘಟ್ಟಿಯಿಂ ಮಲ್ಲಾಮಲ್ಲಿಯಿಂ ಮಾಟ್ಟಿ ಯುದ್ಧಂಗಳ್ ಸಂಸ್ಕೃತ ಕರ್ಣಾಟಕದೊಳ್ ತತ್ಸಮಂಗಳ್: **ಶಬ್ದಮದ,** ೧೯೬ ಪ್ರ)

**ಘಟ್ಟಿ** – ಶ್ರೀಗಂಧ (ಮೌಕ್ತಿಕಕುಂಡಳಂ ಕುಚಂಗಳೊಳ್ ಒಲೆದಾಡೆ ಲೀಲೆಯೊಳೆ ಘಟ್ಟಿಮಗುಟ್ಸ್ವುದು ಅಂಗನಾಜನಂ: **ಆಚವರ್ಧ,** ೧. ೬೫)

**ಘಟ್ಟಿಕೆ** – ಉಂಟಾಗುವಿಕೆ; ಗೊಂಚಲು (ಕುಸುಮ ಕುಟ್ಮಲಳದ ಘಟ್ಟಿಕೆಗಳಂ ಪಿಡಿದಿರ್ಪ ಪರಿಚಾರಿಕಾಜನಂಗಳುಮಂ: **ತ್ರಿಷಷ್ಟಿಪು,** ೩. ೧೦೫ ವ)

**ಘಟ್ಟಿಮಗುಟ್ಟು** – ಗಂಧ ತೇಯುವಾಗ ಮೇಲೆ ಕೆಳಗೆ ಮಾಡುವುದು (ಮನಂಬುಗೆ ನಳಿತೋಳ ಕೋಳೆಸೆಯೆ ಘಟ್ಟಿಮಗುಟ್ಟುವ ಘಟ್ಟಿವಟ್ಟಿಯಂ ಭೋಂಕನೆ ಕಂಡು ಕೀಚಕಂ: **ಪಂಪಭಾ,** ೮. ೫೯ ಮತ್ತು ೫೯ ವ)

**ಘಟ್ಟಿವಳ್ತಿ** – ಗಂಧ ತೇಯುವವಳು (ವಿವಿಧಗಂಧಂಗಳಂ ಆಂ ಅವಯವದೊಳ್ ಮಾಡುವ ಘಟ್ಟಿವಳ್ತಿಯೆಂ ದೇವಿ ಗಂಡವಳ್ತಿಯೆಂ ಅಲ್ಲೆಂ: **ಪಂಪಭಾ,** ೮. ೫೬)

**ಘಟ್ಟಿವಳ್ಳ** – ಗಂಧ ತೇಯುವವನು (ಅಲರ್ಗಣ್ ಘಟ್ಟವಳ್ಳರ ಪಸರದಂತೆ ಕಂಪಂ ಪರಕಲಿಸೆ: **ಹರಿವಂಶ,** ೫. ೫ ವ)

**ಘಟ್ಟಿಸು** – ಅಪ್ಪಳಿಸು (ಚಾತುರ್ವಲಂಗಳ್ ಮೊದಲ ಸಮಕಟ್ಟುಗೆಟ್ಟು ತಡವರಿಸಿ ತಟ್ಟುಪೊಟ್ಟೆಂದು ಎಚ್ಚು ಮಿಟ್ಟುಂ ಇಱಿದು ತಱಿದು ಘಟ್ಟಿಸೆಯುಂ: **ಪಂಪಭಾ,** ೧೦. ೭೦ ವ)

**ಘನ** – ಮೋಡ (ಘನದ ಕರಗಿದುದುನಱು ಅಪಘನದ ವಿಳಾಸಮನದೆಂತು ನಂಬುವುದೊ: **ಆದಿಪು,** ೪. ೬೫)

**ಘನಗರ್ಜನೆ** – ಗುಡುಗು (ಘುಳುಘುಳಿಸುತ್ತಮಿರ್ಪ ಘನಗರ್ಜನೆ ಭೋರೆನುತಿರ್ಪ ವೃಷ್ಟಿ: **ತ್ರಿಷಷ್ಟಿಪು,** ೮. ೫೩)

**ಘನಗ್ರಾವ** – ಆಲಿಕಲ್ಲು (ಮೌಕ್ತಿಕ ಅಸೃಕ್ಕಣೋತ್ಕರಂ ಎತ್ತಂ ಸುರಿವಂತೆ ಸೂಸಿತು ಘನಗ್ರಾವಂ ಇಂದ್ರಗೋಪವ್ರಜಂ: **ರಾಜಶೇಖ,** ೮. ೧೧೫)

**ಘನಘಟಾಟೋಪ** – [ಘನಘಟಾ+ಆಟೋಪ] ಮೋಡದ ರಾಸಿಯ ಅಬ್ಬರ, ಗುಡುಗು (ಸಮುದ್ಯತ್ ರಜತಗಿರಿ ತಟ ಸ್ಫುಷ್ಟ ಸಂಶ್ಲಿಷ್ಟ ಮೌರ್ವೀನಿನದಂ ಪರ್ವಿತ್ತು ಅಕಾಂಡಪ್ರಳಯ ಘನಘಟಾಟೋಪ ಗಂಭೀರನಾದಂ: **ಪಂಪಭಾ,** ೧೨. ೧೩೭)

**ಘನಘಟೆ** – ಮೋಡದ ರಾಶಿ (ಘನಘಟೆ ನಭದಿಂದಂ ಧಾತ್ರಿಗೆತ್ತೆತ್ತ ಬಂದತ್ತೆನಿಸಿ ತಳರ್ದುದೆತ್ತಂ .. .. ಆಶಾಚಕ್ರಗಂಧೇಭಚಕ್ರಂ: **ಆದಿಪು,** ೧೧. ೫೦)

**ಘನತರ** – ಬಹಳ ದೊಡ್ಡ (ಘನತರ ಕುಂಕುಮಾಂಬುಗಳಿಂ ಅಂಬುರುಹಾಂಬಕಂ ಆತ್ಮಸನ್ನಿತಂಬಿನಿಯರನಂದು .. .. ತೋಱಿದರ್: **ಕರ್ಣನೇಮಿ,** ೧೩. ೩೨)

**ಘನಧ್ವನಿ** – ಗಾಢ ಧ್ವನಿ (ನುಡಿದಂ ಘನಧ್ವನಿ ಘನಧ್ವನಿಯಂ ಮಿಗೆ ಖೇಚರಾಧಿಪಂ: **ಪಂಪರಾ,** ೫. ೧೭); ಗುಡುಗು (ಕಲ್ಪಾಂತಕಠೋರ ಘನಘನಧ್ವನಿಯನೇಳಿಪಂತೆ ಗಜಱಿ ಗರ್ಜಿಸಿ: **ರಾಜಶೇಖ,** ೫. ೧೨೦ ವ)

**ಘನನಿನದ** – ಗಾಢವಾದ ಧ್ವನಿ (ಘನನಿನದಕ್ಕನುರೂಪಂ ಇದೆನೆ ಸಂಜೀವಕಂ ಅಳುರ್ಕೆಯಿಂ ಕೆಲೆಯೆ ಮಹಾಧ್ವನಿಯಿಂ: **ಪಂಚತಂತ್ರ,** ೮೦)

**ಘನಪಟಳ** – ಮೋಡದ ರಾಶಿ (ಘನಪಟಳ ನಿನದಮುಮಂ ವನಧಿಯ ನಿನದಮುಂ ಒಂದುಮಾಡಿದ ತೆಱದಿಂ .. .. ಜಯಜಯನಿನಾದಂ ಒದವಿದುದು: **ಆಚವರ್ಧ,** ೧೪. ೨೩)

**ಘನಪಥ** – ಆಕಾಶ (ಅಂಭೋಧಿವೇಲೆ ಭೋರ್ಗರೆವವೊಲ್ ಒರ್ಮೊಲೆಸೆದವು ಘನಪಥದೊಳ್ ತ್ರಿದಶಕರ ಆಹತಿಯಿಂ ಒಡನೆ ಸುರದುಂದುಭಿಗಳ್: **ಪಂಪಭಾ,** ೧. ೧೪೬)

**ಘನಮಾರ್ಗ** – ಘನಪಥ (ಘನಮಾರ್ಗವ್ಯಾಪಿ ಚೈತ್ರಧ್ವಜವಿಜಯಗಜಾರೂಢಂ .. .. ಭರತನೃಪಂ ನೂಂಕಲುದ್ಯುಕ್ತನಾದಂ: **ಆದಿಪು,** ೧೪. ೯೮)

**ಘನರವ** – ಗುಡುಗು (ಘನಪಥಮಂ ಪಳಂಚಲೆವ ಸೌಧಚಯಂಗಳಿಂ ಆಡುತಿರ್ಪ ಕೇತನತತಿಯಿಂ ಕರೀಂದ್ರ ಗಳಗರ್ಜನೆಯಿಂ ಪಟಹಪ್ರಣಾದಮಂ ಘನರವಮೆಂದೆ ನರ್ತಿಸುವ ಕೇಕಿಗಳಿಂ: **ಪಂಪಭಾ,** ೪. ೫)

**ಘನರಸ** – ಮಳೆ ನೀರು (ಘನರಸಮಂ ಪದೆದೀಂಟುವ ವಿನುತಂ ಚಾದಗೆ ಕುವಾರಿಯಂ ಕುಡಿವುದೆ: **ಶಬರಶಂ,** ೧. ೨೨); ಕರ್ಪೂರ

**ಘನವರ್ಷ** – ಭಾರಿ ಮಳೆ (ಘನವರ್ಷತರಂ ವರದುರ್ದಿನಮಾರುದ್ಧಾರ್ಕಮುರು ನೃಪಾನೀತರಜಂ ವನನಿಧಿಯನಾಂತುದೆನಲ್: **ಶಾಂತಿಪು,** ೧೧. ೭೯)

**ಘನವಾತ** – [ಜೈನ] ಭೂಲೋಕವನ್ನು ಆವರಿಸಿರುವ ಘನೋದದೀ, ಘನವಾತ, ತನುವಾತಗಳೆಂಬ ಮೂರು ವಾಯುಗಳಲ್ಲಿ ಒಂದು (ಎಂಟುಂ ಪೊಡವಿಗಳಂ ತಾಳ್ದಿದುವೋಗಡಿಸದೆ ಮೂಱುಂ ಮಹಾನಿಲಂಗಳ್ ಕ್ರಮದಿಂ ಅದಱ ಪೆಸರ್ಗಳಂ ಘನೋದಧಿ, ಘನವಾತ ತನುವಾತಂಗಳೆಂಬುವು: **ಶಾಂತಿಪು,** ೧೨. ೫೧ ವ)

**ಘನಸಮಯ** – ಮೋಡಗಳ ಕಾಲ, ಮಳೆಗಾಲ (ಗರ್ಗರರವದಿಂ ದನಿಯೊಡೆಯೆ ಕರೆದುವೋಡುವ ಘನಸಮಯಮನಾರ್ವ ತೆಱದೆ ಕಳಹಂಸಂಗಳ್: **ಲೀಲಾವತಿ,** ೫. ೩೪)

**ಘನಸಾರ** – ತುಂಬ ಶ್ರೇಷ್ಠ (ಘನಸಾರ ಘುಸೃಣ ಚಂದನ ಘನಸಾರ ದ್ರವದಿಂ .. .. ಅನಘನಂಘ್ರಿಗಳನರ್ಚಿಸಿದಂ: **ಪುಷ್ಪದಂಪು,** ೧೪. ೨); ಪಚ್ಚಕರ್ಪೂರ (ಘನಸಾರ ಸರಳಚಂದನವನಮೃದುಪಲ್ಲವಮಂ ಅಗ್ರಹಸ್ತದೆ ಕೊಂಡು: **ಆದಿಪು,** ೭. ೭೨)

**ಘನಸ್ವನ** – ಗುಡುಗು (ಭೂರಿಭೇರಿಯ ಘನಸ್ವನಮೊಂದೆ ದಿಗಂತಮಂ .. .. ಇದಿರ್ಗೊಂಡನವಂ ನರಾಧಿಪಂ: **ರಾಜಶೇವಿ,** ೩. ೮೦)

**ಘನಾಗಮ** – ಮಳೆಗಾಲ (ಘನಾಗಮಂ ಮೊದಲ್ಗಿಡೆ ಶರದಾಗಮಂ ನೆಱೆಯೆ ಪರ್ಬೆ ಸಮಸ್ತಮಹೀವಿಭಾಗಮಂ: : **ಪಂಪಭಾ,** ೭. ೬೯)

**ಘನಾಘನ** – ಮಳೆಯ ಮೋಡ (ಸುತ್ತಲುಂ ದಾನ ಗಜಂ ಘನಾಘನದವೋಲ್ ವರೆ ಬರದೆ ಪಾದಮಾರ್ಗದಿಂ: **ಪಂಪರಾ,** ೬. ೧೮೦); ಮೋಡದ ಅದೃಢತೆ (ಘನಾಘನದಿಂದಮಱಿಯಲಾದುದು ಘನಾಘನಂ ಜವನ ದಾಟಿಗಿಲ್ಲೆಂಬಿನಿತಂ: **ಆದಿಪು,** ೪. ೬೫)

**ಘನಾಘನನಿನಾದ** – ಗುಡುಗು (ಘನಾಘನನಿನಾದದಿಂ ಬೃಂಹಿತಂಗೆಯ್ವ ವಿಜಯಗಜಮಂ ನೆಲನಂ ಪೊಕ್ಕಡಂಗಿದ ಪಗೆವರಂ ಅಗುಬ್ದು ಕೊಲ್ವುದಂ ಉದಾಹರಿಸುವಂತೆ: **ಪಂಪಭಾ,** ೯. ೯೫ ವ)

**ಘನಾನಕ** – ನಗಾರಿ (ಪೊಣ್ಮಿದತ್ತು ಜಿನಮಂದಿರ ಸಾಮಧ್ಯಘನಾನಕಸ್ವನಂ: **ಮಲ್ಲಿನಾಪು,** ೭. ೧೫)

**ಘನೋದಧಿ** – [ಜೈನ] ಅನಂತಲೋಕವನ್ನು ಸುತ್ತಿರುವ ವಾತತ್ರಿತಯಗಳಲ್ಲಿ ಒಂದು (ಎಂಟುಂ ಪೊಡವಿಗಳಂ ತಾಳ್ದಿದುವೋಗಡಿಸದೆ ಮೂಱುಂ ಮಹಾನಿಲಂಗಳ್ ಕ್ರಮದಿಂ ಅದಱ ಪೆಸರ್ಗಳಂ ಘನೋದಧಿ, ಘನವಾತ ತನುವಾತಂಗಳೆಂಬುವು: **ಶಾಂತಿಪು,** ೧೨. ೫೧ ವ)

**ಘನೋದಯೋಪಳ** – ಆಲಿಕಲ್ಲು (ಘನೋದಯಪಳಂ ಸೂಸಿದುದಿಂದ್ರಗೋಪಮಂ: **ರಾಜಶೇವಿ,** ೫. ೧೦೪)

**ಘನೋಪಳ** – ಆಲಿಕಲ್ಲು (ಎಱಪ ಶರಧರದ ತುಱುಗಲ್ ಕಱೆವ ಘನೋಪಳಕದಂಬಂ ಉಡುಗಣಮೆನೆ: **ರಾಜಶೇವಿ,** ೧. ೧೨೧)

**ಘರಟ್ಟ** – ಬೀಸುವ ಕಲ್ಲು (ದುಷ್ಪ ಘರಟ್ಟನಪ್ಪ ಶೂಲಪಾಣಿ ಮೆಚ್ಚಿ ನಿಜಮೂರ್ತಿಯಂ ಕಾರುಣ್ಯದಿಂ ತೋಱಿದಾಗಳ್: **ತ್ರಿಷಷ್ಟಿಪು,** ೩೧. ೧೨ ವ)

**ಘರವಟ್ಟಿಸು** – ಬೀಸು, ತಿರುಗಿಸು (ಕರವಾಳಂ ಘರವಟ್ಟಿಸಿ ಶಿರೋಜಮಂ ಪಿಡಿದು ತೆಗೆದು ಗುರುವಂ ಪಚ್ಚಂತಿರೆ ಪಿರಿದು ಪೊಯ್ದಂ ಎಂತಪ್ಪರೊಳಂ ಮುಳಿಸು ಅಱಿವಂ ಆಗಲೇನಿತ್ತಪುದೇ: **ಪಂಪಭಾ,** ೧೨. ೩೦)

**ಘರ್ಮ** – ಬೆವರು (ಇನಿಯಂ ತಾಂ ಬಂದಂ ಎಂಬಾಳಿಯ ನುಡಿ ಕಿವಿಯಂ ತಾಗಿದಾ ವೇಗದಿಂ ಝುಮ್ಮನೆ ಘರ್ಮಂ ಪೊಣ್ಮೆ: **ಶಾಂತೀಶ್ವಪು,** ೧೧. ೭೨); ಉಷ್ಣತೆ (ಮೇಗಣ ಭಾಗದೊಳ್ ಅಗುರ್ವು ಘರ್ಮ ಹಿಮದಿಂದಾಗಳೆ ಮುರುಂಟುವರ್: **ಆದಿಪು,** ೫. ೮೨)

**ಘರ್ಮಜಲ** – ಬೆವರು (ತೋಳ್ಗಳ್ ಆಸೆಯೊಳ್ ತೊಡರ್ದಿರೆ ಪೊಣ್ಮೆ ಘರ್ಮಜಲಂ ಉಣ್ಮೆ ಭಯಂ ಕಿಡೆ ನಾಣ್ .. .. ಗುಣಾರ್ಣವನಂ ಸತಿ ಮಾಲೆ ಸೂಡಿದಳ್: **ಪಂಪಭಾ,** ೩. ೬೪)

**ಘರ್ಮವಾರಿ** – ಘರ್ಮಜಲ (ಉಣ್ಮಿದ ನರ್ತನ ಘರ್ಮವಾರಿಯೊಳ್ ತಡತಡಮಾಗೆ ಮಾಧವಿ ಮುಗುಳ್ತವೊಲಿರ್ದ ಎಳವೆಂಡಿರಿಂದಮೇಂ ಪಡೆದುವೊ ಲೀಲೆಯಂ ಮಣಿಮರೀಚಿ ವಿಚಿತ್ರಿತ ನಾಟ್ಯಶಾಲೆಗಳ್: **ಮಲ್ಲಿನಾಪು,** ೨. ೫೫)

**ಘರ್ಮೋದ** – ಘರ್ಮಜಲ (ಮದನಮೋಹಾಮೃತಂ ಮೆಯ್ಗಳಿಂ ಪೊಣ್ಮುವವೋಲ್ ಘರ್ಮೋದಂ ಆದಂ ಬುಡುತೆರೆ ನೆರೆದಳ್ ಕಾಂತನೊಳ್ ಕಾಮತೆಯೊರ್ವಳ್: **ಲೀಲಾವತಿ,** ೨. ೧೩೩); ಬಿಸಿ ನೀರು (ಘರ್ಮೋದಬಿಂದೂತ್ಕರಂ ಸುರಿಯುತ್ತಿರ್ದಪುದು ಕಣ್ಣ ಪಾಪೆಗೆ: **ಕಾದಂಸಂ,** ೫. ೨೫)

**ಘರ್ಮೋರ್ಮಿ** – ಬಿಸಿಲಿನ ದಗೆಯ ಅಲೆ (ಘರ್ಮೋರ್ಮಿ ಹತನಿರ್ಮಳಸಮೀರನುಂ .. .. ಶರಮೊಪ್ಪೆ: **ಶಾಂತಿಪು,** ೧೨. ೧೯ ವ)

**ಘಸಣಿ** – ಆತಂಕ, ತೊಂದರೆ (ಒಂದು ಘಸಣಿಯ ಮೇಲೆ ಬಿರ್ದಂ ಎನೆ ಚಾರುದತ್ತಂ ನೋಡಿ ಶಂಕಿಸದೆ ಬನ್ನಿಂ ಈತಂ .. .. ವಿದ್ಯಾಧರಜನಾಗ್ರಗಣ್ಯನುಂ ಆಗಲೆವೇಟ್ಕುಂ .. .. ಎಂದು: **ಹರಿವಂಶ,** ೩. ೧೧ ವ)

**ಘಸ್ಮರ** – ನಾಶಮಾಡುವವನು (ಪೂಜಿಸಿದಂ ಧೃತಕಾಲಕೂಟನಂ ಮನಸಿಜಘಸ್ಮರಾಂಬಕಲಲಾಟನಂ ಉಗ್ರಫಣೀಂದ್ರಜೂಟನಂ: **ಜಗನ್ನಾವಿ,** ೧೭. ೯೦)

**ಘಸ್ರ –** ಹಗಲು (ದಿವಸಂ ದಿನಂ ದಿವಾಹಂ ದ್ಯು ವಾಸರಂ ಘಸ್ರಮೆನೆ ಪಗಲ್: **ಅಭಿಧಾವ,** ೧. ೨. ೪)

**ಘಳಿಲನೆ –** ಬೇಗನೆ (ಪೊಲಂ ಉಡುಗಿ ಬಂದುದು ಉಡಿದುದು ಪುಲ್ ಕಾಡುಂ ದಲ್ ಎಲೆಯಿಕ್ಕಿ ಘಳಿಲೆನೆ ನಿಂದುವು ತಣಿದುವು ಮೃಗಂಗಳ್ ಎತ್ತಲುಮೀಗಳ್: **ಪಂಪಭಾ,** ೫. ೩೭)

**ಘಟಿಗೆ** – ಒಂದು ಕಾಲ ಪರಿಮಾಣ, ಆರು ಕ್ಷಣಗಳು (ಕ್ಷಣಮದಾಱು ಘಟಿಗೆಯರನಿಕ್ಕುಂ: **ಅಭಿಧಾವ,** ೧. ೨. ೨)

**ಘಟಿಯ –** ಸಜ್ಜು (ಪೊಳೆವ ಕೈದುವ ಘಟಿಯದಿನತಿಭಯದಮಾದುದಾ ಪ್ರತಿಭಯದಂ: **ವರ್ಧಮಾಪು,** ೪. ೪೨)

**ಘಟಿಯಿಸು –** ಸಂಪಾದಿಸು (ಧರ್ಮಮಂ ಘಳಿಯಿಸಿಕೊಳ್ವುದೊಂದೆ ಚದುರ್: **ಆದಿಪು,** ೩. ೫೩)

**ಘಾಟ –** ಆನೆಯ ಕತ್ತಿನ ಹಿಂಭಾಗ (ಗ್ರಾಹಮಂ ಕರ್ಣಜಾಲಾಂತರಮಂ ನಿರ್ಯಾಣಮಂ ಸೃಕ್ವಮಂ ಉದರಮಂ ಉದ್ಭೂತಮಂ ಘಾಟಮಂ: **ವರ್ಧಮಾಪು,** ೪. ೭೯)

**ಘಾತಿಕರ್ಮ–** [ಜೈನ] ಆತ್ಮನ ಗುಣಕ್ಕೆ ಘಾತಕವಾದ ಜ್ಞಾನಾವರಣೀಯ, ದರ್ಶನಾವರಣೀಯ, ಅಂತರಾಯ, ಮೋಹನೀಯ ಎಂಬ ನಾಲ್ಕು ಕರ್ಮಗಳು (ಸುಟ್ಟಂ ಅತುಳ ಧ್ಯಾನಾಗ್ನಿಯಿಂ ಘಾತಿಕರ್ಮನಿಕಾಯಂಗಳಂ ಆಗಳಾಗಳ್: **ಕರ್ಣನೇಮಿ,** ೧೩. ೮೫)

**ಘಾತಿಚತುಷ್ಕ –** ಘಾತಿಕರ್ಮ[ಚತುಷ್ಟಯ] (ಚಮರರುಹದ್ವಯಂ ಬೆಳಪ ಬೆಳ್ಗೊಡೆ ಪೂಮಟಿ ಭಾಪ್ರತಾನಂ ಉತ್ತಮ ಮಣಿಪೀಠಂ ಇಂದ್ರಸಭೆ ಎಂಬಿವು ಘಾತಿಚತುಷ್ಕದಿಂ ಸಮನಿಸೆ: **ಶಾಂತಿಪು,** ೪. ೬೩)

**ಘಾಸ –** ಮೇವು, ಒಣಹುಲ್ಲು (ಶುಷ್ಕ ಪತ್ರ ಪಟ ವೀರುತ್ ಘಾಸಕಾರ್ಪಾಸಸಂತ್ರಿಕಜಾಲಂ ಬಲಿಭುಗ್ಬಲಂ ನಡೆದುದು ಅಂಭೋಧಾಧ್ವದೊಳ್ ರಾಗದಿಂ: **ಪಂಚತಂತ್ರ,** ೩೭೬)

**ಘುಣಾಕ್ಷರಪ್ರಾಯ –** ಹುಳುಗಳಿಂದ ಓಲೆಗರಿಯಲ್ಲಿ ಗೆರೆ ಬಿದ್ದು ಅಕ್ಷರಗಳಂತೆ ಕಾಣಿಸುವುದು (ಘುಣಾಕ್ಷರಪ್ರಾಯದೆ ಶಬ್ದಮೊಂದೆರಡು ಮತ್ತೆ ವಿಚಾರಿಸಿ ನೋಡೆ ಕಾಕತಾಳೀಯದೆ ವಾಚ್ಯಮೊಂದೆರಡು ಕೂಡೆ: **ಚಂದ್ರಪ್ರಪು,** ೧. ೪೮)

**ಘುಸೃಣ –** ಕುಂಕುಮ (ಘುಸೃಣರಸಾವಗಾಹಭರಮಂ ರದನಚ್ಛದರಾಗಭೋಗಮಾಗಿಸೆ .. .. ನೃಪಂ ಪಡೆವಂ ಅಂಗನೆಯೊಳ್ ಜಳಕೇಳಿಲೀಲೆಯಂ: **ಅನಂತಪು,** ೨. ೧೯)

**ಘೂಕ –** ಗೂಬೆ (ಪರಭೃತ ಭೃಂಗ ಕೀರ ಕಳಹಂಸೆಗಳಲ್ಲದೆ ಕಾಕ ಘೂಕ ಭೀಕರ ಖಗಂ ಇಲ್ಲ .. .. ದೇಶದೊಳ್: **ನೇಮಿನಾಪು,** ೧. ೫೮)

**ಘೂರ್ಜರ –** ಗುರ್ಜರ ದೇಶ (ಘೂರ್ಜರ ಬರ್ಬರ ಪಾರಸೀಕ .. .. ಭೂಪಾಲಕರಿಂ ಭಯಾನಕರಸಮುಂ: **ಜಗನ್ನಾವಿ,** ೨. ೩೯ ವ)

**ಘೂರ್ಣಮಾನ –** ನಡುಗುವ (ಘೂರ್ಣಮಾನ ಅರ್ಣವಘೋಷಮಂ ಗೆಲ್ದ ಹರ್ಷದಿಂ ಪೆರ್ಚುವಂತೆ ಪೆರ್ಚಿ: **ಆದಿಪು,** ೧೩. ೪೨ ವ)

**ಘೂರ್ಣಿಸು –** ಪ್ರಕ್ಷುಬ್ಧವಾಗು, ಭೋರೆಂದು ಶಬ್ದವಾಗು (ಉದಯಿಸೆ ಚಂದ್ರಂ ನೆಲವೆರ್ಚಿದ ಅರ್ಣವಂ ಘೂರ್ಣಿಪಂತೆ ಭೋರೆಂದೋರಂದದೆ ಭುವನಮೆಯ್ದೆ ಘೂರ್ಣಿಸಿದುದು ರಾಜಪುತ್ರಜನನೋತ್ಸವದೊಳ್: **ಕಾದಂಸಂ,** ೨. ೧೯)

**ಘೃಣಿ –** ಕಾಂತಿ, ಕಿರಣ (ಸರಸೋದ್ಯತ್ ಕಣಿಶಾವಳೀ ಘೃಣಿಮಯಂ ಕೇದಾರಜಾಲಂ ಲಸತ್ ಸರಸೀಜಾತಮಯಂ ಸರೋವರಚಯಂ: **ಶಾಂತೀಶ್ವಪು,** ೧೩. ೧೩೬); ದಯಾವಂತ (ಸದಯಂ ಘೃಣಿ: **ಅಭಿಧಾವ,** ೨. ೧. ೧೮)

**ಘೃತ –** ತುಪ್ಪ (ಘೃತವಾಜ್ಯಂ ಸರ್ಪಸ್ಸಂಜ್ಞಿತಮಕ್ಕುಂ: **ಅಭಿಧಾವ,** ೧. ೧೬. ೨)

**ಘೃತಪೂರ –** ತುಪ್ಪದ ಪೂರಿ (ಮೃದುರಸನಾ ಸಮ್ಮರ್ದನಮಾತ್ರದ್ರಾವಣಿಯ ಘೃತಪೂರಮುಮಂ: **ಆದಿಪು,** ೧೧. ೨೬ ವ)

**ಘೃಷ್ಟ –** ಘರ್ಷಿಸುವ (ಪರಿಮಳಸಂಭ್ರಮ ಭ್ರಮರವಿಭ್ರಮಭೃತ್ ನಿಜದೃಷ್ಟಿ ಘೃಷ್ಟಭಾಸುರಸುಮಮಾಲೆಯಂ ಸಮಧುವ್ರಜಂ ಒಕ್ಕಿರೆ: **ರಾಜಶೇವಿ,** ೨. ೧೦೫)

**ಘೋಟ –** ಕುದುರೆ (ಶಶಿಜೂಟಂ ವೇಧಘೋಟಂ ಪ್ರವಿಮಲತರಗಾತ್ರಂ ಲಸತ್ ಪಂಚವಕ್ತ್ರಂ: **ಉದ್ಭಟಕಾ,** ೧೨. ೧೩೬)

**ಘೋಟಕ –** ಕುದುರೆ (ಚತುರಶೀತಿಲಕ್ಷ ಭದ್ರಗಜಂಗಳಂ ತಾವತ್ಪ್ರಮಿತ ರಥಂಗಳುಂ ಅಷ್ಟಾದಶ ಕೋಟಿ ಘೋಟಕಂಗಳುಂ ಚತುರಶತಿ ಪದಾತಿಗಳುಂ: **ಆಚವರ್ಧ,** ೧೨. ೯೧ ವ)

**ಘೋಟಾರೂಢ –** ಕುದುರೆ ಸವಾರ (ಘೋಟಾರೂಢಂ– ಘೋಟಿರಾಯ್ಲುಂ: **ಶಬ್ದಮದ,** ೩೧ ಪ್ರ)

**ಘೋಣ –** ಮೂಗು (ಕತ್ತರಿಸಿ ಕಿವಿಗಳಂ ನಸುಗುತ್ತುತ್ತಂ ಮೆಯ್ಯ ಖಂಡಮಂ ಘುರುಘುರೆನುತ್ತೊತ್ತರಿಸೆ ಘೋಣ ಪವನಂ ಉದಾತ್ತಂ ಮಸಗಿತ್ತು ವಾಜಿ ಪೆರ್ಮಾರಿಯವೋಲ್: **ಪಂಪರಾ,** ೪. ೧೦೮)

**ಘೋರಂಬಡಿಸು –** ಹಿಂಸೆ ಮಾಡು (ಪಶುವಂ ಘೋರಂಬಡಿಸಿಯೆ ಕೊಂದು ಅದನಾರೋಗಿಪ ವಿಪ್ರಸಮಿತಿ ಗೆಯ್ಯದುದುಂಟೇ: **ಸಮಯಪ,** ೧೧. ೧೦೬)

**ಘೋರತಪ –** ಕಠಿಣವಾದ ತಪಸ್ಸು, [ಜೈನ] ಭಯಾನಕ ಸ್ಥಳಗಳಲ್ಲಿ ರೋಗವುಂಟಾದರೂ ತಪ ಗೈಯುವುದು (ಉಗ್ರೋಗ್ರ ತಪದಿಂ ದೀಪ್ತತಪಂ ಮಹಾತಪಂ ಘೋರತಪಂ ಎಂದಿವು ಮೊದಲಾಗೊಡೆಯ ತಪಂಗಳಂ ಗೆಯ್ಯೆ ತಪದ ಮಾಹಾತ್ಮ್ಯದಿಂದಂ ಆಮೋಷಧಿ ಖೇಳೋಷಧಿ ಜವೋಷಧಿ ವಿಪ್ರೋಷಧಿ ಸರ್ವೋಷಧಿಯೆಂದಿವು ಮೊದಲಾಗೊಡೆಯ ಋದ್ಧಿಗಳ್ ಪುಟ್ಟಿದೊಡಂ: **ವಡ್ಡಾರಾ,** ಪು ೬೯, ಸಾ ೩)

**ಘೋರತಮ –** ಹೆದರಿಕೆ ತರುವ ಕಗ್ಗತ್ತಲು (ಘೋರತಮಮಾದೊಡಂ ಮಾರ್ಜಾರಂ ಕಾಣ್ಬಂದದಿಂದೆ: **ಪಾರ್ಶ್ವನಾಪು,** ೬. ೭೭)

**ಘೋಷ –** ಗೊಲ್ಲರ ಹಳ್ಳಿ (ಚತುರ್ಮುಖಂ ಈಕ್ಷಿಸಲೆ ಬಂದನೆಂಬೀ ಭ್ರಮೆಯಂ ನೂರ್ಮಡಿಸಿದುದು ಆ ಘೋಷ ಬಹಿರ್ಮಹಿಯೊಳ್ ನಟ್ಟ ಗೊಲ್ಲ ದೇವತೆ: **ಲೀಲಾವತಿ,** ೫. ೯೮)

**ಘೋಷಣೆವಡೆ –** ಕೀರ್ತಿ ಹೊಂದು (ತ್ರಿಣಯನಶೌರ್ಯಂ ತಾಂ ಘೋಷಣೆವಡೆವುದು ಲೋಕಲಯದೊಳ್ ಎನ್ನಂ ಪೋಲ್ತಿರ್ದಂ: **ಜಗನ್ನಾವಿ,** ೭. ೨೮)

**ಘೋಷಾಕರ** – ಕಣಜ (ಘೋಷಾಕರ ಸಂಗ್ರಹಾಕರ ಗೋವ್ರಜಂಗಳುಮಂ: ಅದಿಪು, ೮. ೬೩ ವ)

**ಘೋಷಿಸು** – ಸಾರಿ ಹೇಳು (ಆನಂದಭೇರಿಯಂ ಪೊಯ್ಸಿ ಘೋಷಿಸಲ್ವೇಟ್ಟು: **ಆದಿಪು,** ೧೪. ೧೦೪ ವ)

**ಘೋಟಾಯಿಲ** – ಕುದುರೆ ಸವಾರ (ದುಷ್ಪ್ರೇಕ್ಷನುಂ ರಿಪುಘಟಾ ವಿಘಟನ ಮೃಗೇಂದ್ರನುಂ ಅಪ್ಪ ಪೂರ್ಣಚಂದ್ರನುಂ.. .. ಅಖಿಲ ಘೋಟಾಯಿಲರ್ .. .. ಕದನಕ್ಷೋಣಿಗೆ ನಡೆದರ್: **ಪಂಪರಾ,** ೧೩. ೨೯ ವ)

**ಘೋಟಾಯ್ತ** – ಕುದುರೆ ಸವಾರ (ನಾಗಾಯ್ತರ ಗಳಘರ್ಜನೆ ಘೋಟಾಯ್ತರ ಬಹಳಧ್ವಾನಂ ಆ ಸಭಾಭ್ಯಂತರದೊಳ್: **ಜಗನ್ನವಿ,** ೧೧. ೭೪)

**ಘ್ರಾಣ** – ಮೂಗು (ಮೂಗು ನಾಸಿಕಾ ಘ್ರಾಣ ಸಿಂಘನೀ ಘೋಣಾಖ್ಯಂ: **ಅಭಿಧಾವ,** ೧. ೧೨. ೧೭)

**ಘ್ರಾಣಗಹ್ವರ** – ಮೂಗಿನ ಹೊಳ್ಳೆ (ಘ್ರಾಣಗಹ್ವರದಿಂ ಘೋರಸಮೀರನಂ ಪಸರಿಸುತ್ತಿರ್ದತ್ತುದಾತ್ತ ಹಯಂ: **ಮಲ್ಲಿನಾಪು,** ೮. ೧೨೦)

**ಘ್ರಾಣೀಯ** – ಮೂಸಿನೋಡಬಹುದಾದ, ಒಳ್ಳೆಯ ವಸನೆಯುಳ್ಳ (ಸಂದರ್ಶನೀಯಂ ದಳತ್ಪುಷ್ಪತತಿ ಘ್ರಾಣೀಯಂ .. .. ನಂದನಂ ಮಾಟ್ಪುದು: **ಚಂದ್ರಪ್ರಪು,** ೧. ೧೧೨)

**ಘೋಳಾಯ್ಲ** – ಕುದುರೆ ಸವಾರ (ಘೋಳಾಯ್ಲರ್ ಪೊಳೆಯಿಸೆ ಬಿಸಿಲ್ಗುದುರೆಗಳ್ ಪೊಳೆವಂತೆ ಪೊಳೆವ ಕಡುಗುದುರೆಗಳುಮಂ .. .. ಒಡ್ಡಿ ನಿಂದಾಗಳ್: **ಪಂಪಭಾ,** ೧೦. ೫೧ ವ)

## ಚ

**ಚಂಕನತ್** – ಹೊಳೆಯುವ (ಅಲ್ಲಿಗೆ ದಳನ್ನೀಲಾತಸೀ ಚಂಕನತ್ ತನು ತೋಯಾಹರಣಾರ್ಥಿ ಬಂದಂ ಅಭಯಂ ಸೌಮಿತ್ರಿ ಶತ್ರುಂಜಯಂ: **ಪಂಪರಾ,** ೭. ೧೦೪)

**ಚಂಕ್ರಮಣ** – ತಿರುಗಾಟ (ಚಕಿತ ಚಂಕ್ರಮಣಸ್ಖಲಿತ ಪದಪಲ್ಲವ ಲಾವಣ್ಯರಾಗಾರ್ಚಿತ ಪದಪಥದತ್ತ ದೃಷ್ಟಿಯುಂ: **ಲೀಲಾವತಿ,** ೧೪. ೪೯ ವ)

**ಚಂಚತ್** – ಚಲಿಸುವ (ನಡೆಯೆ ತುರಗಂ ಪೊನ್ನ ಆಯೋಗಂಗಳಿಂ ಅಮರ್ದು ಅಟ್ಟೆಯಿಂ ಪಡೆಯೆ ನೆಳಲಂ ಚಂಚತ್ ಪಿಂಛಾತಪತ್ರಮೆ ಕೂಡೆ ತಮ್ಮೊಡನೆ ಬರೆ: **ಪಂಪಭಾ,** ೯. ೧೦೨)

**ಚಂಚರೀಕ** – ದುಂಬಿ (ಸಂಚರತ್ ಚಂಚರೀಕ ಕ್ವಣನ ಜ್ಯಾಸಂಗಚಿತ್ತೋದ್ಭವಭುವನಜಯೋತ್ಸಾದನ ಪ್ರೌಢ ಸೇನಾಗ್ರಣಿ ಚೇತನಾಪ್ರೀತಿಯಂ ಪೆರ್ಚಿಸುವುದು .. .. ಸಮೀರಂ: **ಮಲ್ಲಿನಾಪು,** ೨. ೩೧)

**ಚಂಚಲ** – ಅಲುಗುವ (ಪೋಗಿನ್ನೆಲೆ ಪೋಗಲಾರ್ಪೊಡೆ ಚಂಚಲಚೇಷ್ಟಿತ ನೋಟ್ಪೆನೆಂಬುದುಂ : **ಜಗನ್ನಾವಿ,** ೩. ೩೭)

**ಚಂಚಿತಿ** – ಬೇಡಿತಿ (ಮಱವುಲ್ಲೆಯ ಕಣ್ಮಿಂಚು ಕೆದಱುವ ನೋಟದ ಚಂಚಿತಿಯಂ ವಿಪ್ರರಾಜವಧು ಕಂಡು: **ಪುಣ್ಯಾಸ್ರ,** ೧೨. ೩೨)

**ಚಂಚು** – ಹಕ್ಕಿಯ ಕೊಕ್ಕು (ಎಟಿಲ್ವ ಪತತ್ರಂ ಎತ್ತಿ ನಸು ನೀಡಿದ ಗೋಣ್ ತೆಱೆದ ಉದ್ವ ಚಂಚುಮಂಡಳಂ ಅರೆಮುಚ್ಚಿದ ಅಚ್ಚಿ ಮಿಡುಕಾಡುವ ತಾಳುಗೆ: **ಶಾಂತೀಶ್ವಪು,** ೧೨. ೪೬)

**ಚಂಚುಪುಟ** – ಮುಚ್ಚಿದ ಕೊಕ್ಕು (ಪಿರಿದಪ್ಪುದೊಂದು ಶಿಲಾತಳದ ಮೇಲಿಕ್ಕಿ ನಿಜ ಚಂಚುಪುಟದಿಂ ಶತಖಂಡಂ ಮಾಡಿ ಬೆಣ್ಣೆಯಂ ತಿಂದ ಬೆಕ್ಕಿನಂತೆ ಅಜೀಲೀಯದೆ: **ಪಂಚತಂತ್ರ,** ೧೩೮ ವ)

**ಚಂಚುರ** – ಸುಂದರವಾದ (ಸಲೆ ನಾವ್ಯಮಾಯ್ತು ಚಂಚುರ ಮುಚುಕುಂದ ಸಂಚಯದೊಳಂ: **ಚಂದ್ರಪ್ರಪು,** ೭. ೬೪); ಸೊಬಗು (ಸಾರವಿಚಾರ ಚಂಚುರಂ ಅತಿಪ್ರಸರಂ ಪರಿಪಕ್ವಶಾಸ್ತ್ರಸಂಸ್ಕಾರಂ .. .. ಕವಿ ಕರ್ಣಪೂರಂ: **ವರ್ಧಮಾಪು,** ೧. ೨೫)

**ಚಂಚುರತೆ** – ಜಾಣತನ (ವಚನ ಚಮತ್ಕಾರಮಂ ಬಳಬಳಿಕೆಯ ಚಂಚುರತೆಯಂ ಹಸ್ತಚಾರಣದ ವಿಸ್ತಾರಮಂ .. .. ತೋಱುತ್ತುಮಿರೆ: **ಕುಸುಮಾಕಾ,** ೭. ೬೩ ವ)

**ಚಂಚುಲೋವೆ** – (ಕಂಕೇಲ್ಲಿ ಕವರ್ಗಟ್ಟುಗಳಿಂ ನಂದ್ಯಾವರ್ತದ ನವಪದಂಗಳಿಂ ಚಂಪಕದ ಚಂಚುಲೋವೆಗಳಿಂ: **ಕುಸುಮಾಕಾ,** ೧೨. ೧೫೭ ವ)

**ಚಂಡ** – ಬಲಿಷ್ಠವಾದ (ಚಂಡವಿರೋಧಿಸಾಧನ ತಮಸ್ತಮಮೋಡೆ: **ಪಂಪಭಾ,** ೧. ೩)

**ಚಂಡಕರ** – ಉರಿವ ಕಿರಣ[ಉಳ್ಳವನು] ಸೂರ್ಯ (ಶ್ರೀದಯಿತಂ ಎಮಗೆ ಮಾಟ್ಕೆ ಶುಭೋದಯಮಂ ದುಶ್ಚರಿತ್ರತಮ ಚಂಡಕರಂ: **ಸಮಯಪ,** ೧೪. ೧)

**ಚಂಡಣೆಗುಡು** – ನಾಟ್ಯದ ಒಂದು ಭಂಗಿ (ಜತಿಯಂ ನಡೆಯಿಪುದು ಕಿತ್ತು ಚಂಡಣೆಗುಡುವುದು ನಚ್ಚಣಿಯರಾಟಮೇನಚ್ಚರಿಯೋ: **ಚಂದ್ರಪ್ರಪು,** ೧೫. ೭೫)

**ಚಂಡಮರೀಚಿ** – ಸೂರ್ಯ (ಚಂಡಮರೀಚಿಗೆ ಅಸ್ತಮಯಮಿಲ್ಲದುದು ಪಂದೆಡೆ ನಿಮ್ಮ ಕೇಳ್ದುದುಂ ಕಂಡುದುಂ ಉಳ್ಳೊಡೆ ಇಂ ಬೆಸಸಿಂ ಆಂ ಇರದೆ ಅಲ್ಲಿಗೆ ಪೋಪೆವು: **ಪಂಪಭಾ,** ೪. ೪೮)

**ಚಂಡಮಾರಿ** – ಒಬ್ಬಳು ಕ್ಷುದ್ರ ದೇವತೆ (ಪಾಪಕಳಾಪಂಡಿತೆ ಚಂಡಮಾರಿ ದೇವತೆಯಿರ್ಪಳ್: **ಯಶೋಧಚ,** ೧. ೩೪)

**ಚಂಡರುಚಿ** – ಸೂರ್ಯ (ತಚ್ಛಶಿ ಪಲವು ಯೋನಿಯೊಳ್ ನಿಂದು ಅಶಾಂತಮತಿ ಚಂಡರುಚಿ ನಿಶಾಚರನಾದಂ: **ಚಂದ್ರಪ್ರಪು,** ೫. ೮೮)

**ಚಂಡವಿಕ್ರಮ** – ಭಯ ಹುಟ್ಟಿಸುವ ಪರಾಕ್ರಮವುಳ್ಳವನು (ಮೇಳಿಸುತುಂ ಚಂಡವಿಕ್ರಮಾಡಂಬರಂ .. .. ಸಾರ್ತಂದು: **ಪುಷ್ಪದಂಪು,** ೫. ೫೮)

**ಚಂಡವೇಗ** – ಬಹಳ ವೇಗ (ಆ ಕಾಂತೆ .. .. ಬಾಳಮತ್ತಪರಮುಮಂ ಕೊಂಡು ಚಂಡವೇಗದಿನೆಯ್ದಿ: **ಕರ್ಣನೇಮಿ,** ೪. ೬ ವ)

**ಚಂಡಾಂಶು** – ಚಂಡರುಚಿ, ಸೂರ್ಯ (ದೀಪ್ಯಮಾನ ಪ್ರತಾಪಸ್ಥಗಿತಾಶಾಚಕ್ರಚಂಡಾಂಶುವಂ: **ಆದಿಪು,** ೮. ೨೬)

**ಚಂಡಾತಕ** – ಹೆಂಗಸರ ಒಂದು ಉಡುಪು (ಅರ್ಧೋರುಂ ಚಂಡಾತಕಂ: **ಅಭಿಧಾವ,** ೧. ೧೩. ೨೧)

**ಚಂಡಾಮಯ** – ತೀವ್ರವಾದ ಕಾಯಿಲೆ (ಕಂಡೊಡೆ ಪೆಸರ್ಗೊಂಡೊಡೆ ಕಿಡುಗುಂ ಚಂಡಾಮಯವೆನಿಪ ಔಷಧಮಂಡಳಿಯಿಂ ಸೇವ್ಯಮಲ್ಲಿ ಗಂದಿಗವಸರಂ: **ಪುಷ್ಪದಂಪು.** ೨. ೮೪)

**ಚಂಡಾಲೆ** – ಹೊಲೆಯ ಹೆಂಗಸು (ಕನ್ನೆ ಚಂಡಾಲೆ ದರ್ಶನತಾತ್ಪರ್ಯದೆ ರಾಜಕೀರಸಹಿತಂ ಬಂದಿರ್ದಳ್: **ಕಾದಂಸಂ,** ೧. ೧೨)

**ಚಂಡಾಳ** – ಹೊಲೆಯ (ಚಂಡಾಳಂ ತಾಂ ಹೊಲೆಯಂ: **ಅಭಿಧಾವ,** ೧. ೧೧. ೮೭)

**ಚಂಡಾಳಿ** – [ಚಂಡ+ಅಳಿ] ದುಷ್ಟ ದುಂಬಿ (ಚಂಡಾಳೀ ಚಂಡಗೀತಧ್ವನಿಯನೊದೆದು .. .. ಉಣ್ಮೆ ಪೊಣ್ಮಿತ್ತು .. .. ತೂರ್ಯಪ್ರಣಾದಂ: **ಲೀಲಾವತಿ,** ೩. ೫೮)

**ಚಂಡಿ** – ದುರ್ಗೆ (ಪುಳಿಂದಪತಿಯಾಡುವ ಬೇಂಟೆಗೆ ಬೆರ್ಚಿ ಪೋಗಿ ಚಂಡಿಯ ಮಱಿಯಂ .. .. ಪೊಕ್ಕು: **ನೇಮಿನಾಪು,** ೩. ೫೫)

**ಚಂಡಿಕೆ** – ಜುಟ್ಟು, ತಲೆಗೂದಲು (ಪಂಜರಮಂ ಪೊತ್ತಿರದೆಟ್ಟಿಂದಂ ಚಂಡಿಕೆವೆರಸಿದ ಚಂಡಾಲಬಾಲಕಂ ಮತ್ತಿರ್ವ್ವಂ: **ಕಾದಂಸಂ,** ೧. ೧೫); ದುರ್ಗೆ (ಸರಸಿಜಭವಂಗೆ ವಿಷ್ಣುಗೆ ಸರಸಿಜಮಿತ್ರಂಗೆ ಶಿಖಿಗೆ ಚಂಡಿಕೆಗೆ ಈತಂ ಗುರು: **ಸಮಯಪ,** ೮. ೧೦೯)

**ಚಂಡಿಸು** – ಹಟಮಾಡು (ಚಂಡಿಪ ಚಪಲೆಯ ನುಡಿಗೇಗೊಂಡಳ್ ಹಿತಮತಮನೇಕೆ ಕೇಳವೊ ಕಿವಿಗಳ್: **ಲೀಲಾವತಿ,** ೧೪. ೪೭)

**ಚಂದ** – ಒಂದು ಜಾತಿಯ ಮರ (ಕುರವಕ ಚಂಪಕ ಅರ್ಜುನ ತಮಾಳ ಕುಚಂದನ ಚಂದ ನಾಗ ಜಂಬಿರ ಪನಸು ಆಮ್ರ ನಿಂಬ ಕುಟಜ ಆದಿ ಮಹಾಕುಜಸಂಕುಳಂಗಳಿಂ; **ಹರಿವಂಶ,** ೭. ೭); ಸೊಬಗು (ತಾನುಂ ಮಾಕಂದಮೆನಿಸಲ್ ನೆಗಳ್ದಿದ ಚಂದಮನಾಂತಂತೆ ನೇಷೆಲಲ್ಲೆಸೆದಿರ್ಕುಂ: **ರಾಜಶೇವಿ,** ೨. ೪೬)

**ಚಂದನಕರ್ದಮ** – ಶ್ರೀಗಂಧದ ಲೇಪನದ್ರವ್ಯ (ಚಂದನಕರ್ದಮದಣ್ಪು .. .. ಬಗೆಗೊಂಡುದು: **ಜಗನ್ನಾವಿ,** ೨. ೭೧)

**ಚಂದನಕುಜ** – ಶ್ರೀಗಂಧದ ಮರ (ಪಾವು ಸುತ್ತಿರಲನಾಹತ ಲೀಲೆಯೊಳಂದು ಬಾಳಚಂದನಕುಜದಂತೆ: ಕೃಷ್ಣನೆಸೆದಿರ್ದೊಡಂ: **ಜಗನ್ನಾವಿ,** ೩. ೯೧)

**ಚಂದನಕ್ಷೋದ** – ಗಂಧದ ಪುಡಿ (ಕೆಂಪಿಲ್ಲದ ಬಿಸಿಲುಣ್ಬುವ ಕಂಪಿಲ್ಲದ ಸಾಂದ್ರ ಚಂದನಕ್ಷೋದಂ: **ಚಂದ್ರಪ್ರಪು,** ೮. ೪೪)

**ಚಂದನಗಂಧವಾರಿ** – ಶ್ರೀಗಂಧದ ಪರಿಮಳದ ನೀರು (ಮುತ್ತಿನ ಪಚ್ಚೆ ಮಾಣಿಕದ ವಜ್ರದ ಕೇಣಿಯೊಳ್ ಒಂದಿ ಸಾಂದಿನೊಳ್ ಕತ್ತುರಿಯೊಂದು ಕೋಟ್ಟೆಸಱೊಳ್ ಓಕುಳಿ ಚಂದನ ಗಂಧವಾರಿಯೊಳ್ ಸುತ್ತಲುಂ ಅಟ್ಟೆಱಿಂ ಪಡೆವ ಗೇಯದ ಪೆಂಪಿನ ಅಲಂಪಂ ಆರ್ಗಂ ಆರ್ತಿತ್ತುದು ಪಟ್ಟಬಂಧ ಮಹೋತ್ಸವಂ ಆ ಪಡೆಮೆಚ್ಚೆ ಗಂಡನಾ: **ಪಂಪಭಾ,** ೧೪. ೨೦)

**ಚಂದನಚರ್ಚೆ** – ಗಂಧಲೇಪನ (ಭಟ್ಟಾರಕರಂ ವಚಸ್ಸುರಭಿ ಚಂದನಚರ್ಚೆಗಳಿಂದಮರ್ಚಿಪೆಂ: **ಪಂಪರಾ,** ೧. ೧೪)

**ಚಂದನಚ್ಛಟಾ** – ಶ್ರೀಗಂಧದ ಗಟ್ಟಿ (ಚಂದನಚ್ಛಟಾ ಚರ್ಚೆಗಳೆಂಬವೊಲಡಸಿ ನೋಡಿ .. .. ತಳಿರ್ವಟ್ಟಲೊಳ್ ಒರ್ವಳೊಟ್ಟಿದಳ್: **ಲೀಲಾವತಿ,** ೧೩. ೬೭)

**ಚಂದನರಸ** – ಶ್ರೀಗಂಧಧ ಮರದ ರಸ (ಮಾದ್ಯತ್ ಗಜಗಂಡಭಿತ್ತಿ ಕಷಣ ಪ್ರೋದ್ಭೇದದಿಂ ಸಾರ್ದು ಬಂದು ಇದಿರೊಳ್ ಕೂಡುವುದಿಲ್ಲಿ ಚಂದನರಸಂ ಕೆಂಬೊನ್ನ ಟಂಕಂಗಳೊಳ್: **ಪಂಪಭಾ,** ೪. ೨೨)

**ಚಂದನಸಾರ** – ಚಂದನಕರ್ದಮ (ಘನಸಾರ ಚಂದನಸಾರ ಪ್ರಮೃಷ್ಟಕರತಳನುಂ: **ಆದಿಪು,** ೧೧. ೨೭ ವ)

**ಚಂದವ** – ಚಂದ್ರ (ಪಡೆ ಮರವಟ್ಟ ಮಾವು ಗಡ ಬೆಳ್ಗೊಡೆ ಆಗಸಕೆಟ್ಟ ಚಂದವಂ ಗಡ: **ಕಬ್ಬಿಗಕಾ,** ೧೪೪)

**ಚಂದ್ರಕ** – [ಜೈನ] ಒಂದು ಇಂದ್ರಕದ ಹೆಸರು (ಚಂದ್ರಕಮೆಂಬ ಮೊದಲ ಇಂದ್ರಕದೊಳ್ .. .. ಪುಟ್ಟಿದಯ್: **ಶಾಂತಿಪು,** ೭. ೮೩ ವ)

**ಚಂದ್ರಕಚ್ಛತ್ರ** – ನವಿಲುಗರಿಯ ಸೀಗುರಿ (ನಿರಂತರೋಚ್ಛ್ರಿತ ಚಂದ್ರಕಚ್ಛತ್ರಚ್ಛಾಯಾನಿರಾಕೃತಾತಪನುಂ: **ಆದಿಪು,** ೩. ೯೦ ವ)

**ಚಂದ್ರಕಬಲ** – ಸರ್ಪಗಂಧ ಎಂಬ ಹೂ (ಮಕರಂದಬಿಂದು ಸಂದೋಹ ಚಂದ್ರಕಬಲ ಚಂದ್ರಕಿತಮುಖಚಂದ್ರರಾಗಿ: **ಶಾಂತಿಪು,** ೭. ೨ ವ)

**ಚಂದ್ರಕಬಳ** – ಕೆಂಪು ಬಣ್ಣದ ಒಂದು ಬಗೆಯ ಪರಿಮಳದ್ರವ್ಯ (ಚಿನ್ನ ಪೂಗಳಂ ಮೆಱಿವಂತೆ ಚಂದ್ರಕಬಳಮಂ ತೊಡೆವಂತೆ ಮಹೀಕಾಂತೆ ಸೊಗಯಿಸೆ: **ಆದಿಪ,** ೭. ೩೬ ವ)

**ಚಂದ್ರಕಳಾಪ** – ನವಿಲುಗರಿಯನ್ನು ಆಭರಣವಾಗುಳ್ಳವನು, ಕೃಷ್ಣ (ಉದಂಚಿತ ಚಂದ್ರಕಳಾಪನೆಲ್ಲಿದಂ .. .. ಎನುತ್ತೈದಿವಂದು: **ಜಗನ್ನಾವಿ,** ೩. ೯೦)

**ಚಂದ್ರಕಲೆ** – ಚಂದ್ರನ ಹದಿನಾರು ಕಲೆಗಳು (ಚಂದ್ರಕಳೆ ಕಣ್ದೆಱಿದಂತೆ ನೆಱಿ ಮೆಱಿದು ನಡೆತಂದು ನಗತನೂಜೆ: **ಗಿರಿಜಾಕ,** ೫. ೭೬ ವ)

**ಚಂದ್ರಕವಳ** – ಪರಿಮಳದ್ರವ್ಯ (ಮನ್ಮಥೋತ್ಸವ ಅಭಿಮುಖಚಂದ್ರನುಂ ಚಂದ್ರಕವಳದಿಂ ತೊಡೆದು ಓರೊಂದೆ ವಜ್ರದ ಪಂಚಲೋಹಮುಮಂ: **ಆದಿಪು,** ೪. ೪೧ ವ); ಒಂದು ಬಗೆಯ ಪರಿಮಳದ್ರವ್ಯ (ಅಡಿಗಡಿಗೆ ಸತಿಗೆ ಸಿರಿಕನ್ನಡಿ ತೋಱುವ ಚಂದ್ರಕವಳದಿಂದಂ ಮೊಗಮಂ ತೊಡೆವ: **ಅಜಿತಪು,** ೩. ೭)

**ಚಂದ್ರಕಾಂತ** – ಬೆಳುದಿಂಗಳಿನಿಂದ ಆರ್ದ್ರಗೊಳ್ಳುವ ಬಿಳಿಯ ಕಲ್ಲು (ಆ ರತಿ ಪಾಪಮುಂ ಪಡಣಮುಂ ಪೋಪಂತೆ ಕಾಮಂಗೆ ಮಜ್ಜನಕೆ ಎಂದೆತ್ತಿದ ಚಂದ್ರಕಾಂತ ಘಟದೊಳ್ ತಂದು ಅಟ್ಟೆಯಿಂ ಪುಷ್ಪವಾಸನೆಗೆಂದಿಕ್ಕಿದ ನೀಳನೀರರುಹಮಂ ಪೋಲ್ದತ್ತು ಕಟ್ಟಿಂದುವಾ: **ಪಂಪಭಾ** ಪರಿಷತ್ತು, ೪. ೫೧)

**ಚಂದ್ರಕಿ** – ನವಿಲು (ಸಮದಾರಾತಿಮರಾಳನೀರದರವಂ ಸಂಕ್ರುದ್ಧವೈವಸ್ವತೋಪಮವಿದ್ವಿಷ್ಟ ಫಣೀಂದ್ರ ಚಂದ್ರಕಿರವಂ: **ಆದಿಪು,** ೧೧. ೧೦)

**ಚಂದ್ರಕಿತ** – ಕೆಂಪುಬಣ್ಣದ (ಗುರುಚರಣ ಸರಸೀರುಹ ಮಕರಂದಬಿಂದಿಸಂದೋಹ ಚಂದ್ರಕಬಲ ಚಂದ್ರಕಿತ ಮುಖಚಂದ್ರರಾಗಿ: **ಶಾಂತಿಪು,** ೭. ೨ ವ); ಹೊಳೆಯುವ (ರತ್ನಾವಳೀ ತೋರಣಕಿರಣಮರುಚ್ಚಾಪಚಾರಂಗಳಿಂ ಚಂದ್ರಕಿತಂ .. .. ಮಲ್ಲರಂಗಂ: **ನೇಮಿನಾಪು,** ೮. ೬೩)

**ಚಂದ್ರಕಿವಾಹ** – ನವಿಲನ್ನು ವಾಹನವಾಗುಳ್ಳವನು, ಷಣ್ಮುಖ (ಚಾರು ಚಂದ್ರಕಿವಾಹಂ ದಶಕೋಟಿಭೈರವಯುತಂ; **ಶಬಶಂವಿ,** ೧. ೫೯)

**ಚಂದ್ರಖಂಡ** – ಚಂದ್ರನ ತುಂಡು (ವಿಳಸತ್ ವಿದ್ಯುಜ್ಜಟಾಮಂಡಳಂ ಅಮರನದೀಚಂದ್ರಖಂಡಾನ್ವಿತಂ: **ರಾಜಶೇವಿ,** ೩. ೦೯)

**ಚಂದ್ರಗತಿ** – ಚಂದ್ರನ ಚಲನೆ; [ಜೈನ] ಬೆಳುದಿಂಗಳಿನಂತೆ ಬಡವಬಲ್ಲಿದರ ನಡುವೆ ವ್ಯತ್ಯಾಸವಿಲ್ಲದೆ ಮಾಡುವ ಚರಿಗೆ

(ಒಯ್ಯಗೆ ಕಾಲ್ಗಳ್ ನೆಲ ಮುಟ್ಟೆ ಚಂದ್ರಗತಿಯಿಂ ಬಂದಂ ಮುನೀಂದ್ರೋತ್ತಮಂ: **ನೇಮಿನಾಪು,** ೧. ೮೧)

**ಚಂದ್ರಚರಿತ** – ಚಂದ್ರಗತಿ (ಶರದದ ಚಂದ್ರಮನೊಳ್ ಮಚ್ಚರಿಪಂತಿರೆ ಚಂದ್ರಚರಿತಮಂ ಕೈಕೊಂಡಂ: **ಆದಿಪು,** ೧೨. ೪೬)

**ಚಂದ್ರದ್ರವ** – ಕರ್ಪೂರದ ರಸ (ಸರಳಂ ಚಂದ್ರದ್ರವಾಭಂ ತರುಣತೃಣಗಣಂ ಮುಷ್ಟಿಮಾತ್ರಂ ಸುಪುತ್ರಂ: **ಚಂದ್ರಪ್ರಪು,** ३. ३३)

**ಚಂದ್ರಪ್ರಭ** – ಚಂದ್ರನಂತೆ ಕಾಂತಿಯುಕ್ತ (ವದನಂ ಚಂದ್ರಪ್ರಭಂ ವಿಕ್ರಮಬುಜಂ ಅಜಿತಂ: **ಲೀಲಾವತಿ,** ೧. ೯೪); [ಜೈನ] ಎಂಟನೆಯ ತೀರ್ಥಂಕರ (ಚಂದ್ರಪ್ರಭಚರಿತಮಂ ಆಚಂದ್ರಾರ್ಕಸ್ಥಾಯಿಯಿಂತಿದೆನೆ ಪೇೞ್ದು: **ಚಂದ್ರಪ್ರಪು,** ೧೬. ೮೩)

**ಚಂದ್ರಬಲ** – ಚಂದ್ರನು ಒಳ್ಳೆಯ ಸ್ಥಾನದಲ್ಲಿರುವ ಕಾರಣ ಉಂಟಾಗುವ ಶುಭಫಲ (ದಮಿತಾರಿಯ ಬಲಂ ಚಂದ್ರಬಲಮಿಲ್ಲದ ಅಂಕಕಾಱನಂತೆ ಸೋಲ್ತು ಮೂರ್ತಿಬಲಮಿಲ್ಲದ ಮಲ್ಲನಂತಿಕ್ಕು **ಶಾಂತಿಪು,** ೪. ३೦ ವ)

**ಚಂದ್ರವಿಮಾನ** – [ಜೈನ] ಸ್ವರ್ಗಗಳಲ್ಲಿ ಒಂದು (ಇನಿಸಗ್ಗಳಂ ಚಂದ್ರಕಾಂತಮಣಿಮಯಮಪ್ಪ ಚಂದ್ರವಿಮಾನಮುಂ: ಸುಕುಮಾಚ, ೧೧. ೫೯ ವ)

**ಚಂದ್ರಶಾಲೆ** – ಮಹಡಿಯಲ್ಲಿನ ಅಂಗಳ (ದಾಳಿಂಬದ ದ್ವಾರಂಗಳಿಂ ಚೂತದ ಚಂದ್ರಶಾಲೆಗಳಿಂ: **ಕುಸುಮಾಕಾ,** ೧೨. ೧೫೭ ವ)

**ಚಂದ್ರಾತಪ** – ಬೆಳುದಿಂಗಳು (ಚಂದ್ರಾತಪ ಪಾಂಡುರ ಹರಿಚಂದನಾನುಲಿಪ್ತಗಾತ್ರನುಂ ಅಭಿನವ ವಿಳಸಿತ ಮಾಳತೀಮಾಳಾಪರಿಷ ತಮಕುಟನುಂ: **ಆದಿಪು,** ೧೧. ೧೦)

**ಚಂದ್ರಾಭ** – ಬೆಳುದಿಂಗಳು (ರುಂದ್ರ ಅರ್ಧಚಂದ್ರಾಭಂ ಆರಯೆ ದಂತಾವರಣಂ: **ಸುಕುಮಾಚ,** ೫. ೫३)

**ಚಂದ್ರಾಭರಣ** – ಶಿವ (ಚಂದ್ರಾಭರಣಂ ಮನಮೊಸೆದು ತಾಲಿಗಟ್ಟಿದನೆನೆ: **ಗಿರಿಜಾಕ,** ३. ೮೬)

**ಚಂದ್ರಾಲೋಕ** – ಬೆಳುದಿಂಗಳು (ಪೊದಳ್ದು ಪಜ್ಜಳಿಪ ಚಂದ್ರಾಲೋಕಮಂ ಕಂಡು: **ಪುಷ್ಪದಂಪು,** ೧३. ೨೫)

**ಚಂದ್ರಾಶ್ಮ** – ಚಂದ್ರಕಾಂತಶಿಲೆ (ನಿರ್ಜರಕಾಂತಾನನ ಚಂದ್ರನಿಂದೊಸರ್ದ ಚಂದ್ರಾಶ್ಮಾಂಬುವಂ ಪೀರ್ದು ಕಿನ್ನರಗೀತಕ್ಕೆ ಕಡಂಗಿ: **ರಾಜಶೇವಿ,** . ೧೧೭)

**ಚಂದ್ರಿಕೆ** – ಬೆಳದಿಂಗಳು (ಮದೀಯ ಮನೋಗತ ಕಾಮಸಾಗರದ ಒದವಿಂಗೆ ನಲ್ಲಳ ವಿಲೋಚನ ಚಂದ್ರಿಕೆಯೊಂದೆ ಸಾಲದೇ: **ಪಂಪಭಾ,** ೫. ೧೧)

**ಚಂದ್ರೋಪಲ** – ಚಂದ್ರಕಾಂತ (ಚಂದ್ರೋಪಲಸಿತ ಭಸಿತಾನಂತಕಾಂತೋತ್ತಮಾಂಗಂ .. .. ನಂದಿಕೇಶಂ: **ರಾಜಶೇವಿ,** ೧. ೧)

**ಚಂಪಕ** – ಸಂಪಿಗೆ (ನಱುಸುಯ್ಯ ಕಂಪಿನಿಂಪಿಂಗೆ ಎಱಗುವ ಮದಭೃಂಗಮಾಲೆ ಬಿಟ್ಟಿರುತಿರೆ ಪೂತೆಱಗಿದ ಚಂಪಕಲತೆಯಂ ನೆಱೆ ಪೋಲ್ತಳ್ ವಿರಹಿದಹನ ದಾಹಿನಿಯಾಗಳ್: **ಶಾಂತೀಶ್ವಪು,** ೫. ೧೧३); ಕೆಂಬಣ್ಣ

**ಚಂಪು** – ಗದ್ಯಪದ್ಯ ಮಿಶ್ರಿತ ಕಾವ್ಯಪ್ರಕಾರ (ಎಲ್ಲರ್ ಅಜೀವಂತಿರೆ ಚಂಪುವೆನಿಪ್ಪ ಬಂಧದಿಂ ಕನ್ನಡದಿಂದೆ ಪೇಳ್ದೆದನಿದಂ ಓದುಗೆ ಕೇಳುಗೆ ಕೂರ್ತು ಸಜ್ಜನರ್: **ಧರ್ಮಪ,** ೧. ३೭)

**ಚಂಪೆಯ** – ಡೇರೆ (ಮಡಲ್ಗೊಂಡ ಮಲ್ಲಿಗೆಯ ಮಂಡವಿಗೆಳೊಳಂ ಸಂಪಗೆಯ ಜೊಂಪದ ಚಂಪೆಯದೊಳಂ .. .. ಬಿಟ್ಟ ಬೀಡು: **ಕಬ್ಬಿಗಕಾ,** ೧೮೪ ವ)

**ಚಂಬಕವಱೆ** – ಒಂದು ಬಗೆಯ ಚರ್ಮವಾದ್ಯ (ಮೊರೆವ ಚಂಬಕವಱೆಯ ಮೊಳಗುವ ಪಳಹದ ಸೂಳೈಪ ನಿಸ್ಸಾಳದ: **ರಾಜಶೇವಿ,** ೬. ೧೧ ವ)

**ಚಕಾರಚತುಷ್ಕ** – ನಾಲ್ಕು ಚಕಾರಗಳು, ಚಕಾರ ಹೆಚ್ಚು ಬಳಸುವ ವ್ಯಾಸನ ವೈಶಿಷ್ಟ್ಯ (ಭಾರತಾದಿಯೊಳ್ ವಿರಚಿಸಿ ಪೇೞ್ವ ಪದ್ಯದ ಚಕಾರಚತುಷ್ಕ: **ಸಮಯಪ,** ೧೦. ೧೭೫)

**ಚಕಿತ** – ಭಯಗೊಂಡ (ಅಳುರ್ವ ಕೋಪಶಿಖಿಗಳ ನಡುವಿರ್ತಲೆವೊತ್ತಿದ ಪುಳ್ಳಿಯ ಪುಱುವೊಲಿರ್ದಂ ಅತಿಚಕಿತಚಿತ್ತಂ ಅಪರಾದಿತ್ಯಂ: **ಗದಾಯು,** ೧. ೨३)

**ಚಕೋರ** – ಬೆಳುದಿಂಗಳನ್ನೇ ಕುಡಿಯುವುದೆಂದು ಹೇಳಲಾಗುವ ಒಂದು ಕಲ್ಪಿತ ಪಕ್ಷಿ (ಶುಕ ಕಾರಂಡ ಚಕೋರ ಸಾರಸ ಮಯೂರಾಕಾರದಿಂ ವ್ಯಾಘ್ರ ಸಿಂಹ ಕುರಂಗಾಂಬುಜ ವಕ್ರ ಮತ್ಸ್ಯ ಮಕರೇಭಾಕಾರದಿಂ ಚೆಲ್ವುವೆತ್ತು: **ಸುಕುಮಾಚ,** ೧೦. ೫३)

**ಚಕ್ಕಣ** – [ಚಕ್ಷಣ] ನೋಟ (ಮೃಡನಂ ಜಾನಿಸುವೆಡೆಯೊಳ್ ಬಿಡೆ ಚಕ್ಕಣದಿಂದೆ ನಾಲ್ವೆರಲ್ ನೆಗೆದಿರ್ಪಂ ಗಡ ಯೋಗಿ: **ಸಮಯಪ,** ೧೨. ೨೪); ಚಾಕಣ, ಮದ್ಯಪಾನದಲ್ಲಿ ನಂಜಿಕೊಳ್ಳುವ [ಖಾರವಾದ] ತಿಂಡಿ (ಗೇಯದೊಳ್ ಈಕೆ ಸೊರ್ಕನಿಕ್ಕಿದಳೆನೆ ಕಳ್ಗೆ ಚಕ್ಕಣಮೆನಿಪ್ಪುದು: **ಪಂಪಭಾ,** ೭. ೯೦)

**ಚಕ್ಕವತ** – ಚಕ್ಕೋತ ಸೊಪ್ಪು (ಸುರುಚಿರ ಚಕ್ಕವತಂ ಚಿರಿಕೆ ರಾಜಗಿರಿ ಕೆಸವು ಕೀರೆ ದೊಗ್ಗಳೆಯೆಲೆ ವಾದುರವಂ ಬಡಿಸಿದರ್: **ಧರ್ಮಪ,** ೨. ೫೮)

**ಚಕ್ಕಟಿ** – ಚಪ್ಪಟೆಯಾದುದು (ಚಕ್ಕಟಿದ ಮೊಲೆಗಳುಂ .. .. ಇನಿಯನ ರೋಸಕ್ಕೆಡೆಯಾಯ್ತು: **ಲೀಲಾವತಿ,** ೧३. ೯೨)

**ಚಕ್ರ** – ಗಾಲಿ (ಭೀಕರ ರಥಚಕ್ರಮಂ ಪಿಡಿದು ನುಂಗಿದಳೋರ್ಮೆಯೆ ಧಾತ್ರಿ ಕೋಪದಿಂ: **ಪಂಪಭಾ,** ೧೨. ೨೦೬); ಸುದರ್ಶನಚಕ್ರ (ಪಿಡಿಯೆಂ ಚಕ್ರಮನೆಂನ ಚಕ್ರಿಯಂ ಇಳಾಚಕ್ರಂ ಭಯಂಗೊಳ್ವಿನಂ ಪಿಡಿಯಿಪ್ಪೆಂ ಕರಚಕ್ರಮಂ: **ಪಂಪಭಾ,** ೧೦. ೨೫); ಭೂಮಿ (ಕ್ಷಿತಿ ಭೂಮಿಯುಂ ವಿನಾಶವುಮರಿ ಚಕ್ರಮುಂ: **ಅಭಿಧಾವ,** ೧. ३. ೧೯); ಚಕ್ರವಾಕ (ಪೊಣರ್ವಕ್ಕಿ ಚಕ್ರಂ: **ಅಭಿಧಾವ,** ೧. ೧೦. ೧೭) ಸಮೂಹ (ಹತವೈರಿಕ್ಷತ್ರಚಕ್ರಂ ಭಯಚಕಿತ ಜಗದ್ವೀರಚಕ್ರಂ: **ಆದಿಪು,** ೧೪. ३)

**ಚಕ್ರಕ್ರಮಣ** – ಚಕ್ರದಂತಹ ಚಲನೆ, ಸುತ್ತುವುದು (ತನ್ನಂ ನಿರ್ದಾಟಿಸಿ ಕಳೆಯೆ ಪೋಗಿ ಸತ್ತು ವಿವಿಧ ಜವಂಜವ ಚಕ್ರಕ್ರಮಣದಿಂ ಬಂದು: **ಶಾಂತಿಪು,** ೭. ४೨ ವ)

**ಚಕ್ರಚಾಪ** – ಒಂದು ಆಯುಧ (ಸಬಳ ಸಲ್ಲೆಹ ಸೂಲಿಗೆ ಚಕ್ರಚಾಪ ಬಲ್ಲೆಹ ಕತ್ತಿಗೆ ಕಠಾರಿಯಾದ .. .. ಕೈದುಗಳಿಂದ: **ಧರ್ಮಪ,** ೧. ೮೬ ವ)

**ಚಕ್ರಧರ** – ಚಕ್ರವನ್ನು ಧರಿಸಿದವನು, ಶ್ರೀಕೃಷ್ಣ (ಸಾರವಸ್ತುಗಳಿಂ ನೆಱೆದ ಅಂಭೋರಾಶಿಯೆ ಕಾದಿಗೆ ಕಾವನುಂ ಸೀರಪಾಣಿ ವಿಳಾಸದಿನಾಳ್ದಂ ಚಕ್ರಧರಂ: **ಪಂಪಭಾ,** ೪. ३೨); ಚಕ್ರವರ್ತಿ (ಚಕ್ರಧರನಧರಕಸಲಯದ ಮೇಲೆ ದಂತಕಾಂತಿ ಲತಾಂತಪ್ರಭೆಗಳ್ ಪಸರಿಸೆ: **ಆದಿಪು,** ೪. ೨೬ ವ)

**ಚಕ್ರಧರತ್ವ** – ಚಕ್ರವನ್ನು ಧರಿಸಿರುವುದು (ಚಕ್ರಧರತ್ವಮಂದು ಸಫಲಂ .. .. ಆ ವಿಕ್ರಮ ಸಾಲ್ವನಂ ತವಿಸಿದಂದು: **ಜಗನ್ನಾವಿ,** ೧. ೭೩)

**ಚಕ್ರನೇಮಿ** – ಚಕ್ರದ ಸುತ್ತುಪಟ್ಟೆ (ಚಟುಳಿತ ಚಕ್ರನೇಮಿ ಪರಿವರ್ತನಘಟ್ಟನಘಾತ ರ್ಭರ ಸ್ಫುಟಿತ ಧರಾತಳಂ: **ಪಂಪಭಾ,** ೧೧. ೧೪೭)

**ಚಕ್ರಪಕ್ಷಿ** – ಚಕ್ರವಾಕ (ಸುತ್ತಿದ ರೇಫೆ ದಡ್ಡ್ಕ್ಕರಮಾದುದಕ್ಕೆ: ಚಕ್ರಪಕ್ಷಿ–ಜಕ್ಕವಕ್ಕಿ: **ಶಬ್ದಮದ,** ೨೭೫ ಪ್ರ)

**ಚಕ್ರಮಿಥುನ** – ಚಕ್ರವಾಕ ಜೋಡಿ (ನೆನೆಯಿಸಿದತ್ತಾ ಮಿಥುನಂ ದಿನಮುಖಮಂ ಕಂಡ ಚಕ್ರಮಿಥುನಾಕೃತಿಯಂ: **ಮಲ್ಲಿನಾಪು,** ೧೩. ೧೫)

**ಚಕ್ರರತ್ನ** – [ಜೈನ] ಚಕ್ರವರ್ತಿಯಾಗುವವನ ಆಯುಧಾಗಾರದಲ್ಲಿ ಹುಟ್ಟುವ ಚಕ್ರಾಯುಧ (ನೆಲನಾಕಾಶಂ ದಿಶಾಮಂಡಲಮೆನಿತನಿತುಂ .. .. ಪರ್ವುವುದನಿದುವೆ ಪೇೞ್ದುಪುದೆಂಬಂತೆ .. .. ಬೆಳಗಿದುದು ದಿಶಾಚಕ್ರಮಂ ಚಕ್ರರತ್ನಂ: **ಆದಿಪು,** ೧೧. ೨)

**ಚಕ್ರಲಾಭ** – [ಜೈನ] ಐವತ್ತಮೂರು ಗರ್ಭಾನ್ವಯಕ್ರಿಯೆಗಳಲ್ಲಿ ಒಂದು; ಚಕ್ರರತ್ನವು ದೊರೆಯುವುದು (ಗೃಹತ್ಯಾಗ ದೀಕ್ಷಾಜಿನರೂಪ ಮೌನಾಧ್ಯಯನ .. .. ಯೌವರಾಜ್ಯ ಸ್ವರಾಜ್ಯ ಚಕ್ರಲಾಭ .. .. ಎಂಬ ಅಯ್ವತ್ತುಮೂಱು .. .. ಗರ್ಭಾನ್ವಯಕ್ರಿಯೆಗಳಂ: **ಆದಿಪು,** ೧೫. ೧೫ ವ)

**ಚಕ್ರವರ್ತಿತ್ವ** – ಚಕ್ರವರ್ತಿ ಪದವಿ (ಚಕ್ರವರ್ತಿತ್ವಲಕ್ಷ್ಮಿಯಂ ಕಸವಿದು ಎನುತುಂ ಎಂಬಂ ಭವ್ಯಂ: **ಸಮಯಪ,** ೪. ೨೧)

**ಚಕ್ರವಾಕ** – ಸದಾ ಜೊತೆಯಾಗಿರುವ [ರಾತ್ರಿಯಲ್ಲಿ ಬೇರೆಯಾಗಿ ವಿರಹ ಅನುಭವಿಸುವ] ಕಲ್ಪನೆಯ ಜೋಡಿಹಕ್ಕಿ (ಚೆಲ್ವುವಿತ್ತಿದುದಯಮಂದು ಪದ್ಮಿನೀಚಕ್ರವಾಳ ಚಕ್ರವಾಕಚಕ್ರ ಚಕ್ರವರ್ತಿಯಾ: **ಆದಿಪು,** ೧೨. ೫೫)

**ಚಕ್ರವಾಲ** – ಮಂಡಲ (ರಾಘವಂ ಪೋಗೆ ಕಣ್ಗಂ ಬಗೆಗಂ ಇಟೆಕೆಯಾದತ್ತಾ ಸಭಾ ಚಕ್ರವಾಲಂ: **ಪಂಪರಾ,** ೬. ೧೫೬)

**ಚಕ್ರವಾಳ** – ಮಂಡಲ, ಸುತ್ತುವಲಯ (ಚೆಲ್ವುವೆತ್ತುದುದಯಮಂದು ಪದ್ಮಿನೀಚಕ್ರವಾಳ ಚಕ್ರವಾಕಚಕ್ರವರ್ತಿಯಾ: **ಆದಿಪು,** ೧೨. ೫೫;

**ಚಕ್ರವಾಳರುಚಿ** – ಸಮೂಹ ಕಾಂತಿ (ಸಂಚಾರಿತಮೇಚಕಾಚಳ ಚಕ್ರವಾಳರುಚಿ ಹರಿಕರಟಿಘಟಾಪ್ರಪಂಚರಾಗಕೇತನ ಚಂಚಳಾಂಚಳನಿಚಯದಿಂದಂ: **ಆದಿಪು,** ೧೩. ೭೭ ವ)

**ಚಕ್ರವಾಕಚಕ್ರವರ್ತಿ** – ಚಕ್ರವಾಕಗಳ ದೊರೆ, ಸೂರ್ಯ (ಚೆಲ್ವುವೆತ್ತುದುದಯಮಂದು ಪದ್ಮಿನೀಚಕ್ರವಾಳ ಚಕ್ರವಾಕಚಕ್ರವರ್ತಿಯಾ: **ಆದಿಪು,** ೧೨. ೫೫)

**ಚಕ್ರವಾಳ** – ಮಂಡಲಾಕೃತಿ (ದಿಕ್ ಚಕ್ರವಾಳಾಂತರಮಂ ನೋಡಲ್ಕೆ ನೀಳ್ದಂತಿರೆ ಬೆಳೆದ ಮಹಾಶಾಖೆಗಳ್: **ಕಾದಂಸಂ,** ೧. ೩೮); ಪರ್ವತಪಂಕ್ತಿ (ಚೆಲ್ವುವೆತ್ತುದುದಯಮಂದು ಪದ್ಮಿನೀ ಚಕ್ರವಾಳ ಚಕ್ರವಾಕ ಚಕ್ರವರ್ತಿಯಾ: **ಆದಿಪು,** ೧೨. ೫೫)

**ಚಕ್ರವಾಳಗದ್ಯ** – ಒಂದು ವಿಶಿಷ್ಟ ಬಗೆಯ ಗದ್ಯರಚನೆ (ಮುಕ್ತಪದಗ್ರಹಣ ಚಕ್ರವಾಳಗದ್ಯಂ: **ಜಗನ್ನಾವಿ,** ೧೨. ೫೭ ವ)

**ಚಕ್ರವ್ಯೂಹ** – ಒಂದು ಬಗೆಯ ಸೇನಾವ್ಯೂಹ (ಇದು ಚಕ್ರವ್ಯೂಹಂ ಈ ವ್ಯೂಹಮಂ ಒಡೆವ ಅದಟಂ ಪಾರ್ಥನಂತೆ ಆತನುಂ ಗೆಂಟಿದಂ ಎಮ್ಮೀ ನಾಲ್ವರುಂ ಭೇದಿಸಲಱಿಯೆವು ಇದಂ: **ಪಂಪಭಾ,** ೧೧. ೮೭)

**ಚಕ್ರಸಹಾಯ** – ಚಕ್ರದ ಸಹಾಯ ಪಡೆದಿರುವವನು, ವಿಷ್ಣು (ಚಕ್ರಸಹಾಯನಾಕ್ರಮಿಸಿದಂ ಭೂಚಕ್ರಮಂ ಪಾದದಿಂ: **ಪುಷ್ಪದಂಪು,** ೮. ೨೩)

**ಚಕ್ರಾಂಕ** – ಚಕ್ರವಾಕಪಕ್ಷಿ (ಕೋಡಿ ಹಿಮದಿಂ ಚಕ್ರಾಂಕಮಳ್ಕಿರ್ದುವು: **ಪುಷ್ಪದಂಪು,** ೩. ೪೦)

**ಚಕ್ರಾನಿಲ** – ಸುಂಟರಗಾಳಿ (ಸರಭಸಂ ಪರಿತಂದು ಚಕ್ರಾನಿಲವಲೆದೊಲೆದು ಎತ್ತಿದ ಅರಲ ಪರಾಗಪಟಲಂ ಮೇಲೆ ಪರಿಕಲಿಸಿ ಪರ್ಬಿ: **ಶಬರಶಂ,** ೨. ೪೨ ವ)

**ಚಕ್ರಾಭಿಷೇಕ** – [ಜೈನ] ಐವತ್ತಮೂರು ಗರ್ಭಾನ್ವಯಕ್ರಿಯೆಗಳಲ್ಲಿ ಒಂದು (ಗೃಹತ್ಯಾಗ ದೀಕ್ಷಾಜಿನರೂಪ ಮೌನಾಧ್ಯಯನ .. .. ಯೌವರಾಜ್ಯ ಸ್ವರಾಜ್ಯ ಚಕ್ರಲಾಭದಿಗ್ವಿಜಯ ಚಕ್ರಾಭಿಷೇಕ .. .. ಎಂಬ ಅಯ್ವತ್ತುಮೂಱು .. .. ಗರ್ಭಾನ್ವಯಕ್ರಿಯೆಗಳಂ: **ಆದಿಪು,** ೧೫. ೧೫ ವ)

**ಚಕ್ರಾಹ್ವ** – ಚಕ್ರವಾಕಗಳ ಜೋಡಿ (ಇಂದ್ರಿಯಸುಖಾರ್ಥಿ ಸಂಸಾರಗುಹಾಗಹ್ವರದೊಳಗೆ ಇರುಳಿನ ಚಕ್ರಾಹ್ವದವೋಲ್ ಮಱಗದೇಂ ಸುಖಂಬಡೆದಪನೇ: **ಆದಿಪು,** ೩. ೬೮)

**ಚಕ್ರಿ** – ಚಕ್ರವನ್ನು ಹೊಂದಿದವನು, ವಿಷ್ಣು, ಕೃಷ್ಣ (ಮಂಗಳತೂರ್ಯನಾದಂ ಎಸೆಯುತ್ತಿರ್ಪನ್ನೆಗಂ ಚಕ್ರಿ ರಾಗಿಸಿ ಕೆಯ್ನೀರ್ ಎಱೆದಂ ಗುಣಾರ್ಣವ ಮಹೀಪಾಲಂಗಂ ಆ ಕನ್ನೆಯಂ: **ಪಂಪಭಾ,** ೫. ೨೫); ಹಾವು (ಉರಗಂ ಭೋಗಿ ಸರೀಸೃಪಂ ಫಣಿ ಭುಜಂಗಂ ಚಕ್ರಿ ದರ್ವೀಕರಂ ಹರಿಯುಂ ಕುಂಡಲಿ ಕಾದ್ರವೇಯಂ ಅಹಿ ನಾಗಂ ವ್ಯಾಳಮ ಆಶೀವಿಷಂ ಮರುಪೃಷ್ಯಂ ಫಣಭೃತ್ಪೃದಾಕು ಭುಜಗಂ ಕುಂಭೀನಸಂ ಪನ್ನಗಂ ಮರುದಾಶಂ ಶನಿ ಗೂಡಪಾತ್ ವಿಷಧರಂ ಸರ್ಪಂ ದ್ವಿಜಿಹ್ವಾಹ್ವಯಂ: **ಅಭಿಧಾವ,** ೧. ೩. ೭); ಕುಂಬಾರ (ಕುಲಾಲಾಖ್ಯಂ ಚಕ್ರಿ ಕುಂಭಕಾರಂ: **ಅಭಿಧಾವ,** ೧. ೧೧. ೭೪); ಚಕ್ರವರ್ತಿ (ಜಗದ ಬಡತನಮನೊರ್ಮೆಯೆ ಬಗೆದಂತಿರೆ ಕಿಡಿಪ ಚಕ್ರಿ ತನ್ನಿರ್ದೆಡೆಯೊಳ್ ನೆಗೞ್ದ ಬಡತನಮನದೇಕೆ ಗಡಂ ಸೈರಿಸುವನೆನೆ ಪೊದಳ್ದುದು ಮಧ್ಯಂ: **ಆದಿಪು,** ೮. ೩೧)

**ಚಕ್ರಿಕಾವರ್ತಿ** – ಚಕ್ರದಂತೆ ಸುತ್ತುವ ಶೀಲವುಳ್ಳವನು, ಕೃತ್ರಿಮೋಪಾಯವುಳ್ಳವನು (ಚಕ್ರಿ ಚಕ್ರಿಕಾವರ್ತಿಯಪ್ಪುದಱಿಂದ ಆ ವನಾಂತರಾಳಕ್ಕೆ ಒರ್ವನೆ ಬಂದು ಮಾಧವೀಮಂಟಪಮಂ ಪೊಕ್ಕು ಅವರಿರ್ವರ ನಾಣುಮಂ ನಡುಕಮಂ ಪತ್ತುವಿಟ್ಟು ನುಡಿದು: **ಪಂಪಭಾ,** ೫. ೧೯ ವ)

**ಚಕ್ರೀವ** – ಕತ್ತೆ (ಖರತಾ ಚಕ್ರೀವ ಜೀವಾಹತಂ ಭಯಲೋಭಾರ್ಜುನಭಂಜನಂ .. .. ಜಯಮಂ ತಾಳ್ದಿದಂ: **ನೇಮಿನಾಪು,** ೭. ೯೩)

**ಚಕ್ರೇಶತ್ವ** – ಚಕ್ರವರ್ತಿ ಪದವಿ (ನಿಜಕೂಟಾಗ್ರದೊಳ್ ಪಾಯ್ವ ಗಂಗಾಜಲದಿಂ ಮೂರ್ಧಾಭಿಷೇಕೋನ್ನತಿ ನಿಲೆ .. .. ಚಕ್ರೇಶತ್ವಮಂ ತಾಳ್ದಿದಂ ಅಖಿಳಧರಾರಮ್ಯ ಹೈಮಾಚಳೇಂದ್ರಂ: **ಪಂಪಭಾ,** ೪. ೧೪)

**ಚಕ್ರೇಶ್ವರ** – [ಜೈನ] ಚಕ್ರರತ್ನದ ಒಡೆಯ (ಚಕ್ರಂ ಪುಟ್ಟಿದೊಡೀಗಳ್ ಚಕ್ರೇಶ್ವರನೆಂಬ ಪೆಸರುಮಾಯ್ತು: **ಆದಿಪು,** ೧೪. ೭೯)

**ಚಕ್ಷುಶ್ಶ್ರುತಿ** – ಕಣ್ಣೆ ಕಿವಿಯಾಗಿರುವ ಪ್ರಾಣಿ, ಹಾವು (ಚಕ್ಷುಶ್ಶ್ರುತಿಗಳಂತೆ ವಾಯುಭಕ್ಷಕರಾಗಿರ್ದ ಮುಮುಕ್ಷು ನಿಕರಮುಮಂ, ನೀರ್ಮಾನಸರಂತೆ ನೀರೊಳ್ ನೆಲೆಸಿರ್ದುದಕವಾಸಿಗಳುಮಂ: **ಪಂಚತಂತ್ರ,** ೧೯೦ ವ)

**ಚಕ್ಷುಷ್ಮಂತ** – ಮುಂದಾಲೋಚನೆಯವನು (ಚಕ್ಷುಷ್ಮಂತರ ಕಣ್ಗಂ ಮನಕ್ಕಂ ಇತ್ತುದು ಮುದಮಂ: **ಶಾಂತಿಪು,** ೧೦. ೧೩೭)

**ಚಕ್ಷೂರಾಗ** – ನೋಟದಲ್ಲಿ ತೋರಿಸುವ ಪ್ರೀತಿ (ಚಕ್ಷೂರಾಗದೊಳ್ ಬೆಂದು ಒಳಗೊಳಗೆ ಏರ್ದೆವೊತ್ತುತ್ತುಮಿರ್ಪ ಅಂಗನಾಸಂಕುಳಮಂ ತಟ್ಟೈಸಿ .. .. ಭಾರತೀಚಿತ್ತಚೋರಂ: **ಲೀಲಾವತಿ,** ೧೩. ೧೬೧)

**ಚಚ್ಚರಿಕೆ** – ಚಟುವಟಿಕೆ, ತೀವ್ರತೆ (ಚಯ್‌ಚಯ್ಯೆಂಬಾಗಳ್ ಮೆಯ್ ಮೆಯ್ ಚಲದಿಂ ಮುಟ್ಟಿ ಪೋಣರ್ದು ತಳ್ತಿಱಿವ ಉರ್ಕಿಂ ಕೆಯ್ ಚೆಚ್ಚರಿಕೆಯ ಚಲದಿಂ ಕೆಯ್ ಚಳಿವಿನೆಗಂ ಇಱಿದರ್ ಎರಡು ಬಲದೊಳಂ ಅದಟರ್: **ಪಂಪಭಾ,** ೧೩. ३೪)

**ಚಚ್ಚಾರವ** – ಪುಂಗಿಯ ನಾದ (ಮಾಗಧಾಮರಂ ವಿನಮಿತಸರ್ವಾಂಗಂ ಚಚ್ಚಾರವಕೆ ಭುಜಂಗನ ಕೊರಲಂತೆ ಬಾಗಿದಂ: **ಆದಿಪು,** ೧೨. ೧೧೧)

**ಚಟಾರಿಸು** – ವಂಚಿಸು (ದಾನಕ್ಕೆ ಕೊಟ್ಟುದಂ ನೆರೆ ತಾನಿಕ್ಕದೆ ಋಷಿಯರಂ ಚಟಾರಿಸಿ ಬಯ್ತು .. .. ಪೆಂಡಿರಸುಗತಿಗಿಳಿವರ್: **ಸಮಯಪ,** ೫. ೧೦೧)

**ಚಟುಳ** – ಚಂಚಲ; ಚುರುಕುತನ (ಚಟುಳಚಳತ್ ಮೀನೋಏನಪ್ರತಾನಂ ಶುಂಭತ್ ಗಂಭೀರಮಂ ರಂಜಿಸಿದುದು: **ರಾಜಶೇಖ,** ೧. ೯೦)

**ಚಟುಳತೆ** – ಚುರುಕುತನ (ನಡೆಯೆ ಚಟುಳತೆಗೆ ಕಣೆಯಂ ಸಡಿಲ್ದೊಡೆ ಅದಂ ಎಡದ ಕೆಯ್ಯೊಳ್ ಓಸರಿಸುತ್ತುಂ ನಡೆದು ಗವಾಕ್ಷಂಬರಂ ಓಗಡಿಸದೆ ನವವರನಂ ಅಬಲೆ ನೋಡಿದಳೊರ್ವಳ್: **ಶಾಂತಿಪು,** ೬. ೯)

**ಚಟುಳಿತ** – ಚಲಿಸುವ (ಘಟೆಯ ದಟಿದ ಉಲಿವು ಲಯಘನಘಟೆಗಳ ಮೊಟಗೆನಿಸೆ ಪೊಟ್ಟಿಗೆ ಒಡೆದತ್ತು ರಟತ್ ಪಟು ಪಟಹ ಶಂಖ ಭೇರಿಯ ಚಟುಳಿತದಿಂದ ಅತಳಪಟಂ ಅಂಬರಪಟಳಂ: **ಪಂಪಭಾ,** ೧೦. ೬೭)

**ಚಟೂಕ್ತಿ** – ಪ್ರಿಯವಾದ ಮಾತು (ಖಚರರಾಜಪುತ್ರಿಯಂ .. .. ಚಟೂಕ್ತಿಯಿಂ ಮೆಚ್ಚಿಸುತ್ತುಂ: **ಆಚವರ್ಧ,** ೬. ೯ ವ)

**ಚಟೂರಿಸು** – ಎದುರಿಗೇ ಹೊಗಳು (ಮಾನ್ಯರ್ ಎಲ್ಲ ತೆಱದಿಂದ ಮೊಕ್ಕು ನಿನ್ನಂ ಚಟೂರಿಸದಂತಾಗಿರೆ .. .. ಆತ್ಮವಂತಂ ಎನಿಸು: **ಕಾದಂಬ,** ३. ೧೦೪)

**ಚಟ್ಟ** – [ಛಾತ್ರ] ಶಿಷ್ಯ (ನಿನ್ನಂ ಅನಾಕುಳಂ ಎನ್ನ ಚಟ್ಟರಿಂ ತಳವೆಳಗಾಗೆ ಕಟ್ಟಿಸದೆ ಮಾಣ್ದೊಡೆ ಕೆಮ್ಮನೆ ಮೀಸೆವೊತ್ತೆನೇ: **ಪಂಪಭಾ,** ೨. ೫೦)

**ಚಟ್ಟಿಱಿ** – (ಚಟ್ಟಿಱಿದು ಘಟಮನರ್ಚಿಸಿ ನೆಟ್ಟನೆ ಪೊಸ ಪೂಗಳಿಂದಮನಿತುಮಂ: **ಕುಸುಮಾಕಾ,** ೧೧. ೧೫೮)

**ಚಟ್ಟು** – ಮಲ್ಲಯುದ್ಧದಲ್ಲಿ ಒಂದು ವರಸೆ (ಪಾಸಗೆವನ್ನಿಮುಟ್ಟಿ ಚಟ್ಟು ಸಿರಣವಟ್ಟಿ ಬಾಹುದಣೆ ಖಮ್ಮರಿ .. .. ಜೆಟ್ಟಿಗನ ನಚ್ಚಿನ ಬಿನ್ನಣಮೊಪ್ಪೆ ಕಾದಿದರ್: **ಚಂದ್ರಪ್ರಪು,** ೫. ೭೮)

**ಚಣ** – ಚಿಮುಟ (ಕಣ್ಣಂ ಕೆತ್ತುವೆಯೆಂದು ಲಕ್ಕಚಣದಿಂ ಮೀಂಟಿ ಕಳೆವರ್ ಕಣ್ಣಂ: **ಪಾರ್ಶ್ವನಾಪು,** ೬. ೯೦)

**ಚಣಕ** – ತುಂಡು ಚಲ್ಲಣ (ಚಣಕಮೆಂದು ಚಲ್ಲಣಂ: **ಶಬ್ದಮದ,** ಪ್ರಸಾ ೮೨); ಕಡಲೆ (ಚಣಕರಾಸಿಯೊಂದ ನೋಡಿ ನಮ್ಮ ನಾಡೊಳ್ ಈ ಪರಿಯ ಮೆಣಸು ಅನಂತ ರಾಸಿಯಿರ್ಪುವೆಂದೊಡೆ: **ಧರ್ಮಪ,** ೨. ३೯)

**ಚತುರಂಗ** – ಧ್ಯಾನದ ನಾಲ್ಕು ಅಂಗಗಳು (ಆ ಧ್ಯಾನಯೋಗಂ .. .. ಧ್ಯಾನಂ ಧ್ಯೇಯಂ ಧಾತೃ ಫಲಂ ಎಂದು ಚತುರಂಗಮಕ್ಕುಂ: **ಅಜಿತಪು,** ೮. ೨೮ ವ); ಆನೆ, ಕುದುರೆ, ರಥ, ಪದಾತಿಗಳಿಂದ ಕೂಡಿದ ಸೈನ್ಯ ಚತುರಂಗಂ ಚತುರಂಗಸೈನ್ಯದೊಳಡರ್ತುಂ ತಿಱ್ಱಿನೆಯ್ತಂದು ತಾಗಿ: **ಪಂಪಭಾ,** ೧೧. ೭)

**ಚತುರಂಗಬಲ** – ಆನೆ, ಕುದುರೆ, ರಥ, ಪದಾತಿಗಳಿಂದ ಕೂಡಿದ ಸೈನ್ಯ (ಬೆಂಗೊಟ್ಟುದು ದಶಮುಖ ಚತುರಂಗಬಲಂ: **ಪಂಪರಾ,** ೧೦. ೨೦೭)

**ಚತುರಂಗುಲ** – ನಾಲ್ಕು ಅಂಗುಲ (ಚತುರಂಗುಲ ಚಾರಣಋದ್ಧಿ ತಮಗೆ ಸಮನಿಸಿದುದು: **ಪಂಪರಾ,** ೧. ೧೨)

**ಚತುರಂತಕ್ಷಿತಿ** – ನಾಲ್ಕು ಸಮುದ್ರದವರೆಗಿನ ಭೂಮಿ (ಚತುರಂತಕ್ಷಿತಿಕಾಂತೆ ಕೇಳ್ ಜಲಧಿ ಕೇಳ್ ಸಪ್ತಾರ್ಚಿ ಕೇಳ್ ತಾತ ಮಾರುತ ಕೇಳ್ ಮಾರುತಮಾರ್ಗ ಕೇಳ್: **ಗದಾಯು,** ೬. ೨೪)

**ಚತುರಂತಯಾನ** – ಪಲ್ಲಕ್ಕಿ (ಮನುಷ್ಯವಾಹ್ಯಮಪ್ಪ ಚತುರಂತಯಾನವನೇಱಿಸಿ: **ಶಾಂತಿಪು,** ೪. ೯೦ ವ)

**ಚತುರಶೀತಿ** – ಎಂಬತ್ತನಾಲ್ಕು (ಚತುರಶೀತಿಲಕ್ಷ ಪ್ರಮಾಣಯೋನಿಮುಖದೊಳ್: **ಸುಕುಮಾಚ,** ೧೧. ೭೯)

**ಚತುರಶ್ರ** –ನಾಲ್ಕು ಮೂಲೆಗಳುಳ್ಳದ್ದು, ಚಚ್ಚೌಕ (ಚತುರಶ್ರಂ ಮೂಱುಂ ಯೋಜನದಳವಿಯ ಸಭಾಮಂಟಪಮಂ ಒಂದು ಲಕ್ಕ ರಕ್ಕಸವಡೆಯಿಂ ಪೊತ್ತು ತರಿಸಿ: **ಪಂಪಭಾ,** ೬. ೨ ವ)

**ಚತುರಾಂತರ** – ಚಚ್ಚೌಕದ ನಡುವೆ, ಹಸೆಯ ಜಗುಲಿ (ವಿವಾಹಗೇಹಮಂ ಸಮೆಯಿಸಿ ಅದಱ ನಡುವಣ ಆರ್ದ್ರಮೃತ್ತಿಕಾವಿರಚಿತಮಪ್ಪ ಚತುರಾಂತರದೊಳ್: **ಪಂಪಭಾ,** ३. ೭೪ ವ)

**ಚತುರಾಸ್ಯ** – ಚತುರ ನುಡಿಗಳನ್ನಾಡುವವನು; ನಾಲ್ಕು ಮುಖಗಳನ್ನುಳ್ಳ ಬ್ರಹ್ಮ (ಪಂಕರುಹಾಸನಂ ಪ್ರಜಾಪತಿ ವಿರಿಂಚನಂ ವಿಧಿ ಪಿತಾಮಹಂ ಚತುರಾಸ್ಯಂ: **ಅಭಿಧಾವ,** ೧. ೧. ೧೧)

**ಚತುರಾಸ್ಯತ್ವ** – [ಜೈನ] ಕೇವಲಜ್ಞಾನಿಗೆ ಉಂಟಾಗುವ ಹತ್ತು ವಿಶೇಷಗಳಲ್ಲಿ ಒಂದು: ನಾಲ್ಕು ಕಡೆಯೂ ಒಮ್ಮೆಗೇ ನೋಡಿವ ಶಕ್ತಿ (ಚತುರಾಸ್ಯತ್ವಂ ಅಭುಕ್ತಿಭಾವಂ ಅನಿಮೇಷತ್ವಂ .. .. ಅಚ್ಛಾಯತೆಯೆಂಬ ಪತ್ತು ಅತಿಶಯಂ ತೀರ್ಥೇಶನೊಳ್ ಶೋಭಿಕುಂ: **ಚಂದ್ರಪ್ರಪು,** ೧೫. ೧೧३)

**ಚತುರಾಸ್ಯಪ್ರಿಯೆ** – ಸರಸ್ವತಿ (ಪುಸ್ತಕಹಸ್ತಾನ್ವಿತೆ ಪುಣ್ಯಕಥೆಯನೊರ್ವಳೆ ಚತುರಾಸ್ಯಪ್ರಿಯೆ ಸುರಾಗದಿಂ ವಾಚಿಸಿದಳ್: **ಪುಷ್ಪದಂಪು,** ೯. ೮३)

**ಚತುರಿಂದ್ರಿಯ** – ಪಂಚೇಂದ್ರಿಯಗಳಲ್ಲಿ ಕಿವಿಯ ಹೊರತು ಉಳಿದ ನಾಲ್ಕು ಇಂದ್ರಿಯಗಳಿರುವ ಜೀವಿ, ಕೀಟ ಸ್ಪರ್ಶನ ರಸನ ಘ್ರಾಣ ಚಕ್ಷುರಿಂದ್ರಿಯಸಮನ್ವಿತಂಗಳಪ್ಪ ಮಧುಕರಾದಿ ಚತುರಿಂದ್ರಿಯಂಗಳ್: **ಆದಿಪು,** ೧೦. ೬३ ವ)

**ಚತುರಿಕೆ** – ಚತುರೆ (ಇತ್ತ ಚತುರ ಚತುರಿಕೆಯರಪ್ಪ ಪರಿಚಾರಕಿಯರುಂ: **ಪುಷ್ಪದಂಪು,** ೮. ೫३ ವ)

**ಚತುರುಪಧಾವಿಶುದ್ಧ** – ಧರ್ಮ ಅರ್ಥ ಕಾಮ ಭಯಗಳ ದೃಷ್ಟಿಯಿಂದ ಶುದ್ಧನಾದವನು (ಆತನ ಮಾತಂ ಮಾರ್ಕೊಂಡು ಸಮಸ್ತಶಾಸ್ತ್ರವಿಚಾರಸಾರನುಂ ಚತುರುಪಧಾವಿಶುದ್ಧನುಂ ಬುದ್ಧಿವೃದ್ಧನುಂ .. .. ವಸುಭಾಗಭಟ್ಟಂ: **ಪಂಚತಂತ್ರ,** ೬೭ ವ)

**ಚತುರುಪಾಯ** – ಸಾಮ ದಾನ ಭೇದ ದಂಡಗಳು (ಸಾಮದಾನಭೇದದಂಡಮೆಂಬ ಚತುರುಪಾಯಂಗಳೊಳಂ

ಮತ್ತಂ ಅನೇಕವಿಧದೊಳಂ ಶತ್ರುವಣ ಉದಾಸೀನನಂ ಮಾಡಲುಂ: **ಪಂಚತಂತ್ರ,** ೧೦೦ ವ)

**ಚತುರ್ಗತಿ –** [ಜೈನ] ದೇವ, ಮಾನವ, ತಿರ್ಯಕ್, ನಾರಕ ಎಂಬ ನಾಲ್ಕು ವಿಧವಾದ ಜನ್ಮಗಳು (ಚತುರ್ಗತಿಸ್ವರೂನಿರೂಪಣಂ ತಪೋದಾನವಿಧಾನ ವರ್ಣನಂ .. .. ಎಂದಿತು ಅವಯವಂಗಳೆಂಟಕ್ಕುಂ: **ಆದಿಪು,** ೧. ೪೨ ವ)

**ಚತುರ್ಗುಣ –** ನಾಲ್ಕು ಪಟ್ಟು (ಜಗದೊಳ್ ಪತಿಹಿತದೆಡೆಯೊಳ್ ನೆಗಟ್ಟಿ ಇನಜನಿಂ ಏಕದಂತನಿಂ ಪವನಜನಿಂ ಖಗರಾಜನಿಂ ದುರ್ಗಂ ದ್ವಿಗುಣಂ ತ್ರಿಗುಣಂ ಚತುರ್ಗುಣಂ ಪಂಚಗುಣಂ: **ಪಂಚತಂತ್ರ,** ೫೫)

**ಚತುರ್ಜ್ಞಾನ –** [ಜೈನ] ಮತಿ, ಶ್ರುತಿ, ಅವಧಿ, ಮನಃಪರ್ಯಯಗಳೆಂಬ ನಾಲ್ಕು ಬಗೆಯ ಜ್ಞಾನಗಳು (ಚತುರ್ಜ್ಞಾನನೇತ್ರರಂ ಭೋಂಕೆನೆ ಕಂಡು ರಹರಹಪರಿಣಾಮಪರಿಣತನಾಗಿ ಸಮುದಾಯಮಂ ಬಂದಿಸಿ ಸಮುಚಿತೋದ್ದೇಶದಾಸನದೊಳ್ ಕುಳ್ಳಿರ್ದು: **ಸುಕುಮಾಚ,** ೮. ೪೮ ವ)

**ಚತುರ್ನಿಕಾಯ –** [ಜೈನ] ಭವನವಾಸಿ, ವ್ಯಂತರ, ಜ್ಯೋತಿಷ್ಯ, ಕಲ್ಪವಾಸಿಗಳೆಂಬ ನಾಲ್ಕು ಪ್ರಕಾರದ ದೇವತಾಸಮೂಹ (ದ್ವಾರಾವತೀಪುರಮನೆಯ್ದಿ ಬಹಿಃಪಪ್ರದೇಶದೊಳ್ ನಿಲೆ ಚತುರ್ನಿಕಾಯ ಅಮರೇಂದ್ರವೃಂದವೊಂದಿ: **ಕರ್ಣನೇಮಿ.** ೮. ೧೧೧ ವ)

**ಚತುರ್ಥಕಾಲ –** ಸುಷಮಕಾಲ (ಪಾಪವರ್ತನಮನಯಂ ಪ್ರವರ್ತಿಸದು ವರ್ತಿಪುದು ಎಯ್ದಿ ಚತುರ್ಥಕಾಲ ವರ್ತನಮೆನೆ: **ಪಾರ್ಶ್ವನಾಪು,** ೬.೧೧)

**ಚತುರ್ಥಧ್ಯಾನ –** [ಜೈನ] ಆರ್ತ, ರೌದ್ರ, ಧರ್ಮ, ಶುಕ್ಲ ಎಂಬ ನಾಲ್ಕು ಬಗೆಯ ಧ್ಯಾನಗಳಲ್ಲಿ ಕೊನೆಯದು (ಧ್ಯಾನಾನಳದಗ್ಧ ಶೇಷಾಶೇಷ ಕರ್ಮೇಂಧನನುಮಾಗಿ: **ಆದಿಪು,** ೧೬. ೭೪ ವ)

**ಚತುರ್ಥಸ್ನಾನ –** ಮುಟ್ಟಾದವಳು ನಾಲ್ಕನೆಯ ದಿನ ಮಾಡುವ ಸ್ನಾನ (ಮರುದೇವಿ ಮಹಾದೇವಿ ಚತುರ್ಥಸ್ನಾನದೊಳ್ ಕಲ್ಪದ್ರುಮ ದುಕೂಲವಸನೆಯುಂ .. .. ಆಗಿ (**ಆದಿಪು,** ೭. ೨೬)

**ಚತುರ್ಥಾಂಶ –** ನಾಲ್ಕನೆಯ ಒಂದು ಭಾಗ (ಪಲ್ಯೋಪಮ ಚತುರ್ಥಾಂಶಂ ಜಘನ್ಯದಿಂ ಪಲ್ಯೋಪಮಾಷ್ಟಮ ಭಾಗಮಕ್ಕುಂ: **ಸುಕುಮಾಚ,** ೧೦. ೫೯ ವ)

**ಚತುರ್ದಂತ –** ನಾಲ್ಕು ಹಲ್ಲು[ಗಳುಳ್ಳದ್ದು], ಐರಾವತ (ಲಲಿತಾಂಗುಲಿ ಭಾಸುರಭದ್ರ ಲಕ್ಷಣಾಲಂಕೃತಂ ಚತುರ್ದಂತಂ: **ಅಜಿತಪು,** ೫. ೬೬)

**ಚತುರ್ದಶ –** ಹದಿನಾಲ್ಕು (ಚತುರ್ದಶ ಮಹಾನದಿಗಳ ನೀರುಮಂ ತಟತಟ ತೊಳಗುವ ಕಳಧೌತಕಳಶಂಗಳೊಳ್ ತೆಕ್ಕನೆ ತೀವಿ ತಂದ ವಾರವನಿತಾಜನಕ್ಕಂ: **ಪಂಪಭಾ,** ೧೪. ೧೭ ವ)

**ಚತುರ್ದಶಗುಣ –** ಸಂಗೀತದ ಹದಿನಾಲ್ಕು ಗುಣಗಳು (ವರ್ಣ ಅಲಂಕಾರ ಸ್ವರ ಪದ ಸಮಾಸ ಉಚ್ಛ್ವಾಸ ಸಭಾ ಆದೇಶ ತಾಳ ಲಯ ಯತಿ ಫಣಿಸ್ಥಾನ ದೇಶ ಕಾಲಜ್ಞತೆಗಳೆಂಬ ಚತುರ್ದಶಗುಣಂಗಳೊಳ್ ಕೂಡಿ ಬಾಜಿಸದಾಗಳ್: **ಹರಿವಂಶ,** ೫. ೨ ವ)

**ಚತುರ್ದಶಪೂರ್ವ –** [ಜೈನ] ಶ್ರುತಾಂಗಗಳ ವಿವರಣೆ ನೀಡುವ ಹದಿನಾಲ್ಕು ಪೂರ್ವಗ್ರಂಥಗಳು: ಉತ್ಪಾದ, ಅಗ್ರಾಯಣೀ, ವೀರ್ಯಾನುವಾದ, ಅಸ್ತನಾಸ್ತಪ್ರವಾದ, ಜ್ಞಾನಪ್ರವಾದ, ಸತ್ಯಪ್ರವಾದ, ಆತ್ಮಪ್ರವಾದ, ಕರ್ಮ ಪ್ರವಾದ, ಪ್ರತ್ಯಖ್ಯಾನ, ವಿದ್ಯಾನುವಾದ, ಕಲ್ಯಾಣವಾದ, ಪ್ರಾಣವಾಯು, ಕ್ರಿಯಾವಿಶಾಲ, ಲೋಕಬಿಂದುಸಾರ (ಇತ್ತ ಗಂಧಭಾಜನ ಮುನಿಯುಂ ದ್ವಾದಶಾಂಗ ಚತುರ್ದಶಪೂರ್ವಮಪ್ಪ ಆಗಮಮೆಲ್ಲಮಂ ಕಲ್ತು ಪಲಕಾಲಂ ಉಗ್ರೋಗ್ರ ತಪಶ್ಚರಣಂಗೆಯ್ದು: **ವಡ್ಡಾರಾ,** ಪು ೪೯, ಸಾ ೧೩)

**ಚತುರ್ದಶಭುವನ –** ಹದಿನಾಲ್ಕು ಲೋಕಗಳು (ಈ ಚತುರ್ದಶಭುವನಮೇ ಬೆಲೆಯೆನಿಪ ಕೃತಿಯಂ ಅಮಳಾಕೃತಿಯಂ: **ನೇಮಿನಾಪು,** ೧. ೪೬)

**ಚತುರ್ದಶಮನು –** ಹದಿನಾಲ್ಕು ಮಂದಿ ಮನುಗಳು; (ವೈದಿಕ) ಸ್ವಾಯಂಭುವ, ಸ್ವಾರೋಚಿತ, ಉತ್ತಮ, ತಾಮಸ, ರೈವತ, ಚಾಕ್ಷುಷ, ವೈವಸ್ವತ, ಸಾವರ್ಣಿ, ದಕ್ಷಸಾವರ್ಣಿ, ಬ್ರಹ್ಮಸಾವರ್ಣಿ, ಧರ್ಮಸಾವರ್ಣಿ, ರುದ್ರಸಾವರ್ಣಿ, ದೇವಸಾವರ್ಣಿ, ಇಂದ್ರಸಾವರ್ಣಿ; [ಜೈನ] ಪ್ರತಿಶ್ರುತಿ, ಸನ್ಮತಿ, ಕ್ಷೇಮಂಕರ, ಕ್ಷೇಮಂಧರ, ಸೀಮಂಕರ, ಸೀಮಂಧರ, ವಿಮಲವಾಹನ, ಚಕ್ಷುಷ್ಮಂತ, ಯಶಸ್ವಿ, ಅಭಿಚಂದ್ರ, ಚಂದ್ರಾಭ, ಮರುದ್ದೇವ, ಪ್ರಸೇನಜಿತು, ನಾಭಿರಾಜ (ಅಜ್ಞಾನತ್ರಯರಹಿತರ್ .. .. ಅಧಿಕಪ್ರಜ್ಞರ್ ಪುಟ್ಟುವರೀ ನೆಲನಾಜ್ಞಾಮುದ್ರಿತಮೆನಲ್ ಚತುರ್ದಶ ಮನುಗಳ್: **ಪಂಪರಾ,** ೧. ೬೯)

**ಚತುರ್ದಶಲೋಕ –** ಹದಿನಾಲ್ಕು ಲೋಕಗಳು: ಭೂ, ಭುವ, ಸುವ, ಮಹ, ಜನ, ತಪ, ಸತ್ಯ, ಎಂಬ ಊರ್ಧ್ವಲೋಕಗಳು ಮತ್ತು ಅತಳ, ವಿತಳ, ಸುತಳ, ತಲಾತಳ, ಮಹಾತಳ, ರಸಾತಳ, ಪಾತಾಳ ಎಂಬ ಏಳು ಅಧೋಲೋಕಗಳು (ಚತುರ್ದಶಲೋಕಮನೆಯ್ದೆ ಗರ್ಭದೊಳ್ ಧರಿಯಿಸಿದಚ್ಯುತಂ ಬಳೆಯೆತನ್ನುದರಾಂತರಾಳದೊಳ್: **ಜಗನ್ನಾವಿ,** ೨. ೯೮)

**ಚತುರ್ನಿಕಾಯಾಮರ –** ಭುವನ, ವನ, ಜ್ಯೋತಿ, ಕಲ್ಪ – ಇವುಗಳ ದೇವತೆಗಳು (ಅಂತು ಚತುರ್ನಿಕಾಯಾಮರಜನಂ ಬೆರಸುಂ ಅಮರರಾಜಂ ಅಮರನಗರಿಗೆ ಪೋದಂ: **ಅಜಿತಪು,** ೫, ೬೦ ವ)

**ಚತುರ್ನೃಪವಿದ್ಯೆ –** ರಾಜನು ಕಲಿಯಬೇಕಾದ ವಿದ್ಯೆಗಳು; ಸಾಮ, ದಾನ, ಭೇದ, ದಂಡ (ತ್ರಿವಿಧಶಕ್ತಿಪ್ರಯುಕ್ತನುಂ ಚತುರ್ನೃಪವಿದ್ಯಾವಿಶರದನುಂ: **ಚಂದ್ರಪ್ರಪು,** ೭. ೩೫ ವ)

**ಚತುರ್ಬಲ –** ಚತುರಂಗಬಲ (ಘೂರ್ಣಿತ ಅರ್ಣವಮಂ ಒತ್ತರಿಸಿತ್ತು ಚತುರ್ಬಲ ಆರ್ಣವಂ: **ಪಂಪಭಾ,** ೧೦. ೨೮)

**ಚತುರ್ಭಕ್ತಿ –** [ಜೈನ] ನಾಲ್ಕು ಭಕ್ತಿಗಳು (ಅರ್ಹತ್‌ಭಕ್ತಿ ಆಚಾರ್ಯಭಕ್ತಿ ಬಹುಶ್ರುತ ಭಕ್ತಿ ಶ್ರುತಭಕ್ತಿ ಎಂಬ ಚತುರ್ಭಕ್ತಿಯುಂ: **ಚಂದ್ರಪ್ರಪು,** ೧೦. ೨೨)

**ಚತುರ್ಭುಜ –** ನಾಲ್ಕು ತೋಳು(ಗಳುಳ್ಳವನು), ಕೃಷ್ಣ, ವಾಸುದೇವ (ಸತ್ಯಭಾಮೆಯಂ ಸಕಳಜನಸ್ತುತ್ಯಂ ಖಚರಾಗ್ರಣಿ ಕೃತಕೃತ್ಯಂಗೆ ಚತುರ್ಭುಜಂಗೆ ತಂದಿತ್ತಂ: **ಕರ್ಣನೇಮಿ,** ೭. ೩೬)

**ಚತುರ್ಮುಖ –** ನಾಲ್ಕುಮುಖಗಳವನು, ಬ್ರಹ್ಮ ಇರ್ದಂ ಜಗತ್ಪತಿಯೊಡ್ಡೋಲಗದೊಳ್ ಚತುರ್ಮುಖಂ .. .. ವಾಣೀವಧೂಟೀಸಖಂ: **ಜಗನ್ನಾವಿ,** ೧. ೨೬); [ಜೈನ] ಮಹಾಸಾಮಂತರು ಮಾಡುವ ಜಿನಪೂಜೆ ಮಹಾಮಂಂಡಳಿಕ ಪ್ರಮುಖ ಮಕುಟಬದ್ಧರ್ ಮಾಟ್ಪಿ ಚತುರ್ಮುಖಮುಂ: **ಆದಿಪು,** ೧೫. ೧೩ ವ)

**ಚತುರ್ವರ್ಗ –** ನಾಲ್ಕು ಪುರುಷಾರ್ಥಗಳು (ಸಮನಿಪ ಧರ್ಮಕ್ಕವಿರುದ್ಧಂ ಅರ್ಥಂ ಅರ್ಥಕ್ಕೆ ಕಾಮಂ ಅವಿರುದಧಂ

ಅನುಕ್ರಮದೊಳೆ ಕಾಮಕ್ಕಂ ಕಡೆಯ ಮೋಕ್ಷಂ ಅವಿರುದ್ಧಮೆನೆ ಚತುರ್ವರ್ಗಫಲಂ: **ಅಜಿತಪು,** ೨. ೪೭)

**ಚತುರ್ವಲ** – ಚತುರಂಗಬಲ ನೆರೆದು ಚತುರ್ವಲಂಬೆರಸು ಬಂದುಱದೊಡ್ಡಿದ ಗಂಡರಾರುಂ ಎನ್ನಜೆಯದ ಗಂಡರೇ: **ಪಂಪಭಾ,** ೧೧. ೮೯)

**ಚತುರ್ವಾಸರ** – (ಎನಗೆ ಇಂದಿಂಗೆ ಆಱುತಿಂಗಳ್ ಸಮನಿಸಿದಪುದಿಲ್ಲ ಎಲ್ಲಿಯುಂ ಬಂದಿಮಂಚಲ್ ಖನನಪ್ರಾರಂಭ ಚೌರ್ಯಾದಿಗಳ್ ಅನಶನಂ ಈಗಳ್ ಚತುರ್ವಾಸರಂ **ಸುಕುಮಾಚ,** ೭. ೧೮)

**ಚತುರ್ವಿಂಶತಿ** – ಇಪ್ಪತ್ತನಾಲ್ಕು (ಚತುರ್ವಿಂಶತಿ ಅರ್ಹತ್ ಪ್ರತಿಮಾವಿರಾಜಮಾನ: **ಆದಿಪು,** ೧೬. ೩೭ ವ)

**ಚತುರ್ವಿಧದಾನ** – [ಜೈನ] ಆಹಾರ, ಔಷಧ, ವಿದ್ಯೆ ಮತ್ತು ಅಭಯಗಳೆಂಬ ನಾಲ್ಕು ದಾನಗಳು (ಸಂದ ಚತುರ್ವಿಧದಾನಂ ಅಗುಂದಲೆಯೆನೆ ಮಾಡಿ; **ಕರ್ಣನೇಮಿ,** ೨. ೮೦)

**ಚತುರ್ವಿಧ ಪುರುಷಾರ್ಥವೃತ್ತಿ** – ಹಣಸಂಪಾದನೆ ಮತ್ತು ಕಾಪಾಡಿಕೊಳ್ಳುವ ನಾಲ್ಕು ಬಗೆಗಳು (ಅಲಬ್ಧಲಾಭಂ ಲಬ್ಧಪರಿರಕ್ಷಣಂ ರಕ್ಷಿತವಿವರ್ಧನಂ ವರ್ಧಿತತೀರ್ಥ ಪ್ರತಿಪಾದನಂ ಎಂಬ ಚತುರ್ವಿಧ ಪುರುಷಾರ್ಥವೃತ್ತಿಯಾಗಿರ್ಪುದು: **ಪಂಚತಂತ್ರ,** ೭೫ ವ)

**ಚತುರ್ವಿಧಾಮರ** – ಚತುರ್ನಿಕಾಯ (ನಿರುತಂ ಭಾವನರುಂ ವನಾವಸಥರುಂ ಜ್ಯೋತಿಷ್ಕರುಂ ಕಲ್ಪವಾಸರುಂ ಆಆಗಿರ್ದ ಚತುರ್ವಿಧಾಮರರ್ ಉದಾರರ್: **ಪುಷ್ಪದಂಪು,** ೧೦. ೧೩)

**ಚತುರ್ವಿಧಾರಾಧನೆ** – [ಜೈನ] ಸಮ್ಯಕ್‌ದರ್ಶನ, ಸಮ್ಯಕ್‌ಜ್ಞಾನ, ಸಮ್ಯಕ್‌ಚಾರಿತ್ರ, ಸಮ್ಯಕ್‌ತಪಸ್ಸು ಎಂಬ ನಾಲ್ಕು ಆರಾಧನಾ ಬಗೆಗಳು (ಅರಲ್ದ ಮುಖಪದ್ಮಮುಂ ನಿಬಿಡಬದ್ಧ ಪರ್ಯಂಕದೊಳ್ ಮರಲ್ದ ಕರಪಲ್ಲವದ್ವಿತಯಮುಂ ಬೆಡಂಗಪ್ಪಿನಂ ನಿರಂತರವಿಶೋಧಿ ಕೂಡಿರೆ ಚತುರ್ವಿಧ ಆರಾಧನಾಪುರಸ್ಸರತೆಯಿಂ ಸಮಾಧಿವಿಧಿಗೇಂ ಮನಂದಂದದಳೋ: **ಸುಕುಮಾಚ,** ೯. ೧೫)

**ಚತುರ್ವಿಧಾಹಾರ** – [ಜೈನ] ಲೇಪ್ಯ, ಓಜ, ಕಬಳ, ಮಾನಸ ಎಂಬ ಆಹಾರಗಳು (ಮಹಾಬಳನಂ ಜಾತರೂಪಧರನಂ ಮಾಡಿ ಚತುರ್ವಿಧಾಹಾರ ಶರೀರಪ್ರತ್ಯಾಖ್ಯಾನಮಂ ಕೊಟ್ಟು: **ಆದಿಪು,** ೨. ೫೧ ವ)

**ಚತುರ್ವಿಧಾಹಾರಶರೀರಪ್ರತ್ಯಾಖ್ಯಾನ** – ನಾಲ್ಕು ಬಗೆಯ ಆಹಾರಗಳನ್ನೂ ಶರೀರದ ಅಭಿಮಾನವನ್ನೂ ತೊರೆಯುವುದು: (ಮಹಾಬಳನಂ ಜಾತರೂಪಧರನಂ ಮಾಡಿ ಚತುರ್ವಿಧಾಹಾರಶರೀರಪ್ರತ್ಯಾಖ್ಯಾನಮಂ ಕೊಟ್ಟು: **ಆದಿಪು,** ೨. ೫೧ ವ)

**ಚತುರ್ವೇದಪಾರಗ** – ಋಕ್, ಯಜುರ್, ಸಾಮ, ಅಥರ್ವಣ ಎಂಬ ನಾಲ್ಕು ವೇದಗಳಲ್ಲಿ ಪರಿಣತ (ಚತುರ್ವೇದಪಾರಗರ ಮನೆಯ ಮುಂದಣ ಚತುಶ್ಶಾಲೆಯೊಳ್ ಬೀಡಂ ಬಿಟ್ಟು: **ಪಂಪಭಾ,** ೩. ೨೨ ವ)

**ಚತುಶ್ಶಾಲೆ** – ನಾಲ್ಕು ಕಡೆ ಕೈಸಾಲೆಯಿರುವ ಅಂಗಳ (ಚತುರ್ವೇದಪಾರಗರ ಮನೆಯ ಮುಂದಣ ಚತುಶ್ಶಾಲೆಯೊಳ್ ಬೀಡಂ ಬಿಟ್ಟು: **ಪಂಪಭಾ,** ೩. ೨೨ ವ)

**ಚತುಷ್ಕ** – ನಾಲ್ಕರ ಗುಂಪು (ಶುದ್ಧಾಕ್ಷರಂಗಳುಮಂ ಯೋಗವಾಹಚಯುಷ್ಕಮುಂ ಸಂಯೋಗಾಕ್ಷರಂಗಳುಮಂ ಬ್ರಹ್ಮಿಗೆ ದಕ್ಷಿಣಹಸ್ತದೊಳ್ ಉಪದೇಶಂಗೆಯ್ದು: **ಆದಿಪು,** ೮. ೫೯ ವ); ಚೌಕ (ಆಗಳಾ ಪುರದ್ವಾರಚತುಷ್ಕದೊಳ್ ಯದುಬಲಂ ತಳರ್ದತ್ತು: **ಜಗನ್ನಾವಿ,** ೭. ೪೭)

**ಚತುಷ್ಕಗೋಪುರ** – ನಾಲ್ಕು ಗೋಪುರಗಳಿರುವ (ವಿಭೂತಿಯನಾಂತುದಿಂತು ಕೌಶಂಬಿಪುರಂ ಜಿತಾಮರಪುರಂ ಕಮನೀಯ ಚತುಷ್ಕಗೋಪುರಂ: **ಸುಕುಮಾಚ,** ೧. ೭೯)

**ಚತುಷ್ಕಷಾಯ** – [ಜೈನ] ಕ್ರೋಧ, ಮಾನ, ಮಾಯಾ, ಲೋಭಗಳೆಂಬ ನಾಲ್ಕು ಕಷಾಯಗಳು (ತ್ರಿಗುಪ್ತಿಗುಪ್ತನುಂ ಚತುಷ್ಕಷಾಯದರ್ಪದಳನನುಂ: **ಅಜಿತಪು,** ೩. ೧ ವ)

**ಚತುಷ್ಕಶೃಂಗಾಟವೇದಿಕೆ** – ನಾಲ್ಕು ದಾರಿಗಳು ಕೂಡುವ ವೇದಿಕೆ (ನಾನಾಮಣಿಮಯ ಪ್ರಾಸಾದಂಗಳೊಳಂ ವಿವಿಧ ವೀಥೀಸನಾಥ ಚತುಷ್ಕಶೃಂಗಾಟವೇದಿಕೆಗಳೊಳಂ: **ಆದಿಪು,** ೬. ೧೦೬)

**ಚತುಷ್ಕೋಣ** – ನಾಲ್ಕು ಮೂಲೆ, ಚೌಕಾಕೃತಿ (ವೇದಿಕೆಯೊಳ್ ರಂಜಿಸಿದುವೆಳನೇಸಱು ನೆನೆಯಿಸುವ ಚಯುಷ್ಕೋಣ ಶೋಣಮಣಿಕಲಶಂಗಳ್: **ಪಂಪರಾ,** ೫. ೨೬)

**ಚತುಷ್ಪದಿ**– ನಾಲ್ಕು ಪಾದಗಳು ಇರುವ ಛಂದೋರೂಪ (ಅಂತುಂ ಯತಿಯಂ ಪೇಟ್ವಾಗ್ರರ್ಪಂತಾದ್ಯದೊಳಲಸದೆ ಆರ್ಯೆಯೊಳ್ ಕಂದದೊಳಂ ಸಂತಂ ದ್ವಿತೀಯ ಪಾದಗತಾಂತದೊಳಕ್ಕದು ಚತುಷ್ಪದೀ ಪದವಿಗಳೊಳ್: **ಕವಿರಾಮಾ,** ೧. ೭೭)

**ಚತುಷ್ಷಷ್ಟಿ** – ಅರವತ್ತನಾಲ್ಕು (ಯಕ್ಷಕುಮಾರರ್ ನೆರೆದಿಕ್ಕೆ ಚತುಷ್ಷಷ್ಟಿಚಮರರುಹದ ಪೊದಲ್ದ ಪೊಳೆಪು ದೆಸೆದೆಸೆಗೆಸೆದಿರ್ಕುಂ: **ಆದಿಪು,** ೧೦. ೪೨)

**ಚತುಸ್ತ್ರಿಂಶದತಿಶಯ** – ಮೂವತ್ತನಾಲ್ಕು ಅತಿಶಯಗಳು: ಸ್ವಾಭಾವಿಕ ಅತಿಶಯಗಳು ೧೦, ಇವು ತೀರ್ಥಂಕರನು ಜನ್ಮಗ್ರಹಣ ಮಾಡಿದಾಗಲೇ ಉತ್ಪನ್ನವಾಗಿರುತ್ತವೆ. ಘಾತಿಕರ್ಮಗಳು ನಾಶವಾದ ಮೇಲೆ ಬರುವ ಅತಿಶಯಗಳು ೧೧, ತೀರ್ಥಂಕರನಿಗೆ ಕೇವಲಜ್ಞಾನ ಉಂಟಾದ ಮೇಲೆ ಇವು ಪ್ರಕಟವಾಗುತ್ತವೆ. ಮತ್ತು ತೀರ್ಥಂಕರನ ಮಾಹಾತ್ಮ್ಯದಿಂದ ದೇವಕೃತವಾಗಿ ಬರುವ ಅತಿಶಯಗಳು ಉಳಿದವು (ದೇವಕೃತಂಗಳುಮಂ ಸ್ವಾಭಾವಿಕಮುಮಂ ಅಜಿತ ನೀನೆ ತಾಳ್ದಿದೆ ಜನಚೋದ್ಯಾವಹಮಿವು ನಿನಗಲ್ಲದೆ ದೇವ ಚತುಸ್ತ್ರಿಂಶದತಿಶಯಂ ಪೆಱರ್ಗೊಳವೇ: **ಅಜಿತಪು,** ೮. ೧೭)

**ಚತ್ತಾಣ** – ಕಂದವೃತ್ತಗಳೊಡನೆ ದೇಸಿ ಛಂದೋಪ್ರಕಾರಗಳಿಂದ ಕೂಡಿದ ಒಂದು ಬಗೆಯ ಕಾವ್ಯ (ಕಂದಂಗಳ್ ಪಲವಾಗಿರೆ ಸುಂದರ ವೃತ್ತಂಗಳ್ ಅಕ್ಕರಂ ಚವುಪದಿ ಮತ್ತಂ ದಲ್ ಗೀತಿಕೆ ತಿವಿದಿಗಳಂದಂಬೆತ್ತೆಸೆಯೆ ಪೇಟ್ದೊಡೆ ಅದು ಚತ್ತಾಣಂ: **ಕವಿರಾಮಾ,** ೧. ೩೫)

**ಚತ್ರ** – ಧರ್ಮಸತ್ರ (ಚತ್ರದ ಕೂಟ್ಗೆ ಮೆಯ್ಯಾಂಪ ನಡುಮನೆಯೊಳ್ ಬಾವಿಯನಗಟ್ವಿ: **ಧರ್ಮಾಮೃ,** ೯. ೧೯ ವ)

**ಚದುಕ** – ನಾಲ್ಕು ಕಂಬಗಳ ಆಧಾರವುಳ್ಳ ಮಂಟಪ (ಗುಡಿ ತೋರಣಂ ಸಸಿ ಮೊಸರ್ ಪಸೆ ಸೇಸೆ ವಿಳಾಸಿನೀಜನಂ ಚದುಕಮಿದು ಒಡ್ಡುಗಟ್ಟೆ: **ನೇಮಿನಾಪು,** ೨. ೩೯)

**ಚದುರ್** – ಚಾತುರ್ಯ (ಧರ್ಮಮಂ ಘಟಿಯಿಸಿಕೊಳ್ವುದೊಂದೆ ಚದುರ್: **ಆದಿಪು,** ೩. ೫೩)

**ಚದುರ** – ಬುದ್ಧಿವಂತ (ದಾನದೊಳಂ ಸಾಮದೊಳಂ ನಿನಗರ್ಥಿ ಚಕ್ರವರ್ತಿಗಂ ಅದೆ ಮನೋನಿಚಿತಂ ಉಟಿದುದು ನೃಪ ನೀನಜಿವೈ ನಯಮನೊಂದೆ ಮಾಟ್ಪುದು ಚದುರಂ: **ಶಾಂತಿಪು,** ೨. ೫೯)

**ಚದುರಂಗ** – ಚತುರಂಗ (ನೆತ್ತಂ ಚದುರಂಗಂ ಬಾರ್ಗುತ್ತಂ ಕಡದೊಂಟಿ ಗೊಟ್ಟಿ ಜೂದೆಂಬಿವಂ ಆಡುತ್ತುಮಿರಲಾಗದು: **ಸಮಯಪ,** ೬. ೪೮)

**ಚದುರಂಗಕಾಱ** – ಚದುರಂಗ ಆಡುವವನು (ಚದುರಂಗಕಾಱರ .. .. ಬೀಣೇಗಾಱರಾಗರಮನೆ ಪೆಂಪುಸೊಂಪನೊಳಕೊಂಡು **ಕಬ್ಬಿಗಕಾ,** ೪೨)

**ಚದುರಸಿಗೆ** – [ಚತುರಶ್ರಕ] ಚೌಕಾಕಾರದ ವಸ್ತ್ರ (ಕುದುರೆಯಿಂದಿೞಿದು ಪಲ್ಲಣಮಂ ಚದುರಸಿಗೆಯುಮಂ ಕೀೞುಮಂ ಕಳೆದು ಕುದುರೆಯಂ ನೀರೂಡಿ ಮೈದೊಳೆದು ಕಟ್ಟಿ: **ವಡ್ಡಾರಾ,** ಪು ೧೬೨, ಸಾ ೨೦)

**ಚಪಲಾ** – ಮಿಂಚು (ಗಗನೇಚರ ತೇಜಶ್ಶಿಖಿ ಪಗೆವರ ಭಾಸುರ ಯಶೋವಿತಾನಮನುರಿಪಲ್ ನೆಗೆದುದೆನೆ ಚಪಲವೇಗಂ ನೆಗೆದಂ ಗಗನಕ್ಕೆ ವಿಜಿತ ಚಪಲಾವೇಗಂ: **ಪಂಪರಾ,** ೪. ೧೦೩)

**ಚಪೇಟ** – ಅಂಗೈ, ಪಂಜ (ಗಿರಿ ಗುರು ಚಪೇಟ ಪಾಟಿತ ಕರಿಯಂ ಹರಿ ಕೊಂಡು ಕೀೞ್ ಪಾಱುದುಂ: **ನೇಮಿನಾಪು,** ೩. ೪೭)

**ಚಪೇಟಚರಣಾಘಾತ** – ಕೈಯ ಹೊಡೆತ ಮತ್ತು ಕಾಲ ಒದೆತ (ಘಾತಿಸೆ ಚಪೇಟಚರಣಾಘಾತದೊಳೞಿದಿಲ್ಲಿ ಬಂದತಿಕ್ರೋಧನನಿಂತೀ ಪುಲಿಯಾದಂ: **ಆದಿಪು,** ೫. ೧೬)

**ಚಪ್ಪರಣೆ**– ಗಿಳಿಗಳ ಸದ್ದು (ಕಳರವದಿಂ ಬಗ್ಗಿಸುವರ ಗಿಳಿಗಳ ಚಪ್ಪರಣೆಯೊಂದೆ ಸಾಲದೆ ಮದನಾ: **ಗಿರಿಜಾಕ,** ೭. ೬೨)

**ಚಪ್ಪರಿಸು** – ಸವಿ (ಚಪ್ಪರಂ ಬಿಸಿಲಂ ಚಪ್ಪರಿಸಲ್: **ಜಗನ್ನಾವಿ,** ೧೭. ೮೦); ಧ್ವನಿಮಾಡು, ಗದರಿಸು (ಸೋಗೆ ದನಿಯೆತ್ತದಿರು ಒಯ್ಯನೆ ಬಂದು ಕುಳ್ಳಿರು .. .. ಎಂದು ಗಿಳಿಗಳ್ ಕಡುಪಿಂ ನಡೆತಂದು ಸುತ್ತಲುಂ ಪಡಿಯಱರಾಗಿ ಚಪ್ಪರಿಪವೋಲಗದೊಳ್ ಸಲೆ ಕರ್ವುವಿಲ್ಲನಾ: **ಕಬ್ಬಿಗಕಾ,** ೧೦೦); ಗರ್ವಿಸು (ಕಂಡು ಕಪ್ಪಮೀಯದೆ ಚಪ್ಪರಿಸುವ ಮಂಡಳಿಕರುಮಂ ಅಡಂಗದಾಟವಿಕರುಮಂ: **ಆದಿಪು,** ೪. ೮೨ ವ)

**ಚಮತ್ಕಾರ** – ಮದ್ದಳೆಯನ್ನು ಬಾರಿಸಿ ಶಬ್ದ ಹೊರಡಿಸುವ ಒಂದು ಪರಿ (ಲಾಗು ಮೋಡಿ ಚಮತ್ಕಾರ ತುಡಿಕು ರಿಗ್ಗವಣೆ ಪಹರಣೆಗಳೆಂಬ ನಾನಾ ಶಬ್ದಂಗಳಂ ಬಾರಿಸಿ: **ಧರ್ಮಪ,** ೨. *೨೩ ವ)*

**ಚಮರಜ** – ಚಾಮರ (ಚಮರಜಮನಿಕ್ಕೆ ಖಚರ ಪ್ರಮದಾಜನಂ: **ಪಂಪರಾ,** ೧೪. ೧೨೮)

**ಚಮರರುಹ** – ಚಮರಜ (ಚತುಷ್ಷಷ್ಟಿ ಚಮರುರುಹದ ಪೊದಳ್ದ ಪೊಳೆಪು ದೆಸೆದೆಸೆಗೆಸೆದಿರ್ಕುಂ: **ಆದಿಪು,** ೧೦. ೪೨)

**ಚಮರಿ** – ಚಮರೀ ಮೃಗ (ಚಮರೀ ಲೋಲ ಲಾಂಗೂಲ ಮಾಲಾವಲಿ ವಿಕ್ಷೇಪಂಗಳಿಂ ತತ್ ಚಮರರುಹ ಮಹಾಶೋಭೆ ಕೈಗಣ್ಮೆ: **ಪಂಪಭಾ,** ೪. ೧೪); ಚಾಮರಗಿತ್ತಿ (ಒರ್ಪಿಡಿ ನಡುವಿನ ಚಮರಿಯರ್ ಇರ್ಪಿಡಿಗಳನೇೞಿ ಕೆಲಬರೆಸೆದರ್: **ಶಾಂತೀಶ್ವಪು,** ೧೦. ೬೫)

**ಚಮರೀಜ** – ಚಾಮರ (ಮದಕಳಹಂಸೆಯಂ ಪಿಂಡಿದೆ ಪೊರ್ದರ್ಪದ ಚಮರೀಜಮಾಗೆ ಜಳದೇವತೆಗೆತ್ತಿದ ಪಚ್ಚೆಯ ಸತ್ತಿಗೆಗಳ ಪುದುವೆನಿಪುದು; **ಆದಿಪು,** ೧೧. ೬೫)

**ಚಮರಿರುಹ** – ಚಮರಜ (ಸುರವಧೂಲೀಲಾವತಿಧೂತ ಪ್ರತಿಕ್ಷಣಚಂಚಚ್ಚಮರೀರುಹಂ ಪಟುನಟಪ್ರಾರಬ್ಧ ಸಂಗೀತಕಂ ತಣಿದಂ: **ಆದಿಪು,** ೨. ೭೯)

**ಚಮೂ** – ಸೇನೆ (ಪ್ರಿಯಗಳ್ಳಭೂಪತಿ ಚಮೂಪ್ರಸ್ಥಾನಮಾಚಕ್ಷತೇ: **ಪಂಪಭಾ,** ೯. ೯೭)

**ಚಮೂಪತಿ** – ದಂಡಾಧಿಪತಿ (ತಮಿಸ್ರಗುಹೆಯ ವಜ್ರದ ಪಡಿ ತತ್ಕ್ಷಿತಿಧರದೆರ್ದೆಯಂತೆ ಚಮೂಪತಿಯಿಂ ತೆಱೆದತ್ತು: **ಆದಿಪು,** ೧೪. ೫೭)

**ಚಮೂರ** – ಹುಲಿ (ಕರಿಕಲಭಂಗಳ್ ಕರಿಕೇಸರಿಗಳ್ ವೈರಮನೆ ಬಗೆಯದೆ ಅಹಿ ನಕುಲಂಗಳ್ ಹರಿಣ ಚಮೂರಂಗಳ್ ಶಾಂತರೂಪದಿಂದಿರ್ದುವು ಅಜಿತನಾಥನ ಕೆಲದೊಳ್: **ಅಜಿತಪು,** ೭. ೬)

**ಚಮ್ಮಟಿಗೆ** – [ಚರ್ಮಪಟ್ಟಿಕಾ] ಬಾರುಕೋಲು (ಅನ್ನೆಗಂ ನಕುಳನುಂ ಅಂಕವಣೆಯುಂ ಬಾಳುಂ ಬಾರುಂ ಚಮ್ಮಟಿಗೆಯುಮಂ ಒರ್ವ ಕೀೞಾಳಿಂ ಪಿಡಿಯಿಸಿಕೊಂಡು ಬಂದು: **ಪಂಪಭಾ,** ೮. ೫೪ ವ)

**ಚಮ್ಮವಾವುಗೆ** – ಚರ್ಮದ ಪಾದುಕೆ (ಸೊಸೆವಿರ್ಗೆಲ್ಲಂ ಸಲೆ ಚಮ್ಮವಾವುಗೆಯಮ ಆ ಲಲನೆ ಮಹೋತ್ಸಾಹದಿಂದೆ ಮಾಡಿಸಿಕೊಟ್ಟಳ್: **ಸುಕುಮಾಚ,** ೧೦. ೧೨೦)

**ಚಯ** – ಸಮೂಹ (ದಿಗಂಬರ ತಟಂಬರಂ ಕೀರ್ತಿವಲ್ಲೀಚಯಂ: **ಆದಿಪು,** ೩. ೫೭)

**ಚಯ್ಯಾಡು** – ಚೆಲಾಟವಾಡು (ಪಣೆಯಂ ಪಣೆಯಿಂದೊಯ್ಯನೆ ಅಣೆದಣೆದು ತಣಿಯದೆ ಚಯ್ಯಾಡುವ ತನಯಂ ಎನಗೆ ಎಂದಾದಪನೋ: **ಧರ್ಮಮಧು,** ೩. ೧೨೧)

**ಚರ** – ನಡೆಯುವವನು (ಪರನಪರಂ ಭವನಭವಂ ಚರನಚರಂ .. .. ಎನಿಪ ಗಣಿದವಿರುದ್ಧಗುಣ: **ಜಗನ್ನಾವಿ,** ೩. ೯೭); ಸೇವಕ (ಅವಧರಿಪುದೆಂದು ಚರನಿಂತೆಂದಂ: **ಪಂಪರಾ,** ೪. ೩೬)

**ಚರಣ** – ಮಾಡುವಿಕೆ (ಅವರೊಳಗೆ ದೇವಾಪಿ ನವಯೌವನಪ್ರಾರಂಭದೊಳೆ ತಪಃ ಚರಣ ಪರಾಯಣನಾದಂ; **ಪಂಪಭಾ,** ೧. ೬೫ ವ); ಪಾದ (ಚರಣಂ ಕ್ರಮಂ ಅಂಘ್ರಿ ಪದಂಬೆರಲಂಗುಉಳಿ ಪಾದತಳಮೆನೆ ಅಡಿಯೆನೆ ಪಡೆಗುಂ: **ಅಭಿಧಾವ,** ೧. ೧೨. ೩)

**ಚರಣಗ್ರಂಥ**– [ಜೈನ] ಚರಣಾನುಯೋಗವನ್ನು ವಿವರಿಸುವ ಗ್ರಂಥ (ಆಚಾರಂ ಆರಾಧನೆ ಮೊದಲಾಗೊಡೆಯ ಚರಣಗ್ರಂಥಂಗಳುಮಂ: **ವಡ್ಡಾರಾ,** ಪು. ೬, ಸಾ. ೭)

**ಚರಣತಳ** – ಅಂಗಾಲು(ಚರಣತಳಪ್ರಘಾತದೆ ಪದಾತಿಗಳಂ ನಖರಪ್ರಹಾರದಿಂ ತುರಗದೞಂಗಳಂ .. .. ನುರ್ಗುಮಾಡಿ: **ಚಂದ್ರಪ್ರಪು,** ೧೧. ೯೬)

**ಚರಣನ್ಯಾಸ** – ಹೆಜ್ಜೆಯಿಡುವಿಕೆ ಚರಣನ್ಯಾಸೋಚಿತಮೇದುರ ಕಾಂಚನಕಮಳಸಪ್ತಕಂ ಕರಮೆಸೆಗುಂ: **ಚಂದ್ರಪ್ರಪು,** ೧೬. ೩೬)

**ಚರಣಾನುಯೋಗ** – [ಜೈನ] ಸದಾಚಾರವನ್ನು ನಿರೂಪಿಸುವ ಶಾಸ್ತ್ರಭಾಗ (ಪ್ರಥಮ ಕರಣ ಚರಣಾನುಯೋಗಂಗಳಂ ನಿರವಶೇಷಂ ಕಲ್ತೊಡಲ್ಲದೆ ಜೋಯಿಸಮಂ ಕಲಲ್ಬಾರದೆಂಬುದುಂ: **ಸುಕುಮಾಚ,** ೩. ೩೫ ವ)

**ಚರಣಾಯುಧ** – ಚರಣವನ್ನೇ ಆಯುಧವಾಗುಳ್ಳುದು, ಹುಂಜ (ಕರಮೆಸೆಯೆ ಸಮೆದು ಬಂದುದು ಚರಣಾಯುಧಂ ಅದಱ ಚಿತ್ರಪರಿಶೋಭೆಗೆ ಬೆಂತರನೊಂದು ಆಶ್ರಿಸಿದುದು: **ಯಶೋಧಚ,** ೩. ೨೪)

**ಚರಣಾಯುಧವಧು** – ಕೋಳಿ (ಅರಸಿಯೆ ನಾಯ್ ಉರಗಿ ಮೊಸಳೆ ಆಡು ಉಲಾಯಂ ಚರಣಾಯುಧವಧುವಾದಳ್: **ಯಶೋಧಚ,** ೪. ೫೮)

**ಚರಣಿ** – ಮೇವು ಹಾಕುವ ಗೋದಲೆ (ಕುದುರೆಯ ಮಂದುರಮಂ ಮಾರಿ ಪೊಕ್ಕು ಚರಣಿ ಪುಲ್ಲೊಳ್ ಪೊರಳಲೊಡಂ: **ಪಂಚತಂತ್ರ** ?)

**ಚರಣೋಪಾಂತ** – ಚರಣದ ಹತ್ತಿರ (ಅನಂತವೀರ್ಯಕೇವಲಿಗಳ ಚರಣೋಪಾಂತದೊಳ್ ಕೈಗೊಂಡ ಪರಾಂಗನಾವಿರತಿವ್ರತದ ಭಂಗಮಂ ಬಗೆಯದೆ: **ಪಂಪರಾ,** ೯. ೧೦೩ ವ)

**ಚರಮ** – ಕೊನೆಯ (ಚರಮಾವಸ್ಥಿತ ವೀತರಾಗಹೃದಯಚ್ಛದ್ಮಸ್ಥ .. .. ತವಿಸಿದಂ ಪಂಚಾಂತರಾಯಂಗಳಂ: **ಅನಂತಪು,** ೯. ೧೧೯)

**ಚರಮಕಲ್ಯಾಣ** – [ಜೈನ] ಪಂಚಕಲ್ಯಾಣಗಳಲ್ಲಿ ಕೊನೆಯದು, ಪರಿನಿರ್ವಾಣ (ಪರಮನ ಚರಮಕಲ್ಯಾಣಂ ಪರಿಪೂರ್ಣಮಾಗೆ: **ಶಾಂತಿಪು,** ೧೨. ೩೭ ವ)

**ಚರಮತನು** – [ಜೈನ] ಮೋಕ್ಷಕ್ಕೆ ಹೋಗುವವನು (ಅಮೂರ್ತರ್ ಚರಮತನುಸಮಾಕಾರರ್ ಉದ್ಧೂತಲೇಪರ್ ಪ್ರಣುತರ್ .. .. ಸ್ವಕೀಯಪ್ರಭುತೆಯನೆಮಗಂ ಮಾಳ್ಕೆ ಅತಿಪ್ರೀತಿಯಿಂದಂ: **ಆದಿಪು,** ೧. ೨)

**ಚರಮದೇಹ** – ಚರಮತನು (ನೀಂ ಚರಮದೇಹನೈ ಪಂಚೇಷುವನಿಕ್ಕಿ ಗೆಲ್ದು ಪಂಚೇಂದ್ರಿಯಮಂ ಪಂಚಮಹಾಕಲ್ಯಾಣಮನಿಂ ಚೆಚ್ಚರಮೆಯ್ದಿ ಪಡೆಯ ಪಂಚಮಗತಿಯಂ: **ಅಜಿತಪು,** ೬. ೭೨)

**ಚರಮದೇಹಧರ** – [ಜೈನ] ಕೊನೆಯ ಸಲ ದೇಹಧರಿಸಿದವನು, ಮೋಕ್ಷಗಾಮಿ (ನೀಂ ಚರಮದೇಹಧರನೈ: **ಅಜಿತಪು,** ೩. ೭೨)

**ಚರಮದೇಹಧಾರಿ** – ಚರಮದೇಹಧರ (ಇವರಿರ್ವರ್ ಅರಸುಗಳಪ್ಪೊಡೆ ಚರಮದೇಹಧಾರಿಗಳ್: **ಆದಿಪು,** ೧೪. ೧೦೦ ವ)

**ಚರಮಧ್ಯಾನ** – [ಜೈನ] ನಾಲ್ಕು ಬಗೆಯ ಧ್ಯಾನಗಳಲ್ಲಿ ಕೊನೆಯದು; ಮೊದಲ ಮೂರು: ಆರ್ತ, ರೌದ್ರ, ಧರ್ಮ (ಪರಮಜಿನಪತಿಯ ಚರಮಧ್ಯಾನದಂತೆಯುಂ .. .. ಮುನ್ನೀರೆ ಮೆರೆದಪ್ಪಿದಂತೆಯುಂ: **ಮಲ್ಲಿನಾಪು,** ೧೨. ೧೦೫ ವ)

**ಚರಿಗೆ** – [ಜೈನ] ಮುನಿಗಳ ಭಿಕ್ಷೆ (ಮಿಂದುಂಡೀಗಳೆ ಬಿಜಯಂಗೆಯ್ಯೆಂದಿರೆ ಕುಳಾದ್ರಿಧೈರ್ಯಂಗೆ ಚರಿಗೆ ಮಾಣ್ದತ್ತಿನಿಸುಂ: **ಆದಿಪು,** ೯. ೧೨೯)

**ಚರಿಗೆವರ್** – [ಜೈನ] ಮುನಿಗಳು ಭಿಕ್ಷೆಗೆ ಬರುವುದು (ಅನುರಾಗದಿಂ ಆ ಪ್ರೀತಿವರ್ಧನಂ ಮುನಿವರರೆಂತೀ ಗಿರಿಗೆ ಚರಿಗೆವರ್ಪರನಾಗತಮತಿ ಬಗೆಯ ನೀನುಪಾಯಾಂತರಮಂ: **ಆದಿಪು,** ೫. ೭)

**ಚರಿಗೆವುಗು** – ಚರಿಗೆಗೆ ಹೋಗು (ಊರಿಲ್ಲ ಕೇರಿಯಿಲ್ಲ ಎಲ್ಲಿ ಚರಿಗೆವುಗುವಂ ಅಂತು ಕೆಮ್ಮನೇಕೆ ಎಮ್ಮಂ ತಾಂಗಿದಪಿರಿ ಎಂದೊಡೆ: **ವಡ್ಡಾರಾ,** ಪು ೯೦, ಸಾ ೨೯)

**ಚರಿಗೆವೊಗು** – [ಜೈನ] ಮುನಿಗಳು ಭಿಕ್ಷೆಗಾಗಿ ಮನೆಯನ್ನು ಹೊಗು (ನಿಯಮದಿಂ ನಿರ್ಮಳಚರಿತಂ ಚರಿಗೆವೊಕ್ಕಂ ಅರಸನ ಬೀಡಂ: **ಆದಿಪು,** ೫. ೧೦)

**ಚರಿತ** – ಆಚಾರ (ಬಗೆಯೊಳ್ಪೊಣ್ಮೆ ದಯಾರಸಂ ಚರಿತದೊಳ್ಕೈಗಣ್ಮೆ ಚಾರಿತ್ರಂ: **ಆದಿಪು,** ೧. ೫); ಜೀವನ ಕತೆ (ಕವಿರತ್ನನಿನನ್ವಿತಮಾದುದು ಸಗರಚಕ್ರವರ್ತಿಯ ಚರಿತಂ: **ಅಜಿತಪು,** ೧೨. ೨೭)

**ಚರಿತಂ** – ತ್ವರಿತವಾಗಿ (ಚರಿತಂ ಬಂದರ್ ಕಣ್ಗೊಪ್ಪಿರಲ್ ವರಭೋಗಿಯರ್: **ಪಂಪಭಾ,** ೯. ೧೦೨)

**ಚರಿತಾನುರೂಪ** – ಕರ್ಮಾನುಸಾರಿಯಾದ (ಶರೀರಿಗಳ ಪಾಪಮಿದೇಂ ಚರಿತಾನುರೂಪಮೋ: **ನೇಮಿನಾಪು,** ೪. ೧೨೪)

**ಚರಿತಾರ್ಥ** – ಕೃತಾರ್ಥ (ಏಂ ಚರಿತಾರ್ಥನೋ ಸಾರ್ವಭೌಮರೊಳ್ ಯಮತನಯಂ: **ಜಗನ್ನಾವಿ,** ೧೭. ೫)

**ಚರಿಸು**– ಸಂಚರಿಸು (ಹಂಸನಂತೆ ರಮಣೀಯ ನೂಪುರನಿನಾದಾನಂದಿತ ಮಾನಸಸರೋವರದೊಳ್ ಚರಿಸಿಯುಂ: **ಕಾದಂಬ,** ೨. ೩೦ ವ)

**ಚರು** – ಹವಿಸ್ಸು, ಹೋಮಕ್ಕಾಗಿ ಸಿದ್ಧಪಡಿಸಿದ ಅನ್ನ (ಜಳಗಂಧಾಕ್ಷತೆ ಪುಷ್ಪಾವಳಿ ಚರು ದೀಪಪ್ರದೀಪ ಧೂಪಫಲಂಗಳ್ ಕುಳಿಶಾಯುಧನರ್ಚಿಸೆ ತೊಳತೊಳಗಿದವು: **ಆದಿಪು,** ೭. ೧೦೫); ನೈವೇದ್ಯ (ಪ್ರಜೆಯೆಲ್ಲಂ ಜಲ ಗಂಧ ಚರು ತಾಂಬೂಲವ್ರಜದಿಂ ಪೂಜಿಸುವುದು: **ಯಶೋಧಚ,** ೪. ೭೩)

**ಚರುಕ** – ಅನ್ನ (ಅನೇಕ ಭಕ್ಷೋಪದಂಶ ರಸಪ್ರಚುರ ಚಾರುಚರುಕಂಗಳಿಂದಂ: **ಆದಿಪು,** ೨. ೩೨ ವ)

**ಚರ್ಯೆ** – ಚರಿಗೆ (ಬನದಿಂ ಚರ್ಯೆಗೆ ಪೊಱಮಟ್ಟಂ ಮುನಿ ತನ್ನಗವನಮಂ ದ್ರುತವಿಳಂಬಿತಂ ಪೊರ್ದದೆನಲ್: **ಮಲ್ಲಿನಾಪು,** ೧೩. ೧೪೭)

**ಚರ್ಕ್ಕಣ** – ಹೆಂಡದೊಡನೆ ನಂಜಿಕೊಳುವ ಪದಾರ್ಥ (ಚರ್ಕ್ಕಣಂ ತಾನದು ಪೆಸರೊಳುಪದಂಶಂ: **ಅಭಿಧಾವ,** ೧. ೧೬. ೬)

**ಚರ್ಚನ** – ಗಂಧ ಬಳಿಯುವುದು (ವಿಜಯಾಂಗನಾ ಚರ್ಚನೋಚಿತ ಮೃಗಮದಮುಂ ನಿಜಭುಜ ವಿಜಯಲಕ್ಷ್ಮೀ ಪರಿರಂಭಪ್ರಕಟನ ದಕ್ಷದಕ್ಷಿಣವಿಷಾಣವಿನ್ಯಸ್ತ ಹಸ್ತಮುಂ: **ಆದಿಪು,** ೧೪. ೯೦ ವ)

**ಚರ್ಚರಪೂಜಾ** – ನೃತ್ಯ ಸಂಗೀತಸಹಿತ ಮಾಡುವ ಪೂಜೆ (ಪೂರ್ವರಂಗಪ್ರಸಂಗದೊಳ್ ಚರ್ಚರಪೂಜಾಮಂಗಳ ಪದೋಚ್ಚಾರಪುಷ್ಪಾಂಜಲಿವಿಕ್ಷೇಪಣಾದಿ ನಾಂದಿವಿಧಿಯಂ ನಿರ್ವರ್ತಿಸಿ: **ಆದಿಪು,** ೭. ೧೧೫ ವ)

**ಚರ್ಚಿತ** – ಲೇಪಿಸಿದ (ಚಂದನರಸ ಚರ್ಚಿತ ದಿಗಂಗನನೆನಿಸಿದ ಮಹಾರ್ಚಿತನುಂ .. ..ಮೊದಲಾಗೆ ಪಲಂಬರುಂ ನಾಯಕರಂತೆ: **ಪಂಪರಾ,** ೧೩. ೩೩ ವ)

**ಚರ್ಚಿಸು** – ವಿಧಿಸು (ಅಪ್ರತಿಮಾನರೂಪೆಯಂ ಅರ್ಚಿಪಂತೆ ಚರ್ಚಿಸಿ ಪೋಗಿ ಭೋಗಿಶಯನಂ ನಿಜಶಿಬಿರದೊಳಿರೆ: **ಕರ್ಣನೇಮಿ,** ೭. ೬೨ ವ)

**ಚರ್ಚು** – ಮಗುವನ್ನು ಎತ್ತಿಕೊಳ್ಳುವುದು (ಚರ್ಚು– ಶಿಶುಸಂಧಾರಣೇ: **ಶಬ್ದಮದ, ಧಾ** ೧೮೧)

**ಚರ್ಚೆ** – ಅನುಲೇಪನ (ವರ್ಧಮಾನ ಭಟ್ಟಾರಕರಂ ವಚಸ್ಸುರಭಿ ಚಂದನ ಚರ್ಚೆಗಳಿಂದಂ ಅರ್ಚಿಪೆಂ: **ಪಂಪರಾ,** ೧. ೧೪)

**ಚರ್ಮಜಳ** – ಚರ್ಮದ ಬುದ್ದಲಿಕೆಯ ನೀರು (ಎಲೆ ಶಿವಭಕ್ತ ಚರ್ಮಜಳಮಂ ತೊಱೆ ಸಂತತಂ ಎಂದು ಪೇಟ್ವ ನಿರ್ಮಳ ಶಿವಯೋಗಿಯಿಲ್ಲ: **ಸಮಯಪ,** ೧೪. ೩೧)

**ಚರ್ಮಭಾಜನ** – ನೀರಿನ ಬುದ್ದಲಿ, ಪಕಾಲಿ (ಚರ್ಮಭಾಜನಂಗಳ ನೀರಂ ಬಳಸುವುದುಂ ಸಿದ್ದಿಗೆಯೊಳ್ ಬಳಸುವುದುಂ ವಿಪ್ರತತಿಗೆ ನಚ್ಚಿನ ಚರಿತಂ: **ಸಮಯಪ,** ೧೪. ೧೫೨)

**ಚರ್ಮರತ್ನ** – [ಜೈನ] ಚಕ್ರವರ್ತಿಗೆ ತಾನಾಗಿ ದೊರೆಯುವ ಜೀವರತ್ನಗಳಲ್ಲಿ ಒಂದು: ನೀರಿನ ಮೇಲೆ ತೇಲಲು ಬಳಸುವ ಚರ್ಮದ ಸಾಧನ (ವರಚರ್ಮರತ್ನಮುಂ ಛತ್ರರತ್ನಮುಂ ತಮ್ಮ ತಮ್ಮ ಬೆಸಗಳನ್ ಉಜಿದಿರ್ಪಿರವಿಂದೆ: **ಶಾಂತಿಪು,** ೧೧. ೫೬)

**ಚರ್ಯಾಕಾಲ** – [ಜೈನ] ಮುನಿಗಳು ಚರಿಗೆಗಾಗಿ ಹೋಗುವ ವೇಳೆ (ಮುನಿಚರ್ಯಾಕಾಲಂ ಈ ಧಾರ್ಮಿಜನಗೃಹಮಂ ಪುಣ್ಯಮೆಯ್ತರ್ಪ ಕಾಲಂ: **ನೇಮಿನಾಪು,** ೧. ೭೮)

**ಚರ್ಯಾಮಾರ್ಗ** – [ಜೈನ] ಚರಿಗೆಗಾಗಿ ಹೋಗುವ ಉದ್ದೇಶ (ಚರ್ಯಾಮಾರ್ಗದೊಂದಂದಮಂ ಧರೆಯೊಳ್ ಮಾರ್ಗವಿಬೋಧನಾರ್ಥಂ ಅಱೆಯಲ್ಕೆಂದೆತ್ತಿ ಕೆಯ್ಯಂ: **ಆದಿಪು,** ೯. ೧೨೪)

**ಚರ್ವಣ** – ಅಗಿದು ತಿನ್ನುವುದು (ತಾಂಬೂಲಚರ್ವಣ ಭರಿತಕಪೋಲರುಂ: **ಜಗನ್ನಾವಿ,** ೪. ೮೦ ವ)

**ಚರ್ವಿತಚರ್ವಣ** – ಅಗಿದದ್ದನ್ನೇ ಅಗಿಯುವುದು, ಪುನರುಕ್ತಿ (ನಿಚ್ಚಂ ನಿಚ್ಚಮೀ ಪಿಷ್ಟಪೇಷಣ ಚರ್ವಿತಚರ್ವಣಂ ಸುಖಮಿದೇಂ ನಿನ್ನಂ ಮರುಳ್ಮಾಡಿತೋ: **ಆದಿಪು,** ೩. ೬೯)

**ಚಲ** – ಹಟ, ಛಲ; ಅಲುಗುವ; ಅಂತಸ್ತು (ಒಡೆಯಂ ಕೂಸಿಂಗದೊಂದು ಕುಲದ ಚಲದ ಪೆಂಪೊಂದೆ ಚೆಲ್ವೊಂದೆ ಸಂದೊಳ್ನುಡಿಯೊಂದೇ: **ಆದಿಪು,** ೪. ೨೭)

**ಚಲಂಗಳ್** – ಹೊರಟು ಹೋಗತಕ್ಕವು, ನಶ್ವರ (ಜಲದದ ನೆಟಿಲುಂ ಪರಪುಂ ವಿಲಾಸಮುಂ ಬೆಳಗುವ ಉದಿತ ವಿದ್ಯುಲ್ಲತೆಯುಂ ನೆಲಸವು ಚಲಂಗಳ್: **ಕವಿರಾಮಾ,** ೩. ೯೭)

**ಚಲನ** – ಅಲುಗಾಟ (ಚಲದಲಕ ತಮಾಲ ದಳಂ ಚಲನ ಅಶೋಕ ಪ್ರವಾಳದೊಳ್ ಪುಂಜಿಸೆ ಕೋಮಲೆಯರ್ ವಿದ್ಯಾಧರ ಕುಲತಿಲಕಂಗತಿ ಭಕ್ತಿ ಭರದಿನಾನತರಾದರ್: **ಪಂಪರಾ,** ೧೧. ೬೫); ಪಾದ (ಬಟೆಕಂ ಅಳಕಂಗಳ್ ಅಳಿಕುಳ ವಿಳಾಸಮಂ ಯಮಿಯ ಚಲನನಳಿನಯುಗಳದೊಳ್ ತಳೆದಿರೆ: **ಆಚವರ್ಧ,** ೧೩. ೧೭)

**ಚಲಿಸು** – ಅಲುಗಾಡು; ಕದಡು (ಆರ ಚರಿತ್ರಮಂ ಚಲಿಸದು ಆರ ಅಜೀವಂ ತಜೆದಿಕ್ಕದು ಆರ ಗಂಭೀರತೆಯಂ ಕಲಂಕದು .. .. ರಾಗಮುತ್ಕಟಂ: **ಶಾಂತೀಶ್ವಪು,** ೫. ೧೪೮)

**ಚಲ್ಲ** – ಸರಸ (ಎಡೆಯಱಿದು ಬರ್ಪ ಮೇಳದ ಕಡುಗಾಡಿಯ ಚದುರ ಚಲ್ಲದಬಳಾಜನದೊಳ್ ನುಡಿಯುತ್ತುಂ ಪೊಸಸುಗ್ಗಿಯ ಪಡಿಮಾತಂ ನೃಪತಿ ಬನಕೆ ಬಿಜಯಂಗೆಯ್ದಂ: **ಮಲ್ಲಿನಾಪು,** ೫. ೫೮); ಸೊಗಸು (ಪೆಂಡಿರ ವಕ್ತ್ರಸಹಸ್ರಕಾಂತಿ ಚಲ್ಲಂ ಚಳಯಂಗುಡುತ್ತುಮಿರೆ .. .. ಓಲಗಂಗುಡುವಂ .. .. ಖಚರೇಂದ್ರನಂದನಂ: **ನೇಮಿನಾಪು,** ೨. ೯೬)

**ಚಲ್ಲಕಾರ್ತಿ** – ಸೊಗಸುಗಾತಿ (ಚಲ್ಲಕಾರ್ತಿಯರ್ ಕಣ್ಬಲದಿಂನಿವಾಳಿಸಿ ನಾಣಂ ಬಟಿದೀಡಾಡಿಯುಂ: **ನೇಮಿನಾಪು,** ೫. ೨ ವ)

**ಚಲ್ಲಣ** – ಚೆಡ್ಡಿ, ಅರ್ಧೋರುಕ (ಪಾಲ್ಗಡಲ ತೆರೆಯ ನೊರೆಯ ದೊರೆಯ ದುಕೂಲಾಂಬರದೊಳ್ ಇಂಬಾಗಿ ಚಲ್ಲಣಮನುಟ್ಟು ಪುಡಿಗತ್ತುರಿಯಂ ತಲೆಯೊಳ್ ತೀವೆ ಪೊಯ್ದು: **ಪಂಪಭಾ,** ೧೨. ೧೦೮ ವ)

**ಚಲ್ಲವಾಡು** – ಸರಸವಾಡು (ಚಲ್ಲವಾಡಿ ಪೂವೆತ್ತುವ ಮಾಲೆಗಾರ್ತಿಯರಂ ಅಂದು ಅರಿಕೇಸರಿ ನಿಂದು ನೋಡಿದಂ: **ಪಂಪಭಾ,** ೪. ೮೧)

**ಚಲ್ಲವೊತ್ತ** – ಒಳ್ಳೆಯ ಮಾತಾಡಿ ನಂಬಿಸಿ ಹೊಟ್ಟೆ ಹೊರೆಯುವವನು (ನಾಡ ಚಲ್ಲವೊತ್ತರ ನುಡಿಗೇಳದಿರ್ ನಿನಗೆ ಪಾಂಡವರಪ್ಪುದಂ ಆರುಂ ಅಪ್ಪರೇ: **ಪಂಪಭಾ,** ೯. ೪೨)

**ಚಲ್ಲಿ** – ಚಲನೆ, ನೃತ್ಯದ ಒಂದು ಗತಿ (ಚರಣದ ಚಾರಿಯ ಚಲ್ಲಿಯ ಪರಿಕ್ರಮಕ್ರಮದ ಚಿತ್ರಮುಮಂ ಎಲುದೆ ರಂಜಿಸಿದುದು: **ಆದಿಪು,** ೯. ೩೯)

**ಚವುತಗಾ** – [ಚವುತ+ಕಾ] ಅತಿಶಯತೆಯನ್ನು ಕಾಪಾಡಿಕೊಳ್ಳುವುದು (ಜಿನಮುನಿ ಮಾಟ್ಟಿ ವರುಷದಂದೊಂದು ಚವುತಗಾವುದು ಗಹನಂ: **ಸಮಯಪ,** ೭. ೭)

**ಚಷಕ** – ಬಟ್ಟಲು, ತಟ್ಟೆ (ಕಮನೀಯ ಉದಾರ ಚಾಮೀಕರ ಚಷಕಚಯನ್ಯಸ್ತ ಮಾಧ್ವೀಕ ಗಂಧಾಂಧಮದಾಳಿವ್ರಾತ ಝುಂಕಾರಿಯಂ ಅಧಿಕ ಮನೋಹಾರಿಯಂ .. .. ಅತಿಮುದದಿಂದೆಯ್ದಿದಂ: **ಪಂಚತಂತ್ರ,** ೧೨೮)

**ಚಳಕಿಗೆ** – ತೋಳಬಂದಿ (ನನೆಗಳಂ ಕೋದೊರ್ವಳ್ ಬಂಧಂಬಿಡದಿರೆ ಚಳಕಿಗೆಯಂ ದರಹಸಿತಾಸ್ಯೆ ಮಾಡಿ ತೊಟ್ಟಳ್ ಮುದದಿಂ: **ಪಾರ್ಶ್ವನಾಪು,** ೯. ೭೪)

**ಚಳಣ** – ಕಾಲು, ಪಾದ (ಬಳಮೆರಡುಂ ತನ್ನನೆ ಮಿಳಮಿಳ ನೋಡೆ ನರೇಂದ್ರಂ ಒಂದೆ ರಥದಿಂದ ಅಸುಹೃದ್ಬಳಮಂ ಇರದೆಯ್ದಿ ಭೀಷ್ಮರ ಚಳಣಯುಗಕ್ಕೆಱಗೆ ನಿನಗೆ ಜಯಮಕ್ಕೆ ಎಂದಂ: **ಪಂಪಭಾ,** ೧೦. ೬೦)

**ಚಳತ್** – ಚಲಿಸುತ್ತಿರುವ (ಪಲವುಂ ರಾಜಚಿಹ್ನಂಗಳಂ ಬೆಳ್ಗೊಡೆಗಳ್ ತಳ್ಪೊಯ್ದು ಅದೇಂ ಕಣ್ಗೊಳಿಸಿದುದೊ ಚಳತ್ ಚಂದ್ರಕಚ್ಛತ್ರಪಿಂಡಂ: **ಪಂಪಭಾ,** ೧೩. ೩೮)

**ಚಳಯಂಬೆಱು** – ಚಿಮುಕಿಸಲ್ಪಡು (ಕ್ಷಿತಿತಳಂ .. .. ಘನಕಾಶ್ಮೀರದ ನೀರಿನಿಂದೆ ಚಳಯಂಬೆತ್ತು ಎತ್ತೆತ್ತಲುಂ .. .. ಮಾಡಿತ್ತು ಸಂತೋಷಮಂ: **ಆಚವರ್ಧ,** ೧೩. ೭೫)

**ಚಳವಳಿಸು** – ಚಂಚಲಗೊಳ್ಳು (ಅಳವಳಿಸಂ ಬೆಬ್ಬಳಿಸಂ ಕಳವಳಿಸಂ ಕನಲಂ ಒನಲಂ ಅಟ್ಟಿಂ ಚಳವಳಿಸಂ ಚಪ್ಪರಿಸಂ ತಳವಳಿಸಂ ಬೇಸಱೆಯ್ದು ಬೆಳ್ಮೊಗ್ಗದಿನಿರಂ: **ಅಜಿತಪು,** ೫. ೯೦)

**ಚಳಿ** – ಬಳಲು (ಚಳಿ–ವಿಗತಪ್ರಭಾವೇ: **ಶಬ್ದಮದ,** ಧಾ ೯೫೨) ಶೈತ್ಯ (ಚಳಿ– .. .. ಶೀತೇ ಚ: **ಶಬ್ದಮದ, ಧಾ** ೯೫೨); [ಬಣ್ಣ] ಮಸುಕಾಗು (ಎನ್ನ ಸೂಳೆಗೆ ಬಿಯಮಾದುದುಟಿದುವೆಲ್ಲಂ ವಣ್ಣಂ ಚಳಿಯದೆ ಇರ್ದುದು: **ವಡ್ಡಾರಾ,** ಪು ೧೨೫, ಸಾ ೨೫)

**ಚಳಿತು** – [√ಚಳಿ] ದಣಿದು (ನಿಜತೇಜದಿಂ ಆಂತ ದೈತ್ಯರಂ ತಳವೆಳಗಾಗೆ ಕಾದಿ ಚಳಿತು ಎಯ್ದಿ ಬಟಿಲ್ದು ಅಪರಾಂಬುರಾಶಿಯೊಳ್ ಮುಟುಗುವ ತೀವ್ರದೀಧಿತಿವೊಲ್ ಆ ಕೊಳದೊಳ್ ಫಣಿರಾಜಕೇತನಂ ಮುಟುಗಿದಂ: **ಪಂಪಭಾ,** ೧೩. ೭೪)

**ಚಳಿಯಿಸು** – ಶಕ್ತಿಹೀನನಾಗಿಸು (ಈ ಮದದಂತಿಯ ಎಟ್ಟಿರವುಂ ಈತನ ಶೌರ್ಯಮಿಂ ಈ ಮಹೋಗ್ರಸಂಗ್ರಾಮದೊಳ್ ಎನ್ನುಮಂ ಚಳಿಯಿಸಲ್ ಬಗೆದಪುದು: **ಪಂಪಭಾ,** ೧೨. ೮೪); ಚಂಚಲಗೊಳ್ಳು (ಕಲ್ಗಳ್ ಚಳಿಯಿಸುಗುಂ ಪರ್ವತಂಗಳೇಂ ಚಳಿಯಿಕುಮೇ: **ಸಮಯಪ,** ೭. ೧೯)

**ಚಳಿಲ್** – ಒಂದು ಅನುಕರಣ ಶಬ್ದ (ಪೊಸಪೂವಿನೊಳ್ ಪೊರೆದು ಪೊಣ್ಮಿದ ಕಂಪು ಮೊಗಂಗಳಂ ಚಳಿಲ್ಲನೆ ಕೊಳೆ ಪೊಯ್ಯೆ ತೀಡಿದುದು ತೆಂಕಣ ಗಾಳಿ ವಸಂತಮಾಸದೊಳ್: **ಪಂಪಭಾ,** ೫. ೩೪)

**ಚಳಿವಿನಂ** – ದಣಿಯುವವರೆಗೂ (ಚಯ್‌ಚಯ್ಯೆಂಬಾಗಳ್ ಮೆಯ್ ಮೆಯ್ ಚಲದಿಂ ಮುಟ್ಟಿ ಪೊಣರ್ದು ತಳ್ತಿಱಿವ ಉರ್ಕಿಂ ಕೆಯ್ ಚೆಚ್ಚರಿಕೆಯ ಚಲದಿಂ ಕೆಯ್ ಚಳಿವಿನೆಗಂ ಇಱಿದರ್ ಎರಡು ಬಲದೊಳಂ ಅದಟರ್: **ಪಂಪಭಾ,** ೧೩. ೩೪)

**ಚಳಿವೆಟ್ಟಣ್ಣ** – [ಚಳಿವೆಟ್ಟು+ಅಣ್ಣ] ಹಿಮಗಿರಿಯ ಒಡೆಯ, ಹಿಮವಂತ (ಚಳಿವೆಟ್ಟಣ್ಣನ ಪುತ್ರಿ ಸುರ್ಕೆ ಚಳಿಯಿಂ: **ರಾಜಶೇವಿ,** ೯. ೧೭)

**ಚಾಂದಸ** – ಸಂಪ್ರದಾಯನಿಷ್ಠ, ಮಂದಮತಿ (ಛಕಾರಕ್ಕೆ ಚಕಾರಂ: ಛಿನ್ನಂ–ಚಿನ್ನಂ ಛಾಂದಸಂ–ಚಾದಸಂ: **ಶಬ್ದಮದ,** ೨೬೯ ಪ್ರ)

**ಚಾಂದ್ರಾಯಣ** – ಚಂದ್ರನ ಚಲನೆ, ವೃದ್ಧಿ–ಕ್ಷಯಗಳು (ವಿಳಾಸವತಿಯರ ಮುಖಮಂಡಳಕೆ ಸರಿಯಾಗಲಾಱದೆ ಸಲೆ ಮಾಳ್ಪಂ ಚಂದ್ರಂ ಚಾಂದ್ರಾಯಣಮಮಂ: **ಯಶೋಧಚ,** ೧. ೩೧); ಒಂದು ಬಗೆಯ ತಪಸ್ಸು (ಕೃಚ್ಛ್ರ ಅತಿಕೃಚ್ಛ್ರ ಚಾಂದ್ರಾಯಣ ಸಾಂತಪನಾದಿ ಮಹಾತಪಂಗಳಿಂ: **ಪಂಚತಂತ್ರ,** ೧೯೦ ವ); [ಜೈನ] ಚಂದ್ರನ ವೃದ್ಧಿ–ಕ್ಷಯಗಳಿಗೆ ಅನುಗುಣವಾಗಿ ಆಹಾರಸೇವನೆಯಲ್ಲಿ ಹೆಚ್ಚು ಕಡಿಮೆ ಮಾಡುವ ವ್ರತ (ಪ್ರಿಯಕಾರಿಣಿಯುಂ .. .. ಚಾಂದ್ರಾಯಣಮಮಂ ನೋಂತು: **ಶಾಂತಿಪು,** ೯. ೧೪ ವ)

**ಚಾಂಪೇಯ** – ಸಂಪಿಗೆ ಜಾತಿಯ ಮರ (ಚಾಂಪೇಯ ಪಿಂಗಾಜ್ಯಕೋಮಳ ಧಾರಾವಳಿಯಿಂ .. .. ಮಜ್ಜನಂಬುಗಿಸಿದಂ ಸೌಂದರ್ಯಸಂಕ್ರಂದನಂ: **ಲೀಲಾವತಿ,** ೩. ೮೬)

**ಚಾಗ** – [ತ್ಯಾಗ] ದಾನ (ನಿರಂತರಂ ಕಡಿಕಡಿದಿತ್ತ ಪೊನ್ನೆ ಬುಧಮಾಗಧವಂದಿಜನಕ್ಕೆ ಕೊಟ್ಟ ಕೋಡೆ ಎಡಱದೆ ಬೇಡಿಂ ಓಡಿಂ ಇದು ಚಾಗದ ಬೀರದ ಮಾತು ಕರ್ಣನಾ: **ಪಂಪಭಾ,** ೧. ೯೯)

**ಚಾಗದ ಕಂಬ** – ದಾನದ ಶಿಲಾಸ್ತಂಭ (ಚಾಗದ ಕಂಬಮಂ ನಿಱಿಸಿ ಬೀರದ ಶಾಸನಮಂ ನೆಗಚ್ಚಿ ಕೋಳ್ಪೋಗದ ಮಂಡಲಂಗಳನೆ ಕೊಂಡು ಜಗತ್ತ್ರಿತಯಂಗಳೊಳ್ ಜಸಕ್ಕೆ ಆಗರಮಾದ ಬದ್ದೆಗನಿಂ ಆ ನರಸಿಂಹನಿಂ ಅತ್ತ ನಾಲ್ವರಲ್ ಮೇಗು ಮೊದಲ್ದ ಚಾಗದೊಳಂ ಒಂದಿದ ಬೀರದೊಳಂ ಗುಣಾರ್ಣವಂ: **ಪಂಪಭಾ,** ೧. ೫೦)

**ಚಾಟು** – ಸಂತಸಕರವಾದ ನುಡಿ (ಅದೃಷ್ಟಪೂರ್ವಂಗಳುಂ ಅತಿಕೃಪಣಂಗಳುಂ ಅಪ್ಪ ಚಾಟುಸಹಸ್ರಂಗಳೊದವೆ .. .. ವೃತ್ತಾಂತಮನಾತಂಗೆ ನಿವೇದಿಸುತ್ತುಂ: **ಕಾದಂಸಂ,** ೪. ೯೬ ವ)

**ಚಾಟುಕಾರಂಗೆಯ್** – ಸಲಿಗೆಯನ್ನು ತೋರಿಸು (ಕಾಲ ಮೇಲೆ ಪೊರಳ್ದು ಚಾಟುಕಾರಂಗೆಯ್ವುದುಂ ಪಾರ್ವಂ ಕಂಡು: **ಪಂಚತಂತ್ರ,** ೨೫೮ ವ)

**ಚಾಟುಕಾರಿಸು** – ಹೊಗಳು (ಗುಣಪಾಲಸೆಟ್ಟಿ ಬೆಱಗಾಗಿ ಪೆರ್ಗಡೆಗಳಂ ಚಾಟುಕಾರಿಸಲೆಂದು ಕೃತಕ ವಚನಂಗಳಿಂ ನಂಬೆ ನುಡಿದುಂ: **ಧರ್ಮಾಮೃ,** ೧೦. ೨೯ ವ)

**ಚಾಟುಕಾಱ** – ಪ್ರಿಯವಾದ (ವಿವಿಧ ವಿಷಯದ ಚಾಟುಕಾಱ ವಚನವಿನ್ಯಾಸದಿಂ ಸೊಗಸುತ್ತ ಒಳ್ಳಿತ್ತೆಂದು ನುಡಿವೊಂ: **ಚಾವುಂಪು,** ಪು. ೪೩೯. ಸಾ. ೯)

**ಚಾಟುಭಣಿತೆ** – ಚತುರತೆಯಿಂದ ಕೂಡಿದ ಮಾತು (ಎಂಬ ಗಣಿಕೆಯ ಚಾಟುಭಣಿತೆಯಂ ಕೇಳ್ದು ಅರಸನೊಳ್ ಪೀಠಮರ್ದಕನಿಂತೆಂದಂ: **ರಾಜಶೇವಿ,** ೧೧. ೧೨೨ ವ)

**ಚಾತುರಂಗ** – ಚತುರಂಗ ಸೈನ್ಯ (ಅದಿರದಿದಿರ್ಚಿ ತಳ್ತಿಱಿಯಲ್ ಈ ಮಲೆದೊಡ್ಡಿದ ಚಾತುರಂಗ ಬಲಮೆಂಬುದು ನಿನಗೊಡ್ಡಿ ನಿಂದುದು ಇದಂ ಓವದೆ ಕೊಲ್ವೊಡೆ ನೀನುಂ ಎನ್ನ ಕಜ್ಜದೊಳೆಸೆಗು ಎಂದು ಸೈತು ಅಜಿತಂ ಆದಿಯ ವೇದರಹಸ್ಯದೊಳ್ .. .. ನೆಱೆಯೆ: **ಪಂಪಭಾ,** ೧೦. ೬೪)

**ಚಾತುರ್ದಂತ** – ನಾಲ್ಕು ದಂತಗಳುಳ್ಳದ್ದು, ಆನೆ (ಚಾತುರ್ದಂತಮನಪರಾಜಿತನೆಱೆದಂ ತನ್ನ ಮನಃಪ್ರಸ್ತಾರಿ ಪೌರುಷಮತಿಯಿಂ: **ಶಾಂತಿಪು,** ೪. ೭); ಚತುರಂಗಬಲ (ಅಂತು ಚಾತುರ್ದಂತಂ ಒಂದೊಂದಱೊಳ್ ಓರಂತೆ ನಡುವಗಲ್ವರಂ ಕಾದುವುದುಂ: **ಪಂಪಭಾ,** ೧೧. ೩೬ ವ)

**ಚಾತುರ್ದಂತಬಲ** – ಗಜಸೈನ್ಯ (ಅಂತು ನೆರೆದ ಚಾತುರ್ದಂತಬಲ ಜಲಧರ ರಭಸಂ ಪ್ರಭಿನ್ನ ಬ್ರಹ್ಮಾಂಡಖಂಡ ಶಂಕೆಯಂ ಪುಟ್ಟಿಸೆ: **ಶಾಂತಿಪು,** ೩. ೧೦೧)

**ಚಾತುರ್ಬಳ** – ಚಾತುರಂಗ (ನಿಜೈಕ ದೋರ್ಬಳಂ ಶತ್ರುದುರ್ದಮ ಚಾತುರ್ಬಳನಾಶಮಂ ಪಡೆಯೆ: **ಚಂದ್ರಪ್ರಪು,** ೨. ೯)

**ಚಾತುರ್ಮಾಸ** – ಮಳೆಗಾಲದ ನಾಲ್ಕು ತಿಂಗಳು [ಆಷಾಢ ಶುಕ್ಲ ಪೌರ್ಣಮಿಯಿಂದ ಕಾರ್ತಿಕ ಶುಕ್ಲ ಪೌರ್ಣಮಿಯವರೆಗೆ] ಮುನಿಗಳು ಒಂದೆಡೆ ನೆಲಸಿ ನಡೆಸುವ ವ್ರತ (ಚಾತುರ್ಮಾಸದ ಪಾರಣೆಯೆಂದು .. .. ಪೊಱಮಟ್ಟು: **ವಡ್ಡಾರಾ,** ಪು. ೪೮ ಸಾ. ೮)

**ಚಾತುರ್ಯ** – ಜಾಣ್ಮೆ (ರತವ್ಯಾಪಾರಚಾತುರ್ಯಂ .. .. ಅದೇಂ ಬೆಡಂಗಮರ್ದುದೋ: **ಚಂದ್ರಪ್ರಪು,** ೧. ೧೩೪)

**ಚಾತುರ್ಯವಚನ** – ಜಾಣ್ಮೆಯ ಮಾತು (ಜಗನ್ನುತ ಚಾತುರ್ಯವಚನರಚನೆಗಳಿಂದಂ ಭಟ್ಟಾರಕರರ್ಚಿಸುವುದುಂ: **ಸುಕುಮಾಚ,** ೫. ೫)

**ಚಾತುರ್ಯಾಮ** – ನಾಲ್ಕು ಜಾವಗಳು (ಆಗಳ್ ಉಭಯಬಲಂಗಳೊಳಂ ಚಾತುರ್ಯಾಮಾವಸಾನ ಘಟಿತ ಘಂಟಿಕಾಧ್ವನಿಗಳುಂ .. .. ನೆಗೞ್ದುವು: **ಪಂಪಭಾ,** ೧೦. ೩೫ ವ)

**ಚಾತುರ್ವರ್ಣ** – ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ನಾಲ್ಕು ವರ್ಣಗಳು (ಸಮಯಿಗಳುಂ ಚಾತುರ್ವರ್ಣಮುಂ ಉಚಿತಚರಿತ್ರಮುಂ ಬಿಸುಟ್ಟು ಆದಂ ಪೊಲ್ಲಮೆಯೊಳ್ ಸಲೆ ನಡೆವರ್: **ಆದಿಪು,** ೧೫. ೩೩)

**ಚಾತುರ್ವರ್ಣ್ಯ** – ಚಾತುರ್ವರ್ಣವ್ಯವಸ್ಥೆ (ಚಾತುರ್ವರ್ಣ್ಯದೊಳಂ ದ್ವಿಜಜಾತಿಗೆ ದರ್ಭಾಧಿಕಾರಮಲ್ಲದೆ .. .. ಶಸ್ತ್ರಾಸ್ತ್ರಮವರ್ಗೆ ಜಾತಿವಿರುದ್ಧಂ: **ಗದಾಯು,** ೨. ೧೭)

**ಚಾತುರ್ವಲ** – ಚತುರಂಗಬಲ (ಚಾತುರ್ವಲಂಗಳ್ ಮೊದಲ ಸಮಕಟ್ಟುಗೆಟ್ಟು ತಡವರಿಸಿ ತಟ್ಟುಪೊಟ್ಟೆಂದು ಎಚ್ಚು ಮಿಟ್ಟುಂ ಇಱಿದು ತಱಿದು ಘಟ್ಟಿಸೆಯುಂ: **ಪಂಪಭಾ,** ೧೦. ೭೦ ವ)

**ಚಾದಗೆ** – ಚಾತಕ ಪಕ್ಷಿ (ಕಾರ್ಗಾಲದ ಬರವಂ ಚಾದಗೆ ಪಾರ್ವಂತೆ: **ಪಂಪಭಾ,** ೮. ೩೬ ವ)

**ಚಾದಗೆವಕ್ಕಿ** – ಚಾದಗೆ (ಕಾರ್ಗಾಲಮಂ ಸೋಗೆ ಮುಂಬನಿಯಂ ಚಾದಗೆವಕ್ಕಿ ಹಂಸೆ ಕೊಳನಂ ಪದ್ಮಂಗಳಾದಿತ್ಯಮಂ ನೆನವಂತೆ: **ಆದಿಪು,** ೧೨. ೩೧)

**ಚಾಪಚಾಪಳ** – ಬಿಲ್ವಿದ್ಯೆಯಲ್ಲಿ ನಿಪುಣ (ಎಚ್ಚಂ ಮೊರಳೆಚ್ಚಂ ಮರಳೆಚ್ಚಂ ಚಾಪಚಾಪಳಂ ಯುವರಾಜಂ: **ಚಂದ್ರಪ್ರಪು,** ೫. ೧೦೦)

**ಚಾಪಲತಾಯೋಗ** – ಚಂಚಲತೆ, ಬಿಲ್ಲಿನ ಸಂಬಂಧ (ಮುಖರತೆ ಮುರಳಿಯೊಳ್ ಚಾಪಲತಾಯೋಗಂ ಜೀವೆಯೊಳ್ ಪ್ರತಾರಣಂ ನಾವೆಯೊಳ್: **ಚಂದ್ರಪ್ರಪು,** ೩. ೯ ವ)

**ಚಾಪಲತಾರೋಹಣ** – ಚಾಂಚಲ್ಯವುಂಟಾಗುವುದು ಹಾಗೂ ಬಿಲ್ಲಿನ ಹೆದೆಯೇರಿಸುವುದು (ಕಳಕಂಠಕ್ಕೆ ಅತನುಗೆ ಚಾಪಳತಾರೋಹಣವಿಕಾರವು ಅಳಿಗೆ ಆಮ್ರಕುಜಾವಳಿಗೆ ಮಧುವಿಕೃತಿ ಮಾನವಕುಳಕ್ಕೆ ಕನಸಿನೊಳಮಿಂತಿಲ್ಲಾ ನಾಡೊಳ್: **ಮಲ್ಲಿನಾಪು,** ೨. ೨೦)

**ಚಾಮರಗ್ರಾಹಿಣಿ** – ಚಾಮರ ಹಿಡಿದು ಬೀಸುವವಳು (ಚಾಮರಗ್ರಾಹಿಣಿಯರ್ಕಳ್ ಕಾಶಕಣಿಶಂಗಳಿಂದೆಸೆವ ಶರಲ್ಲಕ್ಷ್ಮಿಯಂ ನೆನೆಯಿಸೆ: **ಪಂಪರಾ,** ೩. ೮೩ ವ)

**ಚಾಮರಿಗ** – ಚಾಮರ ಹಿಡಿದು ಬೀಸುವವನು (ನಿಯೋಗದಲ್ಲಿ: ಹಡಪಿಗಂ ಚಾಮರಿಗಂ: **ಶಬ್ದಮದ,** ೨೦೮ ಕ್ರಮಪ್ರಯೋಗಂ)

**ಚಾಮರಗಿತಿ** – ಚಾಮರಗ್ರಾಹಿಣಿ (ಇತಿಗೆ: ಚಾಮರಿಗಿತಿ ಮದ್ದಳಿಗಿತಿ ಆವುಜಿಗಿತಿ: **ಶಬ್ದಮದ,** ೨೧೯ ಪ್ರ)

**ಚಾಮೀಕರ** – ಚಿನ್ನ (ನೆರೆದಿಕ್ಕುವ ಯಕ್ಷರ್ಕಳ ಕರತಲದೊಳ್ ಮೊರೆದು ಚಾರು ಚಾಮೀಕರ ಚಾಮರಚಾಮರಾಳಿ ಚಾಮೀಕರರುಚಿರಚ್ಛಾಯೆ ನಿನಗದೇನಸೆಸೆದಪುದೋ: **ಅಜಿತಪು,** ೮. ೧೪)

**ಚಾರಚಕ್ಷು** – ಚಾರರನ್ನು ಕಣ್ಣುಗಳುಳ್ಳವನು (ಚಾರಚಕು ವಿಮಳಾಚರಣಂ ಸಚರಾಚರವಸ್ತುತಂ: **ಚಂದ್ರಪ್ರಪು,** ೬. ೧೯)

**ಚಾರಣ** – ತಿರುಗಾಟ; ದ್ವಂದ್ವಯುದ್ಧದ ಒಂದು ವರಸೆ; ಹೊಗಳುಭಟ; ಗಂಧರ್ವ (ಫಣೀಂದ್ರವೃಂದಂ ನಿಖಿಲಾಮರ ಅಸುಹೃದ್ಗಣಂ ಖಗೇಶಪ್ರಕರಂ ಮನೋಜ್ಞಚಾರಣವ್ರಜಂ: **ಉದ್ಭಟಕಾ,** ೧೨. ೧೨೯); [ಜೈನ] ಸಂಚಾರ ಮಾಡುವ, ಅವಧಿಜ್ಞಾನವಿರುವ ಗಗನಗಾಮಿ ಋಷಿಗಳು (ಅಗ್ಗಳಿಕೆಯೊಳೆಸೆದರ್ ಚತುರಂಗುಲ ಚಾರಣರೆನಿಸಿ ಕೊಂಡಕುಂದಾಚಾರ್ಯರ್: **ಧರ್ಮಪ,** ೧. ೧೧)

**ಚಾರಣಋದ್ಧಿ** – [ಜೈನ] ಚಾರಣಋಷಿಗಳ ಗಗನಸಂಚಾರಶಕ್ತಿ (ಜಿತಶ್ರಮರಂ ಅಪಾಸ್ತದೋಷತಮರಂ ನಿತ್ಯಚಾರಣಋದ್ಧಿವೃದ್ಧರಂ: **ಕರ್ಣನೇಮಿ,** ೧. ೭೫ )

**ಚಾರಣಋಷಿ**– ಚಾರಣಋದ್ಧಿಯನ್ನು ಎಂದರೆ ಆಕಾಶದಲ್ಲಿ ಸಂಚರಿಸುವ ಶಕ್ತಿಯನ್ನು ಪಡೆದ ಪಡೆದ ಋಷಿ (ಧರ್ಮಾಭರಣರೆಂಬ ಚಾರಣ್ಯಷಿಯರ ಸಮಕ್ಷಮದೊಳ್ ದೀಕ್ಷೆಯಂ ಕೊಂಡಂ: **ಪಂಪರಾ,** ೧೬. ೪೨ ವ)

**ಚಾರಣಕ್ರಮ** – ಅಂಕುಶದಿಂದ ಆನೆಯನ್ನು ಮುನ್ನಡೆಸುವ ಕ್ರಮ (ವಾಹನ ದೇವದಂತಿಶಿರದೊಳ್ ಕೂರಂಕುಸಂ ಚಾರಣಕ್ರಮದಿಂದಾದಱುವತ್ತು ನಾಲ್ಕು ಪೊಳೆಪಿಂ ಕಣ್ಗೊಗ್ತೆ: **ಶಾಂತಿಪು,** ೪. ೧೦೬)

**ಚಾರಣಗುಣ** – ಚಾರಣಋದ್ಧಿ (ಚಾರಣಗುಣದಿಂದಂ ಸಂಸಾರಾರ್ಣಮಪಾರ ಚೈತ್ಯವಂದನೆಗೆಂದು ಅಂದು ಓರಂತೆ ಪೋಗಿ: **ಶಾಂತಿಪು,** ೯. ೧೧೩)

**ಚಾರಣರಿಸಿ** – ಚಾರಣಋಷಿ (ಚಂದ್ರವೇಗಂ ಸಿದ್ಧಕೂಟಕ್ಕೆ ಪೋಗಿ ದೇವರನರ್ಚಿಸಿ ಸುಮಾಳಿಗಳೆಂಬ ಅವಧಿಜ್ಞಾನಿಗಳಪ್ಪ ಚಾರಣರಿಸಿಯರಂ ಗುರುಭಕ್ತಿಗೆಯ್ದು: **ವಡ್ಡಾರಾ,** ಪು ೬೨, ಸಾ ೬)

**ಚಾರಿ** – ಪಗಡೆಕಾಯಿ ದಾಳ (ಒರ್ವಳ್ ನೆತ್ತದ ಚಾರಿಯಂ ಕೊಂಡು ಬಂದು .. .. ಎಮ್ಮ ನಾಯಕಿತ್ತಿಯೊಡನೆ ಆಡಿಂ .. .. ಎಂದೊಡೆ: **ಹರಿವಂಶ,** ೩. ೭೦ ವ); ನಾಟ್ಯದಲ್ಲಿನ ಹೆಜ್ಜೆಯ ಒಂದು ಗತಿ (ಚರಣದ ಚಾರಿಯ ಚಲ್ಲಿಯ ಪರಿಕ್ರಮಕ್ರಮದ ಚಿತ್ತಮುಮಂ ಎಱದೆ ರಂಜಿಸಿದುದು: **ಆದಿಪು,** ೯. ೩೯); ಸಂಕೋಲೆ (ವಿಟಜನಕ್ಕೆ ತೊಡರ್ವ ಚಾರಿಯೆನಿಪ ಸೂಳೆಗೇರಿಯಿಂ ವಿದಗ್ಧಹೃದಯಹಾರಿಯಿಂ: **ಪಂಪಭಾ,** ೧. ೫೮); ಸಂಗೀತವಾದ್ಯವನ್ನು ನುಡಿಸುವ ಒಂದು ಕ್ರಮ (ಬಹು ಲಯಭೇದದೋಜೆ ಗತಿಭೇದೊಡಂ ಚಾರಿಭೇದದುರ್ವಹತೆ ತಗುಳ್ದಳಂಕರಣಭೇದಮದರ್ಕೆ ನಿಮಿಕೇಯಿಂ .. .. ಹೃದ್ಯವಾದ್ಯಮಂ ಬಹಳಿಕೆವೆತ್ತು ಬಿತ್ತರಿಸಿ ಬಾಜಿಸಿದರ್: **ಪುಷ್ಪದಂಪು,** ೧೨. ೨೬)

**ಚಾರಿತ್ರಮೋಹನೀಯ** – [ಜೈನ] ಮೋಹನೀಯ ಕರ್ಮಗಳಲ್ಲಿ ಒಂದು, ಆಚಾರವನ್ನು ದೂಷಿಸುವ ಕರ್ಮದ ಒಂದು ವಿಧ (ದರ್ಶನ ಮೋಹನೀಯಂ ಚಾರಿತ್ರಮೋಹನೀಯಂ ಎಂದಿರ್ತೆಱನಕ್ಕುಂ: **ಶಾಂತಿಪು,** ೧೨. ೧೧ ವ)

**ಚಾರಿವರಿ** – ತಿರುಗಿಸು (ರಸಿಕಜನದಕ್ಷಿಗಳಂ ಚಾರಿವರಿದಾಡಿಸಿದಳೆಚ್ಚಾರಿತದಂಗಮಂ ಅನಂಗನಿರೆ ಪಿಂಗಡೆಯೊಳ್: **ರಾಜಶೇಖ,** ೧೨. ೮೯)

**ಚಾರಿಸು** – ಕ್ಷತ್ತಿಯನ್ನು ಝಳಪಿಸು (ಚಾರಿಸಿ ಬಾಳಾಗಮಮಂ ಅವತಾರಂಗೆಯ್ದಂತೆ ಕಾಲದಂತಕನನೆ ಪೋಲ್ತು ಆರುತ್ತುಂ ಕವಿವ ಅದಟರಂ ಓರೊಂದೋರೊಂದೆ ಮೊಯ್ದು ಕೊಂದರ್ ಪಲರಂ: **ಪಂಪಭಾ,** ೧೦. ೮೩); ಚತುರತೆಯಿಂದ ನಡೆಸು (ಚಾರಿಸಿ ಬಾಳಾಗಮನಮವತಾರಂಗೆಯ್ದಂತಕಾಲದಂತಕನನೆ ಪೋಲ್ತಾರುತ್ತುಂ ಕವಿವದಟರನೋರೊಂದೋರಂದೆ ಮೊಯ್ದು ಕೊಂದರ್ ಪಲರಂ: **ಪಂಪಭಾ,** ೧೦. ೮೩)

**ಚಾರು** – ಸುಂದರವಾದ (ಸಮಂತು ಅಲಂಕರಿಸಿದಂ ಶಾಂತೀಶನಂ ದಿವ್ಯಗಂಧ ದರಸ್ಮೇರ ನಮೇರು ಚಾರು ಕುಸುಮ ಕ್ಷೌಮಾಂಶುಕ ಅನರ್ಘ್ಯ ಭಾಸ್ವದನೇಕೋತ್ತಮ ಭೂಷಣಾವಳಿಗಳಿಂ ಸಂಕ್ರಂದನಾನಂದದಿಂದಂ: **ಶಾಂತೀಶ್ವಪು,** ೧೬. ೩)

**ಚಾರುಹಾಸಿನಿ** – ಮೋಹಕವಾದ ನಗೆಯುಳ್ಳವಳು (ಒಡಂಬಟ್ಟು ಚಾರುಹಾಸಿನಿ ನಿಜನಿವಾಸಕ್ಕೆ ಪೋದಳ್: **ಗದಾಯು,** ೨. ೧೦ ವ)

**ಚಾರ್ವಾಕ** – ನಾಸ್ತಿಕವಾದಿ (ಚಾರ್ವಾಕ ಮೇಘಾನಿಳನೊಳ್ ಅತುಳ ಮೀಮಾಂಸಕಾಂಬೋಧಿ ಕುಂಭಾರ್ಭಕನೊಳ್ .. .. ಸರ್ವಭಾಷಾ ಸಮರ್ಥರ್: **ಧರ್ಮಪ,** ೧. ೨೪)

**ಚಾರ್ವಾಕಮತ** – ನಿರೀಶ್ವರತೆಯನ್ನು ಪ್ರತಿಪಾದಿಸುವ ಮತ (ಕೃತಕದ್ವಿಜಂ ಚಾರ್ವಾಕಮತಾವಲಂಬಿಯಾಗಿ: **ಶಾಂತಿಪು,** ೮. ೧೨೬ ವ)

**ಚಾವಳಿಸು** – ಚಾಪಲ್ಯವುಂಟುಮಾಡು; ಆಕ್ಷೇಪಿಸು (ಏನಾನುಮಂ ಕೀಜೆ ಚಾವಳಿಪಂತಾದುದು ಜೀರ್ಣ ಪರ್ಣ ಪರುಷ ಪ್ರಧ್ವಾನದಿಂ ಮಾರುತಂ: **ಪಂಪರಾ,** ೭. ೧೦೨)

**ಚಾಳಯ** – ಗತಿಲಂಘನ (ಬೆಡಂಗಿರ್ಪ ಪೊಳೆಯಕ್ಕಂ ಆ ಚಾಳಯಮಾದ ಚಾಳೆಯಂಗಳುಮಂ .. .. ತಾಳದೊಳ್ ತೂಗಿದಂತೆ: **ನೇಮಿನಾಪು,** ೩. ೧೦೨ ವ)

**ಚಾಳಿಸು** – ಚಪಲತೆ ತೋರಿಸು (ಬಾಯ್ಗೆ ಬಂದವೋಲ್ ಗಳಪುವನಾವಗಂ ಧನಮನೀಯದೆ ಚಾಳಿಪನೆಂತು ಮಾಳ್ಪೆನಾಂ: **ರಾಜಶೇವಿ,** ೧೧. ೧೬೬); ಸೋಲಿಸು (ಅರಿನೃಪರಂ ಭೇದಿಸಿ ಪಾಂಚಾಳರಂ ಚಾಳಿಸಿ ಗಾಂಧರ್ವರಂ ವಿರಥರ್ಮಾಡಿ: **ಪಂಪಭಾ,** ೬. ೨೯ ವ); ಝುಳಪಿಸು (ಉದ್ಧಹಿಮೋಗ್ರಖಡ್ಗಮಂ ಚಾಳಿಸುತುಂ ಸುರಾಧಿಪದಿಶಾನಿಳವಾಹಮನೇಱೆ ಬಂದುದು ಆಭೀಳತೆವೆತ್ತು ಮಾಗಿ: **ಶಾಂತೀಶ್ವಪು,** ೧೨. ೭೩); ಚಲಿಸುವಂತೆ ಮಾಡು (ನಿಶ್ವಸಿತದ ಗಾಳಿ ಚಾಳಿಸೆ ತೆರಳ್ಗಡಿಗಟ್ಟಿಗೆ ಧೂಳಿಜಾಳಮಂ: **ಪುಷ್ಪದಂಪು,** ೮. ೩೬); ಹೀಯಾಳಿಸು (ಲತಾಜಾಳಕಜಾಳಕಂಗಳಂ ಎಟಲ್ಚುತ ಅಲ್ಲಿಱೆದ ಅಬ್ಬ ಅಭ್ರಮಂ ಚಾಳಿಸುತುಂ ಮದಾಳೀಯ ಮದಾಳಿಯಂ ಓವದೆ ಸೋವುತುಂ: **ಪುಷ್ಪದಂಪು,** ೧೦. ೬೮)

**ಚಾಳೆಯ** – ಚಲನೆ (ತಳಿರ್ಗಳ ಚಾಳೆಯಂ ಎಳಲತೆಗಳ ಲುಳಿ ತಿಳಿಗೊಳದ ತೆರೆಯ ತಾಳಂ ಪೊಸಪೂಗಳ ನೋಟಂ ಆಗೆ: **ಯಶೋಧಚ,** ೪. ೩)

**ಚಾಟ್** – ರಾಹು (ಒಂದರ್ಥಕ್ಕೆ: ಚಾಟೆಂದು ರಾಹು: **ಶಬ್ದಮದ,** ೩೩ ವೃತ್ತಿ ೫೦)

**ಚಿಂತಾಂತರಾಯ** – ಚಿಂತೆಯೆಂಬ ವಿಘ್ನ (ತಂತ್ರವಾಪ ಚಿಂತಾಂತರಾಯಪ್ರಾಯ ಸುಖಲವದೊಳೀ ಮಹೀತಳರಾಜ್ಯದೊಳ್ ನಿಱೆಸುವುದುಂ: **ಆದಿಪು,** ೮. ೮ ವ)

**ಚಿಂತಾಮಣಿ** – ಕೇಳಿದ್ದನ್ನು ಕೊಡುವ ದೇವಲೋಕದ ಒಂದು ಮಣಿ (ಮೇರುಮಹೀಜಾತಂ ಪಾರಿಜಾತ ಅಂಘ್ರಿಪೋತ್ಕರಂ ಅಶ್ಮಬ್ರಜಂ ಪಯಃಪ್ರಸರಮುಂ ಚಿಂತಾಮಣಿ: **ಶಾಂತೀಶ್ವಪು,** ೧೪. ೪೯)

**ಚಿಕುರ** – ಮುಂಗುರುಳು (ಮಧುಪವ್ಯೂಹನಿಭ ಕುಟಿಳ ಚಿಕುರ ಮನೋಹರೆ ಮನಸಿಜನ ಕಣೆಗೆ ದೋಣೆಯೆನೆ ನೆಗಟ್ದಳ್: **ಸುಕುಮಾಚ,** ೧. ೭೯ ಬಿ)

**ಚಿಕ್ಕಣ** – ಮೆತ್ತಗಿರುವುದು (ಒಂದರ್ಥಕ್ಕೆ: ಕಿಮುಟ್ಟಿದನೆಂದು ಚಿಕ್ಕಣಮಾಗಿ ಮಾಡಿದಂ: **ಶಬ್ದಮದ,** ೩೩ ವೃತ್ತಿ ೩೧)

**ಚಿಕ್ಕುಟ** – ಚಿಕ್ಕಾಡು, ಸಣ್ಣ ಸೊಳ್ಳೆಯಂಥ ಕೀಟ (ಬಿಯಗಮಿಕ್ಕಿ ಚಿಕ್ಕುಟುಂ ನುಸುಟಲ್ಬಾರದಂತಾಗಿ ಬಿಗಿಯೆ: **ನೇಮಿನಾಪು,** ೭. ೪೪ ವ)

**ಚಿಕ್ಕೊತ್ತೆ** – ಸೂಳೆಯರಿಗೆ ಕೊಡುವ ಹಗಲೊತ್ತೆ (ಮತ್ತೆ ಬೊಜಂಗರಿಲ್ಲ ಪೊಱಗೊಚ್ಚತವೇಂ ನಿನಗುಂಟು ತೋಳ ಚಿಕ್ಕೊತ್ತೆಗೆ ಪೊಕ್ಕೆಯಿಂತು ಶುನಿಯಂತೆ: **ಲೀಲಾವತಿ,** ೨. ೧೨೧)

**ಚಿಗಿ** – ಬೆರಳಿಂದ ಚಿಮ್ಮು (ಚಿಗಿ–ಅಂಗುಲಿ ವಿಸರ್ಜನೇ: **ಶಬ್ದಮದ, ಧಾ** ೧೦೭)

**ಚಿಗುರ್** – ತಳಿರು (ಚಿಗುರಿಂ ಪೂವಿಂ ಕಾಯಿಂ ಸೊಗಯಿಪ ಮಾವಿಂಗೆಪುಣಿಸೆಗೆಱಲ್ವೇಡಾ: **ಸಮಯಪ,** ೯. ೫೬); ಪಲ್ಲವಿಸು (ಚಿಗುರ್–ಪಲ್ಲವೋತ್ಪತ್ತೌ: **ಶಬ್ದಮದ, ಧಾ** ೫೭೦)

**ಚಿಗುಳಿದುಟಿ** – ತುಳಿದು ಜಜ್ಜಿಹಾಕು ಕರ್ಚಿಯುಂ ಒದೆದು ಚಿಗುಳಿದುಟಿದುಂ ಸೇನೆ ಮೆದೆಗೆಡಲು: **ಜಗನ್ನಾವಿ,** ೪. ೩೯ ವ)

**ಚಿಟುಂಕಿಸು** – ನೆಟಿಕೆ ಮುರಿ (ಮೆಯ್ಯಂ ಸೋಂಕಿ ಕುರುಳಂ ನೇವರಿಸಿ ಕರಾಂಗುಲಿಯಂ ಚಿಟುಂಕಿಸಿ .. .. ಜಕ್ಕವಕ್ಕಿಯಂತೆ ಸುಸಿಲೆಸಗಲ್ ಉಜ್ಜುಗಿಸಿರ್ಪನ್ನೆಗಂ: **ರಾಜಶೇವಿ,** ೮. ೮೨ ವ)

**ಚಿಟ್ಟುಮುಱೆ** – ಓಡಿಸಿಕೊಂಡು ಹೋಗಿ ಮುಟ್ಟುವ ಆಟ (ಚಿಟ್ಟುಮುಱೆಯಂ ಪೆಣಣ್ದುಂಬಿಯುಂ ಘ್ರಾಣಸಂಚಾರಂ ಮಾರುತನಾಡೆ: **ರಾಜಶೇವಿ,** ೨. ೧೧೦)

**ಚಿಟ್ಟೆ** – ಮಿಡಿತೆ (ಕೊಳ್ ಕೊಳ್ಳೆಂದು ಎಚ್ಚೊಡೆ ವಿಳಯ ಉಳ್ಕದ ತೆಱದಿಂದೆ ಮುಸುಱೆ ದಿವ್ಯಾಸ್ತ್ರಚಯಂಗಳ್ ಕೊಳೆ ಗಾಂಧರ್ವಬಲಂಗಳ್ ಕೆಡೆದುವು ನಿಟ್ಟೆಗೊಂಡ ಚಿಟ್ಟೆಯ ತೆಱದಿಂ: **ಪಂಪಭಾ,** ೭. ೩೮)

**ಚಿತಕ** – ಚಿತೆ, ಬೆಂಕಿ (ಪರೇತವನದೊಳ್ ಯೋಗಸ್ಥರಾಗಿರ್ದ ಹಿರಣ್ಯವರ್ಮಮುನಿವೆರಸು ಇರ್ವರುಮಂ ಒಂದೆ ಚಿತಕದ ಮೇಗಿಟ್ಟು ಸುಡುವಾಗಳ್: **ಚಾವುಂಪು,** ಪು. ೨೧೫, ಸಾ. ೨೪–೨೫)

**ಚಿತಾನಳ** – ಚಿತೆಯ ಬೆಂಕಿ (ಆ ಜಯದ್ರಥನ ಚಿತಾನಳನಿಂದಂ ಒಗೆದ ಪೊಗೆಗಳ್ ಕೊಳೆ ಸುರಿವೊಡೆ ಸುರಿವುವು ಎನ್ನ ನಯನಜಲಂಗಳ್: **ಪಂಪಭಾ,** ೧೧. ೧೧೯)

**ಚಿತ್ತಂಗೊಳ್** – ಮನಸ್ಸಿಡು (ಕೇಳೀವನಪಾದಪಂಗಳಿರ ಚಿತ್ತಂಗೊಂಡು ಬೀಟಿಕ್ಕೊಂಡು ರಾಗದೆ ನಿಮ್ಮಮ ಬಲಗೊಂಡು ಪೋಪ ಗುಣಮಮಂ ಕೊಳ್ಳಿಂ ಮನಃಪ್ರೀತಿಯಿಂ: **ಆದಿಪು,** ೧೧. ೧೩೪)

**ಚಿತ್ತಂಬಸು** – ಚಾಂಚಲ್ಯವುಂಟಾಗು (ಚಿತ್ತಂಬಸದಪ್ಪವೊಲ್ ಅಮಲಮಪ್ಪ ಜೈನಾಗಮಮದೊಳ್ ಬಸದಾಗೆ ಮರ್ತ್ಯನೇಂ ಸಾಧಿಸನೆ ನಿರ್ವಾಣಪದವಿಯಂ: **ಸಮಯಪ,** ೬. ೫೩)

**ಚಿತ್ತಂಬೆಱು**– ಮನಸ್ಸನ್ನು ಸೆರೆಹಿಡಿ (ಚಿತ್ತಂಬೆತ್ತು ಮೆಚ್ಚಂ ಸಲಿಸಿ ನಲಿವ ತಾಣಂಗಳೊಳ್ ಜಾಣರಂ ಜೊತ್ತಿಸಿ .. .. ಪೋಪರ್: **ಸಮಯಪ,** ೫. ೪೯)

**ಚಿತ್ತಜ** – ಮನ್ಮಥ (ಚಿತ್ತಜನೃಪಂಗೆ ಚೈತ್ರಂ ಮುತ್ತಿನ ಮಂಡವಿಗೆಯಂ ವಿಚಿತ್ರದೆ ಸಮೆದಂತೆತ್ತಿದನೆನೆ ಮಿಗೆ ತಳ್ತದಿರ್ಮುತ್ತೆ ಮುಗುಳ್ತೆಸೆಯುತ್ತಿರ್ದುದು ಅತ್ತೊಂದೆಡೆಯೊಳ್: **ಶಾಂತೀಶ್ವಪು,** ೧೦. ೯೭); [ಜೈನ] ಬಾಹುಬಲಿಯ ಅನೇಕ ಹೆಸರುಗಳಲ್ಲಿ ಒಂದು (ಚಿತ್ತಜಂ ಚಿತ್ತಭವಂ .. .. ನೆಗಟ್ದುವು ಬಾಹುಬಲಿಗೆ ಪಲವುಂ ಪೆರ್ಗಳ್: **ಆದಿಪು,** ೮. ೫೩)

**ಚಿತ್ತಜಕೇಳಿ** – ಕಾಮಕ್ರೀಡೆ (ನೆನೆಯದೆ ಪೋದುವಂತವರ್ಗೆ ಚಿತ್ತಜಕೇಳಿಗಳಿಂದೆ ಪೊಟ್ತುಗಳ್: **ಚಂದ್ರಪ್ರಪು,** ೬. ೮೫)

**ಚಿತ್ತಜನ್ಮ** – ಮನ್ಮಥ (ಮರುಳಾದಪೆ ಚಿತ್ತಜನ್ಮ ನೀಂ ನೋಡ ನಿಜಾಪ್ತವರ್ಗದಳವಂ: **ಪಂಪರಾ,** ೧. ೨೩)

**ಚಿತ್ತನಾಥ** – ಮನಸ್ಸಿನ ಒಡೆಯ, ನಲ್ಲ (ಚಿತ್ತನಾಥನೊಳ್ ಬೆರಸುವೆನೆನ್ನದಾಂ ಬೆರಪೆನೆಂಬುದಿದಾಗದು: **ಕವಿರಾಮಾ,** ೨. ೧೦೭)

**ಚಿತ್ತನಿರೋಧ** – ಮನೋನಿಗ್ರಹ (ಚಿತ್ತನಿರೋಧಂ ತಪಂ: **ಸಮಯಪ,** ೭. ೧೮)

**ಚಿತ್ರಪ್ರವರ್ತನ** – ಚಿತ್ರಕ್ಕೆ ಬಣ್ಣ ಹಾಕುವ ಒಂದು ಬಗೆ (ಅನಿಲಕಂ ಪತ್ರಕಂ ಬಿಂದುಕಂ ಧೂಮ್ರಾವರ್ತನಂ ಉದ್ವರ್ತನಂ ಚಿತ್ರಪ್ರವರ್ತನಂ ಎಂಬಾಱುಂ ಪ್ರಕಾರಮುಮಂ: **ಮಲ್ಲಿನಾಪು,** ೫. ೪೨)

**ಚಿತ್ತಭವ** – ಮನ್ಮಥ (ಚಿತ್ತಭವನ ಮೆಯ್ವಣ್ಣಮಂ ನುಣ್ಣಿಸಿ ತೋರ್ಪಂತೆ ಕರ್ಪು ಕಾಳಸೆಗೊಂಡ ತಮಾಳಮಾಳೆಗಳ

ರತಿಯ ಮುಗುಳ್ನಗೆಯಂ ಅಗೆವೊಯ್ದಂತೆ: **ಅನಂತಪು,** ೧. ೯೦ ವ); ಬಾಹುಬಲಿಯ ಒಂದು ಹೆಸರು (ಚಿತ್ತಭವಂ .. .. ಅಂಗಜನೆನೆ ನೆಗಟ್ದುವು ಬಾಹುಬಲಿಗೆ ಪಲವುಂ ಪೆಸರ್ಗಳ್: **ಆದಿಪು,** ೮. ೫೩)

**ಚಿತ್ತಭ್ರಾಂತಿಕ್ರಾಂತ** – ಮನಸ್ಸಿನ ಭ್ರಮೆಯಿಂದ ಬಳಲಿದವನು (ಚಿತ್ತಭ್ರಾಂತಿಕ್ರಾಂತಂ ಪೊತ್ತುದುದಂ ತಡವಿ ನೋಡುತುಂ: **ಪಂಚತಂತ್ರ,** ೨೧೩)

**ಚಿತ್ತಸಂಭವಲಕ್ಷ್ಮೀ** – ರತಿ (ಚಿತ್ತಸಂಭವಲಕ್ಷ್ಮೀನಿಳಯಂ ಸಮಸ್ತಜನಚೇತೋಹಾರಿ ಶಯ್ಯಾಗೃಹಂ: **ಪಂಚತಂತ್ರ,** ೧೯೫)

**ಚಿತ್ತವಿಮೋಹನ** – ಮನಸ್ಸನ್ನು ಸೆಳೆಯುವುದು, ಮರುಳುಗೊಳಿಸುವುದು (ಆ ಪಸದನದೊಳ್ ಜಗತ್ತ್ರಿತಯ ಚಿತ್ತವಿಮೋಹನ ಶಕ್ತಿಯೇಟ್ಗೆಯಂ: **ಚಂದ್ರಪ್ರಪು,** ೬.. ೬೬)

**ಚಿತ್ತವಿಶೋಧಿ** – ಮನಸ್ಸನ್ನು ಸ್ವಚ್ಛಗೊಳಿಸುವ (ಬೆಸಗೊಳೆ ದಶನದ್ಯುತಿ ದೆಸೆದೆಸೆಯ ತಮಃಪಟಮಂ ಉಗಿಪಟಂಗೊಳೆ ದೇವಂ ಬೆಸಸಿದನಾ ಕನ್ನೆಗೆ ಪಸರಿಸೆ ಚಿತ್ತವಿಶೋಧಿ ಬೋಧಿಪರಿಣಾಂಂಗಳ್: **ಶಾಂತಿಪು,** ೪. ೬೫)

**ಚಿತ್ತವೃತ್ತಿ** – ಸ್ವಭಾವ, ಮನೋಧರ್ಮ (ಆಯಿಲದ ಅಳುಪಿನ ಇಟೆವಿಟೆಯುಂ ಕುತ್ತದ ಮಱುಕದ ಚಿತ್ತವೃತ್ತಿಯುಂ ಅಪಮೃತ್ಯುವಿನ ಸತ್ವಬಾಧೆಯ ಗಂಧಾಗಂಧಮುಂ ಇಲ್ಲ: **ಶಾಂತಿಪು,** ೬. ೧೦೨ ವ)

**ಚಿತ್ತಶಯ** – ಮನ್ಮಥ (ಚಿತ್ತಶಯ ನಾಮಮಂ ಪುರುಷೋತ್ತಮಸುತನಾಳ್ದಂ: **ಪುಷ್ಪದಂಪು,** ೬. ೫೧)

**ಚಿತ್ತಶಯಾಕ್ರೀಡೆ** – ರತಿಕ್ರೀಡೆ (ಕೊಳಗೊಂಡಾ ನೀರೊಳರ್ದಿರ್ದು ಚಿತ್ತಶಯಾಕ್ರೀಡಸರೋವತೀರ್ಣ ರತಿಯೊಂದಾಕಾರಮಂ ತಾಳ್ದಿದಳ್: **ಆದಿಪು,** ೧೧. ೧೮)

**ಚಿತ್ತಾರಿ** – ಚಿತ್ರಕಾರಿ, ಚಿತ್ರಕಾರ (ಸೊಗಯಿಸುವ ಸಾಮಂತಚೂಡಾಮಣಿಯ ಮೆಯ್ಯ ಬಣ್ಣಂ ವಿಧಾತ್ರನೆಂಬ ಚಿತ್ತಾರಿಯ ವರ್ಣಕ್ರಮಂಗೆಯ್ದ ಕದಳೀಗರ್ಭಶ್ಯಾಮಮೆಂಬ ಬಣ್ಣದಂತಾದುದು: **ಪಂಪಭಾ,** ೨. ೩೯ ವ)

**ಚಿತ್ತಾರಿಗ** – ಚಿತ್ತಾರಿ (ಸುಕೇಶಿನಿಯ ಮಾಡದ ಕೇರ್ಗ್ಗಳೆಲ್ಲಾ ಎಡೆಗಳೊಳಂ ವ್ಯಾಳಂಗಳಪ್ಪಾನೆಗಳಂ ತನ್ನ ಚಿತ್ತಾರಿಗರಿಂದಂ ಬರೆಯಿಸಿದಂ: **ವಡ್ಡಾರಾ,** ಪು ೩೪, ಸಾ ೧೧)

**ಚಿತ್ತೆಯ ಸರಿ** – ಚಿತ್ರಾ ನಕ್ಷತ್ರದಲ್ಲಿ ಬರುವ ಮಳೆ (ಪುಷ್ಪವರ್ಷಮೊರ್ಮೆಯೆ ಸಕಲೋರ್ವಿಯನೆಯ್ದೆ ಪರ್ವುತಿರೆ ಚಿತ್ತೆಯ ಸರಿಯಂತೆರಗಿ ಪೋದುದುಮರಸಮಾಜಂ: **ಆದಿಪು,** ೧೪. ೧೪೭)

**ಚಿತ್ತೋದ್ಭವ** – ಮನ್ಮಥ (ಚಿತ್ತೋದ್ಭವ ಭುವನಜಯೋತ್ಪಾದನ ಪ್ರೌಢಸೇನಾಗ್ರಣಿ ಚೇತಃಪ್ರೀತಿಯಂ ಪೆರ್ಚಿಸುವುದು ಉಪವನಸ್ವೈರಚಾರಂ ಸಮೀರಂ: **ಮಲ್ಲಿನಾಪು,** ೨. ೩೧)

**ಚಿತ್ರ** – ಚಿತ್ರಕಲೆ, ಇದರಲ್ಲಿ ಮೂರು ಬಗೆ (ಚಿತ್ರ ಚಿತ್ರಾರ್ಥ ಚಿತ್ರಾಭಸಂ ಎಂಬ ಮೂಱುಂ ಪ್ರಕಾರಮುಂ .. .. ಪರಿಭಾವಿಸಿ ನೋಡಿ: **ಮಲ್ಲಿನಾಪು,** ೫. ೩೬ ವ); ವಿಚಿತ್ರ (ಅದೇನಚ್ಚರಿಯೋ ಚಿತ್ರದ ರೂಪು ರೂಪವಿಭವಂ ಮುಕ್ತ್ಯಾಂಗನಾಕಾಂತನಾ: **ಆದಿಪು,** ೮. ೫)

**ಚಿತ್ರಂ ಅಪಾತ್ರೇ ರಮತೇ ನಾರಿ** – ವಿಚಿತ್ರ, ಹೆಂಗಸು ಅಯೋಗ್ಯನಲ್ಲಿ ರಮಿಸುತ್ತಾಳೆ: **ಯಶೋಧಚ,** ೨. ೩೪)

**ಚಿತ್ರಕ** – ಚಿತ್ರ ಬರೆಯುವವನು (ಚಿತ್ರಕನುಂ ತಾನುಮಲ್ಲದೆ ಪೆಱರಱಿಯದಂತು ಕರುವಿಡಿಸಿ: **ಪಂಪರಾ,** ೩. ೨೫ ವ)

**ಚಿತ್ರಕರ್ಮ** – ಚಿತ್ರರಚನೆ (ರಸಭಾವಕಂಚುಕಿತ ಚಿತ್ರಕರ್ಮಂಗಳಿಂದಮೊರ್ಮೆ ವಿವಿಧಪ್ರಕಾರ ಮೃಗಯಾವಿನೋದಂಗಳಿಂ: **ಕಾದಂಬ,** ೧. ೧೯)

**ಚಿತ್ರಕಾಯ** –ಸುಂದರ ದೇಹ; ಹುಲಿ, ಚಿರತೆ (ಚಿತ್ರಕಾಯನಂ ತಪ್ಪಿಸಿ ತಂದು ತೋಱಿಬಿಡು ಪೋಪ ಮೃಗಾಳಿಗೆ ಎನುತ್ತ: **ಉದ್ಭಟಕಾ,** ೨. ೫೧)

**ಚಿತ್ರಕೃತಿ** – ವೈಶಿಷ್ಟ್ಯಪೂರ್ಣ ಕೃತಿ (ಪ್ರಕಟಂ ಮಾಡಿರೆ ಚಿತ್ರಕೃತಿಯಂ ವ್ಯಾವರ್ಣಿಸುತ್ತುಂ ಕವಿಪ್ರಕರಂ: **ಕವಿರಾಮಾ,** ೧. ೧೫೦)

**ಚಿತ್ರಕೇತುವೃಂದ** – ಬಣ್ಣ ಬಣ್ಣದ ಧ್ವಜಗಳ ಸಮೂಹ (ಕುದುರೆಯ ಬಣ್ಣದಿಂ ರಥದ ತೋರ್ಕೆಯಿಂ ಎತ್ತಿದ ಚಿತ್ರಕೇತುವೃಂದದ ಕುಱುಪಿಂದ ಉದಗ್ರ ರಥಚೋದಕಚಿಹ್ನದಿಂ ಈತನೆಂಬುದಂ ಅಱಿದು: **ಪಂಪಭಾ,** ೧೦. ೮೭)

**ಚಿತ್ರಪ್ರವರ್ತನ** – ಬಣ್ಣ ಹಾಕುವ ಆರು ಪ್ರಕಾರಗಳಲ್ಲಿ ಒಂದು (ಅನಿಲಕಂ ಪತ್ರಕಂ ಬಿಂದುಕಂ ಧೂಮ್ರಾವರ್ತಕಂ ಉದ್ವರ್ತನಂ ಚಿತ್ರಪ್ರವರ್ತನಂ ಎಂಬ ಆಱುಂ ತೆಱದಣ್ಕೆಯುಮಂ: **ಮಲ್ಲಿನಾಪು,** ೫. ೩೬ ವ)

**ಚಿತ್ರಭಿತ್ತಿ** – ಚಿತ್ರಗಳಿರುವ ಗೋಡೆ (ಇಂದ್ರನೀಲದ ಭದ್ರದೊಳಂ ಕರ್ಕೇತನದ ಜಾಳರಿಗೆಯೊಳಂ ಪಳುಕಿನ ಚಿತ್ರಭಿತ್ತಿಯೊಳಂ ವಿವಾಹಗೇಹಮಂ ಸಮೆಯಿಸಿ: **ಪಂಪಭಾ,** ೩. ೩೪ ವ); ಬೆಳ್ಳಿ

**ಚಿತ್ರರತ** – ಅಸಹಜ ರತಿ (ಕಣ್ಗೊಳೆ ಸವಿಯಂ ಪುದುಂಗೊಳಿಪ ಚಿತ್ರರತಂಗಳ ಭಂಗಿಗಳ್: **ಆದಿಪು,** ೨. ೭೧)

**ಚಿತ್ರಸಾಲೆ** – ಚಿತ್ರಗಳನ್ನಿಡುವ ಕೋಣೆ (ಎಸೆವ ಪವಡಿಸುವ ಮನೆ ಚಿತ್ರಸಾಲೆ ಸುರತಾಲಯ ಮಹೀಗೃಹಂ ಆರೋಗಿಸುವ ಮನೆ ಮಂಡಪಂ ಗುಣಣಸಾಲೆ ಎಂಬಿನಿತುಮಂ ಗೃಹಾಂಗಂ ಕುಡುಗುಂ: **ಶಾಂತಿಪು,** ೬. ೧೧೬)

**ಚಿತ್ರಸೂತ್ರ** – ಚಿತ್ರಗಳಿರುವ ಬಟ್ಟೆ (ಚೀನದ ಮಹಾಚೀನದ ಪಟೆಯ ಚಿತ್ರಾವಟೆಯ ಪಟ್ಟಾವಟೆಯ ಪಟ್ಟಸೂತ್ರದ ಚಿತ್ರಸೂತ್ರದ ನೇತ್ರವಟ್ಟಣಿಗೆಯ ಪುಟ್ಟಿಗೆಗಳಂ ಒಟ್ಟಿ ಬೆಟ್ಟಾಗಿ ಪುಂಜಿಸಿ: **ಸುಕುಮಾಚ,** ೧೦. ೯೧ ವ)

**ಚಿತ್ರಾಂಬರ** – ಬಣ್ಣಬಣ್ಣದ ಬಟ್ಟೆ (ತಾಂ ಮಧುಪಾನಾಕ್ರೀಡಾನಿರತನಾಗಿ ಪೋಗಲ್ ಬಗೆದು ಚಿತ್ರಾಂಬರಪರಿಧಾನನುಂ .. .. ಸರ್ವಾಭರಣಭೂಷಿತನುಂ ಆಗಿ: **ಪಂಚತಂತ್ರ,** ೧೨೭ ವ)

**ಚಿತ್ರಾಭಾಸ** – ಚಿತ್ರದ ಒಂದು ಬಗೆ (ಚಿತ್ರ ಚಿತ್ರಾರ್ಥ ಚಿತ್ರಾಭಾಸಮೆಂಬ ಮೂಱುಂ ಪ್ರಕಾರಮುಮಂ: **ಮಲ್ಲಿನಾಪು,** ೫. ೩೬ ವ)

**ಚಿತ್ರಾಯತನ** – ಚತ್ತಾಣ, ಒಂದು ಕಾವ್ಯಪ್ರಕಾರ (ಮುಕ್ತಕಂ ಕುಲಕಂ ಕೋಶಂ ಸಂಘಾತಂ ಎಂಬ ರಚನಾವೂಚಿತ್ರ್ಯ ಚಿತ್ರಾಯತನ ವೈದಂಡಿಕ ಪ್ರಬಂಧ ಬಂಧುರ ಪದ್ಯಬಂಧದೊಳಂ: **ಅನಂತಪು,** ೧೦. ೨೮ ವ)

**ಚಿತ್ರಾರ್ಥ** – ಚಿತ್ರದ ಒಂದು ಬಗೆ (ಚಿತ್ರ ಚಿತ್ರಾರ್ಥ ಚಿತ್ರಾಭಾಸಮೆಂಬ ಮೂಱುಂ ಪ್ರಕಾರಮುಮಂ: **ಮಲ್ಲಿನಾಪು,** ೫. ೩೬ ವ)

**ಚಿತ್ರಾರ್ಪಿತ** – ಚಿತ್ರಣಗೊಂಡ (ಚಿತ್ರಾರ್ಪಿತಕಾಂತೆಯಂತೆ ತಳೆದಳ್ .. .. ನಿಷ್ಪಂದಕಾರಿತ್ವಮಂ: **ಚಂದ್ರಪ್ರಪು,** ೮. ೮೫)

**ಚಿತ್ರಾವಹ** – ಆಶ್ಚರ್ಯಕರವಾದ (ಮತ್ತೀ ವಿವಾಹಾನಂದಂ ದೊರೆಕೊಂಡುದಾರಿನಿದು ಮಚ್ಚಿತ್ತಕ್ಕೆ ಚಿತ್ರಾವಹಂ: **ಚಂದ್ರಪ್ರಪು,** ೬. ೯೮)

**ಚಿತ್ರಾವಳಿ** – ಬಣ್ಣಬಣ್ಣದ ಬಟ್ಟೆ (ಪಟಿ ಚಿತ್ರಾವಳಿ ಜೋನೆಗವಟೆಯಂ ದೇವಾಂಗಮೆಂಬ ವಸನಂಗಳಂ: **ಆದಿಪು,** ೫. ೩೪)

**ಚಿತ್ರಿಕ** – ಚಿತ್ರಕಾರ (ಪಟದೊಳ್ ದಿಟಮಾಗಿ ಚಿತ್ರಿಕಂ ಬರೆದನೆ ಗೆತ್ತು: **ಚಂದ್ರಪ್ರಭು,** ೨. ೫೭)

**ಚಿತ್ರಿಕೆ** – ಬೊಂಬೆ (ನಸುನಗುವಂತಿರ್ಪ ಚಿತ್ರಿಕೆಗಳ ನಗೆಮೊಗಕ್ಕೆ ನಾಣ್ಚಿ ಮುದ್ದುಮೊಗಮಂ ಬಾಗುವ ಮನುಜವನಿತೆಯರುಮಂ: **ಲೀಲಾವತಿ,** ೮. ೮೦ ವ)

**ಚಿತ್ರಿಸು** – ಚಿತ್ರವನ್ನು ರಚಿಸು (ಕಾಟ್ಟುಜು ಮಸಗಿದಂತೆ ಮಸಗಿದ ದುರ್ಧರ ಧನುರ್ಧರಬಲಮುಮಂ ಶ್ವೇತ ಭೀಷ್ಮರ ಪೇಟ್ದಿ ಓಜೆಯೊಳೆರಡುಂ ಪಡೆಗಳ ಪಡೆವಳರ್ಕಳ್ ಕುರುಕ್ಷೇತ್ರದೊಳ್ ಚಿತ್ರಿಸಿದಂತೆ ಒಡ್ಡಿ ನಿಂದಾಗಳ್: **ಪಂಪಭಾ,** ೧೦. ೫೧ ವ)

**ಚಿತ್ರೆ** – [ಜೈನ] ಒಬ್ಬ ದೇವತಾಸ್ತ್ರೀ (ಸುಪ್ರತಿಷ್ಠಿತ ಸುಪ್ತಣೀಧಿ .. .. ಚಿತ್ರೆಯೆಂಬೇಣ್ಬರುಂ ದಿಗಂಗನೆಯರಂ: **ಆದಿಪು,** ೭. ೩ ವ)

**ಚಿನ್ನ** – ಹೊನ್ನು (ಚಿನ್ನದ ಸವಂಗಂ ಅಪೂರ್ವದ ಮೊಚ್ಚೆಯಂ .. .. ಒಪ್ಪೆ: **ಪಂಪಭಾ,** ೯. ೧೦೩); [ಭಿನ್ನ] ಕತ್ತರಿಸಿದುದು (ಭಕಾರಕ್ಕೆ ಚಕಾರಂ: ಭಿನ್ನಂ–ಚಿನ್ನಂ: **ಶಬ್ದಮದ,** ೨೬೯ ಪ್ರ)

**ಚಿನ್ನಪೂ** – ಹೂವಿನಾಕಾರದ ಚಿನ್ನದ ಆಭರಣ (ಕೆನ್ನೆಗಳನೊಯ್ಯನೆ ನೀವುವ ಚಿನ್ನಪೂವನೋಸರಿಸುವ ಹಾರಮಂ ಪಿಡಿದು ನೋಡುವ: **ಪಂಪಭಾ,** ೩. ೭೭)

**ಚಿನ್ನವರದ** – [ಚಿನ್ನ+ಪರದ] ಚಿನ್ನದ ವ್ಯಾಪಾರಿ (ಚಿನ್ನವರದರಿಂ ನಿರ್ಮಳ ಕನಕದ ಪಟ್ಟಶಾಲೆಗಳ್ಪರಿದೆಸೆಗುಂ: **ತ್ರಿಷಷ್ಟಿಪು,** ೭. ೨೫)

**ಚಿಬ್ಬಂಬೊಯ್** – ಮೈಮೇಲೆ ಚುಕ್ಕೆಗಳನ್ನಿಡು (ದೆಸೆಯಾನೆಗಳ ಆನನದೊಳ್ ಪಸರಿಸಿ ದುಗ್ಗೋದಬಿಂದು ಚಿಬ್ಬಂಬೊಯ್ದಂತೆಸೆದಿರ್ದುವು ಮೆಯ್ಯೊಳ್: **ಅಜಿತಪು,** ೪. ೫೯)

**ಚಿಬ್ಬಸಲೆ** – ಚಿಕ್ಕಹಸಲೆ (ಅಂಚೆಗಳ್ ತಳರುತ್ತಿರ್ದಪ್ಪುವು ಒಪ್ಪಿ ಚಿಬ್ಬಸಲೆಯಿಂ: **ಲೀಲಾವತಿ,** ೫. ೫೭)

**ಚಿಬ್ಬು** – ಮೈಮೇಲಿನ ಸಣ್ಣ ಚುಕ್ಕೆಗಳು (ಅಮರಶ್ರೇಣಿಗೆ ಮುತ್ತಿನಾಭರಣಮಂ ದಿಗ್ದಂಥಿಯೂಥಕ್ಕೆ ಚಿಬ್ಬುಮಂ: **ಪುಷ್ಪದಂಪು,** ೧೧. ೩೩)

**ಚಿಮಿಚಿಮಿಸು** – ಒಂದು ಅನುಕರಣ ಶಬ್ದ (ಮೊರ್ಮರಾಗಿ ಕರಿವುದುಂ ಚಿಮಿಚಿಮಿಸೆ ತಾಳಿಸುವುದುಂ ಇಕ್ಷುಯಂತ್ರಗಳಿಂ ಪಿಟೆವುದುಂ: **ಸುಕುಮಾಚ,** ೧೧. ೪೭ ವ

**ಚಿಮ್ಮು** – ಬೆರಳಿಂದ ಚಿಮ್ಮು, ಆಯುಧ ಝಳಪಿಸು (ಯುಕ್ತಾಂಗುಲಿ ವಿಮೋಚನೇ ಶ್ತ್ರಿಯಾಯಾಂಚ : **ಶಬ್ದಮದ, ಧಾ** ೫೦೫)

**ಚಿರ** – ಸ್ಥಿರ, ಬಹುಕಾಲ ಬಾಳುವ (ಚಿರಮಲ್ತೆನ್ನಯ ತೇಜಮುಂ: **ಅನಂತಪು,** ೩. ೬೯)

**ಚಿರಂಜೀವಿ** – ಕಾಗೆ (ಅಂದಿಂದಿತ್ತ ಕೌಶಿಕಂಗಳ್ಗಂ ನಮಗಂ ಪಗೆಯಾದುದು ಎಂದು ಚಿರಂಜೀವಿ ಪೇಟೆ: **ಪಂಚತಂತ್ರ,** ೩೨೯ ವ)

**ಚಿರಂಟಿ** – ಯುವತಿ (ಪಾಡೆ ಚಿರಂಟಿಯರ್ ತಿಣ್ಣಮಾದ ವಿಳಾಸಮಂದಳೆದು: **ಉದ್ಭಟಕಾ,** ೮. ೧೭)

**ಚಿರಂತನ** – ಹಿರಿಯ (ಜನಪತಿ ಬಟೆಯಂ ಸಂಭಿನ್ನನೆಂಬ ನೈಮಿತ್ತಿಕಂಗೆ ಬಟೆಯಟ್ಟಿ ಚಿರಂತನರಿರ್ ದೃಷ್ಟ ಪರಂಪರ ವಿನೂತ ವಿದ್ಯಾವಿಶೇಷವಿದರಿರ್ ಪೇಟೆಂ: **ಶಾಂತಿಪು,** ೫. ೨೦)

**ಚಿರಂತನಾಚಾರ್ಯ** – ಹಿಂದಿನ ಆಚಾರ್ಯರುಗಳು (ಗದ್ಯಪದ್ಯಸಮ್ಮಿಶ್ರಿತಮಂ ನಿಗದಿಸುವರ್ ಗದ್ಯಕಥಾಪ್ರಗೀತಿಯಿಂ ತತ್ ಚಿರಂತನಾಚಾರ್ಯರ್ಕಳ್: **ಕವಿರಾಮಾ,** ೧. ೨೭)

**ಚಿರಜೀವಿತೆ** – ಬಹುಕಾಲ ಬದುಕುವುದು (ಇನ್ನೇವೆಸರ್ಗೊಂಡಪುದಣ್ಣ ನರರ ಚಿರಜೀವಿತೆಯಂ: **ಚಂದ್ರಪ್ರಭು,** ೨. ೩೨)

**ಚಿರನಿಮಿಷ**– ಬಹುಕಾಲ ಕಣ್ಣು ಮುಚ್ಚಿರುವುದು (ಇರ್ದುದನಿಮಿಷಜಾತಂ ಚಿರನಿಮಿಷಮಾಗೆ ಕಣ್ಣುಳ್ಳುವಿನಂ: **ಜಗನ್ನಾವಿ,** ೧. ೪೭)

**ಚಿರಬಿಲ್ವ** – ಹೊಂಗೆಮರ (ಚಿರಬಿಲ್ವಂ ಬ್ರಹ್ಮವೃಕ್ಷಂ ಕಜಿಕೆ ತಜೆಯದದಿಂದೊಪ್ಪುತಿರ್ದುದರಣ್ಯಂ: **ಗಿರಿಜಾಕ,** ೧. ೭೨)

**ಚಿರಿಕೆ** – ಒಂದು ಸೊಪ್ಪು (ಸುರುಚಿರ ಚಕ್ಕವತಂ ಚಿರಿಕೆ ರಾಜಗಿರಿ ಕೆಸವು ಕೀರೆ ದೊಗ್ಗಳೆಯೆಲೆ ವಾದುರವಂ ಬಡಿಸಿದರ್: **ಧರ್ಮಪ,** ೨. ೫೮)

**ಚಿರುಕುಟ** – ಚಿಂದಿ, ಹರಕಲು ಬಟ್ಟೆ (ಚಿರುಕುಟಮನುಟ್ಟು ಕಯ್ಯೊಳ್ ತಿರಿದುಣುತುಂ .. .. ನುಡಿದೊಡೆ ಅದಂ .. .. ಆದೇಶವಚನಮೆಂಬರ್ ಮೂಢರ್: **ಸಮಯಪ,** ೧೨. ೩೩)

**ಚಿಲಿಚಿಮ** – ಒಂದು ಜಾತಿಯ ಸಣ್ಣ ಮೀನು (ಎಳಮೀಂಗಳ್ ಶಕುಲಂಗಳ್ ನಳಮೀನಂ ಚಿಲಿಚಿಮ ಅಭಿಧಾನಮದಕ್ಕುಂ : **ಅಭಿಧಾವ,** ೧. ೪. ೬)

**ಚಿಲುಕೂಲಿ** – ಒಂದು ಬಗೆಯ ಹಕ್ಕಿ (ಹೆಂಗುರು ಕಾಕಂ ಚಿಲುಕೂಲಿ ರತ್ನಖಗಂ ಇರ್ಕುಂ ತದ್ವನಾಗೌಘದೊಳ್: **ರಾಜಶೇವಿ,** ೫. ೫೯)

**ಚಿಲ್ಲ** – ವಂಡು ನೀರನ್ನು ತಿಳಿಗೊಳಿಸುವ ಬೀಜ, ಕತಕ (ತದಕಿನ ತಾಳ ತೆಂಗಿನ ತಳಂಕಿನ ತುಂಬುರ ಚಿಲ್ಲ ಬೆಲ್ಲವತ್ತದ .. .. ಮರಂಗಳ ಕೊಂಬುಗಳ್: **ಲೀಲಾವತಿ,** ೬. ೨೨)

**ಚಿವುಡು** – ಉಗುರಿನಿಂದ ಚಿವುಟಿಹಾಕು (ಚಿವುಡು–ನಖಚ್ಛೇದೇ: **ಶಬ್ದಮದ, ಧಾ** ೩೦೭)

**ಚಿಹ್ನ** – ಗುರುತು (ಎಸೆದೊಪ್ಪಿರ್ದ ವಿಮಾನಮಾಲೆ ಖಚರಾನೀಕ್ಕಕೆ ಚಿಹ್ನಂಗಳ್: **ಶಾಂತಿಪು,** ೫. ೩೮)

**ಚಿಳಿಚಿಮ** – ಪುಟ್ಟ ಮೀನು (ವೀಚಿಗಳನೊಡೆದುರ್ಬಿ ಪರಿವ ಬಲ್ಮೀನ್ಗಳಿಂ ಪುಟನೆಗೆದು ಮಗುಟೆಟೆವ ಚಿಳಿಚಿಮಾನೀಕದಿಂ: **ಉದ್ಭಟಕಾ,** ೩. ೮೪)

**ಚೀತ್ಕೃತಿ** – ಗಟ್ಟಿಯಾದ ಧ್ವನಿ (ವಿಹಗ ಸಮುತ್ಕರಚೀತ್ಕೃತಿ ತೀವಿ ವಿಪಿನದೊಳ್ಬಿಡದೆಸೆಗುಂ: **ರಾಜಶೇವಿ,** ೫. ೬೨)

**ಚೀನ** – ರೇಷ್ಮೆಯ ಬಟ್ಟೆ (ಸಾಹಿಯಾಣದ ಚೀಣದ ಧವಳವಟ್ಟದ ಧರ್ಮದ ಜೊಂಗದ ದೇವಾಂಗದ ಸಕಳವಟ್ಟೆಗಳುಮಂ: **ಆದಿಪು,** ೪. ೩೪ ವ)

**ಚೀನಚೇಳ** – ಚೀನಾಂಬರ (ಪೂತೆಲವಕ್ಕೆ ಪೌರವನಭೂರುಹಂ ಒಪ್ಪುವ ಕೇತನಚೀನಚೇಳವರುಣೋಪಲಭಿತ್ತಿಗೆ ಪೊನ್ನಕೋಂಟೆ: **ಚಂದ್ರಪ್ರಭು,** ೬. ೩೮)

**ಚೀನವಸನ** – ಚೀನಾಂಬರ (ಚೀನವಸನಾಂಚಲಮಂ ನಸುನೂಂಕಿ ಹಾರಮಂ ಕರತಳದಿಂ ಕೆಲಕ್ಕೆ ತೆಗೆದೊಯ್ಯನೆ ಸೋಗಿಲೊಳಿಟ್ಟು: **ರಾಜಶೇವಿ,** ೪. ೬೬)

**ಚೀನಾಂಶುಕ** – ಚೀನಾಂಬರ (ಚೀನಾಂಶುಕ ರುಚಿರಂಗಳಂ .. .. ಉತ್ಕಳಖೇಟಮಂ ಪುಗುವಾಗಳ್: **ಆದಿಪು,** ೪. ೫೮ ವ)

**ಚೀರೀ** – ಜೀರುಂಡೆ (ಚೀರೀ ಝಿಲ್ಲಿಕಾ ಭೃಂಗಾರೀ ಶಬ್ದಂ ಸಮಾನವಾಚ್ಯಂ: **ಅಭಿಧಾವ,** ೯. ೨೩)

**ಚೀರಿಕಾ** – ಝೇಂಕರಿಸುವ ಒಂದು ಹುಳು (ಬಂದುದು ಬೇಸಗೆಗಾಲಂ ಅಸ್ತ ಕಾಸಾರಕ ಸಾರಂ ಅಸ್ತಮಿತ ಮಾರುತನುದ್ಗತ ಚೀರಿಕಾ ರುತಂ: **ಪಂಪರಾ,** ೭. ೮೫)

**ಚೀರ್ಗರೆ** – ಚೀರು, ಕಿರಿಚು (ಚೀರ್ಗರೆವಿಕ್ಷುಯಂತ್ರ ನಿಕರಂ ಮಂದ್ರೇಕ್ಷುಷಂಡಂಗಳೊಳ್: **ಅನಂತಪು,** ೧. ೭೯)

**ಚೀರಘಟ್ಟಿ** – ದೇವಲೋಕದ ಚಿತ್ರಕಾರ (ಕರುವಂ ಒಡರ್ಚಿ ಬರ್ಚಿಸುವ ಬಲ್ಮೆಗೆ ಬೀಗುವ ಚೀರಘಟ್ಟಿ ತಾಂ ಸರಿಯೆನಿಪಂದದಿಂ ಕರುವಿಡಲ್ ನೆಱೆಯಂ ದ್ವಿಜರಾಜಕನ್ಯೆಯಂ: **ಸುಕುಮಾಚ,** ೫. ೫೬)

**ಚೀರೀ** – ಚೀರಿಕಾ, ಝೇಂಕರಿಸುವ ಒಂದು ಹುಳು (ಧವಳ ಚಮರರುಹ ಪವನನನವಮಾನಂಗೆಯ್ದು ಕಂದ ನಿಷ್ಠುರ ಚೀರೀ ರವ ಮುಖರ ಪರುಷ ಕಾನನ ಪವಮಾನನ ಸೋಂಕಂ ಆಸೆಗೆಯ್ಯಲ್ ಬಗೆದೈ: **ಪಂಪರಾ,** ೭. ೧೦)

**ಚೀಲ** – [ಚೀರ] ಬಟ್ಟೆಯ ಕೋಶ, ಹಣ ಇಡುವ ಕೈಚೀಲ (ಪರದನ ಚೀಲಮಂ ಒಳಗಿರ್ದು ಮೆಲ್ಲನೀಕ್ಷಿಸಿ ಚೋರಂ: **ಧರ್ಮಾಮೃ,** ೧೨. ೫೧)

**ಚುಂಚು** – ಜುಟ್ಟು, ಮುಂಗುರುಳು (ಮಂದಮತಿಯ ಮುಂದೆ ತಲೆಯ ಚುಂಚಂ ಪಿಡಿದು ಚರೆಯಕ್ಕೆ ಬಿಟ್ಟ ಗೂಂಟನೆಱೆದು ತಪ್ಪಂತೆ: **ನೇಮಿನಾಪು,** ೬. ೬೬ ವ)

**ಚುಂಚುಮೀಸೆ** – ಹುರಿಗೊಂಡ ಮೀಸೆ (ಕತ್ತುರಿಯಂ ತೂಱುವ ಚುಂಚುಮೀಸೆ: **ಅನಂತಪು,** ೧೦. ೭೫)

**ಚುಂಚುಲೋವೆ** – ಗೋಡೆಯ ಚಾಚು ಭಾಗ (ಪೊಂಬೆಸೆದುಪ್ಪರಿಗೆಯ ಬಿಸವಂದಮಾದ ಚುಂಚುಲೋವೆಗಳೊಳಗೆ ಬಳಸಿ ನಲಿದುಲಿವ ಪಾರಿವಂಗಳ ಕೊರಲುಲಿಯೊಳಂ: **ಕಬ್ಬಿಗಕಾ,** ೩೭ ವ)

**ಚುಂಬನ** – ಮುತ್ತು (ಕಳಾನಿಲಯಂ ಮಾಡಿದಂ ಒಲ್ದು ಚುಂಬನಪರಿಷ್ವಂಗಪ್ರಪಂಚಂಗಳಂ: **ಜಗನ್ನಾವಿ,** ೧೦. ೧೪೦)

**ಚುಂಬಿಸು** – ಮುತ್ತಿಡು (ತಾವರೆಯೆ ಗೆತ್ತು ಮುಖಾಬ್ಜಮನೊಂದು ತುಂಬಿ ಚುಂಬಿಸೆ: **ಪಂಪಭಾ,** ೫. ೬೩)

**ಚುಚ್ಚುಳ** – ಚುಚ್ಚು ಮಾತಾಡುವವನು (ಚೆಚ್ಚರಿಗರಲ್ಲರೆನುತಂ ಚುಚ್ಚುಳರ್ ಆರ್ಹತರ್ಗೆ ಬಱೆದೆ ಮುಳಿಯುತ್ತಿರ್ಪರ್: **ಸಮಯಪ,** ೧೩. ೩೬)

**ಚುನ್ನ** – ಕೊಂಕುಮಾತು (ಈ ಕ್ಷಿತಿರಾಜ್ಯಸಂಪದವಂ ಉಂತುಂ ನಚ್ಚೆ ಮೆಚ್ಚಿರ್ದೊಡೆ ಈ ಭುವನಾಧೀಶ್ವರ ನಿನ್ನ ಬೋಧದೆಸಕಂ ಚುನ್ನಕ್ಕೆ ಪಕ್ಕಾಗದೇ: **ಪುಷ್ಪದಂಪು,** ೧೩. ೬೬)

**ಚುನ್ನವಾಡು** – ಕೊಂಕುಮಾತಾಡು (ತರದಿಂದುಣ್ಬುವ ಕಣ್ಣಿ ನೀರ್ವನಿಗಳಂ ಕೈಕೊಂಡು ನುಣ್ಬುತ್ತಿನೊರ್ಚರಮಂ ಪೆರ್ಮೊಲೆ ಚುನ್ನವಾಡೆ: **ಕಬ್ಬಿಗಕಾ,** ೫೭)

**ಚುನ್ನಕ** – ನಿಂದಕ (ನಿನ್ನ ಸಂಪದ ನೋಡಲಾಱದೆ ಚಿನ್ನಭಿನ್ನವ ಮಾಡಿ ಕೆಡಿಸುವ ಚುನ್ನಕರ ನುಡಿವಿಡಿಯದೆ: **ಆದಿಪು,** ೧೦. ೫)

**ಚುಬುಕ** – ಗಲ್ಲ (ನೃಪಂ ಕರಸರೋರುಹದಿಂ ಚುಬುಕಾಗ್ರಭಾಗಮಂ ಪಿಡಿದು .. .. ನಿಜಾಂಬಿಕಾ ಪಯೋಜನಮನೀಕ್ಷಿಸು ಪೋಗು .. .. ಎಂದು ಬೆಸಸಲ್: **ಕಾದಂಸಂ,** ೨. ೪೫ ಮತ್ತು ೪೫ ವ)

**ಚುಯ್ಯಿಡು** – ಸುಯ್‌ಗುಟ್ಟು (ಅಂಭೋಜ ಲಸನ್ನಾಳೋತ್ಕರಂ ಚುಯ್ಯಿಡುವ ಪೊಗೆಯಾಯ್ತು: **ಕುಸುಮಾಕಾ,** ೧೩. ೫೨)

**ಚುರ್ಚು** – ಸುಡು (ಉರಿವ ಕೈದೀವಿಗೆಗಳೊಳ್ ಮೊಗಮಂ ಚುರ್ಚುವರುಂ: **ಆದಿಪು,** ೫. ೮೫ ವ)

**ಚುರ್ಚುಂಗೊಳ್ಳಿ** – ಉರಿಯುವ ಕೊಳ್ಳಿ (ಉಕಾರಾಂತದೊಳ್ ಗಕಾರಂ ಪರಮಾದುದರ್ಕೆ; ಸುರ್ಕುಂಗುರುಳ್, ಕರ್ಚುಂಗಲ್, ಚುರ್ಚುಂಗೊಳ್ಳಿ: **ಶಬ್ದಮದ,** ೧೮೧ ಪ್ರ)

**ಚುಳಕಪಾನ** – ಅಂಗೈ ತುಂಬ ನೀರು (ಸಂತಪ್ತಜಳಪ್ರತ್ಯೇಕಚುಳುಕಪಾನಮಾತ್ರಜಾನುದಘ್ನ ಜಲದುರ್ಗನುಮಾಗಿ ನಡೆದು: **ಆದಿಪು,** ೧೪. ೫೨. ವ)

**ಚುಳಿಕೆ** – ಹಿಡಿ, ಅಂಗೈ (ಮಣಿಯ ಹಾರಂ ಪೂಗಂ ಚುಳಿಕೆಯ ಅಸಿತೋತ್ಪಳಂ ಕಂಗೊಳಿಸಲ್ ಶಿವನೆಡೆಗೆ ಪರವೆ ಭರದಿಂ ಬಂದಳ್: **ತ್ರಿಷಷ್ಟಿಪು,** ೩. ೧೧೦)

**ಚುಳುಕ** – ಅಂಗೈ (ಅಗಸ್ತ್ಯಂಗೆ ಚುಳುಕಮಾತ್ರಂ ಭವಸಾಗರಶತಂ: **ಅನಂತಪು,** ೧೦. ೪೪)

**ಚುಳುಕಾಡು** – ತುಳುಕಾಡು (ಮುನ್ನೆ ಕಣ್ಬೇಟದವಳ್ ತುಳುಕಿದೆಡೆಗೆಯ್ದಿ ಚುಂಬಿಸಿ ಚುಳುಕಾಡೆ ಮದಳ್ಕಿ ಮೂಡಿದಂ ಸ್ಮರನೊರ್ವಂ: **ಅನಂತಪು,** ೭. ೩೮)

**ಚೂಚಕ** – ಗೊಂಚಲು (ಚೂಚಕಂಗಳ ಭರದಿನೊಂದಿನಿಸು ತೂಗುತುಂ ಪ್ರಾಚೀನಮಾದೆಲರ್ದೊಲೆದೊಲೆದು ಬಾಗುತುಂ: **ಉದ್ಭಟಕಾ,** ೩. ೮೮)

**ಚೂಚುಕ** – ಮೊಲೆತೊಟ್ಟು (ಪೊಂಗೊಡನಂ ತಮಾಳಪಲ್ಲವದೊಳೆ ಮುಚ್ಚಿದಂದದೊಳೆ ಚೂಚುಕಮಾಂತುದು ಕರ್ಪನಾಕೆಯಾ: **ಪಂಪಭಾ,** ೧. ೧೨೫)

**ಚೂಡ** – ಕೋಳಿ (ದಿನಾಂತಂ ಮನೋಹರಮಾಗಿರ್ದುದು ವಾಸಯಷ್ಟಿಗತಶುಂಭತ್ತಾಮ್ರ ಚೂಡವ್ರಜಂ: **ಪಂಚತಂತ್ರ,** ೩೩೭)

**ಚೂಡಾಕರಣ** – ಚೌಲಕರ್ಮ, ಮೊದಲ ಬಾರಿಗೆ ಗಂಡುಮಕ್ಕಳ ತಲೆಗೂದಲು ತೆಗೆಸುವುದು, ಷೋಡಶ ಸಂಸ್ಕಾರಗಳಲ್ಲಿ ಒಂದು (ಭುವನಚೂಡಾಭರಣಂಗೆ ಚೂಡಾಕರಣಮುಂ ಮೊದಲಾದ ಸಮುಚಿತಕ್ರಿಯೆಗಳಂ ಯಥಾಕಾಲದೊಳ್ ಮಹೀಪಾಲಕಂ ಮಾಡಿಸಿ: **ಪುಷ್ಪದಂಪು,** ೪. ೫೧ ವ)

**ಚೂಡಾಮಣಿ** – ತಲೆವಣಿ, ಶಿರೋರತ್ನ (ಈಡಿತ ಜಿನವರ ಶಾಸನ ಚೂಡಾಮಣಿ ಬುಧರ್ಗೆ ಅನಲ್ಪ ಕಲ್ಪಕುಜಂ ಕೆಯ್ ನೀಡಿದ ಬೇಟ್ಟರ ನೆರವಿಗೆ ನೀಡಿಲ್ಲದೆ ಕುಡುವ ಉದಾತ್ತಂ ಆ ಜಿನಚಂದ್ರಂ: **ಶಾಂತಿಪು,** ೧. ೩೨)

**ಚೂಡಾರತ್ನ** – ಚೂಡಾಮಣಿ (ಕವಿಜನ ಚೂಡಾರತ್ನಂ ಕವಿತಿಲಕಂ ಕವಿಚತುರ್ಮುಖಂ ಕವಿರತ್ನಂ: **ಅಜಿತಪು,** ೧. ೮೧)

**ಚೂಡೋದಯ** – ಚೂಡಾಕರಣ (ಪಿಕಮೌನವ್ರತದುಂದುಭಿಧ್ವನಿ ಬಲಾಕಾದೃಶ್ಯ ಚೂಡೋದಯಾನಕರಾವಂ: **ಚಂದ್ರಪ್ರಪು,** ೪. ೩೫)

**ಚೂತ** – ಮಾವಿನ ಮರ (ನವಚೂತಂ ತಳಿರ್ವಂದದಿಂ ತಳಿರ್ಗುಮೇ ಸ್ಥಾಣೂತ್ಕರಂ ಚೈತ್ರದೊಳ್: **ಜಗನ್ನಾವಿ,** ೧. ೧೩)

**ಚೂತಕುಜಾತ** – ಚೂತ (ಎಳೆವಿಸಿಲೀಗಳೀಗಳೆ ಮುದಿರ್ದುದು ಚೂತಕುಜಾತಮೀಗಳೀಗಳೆ ನನೆದೋಱೆತು: **ಆದಿಪು,** ೧೩. ೫)

**ಚೂತದ್ರುಮ** – ಮಾವಿನ ಮರ (ಕಂತುಗೆ ಕೆಯ್ಗೊಟ್ಟವೊಲಿರ್ದುದು ಇಟ್ಟಳದೆ ಕೈಬಂದ ಒಂದು ಚೂತದ್ರುಮಂ: **ಶಾಂತೀಶ್ವಪು,** ೧೦. ೧೧೦)

**ಚೂತವನ** – ಮಾವಿನ ತೋಪು (ಕಿಕ್ಕಿಱಿಗಿಱಿದು ಬೆಳೆದಡರೆ ಕೊಳೆ ಪೂತ ಚೂತವನಮೆ: **ಶಾಂತಿಪು,** ೪. ೯೫ ವ)

**ಚೂರ್ಣಯೋಗ** – ಪುಡಿ ಎರಚಿ ಮಂಕುಗೊಳಿಸುವುದು (ಚೂರ್ಣಯೋಗ ಘಟಿಕಾಂಜನಮೆಂದಿವು ಮಾಡಲಾಗೊಡೆಯ ತಸ್ಕರ ಶಾಸ್ತ್ರಂಗಳೊಳ್: **ವಡ್ಡಾರಾ,** ಪು. ೧೨೨, ಸಾ. ೧೭)

**ಚೂರ್ಣಾಳಕ** – ಮುಂಗುರುಳು (ಸೆಣಸಲೆಳಸಿ ನೆಗೆವಂತೆ ಚೂರ್ಣಾಳಕಂ ಪಣೆವಿಡಿದು ಕುಣಿವುತ್ತಿರೆಯುಂ: **ರಾಜಶೇವಿ,** ೭. ೧೭ ವ)

**ಚೂರ್ಮೊನೆ** – ಹರಿತವಾದ ಅಲಗು (ನೀರ್ಗೆ ಆರ್ದ್ರತೆ ಮುಳ್ಗೆ ಚೂರ್ಮೊನೆ ಭವತ್ ಚಿತ್ತಕ್ಕೆ ತತ್ವಜ್ಞತಾವಿಭವಂ ಸಾಜಂ: **ಶಾಂತಿಪು,** ೧೧. ೯೪)

**ಚೂರ್ಮೊನೆಗೊಳ್** – ಹರಿತವಾದ ಅಲಗನ್ನು ಹೊಂದು (ಪೊಂಜಾಜಿಯೊಂದೊಂದು ಚೂರ್ಮೊನೆಗೊಂಡು ಒಂದಲರಾಯ್ದು ಕೋದ ತೆಱದಿಂದ: **ನೇಮಿನಾಪು,** ૩. ೯೯)

**ಚೂಲಿಕೆ** – ಆನೆಯ ಕಿವಿಯ ತಳ (ಉತ್ಕೃಷ್ಟಾವಿಪುಲ ಚೂಲಿಕಾದುಂದುಭಿನಿರ್ಘೋಷಕರ್ಣನುಂ: **ಆದಿಪು,** ೧೨. ೫೬ ವ)

**ಚೂಷಿತಕ** – ಚೀಪಿ ಚಪ್ಪರಿಸುವುದು (ಮಧುರಸೀತ ತನಾದದೊಳುಣ್ಮಿ ಪೊಣ್ಮಿ ಚೂಷಿತಕಮಂ ಔಪರಿಷ್ಟಕರತಂಗಳ ಭೇದದೊಳ್: **ಆದಿಪು,** ೧೧. ೯೯)

**ಚೂಳ** – ಶಿಖರ (ಖೇಚರ ಚಕ್ರವರ್ತಿ ಧರಣೀಧ್ವಜನಸ್ಮದಧೀಶಂ ಉದ್ಧ ತಾರಾಚಳಚೂಳಶೇಖರಂ: **ಚಂದ್ರಪ್ರಪು,** ೭. ೧೯)

**ಚೂಳಾಕರಣ** – ಚೂಡಾಕರಣ (ಚೂಳಾಕರಣದಿನತ್ತಲೆ ಭಾಳಚ್ಛಾಯೆಯೊಳೆ ಭಂಗಮಂ ಪಡೆದ ಅರಿಭೂಪಾಳರ್ಗೆ: **ಮಲ್ಲಿನಾಪು,** ೪. ೯೧)

**ಚೂಳಾಕರ್ಮ** – ಚೂಡಾಕರ್ಮ (ಅರಿಭೂಪಾಳರ್ಗೆ ದೀನವೃತ್ತಿಯ ಚೂಳಾಕರ್ಮಮಂ ಒಡರ್ಚಿದಂ ನೃಪತನಯಂ: **ಮಲ್ಲಿನಾಪು,** ೪. ೯೧)

**ಚೂಳಿ** – ಶಿಖರ (ಚಂಚತ್ ಮೃಗಾಂಕ ಶಕಲಾಂಚಿತ ಚೂಳಿಕಾಯ: **ಉದ್ಭಟಕಾ,** ೧೨. ೧೦೮)

**ಚೂಳಿಕಾ** – ಕಿವಿಯ ಮೂಲ (ಶ್ರುತಿಮೂಲಂ ಚೂಳಕಾಖ್ಯಂ; **ಅಭಿಧಾವ,** ೧. ೧೪. ೩೪)

**ಚೂಳಿಕಾವರ್ಧನ** – ಸೀಮಂತ (ಚೂಳಿಕಾ ವರ್ಧನ ಮಾಂಗಲ್ಯಂ ಬಳಾಕಕ್ಕೆಸೆಯೆ .. .. ಘೂರ್ಣಿಸಿದುದು ಅಭಿನವಾಂಭೋದ ಗಂಭೀರನಾದಂ: **ಪಂಪರಾ,** ೭. ೧೫೦)

**ಚೂಳಿಕಾಭಾಗ** – ತುದಿ, ಮೇಲ್ಭಾಗ (ಚೂಳಿಕಾಭಾಗದೊಳ್ ನಿಂದಪುದು ಊರ್ಧ್ವಲೋಕಮೆನೆ ಮೂಲೋಕಕ್ಕೆ ಪೆಂಪಿಂದಗುಂದಲೆಯಾಗಿರ್ದುದು: **ಆದಿಪು,** ೧. ೫೦)

**ಚೂಳಿಕೆ** – ತುದಿ (ನೆಗೆದ ಅಟ್ಟಾಳಕಜಾಲದ ಸೊಗಯಿಪ ಹರಿನೀಳ ಚೂಳಿಕಾವಳಿಯೊಳ್ ತಾರಗೆಗಳ್ ತುಱುಂಗಿ ಮಿಱುಗುವುವು ಅಗಲದೆ ತೆತ್ತಿಸಿದ ಮುತ್ತುಗಳ ಮೊತ್ತದವೋಲ್: **ಶಾಂತೀಶ್ವಪು,** ೧೩. ೧೫೩); ತುದಿ, ಅಗ್ರಭಾಗ (ಅಳಿಮಾಳೆ ಕಂತು ನೀರಾಜನದೀಪಮಾಳಿಕೆಯ ಚೂಳಿಕೆಯಂತೆ ಕರಂ ಮನೋಹರಂ: **ಮಲ್ಲಿನಾಪು,** ೫. ೨೦); ಬೆಟ್ಟದ ಶಿಖರ (ಚೂಳಿಕೆ ನಾಕಲೋಕಮಂ ಸೆಡೆಯದೆ ಪೊತ್ತು ನಿತ್ತರಿಸೆ .. .. ಉಚ್ಚ್ರಯಂ ಆ ಕನಕಾವನೀಧರಂ: **ಪುಷ್ಪದಂಪು,** ೧. ೯೪)

**ಚೆಂಗಣಿಗಿಲೆ** – ಕೆಂಪು ಕಣಿಗಿಲೆ ಹೂ (ಕಟಿವೆಯ ಮಡಿಗಳ ಬಟಿವಿಡಿದು ಬೆಳೆದ ಚೆಂಗಣಿಗಿಲೆಯ ಕಂಪಿನೊಳ್ ಪೊರೆದು: **ಕಬ್ಬಿಗಕಾ,** ೪೫ ವ)

**ಚೆಂಗುಡಿ** – ಕೆಂಪು ಬಾವುಟ (ಆನನಂ ಅರಳ್ದ ಅಂಭೋರುಹಂ ತಳ್ತ ಚೆಂಗುಡಿ ದೀರ್ಘಾರುಣಪಾಣಿಶಾಖೆ: **ರಾಜಶೇವಿ,** ೧೨/೧೦೦)

**ಚೆಂಗಾರೆ** – ಕೆಂಪು ಕಾರೆ ಹಣ್ಣು (ಆ ಬಟ್ಟೆಯೊಳ್ ಬೆದಕಿ ಬಟ್ಟನೇಱಲ ಚೆಂಗಾರೆಯ ಮೆಲ್ಲುದ್ಗುಟ್ಟಿ ಸಹಕಾರೋಚ್ಚಿಷ್ಟಪಕ್ವಂಗಳಂ: **ಸುಕುಮಾಚ,** ೪. ೫೭)

**ಚೆಂದಲ್** – ಕೆಂಪು ಅಕ್ಕಿಯ ಬತ್ತ (ನವಗಂಧೋದ್ಗಮ ಗಂಧಶಾಳಿ ಶುಕಲೀಲಾಳಾಪದಿಂದಾಮೊಪ್ಪುವ ಚೆಂದಲ್: **ಸುಕುಮಾಚ,** ೧. ೭೪)

**ಚೆಂದಳ** – ಕೆಂಪಾದ ಅಂಗೈ (ಚಳಿಸಿದ ವೈಣವಮಂ ಚೆಂದಳದಿಂ ಪಿಡಿದೊಯ್ದು ನೋಡಿ ಕೆಂಪಾಗಿರೆ: **ಉದ್ಭಟಕಾ,** ೨. ೯೧)

**ಚೆಂಬುಡಿ** – ಕೆಂಪು ಪುಡಿ (ಭೂರಮೆಯ ಸಸಿಂಧೂರಸೀಮಂತರೇಖೆಯಂತೆ ಚೆಂಬುಡಿತಳ್ತು ಕಂಗೊಳಿಪ ಘಂಟಾಪಥದ ಪರಿಸರದಲ್ಲಿ: **ರಾಜಶೇವಿ,** ೨. ೨೦ ವ)

**ಚೆಂಬೊಂಗಳಸ** – ತಾಮ್ರದ ಕಳಶ (ಒಪ್ಪಂಬೆತ್ತ ಚೆಂಬೊಂಗಳಸದೆಳವಿಸಿಲ್ ಸಂತತಂ ವ್ಯೋಮಗಂಗಾಬ್ಧದ ಪೆರ್ಚಂ ಮಾಡೆ: **ಜಗನ್ನಾವಿ,** ೯. ೯೫)

**ಚೆಂಬೊನ್** – ತಾಮ್ರ (ಚೆಂಬೊನ್ನ ಘಟಂಗಳಿಂ ಅಮೃತಾಂಬುಧಿಯಂಬುಗಳನಾಂತು: **ಪಾರ್ಶ್ವನಾಪು,** ೧೪. ೮೪)

**ಚೆಂಬೊನ್** – ಚಿನ್ನ (ಗಟ್ಟಿಸಿ ಸೆಂದುರದೊಳ್ ನೆಲಗಟ್ಟಿಸಿ ಚೆಂಬೊನ್ನ ನೆಲೆಯ ಚೌಪಳಿಗೆಗಳೊಳ್ ಕಟ್ಟಿಸಿ ಪಟಿಯಿಗೆಗಳಂ ಅಳವಟ್ಟಿರೆ ಬಿಯಂ ಅಲ್ಲಿ ಮೊಟಿಗೆ ಪಲವುಂ ಪಱೆಗಳ್: **ಪಂಪಭಾ,** ೨. ೬೭); ಚಿನ್ನದ ನಾಣ್ಯ (ಸ್ವೈರಣೆಯಿಂ ಚೆಂಬೊಂಗಳೋರಂತಿರೆ ಬೇಡಿಕೊಳ್ವೇನೆನ್ನಾರ್ಪನಿತಂ: **ಧರ್ಮಾಮೃ,** ೧. ೧೧೧)

**ಚೆಕ್ಕನೆ** – ಇದ್ದಕ್ಕಿದ್ದಂತೆ (ಕೊಳದೊಳ್ ಕಾಲಂ ತೊಳೆಯಲ್ವುಗೆಯಲ್ಲಿದ್ದ ನಕ್ರಂ ಚೆಕ್ಕನೆ ಚರಣಮಂ ಪಿಡಿಯೆ: **ಪುಣ್ಯಾಸ್ರ:** ೬. ೧೪ ವ)

**ಚೆಚ್ಚರ** – ಎಚ್ಚರಿಕೆ, ಜಾಗರೂಕತೆ (ಶೀಲವತಿ ಸೀತೆ ಪೊಣ್ದುದಂ ಎಂತುಂ ಪುಚ್ಚಟಿಯಳ್ ಎನ್ನದೆ ಅಟಿಪಿಂ ಚೆಚ್ಚರಂ ಆ ಸಭೆಗೆ ರಾಘವಂ ಬಟಿಸಂದಂ: **ಪಂಪರಾ,** ೧೬. ೩೫)

**ಚೆಚ್ಚರಂ** – ಥಟ್ಟನೆ (ಪೊಲಸುನಾಱುವ ಮೆಯ್ಯನೆ ಕರ್ಚಲೆಂದು ಚೆಚ್ಚರಂ ಅಪರಾಂಬುರಾಶಿಗೆ ಇಟಿವಂತೆ ಇಟಿದಂ ಕಮಳೈಕಬಾಂಧವಂ: **ಪಂಪಭಾ,** ೧೧. ೫೧); ನಿಶ್ಚಯವಾಗಿ (ಮನಸಿಜನೆಚ್ಚೊಡೆ ಆವ ತೆಱನಕ್ಕುಮೊ ಚೆಚ್ಚರಮೆನ್ನ ಪೇಟ್ಟುದಂ ತನಗಿವನೆಯ್ದಿ ಬಿನ್ನವಿಪಿನಂ ಪಿಡಿದಿರ್ಕುಮೆ ದೇವ ಜೀವಮಂ: **ಆಚವರ್ಧ,** ೪. ೮೦)

**ಚೆಚ್ಚರಿಕೆ** – ಚಳಕ, ಚಟುವಟಿಕೆ (ಚಯ್‌ಚಯ್ಯೆಂಬಾಗಳ್ ಮೆಯ್ ಮೆಯ್ ಚಲದಿಂ ಮುಟ್ಟಿ ಪೊಣರ್ದು ತಳ್ತಿಱಿವ ಉರ್ಕಿಂ ಕೆಯ್ ಚೆಚ್ಚರಿಕೆಯ ಚಲದಿಂ ಕೆಯ್ ಚಳಿವಿನೆಗಂ ಇಱಿದರ್ ಎರಡು ಬಲದೊಳಂ ಅದಟರ್: **ಪಂಪಭಾ,** ೧೩. ೩೪)

**ಚೆಚ್ಚರಿಗ** – ಉತ್ಸುಕ (ಚೆಚ್ಚರಿಗರಲ್ಲರೆನುತಂ ಚುಚ್ಚುಳರ್ ಆರ್ಹತರ್ಗೆ ಬಜೆದೆ ಮುಳಿಯುತ್ತಿರ್ಪರ್: **ಸಮಯಪ,** ೧೩. ೩೬); ಆತುರಗಾರ (ಚೆಚ್ಚರಿಗಂ ಪರಿವಾಯಂತುಚ್ಚಳಂ ಅತ್ಯುಗ್ರಕೋಪಿ ಮೂರ್ಖಂ ಕೆಸಜಿಳೊಳ್ ಕಿಚ್ಚಿಡುವವನೆನಿಪ ಖಳನು: **ಸಮಯಪ,** ೬. ೧೦೬)

**ಚೆಚ್ಚರಿಸು** – ಚಾಕಚಕ್ಯತೆಯಿಂದ ಕೂಡು (ಪನ್ನಗರಾಜನಂ ಒತ್ತಿಕಟ್ಟಿ ಚೆಚ್ಚರಿಸಿ ಕರಾಗ್ರದಳ್ ನಿಜೆಪನೋ: **ಧರ್ಮಾಮೃ,** ೯. ೧೨೨)

**ಚೆನ್** – ಚೆಲುವು (ಚೆನ್ ಏವುದೊ ಸಚ್ಚರಿತಂ ಚೆನ್ನಲ್ಲದೆ ದೇಹಿಗೆ ಎಂದು ನೆಗಟ್ದರ್ ಜೈನರ್: **ಸಮಯಪ,** ೬. ೪೪)

**ಚೆನ್ನ** – ಶೂರ (ಬಿರುದರಂ ಒತ್ತಿ ಬೀರರಂ ಅಡಂಗಿಸಿ ಕೊಂಕಿಗರಂ ಕಟಲ್ಚಿ ಚೆನ್ನರಂ ಅಡಿಗೊತ್ತಿ ಮಂಡಳಿಕರಂ ಬೆಸಕಯ್ಸಿ.. ..ಮಾಡಿರೆ ರಾಜಸೂಯಮಂ: **ಪಂಪಭಾ,** ೭. ೧೮); ಚೆಲುವ (ಬೆರಲೊಳ್ ಬೀಣೆಯ ತಂತಿಗಳ್ ಒರಸಿದ ಕೆಂಗಲೆಗಳ್ ಅಕ್ಷಮಾಲೆಯೊಳ್ ಎಸೆದಂತಿರೆ ಪೊಸೆಯೆ ಮುತ್ತು ಪವಳಂ ಬೆರಸಿದವೋಲಾಯ್ತು ಚೆನ್ನ ತಪಸಿಯ ಕೆಯ್ಯೊಳ್: **ಪಂಪಭಾ,** ೬. ೧೦)

**ಚೆನ್ನಂಗಿ** – ಒಂದು ಮರ (ಪಲಸು ಆಲಂ ತಡಸು ಆಸು ತೇಗು ತದುಕಿಂಚಿಲ್ ಪೊನ್ನೆ ಚೆನ್ನಂಗಿ ಬೊಬ್ಬುಲಿ **ಪಾರ್ಶ್ವನಾಪು,** ೧೨. ೫೮)

**ಚೆನ್ನಗಂಡ** – ಚೆಲುವನಾದ ವೀರ (ಅಚ್ಚರಿಸಿಯರಣ್ಮಿ ಸತ್ತ ಭಟರಂ ಕೊನೆಮೀಸೆಯ ಚೆನ್ನಗಂಡರಂ: **ಗದಾಯು,** ೪. ೨೨)

**ಚೆನ್ನನೆ** – ಚೆನ್ನಾಗಿ (ಸುರಹೊನ್ನೆ ಚೆನ್ನನಪ್ಪ ಅರಲನೊತ್ತರದೆ ಸುತ್ತಿ ತೆತ್ತಿಸಿದ ಕೈರವದ ಕರ್ಣಪೂರಂಗಳಂ: **ಜಗನ್ನಾವಿ,** ೭. ೧೬ ವ)

**ಚೆನ್ನಪೂ** – ಸುಂದರವಾದ ಹೂ (ದೇಸಿಯನಾವಗಮೀವ ಚೆನ್ನಪೂಗಳನೆ ಅವನೊಯ್ಯನೋಸರಿಸುತುಂ: **ಪಂಪಭಾ,** ೨. ೧೭)

**ಚೆನ್ನಪೊಂಗ** – ವೀರ (ಅದಟರ ಚೆನ್ನಪೊಂಗರ ಸಬಂಗಳ ತೊಟ್ಟುಟೆಯೊಳ್ ತೊಡಂಕಿ ನಿಲ್ಲದೆ ಪೊಜಮಟ್ಟ ತಮ್ಮ ಮನದೊಳ್ ಮಿಗೆ ಬೆಚ್ಚಿಸಿದಂತೆ ತೋಱುವ: **ಪಂಪಭಾ,** ೮. ೧೦೪)

**ಚೆನ್ನಭಾಷಿತ** – ಒಳ್ಳೆಯ ಮಾತು (ನಿನ್ನ ಚೆನ್ನಭಾಷಿತಮದೊಳ್ಳಿತ್ತಾದುದು: **ಗದಾಯು,** ೨. ೮ ವ)

**ಚೆನ್ನಿಗ** – ಚೆಲುವ (ಬಂದ ಚೆನ್ನಿಗರುಮಂ ಆಸೆಕಾಱರುಮಂ ಒಲ್ಲದೆ: **ಪಂಪಭಾ,** ೧. ೧೦೬)

**ಚೆನ್ನೈದಿಲ್ಗೊಳ** – ಕೆಂಪು ನೈದಿಲೆಯ ಕೊಳ (ಉಳ್ಳಲರ್ದ ಚೆನ್ನೈದಿಲ್ಗೊಳಂ: **ಆದಿಪು,** ೧. ೬೭)

**ಚೆಯ್ಯಾಡು** – ಮುದ್ದಾಡು (ಚೆಯ್ಯಾಡಿ ಪೆರ್ಮೊಲೆಯೊಳ್ ತೀವಿದ ಪಾಲನೂಡಿ ತಣಿಯಲ್ ಪೊಂದೊಟ್ಟಿಲೊಳ್ ತೀವಿ: **ತ್ರಿಷಷ್ಟಿಪು,** ೧೦. ೧೨)

**ಚೆಲ್ಲ** – ಸರಸ (ಚೆಲ್ಲದೊಳೆ ನುಡಿದು .. .. ನೂಂಕಿ ತಳೆದಂ ಚದುರಂ .. .. ಲಜ್ಜೆಯೆಂಬ ಪಟಗುಂಟಣಿಯಂ: **ಲೀಲಾವತಿ,** ೧೩. ೧೫)

**ಚೆಲ್ಲಂಬೆರಸು** – ಚೆಲ್ಲಾಟದಿಂದ ಕೂಡು (ಅಂತು ನೋಡಿ ಕಡೆಗಣ್ಣ ಚೆಲ್ಲಂಬೆರಸು ಸೂಸುವ ವಾಸವಸ್ತ್ರೀಯರ ಮುಖಾಬ್ಜಾಸವ ಸಂಬಂಧಿಗಳಪ್ಪ ಶೇಷಾಕ್ಷತಂಗಳಂ ಈಶ್ವರನಂ ಗೆಲ್ದ ಗೆಲ್ಲಕ್ಕೆ ಸೇಸೆಗೊಳ್ವಂತೆ ಸೇಸೆಗೊಳ್ಳುತ್ತುಂ: **ಪಂಪಭಾ,** ೮. ೨೭ ವ)

**ಚೆಲ್ಲಗಣ್ಬೊಣರ್** – [ಚೆಲ್ಲಗಣ್+ಪೊಡರ್] ವಿಲಾಸಯುಕ್ತ ಕಣ್ಣುಗಳ ಜೋಡಿ (ತನ್ನಯ ಚೆಲ್ಲಗಣ್ಪೊಡರ ಲೀಲೆಯೆಱೆವ ಬಾಳೆಮೀನ್ಗಳಂ: **ಪುಷ್ಪದಂಪು,** ೯. ೯೯)

**ಚೆಲ್ಲಿ** – ಕನ್ನಡಿ (ಒಲವಿಂದೀವೊಡೆ ಗೋವಂಗಲಗೆ ಕೊಟಲ್ ಕೋಡ ಕಾಳೆ ಕೋಲುಡೆದೋಲ್ ಕಂಬಲ ಚೆಲ್ಲಿ ಪೀಲಿಯ ತಲೆಸುತ್ತಲ್ಲದೆ ಮಹಾಗ್ರಪೂಜೆ ವಿರುದ್ಧಂ: **ಜಗನ್ನಾವಿ,** ೧೭. ೨೨)

**ಚೆಲ್ವೋಡು** – ಅಂದಗೆಡು (ಬಾಡದ ಬಾಸಿಗಂ ಉಡೆ ಚೆಲ್ವೋಡದ ದಿವ್ಯಾಮಬರಮಂ ಮನಂಗೊಳೆ: **ಆದಿಪು,** ೬. ೪೦)

**ಚೇಟಿ** – ಸೇವಕಿ (ಗೃಹ ಚೇಟಿ ಚೆಚ್ಚರನೆ ನೋಡದೆ ಒರ್ವಳೀ ತಿರುನೀಲಕಂಠರ ಮೇಲೆ .. .. ಸೂಸೆ: **ತ್ರಿಷಷ್ಟಿಪು,** ೭. ೬೬)

**ಚೇಟಿಕೆ** – ದಾಸಿ (ಚೇಟಿಕೆ ಬೀಸುವ ಕುಂಚಂ ಎಯ್ದೆ ಮೆಯ್ದೋಱುವ ಗಾಡಿ ಕಾಂಚನದ ದಂಡದ ಸೀಗುರಿ ನೋಟಪ್ಪೊಡೆ ಆರುಮಂ ಮಾಜಿ ಮನೋಜನ ಒಡ್ಡು ಎನಿಸಿದರ್: **ಪಂಪಭಾ,** ೯. ೧೦೦)

**ಚೇಣ** – ಕಲ್ಲು ಒಡೆಯುವ ಉಳಿ (ಜಿನರ ನೆರವಿಯೆಂಬ ಚೇಣದಿಂ ದೇವಗತಿಯೆಂಬ ನಿಗಳಮಂ ಭೇದಿಸದೆ: **ಧರ್ಮಾಮೃ:** ೭. ೫೫ ವ)

**ಚೇತ** – ಚೇತನ, ಮನಸ್ಸು (ಮನಮಾಶಯಂ ಅಂತಃಕರಣ ನಾಮಂ ಅದೆ ಚಿತ್ತಂ ಅಂತೆ ಚೇತಂ: **ಅಭಿಧಾವ,** ೧. ೧೨. ೨೫)

**ಚೇತಃಪದ್ಮ** – ಹೃದಯಕಮಲ (ಬಾಲಾರ್ಕನಂ ಮದ್ವರಚೇತಃಪದ್ಮಂ ಈಗಳ್ ಜಯಿಸಿದಪುದು ಕೇಳ್ ಭೂಮಿಪಾಲಾವತಂಸಾ: **ರಾಜಶೇವಿ,** ೩. ೭೩)

**ಚೇತಃಪ್ರೀತಿ** – ಜೀವನಪ್ರೀತಿ (ಚಿತ್ತೋದ್ಭವ ಭುವನಜಯೋತ್ಪಾದನ ಪ್ರೌಢಸೇನಾಗ್ರಣಿ ಚೇತಃಪ್ರೀತಿಯಂ ಪೆರ್ಚಿಸುವುದು ಉಪವನಸ್ವೈರಚಾರಂ ಸಮೀರಂ: **ಮಲ್ಲಿನಾಪು,** ೨. ೩೧)

**ಚೇತನಭಾವ** – ಚೈತನ್ಯವಿರುವ ಅನುಭವ (ತನಮಿಕೆಯೆಂಬಿವುಂ ಚೇತನಭಾವದೊಳಕ್ಕುಂ: **ಕಾವ್ಯಾವಲೋ,** ೩೪೩)

**ಚೇತನಾಚೇತನ** – ಚೇತನವಿರುವ ಮತ್ತು ಇಲ್ಲದಿರುವ (ನಪುಂಸಕಲಿಂಗಕ್ಕೆ: ತಿರ್ಯಗ್ಜೀವಂಗಳಪ್ಪ ಚೇತನಾಚೇತನ ವಸ್ತುಗ್ಗಳೆಲ್ಲಂ ನಪುಂಸಕಂಗಳ್: **ಶಬ್ದಮದ,** ೧೧೧ ಪ್ರ)

**ಚೇತನವಡೆ** – ಚೇತರಿಸಿಕೊ (ದನುಜನ ಮಾಯೆಯೊಂದಿನಿಸು ಬೇಗದಿನೊರ್ಮೆಯೆ ಮಾಯಮಾಗೆ ಚೇತನವಡೆದು: **ಚಂದ್ರಪ್ರಪು,** ೫. ೬)

**ಚೇತರಣೆಗೆಡು** – ಚೈತನ್ಯ ಕಳೆದುಕೊ (ಚೇತರಣೆಗೆಟ್ಟಿರ್ದ ಮಂಗಿಯಂ ಕಂಡು ಸುತ್ತಿರ್ದ ಪಳಾಳವರ್ತಿಯಂ ಕಳೆದು: **ಚಾವುಂಪು,** ಪು. ೪೧೫. ಸಾ. ೧೭)

**ಚೇತರಿಸು** – ಚೈತನ್ಯವನ್ನು ಹೊಂದು (ರುಕ್ಮಿಣೀದೇವಿ .. .. ಮೂರ್ಛಾಗತೆಯಾಗೆ ಕಿಱಿದುಸಮಯದಿಂದ ಚೇತರಿಸೆ ಚೇತೋಜಾತಂ ಆತ್ಮಜಂಗಿಂತೆಂದಂ: **ಕರ್ಣನೇಮಿ,** ೧೪. ೫೩ ವ)

**ಚೇತೋಜವಹರಿಯೋಗ್ಯ** – ಮನೋವೇಗದಲ್ಲಿ ಸಾಗುವ ಕುದುರೆಗಳನ್ನು ಹೂಡಿದ (ಪ್ರವೀರಪುರುಷಪ್ರತಿಷ್ಠಿತಂಗಳ್ ಚೇತೋಜವಹರಿಯೋಗ್ಯಂಗಳ್ ತಳರ್ದುವಾಗಳ್ ಎಂಬತ್ತುನಾಲ್ಕು ಲಕ್ಕೆ ರಥಂಗಳ್: **ಆದಿಪು,** ೧೧. ೩೨)

**ಚೇತೋಜಾತ** – ಮನ್ಮಥ, ಪ್ರದ್ಯುಮ್ನ (ರುಕ್ಮಿಣೀದೇವಿ .. .. ಮೂರ್ಛಾಗತೆಯಾಗೆ ಕಿಱಿದುಸಮಯದಿಂದ ಚೇತರಿಸೆ

ಚೇತೋಜಾತಂ ಆತ್ಮಜಂಗಿಂತೆಂದಂ: **ಕರ್ಣನೇಮಿ,** ೧೪. ೫೩ ವ)

**ಚೇತೋವೃತ್ತಿ** – ಮನೋವ್ಯಾಪಾರ (ತೋಱದೆ ಚೇತೋವೃತ್ತಿಯಿಂ ಕೊರಗುವೆ: **ಪುಷ್ಪದಂಪು,** ೩. ೧೧೧)

**ಚೇತೋನಿಚಿತ** – ಮನದಿಂಗಿತ (ದಾನದೊಳಂ ಸಾಮದೊಳಂ ನಿನಗರ್ಥಿ ಚಕ್ರವರ್ತಿಗಂ ಅದೆ ಮನೋನಿಚಿತಂ ಉೞಿದುದು ನೃಪ ನೀನಱಿವೈ ನಯಮನೊಂದೆ ಮಾಱ್ಪುದು ಚದುರಂ: **ಶಾಂತಿಪು,** ೨. ೫೯)

**ಚೇತೋಭವ** – ಮನ್ಮಥ (ಚೇತೋಭವನುಂ ಪಗೆ ಪಗೆಗೆ ಪಕ್ಕುಗುಡುವುದು ಚದುರೇ: **ಸಮಯಪ,** ೫. ೭೪)

**ಚೇತೋಮಂ** – (ಸಾಮಾನಿಕ ಜನತತಿ ಚೇತೋಮಂ ಪ್ರಾಸಾದಿಕ ಅಂತರ ಆಕ್ಷೇಪಕ ವಿನಿಷ್ಕ್ರಾಮಪ್ರವೇಶ ಗಾನರಸಾಮೃತಮೆಸೆಗುಂ ಧ್ರುವಪ್ರಯೋಗಾನುಗತಂ: **ಅಜಿತಪು,** ೫. ೧೦)

**ಚೇರ** – ಒಂದು ದೇಶ, ಕೇರಳ (ಕರ್ಣಾಟ ಗೊಲ್ಲ ಕರಹಾಟ ಗೌಳ ಲಾಟ ಚೋಳ ಚೇರ ಪಾಂಡ್ಯ ಕಳಿಂಗಾದಿ ವಿಷಯಂಗಳಂ ಸಾಧಿಸಿ: **ಧರ್ಮಾಮೃ,** ೧೧. ೪೮ ವ)

**ಚೇಲ** – ಬಟ್ಟೆ (ಪೊಳೆಯೆ ಕಟಾಕ್ಷಂ ಆ ಮಗುೞ್ದು ನೋಟ್ಪಿನೆ ಪಿಂದೆ ದುಕೂಲ ಚೇಲಮಾ ಮಿಳಿರ್ದುದೆ: **ಆಚವರ್ಧ,** ೫. ೧೨)

**ಚೇಲಕ** – ಬಟ್ಟೆ (ಮುತ್ತಿನ ಹಾರಂ ಉಟ್ಟ ನಿರ್ಮಳ ಸಿತ ಚೇಲಕಂ ಪೊಳೆವ ಕಣ್ಮಲರ್: **ತ್ರಿಷಷ್ಟಿಪು,** ೨೪. ೨೬೧)

**ಚೇಲನ** – ಬಟ್ಟೆ (ಶರದಭ್ರಂ ಪರಿವಿಷ್ಟಮಪ್ಪ ವಿಲಸತ್ ನೀಲಾದ್ರಿಯೆಂಬಂತೆ ಬಿತ್ತರಿಸುತ್ತಿರ್ಪ ದುಕೂಲ ಚೇಲನಗಳಿಂ ಚೆಲ್ವಾಗಿ ತೋರ್ಪ ಆ ಮದೋದ್ಧುರ ಮಾತಂಗಮಂ ಏಱಿ: **ಶಾಂತೀಶ್ವಪು,** ೩. ೧೨೫)

**ಚೇಲಾಂಚಲ** – ಬಟ್ಟೆಯ ಅಂಚು (ರಮ್ಯಹರ್ಮ್ಯಶಿಖರ ಸ್ಥಳಿಯೊಳ್ ಪೊಳೆದುವು ಪೊಂಗಳಸಂಗಳ ಪೊಳೆಪಂ ಕೇತನ ದುಕೂಲ ಚಾಲಾಂಚಲಮುಂ: **ಪಂಪರಾ,** ೩. ೧೧೩)

**ಚೇಷ್ಟೆಗೆಡು** – ಚಲನೆ ಇಲ್ಲವಾಗು (ಕರಣ ಬಲ ಪ್ರಾಣದ ಚೇಷ್ಟೆಗೆಟ್ಟು ಭರತಂ ಪದಾನತಂ ವಿಕಲನಾಗಿ: **ಪಂಪರಾ,** ೭. ೧೫)

**ಚೇಳಕಾಂಚಳ** – ಬಟ್ಟೆಯ ಅಂಚು (ಆಂದೋಳಚಾಳನೋಚ್ಚಳಿತ ಚೇಳಕಾಂಂಚಳ ವಿಳಾಸಿನೀಮಳಯರುಹ ಧವಳ ಕುಚಮಂಡಳಂಗಳಿಂ ಘಳಿತಮಾಗಿಯುಂ: **ಆಚವರ್ಧ,** ೬. ೪೪ ವ)

**ಚೈತನ್ಯ** – ಜೀವ, ಚೇತರಿಕೆ (ಚೇತನೆ ಚೈತನ್ಯಂ ತಾಂ ನಿರ್ಹೇತುಕಮಕ್ಕುಂ: **ಅಭಿಧಾವ,** ೨. ೨. ೨೭); ಜೀವ, ಆತ್ಮ (ಭೂತಚತುಷ್ಟಯ ಸಂಭೂತ ಚೈತನ್ಯಂ: **ಶಾಂತಿಪು,** ೮. ೧೨೮ ವ); ಚಲನೆ (ಮಿಡುಕು ಮಿಡುಂಕು–ಚೈತನ್ಯೇ: **ಶಬ್ದಮದ, ಧಾ** ೬೨)

**ಚೈತಾಗ್ನಿ** – ಚಿತೆಯ ಬೆಂಕಿ (ಸೂರ್ಯತನಯಂ ತೇಜೋಗ್ನಿಯಿಂದಂ ದ್ವಿಷದ್ಬಲಮಂ ಸುಟ್ಟಂ ಉದಾತ್ತಪುಣ್ಯನವಂ ಚೈತಾಗ್ನಿಯಿಂ ಸುಟ್ಟೆನಿಲ್ಲ ಒಲವಿಂದ ಇಂದಿಂತು ಎರ್ದೆಮುಟ್ಟಿ ಕೂರ್ತನೊಳನೇ ಕರ್ಣಂಗೆ ದುರ್ಯೋಧನಂ: **ಪಂಪಭಾ,** ೧೩. ೬೦)

**ಚೈತ್ಯ** – ಬಸದಿ (ಜೈನಪದಾಬ್ಜವರಪ್ರಸಾದದಾದುದು ನಿನಗಪ್ಪ ಕಾರಣದಿನೀಗಳೆ ಪೂಜಿಸು ಚೈತ್ಯರಾಜಿಯಂ: **ಆದಿಪು,** ೨. ೬೯)

**ಚೈತ್ಯಕ್ಷಿತಿಜಾತ** – ಅರಳಿಮರ (ಚೈತ್ಯಕ್ಷಿತಿಜಾತ ಪ್ರಾಂತದೇಶಸ್ಥಿತ ಕನಕಮಯ ಪ್ರಾತಿಹಾರ್ಯಾಷ್ಟಕ ಅರ್ಹತ್ಪ್ರತಿಬಿಂಬಭ್ರಾತಿಯಂ ಮಾಡಿದಂ: **ಚಂದ್ರಪ್ರಪು,** ೨. ೮೨)

**ಚೈತ್ಯಗೇಹ** – ಚೈತ್ಯಗೃಹ (ಗೋಪುರಮೆಲ್ಲಂ ಚೈತ್ಯಗೇಹಂಗಳಿಂ ಉಪಪುರಮೆಲ್ಲಂ ಪುರಸ್ತ್ರೀರಣನ್ನೂಪರ ಝುಂಕಾರಂಗಳಿಂ ರಂಜಿಸೆ: **ಮಲ್ಲಿನಾಪು,** ೨. ೨)

**ಚೈತ್ಯವೃಕ್ಷ** – ಅರಳಿಮರ (ಶ್ರೀಮದಶೋಕ ಪ್ರಾಸಾದಾಮರತರು ಚೈತ್ಯವೃಕ್ಷ: **ಅಜಿತಪು,** ೭. ೨೦)

**ಚೈತ್ರ** – ಚಾಂದ್ರಮಾನ ವರ್ಷದ ಮೊದಲ ತಿಂಗಳು (ನವಚೂತಂ ತಳಿರ್ವಂದದಿಂ ತಳಿರ್ಗುಮೆ ಸ್ಥಾಣೂತ್ಕರಂ ಚೈತ್ರದೊಳ್: **ಜಗನ್ನಾವಿ,** ೧. ೧೩)

**ಚೈತ್ರದೂತಿ** – ಮಾವು (ಚೈತ್ರದೂತೀಘನಗುಚ್ಛವ್ರಾತಮಂ ಪಾಟಳಿಯಂ ಎಸೆವ ಅಶೋಕಪ್ರಸೂನಾಳಿಯಂ: **ರಾಜಶೇವಿ,** ೧೦. ೨)

**ಚೈತ್ರಮಿತ್ರ** – ವಸಂತನ ಗೆಳೆಯ, ಮನ್ಮಥ (ಚೈತ್ರಮಿತ್ರನ ಪೞಯಿಗೆಯ ತಳಿರ್ಕಳಂ ಪೞಿವ ಚಂದಳದಿಂದ: **ಉದ್ಭಟಕಾ,** ೧, ೭೮ ವ)

**ಚೈತ್ರರಥ** – ಕುಬೇರನ ಉದ್ಯಾನ (ಅದು ಮೆಚ್ಚದು ಚೈತ್ರರಥದ ಚಿತ್ರಾಸ್ಪದಮನೆನಲ್ ವೀತಶೋಖ ಪುರವರಮೆಸೆಗುಂ: **ಮಲ್ಲಿನಾಪು,** ೨. ೨೪)

**ಚೈರಂತನ** – ಚಿರಂತನವಾದ, ಸನಾತನ (ಇಂತು ಕವೀಂದ್ರಸಮಯಮಂ ಚೈರಂತನಮಾರ್ಗದೊಳೊಂದೆ ತಿಳಿಯೆ ಪೇೞ್ದಂ: **ಕಾವ್ಯಾವಲೋ,** ೯೫೯)

**ಚೈರಂತನಕ್ರಮ** – ಸನಾತನಕ್ರಮ (ಚೈರಂತನಕ್ರಮದಿಂದೆ ಆ ಮಣಲೆಲ್ಲಮಂ ಮಗುಳೆ ಪಾರಾವಾರದೊಳ್ ಪೊಯ್ದು ಮತ್ತಮದಂ ಸೋದಿಸಿ ಕಾಣ್ಬವೊಲ್ ನೃಗತಿ ನೋಡಲ್ ನಾಡೆಯುಂ ದುರ್ಲಭಂ: **ಸುಕುಮಾಚ,** ೫. ೩೩)

**ಚೊಕ್ಕ** – ಅಂದವಾದ, ಅಚ್ಚುಕಟ್ಟಾದ (ಒಕ್ಕಲಿಗಂ ಚೊಕ್ಕ ಎಲೆಗಳಂ ತಂದು ಪೂೞ್ದಿರ್ದ ಕರಗದ ನೀರಂ ಕಟ್ಟಿದೋಗರದ ಮೊಟ್ಟೆಯಂ ತೆಗೆದು: **ಪುಣ್ಯಾಸ್ರ,** ೧೨. ೧೬ ವ)

**ಚೊಕ್ಕಳ** – ಅಚ್ಚುಕಟ್ಟು (ಇಕ್ಕಿದ ರನ್ನದೋಲೆ ಪೊಸಮುತ್ತಿನ ಮೂಗುತಿ ತೋಳಬಂದಿ ನೀಳ್ದೆಕ್ಕಸರಂ .. .. ಇಂಚರಮೀವ ನೇವುರಂ ಚೊಕ್ಕಳವಪ್ಪ ಚೆಲ್ವನೊಳಕೊಂಡಿರೆ: **ಕಬ್ಬಿಗಕಾ,** ೨೬೫)

**ಚೊಕ್ಕೆಯ** – ಮಲ್ಲಯುದ್ಧದ ಒಂದು ವರಸೆ (ಕಡಂಗುವ ಮಲ್ಲನನಡಸಿ ತಿವಿದು ಕಡುಪಿಂ ಕೆಡಪಿ .. .. ಚೊಕ್ಕೆಯದಾಸೆಗೆ ಪೊಸಮಲ್ಲನನಿಕ್ಕಿ ಮೆಟ್ಟಿ: **ಗಿರಿಜಾಕ,** ೨. ೧೦೫ ವ)

**ಚೊಚ್ಚಲ್** – ಮೊದಲನೆಯ (ಶಾರಿಕೆಯ ಚೊಚ್ಚಲ ಶಾಬಕಮೋದಿದಪ್ಪುದೀ ನಡೆದುದೆ ತಾಯ ಬೆನ್ನೊಳೆ ತಳರ್ನಡೆಯಿಂ ಕಳಹಂಸಪೋತಕಂ: **ನೇಮಿನಾಪು,** ೧. ೯೪)

**ಚೊಚ್ಚಿಲ ಮಗ** – ಮೊದಲ ಮಗ (ನೀಮುಂ ನಿಮ್ಮ ಚೊಚ್ಚಿಲ ಮಗನಪ್ಪ ಸೂರ್ಯಸೂನುವಂ ಸೂರ್ಯದಿನದಂದು ಕಂಡು ಕಾರ್ಯಸಿದ್ಧಿಯಂ ಮಾಡಿಬನ್ನಿಂ: **ಪಂಪಭಾ,** ೯. ೬೩ ವ)

**ಚೊಲ್ಲೆಯ** – ತುರುಬಿನ ಕೊನೆ (ಮಿಱುಪ ಕುರುಳೋಳಿ ಮೂಡುವ ಕಿಱುಮೊಲೆ ತಳತಳಿಸಿ ಪೊಳೆವ ಕೇಸಡಿ ನೀಡುಂ ತುಱುಗಿದೆವೆ ಚೊಲ್ಲೆಯಂ ಮಿಗೆ ಮೆಱೆವಿನಂ ಎಳವೆಂಡಿರಿರ್ದರ್ ಎರಡುಂ ಕೆಲದೊಳ್: **ಕಬ್ಬಿಗಕಾ,** ೧೦೪);

ಹೂವಿನ ದಂಡೆ (ಮಳಯಜದಣ್ಬು ಮಲ್ಲಿಗೆಯ ಚೊಲ್ಲೆಯಂ ಆವಗಮಿಟ್ಟ ಬೊಟ್ಟು: **ಶಾಂತೀಶ್ವಪು,** ೧೧. ೭೫)

**ಚೊಲ್ಲೆಹ** – ಹೂದಂಡೆ (ಅಚ್ಚ ಮಲ್ಲಿಗೆಯ ಚೊಲ್ಲೆಹವಂಗದೊಳಾಂತು ಚಂದನಂ ಸುರುಚಿರ ಚಿನ್ನದೊಳ್ಪುಡೆ: **ತ್ರಿಷಷ್ಟಿಪು,** ೨. ೧೬೦)

**ಚೋಚ** – ತೆಂಗು (ದಾಡಿಮ ದ್ರಾಕ್ಷ ಚೋಚ ಮೋಚಾದಿ ಫಳಕುಳಂಗಳುಂ ಸೊಗಯಿಪುವು: **ಚಂದ್ರಪ್ರಪು,** ೬. ೫೪ ವ)

**ಚೋಜಿಗ** – ಸೋಜಿಗ (ಅಂಗನೆಯೊಳ್ ಕಳ್ದರ್ಪುದನಂಗಾಹಿಯನಱಿದು ಪೇಟ್ಬು ಮೊಡೆಯಂ ಕಡುಪಿನ್ನಂಗಂ ದೊರೆಕೊಂಡಿರೆ ಕೊಂಡಂ ಗಡಮೆಲೆ ತೈಗ ಹುಯಿಲದೇಂ ಚೋಜಿಗಮೋ: **ಕಾವ್ಯಾವಲೋ,** ೪೪೫)

**ಚೋದನ ಕ್ರಮ** – [ರಥ] ನಡೆಸುವ ರೀತಿ (ಪಿಂದೆ ಕಡಂಗಿ ತೇರಂ ಎಸಗು ಎಂಬವಂ ಅಂಬಿಗಂ ಆಜಿರಂಗದೊಳ್ ಮುಂದೆ ಸಮಾನನಾಗಿ ಬೆಸದೆ ಇರ್ಪವನುಂ ತುಱುಕಾಱನಾಗೆ ಮತ್ ಸ್ಯಂದನಚೋದನಕ್ರಮಮದುಂ ಪೊಲೆಯಂಗೆ ಅಮರ್ದು ಇರ್ಕುಂ: **ಪಂಪಭಾ,** ೧೨. ೯೪)

**ಚೋದಿಸು** – ರಥ ಮುಂತಾದವನ್ನು ನಡೆಸು (ಪುಸಿಯೆನೆ ರಥಮಂ ಹರಿ ಚೋದಿಸುವಂತೆವೊಲಿರ್ದು ಅದೆಂತು ನರನಂ ಗೆಲಿಪಂ ವಿಸಸನದೊಳ್ ಅಂತೆ ನೀಮುಂ ಪೆಸರಂ ಕರ್ಣಂಗೆ ಮಾಡಿ ಗೆಲ್ಲಂಗೊಳ್ಳಿಂ: **ಪಂಪಭಾ,** ೧೨. ೯೧)

**ಚೋದ್ಯ** – ಆಶ್ಚರ್ಯ (ಚೋದ್ಯಮುತ್ತು ಕರಂ ಸಂಜನಿತಮುದನಿರಿಸಲಿರ್ದಾ ಧನದತ್ತಂಗಱಿಪಿ ಪೋಗಲುದ್ಯತನಾದಂ: **ಕರ್ಣನೇಮಿ,** ೪. ೮೪)

**ಚೋದ್ಯಂಬಡು** – ಸೋಜಿಗಗೊಳ್ಳು (ಮುನಿಗಣೇಶ್ವರರೊಡನೆ ದಾಳಿವೂಗೊಯ್ವೊಡನೆ ವರ್ಪ ಗೋಳಾಂಗೂಳಂಗಳುಮಂ ನೋಡಿ ತಪೋವನದ ತಪೋಧನರ ತಪಃಪ್ರಭಾವಕ್ಕೆ ಚೋದ್ಯಂಬಟ್ಟು: **ಪಂಪಭಾ,** ೧. ೧೧೫ ವ)

**ಚೋದ್ಯಾವಹ** – ಆಶ್ಚರ್ಯಕರವಾದ (ಜಗಕ್ಕತಿ ಚೋದ್ಯಾವಹಮಾಗೆ ಪೆಂಪುವಡೆದತ್ತಂತಾತ್ಮಜನ್ಮೋತ್ಸವಂ: **ಆದಿಪು,** ೭. ೩೭)

**ಚೋಹ** – ವೇಷ (ಪೆಱರ ಬಣ್ಣಿಸಂದು ತನ್ನಂ ಮಱೆವಂ ಕವಿಯಲ್ಲಂ ಆಟಕಾಱರ ಚೋಹಂ: **ಮಲ್ಲಿನಾಪು,** ೧. ೩೨)

**ಚೌಕ** – ಚತುಷ್ಕೋನಾಕಾರ (ಉಗುರಿಂದಂಟಿ ಬೆಱಂತಿಯನಂಜನಮದಕ್ಕುಂ ಚೌಕಮಂ ಕೀಱುತಂ ತೆಗೆದೆಚ್ಚಾದಿಸೆ ಕೇಳ ನೀಳಪಟಮಕ್ಕುಂ: **ಗಿರಿಜಾಕ,** ೪. ೭೬)

**ಚೌಕಂಡ** – [ಚತುಷ್ಕಂಡ] ಮನೆಯ ಚೌಕಾಕಾರದ ತೊಟ್ಟಿ (ಪಳುಕಿನ ಚೌಕಂಡಂಗಳ ಕೆಲಗಣ ಚೆಂಬೊನ್ನ ಮತ್ತವಾರಣದೊಳ್ ಕಣ್ಗೊಳಿಸಿದುದು ಅನೇಕ ದೇಶಂಗಳ ರಾಜತನೂಜರೋಳಿಯಿಂದಿರ್ಕೆಲದೊಳ್: **ಪಂಪರಾ,** ೩. ೩೭)

**ಚೌಕಸತ್ತಿಗೆ** – ಚೌಕಾಕಾರದ ಕೊಡೆ(ಸೀಗುರಿಯ ಚೌಕಸತ್ತಿಗೆಯ ಮುತ್ತಿನ ಝಲ್ಲರಿಯ ಮೊತ್ತಮಂ ತುಱುಗಲಾಗಿ ಪಿಡಿಯಿಸಿಯುಂ: **ಚಂದ್ರ ಪ್ರಪು,** ೧೨. ೮೩ ವ)

**ಚೌಕಿಗೆ** – ಮನೆಯ ಅಂಗಳ, ತೊಟ್ಟಿ (ಸೊಂಪಾದ ಪಾದರಿಯ ಚೌಕಿಗೆಗಳೊಳಂ ಬಿಟ್ಟ ಬೀಡಂ ಬರೆದಂತೆ ಕಂಡರಿಸಿದಂತೆ ಕಣ್ಗೆಸೆದಿರ್ದುದು: **ಕಬ್ಬಿಗಕಾ,** ೧೮೪ ವ)

**ಚೌತ** – [ಚತುರಸ] ನಿಶ್ಚಿತ (ಮಧುಪಂಗಳ್ ತಮ್ಮಟ್ಟಿಮೆಯೆ ಚೌತಮಾಗಿರೆ ನೀಟ್ಟಿರಿಸಿದುವು ಉಂತೆ ಚಂಪಕಕ್ಕೆಱಗದುವೇ: **ಆದಿಪು,** ೧೧. ೧೯೯); ಕಪ್ಪ, ಕಾಣಿಕೆ (ಅಳಿಗಂತೆನಸುಂ ಚೌತಮನೊದವಿಪುದೆನಿಸುವ ಸಂಪಗೆಯ ಕಂಪು ಪೊಂಪುಳಿ ಬನದೊಳ್: **ಪಾರ್ಶ್ವನಾಪು,** ೯. ೧೨)

**ಚೌತೆಱ** – ನಾಲ್ಕು ರೀತಿ (ಭಾವದೊಳ್ ಪದುಳಮಾಗಿರೆ ಚೌತೆಱನರ್ಥವೃತ್ತಿಯೊಳ್: **ಪುಷ್ಪದಂಪು,** ೧. ೩೯)

**ಚೌದಂತ** – ಚೌಜಂತ, ಐರಾವತ (ಎರಡು ರದನದ ಬಱಿ ಸಂದುರುಜಳಫೇನವಳಕ್ಷಂ ಕರಮೆಸೆದುದುದು ಒಂದು ದಂತಿ ಚೌದಂತದವೋಲ್: **ಶಬರಶಂ,** ೩. ೪೪)

**ಚೌಪಳಿಕೆ** – ಮಂಟಪ (ಕೈಗೆಯ್ದು ಮಹಾವಿಭೂತಿಗಳಿಂ ಬಂದು ತಂತಮ್ಮ ಚೌಪಳಿಕೆಗಳ ಮೇಲೆ ಲೀಲೆಯಿಂದಿರ್ದರ್: **ಹರಿವಂಶ,** ೨. ೩೦ ವ)

**ಚೌಪಳಿಗೆ** – ಮಂಟಪ (ಚೌಪಳಿಗೆಯನೇಱಿದರ್ ಮುಗಿಲನೇಱುವ ಖೇಚರರಾಜರಂದದಿಂ: **ನೇಮಿನಾಪು,** ೮. ೬೫); ಹಜಾರ (ಗಟ್ಟಿಸಿ ಸೆಂದುರದೊಳ್ ನೆಲಗಟ್ಟಿಸಿ ಚೆಂಬೊನ್ನ ನೆಲೆಯ ಚೌಪಳಿಗೆಗಳೊಳ್ ಕಟ್ಟಿಸಿ ಪಱಿಯಿಗೆಗಳಂ ಅಳವಟ್ಟಿರೆ ಬಿಯಂ ಅಲ್ಲಿ ಮೊಱಗೆ ಪಲವುಂ ಪಱಿಗಳ್: **ಪಂಪಭಾ,** ೨. ೬೬)

**ಚೌರಿಗೆ** – ಚೌಕಿಯ ಮನೆ (ಮುಂದೊಂದೆಡೆಯೊಳ್ ಒರ್ವಂ ಚೌರಿಗೆಯಂ ಪೊಕ್ಕು ಗಣಿಕೆಯಂ ಬಿಡದೆ ಪೊಱಮಡದಿರ್ಪುದಂ ಕಂಡು: **ತ್ರಿಷಷ್ಟಿಪು,** ೨೪. ೧೮೮ ವ)

**ಚೌಲ** – ಚೂಡಾಕರ್ಮ (ವಸುಮತಿವೆಸರ್ ಅನ್ವರ್ಥಂ ವಸುಧೆಗೆನಲ್ ಕಱೆದು ಮಟಿಯಂ ದಾನವ್ಯಸನಿ ದಶರಥನದೇಂ ಮೊಸಯಿಸಿದನೊ ಚೌಲೋಪನಯನ ಮಹಿಮೋತ್ಸವಮಂ: **ಪಂಪರಾ,** ೩. ೧೪೨)

**ಚೌವಂದದ ದಱ** – ನಾಲ್ಕು ವಿಧದ ಸೈನ್ಯ (ಸುಗ್ಗಿಯುಂ ಆ ತೆಂಗಾಳಿಯುಂ ಇರ್ವರುಂ ಸಜ್ಜುವಂ ಪಡೆದು ಚೌವಂದದ ದಱಕಂ ಸೆಲವಿತ್ತು ಒಡಗೊಂಡು ಬರೆ: **ಕಬ್ಬಿಗಕಾ,** ೧೫೩ ವ)

**ಚೌವಟ** – ನಾಲ್ಕು ಬೀದಿಗಳು ಸೇರುವ ಚೌಕ (ಕರಂ ಚಲದಿಂ ಚೌವಟದೊಳ್ ಪಾಯ್ದು ಅಲಂಘ್ಯಬಲಂ ಅಲ್ಲಿ ಉಗುಬ್ದು ಬಂದಂ ಮದನಂ: **ಹರಿವಂಶ,** ೯. ೩೮)

**ಚೌವಟಮಲ್ಲ** – ಮಹಾ ಪರಾಕ್ರಮಿ, ನಾಲ್ಕು ದಿಕ್ಕುಗಳಲ್ಲಿಯೂ ಯುದ್ಧಮಾಡಬಲ್ಲ ವೀರ (ತಲ್ಲಣದಿಂ ಪೆಱದೆಗೆವ ಬಿದಿವೆಡಂಗನೆಂಬ ಬಿಂಜಮಾಣಿಕನೆಂಬ ಹರಿರಾಯನೆಂಬ ತೋರಹತ್ತನೆಂಬ ಚೌವಟಮಲ್ಲನೆಂಬ ಮುಱಿವ ರಕ್ಕಸನೆಂಬ ರಾಯದಱಸೂಱೆಕಾರನೆಂಬ ತನ್ನೊಡ್ಡಿನ ಪೇರಾನೆಗಳಂ ಕಂಡು: **ಕಬ್ಬಿಗಕಾ,** ೨೨೩ ವ)

**ಚೌವಟ್ಟ** – ನಾಲ್ಕು ಬೀದಿಗಳ ಚೌಕ (ನಗರಾಭ್ಯಂತರ ದೇವತಾಭವನದೊಳ್ ಚೌವಟ್ಟದೊಳ್ ಬೀದಿವೀದಿಗಳೊಳ್ .. .. ನೀತಿಗೆಟ್ಟಾಡುವರ್: **ಸುಕುಮಾಚ,** ೨. ೭)

**ಚೌವಳಿಗೆ** – ಮಂಟಪ (ಕಡೆಯ ಚೌವಳಿಗೆಯೊಳಿರ್ದ ರಾಜಂ ಒರ್ವ ರಾಜಕುಮಾರನ ಮುಂದೆ ಬಾಜಿಸುವ ಪಱೆಯವರಲ್ಲಿಗೆ ವಂದು: **ಹರಿವಂಶ,** ೫. ೧೨ ವ)

**ಚೌವೇದಿ** – ನಾಲ್ಕು ವೇದಗಳನ್ನು ಅಭ್ಯಸಿಸಿದವನು (ಚತುಃಶಬ್ದಕ್ಕೆ: ಚತುರ್ವೇದಿ–ಚೌವೇದಿ ಚತುರ್ದಂತಂ–ಚೌದಂತಂ: **ಶಬ್ದಮದ,** ೩೦೫ ಪ್ರ)

**ಚ್ಯುತಿ** – ಬೀಳುವುದು, ನಾಶ (ಚ್ಯುತಿಯಿಲ್ಲದ ತಾಣಂ ನಿರ್ವೃತಿಯೊಂದೆ ದಲ್: **ಪಾರ್ಶ್ವನಾಪು,** ೭. ೬೭)

# ಛ

**ಛಂದ** – ವೇದ (ವೇದಂ ಛಂದಂ ಶ್ರುತಿ: **ಅಭಿಧಾವ,** ೧. ೧. ೧೨)

**ಛಂದೋವಿಚಿತಿ** – ಛಂದಶ್ಶಾಸ್ತ್ರ (ಸ್ವಯಂಭುವ ಛಿಧಾವಪದವಿದ್ಯಾ ಛಂದೋವಿಚಿತಿ ಅಲಂಕಾರಗಳೆಂಬ ಮೂಜಿಜೆಂ ಪೆಸರ್ವಡೆದ ವಾಙ್ಮಯಮುಮಂ: **ಆದಿಪು,** ೮. ೬೦ ವ)

**ಛಂದೋವಿದ್ಯೆ** – ಛಂದಶ್ಶಾಸ್ತ್ರ (ಮತ್ತಂ ಅತಿಲಲಿತಂ ಅತಿವಳಛಿಚ್ಛಂದಂಳಿಂ ಛಂದೋವಿದ್ಯೆಯುಮಂ: **ಸುಕುಮಾಚ,** ೧೦.೫೦ ವ)

**ಛಟಾ** – ಸಮೂಹ (ತಚ್ಚರಣಂಗಳಂ ವಿಮಲವಿಲೋಚನ ಮರೀಚಿಚ್ಛಟಾ ಚಂದನ ಚರ್ಚೆಗಳಿನರ್ಚಿಸುತ್ತುಂ: **ನೇಮಿನಾಪು,** ೧. ೯೦ ವ)

**ಛಟೆ** – ಕಾಂತಿ (ಪಾಂಡುರಲೋಲತ್ ಕಟಾಕ್ಷಮಾಲಾಚ್ಛಟೆಗಳ್ ಗಂಡಸ್ಥಳದೊಳ್: **ಜಗನ್ನಾವಿ,** ೧೦. ೧೨೦)

**ಛಟ್ಟಿ** – ಚಾಂದ್ರಮಾನದ ಪ್ರಕಾರ ಷಷ್ಠಿ ತಿಥಿ (ಷಡ್ವಕ್ಕೆ ಟಟ್ವಂ: ಗೋಷ್ಠೀ–ಗೊಟ್ಟಿ ಷಷ್ಠಿ–ಚಟ್ಟಿ: **ಶಬ್ದಮದ,** ೨೯೮ ಪ್ರ)

**ಛತ್ರರತ್ನ** – [ಜೈನ] ಚಕ್ರವರ್ತಿಗೆ ತಾನಾಗಿ ದೊರಕುವ ಏಳು ರತ್ನಗಳಲ್ಲಿ ಒಂದು (ವರಚರ್ಮರತ್ನಮುಂ ಛತ್ರರತ್ನಮುಂ ತಮ್ಮ ತಮ್ಮ ಬೆಸಗಳನ್ ಉಜೆದಿರ್ಪಿರವಿಂದೆ: **ಶಾಂತಿಪು,** ೧೧. ೫೬)

**ಛದ** – ಎಲೆ (ನೋಡುತ್ತೆ ಅಸವಸದೆ ಜೀರ್ಣಾತ್ ಛದಂಗಳ್ ಮೇಳಂಗೊಡೊಪ್ಪೆ ಶಾಖಾಗ್ರದೊಳ್; **ರಾಜಶೇವಿ,** ೯. ೨೯)

**ಛದನ** – ಎಲೆ ಛದನಂ ಪತ್ರಂ ಪರ್ಣಕಂ ಛದಂ ಪಳಾಶಂ ದಳಮ ಸಮವೇಕಾರ್ಥಂ: **ಅಭಿಧಾವ,** ೧. ೭. ೫)

**ಛದ್ಮಬಾಲಿಶ** – ಮಾರುವೇಷ ಹಾಕಿಕೊಂಡು ಆಟ ಆಡುವವನು (ಆರ್ ಗೆಲ್ವರ್ ಈ ಛದ್ಮಬಾಲಿಶನಂ ದೈವೀಸೂತ್ರಮಂ: **ಜಗನ್ನಾವಿ,** ೩. ೧೯)

**ಛದ್ಮಸ್ಥ** – [ಜೈನ] ಕೇವಲಜ್ಞಾನಿಯಾಗಲು ಹಿಂದಿನ ಅವಸ್ಥೆಯಲ್ಲಿರುವವನು (ಪ್ರಥಮಶುಕ್ಲಧ್ಯಾನಪರಿಣತಿಯಿಂ ಕ್ಷೀಣಕಷಾಯವೀತರಾಗ ಛದ್ಮಸ್ಥ ಗುಣಸ್ಥಾನ ವ್ಯವಸ್ಥಿತನಾಗಿ: **ಸುಕುಮಾಚ,** ೮. ೬೨ ವ)

**ಛದ್ಮಸ್ಥಕಾಲ** – [ಜೈನ] ಛದ್ಮಸ್ಥ ಅವಸ್ಥೆಯಲ್ಲಿರುವವನು (ತತ್ ನೇಮೀಶ್ವರನುಂ ಛದ್ಮಸ್ಥಕಾಲಂ ಅಯ್ವತ್ತಾಱುದಿನಂ ಪೋಗೆ: **ಕರ್ಣನೇಮಿ,** ೧೩. ೮೩ ವ)

**ಛನ್ನ** – ಆವರಿಸಿದ (ಉನ್ನತ ಧವಳಚ್ಛತ್ರಚ್ಛನ್ನ ವಿಯತ್ತಳನಂ ಇಂದುಕುಳತಿಳಕನಂ ಇಂತು ಅನ್ನೆಯದಿಂದ ಈ ಪಟುವಿನೊಳ್ ಎನ್ನರಸನಂ ಇಂತು ಬಿದಿಯೆ ತಂದಿಕ್ಕುವುದೇ: **ಪಂಪಭಾ,** ೨. ೨೨); ಮುಚ್ಚಿದ (ಸಿತಮೃದುಳಪ್ರಚ್ಛದಚ್ಛನ್ನ ಶಯ್ಯಾತಲದೊಳ್ .. .. ಸುಖಸೀನನಾಗಿರ್ದನಾಗಳ್: **ಕಾದಂಸಂ,** ೧. ೨೮)

**ಛಪ್ಪಿಸು** – ಆಕ್ರಮಣ ಮಾಡು (ವರ್ಗ ದ್ವಿತೀಯಾಕ್ಷರಂಗಳ್ಗೆ: ಛಲ್ಲಿ ಮಾಡಿದಂ [ಛಲ್ಲಂ ಮಾಡಿದಂ ಛರ್ಪಿಸಿದಂ–ಛಪ್ಪಿಸಿದಂ: **ಶಬ್ದಮದ,** ೨೫ ವೃತ್ತಿ)

**ಛರ್ದಿ** – ವಾಂತಿ (ಚರಿಗೆವೊಲ್ಲೊಡೆ ಆರುಂ ನಿಜೆಸುವರಿಲ್ಲ ಮೂಜೆತ್ತು ನಿಜೆಸಿದೊಡಂ ಛರ್ದಿಯಕ್ಕುಂ: **ವಡ್ಡಾರಾ,** ಪು ೧೭೧, ಸಾ ೯)

**ಛರ್ದಿಗೆಯ್** – ವಾಂತಿಮಾಡಿಕೊ (ಸುವ್ರತೆಯರ್ ಎಂಬ ಆರ್ಯಿಕೆಯರ್ಗೆ ಆಹಾರದಾನಮಂ ಮಾಡಿದೊಡೆ ಅವರುಂ ಉಪವಾಸ ಶ್ರಮದಿಂ ಛರ್ದಿಗೆಯ್ಯೆ: **ಶಾಂತೀಶ್ವಪು,** ೮. ೧೩೨ ವ)

**ಛರ್ದಿಸು** – ಛರ್ದಿಗೆಯ್ (ಕೊಳ್ಳಿರೆ ನಿಮ್ಮ ಕೂಟಂ ಎನುತುಂ ಕೆಯ್ಯಿಂದಮೆರ್ದತ್ತ ಛರ್ದಿಸಿದಾಗಳ್: **ಹರಿವಂಶ,** ೯. ೩೦)

**ಛಲ** – ನೆಪ (ಉಪದೇಶಂಗೆಯ್ದು ಕಾವ್ಯಚ್ಛಲದಿಂ ಅಖಿಲ ಧರ್ಮಂಗಳಂ .. .. ಕಲ್ಪಾಂತಪರೀತ ಖ್ಯಾತಿಯಂ ತಾಳ್ದಿದ ಪರಮ ಕವಿಶ್ರೇಷ್ಠರಾದರ್: **ಪಂಪರಾ,** ೧. ೨೮)

**ಛವಿ** – ಕಾಂತಿ (ತನ್ನೊಳಗಣ ಪನ್ನಗನಂ ಮುಂ ನೀಂ ಪಿಡಿದು ಒಗೆಯೆ ಕಾಯಲಾಱದೆ ಪಿರಿದುಂ ಬನ್ನದ ಕರ್ಪಸೆದುದು ತೊಱೆಗೆ ಇನ್ನುಂ ಹರಗಳ ತಮಾಳ ನೀಳಚ್ಛವಿಯಿಂ: **ಪಂಪಭಾ,** ೫. ೫೪)

**ಛಾಂದಸ** – ವೇದಾಧ್ಯಯನ ಪ್ರವೀಣ (ಶುಚಿಯಂ ಅಶುಚಿಯೆಂಬರ್ ಧೂರ್ತನಂ ಛಾಂದಸನೆಂಬರ್: **ಪಂಚತಂತ್ರ,** ೧೦೪ ವ)

**ಛಾಗ** – ಹೋತ (ಛಾಗದ ಪದೋತ್ಥಧೂಳಿಯೊಳಾಗದೆ ಬಹಿರಂಗಂ ಅಶುಚಿಯೆಂಬರ್: **ಸಮಯಪ,** ೧೧. ೧೦೧)

**ಛಾತ್ರ** – ವಿದ್ಯಾರ್ಥಿ (ತನ್ನ ಛಾತ್ರನಪ್ಪ ಯಜ್ಞನಂ ನಡುಮನೆಯ ಜಗಲಿಯಿಂ ತೆರಳಲಾಗದೆಂದು ನಿಯಮಮಂ ಕೊಟ್ಟು: **ಧರ್ಮಪ,** ೩. ೧೩ ವ)

**ಛಾದ್ಯ** – ಮೇಲ್ಕಟ್ಟು, ವಿತಾನ (ಮುಕ್ತಾಮಣಿಗಣರಚಿತಂ ಛಾದ್ಯ ಹೃದ್ಯಂ .. .. ಕಾಯಮಾನಂ ನವೀನಂ: **ಚಂದ್ರಪ್ರಪು,** ೧೨. ೧೦೭)

**ಛಾಯಾಂಗಿ** – ತೆಳುವಾದ ದೇಹವುಳ್ಳವಳು (ವಿಕಚ ಇಂದೀವರವಕ್ತ್ರೆ ಸನ್ಮರಕತತ್ ಛಾಯಾಂಗಿ ರಾಮಾಂಗೆ ವೃತ್ತಕುಚದ್ವಂದ್ವೆ ವಿನೀಳಕುಂತಳೆ.. ..ಕೂಷ್ಮಾಢಿಯಂಬಿಕೆ ಯಕ್ಷೇಶ್ವರಿ: **ಸುಕುಮಾಚ,** ೧. ೮)

**ಛಾಯಾಗ್ರಹಣಂಗೆಯ್** – ವ್ಯಕ್ತಿಯ ಚಲನವಲನವನ್ನು ನಿರೋಧಿಸಲು ಅವನ ನೆರಳನ್ನು ತಡೆಹಿಡಿ (ಶ್ರೀಶೈಳಂ ತದ್ವಿಮಾನಮಂ ಛಾಯಾಗ್ರಹಣಂಗೆಯ್ಯೆ ನೆಲಕ್ಕೆವರ್ಪುದುಂ: **ಪಂಪರಾ,** ೧೧. ೫೨ ವ)

**ಛಾಯಾಲಕ್ಷ್ಯ** – ಪ್ರತಿಬಿಂಬವನ್ನು ನೋಡಿ ಹೊಡೆಯಬೇಕಾದ ಗುರಿ (ಛಾಯಾಲಕ್ಷ್ಯಮನೊಡ್ಡಿಯುಂ ಆಯದ ನೀರೊಳಗೆ ತನ್ನನಡಸಿದ ನೆಗಟಿಂ ಬಾಯಟಿವಿನಂ ಇಸಿಸಿಯುಂ ಅರೆ ಹೋಯಜ ಬಾಪ್ಪೆಂದು ಹರಿಗನಂ ಗುರು ಪೊಗಟೆ: **ಪಂಪಭಾ,** ೨. ೬೦)

**ಛಿಂದಕ** – ಅಮರದವಳ್ಳಿ (ಓರೊಂದೆಡೆ ಛಿಂದಕ ಸುರದಾರು ಲವಂಗಾಸನದ್ರುಮಗಳಿನೆಸೆಗುಂ: **ವರ್ಧಮಾಪು,** ೫. ೪೯)

**ಛಿದ್ರ** – ಕಂಡಿ (ನೃಪತಿಯ ಪ್ರಾಸಾದದ ಶಿಖರದ ಮಧ್ಯಪ್ರದೇಶಮಂ ಬಾದಣದಂತಿರೆ ಛಿದ್ರಂ ಮಾಡಿ: **ವಡ್ಡಾರಾ,** ಪು ೧೮೬, ಸಾ ೧೪)

**ಛಿದ್ರಕದ್ವಾರ** – ನೀರು ಹೋಗಲು ಮಾಡಿರುವ ತೂತು (ಛಿದ್ರದ್ವಾರದ ತೂಂತನುರ್ಚಿ ನೀರಂ ಕಳೆದಾಗಳ್ : **ವಡ್ಡಾರಾ,** ಪು. ೨೬, ಸಾ. ೨೦)

**ಛಿದ್ರಾನ್ವೇಷಿ** – ರಂಧ್ರವನ್ನು ಹುಡುಕುವವನು, ಇತರರಲ್ಲಿ ತಪ್ಪನ್ನೇ ಹುಡುಕುವವನು (ಆಷಾಢಭೂತಿ ತಂ ಛಿದ್ರಾನ್ವೇಷಿಯಪ್ಪುದಱಿಂ ತನಗಿದುವೆ ಪದನೆಂದು ಬಗೆದು: **ಪಂಚತಂತ್ರ,** ೧೨೬ ವ)

**ಛಿದ್ರಿಸು** – ಭೇದಿಸು, ನಾಶಮಾಡು (ರಸದಾನಾದಿಗಳೊಳ್ ಛಿದ್ರಿಸುವಮಪ್ಪೊಡೆ ಅವರ್ ಆಪ್ತವಂತರುಂ ಬುದ್ಧಿವಂತರುಂ ಆಗಿ ನೆಗೞ್ದರ್ ಇನ್ನಾವ ಮಾಟ್ಕೆಯೊಳ್ ಪಗೆಯಂ ಕೆಯ್ಗೆ ಮಾಡುವುದು ಪೇೞಿಂ: **ಪಂಪಭಾ,** ೬. ೬೭ ವ); ಕನ್ನ ಹಾಕಿ

ಕಳ್ಳತನಮಾಡು (ಪರರ ಕಾವ್ಯಾರ್ಥಮುಮಂ ಛಿದ್ರಿಸುವಂಗತಿ ಶಶಬ್ದದರಿದ್ರಂಗಕ್ಕುಮೆ ನವೀನ ಕಾವ್ಯಾರಂಭಂ: **ಗಿರಿಜಾಕ,** ೧. ೨೬)

**ಛುರಿತ** – ಬೆರೆತುಕೊಂಡಿರುವ (ಉತ್ಪಾತಾಸಿಚ್ಛುರಿತ ಭುಜಪರಿಘರೊಂದೊರ್ವರ ಸೆಣಸಿಂ ಬಗ್ಗೆಗೆಯ್ದು ಪಾಯಿಸೆ ಜವದಿಂ: **ಶಾಂತಿಪು,** ೪. ೧೫)

**ಛೇದಿಸು** – ಕತ್ತರಿಸು (ಮರನಂ ಛೇದಿಸುವು ವಷಟ್ಚರಣಂ ಗಂಧಕ್ಕೆ ಸೋಲ್ತು ತಾವರೆಯೆಸಳಂ ಭರದಿಂ ಛೇದಿಸಲಾಜಿದೆ: ಧರ್ಮಾಮೃ, ೫. ೧೫)

## ಜ

**ಜಂಕರಿಸು** – ಹೆದರು (ಜಂಕರಿಸಂ ಕಾತರಿಸಂ ಮಾಂಕರಿಸಂ ಬೆಕ್ಕಸಂಬಡಂ ಬೆಕ್ಕರಿಸಂ ಹೂಂಕರಿಸಂ ನಿರ್ವಿನಿಸಂ ಜೀಂಕರಿಸಂ ಜಿನುಗಂ ಅವನಿಸಂ ಕೊಕ್ಕರಿಸಂ: **ಅಜಿತಪು,** ೫. ೮೯)

**ಜಂಕಿಸು** – ಗದರಿಸು, ಹೀಯಾಳಿಸು (ಬಿಸುಗದಿರನ ಕಡುಗಾಯ್ಪಂ ಮಸುಳಿಸಿದುವು ತುಱುಗಿ ನೆಗೆದು ನಾಲ್ಕುಂ ದೆಸೆಯಂ ಮುಸುಕಿದುವು ಮುಳಿದರಂ ಜಂಕಿಸಿದುವು ಬಿಡದಾರ್ದು ಕಾವನೆಚ್ಚಲರ್ಗಣೆಗಳ್: **ಕಬ್ಬಿಗಕಾ,** ೨೩೫)

**ಜಂಕೆ** – ಗದರಿಕೆ (ಪರಿವ ಗಾಲಿಯ ಕೋಳ್ಗೆ ಕೆಳರ್ತು ಬೆಟ್ಟುಗಳ್ ಕೂಡೆ ಸಡಿಲ್ವಿನಂ ಪೊಡೆವ ಬೀರರ ಜಂಕೆಗೆ ಗೊಂಟಿನಾನೆಗಳ್ ಕೋಡುವಿನಂ ಕಡಂಗಿ ಪರಿತಂದುವು ತೋರ್ಕೆಯ ತೇರ್ಗಳೋಳಿಯಿಂ: **ಕಬ್ಬಿಗಕಾ,** ೧೬೦)

**ಜಂಗಮ** – ಸಂಚರಿಸುವ (ಲತೆಗಳ್ ಜಂಗಮರೂಪದಿಂದೆ ನೆರದುವೋ ದಿವ್ಯಾಪ್ಸರೋವೃಂದಂ ಈ ಕ್ಷಿತಿಗೇಂ ಇಂದ್ರನ ಶಾಪದಿಂದ ಇೞಿದುವೋ ಪೇೞೆಂಬ ಶಂಕಾಂತರಂ ಮತಿಗಂ ಪುಟ್ಟುವಿನೆಗಂ: **ಪಂಪಭಾ,** ೪. ೩೯)

**ಜಂಗಮಸೇತು** – ಚಲಿಸುವ ಸೇತುವೆ (ಕೊಡಂಬೆರಸು ಆಳಿಗಟ್ಟಿ ಭೋರ್ ಭೋರೆನೆ ಪೋಪ ಬರ್ಪ ಅಮರಸಂಹತಿ ಪೋಲ್ತುದು ಮಂದರಾದ್ರಿಗಂ ಕ್ಷೀರಪಯೋಧಿಗಂ ಹರಿಯ ಕಟ್ಟಿದ ಜಂಗಮಸೇತುಬಂಧಮಂ: **ಶಾಂತಿಪು,** ೧೦. ೪೫)

**ಜಂಗುಳಿ** – ಗುಂಪು (ಅರಾತಿಗಜಮಸ್ತಕಕ್ಕೆ ಲಂಘಿಸುವ ಮಸಕದಿಂ ಸಿಂಗದ ಜಂಗುಳಿಯಂತೆ ಮುಂಗೊಳೊಳ್ ಕಡಂಗುವ ಅಣಿಯ ನಾಯಕರ್ಗೆ: **ಆಚವರ್ಧ,** ೮. ೪೩ ವ)

**ಜಂಗುಳಿದೇವರು** – ಜನಜಂಗುಳಿಯ ದೇವತೆಗಳು, ಕ್ಷುದ್ರದೇವತೆ (ಜಂಗುಳಿದೇವರರಂ ಒಂದಱುದಿಂಗಳ್ ಕುಳ್ಳಿರ್ದು ಪೂಜಿಸುತ್ತಿರದೆ: **ಸಮಯಪ,** ೧. ೧೨೭)

**ಜಂಘಚಾರಣ** – [ಜೈನ] ಎಂಟು ಬಗೆಯ ಚಾರಣಶಕ್ತಿಯಿರುವವರಲ್ಲಿ ಒಬ್ಬ, ನೆಲಕ್ಕೆ ಕಾಲೂರದೆ ನಡೆಯಬಲ್ಲವನು (ಜಂಘಚಾರಣರ್ ನಿಲಲೊಲ್ಲದೆ ಪೋದ ಕಾರಣವನಱಿಯದೆ .. .. ಬೆಸಗೊಂಡೊಡೆ: **ಚಾವುಂಪು,** ಪು. ೨೧೧, ಸಾ. ೫)

**ಜಂಘಾಲ** – ವೇಗವಾಗಿ ಓಡುವವನು (ಅತಿ ಜಂಘಾಲಂ ಭಯ ಕಂಪಿತ ತನು ನಿಜಪತಿಯಂ ಇಂದ್ರನಂ ಕಂಡು ಪದಾನತನೆಂದಂ ದಶಮುಖಂ ಅಪ್ರತಿಮಂ ಬವರದೊಳ್ ಇದಿರ್ಚುವವರಾರ್ ಅವನಂ: **ಪಂಪರಾ,** ೧೦. ೧೬೩)

**ಜಂಘಾಳ** – ವೇಗವಾಗಿ ಓಡುವವನು (ಚಂಡಾಜಿವಿಕ್ರಾಂತ ಮರ್ತ್ಯನಿಳಾಕ್ರಾಂತಹಯೌಘಮೂರ್ಜಿತ ಜಯಪ್ರಖ್ಯಾತ ಜಂಘಾಳಪತ್ತಿ ನಿಕಾಯಂ: **ಆದಿಪು,** ೪. ೯೧)

**ಜಂಜು** – ಬೀಸುವ ಗಾಳಿ ಅಥವಾ ಬೀಳುವ ಮಳೆಯ ಸದ್ದು (ಝಕಾರಕ್ಕೆ ಜಕಾರಂ: ಝುಂಪಂ–ಜಂಪಂ ಝುಂಝಾ–ಜಂಜು: **ಶಬ್ದಮದ,** ೨೪೯ ಪ್ರ)

**ಜಂಝಾನಿಲ** – ಮಳೆಹನಿಯೊಡಗೂಡಿದ ಗಾಳಿ (ಜಂಝಾನಿಲಂ ಭೀಕರಮಾದ್ಯತ್ ಕುಂಜರಂಬೊಲ್ ಸುೞಿದೊಗೆಯೆ ವರ್ಷಾಂಬು ದಾನಾಂಬುವಾಗಳ್: **ಉದ್ಭಟಕಾ.** ೯. ೧೩೨)

**ಜಂಝಾಪ್ರಭಂಜನ** – ಮಳೆಹನಿಯೊಡಗೂಡಿದ ಗಾಳಿ (ರಿಪುಬಲಬಲಾಹಕ ಪ್ರಬಲಜಂಝಾಪ್ರಭಂಜನನಂ ಕಂಡು: **ರಾಜಶೇವಿ,** ೬. ೮೧ ವ)

**ಜಂಝಾಸಮೀರ** – ಜಂಝಾಪ್ರಭಂಜನ (ಆಶಾಂತರದೊಳ್ ಜಂಝಾಸಮೀರಂ .. .. ಪರ್ವಿಸತ್ತಿರ್ದುವೆತ್ತಂ: **ಕಾದಂಬ,** ೯. ೧೫)

**ಜಂತ** – ದಂತ (ಸಿರಿಕಂಡದ ಕೋಟ್ಕೆಸಱಂ ಪುದಿದು ಜಂತದಿಂ ಕಡೆದು ಕಂಡರಿಸಿದ ಪುತ್ತೞಿಯಂತಿರ್ಪಳ್: **ಕಬ್ಬಿಗಕಾ,** ೨೪೬ ವ)

**ಜಂತದ ಪಾಪೆ** – ದಂತದ ಬೊಂಬೆ (ಜಂತದ ಪಾಪೆಗಳ್ ತಳಿರ ತುಂತುರನೋಸರಿಸುತ್ತೆ ಕೈಗಳಿಂದಂ ಬರ್ಪಂತಿರೆ ಬರ್ಪ ಭೂಮಿಪತಿ: **ಲೀಲಾವತಿ,** ೧೨. ೧೪)

**ಜಂತಿಗ** – ದಂತದ ವ್ಯಾಪಾರಿ (ಜಂತಿಗರ್ ಸಂತತಿಗೆಟ್ಟರಂತೞಲೆ ತಂಬುಲಿಗರ್ ನಂಬುಗೆಗೆಟ್ಟವರಂತೆ ಪೆಱಸಾರೆ: **ಧರ್ಮಾಮೃ,** ೨. ೪೧ ವ)

**ಜಂತು** – ಪ್ರಾಣಿ (ಬ್ರತಗುಣಚರಿತಮಿಲ್ಲದ ಸುತನಂ ಜಂತು ಎಂಗೆ ತನುಜನಪ್ಪುದಱೆಂದಂ: **ಸಮಯಪ,** ೫. ೧೪೫)

**ಜಂತೆ** – ಛಾವಣಿಯ ತೊಲೆಗಳ ನಡುವೆ ಹಾಕುವ ಸಣ್ಣ ಅಡ್ಡಪಟ್ಟಿ (ಪಚ್ಚೆಯ ನೆಲಗಟ್ಟಿನೊಳಂ ಪವಳದ ಜಂತೆಯೊಳಂ ಪದ್ಮರಾಗದ ಬೋದಿಗೆಯೊಳಂ: **ಪಂಪರಾ,** ೩. ೭೪ ವ)

**ಜಂತೆತ್ತಿದರ್** – ಹೊಟ್ಟೆಯಲ್ಲಿ ಜಂತುಗಳು ಹೆಚ್ಚಾಗು (ಕಂಡಕಂಡವರೆಲ್ಲಂ ಜಂತೆತ್ತಿದರಂತೆ ಓಕರಿಸುತ್ತುಂ: **ಧರ್ಮಾಮೃ,** ೪.೪೮ ವ)

**ಜಂತ್ರ** – ಯಂತ್ರ, ಕಡೆಗೋಲು (ಘನ ಮಂದರಾವನೀಧರಂ ಉರು ಜಂತ್ರಮಾಗೆ .. .. ಕಡೆದರ್ ಭುಜಸತ್ವದ ಸಂಭ್ರಮಂಗಳಿಂ: **ತ್ರಿಷಷ್ಟಿಪು,** ೧೬. ೨೧)

**ಜಂಪ** – ನೆಗೆತ, ಕುಪ್ಪಳಿಕೆ (ಝಕಾರಕ್ಕೆ ಜತ್ವಂ: ಝುಂಕೆ–ಜಂಕೆ ಝುಂಪಂ–ಜಂಪಂ: **ಶಬ್ದಮದ,** ೨೪೯ ಪ್ರ)

**ಜಂಪತಿ** – ದಂಪತಿ (ಆ ಜಂಪತಿಗಳ ವದನಾಂಭೋಜಂಗಳಂ .. .. ನೋಡಿ: **ಪುಷ್ಪದಂಪು,** ೧೨. ೧೦)

**ಜಂಪೆ** – ಮನೆಯ ಒಂದು ಭಾಗ (ತಿವುರಿ ಗುಡಿ ಗೂಡಾರಂ ಝುಂಪಾಳಿ ಚೌಕಿಗೆ ಜಂಪೆ ಮಂಡವಿಗೆ .. .. ಮಾಡಿತ್ತು ಕಣ್ಣನುರಾಗಂ: **ಅನಂತಪು,** ೧೩. ೭೩)

**ಜಂಬಾಳ** – ಒಂದು ಸಸ್ಯ (ಜಳಮಾತ್ರಂ ಪುದಿದಿರ್ಪ ಪಲ್ವಲ ಮಹಾಜಂಬಾಳದ ಒಳ್ಕೇಸರಾವಳಿಯಗ್ರಂ ನಸುದೋಱದಂತೆ ನೆಱೆ ನಿಷ್ಕಂಪತ್ವದಿಂ .. .. ಇರ್ದುದು .. .. ಕ್ರೋಡವ್ರಜಂ ನಾಡೆಯುಂ: **ಶಾಂತೀಶ್ವಪು,** ೧೨. ೩೫)

**ಜಂಬಿರ –** ನಿಂಬೆ (ತಮಾಳ ಕುಚಂದನ ಚಣದ ನಾಗ ಜಂಬಿರ ಪನಸು ಆಮ್ರ ನಿಂಬ ಕುಟಜ ಆದಿ ಮಹಾಕುಜಸಂಕುಗಳಂ: **ಹರಿವಂಶ,** ೭. ೭)

**ಜಂಬೀರ –** ನಿಂಬೆ (ಪನಸು ಆಮ್ರ ಜಂಬು ಜಂಬೀರ ನಾರಿಕೇಳ ಕಪಿತ್ಥ ಕದಳೀ ನಾರಂಗ ನವೀನಫಲಾವಳಿಯಂ ವಿನಯದಿಂ ಆ ದ್ವಿಜಂಗೆ ಕಪಿವರನಿತ್ತಂ: **ಪಂಚತಂತ್ರ,** ೧೮೩)

**ಜಂಬು –** ನೇರಿಳೆ (ಪನಸು ಆಮ್ರ ಜಂಬು ಜಂಬೀರ ನಾರಿಕೇಳ ಕಪಿತ್ಥ ಕದಳೀ ನಾರಂಗ ನವೀನಫಲಾವಳಿಯಂ ವಿನಯದಿಂ ಆ ದ್ವಿಜಂಗೆ ಕಪಿವರನಿತ್ತಂ: **ಪಂಚತಂತ್ರ,** ೧೮೩)

**ಜಂಬುಕ –** ನರಿ (ಅಧಿಕಭಯಪ್ರದಮೆನಿಪ ಘೋರಕಾಂತಾರದೊಳೆ ಮಹಾಭೀರುವೆಂಬ ಜಂಬುಕನಿರ್ಕುಂ: **ಪಂಚತಂತ್ರ,** ೯೩); ವರುಣ (ವರುಣಂಗಂ ಕ್ರೋಷ್ಟುಗಂ ಜಂಬುಕನೆನಿಸುವ ಸಂಜ್ಞಾಂತರಂ ತಾನದಕ್ಕುಂ: **ಅಭಿಧಾವ,** ೩. ೧. ೭)

**ಜಂಬೂದ್ವೀಪ –** ಜಂಬೂ, ಪ್ಲಕ್ಷ್ಯ, ಶಾಲ್ಮಲೀ, ಕುಶ, ಕ್ರೌಂಚ, ಶಾಕ, ಪುಷ್ಕರ ಎಂಬ ಸಪ್ತದ್ವೀಪಗಳಲ್ಲಿ ಒಂದು; [ಜೈನ] ಜಂಬೂದ್ವೀಪದಲ್ಲಿ ಭರತವರ್ಷ, ಹೈಮವತವರ್ಷ, ಹರಿವರ್ಷ, ವಿದೇಹವರ್ಷ, ರಮ್ಯಕವರ್ಷ, ಹೈರಣ್ಯವತವರ್ಷ, ಐರಾವತವರ್ಷ ಎಂಬ ಏಳು ಭಾಗಗಳು (ಇರೆ ಜಂಬೂದ್ವೀಪಂ ಅಲ್ಲಿಂ ಪೊಱಗಿರೆ ಲವಣಾಂಬೋಧಿ: **ಪುಷ್ಪದಂಪು,** ೧. ೯೦)

**ಜಂಬೂವೃಕ್ಷ –** ನೇರಿಳೆ ಮರ (ಮೇರುಪರ್ವತದ ತೆಂಕಣ ತಟ್ಟಿಲೊಳ್ ದ್ವಾದಶಯೋಜನ ಪ್ರಮಾಣಮಪ್ಪ ಜಂಬೂವೃಕ್ಷದ ಕೆಲದೊಳ್: **ಪಂಪಭಾ,** ೬. ೩೦ ವ)

**ಜಂಭರಿಪು –** ಜಂಭ ಎಂಬ ರಾಕ್ಷಸನ ಶತ್ರು, ಇಂದ್ರ (ಜಂಭುರಿಪುವಿನೋಲಗದೊಳ್ ರಂಭಾಸಂಭೋಗ ಸೌಖ್ಯಮಂ ನೆಱೆ ಮಾಟ್ಕುಂ: **ಉದ್ಭಟಕಾ,** ೧. ೯೧)

**ಜಂಭವೈರಿ –** ಇಂದ್ರ (ಜಲನಿಧಿ ಜಂಭವೈರಿಗೆ ಅರಿಯಂ ನಿಜೆಯಂ ಬಿಡು ಬೇಗಮೆಂದು ಬಂದುಲಿವವೊಲೊಪ್ಪೆ: **ರಾಜಶೇವಿ,** ೧. ೯೯)

**ಜಂಭಾರಾತಿ –** ಜಂಭರಿಪು (ಶಾತಕುಂಭಕುಂಭಂಗಳಿಂ ಜಂಭಾರಾತಿ ತದ್ಭುವನಮೂಲದ್ತಂಭಂಗೆ ಸವನವಿಧಿಯಂ ನಿರ್ವರ್ತಿಸಿ: **ಕರ್ಣನೇಮಿ,** ೧೩. ೭೧ ವ)

**ಜಂಭೀರ –** ಗಜನಿಂಬೆ (ಪಣ್ತ ಜಂಭೀರಂ ಬಿಣ್ಪೊನೆ ಜೋಲ್ದ ಬಾಳೆ ಫಲಸಂದೋಹಂಗಳಿಂ .. .. ಚೆಲ್ವಾದುದಾ ನಂದನಂ: **ಧರ್ಮಪ,** ೧. ೪೮)

**ಜಕ್ಕ –** ಯಕ್ಷ (ಕುಬೇರನಿಂ ಕಪ್ಪಂಗೊಂಡು ಪೊನ್ನಂ ಜಕ್ಕರೆಕ್ಕೆಯಿಂ ಪೊತ್ತು ಬರೆ: **ಪಂಪಭಾ,** ೬. ೩೨ ವ)

**ಜಕ್ಕಂಜಱೆ –** ಬಹಳ ನಿಂದನೆಮಾಡು (ಅಂತು ಜಕ್ಕಂಜಱೆವ ಕಜ್ಜಮಂ ಕೇಳ್ದು: **ಅನಂತಪು,** ೮. ೧೯ ವ)

**ಜಕ್ಕಂದೊೞಿ –** ಗುಂಡಗೆ ಸುತ್ತುವ ಉಯ್ಯಾಲೆ ಸುೞಿಗಾಳಿಯ ತೂಲದಂತೆ ಜಕ್ಕಂದೊೞಿದಂತೆಱಾಟಣದ ಗುಂಡಿಗೆಯಂತೆ: **ಚಂದ್ರಪ್ರಪು,** ೧೩. ೯೦)

**ಜಕ್ಕಂದೊೞಿಲಿ –** ಕೋಣ (ಹರಿ ಜಕ್ಕಂದೊೞಿಲಿಯಂ ಅನುಕರಿಸಿರ್ದಂ ಬಹಳ ಬಾಹುಚಾಳನ ಗತಿಯೊಳ್: **ನೇಮಿನಾಪು,** ೮. ೧೧೬)

**ಜಕ್ಕವಕ್ಕಿ –** ಚಕ್ರವಾಕ ಪಕ್ಷಿ (ಬನಮಂ ಕೋಗಿಲೆ ಜಕ್ಕವಕ್ಕಿ ಪಗಲಂ ಪೂಗೊಂಚಲಂ ತುಂಬಿ ಚಂದ್ರನನಂಭೋನಿಧಿ: **ಆದಿಪು,** ೧೨. ೩೧)

**ಜಕ್ಕಿ –** ಯಕ್ಷಿ (ಜಕ್ಕಿಯರೂೞಿವೆ ಕೂಟದೇೞ್ಗಿಯೊಳ್ ಸುರುಕೆನಬಾರದೆಂಬ ಬೆಲೆವೆಣ್ಗಳ ಕೂಟಮಂ ಇಕ್ಕು ಕಿಚ್ಚಿನೊಳ್: **ಅನಂತಪು,** ೮. ೫೭)

**ಜಕ್ಕುಗೊಳ್ –** ಚಿವುಟು, ಉಗುರ ಗುರುತು ಹೊಂದು (ಮರೆದೊಱಗಿದ ಎಡ್ಡ ಮಿಂಡಿಯರ ಮೇಲುದಂ ಸೆಳೆದು ಕುಸಿದು ಕೆಳಕ್ಕೆ ಎೞೆದು ಜಕ್ಕುಗೊಂಡು ತಕ್ಕೆಗೆ ತೋರವಾದ ಪೇರುರದ ಮೊಲೆಗಳೊಳಪೊಕ್ಕು: **ಲೀಲಾವತಿ,** ೩. ೨೦ ವ)

**ಜಕ್ಕುಲಿಸು –** ಮೋಹಗೊಳಿಸು (ಮುರಿದು ಸುತ್ತಿದ ಚಂಪಕಮಾಲೆ ಕಣ್ಗಳಂ ಜಕ್ಕುಲಿಸಿತ್ತು: **ನೇಮಿನಾಪು,** ೩. ೯೯); ಆವರಿಸು, ವ್ಯಾಪಿಸು (ಆಕೆಗಳ ಕಱಂಗಿದ ಕುಚ ಚೂಚುಕಂಗಳಿಂದೆಸೆದು ತೋಳ ಮೊದಲಿಂ ಜಕ್ಕುಲಿಸುವ ಪೆರ್ಮೊಲೆ: **ಪಂಪರಾ,** ೩. ೧೩೩ ವ); ಕಚಗುಳಿಯಿಡು; ಅಲ್ಲಾಡು (ಎತ್ತಿದ ಪೞಿಯಿಗೆ ಜಕ್ಕುಲಿಸುತ್ತಿರೆ ನಕ್ಕಪುದು ಗಗನಂ: **ಆಚವರ್ಧ,** ೮. ೩)

**ಜಗ –** ಜಗತ್ತು (ಜಗಮಂ ಮಾಡಿದ ಪದ್ಮಜಂ: **ಪಂಪಭಾ,** ೪. ೭೫)

**ಜಗಚ್ಚಕ್ರ –** ಭೂಮಂಡಲ (ಚಕ್ರಿಗೆ ಸುತ್ತಾಕ್ರಾಂತ ಸಮಸ್ತ ಜಗಚ್ಚಕ್ರಂ: **ಕಾದಂಬ,** ೧. ೯)

**ಜಗಜ್ಜನ –** ಜಗತ್ತಿನ ಜನ (ನೇತ್ರಾನಂದಕರಂ ಈ ಜಗಜ್ಜನಚೂಡಾಮಣಿ: **ಮಲ್ಲಿನಾಪು,** ೧೧. ೯೩)

**ಜಗಜ್ಜನಕ –** ಲೋಕದ ತಂದೆ ಜಗಜ್ಜನಕನೆಂಬುದು ಮೇದಿನಿ ಶಾಂತಿವರ್ಮನಂ: **ಪುಷ್ಪದಂಪು,** ೧. ೭೫)

**ಜಗಜ್ಜೀವನ –** ಜಗತ್ತನ್ನು ಬದುಕಿಸುವ (ನದನದೀಕುಳದೊಳ್ ಪರಿವರ್ಧಿಕುಂ ಜಗಜ್ಜೀವನಜೀವನಂ: **ಜಗನ್ನಾವಿ,** ೪. ೭೭)

**ಜಗಜ್ಜೈತ್ರ –** ಜಗತ್ತನ್ನು ಗೆಲ್ಲುವ (ಮಧುಮಿತ್ರ ಜಗಜ್ಜೈತ್ರಾಯುಧಗೃಹಮೆನೆ ವಿಕಚ ವಿಚಕಿಳಂ ಸೊಗಯಿಸುಗುಂ: **ಚಂದ್ರಪ್ರಪು,** ೭. ೫೦)

**ಜಗತಿ –** ಜಗಲಿ (ಎಸೆವ ಕಪ್ಪುರದ ಱೊಬ್ಬಿನುರ್ವಿದ ಜಗತಿಯೊಳ್ ಅಸುಕೆಯ ಪೊಸದಳಿರ ಪಾಸಿನೊಳ್: **ಕರ್ಣನೇಮಿ,** ೧೩. ೨೦ ವ); ಜಗತ್ತು (ವಸುಂಧರೆ ಕು ಮಹಿ ಜಗತಿ ವಿಶ್ವಂಭರೆ: **ಅಭಿಧಾವ,** ೧. ೫. ೧)

**ಜಗತೀಜನ –** ಜಗತ್ತಿನ ಜನ (ಕಡೆಯೊಳ್ ತೀರ್ಥಂಕರಂ.. ..ಉರ್ವಿಗಿೞಿತಂದಂ ಬಂಧುರಾನಂದಮಂ ಪಡೆಯುತ್ತುಂ ಜಗತೀಜನಕ್ಕೆ: **ಶಾಂತೀಶ್ವಪು,** ೨. ೧೨೦)

**ಜಗತೀತಲ –** ಭೂಮಿತಳ (ಜಹತೀತಳಮಂ ಪ್ರಭು ಮೇಘರಥಂಗಿತ್ತಂ: **ಶಾಂತಿಪು,** ೯. ೬೨)

**ಜಗತೀಧರ –** ಬೆಟ್ಟ [ಕೈಲಾಸ] (ಕಪಾಲಶೂಲರಂಜನಕರ ದೇವ ದೇವ ಜಗತೀಧರಮಂದಿರ ಮಂಗಳಾಕರಾ: **ರಾಜಶೇವಿ,** ೧. ೫೯)

**ಜಗತೀನಾಥ –** ರಾಜ (ಆ ನಾಗಪಾಶಮಂ ಜಗತೀನಾಥಂ ಪೊಸೆಯೆ ಕಟ್ಟುಗಳ್ ಬಿಟ್ಟಿರೆ ಪೋಲ್ತೇನೆಸೆದುದೊ ನೃಪಸುತನ ಅಪದಾನದ ಶಾಸನಕೆ ಲೆಕ್ಕಮಿಟ್ಟಕ್ಕರಮಂ: **ಶಾಂತಿಪು,** ೮. ೫೪)

**ಜಗತೀಪಾಲ –** ರಾಜ (ಜಗತೀಪಾಲರನೊತ್ತಿಕೊಂಡು ಪಿತೃಗಟ್ಟುತ್ತುಂ: **ಪುಷ್ಪದಂಪು,** ೫. ೫೭)

**ಜಗತ್ತ್ರಯ –** ಮೂರು ಲೋಕಗಳು: ಸ್ವರ್ಗ, ಮರ್ತ್ಯ, ಪಾತಾಳ ಸಿಂಹಾಸನಮಸ್ತಕದೊಳಿರ್ದ ಜಗತ್ತ್ರಿತಯತಿಳಕನ ಪಾದಪದ್ಮಂಗಳ್ಗೆ .. .. ವಿಹಿತೋಪಹಾರನಾಗಿ: **ಆದಿಪು,** ೧೩. ೮೩ ವ)

**ಜಗತ್ತ್ರಯಪತಿ** – ಮೂರು ಲೋಕಗಳ ಒಡೆಯ (ಕಳೆದ ಭವದೊಳ್ ವಿರಾಮಂಗಳೊಳೊದವಿದ ಮೋಹದಿಂ ವಿಚಾರಕ್ಕೆ ಪವಣ್ಗಳೆದ ಗುಣದಿಂ ಕರಂ ಪಳುಗಳಿದುದು ದಯೆ ತಮ್ಮನೊಳ್ ಜಗತ್ತ್ರಯಪತಿಯಾ: **ಶಾಂತಿಪು,** ೧೦. ೯೯)

**ಜಗತ್ತ್ರಿತಯ** – ಜಗತ್ತ್ರಯ (ಚಾಗದ ಕಂಬಮಂ ನಿಜೆಸಿ ಬೀರದ ಶಾಸನಮಂ ನೆಗಟ್ಟೆ ಕೋಳ್ವೋಗದ ಮಂಡಲಂಗಳನೆ ಕೊಂಡು ಜಗತ್ತ್ರಿತಯಂಗಳೊಳ್ ಜಸಕ್ಕೆ ಆಗರಮಾದ ಬದ್ದೆಗನಿಂ ಆ ನರಸಿಂಹನಿಂ ಅತ್ತ ನಾಲ್ವರಲ್ ಮೇಗು ಮೊದಲ್ದ ಚಾಗದೊಳಂ ಒಂದಿದ ಬೀರದೊಳಂ ಗುಣಾರ್ಣವಂ: **ಪಂಪಭಾ,** ೧. ೫೦)

**ಜಗತ್ಪರ್ಯಷ್ಟಿ** – ಲೋಕಪೂಜೆ (ಜಗತ್ಪರ್ಯಷ್ಟಿಗೆ ನೆಲೆಯಾದರ್ ಅಷ್ಟಮಾವನಿನಿಳಯರ್: **ಶಾಂತಿಪು,** ೧೨. ೯)

**ಜಗತ್ಪ್ರಕಟ** – ಜಗತ್ತಿನಲ್ಲಿ ಪ್ರಸಿದ್ಧವಾದ (ಜಗತ್ಪ್ರಕಟ ಪ್ಲವಸಂವತ್ಸರದ ಕಾರ್ತಿಕಂ ಮುದಮನೀಯೆ: **ಆದಿಪು,** ೧೬. ೭೩)

**ಜಗತ್ಪ್ರತೀತ** – ಜಗತ್ಪ್ರಸಿದ್ಧ (ಲಲಿತವಾಗ್ವಿಳಾಸಮೆ ದಲಲಂಕೃತಿಯವೊಎಸೆದಪುದು ಜಗತ್ಪ್ರತೀತನೀತನೆ ಸರಸ್ವತೀಮಣಿಹಾರಂ: **ಆದಿಪು,** ೧. ೨೮)

**ಜಗನ್ಮಂಡನ** – ಜಗತ್ತಿಗೆ ಆಭರಣವಾಗಿರುವವನು (ಕನತ್ಕನಕರಂಜಿತಂ ನಿಜಕರಂ ಜಗನ್ಮಂಡನಂ ವನೇಜಸಖಂ ಏಕಚಕ್ರರಥನಸ್ತದೋಷೋದಯಂ ಮನೋಹರತರಪ್ರಭಂ ಸುರವರಂ ತ್ರಿಲೋಕಸ್ತುತಂ ಮುನೀಶ್ವರನ ಮುಂದೆ ನಿಂದನನಘಂ ದಿನಾಧೀಶ್ವರಂ: **ಪಂಚತಂತ್ರ,** ೩೬೨)

**ಜಗಲಿ** – ಕಟ್ಟೆ (ವಜ್ರಂಗಳ ಕಾಂತಿಳಡರೆ ಪರ್ವಿ ಪಚ್ಚೆಯ ಜಗಲಿಯೊಳೊಪ್ಪಿದುವು ರಂಗವಲ್ಲಿಯಿಕ್ಕಿದವೊಲ್: **ಮಲ್ಲಿನಾಪು,** ೩. ೭೭)

**ಜಗಲಿಸು** – ಜಗಜಗಿಸು (ಜಗಲಿಸುತ್ತುಮಿರ್ದ ಕಾಂಚನರತ್ನ ಸಂಚಯಮಮಂ ಕಂಡು ಕೊಂಡು ಶೌಂಡಿಕಂ ಧನಶೌಂಡನಾಗಿ ಪೋದಂ: **ನೇಮಿನಾಪು,** ೪. ೧೧೪ ವ)

**ಜಗಳೆ** – ಕಂಸಾಳೆ, ಜಾಗಟೆ (ಜಿನಗೃಹದೊಳೊಗೆವ ಜಗಳೆಯ ದನಿಯಂ ಕಾರ್ಗಾಲ ಮುಗಿಲ ಮೊಟಗಿನ ದನಿಗೆತ್ತು ಅನುರಾಗದಿಂ ಒಡರಿಸಿದುವು ಮನೆಮನೆದಪ್ಪದೆ ಶಿಖಂಡಿಗಳ್ತಾಂಡವಮಂ: **ಮಲ್ಲಿನಾಪು,** ೭. ೭೨)

**ಜಗಟಿ** – ಕಲಹ (ನುಡಿದ ಜಗಟಿಮದಿನಿಸಾನುಂ ತ್ರಿಪುರಹರನ ಕಿವಿಗೆಯ್ದುವುದುಂ: **ಪಂಪಭಾ,** ೧೨. ೧೪೨)

**ಜಗಟಿಂಬೊಗು** – ಜಗಳ ತೆಗೆ (ಜಗಟಿಂಬೊಕ್ಕವರೊಳ್ ಕೆಲರ್ ಪೆಟಿವರಾಗಿರ್ದರ್: **ನೇಮಿನಾಪು,** ೨. ೮೪)

**ಜಗಟಿಗಂಟಿ** – ಜಗಳ ಮಾಡುವ ಸ್ವಭಾವದವಳು (ಜಗಟಿಗಂಟಿಯಂತೆ ಮಿಡುಮಿಡುಮಿಡುಕಿ: **ಧರ್ಮಾಮೃ,** ೧. ೧೨೯ ವ)

**ಜಗುನೆ** – ಯಮುನಾನದಿ (ದ್ವೈತವನಮಂ ಪೊಱಮಟ್ಟು ಜಗುನೆಯಂ ಪಾಯ್ದು ಮೂಡಮೊಗದ ಪಯಣಂಬೋಗಿ: **ಪಂಪಭಾ,** ೮. ೫೦ ವ)

**ಜಗುಟಿಚ್** – ಜಾರು (ಜಗಟ್ಟು ತೋಱುವ ಪೊಱವಾಱೊಳುಚ್ಚಳಿಪ ತೆಳ್ವದಂ ಇರ್ವರೊಳೊಪ್ಪೆ ನೋಡಿದರ್: **ಕಬ್ಬಿಗಕಾ,** ೨೫೯); ಹೊರಟುಹೋಗು (ನಾಣ್ಚೆ ಜಗುಟ್ಟು ಇರ್ವರುಂ ಅಂದು ಒಳಸಾರ್ದು ಪೋಪುದುಂ: **ಆದಿಪು,** ೩. ೮೯)

**ಜಗುಟ್ಟಿರ್** – ಜಾರಿಹೋಗು (ಅಲಸಿಕೆ ಜಕ್ಕವಕ್ಕಿಗೆ ಜಗುಟ್ಟಿರೆ: **ಚಂದ್ರಪ್ರಪು,** ೮. ೯೭)

**ಜಗ್ಧಿ** – ಊಟ ಮಾಡುವುದು, ಊಟ (ಭಕ್ಷಣ ಅಶನಂ ಜಗ್ಧಿ ಭುಕ್ತಿ: **ಅಭಿಧಾವ,** ೧. ೧೬. ೭)

**ಜಘನ** – ನಿತಂಬ (ಕಾಂಚನಕಾಂಚೀದಾಮಪಾತ್ರಂ ಜಘನಜಗತಿಯೊಳ್ ಶೋಭಿಸಲ್ಕೆ: **ಗದಾಯು,** ೮. ೫೮)

**ಜಘನಸೂತ್ರಿಕೆ** – ಒಡ್ಯಾಣ (ಮೌಕ್ತಿಕದ ಜಘನಸೂತ್ರಿಕೆಯೆಂಬಂತಿರೆ .. .. ಎಸೆದುದು ಮಿಸುಪ ಚಂದ್ರಕಾಂತದ ದುರ್ಗಂ: **ತ್ರಿಷಷ್ಟಿಪು,** ೧೭. ೨೧)

**ಜಘನ್ಯ** – ಹಿಂಬದಿಯ (ಜಂಬೂದ್ವೀಪದ ಹೈಮವತಮೆಂಬ ಜಘನ್ಯಭೋಗಭೂಮಿಯೊಳ್: **ವಡ್ಡಾರಾ,** ಪು. ೧೬೪ ಸಾ. ೫); ಕೀಳಾದ (ದುರ್ಗಂಧರುಂ ನಪುಂಸಕರುಂ ಜಘನ್ಯದಿಂ ದಶಸಹಸ್ರವರುಷಾಯುಷ್ಯಮುಂ: **ಸುಕುಮಾಚ,** ೧೧. ೪೮ ವ)

**ಜಘನ್ಯಪಾತ್ರ** – ನಾಟಕದಲ್ಲಿನ ಕೀಳು ಅಥವಾ ಅಪ್ರಧಾನ ಪಾತ್ರ (ಮುಳ್ಳುರ್ಚೆ ತೆಱೆದು ಪಲ್ಲಂ ಘೊಳ್ಳನೆ ನಗಿಸಿದುದು ಕಟಕಮಂ ಮರ್ಕಟಂ – ಇದು ಜಘನ್ಯಪಾತ್ರ: **ಕಾವ್ಯಾವಲೋ,** ೮೧೩); [ಜೈನ] ಸ್ವೀಕಾರಕ್ಕೆ ಅರ್ಹರಾದವರಲ್ಲಿ ಕನಿಷ್ಠನಾದವನು (ದರ್ಶನವಿಶುದ್ಧನಾಗಿಯುಂ ಶೀಲವ್ರತಭಾವನಾ ರಹಿತನಸಂಯುತಂ ಜಘನ್ಯಪಾತ್ರಂ: **ಆದಿಪು,** ೧೧. ೯ ವ)

**ಜಝಾರೆ** – ಕೊಂಡಾಟದ ಮಾತು (ಝಾರೇ ಜಝಾರೇ ಹಳುರೇ .. .. ಎಂಬುಲಿ ನೆಗೆವಿನೆಗಂ: **ಕಬ್ಬಿಗಕಾ,** ೨೭೯)

**ಜಟಮಟಿಗ** – ಮೋಸಗಾರ (ಪಟವಿದ್ಯೆಯೆತ್ತಲುಂ ಜಟಮಟಿಕರ್ಕಳಂ ತೊಡರೆ ಸುತ್ತಲುಂ: **ಆದಿಪು,** ೩. ೪೫); (ಜಟಮಟಿಗರ ಪೇಟ್ದು ಒದನೆ ದಿಟಮೆಂದು ಅದನೊಲ್ದು ಕೇಳ್ವರ್: **ಸಮಯಪ,** ೧೧. ೧೫೨) ಸಡಗರಪಡು

**ಜಟಮಟಿಸು** – ಮೋಸಗೊಳಿಸು (ಜಟಮಟಿಸಿಕೊಂಡು ನಿಮ್ಮೀ ಘಟಿಯಿಸುವ ಈ ಸಂಧಿ ಕೌರವರ್ಕಳೊಳ್ ಎನ್ನಿಂ ಘಟಿತ ಜರಾಸಂಧ ಉರಸ್ತಟ ಸಂಧಿವೊಲ್ ಒಂದೆ ಪೊಟ್ಟಿಱೊಳ್ ವಿಘಟಿಸದೇ: **ಪಂಪಭಾ,** ೯. ೨೩)

**ಜಟಾಜೂಟ** – ಜಟೆಗಟ್ಟಿದ ಕೂದಲು (ಹರಜಟಾಜೂಟಕ್ಕೆ ಚಂದ್ರಲೇಖೆಯಿರ್ಪಂತೆ ದಿಕ್ಕರಿಕಟತಟಕ್ಕೆ ಮದಲೇಖೆಯಿರ್ಪಂತೆ ಕೈಟಭಾರಾತಿಯ ವಿಶಾಲೋರುಸ್ಥಳಕ್ಕೆ ಕೌಸ್ತುಭಂ ಇರ್ಪಂತೆ ಸೊಗಯಿಸುತಿರ್ದುದು: **ಪಂಪಭಾ,** ೧. ೫೭ ವ)

**ಜಟಾಳಿ** – ಜಟೆಯ ಸಾಲು (ಸರಿಗೆಯೊಳ್ ಸಮೆದ ಅಕ್ಷಮಾಲಿಕೆ ಪೊನ್ನ ಮುಂಜಿ ತೊಳಪ್ಪ ಕಪ್ಪುರದ ಭಸ್ಮರಜಃ ತ್ರಿಪುಂಡ್ರಕಂ ಒಪ್ಪೆ ಪಿಂಗಜಟಾಳಿ ತಾವರೆಯ ಸೂತ್ರದೊಳಾದ ಜನ್ನವಿರಂ ದುಕೂಲದ ಕೋವಣಂ ಕರಂ ಒಡಂಬಡೆ ನೋಟಕರ್ಕಳಂ ಆ ತಪಸ್ವಿ ಮರುಳ್ಚಿದಂ: **ಪಂಪಭಾ,** ೬. ೮)

**ಜಟಿ** – ಜಟೆಯನ್ನು ಹೊಂದಿರುವವನು, ಶಿವ; ಮುನಿ (ಉದ್ಗಾತೃ ಜಟಿಗಳಂ ಋತ್ವಿಜರಂ ವರ ಹೋತೃಗಳಂ: **ಕುಸುಮಾಕಾ,** ೪. ೧೩೦)

**ಜಟಿಕಾವಳಯ** – ಜಟೆಗಳ ಸಮೂಹ (ಕನಕ ಪಿಶಂಗ ತುಂಗ ಜಟಿಕಾವಳಯಂ ಕುಡುಮಿಂಚಿನೋಳಿಯಂ ನೆನೆಯಿಸೆ: **ಪಂಪಭಾ,** ೭. ೫೯)

**ಜಟಿಳ** – ಗಂಟುಗಂಟು, ತೊಡಕು; ಹೆಣೆದುಕೊಂಡಿರುವ (ಎನೆಯೆನೆ ರತ್ನರಶ್ಮಿಜಟಿಳಂ ಮಕುಟಂ ಮಣಿಕುಂಡಳಂ

ಕನತ್ ಕನಕ ಪಿಶಂಗ ದೇಹರುಚಿ .. .. ಇಳಾಮರಂ ಅಂದು ಅಮರೇಂದ್ರರೂಪಮಂ: **ಪಂಪಭಾ,** ೮. ೭)

**ಜಟಿಳಿತ** – ಜಡೆಗಟ್ಟಿದಂತೆ ಗಂಟುಗಂಟಾದ (ದೆಸೆಯೆಲ್ಲಂ ಪಂಚರತ್ನದ್ಯುತಿಜಟಿಳಿತ ನಾನಾವಿಮಾನಂಗಳೊಳ್ ರಂಜಿಸೆ: **ಆದಿಪು,** ೬. ೧೮)

**ಜಟ್ಟಿಗ** – ಶೂರ (ನಿಜಪ್ರತಾಪದಳವಂ ತೋಱಲ್ಕೆ ಮಾಱಾಂಪ ಜಟ್ಟಿಗರಾರಪ್ಪೊಡಂ ಇಲ್ಲದಂದು: **ಆದಿಪು** ನರಸಿಂ, ೧೪. ೫೨)

**ಜಠರ** – ಹೊಟ್ಟೆ (ಬಸಿಱ್ ಉದರಂ ಜಠರಂ ಕುಕ್ಷಿ: **ಅಭಿಧಾವ,** ೧. ೧೨. ೬)

**ಜಠರಾಗ್ನಿ** – ಜೀರ್ಣಮಾಡುವ ಅಗ್ನಿ (ಜಠರಾಗ್ನಿ ನಂದದಂದದಿಂ ಅರ್ಧಾಹಾರಮಂ ಆರೋಗಿಸುವಾಚಾರದಿಂ: **ಸುಕುಮಾಚ,** ೪. ೫)

**ಜಠರಾನಳ** – ಜಠರಾಗ್ನಿ (ಜಠರಾನಳನುರಿವಿನಂ ಅಂತೊರ್ವಂ ಉರಿಯ ಬಣ್ಣದ ಪಾರ್ವಂ: **ಪಂಪಭಾ,** ೫. ೬೯)

**ಜಡ** – ಮೂಢ (ಬಾಲಿಶಂ ಅಜ್ಞಂ ಮೂಢಂ ಜಡಂ: **ಅಭಿಧಾವ,** ೨. ೧. ೭); ಸೋಮಾರಿ (ಅಳಸಂ ಮಂದಂ ಜಡಂ: **ಅಭಿಧಾವ,** ೨. ೧. ೧೧); ನೀರು (ಅಗ್ನಿ .. .. ಜಡಂ .. .. ನೆಲಂ ಎಂಬಿವು ಆಪ್ತಂಗೊಡಲೆನಲಾಗ: **ಸಮಯಪ,** ೮. ೭೭)

**ಜಡಜಜ** – ಬ್ರಹ್ಮ (ಜಡಧಿಯ ರತ್ನಂಗಳ್ ಪೊಂದದೊಡವಿನುಪಾಶ್ರಯದಿನೆಸೆದವೋಲ್: **ಪಂಪರಾ,** ೭. ೫); ದಡ್ಡನ ಮಗ (ಅಜನಂತಿರೆ ಜಡಜಜನೆನಿಸದೆ ತದ್ಗುರುಕರಸಂಜಾತನೆನಿಸಿದನೀತಂ: **ರಾಜಶೇವಿ,** ೧. ೬೪)

**ಜಡಜನ** – ಅಲಸಿಗರಾದ ಜನ (ಜಡಜನಮುಮೆಲ್ಲಂ ಓದಂ ತಡೆಯದೆ ಕಲ್ಗುಂ ಗುರೂಪದೇಶಕ್ರಮದಿಂ: **ಕವಿರಾಮಾ,** ೧. ೧೦)

**ಜಡಧರ** – ನೀರನ್ನು ಧರಿಸಿರುವುದು, ಮೋಡ (ನಿಡುಗಳಿಲೆಯ ಮೊನೆಯೊರ್ಚಿದ ಜಡಧರಮೆಸೆದುದು: **ಶಬರಶಂ,** ೩. ೩೭)

**ಜಡಧಿ** – ಸಮುದ್ರ (ಆ ಜಡಧಿಸಂಗತಿಯಿಂ ಜಡಬುದ್ಧಿ ಬುದ್ಧಿಯಂ ತೊಲಗಿಸಿತಕ್ಕುಂ ಅಲ್ಲದೊಡೆ ನೀನಿನಿತಂ ನುಡಿವೈ ಪಳಾಳಮಂ: **ಪಂಪಭಾ,** ೯. ೪೪)

**ಜಡಬುದ್ಧಿ** – ಮಂದಬುದ್ಧಿ (ಆ ಜಡಧಿಸಂಗತಿಯಿಂ ಜಡಬುದ್ಧಿ ಬುದ್ಧಿಯಂ ತೊಲಗಿಸಿತಕ್ಕುಂ ಅಲ್ಲದೊಡೆ ನೀನಿನಿತಂ ನುಡಿವೈ ಪಳಾಳಮಂ: **ಪಂಪಭಾ,** ೯. ೪೪)

**ಜಡರಾಶೀಂದ್ರ** – ವರುಣ ಕಟ್ಟುವೆಂ ಜಡರಾಶೀಂದ್ರನೆಯ್ದುವೆಂ ಪವನನಂ ಸರ್ವಸ್ವಮಂ ಕೊಂಡುಕೂಡಿಪೆಂ ವಿತ್ತಪನಂ: **ಜಗನ್ನಾವಿ,** ೩. ೨೦)

**ಜಡವಾದ** – ನಿರೀಶ್ವರವಾದ, ಜಗತ್ತು ಪಂಚಭೂತಗಳಿಂದ ಆಗಿದೆ ಎಂಬ ವಾದ (ಮಾಂಸನಯನಾವಿಷಯಮೆಲ್ಲಂ ಅಪ್ರತ್ಯಕ್ಷಮೆಂಬೀ ಜಡವಾದಮಂ ಕಂಡು: **ಶಾಂತಿಪು,** ೫. ೧೪೧ ವ)

**ಜಡಾಕರ** – ಸಮುದ್ರ,ರೋಗದ ಆಗರ (ಅಂಗೀಕೃತ ಕುಟಜಶೋಭಾಪ್ರಭವಮಾಗಿಯುಂ ಸಂಶೋಷಿತ ಜಡಾಕರಮಲ್ತು: **ಚಂದ್ರಪ್ರಪು,** ೪. ೪೨ ವ)

**ಜಡಾಕರತ್ವ** – ನೀರಿಗೆ ಆಶ್ರಯವಾಗಿರುವುದು ಹಾಗೂ ಮೂರ್ಖರಿಗೆ ಆಶ್ರಯ ನೀಡುವುದು ವಿಶಿಷ್ಟ ಪಕ್ಷ ಭೂಭೃನ್ನಿಕರಮಾಗಿಯುಂ ಜಡಾಕರತ್ವೋಪೇತಮಲ್ತು: **ಚಂದ್ರಪ್ರಪು,** ೧. ೧೩೬)

**ಜಡಾಶಯ** – ಜಲಾಶಯ (ಕಮಳಿನೀ ಲಕ್ಷ್ಮಿಯಂ ಜಡಾಶಯ ನಿವಾಸಿಯೆನಿಸಿಯುಂ ವಸಂತಲಕ್ಷ್ಮಿಯಂ ಮದಾಳಿಮಲಿನೆಯೆನಿಸಿಯುಂ .. .. ಆಕೆ: **ಮಲ್ಲಿನಾಪು,** ೩. ೩೯ ವ)

**ಜಡಿ** – ಗದರಿಸು (ಅಡಿಗೆಱಗಿಂ ಎಂದು ಭರತಂ ಜಡಿವಂ ನಿನಗೆಱಗಿ ಪೆಱರ್ಗೆಱಗುವವೇ: **ಆದಿಪು,** ೧೪. ೩೬); ಹೊಡೆ; ಸೋನೆಮಳೆ; ಹಕ್ಕಿ ಕೂಜಿಸು (ಕಳಮೆವನಕ್ಕಾಗಿ ತೆಱಂಬೊಳೆವ ಬಕಂ ಸುಟಿವ ಸೋಗೆ ಜಡಿವರಗಿಳಿಗಳ್ ವಿಳಸಿತ ರವದಿಂ ಪಾಂಥ ಪ್ರಬಲಮನೋರಥ ವಿಘಾತಮಂ ಮಾಡುತ್ತುಂ: **ಸುಕುಮಾಚ,** ೯. ೫೩)

**ಜಡಿಪ** – ಹಕ್ಕಿಗಳ ಕೂಜನ (ಮುಳಿಸಿಂ ಗಜಱೆ ಗರ್ಜಿಸುವಂತಿರ್ದ ಕೋಗಿಲೆಗಳ ಜಡಿಪಕ್ಕೆ ಬೆದಱುವಳ್: **ಕಾದಂಬ,** ೮. ೪೬ ವ)

**ಜಡಿಪು** – ಕೂಜನ (ಮಲೆಯೆಲರಲೆಪುಂ ಮನಸಿಜನಲೆಪುಂ ಕೋಗಿಲೆಯ ಜಡಿಪುಂ ಒಡನೆಗಟ್ಟೆನೆಗಮೆನಲ್ ಅಜಡಿಯಾದಂತಿರ್ಪುವು ಅಗಲದಾ ವನಲತೆಯ ಜೊಂಪದೊಳ್ ದಂಪತಿಗಳ್: **ಅಜಿತಪು,** ೨. ೧೪); ಝಳಪಿಸು (ನೃಪನ ಜಡಿಪದೆ ನಡುಗುವಳ್ ಅಸಿತಕಾಂತೆ ಕೂರ್ಪಿದೇಂ ಕೈವಸಮೋ: **ಪುಷ್ಪದಂಪು,** ೩. ೧೬)

**ಜಡೆಗಟ್ಟು** – ಕೂದಲು ಗಂಟುಗಂಟಾಗು (ಕುಚದ್ವಯಂ ಕೊರಗಿದತ್ತು ಕಚಂ ಜಡೆಗಟ್ಟಿತು: **ಗಿರಿಜಾಕ,** ೧೦. ೧೫)

**ಜತಿ** – [ಯತಿ] ಮುನಿ (ಹರಿಸದೆ ಸಗ್ಗದ ಜತಿಗಳ್ ನೆರೆದಂತೆರಡುಂ ಕೆಲಂಗಳೊಳ್ ತರದಿಂ ಕುಳ್ಳಿರೆ ಕುಳ್ಳಿರ್ದಂ ನಡೆನೋಟ್ಟರ ಕಣ್ಗಳ ಹಬ್ಬಮೆಂಬಿನಂ ಕಱಿಗೊರಲಂ: **ಕಬ್ಬಿಗಕಾ,** ೧೩೧); ಯತಿ, ಪದ್ಯರಚನೆಯಲ್ಲಿನ ಉಸಿರ್ದಾಣ (ಕರಣಾಂಗಹಾರಮೃದುಪದ ಪರಿಕ್ರಮಂಗಳ ಬೆಡಂಗುಗಳ ಜತಿಯೊಳ್ ಅಳಂಕರಿಸಿದುದೆಂಬಿನಂ: **ಆದಿಪು,** ೭. ೧೮)

**ಜತಿಮೆಟ್ಟು** – ಲಯಾನುಸಾರಿ ಗತಿ (ಗೋಪಿ ಡಕ್ಕೆಯ ಲಯಕ್ಕೆ ಪೆಱಲ್ ಜತಿಮೆಟ್ಟುತಾಡಿದಳ್: **ಜಗನ್ನಾವಿ,** ೫. ೧೫)

**ಜತು** – ಅರಗು (ಚಮರಂ ಜತು ಪೇರುಡು ಪೀಲಿಯೆಂಬಿವಂ ತುಂಬಿದ ಕಂಬಿಯಂ ತಳೆದದೇಂ ತಳರ್ದತ್ತೊ ಪುಳಿಂಸಂಕುಳಂ: **ರಾಜಶೇವಿ,** ೫. ೧೧೪)

**ಜತುಗೃಹ** – ಅರಗಿನ ಮನೆ (ಕಾಯ್ವ ಅಟಲ್ ಉಱಿ ಜತುಗೃಹದೊಳಗೆ ಅಯ್ವರುಮಂ ಮಂತ್ರಬಲದೆ ಸುಟ್ಟೊಡಂ ಅವರಂ ದೆಯ್ವಬಲಮೊಂದೆ ಕಾದುದು ದೆಯ್ವಮಂ ಆರಯ್ಯೆ ಮೀಱೆ ಬಾಟಿಲ್ ನೆಱೆವರ್: **ಪಂಪಭಾ,** ೪. ೩)

**ಜತುಗೇಹ** – ಜತುಗೃಹ (ಜತುಗೇಹಾನಲದಾಹದಿಂ ವಿಷವಿಶೇಷಾಲಿಪ್ತಗುಪ್ತಾನ್ನದಿಂ ಕೃತಕದ್ಯೂತವಿನೋದದಿಂ ದ್ರುಪದಜಾ ಕೇಶಾಂಬರ ಆಕೃಷ್ಟಿಯಿಂ ಧೃತರಾಷ್ಟ್ರಾತ್ಮಜ ಪಾಂಡುರಾಜಸುತರಂ ಮುನ್ನಂ ಕೊಲಲ್ಕೊಡ್ಡಿದಯ್: **ಗದಾಯು,** ೭. ೪೧)

**ಜತ್ತಕ** – ಮೋಸ, ವಂಚನೆ (ಈ ದೂದವಿ ಜತ್ತಕಮಂ ನುಡಿದು ಜವಕಮಿಲ್ಲದೆ ಕೂಡಿದಳೆಂದು ನುಡಿಯುತ್ತುಂ ಪೋಗೆ: **ಅನಂತಪು,** ೮. ೨೯ ವ)

**ಜತ್ತಕುಱ** – ವಿನೋದ (ಕಾದಿದ ಕಾಳೆಗಂ ಜವನ ಜತ್ತಕುಱಕ್ಕೆ ಸಮಾನಮಾದುದು: **ಅನಂತಪು,** ೧೧. ೭೮)

**ಜತ್ತಕುಱು** – ವಿನೋದ (ಕೊಲ್ವುದಹಿ ತಪ್ಪಿತ್ತೆನೆ ಪೊಡೆವುದು ಬಱಸಿಡಿಲೆತ್ತಿದು ಮಾನವರ್ಗೆ ಜವನ ಜತ್ತಕುಱಲ್ತೇ: **ಚಂದ್ರಪ್ರಪು,** ೯. ೧೩)

**ಜತ್ತವಟ್ಟ –** ವರ್ತುಲವಾದ ಬೊಂಬೆಗಳನ್ನು ಕುಣಿಸುವ ಹಲಗೆಯ ಯಂತ್ರ (ಶಕ್ರನೃತ್ಯದೊಳೊಡಂಬಡೆ ನರ್ತಿಸುವಲ್ಲಿ ಜತ್ತವಟ್ಟದ ಮಣೆಯಂತದೇಂ ಪದುಳಮಾದುದೋ ದಿವ್ಯವಧೂ ಕದಂಬಕಂ: **ಆದಿಪು,** ೭. ೧೨೫)

**ಜತ್ತಿಸು –** ಒಲಿಸಿಕೊ, ಸ್ನೇಹ ಮಡು (ಸಕಳಾಳಾಪಂಗಳಿಂ ಜತ್ತಿಸುವ ಬಗೆ ಗೆಲಲ್ಕೆಂದು ಕೂರ್ತಿಚ್ಚೆ ಬೆಚ್ಚಂತಿರೆ: **ಸುಕುಮಾಚ,** ೯. ೬೩)

**ಜತ್ತು –** ಸರಸವಾಗಿ ಮಾತನಾಡು (ಮೇಳಿಸುವ ಜತ್ತುವ ಕಾಲ್ವಿಡಿವ ಇಂಬುಕೆಯ್ವ ಮಾಣ್ದಿರದೆ ಮಗುಟ್ವಿ ಕಾತರಿಪ ಕೂಡುವ .. .. ತೊಡರ್ಪಿನೊಳ್ ಪೋದುವು ಪೊತ್ತುಗಳ್: **ವರ್ಧಮಾಪು,** ೬. ೫೧)

**ಜತ್ತುಳ –** ನೊರೆ (ತನುಕಾಂತಿ ವಾರಿ ವಿಲಸತ್ ಪೀತಾಂಬರಂ ವಾರಿಜೋಜ್ವಳತೇಜಂ ನಗೆ ಜತ್ತುಳಂ .. .. ವಿಷ್ಣುವೆನೆ ಕಣ್ಗೊಪ್ಪಿತ್ತು ನೀರಾಕರಂ: **ಉದ್ಭಟಕಾ,** ೧. ೩೮)

**ಜನ –** ಜನಗಳ ಸಮುದಾಯ, ಲೋಕ, ಜಗತ್ತು (ಲೋಕಂ ಜನಮುಂ ಜಗಮುಂ: **ಅಭಿಧಾವ,** ೩. ೧. ೨೦)

**ಜನಕ –** ಹುಟ್ಟಿಸುವವನು, (ಜನಕಂ ಪಿತೃವಪ್ಪ ತಂದೆ: **ಅಭಿಧಾವ,** ೧. ೧೧. ೧೭)

**ಜನಜನಿತ –** ಜನರಲ್ಲಿ ಹರಡಿರುವ, ಪ್ರಸಿದ್ಧವಾದ (ಲೋಕಗುರು ಶಂಖಚಕ್ರಗದಾಕರಂ ಅತಿಶಯ ಚತುರ್ಭುಜಂ ಜನಜನಿತ ವ್ಯಾಕುಳದೆ ಬಂದಂ: **ಪಂಪಭಾ,** ೯. ೩೦)

**ಜನತೆ –** ಜನಸಮುದಾಯ (ಪರಮಬ್ರಹ್ಮಶರೀರಮುಷ್ಟಿ ಜನತಾ ಅಂತರ್ದೃಷ್ಟಿ .. .. ನವೀನಸೃಷ್ಟಿ .. .. ವಿದ್ಯಾನಟೀ ನಟಕಂ ನಲಿಗೆ ಮತ್ಕಾವ್ಯಸ್ಥಲೀರಂಗದೊಳ್: **ಪಂಪರಾ,** ೧. ೬)

**ಜನನ –** ಹುಟ್ಟು (ಜನನಂ ಜನ್ಮಂ ಪ್ರಸವಂ: **ಅಭಿಧಾವ,** ೧. ೩. ೩); ಉತ್ಪತ್ತಿ (ಜನನಂ ಪ್ರಾದುರ್ಭವನಂ: **ಅಭಿಧಾವ,** ೧. ೧೧. ೧೫); ವಂಶ (ಜನನಂ ಅನ್ವವಾಯಂ ಕುಲಂ: **ಅಭಿಧಾವ,** ೧. ೧೧. ೨೯)

**ಜನನಾಥ –** ರಾಜ (ತೂಗಿ ತಲೆಯಂ ಜನನಾಥಂ ವಿಸ್ಮಯಸ್ಮಿತಂಬೆರಸು: **ಆದಿಪು,** ೪. ೭೦)

**ಜನನೀಚರ –** [ಜೈನ] ಹಿಂದಿನ ಜನ್ಮದಲ್ಲಿ ತಾಯಿಯಾಗಿದ್ದ (ಇನಗಿನಿವಿರಿದು ಸುಖಂ ಮತ್ ಜನನೀಚರ ದಿವಿಜನಿಂದಮಾಯ್ತು: **ಆದಿಪು,** ೩. ೫೮)

**ಜನನುತ –** ಜನರಿಂದ ಹೊಗಳಲ್ಪಟ್ಟ (ನಿನ್ನ ಜನ್ಮದಿಂ ಜನನುತರಾದೆವು ಅಮಳಮೌಕ್ತಿಕರತ್ನಕೆ ಜನ್ಮಭೂಮಿಯಾದನುಪಮ ಶಕ್ತಿಸಂಪುಟದವೋಲ್: **ಪುಷ್ಪದಂಪು,** ೧೨. ೯೨)

**ಜನನೋತ್ಸವ –** ಮಗು ಹುಟ್ಟಿದ ಸಂಭ್ರಮ (ಮಂದಿಗೆ ಎರೆವರ್ಥಮಂ ಆ ಮಂದಾರಂ ಕೆಯ್ವಂದವೊಲೆಂದಿತ್ತೆಸಗುವನೊ ನೃಪತಿ ಜನನೋತ್ಸವಮಂ: **ಪುಷ್ಪದಂಪು,** ೩. ೯೦)

**ಜನಪ –** ರಾಜ (ಜನಪನ ಕಾದು ರಕ್ಷಿಸುವ ನೀತಿ .. .. ಎಂ ಪಿರಿದೊ: **ಅನಂತಪು,** ೧. ೮೩)

**ಜನಪತಿ –** ರಾಜ (ಜನಪತಿ ಬೞಿಯಂ ಸಂಭಿನ್ನನೆಂಬ ನೈಮಿತ್ತಿಕಂಗೆ ಬೞಿಯಟ್ಟಿ ಚಿರಂತನರಿಂ ದೃಷ್ಟ ಪರಂಪರ ವಿನೂತ ವಿದ್ಯಾವಿಶೇಷವಿದರಿಂ ಪೇೞಿಂ: **ಶಾಂತಿಪು,** ೫. ೨೦)

**ಜನಪದ –** ಜನಸಮುದಾಯ (ನಾಡದಾ ಕನ್ನಡದೊಳ್ ಭಾವಿಸಿದ ಜನಪದಂ ವಸುಧಾವಳಯವಿಲೀನ ವಿಶದವಿಷಯವಿಶೇಷಂ; **ಕವಿರಾಮಾ,** ೧. ೩೬)

**ಜನಪದಸಮಭಿಜಾತ –** ದೇಶ ಬಲ್ಲವನು (ಆತಂ ಜನಪದಸಮಭಿಜಾತನುಂ ಅನ್ವಯಾಗತನುಂ ಅಭಿರೂಪನುಂ ಪ್ರತ್ಯುತ್ಪನ್ನಮತಿಪ್ರತಿಭನುಂ: **ಆದಿಪು,** ೧೪. ೪೩ ವ)

**ಜನವಡೆ –** ಜನರ ಗುಂಪು (ಈ ಜನವಡೆಯೊಳಾರಾನುಂ ಈ ಬಿಲ್ಲನೇಱಿಸಲಾರ್ಪೊಡೆ ಬನ್ನಿಂ: **ಪಂಪಭಾ,** ೩. ೬೦ ವ)

**ಜನವಶ್ಯಚೂರ್ಣ –** ಜನರನ್ನು ವಶೀಕರಣಗೊಳಿಸುವ ಪುಡಿ (ಕಂತುನಿರ್ಮಿತ ಜನವಶ್ಯಚೂರ್ಣಮೆನೆ ಪಾಂಸುಗಳಂ ಕೆದಱುತ್ತೆ .. .. ಅರಲ್ದುದು ಕೇದಗೆ: **ಮಲ್ಲಿನಾಪು,** ೮. ೫೭)

**ಜನವಾದ –** ಕಿಂವದಂತಿ, ವಾರ್ತೆ (ಜನವಾದಂ ತಾಮ ಕಿಂವದಂತಿ ವಾರ್ತೆಯದಕ್ಕುಂ: **ಅಭಿಧಾವ,** ೧. ೧೩. ೩೨)

**ಜನಸಂಕೀರ್ಣ –** ಜನಗಳ ಗುಂಪು (ಜನಸಂಕೀರ್ಣದ ನಡುವೆ ನಾಲ್ಕು ಪೊಟ್ಟಳಿಗೆಯನೀಡಾಡಿದೊಡೆ: **ವಡ್ಡಾರಾ,** ಪು. ೧೫. ೬)

**ಜನಸಂಮರ್ದ –** ಜನಸಮೂಹ (ಜನಸಮಮರ್ದೋತ್ಥ ಕೋಳಾಹಳ ಕುಪಿತ .. .. ಕುಮಾರಂ: **ಚಂದ್ರಪ್ರಪು,** ೬. ೯೩)

**ಜನಸಂಮೋಹನ –** ಜನರನ್ನು ಮರುಳುಗೊಳಿಸುವ ಜನಸಂಮೋಹನವಿದ್ಯೆ ತನ್ನ ಮಧುವಿಂ ಪುಟ್ಟಿತ್ತು: **ಮಲ್ಲಿನಾಪು,** ೬. ೩೭)

**ಜನಾಂತ –** ನಾಡು, ದೇಶ (ಜನಾಂತದ ವಿಪುಳ ನಗರಾಧಿಪತಿ ಜಯವರ್ಮನೆಂಬೊಂಜನನಾಥಂ: **ಚಂದ್ರಪ್ರಪು,** ೬. ೧೧ ವ)

**ಜನಾನಂದನ –** ಜನರಿಗೆ ಸಂತೋಷ ತರುವವನು (ತಂದಿರಿಸಿದ ಜೀವರಾಶಿಯಂ ಬಿಡಿಸಿ ಜನಾನಂದನರಂ ತನ್ನನುಜೆಯನಂದನರಂ ಮಾರಿದತ್ತ ವಿಭು ಲಾಳಿಸಿದಂ: **ಯಶೋಧಚ,** ೪. ೭೪)

**ಜನಾಪವಾದ–** ಜನರು ಹೊರೆಸುವ ಅಪವಾದ (ಜನಾಪವಾದಮಂ ಪೆಱಗಿಕ್ಕಿ ಕುಲೋದ್ಭೂತರಂ ತತ್ತ್ವವೇದಿಗಳುಂ ಮನೆವಾೞಿನಾಸೆವಡಲಾಗದು: **ಶಾಂತಿಪು,** ೪. ೮೨ ವ)

**ಜನಾರ್ದನ –** ಕೃಷ್ಣ (ಮುಂದೆ ನಿಂದಿರ್ದ ಜನಾರ್ದನಂಗೆ ಬದ್ಧಾಂಜಲಿಯಾಗಿ: **ಜಗನ್ನಾವಿ,** ೩. ೪ ವ); [ಜೈನ] ವಾಸುದೇವ, ಲಕ್ಷ್ಮಣ ಧನುವನೆತ್ತಿದಂ ಏಱಿಸಿದಂ ಜನಾರ್ದನಂ: **ಪಂಪರಾ,** ೫. ೧೦೦)

**ಜನಿಷ್ಯಮಾಣ –** ಹುಟ್ಟಲಿರುವ (ಜನಿಷ್ಯಮಾಣ ವೃಷಭಜಿನಾವತರಣ ಮಂಗಳನಿಹಿತ ಕಳಶದರ್ಪಣದಂತೆ: **ಆದಿಪು,** ೬.. ೧೦೬ ವ)

**ಜನೇಶ –** ರಾಜ (ಜನೇಶನಿಂತೇಕೆ ಕೞಿದು ಪೋದನೊ ಪೇೞಿಂ: **ಕವಿರಾಮಾ,** ೨. ೩೩)

**ಜನೇಶ್ವರ –** ರಾಜ (ಜಯವರ್ಮ ಜನೇಶ್ವರನಲ್ಲಿಗೆ .. .. ಉದ್ಭವನೆಂಬ ದೂತಮುಖ್ಯನಂ ಅಟ್ಟಿದೊಡೆ: **ಚಂದ್ರಪ್ರಪು,** ೬. ೧೮ ವ)

**ಜನೋಕ್ತಿ –** ಜನರ ಮಾತುಗಳು (ಮುನ್ನಮೆಂಬ ಬೞಿಕೆಂಬ ಜನೋಕ್ತಿಯೊಳಶಾಯ್ತು ಸೂಚಿಶಕ್ತಿಗೆ ನೃಪರಾನೆ ದಾರದವೊಲಾದುವು ರಾಜಕುಮಾರರಾನೆಗಳ್: **ಗದಾಯು,** ೧. ೧೬)

**ಜನ್ನ** – ಯಜ್ಞ (ಮರುತ್ತೆಂಬ ಅರಸಂ ಜೀವವಧೆಗೆಯ್ವ ಜನ್ನಮಂ ಒಡರ್ಚಿ ಪೆಱರಾರ್ಗಂ ಪೊಡೆವಡದೆ ಪಲವುಂ ಪ್ರಾಣಿಗಳಂ ಕೊಂದಪ್ಪಂ: **ಪಂಪರಾ,** ೧೦. ೧೮೩ ವ)

**ಜನ್ನದಾರ** – ಜನಿವಾರ (ಜನ್ನದಾರದ ಪನ್ನಗಭೂಷಣಂ ಪವಿತ್ರದ ಪರಮಾತ್ಮಂ: **ಗಿರಿಜಾಕ,** ೧೦. ೭೯ ವ)

**ಜನ್ನವನುಣ್ಬಣ್ಣರ್** – ಯಜ್ಞಬಲಿಯನ್ನು ತಿನ್ನುವವರು, ದೇವತೆಗಳು (ಬಾಂಬೊಟಲನುರ್ಕಿಂ ಮೂಱುಮಂ ಸುಟ್ಟು ಜನ್ನವನುಣ್ಬಣ್ಣರಂ ಆರ್ದು ಕೊಂದು: **ಕಬ್ಬಿಗಕಾ,** ೧೨೩)

**ಜನ್ನವಿರ** – ಜನಿವಾರ (ಪಿಂಗಜಟಾಳಿ ತಾವರೆಯ ಸೂತ್ರದೊಳಾದ ಜನ್ನವಿರಂ ದುಕೂಲದ ಕೋವಣಂ ಕರಂ ಒಡಂಬಡೆ ನೋಟಕರ್ಕಳಂ ಆ ತಪಸ್ವಿ ಮರುಳ್ಚಿದಂ: **ಪಂಪಭಾ,** ೬. ೮)

**ಜನ್ನಿಗೆ** – ಜನಿವಾರ (ದೆಯ್ವದ ಜನ್ನಿಗೆಯುಮಂ .. .. ಆ ಕಳ್ಳರ್ ಕೊಂಡೊಯ್ವಲ್ಲಿ ಕಾಯಲಾಱದ ದೆಯ್ವಂಗಳ್ ತಮಗೆ ಭಕ್ತರಂ ಕಾದಪುವೇ: **ಸಮಯಪ,** ೯. ೧೦೫)

**ಜನ್ನಿವರ** – ಜನಿವಾರ (ಜನ್ನಿವರಮಂ ಬಲಮುಯ್ವಿನೊಳಿಕ್ಕಿ .. .. ಕೌಳನವೊಲೇಂ ಪಟಿಕೆಯ್ವನೇ ಕೆಟ್ಟ ಜೈನನುಂ: **ಸಮಯಪ,** ೬. ೩೭)

**ಜನ್ಮ** – ಸಂಸಾರ (ಜನ್ಮಮೆಂಬುದದು ಸಂಸಾರಂ; **ಅಭಿಧಾವ,** ೧. ೩. ೧); (ಜನನಂ ಜನ್ಮಂ ಪ್ರಸವಂ: **ಅಭಿಧಾವ,** ೧. ೩. ೩)

**ಜನ್ಮಕಲ್ಯಾಣ** – [ಜೈನ] ಜಿನನ ಪಂಚಕಲ್ಯಾಣಗಳಲ್ಲಿ ಒಂದು; ಜನಶಿಶು ಹುಟ್ಟಿದಾಗ ದೇವೇಂದ್ರನು ತನ್ನ ಪರಿಜನರೊಡನೆ ನಡೆಸುವ ಉತ್ಸವ ತೀರ್ಥಕರ ಜನ್ಮಕಲ್ಯಾಣಾರ್ಥಂ ಬಂದಿಂತೆ ನೆಲಸಿದಮವಿಲ್ಲಿ: **ಚಂದ್ರಪ್ರಪು,** ೧೦. ೭೬)

**ಜನ್ಮಕ್ಷೇತ್ರ** – ಹುಟ್ಟುವ ಜಾಗ, ಯೋನಿ (ಮೂತ್ರನಿವಾಸಂ ಜನ್ಮಕ್ಷೇತ್ರಂ ಶುಕ್ಲಶೋಣಿತಂ ಬಿತ್ತು ಗಡೇಂ ಪಾತ್ರಂ ದೇಹಂ: **ಮಲ್ಲಿನಾಪು,** ೯. ೪೮)

**ಜನ್ಮಗೃಹ** – ತವರು ಮನೆ (ವಿನಯೈಕಜನ್ಮಗೃಹಂ ಆಳ್ತನದ ಆಸ್ಪದಂ ಒಳ್ಪಿನ ಆಟಿಂ ಆರ್ಪಿನ ಕಣಿಯ ಎಂದು ಅನುನಯದಿಂ ಕೂರ್ತು ಜಗಜ್ಜನಜಾಲಂ ಪೊಗೞೆ ದುರ್ಗಮಯ್ಯಂ ನೆಗೞ್ದಂ: **ಪಂಚತಂತ್ರ,** ೪೨)

**ಜನ್ಮಸವನ** – [ಜೈನ] ಜಿನನ ಪಂಚಕಲ್ಯಾಣಗಳಲ್ಲಿ ಒಂದು; ಜಿನಶಿಶು ಹುಟ್ಟಿದ ಕೂಡಲೆ ದೇವೇಂದ್ರನು ತನ್ನ ಪರಿಜನರೊಂದಿಗೆ ಆ ಮಗುವಿಗೆ ಮಾಡುವ ಅಭಿಷೇಕ (ದಿಟ್ಟಿಗೆಪೊನಲಾದುದು ಪೊಂಬೆಟ್ಟಂ ಜಿನ ಜನ್ಮಸವನ ಮಣಿಮಯಪಟ್ಟಂ: **ಪಂಪರಾ,** ೧. ೪೪)

**ಜನ್ಮಸ್ನಪನ** – ಜನ್ಮಸವನ (ಇದು ಜನ್ಮಸ್ನಪನಕ್ಕೆ ನೂರ್ಮಡಿ ಮಿಗಿಲ್ ಕಲ್ಯಾಣಂ ಎಂದಟ್ಟಿರಿಂ ತ್ರಿದಶೇಂದ್ರಂ ತ್ರಿದಶಾಮರುಷಪರಿವೃತಂ ಬಂದು: **ಆದಿಪು,** ೮. ೨೨)

**ಜನ್ಮಾಂತರವೈರ** – ಹಿಂದಿನ ಜನ್ಮದ ವೈರ (ಅನಂತವೀರ್ಯನ ಜನ್ಮಾಂತರವೈರಂ ಕಾರಣಮಾಗೆ ವಿರೋಧಿಯನಾಂತು: **ಶಾಂತಿಪು,** ೪. ೪೩ ವ)

**ಜನ್ಮಾಂಧಕಿ** – ಹುಟ್ಟು ಕುರುಡಿ (ನಂದನವನೋದ್ದೇಶದೊಳಿರ್ದ ಜನ್ಮಾಂಧಕಿಯಲ್ಲಿಗೆ ಬಂದು: **ಸುಕುಮಾಚ,** ೫. ೨೩ ವ)

**ಜನ್ಮಾನುಬಂಧಿ** – ಜನ್ಮಜನ್ಮಾಂತರದ ಸಂಬಂಧವುಳ್ಳವನು[ಳು] (ಜನ್ಮಾನುಬಂಧಿಯಪ್ಪ ಸ್ನೇಹಂ ಕಾರಣಮಾಗಿ ದುಃಖಮಂ ಸೈರಿಸಲಾಱದೆ: **ವಡ್ಡಾರಾ,** ಪು. ೩೫, ಸಾ. ೨೯)

**ಜನ್ಮಾವಳಿ** – ಭವಾವಳಿ, ಹುಟ್ಟಿನ ಪರಂಪರೆ (ಮನದೊಳೆನಗೀಶ ಮತ್ಪ್ರಾಕ್ತನ ಜನ್ಮಾವಳಿಯನೆಯ್ದೆ ಕೇಳ್ವ ಅಟ್ತೆ ಕರಂ ಜನಿಯಿಸಿದಪುದು: **ಚಂದ್ರಪ್ರಪು,** ೩. ೮)

**ಜನ್ಮಾವಾಸ** – ಹುಟ್ಟಿದ ಮನೆ (ಶ್ರೀವಧುಗೆ ಪೇರುರಂ ಜನ್ಮಾವಾಸಂ: **ಪಂಪರಾ,** ೧೧. ೧)

**ಜನ್ಮಾಳಿ** – ಭವಾವಳಿ (ಪುಣ್ಯದೊಳಂ ವಿಮಿಶ್ರಣದೊಳಂ ಜನ್ಮಾಳಿ ಸ್ಗುಂ: **ಶಾಂತಿಪು,** ೮. ೧೩೯)

**ಜನ್ಮಿ** – ಜೀವಿಸಿರುವವನು (ತನುವಂ ಸುವ್ರತದಿಂದಂ .. ತಪಿಪಾತನ ಜನ್ಮಂ ಸಫಲಂ ಮತ್ತಿನವಂ ತಾಂ ಜನ್ಮಿಯೆನಿಸಿ ಜೀವನ್ಮೃತಕಂ: **ಸಮಯಪ,** ೧೫. ೮೯)

**ಜನ್ಮೋತ್ಸವ** – ಮಗು ಹುಟ್ಟಿದ ಹಬ್ಬ (ಸೂರದತ್ತನಾತ್ಮೀಯಜನ ಜನ್ಮೋತ್ಸವಾಕರ್ಣನದೊಳ್ ಅತ್ಯಂತ ಹರ್ಷೋತ್ಕರ್ಷಾಂತರಂಗನಾಗಿ: **ಸುಕುಮಾಚ,** ೧೦. ೨೭ ವ); [ಜೈನ] ತೀರ್ಥಂಕರ ಜನ್ಮಕಲ್ಯಾಣ (ಅಭಿವೀಕ್ಷಿಸುವ ಜನಕ್ಕೆಯ್ದೆ ಜಿನನ ಜನ್ಮೋತ್ಸವಮಂ ಬೆಸಕೆಯ್ದು ಮಣಿವಿತಾನದೊಳ್: **ಶಾಂತಿಪು,** ೧೦. ೨೩)

**ಜನ್ಯ** – ಯುದ್ಧ (ರಣಂ ಪ್ರಥನಂ ಜನ್ಯಂ ಆಹವಂ: **ಅಭಿಧಾವ,** ೧. ೧೪. ೧)

**ಜನ್ಯಜನಕಮೋಹ** – ತಂದೆಮಕ್ಕಳ ನಡುವಣ ಪ್ರೀತಿ (ತಮ್ಮ ಮೂಱನೆಯ ಭವದ ಜನ್ಯಜನಕಮೋಹಂ ಕಾರಣಮಾಗಿ: **ಶಾಂತಿಪು,** ೯. ೫೫ ವ)

**ಜನ್ಯೆ** – ಮದುವಣಗಿತ್ತಿಯ ಸೇವಕಿ (ಅಂಗರಾಜನೊಳಿರ್ದಿರ್ಪದ ಭಾವನೆ ಪೊಚ್ಚಮಾಗೆ ಹೇಮಾಂಬುರುಹಾಸ್ಯೆ ಸೋಲ್ವುದನೆ ಕನ್ನಿಕೆ ಜನ್ಯೆಯನೊತ್ತೆ ಪೋಯ್ತು ಯಾನಂ: **ಶಾಂತಿಪು,** ೫. ೧೧೬)

**ಜಪನ** – ಜಪ (ಜಪನವಿಕಲ್ಪ ಪ್ರಪಂಚಹೀನಧ್ಯಾನಂ: **ಅನಂತಪು,** ೯. ೯೫)

**ಜಪಾಕುಸುಮ** – ಕೆಂಪು ದಾಸವಾಳ (ಚಾರು ಜಪಾಕುಸುಮದ ತೋರಣದಿಂ ಸಾಲಸುಗಂಧಾವಳಿಯೋರಣದಿಂ: **ಉದ್ಭಟಕಾ,** ೫. ೨೪)

**ಜಪಾಪ್ರಸವ** – ದಾಸವಾಳದ ಹೂ (ಜಪಾಪ್ರಸವ ರಕ್ತಾಶೋಕ ಬಂಧೂಕಶೋಣಮಣಿಜ್ಯೋತಿಗಳಿಕ್ಕೆಯಿಂ ಕುಡೆ ಜಯಂ ಭದ್ರಂ ಶುಭಂ ಮಂಗಳಂ: **ಆದಿಪು,** ೧೬. ೩)

**ಜಪಾಪ್ರಸೂನ** – ಜಪಾಪ್ರಸವ (ದೆಸೆದೇವತೆಗಳ್ಗೆ ಜಪಾಪ್ರಸೂನಮಂ ರಕ್ತಬಲಿಯುಮಂ ತಾಂ ಕುಡುವಂತೆಸೆದಿರ್ದರ್ ಕಡೆಗಣ್ಣೊಳ್ ಪಸರಿಸೆ ಕಡುಗೆಂಪು ಭೀಮದುರ್ಯೋಧನರಾ: **ಗದಾಯು,** ೮. ೩)

**ಜಬ್ಬುಲಿ** – ದುರ್ಬಲ (ಕಿಸುಗುಳಿಗಂ ವಿಕಾರಿ ಕಡುನಾಣಿಲಿ ಜಬ್ಬುಲಿ ಬೂತು ಕಾತರಂ: **ಲೀಲಾವತಿ,** ೨. ೭೪)

**ಜಯಂತಿ** – [ಜೈನ] ಹದಿನಾಲ್ಕು ವಿಮಾನಗಳಲ್ಲಿ ಒಂದು (ಜಯಂತೀವಿಮಾನದೊಳ್ ಅಹಮಿಂದ್ರನಾಗಿ ತ್ರಯಸ್ತ್ರಿಂಶತ್ ಸಾಗರೋಪಮ ಆಯುಷ್ಯನುಂ: **ನೇಮಿನಾಪು,** ೪. ೬೫ ವ)

**ಜಯಗಜ** – ರಾಜನ ಯುದ್ಧದ ಆನೆ (ದಾನಧಾರಾಸಾರಂ ಕೈಗಣ್ಮೆ ಕಣ್ಗೊಪ್ಪುವ ಜಯಗಜಮಂ ಲೀಲೆಯಿಂದೇಱೆ: **ಆದಿಪು,** ೧೩. ೪೩)

**ಜಯದ** – ಜಯಕಾರ ಮಾಡುವವನು (ಎನಗೆ ಉರ್ವೀಧರವೈರಿ ಬಂಧು ಜಯದರ್ ದೇವರ್ಕಳ್: **ನೇಮಿನಾಪು,** ೧. ೫೬)

**ಜಯನಶಾಲಿಕೆ** – ಆಯುಧಾಗಾರ (ನಿಚಿತಶೇಷಾಸ್ತ್ರಾಳಿ ಜಯನಶಾಲಿಕೆಯದರ್ಜೊಳ್: **ಚಂದ್ರಪ್ರಪು,** ೧. ೧೪೯)

**ಜಯನಶಾಲೆ** – ಜಯನಶಾಲಿಕೆ (ಸೌಂದರೀಜನಂ ಮನಸಿಜಭೂಮಿಭೃತ್ ಜಯನಶಾಲೆಯ ಲೀಲೆಯಿಂ ಒಪ್ಪಿ ತೋಱುಗುಂ: **ಪಂಚತಂತ್ರ,** ೬೨)

**ಜಯಪತ್ರ** – ಗೆದ್ದವನಿಗೆ ಕೊಡುವ ದಾಖಲೆಪತ್ರ (ಖಚರೇಶ್ವರನೀಯೆ ಪಡೆದಂ ಅತ್ಯಾದರದಿಂ ಜಯಪತ್ರಮಂ ಸ್ವಯಂಬುದ್ಧಬುಧಂ: **ಆದಿಪು,** ೨. ೨೩)

**ಜಯಪ್ರಮೋದ** – ಗೆಲವಿನ ಸಂತೋಷ (ಖರನಂ ಮುರಾರಿ ಸಂಹರಿಸೆ ಜಯಪ್ರಮೋದಸುಮನರ್ ಸುಮನರ್ ಸುಮನಸ್ಸವೃಷ್ಟಿಯಂ ಸುರಿಯೆ: **ಜಗನ್ನಾವಿ,** ೪. ೪೨)

**ಜಯಾವಸಥ** – ವಿಜಯಕ್ಕೆ ನೆಲೆಯಾದವನು, ಜಯಶೀಲ (ಜಯಾವಸಥಂ ಲಕ್ಷ್ಮಣಂ ರಣೋತ್ಸುಕನಾದಂ: **ಪಂಪರಾ,** ೧೪. ೧೬೫)

**ಜಯಾಶೀರ್ಘೋಷ** – ಜಯವಾಗಲೆಂದು ಮಾಡುವ ಆಶೀರ್ವಾದ (ಗಣೋಚ್ಚಾರ ಝುಂಕಾರ ಜಯಾಶೀರ್ಘೋಷಮಪ್ಪ ವಿಜಯಗಜದ ಬೆಂಗೆ ವಂದು: **ಆದಿಪು,** ೧೪. ೯೦ ವ)

**ಜಯಾಸ್ತ್ರ** – ವಿನಾಯಕನು ಅರ್ಜುನನಿಗೆ ದಯಪಾಲಿಸಿದ ಅಸ್ತ್ರದ ಹೆಸರು (ತನಗೆ ವಿನಾಯಕಂ ದಯೆಯಿನಿತ್ತ ಜಯಾಸ್ತ್ರಮಂ ಉರ್ಚಿಕೊಂಡು ಭೋಂಕೆನೆ ಶರಾಸನದೊಳಾಂತು ಅದನಾಗಡೆ ಪೂಡಿ .. .. ಎಚ್ಚೊಡೆ: **ಪಂಪಭಾ,** ೧೨. ೧೬೮)

**ಜಯೋದ್ದಾಮ** – ಗೆಲವಿನಿಂದ ಘನತೆ ಪಡೆದವನು (ಕೊಂದುದರ್ಜಿಂ ಭೀಮಂ ಜಯೋದ್ದಾಮನೆಂಬುದಂ ಎಂಬಂತಿದು ವಸ್ತು: **ಗದಾಯು,** ೧. ೩೩)

**ಜರ** – ಮುಪ್ಪು (ಜಾತಿಜರಾಮರಣಂಗಳಿಂದಪ್ಪ ಬಾಧೆಯಿನಗಲ್ದ ಶಾಶ್ವತಮಪ್ಪ ಮೋಕ್ಷಸುಖಂಗಳನೆ ಬೇಟ್ಪೆನ್: **ವಡ್ಡಾರಾ** ೧೧೩, ಸಾ ೨೨)

**ಜರಗು** – ಚಿನ್ನದ ಹುಡಿ ಬೆರೆತ ಮಣ್ಣು (ನಿಧಿಗಂಡುಂ ಜರಗು ಕರ್ಚುವಂ ಅಧಮನೆನಿಕ್ಕುಂ: **ಪಾರ್ಶ್ವನಾಪು,** ೪. ೯೫)

**ಜರಗಂಕರ್ಚು** – ಮಣ್ಣಿನಲ್ಲಿರುವ ಚಿನ್ನದ ಕಣಗಳನ್ನು ಬೇರ್ಪಡಿಸಲು ಅದನ್ನು ತೊಳೆಯುವುದು (ದೊರೆಕೊಂಡ ನಿಧಿಯನೊಲ್ಲದೆ ಜರಗಂ ಕರ್ಚುವುದೆ .. .. ದೊರೆಯಲ್ಲದ ಮಾನವಂಗೆ ಕುಡುವುದೆ ಕೂಸಂ: **ಪಂಪರಾ,** ೫. ೨೦)

**ಜರಚ್ಛದನ** – [ಜರತ್+ಛದನ] ಹಣ್ಣೆಲೆ (ಬರುತುಮೆ ಬಸಂತಕಾಂತಂ ಬರಸೆಳೆಯೆ ಸಡಿಲ್ವವೋಲ್ ಜರಚ್ಛದನಂ ಬೀೞ್ತರೆ: **ಲೀಲಾವತಿ,** ೯. ೧೧೩)

**ಜರಠ** – ಜೀರ್ಣಗೊಂಡ, ಮುದಿ (ಜರಠ ಮಹಾಶಾಲ್ಮಲೀವೃಕ್ಷಮಿರ್ಕುಂ: **ಕಾದಂಸಂ,** ೧. ೩೮)

**ಜರತ್** – ವಯಸ್ಸಾದ, ಮುದಿ (ಅಂತೆಯ್ದಿ ತರುಶಿಖೆಯಂ ಪಿಡಿದು ಅಡರ್ವನಂ ಅಲ್ಲಿರ್ಪುದೊಂದು ಕಪಿ ಕಂಡು ಬೇಗಂ ಇದಿರಂ ಬಂದು ಅಂಜದಿರೆಂದು ಕೈಯಂ ಪಿಡಿದು ತೆಗೆವುದುಂ, ಆ ಜರತ್ ಚಮೂರಂ ಕಂಡು **ಪಂಚತಂತ್ರ,** ೧೭೭ ವ)

**ಜರತಿ** – ಮುದುಕಿ (ನಿಮಗಿದೇತರ್ಜಿಂದಾಯ್ತೊ ಪೇೞಿಂ ನಿರುತಂ ನೀಮೆಂದೊಡೆ ಎಂದಳ್ ಜರತಿ: **ಕರ್ಣನೇಮಿ,** ೭. ೨೦)

**ಜರತ್ತೃಣ** – ಒಣಹುಲ್ಲು (ಚಕ್ರವರ್ತಿಪದಮುಂ ತನಗಾವಗಮಾದೊಡಾ ಮಹಾಪುರುಷನದಂ ಜರತ್ತೃಣ ಕಣಾನುಗುಣಂ ವಲಮೆಂದೆ ಪೇಸಿದಂ: **ಆದಿಪು,** ೩. ೭೮)

**ಜರದ್ವಧು** – ಮುದುಕಿ (ವಿರಸಂ ಕರಮವು ದೇಸಿಗೆ ಜರದ್ವಧೂ ವಿಷಯಸುರತ ರಸರಸಿಕತೆವೋಲ್: **ಕವಿರಾಮಾ,** ೧. ೫೦)

**ಜರಾಯು** – ಗರ್ಭಕೋಶ (ಗರ್ಭಾಶಯಮದು ಜರಾಯು: **ಅಭಿಧಾವ,** ೧. ೧೧. ೧೫)

**ಜರಾಯುಜ** – ಜರಾಯುವಿನಿಂದ ಜನ್ಮ ಪಡೆದ ಪ್ರಾಣಿಗಳು ಮತ್ತು ಮನುಷ್ಯ (ಮಾನವಪಶುನಿವಹಂ ಜರಾಯುಜಂ: **ಅಭಿಧಾವ,** ೧. ३. ೪)

**ಜರಾಯುಪಟಲ** – ಗರ್ಭಕೋಶದ ಪೊರೆ (ಪಸರಿಸೆ ಜರಾಯುಪಟಲಂ ಪಸುಗೂಸುಗಳೊಡಲೊಳ್ ಅವನಗಲ್ಚುವ ಮತಿಯಂ ವಸುಮತಿಗರ್ಜಿಪಿ: **ಆದಿಪು,** ೬. ೬೫)

**ಜರಾವಿಭೇದ** – ಮುಪ್ಪಿನಿಂದ ಬದಲಾದವನು (ಪ್ರಿಯವಾದಿತ್ವಮುಮಲ್ಲದೆ ಜರಾವಿಭೇದಂ ದಂತಮಳಾದಿವಿರಹಿತನುಂ: ಅಜಿತಪು, ೫. ೯೩ ವ)

**ಜರಿವೊನಲ್** – ಬೆಟ್ಟದಿಂದ ಇಳಿದು ಬರುವ ಜಲಧಾರೆ (ಕಿಸುಗಾಡ ನೆಲಂಗಳ್ ಎಳದಳಿರ ಬಣ್ಣಮಂ ಕೆಯ್ಕೊಂಡು ವಿರಹಿಗಳ ಮನಮನೊಲಿಸುವಂತೆ ಜಲಜಲನೆ ಪರಿವ ಜರಿವೊನಲ್ಗಳುಮಂ.. ..ಪಯಣಂ ಬಂದು: **ಪಂಪಭಾ,** ೭. ೨೫ ವ)

**ಜರೆ** – ಮುಪ್ಪು (ಕಟೆದ ನೀರ್ಗೆ ಬಂದಪುದೆ ಬಟೆಕ ಜರೆಗಂ ತಿರ್ದಲ್: **ಅಜಿತಪು,** ೨. ೫೯)

**ಜರ್ಕು** – ಉಗುರಿನಿಂದ ಗಾಯಮಾಡು (ಜರ್ಕು–ನಖಘಾತನೇ: **ಶಬ್ದಮದ, ಧಾ** ३೭)

**ಜರ್ಗುವೀೞ್** – ಕುಸಿದು ಬೀಳು (ನುರ್ಗಿದುದೆನೆ ನೆರ್ಗಿದುದೆನೆ ಕಿರ್ಗಿದುದೆನೆ ಜರ್ಗುವಿಟ್ಟುದೆನೆ .. .. ಸರೇಫಪದಂಗಳ್: **ಶಬ್ದಮದ,** ೪೮)

**ಜರ್ಜರಿತ** – ಛಿದ್ರಗೊಂಡ (ಅನೇಕ ನೃಪ ಶಿರಃ ಕಪಾಳ ಶಕಳ ಜರ್ಜರಿತಮುಂ ಪರಸ್ಪರ ಸಮರ ರಭಸಸಮುತ್ಸಾರಿತಮುಂ: **ಪಂಪಭಾ,** ೧३. ೫೧ ವ)

**ಜರ್ಜರಿತಹಸ್ತ** – ಕೈಗೆಟ್ಟ (ಸೊಕಮಿರ್ಕೆ ಅಕ್ಕಟ ದರ್ಭಪಾಣಿ ಯಮಜಂ ದರ್ವೀಕರಂ ವಾಯುಪುತ್ರಕನುಂ ಜರ್ಜರಹಸ್ತಂ ಇಂದ್ರತನಯಂ ದಸ್ರಾತ್ಮಜರ್ ದಂಡಮುಷ್ಟಿಕರರ್ ಶಸ್ತ್ರವಿಡಂಬಂ ಏವುದವರ್ಗಂ ಪಾಂಚಾಲಿಯುಂ ಗಂಧದಾಯಕಿಯಾಗಿರ್ಪಿನಂ ಅಂದು ಮತ್ಸ್ಯಗೃಹದಿಂದ ಈ ನಿಗ್ರಹಂ ಪೊಲ್ಲದೇ: **ಗದಾಯು,** ३. ३४)

**ಜರ್ಝರಧ್ವನಿ** – ಛಿದ್ರವಾದ, ಶಿಥಿಲಗೊಂಡ ಕರ್ಕಶಧ್ವನಿ (ಪರುಷತರಮಕ್ಕುಂ ಒತ್ತುಂಗರಡೆಯ ಮದ್ದಳೆಯ ಜರ್ಝರ ಧ್ವನಿಗಳವೋಲ್: **ಕವಿರಾಮಾ,** ೧. ೫३)

**ಜರ್ಬು** – ಗದರಿಕೆ (ಜರ್ಬು–ಆಕ್ರಮಣಧ್ವನೌ: **ಶಬ್ದಮದ, ಧಾ,** ೪೮३) ಸಂಜ್ಞೆ (ವಾಮಾಕ್ಷಿಗೆ ಪುರ್ಬಿಂ ಜರ್ಬಿನಿಂ ನೋಡೆನುತ ಅಱುಪಿ ನೃಪಂ ಯತ್ನದಿಂ .. .. ಕೀರಪ್ರತನಯನಿನಾದಮಂ ಕೇಳ್ದನಾಗಳ್: **ರಾಜಶೇವಿ,** ೪. ೭೦)

**ಜರ್ವು** – ಹುಬ್ಬು ಹಾರಿಸು, ಹುಬ್ಬಿನ ಚಲನೆ (ಜರ್ವಿದ ಕಡೆಗಣ್ಣ ಜರ್ವುಗಳೊ ಮೋದಿದ ನೀಳ ಸರೋಜಮಾಳೆಯಿಂದುದಿರ್ದು: **ಆದಿಪು,** ४. ೧೦); ಗದರಿಸು (ತಾಂಬೂಲಕರಂಕವಾಹಿನಿಯರಂ ಪುರ್ವಿನಿಂ ಜರ್ವಿಯಂ: **ಜಗನ್ನಾವಿ,** ೧೦. ೭ ವ)

**ಜಲ** – ನೀರು (ಘನಸಂಜಾತವನದ್ವಿಪೇಂದ್ರ ಜಲವಾಹೋದ್ಭೂತ ವೇಣೂದ್ಭವ ಅಭಿನುತ ಜ್ಯೋತಿಗಳಪ್ಪ ಮುತ್ತುಗಳಂ.. ..ಚಕ್ರಿಗೆ ತಂದುಕೊಟ್ಟೆರಗಿದರ್: **ಶಾಂತೀಶ್ವಪು,** ೧೫. ೧೧೦)

**ಜಲಕನೆ** – ತಟಕ್ಕನೆ (ದುಃಖ ಸುಖ ಹೇತುಗಳಂ ನಿಜ ದಿವ್ಯ ಭಾಷೆಯಿಂ ಜಲಕನೆ ತೋಱಿದೈ ಸಕಲ ದೇಹಿಗೆ ನೀನೆ ಶರಣ್ ಜಿನೇಶ್ವರಾ: **ಪಂಪರಾ,** ೫. ೭)

**ಜಲಕ್ಕನೆ** – ಶುಚಿಯಾಗಿ (ಅಂತು ಉಭಯಬಲಂಗಳೊಳಂ ವೀರಜನಜನಿತಾಳಾಪಂಗಳ್ ನೆಗೞೆ ವಿಕ್ರಮಾರ್ಜುನಂ ಅನಂತನುಂ ತಾನುಂ ಜಲಕ್ಕನಿರೆ ಪಲ್ಲಂ ಸುಲಿದು ಅಗಣ್ಯಪುಣ್ಯ ತೀರ್ಥೋದಕಂಗಳಂ ಮಿಂದು ಮಂಗಳವಸದನಂಗೊಂಡು: **ಪಂಪಭಾ,** ೧೦. ೪೬ ವ); ತಟಕ್ಕನೆ (ಪೋದ ಭವದೊಳಾದ ವಿಷಾದ ಕಾರಣಮನೇನಾನುಮಂ ನೆನೆದಂತೆ ಚಿಂತಾಕ್ರಾಂತೆಯಾಗಿರ್ದಳ್ ಎಂಬುದಂ ವಿವೇಕವಿದ್ಯಾಧರಂ .. .. ಜಲಕ್ಕನಱಿದು: **ಮಲ್ಲಿನಾಪು,** ೪. ೧೬ ವ); ಸ್ಪಷ್ಟವಾಗಿ (ಸಿರಿ ಸಾರ್ತರೆ ಸಾರ್ವುದು ಅದರ್ಕೆ ಸಂದೆಯಂಬಡದೆ ಜಲಕ್ಕನೆ ಈಗಳ್ ಅಱಿದೆಂ ಸಿರಿ ಕಳ್ಗೊಡವುಟ್ಟಿತೆಂಬುದಂ: **ಪಂಪಭಾ,** ೨. ೪೯)

**ಜಲಜಲಿಸು** – ಜುಳುಜುಳು ಹರಿ (ಅಲರಾಯ್ತು ಬೞಲೆ ನೊಸಲೊಳ್ ಬೆಮರನೊರಸಿ ಕಳೆವ ಇನಿಯನ ಮೆಲ್ಪು: **ಲೀಲಾವತಿ,** ೧೩. ೧೦೫)

**ಜಲದ** – ಮೋಡ (ಜಲದಾಟೋಪಮಂ ಬುದ್ಬುದನಿವಹನಿಭಂ ಫೇನಪಿಂಡಾಯಮಾನಂ ಜಲರೇಖಾಕಾರಂ ಆಖಂಡಲ ಲಲಿತ ಧನುರ್ಲೀಲಂ ಆಕಾಳಿಕೀಸಂಚಳಂ ಈ ಸೌಂದರ್ಯಂ: **ಅಜಿತಪು,** ೬. ೫೦)

**ಜಲದಮಾರ್ಗ** – ಮೋಡಗಳ ದಾರಿ, ಆಕಾಶ (ಅಮರಗುರುವರಂ ಯತಿ ಜಲದಮಾರ್ಗಗತಿಯಾದಂ: **ಶಾಂತಿಪು,** ೭. ೬೬)

**ಜಲದರವ** – ಗುಡುಗು (ನೋಡೆ ಜಲದರವದೊಳ್ ಕೂಡಿದುದಂತಪ್ಪುದೊಂದು ಶಬ್ದಂ ಕಿವಿಯೊಳ್ ತೀಡೆ ಕರಂ ಅಗಿದು .. ..ಮಗುಟ್ದಿಂ: **ಪಂಚತಂತ್ರ,** ೮೯)

**ಜಲದಾಗಮ** – ಮೋಡ ಬರುವ ಕಾಲ, ಮಳೆಗಾಲ (ಜಲದಾಗಮದಿಂ ಚಿತ್ತಸ್ಖಲಿತಂ ಕೇಳನಲ್ಲನಂ: **ಕವಿರಾಮಾ,** ೨. ೧೨೮)

**ಜಲದುರ್ಗ** – ನೀರಿನ ನಡುವೆ ರಚಿತವಾದ ಕೋಟೆ (ಜಾನುದಘ್ನಜಲದುರ್ಗನುಮಾಗಿ ನಡೆದುಂ: **ಆದಿಪು,** ೧೪. ೫೨ ವ)

**ಜಲಧರಕಾಲ** – ಮಳೆಗಾಲ (ಎಟ್ಟಿಂದುದು ಜಲಧರಕಾಲಂ ಶಿಖಿಶ್ರೇಣೀಲೋಲಂ: **ಕುಸುಮಾಕಾ,** ೬. ೭)

**ಜಲಧರಾಗಮ** – ಮಳೆಗಾಲ (ಭೂತಳಾಧಿನಾಥನರ್ಥಿಸಂಘತಾನವ ಬರ್ಹಿಣಾನಂದಕರಂ ಪ್ರತ್ಯಗ್ರಜಲಧರಾಗಮಂ: **ಸುಕುಮಾಚ,** ೧. ೭೯ ವ)

**ಜಲಧಿ** – ಸಮುದ್ರ (ಹರಿಣಧರ ವಿವಸ್ವತ್ ಮನಕುಂಭದ್ವಯಬ್ಜಾಕರ ಜಲಧಿ ಗಜ ದ್ವಿಷ್ಪೀಠ ಚಕ್ರಾಹಿಗೇಹಸ್ಫುರಿತ ಮಣಿಸಮೂಹಜ್ವಾಳೆಯಂ ಕಾಂತೆ ಕಂಡಳ್: **ಅಜಿತಪು,** ೩. ೧೨)

**ಜಲಧಿತಲ್ಪ** – ವಿಷ್ಣು (ಜಲಧಿತಲ್ಪಂಗೆ ದೈತ್ಯೇಂದ್ರರ್ ಉದ್ವೃತ್ತತೆಯಂ ಪುಯ್ಯಲ್ಚೆ: **ಜಗನ್ನಾವಿ,** ೨. ೪೪)

**ಜಲಧಿಪ** – ವರುಣ ಜಲಧಿಪ ಸಾರ್ವ ವಹ್ನಿಯನೆ ಸಾರ್ದಂ: **ಕುಸುಮಾಕಾ,** ೭. ೧೧)

**ಜಲನಿಧಿ** – ಸಮುದ್ರ (ಉಭಯಬಲದರಸುಗಳ್.. .. ಕೆಯ್ವೀಸೆ ಲಯಕ್ಷುಭಿತ ಜಲನಿಧಿನಿನಾದಮಂ ಅಭಿನಯಿಸಿದುದು ಒಗೆದು ನೆಗೆದ ಸಮರ ಆರಾವಂ: **ಪಂಪಭಾ,** ೧೧. ૩೪)

**ಜಲನಿಧಿವಳಯ** – ಸಮುದ್ರ (ಜಲನಿಧಿವಳಯದಿಂ ಪರಿಕ್ಷಿಪ್ತಮಾಗಿ ಸೊಗಯಿಸುವ ಜಂಬೂದ್ವೀಪದ ಭಾರತವರ್ಷದ ಸಕಲಜಗತೀಜನಸ್ತುತ್ಯ ದಾಕ್ಷಿಣಾತ್ಯಮೆಂಬ ಜನಪದಮುಂಟು: **ಪಂಚತಂತ್ರ,** ೫೯ ವ)

**ಜಲಭೃಚ್ಚಾಪ** – [ಜಲಭೃತ್+ಚಾಪ] ಮಳೆಬಿಲ್ಲು ಕಾಮನಬಿಲ್ಲು (ಆ ಪುರದ ರತ್ನಭವನ ಕಳಾಪದ್ಯುತಿ ನೆಗೞೆ ಗಗನತಳದೊಳ್ ಜಲಭೃಚ್ಚಾಪರುಚಿಗೆತ್ತು: **ಆದಿಪು,** ೨. ೧೭)

**ಜಲಮಂತ್ರ** – ಜಲಸ್ತಂಭನ ಮಂತ್ರ (ಜಲಮಂತ್ರಮನೇನುಮಂ ಬಗೆಯದೆ ಕೋಪೋದ್ರೇಕಮನೆ ಬಗೆದು: **ಗದಾಯು,** ೭. ೨೨ ವ)

**ಜಲಮಾನುಷಿ** – ಜಲಕನ್ನಿಕೆ (ಉದಧಿಯ ತೋಱಿಮುತ್ತೆನಿಸೆ ತಾರಗೆ ಶೀತಮರೀಚಿಶಂಕದಂದನಿರೆ ನೀರ ಮೇಲೆ ನಲಿವ ಅಚ್ಚರಿಯರ್ ಜಲಮಾನುಷೀಪ್ರಕರದನಿರೆ: **ಮಲ್ಲಿನಾಪು,** ೧೨. ೧೦೬)

**ಜಲಯಂತ್ರ** – ಪಿಚಕಾರಿ (ಒಂದರ್ಥಕ್ಕೆ: ಜೀರ್ಕೊಳವೆಯೆಂದು ಜಲಯಂತ್ರಂ: **ಶಬ್ದಮದ,** ૩૩ ವೃತ್ತಿ ೫૩)

**ಜಲರೇಖೆ** – ನೀರ ಮೇಲಿನ ಬರಹ (ಜಲದಾಟೋಪಮಂ ಬುದ್ಬುದನಿವಹನಿಭಂ ಫೇನಪಿಂಡಾಯಮಾನಂ ಜಲರೇಖಾಕಾರಂ ಆಖಂಡಲ ಲಲಿತ ಧನುರ್ಲೀಲಂ ಆಕಾಳಿಕೀಸಂಚಳಂ ಈ ಸೌಂದರ್ಯಂ: **ಅಜಿತಪು,** ೬. ೫೦)

**ಜಲಲಿಪಿ** – ನೀರ ಮೇಲೆ ಬರೆದದ್ದು, ನಶ್ವರ (ಲಲಾಟದೊಳ್ ವಿಧಿಯಿಂ ಬರೆದ ಲಿಪಿ ಜಲಲಿಪಿಯೇ: **ಪಂಪರಾ,** ૩. ૩೦)

**ಜಲವಾಹ** – ಮೋಡ (ಘನಸಂಜಾತವನದ್ವಿಪೇಂದ್ರ ಜಲವಾಹೋದ್ಭೂತ ವೇಣೂದ್ಭವ ಅಭಿನುತ ಜ್ಯೋತಿಗಳಪ್ಪ ಮುತ್ತುಗಳಂ .. .. ಚಕ್ರಿಗೆ ತಂದುಕೊಟ್ಟೆರಗಿದರ್: **ಶಾಂತೀಶ್ವಪು,** ೧೫. ೧೧೦)

**ಜಲವಿಕಳ** – ನೀರು ಬತ್ತಿರುವುದು (ಜಲವಿಕಳಮಾಗಿರ್ದ ಜಲಾಶಯದೊಳ್ ಶಿಶಿಕುಳೀರಂ ನೀರಂ ಪಡೆಯದೆ: **ಪಂಚತಂತ್ರ,** ೪೨೮ ವ)

**ಜಲವಿಹಂಗ** – ನೀರು ಹಕ್ಕಿ (ಚಿತ್ತದೆ ಕವಿತರ್ಪ ಜಲವಿಹಂಗಂಗಳವೋಲ್ ಎತ್ತಂ ಕವಿತಂದುವು: **ಚಂದ್ರಪ್ರಪು,** ೬. ૩೨)

**ಜಲವ್ಯಾಳ** – ನೀರುಹಾವು (ಜಳಮೃಣಾಳನಾಳಮಂ ಜಳವ್ಯಾಳಮೆಂದು ಕೆಲದ ಬಿಲದಿಂ ಪಿಡಿಯಲೆಂದು ಧೀಂಕಿಡುವ ವಿಷಾಪಹಾರ ಶಾಲೂರಜಾಲಂಗಳೊಳಂ: **ಚಂದ್ರಪ್ರಪು,** ೫. ೪೦ ವ)

**ಜಲಶಯನ** – ನೀರಹಾಸಿಗೆ (ರಸೆಯೊಳ್ ಕಾಲಾಗ್ನಿರುದ್ರಂ ಜಲಶಯನದೊಳ್ ಅಂಭೋಜನಾಭಂ ಪೊದಳ್ದು ಆಗಸದಿಂ ಸುತ್ತಿರ್ದ ಅಜಾಂಡೋದರದೊಳ್ ಅಜಂ ಅಡಂಗಿರ್ಪವೋಲ್; **ಪಂಪಭಾ,** ೮. ೮೬); ವಿಷ್ಣು (ಜಲಶಯನೋದರಾಂತರದಿನೀ ತ್ರಿಜಗಂ ಪೊಱಮಟ್ಟುದೀಗಳೆಂಬುಲಿ ಸಲೆ: ಪಂಪಭಾ, ೧೦. ೫೨)

**ಜಲಸ್ತಂಭ** – ಪ್ರವಾಹವನ್ನು ತಡೆಯುವ ವಿದ್ಯೆ (ಪತಿಯ ಜಳಸ್ತಂಭದ ಪರಿಣತಿ ದಲಿದಲ್ಲದೊಡೆ ಜಳಪಥಂ ಸ್ಥಳಪಥದಂತೆ ಅತಿಸುಗಮಮಾಗದು: **ಆದಿಪು,** ೧೨. ೮૩)

**ಜಲಾಂಜಲಿ** – ಜಲತರ್ಪಣ (ಜನಕಂಗೆ ಜಲಾಂಜಲಿಯಂ ತನೂಭವಂ ಕುಡುವುದು ಉಚಿತಂ ಅದುಗೆಟ್ಟೀಗಳ್ ನಿನಗಾಂ ಕುಡುವಂತಾದುದೆ ತನೂಜ ನೀಂ ಕ್ರಮವಿಪರ್ಯಯಂ ಮಾಡುವುದೇ: **ಗದಾಯು,** ೪. ೬೨)

**ಜಲೌಘ** – ನೀರರಾಶಿ (ಪ್ರಕಟಂ ವಾರಿಧಿವೇಳೇ ವಾರ್ಧಿಗೆ ಜಲೌಘಸ್ಪರ್ಧೆಯೊಳ್ ಬಾಧ್ಯಬಾಧಕಭಾವಂ: **ಜಗನ್ನಾವಿ,** ೧. ೩೦)

**ಜಲ್ಪ** – ಮಾತಾಡು (ಜಿನನಿರ್ದಂ ಮನದೊಳಗೊಂದೊಂದವ್ಯಕ್ತನಿಜಾಕ್ಷರ ಜಲ್ಪಮೆಸೆಯೆ ಮಂದರಕಲ್ಪಂ: **ಅಜಿತಪು,** ೭. ೧೨); ಹರಟತಿದು ಮತ್ತೋನ್ಮತ್ತಜಲ್ಪಂ ಕುಲವಧುವರ ಮಾತಲ್ತು: **ಪಂಪರಾ,** ೯. ೧೬೯)

**ಜಲ್ಪಾಕ** – ವಾಚಾಳಿ, ಹರಟೆಮಲ್ಲ (ವಾಚಾಳಂ ಜಲ್ಪಾಕಂ ವಾಚಾಟಂ ವಾವದೂಕನಕ್ಕುಂ: **ಅಭಿಧಾವ,** ೨. ೧. ೧೩)

**ಜಲ್ಲಮಲ** – ಮೈಕೊಳೆ (ತನುವಿನೊಳಾದ ಜಲ್ಲಮಲಂ ಆಭರಣಂ ಪುಲಿಯಿರ್ಪುದೊಂದು ಕಾನನದ ಗುಹಾಂತರಂ ಮನೆ .. .. ಆಗೆ: **ಜೀವಸಂ,** ೩. ೨೨)

**ಜಲ್ಲಳಿ** – ಜರಡಿ (ಜಲ್ಲಳಿಯ ಮಱೆವೊಕ್ಕವೋಲ್ ಕಳಕುಳಮಾದರ್ ನಾಗರಾಜರಪಗತತೇಜರ್: **ಆದಿಪು, ಆದಿಪು,** ೧೩. ೬೫)

**ಜಲ್ಲಿ** – ಕುದುರೆಗೆ ಹಾಕುವ ಒಂದು ಆಭರಣ (ಮಿಸುಗುವ ಜಲ್ಲಿ ಬೆಳ್ಗಱೆ ಕೊಡಂಕೆಯ ಚಾಮರಮೊಪ್ಪೆ ಬಂದುವಂದು ಅಸದೃಶ ವಾಜಿಗಳ್: **ರಾಜಶೇವಿ,** ೧೩. ೬೨)

**ಜಲ್ಲಿಮಿಗ** – ಚಮರೀಮೃಗ (ಜಲ್ಲಿಮಿಗಕ್ಕೆ ವರಾಹಯೂಥಮೆಳ್ತರೆ ಮಣಿಕಾಲ್ಗಳಂ ಮಡಿದು ತೋಱಿದರೊಯ್ಯನೆ ಸನ್ನೆವೇಂಟೆಯೊಳ್: **ಶಬರಶಂವಿ,** ೩. ೪೭)

**ಜವ** – ಯಮ (ನಿನ್ನಯ ತಾಯನುಯ್ವ ಪದದೊಳ್ ಜವಂ ಅಕ್ಕಟ ಬಂದು ಎನ್ನುಮಂ ಅಂತೆ ಕೂಡಿದೊಡನೊಕ್ಕಲುವೋಗಿಸನೇಕೆ: **ಕಾದಂಸಂ,** ೧. ೫೩); ವೇಗ (ಜವಂ ಉಱಿದೊಂದು ಸೋಗೆನವಿಲ್ ಒಯ್ಯನೆ ಕರ್ಕಡೆಗಾಸಿಯಾಗಿ ಪಾಱುವುದುಂ: **ಪಂಪಭಾ,** ೫. ೫೧)

**ಜವಂಗಿಡು** – ಶಕ್ತಿಗುಂದು (ಜವಂಗಿಡದೆ ಮುಟ್ಟೆ ಬರ್ಪ ಜವನಂ ಜವಂಗುಂದಿಸಲ್ ಜವಂಗೆ ಜವನಾಗಲ್ ಇಂ ಪೆಱರ್ಗೆ ತೀರ್ಗುಮೆ: **ಆದಿಪು,** ೧೩. ೮೮)

**ಜವಂಗುಂದಿಸು** – ಜವಂಗಿಡಿಸು (ಜವಂಗಿಡದೆ ಮುಟ್ಟೆ ಬರ್ಪ ಜವನಂ ಜವಂಗುಂದಿಸಲ್ ಜವಂಗೆ ಜವನಾಗಲ್ ಇಂ ಪೆಱರ್ಗೆ ತೀರ್ಗುಮೆ: **ಆದಿಪು,** ೧೩. ೮೮)

**ಜವಂಗೆಡು** – ಶಕ್ತಿಗುಂದು (ಕುದುರೆಯುಂ ಜವಂಗೆಟ್ಟುದು ನಾಂ ಪಥಶ್ರಾಂತನಾದೆಂ: **ಪಂಚತಂತ್ರ,** ೧೮೯ ವ)

**ಜವಂಜವ** – ಹುಟ್ಟುಸಾವುಗಳ ಆವರ್ತನೆ, ಸಂಸಾರ (ತನ್ನಂ ನಿರ್ದಾಟಿಸಿ ಕಳೆಯೆ ಪೋಗಿ ಸತ್ತು ವಿವಿಧ ಜವಂಜವ ಚಕ್ರಾಕ್ರಮಣದಿಂ ಬಂದು: **ಶಾಂತಿಪು,** ೭. ೪೨ ವ)

**ಜವಕ** – (ಈ ದೂದವಿ ಜತ್ತಕಮಂ ನುಡಿದು ಜವಕಮಿಲ್ಲದೆ ಕೂಡಿದಳೆಂದು ನುಡಿಯುತ್ತುಂ ಪೋಗೆ: **ಅನಂತಪು,** ೮. ೨೯ ವ)

**ಜವಜವಾಗು** – ದುರ್ಬಲಗೊಳ್ಳು (ಜವಂ ಜವಜವಾಗಿ ಮುಟ್ಟುಗಿಡುವನ್ನಮಿನ್ನಾ ಜವಂ ಜವವ್ಯಸನಪುಂಜಮಂ ಕಿಡಿಪುದು: **ಆದಿಪು,** ೧೩. ೮೮)

**ಜವದಾಡೆ** – ಹಲ್ಲುಗಳಿರುವ ಈಟಿ (ಲೌಡಿಯ ಜವದಾಡೆಯ ಚಾಪದ ಚಕ್ರದ ಶರದ ಶೂಲದ ಸೆಲ್ಲೆಹದ .. .. ಪದಾತಿವ್ಯೂಹದಿಂ: **ರಾಜಶೇವಿ,** ೬. ೧೧ ವ)

**ಜವದೂತ** – ಯಮದೂತ (ಜವನುಂ ಕರಣಂಗಳುಂ ಆ ಜವದೂತರುಮಿರ್ಪ ತಾಣಂ: **ಸಮಯಪ,** ೧೦. ೧೨೭)

**ಜವನ** – ವೇಗವುಳ್ಳುದು (ಜವನಂ ಎನಿಸಿರ್ದ ನಿಜದಶೆ ಜವನಂ ಅಧಃಕರಿಸೆ: **ಪಾರ್ಶ್ವನಾಪು,** ೪. ೧೧೦)

**ಜವನ ಬಾಜೆಗೆ ಅಟ್ಟು** – ಯಮನ ಸರದಿಗೆ ಕಳಿಸು, ಶೂಲಕ್ಕೆ ಕಳಿಸು (ಪೆಂಡತಿಯ ಮೂಗಂ ಅಕಾರಣದಿಂ ಅರಿದವನಂ ಜವನ ಬಾಜೆಗೆ ಅಟ್ಟುವುದೇ ಧರ್ಮವೆಂದು ಧರ್ಮಾಧಿಕರಣಂ ದಂಡಧರಂಗೆ ಪೇಟ್ಟುದುಂ: **ಪಂಚತಂತ್ರ,** ೧೩೭ ವ)

**ಜವನಿಕೆ** – [ಯವನಿಕಾ] ತೆರೆ (ನಿಲ್ತು ಜವನಿಕೆಯ ಮಱೆಯೊಳ್ ಪೊಲ್ತಳವಳ್ ಮುಗಿಲ ಮಱೆಯ ವಿದ್ಯುಲ್ಲತೆಯಂ: **ಆದಿಪು,** ೯. ೨೦)

**ಜವಪ್ರಸರ** – ವೇಗ ಹೆಚ್ಚುವುದು (ಪವಮಾನಾತ್ಮಜಂ ಜವಪ್ರಸರದಿಂ .. .. ಮಿಗುವ ಜಾತ್ಯಶ್ವಂಗಳ್: **ಪುಷ್ಪದಂಪು,** ೨. ೫೮)

**ಜವಳ** – ಜೋಡಿ (ಆ ಯಕಾರಕ್ಕೆ ಜಕಾರಂ: ಯಮುನೆ–ಜಗುನೆ ಯಮಲಂ–ಜವಳಂ: **ಶಬ್ದಮದ,** ೨೭೩ ಪ್ರ)

**ಜವಳಿ** – ಬಟ್ಟೆ ತುಡುವ ತೊಡಿಗೆಗಳುಂ ಉಡಲ್ಕುಡುವ ಜವಳಿಗಳುಂ: **ಲೀಲಾವತಿ,** ೭. ೬೮ ವ)

**ಜವಳಿವದ್ದಳೆ** – ಜೋಡಿ ಮದ್ದಳೆ (ಮಕಾರಕ್ಕೆ ವತ್ವಂ; ಯಮಲಮರ್ದಲಂ–ಜವಳಿವದ್ದಳೆ: **ಶಬ್ದಮದ,** ೩೦೭ ಪ್ರ)

**ಜವಾದಿ** – ಪುನುಗು (ಜಾದಿಯರಲ್ಲೆ ಜವಾದಿಯನೊಲವಿಂ ಮೇದಿಪರಲ್ಲದೆ ಕಾಟ್ಟುಱುಚೆಗದಮ ಮೇದಿಪರೇ: **ಅನುಭವ,** ೩೯)

**ಜವೋಷಧಿಋದ್ಧಿ** – ಹತ್ತು ತಪಸ್ಸಿದ್ಧಿಗಳನ್ನು ಪಡೆದವರಿಗೆ ಉಂಟಾಗುವ ಮಹಿಮೆ; ಸಾಧುವಿನ ಬೆವರ ಸ್ಪರ್ಶದಿಂದ ರೋಗ ವಾಸಿಯಾಗುವ ಔಷಧರ್ಧಿ (ಉಗ್ರೋಗ್ರ ತಪದಿಂ ದೀಪ್ತತಪಂ ಮಹಾತಪಂ ಘೋರತಪಂ ಎಂದಿವು ಮೊದಲಾಗೊಡೆಯ ತಪಂಗಳಂ ಗೆಯ್ಯೆ ತಪದ ಮಾಹಾತ್ಮ್ಯದಿಂದಂ ಆಮೋಷಧಿ ಖೇಳೋಷಧಿ ಜವೋಷಧಿ ವಿಪ್ರೋಷಧಿ ಸರ್ವೋಷಧಿಯೆಂದಿವು ಮೊದಲಾಗೊಡೆಯ ಋದ್ಧಿಗಳ್ ಪುಟ್ಟಿದೊಡಂ: **ವಡ್ಡಾರಾ,** ಪು ೬೯, ಸಾ ೩)

**ಜವ್ವನಿಗ** – ಹರಯದವನು (ಈ ಜವ್ವನಿಗ ತವಸಿ ತೊಟ್ಟಪ್ಪ ಕರ್ಣಾವತಂಸಂ ಪೊಸತು: **ಕಾದಂಬ,** ೫. ೪೫)

**ಜವ್ವನಿಗೆ** – ಹರಯದವಳು (ಆ ದೊರೆಯ ಭರದ ಜವ್ವನಿಗೆಯರೆಮ್ಮ ಕೆಯ್ಸಾರಲಿತ್ತಪ್ಪುದೆ: **ಆಚವರ್ಧ,** ೯. ೪೩ ವ)

**ಜಸ** – ಯಶಸ್ಸು, ಕೀರ್ತಿ (ಚಾಗದ ಕಂಬಮಂ ನಿಱಿಸಿ ಬೀರದ ಶಾಸನಮಂ ನೆಗಟ್ಟೆ ಕೋಲ್ವೋಗದ ಮಂಡಲಂಗಳನೆ ಕೊಂಡು ಜಗತ್ತ್ರಿತಯಂಗಳೊಳ್ ಜಸಕ್ಕೆ ಆಗರಮಾದ ಬದ್ದೆಗನಿಂ ಆ ನರಸಿಂಹನಿಂ ಅತ್ತ ನಾಲ್ವರಲ್ ಮೇಗು ಮೊದಲ್ದ ಚಾಗದೊಳಂ ಒಂದಿದ ಬೀರದೊಳಂ ಗುಣಾರ್ಣವಂ: **ಪಂಪಭಾ,** ೧. ೫೦)

**ಜಹ್ನುಜಾಂಬು** – ಗಂಗೆ (ಪರಮೋಕ್ಷಾಲಂಬಮೆನಿಪ ಕಾಶಿಗೆ ಕಾಲಾರಿಗೆ ಪೋಗಿ ಜಹ್ನುಜಾಂಬುಗಳಿಂದಂ: **ರಾಜಶೇವಿ,** ೩. ೨೮)

**ಜಳಕನಾಗು** – ಪ್ರಸಿದ್ಧವಾಗು, ಪ್ರಕಟಗೊಳ್ಳು (ಶರ್ಕರೆ ನಾಲಗೆ ನೃಪರೆರ್ದೆ ಕತ್ತರಿ ಎಂಬುದು ಜಳಕನಾದುದು ಎಮ್ಮಗ್ರಜನಿಂ: **ನೇಮಿನಾಪು,** ೫. ೯)

**ಜಳಜಾತಾರಿಕಿರೀಟ** – ಕಮಲದ ಶತ್ರುವಾದ ಚಂದ್ರನನ್ನು ಕಿರೀಟವಾಗಿ ಧರಿಸಿರುವ ಶಿವ (ಜಳಜಾತಾರಿಕಿರೀಟನಂ ಹರುಷದಿಂದಂ ಪೂಜೆಯಂ ಮಾಡಿ: **ತ್ರಿಷಷ್ಟಿಪು,** ೨. ೧೪೦)

**ಜಳದ** – ಮೋಡ (ಕವಿದುವು ಕಾಳ ನೀಳ ಜಳದಾವಳಿ ವಾರಿಧಿಗಳ್ ಧರಿತ್ರಿಯಂ ಕವಿದುವು ಗಾಳಿಗಳ್ ಪ್ರಳಯಕಾಲಮನಾಗಿಸಲೆಂದೆ ಲೋಕಮಂ ಕವಿದುವು: **ಪಂಪಭಾ,** ೨. ೭೭); ಮಳೆಗಾಲ (ಜಳದಗ್ರೀಷ್ಮ ಹಿಮಂಗಳಿಲ್ಲ ಮೊಳೆವುಲ್ ನಾಲ್ಕಂಗಳುಳಂಗಳ್ವರಂ ಬಳಗಂ ಬಳಗಂ ತಣ್ಪಿನ ಬಿಣ್ಪಿನಂತೆಸಗುಗುಂ: **ಶಾಂತಿಪು,** ೬. ೧೦೨)

**ಜಳದಸಮಯ** – ಮಳೆಗಾಲ (ಪರಿಪಕ್ವರಾಜಜಂಬೂದ್ರುಮ ವಿಸ್ತಾರಂ ಶಿಖಂಡಿತಾಂಡವಸಾರಂ ನವಜಳದಸಮಯಂ ಏನೆಸೆದಪುದೋ: **ಆದಿಪು,** ೧೧. ೮೮)

**ಜಳದಾಧ್ವ** – ಆಕಾಶ (ಜಳದಾಧ್ವಂ ಸ್ವರ್ಧುನೀಫೇನನೆವದೆ ಪೆಱತಿರ್ದುದೋ ತಾನದಭ್ರಾಮಳ ಶುಭ್ರಜ್ಯೋತಿಯಂ: **ಕುಸುಮಾಕಾ,** ೪. ೫೨)

**ಜಳದಾನ** – ತರ್ಪಣ (ವಿದುರಂ .. .. ಧೃತರಾಷ್ಟ್ರನ ಬೆಸದೊಳ್ ವಾರಣಾವತಕ್ಕೆ ಪೋಗಿ ತದರ್ಧ ದಗ್ಧ ಕಳೇವರಂಗಳಂ ಸಂಸ್ಕರಿಸಿ ಜಳದಾನಾದಿ ಕ್ರಿಯೆಗಳಂ ಮಾಡಿ ಮಗುೞ್ಚಿ ವಂದಂ: **ಪಂಪಭಾ,** ೩. ೮ ವ)

**ಜಳದೆ** – ಬಾಳದ ಬೇರಿನ ಬೀಸಣಿಗೆ (ಕುಳಿರ್ವ ತಿಳಿನೀರಂ ಉಡುಗದೆ ತಳಿ ತಳಿರಂ ಪಾಸು ಜಳದೆಯಿಂ ಬೀಸು: **ಆದಿಪು,** ೨. ೧೪)

**ಜಳದಾನ** – ನೀರಿನ ತರ್ಪಣ (ಧೃತರಾಷ್ಟ್ರನ ಬೆಸದೊಳ್ ವಾರಣಾವತಕ್ಕೆ ಪೋಗಿ ತದರ್ಧದಗ್ಧ ಕಳೇವರಂಗಳಂ ಸಂಸ್ಕರಿಸಿ ಜಳದಾನಾದಿ ಕ್ರಿಯೆಗಳಂ ಮಾಡಿ: **ಪಂಪಭಾ,** ೩. ೮ ವ)

**ಜಳಧರ** – ಮೋಡ (ಅನ್ನೆಗಂ ಕಪ್ಪಂಗವಿಯಾಗಿ ಕವಿವ ದ್ರುಪದವಿಳಯಾನಿಳನಂ ದ್ರೋಣಂ ಮಹಾದ್ರೋಣ ಪುಷ್ಕಾವರ್ತಕಂಗಳೆಂಬ ವಿಳಯಕಾಳನೀಳ ಜಳಧರ ವರ್ಷಂಗಳಿಂ ನಂದಿಸೆಯುಂ: **ಪಂಪಭಾ,** ೧೨. ೨೦ ವ)

**ಜಳಧರಮಾರ್ಗ** – ಆಕಾಶ (ಜಳಧರಮಾರ್ಗಂ ತಟಿನ್ಮಯಂ ದಿಗ್ವಳಯಂ ಕೆಳೆಗೊಳೆ ನವಸೃಷ್ಟಿಯನೇಂ ತಳೆದುದೊ ಭುವನಂ: **ರಾಜಶೇವಿ,** ೮. ೧೧೯)

**ಜಳಧರರೂಪ** – ಮೋಡದ ಆಕಾರ (ಅಂತು ನೋಡೆ ನೋಡೆ ಶರತ್ಸಮಯಸಮುದಿತ ಜಳಧರರೂಪದಿಂದ ಅದೃಶ್ಯರೂಪನಾಗಿ: **ಆದಿಪು,** ೩. ೮ ವ)

**ಜಳನೀಳಿಕೆ** – ಪಾಚಿ (ಶೈವಾಳಂ ಜಳನೀಳಿಕೆ ಶೈವಳಮದು ನೀರೊಳಾದ ಪಾವನೆರಯೆನಿಕುಂ: **ಅಭಿಧಾವ,** ೧. ೪. ೧೮)

**ಜಳಪಾನ** – ನೀರು ಕುಡಿಯುವುದು (ಜಳಪಾನಚ್ಛಳದಿಂ ಪ್ರಪಾಪ್ರಣಯಿನೀ ಶೃಂಗಾರಲೀಲಾಸುಧಾಜಳಮಂ ಕಣ್ಗಳಿನೀಂಟಿ .. .. ಭಾವರತಕೇಳೀಸೌಖ್ಯ ಪೀಯೂಷಸಂಕುಳಮಂ ಚಿತ್ತದಿನೀಂಟಿ ತದ್ವಿಷಯದದ್ವನ್ಯರ್ ಮನಂಬೆರ್ಚುವರ್: **ಚಂದ್ರಪ್ರಪು,** ೧. ೯೯)

**ಜಳಪ್ಲವ** – ಪ್ರವಾಹ (ಜಳಪ್ಲವದೊಳ್ ನಸುದೇಂಕುದೇಂಕೆ ತಳ್ತಲರ್ಗಣೆ ನಟ್ಟು ತೀವೆ ದೋಣೆಯಂತಿರೆ ಮೆಲ್ಲನೆ ಮೆಯ್ ಬೆಳರ್ತುರ್: **ವರ್ಧಮಾಪು,** ೮. ೯೧)

**ಜಳಬುದ್ಬುದ** – ನೀರಿನ ಗುಳ್ಳೆ ನೀರಿನ ಗುಳ್ಳೆ (ಜಳರುಹನಾಭನ ನಾಭಿಯ ಜಳಬುದ್ಬುದದೊಳಗೆ ಸುರಭಿಪರಿಮಳಮಿಳಿತ ಉಲ್ಲುಳಿತ ಅಳಿ ಜಲಜಮಾಯ್ತು ಆ ಜಳಜದೊಳಗೆ ಒಗೆದಂ ಹಿರಣ್ಯಗರ್ಭಂ: **ಪಂಪಭಾ,** ೧. ೫೯)

**ಜಳಮಂತ್ರ** – ಜಲಸ್ತಂಭನವಿದ್ಯೆ (ಎನ್ನ ಪೇೞ್ದ ಜಳಮಂತ್ರೋಪದೇಶಮಂ ಕೆಯ್ಕೊಂಡು: **ಪಂಪಭಾ,** ೧೩. ೭೦ ವ)

**ಜಳಯಂತ್ರ** – ಪಿಚಕಾರಿ (ಜಳಯಂತ್ರಂಗಳಂ ಕಳಸಂಗಳಂ ಕಳೆದುಕೊಂಡು ಮೇರೆದಪ್ಪಿ ತುಳುಂಕಿಯಾಡುವಾಗಳ್: **ಲೀಲಾವತಿ,** ೧೩. ೧೩೦ ವ)

**ಜಳರುಹನಾಭ** – ತಾವರೆಯನ್ನು ನಾಭಿಯಲ್ಲಿ ಪಡೆದವನು, ವಿಷ್ಣು (ಜಳರುಹನಾಭನ ನಾಭಿಯ ಜಳಬುದ್ಬುದದೊಳಗೆ ಸುರಭಿಪರಿಮಳಮಿಳಿತ ಉಲ್ಲುಳಿತ ಅಳಿ ಜಲಜಮಾಯ್ತು ಆ ಜಳಜದೊಳಗೆ ಒಗೆದಂ ಹಿರಣ್ಯಗರ್ಭಂ: **ಪಂಪಭಾ,** ೧. ೫೯)

**ಜಳರುಹಾಕರ** – ಸರೋವರ (ಅಲ್ಲಿ ಮಾಮರದಲ್ಲಿ ಮಲ್ಲಿಕಾಲತೆಯಲ್ಲಿ ಎಳೆಯಸುಗೆ ಮರದಲ್ಲಿ ಜಳರುಹಾಕರದಲ್ಲಿ: **ರಾಜಶೇವಿ,** ೧೦. ೫೭ ರಗಳೆ)

**ಜಳವಟ್ಟಿಗೆ** – ಒಂದು ಆಭರಣ (ಪೇರುರದ ಪರೆಪು ಕರಿಯ ದಂಡೆಯ ಜಳವಟ್ಟಿಗೆಯ ಬೆರಕೆವೆಳಗಿಂ ಸುರಧನುವಿನ ಹೊರಜೆ ಹತ್ತಧೈರಾವತಕ್ಕೆ ವೈರಮನೊಡರ್ಚೆ: **ಅನಂತಪು,** ೨. ೨೬ ವ)

**ಜಳವಿಹಂಗಮ** – ನೀರು ಹಕ್ಕಿ (ಜಳವಿಹಂಗಮ ಭೃಂಗನಿನಾದವ್ಯಾಪ್ತಸರೋವರಸಂಕುಳಂಗಳೊಳೆ ಪೂತ ಅದಿರ್ಮುರ್ತ್ತೆಯ: **ಆದಿಪು,** ೪. ೫೮)

**ಜಳಸ್ತಂಭಮಂತ್ರ** – ನೀರಲ್ಲಿದ್ದೂ ತೊಂದರೆಯಾಗದಂತೆ ತಡೆಯುವ ವಿದ್ಯೆ (ರಾಜರಾಜಂ ಸೈರಿಸದೆ ಚಿತ್ತಸ್ಖಲನೆಯಾಗೆ ಜಳಸ್ತಂಭನಮಂತ್ರಮೆಲ್ಲಂ ಮಾಯಾಮಂತ್ರಮಾಗೆ: **ಪಂಪಭಾ,** ೧೩. ೮೦ ವ)

**ಜಳಾಕರಪತಿ** – ವರುಣ (ಹರಿ ಶಿಖಿ ಯಮ ನಿರುತಿ ಜಳಾಕರಪತಿ ಮರುತ್ ಐಳಬಿಳ ಹರ ಅಹಿಪ ಶಶಿ ಭಾಸ್ಕರರರಂ ಸೌಧರ್ಮೇಂದ್ರಂ ನಿರವಿಸಿದಂ ದಶದಿಶಾಳಿಯೊಳ್ ಬಲಸಹಿತಂ: **ಶಾಂತೀಶ್ವಪು,** ೧೪. ೧೦೯)

**ಜಳೂಕ** – ಜಿಗಣೆ (ಮಟೆ ಭೋರ್ಭೋರೆಂದು ಅಹೋರಾತ್ರಂ ಉಡುಗದೆ ಕೊಳ್ವಲ್ಲಿ ಪೊಟಲ್ಗಳಿಂದ ಅವ್ವಳಿಸುತ್ತುಂ ಬಂದು ಪೆರ್ವಾವುಗಳ್ ಉಗುಬಗಿ ಮಾಟ್ಪಲ್ಲಿ ಮೆಯ್ಯಂ ಜಳೂಕಾಳಿಗಳ್ ಪೀರ್ವಲ್ಲಿ: **ಸುಕುಮಾಚ,** ೪. ೯)

**ಜಳಾವಗಾಹ** – ನೀರಲ್ಲಿ ಮುಳುಗಿ ಮೀಯುವುದು (ಜಳಾವಗಾಹಾಸೆಯಿಂ ವೈತರಣಿಯ ಪಿರಿಯ ದರಿಯಂ ಮೆಟ್ಟೆ: **ಶಾಂತಿಪು,** ೭. ೯೧ ವ)

**ಜಳೂಕಾ[ಕೆ]** – ಜಿಗಣೆ (ಜಳೂಕೆ ಜಿಗಳೆ: **ಅಭಿಧಾವ,** ೧. ೪. ೮)

**ಜಳೂಕಾಮುಖ** – ಜಿಗಣೆ (ಆ ಬಾಲಕರ್ ಬಾಲ್ಯದಿಂ ತೊಟ್ಟು ಗೋಳಾಂಗೂಳರಂತೆ ಸಹಜಚಾಪಲ್ಯರುಂ ಜಳೂಕಾಮುಖರಂತೆ ದೋಷಗ್ರಾಹಿಗಳುಂ ಸುರಶರಾಸನದಂತೆ ನಿರ್ಗುಣರು: **ಸುಕುಮಾಚ,** ೨. ೫ ವ)

**ಜಱುಚು** – ಹರಟೆ ಹೊಡೆ (ತೆಱನಱಿಯದೆ ಒಂದವಿಂದಂ ಜಱುಚುವುದುಂ .. .. ಅಱುಗುಲಿಯಪ್ಪವಂಗೆ ಸಹಜಮಿವಿನಿತುಂ: **ಸಮಯಪ,** ೧೩. ೫೮): ಜಂಬ ಕೊಚ್ಚು (ಅಱಿಕೆಯ ರೂವಿಲ್ಲದ ನಿನ್ನೆಱಿಯಂಗೆ ಉಬ್ಬಟೆಯು ಬೀರಮುಂಟೆಂದುದ್ದಂ ಜಱುಚಿದೆ ಕೇರಿಲ್ಲದೆ ಕಣ್ದೆಱೆವಿನೆಗಂ ಕರ್ಬುಗಡ ಬಿಲ್ಲಿದೇನಚ್ಚರಿಯೋ: **ಕಬ್ಬಿಗಕಾ,** ೧೪೨); ಬಹಳ ಮಾತು (ನೆಲನಂ ದುರ್ಯೋಧನಂ ತಾಗಿ ತಳ್ತಿಱಿದಲ್ಲದೆ ಕೂಡನೆ ಆಜಿಭರಮುಂ ಸಾರ್ಚಿತ್ತು ಅದೇನೆಂದು ಮುನ್ನಱುದಿಂಗಳ್ ಜಱುಚ್ಚುಮಿರ್ಪುದೆ: **ಪಂಪಭಾ,** ೯. ೯೨)

**ಜಱಿ** – ನಿಂದಿಸು ಬಾಯ್ಗೆವಂದಂತೆ ನುಡಿದಪಂ ಅತಿಧೂರ್ತನೆಂದುಕಂಡರೆಲ್ಲಂ ಜಱೆಯೆ: **ಧರ್ಮಾಮೃ,** ೯. ೯೦ ವ)

**ಜಾಂಗಲ** – ಮಾಂಸ (ಧರ್ಮ ಅಸ್ಥಿ ಶಕಲಂ ವಾಲಂ ವಿಷಾಣಂ ವಿನತ್ ಖುರಮಾಲಂಬಿತ ಜಾಂಗಲಂ: **ತ್ರಿಷಷ್ಟಿಪು,** ೨೭. ೩೩)

**ಜಾಂಗಳ** – ಬರಡುಭೂಮಿ (ಬಟಿಕಂ ದೇವಮಾತೃಕ ಸಾಧಾರಣ ಅನೂಪ ಜಾಂಗಳ ಭೇದಂಗಳುಮನ: **ಆದಿಪು,** ೮. ೬೩ ವ); ಮಾಂಸ

**ಜಾಂಗಳಿವಿದ್ಯಾವಿದುರ** – ಪರಿಣತ ವಿಷವೈದ್ಯ (ಮನಂಗೊಳಿಸುವ ಭೋಜನಗೃಹಕ್ಕೆ ರಾಜಾಧಿರಾಜಂ ಜಾಂಗಳವಿದ್ಯಾವಿದುರರ್ ಬೆರಸು ಬಿಜಯಂಗೆಯ್ವುದುಂ: **ಪಾರ್ಶ್ವನಾಪು,** ೮. ೪೯ ವ)

**ಜಾಂಡಲಕೆ** – ಒಂದು ಸಸ್ಯ (ಜಾಂಡಲಗೆಯ ಬೀಜಂ ಭೂಮಂಡಲದೊಳ್ ಪಸುರಡಗಂಗಿ ಪಾಱುವ ತೆಱದಿಂ: ಧರ್ಮಾಮೃ, ೯. ೮೫)

**ಜಾಂಬವ** – ಚಿನ್ನ (ಪೊಸಬಿಸಿಲದು ಪೆಱದೆಗೆದಿರೆ ಕಿಸುಸಂಜೆಯುಮುಡು ಸಮೂಹಮಂ ಮಿಸುಪವೊಲೇನೆಸೆದುದೊ ಪವಳಂ ಮುಕ್ತಾವಿಸರಂ ಜಾಂಬವ ಜಳಂ ಪೆಡಂಮೆಟ್ಟಲೊಡಂ: **ರಾಜಶೇವಿ,** ೬. ೧೧೪); ಸಮುದ್ರ (ಏನೆಸೆದುದೊ ಪವಳಂ ಮುಕ್ತಾವಿಸರಂ ಜಾಂಬವಜಳಂ ಪೆಡಂಮೆಟ್ಟಲೊಡಂ: **ರಾಜಶೇವಿ,** ೬. ೧೧೪)

**ಜಾಂಬುಕವನ** – ನೇರಿಳೆ ಮರಗಳ ವನ (ತರುಗಳ ಗೊಂದಳದಿಂ ಕಟ್ಟಿಲಿಸುತಿರ್ದ ಜಾಂಬುಕವನಮಂ: **ಕುಸುಮಾಕಾ,** ೭. ೮೩)

**ಜಾಂಬೂನದ** – ಚಿನ್ನ (ಅತಿಸುರಭಿಸುರಸಸುರುಚಿ ಫಲನಿಚಯಂಗಳಿಂದಂ ಮತ್ತಂ ಉತ್ತಪ್ತ ಜಾಂಬೂನದ ಕುಸುಮದಾಮಂಗಳಿಂದಂ: **ಆದಿಪು,** ೨. ೩೨ ವ)

**ಜಾಗಂಬೊಯ್** – ಜಾಗದ ಪೈರು ಬೆಳೆಸು (ರತ್ನದ ಕೇರ್ಗಳ್ ಜಾಗಂಬೊಯ್ದಂತಿರೆ ಪರಭಾಗಂಬಡೆದುವು ವಿವಾಹಗೇಹಾಂತರದೊಳ್: **ಆದಿಪು,** ೪. ೩೧)

**ಜಾಗ** – ಮರಕತ (ಹರಿನೀಲ ಸ್ತಂಭಮುಂ ಜಾಗದ ಪಡಲಿಗೆಯುಂ .. .. ಎಳಸೆ ಬೆಡಂಗಾದುದು ಉದ್ವಾಹಗೇಹಂ: **ಪಂಪರಾ,** ೫. ೧೧೨); ಶುಭಕಾರ್ಯದಲ್ಲಿ ಅಂಕುರಾರ್ಪಣದ ಅಂಗವಾಗಿ ಪಾತ್ರೆಯಲ್ಲಿ ಬೆಳೆಯುವ ಪೈರು (ಪಚ್ಚೆಯ ಪಸಲೆಯ ಪಸುರಂ ಅಸಕಟಿದು ನಿಮಿರ್ದ ನೆಲವಡಲಿಗೆಯ ಜಾಗಂಗಳುಮಂ; **ಆದಿಪು,** ೮. ೧೫ ವ)

**ಜಾಗರ** – ಎಚ್ಚರ (ಅಂತು ಆ ಇರುಳ ನಾಲ್ಕು ಜಾವಮುಮಂ ಕಾಮನ ಜಾಗರದಂತೆ ಅವರ್ಗೆ ಕೆಂದಿನೊಳೆ ಬೆಳಗಾಗೆ: **ಪಂಪಭಾ,** ೩. ೮೩ ವ); ಶುಭಸಮಯದಲ್ಲಿ ಬೆಳೆಸುವ ಪಾತ್ರೆಯಲ್ಲಿನ ಮೊಳೆತ ಪೈರು (ಪಸುರ್ಪೆಸೆದು ನಿಮಿರ್ದ ಜಾಗರಂಗಳಿಂ ತೊಳಗುವ .. .. ಕಾಂಚನದ್ರೋಣಿಗಳಿಂ: **ಕಾದಂಬ,** ೩. ೧೦೫ ವ)

**ಜಾಜಿಪತ್ತೆ** – ಜಾಜಿಯ ದಳ (ತುಱುಂಬಿದ ಜಾದಿ ಪತ್ತೆ ಕತ್ತರಿಸಿದ ಗಡ್ಡಂ .. .. ಅಗುಂದಲೆಯಾದುದು ಬೀರನಣ್ಮಿನಾ: **ನೇಮಿನಾಪು,** ೫. ೩೧)

**ಜಾಜು** – [ಧಾತು] ಕೆಂಪಾದ ಕಲ್ಲು, ಕಾವಿ ಕಲ್ಲು (ಎರಡುಂ ಬಲದ ಕರಿಘಟೆಗಳ್ ಒಂದೊಂದಱೊಳ್ ತಾಗಿ ತಟ್ಟಿಱಿಯೆ ಬಿಸುನೆತ್ತರ ಅರ್ಬಿಗಳ್ ಉರ್ವಿ ಪಾಯೆ ಪೇರರ್ವಿಗಳ್ವೆರಸು ಜಾಜಿನ ಪರ್ವತಂಗಳಂತೆ ಕೆಡೆದಟ್ಟೆಗಿತಟ್ಟೆದಾಗಳ್: **ಪಂಪಭಾ,** ೧೦. ೯೬ ವ)

**ಜಾಜ್ವಲ್ಯಮಾನ** – ಹೊಳೆಯುತ್ತಿರುವ (ಜಾಜ್ವಲ್ಯಮಾನ ಮಣಿಮಕುಟಾಂಶುಜ್ಜ್ವಳ ಖೇಚರೇಂದ್ರ ಪರಿಷದ್ವಳಯಂ: **ಶಾಂತಿಪು,** ೫. ೧೫೦)

**ಜಾಣ್** – ಬುದ್ಧಿವಂತಿಕೆ (ಶೂರ್ಪಕವೈರಿ ಕಾಲುಗುರ್ಗೆ ವರ್ಪನೊ ಶೀತಮರೀಚಿ ಕಾಂತಿಗೇಂ ವರ್ಪನೊ ವಾಸವಂ ಸಿರಿಗೆ ವರ್ಪನೊ ವೃತ್ರಹಮಂತ್ರಿ ಜಾಣ್ಗೆ ಮೇಣ್ ವರ್ಪನೊ: **ಶಾಂತಿಪು,** ೭. ೧೧೮)

**ಜಾಣ್ನುಡಿ** – ಜಾಣತನದ ನುಡಿ (ಕಣ್ಣಮನ ಜಾಣ್ನುಡಿ ಪಂಪನ ರೀತಿ: **ಜಗನ್ನಾವಿ,** ೧. ೧೦)

**ಜಾತ** – ಉಂಟಾದ, ಹುಟ್ಟಿದ (ಕ್ರಂದತ್ ಸ್ಯಂದನ ಜಾತ ನಿರ್ಗತ ಶಿಖಿಜ್ವಾಳಾಸಹಸ್ರಂಗಳ್ ಆಟಂದೆತ್ತಂ ಕವಿದೇಟ್ವಿ ಬೇವ ಶವಸಂಘಾತಂಗಳಂ: **ಪಂಪಭಾ,** ೧೩. ೭೧); ಸಮೂಹ (ಜೀವಜಾತದಿಂದೆನಗೆ ಬಲಿಯನಿತ್ತೊಡೆ ಮುನಿವೆಂ: **ಯಶೋಧಚ,** ೪. ೭೩)

**ಜಾತಕರ್ಮ** – ಮಗು ಹುಟ್ಟಿದಾಗ ಮಾಡುವ ಕರ್ಮ, ಷೋಡಶಸಂಸ್ಕಾರಗಳಲ್ಲಿ ಒಂದು (ಅರ್ಹತ್ಪರಮೇಶ್ವರಂಗೆ ಮಹಾಮಹಮಂ ಮಾಡಲ್ವೇಟ್ಟು ಜಾತಕರ್ಮೋತ್ಸವಮನೊಡರ್ಚಿ: **ಚಂದ್ರಪ್ರಪು,** ೩. ೧೦೨ ವ)

**ಜಾತನಿರ್ವೇದ** – ವಿರಕ್ತಿ ಹೊಂದಿದವನು (ಸಂಸ್ಕೃತಿ ಕೃತಾನುಶಯನುಂ ಜಾತನಿರ್ವೇದಾತಿಶಯನುಂ ಆಗಿ: **ಚಂದ್ರಪ್ರಪು,** ೨. ೩೦)

**ಜಾತಪ್ರಿಯ** – ದಯಾವಂತ (ಜಾತಪ್ರಿಯನಾತಂ ತನುಜಾತನೆ ತಾನಾಗೆ ತನ್ನ ಕಣ್ಣಂ ಮನಕಂ ಜಾತಕುತೂಹಲ ನಾನಾ ದ್ಯೋತಿಶಯಮನರಸನಚಲದಂತಿರೆ ನೋಟ್ಟುಂ: **ಅಜಿತಪು,** ೫. ೫೩)

**ಜಾತರೂಪ** – ಬೆತ್ತಲೆ, ದಿಗಂಬರ ಜೈನರ ಸನ್ಯಾಸ (ತದ್ಗುರುವಿನ ಮತಮಂ ಭಕ್ತಿಯ ಭರದಿಂದಂ ಜಾತರೂಪಮಮಂ ಕೈಕೊಂಡರ್: **ಆದಿಪು,** ೯. ೮೧); ಚಿನ್ನ (ಸರ್ವ್ವೋಮಾಂಗನಾಗಿಯುಂ ಜಾತರೂಪರುಚಿಮತ್ ವಿಗ್ರಹನುಂ: **ಶಬರಶಂ,** ೧. ೭೮ ವ)

**ಜಾತರೂಪಧರ** – ದಿಗಂಬರ ಸನ್ಯಾಸಿ (ವೀರಸಂಸ್ಥಾನಾರೂಢನಂ ಮಹಾಬಳನಂ ಜಾತರೂಪಧರನಂ ಮಾಡಿ: **ಆದಿಪು,** ೨. ೫೧ ವ)

**ಜಾತವೇದ** – ಅಗ್ನಿ (ಗಣನಾತೀತ ಆಜ್ಯಾಹುತಿಗಣದಿಂದಂ ತಣಿಯೆ ಜಾತವೇದನುಂ ಆ ಬ್ರಾಹ್ಮಣಸಮಿತಿ ಬೇಳೆ ದೇವರ್ ತಣಿಯುಂಡರ್ ನೆರೆದು ದಿವ್ಯ ಹವ್ಯಾಮೃತಮಂ: **ಪಂಪಭಾ,** ೬. ೩೭)

**ಜಾತವೇದೋಜಾತೆ** – ಅಗ್ನಿಯಲ್ಲಿ ಹುಟ್ಟಿದವಳು, ದ್ರೌಪದಿ (ಅಂತಿರ್ದ ಜಾತವೇದೋಜಾತೆಯ ಪಾರಿಜಾತ

ಪಲ್ಲವೋಲ್ಲಸಿತ ನಿಕಾಮಕೋಮಲಕರಸ್ಪರ್ಶನದೊಳಂ: **ಗದಾಯು,** ೮. ೬೧ ವ)

**ಜಾತಿ –** ಹುಟ್ಟು (ಜಾತಿಜರಾಮರಣಂಗಳಿಂದಪ್ಪ ಬಾಧೆಯಿನಗಲ್ದ ಶಾಶ್ವತಮಪ್ಪ ಮೋಕ್ಷಸುಖಂಗಳನೆ ಬೇಟ್ಪಿನ್: **ವಡ್ಡಾರಾ** ೧೧೩, ಸಾ ೨೨); ಕುಲ (ಜಾತಿಯೊಳೆಲ್ಲಮುತ್ತಮದ ಜಾತಿಯ ವಿಪ್ರಕುಲಂಗೆ ಪೇಟಿಲೇಮಾತೊ: **ಪಂಪಭಾ,** ೧೪. ೪೮); ಜಾಜಿಯ ಗಿಡ (ಸೊಗಯಿಸಿ ಬಂದ ಮಾಮರನೆ ತಳ್ತ ಎಲೆವಳ್ಳಿಯೆ ಪೂತ ಜಾತಿಸಂಪಗೆಯೆ ಕುಕಿಲ್ವ ಕೋಗಿಲೆಯೆ ಪಾಡುವ ತುಂಬಿಯೆ ನಲ್ಲರ ಒಳ್ಮೊಗಂ ನಗೆಮೊಗದೊಳ್ ಪಳಂಚಲೆಯೆ ಕೂಡುವ ನಲ್ಲರೆ ನೋಟಿಪ್ಪೊಡೆ: **ಪಂಪಭಾ,** ೪. ೨೮)

**ಜಾತಿಜಾಂಗಣ –** ಸತ್ಕುಲಜರ ಮನೆಯ ಪರಿಸರ (ಬಂದ ಮಾವಿಲ್ಲದ ನಮದನಂ ಕುಳಿರ್ವ ನಂದನಮಿಲ್ಲದ ಜಾತಿಜಾಂಗಣಂ: **ಅನಂತಪು,** ೩. ೯)

**ಜಾತಿಜಾಣ್ –** ದೇಸಿಯ ಕೌಶಲ (ಕಂದಮುಂ ಅಮಳಿನ ವೃತ್ತಮುಂ ಒಂದೊಂದೆಡೆಗೊಂಡು ಜಾತಿಜಾಣ್ ಎಸೆಯೆ ಬೆಡಂಗೊಂದಿವಱೊಳ್ ಅಮರೆ ಪೇಟಲ್ ಸುಂದರ ರೂಪಾ ಬೆದಂಡೆಗಬ್ಬಮದಕ್ಕುಂ: **ಕವಿರಾಮಾ,** ೧. ૩೪)

**ಜಾತಿಬಧಿರ –** ಹುಟ್ಟು ಕಿವುಡ (ಜಾತಿಬಧಿರನಂತೆ ಅನ್ಯರ ಕಿವಿಯೊಳ್ ಕೇಳ್ವುದಂ ನುಡುವನಲ್ಲೆಂ: **ಪಂಚತಂತ್ರ,** ೧೫೨ ವ)

**ಜಾತಿಬೆಳ್ –** ಹುಟ್ಟು ದಡ್ಡ (ಸಂಧಿಯಂ ಮಾಡಲೊಲ್ಲದೆ ಸುಹೃದ್ಬಲಮೆಲ್ಲಮನಿಕ್ಕಿ ಯುದ್ಧಮಂ ಮಾಡಿದ ಜಾತಿಬೆಳ್ ನಿನಗೆ ಅದೇವಿರಿದು ಈ ಎಡಱ್ ಎಂದು ಮುಂದೆ ಬಂದು ಏಡಿಸುವಂತಿರೆ ಆಡಿದುದೊಂದು ಮರುಳ್ ಫಣಿರಾಜಕೇತುವಂ: **ಪಂಪಭಾ,** ೧೩. ೫೪)

**ಜಾತಿಸ್ಮರ –** ಹಿಂದಿನ ಜನ್ಮದ ನೆನಪುಳ್ಳವನು (ಜಾತಿಸ್ಮರರೆನೆ ನೆರೆದೋರೊರ್ವರೊಳ್ ಮತ್ತಂ ಅತ್ಯುತ್ಸವದಿಂದಂ ಮರ್ತ್ಯಭೋಗಂಗಳಂ ಅನುಭವಿಸಲ್ ನೋಂತರ್: **ಆದಿಪು,** ೪. ೬೧)

**ಜಾತಿಸ್ಮರತೆ –** ಹಿಂದಿನ ಜನ್ಮದ ನೆನಪು (ಜಾತಿಸ್ಮರತೆ ವಿರಕ್ತಿಗೆ ಹೇತು ಎನುತ್ತಿರ್ಪರ್: **ಕಾದಂಬ,** ೧೦. ೫)

**ಜಾತೀಪತ್ರ –** ಜಾಯಿಕಾಯಿ (ಅಭಿಷೇಕಂಗೆಯ್ದು ಕರ್ಕೋಳ ಜಾತೀಫಲ ಜಾತೀಪತ್ರ ಗೋಶೀರ್ಷ ಚಂದನ ಲವಂಗ ಕುಂದುರುಷ್ಕಾದಿ ಸುಗಂಧದ್ರವ್ಯಸಹಿತನಾಗಿ: **ಅಜಿತಪು,** ೪. ೭೦ ವ)

**ಜಾತೀಫಲ –** ಜಾಯಿಕಾಯಿ (ಅಭಿಷೇಕಂಗೆಯ್ದು ಕರ್ಕೋಳ ಜಾತೀಫಲ ಜಾತೀಪತ್ರ ಗೋಶೀರ್ಷ ಚಂದನ ಲವಂಗ ಕುಂದುರುಷ್ಕಾದಿ ಸುಗಂಧದ್ರವ್ಯಸಹಿತನಾಗಿ: **ಅಜಿತಪು,** ೪. ೭೦ ವ)

**ಜಾತೋತ್ಸವ –** ಹುಟ್ಟುಹಬ್ಬ (ಮಹಾವಿಭೂತಿಯಿಂ ಜಾತೋತ್ಸವಮಂ ಮಾಡಿ: **ಪಂಪರಾ,** ೧೬. ೨ ವ)

**ಜಾತ್ಯಂಧ –** ಹುಟ್ಟುಕುರುಡ (ಅಂಧನೃಪಸುತನಯೋ ಜಾತ್ಯಂಧನಯೋ ಮೆಟ್ಟದಗಲ್ದು ಪೋಗೆನುತುಂ ಕೋಪಾಂಧರ್ ಜಡಿದರ್ ಪತಿಯ ಕಬಂಧಮಂ ಎಡಗಲಿಸಿ ಪೋಪ ದುರ್ಯೋಧನನಂ: **ಗದಾಯು,** ೪. ೧೬)

**ಜಾತ್ಯಂಧಕ –** ಜಾತ್ಯಂಧ (ಅಂಬೆಗೆ ಧೃತರಾಷ್ಟ್ರನೆಂಬ ಜಾತ್ಯಂಧಕಂ ತನೂಜನಾದಂ: **ಕರ್ಣನೇಮಿ,** ३. ३೦ ವ)

**ಜಾತ್ಯಂಧೆ –** ಹುಟ್ಟುಕುರುಡಿ (ನೇಜಿಲಪಣ್ಣಂ ತಡವರಿಸಿ ಆಯ್ದು ತಿನ್ಬ ಜಾತ್ಯಂಧೆಯಪ್ಪ ಪೊಲೆಯರ ಕೂಸಂ ಕಂಡು: **ವಡ್ಡಾರಾ,** ಪು. ೯. ಸಾ, ೧೭)

**ಜಾತ್ಯಶ್ವ –** ಒಳ್ಳೆ ತಳಿಯ ಕುದುರೆ (ಅಂತು ತಮ್ಮ ಮನದೊಳೊಡಂಬಟ್ಟಂತೆ ಮನಮಂ ಎಡಗಲಿಸಿ ಪರಿವ ಜಾತ್ಯಶ್ವಂಗಳೆಲ್ಲಂ ಅಟಿಗಾಳೆಗದೊಳ್ ಸತ್ತೊಡೆ: **ಪಂಪಭಾ,** ೮. ೯೪ ವ)

**ಜಾತ್ರೆಮರುಳ್ಗಳ್ –** ವಿಚಾರಶೂನ್ಯರು (ಕುರುಕ್ಷೇತ್ರಮಂ .. .. ಜಾತ್ರೆಮರುಳ್ಗಳ್ ಎಯ್ದೆ ಬಲವರ್ಪರ್: **ಸಮಯಪ,** ೧೨. ೧೨)

**ಜಾದಿ –** [ಜಾತಿ] ಜಾಜಿ (ಸೊಡರ ಬೆಳಗಿನೊಳ್ ಕೊರಗುವ ಜಾದಿಯಂ ತುಂಬಿಯೊಳ್ಪುಗೆಗೊಂಡ ಸಂಪಗೆಯಂ: **ಆದಿಪು,** ೧೧. ೧೯)

**ಜಾದಿನ ಸೇಲೆ –** ಕಾವಿಬಣ್ಣದ ಬಟ್ಟೆ (ಮಹಾಪದ್ಮನಂ ಕಿಡಿಸಿದಲ್ಲದೆ ಕಾಸೆಗಳಂ ಕಳೆಯೆನೆಂದು ಜಾದಿನ ಸೇಲೆಗಳನ್ನುಟ್ಟು ಭಗವಂತ ವೇಷಮಂ ಕೈಕೊಂಡು: **ವಡ್ಡಾರಾ,** ಪು ೧೮೬, ಸಾ ೬)

**ಜಾದಿನೊಳೂಡು –** ಕಾವಿ ಬಣ್ಣವನ್ನು ಹಚ್ಚು (ಎನಗೆ ಜಾದಿನೊಳೂಡಿದವೆರಡು ವಸ್ತ್ರದೊಳವು ಪೊನ್ನ ಗುಂಡಿಗೆಯುಮುಂಟು ಮೂಱುದಂಡಮುಂ ಒಳವು: **ವಡ್ಡಾರಾ,** ಪು ೧೯೦, ಸಾ ೧೧)

**ಜಾದು –** ಕಾವಿಬಣ್ಣ (ಅಣೆದುದು ಕೊತ್ತಿ ನೂಂಕಿದುದು ಪೊಕ್ಕೊಡನೆ ಇಕ್ಕಿದುದು ಏಱ ಬಾಯ್ಗಳಿಂ ನೆಣನುಗೆ ನೆತ್ತರುಚ್ಚಳಿಸೆ ಜಾದಿನ ಬೆಟ್ಟಿ ಮಗುಟ್ಟುವಂತೆ: **ಕಬ್ಬಿಗಕಾ,** ೨೨೨); ಜಾಜು, ಗೈರಿಕ ಧಾತು

**ಜಾನ –** ಧ್ಯಾನ, ಚಿಂತನೆ (ಯಮರಾಜನಂ ಅದ್ಭುತ ತೇಜನಂ ಸರೋಜಾನನೆ ಜಾನದಿಂ ಬರಿಸೆ: **ಪಂಪಭಾ,** ೧. ೧೧೯)

**ಜಾನಿಸು –** ಧ್ಯಾನಮಾಡು (ಕಿತ್ತಯ್ಯಾ ನಿಮಗೀಗಳ್ ಪ್ರಾಣಂ ಪೋಗಲ್ಬಗೆದಪ್ಪುದು ದೇವರಂ ಜಾನಿಸುವುದು: **ವಡ್ಡಾರಾ,** ಪು ೮೩, ಸಾ ೧೧)

**ಜಾನುಚಂಕ್ರಮಣ –** ಮೊಣಕಾಲ ಮೇಲೆ ಮುಂದೆ ಹೋಗುವುದು, ಅಂಬೆಗಾಲಿಕ್ಕುವುದು (ಜಾನುಚಂಕ್ರಮಣಂ ಹರ್ಮ್ಯಾಂಗಣದೊಳ್ ಎಂದು ಸುಟಿಗುಮೊ .. .. ಕುಮಾರಂ: **ಕಾದಂಬ,** ೨. ೫೮)

**ಜಾನುದಘ್ನ –** ಮೊಳಕಾಲು ಮುಟ್ಟುವ (ಚುಳುಕಪಾನಮಾತ್ರ ಜಾನುದಘ್ನಜಲದುರ್ಗನುಮಾಗಿ ನಡೆದು: **ಆದಿಪು,** ೧೪. ೫೩ ವ)

**ಜಾಮಾತೃ –** ಮಗಳ ಗಂಡ, ಅಳಿಯ (ಚಿತ್ರರಥನುಂ ಗೌರಿವೆರಸು ಹಂಸನುಂ ಬಂದು ಜಾಮಾತೃದರ್ಶನ ಉತ್ಫುಲ್ಲವದನರ್ .. .. ಆನಂದಪರಂಪರೆಯನೆಯ್ದಿ: **ಕಾದಂಸಂ,** ೮. ೬೧ ವ)

**ಜಾಮಿಸು –** ಸುಡು, ಶವಸಂಸ್ಕಾರಮಾಡು (ಈತನಂ ಆರುಂ ಜಾಮಿಸದೆಡೆಯೊಳ್ ಜಾಮಿಸುವೆಂ ಎಂದು ಮತ್ತಂ ಪೊತ್ತುಕೊಂಡು ಪೋಗಿ .. .. ಚಂದನದ ಪುಳ್ಳಿಗಳಂ ತಂದೊಟ್ಟಿ ಜಾಮಿಸಲಿರ್ದಾಗಳ್: **ಹರಿವಂಶ,** ೧೪. ೫೦ ವ)

**ಜಾಯಾ –** ಹೆಂಡತಿ (ಮುಗಿದ ಅಂಜಲಿಪುಟಮಂ ತರಂಗಿತಮಂ ಇದಿರೊಳ್ ನಿಂದು ಅಂಜನಗಿರಿಯವೊಳಿರೆ ಕೊಟ್ಟಂ ಜಯಜಾಯಾಸಹಾಯಂ ಅಭಯಮನಾಗಳ್: **ಪಂಪರಾ,** ೪. ೭೩)

**ಜಾಯಾಜೀವ** – ನಟ (ಬಹುರೂಪಮಂ ತಳೆದು ಜಾಯಾಜೀವಂ ಎಂತು ಅಂತೆವೋಲ್ ತಿಱಿಗುಂ: **ವರ್ಧಮಾಪು,** ೧೦. ೫೧)

**ಜಾಯಾಜೀವಿ** – ನಟ (ರಸಿಕರ್ ಬಣ್ಣಿಸೆ ಭಾವುಕರ್ ಪೊಗೞೆ ಜಾಯಾಜೀವಿಗಳ್ ಕೂರ್ತು ಕೀರ್ತಿಸೆ: **ಪುಷ್ಪದಂಪು,** ೧೨. ೫೧)

**ಜಾಯಿಲ** – ನಾಯಿ (ಮಿಕ್ಕುಪುಗಲತ್ತು ಕಿರ್ಗಣ್ಣಿಕ್ಕುತ್ತೊಳಪೊಕ್ಕ ಜಾಯಿಲನ ಬಡನಡುಂ ಚಕ್ಕನೆ ತುಂಡಿಸಿ: **ಗಿರಿಜಾಕ,** ೧. ೧೦೫); [ಯಾಯಿಲ] ಜಾತಿ ಕುದುರೆ (ಜಾಯಿಲಮೊಂದೆರಡೆಂದು ತೋಱಿ ನೆಟ್ಟನೆ ಪದಿನೆಂಟು ಕೋಟಿವರೆಗಂ ತಳರ್ದತ್ತು ತುರಂಗಸಾಧನಂ: **ಆದಿಪು,** ೧೧. ೩೧)

**ಜಾಯೆ** – ಹೆಂಡತಿ (ಜೀರ್ಣಕೋಟರ ವಿರಳಾಭ್ಯಂತರದೊಳ್ ಇರ್ದುದೊಂದು ಶುಕಂ ತನ್ನ ಜಾಯೆವೆರಸು ಪರಿಣತವಯಸಂ: **ಕಾದಂಸಂ,** ೧. ೪೨)

**ಜಾರಜಾತ** – ಜಾರನಿಂದ ಹುಟ್ಟಿದವನು (ಅಧಮರ ಪೊಲ್ಲಮಾನಸರ ದುರ್ಜನರ ಜಾರಜಾತರ ವಿಜಾತಿಗಳ್ಗೆ ಯೋಗ್ಯಮಪ್ಪ ಅಯೋಗ್ಯಮಂ: **ವಡ್ಡಾರಾ,** ಪು ೮, ಸಾ ೧೪)

**ಜಾಲ** – ಬಲೆ (ಒಂದು ದಿವಸ ಆ ಮೀನಂ ಒರ್ವ ಜಾಲಗಾಱಂ ಜಾಲದೊಳ್ ಪಿಡಿದು ಅಲ್ಲಿಗೆ ಅರಸಪ್ಪ ದಾಶನಲ್ಲಿಗೆ ಉಯ್ದು ತೋಱಿದೊಡೆ: **ಪಂಪಭಾ,** ೧. ೬೮ ವ)

**ಜಾಲಗಾಱ** – ಬೆಸ್ತ (ಒಂದು ದಿವಸ ಆ ಮೀನಂ ಒರ್ವ ಜಾಲಗಾಱಂ ಜಾಲದೊಳ್ ಪಿಡಿದು ಅಲ್ಲಿಗೆ ಅರಸಪ್ಪ ದಾಶನಲ್ಲಿಗೆ ಉಯ್ದು ತೋಱಿದೊಡೆ: **ಪಂಪಭಾ,** ೧. ೬೮ ವ)

**ಜಾಲಗಾಱಿತಿ** – ಬೆಸ್ತ ಹೆಂಗಸು (ಬ್ಯಾಸಂ ಗಡ ಜೆಡೆದೊಂಗಲ್ ವೆರಸಿ ಜಾಲಗಾಱಿತಿಗೊಗೆದಂ: **ಸಮಯಪ,** ೧೦. ೧೫೩)

**ಜಾವ** – [ಯಾಮ] ಮೂರು ಗಂಟೆಯ ಅವಧಿ (ಅಂತು ಆ ಇರುಳ ನಾಲ್ಕು ಜಾವಮುಮಂ ಕಾಮನ ಜಾಗರದಂತೆ ಅವರ್ಗೆ ಕೆಂದಿನೊಳೆ ಬೆಳಗಾಗೆ: **ಪಂಪಭಾ,** ೩. ೮೩ ವ); ಪಹರೆ (ಬಲಿದು ಕಾಲ್ಗಾಪಿನಣಿವೆರಸು ನಿಂದ ಜಾವದ ಮದಗಜಂಗಳುಮಂ: **ಆಚವರ್ಧ,** ೯. ೫೬ ವ); ಪಹರೆಯವರ ಕಾವಲುಕೋಣೆ (ಹೃದಯಪ್ರಿಯರಂತೊಱಗಿದ ಪದದೊಳ್ ಗರಟಿಗೆ ಜಾವದುಕ್ಕಡದುಲಿ ಮೞ್ಗಿದ ಪೊತ್ತು: **ಯಶೋಧಚ,** ೨. ೨೭)

**ಜಾವಜ್ಜೀವ** – ಜೀವವಿರುವವರೆಗೆ (ಬೆಟ್ಟದ ಮೇಗಣ ಏಕಸಱಿಯ ಮೇಗಿರ್ದು ಚತುರ್ವಿಧಮಪ್ಪ ಆಹಾರಕ್ಕಂ ಶರೀರಕ್ಕಂ ಜಾವಜ್ಜೀವಂ ನಿವೃತ್ತಿಪೂರ್ವಕಂ ಸನ್ಯಸನಂಗೆಯ್ದರ್: **ವಡ್ಡಾರಾ,** ಪು ೮೮, ಸಾ ೨೮)

**ಜಾವಮಿರ್** – ಕಾವಲಾಗಿರು (ಇಲ್ಲಿಯೆ ಇರುಳೀ ದಾಷ್ಟಿಕಂಗೆ ಜಾವಮಿರಿಂ ಎಂದು ಪೇೞ್ದು ಪೋದಂ: **ವಡ್ಡಾರಾ,** ಪು ೧೪, ಸಾ ೨೫)

**ಜಾವಮಿರಿಸು** – ಕಾವಲಾಗಿರಿಸು (ನಾಲ್ವರೊಳ್ಳಿದರಪ್ಪ ಸುಭಟರಂ ಜಾವಮಿರಿಸಿ ಪೋದನ್: **ವಡ್ಡಾರಾ,** ಪು ೧೪, ಸಾ ೧೫)

**ಜಾವಳ** – ಸಾಮಾನ್ಯ (ಕಡಲಳ್ಕಿ ಬಟ್ಟೆಗೊಟ್ಟುದು ಗಡ ನಡೆನೋಳ್ಪಾಗಳ್ ಆತನೇಂ ಜಾವಳನೇ: **ರಾಜಶೇಖಿ,** ೬. ೧೧೯)

**ಜಾವಳಿಸು** – ಗರ್ವಿಸು (ಎನಿತಂ ಜಾವಳಿಸುವೆಯೆಲವೊ ದೂತನೋ ನೀಂ ಬೂತೋ: **ಆಚವರ್ಧ,** ೭. ೫೮)

**ಜಾಹ್ನವಿ** – ಜಹ್ನು ಋಷಿಯ ಮಗಳು, ಗಂಗೆ (ಏ ದೊರೆ ಪೆಂಪೊಲಕ್ಷ್ಮೀ ನಿಜವಲ್ಲಭೆ ಜಾಹ್ನವಿ ತನ್ನ ಪಾದಪದ್ಮೋದಕಂ: **ಜಗನ್ನಾಪಿ,** ೧. ೨೦)

**ಜಾಳಕ** – ಸಮೂಹ (ತಳತ್ತಳಿಸಿದುದು ಈಷತ್ ಉನ್ನಿಷಿತಮಂಡಳ ಚಂಡಕರಾಂಶುಜಾಳಕಂ: **ಲೀಲಾವತಿ,** ೩. ೭೫)

**ಜಾಳಪಟ** – ಬಲೆಯ ಹಾಳೆ (ಆತನ ಕೆಲದೊಳ್ ಜಾಳಪಟಂ ತೂಂತಿಟ್ಟಂತೆ ಸಂದಣಿಸಿ ನಿಂದ ಗೋಪಕುಮಾರರಣಿಯ ನಡುವೆ: **ಪಂಪಭಾ,** ೧೦. ೫೭ ವ)

**ಜಾಳಮಾರ್ಗ** – ಕಿಟಕಿ (ಗಣಿಕೆಯರ ವಿಳಾಸಾಗರದೊಳ್ ಜಾಳಮಾರ್ಗಪ್ರಣಯಿಸಿಯರ ಅಪಾಂಗಶ್ರೇಣಿಗಳ್ ಮೂಱು ಬಣ್ಣಂ ಪೆಣೆದೊದವೆ: **ಆದಿಪು,** ೧೧. ೨೩)

**ಜಾಳರಂಬೋಗು** – ಜರ್ಜರಿತಗೊಳ್ಳು (ನಿಶಿತಾಸ್ತ್ರಹತಿಯಿಂ ಆ ಮುನಿಯ ಶರೀರಂ ಕೂಡೆ ಕಾಳರಂಬೋಗಿರೆ: **ಪಾರ್ಶ್ವನಾಪು,** ೧೨. ೮೫)

**ಜಾಳರಿಗೆ** – ಜಾಲರಿಯಿರುವ ಕಿಟಕಿ (ಇಂದ್ರನೀಲದ ಭದ್ರದೊಳಂ ಕರ್ಕೇತನದ ಜಾಳರಿಗೆಯೊಳಂ ಪಳುಕಿನ ಚಿತ್ರಭಿತ್ತಿಯೊಳಂ ವಿವಾಹಗೇಹಮಂ ಸಮೆಯಿಸಿ: **ಪಂಪಭಾ,** ೩. ೩೪ ವ); ಬೆಳ್ಳಿ

**ಜಾಳಾಂತರ** – ಜಾಳರಿಗೆ (ಮೇಗಿರ್ದು ಗವಾಕ್ಷ ಜಾಳಾಂತರಂಗಳಿಂದಂ ದಿಶಾವಲೋಕನಂ ಗೆಯ್ಯುತ್ತಿರ್ಪನ್ನೆಗಂ ಅರ್ಧಗಪ್ಪಡದ ಸಂಘಂ ಭೈಕ್ಷಂ ಕಾರಣಮಾಗಿ ಅರಮನೆಯಂ ಪುಗುವುದಂ ಅರಸಂ ಕಂಡು: **ವಡ್ಡಾರಾ,** ಪು. ೯೩. ಸಾ. ೯)

**ಜಾಳಾಂಧರ** – ಜಾಳರಿಗೆ (ಹೃದಯಂ ಜಾಳಂಧರಂಬೋಪಿನಂ ಅಂಬೆಸೆದೆಚ್ಚಂ .. .. ಕಾಮಂ: **ನೇಮಿನಾಪು,** ೪. ೧೪೬)

**ಜಾಳಿಸು** – ಹೋಗು (ಶಕುಂತಪಾಳಿಕೆಯರ್ ಪೊಱಗೆ ವಾಸಯಷ್ಟಿಗಳೊಳ್ ನಱಿದ ಪೊನ್ನ ಪಂಜರದ ಪುಗಿಲ್ಗಳಿಂ ಜಾಳಿಸಿ ಪೊಕ್ಕು: **ಚಂದ್ರಪ್ರಪು,** ೮. ೪೩ ವ)

**ಜಾಱು** – ಅನುಮಾನ (ನೀಱೆಯರ ಮನಮನೆಱಗಿಸೆ ಜಾಱೆಂ ಜವ್ವನದಂ ಅಮರನೆಸೆದಂ ನಿಸದಂ: **ಪಾರ್ಶ್ವನಾಪು,** ೫. ೧೦೨); ಹಿಮ್ಮೆಟ್ಟುವಿಕೆ (ಪಾಱುವ ಪಾಱುಂಬಳೆ ಕೊಳೆ ಜೀಱೆಲ್ದುಂಬರಕೆ ತಲೆ ಸಿಡಿಲ್ದೊಡಂ ಆ ಕಾಯ್ದಾಱದೆ ಹರಣಂಗೆಯ್ದುವು ಜಾಱಲ್ಲದೆ ಜೋದರ ಅಟ್ಟೆಗಳ್ ಕೆಲವಾಗಳ್: **ಪಂಪಭಾ,** ೧೦. ೯೫); ಮಾಯೆ (ಮಾಱಾಂತ ದಾನವರ್ಕಳ ಜಾಱೆಂದರ್ವಿಸುವ ಬಳಮಂ: **ಕರ್ಣನೇಮಿ,** ೧೨. ೨೪)

**ಜಾಱುಂಗಲ್** – ಜಾರಿಕೆಯುಳ್ಳ ಕಲ್ಲು (ಸಂದಣಿಸಿ ಬರ್ಪ ಸೊರ್ಕಾನೆಗಳ ಕಾಲ್ದೊಱೆಗೆ ನೆಲನೊಂದೆಸೆಗೊಲೆದು ಜಾಱುಗಲ್ಲಂತೆ ತೋಱೆಯುಂ: **ಕಬ್ಬಿಗಕಾ,** ೨೮೮)

**ಜಿಂಕರ** – ಒಂದು ಬಗೆಯ ವಾದ್ಯ (ಬಾರಿಪ ಜಿಂಕರದ ಜಿಂಕರಮುಂಪೊಯ್ವ ಎಕ್ಕವದ್ದಳೆಯ ದನಿಯುಂ .. .. ನೆರಪೆ: **ನೇಮಿನಾಪು,** ೮. ೭೫ ವ)

**ಜಿಂಹ** – ವಕ್ರ (ಪೆರ್ವಾವುಗಳೇಂ ತುಡುಕಿದುವೊ ಜಿಂಹಜಿಹ್ವಾವಿಡಂಬಮಂ ಘನಗುಹಾಮುಖಂಗಳೊಳ್ ಅಗದಾ: **ಲೀಲಾವತಿ,** ೭. ೧೧೩)

**ಜಿಗಿಜಿಗಿ** – ಅಜ್ಜಿಬಜ್ಜಿ (ನಡುವಿರ್ದ ನರಿ ಕರಿ ಮೆಟ್ಟಿದ ಸೋರೆಯ ಕಾಯಂತೆ ಜಿಗಿಜಿಗಿಯಾಗಿ ಸತ್ತೊಡೆ: **ಪಂಚತಂತ್ರ,** ೧೨೬ ವ)

**ಜಿಗಿಲ್** – ಅಂಟಿಕೊಳ್ಳು (ಸಂತಸದಂತನೆಯ್ದಿ ಸುರತಾಮಮೃತದೊಳ್ ತಣಿದಟ್ಟಿರಿಂ ಜಿಗಿಲ್ತಂತಿರೆ ಪತ್ತಿ

ಮೆಯ್ಗಳೆರಡಾದೊಡಮೇನಸುವೊಂದೆ ನೋೞ್ಪಿಡೆಂಬಂತಿರೆ ಕೂಡಿ: **ಆದಿಪು,** ೩. ೫)

**ಜಿಗೀಷು** – ಜಯದ ಅಪೇಕ್ಷೆಯುಳ್ಳವನು (ಸೊಗಯಿಸುಗುಂ ತಾರಾಳಿಯೊಳೆಸೆವ ಹಿಮದ್ಯುತಿಮಾಳೆವೊಲಿನಿಸಿಲ್ಲದಂ ಜಿಗೀಷುವೆ ನೃಪರೊಳ್: **ಶಾಂತಿಪು,** ೨. ೪೪)

**ಜಿಗುರ್** – ಸ್ನಿಗ್ಧಗೊಳ್ಳುವುದು, ತೇವಗೊಳ್ಳುವುದು (ನಲಿದು ನವಿಲ್ ಜಿಗುರ್ತುದು ಪಿಕಧ್ವನಿ ಪಣ್ತುದು ಮಿಂಚು ಕಣ್ಗಳೊಳ್ ಮೊಳೆತುದು ಶಕ್ರಚಾಪಲತೆ ಪೊಣ್ಮೆ ಪಸುರ್ತುದು: **ನೇಮಿನಾಪು,** ೩. ೬೦)

**ಜಿಗುಳೆ** – ಜಿಗಣೆ (ಉಡೆವಣಿ ಪಱೆಯದ ಮುನ್ನಮೆ ತೊಡಗಿ ಚಲಂ ನೆಗೞೆ ರಿಪುಬಲಂಗಳನೆ ಪಡಲ್ವಡಿಸಿ ಪರಬಲದ ನೆತ್ತರ ಕಡಲೊಳಗಣ ಜಿಗುಳೆ ಬಳೆವ ತೆಱದೊಳೆ ಬಳೆದಂ; **ಪಂಪಭಾ,** ೧. ೪೬)

**ಜಿಗುೞೆ** – ಜಿಗಣೆ (ದೋಷಕ್ಕೆ ಒರ್ ಮಾರ್ ನೀಳಂ ನಿಮಿರ್ದಪುದು ಅತಿವಾಚಾಳರ ನಾಲಗೆಗೆ ಜಿಗುೞೆಯೇನಪ್ಪುದೊ ಪೇಳ್: **ಲೀಲಾವತಿ,** ೧. ೩೨)

**ಜಿತತ್ರಿತಾಪ** – ಅಧಿದೈವಿಕ, ಅಧಿಭೌತಿಕ, ಅಧ್ಯಾತ್ಮಿಕ ಎಂಬ ಮೂರು ತಾಪಗಳನ್ನು ಗೆದ್ದವನು (ಅತಿಭಕ್ತಿವಶೀಕೃತಶೈಲಚಾಪನಾತ್ತದಯ ಜಿಪ್ತ್ರಿತಾಪ ಬಸವೇಶ್ವರಂ ಈಗೆ ಎಮಗೆ ಈಶಭಕ್ತಿಯಂ: ===, **ರಾಜಶೇವಿ,** ೧. ೧೧)

**ಜಿತರಿಪುಷಡ್ವರ್ಗಂ** – ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಗಳೆಂಬ ಆರು ಶತ್ರುಗಳನ್ನು ಗೆದ್ದವನು (ನೀತಿಪರಂ ಕ್ಷಮಾನ್ವಿತಂ ಜಿತರಿಪುಷಡ್ವರ್ಗಂ ಪ್ರಭೂತಂ ಅನುಪಮಗುರ್ಗಂ: **ಪಂಚತಂತ್ರ,** ೩೦೩)

**ಜಿತಶತ್ರು** – ಶತ್ರುಗಳನ್ನು ಗೆದ್ದವನು (ಮತ್ತಿತ್ತಲ್ ಜಿತಶತ್ರುವೆಂಬ ಪೆಸರಾಯ್ತು ಅನ್ವರ್ಥಮೆಂಬನ್ನಂ: **ಪಂಪರಾ,** ೧೦. ೭೩)

**ಜಿತಸ್ಮಯ** – ಅರಿಷಡ್ವರ್ಗವನ್ನು ಗೆದ್ದವನು (ಜಿತಸ್ಮಯನುಂ ಸಂಜಾತವಿಸ್ಮಯನುಂ ಜಾತಿಸ್ಮರನುಂ ವೈರಾಗ್ಯಪರನಾಗಿ .. .. ತಪಶ್ಚರಣಮಂ ಕೆಯ್ಕೊಂಡಂ: **ನೇಮಿನಾಪು,** ೪. ೧೨೭ ವ)

**ಜಿತಾಂತಕ** – ಯಮನನ್ನು ಗೆದ್ದವನು, ಶಿವ (ಜಿತಾಂತಕನೊಳ್ ಮಿಗೆ ಮುಷ್ಟಿಯುದ್ಧದಿಂ ಕಾದುವ ಕಜ್ಜಮಂ ಗಡ ನಿರಂಗನೊಳಿಂತಿದು ಚಿತ್ರಮಲ್ಲವೇ: **ಶಬಶಂವಿ,** ೪. ೧೩೧)

**ಜಿತಾತ್ಮ** – ಮನಸ್ಸನ್ನು ಗೆದ್ದವನು (ಉಭಯಕುಲವಿಶುದ್ಧರ್ ನ್ಯಾಯವಂತರ್ ಜಿತಾತ್ಮರ್ ಪ್ರಭುಗಳ್ ಅಧಿಕಪುಣ್ಯರ್ ಮುನ್ನೆ ನಿಮ್ಮಜ್ಜಪಜ್ಜರ್: **ಶಾಂತಿಪು,** ೩. ೭೬)

**ಜಿತಾನಂಗ** – ಜಿತಕಾಮ (ಮಂಗಳಸವನಾನಂತರಂ ಅಂಗೀಕೃತ ಶುಭವಿಭೂಷರಂ ಮಾಡಿ ಜಿತಾನಂಗನೆನಿಪ ಆ ಕುಮಾರಕನಂ ಗೋಮಿನಿಯೆನಿಪ ಖಚರನಂದನೆಯಂ: **ಶಾಂತೀಶ್ವಪು,** ೨. ೧೩೯)

**ಜಿತಾಮರಿ** – ದೇವತಾಸ್ತ್ರೀಯನ್ನು ಜಯಿಸಿದವನು (ತಂತಮ್ಮ ಸ್ವಜಾತೀಯ ಸಂಮದದಿಂ ಪಾಮರಿಯರ್ ಜಿತಾಮರಿಯರ್ ಇರ್ಪರ್ ಕಾದು ಕೇದಾರಮಂ: **ಮಲ್ಲಿನಾಪು,** ೨. ೧೫)

**ಜಿನ** – ಅರ್ಹಂತ (ಉದ್ಭವಿಸಿದಂ ತ್ರೈಲೋಕ್ಯನಾಥಂ ಜಿನಂ: **ಪುಷ್ಪದಂಪು,** ೧೦. ೨); ಬುದ್ಧ (ಜಿನರ್ ಅರ್ಹರ್ ಸುಗತರ್ ಕಮಳನಾಭನುಂ ರುದ್ರನುಂ: **ಅಭಿಧಾವ,** ೩. ೧. ೨)

**ಜಿನಕಲ್ಪ** – [ಜೈನ] ಏಕವಿಹಾರಿ ಜೈನಸಾಧು ಸಂಪ್ರದಾಯ (ಸ್ಥೂಲಭದ್ರಾಚಾರ್ಯರ್ ಮೊದಲಾಗಿ ಕೆಲಂಬರ್ ಕೊಳಲೊಲ್ಲದರ್ ಜಿನಕಲ್ಪಂ ಸ್ಥವಿರಕಲ್ಪಮೆಂದೆರಡು ಭೇದಂ ಮಾಡಿ ಅರ್ಧಗಪ್ಪಡದ ತೀರ್ಥಮಂ ನೆಗೞ್ಚಿದರ್: **ವಡ್ಡಾರಾ,** ಪು ೯೨, ಸಾ ೧)

**ಜಿನಗುಣಸಂಪತ್ತಿ** – ೧೬ ಭಾವನೆಗಳು, ೫ ಕಲ್ಯಾಣಗಳು, ೮ ಪ್ರಾತಿಹಾರ್ಯಗಳು, ಹಾಗೂ ೩೪ ಅತಿಶಯಗಲು – ಹೀಗೆ ೬೩ ಗುಣಗಳಿಗೆ ೬೩ ದಿನಗಳು ಮಾಡುವ ವ್ರತ (ಷೋಡಶತೀರ್ಥಕರಭಾವನೆಗಳಂ ಚತುಸ್ತ್ರಿಂಶತ್ ಅತಿಶಯಂಗಳುಮಂ ಅಷ್ಟಮಹಾ ಪ್ರಾತಿಹಾರ್ಯಂಗಳುಮಂ ಪಂಚಕಲ್ಯಾಣಂಗಳುಮಂ ನಾಮೋದ್ದೇಶಂಗೆಯ್ದು .. .. ಜಿನಗುಣಸಂಪತ್ತಿಯಂ: **ಆದಿಪು,** ೩. ೪೦ ವ)

**ಜಿನಮಹಾಕಲ್ಯಾಣ** – ತೀರ್ಥಂಕರನಿಗೆ ಮಾಡುವ ಪಂಚಕಲ್ಯಾಣಗಳು (ಜಿನಮಹಾಕಲ್ಯಾಣಮಯ್ದುಂ ಸವಿಸ್ತರದಿಂದಿರ್ಪುವು: **ಅಜಿತಪು,** ೧. ೯೬)

**ಜಿನರೂಪ** – [ಜೈನ] ಐವತ್ತಮೂರು ಗರ್ಭಾನ್ವಯಕ್ರಿಯೆಗಳಲ್ಲಿ ಒಂದು (ಗೃಹತ್ಯಾಗ ದೀಕ್ಷಾಜಿನರೂಪ ಮೌನಾಧ್ಯಯನ .. .. ಎಂಬ ಅಯ್ವತ್ತುಮೂಱು .. .. ಗರ್ಭಾನ್ವಯಕ್ರಿಯೆಗಳಿಂ: **ಆದಿಪು,** ೧೫. ೧೫ ವ)

**ಜಿನವೃಂದಾರಕ** – ತೀರ್ಥಂಕರ (ಜಿನವೃಂದಾರಕರ್ ಇರ್ಪತ್ತುನಾಲ್ವರ್: **ಅಜಿತಪು,** ೧. ೬)

**ಜಿನಶಾಸನ** – ಜೈನಸಿದ್ಧಾಂತ (ಜಿನಶಾಸನರುಚಿ ಪಡೆವಳ ತೈಲನ ಜನನಿಯೆ ತೀರ್ಥಕರ ಜನನಿಯೆನ್ನದರೊಳರೇ: **ಅಜಿತಪು,** ೧. ೫೫)

**ಜಿನಸಪರ್ಯೆ** – ಜಿನಪೂಜೆ (ಪುಣ್ಯಬಂಧಮನಾವರಿಸುವ ಜಿನಸಪರ್ಯೆ ತೊಡರ್ದುದು ಬಗೆಯೊಳ್: **ಆದಿಪು,** ೩. ೨೮)

**ಜಿನಸವನ** – ಜಿನನ ಅಭಿಷೇಕ (ಜಿನಸವನಮಂಗಳಕ್ಕಾನೆ ನೋಂತೆನೆಂಬಂತೆ ಶಿಖರಿ ನಿಜಶಿಖರದ ಪೆಂಪನೆ ಮೆಱೆದು: **ಆದಿಪು,** ೭. ೬೫)

**ಜಿನಾರ್ಭಕ** – ಜಿನಶಿಶು (ಆ ಜಿನಾರ್ಭಕನಂ .. .. ಓಲಗಿಸಲ್ ಸಾರ್ದಿರ್ದ ರಾಕೇಂದುವೆಂಬಂತೆ ರಾಜಿಸುವ ಧವಳಾತಪತ್ರಂಬಿಡಿದು ಈಶಾನೇಂದ್ರಂ: **ಶಾಂತೀಶ್ವಪು,** ೧೪. ೬೭ ವ)

**ಜಿನಾವಾಸ** – ಜಿನಗೃಹ (ಜಿನಯೋಗಿಜ್ಯಾಯರ್ ಉತ್ಸಾರಿತಭವದುರಿತರ್ ಭಾವಿಸುತಿರ್ಪ ತತ್ತ್ವಾವನ ಶುಭ್ರಧ್ಯಾನದೀಪ್ತಿವ್ರಜಮೆ ಬಲಿದು ಭಾಸ್ವತ್ ಜಿನಾವಾಸಮಾಯ್ತು: **ಶಾಂತೀಶ್ವಪು,** ೧. ೧೧೩)

**ಜಿನಿಗಿಸು** – ನಿಶ್ಚೇಷ್ಟಗೊಳಿಸು (ಜಿನಿಗಿಸು [ಜಿನುಗಿಸು]– ನಷ್ಟಚೇಷ್ಟಾಯಾಂ: **ಶಬ್ದಮದ, ಧಾ** ೭೮೧)

**ಜಿನುಗು** – ಸಣ್ಣಗೆ ದನಿಮಾಡು, ಗೊಣಗು (ಜಂಕರಿಸಂ ಕಾತರಿಸಂ ಮಾಂಕರಿಸಂ ಬೆಕ್ಕಸಂಬಡಂ ಬೆಕ್ಕರಿಸಂ ಹೂಂಕರಿಸಂ ನಿರ್ವಿನಿಸಂ ಜೀಂಕರಿಸಂ ಜಿನುಗಂ ಅವನಿಸಂ ಕೊಕ್ಕರಿಸಂ: **ಅಜಿತಪು,** ೫. ೮೯); ಝೇಂಕರಿಸು (ಜಿನುಗುವ ದುಂಬಿಯಿಂಚರಮೆ ಗಾಣರ ಕಾಕಳಿ: **ಆದಿಪು,** ೧೩. ೬)

**ಜಿನುಂಗು** – ತೊಟಕಲು ಮಳೆ (ಜಿನುಗು, ಜಿನುಂಗು–ವರ್ಷಭೇದೇ ಚ< ಶಬ್ದಮದ, ಧಾ ೧೦೯); ಝೇಂಕರಿಸು (ಮಧುಕರಮದು ಭೋಂಕೆನೆ ಪಾಯ್ದೆಱಂಕೆ ನಾಂದೊಡೆ

ಜಿನುಂಗಿ ನೆಲಸಿದುದು ವಿಚಕನಕಾಬ್ಜಿನಿಯೊಳ್: **ಆದಿಪು,** ೧೧. ೬೨)

**ಜಿನ್ನ** – ಜೀರ್ಣ (ಮೇಗಣ ಣಕಾರಂ ನಕಾರಮಪ್ಪುದರ್ಕೆ: ಜೀರ್ಣನರ್ನಂ–ಜಿನ್ನಂ, ಕರ್ಣ್ನಂ–ಕನ್ನಮ: **ಶಬ್ದಮದ,** ೨೭೯ ಪ್ರ)

**ಜಿವುಳಿದುಟಿ** – ಚಿಗುಳಿಯನ್ನು ತುಳಿದ ಹಾಗೆ ತುಳಿ (ಕೆಯ್ಯ ಕಾಲ ಕೋಡೇಜಿನೊಳ್ ಬಲಮೆಲ್ಲಂ ಜವನೆ ಜಿವುಳಿದುಟಿದಂತೆ ತೊಟ್ಟುಟಿದುಟಿದು: **ಪಂಪಭಾ** ಪರಿಷತ್ತು, ೧೧. ೭೨ ವ)

**ಜಿಷ್ಣು** – ದೇವೇಂದ್ರ (ಎಲೆ ಜಲಧಿ ಜಿಷ್ಣುಚಕಿತಾಚಲಪಾಲಕ ಕಾವುದೆಮ್ಮಂ: **ರಾಜಶೇವಿ.** ೧. ೯೫)

**ಜಿಷ್ಣುಚಾಪ** – ಇಂದ್ರಧನುಸ್ಸು, ಕಾಮನ ಬಿಲ್ಲು ಘನಾಗಮದಂತೆ ಜಿಷ್ಣುಚಾಪಶರಕರಕೋಚಿತಮುಂ: **ರಾಜಶೇವಿ,** ೬. ೧೭ ವ)

**ಜಿಹ್ಮಗ** – ವಕ್ರವಾಗಿ ಚಲಿಸುವುದು, ಹಾವು (ಆಅಖಿಳಾವನಿಪಟಳಮನುರ್ಚಿ ಜನಾರ್ದನ ಜಿಹ್ಮಗಂ ಎಯ್ದಿದತ್ತು ಸಪ್ತಮದರೆಯಂ: **ಆಚವರ್ಧ,** ೧೦. ೩)

**ಜಿಹ್ಮಗಪತಿ** – ಆದಿಶೇಷ (ಸೂತಜನ ಉದಾರಂ ಉಪಮಾತೀತಂ ಅದಂ ಪೊಗಟಲ್ ಅಜಿದು ಜಿಹ್ಮಗಪತಿಗಂ: **ಕರ್ಣನೇಮಿ,** ೧೨. ೧೪೧)

**ಜೀಂಕರಿಸು** – ಹೊಗಳು, ಕೊಂಡಾಡು (ಜಂಕರಿಸಂ ಕಾತರಿಸಂ ಮಾಂಕರಿಸಂ ಬೆಕ್ಕಸಂಬಡಂ ಬೆಕ್ಕರಿಸಂ ಹೂಂಕರಿಸಂ ನಿರ್ವಿನಿಸಂ ಜೀಂಕರಿಸಂ ಜಿನುಗಂ ಅವನಿಸಂ ಕೊಕ್ಕರಿಸಂ: **ಅಜಿತಪು,** ೫. ೮೯)

**ಜೀಮೂತ** – ಮೋಡ (ಎನ್ನ ರಶ್ಮಿಯ ಪ್ರತಾಪಮಂ ಜೀಮೂತಂಗಳ್ ಮುಸುಕಲೀಯದೆ ಮುಸುಜಿಕೊಂಡು ಎನಗಂ ಅಧಿಕಂಗಳಾಗಿರ್ಕುಂ: **ಪಂಚತಂತ್ರ,** ೩೬೩ ವ); ರಾಜ (ಧರಣೀಂದ್ರರ್ಗಮಬ್ಧಪ್ರತತಿಗಂ ಎಸೆಗುಂ ಕೂಡೆ ಜೀಮೂತನಾಮಂ: **ಅಭಿಧಾವ,** ೩. ೧. ೭)

**ಜೀಮೂತವಾಹ** – ಇಂದ್ರ (ಜೀಮೂತವಾಹಂಗೆ ನಿಜಸುಧಾರಸಮಂ ಮರಕತಕಳಶದೊಳ್ ತೀವಿ .. .. ನೀಡಿದಪಳೆಂಬಂತೆ ರಂಜಿಪ ನಾರಿಕೇಳಮುಂ: **ಶಬರಶಂ,** ೨. ೪೨ ವ)

**ಜೀಯ** – ಒಡೆಯ (ಧರಿತ್ರಿಯಂ ಜೀಯ ಎನೆ ಬೇಡಿ ಕೊಳ್ಳದೆ ವಿರೋಧಿನರೇಂದ್ರರಂ ಒತ್ತಿ ಕೊಂಡುಂ: **ಪಂಪಭಾ,** ೧.೧)

**ಜೀರಕ** – ಜೀರಿಗೆ (ಜೀರಕಾದ್ರವ ನವಹಾರಿದ್ರಕವಾಟೋತ್ಕರಂ ಉನ್ನಿದ್ರಿತ ಕಮಲಾಕರಂಗಳಿಂ ಸೊಗಯಿಸುಗುಂ: **ಮಲ್ಲಿನಾಪು,** ೨. ೩೭)

**ಜೀರಗೆಯೊಕ್ಕಲ್ಮಾಡು** – ಜೀರಿಗೆಯನ್ನು ಗಿಡದಿಂದ ಬೇರ್ಪಡಿಸಲು ಬಡಿಯುವಂತೆ ಸದೆಬಡಿ (ಅಂತು ಕುರುಬಲಮೆಲ್ಲಮಂ ಜೀರಗೆಯೊಕ್ಕಲ್ಮಾಡಿ ತುಟಿದು ಕೊಲೆ ರಾಜರಾಜನ ಬೆಸದೊಳ್ ಅಂಗರಾಜಂ ಬಂದು ತಾಗೆ: **ಪಂಪಭಾ,** ೧೨. ೯. ವ)

**ಜೀರ್ಕೊಳವಿ** – ಪಿಚಕಾರಿ (ಮಳಯರುಹ ಸಲಿಲಮಂ ಜೀರ್ಕೊಳವಿಗಳಿಂದೊತ್ತಿ ರಮಣಿಯರ್ .. .. ಸೂಸೆ: **ಕುಸುಮಾಕಾ,** ೫. ೧೪೦)

**ಜೀರ್ಗರೆ** – ಜೀರ್ ಎಂದು ಸದ್ದುಮಾಡು (ಅರರೀಮುಟಮೆರಡುಂ ಜೀರ್ಗರೆದು ಮರಲ್ವಂದಮೆಂತುಂಟಾಯ್ತು .. .. ಗಿರಿ ನೊಂದು ನರಳ್ವ ಮಾಟ್ಕೆಯಂತೆ: **ಆದಿಪು,** ೧೩. ೩೭)

**ಜೀರಿಗೆಬೆಲ್ಲ** – ಮದುವೆಯಲ್ಲಿ ಗಂಡುಹೆಣ್ಣುಗಳು ಪರಸ್ಪರರ ತಲೆಯ ಮೇಲೆ ಜೀರಿಗೆ ಮತ್ತು ಬೆಲ್ಲ ಹಾಕುವ ಶಾಸ್ತ್ರ (ಸರಿಸಂಬರಿದುದು ಜೀರಿಗೆಬೆಲ್ಲದ ಪರಿಯಿಂ ಮುಳಿದಿಟ್ಟಿ ಭಸಿತಂ: **ಗಿರಿಜಾಕ,** ೯. ೧೨೦)

**ಜೀರ್ಕೊಟವಿ** – ಪಿಚಕಾರಿ, ನೀರು ಚಿಮ್ಮುವ ಕೊಳವೆ (ಆಳಿಯರ್ ದೂರದಿಂ ಸೂಸುತ್ತಿರ್ಪರ್ ತೋಯಮಂ ಜೀರ್ಕೊಟವಿಯೊಳೆ: **ಜಗನ್ನಾವಿ,** ೧೧. ೩೮)

**ಜೀರ್ಣ** – ಜರ್ಜರಿತಗೊಂಡ (ಒರ್ವ ಪಾರ್ವಂ ವಿಸ್ತೀರ್ಣ ಜೀರ್ಣ ಕರ್ಪಟಾವೃತ ಕಟಿತಟನುಂ ಆಗಿ ಬಂದು ಕಣ್ಮುಚ್ಚಲ್ ಎಡೆವೇಡೆ ತನಗವರ್ ಪಾಸಲ್ಕೊಟ್ಟ ಕೃಷ್ಣಾಜಿನಮಂ ಪಾಸಿ ಪಟ್ಟಿರ್ದನಂ: **ಪಂಪಭಾ,** ೩. ೩೧ ವ)

**ಜೀರ್ಣಶೀರ್ಣಚೀರ** – ಹಳೆಯ ಹರಿದ ಬಟ್ಟೆ (ಪರೇತವನ ಭೂಮಿಯೊಳ್ ಜೀರ್ಣಶೀರ್ಣಚೀರಂಗಳಿಂದಂ ಪುದಿದಿರಿಸಿ ಪೋಗಿ: **ಆದಿಪು,** ೩. ೩೪ ವ)

**ಜೀರ್ಣಿಸು** – ಕೊಳೆ (ಮೂರರ್ಥಕ್ಕೆ: ಕೊಟೆತುದೆಂದು ಜೀರ್ಣಿಸಿದುದುಂ: **ಶಬ್ದಮದ,** ೩೩ ವೃತ್ತಿ ೧೬೯)

**ಜೀರ್ಣೋದ್ಧಾರ** – ಬಿದ್ದವುಗಳನ್ನು ಸರಿಪಡಿಸುವುದು (ಅಲ್ಲಿಗಲ್ಲಿಗೆ ಒಡೆದ ಕೆಜಿಗಂ ಅಟಿದ ಆಯತನಕ್ಕಂ ಧನಮನಿತ್ತು ಜೀರ್ಣೋದ್ಧಾರಂಗಳಂ ಮಾಡಿಸುತ್ತುಂ: **ಪಂಪಭಾ,** ೨. ೯೭ ವ)

**ಜೀವಂಗಿಡಿಸು** – ಸಾಮರ್ಥ್ಯಗುಂದುವಂತೆ ಮಾಡು (ರಾಮನಂ ಧುಮಂ ಸುತ್ತಿದಂತೆ ಜೀವಂಗಿಡಿಸಿ: **ಧರ್ಮಾಮೃ:** ೭ ೫೪ ವ)

**ಜೀವಂಜೀವಕ** – ಚಕೋರ (ಅಮೃತಾಹಾರ ಪರೀಕ್ಷಾಯೋಗ್ಯಂಗಳೆನಿಪ್ಪ ಜೀವಂಜೀವಕ ಸಮೂಹಮುಂ: **ಪಂಚತಂತ್ರ,** ೩೨೦ ವ)

**ಜೀವಕ** – ಹೊನ್ನೆಯಮರ (ಕಕಾರಕ್ಕೆ ಗಕಾರಂ – ಜೀವಕ – ಜೀವಗ: **ಶಬ್ದಮದ,** ೨೭೯ ಪ್ರ)

**ಜೀವಗ** – ಹೊನ್ನೆಯ ಮರ (ಕಕಾರಕ್ಕೆ ಗಕಾರಂ – ಜೀವಗಮೆಂದು ಹೊನ್ನೆಯಮರಂ: **ಶಬ್ದಮದ,** ೨೭೯ ಪ್ರ)

**ಜೀವಣಶಾಲೆ** – ಊಟದ ಮನೆ (ಓಲಗಶಾಲೆ ಪೂಗಿಡುಗಳೋಳಿಗೆ ಜೀವಣಶಾಲೆ ಮತ್ತಭೃಂಗಾಳೀಗೆ ಜೇನಶಾಲೆ: **ಪುಷ್ಪದಂಪು,** ೨. ೫೦)

**ಜೀವತತ್ತ್ವ** – [ಜೈನ] ಏಳು ತತ್ತ್ವಗಳಲ್ಲಿ ಮೊದಲನೆಯದು (ತತ್ತ್ವಗಳೊಳಗೆ ಚೇತನಾಲಕ್ಷಣಮಪ್ಪುದು ಜೀವತತ್ತ್ವಂ: **ಆದಿಪು,** ೧೦. ೬೧ ವ)

**ಜೀವತ್ರಾಣ** – ಜೀವಿಗಳನ್ನು ಕಾಪಾಡುವ[ವನು] (ಕಾನಲ್ಬಾರದ ಸೂಕ್ಷ್ಮಪ್ರಾನಿಗಳಂ ನೋಡಿ ನಡೆಯಲೆಂದು ಆ ಜೀವತ್ರಾಣನ ಕಾಲ್ಗಂ ಕಣ್ಗಳೆ ಮಾಣಿಕದಂತಾದುದೆನಿಸಿ ತೊಳಗಿದುವುಗುರ್ಗಳ್: **ನೇಮಿನಾಪು,** ೧. ೮೫)

**ಜೀವದಯಾಷ್ಟಮಿ** – [ಜೈನ] ಒಂದು ವ್ರತ, ಆಶ್ವಯುಜ ಶುಕ್ಲ ಅಷ್ಟಮಿಯ ದಿನ ಮಾಡುವ ವ್ರತ (ಶ್ರಾವಕಜನದುಪವಸಂ ಜೀವದಯಾಷ್ಟಮಿಯೊಳಾಗೆ ಪಾರಣೆ ಕವಿಗಳ್ಗ ಈ ಕಥನದಿಂದೆ: **ಯಶೋಧಚ,** ೧. ೩)

**ಜೀವಧನ** – ಪಶುಸಂಪತ್ತು (ಕೊಡುವ ಬಾಡಕ್ಕಂ ಜೀವಧನಂಗಳ್ಗಂ ಬಿಡುವೆಣ್ಣಂ ಲೆಕ್ಕಮಿಲ್ಲೆನಿಸಿ ರಾಗಂಗಿಡದೆ ಕೊಂಡಾಡಿದಂ ಬಲ್ಲಹನಜೆಯೆ ಗುಣಾರ್ಣವಂ ಕವಿತಾಗುಣಾರ್ಣವನಂ: **ಪಂಪಭಾ,** ೧೪. ೫೫)

**ಜೀವನ** – ಬದುಕು; ನೀರು (ಜಗದೇಕಜೀವನಸ್ಥಿತಿಯಿಂ ಅತಿಪ್ರಸಾದಗುಣದಿಂ ರಸಭಾವವಿಳಾಸದಿಂ .. .. ದಯೆಗೆಯ್ಗೆ .. .. ನಿರ್ಮಳತ್ವಮಂ: **ಕಾದಂಸಂ,** ೧. ೨)

**ಜೀವನಜ** – ಬ್ರಹ್ಮ (ಸರಸಿರುಹಭವಂ ಬ್ರಹ್ಮಂ ಹಿರಣ್ಯಗರ್ಭಂ ವಿಧಾತೃ ಜೀವನಜಂ: **ಅಭಿಧಾವ,** ೧. ೧. ೧೧)

**ಜೀವನ್ ಭದ್ರಾಣಿ ಪಶ್ಯತಿ** – (ಜೀವನ್ ಭದ್ರಾಣಿ ಪಶ್ಯತಿ ಎಂಬ ನೀತಿಯುಂಟಪ್ಪುದಱಿಂ ನಿಷ್ಕಾರಣಂ ಸಾಯದೆ ಎನ್ನಂ ಕೊಳ್ಳಿಂ: **ಪಂಚತಂತ್ರ,** ೧೪೬ ವ)

**ಜೀವನ್ಮೃತಕ** – ಜೀವಿಸಿದ್ದರೂ ಸತ್ತಂತಿರುವವನು (ನೀಳ್ದೊದವಿದ ಜಸಮನುಪಾರ್ಜಿಸದ ಅಧಮಂ ಅದೇತರ್ಕೆ ಬಾರ್ತೆ ಜೀವನ್ಮೃತಕಂ: **ಆದಿಪು,** ೧೨. ೯೭)

**ಜೀವರತ್ನ** – [ಜೈನ] ಚಕ್ರವರ್ತಿಗೆ ದೊರೆಯುವ ಏಳು ರತ್ನಗಳು: ಚಕ್ರ, ರಥ, ಸ್ತ್ರೀ, ನಿಧಿ, ರತ್ನಗಳು, ಅಶ್ವ, ಗಜ; ಮತ್ತೊಂದು ಪಟ್ಟಿ: ಚಕ್ರ, ಹಸ್ತಿ, ಅಶ್ವ, ಮಣಿ, ಸ್ತ್ರೀ, ಗೃಹಪತಿ, ಪರಿನಾಯಕ; ಮತ್ತೂ ಒಂದು ಪಟ್ಟಿ: ಸೇನಾಪತಿ, ಸ್ಥಪತಿ, ಗೃಹಪತಿ, ಪುರೋಹಿತ, ಗಜ, ವಾಜಿ, ಸ್ತ್ರೀ (ಆ ಚಕ್ರರತ್ನದ ಬೞಿಯೊಳ್ ಸಂಗಳಿಸಿದ .. .. ಆಱುಂ ಅಜೀವರತ್ನಂಗಳುಮಂ .. .. ಏೞುಂ ಜೀವರತ್ನಂಗಳುಮಂ.. ..ಪೂಜೆಗೆಯ್ದು: **ಶಾಂತೀಶ್ವಪು,** ೧೨. ೩ ವ)

**ಜೀವಸಂಭಾವನೆ** – ಜೀವದ ಪರಿಕಲ್ಪನೆ (ಈ ನಿಮ್ಮ ಜಿನಮತದ ಜೀವಸಂಭಾವನೆಯೊಳ್ ಪೃಥ್ವಿ ಅಪ್ ತೇಜೋ ವಾತ ಅಭೀಧಾನ ಭುತಚತುಷ್ಟಯದಿಂದಂ ಬೇಱೆ: **ಶಾಂತಿಪು,** ೮. ೧೨೮ ವ)

**ಜೀವಸಿದ್ಧಿ** – [ಜೈನ] ಜೀವನ ಅಸ್ತಿತ್ವವನ್ನು ಸಾಧಾರವಾಗಿ ಪ್ರತಿಪಾದಿಸುವುದು (ಅನುಭೂತ ಶ್ರುತದೃಷ್ಟ ಖೇಚರ ಕಥಾನಕಂಗಳಿಂ ಯುಕ್ತಿಯಿಂದಿನಿತಂ ಸಾಧಿಸಿ ಜೀವಸಿದ್ಧಿಯನಿದಂ ನಿಶ್ಚೈಸಿ: **ಆದಿಪು,** ೨. ೨೨)

**ಜೀವಹತಿ** – ಜೀವವಧೆ (ಜೀವಹತಿ ತನಗೆ ಸುಖೋದ್ದೀಪನಂ ಎನಿಸವ ಪಾಪಕಳಾಪಂಡಿತೆ ಚಂಡಮಾರಿ ದೇವತೆಯಿರ್ಪಳ್: **ಯಶೋಧಚ,** ೧. ೩೪)

**ಜೀವಾಜೀವರತ್ನ** – ೭ ಅಜೀವರತ್ನಗಳು ಹಾಗೂ ೭ ಜೀವರತ್ನಗಳು – ಒಟ್ಟು ೧೪ ರತ್ನಗಳು (ಚಕ್ರ .. .. ಛತ್ರ .. .. ಖಡ್ಗ .. .. ದಂಡ .. .. ಚರ್ಮ .. .. ಮಣಿ .. .. ಕಾಕಿಣೀ .. .. ಗೃಹಪತಿ .. .. ಸೇನಾನಿ .. .. ತಕ್ಷಕ .. .. ಪುರೋಹಿತ .. .. ಯಾಗಹಸ್ತಿ .. .. ತುರಗ .. .. ಸ್ತ್ರೀ .. .. ಎಂದಿಂತು ಜೀವಾಜೀವರತ್ನಂ: **ಆದಿಪು,** ೧೧. ೩ ವ)

**ಜೀವಿತ** – ವೃತ್ತಿ, ಸಂಬಳ (ಗಾಯಕ ಸತ್ತ್ರಹಾರವೃತ್ತಪಾಠಕ ತತಿಗೆ ಇತ್ತಂ ಅಗ್ಗಳದ ಮಾವಿನ ಪೂವಿನ ಮಾವಿನಂಕುರಪ್ರಕರದ ಮಾವಿನೊಳ್ಮಿಡಿದು ಜೀವಿತಮಂ ಮದನಂ ವಸಂತದೊಳ್: **ಶಾಂತಿಪು,** ೭. ೧೩೦)

**ಜೀವಿತಾತ್ಯಯ** – ಜೀವ ಬಿಡುವುದು (ಪ್ರಾಯೋಪಗಮನ ವಿಧಾನನಾತ್ಮೀಯ ಜೀವಿತಾತ್ಯಯದೊಳ್: **ಚಂದ್ರಪ್ರಪು,** ೯. ೪೫)

**ಜೀವೆ** – ಬಿಲ್ಲಿನ ಹೆದೆ (ಚಾಪಲತಾಯೋಗಂ ಜೀವೆಯೊಳ್ .. .. ಮಹಾಮಾತ್ರವರ್ತನಂ ಸೃಣಿಯೊಳ್: **ಚಂದ್ರ ಪ್ರಪು,** ೩. ೯ ವ)

**ಜೀಱಿಟಿಲ್** – ಕಿರಿಚು, ಕೀರು; ಸಶಬ್ದವಾಗಿ ಮೇಲೇಳು (ಉಡಿದಿರ್ದ ಅಚ್ಚು ಅಟಿದ ಈಸು ತಟ್ಗಿದ ನೊಗಂ ಜೀಱೆಟ್ದಿ ಚಕ್ರಂ .. .. ನೆತ್ತರ ಮೊನಲ್ ಕಣ್ಗೊಂಡುದುಗ್ರಾಜಿಯೊಳ್: **ಪಂಪಭಾ,** ೧೦. ೯೧)

**ಜೀಱೆಟಿಲ್** – ಜೀಱೆಟ್ (ಸಕಳಭುವನಂ ಒಂದೊಂದಱೊಳ್ ಕೇಣಿಗೊಂಡು ಉಚ್ಚಳಿಸಲ್ ಸೂಸಲ್ ಪಳಂಚಲ್ ಪಿಡಿದು ಒಡೆದು ಅಳಱಲ್ ಪಾಱೆ ಜೀಱೆಟಲ್ ಅಂದು ಉಮ್ಮಳಿಸುತ್ತೆ ಅತ್ತಿರ್ದೊಡೆ ಆವಂ ಹರಿಗನೊಳ್ ಇದಿರ ಮೀಱೆ ಮಾಱಾಂಪ ಗಂಡಂ: **ಪಂಪಭಾ,** ೧೦. ೬೫)

**ಜುಂಕ** – ಒಂದು ಬಗೆಯ ವಾದ್ಯ (ಪಳವದ ತಿವಳಯ ಜುಂಕದ ಮೊಳಸಿನ ಜೇಕಿರದ ಸಿವಿಱ ಸಿಪ್ಪಿನ ಲಯದಿಂದ ಎಳಲದೆ ಕುಣಿದರ್: **ಅಜಿತಪು,** ೫. ೩೨)

**ಜುಗುಮ** – ಜೋಡಿ (ಆ ಯಕಾರಕ್ಕೆ ಜತ್ವಂ: ಯುಗ್ಮಂ–ಜುಗುಮಂ ಯಮುನೆ–ಜಗುನೆ: **ಶಬ್ದಮದ,** ೨೭೩ ಪ್ರ)

**ಜುದ್ದ** – ಯುದ್ಧ (ಆ ಯಕಾರಕ್ಕೆ ಜತ್ವಂ:ಯುಗಂ–ಜುಗಂ ಯುದ್ಧಂ–ಜುದ್ದಂ: **ಶಬ್ದಮದ,** ೨೭೩ ಪ್ರ)

**ಜೂಂಟ** – ಮೋಸಗಾರ (ನಿನಗಾವೆಡೆಯೊಳುಂ ಅಲ್ಲದ ಜೂಂಟರಂ ನಂಟರೆಂದು ನಂಬಿ: **ಜೀವಸಂ,** ೪. ೧೧ ವ)

**ಜೂಜಿನ ದಿಂಡೆ** – ಜೂಜುಕಟ್ಟೆ (ನಗರಾಭ್ಯಂತರ ದೇವತಾಭವನದೊಳ್ ಚೌವಟ್ಟದೊಳ್ ಬೀದಿವೀದಿಗಳೊಳ್ ಜೂಜಿನ ದಿಂಡೆಯೊಳ್ .. . .ನೀತಿಗೆಟ್ಟಾಡುವರ್: **ಸುಕುಮಾಚ,** ೨. ೭)

**ಜೂಟ** – ಜಡೆಗಟ್ಟಿದ ಕೂದಲು (ಚಂಚತ್ ಜಟಾಜಾಲ ಜೂಟ ವ್ಯೋಮ ಪ್ರೋದ್ಭಾಸಿ ಚಂದ್ರಂ .. .. ತ್ರಿಭುವನ ಜನಕೆ ಆನಂದಮಂ ಮಾಡುಗೆಂದುಂ: **ಕಾದಂಬ,** ೧. ೧)

**ಜೂಟಬಂಧ** – ಜಡೆಗಳ ಕಟ್ಟು (ಉಪನಿಟಿಲ ಕುಟಿಲ ಘಟಿತ ಜೂಟಬಂದಮುಂ: **ಆದಿಪು,** ೧೩. ೪೫ ವ)

**ಜೂದಾಡು** – ಜೂಜಾಡು (ಜೂದಾಡಿ ಸೋಲ್ತು ನನ್ನಿಗೆ ಮೇದಿನಿಯಂ ಕೊಟ್ಟು ಪಾಂಡುನಂದನರ್ ಈಗಳ್ ಪೋದೊಡಮೇಂ ತಿಱುಕಾಗದೆ ಪೋದಪುದೇ ನಮ್ಮ ನೃಪತಿಗವು ತವುದಲೆಯೊಳ್: **ಪಂಪಭಾ,** ೭. ೧೮)

**ಜೂದು** – [ದ್ಯೂತ] ಜೂಜು (ಕರೆದೊಡೆ ಜೂದಿಂಗಂ ಧುರಭರಕೆ ಆಹೇಟಕ್ಕೆ ಭೂಭುಜಂಗೇ ಆಗದು ಮೆಯ್ಗರೆದಿರಲಿ ಎಂಬ ಪುರಾತನ ಗುರುವಚನಂ ತನಗೆ ನಿಟ್ಟೆಪಟ್ಟುದಱಿಂ: **ಪಂಪಭಾ,** ೬. ೭೧)

**ಜೂದುಗಾಱ** – ಜೂಜುಗಾರ (ಭಂಡಾರಿಗನಂತೆ ಆಯಮಂ ಪಿಡಿದು ಜೂದುಗಾಱನಂತೆ ಕವಡಿಕೆಯಂ ತೆಗೆದು ತುರಗಾರೋಹಕನಂತೆ ಆರೂಢಕ್ರಮಮಂ ಅಱಿದು: **ಸುಕುಮಾಚ,** ೩. ೬ ವ)

**ಜೂಬುಮಾಡು** – ಹೆದರಿಸು (ಆತ್ಮಪರಿವೃಢ ಪ್ರತಾಮಂ ಅತಿಶಯಿಸಿ ಜೂಬು ಮಾಟ್ಪ ಚರನಂ ಜ್ವಳನಜಟಿ ಕಟಾಕ್ಷಿಸಿ: **ಆಚವರ್ಧ,** ೭. ೫೮)

**ಜೂಳಿ** – ಸೊಂಡಿಲಾಕಾರದ ಗಿಂಡಿಯ ನಳಿಕೆ (ಕರಗದೊಳಿಟ್ಟೊಡೆ ಜೂಳಿಯಿನಿರದದು ಪೊಱಮಡುಗು: **ಸಮಯಪ,** ೪. ೪೦)

**ಜೃಂಭಾಸ್ತ್ರ** – ಒಂದು ದಿವ್ಯಾಸ್ತ್ರ (ಜೃಂಭಾಸ್ತ್ರದಿಂ ಮುಕುಂದಂ ಸ್ತಂಭಿಸಿ ರಥಮಂ ರಥಾಶ್ವಮಂ ಸಾರಥಿಯಂ: **ಜಗನ್ನಾವಿ,** ೭. ೮೭)

**ಜೃಂಭಿತ** – ಅಧಿಕವಾದ (ದುಃಖಾಂಭೋಧಿಯ ಕಡೆಗಾಣದೆ ಜೃಂಭೀತದುಷ್ಕರ್ಮದಿಂದೆ ನಮೆದಪರಿನ್ನುಂ: **ಆದಿಪು,** ೫. ೭೬)

**ಜೃಂಭಿನಿ –** ಬೇಕಾದಾಗ ಕಾಣಿಸಿಕೊಳ್ಳುವ, ಕಣ್ಮರೆಯಾಗುವ ಒಂದು ಚೋರ ವಿದ್ಯೆ (ವಿದ್ಯುಚ್ಚೋರನೆಂಬೊಂ ಕಳ್ಳಂ ಆತಂ .. .. ಜೃಂಭಿನಿ ಸ್ತಂಭಿನಿ ಮೋಹಿನಿ .. .. ಎಂದಿವು ಮೊದಲಾಗೊಡೆಯ ತಸ್ಕರಶಾಸ್ತ್ರಂಗಳೊಳ್ ಆದಮಾನುಂ ಉಶಲಂ: **ವಡ್ಡಾರಾ,** ಪು. ೧೨೨, ಸಾ. ೧೬)

**ಜೆಟ್ಟ –** ಜ್ಯೇಷ್ಠ ಮಾಸ (ಪಾಲ್ಗೊಳ್ವ ಕೆಯ್ಗೆ ಜೆಟ್ಟಿಯ ಗಾಳಿ ಬರ್ಪಂತಾನುಂ ತಾವರೆಗೊಳಕ್ಕೆ ಮಂಜು ಬರ್ಪಂತೆ: **ಜೀವಸಂ,** ೧. ೪೯ ವ)

**ಜೆಟ್ಟಿಗ –** ಬಲಶಾಲಿ (ಜೆಟ್ಟಿಗರಂ ಅಯೋನಿಸಂಭವರಂ ಆಳ್ದು ಅರಿವರ್ಗದೊಳಾಂತು ಕಾದೆಯುಂ: **ಪಂಪಭಾ,** ೧೩. ೧೦೩); ಸಮರ್ಥ (ಅಕ್ಕರವಿದ್ಯೆಯೊಳ್ ನೆಱೆಯೆ ಜೆಟ್ಟಿಗನೆಂನಿತಲ್ಲದಿರ್ದೊಡಂ ಮಕ್ಕಳನೋದಿಸಲ್: **ಸಮಯಪ,** ೨. ೨೨)

**ಜೆಡೆದೊಂಗಲ್ –** ಜಡೆಯ ಒತ್ತು (ಬ್ಯಾಸಂ ಗಡ ಜೆಡೆದೊಂಗಲ್‌ವೆರಸಿ ಜಾಲಗಾಱತಿಗೊಗೆದಂ: **ಸಮಯಪ,** ೧೦. ೧೫೩)

**ಜೇಂಕರಿಸು –** ಪ್ರಶಂಸೆಮಾಡು (ಉಗ್ರಫಣೆಯಂ ಪಿಡಿವಂ ವಿಷಭೋಜಿಯೆಂದು ಜೇಂಕರಿಸುವರ್: **ಸಮಯಪ,** ೮. ೬೨)

**ಜೇನ್ –** ಜೇನುತುಪ್ಪ (ಜೇನ ಮಱಿಕೊಂಡು ಅಮರ್ದಿನ ಸೋನೆಯೆ ಸುರಿದತ್ತು: **ಆದಿಪು,** ೭. ೧೭); ಹುಳು (ಜೇನ ನೊಱಂಗಳ್ ತುಪ್ಪವನಿರಿಸಿದೊಡೆ ಲೋಗರ್ ಕೊಂಡುಪೋಪರ್: **ಪಂಚತಂತ್ರ,** ೧೨೬, ಶ್ಲೋಕ ೪೦ ಟೀಕೆ)

**ಜೇನಪುಟ್ಟಿ –** ಜೇನುಗೂಡು (ಭುಗಭುಗನೆ ಉರ್ಚಿಪಾಯ್ವ ಬಿಸುನೆತ್ತರ ಸುಟ್ಟುರೆಯಂ ನೆಲಕ್ಕೆ ಪರ್ದುಗಳ್ ಉಗಲೀಯದೆ ಅವ್ವಳಿಸಿ ಪೀರ್ವಿನಂ ಒರ್ಮೆಯೆ ಪೊಯ್ವ ಪೊಯ್ಗಳಿಂ ನೆಗೆದು ಮುಗಿಲ್ಗಳ್ ಇಟ್ಟೆಡೆಗಳೊಳ್ ತಲೆಗಳ್ ತೊಡರ್ದಿರ್ದು ಜೇನ ಪುಟ್ಟಿಗಳೆನೆ ಪೋಲ್ತುವು ಏಂ ಕಲಹಂ ಅಚ್ಚರಿಯಾಯ್ತೊ ತುರಂಗಸೈನ್ಯದೊಳ್: **ಪಂಪಭಾ,** ೧೦. ೮೦)

**ಜೇನೆಯ್ –** ಜೇನುತುಪ್ಪ (ಏನಯ್ಯ ಖಡ್ಗಧಾರೆಯ ಜೇನೆಯ್ಯಂ ನೆಕ್ಕುವಂತೆ ಸಂಸಾರಸುಖಕ್ಕಾನಳಿಪೆ ವಿಷಯಲೋಭದಿಂ ಏನಸ್ಸಂತಾನಂ ಎನ್ನಂ ಏನಂ ಅಱಲಿಸದೋ: **ಪಂಪರಾ,** ೨. ೧೮)

**ಜೇವಣ –** ಊಟ (ಅಂಬುಜಸೌರಭಂ ತನಗೆ ಗಾವಣ ಜೇವಣಂ: **ಶಾಂತಿಪು,** ೮. ೮೭)

**ಜೇವಣಶಾಲೆ –** ಊಟದ ಮನೆ (ಜೇವಣಶಾಲೆ ತುಂಬಿಗಳ ಪುಷ್ಪಕಳಂಬಂ ಶಸ್ತ್ರಶಾಲೆ ಕೀರಾವಳಿ ಕೋಕಿಲಾವಳಿಗಳ್: **ರಾಜಶೇವಿ,** ೯. ೫೩)

**ಜೇವಣಸಾಲೆ –** ಊಟದ ಮನೆ (ನೆರೆದ ತುಂಬಿಯ ಜೇವಣಸಾಲೆ .. .. ಸುಧಾಕರನ ಸೋದರವು ಆ ವಿಳಸತ್ ಸರೋವರಂ: **ಲೀಲಾವತಿ,** ೬. ೭೫)

**ಜೇವೆ –** ತಂಬೂರಿಯ ಜೀವಾಳ (ಕಳೆಯಂ ಪತ್ತಿಸಿ ಜೇವೆಯಂ ನಿಱಿಸಿ ಮೆಲ್ಪಿಂ ತಂತಿಯಂ ತೀಡಿ ಕಾಕಳಿಯೊಳ್ ವೀಣೆಯನಾಗುಮಾಡಿ ಮಿಡಿಯುತ್ತ: **ಲೀಲಾವತಿ,** ೧೦. ೧೧)

**ಜೇವೊಡೆ –** ಬಿಲ್ಲಿನ ಠೇಂಕಾರ ಮಾಡು (ವಜ್ರಕಾಂಡವೆಂಬ ನಿಜವಿಜಯಕಾರ್ಮುಕಕ್ಕೆ .. .. ನಿಜಭುಜಾದಂಡಮಂ ನೀಡಿ ನೀಡಿಲ್ಲದೇಱಿಸಿ ನೀವಿ ಜೇವೊಡೆದಾಗಳ್: **ಆದಿಪು,** ೧೨. ೮೭ ವ)

**ಜೈತ್ರಧ್ವಜ –** ಗೆಲವಿನ ಸಂಕೇತವಾದ ಬಾವುಟ (ತೋರ್ಕೆಗೆತ್ತದ ಜೈತ್ರಧ್ವಜಮೆಂದು ತೋರ್ಪ ತೆಱದಿಂ: **ಆದಿಪು,** ೧೧. ೧೭)

**ಜೈತ್ರಯಾತ್ರೋತ್ಸವ –** ದಿಗ್ವಿಜಯಯಾತ್ರೆ (ಜೈತ್ರಯಾತ್ರೋತ್ಸವದಳ್ ಅಖಿಲ ಷಟ್ಖಂಡಭೂಮಂಡಲೇಶಂ: **ಆದಿಪು,** ೧೩. ೭)

**ಜೈತ್ರಶಾತ್ರವ –** ಶತ್ರುಗಳನ್ನು ಗೆದ್ದವನು (ಸಸ್ಮಿತಾನನದೊಳೆ ಮಾಱುವುದೆಂದು ಅಱೆಪಿದಂ ಜಿತಶತ್ರುಗೆ ಜೈತ್ರಶಾತ್ರವಂ: **ಅಜಿತಪು,** ೫. ೯೮)

**ಜೈತ್ರಾಸ್ತ್ರ –** ಗೆಲವನ್ನು ಸಾಧಿಸುವ ಅಸ್ತ್ರ[ವುಳ್ಳವನು] (ಜೈತ್ರಾಸ್ತ್ರಂ ನಿನಗೀ ಚಕ್ರರತ್ನದಿಂ ಪೆಱತುಂಟೇ: **ಆದಿಪು,** ೧೪. ೧೨)

**ಜೈವಾತೃಕ –** ದೀರ್ಘಾಯುಷಿ (ಜೈವಾತ್ಮಕನೆನೆ ಚಂದ್ರಂ ಜೈವಾತ್ಮಕನೆನೆ ಚಿರಾಯುವಪಪ್ಪುಂ ಅಕ್ಕುಂ: **ಅಭಿಧಾವ,** ೩. ೧. ೯); ಚಂದ್ರ (ಜೈವಾತ್ಮಕಂ ಅತನುಕೃತಸ್ವಾಂತಸೌಖ್ಯಂ .. .. ನೇಮಿಚಂದ್ರಂ ಜಿನೇಂದ್ರಂ: **ಲೀಲಾವತಿ,** ೧. ೧)

**ಜೊಂಗ –** ಒಂದು ಬಗೆಯ ರೇಷ್ಮೆ ಬಟ್ಟೆ (ಸಾಹಿಯಾಣದ ಚೀನದ ಧವಳವಟ್ಟದ ಭರ್ಮದ ಜೊಂಗದ ದೇವಾಂಗದ ಸಕಳವಟ್ಟೆಗಳುಮಂ: **ಆದಿಪು,** ೪. ೩೪ ವ)

**ಜೊಂಡೆಗರ್ಬು –** ರಸಭರಿತ ಕಬ್ಬು (ತೋರಣಸ್ತಂಭಂಗಳಾಗಿ ಪೊಱಗಟ್ಟಿ ನಿಱಿಸಿದ ಜೊಂಡೆಗರ್ಬಿನ ತೆನೆಗಳಂ: **ಲೀಲಾವತಿ,** ೧೧. ೫೬ ವ)

**ಜೊಂಪ –** ಗೊಂಚಲು (ಅಲ್ಲಿಯ ಸುರತರುಗಳ ತಣ್ಣೆಲಿಲ್ಗಳೊಳಂ ಕಲ್ಪಲತೆಯ ಜೊಂಪಂಗಳೊಳಂ: **ಆದಿಪು,** ೨. ೧೪ ವ)

**ಜೊಂಪಿಸು –** ತೂನೆದಾಡು (ಕಂಠದ ಬಿಣ್ಪಿಂ ಜೊಂಪಿಸುತ್ತುಂ ನಡೆದುದಡವಿಯೊಳ್ ದೀರ್ಘದೇಹಂ ವರಾಹಂ: **ಸೂಕ್ತಿಸುಧಾ,** ೩. ೩೯)

**ಜೊತ್ತಿಸು –** ಮರುಳು ಮಾಡು (ಒತ್ತಿದ ತಳ್ಕು ಎತ್ತಿದ ತಱಿ ಮುತ್ತಿನ ಪೊಸದುಡುಗೆ ತಳಿರ ಸೋರ್ಮುಡಿ ಮನಮಂ ಪತ್ತಿಸಿ ಜೊತ್ತಿಸೆ ಮದನೋನ್ಮತ್ತೆಯರ್ ಅವಯವದೆ ಬಂದರ್ ಅರಸಿಯರ್ ಅರೆಬರ್: **ಪಂಪಭಾ,** ೫. ೫೯); ವಂಚನೆ ಮಾಡು (ಅಂತಾದೊಡೆ ಆ ವ್ರತಮಿರ್ಕೆ ಮತ್ತಿನ ಜೊತ್ತಿಸಿ ಕೊಟ್ಟ ಅಸಿತವ್ರತಂಗಳಂ ಆ ಜಿನಮುನಿಗೆ ಕೊಟ್ಟು ಬರ್ಪಂ: **ಸುಕುಮಾಚ,** ೭. ೫ ವ)

**ಜೊತ್ತು –** ರಾಶಿ (ಯೌವನದ ಜೊತ್ತುಂ ಬೆಡಂಗಿನ ಬಿತ್ತುಂ .. .. ಎನಿಸಿದ ಸರ್ವೈಶ್ವರ್ಯರೂಪಾತಿಶಯಮಂ .. .. ಭಾವಿಸಿ ನೋಡುತ್ತಿರ್ಪುದುಂ: **ಲೀಲಾವತಿ,** ೩. ೪೮ ವ)

**ಜೊನ್ನ –** [ಜ್ಯೋತ್ಸ್ನಾ] ಬೆಳುದಿಂಗಳು (ಬೇಱದೊಂದು ಜೊನ್ನದ ಕಾರ ಕಾರಿರುಳ ಮೆಯ್ಸಿರಿ ತಪ್ಪದೆನಲ್ ದಿಗಂತಮಂ ಪುದಿಯೆ.. .. ಬಲಾಚ್ಯುತರ್ .. .. ಪುಗುತಂದರ್: **ಪಂಪರಾ,** ೪. ೪೪)

**ಜೊನ್ನವಕ್ಕಿ –** ಬೆಳುದಿಂಗಳನ್ನು ಕುಡಿಯುವ ಹಕ್ಕಿ, ಚಕೋರ (ನನೆವಿಲ್ಲ ಬಲ್ಲಹನ ಸೊಂಪಿಇಂಗೆ ಬೆಕ್ಕಸಂಬಡುತ್ತುಂ ಬದ ಇಂಗದಿರ್ಗಳಂ ಕಾಣ್ಕೆಗೊಟ್ಟು ಜೊನ್ನವಕ್ಕಿ ಬಿನ್ನವಿಸಿತ್ತು: **ಕಬ್ಬಿಗಕಾ,** ೧೧೩ ವ)

**ಜೊಮ್ಮನೆವೋಗು –** ಆಯಾಸದಿಂದ ಮೈಮರೆ (ಚಕಿತಮೃಗಾಕ್ಷಿ ನೀನೆಳಸಿ ಕೆಮ್ಮನೆ ಜೊಮ್ಮನೆವೋಗಿ ಭಾವದಿಂ ಪ್ರಕಟಿಸಲೇಕೆ ಪಾಱುತನಮಂ: **ಪುಷ್ಪದಂಪು,** ೫. ೩೪)

**ಜೋಕಾಱ –** ಜೋಕುಮಾರು, ಏಳು ದಿವಸ ಆಯುಸ್ಸಿದ್ದ ಒಬ್ಬ ಕ್ಷುದ್ರದೇವತೆ (ಪದ್ಮರಥಂ ಮೆಚ್ಚಿ ಮೆಚ್ಚಿತ್ತೆಂ ಬೇಡಿಕೊಳ್ ಎನೆ ಬಲಿ ಜೋಕಾಱನಂತೀರೇೞು ದಿವಸದ ಅರಸುತನಮಂ ಬೇಡಿ ಪಡೆದಂ: **ನೇಮಿನಾಪು,** ೬. ೧೯ ವ)

**ಜೋಗ** – [ಯೋಗ] ತಪಸ್ಸು (ದೇವರಂ ಬಂದಿಸಿ ನಿಯಮಂಗೆಯ್ದು ಜೋಗಭಕ್ತಿಯಿಂದಿರ್ದರ್: **ವಡ್ಡಾರಾ,** ಪು. ೧೫೬ ಸಾ. ೮)

**ಜೋಗಂಬೋಗು** – ಮೈಮರೆ (ತೂಗುತ್ತೆ ತೊದಳಿ ಜೋಗಂಬೋಗುತ್ತಂ ಸೊಕ್ಕಿದಬಲೆಯರ್ ಕಣ್ಗೆಸೆದರ್: **ತ್ರಿಷಷ್ಟಿಪು,** ೨೪. ೧೫೩)

**ಜೋಗವಟ್ಟಿಗೆ** – [ಯೋಗಪಟ್ಟಿಕಾ] ಯೋಗಿಯು ಸುತ್ತಿಕೊಳ್ಳುವ ಬಟ್ಟೆ (ಅದು ಜೋಗವಟ್ಟಿಗೆ ಕಮಂಡಲು ಅಂತದು ಭಸ್ಮಶಯ್ಯೆ .. .. ಎಂದು ನೋಡಿದಂ ಅತಿವಿಸ್ಮಯಂಬೆರಸು ತದ್ಗುಹೆಯಂ ನೃಪರೂಪಚಂದ್ರಮಂ: **ಕಾದಂಸಂ,** ೩. ೩೯)

**ಜೋಗು** – [ಯೋಗ] ಧ್ಯಾನ (ದಯಾಭದ್ರ ಭಟಾರರ್ಗೆ ಜೋಗು ನೆಱೆದು ಯಶೋಭದ್ರೆಯ ಬೇಡಿದ ಮೋನದ ದಿವಸದ ಪ್ರಮಾಣಾವಸಾನದೊಳ್: **ವಡ್ಡಾರಾ,** ಪು ೨೮, ಸಾ ೮); ತೇವ, ಒದ್ದೆ (ಉರ್ವಿತಳಮದು ನೆಱೆ ಜೋಗಿರ್ದು ಮೆಟ್ಟಲ್ಕೆ ಬಲ್ಪೊಂದೆಡೆಯಿಲ್ಲೆಂಬಂತೆ ಪಂಕಂ ಮಸಗೆ ನೆನೆದು: **ಕುಸುಮಾಕಾ,** ೬. ೩೫)

**ಜೋಗುಗೊಳ್** – ತಪಸ್ಸು ಮಾಡು (ಆಷಾಢಮಾಸದ ಚತುರ್ದಶಿಯ ದಿವಸದಂದು ಪಱವೊೞ್ತು ಬಂದು ಜೋಗುಗೊಂಡಿರ್ದರ್: **ವಡ್ಡಾರಾ,** ಪು ೨೭, ಸಾ ೨೪)

**ಜೋಗುಳ** – ಲಾಲಿ ಹಾಡು (ಜೋ ಎನುತೆ ಜೋಗುಳಮಂ ಶ್ರುತಿಗೂಡಿ ಪಾಡಿದರ್: **ಅನಂತಪು,** ೬. ೩)

**ಜೋಗೆತ್ತು** – ತಪಸ್ಸಿನಿಂದ ಎಚ್ಚರಗೊಳ್ಳು (ಜೋಗೆತ್ತಿ ಮುನಿಶಿಖಾಮಣಿ ಪೋಗುತ್ತಿರೆ: **ಪುಣ್ಯಾಸ್ರ,** ೩. ೭೨)

**ಜೋಡ** – ಹಾದರಿಗ ೯ಜೋಡನೆಂದು ಸಿತಗನುಂ ಪಾಣ್ಬನುಮಕ್ಕುಂ, **ಶಬ್ದಮದ,** ಪ್ರಸಾ, ೮೯)

**ಜೋಡಾಡು** – ಹಾದರಮಾಡು (ನಿಮ್ಮಡಿ ನೀಮಿಲ್ಲಿ ಸುಖನಿದ್ರೆಗೆಯ್ಯಿಂ ಎಂದು ತಾಂ ಜೋಡಾಡಲ್ ಬಗೆದು: **ಪಂಚತಂತ್ರ,** ೧೨೮ ವ)

**ಜೋಡು** – ಜೊತೆ; ಸಮಾನ (ಅಂತೆ ಸಂತಸಂ ಮಾಡದೆ ಸಂಧಿಮಾಡಿ ಕುರುಪುತ್ರರೊಳ್ ಎನ್ನನೆ ಜೋಡುಮಾಟ್ಟಿರೇ: **ಪಂಪಭಾ,** ೯. ೨೪); ಅಂಗರಕ್ಷೆ (ಕಿಱುವುಲಿಯ ಜೋಡಂ ತೊಟ್ಟಂತಿರಿಟ್ಟಳಮಾಗೆಯುಂ: **ಅನಂತಪು,** ೨. ೨೯ ವ)

**ಜೋಡೆ** – ಹಾದರಗಿತ್ತಿ (ಅಲರ್ಗಣ್ಣೊಳ್ ಸ್ಮರನಿರ್ದಪನಕ್ಕುಂ ಎಡೆವೋಪಾ ಜೋಡೆ ಕಾಮಂಗೆ ಕಾದಲೆಯಕ್ಕುಂ: **ಪಂಪಭಾ,** ೪. ೮೪)

**ಜೋಡೆಗೆಯ್ತು** – ಹಾದರ (ನೋಡಿ ನಾಡಾಡಿಯಲ್ಲದ ಆಕೆಗಳ ಜೋಡೆಗೆಯ್ತಂಗಳಂ ಕಂಡು ಇದು ಮನೆಯಾಣ್ಮನಂ ಮಾಱುವಂದಮಲ್ಲದೆ ಪೂಮಾಱುವಂದಂ ಅಲ್ತು ಎಂದು ಮುಗುಳ್ನಗೆ ನಗುತುಂ: **ಪಂಪಭಾ,** ೪. ೮೧ ವ)

**ಜೋತಿರಮರ** – [ಜೈನ] ಭವನವಾಸಿ, ವ್ಯಂತರ, ಜೋತಿಷ್ಕ, ಕಲ್ಪವಾಸಿಗಳೆಂಬ ನಾಲ್ಕು ಬಗೆಯ ದೇವತೆಗಳಲ್ಲಿ ಒಂದು ಗುಂಪು, ಜ್ಯೋತಿಷ್ಯಲೋಕದಲ್ಲಿನ ಸೂರ್ಯಚಂದ್ರ ಮೊದಲಾದ ದೇವತೆಗಳು (ಭವನಾಮರರುಂ ವ್ಯಂತರನಿವಹಮುಂ ಆ ಜ್ಯೋತಿರಮರತತಿಯುಂ: **ಕರ್ಣನೇಮಿ,** ೮. ೧೦೯)

**ಜೋದ** – [ಯೋಧ] ಸೈನಿಕ (ಪಾಱುವ ಪಾಱುಂಬಳೆ ಕೊಳೆ ಜೀಱೆಟ್ಟಿಂಬರಕೆ ತಲೆ ಸಿಡಿಲ್ದೊಡಂ ಆ ಕಾಯ್ದಾಱದೆ ಹರಣಂಗೆಯ್ದುವು ಜಾಱಲ್ಲದೆ ಜೋದರ ಅಟ್ಟೆಗಳ್ ಕೆಲವಾಗಳ್: **ಪಂಪಭಾ,** ೧೦. ೯೫); ಮಾವತಿಗ (ಆದಿತ್ಯಂ ಮಸುಳ್ವನ್ನೆಗಂ ಧ್ವಜಘಟಾಟೋಪಂಗಳಿಂದಂ ಲಯಾಂಭೋದಂಗಳ್ ಕವಿವಂತೆವೋಲ್ ಕವಿವುದುಂ ಕಾಲ್ಗಾಪು ಕಾಲ್ಗಾಪಿನೊಳ್ ಜೋದರ್ ಜೋದರೊಳ್ .. .. ಅಗುರ್ವಪ್ಪನ್ನೆಗಂ: **ಪಂಪಭಾ,** ೧೦. ೯೩);

**ಜೋನೆಗವಟೆ** – ಯವನರಿಂದ ತಯಾರಾದ ಬಟ್ಟೆ (ಪಟೆ ಚಿತ್ರಾವಳಿ ಜೋನೆಗವಟೆ ದೇವಾಂಗಮೆಂಬ ವಸನಂಗಳಂ: **ಆದಿಪು,** ೫. ೩೪)

**ಜೋಯಿಸ** – ಜ್ಯೋತಿಷ್ಯ (ಮಾಯಾತಪಸ್ವಿ ಜೋಯಿಸಮಂ ವಕ್ಖಾಣಿಸಿಂ ಎಂದು ಕಯ್ಗಳಂ ಮುಗಿದು ಮುಂದೆ ಕುಳ್ಳಿರ್ಪುದುಂ: **ಸುಕುಮಾಚ,** ೩. ೩೫ ವ); ಜ್ಯೋತಿಷಿ (ಮೞೆಗಾಲಮುಂಟೆಂದು ತಪ್ಪಿದ ಜೋಯಿಸಂ ಬಾವಿಯ ನೀರನಡಕಿ ನಿರ್ವೊಯ್ದನೆಂಬ ಕಥೆಯಂತೆ ಪುಸಿಯರಸುತನದ ಬೆಸನದೊಳ್ ತೊಡರ್ದು: **ಪಂಚತಂತ್ರ,** ೧೯೭ ವ)

**ಜೋಯಿಸಿಗ** – ಜ್ಯೋತಿಷಿ (ಆ ಒತ್ತುಂ ಜೋಯಿಸಿಗರ್ ಪಾಪಗ್ರಹಮೆಂದು ಪೆಸರನಿಡೆ: **ಸಮಯಪ,** ೮. ೧೬೧)

**ಜೋಲ್** – ಜೋತುಬೀಳು (ಜೋಲ್ವ ಪುರ್ಬನೆತ್ತಿ ಕಟ್ಟಿದ ಲಲಾಟಪಟ್ಟದೊಳ್ ಇಟ್ಟಣಮೊಪ್ಪುವ ಬೀರವಟ್ಟಮುಂ: **ಪಂಪಭಾ,** ೧೦. ೫೨ ವ)

**ಜೋವೇೞು** – ಜೋಮು ಹಿಡಿ, ಮರಗಟ್ಟು (ಬಿದಿರ್ದಳ್ ಕದಪಿನ ಭರದಿಂ ಜೋವೇೞಿದೊಂದು ಕರಕಿಸಲಯಮಂ: **ಕಾದಂಬ,** ೮. ೪೫)

**ಜೋಹ** – ಚೋಹ, ವೇಷ, ರೂಪ (ಪಾಟ್ಟಿಸದಿಯ ಪೆಣ್ಣ ಜೋಹದವೊಲ್ ಒಪ್ಪಿದಳ್ ಒರ್ವಳ್ ಅನಂಗರಾಗದಿಂ: **ಶಾಂತಿಪು,** ೮. ೮೮); ಪಾತ್ರ (ಪಗರಣದ ಜೋಹಂ ಬಂದಿರ್ದುದೆನೆ ಗುಂಡುಗೊಂಡಿಡೆ ಪೆಱಗಣ್ಗೋಡಿ: **ಕರ್ಣನೇಮಿ,** ೩. ೧೧೩ ವ)

**ಜೋಳ** – ಒಂದು ಬಗೆಯ ಧಾನ್ಯ, ಅನ್ನದ ಋಣ (ಒಂದೆರಟ್ಟುದುರೆಯಟ್ಟೆಯುಂ ಒಂದೆರಡು ಆನೆಯಟ್ಟೆಯುಂ ತೊಡರ್ದೊಡನಾಡೆ ತಳ್ತಿಱೆಯದಿರ್ದೊಡೆ ಜೋಳಮನೆಂತು ನೀಗುವೆಂ: **ಪಂಪಭಾ,** ೧೦ ೪೨)

**ಜೋಳಕ್ಕೆ ತಪ್ಪು** – ಅನ್ನದ ಋಣ ತೀರಿಸದಿರು (ಜೋಳಕ್ಕೆ ತಪ್ಪಿಯುಂ ಇಂ ಬಾಟ್ಟುದೆ ಪೂಣ್ದು ನಿಲ್ಲದಿಕೆಯಿಂ ಬಾಟ್ವಂತು ವಿಖ್ಯಾತ ಕೀರ್ತಿಯವೊಲ್ ಈ ಒಡಲ್ ಅಬ್ಬೆ ಪೇೞಿಂ ಎನಗೇಂ ಕಲ್ಪಾಂತರಸ್ಥಾಯಿಯೇ: **ಪಂಪಭಾ,** ೯. ೮೪)

**ಜೋಳದ ಪಾಟಿ** – ಅನ್ನದ ಋಣ (ರಣದೊಳ್ ಗೆಲ್ದು ಆಜಿಯಂ ತಳ್ತು ಸಂಗರದೊಳ್ ಜೋಳದ ಪಾಟಿಯಂ ನೆರಪಿದಂ ಗಂಡಂ ಪೆಱಂ ಗಂಡನೇ: **ಪಂಪಭಾ,** ೧೦ ೪೩)

**ಜೋಳವಾಟಿ** – ಜೋಳದ ಪಾಳಿ, ಅನ್ನದ ಋಣ ತೀರಿಸಲು ಮಾಡುವ ಕರ್ತವ್ಯ (ಸೆರಗಂ ಬೆರಗಂ ಬಗೆಯದೆ ಪೊರೆದಾಳ್ದನ ಜೋಳವಾಳಿ ನಿಲೆ ಗೋಟಿಯ್ದುರ್ ಪರಿಯಿಪುದುಂ ಒಂದೆನೇಣೊಳ್ ಪರಿವಂತಿರೆಪರಿದುವು ಉಭಯ ಬಲದ ಹಯಂಗಳ್: **ಪಂಪರಾ,** ೧೩, ೫೭); ಕರ್ತವ್ಯ ಮಾಡುವವನು

**ಜೋಳಿಗಟ್ಟು** – ಜೊತೆಗಟ್ಟು (ಅಂತು ರಾಜವಲ್ಲಭಾಕರಿಣಿಗಂ ಮನೋವಲ್ಲಭ ಕರೇಣುಗಂ ಜೋಳಿಗಟ್ಟಿನ ಆಲಾಸ್ತಂಭಮಾದ .. .. ಭೂರಿಭುಜಶಾಖೆಗಳಂ: **ಅನಂತಪು,** ೬. ೬೫ ವ)

**ಜೋಳಿದೆಗೆ** – ಜೋಡಿಮಾಡು (ಗೋವಳರ ಗೊಂದಣಂ ಜೋಳಿದೆಗೆದು ಮೇಳೈಸುವಾಗಳ್: **ಅನಂತಪು,** ೨. ೨೩ ವ)

**ಜೋಳಿಸು** – ಕೂಡಿಸು (ಜೋಳೀಸಿ ಕರಪಲ್ಲವಂ .. .. ಮಲ್ಲಿಗೆಯೊಳರ್ಚಿಸಿದಳ್: **ಅನಂತಪು,** ೭. ೧೨)

**ಜೌಗು**– ಸದಾ ತೇವವಾಗಿರುವ ಪ್ರದೇಶ (ನೆಱೆ ಜೌಗಾಗೆ ಮತ್ತೇಭ ದಾನಾತುಳ ಧಾರಾಪೂರದಿಂದ: **ಕುಸುಮಾಕಾ,** ೧೫. ೧೦೩)

**ಜ್ಞಾತವ್ಯ** – ತಿಳಿಯಬೇಕಾದ (ಜ್ಞಾತವ್ಯಂ ತನಗೆನಿಸಿದ ಭೂತಳಸಾರಮಂ ಉಪಾಸಕಾಚಾರಮಂ ಖ್ಯಾತ ಯತಿಗೊಳೆ ತಿಳಿದು: **ಆಚವರ್ಧ,** ೧೨. ೭೦)

**ಜ್ಞಾತಿ** – ದಾಯಾದಿ (ಬಂಧು ಸನಾಭಿ ಸಗೋತ್ರಂ .. .. ಆತ್ಮೀಯನೆನಿಸುಗುಂ ಜ್ಞಾತಿ: **ಅಭಿಧಾವ,** ೧. ೧೧. ೨೮)

**ಜ್ಞಾತಿತ್ವ** – ದಾಯಾದಿ ಸಂಬಂಧ (ಜ್ಞಾತಿತ್ವಂ ತಾನಕ್ಕುಂ ಜ್ಞಾತೇಯಂ: **ಅಭಿಧಾವ,** ೨. ೨. ೩೦)

**ಜ್ಞಾತಿಬಹಿಷ್ಕೃತ** – ದಾಯಾದಿ[ಬಂಧು]ಗಳಿಂದ ಬಹಿಷ್ಕೃತನಾದವನು (ಜ್ಞಾತಿಬಹಿಷ್ಕೃತಂ ವ್ಯಸನಿ ದೈವಪರಂ ಶಿಶು ದೀರ್ಘದೋಷಿ ಸತ್ಯೇತರಂ ಅಸ್ಥಿರಂ: **ಪಂಚತಂತ್ರ,** ೩೦೮)

**ಜ್ಞಾನ** – ಅರಿವು (ಜ್ಞಾನದಿನಿರ್ದು ನಿಟ್ಟಿಪೊಡೆ ದಿವ್ಯಮುನೀಂದ್ರನ ಕೊಟ್ಟ ಒತ್ರಂಗಳಂ ಓದಿಯೋದಿ .. .. ಯಮರಾಜನಂ .. .. ಬರಿಸೆ: **ಪಂಪಭಾ,** ೧. ೧೧೯)

**ಜ್ಞಾನಗರ್ಭ**– ಜ್ಞಾನದಿಂದ ಕೂಡಿದ (ವಿಶ್ವರೂಪಗರ್ಭಿಣಿಯಪ್ಪ ದೇವಿ ಬ್ರಹ್ಮಗರ್ಭಪ್ರಕೃತಿಯಂತೆಯುಂ .. .. ಜ್ಞಾನಗರ್ಭಸನ್ಮತಿಯಂತೆಯುಂ .. .. ಮಹತ್ವಮಂ ಪಡೆದೆ: **ಜಗನ್ನಾವಿ,** ೨. ೯೬)

**ಜ್ಞಾನಾಂಬಕ** – ತಿಳಿವಿನ ಕಣ್ಣು (ಜ್ಞಾನಾಂಬಕಂ ಅಮಳ ಗುಣಾಧಾನಂ ಷರ್ವಜ್ಞನೆಂಬುದು: **ಸಮಯಪ,** ೮. ೮೧)

**ಜ್ಞಾನಾವರಣಪಂಚಕ** – [ಜೈನ] ಮತಿಜ್ಞಾನ, ಶ್ರುತಿಜ್ಞಾನ, ಅವಧಿಜ್ಞಾನ, ಮನಃ ಪರ್ಯಾಯಜ್ಞಾನ ಮತ್ತು ಕೇವಲಜ್ಞಾನ ಎಂಬ ಐದು ಜ್ಞಾನಾವರಣಗಳು (ಚರಮಸಮಯದೊಳ್ ಜ್ಞಾನಾವರಣಪಂಚಕಮುಂ ದರ್ಶನಾವರಣಚತುಷ್ಕಮುಂ ಅಂತರಾಯಪಂಚಕಮುಂ ನಿರ್ಮೂಳಮಪ್ಪಂತೆ ಒರ್ಮೊದಲೊಳೆ ಕಿಡಿಸಿದಾಗಳ್: **ವರ್ಧಮಾಪು,** ೧೩. ೩೨ ವ)

**ಜ್ಞಾನಾವರಣೀಯ** – [ಜೈನ] ಎಂಟು ಬಗೆಯ ಘಾತಿಕರ್ಮಗಳಲ್ಲಿ ಒಂದು; ಜ್ಞಾನವನ್ನು ಮರೆಮಾಡುವ ಕರ್ಮ (ಕಮಧಭೇದಮುಂ .. .. ಮೂಲಪ್ರಕೃತಿಭೇದದಿಂದೆಂಟು ತೆಱನಕ್ಕುಂ ಅವಾವುವೆನೆ ಜ್ಞಾನಾವರಣೀಯಂ .. .. ನಾಮಗೋತ್ರಮಂತರಾಯಂ: **ಶಾಂತಿಪು,** ೧೨. ೧೧ ವ)

**ಜ್ಯಾ** – ಬಿಲ್ಲಿನ ಹೆದೆ (ಸೀಕರಿವೋದತ್ತು ಮೃಣಾಳತಂತುರಚಿತ ಜ್ಯಾಲೇಖೆ .. .. ಬಾಲಚಂದ್ರಮುನಿನಾಥಜ್ಞಾನನೇತ್ರಾಗ್ನಿಯಿಂ: **ಮಲ್ಲಿನಾಪು,** ೧. ೧೯); ಭೂಮಿ (ಜಸವೆಣ್ಣಂ ಜ್ಯಾಯಂ ಎಱಗಿಸಿದ ನೀಱಂ ಸ್ತ್ರೀಯರಂ ಎಱಗಿಸುವುದು ಅರಿದೆ ಮನುಜಮನೋಜಂ: **ನೇಮಿನಾಪು,** ೫. ೧)

**ಜ್ಯಾಕಿಣ** – ಬಿಲ್ಲಿನ ಹೆದೆ ತಗುಲಿ ಆಗುವ ದಡ್ಡು (ಜ್ಯಾಕಿಣ ರೇಖಾಂಕ ಪ್ರಕೋಷ್ಠಂ .. .. ಅದಟಿಂದ ಒರ್ವಂ ಉರ್ವೀಶನಾದಂ: **ಲೀಲಾವತಿ,** ೧. ೮೩)

**ಜ್ಯಾಯ** – ಜ್ಯೇಷ್ಠ, ಅಗ್ರಜ (ಜಿನಯೋಗಿಜ್ಯಾಯರ್ ಉತ್ಸಾರಿತಭವದುರಿತರ್ ಭಾವಿಸುತಿರ್ಪ ತತ್ಪಾವನಶುಭ್ರಧ್ಯಾನದೀಪ್ತಿವ್ರಜಮೆ ಬಲಿದು ಭಾಸ್ವತ್ ಜಿನಾವಾಸಮಾಯ್ತು: **ಶಾಂತೀಶ್ವಪು,** ೧. ೧೧೩)

**ಜ್ಯಾಲೇಖೆ** – ಬಿಲ್ಲಿನ ಹೆದೆಯ ದಾರ (ನನೆವಿಲ್ ನಿಸ್ಸಾರಮಾದತ್ತು ಸೀಕರಿವೋದತ್ತು ಮೃಣಾಳತಂತುರಚಿತ ಜ್ಯಾಲೇಖೆ ಮೀನಧ್ವಜಂ ಕೊರಗಿತ್ತು ಕಂತು ಸೀದ ಗಜೆಯಂತಾದಂ: **ಮಲ್ಲಿನಾಪು,** ೧. ೧೯)

**ಜ್ಯೋತಿಃಪ್ರಭೆ** – ನಕ್ಷತ್ರಗಳ ಬೆಳಕು (ಆಭರಣ ಪರಿಭೂತ ಪ್ರಭೂತ ಜ್ಯೋತಿಃಪ್ರಭೆಯಂ: **ಶಾಂತಿಪು,** ೫. ೧೦೫ ವ)

**ಜ್ಯೋತಿರಂಗ** – [ಜೈನ] ದಶವಿಧ ಕಲ್ಪವೃಕ್ಷಗಳಲ್ಲಿ ಒಂದು; ಬೆಳಕನ್ನು ನೀಡುವ ಕಲ್ಪವೃಕ್ಷ (ಸೊಗಯಿಸುವುದು ದೀಪಾಂಗ ಜ್ಯೋತಿರಂಗ ಕಲ್ಪಕುಜಂಗಳ್: **ಆದಿಪು,** ೫. ೪೦)

**ಜ್ಯೋತಿರಿಂಗಣ** – ಮಿಣುಕುಹುಳು (ತಮಂ ಪಿಂಗೆ ದಿನಪತಿಯ ಬೆಳಪ ನಭೋಂಗಣಮಂ ಜ್ಯೋತಿರಿಂಗಣಂ ಬೆಳಗುಗುಮೇ: **ಆದಿಪು,** ೮. ೧೦)

**ಜ್ಯೋತಿರೌಘ** – ಬೆಳಕಿನ ಪ್ರವಾಹ (ಮಕುಟಮಣಿಜ್ಯೋತಿರೌಘಪ್ರಸೂನಾವಲಿ ಮಾಲಾರ್ಚಿತ ಅಂಘ್ರಿದ್ವಯಂ: **ಅಜಿತಪು,** ೭. ೨೧)

**ಜ್ಯೋತಿರ್ಗಣ** – ಜ್ಯೋತಿಷ್ಯ ದೇವಗಣ (ಆತಂ ಆ ತಪಃಫಲದಿಂ ಜ್ಯೋತಿರ್ಗಣದೊಳಗೆ ಸುದರ್ಶನನೆಂಬ ದೇವನೀತನಾಗಿ ಪೂರ್ವಜನ್ಮಜನಿತ .. .. ರೋಷಾವೇಶದಿಂ ಉಪಸರ್ಗಮಂ ಮಾಡಿದಂ: **ನೇಮಿನಾಪು,** ೪. ೧೨೯ ವ)

**ಜ್ಯೋತಿರ್ಜ್ಞಾನ** – ಜ್ಯೋತಿಷ್ಯದ ತಿಳಿವಳಿಕೆ (ಈ ಜ್ಯೋತಿರ್ಜ್ಞಾನಮಪ್ಪೊಡೆ ಎಮ್ಮನ್ನರಪ್ಪ ಋಷಿರೂಪರ್ಗಲ್ಲದೆ ಕಲಲುಂ ಕಲಿಸಲುಂ ಬಾರದು: **ಸುಕುಮಾಚ,** ૩. ೨೮ ವ)

**ಜ್ಯೋತಿಷ್ಕ** – [ಜೈನ] ಸೂರ್ಯ, ಚಂದ್ರ, ಗ್ರಹ, ನಕ್ಷತ್ರಗಳಲ್ಲಿರುವ ಒಂದು ದೇವತಾವರ್ಗ (ಮಾನಸರ ಮಕ್ಕಳೇ ಜ್ಯೋತಿಷ್ಕರ್: **ಸಮಯಪ,** ೧೦. ೧೦೫)

**ಜ್ಯೋತಿಷ್ಕಾಮರ** – ಜ್ಯೋತಿಷ್ಕ ವರ್ಗದ ದೇವತೆ (ಚಂದ್ರಾದಿತ್ಯ ಪ್ರಮುಖರಪ್ಪ ಜ್ಯೋತಿಷ್ಕಾಮರರುಮಂ: **ಚಂದ್ರಪ್ರಪು,** ೧೨. ೧೧೩ ವ)

**ಜ್ಯೋತ್ಸ್ನಾವಿಲಾಸ** – ಬೆಳುದಿಂಗಳ ವೈಭವ (ಜ್ಯೋತ್ಸ್ನಾವಿಲಾಸದೊಳ್ ಬಗೆದನಿಲ್ಲ ನಲ್ಲಳಂ ಇನಸಂ: **ಕವಿರಾಮಾ,** ૩. ೯૩)

**ಜ್ವರಿತ** – ಜ್ವರಪೀಡಿತ (ಜ್ವರಿತಂಗೆ ದುಗ್ಧಪಾನಂ ಸೊಗಯಿಸದ ತೆಱದೆ ಮಿಥ್ಯಾತ್ವಮಹಾಜ್ವರಿತಂಗೆ .. .. ಜಿನೇಂದ್ರಾಗಮೋಕ್ತಿ ಮೋಹಿಸದೆಂತುಂ: **ಸಮಯಪ,** ૩. ೬೪)

**ಜ್ವಲನ** – ಬೆಂಕಿ (ತತ್ಪುರಪತಿ ವರವಿಭವ ಮರುತ್ಪತಿ ತೇಜೋವಿರಾಜಿತ ಅಹಃಪತಿ ಚಂಚತ್ಪರಮಯ ಯಶಃಪತಿ ವಿದ್ವತ್ಪೂಜ್ಯಂ ಜ್ವಲನಜಟಿ ಮಹಾಖಚರೇಜ್ಯಂ: **ಶಾಂತೀಶ್ವಪು,** ೧. ೧೪೬)

**ಜ್ವಳನ** – ಬೆಂಕಿ (ಮತ್ತ ಮಾತಂಗ ಪದನಖ ಖರ್ವಿತ ಉರ್ವೀತಳಮುಂ ಪ್ರಚಂಡ ಮಾರ್ತಂಡ ಮರೀಚಿ ತೀವ್ರ ಜ್ವಳನ ಆಸ್ಫಾರ ಕರಾಳ ಕರವಾಳ ಭಾಮಂಡಳ ಪರೀತ ಉದ್ಯತ ದೋರ್ದಂಡ ಚಂಡಪ್ರಚಂಡ ಸುಭಟ: **ಪಂಪಭಾ,** ೧૩. ೫೧)

**ಜ್ವಳನಸಖ** – ಬೆಂಕಿಯ ಗೆಳೆಯ, ಗಾಳಿ (ಜ್ವಳನಸಖಸುತನ ಮೂರ್ಛೆಯೆ ತಿಳಿದುದು ಮುಂತಿಳಿಯಲಿಲ್ಲ: **ಗದಾಯು,** ೮. ૩೪)

**ಜ್ವಾಳಿ** – ಬೆಂಕಿ (ಮುಂದಣ ಭೀಮ ಜ್ವಾಳಿಯೊಳೊಂದಿದ ಪೆಣನಂ ಕೆಲಕ್ಕೆ ನೂಂಕಿ: **ಕರ್ಣನೇಮಿ,** ૩. ೧೬೦)

# ಝ

**ಝುಂಕರಣ** – ಝೇಂಕಾರ (ಸರಸಿಜವನಂಗಳಲರ್ವಿನಂ ಇರಲಾಱದೆ ಬೇಗಮೆಱಗುವಳಿನೀನಿವಹದ ಝುಂಕರಣಕ್ಕೆ ಕಾಯ್ಪುಗೊಂಡು: **ಆದಿಪು,** ೧೨. ೫೧)

**ಝುಂಕಾರ** – ದುಂಬಿಗಳ ಮೊರೆತ (ದರದಳಿತಾಂಭೋರುಹದಳಪರೀತ ಪಟ್ಟದ ನಿಬದ್ಧ ಝುಂಕಾರೈಕಾಕ್ಷರ ದಿವ್ಯಮಂತ್ರದಿಂದಂ: **ಮಲ್ಲಿನಾಪು,** ೫. ೪)

**ಝುಂಪಾಣ** – ಮುಸುಕು (ಬಾಸಣಿಸಿದ ಮದನನ ಬಾಣಾಸನದವೊಲೆಸೆವ ಚಾರುಝುಂಪಾಣದೊಳು: **ಪುಷ್ಪದಂಪು,** ೫. ೨೦)

**ಝುಂಪಾಳ** – ಮೇಲ್ಮುಸುಕು (ದಾಡಿಮೀಫಲಂಗಳ ಮೇಲೆ ಮುತ್ತಿ ಝುಂಪಾಳಂಗಳಂ ಕವಿಯಲುಂ .. .. ಪೋಗೆವೋಗೆ: **ಕಾದಂಬ,** ೬. ೨೫ ವ)

**ಝುಣಂಬ** – ಮೇಲುಹೊದಿಕೆ (ಇಂದ್ರಜಾಲಿಗರ ಪಾಪೆಗಳುಂ ಸೀರೆಗಳುಂ ಝುಣಂಬಮುಮಂ ತೊಟ್ಟು ಶ್ಮಶಾನದೊಳುರಿವ ಕಿಚ್ಚಿನ ಪಕ್ಕದೆ ನಿಂದಿರ್ದಳ್: **ವಡ್ಡಾರಾ,** ಪು ೧೯, ಸಾ ೧೨)

**ಝುಲ್ಲರಿ** – ಒಂದು ಚರ್ಮವಾದ್ಯ (ಆಗಳ್ ಕುರುಧ್ವಜಿನಿಯುಂ ಅನೇಕ ಶಂಖ ಕಾಹಳ ಭೇರೀ ಪಣವ ಝುಲ್ಲರೀ ಮೃದಂಗ ತೂರ್ಯಂಗಳ್ ಅಂತ ಕಾಲಾಂತಕ ವಿಕಟಾಟ್ಟಹಾಸಂಗಳ್ ಎಂಬಂತೆ ಮೊಳಗೆ: **ಪಂಪಭಾ,** ೧೧. ೩೩ ವ); ಕಂಚಿನ ತಾಳ (ಪಟುಪಟಹ ತುಣವ ಭಂಭಾ ಮರ್ದಳೆ ಝುಲ್ಲರಿ ಮುಕುಂದ ತಾಳ ಕಾಹಳ ಶಂಖ ವಂಶ ವೀಣಾಸ್ವರಂಗಳೆಸೆಯೆ: **ವಡ್ಡಾರಾ,** ಪು ೮೪, ಸಾ ೨೮); ಜರಡಿ (ಝುಲ್ಲರಿವೋಲ್ ಝುಲ್ಲೆನೆ ಸೂಸಿ ನಿರ್ಝರಂ ಬೀೞ್ತರ್ಪಿನಂ: **ನೇಮಿನಾಪು,** ೮. ೧೧)

**ಝುಲ್ಲಿಸು** – ದ್ರವಿಸು (ಕಲ್ಲಲ್ತೇ ಶಶಿಕಾಂತಂ ಝುಲ್ಲಿಸುವುದು ಚಂದ್ರಕಿರಣಮಂ ತಗಲೊಡಂ: **ಅನುಭವ,** ೯೦)

**ಝುಷ** – ಮೀನು (ಚಳತ್ಕದಳಿಕಾಮಾಳಂ ಝುಷಾನೀಕಂ ಅಚ್ಚರಿಯಂ ಬಾಹುಬಲೀಶ್ವರಂಗೆ ಪಡೆದತ್ತು ಆತ್ಮೀಯಸೈನ್ಯಾರ್ಣವಂ: **ಆದಿಪು,** ೧೪. ೯೧ ವ)

**ಝುಷಕೇತನ** – ಮೀನಿನ ಗುರುತುಳ್ಳ ಧ್ವಜವುಳ್ಳವನು, ಮನ್ಮಥ (ಪಾರ್ವತಿಯ ನವಯೌವನಂ .. .. ಝುಷಕೇತನ ನಿಕೇತನ ತೋರಣ ರತ್ನಸ್ತಂಭಗಳಂತೆ: **ಗಿರಿಜಾಕ,** ೪. ೧೨ ವ)

**ಝುಷಕೇತು** – ಝುಷಕೇತನ (ಸೀರ್ಪನಿಗಳ್.. .. ಅರರೆ ತುಫಾಕದಿಂ ನೆಗೆವ ಗುಂಡಿನವೋಲ್ ಝುಷಕೇತುವೀರನಾ: **ರಾಜಶೇವಿ,** ೫. ೬೯)

**ಝುಳಂಬಂ** – ಮೇಲು ಮುಸುಕು, ಹೊದಿಕೆ (ಬಣ್ಣದ ಸೀರೆ ಮೇಘವಂಣಿಗೆಯ ಝುಳಂಬಂ ಎಂಬಿವು ಅಳವಟ್ಟಿರೆ .. .. ನಡೆತಂದಂ .. .. ಅಪೂರ್ವಚಿತ್ರಿಕಂ: **ಮಲ್ಲಿನಾಪು,** ೫. ೨೭)

**ಝೂಳೆಯಂಗೊಳ್** – ತೆಗೆದುಕೊ, ಕಿತ್ತುಕೊ (ಅರಸರ ಕಾಪಿನ ಪೊಲನಂ ಪೊಕ್ಕುವೆಂದು ಉಂಡಿಗೆಯೊತ್ತಿಕೊಳುತ್ತುಂ ಊಟಿಗವಾದೆಡೆಗಳೊಳ್ ಝೂಳೆಯಂಗೊಳುತ್ತುಂ: **ಸುಕುಮಾಚ,** ೭. ೩೫ ವ)

**ಝಿಲ್ಲಿಕಾ** – ಜೀರುಂಡೆ (ಚೀರೀ ಝಿಲ್ಲಿಕಾ ಭೃಂಗಾರೀ ಶಬ್ದಂ ಸಮಾನವಾಚ್ಯಂ: **ಅಭಿಧಾವ,** ೯. ೨೩)

**ಝೆಂಕಟ** – ವಾದ್ಯವಿಶೇಷ (ಕಂಕರಿಯ ಸಿವಿಱ ಪೆಂಪಿನ ಝೆಂಕಟ ಬೊಂಬುಟೆಯ .. .. ಉಲಿ ನೆಗೞ್ದು ಕರ್ಣಾಮೃತ ಸಮುದ್ರಘೂರ್ಣನಮಾಯ್ತೋ: **ಪುಷ್ಪದಂಪು,** ೧೨. ೨೭)

**ಝೇಂಕರಿಸು** – ಶಬ್ದ ಮಾಡು, ಆರ್ಭಟಿಸು (ಓರಂತು ತಗುಳ್ದು ಝೇಂಕರಿಸಿದೊಡೆ ಎಲ್ಲಡಗಾಗೆ ಮೋದಲೆಂದಿರ್ದ ಎಡೆಯೊಳ್ ಗುರು ತನ್ನ ಮಗನಂ ಎಡೆವುಗವೇೞ್ದಿಂ: **ಪಂಪಭಾ,** ೨. ೭೩); ಹೊಗಳು (ಶಂಕರನಾರಾಯಣನ ಕರಂ ಕಿಡುವುದು ಯುಗದ ಕಡೆಯೊಳ್ ಎಂದೆನುತುಂ ಝೇಂಕರಿಸಿ: **ಸಮಯಪ,** ೯. ೯)

**ಝೋಂಪಿಸು** – ತೂಕಡಿಸು, ಮೈಮರೆ (ಇರುಳೋರಂತಿರೆ ಕಾದಂಬರಿಯನೆ ನೋಡುತ್ತುಮಿರ್ದು ಝೋಂಪಿಸೆ ನಿದ್ರಾತುರನಾಗಿ ಪಟ್ಕೆ ಸಾರ್ವಂತಿರೆ ಸಾರ್ದಂ ಚಂದ್ರಂ ಅಪರವೇಲಾವನಮಂ; **ಕಾದಂಸಂ,** ೫. ೬೪);

# ಟ

**ಟಂಕ** – ಬೆಟ್ಟದ ಇಳಿಜಾರು (ಮಾದ್ಯತ್ ಗಜಗಂಡಕಷಣಪ್ರೋದ್ಭೇದದಿಂ ಸಾರ್ದು ಬಂದು ಇದಿರೊಳ್ ಕೂಡುವುದಿಲ್ಲಿ ಚಂದನರಸಂ ಕೆಂಬೊನ್ನ ಟಂಕಂಗಳೊಳ್: **ಪಂಪಭಾ,** ೪. ೨೨); ಕುದುರೆ ಲಾಳ; ಕಲ್ಲು ಕೆತ್ತುವ ಚಾಣ, ಉಳಿ (ಆಕರ್ಣಾಕೃಷ್ಟ ಉತ್ಸೃಷ್ಟನಿಜವಿಕೀರ್ಣ ಟಂಕಂಗಳಿಂದಂ: **ಆದಿಪು,** ೧೪. ೧೦೩ ವ)

**ಟಂಕಾರ** – ಬಿಲ್ಲಿನ ಠೇಂಕಾರ (ಬಿಲ್ಲನೇಱಿಸಿ ಟಂಕಾರವಗುರ್ವುವಡೆಯೆ ಜೇವೊಡೆದು: **ಪಂಪರಾ,** ೯. ೫೭)

**ಟಂಕಾಹತಿ** – ಚಾಣದ ಪೆಟ್ಟು (ಕರಿಸೇನಾಕರಲೂನವೈರಿ ವನದುರ್ಗವ್ರಾತನಶ್ವಾವಳೀಖುರ ಟಂಕಾಹತಿ ಪಾತಿತಾರಿಗಿರಿದುರ್ಗವ್ರಾತಂ: **ಚಂದ್ರಪ್ರಪು,** ೪. ೨೭)

**ಟಂಕಿತ** – ಮುದ್ರಿಸಿದ (ಅನೇಕ ಮಣಿ ಕೂಟಕೋಟಿ ವಿಟಂಕ ಟಂಕಿತ ವಿಯತ್ತಳಂಗಳುಂ: **ಪುಷ್ಪದಂಪು,** ೨. ೭೫ ವ)

**ಟಂಕೃತಿ** – ಟಂಕಾರ ಅಲತಿಮೃದುಪುಷ್ಪಚಾಪದಳಿನೀಗುಣ ಟಂಕೃತಿರಾವಂ ಆಗಮಾಮೃತ ಪರಿಪೂರ್ಣಕರ್ಣಯುಗನಂ ಸಲೆ ಕೇಳಿಸದೆ: **ಚಂದ್ರಪ್ರಪು,** ೧. ೨೬)

**ಟಂಕೋತ್ಕೀರ್ಣ** – ಚಾಣದಿಂದ ಕೆತ್ತಿದುದು (ಅಪ್ರತಿಹತದಿಗ್ವಿಜಯಪ್ರಶಸ್ತಿಯಂ ಟಂಕೋತ್ಕೀರ್ಣಂ ಮಾಡಿ: **ಆದಿಪು,** ೧೪. ೫೯ ವ)

**ಟಕಾರಿ** – ತೋರಣ ಸಾರಮಂ ಕಿಱುಮಿಡಿಗೆತ್ತು ಸಾರಿಕೆ ಟಕಾರಿಯ ಮಾಣಿಕವಟ್ಟೆಯಂ ಪಿಕಂನಿಱಿದಳಿರ್ಗೆತ್ತು ಲಂಬಣದ ಮುತ್ತುಗಳಂ ಮಟೆಗೆತ್ತು ಚಾತಕಂ: **ಅನಂತಪು,** ೬. ೪೩)

**ಟಕ್ಕ** – ಠಕ್ಕ, ಮೋಸಗಾರ (ನೀನಿಂದೆನ್ನ ಮನೆಗೆ ಬಾರದಂದು ನಿನ್ನ ಕೆಳೆ ಟಕ್ಕರ ಕೆಳೆಯಂತಕ್ಕುಮಲ್ಲದೆ ತಕ್ಕರ ಕೆಳೆಯಂತೊಪ್ಪಲಱಿಯದು: **ಪಂಚತಂತ್ರ,** ೧೯೬ ವ)

**ಟಕ್ಕು** – ಠಕ್ಕು, ಮೋಸ (ತದೆದುಂ ಒದೆದುಂ ಅಂತಕವದನಾಂತರದೊಳ್ ತೂಂತದೆ ಟಕ್ಕಿಂ ಪೊರೆದವೊಲ್ ಇಂತೇಕೆ ನಿಂದಂ: **ಆಚವರ್ಧ,** ೨. ೫೨)

**ಟಕ್ಕನಿಕ್ಕು** – ಎಚ್ಚರ ತಪ್ಪಿಸುವ ಮದ್ದನ್ನಿಡು (ಅವರ ಕಪಟವೃತ್ತಿಯನಱಿಯದೆ ಉಂಡು ಸೊಕ್ಕಿ ಮೆಯ್ಯಱಿಯದೆ ಟಕ್ಕನಿಕ್ಕಿದಂತು ಕೆಡೆದು ನಿರೆಗೆಯ್ದುದುಂ: **ಧರ್ಮಾಮೃ:** ೧೧. ೮೭ ವ)

**ಟಕ್ಕವಿದ್ಯೆ** – ಮೋಸದ ವಿದ್ಯೆ (ಟಕ್ಕವಿದ್ಯೆಯೊಳ್ ತೊಡರದು ಕೂಡೆ ಪುಂಜಿಸಿದ ವಾಙ್ಮಯರತ್ನಚಯಂ ಜಿನೇಶನಾ: **ಸಮಯಪ,** ೨. ೨೧)

**ಟಕ್ಕುವಗೆ** – [ಟಕ್ಕು+ಬಗೆ] ಮೋಸದ ಬುದ್ಧಿ (ಆ ಲಾಕ್ಷಾಗೃಹದಾಹಮೊಂದೆ ವಿಷಸಂಯುಕ್ತಾನ್ನಂ ಅಂತೊಂದೆ ಪಾಂಚಾಲೀನಿಗ್ರಹಂ ಒಂದೆ ಟಕ್ಕುವಗೆಯಿಂ ಗೆಲ್ದಿರ್ದ ಜೂದೊಂದೆ: **ಪಂಪಭಾ,** ೯. ೨೨)

**ಟಮಾಳ** – ಮೋಸ (ದುರ್ವಿಮಂತ್ರಮಂ ಪರೆಪ ಟಮಾಳಮಂ ಪಿರಿದಂ ಓದಿದೊಡೆ ಅಪ್ಪ ಪದಾರ್ಥಮಾವುದೋ: **ಪಂಪಭಾ,** ೧೩. ೬೬)

**ಟಾತಡಾಢಣ** – ಟವರ್ಗದ ಅಕ್ಷರಗಳು; ಅವುಗಳಂತೆ ನಿಶ್ಚಿತ, ನಿಷ್ಠುರ (ಮೇಣ್ ಎನ್ನ ನುಡಿ ಟಾತಡಾಢಣಂ ಎನ್ನಂ ಬೆಸಸುವುದು ರಾಜಸೂಯಂ ಬೇಳಲ್: **ಪಂಪಭಾ,** ೬. ೨೬)

**ಟಿಟ್ಟಿಭ** – ಒಂದು ಹಕ್ಕಿ (ಸಮುದ್ರದ ತೀರ್ಥೈಕಪ್ರದೇಶದೊಳ್ ಮಧುರಾಲಾಪೆಯುಂ ಚಂಡಪರಾಕ್ರಮಂ ಎಂಬ ಟಿಟ್ಟಿಭಮಿಥುನಂ ಸುಖದಿನಿರ್ದು: **ಪಂಚತಂತ್ರ,** ೨೧೪ ವ)

**ಟೆಂಟಣಿಸು** – ವಿರೋಧಿಸು (ತಾಂ ಟೆಂಟಣಿಸದೆ ಬಲ್ವಿಡಿದಂ ಮೀಂಟುಂಜವ್ವನಿಗನಾ ನುಡಿಗಳಂ ಮನದೊಳ್: **ಉದ್ಭಟಕಾ,** ೧೧. ೪೪)

**ಟೆಂಠಣಿಸು** – ದ್ವೇಷಿಸು (ಸೆಣಸಲ್ ಮಾರ್ಮಲೆಯಲ್ ಬೆಸಕ್ಕೆ ಬೆಸೆಯಲ್ ದಂಡೋಪನತ್ಯಕ್ಕೆ ಟೆಂಠಣಿಸಲ್; **ಶಾಂತಿಪು,** ೯. ೧೮೫)

**ಟೆಕ್ಕೆಯ** – ಧ್ವಜ (ನನೆಯೆಸಳಂದಮಾದ ಗುಱಿಮುಂ ಪೊಳೆಯುತ್ತಿರೆ ನೀಳ್ಪುವೆತ್ತ ಪೂವಿನ ಪೊಸ ಟೆಕ್ಕೆಯಂ ಮಿಳಿರೆ ಪಕ್ಕದ ಕೋಗಿಲೆಯೆಂಬ ಗಂಟೆಗಳ್ ದನಿಗುಡೆ: **ಕಬ್ಬಿಗಕಾ,** ೧೬೫)

**ಟೆಪ್ಪರ** – ಕುದುರೆಯದರಂತಹ ಪುಟನೆಗೆತ; ಕತ್ತಿವರಸೆ (ದ್ವಿತ್ವಕ್ಕಿಲ್ಲದುದರ್ಕೆ: ಟಿಪ್ಪಣಂ ಟೆಪ್ಪರಂ ಮುಪ್ಪುರಿ: **ಶಬ್ದಮದ,** ೧೭೦ ಪ್ರ)

**ಟೆಬ್ಬರಿಸು** – ಚಲನೆಯಿಲ್ಲದಂತೆ ಮಾಡು (ಟೆಬ್ಬರಿಸು– ಕುಂಠೀಕರಣೇ: **ಶಬ್ದಮದ, ಧಾ** ೭೮೨)

**ಟೊಣೆ** – ಭೇದಿಸು; ಕಣ್ತಪ್ಪಿಸು, ವಂಚಿಸು (ಟೊಣೆದವರೆಚ್ಚ ಕೂರ್ಗಣೆಗಳಂ ಮಿಗೆ ಮುತ್ತಿದ ಜಾಯಿಲಂಗಳಂ ಕ್ಷಣದೊಳಿದಿರ್ಚಿ ತುಂಡಿಸಿ: **ಶಬರಶಂ,** ೪. ೧೦)

**ಟೊಪ್ಪರ** – ಟೋಪಿ (ತಳ್ವೊಯ್ದು ಸಂಜೆಗೆಂಪಿನ ತಳ್ತಮರ್ದಿರೆ ಪೊರೆಯನೆತ್ತಿ ಪೊಲಿಸಿದ ತೆಱದಿಂದೊಳ್ಪಿನ ಪೊಸಟೊಪ್ಪರಮಿನಕಳ್ಪಂಗಾ ಜೋಗಿಗೆಸೆದುದಸದಳಮಾಗಲ್: **ಲೀಲಾವತಿ,** ೪. ೭೩); ಮುಖವಾಡ (ನೆರೆದು ಪುಳಿಂದರ್ ಆರ್ದು ಮೊಗಕಿಕ್ಕಿದ ಟೊಪ್ಪರಮಂ ಕಳಲ್ಚಿ: **ತ್ರಿಷಷ್ಟಿಪು,** ೨೭. ೯೦)

## ಠ

**ಠಕ್ಕವಿದ್ಯೆ** – ಮೋಸದ ಸ್ವಭಾವ (ಠಕ್ಕವಿದ್ಯೆಯೊಳ್ತೊಡರದು ಕೂಡೆ ಪುಂಜಿಸಿದ ವಾಙ್ಮಯರತ್ನಚಯಂ ಜಿನೇಶನಾ: **ಸಮಯಪ,** ೨. ೨೧)

**ಠಕ್ಕಸಮಯ** – ಮಿಥ್ಯಾಧರ್ಮ (ಪಸರಿಸುವ ಠಕ್ಕಸಮಯದ ದೆಸೆವೋಗರ್ ಅದೆಂತುಂ ಆವ ತೆಱದಿಂ ಜೈನರ್: **ಸಮಯಪ,** ೬. ೭೫)

**ಠಕ್ಕಿಕ್ಕು** – ಮೋಸಗೊಳಿಸು (ಮಾಯಮನೆ ಬೀಸಿ ಪೆಱಿರನುಪಾಯದೆ ಠಕ್ಕಿಕ್ಕಿದೇವವಕಾರ್ಯದೊಳಿನಿಸುಂ ನೋಯದೆ: **ಧರ್ಮಾಮೃ,** ೧. ೯೫)

**ಠಕ್ಕುಗಾರ್ತಿ** – ಮೋಸಗಾತಿ (ಮತ್ತಮೊರ್ವಂ ಇದಿರೊಳ್ಳೈತರ್ಪ ಠಕ್ಕುಗಾರ್ತಿಯಂ ಕರಸಂಜ್ಞೆಯಿಂ ಕೆಳೆಯಂಗೆ ತೋಱಿ: **ರಾಜಶೇವಿ,** ೧೧. ೧೫೪ ವ)

**ಠಕ್ಕುಗೊಳ್** – ಮೋಸಕ್ಕೊಳಗಾಗು, ಮರುಳಾಗು (ಮಾರಿದತ್ತಂ ಲಲಿತಾಕಾರರ ಧೀರರ ಬಂದ ಕುಮಾರರ ರೂಪಿಂಗೆ ಠಕ್ಕುಗೊಂಡಂತಿರ್ದಂ: **ಯಶೋಧಚ,** ೧. ೫೮)

**ಠಕ್ಕುಮತ** – ಮೋಸದ ಮತ (ಕುಲಹೀನಂಗೊಂದು ತೆಱಂ ಕುಲಜಂಗೊಂದು ತೆಱಂ .. .. ಪೇೞ್ವುದು ನಿರ್ಮಲಧರ್ಮಮದಲ್ತು ಠಕ್ಕುಮತಂ: **ಸಮಯಪ,** ೩. ೮)

**ಠಕ್ಕುವೀಟ್** – ಮಂಕುಬಡಿ, ಮೋಸಕ್ಕೊಳಗಾಗು (ಒಡನಾಡಿಗಳೊಳ್ ನುಡಿಯಲ್ಕುಂ ಒಲ್ಲಳ್ ಆ ಸೌಂದರಿ ಠಕ್ಕುವಿಟ್ಟ ತೆಱದಿನಿರ್ದಳ್: **ಚಂದ್ರಪ್ರಪು,** ೫. ೧೨೩)

**ಠಣತ್ಕಾರ** – ಠಣ್ ಎಂಬ ಗಂಟೆಯ ಶಬ್ದ (ಕಿವಿ ಶಬ್ದಂಗಿಡೆ ಘಂಟಿಕಾ ಘನಠಣತ್ಕಾರಂಗಳಿಂದೆ: **ಚಂದ್ರಪ್ರಪು,** ೬. ೧೪)

**ಠವಣಿಸು** – ಸೇರಿಸು (ಕವಿಮಾರ್ಗದೊಳ್ ಒಖ್ಖಾಣಿಪ ಠವಣಿಪ ಕಮ್ಮೈಸುವ ಎಡೆಯೊಳ್ ವಖ್ಖಾಣಿಸಲುಂ ಠವಣಿಸಲುಂ ಕಮ್ಮೈಸಲುಂ ಇವನಂತಾರ್ ಬಲ್ಲರ್ ಎನಿಸಿದಂ ಕವಿರತ್ನಂ: **ಅಜಿತಪು,** ೧. ೮೨)

**ಠವಣೆ** – ವೀಣಾವಾದನದ ಒಂದು ಕ್ರಮ (ನುಡಿಸಿದ ಆಕಾರಮಂ ಪೊಯ್ದು ಠವಣೆಯೊಳ್ ಪವಣಱಿದು .. .. ನಾನಾ ಶಬ್ದಂಗಳಂ ಬಾರಿಸಿ: **ಧರ್ಮಪ,** ೨. ೨೩ ವ)

**ಠಾಣಾಂತರ** – ತಾಣಾಂತರ, ಪಾಳೆಯ (ತಂತಮ್ಮ ಠಾಣಾಂತರಂಗಳೊಳಿರ್ದಂಗಜತಂತ್ರದಂತೆಸೆವಿನಂ ಚೆಲ್ವಾದುವಿಮ್ಮಾವುಗಳ್: **ಆದಿಪು,** ೧೧. ೯೬)

**ಠಾಯೆ** – ಆಲಾಪನೆಯಲ್ಲಿನ ಮಧ್ಯಲಯ ಗಮಕಂ ತಳ್ತಿರೆ ಠಾಯೆ ಮಿಂಚಿರೆ ಚಮತ್ಕಾರಂ ಕರಂ ಪೊಣ್ಮೆ .. .. ಬಾಜಿಸಿದಳ್ .. .. ವೀಣೆಯಂ: **ರಾಜಶೇವಿ,** ೧೦. ೩೨)

**ಠಾವು** – ಸ್ಥಳ (ಮಾವಿನ ಹೂವಿನ ಕಾವಿನ ಠಾವಿನ ಮೊದಲಿಂದೆ ತೀವಿದಳಿಗಳ ಬಳಗಂ: **ಗಿರಿಜಾಕ,** ೨. ೩೭)

**ಠೀವಿ** – ಗತ್ತು (ಹಾವದ ಭಾವದ ಮುಱುಕದ ಠೀವಿಯ ಗರಗರಿಕೆವಡೆದ ಚೆನ್ನೆಯರಂ ತಂದಾ ವಿಭುಗೆ ತೋಱಿ: **ಪುಣ್ಯಾಸ್ರ:** ೪. ೪೮)

## ಡ

**ಡಂಕೆ** – ಸರಳು, ಸಲಾಕೆ (ಬೇಗಂ ಮಂಡೆಯನಿರ್ಪೋಟಾಗಿರೆ ಕರ್ಬುನದ ಡಂಕೆಯಿಂ ಪೊಯ್ವುದುಂ: **ಧರ್ಮಾಮೃ,** ೭. ೬೩)

**ಡಂಗ** – ಸುಂಕವಸೂಲಿಗಾಗಿರುವ ಕಾವಲು ಕಟ್ಟೆ (ಪೊಂಗುವ ಮಲೆಪರ ಮಲೆಗಳ ಡಂಗಂಗಳ್ ಮಲೆವ ಮಂಡಲಂಗಳ್ ಪ್ರತ್ಯಂತಗಳ್ ಎನಲ್ ಒಳವೆ ಪಾಂಡವರಂ ಗೆಡೆಗೊಳೆ ನಿನಗೆ ಕುರುಕುಳಾಂಬರಭಾನೂ: **ಪಂಪಭಾ,** ೯. ೩೯)

**ಡಂಗುರಂಬೊಯ್ಯು** – ಡಂಗುರ ಸಾರಿಸು (ಕುಮಾರನನೆತ್ತಿದಂಗೆ ಬೇಡಿತ್ತಂ ಕುಡುವೆನೆಂದು ಡಂಗುರಂಬೊಯ್ಸಲೊಡಂ: **ಪಂಚತಂತ್ರ,** ೧೮೫ ವ)

**ಡಂಗೆ** – ದೊಣ್ಣೆ, ಕೋಲು (ಕಬ್ಬುನದ ದಬ್ಬಣಂಗಳಂ ದಬ್ಬುಕದ ಡಂಗೆಗಳಿಂ ಬೆರಲ್ಗಳೊಳಡಂಗೆ ಬೆಟ್ಟುವುದುಂ ಪಲ್ಗಳಂ ನುರ್ಗ್ಗುಗಟ್ಟುವುದುಂ: **ಸುಕುಮಾಚ,** ೧೧. ೪೭ ವ)

**ಡಂಗೆಗೊಳ್** – ಹಟಹಿಡಿ (ಪರಮಾರ್ಥಮಪ್ಪುದಂ ಮಚ್ಚರಿಸದೆ ಕೋಪಿಸದೆ ಡಂಗೆಗೊಳ್ಳದೆ: **ಧರ್ಮಾಮೃ,** ೧. ೧೩೭); ಬಡಿಗೆಯನ್ನು ತೆಗೆದುಕೊ (ಡಂಗೆಗೊಂಡು ಬಡಿಯಲ್ ಚಲದಿಂದೆನಸುಂ ದುರಾಗ್ರಹಂ ಚಿತ್ತದೊಳಾಗೆ: **ಕಾವ್ಯಾವಲೋ,** ೪೫೧)

**ಡಂಗೆಯಂಗೊಳ್** – ಬಡಿಗೆಯನ್ನು ತೆಗೆದುಕೊ (ಡಂಗೆಯಂಗೊಂಡು ಕೆಂಗಲ್ಮಸಗಿ ಪರಿವ ಮರುಳ್ಗಳಿಗಳುಂ: **ಲೀಲಾವತಿ,** ೫. ೧೧೪ ವ)

**ಡಂಬ** – ತೋರಿಕೆ, ಮೋಸ (ಸತ್ತನೆ ಮತ್ತೆ ಪುಟ್ಟುವಂ ಗಡ ಪುಸಿ ಕಾಣ ಡಂಬವಿದು ಖೇಚರ ನೀನಿದನೆಂತು ನಂಬಿದೋ: **ಆದಿಪು,** ೨. ೮)

**ಡಂಬಕ** – ಮೋಸಗಾರ (ತಮತಮಗೆ ಡಂಬಕರ್ ಬಲ್ಲೆವೆಂದು ಛಿದ್ರಿಸಲೆ ವಾಜವಶ್ಯವಯಸ್ತಂಭಮಂ: **ಸಮಯಪ,** ೧೨. ೪೦)

**ಡಂಬಲ** – ಹುಚ್ಚಾಟ (ತರುಣಿ ಪೋಗದಿರೆನುತುಂ ಬೆಂಬತ್ತಿ ನಡೆದು ಕಾಣದೆ ಡಂಬಲನಂ ನೋಡಿ ಮುಗ್ದೆ ನಗಿಸಿದಳಾಗಳ್: **ಗಿರಿಜಾಕ,** ೪. ೨೯)

**ಡಂಬಿಸು** – ಮೋಸಮಾಡು (ಚಿತ್ರಕಥೆಗಳಂ ಪಟದೊಳ್ ತೋಱಿ ಪೇೞ್ದು ಲೋಗರಂ ಡಂಬಿಸಿ ಮಾಱುಗೊಳ್ವ ಬತ್ತಮಂ ಕಳ್ವೊಂ: **ವಡ್ಡಾರಾ,** ಪು ೧೪, ಸಾ ೧೯)

**ಡಂಬನ** – ಮೋಸ, ವಂಚನೆ (ಅನಂಗವಿಕಾರಂ ಉಬ್ಬೆಗಂ ಕಲುಷತೆ ಡಂಬನಂ ಕುಟಿಲವೃತ್ತಿ ಅಸೂಯೆ .. .. ದುರ್ಜನ ಗುಣಂಗಳೆ ನಲ್ಮೆಗೆ ಕೆಡ ತಪ್ಪುದು: **ಅನುಭವ,** ೮೬)

**ಡಂಬರ** – ಚೆಲುವು (ಚಿತ್ತಜನ ಡಂಬರಮಂ ತಳೆದು ಆ ಕುಮಾರಕಂಗೆ ಅಳಿಕುಳ ಕುಂತಳಂ ಪೊಳೆಯೆ: **ಕರ್ಣನೇಮಿ,** ೩. ೧೮೧)

**ಡಂಭತನ** – ಸೋಗು (ಗೋವನಂ ಪಿಡಿದು ಸುರತಕ್ರೀಡೆಯಾಡುವುದಂ ನಾರಾಯಣಭಟ್ಟಂ ಕಂಡಾ ಪಾಣ್ಬೆಯ ಡಂಭತನಕ್ಕೆ ಬೆಱಗಾಗಿ: **ಪಂಚತಂತ್ರ,** ೩೨೩ ವ)

**ಡಕ್ಕೆ** – ಒಂದು ವಾದ್ಯ (ತನ್ನ ತೊಡಂಕದು ಎಯ್ದೆ ನೂರ್ಮಡಿ ಮನದೊಳ್ ಪಳಂಚಲೆಯೆ ಡಕ್ಕೆಯೊಳ್ ಅಟ್ಟಜವಾಗೆ ಆಡಿದಳ್: **ಪಂಪಭಾ,** ೪. ೯೦)

**ಡಕ್ಕೆವಾಜಿಸು** – ಡಕ್ಕೆಯನ್ನು ಹೊಡೆ (ಆಡುವ ಡಕ್ಕೆವಾಜಿಸುವ ನೋಡುವ ಸಂಗಡಮೊಪ್ಪೆ: ಸೂಕ್ತಿಸುಧಾ, ೪. ೧೪೯); [ಎದೆ] ಡವಡವ ಹೊಡೆದುಕೊ (ನೋಡುವರೆರ್ದೆ ಡಕ್ಕೆವಾಜಿಸುತ್ತಿರ್ಪಿನೆಗಂ: **ಆಚವರ್ಧ,** ೨. ೨೨)

**ಡಕ್ಕೆವಾಯ್** – [ಎದೆ] ಡಕ್ಕೆಯಂತೆ ಡವಡವ ಹೊಡೆದುಕೊ (ಕಣ್ಗೆಟ್ಟು ಕೋಟಳೆಗೊಂಡು ಅಳ್ಳೆರ್ದೆ ಡಕ್ಕೆವಾಯ್ದು ಸತಿ ನಿಂದು ಔತ್ಸುಕ್ಯಮಂ ತಾಳ್ದಿದಳ್: **ಅನಂತಪು,** ೧೧. ೫೬)

**ಡಕ್ಕೆವಾಱು** – ಡವಡವಗುಟ್ಟು (ಲವಧೃತಿಯಿಲ್ಲದೆ ಒರ್ಮೆಯುಂ ಅರಾತಿಭಯಕ್ಕೆ ಬಿಗುರ್ತು ಡಕ್ಕೆವಾಱುವ ನೃಪಯೊಧವಕ್ಷದೊಳಿರಲ್ಕೆ ಅಣಂ ಒಲ್ಲದೆ .. .. ಅತುಳಲಕ್ಷ್ಮಿ: **ಶಾಂತೀಶ್ವಪು,** ೪. ೭೯)

**ಡಗೆ** – ಮೋಸ (ಬೀೞ್ವ ಏೞ್ವ ಸುೞಿವ ಸುತ್ತುವ ಡಗೆಯಂ ತರಹರಿಪ ಸಾರ್ವ ಪಾರ್ವ ಅಬ್ಬರಿಪ ಎಸಕಂ ಮೀಱಿ ಕಾದಿದರ್ ಕಡುಗಲಿಗಳ್: **ಶಬರಶಂ,** ೪. ೭೬)

**ಡಮರುಗ** – ಒಂದು ಚರ್ಮವಾದ್ಯ (ಮಕಾರಕ್ಕೆ ವತ್ವಂ: ಡಮರುಕಂ–ಡವರುಗಂ: **ಶಬ್ದಮದ,** ೨೭೭ ಪ್ರ)

**ಡವಕೆ** – ಪೀಕದಾನಿ, ಕಾಳಾಂಜಿ (ನೂಱೆಂಟುಂ ಕರಣಮುಮಂ ಅವಳ ಡವಕೆಯ ಪರಿಚಾರಿಕೆಯಱಿಗುಂ ಆಕೆಗವು ತೊಡರ್ವಡೆಯೇ: **ಆದಿಪು,** ೯. ೨೯); ಡಮರುಗ ಎಂಬ ಒಂದು ವಾದ್ಯ (ಪಿರಿದುಮೆರ್ದೆ ಡವಕೆ ವಾಜಿಸುತಿರೆ ಭಂಗಂಬೆತ್ತು ಹಾರಲತೆ ಘನಕುಚದೊಳ್ ಕರವಿಕ್ಷೇಪದೆ ನರ್ತಿಸೆ ನರೇಂದ್ರನಂದನನನೊಲ್ದು ನೋಡಿದಳೊರ್ವಳ್: **ಕಾದಂಬ,** ೩. ೨೮)

**ಡವಕೆವಿಡಿ** – ಪೀಕದಾನಿಯನ್ನು ಒಡ್ಡು (ಲೋಕಂ ಪೊಟ್ಟುದು ಕನಕಾಬ್ಜಾಕಾರದ ಡವಕೆವಿಡಿದ ಸುರಸೌಂದರಿಯಂ : **ಆದಿಪು,** ೭. ೭)

**ಡಸಿಕು** – ವಕ್ರ ನಡತೆಯವನು (ಕಸವಿಂಗಂ ಕಳುಚಿಂಗಂ ಡಸಿಕಿಂಗಂ ದೂರ್ತವಡೆಗಂ ಅತಿಚಪಳರ್ಗಂ ಪುಸಿವ್ಗಂ ಸಿತಗರ್ಗಂ ವಸುಧೇಶ್ವರ ಕೇಳ ಕುಡುವನುರ್ಕಿ ಕುಮಾರಂ: **ಧರ್ಮಾಮೃ,** ೨. ೪೨)

**ಡಾಕಿನಿ** – ರಕ್ಕಸಿ (ನೀನುಂ ದೇವಾ ಸುರಯುದ್ಧಕ್ಕೆ ಕರಗಂಬೊತ್ತ ಡಾವರಡಾಕಿನಿಯೆನಿಸಿದ ಪಾಂಚಾಲಿಯುಂ ಬುದ್ಧಿಮತಿಯೆಂಬ ಗಾಳುದೊಟ್ಟುಂ ಇಂತೀ ಮೂವರುಂ: **ಗದಾಯು,** ೨. ೮ ವ); ರಕ್ಕಸಿಯ ಕತ್ತಿ

**ಡಾಣೆ** – ದೊಣ್ಣೆ (ಡಾಣೆಯೊಳ್ ಬೀಳೆ ಬಡಿವೆನೆಂದಾಜ್ಞೆಯಂ ಮಾಡಿದಂ: **ಧರ್ಮಪ,** ೫. ೧೦ ವ); ಒಂದು ಆಯುಧ, ಗದೆ (ಬೀಸುವ ಡಾಣೆಗೆ ತಲೆಯೊಡ್ಡುವಂತಿರಲೊಡ್ಡಿದನಲ್ತೆ: **ಪಾರ್ಶ್ವನಾಪು,** ೩. ೧೧೩)

**ಡಾಮರ** – ಹಿಂಸೆ, ದಾಳಿ (ಆ ಮಾಧವೀಮಂಟಪಮಂ ಕಾಮನ ಡಾಮರಕ್ಕೆ ಅಳ್ಕಿ ವನದುರ್ಗಂಬುಗುವಂತೆ ಪೊಕ್ಕು: **ಪಂಪಭಾ,** ೫. ೬ ವ)

**ಡಾವರ** – ಪೀಡೆ, ಗಲಭೆ (ಇಂಚೆಯ ಪಸವಿನ ಬಱಿದ ಕಳಂಚಿನ ಡಾವರದ ಬಾಧೆಯಿಲ್ಲದ ಪದದೊಳ್ ಮುಂಚದೆ ಪಿಂಚದೆ ಬಳೆದು ವಿರಿಂಚಿಯ ಕೆಯ್ಪಿಡಿವೊಲಾದುವಾ ನಾಡ ಊರ್ಗಳ್: **ಪಂಪಭಾ,** ೮. ೫೧); ಬಾಯಾರಿಕೆ (ಪುಂಡರೀಕ ಭೋಂಕನೆ ನಿನಗೀಗಳ್ ಇಂದ್ರಿಯದ ಡಾವರವೆತ್ತಣಿನೆತ್ತ ಬಂದುದೋ: **ಕಾದಂಸಂ,** ೪. ೨೦)

**ಡಾವರಿಗ** – ಸೂರೆಗಾರ (ಮೋಹಮೆಂಬ ಅಱಿಕೆಯ ಸಂದ ಡಾವರಿಗನುಂ ಪಗೆ ತನ್ನೊಳಗಿರ್ದೊಡೆ ಎಂತುಂ ಏತೆಱದೊಳಂ ಒಳ್ಳೆಯ್ಗುಮೇ: **ಜೀವಸಂ,** ೯. ೧೬):

**ಡಾಹ** – [ದಾಹ] ಸುಡುವಿಕೆ (ಕಿರ್ಚಿನಂತೆ ಅಡಕಮಂ ತೋಱಿ ನಂಬಿಸದೆ ದಾಟಿಯಂತೆ ಡಾಹಮಂ ಮಾಡಿ ಕಿಡಿಸದೆ: **ಧರ್ಮಾಮೃ,** ೫. ೬೪ ವ)

**ಡಾಳ** – ಕಾಂತಿ (ತೊಳಗುವ ಮುತ್ತಿನೋಲೆಗಳ ಬೆಳ್ವೆಳಗಿನ ಸುಲಿಪಲ್ಲ ಮಿಂಚಿನಿಂ ಪೊಳೆವಲರ್ಗಣ್ಣ ನುಣ್ ಕದಿರ್ಗಳಿಂ

ತಿಸರಂಗಳ ನೀಳ್ದ ಡಾಳದಿಂ .. .. ಮಿಗೆ ಪೆರ್ಮೆವೆತ್ತು ಕಣ್ಗೊಳಿಸಿದಳ್: **ಕಬ್ಬಿಗಕಾ,** ೬೪); ಧೂರ್ತ (ಡಾಳಂಗೆ ಅಪ್ಪಯಿಸಿದುದು ಬಿಡಾಳಕ್ಕಂ ಪಾಲ ಕಾಪನಿತ್ತವೊಳಯ್ತಂದು ಈ ಲೋಕಮುಲಿಯೆ: **ಪಾರ್ಶ್ವನಾಪು,** ೩. ೧೧೨)

**ಡಾಳಿಸು** – ಚಾಮರ ಬೀಸು (ಅಂಗಜನೃಪಂಗೆ ಬನವೆಂಬ ಅಂಗನೆ ಡಾಳಿಸುವ ಚಾರುಚಾಮರಮದೆನಲ್: **ಉದ್ಭಟಕಾ,** ೯. ೧೬)

**ಡಾಳೆ** – ಗಯ್ಯಾಳಿ (ಮೆಯ್ಯನೆ ಮಾಱುವಾಕೆ ಭವಮಂ ಪೇೞ್ಮಾಱುಳೆ ಸಂತೆಯೊಳ್ ಧನಕಾನಾಜೆನಿವಳ್ಗೆ ದೈವವಜೆಗಿನ್ನೀ ಸೂಳೆಯಂ ಡಾಳೆಯಂ: **ಲೀಲಾವತಿ,** ೨. ೧೦೩); ಸುಂದರಿ (ಅಸಮಶರಂ ನಿಡುನನೆಯಂಬಿಂ ಕೆಡೆಕೆಡೆಕೆಡೆ ಎದು ಎಚ್ಚಾರ್ದು ಕೆಡಪಿದಂ ಢಾಳೆಯರಂ: **ನೇಮಿನಾಪು,** ೪. ೧೪೭)

**ಡಾಳೆವೆಂಡತಿ** – ಗಯ್ಯಾಳಿ ಹೆಣ್ಣು (ತೊಡಿಗೆ ಸುಸರ ಹಾರದ ಮುತ್ತಿನಂತೆ ಸರದೊಳಳವಡುವ ಡಾಳೆವೆಂಡತಿಯಂತೆ ಕೈಸನ್ನೆಯಜೆಯದ ಜಾತಿಜಾಯಿಲಂಗಳಂ: **ಅನಂತಪು,** ೨. ೩೦ ವ)

**ಡಿಂಡಿಮ** – ಢಕ್ಕೆ ಎಂಬ ಒಂದು ಚರ್ಮವಾದ್ಯ (ಡಿಂಡಿಮರವದೊಳ್ ವನವೇತಂಡಮಂ ಎಚ್ಚರಿಸುವಂತಿರ್ಪವೋಲ್ ಸೊಗಯಿಸುಗುಂ .. .. ಭ್ರಮರ ಮಧುರ ಮಂದ್ರಸ್ವಾನಂ: **ಕಾದಂಬ,** ೧. ೧೨೪)

**ಡಿಂಡೀರ** – ನೊರೆ (ಡಿಂಡೀರಂ ಆ ಪಾಂಡುಲಸದ್ಭಸ್ಮಂ ಪ್ರವಾಳೋತ್ಕರಂ ರುಣಜಟಾಮಂಡಲಂ: **ಶಬರಶಂ,** ೧. ೩೦)

**ಡಿಂಡೀರಪಿಂಡ** – ನೊರೆಯ ಮುದ್ದೆ, ರಾಶಿ (ತರತ್ ಡಿಂಡೀರಪಿಂಡ ಪ್ರಭಾಸ್ಪದಮಂ ಕೌತುಕದಿಂದೆ ಚಕ್ರಪತಿ ತೀರೋಪಾಂತದೊಳ್ ನಿಂದು ನೋಡಿದಂ: **ಅಜಿತಪು,** ೯. ೧೯)

**ಡಿಳ್ಳವಾಗು** – ದುರ್ಬಲವಾಗು (ತನು ಡಿಳ್ಳಮಾಗೆ ಮಧುಪಾನ ವಿನೋದದಿನಾದ ಸೋಂಖು ಚೆಲ್ವಿಡಿದಿರೆ: **ಸೂಕ್ತಿಸುಧಾ,** ೧೩. ೩)

**ಡುಂಡುಕ** – ತಿಗಣೆ (ನಿನೊಳಕೊಂಡಂದೆನಗಂ ಆ ವಿಧಿಯಕ್ಕುಂ ಎಂದು ಮಂದವಿಸರ್ಪಿಣಿ ಪೇೞ್ವುದುಂ ಡುಂಡುಕನಿಂತೆಂದುದು: **ಪಂಚತಂತ್ರ,** ೧೯೯ ವ)

**ಡುಂಡುಚಿ** – ಒಂದು ಚರ್ಮವಾದ್ಯ, ಡಮರು (ಪಂಡಿತರುಂ .. .. ಕೇಳತಕ್ಕ ಕೃತಿಯಂ ಕ್ಷಿತಿಯೊಳ್ ಕಂಡರ್ ಕೇಳ್ವೊಡೆ ಗೊರವರ ಡುಂಡುಚಿಯೆ: **ಧರ್ಮಮಧು,** ೧. ೫೭)

**ಡುಂಡುಭ** – ಇರ್ತಲೆಯ ಹಾವು (ಕೊರ್ಬಿಯಾಡುವ ಡುಂಡುಭಂಗಳಂ ಕಂಡು ಆನುಂ ನಿಮ್ಮೊಡನೆ ಇರ್ದಪೆಂ ಎಂದೊಡೆ: **ಪಂಚತಂತ್ರ,** ೧೯೫ ವ)

**ಡುಱುಕೆನ್** – ಗುಟುರು ಹಾಕು (ಪಂದಿ ಡುರುಕೆಂದೊಡೆ ಮಹಾವನಕರಿಯಂ ವಿದಾರಿಸುವ ಸಿಂಹಂ: **ಗಿರಿಜಾಕ,** ೧. ೨೯)

**ಡೆಂಕಣಿ** – ಯುದ್ಧದಲ್ಲಿ ಕಲ್ಲು ಎಸೆಯುವ ಒಂದು ಯಂತ್ರ (ಬೆದಜೆದತ್ತು ಬಿಡೆ ಭೈರವಡೆಂಕಣಿಯಿಂದಂ ಚಿಮ್ಮುತೆ ಡೆಂಕಣಿಯಿಂದಂ ಪಾಯ್ವ ಕಲ್ಗೆ ಭೋಂಕೆನಲಾಗಳ್: **ಪಾರ್ಶ್ವನಾಪು,** ೩. ೧೩೭)

**ಡೆಂಕೆ** – ಜಂತೆ (ಢತ್ವಕ್ಕೆ ಡತ್ವ ಪ್ರಯೋಗಂ: ಷಂಡಂ–ಸಂಡಂ ಢಂಕಾ–ಡೆಂಕೆ: **ಶಬ್ದಮದ,** ೨೬೯ ಪ್ರ)

**ಡೆಳ್ಳೆ** – ಬಿದಿರಿನ ಬುಟ್ಟಿ (ಕಳಶಂ ಶುಕ್ತಿಕೆ ವರ್ತುಲಂ ಪಟಲಕಂ ವೈಸ್ತಾಳಿ ನೀರಾಜನಂ ವಿಳಸತ್ ಕುಂಡಿಕೆ ಡೆಳ್ಳೆ ಎಂಬೆಡೆಗಳೊಳ್: **ಅನಂತಪು,** ೧೦. ೪೮)

**ಡೊಂಕಣಿ** – ಸಬಳ (ಪರಿಗೆಗಳಲ್ಲಿ ಕೀಲಿಸಿದ ಗೆಜ್ಜೆಯ ಬಚ್ಚಣೆವೆತ್ತ ಬಿಲ್ಗಳಚ್ಚರಿಗೆಡೆಯಾದ ಕನ್ನಡಿಯ ಕೂರ್ಪಿನ ಡೊಂಕಣಿಯಲ್ಲಿ ಜುಂಜಿನಂತಿರೆ ಮಿಳಿರ್ದಾಡುತಿರ್ಪ: **ಕಬ್ಬಿಗಕಾ,** ೨೦೪)

**ಡೊಂಬ** – ದೊಂಬ (ಪಂದೆಯ ಮಾತಿನಂತೆ ಡೊಂಬರ ತೋಂಟಿಯಂತೆ ದೂರದ ಬೆಟ್ಟದಂತೆ: **ಧರ್ಮಾಮೃ,** ೮. ೫೭ ವ)

**ಡೊಂಬ ದಡ್ಡಿಸ** – ಡೊಂಬರ ಡೋಲು (ಡೊಂಬ ದಡ್ಡಿಸದ ಪೆಱವು ದೆಯ್ವಂಗಳವೇಂ ಕುಡುಗುಮೆ ಸುಖಮಂ: **ಸಮಯಪ,** ೮. ೨೩೮)

**ಡೊಂಬರ ಕೋಡಗ** – ಕೊಲ್ಲಟಿಗರು ಆಟಕ್ಕಾಗಿ ಬಳಸುವ ಕೋತಿ, ಇತರರು ಹೇಳಿದಂತೆ ಕೇಳುವವನು (ಡೊಂಬರ ಕೋಡಗದಂತಾಡಿ ಗೆಲ್ದಾಗಳ್ ತಮ್ಮಣ್ಣನ ಸೋಲಮಂ ಕಂಡಾಗಳ್ ಭೀಮಸೇನನಿಂತೆಂದಂ: **ಪಂಪಭಾ,** ೬. ೭೨ ವ)

**ಡೊಂಬವಿದ್ದೆ** – ದೊಂಬರ ವಿದ್ಯೆ, ಯಕ್ಷಿಣಿ;, ವಂಚನೆ (ಮೀಂ ಆವೆ ಪಂದಿ ಎಂದು ಎನಿತಾನುಂ ತೆಱನಾಗಿ ಡೊಂಬವಿದ್ದೆಯನಾಡಲ್ ನೀನಱಿವೆ: **ಪಂಪಭಾ,** ೭. ೫೭)

**ಡೊಂಬವಱೆ** – ದೊಂಬರ ಒಂದು ಚರ್ಮವಾದ್ಯ (ದಡ್ಡಸಮೆಂದು ಡೊಂಬವಱೆ: **ಶಬ್ದಮದ,** ಪ್ರಸಾ ೧೧೪)

**ಡೊಂಬಾಟ** – ದೊಂಬರಾಟ, ಸಲ್ಲದ ಕಾರ್ಯ (ವಿಡಂಬನ ಡೊಂಬಾಟಕ್ಕಂ ಸಮ್ಯಕ್ತ್ವಚೂಡಾಮಣಿಯ ಧೈರ್ಯಕ್ಕುಂ ಮನದೊಳಾದ ಜೀವದಯೆಗಂ ವಿಸ್ಮಯಂಬಟ್ಟು;, **ಧರ್ಮಾಮೃ,** ೧೨. ೩೦ ವ)

**ಡೊಂಬಿತಿ** – ಡೊಂಬರ ಹೆಣ್ಣು; ವಂಚಕಿ (ಡೊಂಬಿತಿ ಜೋಡೆ ಸೋಲದಿಂ ಬಡ್ಡಿಸಿದಪ್ಪಳ್ ಎಂದೆ ನೆಱೆ ದೂರುವರೆನ್ನಂ: **ಧರ್ಮಾಮೃ,** ೧೦. ೧೩೪)

**ಡೊಂಬಿಸು** – ವಂಚಿಸು (ಧನಮುಳ್ಳಿನಂ ಕರಂ ಡೊಂಬಿಸಿ ತಿಂಬರಿಲ್ಲದೊಡೆ ಪೊರ್ದದ ನಂಟರ ಪಾಂಗುಂ: **ಜೀವಸಂ,** ೪. ೧೪)

**ಡೊಂಬೆ** ಸಿರಿ – ಚಂಚಲೆಯಾದ ಲಕ್ಷ್ಮಿ (ಓಡಿದನೊಳ್ ಪರಾಂಗನೆಯೊಳ್ ಓತು ಒಡಗೂಡಿದನೊಳ್ ಸರಾಗದಿಂ ಕೂಡುವಳೆಂಬ ಡೊಂಬೆ ಸಿರಿ ಪಾತಕಿ ನಾಣಿಲಿ: **ಹರಿವಂಶ,** ೧೧. ೧೦೪)

**ಡೊಕ್ಕರ** – ಹೊಡೆತ, ಮಲ್ಲಯುದ್ಧದ ಒಂದು ವರಸೆ (ಶಾಖಾಚರಬಂಧಂ ಆಯತಿಕೆಬಂಧಂ ಡೊಕ್ಕರಂ ಪಟ್ಟಿಸಂವಳಯಾವೇಷ್ಟನಂ ಆಹತಂ .. .. ಚಮತ್ಕರಿಸೆ ನಾನಾ ಕೌಶಲಂದೋಱೆದರ್: **ಶಬರಶಂ,** ೪. ೭೫)

**ಡೊಕ್ಕರಂಗೊಳ್** – ಮಲ್ಲಯುದ್ಧದಲ್ಲಿ ಡೊಕ್ಕರವೆಂಬ ಪಟ್ಟು ಹಾಕು (ಅಂತು ಎಱಗಿದೊಡೆ ಕೋಡ ಕೆಯ್ದು ಕಾಲೆಡೆಗಳೊಳ್ ಬಿಱ್ಪುಮಂ ಪೊಳೆವಂದದಿಂದೇರ್ದು ಡೊಕ್ಕರಂಗೊಂಡು ಕುರುಕ್ಷೇತ್ರದಿಂದ ಅತ್ತ ಪನ್ನೆರಡು ಯೋಜನಂಬರಂ ಒತ್ತುವುದುಂ: **ಪಂಪಭಾ,** ೧೧. ೭೪ ವ)

**ಡೊಕ್ಕರಿ** – ಜೀರ್ಕೊಳವೆ (ಇಂದುಶಿಲೆಯ ಡೊಕ್ಕರಿಗಳಂ ಆಗಳೆ ಕೊಂಡು ತಾನುಮಾ ಮಾನಿನಿಯುಂ ಧರಣೀವಲ್ಲಭ ಚಕ್ರಿಗಿಂದು ಜಳಕೇಳೀಸ್ಥಾನಂ ಆನಾದೆನೆಂಬ ಉರು

ಸಂತೋಷದೆ ತತ್ಸರೋವರಮದುಂ ಮೈವೆರ್ಚುತಿರ್ದತ್ತು; **ಶಾಂತೀಶ್ವಪು,** ೧೦. ೧೬೦ ಮತ್ತು ೧೬೧)

**ಡೊಕ್ಕರಿಗೊಳ್** – ಡೊಕ್ಕರಂಗೊಳ್ (ಭುವನೈಕಮಲ್ಲಂ ಮೋಹಮಲ್ಲಂ ನೀನೆಕ್ಕತುಳದಿಂದ ಅಕ್ಕುಳಿಸದೆ ಡೊಕ್ಕರಿಗೊಂಡು ನೆಟ್ಟನೆ ಮುಚಿದಿಕ್ಕಿ ಗೆಲ್ದ ವಿದ್ಯಾಧರ ಕಳಂ ಇದು: **ಪಾರ್ಶ್ವನಾಪು,** ೧೬. ೧೦ ವ)

**ಡೊಕ್ಕರಿಸು** – ಪೆಟ್ಟು ಕೊಡು, ಅಪ್ಪಳಿಸು (ಪರಿದೆಯ್ದಿ ಬಿನ್ನಣದಿ ಡೊಕ್ಕರಿಸುವ ಡೊಕ್ಕರಿಸಲ್ ಎತ್ತಿ ಬಿಸುಡುವ: **ತ್ರಿಷಷ್ಟಿಪು,** ೧೭. ೧೪)

**ಡೊಣೆ** – ದೊಣೆ, ಬೆಟ್ಟದ ಮೇಲಣ ಸ್ವಾಭಾವಿಕ ಹೊಂಡ (ಮುಗಿಲ ನೀರಂ ನಚ್ಚಿ ಡೊಣೆಯ ನೀರಂ ತುಳುಂಕಿದ ಕೋಡಗದಂದಂ ನಿನಗಕ್ಕುಂ: **ಪಂಚತಂತ್ರ,** ೧೨೦ ವ); ಬತ್ತಳಿಕೆ (ಡೊಣೆಯಿಂ ಕಣೆಯಂ ತೆಗೆತೆಗೆದು ಅಣಿಯರಮೆನೆ ಪೂಡಿ ನೋಡಿ: **ರಾಜಶೇವಿ,** ೬. ೪೫)

**ಡೊಣೆವು** – ಗಾಯದ ಡೊಗರು (ಅಂಬಿನ ಬಂಬಲೊಳಂ ಜೋಡಾಗಿ ಕೋಡನೂಱೆ ಕೆಡೆದ ಗಜವ್ರಜಂಗಳ ಡೊಣೆವುಗಳಿಂದ ಒಱೆತು ಪರಿವ ನೆತ್ತರ ಕಡಲ್ಗಳೊಳ್ ಮಿಳಿರ್ವ: **ಪಂಪಭಾ,** ೧೦. ೧೧೬ ವ)

**ಡೊಳ್ಳಿಗ** – ಡೊಳ್ಳು ಬಾರಿಸುವವನು; ಡೊಳ್ಳು ಹೊಟ್ಟೆಯವನು (ಸೆಟ್ಟಿ ಡೊಳ್ಳಿಗನಪ್ಪುದಱಿಂ ಪರೀಕ್ಷಿಸದೆ ಪೋದರ್: **ಧರ್ಮಾಮೃ,** ೧೨. ೫೦ ವ)

**ಡೊಳ್ಳು** – ದೊಡ್ಡ ಹೊಟ್ಟೆ (ತೀವಿದ ನರೆಯುಂ ಡೊಳ್ಳುಂ ದೇವವ್ರತನೆನಿಸಿ ನೆಗಟ್ದ ಯಶಮಂ ಬೆರಸಿನ್ನೀವುದು ಹರಿಗೆ ಅರ್ಘ್ಯಮಂ ಎಂದು ಆವನುಂ ಈ ಭೀಷ್ಮರಂತು ನುಡಿದರುಂ ಒಳರೇ: **ಪಂಪಭಾ,** ೬. ೪೩)

**ಡೋಲಾಯಮಾನ** – ತೂಗಾಡುವ (ಗಂಧರ್ವರಾಜನಂದನೆಯ ನೆಗಟ್ತೆಗೆ ಡೋಲಾಯಮಾನಚಿತ್ತನಾಗಿ ತನ್ನೊಳಿಂತೆಂದಂ: **ಕಾದಂಸಂ,** ೫. ೩೭ ವ)

**ಡೋಳಾಕೇಳಿ** – ಉಯ್ಯಾಲೆಯಾಡುವುದು (ಡೋಳಾಕೇಳಿಯ ಕಂದುಕಕೇಳಿಯ .. .. ಬಿನದದೊಳೆ ಸತಿಯನವರೊಸೆಯಿಸಿದರ್: **ಪುಷ್ಪದಂಪು,** ೯. ೮೨)

**ಡೌಡೆ** – ಡಿಂಡಿಮ ಎಂಬ ಚರ್ಮವಾದ್ಯ (ನೀಂ ಪೋ ಪೋಗು ಪೋಗೆಂದು ಮುಂಗಡೆಯೊಳ್ ಸಾಱುವ ಡೌಡೆಯೆಂಬ ತೆಱದಿಂದಂ ಬಗ್ಗಿಸುತಿರ್ದುವುಗ್ಗಡದಿಂ: **ಕಬ್ಬಿಗಕಾ,** ೪೬)

**ಡೌಡೆವಱೆ** – ಡೌಡೆ (ನೆರೆದು ಪಳಂಚುವ ಕಾಲುಂಗುರದ ರವಂ ಮುಂದೆ ಡೌಡೆವಱೆಯಂ ಪೋಲುತ್ತಿರೆ: **ಗಿರಿಜಾಕ,** ೭. ೫೧)

## ಢ

**ಢಿಳ್ಳ** – ಸಡಿಲವಾದ (ಬಲ್ಲಾಲ್ಗಳ್ ಬೀೞ್ವುದುಂ ಕೋಂಟೆ ಢಿಳ್ಳಮಾದೊಡಳ್ಳೆರ್ದೆಗಳ್ ಕೆಲಬರ್ ಬಾಳಂ ಬಿಟ್ಟು ಬಾಟಿನಾಸೆಗೆಯ್ಯೆಯುಂ: **ಪಾರ್ಶ್ವನಾಪು,** ೩. ೧೫೨ ವ)

## ತ

**ತಂಗದಿರ್ಗಲ್** – ಚಂದ್ರಕಾಂತಶಿಲೆ (ತಂಗದಿರ್ಗಲ್ಲ ಗಹ್ವರದ ಚೆಂದಳಿರ್ವಾಸಿನೊಳ್ ಅತ್ತಂ ಇತ್ತ ಚೆವಿಂಗೆಡೆಯಾಗಿ ಸೂಸಿದರಲಂ: **ಶಬರಶಂ,** ೧. ೫೦)

**ತಂಗುಟ್ದಿರಿಕ** – [ತಂಗುಟ್+ತಿರಿಕ] ತಂಗಳನ್ನು ಬೇಡುವವನು ತಮ್ಮಯ್ಯನಪ್ಪ ತಂಗುಟ್ದಿರಿಕನ ಮಾತಂ ಕೇಳ್ದು: **ಧರ್ಮಾಮೃ,** ೮. ೧೦೩ ವ)

**ತಂಗೂಟ್** – ತಂಗಳು (ತಂಗೂಟೆಂಬುದು ನಿಯಮಸ್ಥಂಗಾಗದು: **ಸಮಯಪ,** ೧೪. ೬೫)

**ತಂಗೆ** – ಕಿರಿಯ ಸೋದರಿ (ಭಟಾರರ ತಂಗೆಯಪ್ಪ ವೀಣುಶ್ರೀಯುಂ .. .. ಪ್ರಳಾಪಿಸಿ ದುಃಖಂಗೆಯ್ಯೆ: **ವಡ್ಡಾರಾ,** ಪು. ೧೧೮, ಸಾ. ೯)

**ತಂಡ** – ಗುಂಪು (ಕಣ್ಗಳಿಂ ಕೆಂಡದ ತಂಡಂಗಳುಂ ಉರಿಯ ತಂಡಂಗಳುಂ ಸೂಸೆ: **ಪಂಪಭಾ,** ೩. ೧೬ ವ)

**ತಂಡಂಗೊಳ್** – ಗುಂಪುಗೂಡು (ನೆರೆದು ನಿಗುಂಬಿಸಿ ತಂಡಂಗೊಂಡಿರ್ದ ನರರ ಖಚರರ ಗುಂಡಂ: **ಆದಿಪು,** ೪. ೩)

**ತಂಡಸು** – ಕಂಟಿಕಿ, ಮುಳ್ಳುಮರ (ನೇಳಲ್ ಎರಂ ಪಾದರಿ ತಾಱೆ ತಂಡಸು ಬಿಳಿಲ್ ಬಲ್ಮತ್ತಿ ಬೇವತ್ತಿ ಸೆಳ್ಳೆಲವಂ ಸಂಪಗೆ ತುಂಬುರಂಬಡೆ ಒವುಂಗು ಇಮ್ಮಾವು ಕಕ್ಕಿಮ್ಮರಂ: **ಪಾರ್ಶ್ವನಾಪು,** ೧೨. ೫೮)

**ತಂಡುಲ** – ಅಕ್ಕಿ (ಪ್ರಜೆಯೆಲ್ಲಂ ಜಲ ಗಂಧ ಸ್ರಜ ತಂಡುಲ ಧೂಪ ದೀಪ ಚರು ತಾಂಬೂಲವ್ರಜದಿಂ ಪೂಜಿಸುವುದು: **ಯಶೋಧಚ,** ೪. ೭೩)

**ತಂತಿ** – ಲೋಹದ ತೆಳುವಾದ ಎಳೆ (ಬೆರಲೊಳ್ ಬೀಣೆಯ ತಂತಿಗಳೊರಸಿದ ಕೆಂಗಲೆಗಳ್: **ಪಂಪಭಾ,** ೬. ೧೦)

**ತಂತುವಾಯ** – ನೇಕಾರ (ಮತ್ತನೃತ್ಯತ್ ಪ್ರಮದಾ ಕಸ್ತೂರಿಕಾ ಮಿಶ್ರಿತ ಗುರುಕಬರೀನಿರ್ಗಳತ್ ಪುಷ್ಪಸಂದೋಹಮಂ ಉದ್ಯತ್ ಪಾನಭೂರಂಗಮಂ ಅತಿಮುದದಿಂದೆಯ್ದಿದಂ ತಂತುವಾಯಂ: **ಪಂಚತಂತ್ರ,** ೧೨೮)

**ತಂತುವಾಯಿಕೆ** – ನೇಕಾರ ಹೆಣ್ಣು (ಹರಿಣಾಕ್ಷಿ ಪುಂಶ್ಚಲೀನಾಯಿಕೆ ತಂತುವಾಯಿಕೆ ನಿಜಾಲಯದಿಂ ಪೊಱಮಟ್ಟಳೆತ್ತೆಯಿಂ: **ಪಂಚತಂತ್ರ,** ೧೨೯)

**ತಂತ್ರ** – ಸೈನ್ಯ (ಪೆಱಗಣಿಂದಡಿವಜ್ಜೆಯಂ ನೋಡಿ ತೇನತೇನದಿಂ ತಂತ್ರಮೆಲ್ಲಂ ನೆರೆದು ಬಂದು: **ವಡ್ಡಾರಾ,** ಪು ೧೬೩, ಸಾ ೧೦); ವೈದ್ಯ (ಭೇಷಜ್ಯಂ ಜಾಯು ತಂತ್ರಂ ಅಂತು ಏಕಾರ್ಥಂ: **ಅಭಿಧಾವ,** ೧. ೧೨. ೪೨)

**ತಂತ್ರಪಾಳ** – ಸೇನಾಧಿಪತಿ (ಮಂತ್ರಿ ಮಹತ್ತರ ಪ್ರಧಾನ ತಂತ್ರಪಾಳವರ್ಗದೊಳಾಳೋಚಿಚಿ ನಿಶ್ಚಯಂಗೆಯ್ದು: **ವರ್ಧಮಾಪು,** ೭. ೭೪ ವ)

**ತಂತ್ರವೇದಿ** – ವೈದ್ಯ (ದೋಷಜ್ಞಂ ತಂತ್ರವೇದಿ ಬೆಜ್ಜಂ ವೈದ್ಯಂ: **ಅಭಿಧಾವ,** ೧. ೧೨. ೪೨)

**ತಂತ್ರಾಧ್ಯಕ್ಷ** – ಸೇನಾಪತಿ (ತಂತ್ರಾಧ್ಯಕ್ಷನಂ ಬರಿಸಿ ಬೆಸುವುದುಂ ಆತಂ ವಿಜಯಪ್ರಯಾಣಭೇರಿಯಂ ಪೊಯ್ಸಿದಾಗಳ್: **ಚಂದ್ರಪ್ರಪು,** ೧೦. ೧ ವ)

**ತಂತ್ರಾವಾಪ** – ರಾಜ್ಯ ಹಿತಚಿಂತನೆ (ನಿರಂತರಂ ತಂತ್ರಾವಾಪ ಚಿಂತಾಂತರಾಯಪ್ರಾಯಸುಖಲವದೊಳ್ ಈ ಮಹೀರಾಜ್ಯದೊಳ್ ನಿಱೆಸುವುದುಂ: **ಆದಿಪು,** ೮. ೮ ವ)

**ತಂತ್ರಿ** – ತಂತಿ, ದಾರ (ನಯಮಳವಟ್ಟ ಜೀವೆಯಳವಟ್ಟ ಧರೋತ್ತರ ತಂತ್ರಮಪ್ಪ ತಂತ್ರಿಯೊಳನುವಾದಿಯಾಗೆ: **ಶಾಂತಿಪು,** ೯. ೧೮೭)

**ತಂತ್ರೋದಿತ** – ತಂತ್ರಶಾಸ್ತ್ರದಲ್ಲಿ ಉಕ್ತವಾದ (ತಂತ್ರೋದಿತ ಗುಣಗಣಮಂ ತಾಳ್ದಮೋಘಂ ಪ್ರಭುತ್ವಂ ದೊರೆಕೊಂಡು: **ರಾಜಶೇಖರ,** ೧. ೧೩)

**ತಂದಲ್** – ತುಂತುರು, ಸೋನೆ (ಸೋನೆಯಿಂ ಸರಿಗಳಿಂ ತಂದಲ್ಗಳಿಂದಂದು ಭೂತಳಮೇಕಾರ್ಣವಮಾಗೆ ಚಕ್ರಿಯ ಬಲಕ್ಕಾತಂಕಮಂ ಮಾಡಿದರ್: **ಆದಿಪು,** ೧೩. ೫೯)

**ತಂದೆ** – ಜನಕ (ತಂದೆಯ ರೂಪೆ ತಂದೆವಿಳಾಸಮೆ ತಂದೆಯ ಚೆಲ್ವೆ: **ಆದಿಪು,** ೮. ೪೩)

**ತಂದ್ರ** – ಆಲಸ್ಯ (ಕವೀಂದ್ರರಂ ವಿರಹಿತತಂದ್ರಂ ಪೊಗಟಿದಂಗೆ ತದಾಶ್ರಿತ ವಾಣಿ ಕೂರ್ಪಳೇ: **ಆಚವರ್ಧ,** ೧. ೧೬)

**ತಂದ್ರಿ** – ನಿದ್ದೆ (ನೀನಜೆವುಗೆಟ್ಟು ಈ ತಂದ್ರಿಯಿಂದೊಂದಿ ಸಾಯಲಿದೇಂ ತಕ್ಕುದೇ ಎಂದು ಭೂಪತಿ ಶೋಕಂಗೆಯ್ವ ಹಾಹಾರವಂ: **ಶಾಂತೀಶ್ವಪು,** ೫. ೨೫)

**ತಂದ್ರೀಭೂತ** – ಜಡಗೊಂಡ (ಭರತಂ ವಿಷಾಧಭರ ತಂದ್ರೀಭೂತಚೇತಸನಾಗಿರ್ಪುದುಂ: **ಪಂಪರಾ,** ೬. ೧೦೨ ವ)

**ತಂಬಟ** – ತಮ್ಮಟೆ ಮಿಳ್ಳಿಪ ಪಟಯಿಗೆ ಸೂಳೈಪ ತಂಬಟಂ: **ಆಚವರ್ಧ,** ೮. ೪೯)

**ತಂಬುಲ** – ತಾಂಬೂಲ (ಕಪ್ಪುರದ ಬಂಬಲ್ ತಂಬುಲಂ ರಾಗಮಂ ಪಡೆಗೆಲ್ಲಂ ಪಡೆವನ್ನೆಗಂ ನಡೆದರಂದೆತ್ತಂ ಕೆಲರ್ ನಾಯಕರ್: **ಪಂಪಭಾ,** ೯. ೧೦೪)

**ತಂಬುಲಮನಿಕ್ಕು** – ತಾಂಬೂಲವಿತ್ತು ಆಹ್ವಾನಿಸು (ತಂಬುಲಮನಿಕ್ಕದೊಡಂ ಎಂತುಂ ಬೇಡಿಯುಮಲ್ಲಿ ಮೆಲ್ವರ್ ಉಂಡಿಯುಂಬಟೆಗೆಯಂ: **ಸಮಯಪ,** ೧೪. ೯)

**ತಂಬುಲಿಗ** – ವೀಳೆಯದೆಲೆಯ ಮಾರಾಟಗಾರ (ಪೊಂಬರದರ ಪೂವಡಿಗರ ತಂಬುಲಿಗರ ಕಂಚುವಳರ ಮಣಿಗಾಱರ: **ಉದ್ಭಟಕಾ,** ೧. ೫೦)

**ತಂಬುಲಿಗವಸರ** – [ತಂಬಿಲಿಗ+ಪಸರ] ವೀಳೆಯದೆಲೆಯ ಅಂಗಡಿ (ಬಿಳಿಯೆಲೆಗಳ್ ತಂಬುಲಿಗವಸರದೊಳ್ ಕರಮೆಸೆಗುಂ: **ಲೀಲಾವತಿ,** ೭. ೧೫)

**ತಂಬೆಲರ್** – ತಂಗಾಳಿ (ಮನಮಾಱೆ ತೀಡಿದುದು ತೆಂಕಣ ತಂಬೆಲರ್ ಅಪ್ಪಿಕೊಳ್ವವೋಲ್: **ಪಂಪಭಾ,** ೧೪. ೧೨)

**ತಕ್ಕಂ** – ಯೋಗ್ಯನಾದ (ಒಕ್ಕಲಿಗನನೋಲಗಿಸಿದ ತಕ್ಕಂ ಮೊದಲಾಗಿ ಮುಡಿದ ಪೂವಂ ಮುಡಿವರ್: **ಸಮಯಪ,** ೮. ೧೫)

**ತಕ್ಕರ್** – ವಂಚಕರು, ಠಕ್ಕರು (ಪೆಣನಂ ಎತ್ತಲ್ ಸಲ್ಲೆಂದು ಆಪತ್ತುವಡಿಸಿ ಪುತ್ರನಂ ಈ ಪೊನ್ನಂ ಸಂಗತಿಗುಡುವೆವೆಂಬರ್ ತಕ್ಕರ್: **ಸಮಯಪ,** ೧೪. ೧೫೫)

**ತಕ್ಕಟಿ** – ಯೋಗ್ಯತೆ ಕುಂದು (ತಕ್ಕಟಿದೆನಗೆ ಸಪತ್ನಿಯರಿಕ್ಕುಗೂಟೆಂಗೆ ಬಯಸಿ ಪಾರ್ದಿರ್ಪ ವಿಷಾದಕ್ಕೆ ಗುರಿಯಪ್ಪ ದುರ್ಯಶಮಕ್ಕುಂ: **ಪಂಪರಾ,** ೬. ೯೧); ಧೈರ್ಯಗುಂದು (ಇಭರಿಪುವಂ ತಕ್ಕಟೆವಿನೆಗಂ ನೊಂದು ನಿಂದು ಕೊಂದುದಿಭೇಂದ್ರಂ: **ಶಾಂತಿಪು,** ೨. ೧೦೬)

**ತಕ್ಕಿಸು** – ಬಯಸು (ತಕ್ಕಿಸಲೆ ತಕ್ಕ ಶೋಭೆಗೆ ಪಕ್ಕಾದೊಡಂ: **ಲೀಲಾವತಿ,** ೮. ೪೦)

**ತಕ್ಕು** – ಧೈರ್ಯ; ಸಾಮರ್ಥ್ಯ (ದರ್ಪಿತದುರಿತಮಲ್ಲನುಮಂ ಉಡಿವ ತಕ್ಕಿನಿಂ ಸಭೆಗೆ ನಡೆದಂ: **ಆದಿಪು,** ೧೪. ೧೩೪); ಆಧಿಕ್ಯ, ಹೆಚ್ಚಿಕೆ (ಎರಡುಂ ಬಲಂ ಎನ್ನೆ ನೋಡೆ ತಕ್ಕಿನ ಎನ್ನ ಅದಟುಮಂ ಎನ್ನ ವೀರಮುಮಂ ಆಜಿಯೊಳ್ ಎನ್ನರಸಂಗೆ ತೋಱುವೆಂ: **ಪಂಪಭಾ** ಪರಿಷತ್ತು, ೧೧. ೪೧)

**ತಕ್ಕುಗೆಡು** – ಧೈರ್ಯಗೆಡು (ಇಂತು ತಕ್ಕುಗೆಡದೆ ಮಿಕ್ಕು ಪೊಕ್ಕು ಪೊಣರ್ವ ಸಗರ್ವಗಂಧರ್ವವಾಹಕಸಮೂಹದ: **ರಾಜಶೇಖರ,** ೬. ೬೫ ವ)

**ತಕ್ಕುಗುಡು** – ಬೆಂಬಲ ಕೊಡು (ಮುಗುಳ್ನಗೆಯ ಮುಗುಳ್ವೆಳಗಿಂಗೆ ತಕ್ಕುಗುಡುವಂತೆಯುಂ: **ಅನಂತಪು,** ೮. ೭ ವ)

**ತಕ್ಕುಗೊಡು** – ಠಕ್ಕುಗೊಡು, ವಂಚಿಸು (ಚಿಂತಾಗತಿಯುಂ ತನ್ನ ಪೆಸರಂ ನನ್ನಿಮಾಡಿ ತರುಣಿಗೆ ತಕ್ಕುಗೊಟ್ಟು ಪೆಱಗೆ ಪಾಱೆ ಪೋಗಿ: **ನೇಮಿನಾಪು,** ೩. ೧೮ ವ)

**ತಕ್ಕುಮೆ** – ಯೋಗ್ಯತೆ (ಮಿಂಡನ ತಕ್ಕುಮೆಯುಮೊಪ್ಪಲಾಱವು ಜಗದೊಳ್: **ಧರ್ಮಾಮೃ,** ೭. ೩೦)

**ತಕ್ಕೂರ್ಮೆ** – (ತಕ್ಕು+ಊರ್ಮೆ] ಅಧಿಕ ಯೋಗ್ಯತೆ (ಈ ನುಡಿಯೆ ನಿನ್ನ ಕೂರ್ಮೆಗಂ ತಕ್ಕೂರ್ಮೆಗಂ ದೊರೆಯಪ್ಪುದಾದೊಡಂ ಅರಾತಿಸೈನ್ಯಮಂ ತವೆ ಕೊಂದಲ್ಲದೆ ನಿನ್ನ ಮೊಗಮಂ ನೋಡೆಂ: **ಪಂಪಭಾ,** ೧೩. ೨೮ ವ)

**ತಕ್ಕೆಗೊಳ್** – ಹತ್ತಿರ ಸೆಳೆದುಕೊ (ಮುಳಿದ ವಿಯುಕ್ತವಲ್ಲಭಜನಂ ತಳುವಿಲ್ಲದೆ ತಕ್ಕೆಗೊಂಡುದು ಅಸ್ಖಳಿತ ಕೃಷೀಕುತೂಹಳಜನಂ ಮರವಟ್ಟರುತಿರ್ದುದು .. .. ಏನಳವಿಗಳುಂಬಮೋ ಪುದಿದ ಮಾಗಿಯ ಶೀತವಿಜೃಂಭಪಾತನಂ: **ಶಾಂತೀಶ್ವಪು,** ೧೨. ೮೬)

**ತಕ್ಕೆವರ್** – ಹತ್ತಿರ ಬರು (ಅಭ್ಯಾಸನಿಮಿತ್ತದಿಂದಿರದೆ ಬರ್ಕುಮೆನುತ್ತಂ ತಕ್ಕೆವಂದು: **ಕುಸುಮಾಕಾ,** ೧೧. ೧೫೯)

**ತತ್ತಬಳೆ** – ತಬ್ಬಿದ ಹೆಣ್ಣು (ತತ್ತಬಳೆ ತಾಳಗೊಟ್ಟಿ ಎನುತ್ತಾದಂ ಋಷಿಯರೊಡನೆ ಜಡಮತಿಗಳ್ ಪೋರುತ್ತಿರ್ಪರ್: **ಸಮಯಪ,** ೧೪. ೧೮)

**ತಕ್ರ** – ಮಜ್ಜಿಗೆ (ಕಡೆಗೋಲ ಪೊಯ್ಲಿನಿಂದಂ ಸಿಡಿದು ಶರೀರದೊಳೆ ತುಱುಗೆ ತಕ್ರಕಣಂಗಳ್: **ಲೀಲಾವತಿ,** ೫. ೧೧೦)

**ತಕ್ಷ** – ಬಡಗಿ, ರಥಕಾರ (ಭದ್ರಮುಖನೆಂಬ ತಕ್ಷನಿಂದಂ .. .. ಪದಿನೇಣ್ಬಾಸಿರ್ವರ್ ಮ್ಲೇಚ್ಛರಾಜರಿಂದಂ ನೆಱೆದೈಶ್ವರ್ಯಂ: **ಶಾಂತಿಪು,** ೧೦. ೮೪ ವ)

**ತಕ್ಷಕಪತಿ** – ಮಹಾ ಶಿಲ್ಪಿ (ಭದ್ರಮುಖನೆಂಬ ತಕ್ಷಕಪತಿಯುಂ .. .. ಆತ್ಮೀಯ ಸಾಮ್ರಾಜ್ಯಪರಿಚ್ಛೇದಮಾಗೆ: **ಆದಿಪು,** ೧೫. ೩ ವ)

**ತಕ್ಷಕರತ್ನ** – [ಜೈನ] ಜೀವರತ್ನಗಳಲ್ಲಿ ಒಂದಾದ ಸ್ಥಪತಿ, ವಾಸ್ತುಶಿಲ್ಪಿ (ಪ್ರಾಸಾದಪ್ರಕರಣನುಮಪ್ಪ ಭದ್ರಮುಖನೆಂಬ ತಕ್ಷಕರತ್ನಮುಂ: **ಆದಿಪು,** ೧೧. ೩ ವ)

**ತಗಪು** – ಸಾಲದ ನಿರ್ಬಂಧ (ತಗಪಿರ್ದಂ ಕಾಪಿನವರಗಲ್ಕೆಯಂ ಮೆಚ್ಚದಿರ್ಪನೆ: **ಜೀವಸಂ,** ೧೧. ೧೩ ವ)

**ತಗರ್** – ಟಗರು (ತಗರಂ ಕೋಟಿಗಳಂ ಲಾವಗೆಗಳಂ ಎಸೆವ ಎರ್ಮೆವೋರಿಯಂ ಪಾಪಿಷ್ಠರ್ .. .. ಪೋರಿಪರ್: **ಸಮಯಪ,** ೫. ೧೫); ಅಡ್ಡಗಟ್ಟು (ರಥಮಂ ಬಂದೇಱೆ ಪೋ ಪೋಗಲೆಂದೊದಱುತ್ತುಂ ಪರಿತಂದು ತಾಗಿ ತಗರ್ದಂ ಗಂಗಾಸುತಂ ಭೀಮನಂ: **ಪಂಪಭಾ,** ೧೧. ೧೦)

**ತಗರಕೇಳೀ** – ಟಗರುಕಾಳಗದ ಆಟ (ನಗರಾಭ್ಯಂತರ ದೇವತಾಭವನದೊಳ್ ಚೌವಟ್ಟದೊಳ್ ಬೀದಿವೀದಿಗಳೊಳ್

ಜೂಜಿನ ದಿಂಡೆಯೊಳ್ ತಗರಕೇಳೀವಿದ್ಯೆಯೊಳ್ .. ..ನೀತಿಗೆಟ್ಟಾಡುವರ್: **ಸುಕುಮಾಚ,** ೨. ೭)

**ತಗರ್ತಲೆಯ –** ಒಂದು ಬಾಣ (ನೆಱೆದು ನಿರ್ವಾಯಂ ನರುವಾಯಂ ಮುಂಮೊನೆ ನೆರಕೆ ನಾರಾಚಂ ತಗರ್ತಲೆಯಂ: **ಪಂಪಭಾ,** ೧೩. ೩೯)

**ತಗವೆ –** ಅಡೆತಡೆ (ಕನ್ನಡದೊಳ್ ಯತ್ವ ವತ್ವಂಗಳ್ಗೆ ಬಹುಲತೆಯಿಂ ಲೋಪಮುಂಟು: ತಗವೆ+ಅಪ್ಪೊಡೆ = ತಗವಪ್ಪೊಡೆ, ತಗವೆಯಪ್ಪೊಡೆ: **ಶಬ್ದಮದ,** ೬೫ ಪ್ರ ೮)

**ತಗು –** ತಕ್ಕನಾಗು (ದೇವರ್ಕ್ಕಳ ದೇವಿಯರ್ಕಳ ಕೈಯೊಳ್ ಋಷಿಯರ್ಕ್ಕಳ್ಗುಣಲುಂ ಕುಡಿಯಲುಂ ತಗದು: **ವಡ್ಡಾರಾ,** ಪು ೧೦೪, ಸಾ ೯)

**ತಗುಣಬಿಗುಣಂಬರಿ –** ಅಲೆದಾಡು (ವಿಯತ್ತಳದೊಳ್ ತಗುಣಬಿಗುಣಂಬರಿದು ಬಂದು ಚಾರುದತ್ತನಿರ್ದ ತಿದಿಯನೊಯ್ದು: **ಕರ್ಣನೇಮಿ,** ೪. ೧೦೬ ವ)

**ತಗುಣೆಗಾಟಂ –** ತಿಗಣೆಯ ಕಾಟ (ಈ ರಾಜಹಂಸನಂ ಸರಸೀರುಹಲಂಪಟನಂ ಅಸುರನೊರ್ವಂ ಗಡ ಕೊಲ್ಗಾರವೊಲ್ ಉದ್ಯತನಾದಂ ಅಪಾರಬಲ ತಗುಳೆ ತಗುಣೆಗಾಟಂಗಾಡಲ್: **ಶಾಂತಿಪು,** ೮. ೬೮)

**ತಗುಳ್ –** ಸೇರು (ಬಗೆಯೊಳ್ಪೊಣ್ಮೆ ದಯಾರಸಂ ಚರಿತದೊಳ್ಕೈಗಣ್ಮೆ ಚಾರಿತ್ರಂ ಆವಗಮಾವಶ್ಯಕದೊಳ್ ತಗುಳ್ದು ಪಲವುಂ ಶೀಲಂಗಳಂ ತಾಳ್ದಿ: **ಆದಿಪು,** ೧.೫); ಆರಂಭಿಸು, ತೊಡಗು (ಆ ಮಹಾಬಳಂ ಬಾಲಕಾಲದಿಂ ತಗುಳ್ದು ಅಭ್ಯಸ್ತಸಮಸ್ತವಿದ್ಯಾಧರವಿದ್ಯಾಪಾರಗನುಂ: .. .. ಆಗಿ: **ಆದಿಪು,** ೧. ೭೩ ವ); ಅನುಸರಿಸು (ಭೋಗಿಪೆನೆನ್ನ ಜವ್ವನಮುಂ ಈ ಧನಮುಂತವುವನ್ನೆಗಂ ಕುಚಾಗ್ರಭರಾನತಾಂಗಿಯರೊಳ್ ಅನ್ನೆಗಂ ಅಱಿನಂ ತಗುಳ್ವೆಂ: **ಆದಿಪು,** ३. ೬೩); ಅಂಟು, ಹಿಡಿ (ವನದಹನಂ ವನಾಮತರಮನೊರ್ಬಳಸಾಗಿರೆ ಮುತ್ತಿ ಸುತ್ತಿನ ನಡುವಿರ್ದುಂ ಆ ಮರನಂ ಅಟ್ಟಿದುದು ಈ ಮರನಂ ತಗುಳ್ದುದು: **ಆದಿಪು,** ೯. ೫೯); ಅಟ್ಟಿಸಿಕೊಂಡು ಹೋಗು (ಗೆಡೆವಚ್ಚೆರ್ವರ್ ಮನಗೊಂಡು ಒಡನೊಡನೆ ಓರಂತು ತಗುಳ್ದು ಝೋಂಕರಿಸಿದೊಡೆ ಎಲ್ಲವಡಗಾಗೆ ಮೋದಲೆಂದಿರ್ದ ಎಡೆಯೊಳ್ ಗುರು ತನ್ನ ಮಗನಂ ಎಡೆವುಗವೇಟ್ಟಿಂ: **ಪಂಪಭಾ,** ೨. ೭೩); ಆರಂಭಗೊಳ್ಳು (ಹಿರಣ್ಯಗರ್ಭಬ್ರಹ್ಮರಿಂ ತಗುಳ್ದು ಅವ್ಯವಚ್ಛಿನ್ನಮಾಗಿ ಬಂದ ಸೋಮವಂಶಂ ಈಗಳ್ ಎಮ್ಮ ಕುಲಸಂತತಿಗಂ ಆರುಮಿಲ್ಲದೆ ಎಡವಱಿದು ಕಿಡುವಂತಾಗಿರ್ದುದು: **ಪಂಪಭಾ,** ೧. ೮೪ ವ); ಆವರಿಸು (ವಿಷಮಬಾಣನ ತೀವ್ರ ಶರಾನಳಾರ್ಚಿಗಳ್ ತಗುಳ್ದುವು ಎನಲ್ಕೆ ತೋರ್ಪುವು ತಮಸ್ವಿನಿಗಳ್: **ಕಾದಂಬ,** ೨. ೧೩)

**ತಗುಳ –** ಗೊಂಚಲು (ಬಿರಿಮುಗುಳ ತಗುಳದಿಂ ಸೊಗಯಿಸುವ ಮಲ್ಲಿಕಾಲತೆಯ ಜೊಂಪಂಗಳುಂ: **ಪುಷ್ಪದಂಪು,** ೨. ೩೯ ವ)

**ತಗುಳಿಸು –** ಜೋಡಿಸು (ಸತಿಯ ಕಿವಿಯೊಳ್ ತಗುಳಿಸಿದಳ್ ಹಂಸರಚನೆಯೋಲೆಯನೊರ್ವಳ್: **ಪುಷ್ಪದಂಪು,** ೯. ೭೭ ವ)

**ತಗುಳ್ಚು –** ತಗುಲಿಸು, ಜೋಡಿಸು (ಚಿನ್ನಪೂಗಳಂ ಅವಱೊಳ್ ತಗುಳ್ಚದೆ ಮೃಗೋದ್ಭವಪಂಕದೆ ಪತ್ರಭಂಗಮಂ ತೊಳಪ: **ಆದಿಪು,** ೪. ೧೨)

**ತಗುಳ್ಪು –** ಜೋಡಣೆ, ಬೆಸುಗೆ (ವಜ್ರಲೇಪದ ತಗುಳ್ಪಂ ಪೋಲ್ವಿನಂ ವಜ್ರನಾಭಿಗತಿಪ್ರೀತಿಯನುಂಟುಮಾಡಿದರ್ ಅವರ್ ಜನ್ಮಾಂತರಸ್ನೇಹದಿಂ: **ಆದಿಪು,** ೬. ೨೨); ಆಧಾರ, ಅವಲಂಬನೆ

**ತಗೆ –** ನಿಲ್ಲಿಸು, ಅಡ್ಡಿಪಡಿಸು (ಅಂ ಮರುಳೆನೊ.. ..ನೀಂ ಮರುಳಯೋ ಪೇಟಿ ಪೇಟಿದೊಡೆ ಪೋಗದಿರು ಈಶ್ವರನಾಣೆ ಎಂದು ಪುಲ್ಮರುಳ್ ಇನಿಸಾನುಮಂ ತಗೆದು ಕಾಡಿದುದಲ್ಲಿ ಫಣೀಂದ್ರಕೇತುವಂ: **ಪಂಪಭಾ,** ೧೩. ೫೩); ಅಡ್ಡಿ (ಮಹಾಶ್ವೇತಾವಲೋಕನಕ್ಕೆ ತಗೆಯಂ ಮಾಟ್ಪಂತೆ ಪಡಿಯುಂ ಕೆತ್ತಗುಟಿಯನಿಕ್ಕಿ: **ಕಾದಂಸಂ,** ೮. ೩೭ ವ)

**ತಜಿನೆವಟಯಿಗೆ –** ಒಂದು ಬಗೆಯ ಧ್ವಜ (ಬೆಳ್ಗೊಡೆಗಳುಂ ಪಾಳಿಧ್ವಜಂಗಳೂಂ ತಜಿನೆವಟಯಿಗೆಗಳುಂ ಚಂದ್ರಾದಿತ್ಯರ್ಕಳುಂ: **ವಡ್ಡಾರಾ,** ಪು ೧೩೩, ಸಾ ೧೯)

**ತಜ್ಞ –** [ತತ್+ಜ್ಞ] ಅದನ್ನು ತಿಳಿದವನು ಒಂದು ವಿಷಯವನ್ನು ಚೆನ್ನಾಗಿ ಬಲ್ಲವನು (ತಜ್ಞರ್ ತಲೆದೂಗೆ ದೇವಸಭೆ ಸಂತೋಷಕ್ಕೆ ಪಕ್ಕಾಗೆ: **ಪುಷ್ಪದಂಪು,** ೧೨. ೫೦)

**ತಜ್ಞತೆ –** ಪಾಂಡಿತ್ಯ (ಉದಾತ್ತಾಳಾಪ ಪ್ರಯೋಗಳಗಳಿಂ ತಜ್ಞತೆಯನಾ ಮಾನಧರ ಮುಂದಿಡೆಯುಂ: **ಶಾಂತಿಪು,** ೪. ೮೨ ವ)

**ತಟ –** ದಡ, ಬೆಟ್ಟದ ತಪ್ಪಲು (ಸಮುದ್ಯತ್ ರಜತಗಿರಿ ತಟ ಸ್ಪಷ್ಟ ಸಂಶ್ಲಿಷ್ಟ ಮೌರ್ವೀನಿನದಂ ಪರ್ವಿತ್ತು ಅಕಾಂಡಪ್ರಳಯ ಘನಘಟಾಟೋಪ ಗಂಭೀರನಾದಂ: **ಪಂಪಭಾ,** ೧೨. ೧೩೭)

**ತಟಂಕಷ –** ದಡವನ್ನು ಮುಟ್ಟುವ, ಸಮಗ್ರವಾದ (ನವಭಾವರಸಂಗಳಂ ತಟಂಕಷಮೆನೆ ತೋಱೆ ತದ್ರುಚಿಯ ಮೆಯ್ಯೊಳೆ ಸದ್ರುಚಿಯೊಳ್ ತೊಡರ್ಚುವ ಈಮಿಷದ ಕವೀಂದ್ರರ್: **ಪುಷ್ಪದಂಪು,** ೧. ೩೪)

**ತಟಾಂತರ –** ದಡದ ಪ್ರದೇಶ (ಎರೆದನ ಪೆಂಪುವೇಟಿಪ್ಪೊಡೆ ಅನಲಂ ಪೊಣವರ್ಾತನ ಪೆಂಪುವೇಟಿಪ್ಪೊಡೆ ಆ ಸುರಪತಿ ಕೊಟ್ಟ ತಾಣದೆಡೆವೇಟಿಪ್ಪೊಡೆ ಯಮುನಾನದೀತಟಾಂತರಂ: **ಪಂಪಭಾ,** ೫. ೭೩)

**ತಟಾಕ –** ಕೆರೆ (ಗಗನತಳಮೆ ಪಱಿದು ಬಿಟ್ಟುದೆನಿಪ ಬಹುತಟಾಕದಿಂ ಕುಕಿಲ್ವ ನಲಿವ ಕೋಕದಿಂ: **ಪಂಪಭಾ,** ೧. ೫೮)

**ತಟಿತ್ –** ಮಿಂಚು, ಹೊಳೆಯುವ (ಸುಸ್ತನಿತಮ ಉಚ್ಚ ತಟಿತ್ ಕರವಾಲನಾಂತು ತಜ್ವಲದ ಭಟಂಗೆ ಅದಂ ಕುಡದೆ: **ರಾಜಶೇವಿ,** ೧. ೯೧೦

**ತಟಿದಂಗನೆ –** [ತಟಿತ್+ಅಂಗನೆ] ಮಿಂಚೆಂಬ ಹೆಣ್ಣು (ತಟಿದಂಗನೆ ತಾಂ ಕಡೆಗೊಗೆದಂತಿರೆ ಮುಗಿಲಿಂ ಸಿಡಿದು ಕೆಲಕ್ಕೊಗೆದ ಖಚರಿಯೇನೊಪ್ಪಿದಳೋ: **ಶಬರಶಂ,** ೧. ೪೨)

**ತಟಿದ್ದ್ಯುತಿ –** (ತಟಿತ್+ದ್ಯುತಿ) ಮಿಂಚಿನ ಕಾಂತಿ (ತಟಿದ್ದ್ಯುತಿಚಂಚಲೆಯೆಬುದೊಂದು ಭಾವನೆಯೊಳೆ ರಾಜ್ಯಲಕ್ಷ್ಮಿಯೊಳ್ ಅನಾದರಮಾಯ್ತು ಮನಂ ಚಿದಾತ್ಮನಾ: **ಆದಿಪು,** ೮. ೬)

**ತಟಿದ್ವಲ್ಲರಿ –** ಮಿಂಚಿನ ಬಳ್ಳಿ (ಕನಕಮಯಸೋಪಾನ ರುಚಿವಿತಾನ ತಟಿದ್ವಲ್ಲರೀವಲಯಿತಮುಂ .. .. ಆ ಕರುಮಾಡಂ ಒಪ್ಪುಗುಂ: **ಮಲ್ಲಿನಾಪು,** ೨. ೫೮ ವ ಮತ್ತು ೫೯)

**ತಟಿನಿ –** ನದಿ (ಶಿಪ್ರಾತಟಿನೀತಟಸ್ಥಲಿಗಳೊಳ್ ಲೀಲಾವಿನೋದೈಕ ತತ್ಪರನಾಗಳ್ ನಡಪಾಡುತಿರ್ಪಂ: **ಕಾದಂಸಂ,** ೬. ೧೬)

**ತಟಿಲ್ಲತೆ –** ಮಿಂಚಿನ ಬಳ್ಳಿ (ಎಸೆವ ತಟಿಲ್ಲತೆ ಮೇಘಪ್ರಸರದೊಳ್ ಅಂತಿಂತು ಪೊಳೆದಾಡಿ ಅಡಂಗುವ ತೆಱದೆ: **ಆಚವರ್ಧ,** ೨. ೪೯)

**ತಟ್ಟಿ –** ತಡಿಕೆ (ಗಂಗಾಸುತನ ವಾಮಭಾಗದೊಳ್ ಅಂಬರಭಾಗಂ ಆ ತಟ್ಟಿ ಮೆಡಱಿದಂತಾಗಿ ತನ್ನ ರಥದೊಳೊಟ್ಟಿದ ಕೆಯ್ದುಗಳ ಬೆಳಗೆ ಬೆಳಗಾಗೆ: **ಪಂಪಭಾ,** ೧೦. ೫೬); ಒಂದು ಬಗೆಯ ಬಲೆ (ಎಡೆವಿಡದೆ ಮಲ್ಲಗಳನಂ ಕುಡಿ ಮಿಂಚಿನ ತಟ್ಟಿ ಸುತ್ತಿದಂತಿರೆ .. .. ಸುತ್ತಿದರ್ ಕೂರಾಳ್ಗಳ್: **ನೇಮಿನಾಪು,** ೮. ೭೨)

**ತಟ್ಟಿಱಿ –** ಅಪ್ಪಳಿಸು (ಎರಡುಂ ಬಲದ ಕರಿಘಟೆಗಳ್ ಒಂದೊಂದಱೊಳ್ ತಾಗಿ ತಟ್ಟಿಱಿಯೆ ಬಿಸುನೆತ್ತರ ಅರ್ಬಿಗಳ್ ಉರ್ವಿ ಪಾಯೆ ಪೇರರ್ವಿಗಳ್ವೆರಸು ಜಾಜಿನ ಪರ್ವತಂಗಳಂತೆ ಕೆಡೆದಟ್ಟೆತಟ್ಟೆದಾಗಳ್: **ಪಂಪಭಾ,** ೧೦. ೯೬ ವ)

**ತಟ್ಟು –** ಅಪ್ಪಳಿಸು (ತಟ್ಟು–ತಾಡನೇ, ಕ್ಷಪಣಕಾಚ್ಛಾದನೇ ಚ: **ಶಬ್ದಮದ, ಧಾ** ೨೪೪); ಸನ್ಯಾಸಿಯ ಹೊದಿಕೆ (ಪಿರಿದುಂ ತಟ್ಟಿನ ಕಪ್ಪರ್ .. .. ಕುಂಚದ ವಿರಸದ ಹಂಚುಗಳೆನಿಪ್ಪ ಸವಣರ್ ನೆರೆದರ್: **ತ್ರಿಷಷ್ಟಿಪು,** ೨೯. ೨೦); ಸೈನ್ಯ (ಪೊಗಟ್ಟೆಯಂ ತಳೆದ ತೇಜಿಯ ತಟ್ಟು ತೆರಳ್ದುದೆತ್ತಲುಂ: **ಕಬ್ಬಿಗಕಾ,** ೧೫೯)

**ತಟ್ಟುಂತಾಱುಂ–** ಅಸ್ತವ್ಯಸ್ತವಾಗಿ ನಾಲ್ಕುಂ ತೆಱದ ಶಸ್ತ್ರಾಸ್ತ್ರಮುಖಂಗಳೊಳ್ ತಟ್ಟುಂತಾಱುಂ ಬೀಟ್ಟು ಚತುರಂಗ ಪೃತನಾಪ್ರತಾನದ ತುಮುಲ: **ಅನಂತಪು,** ೧೪. ೧ ವ)

**ತಟ್ಟುಪೊಟ್ಟು –** ಥಟ್ ಪಟ್ ಎಂದು (ಚಾತುರ್ವಲಂಗಳ್ ಮೊದಲ ಸಮಕಟ್ಟುಗೆಟ್ಟು ತಡವರಿಸಿ ತಟ್ಟುಪೊಟ್ಟೆಂದು ಎಚ್ಚು ಮಿಟ್ಟುಂ ಇಱಿದು ತಱಿದು ಘಟ್ಟಿಸೆಯುಂ: **ಪಂಪಭಾ,** ೧೦. ೭೦ ವ)

**ತಡ –** ಅಡ್ಡಿ (ರಾಜಸೂಯಮಖಮಂ ತಡವಿಲ್ಲದೆ ಬೇಳ್ದ ಬೀರಮಂ ನೆಟ್ಟನೆ ನೀನೆ ಕಂಡಿಸಲಕ್ಕುಮೆ ಗಾಂಡಿವಿಯಂ: **ಗದಾಯು,** ೨. ೩೭); ವಿಳಂಬ (ಈ ನುಡಿ ತಡಮಲ್ತು ನಾಳೆಯೆ ರಣಾಂಗಣದೊಳ್ ನಡೆ ನೋಡುವಿರ್: **ಪಂಪರಾ,** ೧೦. ೨೩೩); ದಡ (ಟಕಾರಕ್ಕೆ ಡಕಾರಂ: ತಟಂ–ಟಡಂ ತಟಿ–ದಡಿ: **ಶಬ್ದಮದ,** ೨೯೬ ಪ್ರ); ಅನುರೂಪ (ಆಮೋದ ಮುದಿತ ಮಧುಕರ ದಾಮಕದೊಳ್ ನೀಲರತ್ನ ದಾಮಂ ಮಲ್ಲೀದಾಮಕದೊಳ್ ಮುಕ್ತಾಫಳದಾಮಂ ತಡವಾದುವೊಡನೆ ಮಣಿಮಂಡಲದೊಳ್: **ಪಂಪರಾ,** ೫. ೧೧೫); ಆಧಾರ (ತಡದಿಂ ಕಿತ್ತು ಅಡಿಯಡಂಬುದಡಿಗಿಡೆ ಪೊಕ್ಕು .. .. ಪೊಯ್ದರ್: **ಗದಾಯು,** ೮. ೧೬)

**ತಡಂಗ –** ತಟಾಕ (ಅದೇಂ ನೆಱೆ ಪೋಲ್ತುದೋ ಚಂಡಹುಂಡ ಸಂಸ್ಥಾನದ ಗುಂಡುದೀವಿದ ತಡಂಗನಂಗದ ಪಾಂಗವಂದಿರಾ: **ಆದಿಪು,** ೫. ೯೦)

**ತಡಂಗಡಿ –** ಕತ್ತರಿಸು (ಸಂಧಿಶಂದಿಗಳಂ ಗಂಟುಗಡಿವುದುಂ ತಡಂಗಡಿವುದುಂ: **ಸುಕುಮಾಚ,** ೧೧. ೪೭ ವ)

**ತಡಂಗಲಿಸು –** ಕೂಡಿಕೊ, ಸೇರಿಕೊ (ದೇವದುಂದುಭಿಧ್ವನಿಗಳೊಳ್ ಘನಾಘನದನಿಗಳ್ ತಡಂಗಲಿಸೆ: **ನೇಮಿನಾಪು,** ೭. ೪೩ ವ)

**ತಡಂಗಾ –** ತಡೆದು ರಕ್ಷಿಸಿಕೊ (ಪೂವಿನ ಸುಗ್ಗಿಯಲ್ತೆ .. .. ಸವಿಯೊಳ್ ಸೆಱೆಗೆಯ್ವುದು ಜೀವಮಂ ತಡಂಗಾವುದು: **ಲೀಲಾವತಿ,** ೧೪. ೪೩)

**ತಡಂಗಾಲ್ –** ತೊಡರುಗಾಲು (ತೊಡರೆ ತಡಂಗಾಲ್ ಪೊಯ್ದೊಡೆ ಕೆಡೆದುಂ ತಿವಿದೊಡೆ ಸುರುಳ್ದು ಮೋದಿದೊಡೆ ಇರದೆ ಎಲ್ಲವಡಗಾಗಿ ಮಡಿದು ಬಿಟ್ಟುವು ಗಡಣದೆ ಕರಿಘಟೆಗಳೇಂ ವಲಸ್ಥನೋ ಭೀಮಂ: **ಪಂಪಭಾ,** ೧೧. ೬೮)

**ತಡಂಗೂಡು –** ಸೇರಿಕೊ (ಪೂನೀರಂ ತಡಂಗೂಡಿ ಗುಗ್ಗುಳ ನಿರ್ಯಾಸಮನಾಂತು .. .. ಗಂಧಂಗಳಂ ತಳೆದೇಂ ಗಂದಿಗರಂತೆ ಬಂದೊಲೆದುದೋ: **ನೇಮಿನಾಪು,** ೫. ೯೭)

**ತಡಂಗೆಡೆ –** ಕುಸಿದುಬೀಳು (ಗುಹೆಯೊಳಡಂಗಿ ಬೆಡಂಗಳಿದು ತಡಂಗೆಡೆದಿರ್ಪ ಮಾತಂಗದಂಪತಿಗಳಿಂ: **ಗಿರಿಜಾಕ,** ೧. ೧೨೮ ವ)

**ತಡಂತೊಡರ್ –** ಬೆರೆತುಕೊ (ಸಂಚಳ ಮೀನಸಂಚಯಂ ಪೂದುಱುಗಲ್ ತಡಂತೊಡರ್ದು ತೋರ್ಪವೊಲ್ ಒಪ್ಪಿರೆ: **ನೇಮಿನಾಪು,** ೧. ೬೧)

**ತಡಂನುಡಿ –** ನಿಧಾನ ಮಾತು (ನಡೆತಂದರ್ ಒಳ್ನುಡಿಯ ತಡಂನುಡಿಯ ತೊದಳನುಡಿಯೊಳ್ವೆಂಡಿರ್: **ಜಗನ್ನಾವಿ,** ೪. ೧೨೬)

**ತಡಂಬಡು –** ತಡವರಿಸು (ದಡದಡಿಪ ಅಡಿ ಪಡಿಮಾತಂ ಪಡೆಯಲ್ ಒಡರ್ಚುವ ಮನಂ ತಂಡಂಬಡಿಪ ತಳರ್ ನುಡಿ: **ರಾಜಶೇವಿ,** ೬. ೩೩)

**ತಡಂಬರಿ –** ಹೊರಸೂಸು (ಕೆಮ್ಮುಗಿಲ ಕಾವಣದೊಳ್ ಕುಡಿಮಿಂಚುಗಳ್ ತಡಂಬರಿವೊಲೇಂ ಬೆಡಂಗಡರ್ದುದೋ: **ಅನಂತಪು,** ೭. ೨೮)

**ತಡಂಬಾಯ್ –** ದಾಟು (ಬಿಲ್ಲಂ ನಿಷಾದಿಗಳದೊಲ್ಲದೆ ಕಿತ್ತಿ ಗೇಣೊಳೆ ತಡಂಬಯ್ದುಯ್ದೆ ತದ್ವೈರಿಯೋಧಿಗಳಂ ತಾನೆನೆ .. .. ಕಯ್ಯಾರ್ವಿನಂ ಕಾದಿದರ್: **ಚಂದ್ರಪ್ರಪು,** ೧೦. ೮೩)

**ತಡಂಬುಗಿಸು –** ಬೆರೆಸು ಬಳ್ಳಿಗುರುಳ ಬಂಬಲೊಳ್ ತುಂಬಿಯ ಬಂಬಲಂ ತಡಂಬುಗಿಸೆ: **ಅನಂತಪು,** ೧೦. ೨೩ ವ)

**ತಡಂಬೊಯ್ –** ಅಪ್ಪಳಿಸು (ಎತ್ತಿಕೊಂಡು ಅಸಗವೊಯ್ವೊಯ್ವೊಳ್ ತಡಂಬೊಯ್ದುಂ ಉಳ್ಳ ಅಡಗಂ ನೆತ್ತರುಂ ಎಲ್ವುಂ ಎಲ್ಲ ದೆಸೆಗಳಂ ಜೀಱೆಟ್ಟು ಪಾಱೇಟೆ: **ಪಂಪಭಾ,** ೧೦. ೧೦೪)

**ತಡಂಮಾಡು –** ತಬ್ಬಿಬ್ಬುಮಾಡು (ತಡಮಾಡು, ತಂಮಾಡು– ವಿಪರ್ಯಾಸೇ: **ಶಬ್ದಮದ, ಧಾ** ೩೧೦)

**ತಡಂಮೆಟ್ಟು –** ಮೆಟ್ಟಿಂಗಾಲಿಡು, ಮೆಲ್ಲಗೆ ನಡೆ (ಪೊಳೆದು ಪರಿವ ಪೊಳೆವುಲ್ಲೆಗಳುಮಂ ತಲೆಯಂ ಕುತ್ತಿ ವಿಶಾಲಂಬರಿವ ಕರಡಿಗಳುಮಂ ಅಡಂಗಿ ಪರಿವ ಪುಲಿಗಳುಮಂ ಸೋಂಕಿ ಪರಿವೆಯ ಎಯ್ಗಳುಮಂ ತಡಂಮೆಟ್ಟಿ .. .. ಪಲವನೆಚ್ಚು: **ಪಂಪಭಾ,** ೫. ೪೮ ವ)

**ತಡಕು –** ಹುಡುಕು (ಸರಸಪದಾರ್ಥಮಂ ತಡಕಿ ಕಾಣದೆ ಕಳ್ದು ಪದೋಕ್ತಿಯುಕ್ತಿಯಂ: **ರಾಜಶೇವಿ,** ೧. ೨೩)

**ತಡಕೈ –** ಅಪ್ಪುಗೆ (ಪಟ್ಕೆತಟ್ಕೈಸಿದನೆಂದು ತಡಕೈಯಂ ಮಾಡಿದನೆಂಬುದರ್ಥಂ: **ಶಬ್ದಮದ,** ೨೯ ಪ್ರ)

**ತಡತಡವರ್ –** ತೊದಲು, ತೊಡರು (ಕುಡುಪಮಂ ಕಯ್ಯುಂ ಜತಿಯೊಳ್ ತಡತಡವರೆ ವಾದಕಂಗೆ ಪುರ್ವಿಂ ಜತಿಯಿಂ ತೊಡರದೆ ನಡೆಯಿಸಿ: **ಆದಿಪು,** ೯. ೩೨)

**ತಡತಡಾಗು –** ತಡವರಿಸು (ಅದು ತಡತಡಾದೊಡೆ ಅರ್ಹತ್ವದಮಂ ನಾಲಗೆಗೆ ತರ್ಪುದು ಅದು ಬಾರದೊಡೆ ಇರ್ಪುದು ಅಕಾರದೊಂದಱೊಳ್: **ಆದಿಪು,** ೨. ೫೬)

**ತಡದಡಿಸು** – ಮುನ್ನುಗ್ಗು (ಅಸಿಧೇನುವಂ ಕಿಟ್ಟು ನಡನಡನಡುಗಿ ತಡವಡಿಸುತ್ತುಮಿಱಿಯಲ್: **ಆದಿಪು,** ೨. ೧೪ ವ)

**ತಡಬಡಿಸು** – ತಬ್ಬಿಬ್ಬುಗೊಳ್ಳು (ತಡಬಡಿಸುತ್ತ ಸತೀತತಿ ಅಡಿಯಿಟ್ಟುದು ನಿಜನಿಶಾಂತಸಂಚಯಕಾಗಳ್: **ಉದ್ಭಟಕಾ,** ೧೦. ೧೧೭)

**ತಡಮಾಡು** – ಒಂದುಗೂಡಿಸು (ಮನಂ ವಿನೋದರಸದೊಳ್ ತಡಮಾಡೆ ಮಗುಟ್ದು ಮನ್ಮಥಕ್ರೀಡೆಗೆ ನೋಡೆ ನಾಡೆ ಗುಜೆಯಪ್ಪುವು: **ಆದಿಪು,** ೫. ೪೧); ಉತ್ಸಾಹಗೊಳಿಸು (ಸುಖದೊಳ್ ಮೂಡುವ ಮುಟ್ಟಾಡುವ ತಡಮಾಡುವ ಬಗೆಯಲ್ಲದಲ್ಲಿ ಬಗೆ ಪೆಱತುಂಟೇ: **ಆದಿಪು,** ೬. ೪೦); ತಳ್ಳಂಕಗೊಳಿಸು

**ತಡಮ್ಮೆಟ್ಟು** – ನಿಧಾನವಾಗಿ ನಡೆ (ಪರಲೊತ್ತೆ ಸೈರಿಸುತ್ತುಂ ಗುರು ಜಘನ ಭರಂಗಳಿಂ ತಡಮ್ಮೆಟ್ಟುತ್ತುಂ ಚರಣ ಕಮಲಂಗಳಂ ಸಂವರಿಸುತ್ತುಂ ಸೀತೆ ಸೆಡೆದು ಮೆಲ್ಲನೆ ನಡೆದಳ್: **ಪಂಪರಾ,** ೭. ೨೭)

**ತಡಮಿಕ್ಕು** – ತಡೆಯೊಡ್ಡು (ಸ್ಮರಶರಾಸನ ಭ್ರೂವಿಭ್ರಮನಂ ತಮ್ಮ ಭ್ರೂವಲ್ಲಿಗಳೊಳ್ ತಡಮಿಕ್ಕಿಯುಂ: **ಸುಕುಮಾಚ,** ೧೦. ೧೦೧ ವ)

**ತಡವಡಿಸು** – ಹಿಂದು ಮುಂದು ನೋಡು (ತಡವಡಿಸಿ ಪುಡುಕಿಪಂಜಿನ ನಡು ಬೀದಿಯೊಳಿರ್ದು ಮಱುಗುತಿರೆ ಕಂಡು: **ಸುಕುಮಾಚ,** ೪. ೫೮)

**ತಡವರ್** – ತೊದಲು (ಅಳ್ಳಿರ್ದೆ ನೊಂದು ಕುಂದುಗುಂ ನುಡಿ ತಡವಕ್ಕುಂ ಇಚ್ಚೆಗೆಡುಗುಂ: **ಆದಿಪು,** ೧೨. ೪೦)

**ತಡವಿಕ್ಕು** – ಹಿರಿದುಮಾಡು, ಹೆಚ್ಚಿಸು (ಹಸ್ತಿಯ ಬೆಂಗೆ ವಂದು ಸುತ್ತಿಱಿದು ಪಗಲಂ ತಡವಿಕ್ಕಿದಂತೆ ಬೆಳಗುವ ಕೆಯ್ದೀವಿಗೆಗಳ ಬೆಳಗೆ ಬೆಳಗಾಗೆ: **ಪಂಪಭಾ,** ೧೨. ೫೨ ವ)

**ತಡಸು** – ಒಂದು ಮರ (ಪಲಸು ಆಲಂ ತಡಸು ಆಸು ತೇಗು ತದುಕಿಂಚಿಲ್ ಪೊನ್ನೆ ಚೆನ್ನಂಗಿ ಬೊಬ್ಬುಲಿ ಇರ್ಬಿಡ ಅರನೇಜಿಲ್ ಇಪ್ಪೆ ಸಿರಿಸಂ ಹಾಡಂಗಿ: **ಪಾರ್ಶ್ವನಾಪು,** ೧೨. ೫೮)

**ತಡಹರ** – ಬೊಕ್ಕೆ (ವಿರಹಜ್ವರದುಗ್ರತರಾತಿರೇಕದಿಂ ತಡಹರಮೆರ್ದುವೆಂಬಿನೆಗಂ ಎರ್ದುವು ಮೆಯ್ನವಿರಾ ಮೃಗಾಕ್ಷಿಯಾ: **ಲೀಲಾವತಿ,** ೧೨. ೩೭)

**ತಡಾಗ** – [ತಟಾಕ] ಸಣ್ಣ ಕೆರೆ (ತಡಾಗ ತತಿ ಕಣ್ಗಳಿಂ ಉನ್ನತ ಪಾದಪೋತ್ಕರಂ ಸೀಗುರಿಯಿಂ ಕರಂ ಕಿಱಿಯವಾದುವು ಕಣ್ಗೆ ಗುಣಾವಲೋಕನಾ: **ನೇಮಿನಾಪು,** ೬. ೪)

**ತಡಿ** – ದಡ (ಕೊಳದ ತಡಿಯೊಳ್ ಹಳಿಕುಳಿಶಶಂಖಚಕ್ರಲಾಂಛಿತಮಪ್ಪ ಅಡಿವಜ್ಜೆಯಂ ಕಂಡು: **ಪಂಪಭಾ,** ೧೩. ೭೬ ವ)

**ತಡಿಕೆವಲೆ** – ತಟ್ಟಿಯ ಹಾಗಿರುವ ಬಲೆ (ತಡಿಕೆವಲೆ ಕಣ್ಣಿವಲೆ ನಿಟ್ಟಡಿಕಿಲ್ವಲೆ ಗೂಂಟವಲೆ .. .. ಒಪ್ಪಿದುವುದು ಲುಬ್ಧಕರೊಳ್: **ಗಿರಿಜಾಕ,** ೧. ೮೦)

**ತಡಿಗಾಣ್** – ದಡಕಾಣು (ಈ ಸಂಸಾರಾಂಭೋಧಿಯನೀಸುವ ನಿನಗಿದುವೆ ನಾವೆ ತಡಿಗಾಣ್ಬೆ ಅನಾಯಾಸದೊಳ್: **ಆದಿಪು,** ೫. ೬೦)

**ತಣಿ** – ತೃಪ್ತಿ ಪಡೆ (ಸುಟಿಯದು ಗಾಳಿ ಮೃಗಂ ಕೆಯ್ವಟಿಗಳ ಮೇತದೊಳೆ ತಣಿದಪುವು ಪಂದಿಗಳುಂ ಪಟಿನವಿರ್ ಇಕ್ಕಿದುವು ಆದಂ ಪಱು ಪರಿದಾಡಲ್ ಕರಂ ಬೆಡಂಗವನಿಪತೀ: **ಪಂಪಭಾ,** ೫. ೩೮)

**ತಣಿಯುಣ್** – ತೃಪ್ತಿಯಾಗುವಂತೆ ತಿನ್ನು (ಗಣನಾತೀತ ಆಜ್ಯಾಹುತಿಗಣದಿಂದಂ ತಣಿಯೆ ಜಾತವೇದನುಂ ಆ ಬ್ರಾಹ್ಮಣಸಮಿತಿ ಬೇಳೆ ದೇವರ್ ತಣಿಯುಂಡರ್ ನೆರೆದು ದಿವ್ಯ ಹವ್ಯಾಮೃತಮಂ: **ಪಂಪಭಾ,** ೬. ೩೭)

**ತಣಿವು** – ತೃಪ್ತಿ (ಎನಿತೊಳವು ಜೀವರಾಶಿಗಳ್ ಅನಿತುಮಂ ಓರಂತೆ ಕೊಂದು ತಿಂದುಂ ತಣಿವಿಲ್ಲ: **ಯಶೋಧಚ,** ೪. ೬೩)

**ತಣ್ಗದಿರ್** – ತಂಪು ಕಿರಣ (ನುಣ್ಗಱಿಯಿಲ್ಲದ ವಿಧುವಿಂ ತಣ್ಗದಿರ್ ಒಗೆದಂತೆ ವಿಮಳಮುಖಮಂಡಳದಿಂ ಕಣ್ಗೊಳಿಸೆ ದಂತಕಾಂತಿ ಪವಣ್ಗಳಿದುಳ್ಕಲೆ ಖಚರವರಂ ಇಂತೆಂದಂ: **ಶಾಂತೀಶ್ವಪು,** ೨. ೫೩)

**ತಣ್ಗಾಲ್** – ತಂಪಾದ ನೀರಿನ ಕಾಲುವೆ (ತೆಂಬೆಲರ್ಗಳಿಂ ತಣ್ಗಾಲೊಳ್ ಒಂದೊರ್ವಳ್ ಅಚ್ಚನೆಯಾಟಂ ನತಿ ಬೇಟದೇವತೆಗೆ ಪಾನೋನ್ಮತ್ತೆ ನಿಂದಾಡಿದಳ್: **ಅನಂತಪು,** ೮. ೩೦)

**ತಣ್ಸೊಡರ್** – [ತಣ್ಣಿತ್ತು ಸೊಡರ್] ತಂಪಾದ ದೀಪ (ವಶ್ಯದೊಂದು ತಣ್ಸೊಡರೆನೆ ನೋಟ್ಟಿ ನೋಟಕರ ಕಣ್ಗೊಳಗಾದುದು ಕಣ್ಣ ಪಾಪೆವೋಲ್: **ಪಂಪರಾ,** ೩. ೩೯)

**ತಣ್ಣಲೆ** – ತಂಪಾದ ಅಲೆ (ತಣ್ಣೆಲರ್ ಇರ್ಕೆಲದ ಪರಿಕಾಲ್ಗಳಂ ತಣ್ಣಲೆವೆಳಸಲೆಗಳಂ ಎಳಸಿ ಸುಟಿವೆಳೆಯವಳಂ: **ಆಚವರ್ಧ,** ೪. ೭೫)

**ತಣ್ಣಸ** – ತಂಪು (ನನೆಯೆಳಗಂಪನೆತ್ತಿಯುಂ ಅಣಂ ನನೆನಾಱದೆ ಅರಲ್ದು ಅನೇಕ ಕೋಕನದವನಂಗಳೊಳ್ ಸುಟಿದು ತಣ್ಣಸಮಾಗದೆ: **ಪಂಪಭಾ,** ೫. ೩೪); ತೃಪ್ತಿ (ಮದನರಸಪ್ಲವಂ ಕವಿಯೆ ತಣ್ಣಸನಾಗದೆ ತೃಷ್ಣೆ: **ಶಾಂತಿಪು,** ೮. ೯೭)

**ತಣ್ಣಸಗೆಯ್ಯವಟ್ಟ** – ಚಂದ್ರ (ತಣ್ಣಸಗೆಯ್ಯವಟ್ಟನ ಅಮರ್ದಾನನವೇಳಿಸೆ ತಮ್ಮ ನಲ್ಲರಂ ಬಣ್ಣಿಸುತುಂ: **ಉದ್ಭಟಕಾ,** ೨. ೬೩)

**ತಣ್ಣಸಗೊಳ್** – ತಂಪಾಗು (ಬೆಮರ ಬೆರಲ್ವನಿಗಳಿಂ ತಣ್ಣಸಗೊಂಡ ತಂತಿಗಳಂ ಆಱಿಸುವರ್ ಬಿಸುಸುಯ್ದು ಕಿನ್ನರರ್ ಬೀಣೆಗಳಂ: **ಲೀಲಾವತಿ,** ೯. ೫೧)

**ತಣ್ಣಸುವುಟ್ಟು** – ತಂಪು ಉಂಟಾಗು (ಕಿಱುವೀಲಿ ಕಣ್ದೆಱೆಯೆ ಸೋಗೆಗೆ ತಣ್ಣಸುವುಟ್ಟೆ ಬೆಟ್ಟವೇಸಗೆಯ ಬಿಸಿಲ್ಗೆ ತೀಡಿದುದು ತಣ್ಣನೆ ಪಣ್ಣನೆ ಪಶ್ಚಿಮಾನಿಲಂ: **ಪಂಪರಾ,** ೭. ೧೩೯)

**ತಣ್ಣಿತ್ತು** – ತಂಪಾದ (ಕುದಿಯುತ್ತಿರ್ದ ತುಯ್ಯಲಂ ತಣ್ಣತ್ತಾಗಿ ಆಱುವನ್ನೆಗಂ ಪಾರುತ್ತಿರ್ದು: **ವಡ್ಡಾರಾ,** ಪು ೬೪, ಸಾ ೨೨)

**ತಣ್ಣಿದೆ** – ತಂಪಾದವನು (ಎಮ್ಮ ಅನ್ವಯಕ್ಕೆ ನೀಂ ತಣ್ಣಿದೆಯಾಗು ಎಂದು ಬೇಡುವುದುಂ ತದಸ್ತು ಎಂದಂ: **ಪಂಪಭಾ,** ೫. ೧೦೦ ವ)

**ತಣ್ಣೆಟಿಲ್** – ತಂಪಾದ ನೆರಳು (ಪಾಂಡವರಂ ಇಕ್ಕಿದ ಒಸಗೆವಾತುಗಳಂ ಈಗಳೆ ಕೇಳಿಸುವೆಂ ಎಂದು ಸರೋಜನಿಳಯೆ ಎನ್ನ ಬರ್ಪನ್ನಂ ಅರಸನಂ ಅಗಲದೆ ವಿಕಸಿತಶತಪತ್ರಾತಪತ್ರದ ತಣ್ಣೆಟಿಲುಮಂ ಕುಂದಲೀಯದಿರು ಎಂದು ನಿಯಮಿಸಿ: **ಪಂಪಭಾ,** ೧೩. ೧೦೫ ವ)

**ತಣ್ಪಿಡಿ** – ತಂಪಿನಿಂದ ಕೂಡು (ಸೊಡರ್ಗುಡಿ ಒಯ್ಯನಾಗೆ ಪೊಸಮಲ್ಲಿಗೆ ಕಂಪುನಾಱೆ ತಣ್ಪಿಡಿದ ಎಲರ್ ಊದೆ

ಗಾವರದ ಮೆಲ್ಲುಲಿ ತುಂಬಿಯ ಗಾವರಂಗಳ ಗೆಡೆಗೊಳೆ: **ಪಂಪಭಾ,** ೪. ೧೧೦)

**ತಣ್ಪುವೆಸಕೆಯ್** – ತಂಪಾಗುವಂತೆ ಮಾಡು (ಮಲಯಸಮೀರಣ .. .. ವಾರಿಯಂ ಪುದುಂಗೊಳಿಸಿ .. .. ತಣ್ಪುವೆಸಕೆಯ್ವುದು ತೀರವನಾಂತರಾಳದೊಳ್: **ಆದಿಪು,** ೧೧. ೬೬)

**ತಣ್ಬಿಸಿಲ್** – ತಂಪಾದ ಬಿಸಿಲು, ಎಳೆಬಿಸಿಲು (ಫುಲ್ಲಸರಳ್ ಬಸಂತದ ಪುಗಿಲ್ ನೆಜೀದಿಂಗಳ ತಣ್ಬಿಸಿಲ್ ಮುಗುಳ್ಮಲ್ಲಿಗೆ ಬಂದ ಮಾಮಲೆವ ತೆಂಕಣಗಾಳಿ ವಿಪಂಚಿಯಿಂಚರಂ ನಲ್ಲಳ ಲಲ್ಲೆ ಕೋಹಿಲೆಯ ಬಗ್ಗಣೆ ತುಂಬಿಯ ಗೇಯತಂ ಎಂಬಿನಂ ಬಲ್ಲವರಂ ಮನಂಗೊಳಿಸುಗುಂ ಕೃತಿ ಸತ್ಕೃತಿ ನಾಗಚಂದ್ರನಾ: **ಮಲ್ಲಿನಾಪು,** ೧. ೪೪)

**ತಣ್ಬುಟಿಲ್** – ತಂಪು ಮರಳು ಎಲ್ಲಿ ನೋಡದೊಡಂ ಉದ್ಯಾನಂಗಳ್ ಎತ್ತೆತ್ತ ನೋಡಿದೊಡಂ ತಣ್ಬುಟಿಲ್ .. .. ಇಲ್ಲದ ನೆಲಂ ಬೇಜೆಲ್ಲ: **ಆಚವರ್ಧ,** ೧. ೩೩); ತಂಪಾದ ತೋಪು (ಬರವಂ ಕಾಡಂ ಬೇಗೆಗೆ ಕರಮಜೆದು ಎರಡುಂ ಮೃಗಂಗಳುಂ ತಣ್ಬುಟಿಲೊಳ್ ನೆರೆದು ಒಡವಂದುವು ತಪ್ಪದೆ ಇದ ಅರಿಕೇಸರಿ ಕಂಡು ಮೆಚ್ಚುವೈ ಕೋಳ್ವಾಂಗಂ: **ಪಂಪಭಾ,** ೫. ೩೯)

**ತಣ್ಮಲೆ** – ತಂಪನ್ನು ಹರಡು (ಪಡೆವೆಂ ಶಾಶ್ವತಶ್ರೀಯಂ ಎಂಬುಜ್ಜುಗದೊಳ್ ಚಿತ್ತಂ ಕರಂ ತಣ್ಮಲೆಯೆ ನೆಜೀಯೆ ನಿಶ್ಚೈಸಿದಂ ಸಾರ್ವಭೌಮಂ; **ಆದಿಪು,** ೬. ೨೬); ಗುಂಗು ಹಿಡಿಸು (ಕನಸಿನೊಳಮಾ ಕುಮಾರನೆ ಮನಮಂ ತಣ್ಮಲೆಯೆ: **ಆದಿಪು,** ೮. ೫೩)

**ತತ್** – ಆ, ಅದು (ಚಮರೀ ಲೋಲ ಲಾಂಗೂಲ ಮಾಲಾವಲಿ ವಿಕ್ಷೇಪಂಗಳಿಂ ತತ್ ಚಮರರುಹ ಮಹಾಶೋಭೆ ಕೈಗಣ್ಮೆ: **ಪಂಪಭಾ,** ೪. ೧೪)

**ತತ** – ಹರಡಿದ (ಸುಳುಗೊಳುತೆತ್ತೆ ಸುಟ್ಟುರೆ ಧರಾರಜಮಂ ಕೆಟಿಗೊಂದೆ ದಂಡದಂತುಳಿದ ತತ ಆತಪಂ: **ರಾಜಶೇವಿ,** ೮. ೯೫); ತಂತಿವಾದ್ಯ (ತತಮೆಂಬುದು ತಂತ್ರಿಯೊಳ್ ಅನ್ವಿತಮಾದುದು ಸುಷಿರಮೆಂಬುದದು ವಂಶಾದ್ಯಂ ವಿತತಂ ಅವನದ್ಧ ಚರ್ಮಾವೃತಂ ಘನಂ ಕಾಂಸ್ಯವಿನಿತೆ ವಾದ್ಯವಿಭೇದಂ: **ಅಭಿಧಾವ,** ೧, ೧೩. ೨೫)

**ತತಘನಸುಷಿರಾವನದ್ಧವಾದ್ಯ** – ತಂತಿ ಲೋಹ ಬಿದಿರು ಚರ್ಮ ಇವುಗಳ ವಾದ್ಯ (ಅತಿಮೃದುರವದಾಯಿಗಳಂ ತತಘನಸುಷಿರಾವನದ್ಧವಾದ್ಯಂಗಳನೇಂ ಮತಮಜೆದು ಓಲಗಿಪುದೊ ದಂಪತಿಗೆಂದುಂ ಅವಾರ್ಯತೂರ್ಯಕ್ಷ್ಮಾಜಂ: **ಆದಿಪು,** ೫. ೩೫)

**ತತಿ** – ಸಮೂಹ (ಪ್ರಿಯತಮನಂತೆ ಪುಣ್ಯತತಿಯಂತೆ ಸುಧಾಕರನಂತೆ .. .. ಹರಿದೇವನ ಉನ್ನತ ಕೃತಿ: **ಗಿರಿಜಾಕ,** ೧. ೧೮)

**ತತ್ತರಿಸು** – ನಡುಗು (ಭೀಕರ ಶಬರಸೇನೆ ಕವಿದುದು ಸರಭಸದಿಂ ದೆಸೆ ಮಸುಟ್ಟು ತತ್ತರಿಸುವಿನಂ: **ಕುಸುಮಾಕಾ,** ೧೪. ೯೫)

**ತತ್ತಱಿದಜೆ** – ಕೊಚ್ಚಿಹಾಕು (ಉಱಿದೆ ಇದಿರಾಂತು ನಿಂದ ರಿಪುಸೈನ್ಯಮಂ ಆಹವರಂಗದಲ್ಲಿ ತತ್ತಱಿದಜೆದು ಇಕ್ಕಲ್ ಆಂ ನೆಜೆವೆಂ ಇನ್ನಿರವೇಡ ಒಡಗೊಂಡು ಪೋಗು: **ಪಂಪಭಾ,** ೧೧. ೯೭)

**ತತ್ತಟಿಗುದಿ** – ಜೋರಾಗಿ ಕುದಿ (ಕೊಡೆ ತತ್ತಟಿಗುದಿಯುತ್ತುಮಿರ್ಪ ಕುದಿಯೊಳ್ ಸಿಡಿದು ಅಲ್ಲಿಯ ಮುತ್ತುಗಳ್ ಛಳಿಲ್ ಛಳಿಲನೆ ಕೊಂಡುವು ಒರ್ಮೊದಲೆ ರುಂದ್ರಸುರೇಂದ್ರವಿಮಾನಪಜ್ತಿಯಂ: **ಪಂಪಭಾ,** ೧೧. ೧೫೩)

**ತತ್ತಿ** – ಮೊಟ್ಟೆ (ಅಜಾಂಡಂ ಸಿಡಿಲ್ದು ಸಿಡಿಲ್ವೊಯ್ದು ಒಡೆದು ಒಂದು ತತ್ತಿಯವೊಲಾಯ್ತು: **ಪಂಪಭಾ,** ೯. ೯೪)

**ತತ್ತುಪಣ** – ಜೊತೆಗೊಳಿಸುವಿಕೆ, ಹೊತ್ತಿಸುವಿಕೆ (ನಿತಂಬಿನಿ ನಾನಾಪ್ರಕಾರದ ತತ್ತುಪಣಂಗಳಿಂ ಜೊತ್ತಿಸಿ ವಶೀಕೃತಂಮಾಡಿ: **ಸುಕುಮಾಚ,** ೭. ೧೩ ವ)

**ತತ್ತುಪಣಂಗೆಯ್** – ಉಪಚಾರಮಾಡು (ಕೆಲಕ್ಕೆ ವಂದು ಕೆಯ್ಯನೊತ್ತಿಯುಂ ಕಾಲನೊತ್ತಿಯುಂ ತತ್ತುಪಣಂಗೆಯ್ದು: **ಅಜಿತಪು,** ೫. ೯೫ ವ)

**ತತ್ತ್ವಪಂಚ** – ಆ ವಿಷಯ (ಧರ್ಮಾಧಿಕರಣರಲ್ಲಿಗೆ ಬಂದು ಇರ್ವರುಂ ತತ್ಪ್ರಪಂಚಮೆಲ್ಲಮಂ ಸವಿಸ್ತರಂ ನುಡಿದು: **ಪಂಚತಂತ್ರ,** ೨೩೭ ವ)

**ತತ್ತ್ವಜ್ಞ** – ತತ್ವಜ್ಞಾನಿ (ಕಲಾಕುಶಲನಂ ತತ್ತ್ವಜ್ಞನಂ ಪೆತ್ತಪೈ: **ಪಂಪರಾ,** ೧೦. ೧೪೦):

**ತತ್ತ್ವಪರಿಣತ** – ತತ್ತ್ವಜ್ಞ (ಸುದತ್ತಾಚಾರ್ಯರ ಸಮುದಾಯದೊಳ್ ಇರ್ದು ತತ್ತ್ವಪರಿಣತನಾದಂ: **ಯಶೋಧಚ,** ೪. ೬೭)

**ತತ್ಸಮ** – ಅದಕ್ಕೆ ಸಮನಾದ (ದಟ್ಟಡಿಯನಿಕ್ಕುವ ಬಾಲಕನಂಗದೊಂದು ಮಾರ್ಪೊಳಪಿರೆ ನೀಲಕುಟ್ಟಿಮದೊಳುರ್ವರೆ ತಜ್ಜನನೀ ಸಪತ್ನಿ ತಾಂ ತಳೆದಳೊ ತತಸ್ಸಾತ್ಮಭವನಂ ಪುರುಡಿಂದೆನೆ ಕಣ್ಗೆ ರಂಜಿಕುಂ: **ರಾಜಶೇವಿ,** ೪. ೭೨); ವ್ಯತ್ಯಾಸವಿಲ್ಲದೆ ಅಥವಾ ಸ್ವಲ್ಪ ವ್ಯತ್ಯಾಸದಿಂದ ಕನ್ನಡದಲ್ಲಿ ಬಳಸುವ ಸಂಸ್ಕೃತ ಶಬ್ದ (ಗಲ್ಲಂ ಮಲ್ಲಂ ತಳಂ ಇಂತಿವೆಲ್ಲಂ ತತ್ಸಮಮು ಇವಱುದಾಹರಣೆಗಳ ಸೊಲ್ಲಿಸುವೆಂ: **ಶಬ್ದಮದ,** ೩೧೩)

**ತತ್ಸವಿತುರ್ವರೇಣ್ಯ** – ಬ್ರಾಹ್ಮಣ, ಶ್ರೌತ (ಅಹಿಂಸಾ ಪರಮೋ ಧರ್ಮವಿಂಬುದಂ ಈ ತತ್ಸವಿತುರ್ವರೇಣ್ಯರ್ ಅಟೆದರ್ ತ್ರೈಲೋಕ್ಯಚೂಡಾಮನೀ: **ಶಬ್ದಮದ,** ೮೫ ಪ್ರ ೪)

**ತಥಾಗತ** – ಬುದ್ಧ (ಬುದ್ಧಂ ಸಮಂತಭದ್ರಂ ಸಿದ್ಧಾರ್ಥಂ ಮುನಿ ತಥಾಗತಂ ಷಡಭಿಜ್ಞಂ ಶೌದ್ಧೋದನಿ ದಶಬಳಂ ಅತ್ಯುದ್ಧತಮದಮದನವಿಜಯಿ ಶಾಕ್ಯಂ ಸುಗತಂ: **ಅಭಿಧಾವ,** ೧. ೧. ೧೦)

**ತಥಾಗತಮತ** – ಬೌದ್ಧಮತ (ಎಂದು ತಥಾಗತಮತಮಂ ತಿರಸ್ಕರಿಸಿ ತನ್ನೊಳ್ ಅಶಕ್ಯಾನುಷ್ಠಾನಕ್ಕೆ ಪೊಣರ್ದ ಲೋಕಾಯತ ಶಾಕ್ಯಮತಾವಲಂಬಿಯಂ ಅನವಲಂಬಿತಂ ಗೆಲ್ದು: **ಶಾಂತಿಪು,** ೮. ೧೪೭ ವ)

**ತಥ್ಯ** – ನಿಶ್ಚಯ (ಹರಿಯೆಂದಂದಮದಂತೆ ಪಾಂಡುತನಯರ್ ನಿರ್ದೋಷಿಗಳ್ ತಥ್ಯಂ ಇಂತು ರಣಸ್ಥಾನದೊಳ್ ಇನ್ನೆರಟ್ಬುಡಿವೆನೇ: **ಪಂಪಭಾ,** ೧೩. ೯೦)

**ತಥ್ಯಾಭಿಯೋಗ** – ಸರಿಯಾದ ಪ್ರಯತ್ನ (ತನ್ನ ಮಂತ್ರಿ ಮುದ್ರಾರಾಕ್ಷಸಂಗೆ ತಥ್ಯಾಭಿಯೋಗಮಾದೊಡಂ ಮಿಥ್ಯಾಭಿಯೋಗಮೆಂದು ನಿಶ್ಚೈಸಿ ನಿರ್ವಿಚಾರದಿಂ ನಿರ್ದಾಟಿಸಿ ಕಳೆದೊಡಾತಂ: **ಪಂಚತಂತ್ರ,** ೩೪೬ ವ)

**ತದರ್ಧಪ್ರಮಿತ** – ಅದರ ಅರ್ಧದಷ್ಟು ಅಳತೆಯ (ಅದು ಯೋಜನಶತಮೂಲ ವಿಸ್ತೃತಮುಂ .. .. ತದರ್ಧಪ್ರಮಿತೋಪರಿಮಿತಲವಿಸ್ತಾರಮುಂ: **ಆದಿಪು,** ೧೩. ೬೯ ವ)

**ತದವಸಾನ** – ಅದರ ಕೊನೆ (ಪ್ರಿಯಮಿತ್ರೆ ಮಜ್ಜನಂಬುಗುವಿನಮಲ್ಲಿರ್ದು ತದವಸಾನದೊಳ್ ಅಶೇಷಭೂಷಣಭೂಷಿತೆಯಂ ಪಡಿಯಱಂ ಕಾನಿಸೆಯುಂ; **ಶಾಂತಿಪು,** ೯. ೧೦೧ ವ)

**ತದಾತನ** – ನಡೆಯುತ್ತಿರುವ ಕಾಲದ (ನೈಮಿತ್ತಿಕನಂ ಬರಿಸಿ ತದಾತನಮುಂ ಅತ್ಯಂತ ನೂತನಮುಂ ಅಪ್ಪುದೊಂದು ಲಗ್ನಮಂ ಪೇೞಿಂ ಎಂಬುದುಂ: **ಶಾಂತಿಪು** ೫. ೩೭ ವ)

**ತದಾತ್ವಸುಖ** – ತಾತ್ಕಾಲಿಕ ಸುಖ (ಜೀವಂ ಸದಾತ್ವಸುಖಲವಸೇವೆಗೆ ಕಳವಳಿಪುದು: **ಚಂದ್ರಪ್ರಪು,** ೨. ೩೦)

**ತದಿಕು** – ಸಲ್ಲಕೀ ಗಿಡ, ಬೇಲದ ಮರ (ಅರೆರೊಳಿ ತಳಿಸಿನ ತದಿಕಿನ ಸರಿಸದ ಬೇಳದುರಿಯ ಬಿಳಿಲ ಸಿವನ್ನಿಯ .. .. ಕಕ್ಷಾಂತರಾಳದಿಂ ಪುದಿರ್ಕುಂ: **ವರ್ಧಮಾಪು,** ೫. ೫೦)

**ತದಿಗೆ** – ಹುಣ್ಣಿಮೆ, ಅಮಾವಾಸ್ಯೆಗಳನಂತರದ ಮೂರನೆಯ ದಿನದ ತಿಥಿ (ಯಕಾರಕ್ಕೆ ಗಕಾರಂ: ದ್ವಿತೀಯೆ–ಬಿದಿಗೆ ತೃತೀಯೆ–ತದಿಗೆ ಚರ್ಯೆ–ಚರಿಗೆ: **ಶಬ್ದಮದ,** ೨೭೩ ಪ್ರ)

**ತದೀಯ** – ಅದಕ್ಕೆ [ಆ ವ್ಯಕ್ತಿಗೆ] ಸಂಬಂಧಿಸಿದ (ತದೀಯ ಸಿತಕೇತುಪಟಂ ಬರೆದಿಟ್ಟ ತಿಟ್ಟದ ಒಪ್ಪುವ ಪಟದಂತೆ ನಿಶ್ಚಳಿತಮಾದುದು ವೇಗಮರುತ್ಪ್ರಯೋಗದಿಂ: **ಶಾಂತಿಪು,** ೪. ೬೦)

**ತದುಕು** – ಸಲ್ಲಕಿ ಗಿಡ (ತದುಕು ತಳಿರ್ತುದು ಇಕ್ಕಿದುದು ಪಾದರಿ ಪಣ್ಣೆಲೆಯಂ ನಯಕ್ಕೆ ಬಂದುದು ಲತೆ .. .. ಶಿಶಿರಾತ್ಯಯ ಚೈತ್ರನವಪ್ರವೇಶದೊಳ್: **ಲೀಲಾವತಿ,** ೯. ೬೨)

**ತದೆ** – ಒದೆ (ತರುವಲಿಯಂ ತದೆದುಂ ಒದೆದುಂ ಅಂತಕವದನಾಂತರದೊಳ್ ತೂಂತದೆ ಟಕ್ಕಿಂ ಪೆರೆದವೊಲಿಂತೇಕೆ ನಿಂದಂ: **ಆಚವರ್ಧ,** ೨. ೫೨)

**ತದೆದುಕೊ** – ಹೊಡೆದುಕೊ (ಆಕೆ ನೆಲಕ್ಕೆ ಬಿಬ್ದು ಬಾಯುಂ ಬಸಿಱುಂಬಿವಂ ತದೆದುಕೊಂಡು: **ನೇಮಿನಾಪು,** ೭. ೧೨)

**ತದೆವಡೆ** – ಏಟು ತಿನ್ನು (ಊರ ಸೀರೆಗೆ ಅಗಸಂ ತದೆವರೆದಂ ಎನಿಪ್ಪ ನಾಡನುಡಿ ಪರೆವಿನಗಂ: **ನೇಮಿನಾಪು,** ೮. ೮೦)

**ತದ್ಭವ** – ಅದರಿಂದ ಹುಟ್ಟಿದ (ಧನಾಢ್ಯದಂಪತಿಯೆ ತದ್ಭವದಂಪತಿಯಂದಮಮಂ ಪುದುಂಗೊಳಿಸೆ ಪುರಂ ವಿರಾಜಿಪುದು: **ಚಂದ್ರಪ್ರಪು,** ೧೧. ೬೨); ಹೆಚ್ಚು ವ್ಯತ್ಯಾಸ ಹೊಂದಿ ಕನ್ನಡಕ್ಕೆ ಬಂದ ಸಂಸ್ಕೃತ ಶಬ್ದ (ಸಕ್ಕದದ ತದ್ಭವಂಗಳ ಲಕ್ಕಣಮಂ ಕನ್ನಡಕ್ಕೆ ಲಕ್ಷಿಸಿ ಪೇೞ್ವೆಂ: **ಶಬ್ದಮದ,** ೨೬೭); ಆ ಜನ್ಮ, ಹಿಂದಿನ ಜನ್ಮ (ಜಾತಿಸ್ಮರೆಯಾಗಿ ತದ್ಭವಪ್ರತ್ಯಯದಿಂ ಭವಸ್ವರೂಪಮಂ .. .. ಕೇಳ್ದು ತಿಳಿದು: **ಸುಕುಮಾಚ,** ೮. ೧ ವ)

**ತದ್ರು** – ಸೌಟು (ತದ್ರು ತಾಂ ದರ್ವಿ ದಾರುಹಸ್ತಕಮೆನಿಪ್ಪುದದು ಖಜಿಕಾಖ್ಯಂ: **ಅಭಿಧಾವ,** ೧. ೧೦. ೩೩)

**ತನಿಗಂಪು** – ಸುವಾಸನೆ (ತನಿಗಂಪನಾಳ್ದು ಕಡುದಣ್ಪೆಸನಸುಂ ಕವಿತರೆ ನೀಡಿದನಾಗಳ್ ದಿವಿಜೇಭಕರಾನುಕಾರಿ ನಿಜಕರಯುಗಮಂ: **ಕಾದಂಸಂ,** ೪. ೧೦೪)

**ತನಿಗರ್ವು** – [ತನಿ+ಕರ್ವು] ಬಲಿತು ಸಿಹಿಯಾದ ಕಬ್ಬು (ಮಿಡಿದೊಡೆ ತನಿಗರ್ವು ರಸಂ ಬಿಡುವುವೆ: **ಪಂಪಭಾ,** ೧. ೫೫)

**ತನಿಗೆಂಡ** – ಉರಿಯುವ ಕೆಂಡ (ತನಿಗೆಂಡಮನೊಱಲೆ ಪತ್ತಲೇನಜೆದಪುದೇ: **ಪುಷ್ಪದಂಪು,** ೧೪. ೨೯)

**ತನಿಗೆತ್ತು** – ತೀವ್ರವಾದ ಬಯಕೆ, ಮಿಡಿತ (ಪದಪು ಮನಕ್ಕೆ ಸೊರ್ಕು ನಯನಕ್ಕೆಸೆಯುತಿರೆ ಚುಂಬನಾಭಿಲಾಷದ ತನಿಗೆತ್ತು ಬಾಯ್ಗೆ .. .. ಪುದಿದಿರೆ: **ಆದಿಪು,** ೪. ೧೫)

**ತನಿಗೆತ್ತು** – ಹೆಚ್ಚಾಗಿ ನಡುಗು (ಕಣ್ಬನಿದುಱುಗಲಂ ಎಮೆಯೊಳಾಂತು ನಿಡುಸುಯ್ಗಧರಂ ತನಿಗೆತ್ತಲ್ ಮನಮಿಕ್ಕು ಒಯ್ಯನೆ ನುಡಿದಂ ಪತ್ರಲೇಖೆಗೆ ಅವನಿಪತನಯಂ: **ಕಾದಂಸಂ,** ೬. ೧೩); ಅತಿಶಯ ನಡುಕ

**ತನಿಸೋಂಕು** – ಹಿತಕರ ಸ್ಪರ್ಶ (ಪೊದಳ್ದ ಬಲ್ಮುಗುಳ್ಗಳ ತಂದಲಂದು ಕವಿತಂದುದು ಅದಂ ತನಿಸೋಂಕು ಸೋಂಕಿ ಮೆಲ್ಲಗೆ ಮಲಯಾನಿಲಂ ಸುಟೆದೊಡೆ ಅಂದು ಜಗಂ ಪೊಸತಾದುದು: **ಪಂಪಭಾ,** ೧೪. ೧೯); ಹಿತವಾಗಿ ಸ್ಪರ್ಶಿಸು (ತಳೆದು ನಿಜಾಂಗಪೀಠತಟದೊಳ್ ಜಿನನಂ ತನಿಸೋಂಕಿ ಹಸ್ತದಿಂ ಪುಳಕಿತಗಾತ್ರನಾಗಿ ಮಘವಂ ಮೆಱೆದಂ; **ಪುಷ್ಪದಂಪು,** ೧೦. ೨೨)

**ತನು** – ಕೃಶವಾದ, ಸಣ್ಣ (ಶಿತಿಕಂಠಂ ಅಲ್ಪವ್ರತಕ್ಕೆ ತನುತರತಪಕ್ಕಂ ಏನೊಲ್ದಪನೇ: **ಶಬರಶಂ,** ೨. ೮೬); ದೇಹ (ಬಿಸುನೆತ್ತರ್ ನೆಣಂ ಅಡಗು ಎಲ್ವು ಸಮಸ್ತಂ ಸುರಿಯೆ ಕೈಗೆ ತೊವಲ್ ಉಟೆಯಲ್ ಅಗುರ್ವಿಸಿದುದು ತೀವಿದ ಗುಳ್ಳೆಯ ಪಸುಂಬೆಯ ಸೋರ್ಚಿದಂತೆ ತನು ಕೀಚಕನಾ: **ಪಂಪಭಾ,** ೮. ೭೭)

**ತನುಜ** – ಮಗ (ತನುಜಂ ಅಖಿಲಾರ್ಥಕಲ್ಪಾವನಿಜಂ: **ಪುಷ್ಪದಂಪು,** ೩. ೯೨)

**ತನುಜಾತ** – ತನುಜ (ನಾಲ್ವರುಮಂ ಅವನೀಶಂ ದಶರಥಂ ಪಡೆದಂ ತನುಜಾತರಂ: **ಕಾದಂಬ,** ೨. ೫೨)

**ತನುಜೆ** – ಮಗಳು (ಅವನೀತಳಕ್ಕೆ ನಿಜತನುಜೆವೆರಸು ಬಿಜಯಂಗೆಯ್ದು .. .. ಬಂದಂ ಅಗಕುಲರಾಜಂ: **ಗಿರಿಜಾಕ,** ೩. ೧೧೫)

**ತನುತ್ರ** – ಕವಚ (ಅಸ್ತ್ರಶಸ್ತ್ರ ತನುತ್ರೋತ್ಕರರಹಿತಂಗೆ ಅಸಹಾಯಂಗೆ ಅತಿಬಳಜಯಮಂ ಅಳವು ದೊರೆಕೊಳಿಸುವೊಲ್: **ಆದಿಪು,** ೧೫. ೧೭)

**ತನುತ್ವಂಬಡೆ** – ಕೃಶವಾಗು (ತನುನಾಮಮಂ ಸಾರ್ಥಕಂ ಮಾಟ್ಪಂತೆ ತನು ತನುತ್ವಂಬಡೆಯೆ: **ರಾಜಶೇವಿ,** ೭. ೯೨ ವ)

**ತನುದಂಡ** – ದೇಹದಂಡನೆ (ಸಮನಿಸೆ ಹಾ ಮಾ ಧಿಗ್ದಂಡಮಯ್ವರಿಂದಾಯ್ತು ಭರತನಿಂ ತನುದಂಡಂ: **ಪಂಪರಾ,** ೧. ೮೯)

**ತನುಭೃದ್ಗಣ** – ಜೀವಸಮೂಹ (ಕ್ಷಣಭಂಗವೃತ್ತಿ ತನುಭೃದ್ಗಣಜವಮಲ್ಲಿ ಸಂಶಯಂ ನೋೞ್ಪೊಡಿತ್ತಣಮಿಲ್ಲ: **ಚಂದ್ರಪ್ರಪು,** ೨. ೨೫)

**ತನುರುಹ** – ಮೈಯ ಕೂದಲು (ತನುರುಹಂ ಅಗೆವೊಯ್ದವೊಲಿರೆ ತನು ತಳ್ತಿರೆ: **ರಾಜಶೇವಿ,** ೧೧. ೧೨೦)

**ತನುವಾತ** – [ಜೈನ] ವಿಶ್ವಾಕಾಶವನ್ನು ಆವರಿಸಿಕೊಂಡಿದ್ದು, ಎಂಟು ಲೋಕಗಳಿಗೆ ಆಧಾರವಾದ ಮೂರು ಅನಿಲಗಳಲ್ಲಿ ಕೊನೆಯದು (ಎಂಟುಂ ಪೊಡವಿಗಳಂ ತಾಳ್ದಿದುವೋಗಡಿಸದೆ ಮೂಱುಂ ಮಹಾನಿಲಂಗಳ್ ಕ್ರಮದಿಂ ಅದರ ಪೆರ್ಗಳುಂ ಘನೋದಧಿ ಘನವಾತ ತನುವಾತಂಗಳೆಂಬುವು: **ಶಾಂತಿಪು,** ೧೨. ೫೧ ವ)

**ತನುವಿತ್ತ** – ಶರೀರ ಮತ್ತು ಹಣ (ತನುವಿತ್ತಮೆಂಬ ಬಿತ್ತಂ ಜಿನಧರ್ಮಕ್ಷೇತ್ರದಲ್ಲಿ .. .. ಬಿತ್ತಿರ್ದು ಅನುಪಮ ಸುಖಮಂ ಬೆಳೆವಂ: **ಸಮಯಪ,** ೧೫. ೯೦)

**ತನೂಜ** – ಮಗ (ಅಂತು ಭರದ್ವಾಜಂ ಆತ್ಮತನೂಜಂಗೆ ಪೆಸರನಿಟ್ಟು ತನ್ನ ಕೆಳೆಯ ಪಾಂಚಾಳದೇಶದರಸು ಪೃಷಪತನೆಂಬಾತನ ಮಗಂ ದ್ರುಪದನುಮಂ ದ್ರೋಣನುಮಂ ಒಡಗೂಡಿ: **ಪಂಪಭಾ,** ೨. ೪೩ ವ)

**ತನೂಜಾತೆ** – ಮಗಳು (ಎನ್ನ ತನಯಂಗೆ ತಕ್ಕಳ್ ನಿನ್ನ ತನೂಜಾತೆ ರೂಪವತಿ ಸೀತೆ ಗಡಾ: **ಪಂಪರಾ,** ೫. ೧೮)

**ತನೂಜೆ** – ತನೂಜಾತೆ (ಉರ್ವರೆಯಂ ಇಳಾತನೂಜೆಯೆನುತ ಅಂತು ಅದಂ ಈಕ್ಷಿಸುವರ್ವನೇಚರರ್: **ಕಾದಂಬ,** ೧. ೯೭)

**ತನೂದರಿ** – ತೆಳುವಾದ ಹೊಟ್ಟೆಯುಳ್ಳವಳು (ಲಲನಾಜನಕ್ಕೆ ತಾನೀ ಲಲನೆ ದಿಟಂ ತಿಲಕಮೆಂದು ವರ್ಣಿಸುತ ಒಲವಿಂ ತಿಲಕಿಸುವ ತೆಱದಿಂ ಒರ್ವಳ್ ತಿಲಕಮನಿಟ್ಟಳ್ ತನೂದರಿಯ ಪೆರೆನೊಸಲೊಳ್: **ಶಾಂತೀಶ್ವಪು,** ೪. ೨೪೨)

**ತನೂಭವ** – ತನೂಜ (ಸುರಿವರಲ ಒಂದು ಬೆಳ್ಸರಿಯದು ಆತ್ಮತನೂಭವನ ಉತ್ತಮಾಂಗದೊಳ್ ದೊರೆಕೊಳೆ: **ಪಂಪಭಾ,** ೫. ೧೦೩)

**ತನೂರುಹ** – ಮೈಗೂದಲು (ಕೇಳ್ದದಂ .. .. ತಾಳ್ದಿ ಮುದಮಂ ತನೂರುಹಂ ಗುಡಿಗಟ್ಟುತ್ತ ಏಳ್ದಿರೆ: **ರಾಜಶೇವಿ,** ೪. ೨೮)

**ತನೆವಂದಿ** – ಗಬ್ಬ ಧರಿಸಿದ ಹಂದಿ (ಪಿಡಿವಂದೀ ತನೆವಂದಿ ಕುರುಡು ಕುಂಟೆಂದದಲಸದಱೆದಂತು: **ಪಂಪಭಾ,** ೫. ೪೬)

**ತನ್ವಂಗಿ** – [ತನು+ಅಂಗಿ] ಕೋಮಲ ಶರೀರೆ (ತನ್ವಂಗಿಗೇಂ ಚೆಲ್ವುವೀಱೆದುವೋ ಮುತ್ತಿನ ಪಚ್ಚಮುಂ ದುಗುಲಮುಂ: **ಜಗನ್ನಾವಿ,** ೨. ೭೨)

**ತನ್ವಿ** – ತನ್ವಂಗಿ (ನಿನ್ನನಾ ತನ್ವಿಯೆತ್ತಂಬಳೆದುತ್ತುಂಗಸ್ತನಂ ಮಾಣ್ದಿರದೆ ಬಳಸಲ್: **ಆದಿಪು,** ೪. ೨೧)

**ತಪ** – ತಪಸ್ಸು (ಬೂದಿ ಜೆಡೆ ಲಕ್ಕಣಂ ತಪಕೆ ಆದುವು ಎರಟಿಸ್ಸೊಣೆ ಶರಾಸನಂ ಕವಚಂ ಇದೆಂತಾದುವೋ ಮುತ್ತುಂ ಮೆಟಿಸುಂ ಕೋದಂತುಟೆ ನಿನ್ನ ತಪದ ಪಾಂಗೆಂತು ಗಡಾ: **ಪಂಪಭಾ,** ೭. ೯೨); ಬೇಸಿಗೆ (ನಿದಾಘಂ ತಪಾಹ್ವಯಂ ಗ್ರೀಷ್ಮಂ: ಅಭಿಧವ, ೧. ೨. ೧೩); [ಜೈನ] ಅನಶನ, ವಿವಿಕ್ತ, ಅವಮೋದರ್ಯ, ವೃತ್ತಿಪರಿಖ್ಯಾನ, ರಸಪರಿತ್ಯಾಗ, ವಿವಿಕ್ತ ಶಯ್ಯಾಸನ, ಕಾಯಕ್ಲೇಶ, ಪ್ರಾಯಶ್ಚಿತ್ತ, ವಿನಯ, ವೈಯಾವೃತ್ತ, ಸ್ವಾಧ್ಯಾಯ, ಉತ್ಸರ್ಗ, ಧ್ಯಾನ ಎಂ ಹನ್ನೆರಡು ಬಗೆಯ ತಪಸಗಳು (ವಸುಷೇಣಂ ಅಗ್ಗಳಿಪ ತಪಮಂ ಕೈಕೊಂಡಂ ಶ್ರೇಯೋ ಮುಮುಕ್ಷುಸಮಕ್ಷದೊಳ್: **ಅನಂತಪು,** ೧೨. ೩೨);

**ತಪಃಪರೀಷಹ** – [ಜೈನ] ತಪಸ್ಸನ್ನು ಮಾಡುವಾಗ ಸಹಿಸಿಕೊಳ್ಳಬೇಕಾದ ತೊಂದರೆಗಳು

**ತಪಃಪೋತ** – ತಪಸ್ಸಿನ ಹಡಗು (ಪೆಂಪುವೆತ್ತ ತಪಃಪೋತದಿನಣ್ಣ ನೀಂ ತಡಿಯನೆಯ್ದು ಅಂತಲ್ಲದಿಂತೀ ಚತುರ್ಗತಿಸಂಸಾರಪಯೋಧಿಯಂ ಪೋಱಮಡಲ್ ಮತ್ತಿಲ್ಲ ನೀನಾರ್ತಪ್ಪೈ: **ಆದಿಪು,** ೩. ೫೬)

**ತಪಃಪ್ರಭಾವ** – ತಪಸ್ಸಿನ ಪರಿಣಾಮಕಾರಿಕತೆ (ಮುನಿಗಣೇಶ್ವರರೊಡನೆ ದಾಳಿವೂಗೊಯ್ವೊಡನೆ ವರ್ಪ ಗೋಳಾಂಗೂಳಂಗಳುಮಂ ನೋಡಿ ತಪೋವನದ ತಪೋಧನರ ತಪಃಪ್ರಭಾವಕ್ಕೆ ಚೋದ್ಯಂಬಟ್ಟು: **ಪಂಪಭಾ,** ೧. ೧೧೫ ವ)

**ತಪನ** – ಸೂರ್ಯ (ಅಂತು ಪರಾಶರನಂದನನ ಉಪದೇಶದೊಳ್ ತಪನಪ್ರಭಂ ತಪಂಗೆಯ್ಯಲ್ ತಗುಳ್ದೊಡೆ: **ಪಂಪಭಾ,** ೭. ೭೯ ವ)

**ತಪನಕರ** – ಬಿಸಿಲು, ಸೂರ್ಯ (ತಪನಕರಂ ತನುಗಳನುರ್ಱ ಪೋಗೆ ಸಾರ್ದತ್ತು ಜಕ್ಕವಕ್ಕಿಯ ಪೋಣರುಂ: **ಆದಿಪು,** ೧೧. ೫೦)

**ತಪನತಪ್ತ** – ಬಿಸಿಲಿನಲ್ಲಿ ಸುಟ್ಟ (ನಿಂದ ಶಿಲೆ ತಪನತಪ್ತಮಿದೆಂದು ಅಂಬುಜನಿಳಯೆ ಪದ್ಮವಿಷ್ಟರಮಂ .. .. ಕೃತೇಚ್ಛಂಗೆ ಪಡೆದು: ಅದಿಪು, ೯. ೮೫)

**ತಪನಸುತ** – ಕರ್ಣ (ತಪನಸುತಂ ಬೇಱೆ ಪೊಲ್ಲದಂ ನುಡಿದನಾವಗಂ ಬಿಸುಟಂ ರಕ್ಷಿಪ ಕಯ್ದುವಂ: **ಗದಾಯು,** ೨. ೨೦)

**ತಪನಾತಪ** – ಸುಡುವ ಬಿಸಿಲು (ತಪನಾತಪದಿಂ ಚೇಷ್ಟಾಕ್ಷಪಣೆಯನೊಳಕೊಂಡು: **ಪಂಪರಾ,** ೭. ೯೫)

**ತಪನಾಸ್ತ್ರ** – ಸೂರ್ಯಾಸ್ತ್ರ (ಇಸೆ ತಮದಂಬಿನಿಂ ತಪನಾಸ್ತ್ರದಿಂ ಅದ್ರಿಬಾಣದಿಂದಿಸೆ ದನುಜಾಧಿಪಂ: **ಪಂಪರಾ,** ೧೪. ೧೬೧)

**ತಪನೀಯ** – ಬಂಗಾರ (ಕಾಯ್ಪಿನುಗ್ರತೆಯಿಂ ಆತಪಂ ಆ ತಪನೀಯ ದೀಧೀತಿಪ್ರಸರಮಂ ಅಕ್ಕಿಸಲ್ ನೆಱೆಯದೆ ಇಂತು ಮಗುಳ್ಚಿದುದು ಎಂಬಿನಂ: **ಶಾಂತೀಶ್ವಪು,** ೧೧. ೩)

**ತಪನೀಯಸೂತ್ರ** – ಚಿನ್ನದ ಎಳೆ (ತಪನೀಯಸೂತ್ರದೊಳ್ .. .. ಬ್ರಹ್ಮಸೂತ್ರಾಭಿಧಾನ ಯಜ್ಞೋಪವೀತದಿಂ ಪವಿತ್ರಗಾತ್ರರ್ಮಾಡಿ: **ಆದಿಪು,** ೧೫. ೧೧ ವ)

**ತಪನೋದಯ** – ಸೂರ್ಯೋದಯ (ರಾಮಭುಜಪ್ರತಾಪ ತಪನೋದಯ ಶೈಲಮುಪಾಂತ ಪರ್ವತಸ್ತೋಮಸಮನ್ವಿತಂ: **ಪಂಪರಾ,** ೧೧. ೧೬೦)

**ತಪನೋಪಲಪುತ್ರಿಕೆ** – ಸೂರ್ಯಕಾಂತ ಶಿಲೆಯ ಪ್ರತಿಮೆ ಬಿಸಿಲೇಱೆದ ತಪನೋಪಲಪುತ್ರಿಕೆಯಂತೆ ಕಾಯ್ದು .. .. ಕೆಳದಿಯ ಬಟೆಸಂದು: **ಲೀಲಾವತಿ,** ೧೪. ೩೩ ವ)

**ತಪಮಾನ್** – [ತಪಂ+ಆನ್] ತಪಸ್ಸನ್ನು ಕೈಗೊಳ್ಳು (ಪೋಗಿ ಇಂದ್ರಕೀಲಕ್ಕೆ ಪೆಂಪಡರ್ದುರ್ದ್ಯತ್ ತಪಮಾಂಪುದೆಂದು ಬೇಸನಿತ್ತಂ: **ಶಬಶಂವಿ,** ೨. ೧೧೬)

**ತಪಶ್ಚರಣ** – ತಪಸ್ಸಿನ ಆಚರಣೆ (ಮಹಾತ್ಮಂ ಸಕಳದುರಿತಹರಣ ಕರಣಕಾರಣ ತಪಶ್ಚರಣ ಪರಿಣತಾಂತರಂಗನಾಗಿ: **ಸುಕುಮಾಚ,** ೧೧. ೮೩ ವ)

**ತಪಸಿ** – ತಪಸ್ವಿ (ಬೆರಲೊಳ್ ಬೀಣೆಯ ತಂತಿಗಳ್ ಒರಸಿದ ಕೆಂಗಲೆಗಳ್ ಅಕ್ಷಮಾಲೆಯೊಳ್ ಎಸೆದಂತಿರೆ ಪೊಸೆಯೆ ಮುತ್ತು ಪವಳಂ ಬೆರಸಿದವೊಲಾಯ್ತು ಚೆನ್ನ ತಪಸಿಯ ಕೆಯ್ಯೊಳ್: **ಪಂಪಭಾ,** ೬. ೧೦)

**ತಪಸ್ಥೆ** – ತಪಸ್ಸಿನಲ್ಲಿ ತೊಡಗಿರುವವಳು ಹನುಮನರಸಿಯರೆಲ್ಲಂ ಸುಮತಿಗಂತಿಯರ ಪಕ್ಕದೊಳ್ ತಪಸ್ಥೆಯರಾದರ್: **ಪಂಪರಾ,** ೧೬. ೪೨ ವ)

**ತಪಸ್ವಿ** – ತಪಸಿ (ಸರಿಗೆಯೊಳ್ ಸಮೆದ ಅಕ್ಷಮಾಲಿಕೆ ಪೊನ್ನ ಮುಂಜಿ ತೊಳಪ್ಪ ಕಪ್ಪುರದ ಭಸ್ಮರಜಃ ತ್ರಿಪುಂಡ್ರಕಂ ಒಪ್ಪೆ ಪಿಂಗಜಟಾಳಿ ತಾವರೆಯ ಸೂತ್ರದೊಳಾದ ಜನ್ನವಿರಂ ದುಕೂಲದ ಕೋವಣಂ ಕರಂ ಒಡಂಬಡೆ ನೋಟಕರ್ಕಳಂ ಆ ತಪಸ್ವಿ ಮರುಳ್ಚಿದಂ: **ಪಂಪಭಾ,** ೬. ೮)

**ತಪಿ** – ತಪನ, ಸೂರ್ಯ (ರವಿ ಮಾರ್ತಂಡಂ ಪತಮಗಂ ತಪಿ ತಪನಂ: **ಅಭಿಧಾವ,** ೧. ೧. ೬೪)

**ತಪೋಧನ** – ತಪಸ್ಸನ್ನೇ ಧನವಾಗುಳ್ಳ ಋಷಿ (ಮುನಿಗಣೇಶ್ವರರೊಡನೆ ದಾಳಿವೂಗೊಯ್ವೊಡನೆ ವರ್ಪ ಗೋಳಾಂಗೂಳಂಗಳುಮಂ ನೋಡಿ ತಪೋವನದ

ತಪೋಧನರ ತಪಃಪ್ರಭಾವಕ್ಕೆ ಚೋದ್ಯಂಬಟ್ಟು: **ಪಂಪಭಾ,** ೧. ೧೧೫ ವ)

**ತಪೋವನ** – ತಪಸ್ಸನ್ನು ಮಾಡುವ ಜಾಗ (ಮುನಿಗಣೇಶ್ವರರೊಡನೆ ದಾಳಿವೂಗೊಯ್ವೊಡನೆ ವರ್ಷ ಗೋಳಾಂಗೂಳಂಗಳುಮಂ ನೋಡಿ ತಪೋವನದ ತಪೋಧನರ ತಪಃಪ್ರಭಾವಕ್ಕೆ ಚೋದ್ಯಂಬಟ್ಟು: **ಪಂಪಭಾ,** ೧. ೧೧೫ ವ)

**ತಪೋವಲ್ಲಿ** – ತಪಸ್ಸೆಂಬ ಬಳ್ಳಿ (ತಪೋವಲ್ಲಿಯೊಳಪ್ಪ ಅನಲ್ಪಸುಖಮೆಲ್ಲಮಂ ಅಲ್ಪಸುಖಕ್ಕೆ ಮಾಱೆ ಬಂದಿಲ್ಲಿ.. .. ಮಹಾಬಳನಾಗಿ ಪುಟ್ಟಿದಂ: **ಆದಿಪು,** ೨. ೪೨)

**ತಪ್ತತಪನೀಯಚ್ಛಾಯ** – ಪುಟವಿಟ್ಟ ಚಿನ್ನದ ಮಿರುಗು (ಚೈತ್ಯಾಲಯಂಗಳಂ ಅರ್ಚಿಸಿ ತಪ್ತತಪನೀಯಚ್ಛಾಯನುಂ ಸಪ್ತಹಸ್ತೋಚ್ಛ್ರಯನುಂ: **ಆದಿಪು,** ೨. ೬೯ ವ)

**ತಪ್ತಾಯಃಪುತ್ರಿಕಾಲಿಂಗನ** – ಕಾದ ಕಬ್ಬಿಣದ ಪ್ರತಿಮೆಯನ್ನು ಅಪ್ಪುವುದು (ತಪ್ತಾಯಃಪುತ್ರಿಕಾಲಿಂಗನದೊಳಂ ಅತಿಕರಾಳ ಶೂಲಾರೋಹಣದೊಳಂ: **ಅಜಿತಪು,** ೧೧. ೧೧ ವ)

**ತಪ್ತಾಯಸ** – ಕಾದ ಕಬ್ಬಿಣ (ಸಿತಕರ್ಷಪಂಗಳನಿಟೆಯೆ ಸುರಿವುದುಂ ತಪ್ತಾಯಃಕಟಾಹಪತಿತ ಲಾಜಃಪುಂಜದಂತೆ ದೆಸೆದೆಸೆಗೆ ಚಿಳಿಲ್ ಚಿಳಿಲೆನೆ ಸಿಡಿಲ್ದು: **ಅಜಿತಪು,** ೧೦. ೫೩ ವ)

**ತಪ್ತಾಯಸರಸ** – ಕಾದ ಕಬ್ಬಿಣದ ದ್ರವ (ನಾಯಕಸಾರವೊಲಿದು ಕಡುಸೀಯೆನೆ ಕುಡಿಯೆಂದು ತಂದು ಕುಡಿಯಿಸುವರ್ ತಪ್ತಾಯಸರಸಮಂ ಬಸನಿಗಪಾಯಂ ಭವಭವದೊಳ್ ಎಂದುಂ ಏಂ ಕುಂದುಗುಮೇ: **ಶಾಂತಿಪು,** ೭. ೯೭)

**ತಪ್ಪ** – ಕೊನೆಗಾಣುವ (ಜಱೋಡಿಸುಗುಂ ತಪ್ಪ ದಿವಸಂ ಎಂತಪ್ಪರುಮಂ: **ಮಲ್ಲಿನಾಪು,** ೭. ೬೬)

**ತಪ್ಪಡಿ** – ದಾಪುಗಾಲು (ತಪ್ಪಡಿಯಂ ಅಷ್ಟೋತ್ತರಶತಪ್ರಮಿತಮಂ ಮಱೆಯದೆ ನೆಱೆ ಇಟ್ಟು ಅಲ್ಲಿ ನಿಲ್ಲಿಂ: **ಕರ್ಣನೇಮಿ,** ೩. ೧೫೯ ವ)

**ತಪ್ಪುದು** – [√ತವು] ಕ್ಷಯವಾಯಿತು (ಉದಗ್ರಲೋಭವಶದಿಂ ತನ್ನುಂಡದುಂ ತಪ್ಪುದು ಎಂದು ಅಳವಂ ಮಾಣಿಸಿ: **ಆದಿಪು,** ೨. ೧೫)

**ತಮ** – ತಮೋಗುಣ (ಸತ್ವಂ ಸಾತ್ವಿಕಗುಣಕೆ ಮಹಾತ್ಯಾಗಂ ರಾಜಸಕ್ಕೆ ವಿಕ್ರಮಧಿಕೋದ್ಧತ್ಯಂ ತಮಕ್ಕೆ ನೆಲೆಯಾಯ್ತತ್ಯಂತಂ ನೃಪನಿದೇಂ ತ್ರಿಮೂರ್ತ್ಯಾತ್ಮಕನೋ: **ಪುಷ್ಪದಂಪು,** ೩. ೬); ಕತ್ತಲೆ (ತಮಂ ತಲೆಯನೆತ್ತದಂತು ಮಸುಳ್ವಂತು ಸೂರ್ಯೇಂದುಗಳ್ ಸಮಸ್ತ ಮಣಿಕೂಟ ಕೋಟಿಗಳ ಕಾಂತಿಗಳ್ ಸಂತತಂ ನಿಮಿರ್ಕೆವಡೆದೊಪ್ಪೆ: **ಲೀಲಾವತಿ,** ೮. ೭೧) ಅಜ್ಞಾನ (ಏನಂ ಮಾಡುವೆಂ ಎಂದು ಆಂದೋಳಮನಾಡೆ ಮನಂ ತಮಮಂ ಅಪ್ಪುಕಯ್ದನಿಳೇಶಂ: **ಯಶೋಧಚ,** ೩. ೨೨)

**ತಮಂಗಮಂಟಪ** – ಸಭಾಂಗಣ (ತಮಂಗಮಂಟಪದ ಮತ್ತವಾರಣದ ಕೆಲಕ್ಕೆ ಮತ್ತವಾರಣಮಂ ಸಾರ್ಚಿ: **ಅನಂತಪು,** ೨. ೨೯ ವ)

**ತಮಃಪಟ** – ಕತ್ತಲ ರಾಶಿ (ಬೆಸಗೊಳೆ ದಶನದ್ಯುತಿ ದೆಸೆದೆಸೆಯ ತಮಃಪಟಮಂ ಉಗಿಪಟಂಗೊಳೆ ದೇವಂ ಬೆಸಸಿದನಾ ಕನ್ನೆಗೆ ಪಸರಿಸೆ ಚಿತ್ತವಿಶೋಧಿ ಬೋಧಿಪರಿಣಾಂಗಳ್: **ಶಾಂತಿಪು,** ೪. ೬೫)

**ತಮಪ್ರಭೆ** – [ಜೈನ] ಒಂದು ನರಕ (ಅಲ್ಲಿಂ ಕೆಟಗೇಕರಜ್ಜು ಪ್ರಮಾಣಾಂತರದೊಳಮಘವಿಯೆಂಬ ಪೆಸರ ತಮಪ್ರಭೆಯೆಂಬ ಆಱನೆಯ ನರಕಮಿರ್ಪುದು: **ಅಜಿತಪು,** ೧೧. ೬ ವ)

**ತಮದೊಡ್ಡು** – ಕತ್ತಲ ರಾಶಿ (ಮುಗಿಯೆ ಖಳನಾಂಬುಜಮುಂ ಅಂಬುಜಮುಂ ತಮದೊಡ್ಡುಗೆಟ್ಟು ತಾನುಗಿಯೆ ಕರಂಗಳಂ: **ಅಜಿತಪು,** ೬. ೪೦)

**ತಮಸೃಣ** – ಪ್ರಕಾಶಮಾನ (ಮನೋಲಕ್ಷ್ಯ ತಮಸೃಣ ದರಸ್ಮೇರನೇತ್ರಪ್ರಸೂನಾಯುಧಂ .. .. ಮನ್ಮಥಂ ದಿವ್ಯರೂಪಂ: **ಲೀಲಾವತಿ,** ೧. ೨)

**ತಮಸ್ತಮ** – ಗಾಢ ಕತ್ತಲೆ (ಮಿಥ್ಯಾತ್ವ ತಮಸ್ತಮಮಂ ಅಕಳಂಕದೇವ ಪ್ರಮಾಣರತ್ನಪ್ರದೀಪರಶ್ಮಿಕಳಾಪಂ: **ಆದಿಪು,** ೧. ೧೬)

**ತಮಸ್ವಿನಿ** – ರಾತ್ರಿ (ವಿಷಮಬಾಣನ ತೀವ್ರ ಶರಾನಳಾರ್ಚಿಗಳ್ ತಗುಳ್ದುವು ಎನಲ್ಕೆ ತೋರ್ಪುವು ತಮಸ್ವಿನಿಗಳ್: **ಕಾದಂಬ,** ೨. ೧೩)

**ತಮಾಲ** – ಹೊಂಗೆಯ ಮರ (ತಮಾಲಪಾದಪದ ಪಲ್ಲವಮಂ ಪಿಱಿದೊಂದು ನಿರ್ಮಲೋಪಲತಲದಲ್ಲಿ : **ಕಾದಂಸಂ,** ೪. ೩೫)

**ತಮಾಲ ಪ್ರವಾಳ** – ಹೊಂಗೆಯ ಚಿಗುರು (ಮಲಯರುಹ ಗಂಧಿ ಮೃಗಮದ ತಿಲಕೆ ತಮಾಲ ಪ್ರವಾಳ ಕುಂತಲೆ ಪುಳಿನಸ್ಥಲ ವಿಪುಲ ಜಘನೆ ಮದಗಜ ವಿಲಾಸವತಿ ವನಲತಾಂಗಿ ಕಣ್ಗೆಸೆದಿರ್ದಳ್: **ಪಂಪರಾ,** ೭. ೧೨೪)

**ತಮಾಳ** – ಹೊಂಗೆ (ಪಿರಿದುಂ ಬನ್ನದ ಕರ್ಪೆಸೆದುದು ತೊಱೆಗಿನ್ನುಂ ಹರಗಳ ತಮಾಳ ನೀಳಚ್ಛವಿಯಂ: **ಪಂಪಭಾ,** ೫. ೫೪)

**ತಮಾಳಪಲ್ಲವ** – ಹೊಂಗೆಯ ಚಿಗುರು (ಪೊಂಗೊಡನಂ ತಮಾಳಪಲ್ಲವದೊಳೆ ಮುಚ್ಚಿದಂದದೊಳೆ ಚೂಚುಕಮಾಂತುದು ಕರ್ಪನಾಕೆಯಾ: **ಪಂಪಭಾ,** ೧. ೧೨೫)

**ತಮಿಸ್ರ** – ಕತ್ತಲೆ (ಈ ಕಲಿಕಾಲದೆ ಮಿಥ್ಯಾವ್ರತ ತಮಿಸ್ರರಪ್ಪ ಜನಾವಳಿಗಳ ನಡುವೆ ಬೆಳಗುತಿರ್ಪರ್ ಜೈನರ್: **ಸಮಯಪ,** ೬. ೮೮)

**ತಮೋಧಿ** – ಕತ್ತಲ ಮೊತ್ತ (ತಮೋಧೀಯಂ ಕಿಡಿಸದಂ ಸೌಜನ್ಯಕಂದಾಂಕುರಂ: **ಶಾಂತಿಪು,** ೧೧. ೧೧೪)

**ತಮೋರಿ** – [ತಮಃ+ಅರಿ] ಕತ್ತಲ ಶತ್ರು, ಸೂರ್ಯ (ಕುರುರಾಜೋಗ್ರ ತಮಸ್ತಮೋರಿ ಕುರುರಾಜೇಭೇಂದ್ರ ಕಂಠೀರವಂ: **ಗದಾಯು,** ೧. ೭೪)

**ತಮೋಹರ** – ಕತ್ತಲ [ಅಜ್ಞಾನದ] ನಿವಾರಣೆ; ಸೂರ್ಯ (ಶರದದ ಚಂದ್ರನಂ ವಿಮಲಚಂದ್ರಿಕೆ ಬಾಳದಿನೇಶನಂ ತಮೋಹರಕಿರಣಂ ಕಿಶೋರಹರಿಯಂ ನವಕೇಸರರಾಜಿ .. .. ಮೊರ್ದೆ: **ಪಂಪಭಾ,** ೨. ೩೯)

**ತಮ್ಮ** – ಕಿರಿಯ ಸಹೋದರ (ಆ ಕೂಸೆಂಬುದು ನಿಮ್ಮ ತಮ್ಮನಪ್ಪ ವಾಯುಭೂತಿಯ ಜೀವಂ: **ವಡ್ಡಾರಾ,** ಪು. ೧೦, ಸಾ. ೧); ತಾವು (ತಮ್ಮ ಕೊಂಡು ಪೋದ ಭಂಡಮಂ ಮಾಱೆ ಪೆಱದಂ ತಮ್ಮ ನಾಟ್ಕೆ ಅಪೂರ್ವಮಪ್ಪ ಭಂಡಮಂ ತೀವಿಕೊಂಡು .. .. ಬಂದಿರ್ದರ್: **ವಡ್ಡಾರಾ,** ಪು ೭೧, ಸಾ ೨೫)

**ತಮ್ಮಡಿ** – ಗುರು, ಯಜಮಾನ ("ತಮ್ಮಡಿಗೆ ಮೊಱೆವ ಶ್ವಾನಂ ದಮ್ಮಿಯನೇಕೆ ಬಾಟಲಿತ್ತಪುದು" ಎಂಬಂತೆ: **ಪಂಚತಂತ್ರ,** ೨೪೩ ವ)

**ತರ** – ಕ್ರಮ (ತಳಿರ್ಗಳಿಱುಂಬಿನಲ್ಲಿ ತರದೆ ಪೇೞಿದ ಕೃಷ್ಣಮೃಗಾಜಿನಂಗಳಿಂ .. .. ತೋೞಿದುವಾಗಳ್ ಅಶೋಕಭೂರುಹಂ: **ಕಾದಂಸಂ,** ೧. ೭೩); ಸಾಲು ತರದಿಂದಂ ಬೆಳ್ಮುಗಿಲ್ ಒಗೆದುದೆನಲ್ ತೋರ್ಪ ಸೌಧಂಗಳೊಳ್; **ಕಾದಂಬ,** ೨. ೧೨); ವೇಗ, ತ್ವರಿತ (ತರದೇಂ ಬರ್ಪುದೆ ತೊಟ್ಟನಿಲ್ಲಿಗೆ ಮಹೀಭೃತ್ಕಂತುವಂ ದೇವಿ ಮೆಯ್ಗಿರೆದಾತಂ ಬರವೇಟ್ಕುಂ: **ಕುಸುಮಾಕಾ,** ೩. ೯೭)

**ತರಂಗ** – ಅಲೆ (ದಳಿತ ತರುಣಾಂಬುರುಹಂ ಉಚ್ಚಳಿತ ತರಂಗಪ್ರಪಾತದಿಂ ಚಲಿಯಿಪ ಪಾಂಗಳವಡೆ .. .. ಲಾವಣ್ಯ ರಸಾವಿಳಂ: **ರಾಜಶೇವಿ,** ೧೨. ೭೪); ಮೈಯ ಸುಕ್ಕು (ಸಂಗತತರಂಗಯುತೆಯಂ ಮಂಗಳಲಕ್ಷಣೆಯಂ ಅಂದು ಭೋಮಕನೆ ಕಂಡಂ ಗಂಗಾಂಗನೆಯಂ ಕಾಣ್ಬವೊಲ್ ಅಗನ್ನೃಪಂ ಮುಂದೆ ನಿಂದ ಕೊಂತಿಯನಾಗಳ್: **ಪಂಪಭಾ,** ೯. ೭೩)

**ತರಂಗಿಣಿ** – ಅಲೆಗಳಿಂದ ಕೂಡಿದುದು, ನದಿ (ಮದೋದ್ಧತ ಮಕುಟಬದ್ಧಚೂಡಾಮಣಿಕಿರಣಚರಣ ಆಲಕ್ತಿಕ ರಾಗಮುಂ ಸೀತಾತರಂಗಿಣೀ ತರಂಗೋತ್ತರೆಯುಂ: .. .. ತನಗೆ ಸಹಜಾಭರಣಮಾಗೆ: **ಮಲ್ಲಿನಾಪು,** ೩. ೨೧ ವ)

**ತರಂತರ** – ಮೇಲಿಂದ ಮೇಲೆ (ತರಂತರದೊಳೆ ಪಾಯ್ದು ಕೂರ್ಗಣೆಗಳಂ ತಱಿದೊಟ್ಟಿ ತೆರಳ್ಚಿ ತೂಳ್ದಿಕೊಂಡು ಎರೆದು ಮಗುಟ್ಚಿ ಸಣ್ಣಿಸಿದಂ ಆಂತ ಚತುರ್ಬಲಮಂ ಗುಣಾರ್ಣವಂ: **ಪಂಪಭಾ,** ೧೧. ೧೪೭)

**ತರಕ್ಷು** – ಕಿರುಬ; ಹುಲಿ (ವಟವಿಟಪಿಯ ಕೆಟಗೆ ತರುಣ ಹರಿಣ ವೃಕ ವರಾಹ ಋಕ್ಷ ತರಕ್ಷು ಪ್ರಮುಖನಿಖಿಲಮೃಗಗಣ ಪರಿವೃತನುಂ ಆಗಿ: **ಪಂಚತಂತ್ರ,** ೮೧ ವ)

**ತರಜೆಗತ್ತರಿ** – ಕುದುರೆಗೆ ತೊಡಸುವ ಒಂದು ಆಭರಣ (ಗರ್ಗರದ ತರಜೆಗತ್ತರಿಯ ಪೊರ್ಕುಳ ಘಂಟೆಯ .. .. ತುರಂಗಸಂಘಾತದಿಂ: **ರಾಜಶೇವಿ,** ೬. ೧೧ ವ)

**ತರಟು** – ತಲೆಬೋಳಾಗು (ಆ ದಿವಿಜಾಧಿಪನೆ ಬೆಸಸೆ ಪೂವಂ ದೇವಂಗೆ ಆದರದಿಂ ಅಡಕಿ ತಲೆ ತರಟಾದುವು ಶತಧಾರಿಯಾಗೆ ಬರೆ ಸುರವಟುಕರ್: **ಅಜಿತಪು,** ೫. ೭೫)

**ತರಟ್ಟು** – ತರಟು (ನಾವಿದಂ ಕನ್ನೆಯ ಪುರ್ವಂ ನೊಸಲುಮಂ ಸಮೆದಾಗಳ್ ಆ ಪುರ್ವುಂ ಬೋಟಿಪುರ್ವಾಗೆ ನಿಸಲುಂ ತರಟ್ಟಿನಂತಾಗೆ: **ಹರಿವಂಶ,** ೯. ೭ ವ)

**ತರಣ** – [ತ್ರಾಣ] ಶಕ್ತಿ (ಅಕಾರದ ಮುಂದಣ ದೀರ್ಘಕ್ಕೆ ಹ್ರಸ್ವಂ: ಪ್ರಾಣಂ–ಹರಣಂ, ತ್ರಾಸಂ–ತರಿಸಂ, ತ್ರಾಣಂ–ತರಣಂ: **ಶಬ್ದಮದ,** ೨೬೮ ಪ್ರ)

**ತರಣದ್ರೋಣಿ** – ದಾಟಿಸುವ ದೋಣಿ (ದುರಿತವ್ರಾತಲತಾಕೃಪಾಣಿ ವಿಸರದ್ದುರ್ಬೋಧರೋಧಸ್ವನೀ ತರಣದ್ರೋಣಿ .. .. ತಾಳ್ದಿರ್ಕೆ ವಿಸ್ತರದಿಂ ವಾಣೀ ಮದೀಯ ಮಾನಿತಮುಖಶ್ರೀಯೊಳ್: **ಚಂದ್ರಪ್ರಪು,** ೧. ೧೨)

**ತರಣಿ** – ಸೂರ್ಯ (ಸಂಸಾರಸಾಗರ ಸಮುತ್ತರಣ ತರಣಿಯುಂ ನಿಜಗುಣತಾಮರಸ ತರಣಿಯುಂ ಎನಿಪ ಪರಮ ತಪಸ್ಸರಣಿಯಂ .. .. ಎಯ್ದುವ ಉದ್ಯೋಗಮಂ: **ಆಚವರ್ಧ,** ೨. ೬೩ ವ); ದೋಣಿ (ತರಣಿ ಬಹಿತ್ರಮುಂ ಇನನುಂ: **ಅಭಿಧಾವ,** ೩. ೧. ೧೭)

**ತರಣಿಜ** – ಸೂರ್ಯನ ಮಗ, ಯಮ (ಸ್ಮರಹರ ಪುರಹರ ತರಣಿಜಹರ ಗಂಗಾಧರ: **ತ್ರಿಷಷ್ಟಿಪು,** ೨೦. ೧೭); ಕರ್ಣ (ತರಣಿಜನಂತೆ ದಾನಗುಣದಿಂ ರಘುವಂಶಜನಂತೆ ಸತ್ಯದಿಂ ಸರಸಿಜನೇತ್ರನಂತೆ ಶಿವಭಕ್ತಿಯಿಂ: **ತ್ರಿಷಷ್ಟಿಪು,** ೯. ೫)

**ತರತರ** – ಸಾಲು ಸಾಲು (ಓಗಡಿಸದೆ ನಡೆದುದು ಬಲಸಾಗರಂ ಆ ಸಾಗರಂಬರಂ ತರತರದಿಂ: **ಆದಿಪು,** ೧೨. ೬೪)

**ತರತ್ತರಂಗೆ** – ಚಲಿಸುವ ಅಲೆಗಳುಳ್ಳ [ನದಿ] (ಪುಚ್ಚವಣಂ ನೋಡುವೆನೆನ್ನೆಚ್ಚೆಯೊಳೀ ಮುನಿಯ ವರದ ಮಹಿಮೆಯಂ ಎನುತ ಅಂದು ಉಚ್ಚಸ್ತನಿ ಗಂಗೆಗೆ ಶಫರ ಉಚ್ಚಳಿತ ತರತ್ತರಂಗೆಗೆ ಒರ್ವಳೆ ಬಂದಳ್: **ಪಂಪಭಾ,** ೧. ೯೦)

**ತರತ್ತರಳ** – ಚಲಿಸುವ, ಚಂಚಲ (ಸುಲಿಪಲ್ ಮಿಂಚಿನ ಗೊಂಚಲುಟ್ಟ ದುಗುಲಂ ಗಂಗಾನದೀಫೇನಂ ಉಜ್ಜ್ವಲಮುಕ್ತಾಭರಣಂ ತರತ್ತರಳ ತಾರೋದಾರ ಭಾ ಭಾರಂ.. ..ಕಣ್ಗೊಪ್ಪಿತಾ ಕಾಂತೆಯಾ: **ಪಂಪಭಾ,** ೧. ೧೩೭)

**ತರದಿಂ** – ಕ್ರಮವಾಗಿ (ತಣ್ಣೇಟಲ ಚಂದ್ರೇಂದ್ರಾಶ್ಮಪೀಠಂಗಳೊಳ್ ತರದಿಂ ಮಂಡಿಸಿ ನೋಡುವ .. .. ನಾನಾ ಲೀಲೆ ಕೆಯ್ಗಣ್ಮೆ: **ಶಬರಶಂ,** ೧. ೪೮)

**ತರಲಾಡು** – ತುಯ್ದಾಡು (ಮೀಯಲ್ ಉಜ್ಜುಗಿಸುವ ಸೌಧಮೆಂದು ತರಲಾಡಿಪ ಮುಗ್ಧವಧೂಜನಂಗಳಂ: **ತ್ರಿಷಷ್ಟಿಪು,** ೨೪. ೧೩೯)

**ತರವಾರಿ** – ಕತ್ತಿ (ಜಾನುದಘ್ನವಾದುವು ತರವಾರಿಯಿಂದಿಱಿಯೆ ಲೋಹಿತವಾರಿಗಳಾಸವಾರಿಗಳ್: **ಪಂಪರಾ,** ೧೩. ೬೧)

**ತರಸಾದಂ** – ನೈರುತ್ಯ ದೇವತೆ (ತರಸಾದಂ ಯಾದವೋದಂ ವರುಣಂ ಎರಲೆಯಂ ವಾಯು ಪಾಱಂ .. .. ಆರ್ದು ಏಱೆಯುಂ: **ನೇಮಿನಾಪು,** ೬. ೫೭)

**ತರಸ್ವಿ** – ಗರುಡ (ತರಸ್ವಿಗಳ್ ಬಡಗಣಿಂ ತೆಂಕಣ್ಗೆ ಮೇಣ್ ತೆಂಕಣಿಂ ಬಡಗಣ್ಗೆ .. .. ತಾಂ ಪಾಱಲಾರ್ಪೊಡೆ: **ನೇಮಿನಾಪು,** ೩. ೫)

**ತರಹರಿಸು** – ಸಹಿಸಿಕೊ (ಎಟವಿ ಮಱಿಪಿಕ್ಕಿ ಕಳಲುಂ ಕೆಟಗಂ ತರಹರಿಸಿಕೊಳಲುಂ .. .. ಆಱದೆ ಅಸುರಂ ನೆಟಿಲೊಳ್ ಪೊಣರ್ವಂತೆ ಪೋರ್ದು ಕಟಿಯೆ ಬಟಿಲ್ದಂ: **ನೇಮಿನಾಪು,** ೮. ೧೦೨)

**ತರಳ** – ಉಜ್ವಲ (ತಾರಾತರಳಮುಕ್ತಾಫಳ ಲಂಬಲಂಬೂಷ ಭೂಷಿತಮುಂ: **ಆದಿಪು,** ೭. ೭೬ ವ); ಚಂಚಲ (ಮುನ್ನಿದಿರೇಟ್ ತಾಂ ಬಟಿಕ್ಕ ಇರದೆಟ್ದಳ್ ತರಳನಯನೆ ಸಂಭ್ರಮದಿಂದಂ: **ಕಾದಂಸಂ,** ೫. ೨೨)

**ತರಳತರ** – ತುಂಬ ಉಜ್ವಲವಾದ (ತರಳತರವೃತ್ತಮೌಕ್ತಿಕ ಪರಿಕರಂ ಏಕಾಂತಕಾಂತಮೆಕ್ಕಾವಳಿ ಕಂಧರದೊಳ್ ಅಮರ್ದೆಸೆಯೆ: **ಆದಿಪು,** ೪. ೩೭); ಚಂಚಲವಾದ (ತರಳತರಲೋಚನಂ ನಿರ್ಭರರಾಗರಸಂ ಮುಖಾರವಿಂದಂ ನಿಮ್ಮ ದೊರೆಕೊಳಿಸಿದೊಸಗೆಯೇಂ ಬಂಧುರಮೆಂಬುದು: **ಕವಿರಾಮಾ,** ೩. ೧೬)

**ತರಳತಾರನೇತ್ರ** – ಚಂಚಲ ಹಾಗೂ ಕಾಂತಿಯುಕ್ತ ಕಣ್ಣು (ಪುಂಡರೀಕಾಕ್ಷವದನ ವಿನ್ಯಸ್ತ ನಿರಸ್ತ ತರಳತಾರನೇತ್ರರುಂ ನಿಸ್ಸಂಜ್ಞ ತ್ರಿಸಂಜ್ಞಗಾತ್ರರುಂ ಆಗೆ: **ಜಗನ್ನಾವಿ,** ೩. ೯೪ ವ)

**ತರಳತೆ –** ಚಾಂಚಲ್ಯ (ಮತ್ತಿನ ಮಿಥ್ಯಾಜ್ಞಾನಿವೋಲ್ ನೀಂ ತರಳತೆವೆರಸಿಂತೇಕೆ ವಿಭ್ರಾಮತನಪ್ಪೈ: **ಆದಿಪು,** ೩. ೭)

**ತರಳನಯನೆ –** ಚಂಚಲ ಕಣ್ಣಿನವಳು (ಮುನ್ನಿದಿರೇಟಿ ತಾಂ ಬಟಿಕ್ಕ ಇರದೆಟ್ಟಿಳ್ ತರಳನಯನೆ ಸಂಭ್ರಮದಿಂದಂ: **ಕಾದಂಸಂ,** ೫. ೨೨)

**ತರಳಾಪಾಘ –** ಚಂಚಲವಾದ ಕುಡಿನೋಟ (ತರಳಾಪಾಂಗಮುಂ ಆಕೆಯ ದರಹಸಿತಮುಂ ಅಟಿಯೆ ಪೇಟ್ಟುಮೆಱಕವಂ ಎರ್ದೆಯೊಳ್: **ಕವಿರಾಮಾ,** ೩. ೧೮೯)

**ತರಳಿತ –** ಅದುರುತ್ತಿರುವ (ಚಳತ್ ಭ್ರೂಲತಾಗ್ರ ವಿಭಾಗೋತ್ಕಟತರ್ಜನಂ ತರಳಿತ ಆತಾಮ್ರಾಧರಂ ಚಕ್ರಿಗಿತ್ತುವಲಂಪಂ: **ಆದಿಪು,** ೧೨. ೪೭)

**ತರಿಸು –** ತರುವಂತೆ ಮಾಡು (ಸಂಭೋಗಿಸುತಿಪ್ಪಲ್ಲಿಗೆ ಅಗ್ನಿ ಬರೆ ನಾಣ್ಚಿಕೆಯಿಂದ ಆ ಗಿರಿಜೆ ಪೋಗೆ ತರಿಸಿದಂ ಆಗಳೆ ಷಣ್ಮುಖನಿಂ: **ಸಮಯಪ,** ೮. ೫೪)

**ತರಿಯಿಸು –** ದಾಟು (ಭವಾಬ್ಧಿಯಂ ಕ್ರಮದಿಂದಂ ತರಿಯಿಸಿ ಗಳಿತಾಖಿಳಕರ್ಮರಜಸನಿಂ ಕಡೆಯ ತೀರ್ಥಕರನಾದಪ್ಪಂ: **ಆಚವರ್ಧ,** ೧೦. ೪೬)

**ತರುಕೋಟರ –** ಮರದ ಪೊಟರೆ (ಗಿರಿಗುಹಾದ್ವಾರಂಗಳೊಳಂ ತರುಕೋಟರ ಕುಟೀರಂಗಳೊಳಮಿಡಿದಿಡಿದು ತೀವಿ ಬಟಿಕ್ಕೆ ಕೊಳ್ಳಿಗಳನಲ್ಲಿಗಲ್ಲಿಗೆ ತಗುಳ್ಚುವುದುಂ: **ಪಂಚತಂತ್ರ,** ೩೭೬ ವ)

**ತರುಚರ –** ಕೋತಿ (ಪುರಜನಮುಂ ಪರಿಜನಮುಂ ಪರಿತಂದು ತರುಚರಂಗಳಂ ನಿರವಶೇಷಗಳಂ ಮಾಡಿ ಕೊಂದರ್: **ಪಂಚತಂತ್ರ,** ೨೪೪ ವ)

**ತರುಜಾತ –** ತೋಪು (ಪಾತಾಳವರಂ ಸ್ವಾಚ್ಛ ಗುಣಾತಿಶಯದ ಕಾಣಲೆಯ್ದೆ ಬಂದಪುದೆಂಬೀ ಮಾತನೊದವಿಪುದು ತಟ ತರುಜಾತ ಪ್ರತಿಬಿಂಬವಿಸರವಂತಾ ಸರದೊಳ್: **ಚಂದ್ರಪ್ರಪು,** ೫. ೩೯)

**ತರುಣ –** ಎಳೆಯದಾದ (ತಮ್ಮೊಡನೆ ನಲಿದಾಡುವ ಕಿಶೋರಕೇಸರಿಗಳಂ ತೆಗೆವ ಕರಿಕಳಭಂಗಳುಮಂ ಆ ಪಟುವಂಗಳಿಂದೆ ಪಾಯ್ವ ಪುಲಿಗಳ ಮಱಿಗಳೊಳ್ ಪರಿದಾಡುವ ತರುಣ ಹರಿಣಂಗಳುಮಂ: **ಪಂಪಭಾ,** ೧. ೧೧೫ ವ); ಹರೆಯದವನು ತರುಣಂ ತಾನಿವನೊರ್ಬ ಮರ್ತ್ಯನೆನೆ ನೋಡಿನ್ನುಂಟೆ ಮರ್ತ್ಯಂಗೆ ಬಿತ್ತರಿಪೀ ರೂಪ ವಿಳಾಸಂ ಈ ವಿಪುಳ ಬಾಹಾಶೌರ್ಯಂ: **ಕುಸುಮಾಕಾ,** ೧೧. ೧೦೬)

**ತರುಣವೃಷ –** ಪ್ರಾಯದ ಹೋರಿ (ತರುಣವೃಷಂ ಕೆಲೆದು ತೊಟಲ್ತರೆ ಕಂಡುದಱಿಂದೆ ಜೈನದೀಕ್ಷೆಗೆ ಮೆಯ್ಯಂ ತರುಣಜನಂಗಳೆ ತರ್ಪರ್: **ಆದಿಪು,** ೧೫. ೪೪)

**ತರುಣಾರ್ಕ –** ಬಾಲಸೂರ್ಯ (ಕಿಡಿ ಕಿಱಿದಾದೊಡಂ ಸುಡದೆ ಕಾನನಮಂ ತರುಣಾರ್ಕನಾದೊಡಂ ಕಿಡಿಸನೆ ತೀವ್ರಮಪ್ಪ ತಮಮಂ: **ಪಂಪರಾ,** ೪. ೪೮)

**ತರುವಲಿ –** ಹುಡುಗ (ಕರುಣದಿಂ ಎಮ್ಮಂ ತಾಯ್ವೊಲ್ ತರುವಲಿಗಳಂ ಎಯ್ದೆ ನಡಪಿದ ಅಜ್ಜರ್ ನೀಂ: **ಪಂಪಭಾ,** ೧೧. ೪೮); ತಬ್ಬಲಿ (ಕರುಣದಿಂ ಎಮ್ಮಂ ತಾಯ್ವೋಲ್ ತರುವಲಿಗಳಂ ಎಯ್ದೆ ನಡೆಪಿದಜ್ಜರ್ ನೀಮಿಂತಿರೆಯುಂ ನೋಡಿದೆವು ಏನೆಮಗರಸಿಕೆಯೋ ಪೇಟಿಮೆಂದು ಶೋಂಕಂಗೆಯ್ದರ್: **ಪಂಪಭಾ,** ೧೧. ೪೮)

**ತರುಶಿಫೆ –** ಬಿಳಲು (ಅಂತೆಯ್ದಿ ತರುಶಿಫೆಯಂ ಪಿಡಿದು ಅಡರ್ವನಂ ಅಲ್ಲಿರ್ಪುದೊಂದು ಕಪಿ ಕಂಡು ಬೇಗಂ ಇದಿರಂ ಬಂದು ಅಂಜದಿರೆಂದು ಕೈಯಂ ಪಿಡಿದು ತೆಗೆವುದುಂ: **ಪಂಚತಂತ್ರ,** ೧೭೭ ವ)

**ತರುಸಾರ –** ನೆಯ್ಗೆಯ ಕೆಲಸ ಹಾಗೂ ಮರದ ಚೇಗು, ತಿರುಳು (ತಂತುವಾಯ ಕ್ರಿಯಾಯಾಂ, ತನುಸಾರೇ ಚ : **ಶಬ್ದಮದ, ಧಾ** ೧೭೮)

**ತರ್ಕಯಿಸು –** ಅಪ್ಪಿಕೊ (ತನ್ನಿಪ್ಪತ್ತು ತೋಳುಗಳಿಂದ ಆ ಗಿರಿಯಂ ತರ್ಕಯಿಸಿ ಅಲ್ಲಾಡೆ ಗಿರಿಜೆ ನಡುಗಿ: **ಧರ್ಮಪ,** ೯. ೩೯ ವ)

**ತರ್ಕೈಸು –** ತಕ್ಕೈಸು, ಅಪ್ಪಿಕೊ (ಅನೇಕಭೋಗಭಾಗಿಯಾಗೆಂದು ಪರಸಿ ಪಿರಿದುಂ ಅಟ್ಟಿಱಿನೊಳ್ ತರ್ಕೈಸಿಕೊಂಡು: **ಆದಿಪು,** ೪. ೨೪ ವ)

**ತರ್ಗು –** ತಗ್ಗು, ಕೆಳಕ್ಕೆ ಇಳಿ (ಆಗಡೆ ಕಟ್ಟಿ ಕುಸಿದು ಕುಸಿದಡಿ ಮಿಡುಕದೆ ಸುಗಿದಗಿದು ಮುರ್ಗಿ ತರ್ಗುವ ಪದದೊಳ್: **ಸುಕುಮಾಚ,** ೫. ೧೪)

**ತರ್ಜನ –** ನಿಂದನೆ; ಹೆದರಿಸುವುದು (ಬಾರಿಪ ನಿಮ್ಮ ತರ್ಜನದಿನೀ ಜನದೊಂದುಲಿ ಮಾಣ್ಗೆ: **ಪುಷ್ಪದಂಪು,** ೭. ೩೫)

**ತರ್ಜನಿ –** ತೋರುಬೆರಳು (ಅತಿಲಲಿತ ತರ್ಜನೀತರ್ಜಿತಪರಿಜನೆಯರ್ ವಿಚಿತ್ರವೇತ್ರಲತಾಶೋಭಿತ ತಳಕಮಳೆಯರ್: **ಆದಿಪು,** ೭. ೧೪)

**ತರ್ಜನೋಕ್ತಿ –** ನಿಂದೆಯ ಮಾತು (ಪ್ರತಿಹಾರ ತರ್ಜನೋಕ್ತಿ ತಾನದೆ ಕಳಗಿಥನಾದಮದೆ ಮನ್ಮಥನಾಥನ ಬೀಡುದಾಣಂ: **ಚಂದ್ರಪ್ರಪು,** ೧೧. ೬೧)

**ತರ್ಜಿತ –** ಹೆದರಿಸುವುದು (ಮಧುಮಾಸಕೇಸರಿ ವಿಯೋಗಿಗಳೆಂಬ ಮೃಗಂಗಳಂ ಭಯಂಗೊಳಿಸಿದುದು ಉತ್ಕ ಕೋಕಿಲ ಗರ್ಜಿತತರ್ಜಿತಂಗಳಿಂ: **ಅಜಿತಪು,** ೬. ೨೩)

**ತರ್ಜಿತೆ –** ಧಿಕ್ಕರಿಸಲ್ಪಟ್ಟವಳು (ಲಜ್ಜೆಯಿಂ ತರ್ಜಿತೆಯಾದಂತೆಯುಂ ಗಂಧರ್ವರಾಜನಂದನೆ .. .. ತನ್ನೊಳಿತೆಂದಳ್: **ಕಾದಂಬ,** ೬. ೯೨ ವ)

**ತರ್ಜಿಸು –** ದೂರಮಾಡು (ತರ್ಜಿಸು–ನಿವಾರಣೇ: **ಶಬ್ದಮದ** ಧಾ ೭೩೧); ಬೆದರಿಸು (ಪತ್ತೆ ಸಾರ್ವವರಂ ತರ್ಜಿಸಿ ಕಾಮನ ಪಡಿಯಱಿತಿವೊಲೆಸೆದಳ್ ಪೊಸ ದೇಸೆಕಾರ್ತಿ ಪೊಸಕಟ್ಟಳದೊಳ್; **ನೇಮಿನಾಪು,** ೨. ೧೪)

**ತರ್ಣಕ –** ಹೊಸದಾಗಿ ಹುಟ್ಟಿದ ಕರು ಜಾತೋಕ್ಷನೆಯ್ದೆನೆರೆದುಪಜಾತವೃಷಂ ತರ್ಣಕಾಭಿಧಾನಂ ಯೋಗ್ಯಂ: **ಅಭಿಧಾವ,** ೧. ೧೫ ೫)

**ತರ್ಪಣ –** ತುಷ್ಟಿ, ತೃಪ್ತಿ (ತಣಿವುದು ಸಾಹಿತ್ಯಂ ತರ್ಪಣವೆನಿಸುಗುಂ: **ಅಭಿಧಾವ,** ೧. ೧೬. ೭)

**ತರ್ಬು –** ತಬ್ಬಿಕೊ, ಅಪ್ಪು (ತರ್ಬು–ಆಶ್ಲೇಷೇ: **ಶಬ್ದಮದ, ಧಾ** ೪೮೪)

**ತರ್ಷ –** ಬಾಯಾರಿಕೆ ಹಾಗೂ ಹಂಬಲ (ತರ್ಷಂ ತೃಷ್ಣಾಶಾ: **ಅಭಿಧಾವ,** ೧. ೧೬. ೮)

**ತಲೆಗರೆ –** ಅಡಗಿಕೊ (ಮಂತ್ರಪದಕ್ಕೆ ಉರಗಂ ಸುಗಿವಂತೆವೊಲ್ ಅಗಿದು ಸುಗಿದು ತಲೆಗರೆದಿರ್ಪಂ: **ಪಂಪಭಾ,** ೭. ೪೩)

**ತಲೆಗವಿ –** ತಲೆಯನ್ನು ಮರೆಮಾಡು (ಯುಧಿಷ್ಠಿರಂ ತಲೆಗವಿವನಲ್ಲದೆಯುಂ ಏವದೊಳ್ ತಲೆಗವಿದು ಸಿಗ್ಗಂ ಕೊಂಡಾಡಿ ನೆತ್ತಮನಾಡಿ: **ಪಂಪಭಾ,** ೭. ೨ ವ)

**ತಲೆಗಾಪಿನಾಳ್** – ಮೈಗಾವಲ ಭಟ (ತಲೆಗಾಪಿನಾಳ್ ಉಕ್ಕಡದಾಳ ಮೇಲಿಕ್ಕಿ ಉಕ್ಕಡದಾಳ್ ಘರವಟ್ಟಿಗೆಯಾಳ ಮೇಲಿಕ್ಕಿ: **ಗದಾಯು,** ೯. ೩೨ ವ)

**ತಲೆಗುತ್ತು** – ತಲೆಬಾಗು (ಎಡೆಯೊಳ್ ದೂಂಟಿಂದೆ ದೂಂಟಿಂಗೆ ಪೆರ್ವಱಿಯಂ ಪೊಯ್ದು ಕೆಲಕ್ಕೆ ನಾಣ್ಚಿ ತಲೆಗುತ್ತಿರ್ಪ ಆಕೆಯೇಂ ಜೋಡೆಯೇ: **ಪಂಪಭಾ** ಪರಿಷತ್ತು, ೪. ೮೨)

**ತಲೆಗೋ** – ಹೊಣೆ ಹೊರು (ದೇವರೆನ್ನಂ ಧರಾಭರದೊಳ್ ತಂದು ತೊಡರ್ಚಿ ಪೂಣ್ದು ತಲೆಗೋದಿರ್ದುಂ ಬಟಿಕ್ಕೆ: **ಆದಿಪು,** ೪. ೮೧)

**ತಲೆದುಡುಗೆ** – ತಲೆಯ ಆಭರಣ (ನಂದನನ ಸಹಸ್ರ ಕುಂತಳ ಕಲಾಪಕ್ಕೆ ಬಿಡುಮುತ್ತಿನ ತಲೆದುಡುಗೆಯಂ ಪಡೆದು ಮೋಹರಸ ಸುಧಾಪೂರದೊಳ್ ಅಗಾಹವಮಿರ್ಪುದುಂ: **ಪಂಪರಾ,** ೬. ೪೮ ವ)

**ತಲೆದೋಱು** – ಕಾಣಿಸಿಕೊ (ಆಗಳುಂ ಇಂದುಸೂರ್ಯರ್ ಅಣಂ ಇಲ್ಲ ಕಟ್ಟಿಲೆಯೆಂಬುದಿಲ್ಲ ತದ್ಭೋಗಿಫಣಾದ್ಯುತಿಯೆ ಕಟ್ಟಿಲೆಯಂ ತಲೆದೋಱಲೀಯದು: **ಪಂಪಭಾ,** ೪. ೧೬)

**ತಲೆನವಿರ್** – ತಲೆಗೂದಲು (ಯುವತಿಯರ್ ಓರೋರ್ವರ ತಲೆನವಿರಂ ತಲೆನವಿರೊಳಡಸಿ ಕಟ್ಟುತ್ತುಂ ಮೋದುವುದುಂ: **ಪಂಪರಾ,** ೧೪. ೧೦೧)

**ತಲೆನೀರ್ಮಿ** – ಮುಟ್ಟಾದವಳು ನಾಲ್ಕನೆಯ ದಿನ ತಲೆಗೆ ಸ್ನಾನಮಾಡು (ಕೊಂತಿ ತಲೆನೀರ್ಮಿಂದು ಆದಿತ್ಯನಂ ಬಯಸಿದೊಡೆ ಗರ್ಭಮಪ್ಪುದು ಎತ್ತಗರ್ಭಮಾಗಿ ಕೊವಿಯೊಳ್ ಕರ್ಣನಂ ಪೆತ್ತಳ್: **ಹರಿವಂಶ,** ೧. ೨೯ ವ)

**ತಲೆನೇಣ್** – ಪ್ರಾಣಿಗಳ ಕೊರಳಿನ ಹಗ್ಗ (ತಲೆನೇಣ್ಗೊಂದು ಮೃಗೇಂದ್ರ ವಾಲಕುಲಮಂ ಪಾಸಿಂಗಂ ಆ ಸಿಂಗದುಜ್ಜ್ವಳ ಚರ್ಮಾವಳಿಯಂ .. .. ಕೊಂಡು ತಳರ್ದತ್ತಾಗಳ್ ಕಿರಾತೋತ್ಕರಂ: **ಕುಸುಮಾಕಾ,** ೧೪. ೫೬)

**ತಲೆಮಟ್ಟು** – ತಲೆಯವರೆಗೆ (ಒದೆದು ಬಡಿಯುತ್ತಿರೆಯುಂ ಸಲೆ ನಮವ ಆವಿನ ಮೆಯ್ಯೊಳ್ ತಲೆಮಟ್ಟು ಎಂತು ಅಂತೆ ನಿಂದರಾ ದೇವತೆಗಳ್: **ಸಮಯಪ,** ೯. ೬೨)

**ತಲೆಮಡು** – ತಲೆಗೆ ತಾಗು, ಸಮ್ಮುಖವಾಗು (ಅಂತು ಎರಡುಂ ಪಡೆಯ ನಾಯಕರ್ ಒರ್ವರೊರ್ವರೊಳ್ ತಲೆಮಟ್ಟು ಕಾದುವಾಗಳ್: **ಪಂಪಭಾ,** ೧೦. ೧೧೪ ವ)

**ತಲೆಮಿಗು** – (ಪಾರದೆ ಬರ್ಪ ದೂದವಿಯರಂ ತವಕದಿಂ ತಲೆಮಿಕ್ಕು ನೀವಿಯಂ ಚಾರು ಕಳಾಪದೊಳ್ ನಿಲಿಸುತುಂ .. .. ಜಾರೆಯರೆಯ್ದುತಿರ್ದರ್ ಉಪಕಾಂತರನಾ ಬಹಳಾಂಧಕಾರದೊಳ್: **ಶಾಂತೀಶ್ವಪು,** ೧೧. ೨೪)

**ತಲೆಯಿಕ್ಕು** – ತಲೆಯಿಡು, ಮಲಗು (ಅಂತದಱ ಮೊದಲೊಳ್ ಕೆಲವು ದಿವಸಂ ತಲೆಯಿಕ್ಕಿ ಪಟ್ಟಿರ್ದುದನೊಂದು ದರ್ದುರಂ ಕಂಡು: **ಪಂಚತಂತ್ರ,** ೩೮೩ ವ)

**ತಲೆಯುರ್ಚು** – ಅಡಗಿಕೊ (ಅದುವೆ ಕಾರಣಮಾಗುಳಿದಿರ್ದಂ ಅಂಧರಾಣ್ಣಂದನಂ ಅಅಲ್ಲದೆ ಉಂತೆ ತಲೆಯುರ್ಚುಗುಮೇ ರಣರಂಗಭೂಮಿಯೊಳ್: **ಪಂಪಭಾ,** ೧೩. ೭೫)

**ತಲೆಯೆಱಕ** – ತಲೆ ತಗ್ಗಿಸುವುದು (ನೆರದೀ ಸಭೆಯೊಳ್ ಲಜ್ಜಾಭರದಿಂ ತಲೆಯೆಱಕಮಾದುದು ಇಂದೆನಗೆ: **ಸುಕುಮಾಚ,** ೨. ೨೮)

**ತಲೆಯೇಱು** – ತಲೆಗೆ ಹತ್ತು, ಮಿತಿಮೀರು (ನಿರ್ವಿಕಾರ ಸ್ವರೂಪನಪ್ಪ ಪರಮಂಗೆ ಸ್ವಪ್ನೋಪಮಾಹಂ ಮಮತೆ ತಲೆಯೇಱಿ: **ಗಿರಿಜಾಕ,** ೮. ೪೫ ವ)

**ತಲೆಯೊತ್ತು** – ತಲೆತೂರಿಸಿ ಹೊಡೆದಾಡು (ತಿರು ಪಱಿದೊಡೆ ದಂಡಾದಂಡಿ ರಣಂ ಬಿಲ್ಲಂದಮಾಯ್ತು ಬಿಲ್ಮುಱಿದೊಡೆ ಗೋಣ್ಮುರಿಗೆ ತಲೆಯುತ್ತುತಿರ್ಪೊಂದುರವಣೆಯಿಂದ: **ಚಂದ್ರಪ್ರಪು,** ೧೦. ೭೦)

**ತಲೆವಡು** – ಎದುರಾಗು (ಪಲತೆಱದ ವಿಷಯದತ್ತಲ್ ತಲೆವಟ್ಟಿರ್ದ ಇಂದ್ರಿಯಂಗಳ್: **ಕಾದಂಬ,** ೬. ೯೧)

**ತಲೆವಣಿ** – [ಹಾವಿನ ಹೆಡೆಯ] ತಲೆಯ ಮಣಿ (ತಲೆವಣಿಯ ಫಣಿಗಳುಂ ಸುಲಿಮೊಲದಡಗಂ ಪೊತ್ತ ಬೇಡರುಂ: **ಲೀಲಾವತಿ,** ೬. ೨೫)

**ತಲೆವರಿ** – ಮುಂದೆ ಹೋಗು (ತಲೆವರಿದು ಓಜೆಯ ಪಿಡಿಯಂ ಏಱಿ ಪೆಂಡವಾಸದ ಒಳ್ವೆಂಡಿರ್ ಬಳಸಿ ಬರೆ: **ಪಂಪಭಾ,** ೩. ೪೮ ವ)

**ತಲೆವರಿಗೆ** – ಶಿರಸ್ತ್ರಾಣ (ದಿವಮನದಿರ್ಪಲ್ ತಲೆಡವರಿಗೆಗೊಂಡತನು ನಭಮನಡರ್ದಪ್ಪನೆನಿಸಿದಂ ಶಶಲಕ್ಷ್ಮಂ: **ಆಚವರ್ಧ,** ೬. ೩೯)

**ತಲೆವಱಿ** – [ತಲೆ+ಪಱಿ] ಲೋಚುಮಾಡು (ತಲೆವಱಿದುಟ್ಟುದಿಕ್ಕಿ ಸುರಲೋಕಸುಖಂಗಳನುಣ್ಬೆವೆಂಬ ಬತ್ತಲಿಗರ ಮಾತುಗೇಳದಿರು: **ಆದಿಪು,** ೨. ೯); ಅಲಂಕರಿಸು (ತಲೆವಱಿದ ಓಜೆಯ ಪಿಡಿಯನೇಱಿ ಪೆಂಡವಾಸದೊಳ್ವೆಂಡಿರ್ ಬಳಸಿ ಬರೆ: **ಪಂಪಭಾ,** ೩. ೪೮ ವ)

**ತಲೆವಾಗಿಲ್** – ಮುಂಬಾಗಿಲು (ಶೃಂಖಳಾಬಂಧನೆಯಂ ಮಡಿ ತಲೆವಾಗಿಲ ಕೆಲದ ಪುಲುಮನೆಯೊಳಿರಿಸಿ: **ಆಚವರ್ಧ,** ೧೫. ೫೪ ವ)

**ತಲೆವಿಕ್ಕು** – [ತಲೆ+ಪಿಕ್ಕು] ತಲೆ ಬಾಚು (ಲಳನೆಯ ಕೇಶದಲ್ಲಿಯಲರುಂ ತಳಿರುಂ ಪೊಳೆವಂದದಿಂದೆ ಕೋಮಳನಖಕಾಂತಿಯುಂ ಮೃದುತಳದ್ಯುತಿಯುಂ ನಿಮಿರ್ವನ್ನಂ ಒಯ್ಯನಾಗಳೆ ತಲೆವಿಕ್ಕಿ: **ಚಂದ್ರಪ್ರಪು,** ೬. ೬೫)

**ತಲೆವಿಲ್** – ಶ್ರೇಷ್ಠವಾದ ಬಿಲ್ಲು; ಮುಂಚೂಣಿಯ ಬಿಲ್ಲು (ನಿನ್ನಭ್ಯುದಯದೊಳ್ ಆಂತು ಅರಿ ಸೇನೆಯಂ ಇದಿರ್ಚಿ ತಲೆವಿಲ್ ಎನೆ ಎಱೆದು ತವಿಸುವ ತೆಱದಿಂ: **ಶಾಂತಿಪು,** ೫. ೯೦); [ಬಿಲ್ಲ+ತಲೆ] ಬಿಲ್ಲಿನ ತುದಿ (ಯುದ್ಧದೊಳ್ ಸ್ಥಿತನಾದಂ ತಲೆವಿಲ್ಲೊಳ್ ಎಂದೊಡೆ ನಳಂ ಗಂಡಂ ಪೆಱರ್ ಗಂಡರೇ: **ಪಂಪರಾ,** ೧೨. ೩೮)

**ತಲೆವೀಡು** – ಶ್ರೇಷ್ಠವಾದ ಬೀಡು (ನೆಲೆವೀಡು ರತಿಗೆ ತಿಱುವಾಯ್ ತಲೆವೀಡು ಅಂಗಜಶರಕ್ಕೆ ಕಾಮನ ಕಿಸುಗಣ್ಮಲರ್ವಿಡುವಿಯೋಗಿಗೆ ಸಮಕಲೆವೀಡು ವಸಂತದಂತಿಗೆ ಉಪನಗರವನಂ: **ಚಂದ್ರಪ್ರಪು,** ೧. ೯೭)

**ತಲೆವೀಸು** – ಒಪ್ಪದಿರು, ಬೇಡವೆಂದು ಹೇಳು (ನೀ ತಲೆವೀಸದೆ ಉರ್ವರಾಶ್ರೀಯಂ ಇದಾಗದೆನ್ನದೆ ಒಳಕೊಳ್ ಪರಮೋತ್ಸವದಿಂ ಗುಣಾರ್ಣವಾ: **ಪಂಪಭಾ,** ೧೪. ೧೭)

**ತಲೆವೂಸು** – [ತಲೆ+ಪೂಸು] ತಲೆಗೆ [ಎಣ್ಣೆ] ಲೇಪಿಸು (ನಿನ್ನ ಗಂಡಂಗೆ ತಲೆವೂಸಿ ಮಿಯಲೆಱೆದು ಷಡ್ರಸಾನ್ನಮಂ ಇರ್ಪತ್ತೊಂದು ದಿವಸಮಿಂಬಾಗಿ ಉಣಲಿಕ್ಕಿದೆಯಪ್ಪೊಡೆ ಆತನ ಕಣ್ಣೊಡೆಗುಂ: **ಪಂಚತಂತ್ರ,** ೩೯೨ ವ)

**ತಲೆವೊತ್ತು** – ಪ್ರತಿಭಟಿಸು (ಕಲಹಕ್ಕೆ ಕಚ್ಚೆವಾಸುವ ತಲೆವೊತ್ತೆ ಕೆರಳ್ವ ಜಗಳವಾಡುವವನುಂ ಸಲೆ ಬಯ್ಸಿಕೊಳ್ವಂ: **ಸಮಯಪ,** ೩. ೫೫)

**ತಲೆವೊಲ** – ಮುಖ್ಯ ಪ್ರದೇಶ (ತಲೆವೊಲದ ನಾನಲ್ವಳ್ಳದ ದರಿಯ ಕುತ್ತುಜೆಂಗೆ ಕೊಣಕಿಡುವ ಪುಲ್ಲೆ ಎರಲೆಯ ಜವಕ್ಕೆ ಪಕ್ಕುಗೊಟ್ಟು: **ಮಲ್ಲಿನಾಪು,** ೭. ೨ ವ)

**ತಲೆಸುತ್ತು** – ತಲೆಗೆ ಸುತ್ತುವ ಬಟ್ಟೆ, ಶೀರ್ಷಕ (ರಾಜೀವಲೋಚನಂ ಕ್ರೀಡಿಸಿದಂ ಪೀಲಿಯ ತಲೆಸುತ್ತಿನ ಪಚ್ಚೋಲೆಯ ಪೊಂಬಟ್ಟೆಯುಡೆಯ ಚೆಲ್ವೆಸೆವಿನೆಗಂ: **ಜಗನ್ನಾವಿ,** ೪. ೪೭)

**ತಲೆಸೂಡು** – ತಲೆಯಲ್ಲಿ ಧರಿಸು, ಶಿರಸಾವಹಿಸು (ತಲೆಸೂಡಿ ಮುನ್ನೆ ಕಜ್ಜದ ಫಲಮಂ ಬೆಸಗೊಂಡುಂ ಏವನಲ್ಲಿಂ ಬಟೆಯಂ: **ಕವಿರಾಮಾ,** ३. ೧೪೪)

**ತಲ್ಪ** – ಹಾಸಿಗೆ (ತಲ್ಪಂ ಶಯ್ಯಾ ಅಟ್ಟ: **ಅಭಿಧಾವ,** ३. ೧. ३೨)

**ತಲ್ಪು** – ಆಸ್ರವ (ಕಟಿದ ಭವಕ್ಕೆ ಪೇಸುವ ಅಡೆವ ಆಸುರಕರ್ಮದ ತಲ್ಪಂ ಅರ್ಥಿಸುತ್ತ ಅಟೆವ: **ಶಾಂತಿಪು,** ೯. ೧३೧)

**ತಲ್ಲಟ** – ತಲ್ಲಣ, ಭಯ (ನೆಱಮಾರ್ ಪೆಱಗಿಕ್ಕಿ ಕಾವರಾರಾರ್ಮನೆನುತ್ತ ಒಱಲ್ದಟಲುತಿರ್ಪುದೆ ನಾರಕರ್ಗಲಲಿ ತಲ್ಲಟಂ: **ಶಾಂತಿಪು,** ೭. ೯೪)

**ತಲ್ಲಟಿಸು** – ಭಯಗೊಳ್ಳು (ತದೀತ ದುಸ್ತರ ಸ್ಮರದಶಾವ್ಯತಿಕರಕ್ಕೆ ತಲ್ಲಟಿಸಿ: **ಆಚವರ್ಧ,** ೪. ೮೪ ವ)

**ತವಂಗ** – ಉನ್ನತಾಸನ, ವೇದಿಕೆ, ಜಗುಲಿ (ಯುವರಾಜಂ ಬಂದೀಗಳ್ ತವಂಗದಲ್ಲಿರ್ಪನೆಂದು .. .. ಕೇಳ್ದು: **ಕಾದಂಬ,** ೮. ೫)

**ತವಂಗಪಂಟಪ** – ಆನೆಗಳ ಯುದ್ಧಕ್ರೀಡೆಯ ಸಲುವಾಗಿ ನಿರ್ಮಿತವಾದ ಅಂಗಳ (ತವಂಗಮಂಟಪದ ಮತ್ತವಾರಣದ ಕೆಲಕ್ಕೆ ಮತ್ತವಾರಣಮಂ ಸಾರ್ಚಿ: **ಅನಂತಪು,** ೨. ೨೯ ವ)

**ತವಕಿಗ** – ಉತ್ಸುಕನಾದವನು (ತನಿಗಳ್ಳ ತವಕಿಗಂ ಬಾಡಿನ ಬಾಕುಳಂ ಈತನೆಂದು ಲೋಹದ ರಸಮಂ .. .. ಕುಡಿಯಿಪರ್: **ಅನಂತಪು,** ೯. ३೫)

**ತವದ** – [√ತವು] ಕ್ಷಯಿಸದ (ರಮಿಯಿಪುದು ಅಮರಿಯರೊಳ್ ತೆಗಟ್ ಅಮರಿಯರೊಳ್ ತವದ ಮೇಳಮ್ ಅಮರಿಯರೊಳ್ ಅಲಂಪು ಅಮರಿಯರೊಳ್ ನಗೆ ಸಬ್ಬವಂ ಅಮರಿಯರೊಳ್ ನಡೆವುದು ಅಮರನೇಂ ಸುಖಮಯನೋ: **ಶಾಂತಿಪು,** ೭. ೭೬)

**ತವದೊಣೆ** – ಅಕ್ಷಯವಾದ ಬತ್ತಳಿಕೆ (ಗಾಂಡೀವಮೆಂಬ ಬಿಲ್ಲುಮಂ ದಿವ್ಯಶರಂಗಳೊಳ್ ತೆಕ್ಕನೆ ತೀವಿದ ತವದೊಣೆಗಳುಮಂ ತಂದು .. .. ಬೃಹಂದಳನೆಂಬ ಸಾರಥಿವೆರಸು ರಥಮಂ ಏಱಲೊಡಂ: **ಪಂಪಭಾ,** ೫. ೭೭ ವ)

**ತವನಿಧಿ** – ತವಿಸದ [ಕಡಿಮೆಯಾಗದ] ನಿಧಿ (ಎಣಿಕೊಂಡ ಕಸವರಂ ತವನಿಧಿಯಂತೆ ತವದಿರ್ದಪ್ಪುದೆ ನಿನ್ನ ಕೈಯಿಂದಂ ಕೊಳ್ಳೆ ಪೋಗಬ್ಬಾ: **ವಡ್ಡಾರಾ,** ಪು. ೧೭, ಸಾ. ೪)

**ತವರಾಜ** – ಒಂದು ಬಗೆಯ ಬಿಳಿ ಸಕ್ಕರೆ (ಇಂತು ಇವರ್ಗಳ ಚಿಲ್ವಿಕೆ ಕಂಗಳ ತವರಾಜಮಂ ಇಂದು ಕಂಡೆಂ: **ಯಶೋಧಚ,** ೧. ೬೨)

**ತವಿಲ್** – ಕುಂದು (ನಿಧಿಗಳ್ಗೆಂತುಂ ತವಿಲಿಲ್ಲದುದಂ ಕಂಡು ಉತ್ಸವದಿಂ ಜಿನನಿಳಯನಿಚಯಮಂ ಮಾಡಿಸಿದಂ: **ಸಮಯಪ,** ೨. ೨೬); ತೊಂದರೆ (ತನ್ನ ಬಿನ್ನನಿರ್ದ ಮೊಗದಿಂ ತವಿಲ್ದಿರೆ ವಿಳಾಸಮುಂ ಮುಂದೆ ಕಂಡನಲ್ಲಿ ಕಮಳಾಕ್ಷಿಯಂ ವೃಷಭಲಕ್ಷಣಂ ಲಕ್ಷ್ಮಿಯಂ: **ಗದಾಯು,** ೯. ३); ನಾಶ (ಆಗಳವರ್ ಕಾದಲ್ ಅನುಗೆಯ್ವ ಕಾಯ್ಪಂ ಕಂಡು ಎಲೆ ತಂದೆಗಳಿರ ನೀಮೀತನೊಳ್ ತಾಗಿ ತವಿಲಾಗಲ್ವೇಡಿಂ ಬೇಡಿಕೊಂಡೆಂ: **ಶಾಂತೀಶ್ವಪು,** ೫. ೧೭೬ ವ)

**ತವಿಸು** – ಕ್ಷಯಿಸು (ಕ್ಷಿತಿಯೊಳಗುಳ್ಳ ಭೂಭುಜರ ಬಿತ್ತು ಮೊದಲ್ಗಿಡೆ ಮುನ್ನಂ ಏಕವಿಂಶತಿ ಪರಿಸಂಖ್ಯೆಯಿಂ ತವಿಸಿ ಸರ್ವನಿವೇದಕಮೆಂಬ ಯಜ್ಞದೊಳ್: **ಪಂಪಭಾ,** ೨. ४೫); ನಾಶಪಡಿಸು (ಮಿತವಚನಂ ತನಗಿದಿರಾಂತ ರಿಪುಬಲಮಂ ಇಂತು ತವಿಸಿದಾಗಳ್: **ರಾಜಶೇವಿ,** ೬. ೧೦೫ ವ)

**ತವು** – ಕ್ಷಯಿಸು (ಭವಂ ತವೆ ಭವತ್ಪಾದಂಬುರುಹ ಸೇವೆಗೆಯ್ವಾರುಮಂ ಭವಂಗಿಡಿಪೆ: **ಆದಿಪು,** ೧३. ೮೭)

**ತವುತರ್** – ಕ್ಷೀಣಗೊಳ್ಳು (ಆಗಳ್ ಓಡುವಾತನ ಭಯಮುಟ್ಟುವಾತನ ಚಲಂ ತವುತಂದುವು ತತಸ್ಮೀಪದೊಳ್: **ಶಾಂತಿಪು,** ೬. ४೦); ಬರಿದಾಗು (ಅವನೋದುವನಿತು ಬುದ್ಧಿಯೆ ತವುತಂದೊಡೆ ಪಂಚಪದದ ನಾಮಾಕ್ಷರಮಂ ಧ್ರುವಮೋದುವುದು: **ಆದಿಪು,** ೨. ೫೫); ಮತ್ತೆ ಬಾ (ತವುತಾರವು ನಿನ್ನೆಗಳುಂ ಸವೆಯವು ನಾಳೆರೆಗಳುಂ ಅದಱಿಂ ಇಳೆ ನೆಱೆಯದು ಲೆಕ್ಕವಿಡಲ್ ಶಬ್ದಂ ನೆಱೆಯವು ಪವಣಿಸಲೆನೆ ಕಂಡರಾರೊ ಕಾಲದ ಪವಣಂ: **ಪಂಪರಾ,** ೧. ೫४)

**ತವುದಲೆ** – ಮುಗಿತಾಯ, ಕೊನೆ (ಜೂದಾಡಿ ಸೋಲ್ತು ನನ್ನಿಗೆ ಮೇದಿನಿಯಂ ಕೊಟ್ಟು ಪಾಂಡುನಂದನರ್ ಈಗಳ್ ಪೋದೊಡಮೇಂ ತಿಣುಕಾಗದೆ ಪೋದಪುದೇ ನಮ್ಮ ನೃಪತಿಗವು ತವುದಲೆಯೊಳ್: **ಪಂಪಭಾ,** ೭. ೧೮)

**ತವೆ** – ಮುಗಿದುಹೋಗು (ನೀಂ ಇನಿಸು ಕಾಲ ಇರ್ದಯಪ್ಪೊಡೆ ಏ ತೊದಳೊ ಸರೋವರಾಂಬು ಅನಿತಂ ತವೆ ತುಳ್ಕಿ ರಸಾತಳಂಬರಂ ಬೆದಕಿಯುಂ ಎಂತುಂ ಅಪ್ಪಳಿಸಿ ಕೊಂದಪೆಂ: **ಪಂಪಭಾ,** ೧३. ೮೦)

**ತಸ್ಕರ** – ಕಳ್ಳ (ದಿನಪಂ ತಸ್ಕರರ ಬಾಧೆಗಂಜುವನಕ್ಕುಂ: **ಸಮಯಪ,** ೧೧. ೫४)

**ತಸ್ಕರಸ್ಯ ಅನೃತಂ ಬಲಂ** – ಕಳ್ಳನಿಗೆ ಸುಳ್ಳೇ ಶಕ್ತಿ (ದುಷ್ಟಬುದ್ಧಿ ನುಡಿದಂ ಪುಸಿಯಂ ಮತಿಗೆಟ್ಟು ತಸ್ಕರಸ್ಯ ಅನೃತಂ ಬಲಂ ಎನಿಪ ವಾಕ್ಯವಂ ನೆನೆಯುತ್ತುಂ: **ಪಂಚತಂತ್ರ,** ೨३೭)

**ತಳ್** – ಎದುರಿಸು; ತಳೆ (ತಮ್ಮ ಮನದೊಳ್ ತಳ್ವೊಯ್ದು ತಳ್ತಾ ತಗುಳ್ಪುಗಳೊಳ್ ಪೊಕ್ಕುವು: **ಆದಿಪು,** ೬. ೨೨)

**ತಳ** – ಕೈ, ಅಂಗೈ (ಇನಿಯನ ಕೆಂದಳಂ ತಳಮನೊಯ್ಯನೆ ಸೋಂಕೆ ಪೊದಳ್ದ ನಾಣ ಪೆಂಪಿನೊಳೊಗೆತರ್ಪ ವಿಳಾಸಂ: **ಆದಿಪು,** ४, ४೬); ಅಂಗಾಲು (ನವಕಮಳದಳಂಗಳ್ ಭೀಕರಂ ಬಲ್ಪುಮಾಗಿರ್ಪುವೆ ತಳಕೆ ತಳಂಗಳ್ ನೋಯವೇ ಮೆಟ್ಟಿದಂದು: **ಆದಿಪು,** ೭. ೫೬); ತಾಳೆ (ತಳಮುಂ ತಾಳಮುಂ ಎನೆ ಪನೆ: **ಅಭಿಧಾವ,** ೧. ೮. ४); ಆಳ (ತಳನಾಮಂ ಮತ್ತನೂರ್ಧ್ವಂ: **ಅಭಿಧಾವ,** ೧. ೮. ४)

**ತಳಚ್ಛಂದ** – ತಳದ ವಿನ್ಯಾಸ (ಸಮಚತುರಶ್ರಂ ಪಾದಾಧಿಕಚತುರಶ್ರಂ ವೃತ್ತಮಾಯತಂ ಅಷ್ಟಾಶ್ರಯಂಗಳೆಂಬ ತಳಚ್ಛಂದಂಗಳಂ; **ಚಂದ್ರಪ್ರಪು,** ೧೫. ೨೧ ವ)

**ತಳತಂತ್ರ** – ಪದಾತಿ ಸೈನ್ಯ (ಮುಂದಣ ತನ್ನ ತಳತಂತ್ರಮಂ ಕೆಲಕ್ಕೆ ತೊಲಗವೇಟ್ಟು: **ಚಂದ್ರಪ್ರಪು,** ೧೦. ೯४ ವ)

**ತಳದಳಿಸು** – ಮಿಗಿಲಾಗಿ ಹೊಳೆ (ತಳದಳಿಪ ಮುಗಿಲ್ಗಳ್ಕಳಕುಳಮಪ್ಪಿನಮಳುರ್ದು: **ಆದಿಪು,** ೧३. ೬೫)

**ತಳಪಟ್ಟು** – ಕುಸ್ತಿಯ ಒಂದು ವರಸೆ (ಜಡೆಯೆಂಬುದು ಗೊರವಂಗೆ ತಟ್ಟೆಂಬುದು ಸವಣಂಗೆ ತಳಪಟ್ಟೆಂಬುದು ಪೊಲ್ಲಂಗಲ್ಲದೆ ಕೊಲ್ವ ಗೆಲ್ವ ಕಲಿಗಂ ಬಿರುದಂಗಂ ಏವುದು: **ಅನಂತಪು,** ೨. ೨೮ ವ)

**ತಳಮಳಗು** – ತಳಮಳ (ತಳಮಳಗುತ್ತೆಱಗುವುದುಂ ವಿಳಾಸನ್ನಾಗಧಕಿರೀಟರತ್ನಾಂಶುಗಣಂ ಗಳಯಿಸಿದುವು: **ಆದಿಪು,** ೧೨. ೧೧೨)

**ತಳಮಳಿಸು** – ಕಳವಳಗೊಳ್ಳು (ಮುಳಿದು ತಳಮಳಿಸಿ ತಳರದೆ ತೊಳಗುವ ಕರವಾಳಂ ಉರ್ಚಿ ಮೆಯ್ವೆರ್ಚಿ ಪೊದಳ್ದ ಅಳವು ಅಮರೆ ಪಿಡಿದು ರಥದಿಂದೆ ಇಳೆಗೆ ಇೞಿದು ಅವಂ ಅವನಿಪತಿಯಂ ಅಣುಗಿೞಿ ಪೊಯ್ದಂ: **ಪಂಪಭಾ,** ೧೩. ೪೭)

**ತಳಮಿತಮಧ್ಯೆ** – ಬಹು ತೆಳ್ಳನೆ ಸೊಂಟವುಳ್ಳವಳು (ತಳಮಿತಮಧ್ಯೆಯಂ ಆಯತ ವಿಳೋಳಲೋಚನೆಯಂ .. .. ಪೃಥು ನಿತಂಬಬಿಂಬೆಯಂ ಉೞಿದಂ: **ಕವಿರಾಮಾ,** ೩. ೧೦)

**ತಳರ್** – ಚಲಿಸು (ಜೀವಂ ತನುವಿಂ ತಳರಲೊಡಂ ವಿಚ್ಛಾಯತೆಗೊಳಗಾದುವು ತೊಳಗುವವರ ಸೌಂದರತನುಗಳ್: **ಆದಿಪು,** ೫. ೨೭); ತೊಡರು (ನುಡಿಯ ತೊದಳ್ ನಡೆಯ ತಳರ್ ಜೆಡೆಗಳ ಕರ್ಪು ಅಲರ್ದ ಮೊಗದ ಕಿಱುನಗೆ: **ಆದಿಪು,** ೮. ೩೯); ಮುಂದೆ ಸಾಗು, ಹೊರಡು (ನಂದೆ ಅಪರನಂದೆ ಅಶ್ವಿನಿ ಮಹಾನಂದೆ ಎಂಬ ತೀರ್ಥಜಲಂಗಳೊಳ್ ಓಲಾಡುತ್ತುಂ ಉದ್ವೃತ್ತ ರಿಪು ನೃಪತಿಗಳಂ ಏಸಾಡುತ್ತುಂ ಅಲ್ಲಿಂ ತಳರ್ದು: **ಪಂಪಭಾ,** ೪. ೧೮ ವ)

**ತಳರಡಿ** – ಅಸ್ಥಿರವಾದ ಹೆಜ್ಜೆ, ದಟ್ಟಡಿ (ತನು ಮಾರ್ಪೊಳೆಯುತ್ತಿರೆ ಪಳಿಕಿನ ಕುಟ್ಟಿಮತಳದೊಳಿಂತು ತಳರಡಿಯಿಡುತುಂ ನೆನೆಯಿಸಿದಂ ನೃಪಸುತನಮರ್ದಿನ ಕಡಲೊಳ್ ತಗುವ ಅರುಣರಾಕಾಶಶಿಯಂ: **ಶಾಂತೀಶ್ವಪು,** ೧೫. ೩)

**ತಳರ್ಚು** – ತಳರಿಸು, ಚಲಿಸುವಂತೆ ಮಾಡು, ನೂಕು (ಎಂದುಂ ಕಾಲಕ್ಕೆ ಚಲಂ ಸಂದುದು .. .. ಅಚಲಂ ಎಂದೊಡೆ ನಗುತಂ ಬಂದು ತಳರ್ಚುಗುಂ ಅಚ್ಯುತನೆಂದೊಡೆ ಕೆಡಪುಗುಂ: ೪. ೧೯); ಹೊರಡು

**ತಳರ್ನಡೆ** – ದಟ್ಟ ಹೆಜ್ಜೆ, ಮಂದಗಮನ (ದಾದಿಯರೊಡವಂದಿನಿಸಂ ನಡೆಯಿಸೆ ಲಲಿತೇಂದ್ರನೀಲಮಣಿಭೂಮಿಯೊಳ್ ತಳರ್ನಡೆನಡೆದಂ: **ಆದಿಪು,** ೮. ೨)

**ತಳರ್ನುಡಿ** – ತೊದಲು ನುಡಿ (ದಡದಡಿಪ ಅಡಿ ಪಡಿಮಾತಂ ಪಡೆಯಲ್ ಒಡರ್ಚುವ ಮನಂ ತಡಂಬಡಿಪ ತಳರ್‌ನುಡಿ: **ರಾಜಶೇವಿ,** ೬. ೩೩)

**ತಳರ್ಪು** – ಚಲನೆ (ತನ್ನ ಜಸದಂತೆ ಪಸರಿಸಿದ ಅಚ್ಚವೆಳ್ದಿಂಗಳಂ ಆಕೆಯ ಕಣ್ಗಳ ಬೆಳ್ಪಿನ ತಳರ್ಪು ಎನುತ್ತುಂ ಪೆಪ್ಪಳಿಸಿ ಚಂದ್ರನಂ ನೋಡಿ: **ಪಂಪಭಾ,** ೪. ೬೯ ವ)

**ತಳರ್ವಕ್ಕಿ** – ದಟ್ಟಡಿಯಿಡುವ ಹಕ್ಕಿ, ಹಂಸ (ತಳಿರ್ವೆರಲ ತರತರಿಕೆಯ ತುಂಬಿಯ ತಳರ್ವಕ್ಕಿಯ ಕುಸುಂಕುರುಗೊಂಡೆಸೞ ಬಾಳ್ವೇಲಿಯ ಕೇಸರದ .. .. ಕೋಶಮಿರ್ಪಂತೆ: **ಲೀಲಾವತಿ,** ೮. ೫೧ ವ)

**ತಳಲುಂಬಳಲುಂಗುಟ್ಟು** – ಸದೆಬಡಿ (ಕೌರವಾನಿಜರ್ಕಳನಾಗಳ್ ತಳಲುಂಬಳಲುಂಗುಟ್ಟಿದನೆಳೆಯೊಳ್ ಪಡಲಿಟ್ಟು ಸೊಪ್ಪುಸೊವಡಪ್ಪಿನೆಗಂ: **ಕರ್ಣನೇಮಿ,** ೧೨. ೮೩)

**ತಳವರ್ಗ** – ಸೈನ್ಯ (ಪತ್ತೆಸಾರ್ವ ತಳವರ್ಗದ ನಿಗ್ರವೃತ್ತಿಯಂ ಕಂಡು ಇದು ಮದೀಯವಿಕ್ರಾಂತದರ್ಶನಾರ್ಥಮೆಂದು ಮುಂದಣ ತನ್ನ ತಳತಂತ್ರಮಂ ಕೆಲಕ್ಕೆ ತೊಲಗವೇೞ್ದು: **ಚಂದ್ರಪ್ರಪು,** ೧೦. ೯೪ ವ)

**ತಳವಳಿಸು** – ತಳಮಳ ಅನುಭವಿಸು (ಅಳವಳಿಸಂ ಬೆಬ್ಬಳಿಸಂ ಕಳವಳಿಸಂ ಕನಲಂ ಒನಲಂ ಅೞ್ಕಂ ಚಳವಳಿಸಂ ಚಪ್ಪರಿಸಂ ತಳವಳಿಸಂ ಬೇಸಱೆಯ್ದು ಬೆಳ್ಮೊಗದಿನಿರಂ: **ಅಜಿತಪು,** ೫. ೯೦)

**ತಳವಱ** – ತಳವಾರ, ನಗರರಕ್ಷಕ (ವಿಷಯ ಗೃಹಾಮಾತ್ಯ ದಂಡಾಧಿನಾಥಾವಳಿ ಧರ್ಮಾಧ್ಯಕ್ಷ ಕೋಶಾಧಿಪ ತಳವಱ ಹಾಸ್ಯಾದಿ ತಂತ್ರಾಳಿಪಾಳಾವಳಿ ರಾಜಶ್ರೇಷ್ಠಿ ಸೇನಾಪರಿಕರಣ ಪುರೋಧೋಧಿಕಾರ ಅಂಗರಕ್ಷಾವಳಿ ಮುಖ್ಯಂಬೆತ್ತ ಬಾಹತ್ತರದೆಸಕದ ನಾನಾ ನಿಯೋಗಿಪ್ರತಾನಂ: **ಶಾಂತೀಶ್ವಪು,** ೧೫. ೯೦); (ತಳವಱ ಕಳ್ಳರ ಬಾರಿಯೊಳೊಳಗಾಗದೆ ನಿನ್ನ ಬರ್ದುಕಿ ಬಂದಂದಂ ಇದು ಆರಳವೀಗಳುಂಬಂ ಅಂಬುಜದಳಾಕ್ಷಿ ಪೋಗಬ್ಬೆ ಬೇಗಂ ಎಂಬುದುಂ: **ಸುಕುಮಾಚ,** ೭. ೨೪)

**ತಳವೆಳಗಾಗು** – ಗಾಬರಿಗೊಳ್ಳು (ತನ್ನಲೆ ತಾನಿಂತು ಕನ್ನೆ ತಳವೆಳಗಾದಳ್: **ಪಂಪಭಾ** ಪರಿಷತ್ತು: ೪. ೫೫); ಬೆರಗಾಗು (ಆನಿನ್ನೇಗೆಯ್ವೆನೆಂದು ತಳವೆಳಗಾದಂ: **ಕಾದಂಸಂ,** ೪. ೫೮)

**ತಳಸು** – ತಡಸಲ ಮರ (ಅರರೊಳಿ ತಳಿಸಿನ ಸರಿಸದ ಬೇಳದುರಿಯ ಬಿಳಿಲ ಸಿವನ್ನಿಯ ಕೋಳ್ಮರದಾರ ತಱಿಯ ಬಸುರಿಯ ದುರಿಕ್ಷ ಕಕ್ಷಾಂತರಾಳದಿಂ ಪುದಿದಿರ್ಕುಂ: **ವರ್ಧಮಾಪು,** ೫.೫೦)

**ತಳಾಮಳಕ** – ಅಂಗೈಯ ನೆಲ್ಲಿ, ಸುಸ್ಪಷ್ಟ (ಪೊಳಪಿನೊಳ್ ಅತನುವನೆ ತಳಾಮಳಕಂ ಮಾಡಿದುದು ಬಗೆವೊಡಚ್ಚರಿಯಲ್ತೇ: **ಲೀಲಾವತಿ,** ೨. ೨೪)

**ತಳಾಱ** – ತಳವಱ (ಸೋಮಶರ್ಮನುಂ ಕೊಲಲುಯ್ವ ತಳಾಱನಂ ಬೆಸಗೊಂಡು ತದ್ವೃತ್ತಾಂತಮೆಲ್ಲಮನಱಿದು ನಾಗಶ್ರೀಗಿಂತೆಂದು ಪೇೞ್ಗುಂ: **ವಡ್ಡಾರಾ,** ಪು ೧೪, ಸಾ ೧)

**ತಳಾಱಿಕೆ** – ತಳವಾರನ ವೃತ್ತಿ (ಯಮದಂಡಂಗಂ ಪೊೞಲ ತಳಾಱಿಕೆಯಂ ಕೊಟ್ಟು ಮಂಗಳವಸದನಂಗೊಂಡು: **ವಡ್ಡಾರಾ,** ಪು. ೧೩೩, ಸಾ. ೧೬)

**ತಳಾಱುಗೆಯ್** – ತಳವಾರನ ಕೆಲಸ ಮಾಡು (ಎನ್ನರಸಂ ಕಳ್ಳಂ ಆನುಮೀ ಪೊೞಲೊಳ್ ತಳಾಱುಗೆಯ್ವೆಂ ಇದು ಕಜ್ಜಮೊಳ್ಳಿತ್ತಲ್ತು: **ವಡ್ಡಾರಾ,** ಪು, ೧೨೯. ಸಾ. ೧೮)

**ತಳಿ** – ಎರಚು, ಸೇಚಿಸು (ಆಗಳಮೃತಕಿರಣನ ಅಮೃತಜಲಂಗಳಿಂ ಕುಮುದಿನಿಗಳಂ ತಳಿವಂತೆ: **ಆದಿಪು,** ೧೧. ೧೪೭ ವ); ಅನ್ನಸತ್ರ (ತಳಿ–ಸೇಚನೇ ಸತ್ರೇ ಚ: **ಶಬ್ದಮದ, ಧಾ** ೯೫೪)

**ತಳಿಗೆ** – ತಟ್ಟೆ (ಚೆಂಬೊನ್ನ ತಳಿಗೆಗಳೊಳ್ ತೆಕ್ಕನೆ ತೀವಿದ ಬಿಡುಮುತ್ತಿನ ಸೇಸೆಗಳುಂ: **ಆದಿಪು,** ೨. ೬೭ ವ)

**ತಳಿಗೆಯಂ ಬಾಜಿಸು** – ಜಾಗಟೆ ಬಡಿ (ಅದೇಕೆ ತಳಿಗೆಯಂ ಬಾಜಿಪರ್ ಉತ್ತಮಮಂ ನುಡಿಯೆಂಬರ್: **ಸಮಯಪ,** ೧೪. ೧೧೪)

**ತಳಿಪ** – ಸಿಂಪಡಿಸುವಿಕೆ (ಕುಂಕುಮದ ಕದಡುನೀರ್ ತಳಿಪದಿಂ ಓಲಗಿಸಿದುವು ಸುಟಿವ ತಂಗಾಳಿಗೆ ನೃಪಗೃಹವೀಥಿ ಬೆರಕೆಗೆಂಪಿನ ಸೊಂಪಂ: **ಪುಷ್ಪದಂಪು,** ೪. ೩೩)

**ತಳಿಪು** – ಸೇಚನೆ (ಧಾತ್ರಿತಳಪತಿಯ ಮೆಯ್ಯೊಳೆಲ್ಲಂ ತಳಿಪಂ ತಳಿವಂತೆ ಕೂಡಿ ಪತ್ತಿತ್ತಾಗಳ್: **ಧರ್ಮಾಮೃ,** ೪. ೧೦೨)

**ತಳಿಯಿಸು** – ಚಿಮುಕಿಸು (ಪೊಟಲ ಬೀದಿಗಳೊಳೆಲ್ಲಂ ಗಂಧೋದಕ ಪಂಚಗವ್ಯಂಗಳಿಂ ತಳಿಯಿಸಿ: **ಪಂಪಭಾ,** ೪. ೫ ವ)

**ತಳಿರ್** – ಚಿಗುರು (ತಳಮಿವು ತಳಿರಿವು ಬೆರಲಿವು ಕಳಿಕೆಗಳಿವು ನಖಮಿವು ಅಲರಿವು ಎಂದಱಿಯದೆ ಕೋಮಳೆ ಪೂಗೊಯ್ವೆಡೆಯೊಳ್ ಪಳಪಳಿಸಿದಳ್ ಅತಿಮುಗ್ಧೆ ಮಾವಿನೊಳ್ ಮತ್ತೊರ್ವಳ್: **ಶಾಂತೀಶ್ವಪು,** ೧೦. ೧೨೬)

**ತಳಿರ್ಗಳಸ** – [ಮಾವಿನ] ಚಿಗುರುಗಳನ್ನಿಟ್ಟಿರುವ ಕಳಶ (ತಳಿರ್ಗಳಸಂ ಮುಕುಂದ ರವಂ ಎತ್ತಿದ ಮುತ್ತಿನ ಮಂಟಪಂ ಮನಂಗೊಳಿಪ ವಿತಾನಪಙ್ಕ್ತಿ ಪಸುರ್ವಂದಲೊಳ್ ಒಲ್ದು ಎಡೆಯಾಡುವ ಎಯ್ದೆಯರ್: **ಪಂಪಭಾ,** ೧. ೧೦೭)

**ತಳಿರ್ಗಾಸೆ** – ಚಿಗುರು ಬಣ್ಣದ ಬಟ್ಟೆ, ಕಾವಿ ಬಟ್ಟೆ (ಮುನಿಜನಂಗಳ್ ಒಗೆದು ಆರಲಿಕ್ಕಿದ ತಳಿರ್ಗಾಸೆಗಳ ಸೋರ್ದ ಬಣ್ಣದಿಂ: **ಕಾದಂಬ,** ೧. ೯೮ ವ)

**ತಳಿರ್ವಟ್ಟೆ** – ಚಿಗುರಿನ [ಬಣ್ಣದ] ಬಟ್ಟೆ (ಮಿಗೆ ಬೆಲೆಯೇಱಿದ ಪೂಲಿಯ ಮಗರಿಯ ದೋರಿಯದ ಪಟಿಯ ತಳಿರ್ವಟ್ಟೆಯ ಕಾಡಿಗೆ ನೀರಿನ ಬಟ್ಟೆಯ ಮಟಿಗೆಗಳಿಂ ಸೋಲಿಪುವು ಸೀರೆವರದರ ಪಸರಂ: **ಕಬ್ಬಿಗಕಾ,** ೩೪)

**ತಳಿರ್ವಾಸು** – [ತಳಿರ್+ಪಾಸು] ಚಿಗುರಿನ ಹಾಸಿಗೆ (ಇಲ್ಲಿ ಮಾವಿನ ತಳಿರ್ವಾಸಿನೊಳ್ ಪೊರಳುತಿರ್ದಪೆಂ ಆಗಳುಂ: **ಆದಿಪು,** ೧೨. ೪೧)

**ತಳಿಸು** – ಕುಟ್ಟು (ಕೇಸಕ್ಕಿಯಂತೆ ತಳಿಸಿದಕ್ಕಿಯಂತೆ ಕರ್ಚಿದಕ್ಕಿಯಂತೆ: **ಧರ್ಮಾಮೃ,** ೧೨. ೧೪ ವ)

**ತಳುವು** – ತಳ್ವು, ತಡಮಾಡು (ಮುಳಿದ ವಿಯುಕ್ತವಲ್ಲಭಜನಂ ತಳುವಿಲ್ಲದೆ ತಕ್ಕೆಗೊಂಡುದು ಅಸ್ಖಳಿತ ಕೃಷೀಕುತೂಹಳಜನಂ ಮರವಟ್ಟಿರುತಿರ್ದುದು .. .. ಏನಳವಿಗಳುಂಬಮೋ ಪುದಿದ ಮಾಗಿಯ ಶೀತವಿಜೃಂಭಪಾತನಂ: **ಶಾಂತೀಶ್ವಪು,** ೧೨. ೮೬)

**ತಳೆ** – ಧರಿಸು (ತಳೇ–ಧಾರಣೇ: **ಶಬ್ದಮದ** ಧಾ ೯೫೫); ಹೊಂದು (ತಂಗೆ ನೀಂ ಅಟಲಂ ತಳೆಯದಿರ್ ಆವಿರ್ವರುಂ ಸಮಸುಖದುಃಖ ವೃತ್ತಿಗಳಾದೆವು: **ಕಾದಂಸಂ,** ೭. ೫೨ ವ) ಪ್ರಾಣಿಗಳನ್ನು ಕಟ್ಟುವ ಹಗ್ಗ (ಒಂದರ್ಥಕ್ಕೆ: .. .. ತಳೆಯೆಂಬ ಕ್ರಿಯೆಯೊಳಂ ಪಶುವಿನ ಕೊರಲ ತಳೆಯೊಳಂ ಕುಳಂ: ಶಬ್ದಮದ, ೩೩ ವೃತ್ತಿ ೫೯)

**ತಳೆಯಿಕ್ಕು** – ಪ್ರಾಣಿಗಳ ಕಾಲುಗಳಿಗೆ ಹಗ್ಗ ಕಟ್ಟು (ತಗುಳ್ದೊದೆವಾವಂ ತುಱಿಸು ತಳೆಯಿಕ್ಕು ತಡೆಯದೆ ಮುಱುವಂ ಸುರಿ ಎಂಬ ಸರಮೆ ತುಱುಗಾರ್ತಿಯರಾ: **ಲೀಲಾವತಿ,** ೫. ೧೦೪)

**ತಳೋದರಿ** – ತೆಳುನಡುವಿನ ಹೆಂಗಸು (ಅಟ್ಟಿಱಿಂ ಈಯೆ ಸಂಬಳಂಗೊಳ್ವವೊಲ್ ಆ ತಳೋದರಿಯ ಚಿತ್ತಮಂ ಇಟ್ಟುಟಿಗೊಂಡಂ ಅರ್ಜುನಂ: **ಪಂಪಭಾ,** ೭. ೬೮)

**ತಳ್ಕಿಱಿ** – ಲೇಪಿಸು, ಬಳಿ (ಕೆನ್ನೆತ್ತರೊಳ್ ಒರ್ವರೊರ್ವರಂ ತಳ್ಕಿಱಿದುಂ ಬೊಬ್ಬಿಱಿದುಂ ತ್ರಿಪುಂಡ್ರಮಿಟ್ಟುಂ ಕೂಕಿಱಿದುಂ ತೇಗಿಯುಂ ಸಸಿನೆವರಿದುಂ [ಡಿಎಲ್ಎನ್ ಒಪ್ಪಿದ ಪಾಠ] ಬವಳಿವರಿದುಂ ಬಾನಂಗುಳಿಗೆವರಿದುಂ ಸೂಟ್ವರಿದುಂ ಆಡುವಾಗಳ್ ಉಭಯಬಲಂಗಳ್: **ಪಂಪಭಾ,** ೧೨. ೧೫೮ ವ)

**ತಳ್ಕು** – ಲೇಪನ (ಚಂದನದ ತಳ್ಕು ಅಬಳಾನಿಕರಕ್ಕದೀಗಳೀಗಳೆ ನೆಗಟ್ದತ್ತು ಎಲೆ ಪುಗಿಲದಾಗಲೆವೇಡ ವಸಂತರಾಜಾ: **ಆದಿಪು,** ೧೩. ೫); ಉಪಾಯ (ಕಡಲೊಳ್ ನೇಸಱನಟ್ದಲುಂ ಪೊಡವಿಯಂ ನುರ್ಗೊತ್ತಲುಂ ಕೊಂಕಿ ಘೀಳಿಡೆ ತಳ್ಕಿಂ ದೆಸೆಯಾನೆಯಂ ಮುಱಿಯಲುಂ: **ಕಬ್ಬಿಗಕಾ,** ೧೧೯)

**ತಳ್ತ** – ಚಿಗುರಿದ (ಸೊಗಯಿಸಿ ಬಂದ ಮಾಮರನೆ ತಳ್ತ ಎಲೆವಳ್ಳಿಯೆ ಪೂತ ಜಾತಿಸಂಪಗೆಯೆ ಕುಕಿಲ್ವ ಕೋಗಿಲೆಯೆ ಪಾಡುವ ತುಂಬಿಯೆ ನಲ್ಲರ ಒಳ್ಮೊಗಂ ನಗೆಮೊಗದೊಳ್ ಪಳಂಚಲೆಯೆ ಕೂಡುವ ನಲ್ಲರೆ ನೋಟ್ಪೊಡೆ: **ಪಂಪಭಾ,** ೪. ೨೮)

**ತಳ್ತಳಿಸು** – ಪ್ರಕಾಶಿಸು (ನಾನಾವಿಮಾನಂಗಳೊಳ್ ಭಾಸುರರತ್ನಜ್ಯೋತಿಗಳ್ ತಳ್ತಳಿಸಿರೆ: **ಆದಿಪು,** ೮. ೬೭)

**ತಳ್ತಿಱಿ** – ಎದುರಿಸಿ ಇರಿ (ಅದಿರದಿದಿರ್ಚಿ ತಳ್ತಿಱಿಯಲ್ ಈ ಮಲೆದೊಡ್ಡಿದ ಚಾತುರಂಗಬಲಮೆಂಬುದು ನಿನಗೊಡ್ಡಿ ನಿಂದುದು ಇದಂ ಓವದೆ ಕೊಲ್ವೊಡೆ ನೀನುಂ ಎನ್ನ ಕಜ್ಜದೊಳೆಸೆಗು ಎಂದು ಸೈತು ಅಜಿತಂ ಆದಿಯ ವೇದರಹಸ್ಯದೊಳ್ .. .. ನೆಱೆಯೆ: **ಪಂಪಭಾ,** ೧೦. ೬೪)

**ತಳ್ಪ** – ಹಾಸಿಗೆ (ಕಳಹಂಸಂ ಕಮಲತಳ್ಪದಿಂದ ಏಳ್ವವೊಲ್ ಒಲ್ದೆಳೆಯರಸಂ ಎಳ್ದಂ: **ರಾಜಶೇವಿ,** ೪. ೨೬)

**ತಳ್ಪು** – ಧರಿಸಿರುವಿಕೆ; ಗುಂಪು (ತಾವರೆವಳ್ಳಿಯ ತಳ್ಪಿನಿಂ ಪಸುರ್ಪಾಗೆ ನಿರಂತರಂ ಸೊಗಯಿಸಿರ್ಪುವು ಪೆರ್ಗೞಿಗಳ್ ನಿರಂತರಂ: **ಮಲ್ಲಿನಾಪು,** ೨. ೩೫)

**ತಳ್ಪೊಯ್** – ನೂಕು (ಪಲವುಂ ರಾಜಚಿಹ್ನಂಗಳಂ ಬೆಳ್ಗೊಡೆಗಳ್ ತಳ್ಪೊಯ್ದು ಅದೇಂ ಕಣ್ಗೊಳಿಸಿದುದೊ ಚಳತ್ ಚಂದ್ರಕಚ್ಛತ್ರಪಿಂಡಂ: **ಪಂಪಭಾ,** ೧೩. ೩೮); ವ್ಯಾಪಿಸು (ಪೊಸತಾಗೆ ತಮ್ಮ ಮನದೊಳ್ ತಳ್ಪೊಯ್ದು ತಳ್ತು ಆ ತಗುಳ್ಪುಗಳೊಳ್ ಪೊಕ್ಕುವು: **ಆದಿಪು,** ೬. ೨೨); ಸುರಿ (ಕಾಮಿನಿ ಕಾಮರಾಗರಸಮಂ ತಟ್ಟೈಸಿ ತಳ್ಪೊಯ್ದು ಮೇಳದೊಳಂ ಪೊಕ್ಕು ಎನಸುಂ ಮನಂಗೊಳಿಸಿದಳ್ ನಾನಾ ಪ್ರಕಾರಂಗಳಿಂ: **ಸುಕುಮಾಚ,** ೭. ೧೧); ಒತ್ತಾಗಿ ಸೇರು (ಬಿನ್ನನೆ ಕುರುಳ ನೆಟಿಲ್ಗಳ್ ತನ್ನೊಳೆ ತಳ್ಪೊಯ್ದು ನೆಗಟ್ದಿ ಕಱಿಯೆನೆ ಪೋಲ್ತು: **ಆದಿಪು,** ೭. ೧೦)

**ತಳ್ವು** – ತಡಮಾಡು (ವಿರಾಟನಿರ್ಪ ಅಱಿಕೆಯ ಪಟ್ಟಣಂ ನಮಗೆ ಇದೇ ಪಿರಿದಪ್ಪುದು ತಳ್ವದೆ ಎಯ್ದಿ ನಾಂ ತುಱುವನೆ ಕೊಳ್ವಂ ಅಂತು ತುಱುಗೊಂಡೊಡೆ ಪಾಂಡವರಿರ್ಪ ಗಂಡರೇ: **ಪಂಪಭಾ,** ೮. ೮೯); ವಿಳಂಬ (ಮೆಯ್ಗಲಿ ತಳ್ವಿಲ್ಲದೆ ಚಂದ್ರವರ್ಧನಂ ಅಭೀಪ್ಸಾವಲ್ಲರೀ ವರ್ಧನಂ .. .. ಬೈತಲ್ಲಿ ಕಾದಿರ್ಪುದುಂ: **ಪಂಪರಾ,** ೫. ೨೯)

**ತಳ್ಳಂಕ** – ಆತಂಕ (ಪಸಿಯ ಪಗಿನದೊಳ್ ಕಾಲ್ ಜಿಗಿಲ್ತು ತಳ್ಳಂಕಗೊಳ್ವ ಸಮಯದೊಳ್: **ರಾಜಶೇವಿ,** ೫. ೫೫ ವ)

**ತಳ್ಳಂಕಗುಟ್ಟು** – ತುಂಬಿ ತುಳುಕು (ಸುರವಿರಚಿತಮಂದಾನಿಳ ಆಂದೋಳದಿಂದಂ ಸುರವಂದಿಸ್ತೋತ್ರದಿಂ ದೆಸೆ ಗಗನತಳಂ ತೀವಿ ತಳ್ಳಂಕಗುಟ್ಟುತ್ತಿರೆ: **ಆದಿಪು,** ೧೦. ೧೮)

**ತಱಂಟುದಲೆ** – ಬೋಳುತಲೆ (ಎನಿಸು ಶಕ್ತಿಯುಳ್ಳೊಡಂ ಔಷಧಂ ತಱಂಟುದಲೆಯೊಳ್ ರೋಮಮಂ ಪುಟ್ಟಿಸಲಾರದು: **ಧರ್ಮಾಮೃ,** ೭. ೩೯ ವ)

**ತಱಂಬು** – ಒರಟು ನೆಲ (ತಱಂಬೊಪ್ಪೆ ನೀಂ ಸೈರಿಪ್ಪೈ ನಿನಗೆ ಮೆಯ್ಯೊಡಂಬಡುಗುಮೇ ತಪೋಮಾರ್ಗದೊಳ್: **ಹರಿವಂಶ,** ೧೪. ೧೨)

**ತಱತಱಂ** – ಅಸಂಬದ್ಧತೆಯಿಂದ (ದರವುರಮುಂ ಅಂಟಿಸುಂಟಿಯುಂ ಅರೆವೊರಕನುಂ ಎನಿಸಿ ತಱತಱಂ ನುಡಿದು ಸಭಾಂತರದೊಳ್ ರಂಜಿಪುದೆ ರಸಾಂತರಂಗಳಂ ಮುಟ್ಟೆ ನುಡಿದು ರಂಜಿಸವೇಡಾ: **ಅಜಿತಪು,** ೧. ೮೮)

**ತಱಬಱಕ** – ಹರುಕುಮುರುಕು (ಅಱೆಯದ ಬಾಲಂ ಬೀದಿಯ ಹಜೆಮಣ್ಣಿಂ ಮಾಡಿದೊಂದು ಹಾಹೆಯ ತೆಱದಿಂ ತಱಬಱಕಂ ವಿಕಟಾಕೃತಿ ನೆಱೆ ನಿಷ್ಠುರ ನಿವೃತ ಹುಂಡಸಂಸ್ಥಾನಂಗಳ್: **ಶಾಂತೀಶ್ವಪು,** ೯. ೧೦೭)

**ತಱೆ** – ಕತ್ತರಿಸು (ಸಪ್ತಸಮುದ್ರಮುದ್ರಿತ ಧರಾತಳಮಂ ಬೆಸಕಯ್ಸು ಮೀಱೆದ ಉದ್ದೃಪ್ತ ವಿರೋಧಿ ಸಾಧನಮಂ ಆಹವದೊಳ್ ತಱೆದು ಒಟ್ಟು: **ಪಂಪಭಾ,** ೧. ೧೪೯)

**ತಱೆಸಲ್** – ನಿರ್ಧರಿಸು (ತಾನುಂ ತಱೆಸಂದು ಉಗ್ರತಪಮಂ ತಡವಿಲ್ಲದೆ ಕೊಂಡು: **ಆದಿಪು,** ೨. ೬೧)

**ತಱೆಸಲವು** – ನಿರ್ಧಾರ, ನಿರ್ಣಯ (ಕೇಳ್ದಿರೆ ಪಾಂಡುಸುತರ ಮುನಿಸಿನ ತಱೆಸಲವಿನ ಚಲದ ಬಲದ ಕಲಿತನದಳವಂ: **ಪಂಪಭಾ,** ೧೦. ೨)

**ತಱು** – ಖದಿರೆಯ ಮರ (ಅಲ್ಲಿಯ ಮರಂಗಳೆಲ್ಲಂ ತಱೆಯ ಮರಂಗಳೆ ಕಲ್ಗಳೆಲ್ಲಂ ಮೊನೆಕಲ್ಗಳೆ ಮೃಗಂಗಳೆಲ್ಲಂ ಪುಲಿ ಕರಡಿಗಳೆ: **ಹರಿವಂಶ,** ೮. ೧೩ ವ)

**ತಱುಂಬಿ ನಿಲ್** – ಸ್ತಂಭನಗೊಳ್ಳು (ಚಕ್ರರತ್ನಂ ಅಯೋಧ್ಯಾಪುರಮಂ ಮುಗದೆ ತಱುಂಬಿ ನಿಂದುದಂ ಕಂಡುಂ: **ಆದಿಪು,** ೧೪. ೩ ವ)

**ತಱುಂಬು** – ಅಡ್ಡಗಟ್ಟಿ ನಿಲ್ಲು (ವನಷಂಡಂಗಳೊಳ್ ತಱುಂಬಿಯುಂ ಸರೋಜಷಂಡಂಗಳೊಳ್ ತುಂಬಿಯುಂ: **ಆದಿಪು,** ೭. ೯೭ ವ); ಸೋಲಿಸು (ನೆಗಟ್ಟೆಚ್ಚರಿಯರಿಯರಚ್ಚರಮಪ್ಪ ವಿಳಾಸಮಂ ನಿಜಭೂನಟನೈಕದೇಶಮೆ ತಱುಂಬಿದುದೆಂಬ ಸುರೂಪ ವಿಭ್ರಮಶ್ರೀ ನಿಜಮಾಗೆ: **ಪುಷ್ಪದಂಪು,** ೨. ೭೭); ಸನ್ನೆಕೋಲು (ತಱುಂಬು–ಗತಿಸ್ತಂಭೇ ಶಿಲೋದ್ವಹನದಾರೌ: **ಶಬ್ದಮದ, ಧಾ,** ೪೮೫)

**ತಱುಬು** – ನಿಗ್ರಹಿಸು (ವಿರಕ್ತನಾದಪಂ ತಱುಬಿರಲ್ ಅಗ್ನಿಯಂತೆ ಅರಗು ನಿಲ್ವುದೆ ಗಟ್ಟಿಯದಾಗಿ: **ಅನುಭವ,** ೧೭)

**ತಱುವಾಯ್** – ಕ್ರಮದಿಂದ, ಆನಂತರದಲ್ಲಿ (ತರುವಾಯಿಂದೆ ಗುರುವುಂ ದೀರ್ಘಮುಂ ಗೂಢಸಂಧಿಯುಮಾಗಿ: **ಶಬ್ದಮದ,** ೨೦ ವೃತ್ತಿ)

**ತಟ್** – ಸೇರು (ಪಸರಿಸಿ ನೀಟ್ಟಿ ತನ್ನ ಜಸದೊಳ್ ಪೆಱನೊರ್ವನ ಕೀರ್ತಿ ತಟ್ಟು ರಂಜಿಸೆ: **ಪಂಪಭಾ,** ೧೪. ೩೯)

**ತಟತಟಗುದಿ** – ಜೋರಾಗಿ ಕುದಿ (ಒಂದರ್ಥಕ್ಕೆ: ತಟತಟಗುದಿ ತಟ್ಟಳಗುದಿ ಎಂಬಿವು ಕಾಸುವ ದ್ರವ್ಯಾನಿಕರಣಂಗಳ್: **ಶಬ್ದಮದ,** ೩೩ ವೃತ್ತಿ, ೫೫)

**ತಟತಟೆಸು** – ಹೊಳೆಯುತ್ತಿರು (ತಮ್ಮಯ ಬೆಳಗು ಅಗ್ಗಳಿಸಿ ತಟತಟೆಸಿ ವಿದ್ಯುತ್ ವಿಳಸಿತಮೆನಿಸಿದುವು ನರನ ದಿವ್ಯಾಸ್ತ್ರಂಗಳ್: **ಪಂಪಭಾ,** ೧೦. ೪೭)

**ತಟತ್ತಟೀಸು** – ತಟತಟೆಸು (ಬೆಳಗುವ ಸೊಡರ್ಗಳ ಬೆಳಗುಮಂ ಇಳಿಸಿ ತಟತ್ತಟೆಸಿ ಪೊಳೆಯೆ: **ನೇಮಿನಾಪು, ಪಂಪಭಾ,** ೧೦. ೪೭)

**ತಟಪಟನೆ** – ಜೋರಾಗಿ (ಒಟ್ಟಿದ ಕಚ್ಚಿಂ ತಟಪಟನೆ ಪುಳ್ಳಿಯೊಳಗಣ ಪುಱು ಬೇಗಂ ಬೇಗುಂ: **ನೇಮಿನಾಪು,** ೪. ೧೨೯)

**ತಟಲ್** – ಬಲಿತ ಕಾಯಿ, ದೋರೆಗಾಯಿ (ಒಂದರ್ಥಕ್ಕೆ; ತಟಲೆಂದು ಮುತ್ತ ಕಾಯ್: **ಶಬ್ದಮದ,** ೩೩ ವೃತ್ತಿ, ೫೫))

**ತಟೆ** – ತೊಲೆ, ದಪ್ಪನಾದ ದಿಮ್ಮಿಯ ಜಗುಲಿ (ತನ್ನ ಮನೆಯಂಗಣದೊಳ್ ಸೆಂಡಾಡುವ ತಟೆಯುಂ ಆನೆಯನೇಱುವ ವಿನೋದಂ ಮೊದಲಾಗೊಡೆಯ ವಿನೋದ ಸ್ಥಾನಂಗಳೆಲ್ಲಮಂ ನೋಡುತ್ತುರ್ಕ್ಕಂ: **ವಡ್ಡಾರಾ,** ಪು ೪೫, ಸಾ ೨೧); ಆನೆಗಳ ಹೋರಾಟಕ್ಕೆ ಇರಿಸಿರುವ ಮರದ ದಿಮ್ಮಿಗಳ ಗೋಡೆ (ತಟೆಯೊಳ್ ಪೋರ್ವ ಮದಾಂಧಸಿಂಧುರಚಯಂ; **ಧರ್ಮಮಧು,** ೨. ೪೮)

**ತಟೆಗೋಂಟೆ** – ತಳಿಗೋಂಟೆ, ಬೇಲಿ, ಮರದ ಕೋಟೆ (ಅರಿನೃಪಕೋಟಿಯಂ ಆಟರಲೆಂದು ಆಸ್ಫೋಟಿಸಿ ನಿಶಿತಶರಕೋಟಿಯೊಳ್ ತಟೆಗೋಂಟೆಯನಿಕ್ಕಿ ವೀರರಸನಿಕೇತನನಾಗಿರ್ದ ಕಳಶಕೇತನನಂ ನೋಡಿ ದ್ರುಪದಂ ಸೈರಿಸದೆ: **ಪಂಪಭಾ,** ೧೨. ೧೮ ವ)

**ತಟಿ** – ಛತ್ರಿ (ಕೊಡೆ ತಟಿ ತಳ್ತ ಸೀಗುರಿ ಕರೀಂದ್ರಘಟಾಳಿ ತುರಂಗಸೈನ್ಯಂ ಉರ್ಕುಡುಗದೆ: **ಆದಿಪು,** ೪. ೯೨)

**ತಟಿದುಱುಗಲ್** – ಛತ್ರಿಗಳ ಸಮೂಹ (ಆ ರುದ್ರಾವತಾರನ ಕೆಲದೊಳ್ ಕಿಕ್ಕಿಱೆಗಿಱೆದ ತಟಿದುಱುಗಲ ನಡುವೆ ಪೊನ್ನ ರಥಮನೇಱೆ ನಿಂದಂ: **ಪಂಪಭಾ,** ೧೦. ೫೭ ವ)

**ತಟ್ಕೆಗೊಳ್** – ಆಲಂಗಿಸು (ಮುಳಿದು ವಿಯುಕ್ತ ವಲ್ಲಭಜನಂ ತಳುವಿಲ್ಲದೆ ತಟ್ಕೆಗೊಂಡುದು: **ಕುಸುಮಾಕಾ,** ೭. ೨೧)

**ತಟ್ಕೈಸು** – ಆಲಂಗಿಸು, ಅಪ್ಪಿಕೋ (ಅಟ್ಟಿರ್ತು ನೋಟಂ ಬೆರಸು ಪರಸಿ ತಟ್ಕೈಸಿಕೊಂಡು ಅಮ್ಮ ನೀಂ ಮಮ್ಮನೆಯಪ್ಪೈ ನೋಡು ನಣ್ಪಿಂ: **ಆದಿಪು,** ೨. ೨೦)

**ತಟ್ಗು** – ತಗ್ಗು, ಕ್ಷೀಣಿಸು (ತಟ್ಗಿದ ನೊಗಂ ಜೀಱೆಟ್ಟಿ ಚಕ್ರಂ ಸಿಡಿಲ್ ಪೊಡೆದಂತೆ ಒರ್ಮೆಯೆ ಸೂಸಿ ಪಾಱೆದ ಮಡಂ: **ಪಂಪಭಾ,** ೧೦. ೯೧)

**ತಟ್ಟಳಗುದಿ** – ತಟತಟಗುದಿ (ಒಂದರ್ಥಕ್ಕೆ: ತಟತಟಗುದಿ ತಟ್ಟಳಗುದಿ ಎಂಬಿವು ಕಾಸುವ ದ್ರವ್ಯಾನಿಕರಣಂಗಳ್: **ಶಬ್ದಮದ,** ೩೩ ವೃತ್ತಿ, ೫೫)

**ತಟ್ಟಿಲ್** – [ಬೆಟ್ಟದ] ತಪ್ಪಲು (ಮೇರುಪರ್ವತದ ತೆಂಕಣ ತಟ್ಟಿಲೊಳ್ ದ್ವಾದಶಯೋಜನ ಪ್ರಮಾಣಮಪ್ಪ ಜಂಬೂವೃಕ್ಷದ ಕೆಲದೊಳ್: **ಪಂಪಭಾ,** ೬. ೩೦ ವ)

**ತಟ್ಪು** – ಆಲಿಂಗನ (ವಿಜಯಲಕ್ಷ್ಮಿವೊಲೀತನ ತೋಳ ತಟ್ಪಿನೊಳ್ ಪೊಸಯಿಸು ನಲ್ಮೆಯಂ: **ಪಂಪರಾ,** ೯. ೧೬೭); ಆಲಂಗಿಸು (ಪಾರಿವಂಚೆ ಕೊಂಚೆ ಗಿಳಿ ಸೋಗೆ ಕುಕಿಲ್ ತೊಣೆವಕ್ಕಿ ತಮ್ಮತಮ್ಮೊರಗೆ ತಟ್ಪಿಲುಂಬಿ ದನಿಗೆಯ್ದಪುವು ಎಂದು ಒಡನೆಟ್ಟು: **ಸೂಕ್ತಿಸುಧಾ,** ೧೪. ೫೦)

**ತಟ್ಪೊಯ್** – ಮೆತ್ತಿಕೊ (ನೆತ್ತರ ಪೊನಲೊಳ್ ನಾಂದು ನನೆದ ಮೆಯ್ಯುಮಂ ತೊಯ್ದು ತಟ್ಪೊಯ್ದ ಜಡೆಯುಂ: **ಪಂಪಭಾ,** ೧. ೧೦೫ ವ)

**ತಾಂಗು** – ಮೇಲೆ ಬೀಳು (ಧವಳಹಯಂ ಧವಳರಥಂ ಧವಳ ಉಷ್ಣೀಷಂ ಶಶಾಂಕಸಂಕಾಶ ಯಶೋಧವಳಿತ ಭುವನಂ ತಾಗಿದಂ ಅವಯವದಿಂ ಬಂದು ಧರ್ಮತನಯನ ಬಲದೊಳ್: **ಪಂಪಭಾ,** ೧೧. ೩೯); ತಡೆ; ತಡೆ (ಊರಿಲ್ಲ ಕೇರಿಯಿಲ್ಲ ಎಲ್ಲಿ ಚರಿಗೆವುಗುವಂ ಅಂತು ಕೆಮ್ಮನೇಕೆ ಎಮ್ಮಂ

ತಾಂಗಿದಪಿರಿ ಎಂದೊಡೆ: **ವಡ್ಡಾರಾ,** ಪು ೯೦, ಸಾ ೨೯); ಪ್ರತಿಭಟಿಸು (ಇರದೆಂಟುಂ ದಿಗ್ಗಜಂಗಳ್ ನೆರೆದಿದಿರೊಳ್ ತಾಂಗೆಯುಂ .. .. ಮತ್ಕರಿ ತಾಂಗಲ್ ತಾನೆ ಸಾಲ್ಗುಂ: **ಆದಿಪು,** ೧೪. ೯೧); ತಗ್ಗಿಸು (ಲೋಲಲೋಚನಮಂ ತಾಂಗಿದನಿಲ್ಲ ಜಾನಕಿಯ ಸೌಂದರ್ಯಕ್ಕಿದಾಶ್ಚರ್ಯಮೇ: **ಪಂಪರಾ,** ೫. ೬೩)

**ತಾಂಡವ** – ಕುಣಿತ, ನೃತ್ಯ (ತಾಂಡವಾಡಂಬರದೊಳ್ ನಾನಾವಿಧಂ ನರ್ತಿಪ ನಟನ ಭುಜಾದಂಡಮೋ ಎಂಬಂತಿರೆ: **ಕಾದಂಸಂ,** ೧. ೩೮)

**ತಾಂಬೂಲ** – ವೀಳೆಯ (ಕೆಲರಂಭೋರುಹದಿಂ ಕೆಲರ್ ಸುರಗಿಯಿಂ .. .. ತಾಂಬೂಲದಿಂದಂ ಕೆಲರ್ .. .. ಪೂಜಿಸಿ: **ಧರ್ಮಾಮೃ,** ೫. ೧೪೮)

**ತಾಂಬೂಲಕರಂಕವಾಹಕ** – ತಾಂಬೂಲಕರಂಕ ವನ್ನು ಹಿಡಿದಿರುವವನು (ತಾಂಬೂಲಕರಂಕವಾಹಕಪ್ರದೀಯಮಾನ ವೀಟಿಕಾಗ್ರಹಣ ಲೀಲಾಸಕೃತ್ಪ್ರರಾವೃತ ವಾಮಪಾನಿಪಲ್ಲವನುಂ: **ಚಂದ್ರಪ್ರಪು,** ೮. ೮೩ ವ)

**ತಾಂಬೂಲಕರಂಕವಾಹಿನಿ** – ತಾಂಬೂಲ ಕರಂಕವನ್ನು ಹಿಡಿದಿರುವ ದಾಸಿ (ಸಂತತ ಸನ್ನಿಹಿತೆಯಪ್ಪ ತಾಮಬೂಲಕರಂಕವಾಹಿನಿ ಮಕರಿಕೆ ಎಂಬಳ್ ಇಂತೆಂದಳ್: **ಕಾದಂಬ,** ೨. ೪೪ ವ)

**ತಾಗು** – ಯುದ್ಧಮಾಡು (ಆಕಾಶದ ಕವಿಯುಂ ನೆಲದ ಕಲ್ಲೆಯುಂ ಮುನ್ನಮೆ ಮೇರೆದಪ್ಪುವುದುಮಂ ತನ್ನೊಳ್ ಅಳವಡಿಸಿಕೊಂಡು ತಾಗಿದಾಗಳ್: **ಪಂಪಭಾ,** ೧೨. ೧೯ ವ)

**ತಾಟಂಕ** – ಕಿವಿಯ ಓಲೆ (ನಯನೋತ್ಪಳಂ ಕನಕ ತಾಟಂಕ ಅರ್ಕಬಿಂಬ್ರಭಾಶ್ರೀವಿನ್ಯಾಸಕಮಾಗಿಯುಂ: **ರಾಜಶೇವಿ,** ೨. ೧೧೮)

**ತಾಟಿಸು** – ಘಟ್ಟಿಸು, ಬಡಿ (ಭರದಿಂದಂ ದಂಡದೊಳ್ ತಾಟಿಸಿದೊಡೆ ವಿಜಯಾರ್ಧಾಚಳಂ ತೊಟ್ಟನಾಗಳ್ ಬಿರಿದತ್ತು ಎಂಬಂತುಂ: **ಆದಿಪು,** ೧೩. ೩೬)

**ತಾಡನ** – ಹೊಡೆಯುವುದು (ಅರಸಂ ಕರತಳತಾಡನ ಪುರಸ್ಸರಂ ದೇವ ಬನ್ನಿಂ ಎಂದು ಒಲವಿಂದೊಡ್ಡಿರೆ ಕೈಯಂ: **ಚಂದ್ರಪ್ರಪು,** ೩. ೪೬)

**ತಾಣ** – [ಸ್ಥಾನ] ಎಡೆ (ಮೂಡಿಗೆ ಕುಕ್ಕಂಬಂ ಸುಟೆಸಿ ಜೊಂಪಂ ಬೀಡುಬಿಡುವ ಇಂಬು ಕದಳಿ ತೆಂಗಿನ ತಾಣಂ ಜಾಣಿಂ ನೀರ್ದಾಣಮೆಂದು ಎಡೆಯಱಿದುಂ: **ಪಂಪಭಾ,** ೫. ೪೧)

**ತಾಣಬಟ್ಟ** – ಸ್ಥಾನಭ್ರಷ್ಟ (ಎಡರ ಪದಂಗಳಪರ್ಭರಂಶಕ್ಕೆ: ಸ್ಥಾನದೀಪಿಕೆ–ತಾಣದೀವಿಗೆ, ಸ್ಥಾನಭ್ರಷ್ಟಂ–ತಾಣಬಟ್ಟಂ: **ಶಬ್ದಮದ,** ೩೦೪ ಪ್ರ)

**ತಾಣಂದರ** – [ಸ್ಥಾನಾಂತರ] ಸ್ಥಳ, ಬೀಡು (ಬನಗಳೊಳ್ ತಾಣಂದರಮಾಗಿರ್ಪ ಕೆಂಗಣ್ಣಕ್ಕಿ ಅಲರ್ವಕ್ಕಿ ಕನ್ನಡವಕ್ಕಿ ಪೊಣರ್ವಕ್ಕಿ ಮೊದಲಾದ ದಟ್ಟಿಯ ಕೂರಾಳ್ಗಳುಂ: **ಕಬ್ಬಿಗಕಾ,** ೧೫೩ ವ)

**ತಾತ** – ತಂದೆ (ದೇವ ಭವತ್ ತಾತಂ ಬಂದು ಈ ವನದುಕಂತದಲ್ಲಿ ಬಿಟ್ಟಿರ್ದಪಂ: **ಕುಸುಮಾಕಾ,** ೧೫. ೧೧೫)

**ತಾತ್ಪರ್ಯ** – ಉದ್ದೇಶ (ಆರ್ಯರ ಯಶಮಿದು ಖಳರ ಕದರ್ಯರ ದುರ್ಯಶಮಿದು ಎಂದು ತೋರ್ಪಲ್ಲಿಯೆ ತಾತ್ಪರ್ಯಂ ಎನಗೆ: **ಲೀಲಾವತಿ,** ೧. ೫೩)

**ತಾತ್ಪರ್ಯಕಾರ್ಯ** – ಉದ್ದಿಷ್ಟ ಕೆಲಸ (ಮಗನೆ ತಾತ್ಪಯಕಾರ್ಯಸಿದ್ಧಿಯಪ್ಪಂತು ರಾಜ್ಯದೊಳ್ ನಿಂದು .. .. ಸುಖಮನನುಭವಿಸು: **ಮಲ್ಲಿನಾಪು,** ೯. ೬೫ ವ)

**ತಾತ್ಪರ್ಯಾರ್ಥ** – ಆಶಯ (ಅವಱವಱ ಬೞಿಯೊಳ್ ವೃತ್ತಿಯ ವಿಸ್ತರಂ ವ್ಯಾಕುಲಮಾದಪ್ಪುದೆಂದು ಸೂತ್ರಕ್ಕೆ ತಾತ್ಪರ್ಯಾರ್ಥಂ ಪ್ರವರ್ತಿಸುತ್ತುಮಿರೆ ಪೇೞ್ವೆಂ: **ಶಬ್ದಮದ,** ೬ ವೃತ್ತಿ)

**ತಾದಾತ್ಮ್ಯ** – ಅದರಲ್ಲಿ ಲೀನವಾಗಿರುವುದು (ಇಂತು ತಾದಾತ್ಮ್ಯಮನೋಹರಂಗಳುಂ ಆಯತ್ಯವಿರುದ್ಧಂಗಳುಮಪ್ಪ ಪರಂಪರೆಗಳಿಂ: **ಚಂದ್ರಪ್ರಪು,** ೨. ೧೪ ವ)

**ತಾನ** – ಸಂಗೀತದ ಅಲೆಅಲೆಯಾದ ನಾದಕ್ರಮ (ಅನುಕೃತ ಮಯೂರಕೇಕಾನಿನಾದ ಮರದುಗಾನ ತಾನ ನಿಪುಣರ್: **ಜಗನ್ನಾವಿ,** ೩. ೭೬)

**ತಾಪನ** – ಬಿಸಿ ಮಾಡುವುದು (ಕನಕಂ ಕಲ್ಲೊಳಗಿಂ ತೆಗೆವನ್ನಂ ತಾಂ ದಹನ ತಾಪನಕ್ರಿಯೆವೇೞ್ಕುಂ: **ಸಮಯಪ,** ೧೫. ೨೯)

**ತಾಪಸ** – ತಪಸ್ವಿ (ತಾಪಸನ ಶಾಸನಮೆಂಬುದುಪಾಪದ ರೂಪಱಿತುಂ ಅಱಿಯದಂತೆ: **ಪಂಪಭಾ,** ೨. ೨೦)

**ತಾಪಸಾಶ್ರಮ** – ತಪೋವನ (ಅಂತು ಕೊಂತಿಯ ಗರ್ಭಭಾರಮಂ ತಾಪಸಾಶ್ರಮದ ಅನುರಾಗಮುಂ ಒಡನೊಡನೆ ಬಳೆಯೆ: **ಪಂಪಭಾ,** ೧. ೧೨೦ ವ)

**ತಾಪಿಂಛ** – ಹೊಂಗೆಯ ಮರ (ಮದಗಂಧಸಾರಸಪ್ತಚ್ಛದಮುಗಳಿಂ ಪುದಿದು ಬೆಳೆದ ತಾಪಿಂಛದ ಪೆರ್ವೊದಱ ಕರಿಶಂಕೆಯಿಂ: **ಚಂದ್ರಪ್ರಪು,** ೫. ೫೦)

**ತಾಪಿಚ್ಛ** – ಹೊಂಗೆಯ ಮರ (ಕಾಳಸ್ಕಂಧಂ ತಮಾಳಮೆನೆ ತಾಪಿಚ್ಛಂ: **ಅಭಿಧಾವ,** ೧. ೮. ೮)

**ತಾಪು** – ಭೇದಿಸು, ಸೀಳು (ಮದವತ್ ದಂತಿಗಳಂ ಕಱುತ್ತು ಅಸಗವೊಯ್ವೊಯ್ದಾಡಿಯೊಳ್ ಭೀಮಂ ಆರ್ದು ಒದೆದು ಈಡಾಡಿದೊಡೆ ಅತ್ತ ಅಜಾಂಡತಟಮಂ ತಾಪನ್ನೆಗಂ ಪಾಱಿ ತಾಱಿದ ಪೇರಾನೆಯ ಒಡಲ್ಗಳ್: **ಪಂಪಭಾ,** ೧೧. ೬೭); ತಾಕು (ಕಾಯ್ದು ಕರ್ಬೊನ್ನ ಕೀಲ್ಗಳಂ ನೆಲನಂ ತಾಪಿನಂ ಉರ್ಚಿ ಪೋಗಿ ಇಱಿದೊಡೆ: **ವಡ್ಡಾರಾ,** ಪು ೫೨, ಸಾ ೧)

**ತಾಮರಸ** – ತಾವರೆ (ಗೊಟ್ಟಿಗ್ಗಾಣರಂತಿರೆ ಮಱಿದುಂಬಿ ಮೇಳದವರಂತಿರೆ ಸಾರಿಕೆ ರಾಜಗೇಹದಂತಿರೆ ಕೊಳಂ ಅಲ್ಲಿ ತಾಂ ಅರಸರಂತಿರೆ ತಾಮರಸಂಗಳೊಪ್ಪುಗುಂ: **ಪಂಪಭಾ,** ೫. ೫೮)

**ತಾಮರಸನಿಭಾಸ್ಯೆ** – ತಾವರೆಯಂತಹ ಮುಖವುಳ್ಳವಳು (ಆ ತಾಮರನಿಭಾಸ್ಯೆಗೆ ಸುರಕಾಮಿನಿ ಕಟ್ಟಿದಿರಿರೊಳೆಸೆಯೆ ಕನ್ನಡಿವಿಡಿದಳ್: **ಆದಿಪು,** ೭. ೯)

**ತಾಮರಸಾಮೋದ** – ತಾವರೆಯ ಮಕರಂದ (ಶ್ರೀಮದಮರಾಂಗನಾನನ ತಾಮರಸಾಮೋದಮತ್ತ ಮಧುಕರಂ ಕಲ್ಪಾಮರನೊಸೆದಂ: **ಆದಿಪು,** ೩. ೧)

**ತಾಮರಸೋದ್ಭವ** – ತಾವರೆಯಲ್ಲಿ ಹುಟ್ಟಿದವನು, ಬ್ರಹ್ಮ (ಚಿಂತಾಮಣಿ ಕಾಮಧೇನು ಸುರಭೂರಹಮೆಂಬಿವನೇಕೆ ಮಾಡಿದಂ ತಾಮರಸೋದ್ಭವಂ ಜಡಜಜಂಗೆ ವಿವೇಕಮದೆಲ್ಲಿ ಬಂದುದೋ: **ಅಜಿತಪು,** ೧. ೬೨)

**ತಾಮರೆ** – ತಾವರೆ ತಾಮರೆಗಂ ಚಂದ್ರಂಗಂ ತಾಮಸಮಂ ಕಳೆದು ಕಾಣ್ಕೆ ಮಾಳ್ಪಂತೆವೊಲ್: **ಆದಿಪು,** ೭. ೯)

**ತಾಮೆ** – ತಾವೆ (ಆಚಾರ್ಯರೆಂಬೀ ಪೆಸರ್ ಜಗತೀವ್ಯಾಪಕಮಾಗೆ ತಾಮೆ ಕಣಿಯಾಗಿರ್ದರ್ ಗುಣಂಗಳ್ಗೆ: **ಅಜಿತಪು,** ೧. ೩)

**ತಾಮ್ರ** – ಒಂದು ಲೋಹ (ಪೊಲೆಯಂ ಪಡೆದ ಸುವರ್ಣಂ ಕಿಲುಬುಗೊಂಡಿರ್ದು ತಾಮ್ರಮಕ್ಕುಮೆ: **ಸಮಯಪ,** ೧೫. ೧೦)

**ತಾಮ್ರಚೂಡ** – ಹುಂಜ (ಕೂಗಿದುದೇಕೆ ಈ ಕೃತಕ ತಾಮ್ರಚೂಡಂ ಇದೇಕೆಂದು ಆರಟೆವೆರಯ್ಯ ವಿಧಿವಿಳಸನಮಂ: **ಯಶೋಧಚ,** ೩. ೨೭)

**ತಾಮ್ರತುಂಡ** – ಕೆಂಪು ಕೊಕ್ಕು[ಉಳ್ಳುದು], ಗಿಣಿ (ಎಱಂಕೆಗಳಂ ಬಿದಿರ್ಚಿಕೊಂಡು ತಾಮ್ರತುಂಡಂ ಕಣ್ದೆಱೆದು: **ಉದ್ಭಟಕಾ,** ೫. ೨ ವ)

**ತಾಮ್ರಪರ್ಣಿ** – ಒಂದು ನದಿ (ನೂತನ ಶುಕ್ತಿಜಕ್ಕೆ ತಾಯ್ವನೆಯೆನಿಸಲ್ ದೊರೆ ತಾಮ್ರಪರ್ಣಿ ತಾನೊಂದೆ ವಲಂ: **ಕಾವ್ಯಾವಲೋ,** ೮೮೭)

**ತಾಮ್ರಮಯ** – ತಾಮ್ರದಿಂದ ತುಂಬಿದ (ತಾಮ್ರಮಯ ಗುಹ್ಯಕಪ್ರತಿರೂಪಂ ಕಿಚ್ಚಿಂಗೆ ತೋಱಿದ ಅರಗು ಕರಗುವಂತೆ ಕರಗಿ ಪೊನಲ್ವರಿಯೆ ಬಿಟ್ಟಿರ್ದ ಇಂದ್ರಾಯುಧಮಂ ಕಂಡು: **ಶಾಂತಿಪು,** ೬. ೨೯ ವ)

**ತಾಮ್ರಲೋಚನ** – ಕೆಂಗಣ್ಣು[ಳ್ಳವನು] (ಖಳದುಶ್ಶಾಸನಲೋಹಿತ ಜಳಮಂ ಕುಡಿದೆಂ ಅಸುಂ ಅಳ್ಕಿಸಲಾಱದೆ ಕಣ್ಣೊಳೆ ಕಾಣುವಂತೆ ಕೌರವಕುಳಾಂತಕಂ ತರಲತಾಮ್ರಲೋಚನನಾದಂ: **ಗದಾಯು,** ೮. ೫)

**ತಾಯ್** – ತಾಯಿ (ಜನನಿ ಸವಿತ್ರಿ ಮಾತೃ ಸುಷು ತಾಯ್: **ಅಭಿಧಾವ,** ೧. ೧೧. ೧೭)

**ತಾಯ್ಗರು** – ಮೂಲಸ್ಥಾನ (ವರಪುಣ್ಯೋದಯಹೇತು ಶಾಶ್ವತಮಹಿಂಸಾಲಕ್ಷಣಂ ಸದ್ಗುಣಾಕರಂ ಒಳ್ಪಿಂಗೆಱೆವಟ್ಟು ನೆಟ್ಟನೆ ಪುನರ್ಜಾತಕ್ಷಯಶ್ರೀಗೆ ತಾಯ್ಗರು: **ಸುಕುಮಾಚ,** ೧. ೬)

**ತಾಯ್ಗಾಡು** – ಮೂಲಸ್ಥಾನವಾದ ಕಾಡು (ಮನಸಿಜನೆಂಬಾನೆಗೆ ತಾಯ್ಗಾಡೆನಿಪ್ಪ ಚೆಲ್ವಂ ತಳೆದುದ್ಯಾನವನದೊಳಗೆ ಪೊಕ್ಕಂ: **ಮಲ್ಲಿನಾಪು,** ೬. ೧)

**ತಾಯ್ಗಿರಿ** – ತಾಯಿ ಬೆಟ್ಟ, ದೊಡ್ಡ ಬೆಟ್ಟ (ಕುಳನಗಂಗಳ ಕುಲದೈವಮಧಿರಾಜಂ ತಾಯ್ಗಿರಿ ಮೇರು ಮಹೀಧರೇಂದ್ರಂ: **ಶಾಂತಿಪು,** ೧೦. ೬೬)

**ತಾಯ್ದೊಟ್ಟಿಲ್** – [ತಾಯ್+ತೊಟ್ಟಿಲ್] ಆಶ್ರಯ (ಜಗಕ್ಕೆ ತನ್ನುಂಗುಟಮೆ ತಾಯ್ದೊಟ್ಟಿಲಾದ ಗಿರಿಸುತೆಯಂ: **ಗಿರಿಜಾಕ,** ೩. ೬೬)

**ತಾಯ್ಮಣಲ್** – ಜಲಾಶಯದ ತಳದ ಮರಳು (ಇಂಗಡಲ ತಾಯ್ಮಣಲ್ ಬೆಳ್ದಿಂಗಳ ಬಯಲಂತೆ ವಿಶದಮಾಗೆ: **ಆಚವರ್ಧ,** ೧೪. ೩೩)

**ತಾಯ್ವನೆ** – ತಾಯ ಮನೆ, ತವರು (ತಣ್ಣೆಲರ ತಾಯ್ವನೆ ತಾನೆನಿಸಿರ್ದುದು ಆ ವನಂ: **ಕುಸುಮಾಕಾ,** ೧೧. ೧೭೯)

**ತಾಯ್ವಾಲ್** – ತಾಯ ಹಾಲು (ಆರ್ ಕಾವರ್ ಅಂತಕರಾಜಂ ಬಲಗರ್ವಿತಂ ಮುಳಿದೊಡಂ ತಾಯ್ವಾಲೆ ನಂಜಾದೊಡಂ: **ಶಾಂತಿಪು,** ೬. ೯೩)

**ತಾಯ್ವಿಡಿ** – [ತಾಯ್+ಪಿಡಿ] ಮರಿ ಹಾಕಿದ ಆನೆ (ತಾಯ್ವಿಡಿಯ ಸೋಂಕಿನೊಳೊಯ್ಯನೆ ಸೋಂಕಿ ನಿಲ್ವ .. .. ಕಲಭವ್ರಜಮಿರ್ದುದು ಅದೊಂದು ತಾನದೊಳ್: **ಜಗನ್ನಾವಿ,** ೧೬. ೧೧)

**ತಾಯ್ವೆದೆಗೂಡು** – ನೆಲವು ಹದಗೊಳ್ಳು (ನೆಲಮನುಱಿಂತಾಗೆ .. .. ತಾಯ್ವೆದೆಗೂಡೆ ಬಿತ್ತಿ ಪೆಣನಂ ಬೇಱೊಂದು ಶೌರ್ಯಾಂಕುರಂ ತಲೆದೋಱಿತ್ತು: **ಪಂಪರಾ,** ೧೧. ೧೨೭)

**ತಾರ** – ಬೆಳ್ಳಿ (ಹಲ ಮುಸಲಾಯುಧಂ ನಡೆವ ತಾರ ನಗೇಂದ್ರಮನೊಂದು ಕರ್ಮುಗಿಲ್ ಬಳಸಿದವೊಲ್ ವಿರಾಜಿಸೆ: **ಪಂಪರಾ,** ೬. ೭೬); ಮುತ್ತಿನ ಹಾರ (ಸುಲಿಪಲ್ ಮಿಂಚಿನ ಗೊಂಚಲುಟ್ಟ ದುಗುಲಂ ಗಂಗಾನದೀಫೇನಂ ಉಜ್ಜ್ವಲಮುಕ್ತಾಭರಣಂ ತರತ್ತರಳ ತಾರೋದಾರ ಭಾ ಭಾರಂ .. .. ಕಣ್ಗೊಪ್ಪಿತಾ ಕಾಂತೆಯಾ: **ಪಂಪಭಾ,** ೧. ೧೩೭)

**ತಾರಕ** – ದಾಟಿಸುವವನು (ಭವಾಂಬುನಿಧಿ ತಾರಕಂ .. .. ರಘುಪ್ರವರನರ್ಚಿಸಿದಂ: **ಪಂಪರಾ,** ೧೪. ೨೦೭); ನಕ್ಷತ್ರ (ಮಧುರ ತಾರಕಾವಸನಂ ಭಾಸುರ ಚಂದ್ರಕಾತಿಲಕಂ ಉಡುವರ ಕಾಂತಿಯುತಂ ಬೆಡಂಗುವೆತ್ತಾಗಳ್: **ಅಜಿತಪು,** ೬. ೩೯); ಒಬ್ಬ ರಾಕ್ಷಸ ಹೆಸರು (ಅಪ್ರತಿಮ ಪ್ರತಾಪಭಂಗುರ ಭುವನತ್ರಯಂ ನೆಗಳ್ದನಕ್ರಮಕಾರಿ ಜಿತಾರಿ ತಾರಕಂ: **ಗಿರಿಜಾಕ,** ೬. ೫)

**ತಾರಕಗಣ** – ನಕ್ಷತ್ರಮುಂಜ (ಸೂಸುವ ಶೀಕರಾಳಿ ತಾರಕಗಣದೊಳ್ ಸಮಂಬಡೆಯೆ: **ಜಗನ್ನಾವಿ,** ೧. ೪೪)

**ತಾರಕರಿಪು** – ತಾರಕನ ಶತ್ರು, ಷಣ್ಮುಖ (ಗೌರೀಸುತಂ ವಿಶಾಖಂ ತಾರಕರಿಪು ಷನ್ಮುಖಂ ಮಹಾಸೇನಂ ಕ್ರೌಂಚಾರಿ ಗುಹಂ ಸೇನಾನಿ ಮಯೂರರಥಂ ಸ್ವಾಮಿ ಕಾರ್ತಿಕೇಯಂ ಸ್ಕಂದಂ: **ಅಭಿಧಾವ,** ೧. ೧. ೧೮)

**ತಾರಕಾಪತಿ** – ಚಂದ್ರ (ಪ್ರಜಾಪತಿ ಸಂವತ್ಸರ ಚೈತ್ರಮಾಸ ಸಿತಪಕ್ಷ ದ್ವಾದಶೀ ತಾರಕಾಪತಿವಾರಂ ಬರೆ ಪಂಚತಂತ್ರಮೆಸೆದತ್ತು ಈ ಧಾತ್ರಿಯೊಳ್: **ಪಂಚತಂತ್ರ,** ೪೪೮)

**ತಾರಕಾರಿ** – [ತಾರಕ+ಅರಿ] ನಕ್ಷತ್ರಗಳ ಶತ್ರು, ಸೂರ್ಯ (ವಿಹೃತದೋಷಂ ಅನಾರತಂ ಎನ್ನ ಹೃತ್ಸರೋರುಹಕುಱಿ ತಾರಕಾರಿ ಮಿಗೆ ಮಾಡುಗೆ ಭವ್ಯತರಪ್ರಮೋದಮಂ: **ರಾಜಶೇವಿ,** ೧. ೮)

**ತಾರಕಿತ** – ನಕ್ಷತ್ರಗಳಿಂದ ಕೂಡಿದ (ಸಭಾಂಗಣಂ ಒಪ್ಪೆ ವೀರನಾರಾಯಣನ ತಾರಕಿತ ನಭದವೋಲ್ ಸೊಗಯಿಸುಗುಂ: **ಕವಿರಾಮಾ,** ೩. ೧೮೦)

**ತಾರಕೋತ್ಕರ** – ನಕ್ಷತ್ರಮುಂಜ (ಸೊಗಯಿಪ ತಾರಕೋತ್ಕರದ ಮಧ್ಯದ ಶೀತಮರೀಚಿ ರೋಹಿಣೀಯುಗಮೆನೆ: ಚಂದ್ರಪ್ರಪು, ೭. ೧೫೧)

**ತಾರಗೆ** – ನಕ್ಷತ್ರ (ಕೈದೀವಿಗೆಗಳ ಬೆಳಗುಂ ತರತರದಿನೊಗೆವ ತಾರಗೆಗಳ ಗೊಂದಳಮುಂ ಇಳಾತಳದ ವಿಯತ್ತಳದ ವಿಳಾಸಮನದೇನೊಡಂಬಡಿಸಿದುದೋ: **ಆದಿಪು,** ೧೨. ೩)

**ತಾರಗೆದುಱುಗಲ್** – ನಕ್ಷತ್ರಗಳ ಗೊಂಚಲು (ತಾರಗೆದುಱುಗಲ್ ನವಸಂಧ್ಯಾರಾಗದೊಳೆಸೆವ ತೆಱದೆ ಪದನಖರುಚಿಗಳ್: **ಜಗನ್ನಾವಿ,** ೧. ೫೪)

**ತಾರನಗೇಂದ್ರ** – ಬೆಳ್ಳಿಬೆಟ್ಟ (ಲತಾಂಗಿ .. .. ಎಱೆದಳ್ ಮಾಡಮಂ ಅದ್ರಿರಾಜಸುತೆ ತಾರನಗೇಂದ್ರಮಂ ಏಱುವಂದದಿಂ: **ಕಾದಂಬ,** ೬. ೧೦೯)

**ತಾರಯಿಸು** – ಜೋರಾಗಿ ಧ್ವನಿಮಾಡು (ಚಕ್ರಿ ಬೀಣೆ ಬಾಜಿಸೆ ಸುತಿಗೂಡಿ ತಾರಯಿಪ ತುಂಬಿಗಳಂತೆ: **ಆಚವರ್ಧ,** ೫. ೬೧)

**ತಾರಭೂಧರ** – ಬೆಳ್ಳಿಬೆಟ್ಟ (ತಾರಭೂಧರ ಸಿತಕೀರ್ತಿಯೆಂಬ ಬೆಲಸಂ ಬೆಳೆದಮ ಪರಸೈನ್ಯಭೈರವಂ: **ಗದಾಯು,** ೧೦. ೫)

**ತಾರಶೈಲ** – ಬೆಳ್ಳಿಬೆಟ್ಟ (ರಣದೊಳ್ ರಾವಣನಂ ಜವಂಗೆ ಪೊಸತಿಕ್ಕಲ್ ತಾರಶೈಲಕ್ಕೆ ತೆಂಕಣದಿಂ ಕಂಕಣದಂತೆ ಕೈಗೆವರಿಸಲ್ .. .. ಪುಟ್ಟಿದವರೇಂ ಸಾಮಾನ್ಯರೇ: **ಪಂಪರಾ,** ೩. ೧೬೦)

**ತಾರಹಾರ** – ಮುತ್ತಿನ ಹಾರ (ಅವು ಅತಿತರಳತರತ್ ತಾರಾಹಾರಂ ಜಿನನೀಹಾರಂ ತ್ರೈಲೋಕ್ಯಸಾರಂ ಇಂತಿದು ಹಾರಂ: **ಆದಿಪು,** ೧೨. ೧೧೮)

**ತಾರಹಾರಮುಕ್ತಾಫಳ** – ಮುತ್ತಿನ ಹಾರದ ಮುತ್ತು (ಸುರೇಂದ್ರ ತಾರಾಹಾರಮುಕ್ತಾಫಳಪ್ರತಿಬಿಂಬಿತತನುಗಳಿಂ ವಿದ್ಯಾದೇವತೆಗಳೆನಿಸಿ: **ಆದಿಪು,** ೭. ೧೨೬ ವ)

**ತಾರಾಂತರ** – ನಕ್ಷತ್ರಗಳ ಆಚೆ (ಇರುವರೆ ತಾರಾಂತರದೊಳ್ ಅನಿಬರುಂ ಸತ್ತವರ್ಗಳ್: **ಸಮಯಪ,** ೧೧. ೧೧೫)

**ತಾರಾಗ** – [ತಾರ+ಅಗ] ತಾರಶೈಲ (ಎಲೆ, ತಾರಾಗಂ ಹರ ೦ ಕಣ್ಣಿಡೆ ಕರಗಿದುದು .. .. ಎನಲ್ ಚೆಲ್ವದಾಯ್ತು ಅಬ್ಜಷಂಡಂ: **ಕಾದಂಬ,** ೪. ೧೬)

**ತಾರಾಗಣ** – ನಕ್ಷತ್ರಸಮೂಹ (ತಾರಾಗಣಂಗಳ್ ನಿಇಂದ ನೆಲೆಯಿಂ ದೆಸೆಯಂ ಪೊಟ್ಟುಮನಜೆದು: **ಪಂಪಭಾ,** ೩. ೮ ವ)

**ತಾರಾಗಣವಿಮಾನ** – [ಜೈನ] ಒಂದು ಬಗೆಯ ಜ್ಯೋತಿರ್ವಿಮಾನ (ಸಾಸಿರದ ನೂಜೆಪ್ಪತ್ತೊಂದು ಯೋಜನಮಗಲದಿಂ ತಾರಾಗಣವಿಮಾನಂಗಳಿರ್ಕುಂ: **ಸುಕುಮಾಚ,** ೧೧. ೫೯ ವ)

**ತಾರಾಚಲ** – ತಾರಾಗ (ಮುಂದಣ ತಾರಾಚಲಶಿಖರಮನೇಜೆದತ್ತು ಕಿನ್ನರಮಿಥುನಂ: **ಕಾದಂಸಂ,** ೩. ೪)

**ತಾರಾದ್ರಿ** – ತಾರಾಗ (ಶರದಾಭ್ರ ತಾರಾದ್ರಿ ಪಯಃಕುಂದೇಂದು ಯಶೋಭಾಸುರನೆಂದು ಮನಂಗೊಂಡು: **ಸುಕುಮಾಚ,** ೧. ೫೬)

**ತಾರಾಧಿಪತಿ** – ಚಂದ್ರ (ತಾರಾ ಜಾನಕಿಯಂ ಪೋಗಿ ತಾರಾ ತರಳನೇತ್ರೆಯಂ ತಾರಾಧಿಪತಿ ತೇಜಸ್ವೀ ತಾರಾದಿ ವಿಜಯೋದರ್ಯ: **ಕವಿರಾಮಾ,** ೨. ೧೩೦)

**ತಾರಾಧೀಶ** – ಚಂದ್ರ (ಲೋಲೇಕ್ಷಣಂ ಸಂಚಲತ್ ಕುಂತಳಂ ಭ್ರೂವಿಭ್ರಮಂ ಶೋಭಿಸೆ ತಿಳಿಗೊಳನಂ ಫುಲ್ಲ ಪಂಕೇಜಮಂ ನಿರ್ಮಳ ತಾರಾಧೀಶನಂ ಪೋಲ್ತೆಸೆಯೆ: **ಅಜಿತಪು,** ೨. ೪೦)

**ತಾರಾಧ್ವ** – ನಕ್ಷತ್ರಮಾರ್ಗ, ಆಕಾಶ (ತಾರಾಧ್ವದೊಳ್ ಅಸ್ತಶೈಲಶಿಖರಾಗ್ರದೊಳಿರ್ದುದು ಚಂದ್ರಮಂಡಲಂ: **ಲೀಲಾವತಿ,** ೬. ೫)

**ತಾರಾಪತಿ** – ತಾರಾಧೀಶ (ತಾರಾನಿಕರಾವೇಷ್ಟಿತ ತಾರಾಪತಿಯಾ ಸಮಸ್ತಸುರಲೋಕಮುಮಂ ನೇರಿತ್ತು ಬೆಳಗಿ ಪೋಪುದಂ ಆ ರಾತ್ರಿಯೊಳ್ ಅನಂತವೀರ್ಯಂ ಕಂಡಂ: **ಆದಿಪು,** ೧೬. ೪೬)

**ತಾರಾಪಥ** – ತಾರಾಧ್ವ (ವೈದ್ಯನಂತೆ ಪಂಚಾಂಗಶುದ್ಧಿಯಂ ನೋಡಿ ಮಂತ್ರವಾದಿಯಂತೆ ಗ್ರಹಗತಿಯಂ ಕಂಡು ತಥಾಗತಮತೋಪಾಸಕನಂತೆ ತಾರಾಪಥಕ್ಕೆಜಿಗಿ: **ಸುಕುಮಾಚ,** ೩. ೬ ವ)

**ತಾರಾಹಾರ** – ಮುತ್ತಿನ ಹಾರ (ಸೊಗಯಿಸಿದುದು ವಿಮಳತರ ತಾರಾಹಾರಂ: **ಚಂದ್ರಪ್ರಪು,** ೬. ೫೯)

**ತಾರುಂತಟ್ಟು** – ದಿಕ್ಕಾಪಾಲು, ಚೆಲ್ಲಾಪಿಲ್ಲಿ (ಮೃಗಂಗಳ್ ತಾರುಂತಟ್ಟುವೀಟುತ್ತ ಓಡುತ್ತುಮಿರ್ಪಾಗಳ್: **ಕುಸುಮಾಕಾ,** ೧೪. ೬೦ ವ)

**ತಾರುಣ್ಯ** – ಹರಯ (ಪೊಸವೆಳ್ದಿಂಗಳಿತ್ತೆನ್ನ ತಾರುಣ್ಯವಿಡಂಬಂ ತಾನಿದೆತ್ತ ಒತ್ತರಿಪ ವಿಧಿಯುಮೆತ್ತ: **ಚಂದ್ರಪ್ರಪು,** ೮. ೭೯)

**ತಾರುಣ್ಯವತಿ** – ಚಿಕ್ಕ ಹರಯದವಳು (ತಾರುಣ್ಯವತಿ .. .. ಶರೀರದ ಸಹಜ ಸುರಭಿಗಂಧಮಂ ಗಂಧವಹಂಗೆ ಒಚ್ಚತಗುಡುವಂತಿರೆ: **ಚಂದ್ರಪ್ರಪು,** ೮. ೭೨ ವ)

**ತಾರೆ** – ನಕ್ಷತ್ರ (ತಾವರೆಯಲ್ಲಿ ತಾರೆ ಜನನಂಬಡೆದಂದು .. . ಸತಿಯಂಗಮಂ ಆಂ ಪೊಗಳಲ್ಕೆ ಸಾಲ್ದಪೆಂ: **ರಾಜಶೇವಿ,** ೭. ೨೬); ಕಣ್ಣು ಗುಡ್ಡೆ (ನಿಷ್ಕಂಪವೆನಿಪ್ಪ ತಾರೆಗಳ್ವೆರಸು ಎವೆಯಿಕ್ಕದೆ ನೋಡುತಿರ್ದಳ್ ಎನ್ನಯ ಮೊಗಮಂ: **ಕಾದಂಸಂ,** ೬. ೫)

**ತಾರೆಲೆ** – ಜನಸಾಮಾನ್ಯರ ಒಂದು ಹಾಡು (ನೀರಸರಜೆವಂತೇನಿದು ತಾರೆಲೆಯೇ ಬೀದಿವಾಡೇ ತುಮುಕೇ: **ಗಿರಿಜಾಕ,** ೧. ೩೦)

**ತಾರೇಶ್ವರ** – ಚಂದ್ರ (ಉದಯಕ್ಷೀರವಾರಾಶಿತಾರೇಶ್ವರ ಭಕ್ತವ್ರಾತಕಲ್ಪದ್ರುಮ: **ತ್ರಿಷಷ್ಟಿಪು,** ೩. ೩೯)

**ತಾರ್ಕಿಕ** – ತರ್ಕಶಾಸ್ತ್ರಜ್ಞ (ತಾರ್ಕಿಕರೆರ್ದೆಗೊಂಡುದು ಉಪನ್ಯಾಸಮಾ ಸಭಾಮಂಡಲದೊಳ್: **ಶಾಂತಿಪು,** ೮. ೧೪೯)

**ತಾರ್ಕ್ಷ್ಯ** – ಹದ್ದು, ಗರುಡ (ವನಜನಾಭಂಗೆ ವಾಹನಮಾಗಿರ್ದ ತಾರ್ಕ್ಷ್ಯ ಅನ್ವಯದ ಪಕ್ಷಿನಿಕಾಯಮುಂ: **ಪಂಚತಂತ್ರ,** ೩೨೦ ವ)

**ತಾರ್ಕ್ಷ್ಯಕೇತನ** – ವಿಷ್ಣು (ತಾರ್ಕ್ಷ್ಯಕೇತನ ಸಖ ಸತ್ಯನಿತ್ಯ ಜಯ ನಿಶ್ಚಳಶಂಕರ ಚಂದ್ರಶೇಖರಾ: **ತ್ರಿಷಷ್ಟಿಪು,** ೩. ೮೭)

**ತಾರ್ಕ್ಷ್ಯೇಷು** – ಗರುಡಾಸ್ತ್ರ (ತಾರ್ಕ್ಷ್ಯೇಷುವಿಂ ತುಂಗಮಹೀಧ್ರಾಸ್ತ್ರಕ್ಕೆ ಚಂಡಾಶನಿ ನಿಶಿತ ನಿಕಾಯಂಗಳಂ ತೊಟ್ಟು: **ವರ್ಧಮಾಪು,** ೪. ೯೫)

**ತಾರ್ಣ** – ತೃಣಕ್ಕೆ ಸಂಬಂಧಿಸಿದ (ಪೆರ್ವುಲಿಗಳ್ ಪೊರಳ್ದು ಪೋದುದಂ ಪಿಸುಣ್ಬೇಟ್ವ ಜೀರ್ಣ ತಾರ್ಣ ಸ್ಥಳಿಗಳುಂ: **ಚಂದ್ರಪ್ರಪು,** ೫. ೬೫ ವ)

**ತಾರ್ಮುಟ್ಟು** – ಸೋಂಕು (ತಂತುವಾಯಿಕೆ ಪೊಜಮಟ್ಟು ಕಿಟಿದಂತರಂ ಪೋಗುತ್ತುಂ ಕಟ್ಟಿದಿರೊಳ್ ತಾರ್ಮುಟ್ಟಾಗೆ ಮದಿರಾಮದೋನ್ಮತ್ತನಾಗಿ ತನ್ನಿಚ್ಛೆಯಿಂ ಮೆಚ್ಚಿದಂತೆ ಗಟಪುತ್ತುಂ ಬರ್ಪ ಮನೆಯಾಣ್ಮನ ಸರಮಂ ಭೋಂಕೆನೆ ಸಮಿಪದೊಳ್ ಕೇಳ್ದು: **ಪಂಚತಂತ್ರ,** ೧೭೯ ವ); ಅಪ್ಪಳಿಸುವಿಕೆ (ತಳಿರ್ತ ಅಶೋಕಷಂಡದ ಎಳವಿಸಿಲೊಳಂ ಬಂಬಲ್ದೆರೆಯ ತಾರ್ಮುಟ್ಟಿಂ ಪುಟ್ಟಿದ ತಂಗಾಳಿಯ ಸೋಂಕಿಂ .. .. ಶ್ರುತಿಸುಭಗಮಾಗೆ: **ಮಲ್ಲಿನಾಪು,** ೩. ೮೨ ವ); ಅಸ್ತವ್ಯಸ್ತ (ಅಂತು ತಂತುವಾಯಿಕೆ ಪೊಜಮಟು ಕಿಜಿದಂತರಂ ಪೋಗುತ್ತುಂ ಕಟ್ಟಿದಿರೊಳ್ ತಾರ್ಮುಟ್ಟಾಗೆ ಮದಿರಾಮದೋನ್ಮತ್ತನಾಗಿ ತನ್ನಿಚ್ಚೇಯಿಂ ಮೆಚ್ಚಿದಂತೆ ಗಟಪುತ್ತುಂ ಬರ್ಪ ಮನೆಯಾಣ್ಮನ ಸರಮಂ .. ..ಕೇಳ್ದು: **ಪಂಚತಂತ್ರ,** ೧೭೯ ವ)

**ತಾಲ** – ತಾಳೆ ಮರ (ಪ್ಲಕ್ಷ ಕದಂಬ ನಿಂಬ ಪನಸ ಅರ್ಜುನ ತಾಲ ಲವಂಗ ಲುಂಗ ರುದ್ರಾಕ್ಷ ತುರುಷ್ಕ ಮುಷ್ಕ ನಿಚುಳ ಆಮ್ರ ಕರಂಜ ವಟ ಆದಿ ಅನೇಕ ವೃಕ್ಷ: **ಪಂಚತಂತ್ರ,** ೯೫)

**ತಾವಡಿಗೊಳ್** – ಆಯಾಸಗೊಳ್ಳು (ಆವಡವಿಗಳೊಳ್ ಪಣ್ಪಲಂ ಆವಗಂ ಒಳವು ಅಲ್ಲಿಗಜಿಸಿ ಪರಿಪರಿದು ಕರಂ ತಾವಡಿಗೊಳ್ವ ಈ ಭೀಮನ ಬೇವಸಮಿದು ನಿನ್ನ ಮನಮಂ ಒನಲಿಸಿತಿಲ್ಲಾ: **ಪಂಪಭಾ,** ೭. ೪೬)

**ತಾವಡಿವೇಟ್** – ಆಯಾಸ ಪರಿಹರಿಸು (ವಿರಹಿಗೆ ಭಾವಭವಂ ತಾವಡಿವೇಟ್ವಂತೆ ಸುಳಿವುದು ಪವನಪವನಂ: **ಚಂದ್ರಪ್ರಪು,** ೧೧. ೬೨)

**ತಾವತ್** – ಅಷ್ಟೇ (ಅದು ಯೋಜನಶತಮೂಲವಿಸ್ತೃತಮುಂ ತಾವತ್ ಪ್ರಮಾಣೋತ್ಸೇಧಮುಂ: **ಆದಿಪು, ಆದಿಪು,** ೧೩. ೬೯ ವ)

**ತಾಳ್** – ಧರಿಸು (ಹೃದಯದೊಳೆ ತಾರ್ಳದ ಮಣಿಹಾರಂಬೋಲ್: **ಕವಿರಾಮಾ,** ೧. ೧೩); ಹೊಂದು (ಪಟ್ಟಬಂಧೋತ್ಸವಮನತಿಶಯಂ ಮಾಡಿ ಸಾಮ್ರಾಜ್ಯ ದೀಕ್ಷಾಗುರು ತಾಳಲ್ ದೀಕ್ಷೆಯಂ: **ಅಜಿತಪು,** ೬. ೮೭); ಸಹಿಸು (ತನು ತಾಳಲಾಱದನ್ನೆಗಂ ಎನಸುಂನೀನದಱೊಳಾತ್ಮಶಕ್ತಿಯನಪ್ಪಿನೆಗಂ: ಅಜಿತಪು, ೨. ೫೯); ಗಂಟಲು (ತಾಱುವ ತಾಳ್ಗಳುಮಗುರ್ವಿಸಲ್ ಕಾಡುಕೋಣನೆಯ್ದಿದುದಟಲಂ: **ಜಗನ್ನಾವಿ,** ೧೭. ೬೮)

**ತಾಳ** – ತಾಳೆಯ ಗರಿ; ಲಯವಾದ್ಯ (ಪಟುಪಟಹ ತುಣವ ಭಂಭಾ ಮರ್ದಳೆ ಝಲ್ಲರಿ ಮುಕುಂದ ತಾಳ ಕಾಹಳ ಶಂಖ ವಂಶ ವೀಣಾಸ್ವರಂಗಳೆಸೆಯೆ: **ವಡ್ಡಾರಾ,** ಪು ೮೪, ಸಾ ೨೯)

**ತಾಳಂಗುಟ್ಟು** – ತಾಳಹಾಕು (ಅಂತು ನೆಲನುಮಂ ಆಗಸಮುಮಂ ತಾಳಮಗುಟುವಂತೆ ಭಯಂ ಪುಟ್ಟೆ ಗುಟ್ಟಯಿಸಿ ಘಟ್ಟನದಿಂ ನೆಟ್ಟನಾಡುವ: **ಪಾರ್ಶ್ವನಾಪು,** ೩. ೧೧೯ ವ)

**ತಾಳಗೊಟ್ಟಿ** – ಸಂಗೀತ ಕುಣಿತ ಗೋಷ್ಠಿ (ತತ್ತಬಳೆ ತಾಳಗೊಟ್ಟಿ ಎನುತ್ತಾದಂ ಋಷಿಯರೊಡನೆ ಜಡಮತಿಗಳ್ ಪೋರುತ್ತಿರ್ಪರ್: **ಸಮಯಪ,** ೧೪. ೧೮)

**ತಾಳಧ್ವಜ** – ಭೀಷ್ಮ (ಸೋಲ್ತ ತನ್ನ ಬಲಮಂ ಅಳುಂಬಮಾದ ವಿಕ್ರಮಾರ್ಜುನನ ಭುಜಬಲಮುಮಂ ಕಂಡು ಕನಕ ತಾಳಧ್ವಜಂಗೆ ಪನ್ನಗಧ್ವಜನಿಂತೆಂದಂ: **ಪಂಪಭಾ,** ೧೧. ೧೩ ವ)

**ತಾಳನಿವರ್ತನ** – ತಾಳವನ್ನು ಹಿಡಿಯುವುದು (ಅತಿ ಸುಕಂಠನುಂ ಅತಿ ಪ್ರಗಲ್ಭನುಂ ಅಪ್ಪ ಮುಖ್ಯಗಾಯಕಂ ತಾಳನಿವರ್ತನಂ ಮಾಡಿ: **ಮಲ್ಲಿನಾಪು,** ೮. ೧೫ ವ)

**ತಾಳಪತಾಕ** – ಬಲದೇವ (ಜ್ಞಾನವಿಹೀನನಂತೆ ಅಱಿವುಗೆಟ್ಟು ಎಲೆ ತಾಳಪತಾಕ ಶೋಕದೊಳ್ ನೀನಿರಲಪ್ಪುದೇ ಬಗೆವೊಡೆ ಈ ತನು ನಿತ್ಯಮೇ: **ಶಾಂತೀಶ್ವಪು,** ೫. ೩೨)

**ತಾಳಲಕ್ಷ್ಮ** – ತಾಳದ ಲಾಂಛನವುಳ್ಳವನು, ಬಲರಾಮ (ಬಲದೊಳ್ ಆತ್ಮೀಯ ಭೂಷಾಂಶುವಿಂ ರಾಜಿಸುವಂ ತಾಂ ತಾಳಲಕ್ಷ್ಮಂ: **ಕರ್ಣನೇಮಿ,** ೬. ೧೫೯ ವ)

**ತಾಳವಟ್ಟ** – ಒಂದು ಬಗೆಯ ಇರಿತ (ಆಗಳಿರ್ವಲದ ಕಡಿತಲೆಕಾಱರ್ ಅಲಗಿನೊಳ್ ಪಳಂಚೆ ತಾಗಿ ನಿರ್ಘಾತ ಉಪ್ಪರಂ ತಾಳವಟ್ಟಂ ಅವಿತಂ ಉಚಿತಂ ಎಂಬ ಪಲವುಂ ತೆಱದದ ಇಱಿವ ಬಿನ್ನಣದೊಳ್ ನೆಱೆದು ತಾಳುಂತಟ್ಟುಂ ಪೊಯ್ಯೆ: **ಪಂಪರಾ,** ೧೩. ೫೪ ವ); ಬೀಸಣಿಗೆಯಂತಹ ಆನೆಯ ಕಿವಿ (ಲಳಿತವಿಷಾಣಕೋಟಿಗಳಿಂ ಈಡಾಡಿದಾಗಳೆ ತಾಳವಟ್ಟಮಂ: **ಚಂದ್ರಪ್ರಪು,** ೫. ೬೫)

**ತಾಳವೃಂತ** – ಬೀಸಣಿಗೆ (ಸಾರಚಂದನದ್ರಮಾಂಬು ಬೀಸುತಿರ್ಪ ತಾಳವೃಂತಮಾಸೆಯಾಗದಿರೆ ನಿತಾಂತ; **ಅಜಿತಪು,** ೨. ೮)

**ತಾಳಿಗಟ್ಟು** – ಮಂಗಳಸೂತ್ರವನ್ನು ಕಟ್ಟು (ಚಂದ್ರಾಭರಣಂ ಮನಮೊಸೆದು ತಾಳಿಗಟ್ಟಿದನೆನೆಮೆಱೆದುದುಕೊರಲೊಳ್ ಏಕಮುಖ ರುದ್ರಾಕ್ಷಂ: **ಗಿರಿಜಾಕ,** ೩. ೮೬)

**ತಾಳಿಗೆ** – ದವಡೆ (ಬಿಲ್ಲ ಕೊಪ್ಪು ತಾಳಿಗೆಯಂ ಚುರ್ಚಿ ನೆತ್ತಿಯೊಳ್ ಮೂಡುವುದುಂ: **ಪಂಚತಂತ್ರ,** ೪೩೪ ವ)

**ತಾಳಿಸು** – ಎಣ್ಣೆಯೊಡನೆ ಹುರಿ (ಕಾಯ್ದ ಕಾವಲಿಗಳೊಳ್ ಮೊರ್ಮರನೇಗೆ ತಾಳಿಸುವವರುಂ: **ಆದಿಪು,** ೫. ೮೫ ವ)

**ತಾಳುಂತಟ್ಟುಂಬೊಯ್** – ಚೆಲ್ಲಾಪಿಲ್ಲಿಯಾಗುವಂತೆ ಹೊಡೆ (ಆಗಳಿರ್ವಲದ ಕಡಿತಲೆಕಾಱರ್ ಅಲಗಿನೊಳ್ ಪಳಂಚೆ ತಾಗಿ ನಿರ್ಘಾತ ಉಪ್ಪರಂ ತಾಳವಟ್ಟಂ ಅವಿತಂ ಉಚಿತಂ ಎಂಬ ಪಲವುಂ ತೆಱದದ ಇಱಿವ ಬಿನ್ನಣದೊಳ್ ನೆಱೆದು ತಾಳುಂತಟ್ಟುಂ ಪೊಯ್ಯೆ: **ಪಂಪರಾ,** ೧೩. ೫೪ ವ)

**ತಾಳುಗೆ** – [ತಾಲುಕಾ] ದವಡೆ (ಪಾತಾಳಗಣಂಗಳಿವೆತ್ತಂ ತಾಳುಗೆವರೆಗಂ ತೆಱೆದ ಬಾಯನನುಕರಿಸಿರ್ಕುಂ: **ಆದಿಪು,** ೧೨. ೭೯); ಗಂಟಲು (ಎಟಲ್ವ ಪತತ್ರಂ ಎತ್ತಿ ನಸು ನೀಡಿದ ಗೋಣ್ ತೆಱೆದ ಉದ್ದ ಚಂಚುಮಂಡಳಂ ಅರೆಮುಚ್ಚಿದ ಅಚ್ಚಿ ಮಿಡುಕಾಡುವ ತಾಳುಗೆ: **ಶಾಂತೀಶ್ವಪು,** ೧೨. ೪೬)

**ತಾಳುತಳ** – ಅಂಗುಳ ತಳಭಾಗ (ಅತ್ಯಂತ ಕೋಮಳ ತಾಳುತಳ ಸಂಘಟ್ಟಮಾತ್ರಕ್ಷೋಧನೀಯ ಮೋದಕಮುಂ: **ಆದಿಪು,** ೧೧. ೨೬ ವ)

**ತಾಳೋದ್ಘಾಟಿನಿ** – ಬೀಗ ತೆಗೆಯುವುದು, ಒಂದು ಕಳ್ಳತನದ ವಿದ್ಯೆ (ತಾಳೋದ್ಘಾಟಿನಿ ವಿದ್ಯಾಮಂತ್ರ .. .. ಮೊದಲಾಗೊಡೆಯ ತಸ್ಕರಶಾಸ್ತ್ರಂಗಳೊಳ್ ಆದಮಾನುಂ ಕುಶಲನಂತಪ್ಪ ಕಳ್ಳಂ: **ವಡ್ಡಾರಾ,** ಪು. ೧೨೨, ಸಾ. ೧೬)

**ತಾಳೋಲೆ** – ತಾಳೆಗರಿಯ ಓಲೆ (ನಿಕ್ಕುವದಿಂ ತಾಳೋಲೆಯನಿಕ್ಕುವರ್ ಪಲರೊ ಮುತ್ತಿನ್ನೈಸರಮಂ ಕೇಳಿಕ್ಕುವರ್ ಪಲರೊ: **ಧರ್ಮಾಮೃ,** ೧. ೧೫೧)

**ತಾಳ್ದು** – ಧರಿಸು (ತದಾಜ್ಞೆಯಂ ನಿಜ ಕಿರೀಟದೊಳ್ ತಾಳ್ದಿದಂದದಿಂ ಸೊಗಯಿಸಿದರ್: **ಆದಿಪು,** ೧೩. ೭೯); ಹೊಂದು (ವೈಚಿತ್ರ್ಯಮಂ ಕೂಡೆ ತಾಳ್ದಿದ ಸಂಸಾರದೊಳ್ ಎಂದುಂ ಇಂತೆ ಸುಖದುಃಖಾದಿ .. .. ಕಾರ್ಯೋದಯಂ: **ಕಾದಂಸಂ,** ೭. ೫೬); ಸಹಿಸು

**ತಾಱ್** – ಶಕುನ; ಒಣಗು (ತಾಱೆ ತಪದಿಂದೆ ಮೆಯ್ಲುವೇಱಿದ ತಪಸಿಯನೆ ಕೊರಡುಗೆತ್ತು .. .. ಹರಿದು ಹರಿಣಿ ನಡೆನೂಂಕಿದುದೋ: **ಲೀಲಾವತಿ,** ೮. ೬೨)

**ತಾಱಲ್** – ಒಣಕಲು (ಎಮಗೆ ನಿತ್ತರಿಸಲ್ ನೆಱವಿಲ್ಲ ತಾಱಲ್ ಆದುವು ತನು ಕೂಟ ನೀರ ದೆಸೆಯೊಲ್ಲದೊಡೆ ಒಡಲ್ಗಳನೆಂತು ತಾಳ್ದುವೆಂ: **ಆದಿಪು,** ೯. ೮೯); ಪೊದೆ (ಪೊಸ ಕಾರೊಳ್ ತಾಱಲೊಳ್ ಕಣ್ಣರೆ ಮುಗಿದಿರೆ ಸೃಕ್ವಂಗಳಿಂ ಸೂಸೆ ಫೇನಪ್ರಸರಂ ಮೆಲ್ಲೊತ್ತುತುಂ ನಿಂದುದು ವನಮಹಿಷೀವೃಂದಂ ಆನಂದದಿಂದಂ: **ಪಂಪರಾ,** ೭. ೧೫೭)

**ತಾಱಲ್ವಿಡಿ** – ಪೊದೆಯಲ್ಲಿ ಅಡಗಿಕೊ (ತಾಱಲ್ವಿಡಿದು ಗೋರಿವರಿದುಮೆನೆ ಕುನುಂಗಿ ಕೆಲಲ್ಲಯಿಸಿ ನೋಟ್ಟಿ ತರಳಲೋಚನದ ಸರಳಾಪಾಂಗಂ: **ಅನಂತಪು,** ೭. ೧೬ ವ)

**ತಾಱೆ** – ಅಳಲೆ (ಅರನೇಱೆಲ್ ಇಪ್ಪೆ ಸಿರಿಸಂ ಹಾಡಂಗಿ ಭಾರಂಗಿ ನೇಳಲ್ ಎರಂ ಪಾದರಿ ತಾಱೆ ತಂಡಸು ಬಿಳಿಲ್ ಬಲ್ಮತ್ತಿ ಬೇವತ್ತಿ ಸೆಳ್ಳೆಲವಂ ಸಂಪಗೆ: **ಪಾರ್ಶ್ವನಾಪು,** ೧೨. ೫೮)

**ತಾಱೆಗಬೀಱೆಗ** – ಅಸ್ತವ್ಯಸ್ತ (ಹಱೆಗವಿಗಳ ಕಬ್ಬಂಗಳ ಹೊಱಗಟೆಯಕ್ಕರದ ಹೊಲಿಗೆ ಬಿರ್ಚಿದೊಡೆಲ್ಲಂ ಬಱೆ ತಾಱೆಗಬೀಱೆಗ ಎತ್ತಱ ತತ್ತಱ ಎಕ್ಕಸಕ್ಕಂ ಅಸ್ತವ್ಯಸ್ತಂ: **ಗಿರಿಜಾಕ,** ೧. ೨೩)

**ತಾಱು** – ಆಯಾಸಗೊಳ್ಳು (ಬಿರಯಿಗಳಂಜಿ ತಾಱೆ ಪಗಲಾಣ್ಮನ ಮೆಯ್ ಬಿಸುಪೇಱೆ ಮಾಗೆ ಚೆಚ್ಚರದೊಳೆ ಪಾಱೆ: **ಕಬ್ಬಿಗಕಾ,** ೪೫); ಒಣಗು (ಮದವತ್ ದಂತಿಗಳಂ ಕಱುತ್ತು ಅಸಗವೊಯ್ವೊಯ್ದಾಜಿಯೊಳ್ ಭೀಮಂ ಆರ್ದು ಒದೆದು ಈಡಾಡಿದೊಡೆ ಅತ್ತ ಅಜಾಂಡತಟಮಂ ತಾಪನ್ನೆಗಂ ಪಾಱೆ ತಾಱೆದ ಪೇರಾನೆಯ ಒಡಲ್ಗಳ್: **ಪಂಪಭಾ,** ೧೧. ೬೭)

**ತಾಱುಂತಟ್ಟುಂ** – ಚೆಲ್ಲಾಪಿಲಿ (ಇದಿರುಂ ಬಟಿಯುಂ ತಾಱುಂತಟ್ಟುಂ ಈಸಿಯಾಡಿ .. .. ಮೇರೆದಪ್ಪಿ ತುಳುಂಕಿಯಾಡುವಾಗಳ್: **ಲೀಲಾವತಿ,** ೧೩. ೧೩೦ ವ)

**ತಾಱುಂಬಟಿ** – ಕ್ರಮರಹಿತವಾಗಿ (ಹಂತಿದಪ್ಪಿ ತಾಱುಂಬಟಿಯುಂ ತೆರಳ್ದಿ ಕುರುಳ್: **ಚಂದ್ರಪ್ರಪು,** ೮. ೭೨); ಸುತ್ತಮುತ್ತ (ಅಳಿಗಳ ಬಳಗಂ ತಾಱುಂಬಟಿಯಿಂ ಬರುತಿರೆ: **ಕುಸುಮಾಕಾ,** ೫. ೭೯)

**ತಾಱುಂಬಟಿಗೊಳ್** – ಇಡಿಕಿರಿ (ಹಂಸಮಂಡಳಿ ತಾಱುಂಗೊರ್ಳವ ತಾವರೆಗೊಳಂ: **ಅನಂತಪು,** ೧. ೯೪)

**ತಾಱುಂಬಟಿಯಂ** – ಚೆಲ್ಲಾಪಿಲ್ಲಿ (ಅಲರ್ಗೆ ಫಲಕೆ ಪರಿದತ್ತು ಎಳವೆಂಡಿರ ನೆರವಿ ತಾಱುಂಬಟಿಯಂ: **ಚಂದ್ರ ಪ್ರಪು,** ೭. ೯೮)

**ತಾಟ್** – ತಾಳೆಯ ಮರ (ನೀಳ್ದ ತಾಟ್ ಮರದವೊಲಪ್ಪ ಒಡಲ್ ಕಹಕಹಧ್ವನಿ ಕೌಳಿಕನಾದಂ ಆದುದು ಆಸುರತರಮಾಗೆ ಬಂದು ಕವಿದತ್ತು ಘಟೋತ್ಕಚ ರೌದ್ರಸಾಧನಂ: **ಪಂಪಭಾ,** ೧೨. ೭)

**ತಾಟವಣ್** – ತಾಳೆಯ ಹಣ್ಣು (ಎನಗಿಕ್ಕುವಂ .. .. ತಾಟವಣ್ಣ ಬಣ್ಣಕ್ಕೆಣೆಯಾದ ಚಂಚುಪುಟದಿಂದಮೆ ಮಜ್ಜನಕಂ: **ಕಾದಂಸಂ,** ೧. ೪೫)

**ತಿಂಗಳ್** – ಚಂದ್ರ (ಇಂಗಡಲ ಒಡನಾಡಿಯೋ ನೆಱೆ ತಿಂಗಳ ಸೋದರಮೊ: **ರಾಜಶೇವಿ,** ೧. ೭೧); ವರ್ಷದ ಹನ್ನೆರಡನೇ ಒಂದು ಭಾಗ (ಇಂತು ವರ್ಷಾಕಾಲದ ನಾಲ್ಕು ತಿಂಗಳೊಳು ಮರ್ದನೂಡಿ: **ವಡ್ಡಾರಾ,** ಪು. ೧೭೧, ಸಾ. ೨೭); ಬೆಳುದಿಂಗಳು (ತಿಂಗಳ್ವರಂ ಅಮೃತಮನ್ ಆ ತಿಂಗಳ್ ಸುರಿದಪುದೆ ಬಯಸಿ ನೋಡುವರೆಲ್ಲಂ ತಿಂಗಳೊಳ್ ಒಂದು ದಿನಂ ಬೆಳ್ದಿಂಗಳ್ ಚೌತಿಯೊಳೆ ವಿಷಮನುಗುಳ್ವುದೆ ನೋಡಲ್: **ಸಮಯಪ,** ೯. ೪೩)

**ತಿಂಗಳ ಕೂಸು** – ಬಾಲಚಂದ್ರ (ನೇಸಱ ಬಿಂಬಂ ತಿಂಗಳ ಕೂಸಿನವೋಲ್ ಕೋಡುತಿರ್ದುದು ಅಂದಿನ ದಿನದೊಳ್: **ಲೀಲಾವತಿ,** ೯. ೮)

**ತಿಂಗಳ್ಗಲ್** – ಚಂದ್ರಕಾಂತಶಿಲೆ (ಕರಗಿ ಪರೆವ ಜೊನ್ನದ ತಿಂಗಳ್ಗಲ್ಗಳ್ ಒಸರದೆನೆ ಕಟಿಲ್ದ ಐಕಿಲ್ಗೊಳನೆನೆ ಕುಳಿರ್ದುದಾ ಜಳಂ ತಿಳಿಗೊಳದಾ: **ನೇಮಿನಾಪು,** ೫. ೧೯೯)

**ತಿಂಗಿಣಿ** – ಕುಚ್ಚು, ಗೊಂಡೆ (ಮುತ್ತಿನ ಸೂಸಕದೊಳಂ ಚೆಂಬೊನ್ನ ತಿಂಗಿಣಿಯೊಳಂ: **ಪುಷ್ಪದಂಪು,** ೮. ೫೦ ವ)

**ತಿಂಗುಱಿ** – ತಿನ್ನಲು ಸಾಕಿದ ಕುರಿ (ಮಾಂಸದ ಸವಿಗಂಡ ಅರಸಿ ಬಾಣಸಿನ ಮನೆಯೊಳ್ ಕಟ್ಟಿದ ಪೋಂತಂ ತಿಂಗುಱಿ ಮಾಡಿದಳ್: **ಯಶೋಧಚ,** ೩. ೭೧)

**ತಿಂಟೆ** – ರಾಶಿ, ಗುಡ್ಡೆ (ನೀರ ತಡಿಯೊಳ್ ಸಣ್ಣಮಪ್ಪ ಮಣಲ ತಿಂಟೆಯೊಳ್ ಒಂದು ಅಡಿವಜ್ಜೆಯಂ ಕಂಡು: **ಹರಿವಂಶ,** ೩. ೮ ವ)

**ತಿಂತಿಣಿ** – ಸಮೂಹ, ಗುಂಪು (ಸಿಡಿಲ್ದ ಬಾಳ ಮೊನೆಯಂಬಿನ ತಿಂತಿಣಿಯೊಳ್ ತಗುಳ್ದು ಕಿಕ್ಕಿಱಿಗಿಱಿದಿರ್ದ ಕೊಳ್ಗುಳದೊಳಂ ನಡೆವೀ ನಡೆಗೆಂತು ನೋಂತೆಯೋ: **ಪಂಪಭಾ,** ೧೩. ೫೨)

**ತಿಂಬ** – ತಿನ್ನುವೆಯಾ? (ಅಡಗಂ ತಿಂಬ ತೊಲಗು: **ಸಮಯಪ,** ೧೫. ೪೨)

**ತಿಂಬಡ** – ತಿನ್ನುವ ಪದಾರ್ಥ (ಮನೆಯಿಂದಂ ಪೂಸಲುಂ ಉಡಲುಂ ತುಡಲುಂ ಪೂವುಂ ತಂಬುಲಮುಂ ತಿಂಬಡಂಗಳುಂ ಬಂದುವು: **ವಡ್ಡಾರಾ,** ಪು ೧೧೬, ಸಾ ೨೦)

**ತಿಂಬು** – ತುಂಬು (ಕೆಂಬಣ್ಣದ ಕುದುರೆಗಳೊಳ್ ಒಡಂಬಡೆ ನಿಜರಜತರಥಂ ಅಗುರ್ವು ಉರ್ವರೆಯಂ ತಿಂಬೆ: **ಪಂಪಭಾ,** ೧೦. ೫೪)

**ತಿಕ್ತ** – ಕಹಿ (ಭ್ರಮಿತಮನಹ್ಲಾದಂಗೆ ಫಣಿದಪ್ಪನ ನಾಲಗೆಗೆಂತು ತಿಕ್ತವರ್ಗಮೆ ಮಧುರಂಗಳಾಗಿ: **ಸಮಯಪ,** ೧೧. ೧೫೪)

**ತಿಗಟ** – ಉದ್ದ (ಅಡ್ಡಮುಂ ತಿಗಟಮುಂ ತಾಱುಂತಟ್ಟುಂ ಇದಿತುಂ ಬಟಿಯುಂ ಬಿಟ್ಟು ಬಱಲದೆ: **ಲೀಲಾವತಿ,** ೭. ೫೫ ವ)

**ತಿಗುಡು** – ಮರದ ತೊಗಟೆ (ಮರದ ಫಲಮುಂ ತಿಗುಡುಂ ಎಲೆಯುಂ ಬೇರುಮಂ ತಿಂದವರ್ ನಿರೋಗಿಗಳಾಗಿ ವಳಿತಸ್ತಂಭರಾಗೆ: **ಧರ್ಮಪ,** ೭. ೪ ವ)

**ತಿಗುಣ** – ತ್ರಿಗುಣ, ಮೂರು ಪಟ್ಟು (ಉತ್ತರಪದನಪಭ್ರಂಶಕ್ಕೆ ಬಾರದೆ ಪೂರ್ವಪದಂ ತದ್ಭವಮಾದುದರ್ಕೆ: ತ್ರಿಗುಣ–ತಿಗುಣಂ: **ಶಬ್ದಮದ,** ೩೦೪ ಪ್ರ)

**ತಿಗುಣಂಗೊಳ್** – ಮುರು ಪಟ್ಟಷ್ಟು ಆಗು (ತೇನತೇನಮವತಂ ಬಿಗುಣಂ ತಿಗುಣಂಗೊಳಲ್ ಮೊಗಂಬೊಕ್ಕ ಗಜಂಗಳಂ .. .. ಪಿಂಗಿಪಂ: **ಅನಂತಪು,** ೬. ೧೨)

**ತಿಗುರಿ** – ಚಕ್ರ (ಅದು ತಿಗುರಿಯಂದದಿಂ ತಿರಿದುದು ಮುಂದಂ ನೆಗೆದು ಪಿಂದನೀಡಾಡಿ ಬಿಸಿಲ್ಗುದುರೆಯವೋಲ್ ಬಿಱುವರಿವರಿದುದು ಕೆಳರ್ದ ಕೃತಾಂತನಿಂತಿದೆನೆ ಕೃತಕಾಶ್ವಂ: **ಪಂಪರಾ,** ೪. ೧೦೭); ಸುಳಿ (ಸುಳಿಗಳ್ ನೀರ್ ತಿಗುರಿಯವೋಲ್ ಸುಟಿದುವು ತೆರೆ ತೆರೆಯನಟ್ಟಿದುವು ಬೆಟ್ಟದ ಬೆಂಬಟಿಯಂ ಬೆಟ್ಟಟ್ಟುವವೋಲ್ ತಟಿ ತಳ್ತವೊಲಿರ್ದುವೊಗೆದ ಮಣಿ ಕಿರಣಂಗಳ್: **ಪಂಪರಾ,** ೧೨. ೯೦)

**ತಿಗುರಿದಿರುಪು** – ಜೋರಾಗಿ ತಿರುಗಿಸು (ಅನಂತಾಖ್ಯಮೆಂದು ಭೂಮಿಯಂ ತಿಗುರಿದಿರುಪಿಯುಂ: **ಜಗನ್ನಾವಿ,** ೯. ೫೩)

**ತಿಗುಳನಾಡು** – ತಮಿಳುದೇಶ (ನಿಂದುಣಿಸಿನಿಂದ ಒಡಲದೊಂದು ತಿನಿಸಿಂ ತೃಷೆಯದೊಂದು ಕುದಿಪಿಂ ತಿಗುಳನಾಡಸೆಱೆಯಂತೆ ಆನೊಂದಿದ ಅತಿ ದುಃಖದೊಳೆ: **ಧರ್ಮಾಮೃ,** ೧. ೧೨೯)

**ತಿಗ್ಮಕರ** – ಪ್ರಖರ ಕಿರಣಗಳುಳ್ಳವನು, ಸೂರ್ಯ (ಭವ್ಯಪದ್ಮಾಕರಬೋಧಾದಾಯಿಯಂ ತಿಗ್ಮಕರನುದಯದೊಳ್ ಪುತ್ರನಂ ಪೆತ್ತಳಾಗಳ್: **ಆದಿಪು,** ೭. ૩૬)

**ತಿಗ್ಮಕಿರಣ** – ಸೂರ್ಯ (ಆ ಭೂಲಲನೇಶರ್ ನಿಂದು ಸುಶೀಲರ್ ವಿಶ್ರಮಿಸೆ ತಿಗ್ಮಕಿರಣನುಮಾಗಳ್ ಅಪರವಾರಿಧಿಗಿೞಿವುದುಂ: **ಕರ್ಣನೇಮಿ,** ೯. ೫೪ ಮತ್ತು ೫೪ ವ)

**ತಿಗ್ಮಪ್ರಭ** – ಪ್ರಖರ ಕಾಂತಿಯುಳ್ಳವನು (ತೊಡರ್ದುದು ಅಪ್ರಭವಂ ತನಗೆನೆ ತಿಗ್ಮಪ್ರಭಂ ಗತಪ್ರಭನಾದಂ: **ಕುಸುಮಾಕಾ,** ೪. ೧೧)

**ತಿಗ್ಮಮರೀಚಿ** – ತಿಗ್ಮಕರ (ಕುಮುದಮನಲರ್ಚಿ ಹಿಮರುಚಿಗೆ ಮಹೋತ್ಸವಮಿತ್ತುದು ಅಬ್ಜಮಂ ಕೊಱಗಿಸಿ ತಿಗ್ಮಮರೀಚಿಯನದು ಮಸುಳಿಸಿತು: **ರಾಜಶೇವಿ,** ೯. ೨೦)

**ತಿಗ್ಮರುಙ್ಮಾಲಿ** – [ತಿಗ್ಮರುಕ್+ಮಾಲಿ] ಪ್ರಖರಕಿರಣಗಳ ಮಾಲೆಯುಳ್ಳವನು, ಸೂರ್ಯ (ಸುತ್ತಂ ಸೂಸಿದೀಶಾನನ ಜಡೆಗಳವೊಲ್ ಕಾಯ್ದ ಪೊನ್ನೀರ್ಗವಿಲ್ಗೆಂಪಿನ ಪೆಂಪಂ ಸಿಂಪಿಸುತ್ತಿರ್ದ ಹಿಮರುಚಿಗಳಂ ತಿಗ್ಮರುಙ್ಮಾಲಿಬಿಂಬಂ: **ಕಾದಂಬ,** ೮. ೮. ೬೧)

**ತಿಗ್ಮರೋಚಿ** – ಸೂರ್ಯ (ದ್ವಿಜವಂಶಾಂಬರ ತಿಗ್ಮರೋಚಿ ಸುಬಳಕ್ಷ್ಮಾಪಾಲಪಾಣಿಗ್ರಹವ್ರಜ ಸಂರಕ್ಷಣದಕ್ಷಂ: **ಸುಕುಮಾಚ,** ೨. ३೯)

**ತಿಗ್ಮಾಂಶು** – ಸೂರ್ಯ (ಪರಿಪೂರ್ಣೇಂದುವಿಂ ಅನ್ವಯಾಭ್ರತಿಳಕಂ ತಿಗ್ಮಾಂಶುವಿಂ ತೀವ್ರಭಾಸುರತೇಜಂ ಸುರಶೈಲದಿಂ ಸಕಳಭೂಭೃನ್ಮುಖ್ಯಂ: **ಆದಿಪು,** ೮. ೨೭)

**ತಿಟ್ಟ** – ಚಿತ್ರ (ತದೀಯ ಸಿತಕೇತುಪಟಂ ಬರೆದಿಟ್ಟ ತಿಟ್ಟದ ಒಪ್ಪುವ ಪಟದಂತೆ ನಿಶ್ಚಳಿತಮಾದುದು ವೇಗಮರುತ್ಪ್ರಯೋಗದಿಂ: **ಶಾಂತಿಪು,** ೪. ೬೦)

**ತಿಟ್ಟನೆ ತಿಜೆ** – ಜೋರಾಗಿ ತಿರುಗು (ಎರಡು ಸಾಗರೋಪಮಂ ತಿಟ್ಟನೆ ತಿಜೆದು ಚಂಪಕಾನಗರದೊಳ್ ಮಾದಿಗಿತ್ತಿಯಾಗಿ ಪುಟ್ಟಿ: **ಚಾವುಂಪು,** ಪು. ४३೦. ಸಾ. ೧೬)

**ತಿಟ್ಟಮಿಡು** – ಚಿತ್ರ ಬರೆ (ಬರೆಯಲೆಂದು ಬಟ್ಟಿಗೆವಲೆಗೆಯಂ ತರಿಸಿ ತಿಟ್ಟಮಿಟ್ಟು ಬರೆವನ್ನೆಗಂ: **ಆದಿಪು,** ४. ೬३ ವ)

**ತಿಟ್ಟವಿಡು** – ಚಿತ್ರ ಬರೆ (ತನೂದರಿ ತಿಟ್ಟವಿಟ್ಟ ತತ್ತರುಣಿಯ ನಾಮಮಿಂತು ಕುಸುಮಾವಳಿಯೆಂದೆನಿಪ ಅಕ್ಷರೋತ್ಕರಂ ಬರೆದ ನವೀನ ಚಿತ್ರಪಟಮಿರ್ದುದು: **ಕುಸುಮಾಕಾ,** ೯. ೭೯)

**ತಿಟ್ಟು** – ಬೈಗುಳ (ತಿಟ್ಟೆಂದು ಬೈಗುಳ್: **ಶಬ್ದಮದ,** ಪ್ರಸಾ ೧೦೧); ದಿನ್ನೆ (ತಿಟ್ಟು–ಭರ್ತ್ಸನೇ ಉನ್ನತಭೂಮೌ ಚ: **ಶಬ್ದಮದ, ಧಾ** ೨४೬)

**ತಿಣಿ** – ಒಟ್ಟಿಗೆ ಸೇರು (ತಿಣಿ–ಸಂಕೀರ್ಣೇ: **ಶಬ್ದಮದ, ಧಾ** ३೭३)

**ತಿಣಿಕು** – ಕಷ್ಟ (ಅನಿತುಂ ಬಲಮಂ ಮುತ್ತಿ ಚಿಳಾತಾವರ್ತರ್ ಸುತ್ತಲುಂ ಏಸಾಡಿ ಪಿರಿದು ತಿಣಿಕಂ ತಂದರ್: **ಆದಿಪು,** ೧४. ೭೦)

**ತಿಣುಕು** – ಮುಲುಕು (ಧಾತ್ರಿಯ ಬಿಣ್ಪಿನಗೆಂದಿನಂದವಲ್ತು ಅಣಕಮಿದೆಂದು ಕಣ್ ತುಮುಟಿ ಪೆರ್ಬಿಡೆಯಿಂ ಮಣಿ ಸೂಸೆ ಬೇಸಜೆಂ ತಿಣುಕಿದಂ ಆನಲ್ ಉಮ್ಮಳಿಸಿ ಶೇಷನಶೇಷಮಹೀವಿಭಾಗಮಂ: **ಪಂಪಭಾ,** ೯. ೯೯); ಹೆಣಗಾಟ (ಜೂದಾಡಿ ಸೋಲ್ತು ನನ್ನಿಗೆ ಮೇದಿನಿಯಂ ಕೊಟ್ಟು ಪಾಂಡುನಂದನರ್ ಈಗಳ್ ಪೋದೊಡಮೇಂ ತಿಣುಕಾಗದೆ ಪೋದಪುದೇ ನಮ್ಮ ನೃಪತಿಗವು ತವುದಲೆಯೊಳ್: **ಪಂಪಭಾ,** ೭. ೧೮; ಹೂಸುಬಿಡು (ತಿಣುಕು–ಅಪಾನವಾಯೌ: **ಶಬ್ದಮದ,** ಧಾ ४೦)

**ತಿಣ್ಣ** – [ತೀಕ್ಷ್ಣ] ಭಾರ (ನಿನಗೆ ಜಯವರ್ಮನಾದಂದಿನ ಭವದಿಂದಿತ್ತ ಭೋಗಕಾಂಕ್ಷೆಯೆ ತಿಣ್ಣಂ ಮನದೊಳ್: **ಆದಿಪು,** ೫. ೫೧); ಹೆಚ್ಚು (ಬಿಜುವಿಸಿಲುಂ ಸುಡುತಿರೆ ನೀರಡಿಕೆ ತಿಣ್ಣಮಾದತ್ತಾಗಳ್: **ಕಾದಂಸಂ,** ೧. ೬३)

**ತಿಣ್ಣಂ** – ತೀಕ್ಷ್ಣವಾಗಿ, ನಿಬಿಡವಾಗಿ (ನಿಜವಿಜಯಸಿಂಧುರಮಂ ತಿಣ್ಣಂ ನೂಂಕಲವುಂಕಲುಂ ಬೆಸಸಿ: **ಆದಿಪು,** ೧४. ೯೮ ವ)

**ತಿಣ್ಣನೆ** – ಜೋರಾಗಿ (ತಿಣ್ಣನೆ ಕಿರ್ಚಂ ಪುಡಿಯಂ ಮಣ್ಣಂ ಪೊಯ್ದಿಂತು ಮಾಡಿದೈ ದೂರ್ತಿಂದಂ: **ಧರ್ಮಾಮೃ,** ೯. ೯३)

**ತಿಣ್ಣಮಿಡು** – ಬಲವಾಗಿ ಹೊಡೆ (ಅವನ ವರೂಥಮನೆ ತಿಣ್ಣಮಿಟ್ಟೊಡೆ: **ಪಂಪಭಾ,** ೧೨. ೧४೯)

**ತಿಣ್ಣಮಿಸು** – ಬಲವಾಗಿ ಬಾಣಪ್ರಯೋಗಿಸು (ಎಂತು ಇದಿರಾಂತೆ ಅಂತೆ ಕಲಿಯಾಗು ಒಳಸೋರದಿರ್ ಎಂದು ಭೀಮಂ ಓರಂತೆ ಕನಲ್ದು ತಿಣ್ಣಂ ಇಸೆ: **ಪಂಪಭಾ,** ೧೦. ೯೮)

**ತಿಣ್ಣವೆಳಗು** – ಪ್ರಖರವಾದ ಬೆಳಕು (ಬಂದುಗೆಯ ಬಣ್ಣದ ತಿಣ್ಣವೆಳಗುಂ ಕಣ್ಣ ಬೆಳಗುಂ ತಮ್ಮೊಳ್ಮಿರ್ಮಡಿಸೆ: **ಗಿರಿಜಾಕ,** ೭. ೧೧ ವ)

**ತಿಣ್ಪು** – ಭಾರ (ಹಿಮಕರಂ ಆತ್ಮ ಶೀತರುಚಿಯಂ ದಿನನಾಯಕಂ ಉಷ್ಣದೀಧಿತಿಯಕ್ರಮಮಂ ಅಗಾಧವಾರಿಧಿಯೆ ಗುಣ್ಪಂ ಇಳಾವಧು ತನ್ನ ತಿಣ್ಪಂ ಬಿಸುಟಿಟ್ಪೊಡಂ; **ಪಂಪಭಾ,** ೧. ೮३); ಆಧಿಕ್ಯ (ಮೃಗರಾಜನ ಶಕ್ತಿತ್ರಯದ ಗುಣ್ಪುಮಂ ಬಾಹುಬಲದ ತಿಣ್ಪುಮಂ ಅಜೆದೆಂ: **ಪಂಚತಂತ್ರ,** ೧೫೮)

**ತಿತಿಕ್ಷಾನ್ವಿತ** – ಸಹನೆಯ ಗುಣದವನು (ಕುಲಜಂ ಸತ್ವಾಢ್ಯಂ ನಿಶ್ಚಲವಚನಭಿಮಾನಿ ಗುಣಿ ತಿತಿಕ್ಷಾನ್ವಿತನಿರ್ಮಲಚರಿತಂ ಎರಡನಜೆಯಂ: **ಪಂಚತಂತ್ರ,** ४೨೭)

**ತಿತ್ತಿರಿ** – ಗಜಲ ಹಕ್ಕಿ (ವೇದಂಗಳಂ ಮುನಿಪಂ ಕಾಜಿ ತಿತ್ತಿರಿಯಾಗಿರ್ದನಗ್ನಿ ಪೀರ್ದೊಡೆ ಅದು ತಾಂ ತೂತ್ತಿರ್ಯವೇದೆಂಬುದೀ ಧರೆಗಾಯ್ತು: **ಸಮಯಪ,** ೧೧. ೫); ತುತ್ತೂರಿ (ನಲವಿನೊಳೂದುತಿರ್ಪ ರಣಮೌವರಿ ತಿತ್ತಿರಿ ಕೋಡಗಾಳಿ: **ತ್ರಿಷಷ್ಟಿಪು,** ೨೭. ३४)

**ತಿತ್ತಿರೆ** – ತಿತ್ತಿರಿ (ಚರಣಾಯುಧಂ ಶಕುನಿ ಕಂಕಂ ತೊಂಡಿಗಂ ಸೋರೆ ತಿತ್ತಿರೆ ಕೋಕಂ .. .. ರತ್ನಖಗಮಿರ್ಕುಂ ತದ್ವನಾಗೌಘದೊಳ್: **ರಾಜಶೇವಿ,** ೫. ३೯)

**ತಿತ್ತಿರಿಗಾಳೆ** – ಒಂದು ಬಗೆಯ ಕಹಳೆ (ತಿತ್ತಿರಿಗಾಳೆಯನಾಲಿಸುತ್ತೆ ಪಿಂಡೊಡೆಯದೆ ಕೂಡಿ ಬರ್ಪ ಪಲವಾಕಳಂ ಈಕ್ಷಿಸಿದಂ ನರಾಧಿಪಂ: **ಲೀಲಾವತಿ,** ೫. ೮೮)

**ತಿದಿ** – ಬೆಂಕಿಗೆ ಗಾಳಿಯೂದುವ ಕಮ್ಮಾರನ ಸಾಧನ (ಉಸಿರೊತ್ತಿಂ ತಿದಿಯಂತಿರೊತ್ತಿರೆ ಬಸಿಜ್ ಪೋತಂದ ಕಣ್ ಬಿಟ್ಟ ಬಾಯ್ .. .. ಪುಡಿಯೊಳ್ ಪೊರಳ್ವ ಪಗೆಯಂ ಕಣ್ದಾರ್ವಿನಂ ನೋಡಿದಳ್: **ಪಂಪಭಾ,** ೧೨. ೧೫೧); ಚರ್ಮ (ಅಂತು ತನ್ನ ಸಹಜಕವಚಮಂ ನೆತ್ತರ್ ಪನಪನ ಪರಿಯೆ ತಿದಿ ಉಗಿವಂತೆ ಉಗಿದು: **ಪಂಪಭಾ,** ೧. ೧೦೨ ವ)

**ತಿದಿಯುಗಿ** – ಚರ್ಮವನ್ನು ಸುಲಿ (ಬಾಟಿವಾಟಿ ತಿದಿಯುಗಿವರುಂ ಮಿಡುಮಿಡುಕೆ ಬಡಿತಂಗಾಸುವರುಂ: **ಆದಿಪು,** ೫. ೮೫ ವ)

**ತಿನ್** – ಸೇವಿಸು (ತಿನ್–ಖಾದನೇ: **ಶಬ್ದಮದ, ಧಾ** ४३೬)

**ತಿಪ್ಪುಟಿ್** – ಹಕ್ಕಿಗಳ ಗರಿ (ಒಂದರ್ಥಕ್ಕೆ: ತಿಪ್ಪುಟೆಂದು ಪಕ್ಕಿಯ ಗಜೆ: **ಶಬ್ದಮದ,** ३३ ವೃತ್ತಿ ೬೧)

**ತಿಪ್ಪೆ** – ಕಸದ ರಾಶಿ (ವಾರಿಜಷಂಡಮಂ ಪದೆದು ಪೊರ್ದುವವೊಲ್ ಕಳಹಂಸೆ ತಿಪ್ಪೆಯಂ: **ಧರ್ಮಾಮೃ,** ४. ೧೧೯)

**ತಿಬ್ಬ** – [ತೀವ್ರ] ಚುರುಕಾದ, ಬೇಗನೆ (ತಿಬ್ಬಮೆಂದಲಸಿ ಪೇಟ್ವ ಅವಧಾರಣದೋಷಮಂ ನೆಲಸಲೀಯದಿರಿಂ ಕೃತಿನಾರಿಯೊಳ್: **ಕವಿರಾಮಾ,** ೧. ೧३೯)

**ತಿಬ್ಬಂ** – ಶೀಘ್ರವಾಗಿ (ಅದಜೆಂ ಮುಂಚಿ ಪಳಂಚಿ ಪಾಜೆದುದು ತಿಬ್ಬಂ ಬಾಣಮನ್ಯಂ: **ಶಬಶಂವಿ,** ४. ४೦)

**ತಿಬ್ಬಂಮಾಡು** – ಗಟ್ಟಿಯಾಗಿ ಮಾಡಿಕೊ (ಎಗ್ಗನಂ ಪೋಲ್ವೆನೀ ದರ್ಶನಮುಮಂ ವ್ರತಮುಮಂ ಬಿಟ್ಟೆನಪ್ಪೊಡೆ ಎಂದು ಮನಮಂ ತಿಬ್ಬಂಮಾಡಿ: **ಧರ್ಮಾಮೃ,** ೧೧ ವ)

**ತಿಮಿರ್** – ತಿಕ್ಕು, ಲೇಪಿಸು (ಬಟೆಯಂ ಯಕ್ಷಕರ್ದಮದ ಕೆಯ್ಗಟ್ಟಿಯೊಳ್ ಕೆಯ್ಯಂ ತಿಮಿರ್ದು ತಂಬುಲಮಂ ಕೊಂಡು: **ಪಂಪಭಾ,** ೩. ೭೯ ವ); ಪರಿಮಳದ್ರವ್ಯ (ಕೈಘಟ್ಟಿಯೊಳಂಗೆಯ್ಯಂ ತಿಮಿರ್ದು: ಸುಕುಮಾಚ, ೧೧. ೩೦)

**ತಿಮಿರ** – ಕತ್ತಲೆ (ರಜನೀವಧುವಂ ನಸುಸೋಂಕಿದಾಕ್ಷಣಂ ಘನತಿಮಿರ ಅಸಿತಾಂಬರಂ ಅದೊಯ್ಯನೆ ಜಾಱಿ: **ರಾಜಶೇವಿ,** ೪. ೧೪); ಕಣ್ಣಿನ ಒಂದು ರೋಗ, ಪೊರೆ (ಪರಿಹರಿಸಲ್ ಅರಿದೆನಿಪ್ಪುದು ಪರಮೈಶ್ವರ್ಯಪ್ರಭೂತ ತಿಮಿರ ಅಂಧತ್ವಂ: **ಕಾದಂಬ,** ೩. ೬೪)

**ತಿಮಿರು** – ಲೇಪಿಸು (ತೊಳಗುವ ಮೆಯ್ಗಳೊಳ್ ತಿಮಿರ್ದು ಕುಂಕುಮದಿಂ .. .. ಪೊಳೆವೊಂದು ವಿಳಾಸದಿಂ .. .. ಪುಷ್ಪಿತೆಯಪ್ಪುದು ಒಪ್ಪದೇ: **ನೇಮಿನಾಪು,** ೨. ೧೨); ಲೇಪನ, ಗಂಧ (ನೇರಿತ್ತಾಗಿ ಚೂರಿಸಿದ ಸಿರಿಖಂಡದ ತಿಮಿರುಂ ಇಕ್ಕಿದ ಜವಿಯ ದಂಡೆಯುಂ .. .. ಅದ್ಭುತಮಾಗೆ: **ನೇಮಿನಾಪು,** ೮. ೬೭ ವ)

**ತಿಮುಟನಾಟ್** – ತಿಗುಳರ ನಾಡು, ತಮಿಳುನಾಡು (ಇತ್ತ ತಿಮುಟನಾಟ್ಗೆ ಪೋದ ಋಷಿಸಮುದಾಯಮೆಲ್ಲಂ ಪನ್ನೆರಡು ವರುಷಂಬರೆಗಂ ಸುಖದೊಳಿರ್ದು: **ವಡ್ಡಾರಾ,** ಪು ೯೦, ಸಾ ೧೪)

**ತಿರ** – [ಸ್ಥಿರ] ಶಾಶ್ವತ (ಅದೇಂ ತಿರವೋ ಪೂಣಿಸಿದ ಮುಷ್ಟಿ ಭೂರಿಶ್ರವನಾ: **ಪಂಪಭಾ,** ೧೧. ೧೪೧)

**ತಿರಸ್ಕರಣ** – ತಾತ್ಸಾರ (ನಿನ್ನ ಬಗೆ ನಿನ್ನ ತಿರಸ್ಕರಣಂ ಬೃಹಸ್ಪತೀ: **ಗಿರಿಜಾಕ,** ೬. ೩೭)

**ತಿರಸ್ಕರಿಣಿ** – ಪರದೆ, ತೆರೆ (ಪರ್ವಿದ ರಜನೀ ತಿರಸ್ಕರಣಿಯಂ ಪೆಱಪಿಂಗಿಸಿ .. .. ನೋಡುವೆಂ: **ಕಾದಂಬ,** ೮. ೧೦೪)

**ತಿರಸ್ಕರಿಸು** – ಕಡೆಗಣಿಸು (ಮತಿಗೆಟ್ಟು ಬಾಯ್ಗೆವಂದಂತೆ ತಿರಸ್ಕರಿಸುವುದು ಪುರುಷಕಾರಮೆ ಗುರುವಂ: **ಸುಕುಮಾಚ,** ೨. ೬೭)

**ತಿರಿ** – ಅಲೆದಾಡು, ಚಲಿಸು (ಇನ್ನೆಗಂ ಓರಂತೆ ತೊಟಲ್ದೆಂ ಇಂ ತಿರಿಯಲಾರೆಂ ಭವಾಂಬೋಧಿಯೊಳ್: **ಆದಿಪು,** ೯. ೬೦); ಭಿಕ್ಷೆ ಬೇಡು (ತಾವಿರ್ಬರುಂ ತಿರಿದು ತಂದಿಕ್ಕಿದೆಂಜಲೆವುಟುಮಂ ತಿಂದು: **ಆದಿಪು** ೩. ೩೪ ವ); ಸುತ್ತು, ತಿರುಗಿಸು (ತಿರಿವ ಎಸಳ್ಗಳ್ ಮುಸುಱುವ ಮಧುಕರಂಗಳಂ ಸೋಯೆ: **ಆದಿಪು,** ೪. ೭೦)

**ತಿರಿತರ್** – ಅಲೆದಾಡು (ಅರಣ್ಯದೊಳ್ ತಿರಿತರುತಿರ್ದ ಕಣ್ಬಡಿಗರಂ ಮಗುಟ್ದುಂ ಬಿಱುತೋಡಿ ಬೇಡರೊಳ್ ನೆರೆದಿರಲ್: **ಪಂಪಭಾ,** ೮. ೮೫)

**ತಿರಿದಾಡು** – ಅಲೆದಾಡು (ಕೈರವವಾರಿಜಂಗಳಲರಂ ತಿರಿದಾಡುವ ಭೃಂಗಮಾಲೆಯಂ ಬಾರಿಸಿ: **ಆಚವರ್ಧ,** ೧. ೪೦)

**ತಿರಿದುಣ್** – ಭಿಕ್ಷೆ ಎತ್ತಿ ತಿನ್ನು (ತಿರಿದುಂಡಲ್ಲದೆ ಮೆಯ್ಮಣಿಯದು ಸಂದೆಯಮಿನ್ನೇಕೆ ಬಿಲ್ಲ ನಾಮ ಕಲ್ವಿನೆಗಂ: **ಧರ್ಮಾಮೃ,** ೧೩. ೨೯)

**ತಿರಿಕ** – ತಿರ್ಯಕ್ ಗತಿ [ಪಶುಜನ್ಮ] (ವಜ್ರಜಂಘಂಗಂ ಶ್ರೀಮತಿಗಮಾ ತಿರಿಕಂಗಳ್ಗಂ ಉತ್ತಮಪಾತ್ರದಾನಾನುಮೋದದ ಪುಣ್ಯಫಲದಿಂದಂ .. .. ಉತ್ತಮ ಭೋಗಭೂಮಿಯೆ ಜನ್ಮಭೂಮಿಯಾದುದು: **ಆದಿಪು,** ೫. ೨೭ ವ)

**ತಿರಿಕ** – ಅಲೆದಾಡುವವನು (ತ್ರಿಜಗದ ತಿರಿಕಂ ವಿದ್ಯಾಭಿಜಾತಗಂಧರ್ವಂ ನಿಮಿತ್ತವಿದಂ: ಶಾಂತಿಪು, ೬. ೨೪); ಭಿಕ್ಷುಕ (ತಿರಿಕಂ ನಿಧಿವಡೆದೊಡೆ ಎಂತು ನಲಿದಾಡುಗುಂ: **ಸಮಯಪ,** ೧. ೧೦೨)

**ತಿರಿಕಜೀವ** – ಪ್ರಾಣಿ (ನರಸಿಂಪುರಾಣಮಂ ತಿರಿಕಜೀವವಱಿವುವೆ ಪೇೞಲ್: **ಸಮಯಪ,** ೧೦. ೮೫)

**ತಿರಿಕಲ್** – ಅಣೆಕಲ್ಲು (ತನ್ನಳಿನಿ ಹರಿನೀಲದಿಂ ಕೆಂದಳದೊಳ್ ತಿರಿಕಲ್ಲನಾಡುವಂತೆವೊಲೆಸೆಗುಂ: **ರಾಜಶೇವಿ,** ೨. ೭೧)

**ತಿರಿಕವ್ರಾತ** – ತಿರ್ಯಕ್‌ಜಾತಿಯ ಜೀವಿಗಳ ಗುಂಪು (ತಿರಿಕವ್ರಾತಂಗಳೊಳ್ ಸಂಭವಿಸಿ ದುರಿತದಿಂ ದುಃಖಮಂ ಪೇೞಲಾಱೆಂ: **ಧರ್ಮಾಮೃ,** ೧೩. ೧೦೩)

**ತಿರಿಕೊಱೆಗೊಳ್** – ಭಿಕ್ಷೆ ಬೇಡಿ [ಬಟ್ಟೆ] ಸಂಪಾದಿಸು (ಅರಿದಾದಂ ಕನ್ನೆಡದೊಳ್ ತಿರಿಕೊಱೆಗೊಂಡಱೆಯೆ ಪೇೞ್ವೆಂ: **ಕವಿರಾಮಾ,** ೧. ೪೨)

**ತಿರಿಕೋಪಸರ್ಗ** – [ಜೈನ] ತಿರ್ಯಕ್‌ಜೀವಿಗಳಿಂದ ತಪಸ್ವಿಗಳಿಗೆ ಆಗುವ ತೊಂದರೆ (ಸೈರಿಸಲುಮಾಗದ ತಿರಿಕೋಪಸರ್ಗಮನವಂತಿ ಸುಕುಮಾರಸ್ವಾಮಿ ಮೂಱು ದಿವಸಮಿರುಳುಂ ಪಗಲುಂ ಸೈರಿಸಿ: **ವಡ್ಡಾರಾ,** ಪು. ೩೦, ಸಾ. ೧೮)

**ತಿರಿಗುತ್ತ** – ಭಿಕ್ಷೆ ಬೇಡುವ ಕಷ್ಟ (ಬಡತನದ ಕುತ್ತದ ತಿರಿಗುತ್ತದ ರಾಜಬಾಧೆಯ .. .. ಅಗ್ನಿಗೆ ತಮ್ಮ ಶರೀರಮೆಂಬ ಪುಳ್ಳಿಯನಿಕ್ಕುವರದೇಂ ಸಾಸಿಗರೊ: **ಧರ್ಮಾಮೃ,** ೬. ೧೨೦ ವ)

**ತಿರಿತರ್** – ಅಲೆದಾಡು (ಅರಣ್ಯದೊಳ್ ತಿರಿತರುತಿರ್ದ ಕಣ್ಬಡಿಗರಂ ಮಗುಟ್ದುಂ ಬಿಱುತು ಓಡಿ ಬೇಡರೊಳ್ ನೆರೆದಿರಲ್ ಒಡ್ಡಯಿಸಿ ರಾಜ್ಯದೊಳೇಂ ನೆರೆಯಲ್ಕೆ ತೀರ್ಗುಮೋ: **ಪಂಪಭಾ,** ೮. ೮೫); ಬೇಡಿತರು (ಒಡಲಂ ಮೃಡನಂತೇಕಯ್ಯ ಪೊತ್ತು ತಿರಿತಂದಪನೇ: **ಸಮಯಪ,** ೧೦. ೨೬)

**ತಿರಿಪು** – ತಿರುಗಿಸು (ದರ್ಪಕಂ ತಿರಿಪುವ ಚಕ್ರದಂತೆ ತಿರಿಯುತ್ತಿರೆ ಮೇಲೆ ಮದಾಳಿಮಾಳೆಗಳ್: **ನೇಮಿನಾಪು,** ೨. ೩೭)

**ತಿರಿವು** – ತಿರುಗಾಟ (ಕರ್ಮಮೆ ಕಡುಬಲ್ಲಿತ್ತು ಅದಱ ತಿರಿವು ಅದೇಂ ಬಹುವಿಧಮೋ: **ಆದಿಪು,** ೫. ೯೭)

**ತಿರಿಸುಳಿ** – [ತ್ರಿಶೂಲಿ] ಶಿವ (ಬಗೆ ಪೊಱಸೂಸದೆ ಕೈಯಂ ಮುಗಿಯದೊಲವಿಂ ನೋಡಿ ಪೆರ್ಚುತುಂ ತಿರಿಸುಳಿಯಂ ಪೊಗಟುತ್ತ ಇರ್ತರದಿಂದೆ ಓಲಗದೊಳ್ ಕುಳ್ಳಿರ್ದ ಜತಿಗಳೇನೊಪ್ಪಿದರೋ: **ಕಬ್ಬಿಗಕಾ,** ೧೨೬)

**ತಿರೀಟ** – ಕಿರೀಟ (ಅದು ರತ್ನಹಟತ್ ತಿರೀಟಮೆ ಅಲ್ಲ ಅದು ವರವ್ರಜಕುಂಡಳಮೆ ಅಲ್ಲ .. .. ಅನುಕ್ರಮದಿಂ ಬಳೆದಂ ತ್ರಿವಿಕ್ರಮಂ: **ನೇಮಿನಾಪು,** ೬. ೨೮)

**ತಿರು** – ಬಿಲ್ಲಿನ ಹಗ್ಗ (ಸುರಗಿರಿ ಬಿಲ್ ನಾಗೇಂದ್ರಂ ತಿರು ಕೃಷ್ಣನೆ ಬಾಣಮಾಗಿರೆ: **ಸಮಯಪ,** ೧೦. ೭೧)

**ತಿರುಗೊಲೆ** – ಬಿಲ್ಲಿನ ಕೊಪ್ಪು (ತುಂಬಿಯ ತಿರುಗೊಲೆಯೊಳ್ ಕೋದ ಕಂದರ್ಪಕೋದಂಡ ಲತಾಸೌಭಾಗ್ಯಮಂ ಸೂಸುವ ತನುಲತೆ: **ಲೀಲಾವತಿ,** ೧೩. ೧೩೮)

**ತಿರುಪು** – ತಿರುಗಿಸು (ಕೆಲರಂ ಗುರ್ದಿಯುಂ ಉರ್ದಿಯುಂ ತಿರುಪಿಯುಂ ತೇದುಂ ಭುಜಾದಂಡದಿಂ: **ಗದಾಯು,** ೩. ೧೨); ಅಲೆದಾಡಿಸು (ತಿರುಪು–ಭ್ರಮಣೇ: **ಶಬ್ದಮದ, ಧಾ** ೪೬೨)

**ತಿರುವಾಯ್** – ಹೆದೆಯ ಮಧ್ಯ (ದೋಣೆಗಳಿಂ ಉರ್ಚುವ ತಿರುವಾಯ್ ಒಣರ್ಚಿ ತೆಗೆನೆಱೆವ ಬೇಗಮಂ ಕೂರ್ಗಣೆಗಳ ಪಂದರನೆ ನಭೋಂಗಣದೊಳ್ ಕಂಡತ್ತು ದೇವಗಣಂ ಇನಸುತನಾ: **ಪಂಪಭಾ,** ೧೨. ೧೮೪)

**ತಿರುವು** – ಬಿಲ್ಲಿನ ಹೆದೆ (ಬಂದಳ್ ಅತನುವ ಪೂಗಣೆ ತಿರುವಿಂ ಬರ್ದುಂಕಿ ಬರ್ಪವೊಲ್ ಒರ್ಬಳ್: **ಮಲ್ಲಿನಾಪು,** ೫. ೭೭)

**ತಿರುವುವೊಯ್** – ಹೆದೆಯಿಂದ ಠೇಂಕಾರ ಮಾಡು (ನನೆವಿಲ್ಲಂ ಬಿಟ್ಟು ವಿದ್ಯುಲ್ಲತೆಯ ತಿರುವುವೊಯ್ವಿಂದ್ರಕೋದಂಡಮಂ ಕೊಡು: **ಜಗನ್ನಾವಿ,** ೪. ೨೧)

**ತಿರುವೊಯ್ಲು** – ಬಾಣ ಬಿಡುವಾಗ ಬಿಲ್ಗಾರನ ಕೈಗೆ ಬೀಳುವ ಹೆದೆಯ ಪೆಟ್ಟು (ತಿರುವೊಯ್ಲಿಂದಾದದಡ್ಡುಬ್ಬರಿಸಿಮೆಱೆವ ಮುಂಗೆಯ್ಗಳಿಂ: **ಶಾಂತೀಶ್ವಪು,** ೩. ೭೫)

**ತಿರುಳ್** – ಸಾರ (ಕಿಸುವೊಳಲಾ ವಿದಿತ ಮಹಾ ಕೊಪಣ ನಗರದಾ ಪಿಲಿಗೆಱೆಯಾ ಸದಭಿಸ್ತುತಮಪ್ಪ ಒಂಕುಂದದ ನಾಡೆ ನಾಡೆ ಕನ್ನಡದ ತಿರುಳ್: **ಕವಿರಾಮಾ,** ೧. ೩೭)

**ತಿರುಳ ಕನ್ನಡ** – ಸಾರವತ್ತಾದ ಕನ್ನಡ (ರಾಜದ್ರಾಜಕಮೆನಿಸಿದ ಸಾಜದ ಪುಲಿಗೆಱೆಯ ತಿರುಳ ಕನ್ನಡದೊಳ್: **ಪಂಪಭಾ,** ೧೪. ೫೮)

**ತಿರುಳೆಲೆ** – ಎಲೆಯ ಸುಳಿ (ಎಳವಾಟೆಯ ತಿರುಳೆಲೆಯ ತೆರೆಸುತ್ತಿನೊಳಂ ಎಸೆವ ಪಸುರ್ವಂದರೊಳಗೆ: **ಲೀಲಾವತಿ,** ೧೧. ೫೨ ವ)

**ತಿರೋಹಿತ** – ಮರೆಯಾದ, ಅದೃಶ್ಯ (ಶುಚಿಶಚಿಮಹಾದೇವಿ ತಿರೋಹಿತಶರೀರೆಯಾಗಿ: **ಆದಿಪು,** ೭. ೪೩ ವ)

**ತಿರೋಹಿತವೇಷ** – ವೇಷ ಮರೆಸಿಕೊಂಡವನು ಗಾರ್ಗ್ಯನೆಂಬ ಪುರೋಹಿತಂ ತಿರೋಹಿತವೇಷನಗಿ ಬಂದು ಯಥೋಚಿತ ಮಂಗಳಾಚಾರಮಂ ಮೆಱೆದು: **ಜಗನ್ನಾವಿ,** ೩. ೨೬ ವ)

**ತಿರೋಹಿತೆ** – ಕಣ್ಣಿಗೆ ಮರೆಯಾದವಳು (ಎಂದು ತಿರೋಹಿತೆಯಾದೊಡೆ ತಂದಿರಿಸಿದ ಜೀವರಾಶಿಯಂ ಬಿಡಿಸಿ .. .. ವಿಭು ಲಾಲಿಸಿದಂ: **ಯಶೋಧಚ,** ೪. ೭೪)

**ತಿರ್ದು** – ಶುಭಸೂಚಿಸು (ಬಿಡೆ ತಿರ್ದಿದ ಶಕುನದ ನಯದಡಿವಿಡಿದು ಪುರೋಹಿತಂ ಈ ನುಡಿ ನುಡಿದಂ: **ಆದಿಪು,** ೫. ೬); ತಿದ್ದುವಿಕೆ, ಪಳಗಿಸು (ಮುದುಗುದುರೆ ತಿರ್ದೆ ಬಡವಾದುದು ಎಂಬ ತೆಱದಿಂ: **ಸಮಯಪ,** ೧೩. ೬೧)

**ತಿರ್ದುವರ್** – ಸಮಂಜಸವಾಗು (ನಿರಾಭರಣಂ ಮೆಱೆಯಲ್ಕೆ ಪೇೞ್ದಪೆಂ ಚರಿತಪುರಾಣಮಂ ಬಱಿದೆ ಪೇೞ್ದಪೆನೆಂದೊಡೆ ತಿರ್ದುವಪ್ಪುದೇ: **ಅನಂತಪು,** ೧. ೩೬)

**ತಿರ್ದುಹ** – ತಿದ್ದುವಿಕೆ (ನೆಲದಲ್ಲಿ ತಾವರೆಯಂ ಬಿತ್ತುಹವುಂ, ಕಿವುಂಡಗೇಕಾಂತವಂ ಹೇೞುಹವುಂ, ನಾಯಬಾಲಮಂ ಕಾಸಿ ತಿರ್ದುಹವುಂ, **ಪಂಚತಂತ್ರ,** ೨೦೬, ಶ್ಲೋಕ ೮೭ ಟೀಕೆ)

**ತಿರ್ಯಕ್ತ್ವ** – ಪಶುಪ್ರಾಣಿಯಾಗಿರುವಿಕೆ (ಸುರಲೋಕಭ್ರಷ್ಟನೆಂ ಮರ್ತ್ಯದೊಳುದಯಿಪ ತಿರ್ಯಕ್ತ್ವದೊಳ್ ನಿಲ್ವ .. .. ದುಃಖೋತ್ಕರಂ: **ಕಾದಂಸಂ,** ೮. ೩೯)

**ತಿರ್ಯಗ್ಗತಿ** – [ಜೈನ] ಚತುರ್ಗತಿಗಳಲ್ಲಿ ಒಂದು, ಪಶುಪ್ರಾಣಿಗಳ ಗುಂಪು (ಯಶೋಧರಂ ಚಂದ್ರಮತಿ ಇಂತಿರ್ಬರ್ ಗೂಡಿನ ಕೋಟಿಗಳಾದರ್ ನೋಡಯ್ ಮತ್ತೊರ್ಮೆ ಬಳಳಿ ತಿರ್ಯಗ್ಗತಿಯೊಳ್: **ಯಶೋಧಚ,** ೪. ೩೩)

**ತಿರ್ಯಗ್ಜಾತಿ** – [ತಿರ್ಯಕ್+ಜಾತಿ] ಪಶುಪಕ್ಷಿ ಜನ್ಮ (ತಿರ್ಯಗ್ಜಾತಿಯೊಳೀ ಚಾತುರ್ಯಮಿದೇನೆಂದು .. .. ಅತ್ಯಾಶ್ಚರ್ಯಂ ಒದವುವಿನಂ ಅರಸಂಗೆ ಆರ್ಯೆಯಂ ಓದಿತ್ತದೊಂದನಾ ಶುಕರತ್ನಂ: **ಕಾದಂಸಂ,** ೧. ೨೧)

**ತಿರ್ಯಗ್ಜಾತಿತ್ವ**– ಪಶುಪ್ರಾಣಿಗಳ ಜನ್ಮ (ತಿರ್ಯಗಜಾತಿತ್ವಮಂ ಪೊರ್ದಿದ ಮಿಥುನಂಗಳಾಗಿ ಪುಟ್ಟಿ ಪರಸ್ಪರವೈರಂಗಳಿಲ್ಲದೆ: **ಆದಿಪು,** ೫. ೪೧ ವ)

**ತಿರ್ಯಗ್ದೀನ** – ಅಡ್ಡಡ್ಡಲಾಗಿ ನಡೆದಾಡುವುದು (ಉಡ್ಡೀನ ಸಂಡೀನ ತಿರ್ಯಗ್ದೀನ ಅವಡೀನ ಪ್ರಕೃತಿ ಗರುಡನೇಂ ವಿಸ್ಮಯಂ ಸಭವೇಗಂ: **ಜಗನ್ನಾವಿ,** ೧೮. ೯೪)

**ತಿರ್ಯಗ್ಲೋಕ** – ಪಶುಪ್ರಾಣಿಗಳಿರುವ ಭೂಲೋಕ (ಅಂತೆಸೆದಿರ್ಪುದು ಅಧೋಲೋಕಂ ತಿರ್ಯಗ್ಲೋಕಂ ಊರ್ಧ್ವಲೋಕಂ: **ನೇಮಿನಾಪು,** ೧. ೫೪)

**ತಿರ್ಯಗ್ವರ್ತಿತ** – ಅಡ್ಡಡ್ಡಲಾಗಿ ಓಡಾಡುವ (ಮನವನೊಲಿಸೆ ತಿರ್ಯಗ್ವರ್ತಿತ ಸ್ಮೇರತಾರಂ ಜನಪತಿಸುತನಾಗಳ್ ಕಾಮತೆಯಂ ನೋಡಿದಂ: **ಚಂದ್ರಪ್ರಪು,** ೬. ೭೬)

**ತಿರ್ಯಗ್ವಳನ** – ಅಡ್ಡಲಾಗಿ ಬಾಗು (ಪುಳಕಪ್ರೋದ್ಭೇದ ಘರ್ಮೋದಕವಿಸರಮನೊತ್ತಂಬದಿಂ ತಾಗೆಯುಂ ನಿಶ್ಚಳಧೈರ್ಯವ್ಯಾಜ ತಿರ್ಯಗ್ವಳನತರಳಿತಂ: **ಆದಿಪು,** ೪. ೫೧)

**ತಿಲಕ** – ಸುಂದರವಾದ ಹೂಬಿಡುವ ಒಂದು ಮರ, ಘರಕ (ಕುಂದ ಮುಚುಕುಂದ ಮಂದಾರ ಇಂದೀವರ ನಂದ್ಯಾವರ್ತ ತ್ರಿಸಂಧ್ಯಾ ಬಂಧೂಕ ಕದಂಬ ಕನಕ ಕರವೀರ ಕರ್ಣಿಕಾರ ಕುಮುದವನವಕುಳ ಕುರವಕ ಕಮಲ ತಿಲಕ ಚಂಪಕ ಪಾಟಲಿ ಪಾರಿಜಾತ ಜಾತಿ ಪುನ್ನಾಗ ಮಲ್ಲಿಕಾದಿ ಅನೇಕ ಸುರಭಿಕುಸುಮಂಗಳಂ: **ಪಂಚತಂತ್ರ,** ೧೯೦ ವ); ಹಣೆಯ ಮೇಲಿನ ಬೊಟ್ಟು(ತಿಲಕಾಕಾರನಿದಿರ್ಕೆ ನೊಸಲೊಳ್ ಸಾಮ್ರಾಜ್ಯಪಟ್ಟಂ: ಪಂಪರಾ, ೬. ೮೦); ಶ್ರೇಷ್ಠವಾದ (ಪೇೞ್ದಂ ಮನಮೊಸೆದು ಪುರಾಣತಿಲಕಮಂ ಕವಿತಿಲಕಂ: **ಅಜಿತಪು,** ೧. ೭೯)

**ತಿಲಕಿಸು** – ತಿಲಕವನ್ನಿಡು, ಲೇಖಿಸು (ಲಲನಾಜನಕ್ಕೆ ತಾನೀ ಲಲನೆ ದಿಟಂ ತಿಲಕಮೆಂದು ವರ್ಣಿಸುತ ಒಲವಿಂ ತಿಲಕಿಸುವ ತೆಱದಿಂ ಒರ್ವಳ್ ತಿಲಕಮನಿಟ್ಟಳ್ ತನೂದರಿಯ ಪೆರೆನೊಸಲೊಳ್: **ಶಾಂತೀಶ್ವಪು,** ೪. ೨೪೨)

**ತಿಲ್ವಕ** – ಬಿಳಿ ಸಾಂಬ್ರಾಣಿಯ ಮರ (ಬಿಲ್ವ ತಿಲ್ವಕ ಶಮೀ ಶಮ್ಯಾಕ ಜಂಬಾಳಡಂಬದಿಂ ಒಂದೊಂದೆಡೆ ಛಿಂದಕ ಸುರದಾರು ಲವಂಗಾಸನದ್ರುಮಂಗಳಿನೆಸೆಗುಂ: **ವರ್ಧಮಾಪು,** ೫. ೪೮)

**ತಿವದಿ** – ತ್ರಿಪದಿ ಎಂಬ ಛಂದೋಪ್ರಕಾರ (ವೃತ್ತಂಗಳ್ ಅಕ್ಕರಂ ಚವುಪದಿ ಮತ್ತಂ ದಲ್ ಗೀತಿಕೆ ತಿವಿದಿಗಳಂದಂಬೆತ್ತೆಸೆಯೆ ಪೇೞ್ದೊಡೆ ಅದು ಚತ್ತಾಣಂ: **ಕವಿರಾಮಾ,** ೧. ೩೫)

**ತಿವಳಿ** – ಸ್ತ್ರೀಯ ಹೊಕ್ಕುಳಿನ ಮೇಲಿರುವ ಮೂರು ಮಡಿಕೆಗಳು (ಮಸುಳೆ ತಿವಳಿ ಕರ್ಪಂ ಬಾಸೆ ಪೆತ್ತೊಪ್ಪೆ .. .. ಪೆರ್ಚಿತ್ತು ಗರ್ಭಂ: **ಚಂದ್ರಪ್ರಪು,** ೩. ೮೫); ಹೆಜ್ಜೆಗುರುತು (ಸೊವಡಿಂಗೇವಯ್ಸಿ ಪುಲ್ವಟ್ಟೆಯ ತಿವಳಿಯನಾರಯ್ದು ಘರ್ಮದ್ರವಂ ಮೆಯ್ಯನಿವಿರುಂ ಮೆಯ್ವೆರ್ಚೆ .. .. ಮರವಾಯ್ದತ್ತು ಮತ್ತದ್ವಿಪೇಂದ್ರಂ: **ಮಲ್ಲಿನಾಪು,** ೧೦. ೬೦); ಒಂದು ಬಗೆಯ ವಾದ್ಯ (ಪಳವದ ತಿವಳಿಯ ಜುಂಕದ

ಮೊಳಸಿನ ಜೇಕಿರದ ಸಿವಿಖಿ ಸಿಪ್ಪಿನ ಲಯದಿಂದ ಎಳಲದೆ ಕುಣಿದರ್: **ಅಜಿತಪು,** ೫. ೩೨)

**ತಿವಿ –** ಗುದ್ದು, ಮುಷ್ಟಿಪ್ರಹಾರ ಮಾಡು (ತಿವಿ–ಮುಷ್ಟಿಪ್ರಹರಣೇ: **ಶಬ್ದಮದ, ಧಾ** ೬೭೨)

**ತಿವುಡುಗಳೆ –** ಧಾನ್ಯದ ಹೊಟ್ಟು ತೆಗೆ (ತಿಳಿದುಪ್ಪಂ ತಿವುಡುಗಳೆದ ಪೊಂಬೆಸಱ ಮಹೋಜ್ವಳಮಪ್ಪ ಕಂಪಿನಿಂಪಿನ ನಿಳಯಮೆನಿಸಿರ್ದ ಸವಿಯಿಂ ಒದವಿದ ತೊವೆಯಿಂ; **ಧರ್ಮಾಮೃ,** ೧. ೧೧೯)

**ತಿವುರಿ –** ಡೇರೆ (ಗಾಡಿವಡೆದ ಬಕುಳದ ಗೂಡಾರದೊಳಂ ಬೀಗಿ ಪಟಪಟನೆ ಬೆಳದ ಬಾಟೆಯ ತಿವುರಿಯೊಳಂ .. .. ಬಿಟ್ಟ ಬಿಡು ಬರೆದಂತೆ: **ಕಬ್ಬಿಗಕಾ,** ೧೮೪ ವ)

**ತಿವುರು –** ಲೇಪ (ತಿವುರುಮಂ ತಿಳಕಮುಂ ಬೆರಸುತ್ತೂರಿಸಿಕೊಂಡು ಬರ್ಕೆ: **ನೇಮಿನಾಪು,** ೮. ೭೩ ವ)

**ತಿಸರ –** [ತ್ರಿಸರ] ಮೂರೆಳೆಯ ಸರ (ಸರಿಗೆ ದುಸರಂ ಮಣಿಮುದ್ರಿಕೆ ತ್ರಿಸರಮೆಂಬ ಭೂಷಾನಿಕರಮಂ: **ಆದಿಪು,** ೫. ೩೩)

**ತಿಸರಿ –** ಒಂದು ತಂತಿವಾದ್ಯ (ಬಾಜಿಪ ಬೀಣೆಯ ತಿಸರಿಯಂ ಕೊಳ್ಳೆಂದು ಬಲ್ಲಂಗಿವಂ ಕುಡಿಂ: **ಅಜಿತಪು,** ೬. ೧೦೮)

**ತಿಸುಳ –** ತ್ರಿಶೂಲ (ತಿಸುಳದೊಳ್ ಉಚ್ಚಳಿಪ್ಪ ಪೊಸನೆತ್ತರೆ ಕೆಂದಳಿರಾಗೆ ಕಣ್ಗೆ ಅಗುರ್ವಿಸುವಿನಂ ಒಕ್ಕು ನೇಲ್ವ ಕರುಳೋಳಿಯೆ ಬಾಳಮೃಣಾಳಮಾಗೆ ಮಿಕ್ಕಸುರರ ಮೆಯ್ಯೊಳಾದ ವಿರಹಾಗ್ನಿಯಂ ಆಜೆಸುತಿಂತೆ ತನ್ನ ಕೂರಸಿಯೊಳ್ ಅಡರ್ತು ಕೊಂದಸಿಯಳ್ ಇರ್ಕೆ ಅಸಿಯೊಳ್ ಪಡೆಮೆಚ್ಚೆ ಗಂಡನಾ: **ಪಂಪಭಾ,** ೧. ೬)

**ತಿಸುಳಿ –** [ತ್ರಿಶೂಲಿ] ಶಿವ (ಎನ್ನಯ ಬಾರಿಯೊಳ್ ತಿಸುಳಿ ತಾನಿನ್ನೆತ್ತ ಪೋಗಿರ್ದಪಂ: **ಕಬ್ಬಿಗಕಾ,** ೧೫೦)

**ತಿಹುರಾಂತಕ –** ತ್ರಿಪುರಾಂತಕ (ಉತ್ತರಪದನಪಭ್ರಂಶಕ್ಕೆ ಬಾರದೆ ಪೂರ್ವಪದಂ ತದ್ಭವಮಾದುದರ್ಕೆ: ಶ್ರೀರಾಮಂ–ಸಿರಿರಾಮಂ, ತ್ರಿಪುರಾಂತಕಂ–ತಿಹುರಾಂತಕಂ: **ಶಬ್ದಮದ,** ೩೦೪ ಪ್ರ)

**ತಿಳ –** ತಿಲ, ಎಳ್ಳು (ಗರ್ಭ ಷಷ್ಟಿ ವ್ರೀಹಿ ಯವ ಗೋಧೂಮಾದಿಮಹೌಷಧಂಗಳುಂ ತಿಳ ಅಸೀತ ಕುಸುಂಭಾದಿದೀಪ್ರೌಷಧಿಗಳುಂ; **ಆದಿಪು,** ೮. ೬೧ ವ)

**ತಿಳಕ –** ವಶೀಕರಣದ ಬೊಟ್ಟು (ತಿಳಕಂ ವಶ್ಯಮೆ ಜಡಜನಮೊಳಗಜೆಯದು ಸಕಳಭವ್ಯತಿಳಕಂಗೆ: **ಆದಿಪು,** ೧೦. ೬೦)

**ತಿಳಕೆ –** ಮೂರನೆಯ ಮದಾವಸ್ಥೆಯಲ್ಲಿರುವ ಆನೆ (ತಿಳಕಮಿಟ್ಟವೊಲ್ ತಿಳಕೆಯದು: **ಪಾರ್ಶ್ವನಾಪು,** ೪. ೧೧೭)

**ತಿಳಕಿಸು –** ಮದವೇರು (ತುಹಿನಾಂಶುಬಿಂಬಂ ಅಂಬರದೊಳ್ ಕಣ್ಗೊಳಿಸಿರ್ದುದು ಇಲ್ಲಿಂ ಮುನ್ನಮೆ ತಿಳಕಿಸದಿರ್ಕುಮೆ ಮನೋಜವಿಜಯಗಜೇಂದ್ರಂ: **ಮಲ್ಲಿನಾಪು,** ೫. ೧೬)

**ತಿಳಿ –** ಬಗ್ಗಡ ಹೋಗಿ ಶುದ್ಧವಾಗು (ಕೆಸಱೆಂ ಪಿಂಗಿತ್ತು ಧರಣಿ ತಿಳಿದುವು ಕೊಳಗಳ್: **ಕವಿರಾಮಾ,** ೨. ೬೧); ಮಿರುಗು (ಸೆಳ್ಳುಗುರ್ಗಳ ತೆಳ್ಳನೆ ತಿಳಿದ ಕಾಂತಿ ಕುಸುಮಿಸುವಿನೆಗಂ: **ಅನಂತಪು.** ೬. ೪೬); ಕೋಪವನ್ನು ಬಿಡು (ಮುನಿಸಿನೊಳಾದಮೇವಯಿಸಿ .. .. ಬಯ್ದನುವಿಸಿ ಕಾಡಿ ನೋಡಿ ತಿಳಿದು ಅಟ್ಟಿಜೆಂ ಇಟ್ಟಿಳಿಗೊಂಡು: **ಪಂಪಭಾ,** ೪. ೧೦೬); ಅರಿತುಕೊ (ಜಿನೇಂದ್ರಧರ್ಮಮಂ ಸಾರಮಪ್ಪುದಂ ತಿಳಿದು ನಂವಿದವರಂ ಅನ್ಯರನೇಕೆ ಪೊರ್ದುರ್ವರ್ರ: **ಧರ್ಮಾಮೃ,** ೧. ೧೩೬); ನೈರ್ಮಲ್ಯ (ತಿಳಿ–ನೈರ್ಮಲ್ಯೇ ಜ್ಞಾನಪ್ರಸನ್ನಭಾವಯೋಃ ಕಾಂಜಿಕೇ ಚ: **ಶಬ್ದಮದ, ಧಾ** ೯೫೭)

**ತಿಳಿದ ಕೊಳ –** ಸ್ವಚ್ಛವಾದ ಕೊಳ (ಚೆಲ್ವನಿತ್ತತ್ತು ಓರಂತಂಭೋದಮಾರ್ಗಂ ತಿಳಿದ ಕೊಳದವೋಲ್ ದೇವಸಂದೋಹದಿಂದಂ: **ಆದಿಪು,** ೧೦. ೧೯)

**ತಿಳಿಪು –** ಶುದ್ಧವಾಗು ತೀಳಿಪುವೊಡೆ ಮೊಗ್ಗೆ ಮುದ್ದುಂ ಕಳಂಕಮುಂ ತಿಳಿಯದಿರ್ಪ ದೆಸೆಗಳುಮಂ ನೀರ್ಗಳುಮಂ ತಿಳಿಪಿದ ಸರಮುಂ ತಿಳಿಪಿದುದೆ ಕಳಂಕಗತಿಯಂ ಅಮೃತದ್ಯುತಿಯಂ: **ಲೀಲಾವತಿ,** ೧೪. ೫೧); ಕೋಪವನ್ನು ಉಪಶಮನಗೊಳಿಸು (ವನಿತೆಯರ ಒಲವಿನ ಮುನಿಸುಗಳಂ ತಿಳಿಪುವ ಎಡೆಯೊಳ್ ಅತಿ ಚತುರಂ: **ಕಾದಂಸಂ,** ೧. ೧೯); ಸ್ಪಷ್ಟಪಡಿಸು (ಅವರರಂ ತಿಳಿಪಲಾಱದೆ ಮತ್ತೆ ಪೂರ್ವವಿದೇಹಕ್ಕೆ ಪೋಗಿ .. .. ಭಟಾರರ್ಗೆ ಪೇಱ್ದು: **ವಡ್ಡಾರಾ,** ಪು. ೧೦೪, ಸಾ. ೨೦)

**ತಿಱಿ –** ಹೂ ಕೊಯ್ಯಿ (ನೂಪುರನಿನದಂ ಪುದಿದಿದೊ ಮೊರೆವಳಿಗಳನೆನಿಸಿದಶೋಕೆಯ ತಳಿರನೊರ್ವಟ್ಟಿಯೆ ತಿಱಿದಳ್: **ಆದಿಪು,** ೧೧. ೧೦೪); ಬೇಡು (ಕೈರವವಾರಿಜಲಂಗಳಂ ತಿಱಿದಾಡುವ ಭೃಂಗಮಾಲೆಯಂ ಬಾರಿಸಿ: **ಆಚವರ್ಧ,** ೧. ೪೦)

**ತಿಱಿಕಲ್ –** ಅಣ್ಣೆಕಲ್ಲು, ಮೇಲೆಸೆದು ಹಿಡಿಯುವ ಸಣ್ಣಕಲ್ಲು (ನೆಗೆಯುತ್ತುಮಿರ್ಪ ತುಂಬಿಗಳ್ .. .. ಮನಕ್ಕೆ ತರಲಾರ್ತುವು .. .. ಇಂದ್ರನೀಲ ಮಣಿಯಂ ತಿಱಿಕಲ್ಲಳನಾಡುವಂತೆವೋಲ್: **ಪಂಪರಾ,** ೩. ೭೭)

**ತಿಱಿಕಲ್ಲಾಡು –** ತಿಱಿಕಲ್ ಆಟವಾಡು (ತಿಱಿಕಲ್ಲಾಡುವ ಬೊಟ್ಟುವೋರಿಸುವ ಸೆಡಂ ಮೊಯ್ವು ಬಾದಿಂಗೆ ಕೈನಿಱಿದೆರ್ದಾಡುವ: **ಸುಕುಮಾಚ,** ೨. ೬)

**ತಿಱಿಕೊಱಿ –** ತಿರಿದು ತಿನ್ನುವವನು, ಕಾಳನ್ನು ಆಯ್ದುಕೊಂಡು ಜೀವಿಸುವವನು (ತಿಱಿಕೊಱಿಯೆಂದು ಅಯ್ಕುಳಿ: **ಶಬ್ದಮದ,** ಪ್ರಸಾ, ೧೦೩)

**ತಿಱು –** ವಿನಿಮಯಮಾಡು (ತಿಱು–ದ್ರವ್ಯ ವಿನಿಮಯೇ: **ಶಬ್ದಮದ, ಧಾ** ೮೬೭)

**ತಿಱುನೀರಿಕ್ಕು –** ತಿಱುನೀರನ್ನು ಕೊಡು (ತಱಿಸಂದು ಲಾಟರೊಳ್ ತಳ್ತಿಱಿದು ಏಱಂ ಪೇಱೆ ಕೇಳ್ದು ಮಂಡಲಮಿನ್ನುಂ ತಿಱುನೀರಿಕ್ಕುವುದು ಎನಿಸಿದ ತಱಿಸಲವಿನ ಚಲದ ಬಲದ ಕಲಿ ನರಸಿಂಹಂ: **ಪಂಪಭಾ,** ೧. ೩೩)

**ತಿಱ್ಱನೆ –** ಗಿರ್ರನೆ, ಒಂದು ಅನುಕರಣ ಶಬ್ದ (ಧಾತ್ರಿ ತಿಱ್ಱನೆ ತಿರಿವನ್ನೆಗಂ ತೆಗೆದು ಕಂಧರಸಂಧಿಯಂ ಎಯ್ದೆ ನೋಡಿ ತೊಟ್ಟನೆ ನರಂ ಎಚ್ಚೊಡೆ: **ಪಂಪಭಾ,** ೧೨. ೧೬೮)

**ತೀಟ –** ಸ್ಪರ್ಶ (ತೆಂಬೆಲರೊಂದು ತೀಟಮಿಲ್ಲದ ಸಹಕಾರವಲ್ಲರಿಯ ತೋರ್ಕೆಗಮೊಪ್ಪುವ ಭೃಂಗಸಂಗಂ: **ಸುಕುಮಾಚ,** ೫. ೬೦); ಬೀಸುವಿಕೆ (ಅದಱ ಕೆಲದೊಳ್ ತಂಬೆಲರ ತೀಟದಿಂ ಅಲ್ಲಾಡುವ ಅಸುಕೆಯ ಪೊಸದಳಿರ್ಗಳಂ ನೋಡಿ: **ಮಲ್ಲಿನಾಪು,** ೬. ೧೨ ವ)

**ತೀಂಟು –** ತಾಕು (ಉಚ್ಚಳಚ್ಚೀಕರತತಿ ನಭವಂ ತೀಂಟುವನ್ನಂ: **ಕುಸುಮಾಕಾ,** ೧. ೨೨)

**ತೀಂಟೆ** – ತೀಟೆ, ನವೆ ಮದಕರಿ ತೀಂಟೆಗೊಲ್ದೊರಸೆ ಭೂರುಹಕಂಧರಂಗಳೊಳ್ಬಿಗಿಲ್ತು ಪತ್ತಿದ ಮದಸೌರಭಕ್ಕೆ ಸುಳಿಗೊಳ್ವಳಿಮಾಲೆ: **ಕುಸುಮಾಕಾ,** ೧೪. ೧೨೦)

**ತೀಕ್ಷ್ಣ** – ಹರಿತವಾದ (ಸುರಶರಾಸನದಂತೆ ನಿರ್ಗುಣರುಂ ತೀಕ್ಷ್ಣಕೌಕ್ಷೇಯಕದಂತೆನಿಸ್ತ್ರಿಂಶಭಾವರುಂ: **ಸುಕುಮಾಚ,** ೨. ೫ ವ)

**ತೀಟ** – ತೀಡುವಿಕೆ, ಸ್ಪರ್ಶ (ಅಲರ್ದಲರ್ಗಣ್ಗಳ ನೋಟದೆ ಸುಲಲಿತತನು ಶಿಶುವ ಮೆಯ್ಯ ತೀಟದೆ ತನಗಗ್ಗಲಿಸದಲಂಪಂ ಕುಡೆ: **ಆದಿಪು,** ೭. ೪೭)

**ತೀಡು** – ಉಜ್ಜು (ಕುಸುಮಶರಾಸ್ತ್ರಮಂ ಸಸಿಯ ಸಾಣೆಯೊಳೀ ಮಧುವೆಂಬ ಕಮ್ಮಱಂ ಮಸೆಯಲೆವೇಡಿ ತೀಡಿದನೋ: **ಪಾರ್ಶ್ವನಾಪು,** ೯. ೯೮); ಇಟ್ಟಿಸು (ಆಡುವರಂ ಕಂಡಾಡುವ ಪಾಡುವರಂ ಕಂಡು ಪಾಡುವಂದಾನಂದಕ್ರೀಡೆಗೆ ಮಘವನ ಬಗೆಯುಂ ತೀಡಿದುದೇಂ ಪಿರಿದೊ ಜಿನನ ಪುಣ್ಯಾತಿಶಯಂ: **ಪುಷ್ಪದಂಪು,** ೧೨. ೨೩); ಬೀಸು (ಪೊಸಪೂವಿನೊಳ್ ಪೊರೆದು ಪೊಣ್ಮಿದ ಕಂಪು ಮೊಗಂಗಳಂ ಚಳಿಲ್ಲನೆ ಕೊಳೆ ಪೊಯ್ಯೆ ತೀಡಿದುದು ತೆಂಕಣ ಗಾಳಿ ವಸಂತಮಾಸದೊಳ್: **ಪಂಪಭಾ,** ೫. ೩೪); ನವೆ (ಎನ್ನ ದೋರ್ದ್ವಯದ ತೀಡಂ ರೂಢಿಪೆಂ ಸಂಗರಾವನಿಯೊಳ್ ಬೇಗದಿಳಿಗಳೆಂದು ಬಗೆದಂ: **ಕುಸುಮಾಕಾ,** ೧೧. ೧೩)

**ತೀನ್** – ನವೆ, ಕಡಿತ, ತಿನಿಸು (ನರಮಾತಂಗತುರಂಗಸೈನ್ಯಂ ಇದಿರಾಂತು ಈರೆಂಟು ಲಕ್ಕಂಬರಂ ಕರಗಿತ್ತು ಎನ್ನ ನಿಶಾತಹೇತಿಹತಿಯಿಂ ಮತ್ತಂತು ಈ ತೋಳ ತೀಂ ಕರಗಲ್ಕೆ ಆರ್ತಪುದಿಲ್ಲ: **ಪಂಪಭಾ,** ೧೨. ೧೩೫)

**ತೀನ** – ಕಡಿತ, ನವೆ (ಕಂಠನಾಳಮಂ ಭೋಂಕೆನೆಲೆಚ್ಚು ಪಾಯ್ವ ಬಿಸುನೆತ್ತರ ಸೇಕದಿಂ ಎನ್ನ ತೋಳ ತೀನಂ ಕಳೆವೆಂ: **ಪಂಪರಾ,** ೧೦. ೬೩)

**ತೀನು** – ತಿಂಡಿ (ನೀಡುಂ ನಿದ್ದೆಯಂ ತೀನುಮಂ ಅಱಿಯದೆ ನೀರೂಡದೆ .. .. ಇರ್ದುದು ಗಿಡಿಗಿಡಿಜಂತ್ರಂಬೊಲ್ ಅದೊಂದಿಭೇಂದ್ರಂ: **ಲೀಲಾವತಿ,** ೮. ೫)

**ತೀಯಕಾರ್ತಿ** – ತೀಟೆಯಿರುವವಳು, ಬೆದೆ ಬಂದವಳು (ತೀಯಕಾರ್ತಿಯರ್ ತಾಯಿಲ್ಲದ ಕೂಸಿನಂತೆ ಬಾಯಂಬಿಡೆಯುಂ: **ನೇಮಿನಾಪು,** ೫. ೨ ವ)

**ತೀರ್** – ಶಕ್ಯವಾಗು (ಜವಂಗಿಡದೆ ಮುಟ್ಟೆ ಬರ್ಪ ಜವನಂ ಜವಂಗುಂದುಸಲ್ ಜವಂಗೆ ಜವನಾಗಲಿಂ ಪೆಱರ್ಗೆ ತೀರ್ಗುಮೋ: **ಆದಿಪು,** ೧೩. ೮೮); ಮುಗಿತಾಯಗೊಳ್ಳು (ಮದನನ ಕಾಯ್ಪು ಮಾಣ್ಗೆ ಸರಸೀರುಹಜನ್ಮನ ಮೆಚ್ಚು ತೀರ್ಗೆ ಕೋಳ್ಗುದಿ ಮನದಿಂದಂ ಇಂದು ಪೊಱಮಾಱುಗೆ: **ಪಂಪಭಾ** ಪರಿಷತ್ತು, ೫. ೧೮); ಕೈಗೂಡು (ತನ್ನ ಬಯಕೆ ತೀರ್ದುದೆಂದು ಪೆರ್ಚಿ ಗುಡಿಗಟ್ಟಿ: **ಧರ್ಮಾಮೃ,** ೬. ೩೦ ವ)

**ತೀರ** – ದಡ (ತೀರಂ ರೋಧಂ ತಟಂ: **ಅಭಿಧಾವ,** ೧. ೪. ೧೩)

**ತೀರಂಬಿಡಿ** – ದಡವನ್ನು ಅನುಸರಿಸು (ಸಿಂಧುನದೀ ತೀರಂಬಿಡಿದು ಬರ್ಪಲ್ಲಿ: **ಆದಿಪು,** ೧೩. ೪ ವ)

**ತೀರಸ್ಥ** – ದಡದಲ್ಲಿರುವ (ತೀರಸ್ಥ ಲವಂಗ ಚೂತ ಲವಲೀ ಪುಷ್ಪಾವಾಸ್ವಾದಿತೋದಯುತೋನ್ಮಾದೆಯ: **ಆದಿಪು,** ೧. ೫೪)

**ತೀರಮೆ** – ಸಾಕಾಗುವುದು (ಪಾಂಥಶ್ರೇಣಿ ನೀರಱ್ಕೆಯಂ ಶ್ರಮಮಂ ತೀರಮೆಯಂ ಪ್ರಪಾಂಗನೆಯರಂ ಕಣ್ಗಾಗುವುದಾ ದೇಶದೊಳ್: **ಪಂಪರಾ,** ೧. ೧೦೩)

**ತೀರ್ಗುಮೋ** – ಸಾಧ್ಯವಾಗುತ್ತದೆಯೇ (ಅರಣ್ಯದೊಳ್ ತಿರಿತರುತಿರ್ದ ಕಣ್ಬಡಿಗರಂ ಮಗುಟ್ದುಂ ಬಿಱುತು ಓಡಿ ಬೇಡರೊಳ್ ನೆರೆದಿರಲ್ ಒಡ್ಡಯಿಸಿ ರಾಜ್ಯದೊಳೇಂ ನೆರೆಯಲ್ಕೆ ತೀರ್ಗುಮೋ: **ಪಂಪಭಾ,** ೮. ೮೫)

**ತೀರ್ಚು** – ಮುಗಿಸು, ಕೊನೆಗೊಳಿಸು; ನಿರ್ಮಿಸು (ಅಂಶು ಮಂಡಳಿಸಿದುದು ಇಂದುರಶ್ಮಿಯೊಳೆ ತೀರ್ಚಿದ ಕೀಟ ನೇಣವೋಲ್: **ಪಂಪರಾ,** ೪. ೧೧೩)

**ತೀರ್ಥ** – ಪುಣ್ಯಸ್ಥಾನ (ದಯೆಯಿಂದ ಆರೈವುದೆನಿಪ್ಪ ಮನೆಗಳಲ್ಲವೆ ತೀರ್ಥಂ: **ಸಮಯಪ,** ೬. ೯೯); [ಜೈನ] ಯತಿ ಸಂಪ್ರದಾಯ (ಸ್ಥೂಲಭದ್ರಾಚಾರ್ಯರ್ ಮೊದಲಾಗಿ ಕೆಲಂಬರ್ ಕೊಳಲೊಲ್ಲದರ್ ಜಿನಕಲ್ಪಂ ಸ್ಥವಿರಕಲ್ಪಮೆಂದೆರಡು ಭೇದಂ ಮಾಡಿ ಅರ್ಧಗಪ್ಪಡದ ತೀರ್ಥಮಂ ನೆಗೞ್ಚಿದರ್: **ವಡ್ಡಾರಾ,** ಪು ೯೨, ಸಾ ೧)

**ತೀರ್ಥಕರ** – [ಜೈನ] ಅರ್ಹಂತ, ತೀರ್ಥಂಕರ (ಅತ್ಯಂತ ಭಕ್ತಿಯಿಂ ಪದನತ್ಯಂತದೊಳೆಯ್ದೆ ತಾಳ್ದಿದಂ ತೀರ್ಥಕರಸುತ್ತ್ಯೋದ್ಯಮಮಂ: **ಚಂದ್ರಪ್ರಪು,** ೭. ೩)

**ತೀರ್ಥಜಳ** – ಪವಿತ್ರಕ್ಷೇತ್ರದ ನೀರು ಭದ್ರಾಸನದೊಳ್ ಭರದಿಂ ಕುಳ್ಳಿರಿಸುತ್ತುಂ ಚರಣಂದೊಳೆಯುತ್ತೆ ತೀರ್ಥಜಳಮಂ ತಳೆದರ್: **ಗಿರಿಜಾಕ,** ೪. ೩೯)

**ತೀರ್ಥನಾಥ** – ತೀರ್ಥಂಕರ (ಬಂದುತ್ಸರ್ಪಣಕಾಲದೊಳ್ ಅಂದಿಲ್ಲಿಯ ತೀರ್ಥನಾಥನಾಗಿ: **ಕರ್ಣನೇಮಿ,** ೧೪. ೩೯)

**ತೀರ್ಥೇಶ** – ತೀರ್ಥಂಕರ (ಭೂತಾನಂದರೆಂಬ ತೀರ್ಥೇಶಸನ್ನಿಧಿಯೊಳ್ ದೀಕ್ಷೆಯಂ ತಳೆದು: **ಕರ್ಣನೇಮಿ,** ೬. ೪೫ ವ)

**ತೀರ್ಥೇಶ್ವರ** – ತೀರ್ಥಂಕರ (ಬಂದಂ ಲೋಕನಾಥಂ ಸ್ವಯಂಪ್ರಭ ತೀರ್ಥೇಶ್ವರಂ ಅ ನೃಪೇಶ್ವರನ ರಾಜ್ಯಂ ಪೂಜ್ಯಮಪ್ಪನ್ನೆಗ: **ಶಾಂತಿಪು,** ೧. ೮೧)

**ತೀರ್ಥೋದಕ** – ತೀರ್ಥಜಲ (ಅಂತು ಉಭಯಬಲಂಗಳೊಳಂ ವೀರಜನಜನಿತಾಳಾಪಂಗಳ್ ನೆಗೞೆ ವಿಕ್ರಮಾರ್ಜುನಂ ಅನಂತನುಂ ತಾನುಂ ಜಲಕ್ಕನಿರೆ ಪಲ್ಲಂ ಸುಲಿದು ಅಗಣ್ಯಪುಣ್ಯಾ ತೀರ್ಥೋದಕಂಗಳಂ ಮಿಂದು ಮಂಗಳವಸದನಂಗೊಂಡು: **ಪಂಪಭಾ,** ೧೦. ೪೬ ವ)

**ತೀರ್ಥೋಪವಾಸ** – ಪುಣ್ಯಕ್ಷೇತ್ರದಲ್ಲಿ ಮಾಡುವ ಉಪವಾಸ (ಚೈತ್ಯಾಲಯಂಗಳಂ ವಂದಿಸಿ ಸದ್ವಾಸರದೊಳ್ ತೀರ್ಥೋಪವಾಸಂಗೆಯ್ದು: **ಸುಕುಮಾಚ,** ೪. ೨೧ ವ)

**ತೀವಿಸು** – ತುಂಬಿಸು (ತೊಟ್ಟನೆ ಪಱೆಸೀರೆಗಳಂ ಬೆಟ್ಟಾಗಿರೆ ಗುಹೆಯ ಬಾಗಿಲೊಳ್ ತೀವಿಸಿದಂ: **ಧರ್ಮಾಮೃ,** ೯. ೧೧೬)

**ತೀವು** – ತುಂಬು (ಏನಂ ಪೇೞ್ವುದೊ ಸಿರಿಯುದ್ದಾನಿಯಂ ಎಣ್ಣೆಯೊಳ್ ತೀವಿ ದೀರ್ಘಿಕೆಗಳಂ ಅಂತಾ ನೃಪತಿ ನಿಚ್ಚಲ್ ಅಯ್ನೂಱ್ ಆನೆಯಂ ಅವಗಾಹಮಿರಿಸುವಂ ಬೋದನದೊಳ್: **ಪಂಪಭಾ,** ೧. ೧೭)

**ತೀವ್ರ** – ಹರಿತವಾದ; ಗಾಢವಾದ (ಮತ್ತ ಮಾತಂಗ ಪದನಖ ಖರ್ವಿತ ಉರ್ವೀತಳಮುಂ ಪ್ರಚಂಡ ಮಾರ್ತಂಡ ಮರೀಚಿ ತೀವ್ರ ಜ್ವಳನ ಆಸ್ಫಾರ ಕರಾಳ ಕರವಾಳ ಭಾಮಂಡಳ ಪರೀತ

ಉದ್ಧೃತ ದೋರ್ದಂಡ ಚಂಡಪ್ರಚಂಡ ಸುಭಟ: **ಪಂಪಭಾ,** ೧೩. ೫೧)

**ತೀವ್ರಕರ** – ಸೂರ್ಯ (ಬೊಬ್ಬುಳಿಕೆಗಳಂತೆ ತೋಱೆದುವು ತೀವ್ರಕರಂ ಕರಮೆಯ್ದೆ ಕಾಯ್ದು ಪಜ್ಜಳಿಸುವ ಲೋಹಪಿಂಡಮನೆ ಭೋಂಕನೆ ನೀರೊಳಗರ್ದಿದಂತೆವೊಲ್: **ಆದಿಪು,** ೭. ೯೮)

**ತೀವ್ರಕಿರಣ** – ಸೂರ್ಯ (ಪಿಂಗಿದುದು ಭೋಂಕನೆ ಕಟ್ಟಿಲೆ ದಿವ್ಯಬಾಣಮಂ ತರೆ ತಿರುವಿಂಗೆ ತೀವ್ರಕಿರಣಂ: **ಪಂಪರಾ,** ೧೪. ೧೭೨)

**ತೀವ್ರದೀಧಿತಿ** – ತೀವ್ರಕಿರಣ (ನಿಜತೇಜದಿಂ ಆಂತ ದೈತ್ಯರಂ ತಳವೆಳಗಾಗೆ ಕಾದಿ ಚಳಿತು ಎಯ್ದಿ ಬಟಲ್ದು ಅಪರಾಂಬುರಾಶಿಯೊಳ್ ಮುಟುಗುವ ತೀವ್ರದೀಧಿತಿವೊಲ್ ಆ ಕೊಳದೊಳ್ ಫಣಿರಾಜಕೇತನಂ ಮುಟುಗಿದಂ: **ಪಂಪಭಾ,** ೧೩. ೭೪)

**ತೀವ್ರಾಂಶು** – ಸೂರ್ಯ (ವಿಧುವಿಂದಂ ವಿಬುಧೋತ್ಕರ ಪ್ರಿಯಕರಂ ತೀವ್ರಾಂಶುವಿಂದಂ ಪ್ರತಾಪಧನಂ: **ಪುಷ್ಪದಂಪು,** ೩. ೧೨೨)

**ತೀಱ್** – ಕಬಳಿಸು (ತೀಱ್[ಱು]–ಕಬಳನೇ: **ಶಬ್ದಮದ, ಧಾ** ೪೬೮)

**ತುಂಗ** – ಎತ್ತರವಾದ, ದೊಡ್ಡದಾದ (ತುಂಗವನ್ಯಮತಂಗಜದಂತೆ ಆಘಾತ ನಿಪಾತಿತ ಸಲ್ಲಕೀಭಂಗಮಮ: **ಪಂಪಭಾ,** ೧. ೧೧೫)

**ತುಂಗಘೋಣ** – ಉದ್ದ ಮೂಗು (ಕುವಲಯನಯನಂ ತುಂಗಘೋಣಂ .. .. ನೃಪಸುತಂ ನೋಡೆ ಕಣ್ಗೆಡ್ಡಮಾದಂ: **ಪುಷ್ಪದಂಪು,** ೪. ೬೮)

**ತುಂಗವಂಶ** – ಶ್ರೇಷ್ಠ ವಂಶ (ತುಂಗವಂಶಪ್ರಭವಂ .. .. ಚಕ್ರಾಧೀಶನೊಳ್ ಮಚ್ಚರಿಪವೊಲ್ ಎಸೆದಿರ್ದತ್ತು ರೌಪ್ಯಾಚಲೇಂದ್ರಂ: **ಆದಿಪು,** ೧೩. ೪೬)

**ತುಂಗತೆ** – ಹಿರಿಮೆ (ತುಂಗತೆಯಿಂ ಕನಕಾಂಶು ಪಿಶಂಗತೆಯಿಂದಱಿಯಲಾದುದಿಲ್ಲ: **ಅಜಿತಪು,** ೪. ೪೯)

**ತುಂಗಭದ್ರೆ** – ಅತ್ಯಂತ ಮಂಗಳಸ್ವರೂಪಳು, ಒಂದು ನದಿಯ ಹೆಸರು (ವಿಳಸಿತ ಕೃಷ್ಣವೇಣಿ ಸುಸರಸ್ವತಿ ಸನ್ನುತ ತುಂಗಭದ್ರೆ ಮಂಜುಳ ಕಪಿಲಾಂಗಿ: **ಶಬರಶಂ,** ೧. ೩)

**ತುಂಡ** – ಬಾಯಿ (ಸಾರದೆ .. .. ದುರಾಚಾರರ ತುಂಡಮಂ ಕೃಪೆವಿಹೀನರ ದುರ್ಮೊಗಮಂ: ೧. ೩೪); ಕೊಕ್ಕು (ವಿನತಾಪುತ್ರನ ವಜ್ರ ತುಂಡ ಹತಿಗಂ ಮೆಯ್ಯಾಂತು ಕಂಡಂಗಳುಳ್ಳಿನಂ ಅಂಗಂಗಳಂ ಒಡ್ಡಿ ಒಡ್ಡಿ ತನುವಂ ಕೊಟ್ಟಂತು: **ಪಂಪಭಾ,** ೪. ೨೬)

**ತುಂಡಯುಗ** – ಎರಡು ಕೊಕ್ಕುಗಳು (ತುಂಡಯುಗಂಗಳಿಂ ನೆಗಪಿಕೊಂಡು ಎರಡುಂ ಮಿಗೆ ಪಾಱೆ ಪೋಪ ಭೇರುಂಡ: **ಲೀಲಾವತಿ,** ೮. ೨೭)

**ತುಂತು** – ತುರುಕು (ಪಲ್ಲಿಲಿವಾಯೊಳ್ ಕ್ರೀಡಾಕಂತುಕಮಂ ತುಂತಿ ತೊಟ್ಟ ತುಡುಗೆಯಂ ಕಳೆದೀಡಾಡಿ: **ನೇಮಿನಾಪು,** ೫. ೨ ವ)

**ತುಂತುಱ್** – ತುಂತುರು ಹನಿ (ನೊರೆಯಿಂ ಬುದ್ಬುದದಿಂ .. .. ತುಂತುಱಿಂ: **ಗಿರಿಜಾಕ,** ೧. ೪೭)

**ತುಂದಿಳ** – ತುಂಬಿದ (ಕಟಕಮಂ ಮೆಲ್ಲಮೆಲ್ಲನೊಡಗೊಂಡು ಬರ್ಪಂತು ಕೂರ್ಚಾಳ ತುಂದಿಳ ಜರತ್ ಸಾಮಂತಸಂದೋಹಕ್ಕಪ್ಪಯಿಸಿ: **ಆದಿಪು,** ೪. ೯೧ ವ)

**ತುಂಬ** – ಹೆಚ್ಚು, ಬಹಳ (ತುಂಬಿಯ ಬಣ್ಣಮುಂ ಕೃಷಿಯ ನರಯ್ದಿಲ ಬಣ್ಣಮುಂ .. .. ತುಂಬಮಾಗೆ ತಿಂಬಿದುದು: **ಲೀಲಾವತಿ,** ೫. ೫೬)

**ತುಂಬಕಿ** – ಕೆನ್ನೆಯೂದಿಸಿಕೊಂಡು ಹಾಡುವ ದೋಷ (ತುಂಬುಕೀರಹಿತಂ ಗಾಯಕಗಣಕಂತರವಂ ಶ್ರಾವಕಮಧುರಸ್ನಿಗ್ಧಮೆಸೆದುದು ಆಸ್ಥಾಯಿಕೆಯೊಳ್: **ಆದಿಪು,** ೫. ೧೧)

**ತುಂಬಿ** – ದುಂಬಿ, ಭ್ರಮರ (ಸೊಗಯಿಸಿ ಬಂದ ಮಾಮರನೆ ತಳ್ತ ಎಲೆವಳ್ಳಿಯೆ ಪೂತ ಜಾತಿಸಂಪಗೆಯೆ ಕುಕಿಲ್ವ ಕೋಗಿಲೆಯೆ ಪಾಡುವ ತುಂಬಿಯೆ ನಲ್ಲರ ಒಳ್ಮೊಗಂ ನಗೆಮೊಗದೊಳ್ ಪಳಂಚಲೆಯೆ ಕೂಡುವ ನಲ್ಲರೆ ನೋಟಪ್ಪೊಡೆ: **ಪಂಪಭಾ,** ೪. ೨೮); ಸಿಹಿ ಸೋರೆಕಾಯಿ (ಅಲಾಬು ತುಂಬೀನಾಮಂ: ಅಭಿಧಾವ, ೧. ೮. ೨೧); ತಂಬೂರಿಯ ಬುರುಡೆ (ಚಂದ್ರಬಿಂಬಮಂ ತುಂಬಿ ಮಾಡಿ ಬಿಸತಂತುಸಿಂಜಿನಿಯಂ ತಂತಿ ಮಾಡಿ ಇಕ್ಷುಚಾಪದಂಡಮಂ ದಂಡಿಗೆ ಮಾಡಿ .. .. ಬೀಣೆಯಂ ಬಾಜಿಸುವ ರತಿಯಂತಿರ್ದಳಂ .. .. ಕಂಡು: **ನೇಮಿನಾಪು,** ೬. ೧೬ ವ)

**ತುಂಬೀಫಲ** – ಸೋರೆಕಾಯಿ (ಮಣ್ಣೊಳ್ ಮೆತ್ತಿದ ತುಂಬೀಫಲಂ ನೀರೊಳಿಕ್ಕಿದಾಗಳ್ .. .. ನಿಲ್ಲದಂತೆ ಕರ್ಮಬಂಧಸ್ಥನಪ್ಪ ಜೀವಂ: **ಜೀವಸಂ,** ೧೧. ೯ ವ)

**ತುಂಬು** – ಪೂರ್ತಿಮಾಡು ಹಾಗೂ ಹಣ್ಣುಹೂಗಳ ನಾಳ (ತುಂಬು – ಪೂರಣೇ, ವೃಂತ: **ಶಬ್ದಮದ,** ಧಾ ೪೮೮); ಕೆರೆಯ ತೂಬು (ಜಾತ್ಯಶ್ವದಂತೆ ಬೇಗಮಾಗಿ ಕೋಳಿಕಾಳಿಕಾಱನಂತೆ ಬಟೆವಟೆವಿಡಿದು ತುಂಬಿನ ನೀರಂ ಉರ್ಚಿದಾಗಳಂತೆ ಪರಿದು ಅಳುರ್ದುಕೊಳ್ವುದಿದು ಪಂದಿವೇಂಟೆಯ ನಾಯ್: **ಪಂಪಭಾ,** ೫. ೪೬ ವ); ಆವೃತವಾಗು (ಎಳಮಾವು ಕೆಂದಳಿರ ಪೂವಿನ ಬಿಣ್ಪೊಱೆಯಿಂ ಬಟಲ್ದು ತುಂಬಿಗಳಿನೆ ತುಂಬಿ ಕೋಗಿಲೆಯೆ ಬಗ್ಗಿಸೆ: **ಪಂಪಭಾ,** ೧. ೮)

**ತುಂಬುಕಂ** – ಕಾತರದಿಂದ (ಪಾದಪಾತಂಗಳೊಳಂ ಕಾಣ್ಬನ್ನಂ ಎನ್ನ ಆನನಸರಸಿಜಮಂ ತುಂಬುಕಂ ಪಾಯುತಿರ್ಪೈ: **ಲೀಲಾವತಿ,** ೧೪, ೧೪. ೬೮)

**ತುಂಬುರಕೊಳ್ಳಿ** – ತೂಬರೆ ಮರದ ಕೊಳ್ಳಿ (ಎಂಬುದುಂ ಹಿಡಿಂಬಂ ಆಡಂಬರಂಗೆಯ್ದು ತುಂಬುರುಕೊಳ್ಳಿಯಂತೆ ಅಂಬರಂಬರಂ ಸಡಿಲ್ದು: **ಪಂಪಭಾ,** ೩. ೧೭ ವ)

**ತುಂಬುವೆಱ್** – ತುಂಬಿದ ಚಂದ್ರ (ತುಂಬುವೆಱೆಯಿಂ ಪೊಱಪೊಣ್ಮುವ ಜೊನ್ನದಂತೆ .. .. ಒಡರ್ಚುವುದೀ ಕೃತಿ ಸದ್ಗುಣಾಂಕನಾ: **ರಾಜಶೇವಿ,** ೧. ೮೩)

**ತುಟ್ಟಿಸು** – ಬಲಗುಂದು (ತುಡುಕಿ ತುಟ್ಟಿಸಿ ಕತ್ತರಿವಾಣಿಯಲ್ಲಿ ಕೆಯ್ದುಡುಕಿದವೋಲ್ .. .. ಬೆರಲ್ ಬಿರಿದುವಾ ಹರಿ ಮೆಯ್ಯ ಶಕ್ತಿಯಂ: **ನೇಮಿನಾಪು,** ೮. ೧೦೯)

**ತುಡನೆ** – [ತುಡನ್+ಎ] ಧರಿಸನೆ, ತೊಡಲೇ ಇಲ್ಲ (ಎನಗೆ.. ..ಮಱೆಯಂ ಆಸೆವಡಲ್ ಎಂದು ಅದಟಂ ಅಣಂ ಕುಡನೆ ಕವಚಮಂ ರಾಧೇಯಂ: **ಪಂಪಭಾ,** ೧೨. ೧೦೯)

**ತುಡಿಕು** – ಮದ್ದಳೆಯನ್ನು ಬಾರಿಸಿ ಶಬ್ದ ಹೊರಡಿಸುವ ಒಂದು ಪರಿ (ಲಾಗು ಮೋಡಿ ಚಮತ್ಕಾರ ತುಡಿಕು ರಿಗ್ಗವಣೆ ಪಹರಣೆಗಳೆಂಬ ನಾನಾ ಶಬ್ದಂಗಳಂ ಬಾರಿಸಿ: **ಧರ್ಮಪ,** ೨. ೨೩ ವ)

**ತುಡಿಸು** – ತೊಡಿಸು (ಕಾವ್ಯಭೂಷಣಾರ್ಥ ಅತಿಶಯಂ ಪ್ರಿಯರ್ ತುಡಿಸಿದ ಅರ್ಥವಿಭೂಷಣದಂತಿರೆ ಒಪ್ಪೆ ಪೇೞ್ದಾತನದಾರೊ ನಾನಜೆಯೆಂ: **ಲೀಲಾವತಿ,** ೧. ೮೨)

**ತುಡು** – ತೊಡು (ಮನೆಯಿಂದಂ ಪೂಸಲುಂ ಉಡಲುಂ ತುಡಲುಂ ಪೂವುಂ ತಂಬುಲಮುಂ ತಿಂಬಡಂಗಳುಂ ಬಂದುವು: **ವಡ್ಡಾರಾ,** ಪು ೧೧೬, ಸಾ ೨೦); ಹಿಡಿ (ಭೀಕರ ಬಾಣಮಂ ಆದ ವಿವೇಕದಿಂ ಉರದೆಡೆಗೆ ತುಡದೆ ತಲೆಗೆಯೆ ತುಡುವಾ: **ಪಂಪಭಾ,** ೧೨. ೧೯೪)

**ತುಡುಕು** – ಹಿಡಿದುಕೋ (ಹರಿಪೋತಮಂ ಬೆದಱುತುಂ ಕರಿಪೋತಂ ಅವುಂಡುಗರ್ಚಿ ಕೇಸರಿಣಿಯಂ ಕೆಚ್ಚಲಂ ತುಡುಕುತಂ ಪರಿದತ್ತು: **ಪಂಪಭಾ,** ೭. ೮೦); ತುಂಬು (ಕಣ್ಬೆಳಗಂ ತಾನಲಘುಕುಚೆ ತುಡುಕುತಿರ್ದಳ್ ಸುಲಲಿತಕುಸುಮಾಳಿ ಮತ್ತೆ ಮೂಡಿತೆನುತ್ತುಂ: **ಶಾಂತೀಶ್ವಪು,** ೧೦. ೧೩೪); ವಾದ್ಯ ಬಾಜನೆಯ ಒಂದು ಬಗೆ (ಜತಿ ಜೋಕೆ ತುಡುಕು .. .. ಬೆಡಗಿನಿತುಂ ಸಂಗತಿವಡೆಯೆ ವಾದನಕಳಾವತಿ ಬಾಜಿಸುತಿರ್ದಳ್: **ಶಾಂತೀಶ್ವಪು,** ೧೩. ೨೨೭)

**ತುಡುಗುಣಿ** – ತೊಂಡು (ಗಂಡುನೆರೆದುಕೊಂಡು ತುಡುಗುಣಿಯಾಗಿ ಭಾಂಡಸಂಕರಗೆಯ್ಯುತ್ತಿರ್ಪುದುಂ ಆ ಋಷಿಸ್ತ್ರೀಯರ್ ಪುಯ್ಯಲಿಡೆ: **ಪಂಚತಂತ್ರ,** ೩೬೬ ವ)

**ತುಡುಗೆ** – ಆಭರಣ (ಒಂದೊಂದಜೆನೀ ತುಡುಗೆಗಳೊಂದೊಂದಗ್ಗಳಮಿವೆಂದು ಪದಿನಾಲ್ಕುಮಂ ಓರೊಂದನೆ ತೋಜೆ: **ಆದಿಪು,** ೧೩. ೩೧)

**ತುಡುಜೊಡರ್** – ಉರಿಯುವ ಸೊಡರು (ತುಡುಜೊಡರ್ ಅಱುಗೆಱೆ ಎಂಬಿವು ಪಡೆಯವು ಬಿಂದುವಂ ಉದಂತವೃತ್ತಿನಾಲ್ಕುಂ: **ಶಬ್ದಮದ,** ೧೮೨)

**ತುಡುವು** – ಕೂಡಿಟ್ಟ ವಸ್ತು (ಈ ಪ್ರಕಾರದೊಳು ನಿಚ್ಚ ನಿಚ್ಚ ಬಂದು ತುಡುವಂ ತಿಂದು ಬೇಸರಿಸುತ್ತಿರೆ: **ಪಂಚತಂತ್ರ,** ೯೨ ವ)

**ತುಣವ** – ಜಂಖಾ ಎಂಬ ವಾದ್ಯ (ಪಟುಪಟಹ ತುಣವ ಭಂಭಾ ಮರ್ದಳೆ ಝಲ್ಲರಿ ಮುಕುಂದ ತಾಳ ಕಾಹಳ ಶಂಖವಂಶ ವೀಣಾಸ್ವರಂಗಳೆಸೆಯೆ: **ವಡ್ಡಾರಾ,** ಪು ೮೪, ಸಾ ೨೮)

**ತುತಿ** – [ಸ್ತುತಿ] ಹೊಗಳಿಕೆ (ಸ್ಫೋಟಕಂ–ಹೋಳಿಗೆ, ಸ್ತುತಿ–ತುತಿ: **ಶಬ್ದಮದ,** ೨೮೬ ಪ್ರ)

**ತುತ್ತು** – ತಿನ್ನು (ತೆಗೆದೀಂಟಲ್ ವಾರ್ಧಿ ನುಂಗಲ್ ದಿಗಿಭಸಮಿತಿ ತುತ್ತಲ್ ವಿರಿಂಚಾಭಾಂಡಂ ಮಿಗಿಲಲ್ತು: **ಜಗನ್ನಾವಿ,** ೬. ೭೫); ಒಂದು ಸಲ ಬಾಯಲ್ಲಿ ತುಂಬುವಷ್ಟು (ಗ್ರಾಸಂ ಕಬಳಂ ತುತ್ತು: **ಅಭಿಧಾವ,** ೧. ೧೬. ೮)

**ತುತ್ತೆತ್ತು** – ತುತ್ತಿನ ಹಾಗೆ ಒಂದೇ ಸಲ ನುಂಗಿಹಾಕು, ಕೊಲ್ಲು (ಇರದೂರೂರ ಪೊಲಂಗಳೊಳ್ ಸುಟಿವರಂ ಸೀೞ್ದಿಕ್ಕುತುಂ ಬಟ್ಟೆವೋಪರಂ ಎಬ್ಬಟ್ಟಿ ಕೊಲುತ್ತುಂ ಆಂತ ಭಟರಂ ತುತ್ತೆತ್ತುತಂತಿರ್ದ ಸಿಂಧುರವಿದ್ವಿಷ್ಭಯದಿಂದ ಸಿಂಧುವಿಷಯಂ ಪಾೞಾಗೆಯುಂ: **ಶಾಂತೀಶ್ವಪು,** ೩. ೭)

**ತುದಿಕೊಡಕೆ** – ಕಿವಿಯ ತುದಿ (ತುದಿಮೂಗನಕ್ಕೆ ತುದಿಕೊಡಕೆಯನಕ್ಕೆ ಕೊಯ್ಯೆ ಕೊನರ್ವೊಡೆ ಅದಕ್ಕುಂ: **ಸಮಯಪ,** ೯. ೪೬)

**ತುಪ್ಪ** – ಘೃತ (ತುಪ್ಪಮಂ ಕೊಟ್ಟು ನೀರಂ ಕೊಳ್ವ .. .. ಗಾವಿಲನಂತಾಗಿ: **ಧರ್ಮಾಮೃ,** ೧೪. ೭೬ ವ)

**ತುಪ್ಪುಳ್** – ಪಕ್ಷಿಗಳ ಮೈಗೂದಲು (ಒಂದರ್ಥಕ್ಕೆ: ತುಪ್ಪುಳೆಂದು ಪಕ್ಕಿಯ ರೋಮಂ: **ಶಬ್ದಮದ,** ೩೩ ವೃತ್ತಿ ೬೨)

**ತುಪ್ಪೇಱು** – ಜಿಡ್ಡಾಗು (ತುಪ್ಪೇಜಿದ ದರ್ಪಣದೊಳ್ ಪಜ್ಜಳಿಸಲಾರ್ಪುದೇ ಪ್ರತಿಬಿಂಬಂ: **ಯಶೋಧಚ,** ೧. ೬೬)

**ತುಬ್ಬು** – ಕಳ್ಳನನ್ನು ಪತ್ತೆಮಾಡು (ತುಬ್ಬು–ಚೋರಸೂಚನೇ: **ಶಬ್ದಮದ,** ಧಾ ೪೮೭); ಸಿಕ್ಕಿಹಾಕಿಕೊಳ್ಳು (ಪುಡಿಕೆಯ ಮೊದದಂತೆ ತುಬ್ಬುತಿರ್ಪರ್ ಪಗೆವರ್: **ಚಾವುಂಪು,** ಪು, ೧೬೦, ಪ. ೨೨); ಸೂಚಿಸು (ಕುಲಜರಂ ಉದ್ಧತರಂ ಭುಜಬಲಯುತರಂ ಹಿತರಂ ಈ ಸಭಾಮಧ್ಯದೊಳ್ ಅಗ್ಗಲಿಸಿದ ಮದದಿಂ ನಾಲಗೆ ಕುಲಮಂ ತುಬ್ಬುವವೊಲ್ ಉಱದೆ ನೀಂ ಕೆಡೆನುಡಿವೈ: **ಪಂಪಭಾ,** ೧೦. ೨೦)

**ತುಮುಕು** – ಒಂದು ಚರ್ಮವಾದ್ಯ (ನೀರಸರಜೆವಂತೇನಿದು ತಾರೆಲೆಯೇ ಬೀದಿವಾಡೇ ತುಮುಕೇ: **ಗಿರಿಜಾಕ,** ೧. ೩೦)

**ತುಮುಲಕೇಳಿ** – ಗದ್ದಲದಿಂದ ಕೂಡಿದ ಆಟ (ಅನಂತರಂ ತುಮುಲಕೇಳಿಯಿಂದೋರೊರ್ವರಂ ತುಳುಂಕಾಡುವಾಗಳ್: **ಚಂದ್ರಪ್ರಪು,** ೭. ೧೪೩ ವ)

**ತುಮುಳ್** – ಹೊರಕ್ಕೆ ಬರು (ಅಂತು ಮುಂಬಗಲ್ವರಂ ತುಮುೞೆ ಕಾದುವ ಸಮರಭರಂ ಮನೋರಾಗಮಂ ಮಾಡೆಯುಂ ಮಮ್ಮಟಿಸಿ ಪಾಂಡವಕೌರವಬಲದ ಕಲಿಕೆಯ ಪ್ರಧಾನನಾಯಕರ್ಕಳ್: **ಪಂಪಭಾ,** ೧೩. ೩೭ ವ); ತೇಲುಗಣ್ಣು ಮೇಲುಗಣ್ಣಾಗು (ಧಾತ್ರಿಯ ಬಿಣ್ಪಿನಗೆಂದಿನಂದವಲ್ತು ಅಣಕಮಿದೆಂದು ಕಣ್ ತುಮುೞೆ ಪೆರ್ಬೆಡೆಯಿಂ ಮಣಿ ಸೂಸೆ ಬೇಸಜೆಂ ತಿಣುಕಿದಂ ಅನಲ್ ಉಮ್ಮಳಿಸಿ ಶೇಷನಶೇಷಮಹೀವಿಭಾಗಮಂ: **ಪಂಪಭಾ,** ೯. ೯೯)

**ತುಯ್ಯಲ್** – ಪಾಯಸ (ಕುದಿಯುತ್ತಿರ್ದ ತುಯ್ಯಲಂ ತಣ್ಣತ್ತಾಗಿ ಆಱುವನ್ನೆಗಂ ಪಾರುತ್ತಿರ್ದು: **ವಡ್ಡಾರಾ,** ಪು ೬೪, ಸಾ ೨೨); ತೊವ್ವೆ (ಕ್ರಮದಿಂ ಒಪ್ಪಿಡಿ ತುಯ್ಯಲಾಮಿಷಚಯಂ .. .. ಸಲೆ: **ಸಮಯಪ,** ೧೦. ೧೩೦)

**ತುರಂಗ** – ಕುದುರೆ (ತುರಂಗಮನೆ ಕುದಿರೆ ಬಡಬೆ ವಾಮಿಯೆನಿಕ್ಕುಂ: **ಅಭಿಧಾವ,** ೧. ೧೪. ೨೨)

**ತುರಂಗತ್ವ** – ಕುದುರೆಯ ರೂಪ (ತುರಂಗತ್ವಂ ಎನಗೆ ಮೂಡಿದೊಡಂ ಎನ್ನ ಕೆಳೆಯನೊಡಗೂಡಿ ಕಾಲಮಂ ಕಟೆಪುವಂತು .. .. ನೋಡಿ: **ಕಾದಂಸಂ,** ೭. ೪೭ ವ)

**ತುರಂಗದಳ** – ಚತುರಂಗದಳದಲ್ಲಿ ಒಂದು, ಕುದುರೆ ಸೈನ್ಯ (ತುರಗಂ ನೂಱನಿತುಂ ತುರಂಗದಳಮೊಂದೊಂದರ್ಕೆ ನೂಱಾಳ್ ತಗುಳ್ದಿರೆ ಬಲ್ಲರ್ ನಡೆ ನೋಡಿ ಕೂಡ ಪಡೆದತ್ತಕ್ಷೋಹಿಣೀಸಂಖ್ಯೆಯಂ: **ಪಂಪಭಾ,** ೯. ೯೫)

**ತುರಂಗಮ** – ಕುದುರೆ (ಮದಗಜ ಬೃಂಹಿತಧ್ವನಿ ತುರಂಗಮ ಹೇಷಿತಘೋಷಂ ಆದಂ ಒರ್ಮೊದಲೆ ಪಯೋಧಿಮಂಥನ ಮಹಾರವಮಂ ಗೆಲೆ: **ಪಂಪಭಾ,** ೩. ೩೮)

**ತುರಂಗವದನ** – ಕಿನ್ನರ (ಒರ್ವನೆ ಸಂಧಿಸಿ ಪೋದನಂದು ಪೆರಡವಿಯೊಳ್ ಆ ತುರಂಗವದನರ್ಕಳ ಬೆಂಬಟೆಯಂ: **ಕಾದಂಬ,** ೪. ೪)

**ತುರಂಗಸಾಧನ** – ಅಶ್ವಸೇನೆ (ನೆಟ್ಟನೆ ಪದಿನೆಂಟು ಕೋಟಿವರೆಗಂ ತಳರ್ದತ್ತು ತುರಂಗಸಾಧನಂ: **ಆದಿಪು,** ೧೧. ೩೧)

**ತುರಂಗಸೈನ್ಯ** – ಕುದುರೆದಳ (ಭುಗಭುಗನೆ ಉರ್ಚಿಪಾಯ್ವ ಬಿಸುನೆತ್ತರ ಸುಟ್ಟುರೆಯಂ ನೆಲಕ್ಕೆ ಪರ್ದುಗಳ್ ಉಗಲೀಯದೆ

ಅವ್ವಳಿಸಿ ಪೀರ್ವಿನಂ ಒರ್ಮೆಯೆ ಪೊಯ್ವ ಪೊಯ್ಗಳಿಂ ನೆಗೆದು ಮುಗಿಲ್ಗಳ್ ಇಟ್ಟೆಡೆಗಳೊಳ್ ತಲೆಗಳ್ ತೊಡರ್ದಿರ್ದುಜೇನ ಪುಟ್ಟಿಗಳೆನೆ ಪೋಲ್ತುವು ಏಂ ಕಲಹಂ ಅಚ್ಚರಿಯಾಯ್ತೊ ತುರಂಗಸೈನ್ಯದೊಳ್: **ಪಂಪಭಾ,** ೧೦. ೮೦)

**ತುರಂಗಿ –** ಕುದುರೆ ಸವಾರ (ಓರ್ವರೊರ್ವರಂ ಪೊಯ್ದುರ್ ಮಾಮಸಕದೆ ಪಣಿದಂಬೊಯ್ದಂತಿಯಂ ಪಿಂಗದೆ ತುರಂಗಿಗಳ್ ಸಂಗರದೊಳ್: **ಚಂದ್ರಪ್ರಪು,** ೧೦. ೮೧)

**ತುರಗ –** ಕುದುರೆ (ತುರಗಂ ಯುಯು ಸಪ್ತಿ ಹಯಂ: **ಅಭಿಧಾವ,** ೧. ೧೪. ೨೨)

**ತುರಗ ಬ್ರಹ್ಮಚರ್ಯ –** ಹೆಣ್ಣು ಕೊಡುವವರಿಲ್ಲದೆ ಅನಿವಾರ್ಯವಾಗಿ ತಾಳುವ ಬ್ರಹ್ಮಚರ್ಯೆ (ವಿಧೃತ ತುರಗಬ್ರಹ್ಮಚರ್ಯತೆಯ ಮಸಕದಿಂ: **ಕಾದಂಬ,** ೮. ೪)

**ತುರಗರತ್ನ –** [ಜೈನ] ಜೀವರತ್ನಗಳಲ್ಲಿ ಒಂದು (ಪವನಂಜಯಮೆಂಬ ತುರಗರತ್ನಮುಂ: **ಆದಿಪು,** ೧೧. ೩ ವ)

**ತುರಗಾರೂಢ –** ಕುದುರೆ ಸವಾರ (ತುರಗಾರೂಢನೀ ಬರ್ಪನಸ್ಮದ್ಧರಣೀಶಂ: **ಶಾಂತಿಪು,** ೫. ೩೯)

**ತುರಗಾರೋಹಕ –** ಕುದುರೆ ಸವಾರ (ಭಂಡಾರಿಗನಂತೆ ಆಯಮಂ ಪಿಡಿದು ಜೂದುಗಾಱನಂತೆ ಕವಡಿಕೆಯಂ ತೆಗೆದು ತುರಗಾರೋಹಕನಂತೆ ಆರೂಢಕ್ರಮಮಂ ಅಱಿದು: **ಸುಕುಮಾಚ,** ೩. ೬ ವ)

**ತುರಾಷಾಟ್ಖಡ್ಗ –** ವಜ್ರಾಯುಧ (ತುರಾಷಾಟ್ಖಡ್ಗೋಪಮಮಪ್ಪ ತೀಕ್ಷ್ಣತರಚಕ್ರಂ ಸಾರ್ಗುಂ ಇನ್ನಾತನಂ: **ಚಂದ್ರಪ್ರಪು,** ೫. ೩೫)

**ತುರಿತ –** [ತ್ವರಿತ] ಬೇಗ (ತರುಣಿಯ ತೊಡರ್ದ ಅಂಗಲತೆಯಂ ಬಿಡಿಸಿ ತರಿಸಿ ತುರಿತದಿಂ ಪೋಗಿ: **ಲೀಲಾವತಿ,** ೧೦. ೬೬ ವ)

**ತುರಿಪ –** ತುರಿತ (ಪರಿಜನಮನಿತುಂ ತುರಿಪದೆ ಪರಿತಂದು ಇನ್ನೇವೆವೆಂದು ಕಪ್ಪುರದ ರಜಂಬೊರೆದ ಕರಕಾಂಬುವ ತಳಿದು: **ಆದಿಪು,** ೪. ೧೭)

**ತುರಿಪಕಾಱ –** ಆತುರಗಾರ (ಬಿತ್ತರಿಪ ತುರಿಪಕಾಱಿಂ ಮಹಾಧರ್ಮದೊಳ್ ಮಚ್ಚರಕಾಱಿಂ ಭಾವಕೋತ್ಪಾದಕ ರಸಿಕ ಕವಿಸ್ತೋಮದೊಳ್ ನೇಮಿಚಂದ್ರಂ: **ನೇಮಿನಾಪು,** ೧. ೩೭)

**ತುರೀಯ –** ನಾಲ್ಕನೆಯ; ಪರಬ್ರಹ್ಮಸ್ಥಿತಿಯ (ಅವಂ ತುರೀಯಂ ಅನಖಂಡನಿಜೋನ್ನತಚಿತ್ಪ್ರಕಾಶಂ: **ಶಬರಶಂ,** ೨. ೯೮)

**ತುರುಷ್ಕ –** ಒಂದು ದೇಶ (ಬರ್ಬರ ಪಾರಸೀಕ ಪಾರಿಯಾತ್ರ ಹಮ್ಮೀರ ಡೊಕ್ಕಾರ ತುರುಷ್ಕ ಮರುಪ್ರಭೃತಿ ಭೂಪಾಲಕರಿಂ ಭಯಾನಕರಸಮುಂ .. .. ಪೇಱುತ್ತುಮಿರೆಯಿರೆ: **ಜಗನ್ನಾವಿ,** ೨. ೩೯ ವ); ಸಾಂಬ್ರಾಣಿ [ಮರ] (ಸುದರ್ಶನಮೆಂಬ ಮಣಿಕುಟ್ಟಿಮಮಪ್ಪ ಬೊಡ್ಡಣ ಬಾವಿಯೊಳ್ ಕರ್ಪೂರ ಕಾಳಾಗರು ತುರುಷ್ಕ ಕುಂಕುಮ ಚಂದನಾದಿ ಸುಗಂಧ ದ್ರವ್ಯಂಗಳಿಂ ಬೆರಸೆ: **ವಡ್ಡಾರಾ,** ಪು ೧೩೬, ಸಾ ೨೨)

**ತುರ್ಯ –** ನಾಲ್ಕನೆಯ ಅವಸ್ಥೆ (ಚರಮಂ ಪಾದಂ ತುರ್ಯಂ: **ಅಭಿಧಾವ,** ೨. ೧. ೭೦)

**ತುಲನ –** ತೂಕಮಾಡುವುದು (ತೂಗು–ತುಲನೇ: **ಶಬ್ದಮದ, ಧಾ** ೧೧೫)

**ತುಲಾಕೋಟಿ –** ತಕ್ಕಡಿಯ ತುದಿಗಡ್ಡಿ (ಜಿನಂ ಕೇವಲ ವಿಮಲತುಲಾಕೋಟಿಯಿಂ ತೂಗೆ ತನ್ನಂ: **ಪಂಪರಾ,** ೧. ೪೨)

**ತುಲಾದಂಡ –** ತಕ್ಕಡಿಯ ಕೋಲು (ಧರೆಯಱಿಯಲೊಡಂ ತೂಗಲ್ ಧರೆಗೆ ತುಲಾದಂಡಮಲ್ತೆ ಮದ್ಭುಜದಂಡಂ: **ಆದಿಪು,** ೧೪. ೮೧)

**ತುಷಾರ –** ಮಂಜು (ತತ್ಕಾಲೋಚಿತ ವಚನತುಷಾರಸೇಚನದಿಂ ಈಷತ್ ವಿಶ್ರಾಂತ ಚಿಂತಾಸಮುದ್ಭೂತ ಅಂತಃಶೋಕಸಂತಾಪಶ್ರಮೆಯಾಗಿ: **ಪುಷ್ಪದಂಪು,** ೩. ೮೪ ವ)

**ತುಷಾರಕರ –**ಚಂದ್ರ (ಶೀತಳ ನಭಃಸ್ಥಳ ತಿಳಕ ತುಷಾರಕರ ಶಿಶಿರ ಶರದಭ್ರವಿಭ್ರಮ ದಶದಿಶಾಮಂಡಲಂ .. .. ಅರ್ಹದ್ದಾಸನೆಂಬೊಂ: **ನೇಮಿನಾಪು,** ೧. ೬೮ ವ)

**ತುಷಾರೋಪಳ –** ಕರ್ಪೂರದ ಬಿಲ್ಲೆ (ತುರುಷ್ಕ ತುಷಾರೋಪಳ ಕಾಳಾಗುರು ತಕ್ಕೋಳ ಲವಂಗ ಪ್ರಮುಖ ಸುರಭಿಪರಿಕರಯುತಮಂ: **ಪುಷ್ಪದಂಪು,** ೧೧. ೪೫)

**ತುಷಿತ –** [ಜೈನ] ಲೋಕಾಂತಿಕ ದೇವತೆಗಳಲ್ಲಿ ಒಂದು ಗುಂಪು (ಸಾರಸ್ವತ ಆದಿತ್ಯ ವಹ್ನಿ ಅರುಣ ಗರ್ವತೋಯ ತುಷಿತ ವ್ಯಾಬಾಧ ಅರಿಷ್ಟರೆಂಬ ಎಣ್ಬರುಂ ಲೋಕಾಂತಿಕದೇವರ್ ಬಂದು: **ಆದಿಪು,** ೯. ೬೦ ವ)

**ತುಷ್ಟಿ –** ತೃಪ್ತಿ (ತನ್ನಿಷ್ಟವನ್ನಂ ಉತ್ತರಮಕ್ಕುಂ ಧೃತಿ ತುಷ್ಟಿ ಪುಷ್ಟಿ ವಿಭವಂ ಸೌಭಾಗ್ಯಂ ಇಷ್ಟಾಂಗನಾ ಸುರತಂ ಕಾಂತಿ ಅಗುಂತಿ ಶಾಂತಿ ವಿಭವಂ ಭದ್ರಂ ಶುಭಂ ಮಂಗಳಂ; **ಪಂಪಭಾ,** ೧೪. ೬೫)

**ತುಷ್ಟಿವಡಿಸು –** ತೃಪ್ತಿಪಡಿಸು (ಧಾರ್ಮಿಕಂ ತುಷ್ಟಿವಡಿಸವೇೞ್ಕುಂ ಜೈನಂ: **ಸಮಯಪ,** ೫. ೧೪೨)

**ತುಹಿನ –** ಹಿಮ (ತುಷಾರ ಹಿಮ ಪ್ರಾಲೇಯ ತುಹಿನ: **ಅಭಿಧಾವ,** ೧. ೧. ೬೮)

**ತುಹಿನಕರ –** ಚಂದ್ರ (ದಿಗ್ನಾಯಕಚೂಡಾಮಣಿ ಲಗ್ನೋದಯಶಿಖರನೊಪ್ಪಿದಂ ತುಹಿನಕರಂ: **ಅಜಿತಪು,** ೬. ೪೧)

**ತುಹಿನಕ್ಷೋಣೀಧ್ರ –** ಹಿಮವತ್ಪರ್ವತ (ಎಲೇ ಇದಲ್ತೆ ತುಹಿನಕ್ಷೋಣೀಧ್ರದ ಉತ್ತುಂಗಸಾನಗಳ್; **ಶಬ್ದಮದ,** ೬೬ ಪ್ರ ೨)

**ತುಹಿನಗಿರಿ –** ತುಹಿನಕ್ಷೋಣೀಧ್ರ (ಬಳಸಿರ್ದ ಅಭ್ರಾಳಿಯಿಂದಂ ತುಹಿನಗಿರಿಶಿಲಾಪಟ್ಟವೆಂಬಂತೆ ಚೆಲ್ವಾದ ... .. ಸಿತಮೃದುಳಪ್ರಚ್ಛನ್ನದಚ್ಛನ್ನ ಶಯ್ಯಾತಳ: **ಕಾದಂಸಂ,** ೧. ೨೮)

**ತುಹಿನಾಚಳ –** ತುಹಿನಕ್ಷೋಣೀಭ್ರ (ಸುಂದರ ತುಹಿನಾಚಳ ಸಂಕ್ರಂದನಗಜ ಶಾರದಾಭ್ರ ತಾರಾದ್ರಿ ಪಯಃಕುಂದೇಂದು: **ಸುಕುಮಾಚ,** ೧. ೫೬)

**ತುಳಾಕೋಟಿ –** ಕಾಲಂದುಗೆ, ನೂಪುರ (ಮದನ ಡಿಂಡಿಮರವಾಡಂಬರಮಾಳೋಳ ತುಳಾಕೋಟಿಕ್ವಣಿತಮೆ ನಿಗಳಾಂದುಕಾರವಮಾಗೆ: **ಆದಿಪು,** ೧೧. ೨೦ ವ)

**ತುಳಾಡಿ –** ಮಲ್ಲಯುದ್ಧದ ಒಂದು ವರಸೆ (ಡೊಕ್ಕರಂ ಚಡಿಕೆ ತುಳಾಡಿ ಪೊಟ್ಟಮುಡುಹಂ ಮುಹಡಂ ದಣುವಟ್ಟಿಪಟ್ಟಿಸಂ ಎಂದು ಮಲ್ಲಮಾತಂ ಮಾಡಿ: **ಅನಂತಪು,** ೨. ೨೭ ಮತ್ತು ೨೭ ವ)

**ತುಳಾಪುರುಷ** – ತುಲಾಭಾರ, ತನ್ನ ತೂಕದ ಚಿನ್ನವನ್ನು ದೇವರಿಗೆ ಅರ್ಪಿಸುವ ವ್ರತ (ಪುರುಷೋತ್ತಮನ ತಂಗೆಯುಂ ತಾನುಂ ತುಳಾಪುರುಷಮನಿರ್ದು ಲೋಕಕ್ಕೆಲ್ಲಂ ಬಿಯಮಂ ಮೆಱೆದು: **ಪಂಪಭಾ,** ೧೪. ೨೦ ವ)

**ತುಳಿವೊಂದು** – ಮೈಲಿಗೆಯಾಗದ (ದ್ರುಮಪತ್ರಪಾತ್ರೆಯಂ ಸಮೆದು ಅದಱಲಲ್ಲಿ ತುಂಬಿ ತುಳಿವೊಂದದ ಪೂಗಳನ್ನೈದೆ ತುಂಬಿಕೊಂಡು: **ರಾಜಶೇವಿ,** ೧. ೧೨೭)

**ತುಳುಂಕು** – ಹೊರಚೆಲ್ಲು (ಕಡೆಗಣ್ಣೊಳ್ ತುಳುಂಕಿಯುಂ ಕದಪಿನೊಳ್ ಪೊಂಪುೞಿವೋಗಿಯುಂ ಭ್ರೂವಿಭ್ರಮದೊಳ್ ಪೊನಲ್ವರಿದುಂ: **ಆದಿಪು,** ೭. ೧೨೬ ವ)

**ತುಳುಂಕುಗುಟ್ಟು** – ಹೆಚ್ಚಾಗಿ ತುಳುಕಾಡು (ಆಕೆಗಳಂಗೋಪಾಂಗದೊಳಿಂತು ನಾಟ್ಯರಸಮೆ ತೀವಿ ತುಳುಂಕುಗುಟ್ಟೆ: **ಆದಿಪು,** ೭. ೧೨೬ ವ)

**ತುಳುಕುನೀರಾಡು** – ನೀರು ಚಿಮುಕಿಸಿ ಆಟವಾಡು (ರಾಗದಿಂದ ಈಸಿದಂ ದೊಮ್ಮಳಿಸಿ ತುಳುಕುನೀರಾಡಿದಂ: **ಸುಕುಮಾಚ,** ೯. ೪೩)

**ತುಳುನಾಡು** – ಒಂದು ದೇಶ (ತುಳುನಾಡ ಸತ್ತ ಮನೆಯವರಂತೆ ಪೞಯಿಸುವರ್ ಕುತ್ತಂಬಡೆದವರಂತೆ ಬೀೞ್ವರ್: **ಧರ್ಮಾಮೃ,** ೩. ೪೯ ವ)

**ತುಳ್ಕು** – ತುಳುಕಾಡುವಂತೆ ಮಾಡು (ನೀಂ ಇನಿಸು ಕಾಲ ಇರ್ದೆಯಪ್ಪೊಡೆ ಏ ತೊದಳೊ ಸರೋವರಾಂಬುವನಿತಂ ತವೆ ತುಳ್ಕಿ ರಸಾತಳಂಬರಂ ಬೆದಕಿಯುಂ ಎಂತುಂ ಅಪ್ಪಳಿಸಿ ಕೊಂದಪೆಂ: **ಪಂಪಭಾ,** ೧೩. ೮೦)

**ತುಱಿ** – ನವೆ, ಕಜ್ಜಿ (ತುಱಿಯಾದೊಡೆ ಫಣಿಯೆಂಬರ್ ಮತಿಹೀನಜನರದೇನಂ ಮಾಡರ್: **ಸಮಯಪ,** ೯. ೨೫)

**ತುಱಿಪ** – ವೇಗ (ನೆಲದೊಳಿರ್ದಳಂ ಎತ್ತಿ ಪಾಸಿನೊಳ್ ಪಟ್ಟಿರಿಸಿ ತುಱಿಪಸಿಂ ತಣ್ಣಳಸದ ಆಲಿನೀರುಮಂ .. .. ಮೇಲೆ ಸೂಸುತ್ತುಂ: **ಲೀಲಾವತಿ,** ೧೦. ೭೪ ವ)

**ತುಱಿಪಗಾರ್ತಿ** – ಕಾಮಾತುರೆ (ವನದೊಳಗೊರ್ಬನೆ ಬರ್ಪ ಮಾನಮದನನಂ ಕಂಡು ಕೈಗೞಿಯೆ ಕಣ್ಸೋಲ್ತು ಕಾಮಕಾತರೆಯಾಗಿ ತುಱಿಪಗಾರ್ತಿ ಕೂರ್ತು ನಿತ್ತರಿಸಲಾಱದೆ: **ಲೀಲಾವತಿ,** ೧೪. ೧೦೫ ವ)

**ತುಱಿಸು** – ಕೆರೆ, ನೇವರಿಸು (ತಗುಳ್ದೊದೆವಾವಂ ತುಱಿಸು ತಳೆಯಿಕ್ಕು ತಡೆಯದೆ ಮುಱುವಂ ಸುರಿ ಎಂಬ ಸರಮೆ ತುಱುಗಾರ್ತಿಯರಾ: **ಲೀಲಾವತಿ,** ೫. ೧೦೪)

**ತುಱು** – ಹಸು (ತುಱು ಪರಿವಾಗಳ್ ಎಮ್ಮ ಪೆಣನಂ ತುೞಿದುಂ ಪರಿಗುಂ ದಲ್ ಎಂದು ಚಃ ತುಱುಗೊಳೆ ಬಾೞೆಂ ಎಂದು ತುಱುಗೋಳೊಳೆ ಸಾವುದು ಸೈಪಿದೆಂದು ಪಾಯ್ದು ಅೞಿಕೆಯ ಗೋವರ್ ಅಣ್ಮಿ ಬರೆ: **ಪಂಪಭಾ,** ೮. ೯೫)

**ತುಱುಂಗಲ್** – ಗುಂಪು (ಆತಂಗೆ ತುಱುಂಗಲುಂ ಬಂಬಲುಮಾಗೆ ಬೀಸುವ ಚಾಮರದ ಪೊಳೆಪುಗಳೆ ದೆಸೆದೆಸೆಗೆಸೆವಂತೆ: **ಆದಿಪು,** ೧೧. ೫ ವ)

**ತುಱುಂಗು** – ಒತ್ತಾಗಿ ಸೇರು (ನೆಗೆದ ಅಟ್ಟಾಳಕಜಾಲದ ಸೊಗಯಿಪ ಹರಿನೀಳ ಚೂಳಿಕಾವಳಿಯೊಳ್ ತಾರಗೆಗಳ್ ತುಱುಂಗಿ ಮಿಱುಗುವುವು ಅಗಲದೆ ತೆತ್ತಿಸಿದ ಮುತ್ತುಗಳ ಮೊತ್ತದವೋಲ್: **ಶಾಂತೀಶ್ವಪು,** ೧೩. ೧೫೩)

**ತುಱುಂಬು** – ಕೂದಲ ಮುಡಿ (ತೋರಮಲ್ಲಿಗೆಯ ತುಱುಂಬು ರಾಹು ತವೆ ನುಂಗಿದ ಚಂದ್ರನಂ ಒಯ್ಯನೊಯ್ಯನೆ ಅಂದುಗುಟ್ವವೊಳ್ ಒಪ್ಪಿರಲ್: **ಪಂಪಭಾ,** ೭. ೮೮); ತುಂಬು (ನಿಱಿವಿಡಿದುಟ್ಟ ದೇವಾಂಗವಸ್ತ್ರಾಪಶಾಖೆಯಂ ತುಱುಂಬಿ ಮಿಱುಪ ಪರಿಮಳಮಂ ಉಗುಳ್ವ ಮಂದಾರ ಕುಸುಮಂಗಳಿಂ: **ಧರ್ಮಪ,** ೩. ೬೮ ವ); ಮುಡಿದುಕೊ (ಕಾಡ ಅಲರಂ ತುಱುಂಬಿ ಚಂದನದೊರಳಲ್ಲಿ ಪೊಯ್ದು ಬಿದಿರಕ್ಕಿಯಂ .. .. ಪಾಡಿದಳ್ ಪುಳಿಂದಿ: **ಲೀಲಾವತಿ,** ೮. ೩೦)

**ತುಱುಕಾರ** – ದನ ಕಾಯುವವನು (ಪಿಂದೆ ಕಡಂಗಿ ತೇರಂ ಎಸಗು ಎಂಬವಂ ಅಂಬಿಗಂ ಆಜಿರಂಗದೊಳ್ ಮುಂದೆ ಸಮಾನನಾಗಿ ಬೆಸದೆ ಇರ್ಪವನುಂ ತುಱುಕಾಱನಾಗೆ ಮತ್ ಸ್ಯಂದನಚೋದನಕ್ರಮಮದುಂ ಪೊಲೆಯಂಗೆ ಅಮರ್ದು ಇರ್ಕುಂ: **ಪಂಪಭಾ,** ೧೨. ೯೪)

**ತುಱುಕಾರ್ತಿ** – ಹಸು ಕಾಯುವವಳು (ನಸುವಾಡಿದನೆಲ್ಲ ನಿಡುವೊಡೆಗಳಿಂ ತುಱುಕಾರ್ತಿಯರ್ ತಿಱಿದು ತಂದು: **ಲೀಲಾವತಿ,** ೫. ೫೯ ವ)

**ತುಱುಗಲ್** – ಗುಂಪು (ಪೊಸಸಂಜೆಮುಗಿಲ ತುಱುಗಲ್ ಮುಸುಕಿದುದು ಪಯಃಪಯೋಧಿಯೆಲ್ಲಮಂ: **ಆದಿಪು,** ೭. ೮೭); ಗೊಂಚಲು (ಪಣ್ಗೊಲೆಯಿಂ ಬಳ್ಕುವ ಕೌಂಗು ಕಾಯ್ದುಱುಗಲಂ ಪೇಱಿರ್ದ ಚೆಂದೆಂಗು: **ಆದಿಪು,** ೧. ೬೭)

**ತುಱುಗಾರ** – ಹಸು ಕಾಯುವವನು (ಒರ್ವರಿಂ ಒರ್ವರೆ ಮಿಕ್ಕು ಪಾರ್ದು ಸಾರ್ದು ಇಸೆ ತುಱುಗಾಱರ್ ಅಂದು ಇನಿಸು ಬಳ್ವಳನಾದುದು ಅದೊಂದು ಕಾಳಗಂ: **ಪಂಪಭಾ,** ೮. ೯೩)

**ತುಱುಗಾರ್ತಿ** – ದನ ಕಾಯುವಳು (ತಗುಳ್ದೊದೆವಾವಂ ತುಱಿಸು ತಳೆಯಿಕ್ಕು ತಡೆಯದೆ ಮುಱುವಂ ಸುರಿ ಎಂಬ ಸರಮೆ ತುಱುಗಾರ್ತಿಯರಾ: **ಲೀಲಾವತಿ,** ೫. ೧೦೪)

**ತುಱುಗು** – ದಟ್ಟೈಸು, ಗುಂಪಾಗು (ತೆಂಬೆಲರಲೆಪಿಂ ಕಳಿಕೆಯೊಳೆ ತುಱುಗಿ ತಳಿರೊಳೆ ತಳತಳಿಸಿದುದೊಂದಶೋಕಲತೆಯನೆ ಪೋಲ್ತಳ್: **ಆದಿಪು,** ೮. ೨೯)

**ತುಱುಗೆಮೆ** – ಒತ್ತಾದ ರೆಪ್ಪೆಗೂದಲು (ಒಳಪೊಯ್ಯಲ್ ನಿನ್ನಂ ಆ ಕನ್ನೆಯ ತುಱುಗೆಮೆಗಳ್ ಸುತ್ತಲುಂ ನಿನ್ನಂ ಆ ಕೋಮಳೆಯಂದಂಬೆತ್ತ ಸುತ್ತುಂಗುರುಳಳವಡಿಸಲ್ ನಿನ್ನಂ: **ಆದಿಪು,** ೪. ೨೧)

**ತುಱುಗೆವೆ** – ತುಱುಗೆಮೆ (ತುಱುಗೆವೆ ನಿಂದು ನೋಡೆ ಕಡೆಗಣ್ಣಿದಿರ್ಗೊಳ್ವ ಅಳಿಪು ಆಡೆ ಪೊಕ್ಕು ಸೈಪೆಱೆದಿದಿರ್ಗೊಳ್ವ .. .. ಲ್ಲೆಯಿದಿರ್ಗೊಂಡುದು ಕೂಟದ ಕಾಯ್ಪಿನೋಪರಾ: **ನೇಮಿನಾಪು,** ೨. ೩೭)

**ತುಱುಕು** – ಬಲವಂತವಾಗಿ ಒಳಸೇರಿಸು (ತುಱುಕು– ಗಾಢಪ್ರವೇಶೇ: **ಶಬ್ದಮದ, ಧಾ** ೪೨)

**ತುಱುಗಾ** – ದನಗಳನ್ನು ಕಾಪಾಡು (ತುಱುಗಾವ ಗೋವರಂ ಮತ್ತಱಿಕೆಯ ಕಬ್ಬಿಲರಂ ಎಯ್ದೆ ಬೆಸಗೊಳುತುಂ: **ಧರ್ಮಾಮೃ,** ೮. ೧೫) (ತುಱುಗಾವ ಗೋವರಂ ಮತ್ತಱಿಕೆಯ ಕಬ್ಬಿಲರಂ ಎಯ್ದೆ ಬೆಸಗೊಳುತುಂ: **ಧರ್ಮಾಮೃ,** ೮. ೧೫)

**ತುಱುಕಾರ್ತಿ** – ಗೊಲ್ಲ ಹೆಂಗಸು (ಪಾಮರಿಯರ ಪೆರ್ಮುಡಿಯಿನಲ್ಲೊಕ್ಕು ನಸುವಾಡಿದನೆಲ್ಲ ನಿಡುವೊಡೆಗಳಿಂ ತುಱುಕಾರ್ತಿಯರ್ ತಿಱಿದು ತಂದು: **ಲೀಲಾವತಿ,** ೫. ೫೯ ವ)

**ತುಱುಗಾಱ** – ಗೊಲ್ಲ (ತುಱುಗಾರರಂದಿನಿಸು ಬಳ್ವಳನಾದುದದೊಂದು ಕಾಳೆಗಂ: **ಪಂಪಭಾ,** ೮. ೯೩)

**ತುಱುಗು** – ಒತ್ತಾಗಿ ಸೇರು (ಪಿರಿಯ ಪರಿವುಗಳ ಸುತ್ತಿದ ಪರಿಕಾಲ್ಗಳ ತುಱುಗಿದ ಅಣ್ಣಗಳ ತೀವಿದ ಪೊಕ್ಕರಣೆಗಳ ನೆಱೆದ ಕೆಱೆಗಳ ಸರೋವರಂಗಳ ಬೆಡಂಗು ಅಗುಂದಲೆ ಪುರದೊಳ್: **ಸುಕುಮಾಚ,** ೯. ೫೧)

**ತುಱುಗೆಮೆ** – ಒತ್ತಾದ ಕೂದಲಿನ ರೆಪ್ಪೆ (ತುಱುಗೆಮೆ ನೀಳ್ದ ಪುರ್ವು ನಿಡುಗಣ್: **ಪಂಪಭಾ,** ೧. ೧೦೮)

**ತುಱುಗೆಮೆಗಣ್** – ದಟ್ಟ ಕೂದಲ ರೆಪ್ಪೆಯುಳ್ಳ ಕಣ್ಣು (ತುಱುಗೆಮೆಗಣ್ಣ ನೋಟ್ಟನಯನಂ ವೆಳರ್ವಾಯ ಬೆಡಂಗಿನೊಳ್ಪುಂ: **ಹರಿವಂಶ,** ೩. ೪೫)

**ತುಱುಗೊಳ್** – ದನಗಳನ್ನು ಹಿಡಿ (ವಿರಾಟನಿರ್ಪ ಅಱಕೆಯ ಪಟ್ಟಣಂ ನಮಗೆ ಇದೇ ಪಿರಿದಪ್ಪುದು ತಳ್ವದೆ ಎಯ್ದಿ ನಾಂ ತುಱುವನೆ ಕೊಳ್ವಂ ಅಂತು ತುಱುಗೊಂಡೊಡೆ ಪಾಂಡವರಿರ್ಪ ಗಂಡರೇ: **ಪಂಪಭಾ,** ೮. ೮೯)

**ತುಱುಗೋಳ್** – ಗೋಗ್ರಹಣ, ದನಗಳನ್ನು ಕದ್ದೊಯ್ಯುವಾಗ ಮಾಡುವ ಹೋರಾಟ (ತುಱು ಪರಿವಾಗಳ್ ಎಮ್ಮ ಪೆಣನಂ ತುೞಿದುಂ ಪರಿಗುಂ ದಲ್ ಎಂದು ಚಃ ತುಱುಗೊಳೆ ಬಾೞೆಂ ಎಂದು ತುಱಿಗೋಳೊಳೆ ಸಾವುದು ಸೈಪಿದೆಂದು ಪಾಯ್ದು ಅಱಕೆಯ ಗೋವರ್ ಅಣ್ಮಿ ಬರೆ: **ಪಂಪಭಾ,** ೮. ೯೫)

**ತುಱುಚ** – ಕಜ್ಜಿ ಇರುವವನು (ಸಾವಂ ಬಯಸುವ ತೊನ್ನರುಂ ತುಱುಚರುಂ ಮಹಾರೋಗಿಗಳುಂ .. .. ತಿಂದವರ್ ನಿರೋಗಿಗಳಾಗಿ: **ಧರ್ಮಪ,** ೭. ೪ ವ)

**ತುಱುಚೆ** – ನವೆಯುಂಟುಮಾಡುವ ಒಂದು ಸಸ್ಯ (ಜಾದಿಯರಲ್ಗೆ ಜವಾದಿಯನೊಲವಿಂ ಮೇದಿಪರಲ್ಲದೆ ಕಾಟ್ ತುಱುಚೆಗದಂ ಮೇದಿಪರೇ: **ಅನುಭವ,** ೩೯)

**ತುಱುನೆಲೆ** – ದನಗಳ ಕೊಟ್ಟಿಗೆ (ಮಾನವವಂದನನುಂಮಕರಂದನುಂ ಆ ತುಱುಪಟ್ಟಿಯ ತುಱುನೆಲೆಯೊಳ್ ನಿಂದು ನೋಡುತ್ತುಮಿರೆ: **ಲೀಲಾವತಿ,** ೫. ೮೫ ವ)

**ತುಱುಪಟ್ಟಿ** – ದನಗಳ ಹಟ್ಟಿ (ಗೋಟ್ಠೇ–ತಱುಪಟ್ಟಿಯೊಳ್: **ವಡ್ಡಾರಾ,** ೧೮೦. ಸಾ. ೪) ಗೊಲ್ಲರ ಹಟ್ಟಿ (ಕೆಲಕಾಲಂ ಉಗ್ರೋಗ್ರ ತಪಶ್ಚರಣಂಗೈದು ಮತ್ತೆ ಪಾಟಳೀಪುತ್ರದ ಸಾರೆ ಸೋಣೆಯೆಂಬ ತೊೞೆಯ ತಡಿಯಲ್ಲಿರ್ದ ತುಱುಪಟ್ಟಿಯೊಳ್ ವಿಹಾರಿಸುತ್ತುಂ ಬಂದಿರ್ದರ್: **ವಡ್ಡಾರಾ,** ಪು ೧೯೧, ಸಾ ೧೯)

**ತುಱುಪಳ್ಳಿ** – ಗೊಲ್ಲರ ಹಳ್ಳಿ (ಚಂದ್ರವಾಹನನ ಕೀಲಾರಿಗಳ ವೀರಪೂರ್ಣನೆಂಬೊಂ ಒಂದು ದಿವಸಂ ಅಲ್ಲಿಯ ತುಱುಪಳ್ಳಿಯ ಗೋವುಳಿಗರೊಳ್ ತೋಟಿಗೆಯ್ದು: **ಸುಕುಮಾಚ,** ೭. ೩೫ ವ)

**ತುಱುಬು** – ಮುಡಿದುಕೊ (ರತಿಗೆ ಮುಡಿಯಲ್ಕೆ ಮದನಂಗೆ ತುಱುಬಲ್ಕಿರ್ದುದೆಂದು ಮಧು ಸುೞಿವ ಮಧುವ್ರತಮುಮಂ: **ಆದಿಪು,** ೧೧. ೧೧೧);

**ತುಱುವೆ** – ಒಂದು ಹೂವಿನ ಗಿಡ (ಪೊಂಗಳನೆ ಗೋಪಿಯರ್ ಕೆದಱೆದವೋಲ್ ತುಱುವೆಯ ನೆಗ್ಗಿಲ ಪೂಗಳ್ .. .. ಎಸೆದಿರ್ಕುಂ: **ಲೀಲಾವತಿ,** ೫. ೯೯)

**ತುೞಿ** – ಕಾಲಿಂದ ಮೆಟ್ಟು (ತುೞಿ–ಪಾದಸಂಘಟ್ಟನೇ: **ಶಬ್ದಮದ, ಧಾ** ೯೨೬); ನಾಶಪಡಿಸು (ರಿಪುಸೇನೆಯಂ ತುೞಿದು ತೊೞ್ತುೞಿ ಮಾಡುವೆಂ: **ಪಂಪಭಾ,** ೧೩. ೪೪)

**ತುೞಿಕಲ್** – ಬಾಡಿಹೋಗುವುದು (ಒಂದರ್ಥಕ್ಕೆ: ತುೞಿಕಲೆಂದು ಸೊಪ್ಪಾದುದು: **ಶಬ್ದಮದ,** ೩೩ ವೃತ್ತಿ ೬೩)

**ತುೞಿಲ್** – ಶೌರ್ಯ (ತುೞಿಲಳವಾಂತು ನಿಂದ ಮಿಗಬೇರನನಿಕ್ಕಿ ಪೊಣರ್ಕೆಗಾರ್ಪು ಸಂಗಳಿಸಿ ಇದಿರಾಂತ: **ಶಬರಶಂ,** ೫. ೯); ನಮಸ್ಕಾರ (ಬ್ರಹ್ಮಋಷಿಯರೆಲ್ಲರುಮಂ ಬಱಿಸಿ ತುೞಿಲ ಪರಕೆಯ ಸಮಾನ ಪ್ರತಿಪತ್ತಿಯಿಂ ಕಿೞಿವಿರಿಯರಱೆದು ಪೊಡೆವಟ್ಟು: **ಪಂಪಭಾ,** ೬, ೩೩ ವ)

**ತುೞಿಲಸಂದ** – ವೀರ (ಕಾಪೀವುದು ಎಂದು ಕಳೆವ ತುೞಿಲಸಂದಂ ಕರೆದಂತೆ ಸಂಸಾರದೊಳಾರುಂ ಶರಣಿಲ್ಲ: **ಹರಿವಂಶ,** ೧೦. ೩೧ ವ); ಪಂಚಮವರ್ಣದವನು (ಎರಡರ್ಥಕ್ಕೆ: ತುೞಿಲಸಂದನೆಂದು ವೀರನುಂ ಪಂಚಮನುಂ ಅಕ್ಕುಂ: **ಶಬ್ದಮದ,** ೩೩ ವೃತ್ತಿ ೧೪೬)

**ತುೞಿಲಾಳ್** – ಪರಾಕ್ರಮಿ (ಆಯಮಿಲ್ಲದ ತುೞಿಲಾಳ್ ಫಲಮಿಲ್ಲದ ತರು ಶೀತಲಜಲಮಿಲ್ಲದ ಪೂಗೊಳಂ ಮನಂಗೊಳಿಸುಗುಮೇ: **ಅಜಿತಪು,** ೬. ೯೫)

**ತುೞಿಲಾಳ್ತನ** – ಶೌರ್ಯ (ತುೞಿಲಾಳ್ತನಮಂ ಬಂದೀಗಳೆ ನುಡಿದೊಡೆ ಪೋಗಿ ತಂದು ಕುರುಪತಿಯಿಂತಗ್ಗಳಿಕೆಯನೇೞಿಸಲಕ್ಕುಮೆ: **ಕರ್ಣನೇಮಿ,** ೯. ೨೫)

**ತುೞಿಲ್ಗೆಯ್** – ನಮಸ್ಕಾರಮಾಡು (ಆ ನಂಜುಗೊರಲನ ಗಾಡಿಯಂ ನೋಡಿ ಬಗೆಯೊಳ್ ಅಚ್ಚರಿವಡುತುಂ ಬಂದು ತುೞಿಲ್ಗೆಯ್ದು ಕೈಗಳಂ ಮುಗಿದು: **ಕಬ್ಬಿಗಕಾ,** ೧೩೧ ವ)

**ತುೞಿವು** – ತುಳಿಯುವಿಕೆ (ಖಳನ ತುೞಿವುಮಂ ಸೋಂಕುವನಾರ್ ಅವಧಾರಿಪರ್: **ಆದಿಪು,** ೪. ೬೭)

**ತೂಂಕಂಗೊಳ್** – ಮೂರ್ಛೆ ಹೋಗು (ವಿಷವಿಷಮ ಕನತ್ಕಿಂಜಲ್ಕಮುತ್ಪಲಮೊಂದಂ ಜನಪತಿ ಕಂಉಗೊಂಡು ತೂಂಕಂಗೊಂಡಂ: **ಶಾಂತಿಪು,** ೬. ೯೨)

**ತೂಂಕಡಂ ಕಾಣ್** – ತೂಕಡಿಸು (ಗೞಪುವ ಗಿಳಿಯಂ ತೂಂಕಡಂ ಕಾಣಲೀಯಳ್: **ನೇಮಿನಾಪು,** ೩. ೧೦೬)

**ತೂಂಕಡಿಕೆಗಣ್** – ನಿದ್ದೆಗಣ್ಣು (ಕಳ್ಳನೆಂದು ತೂಂಕಡಿಕೆಗಣ್ಣಿಂದಾಕೆಯ ಮುಂದಲೆಯನಡಸಿ ಪಿಡಿದು: **ಧರ್ಮಾಮೃ,** ೨. ೩೦ ವ)

**ತೂಂಕಡಿಸು** – ತೂಕಡಿಸು, ನಿದ್ದೆಯಿಂದ ಜೂಗರಿಸು (ಮರೆದು ತೂಂಕಡಿಪ ವನ್ಯಮೃಗಂಗಳ ಮಗ್ಗುಲೊಳ್ ತೆರಂಬಿರಿದು ಹಿಮಾಂಶು ರಶ್ಮಿಗಳಿಂ ಉಜ್ವಳಿಸಿರ್ದ ಉಟಜಾಂಗಣಗಳೊಳ್: **ಕಾದಂಬ,** ೧. ೨೪೧)

**ತೂಂಕಡು** – ಜೋಂಪು, ನಿದ್ದೆ (ಪನಿಪುಲ್ಲಂಬುಕಣಂಗಳಂ ಕೆದಱುತುಂ ಕೋಕಂಗಳೊಳ್ ರಾಗಮಂ ನನೆವೊಯ್ದು ಉಣ್ಮಿಸುತುಂ ಪತತ್ರಿಗಳೊಳಗಿರ್ಪಾ ತೂಂಕಡಂ ನೂಂಕುತುಂ ತಣ್ಣನೆ ತೀಡಿತ್ತೆನಸುಂ ಪ್ರಭಾತಮಯ ಪ್ರೋದ್ಭೂತ ಶೀತಾನಿಳಂ: **ಶಾಂತೀಶ್ವಪು,** ೧೧. ೯೪)

**ತೂಂತಿಡು** – ತೂತು ಮಾಡು (ಆತನ ಕೆಲದೊಳ್ ಜಾಳಪಟಂ ತೂಂತಿಟ್ಟಂತೆ ಸಂದಣಿಸಿ ನಿಂದ ಗೋಪಕುಮಾರರ ಅಣಿಯ ನಡುವೆ: **ಪಂಪಭಾ,** ೧೦. ೫೭ ವ); ತುಂಬು (ಎನಸುಂ ಭಿನ್ನ ಘಟಕ್ಕೆ ತೂಂತಿಡುವುದೇ ನದ್ಯಾದಿಗಳ್: **ನೇಮಿನಾಪು,** ೪. ೫೭)

**ತೂಂತು** – ತುರುಕು (ನವರಕ್ತಾಸಕ್ತ ನಕ್ತಂಚರೀಮುಖದೊಳ್ ತೂಂತುವುದಾಂತರಂ ದಶಮುಖೋತ್ಪಾತಾಸಿ ಧಾರಾಮುಖಂ: **ಪಂಪರಾ,** ೧೦. ೨೨೩); ತೂತು (ರತ್ನೋಜ್ಜ್ವಳಗಿರಿಕುಳದಿಂ ತೂಂತುನಿಟ್ಟಂತೆ ನೀಳಾಂಭೋದಂಗಳೊಳ್ ಕೂಡೆ ವಿದ್ಯುದ್ವಳಯಮನೊಳಕೊಂಡಂತೆ: **ಆದಿಪು,** ೧೪. ೯೭)

**ತೂಂಬು** – ನೀರು ಹೋಗಲು ಇರುವ ತೂಬು (ಪರಿಮಳದ ತೂಂಬನೆತ್ತಿದಂ ಅರಲಂಬಂ ಜನಮನೋವನಕ್ಕೆ ಎನೆ ಕಾಳಾಗರುಧೂಮಲತಿಕೆ ಜಾಲಾಂದರದಿಂದ ಒಗೆದುದು: **ಯಶೋಧಚ,** ೨. ೧೯)

**ತೂಂಬುರ್ಚು** – ತೂಬು ತೆಗೆ (ಮೀಂಬೊಲಸು ನಾರ್ಪ ಮೆಯ್ಗಮಳುಂಬಂ ತೂಂಬುರ್ಚಿದಂತೆ ಸುರಿವರುಣಜಳಕ್ಕಂ ಬಿಡದೆ ಕಾಗೆಯುಂ ಪರ್ದುಂ ಬಳಸುವವೆಂದೊಡೆ ಇಂತು ಕಿಸುಗುಳರೊಳರೇ: **ಸುಕುಮಾಚ,** ೪. ೫೯)

**ತೂಕ** – ಭಾರ (ಬಲ್ಲವರೊಡಗೂಡಿ ಬಣ್ಣದಿಂದ ಒರೆಯಂ ತೂಕದಿಂ ಮರ್ಚ್ಚಿಯಿಂದಂ ಪೊನ್ನೆಂತೊಪ್ಪುಗುಂ: **ಧರ್ಮಾಮೃ,** ೧೫. ೩ ವ)

**ತೂಕರಿಸು** – ದೃಷ್ಟಿ ತೆಗೆಯಲು ಊದುವುದು (ತೂಕರಿಸಿ ಪರಸಲೆಂದು ಶಚೀಕಾಂತೆಯೊಡರ್ಚಿ ನಾಣ್ಚಿ ತಲೆವಾಗಿ: **ಚಂದ್ರಪ್ರಭ,** ೧೨. ೧೫೮)

**ತೂಕವಣೆ** – ನೃತ್ಯದ ಒಂದು ಗತಿ (ರೂಪುರೇಖೆ ಥಾಪಣೆ ತೂಕವಣೆಯಂಕೆ ಯೋಂಕೆ ಢಾಳೆ .. .. ಉಲ್ಲಾಸದಚ್ಚರಿವಡೆಯ ನರ್ತಿಸುತ್ತುಮಿರೆಯುಂ: **ಶಾಂತೀಶ್ವಪು,** ೧೬. ೬೭ ವ)

**ತೂಗಾಡು** – ತೊನೆದಾಡು (ಮೇಪಿಂಗೆ ತೂಗಾಡುವ ಯಾಮನೇಕಮಂ ಮಿಳ್ಮಿಳಿಸಿ ಸೊವಡರನಾರಯ್ದುದು: **ಆಚವರ್ಧ,** ೮. ೩೪)

**ತೂಗಿ ತೊನೆ** – ತೂಗಾಡು (ಅಂತಾಕೆಗಳ್ ತೂಗಿ ತೊನೆವ ತೊನೆಪಂಗಳುಮಂ ಮರಸರಿಗೆವಿಡಿದು ಬಿಲ್ವಿಡಿದಾಡುವ ಬೂತಾಟಂಗಳುಮಂ ನೋಡಿ ಗಂಧೇಭವಿದ್ಯಾಧರಂ ಇಂತೆಂದಂ: **ಪಂಪಭಾ,** ೪. ೯೦ ವ)

**ತೂಗುಂಗೊಂಬು** – ತೂಗಾಡುವ ಕೊಂಬೆ (ತುಱುಗಿರ್ದ ಬಲ್ಮಿಡಿಯ ತೂಗುಂಗೊಂಬಿನೊಳ್ವಾಯ್ದು ಮಂಡಳಿಸುತ್ತಿರ್ಪ ಶುಕಾಳಿ: **ಆದಿಪು,** ೧೧. ೯೬)

**ತೂಗುಂದಲೆ** – ತೊನೆದಾಡುವ ತಲೆ (ತೂಗುವ ತೂಗುಂದಲೆಗಳುಮಂ ಅಱಿಸಿ ಕಾಣದೆ: **ಹರಿವಂಶ,** ೨. ೧೧ ವ)

**ತೂಗುಂದೊಟ್ಟಿಲು** – ತೂಗಾಡುವ ತೊಟ್ಟಿಲು (ತೂಗುಂದೊಟ್ಟಿಲೊಳ್ ಪಟ್ಟ ಪುತ್ರನ ವಕ್ತ್ರೇಂದುವಂ .. .. ಇನ್ನೆಂದು ಕಾಣ್ಬೆನೋ: **ಕಾದಂಬ,** ೨. ೫೬)

**ತೂಣ** – [ಸ್ಥೂಣ] ಕಂಬ; ಯಮ (ಕ್ಷೋಣಿಯೊಳಗೆ ಅಬ್ಬೆಯಱಿಯದ ಕೋಣೇಯುಂ ಆ ತೂಣನಾಡದೆಡೆಗಳುಂ ಒಳವೇ: **ಲೀಲಾವತಿ,** ೧. ೪೫)

**ತೂಣೀರ** – ಬತ್ತಳಿಕೆ (ಪೊಣ್ಮಿದ ಇರಮ್ಮದ ಅನಳ ಶಿಖಾದಾಮಂಗಳೋ ತಾಂ ವಿಯೋಗಿಗಣಕ್ಕುರ್ಚುವ ಮೇಘಮನ್ಮಥನ ತೂಣೀರೋದ್ಗತಜ್ವಾಳೆಯಂಬುಗಳೊ ಪೇಟಿನೆ ಮಿಂಚುಗಳ್: **ಶಾಂತೀಶ್ವಪು,** ೧೨. ೪೨)

**ತೂಪಿಜೆ** – ದೃಷ್ಟಿ ತೆಗೆಯಲು ಬಾಯಿಂದ ಉಫ್ ಎಂದು ಊದು (ಮುಟ್ಟಿದುದೀ ಶುಕಶಾಬಕಂ ಇಂದು ಕಣ್ಬೆಱೆದುದು ಸಂಜೆಯೊಳ್ ನಿವಳಿಸು ಆದರದಿಂ ಸೊಡರಕ್ಕೆಯಿಟ್ಟು ತೂಪಿಜೆ: **ಲೀಲಾವತಿ,** ೧೪. ೧೨೦)

**ತೂರ್ಣಗತಿ** – ತ್ವರಿತ ಗತಿ (ಕುರಂಗದವೋಲ್ ತೂರ್ಣಗತಿಪ್ರಯುಕ್ತಂ ಅಳಿಯಂತೆ ಆಮೋದಚಿತ್ತಂ: **ರಾಜಶೇವಿ,** ೧೨. ೧೦೨)

**ತೂರ್ಯ** – ವಾದ್ಯ (ನಿಜಧ್ವನಿ ತೂರ್ಯಮಾಗೆ ರಾಗದಿನಿನರಶ್ಮಿಯೆಂಬ ಕಸಮಂ ಕಳೆದು: **ಆದಿಪು,** ೬. ೭೧); ನಾಲ್ಕನೆಯ

**ತೂರ್ಯಕ್ಷ್ಮಾಜ** – [ಜೈನ] ದಿವ್ಯವಾದ್ಯಗಳನ್ನು ನೀಡುವ ಕಲ್ಪವೃಕ್ಷ (ಓಲಗಿಪುದೊ ದಂಪತಿಗೆಂದುಮವಾರ್ಯವೀರ್ಯ ತೂರ್ಯಕ್ಷ್ಮಾಜಂ: **ಆದಿಪು,** ೫. ೩೫)

**ತೂರ್ಯತ್ರಯ** – ನೃತ್ಯ, ಗೀತ, ವಾದ್ಯ – ಇವುಗಳ ಮೇಳ (ಮರ್ಕಟಂಗಳ್ ತೂರ್ಯತ್ರಯಮನೆಸಗೆ ಕಂಡು ಬಂದು ಅರಸಂ ಅದಂ ಮಂತ್ರಿಗೆ ಪೇಳಲ್: **ಧರ್ಮಪ,** ೫. ೬ ವ)

**ತೂರ್ಯತ್ರಿಕ** – ತೂರ್ಯತ್ರಯ (ಚಿತ್ತೋದ್ಭವನಿನೆಸೆಯೆ ತೂರ್ಯತ್ರಿಕಂ ಹಾಸಪುಷ್ಪಾಂಜಳಿಯಿಂ ತತ್ಕಾಂತೆ ದೇಹದ್ಯುತಿ ಜವನಿಕೆಯಿಂ ನಾಟ್ಯರಂಗಂಬೊಲಿರ್ಪಳ್: **ಅಜಿತಪು,** ೨. ೪೧)

**ತೂರ್ಯರವ** – ತೂರ್ಯನಾದ (ಉಣ್ಮಿದತ್ತು ಭೋರೆನೆ ದಿವಿಜೇಂದ್ರತೂರ್ಯರವಂ: **ಜಗನ್ನಾವಿ,** ೩. ೩)

**ತೂರ್ಯಸ್ವನ** – ತೂರ್ಯನಾದ (ತೂರ್ಯದ್ವನಂ ಪೊಣ್ಮೆ ಮಂಗಳಲಿಳಗಕ್ಕೆ ಅಭಿಷೇಕಮಂ ರಚಿಸಿದಂ: **ರಾಜಶೇವಿ,** ೩. ೩೨)

**ತೂಲ** – ಹತ್ತಿ (ಚತುರ್ಗತಿಗಳೊಳ್ ಸುಟಿಗಾಳಿಯ ತೂಲದಂತೆ .. .. ತೊಟಿಲ್ತಿರುತಮಿರ್ದುದು ಸಾಲದೆ ಕರ್ಮಯೋಗದಿಂ: **ಚಂದ್ರಪ್ರಭ,** ೧೫. ೯೦); ತುಪ್ಪಳ (ಮರಾಳಿಕಾ ತೂಳ ತಳ್ಪದೊಳ್ ತಾಮೆಸೆದರ್ ಸುರಚಾಪಚ್ಛವಿ ಸುತ್ತಿದ ಶರದಭ್ರದೊಳೆಸೆವ ಖಚರದಂಪತಿಗಳವೊಲ್: **ಯಶೋಧಚ,** ೨. ೨೨)

**ತೂಲಿಕಾ**[ಕೆ] – ಕುಂಚ (ಸಂಕಲ್ಪತೂಲಿಕಾಭಿತ್ತಿಯಳೀ ಭುವನತ್ರಯಮಂ ಚಿತ್ರಿಸುವವಿರಿಂಚನ: **ಜಗನ್ನಾವಿ,** ೯. ೪೯)

**ತೂಳ್** – ಹಿಮ್ಮೆಟ್ಟು (ನರರಥಂ ತೂಳ್ದು ಆ ಕುರುಕ್ಷೇತ್ರದಿಂ ಪಡುವು ಎಣ್ಗಾವುದು ಪೋಗೆ ಪೋ ಗಡ ಇಸುವೆಂ: **ಪಂಪಭಾ,** ೧೦. ೨೫); ಚೆದುರಿ ಹೋಗು (ತರಂಗಂಗಳ್ ತೂಳ್ದು ಅಲಱುಗುಂ ಅವಳ ಅಳ್ಳೇಜೆನೊಳ್ ಅಲಱುಗುಂ ಎರ್ದೆತೆರೆಗಳಳಱ್ ತೂಳ್ವುದು ಪಿರಿದೇ: **ಆದಿಪು,** ೧೧. ೧೪೬); ನಾಶಪಡಿಸು (ಅಭಿನವ ಗಣಧರರೆನೆ ದಿವ್ಯ ಭಾಷೆಯಂ ತಾಳ್ದಿ ಕುಮತಮಂ ತೂಳ್ದಿದರಂ ಶುಭಕೀರ್ತಿ ದೇವರಂ ಸಕಲಭುವನಜನ ಪೂಜ್ಯಪಾದರ್ ಎನ್ನದರೊಳರೇ: **ಪಂಪರಾ,** ೧. ೨೧); ಹೋಗಲಾಡಿಸು (ಮಂತ್ರಿನಿಧಾನಂ ವಿಜಯಾವತೀಸತಿಯ ಚಿತ್ತಭ್ರಾಂತಿಯಂ ತೂಳ್ದಿದಂ: **ಕುಸುಮಾಕಾ,** ೩. ೭೧)

**ತೂಳ** – [ಸ್ಥೂಲ] ದಪ್ಪ ಸಕಾರದೊಡನೆ ಕೂಡಿದ ಥಕಾರಕ್ಕೆ ತಕಾರಂ: ಸ್ಥಾಪನೆ, ಸ್ಥೂಲಂ–ತೂಳಂ: **ಶಬ್ದಮದ,** ೨೭೧ ಪ್ರ); [ತೂಲ] ಹತ್ತಿ (ನಳಿನಂಗಳಂ ಅಳ್ಕಿಸಿ ಬೆಳ್ಮುಗಿಲ್ಗಳಂ ತೂಳಮನೆತ್ತುವಂತೆ ಎಟೆದು .. .. ತೀಡಿದುದು ಮೂಡಣ ಗಾಳಿ ಹಿಮಪ್ರವೇಶದೊಳ್: **ಲೀಲಾವತಿ,** ೯. ೨)

**ತೂಳಿಕೆ** – ಬಣ್ಣ ಹಾಕುವ ಕುಂಚ (ವನಿತಾಕಟಾಕ್ಷ ತೂಳಿಕೆಯಿಂ ಅತನು ಸೌಭಾಗ್ಯರೂಪಮಂ ಚಿತ್ರಿಪ ನೂತನ ಚಿತ್ರಫಳಕಂ: **ಆಚವರ್ಧ,** ೪. ೧೯)

**ತೂಳೆ** – ತೂಲ, ಹತ್ತಿ (ನವಮಣಿಮಂಚದಿಂದೆ ಮಿಸುಪಂಚೆಯ ತುಪ್ಪುಟ ತೂಳೆಯಿಂದೆ .. .. ಎಸೆರ್ದಿ ಸೆಜ್ಜೆಯೊಳ್ ಪವಡಿಸಿ: **ಪುಷ್ಪದಂಪು,** ೯. ೯೭)

**ತೂಱಲಗೊಂಬು** – ಮಟ್ಟ ರೆಂಬೆ (ಸಂಶಯಮನೆ ಮಾಬ್ಬುವು ಆತುರದ ತೂಱಲಗೊಂಬಿನ ತೂಲರಾಶಿಗಳ್: **ಕಾದಂಬ,** ೧. ೧೧೧)

**ತೂಱಲ್ಗೊಂಬು** – ತೂಱಲಗೊಂಬು (ಸತ್ಕವೀಂದ್ರರ್ಕಲುಬ್ಬಟಿಯಂ ಕಂಡು ಕನಲ್ದು ಕೇದಗೆಯ ತೂಱಲ್ಗೊಂಬನೇಱರ್ದ ಮರ್ಕಟನಂತೆ: **ಧರ್ಮಮಧು,** ೧. ೫೩)

**ತೂಱು** – ಜಳ್ಳನ್ನು ಗಾಳಿಯಿಂದ ಬೇರ್ಪಡಿಸು(ಕಳದೊಳ್ ತೂಱಿದ ಭತ್ತಮನಳೆಯದೆ ನಿಂದಂದು ದನುಜನಾ ಧಾನ್ಯಮನಾಗಳೆ ಕೊಳ್ವರೆಂಬರ್: **ಸಮಯಪ,** ೧೨. ; ತುಂತುರು ಬೀಳು (ಖಿನ್ನ ಗೃಹಿಣೀ ನಿಶ್ವಾಸದಿಂ ಕೂಡೆ ತೂಱಿದುವು .. .. ವಾರ್ಬಿಂದುಗಳ್: **ಚಂದ್ರಪ್ರಪು,** ೪. ೪೦)

**ತೂಱಿಕೊಳ್** – ತೂರಿಕೊಳ್ಳು (ವಿರೋಧಿಸೈನ್ಯಮಂ ಮಾರಿ ಪೊಕ್ಕಂತೆ ಪೆಣಮಯಂ ಮಾಡಿ ತೂಱಿಕೊಂಡ ಜೋಳದಂತಿರೆ: **ಪಂಪಭಾ,** ೧೧. ೯೩ ವ)

**ತೃಣ** – ಹುಲ್ಲು (ತೃಣ ಸಸ್ಸ ಘಾಸ ವಿಷಯಪ್ರಣಯಂ ಸಮವೃತ್ತಿಯಪ್ಪವೋಲ್ ಮೃಗಗಣದೊಳ್: **ಕವಿರಾಮಾ,** ೧. ೮)

**ತೃಣಕುಟಿ** – ಹುಲ್ಲಿನ ಗುಡಿಸಲು (ತೃಣಕುಟಿ ಪುಲ್ಗುಡಿ: **ಅಭಿಧಾವ,** ೧. ೧೦. ೯)

**ತೃಣಗ್ರಾಹಿ** – ನೀಲ ರತ್ನ (ಹಿಮೋಪಳಂ ಒಸರ್ವವೊಲಿಂದುಕರಾವಳಿಗೆ ತೃಣಗ್ರಾಹಿ ನೀಳಮಣಿಯೊಸರ್ದಪುದೇ: **ಚಂದ್ರಪ್ರಪು,** ೧. ೩೯)

**ತೃಣಪುರುಷ** – ಬೆರ್ಚು, ಬೆದರುಗೊಂಬೆ (ಬೆರ್ಚು೦ಸಂತ್ರಾಸೇ ತೃಣಪುರುಷೇ ಚ: **ಶಬ್ದಮದ, ಧಾ** ೨೦೮)

**ತೃಣಪುಲೀ** – ಹುಲ್ಲಿನ ಉಕ್ಕಡ (ನಿಡುಮರದ ತುದಿಗೋಡುಗಳೊಳ್ ಕಟ್ಟಿದ ತೃಣಪುಲೀ ಚಿಹ್ನಂಗಳಿಂ; **ಕಾದಂಬ,** ೮. ೦ ವ)

**ತೃಣಶರಣ** – ಹುಲ್ಲಿನ ಗುಡಿಸಲು (ನೆರೆದುದು ವಿರಹಿಜನಮನಸ್ ತೃಣಶರಣದೊಳ್ ಅಂಗಜದವಾಗ್ನಿಯಂ ನೆಱಪುತ್ತುಂ ನೆರೆದಭ್ರಂ ಕೊರ್ವಿದುದು ಅಚ್ಚರಿಯಿಂ ಪೋದಗೆಯ ಗರ್ಭಮಂ ಕೊರ್ವಿಸುತುಂ: **ಶಾಂತೀಶ್ವಪು,** ೧೨. ೪೦)

**ತೃಣಾಗ್ರ** – ತೃಣಶಿಖರ (ಅನಿಮಿಷಚಾಪದಂತೆ ಸಿರಿ ಶಾರದನೀರದಕಾಂತಿಯಂತೆ ಯೌವನದೆಸಕಂ ತೃಣಾಗ್ರಗತವಾಃಕಣಿಕಾಗಣದಂತೆ ಸಂದ ಜೀವನಂ: **ಪಂಚತಂತ್ರ,** ೧೧೬)

**ತೃಷಾಪೀಡಿತ** – ಬಾಯಾರಿಕೆಯಿಂದ ಬಳಲಿದ (ಭೀತನಂ ಅಲಸಿಗನಂ ಕಾರ್ಯ್ಯಾತುರನಂ ಪಸಿದನಂ ತೃಷಾಪೀಡಿತನಂ ದ್ಯೂತ ಮೃಗವ್ಯಸನಜನೋಪೇತನಂ ಅಱಿಅದಱಿದು ಬಿನ್ನವಿಪ್ಪಂ ಗಾಂಪಂ: **ಪಂಚತಂತ್ರ,** ೮೫)

**ತೃಷ್ಣಾತುರ** – ಬಾಯಾರಿಕೆಯಿಂದ ಬಳಲುವ (ತೃಷ್ಣಾತುರ ಗದ್ಗದ ಕಾಂತೆಯಂ ಆ ತಾಪಸಣ ಆಗಳ್ ಅವಳನಿದಿರೊಳೆ ಕಂಡಂ: **ಸುಕುಮಾಚ,** ೪. ೫೬)

**ತೃಷ್ಣೆ** – ತೃಷೆ (ಮದನರಸಪ್ಲವಂ ಕವಿಯೆ ತಣ್ಣಸನಾಗದೆ ತೃಷ್ಣೆ: **ಶಾಂತಿಪು,** ೮. ೯೭)

**ತೆ** – ತಿರಸ್ಕಾರ ಸೂಚಕ ಅವ್ಯಯ, ಛೀ (ಗುರುವ ಕೇಶಕಳಾಪಮಂ ತೆಗೆದಂ ತೆ ಗಂಡನುಮಾದಂ ಈ ಪರಿಭವಕ್ಕೆ ಅನುರೂಪಮಿಂ ಪೆಱತೊಂದುಮಿಲ್ಲ ಅಹಿಕೇತನಾ: **ಪಂಪಭಾ,** ೧೨. ೩೭)

**ತೆಂಕಣ** – ದಕ್ಷಿಣ (ನಕುಳನುಂ ತೆಂಕಣ ದೆಸೆಯ ಮಲೆಪರಂ ಮಂಡಳಿಕರುಮಂ ಅಸಿಯರಾಗೆ ಕವರ್ದುಕೊಂಡು ಲಂಕೆಯ ಮೇಗೆ ನಡೆದು: **ಪಂಪಭಾ,** ೬. ೩೨ ವ)

**ತೆಂಕಣ ಗಾಳಿ** – ದಕ್ಷಿಣದಿಂದ ಬೀಸುವ ಗಾಳಿ, ತಂಪಾದ ಗಾಳಿ (ಪೊಸಪೂವಿನೊಳ್ ಪೊರೆದು ಪೊಣ್ಮಿದ ಕಂಪು ಮೊಗಂಗಳಂ ಚಳಿಲ್ಲನೆ ಕೊಳೆ ಪೊಯ್ಯೆ ತೀಡಿದುದು ತೆಂಕಣ ಗಾಳಿ ವಸಂತಮಾಸದೊಳ್: **ಪಂಪಭಾ,** ೫. ೩೪)

**ತೆಂಕಣದ** – ದಕ್ಷಿಣ ದೇಶದವನು (ರಣದೊಳ್ ರಾವಣನಂ ಜವಂಗೆ ಪೊಸತಿಕ್ಕಲ್ ತಾರಶೈಲಕ್ಕೆ ತೆಂಕಣದಂ ಕಂಕಣದಂತೆ ಕೈಗೆವರಿಸಲ್ ಭೂಚಕ್ರಮಂ: **ಪಂಪರಾ,** ೩. ೧೬೦)

**ತೆಂಕನಾಡು** – ದಕ್ಷಿಣ ದೇಶ (ತೆಂಕನಾಡ ಕಿಷ್ಕಿಂಧೆಯೆಂಬ ಪರ್ವತಮನೆಯ್ದಿ: ವಡ್ಡಾರಾ, ಪು. ೧೧೬, ಸಾ. ೨೮)

**ತೆಂಕಲ್** – ದಕ್ಷಿಣದಿಕ್ಕು (ಉದ್ಭಟಭೂಮಿಪಂ ಉತ್ತರದಿಂ ಕೂರ್ತು ತೆಂಕಲಭಿಮುಖನಾದಂ: **ಉದ್ಭಟಕಾ,** ೨. ೩೩)

**ತೆಂಕವಂಕ** – ದಕ್ಷಿಣ ದಿಕ್ಕು (ಆ ಪುರದ ತೆಂಕವಂಕದೊಳ್ .. .. ಪಾಪಕಳಾಪಂಡಿತೆ ಚಂಡಮಾರಿ ದೇವತೆಯಿರ್ಪಳ್: **ಯಶೋಧಚ,** ೧. ೩೪)

**ತೆಂಗಾಳಿ** – ತೆಂಕಣದ ಗಾಳಿ (ಎಲೆ ತೀಡುವ ತೆಂಗಾಳಿಯೆ ನಲವಿಂ .. .. ತಳ್ವಿಲ್ಲದೆ ಕಾದಲನಂ ತಂದೊಡೆ: **ಕಬ್ಬಿಗಕಾ,** ೫೮)

**ತೆಂಗುಹ** – ಹಕ್ಕಿ ಮೇಲೆರಗುವಿಕೆ (ತೆಂಗುಹಮೆಂದು ಪಕ್ಕಯೆಱಗುಹಂ: **ಶಬ್ದಮದ,** ಪ್ರಸಾ, ೧೦೭)

**ತೆಂಟು** – ಕೇರು (ತೆಂಟು–ಶೂರ್ಪಕರಣೇ: **ಶಬ್ದಮದ, ಧಾ** ೨೪೮)

**ತೆಂಬೆರಲ್** – ತೆಂಕಣ ಗಾಳಿ (ಪೊರೆದೋಱೆ ತೆಂಬೆರಲ್ ಪೊರೆವೊರೆಯಂ ಸಡಿಲ್ಚೆ: **ಪಂಪಭಾ,** ೫. ೩೩)

**ತೆಂಬೆಲರ್** – ತೆಂಗಾಳಿ (ತೆಂಬೆಲರಲೆಪದ ಪೂಲತೆಯೆಂಬಿನಂ ಅಂಕುರಿಸೆ ಪುಳಕಮೊರ್ಮೊದಲೊಳೆ ಬಿಲ್ಲುಂಬೆಱಗಾಗಿ: **ಶಾಂತಿಪು,** ೧೦. ೭)

**ತೆಕ್ಕನೆ ತೀವು** – ಭರ್ತಿಯಾಗಿ ತುಂಬು (ಚತುರ್ದಶ ಮಹಾನದಿಗಳ ನೀರುಮಂ ತಱತಱ ತೊಳಗುವ ಕಳಧೌತಕಳಶಂಗಳೊಳ್ ತೆಕ್ಕನೆ ತೀವಿ ತಂದ ವಾರವನಿತಾಜನಕ್ಕಂ: **ಪಂಪಭಾ,** ೧೪. ೧೭ ವ)

**ತೆಕ್ಕನೆವೋಗು** – ಗಾಬರಿಯಾಗು (ಇತ್ತ ಲೀಲಾವತಿ ನಿಜವಲ್ಲಭಂ ಮಲ್ಲಿಕಾಮಂಡಪದೊಳ್ ಇಲ್ಲದುದಂ ಕಂಡು ತೆಕ್ಕನೆವೋಗಿ: **ಲೀಲಾವತಿ,** ೧೪. ೧೧೭ ವ); ಅಚ್ಚರಿಗೊಳ್ಳು (ಆ ಭವದೊಳಂ ನೀಂ ವನಚರನೆ ಎನಲೊಡಂ ತೆಕ್ಕನೆವೋದಂ ಜನ್ಮನಾಟಕಕ್ಕವನೀಶಂ: **ನೇಮಿನಾಪು,** ೪. ೫)

**ತೆಕ್ಕು** – [ಪ್ರಾಣಿಗಳು] ನವೆಗೆ ನೆಕ್ಕು (ತೆಕ್ಕು–ತಿರ್ಯಕ್ಕಂಡೂತಿ ಲೇಹನೇ: **ಶಬ್ದಮದ, ಧಾ** ೪೪)

**ತೆಕ್ಕೆಗಟ್ಟು** – ರಾಶಿಯಾಗು (ತೆಕ್ಕೆಗಟ್ಟಿದ ಪೊಂದಾವರೆಯ ರಜದಂತೆ: **ಮಲ್ಲಿನಾಪು,** ೨. ೫೦)

**ತೆಕ್ಕೆವೆಱು** – ಗುಂಪಾಗು (ತನಯಂ ಬಂದಾ ವಾರ್ತೆಗೆ ತೆಕ್ಕೆವೆತ್ತು ಶಿಶಿರದ ಸೋಂಕಿಂ ನನೆದೊಪ್ಪುವ ಮಾಲತಿಯನೆ ವಿಜಯಾವತಿ ಸಮಂತು ಪೋಲ್ತೆಸೆದಿರ್ದಳ್: **ಕುಸುಮಾಕಾ,** ೧೫. ೯೮)

**ತೆಗಪು** – ಬೇಯಿಸು (ತಳಿರ್ಗಳ್ ಮೆಯ್ವೆಂಕೆಯಿಂದಂ ತೆಗಪಿದ ತಳಿರಂತಾದುವು: **ಲೀಲಾವತಿ,** ೧೧. ೪೪)

**ತೆಗಲೆ –** ಹೆಕ್ಕತ್ತು, ಹೆಗಲು (ಅಡಿ ತೊಡೆ ಪೊರ್ಕುಳುಂ ತೆಗಲೆ ಕೈ ಕಣ್ಕೆಕಾಲ್ ಕೊರಲ್ ಎಂಬಿವುಂ ಬೆರಲ್ ನಡುವುರ ಬೆಂ ಬಸಿಱ್ ತೊಳಕು ಕರ್ಜಱ್ ಮುಯ್ವು .. .. ಎಂಬೆಡೆಯನೆ ನಟ್ಟುರ್ಚಿದುವು .. .. ಪಾರ್ಥನಂಬುಗಳ್: **ಪಂಪಭಾ,** ೧೧. ೧೩೬)

**ತೆಗಳಿ –** ತೆವಡೆ, ಕೂದಲು ಉದುರುವ ರೋಗ (ಗಂಟಲುರಂಬಂ ಆಱ್ ಬೆಂದೊವಲ್ ತೆಗಳಿಗೆ ಬೀೞ್ ಬಾಯ್ಗೆ ಕರಿಸಂ ಬರೆ .. .. ನಡೆಗೆಟ್ಟುವು: **ಪಂಪರಾ,** ೭. ೯೩)

**ತೆಗಳಿಕೆ –** ಪದರ, ನಿರಿಗೆ (ಚಂದನಾಲೇಪದ ತೆಗಳಿಕೆಗಳ್ .. .. ಬೆರಸಲರ್ವಸೆಯೊಳ್ ಕಾಮತೆಯಿರ್ದಳ್: **ಕುಸುಮಾಕಾ,** ೧೩. ೭೯)

**ತೆಗಳಿಗೆಬೀೞ್ –** ಪದರಪದರವಾಗು (ಗಂಟಲುರಂಬಮಾಱ್ ಬೆಂದೊವಲ್ ತೆಗಳಿಗೆ ಬೀೞ್ ಬಾಯ್ಗೆ ಕರಿಸಂ ಬರೆ ನಾಲಗೆಗಿಟ್ಟು ನಟ್ಟ ದಿಟ್ಟಿಗಳೊಡನಳ್ಳೆ ಪೊಯ್ಯೆ ನಡೆಗೆಟ್ಟುವು ತೃಷ್ಣೆಯಿನಾರೊ ಬೇಯದರ್: **ಪಂಪರಾ,** ೭. ೯೩)

**ತೆಗೞ್ –** ನಿಂದಿಸು (ತಮ್ಮೊಡನಾಡಿಗಳಪ್ಪ ಮೇಳದ ಸಬ್ಬವದ ನಗೆಯ ತೆಗೞೆನವರನೆಮ್ಮ ಬೞಿಯಟ್ಟಿದಂದು ಬನ್ನಿಮೆಂದು ಪ್ರಿಯಂ ನುಡಿದಿರಿಸಿ: **ಪಂಪಭಾ,** ೨. ೯೫ ವ); ನಿಂದೆ, ಹೀನಾಯ (ಸಭೆಯೊಳ್ ಮಾಷಮುಖದಂತೆ ದೋಷಗವೇಷಣಪರರಪ್ಪರ್ ಎಂದೊಡದು ತೆಗೞಲ್ತೇ: **ಆದಿಪು,** ೧. ೨೧); ಸರಸ (ರಮಿಯಿಪುದು ಅಮರಿಯರೊಳ್ ತೆಗೞ್ ಅಮರಿಯರೊಳ್ ತವದ ಮೇಳಮ್ ಅಮರಿಯರೊಳ್ ಅಲಂಪು ಅಮರಿಯರೊಳ್ ನಗೆ ಸಬ್ಬವಂ ಅಮರಿಯರೊಳ್ ನಡೆವುದು ಅಮರನೇಂ ಸುಖಮಯನೋ: **ಶಾಂತಿಪು,** ೭. ೭೬)

**ತೆಗೞ್ಕೆ –** ಸರಸ (ಬಗೆಯಱಿದು ನಗುವ ನಗೆಗಂ .. .. ಇಚ್ಛೆಯಱಿದು ತೆಗೞ್ವತೆಗೞ್ಕೆಗಂ: **ಶಾಂತಿಪು,** ೩. ೫೯ ವ)

**ತೆಗೞ್ಪು –** ಮಾತಿನ ತೊದಲು (ಆಮೀಳನಮಂ ಕಣ್ಗಳೊಳ್ ಆ ಮನದೊಳ್ ಒಸಗೆಯಂ .. .. ಮದಿರಾಮದವಾಗಿಸೆ ತೆಗೞ್ಪನಾಕೆಯ ನುಡಿಯೊಳ್: **ಕವಿರಾಮಾ,** ೩. ೯)

**ತೆಗೞ್ತೆ –** ಸರಸ (ಲಾಲಿಸುವ ಲಲ್ಲೆ ಮರಲ್ಚುವ ಮಾತು ಚಿತ್ತಮಂ ತೆಗೆವ ತೆಗೞ್ತೆ ಮೋಹಿಪ ವಿನೋದಂ .. .. ಅಲಂಪನೆರ್ದೆಗಿತ್ತರೊ ಸಗ್ಗದ ಪೆಂಡಿರಾತನಾ: **ಚಂದ್ರಪ್ರಪು,** ೪. ೭೧)

**ತೆಗೆ –** ಹೊರಗೆ ತಾ (ಆನೇಱೆಪೆನೆಂದು ಆ ಕಾನೀನಂ ಬಂದೆತ್ತಿ ಬಿಲ್ಲಂ ಏಱೆಸಿ ತೆಗೆಯಲ್: **ಪಂಪಭಾ,** ೩. ೬೦); ಹಿಮ್ಮೆಟ್ಟು (ಸಪ್ತಕೊಂಕಣಂ ಆ ಸಾಗರದ ತೆಗೆದ ಎಡೆಯೊಳ್ ಆಯ್ತೆಂಬರ್ .. .. ಜಳಧಿ ಭಯದೆ ತೆಗೆದುದೆ ಪೇೞೆಂ: **ಸಮಯಪ,** ೧೦. ೧೧೨); ಆಕರ್ಷಿಸು (ತೆಗೆ–ಆಕರ್ಷಣೇ: **ಶಬ್ದಮದ, ಧಾ** ೧೧೬)

**ತೆಗೆನೆೞ್ –** ಪೂರ್ತಿ ಎಳೆ (ಗಱೆಸನ್ನೆಗೆಯ್ದು ತೆಗೆನೆೞ್ದು ಎೞಗಿ ಪರಂಕಲಿಸಿ ಪರ್ವಿ ಕೂಕಿಱೆದು ಇಸೆ ಕೆಂಗಱೆಯ ಮೊನೆಯಂಬುಗಳ್ ಕಣ್ದೆಱೆಯಿಸಿದುವು ಪೊಣರ್ವ ಬಿಲ್ಲ ಕಡುವಿತ್ತೆಗರಂ; **ಪಂಪಭಾ,** ೧೦. ೭೩)

**ತೆಗೆಯಾಳ್ –** ದಾಳಿಕಾರ (ದಿವ್ಯವಾಗ್ವಿದಿತ ಸುಧರ್ಮಮಾ ಸಭೆಯೊಳಿಂದು ವಿರಕ್ತನೃಪಾಳಮಿರ್ದುದು ತೆಗೆಯಾಳನಾಯ್ದು ತೆಗೆದಂತೆ ಕೊಳಲ್ಕುಪರ್ವಗರ್ದುರ್ಗಮಂ: **ಅನಂತಪು,** ೯. ೪೯)

**ತೆಗೆಯಿಸು –** ಹೊರಬರುವಂತೆ ಮಾಡು (ಸುಬಂಧುವಂ ನೆಲಮನೆಯಿಂ ತೆಗೆಯಿಸಿ ಸನ್ಮಾನದಾನಂಗಳಿಂದಾತನಂ ಸತ್ಕರಿಸಿ: **ವಡ್ಡಾರಾ,** ಪು. ೧೮೨, ಸಾ. ೨೩)

**ತೆಣಱು –** ತಿಣುಕು (ಪೊತ್ತ ಫಣಿ ತೆಣಱುತಿರೆ ನಡೆದತ್ತಾಗಳ್ ಸಗರಚಕ್ರವರ್ತಿಯ ಕಟಕಂ: **ಅಜಿತಪು,** ೯. ೧೬)

**ತೆತ್ತಿಸು –** ಅಂಟಿಕೊ (ದೆಸೆದೆಸೆಗೆ ನರಶಿರಂ ತೆತ್ತಿಸಿ ಮೆಱೆದುವು .. .. ಜೀವಪ್ರಸರಮಂ ಪಲವು ಮುಖದಿಂ ಅವಳೋಕಿಪವೊಲ್: **ಯಶೋಧಚ,** ೧. ೫೭); ತನ್ಮಯಗೊಳಿಸು (ಹರನೊಳೆ ಪತ್ತಿ ತೆತ್ತಿಸಿದ ಚಿತ್ತಮಂ ಇರ್ಬಗಿಯಾಗಿ ಮೋಹಮೊತ್ತರಿಸೆ ಸುಯೋಧನಂಗೆ ರಣಭೂಮಿಯೊಳ್ ಎಂತವಸ್ಥೆಯೋ ಕನಲ್ದು ಉರಿದಪುದು ಎನ್ನ ಮೆಯ್: **ಪಂಪಭಾ,** ೧೩. ೬೩); ಕುಂದಣವಿರಿಸು (ನೆಗೆದ ಅಟ್ಟಾಳಕಜಾಲದ ಸೊಗಯಿಪ ಹರಿನೀಳ ಜೂಳಿಕಾವಳಿಯೊಳ್ ತಾರಗೆಗಳ್ ತುಱುಂಗಿ ಮಿಱುಗುವುವು ಅಗಲದೆ ತೆತ್ತಿಸಿದ ಮುತ್ತುಗಳ ಮೊತ್ತದವೋಲ್: **ಶಾಂತೀಶ್ವಪು,** ೧೩. ೧೫೩)

**ತೆನೆ –** ಧಾನ್ಯದ ತೆಂಡೆ, ಕಣಿಶ (ಪ್ರಬಳ ಫಳಭರದಿಂ ಕೂಡಿ ಬಳ್ಕಿ ತೆನೆ ನೆಲನನಲೆಯೆ ಪವನನ ಹತಿಯಿಂದೆ: **ಸುಕಮಾಚ,** ೯. ೫೨); ಕೋಟೆಯ ಕಿರುಗೋಪುರ (ರಥಾಂಗಮೆಗೆತ್ತರುಣಂ ತೆನೆಯನೆತ್ತಿ ನಗಿಸುವನಿನನಂ: **ಅನಂತಪು,** ೧. ೧೧೧)

**ತೆನೆತೀವು –** ಬಸಿರು ತುಂಬು (ಅದು ಮೆಲ್ಲನೆ ತೆನೆತೀವಿ ಸುೞಿಯೆ ಕಂಡೊರ್ಮೆ ಮಹೀವಲ್ಲಭನುಂ ಬೇಂಟೆಯೊಳ್ ಅಡಗಿಲ್ಲದೆ ಬರುತ ಎೞ್ಚಂ: **ಯಶೋಧಚ,** ೩. ೫೫)

**ತೆಪ್ಪ –** ಹರಿಗೋಲು (ಬೆಳ್ಳಂಗೆಡೆದು ಪರಿತರ್ಪ ಪೆರ್ಬಳ್ಳದೊಳ್ ಪಿರಿದಪ್ಪ ತೆಪ್ಪದ ಮೇಲೆ ತೇಂಕುತ್ತುಂ: **ಪಂಚತಂತ್ರ,** ೪೨೭ ವ)

**ತೆಪ್ಪೞು –** [ತೆರ್ಪೞು] ಚೇತರಿಸಿಕೊ (ಆಗಳ್ ತೆಪ್ಪುತ್ತುಂ ಎಲ್ಲಿದಂ ಎತ್ತಣಂ ಎಂದು ಕರ್ಣನ ಕಳೇವರಮಂ ನೋಡಿ ನೋಡಲಾಱದೆ ಕಣ್ಗಳಂ ಮುಚ್ಚಿ: **ಪಂಪಭಾ,** ೧೩. ೫೮ ವ)

**ತೆಪ್ಪರ್ತ –** ಮೂರ್ಛೆಯಿಂದ ಎಚ್ಚೆತ್ತವನು (ತೆಪ್ಪರ್ತನೆಂದು ಮೂರ್ಛೇತಿಳಿದಂ: **ಶಬ್ದಮದ,** ಪ್ರಸಾ, ೧೦೮)

**ತೆಬ್ಬರಿಸು –** ಮೇಲಕ್ಕೆತ್ತು (ಇರ್ವರುಂ ಪರಸಿ ತಡವರಿಸಿಯುಂ ತೆಬ್ಬರಿಸಿಯುಂ ಅಟ್ಕಱೊಳ್ ಅಪ್ಪಿಕೊಂಡು: **ಪಂಪಭಾ,** ೧೩. ೮ ವ); ಎಚ್ಚರಿಸು (ಇನಿಸು ಚೇತರಿಸಿ ಪತಿಯಂ ತೆಬ್ಬರಿಸಿ ನೋಟ್ಟಿ ರಾಜಾಗ್ರಮಹಿಷಿಯುಂ: **ವರ್ಧಮಾಪು,** ೫. ೯ ವ)

**ತೆಮರ್ –** ಓಡಿಸು (ಮೆಯ್ದುಡಪಿದಂ ವರವೀವ ಕರಾಬ್ಜದಿಂದೆ ನೋಡಿದಂ ಅಖಿಳಾಘಮಂ ತೆಮರ್ವ ಕಣ್ಗಳಿಂ: **ಶಬರಶಂ,** ೫. ೪೦); ತೆವರು, ದಿನ್ನೆ (ತೆಮರೆಲ್ಲಂ ಜೈನ ರಾಜಾಯತನಮೆ ಕುೞಿಯೆಲ್ಲಂ ನವಾಂಭೋಜಿನೀಷಂಡಮೆ: **ಅನಂತಪು,** ೩. ೭)

**ತೆಮಳ್ದು –** ಕೂಡಿಹಾಕು (ಅಂತು ಜಾತರೂಪಧರನಾಗಿ ತನ್ನ ಪಱಿದು ಬಿಸುಟ ಸಹಸ್ರಕುಂತಳಂಗಳಂ ತನ್ನ ತಳದೊಳ್ ತೆಮಳ್ದಿಕೊಂಡು: **ಆದಿಪು,** ೨. ३೯ ವ)

**ತೆಮಳ್ –** ತೆವಳಿಕೊಂಡು ಹೋಗು (ಪೞಗೇಟು ದಿವಸದೊಳ್ ತೆಮಳ್ದುಂ ಪೞವೇಟು ದಿವಸಕ್ಕೆ ತರ್ಳನ್ನಡೆನಡೆದುಂ: **ಆದಿಪು,** ೫. ೪೧ ವ); ಸೇರಿಸಿಕೊ, ಸಂಗ್ರಹಿಸು (ತೆಮಳ್ದು ಪೀರ್ದ ಪಟನೀರ್ಗಳಂ ಅಟ್ಕಿಸಲಾಱದೆ ಎಯ್ದೆ ಕಂಟಳಿಸಿ ಮಗುಳ್ಚಿದಪ್ಪುದು: **ಲೀಲಾವತಿ,** ೧೨. ३೮)

**ತೆರಂದಿರಿ** – ಅವಕಾಶ ಮಾಡಿಕೊ (ಮರೆದು ತೂಂಕಡಿಪ ವನ್ಯಮೃಗಂಗಳ ಮಗ್ಗುಲೊಳ್ ತೆರಂಬಿರಿದು ಹಿಮಾಂಶು ರಶ್ಮಿಗಳಿಂ ಉಜ್ವಳಿಸಿರ್ದ ಉಟಜಾಂಗಣಗಳೊಳ್: **ಕಾದಂಬ,** ೧. ೨೪೧)

**ತೆರಟು** – ಮದುವೆಯಲ್ಲಿ ಮುಯ್ಯ ಸೀರೆ ಕೊಡು (ತೆರಟು– ನಿವಸನೋದ್ವಹನೇ: ಶಬ್ದಮದ, ಧಾ ೨೪೭)

**ತೆರಳ್** – ಒಗ್ಗೂಡಿಸು (ತೆರಳ್ದು ಸುರಭೂರುಹಪ್ರಸವಧೂಳಿಯಂ ಮೊಕ್ಕಳಂ ಸುರುಳ್ದು ಸರಸೀಸರೋರುಹದಳಂಗಳಂ: **ಆದಿಪು,** ೭. ೬೭); ಚಲಿಸು (ಎಸೆವ ನಭಸ್ಸರೋವರದೊಳುಣ್ಮಿ ಕೆಲಕ್ಕೆ ತೆರಳ್ದ ನೀಲಿಕಾಪ್ರಸರಮೊ .. .. ಎಂದೆನಿಸಿತಂದು ಪುರಂದರಚಾಪವಿಭ್ರಮಂ: **ಚಂದ್ರಪ್ರಪು,** ೪. ೫೦)

**ತೆರಳಿ** – ರೇಷ್ಮೆಹುಳು (ನಿಷ್ಕಾರಣಂ ತೆರಳಿಯ ಪುಟುವಿನಂತೆ ನಿನ್ನಂ ನೀನೆ ದುಷ್ಪರಿಣಾಮದಿಂ ಸುತ್ತಿಕೊಂಡು: **ಧರ್ಮಾಮೃ,** ೧೪. ೬೨ ವ)

**ತೆರಳ್ಕೆ** – ತೆರಳುವಿಕೆ (ಮಲಯಾನಿಲನೂದೆ ತೆರಳ್ವ ಚೂತಪಲ್ಲವದ ತೆರಳ್ಕೆ: **ಪಂಪರಾ,** ೨. ೧೪)

**ತೆರಳ್ಚು** – ಚಲಿಸುವಂತೆ ಮಾಡು (ಜಡಿ ಸೋಂಕು ಔಂಕು ತೆರಳ್ಚು ನೋಡು ಕಡುಗೆಯ್ದೇೞ್ .. .. ಎನುತಂ .. .. ನುಡಿವ ಒಂದಬ್ಬರಂ: **ಕಾದಂಬ,** ೧. ೧೩೫); ಸುತ್ತುವಂತೆ ಮಾಡು (ಕೆಂದಳದಿಂ ಸಣ್ಣಿಗೆಯಂ ತೆರಳ್ಚಿ ತಿರುಪುತ್ತುಂ: **ಕುಸುಮಾಕಾ,** ೨. ೧೦೬); ಪಸರಿಸು (ಅನುಲೇಪನದ ಸೌರಭ್ಯಮಂ ತೆರಳ್ಚಿ ವಿಟಜನಘ್ರಾಣಕೆ ಪಾರಣೆಯನೊಡರ್ಚಿಯುಂ: **ಕುಸುಮಾಕಾ,** ೪. ೨೯ ವ); ಉಂಟುಮಾಡು (ಕೂರ್ತು ಕೂಡಿದವರ್ಗಂ ರಾಗಾದಿ ಕಲ್ಲೋಲಮಂ ಕಿವಿಯಂ ತಾಗಲೊಡಂ ತೆರಳ್ಚುವುದು: **ಅನಂತಪು,** ೧. ೩೩)

**ತೆರಳ್ದು ತೂಳ್** – ಒಗ್ಗೂಡಿಸಿ ಒಗೆಯಲ್ಪಡು (ಬಿಸಿಲಂ ಬೆಳ್ದಿಂಗಳುಮಂ ಪಸರಿಸೆ ಕಟ್ಟಿಲೆ ತೆರಳ್ದು ತೂಳ್ದೊಡೆ ರಾಗಂ: **ಆದಿಪು,** ೧೩. ೫೦)

**ತೆರೆ** – ಅಲೆ; ಜವನಿಕೆ; ಮೈಯ ಸುಕ್ಕು (ಕೆನ್ನೆಯ ನರೆಯಂ ಕದಪಿನೊಳ್ ಉನ್ನುನ್ನಂ ನೆಗೆದ ತೆರೆಯನೊಡ್ಡಿದ ಜರೆಯಂ ಕನ್ನಡಿಯ ನೋಡಿ ತಜೆಸಲೆ ಕನ್ನಡಿಕುಂ ವೃದ್ಧ ನೋಡ ನಿನ್ನಯ ಮೊಗಮಂ: **ಅಜಿತಪು,** ೨. ೯೬)

**ತೆರೆಮಸಗು** – ಅಲೆಗಳುಂಟಾಗು (ತೆರೆಮಸಗಿದ ಲಾವಣ್ಯರಸದ ಪೊನಲೆಂಬಿನೆಗಂ: **ಮಲ್ಲಿನಾಪು,** ೩. ೫೧)

**ತೆರೆವೊಯ್ಲು** – ತೆರೆಗಳ ಅಪ್ಪಳಿಸುವಿಕೆ (ತೆರೆವೊಯ್ಲಿಂದಾ ತುಂತುರ್ವನಿ ನಿಜತನುವಂ ತೀವಿ .. .. ಬೆಮರ್ವನಿಯಂ ಪೋಲೆ: **ಜಗನ್ನಾವಿ,** ೧. ೫೩)

**ತೆರೆಸುತ್ತು** – ತೆರೆಯಲ್ಲಿ ಸುತ್ತು, ತೆರೆಯ ಮರೆ (ಎಳವಾೞೆಯ ತಿರುಳೆಲೆಯ ತೆರೆಸುತ್ತಿನೊಳಂ ಎಸೆವ ಪಸುರ್ವಂದರೊಳಗೆ: **ಲೀಲಾವತಿ,** ೧೧. ೫೨ ವ)

**ತೆರ್ಕೆ** – ಪರಂಪರೆ (ಕರಿಗಳ್ ಎಱಂಕೆವೆಟ್ಟುಗಳವೋಲ್ ನಡೆತಂದುವು ವಾಜಿರಾಜಿಗಳ್ ತೆರೆಗಳ ತೆರ್ಕೆಯಂತೆ ಕವಿತಂದುವು: **ಪಂಪರಾ,** ೪. ೫೫)

**ತೆರ್ಕೆಗಡಲ್** – ಎರಡು ಸಮುದ್ರಗಳ ಸೇರುವಿಕೆ (ಉಭಯಕಟತಟದ ಸೊರ್ಕುಕದಡಿನ ತೆರ್ಕೆಗಡಲ್ಗಳ್ ಒಕ್ಕೈಸಿ ಜಗಮನಿಕ್ಕಲೆಂದು: **ಅನಂತಪು,** ೧೩. ೨೧ ವ)

**ತೆಲ್ಲಂಟಿ** – ಕಾಣಿಕೆ, ಬಳುವಳಿ (ಎನಗೆನ್ನೊಪನ ಬಂದುದರ್ಕಿದುವೆ ದಲ್ ತೆಲ್ಲಂಟಿ ನೀಂ ನಿನ್ನ ಕಂಪನುಗುಳ್ ಮಲ್ಲಿಗೆ ಚಂದ್ರ ನಿನ್ನ ಪೊಳೆಪಂ ನೀಂ ತೋಱು: **ಆದಿಪು,** ೧೨. ೪೩)

**ತೆಲ್ಲಟಿಗೆಗುಡು** – ಉಡುಗೊರೆ ನೀಡು (ಒಸೆದು ಅರ್ಜುನಂಗೆ ಮುಂ ಕಳಶಸಂಭವಂ ಮಾನ್ಯಪದವಿಯಂ ಮಾಡಿದೊಡಂ ಬೆಸುಗೆಗಿಡೆ ಪಾಟಿಗಿಡೆ ತನ್ನಸುವಂ ತೆಲ್ಲಟಿಗೆಗುಡುವ ತೆಱದೊಳ್ ಕೊಟ್ಟಂ: **ಗದಾಯು,** ೨. ೧೫)

**ತೆಲ್ಲಟಿಗೊಳ್** – ಉಡುಗೊರೆಯನ್ನು ಸ್ವೀಕರಿಸು (ಚಂಡವಿಕ್ರಮನ ಶಿರಕ್ಕೆ ತನ್ನ ಶಿರಮಂ ತೆಲ್ಲಟಿಗೊಳ್ಗುಮೆಂದು ಧೈರ್ಯವನುೞಿದು: **ಕುಸುಮಾಕಾ,** ೧೧. ೮೯)

**ತೆಲ್ಲಿಗ** – ತೈಲಿಗ, ಗಾಣಿಗ (ತೆಲ್ಲಿಗನಂ ಎಣ್ಣೆಗೆಂದು ಗಾಣಂಬಡಿಯುತ್ತಿದ್ದೊಡೆ ಇದೇಕೆಂಬುದಂ ಎಂದೊಡೆ: **ಹರಿವಂಶ,** ೧೪. ೪೯ ವ)

**ತೆಲ್ಲಿಗಗೇರಿ** – ಗಾಣಿಗರ ಕೇರಿ (ಮಂತ್ರವಾದಿಯಂ ಕಂಡ ಗ್ರಹದಂತೆ ತೆಲ್ಲಿಗರ್ ತಲ್ಲಣಿಸೆ ತೆಲ್ಲಿಗಗೇರಿಯಂ ಪೊಕ್ಕು: **ಧರ್ಮಾಮೃ,** ೨. ೧೪ ವ)

**ತೆವರ್** – ದಿಣ್ಣೆ (ಮುಗಿಲಿಂದೆಱಗುವ ಮಟೞ್ ಕದಡಿ ಬರ್ಪ ತೊಱೆ ಬೆಟ್ಟು ತೆವರ್ ಮೊಱಡು ಉಪಜಲಧಿಗಳೆನೆ ಜನಮೞಿಯೆ: **ಆದಿಪು,** ೬. ೬೨)

**ತೆವಳೆಗಾಣ್** – ಉದಾಸೀನ[ಮಾಡು] (ಸತಿ ಪುಯ್ಯಲ್ಚಿದಪಳ್ .. .. ಕೇಳ್ದಿದಂ ತೆವಳೆಗಂಡಂದು ಎನ್ನ ವಿಖ್ಯಾತಿ ದೂಷಿತಮಕ್ಕುಂ: **ಪಂಪರಾ,** ೯. ೧೪೪)

**ತೆಳುಂಪು** – ಕೃಶತೆ, ತೆಳ್ಳಗಿರುವಿಕೆ (ಬಸಿಱ ತೆಳುಂಪು ಕುಂದದದೆ ಪಯೋಧರಚೂಚುಕಯುಗ್ಮಂ ಈಕ್ಷಿಸಲ್ ಮಸುಳ್ದಿರದೆ: **ಕರ್ಣನೇಮಿ,** ೮. ೧೦೨)

**ತೆಳ್ಪು** – ತಿಳಿಯಾಗಿರುವುದು, ಪರಿಶುದ್ಧತೆ (ತಳ್ತುರ್ವಿ ಪರ್ವಿದೊಡೆ ಆ ಮುನ್ನಿನ ತೆಳ್ಪುಗೆಟ್ಟು ಕೆಸಱಾಯ್ತು ಆಕಾಶಗಂಗಾಜಲಂ: **ಪಂಪಭಾ,** ೧೦. ೨೯)

**ತೆಳ್ಪುಗೆಡು** – ಶುದ್ಧತೆ ನಾಶವಾಗು (ತಳ್ತುರ್ವಿ ಪರ್ವಿದೊಡೆ ಮುನ್ನಿನಾ ತೆಳ್ಪುಗೆಟ್ಟು ಕೆಸಱಾಯ್ತಾಕಾಶಗಂಗಾಜಲಂ: **ಪಂಪಭಾ,** ೧೦. ೨೯)

**ತೆಳ್ಪುವೆಱು** – ಪರಿಶುದ್ಧವಾಗು (ಶರೀರಂ ಅಬ್ಜಜನ್ಮನೆ ಸಮೆದ ಇಂದಕಾಂತವನಕಾಂತೆವೊಲ್ ಎಂತೆನೆ ತಟ್ಟುವೆತ್ತುದೋ: **ಶಾಂತಿಪು,** ೯. ೧೯೮)

**ತೆಳ್ವದ** – ಕಾಮದ್ರವ (ಪೊಱವಾಱೊಳುಚ್ಚಳಿಪ ತೆಳ್ವದಂ ಇರ್ವರೊಳೊಪ್ಪೆ ನೋಡಿದರ್ ತವಕಿಪ ಕಣ್ಮಲರ್ ಸುಸಿಲನೊಪ್ಪಿಸೆ ಕಾವನುಂ ಇಚ್ಚೆಗಾರ್ತಿಯುಂ: **ಕಬ್ಬಿಗಕಾ,** ೨೫೯);

**ತೆಳ್ವಸಿಱ್** – ತೆಳುವಾದ ಹೊಟ್ಟೆ (ಪೆರ್ಮೊಲೆ ತೆಳ್ವಸಿಱ್ ಕರಂ ನೆಱೆದ ನಿತಂಬ ಇಂಬುವಡೆದ ಒಳ್ದೊಡೆ: **ಪಂಪಭಾ,** ೧. ೧೦೮)

**ತೆಳ್ಳೊಱತೆ** – ಸಣ್ಣ ಚಿಲುಮೆ (ಅಂತು ಪೋಪಿನಂ ಒಂದೆಡೆಯೊಳ್ ಇಡಿದ ಮಟಲೇಱೆಗೊಂಡು ಬಳಸಿ ತಿಳಿದ ತೆಳ್ಳೊರತೆಯೊಳ್: **ಲೀಲಾವತಿ,** ೬. ೪೬ ವ)

**ತೆಱ** – ರೀತಿ (ಎಂದು ಎನಿತಾನುಂ ತೆಱದೊಳ್ ಅಳಿಪಿನ ಲಲ್ಲೆಯ ಚೆಲ್ಲದ ಪುರುಡಿನ ಮುಳಿಸಿನ ನೆವದ ಪಡೆಮಾತುಗಳಂ ನುಡಿದುಂ ಕಾಲ್ವಿಡಿದುಂ ಅಚಳಿತಧೈರ್ಯನ ಮನಮಂ ಚಲಿಯಿಸಲಾಱದೆ: **ಪಂಪಭಾ,** ೭. ೯೪ ವ)

**ತೆಱಂದಿರಿ –** ಜೋರಾಗಿ ಬೀಸು, ಹಾರು; ಗಿರಗಿರ ಸುತ್ತು (ಪೀರ್ದು ಪೀರ್ದವಚಱದೇಂ ತೆಱಂದಿರಿದು ಪಾಯ್ದುವೊ ಕೇತಕಿಯೊಳ್ ಮದಾಳಿಗಳ್: **ಆದಿಪು,** ೧೧. ೧೨೦)

**ತೆಱಂಬಿಡಿದಿರು –** ನಾನಾ ತೆರನಾಗಿ (ಇಡಿದಿರೆ ರೋಮಕೂಪದೊಳಗೆ ಉರ್ಚಿದ ಸಾಲ ಸರಲ್ಗಳುಂ ತೆಱಂಬಿಡಿದಿರೆ ಬೆಟ್ಟು ಒರ್ಗುಡಿಸಿದಂತೆ ನೆಱಲ್ದಿರೆ .. .. ಬಿಟ್ಟಂ ಏನೆಸೆದನೋ ಶರಶಯ್ಯೆಯೊಳ್ ಅಂದು ಸಿಂಧುಜಂ: **ಪಂಪಭಾ,** ೧೩, ೬೨)

**ತೆಱಂಬೊಳೆ –** ತೆರತೆರನಾಗಿ ಹೊಳೆ (ಪೊಱಪೊಣ್ಮುವ ಕಣ್ಣ ಬೆಳ್ಪುಂ ಓಪರ ಮನದೊಳ್ ತೆಱಂಬೊಳೆವ ಬಾಳೆಗಳಂತಿರೆ: **ಆದಿಪು,** ೧೧. ೪೬)

**ತೆಱಪು –** ತೆರೆಯುವಿಕೆ, ಸಮಯಾವಕಾಶ (ತೆಱಪನೆ ಪಾಯ್ದಿರ್ಪಂ ಮಾಯ್ದಱಗುಲಿ ಜವಂ ಅದಱೆನಿನಿಸು ಪೊಟ್ಟುಂ ಮಱೆದಿರಲಕ್ಕುಮೆ: **ಆದಿಪು,** ೪. ೭೬); ಜಾಗ (ತೆಱಪುವಡೆದು ಅಂಗಜಂ ಕೈಸ್ಸಱಗೊಳೆ ನೋಟಕರ ಮನಮನಾಗಳ್ ಕೊಳದಿಂ ಪೊಱಮಡೆ ಜಿಗಿಲ್ತು ಪತ್ತಿದ ಕುಱುವಡಿಗಳೆ ಮೆಱೆದುದು ಅವರ ನಾಣ್ಗಳ ತೆಱಪಂ: **ಪಂಪಭಾ,** ೫, ೬೭)

**ತೆಱಪುವಡೆ –** ಎಡೆ ಹೊಂದು, ಅವಕಾಶವನ್ನು ಪಡೆ (ತೆಱಪುವಡೆದು ಅಂಗಜಂ ಕೈಸ್ಸಱಗೊಳೆ ನೋಟಕರ ಮನಮನಾಗಳ್ ಕೊಳದಿಂ ಪೊಱಮಡೆ ಜಿಗಿಲ್ತು ಪತ್ತಿದ ಕುಱುವಡಿಗಳೆ ಮೆಱೆದುದು ಅವರ ನಾಣ್ಗಳ ತೆಱಪಂ: **ಪಂಪಭಾ,** ೫, ೬೭)

**ತೆಱವು –** ಎಡೆ (ತೆಱವಿಂ ನೀಳ್ಕಿ ಗವಾಕ್ಷಮಂ ತೆಱೆವ ನೀರಂ ಮುಕ್ಕುಳೊಳ್ ತೀವಿಕೊಂಡೆಱೆವ .. .. ಓಪರಟ್ಟಿಱಲಂಪಂಗನೆಯರ್ಗೆ ರಾಗಮನದೇಂ ಮಾಡಿತ್ತೊ ರತ್ಯಂತದೊಳ್: **ಆಚವರ್ಧ,** ೬. ೫೨); ಕಪ್ಪ (ಕರಮೊಸೆದಾ ದ್ರುಪದಜೆಯೊಳ್ ನೆರೆದೊಸಗೆ ತಮ್ಮ ಬೀರಮಂ ಬಿಂಕಮುಮಂ ತೆಱವುಂ ತೆಲ್ಲಂಟಿಯುಂ ಎಂದು ಅರಿಕೇಸರಿಗೆ ಆಗಳ್ ಈವವೊಲ್ ಬೆನ್ನಿತ್ತರ್: **ಪಂಪಭಾ,** ೩. ೭೨)

**ತೆಱು –** [ಹಣ] ಕೊಡು (ಮಧುಕರಂ ಮಧುಕರಮಂ ತೆಱಲಾರದೆ ಮಲ್ಲಿಗೆಯೊಳೆ ಸೆಱೆಗೆಯ್ದಂತಿರ್ದುದೊಂದು ಪರಿಮಳ ಫಲಮಂ: **ಅಜಿತಪು,** ೬. ೧೮)

**ತೆಱೆ –** ಬಿರಿ, ಸೀಳು (ಒಗೆದ ಸುತಶೋಕದಿಂದ ಆವಗೆಯಂತೆ ಒಳಗು ಉರಿಯೆ ಭೋಂಕನೆ ಎರ್ದೆ ತೆಱೆಯಲ್ ಹಾ ಮಗನೇ ಎಂದು ಅಶ್ರುಜಲಾರ್ದ್ರಗಂಡಂ ಆ ಗಂಡಿನೊಡನೆ ಬಿಸುಟಂ ಬಿಲ್ಲಂ: **ಪಂಪಭಾ,** ೧೨. ೨೮); ತೆಗೆ (ತೆಱೆಯದ ಮುನ್ನ ಕೆತ್ತ ಪಡಿಗಳ್ ನವಸೌರಭಮುಣ್ಮೆ ಮೊಕ್ಕಳಂ ತೆಱೆದುವು: **ಆದಿಪು,** ೨. ೬೩); ಸ್ಪಷ್ಟಗೊಳಿಸು (ಗಂಭೀರೋದಾರ ಸಾರ ಭಿನ್ನನಯಸಂತತಿ ಸಮನ್ವಿತಮನಱೆಯೆ ತೆಱೆಯೆ ನೆಱೆಯೆ ನುಡಿದು: **ಶಾಂತಿಪು,** ೩. ೮೯ ವ); ತೆರಿಗೆ (ಜನಕಜೆಗೆ ಅಗ್ನಿಸಾಕ್ಷಿಯಿಂದಾದುದು ರಾಮನೊಳ್ ಮದುವೆ ಬೆಲ್ ತೆಱೆ ತೆತ್ತು ಬರ್ದುಂಕಿ ಪುಣ್ಯದಿಂ ಪೋದ ಮಹತ್ತರಂ ಮಗುಟ್ದಂ: **ಪಂಪರಾ,** ೬. ೧೧)

**ತೆಱೆದೆಱು –** ತೆರಿಗೆಯನ್ನು ತೆರು (ಕ್ರಿಯಾಸಮಸಕ್ಕೆ: ಬಳೆದೊಟ್ಟಂ, ಕೆಳೆಗೊಂಡಂ, ತೆಱೆದೆತ್ತಂ, ಮಱೆವೊಕ್ಕಂ: **ಶಬ್ದಮದ,** ೧೭೮ ಪ್ರ ೧)

**ತೆಱೆಯೊಕ್ಕಲ್ –** ತೆರಿಗೆ ಸಲ್ಲಿಸುವ ಒಕ್ಕಲು (ಡಂಬಿಸಿ ತಿರಿತರ್ಪರ ತೆಱೆಯೊಕ್ಕಲೆನಿಪ್ಪ ಅನ್ಯರ ತೆಱದಿಂ: **ಸಮಯಪ,** ೧೨. ೪೨)

**ತೇ –** ತೇಯಿ, ತಿಕ್ಕು (ಕೆಲರಂ ಗುರ್ದಿಯುಂ ಉರ್ದಿಯುಂ ತಿರುಪಿಯುಂ ತೇದುಂ ಭುಜಾದಂಡದಿಂ: **ಗದಾಯು,** ೩. ೧೨)

**ತೇಂಕಾಡು –** ತೇಲಾಡು (ಕಣ್ಣೀರ ಪೂರದಿಂ ತೇಂಕಾಡುತ್ತುಂ .. .. ಆತ್ಮೀಯ ವೃತ್ತಾಂತಮಂ ಆತಂಗೆ ನಿವೇದಿಸುತ್ತುಮಿರ್ಪುದುಂ: **ಕಾದಂಸಂ,** ೪. ೯೬ ವ)

**ತೇಂಕು –** ತೇಲಾಡು (ಶೋಣಿತ ಧಾರಾಳಿಗಳ್ ಉರ್ಚಿ ಪೆರ್ಚಿ ಸಿಡಿಯಲ್ ತೇಂಕಲ್ ವಿಮಾನಂಗಳ್ ಅಳ್ಕಿ ತಗುಳ್ದಾಗಳೆ ಮತ್ತಮತ್ತ ತಳರ್ದರ್ ದೇವರ್ ನಭೋಭಾಗದೊಳ್: **ಪಂಪಭಾ,** ೧೧. ೭)

**ತೇಂಕುದಾಣ –** ನಾಡಿಮಿಡಿತದ ಸ್ಥಾನ (ಬೇಗನೆ ತೊಡೆದು ಹಿಮಕಣಾನೀಕಮಂ ತೇಂಕುದಾಣಂಗಳಂ ಅಂಟಂಟೆಲ್ಲಿಯುಂ ಕಾಣದೆ ಹರಣಮಂ: **ಲೀಲಾವತಿ,** ೯. ೨೧)

**ತೇಂಗು –** ನೆಲಸು (ಜವದಿಂದಾಗಸದೊಳ್ ಪಾಱುವ ಪಕ್ಕಿಯುಮಂತುಗಾಣಲಣಮಱದೆ ತೇಂಗುವುದು ಪತಾಕಾಗ್ರದೊಳ್: **ಚಂದ್ರಪ್ರಪು,** ೧೦. ೨೫)

**ತೇಗು –** [ಹಕ್ಕಿಯಂತೆ] ಎರಗು (ಸಕಳಾವನಿ ರಾಗಿಸಿ ಬೀಗೆ ಕೀರ್ತಿ ದಿಕ್ತಿಗಳ ಮೇಗೆ ತೇಗೆ ತಳೆದಂ ಭುವನಪ್ರಭು ರಾಜ್ಯಲಕ್ಷ್ಮಿಯಂ: ಪುಷ್ಪದಂಪು, ೧೩. ೨); ಉದಾನವಾಯು ಬಿಡು, ಹೊಟ್ಟೆಯೊಳಗಿನ ಗಾಳಿ ಬಾಯಿಂದ ಹೊರಬರು (ರಕ್ತಮಂ ಕುಡಿದು ಪೆರ್ಗೆಂಡಂಗಳಂ ಸೂಸುತುಂ ಗಱ್ಬೆಂದೋವದೆ ತೇಗಿಯುಂ: **ಧರ್ಮಾಮೃ,** ೬. ೧೩೩)

**ತೇಕುಣ್ಮು –** ಏದುಸಿರು ಹೊಮ್ಮು (ಕಡುಗಾಯ್ದುಗ್ರಾತಪಜ್ವಾಳೆಗೆ ಮಿಗೆ ಮುಳಿಚೇಟಿಲ್ಕೆ ಬೆಂಬೆಂದು ಬಾಯಂ ಬಿಡುತಂ ತೇಕುಣ್ಮಿ ಜಿಹ್ವಾಲತೆಯೆಟಲೆ ಜವಂಗುಂದುತುಂ ಬಂದು .. .. ಸೈರಿಭಂಗಳ್: **ಶಾಂತೀಶ್ವಪು,** ೧೨. ೩೬)

**ತೇಗು –** ತೇಗದ ಮರ (ಪಲಸು ಆಲಂ ತಡಸು ಆಸು ತೇಗು ತದುಕಿಂಚಿಲ್ ಪೊನ್ನೆ ಚೆನ್ನಂಗಿ ಬೊಬ್ಬುಲಿ ಇರ್ಬಿಡ ಅರನೇಱೆಲ್ ಇಪ್ಪೆ ಸಿರಿಸಂ ಹಾಡಂಗಿ: **ಪಾರ್ಶ್ವನಾಪು,** ೧೨. ೫೮)

**ತೇಜ –** ಕಾಂತಿ (ತೇಜಕ್ಕೆ ನ್ನೊಳ್ ಸೆಣಸುವನೀ ಜಿನಪತಿಯೆಂದು ಕಾಯ್ದು ತೆಱದಳುರ್ದಂ ನೀರೇಜಸಖಂ: **ಲೀಲಾವತಿ,** ೬. ೪೫); ಪರಾಕ್ರಮ (ಶತ್ರುಸಂತತಿ ತಲೆವಾಗೆ ಶಿಷ್ಟಜನದಾಱಿಡಿ ನಾಟ್ಟಿಡೆವೋಗೆ ತೇಜಮುದ್ದರನೆ ಕೊಂದು ಕೂಗೆ: **ಪುಷ್ಪದಂಪು,** ೧೩. ೨); ಶ್ರೇಯಸ್ಸು (ತೇಜಂ ಇಲ್ಲಾದೊಡಂ ಸೂಱಂ ಮಾಡಿದನೊಳ್ ಕಾದಲೆವೇಟ್ಟುಂ ಎಂದು ದಮಿತಾರಿ ಕೈವೀಸೆ: **ಶಾಂತಿಪು,** ೪. ೭ ವ)

**ತೇಜಿ –** ಕುದುರೆ (ಪೊಗಟ್ತೆಯಂ ತಳೆದ ತೇಜಿಯ ತಟ್ಟು ತೆರಳ್ದುದೆತ್ತಲುಂ: **ಕಬ್ಬಿಗಕಾ,** ೧೫೯)

**ತೇಜಿವಾರು –** ಕುದುರೆಗೆ ಕಟ್ಟಿರುವ ಚರ್ಮದ ಬಾರು (ಪೊನ್ನ ಪಲ್ಲಣಂ ಪಕ್ಕರೆ ತೇಜಿವಾರು ಕಟಿದಿರ್ಕಡಿಯಾದುದು ಬಾಳ ಬಾಯೊಳ್: **ಕಬ್ಬಿಗಕಾ,** ೨೧೮)

**ತೇಜೋಗುಣ –** ತೇಜಸ್ಸು (ಕ್ಷತ್ರಂ ತೇಜೋಗುಣಂ ಆ ಕ್ಷತ್ರಿಯರೊಳ್ ನೆಲಸಿ ನಿಂದುದು: **ಪಂಪಭಾ,** ೧. ೨೧)

**ತೇಜೋಗ್ನಿ** – ತೇಜಸ್ಸು ಎಂಬ ಬೆಂಕಿ (ಸೂರ್ಯತನಯಂ ತೇಜೋಗ್ನಿಯಿಂದಂ ದ್ವಿಷದ್ಬಲಮಂ ಸುಟ್ಟಂ ಉದಾತ್ತಪುಣ್ಯನವಂ ಚೈತಾಗ್ನಿಯಿಂ ಸುಟ್ಟಿನಿಲ್ಲ ಒಲವಿಂದ ಇಂದಿಂತು ಎರ್ದೆಮುಟ್ಟಿ ಕೂರ್ತನೊಳನೇ ಕರ್ಣಂಗೆ ದುರ್ಯೋಧನಂ: **ಪಂಪಭಾ,** ೧೩. ೬೦)

**ತೇಜೋವೃತ್ತಿ** – ಕಾಂತಿಯುಂಟಾಗುವಿಕೆ (ಖರಶಾಣಕಷಣದಿಂ ಮಣಿಗೆ ಉರು ತೇಜೋವೃತ್ತಿ ನೆಗಳ್ವವೊಕ್ಕುಂ ನಷ್ಠುರ ವಾಕ್ಪಾಷಾಣ ಪರಿಸ್ಫುರಿತಂ ಕೃತಿರತ್ನದೊಳ್: **ಚಂದ್ರಪ್ರಪು,** ೧. ೪೪)

**ತೇನತೇನಂ** – ಮೇಲಿಂದ ಮೇಲೆ (ಪೆಱಗಣಿಂದಡಿವಜ್ಜೆಯಂ ನೋಡಿ ತೇನತೇನದಿಂ ತಂತ್ರಮೆಲ್ಲಂ ನೆರೆದು ಬಂದು: **ವಡ್ಡಾರಾ,** ಪು ೧೬೩, ಸಾ ೧೦)

**ತೇಪೆ** – ಸೂಳೆ (ಪತ್ತದರಾರೊ ಧೂರ್ತ ವಿಟಹೃತ್ ಸಂತಾಪೆಯಂ ತೇಪೆಯಂ: **ಲೀಲಾವತಿ,** ೨. ೯೬)

**ತೇರ್** – ಬಂಡಿ, ರಥ (ಪಿಂದೆ ಕಡಂಗಿ ತೇರಂ ಎಸಗು ಎಂಬವಂ ಅಂಬಿಗಂ ಆಜಿರಂಗದೊಳ್ ಮುಂದೆ ಸಮಾನನಾಗಿ ಬೆಸದೆ ಇರ್ಪವನುಂ ತುಱುಕಾಱನಾಗೆ ಮತ್ ಸ್ಯಂದನಚೋದನಕ್ರಮಮದುಂ ಪೋಲೆಯಂಗೆ ಅಮರ್ದು ಇರ್ಕುಂ: **ಪಂಪಭಾ,** ೧೨. ೯೪)

**ತೇರಂಜಿಸು** – ಸಾಣೆಯಿಂದ ಹೊಳಪು ಕೊಡು (ಮಣಿಯಂ ತೇರಂಜಿಪಂತೆ ಒಪ್ಪಮನೆಸೆಗುಗೆ ಕೆಯ್ಕೊಂಡು .. .. ಸತ್ಕವೀಂದ್ರರ್: **ಪುಷ್ಪದಂಪು,** ೧. ೩೫)

**ತೇರಂಟೆ** – ಸಹಸ್ರಪಾದಿ, ಝುರಿ ಹುಳು (ತೇರಂಟೆಯಂತೆ ಕುಮತಕ್ಕೆ ಸೂರುಳದೆ ಒನಲಿಯಂತೆ ಪೊಲ್ಲಮೆಯಂ ಪಿಡಿಯದೆ: **ಧರ್ಮಾಮೃ,** ೪. ೨೬ ವ)

**ತೇರಜೆ** – ಒಂದು ಬಗೆಯ ಪ್ರಾಣಿ (ರೂಪಮದಮುಳ್ಳಂ ಕಟ್ಟೆಯಾಗಿಯುಂ ಅಜ್ಞಾಮದಮುಳ್ಳಂ ತೇರಜೆಯಾಗಿಯುಂ ಪುಸಿಯುಳ್ಳಂ ಕರಡಿಯಾಗಿಯುಂ .. .. ಪುಟ್ಟಿ: **ಧರ್ಮಾಮೃ,** ೧೩೨ ವ)

**ತೇರಣ** – ಗೋರಂಟಿ (ಪೇನಂತೆ ತಲೆಯಂ ಪತ್ತಿ ಪಲ್ಕಡಿವರ್ ತೇರಣದಂತೆ ತಳಮಂ ಪತ್ತಿ ಕತ್ತಿರಿಸುವರ್: **ಧರ್ಮಾಮೃ,** ೩, ೪೩ ವ)

**ತೇರಯ್** – ದಾಳಿ ಮಾಡು (ಪೂತನೀರಕ್ತಮಂ ಪೀರ್ದೆಡೆ ಆ ತೇರಯ್ವ ತೇರಂ ಪರಪಿದೆಡೆ: **ನೇಮಿನಾಪು,** ೮. ೨೩); ತವಕಪಡು (ಆಡಿಸುವ ತೋಳ್ ತೇರಯ್ವ ಬಾಯ್ ತಪ್ಪಿ ಬರ್ಪರವಾತುಣ್ಮುವ ಕಿತ್ತುಸಿರ್: **ಆಚವರ್ಧ,** ೬. ೬೧)

**ತೇರಯಿಸು** – ದಾಳಿಮಾಡು (ಅಂತು ರಕ್ಕಸವಡೆ ತನ್ನ ಪಡೆಯೆಲ್ಲಮಂ ತೆರಳ್ಚಿ ತೇರಯಿಸಿ ನುಂಗಿದೊಡೆ: **ಪಂಪಭಾ,** ೧೨. ೮ ವ)

**ತೇರಯ್ಕೆ** – ಆಸೆ (ದಾಳಿಂಬಂ ತದುದ್ಯಾನದೊಳ್ ಒದವಿಸುಗುಂ ಬಾಯ್ಗೆ ತೇರಯ್ಕೆಯುರ್ವಂ: **ಚಂದ್ರಪ್ರಪು,** ೧೧. ೫೪)

**ತೇರಯ್ಸು** – ಮುತ್ತಿಕೋ (ತುಂಬಿಗಳುಮೊಡನೊಡನೆ ತಾರಯ್ಸುತಿರೆ ಪಾಡಿ: **ಪುಷ್ಪದಂಪು,** ೨. ೪೪)

**ತೇರಸಿ** – ತ್ರಯೋದಶಿ (ಕದನಂ ಮಾರ್ಗಶಿರದ ಶುದ್ಧದಿನಂ ತೇರಸಿಯ ತಾರೆ ಭರಣಿಯೊಳ್ ಆ ಮೂಲದ ಕಡೆಯಮವಾಸೆಯ ಪರ್ವದೊಳಂ ನಿರ್ಮಲಮಾಯ್ತು ಕೌರವವಂಶಂ: **ಗದಾಯು,** ೯. ೩೭)

**ತೇರೆಸಗು** – ರಥವನ್ನು ಚೋದಿಸು (ಕ್ಷೀರಸಮುದ್ರನಿವಾಸಿ ನರನ ತೇರೆಸುಗುವಂ: **ಸಮಯಪ,** ೮. ೧೫೬)

**ತೇರೈಸು** – ತವಕಪಡು (ಅನ್ನೆಗಂ ವೃಕೋದರಂ ಚತುರ್ದಶಭುವನಂಗಳೆಲ್ಲಮಂ ತೆರಳ್ಚಿ ತೇರೈಸಿ ನುಂಗುವಂತು ಮಸಕದಿಂ ಭಗದತ್ತನಂ ಮಾರ್ಕೊಂಡು: **ಪಂಪಭಾ,** ೧೧. ೮)

**ತೇರ್ಗಳೊಡ್ಡು** – ರಥಿಕ ಸೈನ್ಯ (ಬಿಱುವರಿಯ ಬೇಗದಿಂದಂ ಕುಱುಪಿನ ಪಱಯಿಗೆಗಳೊಲೆಯೆ ಪೆರ್ಗಡೆಲೆಡೆಯೊಳ್ ನೆಱೆ ನಾವೆ ತಾಗುವಂದದೆ ತೆಱಪಿಲ್ಲದೆ ತೇರ್ಗಳೊಡ್ಡು ತಾಗಿದುದಾಗಳ್: **ಕಬ್ಬಿಗಕಾ,** ೨೧೩)

**ತೇಱ್** – ಚೇಳು (ತೇಱ ತೆಱದಿಂದಂ ತಾಂ ಜನನಿಯ ಬಸಿಱಂ ಸೀಳ್ದು ಒಗೆದಣ ಆಪ್ತನಲ್ಲೆಂತುಂ ಅಪ್ರಬುದ್ಧಂ ಬುದ್ಧಂ: **ಸಮಯಪ,** ೮. ೧೭೬)

**ತೊಂಗಲ್** – ಕುಚ್ಚು, ಗೊಂಚಲು (ದೇವಾಂಗವಸ್ತ್ರದುಳ್ಳುಡೆಯೊಳ್ ಉಲಿವ ಸೂಸಕದ ತೊಂಗಲ್ವೆರಸು ಎಱಲ್ವ ಮುಂದಣ ಸೋಗೆ ಕಾರ್ಗಾಲದ ಸೋಗೆಯಂತೆ ಸೊಗಯಿಸೆ: **ಪಂಪಭಾ,** ೨. ೪೧ ವ); ಸಮೂಹ (ಪೆಱನೊಸಲೊಳಂ ಕವಿವ ಜಡೆಯ ತೊಂಗಲಿಂ ಸಂಗಳಿಸಿ ಬೆಡಂಗನೊಳಕೊಂಡ ಗಂಡಮಂಡಲ: **ಕಾದಂಸಂ,** ೪. ೯೬ ವ)

**ತೊಂಗಲ್ಗುರುಳ್** – ಇಳಿಬಿದ್ದ ಮುಂಗುರುಳು (ನೊಸಲಂ ತೊಂಗಲ್ಗುರುಳ್ ಮೇಲುದನೊಗೆವ ಕುಚಂ ಬೆನ್ನನಾ ನೀಳಕೇಶಪ್ರಸರಂ .. .. ಪಸರಂಬೆತ್ತು: **ಆದಿಪು,** ೧೧. ೧೬)

**ತೊಂಡಲ್** – ಸಾಲು (ಅಲ್ಲಲ್ಲಿಗೆ ಪರಿಯುತಿರ್ಪ ಇಱುಂಪೆಯ ತೊಂಡಲ್: **ಧರ್ಮಾಮೃ,** ೩. ೪೪); ಮುತ್ತಿನ ಹಾರ (ಮುಡಿದ ಮಹೇಂದ್ರನ ಇಂದ್ರದಿಗ್ವಧುವ ಬಣ್ಣದ ತೊಂಡಲಂ ಇಂದುಮಂಡಲಂ: **ಲೀಲಾವತಿ,** ೨. ೫)

**ತೊಂಡಿಕೆ** – ತುಂಟತನ (ಬೆಳೆದು ನಿಚ್ಚನಿಚ್ಚಂ ತೊಂಡಿಕೆಗೆಯ್ದು ಪುಯ್ಯಲ ಮಾಡುತ್ತಿರೆ ಅವರೆನ್ನಂ ಬೇಗಮಟ್ಟಿ ಕಳೆದೊಡೆ: **ಹರಿವಂಶ,** ೫. ೩೧ ವ)

**ತೊಂಡಿಗ** – ರಣಹದ್ದು (ಚರಣಾಯುಧಂ ಶಕುನಿ ಕಂಕಂ ತೊಂಡಿಗಂ ಸೋರೆ ತಿತ್ತಿರೆ ಕೋಕಂ .. .. ರತ್ನಖಿಗಮಿರ್ಕುಂ ತದ್ವನಾಗೌಘದೊಳ್: **ರಾಜಶೇವಿ,** ೫. ೫೯)

**ತೊಂಡಿಲ್** – ಮುಡಿಯುವ ದಂಡೆ (ಮಣಿವಜ್ರಮಂಡಿತಮೊಂದಿ ತೊಂಡಿಲ್ ಆ ಸೋರ್ಮುಡಿಯಲ್ಲಿ .. .. ತತ್ಸಖಿಜನಂ ಕೂರ್ಮೆಯೊಳಿಟ್ಟು ಸಿಂಗರಿಸಿ: ರಾಜಶೇವಿ, ೮. ೩೮)

**ತೊಂಡು** – ಸ್ವೇಚ್ಛಾವೃತ್ತಿ, ತುಡುಗುತನ (ತೊಂಡಿನೊಳ್ ಉರ್ಕಿ ಕೆಟ್ಟ ದಶಕಂಠನಂ ಅಕ್ಕಟ ಕೊಂಡ ಪೆರ್ಮರುಳ್ ಕೊಂಡುದೆ ತನ್ನುಮಂ: **ಪಂಪಭಾ,** ೬. ೩೩); ಮುಖ (ಗಾಡಿಯೊಳ್ ಅನಾರತಮೊಪ್ಪುವ ತೊಂಡು ತೊಂಡಿನೊಳ್ ನೆಲ ಬಳಸಿರ್ಪ ಭಾವವು ಅಳವಟ್ಟಿರೆ ನರ್ತಕಿ ನಾಡೆ ನರ್ತಿಪಳ್: **ಧರ್ಮಪ,** ೨. ೨೪)

**ತೊಂಡುಗೆಡೆ** – ಗಿಳಿಯು ಗಳಹು (ಪಾಡುವ ತುಂಬಿ ತೊಂಡುಗೆಡೆವ ಅಗ್ಗದ ಪಂಡಿತವಕ್ಕಿ: **ಶಬರಶಂ,** ೧. ೫೨); ರಾಶಿಯಾಗು

**ತೊಂಡುವೆಣ್ಬುರುಳಿ** – ಗಳಹುವ ಹೆಣ್ಣು ಗಿಳಿ (ಪಾಡುವ ತುಂಬಿ ಕೋಡುವ ಪುಟಿಲ್ ನಡಪಾಡುವ ರಾಜಹಂಸೆ ಬಂದಾಡುವ ತೊಂಡುವೆಣ್ಬುರುಳಿ .. .. ಅನುರಾಗಮಂ ಮಾಡೆ ಮನಕ್ಕೆ: **ಪಂಪಭಾ,** ೩. ೩೭)

**ತೊಂಡುವೆಸರ್** – ಸುಳ್ಳು ಹೆಸರು, ಬಿರುದು (ಗಾವಿಲನೊರ್ವಂ ಕುಡೆ ಕೊಂಡ ತೊಂಡುವೆಸರಿಂದೇಂ ಸಲ್ವುದೇ ನಿಲ್ವುದೇ: **ಧರ್ಮಮಧು,** ೧. ೪೯)

**ತೊಂತುಳಿ** – ಸಿಕ್ಕುಸಿಕ್ಕು (ಚಲದಿಚೆದಾಂತು ಬಿಟ್ಟಿ ಭಟರಂತ್ರದ ತೊಂತುಳಿಯೊಳ್ ಸಿಲುಕಿದಗ್ಗಳದ ಪೊದಲ್ದ ಕೆಚ್ಚಲನಿಱುಂಕಿ: **ಕರ್ಣನೇಮಿ,** ೧೦. ೧೫೩)

**ತೊಂಬೆ** – ಕುಚ್ಚು, ಗೊಂಚಲು (ತಳ್ತ ಬಣ್ಣವಣ್ಣದ ಗುಡಿ ತೊಂಬೆಗೊಂಚಲ್ ಎಲೆಯಿಕ್ಕಿದ ಕಾವಣಮೆಲ್ಲಿಯುಂ ಪೊದಳ್ದೊದವಿರೆ ಕಣ್ಗೆ ಕಂಡುವು ಅಖಿಳಾವನಿಪಾಳರ ಬಿಟ್ಟ ಬೀಡುಗಳ್: **ಪಂಪಭಾ,** ೩. ೩೮)

**ತೊಗರ್** – ಚೊಗರು, ಒಗರು (ಅಣಿಲೆಗೆ ತೊಗರೆಂತು ಸಹಜಂ ಸುಂಟಿಗೆ ಕಾರಮೆಂತು ಸಹಜಂ ಸಹಜಂ ತಾನಂತೆ ಬಡತನದ ಪೀಡೆ: **ಧರ್ಮಾಮೃ,** ೪. ೨೩ ವ)

**ತೊಗಲ್** – ಚರ್ಮ (ದಂಡಕ ರಿಸಿಯರ ಮೆಯ್ಯ ತೊಗಲ್ ಪಾವಿನ ಪೆರೆ ಸುಲಿವಂತೆ ಸುಲಿದು ಪೋಗಿ: **ವಡ್ಡಾರಾ,** ಪು ೧೭೨, ಸಾ ೨); ಚರ್ಮದ ಬುದ್ದಲಿ (ಪೊಲೆಗೇವಯ್ಸರ್ ತೊಗಲಿನೊಳ್ ಅಲಸದೆ ನೀರ್ಗುಡಿಯುತಿರ್ಪರ್: **ಸಮಯಪ,** ೧೪. ೯೬)

**ತೊಟ್ಟ** – (√ತೊಡು) ತೊಡಗಿದ, ಆರಂಭವಾದ (ಈತನೊಳ್ ತೊಟ್ಟ ಕಿಂಕರಭಾವಂ ನಮಗಕ್ಕಿಗೊಟ್ಟು ಮಡಗೂಟುಣ್ಬಂದಮಂ ಪೋಲದೇ: **ಆದಿಪು,** ೧೪. ೩೨)

**ತೊಟ್ಟಗೆ** – ತಕ್ಷಣವೇ (ಒಗೆದ ಶರಸ್ತಂಬದೊಳ್ ಇರ್ಬಗಿಯಾಗಿ ಮನೋಜರಾಗರಸಂ ಉಗುತರೆ ತೊಟ್ಟಗೆ ಬಿಸುಟು ಬಿಲ್ಲಂ ಅಂಬುಮಂ ಅಗಲ್ದಂ ಆಶ್ರಮದಿಂ ಉದಿತಲಜ್ಜಾವಶಂ: **ಪಂಪಭಾ,** ೨. ೩೩)

**ತೊಟ್ಟನೆ** – ತಕ್ಷಣ (ಧಾತ್ರಿ ತಿಱ್ಱನೆ ತಿರಿವನ್ನೆಗಂ ತೆಗೆದು ಕಂಧರಸಂಧಿಯಂ ಎಯ್ದೆ ನೋಡಿ ತೊಟ್ಟನೆ ನರಂ ಎಚ್ಚೊಡೆ: **ಪಂಪಭಾ,** ೧೨. ೧೬೮)

**ತೊಟ್ಟಿಲ್** – ಮಗು ಮಲಗಲು ಬಿದಿರಿನಿಂದ ಮಾಡಿದ ತೂಗುಹಾಸಿಗೆ (ನೀನ್ ತೊಟ್ಟಿಲೊಳಿರ್ದಂತೆ ನಿನಗೆ ಸೆಟ್ಟಿವಟ್ಟಂಗಟ್ಟಿ: **ವಡ್ಡಾರಾ,** ಪು. ೪೬, ಸಾ ೨೭)

**ತೊಟ್ಟಿಲಿಗ** – ತೊಟ್ಟಿಲಲ್ಲಿ ಮಲಗುವ ಹಸುಗೂಸು (ಬಾಳಕಾಲದೊಳೆ ತೊಟ್ಟಿಲಿಗಂ ಗಜಪ್ರಿಯನಪ್ಪುದಂ ಸಲೆ ತೋಱಿದಂ: **ಪಂಪಭಾ,** ೧. ೪೩)

**ತೊಟ್ಟು** – (√ತುಡು] ಆರಂಭಿಸಿ (ಜನಿಯಿಸಿದಂದು ತೊಟ್ಟು ಅಗಲದಾತಂ ಇಂತಿರೆ ಅಗಲ್ದ ಪಾಪಕರ್ಮನಂ ಅವಿವೇಕಿಯಂ .. .. ನೆನೆದು .. .. ಬರವೇಟ್ಟುಂ: **ಕಾದಂಸಂ,** ೬. ೩೫)

**ತೊಡಂಕಿಕ್ಕು** – ಕಷ್ಟಕ್ಕೆ ಈಡುಮಾಡು (ನೀಮಾರ್ಗೆ ಎಲಗೆ ನಿಮ್ಮನಾವಱಿಯೆಂ ಎಂದೆಮ್ಮಂ ತೊಡಂಕಿಕ್ಕುವಂದಿನ ಭಿಕ್ಷಾನ್ನಮನಿಕ್ಕುವಲ್ಲಿ ಸತಿಯಂ ಬೇಡೆಂದು ಕಣ್ಗೆತ್ತುವಂದಿನ ಸೊರ್ಕು: **ಸುಕುಮಾಚ,** ೪. ೨೬)

**ತೊಡಂಕು** – ಸಿಕ್ಕಿಸು (ಪುಣ್ಯಜೀವಮಂ ಸಹಜಸುಖಾಸ್ಪದಂಬರೆಗಮುಯ್ವಿನಮಲ್ಲಿ ತೊಡಂಕಲೀಗುಮೇ: **ಆದಿಪು,** ೬. ೨೫); ಗೋಜಲು (ಕರುಳ ತೊಡಂಕಂ ಬಿಡಿಸಿ ನಡೆ ನೋಟ್ಪಿಂ ಒಳಗೆಲ್ಲ ಅಡಗಿರ್ಪುದು ಜೀವನಿರ್ಪೊಡೆ ಎಲ್ಲಿಗೆವೋದಂ: **ಯಶೋಧಚ,** ೪. ೧೯); ಜಗಳಕ್ಕೆ ತೊಡಗು (ಎಯ್ದಿ ತೊಡಂಕಿ ಸಿಂಹಳಕ್ಕಾಳ್ದನ ಬಂಟರ್ ಉರ್ವಿ ಮಿಗೆ ಕಾಳೆಗಮಂ ತೆಗೆದರ್ ಧರಾಧಿಪಾ: **ರಾಜಶೇವಿ,** ೫. ೧೨೪)

**ತೊಡಂಕುವಲೆ** – ಒಂದು ಬಗೆಯ ಬಲೆ (ಪೆರ್ವಲೆ ತೊಡಂಕುವಲೆ ಕೊಲ್ವಲೆ .. .. ಬಿಡುವಲೆಗಳೆನಿಪ್ಪುಬೆಸೆದವಾ ಬೇಂಟೆಇಗರೊಳ್: **ಶಬಶಂವಿ,** ೩. ೨೪)

**ತೊಡಂಬೆ** – ಹಣ್ಣುಹೂಗಳ ಗೊಂಚಲು (ಬಿಟ್ಟುಳಿಯ ಕುಕ್ಕಂಬಂ ತೊಡಂಬೆಯ ಮೂಡಿಗೆಯ ಕದಲಿಕೆಯ ಕಾಂಡಪಟಗಳುಮಂ: **ಪಂಪಭಾ,** ೫. ೪೭ ವ)

**ತೊಡಂಬೆಪಱಿ** – ತೊಟ್ಟು ಕಳಚು (ಬಡಿ ಕೊಳೆ ಕಾಯುಂ ಪಣ್ಣುಂ ತೊಡಂಬೆವಱಿದುದಿರ್ವ ಮಾಟ್ಕೆಯಿಂ ಕಿಱಿವಿರಿಯರ್ ಮಡಿವರ್: **ಪಂಪರಾ,** ೧. ೮೩)

**ತೊಡರ್** – ಸಿಲುಕಿಕೊ (ತೊಡರ್ದೀ ಪುತ್ರಕಳತ್ರಮೋಹದೊಳ್ ಇದೇಕಟ್ಟಿರ್ಪೆ ನಿನ್ನ ಮೆಟ್ಟಿಡಿದೇಕಾರಣಂ: **ಆದಿಪು,** ೧. ೭೯); ಸುತ್ತಿಕೊ (ಕುಡಿದೊಡೆ ಪೊಟ್ಟೆಯಿಂದೆ ಬೞಿನೀರ್ ಪೊಱಪಾಯ್ದುವೆ ಸುತ್ತಿ ಕಾಲನೇಂ ತೊಡರ್ವುವೆ ದಾಂಟುವಲ್ಲಿ ನಿಱಿ: **ಚಂದ್ರಪ್ರಪು,** ೮. ೬೦); ಬಂಧಿಸು (ತೊಡರ್–ಬಂಧನೇ: **ಶಬ್ದಮದ,** ಧಾ ೫೭೭); ತಡವರಿಸು (ತೊಡರೆ ಕೊರಳ್ ಪೊದಲ್ದು ತುದಿನಾಲಗೆಯೊಳ್.. .. ತಡಮಡಮೆಟ್ಟಿ ಪಾಡಿ ಪೊಸ ಕಳ್ಗಳನೀಂಟಿದುದಂಗನಾಜನಂ: **ಸೂಕ್ತಿಸುಧಾ,** ೧೩. ೭); ವಾದ ಮಾಡು (ವೇದಾಂತ ಸಿದ್ಧಾಂತ ಪ್ರಮಾಣಶಾಸ್ತ್ರಂಗಳನೋದಿ ತರ್ಕಿಸುವ ಪಂಡಿತರ್ಕಳೊಡನೆ ತೊಡರ್ದು ನುಡಿದು ಸದುತ್ತರಂಗುಡುತಿರ್ಪ ಶುಕಶಾರಿಕಾನಿಕಾಯಂಗಳುಮಂ: **ಪಂಚತಂತ್ರ,** ೧೯೦ ವ); ಬಂಧನ (ತೀರ್ಥಕರರ್ ನಿವ್ಯಾಕುಳಮೊಲ್ಲರ್ ಮೋಹೋದ್ರೇಕವಿಹನರ್ಕಳಲ್ಲಿ ರಾಜ್ಯದ ತೊಡರಂ: **ಕರ್ಣನೇಮಿ,** ೧೩. ೪೭); ಬಿರುದ ಬಳೆ (ತೊಡರ್– .. .. ಬಿರುದ ಶೃಂಖಲಾಯಾಂ: **ಶಬ್ದಮದ,** ಧಾ ೫೭೭)

**ತೊಡರಿಕ್ಕು** – ತೊಡರುಗಳನ್ನು ಒಡ್ಡು (ಎನಿತಾನುಂ ಉಪದ್ರವಂಗಳೊಳ್ ತೊಡರಿಕ್ಕಿಯುಂ ಗೆಲಲಾಱದೆ: **ಪಂಪಭಾ,** ೨. ೩೨ ವ)

**ತೊಡರ್ಚು** – ಸಿಲುಕಿಸು, ಮುಡಿಸು (ಬೇಡವೇಡೆನೆಯುಂ ಕಿವಿಯೊಳ್ ತೊಡರ್ಚಿ ಪೋದಳ್ ಈ ಕುಸುಮಮಂಜರಿಯಂ: **ಕಾದಂಬ,** ೫. ೫೦ ವ)

**ತೊಡರ್ಪು** – ಸಿಕ್ಕು, ತೊಡಕು (ಇದುವು ಪಿರಿದು ತೊಡರ್ಪಾದುದು ಇನ್ನೆತ್ತವೋಪೈ: **ಆದಿಪು,** ೪. ೨೧); ಬಂಧನ (ಎನ್ನ ನಿನ್ನ ಪತ್ತುಗೆಯ ತೊಡರ್ಪದಿಂದು ಪಱಿದತ್ತು ಮನಂ: **ಆದಿಪು,** ೧೨. ೩೬); ಸಂಬಂಧ (ಒಡವುಟ್ಟಿಯುಂ ಒಡವಳೆದುಂ ಕಡೆಯೊಳ್ ನೀನೆನ್ನನಿಂತು ಕಂಡುಂಬಂದಿರ್ದೊಡೆ ಉಡಿದೀ ನಮ್ಮಿರ್ವರ ತೊಡರ್ಪಿದಂ ನೀಂ ಪುನರ್ನವಂ ಮಾಡಿನ್ನುಂ: **ಶಾಂತಿಪು,** ೭. ೧೦೪)

**ತೊಡವು** – ಒಡವೆ, ಆಭರಣ (ಪೋ ಬಿಡು ಕಟಿಸೂತ್ರಮಂ ತೊಡೆಯ ಬಿಣ್ಪು ಪದಾಂಬುರುಹಕ್ಕೆ ತಿಣ್ಣಂ ಎಂತು ಉಡಿಸುವುದಕ್ಕ ನೂಪುರಮಂ ಈ ತೊಡವು ಏವುದೋ ರೂಪ ಸಾಲದೇ: **ಪಂಪಭಾ,** ೩. ೪೬)

**ತೊಡವೆಳಗು** – ಆಭರಣದ ಕಾಂತಿ (ತೊಡವೆಳಗು ಇಂದ್ರಚಾಪಲತೆ ಸೋರ್ಮುಡಿ ಕಾರ್ಮುಗಿಲ್: **ರಾಜಶೇವಿ,** ೧೩. ೯೪)

**ತೊಡಿಗೆ** – ಆಭರಣ (ಮುತ್ತಿನ ತೊಡಿಗೆಗಳಂ ತೊಟ್ಟು ದರ್ಭಶಯನದೊಳಿರ್ದು: **ಪಂಪಭಾ,** ೧. ೧೧೮ ವ)

**ತೊಡು** – ಧರಿಸು, ಹೂಡು ಪಿಂಡುಗಂಕಣಮಂ ತೊಟ್ಟ ಕೈಯಿಂದಂ ಪೊನ್ನ ಸಟ್ಟುಗಮಂ ತೀವಿ: **ವಡ್ಡಾರಾ,** ಪು. ೧೯, ಸಾ. ೭); ಆರಂಭವಾಗು (ಭವಪ್ರತ್ಯಯಜ್ಞಾನಂ ತೊಟ್ಟನೆ ಪುಟ್ಟೆ ಪೂರ್ವಭವದೊಳ್ ತೊಟ್ಟೊಂದು ವೃತ್ತಾಂತಮಮ: **ಆದಿಪು,** ೨. ೬೬)

**ತೊಡೆ** – ಸೊಂಟದಿಂದ ಮಂಡಿಯವರೆಗಿನ ಭಾಗ (ಪ್ರಸೃತಾಖ್ಯೆ ಜಂಘೆ ತೊಡೆ ಊರು: **ಅಭಿಧಾವ,** ೧. ೧೨. ೩); ಮುಖಚಂದ್ರನಂ ಚಂದ್ರಕವಳದಿಂ ತೊಡೆದು: **ಆದಿಪು,** ೪. ೪೦ ವ); ಲೇಪಿಸು (ಕುಡಿ ಮುಜಿದಿರ್ದೊಡಂ .. .. ಆಯೆಡೆಯೊಳ್ ಬಿಸಿಯಪ್ಪ ತುಪ್ಪಮಂ ತೊಡೆದು: **ಲೋಕೋಪಕಾ,** ೬. ೧೩); ಒರಸಿಹಾಕು (ಬರೆಬರೆದಂತೆ ಅದಂ ತೊಡೆದು ತೊಟ್ಟನೆ ನಿಟ್ಟಿಸಿ ಮೆಲ್ಲನೊಂದುಮಂ ಸರಸಪದಾರ್ಥಮಂ ಕಾಣದೆ: **ರಾಜಶೇವಿ,** ೧. ೨೩)

**ತೊಡೆಸಕ್ಕಿ** – ನೇರ ಸಾಕ್ಷಿ (ವಜ್ರವೇದಿಕೆಯಂ ತಾಂ ತೊಡೆಸಕ್ಕಿವೊಯ್ವವೋಲ್ ಪೊಯ್ದೊಡನೊಡನುಚ್ಚಳಿಪುವಿದಱ ತುಂಗತರಂಗಂ: **ಆದಿಪು,** ೧೨. ೧೨೪)

**ತೊಡೆಸೋಂಕು** – ತೊಡೆ ಸೋಕುವಷ್ಟು ಹತ್ತಿರ (ಅಂತೆ ಕುಳ್ಳಿರಿರಪ್ಪೊಡೆ ಇಂ ನಿಮಗಾಣೆಯೆಂದಿರವೇೞ್ದು ಇಳಾಕಾಂತನಂ ತೊಡೆಸೋಂಕಿ ಕುಳ್ಳಿರೆ: **ಪಂಪಭಾ,** ೧೨. ೮೯)

**ತೊಣೆ** – ಸಮನಾದುದು (ಕರ್ಣನ ಎಣೆಗಂ ತೊಣೆಗಂ ನೃಪರಾರುಮಿಲ್ಲ ಬೆಳ್ಕುಱೆ ರಿಪುಸೇನೆ ತೇರನೊಸೆದು ಆನೆಸಗುತ್ತಿರೆ ಕರ್ಣನಂ ಗೆಲಲ್ ನೆಱೆವರೆ: **ಪಂಪಭಾ,** ೧೨. ೧೦೦)

**ತೊತ್ತೞಿದುೞಿ** – ಗಿಜಿಗಿಜಿ ತುಳಿ (ಹೀನಬಲನಂ ಅಧಿಕಬಲಂ ತೊತ್ತೞಿದುೞಿದಂ ಎಂಬ ಲೋಕದ ಪೞಿ ಪೊರ್ದದೆ ಮಾಣೆ ಧರ್ಮಯುದ್ಧದೊಳೆಸೆಗಿಂ: **ಆದಿಪು,** ೧೪. ೧೦೨)

**ತೊದಳ್** – ಮುದ್ದುಮಾತಾಡು (ಕಿವಿಗಿಂಪಂ ತೊದಳೊಳ್ ಪೊದಳ್ದ ನುಡಿಗಳ್ ಕಣ್ಗಿಟ್ಟಱಿಂ ರಾಗದಾಡುವ ಕೂಸಾಟದ ಚೆಲ್ವುಗಳ್ ಕುಡೆ: **ಆದಿಪು,** ೭. ೧೨೯); ತಡವರಿಸು; ಸುಳ್ಳು (ಏನಭಿಮತಮವರ್ಗವರ್ಗದನೇನುಂ ತೊದಳಿಲ್ಲದಿತ್ತು ಮನ್ನಿಸಿದಂ ಸನ್ಮಾನಪುರಸ್ಸರಂ: **ಆದಿಪು,** ೧೫. ೧೨)

**ತೊದಳ್ನುಡಿ** – ಸುಳ್ಳು ಹೇಳು (ತೊದಳ್‌ನುಡಿಯದೆ ಪೋಗೆಂದೊಡೆ ಒಂದಬ್ದದೊಳೆ ಬೃಹಂದಳೆಯಾಗೆಂದು ಮುನಿದು ಶಾಪವನಿತ್ತಳ್: **ಪಂಪಭಾ,** ೮. ೨೯); ಮಕ್ಕಳ ಮಾತು (ಮುಖಸರಸಿಜದೊಳ್ ದರಹಸಿತಂ ನೆಗೞ್ವಿನಂ ತೊದಳ್ನುಡಿ ನುಡಿದ: **ಆದಿಪು,** ೮. ೩)

**ತೊದಳ್ವಾತು** – ತೊದಲು ಮಾತು (ಸೀತೆ ಕಡಂಗಿ ಕಾಯ್ದು ಕಡೆಗಣ್ಚಿದಳಪ್ಪೊಡೆ ಧಾತ್ರನಿಂ ತೊದಳ್ವಾತಿನೊಳೇನೊ ಪಾಂಡವರ ಕೈಯೊಳೆ ನಿನ್ನ ನಿಸೇಕಮಾಗದೇ: **ಪಂಪಭಾ,** ೯. ೪೯)

**ತೊನಸೆ** – ಜಿಗಟದಂತಹ ಕೀಟ (ನಿರುತಂ ಸರುಗಾಡುವ ಪಶುವಿನೊಳಲ್ಲಿರಲೇಂ ತಾನೆಂತೊ ತೊನಸೆಯೊ ನೊವುಗಳೋ: **ಸಮಯಪ,** ೯. ೬೦)

**ತೊನೆ** – ಅಲ್ಲಾಡು (ಎಱಕೆಗಳಂ ಮೆಲ್ಲನೆ ಉರ್ಚುತ್ತೆ ನಿಂದು ಒಯ್ಯನೆ ಸಾರ್ದು ಆ ತ್ರೋಟಿಯಿಂದಂ ತೊಡೆದು ಗಱಿಗಳಂ ನುಣ್ಣವಿರ್ ಬಿರ್ಚಿ ಮೆಯ್ಯಂ ತೊನೆದು ಉದ್ದಂ ನೀಡಿ ಗೋಣಂ ನವ ದಿನಮುಖದೊಳ್ ಕುಕ್ಕುಟಂ ಕೂಗಿತಾಗಳ್: **ಶಾಂತೀಶ್ವಪು,** ೧೧. ೯೬)

**ತೊನೆಪ** – ತೂಗಾಡುವಿಕೆ (ಅಂತಾಕೆಗಳ್ ತೂಗಿ ತೊನೆವ ತೊನೆಪಂಗಳುಮಂ ಮರಸರಿಗೆವಿಡಿದು ಬಿಲ್ವಿಡಿದಾಡುವ ಬೂತಾಟಂಗಳುಮಂ ನೋಡಿ ಗಂಧೇಭವಿದ್ಯಾಧರಂ ಇಂತೆಂದಂ: **ಪಂಪಭಾ,** ೪. ೯೦ ವ)

**ತೊನ್ನ** – ತೊನ್ನುರೋಗಿ (ತಾಂ ತೊನ್ನನಾಗಿ ಮುರುಂಟಿದಕೈಯುಂ ಕಾಲುಂ ಬೆರಸು: **ವಡ್ಡಾರಾ,** ಪು. ೧೨೨, ಸಾ. ೨೨)

**ತೊನ್ನುಗೊಳ್** – ತೊನ್ನು ಉಂಟಾಗು (ಕಯ್ಯೇಱದೆ ಕಾಲೇಱದೆ ಮೆಯ್ಯೆಲ್ಲಂ ತೊನ್ನುಗೊಂಡು ದುಃಖಂಬಟ್ಟು: **ಧರ್ಮಾಮೃ,** ೬. ೧೨೨)

**ತೊಮ್ಮೆವಡೆ** – ಚೆಲುವಾಗು (ರೀತಿ ನೂತನಂಬಡೆಯೆ ವಳ ವಿಳಾಸಂಬಡೆಯೆ ವಹವಣಿ ಬಹಳಂಬಡೆಯೆ ತಿರುಪು ತೊಮ್ಮೆವಡೆಯೆ ಗತಿ ಸಂಗತಿವಡೆಯೆ ಗಮಕಂ ಗಾರವಂಬಡೆಯೆ: **ಶಾಂತೀಶ್ವಪು,** ೧೬. ೬೭ ವ)

**ತೊರೆ** – ಎದೆಹಾಲು ಸುರಿಸು (ತೊರೆದ ಪಯೋಧರಂ ನವಮರಂದರಸಾಮೃತಪೂರ್ಣಕುಟ್ಮಳಂ: **ರಾಜಶೇವಿ,** ೨. ೭೩); ಸೊರೆ ಬಿಡು (ತೊರೆದುದು ಕಾಮಧೇನು ತುಱುಗಲ್ಗೊನೆವಣ್ತುದು ಕಲ್ಪವೃಕ್ಷಂ: **ಪಂಪಭಾ,** ೧೪. ೨೧)

**ತೊಲಗು** – ದೂರವಾಗು (ಅಳಿಯನಂ ಕಂಡತ್ತೆಯಂತೆ ತೊಲಗುತ್ತುಂ: **ಧರ್ಮಾಮೃ,** ೪. ೪೮ ವ)

**ತೊಲೆ** – [ತುಲಾ] ತಕ್ಕಡಿ (ತೊಲೆಯಂ ಜನರಂಜನೆಗೇಱಿ ರಾಗಮಂ ಭೂವಲಯಕ್ಕೆ ಬೀಱಿದಂ ಅದೇಂ ಪ್ರಭುಮಾಡಿದ ಮಾಯರೆ ಸಲ್ಲದೇ: **ಪಂಪರಾ,** ೭. ೧೬೬); ಸಮಾನ (ಪುಡಿ ತನಿಗೆಂಡದ ಬೂದಿಯ ಪಡಿ ನೆಲಂ ಅಟ್ಟೊಲೆಯ ತೊಲೆ ಎಲರ್ ಬಿರಯಿಯ ಬಾಯೆಡೆ: **ರಾಜಶೇವಿ,** ೫. ೩೪)

**ತೊವರ್** – ಒಗರು ರುಚಿ (ಇಂದೊವರೆನಿಸಿದ ತನಿರಸದಿಂದೊದವಿದ ನೀಲ ಪಾಟಲಚ್ಛವಿಯಿಂ ನಣ್ಪಿಂದೆಸೆವ ಅರನೇಱಿಲ ಪಣ್ಣಿದರಗಿಳಿ ಗ್ರಾಮದೊಲವನೇಂ ತೊಲಗಿಸಿತೋ: **ಪಂಪರಾ,** ೭. ೧೫೫)

**ತೊವರ್ಗಂಪು** – ಒಗರಿನಿಂದ ಕೂಡಿದ ವಾಸನೆ (ವನಜವನಂಗಳ ತೊವರ್ಗಂಪನಾಂಪ ಬಗೆ ಬಳೆಯೆ ಮೊರೆವುವಳಿಗಳ ಬಳಗಂ: **ಆದಿಪು,** ೧೨. ೫೦)

**ತೊವಲ್** – ಚಿಗುರು, ಚಿಗುರೆಲೆ (ಕೆಂದಳಿರ್ವಾಸು ಸೇಕದ ತೊಲ್ಗೆಣೆಯಾಯ್ತು ಮೃಣಾಳನಾಳವೊಂದೊಂದಡೆವೊತ್ತಿ ಪತ್ತಿದುವು: **ಪಂಪಭಾ,** ೫. ೭); ಚಿಗುರುವುದು (ಪಯೋಧರಕಾಲದೊಳ್ ಎರಡು ತಡಿಯುಮಂ ಪೊಯ್ದು ಪರಿವ ತೊಱೆಗಳುಮಂ ತೊವಲ್ತು ಸೊಗಯಿಸುವ ಅಡವಿಗಳುಮಂ: **ಪಂಪಭಾ,** ೭. ೨೫ ವ); ತೊಗಲು, ಚರ್ಮ (ಎಂದು ಬಿನ್ನಪಂಗೆಯ್ದು ಬೇಂಟೆಯಾತಂಗೆ ಮೃಗವ್ಯಾಯಾಮ ಕಾರ್ತಿಕೇಯಂ ಮೆಚ್ಚಿ ಮೆಚ್ಚುಗೊಟ್ಟು ತೊವಲನಿಕ್ಕೆಂದು ಮುಂದೆ ಪೇೞ್ದಟ್ಟಿ ನಾರಾಯಣನುಂ ತಾನುಂ .. .. ಬೇಂಟೆಗೆ ಪೊಱಮಟ್ಟು: **ಪಂಪಭಾ,** ೫. ೪೭ ವ)

**ತೊವಲಿಕ್ಕು** – ಚಿಗುರು ಬಿಡು; ಚಿಗುರಿನಿಂದ [ಎಲೆಗಳಿಂದ] ಮುಚ್ಚು (ಆಡಲಾಡಿಸಲ್ ಪಾೞಿಯಂ ನಿೞಿಸಲುಂ ಪರಿಗೊಳಲ್ ತೊವಲಿಕ್ಕಲೊಳಗಂ ಬರಲ್ ಕಾಡ ಬೇಲಿಯಂ

ಮಾರ್ಕಾಡನಱಿಯಲುಂ .. .. ಮಾಡಲ್ ಮಾಡಿಸಲ್ .. ..ನೀನೆ ಬಲ್ಲೆ: **ಪಂಪಭಾ,** ೫. ೪೧)

**ತೊವಲ್ಗೊಳ್** – ಶರಣಾಗತಿಯ ಸಂಕೇತವಾಗಿ ಚಿಗುರನ್ನು ಹಿಡಿದುಕೊ (ನಿನ್ನಂಗನೆಯರ್ ತೊವಲ್ಗೊಳೆ ಭಯಂಗೊಳೆ ಕೋಡಗಗಟ್ಟುಗಟ್ಟಿ ಚಿತ್ರಾಂಗದನುಯ್ಯೆ ನಿನ್ನನೆಡೆಮಾಡದಸುಂಗೊಳೆ ಕಾದಿ ತಂದ ವೀರಂಗೆ ಅರಿಗಂಗೆ ನೀಂ ಮಲೆದು ನಿಲ್ವುದು ಪಾಟಿ ವಲಂ ಸುಯೋಧನಾ: **ಪಂಪಭಾ,** ೯. ೫೪)

**ತೊವಲ್ವೊರಜೆ** – ಚರ್ಮದ ಹುರಿ ಕಟ್ಟವಿಕೆ (ಈ ಮೆಯ್ಯೊಳ್ ತೊವಲ್ವೊರಜೆಗಳ ಕಟ್ಟಿಂ ಪುಟ್ಟಿದ ಮೇನೆಯುಮಂ: ೧೦. ೩೦ ವ)

**ತೊವೆ** – ತೊವ್ವೆ (ಉಪಾಧ್ಯಾಯಂಗೆ ಕಟಿಮೆಯ ಕೂೞುಂ ತುಪ್ಪಮಂ ತೊವೆಯುಮಂ ಉಣಲ್ಕೊಟ್ಟು ಕುಮಾರನಂ ಓದಿಸುಗೆ ಎಂದು ಓಲೆಯಟ್ಟಿದೊಡೆ: **ವಡ್ಡಾರಾ,** ಪು ೬೫, ಸಾ ೧೫)

**ತೊಳಂಚೆ** – ತುಳಸಿ (ಬನ್ನಿಯ ಎಕ್ಕೆಯ ಉತ್ತರಣೆಯ ಬೆಲ್ಲವತ್ತದ ತೊಳಂಚೆಯ ಪತ್ರೆಯಂ ಒಂದನಿತ್ತು ಚೆಚ್ಚರಂ ಅಮರತ್ವಮಂ ಪಡೆಯಿಂ ಎಂಬರ್: **ಸಮಯಪ,** ೮. ೧೨)

**ತೊಳಕು** – ದೇಹದ ನಡುವಣ ಭಾಗ (ಅಡಿ ತೊಡೆ ಮೊರ್ಕುಟುಂ ತೆಗಲೆ ಕೈ ಕಣೆಕಾಲ್ ಕೊರಲ್ ಎಂಬಿವುಂ ಬೆರಲ್ ನಡುವುರ ಬೆಂ ಬಸಿಱ್ ತೊಳಕು ಕರ್ಚುಱ್ ಮುಯ್ವು .. .. ಎಂಬೆಡೆಯನೆ ನಟ್ಟುರ್ಚಿದುವು .. .. ಪಾರ್ಥನಂಬುಗಳ್: **ಪಂಪಭಾ,** ೧೧. ೧೩೬)

**ತೊಳಗು** – ಪ್ರಕಾಶಿಸು (ಕಾರಿರುಳ ತಿರುಳ ಬಣ್ಣ ಕೂರಿದುವೆನೆ ತೊಳಪ ದಾಡೆ ಮಿಳಿರ್ವ ಉರಿಗೇಸಂ ಪೇರೊಡಲ್ ಎಸೆದಿರೆ ಪುಟ್ಟಿದಂ ಆರುಂ ಅಗುರ್ವಿಸೆ ಮ್ಗಂ ಘಟೋತ್ಕಚನೆಂಬಂ: **ಪಂಪಭಾ,** ३. ೨೦)

**ತೊಳಪ** – ಹೊಳೆಯುವ (ತಂಬುಲಂ ತೊಳಪ ಬಾಯ್ದೆಱೆ ತುಟ್ಟುವ ರಾಗಂ ಒರ್ಮೆಯುಂ ಬಾಡದ ಬಣ್ಣಂ ಈಕೆಗೆ: **ಲೀಲಾವತಿ,** ೪. ೯೯)

**ತೊಳಪ್ಪ** – ಹೊಳೆಯುವ (ಸರಿಗೆಯೊಳ್ ಸಮೆದ ಅಕ್ಷಮಾಲಿಕೆ ಪೊನ್ನ ಮುಂಜಿ ತೊಳಪ್ಪ ಕಪ್ಪುರದ ಭಸ್ಮರಜಃ ತ್ರಿಪುಂಡ್ರಕಂ ಒಪ್ಪೆ ಪಿಂಗಜಟಾಳಿ ತಾವರೆಯ ಸೂತ್ರದೊಳಾದ ಜನ್ನವಿರಂ ದುಕೂಲದ ಕೋವಣಂ ಕರಂ ಒಡಂಬಡೆ ನೋಟಕರ್ಕಳಂ ಆ ತಪಸ್ವಿ ಮರುಳ್ಚಿದಂ: **ಪಂಪಭಾ,** ೬. ೮)

**ತೊಳೆ** – ಶುದ್ಧಮಾಡು (ಪಳುಕಿನ ಪಾಪೆಯನಮರ್ದಿಂ ತೊಳೆದಂತೆ: ಆದಿಪು, ೬. ೩೯); ಹಣ್ಣಿನ ಭಾಗ (ತೊಳೆ– ಪ್ರಕ್ಷಾಲನೇ ಫಲತೂಲಾಯಾಂ ಚ: **ಶಬ್ದಮದ, ಧಾ** ೯೫೯)

**ತೊಱವಿ** – ಬಿಡುಗಡೆ (ನೀವಲ್ಲಿಗೆ ಬಿಜಯಂಗೈದು ತತ್ಷಣಿಗೆ ತೊಱವಯಂ ಕುಡುವುದೆಂಬುದುಂ: **ಧರ್ಮಾಮೃ,** ೧೪. ೬೭ ವ)

**ತೊಱೆ** – ತ್ಯಜಿಸು (ತೊರೆ–ವಿಸರ್ಜನೇ: **ಶಬ್ದಮದ,** ಧಾತು, ೮೭೩); ನದಿ (ತನ್ನೊಳಗಣ ಪನ್ನಗನಂ ಮುಂ ನೀಂ ಪಿಡಿದು ಒಗೆಯೆ ಕಾಯಲಾಱದೆ ಪಿರಿದುಂ ಬನ್ನದ ಕರ್ಪೇಸೆದುದು ತೊಱೆಗೆ ಇನ್ನುಂ ಹರಗಳ ತಮಾಳ ನೀಳಚ್ಛವಿಯಿಂ: **ಪಂಪಭಾ,** ೫. ೫೪)

**ತೊಱೆದ** – ಸನ್ಯಾಸಿ (ಕಿಱೆಯಂ ಮುತ್ತಂ ಧನದಂ ಬಱುವಂ ತೊಱೆದಂ ಗೃಹಸ್ಥನೆನ್ನದೆ ಮುಂಬಿಟ್ಟಱಿಸಿ ಕೊಲುತಿರ್ಪ ಜವನಂ: **ಆದಿಪು,** ೪. ೭೬)

**ತೊಱೆಯೆಱೆಯ** – ನದಿಯ ಒಡೆಯ, ಸಮುದ್ರ (ಮಿಂಚುಗಳನುಡಿದು ಪಿಡಿದನೊ ಕಡುಪಿಂ ತೊಱೆಯೆಱೆಯಂ ತೆಱೆಗೈಗಳಿಂ ಅಱೆದನೆ: **ರಾಜಶೇವಿ,** ೧. ೧೦೦)

**ತೊಱೆವು** – ತೊರೆಯುವಿಕೆ (ನಿಷ್ಠುರನಿವನೆಣಬ ಮಾತು ತೊಱೆವಾದುದು ಪೆಂಪಿನ ಮಾತುಂ ಕೆಟ್ಟುದು: **ಧರ್ಮಾಮೃ,** ೧೩. ೬೭)

**ತೊಟಲ್** – ಸುತ್ತಾಡು (ಅಂತವಂ ಅನನ್ಯದೃಷ್ಟಿಯಾಗಿ ತೊಟಲುತ್ತುಂ .. .. ಕಂದಮೂಲಫಲಂಗಳನಲ್ಲದೆ ಮೆಲ್ಲೆನೆಂದು ನಿಯಮಂ ಮಾಡಿರ್ದನಂ ನೋಡಿ: **ಕಾದಂಸಂ,** ೬. ೩೩ ವ)

**ತೊಟಲಿ** – ಬೀಸುವ ಕಲ್ಲು (ಮರನಂ ಬಿಲಂ ತೊಟಲಿ ಸಮಸ್ತಂ ದೆಯ್ವಮಿಂತಿವೆಂಬರ್ ಮೂಢರ್: **ಸಮಯಪ,** ೯. ೮೧)

**ತೊಟಸು** – ಕಲಕು (ಆಟೋಪದಿಂ ಪೊಕ್ಕು ಸಾಗರಮಂ ಕೂಡೆ ತೆರಳ್ಚಿದಂ ತೊಟಸಿದಂ ತುಳ್ಕಾಡಿದಂ **ಜಗನ್ನಾವಿ,** ೭. ೧೮)

**ತೊಟಲ್ಚು** – ಸುತ್ತಿಸು (ಆಂ ಪಾರಣೆಯಂ ಮಾಡುವೆಂ ಪೆಱರಾರುಂ ನಿಱಿಸಲ್ ಸಲ್ಲೆಂದು ಪೊಟಲೊಳಗೆಲ್ಲಂ ಗೋಸನೆಯಂ ತೊಟಲ್ಚಿ: **ವಡ್ಡಾರಾ,** ಪು ೭೮, ಸಾ ೪)

**ತೊಟಲ್ತರ್** – ಸುತ್ತಾಡಿಕೊಂಡು ಬಾ (ತರುಣವೃಷಂ ಕೆಲೆದು ತೊಟಲ್ತರೆ ಕಂಡುದಱಿಂದೆ ಜೈನದೀಕ್ಷೆಗೆ ಮೆಯ್ಯಂತರುಣಜನಂಗಳೆ ತರ್ಪರ್: **ಆದಿಪು,** ೧೫. ೪೪)

**ತೊಟ್ರಾಳ್** – ತೊತ್ತನ್ನಾಗಿಸಿಕೊ (ಮದನಾಸ್ತ್ರಂ ಖರಸಾಣೆಗಾಣಿಸಿದುದು ಎಂಬಂತಾಗೆ ನಿನ್ನೊಂದು ಕಂದಿದ ಮೆಯ್ ಎನ್ನಯ ತೋಳೊಳೊಂದೆ ಸಿರಿಯಂ ನೀನುಯ್ದು ತೊಟ್ರಾಳ್ದು ರಾಗದಿಂ ಎನ್ನೊಳ್ ಸುಕಮಿರ್ಪುದು: **ಪಂಪಭಾ,** ೮. ೬೬)

**ತೊಟ್ರೆರ್** – ತೊತ್ತುಗಳು (ನಿನ್ನ ತೊಟ್ರೆರೊಳ್ ಇನಿತೇಕೆ ಭಕ್ತಜನವತ್ಸಲ ನಿರ್ದಯನಾದೆ: **ಕಾದಂಸಂ,** ೪. ೯೪)

**ತೊಟ್ಟು** – ತೊತ್ತು, ದಾಸಿ, ದಾಸ (ತಾನುಂ ದಾದಿಯುಂ ಮತ್ತಂ ಬೆಸಕೆಯ್ವ ತೊಟ್ಟುಂ ಇಂತು ಮೂವರುಂ ಅಱಿವೊರ್ ಉೞಿದು ಆರುಂ ಅಱಿಯರ್: **ವಡ್ಡಾರಾ,** ಪು ೪೪, ಸಾ ೪)

**ತೊಟ್ಟುವೆಸ** – ತೊತ್ತಿನ ಕೆಲಸ (ಪಡೆದರ್ ತಾಯುಂ ತಂದೆಯುಂ ಒಡಲಂ ಪ್ರಾಣಮುಮಂ ಅವು ಅವರವು ಕೆಯ್ಯೆಡೆಯಂ ಕುಡುವುದು ಅರಿದಾಯ್ತೆ ನೀಂ ಎನಗೆ ಎಡೆಮಡಗದೆ ಬೆಸಪ ತೊಟ್ಟುವೆಸನಂ ಬೆಸಸಿಂ: **ಪಂಪಭಾ,** ೯. ೮೧)

**ತೊಟ್ಟುಟಿ** – ತೊತ್ತಳ, ಅಜ್ಜಿಬಜ್ಜಿ, ತುಳಿದಾಟ (ಅದಟರ ಚೆನ್ನಪೊಂಗರ ಸಬಂಗಳ ತೊಟ್ಟುಟಿಯೊಳ್ ತೊಡಂಕಿ ನಿಲ್ಲದೆ ಪೊಱಮಟ್ಟ ತಮ್ಮ ಮನದೊಳ್ ಮಿಗೆ ಬೆಚ್ಚಿಸಿದಂತೆ ತೋಱುವ: **ಪಂಪಭಾ,** ೮. ೧೦೪)

**ತೊಟ್ಟುಟ್ಟಿ** – ತೊತ್ತಿಗೆ ಹುಟ್ಟಿದವನು (ನೀನುಂ ಮೆಟ್ಟುಟ್ಟು ವಿದುರನೆಂಬೀ ತೊಟ್ಟುಟ್ಟಿಯ ಮನೆಯ ಕೂೞ್ ನುಡಿಯಿಸೆ ನುಡಿದೈ: **ಪಂಪಭಾ,** ೯. ೫೮)

**ತೋಕ** – ಮಗು (ಎಲೆ ವಿದ್ಯಾಧರನಾಥ ದೇವಿ ಪಡೆದಳ್ ಭೂಭಾನುವಂ ಸೂನುವಂ ಲಲಿತಾಗಣ್ಯವರೇಣ್ಯಲಕ್ಷಣ ಮಣಿವ್ರಾತತೋಕನಂ ತೋಕನಂ: **ಶಾಂತೀಶ್ವಪು,** ೪. ೪೪)

**ತೋಂಟ** – ತೋಟ (ಕಳ್ಳಿಯಂ ನಂಬಿ ಕೌಂಗಿನ ತೋಂಟಮಂ ಕಡಿವ ತೋಂಟಿಗನುಮಂ: **ಧರ್ಮಾಮೃ,** ೮. ೩೧ ವ)

**ತೋಂಟವಳ** – ತೋಟಗಾರ (ಬಿನ್ನಪಂಗೆಯ್ದ ತೋಂಟವಳಂಗೆ ಪಸಾಯನಮನಿತ್ತು: **ರಾಜಶೇವಿ,** ೧೦. ೫ ವ)

**ತೋಂಟವೆಸಂಗೆಯ್** – ತೋಟದ ಕೆಲಸ ಮಾಡು (ಮಂದಾನಿಲಂ ತೋಂಟವೆಸಂಗೆಯ್ದಟ್ಟಿಱಿಂ ಪೆರ್ಚಿಸಿದ ವಿಚಕಿಳಂ ರಯ್ಯಮಲ್ಲಲ್ಲಿಗೆಲ್ಲಂ: **ಚಂದ್ರಪ್ರಪು,** ೧. ೮೩)

**ತೋಂಟಿ** – ಕಾಳಗ (ಪಂದೆಯ ಮಾತಿನಂತೆ ಡೊಂಬರ ತೋಂಟಿಯಂತೆ ದೂರದ ಬೆಟ್ಟದಂತೆ: **ಧರ್ಮಾಮೃ,** ೮. ೫೭ ವ)

**ತೋಂಟಿಗ** – ತೋಟಗಾರ (ಕಳ್ಳಿಯಂ ನಂಬಿ ಕೌಂಗಿನ ತೋಂಟಮಂ ಕಡಿವ ತೋಂಟಿಗನುಮಂ: **ಧರ್ಮಾಮೃ,** ೮. ೩೧ ವ)

**ತೋಟಿ** – ಜಗಳ (ಎಂತು ಅಬಳೆಗೆ ತಾಳಗೊಟ್ಟೆ ಎಂದು ಎಮ್ಮೊಳಿಂತು ತೋಟಿಗೆ ಬಂದಂ: **ಸುಕುಮಾಚ,** ೭. ೪೪); ಮುಷ್ಟಿಯುದ್ಧ (ಪೊಯ್ವ ತೊಡಂಕುವ ತೋಟಿಗೈವ ಕೂಂಕುವ ನೆಱಿ ನೂಂಕುವ ಏಳ್ಗೆಯ ಬಲಂ ಬಗೆಗೊಂಡುದು: **ರಾಜಶೇಖಿ,** ೧೩. ೮೪); ಗೋಜು, ಸಂಬಂಧ (ಆ ಪಕ್ಷಿಯ ಗೂಡಂ ಕೋಡಂ ಮುಱಿದೀಡಾಡಿತ್ತು, ಅದಱಿಂ ನಿನಗಿದಱ ತೋಟಿ ಬೇಡ: **ಪಂಚತಂತ್ರ,** ೩೪೦ ವ); ಸ್ಪರ್ಧೆ (ಗೋಸಂಬಂಧದ ತೋಟಿಯೊಳ್ ಆ ಸಾಗರನಾಥನಿತ್ತ ಶಾಪದಿಂ .. .. ಕೆಲವುಕಾಲಮಿರ್ಕುಂ: **ಜಗನ್ನಾಪಿ,** ೧. ೭೬)

**ತೋಟಿಮಾಡು** – ಜಗಳವಾಡು (ದಿವಿಜರೊಳೆ ತೋಟಿಮಾಡುವ ಪಲವಂ ಬೇಡುವ ವಿಕಳನಂ ಆಪ್ತಂ ಮಾಡಿ ಮಗುಟ್ದೆಱಲಾಗದು: **ಸಮಯಪ,** ೮. ೯೦)

**ತೋಡು** – ಅಗೆ (ತೋಡುವೆಂ ಒರ್ವನ ಒಳ್ಗರುಳಂ ಉರ್ವಿಗೆ ನೆತ್ತರನೆತ್ತಿ ಪೀರ್ದು ವಿರ್ದಾಡುವೆಂ ಒರ್ವನ ಊರುಗಳಂ ಎನ್ನ ಗದಾಶನಿಘಾತದಿಂದೆ ನುರ್ಗಾಡುವೆಂ: **ಪಂಪಭಾ,** ೯. ೨೪); ಅಗೆದ ಜಾಗ; ಹೊರಟು ಹೋಗು; ಜೋಡಿ (ಅಗಲಿರ್ದ ನೀರ್ವಕ್ಕಿಗಳಾಗಳ್ ಕೂಡಿ ತೋಡಾದುವು: **ಆದಿಪು,** ೧೨. ೯); ಜೋಡಿ (ದೇಸೆ ಕಣ್ಗಂ ಮನಕಂ ತೋಡೆನಿಸಿ ತೋಳೊಳಿದರನಾಡಿಸಿ ನೋಡುತ್ತುಂ ಇರ್ಪುದೊಂದರಸಲ್ತೇ: **ಅಜಿತಪು,** ೫. ೨೨); ಬಾಣ ಹೂಡು (ತೋಡುಡುಗದೆ ಎಸುತುಮಿರೆ ಮಾರ್ಪಡೆಯರುಂ ಅವರವಯವಂಗಳ್ ಎನಿತಱೊಳಂ ಕೂಡೆ ನಡೆ: **ಹರಿವಂಶ,** ೧೧. ೧೧೦); ಸಮಾನ (ಅವೇಂ ತೋಡಪ್ಪುವೇ ಕರತಳದೊಳಗೂಡಿದ ಸೌಭಾಗ್ಯರೇಖೆಯೊಳವಳಾ: **ಪುಷ್ಪದಂಪು,** ೩. ೪೦); ದೋಷ (ಮೂಡಿಗೆಯಿಂ ತೋಡಿಲ್ಲದ ಚಂಡಕಾಂಡಮನುಗಿದು ಗಾಂಡಿವಿ .. .. ಪೂಡಿ ನೀಡಡಿಗೊಂಡು: **ಶಬರಶಂ,** ೪. ೨೪ ವ)

**ತೋಡುಂ ಬೀಡುಂ** – [ಬಾಣ] ತೊಡುವುದೂ ಬಿಡುವುದೂ (ಕಟಿವುಂ ಉಟಿವುಂ ಕಾಪುಂ ಮೇಪುಂ ತೋಡುಂ ಬೀಡುಂ ದೆಸೆಯುಂ ಕೊಸೆಯುಂ: **ಪಂಪಭಾ,** ೫. ೪೩ ವ)

**ತೋಮರ** – ಒಂದು ಆಯುಧ, ಭರ್ಜಿ (ಕಣೆಯ ಕಂಪಣ ಮುಸಲ ಮುಸುಂಡಿ ಭಿಂಡಿವಾಳ ತೋಮರ ಮುದ್ಗರ ಮಹಾ ವಿವಿಧಾಯುಧಂಗಳೊಳಿಟ್ಟುಂ ಇಱಿದುಂ ಅಗುರ್ವು ಅದ್ಭುತಮಾಗೆ ಕಾದುವಾಗಳ್: **ಪಂಪಭಾ,** ೧೨. ೧೧೮ ವ)

**ತೋಮೆ** – ಗುಂಪು (ಪಂದಿಯ ಗೊಂದಳದಂತೆಯುಂ ಅಮ್ಮಾವಿನ ತೋಮೆಯಂತೆಯುಂ ತೋಳದ ಗೂಳೆಯಂತೆಯುಂ: **ಪುಷ್ಪದಂಪು,** ೩. ೧೨೭ ವ)

**ತೋಯ** – ನೀರು (ವಿವರಾಂತರ್ವರ್ತಿಯಾಗಿರ್ದ ಅನಿಲನೊಗೆಯೆ ಮೇಗಣ್ಗೆ ಪಕ್ಷಂಬರಂ ಪೆರ್ಚುವುದು ಆ ತೋಯಾನಿಲಂ: **ಮಲ್ಲಿನಾಪು.** ೧. ೬೨)

**ತೋಯಜಗರ್ಭ** – ಬ್ರಹ್ಮ (ತೋಯಜಗರ್ಭಂ ಆದಿಮುನಿಮುಖ್ಯಮತಪ್ರಕಟೀಕೃತಾಖಿಳ ಆಮ್ನಾಯ ಪರಂಪರಾಯತಂ ಅಶೇಷ ಜಗಜ್ಜನಕಂ.. ..ಒಲ್ದು ದೀರ್ಘಾಯುಮಂ ಈಗೆ ಶಿಷ್ಟನಿಧಿಗೆ: **ಪಂಚತಂತ್ರ,** ೩)

**ತೋಯನಿಧಾನ** – ತೋಯಧಿ (ತೋಯನಿಧಾನಫೇನ ವಿಶದೋತ್ತಮವಸ್ತ್ರಮನುಟ್ಟು ಪುಷ್ಪಮಾಲಾಯುತೆಯಾಗಿ ರಾಗದಿನುಪೇಶ್ವರನೊಳ್ ನೆರೆವಟ್ಟಱಿಂ: **ಪಂಚತಂತ್ರ,** ೧೨೯)

**ತೋಯಭೃತ್** – ಮೋಡ (ಅಪೂರ್ವ ತೋಯಭೃತ್ ವಿಸರದೆ ವಾಃಕಣಂಗಳುಗುತಂದಪುವೆಂದೆಪೊಡರ್ಪುಗೆಯ್ದು: **ಚಂದ್ರಪ್ರಪು,** ೯. ೭೬)

**ತೋಯಾಕರ** – ನೀರಿನ ಆವಾಸ, ಕೊಳ ಸ್ವಚ್ಛಸಂಪನ್ನ ತೋಯಾಕರದೊಳ್ .. .. ಸೌಂದರಕೇಳೀಹಂಸನಾದಂ; **ಆದಿಪು,** ೧೬. ೭೫)

**ತೋಯಾಶಯ** – ಜಲಾಶಯ, ಸರೋವರ (ನೂತನ ಲಾವಣ್ಯಚ್ಛತೋಯಾಶಯದೊಳೆ ಮೆಱೆಯಲ್ ನರ್ತನಕ್ರೀಡೆಯಂ ನಚ್ಚಿನ ಭಾವರತ್ನರತ್ಯುತ್ಸವದೊಳೆ ಪಡೆಯಲ್: **ಆದಿಪು,** ೧. ೮೩)

**ತೋಯೋದ್ದೇಶ** – ತೋಯಾಶಯ (ಮೇಣೆಲ್ಲಿ ದಿಙ್ನಾಗರಾಜಿಗೆ ಮೆಯ್ಗರ್ಚಿಕೊಳಲ್ಕಱಂ ಸಮೆದ ತೋಯೋದ್ದೇಶಮೋ: **ಗದಾಯು,** ೬. ೧೧)

**ತೋರ** – ದಪ್ಪನಾದ (ಪಲವು ನಿಡಿಯವುಂ ತೋರಮುಂ ಅಪ್ಪ ಕರ್ಬೊನ್ನ ಕೀಲ್ಗಳಂ ಕೊಂಡು ಬಂದು: **ವಡ್ಡಾರಾ,** ಪು ೫೧, ಸಾ ೨೬)

**ತೋರಗಾವು** – ದಪ್ಪ ಕಾವು, ದಂಟು (ತಾವರೆಯ ತೋರಗಾವುಗಳ ಗಟುಗಳೊಳಂ ಉತ್ಪಲನಾಳ ಪುಂಜದ ಪಂಜರದೊಳಂ: **ಲೀಲಾವತಿ,** ೧೧. ೫೨ ವ)

**ತೋರಣ** – ಹೆಬ್ಬಾಗಿಲು (ಸಪ್ತಕಕ್ಷ್ಯಾಂತರಂಗಳಂ ಕಾಂಚನಮಯ ತೋರಣಂಗಳಂ ನುಸುಳ್ದು: **ಕಾದಂಬ,** ೬. ೧೭ ವ)

**ತೋರಮಲ್ಲಿಗೆ** – ದುಂಡು ಮಲ್ಲಿಗೆ (ಉಳ್ಳಲರ್ದ ಚೆಲ್ವಿಂಗೆ ಮುಡಿಗವಿದಂತೆ ತೋಱುವ ತೋರಮಲ್ಲಿಗೆಯ ಮುಡಿಯುಮೆಸೆಯೆ: **ಆದಿಪು,** ೪. ೪೧ ವ)

**ತೋರವನಿ** – ದಪದಪ ಹನಿ (ಎಳವಿಸಿಲೊಳ್ ಬೆಳ್ಸರಿ ತೋರವನಿಯ ಪುದುವಿನೊಳರಲ್ದ ತಿಳಿಗೊಳನೆ ನಭದೊಳಿಟಿದಂತಿರ್ಕು: **ಆದಿಪು,** ೧೧. ೮)

**ತೋರಿದುವು** – ದಪ್ಪನಾದುವು (ಪಾದರಿ ಪೂತುವು ತೋರಿದುವಾದುವು ಮಲ್ಲಿಗೆಗಳೆಯ್ದೆ ಪಣ್ತುವು ಮಾವು: **ಆದಿಪು,** ೧೧. ೮೭)

**ತೋರಹತ್ತ** – ದೊಡ್ಡ ಸೊಂಡಿಲು (ತಲ್ಲಣದಿಂ ಪೆಱದೆಗೆವ ಬಿದಿವೆಡಂಗನೆಂಬ ಬಿಂಜಮಾಣಿಕನೆಂಬ ಹರಿರಾಯನೆಂಬ ತೋರಹತ್ತನೆಂಬ ಚೌವಟಮಲ್ಲನೆಂಬ ಮುಱಿವ ರಕ್ಕಸನೆಂಬ ರಾಯದಟಸೂಱೆಕಾರನೆಂಬ ತನ್ನೊಡ್ಡಿನ ಪೇರಾನೆಗಳಂ ಕಂಡು: **ಕಬ್ಬಿಗಕಾ,** ೨೨೩ ವ)

**ತೋರಟಿಕೆ** – ಹೆಚ್ಚಿನ ಖ್ಯಾತಿ (ಗಂಡರ್ ಜಾಱೆ ಕೈಕೊಳ್ಳದಗ್ಗದ ಬೀರರ್ ತೆಗೆದೋಡೆ ತೋರ್ಕೃಷಿಕೆಯಾಳ್ಗಳ್ ಬಳ್ಕಿ ಬೆಂಬೀಟಿ: **ಕಬ್ಬಿಗಕಾ,** ೨೩೮)

**ತೋರಿತ್ತು** – ದೊಡ್ಡದು (ತುಕಾರಾಂತಕ್ಕೆ: ಬಟ್ಟಿತು–ಬಟ್ಟಿತ್ತು; ತೋರಿತು–ತೋರಿತ್ತು .. .. ಎಂಬಂತೆ ದ್ವಿತ್ವಮಂ ಒರ್ಮೆ ಪತ್ತಿಸಿಕೊಳ್ವುದು: **ಶಬ್ದಮದ,** ೮೭ ಪ್ರ)

**ತೋರಿದು** – ದೊಡ್ಡದು (ಪಾದರಿ ಪೂತುವು ತೋರಿದವಾದುವು ಮಲ್ಲಿಗೆಗಳ್ ಎಯ್ದೆ ಪಣ್ತುವು ಮಾವುಗಳ್: **ಆದಿಪು,** ೧೧. ೮೭)

**ತೋರ್ಕೆ** – ತೋರಿಕೆ, ಆಕಾರ (ಕುದುರೆಯ ಬಣ್ಣದಿಂ ರಥದ ತೋರ್ಕೆಯಿಂ ಎತ್ತಿದ ಚಿತ್ರಕೇತುವೃಂದದ ಕುಱುಪಿಂದ ಉದಗ್ರ ರಥಚೋದಕಚಿಹ್ನದಿಂ ಈತನೆಂಬುದಂ ಅಱಿದು: **ಪಂಪಭಾ,** ೧೦. ೮೭)

**ತೋರ್ಕೆಗೊಡು** – ಒಪ್ಪಿಸಿಕೊಡು, ಕಾಣಿಕೆ ನೀಡು (ನಿನಗೆನ್ನಂ ಬಿಡದೆ ಬೆಮರೆ ಕಯ್ನೀರಾಗಿರಲ್ ತೋರ್ಕೆಗೊಟ್ಟಂ ಅನಂಗಂ: **ಕಾದಂಸಂ,** ೫. ೩೦)

**ತೋರ್ಪು** – ಕಾಣ್ಕೆ, ತೋರ್ಕೆ (ತೋರ್ಪನೆ ಕಾಣ್ಕೆ: **ರನ್ನ ನಿಘಂಟು,** ೧೨)

**ತೋರ್ಪುಗೆಡು** –ಕುಗ್ಗು (ತನ್ನ ಪಕ್ಷಂ ಸತ್ತೊಡಂ ಮಾತು ಸಾಯದೆ ತೋರ್ಪಗೆಟ್ಟೊಡಂ ಕೂರ್ಪುಗಿಡದೆ ತೇಜಂ: **ಶಾಂತಿಪು,** ೮. ೧೨೭)

**ತೋಲ್** – ತೊವಲು, ಚರ್ಮ (ತೋಲ್ವಂಜರದ ಪಡಕೆಯೊಳ್ ನಿಲ್ವ ದುರ್ವಾರದುಃಖೋತ್ಕರಂ: **ಕಾದಂಸಂ,** ೮. ೩೯)

**ತೋಲ್ಗಟ್ಟು** – ಮುಂಗೈಗೆ ಚರ್ಮ ಕಟ್ಟಿಕೊ (ಹಾರಾದ್ಯಾಭರಣಂಗಳನೊಲ್ಲದೆ ತೋಲ್ಗಟ್ಟಿ ಪಂಚಮಹಾಶಬ್ದಮನೊಲ್ಲದೆ ಬೇಂಟೆಪಱೆಯಂ ಪೊಯ್ಸಿ: **ಧರ್ಮಾಮೃ,** ೭. ೩೭ ವ)

**ತೋಲ್ವನೆ** – ಧರ್ಮ ತುಂಬಿದ ಮನೆ (ಫಣಿಹಿಂಸಮಿಲ್ಲದಲ್ಲಿ ತೋಲ್ವನೆ ಪೊಲಸಿಲ್ಲದಲ್ಲಿ ಶಬರಂ ಸುಖಮಿರ್ಪಂ: **ನೇಮಿನಾಪು,** ೩. ೭೭)

**ತೋಲ್ವಾವಲ್** – ತೊಗಲು ಬಾವಲಿ (ನೇಲ್ವ ತೋಲ್ವಾವಲೊ ಮತ್ತವಾರಣದ ಸೊಂಡಲೊ .. .. ಅತಿಭೀತಿಯಾದಪುದು ಸೂಳೆಯ ಸೋರ್ಮೊಲೆಗಂಡು ಭೂಪತೀ: **ಲೀಲಾವತಿ,** ೨. ೧೦೮)

**ತೋಲ್ವುಲ್ಲೆ** – ತೊಗಲಿನಿಂದ ಮಾಡಿದ ಜಿಂಕೆ (ನೆರೆದಿಸುತಿರೆ ತೋಲ್ವುಲ್ಲೆಯಂ ಇರದೆ ಅದು ಬಿಟ್ಟೋಡೆ ಪುರಾಣಕೂಪದೊಳ್ ಅದಂ ಇನ್ನು ಅರಿದು ತೆಗೆವಂದಂ ಎಂದವರಿರೆ ಬಳಸಿಯುಮಲ್ಲಿ ಕಂಡು ನಕ್ಕಂ ದ್ರೋಣಂ: **ಪಂಪಭಾ,** ೨. ೫೧)

**ತೋಳ್** – ಬಾಹು (ದೋಷಮುಳ್ಳೊಡೆ ತನ್ನ ತೋಳನಾದೊಡಂ ಕಡಿದುಬಿಡುವುದು: **ಪಂಚತಂತ್ರ,** ೧೬೬ ಶ್ಲೋಕ ೫೬ ಟೀಕೆ)

**ತೋಳಬಂದಿ** – ಒಂದು ಆಭರಣ, ಬಾಹುಪೂರ (ಇಕ್ಕಿದ ರನ್ನದೋಲೆ ಪೊಸಮುತ್ತಿನ ಮೂಗುತಿ ತೋಳಬಂದಿ ನೀಳ್ದೆಕ್ಕಸರಂ .. .. ಇಂಚರಮೀವ ನೇವುರಂ ಚೊಕ್ಕಳವಪ್ಪ ಚೆಲ್ವನೊಳಕೊಂಡಿರೆ: **ಕಬ್ಬಿಗಕಾ,** ೨೬೫)

**ತೋಳೆ** – ತೊಗಲ ಬಾವಲಿ (ಬಾಣ ಸಂಕುಲಂ ಕವಿದುವು ತೋಳೆವಿಂಡು ಕವಿವಂತೆಲೆಯಿಕ್ಕಿದ ಕಾನನಂಗಳಂ: **ಪಂಪರಾ,** ೧೩. ೪೩)

**ತೋಳ್ದುಱುಗಲ್** – ತೋಳುಗಳ ಸಮೂಹ (ತ್ರಿದಶಗಣಾಧಿನಾಯಕನ ಪರ್ವಿದ ತೋಳ್ದುಱುಗಲೊಳ್ ಪಳಂಚದೆ ಗಗನಂಬರಂ ನೆಗೆದು ಸೂಸುವ ಬಾಹುಪರಿಭ್ರಮಂಗಳೊಳ್: **ಆದಿಪು,** ೭. ೧೨೫)

**ತೋಳ್ವಲ** – ಬಾಹುಬಲ (ನಿಜೇಶನ ನಚ್ಚು ಮಿಕ್ಕ ತೋರ್ಬಲದ ಪೊಡರ್ಪು: **ಪಂಪಭಾ,** ೧೨. ೨೩)

**ತೋಳ್ವಲೆ** – [ತೋಳ್+ಬಲೆ] ತೋಳ ಸೆರೆ, ಹಿಡಿತ (ಕಾಮಿನೀಜಗದ ತೋಳ್ವಲೆಯೊಳ್ ತೊರಲ್ಕೆ ತಕ್ಕುದೇ: **ಪಂಪರಾ,** ೧೪. ೨೦೦)

**ತೋಳ್ವಳೆ** – [ತೊಳ್+ಬಳೆ] ತೋಳಬಂದಿ (ಮಣೀಮೇಖಳೆ ಮಕರಕುಂಡಳಂ ತೋಳ್ವಳೆಯೆಂಬಿವನವರ್ಗೆ ಭೂಷಣಾಂಗಂ ಕುಡುಗುಂ: **ಶಾಂತಿಪು,** ೭. ೧೧೦)

**ತೋಳ್ವಾಸ** – ಹಿಡಿತ, ಅಪ್ಪುಗೆ (ಅವನಂ ತೋಳ್ವಾಸದೊಳ್ ಕಟ್ಟಿ ತೂಗಲೊಡಂ ಪೇಟ್ ಮೊಲೆವೊತ್ತೆನೇ ಅವನ ವೇಷಂಬೊತ್ತೆನನಬ್ಜಾನನೇ: **ಲೀಲಾವತಿ,** ೧೧. ೮೦)

**ತೋಳ್ವಿಸುಗೆ** – ತೋಳ ಬೆಸುಗೆ, ಅಪ್ಪುಗೆ (ವೀರಾಂಗನೆ ಕಡೆ ತೋಳಿಸುಂಗೆಯೊಳ್ ನೇರ್ಪಟ್ಟು ನಿಲ್ವನ್ನಳೇ: **ಪಂಪರಾ,** ೧೨. ೬೦)

**ತೋಳ್ವೆಱಗು** – [ತೋಳ್+ಪೆಱಗು] ತೋಳ ಹಿಂಭಾಗ (ಪ್ರಣಯಕಲಹ ಕೇಳಿಯಿಂ ವಿಜಯಶ್ರೀಯಂ ಜನಿಸುವಂತೆ ತೋಟ್ವೆಱಗನಪ್ಪುಕೆಯ್ದು: **ಪಂಪರಾ,** ೩. ೯ ವ)

**ತೋಱಗೆ** – ತೋರಿಸು (ಲೀಲಾವತೀ ನಿನ್ನ ಕಾಲ್ವಿಡಿವೆಂ ತೋಱಗೆ ಮುಗ್ಧೆ ಮುದ್ದುಮೊಗಮಂ: **ಲೀಲಾವತಿ,** ೧೪. ೫೮)

**ತೋಱೆ ಬಿಡು** – ಕಾಳಗಕ್ಕೆ ಬಿಡು, ಛೂ ಬಿಡು (ಅಱಮಗನಿರ್ಕೆ ಅರ್ಜುನನಿರ್ಕೆ ಅಱೆಕೆಯ ಮಾದ್ರೀಸುತರ್ಕಳಿರ್ಕೆ ಅಱೆವೆಗೆಯಂ ಪಱೆಪಡಿಸಲ್ಕೆ ಹಲಾಯುಧನೆಱೆದಿರ್ದಪಂ ಎನಗೆ ತೋಱೆ ಬಿಡು ಕೌರವನಂ: **ಗದಾಯು** ಪರಿಷತ್ತು, ೭. ೬೨)

**ತೋಱು** – ಕಾಣು (ತೋಱು–ದರ್ಶನೇ: **ಶಬ್ದಮದ, ಧಾ** ೮೭೪); ಕಾಣಿಸು (ತಮ್ಮ ದೈವತ್ವಮಂ ತೋಱಲ್ವೇಡಿ ಆಕಾಶಮೆಲ್ಲಂ ಚಿತ್ರಪಟಂಗೆದಱೆದಂತೆವಿಮಾನಂಗಳಿಂ ಸಂಛನ್ನಮಾಗಿ: **ವಡ್ಡಾರಾ,** ಪು. ೧೪೦, ಸಾ. ೨೫)

**ತೋಱೆಕುಡು** – ತೋರಿಸಿ ಕೊಡು (ತೊಡೆಯಂ ಪೊಯ್ದಾರ್ವ ನೆವದೆ ನೆಱನೀತಂಗೀಯೆಡೆಯೆಂದು ತೋಱೆಕುಡೆ: **ಗದಾಯು,** ೮. ೩೫)

**ತೋಱುಂಬೊಣೆ** – ತೋರಿಸುವ ಹೊಣೆ, ಜಾಮೀನು (ಬಕಾರಕ್ಕೆ: ಪೆರ್ಬುಂಬುರುಳ್ ತೋಱುಂಬೊಣೆ, ಪಾಱುಂಬಳೇ: **ಶಬ್ದಮದ,** ೧೮೧ ಪ್ರ ೪)

**ತೌಗೆ** – ಮುಕ್ತಾಯ, ಅಂತ್ಯ (ಅದೊಂದು ತಂದ್ರತೆ ಚಿತ್ತಮಂ ಬಳಸಿದುದು ಪೇಱಾವೊಂಗೇನಾಗದಾಯುವ ತೌಗೆಯೊಳ್: **ಚಂದ್ರಪ್ರಪು,** ೪. ೭೮)

**ತೌಡು** – ಧಾನ್ಯದ ಹೊಟ್ಟು (ಶಿವಸುಖಮನಱೆಯದೀ ಮಾನವಸುಖದ ನಿಮಿತ್ತದಿಂ ತಪಂಗೆಯ್ವವರ್ ಮಾಣಿಕಮಂ ತೌಡಿಂಗೆ ಅವಯವದೆ ಮಾಱುಗುಡುವ ಮರುಳಂ ಪೋಲ್ಗಂ: **ಶಾಂತಿಪು,** ೧೧. ೯೨)

**ತೌತರ್** – ನಾಶವಾಗು, ತವುತರ್ (ವಿಳಯೋಗ್ರಾಂತಕನಂತೆ ಮುಂತಣಬಲಂ ತೌತಂದುದಂ ಕಂಡು: **ಕರ್ಣನೇಮಿ,** ೧೨. ೮)

**ತೌದಲೆ** – ಕೊನೆಗಾಲ (ಮೂದಲಿಪ ವೀರನಂ ತೌದಲೆಗಾಣಿಪ ಮಾಯದ ವೀರನಂ ನೋಯಲಿಱಿದು ಕೆಡಪುವ: **ರಾಜಶೇವಿ,** ೬. ೧೧ ವ)

**ತ್ಥಾಮ** – ಕೆನೆತ (ದಿವಿಜ ಅಶ್ವ ತ್ಥಾಮದೊಳ್ ಈ ಭುವನಂಗಳ್ ನಡುಗೆ ಶಿಶು ನಕ್ಕು ಸರಂಗೆಯ್ದೊಡೆ ಕುಂಭಸಂಭವಂ ಇವಂ ಅಶ್ವತ್ಥಾಮನೆಂದು ಪೆಸರಿಡೆ ನೆಗಟ್ದಂ: **ಪಂಪಭಾ,** ೨. ೪೪)

**ತ್ಯಾಗ** – ಬಿಡುವುದು (ಶೌಚ ಸಂಯಮ ತಪಸ್ ತ್ಯಾಗ ಆಕಿಂಚನ್ಯ ಬ್ರಹ್ಮಚರ್ಯ ಆಪ್ತ ದಶಧರ್ಮಂಗಳಂ ಕೈಕೊಂಡು: **ಆದಿಪು,** ೬. ೩೦ ವ)

**ತ್ಯಾಜ್ಯ** – ಬಿಡಲು ತಕ್ಕನಾದ (ಅಜೀರ್ಣಭಯದಿಂ ಪ್ರಾಜ್ಯಾಜ್ಯಮೇಂ ತ್ಯಾಜ್ಯಮೇ: **ಚಂದ್ರಪ್ರಪು,** ೧. ೪೫)

**ತ್ರಪು** – ಸೀಸ ಎಂಬ ಲೋಹ (ವಿಚಿತ್ರ ತ್ರಪುಮಯಪತ್ರ ಖಚಿತೋಚ್ಚಂಡಾತಾಳಚಾಪದಂಡಮಂ: **ಆದಿಪು,** ೧೩. ೪೫ ವ)

**ತ್ರಯಸ್ತ್ರಿಂಶತ್** – ಮೂವತ್ತಮೂರು (ಜಯಂತೀ ವಿಮಾನದೊಳ್ ಅಹಮಿಂದ್ರನಾಗಿ ತ್ರಯಸ್ತ್ರಿಂಶತ್ ಸಾಗರೋಪಮ ಆಯುಷ್ಯನುಂ .. .. ಸುಖಮನಾಸ್ವಾದಿಸುತ್ತುಮಿರ್ದಂ: **ನೇಮಿನಾಪು,** ೪. ೬೫ ವ)

**ತ್ರಯಿ** – ಋಕ್, ಯಜುಸ್ ಮತ್ತು ಸಾಮ ಎಂಬ ಮೂರು ವೇದಗಳು (ಸಾಮರ್ಗ್ಯಜುಸ್ತ್ರಯಂ ತ್ರಯಿ ಎನಿಕುಂ: **ಅಭಿಧಾವ,** ೧. ೧. ೧೨)

**ತ್ರಯೀಮಯ** – ಮೂರು ವೇದಗಳ ಸ್ವರೂಪನಾದವನು, ಸೂರ್ಯ (ತ್ರಯೀಮಯನುಂ ನಿತ್ಯೋದಯನುಮಪ್ಪ ಗಭಸ್ತಿಮಾಲಿಗೆ ಅರ್ಘ್ಯಮನೆತ್ತಿದ ಹಸ್ತಕಮಲದೊಳ್: **ಪಂಚತಂತ್ರ,** ೩೫೭ ವ)

**ತ್ರಯೀವಧು** – ವೇದಾಧಿದೇವತೆ (ನಿರ್ಮೂಲಿಸಲ್ ಧರ್ಮಮಂ ಪಿರಿದುಂ ಶೋಕದೊಳ್ ಆ ತ್ರಯೀವಧು ವನಂಬೊಕ್ಕಿರ್ದಳೋ: **ಕಾದಂಬ,** ೪. ೪೦)

**ತ್ರಸ** – ಚಲಿಸುವ; [ಜೈನ] ಈ ಹೆಸರಿನ ಕರ್ಮದ ಉದಯದಿಂದ ಎರಡರಿಂದ ಐದು ಇಂದ್ರಿಯಗಳನ್ನು ಪಡೆದ ಜೀವ (ಆ ಸಂಸಾರಿಯುಂ ಸ್ಥಾವರ ತ್ರಸ ವಿಕಲ್ಪದಿಂ ದ್ವಿವಿಧಮಕ್ಕುಂ: **ಸುಕುಮಾಚ,** ೮. ೬ ವ)

**ತ್ರಸಕಾಯ** – [ಜೈನ] ಚಲಿಸುವ ದೇಹವುಳ್ಳ ದ್ವೀಂದ್ರಿಯ, ತ್ರೀಂದ್ರಿಯ, ಚತುರಿಂದ್ರಿಯ ಮತ್ತು ಪಂಚೇಂದ್ರಿಯ ಪ್ರಾಣಿಗಳು (ಅಲ್ಲಿಯುಂ ತ್ರಸನಾಮ ಕರ್ಮೋದಯವಶಂಗಳ್ ತ್ರಸಕಾಯಂಗಳ್: **ಆದಿಪು,** ೧೦. ೬೧ ವ)

**ತ್ರಸನಾಮ** – ಹದಿಮೂರು ಪ್ರಕೃತಿಗಳಲ್ಲಿ ಒಂದು; ತ್ರಸಜೀವವನ್ನು ಪಡೆಯುವಂತೆ ಮಾಡುವ ಕರ್ಮ (ಅಲ್ಲಿಯುಂ ತ್ರಸನಾಮ ಕರ್ಮೋದಯವಶಂಗಳ್ ತ್ರಸಕಾಯಂಗಳ್: **ಆದಿಪು,** ೧೦. ೬೧ ವ)

**ತ್ರಸ್ತ** – ಭಯಗೊಂಡ (ಭವದೀಯ ಬಳವಿಜೃಂಭಿತರವದಿಂ ತ್ರಸ್ತನೆಂ ಅಧೀಶ ಬಂದೆಂ ಕಾಣಲ್ ಭವದಂಘ್ರಿಸರೋಜಮಂ: **ಆದಿಪು,** ೧೩. ೨೮); [ಜೈನ] ಒಂದು ನರಕ

**ತ್ರಸ್ತರಿಯಾಡು** – ಮೂದಲಿಸು (ಸುರಭೂರುಹಮುಮಂ ಅಗ್ಗದ ಸುರಭಿಯುಮಂ ಚಾಗಗುಣದೊಳ್ ಎಮ್ಮರಸಂ ತ್ರಸ್ತರಿಯಾಡುವಂ: **ಧರ್ಮಾಮೃ,** ೪. ೧೨೯)

**ತ್ರಸ್ತಾಭಿಭೂತ** – ಹೆದರಿದವನು (ಕಳ್ಳರೆಂದು ಪುಯ್ಯಲಿಟ್ಟಾಗಳ್ ಅನಿಬರುಂ ತ್ರಸ್ತಾಭಿಭೂತರಾಗಿ ಪಟ್ಟನೆ ಪಾಱಿಯೋಡಿ: **ವಡ್ಡಾರಾ,** ಪು. ೧೮, ಸಾ. ೨೫

**ತ್ರಾಣ** – ಶಕ್ತಿ (ಪರಮದೈವಂ ತನ್ಮತಂ ಜೀವರಾಶಿ ತ್ರಾಣಾಗಮಮೆಂದು ನಂಬುವಱಿವಿಂದಾಚಾರ್ಯರಿರ್ಪಂತು: **ಅನಂತಪು,** ೧. ೭); ರಕ್ಷಣೆ (ಪರಿಜನಪ್ರಾಣ ತ್ರಾಣಾಕುಲಮತಿಯಪ್ಪೆನ್ನ ಬಿನ್ನಪಮಂ ದೇವರವಧಾರಿಸಿ ಪ್ರಸಾದಂಗೆಯ್ವುದು: **ಕಾದಂಸಂ,** ೬. ೧೯ ವ)

**ತ್ರಾಯಿಗ** – ರಕ್ಷಕ (ಭವ್ಯಜನ ತ್ರಾಯಿಗಂ ಅಮರೇಂದ್ರ ಸ್ತವನೀಯಂಗಳ್ ದೇವ ನಿನ್ನ ಚರಣಯುಗಂಗಳ್: **ವರ್ಧಮಾಪು,** ೮. ೪)

**ತ್ರಾಸಂಗೊಳ್** – ಭಯಗೊಳ್ಳು (ವಸುಧಾತಳಪತಿಗಿತ್ತಂ ತ್ರಾಸಂಗೊಳುತುಂ ಸರ್ವಸ್ವಮಂ ಪ್ರಭಾಸಾಮರನುಂ: **ಆದಿಪು,** ೧೩. ೪)

**ತ್ರಾಸು** – ತಕ್ಕಡಿ, ಅದರ ಹಲ್ಲೆ (ಲೇಸು ಬಹಿರಂಗಮಿಲ್ಲದೊಡಾಸೆಯದೇನಂತರಂಗಮುಂ ತನಗಿನಿಸುಂ ಲೇಸಾಗಲಱಿಯದೆಂತೆನೆ ತ್ರಾಸಿನ ಕೊಡಮೊಂದು ಬಿರ್ದೊಡೊಂದುಱಿದಪುದೇ: **ಧರ್ಮಾಮೃ,** ೫. ೭೦)

**ತ್ರಿಕರಣ** – [ಜೈನ] ಜೀವಕ್ಕೊದಗುವ ಅಧಃಕರಣ, ಅಪೂರ್ವಕರಣ, ನಿವೃತ್ತಿಕರಣ ಎಂಬ ಮೂರು ಬಗೆಯ ಪರಿಣಾಮಗಳು (ತ್ರಿಕರಣ ದಿವ್ಯಾಂಜನದಿಂ ಸಕಳಪ್ರತ್ಯಕ್ಷಹೇತು ಸಮನಿಸೆ ಸಪ್ತಪ್ರಕೃತಿಪಟಳಕ್ಷಯಂ: **ಮಲ್ಲಿನಾಪು,** ೧೪. ೫೮)

**ತ್ರಿಕರಣಪರಿಣತ** – ಕರಣತ್ರಯಗಳ ಬಗ್ಗೆ ಸಂಪೂರ್ಣ ತಿಳಿವಳಿಕೆಯಿರುವವನು (ತ್ರಿಕರಣಪರಿಣತಂ ಏೞುಂ ಪ್ರಕೃತಿಗಳುಮಂ ಇಂತು ಕಿಡಿಸಿ .. .. ಸಮ್ಯಗ್ದೃಷ್ಟಿತ್ವಮಂ ಅಕಳಂಕಂ ತಳೆದು ಶುದ್ಧದರ್ಶನನಾದಂ: **ಚಂದ್ರಪ್ರಪು,** ೧೪. ೬೬)

**ತ್ರಿಕರಣಶುದ್ಧಿ** – ಕಾಯ, ವಾಕ್ಕು, ಮನಸ್ಸುಗಳ ಪರಿಶುದ್ಧತೆ (ತಪಂಗೆಯ್ಯಲ್ ಕಾಲಮಿಲ್ಲೆಂದು ತ್ರಿಕರಣಶುದ್ಧಿಯಿಂ ಸಂನ್ಯಸನವ್ರತಮಂ ದಯಂಗೆಯ್ಯಿಮೆಂಬುದುಂ: **ಸುಕುಮಾಚ,** ೧೨. ೯ ವ)

**ತ್ರಿಕಾಲ** – ಭೂತ, ವರ್ತಮಾನ, ಭವಿಷ್ಯತ್ ಎಂಬ ಕಾಲಗಳು (ಜಿನರ್ಗಂ ತ್ರಿಕಾಲಯೋಗಂ ಜಿನರ್ಗಂ ಸ್ವಾಧ್ಯಾಯಮಯ್ದು: **ಅಜಿತಪು,** ೧೨. ೩೦)

**ತ್ರಿಕಾಲಗೋಚರ** – ಯೋಗಶಕ್ತಿಯಿಂದ ತ್ರಿಕಾಲಗಳ ಆಗುಹೋಗುಗಳನ್ನು ತಿಳಿಯುವ ಶಕ್ತಿ (ತದ್ವಚೋವಿಸ್ತರದೊಳ್ ಸಕಲಜಗಂ ಸೊಗಯಿಸುಗುಂ ತ್ರಿಕಾಲಗೋಚರಂ ಅನಂತಪರ್ಯಾಯಯುತಂ: **ಚಂದ್ರಪ್ರಪು,** ೨. ೬೭)

**ತ್ರಿಕಾಲದರ್ಶಿ** – ತ್ರಿಕಾಲಗೋಚರ ಶಕ್ತಿಯನ್ನು ಪಡೆದವನು (ತಪೋವೃದ್ಧರುಂ ತ್ರಿಕಾಲದರ್ಶಿಗಳುಂ ಸಕಳಭೂತಂಗಳಂ ಸವನಾಗಿ ಕಾಣ್ಬ ಕರುಣಾರಸಾರ್ದ್ರ ಹೃದಯರಪ್ಪುದಱಿಂ: **ಪಂಚತಂತ್ರ,** ೧೩೮ ವ)

**ತ್ರಿಖಂಡ** – [ಜೈನ] ಗಂಗಾ ಮತ್ತು ಸಿಂಧೂನದಿಗಳಿಂದ ಪ್ರತ್ಯೇಕಗೊಳಿಸಲ್ಪಟ್ಟ ಮೂರು ಭಾಗಗಳು (ತಳೆದಂ ಚಂಡನಂದೀ ತ್ರಿಖಂಡ ಉರ್ವರೆಯಂ ದಿಗ್ವರ್ತಿ ಕೀರ್ತಿಪ್ರಸರಂ: **ಕರ್ಣನೇಮಿ,** ೨. ೧೦೩)

**ತ್ರಿಖಂಡಾಧಿಪ** – [ಜೈನ] ತ್ರಿಖಂಡಗಳ ಒಡೆಯ, ಅರ್ಧ ಚಕ್ರವರ್ತಿ (ಮಯೂರಗ್ರೀವಂ ನೀಳಾಂಜನೆಗಂ ಪುಟ್ಟಿದ ನಿಖಿಳಖೇಚರಲಲಾಮಾಯಮಾಣಂ ತ್ರಿಖಂಡಾಧಿಪಂ: **ಶಾಂತಿಪು,** ೫. ೨೬ ವ)

**ತ್ರಿಗಾರವ** – [ಜೈನ] ಋದ್ಧಿ, ರಸ, ಸಾತು ಎಂಬ ಮೂರು ಬಗೆಯ ಗಾರವ [ಅಹಂಕಾರ]ಗಳು (ಪಂಚಸಮಿತಿಸಂಯುತನುಂ ಶಲ್ಯತ್ರಯ ತ್ರಿಗಾರವರಹಿತನುಂ: **ಕರ್ಣನೇಮಿ,** ೨. ೬೧ ವ)

**ತ್ರಿಗುಣ** – ಸತ್ವ, ತಮಸ್ಸು, ರಜಸ್ಸುಗಳೆಂಬ ಮೂರು ಗುಣಗಳು; ಮೂರು ಪಟ್ಟು (ಜಗದೊಳ್ ಪತಿಹಿತದೆಡೆಯೊಳ್ ನೆಗಟ್ದಿ ಇನಜನಿಂ ಏಕದಂತನಿಂ ಪವನಜನಿಂ ಖಗರಾಜನಿಂ ದುರ್ಗಂ ದ್ವಿಗುಣಂ ತ್ರಿಗುಣಂ ಚತುರ್ಗುಣಂ ಪಂಚಗುಣಂ: **ಪಂಚತಂತ್ರ,** ೫೫)

**ತ್ರಿಗುಣಿಸು** – ಮೂರು ಪಟ್ಟಷ್ಟು ಆಗು (ಕಮನೀಯಾಂಗತ್ರಿಭಂಗಿ ತ್ರಿಗುಣಿಸೆ ನಿಜಲಾವಣ್ಯಮಂ: **ಶಾಂತೀಶ್ವಪು,** ೨. ೭೭)

**ತ್ರಿಗುಪ್ತಿ** – [ಜೈನ] ಕಾಯ, ವಾಕ್ಕು, ಮನಸ್ಸುಗಳನ್ನು ನಿಯಂತ್ರಿಸಿಕೊಂಡು ಧರ್ಮಧ್ಯಾನದಲ್ಲಿ ನಿರತನಾಗುವುದು (ಕಸವರಮಂ ಕಸಮ ಪೂಜಿಸುವನುಂ ಏಳಿಸುವನುಂ ಸಮಾನಂ ಪ್ರತಿಭಾಷಿಸೆ ಪಂಚಮಹಾವ್ರತ ಪಂಚಸಮಿತಿ ಮಿಳಿತ ತ್ರಿಗುಪ್ತಿಗುಪ್ತಂ ಮುನಿಪಂ: **ಶಾಂತಿಪು,** ೯. ೧೧೧)

**ತ್ರಿಗುಪ್ತಿಗುಪ್ತ** – ತ್ರಿಗುಪ್ತಿಯನ್ನು ಸಾಧಿಸಿದವನು (ದ್ವಿವಿಧಸಂಯಮಧಾರಿಯುಂ ತ್ರಿಗುಪ್ತಿಗುಪ್ತನುಂ .. .. ಪಂಚದಶಪ್ರಮಾದವರ್ಜಿತನುಂ ಆಗಿ: **ಅಜಿತಪು,** ೩. ೧ ವ)

**ತ್ರಿಜಗ** – ಸ್ವರ್ಗ, ಮರ್ತ್ಯ, ಪಾತಾಳಗಳು (ತ್ರಿಜಗದ ತಿರಿಕಂ ವಿದ್ಯಾಭಿಜಾತಗಂಧರ್ವಂ ನಿಮಿತ್ತವಿದಂ: **ಶಾಂತಿಪು,** ೬. ೨೪)

**ತ್ರಿಜಗಚ್ಚೂಡಾಮಣಿ** – [ತ್ರಿಜಗತ್+ಚೂಡಾಮಣಿ] ಮೂರು ಲೋಕಗಳಿಗೂ ತಲೆಯ ಆಭರಣದಂತಿರುವವನು (ತ್ರಿಜಗಚ್ಚೂಡಾಮಣಿಯಂ ಕರಣತ್ರಯಶುದ್ಧಿಯಿಂದೆಱಗಿ ಪೊಡೆವಟ್ಟು: **ಶಾಂತಿಪು,** ೯. ೬೯ ವ)

**ತ್ರಿಜ್ಞಾನ** – [ಜೈನ] ಶ್ರುತಿ, ಮತಿ, ಅವಧಿ ಎಂಬ ಮೂರು ಬಗೆಯ ಜ್ಞಾನಗಳು (ಸಹಜಾತ ತ್ರಿಜ್ಞಾನದ ಮಹಿಮೆಯಿಂ ಆ ನಿಖಿಳವಿದ್ಯೆಗಳ್ ತನ್ನೊಳ್ ಸನ್ನಿಹಿತಮೆನಿಸಿದುವು: **ಕರ್ಣನೇಮಿ,** ೯. ೫)

**ತ್ರಿಣಯನ** – ಮೂರು ಕಣ್ಣುಗಳುಳ್ಳವನು, ಶಿವ (ತ್ರಿಣಯನನಂ ಹರನಂ ನಿರ್ಗುಣನಂ ಸಡಿಫಡ ರತೀಶನಿಸುವನೆ: **ಗಿರಿಜಾಕ,** ೮. ೪೦)

**ತ್ರಿಣೇತ್ರ** – ತ್ರಿನಯನ (ತ್ರಿಣೇತ್ರನುಮಂ ಅಸುಂಗೊಳಿಸಿದ ಸಾಹಸದೊಳ್ ಕದನತ್ರಿಣೇತ್ರನುಂ: **ಪಂಪಭಾ,** ೧೪. ೩೭ ವ)

**ತ್ರಿತಯ** – ಮೂರರ ಗುಂಪು (ಅಲ್ಲಿಂದತ್ತಲ್ ಯೋಜನತ್ರಿತಯ ಅಂತರದೊಳ್ ಶುಕ್ರ ವಿಮಾನಮುಂ: **ಸುಕುಮಾಚ,** ೧೧. ೫೯ ವ)

**ತ್ರಿತಾಪ** – ಅಧಿದೈವಿಕ, ಅಧ್ಯಾತ್ಮಿಕ, ಅಧಿಭೌತಿಕ ಎಂಬ ತಾಪತ್ರಯಗಳು (ಜಿತತ್ರಿತಾಪ ಬಸವೇಶ್ವರಂ ಈಗೆ ಎಮಗೆ ಈಶಭಕ್ತಿಯಂ: **ರಾಜಶೇವಿ,** ೧. ೧೧)

**ತ್ರಿದಂಡ** – [ಜೈನ] ಕಾಯ, ಮನೋ, ವಾಕ್ ಎಂಬ ಮೂರು ದಂಡಗಳು (ಮತ್ತಂ ತ್ರಿದಂಡ ತ್ರಿಶಲ್ಯ ತ್ರಿಗಾರವಂಗಳಿಂ ಕ್ರಮಕ್ರಮದಿಂ ಕಟಿಲ್ಚಿ: **ಸುಕುಮಾಚ,** ೩. ೪೬ ವ)

**ತ್ರಿದಂಡಿ** – ಕಾಯ, ಮನೋ, ವಾಕ್‌ಗಳ ಮೇಲೆ ನಿಯಂತ್ರಣ ಸಾಧಿಸಿದ ಯತಿ (ಏಕದಂಡಿ ತ್ರಿದಂಡಿಗಳಪ್ಪ ಪರಿವ್ರಾಜಕರುಮಾಗಿ ತಮಗೆ ತಾವೇ ವನಪ್ರವೇಶಮಂ ಮಾಡಿ: **ಆದಿಪು,** ೯. ೯೩ ವ)

**ತ್ರಿದಶ** – ಮೂರು ಹತ್ತುಗಳು, ಮೂವತ್ತು; ಸದಾ ಬಾಲ್ಯ, ಕೌಮಾರ್ಯ, ಯೌವನಗಳೆಂಬ ಮೂರು ಅವಸ್ಥೆಗಳನ್ನು ಮಾತ್ರ ಉಳ್ಳವನು, ದೇವತೆ (ತ್ರಿದಶ ನರ ಅಸುರ ಉರಗ ಗಣಪ್ರಭು ನಿಶ್ಚಿತತತ್ತ್ವಯೋಗಿ ಯೋಗದ ಬಲಮುಣ್ಮಿ ಮೋಣ್ಮಿ ನಿಲೆ: **ಪಂಪಭಾ,** ೧. ೮೫)

**ತ್ರಿದಶಕುಜ** – ಕಲ್ಪವೃಕ್ಷ (ತ್ರಿದಶಕುಜದವೋಲ್ ಧಾತ್ರಿಯೊಳ್ ಶೋಭಿಕುಂ ಸನ್ಮಧುರಂಬೆತ್ತಿರ್ಪ ಕಾವ್ಯಂ: **ಉದ್ಭಟಕಾ,** ೧. ೩೧)

**ತ್ರಿದಶಗಣ** – ದೇವತೆಗಳ ಸಮೂಹ (ತ್ರಿದಶಗಣಾಧಿನಾಯಕನ ಪರ್ವಿದ ತೋಳ್ದುಱುಗಲ್ಗಲೊಳ್ ಪಳಂಚದೆ: **ಆದಿಪು,** ೭. ೧೨೫)

**ತ್ರಿದಶಗಣಾಧಿನಾಯಕ** – ದೇವತೆಗಳ ಅಧಿಪತಿ, ದೇವೇಂದ್ರ (ತ್ರಿದಶಗಣಾಧಿನಾಯಕನ ಪರ್ವಿದ ತೋಳ್ದುಱುಗಲ್ಗಳೊಳ್: **ಆದಿಪು,** ೭. ೧೨೪)

**ತ್ರಿದಶಗಣಾಧಿಪ** – ತ್ರಿದಶಗಣಾಧಿನಾಯಕ (ತ್ರಿದಶಗಣೇಧಿಪರ್ ಸುರಿಯುತಿರ್ಪನಿರ್ಮಲದುಗ್ಧವಾರಿಪೂರದೊಳ್ .. .. ಒಪ್ಪಿದನಿಂದ್ರವಂದಿತಂ: **ಪುಷ್ಪದಂಪು,** ೧೧. ೨೯)

**ತ್ರಿದಶತ್ವ** – ದೇವತ್ವ ತ್ರಿದಶತ್ವಮನೆಯ್ದಿ ನೀನೆ ಬಂದು ಸಮಸ್ತ ತ್ರಿದಶವಂದಿತಶ್ರೀಪದನಂ .. .. ಈಕ್ಷಿಸುವೈ: **ಆಚವರ್ಧ,** ೧೨. ೧೯)

**ತ್ರಿದಶನಗೇಂದ್ರ** – ದೇವತೆಗಳ ಬೆಟ್ಟ, ಮೇರುತ್ರಿದಶನಗೇಂದ್ರಂ ಧನುವಾದುದುಪಶುಪತಿಗೆ: **ಜಗನ್ನಾವಿ,** ೧೬. ೨೭)

**ತ್ರಿದಶಪತಿ** – ಇಂದ್ರ (ತ್ರಿದಶಪತಿ ಪಾರಿಜಾತಪ್ರದನಾಗದೊಡೆ ಆಧಿಪತ್ಯಸವನಮದಿನ್ನಾಗದು: **ಜಗನ್ನಾವಿ,** ೧೩. ೩೧)

**ತ್ರಿದಶಪದ** – ದೇವಪದವಿ (ತ್ರಿದಶಪದಸುಖಮನೆಯ್ದಲ್ ತುದಿಗಾಲೊಳ್ ನಿಂದಂ ಈತಂ ಎಂಬಿನಂ: **ಜಗನ್ನಾವಿ,** ೧೬. ೬೦)

**ತ್ರಿದರ್ಶನ** – [ಜೈನ] ಶ್ರುತಿ, ಮತಿ ಮತ್ತು ಅವಧಿ ಎಂಬ ಜ್ಞಾನಗಳು (ತನ್ನ ದರ್ಶನಂ ತ್ರಿದರ್ಶನಮನಧಃಕರಿಸೆ ಸುಪ್ರತಿಷ್ಠವ್ರತಿಪಂ ಏಕಾದಶಾಂಗಧರನಾಗಿ: **ನೇಮಿನಾಪು,** ೪. ೬೫ ವ)

**ತ್ರಿದಶಸ್ತ್ರೀ** – ದೇವವನಿತೆ (ತ್ರಿದಶಸ್ತ್ರೀಜನದೊಳಂ ಅಮೃತದೊಳಂ ಅಣಂ ಮಟ್ಟದುರಿವ ಮದನಾಗ್ನಿಯ ಕೊರ್ಬು: **ಆದಿಪು,** ೯. ೫೬)

**ತ್ರಿದಶನೇಕಾನಕ** – [ತ್ರಿದಶ+ಅನೇಕ+ಆನಕ] ದೇವತೆಗಳ ಅನೇಕ ದುಂದುಭಿಗಳು (ತ್ರಿದಶಾನೇಕಾನಕಂಗಳ್ ಮೊಳಗಿದುವು: **ಆದಿಪು,** ೭. ೩೯)

**ತ್ರಿದಶಾಸನ** – ದೇವತೆಗಳ ಪೀಠ (ತ್ರಿದಶಾಸನಂಗಳ್ ಅಲ್ಲಾಡಿದುವು ಕ್ರಮದೆ ಶಂಖಭೇರೀಕಂಠೀರವ ಘಂಟಾಧ್ವನಿಗಳ್ ನೆಗಟ್ದುವು: **ಆದಿಪು,** ೭. ೪೧)

**ತ್ರಿದಶೇಭ** – ಐರಾವತ (ತ್ರಿದಶೇಭಕ್ಕೆಸೆದಾದುವಂದು ವದನಂ ಮೂತ್ತೆರಟ್ ಕೂಡೆ ತದ್ವದನವ್ರಾತದೊಳ್ ಆದುವು ಉದ್ಘರದನಂ: **ಕರ್ಣನೇಮಿ,** ೮. ೧೨೩)

**ತ್ರಿದಿವ** – ದೇವಲೋಕ (ತನ್ಮಧ್ಯದೊಳಿರ್ಪುದು ಬಿಳಸನ್ಮಣಿಮಯ ಶಿಖರಚುಂಬಿತಾದ್ಯತ್ ತ್ರಿದಿವಂ: **ಆಚವರ್ಧ,** ೧. ೩೧)

**ತ್ರಿಪತಾಕಾ** – ಒಂದು ಹಸ್ತಾಭಿನಯ (ಪತಾಕಾ ತ್ರಿಪತಾಕಾ ಕರ್ತರೀಮುಖ ಅರ್ಧಚಂದ್ರಕಳಾ ಶುಕತುಂಡಾದಿ ಸಮಾಸದಭಿನಯ ಪ್ರಯೋಗ ಸುಭಗಮಾಗೆ: **ಹರಿವಂಶ,** ೨. ೩೩ ವ)

**ತ್ರಿಪತಾಕೆ** – ಮೂರು ಬಾವುಟಗಳು; ಹಣೆಯ ಮೇಲಿನ ಮೂರು ಮಡಿಕೆಗಳು (ಅಳೀಕಭ್ರುಕುಟಿಯುಂ ಅನರ್ಥಕ

ಲಲಾಟತ್ರಿಪತಾಕೆಯುಂ ಅಪಾರ್ಥವಿಲೋಹಿತ ವಿಲೋಚನ ರುಚಿಯುಂ: **ಆದಿಪು,** ೧೪. ೮೧ ವ)

**ತ್ರಿಪಥಗೆ –** ಸ್ವರ್ಗ, ಮರ್ತ್ಯ, ಪಾತಾಳಗಳಲ್ಲಿ ಹರಿಯುವವಳು, ಗಂಗೆ (ತ್ರಪಥಗೆಯ ಮೂಱು ಪೊನಲಿಂದೆ ಪೊಳೆವ ಹಿಮಗಿರಿಶಿಲಾತಳಕ್ಕೆ ಎಣೆ ಎನಿಸಿತ್ತು .. .. ತ್ರಿಪುಂಡ್ರ ಲಾಂಛಿತ ಲಲಾಟವಾ ಮುನಿವರನಾ: **ಕಾದಂಬ,** ೧. ೧೯೩)

**ತ್ರಿಪದಿ –** [ಆನೆಯ] ಕಾಲ್ಗಟ್ಟು, ಪದಬಂಧ (ಭುಜಂಗವೇಷ್ಟಿತ ಚಂದನ ಮಾರ್ಗದೊಳ್ ಇಭಂಗಳ್ ಒಳ್ಳಾನೆಗಳಂತೊಂದು ತ್ರಿಪದಿಚ್ಛೆದದೊಳಂ ದಲ್ ತಳರವೆ ಪಯೋಧಿವೇಳಾವನದೊಳ್: **ಶಾಂತಿಪು,** ೧೧. ೫)

**ತ್ರಿಪಲ್ಯೋಪಮ –** [ಜೈನ] ವ್ಯವಹಾರ, ಉದ್ಧಾರ, ಅದ್ಧಾ ಎಂಬ ಮೂರು ಪಲ್ಯಗಳಷ್ಟು ಅವಧಿ (ಬದರೀಫಲ ಮಾತ್ರಾಹಾರಿಗಳುಂ ಆರೋಗ್ಯ ಶರೀರಂಗಳುಂ ಸೌಂದರಾಕಾರಂಗಳುಂ ಆಗಿ: **ಆದಿಪು,** ೫. ೪೧ ವ)

**ತ್ರಿಪುಂಡ್ರ –** ಹಣೆಯ ಮೇಲಿನ ಮೂರು ವಿಭೂತಿ ಪಟ್ಟೆಗಳು (ಮನೋಜಾತಮಹೋತ್ಸಾಹರ್ ತದ್ಭೂತಿಯಿನಿಟ್ಟರ್ ತ್ರಿಪುಂಡ್ರಮಂ ದಿವಿಜೇಂದ್ರರ್: **ಆದಿಪು,** ೧೬. ೫೩)

**ತ್ರಿಪುಂಡ್ರಕ –** ತ್ರಿಪುಂಡ್ರ (ಸರಿಗೆಯೊಳ್ ಸಮೆದ ಅಕ್ಷಮಾಲಿಕೆ ಪೊನ್ನ ಮುಂಜಿ ತೊಳಪ್ಪ ಕಪ್ಪುರದ ಭಸ್ಮರಜಃ ತ್ರಿಪುಂಡ್ರಕಂ ಒಪ್ಪೆ .. .. ಆ ತಪಸ್ವಿ ಮರುಳ್ಚಿದಂ: **ಪಂಪಭಾ,** ೬. ೮)

**ತ್ರಿಪುರ –** ತಾರಕಾಸುರನ ಮಕ್ಕಳಾದ ತಾರಕಾಕ್ಷ, ಕಮಲಾಕ್ಷ, ವಿದ್ಯುನ್ಮಾಲಿ ಎಂಬ ಮಕ್ಕಳಿಗೆ ಕ್ರಮವಾಗಿ ಸೇರಿದ ಒಂದರ ಕೆಳಗೊಂದಿರುವ ಚಿನ್ನ, ಬೆಳ್ಳಿ, ಕಬ್ಬಿಣಗಳಿಂದಾದ ಪಟ್ಟಣಗಳು (ತ್ರಿಪುರಂಬೊತ್ತಸಿದಂತೆ ಪೊತ್ತಿ ಪೊಗೆದತ್ತೆತ್ತಂ ವಿಯನ್ಮಂಡಲಂ: **ಪಂಪಭಾ,** ೧೧. ೧೭)

**ತ್ರಿಪುರಭಂಜನ –** ತ್ರಿಪುರಗಳನ್ನು ನಾಶಮಾಡಿದವನು, ಶಿವ (ಕೀನಾಶವಿನಾಶಕರಂ ತ್ರಿಪುರಭಂಜನಂ .. .. ಶೂಲಧರಂ ಕೈಲಾಸಕ್ಕೆ ಬಿಜಯಂಗೆಯ್ದಂ: **ಗಿರಿಜಾಕ,** ೧೦. ೮ ವ)

**ತ್ರಿಪುರಹರ –** ಶಿವ (ಇಕ್ಕಿದಂ ಅಭವಂ ಪಾರ್ಥನಂ ಇಕ್ಕಿದನಾ ತ್ರಿಪುರಹರನಂ ಅರ್ಜುನಂ: **ಪಂಪಭಾ,** ೮. ೨೨)

**ತ್ರಿಪುರಾರಿ –** ತ್ರಿಪುರಭಂಜನ (ತ್ರಿಪುರಾರಿಯಂತೆ ವಿಇಷೋರಗಧಾರಿಯುಂ .. .. ಎನಿಸಿದುದು: **ಜಗನ್ನಾವಿ,** ೧. ೪೪ ವ)

**ತ್ರಿಪ್ರಾಭೃತ –** [ಜೈನ] ಪ್ರಶಸ್ತನೋ ಆಗಮಭಾವ, ಅಪ್ರಶಸ್ತನೋ ಆಗಮಭಾವ, ಗ್ರಾಂಥಿಕ ಎಂಬ ಮೂರು ಪ್ರಾಭೃತ [ಉಡುಗೊರೆ]ಗಳು (ಅರ್ಹತ್ಪತಿ ಮೆಚ್ಚಿತ್ತಂ ತ್ರಿಪ್ರಾಭೃತಮನೆನಲ್ ಕೊಂಡಕುಂದ ಮುನಿಪತಿ ಸಂದಂ: **ಪುಷ್ಪದಂಪು,** ೧ ೧೭)

**ತ್ರಿಭಂಗ –** ಶರೀರವನ್ನು ಮೂರು ಕಡೆಗಳಲ್ಲಿ ಬಾಗಿಸಿ ನಿಲ್ಲುವ ನಾಟ್ಯದ ಒಂದು ಭಂಗಿ (ವದನಂ ಪೂರ್ಣಶಶಾಂಕನಂತೆಸೆಯೆ ಮೇಘಶ್ಯಾಮಳಾಂಗಂ ತ್ರಿಭಂಗದಿನಿಂಬಾಗಿರೆ: **ಜಗನ್ನಾವಿ,** ೩. ೧೬)

**ತ್ರಿಭುವನ –** ಸ್ವರ್ಗ, ಮರ್ತ್ಯ, ಪಾತಾಳಗಳು (ತ್ರಿಭುವನಮಂಗಳ ತೋರಣನಿಭಮಂ ಪ್ರವಚನಮನೆಯ್ದಿ: **ಚಂದ್ರಪ್ರಪು,** ೧. ೧೫)

**ತ್ರಿಭುವನಗುರು –** ಮೂರೂ ಲೋಕಗಳಿಗೆ ಗುರು (ತ್ರಿಭುವನಗುರು ಪರಿನಿಷ್ಕ್ರಮಣಕಲ್ಯಾಣಶಾರದಾಗಮಪ್ರತೀಕ್ಷಣದಿವ್ಯಹಂಸರುಂ: **ಆದಿಪು,** ೯. ೬೦ ವ)

**ತ್ರಿಮಾರ್ಗಗೀತ –** [ಜೈನ] ರೂಪಸ್ತವ, ಗುಣಸ್ತವ, ವಸ್ತುಸ್ತವ ಎಂಬ ಮೂರು ಬಗೆಯ ಗೀತಗಳು (ವೀತರಾಗ ರೂಪಗುಣವಸ್ತುವರ್ಣನಾನುಬದ್ಧ ತ್ರಿಮಾರ್ಗಗೀತಂಗಳಂ ತ್ರಿವಿಧಮಾರ್ಗಂಗಳೊಳ್ ಪಾಡಿ: **ಚಂದ್ರಪ್ರಪು,** ೯. ೫೫ ವ)

**ತ್ರಿಮೂಢತಾನಿರಶನ –** [ಜೈನ] ಲೋಕಮೂಢತೆ, ದೇವಮೂಢತೆ, ಪಾಖಂಡಿಮೂಢತೆ ಎಂಬ ಮೂರು ಬಗೆಯ ಮೌಢ್ಯಗಳನ್ನು ತೊರೆಯುವುದು; ಇದು ಸಮ್ಯಗ್ದರ್ಶನದ ಒಂದು ಅಂಗ (ಮುನಿಜನ ತನುಮಳವಿಚಿಕಿತ್ಸವರ್ಜನಮುಂ ತ್ರಿಮೂಢತಾ ನಿರಶನಮುಂ ಉಪಗೂಹನಮುಂ .. .. ಎಂದು ಪೇಟ್ವೇಯೆಂಟು ಗುಣಂಗಳುಂ ಸಮ್ಯಗ್ದರ್ಶನಾವಯವಂಗಳ್: **ಆದಿಪು,** ೫. ೫೭)

**ತ್ರಿಯಾಮಾಂತ್ಯ –** ಬೆಳಗಿನ ಜಾವ (ಪೂರ್ವದಿಗ್ರಮಣೀವಕ್ತ್ರಸರೋಜ ರಾಗಮಾಯ್ತೆತ್ತಂ ತ್ರಿಯಾಮಾಂತ್ಯದೊಳ್: **ಆದಿಪು,** ೧೨. ೪೮)

**ತ್ರಿಯಾಮಾವಿರಾಮ –** ತ್ರಿಯಾಮಾಂತ್ಯ (ಒಂದು ದಿವಸಂ ತ್ರಿಯಾಮವಿರಾಮದೊಳ್ ಆಶ್ಚರ್ಯಭೂತಂಗಳುಂ ದೂರಾರಿಷ್ಟಫಲಸೂಚಕಂಗಳುಮಪ್ಪ ಸ್ವಪ್ನಂಗಳಂ ಕಂಡು: **ಆದಿಪು,** ೧೫. ೨೧ ವ)

**ತ್ರಿಯಾಮೆ –** ಮೂರು ಜಾಮಗಳನ್ನುಳ್ಳುದು, ರಾತ್ರಿ (ಇರುಳ್ ತ್ರಿಯಾಮೈ ಯಾಮಿನಿಯಕ್ಕುಂ: **ಅಭಿಧಾವ,** ೧. ೨. ೫)

**ತ್ರಿವರ್ಗ –** ಧರ್ಮ, ಅರ್ಥ, ಕಾಮ (ಜಗದ್ಗುರು ತನ್ನೃತ್ಯಫಲಂ ತ್ರಿವರ್ಗವಿಭವಂ ತಾನೆಂದೊಡೇಮಾತೊ ಸಾಸಿರಮುಂ ನಾಲಗೆಯುಳ್ಳ ವಾಸುಕಿಯುಂ ಇನ್ನೇನೆಂದದಂ ಬಣ್ಣಿಪಂ: **ಆದಿಪು,** ೭. ೧೨೭)

**ತ್ರಿವಳಿ –** ಹೊಟ್ಟೆಯ ಮೇಲಿನ ಮೂರು ಮಡಿಕೆ (ಬಸಿಱ ತೆಳ್ಪಟೆದತ್ತೆ ಮೊಗಂ ಬೆಳ್ಪೇಱೆದುದೇ ಕುಚಚೂಚುಕಂ ಮಸುಳ್ದುವೇ ತ್ರಿವಳೀರುಚಿಯುಂ ಮೇಣ್ಕುಂದಿತೆ: **ಆದಿಪು,** ೭. ೩೧)

**ತ್ರಿವಾತ –** [ಜೈನ] ಲೋಕವನ್ನು ಸುತ್ತುವರಿದಿರುವ ವಾತ, ಘನವಾತ, ತನುವಾತಗಳೆಂಬ ಗಾಳಿಯ ಆವರಣಗಳು (ತ್ರಿವಾತಾಭಿವೇಷ್ಟಿತಂ ಉತ್ಪತ್ತಿಸ್ಥಿತಿಲಯೇತರಂ .. .. ಜಗತ್ತ್ರಿತಯಂ ನಿಂದುದು ತಾನನಾದ್ಯನಿಧನಂ ಸ್ವಾಭಾವಿಕನ್ಯಾಯದಿಂ: **ಸುಕುಮಾಚ,** ೧೧. ೪೧)

**ತ್ರಿವಿಕ್ರಮ –** ಮೂರು ಲೋಕಗಳನ್ನೂ ತನ್ನ ಮೂರು ಹೆಜ್ಜೆಗಳಿಂದ ಆವರಿಸಿದವನು, ವಿಷ್ಣು (ಅನುಕ್ರಮದಿಂ ಬಳೆದಂ ತ್ರಿವಿಕ್ರಮಂ: **ನೇಮಿನಾಪು,** ೬. ೨೬)

**ತ್ರಿವಿಧಮಾರ್ಗ –** ಸಂಗೀತದಲ್ಲಿನ ಶುದ್ಧ, ಸಾಳಗ, ಸಂಕೀರ್ಣವೆಂಬ ಮೂರು ಬಗೆಯಲ್ಲಿ ಹಾಡುವ ರೀತಿ (ವೀತರಾಗ ರೂಪಗುಣವಸ್ತುವರ್ಣನಾನುಬದ್ಧ ತ್ರಿಮಾರ್ಗಗೀತಂಗಳಂ ತ್ರಿವಿಧಮಾರ್ಗಂಗಳೊಳ್ ಪಾಡಿ: **ಚಂದ್ರಪ್ರಪು,** ೯. ೫೫ ವ)

**ತ್ರಿವಿಧಶಕ್ತಿ –** ಪ್ರಭು, ಮಂತ್ರ, ಉತ್ಸಾಹಗಳೆಂಬ ಮೂರು ಶಕ್ತಿಗಳು (ತ್ರಿವಿಧಶಕ್ತಿಪ್ರಯುಕ್ತನುಂ ಚತುರ್ನೃಪವಿದ್ಯಾವಿಶಾರದನುಂ .. .. ದಶಾಂಗಭೋಗಸಂಗನುಂ ಆಗಿ: **ಚಂದ್ರಪ್ರಪು,** ೭. ೩೫ ವ), ನೋಡಿ, **'ಶಕ್ತಿತ್ರಯ'**

**ತ್ರಿವಿಷ್ಟಪ –** ದೇವಲೋಕ (ಸುರಸದನಂ ನಾಕಂ ತ್ರಿವಿಷಟಪಂ ದಿವಂ: **ಅಭಿಧಾವ,** ೧. ೧. ೩೦)

**ತ್ರಿಶಂಕು –** ಸೂರ್ಯವಂಶದ ದೊರೆ; ಹರಿಶ್ಚಂದ್ರನ ತಂದೆ; ಅನ್ಯಸ್ತ್ರೀ ಅಪಹರಣ, ಸುಳ್ಳು ಹೇಳಿದುದು, ಹಸಿ ಮಾಂಸ ತಿಂದುದು ಎಂಬ ಮೂರು ತಪ್ಪುಗಳನ್ನು ಮಾಡಿ ವಸಿಷ್ಠನ ಶಾಪಕ್ಕೆ ಗುರಿಯಾದ ಸತ್ಯವ್ರತನಿಗೆ ಆನಂತರ ಬಂದ ಹೆಸರು

(ತ್ರಿದಶಲೋಕಕೇಱತಿರ್ದಾ ತ್ರಿಶಂಕುನರಾಧೀಶನ ಲಕ್ಷ್ಮಿ ಶಕ್ರನ ಮಹಾ ಹುಂಕಾರದಿಂಬಿರ್ದಳೆಂಬಿನೆಗಂ: **ಕಾದಂಬ**, ೧. ೨೨)

**ತ್ರಿಶಕ್ತಿ** – ರಾಜನಲ್ಲಿರಬೇಕಾದ ಪ್ರಭುಶಕ್ತಿ, ಉತ್ಸಾಹಶಕ್ತಿ, ಮಂತ್ರಶಕ್ತಿಗಳು (ವರ ಷಾಡ್ಗುಣ್ಯಂ ಸಪ್ತಾಂಗ ರಾಜ್ಯದೊದವಂ ತ್ರಿಶಕ್ತಿ ಚತುರಂಗಬಲಂ .. .. ಇರ್ಪುದು ನಿನ್ನೊಳ್: **ತ್ರಿಷಷ್ಟಿಪು**, ೨೪. ೨೪೩)

**ತ್ರಿಶಲ್ಯ** – [ಜೈನ] ಮಿಥ್ಯಾ, ಮಾಯಾ, ನಿದಾನಗಳೆಂಬ ಮೂರು ಮೋಹಗಳು (ಮತ್ತಂ ತ್ರಿದಂಡ ತ್ರಿಶಲ್ಯ ತ್ರಿಗಾರವಂಗಳಂ ಕ್ರಮಕ್ರಮದಿಂ ಕಟಲ್ಚಿ ಕಳೆಯುತ್ತುಂ: **ಸುಕುಮಾಚ**, ೩. ೪೬ ವ)

**ತ್ರಿಶಾಲ** – ಮೂರು ಸ್ತರಗಳಿಂದ ಕೂಡಿದ (ತತ್ ಕನಕ ಶಾಲಾಭ್ಯಂತರದೊಳ್ ತ್ರಿಶಾಲ ತ್ರಿಪೀಠೋಪಸ್ಥಿತ ಅರ್ಹತ್ರತಿಮೋಪೇತ .. .. ಶೋಭಿತಮುಂ: **ಆದಿಪು**, ೧೦. ೩೦ ವ)

**ತ್ರಿಶುದ್ಧಿ** – ತ್ರಿಕರಣಶುದ್ಧಿ (ಚಕ್ರವರ್ತಿಗೃಹೀತ ಸದ್ದರ್ಶನನಂತರ್ದರ್ಶನನಂ ತ್ರಿಶುದ್ಧಿಯಿಂ ತ್ರಿಃಪ್ರದಕ್ಷಿಣಂಗೆಯ್ದು: **ಚಂದ್ರಪ್ರಪು**, ೭. ೨೭ ವ)

**ತ್ರಿಷಷ್ಟಿ ಪುರಾತನರು** – ತಮಿಳುನಾಡಿನ ಅರುವತ್ತುಮೂರು ಮಂದಿ ಶೈವ ಭಕ್ತರುಗಳು: ಕಲಿಗಣನಾಥ, ರುದ್ರಪಶುಪತಿ, ಮುರುಘ, ಚೊಕ್ಕನಾಯನಾರ್, ತಿರುನೀಲಕಂಡಠ, ಕಾರಿಕಾಲಮ್ಮೆ, ನರಸಿಂಗ ಮೊನೆಯಾರ, ಕಡವೂರಿಕಾರಿ, ತಿರುನೀಲಕಂಠಪಾಣ, ಚಿರುಪುಲಿಯಾಂಡ, ಸೋಮಾಸಿಮಾರ, ಅಚ್ಯುತ ಮೊನೆಯಾರ, ಮಾನಕಂಜರ, ಪಗಲ್‌ಚೋಳ, ಕಲಿಕಾಮದೇವ, ತಿರುಮೂಲ, ಪಗಲ್ತೊಣೆಯಾಂಡ, ಅರಿವಾಳ್ತಾಂಡ,ನೈಸ, ನೀಲನಕ್ಕ, ತಿರುಕುರುಂಪೆತೊಂಡ, ತಿರುನಾಳ್ಪೋವ, ಏಣಾಧಿನಾಥ, ಸೇದಿರಾಜ, ಸೇದಿರಾಜ, ಪೂಸಲಿಯಾಂಡ, ಕಂಗುಲಿಯ ಕಲಿಯ, ಇರಿಭಕ್ತ, ಕಳಚೆಂಗ ಪೆರುಮಾಳೆ, ನಮಿನಂದಿ, ಅಮರನೀತಿ, ಕಲಿಕಂಭ, ಕನ್ನಪ್ಪ, ನಾಟ್ಯನಮಿತ್ತಾಂಡಿ, ಒಲಘಾಂಡಮೂರ್ತಿ, ಆಪೂತಿಯಡಿಯ, ವಾಗೇಶ, ತಿರುಜ್ಞಾನಸಂಬಂಧ, ಕುಲಚ್ಚರಿ, ಮಂಗಾಯಕ್ಕರಸಿ, ಸೌಂದರಪಾಂಡ್ಯ, ವೇಳ್ಕುತ್ತ, ಮಹಾಕುಳಚಂಗ, ಸಾಂಕ್ಯ, ವಾಹಿಲ್ಯ, ಸಿರುತೊಣೆಯಾಂಡ, ಕಳಚತ್ತಿಯಾಂಡ, ಕೊಲ್ಬುಲಯಾಂಡ, ಚಂಡೇಶ, ಅಚ್ಚಕಲಿಯನಾರ್, ಐಯಡಿಯ, ಚಿರುತೊಂಡ, ಅತಿಭಕ್ತ, ಕಣಂಬುಲ್ಲ ನಂಬಿ, ಇಳೆಯಾಂಡ ಗುಡಿಮಾರ, ಮೆರೆಮಿಂಡ, ಚೇರಮ, ಪಿರವಾಳವಿಕುರುಂಬ, ಕಡೆಯ ನಾಯನಾರ್, ಯಸ್ಯಜ್ಞಾನದೇವಿ, ಮತ್ತು ಸೌಂದರನಂಬಿ (ಕರ್ನಾಟಕ ಕವಿಚಕ್ರವರ್ತಿವಿರಚಿತ ತ್ರಿಷಷ್ಟಿಪುರಾತನಚಾರಿತ್ರದೊಳ್: **ತ್ರಿಷಷ್ಟಿಪು**, ಆಶ್ವಾಸಾಂತ್ಯ ಗದ್ಯ)

**ತ್ರಿಷಷ್ಠಿಶಲಾಕಾಪುರುಷರು** – ಅರುವತ್ತುಮೂವರು ಆರಾಧನೀಯರು [ಜೈನ] ಇಪ್ಪತ್ತನಾಲ್ಕು ಮಂದಿ ತೀರ್ಥಂಕರರು: ವೃಷಭ, ಅಜಿತ, ಸಂಭವ, ಅಭಿನಂದನ, ಸುಮತಿ, ಪದ್ಮಪ್ರಭ, ಸುಪಾರ್ಶ್ವ, ಚಂದ್ರಪ್ರಭ, ಪುಷ್ಪದಂತ, ಶೀತಲ, ಶ್ರೇಯಾಂಸ, ವಾಸುಪೂಜ್ಯ, ವಿಮಲ, ಅನಂತ, ಧರ್ಮ, ಶಾಂತಿ, ಕುಂಥು, ಅರ, ಮಲ್ಲಿನಾಥ, ಮುನಿಸುವ್ರತ, ನಮಿ, ನೇಮಿ, ಪಾರ್ಶ್ವನಾಥ, ವರ್ಧಮಾನ; ಹನ್ನೆರಡು ಮಂದಿ ಚಕ್ರವರ್ತಿಗಳು: ಭರತ, ಸಗರ, ಮಘವಾ, ಸನತ್ಕುಮಾರ, ಶಾಂತಿ, ಕುಂಥು, ಅರ, ಸುಭೌಮ, ಪದ್ಮ, ಹರಿಷೇಣ, ಜಯಸೇನ, ಬ್ರಹ್ಮದತ್ತ; ಒಂಬತ್ತು ಮಂದಿ ಬಲದೇವರು: ವಿಜಯ, ಅಚಲ, ಸುಧರ್ಮ, ಸುಪ್ರಭ, ಸುದರ್ಶನ, ನಂದಿ, ನಂದಿಮಿತ್ರ, ರಾಮ, ಪದ್ಮ; ಒಂಬತ್ತು ಮಂದಿ ವಾಸುದೇವರು: ತ್ರಿಪೃಷ್ಠ, ದ್ವಿಪೃಷ್ಠ, ಸ್ವಯಂಭೂ, ಪುರುಷೋತ್ತಮ, ಪುರುಷಸಿಂಹ, ಪುಂಡರೀಕ, ದತ್ತ, ಲಕ್ಷ್ಮಣ, ಕೃಷ್ಣ; ಒಂಬತ್ತು ಮಂದಿ ಪ್ರತಿವಾಸುದೇವರು: ಅಶ್ವಗ್ರೀವ, ತಾರಕ, ಮೇರುಕ, ಮಧುಕೈಟಭ, ನಿಶುಂಬ, ಬಲಿ, ಪ್ರಹರಣ, ರಾವಣ, ಜರಾಸಂಧ: (ಜಿನಸ್ತವನಂಗಳನೆ ಮಾಣದೆ ಪಾಡಲುಂ ತ್ರಿಷಷ್ಟಿಶಲಾಕಪುರುಷರ ಕಥೆಗಳಂ ಕೇಳಲುಂ ಬಯಕೆ ತಿಣ್ಣಮಾಗೆ: **ಧರ್ಮಾಮೃ**, ೧೦. ೧೧ ವ)

**ತ್ರಿಸಂಜ್ಞ** – ಮಾತು, ಕಣ್ಣಾಡಿಸುವುದು, ಅಂಗಚಲನೆ ಎಂಬ ಮೂರು ಚಲನೆಗಳು (ನಂದಗೋಪನುಂ ಯಶೋದಯೆಯುಮಂ ವಿಗಟಿದಟಲನೊಳಕೊಂಡು ಚಂಡಾಹಿತುಂಡಖಂಡಿತ ಪುಂಡರೀಕಾಕ್ಷವದನದಿನ್ಯಸ್ತನಿರಸ್ತ ತರಳತಾರನೇತ್ರರುಂ ನಿಸ್ಸಂಜ್ಞತ್ರಿಸಂಜ್ಞಗಾತ್ರರುಂ ಆಗೆ: **ಜಗನ್ನಾವಿ**, ೩. ೯೫ ವ)

**ತ್ರಿಸಂಧ್ಯಾಸೇವೆ** – ಬೆಳಿಗ್ಗೆ, ಮಧ್ಯಾಹ್ನ, ಸಂಜೆಗಳಲ್ಲಿ ಮಾಡುವ ಸೇವೆ (ತ್ರಿಸಂಧ್ಯಾಸೇವೆಯುಮೆಂದೆಂಟುಂ ತೆಱದ ಪೂಜೆಯುಮಂ ಅರ್ಕಪೂಜೆಯುಮಂ ಮನ್ನಿಸಿ: **ಆದಿಪು**, ೧೫. ೧೩ ವ)

**ತ್ರಿಸಂಧ್ಯೆ** – ಬೆಳಿಗ್ಗೆ, ಮಧ್ಯಾಹ್ನ, ಸಂಜೆಗಳು; ದೇವಕುಸುಮ (ಕುಂದ ಮುಚುಕುಂದ ಮಂದಾರ ಇಂದೀವರ ನಂದ್ಯಾವರ್ತ ತ್ರಿಸಂಧ್ಯಾ ಬಂಧೂಕ ಕದಂಬ ಕನಕ ಕರವೀರ ಕರ್ಣಿಕಾರ ಕುಮುದವನವಕುಳ ಕುರವಕ ಕಮಲ ತಿಲಕ ಚಂಪಕ ಪಾಟಲಿ ಪಾರಿಜಾತ ಜಾತಿ ಪುನ್ನಾಗ ಮಲ್ಲಿಕಾದಿ ಅನೇಕ ಸುರಭಿಕುಸುಮಂಗಳಂ: **ಪಂಚತಂತ್ರ**, ೧೯೦ ವ)

**ತ್ರಿಸಾಕ್ಷಿ** – ಕಾಯ, ವಾಕ್, ಮನಗಳೆಂಬ ಮೂರು ಸಾಕ್ಷಿಗಳು; [ಜೈನ] ಆತ್ಮ, ಇಂದ್ರ, ಸಿದ್ಧ ಎಂಬ ಸಾಕ್ಷಿಗಳು (ಪರಮ ಜಿನದೀಕ್ಷೆಯಂ ತ್ರಿಸಾಕ್ಷಿಕನಾಗಿ ಕೆಯ್ಕೊಂಡು ಕಾಲಾವಸಾನದೊಳ್ ಸನ್ಯಸನಮರಣದಿಂ .. .. ಮಹಾಬಲನೆಂಬ ದೇವನಾಗಿ ಪುಟ್ಟಿ: **ಅಜಿತಪು**, ೯. ೬ ವ)

**ತ್ರಿಸಾಕ್ಷಿಕ** – [ಜೈನ] ತ್ರಿಸಾಕ್ಷಿಗಳುಳ್ಳವನು (ಬಾಹ್ಯಾಭ್ಯಂತರಪರಿಗ್ರಹಪರಿತ್ಯಾಗೋನ್ಮುಖ ಮಾನಸಂ ತ್ರಿಸಾಕ್ಷಿಕನಾಗಿ ವಸ್ತ್ರಾಭರಣಮಾಲ್ಯಾದಿಗಳಂ ಮೆಯ್ಯಿಂ ತೊಲಗಿಸಿ: **ಆದಿಪು**, ೯. ೭೬ ವ)

**ತ್ರಿಸೆ** – (ತೃಷಾ) ಬಾಯಾರಿಕೆ (ತ್ರಿಸೆ ಮೆಯ್ಯ ತಿನಿಸು ನೆಱೆ ಸೈರಿಸಬಾರದ ತಲೆಯ ನೋವುಂ ಅತ್ತೆತ್ತಲ್ ಮುಂ ಮಿಸುಕದಿರವೆಂಬಿನಿತುಂ ಪುಸಿಯಲ್ತೊಂದೊಂದೆ ಕಿಡಿಸಲಾಱದೆ ನರರಂ: **ಧರ್ಮಾಮೃ**, ೧. ೧೩೧)

**ತ್ರಿಸ್ಥಾನ** – ಮಂದ್ರ, ಮಧ್ಯಮ, ತಾರಗಳೆಂಬ ಸಂಗೀತದಲ್ಲಿನ ಮೂರು ಸ್ಥಾಯಿಗಳು (ಕೊರಲಂ ನಿಟ್ಟೆಗೆ ಒದು ವಂಶಶ್ರುತಿಯಿಂ ತ್ರಿಸ್ಥಾನ ಸಂಶುದ್ಧಿವೆತ್ತಿರೆ ನಾನಾವಿಧಂ ಪ್ರಯೋಗಿಸುಪಾಂಗಂಗಳೊಳ್ ರಸಂಬೆತ್ತು ಬಿತ್ತರಿಸುವಂತಾಣತಿ ಮಾಡಿದಂ: **ಮಲ್ಲಿನಾಪು**, ೮. ೧೬)

**ತ್ರೀಂದ್ರೀಯ** – ಸ್ಪರ್ಶ, ರಸನ, ಘ್ರಾಣ ಎಂಬ ಮೂರು ಇಂದ್ರಿಯಗಳನ್ನುಳ್ಳ ಜೀವ, ಕ್ರಿಮಿಕೀಟಗಳು (ಸ್ಪರ್ಶನ ರಸನ ಘ್ರಾಣೇಂದ್ರಿಯಸಮನ್ವಿತಂಗಳಪಳ್ಪಿಪೀಲಿಕಾದಿ ತ್ರೀಂದ್ರಿಯಂಗಳ್: **ಆದಿಪು**, ೧೦. ೬೩ ವ)

**ತ್ರೇತಾಗ್ನಿ** – ಗಾರ್ಹಪತ್ಯ, ದಕ್ಷಿಣ, ಆಹವನೀಯ ಎಂಬ ಮೂರು ಅಗ್ನಿಗಳು (ತೀರ್ಥಕರಗಣಧರಾನಗಾರ ಕೇವಳಿಗಳ್

ಪರಿನಿರ್ವಾಣಕ್ಷೇತ್ರದೊಳ್ ಶರೀರಸಂಸ್ಕಾರಾದಿ ಗಾರ್ಹಪತ್ಯ ದಕ್ಷಿಣಾಗ್ನಿ ಆಹವನೀಯಮೆಂಬ ಪೆಸರಂ ಪಡದಂ: **ಆದಿಪು,** ೧೫. ೧೬ ವ)

**ತ್ರೇತೆ** – ಮೂರರ ಗುಂಪು, ತ್ರೇತಾಯುಗ (ಹುತಾಶನತ್ರಿತಯನಾಮಕಂ ತ್ರೇತೆ: **ಅಭಿಧಾವ,** ೩. ೧. ೧೨೬); ತೇತಾಯುಗ (ತ್ರೇತಾಪ್ರವೇಶದೊಳ್ .. .. ಅಲಲದೆ ಜನಪದದ ಜನಂಗಳೊಳಿಲ್ಲ: **ಜಗನ್ನಾವಿ,** ೨. ೧ ವ)

**ತ್ರೈಕಾಲ್ಯಯೋಗಿ** – ತ್ರಿಕಾಲಜ್ಞಾನಿಯಾದ ಯೋಗಿ (ತ್ರೈಕಾಲ್ಯಯೋಗಿ ಬಂದುದಂ .. .. ಕೇಕಿಕೋಕಿಳಕಾಕಳಿಯಿಂದಱಿದು ಬನದೊಳಱಸಿದೆನಾಗಳ್: **ಚಂದ್ರಪ್ರಪು,** ೨. ೮೧)

**ತ್ರೈಗುಣ್ಯ–** ಸತ್ವ, ರಜಸ್ಸು, ತಮಸ್ಸುಗಳೆಂಬ ಮೂರು ಗುಣಗಳು (ಜಗದಂಡಕರಂಡಷಂಡನಿರ್ಮಾಣಪ್ರವೀಣನುಂ .. .. ತ್ರೈಗುಣ್ಯಾವಾಸನಾತೀತಂ .. .. ಒಪ್ಪುತ್ತಿರ್ದಂ: **ಶಬಶಂವಿ,** ೧. ೮೧ ವ)

**ತ್ರೈಭುವನ** – ಮೂರು ಲೋಕಗಳು (ಮನದೊಳ್ ತ್ರೈಭುವನಮಂ ಆಳ್ದನಿತುವರಂ ತನಗೆ ಸಂತಸಂ ಪೆರ್ಚಿಯುಂ ಅಂದು ಇನಿಸು ಅಂಧನೃಪಂ ತನ್ನಯ ಜನದೊಳ್ ಕೆಲನಱಿಯೆ ಕೃತಕಶೋಕಂಗೆಯ್ದಂ: **ಪಂಪಭಾ,** ೩. ೮)

**ತ್ರೈವಿದ್ಯ** – [ಜೈನ] ಜೀವಸ್ಥಾನ, ಕ್ಷುದ್ರಕಬಂಧ, ಬಂಧಸ್ವಾಮಿತ್ವ ವಿಚಯಗಳೆಂಬ ಷಟ್ಖಂಡಾಗಮದ ಮೂರು ಖಂಡಗಳನ್ನು ತಿಳಿದವನು (ಮೂವತ್ತಾಱು ಗುಣದಿಂ ಭಾವಜನಂ ಕಟ್ಟಿ ಪೆಟ್ಟವೇಳೆದರ್ ವೃಷದಿಂ ಭಾವಿಪೊಡೆ ಮೇಘಚಂದ್ರತ್ರೈವಿದ್ಯರ್ ಅದೆಂತು ಶಾಂತರಸಮಂ ತಾಳ್ದರ್: **ಮಲ್ಲಿನಾಪು,** ೧. ೨೧)

**ತ್ರೈವಿದ್ಯಾಸ್ಪದ** – ವ್ಯಾಕರಣ, ತರ್ಕ, ಜೈನಸಿದ್ಧಾಂತಗಳಲ್ಲಿ ಬಲ್ಲಿದನಾದವನು (ವಿದಿತ ವ್ಯಾಕರಣದ ತರ್ಕದ ಸಿದ್ಧಾಂತದ ವಿಶೇಷದಿಂ ತ್ರಯವಿದ್ಯಾಸ್ಪದರೆಂದೀ ಧರೆ ಬಣ್ಣಿಪುದು ದಿವಾಕರ ನಂದಿದೇವ ಸೈದ್ಧಾಂತಿಗಳಂ: **ಸುಕುಮಾಚ,** ೧. ೨೮)

**ತ್ರೋಟಿ** – ಕೊಕ್ಕು (ಎಱಕೆಗಳಂ ಮೆಲ್ಲನೆ ಉರ್ಚುತ್ತೆ ನಿಂದು ಒಯ್ಯನೆ ಸಾರ್ದು ಆ ತ್ರೋಟಿಯಿಂದಂ ತೊಡೆದು ಗಱಿಗಳಂ ನುಣ್ಣವಿರ್ ಬಿರ್ಚಿ ಮೆಯ್ಯಂ ತೊನೆದು ಉದ್ದಂ ನೀಡಿ ಗೋಣಂ ನವ ದಿನಮುಖದೊಳ್ ಕುಕ್ಕುಟಂ ಕೂಗಿತಾಗಳ್: **ಶಾಂತೀಶ್ವಪು,** ೧೧. ೯೬)

**ತ್ರ್ಯಂಬಕ** – ಮೂರು ಕಣ್ಣುಳ್ಳವನು, ಶಿವ ತ್ರ್ಯಂಬಕನಂ ಬಲವರಲ್ ಎರಡೆಂಬೀ ಪದವೆಯ್ದೆವಂದು ನಾಲ್ಕುಂ ಕಾಲಿಂದಂ ಬಲವಂದಳ್: **ಗಿರಿಜಾಕ,** ೩. ೭೨)

**ತ್ರ್ಯಶ್ರೀಕೃತ** – ನಾಟ್ಯದ ಒಂದು ಭಂಗಿ (ಶ್ರೀಕಮಳಲೋಚನಂ ತ್ರ್ಯಶ್ರೀಕೃತಪದನಯನ್ನತೈಕಜಘನಂ ಲಲಿತಭೂತ ತಿರ್ಯಗ್ವಳಿತ ವ್ಯಾಕುಂಚಿತಕಂಠನೂದುತಿರ್ದಂ ಕೊಟಲಂ: **ಜಗನ್ನಾವಿ,** ೫. ೧)

**ತ್ರ್ಯಷ್ಠಿ** – ಆನೆಯ ಶರೀರಮಧ್ಯದ ಒಂದು ಭಾಗ (ಅಜಕುಕ್ಷಿಯಂ ಗೂಢಪುಷ್ಕರನಂ ವಿಪುಳಾಯತಬಾಹುವಂ ವರಾಹಜನನಪರನಂ ಸುಸ್ಥಿತ ತ್ರ್ಯಷ್ಠಿಲಾಂಗೂಲನಂ: **ಶಾಂತಿಪು,** ೧೦. ೧೪೨ ವ)

**ತ್ವಗಸ್ಥಿಭೂತಸರ್ವಾಂಗ** – ದೇಹದಲ್ಲಿ ಚರ್ಮ–ಮೂಳೆಗಳು ಮಾತ್ರ ಉಳಿದಿರುವಷ್ಟು ಕೃಶವಾದ (ಪ್ರಾಯೋಪಗಮನವಿಧಿಯಿಂ ತ್ವಗಸ್ಥಿಭೂತಸರ್ವಾಗಂ ಧೈರ್ಯಮನೆ ಮನದೊಳ್ ಅವಲಂಬಿಸಿ: **ಆದಿಪು,** ೬. ೩೩ ವ)

**ತ್ವಗ್ಜ** – ತೊಗಲಿನಿಂದ ಮಾಡಿದ (ತ್ವಗ್ಜಲೋಹಜಬಂಧಂಗನೆಲ್ಲಮಂ ಪಱಿವಿನಂ ಪೊಯ್ದೆತ್ತಿ ಮೊತ್ತಕ್ಕೆ ಕಾಯ್ದು: **ಪಂಪರಾ,** ೧೫. ೩೧)

**ತ್ವಚ** – ತೊಗಲು (ತ್ವಚಂ ಅಜಿನಾಸೃಗ್ಧರೆ ಕೃತ್ತಿ ಧರ್ಮಮೆನೆ ತೋಲ್ ತ್ವಗಾಹ್ವಯಂ: **ಅಭಿಧಾವ,** ೧. ೧೨. ೨೮)

**ತ್ವತ್** – ನಿನ್ನ (ವಿಶ್ವಂಭರಭೂಪಂ ಬೇಡಿದಂ ತ್ವತ್ ಸುತೆಯಂ ಒಸೆದು ಕಂದರ್ಪದೇವಂಗೆ: **ಕುಸುಮಾಕಾ,** ೧೩. ೧೧೨)

**ತ್ವದೀಯ** – ನಿನ್ನ, ನಿನಗೆ ಸಂಬಂಧಿಸಿದ [ಸೇರಿದ] (ತ್ವದೀಯ ತನುಚಿಂತೆಯಂ ಪಡೆಯೆ ನಿತ್ಯನೈಶ್ಚಿಂತ್ಯಮಂ ತ್ವದೀಯ ಪದಪೂಜೆಯೊಳ್ ತೊಡರೆ: **ಚಂದ್ರಪ್ರಪು,** ೪. ೯೫)

**ತ್ವರಿತ** – ಬೇಗನೆ (ತ್ವರಿತದಿಂ ಬಂದಂ ಪ್ರತೀಹಾರಕಂ: **ಪಂಪರಾ,** ೨. ೨); ಬೇಗ (ಕ್ಷಿಪ್ರಂ ತ್ವರಿತಂ ದ್ರಾಜ್ಞಂಕ್ಷು ಝಡಿತಿ ಲಘು ಶೀಘ್ರಂ: **ಅಭಿಧಾವ,** ೨. ೨. ೧೩)

**ತ್ವರ್ಯ–** ತ್ವರೆ (ತಳೆದಿರ್ದನು ತ್ವರ್ಯದೊಳ್ ಈಶಕಿಂಕರಂ: **ತ್ರಿಷಷ್ಟಿಪು,** ೮. ೬೦)

**ತ್ವಿಡ್** – ಪ್ರಕಾಶ (ಜಿತಕಂದರ್ಪ ಕಸ್ತೂರಿಕಾ ತ್ವಿಡ್ ಗರ ಭಾಸ್ವದ್ಗ್ರೀವ ಚಂದ್ರದ್ವಿಗುಣಿತರುಚಿ ನೀಂ ಪಾಲಿಸೆಮ್ಮಂ ಕಪರ್ದಿ: **ಶಬರಶಂ,** ೨. ೨೩)

# ಥ

**ಥಟ್ಟು** – ಸೈನ್ಯ (ರಾಮರಾವಣರ ಬಲ್ಪ ಮೆಲ್ಪುಮಂ ಕಾಣಲಪ್ಪುದು ಥಟ್ಟೊತ್ತಿಱಿವಲ್ಲಿ ದಿಟ್ಟಿದೊಲೆಯಿಂ ತೂಗಿಂ ರಣಕ್ಷೋಣಿಯೊಳ್: **ಪಂಪರಾ,** ೧೦. ೨೩೨)

**ಥಟ್ಟುಮಾಡು** – ದಾಳಿ ಮಾಡು (ಪೊಡೆವ ಪೊಯ್ವ ತಱುಂಬುವ ಥಟ್ಟುಮಾಳ್ಪ ಮುಂಬರಿವ .. .. ಬಿನ್ನಣಮೊಪ್ಪೆ ಕಡಂಗಿ ಕಾದಿದರ್: **ರಾಜಶೇವಿ,** ೬. ೫೩)

**ಥಳಥಳಿಸು** – ಹೊಳೆ (ಧನದನಗಂ ತನಗಟ್ಟಿದೊಡೆ ರಾಯಭಾರಿತನಂ ಬಂದಂತಿರ್ಪುವಿದಱ ಕುಂಜೋಪಾಂತಂ ಥಳಥಳಿಸಿ ಬೆಳಗೆ ಕುಳಿಶಾಶ್ಮಂಗಳ್: **ಶಾಂತಿಪು,** ೨. ೧೧೫)

# ದ

**ದಂಟು** – ತಾವರೆ ಮುಂತಾದುದರ ನಾಳ (ಪಿಡಿದ ಬಿಲ್ಲೆ ದಂಟೊಂಗೆಣೆ ಕಣ್ಗೆಟ್ಟ ಮುದುಪಂಗೆ: **ಪಂಪಭಾ,** ೧೦. ೧೭)

**ದಂಡ** – ದಂಡನೆ; ಕೋಲು (ನೋಟ್ಟಿವೊಲ್ ಇರದೆ ಊಱುವ ದಂಡವೆರಸು ಬರ್ಪನನಾಗಳ್: **ಜೀವಸಂ,** ೧೧. ೫೩)

**ದಂಡಕಾಷ್ಠ** – ದಂಡಗೋಲು (ನೀರದಪಥದೊಳ್ ತಗುಳ್ದು ಅರಿಗನಂ ಪೊಗಟ್ಟಾಡಿದಂ ಅಂದು ದಂಡಕಾಷ್ಠದ ತುದಿಯೊಳ್ ಪಳಂಚಲೆಯೆ ಕೋವಣವಂ ಗುಡಿಗಟ್ಟಿ ನಾರದಂ: **ಪಂಪಭಾ,** ೧೨. ೨೧೯)

**ದಂಡಂಗೊಳ್** – ದಂಡನೆಗೊಳಗಾಗು (ಲೆಂಕರ್ ದಂಡಂಗೊಂಡರಂತೆ ಶಂಕಿಸುತ್ತುಂ ಪೆಱಪಿಂಗೆ ಪರಿಚಾರಕಿಯರ್ ಇರಲಾಱದೆ ನುಸುಳ್ದೊಡೆ: **ಧರ್ಮಾಮೃ,** ೪. ೯೭ ವ)

**ದಂಡಖಂಡ** – ಚಿಕ್ಕ ಕೋಲು (ದಂಡಖಂಡಾಘಾತದೊಳು ಮುದಿರ್ದು ನೆಲದೊಳ್ ಬಿರ್ದ ನೇಜಿಲ ಪಣ್ಗಳಂ .. .. ಸಾರ್ಚಿ ಕೊಟ್ಟು: **ಸುಕುಮಾಚ,** ೪. ೬೩ ವ)

**ದಂಡತೋರಣಕ** – ನೀರೆತ್ತುವ ರಾಟೆಯ ಅರೆಕಾಲುಗಳ ಪಂಕ್ತಿ (ಮಲಜಯವಾರಿಯಿಂ ಕುಳಿರ್ವ ಬಾವಿಗಳಲ್ಲಿ ಮೃಣಾಳದಂಡಮಂಡಲಿಗಳ ದಂಡತೋರಣಕದಿಂ .. .. ಸಮೆದಾಡುವ ಜಾಟಳಂಗಳಂ: **ಕಾದಂಬ,** ೭. ೨೧)

**ದಂಡತ್ರಯ** – [ಜೈನ] ಮನಸ್ಸು, ದೇಹ, ಮಾತುಗಳಿಗೆ ಸಂಬಂಧಿಸಿದ ಮೂರು ಬಗೆಯ ದೋಷಗಳು (ಮಣೊದಂಡ ವಾಗ್ದಂಡ ಕಾಯದಂಡಮೆಂಬ ದಂಡತ್ರಯಮಂ ಪರಿಹರಿಸುತ್ತುಂ: **ಅಜಿತಪು,** ೭. ೮ ವ)

**ದಂಡಧರ** – ದಂಡವನ್ನು ಹಿಡಿದಿರುವವನು, ಅಧಿಕಾರ ಹಿಡಿದವನು (ಮತ್ತಂ ದಂಡಧರರಿಲ್ಲದಂದು ತಂತಮ್ಮ ವೃತ್ತಿಗಳಂ ಪ್ರಜೆಗಳತಿಕ್ರಮಿಸಿ ನಡೆಗುಂ ಎಂದು: **ಆದಿಪು,** ೮. ೭೪ ವ); ಕಾವಲುಗಾರ, ಯಮ (ಸೇನಿಕನೆಂಬ ದಂಡಧರಂ ಕೊಲೆ ದಂಡಧರಮುಖಕುಹರಮಂ ಸಾರ್ದು ಸಪ್ತಮನರಕಂಬೊಕ್ಕು: **ಕರ್ಣನೇಮಿ,** ೩. ೮೭ ವ)

**ದಂಡನಮಸ್ಕಾರ** – ಸಾಷ್ಟಾಂಗ ನಮಸ್ಕಾರ (ಮಾರಿ ಮಲಯಾನಿಲಂ ನವನೀರಜವನಮೆಂಬ ಕೆಂಡದೊಳ್ ದಂಡನಮಸ್ಕಾರಂ ಬಂದಪಂ: **ಯಶೋಧಚ,** ೧. ೩೮)

**ದಂಡನಾಥ** – ಸೇನಾಧಿಪತಿ (ಸುವ್ರತನಿಧಾನಂ ರಾಯದಂಡಾಧಿನಾಥ ಕೃತಾಂತಂ ಪೆಸರ್ವೆತ್ತ ಚಾಕಣಂ: **ಅನಂತಪು,** ೧. ೨೬)

**ದಂಡನೀತಿ** – ರಾಜನೀತಿ (ನಿನ್ನ ದಂಡನೀತಿಯ ಉದುವೆ ವಲಂ ಸಂಡರತ್ನಮೆಂಬುದು ಪೆಜಿತೇ: **ಆದಿಪು,** ೧೩. ೨೭)

**ದಂಡಪಾಣಿ** – ಗದೆ ಹಿಡಿದವನು, ಯಮ (ಕೋದಂಡಪಾಣಿಗಳ್ ದಂಡಪಾಣಿಗಣೆಯನೆ ತಳರ್ದರ್: **ಪಂಪರಾ,** ೪. ೫೧)

**ದಂಡಭ್ರಮ** – ತಪ್ಪು ತಿಳಿವಳಿಕೆಯಿಂದ ಮುಗ್ಧನನ್ನು ದಂಡಿಸುವುದು (ದಂಡಭ್ರಮಂ ಕುಲಾಲಚಕ್ರದೊಳ್ .. .. ಮಹಾಮಾತ್ರವರ್ತನಂ ಸೃಣಿಯೊಳ್ ಅಲ್ಲದಿಲ್ಲಮೆಲ್ಲಿಯುಂ: **ಚಂದ್ರಪ್ರಪು,** ೩. ೯ ವ)

**ದಂಡಮುಷ್ಟಿಕರ** – ಕೈಯಲ್ಲಿ ಕೋಲು ಹಿಡಿದವನು [ದನ ಕಾಯುವವನು] (ಸೊಕಮಿರ್ಕೆ ಅಕ್ಕಟ ದರ್ಭಪಾಣಿ ಯಮಜಂ ದರ್ವೀಕರಂ ವಾಯುಪುತ್ರಕನುಂ ಜರ್ಜರಹಸ್ತಂ ಇಂದ್ರತನಯಂ ದಸ್ರಾತ್ಮಜರ್ ದಂಡಮುಷ್ಟಿಕರರ್ ಶಸ್ತ್ರವಿಡಂಬಂ ಐವುದವರ್ಗಂ ಪಾಂಚಾಲಿಯುಂ ಗಂಧದಾಯಕಿಯಾಗಿರ್ಪಿನಂ ಅಂದು ಮತ್ಸ್ಯಗೃಹದಿಂದ ಈ ನಿಗ್ರಹಂ ಪೊಲ್ಲದೇ: **ಗದಾಯು,** ೩. ೩೪)

**ದಂಡರತ್ನ** – [ಜೈನ] ಏಳು ಜೀವರತ್ನಗಳಲ್ಲಿ ಒಂದು, ದಿವ್ಯದಂಡ (ವಿಷಮಭೂತಳಮನನಿತುಮಂ .. .. ಸಮತಳಂ ಮಾಡೆ ಕೈಗೆ ಬಂದ ದಂಡರತ್ನಮುಂ: **ಚಂದ್ರಪ್ರಪು,** ೬. ೧೦೧ ವ)

**ದಂಡಾಧಿನಾಥ** – ದಂಡನಾಯಕ (ವಿಷಯ ಗೃಹಾಮಾತ್ಯ ದಂಡಾಧಿನಾಥಾವಳಿ ಧರ್ಮಾಧ್ಯಕ್ಷ ಕೋಶಾಧಿಪ ತಳವರ ಹಾಸ್ಯಾದಿ ತಂತ್ರಾಳಿಪಾಳಾವಳಿ ರಾಜಶ್ರೇಷ್ಠಿ ಸೇನಾಪರಿಕರಣ ಪುರೋಧೋಧಿಕಾರ ಅಂಗರಕ್ಷಾವಳಿ ಮುಖ್ಯಂಬೆತ್ತ ಬಾಹತ್ತರದೆಸಕದ ನಾನಾ ನಿಯೋಗಿಪ್ರತಾನಂ: **ಶಾಂತೀಶ್ವಪು,** ೧೫. ೯೦)

**ದಂಡಿಗೆ** – [ದಂಡಿಕಾ] ಪಲ್ಲಕ್ಕಿ; ಒಂದು ತಂತೀವಾದ್ಯ (ತುಂಗ ಮೃದಂಗದುಪಾಂಗದ ಚಂಗಿನ ದಂಡಿಗೆಯ ತಾಳದ ಆವುಜದ : **ರಾಜಶೇವಿ,** ೧೨. ೬೦)

**ದಂಡಿತ** – ದಂಡನೆಗೊಳಗಾದ, ಸೋತ ಕೊಳದೊಳ್ಪು ಮನಂಗೊಂಡಿರೆ ಪೊಕ್ಕು ಅಲ್ಲಿ ಪಾದಶುದ್ಧಿಯನಾಗಳ್ ದಂಡಿತದಿನೋದಿ ವಿಳಸನ ಖಮಡಿತ ಗುಣಂ ಉತ್ತರಾಭಿಮುಖದೊಳ್ ನಿಂದಂ: **ಹರಿವಂಶ,** ೨. ೪೦)

**ದಂಡಿಸು** – ಶಿಕ್ಷೆಗೊಳಪಡಿಸು (ಈತನಂ ದಂಡಿಸೆಮದು ಯಮದಂಡಂಗೆ ಬೆಸವೇಟ್ಟೊಡೆ: **ವಡ್ಡಾರಾ,** ಪು. ೧೨೪, ಸಾ. ೧೯)

**ದಂಡು** – ಸೈನ್ಯ (ದಂಡಿಂಗೆ ಪೋಪೆನೆಂದೆನೆ ಗಂಡಂ ನವಯುವತಿ ಭೀತಿಗೊಂಡಳ್ ಕೇಳ್ದು: **ಪಾರ್ಶ್ವನಾಪು,** ೩. ೧೫)

**ದಂಡುಜುಂಬೆ** – ಗಯ್ಯಾಳಿ, ದಿಟ್ಟೆ (ಅಂಬೆಯೆಂಬ ದುಂಡುಜುಂಬೆ ನಿನಗೆ ವಧಾರ್ಥಮಾಗಿ ಪುಟ್ಟುವೆನಕ್ಕೆ: **ಪಂಪಭಾ,** ೧. ೮೦ ವ)

**ದಂಡುಟೆಗ** – ಯುದ್ಧದಲ್ಲಿ ಸೆರೆಸಿಕ್ಕವನು, ಯುದ್ಧಖೈದಿ (ಒಂದರ್ಥಕ್ಕೆ: ದಂಡುಟೆಗನೆಂದು ದಂಡದೊಳ್ ಪಡೆದವಂ: **ಶಬ್ದಮದ,** ೩೩ ವೃತ್ತಿ ೩೩)

**ದಂಡುಟೆಗೊಳ್** – ಯುದ್ಧದಲ್ಲಿ ವಶಪಡಿಸಿಕೊ (ದಂಡೋಪನತರಾದ ಮಂಡಳಿಕರೊಳ್ ದಂಡುಟೆಗೊಂಡ ಮದವೇತಂಡ ಗಂಢಭಿತ್ತಿಗಳ ಪುಷ್ಕರಷಂಡದ .. .. ಶೀಕಾರಾಸಾರದೊಳಂ: **ಅನಂತಪು,** ೧. ೧೦೫ ವ)

**ದಂಡೆಗಟ್ಟು** – ಮಾಲೆಯಾಗಿ ಕಟ್ಟು (ದಂಡೆಗಟ್ಟಿದ ಮಲತಿಯ ಮುಗುಳ ವನಮಾಲೆಗಳುಮಂ: **ಜಗನ್ನಾವಿ,** ೬. ೧೬ ವ)

**ದಂಡೆಗೊಡು** – ವೀರಮಂಡಿಯಲ್ಲಿ ಕುಳಿತುಕೊ (ಭಟಾಗ್ರಣಿ ಪರಿದು ದಂಡೆಗೊಂಡಡ್ಡಣದಿಂದಂ ಚಂಡಶಾಸನಂ ಕೈಕೊಂಡಂ: **ಅನಂತಪು,** ೧೧. ೮೪)

**ದಂಡೆಗೊಳ್** – ದಾಳಿಮಾಡು (ದಂಡೆಗೊಳುತ್ತದಂ ಪೊಳೆದು ಚಿಮ್ಮಿದಂ ಈಶ್ವರನಲ್ಲಿ: **ಶಬರಶಂ,** ೪. ೫೯)

**ದಂಡೆದೊಂಡಿಲ್** – ಕುಚ್ಚಿನ ಹಾಗಿರುವ ಒಂದು ಆಭರಣ (ಪೀನಪಯೋಧರೆಯರ್ ಶೈಳತನೂಜೆಗೆ ವರರತ್ನದ ದಂಡದೊಂಡಿಲಂ ಸೈತಿಟ್ಟರ್: **ಗಿರಿಜಾಕ,** ೧೦. ೪೪)

**ದಂಡೋಕ್ತಿ** – ದಂಡನೆಯ ಮಾತು (ಸಾಮಾಭಾಸದಿಂ ದಂಡೋಕ್ತಿಯನೆ ನುಡಿಯಲೊಡಂ: **ಚಂದ್ರಪ್ರಪು,** ೬. ೨೨ ವ)

**ದಂಡೋಪನತ** – ಸಾಷ್ಟಾಂಗ ನಮಸ್ಕಾರ ಮಾಡಿದವನು (ಅನೇಕ ತುರಗಮಣಿಪ್ರತತಿಗಳಂ ಮುಂದಿಟ್ಟು ಅವನತರಾದರ್ ಚಕ್ರಿಗಳ್ಕಿ ದಂಡೋಪನತರ್: **ಆದಿಪು,** ೧೨. ೬೫)

**ದಂಡೋಪನತ್ಯ** – ಶರಣಾಗುವಿಕೆ (ಸೆಣಸಲ್ ಮಾರ್ಮಲೆಯಲ್ ಬೆಸಕ್ಕೆ ಬೆಸೆಯಲ್ ದಂಡೋಪನತ್ಯಕ್ಕೆ ಟೆಂಠಣಿಸಲ್; **ಶಾಂತಿಪು,** ೯. ೧೮೫)

**ದಂತ** – ಹಲ್ಲು (ಶಾಂತಿಯನಾಂತು ದಂತವೆಯ್ದಿದುದು ಅತಿಕಾಂತಿಯಂ: **ಪುಷ್ಪದಂಪು,** ೧. ೩೨); ಆನೆಯ ಕೋರೆ (ನಿನ್ನ ಕೀರ್ತಿಮುಖಂ ಕೀರ್ತಿಮುಖಂಬೊಲೇಂ ಎಸೆದುದೋ ದಿಗ್ದಂತಿ ದಂತಂಗಳೊಳ್: **ಪಂಪಭಾ,** ೬. ೬೬)

**ದಂತಚ್ಛದ** – ತುಟಿ (ವಿಲೋಚನಯುಗಂ ಪಂಕೇಜಪತ್ರಪ್ರಭಂ ರದನಂ ವಜ್ರಸಮಂ ಪ್ರವಾಳಸದೃಶಂ ದಮತಚ್ಛದಂ: **ರಾಜಶೇವಿ,** ೩. ೬)

**ದಂತಪತ್ರ** – ಕಿವಿಗೆ ಹಾಕಿಕೊಳ್ಳುವ ಓಲೆ (ಪೂರ್ವದಿಕ್ಕಾಂತೆಯ ಲೀಲಾ ದಂತಪತ್ರಂ .. .. ನಭೋಲಕ್ಷ್ಮಿಯ ಲಾವಣ್ಯಪ್ರದಂ ಬಂದುದಯಿಸಿತು .. .. ಚಂದ್ರಬಿಂಬಂ: **ಕಾದಂಬ,** ೮. ೭೦)

**ದಂತಪ್ರಭೆ** – ದಂತಕಾಂತಿ (ಆ ಕುವರನ ದಂತಪ್ರಭೆಯೆಂಬ ಶೀತಕರನುದಯಂ ಅಘಧ್ವಾಂತೌಘ ಮಧುಪ ಮಾಲಿಕೆಯಂ ತೊಲಗಿಸೆ: **ಯಶೋಧಚ,** ೧. ೬೭)

**ದಂತಶಲ್ಕ** – ದಂತದ ಚೆಕ್ಕೆ (ನಭಂ ಮದದಾನೆಯ ದಂತಶಲ್ಕವೆಂಟುಂ ದೆಸೆಗುಳ್ಕದಂತೆಸೆಯೆ .. .. ತಾಗಿದುವಂದೆರಡುಂ ಚತುರ್ಬಲಂ: **ಪಂಪರಾ,** ೪. ೬೦)

**ದಂತಾಗ್ರ** – ಆನೆಯ ದಂತದ ತುದಿ (ದರಿಯಂ ದಂತಾಗ್ರದಿಂದೀಡಿಜಿದು ಕೆಡಪುತುಂ: **ಗಿರಿಜಾಕ,** ೧. ೧೧೨)

**ದಂತಾವರಣ** – ತುಟಿ (ಆರಯೆ ದಂತಾವರಣಂ ಪ್ರವಾಳರುಚಿರಚ್ಛಾಯಾರುಣಾಕ್ಷೇಪಿ .. .. ಸುರೂಪಾಶ್ಚರ್ಯಮಾ ಕನ್ನೆಯಾ: **ಸುಕುಮಾಚ,** ೫. ೫೩)

**ದಂತಾವಳ** – ಆನೆ (ಮೂಡಿತ್ತು ಅವಗಾಹಮಿರ್ದು ಕೊಳದಿಂ ಕಾಯ್ದೊಂದು ದಂತಾವಳಂ: **ನೇಮಿನಾಪು,** ೫. ೧೧೨)

**ದಂತಾಹತಿ** – ಆನೆಯ ದಂತದ ಹೊಡೆತ (ದಂತಾಹತಿವಿದಳಿತ ಗೋಶೀರ್ಷಸಾರದ್ರವಾಮೋದದಿನೆತ್ತಂ ಗಂಧವಾಹಂ ಮಗಮಗಸೆ: **ಆದಿಪು,** ೧೩. ೬೮)

**ದಂತಿ** – ಆನೆ (ಶಲ್ಯನಂ ಅಂದು ಅಶಲ್ಯನಂ ಬಗೆವವೊಲ್ ಏಳಿದಂಬಗೆದು ದಂತಿಯಂ ಆಗಡೆ ತೋಜಿಕೊಟ್ಟು ತೊಟ್ಟಗೆ ರಥಮಂ ಪಡಲ್ವಡಿಸಿ ಪೂಣ್ದಿಂ ಅರಾತಿಯಂ ಅಸ್ತ್ರಕೋಟಿಯಿಂ: **ಪಂಪಭಾ** ಪರಿಷತ್ತು, ೧೦. ೧೧೧);

**ದಂತಿಘಟೆ** – ಆನೆಯ ಸೈನ್ಯ (ದಂತಿಘಟೆ ದಂತಿಘಟೆಯೊಳಾಂತು ಮೊಗಮಿಕ್ಕೆಯುಂ: **ಪಂಪರಾ,** ೧೩. ೭೬ ವ)

**ದಂತಿನಿ** – ಹೆಣ್ಣಾನೆ (ದಂತಿನಿ ಮೊಲೆಯೂಡೆ ನಿಂದು ನಿಜಪೋತಮಂ: **ಶಾಂತಿಪು,** ೨. ೧೦೫)

**ದಂತಿಪ** – ಆನೆಯನ್ನು ಕಾಯುವವನು, ಮಾವತಿಗ (ಅಂತೆಸೆಯೆ ಪಾಡುತಿರೆ ತತ್ ದಂತಿಪಂ ಅತಿ ನೂತ್ನ ಗೀತ ಪತನ ವಿಕಳಸ್ವಾಂತೆಗೆ ನೋಡುವ ಕೂಡುವ ಚಿಂತೆ ಕಡಲ್ವರಿದುದು: **ಯಶೋಧಚ,** ೨. ೩೨)

**ದಂತುರ** – ಹರಡಿರುವ (ಸೂಕ್ಷ್ಮಮಾದ ತುಪ್ಪುಳ ತತಿಯಿಂ ದಂತುರಮಾದ ಎನ್ನಂಗಮಂ ಅಂತರಿಸದೆ ಕರದಿನೆಟಿವಿದಂ: **ಕಾದಂಸಂ,** ೮. ೨೪)

**ದಂತುರಿತ** – ವ್ಯಾಪಿಸಿದ (ಬಹುಳಕಾಂತಿ ದಂತುರಿತ ಚಂದ್ರಕಾಂತ ಕಲಶಂಗಳಿಂ: **ಪಂಪರಾ,** ೧೨. ೨ ವ)

**ದಂದಶೂಕ** – ಹಾವು (ಕುಪಿತ ಅನೇಕಪ ದಂದಶೂಕ ದವದೈತ್ಯಾರಾತಿಚೋರಾಂಧಕಾರಪತದ್ಧ್ವಜವಿಷಾಭಿಚಾರಿಕಜರಾತ ಂಕಾದಿಭೇದಂಗಳ: **ಆದಿಪು,** ೧೬. ೯)

**ದಂದಶೂಕಪತಾಕ** – ಸರ್ಪಧ್ವಜ, ದುರ್ಯೋಧನ (ದಂದಶೂಕಪತಾಕನ ಗೆಲ್ಲದ ಮುಳಿಸಿನಂದಮನಜಿದು ಸಂಜಯನೆಂದಂ: **ಗದಾಯು,** ೫. ೩೭ ವ)

**ದಂದಶೂಕಪತಿ** – ಆದಿಶೇಷ (ಭಾಳವಿಲೋಚನಂ ದಂದಶೂಕಪತಿಹಾರಮಂದಾರಸ್ಮೇರಮುಖಂ: **ರಾಜಶೇವಿ,** ೧೪. ೮೬)

**ದಂದಶೂಕಪ್ರಮಾಥಿ** – ಹಾವುಗಳ ಮರ್ದಕ, ಗರುಡ (ದಂದಶೂಕಪ್ರಮಾಥಿಯಂ ಯಥೋಚಿತ ಸ್ನಿಗ್ಧಮಧುರಾಳಾಪದಿಂ ಸಂಭಾಷಿಸಿ ದೇವಕೀನಂದನಂ: **ಜಗನ್ನಾವಿ,** ೮. ೮೦ ವ)

**ದಂದಹ್ಯಮಾನಮಾನಸ** – ದುಃಖದಿಂದ ಬೇಯುವ ಮನಸ್ಸುಳ್ಳವನು (ಮಾನಸರ್ ಅಸಹ್ಯ ಶೋಕಾನಲ ದಂದಹ್ಯಮಾನಮಾನಸರಾಗೆ: **ಪಂಪರಾ,** ೧. ೮೧ ವ)

**ದಂದುಗ** – ವ್ಯಥೆ (ಪಲವುಂ ಶೀಲಂಗಳಂ ತಾಳ್ದಿದಂದುಗವೆಂದುಂ ತಮಗಾಗದಂತೆಸಗುವರ್ ಸರ್ವೋತ್ತಮರ್ ಸರ್ವಸಾಧುಗಳ್: **ಆದಿಪು,** ೧. ೫); ಗೊಡವೆ (ಮುನ್ನಾ ವಿಧಾತ್ರಂ ಕುಡಲಿರ್ದಂ ಕನ್ನೆಯಂ ಪೇಟ್ ನಿನಗಮೆನಗಮೇಂ ದಂದುಗಂ ವಜ್ರಬಾಹೂ: **ಆದಿಪು,** ೪. ೨೭)

**ದಂಪತಿ** – ಗಂಡಹೆಂಡಿರು (ಮನ್ಮಥಕ್ರೀಡೆಗೆ ನೋಡೆ ನಾಡೆ ಗುಜಿಯಪ್ಪುವು ದಂಪತಿ ಭೋಗಭೂಮಿಯೊಳ್: **ಆದಿಪು,** ೫. ೪೧)

**ದಂಭೋಳಿ** – ಸಿಡಿಲು (ಅಭ್ರರವಂ ಜ್ಯಾರವಂ ಎಯ್ದೆ ಸಂಚಳಿಪ ಮಿಂಚು ಉಗ್ರಾಸಿ ದಂಭೋಳಿ: **ಪಾರ್ಶ್ವನಾಪು,** ೮. ೧೬); ವಜ್ರಾಯುಧ (ಊರ್ಮಿಮಾಲಾಜೃಂಭ ದಂಭೋಳಿ ಹಸ್ತಾಹತಚಕಿತಗತ ಕ್ಷ್ಮಾಧ್ರ ವಿಸ್ತಾರ: **ರಾಜಶೇವಿ,** ೧. ೯೦)

**ದಂಭೋಳಿಹಸ್ತ** – ದಂಭೋಳಿಯನ್ನು ಹಿಡಿದವನು, ಇಂದ್ರ (ಜೃಂಭತ್ ದಂಭೋಳಿಹಸ್ತಾಹತ ಚಕಿತಗತ ಕ್ಷ್ಮಾಧ್ರವಿಸ್ಫಾರವಿದ್ಯುತ್ಸಂಭಿನ್ನಂ: **ರಾಜಶೇವಿ,** ೧. ೯೦)

**ದಂಶ** – ನೊಣ, ಚಿಗಟ (ತರಕ್ಷು ದಂಶಶತಸಂವೃತಮಿರ್ದುದು ಅದೊಂದು ತಾಣದೊಳ್: **ರಾಜಶೇವಿ,** ೫. ೯೨)

**ದಂಶ** – ಕಚ್ಚುವುದು (ಅಸಿತಾಹಿದಂಶಮಾದುದು ದಿಟವೆಂದು ತಲ್ಲಣದಿಂ ಆಗಳೆ ಭೋಂಕನೆ ಮೂರ್ಛೆವೋಪುದುಂ: **ಕಾದಂಸಂ,** ೪. ೭೯)

**ದಂಷ್ಟ್ರಾಂಕುರ** – ಮೊಳೆಯುತ್ತಿರುವ ಕೋರೆ (ಸಿತದಂಷ್ಟ್ರಾಂಕುರಂ ಪಾಶಿಹಾರೋರುಮಯೂಖಂ .. .. ಬೆಳ್ದಿಂಗಳೆತ್ತಂ: **ರಾಜಶೇವಿ,** ೧೩. ೪೨)

**ದಂಸ** – ದಂಶ (ದೇವತೆ ಮುಳಿದು ಪೊಜಸುಗಳಣ ಇವಿರಿಯವು ದಂಸ ಮಸಕಂಗಳಂ ವಿಗುರ್ವಿಸೆ ಮೆಯ್ಯೆಲ್ಲಮನಿರುಳ್ ನಾಲ್ಕು ಜಾವಮುಂ ತಿನೆ: **ವಡ್ಡಾರಾ,** ಪು ೧೩೪, ಸಾ ೧೮)

**ದಕ್ಕಣ** – ಸಾಹಸ, ಛಲ (ಸಮಕಟ್ಟಿಕೊಂಡು ಸಾಧಿಸುವ ದಕ್ಕಣಂ ಸರಿಗೆವಾಳಮೆನಿಪ್ಪ ನೆಗರ್ತೆ ಕೂಡೆ ಮಾಡಿಸಿದಂ ಅದೊಂದು ನಂದನಮಂ: **ವರ್ಧಮಾಪು,** ೨. ೧೩)

**ದಕ್ಕಾಲಿ** – ನೋಡಲಾರದ ಕಣ್ಣು (ವಿಪ್ರಳಾಪಂಗೆಯ್ಯುತ್ತಂ ಮುಂದೆಲ್ಲಮಿರ್ದು ಕಣ್ಗಳ್ ದಕ್ಕಾಲಿಬಿರ್ದು: **ಹರಿವಂಶ,** ೧೪. ೪೭ ವ)

**ದಕ್ಕು** – ದಸಿ, ಮುಳ್ಳಿನಂಥ ಕತ್ತಿ (ಪುಸಿ ನಸುವಂಚನೆ ನೋರ್ಪು ಅಸಿದು ಅಗಲಿತು ತಕ್ಕು ದಕ್ಕು ಪಗೆ ಕೆಯ್ಬುಗೆ ಕೆಯ್ ಕುಸುರಿ ನುಸುಳೆಂಬ ಕೇಣದ ಕುಸುರಿಯಂ ಅಜಿದು ಇಜಿದು ಮೆಜೆದು ಉಜಿದೆ ಅರೆಬರ್: **ಪಂಪಭಾ,** ೧೦. ೮೧)

**ದಕ್ಕುಂದಲೆ** – ಶೂಲದ ಮೇಲಣ ತಲೆ (ಅಲ್ಲಿ ಗುಡಿಗಟ್ಟಿದ ಸೀರೆಯಂತೆ ದಕ್ಕುಂದಲೆಗೆ ವಂದರುಂ ಮೆಚ್ಚುಕಯ್ವರಂತೆ ತೂಗುವ ತೂಗುಂದಲೆಗಳುಮಂನಜಿಸಿ ಕಾಣದೆ: **ಹರಿವಂಶ,** ೨. ೧೧ ವ)

**ದಕ್ಕುಂದಲೆವರಿ** – ಗರ್ವದಿಂದ ಮುಂದೆ ನುಗ್ಗು (ಉರ್ಕಿಂ ಸೊಕ್ಕಿ ದಕ್ಕುಂದಲೆವರಿದಪ್ಪರ್ ಕರಂ ನಂದಿದಪ್ಪರ್: **ಅನಂತಪು,** ೧೩. ೧೬)

**ದಕ್ಷ** – ಸಮರ್ಥ (ಶ್ರೀರಮಣೀ ರಮಣಾಂಗರಿನಾರೀ ವೈಧವ್ಯದಿವ್ಯದೀಕ್ಷಾದಕ್ಷಂಗಾರೆಣೆ: **ಪಂಪರಾ,** ೭. ೧)

**ದಕ್ಷತೆ** – ಸಾಮರ್ಥ್ಯ (ಪ್ರವಚನ ಪರಿಪಠನಕ್ಷಮತೆ ವಾಣಿಯಂ ತೀರ್ಥಯಾನ ದಕ್ಷತೆ ಪದಮಂ ಕಿವಿಯಂ ಜಿನವರ ಚರಿತಶ್ರವಣಪಟುತೆ ಪಿಂಗದನ್ನಂ ಆರ್ಜಿಪೆನಜಿನಂ: **ಚಂದ್ರಪ್ರಪು,** ೪. ೧೭)

**ದಕ್ಷಿಣ** – ಬಲಗಡೆ (ಉನ್ನಮಿತ ದಕ್ಷಿಣಚರಣನುಂ ಅತಿಸ್ಪಷ್ಟ ವರ್ಣಸಂಸ್ಕಾರಮಪ್ಪ ಕೃತಜಯಶಬ್ದನುಂ ಆಗಿ: **ಕಾದಂಸಂ,** ೧. ೨೦ ವ)

**ದಕ್ಷಿಣವರ್ತನ** – ಬಲಕ್ಕೆ ತಿರುಗುವುದು (ದಕ್ಷಿಣವರ್ತನದಿಂದೆ ಪಜ್ಜಳಿಸುತಿರ್ದುದು ವಹ್ನಿಸಮಸ್ತಂ: **ಚಂದ್ರಪ್ರಪು,** ३. ೯೪)

**ದಕ್ಷಿಣವಿಷಾಣ** – ಬಲಭಾಗದ ದಂತ (ನಿಜಭುಜವಿಜಯಲಕ್ಷ್ಮೀ ಪರಿರಂಭಣಪ್ರಕಟನದಕ್ಷದಕ್ಷಿಣವಿಷಾಣವಿನ್ಯಸ್ತಹಸ್ತನುಂ: **ಆದಿಪು,** ೧೪. ೯೦ ವ)

**ದಕ್ಷಿಣಾಕ್ಷಿಸ್ಪಂದ** – ಬಲಗಣ್ಣ ಅದುರುವಿಕೆ (ಅರಿಮಕುಟರತ್ನಮಂ ನಿಜಚರಣಕ್ಕರ್ಘ್ಯಪ್ರದೀಪಮಾಗಿರ್ಪುದನಾ ಭರತೇಶ್ವರಂಗೆ ಸೂಚಿಸಿದತ್ತು ದಕ್ಷಿಣಾಕ್ಷಿಸ್ಪಂದಂ: **ಆದಿಪು,** ೧೧. ೧೨)

**ದಕ್ಷಿಣಾಗ್ನಿ** – ಅಗ್ನಿತ್ರಯದಲ್ಲಿ ಒಂದು (ತೀರ್ಥಕರಗಣಧರಾನಗಾರ ಕೇವಳಿಗಳ್ ಪರಿನಿರ್ವಾಣಕ್ಷೇತ್ರದೊಳ್ ಶರೀರಸಂಸ್ಕಾರಾದಿ ಗಾರ್ಹಪತ್ಯ ದಕ್ಷಿಣಾಗ್ನಿ ಆಹವನೀಯಮೆಂಬ ಪೆಸರಂ ಪಡದಂ: **ಆದಿಪು,** ೧೫. ೧೬ ವ)

**ದಕ್ಷಿಣಾಪಥ** – ವಿಂಧ್ಯಪರ್ವತದ ದಕ್ಷಿಣಕ್ಕಿರುವ ಭೂಭಾಗ (ದಕ್ಷಿಣಾಪಥದಿನೊರ್ವಳ್ ಕನ್ನೆ ಚಂಡಾಲೆ ದರ್ಶನತಾತ್ಪರ್ಯದೆ ರಾಜಕೀರಸಹಿತಂ ಬಂದಿರ್ದಪಳ್ ಬಾಗಿಲೊಳ್: **ಕಾದಂಬ,** ೧. ೨೨)

**ದಕ್ಷಿಣಾಭಿಮುಖ** – ದಕ್ಷಿಣಕ್ಕೆ ಎದುರಾದ (ದಕ್ಷಿಣಾಭಿಮುಖನಾಗಿ ನಿತ್ಯಪ್ರಯಾಣಂಗಳಿಂ ಬಂದು: **ಆದಿಪು,** ೧३. ೭೭ ವ)

**ದಕ್ಷಿಣಾವರ್ತ** – ಬಲಭಾಗವಾಗಿ ಸುತ್ತು, ಪ್ರದಕ್ಷಿಣೆ (ಹೋಮಾನಳನಂ ಮದುವಕ್ಕಳ್ ಮಿಸುಪ ಲಾಜೆಯಿಂ ಪೂಜಿಸಿದರ್: **ಜಗನ್ನಾವಿ,** ೧೦. ೧३३)

**ದಕ್ಷಿಣಾವೃತ್ತ** – ಸಂಗೀತದಲ್ಲಿ ಗೀತ ಹಾಗೂ ವಾದ್ಯಗಳ ಪ್ರಾಧಾನ್ಯ (ರಂಜಿಸುವಿನೆಗಂ ಎಸೆಗುಂ ದಕ್ಷಿಣಾವೃತ್ತ ವೃತ್ತತ್ರಿತಯಾಂತರ್ವರ್ತಿ ತಾನೆಂಬಿನಂ: **ಅಜಿತಪು,** ೫. ೫೨)

**ದಕ್ಷಿಣೇಂದ್ರ** – [ಜೈನ] ಆರು ಮಂದಿ ದಕ್ಷಿಣೇಂದ್ರರು: ಸೌಧರ್ಮ, ಸನತ್ಕುಮಾರ, ಬ್ರಹ್ಮ, ಶುಕ, ಅನತ, ಅರಣ್ಯ (ಬ್ರಹ್ಮಲೋಕನಿಳಯರಪ್ಪ ಲೋಕಾಂತಿಕರುಂ ದಕ್ಷಿಣೇಂದ್ರರುಂ .. .. ಭವವಲ್ಲೀದಳಫಲಮೂಲವಿಷಯಮುಂ ಪಱಿದು: **ಶಾಂತಿಪು,** ೧೨. ४३ ವ ಮತ್ತು ೧೨. ४४)

**ದಗುಂತಿ** – ಆಧಿಕ್ಯ (ದಿಶಾಕಾಂತೆಯ ಬೆಳ್ವಸದನದ ದಗುಂತಿಯನೇಂ ತನಗೆ ನಾಡೆಯುಂ ಮಾಡಿದುದೋ: **ಆದಿಪು,** ೧೧. ೯)

**ದಗ್ಧ** – ಸುಟ್ಟ (ವಿದುರಂ .. .. ಧೃತರಾಷ್ಟ್ರನ ಬೆಸದೊಳ್ ವಾರಣಾವತಕ್ಕೆ ಪೋಗಿ ತದರ್ಧ ದಗ್ಧ ಕಳೇವರಂಗಳಂ ಸಂಸ್ಕರಿಸಿ ಜಳದಾನಾದಿ ಕ್ರಿಯೆಗಳಂ ಮಾಡಿ ಮಗುಟ್ಚಿ ವಂದಂ: **ಪಂಪಭಾ,** ३. ೮ ವ)

**ದಟ್ಟಡಿ** – ಮಕ್ಕಳಿಡುವ ತಪ್ಪು ಹೆಜ್ಜೆ (ಕಂದಂ ನಿಂದು ಬೆರಲ್ವಿಡಿದು ಅದೆಂದೋ ದಟ್ಟಡಿಯಿಡುವಂ: **ಪುಷ್ಪದಂಪು,** ३. ೯೬)

**ದಟ್ಟಿ** – ಸಮರ್ಥ (ಬನಗಳೊಳ್ ತಾಣಂದರಮಾಗಿರ್ಪ ಕೆಂಗಣ್ವಕ್ಕಿ ಅಲರ್ವಕ್ಕಿ ಕನ್ನಡವಕ್ಕಿ ಪೊಣರ್ವಕ್ಕಿ ಮೊದಲಾದ ದಟ್ಟಿಯ ಕೂರಾಳ್ಗಳುಂ: **ಕಬ್ಬಿಗಕಾ,** ೧೫३ ವ)

**ದಡಿ** – ಕೋಲು (ದಡಿಯಂ ಪಿಡಿದಬ್ಬರಿಸುತ್ತುಮಿರ್ಪ ತೊಟ್ಟನೆ ಕೆಡೆಯುತ್ತುಮಿರ್ಪ .. .. ತತ್ಪುರೀಜನದ ಪೊದಳ್ದ ತಲ್ಲಣದ ಮಲ್ಲಣಿ: **ಆಚವರ್ಧ,** ३. ೫)

**ದಡಿಗ** – ದೊಣ್ಣೆಯನ್ನು ಹಿಡಿದವನು, ಪರಾಕ್ರಮಿ (ಅಡ್ಡಾಯುಧಮನೀಡಾಡಿ ದಡಿಯಂ ಕೊಂಡು ಪರಿವ ದಡಿಗರುಮಂ: **ಲೀಲಾವತಿ,** ೫. ೧೧೪ ವ); ದಾಂಡಿಗ (ದಡಿಗರ್ ಮಂತ್ರಿಸಿ ಕಟ್ಟಿದರ್ ಕಲಿಯ ಕೈಯ್ಯಂ ಬಾಯುಮಂ: **ನೇಮಿನಾಪು,** ३. ೮೦)

**ದಡಿಗವೇಣ** – ಭಾರಿ ಗಾತ್ರದ ಹೆಣ (ಕಾಲಿಡಲೆಡೆವಡೆಯದೆ ಕುರುಪತಿ ದಡಿಗವೇಣಂಗಳನೆ ಮೆಟ್ಟಿ ನಡೆಯುತ್ತಿರ್ದಂ: **ಗದಾಯು,** ೪. ೧೪)

**ದಡ್ಡಕ್ಕರ** – ಒತ್ತಕ್ಷರ, ದ್ವಿತ್ವ (ದಡ್ಡಕ್ಕರದ ಱಟಿಕ್ಕೆ ಪ್ರತಿಯಾಗಿ ರೇಫೆವೆರಸಿದ ದಡ್ಡಕ್ಕರಮಂ ಪ್ರಾಸಕ್ಕೆ ಪಿರಿಯರ್ ಪೇೞ್ದ ಪ್ರಯೋಗಮೊಳವು: **ಶಬ್ದಮದ,** ३४ ವೃತ್ತಿ)

**ದಡ್ಡಸ** – ಡೊಂಬರ ಡೊಳ್ಳು (ದಡ್ಡಸಮೆಂದು ಡೊಂಬಱಿ: **ಶಬ್ದಮದ,** ಪ್ರಸಾ ೧೧೪)

**ದಡ್ಡಿ** – ತೆರೆ, ತಡಿಕೆ (ದುಂಬಿಯ ಬಂಬಲಿಂ ಲತೆಗಳುಂ ಕರಿಯ ದಡ್ಡಿಯಂ ಕವಿದಂತೆಯುಂ ಆಗೆ: **ಕಾದಂಬ,** ೭. ೨३ ವ); ಬಲೆ (ಕಣ್ಗೆ ಇಂಬಾದ ಪೆಣ್ಗಾಗಿ ದಡ್ಡಿಗಳಂ ಸಾರ್ದಿರೆ ನೆಟ್ಟು ಕಟ್ಟಿ ಕಱಿದತ್ತು ಆಸಾರಮೀಧಾತ್ರಿಯೊಳ್: **ಉದ್ಭಟಕಾ,** ೯. ೧४५)

**ದಡ್ಡು** – ಒರಟು, ಜಡ್ಡುಗಟ್ಟಿರುವ (ಪಲ್ಲಣದೊತ್ತಿನಿಂದೊಗೆದ ದಡ್ಡುಗಳುಮಂ .. .. ಎಂತು ಸೈರಿಸಿದೆ: **ಕಾದಂಸಂ,** ೮. ೨४ ವ)

**ದಣಿಬ** – ವಸ್ತ್ರ, ನಡೆಮಡಿ (ಮುದದಿಂ ನಡೆತಂದರ್ ಪಾಸಿದ ದಣಿಬದ ಮೇಲೆ ಜಗಲಿಗಾ ದಮಪತಿಗಳ್: **ತ್ರಿಷಷ್ಟಿಪು,** ೧೮. ೬೨)

**ದಣುವಟ್ಟಿ** – ಕುಸ್ತಿಯ ಒಂದು ವರಸೆ (ಡೊಕ್ಕರಂ ಚಡಿಕೆ ತುಳಾಡಿ ಪೊಟ್ಟಮುಡುಹಂ ಮುಹಡಂ ದಣುವಟ್ಟಿ ಪಟ್ಟಿಸಂ: **ಅನಂತಪು,** ೨. ೨೭)

**ದತ್ತ** – ಕೊಟ್ಟ (ತಂದೆಗವನತನಾದಂ ಆಗಿ ದೌವಾರಿಕದತ್ತ ಕನವಿಷ್ಟರಮನಗಲೆ ನೂಂಕಿ: **ಪುಷ್ಪದಂಪು,** ४. ೭೧ ವ)

**ದತ್ತಕನಿಷ್ಟಿಕ** – [ಎಣಿಕೆಯಲ್ಲಿ] ಮೊದಲನೆಯವನು (ಸುಕವಿಜನಗಣನೆಯೊಳ್ ದತ್ತನಿಷ್ಠಿಕನಾಗೆ ಕಾಳಿದಾಸಂ ಮೊದಲೆಂದು ಕರಂ ಬಣ್ಣಿಪರ್: **ಜಗನ್ನಾವಿ,** ೧. ೯)

**ದತ್ತಾವಧಾನ** – ಗಮನ ಹರಿಸುವುದು (ಎಂತು ಬೆಸಗೊಂಡೆ ಬೆಸಗೊಂಡಂತಿರೆ ದತ್ತಾವಧಾನನಾಗು: **ಯಶೋಧಚ,** ೧. ೭೦)

**ದತ್ತಿ** – ದಾನ (ಸಮನೆನಿಪನೊಡನೆ ಕೊಳ್ಕೊಡೆ ಸಮನಿಸೆ ಸಮದತ್ತಿ ಭೂಚರರ್ ಖೇಚರರೊಳ್ ಸಮನಲ್ಲರ್ ಸುತಮೋಹದಿಂ ಎಮಗಮಶ್ರೇಯಮಾದೊಡಂ ಕರಣೀಯಂ: **ಪಂಪರಾ,** ४. ೧೦೧)

**ದಧಿ** – ಮೊಸರು (ಜೇನುತುಪ್ಪದೋಕುಳಿ ದಧಿಯೋಕುಳಿ .. .. ಚಂದನದೋಕುಳಿಯನಾಡಿದಂ: **ಗಿರಿಜಾಕ,** ३. ೬೨)

**ದಧಿಮುಖ** – [ಜೈನ] ಒಂದು ಪರ್ವತ, ಇಂಥ ಹದಿನಾರು ಪರ್ವತಗಳಿರುವುವೆಂದು ಪುರಾಣಗಳ ಹೇಳಿಕೆ (ನಂದೀಶ್ವರವರದ್ವೀಪಂ ಅದಱ ನಾಲ್ಕುಂ ದೆಶೆಯೊಳ್ ನಾಲ್ಕು ಅಂಜನಪರ್ವತಂಗಳುಂ ಅವಱ ನಾಲ್ಕುಂ ದೆಶೆಯೊಳ್ ಸಮಚತುರಸ್ರಂಗಳಪ್ಪ ದಿವ್ಯಸರೋವರಂಗಳ್ ಪದಿನಾಱಪ್ಪುವು ಅದಱ ನಡುವೆ ದಧಿಮುಖಶಿಖರಿಗಳುಂ: **ಸುಕುಮಾಚ,** ೧೧. ೫೦ ವ)

**ದನಗಾಹಿ** – ಗೋಪಾಲ (ಗೋವಳಿಗರ ಪಳ್ಳಿಯೊಳ್ ನೆಲಸಿದಾ ದನಗಾಹಿಯೆನಿಪ್ಪ ಕೃಷ್ಣನೇಂ ತಳಿಗೆಯೊಳಿಟ್ಟು ಸಂಹರಿಸನೇ: **ಜಗನ್ನಾವಿ,** ೧೮. ೮೪)

**ದನಿ** – [ಧ್ವನಿ] ಸಪ್ಪುಳ (ರುಂಜೆಯ ದನಿ ದಿಕ್ಪಾಲರನಂಜಿಸೆ ತಳ್ತೊಗೆದ ಕಾಳೆಯ ದನಿ ದಿಕ್ಕುಂಜರನಂ ಬೆದಱಿಸೆ: **ಪಂಪರಾ,** ೪. ೫೬)

**ದನುಜ** – ದನು ಎಂಬುವವನ ವಂಶದ ರಾಕ್ಷಸ (ಸುರ ದನುಜ ಭುಜಗ ವಿದ್ಯಾಧರ ನರ ಸಂಕುಲದೊಳ್ ಆರನಾದೊಡಂ ಏನೋ ಗರಮುಟ್ಟೆ ಕೊಲ್ಗುಂ ಇದು ನಿಜವಿರೋಧಿಯಂ ಧುರದೊಳ್ ಎಂದು ಶಕ್ತಿಯನಿತ್ತಂ: **ಪಂಪಭಾ,** ೧. ೧೦೩)

**ದನುಜವಿರೋಧಿ** – ರಾಕ್ಷಸವೈರಿ, ಕೃಷ್ಣ (ವಿಷ್ಣು ನಾರಾಯಣಂ ದನುಜಾರಾತಿ ಮುಕುಂದಂ ಅಬ್ಧಿಶಯನಂ ಗೀವರ್ಧನಂ: **ಅಭಿಧಾವ,** ೧. ೧. ೨೦)

**ದನುಜಾರಾತಿಜಾತಾಧಿವಾಸ** – ಮೇರುಪರ್ವತ (ನಿಜವಾಹಂ ಧರ್ಮಗೇಹಂ ನಿಜಧನು ದನುಜಾರಾತಿಜಾತಾಧಿವಾಸಂ ನಿಜರೂಪಂ ವಿಶ್ವರೂಪಂ: **ರಾಜಶೇವಿ,** ೧. ೨)

**ದನುಜಾರಿ** – ದನುಜವಿರೋಧಿ (ಆ ದನುಜಾರಿಯಂ ಆತ್ಮಗರ್ಭದೊಳ್ ಧರಿಯಿಸಿ ನಿಂದಳ್: **ಜಗನ್ನಾವಿ,** ೨. ೯೬)

**ದನಿಜೋದೀರಿತ** – [ಜೈನ] ರಾಕ್ಷಸರಿಂ ಉಂಟಾದ ದುಃಖ (ಶಾರೀರ ಮಾನಸ ಕ್ಷೇತ್ರಜ ಪರಸ್ಪರೋದೀರಿತ ದನುಜೋದೀರಿತಗಳೆಂಬ ಅಯ್ದುಂ ತೆಱದ ದುಃಖಂಗಳೊಳಿರ್ದು: **ಆದಿಪು,** ೫. ೮೮ ವ)

**ದಪ್ಪ** – [ದರ್ಪ] ಗರ್ವ (ಪೊಂಬೆಟ್ಟಮಂ ನೂಂಕಲುಂ ಪೆಡೆಯಂ ತೊಟ್ಟನೆ ಮೆಟ್ಟಿ ಬಾಸುಗಿಯಂ ಆದಂ ಸೀೞಲುಂ ಪೊತ್ತು ಬಾನೆಡೆಯಂ ಬೇಗದಿನೆತ್ತಲುಂ ಬಗೆದನಾಗಳ್ ದಪ್ಪದಿಂ ದಪ್ಪಗಂ: **ಕಬ್ಬಿಗಕಾ,** ೧೧೯)

**ದಪ್ಪಗ** – [ದರ್ಪಕ] ಮನ್ಮಥ(ಪೊಂಬೆಟ್ಟಮಂ ನೂಂಕಲುಂ ಪೆಡೆಯಂ ತೊಟ್ಟನೆ ಮೆಟ್ಟಿ ಬಾಸುಗಿಯಂ ಆದಂ ಸೀೞಲುಂ ಪೊತ್ತು ಬಾನೆಡೆಯಂ ಬೇಗದಿನೆತ್ತಲುಂ ಬಗೆದನಾಗಳ್ ದಪ್ಪದಿಂ ದಪ್ಪಗಂ: **ಕಬ್ಬಿಗಕಾ,** ೧೧೯)

**ದಬ್ಬಣ** – ದಪ್ಪನಾದ ಸೂಜಿ (ಕಬ್ಬುನದ ದಬ್ಬಣಂಗಳಂ ದಬ್ಬುಕದ ಡಂಗೆಗಳಿಂ ಬೆರಲ್ಗಳೊಳಡಂಗೆ ಬೆಟ್ಟುವುದುಂ ಪಲ್ಗಳಂ ನುರ್ಗ್ಗುಗಟ್ಟುವುದುಂ: **ಸುಕುಮಾಚ,** ೧೧. ೪೭ ವ)

**ದಬ್ಬುಕ** – ಕಲ್ಲು ಸೀಳುವ ಚಾಣ (ಕರ್ಬೊನ್ನ ದಬ್ಬುಕಂಗಳಿಂ ತಲೆಯ ಸಿಪ್ಪು ಬಿಚ್ಚತ ಬಿರಿದು ಶತಖಂಡಂಗಳಪ್ಪಿನಮೆತ್ತಿ ಪೊಯ್ಯೆಯುಂ: **ವರ್ಧಮಾಪು,** ೫. ೩೪ ವ); ಹಾರೆ (ಮೂಳೆಯಂ ದಬ್ಬುಕದಿಂದೆ ನುಗ್ಗುನುಱಿಯಪ್ಪಿನೆಗಂ ಬಿಡೆ ಬೀಸಿ ಪೊಯ್ದು: **ಸುಕುಮಾಚ,** ೭. ೬)

**ದಮ** – ಇಂದ್ರಿಯ ನಿಗ್ರಹ (ನಿಲ್ಲಲೊಲ್ಲದೆ ವೈರಾಗ್ಯಮೆ ಕುಲವಟಿಯೆಂಬಂತೆ ತಂದೆಯಿಂ ಮುನ್ನಂ ನಿರ್ಮಲ ಜಿನದೀಕ್ಷೆಗವರ್ ಪೂಣ್ದು ಅಲಂಘ್ಯ ದಮಮಂ ಧರಿತ್ರಿಯಿಂ ಪೊಗೞಿಸಿದರ್: **ಶಾಂತಿಪು,** ೯. ೫೩)

**ದಮಿತಾರಿ** – ಅರಿಗಳನ್ನು ದಮನಮಾಡಿದವನು (ತೇಜಂ ಇಲ್ಲಾದೊಡಂ ಸೂೞಂ ಮಾಡಿದನೊಳ್ ಕಾದಲೆವೇಟ್ಕುಂ ಎಂದು ದಮಿತಾರಿ ಕೈವೀಸೆ: **ಶಾಂತಿಪು,** ೪. ೭ ವ)

**ದಮ್ಮ** – ದ್ರಮ್ಮ, ಒಂದು ನಾಣ್ಯ (ಎನಗುಡಲಿಲ್ಲ ಏನುಮೊಂದು ದಮ್ಮಕ್ಕಾದೊಡಂ ಸೀರೆಯಂ ಕೊಂಡೀಯಿಂ: **ವಡ್ಡಾರಾ,** ಪು. ೭೭, ಸಾ. ೧೧); ಧರ್ಮ (ಮನೆವಾೞದಮ್ಮಮವೆಲ್ಲಮಂ ನೀನೆ ಬಲ್ಲೆಯೆಂದೊಡೆ: **ಪಂಚತಂತ್ರ,** ೧೯೯ ವ)

**ದಮ್ಮಾಣಿ** – [ಧರ್ಮಪಾನೀಯ] ಧರ್ಮಾರ್ಥ ವಾಗಿ ಪ್ರಯಾಣಿಕರಿಗೆ ಕೊಡುವ ನೀರು (ಪೂರ್ವಪದಾಂತ್ಯಕ್ಕೆ ದೀರ್ಘಂ ಉತ್ತರಪದದಾದಿಗೆ ಲೋಪಮುಂ ಆಗಿ ಧರ್ಮಪಾನೀಯಕ್ಕೆ ದಮ್ಮಾಣಿಯಮೆಂದಾಯ್ತು: **ಶಬ್ದಮದ,** ૩೦೮ ಪ್ರ)

**ದಮ್ಮಿ** – ಧರ್ಮವಂತ (ತಮ್ಮಡಿಗೆ ಮೊಱೆವ ಶ್ವಾನಂ ದಮ್ಮಿಯನೇಕೆ ಬಾೞಲಿತ್ತಪುದು ಎಂಬಂತೆ: **ಪಂಚತಂತ್ರ,** ೨೪೪ ವ)

**ದಯಂಗೆಯ್** – ಕೃಪೆ ತೋರಿಸು (ಸೋವಿಲನೆಂಬೊಂಗೆ ತನ್ಮಥ್ರಪದವಿಯಂ ದಯಂಗೆಯ್ವುದುಂ: **ಸುಕುಮಾಚ,** ೨. ೨೯ ವ)

**ದಯಕಾಱ** – ದಯಾವಂತ (ನಿರನುನಾಸಿಕ ಯಕಾರಕ್ಕೆ: ಬಯಕೆ, ಬಿಯಳಂ, ದಯಾಕಱಂ, ದಾಯಿಗಂ: **ಶಬ್ದಮದ,** ೨೬ ಪ್ರ)

**ದಯಾರಸಾರ್ಣವ** – ಕರುಣೆಯೆಂಬ ರಸದ ಸಮುದ್ರ (ಜಯ ವಿಮಳ ಕೇವಳಾಕರ್ೋದಯಗಿರಿವರ ಜಯ ದಯಾರಸಾರ್ಣವ: **ಚಂದ್ರಪ್ರಪು,** ೭. ೭)

**ದಯಿತ** – ಒಡೆಯ (ದ್ವೈತೀಯಕ ಜಿನಪಂಗೆ ಅದ್ವೈತಂಗೆ ಅಜಿತಂಗೆ ಭುವನದಯಿಂತಗಾಗಳ್ ದೈತ್ಯೇಂದ್ರಲ್ಲರಂ ಗ್ಯೆಱಗಿದರಾತತ ಪುಣ್ಯಂಗೆ ಜಗದೊಳಗೆಱಗದರೊಳರೇ: **ಅಜಿತಪು,** ೫. ೩); ಮನಃಪ್ರಿಯ (ಸಖಿಯ ಮಾತು ಮನಃಪ್ರಿಯನಂತೆ ಮನಂಬುಗೆ ಪೋಗಿ ದೈವಮೆ ದಯಿತನಾದಂತೆ: **ಲೀಲಾವತಿ,** ೧೦. ೨ ವ)

**ದಯೋದ್ಯ** – ದಯಾಳು (ದಯೋದ್ಯ ನಿಮಗಿಂತೀ ಕ್ಷುದ್ರನೊಳ್ ರೌದ್ರಮೇಂ: **ಕರ್ಣನೇಮಿ,** ೫. ೨೪)

**ದರ** – ಸ್ವಲ್ಪ (ಕ್ಷೀರಜಲಾಕರಮಂ ದರವಿಕಸದ್ವಾರಿರಹಮಂ ಆ ಕಾಂತೆ ನಿಶೆಯ ಕಡೆಯೊಳ್ ಕಂಡಳ್: **ಪುಷ್ಪದಂಪು,** ૩. ೧೨೦); ಬಿಲ (ಅವಟಂ ಛಿದ್ರಂ ಕುಹರಂ ವಿವರಂ ಶ್ವಭ್ರಂ ಬಿಲಂ ದರಂ: **ಅಭಿಧಾವ,** ೧. ૩. ೬); ಭಯ (ಶಂಕೆ ಭಯಂ ಸಾಧ್ವಸಂ ಆಶಂಕಂ ತ್ರಾಸಂ ದರಂ ಭೀತಿ: **ಅಭಿಧಾವ,** ೨. ೨. ೫)

**ದರನಿಮೀಲಿತಾಂಬಕ**– ದರನಿಮೀಲಿತಲೋಚನ (ಅಕಂಪಿತ ಶರೀರನಿರ್ದು .. .. ಬಕಂ ದರನಿಮೀಲಿತಾಂಬಕಂ ಅಶೇಷ ದೋಷಾಶಯಂ: **ಪಂಪರಾ,** ೭. ೯೧)

**ದರವುರ** – ಸ್ವಲ್ಪ ಮಟ್ಟಿಗೆ (ಕಪ್ಪುರದ ರಜಂಬೊರೆದ ಕರಕಾಂಬುವ ತಳಿದು ದರವುರಂ ಎಚ್ಚರಿಸೆ ಮೂರ್ಛೆ ತಿಳದು ಕುಮಾರಂ: **ಆದಿಪು,** ೪. ೧೭)

**ದರವುರಂಗಾಣ್** – ಆಕಸ್ಮಿಕವಾಗಿ ನೋಡು (ಮನಮೊಲ್ದಾತನ ಗಾಡಿಯಂ ದರವುರಂಗಂಡಾಕೆಗಳ್ ಪೂವಿನಂಬಿನ ಕೋಳ್ಗಂ ತಳಿವಾಲಿನೀರ್ಗವಂ ಅಲರ್ವಾಸಿಗಂ .. ..ಪಕ್ಕಾಗದೇಂ ಪೋಪರೇ: **ಆದಿಪು,** ೧. ೭೫)

**ದರವುರಗಲಿ** – ಅಲ್ಪಶೂರ (ನೆರೆದ ದರವುರಗಲಿಗಳುಂ ಮೆಯ್ಗಲಿಗಳುಂ ಭೀಮಸೇನನ ಭೀಮಾಕಾರಮುಮಂ ಉಲ್ಬಣಮಾಗೆ ಮುಳಿದು ತುಟಿಯೆ: **ಕರ್ಣನೇಮಿ,** ೧೦. ೧೧೧ ವ)

**ದರವುರವಿದ್ದೆ** – ಕ್ಷುಲ್ಲಕಜ್ಞಾನ (ಪರಮ ಜಿನೋದಿತಮಲ್ಲದ ದರವುರವಿದ್ಯೆಗಳನಜೆವವಂ .. .. ವಿದ್ಯೆಗಳೆಂದೆ ಬಗೆವನೆ ಉತ್ತಮ ಜೈನಂ: **ಸಮಯಪ,** ೧೨. ೪೨)

**ದರವುರಿಗ** – ಸಾಮಾನ್ಯ (ಮತ್ತಿನ ದರವುರಿಗಂ ಬ್ರಹ್ಮನಲ್ಲ ಸಂಚಿತಕರ್ಮಂ: **ಸಮಯಪ,** ೮. ೧೩೫)

**ದರಸ್ಮೇರ** – ಮುಗುಳ್ನಗೆ (ಅದನೊರ್ವ ಭುಜಂಗಂ ಕೇಳ್ದು ದರಸ್ಮೇರನೊಲ್ದು ಪೋಗುತ್ತ: **ಉದ್ಭಟಕಾ,** ೧೦. ೭೫); ಅರ್ಧ ಅರಳಿದ (ಸಮಂತು ಅಲಂಕರಿಸಿದಂ ಶಾಂತೀಶನಂ ದಿವ್ಯಗಂಧ ದರಸ್ಮೇರ ನಮೇರು ಚಾರು ಕುಸುಮ ಕ್ಷೌಮಾಂಶುಕ ಅನರ್ಘ್ಯ ಭಾಸ್ವದನೇಕೋತ್ತಮ ಭೂಷಣಾವಳಿಗಳಿಂ ಸಂಕ್ರಂದನಾನಂದದಿಂದಂ: **ಶಾಂತೀಶ್ವಪು,** ೧೬. ೩)

**ದರಹಸಿತ** – ಮುಗುಳ್ನಗೆಯಿಂದ ಕೂಡಿದ (ಆತನ ಲಲಿತೋತ್ತಾನಶಯಿತ ದರಹಸಿತ ತರಂಗಿತ ಗತಿಸ್ಖಲಿತ ಮುಗ್ಧಜಲ್ಪಿತಾದಿ ಬಾಲ್ಯವಿಳಾಸಂಗಳಿಂದಂ: **ಆದಿಪು,** ೮. ೫೦ ವ)

**ದರಿ** – ಕಂದರ, ಬಿರುಕು (ಅದಜೆಂದಂ ಜೀವಾಭಾವದ ವಾದಂ ದರಿಯ ಮರನಂ ಏಜೆದ ತೆಱನಂತೆ; **ಶಾಂತಿಪು,** ೮. ೧೩೮)

**ದರಿಗೊಳ್** – ಬಿರುಕುಬಿಡು (ಪಳಿಕಿನ ಶಿಲಾಪಟ್ಟಂ ಪ್ರಸ್ಥಾನದೊಳ್ ವಿಜಯದ್ವಿಪಾವಳಿಯ ದರಿಗೊಂಡುದ್ದೇಶಂ .. .. ತತ್ ದ್ವಿಪಾಳಿ ದಿಗತದೊಳ್ ತಳೆದುದು ಜಯಸ್ತಂಭಶ್ರೀಯಂ ತ್ರಿಕೂಟಮಹೀಧರಂ: **ಶಾಂತಿಪು,** ೧೧. ೧೮)

**ದರಿದ್ರಗೇಹಿನೀಗರ್ಭದೋಹಳ** – ಬಡವೆ ಗೃಹಿಣಿಯ ಬಸಿರಿ ಬಯಕೆ (ಬಾಹುಬಲಿಯ ಸಮರಸಂಘಟ್ಟ ದೋಹಳಂ ಇದು ದರಿದ್ರಗೇಹಿನೀ ಗರ್ಭದೋಹಳದಂತಾದುದು: **ಆದಿಪು,** ೧೪. ೧೦೨ ವ)

**ದರಿದ್ರಮಧ್ಯ** – ಬಡನಡು (ತುಂಗಸ್ತನಕ್ಷೋಭವಿಭ್ರಮಂ ಉತ್ಕಂಪದರಿದ್ರಮಧ್ಯಂ ಉಚಿತಸ್ವೇದೋದ್ಗಮಂ: **ಆದಿಪು,** ೮. ೭೦)

**ದರೀಗೃಹ** – ಕಣಿವೆ ಪ್ರದೇಶ (ಕ್ಷೀರವಾರಿಧಾರೆಗಳಿಂ ಪಾಂಡುರಿತಂಗಳಾಗಿ ಮಂದರದರೀಗೃಹಂಗಳ್ ಸುಧಾಗೃಹಂಗಿವೆನಿಕುಂ: **ಅಜಿತಪು,** ೪. ೬೬)

**ದರೆ** – [ಧರೆ] ಭೂಮಿ (ದರೆಯಂ ಪೊತ್ತಾನೆಯ ಕೈಗೊರೆಯೆನೆ ಕಡುವೆಟ್ಟಿತಾದ ನಾಲ್ಕುಂ ತೋಳುಂ ಕರಮೆಸೆದಿರೆ ಕುಳ್ಳಿರ್ದಂ ಸಿರಿಯರಸಂ ಕಾರ ಮುಗಿಲ ರೂವೆಂಬಿನೆಗಂ: **ಕಬ್ಬಿಗಕಾ,** ೧೨೯)

**ದರ್ಕುಂದಲೆವಾಯ್** – ಸೊಕ್ಕಿನಿಂದ ಕೂಡು (ದರ್ಕುಂದಲೆವಾಯ್ದು ಪಂಚಶರನಂ ಮಂಚದ ಕಾಲೊಳದ ತಂದು ಕಟ್ಟಿ ನಿನ್ನ ಪಗೆಯಂ ಬಗೆದಂತೆ ತೋಱುವೆಂ: **ಲೀಲಾವತಿ,** ೧೧. ೮೫ ವ)

**ದರ್ಕ್ಮೆ** – ದಸಿ, ಚೂಪಾದ ಬೆಣೆ (ಆತನಂ ಶ್ಮಶಾನಕ್ಕೆಟ್ಟಿದುಕೊಂಡು ಪೋಗಿ ದರ್ಕ್ಮಂ ಬಸಿದು ಸೂಲದೊಳಿಕ್ಕು: **ವಡ್ಡಾರಾ,** ಪು ೧೨೪, ಸಾ ೨೯)

**ದರ್ದುರ** – ಕಪ್ಪೆ (ಅನೇಕಕಾಲಂ ವೃದ್ಧೋರಗನಾ ದುರ್ದರಂಗಳಂ ಪೊತ್ತು ತಿರುಗಿ ಬೇವಸಂಗೊಂಡು: **ಪಂಚತಂತ್ರ,** ೩೮೭ ವ); ಊದಿಕೊಳ್ಳುವಿಕೆ

**ದರ್ಪಕ** – ಮನ್ಮಥ (ದರ್ಪಕ, ಮೇಘಚಂದ್ರ ಮುನಿಯೊಳ್ ಮಾಣ್ ನಿನ್ನ ದೋರ್ದರ್ಪಮಂ: **ಪಂಪರಾ,** ೧. ೨೦)

**ದರ್ಪಕದರ್ಪಭಂಜನ** – ಕಾಮನ ದರ್ಪವನ್ನು ನಿಗ್ರಹಿಸಿದವನು, ಅರ್ಹಂತ (ಕುಮಾರಕಂ ಪರಿಣಯನೋತ್ಸವಕ್ಕೆ ಬಗೆದರ್ಪನೆ ದರ್ಪಕದರ್ಪಭಂಜಕನಂ: **ಮಲ್ಲಿನಾಪು,** ೧೩. ೬೪)

**ದರ್ಪಕವಿರೋಧಿ** – ಕಾಮನ ವೈರಿ, ಶಿವ ತನ್ನುಪವನದೊಳ್ ಸನ್ನಿಹಿತನಾಗಿರ್ಪ ದರ್ಪಕವಿರೋಧಿಯನಾರಾಧಿಸಿ: **ಜಗನ್ನಾವಿ,** ೧೭. ೮೮ ವ)

**ದರ್ಪಣ** – ಕನ್ನಡಿ (ತುಪ್ಪೇಜೆದ ದರ್ಪಣದೊಳ್ ಪಜ್ಜಳಿಲಾರ್ಪುದೇ ಪ್ರತಿಬಿಂಬಂ: **ಯಶೋಧಚ,** ೧. ೩೯)

**ದರ್ಪಿತ** – ಅಹಂಕಾರದಿಂದ ಕೂಡಿದ (ದರ್ಪಿತ ದುರಿತಮಲ್ಲನುಂ ಉಡಿವ ತಕ್ಕಿನಿಂ ಸಭೆಗೆ ನಡೆದಂ: **ಆದಿಪು,** ೧೪. ೧೩೪)

**ದರ್ಪಿಷ್ಠ** – ಅಹಂಕಾರಿ (ನೆರೆದಿರ್ದ ನೃಪವರರುಮಂ ಮೊದಲಿಸಿ ಮಾತಂ ಬೂತುಮನಟ್ಟುವುದುಂ ದರ್ಪಿಷ್ಠನಪ್ಪ ತ್ರಿಪೃಷ್ಠಕುಮಾರಂ: **ಶಾಂತಿಪು,** ೫. ೪೭ ವ)

**ದರ್ಭಪಾಣಿ** – ದರ್ಭೆ ಹಿಡಿದವನು, ಪುರೋಹಿತ (ಸೊಕಮಿರ್ಕೆ ಅಕ್ಕಟ ದರ್ಭಪಾಣಿ ಯಮಜಂ ದರ್ವೀಕರಂ ವಾಯುಪುತ್ರಕನುಂ ಜರ್ಜರಹಸ್ತಂ ಇಂದ್ರತನಯಂ ದಸ್ರಾತ್ಮಜರ್ ದಂಡಮುಷ್ಟಿಕರರ್ ಶಸ್ತ್ರವಿಡಂಬಂ ಏವುದವರ್ಗಂ ಪಾಂಚಾಲಿಯುಂ ಗಂಧದಾಯಕಿಯಾಗಿರ್ಪಿನಂ ಅಂದು ಮತ್ಸ್ಯಗೃಹದಿಂದ ಈ ನಿಗ್ರಹಂ ಪೊಲ್ಲದೇ: **ಗದಾಯು,** ೩. ೩೪)

**ದರ್ಭಾಧಿಕಾರ** – ದರ್ಭೆ ಹಿಡಿದು ಕರ್ಮ ಮಾಡುವ ಅಧಿಕಾರ (ಚಾತುರ್ವರ್ಣ್ಯದೊಳಂ ದ್ವಿಜಜಾತಿಗೆ ದರ್ಭಾಧಿಕಾರಮಲ್ಲದೆ ವಂಶೋದ್ಭುತನೃಪೋಚಿತಮರಿಯಂ ಘಾತಿಪ ಶಸ್ತ್ರಾಸ್ತ್ರಮವರ್ಗೆ ಜಾತಿವಿರುದ್ಧಂ: **ಗದಾಯು,** ೨. ೧೭)

**ದರ್ವಿ** – ಸೌಟು (ಸುರುಚಿರ ದರ್ವಿಯೊಳ್ ನವಶರಾವೆಯೊಳ್: **ತ್ರಿಷಷ್ಟಿಪು,** ೧೦. ೭೬)

**ದರ್ವೀಕರ** – ಸೌಟು ಹಿಡಿದವನು, ಬಾಣಸಿಗ (ಸೊಕಮಿರ್ಕೆ ಅಕ್ಕಟ ದರ್ಭಪಾಣಿ ಯಮಜಂ ದರ್ವೀಕರಂ ವಾಯುಪುತ್ರಕನುಂ: **ಗದಾಯು,** ೩. ೩೪); ಹಾವು (ದರ್ವೀಕರ ಅರ್ಭಕಸಮಾಜ ವಿಭೂಷಣಾಯ: **ಉದ್ಭಟಕಾ,** ೧೨. ೧೧೨)

**ದರ್ಶನಘಾತಿ** – ಸಮ್ಯಗ್ದರ್ಶನಜ್ಞಾನಚಾರಿತ್ರಗಳಿಗಿರುವ ಅಡ್ಡಿಗಳು:ಕ್ರೋಧ ಮಾನ ಮಾಯಾ ಮತ್ತು ಲೋಭಗಳು (ಅಂತವಿಶ್ರಾಂತ ಚತುಃಪ್ರಕಾರಧರ್ಮಚಿಂತಾಪರಂ ವಿಶುದ್ಧ ಲೇಶ್ಯಾಪರಿಣಾಮಪರಿಪೂರ್ಣಂ ಅಪ್ರಮತ್ತಗುಣಸ್ಥಾನದೊಳ್ ನಿಂದು.. .. ಕ್ರೋಧಮಾನಮಾಯಾಲೋಭಗಳೆಂಬ ನಾಲ್ಕುಂ ದರ್ಶನಘಾತಿಗಳುಮಂ ಪರಿವಿಡಿಯಿಂ ಕಿಡಿಸಿ: **ಮಲ್ಲಿನಾಪು,** ೧೪. ೫೭ ವ)

**ದರ್ಶನಮೋಹ** – [ಜೈನ] ಎರಡು ಬಗೆಯ ಮೋಹನೀಯಕರ್ಮಗಳಲ್ಲಿ ಒಂದು, ಸಮ್ಯಗ್ದರ್ಶನಕ್ಕೆ ಅಡ್ಡಿಯಾದುದು (ವೇದನೀಯಮುಂ ದರ್ಶನಮೋಹದೊಳಂ ಚಾರಿತ್ರಮೋಹದೊಳಂ ಯಥಾಕ್ರಮದಿಂ: **ಸುಕುಮಾಚ,** ೩. ೩೯ ವ)

**ದರ್ಶನಮೋಹನೀಯ – [ಜೈನ]** ದರ್ಶನಮೋಹವನ್ನು ಉಂಟುಮಾಡುವಂಥದು (ಮಿಥ್ಯಾತ್ವ ಸಮ್ಯಕ್ಪ್ರಕೃತಿ ಸಮ್ಯಙ್ಮಿಥ್ಯಾತ್ವಮೆಂದು ತ್ರಿವಿಧಮಪ್ಪ ದರ್ಶನಮೋಹನೀಯಮಂ ನಿರ್ಮೂಲಿಸಿ: **ಶಾಂತಿಪು,** ೧೧. ೧೧೧ ವ)

**ದರ್ಶನಾವರಣೀಯ –** [ಜೈನ] ನಾಲ್ಕು ಘಾತಿಕರ್ಮಗಳಲ್ಲಿ ಒಂದು; ನವವಿಧ ದರ್ಶನಾವರಣೀಯ: ಚಕ್ಷು, ಅಚಕ್ಷು, ಅವಧಿ, ದೇವಲ, ನಿದ್ರಾ, ನಿದ್ರಾನಿದ್ರಾ, ಪ್ರಚಲಾ, ಪ್ರಚಲಾಪ್ರಚಲಾ, ಸ್ತ್ಯಾನಗೃದ್ಧಿ ಎಂಬ ಒಂಬತ್ತು ಬಗೆ, (ದರ್ಶನಾವರಣೀಓತ್ಕರ ತಾಮಸಕ್ಕೆ ರವಿಬಿಂಬಂ .. .. ಎಂಬಂತು ಘಾತಿ ರಿಪುವ್ರಾತ ವಿಘಾತಿಯಾತ್ತು: **ಪುಷ್ಪದಂಪು,** ೧೪. ೩೭) ನೋಡಿ, 'ಘಾತಿಕರ್ಮ'

**ದರ್ಶನಿಕ –** [ಜೈನ] ಹನ್ನೊಂದು ವರ್ಗದ ಶ್ರಾವಕರಲ್ಲಿ ಮೊದಲನೆಯವನು (ಜಿನೇಂದ್ರಧರ್ಮಂ .. .. ವಂದ್ಯನೆನಗಾಯ್ತು ಅಂತದೆ ಮೋಕ್ಷಪಥಂ ಎಂಬವಂ ದರ್ಶನಿಕಂ: **ಸಮಯಪ,** ೪. ೧೫೫)

**ದಲ್ –** ನಿಶ್ಚಿತವಾಗಿ (ಈ ಚಿತ್ತದೊಂದಾಸೆ ದಲ್ ಮಾಯದ ಕುಂಚಂಬೋಲ್ ಅಸಂಭಾವ್ಯಮನೆ ದಿಟಮೆನಲ್ ತೋಱುತಿರ್ದಪುದೀಗಳ್: **ಕಾದಂಸಂ,** ೫. ೩೯); ಅಲ್ಲವೇ ಎಂಬ ಅವಧಾರಣಸೂಚಕ ಶಬ್ದ (ನೀನರಸನೆ ಎನ್ನ ರಾಜ್ಯವಿಭವಕ್ಕೆ ಎಲೆ ನೀನೆ ದಲ್ ಎಂದು ಮಾಮರನನೆ ಮೂಱು ಸೂಟ್ ಪರಿದುಮಟ್ಟಿಱೆನಿಂ ಬಲವಂದನಗಜಂ: **ಆದಿಪು,** ೧೧. ೧೦೦)

**ದವ –** ಕಾಡು; ಕಾಡುಗಿಚ್ಚು (ತದ್ರಿಪುದವಮಂ ನಂದಿಸಲ್ ಬರ್ಪ ಕಾರಂತಿರೆ ಬಂದಂ .. .. ಭೂಮಿಪಾಲಂ: **ರಾಜಶೇವಿ,** ೬. ೧೩)

**ದವನ –** ಸುವಾಸನೆಯ ಎಲೆಗಳುಳ್ಳ ಒಂದು ಸಸ್ಯ (ಭವನವಾಸಿಗರ ಕರಂ ದವನದ ಮಡಿಯಂ ದಾಟಿವೊಕ್ಕಂತೆ ಮಾಡಿ: **ಧರ್ಮಾಮೃ,** ೭. ೫೪ ವ)

**ದವನಕ –** 'ಪಂಚತಂತ್ರ' ದ ಒಂದು ನರಿ (ಪಿಂಗಳಕ ನಿರವಂ ಕಂಡು ದವನಕಂ ಕರಟಕಂಗೆಂಗುಂ: **ಪಂಚತಂತ್ರ,** ೮೧ ವ)

**ದವಶಿಖಿ –** ಕಾಡುಗಿಚ್ಚು (ದವಶೀಕಿಯಾಗಿ ದಳ್ಳಿಸುವ ಸಂಹರಣೋಗ್ರ ಸಮೀರನಾಗಿ: **ಜಗನ್ನಾವಿ,** ೧೫. ೨೨)

**ದವಳಾರ –** ಬಿಳಿಯ ಹಾರ; [ಧವಲಾಗಾರ] ಬಿಳಿಯ ಮನೆ (ತಾಂ ಪ್ರಿಯಮೆಂದೊಡನೆಯವರ್ಗೆ ಅಱಿಯೆ ನುಡಿಯುತ್ತಂ ಪೋಗಿ ಪೆಱತೊಂದು ದವಳಾರದ ಮುಂದಣೆಡೆಯೊಳ್: **ಹರಿವಂಶ,** ೩. ೪೯ ವ)

**ದವಾಗ್ನಿ –** ಕಾಡುಗಿಚ್ಚು (ಆ ಮರನಂ ದವಾಗ್ನಿ ಬರ್ದುಂಕಲೀಗುಮೇ: **ಆದಿಪು,** ೯. ೫೯)

**ದವಾನಲ –** ಕಾಡುಗಿಚ್ಚು (ಮದನ ದವಾನಲಾರ್ಚಿ ತನುವಂ ಸುಡೆ ತಳ್ತ ಎಮೆಯೊಳ್ ಪಳಂಚಿ ಬೀಗಿದ ಬೆಳರ್ವಾಯೊಳ್ ಉಚ್ಚಳಿಸಿ.. ..ಎಯ್ದಿದುವು ನೇತ್ರಜಲಬಿಂದುಗಳ್ ಆಕೆಯ ನಿಮ್ನನಾಭಿಯಂ: **ಪಂಪಭಾ,** ೫. ೯)

**ದಶಕಂಠ –** ಹತ್ತು ತಲೆಗಳುಳ್ಳವನು, ರಾವಣ (ತೊಂಡಿನೊಳ್ ಉರ್ಕಿ ಕೆಟ್ಟ ದಶಕಂಠನಂ ಅಕ್ಕಟ ಕೊಂಡ ಪೆರ್ಮರುಳ್ ಕೊಂಡುದೆ ತನ್ನುಮಂ: **ಪಂಪಭಾ,** ೬. ೩೩)

**ದಶಕಂಧರ –** ದಶಕಂಠ (ಭೋಂಕನೆ ಕಂಡು ಸೀತೆ ದಶಕಂಧರನಂ ನೆಲೆವೆರ್ಚೆ ಶೋಕವಾತಂಕಮೊಡರ್ಚೆ: **ಪಂಪರಾ,** ೯. ೧೦೯)

**ದಶಗುಣ –** ಹತ್ತು ಪಟ್ಟು (ಸಹಸ್ರದಶಕಂ ಲಕ್ಷಂ ದಶಗುಣವಯುತಂ: **ಅಭಿಧಾವ,** ೨. ೧. ೩೩); ಹಾಡಬೇಕಾದ ಕೃತಿಯಲ್ಲಿ ನಿರೀಕ್ಷಿಸುವ ಹತ್ತು ಗುಣಗಳು (ನಳಂ ಕೃತಂ ಪ್ರಸನ್ನಂ ವ್ಯಕ್ತಂ ಪೂರ್ಣಂ ಸಮಂ ಸುಕುಮಾರಂ ಸುರಕ್ತಂ ಶ್ಲಕ್ಷ್ಣಂ ಮಧುರಂ ವಿನಿಕೃಷ್ಟಮೆಂಬ ದಶಗುಣಂಗಳಿನೆಸೆವ ಗೀತಕಾದಿ ಶುದ್ಧಪ್ರಬಂಧಗಳೊಳಂ: **ಚಂದ್ರಪ್ರಪು,** ೧೫. ೭೨ ವ)

**ದಶಗ್ರೀವ –** ದಶಕಂಠ (ದಶಗ್ರೀವನ ವನಮಂ ಕಿಟ್ಟು ಈಡಾಡುವ ಅಣುವನಂತಿರ್ದುದು: **ನೇಮಿನಾಪು,** ೫. ೧೧೩ ವ)

**ದಶದಿಶಾಳಿ –** ಹತ್ತು ದಿಕ್ಕುಗಳು (ಹರಿ ಶಿಖಿ ಯಮ ನಿರುತಿ ಜಳಾಕರಪತಿ ಮರುತ್ ಐಳಬಿಳ ಹರ ಅಹಿಪ ಶಶಿ ಭಾಸ್ಕರರರಂ ಸೌಧರ್ಮೇಂದ್ರಂ ನಿರವಿಸಿದಂ ದಶದಿಶಾಳಿಯೊಳ್ ಬಲಸಹಿತಂ: **ಶಾಂತೀಶ್ವಪು,** ೧೪. ೧೦೯

**ದಶಧರ್ಮ –** ದಶಕುಲಧರ್ಮ (ಏಕಧನುರ್ಧರನಾದಂ ಇಳಾಕಾಂತೆಯನೊಲಿಸುವಂದು ದಶಧರ್ಮಾಕಳಿತ ಕರಾಗ್ರನಾದೆಂ: **ಆದಿಪು,** ೬. ೩೦)

**ದಶಧರ್ಮಧರ –** [ಜೈನ] ದಶಧರ್ಮಗಳನ್ನು ಹೊಂದಿದವನು (ಸಂದ ದಶಧರ್ಮಧರರಾಗಿಯುಂ ನಿವೃತ್ತಾನರ್ಥ ದಂಡರೆನಿಸಿಯುಂ .. .. ಮುಂದೆ ನಿಂದಿರ್ದ ಮಹಾಮುನಿಗಳಂ: ೧. ೭೫ ವ)

**ದಶಧರ್ಮಧಾರ –** ದಶಧರ್ಮಧರ (ದಶಧರ್ಮಧಾರರಂ ಪುಷ್ಪಶರಾಟೋಪಸಂಹಾರರಂ .. .. ಭೂಪನಂದು ಬಂದಿಸಿ: **ಕರ್ಣನೇಮಿ,** ೫. ೯೬)

**ದಶನ –** ಹಲ್ಲು (ಅಱಿದಳಿಲ್ಲ ನಿರ್ಮಳ ದಶನಚ್ಛವಿ ಕುಸುಮಿತ ರಸನಾಪಲ್ಲವದೊಳಿರ್ದು ಸುಕರಕವಿಶೇಖರನಾ: **ಲೀಲಾವತಿ,** ೧. ೭೯)

**ದಶನಕ್ಷತ –** ದಂತಕ್ಷತ, ಸಂಭೋಗಸಮಯದಲ್ಲಿ ಕಚ್ಚಿದ್ದರಿಂದಾಗುವ ಹಲ್ಲಿನ ಗುರುತು (ನಿನ್ನ ಬಾಹುಪಾಶದೊಳೆ ತೊಡರ್ಚೊಡರ್ಚು ದಶನಕ್ಷತಪೀಡೆಯಂ .. .. ತಳೋದರೀ: **ಮಲ್ಲಿನಾಪು,** ೭. ೪೫)

**ದಶನಘಟ್ಟನ –** ಹಲ್ಲು ಕಡಿಯುವುದು (ಆಮಂತ್ರಿತ ಡಾಕಿನೀ ದಶನಘಟ್ಟನ ಜಾತವಿಭೀಷಣಂ: **ಪಂಪಭಾ,** ೧೨. ೧೨೦)

**ದಶನಚ್ಛದ –** ಹಲ್ಲುಗಳನ್ನು ಮುಚ್ಚಿರುವುದು, ತುಟಿ (ದಶನಾಂಶುಗಳಂ ಮೆಲ್ಲನೆ ದಶನಚ್ಛದಮೃದುಪಲ್ಲವದಿಂ ಮಱಿಸಿ ಮಾಣೆ ದೂತಂ ನುಡಿದಂ: **ಆದಿಪು,** ೧೪. ೫೦)

**ದಶನನಿಪೀಡಿತದಶನವಸನ –** ಹಲ್ಲುಗಳಿಂದ ತುಟಿಯನ್ನು ಕಚ್ಚುವುದು (ಮುಳಿದು ಘೂರ್ಣಮಾನಲೋಹಿತ 'ಲೋಚನಂ ದಶನನಿಪೀಡಿತ ದಶನವಸನಂ ಅಸಿಧೇನುವಂ ಕಿಟ್ಟು: **ಆದಿಪು,** ೨. ೧೪ ವ)

**ದಶಪೂರ್ವಧರ –** [ಜೈನ] ಉತ್ಪಾದಪೂರ್ವ, ಆಗ್ರಾಯಣೀಯ, ವೀರ್ಯಾನುವಾದ ಪ್ರವಾದ, ಅಸ್ತಿನಾಸ್ತಿ ಪ್ರವಾದ, ಜ್ಞಾನಪ್ರವಾದ, ಸತ್ಯಪ್ರವಾದ, ಆತ್ಮಪ್ರವಾದ, ಕರ್ಮಪ್ರವಾದ, ಪ್ರತ್ಯಾಖ್ಯಾನ, ವಿದ್ಯಾನುವಾದ ಎಂಬ ದಶಪೂರ್ವಗಳನ್ನು ಅಭ್ಯಸಿಸಿದವನು

**ದಶಮದೆಸೆ** – ಮದನಾವಸ್ಥೆಯ ಹತ್ತನೆಯದು, ಮರಣ (ಅದು ಕಾರಣದಿಂ ದಶಮದೆಸೆಗೆ ಪಕ್ಕಾಗದ ಮುನ್ನಂ ತಕ್ಕುದಂ ನೆಗಳಲ್ವೇಳ್ಕು: **ರಾಜಶೇವಿ,** ೭. ೯೬ ವ)

**ದಶಮುಖ** – ಹತ್ತು ಮುಖಗಳು, ರಾವಣ (ಅವಲೋಕಿನೀವಿದ್ಯೆ ಮನದೊಡನೆ ಬಂದು ಬೆಸನಾವುದೆನೆ ದಶಮುಖಂ ಅವರಾರೆಂಬುದುಂ: **ಪಂಪರಾ,** ೯. ೮೯ ವ)

**ದಶರೂಪಲಕ್ಷಣ** – ದಶರೂಪಕಗಳ ಲಕ್ಷಣ (ನಾಟಕಮುಂ ಪ್ರಕರಣಮುಂ ಚಾರಣಮುಂ ಭಾಣಮುಂ ಸಮವತಾರಣಮುಂ ಡಿಮಮುಂ ಈಹಾಮೃಗಮುಂ ವ್ಯಾಯೋಗಮುಂ ಸಪಹಸನಮುಂ ವೀಥಿಯುಂ ಎಂಬ ದಶರೂಪಕಲ್ಷಣಮುಮಂ ಪಾತ್ರಸಂಕ್ರಮಣದೊಳ್ ನೆಱೆಯೆ ತೋಱೆ: **ಅಜಿತಪು,** ೫. ೩೦ ವ)

**ದಶವಂದ** – ಹತ್ತನೇ ಒಂದು ಭಾಗ (ಆ ನಾಡುಮಂ ತನಗೆವಪ್ಪ ದ್ರವ್ಯದೊಳೆಲ್ಲಂ ದಶವಂದಮುಮಂ ಕೊಟ್ಟು: **ಹರಿವಂಶ,** ೧೦. ೩೬ ವ)

**ದಶವಿಧದಶೆ** – ಪೋತ, ಚಿಕ್ಕ, ಕಲಭ, ಜವನ, ರೂಪ, ಕಲ್ಯಾಣ, ಯೋದ, ಯೋದತರ, ಸ್ಥವಿರ, ವೃದ್ಧ ಎಂಬ ಆನೆಯ ವಯೋನುಗುಣವಾದ ಹತ್ತು ಅವಸ್ಥೆಗಳು: (ಅಂತೊಗೆದು ಸೊಗಯಿಸುವ ದಶವಿಧದಶೆಗಳೊಳ್: **ಪಾರ್ಶ್ವನಾಪು,** ೪. ೧೧೦ ವ)

**ದಶವಿಧಧರ್ಮ** – [ಜೈನ] ಸನ್ಯಾಸಿ ಅನುಸರಿಸಬೇಕಾದ ಕ್ಷಮೆ, ಮಾರ್ದವ, ಆರ್ಜವ, ಸತ್ಯ, ಶೌಚ, ಸಂಯಮ, ತಪಸ್ಸು, ತ್ಯಾಗ, ಅಕಿಂಚನ್ಯ, ಬ್ರಹ್ಮಚರ್ಯೆಗಳೆಂಬ ಹತ್ತು ಧರ್ಮಗಳು (ಉತ್ತಮಕ್ಷಮಾದಿ ದಶವಿಧಧರ್ಮಮುಮಂ .. .. ಪಂಚೇಂದ್ರಿಯವಿಷಯವಿಚ್ಛಿತಿಯುಂ ತನ್ನೊಳುಂ ಸಚ್ಛನ್ನಮಾಗಿ: **ಪುಷ್ಪದಂಪು,** ೧೪. ೧೬ ವ)

**ದಶವಿಧನಾದ** – ಭ್ರಮರ, ಶಂಖ, ಮೃದಂಗ, ತಾಳ, ಗಂಟೆ, ವೀಣೆ, ಭೇರಿ, ದುಂದುಭಿ, ಸಮುದ್ರಗರ್ಜನೆ, ಮೇಘಗರ್ಜನೆಗಳೆಂಬ ಹತ್ತು ನಾದಗಳು (ದಶವಿಧನಾದಮಂ ಪದೆದು ಕೇಳ್ವ ಸಮುಜ್ಜ್ವಳಬಿಂದುತೇಜಮಂ ಸ್ವಶುಭಚಿದಕ್ಷಿಯಿ ಬಿಡದೆ ನೋಟ್ಟಿ: **ಶಬಶಂವಿ,** ೨. ೯೬)

**ದಶವಿಧಸತ್ಯ** – [ಜೈನ] ಜನಪದ, ಸಮ್ಮತಿ, ಸ್ಥಾಪನಾ, ನಾಮ, ರೂಪ, ಪ್ರತೀತ್ಯ, ವ್ಯವಹಾರ, ಸಂಭಾವನಾ, ಭಾವ, ಉಪಮಾ ಎಂಬ ಹತ್ತು ಬಗೆಯ ಸತ್ಯಗಳು (ನಾಮಸತ್ಯ ರೂಪಸತ್ಯಾದಿ ದಶವಿಧ ಸತ್ಯಮುಂ: **ಪುಷ್ಪದಂಪು,** ೧೪. ೧೬ ವ)

**ದಶವ್ಯಾಕರಣ** – ಐಂದ್ರ, ಚಾಂದ್ರ, ಕಾಶಕೃತ್ಸ್ನ, ಕೌಮಾರ, ಶಾಕಟಾಯನ, ಸಾರಸ್ವತ, ಶಾಕಲ, ಅಪಿಶಲ, ಕಾತಂತ್ರ, ಪಾಣಿನೀಯ ಎಂಬ ಹತ್ತು ವ್ಯಾಕರಣಗಳು (ಸಂಖ್ಯಾವಾಚಕ ಸಮಾಸಕ್ಕೆ: ಏಕಾಂಗ, ದ್ವಿಮುಖ .. .. ಅಷ್ಟಭುಜ, ನವನಿಧಿ, ದಶವ್ಯಾಕರಂ ಎಂದು ಸಂಕ್ಯಾವಾಚಕಂಗಳ್ಗೆ ಸಮಾಸಮಾಗಲೊಡಂ: **ಶಬ್ದಮದ,** ೯೨ ಪ್ರ)

**ದಶಶತಕರ** – ಸೂರ್ಯ (ಮುರಹರ ಪುರಹರ ದಶಶತಕರ ಮೂರ್ತಿಗಳೆನಿತೊಳವು: **ಸಮಯಪ,** ೮. ೧೭೦)

**ದಶಶತಕಿರಣ** – ಸೂರ್ಯ (ದುರಿತಘನತಿಮಿರ ದಶಶತಕಿರಣಮತಿಪ್ರೀತಿಕರಣಂ ಅಖಿಳವಿನೇಯೋದ್ಧರಣಂ: **ಆದಿಪು,** ೧೪. ೩೮)

**ದಶಶತದಳ** – (ಕಂಪಿನ ಸಿರಿಯಂ ಪರಕಲಿಸುವ ದಶಶತದಳ ಪರಿಕರದಿಂ ಪುದಿದು ಹೇಮಕೋಮಳಕಮಳಂ: **ಶಾಂತೀಶ್ವಪು,** ೧೬. ೮೪

**ದಶಾಂಗ** – ಧೂಪ (ದಶಧರ್ಮದಶಾಂಗಧೂಪಮಂ ಸಮರ್ಪಿಸಿ: **ನೇಮಿನಾಪು,** ೬. ೧೪ ವ): [ಜೈನ] ಹತ್ತು ಅಂಗಗಳು (ಪುರ ನಿಧಿ ಶಯ್ಯಾ ಆಸನ ರಾಜ್ಯ ರತ್ನ ವಾಹನ ವರೂಥಿನೀ ನಾಟ್ಯಸಭಾ ಪರಿಕರಸಹಿತಂ ಭರತೇಶ್ವರಂಗೆ ಸಮಸಂದುದೀ ದಶಾಂಗಂ ಭೋಗಂ: **ಆದಿಪು,** ೧೫. ೫)

**ದಶಾಂಗಕಲ್ಪಕುಜ** – [ಜೈನ] ಭೋಗಭೂಮಿಯ ಮಧ್ಯ, ಭೂಷಣ, ವಸ್ತ್ರ, ಆತೋದ್ಯ, ಸ್ರಗ್ಭವನ, ಭಾಜನ, ಅಶನ, ದೀಪ, ಪ್ರೋದ್ಯತ್, ಜ್ಯೋತಿಸ್ಥಿತಿ ಎಂಬ ಹತ್ತುಕಲ್ಪವೃಕ್ಷಗಳು (ಇದು ಶಾಲ್ಮಲೀಪಾದಪಂ ಇಂತಿದು ಜಂಬೂವೃಕ್ಷಂ ಇದುವೆ ಕುರುಭೂಮಿಗಳೊಪ್ಪಿದುವು ಅರ್ಧಚಂದ್ರನಾಕಾರದಿಂ ಉಚಿತದಶಾಂಗಕಲ್ಪಕುಜನಿಳಯಂಗಳ್; **ಆದಿಪು,** ೨. ೨೬)

**ದಶಾಂಗಭೋಗ** – ಚಕ್ರವರ್ತಿಗಳಿಗೆ ದೊರಕುವ ದಿವ್ಯನಗರ, ಚತುರ್ದಶರತ್ನಗಳು, ನವನಿಧಿ, ಸೈನ್ಯ, ಭೋಜನ, ಭಾಜನ, ಶಯ್ಯಾ, ಆಸನ, ವಾಹನ, ನಾಟ್ಯ ಎಂಬ ಹತ್ತು ಭೋಗಗಳು (ಈ ಪುರುಷ ರತ್ನಾಕರಂ ದಶಾಂಗಭೋಗದೊಳ್ ಕೂಡಿದಂ: **ಆದಿಪು,** ೬. ೨೪ ವ)

**ದಶಾನನ** – ಹತ್ತುಮುಖಗಳುಳ್ಳವನು, ರಾವಣ (ಜಲನಿಧಿಯಂ ಪಾರ್ಯ್ದೆರ್ವನೆ ನಿಲಿಕಿ ದಶಾನನನ ಪೊಟಲನಾ ಲಂಕೆಯಂ ಆಕುಲಮಿಲ್ಲದಿಱಿದುನಿಂದಂ: **ಕವಿರಾಮಾ,** ೩. ೯೦)

**ದಶಾವತಾರ** – ಮತ್ಸ್ಯ, ಕೂರ್ಮ, ವರಾಹ, ನರಸಿಂಹ, ವಾಮನ, ಪರಶುರಾಮ, ರಾಮ, ಕೃಷ್ಣ, ಬುದ್ಧ, ಕಲ್ಕಿ ಎಂಬ ವಿಷ್ಣುವಿನ ಹತ್ತು ಅವತಾರಗಳು (ಅನಿಮಿಷೇದ್ಯಾವತಾರಂ ತನಗಾಯ್ತು ದಶಾವತಾರಂ: **ಗದಾಯು,** ೩. ೪೪)

**ದಶಾಸ್ಯ** – ದಶಾನನ (ಮರುನ್ನಂದನನಿಂ ದಶಾಸ್ಯನಗರಂ .. .. ಬೆಂದ ಮಾಟ್ಕೆಯಿಂ: **ಪಂಚತಂತ್ರ,** ೩೭೭)

**ದಶಾಸ್ಯಾಂತಕ** – ದಶಾಸ್ಯನನ್ನು ಕೊಂದವನು, ಶ್ರೀರಾಮ (ಚಿರಂತನಕಾರ್ಯಂಗಳೊಳಂ ಹನೂಮಂತನಂತಪ್ಪನಂ ದಶಾಸ್ಯಾಂತಕಂ ದೂತನಾಗಿ ಕಳಿಪಿದಂ: **ಪಂಚತಂತ್ರ,** ೩೩೪ ವ)

**ದಷ್ಟತೆ** – ಕಡಿತ, ಕಚ್ಚುವಿಕೆ (ರತಿಮೂರ್ಛಿತೆ ಜೋಲ್ದದೇಹದಿಂ ಸೊಗಯಿಸಿದಳ್ ಭುಜಂಗಪರಿದಷ್ಟತೆಯಂ ತವೆ ಸೂಚಿಪಂದದಿಂ: **ರಾಜಶೇವಿ,** ೧೧. ೧೭೯)

**ದಸಿ** – ತಿವಿಗೋಲು, ಶೂಲ (ದಸಿಗಾಲ್ ಮಸಿಮೆಯ್ ಬಿಜುಸಾದ ಕೆಯ್: **ಆಚವರ್ಧ,** ೧೫. ೩೮); ಮುಳ್ಳು (ಉಚ್ಚವದಿಂದ ದಸಿಯಂ ತೆಗೆದು ಅಚ್ಚಿಗೆ ಗೋಚರಿಸದೆ ಎಯ್ದಲ್ ಆ ಲುಬ್ಧಕಂ: **ಉದ್ಭಟಕಾ,** ೧೧. ೧೧೧)

**ದಸಿಕ** – ಶೂಲಕ್ಕೇರಿಸುವವನು (ಇಕ ಪ್ರತ್ಯಯಕ್ಕೆ: ಕರಿಕಂ, ಹುಸಿಕಂ, ದಸಿಕಂ ಬಾರಿಕಂ: **ಶಬ್ದಮದ,** ೨೧೪ ಪ್ರ)

**ದಸೆ** – [ದಶಾ] ಅವಸ್ಥೆ (ಶಕಾರಕ್ಕೆ ಸಕಾರಂ: ಶಿರಂ–ಸಿರಂ, ದಶೆ–ದಸೆ, ರಾಶಿ–ರಾಸಿ: **ಶಬ್ದಮದ,** ೨೬೭ ಪ್ರ)

**ದಸ್ರಾತ್ಮಜರ್** – [ದಸ್ರ+ಆತ್ಮಜರ್] ಅಶ್ವಿನೀ ದೇವತೆಗಳ ಮಕ್ಕಳು: ನಕುಲ ಮತ್ತು ಸಹದೇವ (ಸೊಕಮಿರ್ಕೆ ಅಕ್ಕಟ ದರ್ಭಪಾಣಿ ಯಮಜಂ ದರ್ವೀಕರಂ ವಾಯುಪುತ್ರಕನುಂ ಜರ್ಜರಹಸ್ತಂ ಇಂದ್ರತನಯಂ ದಸ್ರಾತ್ಮಜರ್ ದಂಡಮುಷ್ಟಿಕರರ್ ಶಸ್ತ್ರವಿಡಂಬಂ ಏವುದವರ್ಗಂ ಪಾಂಚಾಲಿಯುಂ

ಗಂಧದಾಯಕಿಯಾಗಿರ್ಪಿನಂ ಅಂದು ಮತ್ಸ್ಯಗೃಹದಿಂದ ಈ ನಿಗ್ರಹಂ ಪೊಲ್ಲದೇ: **ಗದಾಯು,** ३. ३४)

**ದಹನ –** ಅಗ್ನಿ (ನಾಗರ ಖಂಡಂಗಳಂ ಆ ನಾಗರ ಖಂಡದೊಳೆ ತೊಡರೆ ನರಂ ಇಸುವುದುಂ ನಾಗರ ಖಂಡಂಗಳುಮಂ ನಾಗರ ಖಂಡಮುಮಂ ಅಳುರ್ದುಕೊಂಡಂ ದಹನಂ: **ಪಂಪಭಾ,** ೮೯)

**ದಹನಕ್ರಿಯೆ –** ಹೆಣವನ್ನು ಸುಡುವ ಕಾರ್ಯ(ಜಲದಾನಕ್ರಿಯೆಯಂ ದೃಗ್ಜಲದಿಂ ಕೋಪಾಗ್ನಿಯಿಂದೆ ದಹನಕ್ರಿಯೆಯಂ ಕೆಳೆಯಂಗೆ ಮಾಡಿದಯ್: **ಗದಾಯು,** ೫. ३೨)

**ದಹನಾರ್ಚಿ –** ಅಗ್ನಿಜ್ವಾಲೆ (ರತ್ನಂ ಪ್ರತಿಬಿಂಬಿತ ಮಣಿದೀಪಪ್ರತಿಬಿಂಬದತಾನುಂ ಆಕಾಶಸ್ಫಟಿಕಾಂತರಿತ ದಹನಾರ್ಚಿಯಂತಾನುಂ .. .. ತನ್ನ ಬೆಳಗೆ ಬೆಳಗಾಗೆ: **ಶಾಂತಿಪು,** ೯. ೨೧೪ವ)

**ದಹನಾಶೆ –** ಅಗ್ನಿಯ ದಿಕ್ಕು, ಆಗ್ನೇಯ (ಅಹಿಮಕರಂ ಪೊಡಯಿಸುವಂ ದಶನಾಶೆಗೆ ರಥಮನರುಣನಿಂ ದಿನಮುಖದೊಳ್: **ಲೀಲಾವತಿ,** ೯. ೭)

**ದಹ್ಯಮಾನ –** ಸುಡುತ್ತಿರುವ (ಮನ್ಯೂದ್ಗತಕಂಠನುಂ ಅಸಹ್ಯಶೋಕಾನಲ ದಹ್ಯಮಾನ ಅಂತಃಕರಣನುಂ ಆಗಿ; **ಗದಾಯು,** ೫. ೧೦ ವ)

**ದಳ –** ಪತ್ರ, ಎಸಳು (ಛದನಂ ಪತ್ರಂ ಪರ್ಣಂ ಛದಂ ಪಳಾಶಂ ದಳಂ ಸಮಂ ಏಕಾರ್ಥಂ: **ಅಭಿಧಾವ,** ೧. ೭. ೫); ಆಸರೆ (ವಜ್ರನಾಭಿ ಚೆಲ್ವಿಂಗೆ ನಾಭಿಯುಂ ವಿಳಾಸಕ್ಕಾವಾಸಮುಂ ಅಳವಿಂಗೆ ದಳಮುಂ ಅಜೆವಿಂಗೆ ಗುಜೆಯುಂ .. .. ಆಗಿ ಬಳೆವನ್ನೆಗಂ: **ಆದಿಪು,** ೬. ೨೨ ವ); ದಟ್ಟವಾದ (ಅಂಗಜಂಗೆ ದಳಮಾದ ಎಲೆ ಮುದ್ಗರಮಾದ ಕೆಯ್ ಬಸಂತದ ನಡು .. .. ಆಗೆ: **ಶಾಂತಿಪು,** ೯. ೭೫)

**ದಳಂಗೊಳಿಸು –** ದಟ್ಟಗೊಳಿಸು (ಸೌರಭಮಂ ದಳಂಗೊಳಿಸೆ ಬಣ್ಣದೆ ನುಣ್ಣಿಸೆ .. .. ನೋಡಿದಳ್ ವಾರಿಜವಕ್ತ್ರೆ ಕೈರವವಿಲೋಚನೆ ಮಾಲೆಯನಂದು ಲೀಲೆಯಿಂ: **ಅನಂತಪು,** ४. ೧೧४)

**ದಳಂಬಡೆ –** ಅಧಿಕವಾಗು (ಕಾಮದೇವನೆಂಬ ಬಳಮರ್ದುಕಾಜಿನ ಮಾಡಿದ ಮರ್ದಿನಂತೆ ಬಳೆದು ದಳಂಬಡೆದು: **ಪಂಪಭಾ,** ४. ೮೭ ವ)

**ದಳತ್ –** ಅರಳುವ, ಚಿಗುರುವ (ದಳತ್ ನೀಲಾತಸೀ ಚಂಕನತ್ತನು ತೋಯಾಹರಣಾರ್ಥಿ ಬಂದಂ ಅಭಯಂ ಸೌಮಿತ್ರಿ ಶತ್ರುಂಜಯಂ: **ಪಂಪರಾ,** ೭. ೧೦४)

**ದಳತ್ಕೋಕನದಜಠರ –** [ದಳತ್+ಕೋಕನದ+ಜಠರ] ತಾವರೆಯನ್ನು ಹೊಕ್ಕುಳಲ್ಲಿ ಉಳ್ಳವನು, ವಿಷ್ಣು, ಕೃಷ್ಣ (ಜಳತ್ಕೋಕಕನದಜಠರನಂ ನಿರ್ವ್ಯಾಕುಳಂ ಇಂತೆಂದು ಧರ್ಮತನಯಂ ನುಡಿದಂ: **ಪಂಪಭಾ,** ೯. ೧४)

**ದಳನ –** ಸೀಳುವಿಕೆ (ರಿಪುನೃಪಬಲದಾವಾನಲಂ ವೈರಿಭೂಭೃತ್ ಮದವತ್ ಮಾತಂಗಕುಂಭಸ್ಥಳ ದಳನಖರೋಗ್ರಾಸಿ ಪಂಚಾಸ್ಯಧೈರ್ಯಂ: **ಪಂಪಭಾ,** ೬. ೭೭)

**ದಳವೇಱು –** ಸಾಂದ್ರವಾಗು, ವಿಕಸನಗೊಳ್ಳು (ಸೆಳ್ಳುಗುರ್ವೆಳಗಿಂದ ಅರಲ್ಗಳ ದಳಂ ದಳವೇಱೆ ಮದಾಳಿ ಮೆಲ್ಲ ಮೆಲ್ಲಗೆ ಸುತಿಗೂಡೆ: **ಆಚವರ್ಧ,** ೧. ೬४); ಹಿಗ್ಗು (ಇನಿಯಳ ಗರ್ಭದಂದಮಂ ನೋಡಲ್ ಚಿತ್ತಂ ದಳವೇಱುತ್ತಿರೆ: **ರಾಜಶೇವಿ,** ४. ४४)

**ದಳಿಂಬ –** ದಡಿಬ, ಮಡಿ ಬಟ್ಟೆ (ಹಾಟಕಪೀಠದ ಮೇಲೆ ಪಾಸಿದ ದುಗುಲದ ದಳಿಂಬದೊಳಿರಿಸಿದಾಗಳ್: **ಆದಿಪು,** ४. ४೮ ವ); ಮೆತ್ತೆ (ಆಕೆವೆರಸು ದಳಿಂಬದೊಳ್ ಕುಳ್ಳಿರ್ದು: **ಕಾದಂಬ,** ೯. ೮ ವ)

**ದಳಿತ –** ಅರಳಿದ (ದಳಿತ ಲಸತ್ಕುಂದದ್ಯುತಿ ಅಳಂಕೃತಾಶೇಷಭುವನರಾ ನೃಪನ ಯಶಂ ಬಳೆಯಿಪುದು: **ಆಚವರ್ಧ,** ೧. ೭೯)

**ದಳಿತಮಾರ –** ಕಾಮನನ್ನು ದಮನ ಮಾಡಿದವನು (ಜಯ ಜಿನೇಂದ್ರ ನತಸುರೇಂದ್ರ ದುರಿತದೂರ ದಳಿತಮಾರ: **ಅಜಿತಪು,** ೭. ೧೫ ರಗಳೆ)

**ದಳಿತೇಕ್ಷಣೆ –** ಅಗಲವಾದ ಕಣ್ಣುಳ್ಳವಳು (ಅಡರೆ ಬೆಮರ್ತುದು ತನುಶಶಿಮಣಿಶಲಾಕೆ ದಳಿತೇಕ್ಷಣೆಯಾ: **ಲೀಲಾವತಿ,** ೭. ೯೦)

**ದಳಿವ –** ಮೇಲು ಹೊದಿಕೆ (ತೊಟ್ಟ ಎಕ್ಕವಡಂ ಮರವಿಲ್ ಕಟ್ಟಿದ ಪಣೆಕಟ್ಟು ಬೇಂಟೆವಜೆ ದೊರೆಯೊಳ್ ಒಡಂಬಟ್ಟ ಅಸಿಯ ಸುರಗಿ ದಳಿವದ ತೊಟ್ಟ ಅಂಗಿಗೆ ತನ್ನೊಳ್ ಅಮರೆ ಬೇಂಟೆಯನೊರ್ವಂ; **ಪಂಪಭಾ,** ೫. ३೬)

**ದಳಿವಿಡಿ –** ಕೂಡಿಸು, ಕುಂದಣವಿಡು (ಮಾಣಿಕ್ಯಚಟ್ಟಂ ನೀರಂಜಿಸಿ ದಳಿವಿಡಿದ ಮಹಾರತ್ನದ ದೊರೆಗೆ ವಂದುದಾ ಸ್ತ್ರೀರತ್ನಂ: **ಆದಿಪು,** ४. ४೨)

**ದಳ್ಳಿಸಿ ಕುಕಿಲ್ –** ಭೋರೆಂದು ಶಬ್ದಮಾಡು (ದಳ್ಳಿಸಿ ಕುಕಿಲುತ್ತಂಬುಧಿಯ ಉಳ್ಳೋಳಂ ನೆಗೞೆ ಕವಿದು ನರ್ತಿಸಿ ನಡೆದತ್ತು: **ಆದಿಪು,** ೧३. ೫३)

**ದಳ್ಳಿಸು –** ಗರ್ವದಿಂದ ಮೆರೆ; ಸುಡು (ಅದ್ಭುತನಟನಿಟಿಲಾಳೋಲಕೀಲಾಕ್ಷಿವೊಲ್ ದಳ್ಳಿಸೆ ಕೋಪಾರಕ್ತನೇತ್ರಂ ನಿಜಭುಜಗದೆಯಂ ತೂಗಿದಂ ಧಾರ್ತರಾಷ್ಟ್ರಂ: **ಗದಾಯು,** ೭. ३೦)

**ದಳ್ಳಿಱೆ –** ತಿವಿ (ಮುಗಿಲಂ ಮರಗಳ ತುದಿಗೋಡುಗಳೊಳೆ ದಳ್ಳಿಱಿದೊಡೆ ಉದಿರ್ದು ಕೆದಱಿದ ಕಿಱುದಾರೆಗಳೆನಿಪುವು .. .. ನೆಲ್ಲಿಯ ಕಾಯ್ಗಳ್: **ಲೀಲಾವತಿ,** ೬. ೨೯)

**ದಳ್ಳುರಿ –** ದೊಡ್ಡ ಉರಿ (ಮುಳಿಸಿನ ದಳ್ಳುರಿಗಳನುಗುೞುತ್ತುಂ ಚಕ್ರರತ್ನಂ ಬಗೆದು ಬೆಸೆಸಿದಂ ಭರತೇಶಂ: **ಆದಿಪು,** ೧४. ೧೧೫); ಗರ್ವದಿಂದ ಮೆರೆ (ನೀಂ ಕೊರ್ವಿ ಗಾಳಿಯೊಳ್ ಕೂಡಿದ ಕಿರ್ಚಿನಂತೆ ದಳ್ಳುರಿದು ಪೊಟಲೊಳಗೆ ಮುನ್ನಿನೆಡೆಗೀಗಳುಂ ಪಿರಿದಬ್ಬರಮಂ ಮಾಡಿದೆ: **ಧರ್ಮಾಮೃ,** ೨. ೫೯ ವ)

**ದಟಿ –** ಸೈನ್ಯ, ಚತುರಂಗಸೈನ್ಯ (ಎರಡರ್ಥಕ್ಕೆ: ದಟಿಮೆಂದು ಚತುರಂಗಬಲಮುಂ ಸಾಮಾನ್ಯಬಲಮುಂ ಅಕ್ಕುಂ: **ಶಬ್ದಮದ,** ३३ ವೃತ್ತಿ ೧४೯)

**ದಟಿದುಟಿ –** ಬಲ್ಲೂರೆ, ಸುಲಿಗೆ (ಒಂದರ್ಥಕ್ಕೆ: ದಟಿದುಟಿಮೆಂದು ಬಲ್ಲೂಱೆ: **ಶಬ್ದಮದ,** ३३ ವೃತ್ತಿ ೬೯)

**ದಟಿಮುಖಧವಳ –** ಸೇನೆಯ ಮುಂಭಾಗದಲ್ಲಿ ಶೋಭಿಸುವವನು (ಬಿರುದಿಂಗೆ: .. .. ದಟಿಮುಖಧವಳಂ ದಟಿಮುಖಾದಿತ್ಯಂ .. .. ಇವಱಂತೆ ತಾಮ ಮಾಡಲಾಗದು: **ಶಬ್ದಮದ,** ೧೮೫ ಪ್ರ)

**ದಟಿಮುಖಾದಿತ್ಯ –** ಸೇನೆಯ ಮುಂಭಾಗದಲ್ಲಿ ಸೂರ್ಯನಂತಿರುವವನು (ಬಿರುದಿಂಗೆ: .. .. ದಟಿಮುಖಧವಳಂ ದಟಿಮುಖಾದಿತ್ಯಂ .. .. ಇವಱಂತೆ ತಾಮ ಮಾಡಲಾಗದು: **ಶಬ್ದಮದ,** ೧೮೫ ಪ್ರ)

**ದಟಿವುಟಿ –** ಸುಲಿಗೆ (ಒಂದರ್ಥಕ್ಕೆ: ದಟಿದುಟಿಮೆಂದು ಬಲ್ಲೂಱೆ; ದಟಿವುಟಿಮೆಂದುಂಟು: **ಶಬ್ದಮದ,** ३३ ವೃತ್ತಿ ೬೯); ಗಲಾಟೆ

(ಕಿವಿಯಂ ಪಳಂಚಲೆವ ಮಂಚದ ಶಕುನಿಯಂಚೆಯ ಗಿಳಿಯ ಪುರುಳಿಯ ಪಾರಿವದ ಕೊರಲುಲಿಯ ದಟಿವುಟಿವನಾಲಿಸಿ: **ಚಂದ್ರಪ್ರಭ,** ೮. ೬೬ ವ)

**ದಟ್ಟಿಟಿ** – ಸಂಕೋಲೆ (ಒಂದರ್ಥಕ್ಕೆ: ದಟ್ಟಿಟಿಯೆಂದು ಸಂಕಲೆ: **ಶಬ್ದಮದ,** ೩೩ ವೃತ್ತಿ ೭೦)

**ದಾಂಗುಡಿ** – (ದಾವು+ಕುಡಿ) ದಾಟುವ ಕುಡಿ, ಹಬ್ಬುವ ಕುಡಿ (ದಾಂಗುಡಿವಡೆವ ಕಲ್ಪಲತೆಗಳ ನಡುವಣ ಕಲ್ಪಾವನೀಜಮಿರ್ಪಂತಿರ್ದಂ: **ಸುಕುಮಾಚ,** ೧೦. ೧೦೧)

**ದಾಂಗುಡಿವರಿ** – ದಾಂಗುಡಿವಡೆ (ಮರದಿಂ ಮರಕ್ಕೆ ದಾಂಗುಡಿವರಿದ ಎಳಲತೆಯಂತೆ .. .. ರಾಜ್ಯಲಕ್ಷ್ಮಿ ನಿಲುಕಿದಾಗಳ್: **ಕಾದಂಬ,** ೩. ೧೦೮)

**ದಾಂಗುಡಿವಿಡಿ** – ದಾಂಗುಡಿವಡೆ (ಮಕ್ಕಳಂ ಪಡೆದಬಳಾಜನಂ ನೆರೆದ ಮಕ್ಕಳ ಮಕ್ಕಳ ನೀಳ್ದದೊಂದು ದಾಂಗುಡಿವಿಡಿದೀವ ಚಾಗಮೆಡಱೋಡುವಿನಂ: **ಆದಿಪು,** ೨. ೨೪)

**ದಾಕ್ಷಿಣಾತ್ಯೆ** – ದಕ್ಷಿಣದೇಶದಲ್ಲಿನ ಸಂಗೀತಪದ್ಧತಿ (ಮನಾವತಿಯುಂ ದಾಕ್ಷಿಣಾತ್ಯೆಯುಂ ಪಾಂಚಾಲಿಯುಂ ಮಾದ್ರಮಾಗಧಿಯುಂ ಎಂಬ ನಾಲ್ಕುಂ ವೃತ್ತಿಯುಮಂ: **ಅಜಿತಪು,** ೫. ೩೦ ವ)

**ದಾಕ್ಷಿಣ್ಯ** – ಅನುಕಂಪ (ಸ್ವಚ್ಛತನಂ, ತ್ಯಾಗಂ, ಶೌರ್ಯಂ, ಸಮಾನವಹ ಸುಖದುಃಖಂ, ಸ್ನೇಹಂ, ದಾಕ್ಷಿಣ್ಯಂ, ಸತ್ಯಂ, ಶೌಚಮೆಂಬಿವು ಮಿತ್ರಗುಣಂಗಳ್: **ಪಂಚತಂತ್ರ,** ೪೨೬ ಶ್ಲೋಕ ೧೯೯ ಟೀಕೆ)

**ದಾಘ** – ದಾಹ, ತಾಪ (ಮೇಘಮಂ ಅಖಿಲ ಪರಿಗ್ರಹ ದಾಘಮಂ ಈ ಕೈಕೆ ಬೇಡೆ ಧರೆಯಂ ತೃಣದಿಂ ಲಾಘವಮೆನೆ ಬಗೆದೀಗುಂ ರಾಘವನೌದಾರ್ಯ ತುಂಗನೀಯದುದುಂಟೇ: **ಪಂಪರಾ,** ೬. ೧೮೯)

**ದಾಡಿಮ** – ದಾಳಿಂಬೆ (ಅದಱ ಬಾಳ್ಕೆಯಂ ನೆಟ್ಟನೆ ನಗುವಂತೊಗೆದು ಬಿಱಿದ ದಾಡಿಮಮೆಸೆಗುಂ: **ತ್ರಿಷಷ್ಟಿಪು,** ೨೮. ೧೪)

**ದಾಡಿಮೀಬೀಜ** – ದಾಳಿಂಬೆಯ ಬೀಜ (ಎಸೆವ ದಾಡಿಮೀ ಬೀಜರಾಜಿಯಂ ತೆಗೆದು ರಸವನಾಸ್ವಾದಿಸಿದೆಂ: **ಕಾದಂಸಂ,** ೧. ೩೨)

**ದಾಡೆ** – ಕೋರೆಹಲ್ಲು (ಕಾರಿರುಳ ತಿರುಳ ಬಣ್ಣ ಕೂರಿದುವೆನೆ ತೊಳಪ ದಾಡೆ ಮಿಳಿರ್ವ ಉರಿಗೇಸಂ ಪೇರೊಡಲ್ ಎಸೆದಿರೆ ಪುಟ್ಟಿದಂ ಆರುಂ ಅಗುರ್ವಿಸೆ ಮ್ಗಂ ಘಟೋತ್ಕಚನೆಂಬಂ: **ಪಂಪಭಾ,** ೩. ೨೦)

**ದಾಡೆಗುಟ್ಟು** – ದಾಡೆಗಡಿ, ಹಲ್ಲು ಕಡಿ (ಕಿಡಿ ಕಣ್ಕಡೆಯೊಳ್ ಕಿಟಿ ದಾಡೆಗುಟ್ಟಿ ತಾಂ ತಾಗಲಿದಿರ್ಚಿ: **ರಾಜಶೇವಿ,** ೫. ೯೦)

**ದಾತ** – [ದಾತೃ] ದಾನಿ (ಋಕಾರಾಂತಕ್ಕೆ: ದಾತೃ ಶಬ್ದಕ್ಕೆ ದಾತನೆದು ಪ್ರಯೋಗಮುಂಟು; ಭೀತನ ದಾತನ ಸತ್ವೋಪೇತನ .. .. **ಶಬ್ದಮದ,** ೯೪ ಪ್ರ ೧)

**ದಾತವ್ಯ** – ಕೊಡಲು ಅರ್ಹವಾದ (ಪ್ರವಿಮಲಸದ್ಗೀರ್ವಾಣದಾತವ್ಯ ಸಾಯಕ ಸಂಪೂರ್ಣ ಕಳಾಪ್ರವೀಣನಂ ಇಳಾಭಾರಕ್ಷಮ ಅಕ್ಷೂಣನಂ .. .. ಸರ್ವಲಕ್ಷಣಸಂಪೂರ್ಣಂ ಅಪ್ಪ ಮಗನಂ ಅಮೋಘಂ ಪಡೆವೆಂ: **ಪಂಪಭಾ,** ೧. ೧೩೪ ಮತ್ತು ೧೩೪ ವ)

**ದಾತೃ** – ದಾನಿ (ಭಕ್ತಿಜ್ಞಾನ .. .. ಸಮಾಯುಕ್ತಂ ಸಪ್ತಗುಣಂ ಜೈನೋಕ್ತಿಯಿನ ದಾತೃವೆನಿಪ ಭವ್ಯಂಗಕ್ಕುಂ: **ಚಂದ್ರಪ್ರಭ,** ೩. ೩೧)

**ದಾತ್ರ** – ಕುಡುಗೋಲು (ದಾತ್ರಂ ಲವಿತ್ರಂ ಅಱೆಗೆ ಖನಿತ್ರಂ ಕುದ್ದಾಲಂ ಅದುವೆ ಗೋದಾರಣಕಂ: **ಅಭಿಧಾವ,** ೧. ೧೧. ೬೯)

**ದಾದಿ** – [ಧಾತ್ರಿ] ಸಾಕಿದವಳು, ದಾಸಿ (ಅಬ್ಬೆ ದಾದಿ ಪರಿಚಾರಕರ್ ಈಜೆಲ ಕಾಪು ಕಾಪೆ ಕೂರ್ತಿಟ್ಟ ಅವರ ಆತ್ಮಪುಣ್ಯಮೆ ವಿಪುಣ್ಯರಂ ಓಳಿಯೆ ಕಾಪು ಕಾಗುಮೇ: **ಶಾಂತಿಪು,** ೬. ೧೦೬)

**ದಾದಿಕಾಱವೆಸ** – ದಾಸಿಯ ಕೆಲಸ (ಉಸುರೆ ದಿವಿಜೇಶ್ವರಂ ಪರಿವೆಸದಮರರ್ ದಾದಿಕಾಱವೆಸದ ಅಮರರದೇಂ ಬೆಸಗಲಿಗಳ್ ಬರ್ಪರೊ: **ಅಜಿತಪು,** ೫. ೭೩)

**ದಾನ** – ಮದೋದಕ (ನಿನ್ನಯ ಸಂತಾನಂ ಅವಿಚ್ಛಿನ್ನಂ .. .. ನೆಗಟ್ಟುಂ ಭೂಪೋನ್ನತ ದಿಜ್ಞಾಗ ದಾನದಂದದಿನೆಂದುಂ: **ಕಾದಂಸಂ,** ೨. ೧೭); ನೀಡುವ ಗುಣ, ಇದರಲ್ಲಿ ನಾಲ್ಕು ಬಗೆ (ಆಹಾರದಾನಂ ಅಭಯದಾನ ಶಾಸ್ತ್ರದಾನ ಭೈಷಜ್ಯದಾನಮೆಂಬಿವು: **ಹರಿವಂಶ,** ೧೦. ೧೦ ವ)

**ದಾನಗುಣ** – ದಾನಕೊಡುವ ಸ್ವಭಾವ (ಚಂದ್ರಬಲಮಂ .. .. ಮಾಟ್ಕೆ ನೂತನ ಕಂದರ್ಪಂ ಅನೂನದಾನಗುಣದಿಂ ಚಾಳುಕ್ಯಕಂದರ್ಪನಾ: **ಗದಾಯು,** ೧. ೬)

**ದಾನಚಿಂತಾಮಣಿ** – ಚಿಂತಾಮಣಿಯಂತೆ ಕೊಡುಗೈದಾನಿ (ಎನ್ನ ಅತಿಪ್ರೀತಿಯಿಂ ಧರ್ಮಚಿತ್ತಂ ವರದತ್ತಂ ದಾನಚಿಂತರಾಮಣಿಯೆನಿಸಿ ಯಶೋಭರಮಂ ತಾಳ್ದಿ ನಿಂದಂ: **ಅಜಿತಪು,** ೧೨. ೫); ಅತ್ತಿಮಬ್ಬೆಯ ಬಿರುದು (ಪರಮ ಶ್ರಾವಕಿ ನೀನೆ ದಾನಿಯೆ ವಲಂ ಶ್ರೀ ದಾನಚಿಂತಾಮಣಿ: **ಅಜಿತಪು,** ೧೨. ೭)

**ದಾನದಂತಿ** – ಮದೋದಕವನ್ನು ಸುರಿಸುವ ಆನೆ (ನಿಜಗಮನಕ್ಕೆ ಮಚ್ಚರಿಪ ಮಂಥರಯಾನದ ದಾನದಂತಿಯಂ .. .. ಕನಸು ಪದಿನಾಱುಮಂ ಅಂಬುಜವದನೆ ಕಂಡಳ್: **ಪುಷ್ಪದಂಪು,** ೯. ೯೮)

**ದಾನಪರ** – ದಾನ ನೀಡುವುದರಲ್ಲಿ ನಿರತ (ದಾನಪರಂ ನಿಜೋನ್ನತಮಾನನಾರೂಢ ವಿಪುಳವಂಶಂ: **ಕವಿರಾಮಾ,** ೩. ೧೨೯); ದಾನದಂತಿ (ಎಂತು ಅಬಳೆಗೆ ತಾಳಗೊಟ್ಟೆ ಎಂದು ಎಮ್ಮೊಳಿಂತು ತೋಟಿಗೆ ಬಂದಂ: **ಸುಕುಮಾಚ,** ೭. ೪೪)

**ದಾನಲೇಖೆ** – ಮದೋದಕದ ಗೆರೆ (ಯೌವನ ಗಂಧದ್ವಿಪ ದಾನಲೇಖೆ .. .. ತಳೆದತ್ತೀಗಳ್ ಕುಮಾರಾಸ್ಯದೊಳ್: **ಕಾದಂಬ,** ೮. ೯೧)

**ದಾನವ** – ದನುವಿನ ಮಗ; ರಾಕ್ಷಸ (ಅಂತು ಆ ವನಗಹನಮೆಲ್ಲಂ ದಹನಮಯಮಾದ ಪ್ರಸ್ತಾವದೊಳ್ ವಿಸ್ಮಯಮಾಗೆ ಮಯನೆಂಬ ದಾನವವಿಶ್ವಕರ್ಮಂ ನೆಗೆದುರಿವ ಉರಿಮಾಲೆಗಳಂ ಗದೆಯೊಳ್ ಬೀಸುತ್ತುಂ ಪೊಱಮಡೆ: **ಪಂಪಭಾ,** ೫. ೯೭ ವ)

**ದಾನವಮಥನ** – ರಾಕ್ಷಸಸಂಹಾರಿ, ವಿಷ್ಣು (ಮಾನಿನಿಯರ ಒಳಗನಱಿವೊಡೆ ದಾನವಮಥನಂಗೆ ಬರದು: **ಅನುಭವ,** ೮೪)

**ದಾನವಿನೋದ** – ದಾನ ನೀಡುವುದರಲ್ಲಿ ಸಂತಸ ಪಡೆಯುವವನು (ದಾನವಿನೋದನ ದಾನವರ್ಷದಿಂ ವಿಬುಧದ್ರುಮಕದಂಬಂ ಅಂಕುರಿತಮಾಗೆಯುಂ: **ಮಲ್ಲಿನಾಪು,** ೮. ೫೨ ವ)

**ದಾನವ್ಯಸನಿ** – ದಾನ ನಿಡುವುದರಲ್ಲಿ ಅತ್ಯಾಸಕ್ತ (ಕಱೆದು ಪೊನ್ನ ಮಟೆಯಂ ದಾನವ್ಯಸನಿ ದಶರಥಂ ಅದೇಂ ಪೊಸಯಿಸಿದನೊ .. .. ಉತ್ಸವಮಂ: **ಪಂಪರಾ,** ೩. ೧೪೨)

**ದಾನವ್ರತ** – [ಜೈನ] ದಾನಮಾಡುವ ವ್ರತ; ಒಂದು ಶಿಕ್ಷಾವ್ರತ (ಶೀವ್ರೋಪವಾಸಮುಂ ದಾನವ್ರತಮುಂ ನಿಖಿಲಸಮತೆಯಂ ಸನ್ಯಾಸವ್ರಜನಮುಂ ಎಂಬಿವು ಶಿಕ್ಷಾವ್ರತವಿದು ನಾಲ್ಕು ತೆಱಂ: **ಶಾಂತಿಪು,** ೧. ೯೦)

**ದಾನಾಸಾರ** – ದಾನ ಕೊಡುವಾಗ ಹೊಯ್ಯುವ ನೀರಿನ ಮಳೆ (ಅಹಿಪತಿ ಪೆಡೆಯಂ ಬಿರ್ಚಿದಂ ದಿಗ್ಗಜಂ ಭೋರೆನೆ ದಾನಾಸಾರಮಂ ಸೂಸಿದವು: **ಜಗನ್ನಾವಿ,** ೩. ೪)

**ದಾಮ** – ಹಗ್ಗ (ಪೊಣ್ಮಿದ ಇರಮ್ಮದ ಅನಳ ಶಿಖಾ ದಾಮಂಗಳೋ ತಾಂ ವಿಯೋಗಿಗಣಕ್ಕುರ್ಚುವ ಮೇಘಮನ್ಮಥನ ತೂಣೀರೋದ್ಗತಜ್ವಾಳೆಯಂಬುಗಳೊ ಪೇೞ್ನೆ ಮಿಂಚುಗಳ್: **ಶಾಂತೀಶ್ವಪು,** ೧೨. ೪೨); ಸೊಂಟಪಟ್ಟಿ [ಡಾಬು]; ಹಾರ, ಹೂಮಾಲೆ (ಪೊಸದ ಸೌರಭಂ ತವದ ಮೆಯ್ಸಿರಿ ಬಾಡದ ದಾಮಂ ಉಟ್ಟೊಡಂ ಮಾಸದ ಸೀರೆ .. .. ಇವಂ ಅಪ್ಪುಕೆಯ್ದಂ .. .. ಕಡೆವರಂ ದಿವಿಜಂ: **ಮಲ್ಲಿನಾಪು,** ೧೧. ೪೬); ಪರಿಮಳ (ಕನಕಕೇತಕೀ ದೀರ್ಘದಳ ದಾಮ ಅನುಲೇಪನ ಕರ್ಪೂರ ... .. ಬಹಳ ಪರಿಮಳಕ್ಕೆ ಪರಿತಂದ .. .. ಮಧುಕರನಿಕರಮಂ: **ನೇಮಿನಾಪು,** ೪. ೫೦ ವ)

**ದಾಮಕ** – ಹಾರ (ಆಮೋದ ಮುದಿತ ಮಧುಕರ ದಾಮಕದೊಳ್ ನೀಲರತ್ನ ದಾಮಂ ಮಲ್ಲೀದಾಮಕದೊಳ್ ಮುಕ್ತಾಫಳ ದಾಮಂ ತಡವಾದುವೊಡನೆ ಮಣಿಮಂಡಲದೊಳ್: **ಪಂಪರಾ,** ೫. ೧೧೫)

**ದಾಮೋದರ** – ಚಿಕ್ಕಂದಿನಲ್ಲಿ ಯಶೋದೆ ಸೊಂಟಕ್ಕೆ ಹಗ್ಗ ಕಟ್ಟುತ್ತಿದ್ದುದರಿಂದ ಕೃಷ್ಣನಿಗೆ ಈ ಹೆಸರು, ವಿಷ್ಣು ನಂದಗೋಪಂ .. .. ಶಾಖಾರ್ಜುನವಿಟಪಯುಮಂ ದರಸ್ಮಿತಭಿನ್ನೋಷ್ಠಪುಟನಾಗಿರ್ದ ದಾಮೋದರನುಮಂ ಕಂಡು: **ಜಗನ್ನಾವಿ,** ೩. ೩೮ ವ)

**ದಾಯ** – ಪಗಡೆಯ ಗರ, ಪಗಡೆಯಲ್ಲಿ ಎರಡು ಕಡೆ ಮೂರು ಬೀಳುವುದು (ಚೌಕ ದುಗಂ ಇದ್ದುಗಂ ಇತ್ತಿಗಂ ಬಾರಮಂ ಎಂಬ ಆರಿಸಿ ಬೇಡಿದ ದಾಳಮಳವಟ್ಟಿರೆ: **ಪುಣ್ಯಾಸ್ರ,** ೪. ೧೮); ಬಹುಮಾನ; ಅವಕಾಶ (ಮಲಯಾವತಿಗೆ ಪೋಪ ದಾಯಮಂ ಎಡದ ದೆಸೆಯೊಳ್ ಪದ್ಮಾವತಿಗೆ ಪೋಪ ದಾಯಮಂ ಇತ್ತು: **ವಡ್ಡಾರಾ,** ಪು ೩೭, ಸಾ ೨೩)

**ದಾಯಂಗೊಡು** – ಅವಕಾಶ ನೀಡು (ಅರಸಂ ದಾಯಂಗೊಟ್ಟನೆಂದು .. .. ಒಳ್ಳಿದುವಪ್ಪ ಎಮ್ಮೆಯುಂ ಪಸುಗಳುಮಂ ಆಯ್ದುಕೊಂಡು: **ವಡ್ಡಾರಾ,** ಪು. ೨೨, ಸಾ. ೪)

**ದಾಯಂಬಡೆ** – ಬೇಕಾದ ಗರ ಪಡೆದುಕೊ (ಅಣುಗಾಳಂತೆ ದಾಯಂಬಡೆದುಂ ಮೇಳದಂಕದಂತೆ ಸುಟಿಯಜೆದುಂ ಡೊಂಬರ ಕೋಡಗದಂತಾಡಿ ಗೆಲ್ದಾಗಳ್: **ಪಂಪಭಾ,** ೬. ೭೨ ವ)

**ದಾಯಾದ** – ಜ್ಞಾತಿ, ಪಾಲು ಪಡೆಯಲು ಅರ್ಹನಾದವನು (ಎಮ್ಮ ದಾಯಾದನುಂ ಕೋಪದಿನೆನ್ನೊಳ್ ಕದಲೆಂದುಬ್ಬರಿಸಿದ ಸಮರಾಟೋಪದಿಂ ನಿಂದೊಡಂ ಮಾಣ್ಬುದು ಸೂಟಿಲ್ತು: **ಆದಿಪು,** ೧೪. ೮೫)

**ದಾಯಿಗ** – ದಾಯಾದಿ (ದಾಯಿಗರತ್ತಣಿನಪ್ಪ ಅಪಾಯಕೋಟಿಗೆ ಪವಣಿಲ್ಲ ಕಲ್ಪಿಗೆ ಎಡೆಯಾವುದೊ ಪಾಟಿಯ ಬಟ್ಟೆದಪ್ಪಿ ಮುಂ ನೆಗೞ್ದೆಡೆಯಿಲ್ಲ ಪೋಗು ಜಯಮಕ್ಕೆ ಶುಭಂ ನಿಮಗಕ್ಕೆ ಮಂಗಳಂ: **ಪಂಪಭಾ,** ೭. ೨೧)

**ದಾಯಿಗತನ** – ದಾಯಾದಿಯ ಸ್ವಭಾವ, ವೈರ (ನೀಮೆಲ್ಲಂ ದಾಯಿಗತನಮಿಲ್ಲಿ ತೋಱಲ್ತಗದು: **ಗದಾಯು,** ೭. ೬೨)

**ದಾಯಿತ** – ಬಂಧು (ದಾಯಿತರಿಂ ಪೆಸರ್ವೆತ್ತ ಪಸಾಯಿತರಿಂ ಸುಭಟ ಚೇಟಕ ಪ್ರಕಟ ಮಹಾನಾಯಕರಿಂ ನಿರುಪಮ ಶೋಭಾಯತಮಾಯ್ತು ಓಲಗಂ: **ಕುಸುಮಾಕಾ,** ೩. ೮೮)

**ದಾಯೆ** – ವೈರಿ (ಆ ಯುವತಿಗೆ ಚಿತ್ತೋದ್ಭವ ದಾಯೆಯೆನಲ್ ಸಂದುದಿಲ್ಲ ರಾಜಸಮಾಜಂ: **ಲೀಲಾವತಿ,** ೭. ೭೭)

**ದಾರ** – ನೂಲು; ದ್ವಾರ; ಹೆಂಡತಿ (ಸುಂದರ ದಾರ ದಾರಕ ಉದಾರವಿಹಾರದೊಳ್ ತೊಡರ್ದು ದಾರುಣ ದುಃಖಮನೆಯ್ದಿರ್ಕುಮೇ: **ಅಜಿತಪು,** ೨. ೫೬)

**ದಾರಕ** – ಹುಡುಗ, ಮಗ (ಸುಂದರ ದಾರ ದಾರಕ ಉದಾರವಿಹಾರದೊಳ್ ತೊಡರ್ದು ದಾರುಣ ದುಃಖಮನೆಯ್ದಿರ್ಕುಮೇ: **ಅಜಿತಪು,** ೨. ೫೬); ಸೀಳುವವನು (ದಾರಕನಂ ಪಡೆದಳ್ ರಿಪುದಾರಕನಂ ಸೋಮವಂಶವಿಸ್ತಾರಕನಂ: **ಕರ್ಣನೇಮಿ,** ೧೦. ೧೯)

**ದಾರವಂದ** – [ದ್ವಾರಬಂಧ] ಬಾಗಿಲ ಚೌಕಟ್ಟು (ಪೊರೆಗಳೆದ ತೋರವಾೞ್ಯ ದಾರವಂದದೊಳಂ .. .. ಎಸೆವ ಪಸುರ್ವಂದರೊಳಗೆ: **ಲೀಲಾವತಿ,** ೧೧. ೫೨ ವ)

**ದಾರವಟ್ಟ** – ಪುರದ್ವಾರ, ಮುಂಬಾಗಿಲು (ಪಿತೃವನಪಾಳಕಂ ಕಪಾಳಕುಂಡಳಂ ದಾರವಟ್ಟಕ್ಕೆ ಬಂದು: **ನೇಮಿನಾಪು,** ೫. ೪೧ ವ)

**ದಾರವಟ್ಟಿಗ** – ಬಾಗಿಲು ಕಾಯುವವನು (ಪಂಡಿತೆ ವಟ್ಟೈಸಿ ಪುಗುವುದುಂ ದಾರವಟ್ಟಿಗಂ ದಟ್ಟಿಸಿ ಕೊರಳಂ ಪಿಡಿದು ನೂಂಕೆ: **ಪುಣ್ಯಾಸ್ರ,** ೫. ೨೮ ವ)

**ದಾರಿಕೆ** – ಸೂಳೆ (ಭಾವಿಸಿ ಬಂದ ಭುಜಂಗನಂ ಭುಜಂಗನೆಂದೆ ದಿಟಮೆಂದು ದಾರಿಕೆ ಮಯೂರಿಕೆಯಂದದಿನೇಂ ಕನಲ್ದಳೋ: **ಚಂದ್ರಪ್ರಪು,** ೮. ೫೮)

**ದಾರಿತ** – ಸೀಳಿದ (ದುಃಖಕ್ರಕಚ ದಾರಿತ ದಾರುದಾರುಣ ಕರುಣಾಕೃಷ್ಟ ಬಾಷ್ಪಜಲಲುಳಿತ ಲೋಚನಂ ಬಂದು: **ಲೀಲಾವತಿ,** ೧೪. ೬೯ ವ)

**ದಾರಿದ್ರ್ಯಾಭಿಭೂತ** – ಬಡತನದ ಪೀಡೆಗೊಳಗಾದವನು (ಆ ಮಾತಂ ಅಲ್ಲಿಯೊರ್ವ ಸಂಜೆವಾರಿಸುತ್ತಿರ್ದ ಬ್ರಾಹ್ಮಣಂ ದಾರಿದ್ರ್ಯಾಭಿಭೂತಂ ಸೋಮಶರ್ಮನೇಂಬಾತಂ ಕೇಳ್ದು: **ವಡ್ಡಾರಾ,** ಪು. ೪೪, ಸಾ. ೧೩)

**ದಾರು** – ದಿಮ್ಮಿ (ಖೇದಾನಳನುರಿದೆರ್ದು ಮನೋದಾರುವನಳುಱೆ ಧೃತಿಯುಮಱೆವುಂ ಬಱಯಲ್ ಹಾ ದೇವಿ ಹಾ ದೇವಿ ಎನುತುಂ ಅವನಿಪತಿ ಮೂರ್ಛಿಸಿದಂ: **ಶಾಂತೀಶ್ವಪು,** ೫. ೧೮೨)

**ದಾರುಕರ್ಮ** – ಮರಗೆಲಸ (ರತ್ನಪರೀಕ್ಷೆಗಳೊಳಂ ದಾರುಕರ್ಮ ವಾಸ್ತುವಿದ್ಯಾಪೂರ್ವಯಂತ್ರಪ್ರಯೋಗ ವಿಷಾಪಹರಣ .. .. ಗದಾದಿ ವಿವಿಧಯುಧಂಗಳೊಳಂ ಅತಿಪ್ರವೀಣನುಂ: **ಪಂಪಭಾ,** ೨. ೩೪ ವ)

**ದಾರುಣ** – ಕ್ರೂರ (ದಾರುಣ ರೋಷಾವೇಶ ವಿಕಾರಭವಂ ರೌದ್ರಮೆಂಬ ರಸಮದು ನೆಗೞ್ಗುಂ: **ಕಾವ್ಯಾವಲೋ,** ೮೧೬)

**ದಾರುದಾರುಣ** – ದಿಮ್ಮಿಯಂತೆ ನಿಸ್ಪಂದವಾದ (ದುಃಖಕ್ರಕಚ ದಾರಿತ ದಾರುದಾರುಣ ಕರುಣಾಕೃಷ್ಟ ಬಾಷ್ಪಜಲಲುಳಿತ ಲೋಚನಂ ಬಂದು: **ಲೀಲಾವತಿ,** ೧೪. ೬೯ ವ)

**ದಾರುವನ** – ದೇವದಾರು ಮರಗಳ ಕಾಡು (ಸುರಮುನಿಸಂಕುಳಂ ನೆರೆದು ದಾರುವನಾಂತರದೊಳ್ ತಪಂಗೆಯ್ಯುತ್ತಿರೆ: **ಸಮಯಪ,** ೮. ೮)

**ದಾರುಹಸ್ತಕ** – ಸೌಟು (ತದ್ರು ತಾಂ ದರ್ವಿ ದಾರುಹಸ್ತಕಮೆನಿಪ್ಪುದದು ಖಜಿಕಾಖ್ಯಂ: **ಅಭಿಧಾವ,** ೧. ೧೦. ೩೩)

**ದಾವ** – ದವ, ಕಾಡು (ಒಗೆದು ಆಗಳ್ ಮಾಗದ ಉರ್ಕಂ ಮೊದಲೊಳೆ ತವೆ ತೂಳ್ದಿಕ್ಕಿ ದಾವಜ್ವಳಜ್ವಾಳೆಗಳಿಂದಂ .. .. ಬಂದತ್ತು .. .. ವಿಮೇಘಂ ನಿದಾಘಂ: **ಶಾಂತೀಶ್ವಪು,** ೧೨. ೧೭)

**ದಾವಣಿ** – ಹಗ್ಗ (ದಾವಣಿಗಟ್ಟಿದ ಮಧುಕರ ಜೀವದನಕಿಕ್ಕುವಂತೆ ಮೇಪಂ .. .. ಪೂವಿನ ಕೇಸರದ ರಜಮನೊರ್ವಳ್ ತಳಿದಳ್: **ಲೀಲಾವತಿ,** ೧೨. ೬೦); ಗುಂಪು (ದೇವಿಯರ ಮೆಚ್ಚಿ ನಿಚ್ಚಯ ದಾವಣಿಯೊಳಗೆನಿಸಿ ನೆಗಟ್ಟ ಸಬ್ಬವದವರ್ಗಳ್: **ವರ್ಧಮಾಪು,** ೬. ೪೯)

**ದಾವತಿ** – ಧಾವತಿ, ಶ್ರಮ, ದಣಿವು (ಕಿತಕಂ ದಾವತಿಗೇಕೆ ಪೇಟ್ ಪರಸಿ ಗಂಡಂ ಬೇಡಿಕೊಂಡೆನ್ನ ಪೆಂಡಿಗಿತ್ತೈ ಮುಳಿತೊಂದು ಪೆಣ್ಣಂ ಇದನೊಲ್ಲಳ್ನೀನೆ ಕೊಳ್ಳಾದ ದಾವತಿಯಕ್ಕುಂ: **ನೇಮಿನಾಪು,** ೭. ೫೦)

**ದಾವದಗ್ಧ** – ಕಾಡುಗಿಚ್ಚಲ್ಲಿ ಸುಟ್ಟುಹೋದ (ಎನೆ ದಾವದಗ್ಧದಗಿರಿ ನೂತನ ಜಳದಜಳಂಗಳಿಂಮಾಱುವವೋಲ್ ಭೋಮಕನೆ ಭರತವನಾಱಿಸಿದಂ ಮುನಿವಿನುತ ಗಣಾಧಿನಾಥ ವಚನಾಮೃತದಿಂ: **ಆದಿಪು,** ೧೬. ೬೦)

**ದಾವದಹನ** – ಕಾಡುಗಿಚ್ಚು (ಮದನ ದಾವದಹನಂ ತಳ್ತಿರ್ದಪುದಿಲ್ಲ ನಿನ್ನಂ: **ಕಾದಂಬ,** ೫. ೧೧೫)

**ದಾವಪಾವಕ** – ದಾವದಹನ (ದಾವಪಾವಕಂ ಬಳಸೆ ಸುರುಳ್ದ ಬಾಳಸಹಕಾರಮಹೀರುಹಮೆಂಬ ಶಂಕೆಯಿಂ: **ಆದಿಪು,** ೨. ೫೯)

**ದಾವಶಿಖಿ** – ದಾವದಹನ (ಸಾವಿತ್ರದ್ಯುತಿ ದಾವಶಿಖಾವಳಿ ಪರಿದಟ್ಟಿ ಪೆಱಗೆ ಕರಿಕೆರ್ದವೊಲ್ .. .. ತೀವಿದುದೊ ಕಟ್ಟಿಲೆ: **ನೇಮಿನಾಪು,** ೫. ೧೬)

**ದಾವಾನಲ** – ದಾವದಹನ (ಎಂದು ತನಗೆ ಕೊಟ್ಟ ಕೋಡಿಂಗೆ ಒಡಂಬಟ್ಟ ದಿತಿಜಕುಲ ದಾವಾನಲನನುಮಂ ಅರಾತಿಕುಲಾನಲನುಮಂ ಅನಲಂ ಇಷ್ಟಾರ್ಥಸಿದ್ಧಿಯಕ್ಕುಂ ಎಂದು ಪರಸಿ: **ಪಂಪಭಾ,** ೫. ೭೭ ವ

**ದಾವು** – ಹಗ್ಗ (ಆ ಪಂಕಮಂ ಪೆಡಿಗೆಗಳಂ ತುಂಬಿ ದಾವಿಂಗಟ್ಟಿ ನೀಡಲ್ .. .. ಕೂಪದ ದಡಮಂ ಮೆಟ್ಟಿ ಸೇದಿ ಸೇದಿ ಕುಡಲ್: **ತ್ರಿಷಷ್ಟಿಪು,** ೩೧. ೬ ವ)

**ದಾಶ** – ಬೆಸ್ತ (ಆ ಮೀನನೊರ್ವಂ ಜಾಲಗಾಱಂ ಜಾಲದೊಳ್ ಪಿಡಿದು ಅಲ್ಲಿಗರಸನಪ್ಪ ದಾಶನಲ್ಲಿಗುಯ್ದು ತೋಱಿದೊಡೆ: **ಪಂಪಭಾ,** ೧. ೬೮ ವ)

**ದಾಕ್ಷಿಕ** – ಕಚ್ಚಲ್ಪಟ್ಟವನು (ಇಲ್ಲಿಯೆ ಇರುಳೀ ದಾಕ್ಷಿಕಂಗೆ ಜಾವಮಿರಿಂ ಎಂದು ಪೇಟ್ದು ಪೋದಂ: **ವಡ್ಡಾರಾ,** ಪು ೧೪, ಸಾ ೨೫)

**ದಾಸವರ್ಣ** – ದಾಸವಾಳ (ತಳಿರ್ತ ಅಶೋಕೆ ಒದವಿದ ದಾಸವರ್ಣಂ ಅಲರೇಱಿದ ಪಾದರಿ ಪಣ್ತ ತೊಂಡೆ: **ಪುಷ್ಪದಂಪು,** ೫. ೬೨)

**ದಾಸೇರಕ** – ದಾಸಿಯ ಮಗ (ಈ ಸಕಲ ಧರೆಯಂ ಉಗ್ರ ಪ್ರಭು ಜಾಸಿಯೊಳಳವಡಿಸಿ ನಹುಷನಗ್ರಸುತಂ ಸಂವಾಸಂ ರಿಪು ದಾರಕರಂ ದಾಸೇರಕರೆನೆ ಪೊಡರ್ಪುಗಿಡೆ ನಡೆಯಿಸಿದಂ: **ಪಂಪರಾ,** ೨. ೬೦)

**ದಾಹ** – ತಾಪ, ಸುಡುವುದು (ಆ ಲಾಕ್ಷಾಗೃಹದಾಹಮೊಂದೆ ವಿಷಸಂಯುಕ್ತಾನ್ನಂ ಅಂತೊಂದೆ ಪಾಂಚಾಲೀನಿಗ್ರಹಂ ಒಂದೆ ಟಕ್ಕುವಗೆಯಿಂ ಗೆಲ್ದಿರ್ದ ಜೂದೊಂದೆ: **ಪಂಪಭಾ,** ೯. ೨೨)

**ದಾಹಿಕಾಶಕ್ತಿ** – ಸುಡುವ ಶಕ್ತಿ (ಸತಿಯ ವಿಶುದ್ಧಾಚಾರಂ ಹುತಾಶನ ಪ್ರಬಲ ದಾಹಿಕಾಶಕ್ತಿಯುಮಂ ಪ್ರತಿಬಂಧಿಸಿದುದು ಚೋದ್ಯಮೇ: **ಪಂಪರಾ,** ೧೬. ೨೯)

**ದಾಹಿನಿ** – ಬೇಯುತ್ತಿರುವವಳು (ನಱುಸುಯ್ಯ ಕಂಪಿನಿಂಪಿಂಗೆ ಎಱಗುವ ಮದಭೃಂಗಮಾಲೆ ಬಿಟ್ಟಿರುತಿರೆ ಪೂತೆಱಗಿದ ಚಂಪಕಲತೆಯಂ ನೆಱೆ ಪೋಲ್ತಳ್ ವಿರಹಿದಹನ ದಾಹಿನಿಯಾಗಳ್: **ಶಾಂತೀಶ್ವಪು,** ೫. ೧೧೩)

**ದಾಹೋತ್ತರ** – ಸುಟ್ಟು ಪರಿಶುದ್ಧವಾದದ್ದು (ದಾಹೋತ್ತರಮಪ್ಪ ಪೊನ್ನ ಪೊಳೆಪಂ ಗೆಲೆವಂದುದು ಕಾಂತಿ ಕಾಂತೆಯಾ: **ಅಜಿತಪು,** ೨. ೩೭)

**ದಾಳ** – ಪಗಡೆಯಾಟದ ಗರ ಬೀಳಿಸುವ ಸಾಧನ (ಚೌಕ ದುಗನಿದ್ದುಗನಿತ್ತಿಗ ಬಾರಮನೆಂಬ ದಾಯಮಂ ಬಾರಿಸಿ ಬೇಡಿದ ದಾಳಮಳವಟ್ಟಿರೆ: **ಪುಣ್ಯಾಸ್ರ:** ೪. ೧೮)

**ದಾಳಿಂಬ** – ದಾಡಿಮ (ತಮ್ಮಿಂ ತಾವೆ ಬಿರಿದು ಬಿರಿದಟ್ಟು ಸುರಿವ ದಾಳಿಂಬದ ಪಣ್ಗಳ ತನಿರಸದ ಪರಿವೊನಲೆ ಪರಿನೀರಾಗೆಯಂ: **ಪಂಚತಂತ್ರ,** ೧೯೦ ವ)

**ದಾಳಾದಾಳಿ** – ಆಕ್ರಮಣ (ಪಿರಿದಪ್ಪ ಉತ್ಸವದೊಳ್ ಸಿವಿಗೆಯೊಳಗಿಕ್ಕಿ ದಾಳಾದಾಳಿಯಿಂ ಬಂದು ಪ್ರತಿಪಾಲ ಪುರಮಂ ಪೊಕ್ಕು: **ಧರ್ಮಾಮೃ,** ೧೧. ೮೭ ವ)

**ದಾಳಿ** – ಸೇನೆಯೊಡನೆ ಮಾಡುವ ಆಕ್ರಮಣ (ದಾಳಿ ಬಂದುದೆಂದಂಜಿ ತ್ರಸ್ತಾಭೀಭೂತನಾಗಿಯೋಡಲ್: **ವಡ್ಡಾರಾ,** ಪು. ೧೬೩, ಸಾ. ೧೨)

**ದಾಳಿಕಾಱ** – ಆಕ್ರಮಣಕಾರ (ಮದುವೆಯಂ ದಾಳಿಕಾಱರಿಂದರಸುಗಳಂ ಭೈತ್ರಕಾಱರಿಂ ದ್ವೀಪಂಗಳಂ ಜೋಯಿಸರಿಂ ಗ್ರಹಣಮನಱಿವಂತೆಯುಂ: **ಧರ್ಮಾಮೃ,** ೯. ೪೧ ವ)

**ದಿಂಕುಗೊಳ್** – ಚಿಮ್ಮು, ಹಾರು, ಕುಪ್ಪಳಿಸು (ನಡುವ ಸರಲ್ಗೆ ಮೆಯ್ಯೊಳ್ ಅಡಂಗುವ ಸಂಕುಗೆ ದಿಂಕುಗೊಳ್ವ ಕಕ್ಕಡೆಗೆ ಇದಿರ್ ಉರ್ಚುವ ಇಟ್ಟಿಗೆ: **ಪಂಪಭಾ,** ೧೦. ೯೪)

**ದಿಂಕುವಾಱು** – ಕುಣಿದಾಡು (ರಾಗದಿನುರ್ವಿ ದಿಂಕುವಾಱಿದಪನೆನಿಪ್ಪಿನಂ ಸ್ಮರರಾಜ್ಯಸಾಧ್ವಸದಿಂ ಧಿಗಿಲೆಂದು ಗೂಡುವಾಯ್ದುದುನ್ನೃಪಕನ್ನೆಗಾಗಳೆರ್ದೆ ನೋಡಲೊಡಂ ಮಾನುಷವಂಶಮೇರುವಂ: **ಆಚವರ್ಧ,** ೬. ೧೩)

**ದಿಂಟೆ** – ಕಟ್ಟೆ (ಕೇಸರಿಯ ದಾಡೆಯ ಜೂದಿನ ದಿಂಟೆ ಪೀಲಿಯಂ ಪೊದಸಿದ ಪಂದರಾಳಿ: **ನೇಮಿನಾಪು,** ३. ೫೨)

**ದಿಂಡಲ** – ಒಂದು ಜಾತಿಯ ಮರ (ಮತ್ತಿ ಮಧುಕಂ ಮುಂಗಾರೆ ಪಚ್ಚಾರಿದಿಂಡಲಂ ಆಲಂ .. .. ಬಕುಳಂ ಬೇವತ್ತಕಂ ಕಿಂಶುಕಂ: **ರಾಜಶೇವಿ,** ೫. ೫೬)

**ದಿಂಡು** – ಪಿಂಡಿ, ಹೊರೆ (ನಾನಾ ದಿವ್ಯವಸ್ತ್ರಂಗಳ ದಿಂಡುವೆರಸು ತಿರುನಲ್ಲೂರಾಧಿಪತಿಯಪ್ಪ ಶಿವನಿಳಯಕ್ಕೆಳ್ತಂದು: **ತ್ರಿಷಷ್ಟಿಪು,** ೯. ೯ ವ); ಬಾಳೆಯ ದಂಟಿನ ಒಳಭಾಗ (ಕಿಱುದೊಡೆಗಳ್ .. .. ಎಳವಾಟೆಯ ದಿಂಡಿನೊಳ್ ಸಾಣೆಗಟ್ಟಿದಂತಾದುವು: **ಪಂಪಭಾ,** ೨. ೩೯ ವ)

**ದಿಂಡುಕ** – ದಪ್ಪವಾದ ದೇಹವುಳ್ಳವನು (ಉಕಪ್ರತ್ಯಯಕ್ಕೆ: ಸಣ್ಣುಕಂ, ಜೋಡುಕಂ, ಬೊಂದುಕಂ, ದಿಂಡುಕಂ: **ಶಬ್ದಮದ,** ೨೧೪ ಪ್ರ)

**ದಿಂಡುಗೆಡಪು** – ಮರದ ತುಂಡಿನಂತೆ ಕೆಡವು (ಬಱಸಿಡಿಲ ಬಳಗಂ ಚಂದಣದ ಪೆರ್ಮರಗಾಡಂ ದಿಂಡುಗೆಡಪಿದಂತಿರ್ದುವು: **ಅನಂತಪು,** ೧೪. ೭ ವ)

**ದಿಂಡುಮಗುಟಿಕ್** – ಕುಸಿದು ಬೀಳು (ಕೀಟಂ ಕರ್ಚಿ ದಿಂಡುಮಗುಟ್ದು ಕೆಡೆದ ಜಾತ್ಯಶ್ವಂಗಳುಂ: **ಪಂಪಭಾ,** ೧೦. ೧೧೬ ವ)

**ದಿಂಡುವಾಯ್** – ರಭಸದಿಂದ ನುಗ್ಗು (ಕಡೆಗಣಿಸಿ ಪಾರ್ವ, ದುಂಡಿಪ, ದಿಂಡುವಾಯ್ವ, ಬವರಿವರಿವ .. .. ಘೋಳಾಯಿಲರ್: **ರಾಜಶೇವಿ,** ೬. ೧೧ ವ); ಮುಂಗಾಲೆತ್ತು (ಇರ್ಬರಿಯೊಳೆ ಸುತ್ತಿ ಪಾಯತಿಕೆಯಿಂ ಮಿಗೆ ನರ್ತಿಪ ದಿಂಡುವಾಯಲ್ ಉಪ್ಪರಿಪ: **ರಾಜಶೇವಿ,** ೧೩. ೮೨)

**ದಿಕ್ಕರಿ** – ದಿಗ್ಗಜ (ಅಂತೊಗೆದು ದಿಕ್ಕರಿ ಕರಾನುಕಾರಿ ಪರಿಘ ಉತ್ತಂಸಿತ ತೋರಣೀಕೃತರೌದ್ರ ಗದಾದಂಡನುಂ ಪ್ರಚಂಡನುಂ ಆಗಿ ಸೆರಗಿಲ್ಲದೆ ಕೊಳದಿಂ ಪೊಱಮಟ್ಟು ಬರ್ಪ ದುರ್ಯೋಧನನಂ ಧರ್ಮಪುತ್ರಂ ನೋಡಿ: **ಪಂಪಭಾ,** ೧೩. ೮೨ ವ)

**ದಿಕ್ಕುಧರ** – [ದಿಕ್+ಕುಧರ] ದಿಕ್ಕು ಎಂಬ ಬೆಟ್ಟ (ಏಱಿದಂ ದಿವಿಜ ದಿಕ್ಕುಧರೇಂದ್ರಮಂ ಅಂದು ಚಂದ್ರಮಂ: **ಕುಸುಮಾಕಾ,** ೧೩. ೬೫)

**ದಿಕ್ಕುಮಾರ** – ದಿಕ್ಪಾಲಕ (ಓರನ್ನರೆನಿಪ ರಾಜಕುಮಾರಕರೊಡನೇಱಿ ವಜ್ರಬಾಹುಕುಮಾರಂ ವಾರಣಮಂ ಏಱಿದಂ ದಿಗ್ವಾರಣಮಂ ದಿಕ್ಕುಮಾರರೇಱುವ ತೆಱದಿಂ: **ಪಂಪರಾ,** ೨. ೯)

**ದಿಕ್ಚಕ್ರ** – ದಿಗ್ವಲಯ (ಭೂಷಾಮಣಿಪ್ರಭೆ ದಿಕ್ಚಕ್ರಮಂ ಅಚ್ಚ ಜೊನ್ನಮೆಳಸಿತ್ತೆಂಬನ್ನೆಗಂ ತುಂಬೆ: **ಚಂದ್ರಪ್ರಪು,** ೬. ೭೯)

**ದಿಕ್ತಟ** – ದಿಕ್ಕಿನ ಕೊನೆ (ಬಧಿರಿತ ಸಮಸ್ತ ದಿಕ್ತಟಂ ಅಧಿರಿತ ಸರ್ವ ಇಭ್ಯಗರ್ವಿತಂ ಕ್ಷುಭಿತಾಂಭೋಸಲಿಲಂ ಪರೆದುದು ಧುರವಿಧಾನ ಪಟುಪಟಹ ಕಹಳ ಭೇರೀರಭಸಂ: **ಪಂಪಭಾ,** ೧೨. ೧೭೧)

**ದಿಕ್ಪ** – ದಿಕ್ಪಾಲಕ (ಪೆಸರ್ಗೊಂಡ ವಸ್ತುತತಿಯಂ ಕೊಟ್ಟಟ್ಟುವರ್ ದಿಕ್ಪರ್ ಉತ್ಸವದಿಂದಂ ದಮಿತಾರಿಗೆಂದೊಡೆ ಪೊಡರ್ಪಿಂ ದರ್ಪದಿಂದಿರ್ಪರಾರ್: **ಶಾಂತೀಶ್ವಪು,** ೭. ೧೧೩)

**ದಿಕ್ಪತಿ** – ದಿಕ್ಕಿನ ಒಡೆಯ (ಶತಮಖ ಹುತವಹ ಯಮ ನೈರುತಿ ವರುಣ ಮರುತ್ ಕುಬೇರ ಶೂಲಧರರ್ ದಿಕ್ಪತಿಗಳ್: **ಅಭಿಧಾವ,** ೧. ೧. ೪೮)

**ದಿಕ್ಪಾರ** – ದಿಕ್ಕಿನ ಎಲ್ಲೆ (ಶಿವಿರಾಭ್ಯುತ್ಥಿತ ಕಾಹಳಾಘನರವಂ ಮುಟ್ಟಿತ್ತು ದಿಕ್ಪಾರಮಂ: **ಚಂದ್ರಪ್ರಪು,** ೧೦. ೮)

**ದಿಕ್ಸ್ವಸ್ತಿಕ** – [ಜೈನ] ಒಂದು ಸಭಾಮಂಟಪ (ದಿಕ್ಸ್ವಸ್ತಿಕಮೆಂಬ ಸಭಾಭವನದಿಂ ನಂದ್ಯಾವರ್ತಪ್ರಕಾಶಮೆಂಬ ಶಿಬಿರನಿವೇಶಂಗಳಿಂದಂ: **ಶಾಂತಿಪು,** ೧೧. ೮೪ ವ)

**ದಿಗಂತ** – ದಿಕ್ಕಿನ ಕೊನೆ, ಕ್ಷಿತಿಜ (ಭವದಾನನಕ್ಕೆ ಸೋಲ್ತು ಆತ್ಮವಿಲಾಸಮಂ ಉಟಿದ ತೆಱದೆ ರುಚಿಗೆಟ್ಟು ದಿಗಂತ ವಿಲಂಬಿಬಿಂಬಂ ಅಂಬುರುಹವೈರದಿಂದ ಉಡುಪಂ ಉಡುಪನಾದಂತಾದಂ: **ಶಾಂತಿಪು,** ೫. ೮೮)

**ದಿಗಂತರೋಪಗತ** – ದಿಕ್ಕಿನ ಕೊನೆ ಮುಟ್ಟಿದ ನಿರೀಕ್ಷಿಸ ನಿಕೃಷ್ಟದುಷ್ಟಗಣರಂ ಗತಪ್ರಜ್ಞರಂ ನಿರಂತರ ದಿಗಂತರೋಪಗತ ದುರ್ಯಶಪ್ರಾಪ್ತರಂ: **ಸುಕುಮಾಚ,** ೨. ೧೮)

**ದಿಗಧಿಪ** – ದಿಕ್ಪಾಲಕ (ಸ್ತಂಭೇರಮಂ ಎಂಟುಮಂ ಒತ್ತಂಬದೆ ದಿಗಧಿಪರೊಳ್ ಈಟ್ಟುಕೊಂಡು: **ಜಗನ್ನಾವಿ,** ೧೧. ೮೧)

**ದಿಗಧೀಶ** – ದಿಗಧಿಪ (ನಿಜವಿವಿಧಾಯುಧಸಹಿತಂ ನಿಲವೇಟ್ಟು ನೆಲೆಯೊಳಿರೆ ದಿಗಧೀಶರ್: **ಶಾಂತಿಪು,** ೧೦. ೩೨)

**ದಿಗವಲೋಕನಗೃಹ** – ದಿಕ್ಕುಗಳನ್ನು ನೋಡಲು ಅನುಕೂಲವಾಗುವ ಎತ್ತರವಾದ ಮನೆ (ಗಿರಿಕೂಟಮುಮೆಂಬ ದಿಗವಲೋಕನಗೃಹಮುಂ: **ಅಜಿತಪು,** ೧೦. ೧ ವ)

**ದಿಗಿಭ** – ದಿಕ್ಕರಿ (ದಿಗಿಭವ್ರಾತಂ ಕೊರಲ್ಗುರ್ಗೆ ದುರ್ವಹಧಾತ್ರೀಭರಮಂ ಪುರಾಣಕಮಠಂ ಬೆಂಬತ್ತೆ ಪೊತ್ತಿರ್ದೊಡೆ ಆವ ಹಿತಂ ಪೇಟ್: **ಲೀಲಾವತಿ,** ೧. ೮೭)

**ದಿಗಿಭೇಂದ್ರ** – ಶ್ರೇಷ್ಠ ದಿಕ್ಕರಿ, ಐರಾವತ (ನೆಗಟ್ದಮರನಗೇಂದ್ರಮನಾ ದಿಗಿಭೇಂದ್ರಂ ಪೊರ್ದಿದಲ್ಲಿ ಸುರತೂರ್ಯಂ ನೆಗಟ್ದೆನೆಗಂ: **ಅಜಿತಪು,** ೪. ೨೬)

**ದಿಗ್ಗಜ** – ಭೂಮಿಯನ್ನು ಎಂಟು ದಿಕ್ಕುಗಳಲ್ಲಿ ಹೊತ್ತಿವೆ ಎನ್ನಲಾದ ಐರಾವತ, ಪುಂಡರೀಕ, ವಾಮನ ಕುಮುದ, ಅಂಜನ, ಪುಷ್ಪದಂತ, ಸಾರ್ವಭೌಮ, ಸುಪ್ರತೀಕ ಎಂಬ ಆನೆಗಳು (ಅಹಿಪತಿ ಪೆಡೆಯಂ ಬಿರ್ಚಿದಂ ದಿಗ್ಗಜಂ ಭೋರೆನೆ ದಾನಾಸಾರಮಂ ಸೂಸಿದುವು ಕಮಠನುಂ ಕೂಗಿದಂ ಹರ್ಷದಿಂದಂ: **ಜಗನ್ನಾವಿ,** ೩. ೪)

**ದಿಗ್ದಂತಿ** – ದಿಕ್ಕರಿ (ನಿನ್ನ ಕೀರ್ತಿಮುಖಂ ಕೀರ್ತಿಮುಖಂಬೊಲೇಂ ಎಸೆದುದೋ ದಿಗ್ದಂತಿ ದಂತಂಗಳೊಳ್: **ಪಂಪಭಾ,** ೬. ೬೬)

**ದಿಗ್ದಾಹ** – ದಿಕ್ಕಿನಲ್ಲಿ ಕಾಣಿಸಿಕೊಳ್ಳುವ ಬೆಂಕಿ [ಅಪಶಕುನ] (ಪರುಷವಾತಾಹತಿಪ್ರೋಚ್ಚಳತ್ ಸಾಮಜಸೇನಾಕುಂಭ ಸಿಂದೂರಮುಮೊದವಿದ ದಿಗ್ದಾಹಮುಂ ಕೂಡೆ: **ಆದಿಪು,** ೧೪. ೮೯)

**ದಿಗ್ನಾಗ** – ದಿಗ್ಗಜ (ಜೈನಾಗಮನಧಿಕರಿಪೊಂ ದಿಗ್ನಾಗನಕ್ಷೂಣ ಭದ್ರಗುಣಲಕ್ಷಣದಿಂ: **ಅಜಿತಪು,** ೧. ೨೫)

**ದಿಗ್ನಿವಹ** – ದಿಕ್ಕುಗಳ ಸಮೂಹ (ದಿಗ್ನಿವಹ ಶ್ವಭ್ರಂಗಳೊಳ್ ಮಾರ್ದನಿವಿಡೆ ನಡೆಗೊಂಡತ್ತು ಗೀರ್ವಾಣಸೈನ್ಯಂ: **ಶಾಂತೀಶ್ವಪು,** ೧೪. ೬೮)

**ದಿಗ್ಭವ** – ದಿಕ್ಕಿನಲ್ಲಿ ಉಂಟಾಗುವ ವೈಹಾಯಸ, ಭೌಮ, ದಿಗ್ಭವ, ಸೈನ್ಯಜ, ಗೃಹೋದ್ಭೂತ ಎಂಬ ಐದು ಬಗೆಯ ಉತ್ಪಾತಗಳಲ್ಲಿ ಒಂದು (ಐದು ತೆಱದುತ್ಪಾತಂಗಳೊಡನೊಡನೆ ನೆಗೆದುವಾಗಳ್: **ಶಾಂತಿಪು,** ೩. ೧೦೬ ವ)

**ದಿಗ್ಮಾಳೆ** – ದಿಕ್ಕುಗಳ ಸಮೂಹ (ಜಳರಾಶಿಶ್ರೇಣಿ ಕಂಪಲ್ ಮಸಗೆ ಬಲಪದೋದ್ಧೂತ ಧೂಳಿವ್ರಜವ್ಯಾಕುಳದಿಂ ದಿಗ್ಮಾಳೆ ಚಂದ್ರಾತಪವಿಸರದ ಅಗುರ್ವಾಗೆ .. .. ನಡೆದುದು ಭೂಪಸೇನಾ ಪ್ರತಾನಂ: **ಶಾಂತೀಶ್ವಪು,** ೧೨. ೭)

**ದಿಗ್ಭ್ರಾಮಿತ** – ಗದಾಯುದ್ಧದ ಒಂದು ವರಸೆ (ಉದ್ಭ್ರಾಮಿತಂ ದಿಗ್ಭ್ರಾಮಿತಂ .. .. ಎಂಬೆಂಟು ತೆಱದ ಪ್ರಹರಣಂಗಳೊಳಂ ಅತಿಪರಿಚಿತರಾಗಿ ವೈಶಾಖಸ್ಥಾನದೊಳ್ ನಿಂದು: **ಗದಾಯು,** ೮. ೧ ವ)

**ದಿಗ್ವಸನ** – ದಿಗಂಬರ (ವಾಸವಂ ನಿಜರಾಜ್ಯಪದಮನಿತ್ತು ಪೋಗಿ ಸಾಗರಸೇನರೆಂದ ದಿಗ್ವಸನರಂ ಸಾರ್ದು ದಿಗಂಬರನಾದಂ: **ಕರ್ಣನೇಮಿ,** ೧೪. ೨೪ ವ)

**ದಿಙ್ನಾಗ –** ದಿಕ್ಕರಿ (ಸ್ಮಿತಮುಖಂ ಚಂದ್ರೋಪಮಂ ತೋಳ್ಗಳಪ್ಪೊಡೆ ದಿಙ್ನಾಗಕರೋಪಮಂ: **ಲೀಲಾವತಿ,** ೧. ೯೫)

**ದಿಟ –** ವಾಸ್ತವ, ಸತ್ಯ (ಶಿವನಾದೊಡೆಂ ಪುಸಿ ದಿಟಕ್ಕೆ ನಿಲ್ವುದೆ ಜಗದೊಳ್: **ಗಿರಿಜಾಕ,** ೯. ೧೧೭)

**ದಿಟಂ –** ನಿಶ್ಚಿತವಾಗಿಯೂ (ಪುತ್ರಂ ಮುಮುಕ್ಷುದರ್ಶನ ಮಾತ್ರದೆ ಜಿನದೀಕ್ಷೆಯಂ ದಿಟಂ ಕೈಗೊಳ್ಗುಂ: **ಸುಕುಮಾಚ,** ೯. ೧೧೧)

**ದಿಟ್ಟಿ –** [ದೃಷ್ಟಿ] ಕಣ್ಣು (ಸಮೀಪದೊಳ್ ಸಾರಂಗಮಿರ್ದೊಡಂ ಸಿಂಹಮೆಂದುಂ ಕಾಂಕ್ಷಿಸದು. ಮದ ಸೊರ್ಕಿದಾನೆಯ ಮಸ್ತಕದ ಮೇಲೆ ದಿಟ್ಟಿನಟ್ಟಿರ್ಪುದು.: ಪಂಚತಂತ್ರ, ೧೦೩, ಶ್ಲೋಕ ೨೨ ಟೀಕೆ); ನೋಟ (ಪಸುಗೆ ನೆಲಂ ಜಲಂ ಹಯದೊಡಂಬಡು ವಂಚನೆ ಕೇಣಂ ಆಸನಂ ಕೊಸೆ ದೆಸೆ ದಿಟ್ಟಿ ಮುಟ್ಟಿ ಕೆಲಜಂಕೆ ನಿವರ್ತನೆ ಕಾಣ್ಕೆ ಪರ್ವಿದ ಏರ್ವಸನದೊಳಾದ ಬಲ್ಮೆಯೊಳ್ ಒಡಂಬಡೆ ತಳ್ತಿಜೆವಲ್ಲಿ ಮಿಂಚಿನೊಳ್ ಮುಸುಕಿದ ಮಾಟ್ಕೆಯಾಯ್ತು ಸಮರಾಂಗಣಂ ಉಳ್ಕುವ ಬಾಳ್ಗಳ ಉಳ್ಕದಿಂ: **ಪಂಪಭಾ,** ೧೦. ೭೮)

**ದಿಟ್ಟಿವಿಷ –** [ದೃಷ್ಟಿವಿಷ] ಕೆಟ್ಟ ಕಣ್ಣು (ರಾಜ್ಯವಿಭವೋದಯದಿಂದೆ ವಿರಾಜಿಪಂಗೆ ದಿಟ್ಟಿವಿಷಮಪ್ಪುದೆಂದು ಪದೆಪಿಂ ಪ್ರಭುಸೂನುಗೆ ತಾನೆ ರಕ್ಕೆಗಟ್ಟುವ ತೆಱದಿಂದೆ ಕಟ್ಟಿದನಿಳಾಪತಿ ತನ್ನಧಿರಾಜಪಟ್ಟಮಂ: **ಚಂದ್ರಪ್ರಪು,** ೬. ೧೦೩)

**ದಿಣರ್ –** ಒಚಿದು ಅನುಕರಣ ಶಬ್ದ (ಮಣಿಮಾಡಂ ಮುರಿದವಭೇದ್ಯಕರಂ ದಿಣರಲ್ ಕರಮುರಿದುದು ಚೋದ್ಯಕರಂ: **ಹರಿವಂಶ,** ೧೪. ೨೬)

**ದಿಣ್ಪು –** ತಿಣ್ಪು, ಭಾರ (ನಡುನಡುಗೆ ಬಿಗಿದೊಗೆದ ಪೆರ್ಮೊಲೆಯ ಬಿಣ್ಪಿನಿಂ ಕಡೆದು ಮಾಡಿದುವೆನಿಪ ಪೊಱಿವಾಱದಿಣ್ಪಿನಿಂ: **ಅಜಿತಪು,** ೪. ೭)

**ದಿತಿಜ –** ದಿತಿಯ ಮಗ ರಾಕ್ಷಸ; ನೈರುತ್ಯ ದಿಕ್ಕಿನ ಅಧಿಪತಿಯಾದ ನೈಋತ್ಯ (ದಿವಿಜವಾರವರನುಂ ದಹನನಾ ರವಿತನೂಜಂ ಧೀರದಿತಿಜಂ ವಿನುತ ವೀರನಿಲಯಂ: **ರಾಜಶೇವಿ,** ೧೪. ೮೮)

**ದಿತಿಜಕುಲ –** ರಾಕ್ಷಸ ಕುಲ (ಎಂದು ತನಗೆ ಕೊಟ್ಟ ಕೋಡಿಂಗೆ ಒಡಂಬಟ್ಟ ದಿತಿಜಕುಲ ದಾವಾನಲನನುಮಂ ಅರಾತಿಕುಲಾನಲನುಮಂ ಅನಲಂ ಇಷ್ಟಾರ್ಥಸಿದ್ಧಿಯಕ್ಕುಂ ಎಂದು ಪರಸಿ: **ಪಂಪಭಾ,** ೫. ೭೭ ವ)

**ದಿತಿಸುತ –** ದಿತಿಜ ಮಾದೇವಂ ದಿತಿಸುತರೊಳ್ ಕಾದುವನಣಮಲ್ಲ ನಿರ್ಮಳಾಂಗಂ: **ಸಮಯಪ,** ೮. ೬೪)

**ದಿನ –** ಹಗಲು (ದಿವಸಂ ದಿನಂ ದಿವಾಹಂ: **ಅಭಿಧಾವ,** ೧. ೨. ೪); ದಿವಸ (ದಿನಮೆಲ್ಲಂ ನಿಯಮವ್ರತಕ್ಕೆ: **ಶಾಂತೀಶ್ವಪು,** ೨. ೧೧)

**ದಿನಕರ –** ಸೂರ್ಯ (ದಿನಕರನ ಕರದ ಕಮಳದೊಡವುಟ್ಟಿದ ಕಮಳವನಂಗಳಿಲ್ಲ: **ಪುಷ್ಪದಂಪು,** ೯. ೨೧ ವ)

**ದಿನಕರತನಯ –** ಸೂರ್ಯನ ಮಗ, ಕರ್ಣ (ದಿನಕರತನಯನ ದುಶ್ಶಾಸನನ ವಿಯೋಗದೊಳಂ ಇಂದುವರೆಗಂ ನೋವಿಲ್ಲೆನಗೆ ಅೞಿತರೊಡನೆ ಸಂದಿಗುಡೆನೆ ನೊಂದೆಂ; **ಗದಾಯು,** ೬. ೭); ಶನಿ; ಯಮ; ಸುಗ್ರೀವ

**ದಿನಕರಸುತ –** ಕರ್ಣ (ನೇಸಱೆಂದೊಳಗೆ ಆಂ ದಿನಕರಸುತನಂ ಇಕ್ಕಿ ಬಂದಲ್ಲದೆ ಕಾಣೆಂ ದಲ್ ಭವತ್ ಪದಾಬ್ಜಮಂ ಎಂದು ಎಟ್ದಿಂ ಉದಶ್ರುಜಳಲವಾರ್ದ್ರ ಕಪೋಳಂ: **ಪಂಪಭಾ,** ೧೨. ೧೩೪)

**ದಿನಕೃತ್ –** ಸೂರ್ಯ (ದೀಪದೀಪ್ತಿಪ್ರತಿಹತ ದಿನಕೃತ್ ಚಕ್ರ ತೀವ್ರಾಂಶುಚಕ್ರಂ: **ಆದಿಪು,** ೧೪. ೩)

**ದಿನನಾಯಕ –** ದಿನನಾಥ (ಹಿಮಕರಂ ಆತ್ಮ ಶೀತರುಚಿಯಂ ದಿನನಾಯಕಂ ಉಷ್ಣದೀಧಿತಿಯಕ್ರಮಮಂ ಅಗಾಧವಾರಿಧಿಯೆ ಗುಣ್ಪಂ ಇಳಾವಧು ತನ್ನ ತಿಣ್ಪಂ ಬಿಸುಟೆಸ್ವೊಡಂ; **ಪಂಪಭಾ,** ೧. ೮೩)

**ದಿನಪ –** ದಿನನಾಥ (ದಿನಪನೊಗೆವಂತೆ ಪುಟ್ಟಿದಂ ಅನಿವಾರ್ಯತೇಜನೆನಿಪಂ ಇನಜನ ತನಯಂ: **ಪಂಪಭಾ,** ೧. ೧೨೧)

**ದಿನಮುಖ–** ದಿನದ ಮೊದಲು, ಬೆಳಗಿನ ಜಾವ (ಎಱಕೆಗಳಂ ಮೆಲ್ಲನೆ ಉರ್ಚುತ್ತೆ ನಿಂದು ಒಯ್ಯನೆ ಸಾರ್ದು ಆ ತ್ರೋಟಿಯಿಂದಂ ತೊಡೆದು ಗಱಿಗಳಂ ನುಣ್ಣವಿರ್ ಬಿರ್ಚಿ ಮೆಯ್ಯಂ ತೊನೆದು ಉದ್ದಂ ನೀಡಿ ಗೋಣಂ ನವ ದಿನಮುಖದೊಳ್ ಕುಕ್ಕುಟಂ ಕೂಗಿತಾಗಳ್: **ಶಾಂತೀಶ್ವಪು,** ೧೧. ೯೬)

**ದಿನಶಿರ –** ಮಧ್ಯಾಹ್ನದ ಸೂರ್ಯ (ಪರಿಣತ ದಿನಶಿರದಂತಿರೆ ಖರಕಿರಣಂ .. .. ಪರೆದರುಣಜಲದಂತಿರೆ ಪಸರಿಸುತಿರ್ದುದು ಅಪರಸಂಧ್ಯಾರಾಗಂ: **ಲೀಲಾವತಿ,** ೧೦. ೧೯)

**ದಿನಾಂತ –** ದಿನದ ಕೊನೆಯ ಭಾಗ, ಸಂಜೆ (ದಿನಾಂತಂ ಮನೋಹರಮಾಗಿರ್ದುದು ವಾಸಯಷ್ಟಿಗತಶುಂಭತ್ತಾಮ್ರ ಚೂಡವ್ರಜಂ: **ಪಂಚತಂತ್ರ,** ೩೩೭)

**ದಿನೇಶಜ –** ಸೂರ್ಯನ ಮಗ, ಕರ್ಣ (ಪವನಜನಂತು ಪೂಣ್ದು ಯುವರಾಜನ ನೆತ್ತರನಾರ್ದು ಪೀರ್ದಂ ಇಂತು ಅವಗಡದಿಂ ದಿನೇಶಜನಂ ಅಂಕದ ಗಾಂಡಿವಿ ಕೊಂದಂ: **ಪಂಪಭಾ,** ೧೩. ೮);

**ದುಪ್ಪೋಡಿ –** ಎರಡು ಹೋಳು (ಕಡುಪಿಂ ಪೊಯ್ಯೆ ಶಿರೋಜ ಮೆಯ್ಯ ಹಯಣಂ ದುಪ್ಪೋಡಿಯಾಗಲ್ ಜವಂಗಿಡದೆ ಆ ವಾಘೆಯ ಗಾಢದಿಂ ಹಯಮಂ ಅಂತ್ರಾನೀಕದಿಂ ಸುತ್ತಿ: **ಶಾಂತೀಶ್ವಪು,** ೮. ೮೨)

**ದಿಬ್ಯ –** [ದಿವ್ಯ] ದೈವಿಕವಾದುದು (ಅದು ದಿಬ್ಯಮದು ಸೇಬ್ಯಮದು ಸೌಮ್ಯಮದು ರಮ್ಯಮದು ಸುಖಾಧಾರ ಸಂಸಾರಸಾರಂ: **ಸುಕುಮಾಚ,** ೧೨. ೫೧)

**ದಿಬ್ಯಂಬಿಡಿ –** ದಿವ್ಯದ ವಸ್ತು ಹಿಡಿದು ಪ್ರಮಾಣಮಾಡು (ಸೋಲ್ತು ಕಂಡೊಲ್ದು ನಲ್ಮೆಎ ದಿಬ್ಯಂಬಿಡಿದಂತೆವೋಲ್ ಪಿಡಿದು: **ಪಂಪಭಾ,** ೧. ೭೦)

**ದಿಬ್ಯಸಭೆ –** ದಿವ್ಯಸಭೆ (ಪೆಂಡವಾಸದದ ಅಗ್ಗಳದ ಸೂಳೆಯರ್ಕಳಿಂದಂ ಪರಿವಾರದಿಂದಂ ಇಂತಪ್ಪ ದಿಬ್ಯಸಭೆಯಿಂದಂ ಪರಿವೇಷ್ಟಿತನಾಗಿ: **ವಡ್ಡಾರಾ,** ಪು ೧೪೯, ಸಾ ೨೪)

**ದಿಮ್ಮಿದ –** ಪ್ರೌಢ (ದಿಮ್ಮಿದರ್ ಅಕ್ಕರಕ್ಕರಱಿವರೊಳ್ ನುಡಿಯೊಳ್ ಕಡುಜಾಣರಂದದೊಳ್ ಪೊಮ್ಮಿದರೊಂದಿ ನಿಂದ ಸಿರಿಯೊಳ್ ಪಿರಿಯರ್ಗಡೆಗೊಟ್ಟು ಬಾಬ್ವರ್: **ಕಬ್ಬಿಗಕಾ,** ೧೦)

**ದಿವ –** ಆಕಾಶ (ದಿವಮಂ ಏಳಿಪಂತು ಮಿಳಿರ್ವ ವಿವಿಧಕೇತನಂಗಳಿಂ ಸದಾನಿಕೇತನಂಗಳಿಂ: **ಪಂಪಭಾ,** ೧. ೫೮); ಸ್ವರ್ಗ (ಕೈಲಾಸವಾಸಿಯ ಕಾಣಲ್ಕೆ ಆನಂದದೆ ದಿವದಿಂ ಇರ್ಬರುಂ ಒಂದಾಗಿ ಬರುತ್ತುಮಿರ್ಪುದುಂ: **ಕಾದಂಸಂ,** ೪. ೧೬); ಹಗಲು (ದಿವದೊಳ್ ಸುಭೋಜನಂ ಗೆಯ್ವರಲ್ಲವೇ ಜೈನಪರರ್: **ಸಮಯಪ,** ೬. ೩)

**ದಿವಸವಿರಾಮ –** ಹಗಲಿನ ಕೊನೆ, ಸಂಜೆ (ದಿವಸವಿರಾಮದೊಳ್ ಅವ್ಯವಸ್ಥೆ ಜಡಾಶ್ರಯದೊಳ್ .. .. ಅಕ್ಕುಮಲ್ಲದೆ ಜನಪದದ ಜಂಗಳೋಲ್ಲ: **ಜಗನ್ನಾವಿ,** ೨. ೧ ವ)

**ದಿವಸಾಂಧ –** ಹಗಲು ಕುರುಡ (ಆದೊಡಾ ಗೂಗೆಗಳ್ ದಿವಸಾಂಧಂಗಳಾಗಿಯುಂ ನಮ್ಮೊಳ್ ಪಗೆಯುಂಟಾಗಿಯುಂ .. .. ಗುಹಾಗ್ವರಂಗಳೊಳ್ ಪೊಕ್ಕಿರ್ಪುವು: **ಪಂಚತಂತ್ರ,** ೨೯೮ ವ)

**ದಿವಾಂಧ –** ದಿವಸಾಂಧ (ಅದಱಿಂ ಕೌಶಿಕಂಗಳ್ಗಂ ನಮಗಂ ದುರ್ಧರಮಪ್ಪ ವೈರಮುಂಟಾಗಿಯುಂ ನಾವೆಲ್ಲರುಂ ರಾತ್ರ್ಯಂಧರುಂ ಅವರೆಲ್ಲರುಂ ದಿವಾಂಧರುಂ ಅಪ್ಪುದಱಿಂ ಸಂಧಾನಮೆಂತುಂ ಆಗಲಱಿಯದು: **ಪಂಚತಂತ್ರ,** ೨೧೦ ವ)

**ದಿವಾಕರ –** ದಿವಸಕರ (ಮುನಿಸಮುದಾಯಸಮೇತಂ ವಿನೇಯಜನ ವನಜವನ ದಿವಾಕರಂ .. .. ಆ ಮುನಿಪಂ: **ಯಶೋಧಚ,** ೧. ೪೬)

**ದಿವಾಸ್ವಾಪ –** ಹಗಲು ನಿದ್ದೆ (ತಮಗೆ ರುಜೆಯಾಯ್ತೊ ದಿವಾಸ್ವಾಪದಿಂ ಎನೆ ನಯಮಿಟಿದವೊಲೊಪ್ಪಿದುವು ಮಧುಪ್ರವೇಶದೊಳ್ ಕುಮುದಂಗಳ್: **ಲೀಲಾವತಿ,** ೯. ೮೭)

**ದಿವಿಜಪೇಟಕ –** ದೇವತೆಗಳ ಸಮೂಹ (ಇರದೆ ಎನ್ನಧಿಕಭಕ್ತಿಯೆ ತರೆ ಬಂದುದು ದೇವ ದಿವಿಜಪೇಟಕನಿತುಂ: **ಆದಿಪು,** ೯. ೧೦)

**ದಿವಿಜಶರಾಸನ –** ಕಾಮನ ಬಿಲ್ಲು (ನವರತ್ನದ ಪಂಜರದೊಳ್ ದಿವಿಜಶರಾಸನದ ಮಱಿಯನಿರಿಸಿದವೊಲ್: **ಯಶೋಧಚ,** ೩. ೩೭)

**ದಿವಿಜಾಧೀಶ –** ದೇವೇಂದ್ರ (ದಿವಿಜಾಧೀಶನೆ ಮೆಚ್ಚುತಿರ್ದ ವಿಭವಂ ಜನ್ಮಾಭಿಷೇಕಕ್ಕೆ ತಾನೆ ವಲಂ ಮಜ್ಜನಪೀಠಂ ಆದತಿಶಯಂ ಹೇಮಾದ್ರಿಗುನ್ಮುದ್ರಿತಂ: **ಮಲ್ಲಿನಾಪು,** ೧. ೬೪)

**ದಿವಿಜಾನೋಕಹ –** ಕಲ್ಪವೃಕ್ಷ (ದಿವಿಜಾನೋಕಹಕಾಮಧೇನುಗಳೆ ದಿವ್ಯಾವಾಸ ದಿವ್ಯಾನ್ನ ದಿವ್ಯವಿಲೇಪನಾದ್ಯಭಿವಾಂಛೆಯಂ ಶಿಬಿರದೊಳ್ ತಂದಿತ್ತುವು: **ಜಗನ್ನಾವಿ,** ೧೬. ೬೭)

**ದಿವಿಜಾಪಗೆ –** ದೇವಗಂಗೆ (ಕರಂಗಳಡಂಗಿ ಕಿಲುಂಬುಗೊಂಡ ಕನ್ನಡಿಗೆಣೆಯಾಯ್ತು ಭಾನುವಳಯಂ ದಿವಿಜಾಪಗೆ ನೋಡೆ ನೋಡೆ ಕರ್ಪಡರ್ದೆಣೆಯಾದುದು ಆ ಯಮುನೆಗೆ ಅಗ್ಗದ ಯಾಗದ ಧೂಮದ ಏಟ್ಗೆಯೊಳ್: **ಪಂಪಭಾ,** ೬. ೩೬)

**ದಿವಿಜಾಶ್ವತ್ಥಾಮ –** ದೇವಲೋಕದ ಕುದುರೆಯಾದ ಉಚ್ಚೈಶ್ರವಸ್ಸಿನ ಕೆನೆತ (ದಿವಿಜ ಅಶ್ವ ತ್ಥಾಮದೊಳ್ ಈ ಭುವನಂಗಳ್ ನಡುಗೆ ಶಿಶು ನಕ್ಕು ಸರಂಗೆಯ್ದೊಡೆ ಕುಂಭಸಂಭವಂ ಇವಂ ಅಶ್ವತ್ಥಾಮನೆಂದು ಪೆಸರಿಡೆ ನೆಗಟ್ದಂ: **ಪಂಪಭಾ,** ೨. ೪೪)

**ದಿವಿಜೇಭ –** ಇಂದ್ರನ ಆನೆ, ಐರಾವತ (ಸಿಡಿದ ದಿವಿಜೇಭದ ಬಾಳದ ರತ್ನದರ್ಪಣಂ ಬಿರ್ದುದೆನಲ್ಕೆ ಅಪರಾಬ್ಧಿಗಿಳಿದುದಾ ರವಿಬಿಂಬಂ: **ತ್ರಿಷಷ್ಟಿಪು,** ೭. ೫೦)

**ದಿವಿಷನ್ಮಣಿ –** [ದಿವಿಷತ್+ಮಣಿ] ದೇವಲೋಕದ ಮಣಿ, ಚಿಂತಾಮಣಿ (ಪುಣ್ಯದೇಟ್ಗೆಯಿಂ ಮಹಿಯೊಳೆ ಸತ್ಕವಿತ್ವ ದಿವಿಷನ್ಮಣಿ ಸಾರ್ಗುಂ: **ಶಬರಶಂ,** ೫. ೬೧)

**ದಿವೌಕಸ –** ಸ್ವರ್ಗವನ್ನು ಮನೆಯಾಗುಳ್ಳವನು, ದೇವತೆ (ಅಮರ್ತ್ಯಭವನಂ ತದುದ್ಭವರ್ಕಳ್ ದಿವೌಕಸರ್ ದೇವವರ್ಕಳ್: **ಅಭಿಧಾವ,** ೧. ೧. ೩೦)

**ದಿವ್ಯ –** ಸ್ವರ್ಗೀಯ (ಮರಕತನಗಂ ದಿವ್ಯಂ ಮರ್ತ್ಯೋತ್ತಮಾಕೃತಿಯೆಂಬಿನಂ ವಿರಚಿಸಿದಂ ಅಂತು ಆದಿಬ್ರಹ್ಮಂ: **ಆದಿಪು** ೧೪. ೪೪); ದೇವತೆ (ಎನ್ನ ತಮ್ಮಂದಿರ್ಗೀನಿತಂ ಮಾಡಿದ ದಿವ್ಯಂ ಈ ದೈವಮಕ್ಕುಂ: **ಪಂಪಭಾ,** ೮. ೪೭); ಆರೋಪವನ್ನು ಸಾಬೀತುಮಾಡಲು ಆಚರಿಸುವ ವಿವಿಧ ಬಗೆಯ ಪರೀಕ್ಷೆಗಳು, ಪ್ರಮಾಣ, ದೈವ ಸಾಕ್ಷ್ಯ – ಇವು ಐದರಿಂದ ಒಂಬತ್ತು ಬಗೆ ಎಂದು ಸ್ಮೃತಿಕಾರರು; ಪ್ರಾಚೀನ ಕರ್ನಾಟಕದಲ್ಲಿ ಪ್ರಚಲಿತವಾಗಿದ್ದ ಏಳು ಬಗೆಯ ದಿಬ್ಯಗಳು: ಕೋಶ, ರವಿ, ತಂಡುಲ, ಅಗ್ನಿ, ತಪ್ತಮಾಷ, ಜಲ ಮತ್ತು ವಿಷ (ಎಲ್ಲರುಮಱಿಯೆ ದಿವ್ಯಮಂ ಅಪವಾದಮಂ ಕಳೆವಂತು ಮಾಟ್ಪುದೆಂದಬುದುಂ: **ಪಂಪರಾ,** ೧೬. ೨೪ ವ)

**ದಿವ್ಯಂಬಿಡಿ –** ದಿಬ್ಯಂಬಿಡಿ (ನಲ್ಮೆಗೆ ದಿವ್ಯಂಬಿಡಿದಲೊ ಪೇೞಿಂ: **ಚಂದ್ರಪ್ರಪು,** ೫. ೧೩೧)

**ದಿವ್ಯಕರಿ –** ಐರಾವತ (ಧರಾಬಾರಾವಹಂ ಬಾಹು ದಿವ್ಯಕರಿ ಶ್ರೀಕರಮಂ ಕರಂ ಜಱಿಯೆ: **ರಾಜಶೇವಿ,** ೩. ೩)

**ದಿವ್ಯನಗ –** ಮೇರುಪರ್ವತ; ಕಲ್ಪವೃಕ್ಷ (ವಿತರಣದಿಂದೆ ದಿವ್ಯನಗಮಂ .. .. ಜಯಿಸಿರ್ದನುದಾತ್ತವೈಭವಂ: **ರಾಜಶೇವಿ,** ೪. ೧೧೧)

**ದಿವ್ಯಬಾಣ –** ದಿವ್ಯಾಸ್ತ್ರ (ಕುಲಹೀನನೆ ಅಪ್ಪೊಡೆ ಕೇವಲಬೋಧಂ ಪರಶುರಾಮಂ ಏನೀಗುಮೆ ನಿರ್ಮಲಿನಕುಲಂಗಲ್ಲದೆ ಪಿಡಿಯಲಲ್ಲದೆ ಅಂತಪ್ಪ ದಿವ್ಯಬಾಣಾವಳಿಯಂ: **ಪಂಪಭಾ,** ೧೨. ೯೭)

**ದಿವ್ಯಭಾಷಾ[ಷೆ] –** ದೇವನುಡಿ (ಆವರಿಸಿದ ಈ ಛಾತಿ ಕಾಂಡಪಟಮಂ ಪೆಱಪಿಂಗೆ ದಿವ್ಯಭಾಷಾವಧುವಿಂಗೆ ರಾಘವ ಯತಿಪ್ರವರಂ ವರನಾಗೆ: **ಪಂಪರಾ,** ೧೬. ೬೮)

**ದಿವ್ಯಸಂಭವ –** ದೈವಾಂಶಸಂಭೂತ, ಸ್ವರ್ಗದಲ್ಲಿ ಹುಟ್ಟಿದ (ದಿವ್ಯಸಂಭವಂಗಳಪ್ಪ ಶ್ವೇತಾಶ್ವಂಗಳೊಳ್ ಪೂಡಿದ ದಿವ್ಯರಥಮುಮಂ ದಧೀಚಿಗಂಡಸ್ಥಮಪ್ಪ ಗಾಂಡೀವಮೆಂಬ ಬಿಲ್ಲುಮಂ.. ..ಕೆಯ್ಕೊಂಡು: **ಪಂಪಭಾ,** ೫. ೭೭ ವ)

**ದಿವ್ಯಾಸ್ತ್ರ –** ದೇವತೆ ದಯಪಾಲಿಸಿರುವ ಅಸ್ತ್ರ (ಶಲ್ಯನಂ ರಥಮಂ ಎಸಗಲ್ವೇೞ್ದು ದಿವ್ಯಾಸ್ತ್ರಂಗಳ ದೊಣೆಗಳಂ ಎರಡುಂ ದೆಸೆಯೊಳಂ ಬಿಗಿದು ಕಾಳವಟ್ಟದ ಬಿಲ್ಲಂ ಕೆಂದಳದೊಳ್ ಅಮರೆ ಪಿಡಿದು ನೀವಿ ಜೇವೊಡೆದಾಗಳ್: **ಪಂಪಭಾ,** ೧೨. ೧೩೫ ವ)

**ದಿಶಾಚಕ್ರ –** ದಿಕ್ಚಕ್ರ, ದಿಕ್ಕುಗಳ ವಲಯ (ಪ್ರತಾಪಕ್ಕೆ ಅಗುರ್ವಿಸೆ ಗೋಟುಂಡೆಗೊಳುತ್ತುಂ ಇರ್ದುದು ದಿಶಾಚಕ್ರಂ ಪೊದಳ್ದ ಆಜ್ಞೆಗಂ ಪೆಸರ್ಗಂ ಮುನ್ನಮೆ ರೂಪುವೋದುದು ವಿಯಚ್ಚಕ್ರಂ: **ಪಂಪಭಾ,** ೧. ೧೧೦)

**ದಿಶೇಂದ್ರ –** ದಿಕ್ಪಾಲಕ (ಬಹುಳನಾದ ಬಧರೀಕೃತದಿಶೇಂದ್ರಂ ಸಿಂಹಳೇಂದ್ರಂ: **ರಾಜಶೇವಿ,** ೬. ೧೩೭ ವ)

**ದೀಂಟೆ –** ಜಗುಲಿ, ಕಟ್ಟೆ (ಕಟ್ಟಿ ಕುಟ್ಟುವೆನೆನುತಂ ನಿಟ್ಟಿಸಿ ಕಂಡನವಂ ಚೌವಟ್ಟದ ದೀಂಟೆಯೊಳೆ ನಿಂದು ಜೂದಾಡುವನಂ: **ಪಾರ್ಶ್ವನಾಪು,** ೪. ೨೦)

**ದೀಕ್ಷೆ –** [ಜೈನ] ಸನ್ಯಾಸದೀಕ್ಷೆ (ಬೇಡಿದೊಡೆ ಒಳ್ಳಿತಪ್ ಮುಹೂರ್ತದೊಳೆ ದೀಕ್ಷೆಯಂ ಕೊಟ್ಟು: **ವಡ್ಡಾರಾ,** ಪು. ೬. ಸಾ. ೧)

**ದೀಧಿತಿ –** ಕಾಂತಿ (ನಿಜಮೌಕ್ತಿಕಾಭರಣದೀಧೀತಿಯಿಂ ಕಣ್ಗೊಳಿಸೆ ಲತಾಂಗಿ ಪೋಲ್ತಳ್ ಅಸಮಾಯುಧ ಮೋಹನ ಮಂತ್ರಶಕ್ತಿಯಂ: **ಮಲ್ಲಿನಾಪು,** ೩. ೭೯)

**ದೀಧಿತ್ಯಂಬು** – ಕಾಂತಿಜಲ (ರಾಹು ಪೀರ್ದಮೃತದ್ಯುತಿ ದೀಧ್ಯ್ಯಂಬುಕಣಾವಳಿ ಪಿಂತಣಿಂ .. .. ಉಗುವಂತೆ: **ಲೀಲಾವತಿ,** ೧೪. ೮)

**ದೀನತೆ** – ದೈನ್ಯ, ದುರ್ಬಲತೆ (ದೀನತೆ ದಿನಕ್ಕಪ್ಪಂತು ಕೂರ್ಪಂಬುಜಂ ಸುಗಿವಂತಾಯ್ತು ಸಖಂಗೆ ಕಲವಶದಿಂ: **ಪುಷ್ಪದಂಪು,** ೬. ೪೦)

**ದೀನತ್ವ** – ಬಾಡುವಿಕೆ (ಕನತ್ಕನಕಾಂಭೋಜನಿಧಾಮಮಕ್ಕೆ ಪಿರಿದುಂ ದೀನತ್ವಮಂ .. .. ನಿನಗಂ ಸಂತಾಪಮಂ ಮಾಡಿದಂ: **ಪಂಪಭಾ,** ೪. ೬೪)

**ದೀನಾರ** – ಒಂದು ಚಿನ್ನದ ನಾಣ್ಯ (ಪೊಗಳೆ ಜನಂ ಝುಂಝೂವೇಗೆಗೆ ತಾನಂತು ಒಂದು ಕೋಟಿ ದೀನಾರಮಂ ಆ ಮೃಗನಯನೆ ಕೊಟ್ಟು ಕೊಂಡಳ್ ನೆಗಟ್ತೆವೆತ್ತಿರ್ದ ರತ್ನಮಯ ಕಂಬಳಮಂ: **ಸುಕುಮಾಚ,** ೧೦. ೧೧೮)

**ದೀಪ** – [ದ್ವೀಪ] ನಡುಗಡ್ಡೆ (ಮೇರುವೆ ಮಧ್ಯದೊಳ್ ನೆಲಸೆ ಸುತ್ತಿಜೆದಿರ್ದಪುದು ಜಂಬುದೀಪಮಂ ಕ್ಷಾರಪಯೋಧಿ: **ಅನಂತಪು,** ೧. ೬೨); ಸೊಡರು ಗಾಳಿ ತೀಡಿದ ದೀಪರೂಪದಂದದಿಂ ಶಾರದನೀರದಾಕಾರದಂದದಿಂ ಅದೃಶ್ಯಾಕಾರನಾಗಿ: **ಸುಕುಮಾಚ,** ೧೦. ೮ ವ)

**ದೀಪಕಳಿಕೆ** – ದೀಪದ ಕುಡಿ (ನೀರಾಜನ ದೀಪಕಳಿಕಾಶೋಣಾಂಶು ಬಾಲಾತಪಪ್ರಸರಪಿಶಂಗಮುಂ: **ಜಗನ್ನಾವಿ,** ೪. ೮೨ ವ)

**ದೀಪವರ್ತಿ** – ದೀಪದ ಬತ್ತಿ (ಪಂಗೆಜಗುವ ದೀಪವರ್ತಿ ಮಣ್ಗೆಜಗುಗುಮೇ: **ಸಮಯಪ,** ೪. ೨೫)

**ದೀಪಸ್ಪರ್ಶನ** – ದೀಪ ಹೊತ್ತಿಸುವುದು (ದೀಪಸ್ಪರ್ಶನಮಾದ ವರ್ತಿ ನಿಮಿಷಕ್ಕಾ ದೀಪರೂಪಂ ಸಂಂತಾ ಪೊತ್ತೆಯ್ದುವವೋಲ್: **ಶಾಂತೀಶ್ವಪು,** ೪. ೧೧೨)

**ದೀಪಾಂಗ** – [ಜೈನ] ದೀಪಗಳನ್ನು ನೀಡುವ ಒಂದು ಕಲ್ಪವೃಕ್ಷ, ನೋಡಿ, ಕಲ್ಪವೃಕ್ಷ (ಸೊಗಯಿಸುವುವು ದೀಪಾಂಗ ಜ್ಯೋತಿರಂಗ ಕಲ್ಪಕುಜಂಗಳ್: **ಆದಿಪು,** ೫. ೪೦)

**ದೀಪ್ತ** – ಹೊಳೆಯುವ (ದೀಪ್ತ ಸುವರ್ಣವಪ್ರವಿಪುಳಪ್ರಭೆಗಳ್ ಬಳೆದುಂಟುಮಾಡೆ ಸೂರ್ಯಪ್ರಭೆಯುಕ್ಕಿದುಕ್ಕಂ: **ನೇಮಿನಾಪು,** ೨. ೮೦)

**ದೀಪ್ತತಪ** – [ಜೈನ] ತಪಸ್ಸಿನಿಂದ ಯೋಗಿಗೆ ಉಂಟಾಗುವ ದೇಹಕಾಂತಿ (ಉಗ್ರೋಗ್ರ ತಪದಿಂ ದೀಪ್ತತಪಂ ಮಹಾತಪಂ ಘೋರತಪಂ ಎಂದಿವು ಮೊದಲಾಗೊಡೆಯ ತಪಂಗಳಂ ಗೆಯ್ಯೆ ತಪದ ಮಾಹಾತ್ಮ್ಯದಿಂದಂ ಆಮೋಷಧಿ ಖೇಳೋಷಧಿ ಜಲ್ಲೋಷಧಿ ವಿಪ್ಪೋಷಧಿ ಸರ್ವೋಷಧಿಯೆಂದಿವು ಮೊದಲಾಗೊಡೆಯ ಋದ್ಧಿಗಳ್ ಪುಟ್ಟಿದೊಡಂ: **ವಡ್ಡಾರಾ,** ಪು ೬೯, ಸಾ ೩)

**ದೀಪ್ತವರ್ತಿ** – ಬೆಳಕಿನ ಕುಡಿ (ವಾಸವದಿಕ್ತಟಂ ಸಮೆದ ಮೂಷೆ ತಮಂ ಸುರಿದಿರ್ದಲಬ್ಜಸಂವಾಸಿ ಸಮೀರಂ ಏರಣಿಗನಾಗೆ ನಿದಾಘವ ದೀಪ್ತಿವರ್ತಿಯೊಳ್ ಕಾಸೆ ತೆರಳ್ದ ಪಿಂಜರಿಯವೋಲ್ ಕಿಸುಸಂಜೆ ತೆರಳ್ದಿನಂ ಪಟಂಗಾಸಿನ ಪೊನ್ನಗಂಟೆಯವೊಲೊಪ್ಪಿದುದು ಉದ್ಗತ ಭಾನುಮಂಡಲಂ: **ಅಜಿತಪು,** ೬. ೭೦)

**ದೀಪ್ತಿಕೆ** – ಸೊಡರು (ಗೃಹಸಮುಚಿತದೊಳ್ ತೊಳಗಿ ಬೆಳಗಿದುವು ದೀಪ್ತಿಕೆಗಳ್: **ಸೂಕ್ತಿಸುಧಾ,** ೮. ೧೮೫)

**ದೀಪ್ರ** – ಕಾಂತಿಯುಕ್ತವಾದ (ಹರಿಹರಹಿರಣ್ಯಗರ್ಭರಂ ಉರವಣೆಯಿಂ ಗೆಲ್ದ ಕಾಮನಂ ದೀಪ್ರ ತಪೋಭರದಿಂದ ಉರಿಪಿದರ್ ಎನೆ ಬಿತ್ತರಿಸದರಾರ್ ವೀರಣಂದಿ ಸೈದ್ಧಾಂತಿಕರಂ: **ಪಂಪರಾ,** ೧. ೨೭)

**ದೀಪ್ರೌಷಧಿ** – ಎಣ್ಣೆಕಾಳು (ತಿಳಾತಸೀಕುಸುಂಭಾದಿ ದೀಪ್ರೌಷಧಿಗಳುಂ ಯಾವನಾಳಕಂಗುಕೋದ್ರಾವಾದಿ ಸರ್ವೌಷಧಿಗಳುಂ: **ಆದಿಪು,** ೮. ೬೧ ವ)

**ದೀರ್ಘ** – ನೀಳ, ಉದ್ದವಾದ (ಪ್ರಾಂಶು ದೀರ್ಘಂ ಉಚ್ಚಂ: **ಅಭಿಧಾವ,** ೨. ೧. ೩೭)

**ದೀರ್ಘನಿದ್ರಿತ** – ಸತ್ತವನು (ಕೆಲವುಕಾಲದಿನಾತನ ತಂದೆ ಮಹಾದ್ರುಮಂ ದೀರ್ಘನಿದ್ರಿತನುಮಪ್ಪುದುಂ: **ಪಂಚತಂತ್ರ,** ೮೧ ವ)

**ದೀರ್ಘನಿದ್ರೆ** – ಸಾವು (ಈಗಳ್ ನಿನಗಿಂತೀ ದೀರ್ಘನಿದ್ರೆಯಂ ಮಾಡಿದನೇ: **ಗದಾಯು,** ೫. ೨೧)

**ದೀರ್ಘಸೂತ್ರ** – ತುಂಬ ತಡವಾಗಿ ಕೆಲಸ ಮಾಡುವವನು (ಹತದೈವಂ ಪ್ರಾರಂಭಂ ಪ್ರತಿಕಾರಂ ದೀರ್ಘಸೂತ್ರ ತತ್ಪ್ರತಿಕಾರಂ ಶತಮಾದೊಡೆ ಅಂತು ಮೋಕ್ಷಂ ಹತ್ತೋರುಗೆನಗಾವುದು ಇಂ ಗಡ ಪ್ರತಿಕಾರಂ: **ಗದಾಯು,** ೯. ೨೫)

**ದೀರ್ಘಿಕೆ** – ಸರೋವರ, ಬಾವಿ (ಏನಂ ಪೇಟ್ವುದೊ ಸಿರಿಯ ಉದ್ದಾನಿಯಂ ಎಣ್ಣೆಯೊಳ್ ತೀವಿ ದೀರ್ಘಿಕೆಗಳಂ ಅಂತಾ ನೃಪತಿ ನಿಚ್ಚಲ್ ಅಯ್ನೂಱ್ ಆನೆಯಂ ಅವಗಾಹಮಿರಿಸುವಂ ಬೋದನದೊಳ್: **ಪಂಪಭಾ,** ೧. ೧೭)

**ದೀರ್ಣಾನನ** – [ದೀರ್ಣ+ಆನನ] ತೆರೆದ ಬಾಯಿ (ರಸನಾ ಶಂಪಾ ಶತಂ ಸಂಚಳಿಸೆ ಪುದಿಯೆ ಫೂತ್ಕಾರಂ ಆಶಾಂತಮಂ ದಳ್ಳಿಸೆ ವಹ್ನಿಜ್ವಾಲೆ ದೀರ್ಣಾನನ ಕುಹರ ಸಹಸ್ರಂಗಳಿಂ .. .. ವಜ್ರಾವರ್ತ ಚಾಪಂ ಪಡೆದುದು ಭಯಮಂ ಕಾಳ ಕಾಳಾಹಿ ರೂಪಂ: **ಪಂಪರಾ,** ೫. ೭೪)

**ದೀವ** – ಬೇಟೆಯ ಪ್ರಾಣಿಯನ್ನು ಆಕರ್ಷಿಸಲು ಒಡ್ಡುವ ಸಾಕಿದ ಪ್ರಾಣಿ (ಮನೋಜನ ದೀವದ ಪುಲ್ಲೆಗಳೆನಿಸಿದವು ನೆರೆದ ಪೆಂಡಿರ ತಂಡಂ: **ಸುಕುಮಾಚ,** ೧೧. ೨೧)

**ದೀವಗಾಱ** – ದೀವದ ಬೇಟೆಯಾಡುವವನು, ಮೃಗಪಕ್ಷಿಗಳನ್ನು ಸಾಕುವವನು (ಮನೋಜನೆಂಬ ದೀವಗಾಱನ ಪುಲ್ಲೆಗಳಂತೆ .. .. ನೆರೆದಿರ್ದ ಪೆಂಡವಾಸದೊಳ್ವೆಂಡಿರಂ ಕಂಡು: **ಪಂಪಭಾ,** ೪. ೮೪ ವ)

**ದೀವಟಿಗ** – ಪಂಜು ಹಿಡಿಯುವವನು (ಅಟಿಗ ಪ್ರತ್ಯಯಕ್ಕೆ: ಕೊಲ್ಲಟಿಂ, ಮಾವಟಿಗಂ, ದೀವಟಿಗಂ: **ಶಬ್ದಮದ,** ೨೧೫ ಪ್ರ)

**ದೀವದ ಪುಲ್ಲೆ** – ಬೇಟೆಯಲ್ಲಿ ಆಕರ್ಷಣೆಗಾಗಿ ಒಡ್ಡುವ ಜಿಂಕೆ (ಕೆಲ್ಲಯಿಸಿ ಕೆಲಕೆ ತೊಲಗುತುಂ ಅಲ್ಲಲ್ಲಿಗೆ ನಿಂದು ತತ್ಕುಮಾರಕನಂ ನೋಟ್ಪಲ್ಲಿ ಮನೋಜನ ದೀವದ ಪುಲ್ಲೆಗಳೆನಿಸಿದವು ಪೆಂಡಿರ ತಂಡಂ: **ಸುಕುಮಾಚ,** ೧೧. ೨೧)

**ದೀವದ ಹರಿಣ** – ದೀವದ ಪುಲ್ಲೆ (ಕಾಮನ ದೀವದ ಹರಿಣಂ ಕಾಮೋರಗನಿರ್ಪ ಪುತ್ತು ಮೊಲಗಟ್ಟಲೆಯಂ ಕಾಮಿಗೆ ಮಟ್ಟಿಸುವ ಮೊಲಂಕಾಮಗ್ರಹದ ಆಲಂ ಎನಿಸಿತು ಇಂದುಕಳಂಕಂ: **ಮಲ್ಲಿನಾಪು,** ೭. ೨೯)

**ದೀವಳಿಗೆಯ ಪರೆ** – ದೀಪಾವಳಿಯ ತಮ್ಮಟೆ (ಭಯವಶದಿಂ ದೀವಳಿಗೆಯ ಪರೆಯಂತೆ ಪೊಕ್ಕಪರ್ ಮನೆಮನೆಯಂ: **ಚಾವುಂಪು,** ಪು. ೧೬೦. ಪ. ೨೩)

**ದೀವಿಗೆ** – ಸೊಡರು (ದೀವಿಗೆಗಳೊಳ್ ಜಲಕ್ಕನೆಕ್ಕೆಕ್ಕೆಯನಿಟ್ಟಳಂ ಬೆಳಗುತಿರ್ದುವೆರಟ್ಟಿಸೆಯೊಡ್ಡಣಂಗಳೊಳ್: **ಪಂಪಭಾ,** ೧೨. ೫)

**ದೀಹ** – ಬೇಟೆಯಾಡಲು ಆಕರ್ಷಣೆಯಾಗಿ ಒಡ್ಡುವ ಸಾಕುಪ್ರಾಣಿ (ಎನ್ನ ಪಸರಿಸಿದ ಚಿತ್ರಪಟಮೆಂಬ ದೀಹಕ್ಕೆ ಖೇಚರಭೂಚರಯುವಮೃಗಗಂಗಳೇಳೀಸಿ ಬಂದು: **ಆದಿಪು,** ೩. ೮೬ ವ)

**ದೀಹದೇಣ** – ಬೇಟೆಯ ಪ್ರಾಣಿಗಳಿಗೆ ಆಕರ್ಷಣೆಯಾಗಿ ಒಡ್ಡಲು ಸಾಕಿದ ಜಿಂಕೆ (ಇಡುವಲೆ ದೀಹದೇಣ ನುಡಿಗಲ್ಲಿ ಅಡಾಯುಧಂ ಅಡ್ಡಣಂ .. .. ಇವಂ ಪಿಡಿದು ಬೇಂಟೆಗೆ ಸಂದ ಪುಳಿಂದರ್: **ರಾಜಶೇವಿ,** ೫. ೫೨)

**ದುಂಡಿಸು** – ಅಲೆದಾಡಿಸು (ನಿಜೆಗಳನಿಕ್ಕಿ ದಾಂಟಿಸದೆ ದುಂಡಿಸುವಾಕೆಯಂ ಒತ್ತೆಗೊಳ್ಳದೆ: **ಲೀಲಾವತಿ,** ೨. ೯೩); ತುಂಡರಿಸು (ಕಡೆಗಣಿಸಿ ಪಾರ್ವ, ದುಂಡಿಪ, ದಿಂಡುವಾಯ್ವ, ಬವರಿವರಿವ .. .. ಘೋಳಾಯಿಲರ್: **ರಾಜಶೇವಿ,** ೬. ೧೧ ವ)

**ದುಂಡುಜುಂಬೆ** – ಗಯ್ಯಾಳಿ (ದುಂಡುಜುಂಬೆಯರ್ ಬಸನಿಗಳಾಗಿ ಗಾವಿಲರನಾ ಪೆಸರಿಂ ಕುಜೆಮಾಡಿ ತಿಂದಪರ್: **ಸಮಯಪ,** ೯. ೧೧೩)

**ದುಂದುಭಿ** – ಒಂದು ಚರ್ಮವಾದ್ಯ (ಮಿಥ್ಯಾಕಂದರದೊಳ್ ಬೆದಱಿಟ್ಟುವ ದುಂದುಭಿರವದಂತಿರೆ ಒಗೆಯೆ ಗಂಭೀರರವಂ: **ಯಶೋಧಚ,** ೪. ೨೨); ಅರವತ್ತು ಸಂವತ್ಸರಗಳಲ್ಲಿ ಒಂದು (ದುಂದುಭಿ ಗಭೀರನಿನದಂ ದುಂದುಭಿ ಸಂವತ್ಸರೋದ್ಭವಂ: **ಆದಿಪು,** ೧. ೩೩)

**ದುಂದುಭಿನಿನದ** – ದುಂದುಭಿಯ ಧ್ವನಿ (ದುಂದುಭಿ ಗಭೀರನಿನದಂ ದುಂದುಭಿ ಸಂವತ್ಸರೋದ್ಭವಂ: **ಆದಿಪು,** ೧. ೩೩)

**ದುಂದುಮೆ** – ಹರೆ (ಧರೆಯೊಳಗಿಂತೀ ನಗರದ ಪರದರೆ ಸಂಪನ್ನರೆಂದು ದುಂದುಮೆಗೇಳ್ದಿಂ: **ಸುಕುಮಾಚ,** ೧೦. ೧೧೭)

**ದುಂದುಜುಂಬೆ** – ಗಯ್ಯಾಳಿ (ತನಗಿದಿರಾಗಿ ಬರ್ಪ ಪಾಣ್ಬೆಯಂ ದುಂದುಜುಂಬೆಯಂ ಕಂಡು ಈಕೆ ಗೆಯ್ದ ದೋಷಮಾವುದು ಎಂದು ಬೆಸಗೊಳ್ಳಿಂ ಎಂಬುದುಂ: **ಸುಕುಮಾಚ,** ೭. ೨೯ ವ)

**ದುಃಖದ** – ದುಃಖವನ್ನು ಉಂಟುಮಾಡುವಂಥದು (ಆ ವ್ರತ ಶಿತಾಸಿ ಸಂಸಾರವ್ರತತಿಚ್ಛೇದಮಕ್ಕುಂ ಆ ಸಂಸಾರಂ ತೀವ್ರತರ ದುಃಖದಂ ನಾಳೀವ್ರಣಸದೃಶಂ ಶರೀರಿಗದ ಕಿಡೆ ನೆಗಟೆಂ: **ಶಾಂತಿಪು,** ೭. ೭)

**ದುಃಖೋಪಾತ್ತ** – ದುಃಖವನ್ನುಂಟು ಮಾಡುವುದು (ಸುಖಮಿದು ದುಃಖೋಪಾತ್ತಮಿದೆಂದಱಿಪುಗುಂ ಪರಮ ಕವಿಪ್ರಧಾನರಾ ಕಾವ್ಯಂಗಳ್: **ಕವಿರಾಮಾ,** ೧. ೧೮)

**ದುಃಪಕ್ವಾನ್ನ** – [ಜೈನ] ಐದು ಭೋಗೋಪಭೋಗ ಅತಿಚಾರಗಳಲ್ಲಿ ಬೇಯದ ಆಹಾರ ತಿನ್ನಬೇಕೆಂಬ ಒಂದು ನಿಯಮ (ಕ್ರಮದಿಂ ಸಚಿತ್ತಸಂಬಂಧಮಂತೆ ಸಮ್ಮಿಶ್ರಭಿಷವಂ ದುಃಪಕ್ವಾನ್ನಂಗಳತಿಕ್ರಮವಂ ಆ ಭೋಗೋಪಭೋಗಪರಿಮಿತ ಗತಿಯೊಳ್: **ಸುಕುಮಾಚ,** ೬. ೨೪)

**ದುಕೂಲ** – ರೇಷ್ಮೆ ಬಟ್ಟೆ (ಸರಿಗೆಯೊಳ್ ಸಮೆದ ಅಕ್ಷಮಾಲಿಕೆ ಪೊನ್ನ ಮುಂಜಿ ತೊಳಪ್ಪ ಕಪ್ಪುರದ ಭಸ್ಮರಜಃ ತ್ರಿಪುಂಡ್ರಕಂ ಒಪ್ಪೆ ಪಿಂಗಜಟಾಳಿ ತಾವರೆಯ ಸೂತ್ರದೊಳಾದ ಜನ್ನವಿರಂ ದುಕೂಲದ ಕೋವಣಂ ಕರಂ ಒಡಂಬಡೆ ನೋಟಕರ್ಕಳಂ ಆ ತಪಸ್ವಿ ಮರುಳ್ಚಿದಂ: **ಪಂಪಭಾ,** ೬. ೮)

**ದುಗ** – [ದ್ವಿಕ] ಜೋಡಿ, ಎರಡು (ದ್ವಿಕಂ–ದುಗಂ, ತ್ರಿಕಂ–ತಿಗಂ, ಚತುಷ್ಕಂ–ಚೌಕಂ: **ಶಬ್ದಮದ,** ೩೦೫ ಪ್ರ); ಪಗಡೆಯಲ್ಲಿ ಎರಡು ದಾಳಗಳಲ್ಲಿಯೂ ಒಂದು ಬೀಳುವುದು (ಚೌಕ ದುಗಂ ಇದ್ದುಗಂ ಇತ್ತಿಗಂ ಬಾರಮಂ ಎಂಬ ಆರಿಸಿ ಬೇಡಿದ ದಾಳಮಳವಟ್ಟಿರೆ: **ಪುಣ್ಯಾಸ್ರ,** ೪. ೧೮)

**ದುಗುಣ** – [ದ್ವಿಗುಣ] ಎರಡು ಪಟ್ಟು, ಎರಡು ಸಲ (ದ್ವಿಶಬ್ದಕ್ಕೆ: ದ್ವಿಶರಂ–ದುಸರಂ, ದ್ವಿಗುಂ–ದುಗುಣಂ, ದ್ವಿಪಟ್ಟಿಕಾ–ದುವಟ್ಟಿಗೆ. ದ್ವಿಹಸ್ತಂ–ದುಹತ್ತಂ: **ಶಬ್ದಮದ,** ೩೦೫ ಪ್ರ)

**ದುಗುಲ** – ದುಕೂಲ, ರೇಷ್ಮೆ ಬಟ್ಟೆ (ಸುಲಿಪಲ್ ಮಿಂಚಿನ ಗೊಂಚಲುಟ್ಟ ದುಗುಲಂ ಗಂಗಾನದೀಫೇನಂ ಉಜ್ಜ್ವಲಮುಕ್ತಾಭರಣಂ ತರತ್ತರಳ ತಾರೋದಾರ ಭಾ ಭಾರಂ .. .. ಕಣ್ಗೊಪ್ಪಿತಾ ಕಾಂತೆಯಾ: **ಪಂಪಭಾ,** ೧. ೧೩೭)

**ದುಗ್ಧ** – ಕರೆದುದು, ಹಾಲು (ಪುಳಿ ಮುಟ್ಟಿದ ದುಗ್ಧದಂತೆ ನೀರ್ ಮುಟ್ಟಿದ ಜೇನೆಯ್ಯಂತೆ: **ಯಶೋಧಚ,** ೨. ೫೯)

**ದುಗ್ಧಕಂಠ** – ಹಾಲು ಕುಡಿಯುವ ಮಗು (ಲಕ್ಷ್ಮಣಂ ಸಂಗರದೊಳ್ ಪೌಲಸ್ತ್ಯನಂ ಗೆಲ್ದಪನೆ ರಣರಸೋತ್ಕಂಠನಂ ದುಗ್ಧಕಂಠಂ: **ಪಂಪರಾ,** ೧೨. ೬೫)

**ದುಗ್ಧಚ್ಛಟ** – ಹಾಲಿನ ಕಾಂತಿ (ಲಟಹಯುತಂಗಳ್ ದುಗ್ಧಚ್ಛಟೋಜ್ಜ್ವಲಂಗಳ್ ತದಮರಚಮರರುಹಂಗಳ್: **ಆದಿಪು,** ೭. ೫೧)

**ದುಗ್ಧಜಳಭೇದನ** – ಹಾಲುನೀರುಗಳನ್ನು ಬೇರ್ಪಡಿಸುವುದು (ಕವಿರಾಜಹಂಸನಱಿವಂತೆವೊಲ್ ಏನಱಿಯಲ್ಕೆ ಯೋಗ್ಯನೇ .. .. ಗುಣದೋಷ ದುಗ್ಧಜಲಭೇದನಮಂ ಕವಿನಾಮಧಾರಕಂ: **ಚಂದ್ರಪ್ರಪು,** ೧. ೩೮)

**ದುಗ್ಧಪಯೋಧಿ** – ಹಾಲಿನ ಸಮುದ್ರ (ಬೇಗದೊಳಾ ಕಟಕಂಗಳೆಯ್ದೆ ಕೆಯ್ಕೊಂಡುವು ಮಂದರಕ್ಷುಭಿತ ದುಗ್ಧಪಯೋಧಿ ಗಂಭೀರನಾದಮಂ; **ಪಂಪಭಾ,** ೧೦. ೪೯)

**ದುಗ್ಧಸಿಂಧುಪ್ಲವ** – ದುಗ್ಧವಾರಿಧಿಯ ಹೊನಲು (ಸಮಸ್ತಸುರಕೋಟಿ ಹೇಮಘಟಕೋಟಿಯಿಂ ತೀವಿ ತಂದಮೇಯಭುಜಕೋಟಿಯಿಂ ಮಿಸಿಸೆ ದುಗ್ಧಸಿಂಧುಪ್ಲವಂ ಶ್ರಮಾಂಬುಲವಮೊಂದುಮಂ ನಿನಗೆ ಪುಟ್ಟಿಸಲ್ಕಾರ್ತುದು: **ಆದಿಪು,** ೧೩. ೮೩)

**ದುಗ್ಧಾಂಬುಧಿ** – ದುಗ್ಧವಾರಿಧಿ (ಎನಿತಾನುಂ ಪೇಟಿಲೆಟ್ಟಿಂದುದು ಉಜ್ವಲ ದುಗ್ಧಾಂಬುಧಿಯೆಂಬಿನಂ ಭುವನಮಂ ಪರ್ವಿತ್ತು ಚಂದ್ರಾತಪಂ: **ಶಾಂತೀಶ್ವಪು,** ೧೧. ೪೪)

**ದಿಗ್ಧೋದಧಿ** – ದುಗ್ಧವಾರಿಧಿ (ದಿಗಂತಮೆಲ್ಲಮಂ ದುಗ್ಧೋದಧಿ ಧವಳದೀರ್ಘಂಗಳಪ್ಪ ಅಪಾಂಗಾವಲೋಕನದಿಂ ತೇಂಕಾಡಿಸುತ್ತುಂ .. .. ನಿಂದು: **ಕಾದಂಸಂ,** ೫. ೮೪ ವ)

**ದುಗ್ಧೋದಧಿತಲ್ಪ** – ಹಾಲಿನ ಸಮುದ್ರವನ್ನೇ ಹಾಸಿಗೆಯಾಗುಳ್ಳವನು, ವಿಷ್ಣು (ಲಕ್ಷ್ಮಿ ನಿಜವಲ್ಲಭೆ ಜಾಹ್ನವಿ ತನ್ನ ಪಾದಪದ್ಮೋದಕ .. .. ಎಂದೆನಿಪ್ಪ ದುಗ್ಧೋದಧಿತಲ್ಪನಂ ನರನಭಿಷ್ಟುತಿಗೆಯ್ವುದು ಧಾರ್ಷ್ಟ್ಯಮಲ್ಲವೇ: **ಜಗನ್ನಾವಿ,** ೧. ೨೦)

**ದುಘ** – ಹಸು (ಕಾಮಿತವಸ್ತುವಂ ನೆಗಳಲಾರ್ಪುದು ಕಾಮದುಘಂ: **ರಾಜಶೇವಿ,** ೪. ೯೦)

**ದುಟ್ಟಗೊರವ** – ದುಷ್ಟ ಸನ್ಯಾಸಿ (ಈಗಳ್ ಸಿವನೆಂಬ ದುಟ್ಟಗೊರವಂ ಮಂಜುವೆಟ್ಟಮಂ ಗೊಟ್ಟಂ ಮಾಡಿ ಕಿತ್ತಡಿಗಳಂ ಮರುಳ್ವಡೆಗಳಂ ಕೂಡಿಕೊಂಡು .. .. ಮೆಯ್ಯಱಿಯದಿರ್ಪಂ: **ಕಬ್ಬಿಗಕಾ,** ೧೧೪ ವ)

**ದುಡುಮ್ಮಿಱಿ** – ದುಡುಂ ಎಂದು ಶಬ್ದಮಾಡು (ಪಱುಗೋಲ್ಗಳನಿಕ್ಕಿ ಪಾಯಿಸಲ್ ನೆಲೆಯಿನಿಸೆಂದು ನೋಡಲ್ ಒಳಪೊಕ್ಕು ದುಡುಮ್ಮಿಱಿದಾಡಲ್ ಈಸಲ್ ಅಗ್ಗಲಿಸಿದಲಂಪಿನಿಂ ಬಗೆದುದಂದು ಜನಂ ಘನಚಂದ್ರಿಕಾಂಬುವಂ: **ಅಜಿತಪು,** ೬. ೪೫)

**ದುಣವಟ್ಟಿ** – ಕುಸ್ತಿಯ ಒಂದು ಪಟ್ಟು (ಡೊಕ್ಕರಂ ಚಡಿಕೆ ತುಳಾಡಿ ಪೊಟ್ಟಮುಡುಹಂ ಮುಹಡಂ ದುಣವಟ್ಟಿ ಪಟ್ಟಿಸಂ: **ಅನಂತಪು,** ೨. ೨೭)

**ದುಮ್ಮನ** – ವ್ಯಥೆ (ಕಿಡಿದನುರಾಗಮಂ ಕಿಡಿದು ದುಮ್ಮನಮಂ ಕಿಡಿದೊಂದು ಹಾಸಮಂ .. .. ಮೆಱೆದಪ್ಪುದೊ: **ನೇಮಿನಾಪು,** ೧. ೧೧೨)

**ದುರಂತ** – ಕೊನೆಯಿಲ್ಲದ (ಘೋರ ದುರ್ಗತಿಯಂ ಪೊಕ್ಕು ದುರಂತದುಃಖಮನುಣಲ್ವೇಡ: **ಆದಿಪು,** ೩. ೫೬)

**ದುರಂತೋದ್ವೇಗ** – ಕೊನೆಯಿಲ್ಲದ ತಳಮಳ (ದುರಂತೋದ್ವೇಗನೀಡಿದಂ ಅತಿತರ ನಿರ್ಬಂಧದಿಂ ಪದ್ಮಸದ್ಮಂ: **ಚಂದ್ರಪ್ರಪು,** ೫. ೯೭)

**ದುರಘ** – ಮಹಾಪಾತಕ (ದುರಘವಿಷವೃಕ್ಷಮೂಲೋತ್ಕರಮಂ ಕೀೞ್ವಂತೆ ಕಿೞ್ತಂ .. .. ಕುಟಿಳಕುಂತಳಕುಳಮಂ: **ಕರ್ಣನೇಮಿ,** ೧೩. ೩೬)

**ದುರತ್ಯಯ** – ಗೆಲ್ಲಲು ಕಷ್ಟಕರವಾದ (ಗೋಪಿಯರೀಕ್ಷಿಸೆ ಕೃಷ್ಣನಾರ್ದು ತಳಶಬ್ದ ದುರತ್ಯಯಂ ಅಸುರವೃಷಗಭಿಮುಖತೆಯಿನೆಯ್ದಿದಂ: **ಜಗನ್ನಾವಿ,** ೫. ೩೭)

**ದುರಾಗ್ರಹಸ್ಯ ಹಿತೋಪದೇಶೋ ಬಧಿರಸ್ಯಾಗ್ರತೋ ಗಾನಮಿವ** – ದುರಾಗ್ರಹಿಗೆ ಮಾಡಿದ ಉಪದೇಶವು ಕಿವುಡನ ಎದುರಿನಲ್ಲಿ ಹಾಡಿದಂತೆ (ಅದು ಕಾರಣದಿಂ ನರಕಂ ಪುಲ್ವೇಡಿರ್ದಂಗೆ ಪರವೆಣ್ಣೊಳಾದ ಪ್ರೀತಿ ಪೋಗಲಱಿಯದು ದುರಾಗ್ರಹಸ್ಯ ಹಿತೋಪದೇಶೋ ಬಧಿರಸ್ಯಾಗ್ರತೋ ಗಾನಮಿವ ಎಂಬ ನೀತಿಯುಂಟು: **ಧರ್ಮಾಮೃ,** ೧೩. ೯೨ ವ)

**ದುರಾತ್ಮ** – ಕೆಟ್ಟ ವ್ಯಕ್ತಿ (ಅಂತು ದುರಾತ್ಮನ ದುರುಕ್ತಿಗೆ ಜನಕಸುತೆ ಕಡುಮುಳಿದು: **ಪಂಪರಾ,** ೯. ೧೮೦ ವ)

**ದುರಾಪ** – ಗೆಲ್ಲಲಸಾಧ್ಯವಾದ (ದುರಾಪಂ ಗುಣಾಬ್ಧಿಗಂಭೀರಂ ಭವದೀಯಮೆಂದು .. .. ಬಂದಿಸಿದನಾ ಪಾಪೇಭಕಂಠೀರವಂ: **ಶಾಂತಿಪು,** ೮. ೧೫೮)

**ದುರಾರೋಹ** – ಏರಲು ಕಷ್ಟಕರವಾದುದು (ಅಭ್ರಂಕಷಮುಂ ದುರಾರೋಹಮುಂ ಆದೊಡಂ ಬಗೆಯದೆ ಬಳಸಿದ ಬಳ್ಳಿವಿಡಿದು ಅಡರ್ದೇಱಿ: **ಕಾದಂಸಂ,** ೧. ೪೯ ವ)

**ದುರಿತ** – ಪಾಪ (ದುರಿತದ ಪೆರ್ಬಡೆಗೆ ಕಡುಮುಳಿದು ಮುನಿ ಮೊಗವಡಂ ಉಡುಗಿದ ವಿಜಯಭದ್ರಗಜದವೊಲಿರ್ದಂ: **ಮಲ್ಲಿನಾಪು,** ೧೪. ೬೪); ಅಮಂಗಳ (ಆ ದೇವಿಗೆ ಎನ್ನನಿಕ್ಕಿಯುಂ ಈ ದುರಿತಮನಿಂದು ಮಗನೆ ಪರಿಹರಿಸದಿರೆಂ: **ಯಶೋಧಚ,** ೩. ೨೦)

**ದುರಿತಘರಟ್ಟ** – ಪಾಪವನ್ನು ಪುಡಿಮಾಡುವ ಬೀಸುವ ಕಲ್ಲು (ದುರಿತಘರಟ್ಟಂ ಎನಗಾಪ್ತನೆಂದು ಭಾವಿಪುದು ಅಜೀವಂ: **ಸಮಯಪ,** ೧. ೭೭)

**ದುರಿತಾರಿ** – ಪಾಪವನ್ನು ನಾಶಮಾಡುವವನು, ಜಿನ (ತೊಱೆದು ಪರೀಷಹತತಿಯಂ ಪಱಿವಱಿಯಾದ ಒಡಲಂ ಆತ್ಮನಿರಪೇಕ್ಷತೆಯಿಂ ನಿಱಿಸಿ ದುರಿತಾರಿಯೊಡಮಡಿದೆಱೆವಿಡಿದು ಅಘಹರಂ ಅಚ್ಯುತೇಂದ್ರನೆನಾದಂ: **ಶಾಂತಿಪು,** ೭. ೮೪)

**ದುರಿತಾಸಹಿಷ್ಣು** – [ದುರಿತ+ಅಸಹಿಷ್ಣು] ಪಾಪವನ್ನು ಸಹಿಸದವನು (ದುರಿತಾಸಹಿಷ್ಣು ಸುತಪಶ್ಚರಿಷ್ಣು .. .. ಗುಣಗಣಾಲಂಕಾರಿಷ್ಣುವೆನೆ ನೆಗೞ್ದಂ ಉದಯಚಂದ್ರ ಮುನೀಂದ್ರಂ: **ಚಂದ್ರಪ್ರಪು,** ೧. ೨೮)

**ದುರೀಂದ್ರಿಯಸುಖ** – ಕ್ಷುಲ್ಲಕವಾದ ಇಂದ್ರಿಯಸುಖ (ದುರೀಂದ್ರಿಯಸುಖಕ್ಕೆ ಕೊಕ್ಕರಿಕೆ ಪುಟ್ಟೆ ನಿರ್ವೇಗದಿಂ ನಿರೀಂದ್ರಿಯಸುಖಕ್ಕೆ ನಾಡೆ ಮನವಿಟ್ಟು ಸರ್ವಸ್ವಮಂ ಜರತ್ ತೃಣಸಮಾನವಾಗೆ ಬಗೆದು: **ಸುಕುಮಾಚ,** ೧೦. ೩೧)

**ದುರುಕ್ತಿ** – ಕೆಟ್ಟ ಮಾತು, ತಿರಸ್ಕಾರದ ನುಡಿ (ಅಂತು ದುರಾತ್ಮನ ದುರುಕ್ತಿಗೆ ಜನಕಸುತೆ ಕಡುಮುಳಿದು: **ಪಂಪರಾ,** ೯. ೧೮೦ ವ)

**ದುರೋದರ** – ಜೂಜು (ಚಂದ್ರಾಪೀಡಂ ವಿನೋದಾರ್ಥಂ ಕಾದಂಬರಿಯ ಬೆಸದಿಂ .. .. ದುರೋದರ ಕ್ರೀಡಾರಾಗಿಣಿಯರುಂ .. .. ಕನ್ನಿಕೆಯರೊಡನೆ: **ಕಾದಂಬ,** ೬. ೯೨ ವ); ಜೂಜಿನ ಪಣದ್ರವ್ಯ (ಆ ದುರೋದರವ್ಯತಿಕರದೊಳ್ ಪರಾಭವಿಸಿ ಕೃಷ್ಣೆಯಂ ಉಯ್ದ ಅಪರಾಧಿ ಎಲ್ಲಿದಂ ಕೃತಕ ಸಭಾ ಪ್ರವೇಶಕರಂ ಎಲ್ಲಿದನೆಲ್ಲಿದನೋ ಸುಯೋಧನಂ: **ಗದಾಯು,** ೬. ೩೦)

**ದುರೋದರಕ್ರೀಡೆ** – ಪಗಡೆಯ ಆಟ (ದುರೋದರಕ್ರೀಡಾ ರಾಗಿಣಿಯರುಂ ಚಿತ್ರಕರ್ಮಚತುರೆಯರುಂ .. .. ಎನಿಸಿದ ಕನ್ನಿಕೆಯರೊಡನೆ .. .. ಬಿಜಯಂಗೆಯ್ದಂ: **ಕಾದಂಸಂ,** ೫. ೩೧ ವ)

**ದುರ್ಗ** – ಸೇರಲು ಅಸಾಧ್ಯವಾದ; ಕೋಟೆ ಆಪತ್ತಿಗಾಶ್ರಯಮಾಗಿ ಜಲದುರ್ಗ, ಗಿರಿದುರ್ಗ, ಸ್ಥಳದುರ್ಗ, ವನದುರ್ಗ ಮೆಂದಿಂತು ದುರ್ಗಂಗಳ್ ನಾಲ್ಕು ತೆಱನಕ್ಕುಂ: **ಪಂಚತಂತ್ರ,** ೨೯೭, ಶ್ಲೋಕ ೧೫೩ ಟೀಕೆ; ಏಳು ರಾಜ್ಯಾಂಗಗಳಲ್ಲಿ ಒಂದು; ಜಲದುರ್ಗ, ಗಿರಿದುರ್ಗ, ಸ್ಥಲದುರ್ಗ, ವನದುರ್ಗಗಳಲ್ಲಿ ಕ್ರಮವಾಗಿ ಎರಡೆರಡು ಬಗೆ: ಉಭಯ ನದೀಸಂಗಮುಮಪ್ಪ ಮಧ್ಯಪ್ರದೇಶಂ ಅಂತರ್ದ್ವೀಪಂ ಎಂಬುದಕ್ಕುಂ; ಅಗಾಧಮಪ್ಪ ಬೃಹತ್ತಟಾಕಂಗಳಿಂ ಕರ್ಕಶಖರದಂಡಸಲಿಲವಿತಾನವಿರಾಜಿತ ಸರೋವರ ಪರಿವೃತಮಪ್ಪ ಭೂಪ್ರದೇಶಂ ಮಹಾಸ್ಥಳಮೆಂಬುದಕ್ಕುಂ ಈ ಯೆರಡುಂ ಜಲದುರ್ಗಭೇದಂಗಳ್. ಗರುಡಂಗಂ ಅಡರಲ್ಬಾರದ ಸಮುತ್ತುಂಗಶಿಖರಂಗಳ್ ನಾಲ್ಕುಂ ದೆಸೆಯೊಳುಮಾಗಿ ಬಾಗಿಲೊಂದೆಯಾಗಿರ್ಪುದು ಗುಹ್ಯಾಖ್ಯಮೆಂಬುದಕ್ಕುಂ; ಆವ ದೆಸೆಯೊಳುಂ ಬಟ್ಟೆಯಿಲ್ಲದೆ ಸಱೀವೀೞ್ದುಚ್ಚಮಪ್ಪ ಬೆಟ್ಟುಗಳ ನಡುವೆ ಕರಮಸಿದಪ್ಪ ಬಟ್ಟೆಯಾಗೇ ಜುವುದುಂ ಪ್ರಸ್ತರಮೆಂಬುದಕ್ಕುಂ; ಈಯೆರಡುಂ ಗಿರಿದುರ್ಗದ ಭೇದಂಗಳ್. ಮೊಱಗೆ ನೀರುಂ ಭೂರಿಭೂರುಹ ಸಂದೋಹಮುಂ ತೃಣ ಗುಲ್ಮ ಲತಾಸ್ತೋಮಮುಮಿಲ್ಲದೆ ಒಳಗೆ ತೃಣಕಾಷ್ಠ

ಜಲಸಂಪೂರ್ಣಮಪ್ಪುದು ಉದಕಸ್ತಂಭಮೆಂಬುದಕ್ಕುಂ; ಪೊಱಗೆ ಕರಮುಪ್ಪುಮಪೇಯಮುಮಲ್ಲ ಜಲಪರಿಪೂರ್ಣ ಜಲಾಶಯಮುಂ ದುರ್ದರ ಕರ್ದಮೋಪೇತ ಅತಿಶೀತಮಪ್ಪುದು ಕರ್ದಮೋದಕಮೆಂಬುದಕ್ಕುಂ; ಅನೇಕತರುನಿಕರಪರಿವೃತಮುಂ ತೃಣಪಟಣಪ್ರಾವೃತಮುಂ ಅಪ್ಪುದು ಸ್ತಂಭನಗಹನಮೆಂಬುದಕ್ಕುಂ; ಈಯೆರಡುಂ ವನದುರ್ಗದ ಭೇದಂಗಳ್. ಇಂತಷ್ಟವಿಧಮಪ್ಪ ದುರ್ಗಂಗಳೊಳಂ: **ಪಂಚತಂತ್ರ,** ೨೯೭ ವ)

**ದುರ್ಗತಿ –** ಕೆಟ್ಟ ಸ್ಥಿತಿ (ಪಾಪದಿಂದಿನಿತು ನಿಕೃಷ್ಟ ದುರ್ಗತಿಗಳೊಳ್ ಬಲವಂದುದಂ ಈಗಳಾಗಿಯುಂ ನೆನೆದು: **ಸುಕುಮಾಚ,** ೫. ೨೯)

**ದುರ್ಗಪಂಚಕ –** ಐದು ಬಗೆಯ ದುರ್ಗಗಳು: ಜಲದುರ್ಗ, ಗಿರಿದುರ್ಗ, ವನದುರ್ಗ, ಸ್ಥಳದುರ್ಗ, ಈರಿಣದುರ್ಗ (ಪೃಥ್ವೀಪಾಲ ಭೂಪಾಲಂ .. .. ಷಡ್ಬಲಬಲಿಷ್ಠನುಂ ದುರ್ಗಪಂಚಕಸಮಗ್ರನುಂ .. .. ಆಗಿರ್ಪಂ: **ಚಂದ್ರಪ್ರಭು,** ೯. ೧೧೭ ವ)

**ದುರ್ಗಮ –** ಹೋಗಲು ಅಸಾಧ್ಯವಾದ (ಆಗಳಾ ಪರ್ವತಮನೇಱೆ ದುರ್ಗ ದುರ್ಗಮಮಾರ್ಗಮಂ ನೋಟ್ಪೆನೆಂದು ಬಗೆದು: **ಚಂದ್ರಪ್ರಭು,** ೫. ೬೮ ವ)

**ದುರ್ಗಾಶ್ರಯವಿಗ್ರಹ –** ಕೋಟೆಯನ್ನು ಆಶ್ರಯಿಸಿ ಯುದ್ಧಮಾಡುವವನು, ಪಾರ್ವತಿಯನ್ನು ಆಶ್ರಯಿಸಿದ ದೇಹವುಳ್ಳವನು(ಅಧಿಗತಸ್ವಾಮಿ ಸಂಪತ್ಪ್ರಮೋದಿತನಾಗಿಯುಂ ದುರ್ಗಾಶ್ರಯವಿಗ್ರಹನಲ್ಲದ ವಿಭೂತಿಭೂಷಿತನುಂ: **ಪುಷ್ಪದಂಪು,** ೩. ೨೧ ವ)

**ದುರ್ಗಿ –** ದುರ್ಗಾದೇವಿ (ಭಗವತಿಯುಂ ದುರ್ಗಿಯುಂ ಚಂಡಿಯುಂ: **ಜಗನ್ನಾವಿ,** ೨. ೫೮)

**ದುರ್ಜನ –** ನೀಚ ವ್ಯಕ್ತಿ[ಗಳು] (ಗುಣಮಂ ಕಂಡೊಡೆ ದುರ್ಜನಂ ಬಗೆವನಲ್ಲಂ ದೋಷಮಂ ಕಂಡ ಸದ್ಗುಣಿವೊಲ್: **ಸೂಕ್ತಿಸುಧಾ,** ೧. ೬೩)

**ದುರ್ಜನತೆ –** ಕೆಟ್ಟತನ (ದುರ್ಜನತೆಯಿಂದೆ ಪಡೆದು ದುರ್ಜನನಂ ಕಮಲಗರ್ಭಂ: **ಸೂಕ್ತಿಸುಧಾ,** ೧. ೪೦)

**ದುರ್ಜಯ –** ಗೆಲ್ಲಲು ಅಸಾಧ್ಯನಾದ[ವನು] (ಧುರದೊಳ್ ದುರ್ಜಯಂ ಆರ್ಗಂ ಎನ್ನನುಜಂ: **ಪಂಪರಾ,** ೯. ೯೮)

**ದುರ್ಣಯ –** ಕೆಟ್ಟ ನಡತೆ (ತುಱುವಂ ಕಳಿಸುವ ಕೃಷ್ಣೆಯ ನಿಱೆಯಂ ಪಿಡಿದು ಉಚ್ಚುರ್ವೇಟ್ದು ಕೊಳನಂ ಪಿಂದುಂ ಪೆಱಗಾಗಿ ಪುಗುವ ದುರ್ಣಯಂ ಅಱೆಪದೆ ಕೌರವನ ರಾಜ್ಯದ ಆಯದಕುಂದಂ: **ಗದಾಯು,** ೬. ೧೦)

**ದುರ್ಣರ –** ದುರ್ನರ, ಕೆಟ್ಟ ವ್ಯಕ್ತಿ (ವರ್ಣತತಿಮಾತೃಜನಕರ .. .. ನುತಿಗೆಯ್ಯದ ದುರ್ಣರಕೃತಿಕರನೆ ಲಬ್ಧವರ್ಣವರಾಕಂ: **ರಾಜಶೇವಿ,** ೧. ೨೦)

**ದುರ್ದಮ –** ದಮನಮಾಡಲು ಕಷ್ಟಕರವಾದ (ನಿಜ್ಜೈಕಂ ದೋರ್ಬಳಂ ಶತ್ರುದುರ್ದಮಚಾತುರ್ಬಳನಾಶಮಂ ಪಡೆಯೆ: **ಚಂದ್ರಪ್ರಭು,** ೨. ೯)

**ದುರ್ದರ್ಶ –** ನೋಡಲು ಕಷ್ಟಕರವಾದ (ಜರಾದುರ್ಬಲ ಬಲೀವರ್ದ ದುರ್ದರ್ಶಮರಣಾಯಾಸ ಪರಿಣತಿಗಂ ವಿಸ್ಮಯಂಬಟ್ಟು: **ಚಂದ್ರಪ್ರಭು,** ೨. ೨೯ ವ)

**ದುರ್ದಿನ –** ಮೋಡ ಕವಿದು ಸೂರ್ಯ ಕಾಣಿಸದ ದಿನ (ದುರ್ದಿನಮಡಂಗೆ ಸುದಿನಂ ಪೊರ್ದಲ್ಕಕುಂ ಅಂಬರಾವನೀತಳಮೆಲ್ಲಂ: **ಉದ್ಭಟಕಾ,** ೧೦. ೪)

**ದುರ್ಧರ –** ಸಹಿಸಲು ಅಥವಾ ಎದುರಿಸಲು ಕಷ್ಟಕರವಾದ (ಕಾಟ್ಟುಱು ಮಸಗಿದಂತೆ ಮಸಗಿದ ದುರ್ಧರ ಧನುರ್ಧರಬಲಮುಮಂ ಶ್ವೇತ ಭೀಷ್ಮರ ಪೇೞ್ದ ಓಜೆಯೊಳೆರಡುಂ ಪಡೆಗಳ ಪಡೆವಳರ್ಕಳ್ ಕುರುಕ್ಷೇತ್ರದೊಳ್ ಚಿತ್ರಿಸಿದಂತೆ ಒಡ್ಡಿ ನಿಂದಾಗಳ್: **ಪಂಪಭಾ,** ೧೦. ೫೧ ವ)

**ದುರ್ನಯ –** ದುರ್ಣಯ (ನೆಱವಂ ತಾಳ್ದಿದಪಾಸ್ತ ದುರ್ನಯತಮೋಬಂಧಂ ಶ್ರುತಸ್ಕಂಧಮಾದಱೆವಿಂದಂ: **ಆದಿಪು,** ೧. ೩೯); ಅಪಶಕುನ (ಅಲರ್ವೋದ ಲತೆಗಂಡ ವಿರಹಿವೊಲಾದುದು ದುರ್ನಯದ ಕಾಣ್ಕೆಗೆನ್ನಯ ಚಿತ್ತಂ: **ಯಶೋಧಚ,** ೩. ೧೦)

**ದುರ್ನಿರೀಕ್ಷ್ಯ –** ನೋಡಲಸಾಧ್ಯವಾದ[ದುದು] (ಕಲ್ಪಾಂತ ದಿನಕರ ದುರ್ನಿರೀಕ್ಷ್ಯಂ ಉತ್ಪಾತ ಮಾರುತನಂತೆ ಸಕಲ ಭೂಭೃತ್ಕಂಪಕಾರಿಯುಂ .. .. ಭೈರವಾಕಾರನುಂ ಆಗಿ: **ಪಂಪಭಾ,** ೧೧. ೧೧೭ ವ)

**ದುರ್ಬಲಸ್ಯ ಬಲೋ ರಾಜ –** ರಾಜನು ದುರ್ಬಲರ ಬಲ (ಉರ್ವೀರಮಣ ದುರ್ಬಲಸ್ಯ ಬಲೋ ರಾಜಾ ಎನ್ನದೆ ಇವರ್ಗೆ ಮುಳಿವುದೆ ಮರುಳೇ: **ಯಶೋಧಚ,** ೪. ೪೭)

**ದುರ್ಭಗ –** [ಜೈನ] ಇತರರ ಮನಸ್ಸಿನಲ್ಲಿ ಅಸಹ್ಯವನ್ನು ಉಂಟುಮಾಡುವ ಸ್ಥಿತಿ, ಒಂದು ಬಗೆಯ ನಾಮಪ್ರಕೃತಿ (ಸ್ಥಿರಾಸ್ಥಿರ ಶುಭಾಶುಭ ಸುಸ್ವರ ದುಸ್ವರ ಸುಭಗ ದುರ್ಭಗ ಪ್ರತ್ಯೇಕಶರೀರ ಅಯಶಸ್ಕೀರ್ತಿರನಾದೇಯ ನಿರ್ಮಾಣ ಪರ್ಯಾಪ್ತನೀಚೈರ್ಗೋತ್ರಂಗಳೆಂಬ ದ್ವಿಸಪ್ತತಿಪ್ರಕೃತಿಗಳಂ: **ಆದಿಪು,** ೧೬. ೪೯ ವ)

**ದುರ್ಲಭಂ –** ಸುಲಭವಾಗಿ ಸಿಗದುದು (ಚೈರಂತನಕ್ರಮದಿಂದೆ ಆ ಮಣಲೆಲ್ಲಮಂ ಮಗುಳೆ ಪಾರಾವಾರದೊಳ್ ಪೊಯ್ದು ಮತ್ತಮದಂ ಸೋದಿಸಿ ಕಾಣ್ಬವೊಲ್ ನೃಗತಿ ನೋಡಲ್ ನಾಡೆಯುಂ ದುರ್ಲಭಂ: **ಸುಕುಮಾಚ,** ೫. ೩೩)

**ದುರ್ವಾಪಣ –** ಬಿಡಿಸಲಾಗದ ಗೋಜಲು (ಅಂಗಪ್ರಭಾಮಾಲೆ ದುರ್ವಾಪಣಮಂ ಕಾಳಿಂದಿಯೊಳ್ ಪುಟ್ಟಿಸಿ: **ನೇಮಿನಾಪು,** ೮. ೪೮)

**ದುರ್ವಾರ –** ದಾಟಲಾಗದ (ದುರ್ವಾರಸಂಸಾರ ವಿಚ್ಛೇದೋಪಾಯನಿಯುಕ್ತಸೂಕ್ತಿವೃಷ ಮಾರ್ಗಗ್ರೇಸರಂ: **ಆದಿಪು,** ೧. ೧); ಉಗ್ರ (ರಾಮಚಂದ್ರವ್ರತೀಂದ್ರನ ದುರ್ವಾರ ನಿಘೋರ ವೀರ ತಪಮೇನಂ ಪೇೞ್ದಪೆಂ: **ಅನಂತಪು,** ೧. ೨೩)

**ದುರ್ವಿದ –** ಅಜ್ಞಾನಿ, ಮೂರ್ಖ (ವಸ್ತುವಂ ಅವಸ್ತುವೆಂಬರ್ ಅವಸ್ತುವನಿದು ವಸ್ತುವೆಂಬ ದುರ್ವಿದರ್: **ಸಮಯಪ,** ೧೦. ೧೮೮)

**ದುರ್ವಿದಗ್ಧ –** ಪಾಂಡಿತ್ಯರಹಿತ, ತಿಳಿವಳಿಕೆಯಿಲ್ಲದ (ದುರ್ವಿದಗ್ಧವೆನ್ನ ಮನಂ ಮತ್ತೆಂತುಂ ನಂಬಿದುದಿಲ್ಲ: **ಕಾದಂಬ,** ೭. ೪೧)

**ದುರ್ವಿಮಂತ್ರ –** ದುಷ್ಟ ಪರ್ಯಾಲೋಚನೆ (ದುರ್ವಿಮಂತ್ರಮಂ ಪರೆಪ ಟಮಾಳಮಂ ಪಿರಿದಂ ಓದಿದೊಡೆ ಅಪ್ಪ ಪದಾರ್ಥಮಾವುದೋ: **ಪಂಪಭಾ,** ೧೩. ೬೬)

**ದುರ್ವಿಳಸನ** – ದುರ್ವಿಲಸಿತ (ನೀಗುವೆನಸದಾಗ್ರಹಮಂ ಬಿಸುಡುವುದೊರ್ಮೆಗೆ ಮಱೆವುದೆನ್ನ ದುರ್ವಿಳಸನಮಂ: **ಆದಿಪು,** ೧೪. ೧೩೧)

**ದುರ್ವೋಧ** – ಮಿಥ್ಯಾಜ್ಞಾನಿ (ಸರ್ವಮನಿಂಬಾಗಿ ನಿಯಮದಿಂದಂ ಪೇೞಲ್ ದುರ್ವೋಧರಳವೆ: **ಸಮಯಪ,** ೩. ೧೪)

**ದುರ್ವ್ಯವಸಾಯ** – ದುಷ್ಟಕಾರ್ಯ (ಇಂ ಮಾಣ ದುರ್ವ್ಯವಸಾಯೋದ್ಯೋಗಮಂ ಮರುಳ್ತನವಿದೇಂ ಬಾಯೆಂದು ಕೊಂಡುಯ್ದಳ್: **ಕರ್ಣನೇಮಿ,** ೧. ೭೭)

**ದುರ್ವ್ಯವಸೆ** – ಕೆಟ್ಟ ನಡವಳಿಕೆ (ದುರ್ವ್ಯವಸೆಯ ಕಾರಣಂ ಪರಿಭವಕ್ಕೆಡೆ .. .. ಎನಿಪ್ಪ ಜೂದಂ: **ಸಮಯಪ,** ೬. ೪೯)

**ದುಲ್ಲಟೆ** – ಬಿಕ್ಕೆ ಬೇಡುವ ತಟ್ಟೆ (ಕೆಲದೊಳಿರ್ದ ತಿರಿದುಂಬ ದುಲ್ಲಟೆಯಂ ಕೊಮಡು ಗಜಗಮನಮನಿಡುವಂತೆ ಭಯಮಿಲ್ಲದಿಡುವುದುಂ: **ಧರ್ಮಾಮೃ,** ೧೩. ೪೫ ವ)

**ದುಲ್ಲಹ** – [ದುರ್ಲಭ] ಪಡೆಯಲಸಾಧ್ಯವಾದ (ದುಲ್ಲಹಮಲ್ಲರೊಳ್ ಅಘಟಶೂರಚಾಣೂರವಿಕ್ರಮದಿಂ ಸಮಕರ್ತರಿಯಂ ಎನ್ನಯ್ಯಂ ಕೊಂಡನೆಂದು ಪಡಿಗೆಯಿಡಿಸಲು: **ನೇಮಿನಾಪು,** ೮. ೧೦೬ ವ)

**ದುಶ್ಚರ** – ನಡೆಯಲು [ಆಚರಿಸಲು] ಕಷ್ಟಕರವಾದ (ದುಶ್ಚರತಪಶ್ಚರಣಪರಿಣತನಿಹಿತವಿಹಾರನಾಗಿ: **ಶಾಂತಿಪು,** ೯. ೨೯ ವ)

**ದುಶ್ಚರಿತ** – ಕೆಟ್ಟ ನಡವಳಿಕೆಯುಳ್ಳ[ವನು] (ವಿವಿಧೋಪಸರ್ಗಮಂ ಪಡೆಯದೆ ಮುಳೀಸು ಪಡೆವ ಮುಳಿವ ದುಶ್ಚರಿತಂಗಳ್: **ಪಂಪರಾ,** ೪. ೯)

**ದುಶ್ಚ್ಯವನ** – ಇಂದ್ರ (ದುಶ್ಚ್ಯವನನ ಹಯದಿಂ ವೇಗಮಂ ತಾಳ್ದಿ ನೀಲಾಕರ ಬೆಟ್ಟದಿಂದ ಏಟ್ತಂದಳ್: **ಕಾದಂಬ,** ೩. ೮೧)

**ದುಶ್ರಾವ** – ಕೇಳಲು ಕಷ್ಟಕರವಾದ (ಶರಭಗ್ರಸ್ಥೋತ್ಥ ಕಂಠೀರೌಕಟುರಟನೋತ್ಥ ಪ್ರತಿಧ್ವಾನವದ್ಗಹ್ವರ ದುಶ್ರಾವಶ್ರವಂ: **ಚಂದ್ರಪ್ರಪು,** ೫. ೬೬)

**ದುಶ್ರುತಿ** – ಕೆಟ್ಟ ಮಾತು, ಅಪಕೀರ್ತಿ (ಕೃತಮಱೆಯದನೆಂಬೀ ದುಶ್ರುತಿ ಪರೆಗುಂ: **ಪಂಪರಾ,** ೧೦. ೪೭)

**ದುಷ್ಟಚತುಷ್ಟಯ** – ಮಹಾಭಾರತದಲ್ಲಿನ ನಾಲ್ವರು ಕೆಡುಕರು; ದುರ್ಯೋಧನ, ದುಶ್ಶಾಸನ, ಕರ್ಣ, ಶಕುನಿ (ದುಶ್ಶಾಸನ ಕರ್ಣ ಶಕುನಿ ಸೈಂಧವರೆಂ ದುಷ್ಟಚತುಷ್ಟಯದೊಳ್ ಮಂತಣಮಿರ್ದು: **ಪಂಪಭಾ,** ೬. ೬೭ ವ)

**ದುಷ್ಷಮಕಾಲ** – [ಜೈನ] ಕೆಟ್ಟ ಕಾಲ (ಎಸೆಯದು ದುಷ್ಷಮಕಾಲದೊಳ್ ಅಸದೃಶ ಕೈವಲ್ಯಬೋಧದಿನಕರಬಿಂಬಂ: **ಆದಿಪು,** ೧೫. ೩೦)

**ದುಷ್ಷಮಸುಷಮ** – [ಜೈನ] ಅವಸರ್ಪಿಣಿಕಾಲದ ಒಂದು ಭಾಗ (ಸುಷಮದುಷ್ಷಮಕಾಲಂ ಚರಿಯಿಸುಗುಂ ನಾಲ್ಕನೆಯದು ಪರಿವಿಡಿಯಿಂದಪ್ಪುದಲ್ತೆ ದುಷ್ಷಮಸುಷಮಂ: **ಪಂಪರಾ,** ೧. ೫೬)

**ದುಸರ** – ಎರಡೆಳೆ ಹಾರ (ಮಕುಟಂ ಕೆಯೂರಂ ಕರ್ಣಕುಂಡಲಂ ಕೊಪ್ಪು ಸರಿಗೆ ದುಸರಂ ಮಣಿಮುದ್ರಿಕೆ ತಿಸರಮೆಂಬ ಭೂಷಾನಿಕರಮಂ: **ಆದಿಪು,** ೫. ೩೩)

**ದುಸ್ತಮ** – ಕಗ್ಗತ್ತಲೆ (ಚಕ್ರಸಹಾಯನಾಕ್ರಮಿಸಿದಂ ಭೂಚಕ್ರಮಂ ಪಾದದಿಂ ದೆಸೆಗಾಗಳ್ ಬಲಿ ದುಸ್ತಮಂ ತಳರ್ವಿನಂ: **ಪುಷ್ಪದಂಪು.** ೮. ೨೩)

**ದುಸ್ತರ** – ದಾಟಲಾಗದ (ಈ ದುಸ್ತರ ಸಂಸಾರಾಬ್ಧಿಯಿಂದಂ ಪೊಱಮಡಿಸುಗೆ ಸದ್ಧರ್ಮರಾಚಾರ್ಯರೆಂದುಂ: **ಸುಕುಮಾಚ,** ೧. ೩)

**ದುಸ್ತರಾವಸ್ಥೆ** – ಕಷ್ಟ ಸ್ಥಿತಿ (ಇಂತಪ್ಪ ದುಸ್ತರಾವಸ್ಥೆಯೊಳ್ ಕಾದುವುದು ಕಜ್ಜಮಲ್ಲ: **ಪಂಚತಂತ್ರ,** ೨೮೦ ವ)

**ದುಸ್ವರ** – [ಜೈನ] ದುಷ್ಟಸ್ವರಕ್ಕೆ ಕಾರಣವಾದ [ಎಪ್ಪತ್ತೆರಡು ಬಗೆಯ] ನಾಮಕರ್ಮಪ್ರಕೃತಿಗಳಲ್ಲಿ ಒಂದು (ಸುಸ್ವರ ದುಸ್ವರ ಸುಭಗ ದುರ್ಭಗ .. .. ನೀಚೈರ್ಗೋತ್ರಂಗಳೆಂಬ ದ್ವಿಸಪ್ತತಿ ಪ್ರಕೃತಿಗಳಂ ನಿರವಶೇಷಂ ಕಿಡಿಸಿ: **ಆದಿಪು,** ೧೬. ೪೪ ವ)

**ದುಸ್ಸ್ವರ** – ಕೆಟ್ಟ ಧ್ವನಿ (ಆಲದ ಮರದ ಮೇಲೆ ಕಾಗೆ ಬಂದು ಪಾಯ್ದುಂ ದುಸ್ಸ್ವರದಿಂ ಕರೆವುದುಂ: **ಪಂಚತಂತ್ರ,** ೩೧೯ ವ)

**ದುಹಿತೃ** – ಮಗಳು (ಶ್ರೀನೀಹಾರಚಳಾಧೀಶ್ವರ ದುಹಿತೃಮುಖಾಂಭೋಜಸೂರ್ಯಂ: **ಉದ್ಭಟಕಾ,** ೧. ೧)

**ದುಱುದುಂಬಿ** – ದುಷ್ಟ (ಕೆಲಬರ್ ದುಱುದುಂಬಿ ಮುಂಡೆಯರ್ .. .. ಗಂಡರನೇ ಕುಱೆ ಮಾಡಿ ತಿಂದಪರ್: **ಸಮಯಪ,** ೯. ೧೧೨)

**ದುಱುದುಂಬಿತನ** – ಕಿಡಿಗೇಡಿತನ (ಝೇಂಕರಿಸುತ್ತ ದುಱುದುಂಬಿತನದಿಂ ಬಂದ ಮಱಿದುಂಬಿಗೆ: **ರಾಜಶೇವಿ,** ೧೨. ೩೯ ವ)

**ದೂಂಟಿಂದೆ ದೂಂಟಿಂಗೆ** – ಹೆಜ್ಜೆ ಹೆಜ್ಜೆಗೂ (ಎಡೆಯೊಳ್ ದೂಂಟಿಂದೆ ದೂಂಟಿಂಗೆ ಪೆರ್ವಱೆಯಂ ಪೊಯ್ಸಿ ಕೆಲಕ್ಕೆ ನಾಣ್ಚಿ ತಲೆಗುತ್ತಿರ್ಪ ಆಕೆಯೇಂ ಜೋಡೆಯೇ: **ಪಂಪಭಾ** ಪರಿಷತ್ತು, ೪. ೮೨)

**ದೂಂಟು** – ಹಾರು (ಕಂಪನಲಂಪಿನೊಳೀಂಟಿ ದೂಂಟುವಾಡುವ ಮಱಿದುಂಬಿಮಾಲೆ: ಅನಂತಪು, ೭. ೯); ಹೆಜ್ಜೆ (ಎಡೆಯೊಳ್ ದೂಂಟಿಂದೆ ದೂಂಟಿಂಗೆ ಪೆರ್ವಱೆಯಂ ಪೊಯ್ಸಿ ಕೆಲಕ್ಕೆ ನಾಣ್ಚಿ ತಲೆಗುತ್ತಿರ್ಪ ಆಕೆಯೇಂ ಜೋಡೆಯೇ: **ಪಂಪಭಾ** ಪರಿಷತ್ತು, ೪. ೮೨); ಒಂದು ಕಾಲಿನಿಂದ ನಡೆ, ಕುಂಟು (ದೂಂಟು–ಏಕಪಾದಗತೌ: **ಶಬ್ದಮದ, ಧಾ** ೨೫೦)

**ದೂತ** – ರಾಜಲೇಖಗಳನ್ನು ಹೊತ್ತೊಯ್ಯುವವನು, ನಿಯೋಗಿ, ರಾಜಪ್ರತಿನಿಧಿ (ಲೇಖವಾಹಂ ದೂತಂ: **ಅಭಿಧಾವ,** ೧. ೧೧. ೫೮)

**ದೂದ** – [ದೂತ] ಸಂದೇಶವಾಹಕ (ಇನಿಯನಟ್ಟಿದ ದೂದರ ಸೀಯನಪ್ಪ ಮಾತಿನ ರಸದೊಳ್ ಕೊನರ್ವುದು ತಳಿರ್ವುದು .. .. ನಲ್ಮೆಯೆಂಬ ನಂದನವನಂ ಓಪರೊಳ್: **ಪಂಪಭಾ,** ೪. ೧೦೨)

**ದೂದಟ್ಟು** – [ದೂದು+ಅಟ್ಟು] ಸಂದೇಶ ಕಳಿಸು (ಆವೆಮ್ಮ ಗರುಡನನೇಱೆಕೊಂಡು ಏಕಾಂಗದಿಂ ಬಂದಪೆವೆಂದು ಆ ನಾರದನನೆ ದಿವಿಜರಾಜಂಗೆ ದೂದಟ್ಟಿ: **ಜಗನ್ನಾವಿ,** ೧೩. ೩೨ ವ)

**ದೂದವಿ** – ದೂತಿಕೆ (ಕಡೆಗಣ್ ಕೂಂಟಣಿವಾತು ದೂದವಿ ಮನಂ ತಾಯ್ತಂದೆ ಬಲ್ಗೆಯ್ತಂ: **ಲೀಲಾವತಿ,** ೨. ೯೬) ಕುಂಟಣಿ (ಪಾರದೆ ಬರ್ಪ ದೂದವಿಯರಂ ತವಕದಿಂ ತಲೆಮಿಕ್ಕು ನೀವಿಯಂ ಚಾರು ಕಳಾಪದೊಳ್ ನಿಲಿಸುತುಂ .. .. ಜಾರೆಯರೆಯ್ದುತಿರ್ದರ್: **ಶಾಂತೀಶ್ವಪು,** ೧೧. ೨೪)

**ದೂನಿಸು** – ದುಃಖಿಪಡು (ಚಿತ್ರದೊಳಾದೊಡಂ ಪುತ್ರವತಿಯೆಂಬ ಬರಪಕ್ಕೆ ಬಾರೆನೆಂದು ತನ್ನೊಳ್ ತಾನೆ ದೂನಿಸುತ್ತಂ: **ಧರ್ಮಮಧು,** ೩. ೧೧೭ ವ)

**ದೂರದರ್ಶಿತ್ವ** – ಮುಂದಾಲೋಚನೆ (ಮಂತ್ರನಿಶ್ಚಯಮುಮಂ ದೂರದರ್ಶಿತ್ವಮುಮಂ ಪ್ರತಿಭಾಗುಣಮುಮಂ .. .. ಮೆಚ್ಚಿ: **ಶಾಂತಿಪು,** ೨. ೭೦ ವ)

**ದೂರಫಲ** – ಬಹಳ ಕಾಲದ ಮೇಲೆ ಸಿಕ್ಕುವ ಫಲ (ಇವು ದೂರಫಲಂಗಳ್ ಸ್ವಪ್ನವಿಶೇಷಂಗಳ್: **ಆದಿಪು,** ೧೫. ೪೪)

**ದೂರಭವ್ಯ** – [ಜೈನ] ಸಮ್ಯಕ್ತ್ವಕ್ಕೆ ಇನ್ನೂ ದೂರವಿರುವವನು (ವಾಯುಭೂತಿಚರನಪ್ಪಾ ಜೀವಂ ಈಗಳ್ ಅಭವ್ಯನೋ ಭವ್ಯನೋ ಮತ್ತಂ ದೂರಭವ್ಯನೋ ಬೆಸಸಿಮಿದಂ: **ಸುಕುಮಾಚ,** ೫. ೨೨)

**ದೂರಿಸು** – ಚಿಂತಿಸು (ಕಱುವಂ ದೂರಿಸಿ ಮೆಲ್ಕನೊಕ್ಕು ತುಱುವಂ ತಾಯ್ಗಾಡಿನೊಳ್ ಬಿಟ್ಟು ಮುಂದುಱುವಾಯ್ತರ್ಪ ಎಳದಿಂಗಳ್: **ಲೀಲಾವತಿ,** ೫. ೮೨)

**ದೂರು** – ಚಾಡಿ ಹೇಳು (ಜಾಣ್ಮೆಯೊಳವಂ ಮಱಸುತ್ತಿರೆ ದೂರಿದತ್ತು ಕಂಪನಕೃತಕಂಕಣಸ್ವನಮುಂ ಆಸ್ಯವಿಕಾಸಮುಂ ಆತ್ಮರಾಗಮುಂ: **ರಾಜಶೇವಿ,** ೮. ೭೪)

**ದುರೋತ್ಸಾರಿತಂ ಮಾಡು** – ದೂರದಲ್ಲಿ ನಿಲ್ಲಿಸಿ (ಶಿಬಿಕೆಯನಿರಿಸಿ ಸುರಾಸುರಸಭೆಯಂ ದೂರೋತ್ಸಾರಿತಂ ಮಾಡಿ: **ಆದಿಪು,** ೯. ೭೬ ವ)

**ದೂರ್ತವಡೆ** – ವಂಚಕರ ಸಮೂಹ (ದೂರ್ತವಡೆಗಂ ಅತಿಚಪಳರ್ಗಂಪುಸಿವರ್ಗಂ ಸಿತಗರ್ಗಂ ವಸುಧೇಶ್ವರ ಕೇಳ ಕುಡುವನುರ್ಕಿ ಕುಮಾರಂ: **ಧರ್ಮಾಮೃ,** ೪೨)

**ದೂರ್ತು** – ವಂಚಕತನ (ಉಣ್ಬರ ಬಾಯೊಳ್ ತಿಣ್ಣನೆ ಕಿರ್ಚಂ ಪುಡಿಯಂ ಮಣ್ಣಂ ಪೊಯ್ದು ಇಂತುಮಾಡಿದ್ದೈ ದೂರ್ತಿಂದಂ:: **ಧರ್ಮಾಮೃ,** ೯. ೯೩)

**ದೂರ್ವಾ** – ಗರಿಕೆ (ಮಳಿಮಸ ವರ್ಣಂ ಪರಿತಂದುದೊಂದು ನವದೂರ್ವಾಕರ್ದಭಂ ಗರ್ದಭಂ: **ನೇಮಿನಾಪು,** ೭. ೯೦)

**ದೂರ್ವಾಂಕುರ** – ಗರಿಕೆಯ ಚಿಗುರು (ಕಾಳಿಂದೀನದೀಕಚ್ಛದೊಳ್ ಆತ್ಮೇಚ್ಛೆಯಿಂ ನಲಿನಲಿದು ರುಚಿರಮರಕತಶ್ಯಾಮ ದೂರ್ವಾಂಕುರಗ್ರಾಸದೊಳಂ ಅತಿಸ್ವಚ್ಛಸ್ವಾದು ಸಲಿಲಪಾನದೊಳಂ .. .. ಮೆಲ್ಕಾಡಿ ಪಥಪರಿಶ್ರಮಮಂ ಆಱಿಸಿಕೊಂಡು: **ಪಂಚತಂತ್ರ,** ೭೭ ವ)

**ದೂವಾಪ್ರವಾಳ** – ದೂರ್ವಾಂಕುರ (ಅಪೂರ್ವ ದೂರ್ವಾಪ್ರವಾಳಾಳಂಕೃತ ಕರ್ಣಪೂರನುಂ: **ಆದಿಪು,** ೧೧. ೧೦ ವ)

**ದೂರ್ವೆ** – ಗರಿಕೆ (ಆಸ್ಯಮಂಡಳಂ ವಿಳಸಿತ ದರ್ಪನಂ ಗುರುಕುಚಂ ಕಳಸಂ ನಿಡುಮುರ್ಬು ದೂರ್ವೆ ಕಣ್ ಮಲರ್: **ತ್ರಿಷಷ್ಟಿಪು,** ೨. ೧೩೩)

**ದೂವಟ** – ರೇಷ್ಮೆ ಬಟ್ಟೆ (ತಂಬುಲವನಲ್ಲದೆ ಮೆಲ್ಲದ ನಲ್ಲಳ ಅಂಗಗಂಧಂ ಬಗೆಗೊಂಡ ದೂವಟಮನಲ್ಲದೆ .. .. ಯಕ್ಷಕರ್ದಮವನಲ್ಲದೆ ಪೂಸದ ಕಾಂತನೊಪ್ಪಿದಂ: **ರಾಜಶೇವಿ,** ೧೧. ೧೩೦)

**ದೂವಟ್ಟಿಗೆ** – (ದ್ವಿಪಟ್ಟಿಕಾ) ಎರಡು ಪದರದ ಬಟ್ಟೆ (ಪದದಾದಿಯ ದೀರ್ಘಕ್ಕೆ: ದ್ವಿಪಟ್ಟಿಕೆ–ದೂವಟ್ಟಿಗೆ, ದ್ವಿಹಸ್ತಿ–ದೂತ್ತಿ: **ಶಬ್ದಮದ,** ೨೮೧ ಪ್ರ)

**ದೂವೆ** – [ಧೂಮ] ಹೊಗೆ (ಬಟ್ಟೆಯ ದೂಳಿದೂವೆ ಮೊದಲಾದುದು: **ಕಾದಂಸಂ,** ೧. ೬೪); ಚಿತೆ (ತ್ವರಿತದೆ ಪುಟ್ಟಿ ಬಿರ್ರೆನುತಮಾ ಕ್ಷಣದಿಂ ಮೊಗವೆತ್ತಿ ದೂವೆಯಂತಿರೆ ಕಡುಗಾಯ್ದ ಭುರಜಂ: **ಕುಸುಮಾಕಾ,** ೮. ೧೨೧); ಆವಗೆ (ದೂವೆಯೊಳ್ ಪೊಕ್ಕ ಪಾವಿನಂತೆ ಬೆದಬೆದ ಬೆಂದು: **ಲೀಲಾವತಿ,** ೧೦. ೭೧ ವ)

**ದೂವೆದೊಟ್ಟು** – ಕೀಳು ದಾಸಿ (ಸಿರಿವೆಣ್ಣಂ ದೂವೆದೊಟ್ಟಿಂಗೆಣೆಯೆನೆ ಬಗೆದಂ: **ಚಂದ್ರಪ್ರಪು,** ೧೦. ೧೨೮)

**ದೂಷಣಿಕ** – ನಿಂದಕ (ದೋಷರಾ ಕಥೆಯಲ್ಲ ದೂಷಣಿಕರ ಕಥೆಯಲ್ಲ ಭಾಸುರೋಜ್ವಲ ಜಗದದೀಶನ ಕೃತಿಯು: **ಆದಿಪು,** ೨. ೫)

**ದೂಷ್ಯ** – ಕೀಳಾದ; ಡೇರೆ (ಕ್ರೋಶದ್ವಿತಯ ಮಾತ್ರದೊಳ್ ಪ್ರಸಿದ್ಧಮಾಗಿಯುಂ ದೂಷ್ಯಮುಂ .. .. ಪ್ರಸ್ಥಾನಶಿಬಿರಮಂ ಪೊಕ್ಕು: **ಚಂದ್ರಪ್ರಪು,** ೧೦. ೧೭ ವ)

**ದೂಸಕ** – [ದೂಷಕ] ನಿಂದಕ (ದೂಸಕರ ದೂಱುಗೇಳ್ದುಂ ಸಾಸಿಗಂ .. .. ಸಮುದ್ರವಿಜಯಂ ಅಜೇಯಂ: **ನೇಮಿನಾಪು,** ೫. ೧೩)

**ದೂಸರ** – ಬೂದುಬಣ್ಣ (ತುಂಬಿಗಳ್ ಅಚ್ಚವೂಗಳ ದೂಸರಮಾದ ಚೊಲ್ಲೆಯದ ಕಂಪಿನೊಳ್ ಓಕುಳಿಯಾಡೆ ಸಿಂಗರಂ ದೇಸೆಯೊಳೊಂದಿ ತೋಱೆ ತಳರ್ದಂ ನನೆಯಂಬನದೊಂದು ಚೆಲ್ವಿನಿಂ: **ಕಬ್ಬಿಗಕಾ,** ೭೨)

**ದೂಸಱ್** – ಕಾರಣ, ನಿಮಿತ್ತ (ರತ್ನಾಳಿಗಳಂ ಕಂಡ ದೂಸಱಿಂದಂ ಧರಣೀಪಾಳಕಮುನಿಪರ್ ಪಂಚಮಕಾಳದೊಳ್ ಅಣಮಾಗರಲ್ತೆ ಋದ್ಧಿಪ್ರಾಪ್ತರ್: **ಆದಿಪು,** ೧೫. ೪೧)

**ದೂಸಿಗ** – ಬಟ್ಟೆಯ ವ್ಯಾಪಾರಿ (ಆರುಂ ಅಱಿಯದಂತಿರ್ದು ಬಚ್ಚರ ದೂಸಿಗರ ನಿಯೋಗಿಗಳ ಅಗ್ಗಲೆಯಿರಪ್ಪ ಸೂಳೆಯರ ಸಾಮಂತರ ಕಸವರಂಗಳೆಲ್ಲಮಂ ಕಳ್ದು: **ವಡ್ಡಾರಾ,** ಪು ೧೨೩, ಸಾ ೪)

**ದೂಸಿಗವಸರ** – [ದೂಸಿಗ+ಪಸರ] ಬಟ್ಟೆಯಂಗಡಿ (ನೆಯ್ಗೆ ನೂಲಿಂ ರಂಗಿಂ ದೊರೆಕೊಳ್ಳದೆನಿಪ ದಿವ್ಯಾಂಬರಂಗಳಿಂದ ಎಸೆವುದಲ್ಲಿ ದೂಸಿಗವಸರಂ: **ಜಗನ್ನಾವಿ,** ೯. ೧೧೧)

**ದೂಳಿಗೋಂಟೆ** – ಕೋಟೆಯನ್ನು ಹುಡಿಗುಟ್ಟುವುದು (ಕಾದಲೆಂದು ನಿಂದದಂ ಅರವಿಂದ ಮಹಾರಾಜಂ ಕಂಡು ದೂಳಿಗೋಂಟೆಯಂ ಕೊಂಡಲ್ಲದೆ ನಿಲ್ಲೆನೆಂದು: **ಪಾರ್ಶ್ವನಾಪು,** ೩. ೧೩೧ ವ)

**ದೂಳಿಸೆಜ್ಜರ** – ದೂಳಾಟ (ಆ ಸಮಯದೊಳ್ ದೂಳಿಸೆಜ್ಜರಕ್ಕುಱ್ಜುಗಿಸಿ ಕಾಡಾನೆಗಳ ಮೋಡಮೊನೆಯಿನೀಡಾಡಿದ ಗಿರಿಯ ದರಿಯ ಗೈರಿಕಪರಾಗಮಂ ಸಂಧ್ಯಾರಾಮಿಷದಿನಾಗಸಕ್ಕೆ ಪಸರಿಸಿಯುಂ: **ಚಂದ್ರಪ್ರಪು,** ೮. ೪ ವ)

**ದೂಱಿಸು** – ಚಿಂತಿಸು (ಆಕೆಯ ದೂಱಿಸಿ ಸುಯ್ದು ಸುಯ್ಯೊಳುಚ್ಚಳಿಸಿದುದಾ ಸರೋಜದಳನೇತ್ರೆಯ ನಲ್ಮೆಯೊಳಟ್ಟಿ ಕಣ್ಣ ನೀರ್: **ಆದಿಪು,** ೧೨. ೩೪)

**ದೂಱು** – ತೆಗಳು (ಪೆಱರವಗುಣಮಂ ಕಂಡೊಡೆಯಱೀಯಟ್ಟಿ ತಗುಳ್ದು ದೂಱವೇಡ: **ಧರ್ಮಾಮೃ,** ೫. ೬೭); ಚಾಡಿ ಹೇಳು (ದೂಱು–ಪೈಶುನ್ಯೇ, **ಶಬ್ದಮದ,** ಧಾ ೮೭೫); ಅಪವಾದ

ಹೊರಿಸು (ನೆರೆಯಳ್ ತಾನೀಯಳೆಮ್ಮಂ ಸವತಿತನಕೆ ಶೀತಾಂಶುವಂ ರೋಹಿಣೀಸೌಂದರಿಯೆಂದೆಟ್ಟಿಂದು ದೂಱಲ್ಕೆಱಗಿಮಳತಾರಾಳಿಯೋ: **ಕುಸುಮಾಕಾ,** ೧೩. ೭೬); ಮೊರೆಹೋಗು (ಕೂರ್ಪವರಿಂ ಪೇೞ್ವುದು ಬುದ್ಧಿಯನೆಂದು ದೂಱುತಿರ್ಪರ್ ಪೆಂಡಿರ್: **ಸಮಯಪ,** ೫. ೯೭); ತೆಗಳಿಕೆ (ದೂಱೆದು ತಮ್ಮಯ ಚಿತ್ತಕ್ಕೆಱೆದ ದಿವಸದೊಳೆ ಪೊಲ್ಲಕೆಯ್ದೆಂ: **ನೇಮಿನಾಪು:** ೫. ४४); ಅಪವಾದ (ಗಾಱ[ರ]ಣಮೆಂದು ದೂಱು: **ಶಬ್ದಮದ,** ಪ್ರಸಾ ೭೭);

**ದೃಕ್ಕುವಲಯ** – ದೃಷ್ಟಿಯೆಂಬ ನೈದಿಲೆ (ಕಾಮಮೋಹೋನ್ಮಾದ ಜ್ಞಾನಾಂಗನಾ ದೃಕ್ಕುವಲಯಮುಕುಳಾರಂಭಿ ಸಂಭುಕ್ತ ಕಾಂತಾಸ್ವೇದಾಸ್ವಾದಪ್ರಗಲ್ಭಂ: **ಲೀಲಾವತಿ,** ೨. ೧೩೬)

**ದೃಕ್ಸೌಮ್ಯ** – ಕಣ್ಣಿಗೆ ಹಿತಕರವಾದ ಸ್ರಕ್ಚುಭಗ ಉರಸ್ಸ್ಥಳನಂ ದೃಕ್ಸೌಮ್ಯಶರೀರನಂ ಸರ್ವೇಣುಸ್ವನನಂ .. .. ಗೋಪಬಂಧುಗೆತ್ತರ್ ಖಳನಂ: **ಜಗನ್ನಾಪಿ,** ४. ೫೦)

**ದೃಗ್ದಾಮ** – ದೃಷ್ಟಿಯೆಂಬ ಹಗ್ಗ (ಸತಿಯ ಸಿತಸ್ನಿಗ್ಧ ದೃಗ್ದಾಮದಿಂ ಪೊಯ್ವಡೆದೆನ್ನೀ ಚಿತ್ತಮಿನನುಂ ಬೆದಱಿದಪುದು: **ಲೀಲಾವತಿ,** ೩. ೬೮)

**ದೃಢೀಕೃತ** – ಭದ್ರಪಡಿಸಿದ (ದೃಢೀಕೃತ ತಳವರ್ಗನುಂ ಸಮೀಕೃತಸಾಮಂತವರ್ಗನುಮಾಗಿ: **ಚಂದ್ರಪ್ರಪು,** ४. ೨೮ ವ)

**ದೃಪ್ತ** – ದರ್ಪದಿಂದ ಕೂಡಿದ (ದೃಪ್ತಮನಸಿಜನನಜನಿಪ ದೀಪ್ತ ಮಹಾಘೋರತಪ್ತತಪಮೆಸೆಯೆ: **ಪಾರ್ಶ್ವನಾಪು,** ೧೫. ४८)

**ದೃಪ್ಯದ್ಬಳ** – [ದೃಪ್ಯತ್+ಬಳ] ಬಲಿಷ್ಠ ಸೈನ್ಯ (ದಗ್ವೇತಂಡಮಂ ಡಿಂಡಿಮರುತಿ ಚಕಿತಂ ಮಾಡೆ ದೃಪ್ಯದ್ಬಳಂ ಮಾಮಸಕಂಗೊಂಡೆತ್ತಿ ಬಂದಂ: **ಚಂದ್ರಪ್ರಪು,** ೧೦. ೫೮)

**ದೃಶೆ** – ನೋಟ (ಮೃಗದೃಶೆಯರ್ಧಾಳಿಪ ಚೌರಿಗಳ್ ಉದ್ಭಟಭೂಮಿಪತಿಗೆ ಅದೇನೊಪ್ಪಿದುದೋ: **ಉದ್ಭಟಕಾ,** ೨. ೧೦)

**ದೃಶ್ಯಂ** – ನೋಡಬಹುದಾದುದು (ಇವಳುಂ ಈ ಜಳಮುಂ ದೃಶ್ಯಮಲ್ಲದೆ ಪರಿಸ್ಪೃಶ್ಯಮಲ್ಲ ಎಂದು ಅಲ್ಲಿಂ ತಳರ್ದು: **ಲೀಲಾವತಿ,** ೬. ४೩ ವ)

**ದೃಷದಾಸಾರ** – [ದೃಷತ್+ಆಸಾರ] ಕಲ್ಲಿನ ಮಳೆ (ಉರ್ಕುಳ್ಳ ಸಾಮಂತನಿಕಾಯಂ ಯಂತ್ರಮುಕ್ತ ಅನಳ ಶರ ದೃಷದಾಸಾರವಿಧ್ವಂಸಮಕ್ಕುಂ: **ಆದಿಪು,** ೧೩. ೫೮)

**ದೃಷ್ಟ** – ಕಾಣಿಸುವ, ಎದುರಿಗಿರುವ (ಜನಪತಿ ಬೞಿಯಂ ಸಂಭಿನ್ನನೆಂಬ ನೈಮಿತ್ತಿಕಂಗೆ ಬೞಿಯಟ್ಟೆ ಚಿರಂತನರಿರ್ ದೃಷ್ಟ ಪರಂಪರ ವಿನೂತ ವಿದ್ಯಾವಿಶೇಷವಿದರಿರ್ ಪೇೞಿಂ: **ಶಾಂತಿಪು,** ೫. ೨೦)

**ದೃಷ್ಟಾಂತ** – ನಿದರ್ಶನ, ಕುರುಹು (ಜಲಬುದ್ಬುದ ಚಲ ವಿದ್ಯುತ್ ವಿಲಸನ ಬಳರಿಪುಶರಾಸನಂಗಳ್ ನಿರುತಂ ಬಲ ವಿಭವ ರೂಪ ಯೌವನ ವಿಲಾಸವಿಲಯಕ್ಕಿವಲ್ತೆ ದೃಷ್ಟಾಂತಂಗಳ್: **ಅಜಿತಪು,** ೨. ೧೦೮)

**ದೃಷ್ಟಿಪಾತ** – ನೋಟ (ಸಚಿಯವಮುಖಮಂ ಅತಿಪ್ರಸನ್ನ ದೃಷ್ಟಿಪಾತದಿಂ ಅಭಿಮುಖಂ ಮಾಡಿ: **ಚಂದ್ರಪ್ರಪು,** ೯. ೧೧४ ವ)

**ದೃಷ್ಟಿಮೋಹ** – [ಜೈನ] ಸಮ್ಯಗ್ದರ್ಶನವನ್ನು ಹಾಳುಮಾಡುವ ಕರ್ಮ (ಘನ ಮಿಥ್ಯಾತ್ವ ದವಾನಳಪಿನದ್ಧಜೀವಕ್ಕೆ ದೃಷ್ಟಿಮೋಹನಪ್ರವಿನಾಶನಮಿಲ್ಲದಂದು ಪುಟ್ಟದು ಮನದೊಳ್ ಸ್ವರ್ಮೋಕ್ಷಸಾಧನಂ ಸಮ್ಯಕ್ತ್ವಂ: **ಆದಿಪು,** ೫. ೫೨)

**ದೃಷ್ಟಿಯುದ್ಧ** – ರೆಪ್ಪೆಯಿಕ್ಕದೆ ಪರಸ್ಪರರನ್ನು ನೋಡುವ ಯುದ್ಧ (ಸ್ಥಿರಬದ್ಧಮತ್ಸರರ್ ಭೀಕರಬದ್ಧಭ್ರುಕುಟಿಘಟಿತರ್ ಅದ್ಭುತರ್ ಅಟ್ಟಾಸುರರ್ ಅಧಿಕಕೋಪ ಪಾಟಲ ಪರುಷೇಕ್ಷಣರ್ ಎನಿಸಿ ದೃಷ್ಟಿಯುದ್ಧಂಗೆಯ್ದರ್: **ಗದಾಯು,** ೮. ೨)

**ದೃಷ್ಟಿವಿಷ** – ನೋಟವೆಂಬ ವಿಷ (ಎರಡು ಪದಂಗಳಪಭ್ರಂಶಕ್ಕೆ: ವರ್ಣದವರಂ–ಬಣ್ಣಸರಂ, ದೃಷ್ಟಿವಿಷಂ–ದಿಟ್ಟಿವಿಸಂ: **ಶಬ್ದಮದ,** ೩೦४ ಪ್ರ)

**ದೃಷ್ಟಿವಿಷಾಹಿ** – ನೋಟದಿಂದಲೇ ಕೊಲ್ಲುವ ಹಾವು (ಇವೆ ದೃಷ್ಟಿವಿಷಾಹಿಗಳಿ ಕವಿತರ್ಪುವೆ ಜವನ ಬೆಸದಿಂ ಎನೆ: **ಪಂಪರಾ,** ೯. ೬೫)

**ದೃಷ್ಟಿವಿಷೋರಗ** – ನೋಟದಿಂದಲೇ ಕೊಲ್ಲುವ ಹಾವು (ಕೇಸರಿಯುಂ ದೃಷ್ಟಿವಿಷೋರಗನುಂ ಶಾರ್ದೂಲನುಂ .. .. ವ್ಯಾಧಪರಿಯುಮಾಗಿ ಸತ್ತು: **ಚಾವುಂಪು,** ಪು. ४೦೧. ಸಾ. ೨೬)

**ದೆಖ್ಖಾದೆಖ್ಖಿ** – ದ್ವಂದ್ವಕಾಳಗ (ದೇವರ್ಕಳ ದೆಖ್ಖಾದೆಖ್ಖಿಯ ಕಾಳೆಗಮಂ ಕಂಡು ಕಡುಮುಳಿದು: **ಗಿರಿಜಾಕ,** ೬. ೭४ ವ)

**ದೆಖ್ಖಾಳ** – ಸೊಬಗು (ಮತ್ತಂ ಆರಭಟಿಯೊಳ್ ದೆಖ್ಖಾಖ್ಖಾಳಂ ಮಿಕ್ಕು ಸಾತ್ವತಿಯೊಳ್ ಪಜ್ಜಳಂಬೆತ್ತು ಭಾರತಿಯೊಳ್ ಕಾಂತಿ ಕೆಯ್ಗಣ್ಮೆ: **ಗಿರಿಜಾಕ,** ೨. ೧೦೫ ವ)

**ದೆಪ್ಪಳಿಸು** – ಬೆರಗಾಗು (ಮೆಲ್ಲನೆ ನಿಳ್ಕಿ ನಿಳ್ಕಿ ದೆಪ್ಪಳಿಸಿ ನೋಟ್ಟಿನ್ನೆಗಂ: **ಕಾದಂಬ,** ೧. ೧೩೭ ವ)

**ದೆಯ್ವದಚ್ಚು** – ದೇವತಾವಿಗ್ರಹ (ಸಿರಿಯಾಗೆ ದೆಯ್ವದಚ್ಚಂ ತುರಿಪದೆ ಮಾಡಿಸುವರ್: **ಸಮಯಪ,** ೯. ೧೦೨)

**ದೆವಸ** – ದಿವಸ (ಕೆಲವು ದೆವಸದಿಂ ತನ್ನ ನಿಸ್ವತೆ ಕಾರಣಮಾಗೆ ಸಮಾಧಿಗುಪ್ತಮುನೀಂದ್ರ ಪಾದಪದ್ಮೋಪಕಂಠದೊಳ್ ಪರಮದೀಕ್ಷಾವಿಲಕ್ಷಿತ ಅಕ್ಷೂಣ ಪ್ರಮೋದನಾಗಿ: **ಶಾಂತಿಪು,** ೯. ೮೩ ವ); ದಿನಶುದ್ಧಿ (ಪಿರಿದಪ್ಪ ನಿಧಾನಂ ಸಾರ್ತರೆ ದೆವಸಮನಱಸದಂದದಿಂ .. .. ४. ೫)

**ದೆಸೆ** – [ದಿಶಾ] ದಿಕ್ಕು, ಜಾಗ (ನಾಡೆ ಕೆಸಱನೊಡೆಯ ಪೞವಾವಿಯ ತಡಿಯೊಳ್ ಇಱುಷಿದು ಕೊಂದು ಬಾವಿಯೊಳ್ ನೂಂಕಿ ದೆಸೆಗಳಂ ನೋಟ್ಟಿನ್ನೆಗಂ: **ವಡ್ಡಾರಾ,** ಪು ೧೮೦, ಸಾ ೨४)

**ದೆಸೆಗಾಣ್** – ದಿಕ್ಕು ಕಾಣು (ಉರಿ ಕೊಳೆ ದೆಸೆಗಾಣದೆ ದೆಸೆವರಿವರಿದು ಕುಜಂಗಳಂ ಪಡಲ್ವಡಿಸಿ ಭಯಂಬೆರಸು ಒಳಱೆ ನೆಗೆದುದಾ ವನ ಕರಿ ಶರಭ ಕಿಶೋರಕಂಠಗರ್ಜನೆ ಬನದೊಳ್: **ಪಂಪಭಾ,** ೫. ೯೧)

**ದೆಸೆಗೆಡು** – ದಿಕ್ಕು ತೋಚದಂತಾಗು (ಕಾಗೆಯಂ ಕಂಡ ಕೋಗಿಲೆಯಂತೆ ಮಾಲೆಗಾಱರ್ಬೆಚ್ಚಿ ದೆಸೆಗೆಟ್ಟು ಪರಿಯೆ ಪೂವಿನ ಸಂತೆಯಂ ಪೊಕ್ಕು: **ಧರ್ಮಾಮೃ,** ೨. ೧೫ ವ); ಹಾಳಾಗು (ಕಿಚ್ಚಲ್ಲ ಮಿಂಚುಂಬುಱು ನೀನಿದನೂದಿ ದೆಸೆಗೆಡವೇಡೆಂದು ಪಿರಿದುಂ ಪೊಟ್ಟು ಬಾರಿಸುತಿರ್ಪುದುಂ: **ಪಂಚತಂತ್ರ,** ೩४೦ ವ)

**ದೆಸೆಗೆತ್ತಂ** – ಎಲ್ಲೆಲ್ಲಿಯೂ (ದೆಸೆಗೆತ್ತಂ ಗಜಱುತ್ತುಮಿರ್ಪ ಮಲಿಯಿಂ ನೀಳಾಭ್ರಮಂ ದಂತಿಗೆತ್ತು ಸಿಡಿಲ್ದು ಆಗಸಕೆ ಎಯ್ದೆ ಪಾಯ್ವ ಪಲವುಂ ಸಿಂಗಂಗಳಿಂದೆತ್ತಗುರ್ವಿಸಿ: **ಪಂಪಭಾ,** ೭. ೨೬)

**ದೆಸೆದೆಸೆ** – ದಿಕ್ಕುದಿಕ್ಕು, ಎಲ್ಲ ಕಡೆ (ಬಗೆ ಮತ್ತೊಂದೆನೆಯುಂ ಗೆಯ್ವೊಗಂ ಇತ್ತೊಂದೆನೆಯುಂ ಅಂಗುಳೀ ನಖಚಯಕಾಂತಿಗಳಂ ಅವಟಯ್ಸಿ ಸಲೆ ಪಾಸಗಯದೆಸೆದೆಸೆ ಪೊರಳ್ಚಿದಂ ಮತ್ತೊರ್ವಂ: **ಶಾಂತಿಪು,** ೫. ೧೦೫)

**ದೆಸೆಬಿದ್ದಂ** – (ದಿಶಾವಿದ್ಧ) ಅಧಿಕವಾಗಿ (ಪಸರಿಸೆ ಪೂವಲಿಗಳ್ ಬಾಜಿಸೆ ಬದ್ದವಣಂಗಳ್ ಒಡನೆ ಮಿಳ್ಳಿಸೆ ಗುಡಿಗಳ್ ದೆಸೆಬಿದ್ದವಾದೊಡೆ ತರುಣಿಯರ್ ಒಸಗೆಯ ಮೇಲೆ ಒಸಗೆಯಾದುದು ಅಂದು ಅರಮನೆಯೊಳ್: **ಪಂಪರಾ,** ೩. ೧೩೪)

**ದೆಸೆಯಾನೆ** – ದಿಕ್ಕರಿ (ಕಡಲೊಳ್ ನೇಸಱನಟ್ಟಿಲುಂ ಪೊಡವಿಯಂ ನುರ್ಗೊತ್ತಲುಂ ಕೊಂಕಿ ಫೀಳಿಡೆ ತಳ್ಕಿಂ ದೆಸೆಯಾನೆಯಂ ಮುಱಿಯಲುಂ: **ಕಬ್ಬಿಗಕಾ,** ೧೧೯)

**ದೆಸೆವರಿವರಿ** – ದಿಕ್ಕು ದಿಕ್ಕಿಗೆ ಓಡು (ಉರಿ ಕೊಳೆ ದೆಸೆಗಾಣದೆ ದೆಸೆವರಿವರಿದು ಕುಜಂಗಳಂ ಪಡಲ್ವಡಿಸಿ ಭಯಂಬೆರಸು ಒಳಱೆ ನೆಗೆದುದಾ ವನ ಕರಿ ಶರಭ ಕಿಶೋರಕಂಠಗರ್ಜನೆ ಬನದೊಳ್: **ಪಂಪಭಾ,** ೫. ೯೧)

**ದೆಸೆವೆಟ್ಟು** – ದಿಕ್ಕು ಎಂಬ ಬೆಟ್ಟ (ತೆಱವುಗುಡದೆ ಸೂಟ್ಟೈಸುವ ನಿಸ್ಸಾಳದ ಬಲ್ಸರಕೆ ದೆಸೆವೆಟ್ಟುಗಳ್ ನಿಬ್ಬರಂಬಿರಿಯೆಯುಂ ಬೇಗದಿಂ ನಡೆದೆತ್ತಿ ಬಂದು ಮಂಜುವೆಟ್ಟಮಂ ಮೂವಳಸಾಗಿ ಮುತ್ತಿದಾಗಳ್: **ಕಬ್ಬಿಗಕಾ,** ೨೨೪ ವ)

**ದೆಸೆವೋಗು** – [ಆ] ದಿಕ್ಕಿಗೆ ಹೋಗು (ಪುಸಿದೈವದ ಪುಸಿಯಜಿತದ ಪುಸಿಧರ್ಮದ .. .. ದೆಸೆವೋಗರ್ .. .. ಜೈನರ್: **ಸಮಯಪ,** ೬. ೭೫)

**ದೇಗುಲ** – [ದೇವಕುಲ] ದೇವಾಲಯ (ಕಾರ್ತಿಕೇಯನ ದೇಗುಲಕಾಗಿ ದೂರಾಗಮನಖೇದನಿವೇದಕಂಗಳಪ್ಪ ಕೆಲವು ಕುದುರೆಗಳ್ ಬೆರಸಿ ಬರ್ಪುದಂ ಕಂಡು: **ಕಾದಂಸಂ,** ೬. ೧೯ ವ)

**ದೇಗುಲಿಗ** – ದೇವಸ್ಥಾನದ ಕೆಲಸಗಾರ (ಆಚರಣದಲ್ಲಿ: ದೇಗುಲಿಗಂ, ಅಕ್ಕರಿಗಂ, ಛಂದಸಿಗಂ: **ಶಬ್ದಮದ,** ೨೦೮ ಪ್ರ)

**ದೇಯ** – ಕೊಡಲ್ಪಟ್ಟುದು, ದಾನವಸ್ತು (ಎಸೆದುದು ಅಹೋ ದಾನಿ ಅಹೋ ಪಾತ್ರಂ ಅಹೋ ದಾನಂ ಅಹೋ ದೇಯಮೆಂಬ ದಿವ್ಯಧ್ವನಿಗಳ್: **ಆದಿಪು,** ೧೦. ೪)

**ದೇವಕುಜ** – ಕಲ್ಪವೃಕ್ಷ (ಇದು ದಲ್ .. .. ಚಂದ್ರಿಕಾಶೋಭೆಯಲ್ತು ಇದು ತತ್ಕಂಠವಿಲಂಬಿ ದೇವಕುಜ ಪುಷ್ಪಸ್ರಕ್ ರಜೋವಿಭ್ರಮಂ: **ರಾಜಶೇವಿ,** ೧೩. ೪೪)

**ದೇವಕುರು** – [ಜೈನ] ಮೇರುಪರ್ವತದ ದಕ್ಷಿಣದಲ್ಲಿರುವ ಒಂದು ಭೋಗಭೂಮಿ (ಪುರಂ ವಿರಾಜಿಪುದು ದೇವಕುರುಪ್ರತಿಮಾನವೆಂಬಿನಂ: **ಚಂದ್ರಪ್ರಪು,** ೧೧. ೭೨)

**ದೇವಕುಲ** – ದೇಗುಲ, ದೇವಸ್ಥಾನ (ಅಮರಾಪಗ ಪಯಃಪಪೂರಮಂ ಆಂತ ಹೈಮನಗದಂತಿರೆ ದೇವಕುಲಂಗಳ್ ಒಪ್ಪುಗುಂ: **ಕಾದಂಬ,** ೨. ೬)

**ದೇವಕೃತ** – [ಜೈನ] ಮೂವತ್ತನಾಲ್ಕು ಅತಿಶಯಗಳಲ್ಲಿ ಒಂದು (ದೇವಕೃತಂಗಳುಮಂ ಸ್ವಾಭಾವಿಕಮುಮಂ ಅಜಿತ ನೀನೆ ತಾಳ್ದಿದೆ: **ಅಜಿತಪು,** ೮. ೧೨)

**ದೇವಗಣಿಕೆ** – ಅಪ್ಸರಸ್ತ್ರೀ: ರಂಭೆ, ಊರ್ವಶಿ, ತಿಲೋತ್ತಮೆ, ಮಂಜುಘೋಷೆ, ಮೇನಕೆ, ಸುಕೇಶಿ, ಘೃತಾಚಿ (ದೇವಗಣಿಕೆಯರನೆ ಪೋಲ್ವ ಅಯ್ನೂರ್ವರ್ ಅರಸಿಯರ್ಕಳಿಂದಂ: **ವಡ್ಡಾರಾ,** ಪು. ೮೧, ಸಾ. ೬)

**ದೇವಗತಿ** – ದೇವತ್ವವನ್ನು ಹೊಂದುವುದು (ಮುನ್ನಿನ ತಿರ್ಯಗ್ಗತಿ ಬಟಿಕಂ ನೆರಪಿದ ದೇವಗತಿ ವಿನಿಷ್ಫಲಮಾದತ್ತು: **ಪಾರ್ಶ್ವನಾಪು,** ೬. ೩೭)

**ದೇವಗೃಹ** – ದೇವಸ್ಥಾನ (ಭಯಂಕರರೂಪು ಆ ಇರ್ವರ ದಯೆಯಿಂ ದೇವಗೃಹದ ನೆಲೆಗಳೊಳ್ ಅವರಾ: **ಸಮಯಪ,** ೮. ೨೧೫)

**ದೇವಚಾಪ** – ಕಾಮನಬಿಲ್ಲು (ರತ್ನದ ಬೆಡಂಗುವೆತ್ತೆಸೆವ ದೀಪ್ತಿವಳಯದ ಚೆಲ್ವಂ ಪಡೆದು ಸಲೆ ದೇವಚಾಪದ ನಡುವಣ ಲಲಿತಾರ್ಧಚಂದ್ರನಿರ್ಪಂತಿರ್ಕುಂ: **ಆದಿಪು,** ೭. ೭೫)

**ದೇವಚ್ಛಂದ** – ನೂರು [ಎಂಬತ್ತೊಂದು] ಎಳೆಗಳ ಮುತ್ತಿನ ಹಾರ (ಸಾಸಿರದೆಂಟು ತೋರಮುತ್ತಿನ ಸರದಿಂದ್ರಚ್ಛಂದಂ ಮೊದಲಾಗೆ ವಿಜಯಚ್ಛಂದಂಹಾರ ದೇವಚ್ಛಂದಾರ್ಧಹಾರ: **ಆದಿಪು,** ೮. ೫೪ ವ)

**ದೇವಡಿಗ** – ಪೂಜಾರಿ (ಅಡಿಗ ಪ್ರತ್ಯಯಕ್ಕೆ: ದೇವಡಿಗಂ, ಪೂವಡಿಗಂ, ಪಾವಡಿಗಂ: **ಶಬ್ದಮದ,** ೨೧೪ ಪ್ರ)

**ದೇವಡಿತಿ** – ದೇವತಾಸ್ತ್ರೀ, ಅಪ್ಸರೆ (ಸಗ್ಗಂಗಳೊಳಿರ್ಪ ದೇವಡಿತಿ ತೊಟ್ತಿರೊಳಟ್ತಿಯಾಗಲೀವೆನೇ: **ಪಂಪರಾ,** ೧೦. ೪೫)

**ದೇವತಾಮೂಢ** – [ಜೈನ] ಮೂಢತ್ರಯಗಳಲ್ಲಿ ಒಂದು; ಸಲ್ಲದವನನ್ನು ಪೂಜಿಸುವುದು (ಮತಿವಂತಂ ಸಲೆ ದೇವಮೂಢತೆಯುಮಂ ಪಾಷಂಡಿಮೂಢತ್ವಮಂ ಸತತಂ ಲೌಕಿಕಮಪ್ಪ ಮೂಢತೆಯುಮಂ ನಿರ್ವ್ಯಾಜದಿಂ ಬಿಟ್ಟು: **ಸಮಯಪ,** ೯. ೨)

**ದೇವದತ್ತ** – ಅರ್ಜುನನಿಗೆ ಇಂದ್ರ ಕೊಟ್ಟ ಶಂಖದ ಹೆಸರು (ಇದಱ ಪೆಸರ್ ದೇವದತ್ತಮೆಂಬುದು ನಿನಗೆ ಅಭ್ಯುದಯಕರಂ ಶಂಖಂ ರಿಪುಹೃದಯ ಕವಾಟಪುಟವಿಘಟನಂ ನೋಡರಿಗಾ: **ಪಂಪಭಾ,** ೬. ೪)

**ದೇವದಾರು** – ಒಂದು ಮರ (ವನ್ಯಮಹೀರುಮಾದ ಕಲ್ಪನಂದನತರು ದೇವದಾರುಕುಜಮಾದ ನಮೇರುಕುಜಂ: **ಶಾಂತಿಪು,** ೯. ೧೩೪)

**ದೇವದುಂದುಭಿ** – ಸ್ವರ್ಗದ ನಗಾರಿ (ಬದ್ದವಣದ ಪಱೆಗಳ್ ಕಿವಿ ಸದ್ದಂ ಗಿಡೆ ಮೊೞಗೆ ದೇವದುಂದುಭಿರವಂ ಒಂದು ಉದ್ದಾನಿ ನೆಗೞೆ ಮುಗುಳ ಅಲರ ಒದ್ದೆ ಕರಂ ಸಿದ್ಧಮಾದುದು ಅಂಬರತಲದೊಳ್: **ಪಂಪಭಾ,** ೧೨. ೨೧೮)

**ದೇವನಗ** – ಮೇರುಪರ್ವತ (ದೇವಾಂದ್ರಾಲಯಂಗಳ್ಗೆ ದೇವನಗಂ ಪೋಲ್ವುದು ಪದ್ಮಗರ್ಭನ ಕಿರೀಟಸ್ತಂಭಮಂ ಸ್ತಂಭಮಂ: **ಅಜಿತಪು,** ೨. ೩)

**ದೇವಮಣಿ** – ಕೌಸ್ತುಭರತ್ನ (ದೇವಮಣಿಗೂಡಿ ಜಳಧಿಯೊಳ್ ವಿಬುಧವರಾಶ್ವಂ ಒಗೆದು ಅಗಲ್ದಿರ್ಪುದಂ: **ರಾಜಶೇವಿ,** ೧೨. ೧೦೫)

**ದೇವಮಾತೃಕ** – ಮಳೆಯ ನೀರಿನಿಂದ ಕೃಷಿಗೊಳ್ಳುವ ಪ್ರದೇಶ (ಬಟಿಕಂ ದೇವಮಾತೃಕ ಸಾಧಾರಣ ಅನೂಪಜಾಂಗಳ ಭೇದಂಗಳುಮಂ ಅಂತಪಾಳ ಪಾಳಿತದುರ್ಗ ಪರಿವೃತಾಂತಂಗಳುಂ: **ಆದಿಪು,** ೮. ೫೪ ವ)

**ದೇವಮುನಿ** – ನಾರದ (ಆಗಳಾ ದೇವರಾಜಂ ದೇವಮುನಿ ನುಡಿದ ನುಡಿಯಂ ಭಾವಿಸಿ: **ಜಗನ್ನಾವಿ,** ೫. ೫೭)

**ದೇವರ್** – ಹಿರಿಯರನ್ನು ಸಂಬೋಧಿಸುವ ಒಂದು ಬಗೆ (ಇದಕ್ಕೆ ತಕ್ಕುದಂ ದೇವರ್ ಸಮಟ್ಟುವುದು: **ಚಂದ್ರಪ್ರಪು,** ೫. ೧೩೬ ವ)

**ದೇವರ –** ಮೈದುನ (ಜಗತ್ತ್ರಯಖ್ಯಾತಂ ಅರ್ಜುನಂ ಇಂದ್ರಸೂನು ಮುಕುಂದದೇವರಂ ಉಗ್ರಶೌರ್ಯಾತುಳಂ: **ಶಬರಶಂ,** ೨. ೧೧೫)

**ದೇವವ್ರತ –** ಬ್ರಹ್ಮಚರ್ಯೇ ಪಾಲಿಸಿದವನು, ಭೀಷ್ಮ (ತೀವಿದ ನರೆಯುಂ ಡೊಳ್ಳುಂ ದೇವವ್ರತನೆನಿಸಿ ನೆಗಟ್ದಿ ಯಶಮಂ ಬೆರಸಿನ್ನೀವುದು ಹರಿಗೆ ಆರ್ಘ್ಯಮಂ ಎಂದು ಆವನುಂ ಈ ಭೀಷ್ಮರಂತು ನುಡಿದರುಂ ಒಳರೇ: **ಪಂಪಭಾ,** ೬. ೪೩)

**ದೇವಸ್ವ –** ದೇವರ ಸ್ವತ್ತು (ವಿಶ್ವಜನಾಳಿಗೆ ಭವದೀಯಸ್ವಂ ಕರತಳಿತಗತಸ್ವಂ ಅನ್ಯಸ್ವಂ ಬ್ರಹ್ಮಸ್ವಂ ರಾಜಸ್ವಂ ದೇವಸ್ವಂ ಕೀರ್ತಿಸ್ವ ದುರ್ಗ ವಿಶ್ವಾವನಿಯೊಳ್: **ಪಂಚತಂತ್ರ,** ೪೪೫)

**ದೇವಾಂಗ –** ರೇಷ್ಮೆಯ ಬಟ್ಟೆ (ಒಚ್ಚಿದುವಪ್ಪ ದೇವಾಮಗನುಡಿಸಿ ಮಾಣಿಕದೊಡಿಗೆಯಂ ತೊಡಿಸಿ .. .. ತೊಡೆಯನೇಱಿಸಿಕೊಂಡು: **ನೇಮಿನಾಪು,** ೮. ೨೧ ವ)

**ದೇವಾಂಗವಸ್ತ್ರ –** ರೇಷ್ಮೆಯ ಬಟ್ಟೆ (ಇಂದ್ರಾಣಿ ಭವತ್ ಅಂಗಸಂಗತಜಳಕಣಂಗಳಂ ದೇವಾಂಗವಸ್ತ್ರಂಗಳೊಳ್ ಒತ್ತಿ ಕಳೆದು: **ಆದಿಪು,** ೭. ೧೦೬ ವ)

**ದೇವಾಂಗವಿತಾನ –** ರೇಷ್ಮೆಯ ಮೇಲುಕಟ್ಟು (ದೇವಾಂಗವಿತಾನಂಗಳ ತುಱುಗಲ್ ಬೆಡಂಗುವಡೆದತ್ತದಱೊಳ್: **ಆದಿಪು,** ೮. ೧೭)

**ದೇವಾಂಗವಸ್ತ್ರ –** ದೇವಾಂಗವಸನ (ದೇವಾಂಗವಸ್ತ್ರದುಳ್ಳುಡೆಯೊಳ್ ಉಲಿವ ಸೂಸಕದ ತೊಂಗಲ್ವೆರಸು ಎಟಲ್ವ ಮುಂದಣ ಸೋಗೆ ಕಾರ್ಗಾಲದ ಸೋಗೆಯಂತೆ ಸೊಗಯಿಸೆ: **ಪಂಪಭಾ,** ೨. ೪೧ ವ)

**ದೇವಾನಾಂಪ್ರಿಯ –** ದೇವತೆಗಳಿಗೆ ಪ್ರಿಯನಾದವನು; ದಡ್ಡ (ಆ ದೇವಂಗೆ ವಿಷಯಮಲ್ಲದೆ ದೇವಾನಾಂಪ್ರಿಯರ್ಗೆ ವಿಷಯಮೆ ಸತ್ಕಾವ್ಯಂ: **ಯಶೋಧಚ,** ೧. ೭)

**ದೇವಾಪಗಾ –** ದೇವತೆಗಳ ನದಿ (ಆ ದೇವಾಪಗಾಪತ್ಯಂ ಪಾಂಡುಕುಮಾರಂಗೆ ಕೊಂತಿಯಂ ಬೇಡಿ ಅಟ್ಟಿದೊಡೆ: **ಕರ್ಣನೇಮಿ,** ೩. ೩೩ ವ)

**ದೇವಾಯತನ –** ದೇವಾಲಯ (ನಾನಾ ದೇವಾಯತನ ಅನೂನ ವಿಭೋಗಾದಿ ಸಂಪದಪ್ರದಮೆನಿಸಿರ್ಪಾ ನಾಡಿಂಗೆ: **ಗಿರಿಜಾಕ,** ೨. ೨೮)

**ದೇವಾರ –** [ದೇವಾಗಾರ] ದೇವಾಲಯ (ಆಗಾರಕ್ಕೆ: ದೇವಾಗಾರಂ–ದೇವಾರಂ, ಧವಲಾಗಾರಂ–ಧವಳಾರಂ, ಗೂಢಾಗಾರಂ–ಗೂಡಾರಂ: **ಶಬ್ದಮದ,** ೩೧೦, ಪ್ರ)

**ದೇವಾರಣ್ಯ –** [ಜೈನ] ಮೇರುಗಿರಿಯ ತಪ್ಪಲಿನ ಭದ್ರಸಾಲವನ (ದೇವಾರಣ್ಯಂ ದೇವರ ದೇವನ ಮನಕಿಂಬನೀಯೆ ತನ್ನಂದನದೊಳ್: **ಶಾಂತಿಪು,** ೮. ೧೨೨)

**ದೇವಾರಿ –** ದೇವತೆಗಳ ಶತ್ರು, ರಾಕ್ಷಸ (ಮಡದಿ ನೀಮ ಪಡೆವಾ ಸುತಂ .. .. ತವಿಕುಂ ಈ ದೇವಾರಿಯಂ: **ಜಗನ್ನಾವಿ,** ೨. ೮೫)

**ದೇವಾರ್ಚನಾವಸಥ –** [ದೇವಾರ್ಚನಾ+ಅವಸಥ] ದೇವರ ಮನೆ (ಒಪ್ಪುವುವಲ್ಲಿ ಶಸ್ತ್ರಕುಟಿ ಕೋಶಾಗಾರಂ ಏಕಾಂತಮಂದಿರಂ ಅಭ್ಯಾಸನಿಕೇತನಂ ಪಚನಧಾಮಂ ಸ್ನಾನಸದ್ಮಂ ಮನೋಹರ ಶಯ್ಯಾವಸಥಂ ವಿಭೂಷಣಗೃಹಂ ದೇವಾರ್ಚನಾವಾಸಂ ಅಂಬರವೇಶ್ಮಂ ವರ ಭೋಜನೌಕಂ ಅವರೋಧಸ್ತ್ರೀನಿವಾಸಾಸ್ಪದಂ: **ಶಾಂತೀಶ್ವಪು,** ೧. ೧೩೭)

**ದೇವಿತನ –** ಪಟ್ಟದ ರಾಣಿಯ ಪದವಿ (ಬುದ್ಧದಾಸಿಗೆ ದೇವಿತನಂಗೊಟ್ಟನಿಂತುಕಷ್ಟನುಮೊಳನೇ: **ಧರ್ಮಾಮೃ,** ೮. ೧೨೭)

**ದೇಶ –** ಪ್ರದೇಶ, ಸ್ಥಳ (ಗಿಳಿಗಳ ಪಿಂಡುಗಳ್ ನೆರೆದು .. .. ನಿರಾಕುಳಂ ಅನುರಾಗದಿಂ ಪಲವು ದೇಶದೊಳಿರ್ಪುವು ಬಂದು: **ಕಾದಂಸಂ,** ೧. ೪೦)

**ದೇಶನಿವೇಶೋಪದೇಶ –** [ಜೈನ] ಜೈನಪುರಾಣಗಳ ಎಂಟು ಅಂಗಗಳಲ್ಲಿ ಒಂದು, ದೇಶದ ವಿನ್ಯಾಸ, ವಿಸ್ತೀರ್ಣ, ರೀತಿ ಮುಂತಾದವನ್ನು ತಿಳಿಸುವುದು (ಆ ಪುರಾಣಕ್ಕಂ ಲೋಕಾಕಾರಕಥನಮುಂ ದೇಶನಿವೇಶೋಪದೇಶಮುಂ ನಗರಸಂತ್ಸರಿವರ್ಣನಮುಂ ರಾಜ್ಯರಾಮಣಿಕಾಖ್ಯಾನಮುಂ ತೀರ್ಥಮಹಿಮಾಸಮರ್ಥನಮುಂ ಚತುರ್ಗತಿಸ್ವರೂಪ ನಿರೂಪಣಮುಂ ತಪೋದಾನವ್ಯಾವರ್ಣನಮುಂ ತತ್ಫಲಪ್ರಾಪ್ತಿಪ್ರಕಟಮುಂ ಎಂದಿಂತು ಅವಯವಂಗಳ್ ಎಂಟಕ್ಕುಂ: **ಆದಿಪು,** ೧. ೪೨)

**ದೇಶವಿರತ –** [ಜೈನ] ಮೂರು ಬಗೆಯ ಗುಣವ್ರತಗಳಲ್ಲಿ ಒಂದು; ಜೀವನ ಪರ್ಯಂತ ನಿಗದಿತ ಅವಧಿಯಲ್ಲಿ ನಿರ್ದಿಷ್ಟ ಪ್ರದೇಶಗಳ ಹೊರಗೆ ಸಂಚರಿಸದಿರುವ ವ್ರತ ತೊಟ್ಟವನು (ಗುಣಸ್ಥಾನಂ ಪರಿಕಿಪೊಡೆ ಏಟಲ್ತೆ ದೇಶವಿರತನನಿಂ ಅವಱೊಳ್: **ಅನಂತಪು,** ೩. ೫೭)

**ದೇಶಾವಧಿ –** [ಜೈನ] ಮೂರು ಬಗೆಯ ಅವಧಿಜ್ಞಾನಗಳಲ್ಲಿ ಒಂದು; ದೇಶಕಾಲ ಭಾವಗಳಿಗೆ ಸಂಬಂಧಿಸಿದಂತೆ ಸೀಮಿತ ಪದಾರ್ಥಗಳ ಜ್ಞಾನ (ದೇವೇಂದ್ರನುಮಾಗಳ್ ದೇಶಾವಧಿಯಿಂ ಚಿತ್ರದೊಳ್ ಪ್ರಯೋಗಿಸಿ ನಿಜ ಜನ್ಮಾವಳಿ ಸಮೇತಂ ಆತ್ಮೀಭಾವನೆಱಿದಂ ವ್ಯತೀತ ಭವಸಂತತಿಯಂ: **ಶಾಂತಿಪು,** ೫. ೪)

**ದೇಶಿ –** ಉಪಭಾಷೆ (ವಾಸುಗಿಯುಂ ಅಱಿಯಲಾಱದೆ ಬೇಸಱಿಗುಂ ದೇಶಿ ಬೇಱೆವೇಱಪ್ಪುದಱಿಂ: **ಕವಿರಾಮಾ,** ೧. ೪೬)

**ದೇಶಿಕ –** ಗುರು (ಡೊಂಬಿತಿಗೂಡಿ ಆ ನೃಪನ ದೇಶಿಕಂ ಒಲ್ದು ಉಣುತಿರ್ದಂ: **ಉದ್ಭಟಕಾ,** ೫. ೧೦೨)

**ದೇಶೀಯಪದ –** ದೇಶ್ಯಪದ, ಕನ್ನಡದ ಸ್ವಂತಪದ (ಅಪಭ್ರಂಶಕ್ಕಂ ದೇಶಿಯಪದಕ್ಕಂ ಉಂಟು ಸಮಾಸಂ: **ಶಬ್ದಮದ,** ೩೧೪)

**ದೇಶೀಯಾಕ್ಷರ –** ಅಚ್ಚಗನ್ನಡ ಅಕ್ಷರ (ಅ ಎ ಒ ಎಂಬಿವು ಸಹಿತವಾಗಿ, ದೇಶೀಯಂ–ದೇಶೀಯಾಕ್ಷರಂಗಳ್, ಎನಿಪುವು–ಎನಿಸುವುವು: **ಶಬ್ದಮದ,** ೨೯ ಟೀಕು)

**ದೇಸಿ –** ಬಳಕೆಯ ನುಡಿ (ಪಟಗನ್ನಡಮಂ ಪೊಲಗೆಡಿಸಿ ನುಡಿವರ್ ಆಗಮ ಬಲಹೀನರ್ ದೇಸಿಯಲ್ಲವೆಂದು ಅಱಿದಿರ್ದುಂ: **ಕವಿರಾಮಾ,** ೧. ೪೮): ಜನಪದದ ಸ್ವಂತಿಕೆ (ಬಗೆ ಪೊಸತಪ್ಪುದಾಗಿ ದೇಸಿಯೊಳ್ ಪುಗುವುದು ಪೊಕ್ಕ ಮಾರ್ಗದೊಳೆ ತಳ್ವುದು: **ಪಂಪಭಾ,** ೧. ೮); ಚೆಲುವು (ಪೊಸದೇಸಿವೆತ್ತು ಎಸೆದುದಲ್ಲಿ ನರೇಂದ್ರಕುಮಾರಸಂಕುಳಂ: **ರಾಜಶೇವಿ,** ೧೨. ೪೫)

**ದೇಸಿಗ –** ಪರದೇಶಿ, ನಿರ್ಗತಿಕ (ಪೆಱುಕಿ ತಿಂದು ಬಾಟಿಸ್ವೊಂ ಬೈಕಂಗುಳಿ ಬೇಡಿ ಪೊಟಲೆಲ್ಲಮಂ ತೊಟಲ್ದು ಬಸಿಱಂ ಪೊರೆವೊಂ ದೇಸಿಗಂ ಆರುಮಿಲ್ಲದೊಂ: **ವಡ್ಡಾರಾ,** ಪು ೪೬, ಸಾ ೮)

**ದೇಸಿಗಿತಿ** – ದಿಕ್ಕಿಲ್ಲದವಳು (ಸೆಱೆಸಿಕ್ಕಿಂ ಪಿಡಿತಂದ ದೇಸಿಗಿತಿಯಂ ಭೋಗೋಪಭೋಗಂಗಳಂ ಮಱೆದುಂ ಕಾಣದೆ: **ಅನಂತಪು,** ೧೧. ೯೦)

**ದೇಸಿಗೆ** – ದೇಸಿಗಿತಿ (ರಾಹು ತವೆ ನುಂಗಿದ ಚಂದ್ರನಂ ಒಯ್ಯನೊಯ್ಯನೆ ಅಂದು ಉಗುಟ್ಟಿವೊಲ್ ಒಪ್ಪಿರಲ್ ಬಲದೊಳುರ್ವಸಿ ದೇಸಿಗೆ ದೇಸಿಯಾಡಿದಳ್: **ಪಂಪಭಾ,** ೭. ೮೮)

**ದೇಸೆ** – ಸಹಜ ಚೆಲುವು (ಈಕೆಯೊಂದು ದೇಸೆಗೆ ನಿಮಿರ್ವೊಂದು ಪುರ್ವಿನ ನಯಕ್ಕೆ ಅಮರ್ವೊಂದು ಅಗುಂತಿಗೆ .. .. ವಾರವೇನೊಗಸುಗಂ: **ಆದಿಪು,** ೨. ೭೫); ಸೊಗಸು (ಸುಖಿಮಿರ್ದು ನೆಮ್ಮಿ ನಿರ್ಮಿಸಿದ ಅಲರೊಂದು ಬೊಂದರಿಗೆಯೊಳ್ ಕನಕಾಂಬುಜ ಪಾದಪೀಠದೊಳ್ ನಿಸದಮೆ ನೀಡಿ ಕಾಲನಿಡೆ ರಾಜಕುಮಾರನದೊಂದು ದೇಸೆಯಿಂ: **ಶಾಂತಿಪು,** ೮. ೪); ನಾಡುನುಡಿಯ ವೈಶಿಷ್ಟ್ಯ (ಪೂರ್ವಾಚಾರ್ಯರ್ ದೇಸಿಯನೆ ನಿಱೆಸಿ ಖಂಡಪ್ರಾಸಮನತಿಶಯಮಿದೆಂದು ಯತಿಯಂ ಮಿಕ್ಕರ್: ಕವಿರಾಮಾ, ೧. ೭೫)

**ದೇಸೆಕಾರ್ತಿ** – ಸುಂದರಿ (ಲಲಿತಾಂಗನಂ ಮನಂಗೊಳಿಸುಚ್ಚೆಕಾರ್ತನದ ಲಲ್ಲೆಯ ಸಗ್ಗದ ದೇಸೆಕಾರ್ತಿಯರ್: **ಆದಿಪು,** ೨. ೭೧)

**ದೇಹರುಚಿ** – ಮೈಕಾಂತಿ (ಎನೆಯೆನೆ ರತ್ನರಶ್ಮಿಜಟಿಳಂ ಮಕುಟಂ ಮಣಿಕುಂಡಳಂ ಕನತ್ ಕನಕ ಪಿಶಂಗ ದೇಹರುಚಿ .. .. ಇಳಾಮರಂ ಅಂದು ಅಮರೇಂದ್ರರೂಪಮಂ: **ಪಂಪಭಾ,** ೮. ೭)

**ದೇಹಾರ** – ದೇವಾರ, ಗುಡಿ (ದೇಹಾರದೊಳಂ ಸ್ತುತಿಯಿಸುವ ಪದದೊಳಂ ಸಂಸ್ಕೃತದಿಂದಂ ನುಡಿಯೆ ಕಿಡದು ಗಡ ಮೌನಫಲಂ: **ಸಮಯಪ,** ೧೧. ೬೩); ಪೂಜೆ, ಕಾಣಿಕೆ (ದೇಹಾರಮನುಡತುಡಲಿತ್ತುಂ ಕುಡುವರ್ ಅಟ್ಟೆಯಿಂದಂ ಜೈನರ್: **ಸಮಯಪ,** ೭. ೩೧); ಆರೋಗಣೆ (ಶಿಷ್ಯನಂ ಮುನ್ನಂ ಸಚ್ಚಾರಿತ್ರಂ ಮಾಡದೆ ದೇಹಾರಮನೀಯಲ್ಕೆ ಮಱುಗುತಿರ್ಪರ್ ಗೊರವರ್: **ಸಮಯಪ, ಸಮಯಪ,** ೧೪. ೨೨)

**ದೇಹಾರಂಗೆಯ್** – ಆರೋಗಿಸು (ಸವಳದೆ ದೇಹಾರಂಗೆಯ್ದುವಹಿತಮೆಮಗೆಂದು ಜೈನರಲ್ಲದ ನೃಪರ್.. .. ಬೇಂಟೆವೋಪರ್: **ಸಮಯಪ,** ೧೪, ೮೧)

**ದೇಹಿ** – ದೇಹವುಳ್ಳುದು, ಜೀವಿ (ನೀಂ ನಿಃಶಂಕತೆಯಿಂ ಇನಿತು ದೇಹಿಗಳಂ ಕೊಂದಪೆ ನರಕದೊಳ್ ನಿವಾರಣೆವಡೆವೈ: **ಯಶೋಧಚ,** ೪. ೭೦)

**ದೇಹೋಚ್ಛ್ರಿತಿ** – ದೇಹದ ಎತ್ತರ (ಅಮರನ ದೇಹೋಚ್ಛ್ರಿತಿ ಮೂಱು ಮೊಟಂ ಪರಮಾಯುವು ಇರ್ಪತ್ತೆರಡು ಸಮುದ್ರೋಪಮಂ: **ಸುಕುಮಾಚ,** ೯. ೩೩)

**ದೈತ** – ನಲ್ಲ, ಗಂಡ (ಆತಂ ನಿನ್ನಯ ಮೋಹದ ದೈತಂ ವಿಭು ನಾಗದತ್ತಂ: ಅಂಗಜವಿಕಳೋಪೇತಂ **ಪುಣ್ಯಾಸ್ರ,** ೧. ೫೫)

**ದೈತೇಂದ್ರ** – ಒಡೆಯರ ಒಡೆಯ (ದ್ವೈತೀಯಕ ಜಿನಪಂಗೆ ಅದ್ವೈತಂಗೆ ಅಜಿತಂಗೆ ಭುವನದಯಿಂತಗಾಗಳ್ ದೈತೇಂದ್ರೆಲ್ಲರಂ ಗೈಱಗಿದರಾತತ ಪುಣ್ಯಂಗೆ ಜಗದೊಳಗೆಱಗದರೊಳರೇ: **ಅಜಿತಪು,** ೫. ೩)

**ದೈತೇಯ** – ದಿಕ್ಪಾಲಕರಲ್ಲಿ ಒಬ್ಬನಾದ ನಿರ್ಋತಿ (ಮೆಟ್ಟುವೆಂ ವಹ್ನಿಯಂ ಪೊಡೆವೆಂ ಕಾಲಮನಿಕ್ಕಿ ಡೊಕ್ಕರಿಸುವೆಂ ದೈತೇಯನಂ: **ಜಗನ್ನಾವಿ,** ೩. ೧)

**ದೈತ್ಯ** – ರಾಕ್ಷಸ (ಕೃತಯುಗದಿಂದಾವರ್ ತ್ರೇತೆಯೊಳ್ ಪುಟ್ಟಿದವರ್ ಮತ್ತೀಗಳ್ ಈ ದ್ವಾಪರದೊಳ್ ಒಗೆದರ್ ದೈತ್ಯರಿರ್ದಪ್ಪರ್: **ಜಗನ್ನಾವಿ,** ೧. ೬೬)

**ದೈತ್ಯವಿದ್ರಾವಣ** – ರಾಕ್ಷಸನನ್ನು ಸೀಳಿದವನು (ಆವಂ ಅಶೇಷದೈತ್ಯವಿದ್ರಾವಣಂ ಈಗೆ ದುರ್ಗವಿಭುಗೆ ಅಚ್ಯುತಂ ಅಚ್ಯುತಸೌಖ್ಯಕೋಟಿಯಂ: **ಪಂಚತಂತ್ರ,** ೧)

**ದೈತ್ಯಾರಾಧ್ಯ** – ಶುಕ್ರಗ್ರಹ (ಸೌರಂ .. .. ಚಂದ್ರಕುಜಬುಧ ಅಮರಗುರು ದೈತ್ಯಾರಾಧ್ಯರಮಂದಫಣಿಗಳಂ ಆರಾಧಿಪನೊಮದು ಮಣೆಗೆ ತಂದನಿಬರುಮಂ: **ಸಮಯಪ,** ೮. ೧೬೩)

**ದೈವವಾಡು** – ದೇವರ ವೇಷ ಹಾಕಿ ಕುಣಿ (ದೇವವಾಡಲ್ಕದೇಕೆ ಖಳಕರ್ಮಬಂಧಮಂ ಬಿಡಿಸುವವಂ: **ಸಮಯಪ,** ೪. ೧೪೫)

**ದೈವವಿಸೂತ್ರ** – ವಿಧಿನಿಯಮ (ದೈವವಿಸೂತ್ರಮಂ ಪುರುಷಕಾರಂ ಮೀಱಲೇನಕ್ಕುಮೇ: **ಜಗನ್ನಾವಿ,** ೩. ೧೯)

**ದೈವಹೀನ** – ಅದೃಷ್ಟಹೀನ (ವಸುಹೀನಂ ದುಶ್ಶಿಕ್ಷಂ ವ್ಯಸನಯುತಂ ದೇಶಕಾಲಬಲರಹಿತಂ ಭಾವಿಸೆ ದೈವಹೀನಂ: **ಪಂಚತಂತ್ರ,** ೩೨೯)

**ದೈವಾಯತ್ತ** – ದೇವರ [ಅದೃಷ್ಟದ] ವಶದಲ್ಲಿರುವ (ಸಮರಜಯಂ ದೈವಾಯತ್ತಂ ಅದಱಿಂ ಆ ಪುರುಷಕಾರಮೆಮಗಾಯ್ತಾಗಳ್: **ಗದಾಯು,** ೩. ೪೬)

**ದೊಂಡೆ** – ತೊಡಕಾದ (ನಾನಾ ಮೃಗಾನೀಕದ ಕರ್ಗಂಡಂಗಳಂ ದೊಂಡೆಗಳನಡಸಿ ನುಂಗುತ್ತುಂ: **ಶಾಂತೀಶ್ವಪು,** ೩. ೬)

**ದೊಂಡೆಗರುಳ್** – ಹೆಣೆದುಕೊಂಡ ಕರುಳು (ಕೆನ್ನೆತ್ತರಂ ಕೆನೆಗೊಂಡಾಜಿದ ಪಾಲ್ಗೆ ದೊಂಡೆಗರುಳಂ ಕರ್ಬಿಂಗೆ ಲೆಕ್ಕಕ್ಕೆ ತಂದು: **ಪಂಪಭಾ,** ೧೨. ೧೬೦)

**ದೊಂದೆ** – ಪಂಜು (ಪುಲ್ಲ ದೊಂದೆ ಪೆಟಲುಪ್ಪಿನ ಪೆರ್ದಿಡಿಮರ್ದು ಎಂಬಿವಂ .. .. ಇಟ್ಟು ಕಾದುತಿರೆ: **ರಾಜಶೇವಿ,** ೬. ೧೧೬)

**ದೊಂಬ** – ಡೊಂಬ, ಕೊಲ್ಲಟಿಗ (ಕೌಶಂಬೀಪುರದೊಳ್ ಬಹುಕರ್ಮಿಯೆಂಬ ದೊಂಬನ ಮನೆಯೊಳ್ ಸ್ತ್ರೀವೇದದಿಂ ಬೆಳ್ಗತ್ತೆಯಾಗಿ ಪುಟ್ಟಿ: **ಸುಕುಮಾಚ,** ೫. ೧೨ ವ)

**ದೊಂಬದಡ್ಡಿಸ** – ದೊಂಬರ ಡೋಲು (ಪೆಸರ್ ನಿನಗೆ ಕೇಳ್ ಮೊಸರ್ ನಿನ್ನ ಮೆಯ್ ದೊಂಬದಡ್ಡಿಸಕ್ಕೆ ಗುಜೆಯಪ್ಪುದು: **ಆದಿಪು,** ೩. ೬೦)

**ದೊಗ್ಗಳೆ** – ಒಂದು ಗಿಡದ ಎಲೆ, ಸೊಪ್ಪು (ಸುರುಚಿರ ಚಕ್ಕವತಂ ಚಿರಿಕೆ ರಾಜಗಿರಿ ಕೆಸವು ಕೀರೆ ದೊಗ್ಗಳೆಯೆಲೆ ವಾದುರವಂ ಬಡಿಸಿದರ್: **ಧರ್ಮಪ,** ೨. ೫೮)

**ದೊಡ್ಡಮಾರ್ಗ** – ಆನೆಕುದುರೆಗಳ ಕಿರುದೊಡೆಯ ದದ್ದು (ದೊಡ್ಡಮಾರ್ಗವೆಂದು ಆನೆಕುದುರೆಗಳೊಳದ ಕಿಱುದೊಡೆಯ ಜಡ್ಡು: **ಶಬ್ದಮದ, ಪ್ರಸಾ,** ೧೧೭)

**ದೊಡ್ಡರು** – ವೃದ್ಧರು, ಹಿರಿಯರು (ಅಂತು ಪೊಱಮಡುವ ಅರಾತಿ ಕಾಲಾನಲನಂ ಕಂಡು ಕಡ್ಡುವಂದ ದೊಡ್ಡರೆಲ್ಲಂ ಮುಸುಱಿ: **ಪಂಪಭಾ,** ೩. ೬೧ ವ)

**ದೊಡ್ಡಿತ್ತು** – ದಪ್ಪನಾದ (ಒಲ್ದು ನೋಡುವ ಗಾಡಿಕಾರ್ತಿಯರ ಕಣ್ಗೆ ಕಾಮನ ಅಡ್ಡಣದಂತೆ ದೊಡ್ಡಿತ್ತಾಗಿ ಮೀಱುವ ಉದ್ದ್ವೃತ್ತವೃತ್ತತೆಯಂ ಈಟ್ಟುಕೊಂಡಂತೆ ಉದ್ದ್ವೃತ್ತಂಗಳಾದುವು: **ಪಂಪಭಾ,** ೨ ೩೯ ವ)

**ದೊಡ್ಡಿವೆಸರ್** – ದೊಡ್ಡ ಹೆಸರು (ವಿಜಿಗೀಷುತ್ವದೊಳ್ ಒಂದಿ ಗೋವುಳಿಗನಪ್ಪಂ ಮತ್ಸ್ಯನಾಳಾಗಿ ವಾರಿಜನಾಭಂ ಹರಿಯೆಂಬ ದೊಡ್ಡಿವೆಸರಂ ಪೊತ್ತಿರ್ದ ನೀಂ ಮಂತ್ರಿಯಾಗೆ.. ..ರಣದೊಳ್ ಭೂಭಾಗಮಂ ನೆಟ್ಟನೆ ಒಟ್ಟಜೆಯಿಂದ ಅಂಜಿಸಿ ಕೊಳ್ಳದಿರ್ಪರೆ: **ಪಂಪಭಾ** ಪರಿಷತ್ತು, ೯. ೪೭)

**ದೊಣೆ** – ನೀರಿರುವ ಸ್ವಾಭಾವಿಕ ಹೊಂಡ (ಜಳಪ್ಲವದೊಳ್ ನಸುದೇಂಕುದೇಂಕೆ ತಳ್ತಲರ್ಗಣೆ ನಟ್ಟು ತೀವೆ ದೊಣೆಯಂತಿರೆ ಮೆಲ್ಲನೆ ಮೆಯ್ ಬೆಳರ್ತು: **ವರ್ಧಮಾಪು,** ೮. ೯೧); ಬತ್ತಳಿಕೆ (ಶಲ್ಯನಂ ರಥಮಂ ಎಸಗಲ್ವೇಟ್ಟು ದಿವ್ಯಾಸ್ತ್ರಂಗಳ ದೊಣೆಗಳಂ ಎರಡುಂ ದೆಸೆಯೊಳಂ ಬಿಗಿದು ಕಾಳವಟ್ಟದ ಬಿಲ್ಲಂ ಕೆಂದಳದೊಳ್ ಅಮರೆ ಪಿಡಿದು ನೀವಿ ಜೇವೊಡೆದಾಗಳ್: **ಪಂಪಭಾ,** ೧೨. ೧೩೫ ವ)

**ದೊಣ್ಣೆ** – ದೊಣೆ (ಬಾವಿ ಪೊಕ್ಕರಣೆ ದೀರ್ಘಿಕೆ ಪೆರ್ಗೆಱೆ ದೊಣ್ಣೆ ಪೂಗೊಳಂ ಬಗರಗೆ ಬೆಂಚೆ ಪಳ್ಳ ಮೊಱವೆಂಬ ಜಲಾಶಯಮಿಂತು ಸುತ್ತಲುಂ: **ಪುಷ್ಪದಂಪು,** ೨. )೫೪

**ದೊಣೆವೋಗು** – ಗುಳಿಬೀಳು (ಕಡಿಕಂಡಮಾದ ಮೆಯ್ಯುಂ ಕುಣಿಲ್ವಾಱುವ ಮುಂಡಮುಂ ಮುಂಡುವೋದ ಕಯ್ಯುಂ ಕಂಡುವೋದ ತೊಡೆಯುಂ ಪಿಸುಟ್ಟಿ ಕಿಟಿಲ್ವೊಡೆಯುಂ ಕಣೆವೋದ ಕಣಕಾಲುಂ ದೊಣೆವೋದ ಮೇಗಾಲುಂ: **ಪಂಪರಾ,** ೧೩. ೫೪ ವ)

**ದೊಮ್ಮಳಿಸು** – ಸಂಭ್ರಮಿಸು (ಅಮಿತಾಳಾಪಂಗಳಿಂ ದೊಮ್ಮಳಿಸಿ ಕಿನಿಸಿ ಕೊಟ್ಟೂಳ್ವ ತಾತ್ಪರ್ಯಮೇಂ ಎಮ್ಮಗಳ್ ಬಂದು ಎಮ್ಮ ಕೈಯೊಳ್ ಬ್ರತಮನೊಸೆದು ಕೈಕೊಂಡೊಡೇನಾಯ್ತು: **ಸುಕುಮಾಚ,** ೭. ೪೦); ಗಾಬರಿಗೊಳ್ಳು (ಆ ಸಮಯದೊಳ್ ಅಗ್ನಿಸಿಖಾಮುಖಕ್ಕೆ ದೂರಮಪ್ಪ ಬಕ್ಕಬಯಲ ತಾಣದೊಳ್ ದೊಮ್ಮಳಿಸಿ ನಿಂದು ಬಹುಜನಂಗಳ್ ಉಮ್ಮಳಿಸಿ ತಮ್ಮೊಳಿಂತೆಂದರ್: **ಪಂಪರಾ,** ೧೧. ೧೫೫ ವ)

**ದೊರಕು** – ಸಿಗು (ವರರಾಜ್ಯಂ ಶ್ರೀಸಹಿತಂ ದೊರಕಲ್ ಕೈಕೊಳ್ಳದಿರ್ಪರಾರೀ ಜಗದೊಳ್: **ಪಂಚತಂತ್ರ,** ೧೬೭)

**ದೊರೆ** – ರಾಜ (ಗಾಂಗೇಯಂ ದೊರೆಯ ಪಿರಿಯ ಮಗನುಂ ಕ್ರಮಕ್ರಮಾರ್ಹನುಂ ಇರ್ದಂತೆ ಎನ್ನ ಮಗಳಂ ಕುಡೆವು: **ಪಂಪಭಾ,** ೧. ೭೦ ವ); ಸಿಗು (ಈಕ್ಷಣೋತ್ಕರಪುಟದಿಂದೆ ಪೀರ್ದಪರೆನಲ್ ನಗರಾಂಗನೆಯರ್ ಮಹೋತ್ಸವಂ ದೊರೆದುದು ಎನುತ್ತಲಂಪು ಮಿಗೆ ನೋಡಿದರಾ ಮನುಜೇಂದ್ರಚಂದ್ರನಂ: **ಕಾದಂಬ,** ೩. ೩೦); ಸಮಾನ (ರಸಭಂಗಭಯದಿನಿಂದ್ರಂ ಪೊಸತೊಂದು ಆ ದೊರೆಯ ಪಾತ್ರಮಂ ತಂದನನುಸಂಧಿಸುವುದುಂ: **ಆದಿಪು,** ೯. ೪೨); ಯೋಗ್ಯ (ನಿಮ್ಮಯ ಧರ್ಮದ ಮಕ್ಕಳೆವು ಎಮ್ಮಂ ಕಡೆಗಣಿಸಿ ನಿಮಗೆ ನೆಗಟ್ಟುದು ದೊರೆಯೇ: **ಪಂಪಭಾ,** ೧೧. ೧೨೮); ಸಮೀಪಿಸು (ಮತ್ತುಟಿದ ವಿದ್ಯೆಗಳ್ ಓಜರೆ ಚಟ್ಟರ್ ಎಂಬಿನಂ ನೆರೆದುವು ಗಳ ತನ್ನೊಳಾರ್ ದೊರೆ ಗುಣಾರ್ಣವನಂತು ಕುಶಾಗ್ರಬುದ್ಧಿಗಳ್: **ಪಂಪಭಾ,** ೨. ೩೪); ಪ್ರಸಿದ್ಧಿ (ಕಾಗಿಣೆಗೆ ಮರಂ ಬೀಱಿಲ್ವೋಗಿರ್ಕುಂ ಕಡಲ ಕಡೆವರಂ ನಿಮಿರ್ದ ಮಹೀಭಾಗಮಂ ಅನುಜಂಗಿತ್ತಿಂ ಭಾಗಿಗಳಾರ್ ಸೀರಪಾಣಿಯ ಒರೆಗಂ ದೊರೆಗಂ: **ಪಂಪರಾ,** ೬. ೧೩೪)

**ದೊರೆಕೊಳ್** – ಸಿಗು (ಪ್ರಚಾರಮಣಮಲ್ಲದುದು ನೆರೆ ಕಂಡು ನಾಮೆ ಪೋಪುದು ದೊರೆಕೊಳ್ಳದಾನವದೊಳಿರ್ದವೆ ಅನಾಥೆಯರಾಗಿ: **ಶಾಂತೀಶ್ವಪು,** ೯. ೧೮); ಉಂಟಾಗು (ಸುರಿವರಲ ಒಂದು ಬೆಳ್ಸರಿಯದು ಆತ್ಮತನೂಭವನ ಉತ್ತಮಾಂಗದೊಳ್ ದೊರೆಕೊಳೆ: **ಪಂಪಭಾ,** ೫. ೧೦೩); ಸಮಾನವಾಗು (ದೊರೆಕೊಂಡಿರೆ ಸೊಗಯಿಸುಗುಂ ಪುರಾಣಕಾವ್ಯಪ್ರಯೋಗದೊಳ್ ತತ್ಕಾಲಂ ವಿರಸಂ: **ಕವಿರಾಮಾ,** ೧. ೫೦)

**ದೊರೆಕೊಳಿಸು** – ಆಚರಿಸು (ಅಮರನಾಯಕರೆಲ್ಲಂ ನೆರೆದು ವಿವಾಹಮನಾಕೆಗೆ ದೊರೆಕೊಳಿಸಿದರ್: **ಆದಿಪು,** ೬. ೮೬); ಉಂಟುಮಾಡು (ಕರವಿಲುಳಿತ ನೀಲಕಬರಿಭರಮಂ ಪಿಡಿದುಂ ಪರಿಭವಿಸಲ್ ಕೃಷ್ಣೆಗೆ ಮಿಗೆ ದೊರೆಕೊಳಿಸದೆ ಕೋಪಮಂ ಮನಸ್ತಾಪಮುಮಂ: **ಗದಾಯು,** ೧. ೫೯); ಹೋಲಿಕೆಯಾಗು (ದೊರೆಕೊಳಿಸುವೊಡೆ ಪರಸ್ರ ವಿರೋಧಿಗಳ್ ನಿರುತಮೆನೆ ವಿರೋಧೋಪಮಿತಂ: **ಕವಿರಾಮಾ,** ೩. ೭೫); ಸರಿಯಾಗಿ ಗ್ರಹಿಸು (ಸ್ಮರನಸ್ತ್ರಸಮಿತಿಯದು ನಿರ್ಭರಮಂಗಮನಮರ್ಚಿ ಪೋಗೆಯುಂ ಪೋಬಟೆಯಂ ದೊರೆಕೊಳಿಸಲಾಗದದಱಿಂ ಶರತತಿಲ್ತೆಂಬುದಿಂತು ಧರ್ಮಾಪೋಹಂ: **ಕವಿರಾಮಾ**. ೩. ೧೮೫)

**ದೊರೆಗಾಣ್** – ಸಮನಾಗಿ ಕಾಣು (ದೊರೆಗಾಣೆಂ ನಿನಗೆ ಜಿನೇಶ್ವರ .. .. ಮಂದರಗಿರಿಗೆ ಮಂದರಗಿರಿಯೆ ದೊರೆ ಜಲಧಿಗೆ ಅಗಾಧಜಲಧಿ ದೊರೆ: **ಅಜಿತಪು,** ೪೮. ೨೨)

**ದೊರೆಗಿಡಿಸು** – ಅಯೋಗ್ಯವಾಗಿಸು (ಕುರುವೃದ್ಧಂ ಕುಲವೃದ್ಧಂ ಸರಿತ್ಸುತಂ ತಕ್ಕನೆಂದು ನಂಬಿದ ಸಭೆಯೊಳ್ ದೊರೆಗಿಡಿಸಿ ನುಡಿದೊಡೆ ಏನೊಲವರಮೆನ್ನದೆ ನೀನುಮದನೆ: **ಪಂಪಭಾ,** ೬. ೪೪)

**ದೊರೆಗಿಡು** – ಅಸಮರ್ಥವಾಗು (ಮತ್ ಕರಯುಗಂ ದೊರೆಗಿಡೆ ಪೆಱಂಗೆ ಮುಗಿವುದೆ ಕಿರೀಟಮಿದು ಪೆಂಪುಗಿಡೆ ಪೆಱಂಗೆಱಗುವುದೇ: **ಆದಿಪು,** ೧೨. ೧೦೦)

**ದೊರೆಗೆವರ್** – ಹೋಲಿಕೆ ಬರು (ಪುರುತನಯರ್ ಭುಜಬಲಿಯುಂ ಭರತನುಮೆನೆ ದೊರೆಗೆವಂದೊಡೆ ಆರಳವುಮಂ .. .. ತೂಗಲ್ ತುಲಾದಂಡಮಲ್ತೆ ಮದ್ಭುಜದಂಡಂ: **ಆದಿಪು,** ೧೪. ೮೧)

**ದೊರೆತು** – ಸಮ, ಯೋಗ್ಯ (ಮುನ್ನಾಲೋಚಿಸದಾವುದು ಮನ್ನೆಗಟಲ್ಲಾಗದು ಎಂಬುದು ಏ ದೊರೆತು: **ಆದಿಪು,** ೧೨. ೧೦೫)

**ದೊರೆಯಂ** – ಯೋಗ್ಯತೆಯುಳ್ಳವನು (ಈ ದೊರೆಯುಮಂ ಅಳವಟಿಯೆ ಧರೆಯೊಳ್ ತಂದಿಕ್ಕಿ ಭಂಗಮಂ ಮಾಡುವೆನೇ: **ಆದಿಪು,** ೧೪. ೧೧೨)

**ದೊರೆವಡೆ** – ಪ್ರಸಿದ್ಧಿಗೊಳ್ಳು (ದೊರೆವಡೆದ ಯಶೌಘನ ಭೂವರತಿಳಕನ ಕಣ್ಗಳ್ ಅಂಗರಕ್ಕರ್ ಮನಂ ಆಭರಣಂ: **ಯಶೋಧಚ,** ೨. ૩)

**ದೊರೆವೆಱು** – ದೊರಕು (ಎಂಬ ಪೆಂಪು ದೊರೆವೆತ್ತು ಕಥಾರಸಂ ಅತಿಶಯಮುಂ ಪೊಂಪುಟೆಯೊಳಿಯುಂ ಆಗೆ: **ಶಾಂತಿಪು,** ೬. ೫೯ ವ); ಸರಿಯಾಗು; ಶ್ರೇಷ್ಠವಾಗು (ಒರ್ವಂ ಶ್ರೀವಿಜಯಂ ನೀನೊರ್ವಯ್ ಖಚರೇಶ ಪೊತ್ತು ನಿಂದಿರ್

ದೊರೆವೆತ್ತು ಉರ್ವೀಭರಂ: **ಶಾಂತಿಪು,** ೫. ೮೪); ಶೋಭಿತವಾಗು

**ದೋಂಟಿ** – ದೋಟಿ, ತುದಿಯಲ್ಲಿ ಕೊಕ್ಕೆಯಿರುವ ಉದ್ದನೆಯ ಕೋಲು (ಬೇಡಂ ತರುಶಾಖಾಖಗನೀಡಮಂ ಅಳ್ಳಿಱಿದು ದೋಂಟಿಯಿಂ ಕೆದಱುವವೋಲ್: **ಅನಂತಪು,** ೧೩. ೨೮)

**ದೋಃಕಂಡೂಯನ** – ತೋಳಿನ ತೀಟೆ (ಎನಗೆ ರಣರಭಸದಿಂ ಗಡ ಮನುಜಂ ಮೇಲೆತ್ತಿ ಬಂದನಿಂ ದೋಃಕಂಡೂಯನಮಂ ಕಟಿಲ್ವಡೆಯಾಯ್ತು ಎನುತ್ತುಂ ಉತ್ತರಳತಾಮ್ರೋಚನನಾದಂ: **ಪಂಪರಾ,** ೧೩. ೩)

**ದೋಣಿ** – ನೀರಿನ ತೊಟ್ಟಿ (ಕಲ್ಲ ದೋಣಿಯಲೆಱೆದ ನೀರಂತೆಕೈಕೊಳ್ಳದೆ ಸತಿಯರ ರೂಪನೆ ಭಾವಿಸುತಿರ್ಪುದುಂ: **ಧರ್ಮಾಮೃ,** ೭. ೧೦೩ ವ); ತೇಲುವ ಸಾಧನ (ತುಳುಕುನೀರಾಡಿದಂ ದೋಣಿಯಿಂದೇಱಿದನೆಂಬಂತೆ: **ಸುಕುಮಾಚ,** ೯. ೪೩); ತಟ್ಟೆ, ಹರಿವಾಣ (ನಾಯುಣ್ಣದ ದೋಣಿಯೊಳ್ ಇಡಿದಂಗೆ ಪದಯಿದನೆ ಕರಂ: **ಸುಕುಮಾಚ,** ೨. ೬೯)

**ದೋಣಿಕೊಂಡ** – [ದ್ರೋಣಿಕುಂಡ] ದೋಣಿಯಾಕಾರದ ಹರವಿ (ಒಂದು ದೋಣಿಕೊಂಡಮಂ ತರಿಸಿ ನೀರಂ ತೆಕ್ಕನೆ ತೀವಿ ಅದಱೊಳಗೆ ಚಮರಿಯರನಿರ್ದ್ದಿ ತೆಗೆದು ಬಳಸಿಯುಂ ಬೀಸಿದಾಗಳ್: **ವಡ್ಡಾರಾ,** ಪು ೬೮, ಸಾ ೪)

**ದೋಣಿವೋಗು** – ತಗ್ಗುಬೀಳು, ಹಳ್ಳವಾಗು (ಇರ್ಬಗಿಯಾಗಿ ಪೋಟ್ಟು ನೀರೇಱಿದ ನಾಳಿಪುಣ್ಣೊಡೆದು ಸೌಳೆನೆ ಸೀಳ್ದುದು ದೋಣಿವೋಪಿನಂ: **ಸುಕುಮಾಚ,** ೫. ೧೬)

**ದೋರಿಯ** – ವಸ್ತ್ರವಿಶೇಷ (ಪೊಸ ಪಸಗೆಯ ಮಂಜಿಟಿಗೆಯ ಮಿಸುಗುವ ದೋರಿಯದ ಪಟಿಯ ಪುಲ್ಲಿಯ ಸೊಂಪಂ ಪಸರಿಸಿದ ಪಕ್ಕರಕ್ಕೆಗಳೆಸೆದಿರ್ದುವು: **ಕಬ್ಬಿಗಕಾ,** ೨೦೨)

**ದೋರೆಗಾಯ್** – ಅರ್ಧ ಮಾಗಿದ ಕಾಯಿ (ಸಮಾವಿನ ದೋರೆಗಾಯ್ಗಳಂ ಗೊಲೆವೆರಸು ನೆಲಕ್ಕೆ ಬೀಟಲೀಯದೆ: **ಧರ್ಮಾಮೃ,** ೧೩. ೧೮ ವ)

**ದೋರೆಗೆಂಬಿಸಿಲ್** – ದೋರೆಗಾಯಿಗಿರುವಂತಹ ಕೆಂಬಿಸಿಲು (ನೇಸಱ ದೋರೆಗೆಂಬಿಸಿಲ್ಗಲರಿಸಿಂತಿರಾಯ್ತು: **ಅನಂತಪು,** ೧೦. ೩೫)

**ದೋರೆವಾಯ್ದೆಱೆ** – ದೋರೆಹಣ್ಣಿನಂತೆ ನಸುಗೆಂಪಾದ ತುಟಿ (ಪಾಮರಿಯರ ದೋರೆವಾಯ್ದೊಱೆಗಳಂ ನೆಱಿಮೀಕ್ಷಿಸಿ ಬೀಡೆವೆತ್ತು ಬಿತ್ತರಿಸುವ ದಾಡಿಮವ್ರಜಂ: **ಶಾಂತೀಶ್ವಪು,** ೧. ೯೩)

**ದೋರ್ಗರ್ವ** – ಬಾಹುಬಲದ ಬಗೆಗಿನ ಹೆಮ್ಮೆ (ದೋರ್ಗರ್ವಮಂ ಇರ್ವಲಂ ಪೊಗಟ್ವಿನಂ ಸೌಮಿತ್ರಿಯುಂ ರಾಮನಂ ವಿರಥರ್ ಮಾಡಿ ರಣಾಗ್ರದೊಳ್ ಪಿಡಿದು ತಂದಾಮ ಕೊಟ್ಟಪೆಂ ಸೀತೆಯಂ: **ಪಂಪರಾ,** ೧೪. ೧೧೯)

**ದೋರ್ದಂಡ** – ಭುಜದಂಡ (ಆ ಬಲ್ಲಿದಂ ಸುರಂ ಆ ಮಾಗಧನಲ್ಲಿ ಭೂಭುಜನ ದೋರ್ದಂಡಕ್ಕೆ ಪುಣ್ಯೋಸಯಂ ನೆರಮಕ್ಕೆ: **ಆದಿಪು,** ೧೨. ೧೨೫); ಪರಾಕ್ರಮ (ಮತ್ತ ಮಾತಂಗ ಪದನಖ ಖರ್ವಿತ ಉರ್ವೀತಳಮುಂ ಪ್ರಚಂಡ ಮಾರ್ತಂಡ ಮರೀಚಿ ತೀವ್ರ ಜ್ವಳನ ಆಸ್ಫಾರ ಕರಾಳ ಕರವಾಳ ಭಾಮಂಡಳ ಪರೀತ ಉದ್ಯತ ದೋರ್ದಂಡ ಚಂಡಪ್ರಚಂಡ ಸುಭಟ: **ಪಂಪಭಾ,** ೧೩. ೫೧)

**ದೋರ್ದರ್ಪ** – ದೋರ್ಗರ್ವ (ಅದೆ ಕಂದರ್ಪಂಗೆ ದೋರ್ದರ್ಪದ ಮೊಲ್ ಅದೆ ಪುಷ್ಪೇಷುಗೆ ಈ ಲೋಕಮಂ ಗೆಲ್ವ ಅದಟಿಂದೆತ್ತಿರ್ಪ ಚೈತ್ರಧ್ವಜಂ; **ಅಜಿತಪು,** ೨. ೪೬)

**ದೋರ್ಬಲ** – ಬಾಹುಬಲ (ಕಾಡ ಬಡನರಿ ಮೊಲ ಪುಲ್ಲೆಗಳಲ್ಲಿ ನಿನ್ನ ಸಾಹಸಮುಂ ದೋರ್ವಲಮುಂ ಮೆಱೆಗುಂ: **ಶಬರಶಂ,** ೪. ೨೭)

**ದೋರ್ಭಂಗ** – ತೋಳು ಮುರಿ, ಸೋಲಿಸು (ವೀರಂಗೆ ದೋರ್ಭಂಗಂ ಮಾಡಿದರೇನಲಂಘ್ಯಬಲನೋ ರಾಮಾನುಜಂ ಲಕ್ಷ್ಮಣಂ: **ಪಂಪರಾ,** ೮. ೨೯)

**ದೋರ್ಲತಾ[ತೆ]** – ತೋಳೆಂಬ ಬಳ್ಳಿ (ಸುಲಲಿತ ದೋರ್ಲತಾಕುಸುಮಮಂಜರಿಯಂತಿರೆ ಚಾಮರಂ: **ರಾಜಶೇವಿ,** ೧೨. ೪೪)

**ದೋರ್ವಲ** – ಬಾಹುಬಲ (ಎಂದು ಕೈದವಮಿಲ್ಲದ ನಲ್ಮೆಯಂ ನಾಲಗೆಯ ತುದಿಗೆ ತಂದು ನುಡಿದಳ್ ಮತ್ತೊರ್ವಳ್ ತನ್ನ ಅಣ್ಣನ ದೋರ್ವಲದ ಅಗುರ್ವಂ ನಚ್ಚಿ: **ಪಂಪಭಾ,** ೧೦. ೪೫ ವ)

**ದೋರ್ವಲನ** – ಬಾಹುಚಲನೆ (ಚಾರಿ ಮೆಟ್ಟುವ ಭಂಗಿ ದೋರ್ವಲನಂ ಮನಂಗೊಳೆ .. .. ಮುರಾರಿ ಕೈಪಱೆಗಾಡಿದಂ: **ಜಗನ್ನಾವಿ,** ೩. ೫೨)

**ದೋರ್ವಳಯ** – ತೋಳಬಂದಿ (ಕಂಕಣಮಂ ತಗುಳ್ಚಿ ದೋರ್ವಳಯಮನಿಕ್ಕಿ ಮುದ್ರಿಕೆಯನೇಱಿಸಿ: **ಪುಷ್ಪದಂಪು,** ೭. ೬೨)

**ದೋವತ್ತಿ** – ಧೋತ್ರ, ಪಂಚೆ (ಗಾವಿಲನೊರ್ವ ಪಾರ್ವಂ ದೋವತ್ತಿಯಂ ಪಿಳಿದು ನಭದೊಳ್ ಒಣಗಿಕ್ಕಿದೊಡೆ: **ಸಮಯಪ,** ೧೨. ೩೨)

**ದೋಷಾವಿಳ** – ದೋಷಪೂರಿತವಾದ (ದೋಷಿಯ ತೆಱಂ ಸುಕರ್ಮಂ ದೋಷಾವಿಳಮಪ್ಪುದು: **ಸಮಯಪ,** ೧೪. ೩)

**ದೋಶ್ಚಕ್ರ** – [ದೋಃ+ಚಕ್ರ] ಕೈವಶವಾದ ಚಕ್ರಾಯುಧ (ಚಕ್ರರತ್ನಮೊಂದೆಯಲ್ತು ಚಕ್ರಿಗಾನುಮಲ್ತೆ ದೋಶ್ಚಕ್ರಂ ಎಂದು ಮುಂದೆ ಬಂದು ನಿಲ್ವ ಮಾಟ್ಕೆಯಿಂ: **ಆದಿಪು,** ೧೨. ೫೫)

**ದೋಶ್ಶಾಲಿ** – ಪರಾಕ್ರಮಿ (ವಿಜಯಾರ್ಧನಗಕ್ಕೆತ್ತಿದಂ ಅಜೇಯ ದೋಶ್ಶಾಲಿ ರಾವಣಂ: **ಪಂಪರಾ,** ೧೦. ೧೯೭)

**ದೋಷ** – ತೊಂದರೆ (ಶಂಕಿಸದಿರು ಮುಟ್ಟದು ಗುಣಿಗೆ ದೋಷಿಗಕ್ಕುಂ ದೋಷಂ: **ಶಾಂತಿಪು,** ೩. ೮೮); ರೋಗಚಿಕಿತ್ಸೆ (ದೋಷಂ ಪ್ರತಿಕಾರಕ್ರಿಯೆ: **ಅಭಿಧಾವ,** ೧. ೧೨. ೪೨); ತಪ್ಪು (ದೋಷವಪರಾಧ: **ಅಭಿಧಾವ,** ೨. ೨. ೧೮)

**ದೋಷಗವೇಷಣ** – ತಪ್ಪು ಹುಡುಕುವವನು (ಸಭೆಯೊಳ್ ಮಾಷಮುಖದಂತೆ ದೋಷಗವೇಷಣಪರರಪ್ಪರೆಂದೊಡದು ತೆಗಟಲ್ತೇ: **ಆದಿಪು,** ೧. ೨೧)

**ದೋಷಗ್ರಾಹಿ** – ದೋಷವನ್ನು ಕಾಣುವವನು (ದೋಷಗ್ರಾಹಿ ಪುರೋಭಾಗಿ ದುರ್ಮುಖಂ ಮುಖರನವಂ; **ಅಭಿಧಾವ,** ೧. ೧. ೧೭); ಕೆಟ್ಟರಕ್ತ ಹೀರುವವನು (ಆ ಬಾಲಕರ್ ಬಾಲ್ಯದಿಂ ತೊಟ್ಟು ಗೋಳಾಂಗೂಳರಂತೆ ಸಹಜಚಾಪಲ್ಯರುಂ ಜಳೂಕಾಮುಖರಂತೆ ದೋಷಗ್ರಾಹಿಗಳುಂ ಸುರಶರಾಸನದಂತೆ ನಿರ್ಗುಣರು: **ಸುಕುಮಾಚ,** ೨. ೫ ವ)

**ದೋಷಾಕರ** – ದೋಷಗಳ ಆಗರ, ಹದಿನಾರು ಕಲೆಗಳಿಂದ ಕೂಡಿದ ಚಂದ್ರ (ಪೊಲ್ಲದಂ ಏನಾಚರಿಸಿದಳ್ ನಿನ್ನೊಳ್ ಮಹಾಶ್ವೇತೆ ಭೀಕರ ದೋಷಾಕರ: **ಕಾದಂಬ,** ೫. ೧೫೧)

**ದೋಷಾಪಚಯ** – ದೋಷಕ್ಷಯ (ಶುದ್ಧಪಕ್ಷವೃತ್ತರ್ ದೋಷಾಪಚಯೊರಕಾಶರ್ ಎನೆ ಬಾಲಚಂದ್ರದೇವ ಪ್ರಭಾವಮೇನಚ್ಚರಿಯೋ: **ಮಲ್ಲಿನಾಪು,** ೧. ೨೦)

**ದೋಷಾಮಿಷ** – ತಪ್ಪುಗಳೆಂಬ ಎರೆ (ಮಾತ್ಸರ್ಯಮಹಾವಿಷಮಮತಿಯಿಂದೆ ದೋಷಾಮಿಷಮನೆ ಪೊರ್ದಿರ್ಪುವಲ್ತೆ ಕುಕವಿಬಕಂಗಳ್: **ಆದಿಪು,** ೧. ೨೨)

**ದೋಷಾವಹ** – ಕೆಟ್ಟುದನ್ನುಂಟುಮಾಡುವುದು (ದೇವ ಕನಸಿದು ಕರಂ ದೋಷಾವಹಂ ಇಳಿಕಯ್ಯಲಾಗ: **ಯಶೋಧಚ,** ೩. ೧೩)

**ದೋಸಿಗ** – ದೋಷಿ (ದೋಸಿಗರಾರೊ ಪೇಸಿಕೆಯುಮಿಲ್ಲದರಾರ್ ಗಳ ಶೈವರಂದದಿಂ: **ಸಮಯಪ,** ೧೪. ೫೩)

**ದೋಸ್ಸಾರ** – ಬಾಹುಬಲ (ದೋಸ್ಸಾರನಲ್ಲದಂಗೇವುದೊ ಪೇಟ್ ತೇರೆಂದು ಸಿಂಹರಥಮಂ ವೀರಶ್ರೀರಮಣನೇಱದಂ ರಘುವೀರಂ: **ಪಂಪರಾ,** ೧೪. ೧೩೦)

**ದೋಹದ** – ಬಸಿರಿನ ಬಯಕೆ (ತೃಷ್ಣಾರ್ತಿಕ್ಷಯಕರನಿರೆ ತಂ ಗರ್ಭಾಶಯದೊಳ್ ತೋಱುಗುಮೆ ದೋಹದಂಗಳವೊಂದುಂ: **ವರ್ಧಮಾಪು,** ೧೧. ೬೨)

**ದೋಹನ** – ಹಾಲು ಕರೆಯುವುದು (ಗೋದೋಹನಲೀಲೆಯೊಳ್ ಅಬ್ಜೋದರನಿರೆ ಕಂಡು ದಾನಪತಿ .. .. ಈಕ್ಷಿಸಿದಂ: **ಜಗನ್ನಾವಿ,** ೫. ೭೯)

**ದೋಹಲ** – ಇಚ್ಛೆ (ದೋಹಲವಿಚ್ಛೆ: **ಅಭಿಧಾವ,** ೨. ೨. ೩)

**ದೋಹಳ** – ಬಯಕೆ (ಬಾಹುಬಲಿಯ ಸಮರಸಂಘಟ್ಟ ದೋಹಳಮಿದು ದರಿದ್ರಗೇಹಿ ಗರ್ಭದೋಹಳದಂತಾದುದು: **ಆದಿಪು,** ೧೪. ೧೦೨ ವ)

**ದೌವಾರ** – ದ್ವಾರಪಾಲಕ (ಚಿತ್ರನ್ಯಸ್ತ ದೌವಾರ ಪಾರಿಕಾಜನಂಗಳುಮಂ: **ವರ್ಧಮಾಪು,** ೫. ೯ ವ)

**ದೌವಾರಿಕ** – [ದ್ವಾರಪಾಲಕ] ಬಾಗಿಲು ಕಾಯುವವನು (ಮಕರತೋರಣಾಳಂಕೃತ ಜ್ಯೋತಿರಮರ ದೌವಾರಿಕಪರಿಪಾಳಿತ ಬಹಿರಂತರ್ಜಗತೀದ್ವಯನಿಹಿತ: **ಆದಿಪು,** ೧೦. ೨೩ ವ)

**ದೌವಾರಿಕೆ** – ಬಾಗಿಲು ಕಾಯುವವಳು (ಅತಿ ದೂರದೊಳಿರ್ದ ದೌವಾರಿಕೆಯಂ ವೈಶಂಪಾಯನನಂ ಒಡಗೊಂಡು ಬರ್ಪುದೆಂದು .. .. ಬೆಸಸೆ: **ಕಾದಂಸಂ,** ೧. ೨೦ ವ)

**ದೌವಾಳಿ** – ಕುದುರೆಯ ನಡಿಗೆಯ ವಿಶೇಷ (ತುರಂಗಿಗಳಿಂ ಆ ದೌವಾಳಿಗಳಂ ತೋಱುತ್ತೆ ಏಱಿಸಿ ಪಗೆವಡೆಯೊಳ್ ಪೊಕ್ಕು ಕಾದಿದರ್: **ತ್ರಿಷಷ್ಟಿಪು,** ೨೪. ೩೧೫)

**ದೌಸ್ಥಿತ್ಯ** – ದುಸ್ಥಿತಿ (ನಿಮಗೆನ್ನಂತಪ್ಪ ಪುತ್ರಂ ಸಮನಿಸೆ ಸವಸಂದತ್ತು ದೌಸ್ಥಿತ್ಯಂ: **ಕರ್ಣನೇಮಿ,** ೪. ೬೫)

**ದೌಹಿತ್ರ** – ಮೊಮ್ಮಗ, ಮಗಳ ಮಗ (ಮಗಳ ಮಗಂ ದೌಹಿತ್ರಂ: **ಅಭಿಧಾವ,** ೧. ೧೧. ೨೨)

**ದೌಹೃದ** – ದೋಹದ (ನೆಗಟ್ದುವು ಗರ್ಭಸ್ಥನುತ್ಸಾಹಮಂ ತೋಳ್ವಲಮಂ ಸಾಮ್ರಾಜ್ಯಮಂ ಸೂಚಿಸುವಂತೆವೊಲ್ ಅತಿಚೋದ್ಯಂಗಳ್ ದೌಹೃದಂಗಳ್; **ಆದಿಪು,** ೮. ೩೩)

**ದ್ರಾಹ** – ನೀರಾನೆ (ಫಣಿ ನಕ್ರಂ ಚಲದ್ಗ್ರಾಹಂ ಅಂಭಶ್ಶಕುಲಂ ಶಂಬೂಕಂ: **ಉದ್ಭಟಕಾ,** ೧. ೩೫)

**ದ್ಯುಚರ** – ಆಕಾಶಗಾಮಿ (ಖೇಚರ ನಿಶಾಚರ ದ್ಯುಚರ ಸಂಚಾರಮಲ್ಲದೆ ಭೂಚರಗೋಚರಮಲ್ಲೆಂದು ಮುಟ್ಟೆವೆರ್ಪುದುಂ: **ಸುಕುಮಾಚ,** ೭. ೧೮ ವ)

**ದ್ಯುತಿ** – ಪ್ರಕಾಶ (ಇಂದುಪ್ರಭೆಯನಿಳಿಸೆ ವಕ್ತ್ರೇಂದು ಮೆಯ್ ಸೂರ್ಯಕಾಂತ ದ್ಯುತಿಯಂ .. .. ನೆಲಸಿದನಗದೊಳ್ ಸುಪ್ರತಿಷ್ಠಂ ವರಿಷ್ಠಂ: **ನೇಮಿನಾಪು,** ೪. ೧೦೯)

**ದ್ಯುಮಣಿ** – ಸೂರ್ಯ (ನಿಯತ ಪ್ರಾಲೇಯದೀಪ್ತಿ ದ್ಯುಮಣಿ ಭಗಣದೀಪೋಜ್ವಳ ಅಕೃತ್ರಿಮ ಆತ್ಮೋಜ್ವಳಮಪ್ಪ ಆಕಾಶಂ: **ನೇಮಿನಾಪು,** ೧. ೫೩)

**ದ್ಯುಮಣಿಮಯೂಖ** – ಸೂರ್ಯನ ಕಾಂತಿ, ಬಿಸಿಲು (ತಮಮಂ ದ್ಯುಮಣಿಮಯೂಖೋದ್ಗಮಮಲೆವೊಲೆಲಗೆ ಜಗದ ಮಿಥ್ಯಾತ್ವತಮಸ್ತಮಮಂ ಅಕಳಂಕದೇವ ಪ್ರಮಾಣರತ್ನಪ್ರದೀಪರಶ್ಮಿ ಕಳಾಪಂ: **ಆದಿಪು,** ೧. ೧೬)

**ದ್ಯೂತ** – ಜೂಜು (ಕೃತಕದ್ಯೂತವಿನೋದದಿಂ .. .. ಪಾಂಡುರಾಜಸುತರಂ ಕೊಲ್ಕೋಱದ್ಯೆ: **ಗದಾಯು,** ೭. ೪೦); ಜೂಜಿನ ಪಣ (ದ್ಯೂತಕರಂ ದ್ಯೂತಪಣಂ ದ್ಯೂತಮೆನಿಪ್ಪುವು: **ಅಭಿಧಾವ,** ೨. ೧. ೮೮)

**ದ್ಯೋತ** – ಪ್ರಕಾಶ (ಭೂಭಾಗದೊಳ್ ತಂದು ತಾಟಿಸುತುಂ ಕೋಟಲೆಗೊಳ್ವ ರತ್ನಮಕುಟ ದ್ಯೋತ ಉತ್ತಮಾಂಗಂ ವಿರಾಜಿಸುವನ್ನಂ ಪೊರಳ್ವ ಪಗೆಯಂ ಕರ್ಣಾರ್ವಿನಂ ನೋಡಿದರ್: **ಪಂಪಭಾ,** ೧೨. ೧೫೧)

**ದ್ಯೋತಿ** – ಕಾಂತಿ (ಜಾತಪ್ರಿಯನಾತಂ ತನುಜಾತನೆ ತಾನಾಗೆ ತನ್ನ ಕಣ್ಣಿಂ ಮನಕಂ ಜಾತಕುತೂಹಲ ನಾನಾ ದ್ಯೋತಿಶಯಮನರಸನಚಲದಂತಿರೆ ನೋಟ್ಕುಂ: **ಅಜಿತಪು,** ೫. ೫೩);

**ದ್ಯೋತಿಮಂತ** – ಕಾಂತಿಯುಕ್ತವಾದ (ವಿಮಾನಂಗಳ್ .. .. ಅತ್ಯಂತಂ ದ್ಯೋತಿಮಂತಂ ಅಱೆ ಜಿನಮತದೊಳ್: **ಸಮಯಪ,** ೧೧. ೫೫)

**ದ್ರಮ್ಮ** – ಒಂದು ನಾಣ್ಯ (ಬೂತಿಂಗೆ ದ್ರಮ್ಮಮಂ ಕೊಟ್ಟು ಒಡಂಬಡಿಸಿ ತಲೆಯಂ ಕಿರಿಸಿ ಕರಿಯ ಕೋವಣವನುಡಿಸಿ ಪಲ್ಗಳೊಳ್ ಕವಡಿಕೆಯಂ ಕಟ್ಟಿಸಿಕುಂಚಮಂ ಕೊಟ್ಟು: **ವಡ್ಡಾರಾ,** ಪು ೧೭೭, ಸಾ ೧೭)

**ದ್ರವಿಡಭಾಷಾ** – ತಮಿಳು ಭಾಷೆ (ಪಿಳ್ಳನೈನಾರರ್ ಇಂಬಾಗಿರ್ದೊಂದಿತಿಹಾಸಮಂ ದ್ರವಿಡಭಾಷಾಭೇದದಿಂ ಮಾಡಿದರ್: **ರಾಜಶೇವಿ,** ೧. ೭೭)

**ದ್ರವಿಣ** – ಹಣ (ಉಪಾದ್ರಿಯೊಳ್ ದ್ರವಿಣಮಂ ಬಯ್ತುದ್ಧತಂ ತನ್ನುಸಿರ್ ತವೆ ಪಂಕಪ್ರಭೆಯೊಳ್ .. .. ಬೆಂದು: **ಆದಿಪು,** ೫. ೪); ಪರಾಕ್ರಮ (ಧನಮುಂ ವಿಕ್ರಮಮುಂ ದ್ರವಿಣನಾಮಂ: **ಅಭಿಧಾವ,** ೩. ೧. ೧೫)

**ದ್ರವಿಟ** – ದ್ರಾವಿಡ (ಎಲ್ಲರುಮಂ ಆಚಾರ್ಯರ್ ಮಾಡಿ ದ್ರವಿಟವಿಷಯಕ್ಕೆ ಪೋಗಿಂ ಎಂದು ವಿಶಾಖಾಚಾರ್ಯರೊಡನೆ ಎಣ್ಬಾಸಿರ್ವರ್ ರಿಸಿಯರಂ ಅಟ್ಟಿದರ್: **ವಡ್ಡಾರಾ,** ಪು ೮೮, ಸಾ ೨೨)

**ದ್ರವ್ಯ** – ವಸ್ತು (ಮುಕುಂದಂ ನಗಯಜ್ಞೋಪಯೋಗ್ಯ ದ್ರವ್ಯಂಗಳಂ ತಂದು: **ಜಗನ್ನಾವಿ,** ೪. ೯೦ ವ) ಹಣ, ಆಸ್ತಿ (ದ್ರವಿಣಂ ದ್ರವ್ಯಂ ವಸ್ವರ್ಥವಿತ್ತ ರೈ ರಿಕ್ಥ ಸಾರ ಧನವೇಕಾರ್ಥಂ: **ಅಭಿಧಾವ,** ೧. ೬. ೧೨); [ಜೈನ] ಐದು ಬಗೆಯ ಸಂಸಾರಗಳಲ್ಲಿ ಒಂದು (ದ್ರವ್ಯ ಕ್ಷೇತ್ರ ಕಾಲ ಭವ ಭಾವ ಭೇದದಿಂ ಪಂಚವಿಧಂ ಸಂಸಾರಂ: **ಆದಿಪು,** ೧೦. ೬೩ ವ); [ಜೈನ] ಷಡ್ದ್ರವ್ಯಗಳಲ್ಲಿ ಒಂದು (ಜೀವಾದಿ ದ್ರವ್ಯಂಗಳ್ ಆಧಾರಭೂತಮಪ್ಪ ಲೋಕವಿಭಾಗಮೆಂತೆಂದೊಡೆ: **ಅಜಿತಪು,** ೧೧. ೨ ವ); ನೋಡಿ, 'ಸಂಸಾರ' ಮತ್ತು 'ಷಡ್ದ್ರವ್ಯ'

**ದ್ರವ್ಯಲಿಂಗಿ** – ದ್ರವ್ಯರ್ಷಿ (ಒಲವಿಂದೆ ಕೇವಲಂ ದ್ರವ್ಯಲಿಂಗಿಗಳ್ ತನ್ನನಂದು ಬಳಸಿಯುಮಿರೆ: **ಆದಿಪು,** ೯. ೮೨)

**ದ್ರವ್ಯಾನುಯೋಗ** – [ಜೈನ] ಜೀವಾದಿ ಷಡ್ದ್ರವ್ಯಗಳನ್ನೂ, ಏಳು ತತ್ವಗಳನ್ನೂ ನಿರೂಪಿಸುವ ಶಾಸ್ತ್ರಭಾಗ, ನಾಲ್ಕು ಅನುಯೋಗಗಳಲ್ಲಿ ಒಂದು (ದ್ರವ್ಯಾನುಯೋಗಮೆಂಬುದುಂಟು ಅದು ನಿಮ್ಮನ್ನರಪ್ಪ ನಿಶಿತಮತಿಗಳ್ಗೆ ಪಂಚರಾತ್ರಿಯೊಳ್ ಪ್ರತೀತಿಯಕ್ಕುಂ: **ಸುಕುಮಾಚ,** ೩. ೩೭ ವ); ನೋಡಿ, 'ಅನುಯೋಗ'

**ದ್ರಾಘಿಮ** – ದೀರ್ಘತೆ (ಗ್ರಾವಸ್ಥಲಂ ಲೋಹವಾದುವು ರೇಣುಸ್ಥಲಿ ಕಾಜುವಿಟ್ಟುವು ನಿಧಾನದ್ರಾಘಿಮೋದ್ರೇಕದೊಳ್: **ಪಂಪರಾ,** ೭. ೯೭)

**ದ್ರಾವಣಿ** – ಕರಗಿಹೋಗುವ (ತಲಸಂಗಮಾತ್ರ ದ್ರಾವಣಿಯಪ್ಪ ಶಕವರ್ತಿಗಳುಮಂ .. .. ಬಡ್ಡಿಸಿದಾಗಳ್: **ಸುಕುಮಾಚ,** ೧೧. ೨೯ ವ)

**ದ್ರಾವಣೀಯ** – ಕರಗುವ (ಅತಿಮೃದುರಸನಾಸಮ್ಮರ್ದನಮಾತ್ರ ದ್ರಾವಣೀಯ ಘೃತಪೂರಮುಮಂ: **ಆದಿಪು,** ೧೧. ೨೬ ವ)

**ದ್ರು** – ಮರ (ಬೀಟ್ ಬೀಟ್ ಎಂಬಿನಂ ಬೇರ್ಗಳುರ್ವರೆ ಬಾಯಂ ಬಿಡೆ ವಿಶ್ವನಂದಿ ಕಡುಪಿಂ ಕಿಟ್ತಿಂ ಕಪಿತ್ಥದ್ರುಮಂ: **ಶಾಂತೀಶ್ವಪು,** ೭. ೨೭)

**ದ್ರುತ** – ತ್ವರಿತವಾಗಿ (ಬನದಿಂ ಚರ್ಯೆಗೆ ಪೊಱಮಟ್ಟಂ ಮುನಿ ತನ್ನಗವನಮಂ ದ್ರುತವಿಳಂಬಿತಂ ಪೊರ್ದದೆನಲ್: **ಮಲ್ಲಿನಾಪು,** ೧೩. ೧೪೭)

**ದ್ರುತವಿಡು** – ದುಃಖಿಪಡು (ಮಂಗಲಯಾತ್ರೆಯೊಳ್ ದ್ರುತವಿಡಲ್ ಬಾಯ್ವಿಟ್ಟಱಿಲ್ಲಾಗ: **ಅನಂತಪು,** ೩. ೧೦೩)

**ದ್ರುಪದಜಾ** – ದ್ರುಪದನ ಮಗಳು, ದ್ರೌಪದಿ (ಜತುಗೇಹಾನಲದಾಹದಿಂ ವಿಷವಿಶೇಷಾಲಿಪ್ತ ಗುಪ್ತಾನ್ನದಿಂ ಕೃತಕದ್ಯೂತವಿನೋದದಿಂ ದ್ರುಪದಜಾ ಕೇಶಾಂಬರ ಆಕೃಷ್ಟಿಯಿಂ ಧೃತರಾಷ್ಟ್ರಾತ್ಮಜ ಪಾಂಡುರಾಜಸುತರಂ ಮುನ್ನಂ ಕೊಲಲ್ಕೊಡ್ಡಿದಯ್: **ಗದಾಯು,** ೭. ೪೧)

**ದ್ರುಮ** – ಮರ, ವೃಕ್ಷ (ವಾರಣರಕ್ತಸಿಕ್ತಮೃಗರಾಜಯುಗಕ್ಕೆ ನವ ಪ್ರಸೂನರಾಗಾರುಣ ಕಿಂಶುಕ ದ್ರುಮಯುಗಕ್ಕೆ ಸಧಾತುಕುಭೃದ್ಯುಗಕ್ಕೆ ಸಿಂದೂರಿತಗಂಧಸಿಂಧುರಯುಗಕ್ಕೆ ಎಣೆಯೆಂಬಿನಂ ಅಣ್ಮಿ ಕಾದಿದರ್ ಕೌರವರಾಜನುಂ ಕುರುಕುಲಾಂತಕನುಂ: **ಗದಾಯು,** ೮. ೧೭)

**ದ್ರುಮಪತ್ರಪಾತ್ರೆ** – ಎಲೆಯಿಂದ ಮಾಡಿದ ಪಾತ್ರೆ, ದೊನ್ನೆ (ದ್ರುಮಪತ್ರಪಾತ್ರೆಯಂ ಸಮೆದು ಅದಱಿಲ್ಲಿ ತುಂಬಿ ತುಳಿವೊಂದದ ಪೂಗಳಂ: **ರಾಜಶೇವಿ,** ೧. ೧೨೭)

**ದ್ರೋಣ** – ದೊನ್ನೆ (ದ್ರೋಣದೊಳ್ ಪುಟ್ಟಿದೀತಂ ದ್ರೋಣನೆ ಪೋಗೆಂದು ಪೆಸರನಿಟ್ಟಂ: **ಪಂಪಭಾ,** ೨. ೪೩); ದೋಣಿಯಾಕಾರದ ಪಾತ್ರೆ; ಬಿಲ್ಲು; ಪಾಂಡವ ಕೌರವರ ಧನುರ್ವಿದ್ಯಾಗುರು; ತುಂಬೆ ಹೂ (ವಿನುತ ದ್ರೋಣಂ ಗುಳ್ಳಂ ವನಕುಂದಂ ಕಕ್ಕೆ ಎಕ್ಕೆ ಎಂಬಿವಱ ಅಲರಿಂ .. .. ಅರ್ಚನೆಯಂ ಮಾಡಿ: **ತ್ರಿಷಷ್ಟಿಪು,** ೪೪. ೧೧); ಕಾಗೆ (ಮೌಕುಳಿ ಕೃಷ್ಣಧ್ವಾಂಕ್ಷಂ ಕಾಕೋಳಂ ದ್ರೋಣಂ ಇನತನೂಜನೆನಿಕ್ಕುಂ: **ಅಭಿಧಾವ,** ೧. ೯. ೧೫)

**ದ್ರೋಣದುಘಾ[ಘೆ]** – ಗಡಿಗೆ ತುಂಬ ಅಂದರೆ ಹೆಚ್ಚು ಹಾಲು ಕರೆಯುವ ಹಸು (ಧೇನು ಪ್ರಷ್ಠೌಹಿ ದ್ರೋಣದುಘಾಧೃತ ದೋಹನಘನಧೀರದುಗ್ಧಧಾರಾಧ್ವನಿಗಳ್: **ಲೀಲಾವತಿ,** ೫. ೧೦೮)

**ದ್ರೋಣಾಮುಖ** – ಜಲಸ್ಥಲಮಾರ್ಗಗಳುಳ್ಳ ಪಟ್ಟಣ (ನಿಮ್ನಗಾ ತಟನಿಕಟವರ್ತಿಗಳಪ್ಪ ಮಹಾದ್ರೋಣಾಮುಖಂಗಳುಮಂ: **ಆದಿಪು,** ೮. ೬೩ ವ)

**ದ್ರೋಣಾಸ್ಯ** – ದ್ರೋಣಾಮುಖ (ತನತು ಪದಪಾಂಸುವಿಂ ಗ್ರಾಮನಗರ .. .. ದ್ರೋಣಾಸ್ಯ ನಿಗಮಪತ್ತನತತಿ ಪಾವನಮಾಗೆ ವಿಹಾರಿಸುತ್ತೆ: **ಪುಷ್ಪದಂಪು,** ೧೪. ೧೪)

**ದ್ರೋಣಿ** – ದೋಣಿ (ದ್ರೋಣಿಯಾನಪಾತ್ರಾದಿಗಳೊಳ್ ಜಲದುರ್ಗೋತ್ತರನಮನುಒದೇಶಂಗೆಯ್ದು: **ಆದಿಪು,** ೬. ೬೨ ವ); ದೊನ್ನೆ (ಕರೆಗಣ್ಮುವ ನಿಜ ಲಾವಣ್ಯರಸಂ ಪರಿನಾಳಮಿಕ್ಕಿದತ್ತೆನೆ ತಂದಳ್ ಸುರಸುಂದರಿ ಚಂದನರಸಭರಿತ ಆಯತ ಕೇತಕೀದಲ ದ್ರೋಣಿಗಳಂ: **ಪಂಪರಾ,** ೧೬. ೯೦)

**ದ್ರೌಣಿ** – [ದ್ರೋಣನ ಮಗ] ಅಶ್ವತ್ಥಾಮ (ಜೋಳದ ಪಾಟಿಯಂ ಬಗೆದರಿಲ್ಲಾ ದ್ರೌಣಿಯುಂ ದ್ರೋಣನುಂ: **ಗದಾಯು,** ೨. ೧೧)

**ದ್ವಂದ್ವಯುದ್ಧ**– ಇಬ್ಬರ ನಡುವಣ ಯುದ್ಧ, ಮಲ್ಲಯುದ್ಧ (ಒರ್ವ ಗಂಧರ್ವನೊಳೆ ಚಿತ್ರಾಂಗದಂ ದ್ವಂದ್ವಯುದ್ಧಮಂ ಪೊಣರ್ಚಿ ಕುರುಕ್ಷೇತ್ರಮಂ ಕಳಂಬೇಟ್ಟು: **ಪಂಪಭಾ,** ೧. ೭೩ ವ)

**ದ್ವಯ** – ಜೊತೆ, ಯುಗಳ (ಯುಗಳಂ ಯುಗ್ಮಂ ದ್ವಂದ್ವಂ ಯುಗಂ ಉಭಯಂ ಯಾಮಳಂ ದ್ವಯಂ ದ್ವಿತಯಂ ಸಂಜ್ಞೆಗಳಿವೆ ಪೊಣರೊಳ್: **ಅಭಿಧಾವ,** ೨. ೧. ೩೫)

**ದ್ವಯಭಾವ** – ದ್ವೈತ, ಎರಡು ಎಂಬ ಭಾವ (ದ್ವಯಭಾವಂ ನಮಗಿಲ್ಲ ಬಲ್ಲವರೆ ನಾನುಂ ನೀನುಂ ಈ ಮಾತು ನಿಶ್ಚಯಂ: **ಜಗನ್ನಾವಿ,** ೧೮. ೬೬)

**ದ್ವಾತ್ರಿಂಶತ್** – ಮೂವತ್ತೆರಡು (ದ್ವಾತ್ರಿಂಶತ್ ಚಾರುಚಾಮರಂಗಳಂ ಮಾಡಿ ಪಿಡಿಸಿಯುಂ: **ಆದಿಪು,** ೮. ೪೧ ವ)

**ದ್ವಾದಶ** – ಹನ್ನೆರಡು (ಮೇರುಪರ್ವತದ ತೆಂಕಣ ತಟ್ಟಿಲೊಳ್ ದ್ವಾದಶಯೋಜನ ಪ್ರಮಾಣಮಪ್ಪ ಜಂಬೂವೃಕ್ಷದ ಕೆಲದೊಳ್: **ಪಂಪಭಾ,** ೬. ೩೦ ವ); ಹನ್ನೆರಡನೆಯ (ದ್ವಾದಶದಿನಕ್ಕೆ ನಾಮಕರಣೋತ್ಸವಮಂ ಮಾಡಲೆಂದು ಗಾರ್ಗ್ಯನೆಂಬ ಪುರೋಹಿತಂ ತಿರೋಇತವೇಷನಾಗಿ ಬಂದು: **ಜಗನ್ನಾವಿ,** ೩. ೨೬ ವ)

**ದ್ವಾದಶಕಲ್ಪ** – [ಜೈನ] ಸೌಧರ್ಮ, ಈಶಾನ, ಸತತ್ಕುಮಾರ, ಮಾಹೇಂದ್ರ, ಬ್ರಹ್ಮ, ಲಾಂತವ, ಮಹಾಶುಕ್ರ, ಸಹಸ್ರಾರ, ಆನತ, ಪ್ರಾಣತ, ಆರಣ, ಅಚ್ಯುತ (ಅನ್ನೆಗಮಿತ್ತ ನಾಲ್ಕನೆಯ ಕಲ್ಪದನಲ್ಪಮೆನಿಪ್ಪ ಸೌಖ್ಯಮಂ .. .. ತವೆ ಪೀರ್ದು: **ಕರ್ಣನೇಮಿ,** ೨. ೨)

**ದ್ವಾದಶಗಣ** – [ಜೈನ] ಸಮವಸರಣಸಭೆಯಲ್ಲಿ ಸೇರುವ ಹನ್ನೆರಡು ವರ್ಗಗಳು: ಮುನಿ, ಕಲ್ಪಜಸ್ತ್ರೀ, ಆರ್ಯಕೀರ, ಜ್ಯೋತಿಷಸ್ತ್ರೀ, ವ್ಯಂತರಸ್ತ್ರೀ, ನಾಗಸ್ತ್ರೀ, ನಾಗದೇವತೆ, ವ್ಯಂತರದೇವತೆ, ಜ್ಯೋತಿಷ್ಯದೇವತೆ, ಕಲ್ಪವಾಸಿ, ಮನುಷ್ಯ, ತಿರ್ಯಕ್‌ಪ್ರಾಣಿ (ದ್ವಾದಶಗಣಪರಿವೇಷ್ಟಿತಂ ಆದಿಬ್ರಹ್ಮಂ ಜಿನೇಶ್ವರಂ: **ಸಮಯಪ,** ೮. ೧೮೭)

**ದ್ವಾದಶತಪ** – [ಜೈನ] ಸಂವರಮಾರ್ಗದ ಹನ್ನೆರಡು ಬಗೆಯ ತಪಸ್ಸುಗಳು: ಅನಶನ, ಅವಮೋದಾರ್ಯ, ವೃತ್ತಿಪರಿಸಂಖ್ಯಾನ, ರಸಪರಿತ್ಯಾಗ, ವಿವಿಕ್ತಾವಾಸ, ಕಾಯಕ್ಲೇಶ ಎಂಬ ಬಹಿರಂಗ ತಪಸ್ಸುಗಳು ಹಾಗೂ ಪ್ರಾಯಶ್ಚಿತ್ತ, ವಿನಯ, ವೈಯಾವೃತ್ಯ, ಸ್ವಾಧ್ಯಾಯ, ವ್ಯುತ್ಸರ್ಗ, ಧ್ಯಾನ ಎಂಬ ಅಂತರಂಗ ತಪಸ್ಸುಗಳು (ಬಾಹ್ಯಾಭ್ಯಂತರ

ಪರಿಗ್ರಹಂಗಳಂ ತೊಱೆದು ದ್ವಾದಶವಿಧಮಪ್ಪ ತಪದೊಳ್ ನೆಗಟ್ದು ಪ್ರಾಯೋಪಗಮನದಿಂ ಸಂನ್ಯಸನಂಗೆಯ್ದು ಕರ್ಮಕ್ಷಯಂಗೆಯ್ದು ಮೋಕ್ಷಕ್ಕೆ ವೋದ .. .. ಮಹಾಪುರುಷರ್ಕಳ ಕಥೆಗಳಂ: **ವಡ್ಡಾರಾ,** ಪು ೧, ಸಾ ೯)

**ದ್ವಾದಶರಾಜಕ** – ತ್ರಿಷಷ್ಟಿಶಾಕಾಪುರುಷರಲ್ಲಿನ ಹನ್ನೆರಡು ಮಂದಿ ಚಕ್ರವರ್ತಿಗಳು (ದ್ವಾದಶರಾಜಕಮೆಂಬುದನೋದುಗಳೊಳ್ ಕೇಳಲ್ಕಾದುದಲ್ಲದೆ ಕಾಣಲ್ಕಾದುದೆ: **ಆದಿಪು,** ೧೪. ೧೪)

**ದ್ವಾದಶರಾಜಾರ್ಕ**– ಹನ್ನೆರಡು ಮಂದಿ ಆದಿತ್ಯರು: ಧಾತಾ, ಮಿತ್ರ, ಆರ್ಯಮಾ, ಶಕ್ರ, ವರುಣ, ಅಂಶ, ಭಗ, ವಿವಸ್ವಾಂ, ಪೂಷಾ, ಸವಿತಾ, ತ್ವಷ್ಟಾ, ವಿಷ್ಣು (ಮನುಚರಿತಾಷ್ಟಕವರ್ಗವಿಧಾನನುಂ ನವನಿಧಿಸಂಪೂರ್ಣನುಂ ಪಾಲಿತದಶದಿಶಾಚಕ್ರನುಂ ಏಕಾದಶರುದ್ರಾವತಾರನುಂ ದ್ವಾದಶರಾಜಾರ್ಕ ಪ್ರಯುಕ್ತಗುಪ್ತಚರನುಂ .. .. ವಸುಂಧರಾವಳಯಮಂ .. .. ನಿಜಭುಜಾಗ್ರದೊಳ್ ತಾಳ್ದು: **ಪಂಚತಂತ್ರ,** ೬೫ ವ)

**ದ್ವಾದಶಸಂಗ್ರಹಕೃಷ್ಟಿ** – [ಜೈನ] ಕಷಾಯಗಳ ಫಲ ಕಡಿಮೆ ಮಾಡುವ ಅಪ್ರತ್ಯಾಖ್ಯಾನಕ್ರೋಧ, ಪ್ರತ್ಯಾಖ್ಯಾನಮಾನ, ಅಪ್ರತ್ಯಾಖ್ಯಾನಲೋಭ, ಅಪ್ರತ್ಯಾಖ್ಯಾನ ಮಾಯೆ, ಪ್ರತ್ಯಾಖ್ಯಾನಾವರಣಕ್ರೋಧ, ಪ್ರತ್ಯಾಖ್ಯಾನಾವರಣಮಾನ, ಪ್ರತ್ಯಾಖ್ಯಾನಾವರಣಲೋಭ, ಪ್ರತ್ಯಾಖ್ಯಾನಾವರಣ, ಪ್ರತ್ಯಾಖ್ಯಾನಾವರಣ ಮಾಯೆ, ಸಂಜ್ವಲನಕ್ರೋಧ, ಸಂಜ್ವಲನ ಕ್ರೋಧ, ಸಂಜ್ವಲನಮಾಯೆ, ಸಂಜ್ವಲನ ಲೋಭ (ಅನಂತಹಾನಿಗುಣರೂಪದಿಂ ದ್ವಾದಶಸಂಗ್ರಹಕೃಷ್ಟಿಗಳಂ ಮಾಡುತ್ತುಂ: **ಚಂದ್ರಪ್ರಪು,** ೧೪. ೭೧ ವ)

**ದ್ವಾದಶಾಂಗ** – [ಜೈನ] ಜೈನಧರ್ಮಗ್ರಂಥಗಳ ಹನ್ನೆರಡು ಭಾಗಗಳು: ಆಚಾರಾಂಗ, ಸೂತ್ರಕೃತಾಂಗ, ಸ್ಥಾನಾಂಗ, ಸಮವಾಯಾಂಗ, ವ್ಯಾಖ್ಯಾಪ್ರಜ್ಞಪ್ತ್ಯಂಗ, ಉಪಾಸಕಾಧ್ಯಯನಾಂಗ, ಅಂತಕೃದ್ದಶಾಂಗ, ಅನುತ್ತರೋಪ ಪಾದಿಕದಶಾಂಗ, ಪ್ರಶ್ನವ್ಯಾಕರಣಾಂಗ, ವಿಪಾಕಸೂತ್ರಾಂಗ, ದೃಷ್ಟಿವಾದಾಂಗ (ಇತ್ತ ಗಂಧಭಾಜನಮುನಿಯುಂ ದ್ವಾದಶಾಂಗ ಚತುರ್ದಶಪೂರ್ವಮಪ್ಪ ಆಗಮಮೆಲ್ಲಮಂ ಕಲ್ತು ಪಲಕಾಲಂ ಉಗ್ರೋಗ್ರ ತಪಶ್ಚರಣಂಗೆಯ್ದು: **ವಡ್ಡಾರಾ,** ಪು ೪೯, ಸಾ ೧೩)

**ದ್ವಾದಶಾರ್ಕ** – ದ್ವಾದಶಾದಿತ್ಯರು (ದ್ವಾದಶಾರ್ಕೋರ್ಜ್ಜ್ವಲ ತೇಜಶ್ಚಕ್ರರೂಪಂ ಬೆಳಗಿದುದು ದಿಶಾಚಕ್ರಮಂ ಚಕ್ರರತ್ನಂ: **ಆದಿಪು,** ೧೧. ೨)

**ದ್ವಾದಶಾನುಪ್ರೇಕ್ಷ** – [ಜೈನ] ಜೈನಮುನಿಗಳ ಹನ್ನೆರಡು ಬಗೆಯ ಧ್ಯಾನಚಿಂತನೆ: ಅನಿತ್ಯ, ಅಶರಣ, ಸಂಸಾರ, ಏಕತ್ವ, ಅನ್ಯತ್ವ, ಅಶುಚಿತ್ವ, ಆಸ್ರವ, ಸಂವರ, ನಿರ್ಜರಾ, ಲೋಕ, ಬೋಧಿದುರ್ಲಭ, ಧರ್ಮಸ್ವಾಖ್ಯಾತತ್ವ (ಅಂತಿರ್ದು ದ್ವಾದಶಾನುಪ್ರೇಕ್ಷ ಸ್ಮರಣಪರಿಣತಾಂತಃಕರಣಂ: **ಕರ್ಣನೇಮಿ,** ೨. ೬೫ ವ)

**ದ್ವಾದಶಿ** – ಚಾಂದ್ರಮಾನದ ಹನ್ನೆರಡನೆಯ ದಿನ (ರಾಮಭಟ್ಟಾರಕರಂತು ಅಸ್ಖಲಿತಚಿತ್ತದಿಂ ಶುಕ್ಲಧ್ಯಾನ ಪ್ರವಿಷ್ಟರಾಗಿ ಮಾಘಮಾಸದ ಶುಕ್ಲಪಕ್ಷದ ದ್ವಾದಶಿಯ ಬೆಳಗಪ್ಪ ಜಾವದೊಳ್: **ಪಂಪರಾ,** ೧೬. ೬೭ ವ)

**ದ್ವಾರನಿಯುಕ್ತ** – ಬಾಗಿಲು ಕಾಯುವವನು ಕನಕಗದಾಹಸ್ತರ್ ದ್ವಾರನಿಯುಕ್ತರ್ ಜ್ಯೋತಿರಮರನಾಯಕರಿರ್ಪರ್: **ಮಲ್ಲಿನಾಪು,** ೧೪. ೧೦೧)

**ದ್ವಾರಬಂಧ** – ಬಾಗಿಲ ಚೌಕಟ್ಟು (ವಿಚಿತ್ರಮಣಿಮಯೂಖಚಿತ್ರಿತ ದ್ವಾರಬಂಧ ಬಂಧುರಮುಂ: **ಆದಿಪು,** ೧೩. ೪೬ ವ)

**ದ್ವಾರಾಪೇಕ್ಷೆ** – [ಜೈನ] ಅಡುಗೆ ಸಿದ್ಧಪಡಿಸಿ ಶ್ರಾವಕನು ಚರಿಗೆಗೆ ಬರುವ ಮುನಿಗಳನ್ನು ಎದುರು ನೋಡುವುದು (ಮತ್ತೊಂದು ಪುಣ್ಯದಿನದೊಳ್ ಅನಗಾರಸಮಯದೊಳ್ ದ್ವಾರಾಪೇಕ್ಷೆಯೊಳಿರೆ: **ಶಾಂತಿಪು,** ೬. ೬೯ ವ)

**ದ್ವಾವಿಂಶತಿ** – ಇಪ್ಪತ್ತೆರಡು (ದ್ವಾವಿಂಶತಿ ಸಾಗರೋಪಮ ಆಯುಷ್ಯರುಂ ಮನಃಪ್ರವೀಚಾರದಿವ್ಯಸುಖರುಮಪ್ಪರ್: **ಸುಕುಮಾಚ,** ೧೧. ೬೮ ವ)

**ದ್ವಾವಿಂಶತಿಜಲಧಿ** – [ಜೈನ] ಇಪ್ಪತ್ತೆರಡು ಸಾಗರದಷ್ಟು ಕಾಲಾವಧಿ (ಅಖಿಲಸುಖಮನುಂಡರ್ ದ್ವಾವಿಂಶತಿ ಜಲಧಿವರೆಗಂ ಇಂದ್ರಪ್ರತೀಂದ್ರರ್: **ಶಾಂತಿಪು,** ೭. ೧೧೧)

**ದ್ವಾವಿಂಶತಿಪರೀಷಹ** – ದೇಹಕ್ಕೆ ಉಂಟಾಗುವ ಇಪ್ಪತ್ತೆರಡು ತೋಮದರೆಗಳು [ಜೈನ] ಕ್ಷುತ್, ಪಿಪಾಸೆ, ಶೀತ, ಉಷ್ಣ, ದಂಶವಂಕ್ಷಿಕ, ನಗ್ನತೆ, ಆರತಿ, ಸ್ತ್ರೈಣ, ಚರ್ಯೆ, ಶಯ್ಯೆ, ನಿಷದ್ಯೆ, ಆಕ್ರೋಶ, ವಧೆ, ಯಾಚನೆ, ಅಲಾಭ, ಅದರ್ಶನ, ರೋಗ, ಸತೃಣಸ್ಪರ್ಶ, ಪ್ರಜ್ಞೆ, ಅಜ್ಞಾನ, ಮಲ, ಸಸತ್ಕಾರಪುರಸ್ಕಾರ ಎಂಬ ಇಪ್ಪತ್ತೆರಡು ಬಗೆಯ ಪರೀಷಹಗಳು (ದ್ವಾವಿಂಶತಿ ಪರೀಷಹಮುಮಂ ತನ್ನಂ ಮಿಗಲೀಯದೆ ತಳೆದು: **ಸುಕುಮಾಚ,** ೩. ೪೬ ವ)

**ದ್ವಿಗುಣ** – ಎರಡು ಪಟ್ಟು (ಜಗದೊಳ್ ಪತಿಹಿತದೆಡೆಯೊಳ್ ನೆಗಟ್ದ ಇನಜನಿಂ ಏಕದಂತನಿಂ ಪವನಜನಿಂ ಖಗರಾಜನಿಂ ದುರ್ಗಂ ದ್ವಿಗುಣಂ ತ್ರಿಗುಣಂ ಚತುರ್ಗುಣಂ ಪಂಚಗುಣಂ: **ಪಂಚತಂತ್ರ,** ೫೫)

**ದ್ವಿಗುಣಿಸು** – ಎರಡರಷ್ಟಾಗು (ದ್ವಿಗುಣಿಸಿದುದು ಹಾರವಂ ಪ್ರತಿಧ್ವಾನದಿಂ ಜಿನೇಂದ್ರಾಲಯದೊಳ್: **ಪಂಪರಾ,** ೧೪. ೧೦೧)

**ದ್ವಿಜ** – ಎರಡು ಸಲ ಹುಟ್ಟಿದವನು, ಬ್ರಾಹ್ಮಣ (ದ್ವಿಜ ವಿಪ್ರ ಭೂಮಿದೇವ ಅಗ್ರಜನ್ಮ ಬಾಡವ ಸಮಾಹ್ವಯಂ ಬ್ರಾಹ್ಮಣಂ: **ಅಭಿಧಾವ,** ೧. ೧೧. ೩೭); ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಎಂಬ ಉಪನಯನಗೊಳ್ಳುವ ವರ್ಣಗಳಿಗೆ ಸೇರಿದವನು (ಯಜನಾಧ್ಯಯನಂ ದಾನಂ ನಿಜಮಾಗಿರೆ ನೃಪವಣಿಕಕುಲಕ್ಕಂ ಸಲ್ಗುಂ ದ್ವಿಜನಾಮಂ: **ಅಭಿಧಾವ,** ೧. ೧೧. ೭೧); ಎರಡು ಸಲ ಹುಟ್ಟುವುದು, ಹಲ್ಲು (ದಂತಂ ರದಂ ದಶನಂ ದ್ವಿಜಂ: **ಅಭಿಧಾವ,** ೧. ೧೨. ೧೫); ಮೊಟ್ಟೆಯಾಗಿ, ಆನಂತರ ಹೊರಬರುವ, ಹಕ್ಕಿ (ಶ್ರೀನಿಲಯಂ ಮಹಾಶ್ರುತಿಯುತಂ ದ್ವಿಜಸಂಕುಲಭಾಸಿತಾನನಂ .. .. ದುರ್ಗಸಿಂಹಾನನಪದ್ಮದೊಳ್ ನೆಲಸಿ ನಿಲ್ಗೆ: **ಪಂಚತಂತ್ರ,** ೪); ನಕ್ಷತ್ರ (ಪಿರಿದುಂ ದ್ವಿಜಾಪಹರಣಂ ದೊರಕಿತ್ತು ಅಂಬರಮನುಳಿದು ಕರವಳಿದ ದಿವಾಕರನಂ ನೋಡದೆ ನೆಱೆ ಮೊಗದಿರುಹಿದುದು: **ತ್ರಿಷಷ್ಟಿಪು,** ೨೪. ೧೧೪)

**ದ್ವಿಜಚಕ್ರ** – ಬ್ರಾಹ್ಮಣ ಸಮುದಾಯ; ಚಕ್ರವಾಕ ಪಕ್ಷಿ (ದ್ವಿಜಚಕ್ರಕ್ಕೆ ಅನಿಮಿತ್ತಮಾತ್ರಕರದಿಂ ಸಂತಾಪಮಂ ಮಾಡಿಯುಂ .. .. ರಜನೀಸಂಚರನಾಗಿಯುಂ ಕುವಲಯಾಪ್ತಂ: **ರಾಜಶೇವಿ,** ೧೧. ೭೬)

**ದ್ವಿಜನ್ಮಾನ್ವಯ** – ಬ್ರಾಹ್ಮಣಕುಲ (ಷಟ್ಖಂಡಭೂಮಂಡಲೇಶ್ವರರಂ ಓರಂತೆ ನೆಗಟ್ಚೆ ಕೂಡೆ ನೆಗಟ್ದುದೆತ್ತಂ ದ್ವಿಜನಮಾನ್ವಯಂ: **ಆದಿಪು,** ೧೫. ೨೦)

**ದ್ವಿಜವರ** – ದ್ವಿಜರಾಜ; ಗಂಡಭೇರುಂಡ (ಅಂಭೋಜಿನಿ ಮಾಡಿದಳ್ ದ್ವಿಜವರಂಗೆ ಆತಿಥ್ಯಸತ್ಕಾರಮಂ: **ರಾಜಶೇವಿ,** ೬. ೧೦)

**ದ್ವಿಜಿಹ್ವ** – ಎರಡು ನಾಲಗೆಯುಳ್ಳದ್ದು, ಹಾವು (ಮಾರುತಂ ಎಟ್ಟಿಜೆಸುತ್ತುಂ ಇರ್ಕುಂ ಆ ಗಿರಿವರದೊಳ್ ದ್ವಿಜಿಹ್ವಪರಿಪೀಡಿತರಂ: **ಪಾರ್ಶ್ವನಾಪು,** ೬. ೬೬); ಎರಡು ಮಾತಾಡುವವನು, ಮಾತಿಗೆ ತಪ್ಪುವವನು (ಉದಧಿಯಂತೆ ಜಡಸ್ವಭಾವರುಂ ವಿಷೋರಗದಂತೆ ದ್ವಿಜಿಹ್ವರುಂ .. .. ಎನಿಸಿ: ಸುಕುಮಾಚ, ೨. ೫ ವ)

**ದ್ವಿಜೇಶ** – ನಕ್ಷತ್ರಗಳೊಡೆಯ, ಚಂದ್ರ (ಚಂದ್ರನಂ ಈಕ್ಷಿಸಿ ಸದ್ವಿಜೇಶ ಮಚ್ಚರಣದೊಳೇಕೆ ಬಿರ್ದ: **ತ್ರಿಷಷ್ಟಿಪು,** ೨೪. ೧೬೧)

**ದ್ವಿಟ್** – ಶತ್ರು (ಶಿಕ್ಷಿತ ದ್ವಿಟ್ ಕ್ಷಿತಿಪತಿವ್ರಾತಂ ಸದ್ಧರ್ಮಪ್ರತಾನಂ: **ತ್ರಿಷಷ್ಟಿಪು,** ೧೭. ೫೨)

**ದ್ವಿಟ್ಕರಿ** – ಶತ್ರುವಿನ ಆನೆ (ಏಕಾತಪತ್ರಂ ನಿಜಭುಜವಿಜಯೋತ್ಸಾಹದಿಂ ತಾಳ್ದಿದಂ ದ್ವಿಟ್ಕರಿಕ್ಕುಂಭೋನ್ಮುಖ ಮುಕ್ತಾಫಳಕಲಿತ; **ಅಜಿತಪು,** ೯. ೭)

**ದ್ವಿಟ್ವೀತ** – (ಹರಿಣಧರ ವಿವಸ್ವತ್ ಮನಕುಂಭದ್ವಯಬ್ಜಾಕರ ಜಲಧಿ ಗಜ ದ್ವಿಟ್ವೀತ ಚಕ್ರಾಹಿಗೇಹಸ್ಫುರಿತ ಮಣಿಸಮೂಹಜ್ವಾಳೆಯಂ ಕಾಂತೆ ಕಂಡಳ್: **ಅಜಿತಪು,** ೩. ೧೨)

**ದ್ವಿತಯ** – ಎರಡು, ಯುಗಳ (ಸಾರಾಸಾರ ದ್ವಿತಯವಿಚಾರಕ್ಷಮನೆನಿಸಿದವನೆ ಮಿಥ್ಯಾತ್ವದೆ ಓರಂತೆ ನಮೆವೊಡೆ: **ಸಮಯಪ,** ೩. ೩೫)

**ದ್ವಿತೀಯ** – ಎರಡನೆಯ (ಆ ದ್ವಿತೀಯ ಮುನೀಶ್ವರಂ ಅಗ್ರಮುನೀಶ್ವರನಾದೇಶದಿಂ .. .. ಬಂದು: **ಸುಕುಮಾಚ,** ೫. ೨೩ ವ)

**ದ್ವಿಪ** – ಎರಡು ಹಂತದಲ್ಲಿ ನೀರು ಕುಡಿಯುವುದು, ಆನೆ (ಧೂಳೀಪಟಲಪಿಹಿತಕೇತು ದ್ವಿಪಾನೀಕ ಘಂಟಾನಿವಹ ವ್ಯಾಪಾರಮಲ್ಲಿಂ: **ಆದಿಪು,** ೧೪. ೯೪)

**ದ್ವಿರದ** – ಎರಡು ಕೋರೆಗಳನ್ನುಳ್ಳದು, ಆನೆ (ದಿಗಿಭಂಗಪ್ಪ ಸಮರ ದ್ವಿರದಂಗಳ ಯುದ್ಧಕೇಳಿಯಂ ಬಗೆಗೊಳೆ: **ಆದಿಪು,** ೮. ೪೮)

**ದ್ವಿರದ ಕದಳಿಕಾ** – ಆನೆಯ ಮೇಲೆ ನಿಲ್ಲಿಸುವ ಪತಾಕೆ (ಉದ್ಯಾನಕೇಳೀ ಚಳತ್ತ್ರಿಶಾಖಾಕಾರಜೈತ್ರ ದ್ವಿರದ ಕದಳಿಕಾಡಂಬರಂ: **ಆದಿಪು,** ೧೩. ೮)

**ದ್ವಿರದನಿ** – ದ್ವಿರದ (ಭೂವರಶಿಖಾಮಣಿ ನೆಟ್ಟನೆ ಪಟ್ಟವರ್ಧನ ದ್ವಿರದನಿಯಿಂದೆ ಮುಂದಿಟಿದು ತದ್ವನಕೇಳಿಗೆ .. .. ಪುಗುತಂದಂ: **ಶಾಂತೀಶ್ವಪು,** ೧೦. ೭೩)

**ದ್ವಿರೇಫ** – 'ಭ್ರಮರ' ಎಂಬುದರಲ್ಲಿ ಎರಡು ಬಾರಿ 'ರ' ಕಾರ ಬರುವುದರಿಂದ ಈ ಹೆಸರು, ದುಂಬಿ (ನರಪಾಳ ಮೌಳಿ ಹರಿನೀಳಮಣಿಪ್ರಚಯ ದ್ವಿರೇಫ ಚುಂಬಿತ ಚರಣಾರವಿಂದಂ ಅವದಾತ ಯಶಂ ಕವಿತಾಮನೋಹರಂ: **ಪಂಪರಾ,** ೧೦. ೨೩೬)

**ದ್ವಿಶಿರ** – ಎರಡು ತಲೆ[ಗಳುಳ್ಳ]], ಗಂಡಭೇರುಂಡ (ಸಾರಂಗಶಾಬಂ ದ್ವಿಶಿರಂ ತಾಯ್ದಪ್ಪಿ ಪಾಯ್ದು ಎಂಟಡಿಗೆ ಕುಟುಕನೊಲ್ದೂಡುಗುಂ: **ಶಬರಶಂ,** ೨. ೬೫)

**ದ್ವಿಷಜ್ಜಾತ** – ಶತ್ರುವಿನಿಂದಾದುದು (ದ್ವಿಷಜ್ಜಾತಂ ಚೂತಂ .. .. ವಿಷಾದಾಯಂ ಕಾಯಂ ವನಿತೆಗವನಿಂ ಚಿತ್ತಭವನಿಂ: **ಲೀಲಾವತಿ,** ೭. ೮೩)

**ದ್ವಿಷದ್ಬಲ** – [ದ್ವಿಷತ್+ಬಲ] ದ್ವಿಷತ್ಸೇನೆ (ಸೂರ್ಯತನಯಂ ತೇಜೋಗ್ನಿಯಿಂದಂ ದ್ವಿಷದ್ಬಲಮಂ ಸುಟ್ಟಂ ಉದಾತ್ತಪುಣ್ಯನವಂ ಚೈತಾಗ್ನಿಯಿಂ ಸುಟ್ಟೆನಿಲ್ಲ ಒಲವಿಂದ ಇಂದಿಂತು ಎರ್ದೆಮುಟ್ಟೆ ಕೂರ್ತನೊಳನೇ ಕರ್ಣಂಗೆ ದುರ್ಯೋಧನಂ: **ಪಂಪಭಾ,** ೧೩. ೬೦)

**ದ್ವಿಸಹಸ್ರಜಿಹ್ವ** – ಎರಡು ಸಾವಿರ ನಾಲಗೆಗಳುಳ್ಳ, ಆದಿಶೇಷ (ಅಹಿರಾಜಂ ದ್ವಿಸಹಸ್ರಜಿಹ್ವಂ ಅಜೆಯಂ ವ್ಯಾವರ್ಣಿಸಲ್ ಬಲ್ಲನೇ ಮಹಿಯೊಳ್ ಮಾನವನೊಂದೆ ನಾಲಗೆಯೊಳ್: **ಜಗನ್ನಾವಿ,** ೨. ೩೭)

**ದ್ವೀಂದ್ರಿಯ** – [ಜೈನ] ಸ್ಪರ್ಶನ, ರಸನ ಎಂಬ ಎರಡು ಇಂದ್ರಿಯಗಳು ಮಾತ್ರ ಇರುವ ಜಂತು (ಸ್ಪರ್ಶನ ರಸನೇಂದ್ರಿಯೋಪೇತಂಗಳಪ್ಪ ಶಂಖಾದಿ ದ್ವೀಂದ್ರಿಯಂಗಳ್: **ಆದಿಪು,** ೧೦. ೬೩ ವ)

**ದ್ವೀಪ** – ನಡುಗಡ್ಡೆ (ನೆಗಟ್ದಾ ದ್ವೀಪದ ಮಧ್ಯದಲ್ಲಿ ಕಲಶಂ ಚಂಡಪ್ರಭು ಪಂಜರಂ ಭಗಣಂ: **ಜಗನ್ನಾವಿ,** ೧. ೨೫)

**ದ್ವೀಪಾಂತರ** – ಬೇರೆಯ ದ್ವೀಪ (ದ್ವೀಪಾಂತರಕಟಕ ಪ್ರಭಾವನುಂ ಎನಿಸಿದ ಪುಲಿಕೇಶಿದೇವಂ: **ಗದಾಯು,** ೨. ೭ ವ)

**ದ್ವೀಪಿ** – ಹುಲಿ, ಶಾರ್ದೂಲ (ಕಪಟತಾಪಸರೂಪಿಯಪ್ಪ ದ್ವೀಪಿಯ ಸಮೀಪಕ್ಕೆ ಬಂದು ಪೊಡೆವಟ್ಟು: **ಪಂಚತಂತ್ರ,** ೩೨೬ ವ)

**ದ್ವೈತೀಯಕ** – ಎರಡನೆಯ (ದ್ವೈತೀಯಕ ಜಿನಪಂಗೆ ಅದ್ವೈತಂಗೆ ಅಜಿತಂಗೆ ಭುವನದಯಿಂತಗಾಗಳ್ ದೈತೇಂದ್ರೆಲ್ಲರಂ ಗ್ಯೆಜಿಗಿದರಾತತ ಪುಣ್ಯಂಗೆ ಜಗದೊಳಗೆಜಿಗದರೊಳರೇ: **ಅಜಿತಪು,** ೫. ೩)

**ದ್ವೈಧ** – ಎರಡಾಗಿರುವುದು, ಭಿನ್ನವಾಗಿರುವುದು (ಅರ್ಥಂ ದ್ವೈಧಮಾಗೆ ಮನದ ಸಂಶಯಮಂ ಪರಿಚ್ಛೇದಿಸಿ: **ಮಲ್ಲಿನಾಪು,** ೩. ೧೧)

**ದ್ವೈಧೀಭಾವ** – ರಾಜನ ಷಾಡ್ಗುಣ್ಯಗಳಲ್ಲಿ ಒಂದು, ಆರು ಬಗೆಯ ಭೇದೋಪಾಯಗಳಲ್ಲಿ ಒಂದು, ಬಲಿಷ್ಠ ಶತ್ರುಗಳಿಬ್ಬರಲ್ಲಿ ದುರ್ಬಲನನ್ನು ಒಲಿಸಿಕೊಳ್ಳುವುದು, (ಬಲವಂತರಪ್ಪ ಶತ್ರುಗಳ ನಡುವೆ ದುರ್ಬಲನಪ್ಪ ನೃಪಂ ಆ ರಿಪುಗಳಂ ವಾಙ್ಮಾತ್ರದಿಂ ಅತಿಸಂಧಾನಂಗೆಯ್ದು ತನ್ನ ಮನಮಂ ಎನ್ನರುಂ ಅಜೆಯದಂತು ಕಾಕಾಕ್ಷಿಗೋಳಕನ್ಯಾಯದಿಂದಿರ್ಪುದುಂ ದ್ವೈಧೀಭಾವಮೆಂಬುದಕ್ಕುಂ: **ಪಂಚತಂತ್ರ,** ೩೦೭ ವ) ನೋಡಿ, 'ಭೇದೋಪಾಯ'

**ದ್ವ್ಯರ್ಧಾಕ್ಷಿ** – ಚಿತ್ರಗಳಲ್ಲಿ ಒಂದೂವರೆ ಕಣ್ಣು ಕಾಣುವ ಭಂಗಿ (ಗಿಳಿ ಋಜ್ವಾಗತದಿಂದಂ ಅರ್ಧಋಜುವಿಂದಂ ಕೋಕಿಳಂ ಸಾಚಿಯಿಂ ಕಳಹಂಸೀಕಳಭಂ ರಥಾಂಗಮಿಥುನಂ ದ್ವ್ಯರ್ಧಾಕ್ಷಿಯಿಂ .. .. ಕಣ್ಗೊಳೆ: **ಮಲ್ಲಿನಾಪು,** ೫. ೩೬)

# ಧ

**ಧನ** – ಹಣ (ದ್ರವಿಣಂ ದ್ರವ್ಯಂ ವಸು ಅರ್ಥ ವಿತ್ತ ರೈ ರಿಕ್ಥ ಸಾರ ಧನವೇಕಾರ್ಥಂ: **ಅಭಿಧಾವ,** ೧. ೬. ೧೨)

**ಧನಂಜಯ** – ಅಗ್ನಿ (ಕೆಂಜೆಡೆ ಬಾಂದೊಜೆಯಿಂದೆ ಧನಂಜಯಂ ಅಹಿಪಂ ವಿಷಂ ವಿಭೂತಿ ಕಪಾಲಂ .. .. ರಂಜಿಸಲ್ ಅಭವಂ ಸ್ವರೂಪದಿಂದೆಸೆದಂ: **ತ್ರಿಷಷ್ಟಿಪು,** ೫೩. ೧೪); ಅರ್ಜುನ

**ಧನಂಜಯ –** ಬೆಂಕಿ (ಯಾಮಿನೀವ್ಯೋಮದಂತೆ ಸಿತರುಚಿದಾಳ್ದು ಧನಂಜಯನಂತೆ ರುದ್ರಾಕ್ಷದಿಂ ರಂಜಿಸಿ: **ರಾಜಶೇವಿ,** ೧೦. ೫೭ ವ)

**ಧನಂಜಯಾಂಬಕ –** ಉರಿಗಣ್ಣ, ಶಿವ (ಪಾಂಡುಪುತ್ರನಾತಂ ಜಡಿದೊತ್ತೆ ಜಾಜೆ ಪೆಱಸಾರ್ವನೆ ಧೀರ ಧನಂಜಯಾಂಬಕಂ: **ಶಬರಶಂ,** ೪. ೪೪)

**ಧನಕೋಶ –** ಕೋಶಾಗಾರ (ಧನಕೋಶಂ ನವಹೇಮತಾಮರಸಕೋಶಂ ದೇಶಮಾಸ್ಯೈಕತಾವನಿದೇಶಂ ಸಹಕಾರಿ ಸಾರಸಹಕಾರಂಮಂತ್ರಿ ಮಂದಾನಿಳಂ; **ಚಂದ್ರಪ್ರಪು,** ೧೧. ೫೯)

**ಧನದ –** ಕುಬೇರ (ಧನದಂ ಕಾಂಚನಪಂಚರತ್ನಮಯಂ ರಯವಷ್ಟಿಯಂ ಮಡುವಲ್ಲಿ: **ಆದಿಪು,** ೭. ೨೪); ಹಣ ನೀಡುವವನು (ಧನದರಲ್ಲದ ಧನದರಿಲ್ಲ ತಕ್ಕರಲ್ಲದೆ ಟಕ್ಕರಿಲ್ಲ ಜನ್ನಮಲ್ಲದೆ ಬನ್ನಮಿಲ್ಲ: **ಅಜಿತಪು,** ೧. ೨೦ ವ)

**ಧನದನಿವಾಸ –** ಕುಬೇರನ ಆವಾಸ, ಶ್ರೀಮಂತನ ಮನೆ (ಧನದನಿವಾಸದಿಂ ಮಣಿಮಯೋಜ್ವಳದೇವಕುಲಳಗಳಿಂದೆ ನಂದನವನದಿಂ: **ಪಾರ್ಶ್ವನಾಪು,** ೧. ೧೧೧)

**ಧನದಪತಿ –** ಕುಬೇರ (ಅದಱ ವಿಶಾಳತೆವೆತ್ತಿರ್ಪ ತತ್ಪ್ರಥಮಶಾಳದೊಳಗ್ರ ಸುರಪತಿ ಪಿತೃಪತಿ ಶರಧಿಪತಿ ಧನದಪತಿಗಳ ಕೇಳೀವಿಲಾಸಶೋಭಿತಂಗಳಪ್ಪ ನಾಲ್ಕುಂ ದೆಸೆಗಳ ಮಣಿರತ್ನಹರ್ಮ್ಯಂಗಳುಮಂ: **ಶಾಂತೀಶ್ವಪು,** ೧೬. ೩೧ ವ)

**ಧನದಮಿತ್ರ –** ಕುಬೇರನ ಸ್ನೇಹಿತ, ಶಿವ (ಕಲ್ಯಾಣಭೂಭೃತ್ ಸದನ ಧನದಮಿತ್ರಂ .. .. ನಂದಿಕೇಶಂ ಮಹೇಶಂ: **ರಾಜಶೇವಿ,** ೧. ೧ )

**ಧನದಾದ್ರಿ –** ಕುಬೇರನು ವಾಸಿಸುವ ಬೆಟ್ಟ, ಕೈಲಾಸಪರ್ವತ (ಧನದಾದ್ರಿಯೊಳ್ ಸುಖಂ ವಸಿಯಿಸುವಂತೆ ಅನಂತವನಿಪನಾ ಮಾಡದೊಳ್ ಉದ್ಭವಾಂಬುನಿಧಿ ವಿಶ್ವಸೇನನುದಿನಮಿರ್ಕುಂ: **ಶಾಂತಿಪು,** ೯. ೧೪೯)

**ಧನಶೌಂಡ –** ಹಣದ ಅಮಲಿನವನು ಧನಿಕ (ಜಗಲಿಸುತ್ತುಮಿರ್ದ ಕಾಂಚನರತ್ನ ಸಂಚಯಮಂ ಕಂಡು ಕೊಂಡು ಶೌಂಡಿಕಂ ಧನಶೌಂಡನಾಗಿ ಪೋದಂ: **ನೇಮಿನಾಪು,** ೪. ೧೧೪ ವ)

**ಧನುರಾಗಮ –** ಬಿಲ್ವಿದ್ಯೆ, ಅಸ್ತ್ರಶಾಸ್ತ್ರ (ಆ ಗಗನೇಚರನುಂ ಧನುರಾಗಮವಿದ್ಯಾಗಮ್ಯೈಕನಿಧಿ ವಿದ್ಯೆಗಳಿಂ ಪೋಗದೆ ಕಾದುತ್ತಿರೆ: **ಶಾಂತಿಪು,** ೪. ೨೫)

**ಧನುರ್ಗುಣ –** ಬಿಲ್ಲಿನ ಹೆದೆ (ಚಂಡ ಧನುರ್ಗುಣಮಂ ನೀವಿ ಜೇವೊಡೆಯಲೊಡನೆ: **ಶಬಶಂವಿ,** ೪. ೧೭ ವ)

**ಧನುರ್ಗುಣಕಿಣೀಕೃತೋದ್ವೃತ್ತಪ್ರಕೋಷ್ಠ –** – [ಧನುರ್ಗುಣ+ಕಿಣೀಕೃತ+ಉದ್ವೃತ್+ಪ್ರಕೋಷ್ಠ] ಬಿಲ್ಲಿನ ಹೆದೆಯಿಂದ ಜಿಡ್ಡುಗಟ್ಟಿರುವ ಮುಂಗೈಯುಳ್ಳವನು (ಪ್ರಣತಾರಾತಿ ಧನಗುರ್ಣಕಿಣೀಕೃತೋದ್ವೃತ್ತಕೋಷ್ಠಂ ಅನುಪಮಧೈರ್ಯಂರಣಕೇಲೀಲೋಲಂ .. .. ಎನೆ ನೆಗಟ್ಟಿ ನೃಪಂ: **ಪಂಚತಂತ್ರ,** ೩೦೫ ಮತ್ತು ೩೦೬)

**ಧನುರ್ಗುಣಕ್ವಣಿತ –** ಬಿಲ್ಲಿನ ಹೆದೆಮಿಡಿತದ ಧ್ವನಿ (ಯುದ್ಧಸನ್ನದ್ಧರಾಗಿ ಧನುರ್ಗುಣಕ್ವಣಿತಕರಣ ಪ್ರಣಯಪಾಣಿಯಪ್ಪ ಮಂತ್ರಿಪುತ್ರಂಬೆರಸು .. .. ನಡೆಯೆ: **ಲೀಲಾವತಿ,** ೬. ೫ ವ)

**ಧನುರ್ಧರ –** ಬಿಲ್ಲನ್ನು ಹಿಡಿದವನು (ಪಿಡಿಕೆಯ್ ತೀವಿದ ಕೂರ್ಗಣೆ ಮಡಕಾಲ್ವರಂ ಅಲೆವ ಕಚ್ಚೆ ನಿಡಿಯಸಿಯ ಒಱೆ ಕರ್ಪಿಡಿದ ಪಣೆಕಟ್ಟು ಕೆಯ್ಪಡೆ ಬೆಡಂಗನೊಳಕೊಳೆ ಧನುರ್ಧರರ್ ಪೆಣೆದೆಚ್ಚರ್: **ಪಂಪಭಾ,** ೧೦. ೭೧)

**ಧನುರ್ಧರಬಲ –** ಬಿಲ್ಗಾರರ ಸೈನ್ಯ (ಕಾಟ್ಟುಱು ಮಸಗಿದಂತೆ ಮಸಗಿದ ದುರ್ಧರ ಧನುರ್ಧರಬಲಮುಮಂ ಶ್ವೇತ ಭೀಷ್ಮರ ಪೇಟ್ದ ಓಜೆಯೊಳೆರಡುಂ ಪಡೆಗಳ ಪಡೆವಳರ್ಕಳ್ ಕುರುಕ್ಷೇತ್ರದೊಳ್ ಚಿತ್ರಿಸಿದಂತೆ ಒಡ್ಡಿ ನಿಂದಾಗಳ್: **ಪಂಪಭಾ,** ೧೦. ೫೧ ವ)

**ಧನುರ್ವಂಶ –** ಆನೆಯ ಬಿಲ್ಲಂತೆ ಬಾಗಿದ ಬೆನ್ನುಮೂಳೆ (ಧನಿರ್ವಂಶನುಂ ವಿಪುಲೋಪಚಿತಾಂಸನುಂ : ಅಜಿತಪು, ೪. ೨೦ ವ)

**ಧನುರ್ವೇದ –** ಅಸ್ತ್ರಶಾಸ್ತ್ರ; ಒಂದು ಉಪವೇದ (ಧನುರ್ವೇದ ಹಸ್ತಿ ಅಶ್ವ ತಂತ್ರ ರತ್ನಪರೀಕ್ಷೆಗಳುಮಂ .. .. ಉಪದೇಶಂಗೆಯ್ದು: **ಆದಿಪು,** ೮. ೬೦ ವ), ನೋಡಿ 'ಉಪವೇದ'

**ಧನೇಶ –** ಕುಬೇರ (ಪಲಬರ್ಧನಪರ್ ತಮ್ಮೊಳಲಕೆಯಲೊರ್ವಂ ಧನೇಶನೆಂದು ಏಳಿಸುತಂ: **ತ್ರಿಷಷ್ಟಿಪು,** ೭. ೨೫)

**ಧನ್ಯ –** ಸದ್ಗುಣಿ (ಅಶೇಷಶಾಸ್ತ್ರಪಾರಗಂ ಅತಿಧನ್ಯನೆಂದು ಪರಿಭಾವಿಸಿ ಬಂದೊಡೆ ಅವಜ್ಞೆಗೆಯ್ದು ನಾಯ್ಪುಗದೆಡೆಯೆಲ್ಲಮಂ ಮುಗಿಸಿ: **ಸುಕುಮಾಚ,** ೨. ೬೩); ಅದೃಷ್ಟವಂತ (ಕ್ಷೇಮಂಕರತೀರ್ಥಂಕರನೃಪಕುಮಾರಂಗಂ ಧನ್ಯಂ ಕನಕಚಿತ್ತೆಗಂ ವಜ್ರಾಂಕಿತ ತಳವಿಳಸಿತಂ ಪವಿತ್ರಂ ಪುತ್ರಂ: **ಶಾಂತಿಪು,** ೭. ೧೧೫)

**ಧನ್ವಂತರಿ –** ದೇವವೈದ್ಯ (ಸುರವೈದ್ಯನಪ್ಪ ಧನ್ವಂತರಿ ತರಿಸುವನಿಲ್ಲಿ ತನಗೆ ದೊರಕದ ತಂತ್ರೋತ್ಕರಮಂ ಎನೆ: **ಕುಸುಮಾಕಾ,** ೨. ೧೦೫)

**ಧನ್ವಿ –** ಬಿಲ್ಲುಗಾರ (ನಗರಾಜನಂತೆ ಅಚಲಾಂಗನಾಗಿ ಧನ್ವಿಯಂತೆ ಲಕ್ಷ್ಯಕಾಗ್ರಚಿತ್ತನೆನಿಸಿ ಕಲ್ಯಾಣಗೃಹದಂತೆ ಶಿವಪ್ರಭಾವಮಂ ಪಡೆದು: **ರಾಜಶೇವಿ,** ೧೦. ೫೭ ವ)

**ಧಮ್ಮಿಲ್ಲ –** ತುರುಬು (ಮೊಗಮಂ ತಾವರೆ ಕಣ್ಣನುತ್ಪಳದಳಂ ಧಮ್ಮಿಲ್ಲಮಂ ಸೋಗೆ .. .. ಪೋಲ್ತುವು: **ಆದಿಪು,** ೬. ೮೫)

**ಧರ –** ಬೆಟ್ಟ (ಸುರಸಭೆಯಂತೆ ವಜ್ರಿಲಸಿತಂ ಧರನಂತೆ ಉರುಬಾಣಸಂಭೃತಂ: **ತ್ರಿಷಷ್ಟಿಪು,** ೨೭. ೧೫)

**ಧರಣಿ –** ಭೂಮಿ (ಸ್ಥಿರೆ ಧರಣಿ ಧಾತ್ರಿ ಮೇದಿನಿ ಧರಿತ್ರಿ ಧರೆ ಅವನಿ ಪೃಥ್ವಿ ರಸೆ ವಸುಧೆ ವಸುಂಧರೆ ಕು ಮಹಿ ಜಗತಿ ವಿಶ್ವಂಭರೆ ಗೋ ಕ್ಷ್ಮಾ ಕ್ಷೋಣಿ ಭುಮಿ ಭೂ ಗೋತ್ರೆ ನೆಲಂ: **ಅಭಿಧಾವ,** ೧. ೫. ೧)

**ಧರಣಿಜೆ –** ಭೂಮಿಯ ಮಗಳು, ಸೀತೆ (ಧರಣಿಜೆಯನುಯ್ದು ಲಂಕಾಪುರೇಶನಂತಪ್ಪ ಗಂಡರುಂ ಸತ್ತರ್ ನಿತ್ರಿಸದೆ: **ಧರ್ಮಾಮೃ,** ೪. ೧೪೧)

**ಧರಣಿಪತಿ –** ಭೂಮಿಯ ಒಡೆಯ, ರಾಜ (ಧರಣಿಪತಿಯಪ್ಪ ಚಕ್ರೇಶ್ವರನೊಳ್ ಧುರಧರೆಗೆ ವಂದು: **ಕರ್ಣನೇಮಿ,** ೧೧. ೯೭)

**ಧರಣೀಭೃತ್ –** ಬೆಟ್ಟ (ಘನಕರ ಧರಣೀಭೃತ್ ನಿಭಸ್ಥೂಲಫೇನೋತ್ಕರಮುದ್ರಂ .. .. ಘುಳುಘುಳುಧ್ವಾನರುದ್ರಂ ಸಮುದ್ರಂ: **ತ್ರಿಷಷ್ಟಿಪು,** ೨. ೧೯)

**ಧರಣೇಂದ್ರ –** [ಜೈನ] ಪಾರ್ಶ್ವನಾಥ ತೀರ್ಥಂಕರನ ಯಕ್ಷ; ಭವನವಾಸಿ ದೇವನಾದ ನಾಗೇಂದ್ರ (ಧರಣೇಂದ್ರಂಗಂ ಅಳುಂಬಂ ಪೊಗಟಲ್ಕೆ ರೂಪು ನೀಳಾಂಜನೆಯಾ: **ಆದಿಪು,** ೯. ೧೭)

**ಧರಣೀಭೃತ್** – ರಾಜ (ಧರಣೀಭೃನ್ಮುನಿ ಪೊಱಗಾಗುಟಿದರ ಕಣ್ಮನಮೆಂಬಿವಂ ಉಗಿವುದು ಅಮರಗಣಿಕೆಯರಾಟಂ: **ಶಾಂತಿಪು,** ೧೧.೩೩)

**ಧರಣೀವಿಭಾಗ** – ಭೂಪ್ರದೇಶ (ಕರಿಯ ಮುಗಿಲ್ಗಳಿಂ ಗಗನಮಂಡಳಮೊಪ್ಪಿರೆ ಸೋಗೆಯಿಂ ವನಾಂತರಂ ಎಸೆದು ಒಪ್ಪೆ ತೋರ್ಪ ಮೊಳೆವುಲ್ಗಳಿನೀ ಧರಣೀವಿಭಾಗಂ ಒಪ್ಪಿರೆ: **ಪಂಪಭಾ,** ೭. ೨೩)

**ಧರಾಚಕ್ರ** – ಭೂಮಂಡಲ (ಕುರುರಾಜಂ ವಿದ್ಯಾಧರಕರಣದೆ ನೆಗೆದು ಅಂಬರಕ್ಕೆ ಗದೆಯಂ ಕ್ರಮದಿಂ ತಿರುಪೆ ಧರಾಚಕ್ರಂ ಕೋವರಚಕ್ರಂ ತಿರಿವ ತೆಱದೆ ತಿರಿದತ್ತು ಎನಸುಂ: **ಗದಾಯು,** ೮. ೨೪)

**ಧರಾತಳ** – ಭೂತಳ (ಪಡೆದ ಧನಕ್ಕೆ ಲೆಕ್ಕಮಿಡಲ್ ಇಂದ್ರನಗಂ ಬಳಪಂ ಧರಾತಳಂ ಕಡಿತಂ ಅಹೀಶ್ವರಂ ತಗುಳೆ ಬಾಚಿಸುವೊಂ ಸುರಮಂತ್ರಿ ಕೂಡುವೊಂ: **ಶಾಂತಿಪು,** ೯. ೧೪೭)

**ಧರಾಧರಧನ್ವ** – ಮೇರುವನ್ನು ಬಿಲ್ಲಾಗಿ ಪಡೆದವನು, ಶಿವ (ಧರಾಧರಧನ್ವ ಶಶಾಖಖಂಡಮಂಡನ: **ರಾಜಶೇವಿ,** ೧೦. ೫೯)

**ಧರಾಧರಧರ** – ಬೆಟ್ಟವನ್ನು ಎತ್ತಿದವನು, ಕೃಷ್ಣ (ಗಾಂಡಿವಧರಂ ಗಂಗಾಧರಂ ತುಂಗಶಕ್ತಿಧರಂ ವಜ್ರಧರಂ ಧರಾಧರಧರಂ ಶ್ರೀಕೀರ್ತಿವಿದ್ಯಾಧರಂ: **ಪಂಚತಂತ್ರ,** ೩೭)

**ಧರಾಧರಸುತ** – ರಾಜಪುತ್ರ (ಈತಂಗೀ ಧರೆಯೊಳ್ ಧರಾಧರಸುತರ್ ಪೇಟಾರ್ ಸಮಂಬರ್ಪ ವಿಖ್ಯಾತರ್: **ಕರ್ಣನೇಮಿ,** ೩. ೨೨)

**ಧರಾಧಾರ** – ರಾಜ; ಬೆಟ್ಟ (ಧನದಮಿತ್ರಂ ಧರಾಧಾರ ಧರ್ಮಂ ವೈಶದ್ಯದ್ಯೋತಿ.. .. ನಂದಿಕೇಶಂ: **ರಾಜಶೇವಿ,** ೧,. ೧)

**ಧರಾಧ್ರ** – ಪರ್ವತ (ಘನಧೈರ್ಯಗುಣಂ ಧರಾಧ್ರಮಂ ಕೋಪಮದು ಅಗ್ನಿಯಂ .. .. ಗೆಲ್ದು: **ರಾಜಶೇವಿ,** ೩. ೭)

**ಧರಾಭಾರ** – ರಾಜ್ಯಭಾರ (ನೀನೆ ಜೆಟ್ಟಿಗನೈ ಮುನ್ನಿನ ಒಱಂಟು ವೇಡ ಮಗನೇ ಕೈಕೊಳ್ ಧರಾಭಾರಮಂ: **ಪಂಪಭಾ,** ೧. ೮೧)

**ಧರಾಮರ** – ಭೂಸುರ (ತರ್ಕವ್ಯಾಕರಣ ಕಾವ್ಯ ನಾಟಕ ಭರತ ವಾತ್ಸ್ಯಾಯನ ಆದಿ ಅಶೇಷವಿದ್ಯಾಸಮುದ್ರತರಣ ಗುಣೈಕಪುಣ್ಯನುಂ ಧರಾಮರಾಗ್ರಗಣ್ಯನುಂ ಆಗಿ: **ಪಂಚತಂತ್ರ,** ೪೧ ವ)

**ಧರಿತ್ರಿ** – ಭೂಮಿ (ಕವಿದುವು ಕಾಳ ನೀಳ ಜಳದಾವಳಿ ವಾರಿಧಿಗಳ್ ಧರಿತ್ರಿಯಂ ಕವಿದುವು ಗಾಳಿಗಳ್ ಪ್ರಳಯಕಾಲಮನಾಗಿಸಲೆಂದೆ ಲೋಕಮಂ ಕವಿದುವು: **ಪಂಪಭಾ,** ೨. ೭೭)

**ಧರಿತ್ರೀಧರಸಾನು** – ಬೆಟ್ಟದ ತಪ್ಪಲು (ನೀನೀ ಧರಿತ್ರೀಧರಸಾನುಸ್ಥಾನದಿಂ ಪೋಗದೆ ಬೆಱತಿರೆ ನಿನ್ನಂ ಸಮಂತೆನ್ನ ಬಾಹಾಪರಿಘಾತಕ್ಕೆ ಪಕ್ಕಾಗಿಸಿ .. .. ಜಠರಶಿಖಾಜ್ವಾಲಿಕಾಮಾಲೆಗೀವೆಂ: **ಶಾಂತೀಶ್ವಪು,** ೯. ೧೪೧)

**ಧರಿತ್ರೀನಾಥ** – ಧರಾಧೀಶ (ಕುಸುಮದತ್ತಂಗೆ ಧರಿತ್ರೀನಾಥ ಪದವಿಯಂ ಕೊಟ್ಟಾ ನರಪತಿ ಬಟಿಕೆ ದೀಕ್ಷೆಯಂ ಕೈಕೊಂಡಂ: **ಯಶೋಧಚ,** ೪. ೭೬)

**ಧರೆ** – ಭೂಮಿ (ಏಂ ಗಾವಿಲನಯೊ ನಿನ್ನಂ ನುಂಗುವುದರ್ಕೆ ಇವರಂ ಎತ್ತವೇಟ್ಟುಮೇ ನೆರಮಂ ಸಂಗಳಿಸಲ್ವೇಟ್ಟುಮೇ ಮಾತಂಗವಿರೋಧಿಗೆ ಕುರಂಗಸಂಗರ ಧರೆಯೊಳ್: **ಪಂಪಭಾ,** ೩. ೧೭)

**ಧರ್ಮ** – ನಂಬಿಕೆ–ಆಚರಣೆಗಳ ಕಟ್ಟಳೆ (ಈ ಸಂಸ್ಕೃತಿಯೊಳ್ ಧರ್ಮಾಧರ್ಮಸ್ಥಿತಿಯೆ ವಲಂ ಸ್ವರ್ಗನರಕಸುಖದುಃಖಕರಂ: ಆದಿಪು, ೭. ೭೭); ಪುಣ್ಯ (ಪುಣ್ಯ ದಯಂ ಶ್ರೇಯಂ ವೃಷಂ ಸುಕರ್ಮಂ ಧರ್ಮಂ: **ಅಭಿಧಾವ,** ೧. ೩. ೧೩) ಧಾರ್ಮಿಕ ಕರ್ತವ್ಯ (ಧರ್ಮಮೆಂಬುದು ದಾನ ಪೂಜೆ ಶೀಲಂ ಉಪವಾಸಂದು ನಾಲ್ಕುಂ ತೆಱಂ: **ಹರಿವಂಶ,** ೧೦. ೧೦ ವ); ಬಿಲ್ಲು (ಧನದಮಿತ್ರಂ ಧರಾಧಾರ ಧರ್ಮಂ ವೈಶದ್ಯದ್ಯೋತಿ .. .. ನಂದಿಕೇಶಂ: **ರಾಜಶೇವಿ,** ೧,. ೧); ಯಮ (ಯಮಂ ಅರ್ಕಸುತಂ ಧರ್ಮಂ ಯಮುನಾಹಜಂ ಪರೇತವಿಭು ದಂಡಧರಂ ಶಮನಂ ಪಿತೃಪತಿ ಕಾಲಂ ಸಮವರ್ತಿ ಕೃತಾಂತಂ ಅಂತಕಂ ಕೀನಾಶಂ: **ಅಭಿಧಾವ,** ೧. ೧. ೪೧); ಗುಣಸ್ವಭಾವ (ಧರ್ಮಂ ಗುಣಸ್ವಭಾವವಾಚಿ **ಅಭಿಧಾವ,** ೩. ೧. ೭೧); [ಜೈನ] ದ್ವಾದಶಾನುಪ್ರೇಕ್ಷೆಗಳಲ್ಲಿ ಒಂದು, ಧರ್ಮಚಿಂತನೆ; ಧನುಸ್ಸು (ಮುನಿನಾಥಂ ದಶಧರ್ಮಧಾರಿ ದೃಢ ಷಟ್ತ್ರಿಂಶಸದ್ಗುಣಂ ದಿವ್ಯ ಬಾಣ ನಿಧಾನಂ: **ಪಂಪರಾ,** ೧. ೨೦)

**ಧರ್ಮಕಥನ** – ಧರ್ಮಬೋಧನೆ ಮಾಡುವುದು (ಮುನಿಪತಿ ವಾಚನೆಯಿಂ ಪೃಚ್ಛನೆಯಿಂ ಅನುಪ್ರೇಕ್ಷೆಯಿಂ ತದಾಮ್ನಾಯದಿಂ ಒಯ್ಯನೆ ಧರ್ಮಕಥನದಿಂದಂ ವಿನುತಸ್ವಾಧ್ಯಾಯಮೆಂಬ ತಪಮಮಂ ತಳೆದಂ: **ಸುಕುಮಾಚ,** ೪. ೧೮)

**ಧರ್ಮಕಥಾವಸ್ತು** – [ಜೈನ] ಧರ್ಮದ ಬಗೆಗಿನ ಕತೆಗಳಲ್ಲಿನ ನಾಲ್ಕು ವಸ್ತುಗಳು (ಧರ್ಮಕಥಾವಸ್ತುವೆಂಬ ಅರ್ಥಕಥೆಯೆಂದುಂ ಕಾಮಕಥೆಯೆಂದುಂ ಧರ್ಮಕಥೆಯೆಂದುಂ ವ್ಯಾಮಿಶ್ರಮಕಥೆಯೆಂದುಂ ಚತುರ್ವಿಧಮಕ್ಕುಂ: **ಚಾವುಂಪು,** ಪು. ೪೫. ಸಾ. ೧೩. ೧೪)

**ಧರ್ಮಕಥೆ** – [ಜೈನ] ಇದರಲ್ಲಿ ಆಕ್ಷೇಪಣಿ, ವಿಕ್ಷೇಪಣಿ, ಸಂವೇದನಿ, ನಿರ್ವೇದನಿ ಎಂದು ನಾಲ್ಕು ಬಗೆ (ಧರ್ಮಕಥೆಯೆಂದು ಆಕ್ಷೇಪಣೀಯಂ ವಿಕ್ಷೇಪಣೀಯಂ ಸಂವೇದನೀಯಂ ನಿರ್ವೇದನೀಯಂ ಎಂದು ಚತುರ್ವಿಧಮಕ್ಕುಂ: **ಚಾವುಂಪು,** ಪು. ೪೫, ಸಾ. ೧೯–೨೦)

**ಧರ್ಮಗಳ್** – [ಧರ್ಮ+ಕಳ್] ಪುಕ್ಕಟೆ ಕೊಡುವ ಕಳ್ಳು, ಹೆಂಡ (ನೆರೆದೆಲ್ಲರ್ ಕಳ್ಗುಡಿಯುತ್ತಿರೆ ಬಡವರ್ಗಲ್ಲಿ ಧರ್ಮಗಳ್ಳೆಂದು ಎಱೆವರ್ ಧರೆಯೊಳಗದುವುಂ ಧರ್ಮಮೆ: **ಧರ್ಮಾಮೃ,** ೧. ೧೫೯)

**ಧರ್ಮಗೇಹ** – ಧರ್ಮಕ್ಕೆ ಮನೆಯಂತಿರುವುದು, ನಂದಿ (ನಿಜವಾಹಂ ಧರ್ಮಗೇಹಂ ನಿಜಧನು ದನುಜಾರಾತಿಜಾತಾಧಿವಾಸಂ: **ರಾಜಶೇವಿ,** ೧. ೨)

**ಧರ್ಮಚಕ್ರ** – ಧರ್ಮದ ರಾಜ್ಯ (ಧರ್ಮಚಕ್ರ ಪರಚಕ್ರಮನಾಕ್ರಮಿಸಲ್ಕೆ ಸಾಲ್ವ ಭಾಸುರತರತೀವ್ರತೇಜದಪರಾಜಿತೆ ಮಾಟ್ಕೆ ಮತಿಪ್ರಕಾಶಮಂ: **ಮಲ್ಲಿನಾಪು,** ೧. ೯); ಧರ್ಮರಕ್ಷಣೆಗೆ ಚಕ್ರ ಹಿಡಿದವನು, ವಿಷ್ಣು; [ಜೈನ] ತೀರ್ಥಂಕರನು ವಿಹಾರ ಮಾಡುವ ಸಮಯದಲ್ಲಿ ಆತನ ಮುಂದೆ ಸಾಗುವ ಅತ್ಯಂತ ಪ್ರಕಾಶಮಾನವಾದ ಚಕ್ರ (ಜಿನಚಂದ್ರದೇವಂ ನಡೆಯೆ ಧರ್ಮಚಕ್ರಂ ಮುಂದೆ ನಡೆಯೆ: **ಶಾಂತಿಪು,** ೧೨. ೧೪ ವ)

**ಧರ್ಮಚಕ್ರವಾಳ** – [ಜೈನ] ಒಂದು ವ್ರತ (ನೋಂಪೆನೆಂದಡೆ ಉಡುಗದೆ ಸಲೆ ಧರ್ಮಚಕ್ರವಾಳಮನಾಗಳ್ ಬೇಡಿ: **ಶಾಂತಿಪು,** ೪. ೬೭ ಮತ್ತು ೬೭ ವ)

**ಧರ್ಮಜ** – ಯಮನ ಮಗ, ಯುಧಿಷ್ಠಿರ (ಶ್ರೀದಿವ್ಯಕಾಂತಾಜನಂ ತೊಡವು ಎಂಬೊಂದುಮಂ ಆ ಸುರಾಸುರರಿಂ ಆ ಗೋವಿಂದನಿಂ ಮುನ್ನೆ ಕೋಳ್ಪಡೆದು ಅಂಭೋನಿಧಿಯಂತೆ ಬಂದು ನೆಗಟ್ದು ಇಂದ್ರಪ್ರಸ್ಥಮಂ ಧರ್ಮಜಂ: **ಪಂಪಭಾ,** ೪. ೯); ಪಾಂಡವ, ಬಿಳಿ ಹಕ್ಕಿ (ಧರ್ಮಜನ ಲಸತ್ತುರಗದ ಗಜಗಂಡದ ಭಾಸುರವಾದ್ಯದ ಪೆಸರ ಖಗಕುಳಂ ಕರಮೆಸೆಗುಂ: **ರಾಜಶೇವಿ,** ೫. ೬೦)

**ಧರ್ಮತನಯ** – ಧರ್ಮಜ (ಧವಳಹಯಂ ಧವಳರಥಂ ಧವಳ ಉಷ್ಣೀಷಂ ಶಶಾಂಕಸಂಕಾಶ ಯಶೋಧವಳಿತ ಭುವನಂ ತಾಗಿದಂ ಅವಯವದಿಂ ಬಂದು ಧರ್ಮತನಯನ ಬಲದೊಳ್: **ಪಂಪಭಾ,** ೧೧. ೩೯)

**ಧರ್ಮದ್ವಿಷ** – ಧರ್ಮದ ವೈರಿ (ಮಳಿನಾತ್ಮಂ ಧರ್ಮದ್ವಿಷಂ .. .. ಎನಿಪ್ಪಾ ಕುದೃಷ್ಟಿಯಂ ಕಂಡು ಇನಿಸಂ ಮುಳಿಯಂ: **ಸಮಯಪ,** ೧೩. ೫೬)

**ಧರ್ಮಧ್ಯಾನ** – [ಜೈನ] ಧರ್ಮದ ವಿಷಯಗಳನ್ನು ಕುರಿತು ಸದಾ ಚಿಂತಿಸುವುದು; ಧ್ಯಾನಚತುಷ್ಟಯಗಳಲ್ಲಿ ಒಂದು, (ಆಜ್ಞಾವಿಚಯಂ ಅಪಾಯವಿಚಯ ವಿಪಾಕವಿಚಯ ಸಂಸ್ಥಾನವಿಚಯಮೆಂಬ ನಾಲ್ಕುಂ ಧರ್ಮ್ಯಧ್ಯಾನಮಂ ಧ್ಯಾನಿಸುತ್ತುಂ: **ಆದಿಪು,** ೧೦. ೧೪ ವ); ನೋಡಿ, 'ಧ್ಯಾನಚತುಷ್ಟಯ'

**ಧರ್ಮಪಾನೀಯ** – ಹಾದಿಹೋಕರಿಗೆ ಉಚಿತವಾಗಿ ನೀಡುವ ನೀರು ಅಥವಾ ಪಾನೀಯ (ಪೂರ್ವಪದಾಂತ್ಯಕ್ಕೆ ದೀರ್ಘಮುಮುತ್ತರಪದದಾದಿಗೆ ಲೋಪಮುಮಾಗಿ ಧರ್ಮಪಾನೀಐಕ್ಕೆ ದಮ್ಮಾಣಿಯೆಂದಾಯ್ತು ಕಾಂಸ್ಯತಾಳಕ್ಕೆ ಕಂಸಾಳಮೆಂದಾಯ್ತು: **ಶಬ್ದಮದ,** ೩೦೮ ಪ್ರ)

**ಧರ್ಮಪುತ್ರ** – ಧರ್ಮನಂದನ (ಧರ್ಮಪುತ್ರನುಂ ಕುಲಧನಸಂಕುಲಗಳನೆ ತಂದಿಡೆ ಇಟ್ಟವಂ ಆಡಿ ಸೋಲ್ತಂ: **ಪಂಪಭಾ,** ೬. ೭೨)

**ಧರ್ಮಪ್ರಭಾವನೆ** – [ಜೈನ] ಸಮ್ಯಗ್ದರ್ಶನದ ಎಂಟು ಅಂಗಗಳಲ್ಲಿ ಕೊನೆಯದು; ಜೈನಧರ್ಮದ ಬಗ್ಗೆ ಇತರರಲ್ಲಿ ಪ್ರಚಾರ ಮಾಡುವುದು

**ಧರ್ಮಾಧಿಕರಣ** – ನ್ಯಾಯನಿರ್ಣಾಯಕ ಮಂಡಲಿ, ನ್ಯಾಯಾಧಿಕಾರಿ (ಪುಯ್ಯಲಿಡುವ ಕರುಣಾರವಮಂ ತಳವಾಱಂ ಕೇಳ್ದು ಪರಿತಂದು ನಾವಿದನುಮಂ ಅವನ ಪೆಂಡತಿಯುಮಂ ಪಿಡಿದು ಒಡಗೊಂಡು ಪೋಗಿ ಧರ್ಮಾಧಿಕರಣದ ತಾಣಾಂತರದೊಳ್ ಇರಿಸಿದಂ: **ಪಂಚತಂತ್ರ,** ೧೩೭ ವ)

**ಧರ್ಮಾಧ್ಯಕ್ಷ** – ನ್ಯಾಯಾಧೀಶ (ವಿಷಯ ಗೃಹಾಮಾತ್ಯ ದಂಡಾಧಿನಾಥಾವಳಿ ಧರ್ಮಾದ್ಧ್ಯಕ್ಷ ಕೋಶಾಧಿಪ ತಳವರ ಹಾಸ್ಯಾದಿ ತಂತ್ರಾಳಿಪಾಳಾವಳಿ ರಾಜಶ್ರೇಷ್ಠಿ ಸೇನಾಪರಿಕರಣ ಪುರೋಧೋಧಿಕಾರ ಅಂಗರಕ್ಷಾವಳಿ ಮುಖ್ಯಂಬೆತ್ತ ಬಾಹತ್ತರದೆಸಕದ ನಾನಾ ನಿಯೋಗಿಪ್ರತಾನಂ: **ಶಾಂತೀಶ್ವಪು,** ೧೫. ೯೦)

**ಧರ್ಮಾಸ್ತಿಕಾಯ** – [ಜೈನ] ಪಂಚಾಸ್ತಿಕಾಯಗಳಲ್ಲಿ ಒಂದು; ಬಹುಪ್ರದೇಶದಲ್ಲಿ ವ್ಯಾಪಿಸಿರುವ ಧರ್ಮದ್ರವ್ಯ (ನವಪದಾರ್ಥಂಗಳುಂ ಪಂಚಾಸ್ತಿಕಾಯ ಷಡ್ದ್ರವ್ಯಂಗಳುಂ ಎಂಬಿವಱೊಳ್ ಆದಮಾನುಂ ಅಜೆತಮುಂ ಕುಶಲಿಕೆಯುಂ ನಂಬುಗೆಯುಂ ಆಗಿ: **ವಡ್ಡಾರಾ,** ಪು ೬, ಸಾ ೧೯), ನೋಡಿ, 'ಪಂಚಾಸ್ತಿಕಾಯ'

**ಧವಳ** – ಬಿಳಿಯ (ಧವಳಹಯಂ ಧವಳರಥಂ ಧವಳ ಉಷ್ಣೀಷಂ ಶಶಾಂಕಸಂಕಾಶ ಯಶೋಧವಳಿತ ಭುವನಂ ತಾಗಿದಂ ಅವಯವದಿಂ ಬಂದು ಧರ್ಮತನಯನ ಬಲದೊಳ್: **ಪಂಪಭಾ,** ೧೧. ೩೯); ಒಂದು ಬಗೆಯ ಗಾನ, ಆಶೀರ್ವಚನ (ಕೀರ್ತಿಯಿಂಧವಳಮಂಗಳಗೇಯದಿನೊಪ್ಪೆ ಬರ್ಪ ಕೌರವಧವಳಂಗೆ ದೇಸಿಗನೆ ಬರ್ಪವೊಲೊರ್ವನೆ ಬರ್ಪುದಾದುದೇ: **ಗದಾಯು,** ೫. ೪೧)

**ಧವಳಚ್ಛತ್ರ** – ಬೆಳ್ಗೊಡೆ (ಉನ್ನತ ಧವಳಚ್ಛತ್ರಚ್ಛನ್ನ ವಿಯತ್ತಳನಂ ಇಂದುಕುಳತಿಳಕನಂ ಇಂತು ಅನ್ನೆಯದಿಂದ ಈ ಪಟುವಿನೊಳ್ ಎನ್ನರಸನಂ ಇಂತು ಬಿದಿಯೆ ತಂದಿಕ್ಕುವುದೇ: **ಪಂಪಭಾ,** ೨. ೨೨)

**ಧವಳದ್ಯುತಿ** – ಹೊಳೆಯುವ ಕಾಂತಿ (ಧವಳದ್ಯುತಿಯಂ ತವೆ ಪಸರಿಪ ದಿವ್ಯ ದುಕೂಲವನುಡಿಸಿದರ್ ಅಗತನೂಜೆಗೆ ಅಂಗನೆಯರ್ಕಳ್: **ಗಿರಿಜಾಕ,** ೧೦. ೩೧)

**ಧವಳವಟ್ಟ** – ಬಿಳಿಯ ಬಟ್ಟೆ [ಸಾಹಿಯಾಣದ ಚೀನದ ಧವಳವಟ್ಟದ ಜೊಂಗದ ದೇವಾಂಗದ ಸಕಳವಟ್ಟೆಗಳುಮಂ: **ಆದಿಪು,** ೪. ೩೪ ವ)

**ಧವಳಾಗಾರ** – ಬಿಳಿಯ ಮನೆ, ದೊಡ್ಡ ಸೌಧ (ಈ ಪೊಟಲೊಳ್ ಸುಪ್ರದೇಶಮಪ್ಪ ಸ್ಥಾನದೊಳ್ ಸುಧಾಧವಳಿತಮಪ್ಪ ಧವಳಾಗಾರಂ ಗೋಷ್ಠಾಗಾರಂ ಮೊದಲಾಗಿ ಪಲವುಂ ಶೋಭಾವಹಂಗಳಪ್ಪ ಗೃಹಂಗಳಂ ಮಾಡಿಸಿ: **ಪಂಚತಂತ್ರ,** ೨೫೪ ವ)

**ಧವಳಾತಪತ್ರ** – ಬೆಳ್ಗೊಡೆ (ರಜತಾದ್ರಿಯೆನೆ ನೃಪನಂದನ ಧವಳಾತಪತ್ರಂ ಎಸೆದತ್ತಾಗಳ್: **ಕಾದಂಬ,** ೩. ೧೧೪)

**ಧವಳಾತಪವಾರಣ** – ಬೆಳ್ಗೊಡೆ (ಧವಳಾತಪವಾರಣ ವಿಭೂತಿಯನುಟಿದು ನೆಗಟ್ದುಪಾಸಕನಾದಂ: **ಆದಿಪು,** ೬. ೬)

**ಧವಳಿಸು** – ಬಿಳುಪಾಗಿಸು, ಪ್ರಕಾಶಿಸು (ಮಣಿಹಾರಮಾಲೆಯಂ ಧವಳಿಸಿ ನೀಳ್ದ ಬೆಳ್ವೆಳಗಿನಿಂ ಬಿರಿಯಲ್ ಸರಸೀರುಹಂಗಳ್: **ಲೀಲಾವತಿ,** ೧೦. ೯೦)

**ಧಾತಕೀ** – ಅರೆಹೂ, ಮರಾಟಿಮೊಗ್ಗು (ಪಿಷ್ಟೋದಕ ಧಾತಕೀ ಗುಡ ಸಮಯೋಗದಿಂದಂ ಎಂತು ಮದವಿಕಾರಮೆಸೆದಪ್ಪುದು ಅಂತೆ: **ಆದಿಪು,** ೨. ೯ ವ)

**ಧಾತಕೀಷಂಡ** – [ಜೈನ] ಪುಷ್ಕರದ್ವೀಪದ ಒಂದು ಭಾಗ; ಧಾತಕೀವೃಕ್ಷ ಹೇರಳ ವಾಗಿರುವ ಜಾಗ (ಧತಕೀಷಂಡಂ ಈಕ್ಷಣಭದ್ರಂ ಸಸಮುದ್ರಮಂ ಬಳಸಿ ಜಂಬೂದ್ವೀಪವಿನ್ಯಾಸಮಂ: **ಚಂದ್ರಪ್ರಪು,** ೧. ೭೨)

**ಧಾತು** – ಲೋಹ (ಸಧಾತು ಕುಭೃದ್ಯುಗಕ್ಕೆ ಸಿಂದೂರಿತಗಂಧಸಿಂಧುರಯುಗಕ್ಕೆ ಎಣೆಯೆಂಬಿನಂ ಅಣ್ಮಿ ಕಾದಿದರ್ ಕೌರವರಾಜನುಂ ಕುರುಕುಲಾಂತಕನುಂ: **ಗದಾಯು,** ೮. ೧೭); ರೇತಸ್ಸು, ವೀರ್ಯ (ಮಸೆವುದು ಮಾಸಲಿರ್ದ ಪಟವೇಟಮಂ ಇಚ್ಚೆಯ ಬಿಚ್ಚತಿಕ್ಕೆಯಂ ಪೊಸೆಯಿಪುದು ಒಳ್ಕಮಂ ನಡೆಪುತಿರ್ಪುದು ಧಾತುವಂ ಒಳ್ಪಿತೆಯ್ದೆ ಪಾಟಿಸುವುದು ಕೂಟದೊಳ್ ಕುಶಲನಪ್ಪುದು: **ಶಾಂತಿಪು,** ೮. ೯೧)

**ಧಾತೃಪುತ್ರ** – ಬ್ರಹ್ಮಪುತ್ರ, ನಾರದ (ಸರಸೀಜೋದರಂ ಆದರದಿಂದಂ ಧಾತೃಪುತ್ರನಂ ಬೆಸಗೊಂಡಂ: **ಕರ್ಣನೇಮಿ,** ೧೧. ೭೨)

**ಧಾತ್ರ** – ಬ್ರಹ್ಮ (ಏಂ ಜಾಣನೋ ಧಾತ್ರಂ ರೂಪನಿಷ್ಪಾದನವಿಧಿಯೊಳಿವಂ ಮುನ್ನಮೇಂ ನೋಂಪಿಯಂ ನೋಂತನೊ: **ಆದಿಪು,** ೩. ೯೧)

**ಧಾತ್ರಿ** – ಸಾಕುತಾಯಿ, ದಾದಿ (ಧಾತ್ರಿಯೊಳನ್ಯರ ತೇಜೋಮಾತ್ರಮನಾಂ ಸಲಿಸೆನೆಂಬ ತೆಱದಿಂ ಪೊಯ್ಯಲ್ ಧಾತ್ರಿಯ ಕಯ್ಯಿಂ ನಿಮಿರ್ವಂ ಕ್ಷತ್ರಶಿಖಾಮಣಿ ಮಣಿಪ್ರದೀಪಾಂಕುರಮಂ: **ಪಂಪರಾ,** ೩. ೧೨೫); ಭೂಮಿ (ರಥದಿಂ ಧಾತ್ರಿಗೆ ಪಾಯ್ದು ಕೊಂಡು ಗದೆಯಂ ಕೆಯ್ಸಾರ್ದುದು ಅಸ್ಮತ್ ಮನೋರಥಂ ಇಂದು ಎಂದು ಕಡಂಗಿ: **ಪಂಪಭಾ,** ೧೧. ೬೬); ನೆಲ್ಲಿ (ಧಾತ್ರೀತರು ಆಮಲಕ: **ಅಭಿಧಾವ,** ೧. ೮. ೧೨)

**ಧಾತ್ರಿಕಾ[ಕೆ]** – ದಾದಿ (ಅನಂತರಂ ಅಮರ ಧಾತ್ರಿಕಾನಿಕಾಯಮುಮಂ .. .. ಜಗತ್ಪತಿ ಪಿತೃಗಳುಮಂ ಬೀೞ್ಕೊಂಡು: **ಅರ್ಧನೇಮಿ,** ೮. ೧೬೭ ವ)

**ಧಾತ್ರೀಜನ** – ದಾದಿಯರು (ಗುರುಜನ ಅಭಿಷಕ್‌ಜನ ಗಣಕಜನ ಗಣಿಕಾಜನ ಧಾತ್ರೀಜನ ಕುಲಮಹತ್ತರಿಕಾಜನಮನಂ ಸಮರ್ಪಿಸುವುದುಂ ಅನಂತರಂ: **ಮಲ್ಲಿನಾಪು,** ೪. ೬೨ ವ)

**ಧಾತ್ರೀಧರ** – ಪರ್ವತ (ಮಹಾಪ್ರಾಸಾದದಂತಿರ್ಪುದು ಆವಗಂ ಆಶ್ಚರ್ಯಮನಪ್ಪುಕೆಯ್ದು ವಿಜಯಾರ್ಧಖ್ಯಾತ ಧಾತ್ರೀಧರಂ: **ಶಾಂತೀಶ್ವಪು,** ೮. ೭)

**ಧಾತ್ರೀಫಳ** – ನೆಲ್ಲಿಕಾಯಿ (ಪೆಸರ್ವೆತ್ತ ಧಾತ್ರಿಯಂ ನೀರಸಮಂ ಮಾಡಿತ್ತು ಮತ್ತೆ ಧಾತ್ರೀಫಳಮಂ ರಸಮಯಮಂ ಮಾಡಿತು ಮಾಗಿ: **ಶಾಂತೀಶ್ವಪು,** ೧೨. ೭೫ ಎ)

**ಧಾತ್ರೀರಜ** – ಮಣ್ಣು, ದೂಳು (ಮುಸುಕಿತ್ತೀ ಜಗಮೆಲ್ಲಮಂ ಬಳಪದ ಪ್ರಕ್ಷುಣ್ಣ ಧಾತ್ರೀರಜಂ: **ವರ್ಧಮಾಪು,** ೪. ೩೮)

**ಧಾತ್ರೀರುಹ** – ಮರಗಿಡ ಮನದಿಂ ಬೇಗಂ ಮುಟ್ಟಿದಂ .. .. ಪವನನಂದನಂ ಅನಿಂದ್ಯಗುಣಂ ಎಸೆವ ಅಶೋಕಧಾತ್ರೀರುಹಮಂ: **ಕಾವ್ಯಾವಲೋ,** ೧೦೬)

**ಧಾನುಷ್ಕ** – ಶರಸಂಧಾನ (ಅವಿಚಾರಂ ವನದೊಳ್ ದ್ವಿಜಾಪಹರಣಂ ಧಾನುಷ್ಕದೊಳ್ ಭಂಗದುದ್ಭವಂ ಅಂಭೋನಿಧಿಯೊಳ್: **ತ್ರಿಷಷ್ಟಿಪು,** ೨. ೩೦)

**ಧಾನುಷ್ಕಬಳ** – ಬಿಲ್ಗಾರರ ಪಡೆ (ತತ್ ಕ್ಷಣದಿಂದ ಉಲ್ಬಣಮಾಗಿರೆ ಪೆಣಮಾಯ್ತು ಅರಿನೃಪಾಳ ಧಾನುಷ್ಕಬಳಂ: **ಕರ್ಣನೇಮಿ,** ೫. ೮೪)

**ಧಾನ್ಯಕ** – ಕೊತ್ತಂಬರಿ (ಕುಸುಂಭ ಕಾರ್ಪಾಸ ಸರ್ಷಪ ಜೀರಕ ಧಾನ್ಯಕಾದಿ ವಿವಿಧಧಾನ್ಯಭೇದಂಗಳುಂ: **ಆದಿಪು,** ೬. ೭೨ ವ); ಬತ್ತ (ಸ್ತಮಕಂ ಧಾನ್ಯಕಂ ವ್ರೀಹಿ: **ಅಭಿಧಾವ,** ೧. ೧೬. ೧೬)

**ಧಾನ್ಯಮಂಜರಿ** – ಕಾಳಿನ ತೆನೆ (ರಂಜಿಸುವ ಧಾನ್ಯಮಂಜರಿಯ ನೆಟಿಲ್ ಪೊಳೆಯೆ ತೆನೆವೋದುವು ಬೇರ್ಗಳೆನಿಪುವು ಬೆಳೆದ ತೆಱದೆ ಕಟಿವೆ ಭೂಸಾರತೆಯಿಂ: **ಚಂದ್ರಪ್ರಪು,** ೧. ೯೨)

**ಧಾನ್ವನದುರ್ಗ** – ಮರುಭೂಮಿಯ ನಡುವಣ ದುರ್ಗ (ಧಾನ್ವನದುರ್ಗಕ್ಕೆ ಬೃಹಲ್ಲಯಾಗ್ನಿಯೆನೆ ತನ್ಮುದ್ವೃತ್ತತಾಪಾಗ್ನಿ ನೀೞ್ದೆನಸುಂ ಪರ್ವಿ ವಿಗುರ್ವಿಸಲ್: **ಪುಷ್ಪದಂಪು,** ೫. ೫೦)

**ಧಾಮ** – ಮನೆ (ಧಾಮಂ ನಿವಾಸ: **ಅಭಿಧಾವ,** ೩. ೧. ೧೩);

**ಧಾರಣ** – ಆಶ್ರಯದಾತ, ಪೋಷಕ (ಇಷ್ಟತುಷ್ಟಧಾರಣಂ ಅವದಾತಕೀರ್ತಿಗೃಹತೋರಣಂ ನರೇಂದ್ರಗಂಧವಾರಣಂ: **ಗದಾಯು,** ೧, ೧೭)

**ಧಾರಾ** – ಕತ್ತಿಯ ಅಲಗು (ಭೂಮಂಡಳಪತಿಯ ಖಡ್ಗ ಧಾರಾಜಳದೊಳ್ ಸಾಮ್ರಾಜ್ಯಲಕ್ಷ್ಮಿ ಸಲೆ ನೆಲಸಿರ್ದಳ್: **ಕಾದಂಸಂ,** ೧. ೭)

**ಧಾರಾಗೃಹ** – ತಂಪಾಗಿರಲು ನೀರು ಎರಚುವ ಏರ್ಪಾಟಿರುವ ಮನೆ (ಪಲವುಂ ಧರಾಗೃಹಂಗಳ್ ಅತನುವಿಕಾರಮಂ ಒದವಿಪುದು ದೇವದಂಪತಿಗದಱೊಳ್: **ಆದಿಪು,** ೬. ೯೫)

**ಧಾರಾಧರ** – ಮೋಡ (ಅದು ಧಾರಾಧರಂ ಅಬ್ದದಂತೆ ಪೊಳೆಯಂತೆ ಆವರ್ತಯುಕ್ತಂ .. .. ಶ್ರೀಕರಲಕ್ಷಣಾಂಕಂ ಎನಿಸಿತ್ತು ರಾಜವಾಜಿದ್ವಯಂ: **ರಾಜಶೇವಿ,** ೧೨. ೧೦೨)

**ಧಾರಾಪಂಚಕ** – ಕುದುರೆಯ ಐದು ಬಗೆಯ ನಡಿಗೆಗಳು: ಆಸ್ಕಂದಿತ, ಧೌರಿತಕ, ರೇಚಿತ, ವಲ್ಗಿತ, ಪ್ಲುತ (ವಾಜಿಯಂ ಧಾರಾಪಂಚಕದೊಳ್ ವಿಚಿತ್ರ ಲಯದಿಂ ತಾಮೇಱೆ ಬರ್ಪೀ ಮಹಾಧೀರರ್ ಕಾಲ್ನಡೆಯೊಳ್ ನೃಪಾವಸಥದಿಂ ಬರ್ಪಂಧಂ ಆವಂದಮೋ: **ಪಂಪರಾ,** ೬. ೧೮೦)

**ಧಾರಿಣಿ** – ಭೂಮಿ (ಧಾರಿಣಿಯಂ ಮುಗುಳ್ಚಿ ಕುಲಪರ್ವತಮಂ ನೆಲೆಯಿಂ ತೆರಳ್ಚಿ: **ಪಂಪರಾ,** ೯. ೧೩೩); ದೇಶ (ಧಾರಿಣಿಯಂ ಪ್ರಣಯದಿಂ ಇಳೇಶನಿತ್ತೊಡಮೇಂ ಲಕ್ಷ್ಮಣನೀಯನೆಂಬುದನೆಣಿಸಳೇ: **ಪಂಪರಾ,** ೬. ೧೦೭)

**ಧಾರಿಣೀಧರ** – ಪರ್ವತ (ದಾರುಣ ಧಾರಿಣೀಧರ ಗುಹಾವಳಿಯಿಂ ದೂರವಾರಣಂಗಳಿಂ .. .. ರೌದ್ರಮಪ್ಪ ಕಾಂತಾರದೊಳ್ ಇರ್ಪುದೊಂದು ಹರಿ: **ಪಂಚತಂತ್ರ,** ೨೦೭)

**ಧಾರೆಗೆದಱು** – ಪ್ರವಾಹದಂತೆ ಹರಡಿಕೊ (ಧಾರೆಗೆದಱೆ ಪೇರ್ವೆಸಿ ಸೂಸುವ ಉಭಯಕಟತಟದ ಸೊರ್ಕುಕದಡಿನ ತೆರ್ಕೆಗಡಲ್ಗಳ್: **ಅನಂತಪು,** ೧೩. ೨೧ ವ)

**ಧಾರ್ತರಾಷ್ಟ್ರ** – ಕೌರವ, ಧೃತರಾಷ್ಟ್ರನ ಮಗ, ದುರ್ಯೋಧನ (ಅದ್ಭುತನಟನಿಟಿಲಾಲೋಲಕೀಲಾಕ್ಷಿವೊಲ್ ದಳ್ಳಿಸೆ ಕೋಪಾರಕ್ತನೇತ್ರಂ ನಿಜಭುಜಗದೆಯಂ ತೂಗಿದಂ ಧಾರ್ತರಾಷ್ಟ್ರಂ: **ಗದಾಯು,** ೭. ೩೦); ಕೊಕ್ಕು–ಕಾಲುಗಳು ಕಪ್ಪಾಗಿರುವ ಒಂದು ಬಗೆಯ ಹಂಸ (ಚರಣಾನನಂಗಳ್ ಆಧೂಸರಮಾಗಿರೆ ಮಲ್ಲಿಕಾಕ್ಷಂ ಅವಱೊಳ್ ಕರ್ಪೊಂದಿರೆ ಧಾರ್ತರಾಷ್ಟ್ರಂ ತಾಮ್ರರುಚಿಯಾದಂದು ರಾಜಹಂಸನೆನಿಕ್ಕುಂ: **ಅಭಿಧಾವ,** ೧೯. ೧೯)

**ಧಾರ್ಮಿಕ** – ಉಪಾಸಕ, ಸಾಧಕ (ಹಾಸ್ಯ ಬೀಭತ್ಸಾದಿ ನಾನಾ ರಸಂಗಳಿಂದೊಂದಿದ ಜರತ್ ದ್ರವಿಳ ಧಾರ್ಮಿಕಜನಂಗಳಿಂ: **ಕಾದಂಬ,** ೮. ೪)

**ಧಾರ್ಷ್ಟ್ಯ** – ದಿಟ್ಟತನ (ಸ್ತವಂಗೆಯ್ವುದದೆಮಗೆ ದಲ್ ಗೌರವಂ ಬಿನ್ನಪಂಗೆಯ್ವುದೆ ಧಾರ್ಷ್ಟ್ಯಂ: **ಕಾದಂಬ,** ೬. ೧೨೩)

**ಧಾವಳಿ** – ಮಡಿಬಟ್ಟೆ (ಪಾರ್ವಂ ಧಾವಳಿಯಂ ಪಿಳಿದು ನಭದೊಳ್ ಒಣಗಿಕ್ಕಿದೊಡೆ: **ಸಮಯಪ,** ೧೨. ೩೨)

**ಧಾಳಾಧಾಳಿ** – ಧಾವಿಸಿ ಬರು (ದೇವತಾರಾಧನೆಗೆ ಕಾಲಾತಿಕ್ರಮಮಾಗಲೀಯದೆ ಧಾಳಾಧಾಳಿಯಲ್ಲಿ ಬರ್ಪ ಪರಿಚಾರಕರ ನೆರವಿಯುಮಂ: **ಪಂಚತಂತ್ರ,** ೧೯೦ ವ)

**ಧಿಕ್ಕರಿಸು** – ನಿಂದಿಸು (ಪಿರಿಯರೆವೆಂದು ಧಿಕ್ಕರಿಸಿ ಬಯ್ವುದು ತಕ್ಕುದೆ: **ಶಬ್ದಮದ,** ೩೨೧, ಪ್ರ ೨)

**ಧಿರು** – ಭಲೆ (ಧಿರು ಮಾಧವಿಯೊರ್ವಸಿ ಹೋಯಿರೆ ನಚ್ಚಣಿ ರಂಭೆ ಭಲ ತಿಲೋತ್ತಮೆ .. .. ಎನೆ ಪೊಗ್ರಲ್ತೆ ಸುರಭರತಿಯರ್: **ಅನಂತಪು,** ೪. ೯೧)

**ಧಿಷಣ** – ಪ್ರತಿಭಾವಂತ (ಧಿಷಣರ ಕೃತಿಗಳೊಳೆಸವ ಅಭಿಲಷಿತಗುಣಂಗಳನೆ ಬಿಸುಟು ಮಾತ್ಸರ್ಯ ಮಹಾವಿಷಮಮತಿಯಿಂದೆ ದೋಷಾಮಿಷಮನೆ ಪೊರ್ದಿರ್ಪುವಲ್ತೆ ಕುಕವಿಬಕಂಗಳ್: **ಆದಿಪು,** ೧. ೨೨)

**ಧಿಷ್ಣ್ಯ** – (ಆ ಪುರವರೇಣ್ಯಂ ಧಿಷ್ಣ್ಯಮಾಗಿಯುಂ ನಕ್ತಂಚರಯುಕ್ತಮಲ್ತು ಅಗಣ್ಯ ಪುಣ್ಯಜನಮಯಮಾಗಿಯುಂ ವಿಬುಧರಹಿತಮಲ್ತು: **ಶಾಂತೀಶ್ವಪು,** ೧. ೧೩೨ ವ)

**ಧೀಂಕಿಡು** – ಹಾರು, ನೆಗೆ (ಇದೊಂದು ಧೂಲಿಚಿತ್ರದ ಖಣವೆಂದು ಮೈಯೊರಸಿ ಧೀಂಕಿಡುವರ್ ಕಡೆಯೊಳ್ ಲತಾಂಗಿಯರ್: **ಅನಂತಪು,** ೬. ೪೪)

**ಧೀಂಕು** – ತುಳಿತ (ಧೀಂಕಿಗೆಯ್ದದು ಧಾರಿಣಿ ಮುಳಿಸಿಂಗೆಯ್ದದು ಮೂಱುಲೋಕಂ ಆ ಮದಗಜದಾ: **ನೇಮಿನಾಪು,** ೮. ೮೪)

**ಧೀಮಂತ** – ಮೇಧಾವಿ (ಮಾಹಾ ಮಹಿಭುಜರ್ ಶೌರ್ಯೋಗ್ರ ಧೀಮಂತರ್ ಅಂಕದ ಸಾಮಂತರ್ ಉದಾರವೀರವಿಭವ ಶ್ರೀಮನ್ನೆಯರ್: **ಪುಷ್ಪದಂಪು,** ೮. ೩೯)

**ಧೀರ** – ಧೈರ್ಯವಂತ (ಧೀರಂ ಮದೀಯ ತನಯಂ ಮಾರನಿಭಂ ತೊರಪೆದನೆನ್ನ ಕಾರಣದಿಂದಂ ಚಾರುತರಸ್ತ್ರೀಯರಂ: **ಕರ್ಣನೇಮಿ,** ೩. ೨೮)

**ಧೀರತೆ** – ಧೈರ್ಯ (ಧೀರತೆಯನೊಡನೆ ತೊರೆದು ತಪೋರಮಣ ಸಹಸ್ರಮಂತು ಬಳಸಿರ್ಪಿನೆಗಂ: **ಅನಂತಪು,** ೯. ೭೮)

**ಧೀವರ** – ಬೆಸ್ತ (ತೊಡರೆ ಮೀನ್ ಮೃಗಲಾಂಛನ ಧೀವರಂ ತಡಿಗೆ ಬೀಸಿದ ಜಾಲಮಂ: **ಲೀಲಾವತಿ,** ೩. ೨)

**ಧೀವರೆ** – ಬೇಟೆಗಾತಿ ಬನದ ಧಿವರೆಯರ್ಕಳ ಕಣ್ಣ ಬೆಳ್ಪು ಬೆಳ್ಳಂಗೆಡೆದತ್ತೊ ಪೇಟಿಂ ಎನೆ ನಿರ್ಮಳಮಾದುದು ನೀರಜಾಕರಂ: **ನೇಮಿನಾಪು,** ೫. ೧೦೦)

**ಧುನಿ** – ನದಿ (ಅನಿಲಹತಿಯಿಂದಂಬರ ಧುನಿಯಿಂದೆ ಸಿಡಿಲ್ದ ಫೇನಪಿಂಡಂಗಳ್: **ತ್ರಿಷಷ್ಟಿಪು,** ೯. ೨೪)

**ಧುರ** – ಯುದ್ಧ (ಬಧಿರಿತ ಸಮಸ್ತ ದಿಕ್ತಟಂ ಅಧಿರಿತ ಸರ್ವ ಇಭ್ಯಗರ್ವಿತಂ ಕ್ಷುಭಿತಾಂಭೋಸಲಿಲಂ ಪರೆದುದು ಧುರ ವಿಧಾನ ಪಟುಪಟಹ ಕಹಳ ಭೇರೀರಭಸಂ: **ಪಂಪಭಾ,** ೧೨. ೧೭೧)

**ಧೂತಪಾಪೆ** – ಅಘನಾಶಿನಿ (ಪರಿಗತ ಕೃಷ್ಣವೇಣಿಯುರರೀಕೃತಪುಷ್ಕರೆ .. .. ಗೋಮತಿ ಧೂತಪಾಪೆ ಭುಸುರಲೋಕಪಾವನೆ: **ರಾಜಶೇವಿ,** ೨. ೭)

**ಧೂಪಗುಂಡಿಗೆ** – ಧೂಪದ ಪಾತ್ರೆ [ಸೂರ್ಯಕಾಂತದ ಧೂಪಗುಂಡಿಗೆಯೊಳಳವಡೆಯ ಸೆಜ್ಜೆವಳನಿಕ್ಕಿದ ಕೇಶಸಂಸ್ಕಾರಕಾಳಾಗರುಧೂಪಂ: **ಆದಿಪು,** ೫. ೨೨ ವ)

**ಧೂಪೋದ್ಧಾರ** – ಧೂಪ ಸಮರ್ಪಣೆ (ಮೂಱುಂ ಪೊತ್ತುಂ ಅರ್ಚನಾಪುರಸ್ಸರಂ ಧೂಪೋದ್ಧಾರಂಗೆಯ್ಯೆ: **ಆದಿಪು,** ೫. ೨೩)

**ಧೂಮ** – ಹೊಗೆ (ಕರಂಗಳಡಂಗಿ ಕಿಲುಂಬುಗೊಂಡ ಕನ್ನಡಿಗೆಣೆಯಾಯ್ತು ಭಾನುವಳಯಂ ದಿವಿಜಾಪಗೆ ನೋಡೆ ನೋಡೆ ಕರ್ಪಡರ್ದೆಣೆಯಾದುದು ಆ ಯಮುನೆಗೆ ಅಗ್ಗದ ಯಾಗದ ಧೂಮದ ಏಱ್ಗೆಯೊಳ್: **ಪಂಪಭಾ,** ೬. ೩೬)

**ಧೂಮಜ್ವಾಲೆ** – ಹೊಗೆಸಹಿತವಾದ ಬೆಂಕಿ (ನೆಗೆವ ಧೂಮಜ್ವಾಲೆಗಳ್ ಬಿಟ್ಟಿ ಪೆರ್ಗಿಡಿಗಳ್ ಪೊಣ್ಮುವ ಘೂತ್ಕೃತಿಯಾರಭಸಂ ಆದಂ ಭೀತಿಯಂ ಮಾಡೆ: **ಆಚವರ್ಧ,** ೧೪. ೬೮)

**ಧೂಮಧ್ವಜ** – ಹೊಗೆಯ ಬಾವುಟವುಳ್ಳವನು, ಅಗ್ನಿ (ಜೀಮೂತವಿಮುಕ್ತ ಧಾರೆಗಳಿಂದಂತಾ ಮುನಿಜನಾಪಕಾರಕ ಧೂಮಧ್ವಜನೆಯ್ದೆ ನಂದಿ ಪೋದತ್ತಾಗಳ್: **ನೇಮಿನಾಪು,** ೬. ೩೭)

**ಧೂಮಪ್ರಭೆ** – [ಜೈನ] ಏಳು ನರಕಗಲಲ್ಲಿ ಒಂದು ನರಕ (ಮೂಱು ಲಕ್ಕೆ ಬಿಲದಿಂ ಪುದಿದಿರ್ದನೆಯ್ದನೆಯದೆನಿಪ ಧೂಮಪ್ರಭೆಯೊಳ್: **ಮಲ್ಲಿನಾಪು,** ೧೩. ೧೧೯)

**ಧೂಮಮಾಳೆ** – ಹೊಗೆಯ ಪಂಕ್ತಿ (ಭ್ರಾಜಿತ ಧೂಮಮಾಳೆಮಧುಪಾವಳಿ ಕೇಸುರಿ ಕೆಂದಳಿರ್ ತದುವೀಘಜಮುದಗ್ರವಹ್ನಿಯೆನೆ ಪೊತ್ತಿಸಿದಂ ದೀಪಮೆನಿಪ್ಪುವು ತಳ್ತಶೋಕೆಗಳ್: **ಶಾಂತಿಪು,** ೭. ೧೩೨)

**ಧೂಮಯಷ್ಟಿ** – ಹೊಗೆಯ ಸರಳು, ಸಲಾಕಿ (ವಿವಿಧ ಮಣಿಕನಕಕೃತ ಗೃಹ ಗವಾಕ್ಷಜಾಳಂಗಳಿಂ ಆದಂ ಪೊಱಪೊಣ್ಮುವ ಧೂಪಧೂಮಯಷ್ಟಿಗೆ ನವಿಲೊಸೆದು ಎಱಗುವುದು ಪಾವುಗೆತ್ತಾ ಪುರದೊಳ್: **ಅಜಿತಪು,** ೨. ೧೮)

**ಧೂಮವೇಣಿಕಾನಿಕರ** – ಹೊಗೆಯ ಜಡೆಗಳ ಗುಂಪು (ವಿಷೋರಗಾನಳಾರ್ಚಿಗಳಿಂದಂ ಮಿಳಿರ್ದುವು ಮುನಿಪಧ್ಯಾನಾನಳನಿರ್ಯತ್ ಧೂಮವೇಣಿಕಾನಿಕರದವೋಲ್: **ಆದಿಪು,** ೧೪. ೧೪೨)

**ಧೂಮ್ರಾವರ್ತನ** – ಚಿತ್ರಗಳಿಗೆ ಬಣ್ಣ ಹಾಕುವ ಒಂದು ಬಗೆ (ಅನಿಲಕಂ ಪತ್ರಕಂ ಬಿಂದುಕಂ ಧೂಮ್ರಾವರ್ತನಂ ಉದ್ವರ್ತನಂ ಚಿತ್ರಪ್ರವರ್ತನಂ ಎಂಬಾಱುಂ ಪ್ರಕಾರಮುಮಂ: **ಮಲ್ಲಿನಾಪು,** ೫. ೪೨)

**ಧೂರ್ಜಟಿ** – ಶಿವ (ಆ ವೇಶ್ಯಾವಾಟದೊಳ್ ಧೂರ್ಜಟಿಯ ನೊಸಲ ಕಣ್ಣಂ ಸ್ಮರಂ ನಂದೆವೊಯ್ದಂ: **ಮಲ್ಲಿನಾಪು,** ೨. ೪೪)

**ಧೂರ್ಜಟಿಪುತ್ರ** – ಷಣ್ಮುಖ (ಅಮೋಘಾಸ್ತ್ರದಿಂ .. .. ಎಚ್ಚಂ ಎಚ್ಚಂತೆ ಮುಂ ಧೂರ್ಜಟಿಪುತ್ರಂ ಕ್ರೌಂಚಮಂ ಪಂಚಮೆನೆ ರಿಪುಮಹಾಕಲ್ಪಕಾಲಾಗ್ನಿರುದ್ರಂ: **ರಾಜಶೇವಿ,** ೬. ೮೯)

**ಧೂರ್ತ** – ದುಷ್ಟ (ಕಿತವಂ ಮಾಯಾವಿ ಧೂರ್ತಂ ವಿಕೃತಪರಂ: **ಅಭಿಧಾವ,** ೨. ೧. ೬)

**ಧೂಸರ** – ಬೂದುಬಣ್ಣದ (ಚಂದನ ಅಂಗರಾಗ ಧೂಸರೋರುದಂಡನುಂ .. .. ಅಪ್ಪ ಕೇಯೂರಕಂ: **ಕಾದಂಬ,** ೬. ೧೦ ವ); ಧೂಳು (ಆ ಸೇನಾರಜದಿಂ ಪರಿಧೂಸರಮಾದ ಉರುನಿಜಾಮಗಮಂ ತೊಳೆಯಲ್ಕೆಂದು: **ರಾಜಶೇವಿ,** ೬. ೨೭)

**ಧೂಸರಿತ** – ಧೂಳಿನ ಬಣ್ಣದಿಂದ ಕೂಡಿದ (ಅವಿರಳ ನವಧೂಮದೂಸರಿತ ನಭೋವಿವರಂ ವಿವಿಧಮಣಿಪ್ರಕರ ವಿರಾಜಿತ ಧೂಪಧೂಮಘಟಂ ಎಸೆದಿರ್ಕುಂ: **ಆದಿಪು,** ೧೦. ೩೦)

**ಧೂಳೀಚಿತ್ರ** – ಪುಡಿಯಿಂದ ರಚಿಸಿದ ಚಿತ್ರ (ರಸಚಿತ್ರ ಧೂಳೀಚಿತ್ರದ ಓಜೆಯುಮಂ .. .. ಪರಿಭಾವಿಸಿ ನೋಡಿ: **ಮಲ್ಲಿನಾಪು,** ೫. ೩೬ ವ)

**ಧೂಳೀಪಟಲ** – ಧೂಳಿನ ತೆರೆ (ಅತ್ಯಾಕೀರ್ಣಂ ಮಸುಳಿಸಿತು ದಿವಾಕರಕಿರಣಮಂ ಉದಗ್ರಧೂಳೀಪಟಲಂ: **ಪುಷ್ಪದಂಪು,** ೫. ೪೧)

**ಧೂಳೀಶಾಲ** – [ಜೈನ] ಸಮವಸರಣ ಮಂಟಪದ ಮೊದಲನೆಯ ಪ್ರಾಕಾರ (ಕೈಳಾಸಾಚಲಮನೇಜೆ ಧೂಳೀಶಾಲದಿಂ ತಗುಳ್ದು ಪೂರ್ವೋಕ್ತವರ್ಣನ ಉಪೇತಮಪ್ಪ ವೃಷಭಾಸ್ಥಾನ ಮಂಟಪಮಮಂ ನೋಡುತ್ತುಂ: **ಆದಿಪು,** ೧೩. ೮೨ ವ)

**ಧೂಳೀಸಾಳ** – [ಜೈನ] ಧೂಳೀಶಾಲ (ಬೆಳಗಿಂದಂ ಬೆಳಪುವಿಲ್ಲಿ ಧೂಳೀಶಾಳಂ: **ಆದಿಪು,** ೧೦. ೨೩)

**ಧೃತ** – ತಳೆದ, ಹಿಡಿದ (ಚರ್ಚಿತಚಂದನಂ ಅತಿವಿಳಾಸವಿಧೃತದುಕೂಲಂ ಧೃತರತ್ನಾರ್ಘ್ಯಂ ಬಂದಂ: **ಆದಿಪು,** ೧೩. ೧೨)

**ಧೃತಕಂಟಕ** – ಮುಳ್ಳಿನಿಂದ ಕೂಡಿರುವುದು (ಧೃತಕಂಟಕಮಾದೊಡಮುನ್ನತಿಯಿಂ ಕೇತಕಿಯೊಳೆಱಗಿದುದು ಮಧುಕರಂ: **ಗಿರಿಜಾಕ,** ೨. ೬೪)

**ಧೃತಕಂಬಲ** – ಕಂಬಲಸರ್ಪವನ್ನು ಧರಿಸಿದವನು, ಶಿವ (ನಿಜಾಂಗ ಧೃತಕಂಬಲಧನಂಜಯಮದಂಬಕ: **ರಾಜಶೇವಿ,** ೧೫. ೫೪)

**ಧೃತಿ** – ಧೈರ್ಯ (ಧೃತಿಯನವಳಂಬಿಸಿ ಬಿಸಿಲಂ ಬೆನ್ನೊಳ್ಕಿಕ್ಕಿ ನೀರ್ನೆಟಿಲನಱಿಸಿ .. .. ನಡೆವಾಗಳ್: **ಲೀಲಾವತಿ,** ೬. ೪೨ ವ)

**ಧೃತಿಗೆಡು** – ಧೃತಿಗುಂದು (ಮದನಮದೋದ್ರೇಕದಿಂ ಎನ್ನಿದಿರೊಳ್ ಧೃತಿಗೆಟ್ಟ ಸಿಗ್ಗಿನಿಂ ತನ್ನೊಳ್ ಪೊಲ್ಲದಂ ಎತ್ತಾಚರಿಸುಗುಮೋ: **ಕಾದಂಸಂ,** ೪. ೫೫)

**ಧೃಷ್ಟ** – ಧೈರ್ಯವುಳ್ಳವನು (ಧೃಷ್ಟಂ ವರವಕ್ರೋಕ್ತಿ ವಿಶಿಷ್ಟಂ .. .. ಎನಿಪ್ಪ ದೂತಮುಖ್ಯನಂ: **ಪಾರ್ಶ್ವನಾಪು,** ೨. ೫೦); ಉದ್ಧಟ (ಧೃಷ್ಟನಾತಂ ವಿಯಾತಂ: **ಅಭಿಧಾವ,** ೨. ೧. ೬)

**ಧೇನುಕ** – ಕತ್ತೆಯಾಕೃತಿಯ ಒಬ್ಬ ರಾಕ್ಷಸ (ಧೇನುಕನೆಂಬ ರಾಶಭರಾಕ್ಷಸಂಕಾದಿರ್ಪಂ: **ಜಗನ್ನಾವಿ,** ೪. ೩೯ ವ)

**ಧೈವತ** – ಸಂಗೀತದ ಸಪ್ತಸ್ವರಗಳಲ್ಲಿ ಆರನೆಯದು (ಶೃಂಗಾರಾರ್ದ್ರಂ ಕಕುಭಜನಿತಂ ಧೈವತಂ ಸಂಗ್ರಹನ್ಯಾಸಾಂಗಂ: **ಲೀಲಾವತಿ,** ೨. ೩೦); ನೋಡಿ, 'ಸಪ್ತಸ್ವರ'

**ಧೋಧೂಯಮಾನ** – ಬೀಸುತ್ತಿರುವ (ಧೋಧೂಯಮಾನ ಧವಳಚಾಮರಸಹಸ್ರಸಂಛಾದಿತ: **ಆದಿಪು,** ೧೧. ೧೪ ವ)

**ಧೌತ** – ತೊಳೆದ, ನೆನೆದ (ಒಗೆತರ್ಪ ಬಹುಳ ಬಾಷ್ಪಾಂಬುಗಳಿಂ ಧೌತಮಾದುವೇಕೆಯೋ ನಿನ್ನೀ ಸೊಗಯಿಪ ಕಪೋಲ: **ಕಾದಂಬ,** ೨. ೪೧); ಶುಭ್ರ (ಸುರಭಿಜಲಪರಿರಚಿತಸ್ನಾನರುಂ ಪರಿವೃತಶುಭ್ರವಸನಸಮಂಚಿತ ಕೋಮಳಕಳೇವರರುಂ: **ರಾಜಶೇವಿ,** ೪. ೨೬ ವ)

**ಧೌತಾಸಿನಿಭ** – ತೊಳೆದ ಕತ್ತಿಯಂತಿರುವ (ಧೌತಾಸಿನಿಭನಭೋಮಂಡಳನುಂ ಜನಿತಜಗಜ್ಜನ ಆನಂದನುಂ: **ಆದಿಪು,** ೧೦. ೬೭ ವ)

**ಧೌರೇಯ** – ಜವಾಬ್ದಾರಿ ಹೊತ್ತವನು (ವಿಶ್ವವಿಶ್ವಂಭರಾಧಾರಣಾ ಧವರೇಯನುಂ ಆಸಾದಿತ ಯುವರಾಜಪದವಿವಿರಾಜನುಂ: **ವರ್ಧಮಾಪು,** ೬. ೬೮ ವ)

**ಧ್ಯಾತೃ** – ಧ್ಯಾನಮಾಡುವವನು (ಧ್ಯಾನಂ ಧ್ಯೇಯಂ ಧ್ಯಾತೃ ಫಲಮೆಂದು ಚತುರಂಗಮಕ್ಕುಂ: **ಅಜಿತಪು,** ೮. ೨೯ ವ)

**ಧ್ಯಾನ** – ಚಿಂತನೆ (ಧ್ಯಾನದೊಳಭವಂ ನೆಱೆದಿನಿಸಾನುಮನರೆಮುಚ್ಚಿ ಕಣ್ಗಳಂ: **ಪಂಪಭಾ,** ೮. ೧೩)

**ಧ್ಯಾನಂಬೆಱು** – ಧ್ಯಾನಮಾಡು (ಭಕ್ತಿಯಿಂ ತತ್ಪದ ಧ್ಯಾನಂಬೆತ್ತು ದಯಾಬ್ಧಿಯಂ ಘನತಪಂಗೆಯ್ದೊಚ್ಚತಂ ಮಚ್ಚಿಪೆಂ: **ಶಬಶಂವಿ,** ೨. ೮೯)

**ಧ್ಯಾನಚತುಷ್ಟಯ** – [ಜೈನ] ಆರ್ತ, ರೌದ್ರ, ಧರ್ಮ, ಶುಕ್ಲ ಎಂಬ ನಾಲ್ಕು ಬಗೆಯ ಧ್ಯಾನಗಳು (ಆರ್ತ ರೌದ್ರ ಧರ್ಮ ಶುಕ್ಲಾಭಿಧಾನಚತುಷ್ಟಯಮುಮಂ: **ಸುಕುಮಾಚ,** ३. ३೯ ವ)

**ಧ್ರವ** – ಏಳು ಬಗೆಯ ತಾಳಕ್ರಮಗಳಲ್ಲಿ ಒಂದು (ಧ್ರವ ಮಟ್ಟೆಯಂ ಪಡಿಮಟ್ಟೆಯಂ ಅಟ್ಟತಾಳ ಎಕ್ಕತಾಳ ರೂಪಕಂ ರಚ್ಚೆಯ ಎಂಬ ಏೞುಂ ತೆಱದ ತಾಳಕ್ರದಿಂದ: **ಧರ್ಮಪ,** ೨. ೨೦ ವ)

**ಧ್ರುವ** – ಸ್ಥಿರ (ಧ್ರುವಂ ಸನಾತನಂ ನಿತ್ಯಂ ಅವಿನಶ್ವರ: **ಅಭಿಧಾವ,** ೧. ३. ೨೦); ಒಂದು ನಕ್ಷತ್ರ (ಹಾರಲತೆಯಂತೆ ಕಂಠಯೋಗ್ಯಮುಂ ಗ್ರಹಪಂಕ್ತಿಯಂತೆ ಧ್ರುವಪ್ರತಿಬದ್ಧಮುಂ .. .. ಅಪ್ಪ ಗೀತೆಯಿಂ: **ಕಾದಂಬ,** ೪. ೫೪ ವ); ಒಂದು ತಾಳದ ಹೆಸರು (ಸಾಮಾನಿಕ ಜನತತಿ ಚೇತೋಮಂ ಪ್ರಾಸಾದಿಕ ಅಂತರ ಆಕ್ಷೇಪಕ ವಿನಿಷ್ಕಾಮಪ್ರವೇಶ ಗಾನರಸಾಮೃತಮೆಸೆಗುಂ ಧ್ರುವಪ್ರಯೋಗಾನುಗತಂ: **ಅಜಿತಪು,** ೫. ೧೦); ಆಕಾಶ (ಉರುವಣೆಯಿಂದ ಎಟ್ಟಿ ಧ್ರುವಮಂಡಲದೊಳ್ ವಿಜೃಂಭಿಪ ಓಂಕಾರಮೂರ್ತಿಯಂ ಕಾಣ್ಬ ಸದ್ವಿವೇಕದಂತೆ: **ಉದ್ಭಟಕಾ,** ೪. ೬ ವ)

**ಧ್ರುವಂ** – ತಪ್ಪದೆ (ಅವನೋದುವನಿತು ಬುದ್ಧಿಯೆ ತವುತಂದೊಡೆ ಪಂಚಪದದ ನಾಮಾಕ್ಷರಮಂ ಧ್ರುವಂ ಓದುವುದವು ತೊಡರ್ವುದುಮವಶ್ಯಂ ಓದಲಸದವಱ ಮೊದಲಕ್ಕರಮಂ: **ಆದಿಪು,** ೨. ೫೫)

**ಧ್ರುವಕ್ಷೇತ್ರ** – ಕುದುರೆಯ ದೇಹದ ಮೇಲಿನ ರೋಮದ ಹತ್ತು ಸುಳಿಗಳಿರುವ ಜಾಗ (ಸಂಗತ ದಶಧ್ರುವಕ್ಷೇತ್ರಂಗಳ್ ಶುಭಲಕ್ಷಣಂಗಳ್ ಅಮೃತೋದ್ಭವವಾಹಂಗಳ್ ಅಜಮ್ಮಗ್ಯುಳೂಕಭವಂಗಳ್ ಪದಿನೆಂಟು ಕೋಟಿ ಜಾಶತ್ಯಶ್ವಂಗಳ್: **ಶಾಂತಿಪು** ೧೦. ೧೨೮)

**ಧ್ವಂಸನ** – ಬೀಳು, ನಾಶ [ಮಾಡುವುದು] (ದಶಮುಖಧಸನ ಸೇವಾಸಮಾಜದಂತೆ ಪ್ಲವಗತಿಪ್ರಕೀರ್ಣಮುಂ: **ಕುಸುಮಾಕಾ,** ೧. ೨೨ ವ)

**ಧ್ವಜ** – ಪತಾಕೆ (ಆದಿತ್ಯಂ ಮಸುಳ್ವನ್ನೆಗಂ ಧ್ವಜಘಟಾಟೋಪಂಗಳಿಂದಂ ಲಯಾಂಭೋದಂಗಳ್ ಕವಿವಂತೆವೋಲ್ ಕವಿವುದುಂ ಕಾಲ್ಗಾಪು ಕಾಲ್ಗಾಪಿನೊಳ್ ಜೋದರ್ ಜೋದರೊಳ್ .. .. ಅಗುರ್ವಪ್ಪನ್ನೆಗಂ: **ಪಂಪಭಾ,** ೧೦. ೯೩)

**ಧ್ವಜಿನಿ** – ಧ್ವಜವನ್ನು ಪಡೆದಿರುವಂಥದು, ಸೈನ್ಯ (ಬಿಡೆ ಪಿಣಿಲಂ ಕುರುಧ್ವಜಿನಿ ತೊಟ್ಟನೆ ಬಾಯನೆ ಬಿಟ್ಟುದು ಅಂದು ಗಂಡುಡೆಯುಡೆ ಗಂಡುಗೆಟ್ಟುದು: **ಪಂಪಭಾ,** ೮. ೧೦೧)

**ಧ್ವಜಿನೀಪತಿ** – ಸೇನಾಧಿಪತಿ (ಅಖಂಡಪ್ರತಾಪಧ್ವಜನಂದು ತನ್ನ ಧ್ವಜಿನೀಪತಿಯನಟ್ಟಿ ಬಾಯ್ಕೇಳಿಸಿ: **ಆದಿಪು,** ೧೩. ೫೬ ವ)

**ಧ್ವಜಿನೀಸಂಕ್ಷೋಭ** – ಸೇನೆಯ ಕೋಲಾಹಲ (ಭೂರಿ ಧ್ವಜಿನೀಸಂಕ್ಷೋಭಮಾಕಂಪಮುಂ ಅಶುಭಮಹೀಕಂಪಮುಂ ತನ್ನೊಳೊಂದಾಗೆ: **ಆದಿಪು,** ೧೪. ೮೯)

**ಧ್ವಸ್ತ** – ನಾಶಗೊಂಡ (ತ್ರಿವೇದಮಯಂ ಧ್ವಸ್ತತಮಸ್ತಮಂ ಹೃತನಿಶಾಟೋಪನೊಲ್ದೀಗೆ ಗೌತಮ ಗೋತ್ರಾಂಬುಜ ಷಂಡಚಂಡಕಿರಣಂಗೆ ಆದಿತ್ಯನುತ್ಸಾಹಮಂ: **ಪಂಚತಂತ್ರ,** ೭)

**ಧ್ವಸ್ತದಿತಿಜ** – ರಾಕ್ಷಸನನ್ನು ನಾಶಗೈದವನು (ಧ್ವಸ್ತದಿತಿಜಂ ನತಸಮಸ್ತವಿಬುಧಂ ಭುವನವಿಸ್ತರಣಪಾದಂ ಎಸೆದಂ ಫಣಿತಲ್ಪಂ: **ಜಗನ್ನಾವಿ,** ೧. ೫೦)

**ಧ್ವಾಂಕ್ಷ** – ಕಾಗೆ (ಧ್ವಾಂಕ್ಷಬಲಂಬೆರಸು ಅರಿಜಯಕಾಂಕ್ಷೆಯಿಂ ಆತ್ಮೀಯ ಮಂತ್ರಿ ಪೇಳ್ದಿಂದದಿಂ ಇರ್ದಂ ಕ್ಷೇಮದಿಂ: **ಪಂಚತಂತ್ರ,** ೩೩೬)

**ಧ್ವಾಂಕ್ಷಧ್ವಜ** – ಕಾಗೆಯ ಹುರಿತಿನ ಧ್ವಜ, ಅಂಥ ಧ್ವಜವುಳ್ಳವನು, ಕರ್ಣ (ಅಂತು ಯುಗಾಂತವಾತಾಹತಕುಲಗಿರಿಯೆ ನೆಲೆಯಿಂ ತಳರ್ವಂತೆ ತಳರ್ದು ಧ್ವಾಂಕ್ಷಧ್ವಜಂ ಅಂಬರತಳದೊಳ್ ಮಿಳಿರೆ ತನಗಿರಂ ಬರ್ಪ ಕರ್ಣನ ರಥಮಂ; **ಪಂಪಭಾ,** ೧೨. ೧೩೬ ವ):

**ಧ್ವಾಂತ** – ಕತ್ತಲೆ (ಬಲನಿವಹರಜಸ್ಸಂತತಿಧ್ವಾಂತದೊಳ್: **ಆದಿಪು,** ೧೪. ೯೬)

**ಧ್ವಾಂತದ್ವಿಷ** – ಕತ್ತಲ ಶತ್ರು, ಸೂರ್ಯ (ಕಷಾಯವಿಪುಳಧ್ವಾಂತದ್ವಿಷಂ .. .. ಆಪ್ತರಂದಮನೆ ಬ್ರಹ್ಮಂ ಪೇಳ್ದಂ: **ಸಮಯಪ,** ೮. ೨)

**ಧ್ವಾಂತಬಂಧ** – ಕತ್ತಲೆಯ ಕಟ್ಟು (ತಮ್ಮಂ ಕಂಡನಿತಱೊಳೆ ತೆರಳ್ದೆನ್ನಾ ಮನೋಗತಧ್ವಾಂತಬಂಧಂ ಳಱೆತ್ತೆಲ್ಲಂ: **ಕವಿರಾಮಾ,** ೨. ೬೭)

**ಧ್ವಾಂತಹರ** – ಕತ್ತಲೆಯನ್ನು ನಾಸಪಡಿಸುವವನು, ಸೂರ್ಯ ಅಥವಾ ಚಂದ್ರ (ನೀಹಾರಕರಂ ಮಹಿತಾತ್ರಿನೇತ್ರಜಂ ಧ್ವಾಂತಹರಂ ದ್ವಿಜರಾಜಂ ಅಪ್ರಿಯತನಯಂ: **ಅಭಿಧಾವ,** ೧. ೧. ೬೮)

**ಧ್ವಾನ** – ಶಬ್ದ (ಕಿಱಿದಾನುಂ ಬೇಗಕ್ಕೆ ಭೋಂಕೆನೆ ಪೊಣ್ಮಿದ ಭಯಂಕರ ಧ್ವಾನಮಂ ಕೇಳ್ದು: **ಪಂಚತಂತ್ರ,** ೯೩ ವ)

# ನ

**ನಂಜಿನುರುಳಿ** – ವಿಷದ ಉಂಡೆ (ಕಾಮತೆಯರ ಮೆಲ್ನುಡಿಯಂ ನಂಜಿನುರುಳಿಯೆನ್ನದೆ ಮುದ್ದುನುಡಿಯೆಂದೊಡಂ ತರುಣಿಯರ ಕುಚಯುಗಳಂ ಮೋಹರಾಜನ ಚಕ್ರಮೆನ್ನದೆ ಚಕ್ರವಾಕಮೆಂದೊಡಂ: **ಧರ್ಮಾಮೃ,** ೭. ೯೪ ವ)

**ನಂಜು** – ನಂಚಿಕೊ ಹಾಗೂ ವಿಷ (ನಂಜು–ಈಷಲ್ಲೇಹನೇ ವಿಷೇ ಚ: **ಶಬ್ದಮದ, ಧಾ** ೨೨೬)

**ನಂಜುಗೊರಲ** – ಕೊರಳಲ್ಲಿ ನಂಜುಳ್ಳವನು, ಶಿವ (ಆ ನಂಜುಗೊರಲನ ಗಾಡಿಯಂ ನೋಡಿ ಬಗೆಯೊಳ್ ಅಚ್ಚರಿವಡುತುಂ ಬಂದು ತುಟಿಲ್ಗೆಯ್ದು ಕೈಗಳಂ ಮುಗಿದು: **ಕಬ್ಬಿಗಕಾ,** ೧೩೧ ವ)

**ನಂಜುನೀರ್** – ವಿಷಯುಕ್ತ ನೀರು (ನಂಜುನೀರ್ ಪಿಡಿದು ನುಂಗುವುದಲ್ಲಿಯ ಮೀಂಗಳ್: **ಆದಿಪು,** ೫. ೮೮)

**ನಂಜುರುಳಿ** – ನಂಜಿನ ಉಂಡೆ, ವಿಷದ ಗುಳಿಗೆ (ಜೀವನಮೆಂಬುಬ್ಬೆಗದಿಂದೆ ನಂಗುರುಳಿಯಂ ಮೋ ನುಂಗಿದಳ್ ಪೇಟದಬ್ಬಿನಿಯೆಂಬಂತೆವೊಲಾಯ್ತು ಕುಟ್ಮಳಿತ ಕಂಜಾತೋದರೇಂದಿಂದಿರಂ: **ಚಂದ್ರಪ್ರಪು,** ೮. ೧೫)

**ನಂಜೂಡು** – ವಿಷ ಲೇಪಿಸು (ನಂಜೂಡಿದ ಸೂಜಿಗಳನುಳಿಪಿ ತುಂಬಿಯೊಲವನೇನಾಡಿದಳೊ ಸೂಜಿಗಳ ಕೂರ್ಪೊಡೆದ ಮೊನೆಯಲರ ಮೇಲೆ ನಾನಾವಿಧದಿಂ: **ನೇಮಿನಾಪು** ೩. ೧೦೦)

**ನಂಜೂಱು** – ವಿಷ ಸೇರಿಕೊ (ಒಂಭತ್ತು ಭೇದದ ನಂಜೂಱಿದ ಮುಪ್ಪು ಬಾರದ ಯುವತ್ವಂ ತೀರದುತ್ಕರ್ಷಣಂ: **ಅನಂತಪು,** ೬. ೧೭)

**ನಂಟ** – ಬಂಧು (ತಾಯ್ ಕಟ್ಟೊಡೆ ಬಂದ ನಂಟರ ನಡುವೆ ಬಳೆದೊಡೆ ಆ ನಂಟರುಂ ಕಟೆದು ಉಳ್ಳರೆಲ್ಲಂ ಸತ್ತು: **ವಡ್ಡಾರಾ,** ಪು. ೭೭, ಸಾ. ೧೭)

**ನಂಟರ್ತನ** – ನಂಟಸ್ತಿಕೆ (ಕಳ್ಳರ ನಂಟರ್ತನಮುಂ .. .. ಕಳ್ಳತನಬ್ರತದ ಹಾನಿಯೆಂಬಂ ಜೈನಂ: **ಸಮಯಪ,** ೫. ೪೪)

**ನಂಟು** – ಬಾಂಧವ್ಯ (ಜವನೊಡವುಟ್ಟು ಮಾರಿಯ ಒಡನಾಡಿ ಲಯಾಗ್ನಿಯ ನಂಟು: **ಜಗನ್ನಾವಿ,** ೬. ೭೩)

**ನಂದ** – ಕೃಷ್ಣನ ಸಾಕುತಂದೆ ನಂದಗೋಪ (ನಂದಾದಿ ಗೋಪರ್ ಇಂದುಪುರಂದರರಮಹಮೆಮದು ಹರ್ಷದಿಂ ಸಂಭ್ರಮಿಸಲ್: **ಜಗನ್ನಾವಿ,** ೪. ೭೬); ನಂದ ಎಂಬ ರಾಜವಂಶ (ಪಾಟಳೀಪುತ್ರಮೆಂಬುದು ಪೊಟಲ್ ಅದನಾಳ್ವೊಂ ನಂದವಂಶಜಂ ಪದ್ಮಮನೆಂಬೊಂ: **ವಡ್ಡಾರಾ,** ಪು. ೧೮೦, ಸಾ. ೧೩)

**ನಂದಕ** – ಸಂತಸಗೊಳ್ಳುವಿಕೆ; ವಿಷ್ಣುವಿನ ಕತ್ತಿ (ಮುಕುಂದನ ನಂದಕಾಯುಧಂ ವನದ ತಮಾಲಕಾನನದ ಕಾನಕವಲ್ಲರಿ .. .. ಅಂಬನೀಕ್ಷಣಂ: **ರಾಜಶೇವಿ,** ೮. ೧೦೦)

**ನಂದನ** – ಉದ್ಯಾನವನ (ಇದಂ ಪುಗಲಿಂ ಗಡಿಂ ಎಂದು ಬೇಟಕಾಱರಂ ಇರದೆ ಊಱೆ ಸಾಱೆ ಜಡಿವಂತೆ ಎಸೆಗುಂ ಸಹಕಾರಕೋಮಳ ಅಂಕುರಪರಿತುಷ್ಟ ಪರಪುಷ್ಟಗಳ ಧ್ವನಿ ನಂದನಂಗಳೊಳ್: **ಪಂಪಭಾ,** ೨. ೧೩); ಇಂದ್ರನ ವನ (ಸುರದ್ರುಮಯೋನಿ ನಂದನಂ: **ಅಭಿಧಾವ,** ೧. ೧. ೩೬); ಮಗ (ನಂದನ ತನುಜನ್ಮ ತೋಕ ಸುತ ಪುತ್ರ ತನೂಭವ ಸೂನುನಾಮಕಂ: **ಅಭಿಧಾವ,** ೧. ೧೧. ೧೭); [ಜೈನ] ಮೇರುಪರ್ವತದ ಭದ್ರಶಾಲ, ನಂದನ, ಸೌಮನಸ ಮತ್ತು ಪಾಂಡುಕ ಎಂಬ ವನಗಳಲ್ಲಿ ಒಂದು (ಮಂದರಶೈಲಮಂ ದಿವಿಜನಾಯಕನೆಯ್ತರೆ ಭದ್ರಶಾಲದಿಂ ಸಂಧಿಸಿ ನಿಂದ ನಂದನದಿಂದೊಪ್ಪುವ ಸೌಮನಸಾಖ್ಯದಿಂ ಮನೋನಂದನಮಪ್ಪ ಪಾಂಡುಕದಿನಾ ಗಿರಿರಾಜವಿಲಾಸಂ ಅೞ್ತಿಯಂ ತಂದುದು ಕಾಣ್ಕೆಯಂ ತನಗೆ ತರ್ಪವೊಲ್ ಅಂತದನಿಂದ್ರನೆಯ್ದಿದಂ: **ಶಾಂತಿಪು,** ೫. ೨)

**ನಂದನಂದನ** – ನಂದಗೋಪನ ಮಗ, ಕೃಷ್ಣ (ಗೋಕುಲಮಂ ಪೊಕ್ಕು ನಂದನಂದನಂ ಗೋಪಾಲವಿನೋದಮೆ ನಿತ್ಯೋತ್ಸವಮಾಗೆ: **ಜಗನ್ನಾವಿ,** ೪. ೫೮ ವ)

**ನಂದನಚರ** – [ಜೈನ] ಹಿಂದಿನ ಜನ್ಮದಲ್ಲಿ ಮಗನಾಗಿದ್ದು ಸಂಸಾರಚಕ್ರದಲ್ಲಿ ಸುತ್ತುತ್ತಿರುವವನು (ನವಿಲಂಕೊಳ್ಳೆಂದರೆ ಗೆತ್ತು ಪಿಡಿದುದಂಬಾಚರಿ ಕುಕ್ಕುರಿ ನೊಂದು ಬೀೞ್ದ ನಂದನಚರನಂ: **ಯಶೋಧಚ,** ೩. ೪೨)

**ನಂದನವನ** – ಇಂದ್ರನ ಉದ್ಯಾನ (ನಂದನವನ ಸಂಭವ ಹರಿಚಂದನಸಂತಾನ .. .. ಕುಸುಮಕೋಟಿಯಂ: **ಪುಷ್ಪದಂಪು** ೧೧. ೪೪); ಚೆಲುವಾದ ಉದ್ಯಾನ (ನಂದನವನೋದ್ದೇಶದೊಳಿರ್ದ ಜನ್ಮಾಂದಕಿಯಲ್ಲಿಗೆ ಬಂದು ಮುಂದೆ ನಿಂದು: **ಸುಕುಮಾಚ,** ೫. ೨೩ ವ)

**ನಂದನೆ** – ಮಗಳು (ನಂದನೆ ಪುತ್ರಿ ತನೂಜೆ ಸೂತಿತಾನೆನಿಕುಂ: **ಅಭಿಧಾವ,** ೧. ೧೧. ೧೭)

**ನಂದಿ –** ಸಂತೋಷಗೊಳ್ಳುವವನು (ಅಂತು ದುಶ್ಶೀಲ ದುರಾಚಾರ ದುರ್ಯಶೋನಂದಿಯಾದ ವಿಶಾಖನಂದಿ: **ಆಚವರ್ಧ,** ೨. ೩೬ ವ)

**ನಂದಿನಿ –** ಒಡಹುಟ್ಟಿದವರ ಹೆಂಡತಿ, ನಾದಿನಿ (ಸ್ವಸೃತನಯಂ ಸ್ವಸೃಈಯಂ ಪೆಸರಿಂ ನಾದುನಿ ನನಾಂದು ನಂದಿನಿಯೆನಿಕುಂ: **ಅಭಿಧಾವ,** ೧. ೧೧. ೨೪)

**ನಂದಿಸು –** ಆರಿಸು (ಅನ್ನೆಗಂ ಕಪ್ಪಂಗವಿಯಾಗಿ ಕವಿವ ದ್ರುಪದವಿಳಯಾನಿಳನಂ ದ್ರೋಣಂ ಮಹಾದ್ರೋಣ ಪುಷ್ಕಲಳಾವರ್ತಕಂಗಳೆಂಬ ವಿಳಯಕಾಳನೀಳ ಜಳಧರ ವರ್ಷಂಗಳಿಂ ನಂದಿಸೆಯುಂ: **ಪಂಪಭಾ,** ೧೨. ೨೦ ವ)

**ನಂದೀಶ್ವರ –** [ಜೈನ] ಆಷಾಢ, ಕಾರ್ತಿಕ, ಫಾಲ್ಗುಣ ಮಾಸಗಳಲ್ಲಿ ದೇವತೆಗಳು ಜಿನಪೂಜೆಗಾಗಿ ನಂದೀಶ್ವರದ್ವೀಪಕ್ಕೆ ಹೋಗುವ ಕಾಲ (ವಂದಾರು ಬಂದ ಫಾಲ್ಗುಣ ನಂದೀಶ್ವರದೊಳ್ ತ್ರಿಪೃಷ್ಠತನಯಂ ತನುವಂ ತಂದುಪವಾಸಕ್ಕಾ ನಿಜನಂದನದ ಸಹಸ್ರಕೂಟ ಚೈತ್ಯಾಲಯದೊಳ್: **ಶಾಂತಿಪು,** ೭. ೪೮)

**ನಂದೆವೊಯ್ –** ಆರಿಸುವಂತೆ ಹೊಡೆ (ಮನಸ್ತಾಪಮಂ ಧೃತಿಸಾಂದ್ರಚಂದ್ರಿಕೆಯಿಂ ನಂದೆವೊಯ್ದು ನಡೆತಂದು: **ರಾಜಶೇವಿ,** ೧೩. ೯೭ ವ)

**ನಂದ್ಯಾವರ್ತ –** ನಂದಿಬಟ್ಟಲು ಹೂ: ನಂದಬಟ್ಟಲ ಹೂವಿನ ಆಕಾರದ ಮನೆ (ನಾಭಿರಾಜಾಂಗಸಂಗತಮಪ್ಪ ನಂದ್ಯಾವರ್ತದಂತೆ ಸೊಗಯಿಸುವ ನಂದ್ಯಾವರ್ತದೊಳಂ: **ಆದಿಪು,** ೬. ೧೦೬ ವ)

**ನಂದ್ಯಾವರ್ತವಿಮಾನ –** [ಜೈನ] ಒಂದು ಸ್ವರ್ಗದ ಹೆಸರು (ವಾನರಾರ್ಯನುಂ ಸಂದ್ಯಾವರ್ತವಿಮಾನದೊಳ್ ಮನೋರಥಾವಾಪ್ತದಿವ್ಯಭೋಗಂ ಮನೋರಥನೆಂಬಂ ಕಲ್ಪಜನಾದಂ: **ಆದಿಪು,** ೫. ೭೦ ವ)

**ನಂಬಲೆಯಾಗ ನಂಬದಿರಲಾಗ –** ನಂಬಲೂ ಆಗುವುದಿಲ್ಲ ನಂಬದಿರಲೂ ಆಗುವುದಿಲ್ಲ (ಪೆಂಡಿರಂ ನಂಬಲೆಯಾಗ ನಂಬದಿರಲಾಗ ಅವರಿಲ್ಲದೆ ಬಾಟಿಲಾಗದು: **ಪಂಚತಂತ್ರ,** ೧೩೬)

**ನಂಬುಗೆ –** ನಂಬಿಕೆ (ನವಪದಾರ್ಥಂಗಳುಂ ಪಂಚಾಸ್ತಿಕಾಯ ಷಡ್ದ್ರವ್ಯಂಗಳುಂ ಎಂಬಿವಱೊಳ್ ಆದಮಾನುಂ ಅಱೆತಮುಂ ಕುಶಲಿಕೆಯುಂ ನಂಬುಗೆಯುಂ ಆಗಿ: **ವಡ್ಡಾರಾ,** ಪು ೬, ಸಾ ೧೯)

**ನಕುಲ –** ಮುಂಗುಸಿ (ತನ್ನ ಮನೆಯೊಳ್ ಮಾರ್ಮನುಷ್ಯರಿಲ್ಲದ ಕಾರಣದಿಂ ತಾಂ ನಡಪಿದೊಂದು ನಕುಲನಂ ತೊಟಿಲ ಸಮೀಪದೊಳ್ .. .. ಕಟ್ಟಿ ಪೋದಂ: **ಪಂಚತಂತ್ರ,** ೨೫೭ ವ); ಪಂಚಪಾಂಡವರಲ್ಲೊಬ್ಬ (ನಕುಲಂ ಕುಂತಶಸ್ತ್ರದೊಳತಿಪ್ರವೀಣನುಮಾಗಿ: **ಪಂಪಭಾ,** ೨. ೩೬ ವ)

**ನಕುಳ –** ನಕುಲ, ಮುಂಗುಸಿ (ಶಾರ್ದೂಲ ವರಾಹ ಗೋಲಾಂಗೂಲ ನಕುಳಂಗಳಂ ನೋಡುತ್ತಮವರ್ಕೆ ಭಕ್ಷ್ಯಾಪೂಪಗಳಂ ತಿರಿಸಿ ನೀಡುತ್ತಮಿರ್ದ: **ಆದಿಪು,** ೫. ೨ ವ)

**ನಕ್ಕಿಸು –** ನೆಕ್ಕಿಸು (ಸುರಭಿಯಿಂ ನಕ್ಕಿಸೆ ದೇಹಮನೆಲ್ಲಂ ಉರ್ಚಿ ಕುಡೆ ಕಯ್ದುವಾದವು ಆ ಗೊರವನೆಲ್ವು ಗಡ: **ಸಮಯಪ,** ೧೦. ೧೪೨)

**ನಕ್ತಂಚರ –** ರಾತ್ರಿಯಲ್ಲಿ ಚರಿಸುವುದು, ರಾಕ್ಷಸ (ಆ ಪುರವರೇಣ್ಯಂ ಧಿಷ್ಣ್ಯಮಾಗಿಯುಂ ನಕ್ತಂಚರಯುಕ್ತಮಲ್ತು ಅಗಣ್ಯ ಪುಣ್ಯಜನಮಯಮಾಗಿಯುಂ ವಿಬುಧರಹಿತಮಲ್ತು: **ಶಾಂತೀಶ್ವಪು,** ೧. ೧೩೨ ವ)

**ನಕ್ತಂಚರಿ –** ರಾಕ್ಷಸಿ (ನಕ್ತಂಚರೀಮುಖದೊಳ್ ತೂಂತುವುದು ಅಂತರಂ ದಶಮುಖೋತ್ಪಾತಾಸಿ ಧಾರಾಮುಖಂ: **ಪಂಪರಾ,** ೧೦. ೨೨೩)

**ನಕ್ತಮಾಲ –** ಹುಲಿಗಿಲು ಮರ (ನಾಗ ನಕ್ತಮಾಲವನದ ಪೂಗವನ ತಮಾಲವನದ ಲೀಲೆ ಕರಮೆ ಕಣ್ಗೆವರ್ಕು: **ಅಜಿತಪು,** ೧. ೮)

**ನಕ್ರ –** ಮೊಸಳೆ (ಕ್ಷಣರುಗ್ಮಾಲಾಮಯ ಅಬ್ಧಕ್ಕೆಣೆಯೆನಿಸೆ ಚಳತ್ಕಾಂತಿಯುಕ್ತಾಂತರಂಗೋಲ್ಬಣೆ ನಕ್ರ ಆರೂಢೆ .. .. ಆ ಮಹಾಮನಸೀ ಯಕ್ಷಿಣಿಯೆಂದುಂ ಮಾೞ್ಕೆ ಶಾಂತೀಶ್ವರಚರಿತಕೃತಿಶ್ರೀಗೆ ಸೌಭಾಗ್ಯದೊಳ್ಪಂ: **ಶಾಂತೀಶ್ವಪು,** ೧. ೧೦)

**ನಕ್ಷತ್ರಪಾತಕ –** ಜ್ಯೋತಿಷಿ (ಕ್ಷಿತೀಶಂ ನಕ್ಷತ್ರಪಾಠಕಪ್ರಕರನಿರೂಪಿತ ಶುಭಲಗ್ನದೊಳ್ .. .. ವಿವಾಹಂ ಮಾಡಿ: **ಕರ್ಣನೇಮಿ,** ೩. ೧೯೫ ವ)

**ನಕ್ಷತ್ರಮಾಲೆ –** ನಕ್ಷತ್ರಸಮೂಹ (ನಕ್ಷತ್ರಮಾಲೆಯನೋಲಗಿಸುವಂತೆ ಮುಕ್ತಾಫಲನೂಪುರಮಂ ತುಡಿಸಿಯುಂ: **ಪಂಪರಾ,** ೫. ೪೨ ವ)

**ನಕ್ಷತ್ರಮಾಳಾ –** ಇಪ್ಪತ್ತೇಳು ಎಳೆಗಳ ಮುತ್ತಿನ ಕಂಠೀಹಾರ (ಅರ್ಧಹಾರ ರಶ್ಮಿಕಳಾಪ ನಕ್ಷತ್ರಮಾಳಾ ಅರ್ಧಗುಚ್ಛ ಮಾಣವಕ ಅರ್ಧಮಾಣವಕಗಲೆಂಬ ಪನ್ನೊಂದು ನಾನಾರತ್ನದ ಸುವರ್ಣಪದಕವಿರಚನಾದಿ ಭೇದದಿಂ: **ಆದಿಪು,** ೮. ೫೪ ವ)

**ನಕ್ಷತ್ರವೀಧಿ –** ಆಕಾಶ (ಆ ಕನ್ಯಾರತ್ನಂಗಳಂ ಪ್ರಭಾಮಂಡಲದ ವಿಮಾನಾರೂಢಮರ್ಮಾಡಿ ನಕ್ಷತ್ರವೀಧಿಯೊಳ್ ಕ್ಷಣಮಾತ್ರದೊಳ್ ರಣಭೂಮಿಯನ್ಯೆದಿ: **ಪಂಪರಾ,** ೧೦. ೬೫ ವ)

**ನಖ –** ಉಗುರು (ತಳಮಿವು ತಳಿರಿವು ಬೆರಲಿವು ಕಳಿಕೆಗಳಿವು ನಖಮಿವು ಅಲರಿವು ಎಂದಱೆಯದೆ ಕೋಮಳೆ ಪೂಗೊಯ್ವೆಡೆಯೊಳ್ ಪಳಪಳಿಸಿದಳ್ ಅತಿಮುಗ್ಧೆ ಮಾವಿನೊಳ್ ಮತ್ತೊರ್ವಳ್: **ಶಾಂತೀಶ್ವಪು,** ೧೦. ೧೨೬)

**ನಖಂಪಚ–** ಉಗುರು ಬೆಚ್ಚಗಿನ (ಮದನದವಾಗ್ನಿತಪ್ತೆಯರ ಸುಯ್ಯ ನಖಂಪಚಮಾಗಿ ಬರ್ಪ ತಣ್ಗದಿರನೆಲರ್ಚಿ: **ಅನಂತಪು,** ೭. ೮೧)

**ನಖಪದ –** ಉಗುರಿನ ಗೀರುಗಾಯ (ಮದಯುತಂ ಅನ್ಯವಧೂನಿವಹದ ಮೆಯ್ಯೊಳ್ .. .. ವಿರಚಿಸುವಂ ನಖಪದಮಂ: **ಪಾರ್ಶ್ವನಾಪು,** ೩. ೭೫)

**ನಖಮಯೂಖ –** ನಖದೀಪ್ತಿ (ಇಂಬಾಗಿರೆಯುಂ ಮಕುಟಮದಂ ಬಿಣ್ಪಿನೊಳ್ ಓರೆವೋದೊಡೆ ಓಸರಿಪವೊಲ್ ಒರ್ವಂ ಬಹಳ ನಖಮಯೂಖ ಕದಂಬಕಮಂ ಕರಮಂ ಉತ್ತಮಾಂಗಕ್ಕೊಯ್ದಂ: **ಶಾಂತಿಪು,** ೫. ೧೦೨)

**ನಖರ –** ಪ್ರಾಣಿಗಳ ಪಂಜ (ತೀಕ್ಷ್ಣನಖರಂಗಳಿಂ ಆಸುರಮಾಗಿ ಸೀೞ್ದು ಪುಂಸ್ಕೇಸರಿಗಂ ಬಲಾಧಿಕಂ ಅಸಾಧ್ಯತರಂ ನೆಗೞ್ವಂ ವೃಷಾಧಿಪಂ: **ಪಂಚತಂತ್ರ,** ೧೬೧)

**ನಗ –** ಚಲಿಸದಿರುವುದು, ಬೆಟ್ಟ (ಆ ವಿಂಧ್ಯ ನಗದೊಳ್ ನಾಯ್ ಪಾವಾಯ್ತು ನವಿಲುಂ ಎಯ್ಯುಮಿಗಮಾಯ್ತು: **ಯಶೋಧಚ,** ೩. ೪೫); ಮರ (ಕರ್ತಾರಂಗೆ ಎಱಗುವುದು ಅತಿವರ್ತಿತ್ವಂ ಪೊಲ್ಲದೆಂದು ಪುರುಸೂನುಗೆ ಮುಂ ಮಾರ್ತಲೆಯಾದ

ಚಿಳಾತಾವರ್ತನರಂ ಅಂದು ಊಜೆ ಕಲ್ಪಿಪಂತಾಯ್ತು ನಗಂ: **ಶಾಂತಿಪು,** ೧೧. ೫೨)

**ನಗಚೂಳ** – ಬೆಟ್ಟದ ಶಿಖರ (ಆ ನಗಚೂಳದೊಳ್ ಶಬರ ಬಾಲಕಿಯರ್ ವಿಧುಬಿಂಬದಲ್ಲಿ ತಮ್ಮಾನನಮಂ ನಿರೀಕ್ಷಿಸಿ: **ಚಂದ್ರಪ್ರಪು,** ೧೦. ೩೨)

**ನಗಜೆ** – ಪರ್ವತಪುತ್ರಿ, ಗಿರಿಜೆ (ನಿನಗಜೆಪಲ್ ಬಂದೆಂ ಶರ್ವನ ವಧು ಶರ್ವಾಣಿಯೆಂದು ನಗಜೆಯ: **ಗಿರಿಜಾಕ,** ೪. ೬೦)

**ನಗಧರ** – ಬೆಟ್ಟವನ್ನು ಎತ್ತಿದವನು, ಕೃಷ್ಣ (ಜಗಮಂ ಬಸಿಱೊಳ್ ಅಡಗಿಡುವಂ ನಗಧರನೆಂಬರ್ ಕೆಲಂಬರ್: **ಸಮಯಪ,** ೧೦. ೪೫)

**ನಗಧ್ವನಿ** – ಬೆಟ್ಟದ ಮಾರ್ದನಿ (ಜನವಾದಂ ನೆಗೞ್ ನಗಧ್ವನಿವೊಲ್ ಅನುಕರಣವಾರ್ತೆ ಮಂತ್ರಿಯ ಗುಣಮೇ: **ಕವಿರಾಮಾ,** ೩. ೧೪೩)

**ನಗಾಹಿತ** – [ನಗ+ಅಹಿತ] ಇಂದ್ರ (ಜಡಧರಮೆಸೆದುದು ನಗಾಹಿತ ಪ್ರಣಿಧಿಯಿದೆಂದಡರ್ದತಿರೋಷದಿಂ ಗಿರಿ ತೊಡರ್ಚಿ ಪಿಡಿದು ಉಗ್ರಶೂಲದೊಳ್ ತಾಱುವವೋಲ್: **ಶಬಶಂವಿ,** ೩. ೩೭)

**ನಗಿಸು** – ನಗುವಂತೆ ಮಾಡು [ಕಾರುಣ್ಯನಿನಾದಂ ನಿನ್ನಾದಂ ನಗಿಸುಗುಂ: **ಆದಿಪು,** ೩. ೬)

**ನಗೆವಡಿಕಾಱ** – ಹಾಸ್ಯಗಾರ (ನಗೆಚಡಿಕಾಱಮ ನೀಱಂ ಬಗೆಕಾಱಂ ಪಾಟಕಾಱನೊಳ್ನುಡಿಕಾಱಂ: **ಕಾವ್ಯಾವಲೋ,** ೩೨೨)

**ನಗೆವೆಳ್ಪು** – ನಗೆವೆಳಗು (ಗಂಡನೆಂಬ ತುಂಬಿಗೆ ನಗವೆಳ್ಪನೋಲಗಿಸಿತಿರ್ಪುದು: **ಲೀಲಾವತಿ,** ೧೪. ೪೨)

**ನಗೇಂದ್ರ** – ಪರ್ವತರಾಜ (ತಾವರೆಯಲ್ಲಿ ತಾರೆ ಜನನಂಬಡೆದಂದು ನಗೇಂದ್ರಮೂಲದೊಳ್ ಭಾವಿಸೆ ಬಾಳೆಗಂಬಮೊಗೆದಂದು .. .. ಸತಿಯಂಗಮನಾಂ ಪೊಗಳಲ್ಕೆ ಸಾಲ್ದಪೆಂ: **ರಾಜಶೇವಿ,** ೭. ೨೬)

**ನಗೇಂದ್ರಮೂಲ** – ಬೆಟ್ಟದ ತಪ್ಪಲು (ತಾವರೆಯಲ್ಲಿ ತಾರೆ ಜನನಂಬಡೆದುದು ನಗೇಂದ್ರಮೂಲದೊಳ್ ಭಾವವಿಸೆ ಬಾಳೆಗಂಬಮೊಗೆದಂದಂ: **ರಾಜಶೇವಿ,** ೭. ೨೬)

**ನಗೇಂದ್ರಯಜ್ಞ** – ಬೆಟ್ಟಕ್ಕೆ ಮಾಡುವ ಪೂಜೆ (ನಗೇಂದ್ರಯಜ್ಞಮಂ ನೆಗಳ್ದು ಗೋಪಸಮಾಜಂ ವಿರಾಜಿಸೆ: **ಜಗನ್ನಾವಿ,** ೪. ೮೨ ವ)

**ನಗೋತ್ಸಂಗ** – ಬೆಟ್ಟದ ತಪ್ಪಲು (ಉತ್ತುಂಗ ನಗೋತ್ಸಂಗಮಂ ಏಱುವ ಮೃಗರಾಜನಂ ಪೋಲ್ತು: **ಶಾಂತಿಪು,** ೫. ೯೪ ವ)

**ನಗೋಪಕಂಠ** – ಪರ್ವತದ ಸನಿಹ, ತಪ್ಪಲು (ನಗದಿಂ ಪೊಱಪೊಣ್ಮಿ ಲೋಲಕಲ್ಲೋಲ ಪರಂಪರಾಪರಿಗತಂ ಪರಿದತ್ತು ನಗೋಪಕಂಠದೊಳ್: **ಅಜಿತಪು,** ೪. ೬೩)

**ನಗೋಪತ್ಯಕ** – ಬೆಟ್ಟದ ತಪ್ಪಲು (ಓರಂತೊಱಗಿರ್ದ ಶಾಳಿವನದಿಂ ಸೇವ್ಯಂ ನಗೋಪತ್ಯಕಂ: **ಆದಿಪು,** ೧. ೬೪)

**ನಗೋಪರಿಮತಲ** – [ನಗ+ಉಪರಿಮತಲ] ಪರ್ವತಶಿಖರ ವಂಶಸ್ಥಲ ನಗೋಪರಿಮತಲದೊಳ್ ವಿಚಿತ್ರಚೈತ್ಯಭವನಂಗಳಂ .. .. ಮಾಡಿಸಿ: **ಪಂಪರಾ,** ೮. ೬೭ ವ)

**ನಚ್ಚಣಿ** – ನರ್ತಕಿ (ಭಾವರಸಮನೊದವಿಸಿತು ಆಸ್ಯಂ ಕೆಲಕೆ ನಸುಬಾಗುವಂಚಿತವಲೆಗುಂ ಮನಮೊಲೆವ ಲೋಳಿತಂ ನಚ್ಚಣಿಯಾ: **ಲೀಲಾವತಿ,** ೧೪. ೧೧೦)

**ನಚ್ಚು** – ನಂಬು (ಎಂದು ಕೈದವಮಿಲ್ಲದ ನಲ್ಮೆಯಂ ನಾಲಗೆಯ ತುದಿಗೆ ತಂದು ನುಡಿದಳ್ ಮತ್ತೊರ್ವಳ್ ತನ್ನ ಆಣ್ಮನ ದೋರ್ವಲದ ಅಗುರ್ವಂ ನಚ್ಚಿ: **ಪಂಪಭಾ,** ೧೦. ೪೫ ವ); ನಂಬಿಕೆ, ನಚ್ಚಿಕೆ (ಒಲವಿಂದಂ ಆ ಮಹಾಶ್ವೇತೆಯೆ ಬೇಗಮುಯ್ಯೆ ಪುದಿರ್ಪವೆ ನಚ್ಚಿನ ಹೇಮಕೂಟಮಂ: **ಕಾದಂಸಂ,** ೭. ೨); ಮೋಹ (ನಿನ್ನ ನಚ್ಚಿನ ರಾಮನ ದೆಸೆಯಂ ಬಿಟ್ಟೆನಗೊಡಂಬಟ್ಟು ಸಾಮ್ರಾಜ್ಯಸುಖಮಂ ಅನುಭವಿಸು: **ಪಂಪರಾ,** ೧೪. ೧೯ ವ)

**ನಚ್ಚುವೋಗು** – ನಂಬಿಕೆಗೆ ಪಾತ್ರವಾಗು (ದನುಜಾಂತಕನೆಂಬೀ ನಿನ್ನ ನಚ್ಚುವೋದಂಕಮೆಲವೊ ಮುನ್ನೆನ್ನನ್ನಂ ದನುಜಂ ಪುಟ್ಟದೆ ಸಂದುದು ನಿನಗೀ ಪೆಸರ್: **ಪಂಪಭಾ,** ೬. ೫೪)

**ನಟ** – ನರ್ತಕ, ಅಭಿನಯಿಸುವವನು (ಸೂತ ನಟ ವಂದಿಮಾಗಧ ವೈತಾಳಿಕ ಕಥಕ ಪುಣ್ಯಪಾಠಕ ವಿಪ್ರ ಉದ್ಭೂತರವಂ ಎಸೆಯೆ: **ಪಂಪಭಾ,** ೧೨. ೧೦೬); ಈಶ್ವರ (ಎಣ್ದೆಸೆಯಂ ನೋಡುತ್ತೆ ಮತ್ತದ್ಭುತ ನಟ ನಿಟಿಳಾಳೋಲ ಕೀಲಾಕ್ಷಿವೊಳ್ ದಳ್ಳಿಸೆ ಕೋಪಾರಕ್ತನೇತ್ರಂ: **ಗದಾಯು,** ೭. ೩೦)

**ನಟನೆಗೊಳ್** – ನರ್ತಿಸತೊಡಗು (ನವಿಲ್ಗಳ್ ನಟನೆಗೊಳುತ್ತಿರ್ದಪುವು ಎಡೆಯಱಸುತ್ತಿರ್ಪುವಂಚೆ ಸುಳಿದುವು ಮುಗಿಲ್ಗಳ್: **ಗಿರಿಜಾಕ,** ೯. ೩೨)

**ನಟ್ಟಡವಿ** – ಅಡವಿಯ ಮಧ್ಯಭಾಗ (ನಟ್ಟಡವಿಯ ನಡುವೆ ಪಸಿವುಂ ನೀರಟ್ಕೆಯುಂ ತಿಣ್ಣಮಾಗೆ: **ಧರ್ಮಾಮೃ,** ೨. ೧೨೦ ವ)

**ನಟ್ಟನಡುವೆ** – ಸರಿಯಾಗಿ ನಡುವೆ (ಕಿಚ್ಚಿನ ನಟ್ಟನಡುವೆ ನಿಂದುರಿವನುವರಮಂ ಜಾರಿಸಲೆಂದೆಡೆವೊಕ್ಕ ಅಗ್ನಿಕುಮಾರನಂತಿರೆ: **ಶಾಂತಿಪು,** ೪. ೩೦ ವ)

**ನಟ್ಟವಳ** – ನರ್ತಕ; ಅಭಿನಯಕಾರ ತದಮರಭಾರತಿಕತತಿ ನೆಟ್ಟನೆ ನಟ್ಟವಳರಾಗೆಯುಂ: **ಕರ್ಣನೇಮಿ,** ೮. ೧೬೦ ವ)

**ನಟ್ಟವಿಸಿಲ್** – ನಡುಹಗಲ ಬಿಸಿಲು (ಪರಮತಪೋನಿಧಿಗಳ್ ಸಂಚರಿಸುವ ಬಟ್ಟೆಯನಗಲ್ದು ನಟ್ಟವಿಸಿಲಾಯ್ದುರಗಂ ಪುಡಿಯೊಳ್ ಪೊರಳುತ್ತಿರೆ ಸೋಗೆಯನೆತ್ತಿ ಸೋಗೆ ಪಿಡಿದುದು ನೆಟಿಲಂ: **ಅನಂತಪು,** ೩. ೩೮)

**ನಟ್ಟುವ** – ನರ್ತಕ (ಆತನ ಸಭೆಯೊಳ್ ನಟ್ಟುವನ ಮಗಳ್ ನಾಟ್ಯಮಾಲೆ ಸಾಭಿನಯದಿನಾಡುತಿರ್ದೊಡೆ: **ಚಾವುಂಪು,** ಪು. ೨೧೭, ಸಾ. ೧೩); ನಟರನ್ನು ಆಡಿಸುವವನು (ವಿಚಿತ್ರಾಕಾರರಸಾಂತರಂಗದೊಳ್ ಪುದಿದಿರೆ ಮಾಣದಾಡಿಸಿದಂ ಆತನಂ ಅಂಗಜನೆಂಬ ನಟ್ಟುವಂ: **ಆದಿಪು,** ೪. ೧೫)

**ನಡಪಾಡು** – ಓಡಾಡು (ಶಿಪ್ರಾತಟನೀತಟಸ್ಥಲಿಗಳೊಳ್ ಲೀಲಾವಿನೋದೈಕ ತತ್ಪರನಾಗಳ್ ನಡಪಾಡುತಿರ್ಪಂ: **ಕಾದಂಸಂ,** ೬. ೧೬)

**ನಡಪು** – ಸಲಹು (ಒಡಲನುಣಿಸಿಲ್ಲದಾಗಳ್ ನಡಪುವುದರಿದು: **ಆದಿಪು,** ೬. ೭೫); ಸಾಕು (ತನ್ನ ಮನೆಯೊಳ್ ಮಾರ್ಮನುಷ್ಯರಿಲ್ಲದ ಕಾರಣದಿಂ ತಾಂ ನಡಪಿದೊಂದು ನಕುಲನಂ ತೊಟಿಲ ಸಮೀಪದೊಳ್ .. .. ಕಟ್ಟಿ ಪೋದಂ: **ಪಂಚತಂತ್ರ,** ೨೫೭ ವ)

**ನಡು** – ಸ್ಥಾಪಿಸು, ಮಧ್ಯಭಾಗ (ನಡು–ಸಂಸ್ಥಾಪನೇ ಮಧ್ಯೇ ಚ: **ಶಬ್ದಮದ, ಧಾ** ೩೯೯); ನಾಟಿಮಾಡು (ಪೂಗಿಡುವೆಂಬ ಪೆಸರಿಂಗೆ ಕೊಳವಳ್ಳಿಯ ಗಿಡುಗಳಂ ನಟ್ಟು ನೀರೆಱೆದು ನಡಪಪೆ ಮಲ್ಲಗೆಯ ಪೂವಿನಂತಾಗಲಱಿಯದಂತೆ: ಧರ್ಮಾಮೃ, ೭. ೪೫ ವ); ಚುಚ್ಚು (ಉರದೊಳ್ ನಟ್ಟ ಸುರಿಗೆ ಬೆನ್ನೊಳ್ಮೂಡೆ: **ಆದಿಪು,** ೨. ೧೪ ವ); ಸೊಂಟ(ಬಡಿ ಕೊಲ್ ಕಟ್ಟಿಱೆ ಮುಱೆ ಕಡಿ ನಡುವಂ ಕೊಱೆ: **ವಡ್ಡಾರಾ,** ಪು. ೧೨೭, ಸಾ. ೧೦)

**ನಡುಕ** – ಕಂಪನ (ಮನದ ಶಂಕೆಯುಮ ನಡುಗುವ ಮೆಯ್ಯ ನಡುಕಮುಂ ಕಿಡೆ ನುಡಿದಿಂತೆಂದಂ: **ಪಂಪಭಾ,** ೧. ೯೨ ವ)

**ನಡುನಾಡ ತೀರ್ಥ** – ಪವಿತ್ರಸ್ಥಳ (ನಡುನಾಡತೀರ್ಥಮೆನಿಸಲ್ಪಡೆದ ಇಂದ್ರಪ್ರಣಯಮೆಂಬ ಪರ್ವತಕಟಕಂಬಿಡಿದು ನಿಜಕಟಕಮಂ ತಾಂ ಬಿಡಿಸಿ: **ಅನಂತಪು,** ೧೨. ೨೯)

**ನಡುನಾಡು** – ನಾಡ ನಡುಭಾಗ (ನಡುನಾಡೊಳ್ ಅಱಂ ನೆಲಸದ ಕಡೆಯೊಳ್ ನೆಲೆಗೊಳ್ಗುಂ: **ಆದಿಪು,** ೧೫. ೪೦)

**ನಡುವಗಲ್** – ಹಗಲಿನ ನಡುವಣಭಾಗ, ಮಧ್ಯಾಹ್ನ (ಅಂತು ಚಾತುರ್ದಂತಂ ಒಂದೊಂದಱೊಳ್ ಓರಂತೆ ನಡುವಗಲ್ವರಂ ಕಾದುವುದುಂ: **ಪಂಪಭಾ,** ೧೧. ೩೬ ವ)

**ನಡೆ** – ಹೆಜ್ಜೆ ಹಾಕಿ ಮುಂದುವರಿ (ನಡೆ–ಗಮನೇ: **ಶಬ್ದಮದ,** ಧಾ ೩೨೦); ಮುಂದುವರಿ (ಸಮರಾಭಿಮುಖನಾಗಿ ನಡೆವ ಫಣಿರಾಜಕೇತನನಂ ಸಂಜಯನಂಜದೆ ಮಾರ್ಕೊಂಡು: **ಗದಾಯು,** ೩. ೪೯ ವ); ಚಲನೆ (ಆವೆಡೆ ಹಂಸಿಗೀ ನಡೆಯ ಚೆಲ್ವೆನೆ ನೂಪುರದಿಂಚರಂ ಸ್ಮರಂ ಜೇವೊಡೆದಂದಮಾಗೆ: **ಮಲ್ಲಿನಾಪು,** ೪. ೫೦); ಚೆನ್ನಾಗಿ (ಕರುಳ ತೊಡಕಂ ಬಿಡಿಸಿ ನಡೆ ನೋೞ್ಪೆಂ ಒಳಗೆ ಅಡಗಿರ್ಪುದು ಜೀವನಿರ್ಪೊಡೆ ಎಲ್ಲಿಗೆವೋದಂ: **ಯಶೋಧಚ,** ೪. ೧೯)

**ನಡೆಗಲ್** – ನಡೆಯುವುದನ್ನು ಕಲಿ (ಬಾಲಕಂ ಬಾಲದುಡಿಗೆಗಳಂ ತೊಟ್ಟು ನಡೆಗಲ್ತೊಂದು ದಿವಸಂ ಗೋವ್ರಜಂಗಳೊಳ್ ಸೋಂಕುವುದಂ ಆಂ ಕಂಡು: **ಪಂಚತಂತ್ರ,** ೨೫೪ ವ)

**ನಡೆಗಲಿ** – ನಡೆಯುವ [ನುಗ್ಗುವ] ಶೂರ (ಮತ್ತಂ ಅಣ್ಮಿ ನಡೆದಿಱಿವ ನಡೆಗಲಿಗಳುಂ ನೋಡಿ: **ಗದಾಯು,** ೯. ೩೪ ವ)

**ನಡೆಗಟ್ಟಿ** – [ಭಾರ ಹೊತ್ತು] ನಡೆಯುವ ಕತ್ತೆ (ನಡೆಗಟ್ಟಿಗಳಂ ಅನಿಬರ್ಗಂ ಏಱಲ್ ಕೊಟ್ಟು ಪಿರಿದಾಳಂ ನೆರಂ ಬೇೞ್ದು ಕಿಱಿದಂತರಂ ಕಟಿಪುತ್ತುಂ: **ಸುಕುಮಾಚ,** ೨. ೫೯ ವ)

**ನಡೆಗೋಂಟೆ** – ನಡೆಯುವ ಕೋಟೆ, ಒಂದು ಸೈನ್ಯವ್ಯೂಹ (ಸಂಗರಭೂಮಿಯೊಳ್ ಒಡ್ಡಿನಿಂದೆಡ್ಡಮಾಗಿ ಬಗ್ಗಿಸಿ ಮೊಗ್ಗಂ ಸುತ್ತೊಗ್ಗುಗೆಡದೆ ನಡೆಗೋಂಟೆಯಂತೆ ನೆಲೆವೆರ್ಚಿ ನಿಂದಂ: **ಗಿರಿಜಾಕ,** ೬. ೫೫ ವ)

**ನಡೆಜಂತ್ರ** – ನಡೆದಾಡುವ ಯಂತ್ರ (ಬರುತಿರ್ದಳ್ ಆ ಮನಸಿಜನಾಡಿಪೊಂದು ನಡೆಜಂತ್ರದ ಪುತ್ರಿಕೆಯೆಂಬ ಭಂಗಿಯಿಂ: **ಕುಸುಮಾಕಾ,** ೧೨. ೧೨೫)

**ನಡೆಪಾಡು** – ಸಂಚರಿಸು [ಪಾಡುವ ತುಂಬಿ ಕೋಡುವ ಪುಟಿಲ್ ನಡಪಾಡುವ ರಾಜಹಂಸೆ ಬಂದಾಡುವ ತೊಂಡುವೆಣ್ಬುರುಳಿ .. .. ಅನುರಾಗಮಂ ಮಾಡೆ ಮನಕ್ಕೆ: **ಪಂಪಭಾ,** ೩. ೩೭)

**ನಡೆಮಡಿ** – ಗಣ್ಯರು ನಡೆಯುವಾ ಹಾಸುವ ಬಟ್ಟೆ (ಅಭವಂಗೀ ಧರೆ ಪಾಸಿದ ನಡೆಮಡಿಯೆನೆ ಕರಮೆಸೆದುದು ವಿಮಳಗುಣದಿನಾ ನದಿ ಪದಪಿಂ: **ರಾಜಶೇವಿ,** ೨. ೫)

**ನಡೆಮಾಡ** – ನಡೆಯುವ ಮಾಡ, ವಿಮಾನ ಪಂಚಕಲ್ಯಾಣದ ಸೂಚೀಯಾನೆಗಳ್ಗಿಂದು ನಿಱಿಸಿದ ನಡೆಮಾಡಸಾಲೆಗಳಿಂದಂ: **ಶಾಂತಿಪು,** ೧೦. ೧೪೭ ವ)

**ನಡೆವಣಿ** – [ನಡೆವ+ಅಣಿ] ನಡೆಯುವ ಸೈನ್ಯದ ಸಾಲು [ಕೋಳ್ಮಸಗಿದ ಪುಲಿಯ ಪಿಂಡುಗಳುಮಂ ಅನುಕರಿಸಿ ನಡೆವಣಿಯ ಸಂದಣಿಯುಮಂ ಕಾಱುಱು ಮಸಗಿದಂತೆ ಮಸಗಿದ ದುರ್ಧರರಥನುರ್ಧರಬಲಮುಮಂ: **ಪಂಪಭಾ,** ೧೦. ೫೧ ವ)

**ನಡೆವಳಿ** – ನಡವಳಿಕೆ (ಸೂರ್ಯ ಚಂದ್ರಮರುಗಳು, ವಾಯು, ಅಗ್ನಿ, ಆಕಾಶ, ಭೂಮಿ, ಉದಕ, ಹೃದಯ, ಯಮನು, ಹಗಲಿರುಳು, ಉದಯ ಬೈಗುಗಳು, ಧರ್ಮವು ಎಂಬಿವು ಮನುಷ್ಯರ ನಡವಳಿಯನಱಿವುವು: **ಪಂಚತಂತ್ರ,** ೨೩೭, ಶ್ಲೋಕ ೧೨೨ ಟೀಕೆ)

**ನಡೆವಳಿಕಾಱ** – ಮೇಲ್ವಿಚಾರಕ (ಕಾಱಕ್ಕೆ: ನಡೆವಳಿಕಾಱಂ, ಇಚ್ಚೆಕಾಱಂ, ಕಯ್ದುಕಾಱಂ: **ಶಬ್ದಮದ,** ೨೧೦ ಪ್ರ ೧)

**ನಡೆಸಾರ** – ಏರುವ ಸಾಧನ (ನಡೆಸಾರಂ ನೆಲವಾಳಿಗೆ ಪೆಡಕೆಡಪುವ ಡೆಗ್ಗೆ ಬದ್ದಿರಂಗಳಿಂ ಆರ್ದು: **ತ್ರಿಷಷ್ಟಿಪು,** ೫. ೧೧)

**ನಣ್ಪು** – ಬಾಂಧವ್ಯ, ನಂಟಸ್ತಿಕೆ (ತಮ್ಮ ತಮ್ಮ ಜಾತಿಗಳೊಳ್ ನಣ್ಪುಮಂ ಕೊಳ್ಕೊಡೆಯುಮಂ ನಿಯೋಜಿಸಿ: **ಆದಿಪು,** ೮. ೬೪ ವ); ಪ್ರೀತಿ (ಎಮ್ಮ ನಣ್ಪಿನಿಂ ಜನಿಯಿಸಿದ ಕದರ್ಥನೆಗೆ ಸೈರಿಪುದು: **ಕಾದಂಸಂ,** ೫. ೮೦)

**ನತ** – ಬಾಗಿದ, ನಮಸ್ಕರಿಸಿದ (ನತ ನಾನಾಮರಮೌಳಿ ರತ್ನಕಿರಣಂ ನಾನಾಪ್ಸರಃಕೇಕರದ್ಯುತಿ .. .. ಒಡ್ಡೋಲಗದೊಳ್: **ಜಗನ್ನಾವಿ,** ೧. ೨೬)

**ನತಚುಂಚು** – ಬಾಗಿದ ಕೊಕ್ಕು (ನತಚಂಚು ನೀಡಿ ಗಳಕಂದಳಮಂ ಮಡಗೆದಱೆ ನವಾಮ್ರದ ಪೂಮಿಡಿಯಂ ಕರ್ದುಕಿದುದು ಪರಭೃತಂ ಪರಭೃತದಿಂ: **ಮಲ್ಲಿನಾಪು,** ೫. ೩೪)

**ನತಾಸ್ಯ** – ಬಾಗಿದ ಮುಖವುಳ್ಳವನು (ನಯದಿಂದೆಳ್ದು ನತಾಸ್ಯನಾಗಿ .. .. ದಿಟ್ಟವಾರಿಯ ಧೀತಂ ವೃಷಭೇಂದ್ರಂ ಅಪ್ರತಿಮಕಾಯಂ ಮುಂದೆ ನಿಂದಿರ್ಪುದುಂ: **ಗಿರಿಜಾಕ,** ೧೦. ೭೮)

**ನತಿ** – ಬಾಗಿರುವಿಕೆ, ನಮಸ್ಕಾರ (ನುತಿಯಿಂ ನತಿಯಿಂ ಪೂಜಾತತಿಯಿಂ ಭಜಿಯಿಸಿ ಬೞಿಕ್ಕೆ ವಿಜಯಂ .. .. ರಾಜ್ಯಲಕ್ಷ್ಮಿಯೊಳಿರ್ದಂ: **ಅನಂತಪು,** ೧೦. ೯೪)

**ನದ** – [ರಭಸವಾಗಿ ಹರಿಯುವ] ಗಂಡುತೊರೆ (ಅನವರತ ನಿಹತ ನರ ಕರಿ ತುರಗ ನಿಕುರುಂಬ ಕೀಲಾಲ ಕಲ್ಲೋಲ ಪ್ರವರ್ತನ ಅನೇಕ ನದ ನದೀ ಪ್ರವಾಹಬಾಹುಳ್ಯದುಸ್ತರಾವತರಣ ಮಾರ್ಗಮಂ: **ಪಂಪಭಾ,** ೧೩. ೫೧ ವ)

**ನದತ್** – ಧ್ವನಿಮಾಡುತ್ತಿರುವ (ಆಶಾ ಕುಂಭೋದರ ವರ್ತಿಯಾಯ್ತು ಸುಮನೋವರ್ಷಂ ನದತ್ ಭೃಂಗಮಾಳಾಕೀರ್ಣಂ ಪೊಸತಾಯ್ತು ಸಾಹಸಧನಂ ಸೌಮಿತ್ರಿ ಸಾಮಾನ್ಯನೇ: **ಪಂಪರಾ,** ೧೧. ೧೦)

**ನದಿ** – ಹೊಳೆ [ಅನವರತ ನಿಹತ ನರ ಕರಿ ತುರಗ ನಿಕುರುಂಬ ಕೀಲಾಲ ಕಲ್ಲೋಲಪ್ರವರ್ತನ ಅನೇಕ ನದ ನದೀ ಪ್ರವಾಹಬಾಹುಳ್ಯದುಸ್ತರಾವತರಣ ಮಾರ್ಗಮಂ: **ಪಂಪಭಾ,** ೧೩. ೫೧ ವ)

**ನದಿಪು** – ಆರಿಸು, ನಂದಿಸು (ಮದನ ದವಾಗ್ನಿಯಂ ನದಿಪೆ ಮಾಡಿದ ಕಾಮನದಿಯೆನಿಸುವುದು ದಿವಿಜ ದಂಪತಿ ಶತದೊದವಿದ ರತದ ಪದನಲ್ಲಿ: **ಶಾಂತಿಪು,** ೨. ೯೩)

**ನದೀಕಚ್ಛ** – ನದಿಯ ತೀರ (ಕಾಳಿಂದೀನದೀಕಚ್ಛದೊಳ್ ಆತ್ಮೇಚ್ಛೆಯಿಂ ನಲಿನಲಿದು ರುಚಿರಮರಕತಶ್ಯಾಮ ದೂರ್ವಾಂಕುರಗ್ರಾಸದೊಳಂ ಅತಿಸ್ವಚ್ಛಸ್ವಾದು ಸಲಿಲಪಾನದೊಳಂ .. .. ಮೆಲ್ಲಾಡಿ ಪಥಪರಿಶ್ರಮಮಂ ಆಱಿಸಿಕೊಂಡು: **ಪಂಚತಂತ್ರ,** ೭೭ ವ)

**ನದೀಚರ** – ನದಿಯಲ್ಲಿ ಚಲಿಸುವುದು (ಪಿಱಿದು ಪೊೞ್ತಂ ವನಪ್ರಚಾರದೊಳ್ ಅಲಸಿದ ನದೀಚರನಪ್ಪ ಯೂಥಪತಿಯಂತೆ ವನವಿಹಾರದೊಳ್ ಅಲಸಿ ಬಂದು ಕಾವಣಂ ಪುಗೆ: **ಶಾಂತಿಪು,** ೮. ೨೩ ವ)

**ನದೀಮಾತೃಕ** – ನದಿ ನೀರಿನಿಂದ ಕೃಷಿಗೊಳ್ಳುವ ಭೂಮಿ (ಅದಲ್ಲದೆ ನದೀಮಾಥರಕಮುಂ ದೇವಮಾತೃಕಮುಂ ಎಂಬ ಭೇದಮಂ ಬೇರ್ಪಡಿಸಿ: **ಪುಷ್ಪದಂಪು,** ೨. ೧೪ ವ)

**ನದೀಹ್ರದ** – ನದಿಯಲ್ಲಿನ ಮಡು (ಅಂತಲ್ಲಿಯುಂ ಸೈರಿಸದೆ ನದೂಕ್ರದಮಂ ಪುಗುವುದುಂ: **ಶಾಂತಿಪು,** ೭. ೯೨ ವ)

**ನದ್ಯುತ್ತರಣ** – [ನದಿ+ಉತ್ತರಣ] ನದಿಯ ದಾಟುವಿಕೆ (ಅಂತುಭಯ ನದಿಯ ವೈಷಮ್ಯಮಂ ಆಶ್ಚರ್ಯಂಬಟ್ಟು ನೋಡಿ ನದ್ಯುತ್ತರಣುಪಾಯಮಾವುದೆಂದು ಬಗೆದು: **ಆದಿಪು,** ೧೩. ೫೧ ವ)

**ನನಸು** – ನೆನಸು, ದಿಟ (ವಸುಧಾದಿಪಂ ಅಂದು ಕಂಡಂ ಅಚ್ಚರಿಯೆನಿಸಿರ್ದುದಂ ನನಸುವೋಲ್ ಕನಸಂ ಬೆಳಗಪ್ಪ ಜಾವದೊಳ್: **ಕಾದಂಸಂ,** ೨. ೧೩)

**ನನಾಂದು** – ನಾದಿನಿ (ನಾದುನಿ ನನಾಂದು ನಂದಿನಿಯೆನಿಕುಂ: ಅಭಿಧಾವ, ೧. ೧೧. ೨೪)

**ನನೆ** – ಒದ್ದೆಯಾಗು (ನನೆ–ಆರ್ದ್ರಭಾವೇ: **ಶಬ್ದಮದ,** ಧಾ ೪೩೮); ಮೊಗ್ಗು (ಬನದ ತಳಿರ್ ಕಳಿಕೆ ಮುಗುಳ್ ನನೆ ಬಿರಿಮುಗುಳ್ ಅಲರ ಗೊಂಚಲೆಂಬಿವು: **ಆದಿಪು,** ೧೧. ೧೨೯); ಹೂಬಿಡು ತಳಿರ್ತೊಱಗುವಶೋಖೆಗಳುಂ ನನೆತು ಎಟಲ್ ಜಾದಿಗಳುಲ್ಮುಗುಳ್ತು ಮುಱಿವ ಮೊಲ್ಲೆಗಳುಂ: **ಲೀಲಾವತಿ,** ೬. ೬೦ ವ)

**ನನೆಕೊನೆ** – ಮೊಳಕೆ (ನನೆಕೊನೆಯ ತಳಿರಪೂವಿನ ಬನಮನಿತುಂ ಶಿಖೆಗಳುರೆ ಬೆಂಕೆಯ ಪೊಯ್ದುರ್ವಿನೊಳೆಕೊರಗಿರ್ದ ಲತೆಗಳ ನನೆಕೊನೆಯನೆ ದಹನನಳುರ್ದು ಕೊನೆಗೊನೆಗೊಂಡಂ: **ಪಂಪಭಾ,** ೫. ೮೭)

**ನನೆಕೊನೆಯೇಱು** – ಚಿಗುರಿಡು (ಅನಂಗವಿಕಾರಮದೇಂ ಪೊದಳ್ದುದೋ ನನೆಕೊನೆಯೇಱುವಂತೆ ವನರಾಜಿ ಮಧು ಪ್ರಥಮ ಪ್ರವೇಶದೊಳ್: **ಪಂಪರಾ,** ೫. ೫೦)

**ನನೆಕೊನೆವೋಗು** – ಚಿಗುರು, ಸಂತಸದಿಂದ ಉಬ್ಬು (ಅಬಲಾ ಜನಮಂ ನನೆಕೊನೆವೋಗಿಸುತಿರ್ಪುದು ಮನುಜಮನೋಭವ ಭವದ್ವಿಳಾಸವಸಂತಂ: **ಯಶೋಧಚ,** ೩. ೩)

**ನನೆಗಟ್ಟು** – ಮೊಗ್ಗು ಬಿಡು (ಗಱಿಗಟ್ಟುವುದುತನುಗೆ ನನೆಗಟ್ಟುವ ನೆವದೆ ಪುಷ್ಪಲಾವೀನಿವಹಂ: **ಆಚವರ್ಧ,** ೧. ೬೪)

**ನನೆಗಣೆ** – ಹೂವಿನ ಬಾಣ (ನಿಡು ನನೆಗಣೆಗಳನಾಯ್ದುಕೊಂಡು ಮನಸಿಜನೆಚ್ಚಂ: **ಲೀಲಾವತಿ,** ೩. ೫೧)

**ನನೆಗೋಲ್** – ನನೆಗಣೆ (ಅತನುವ ನನೆಗೋಲ ಮೊಗಕ್ಕೆ ತಪ್ಪಿಪೋದೊಡೆ ಸಾಲ್ವುಂ: **ಲೀಲಾವತಿ,** ೫. ೧೨)

**ನನೆದೋಱು** – ಹೂಬಿಡಲು ತೊಡಗು (ಚೂತಕುಲ ಜಾತಮೀಗಳೀಗಳೆ ನನೆದೋಱಿತು: **ಆದಿಪು,** ೧೩. ೫)

**ನನೆನಾಱು** – ಹೂವಿನ ಕಂಪಿನಿಂದ ತುಂಬು (ನನೆಯೆಳಗಂಪನೆತ್ತಿಯುಂ ಅಣಂ ನನೆನಾಱದೆ ಅರಲ್ದು ಅನೇಕ ಕೋಕನದವನಂಗಳೊಳ್ ಸುಟಿದು ತಣ್ಣಸಮಾಗದೆ: **ಪಂಪಭಾ,** ೫. ೩೪)

**ನನೆಯಂಬು** – ಹೂಬಾಣ (ನನೆಯಂಬನೆ ಕರ್ಚಿ ಪಾಱಿದಪುದೋ ಶೃಂಗಾರವಾರಾಶಿ ಭೋಂಕನೆ ಬೆಳ್ಳಂಗೆಡೆದತ್ತೊ ಕಾಮನ ಎಱಿ ಮೆಯ್ವೆರ್ಚಿತ್ತೊ ಪೇಟ್ ಈಕೆಗೆ ಎಂಬಿನಂ: **ಪಂಪಭಾ,** ೪. ೪೨)

**ನನೆಯೊತ್ತು** – ಅರಳು (ನನೆಯೊತ್ತೆ ಮಿಸುಪ ಮಲ್ಲಿಗೆ ನನೆಯೊತ್ತುವುದತನುಸತಿಯ ಲಾವಣ್ಯರಸಭಾವಂ: **ಪಾರ್ಶ್ವನಾಪು,** ೯. ೫೬)

**ನನೆಲತೆ** – ಹೂಬಿಟ್ಟ ಬಳ್ಳಿ (ನನೆಲತೆಗಳ ಮೇಳದ ಮನ್ನಣೆಯ ಕನ್ನೆಯರಲತಾಂಗಂಗಳೊಳ್ ಲಾವಣ್ಯರಸವಿಸರದ ಬಿಂದುಗಳ್ ತಲೆದೋಱಿದುವು: **ಲೀಲಾವತಿ,** ೪. ೧೬ ವ)

**ನನೆವಿಲ್** – ಹೂವಿನ ಬಿಲ್ಲು (ನನೆವಿಲ್ ನಿಸ್ಸಾರಮಾದತ್ತು ಸೀಕರಿವೋದತ್ತು ಮೃಣಾಳತಂತುರಚಿತಜ್ಯಾಲೇಖೆ ಮೀನಧ್ವಜಂ ಕೊರಗಿತ್ತು ಕಂತು ಸೀದ ಗಱಿಯಂತಾದಂ: **ಮಲ್ಲಿನಾಪು,** ೧. ೧೯)

**ನನೆವಿಲ್ಲ** – ಹೂಬಾಣವುಳ್ಳವನು, ಕಾಮ (ಅರಮನೆಯಂ ಪೊಕ್ಕು ಪರಿವಡೆದ ಪಿರಿಯ ಕರುಮಾಡದ ಮುಂದಣ ಓಲಗಸಾಲೆಯೊಳ್ ಸಿಂಗರದ ಚೆನ್ನನಾಂತ ಪಟ್ಟವಣೆಯ ಮೇಲೆ ಇಚ್ಚೆಗಾರ್ತಿವೆರಸು ನನೆವಿಲ್ಲ ಬಲ್ಲಹಂ ಕುಳ್ಳಿರಲ್: **ಕಬ್ಬಿಗಕಾ,** ೨೬೫ ವ)

**ನನೆವೂದುಱುಗಲ್** – ಅರಳಿದ ಹೂಗಳ ಗೊಂಚಲು (ತಳಿರ್ಗಳನೊಂದು ಕೊಂಬು ನನೆವೂದುಱುಲ್ಗಳನೊಂದು ಕೊಂಬು .. .. ತಳೆದು: **ಕುಸುಮಾಕಾ,** ೧೦. ೧೫೫)

**ನನೆವೆಱು** – ಹೂಬಿಡು (ಶಿಶಿರದ ಸೋಂಕಿಂ ನನೆವೆತ್ತೊಪ್ಪುವ ಮಾಲತಿಯನೆ ವಿಜಯಾವತಿ ಸಮಂತು ಪೋಲ್ತೆಸೆದಿರ್ದಳ್: **ಕುಸುಮಾಕಾ,** ೧೫. ೯೮)

**ನನೆವೊಯ್** – ಚಿಗುರು (ಪನಿಪುಲ್ಲಂಬುಕಣಂಗಳಂ ಕೆದಱುತುಂ ಕೋಕಂಗಳೊಳ್ ರಾಗಮಂ ನನೆವೊಯ್ದು ಉಣ್ಮಿಸುತುಂ ಪತತ್ರಿಗಳೊಳಗಿರ್ಪಾ ತೂಂಕಡಂ ನೂಂಕುತುಂ ತಣ್ಣನೆ ತೀಡಿತ್ತೆನಸುಂ ಪ್ರಭಾತಮಯ ಪ್ರೋದ್ಭೂತ ಶೀತಾನಿಳಂ: **ಶಾಂತೀಶ್ವಪು,** ೧೧. ೯೪)

**ನನೆವೊಱೆ** – ಹೂವಿನ ಹೊರೆ, ಹೂವಿನ ಭಾರ (ನನೆವೆಱೆಯಿಂ ಬಳ್ಕಿದ ಮಾವಿನ ಕೊಂಬಿನೊಳೊಳಳಿಯ ಮಾಲೆ ಮೊರೆಯುತ್ತುಂ: **ಪಾರ್ಶ್ವನಾಪು,** ೯. ೫೩)

**ನನೆವೋಗು** – ಮೊಗ್ಗು ಬಿಡು (ಅಧೀಶವಚನಕದಂಬ ಎಂಬೊಂದು ತೆಂಕಣೆಲರೊಳ್ ನನೆವೋಯ್ತೆಂಬಿನಂ: **ಆದಿಪು,** ೭. ೩೦)

**ನನ್ನಿ** – ಸತ್ಯ (ಜೂದಾಡಿ ಸೋಲ್ತು ನನ್ನಿಗೆ ಮೇದಿನಿಯಂ ಕೊಟ್ಟು ಪಾಂಡುನಂದನರ್ ಈಗಳ್ ಪೋದೊಡಮೇಂ: **ಪಂಪಭಾ,** ೭. ೧೮)

**ನನ್ನಿಕಾಱ** – ಸತ್ಯವಂತ (ಈ ಯಮಳರಾವ ತೆಱದಿಂ ನೋಯಿಸರೈ ನಿನ್ನ ನನ್ನಿಕಾಱನ ಮನಮಂ: **ಪಂಪಭಾ,** ೭. ೪೮)

**ನನ್ನಿಗೊಡು** – ಮಾತು ಕೊಡು (ಬಟಿಕ್ಕೆನ್ನಂ ಮೆಚಿದಂತೆ ಮಾಡೆಂದು ನನ್ನಿಗೊಟ್ಟು ನಂಬಿಸಿ ಪೋದೊಡೆ: **ವಡ್ಡಾರಾ,** ಪು. ೧೬, ಸಾ. ೯)

**ನನ್ನಿಗೊಳ್** – ಮಾತು ಪಡೆ (ಅರಸಿಗೆ ಪುಟ್ಟಿದ ಕೂಸಂ ಎನನಗೀಯಲಾರ್ಪೊಡೆಯೆಂದೊಡೆ ಅರಸಂ ಈವೆನೆಂದೊಡೆ ಅರಸಿಯುಮಂ ನನ್ನಿಗೊಂಡು ಆರುಂ ಅಱಿಯದಂತಿರೆ: **ವಡ್ಡಾರಾ,** ಪು. ೧೮೬, ಸಾ. ೧೩)

**ನನ್ನಿಮಾಡು** – ನಿಜವಾಗಿಸು (ರಾಜ್ಯಲಕ್ಷ್ಮೀಲೀಲಾಕರನಪ್ಪುದಂ ನನ್ನಿಮಾಡುತ್ತುಂ: **ಆದಿಪು,** ೮. ೩೭ ವ)

**ನನ್ನಿವಾತು** – ಪ್ರತಿಜ್ಞೆ (ಪಡೆಮೆಚ್ಚೆಗಂಡನ ಗಂಡವಾತುಮಂ ನನ್ನಿವಾತುಮಂ ಮುರಾಂತಕಂ ಮೆಚ್ಚಿ: **ಪಂಪಭಾ,** ೫. ೭೫ ವ)

**ನಪುಂಸಕ** – ಷಂಡ (ಕ್ಲೀಬವ್ಯಪದೇಶಂ ವರ್ಷವರಂ ನಪುಂಸಕಂ ಪೇಡಿ ಷಂಡಕಂ ತಾಂ ಷಂಡಂ: **ಅಭಿಧಾವ,** ೧. ೧೧. ೨೬)

**ನಪುಂಸಕವೇದ** – [ಜೈನ] ಸ್ತ್ರೀ–ಪುರುಷ ಎರಡೂ ಭಾವನೆಗಳಿಲ್ಲದಂತಾಗುವ ಸ್ಥಿತಿ; ಒಂದು ಬಗೆಯ ನೋಕಷಾಯ; ಮೂರು ಬಗೆಯ ವೇದಗಳಲ್ಲಿ ಒಂದು (ಮತ್ತಂ ಕತಿಪಯ ಸಮಯದೊಳ್ ಅನುಕ್ರಮದಿಂ ನಪುಂಸಕವೇದಂ ಸ್ತ್ರೀವೇದವೆಂಬ ಎರಡುಮನದಿರ್ಪಿ: **ಚಂದ್ರಪ್ರಪು,** ೧೪. ೬೯ ವ)

**ನಪ್ತೃ** – ಮೊಮ್ಮಗ, ಮಗನ ಮಗ (ಮಗನ ಮಗಂ ನಪ್ತೃಪಾತ್ರನೆನಿಕುಂ: **ಅಭಿಧಾವ,** ೧. ೧೧. ೨೨)

**ನಭ** – ಆಕಾಶ [ವಯಲ್ಗೆ ಮೆಯ್ದೋಱುವವೆಂಬ ಪೂಣಿಗರ್ ಅಡಂಗಿ ಕುನುಂಗಿ ಸಿಡಿಲ್ದು ಜೋಲ್ದು ಕಾಯ್ಪಾಱ್ ನಭಕ್ಕೆ ಪಾಱಿದುದು: **ಪಂಪಭಾ,** ೧. ೧೧೯)

**ನಭಃಪಯೋಜ** – ಆಕಾಶದ ಕಮಲ, ಅಸಾಧ್ಯವಾದುದು (ನಂಬಿ ಜಪಿಸಿದೊಡೆ ಇದಱಿಂ ದೊರೆಕೊಳ್ಗುಂ ಅಮಳಶಿವಪದಂ .. .. ಪೆಱತು ಮಾರ್ಗದಿಂದಪ್ಪುದು ತಾನೆಂಬುದು ನಭಃಪಯೋಜಪ್ರಾಯಂ: **ರಾಜಶೇವಿ,** ೪. ೯೫)

**ನಭಃಪ್ರಸೃತಿ** – ಮೋಡದ ರಾಶಿ (ಯಾನಮೇಂ ಕೀಱಿದುದೋ ನಭಃಪ್ರಸೃತಿಗಿಟ್ಟೆಡೆಯಾದುದೆಂಬಿನಂ: **ಶಾಂತಿಪು,** ೨. ೮೨)

**ನಭಶ್ಚರ** – ಗಗನಗಾಮಿ, ವಿದ್ಯಾಧರ (ಪೆಂಪಿನ ತನೂಜೆಯಂ ಕೊಟ್ಟಂ ಶಾಂತೀಶ್ವರಂಗೆ ನಭಶ್ಚರಂ: **ಶಾಂತಿಪು,** ೧೧. ೬೯)

**ನಭಸ್ಥಳ** – ಆಕಾಶ (ಮುನಿಪನಿರ್ದಂ ಅಪಗತ ಜೀಮೂತಸ್ತೋಮನಾಗಿ ವಿಮಳ ನಭಸ್ತಳದೊಳ್ ತೊಳಪ ಚಂದ್ರನಂದದಿನಾಗಳ್: **ಚಂದ್ರಪ್ರಪು,** ೨. ೨)

**ನಭೋಂಗಣ** – [ನಭಃ+ಅಂಗಣ] ಗಗನತಳ (ದೊಣೆಗಳಿಂ ಉರ್ಚುವ ತಿರುವಾಯ್ ಒಣರ್ಚಿ ತೆಗೆನೆಱೆವ ಬೇಗಮಂ ಕೂರ್ಗಣೆಗಳ ಪಂದರನೆ ನಭೋಂಗಣದೊಳ್ ಕಂಡತ್ತು ದೇವಗಣಂ ಇನಸುತನಾ: **ಪಂಪಭಾ,** ೧೨. ೧೮೪)

**ನಭೋನಗರಹರಣ** – ಆಕಾಶದಲ್ಲಿನ [ತ್ರಿ]ಪುರಗಳನ್ನು ನಾಶಮಾಡಿದವನು, ಶಿವ (ಜಯ ಜಯ ನಭೋನಗರಹರಣ ಪಟುನಿಟಿಲಾಕ್ಷ ಜಯ ಜಯ ಜಲಂಧರ ಮದಾಂಧಗಜಹರ್ಯಕ್ಷ: **ರಾಜಶೇವಿ,** ೧೪. ೧೬೯ ರಗಳೆ)

**ನಭೋಭಾಗ** – ನಭಸ್ಥಲ [ಶೋಣಿತ ಧಾರಾಳಿಗಳ್ ಉರ್ಚಿ ಪೆರ್ಚಿ ಸಿಡಿಯಲ್ ತೇಂಕಲ್ ವಿಮಾನಂಗಳ್ ಅಳ್ಕಿ ತಗುಳ್ದಾಗಳೆ ಮತ್ತಮತ್ತ ತಳರ್ದರ್ ದೇವರ್ ನಭೋಭಾಗದೊಳ್: **ಪಂಪಭಾ,** ೧೧. ೭)

**ನಭೋಮಣಿ** – ಸೂರ್ಯ (ಮೆಱೆದುದು ತರುಣ ನಭೋಮಣಿ .. .. ಭೂಮೀಶ್ವರನಂಘ್ರಿಕಮಳಮಂ ಸೇವಿಪವೋಲ್: **ರಾಜಶೇವಿ,** ೫. ೨೬)

**ನಮನ** – ಬಾಗುವುದು, ನಮಸ್ಕಾರ (ಮೊಟ್ಟುಗ–ನಮನೇ: **ಶಬ್ದಮದ, ಧಾ** ೧೫೪)

**ನಮಸ್ಕ್ರಿಯಾವಿಧಿ** – ನಮಸ್ಕಾರನಿಯಮ (ನಂದೀಶ್ವರಾದ್ಯುದಿತದೀಪ ನಮಸ್ಕ್ರಿಯಾದಿವಿಧಿಗಳಂ ನೀಂ ಮಾಡು ದೇವಾಧಿದೇವಾ: **ಶಾಂತಿಪು,** ೭. ೨೫)

**ನಮಸ್ತೇ** – [ನಮಃ+ತೇ] 'ನಿನಗೆ ನಮಸ್ಕಾರ' (ಶ್ರೀಮದಜಿತ ಭಟ್ಟಾರಕ ಜಿನ ನಮಸ್ತೇ ನಮಸ್ತೇ: **ಅಜಿತಪು,** ೪. ೭೯ ವ)

**ನಮಸ್ಯ** – ನಮಸ್ಕಾರಾರ್ಹ ಚತುರಾಸ್ಯನುಂ ಅಹಮಿಂದ್ರ ನಮಸ್ಯನುಂ .. .. ಆಗಿ: **ಶಾಂತಿಪು,** ೧೨. ೧ ವ)

**ನಮಿ** – [ಜೈನ] ಇಪ್ಪತ್ತೊಂದನೆಯ ತೀರ್ಥಂಕರ (ಮುಚುಕುಂದಂ ತಾಮ ನಮಿಸ್ವಾಮಿಗಳ್ಗೊಲವಿಂದಾಬ್ಜಕೆ ಸೇವ್ಯಮಾನಮೆನಲುಂ ಪೂಜಾವಿಧಾನೋತ್ಕರಂ: **ಪುಣ್ಯಾಸ್ರ,** ೧. ೧೦೩)

**ನಮಿತ** – ಬಾಗಿದ (ನಮಿತೋದ್ಯತ್ಕಣಿಶಪ್ರಕೀರ್ಣಕಳಮಪ್ರಖ್ಯಾತ ಕೇದಾರಜಾಲಮಯಂ: **ಕುಸುಮಾಕಾ,** ೧೦. ೧೫೪)

**ನಮೀಕೃತ** – ಬಾಗಿಸಿದ, ಶರಣಾಗಿಸಿದ ದೃಢೀಕೃತತಳವರ್ಗನುಂ ನಮೀಕೃತಸಾಮಂತವರ್ಗನುಮಾಗಿ: **ಚಂದ್ರಪ್ರಪು,** ೪. ೨೮ ವ)

**ನಮೆ** – ಬಡವಾಗು (ನೀನೊಂದಿದ ನಾರೀರೂಪದ ದಂದುಗದೊಳ್ ತೊಡರ್ದು ಬಿಡದೆ ನಮೆಯುತ್ತಿರ್ಪ್ಪೆ: **ಆದಿಪು,** ೫. ೬೨); ಕೊರಗು (ಪುಡುಪುಡನೆ ಪುರ್ಗಿ ನಮೆವ ಪಾಪದ ಫಲಮಂ ನೀನಮೋಘಮುಣ್ಬೆಯೆಂದು ಮೂದಲಿಸಿ: **ಸುಕುಮಾಚ,** ೫. ೭ ವ)

**ನಮೇರು** – ಸುರಗಿ ಮರ, ಹೂ (ಸಮಂತು ಅಲಂಕರಿಸಿದಂ ಶಾಂತೀಶನಂ ದಿವ್ಯಗಂಧ ದರಸ್ಮೇರ ನಮೇರು ಚಾರು ಕುಸುಮ ಕ್ಷೌಮಾಂಶುಕ ಅನರ್ಘ್ಯ ಭಾಸ್ವದನೇಕೋತ್ತಮ ಭೂಷಣಾವಳಿಗಳಿಂ ಸಂಕ್ರಂದನಾನಂದದಿಂದಂ: **ಶಾಂತೀಶ್ವಪು,** ೧೬. ૩)

**ನಮೋಸ್ತು** – [ಜೈನ] ಸನ್ಯಾಸಿ (ಕ್ರಿಯೆಗೆ: ನಮೋಸ್ತುಗಳೆಂಬುದು ಸವಣರ್ಗೆ ಪೆಸರಾಯ್ತು: **ಶಬ್ದಮದ,** ೮೫ ಪ್ರ)

**ನಮೋಸ್ತುಗೆಯ್** – ನಮಸ್ಕರಿಸು (ಯತೀಂದ್ರನಂ ಕಂಡು ನಮೋಸ್ತುಗೆಯ್ದು: **ಪುಣ್ಯಾಸ್ರ,** ૩. ೬೨ ವ)

**ನಮ್ರತ್ವ** – ಬಾಗುವಿಕೆ, ನಮಸ್ಕರಿಸುವುದು (ಬಾಗು–ನಮ್ರತ್ವೇ: **ಶಬ್ದಮದ, ಧಾ** ೧૩೬)

**ನಮ್ರಮೂರ್ತಿ** – ವಿನಯವಂತ (ನಮ್ರಮೂರ್ತಿ ಬೆಸವೆತ್ತು ಆ ಬೀರವಟ್ಟಕ್ಕೆ ಮೆಟ್ಟಿಡೆ .. .. ಪಡಯಂ ಕೈಸನ್ನೆಗೆಯ್ದುದ್ಧತಂ ನಡೆಯಲ್ವೇಟ್ಕೊಡೆ: **ಶಾಂತಿಪು,** ೧. ೧೦೭)

**ನಮ್ರಾಟನೀನಾದ** – ಬಾಗಿಸಿ ಕಟ್ಟಿದ ಹೆದೆಯ ಶಬ್ದ (ಬಾಹುಬಲೀಶನೇಱಿಸಿದನಾ ನಮ್ರಾಟನೀನಾದಸಂಜನಿತ ಅರಾತಿಕುಲಾಂಗನಾಜನಮನಸ್ಸಂತಾಪಮಂ ಚಾಪಮಂ: **ಆದಿಪು,** ೧೪. ೯೯)

**ನಯ** – ನುಣುಪು (ಪದಕೊರಲ್ ಇಂಪಂ ಅಪ್ಪುಕೆಯೆ ಕೊಂಕು ನಯಂ ಗಮಕಂಗಳಿಂ ಪೊಡರ್ ಕೊದಳ್ ಎಱೆದಿಕ್ಕಿದಂತೆ ಸುತಿಯೊಳ್ ಸಮವಾಗಿರೆ .. .. ಮೇನಕೆ ಸರಸ್ವತಿ ಬಾಯ್ದೆಱೆದಂತೆ ಪಾಡಿದಳ್: **ಪಂಪಭಾ,** ೭. ೮೮); ಸೊಗಸು (ನಯದ ಹರಿನೀಳಕುಟ್ಟಿಮಮಯದ ವಿಮಾನಂಗಳಲ್ಲಿ: **ಶಾಂತೇಶ್ವಪು,** ೧૩. ೧೧೭); ನಾಜೂಕು (ನಯದಿಂ ಪಂಪನೊಱಲ್ದು ನಿರ್ಮಿಸಿದ ಪೊನ್ನಂ ಪ್ರೀತಿಯಿಂ ಪೇಟ್ದು .. .. ತತ್ಕಾವ್ಯತ್ರಯಕ್ಕಂ ಜಗತ್ತ್ರಯಮುಂ ಮುಂ ಬೆಲೆಯಾಗಿ ಪೋಯ್ತನೆ: **ಚಂದ್ರಪ್ರಪು,** ೧. ೬೬); ರಾಜನೀತಿ (ನೀನಾದಿರಾಜನ್ಯೆ ನೀನಾ ನಾಲ್ಕುಂ ರಾಜವಿದ್ಯೆ ಪುಟ್ಟಿದುವು ಅದಱಿಂ ನೀನೆ ಬೆಸಸುವುದು ನಯಮಂ: **ಆದಿಪು,** ೧೪. ೧೦); ನ್ಯಾಯ (ನಯಮಂ ನಂಬುವೊಡೆ ಎನ್ನ ಪೇಟ್ವ ಸತಿಯಂ ಕೈಕೊಂಡಂ: **ಪಂಪಭಾ,** ೧. ೭೭); ಸೌಜನ್ಯ (ನಯದಿಂ ಗಂಧರ್ವವಿದ್ಯಾಪ್ರಮುಖನತಿನುತಂ ಬಂದು: **ಕರ್ಣನೇಮಿ,** ೧೦. ೭೮); [ಜೈನ] ಪ್ರತಿಪಕ್ಷವನ್ನು ನಿರಾಕರಿಸದೆ ವಸ್ತುವಿನ ಅಂಸವನ್ನು ಗ್ರಹಿಸುವ ಜ್ಞಾತೃವಿನ ಅಭಿಪ್ರಾಯ

(ಆಚಾರ್ಯರ್ ನಮಗೀವರಕ್ಕೆ ನಯನಿಕ್ಷೇಪಪ್ರಮಾಣಂಗಳಂ: **ನೇಮಿನಾಪು,** ೧. ೪)

**ನಯಂಗುಂದು** – ಕಳೆಗುಂದು (ನಿನ್ನೀ ಸುಕುಮಾರ ಲತಾತಿವಿಳಾಸಮಿದೇಕಾರಣಂ ನಯಂಗುಂದಿದುದೋ: **ಮಲ್ಲಿನಾಪು,** ೪. ೫)

**ನಯಕಾರ** – ತರಬೇತಿದಾರ (ಮೂವತ್ತಿರ್ವರ್ ನಯಕಾರರೀತನ ಗಜವ್ರಾತಂಗಳಂ ತಿರ್ದುವರ್: **ಶಾಂತಿಪು,** ೫. ೧೧೩)

**ನಯಜ್ಞ** – ರಾಜನೀತಿನಿಪುಣ (ಪರನೃಪರನೊತ್ತರಿಪಲ್ ಸಾಲ್ವುದು ನಯಜ್ಞ ಹಿತಮಿತ ವಚನಂ: **ರಾಜಶೇಖ,** ೧೩. ೧೫)

**ನಯನತ್ರಿಭಾಗ** – ಕುಡಿನೋಟ (ಚಾರು ಚಲತ್ ನಯನತ್ರಿಭಾಗದಿಂ ಕುಸಿಕುಸಿದೆನ್ನಂ ಈಕ್ಷಿಸುವಳ್ .. .. ಆ ಲತಾಂಗಿ: **ಕಾದಂಬ,** ೬. ೧೦೫)

**ನಯನ** – ಕಣ್ಣು (ಈಕ್ಷಣ ನಯನ ವಿಲೋಚನ ಚಕ್ಷುನೇತ್ರ ಅಂಬಕ ಅಕ್ಷಿಗಳ್ ದದೃಜ್ಞಾಮಂ: **ಅಭಿಧಾವ,** ೧. ೨೨. ೧೬)

**ನಯನಜಲ** – ಕಣ್ಣೀರು (ಆ ಜಯದ್ರಥನ ಚಿತಾನಳನಿಂದಂ ಒಗೆದ ಪೊಗೆಗಳ್ ಕೊಳೆ ಸುರಿವೊಡೆ ಸುರಿವುವು ಎನ್ನ ನಯನಜಲಂಗಳ್: **ಪಂಪಭಾ,** ೧೧. ೧೧೯)

**ನಯನತ್ರಿಭಾಗ** – ಕಡೆಗಣ್ಣು (ನಾಣ್ಚಿ ನೋಡಿದಳ್ ತಾಮ ಮನದನ್ನಳಪ್ಪ ಕಳಭಾಷಿಣಿಯಂ ನಯನತ್ರಿಭಾಗದಿಂ: **ಚಂದ್ರಪ್ರಪು,** ೩. ೬೨)

**ನಯನಪುತ್ರಿಕೆ** – ಕಣ್ಣ ಪಾಪೆ (ಜಾನಕಿ .. .. ಧಾರಾನಿಳಯ ಜಲಯಂತ್ರಪುತ್ರಿಕೆಯಂತೆ ನಯನಪುತ್ರಿಕೆಗೆ ಮಣಿಭೂಷಣಂ ಎನಿಸಿ: **ಪಂಪರಾ,** ೫. ೪೦ ವ)

**ನಯನಾಕರ್ಷಣವಿದ್ಯೆ** – ನೋಟ ಸೆಳೆಯುವ ಕಲೆ (ನಯನಾಕರ್ಷಣವಿದ್ಯೆ ಗಂಡುವರಿಜಂ ಕೈಗೊಂಡುದೋ: **ಪಂಪರಾ,** ೩. ೩೮)

**ನಯನಿಪುಣ** – ರಾಜನೀತಿ ಪರಿಣತ (ನಯನಿಪುಣರ್ ಉಪಾಯಚತುಷ್ಟಯದೊಳ್ ಸಾಮಮನಗಣ್ಯ ಷಾಡ್ಗುಣ್ಯದೊಳಾರಯೆ ಸಂಧಿಯಂ ಮೊದಲ್ ಮಾಡಿಯೆ ಪೇಳ್ದಿರ್: **ಪಾರ್ಶ್ವನಾಪು,** ೨. ೩೯)

**ನಯನೀಯ** – ನೋಡತಕ್ಕುದಾದ (ಜಗತ್ತ್ರಯನಾಥಾಂಬಿಕೆಯುಂ ನಯನೀಯ ಬಾಳಾರ್ಕನ ಮುಖಕಮಳಮಂ ನೀಡುಂ ಅಟ್ಟಿರ್ದು ನೋಡಿ: **ಪಾರ್ಶ್ವನಾಪು,** ೧೪. ೧೧೪ ವ)

**ನಯಮೂರ್ತಿ** – ರಾಜನೀತಿಯ ಸಾಕಾರರೂಪ (ಪ್ರಿಯೆಯ ಬರಪಾರ್ವವೊಲ್ರಿಯ ಗಗನಚರೇಂದ್ರರುಂದ್ರಸೇನೆಯ ಬರಪಾರ್ವಯಮೂರ್ತಿಯುಮಂ ನಯಮೂರ್ತಿಯುಮಂ ಪೋಲ್ವರಂ ಅಪಾರಪೌರುಷಪರರಂ .. .. ಕಂಡು: **ಶಾಂತಿಪು,** ೩. ೭೫ ಮತ್ತು ೭೫ ವ))

**ನಯಯುಕ್ತ** – ನಯವನ್ನು ಬಲ್ಲವನು (ಅನುಪಮ ನಯಯುಕ್ತಂ ಧರ್ಮಮಾರ್ಗನುರಕ್ತಂ ಮನುನಿಭಸುಚರಿತ್ರಂ .. .. ವರ್ಧಮಾನಾಭಿದಾನಂ: **ಪಂಚತಂತ್ರ,** ೭೪)

**ನಯವಾದ** – [ಜೈನ] ಸಮ್ಯಜ್ಞಾನ ಪಡೆಯಲು ವಸ್ತುವಿನ ಪ್ರತಿ ಅಂಶವನ್ನೂ ಗ್ರಹಿಸುವುದು (ನಯವಾದಂ ನಯಮಾಗಿ ಕೂಡೆ ಪೊಳೆಯಲ್ .. .. ಪೇಟ್ವಿರೀಗೆ ಉಪಾಧ್ಯಾಯರ್ ಸುಖೋಪಾಯಮಂ: **ಪುಷ್ಪದಂಪು,** ೧. ೪)

**ನಯವಿದೆ** – ನಯವಂತೆ (ಕೇಳ್ ನಯವಿದೆ ಪೆತ್ತ ಪರೀಷಹ ಜಯಮೆ ತಪಂ ತಪಕೆ ಬೇಱೆ ಕೋಡೆರಡೊಳವೇ: **ಯಶೋಧಚ,** ೧. ೪೯)

**ನಯವಿದ್ಯಾವಿದ** – ನೀತಿಶಾಸ್ತ್ರ ನಿಪುಣ (ನಯವಿದ್ಯಾವಿದರಿಂ ಕವಿಪ್ರಕರದಿಂ ತರ್ಕಜ್ಞರಿಂ .. .. ಒಪ್ಪುವ ಗುಪ್ತವಂಶ ವಸುಧಾಧೀಶಾವಳೀರಾಜಧಾನಿಯಂ ಉಜ್ಜೈನಿಯನೆಯ್ದಿ ಬಂದನಜಿತಂ ಶುಂಭದ್ಗುಣಭ್ರಾಜಿತಂ: **ಪಂಚತಂತ್ರ,** ೨೬೩)

**ನಯವಿನಿಮಯ** – ಪರಸ್ಪರ ನೀತಿ ಅರಿಯುವುದು ನಯವಿನಿಮಯ ನಾನಾ ಮಂತ್ರ ದೂತ ಪ್ರಯಾಣಾಕ್ಷನ ಸಮಯವಿಆಸೋಲ್ಲಾಸಿ ಸಂಗ್ರಾಮಿಕಾಂಗಂ; **ಕವಿರಾಮಾ,** ೩. ೨೧೩)

**ನಯಶಾಸ್ತ್ರ** – ರಾಜನೀತಿಶಾಸ್ತ್ರ (ನಯಶಾಸ್ತ್ರಕ್ರಮದಿಂ ವಿರೋಧಿನೃಪರಂ ಗೆಲ್ದಾಳ್ದನೇಕಾಕಿಯಾಗಿಯುಂ ಉರ್ವೀತಳಮಂ ನರೇಂದ್ರತಿಲಕಂ ಶ್ರೀಚಂದ್ರಗುಪ್ತಂ ನಿಜಾ ನ್ವಯರಾಜ್ಯಕ್ರಮದೊಳ್ ಚತುರ್ಬಲ ಸಮೇತಂ ನಿಂದು ತನ್ನೊಂದು ದುರ್ನಯದಿಂದಂ ನೆಗಟ್ದೆಯ್ದೆ ಕೆಟ್ಟನಧಿಕಂ ದುರ್ಬುದ್ಧಿ ದುರ್ಯೋಧನಂ: **ಪಂಚತಂತ್ರ,** ೬೭)

**ನಯಾಂಕವಚಸ್ಕ** – ರಾಜನೀತಿ ಬಲ್ಲ ಮಾತುಗಾರ (ಸಮದರ್ಶಿ ಸದ್ಗುಣಯುತಂ ಸತ್ಕೀರ್ತಿತುಕ್ತಂ ನಯಾಂಕವಚಸ್ಕಂ ಪತಿಮೋಹಿ ನಾಮದಿಂ ಅಲಂಪಿಂ ಮಂತ್ರಿಪಂ ರಂಜಿಪಂ: **ರಾಜಶೇಖ,** ೩. ೨೨)

**ನಯಾಗಮ** – ರಾಜನೀತಿಶಾಸ್ತ್ರ (ಮತಿಹೀನರಪ್ಪ ಮನುಜರ್ ಪತಂಗವೃತ್ತಿಯನೆ ಕೊಂಡು ಕೊನೆಯುತ್ತಿರ್ಪರ್ ಸತತಮದೆಂತುಂ ವಿಬುಧ ಪ್ರತತಿಗನಿಷ್ಟಂ ನಯಾಗಮಕ್ಕೆ ವಿರುದ್ಧಂ: **ಪಂಚತಂತ್ರ,** ೨೯)

**ನಯೋದಯ** – ರಾಜನೀತಿಯ ಏಳಿಗೆ (ಜಯಮೊಡವುಟ್ಟಿದುದು ನಯೋದಯಮೊಡವಳೆದುದು ವಿಳಾಸಂ ಒಡನಾಡಿದುದು: **ಶಾಂತಿಪು,** ೧. ೭೮)

**ನರ** – ಮನುಷ್ಯ (ಸುರ ದನುಜ ಭುಜಗ ವಿದ್ಯಾಧರ ನರ ಸಂಕುಲದೊಳ್ ಆರನಾದೊಡಂ ಏನೋ ಗರಮುಟ್ಟೆ ಕೊಲ್ಗುಂ ಇದು ನಿಜವಿರೋಧಿಯಂ ಧುರದೊಳ್ ಎಂದು ಶಕ್ತಿಯನಿತ್ತಂ: **ಪಂಪಭಾ,** ೧. ೧೦೩); ಅರ್ಜುನನ ಒಂದು ಹೆಸರು (ತನ್ನ ರತ್ನವಿಸ್ಫುರಿತ ಕಿರೀಟಮಂ ಕವಿದು ತಾನೆ ನರಂಗೆ ಕಿರೀಟಿನಾಮಮಂ ಸರಸದಿಂ ಆಗಲುಚ್ಚರಿಸಿ ಸಾಹಸಮಂ ಪೊಗಟ್ದಂ ಸುರಾಧಿಪಂ: **ಪಂಪಭಾ,** ೫. ೧೦೩)

**ನರಕ** – ಸಾವಿನನಂತರ ಪಾಪಗಳಿಗೆ ಶಿಕ್ಷೆ ಪಡೆಯುವ ಸ್ಥಳ (ನರಕವ್ಯಾವರ್ಣನೆಯಂ ಆ ಭಟಾರರಿಂತೆಂದು ಪೇಟ್ವಿದಂ ಕೇಳ್ದಂ; ವಡ್ಡಾರಾ, ಪು. ೧೨೬, ಸಾ. ೧೨); [ಜೈನ] ಏಳು ಬಗೆಯ ನರಕಗಳು: ರತ್ನಪ್ರಭೆ, ಶರ್ಕರಾಪ್ರಭೆ, ವಾಲುಕಾಪ್ರಭೆ, ಪಂಕಪ್ರಭೆ, ಧೂಮಪ್ರಭೆ, ತಮಃಪ್ರಭೆ, ಮಹಾತಮಪ್ರಭೆ (ಏೞಿಂಬ ನರಕಮಾವುದೊ ಪೇೞ್ ಎಂಬ ದುರಂತದುಃಖದೊಳೆ ಪೇೞಿಸಿನಿಂದೇೞು ಧಾತುಗಳೇೞುಂ ನರಕಂಗಳ್ ವೞಿಯೊಳೇಗುಂದದವೋಲ್; **ಅಜಿತಪು,** ೨. ೫೪)

**ನರಕಗತಿ** – ನರಕವಾಸ (ಸುವರ್ಣಹರಣಂಗೆಯ್ದಾ ಪಾತಕಂ ನರಕಗೆತಿಗೆಯ್ದುವ ಧೂರ್ತತನದಿಂ ಕುಟಿಲಮಾರ್ಗಾಂತರ್ಗತನಾಗಿ ಪೋಗೆ: **ಪಂಚತಂತ್ರ,** ೧೨೬ ವ); [ಜೈನ] ಹದಿನಾರು ಕರ್ಮಪ್ರಕೃತಿಗಳಲ್ಲಿ ಒಂದು, ಇದರಿಂದ ನಾರಕೀಯ ಅವಸ್ಥೆ ಉಂಟಾಗುತ್ತದೆ (ಅಂತರ್ಮುಹೂರ್ತದಿಂ .. .. ನರಕಗತಿ .. .. ತಿರ್ಯಗ್ಗತಿ .. .. ಎಂಬ ಪದಿನಾಱುಂ ಕರ್ಮಪ್ರಕೃತಿಗಳಿಂ ನಿರವಶೇಷಂ ಕಿಡಿಸಿ: **ಆದಿಪು,** ೧೦. ೧೪ ವ)

**ನರಕಾಂತಕ –** ನರಕನೆಂಬ ರಾಕ್ಷಸನನ್ನು ಕೊಂದವನು, ಕೃಷ್ಣ (ಆ ನರಕಾಂತಕನೀಕೆಗಂಡು ತೊಟ್ಟನೆ ನಿಜಲಕ್ಷ್ಮಿಯಂ ಮಱೆದಂ: **ಪಂಪಭಾ,** ೪. ೮೫); [ಜೈನ] ವಾಸುದೇವ (ಅಂತಾ ವಿದ್ಯೆಗಳಂ ನರಕಾಂತಕಂ ಅಲಸದೆ ವಿಷಂ ದಿವ್ಯೌಷಧಮೆಂಬಂತಿರೆ ವಿದ್ಯೆಗಳಿಂ ಗೆಲ್ದಂ: **ಶಾಂತಿಪು,** ೫. ೬೨)

**ನರಕಾಯುಷ್ಯ –** [ಜೈನ] ನರಕವಾಸದ ಅವಧಿ (ಆ ಸಮಯದೊಳ್ ಏೞನೆಯ ನರಕಾಯುಷ್ಯಂ ನೆಱೆಯೆ: **ಪುಣ್ಯಾಸ್ರ:** ૩. ೫೪ ವ)

**ನರಕಾರಿ –** ಕೃಷ್ಣ (ಪಾಂಡುಪ್ರಭವರ್ಕಳ್ ಅಲ್ಲಿರಲ್ ಅದಂ ಚರರಿಂ ನರಕಾರಿ ಕೇಳ್ವುದುಂ: **ಕರ್ಣನೇಮಿ,** ೧೦. ೧೬೭)

**ನರಕೀಟ –** ಕ್ಷುದ್ರ ಮನುಷ್ಯ (ನರಕೀಟದ್ವಯಸಂಗರಕ್ಕೆ ಖಚರೇಂದ್ರಾಧೀಶಂ ಇಂತೇಕೆ ಕಾತರನಪ್ಪೊಂ ಗಡ: **ಶಾಂತಿಪು,** ૩. ೯೮)

**ನರಗ –** ನರಸಿಂಹ ಎಂಬ ಹೆಸರಿನ ರಾಜ (ಸಿಡಿಲವೊಲ್ ಎಱಗುವ ನರಗನ ಪಡೆಗೆ ಅಗಿದು ಉಮ್ಮಳದಿಂ ಉಂಡೆಡೆಯೊಳ್ ಉಣ್ಣದೆಯುಂ ಕೆಡೆದೆಡೆಯೊಳ್ ಕೆಡೆಯದೆಯು ನಿಂದೆಡೆಯೊಳ್ ನಿಲ್ಲದೆಯುಂ ಓಡಿದಂ ಮಹೀಪಾಲಂ: **ಪಂಪಭಾ,** ೧. ૩೭)

**ನರಜನ್ಮ –** ಮಾನವಜನ್ಮ, ಬದುಕು (ಭಂಗುರಂ ಉಳ್ಳುವಂತೆ ನರಜನ್ಮಂ ಅದಂ ಬಗೆದುಂ ವಿವಾಹಕಾರ್ಯಂಗಳ ಕಾಮಸೇನೆಗಳ .. .. ಆದರದೊಳ್ ಮನಮಂ ತೊಡರ್ಚಿ .. .. ಮಾಣ್ಬುದು ಮರುಳ್ತನಮಲ್ತೆ: **ಅಜಿತಪು,** ೬. ೪೭)

**ನರಡು –** ದನಗಳಿಗೆ ಬರುವ ಒಂದು ರೋಗ (ಅಂತು ಜ್ವರಮಾದಂತೆ ಕುಂಬಿಕ್ಕುವರಸನುಮಂ ಪೊರಳ್ವರಸಿಯರುಮಂ ನರಡಾದೆತ್ತಿನಂತೆ ನಾಲಗೆಯನುರ್ಚುವ ಪರಿಜನಮುಮಂ .. .. ಕಂಡು: **ಧರ್ಮಾಮೃ,** ૩. ೧೮೯ ವ)

**ನರನಂದನ –** ಅರ್ಜುನನ ಮಗ, ಅಭಿಮನ್ಯು [ಅನಿತಣ್ಮಿ ಸತ್ತ ನರನಂದನನಂಗೆ ಕಣ್ ಸೋಲ್ತು ಬಗೆಯದೆ ಅಮರೇಂದ್ರನಂ ಇನ್ನೆನಗೆ ತನಗೆಂಬ ದೇವಾಂಗನೆಯರ ಕಳಕಳಮೆ ಪಿರಿದುಂ ಆಯ್ತು ಅಂಬರದೊಳ್: **ಪಂಪಭಾ,** ೧೧. ೧೦೫)

**ನರಪತಿಯಣುಗ –** ರಾಜಕುಮಾರ (ನರಪತಿಯಣುಗಂ ಸೊಣಕಡಿಕರಮಂ ಪೊಲೆಯರುಮಂ ಓಲಗಿಪದಪುದೆ: **ಸಮಯಪ,** ೯. ೯೮)

**ನರಪ್ರಿಯತನೂಜ –** ಅರ್ಜುನನ ಪ್ರೀತಿಯ ಮಗ, ಅಭಿಮನ್ಯು (ಕರಮೆರಡುಂ ಪಱೆವುದುಂ ಆತುರದಿಂದಂ ತನ್ನ ಕುನ್ನಗೆಯ್ಯೊಳೆ ಕೊಂಡು ಉದ್ಧರಚಕ್ರದಿಂ ಇಟ್ಟಂ ತಿರಿಪಿ ನರಪ್ರಿಯತನೂಜನ ಅಕ್ಷೋಹಿಣಿಯಂ: **ಪಂಪಭಾ,** ೧೧. ೧೦૩)

**ನರಮಹಿತ –** ಜನರ ಗೌರವಕ್ಕೆ ಪಾತ್ರನಾದವನು (ನರಮಹಿತಾ ನಿನಗೇಂ ಅಹಿತರುಮೊಳರೆ ಸತತ ಪರಹಿತಾಚಾರಪರಾ: **ಕವಿರಾಮಾ,** ೧. ೮೨)

**ನರವು –** ಸ್ನಾಯುರಜ್ಜು, ಸ್ನಾಯುವನ್ನು ಮೂಳೆಗೆ ಸೇರಿಸುವ ಅಂಗಾಂಶ, ನರ (ನೆತ್ತರಂ ಪಡೆಯದೆ ಆಕಾಶಕ್ಕೆ ಬಾಯಂ ತೆಱೆದು ಊಳ್ವ ಬಳ್ಳುಗಳುಮಂ ನರವುಮಂ ಬರಿಯುಮಂ ಪತ್ತಿ ತೆಗೆದು ಪೆಡಸಾರ್ವ ನರಿಗಳುಮಂ ತಾನೆ ಸೋದು: **ಪಂಪಭಾ,** ೧૩. ೫೬ ವ)

**ನರವೈದ್ಯ –** ಮಾನವವೈದ್ಯ (ಕ್ಷಾರಪಾನೀಯಂ ಮೊದಲಾಗೊಡೆಯ ನರವೈದ್ಯಂಗಳುಂ ಜ್ಯೋತಿಷಂ ಮಂತ್ರವಾದಂ ಮೊದಲಾಗೊಡೆಯ ಶಾಸ್ತ್ರಂಗಳೆಲ್ಲಮಂ ನೆಱೆಯೆ ಕಲ್ಪಿಸಿ ಯೋಗ್ಯರ್ ಮಾಡಿದೊಡೆ: **ವಡ್ಡಾರಾ,** ಪು. ೪. ಸಾ. ೨)

**ನರಶಾಸನ –** ಶಾಸನದ ಸಾಕಾರ (ತೋಳ್ವಲಕ್ಕೆ ಪಡೆದಂ ನರಶಾಸನಮಂ ನರೇಂದ್ರಚೂಡಾರತ್ನಂ: **ಮಲ್ಲಿನಾಪು,** ૩. ೧೪)

**ನರಸಿಂಹ –** ಮನುಷ್ಯ ದೇಹ ಹಾಗೂ ಸಿಂಹದ ಮುಖವುಳ್ಳ ವಿಷ್ಣುವಿನ ನಾಲ್ಕನೆಯ ಅವತಾರ (ನರಸಿಂಹಾಕಾರದಿಂ ದೈತ್ಯನಂ ಚಲದಿಂ ಸೀಳ್ದವನಬ್ಧಿಮಥನಪ್ರಾರಂಭದೊಳ್ ಮಂದರಾಚಲಮಂ ತಂದನಾವಂ: **ಪಂಪಭಾ,** ೬. ೪೧)

**ನರಸಿಂಹಾಡಂಬರ –** ನರಸಿಂಹನ ಆಟೋಪ (ಶೂದ್ರಕನ ವಿಕ್ರಮಾಡಂಬರಮಂ ಅಂದು ಅರೆವಾನಿಸಿಕೆಯೊಳ್ ಒಂದಿದ ನರಸಿಂಹಾಡಂಬರಕ್ಕೆ ನಸುನಗುತಿರ್ಕುಂ: **ಕಾದಂಬ,.** ೧. ೧೦)

**ನರಸುತ –** ಅರ್ಜುನನ ಮಗ, ಅಭಿಮನ್ಯು (ಗುರು ಪಣ್ಣಿದ ಚಕ್ರವ್ಯೂಹರಚನೆ ಪೆಱರ್ಗರಿದು ಪುಗಲ್ ಇದಂ ಪೊಕ್ಕು ರಣಾಜಿರದೊಳ್ ಅರಿನೃಪರಂ ಇಕ್ಕಿದ ನರಸುತ ನಿನ್ನೊರೆಗೆ ದೊರೆಗೆ ಗಂಡರುಮೊಳರೇ: **ಗದಾಯು,** ೪. ೫೫)

**ನರಸೇನೆ –** ಮನುಷ್ಯಸೈನ್ಯ (ನರಸೇನೆಗರಿದು ಲಂಕಾಪುರದ ಬರ್ಹಿಜಲಧಿ ದಾಂಟಲ್ ಇಂತಿದು ದೇವಾಸುರರರ್ಗಮರಿದು ನರಕದ ಪುರಮಂ ಬಳಸಿರ್ದುದೊಂದು ಮೌರವಪಾಶಂ: **ಜಗನ್ನಾವಿ,** ೧೨. ೫):

**ನರಿ –** ಜಂಬುಕ (ನೆತ್ತರಂ ಪಡೆಯದೆ ಆಕಾಶಕ್ಕೆ ಬಾಯಂ ತೆಱೆದು ಊಳ್ವ ಬಳ್ಳುಗಳುಮಂ ನರವುಮಂ ಬರಿಯುಮಂ ಪತ್ತಿ ತೆಗೆದು ಪೆಡಸಾರ್ವ ನರಿಗಳುಮಂ ತಾನೆ ಸೋದು: **ಪಂಪಭಾ,** ೧૩. ೫೬ ವ)

**ನರುವಾಯ –** ಒಂದು ಬಗೆಯ ಬಾಣ (ನೆಱೆದು ನಿರ್ವಾಯಂ ನರುವಾಯಂ ಮುಂಮೊನೆ ನೆರಕೆ ನಾರಾಚಂ ತಗರ್ತಲೆಯಂ: **ಪಂಪಭಾ,** ೧૩. ૩೯)

**ನರೆ –** ಬಿಳಿಗೂದಲು (ಭರತಂ ಕಂಡಂ ಕೆನ್ನೆಯ ನರೆಯಂ ತಳದಳಿಸಿ ಪೊಳೆವ ಮಣಿದರ್ಪಣದೊಳ್: **ಆದಿಪು,** ೧೬. ೬೧); ಮುಪ್ಪು (ತೀವಿದ ನರೆಯುಂ ಡೊಳ್ಳುಂ ದೇವವ್ರತನೆನಿಸಿ ನೆಗಟ್ಟಿ ಯಶಮಂ ಬೆರಸಿನ್ನೀವುದು ಹರಿಗೆ ಅರ್ಘ್ಯಮಂ ಎಂದು ಆವನುಂ ಈ ಭೀಷ್ಮರಂತು ನುಡಿದರುಂ ಒಳರೇ: **ಪಂಪಭಾ,** ೬. ೪૩)

**ನರೆತೆರೆದೋಱು –** ನರೆತ ಕೂದಲು ಹಾಗೂ ಸುಕ್ಕುಗಳು ಕಾಣಿಸಿಕೊಳ್ಳು (ದೇಹದೊಳ್ ನರೆತೆರೆದೋಱದನ್ನೆಗಂ ಅನಾಕುಳಂ ಇಂದ್ರಿಯಯದೇೞ್ಗೆಯುಳ್ಳಿನಂ .. .. ನೆನೆವುದು ಇಂದ್ರನರೇಂದ್ರಫಣೀಂದ್ರವಂದ್ಯನಂ: **ಸಮಯಪ,** ೧. ೧೦೪)

**ನರೆಯೇಱು –** ಕೂದಲು ಬೆಳ್ಳಗಾಗು, ಮುಪ್ಪಾಗು (ಕರಂ ನರೆಯೇಱದಿಟ್ಟು ಮುಪ್ಪಡಸದ ಮುನ್ನಮೇಕೆ ಮನುಜರ್ ಮುಱೆದಿಕ್ಕರೊ ಮೋಹಮಲ್ಲನಂ: **ಮಲ್ಲಿನಾಪು,** ೧૩. ೭೧)

**ನರ್ತಕ –** ನೃತ್ಯಗಾರ (ಧರೆ ರಂಗಂ ಗಗನಂ ಮನೋಹರತರಂ ನಾಟ್ಯಾಲಯಂ ನರ್ತಕಂ ಸುರರಾಜಂ: **ಆದಿಪು,** ೭. ೧೨೭)

**ನರ್ತಕಾಳಿ –** ನೃತ್ಯಗಾರರ ಸಮೂಹ (ಪ್ರಕಟಿಸಿತ್ತು ಪದ್ಮಜನ ಪಕ್ಕದೊಳ್ .. .. ಗಾಯಕಪ್ರತತಿ ವಾದಕಮಂಡಳಿ ನರ್ತಕಾಳೀ: **ಪುಷ್ಪದಂಪು,** ೫. ೨೧)

**ನರ್ತಕಿ –** ನೃತ್ಯಗಾತಿ (ಕುಡುಪುಂ ಕಯ್ಯುಂ ಜತಿಯೊಳ್ ತಡತಡವರೆ ವಾದಕಂಗೆ ಪುರ್ವಿಂ ಜತಿಯಂ ತೊಡರದೆ ನಡೆಯಿಸಿ ಪುರ್ವದೆ ಕುಡುಪೆನೆ ನರ್ತಕಿಯೆ ಸಭೆಗೆ ವಾದಕಿಯಾದಳ್: ಆದಿಪು, ೯. ૩೨); [ಜೈನ]

ಸೌಧರ್ಮೇಂದ್ರನ ಏಳು ಸೇನಾಂಗಗಳಲ್ಲಿ ಒಂದು (ಗಜ ತುರಗ ಸ್ಕಂದನ ಪದಾತಿ ಗವೇಂದ್ರ ಗಂಧರ್ವ ನರ್ತಕಿ ಪ್ರಮುಖಪಥಿತಸಪ್ತಾನೀಕಸಂಯುತನುಂ: **ಕರ್ಣನೇಮಿ,** ೨. ೩೨ ವ) ನೋಡಿ, 'ಸಪ್ತಾನೀಕ'

**ನರ್ತನ** – ನೃತ್ಯ, ಕುಣಿತ (ಖೇಡನ ನರ್ತನ ಹಾಸ್ಯವನಾಡಂಬರ ನಟನ ವೇಣುವಾದನ ಗೇಯ ಕ್ರೀಡೆಗಳಿಂ: **ಜಗನ್ನಾವಿ,** ೪. ೪೮)

**ನರ್ತನಗೃಹ** – ನಾಟ್ಯಶಾಲೆ (ಸಾಹಿತ್ಯಲೀಲಾಗೃಹಂ ಭಗವಜ್ಜೈನಮತೋಕ್ತಿ ನರ್ತನಗೃಹಂ: **ಪುಷ್ಪದಂಪು,** ೧. ೭೬)

**ನರ್ತಿಸು** – ಕುಣಿ, ನೃತ್ಯಮಾಡು (ಕುಡುಮಿಂಚಂತೆ ಮೇಗೊಗೆದು ನಾರದಂ ನರ್ತಿಸಿದಂ: **ಪಂಪಭಾ,** ೧೨. ೧೮೯)

**ನರ್ದನ** – ದನಗಳ ಗುಟುರು (ಜನಾರ್ದನನಾಡುತ್ತುಮಿರ್ದ ಪದದೊಳ್ ದೆಸೆಗಳ್ ಮಾರ್ದನಿವಿಡಲ್ ಅದ್ಭುತವೃಷನರ್ದನ ಪುಣ್ಮಿದುದು ಅದೊಂದು ವಜ್ರಾಶನಿವಲ್: ಜಗನ್ನಾವಿ, ೫. ೩೪)

**ನರ್ಮ** – ಆಟ (ನರ್ಮಮನಾದರಿಸಿದವು ಪದಂಗಳ್ ಪರಡು ನಿಗೂಢಂ ಲಲಿತ ಲತಾಂಗಿಯ: **ಸುಕುಮಾಚ,** ೫. ೫೧); ಸಂತೋಷ (ನರ್ಮದಿಸೆಗೆ ಉತ್ಕಟಸತ್ಕರ್ಮಂ ಪ್ರತ್ಯಕ್ಷಫಲಮನೀವುದು ಪುಸಿಯೇ: **ಪುಷ್ಪದಂಪು,** ೩. ೧೦೮)

**ನರ್ಮಗೋಷ್ಠಿ** – ವಿನೋದಗೋಷ್ಠಿ (ನರ್ಮಗೋಷ್ಠಿಯನಾಳ್ವಂ ಕಡುನೀಳಿಂ ಊರ್ಜಿತಯಶಂ ಪಂಚಾಸ್ತ್ರಶಾಸ್ತ್ರಾರ್ಥ ನಿಶ್ಚಯಚಿತ್ತಂ: **ರಾಜಶೇವಿ,** ೧೧. ೧೫೦)

**ನರ್ಮಸಚಿವ** – ರಾಜನ ಆಪ್ತ, ಸಖ (ಅಂತವರ್ ನರ್ಮ ಸಚಿವರಂತೆ ಇಚ್ಛೆಯಂ ಪ್ರತಿಆಲಿಸಿ ನುಡಿವುದುಂ ಅದಂ ಕೇಳ್ದು .. .. ವಿಭೀಷಣಂ .. .. ಇಂತೆಂದಂ: **ಪಂಪರಾ,** ೧೨. ೫೧ ವ)

**ನರ್ಮಾಲಾಪ** – ವಿನೋದದ ಮಾತು, ಹರಟೆ (ಪಲವುಂ ನರ್ಮಾಲಾಪಂಗಳಿಂದವೆ ಸುಖಾಯಮಾನಸ್ವಾಂತನಾಗಿ ರಾಜಾಧಿರಾಜಂ: **ಕಾದಂಬ,** ೮. ೯೪ ವ)

**ನಲವರಿ** – ಸಂತಸಗೊಳ್ಳು (ದೆಸೆದೆಸೆಯಂ ವಾಸಿಸಿ ನಲವರಿದು ಪ್ರಾಣಿಗಳೊಳ್ ತನಗದಿರದಿದಿರಾಂಪರೊರ್ವರುಮಂ ಕಾಣದೆ: **ಪಂಚತಂತ್ರ,** ೯೮ ವ)

**ನಲವು** – ಸಂತಸ (ನೆರೆದೋಲಗಂ ನಲವು ಕೈಮಿಗೆ ತನ್ನನೆ ನೋಡುತಿರ್ಪಿನಂ: **ಕಬ್ಬಿಗಕಾ,** ೬೬); ಪ್ರೀತಿ (ಸಕಲಬುಧಸಮಿತಿ ನೆಱೆ ಕೊಂಡುಕೊನೆದು ನಲವಿಂದೆ ಕೀರ್ತಿಸುತ್ತಿರೆ .. .. ಕಾವ್ಯಾವಲೋಕನಮಂ ವಿರಚಿಸುವೆಂ: **ಕಾವ್ಯಾವಲೋ,** ೩):

**ನಲಿ** – ಸಂತಸಗೊಳ್ಳು (ತಾಮರೆಯರಲೊಳ್ ಸರಸನಿಜಾಮೋದದೊಳೊಂದಿ ನಲಿದು ಮಕರಂದರಜೋ ವ್ಯಾಮುಗ್ಧದೊಳೀ ಮುಗುಳೊಳಮಾ ಮಾಟ್ಕೆಯನಱಿಸಿ ಸುಟಿವುದಳಿಕೆಲಕೆಲದೊಳ್: **ಕವಿರಾಮಾ,** ೩. ೧೨೭); ಕುಣಿ (ಗಗನತಳಮೆ ಪಱಿದು ಬಿಟ್ಟುದೆನಿಪ ಬಹುತಟಾಕದಿಂ ಕುಕಿಲ್ವ ನಲಿವ ಕೋಕದಿಂ: **ಪಂಪಭಾ,** ೧. ೫೮)

**ನಲಿವರಿ** – ಸಂತಸದಿಂದ ಓಡಾಡು (ಪಲದಿವಸಕ್ಕೆತ್ತಾನುಂ ಕಲಹಂ ದೊರೆಕೊಂಡುದೆಂದು ಕೆಲಬರ್ ಬಿಲ್ಲಂ ಗೊಲೆಗೆತ್ತಿ ತೀವಿ ತೆಗೆದೇಂ ನಲಿವರಿದರೋ ಜವನ ದೂತರೆನಿಸಿ ಕಿರಾತರ್: **ಪಂಪರಾ,** ೪. ೫೭)

**ನಲಿವು** – ಸಂತೋಷ (ಸಿರಿ ನಲವಿಂದಮಿರ್ಪ ನೆಲೆ ಕಣ್ಗಳ ಪರ್ವಮೆನಿಪ್ಪ ಪಂಕಜೋತ್ಕರಂ: **ಕಾದಂಸಂ,** ೪. ೭)

**ನಲ್ಮೆ** – ಪ್ರೀತಿ (ಚಲಂಗಳಾದಂ ವಿಲಾಸಿನೀಜನದ ನಲ್ಮೆಯುಂ ಸಂಗಮಮುಂ: **ಕವಿರಾಮಾ,** ೩. ೯೭)

**ನಲ್ಲ** – ಪ್ರಿಯಕರ (ಅನುಪಮನಂ ಬರಿಪ್ಪೆನನುರಾಗದೆ ನಲ್ಲನನಿಂದ: ಕವಿರಾಮಾ, ೨. ೧೦೬)

**ನಲ್ಲರ್** – ಹಿತವರು, ಪ್ರೇಮಿಗಳು (ಪೊಲ್ಲಮೆಯೆ ಲೇಸು ನಲ್ಲರ ಮೆಯ್ಯೊಳ್: **ಯಶೋಧಚ,** ೨. ೪೨)

**ನಲ್ಲಂಬು** – ಮೋಹದ ಬಾಣ (ತನ್ನ ನಲ್ಲಂಬುಗಳಿಂದಂ ಆರ್ದಿರದಡುರ್ತಿಸೆ ಭೂಭುಜರೆಲ್ಲಮಲ್ಲಿ ಬಿಲ್ಲುಂಬೆಱಗಾಗೆ: **ಪಂಪಭಾ,** ೧೧. ೪೨)

**ನಲ್ಲವರಕೆ** – ಶುಭ ಹಾರೈಕೆ (ಎಂದವರ್ ನಲ್ಲವರಕೆಯಂ ಪರಸುವುದುಂ ಅನಂತರಂ ಅನಂತಕಾಂತಮಣಿಗಣ .. .. ಶಿಬಿಕಾರೂಢೆಯಪ್ಪುದುಂ: **ಕರ್ಣನೇಮಿ,** ೯. ೮೬ ವ)

**ನಲ್ಲಳ್** – ಪ್ರಿಯೆ (ಮದೀಯ ಮನೋಗತ ಕಾಮಸಾಗರದ ಒದವಿಂಗೆ ನಲ್ಲಳ ವಿಲೋಚನ ಚಂದ್ರಿಕೆಯೊಂದೆ ಸಾಲದೇ: **ಪಂಪಭಾ,** ೫. ೧೧)

**ನವಕ** – ಒಂಬತ್ತರ ಗುಂಪು (ಬಟೆಯಂ ಸಂಜ್ವಳನಕಷಾಯ ಚತುಷ್ಕೋಕಷಾಯ ನವಕ ನಾಮ ತ್ರಯೋದಶಪ್ರಕೃತಿಗಳನರೆದು: **ಶಾಂತಿಪು,** ೧೧. ೧೧೧ ವ)

**ನವಕಂಟಕ** – ಹೊಸ ಮುಳ್ಳು (ನವಕಂಟಕಮಡಿಯಂ ನಡೆ ಸವತಿಯನಪ್ಪಿದುದಱಿದು ಪತಿ ಪೆಗಲಿಂ ಪೊತ್ತವಳಗಿದಳ್: **ಲೀಲಾವತಿ,** ೧೩. ೯೧)

**ನವಕವಿತ್ವ** – ಹೊಸ ಕವಿತೆ (ನಿನ್ನಯ್ದಿದ ನವಕವಿತ್ವಮಂ ನವಕವಿತ್ವಮಂ ನೀನಭಿನಯಿಸಿದಂತಾಗಿರ್ದಪುದು: **ಶಾಂತಿಪು,** ೩. ೯೩ ವ)

**ನವಖಂಡ** – ಒಂಬತ್ತು [ಅಸಂಖ್ಯ] ಚೂರು (ನವಖಂಡಮಾಗೆ ಮಾಟ್ಟಿರ್ ನವನಾರಕರಂ ಪುರಾಣನಾರಕರಾಗಳ್: **ಮಲ್ಲಿನಾಪು,** ೧೩. ೧೦೪); [ಜೈನ] ಇಂದ್ರ, ಶ್ವೇತ, ತಾಮ್ರ, ಗಭಸ್ತಿ, ನಾಗ, ಸೌಮ್ಯ, ಗಂಧರ್ವ, ಚಾರಣ, ಭರತ ಎಂಬ ಭೂಮಿಯ ಒಂಬತ್ತು ಭಾಗಗಳು (ನವಖಂಡಾವನಿಯೊಳಗಿರ್ಪವನೀಶರ ಹೃದಯಮೆಯ್ದೆ ಶತಖಂಡಮೆನಿಪ್ಪವೊಲೆಡೆಯೆ ಭೂರಿಭೇರೀರವಮೊಗೆದುದು: **ಪಾರ್ಶ್ವನಾಪು,** ೮. ೩೦)

**ನವಗ್ರೈವೇಯಕ** – [ಜೈನ] ಸ್ವರ್ಗಗಳ ಮೇಲಿರುವ ಒಂಬತ್ತು ಕಲಾತೀತ ಸ್ವರ್ಗಗಳು: ಸುದರ್ಶನ, ಅಮೋಘ, ಸುಪ್ರಬುದ್ಧ, ಯಶೋಧರ, ಸುಭದ್ರ, ಸುವಿಶಾಳ, ಸುಮನಸ, ಸೌಮನಸ, ಪ್ರೀತಿಕರ (ಆ ಪದಿನಾಱು ಕಲ್ಪಂಗಳ ಮೇಲೆ ನವಗ್ರೈವೇಯಕಗಳಿರ್ದುವು: **ಅಜಿತಪು,** ೧೧. ೨೯ ವ)

**ನವನಾರಕ** – ನರಕವನ್ನು ಹೊಸತಾಗಿ ಪ್ರವೇಶಿಸಿದವನು (ನವಖಂಡಮಾಗೆ ಮಾಟ್ಟಿರ್ ನವನಾರಕರಂ ಪುರಾಣನಾರಕರಾಗಳ್: **ಮಲ್ಲಿನಾಪು,** ೧೩. ೧೦೪)

**ನವನಿಧಿ** – ರಾಜನ ಒಂಬತ್ತು ಅಮೂಲ್ಯ ವಸ್ತುಗಳು: ಹಯ, ಗಜ, ರಥ, ದುರ್ಗ, ಭಾಂಡಾರ, ಅಗ್ನಿ, ರತ್ನ, ಧ್ಯಾನ, ಪ್ರಮದಾ (ನವನಿಧಿಸಂಪೂರ್ಣನುಂ ಪಾಲಿತದಶದಿಶಾಚಕ್ರನುಂ ಏಕಾದಶ ರುದ್ರಾವತಾರನುಂ ದ್ವಾದಶರಾಜಾರ್ಕಪ್ರಯುಕ್ತಗುಪ್ತಚರನುಂ .. .. ವಸುಂಧರಾವಳಯಮಂ .. .. ನಿಜಭುಜಾಗ್ರದೊಳ್ ತಾಳ್ದು: **ಪಂಚತಂತ್ರ,** ೬೫ ವ); [ಜೈನ] ಚಕ್ರವರ್ತಿಯ ಬಳಿ ಇರುವ ಕಾಳ[ನೀಲ], ಮಹಾಕಾಳ, ನೈಸರ್ಪ, ಪಾಂಡುಕ, ಪದ್ಮ, ಪಿಂಗಳ, ಮಾಣವಕ, ಶಂಖ, ಸರ್ವರತ್ನ ಎಂಬ ಒಂಬತ್ತು ರತ್ನಗಳು (ನವನಿಧಿಯಿಂ ಅಷ್ಟಮಂಗಳನಿವಹಂಗಳಿಂ ಎಸೆವ

ನಾಲ್ಕು ಬಾಗಿಲ್ಗಳುಮಂ ದಿವಿಜರ್ ದೌವಾರಿಕವೃತ್ತಿವೆತ್ತು ಕಾವರ್ ಬೃಹದ್ಗದಾದಂಡಧರರ್: **ಮಲ್ಲಿನಾಪು,** ೧೪. ೧೨೬)

**ನವನೀತಚೋರ** – ಬೆಣ್ಣೆಯ ಕಳ್ಳ, ಕೃಷ್ಣ (ನವನೀತಚೋರನ ಕುಲೀನವಧೂಸ್ತನದುಗ್ಧಪೃಥುಶರೀರಂ .. .. ಪೂಜ್ಯನಾಗೆ ನಿನಗೆ ನಿಕಾರಂ: **ಜಗನ್ನಾವಿ,** ೧೭. ೨೩)

**ನವನೋಕಷಾಯ**– [ಜೈನ] ಸುಖದುಃಖಗಳಿಗೆ ಕಾರಣವಾದ ಒಂಬತ್ತು ಕಿಂಚಿತ್ ಕಷಾಯಗಳು: ಹಾಸ್ಯ, ರತಿ, ಆರತಿ, ಶೋಕ, ಭತಯ, ಜಿಗುಪ್ಸೆ, ಸ್ತ್ರೀವೇದ, ಪುಂವೇದ, ನಪುಂಸಕವೇದ (ಕ್ರೋಧಮಾನಮಾಲೋಭಮೆಂಬೆಂಟುಂ ಕಷಾಯಮುಮಂ ನವನೋಕಷಾಯಮುಮಂ .. .. ಎಡೆಯುಡುಗದೆ ಕಿಡಿಸಿ; **ಸುಕುಮಾಚ,** ೮. ೬೨ ವ), ನೋಡಿ. ನೋಕಷಾಯ

**ನವಪದ** – (ಕಂಕೇಲ್ಲಿ ಕರ್ವರ್ಗಟ್ಟುಗಳಿಂ ನಂದ್ಯಾವರ್ತದ ನವಪದಂಗಳಿಂ ಚಂಪಕದ ಚಂಚುಲೋವೆಗಳಿಂ: **ಕುಸುಮಾಕಾ,** ೧೨. ೧೫೭ ವ)

**ನವಪದಾರ್ಥ** – [ಜೈನ] ಜೀವ, ಅಜೀವ, ಪುಣ್ಯ, ಪಾಪ, ಆಸ್ರವ, ಸಂವರ, ನಿರ್ಜರ, ಬಂಧ, ಮೋಕ್ಷ ಎಂಬ ಒಂಬತ್ತು ತತ್ವಗಳು (ನವಪದಾರ್ಥಂಗಳುಂ ಪಂಚಾಸ್ತಿಕಾಯ ಷಡ್ದ್ರವ್ಯಂಗಳುಂ ಎಂಬಿವಱೊಳ್ ಆದಮಾನುಂ ಅಜಿತಮುಂ ಕುಶಲಿಕೆಯುಂ ನಂಬುಗೆಯುಂ ಆಗಿ: **ವಡ್ಡಾರಾ,** ಪು ೬, ಸಾ ೧೯)

**ನವಭೂತಭಾಷೆ** – ಹೊಸ ಪೈಶಾಚಿಕ ಭಾಷೆ, ಹೊಸ ಮರುಳುಗಳ ಭಾಷೆ (ನವಭೂತ ಭಾಷೆಯಿಂ ಕುಱುಪುವೇಟ್ಟು ತಾಂ ಅಡ್ಡಗವಿತೆಯಂ ಮಾಡಿ ಮಹಾವ್ಯವಸಾಯಂಗೆಯ್ವ ಮರುಳ್ಗವಿಗಳ್ ತಾವೇಂ ಗುಣಾಢ್ಯರಂ ಮಸುಳಿಸರೇ: **ಗದಾಯು**, ೪. ೪೨)

**ನವಮ** – ಒಂಬತ್ತನೆಯ (ನೀಂ ನವಮ ಲೋಕಪಾಲನೆ ಅವರೊಳ್: **ಕವಿರಾಮಾ,** ೩. ೯೭)

**ನವಮಂಡನ** – ಹೊಸ ಆಭರಣ (ಭವನತನು ಭಾಳಮಂಡದ ನವಮಂಡನದಿಂದಮೊಪ್ಪೆ ನಯನದ್ವಯದಿಂ ತವೆ ನೋಡಲ್ ನೆಱೆಯದೆ ನಯನವಿಹ್ವಲಂ ಹರಿ ಸಹಸ್ರಲೋಚನನಾದಂ: **ಶಾಂತಿಪು,** ೧೦. ೬೦)

**ನವಮಣಿ** – ನವರತ್ನಗಳು: ವಜ್ರ, ವೈಡೂರ್ಯ, ಗೋಮೇಧಕ, ಪುಷ್ಯರಾಗ, ನೀಲ, ಮರಕತ, ಮಾಣಿಕ್ಯ, ಹವಳ, ಮುತ್ತು (ನವಮಣಿಗಣರುಚಿಯಿಂ ಮಿಱುಗುವ ಕೂಟಾಟೋಪಮಂ ವಿಮಾನಮಂ ಅವರ್ ಯತ್ನವದಿಂದೇಱಿಮೆನಲ್ ದಿವಿಜಕುಮಾರಾಭನೇಱಿ ನಭದಿಂ ಬಂದರ್: **ಕರ್ಣನೇಮಿ,** ೩. ೧೯೪)

**ನವಮಾಲಿಕೆ** – ಜಾಜಿ ಹೂ (ಬಾಲಸಹಕಾರತರು ನವಮಾಲಿಕೆಗೆ ಅತಿಲಲಿತಪೂಗಭೂಜಾತಂ ತಾಂಬೂಲಲತೆಗೆಂಬವೊಲ್: **ಆದಿಪು,** ೪. ೨೮)

**ನವರತ್ನ** – ನವಮಣಿ (ನವರತ್ನದ ಪಂಜರದೊಳ್ ದಿವಿಜಶರಾಸನದ ಮಱೆಯನಿರಿಸಿದವೊಲ್ ಸುತ್ತುವ ಸೋಗೆಯ ಸುತ್ತಿನೊಳಾಡುವ ಕೇಕಿಯ ಭಂಗಿ ಲೋಕಮಂ ಸೋಲಿಸುಗುಂ: **ಯಶೋಧಚ,** ೩. ೩೭)

**ನವರಸ** – ಒಂಬತ್ತು ರಸಗಳು: ಶೃಂಗಾರ, ಹಾಸ್ಯ, ಕರುಣ, ರೌದ್ರ, ವೀರ, ಭಯಾನಕ, ಬೀಭತ್ಸ, ಅದ್ಭುತ, ಶಾಂತ (ಅಂಗನಾಜನಂಗಳಿಂ ಶೃಂಗಾರರಸಮುಂ .. .. ಸೇನಾಗ್ರಣಿಗಳಿಂ ವೀರರಸಮುಂ .. .. ಯಾದವಪ್ರಧಾನಸಂತಾನದಿಂ ಶಾಂತರಸಮುಂ .. .. ಪಡಿಯಱರ ತಂಡದಿಂ ರೌದ್ರರಸಮುಂ .. .. ಸಬ್ಬವಗಾಱರ ಹಾಸ್ಯರಸಮುಂ .. .. ಭೂಪಾಲಕರಿಂ ಭಯಾನಕರಸಮುಂ .. .. ವಾರ್ತಾಪರಂಪರೆಯಿಂ ಅದ್ಭುತರಸಮುಂ .. .. ದಾಯಾದ ಯಾದವರಿಂ ಕಾರುಣ್ಯರಸಮುಂ .. .. ವೈತಾಳಿಕರಿಂ ಬೀಭತ್ಸರಸಮುಂ ಇಂತು ನವರಸಂಗಳಿಂದ ಅಭಿನವರಸಂಗಳಾಗಿ ನೆಗೞುತ್ತುಮಿರೆ: **ಜಗನ್ನಾವಿ,** ೨. ೩೯ ವ)

**ನವಲೋಹಿತ** – ಹೊಸ ರಕ್ತ (ಅನ್ಯಶರಪ್ರಹಾರ ಜರ್ಜರಿತಶರೀರನಾಗಿ ನವಲೋಹಿತ ವಾರ್ಧಿಯೊಳಟ್ಟು ಬಿಟ್ಟನಂ ಕುರುಪತಿ ನೋಡಿ: **ಗದಾಯು,** ೪. ೫೩)

**ನವವಯಸ** – ತರುಣ (ಆ ಧವಳೇಕ್ಷಣೆಯೀಕ್ಷಿಸಿದಳ್ ನವವಯಸನೆನಿಪ್ಪ ವಾದ್ಯವಿದ್ಯಾಧರನಂ: **ಕರ್ಣನೇಮಿ,** ೫. ೪೩)೫. ೪೩)

**ನವವರ** – ಮದುವಣಿಗ (ನಡೆಯೆ ಚಟುಳತೆಗೆ ಕಣೆಯಂ ಸಡಿಲ್ದೊಡೆ ಅದಂ ಎಡದ ಕೆಯ್ಯೊಳ್ ಓಸರಿಸುತ್ತುಂ ನಡೆದು ಗವಾಕ್ಷಂಬರಂ ಓಗಡಿಸದೆ ನವವರನಂ ಅಬಲೆ ನೋಡಿದಳೊರ್ವಳ್: **ಶಾಂತಿಪು,** ೬. ೯)

**ನವವಿಧಪುಣ್ಯ** – [ಜೈನ] ಚರಿಗೆ ನೀಡುವಾಗ ಅನುಸರಿಸಬೇಕಾದ ಒಂಬತ್ತು ಕ್ರಮಗಳು: ತ್ರಿಪ್ರದಕ್ಷಿಣೆ, ಉಚ್ಚಾಸನ ಸಮರ್ಪಣೆ, ಪಾದಪೂಜೆ, ಅರ್ಚನೆ, ಪ್ರಣಾಮ, ವಚನಶುದ್ಧಿ, ಕಾಯಶುದ್ಧಿ, ಮನಶ್ಶುದ್ಧಿ, ಏಷಣಾಶುದ್ಧಿ (ಇದಿರ್ಗೊಳ್ವುದು ಕಾಲ್ಗರ್ಚುವುದು ಉದಾತ್ತಮಪ್ಪೆಡೆಯೊಳ್ ಇರಿಪುದು ಎಱಗಿರ್ಪುದು ಕರಣಶುದ್ಧವಡೆವುದು ಪದೆದು ಅನ್ನವನೀವುದು ಎಂಬ ನವವಿಧಪುಣ್ಯಂ: **ಆದಿಪು,** ೪. ೯೬)

**ನವವಿಧಬ್ರಹ್ಮಚರ್ಯ** – [ಜೈನ] ಮನಸ್ಸು, ದೇಹ, ಮಾತುಗಳಲ್ಲಿಯೂ ಕೃತ, ಕಾರಿತ, ಅನುಮೋದನ ಎಂಬ ಬಗೆಗಳು (ಅಷ್ಟಮಲವ್ಯಪೇತನುಂ ನವವಿಧ ಬ್ರಹ್ಮಚರ್ಯೋಪೇತನುಂ .. .. ಆಗಿ: **ಅಜಿತಪು,** ೩. ೧ ವ)

**ನವವಿಧಭಕ್ತಿ** – ಭಕ್ತಿಯ ಒಂಬತ್ತು ಬಗೆಗಳು – ಶ್ರವಣ, ಕೀರ್ತನ, ಸ್ಮರಣ, ಪಾದಸೇವನ, ಅರ್ಚನ, ವಂದನ, ದಾಸ್ಯ, ಸಖ್ಯ, ಆತ್ಮನಿವೇದನ (ಸವೆಯದೆ ಮಾಡಿ ಮಾಡಿ ತಣಿವೈದದು ಪಾಣಿ ತದಂಘ್ರಿಸೇವೆಯಂ ನವವಿಧಭಕ್ತಿಯಿಉಕ್ತ ಶರಣಾವಳಿಗೆನೆ ಸೈಪದೆಂತುಟೋ: **ರಾಜಶೇವಿ,** ೧೪. ೧೬೮)

**ನವವಿವರ** – ನವದ್ವಾರ: ಕಣ್ಣುಗಳು, ಕಿವಿಗಳು, ಮೂಗಿನ ಹೊಳ್ಳೆಗಳು, ಬಾಯಿ, ಮೂತ್ರದ್ವಾರ, ಗುದದ್ವಾರ (ನವವಿವವರಾವೃತ ಪೂತಿದ್ರವ ಸ್ವಾವೃತವಿಮಿಶ್ರಮಾಂಸೋಪಚಿತಂ ಅಧ್ರುವಂ ಅಸುಚಿತ್ರಭ್ರಮಿತಾಸ್ಥಿವಹಂ ಮೆಯ್ ಬಗೆವೊಡಿಂತು ಕಿಸುಗುಳಮಾದಂ: **ಕವಿರಾಮಾ,** ೩. ೧೯೫)

**ನವಸಿಗ** – ಪರಪೀಡಕ (ಗಪ್ರತ್ಯಯಕ್ಕೆ: ಮಾತುಗಂ, ಬೂತುಗಂ, ಕಂತೆಗಂ, ಬೊಂತೆಗಂ, ಬೀದಿಗಂ, ಸಟೆಗಂ, ನವಸಿಗಂ, ಎಡಗಂ: **ಶಬ್ದಮದ,** ೨೧೨ ಪ್ರ)

**ನವಸೂತಿ** – ಎಳಗಂದಿ, ಹೊಸದಾಗಿ ಕರು ಹಾಕಿದ ಹಸು (ಧೇನು ನವಸೂತಿ: **ಅಭಿಧಾವ,** ೧. ೧೫. ೭)

**ನವಹಾಟಕ** – ಅಪರಂಜಿ (ಚೆಲ್ವೆನಿಪ್ಪ ನವಹಾಟಕ ನಿರ್ಮಿತಮಪ್ಪ ಕೋಂಟೆ ಮುಟ್ಟಿರೆ ಮುಗಿಲಂ: **ಚಂದ್ರಪ್ರಪು,** ೧. ೧೧೪)

**ನವಹಾರಿದ್ರಕ** – ಹೊಸ [ಹಸಿ] ಅರಿಸಿನ (ಜೀರಕಾದ್ರವ ನವಹಾರಿದ್ರಕವಾಟೋತ್ಕರಂ ಉನ್ನಿದ್ರಿತ ಕಮಲಾಕರಂಗಳಿಂ ಸೊಗಯಿಸುಗುಂ: **ಮಲ್ಲಿನಾಪು,** ೨. ೩೭)

**ನವಾನುದ್ದಿಸೆಗಳ್** – ಒಂಬತ್ತು ಅನುದ್ದಿಸೆಗಳು, ಇವು ಗ್ರೈವೇಯಕಗಳ ಮೇಲಿರುವ ಸ್ವರ್ಗಗಳು (ಲಚ್ಚಿ ಮಹಾಲಚ್ಚಿ ಮಾಳಿನಿ ವೈರೆ ವೈರೋಚನೆ ಸೋಮೆ ಸೋಮರೂಪೆ ಅಂಕೆ ಪಳಿಕೆ ಅಯಿಚ್ಚೆಯೆಂಬ ನವಾನುದ್ದಿಸೆಗಳೊಳಂ: **ವಡ್ಡಾರಾ,** ಪು ೯೭, ಸಾ ೩೦ ಮತ್ತು ಪು ೯೮ ಸಾ ೧)

**ನವಾಸಾರ** – ಹೊಸ ಮಳೆ (ಮೇಘನಿಕಾಯಂಗಳಿಂ ಏಂ ಬೞಲ್ದೆೞಗಿತೋ ರೂಪ್ಯಾದ್ರಿಯೊಳ್ ಪುಷ್ಪ ನೀರ ನವಾಸಾರದಿಂ: **ನೇಮಿನಾಪು,** ೩. ೧೨)

**ನವಿರ್** – ಕೂದಲು (ಸವನಿಸೆ ಹಮ್ಮದಂ ನಡುಪಕಾಲ್ ಬೆವರಂ ಬಿಡುತಿರ್ಪ ಗಲ್ಲಂ ಉಣ್ಮುವ ನವಿರ್: **ಕಬ್ಬಿಗಕಾ,** ೨೪೯)

**ನವಿರೇೞು** – ಕೂದಲು ಮೇಲೇಳು, ಪುಲಕಗೊಳ್ಳು (ರತ್ನಶೇಖರನಾಗಳ್ ನವಿರೇೞಿದ ತನುವಂಕದ ಬವರಮನೊಳಕೊಳ್ವ ಮಾಸವಳನಂ ಪೋಲ್ತಂ: **ಪುಣ್ಯಾಸ್ರ,** ೧. ೬೭)

**ನವಿರ್ಗೆದಱ್** – ಪುಳಕಗೊಳಿಸು (ಪುದಿದ ಹಿಮಂ ನವಿರ್ಗೆದಱೆ ಮೆಯ್ ಮಿಗೆ ಕೋಡೆ .. .. ಶಿತಮದೇಂ ಪ್ರಭೂತಮೋ: **ಕುಸುಮಾಕಾ,** ೭. ೧೪)

**ನವಿಲ್** – ಮಯೂರ (ದೇವತೆ ನವಿಲ ರೂಪದಿಂದೆತ್ತಿಕೊಂಡು ಬೆನ್ನೊಳಿಟ್ಟು .. .. ಪೋದೊಡೆ: **ವಡ್ಡಾರಾ,** ಪು. ೧೧೮. ಸಾ. ೩)

**ನವಿಲಾಟ** – ನವಿಲ ನರ್ತನ ನವಿಲಾಟಂ ಹಂಸೆಯ ನಡೆ ತವೆ ಮಂದಾನಿಳನ ಸುಗತಿ .. .. ಆ ಬಾಲಕಿಯ ಮಧುರಮೃದುಪದಗತಿಯೊಳ್: **ಗಿರಿಜಾಕ,** ೩. ೧೦೮)

**ನವಿಲುಯ್ಯಲ್** – ನವಿಲಿನಾಕಾರದ ಉಯ್ಯಾಲೆ (ಮದನ ಮಂಗಳಾಗಾರದ್ವಾರಮಕರತೋರಣದಂತಿರ್ದ ನವಿಲುಯ್ಯಲ ಕೆಲಕ್ಕೆ ವಂದು: **ಚಂದ್ರಪ್ರಪು,** ೮. ೪೫ ವ)

**ನವಿಲ್ವಾಣತಿ** – [ನವಿಲ್+ಬಾಣತಿ] ಹೊಸತಾಗಿ ಮರಿಹಾಕಿದ ನವಿಲು (ನವಿಲ್ವಾಣತಿಯ ಬೆನ್ನನೇಱೆ ಮಂಡೆಯ ಚಂಡಿಕೆಯಂ ಕರ್ಚಿ ಸೆಳೆವ ಸೋಗೆಯ ಮಱೆಯ ಮುದ್ದುತನಮಂ: **ನೇಮಿನಾಪು,** ೧. ೯೨ ವ)

**ನವೀನ** – ಹೊಸತು (ನವ್ಯಂ ನೂತ್ನಂ ನೂತನಂ ಅಭಿನವಂ ಎನಿಪ್ಪುದೞೆಗೆ ನವೀನಂ: **ಅಭಿಧಾವ,** ೨. ೧. ೪೬)

**ನವೀನಚೀನ** – ಹೊಸ ರೇಷ್ಮೆ ಬಟ್ಟೆ (ಪಡೆದನುಡಲ್ ನೃಪಂ ಸತಿಯ ಮೆಯ್ವೆಳಗೆಂಬ ನವೀನಚೀನಮಂ: **ಚಂದ್ರಪ್ರಪು,** ೭. ೭೭)

**ನವ್ಯ** – ಹೊಸತಾದ(ನವ್ಯಂ ನೂತ್ನಂ ನೂತನಂ ಅಭಿನವಂ ಎನಿಪ್ಪುದೞೆಗೆ ನವೀನಂ: **ಅಭಿಧಾವ,** ೨. ೧. ೪೬)

**ನಷ್ಟರಾಜ** – ರಾಜ ಇಲ್ಲವಾಗುವುದು (ರಾಜ್ಯಂ ನಷ್ಟರಾಜಮಾದದರ್ಕೆ ಮಱುಗಿ ಯೋಜನಗಂಧಿ ಸಿಂಧುಪುತ್ರನನಿಂತೆಂದಳ್: **ಪಂಪಭಾ,** ೧. ೮೦ ವ)

**ನಸಿ** – ಕೃಶವಾಗು, ಸವೆದು ಹೋಗು (ಒಡಲುಳ್ಳನಿತುಂ ನಸಿದೊಡೆ ಬಿಡಲಾಱಂ ತನ್ನಂ: **ಸಮಯಪ,** ೫. ೪)

**ನಸು** – ಸ್ವಲ್ಪ (ನಸುವೆಳ್ಪು ಮಂದಮಂದಸ್ಮಿತದಿಂ ಪಸರಿಸುತಿರೆ ಯುವರಾಜಂ ಬೆಸಗೊಂಡಂ ಪ್ರೀತಿಯಿಂದೆ: **ಕಾದಂಸಂ,** ೫. ೭೭)

**ನಸುಕುನ್ನಿ** – ಒಂದು ಗಿಡ ಮತ್ತು ಕಾಯಿ (ಆ ಶ್ರಾವಕಂ ಒಂದೆಡೆಯೊಳ್ ನಸುಕುನ್ನಿಯಂ ಕಂಡು ಇದೆನ್ನ ದೈವಮೆಂದದಱ ಪ್ರದಕ್ಷಿಣಂಗೆಯ್ಯೆ: **ಚಾವುಂಪು,** ಪು ೪೫೦. ಸಾ. ೩)

**ನಸುತೇಂಕುದೇಂಕು** – ಸ್ವಲ್ಪ ತೇಲಾಡು (ಬೆಳಗುವ ತಾರಹಾರನಿಕರಂ ಆ ಕಡಲೊಳ್ ನಸುತೇಂಕುದೇಂಕಿ ಬೊಬ್ಬುಳಿಕೆಗಳಂತೆ ತೋಱಿದುವು: **ಆದಿಪು,** ೭. ೯೮)

**ನಳಿದೋಳ್** – ನೀಳವಾದ ತೆಳ್ಳನೆಯ ತೋಳು (ನಳಿತೋಳೋಳ್ ತೊಡರ್ದೊಂದು ತೋಳ ಮಣಿವೋಲ್: **ಆದಿಪು,** ೧೨. ೩೯)

**ನಸುಮಾಸು** – ನಸುಮಸುಳ್ (ನಸುಮಾಸಿ ಪಾಡೞಿದ ರೂಪಿನೊಳ್ ಉಣ್ಮುವ ಗಾಡಿ ನಾಡೆ ಕಣ್ಗೆಡರೆ: **ಪಂಪಭಾ,** ೧೩. ೯೯)

**ನಸೆ** – ಬೆದೆ, ಕಾಮಾತುರ (ಪೊಸ ಮದದದಾನೆಯಂ ನಸೆಯ ಪೆರ್ಬಿಡಿ .. .. ಪೊರ್ದಿ ಶೋಭಿಸುವವೊಲ್; **ಶಾಂತಿಪು,** ೭. ೨೯)

**ನಸೆಮಸಪು** – ಕಾಮಾತುರತೆ (ನಸೆಮಸೆಪೊಂದೆ ನುಣ್ಪಸಲೆಯೊಳ್ ಸುಸಿಲಾಥೆಸೆವೇಣನಂ ವಿಲಂಬಿಸದಿಸಲೆಂದು ಬಂದನ ಪುಳಿಂದನ ವಕ್ಷಮನುದ್ಗಮಾಸ್ತ್ರದಿಂದಿಸೆ ಕುಸುಮಾಸ್ತ್ರಂ: **ರಾಜಶೇವಿ,** ೫. ೧೦೫)

**ನಸೆಯಳಿಪು** – ಕಾಮಾತುರ (ಮಸೆಯಳಿಪಿಂ ಪ್ರಿಯಾನನಮಂ ಈಕ್ಷಿಸಲುಜ್ಜುಗೆಯಾಗಿ ತಾನೆ ಲಜ್ಜಿಸಿ: **ಸೂಕ್ತಿಸುಧಾ,** ೬. ೮೨)

**ನಸೆಯಿಚ್ಚೆಯಾಗು** – ಕಾಮೇಚ್ಛೆಯುಂಟಾಗು (ನಸೆಯಿಚ್ಚೆಯಾದೊಡೆ ಒಡಗೂಡಿ ಬೞಲ್ದೊಡೆ ಕರ್ಣವಾತಮಂ ಪಸರಿಸಿ ತನ್ನ ಕೈಪಿಡಿಯವೊಳ್ ಪಿಡಿಯಂ ಪಿಡಿದಿರ್ದುದೊಂದಿಭಂ: **ಚಂದ್ರಪ್ರಪು,** ೫. ೬೪)

**ನಸೆವಣಕ** – ಬೆದೆಗೆ ಬಂದ ಪ್ರಾಣಿ (ನಸೆವಣಕದೆ ಬೆನ್ನಂ ಸಂಧಿಸುವದುಂ ಅಸಮಸದಿನೆಡೆಗೆ ಪುಗಲೊಡನೆ: **ಚಂದ್ರಪ್ರಪು,** ೨. ೨೪)

**ನ ಹಿಂಸ್ಯಾತ್ ಸರ್ವಭೂತಾನಿ** – ಎಲ್ಲ ಪ್ರಾಣಿಗಳಲ್ಲಿಯೂ ಹಿಂಸೆ ಕೂಡದು (ನ ಹಿಂಸ್ಯಾತ್ ಸರ್ವಭೂತಾನಿ ಎಂದು ಅಕಳಂಕತರ್ಕಪ್ರತಿಷ್ಠಾನಿಶ್ಚಯ ಜೈನಸಿದ್ಧಾಂತವಾದಿಗಳುಂ: **ಪಂಚತಂತ್ರ,** ೧೧೭ ವ)

**ನಳನಳಿಕೆವೆೞು** – ಲಾಲಿತ್ಯವನ್ನು ಪಡೆ (ನಳನಳಿಕೆವೆತ್ತ ವಿಮಳಕೋಮಳತ್ರಯವಿಳಸಿತ ಸರಳಶಾಖಾನಿಕಾಯಾಕಲಿತ ಬಿಲ್ವವೃಕ್ಷ: **ಶಬಶಂವಿ,** ೨. ೭೮ ವ)

**ನಳನಳಿಸು** – ಕಾಂತಿಗೊಳ್ಳು (ನಳನಳಿಸಿ ಬಳೆದು ವಿರಹಾನಳನಳುರ್ಗುಮುಮಾ ವಿಳಾಸರಸದ ತರಂಗಾಳಿಗಳನಿೞೆಸುವ ಮಧ್ಯದ ವಳಿಗಳನೀಕ್ಷಿಸಿದ ನೀಱರಂ ರುಕ್ಮಿಣಿಯಾ: **ಜಗನ್ನಾವಿ,** ೧೦. ೨೭)

**ನಳಿ** – ಕೋಮಲವಾದ; ಬಾಗು (ಕಂಗಳೊಳ್ ಕೆಂಪಡರೆ ಕಾಲ್ ಬಳೆಯೆ ನಡು ನಳಿಯೆ: **ಲೀಲಾವತಿ,** ೧೧. ೧೧); ದಣಿವುಗೊಳ್ಳು (ಶೇಷಕಂಠ ಕಠಿನಾಸ್ತಿಶ್ರೇಣಿ ನುರ್ಗಾಗದಿರ್ದುದೆ ಕೂರ್ಮೋನ್ನತ ಕರ್ಪರಂ ನಳಿದು ಬೆನ್ನಂ ಪತ್ತದೇಂ ಮಾಣ್ದುದೇ: **ಪಂಪರಾ,** ೫. ೮೭)

**ನಳಿನದಳಪುಟ** – ತಾವರೆಯೆಲೆಯ ದೊನ್ನೆ (ನಳಿನದಳಪುಟದೆ ನೀರಂ ನಳಿನಗಳಿವು ರೂಪುಗೊಂಡು ಸುರಿದಪುದೆನೆ ಕಂಗೊಳಿಪ ಮರಕತದ ಕಳಶಂಗಳ ಜಲಮಂ ಸುರಿದರಮಳ ಕಮಳಾನನೆಯರ್: **ಕಾದಂಬ,** ೧. ೬೩)

**ನಳಿನಳಿ** – ಬಾಗಿ ಬಾಗಿ (ನಳಿನಳಿದು ನಡೆವ ಹಯದಟೆಯಳವಂ ಕಂಡುದಱಿಂ ಅಧಿಕಬಲ ಮುನಿಪ ಧೃತಾತುಳ ಗುಣಭಾರಮನಾಂಪನಿತಳವಿಲ್ಲದೆ ಕಿಡುವರಲ್ತೆ ದುಷ್ಷಮಯತಿಗಳ್: **ಆದಿಪು,** ೧೫. ೩೧)

**ನಳಿನೀಪತ್ರಪುಟ** – ತಾವರೆ ಎಲೆಯ ದೊನ್ನೆ (ಪೌರರ್ ಮಾಡಿದ ನಳಿನೀಪತ್ರಪುಟಪ್ರಸಾದಿತ ಸಾರವಜಳ ಪಾದಾಭಿಷೇಕನದೊಳಂ: **ಆದಿಪು,** ೮. ೬೯ ವ)

**ನಳಿಮೊಗ** – ನಳನಳಿಸುವ ಮುಖ (ಪೊದಳ್ದೆಳಸುವ ಬಾಯ್ ಬಳಸುವ ಕಣ್ ಮಿಳಿರ್ವ ಕುರುಳ್ ನಳಿಮೊಗಮೆನೆ ಸೊಬಗಿವಳ್ಗೆ ನಾಟ್ಟಿರ್ತನಮೇ: ೪. ೪೪)

**ನಱುಂಕು** – ಬೆಳವಣಿಗೆ ಕುಂಠಿತಗೊಳ್ಳು (ತಾಱೆದ ಅಂಕಿದ ನಱುಂಕಿದ ಕೊಂಬು ಒಣಗಿರ್ದ ಪೊಟ್ಟೆವೋದ ಒಱಗಿದ ವೃಕ್ಷದಿಂದ ಅಱೆವುದು ಆಯೆಡೆಯೊಳ್ ಜಳಮಾಗದೆಂಬುದಂ: **ಲೋಕೋಪಕಾ,** ೫. ೪)

**ನಱುಂಬು** – ಇರುಕು (ತುಂಗಕೂಟಸಹಸ್ರಂ ದಿವಮಂ ನಱುಂಬಿದವೊಲಂತಿರ್ಪನ್ನೆಗಂ ಸುತ್ತಲುಂ ದೆಸೆಗಳ್ ಪೊಂಗಳಸಂಗಳಿಂ ತೊಳಗುಗುಂ: **ವರ್ಧಮಾಪು,** ೭. ೫೮)

**ನಱುಗಂಪು** – ಸುವಾಸನೆ (ಮುಗುಳ್ಗಳ ಮಾಲೆ ಸುಯ್ಯ ನಱುಗಂಪಿನೊಳ್ ಇರ್ಮಡಿ ಗಂಮನಾಗೆ: **ಆಚವರ್ಧ,** ೧. ೬೪)

**ನಱುದಂಬುಲ** – ಸುವಾಸಿತ ತಾಂಬೂಲ (ಬಾಯೊಳೆ ಬಾಯನಿಟ್ಟು ನಱುದಂಬುಲನಿಕ್ಕುವ ಮುಗ್ಧೆ: **ಲೀಲಾವತಿ.** ೨. ೯೨)

**ನಱುನೆಯ್** – ಸುವಾಸಿತವಾದ ತುಪ್ಪ (ನಱುನೆಯ್ಯಾೞೆದ ಸಿರಿಯಂ ಮೆಱೆಯಲೆ ಪೊಂಗಳನೆ ಗೋಪಿಯರ್ ಕೆದಱೆದವೋಲ್ .. .. ನೆಗ್ಗಿಲ ಪೂಗಳ್ .. .. ಕರಮೆಸೆದಿರ್ಕುಂ: **ಲೀಲಾವತಿ,** ೫. ೯೯)

**ನಱುವಂಡು** – [ನಱು+ಬಂಡು] ಸುವಾಸಿತ ಮಧು (ಮೊಗಮಿರಿದು ಕಾರ್ದು ಚಪ್ಪಲರ್ವಿನೆಗಂ ಸಿಪ್ಪಿಟ್ಟು ಕರೆದು ಕೊಂಡುವು ಸಪ್ಪದಮುಪ್ಪಳದಿನೊಱೆವ ನಱುವಂಡುಗಳಂ: **ಲೀಲಾವತಿ,** ೯. ೮೬)

**ನಱುವಲ್** – ಶ್ರೀಪರ್ಣ ಎಂಬ ಗಿಡ (ಸುಗಂಧಿ ಕಬ್ಬಳಿ ನಱುವಲ್ ಕುರುಟಿಗೆ ಪಾಗಲ್: **ತ್ರಿಷಷ್ಟಿಪು,** ೨೭. ೧೯)

**ನಱುಸುಯ್** – ಪರಿಮಳಭರಿತ ಉಸಿರು (ನಱುಸುಯ್ಯ ಕಂಪಿನಿಂಪಿಂಗೆ ಎಱಗುವ ಮದಭೃಂಗಮಾಲೆ ಬಿಟ್ಟಿರುತಿರೆ ಪೂತೆಱಗಿದ ಚಂಪಕಲತೆಯಂ ನೆಱೆ ಪೋಲ್ತಳ್ ವಿರಹಿದಹನ ದಾಹಿನಿಯಾಗಳ್: **ಶಾಂತೀಶ್ವಪು,** ೫. ೧೧೩)

**ನಾಂಟು** – ನಾಟು, ಚುಚ್ಚಿಕೊ (ಜವನಾಳಂತಪಪ್ ಕಣೆ ರೋಮರೋಮಂದಪ್ಪದೆ ನಾಂಟಿದುವು: **ಪಂಪರಾ,** ೧೩. ೭೧)

**ನಾಂದಿ** – ಶುಭಕಾರ್ಯದ ಆರಂಭ, ನಾಟಕದ ಆರಂಭ (ನಾಂದೀ ಪ್ರರೋಚನಾ ಪ್ರಸ್ತಾವನಾ ಇತಿವೃತ್ತ ಸಂಧಿ ಪ್ರವೇಶ (ನಿಷ್ಕಂಭ ಕಪೋತಿಕಾ ವ್ಯಾಳಿಕಾದಿ ಲಕ್ಷಣೋಪೇತಂಗಳಪ್ಪ ನಾಟಕಂಗಳೊಳಂ: **ಪಂಪಭಾ,** ೨. ೩೪ ವ)

**ನಾಂದಿಸು** – ಒದ್ದೆಮಾಡು (ಪ್ರೇಮಪೀಯೂಷದಿಂ ಪಿರಿದುಂ ನಾಂದಿಸುವಂತೆ ಕಾಂತೆ ಪದೆದಾಗಳ್ಪೊಯ್ದಳ್ ಅಂತಾ ಮಹೀವರಶೋಭಾಂಗದ ಮೇಲೆ ಲೀಲೆಯೊದವಿಂ ಕರ್ಪೂರಪೂರಾಂಬುವಂ: **ಶಾಂತೀಶ್ವಪು,** ೧೦. ೧೭೭)

**ನಾಂದೀಪದ** – ಮಂಗಳಾಚರಣೆಯ ಹಾಡು (ರಸಮಂ ಭಾವಮಂ ಅರ್ಥಮಂ ರಚನೆಯಂ ಕಾವ್ಯಜ್ಞರ್ ಆರಯ್ದು ಭಾವಿಸಿ ನಾಂದೀಪದ ನಾಯಕಾಭ್ಯುದಯ ಪರ್ಯಂತಂ ಬರಂ ಕೂಡೆ ಶೋಧಿಸಿ ನೋಟ್ಟಿಕ್ಕೆ ಈ ರಘುವಂಶರಾಮಕೃತಿಯೊಳ್: **ಪಂಪರಾ,** ೧. ३३)

**ನಾಂದೀಮುಖ** – ಪಿತೃಗಳ ಆವಾಹನೆ, ಆರಂಭ (ನಾಂದೀಮುಖಮಂ ನಿರ್ವರ್ತಿಸಿ ಶುಭಲಕ್ಷಣಲಕ್ಷಿತನುಂ ಸನ್ನಾಹಕರ್ಮನಿರ್ಮಿತನುಂ ವಿಜಯಗಜಮುಮಂ .. .. ಅರ್ಚಿಸಿ: **ಪಂಪಭಾ,** ೧೦. ४೬ ವ)

**ನಾಂದೀವಿಧಿ** – ನಾಂದಿ (ಪುಷ್ಪಾಂಜಲಿವಿಕ್ಷೇಪಣಾದಿ ನಾಂದೀವಿಧಿಯಂ ನಿರ್ವರ್ತಿಸಿ: **ಆದಿಪು,** ೭. ೧೧४ ವ)

**ನಾಂದು** – ನೆನೆಯಿಸು, ತೋಯಿಸು (ಸರೋವರಶೀಕರಂಗಳಿಂ ನಾಂದು ನವಪ್ರಸೂನತರುಶಾಖೆಗಳಲ್ಲಿಯೆ ನಿಂದು: **ಪಾರ್ಶ್ವನಾಪು,** ३. ४५)

**ನಾಂಬು** – ಆಲಸ್ಯಮಾಡು (ನಾಂಬು–ಆಲಸ್ಯೇ: **ಶಬ್ದಮದ, ಧಾ** ४೯೦)

**ನಾಕ** – ಸ್ವರ್ಗ, ಆಕಾಶ (ನಾಕಂ ದಿವಿಜಾಧಿವಾಸಮುಂ ಘನಪಥಮುಂ: **ಅಭಿಧಾವ,** ३. ೧. ೨೦)

**ನಾಕಚ್ಯುತ** – ಸ್ವರ್ಗದಿಂದ ಇಳಿದವನು (ನಾಕಚ್ಯುತಂ ಶ್ರೀಕಂಠನಾಗಿ ಪದಚ್ಯುತೇಂದ್ರದರ್ಶನಜನಿತಜತಿಸ್ಮರಂ: **ಪಂಪರಾ,** ೧೦. ೧೧೬ ವ)

**ನಾಕಜ** – ದೇವತೆ (ಕೇಶಾಕೇಶಿಯಿಂದಂ ಸಬಳಿಗರ್ ಉಱೆ ಕಾದುತ್ತಿರಲ್ ನಾಕಜರ್ ಕಂಡು: **ತ್ರಿಷಷ್ಟಿಪು,** ೨४. ३೧೧)

**ನಾಕಜನಾಥ** – ದೇವೇಂದ್ರ (ಸ್ಫಟಿಕಕಳಶಮಂ ತೀವಿ ದಿವ್ಯಾಂಬುವಿಂ ನಾಕಜನಾಥಂ ಮಜ್ಜನಕೆ ಎಂದೆತ್ತಿದ ತೆಱದೆ ಸುಧಾಸೂತಿ ಕಣ್ಗೆಡ್ಡಮಾದುದು: **ಆದಿಪು,** ೧೨. ೮)

**ನಾಕಜಮಂತ್ರಿ** – ಬೃಹಸ್ಪತಿ (ನಾಕಜಮಂತ್ರಿ ಪ್ರಕಟೋದಯಂ ನೆಗಟ್ವೆನೆಗಂ ತನ್ನುಚ್ಚದೊಳ್ ಪುಟ್ಟಿದಳ್: **ಅಜಿತಪು,** ೧೨. ೫೨)

**ನಾಕತರಂಗಿಣಿ** – ದೇವನದಿ (ನಾಕತರಂಗಿಣಿಪ್ರವಾಹದೊಳ್ .. .. ಪೊಳೆಯುತಿರ್ಪುದು ಚಂಡಮರೀಚಿಮಂಡಲಂ: **ಜಗನ್ನಾವಿ,** ೮. ೧)

**ನಾಕನಾಯಕ** – ದೇವೇಂದ್ರ (ನಾಕನಾಯಕಂ ತ್ರಿಲೋಕಗುರು ಸವಿತ್ರಿಗೆ ಸೀಯನಪ್ಪ ಗೇಯದಿಂ ಪೊಟ್ಟುಗಳೆಯಲ್ ನಿಯಮಿಸಿದಂ: **ಶಾಂತಿಪು,** ೯. ೧೬೮ ವ)

**ನಾಕಪ್ರಭವ** – ಸ್ವರ್ಗದಲ್ಲಿ ಹುಟ್ಟಿದ (ನಾಕಪ್ರಭವೋದ್ಯನ್ಮಾಲೆಯಂ ಭೂಪತಿಯನೊಸೆದು ಒಱಲ್ದರ್ಚಿಸಿದಂ ಸುರೇಂದ್ರಂ: **ಶಾಂತಿಪು,** ೯. ೯३)

**ನಾಕಾನೋಕಹ** – ದೇವಲೋಕದ ವೃಕ್ಷ, ಕಲ್ಪವೃಕ್ಷ (ಅದು ಮುಕ್ತಿಪುರಕ್ಕೆ ಗೋಪುರಮದು ನಾಕಾನೋಕಹಕ್ಕೆ ಫಳಮಂಜರಿ: **ಚಂದ್ರಪ್ರಪು,** ೧೧. ೨೯)

**ನಾಕಿ** – ದೇವತೆ (ನಾಕಿಗಣಂ ಸರ್ವಸ್ವಮಂ ಮೇಣ್ ಕವರ್ದುದಕಟ ಭಂಗಕ್ಕೆ ಪಕ್ಕಾದೆಂ .. .. ಅಂತೆ ತೋರ್ಕುಂ ಸಮುದ್ರಂ: **ಶಬರಶಂ,** ೧. ३೨)

**ನಾಕಿನಿ** – ದೇವತೆ (ನಾಕಿನೀನಿಕರ ಮಕುಟತಟಪ್ರಾಂತ ಪದ್ಮರಾಗಮಣಿ ಪ್ರಭಾಪಟಲದಿಂ ದಿವಸಕರ ಮರೀಚಿ ಮಾಳೆ ಮಾಂಸಳಮಾಗೆಯುಂ: **ಲೀಲಾವತಿ,** ४. ೮೬ ವ)

**ನಾಕೌಕ** – [ನಾಕ+ಓಕ] ದೇವತೆಗಳ ನಿಳಯ, ಸ್ವರ್ಗ (ನಾಕೌಕರ್ ಬಂದದಱೊಳನುಭವಿಪ್ಪುದಱೆಂದ: **ಶಾಂತಿಪು,** ೯. ೧३೭)

**ನಾಗ** – ಹಾವು (ಉರಗಂ ಭೋಗಿ ಸರೀಸೃಪಂ ಫಣಿ ಭುಜಂಗಂ ಚಕ್ರಿ ದರ್ವೀಕರಂ ಹರಿಯುಂ ಕುಂಡಲಿ ಕಾದರವೇಯಂ ಅಹಿ

ನಾಗಂ ವ್ಯಾಳನಾಶೀವಿಷಂ ಪುರುಪೃಷ್ಠಂ ಫಣಭೃತ್ಪ್ರದಾಕು ಭುಜಗಂ ಕುಂಭೀನಸಂ ಪನ್ನಗಂ ಮರುದಾಶಂ ಶನಿ ಗೂಢಪಾತ್ ವಿಷಧರಂ ಸರ್ಪಂ ದ್ವಿಜಿಹ್ವಾಹ್ವಯಂ: **ಅಭಿಧಾವ,** ೧. ೩. ೭); ನಾಗರ ಹಾವು (ನಾಗರ ಖಂಡಂಗಳಂ ಆ ನಾಗರ ಖಂಡದೊಳೆ ತೊಡರೆ ನರಂ ಇಸುವುದುಂ ನಾಗರ ಖಂಡಂಗಳುಮಂ ನಾಗರ ಖಂಡಮುಮಂ ಅಳುರ್ದುಕೊಂಡಂ ದಹನಂ: **ಪಂಪಭಾ,** ೮೯); ಸೀಸ ಎಂಬ ಲೋಹ (ತ್ರಪು ವಂಗಂ ಸೀಸಂ ಸೀಸಪತ್ರಕಂ ನಾಗಂ ಅಱೆಗೆ ಸೌರಾಷ್ಟ್ರಕಂ: **ಅಭಿಧಾವ,** ೧. ೬. ೯); ನಾಗಸಂಪಿಗೆ (ನಾಗ ನಕ್ತಮಾಲವನದ ಪೂಗವನ ತಮಾಲವನದ ಲೀಲೆ ಕರಮೆ ಕಣ್ಗೆವರ್ಕುಂ: **ಅಜಿತಪು,** ೧. ೮); ಆನೆ (ಅಜೇಯಂ ನಿರ್ದಯಂ ಅನುಪಮ ನಖಮನಿರ್ಧಾರಿತ ವನ್ಯನಾಗಸಂಘಂ ಸಿಂಗಂ: **ಪಂಚತಂತ್ರ,** ೧೪೩); ಗಜಕೇಸರ ಅಥವಾ ನಾಗಸಂಪಿಗೆ ಹೂ (ನಾಗಂ ಗಜಕೇಸರಂ: **ಅಭಿಧಾವ,** ೧. ೮. ೭)

**ನಾಗಕೇತನ** – ಸರ್ಪಧ್ವಜ, ದುರ್ಯೋಧನ (ಹಲಾಯುಧ ಕೃಪ ಅಶ್ವತ್ಥಾಮರುಂ ನಾಗಕೇತನನೊಳ್ ನಾಳೆಯೆ ಕೂಡಿ ಬರ್ಪರ್: **ಗದಾಯು,** ೬. ೩೯)

**ನಾಗಚಂಪಕ** – ಹೇಮಪುಷ್ಪ, ನಾಗಸಂಪಿಗೆ (ನಾಗಚಂಪಕ ಕುಟ್ಮಲಾನುಕಾರಿ ನಾಸಾಪುಟವಿಕಸಿತ ಮುಕುಲಶೋಭಿತ ಚಂಪಕಗಳಂ: **ಸುಕುಮಾಚ,** ೯. ೧೦೭ ವ)

**ನಾಗತಾಣ** – [ನಾಗಸ್ಥಾನ] ನಾಗರಕಲ್ಲುಗಳಿರುವ ಜಾಗ (ನಾಗತಾಣಕ್ಕೆ ಪೋಗಿ ನಾಗರನರ್ಚಿಸಿ ಪೊಡೆವಟ್ಟು ಸೂರ್ಯಮಿತ್ರಾಚಾರ್ಯರುಂ ಅಗ್ನಿಭೂತಿರುಷಿಯರಂ ಕಂಡು ಜಾತಿಸ್ಮರೆಯಾಗಿ: **ವಡ್ಡಾರಾ,** ಪು. ೧೨. ಸಾ. ೨೨)

**ನಾಗದೇವಾಂಗನೆ** – ಅತ್ತಿಮಬ್ಬೆ (ಮಂಗಳನಿಳಯನ ಪದಪದ್ಮಂಗಳನರ್ಚಿಸಿದರ್ ಅಷ್ಟವಿಧದರ್ಚನೆಯಿಂ ಮಂಗಳಧಾರಿಣಿಯರ್ ಶಕ್ರಾಂಗನೆಯುಂ ನೆಗಟ್ದ ನಾಗದೇವಾಂಗನೆಯುಂ: **ಅಜಿತಪು,** ೪. ೭೯)

**ನಾಗಧ್ವಜ** – ಸರ್ಪಧ್ವಜ, ದುರ್ಯೋಧನ (ಏಗೆಯ್ದುಂ ಎನ್ನ ಧರೆಯ ಒರ್ವಾಗಮುಮಂ ನೀಮೆ ಬೆಸಸೆಯುಂ ಕುಡದೆ ಇನಿತಂ ಮೇಗಿಲ್ಲದೆ ನೆಗಟ್ದು ಅಟೆದಂ ನಾಗಧ್ವಜನಯ್ಯ ನೀಮದರ್ಕೆ ಅಟಲದಿರಿಂ; **ಪಂಪಭಾ,** ೧೪. ೬)

**ನಾಗನಿವಾಸ** – ನಾಗತಾಣ, ಹುತ್ತ (ನಾಗನಿವಾಸದ ಕೆಲದೊಳ್ ಪೂಗವನಾಂತದೊಳ್ ಜೈನಯೋಗಿಗಳಿರ್ವರ್ ಯೋಗನಿಯೋಗದೊಳ್ ಇರುತಿರೆ: **ಪುಣ್ಯಾಸ್ರ:** ೬. ೫)

**ನಾಗಪಾಶ** – ಎದುರಾಳಿಯನ್ನು ಕಟ್ಟಿಹಾಕುವ ಒಂದು ದಿವ್ಯಾಸ್ತ್ರ (ದಿತಿಸುತನಣ್ಮುಟ್ಟಾಗೆ ಬಂದು ಕಡನಂ ಕೊಟ್ಟರ್ ಕೊಳ್ವಂತೆ ನಾಗಪಾಶದಿನಾಗಳ್ .. .. ಕಟ್ಟಿ: **ಶಾಂತಿಪು,** ೮. ೪೯)

**ನಾಗಪುರ** – ನಾಗಲೋಕ, ಪಾತಾಳ (ಅಂತು ನಾಗಪುರಮನಿಟೆಸುವ ನಾಗಪುರಮಂ ಆ ನಾಗಶಯನಂ ಪೊಕ್ಕು: **ಪಂಪಭಾ,** ೯. ೨೭ ವ)

**ನಾಗಬಂಧ** – ಬಿಗಿಯಾದ ಅಪ್ಪುಗೆ (ನಾಗಶಯ್ಯೆಯೊಳ್ ನಾಗಿಣಿ ನಾಗಬಂಧದೊಳೆ ತಳ್ತು ಗುಣಾರ್ಣವನಂ ಮರುಳ್ಚಿದಳ್: **ಪಂಪಭಾ,** ೪. ೧೭)

**ನಾಗರಕ** – ಪಿಪ್ಪಲಿ ಎಂಬ ಗಿಡ (ಪಿಪ್ಪಲಿ ನಾಗರಕಂ: **ಅಭಿಧಾವ,** ೧. ೮. ೩೨); ರಾಜನಿಗೆ ಶೃಂಗಾರಸಹಾಯಕರಾದ ನಾಲ್ವರಲ್ಲಿ ಒಬ್ಬ (ಚದುರಿಲ್ಲದ ನಾರಕರ್ಕಳಿಲ್ಲ ಕವಿತಾಗುಣಮಿಲ್ಲದ ವಿಬುಧರಿಲ್ಲ: **ವರ್ಧಮಾಪು,** ೧. ೪೮); ಉಳಿದವರು, ವಿಟ, ವಿದೂಷಕ, ಪೀಠಮರ್ದ

**ನಾಗರಖಂಡ** – ಹಸಿಶುಂಠಿ (ನಾಗರ ಖಂಡಂಗಳಂ ಆ ನಾಗರ ಖಂಡದೊಳೆ ತೊಡರೆ ನರಂ ಇಸುವುದುಂ ನಾಗರ ಖಂಡಂಗಳುಮಂ ನಾಗರ ಖಂಡಮುಮಂ ಅಳುರ್ದುಕೊಂಡಂ ದಹನಂ: **ಪಂಪಭಾ,** ೮೯)

**ನಾಗರಜ್ಜು** – ನಾಗಪಾಶ (ನೆಱೆದಿರೆ ಸಂಕಲೆವಂದದ ತೆಱದಿಂ ಪೆಣೆದಿರ್ದ ನಾಗರಜ್ಜುಗಳೆಲ್ಲಂ .. .. ಪಱೆದು: **ಶಾಂತಿಪು,** ೮. ೫೧)

**ನಾಗರ ಮಾಟ** – ಸರ್ಪಗಳ ಕೃತ್ಯ (ಕೆರಕುಂ ತುಱೆಯುಂ ತೊನ್ನುಂ ಶರೀರದೊಳ್ ತೋಱೆ ತಂತ್ರದಿಂ ಕಿಡಿಸದೆ ನಾಗರ ಮಾಟಮೆಂದು .. .. ಅರ್ಚಿಪರ್ ಪುತ್ತುಗಳಂ: **ಸಮಯಪ,** ೯. ೭೬)

**ನಾಗಲತಾ** – ವೀಳೆಯದೆಲೆಯ ಬಳ್ಳಿ (ನಾಗಲತಾನಾಮಂ ಅಱೆಗೆ ತಾಂಬೂಳಿಕೆ: **ಅಭಿಧಾವ,** ೧. ೮. ೭)

**ನಾಗವಟ್ಟಣಿಗೆ** – ಒಂದು ಬಗೆಯ ವಸ್ತ್ರ (ಸೊಯಿಪ ತೀರಮಲ್ಲಿಗೆಯ ಪೆರ್ಮುಡಿ ಶೋಭಿಸೆ ಉಟ್ಟ ಅಗಲದ ನಾವಟ್ಟಣಿಗೆಯುಂ ಸುಲಿಪಲ್ ಕರಮೊಪ್ಪೆ: **ಹರಿವಂಶ,** ೩. ೩೭)

**ನಾಗವಟ್ಟಳಿಗೆ** – ನಾಗವಟ್ಟಣಿಗೆ (ಪೊಳೆವೆಳೆವಾಟೆ ಚುಂಬಿಸೆ ಮುಱುಂಕಿರಲಂಜಿದಳೆಟ್ದುಮೆಯ್ದೆ ಮೆಯ್ಯೊಳಿಸಿದ ನಾಗವಟ್ಟಳಿಗೆ ನಾಂದು ಪಗಿಲ್ತಿರೆ: **ಅನಂತಪು,** ೭. ೩೭)

**ನಾಗವಟ್ಟಿಗೆ** – [ನಾಗಪಟ್ಟಿಕಾ] ನಾಗಂದಿಗೆ (ಚಂದ್ರಕಾಂತದ ಬೋದಿಗೆಗಳಿಂ ಇಂದ್ರನೀಲದ ನಾಗವಟ್ಟಿಗೆಯಿಂ ವಜ್ರದ ಸೋಪಾನಂಗಳಿಂ: **ಧರ್ಮಾಮೃ,** ೨. ೯೨ ವ)

**ನಾಗವಲಿ** – ನಾಗೋಲಿ, ಮದುವೆಯ ಮುಕ್ತಾಯ (ಅಂತು ಬೀಯಮಂ ಮೆಱೆದು ನಾಲ್ಕನೆಯ ದೇವಸದೊಳ್ ನಾಗವಲಿಯಂ ಮಾಡಿ ನಿರ್ವರ್ತಿತ ವಿವಾಹೋತ್ಸವಂ ಜ್ವಳನಜಟಿ ಮಹಾರಾಜಂ: **ವರ್ಧಮಾಪು,** ೩. ೯೭ ವ)

**ನಾಗವಲ್ಲಿ** – ವೀಳೆಯ ಬಳ್ಳಿ (ಅಡಪವಳ್ಳಂ ನೀಡಿದ ಆರ್ದ್ರ ಪೂಗೀಫಲಂಗಳುಮಂ ಕರ್ಪೂರ ನಾಗವಲ್ಲೀ ಧವಲ ಲಲಿತಂಗಳುಮಂ: **ಸುಕುಮಾಚ,** ೧೧. ೩೨ ವ)

**ನಾಗವಿಭೂಷಣ** – ಸರ್ಪಾಕಾರದ ಒಂದು ಆಭರಣ (ನಾಗವಿಭೂಷಣಪ್ರತತಿ ನಾಗಖಂಡಮಪೂರ್ವಮಪ್ಪ ಪುನ್ನಾಗದ ಬಾಸಿಗಂ: **ಪಂಪಭಾ,** ೪. ೧೭); ಶಿವ

**ನಾಗವಿಮಾನ** – ನಾಗಕನ್ನಿಕೆಯರ ಉಪ್ಪರಿಗೆ (ನಾಗಕನ್ನೆ ನಾಗಲೋಕದ ವಿಳಾಸಂಗಳಂ ತೋಱುತ್ತುಂ ತನ್ ಕೆಟಿಗಣ ನಾಗವಿಮಾನಕ್ಕೆ ವಂದು: **ಪಂಪಭಾ,** ೪. ೧೬ ವ)

**ನಾಗವೇದಿಕೆ** – ನಾಗಂದಿಗೆ (ಪಳುಕಿನ ಕಂಬಂಗಳೊಳಂ ಹರಿನೀಲದ ನಾಗವೇದಿಕೆಯೊಳಂ ವೈಡೂರ್ಯದ ತೊಲೆಯೊಳಂ: **ಪುಷ್ಪದಂಪು,** ೮. ೫೦ ವ)

**ನಾಗಶಯನ** – ಹಾವಿನ ಮೇಲೆ ಮಲಗಿದವನು, ವಿಷ್ಣು (ಅಂತು ನಾಗಪುರಮನಿಟೆಸುವ ನಾಗಪುರಮಂ ಆ ನಾಗಶಯನಂ ಪೊಕ್ಕು: **ಪಂಪಭಾ,** ೯. ೨೭ ವ)

**ನಾಗಶಯ್ಯೆ** – [ಜೈನ] ಮಥುರಾನಗರದ ಚೈತ್ಯಾಲಯದಲ್ಲಿ ಹುಟ್ಟಿದ ಹಾವಿನ ಹಾಸಿಗೆ, ಇದನ್ನು ಕೃಷ್ಣನು ವಶಪಡಿಸಿಕೊಳ್ಳುತ್ತಾನೆ (ಹರಿಯದೊಂದು ಪುಣ್ಯೋದಯದಿಂ ಶುಚಿ ನಾಗಶಯ್ಯೆಯುಂ ಶಾರ್ಙ್ಗಚಾಪಮುಂ ಪಾಂಚಜನ್ಯಮುಂ ಪುಟ್ಟುವುದುಂ: **ನೇಮಿನಾಪು,** ೮. ೨೬)

**ನಾಗಸಂಪಗೆ** – ನಾಗಕೇಸರ ಹೂ (ಮೂಗು ಸುರಭಿಕರ ಪರಿಮಳದಂದಮೆ ನಾಗಸಂಪಗೆಯ ವಿರಿಮುಗುಳಂದಮೆ: **ಸುಕುಮಾಚ,** ೫. ೫೧)

**ನಾಗಹ್ರದ** – ಹಾವಿನ ಮಡು, ಯಮುನಾನದಿ (ತರ್ಪುದೀ ಬಸದಿಗೆ ನೀನುದಯಕ್ಕೆ ಮುಂಚೆ ನಾಗಹ್ರದದೊಳಗಣ ಸಾವಿರೆಸಳ ತಾವರೆಯಲರಂ: **ನೇಮಿನಾಪು,** ೮. ೩೯)

**ನಾಗಾಂತಕ** – ಗರುಡ (ನಾಗಾಂತಕನೀ ಗರುಡಂ ನಾಗನದೈರಾವತಂ ಪರಾಜಿತವಂತಾ ನಾಗೇಂದ್ರಂ: ಜಗನ್ನಾವಿ, ೧೩. ೮೬)

**ನಾಗಾಧಿಪ** – ಆದಿಶೇಷ (ನಡೆ ನೋಡಲ್ ದಿವಿಜೇಂದ್ರನೆಯ್ದೆ ಪೊಗಟಲ್ ನಾಗಾಧಿಪಂ ಭಾವದೊಂದೆಡೆಯಂ ಭಾವಕನಾಗಿ ಪೋಲೆ ಬರೆಯಲ್ಕಾ ವಿಶ್ವಕರ್ಮಂ ದಲಾರ್ಪೊಡೆ .. .. ಬಣ್ಣಿಸುವರಾರೈ ಆ ಮಹದೇವಿಯಂ: **ಶಾಂತಿಪು,** ೯. ೧೫೬)

**ನಾಗಾಯ್ತ** – ಮಾವಟಿಗ (ಇರದೊಗೆದುದಲ್ಲಿ ಸೂಟಾಯ್ತರ ಕಳಕಳವಚ್ಚುಳಾಯ್ತುರುಲಿಪುಂ ನಾಗಾಯ್ತರ ಗಳಗರ್ಜನೆ: **ಜಗನ್ನಾವಿ,** ೧೧. ೭೪)

**ನಾಗಾರಿ** – ಗರುಡ (ಮನೆಯಿಲ್ಲದ ನಾಗಾರಿಗೆ ಜಿನಮುನಿಗೆ ತಪೋಧನಂಗೆ ದಯೆಯಿಂ ನಿಚ್ಚಂ ಮನಮೊಲ್ದೀವುದು ದಾನಮಂ: **ಸಮಯಪ,** ೭. ೫೮); ಹದ್ದು (ನಾಗಾರಿಯಂ ಅಕಟ ಗೃಧ್ರನೆಂದೇಳಿಪುದೇ: **ಜಗನ್ನಾವಿ,** ೧೩. ೮೬); ಸಿಂಹ (ಕಮಳಾವಾಸಿನಿಯಪ್ಪ ಗೋಮಿನಿಯಂ ಆ ನಾಗಾರಿಯಂ ಭೂರಿವಿಕ್ರಮನಂ: **ಕರ್ಣನೇಮಿ,** ೧. ೧೩೩)

**ನಾಗಾರಿಕೇತು** – ಗರುಡಕೇತನ, ಕೃಷ್ಣ (ಆ ಮರದಿಂ ನಾಗಾರಿಕೇತು ಕಾಳಿಯ ನಾಗಂಗೆಱಗಿದಂ ಅಮರ್ತ್ಯರೀಕ್ಷಿಸೆನಭದೊಳ್: **ಜಗನ್ನಾವಿ,** ೩. ೮೫)

**ನಾಗಿಣಿ** – ನಾಗಕನ್ಯೆ (ನಾಗಶಯ್ಯೆಯೊಳ್ ನಾಗಿಣಿ ನಾಗಬಂಧದೊಳೆ ತಳ್ತು ಗುಣಾರ್ಣವನಂ ಮರುಳ್ಚಿದಳ್: **ಪಂಪಭಾ,** ೪. ೧೭); ಹೆಣ್ಣು ಹಾವು (ನಾಗಿಣಿವೊಲೀ ಭುಜಂಗನ ಭೋಗಕ್ಕೆ ತನುವಿತ್ತೆ: **ರಾಜಶೇವಿ,** ೧೧. ೧೬೮)

**ನಾಗೇಂದ್ರ** – ಆದಿಶೇಷ (ಶ್ರೀಮತ್ ನಾಗೇಂಧ್ರ ಭೋಗ ಸ್ಫುರತ್ ಅರುಣಮಣಿದ್ಯೋತಿ ಸಂಧ್ಯಾ ನಿಬದ್ಧಪ್ರೇಮಂ: **ಕಾದಂಬ,** ೧. ೧)

**ನಾಟಕ** – ರೂಪಕ ಹಾಗೂ ನೃತ್ಯ ಅಭಿನಯ ಪ್ರದರ್ಶನ (ಕೋಟಿತೆಱದಿಂದಮೆಸೆವ ನಾಟಕಮಂ ತೋಱೆ ಮಾಣ್ದಳಿಲ್ಲಳ್: **ಆದಿಪು,** ೯. ೪೫)

**ನಾಟಕಶಾಲೆ** – ನಾಟಕ[ನೃತ್ಯ]ವಾಡುವ ರಂಗಮಂದಿರ (ಹಾಟಕಭಿತ್ತಿಸಮನ್ವಿತ ನಾಟಕಶಾಲೆಗಳ ವಿವಿಧಸೌಧಂಗಳ ಕೊಂಡಾಟಮನೆ ಮೆಱೆದು: **ಆದಿಪು,** ೫. ೩೭)

**ನಾಟ್ಯವಿದ್ಯೆ** – ನೃತ್ಯಕಲೆ (ತತಾರ್ಯವೃತ್ತಕಮಪ್ಪ ನಾಟ್ಯವಿದ್ಯೆಯುಮಂ ಯೋಗಕ್ಷೇಮಾಧಿನಮಪ್ಪ ನೀತಿಶಾಸ್ತ್ರಮುಮಂ: **ಶಾಂತಿಪು,** ೧೦. ೯೦ ವ)

**ನಾಟ್ಯವೇದಮೂರ್ತಿ** – ನೃತ್ಯಕಲೆಯ ಸಾಕಾರದಂತಿರುವವನು (ಭುಜಚಳನದ ಪರಿಣತಿಯಿಂ ನಾಟ್ಯವೇದಮೂರ್ತಿವೊಲೆಸೆದಂ: **ಪುಷ್ಪದಂಪು,** ೧೨. ೩೪)

**ನಾಟ್ಯಶಾಲೆ** – ನೃತ್ಯಶಾಲೆ (ಸೊಗಯಿಪನಾಟ್ಯಶಾಲೆಗೆ .. .. ಮಾಟ್ಪುದಕೃತ್ಯ ವಿಚಿತ್ರಶೋಭೆಯಂ; **ಪುಷ್ಪದಂಪು, ೨. ೯೫)**

**ನಾಟ್ಯಾಂಗ** – ನಾಟ್ಯದ ವಿವಿಧ ಪ್ರಕ್ರಿಯೆಗಳು (ಉತ್ಕ್ಷೇಪಣ ಆಕುಂಚನ ಪ್ರಸಾರಣ ಮನೋಭ್ರಮಣ ಜಾವನ ಸ್ಯಂದನ ನಮನೋನ್ನಮನ ಸ್ಥಿತಾಚಳಿತ ಪ್ರಚಳಿತ ಕ್ರಾಂತ ಅಪಕ್ರಾಂತ ಕ್ಷಿಪ್ತಕ ಕ್ರಿಯಾವಿಶೇಷಮಾಗೆ ಪತಾಕಾ ತ್ರಿಪತಾಕಾ ಕರ್ತರೀಮುಖ ಅರ್ಧಚಂದ್ರಕಳಾ ಶುಕತುಂಡಾದಿ ಸಮಾಸದಭಿನಯ ಸುಭಗಮಾಗೆ ನಾಟ್ಯಾಂಗಮೆಲ್ಲಮಂ ತೋಱಿದಾಗಳ್: **ಹರಿವಂಶ,** ೨. ೩೩ ವ)

**ನಾಟ್ಯಾಗಮ** – ನಾಟ್ಯವಿದ್ಯೆ (ನಯಂ ಒಸವೆ ಕರಣಂಗಳುಮಂ ನಿಪ್ಪೊಸವೆನೆ ಪೊಸಯಿಸಿದಳಾಕೆ ನಾಟ್ಯಾಗಮಮಂ: **ಆದಿಪು,** ೯. ೨೫)

**ನಾಟ್ಯಾಲಯ** – ನಾಟ್ಯಗೃಹ (ಧರೆ ರಂಗಂ ಗಗನಂ ಮನೋಹರತರಂ ನಾಟ್ಯಾಲಯಂ ನರ್ತಕಂ ಸುರರಾಜಂ: **ಆದಿಪು,** ೭. ೧೨೭)

**ನಾಡರಸ** – ನಾಡಿನ ರಾಜ (ನಾಡರಸಂ ತಗುಳ್ದು ಕಡೆಗಾಲದ ಮಾರಿಯ ಮೂರಿಯಂತೆ: **ಪಂಪರಾ,** ೪. ೩೮)

**ನಾಡವರ್** – ನಾಡಿನ ಸಾಮಾನ್ಯ ಜನ (ಪದನಱಿದು ನುಡಿಯಲುಂ ನುಡಿದುದಂ ಅಱಿದು ಆರಯಲುಂ ಆರ್ಪರ್ ಆ ನಾಡವರ್ಗಳ್: **ಕವಿರಾಮಾ,** ೧. ೩೮)

**ನಾಡಱಿಕೆ** – ಲೋಕಕ್ಕೆಲ್ಲ ತಿಳಿದ (ಮಾಡಿದನೇಕೆಯೊ .. .. ಬಿದಿವಿಷಮಫಣಿಗೆ ಅಣಲ್ಗಳ ಪಲ್ಲಂ ರೂಡಿಸಿದ ತೇಳ್ಗೆ ಮುಳ್ಳಂ ನಾಡಱಿಕೆಯ ದುರ್ಜನಂಗೆ ನಿಡುನಾಲಗೆಯಂ: **ಧರ್ಮಮಧು,** ೧. ೬೨)

**ನಾಡಾಡಿ** – ಸಾಮಾನ್ಯ [ಮನುಷ್ಯ] (ನಾಡಾಡಿಯನರರ್ಗದು ಬಗೆಯಲ್ ಕೂಡದಭಸ್ತಿರ್ಯಗೂರ್ಧ್ವಭೇದವಿಭಿನ್ನಂ: **ಆದಿಪು,** ೧. ೪೬)

**ನಾಡಿಕಾ[ಕೆ]** – ಒಂದು ಗಳಿಗೆ, ಇಪ್ಪತ್ತನಾಲ್ಕು ನಿಮಿಷ (ಸಮಯಾವಳಿಕೋಚ್ಛ್ವಾಸಸ್ತೋಕನಿಮೇಷನಾಡಿಕಾ ಮುಹೂರ್ತ .. .. ಗಣನಾನುಕ್ರಮದಿಂ ಪೆರ್ಚಿದೆಣಿಕೆಯೊಳ್: **ಆದಿಪು,** ೬. ೪೮ ವ)

**ನಾಡಿಗ** – ಪ್ರಜೆ (ಮೃಗರಿಪುವಂ ಮೃಗಾವತಿನಂದನನೊರ್ವನೆ ನಿಂದು ಕೊಂದು ನಾಡಿಗರ ಮನಕ್ಕೆ ಮಿಕ್ಕ ಪರಿತೋಷಮನಿತ್ತು: **ಆಚವರ್ಧ,** ೩. ೪೭)

**ನಾಡು** – ಜನರಿರುವ ಪ್ರದೇಶ (ಇಂಚೆಯ ಪಸವಿನ ಬಱದ ಕಳಂಚಿನ ಡಾವರದ ಬಾಧೆಯಿಲ್ಲದ ಪದದೊಳ್ ಮುಂಚದೆ ಪಿಂಚದೆ ಬಳಿದು ವಿರಿಂಚಿಯ ಕೆಯ್ಪಿಡಿವೊಲಾದುವಾ ನಾಡ ಊರ್ಗಳ್: **ಪಂಪಭಾ,** ೮. ೫೧)

**ನಾಡುವಿಡಿ** – ನಾಡನ್ನು ಹಿಡಿ, ಆಕ್ರಮಿಸು (ನಾಡುವಿಡಿಯದೆ ಅರಸುಗೆಯ್ವೆನೆಂಬಂತೆ ಮಾತಱಿಯದೆ ಬಿನ್ನಪಂಗೆಯ್ವೆನೆಂಬಂತೆ: **ಧರ್ಮಾಮೃ,** ೪. ೨೯ ವ) [ಕೆ. ವೆಂಕಟರಾಮಪ್ಪನವರಿಂದ ಸಂಪಾದಿತ **'ಧರ್ಮಾಮೃತ'**ದ ಪಾಠವನ್ನು ಸ್ವೀಕರಿಸಿದೆ]

**ನಾಡೆ** – ಅತಿಶಯವಾಗಿ (ನಿಜಮಂದಿರೋದ್ಗತೋತ್ಸವಕಿದು ನಾಡೆಯುಂ ದ್ವಿಗುಣಂ ಎಂಬಿನಂ ಉತ್ಸವಮಂ ನೆಗಟ್ಚಿದಂ: **ಕಾದಂಸಂ.** ೨. ೨೬)

**ನಾಡೆಗೆಡು** – ಬಹಳ ದೂರ (ಪರಿವಾರಮೆಲ್ಲಂ ಕುದುರೆವಡಿವಜ್ಜೆಯಂ ನೋಡಿ ನಾಡೆಗೆಟ್ಟು ಪೋಗಿ: **ವಡ್ಡಾರಾ,** ಪು ೫೩, ಸಾ ೨೫)

**ನಾಡೆಯುಂ** – ನಾಡೆ (ಚೈರಂತನಕ್ರಮದಿಂದೆ ಆ ಮಣಲೆಲ್ಲಮಂ ಮಗುಳೆ ಪಾರಾವಾರದೊಳ್ ಪೊಯ್ದು ಮತ್ತಮದಂ ಸೋದಿಸಿ ಕಾಣ್ಬವೊಲ್ ನೃಗತಿ ನೋಡಲ್ ನಾಡೆಯುಂ ದುರ್ಲಭಂ: **ಸುಕುಮಾಚ,** ೫. ೩೩)

**ನಾಡೆಱೆಯ** – ನಾಡ ಪ್ರಭು, ರಾಜ (ನಾಡೆಱೆಯಂ ಭರತಂ ಬೆಸಸದ ತೆಱನಂ ಕೇಳ್: **ಪಂಪರಾ,** ೭. ೪೯)

**ನಾಡೊವಜ** – ನಾಡ ಗುರು (ನಾಡೊವಜನಾದನೊ ಪೇಳಷ್ ಕವಿತಾಗುಣಾರ್ಣವಂ: **ಪಂಪಭಾ,** ೧೪. ೬೨)

**ನಾಡೋಜ** – ನಾಡೊವಜ (ರಾಜ್ಯಲಕ್ಷ್ಮಿ ಬಳೆದ ಸಂತೋಷದಂತಮನೆಯ್ದೆ ಪತ್ತಿದಳ್ ಸಹಜಮನೋಜನಂ ನಾಡೋಜನಂ: **ಪಂಪಭಾ,** ೧೩. ೧೦೮)

**ನಾಣ್** – ಲಜ್ಜೆ (ಅಟ್ಟಳಿಸುರ್ಕೆ ತೋಳ್ಗೆವಂದೊದವಿರೆ ನಾಣನೊಕ್ಕರ್ದೆ ವಿಚಿತ್ರವಿಕಾರರಸಾಂತರಂಗದೊಳ್ ಪುದಿರೆ: **ಆದಿಪು,** ೪. ೧೫); ನಾಚಿಕೆಯ ಜಾಗ, ಗುಹ್ಯೇಂದ್ರಿಯ (ತೆಱಪುವಡೆದು ಅಂಗಜಂ ಕೆಯ್ಸಱೆಗೊಳೆ ನೋಟಕರ ಮನಮನಾಗಳ್ ಕೊಳದಿಂ ಪೊಱಮಡೆ ಜಿಗಿಲ್ತು ಪತ್ತಿದ ಕುಱುವಡಿಗಳೆ ಮೆಱೆದುದು ಅವರ ನಾಣ್ಗಳ ತೆಱಪಂ: **ಪಂಪಭಾ,** ೫, ೬೭)

**ನಾಣ ಪುತ್ತು** – ನಾಚಿಕೆಯ ಹುತ್ತ (ಇದು ಕಡು ನಾಣ ಪುತ್ತು ವಲಂ ಇಂ ನೆನೆಯುತ್ತಿರಿಂ ಎಮ್ಮಂ ಎಂಬುದಾವುದು ಗುಣವೆಮ್ಮೊಳಾಗೆ ನೆನೆದಪ್ಪಿರಿ: **ಆದಿಪು,** ೧೧. ೧೩೧)

**ನಾಣಳ್ಕು** – ನಾಚಿಕೆಯಿಂದಾದ ಭಯ (ಮಜ್ಜನಂಬುಗದೆ ಆರೋಗಿಸಲೊಲ್ಲದಿರ್ಪಿರವಿದೇಂ ನಾಣಳ್ಕಿದೇಂ: **ಪಂಪಭಾ,** ೪. ೬೩)

**ನಾಣಟಿ** – ನಾಚಿಕೆಬಿಡು (ಬಟಲದೆ ಪುಷ್ಪಬಾಣಹತಿಯಿಂ ಪುಳಕಂಗಳಂ ಆನದೆ ಉಣ್ಮೆ ನಾಣಟಿಯದೆ .. .. ಮುಕ್ತಿಯೊಡಗೂಡಿದ .. .. ಸಿದ್ಧರೆಮಗೀಗೆ ವಿಶುದ್ಧರಭೀಷ್ಟಸಿದ್ಧಿಯಂ: **ಲೀಲಾವತಿ,** ೧. ೪)

**ನಾಣಿಲಿ** – ನಾಚಿಕೆಯಿಲ್ಲದ (ಬಸನಂಗಳೆ ನಿನ್ನಂ ಬರ್ದಿಸುತಿರ್ದಪುವು ಅವಱ ಬಸದೊಳ್ ಎಸೆವುದಱಿಂ ನಾಣ್ಚಿಸುವೀ ನಾಣಿಲಿ ನಾಣಂ ಪಸುವಂದೆಲೆ ಜೀವ ನೀನದೆಲ್ಲಿಗೆವೋಪೈ: **ಅಜಿತಪು,** ೨. ೯೪)

**ನಾಣಿಲಿಗ** – ನಾಣಿಲಿ (ಮಹೀಪತಿಗಂ ದ್ವಿಜವಂಶಂಗಂ ಏತಱಕೆಳೆಯಿಂತು ನಾಣೀಲಿಗರಪ್ಪರೆ ಮಾನಸರ್: **ಪಂಪಭಾ,** ೨. ೪೮)

**ನಾಣಿಲಿವೆಣ್** – ನಾಚಿಕೆಯಿಲ್ಲದ ಹೆಣ್ಣು (ಲಿಕಾರಕ್ಕೆ: ಪಲ್ಲಲಿವಾಯ್, ಅಗಿಲಿಲಿಗಂಧಂ .. .. ನಾಣಿಲಿವೆಣ್: **ಶಬ್ದಮದ,** ೧೯೭ ಪ್ರ ೨)

**ನಾಣೆಱಕ** – ಲಜ್ಜೆ ತುಂಬಿದ ಪ್ರೀತಿ (ನಾಣೆಱಕದಿಂದ ಇನಿತು ಬೇಗಂ ತಲೆಯಂ ಬಾಗಿರಲ್: **ಕಾದಂಬ,** ೫. ೧೨೬ ವ)

**ನಾಣೊಡೆಯ** – ವಿಟ (ನಾಣೊಡೆಯನಂ ಎಡೆಯೊಳಿರ್ದನಂ ಮಾಟ್ಪಳ್ ಇಂತೀ ಗಣಿಕಾಸಂದೋಹದೊಳ್ ತೇಪೆಯೆ ಪುರುಷಗುಣಶ್ರೀಗಳಗ್ರಾಹಿಯಲ್ತೇ; **ಲೀಲಾವತಿ,** ೨. ೯೭)

**ನಾಣ್ಗಳ ತೆಱಪು** – ಲಜ್ಜಾಕರವಾದ ಜಾಗ (ತೆಱಪುವಡೆದು ಅಂಗಜಂ ಕೆಯ್ಸಱೆಗೊಳೆ ನೋಟಕರ ಮನಮನಾಗಳ್ ಕೊಳದಿಂ ಪೊಱಮಡೆ ಜಿಗಿಲ್ತು ಪತ್ತಿದ ಕುಱುವಡಿಗಳೆ ಮೆಱೆದುದು ಅವರ ನಾಣ್ಗಳ ತೆಱಪಂ: **ಪಂಪಭಾ,** ೫, ೬೭)

**ನಾಣ್ಗಳರೆ** – ನಾಚಿಕೆಪಡು (ಕಾಯ್ವ ಬಯ್ವ ನಾಣ್ಗರೆವ ಎರೆವ ಇಂಬುಕೆಯ್ಯುವ ಒಳಪೊಯ್ಯುವ ಅನೇಕ ವಿಚಿತ್ರಚೇಷ್ಟೆಗಳ್: **ಪುಷ್ಪದಂಪು,** ೨. ೨೭)

**ನಾಣ್ಗಾಪು** – ಮಾನರಕ್ಷಣೆ (ಎಂದು ತನ್ನ ನಾಣ್ಗಾಪನೆ ಬಗೆದು ಅತನುಪರಿತಾಪಿತ ಶರೀರನುಮಾಗಿ ಶಂತನು ಕರಂಗಿ ಎರ್ದೆಗಿಡೆ: **ಪಂಪಭಾ,** ೧. ೭೧ ವ)

**ನಾಣ್ಗೆಡಿಸು** – ಮರ್ಯಾದೆ ಹಾಳುಮಾಡು (ಕುಡಿದೊಡೆ ಸೊರ್ಕಿಸದವು ನಾಣ್ಗೆಡಿಸದವು ಮನಕ್ಕಲಂಪನೀವವು ರತಮಂ ನಡೆಯಿಪುವು ಎನಿಪ ಮಧುಗಳಂ: **ಆದಿಪು,** ೫. ೩೨)

**ನಾಣ್ಗೆಡು** – ನಾಚಿಕೆಯನ್ನು ತೊರೆ (ಕೀಚಕಂ ಕಾಮದೇವಂ ಮಾಡಿದ ಯಾಚಕನಂತೆ ಕರಮೆ ನಾಣ್ಗೆಟ್ಟು ಮನಂಗಾಪು ಅಟಿದು ಅಳಿಪಿ ನೋಡಿ: **ಪಂಪಭಾ,** ೮. ೫೯ ವ)

**ನಾಣ್ಚು** – ನಾಚಿಕೆಪಡು (ಎಡೆಯೊಳ್ ದೂಂಟಂದೆ ದೂಂಟಂಗೆ ಪೆರ್ವಱೆಯಂ ಪೊಯ್ಸಿ ಕೆಲಕ್ಕೆ ನಾಣ್ಚಿ ತಲೆಗುತ್ತಿರ್ಪ ಆಕೆಯೇಂ ಜೋಡೆಯೇ: **ಪಂಪಭಾ** ಪರಿಷತ್ತು, ೪. ೮೨); ಅವಮಾನಗೊಳ್ಳು

**ನಾಣ್ನುಡಿ** – ಲೋಕೋಕ್ತಿ, ಗಾದೆ (ಜಯಮಂ ಬಯಸುವೊಡಂ ಮಾರಿಯಂ ಆವರ್ತಿಸಿದರ್ ಎಂಬ ನಾಣ್ನುಡಿಗಂ ಅಳುರ್ಚಿಯೆ ನಿನ್ನೊಳ್ ಎಡಜಿ ತನಗಟೆಕೆಯ ಮಿಟ್ಟುವಂ ಇಂತು ತಂದುಕೊಂಡರುಂ ಒಳರೇ: **ಶಾಂತಿಪು,** ೩. ೭೨)

**ನಾಣ್ದಾಣ** – ನಾಚಿಕೆಯ ಜಾಗ, ಗುಹ್ಯೇಂದ್ರಿಯ (ಮೊಱೆಯಂ ಮೀಱುವ ಮಾತು ಕೆಂದೆಸೆವ ನಾಣ್ದಾಣಂ: **ಚಂದ್ರಪ್ರಪು,** ೮. ೬೮)

**ನಾಣ್ಬದ** – ಯೋನಿದ್ರವ (ಊರುಯುಗಂಗಂಗದಿಟಿವ ನಾಣ್ಬದನಂ ನಿಱೆಯಿಂದಮೊತ್ತುತುಂ ಜಾರೆಯರೆಯ್ದುತಿರ್ದರ್: **ಕುಸುಮಾಕಾ,** ೪. ೩೫)

**ನಾಣ್ಬಿಡು** – ನಾಚಿಕೆಯನ್ನು ಬಿಡು (ಮೊಗಂಗುಡೆ ಪದವೆತ್ತು ಚುಂಬಿಸಿ ಭಯಂಗೆಯೆ ಬಲ್ವೆಣಸಂ ಪೊದಳ್ದಳ್ಟಿ ನಾಣ್ಬಿಡೆನೆರೆದೂಢೆಯಂ ಪ್ರಥಮಸಂಗಮದೊಳ್ ಕುವರಂ ಮರುಳ್ಚಿದಂ: **ಚಂದ್ರಪ್ರಪು,** ೬.೮೨)

**ನಾತ** – ದುರ್ವಾಸನೆ (ತನ್ನ ಬಾಯ ನಾತಕ್ಕೆ ನೊಣಂ ಮುಸುರಿ ಗೊಮ್ಮುಗ್ಗರೆಯೆ: **ಚಾವುಂಪು,** ಪು. ೪೦೨. ಸಾ. ೪)

**ನಾದ** – ಧ್ವನಿ (ನಾದಂ ಶಬ್ದಂ ಧ್ವಾನಂ ಹ್ರಾದಂ ಸ್ವಾನಂ ರವಂ ಸ್ವರಂ ಘೋಷಣಂ: **ಅಭಿಧಾವ,** ೧. ೧೩. ೨೭)

**ನಾದಿಪಂಚೆ** – [ನಾದಿಪ+ಅಂಚೆ] ಧ್ವನಿಮಾಡುವ ಹಂಸ (ನಾದಿಪಂಚೆಗೆ ಸರೋರುಹಮಂ ನೀಡೋದುತಿರ್ಪ ಗಿಳಿಗೆ ಈ ಅಗೆಪಣ್ಣಂ .. .. ಕುಡುಗೆ ನೆಯ್ದಿಲ ಕಾವಂ: **ಲೀಲಾವತಿ,** ೧೧. ೨೨)

**ನಾದುನಿ** – ನಾದಿನಿ (ಸೀರ್ಕರಡಿಯನ್ನಳೆ ನಾದುನಿಯೊಲ್ದುಮೊಲ್ಲದನ್ನಳೆ ಗಡ ಸೂಳೆಯೆಂದೊಡೆ ಇಂತುತಲೆವೇಸಱನೆಂತು ನೀಗುವೆಂ: **ಪಂಪಭಾ,** ೪. ೯೮)

**ನಾದೇಯ** – ನದಿಗೆ ಸಂಬಂಧಿಸಿದ (ನಾದೇಯಮಾಗಿ ದದಿವ್ಯಾಮೋದಂ ತಳ್ಪೊಯ್ದು ಪೊಂಗೆ ಕಂಪಾಯ್ತೆಂಬಂತಾದುದು ಸುವರ್ಣಗಿರಿ ಗಂಧೋದಕದಿಂ: ಅನಂತಪು, ೫. ೭೯)

**ನಾದೇಯಾಂಬು** – ನದಿಯ ನೀರು (ನಾದೇಯಾಂಬುವೊಳ್ ಅರ್ದಿಕೊಂಡು ಶಿರದೊಳ್ ಕರ್ಪೂರಮಂ ಪೊಯ್ದುಕೊಂಡು: **ಲೀಲಾವತಿ,** ೮. ೧೦)

**ನಾನ್** – ಒದ್ದೆಯಾಗು (ಆ ಸತಿಯಿಕ್ಕಿದ ಕಣ್ಣ ನೀರ ಧಾರೆಗಳೊಳೆ ನಾಂದು ಎಲರ್ಚಿ ಪೊದಳ್ದು ಒರ್ಮೆಯೆ ಪಾಱಿದುವು ಉನ್ಮದಾಳಿಗಳ್: **ಪಂಪಭಾ,** ೫. ೧೦); ನಾನು ಎಂಬ ಉತ್ತಮಪುರುಷ ಏಕವಚನ ಸರ್ವನಾಮ (ಅದಱಿನ್ನಾವುದುಮಂ ನಾನೆ ಬಲ್ಲೆಂ. ನೀನುಸಿರದಿರೆಂದು ವಲ್ಲಭೆಯಂ ಕಲ್ಲ ಸರದಿಂ ನುಡಿದು ಮಾಣಿಸುವುದುಂ: **ಪಂಚತಂತ್ರ,** ೨೨೫ ವ)

**ನಾನಲ್** – ಕಾಲುವೆ (ನಾನಲುಂ ಬಾನಲುಂ ಸಡಿಂಬಮಂ ಇಡಿಂಬಮಂ .. .. ಕಳೆದು ಪೋಗಿ: **ಲೀಲಾವತಿ,** ೬. ೧೬ ವ)

**ನಾನಲಿ** – ಜೊಂಡು (ಕೆಸಱಿಂ ಕುೞಿಯಿಂ ನಾನಲಿಂ ಅಸಿದಾಗಿರೆ .. .. ವಸುಧೇಶನುಂ ಆರ್ಯಸುತನುಂ ಒಯ್ಯನೆ ನಡೆದರ್: **ಲೀಲಾವತಿ,** ೫. ೪೧)

**ನಾನಲ್ವಳ್ಳ** – ಜೊಂಡಿರುವ ಹಳ್ಳ (ತಲೆವೊಲದ ನಾನಲ್ವಳ್ಳದ ದರಿಯ ಕುತ್ತುಱಿಂಗೆ ಕೋಣಕಿಡುವ ಮಲ್ಲೆ ಎರಲೆಯ ಜವಕ್ಕೆ ಪಕ್ಕುಗೊಟ್ಟು: **ಮಲ್ಲಿನಾಪು,** ೭. ೨ ವ)

**ನಾನೃತಾತ್ ಪಾತಕಂ ಪರಂ** – ಸುಳ್ಳಿಗಿಂತ ಮಿಗಿಲಾದ ಪಾತಕವಿಲ್ಲ (ನಾನೃತಾತ್ ಪಾತಕಂ ಪರಂ ಎಂಬೀ ನುಡಿಯಂ ವಿಚಾರಿಸದವಂ ಪಾಪಕ್ಕೆ ಪಕ್ಕಾಗನೇ: **ಸಮಯಪ,** ೫. ೩೦)

**ನಾನೃಷಿಃ ಕುರುತೇ ಕಾವ್ಯಂ** – ಋಷಿಯಲ್ಲದವನು ಕಾವ್ಯ ರಚಿಸಲಾರ (ಕೋಕನದಗರ್ಭನಿಂ .. .. ಸಂದತ್ತೀ ಲೋಕಕ್ಕೆ ನಾನೃಷಿಃ ಕುರುತೇ ಕಾವ್ಯಂ ಎನಿಪ್ಪ ಮಹಿಮೆ: **ಜಗನ್ನಾವಿ,** ೧. ೭)

**ನಾನ್ಯಥಾ ಮುನಿಭಾಷಿತಂ** – ಮುನಿಯ ಮಾತು ವ್ಯತ್ಯಾಸವಾಗುವುದಿಲ್ಲ (ನಾನ್ಯಥಾ ಮುನಿಭಾಷಿತಂ ಎಂಬ ಈ ವಾಕ್ಯಂ ಅದೇಂ ಪುಸಿಯಕ್ಕುಮೇ: **ಪಂಚತಂತ್ರ,** ೩೫೯)

**ನಾಭಸ** – ಮಳೆಗಾಲಕ್ಕೆ ಸಂಬಂಧಿಸಿದ (ವರುಣ ಮಕರಹಸ್ತೋಚ್ಚೀಕರಾರ್ದ್ರಂ .. .. ತೀಡಿತ್ತಿರದೆ ಮುದುತವಿಶೌ ನಾಭಸಂ ಮಾತರಿಶ್ವಂ: **ಚಂದ್ರಪ್ರಪು,** ೪. ೩೦)

**ನಾಭಿ** – ಹೊಕ್ಕುಳು (ನಾಭಿ ಪೊರ್ಕುಳ್: **ಅಭಿಧಾವ,** ೧. ೧೨. ೬); ಕೇಂದ್ರ (ಅಂತು ವಜ್ರನಾಭಿ ಚೆಲ್ವಿಂಗೆ ನಾಭಿಯುಂ ವಿಳಾಸಕ್ಕಾವಾಸಮುಂ ಅಳವಿಂಗೆ ದಳಮುಂ: **ಆದಿಪು,** ೬. ೨೨ ವ)

**ನಾಭಿಖಂಡನ** – ಹೊಕ್ಕುಳ ಬಳ್ಳಿ ಕತ್ತರಿಸುವುದು (ಮೊದಲಿಗನವನೀಶ್ವರರೊಳ್ ಮಹಿಮಾಸ್ಪದನಾದಂ ನಾಭಿ ನಾಭಿಖಂಡಕುಶಲಂ: **ಪಂಪರಾ,** ೧. ೯೨)

**ನಾಭಿದಘ್ನ** – ಹೊಕ್ಕುಳು ಮುಳುಗುವಷ್ಟು ಆಳ (ಮನಃಪ್ರಿಯಂ ಸವತಿಯ ಮೆಯ್ಯೊಳೊತ್ತೆ ಚಂದನಾಂಬುವಂ ಕುಪಿತೆಗೆ ನಾಭಿದಘ್ನಮಾಯ್ತು .. .. ಪೂಗೊಳಂ: **ಲೀಲಾವತಿ,** ೧೩. ೧೫೨)

**ನಾಭಿನಗ** – [ಜೈನ] ಮೇರುಪರ್ವತ (ನಾಲ್ಕು ನಾಭಿನಗಂಗಳಿಂದಂ .. .. ಚತುರ್ದಶಮಹಾವಾಹಿನಿಗಳಿಂದಂ ಎಸೆದು: **ಆದಿಪು,** ೧. ೪೮ ವ)

**ನಾಭಿರಾಜ** – [ಜೈನ] ಆದಿತೀರ್ಥಂಕರನ ತಂದೆ (ನಾಭಿರಾಜ ಧರಣಿಯುವತಿಗೆ ಮರುದೇವಿಯೆ ದಲ್ ಸವತಿಯೆನಲ್ ಸುಖದಿಂದರಸುಗೆಯ್ಯುತಿರ್ದಂ: **ಪಂಪರಾ,** ೧. ೯೮)

**ನಾಭಿಸ್ಥಾನ** – ಕೇಂದ್ರಸ್ಥಾನ (ಶ್ರೀನಿಳಯಮಿದುವೆ ನಾಭಿಸ್ಥಾನಮೆನಲ್ ನೆಱೆದಯೋಧ್ಯೆಗವತರಿಸಲ್ ಜ್ಞಾನಧರಂ: **ಆದಿಪು,** ೭. ೧)

**ನಾಭೇಯ** – ನಾಭಿರಾಜನ ಮಗ (ನಾಭೇಯ ಜಿನಮಹಾಜನ್ಮಾಭಿಷವ ಕ್ಷೀರವಾರಿಧಾರಾಪ್ರಸರಂ ಶೋಭಿಪ ನಿಜಕೀರ್ತಿಪತಾಕಾ ಭಾವದಿನೆಸೆದುದೆಂದು ಮಂದರಶೈಲಂ: **ಅಜಿತಪು,** ೨. ೬)

**ನಾಮ** – ಹೆಸರು (ತೊಡೆವೆಂ ಶಕ್ರನ ನಾಮಮಂ ತುಡುಕಿ ನೀರೊಳ್ ಮೆಟ್ಟುವೆಂ ವಹ್ನಿಯಂ: **ಜಗನ್ನಾವಿ,** ೩. ೨೧)

**ನಾಮಕರಣ** – ಹೆಸರಿಡುವ ಸಂಸ್ಕಾರ (ತನಯರ್ಗೆ ರಾಮಕೃಷ್ಣರೆಂಬ ನಾಮಕರಣಂ ಮೊದಲಾಗೆ ಪಲವುಂ ಅನ್ವರ್ಥನಾಮಮನಿಟ್ಟು: **ಜಗನ್ನಾವಿ,** ೨. ೩೬ ವ); ನೋಡಿ, 'ಷೋಡಶಸಂಸ್ಕಾರ'

**ನಾಮಕರ್ಮ** – ನಾಮಕರಣ (ಜಿನಂಗೆಸೆದುದಂತಾ ನಾಮಕರ್ಮೋತ್ಸವಂ: **ಶಾಂತಿಪು,** ೧೦. ೭೮)

**ನಾಮಗ್ರಹ** – ಹೆಸರು ಹಿಡಿದು ಕರೆಯುವುದು (ಬಂದು ನಿಂದನಿಜಸೊಳ್ ನಾಮಗ್ರಹಂ ಮಾಡಿ .. .. ಕಾರ್ಯಮಂ ನುಡಿದೆ: **ಸುಕುಮಾಚ,** ೩. ೧೬)

**ನಾಮಧಾರಕ** – ಹೆಸರು ಮಾತ್ರ ಹೊಂದಿರುವ (ಉಚಿತಸತ್ಕ್ರಿಯಾವಿರಹಿತನಾತಂ ನಾಮಧಾರಕಂ, ದ್ವಿಜನಲ್ಲಂ: **ಆದಿಪು,** ೧೫. ೧೫)

**ನಾಯ್** – ಶ್ವಾನ (ದುರಾತ್ಮಾ ಎನ್ನನೊಡೆದ ನಿನ್ನ ಕಾಲ್ಗಳಂ ಜನ್ಮಾಂತರದೊಳಂ ನಾಯುಂ ನರಿಯುಮಾಗಿಯಪ್ಪೊಡಂ ಕೊಂದು ಮಕ್ಕಳ್ವೆರಸು ತಿಂಬೆಂ: **ವಡ್ಡಾರಾ,** ಪು. ೮, ಸಾ.೧೯)

**ನಾಯಕನರಕ** – ಘೋರ ನರಕ (ಕಳ್ ವಿಷಮೆನೆಯುಂ ಮನ್ನಿಸಳೆ ಮಗನ ಮಾತಂ ಇದೇಂ ನಾಯಕನರಕಂ ಈಕೆಗೆ ಒಚ್ಚತಮಾಯ್ತೋ: **ಯಶೋಧಚ,** ೩. ೭೪)

**ನಾಯಕಸಾರ** – ಶ್ರೇಷ್ಠ ಪೇಯ (ನಾಯಕಸಾರವೊಲಿದು ಕಡು ಸೀಯೆನೆ ಕುಡಿಯೆಂದು ತಂದು ಕುಡಿಯಿಸುವರ್ ತಪ್ತಾಯಸ ರಸಮಂ ಬಸನಿಗಪಾಯಂ ಭವಭವದೊಳ್ ಎಂದುಂ ಏಂ ಕುಂದುಗುಮೇ: **ಶಾಂತಿಪು,** ೭. ೯೭)

**ನಾಯಕಿತ್ತಿ** – ಯಜಮಾನಿ, ಒಡತಿ (ಒರ್ವಳ್ ನೆತ್ತದ ಚಾರಿಯಂ ಕೊಂಡು ಬಂದು .. .. ಎಮ್ಮ ನಾಯಕಿತ್ತಿಯೊಡನೆ ಆಡಿಂ .. .. ಎಂದೊಡೆ: **ಹರಿವಂಶ,** ೩. ೭೦ ವ)

**ನಾಯ್ಬಸನಿಗತನ** – ನಾಯಿಯ ನಡವಳಿಕೆ (ನಾಯ್ಬಸನಿಗತನಮಂ ಕಂಡು ಈ ಕಿಸುಗುಳಿಯಂ ಜವನುಮುಯ್ಯಲೇಂ ಪೇಸಿದನೋ: **ಯಶೋಧಚ,** ೩. ೭೨)

**ನಾರ್** – ನೂಲು (ತೋರಮುಡಿವಿಡಿದು ಕುಡಿಯಂ ನಾರಂ ತದೆವಂತೆ ತದೆದು .. .. ಒದೆದೊಡೆ: ಯಶೋಧಚ, ೨. ೫೦); ತೊಗಟೆ (ವಲ್ಕಂ ನಾರಂತದು: **ಅಭಿಧಾವ,** ೧. ೭. ೬); ನಾರಿನಿಂದ ಮಾಡಿದ ಬಟ್ಟೆ (ಸೀರೆಯಂ ಬಿಟ್ಟು ನಾರನುಡುವಂತೆ .. .. ಸದ್ಧರ್ಮಮಂ ಬಿಟ್ಟು ಮಿಥ್ಯಾತ್ವಪ್ರೀತನಾಗಿರ್ಪುದುಂ: **ಧರ್ಮಾಮೃ,** ೧೧. ೧೧೨ ವ)

**ನಾರಂಗ** – ಕಿತ್ತಳೆ (ಪನಸು ಆಮ್ರ ಕದಳಿ ನಾರಂಗ ನಾಳಿಕೇರೀ ಫಲಾಮೃತಸ್ವಾದದೆ: **ಆದಿಪು,** ೧೧. ೮೧); ಕಿತ್ತಿಳೆ ಬಣ್ಣದ ಬಟ್ಟೆ (ಬೊಂಗದ ನಾರಂಗದ ದೇವಾಂಗದ ಪಲತೆಱದ ಸಕಲ ವಟ್ಟೆಗಳಂ ಗೇಹಾಂಗಣದೊಳ್ ಮೆಟ್ಟುವ ತಾಣಂಗಳೊಳ್ ಓರಂತೆ ಪಾಸಿ: **ಸುಕುಮಾಚ,** ೧೦. ೯೦)

**ನಾರಂಗವಟ್ಟೆ** – ಕಿತ್ತಳೆ ಬಣ್ಣದ ಬಟ್ಟೆ (ನಾಂದ ನಾರಂಗವಟ್ಟೆಯ ಮೇಲ್ಕಟ್ಟಂ ಅಂಬರದೊಳ್ ಕಟ್ಟಿದಳ್ ಎಂಬಂತೆ: **ಕಾದಂಬ,** ೮. ೬೯ ವ)

**ನಾರಂದ** – ನಾರದ (ಧರೆಗಿಳಿತಂದಂ ಪವನಮಾರ್ಗದಿಂ ನಾರಂದಂ: **ಪುಣ್ಯಾಸ್ರ,** ೫. ೬೧)

**ನಾರಕ** – ನರಕಕ್ಕೆ ಸಂಬಂಧಿಸಿದ; ನರಕವಾಸಿ (ಸೀಳ್ಸೀಳೆನುತ್ತೆ ನಾರಕರ್ಕೈತಂದು .. .. ಸೀಳ್ವರ್ ತಗುಳ್ದು ನವನಾರಕರಂ: **ಸುಕುಮಾಚ,** ೧೧. ೪೨); [ಜೈನ] ಜನ್ಮರೀತಿಗಳಲ್ಲಿ ಒಂದು, ನರಲೋಕದ ಜನ್ಮ (ನಾರಕ ತಿರ್ಯಕ್ ನರಬೃಂದಾರಕಮೆನೆ ಗತಿಚತುಷ್ಟಯಂಗಳೆ ಸಲೆ ಸಂಸಾರದ್ರವ್ಯ

ಕ್ಷೇತ್ರಾದ್ಯಾರೋಪಿತಭೇದದಿಂದಮದು ಪಂಚಾತ್ಮಂ: ಅಜಿತಪು, **ಪುಷ್ಪದಂಪು,** ೧೩. ೫೬), ನೋಡಿ 'ಚತುರ್ಗತಿ'

**ನಾರಕಪಟಲ –** [ಜೈನ] ಏಳು ನರಕಗಳ ಒಟ್ಟು ನಲವತ್ತೊಂಬತ್ತು ಸ್ತರಗಳು (ಮೋಹದಿಂ ಸಮ್ಯಗ್ದರ್ಶನಮಂ ಕೆಯ್ಕೊಳಿಸಿದನಾ ನಾರಕಪಟಲಂಗಳೊಳ್: **ಶಾಂತಿಪು,** ೭. ೮೪ ವ)

**ನಾರಕಾವಾಸ –** ನರಕಲೋಕ (ಬೇಸಱ್ ಲೋಕಮಂ ತಗುಳ್ದು ಸುಟ್ಟ ಅೞಲಿಂದೆ ಖರಾಂಶು ನಾರಕಾವಾಸದೊಳ್ ಆಟ್ಟಿವೋಲ್ ಅಪರವಾರ್ಧಿಯೊಳ್ ಆೞ್ವುದುಂ: **ಪಂಪಭಾ,** ೩. ೮೧)

**ನಾರಜ –** ಮಾನವ[ಪದಾತಿ]ನಿಂದಾದ; ಗವಾಕ್ಷಿ (ವಿವರಂಗಳಿಂದಂ ಒಗೆವ ಅಗುರುವ ಪೊಗೆ ನಾರಜಕೆ ಮೇಲೆ ಮುಸುಱಿದ ಭೃಂಗೀನಿವಹದ ಗಱಿ: **ಆಚವರ್ಧ,** ೧. ೬೨)

**ನಾರದ –** ಒಬ್ಬ ದೇವರ್ಷಿ (ಆವ ಕಾಳಗದೊಳಂ ಕಣ್ಣಾರದಂ ನಾರದಂ: **ಪಂಪರಾ,** ೬. ೧೮)

**ನಾರದತನಯೆ –** ನಾರದ ಋಷಿಯ ಸಾಕುಮಗಳಾದ ಭದ್ರೆ (ನಾನಾ ಭಮಗಿಯಿಂ ನಾರದತನಯೆ ನಯಂಬೆತ್ತುದು ಎಂಬಂತೆ: **ಕಾದಂಬ,** ೬. ೧೬೭)

**ನಾರಸೀರೆ –** ನಾರಿನ ಬಟ್ಟೆ (ನಿನ್ನಂ ನಿನ್ನ ನನ್ನಿಯನೆ ಕಾದು ನಿನ್ನನುಜರ್ ಬನ್ನದ ಕೂೞನುಂಡರ್ ಪನ್ನೆರಡು ವರ್ಷ ಬೇಡದಂತೆ ಅಡವಿಯೊಳ್ ನಾರಸೀರೆಯನುಟ್ಟು ಬೇರುಮಂ ಬಿಕ್ಕೆಯಂ ತಿಂದು ಕಂದಿ ಕುಂದಿ ಪಂದೆಯ ಮನದಂತಳ್ಳಾಡುತಿರ್ಪರ್: **ಪಂಚತಂತ್ರ,** ೩೦೭ ವ)

**ನಾರಾಚ –** ಕಬ್ಬಿಣದಿಂದ ಮಾಡಿದ (ನೆಱಿಗೊಂಡುದು ನಾರಾಚಂ ನೆಱಿಗಾಣಲ್ಕಾರ್ತುದಿಲ್ಲ ಬೀರಕೆ ಬೀಯಕ್ಕಿಱಿವ ಬೆಡಂಗನೊಳಾರ್ ದೊರೆ ನೆಱ್ ತೋರ್ಕುಮೆ ಶತ್ರುಜನಕಮರ್ಥಿಜನಕ್ಕಂ: ಗದಾಯು, ೧. ೧೮); ಬಾಣ (ಕಾಯ್ದಿಸುವ ಮನೋಜನ ಕರ್ನೆಯ್ದಿಲ ಕೇಸರದ ಮಿಸುಪ ನಾರಾಚಮೆನಲ್ ಮೆಯ್ದೋರ್ಸಿಯಳ ಬಾಸೆಗೆ ಮೆಯ್ದೊಣೆಯೆಂಬೆನೆ ಮನೋಭವ ಜ್ವಾಲತೆಯಂ: **ಮಲ್ಲಿನಾಪು,** ೩. ೪೮)

**ನಾರಾಯಣ –** ಕೃಷ್ಣ (ಎಂದು ಬಿನ್ನಪಂಗೆಯ್ದ ಬೇಂಟೆಯಾತಂಗೆ ಮೃಗವ್ಯಾಯಾಮ ಕಾರ್ತಿಕೇಯಂ ಮೆಚ್ಚಿ ಮೆಚ್ಚುಗೊಟ್ಟು ತೊವಲನಿಕ್ಕೆಂದು ಮುಂದೆ ಪೇೞ್ದಟ್ಟಿ ನಾರಾಯಣನುಂ ತಾನುಂ .. ..ಬೇಂಟೆಗೆ ಪೋಱಮಟ್ಟು: **ಪಂಪಭಾ,** ೫. ೪೭ ವ); [ಜೈನ] ಒಂಬತ್ತು ಮಂದಿ ವಾಸುದೇವರಲ್ಲಿ ಒಬ್ಬ (ನಾರಾಯಣನಂ ಮಣಿಮಯ ನೀರಾಜನ ದೀಪಮಾಲೆ ಬಳಸಿದುವಾಗಳ್: **ಪಂಪರಾ,** ೧೪. ೭೩)

**ನಾರಿ –** ಬಿಲ್ಲಿಗೆ ಕಟ್ಟುವ ಹಗ್ಗ (ಅದೇಂ ಬಲ್ಲನೊ ಪಿರಿದುಂ ಶ್ವೇತನ ಬಿಲ್ಲಿನ ಕೊಪ್ಪಿನೊಳಿರಲ್ಕೆ ನಾರಿಯ ತೆರದಿಂ: **ಸಮಯಪ,** ೮. ೭೦); ಸ್ತ್ರೀ

**ನಾರಿಕೇಳ –** ತೆಂಗು (ಮತ್ತಮನೇಕ ಪವನ ಜಂಬೀರ ನಾರಿಕೇಳ ಸಹಕಾರ ಕದಳೀ ಪ್ರಮುಖ ಫಲಿತಭೂಜರಾಶಿಗಳ್: **ಪುಷ್ಪದಂಪು,** ೫. ೮೭ ವ)

**ನಾರುಗಿ –** ನಾರು ಬಿಡಿಸು ತರತರದಿಂ ನಾರುಗಿಸು ತೋಳ್ವಳೆ ಮಾಡುವ ಕೊಯ್ದು ತಂದು ಪಾದರಿಯೊಡಗಟ್ಟಿ ಸೂಡುವ .. .. ಲತಾಂಗಿಯರ್: **ಸೂಕ್ತಿಸುಧಾ,** ೮. ೨೭೭); ನರಗಳು ಕಾಣುವಂತೆ ಕೃಶವಾಗು (ಅನಿವಿರಿದು ದುಃಖದೊಳ್ ನಮೆದು ನಾರುಗಿದು ಪೊಗದು ಸತ್ತು ಅಲ್ಲಿ ನಿಷಾದನ ಮನೆಯಲ್ಲಿ ಪೆಣ್ ನಾಯಾಯ್ತು: **ಸುಕುಮಾಚ,** ೫. ೧೯)

**ನಾಲಗೆ –** ಜಿಹ್ವೆ (ನಾಲಗೆಯಿಲ್ಲದೆ ನುಡಿವೆನೆಂಬ ಪಱುಗೋಲಿಲ್ಲದೆ ತೊಱೆಯಂ ಪಾಯ್ವೆನೆಂಬ ಪಚ್ಚಪಸಿಯೆಗ್ಗನಂ ಪೋಲ್ತುಂ: **ಧರ್ಮಾಮೃ,** ೧. ೬೪ ವ)

**ನಾಲಗೆ ಕುಲಮಂ ತುಬ್ಬುವವೋಲ್ –** ನಾಲಗೆ ಹುಟ್ಟನ್ನು [ಸ್ವಭಾವವನ್ನು] ಸೂಚಿಸುವಂತೆ (ಕುಲಜರಂ ಉದ್ಧತರಂ ಭುಜಬಲಯುತರಂ ಹಿತರಂ ಈ ಸಭಾಮಧ್ಯದೊಳ್ ಅಗ್ಗಲಿಸಿದ ಮದದಿಂ ನಾಲಗೆ ಕುಲಮಂ ತುಬ್ಬುವವೋಲ್ ಉಱದೆ ನೀಂ ಕೆಡೆನುಡಿವೈ: **ಪಂಪಭಾ,** ೧೦. ೨೦)

**ನಾಲ್ಕಭಿನಯ –** ಅಭಿನಯದ ನಾಲ್ಕು ಬಗೆಗಳು (ಆಂಗಿಕ ವಾಚಿಕ ಸಾತ್ತ್ವಿಕ ಆಹಾರ್ಯಂಗಳೆಂಬ ನಾಲ್ಕಭಿನಯಮುಂ ಸಕಲ ಪರೀಷಹಮೆನೆ ರಂಜಕಮಾದುದು: **ಅಜಿತಪು,** ೫. ೯)

**ನಾಲ್ಸಾಸಿರ –** [ನಾಲ್+ಸಾಸಿರ] ನಾಲ್ಕು ಸಾವಿರ (ಸುಶರ್ಮನುಮಂ ನಾಲ್ಸಾಸಿರ ರಥಂಬೆರಸು ದಕ್ಷಿಣದಿಶಾಭಾಗಕ್ಕೆ ವೇೞ್ದು ತುಱುವಂ ಕೊಳಿಸಿದಾಗಳ್: **ಪಂಪಭಾ,** ೮. ೮೯ ವ)

**ನಾಲ್ಮೊಗ –** ನಾಲ್ಕು ಮುಖ[ದವನು], ಬ್ರಹ್ಮ (ನುಡಿವೆಣ್ಣನಾಂತ ನಾಲ್ಮೊಗಂ ಇರದಚ್ಚದಾವರೆಯ ಚೆಂದಮಂ ಅಂದು ಒಳಕೆಯ್ದೆ ಬಂದು ನೆಟ್ಟಗೆ ಬಲವಕ್ಕದೊಳ್ ನೆಲಸಿ ಕಣ್ಗೆಸೆದಂ ಬಿದಿ ನಿಂದು ನೋೞ್ಪರಾ: **ಕಬ್ಬಿಗಕಾ,** ೧೨೮)

**ನಾಲ್ಬಟ್ಟೆ –** ನಾಲ್ಕು ದಾರಿಗಳು ಸೇರುವ ಜಾಗ (ನಾಲ್ಬಟ್ಟೆಯ ಪಿಟ್ಟೆವೋಲ್ ಕುಲನಗೌಘಂ ನುರ್ಗಿದತ್ತು: **ಜಗನ್ನಾವಿ,** ೧. ೩೦)

**ನಾಲ್ವಡಿ –** ನಾಲ್ಕರಷ್ಟು (ಆನಂದಾಶ್ರುವೊಗೆಯೆ ಬಗೆವೆರ್ಚುತ್ತಿರ್ಮಡಿ ಮೂವಡಿ ನಾಲ್ವಡಿ ಅಯ್ವಡಿ ಸಂತಸದಿಂದೆ ತಂದೆ ಮಗಳಂ ಕರೆದಂ: **ಗಿರಿಜಾಕ,** ೩. ೧೦೪)

**ನಾಲ್ವೆರಲ್ –** ನಾಲ್ಕು ಬೆರಳು (ಚಾಗದ ಕಂಬಮಂ ನಿಱಿಸಿ ಬೀರದ ಶಾಸನಮಂ ನೆಗೞ್ಚಿ ಕೋಳ್ಗೋಗದ ಮಂಡಲಂಗಳನೆ ಕೊಂಡು ಜಗತ್ತ್ರಿತಯಂಗಳೊಳ್ ಜಸಕ್ಕೆ ಆಗರಮಾದ ಬದ್ದೆಗನಿಂ ಆ ನರಸಿಂಹನಿಂ ಅತ್ತ ನಾಲ್ವೆರಲ್ ಮೇಗು ಮೊದಲ್ದ ಚಾಗದೊಳಂ ಒಂದಿದ ಬೀರದೊಳಂ ಗುಣಾರ್ಣವಂ: **ಪಂಪಭಾ,** ೧. ೫೦)

**ನಾವಿದ –** ನಾಯಿಂದ, ಕ್ಷೌರಿಕ (ನಾವಿದಂ ಕನ್ನೆಯ ಪುರ್ವುಂ ನೊಸಲುಮಂ ಸಮೆದಾಗಳ್ ಆ ಪುರ್ವುಂ ಬೋೞಪುವಾರ್ಗೆ ನೊಸಲುಂ ತರಟ್ಟನಂತಾಗೆ: **ಹರಿವಂಶ,** ೯. ೭)

**ನಾವೆ –** ದೋಣಿ, ಹಡಗು (ಗುರುಚರಣಕ್ಕೆಱಗಿ ನಾವೆಗಳನೇಱಿ ಸಮುದ್ರಂ ಪಾಯ್ದು ಪಲಾಶಪುರಮನೆಯ್ದಿ: **ಚಾವುಂಪು,** ಪು. ೪೫೫. ಸಾ. ೪)

**ನಾಸಕುಟ್ಮಳ –** ಮೊಗ್ಗಿನಂತಹ ಮೂಗು (ಶೋಭಾಕರಮಾಯ್ತು ಅದಱೊಳ್ ನಾಸಾಕುಟ್ಮಲದಂತೆ ಮೆಱೆವುದುಜ್ಜಯಿನಿಪುರಂ: **ಯಶೋಧಚ,** ೨. ೧)

**ನಾಸಾಗ್ರಿಮ –** ನಾಸಾಗ್ರ (ಶ್ವಸಿತಗತಿ ನಿಂದು ಕಡುತಣ್ಣಸನೆಯ್ದಿದ ಗಾತ್ರಮಂ ಸ್ವಯಂಪ್ರಭೆ ತಾನೀಕ್ಷಿಸಿ ಪತಿಯಿರಮನೆರೆ ಭಾವಿಸಿದಳ್ ಕರತಲಮನೊಡ್ಡಿ ನಾಸಾಗ್ರಿಮದೊಳ್: **ಶಾಂತೀಶ್ವಪು,** ೫. ೨೩)

**ನಾಸಾಪುಟ –** ಮೂಗಿನ ಹೊಳ್ಳೆ (ವಿಕಸಿತನಾಸಾಪುಟಂ ಅತಿವಿಕಂಪಿತಾತಾಮ್ರದಶನವಸನಂ: **ಆದಿಪು,** ೧೪. ೨೪)

**ನಾಸಾವಂಶ** – ಮೂಗಿನ ನಡುಮೂಳೆ, ಚಾಚಿದ ಮೂಗು (ಆ ಚಂಪಕವಿಳಾಸ ನಾಸಿಕಾವಂಸೆಯರೊಳ್: **ಆದಿಪು,** ೮. ೨೩ ವ)

**ನಾಸಿಕ** – ಮೂಗು (ಓರಂದದಿಂದ ಅಕ್ಕಜುಗಂಪಂ ನಾಸಿಕಕ್ಕೆ ಒಂದಿಸುತೆನಸುಂ ಮೆಯ್ಗೆ ಸೈಪಂ ಸಮಂತೆಳ್ಚಜೆಸುತ್ತುಂ ತೀಡುತಿರ್ದತ್ತವರ್ಗೆ ಅನುಚರನಂತೆ ಆ ವನಾಂತಸ್ಸಮೀರಂ: **ಶಾಂತೀಶ್ವಪು,** ೫. ೧೩೮)

**ನಾಸ್ತಿ ಸತ್ವಾತ್ರತರಂ ತಪಂ** – ಸತ್ಯಕ್ಕಿಂತ ಮಿಗಿಲಾದ ತಪವಿಲ್ಲ (ನಾಸ್ತಿ ಸತ್ವಾತ್ರತರಂ ತಪಂ ಎಂದಿರ್ದಪುದು ಆಗಮೋಕ್ತಂ: **ಸಮಯಪ,** ೫. ೩೯)

**ನಾಳಿ** – ದಂಟು (ಬೆನ್ನೊಳ್ ನಾಳಿಬಿರ್ದು ಕಱಮೆಯಾಗಿ ಪುೞಿತು ನಮೆದು ಸತ್ತು ಮತ್ತಮಾ ಪೊಟಿಲೊಳ್ ಪೇಪಂದಿಯಾಗಿ ಪುಟ್ಟಿ: **ವಡ್ಡಾರಾ,** ಪು ೯, ಸಾ ೨)

**ನಾಳಿ** – ಬಾಣವಿಶೇಷ (ನಾಳಿಯ ಕೋಲ್ ಜವನಾಳಿವೆಂಬಿನಂ ಕವಿದುವು ತೋಮರಂ ಜವನ ಡಾಮರವಾದುವು: **ಪಂಪರಾ,** ೧೩. ೬೧)

**ನಾಳಿಕಾ** – ಇಪ್ಪತ್ತನಾಲ್ಕು ನಿಮಿಷಗಳ ಕಾಲ, ಒಂದು ಗಳಿಗೆ (ಅದು ಸಮಯಾವಳಿಕೋಚ್ಛ್ವಾಸಸ್ತೋಕ ನಿಮೇಷ ನಾಳಿಕಾ ಮುಹೂರ್ತ ದಿವಸ ಪಕ್ಷ ಮಾಸರ್ತ್ವಯನ ಸಂವತ್ಸರಾದಿಗಣನಾಕ್ರಮದಿಂದಂ: **ಅದಿಪು,** ೬. ೪೮ ವ)

**ನಾಳಿಕೇರ** – ನಾರಿಕೇಳ (ಸಕಲದಿಶಾಳಿಯಂ ಪುದಿದ ಶಾಳೀವನಂ ಶಶಿಕಾಂತನಿರ್ಗತೋದಕ ನವನಾಳಿಕೇರ .. .. ಬೆಳೆಯ ಪೆರ್ಚೆಳಸಿಂ: **ಮಲ್ಲಿನಾಪು,** ೨. ೧೨)

**ನಾಳಿಕೇರಫಳ** – ತೆಂಗಿನ ಕಾಯಿ (ಅನುಪಮ ನಾಳಿಕೇರಫಳ ಸಂಕುಳಂ ಒಳ್ಳೆಳೆನೀರಂ ಆಂತುದು ಇಂಪಿನ ರಸದ ಉರ್ವನಾಳ್ದು ನಯವೇಱಿದುದು: **ಶಾಂತೀಶ್ವಪು,** ೧೨. ೭೪)

**ನಾಳಿಬೀೞ್** – ಗುಳಿಯುಂಟಾಗು (ಪಿರಿಯ ಪೊಱೆಗಳಂ ಪೊತ್ತು ಪೋಗಿ ಬೆನ್ನೊಳ್ ನಾಳಿಬಿರ್ದು ಪುೞಿತು ನಮೆದು ಸತ್ತು: **ವಡ್ಡಾರಾ,** ಪು ೧೩, ಸಾ ೪)

**ನಾಳಿಪುಣ್** – ಬೆನ್ನೊಡೆದು ಆಗುವ ಹುಣ್ಣು (ಇರ್ಬಗಿಯಾಗಿ ಪೋೞ್ದು ನೀರೇಱಿದ ನಾಳಿಪುಣ್ಣೊಡೆದು ಸೌಳೆನೆ ಸೀಳ್ದುದು ದೋಣಿವೋಪಿನಂ: **ಸುಕುಮಾಚ,** ೫. ೧೬)

**ನಾಳೀವ್ರಣ** – ನಾಳಿಪುಣ್ (ಆ ವ್ರತ ಶಿತಾಸಿ ಸಂಸಾರವ್ರತತಿಚ್ಛೇದಮಕ್ಕುಂ ಆ ಸಂಸಾರಂ ತೀವ್ರತರ ದುಃಖದಂ ನಾಳೀವ್ರಣಸದೃಶಂ ಶರೀರಿಗದ ಕಿಡೆ ನೆಗೞೆಂ: **ಶಾಂತಿಪು,** ೭. ೭)

**ನಾಳಿಕೆ** – ಒಂದು ಗಳಿಗೆ, ಇಪ್ಪತ್ತನಾಲ್ಕು ನಿಮಿಷ (ಸ್ತೋಕಂ ನೆಱೆದೇೞಾಗೆ ಲವಾಕಾಲಂ ಮೂವತೆಂಟುವರೆಯೆನಿಸಿಪ ಲವಾನೀಕಂ ನಾಳಿಕೆ: ಪಂಪರಾ, ೧.೫೦)

**ನಾಳಿಕೇರ** – ತೆಂಗು (ವನಪಾಲಕರಂ ಪಾರುತ್ತಿಪ್ಪಂತಿರ್ಪುವು ಸಾರಾಯ ಫಲಾಳಿ ನಾಳಿಕೇರಂ ಬನದೊಳ್: **ಗಿರಿಜಾಕ,** ೨. ೪೭)

**ನಾಳೀಜಂಘ** – ಹೆಣ್ಣು ಕೋತಿ (ನಾಳೀಜಂಘಂ ಕರಂ ಪಲ್ದೆಱೆದು ನಡುಗಿ ಹೞೆಂಬೊಂದು ಪುರ್ಬಿಕ್ಕಿತಾಗಳ್: **ರಾಜಶೇವಿ,** ೯. ೨೯)

**ನಾಳೆ** – ಇಂದಿಗೆ ಮರುದಿನ(ನಾಳೆ ನಮ್ಮ ಮನೆಯೊಳ್ ಪಾನಿಗಟ್ಟುವಮೆಂದು ಬಗೆದಿರ್ದು: **ವಡ್ಡಾರಾ,** ಪು ೭೯, ಸಾ.೧೧)

**ನಾಳ್ಗಡಿಗಳೆ** – ಗಡಿಪಾರುಮಾಡು (ಪಡೆವಳ್ಳರ್ ನೃಪಗುಣಮಂ ಬಿಡೆ ನಾಳ್ಗಡಿಗಳೆವ ತೆಱದೆ: **ಕಾದಂಬ,** ೩. ೮೯)

**ನಾಱು** – ಸುವಾಸನೆ ಬೀರು (ಬೆಣ್ಣೆಗಾಸಿದಾಮೋದ ಸುಂಧಪರಿಮಳಂ ನಾರ್ಪ ತುಪ್ಪಮುಂ .. .. ಭಟ್ಟಾರರ್ಗೆ ಬಡ್ಡಿಸಿ: **ವಡ್ಡಾರಾ,** ಪು.೭೮, ಸಾ. ೧೫); ದುರ್ವಾಸನೆ ಬೀರು ಕರಂ ಪಿರಿಯುರಿಯಳ್ವೆ ಚಂದನ ಮಹಾದ್ರುಮಮೇಂ ಗಳ ಪೊತ್ತು ನಾರ್ಕುಮೇ: **ಹರಿವಂಶ,** ೧೪. ೧೨)

**ನಾಟ್** – ಸಮಾಸವಾಗುವಾಗ 'ನಾಡು' ಪಡೆಯುವ ರೂಪ: ಉದಾ, ನಾಡ+ಗಾಮುಂಡ, ನಾಟ್ಗಾಮುಂಡ (ತಮ್ಮ ಕೊಂಡು ಪೋದ ಭಂಡಮಂ ಮಾಱೆ ಪೆಱದಂ ತಮ್ಮ ನಾಟ್ಗೆ ಅಪೂರ್ವಮಪ್ಪ ಭಂಡಮಂ ತೀವಿಕೊಂಡು .. .. ಬಂದಿರ್ದರ್: **ವಡ್ಡಾರಾ,** ಪು ೭೧, ಸಾ ೨೫)

**ನಾಟವಾಸಗೆ** – ಮೋಸದ ದಾಳ (ನಾಟವಾಸಗೆಗಳಂ ಅರಸಾಳಂತೆ ಕಣ್ಣಱಿದು ಮೆಟ್ಟಿ ಮಟ್ಟಮಱಿದು ಇಕ್ಕುವಾಗಳ್ ಒಡ್ಡಮಂ ಪೇೞೆಮೆನೆ: **ಪಂಪಭಾ,** ೬. ೭೧ ವ)

**ನಾಟ್ಕಡೆ** – ನಾಡಿನ ಕಡೆ, ಎಂದರೆ ಗಡಿ (ಡಕಾರಕ್ಕಾದೇಶಮಾದ ಱಟಕ್ಕಂ ಪ್ರಯೋಗ: ಕಾಟ್ಕಿೞ್ಚು, ನೀಟ್ಕರಿಸಿದಂ, ನಾಟ್ಕಡೆ: **ಶಬ್ದಮದ,** ೨೯ ಪ್ರ)

**ನಾಟ್ಕಡೆಗೞೆ** – ದೇಶಭ್ರಷ್ಟನಾಗಿಸು (ನಾಟ್ಕಡಿಗೞೆದೊಡೆ ಮದೀಯ ನಾಥಂ ಬೇರಂ ಬಿಟ್ಕೆಯನೆ ತಿಂದ ದೆವಸದೊಳಟ್ಕಾಡಿದ ಬೀರಮೀಗಳೇಂ ಪೊಸತಾಯ್ತೇ: **ಪಂಪಭಾ,** ೧೨. ೧೭೮)

**ನಾಟ್ಕಡೆವೋಗು** – ದೇಶಭ್ರಷ್ಟನಾಗು (ಶತ್ರುಸಂತತಿ ತಲೆವಾಗೆ ಶಿಷ್ಟಜನದ ಆಱಿಡಿ ನಾಟ್ಕಡೆವೋಗೆ ತೇಜಂ ಉದ್ಧತರನೆ ಕೊಂದು ಕೂಗೆ: **ಪುಷ್ಪದಂಪು,** ೧೩. ೨)

**ನಾಟ್ಗಾದೆ** – ನಾಡ ಗಾದೆ, ನಾಣ್ನುಡಿ (ಆವಿಷ್ಕೃತಂ ಮಾಡಿದಂ ದೇವಂಗಾಱದೆ ಧರ್ಮಿಯಂ ಬಡಿದರೆಂಬೀ ಸಂದ ನಾಟ್ಗಾದೆಯಂ: **ಪುಷ್ಪದಂಪು,** ೧೨. ೮೬)

**ನಾಟ್ಜೋಡೆ** – ಪ್ರಸಿದ್ಧ ಜಾರೆ (ಓಡಿದನೊಳ್ ಪರಾಂಗನೆಯೊ ಓತು ಓಡಿದನೊಳ್ ಅಸರಾಗದಿಂ ಕೂಡುವಳ್ ಎಂಬ ಡೊಂಬೆಸಿರಿ .. .. ನಾಟ್ಜೋಡೆಯವಳ್ಗದಕ್ಕುಂ: **ಹರಿವಂಶ,** ೧೧. ೧೦೪)

**ನಾಟ್ನುಡಿ** – ನಾಣ್ಣುಡಿ, ಗಾದೆ (ಬಗೆಗಿಡಿಸೆ ಮೋಹನೀಯಂ ನಗಧರ ಶವಧಾರಿಯಾಗೆ ಷಣ್ಮಾಸಮದೇಂ ನೆಗೞ್ದುದೊ ಸಲೆ ಬಲದೇವನ ಪೆಗಲ ಪೆಣಂ ಕುಂದದೆಂಬ ನಾಟ್ನುಡಿ ಜಗದೊಳ್: **ಪಂಪರಾ,** ೧೬. ೫೩)

**ನಾಟ್ಪ್ರಭು** – ನಾಡ ಪ್ರಭು, ರಾಜ (ನಾಟ್ಪ್ರಭು ಜನಾರ್ದನದೇವನ ವಕ್ತ್ರಪದ್ಮದೊಳ್: **ಯಶೋಧಚ,** ೪. ೮೭)

**ನಾಟ್ವರ್ತನ** – ನಾಡ ನಿಯಮ (ಎಳವಿದಿರ ಬಣ್ಣದೊಳ್ನಡು .. ,, ಸೊಬಗಿವಳ್ಗೆ ನಾಟ್ವರ್ತನಮೇ: ಆದಿಪು, ೪. ೪೪); ಕಪಟ (ಅಂತಾ ನಾಲ್ವರುಂ ನಾಟ್ವರ್ತನಮಿಲ್ಲದೆ ಉಳ್ಳುದನುಳ್ಳ ಂದದೊಳ್ ಅಱೆಪುವುದುಂ: **ಸುಕುಮಾಚ,** ೭. ೧೫)

**ನಾಟ್ವಿಳಾಸ** – ನಾಡ ವಿಲಾಸ, ದೇಸೀ ಸೊಬಗು [(ನಾಟ್ವಿಳಾಸದೊಳ್ ಪೊರೆದಿರೆ ಬಂದುದಂದೊಡನೆ ಸಜ್ಜನವೆಂಡಿರ ತಂಡಮೋಳಿಯೊಳ್: **ಆದಿಪು,** ೧೧. ೪೬)

**ನಿಂದಣ** – ನಿಂದೆ, ಬೈಗುಳ (ವೈದ್ಯಂ ಅನವರತಂ ತಮ್ಮನೋಲಗಿಸುವುದಱೆಂ ತಮಗೆಂದುಂ ಮಾಡಿದ ವೈಯಾಪೃತ್ಯಮಂ ಅಱೆದು ನಿಂದಣ ಗುರಹಣಂಗೆಯ್ದು: **ವಡ್ಡಾರಾ,** ಪು ೧೭೨, ಸಾ ೧೧)

**ನಿಂದಣೆ** – ನಿಂದನೆ (ರಿಸಿಯರಂ ಕೊಂದೆನೆಂದು ನಿಂದಣೆ ಗರುಹಣೆ ಗೆಯ್ದು: **ವಡ್ಡಾರಾ,** ಪು ೧೫೬, ಸಾ ೧೫)

**ನಿಂದ್ಯ** – ನಿಂದನೀಯ (ವಂದಿಗಳ್ ನಿಂದ್ಯಮೆನೆ ಮಾಗಧರ್ ಆಗದೆನೆ ಸೂತರ್ ಅನೀತೆಯೆನೆ: **ಜಗನ್ನಾವಿ,** ೨. ೫೩ ವ)

**ನಿಂಬ** – ಬೇವು (ಪ್ಲಕ್ಷ ಕದಂಬ ನಿಂಬ ಪನಸ ಅರ್ಜುನ ತಾಲ ಲವಂಗ ಲುಂಗ ರುದ್ರಾಕ್ಷ ತುರುಷ್ಕ ಮುಷ್ಕ ನಿಚುಳ ಆಮ್ರ ಕರಂಜ ವಟ ಆದಿ ಅನೇಕ ವೃಕ್ಷ: **ಪಂಚತಂತ್ರ,** ೯೭)

**ನಿಃಪಾಟವ** – ಅದಕ್ಷ (ಮಿಂಡರುತ್ಪಾಟಿಪೆಮೆಂದು ಪೂಣ್ದು ಅಖಿಳಶಕ್ತಿಯಿಂ ಎತ್ತುತ್ತುಂ ಅಳ್ಳೆವೊಯ್ಯೆ ನಿಃಪಾಠವರಾಗಿ ಪಿಂಗೆ: **ಆಚವರ್ಧ,** ३. ४೬)

**ನಿಃಪ್ರವೀಚಾರ** – ದೇಹಸಂಪರ್ಕವಿಲ್ಲದೆ ಸುಖವನ್ನು ಅನುಭವಿಸುವವನು (ನಿಃಪ್ರವೀಚಾರಸುಖನುಂ ಸಪ್ರವೀಚಾರಾಂತಗುಣನುಂ .. .. ಆಗಿ .. .. ದಿವ್ಯಸುಖಮಂ ಅನುಭವಿಸುತ್ತುಮಿರ್ದಂ: **ನೇಮಿನಾಪು,** ೪. ೬೫ ವ)

**ನಿಃಪ್ರಾದೇಶಿಕ** – ಪ್ರದೇಶಾತೀತ, ದೇವರು (ನಿಃಪ್ರಾದೇಶಿನೆಂದಾತಂ ಉಪಾದೇಯಂ ಮುಕ್ತಿಮುಕ್ತನುಂ ಪರಮಾತ್ಮಂ: **ಯಶೋಧಚ,** ೪. ೨೬)

**ನಿಃಶೀಲವ್ರತ** – [ಜೈನ] ಸಪ್ತಶೀಲವ್ರತಗಳನ್ನು ಆಚರಿಸದಿರುವುದು (ನಿಃಶೀಲವ್ರತಮನುಷ್ಯತಿರ್ಯಗ್ಜೀವಂಗಳ್ ದಾನಾನುಮೋದನದಿಂ ಪರಸ್ಪರವಿರೋದವಿರಹಿತ ಪಂಚೇಂದ್ರಿಯತಿರ್ಯಗ್ಜಾತಿಗಳಾಗಿ ಪುಟ್ಟಿ: **ಸುಕುಮಾಚ,** ೧೧. ೫೪ ವ), ನೋಡಿ, 'ಸಪ್ತಶೀಲ'

**ನಿಃಶ್ರೇಯಸ** – ಮೋಕ್ಷ (ಅಪವರ್ಗಂ ಸಿಃಶ್ರೇಯಸಂ ಅಪುನರ್ಭವಂ ಅಮೃತಂ ಅಕ್ಷರಂ ಮೋಕ್ಷಂ: **ಅಭಿಧಾವ.** ೧. ೩. ೧೯)

**ನಿಕಟ** – ಸಮೀಪದಲ್ಲಿರುವ (ಸೌಮಿತ್ರಿ ವಿಲಯಕಾಲ ಮಹಾಮೇಘಸ್ಕಂಧ ನಿಕಟ ನರ್ತಿತ ವಿದ್ಯುದ್ದಾಮಮಿದೆನೆ ದಂತಾಂಶುಸ್ತೋಮಮಂ ಪೊಳೆದುಳ್ಕೆ ಬೆಟ್ಟವೆಟ್ಟನೆ ನುಡಿದಂ: **ಪಂಪರಾ,** ೬. ೧೪೦)

**ನಿಕರ** – ಸಮೂಹ (ಭೂತಾಂಗನಾ ನಿಕರಂ ಶೋಣಿತವಾರಿಯಂ ಕುಡಿದು ಅಗುರ್ವಪ್ಪನ್ನೆಗಂ ಸೂಸೆ ನೋಡ ಕವಿಲ್ತಿರ್ದುದು ಕೂಡೆ ಸಂಜೆಗವಿದಂತಾ ದ್ರೋಣನಿಂ ಕೊಳ್ಗುಳಂ; **ಪಂಪಭಾ,** ೧೨. ೨೫)

**ನಿಕರ್ತನ** – ಕತ್ತರಿಸುವುದು (ನಾಭಿನಾಮಮುಮಾಯ್ತು ಅರ್ಭಕರನಿಕರನಾಭಿಪ್ರಕರ ನಿಕರ್ತನಮಱಿಯೆ ಪೇೞ್ದುದಱಿಂದಂ: **ಆದಿಪು,** ೬. ೬೭)

**ನಿಕಷ** – ಒರೆಗಲ್ಲು (ಭಾಷಾವಿದರ್ ಕವಿತ್ವವಿಶೇಷಜ್ಞನಿಕಷರಪ್ಪೊಡೆ ಅಪ್ಪುದು ಸಭೆಯೊಳ್ ಮಾಷಮುಖದಂತೆ: **ಆದಿಪು,** ೧. ೨೨)

**ನಿಕಷಣ** – ಉಜ್ಜುವುದು (ಶ್ರೀವಿಜಯಾರ್ಧಾಚಳ ಖಚರಾವಳಿ ಮಣಿಮುಕುಟಮಕರಿಕಾನಿಕಷಣಲೇಖಾವಿಳಸಿತಪದಕಮಳಂ: **ಆದಿಪು,** ೨. ೧)

**ನಿಕಷದೃಷದ** – ನಿಕಷ (ಪಾಷಾಣಹೃದಯರಪ್ಪೊಡೆ ದೂಷಿಸಿ ಮತ್ಕಾವ್ಯಮಂ ಪರೀಕ್ಷಿಸುಗೆ ಗುಣಾನ್ವೇಷಿಗಳಪ್ಪೊಡೆ ಕನಕನಿಕಷದೊಳೇಂ ನಿಕಷದೃಷದಮನಱಸದರೊಳರೇ: **ಲೀಲಾವತಿ.** ೧. ೬೯)

**ನಿಕಷಾಶ್ಮ** – ಒರೆಗಲ್ಲು (ಕಾಂತಾಕುಚಾವಳಿ ಭಸ್ವತ್ ನಿಕಷಾಶ್ಮಸಂಗತಿಯಿಂ ಅಂಗಂ ಯೌವನಾರಂಭಮಾಗೆ: **ಪಾರ್ಶ್ವನಾಪು,** ೬. ೨೭)

**ನಿಕಾಮ** – ಬಯಕೆ (ವಜ್ರಜಂಘಂ ಶ್ರೀಮತಿಯ ನಿಕಾಮ ಕೋಮಳಕರತಳಪಲ್ಲವಸ್ಪರ್ಶನ ಸುಖೋನ್ಮೀಳಿತ ಲೋಚನನಾಗೆ: **ಆದಿಪು,** ೪. ೪೮ ವ); ಪರ್ಯಾಪ್ತ, ವಿಪುಲ (ಅಂತು ನಿಕಾಮಪ್ರೇಮದಿಂ ಕಾಮಸುಖಮಂ ಅನುಭವಿಸುತ್ತಿರಲ್: **ಜಗನ್ನಾವಿ,** ೨. ೫೨ ವ)

**ನಿಕಾಮಂ** – ವಿಪುಲವಾಗಿ (ಕುಚಂ ಬೆಳ್ಪುವೆತ್ತುದು ರೋಮಾವಳಿ ರಾಜಿತಂ ನಡು ನಿಕಾಮಂ ಪೀವರಶ್ರೋಣಿ ಸಂಪದಂ ತೀವಿದುದು ಕುಮಾರಿಗೆ ವಿಳಾಸಾಳಂಬನಂ ಯೌವನಂ: ವರ್ಧಮಾಪು, ३. ४೬); ಸುಂದರ (ನಿರಲಂಕಾರ ನಿಕಾಮಂ ಆಕೃತಿ ತದಾಕಾರಂಬೊಲ್ ಅಸ್ಮತ್ ಪ್ರಿಯಾಧರದಂದಕ್ಷತ ಕೋಮಲಂ ಕಿಸಲಯಂ: **ಲೀಲಾವತಿ,** ೧೪. ೯३)

**ನಿಕಾಮಕಮನೀಯ** – ಅತ್ಯಂತ ಮನೋಹರವಾದ (ಹರಿನೀಲ ಗವಾಕ್ಷಜಾಲದೊಳ್ ಅವಿರಳಮುಕ್ತಾದಾಮ ನಿಕಾಮಕಮನೀಯ ವಿತಾನದೊಳ್: **ಆದಿಪು,** ೭. ೨೭ ವ)

**ನಿಕಾಮಕೋಮಲ** – ಅತ್ಯಂತ ಮೃದು (ಚಲದ ಅಭಿಮಾದ ಉನ್ನತಿಯ ಪೆಂಪನೆ ತಾಳ್ದಿದುವೀ ನಿಕಾಮಕೋಮಲ ಭವದುಕ್ತಿಗಳ್: **ಆದಿಪು,** ೧೨. ೧೦३)

**ನಿಕಾಯ** – ಸಮೂಹ (ತರುನೀಡ ನಿಕಾಯದಿಂ ಎಲ್ಲವಾಗಳಾಗಳೆ .. .. ಶುಕಶಾಬಕಪ್ರಕರಮಂ ತೆಗೆದಂ ದಯೆಗೆಟ್ಟ ಲಬ್ಧಕಂ: **ಕಾದಂಸಂ,** ೧. ೫೦)

**ನಿಕಾರವಟ್ಟೆ** – ಶುಭ್ರವಾದ ಬಟ್ಟೆ (ಮಿಳಿದು ಮಸಗಿಸುವ ನಿಕಾರಿವಟ್ಟೆಯ ಗುಡಿಯ ತುಱುಗಲೊಳಂ: **ಅನಂತಪು,** ೧೪. ೨३ ವ)

**ನಿಕಾಶ** – ಸದೃಶ (ಚಂಪಕಮುಕುಳನಿಕಾಶನಾಸಾವಂಶೆಯರ್: **ಆದಿಪು,** ೧೧. ೯೫ ವ)

**ನಿಕೀರ್ಣ** – ತುಂಬಿದ (ಅಶೋಕವೃಕ್ಷಮೆಸೆದಪುದು ನಮಜ್ಜನಮನಶೋಕಂ ಮಾಳ್ಪವೊಲ್ ಅನೇಕ ಶಾಖಾನಿಕೀರ್ಣ ಕಿಸಲಯಚಯದಿಂ: **ಅಜಿತಪು,** ೮. ೧೫)

**ನಿಕುಂಜ** – ಪೊದೆ, ಲತಾಗೃಹ, ಬಳ್ಳಿ ಮನೆ (ಕನಕಾದ್ರೀಂದ್ರ ನಿಕುಂಜರಂಜಿತವನಕ್ರೋರೋರ್ಮಿ .. .. ಲೀಲಾವಿಲೋಕನದಿಂ ಮಾಣದೆ ಪೋಗಿ ಪೊೞ್ತುಗಳೆವಂ ನಿಚ್ಚಂ ನಿಳಿಂಪೋತ್ತಮಂ: **ಸುಕುಮಾಚ,** ೯. ४೦)

**ನಿಕುರುಂಬ** – ಗುಂಪು (ನೆರೆದ ಸಮಸ್ತದೇವನಿಕುರುಂಬದ ಯಾನವಿಮಾನಕಿಂಕಿಣೀವಿರುತಿಯ: **ಆದಿಪು,** ३. ೨೨)

**ನಿಕೃತನಿದ್ರಾ** – ಮಾಯಾ ನಿದ್ರೆ (ಇಂದ್ರಾಣೀವದನ ಚಂದ್ರಚಂದ್ರಿಕಾವಿಘಟಿತ ನಿಕೃತನಿದ್ರಾಮುದ್ರಿತನಯನ ನೀಲೋತ್ಪಳೆಯಪ್ಪ ಜಗದ್ಗುರುರಂಜನೆಯುಂ ಬಂದು: **ಆದಿಪು,** ೭. ೧೧೦ ವ)

**ನಿಕೃತಿವಿಚ್ಛೇದಿನಿ** – [ಜೈನ] ಮಾಯಾನಿವಾರಣ ವಿದ್ಯೆ (ಅವಲೋಕಿನಿಗೀ ರೋಹಿಣೆ ಗರುಡವಾಹಿನಿ ವಿದ್ಯೆ ನಿಕೃತಿವಿಚ್ಛೇದಿನಿ[?]ಯೆನಿಕುಂ: **ವರ್ಧಮಾಪು,** ४. ३೦)

**ನಿಕೃಷ್ಟ** – ಕೀಳಾದ (ಪಾಪದಿಂದಿನಿತು ನಿಕೃಷ್ಟ ದುರ್ಗತಿಗಳೊಳ್ ಬಲವಂದುದನೀಗಳಾಗಿಯುಂ ನೆನೆದು: **ಸುಕುಮಾಚ,** ೫. ೨೯)

**ನಿಕೃಷ್ಟಾತ್ಮ** – ಕೀಳು ಮನಸ್ಸಿನವನು (ಉಗ್ರಂ ಸಮಗ್ರಂ ರಜತಗಿರಿಗೆ ಪೋದಂ ನಿಕೃಷ್ಟಾತ್ಮನಾದಂ: **ಗಿರಿಜಾಕ,** ೮. ೮೪)

**ನಿಕೇತನ** – ಮನೆ, ನೆಲೆ (ಅರಾತಿನಿಕರಕ್ಕೆ ಅಯೋಧ್ಯೆಯಪ್ಪುದಱಿಂದ ಅಯೋಧ್ಯೆಯುಂ ಅನೇಕ ನಿಕೇತನಸಮನ್ವಿತಮಪ್ಪುದಱಿಂ ಸಾಕೇತಮುಂ: **ಆದಿಪು,** ೬. ೧೦೭ ವ)

**ನಿಕೋಚ** – ಮೊಗ್ಗು (ಸಂಜೆವೊಟ್ತು ಬರೆ ಮುಷಿತದುಖೋದಯೆಯಾಗಿ ಪುಗಿಸಿ ತದ್‌ಭೀತಿಯಿಂದೆ ಮುಚ್ಚುವೊಳಯ್ತು ನಳಿನಿನಿಕೋಚಂ: **ವರ್ಧಮಾಪು,** ೮. ೨೪)

**ನಿಕ್ಕುವ** – ನಿಶ್ಚಯ (ಭವತ್ ಊರುಯುಗಂಗಳಂ ಆಜಿರಂಗದೊಳ್ ಗಿಜಿಬಿಜಿಮಾಡಲೆಂದು ಅವನ ಪೂಣ್ದುದು ನಿಕ್ಕುವಂ ಆಗದಿರ್ಕುಮೇ: **ಪಂಪಭಾ,** ೯. ೫೨)

**ನಿಕ್ಕುವಂ** – ನಿಜವಾಗಿಯೂ (ನೀನೆನಗೆ ಕೂರ್ಪುದು ನಿಕ್ಕುವಂ ಅಪ್ಪೊಡೆ .. .. ಜೀವಮಂ ಅಬ್ಬೆ ಪತ್ತುವಿಡದಂತಿರೆ ಮಾಡುವುದು: **ಕಾದಂಬ,** ೯. ೫೨)

**ನಿಕ್ಕುಳಿಸು** – ವಿಲಾಸದಿಂದ ಬಾಗು (ಕಂಕಣನಿಕ್ವಣಮುಣ್ಮೆ .. .. ಅರಲ್ ತಿಜಿದಳ್ ವಿಳಾಸದಿಂ: **ರಾಜಶೇವಿ,** ೧೦. ೪೭)

**ನಿಕ್ವಣಿತ** – ಆಭರಣ ಮಾಡುವ ಧ್ವನಿ (ಚಲತ್ ಕಂಕಣಕಾಂಚೀಕಿಂಕಿಣಿನಿಕ್ವಣಿತಯುತೆ ವರಾಘ್ಯರ್ಣಮಂ ಸಾರ್ದಳಾಗಳ್: **ರಾಜಶೇವಿ,** ೮. ೫೮)

**ನಿಕ್ವಾಣ** – ಶಬ್ದ (ಪ್ರಗಲ್ಭ ಕೋಕಿಲನಿಕ್ವಾಣಂ ನಿಕಾಮಕೋರಕಕೋಣಂ ವಿಲಸತ್ ಪ್ರವಾಳಂ ಆಮ್ರಮಹೀಜಂ: **ಲೀಲಾವತಿ,** ೧೩. ೪೫)

**ನಿಕ್ಷಿಪ್ತ** – ಇರಿಸಿದ (ಏನುಂ ತೊದಳಿಲ್ಲಿದುವೆ ನಿಕ್ಷಿಪ್ತಾಕ್ಷರಂ ವಿಭೀಷಣರಣದೊಳ್ ಜಾನಕಿಯ ದೂಸಜೆಂ ಲಂಕಾನಾಥಂ ದಾಶರಥಿಯ ಕೈಯೊಳ್ ಮಡಿಗುಂ: **ಪಂಪರಾ,** ೩. ೨೩)

**ನಿಕ್ಷೇಪ** – [ಜೈನ] ಸಮಸ್ತ ವಸ್ತುಸ್ವರೂಪವನ್ನು ಅರಿಯುವ ಬಗೆ (ಪ್ರಮಾಣ ನಯ ನಯ ನಿಕ್ಷೇಪಂಗಳಿಂ ಯಥಾವಸ್ಥಿತಿ ಸಮಸ್ತವಸ್ತುಸ್ವರೂಪಮಂ ನಿಶ್ಚಯಮಾಗಿರಲಜೆವುದು ಸಮ್ಯಜ್ಞಾನಮೆಂಬುದಕ್ಕುಂ: **ಸುಕುಮಾಚ,** ೬. ೮)

**ನಿಖಂಡಿತ** – ಕತ್ತರಿಸಲ್ಪಟ್ಟ (ಆರ್ದ್ರ ಚಂದನಾನ್ವಿತಮುಂ ಅಶಿಶಿರಕರ ರಥತುರಗಖುರಶಿಖರನಿಖಂಡಿತ ಲವಂಗಪಲ್ಲವಮುಂ: **ಪಂಪಭಾ,** ೪. ೧೮ ವ)

**ನಿಖಿಲ** – ಎಲ್ಲ, ಸಕಲ (ಮಂತ್ರಿಯುಂ ನೃಪತಿಯುಂ ಬಗೆಗೊಂಡನುಕೂಲವೃತ್ತಿಯೊಳ್ ನೆಜೆದಿರೆ ಕೂಡುಗುಂ ನಿಖಿಲರಾಜ್ಯವಿಭೂತಿಗಳಾವ ಕಾಲಮುಂ: **ಪಂಚತಂತ್ರ,** ೧೫೩)

**ನಿಖಿಲಸಮತೆ** – [ಜೈನ] ಶಿಕ್ಷಾವ್ರತಗಳಲ್ಲಿ ಒಂದು, ಭೇದವಿಲ್ಲದೆ ಎಲ್ಲ ಜೀವಗಳನ್ನೂ ಸಮಾನಭಾವನೆಯಿಂದ ಕಾಣುವುದು (ತೀವ್ರೋಪವಾಸಮುಂ ದಾನವ್ರತಮುಂ ನಿಖಿಲಸಮತೆಯುಂ ಸನ್ಯಾಸವ್ರಜನಮುಂ ಎಂಬಿವು ಶಿಕ್ಷಾವ್ರತಂ ಇದು ನಾಲ್ಕು ತೆಱಂ: **ಶಾಂತಿಪು,** ೧. ೯೦)

**ನಿಗಡ** – ನಿಗಳ, ಸಂಕೋಲೆ (ಗುರುಮತದಿಂ ಬಂಧಹೇತುಗಳ್ ಪಜಿದೊಡಂ ಆ ನಿಗಡಬಂಧಕ್ಕಂ ಈ ಕರ್ಮಬಂಧಕ್ಕಂ ಮೋಕ್ಷಮಕ್ಕುಂ: **ಜೀವಸಂ,** ೧೧. ೭ ವ)

**ನಿಗದಿಸು** – ನಿಗದಿಪಡಿಸು, ಹೇಳು (ಮೊಟ್ಟೆಗೆ ಕಾಲ್ಗರಗಿದವೋಲ್ ಅಡಿಮೊದಲು ಸಾರ್ದ ನೆಟಿಲ್ ನಡುವಗಲಂ ನಿಗದಿಸಿತ್ತು ಮುನಿಪತಿಗಾಗಳ್: **ಆಚವರ್ಧ,** ೩. ೨)

**ನಿಗಮ** – ವೇದ (ನಿಮಗಂಗಳ್ ಮಿಗೆ ಕಾಣಲಾರ್ತವೇ ಭವತ್ ಪಾದಾಬ್ಜಮಂ: **ರಾಜಶೇವಿ,** ೩. ೪೧); ನಗರ (ಗ್ರಾಮನಗರ .. .. ನಿಗಮ ಪತ್ತನತತಿ ಪಾವನಮಾಗೆ ವಿಹಾರಿಸುತ್ತೆ ಮೌನವ್ರತದಿಂ:: **ಪುಷ್ಪದಂಪು,** ೧೪. ೧೪)

**ನಿಗಮಾಂತ** – ಉಪನಿಷತ್ತು (ಸಾರ ನಿಗಮಾಂತ ಅಭೇದ್ಯ ಸದ್ರೂಪ ಚಿತ್ ವ್ಯೋಮಾಕಾರ ... .. ರಕಿಸೊಲವಿಂ: **ರಾಜಶೇವಿ,** ೩. ೩೬)

**ನಿಗಳ** – ಬೇಡಿ, ಬಂಧನ (ನಿಗಳಂಬೊಲ್ ತೊಡರ್ದೊಂದು ಮೋಹನಿಗಳಂತಜ್ಜನ್ಮದೊಳ್ ನೋಡೆ: **ಆದಿಪು,** ೬. ೨೨); ಕಾಲಂದುಗೆ (ನಿಗಳದ ನುಣ್ಚರಂ ನೆಗೆವಿನಂ ನುಡಿಗಳ್ ಕಿವಿಗಿಂಪನೀವಿನಂ ಮಗಮಗಿಸುತ್ತುಮಿರ್ಪ ನಱುಸುಯ್ಯಲರ್ವಕ್ಕಿ ಜಿನುಂಗುತಿರ್ಪಿನಂ .. .. ಮುತ್ತಿ ಸೇಸೆಯನಾಗಳಿಕ್ಕಿದರ್: **ಕಬ್ಬಿಗಕಾ,** ೨೬೬)

**ನಿಗಳಾಂದುಕಾ** – ಕಾಲಿನ ಸರಪಳಿ (ಮದನಡಿಂಡಿಮರವ ಆಡಂಬರಮಾಳೋಳತುಳಾಕೋಟಿಕ್ವಣಿತಮೆ ನಿಗಳಾಂದುಕಾ ರವಮಾಗೆ: **ಆದಿಪು,** ೧೧. ೨೦ ವ)

**ನಿಗುಂಬಿಸು** – ಒಟ್ಟಾಗು (ಇದಿರೊಳ್ ಕಂಡಂ ನೆರೆದು ನಿಗುಂಬಿಸಿ ತಂಡಂಗೊಂಡಂತಿರ್ದ ನರರ ಖಚರರ ಗುಂಡಂ: **ಆದಿಪು,** ೪. ૩)

**ನಿಗುಂಬು** – ಒಟ್ಟುಗೂಡಿಸು (ನಿಗುಂಬು–ಪುಂಜೀಕರಣೇ: **ಶಬ್ದಮದ, ಧಾ** ೪೯೧)

**ನಿಗುಣ** – ಉತ್ಕೃಷ್ಟ ಗುಣದವನು (ಗದ್ಯವಿರಚನೆಗೆ ಬಾಣನಿಂದಂ ಬಣ್ಣಂ ನಿಗುಣಂಗಂ ನಿಗುಣಂ ವೃತ್ತಗುಣಂ: **ವರ್ಧಮಾಪು,** ೧. ೨೬೦

**ನಿಗೂಢ** – ಅಡಗಿಸಿದ (ಅಂತರ್ನಿಗೂಢ ಶೋಕೋದ್ರೇಕಮೂಕೆಯುಮಾಗಿರ್ದ ನಿಜತನೂಜೆಗೆ ಬಟೆಯನಟ್ಟಿದಾಗಳ್: **ಆದಿಪು,** . ೪೬ ವ)

**ನಿಗೋದ** – ನರಕ (ಜೀವಂಗಳಿಗೇಕೇಂದ್ರಿಯ ಜೀವಕ್ಕೆ ಉತ್ಪತ್ತಿಯಾದುದನಿತೆ ನಿಗೋದಂ: **ಅಜಿತಪು,** ೧೧. ೮); [ಜೈನ] ಯಾತನೆಗಳಿಗೆ ಆಶ್ರಯವಾದ ಶರೀರ (ಅಂತು ನಿಗೋದಂಬೆರಸು ಸಪ್ತಭೂಮ್ಯಾದಿ ಪರ್ಯಂತಮಪ್ಪ ಗತಿಪಂಚಕಸ್ಥಾನಂ: **ಶಾಂತಿಪು,** ೧೨. ೧೦ ವ)

**ನಿಗ್ಗಡಿ** – ಬುದ್ಧಿಯಿಲ್ಲದವನು, ಅವಿವೇಕಿ (ನಾಣಿಲಿ ನಿಗ್ಗಡಿ ನಿಜದಿಂ ಅಪೂಜ್ಯಂ ಆಪ್ತನೆನಲಾಗದು ಅಜಿವಂ: **ಸಮಯಪ,** ೮. ೧೩೧)

**ನಿಗ್ಗವ** – ಆನೆಯ ದಂತ (ಅವರಾಶಾ ದಂತಿಗೆ ನಿಗ್ಗವಗಳಾದಂತೆ ತನಗೆ ನೆರವಾಗೆ ಮಹೋತ್ಸವಮನದೇಂ ತಳೆದನೊ ಖಚರವಲ್ಲಭಂ ಕಳೆಯಲೆಂದು ಕುಲ ಪರಿಭವಮಂ: **ಪಂಪರಾ,** ೧೦. ೧೫೨); ದಂಡನೆ, ಹಿಂಸೆ [ನಿಗ್ರಹ] (ಸಾಲ್ವ ಸಾಲಿಗರ್ಗೆ ನಿಗ್ಗವಮಲ್ಲದೆ ಪೋಪುದೇ ಋಣಂ: **ಸಮಯಪ,** ೧೨. ೨೫)

**ನಿಗ್ಘೆ** – ನೌಕರ (ಓಲಗಿಪ ನಿಗ್ಘೆಗಳುಂ ಮುದುಗಣ್ಣಳುಂ ಮೊದಲ್ ಪಡಿಯಱರುಂ ಮಹಾಮರರದೇಂ ಜಿನಚಂದ್ರಂ ಅಗಣ್ಯಪುಣ್ಯನೋ: **ಶಾಂತಿಪು,** ೭. ೭೪)

**ನಿಗ್ರಹ** – ಹಿಂಸೆ (ಪಲವಂದದ ನಿಗ್ರಹದಿಂ ಕೊಲಿಸಿದೊಡೆ ಆ ಮೊಸಳೆ ಸತ್ತುಂ ಅದುವೆ .. .. ಒಗೆದುದು ಆಡಿನ ರೂಪಿಂ: **ಯಶೋಧಚ,** ೩. ೪೯)

**ನಿಘಂಟು** – ಶಬ್ದಕೋಶ (ಛಂದಮಲಂಕಾರಂ ನಿಘಂಟು ಕಾವ್ಯ ನಾಟಕಂಗುಳುಂ: **ವಡ್ಡಾರಾ,** ಪು. ೨. ಸಾ. ೨೮)

**ನಿಘಂಟುಸಮಯ** – ನಿಘಂಟುಶಾಸ್ತ್ರ (ಅಭಿಧಾನ ಲಿಂಗಾಂಗೀಕೃತಮಪ್ಪ ನಿಘಂಟುಸಮಯಮುಂ ಶತಾರ್ಯವೃತ್ತಕಮಪ್ಪ ನಾಟ್ಯವಿದ್ಯೆಯುಮಂ: **ಶಾಂತಿಪು,** ೧೦. ೯೦ ವ)

**ನಿಘರ್ಷಣ** – ಉಜ್ಜುವಿಕೆ (ಕರಟನಿಘರ್ಷಣದೆ ಮದಂಬೊರೆದಾನೆಯ ಕೈಯನಳಿಗಳಾವರಿಸಿದವೊಳ್ ಮರಕತಕಂಕಣಮೆಸೆದುವು: **ಚಂದ್ರಪ್ರಪು,** ೬. ೬೦)

**ನಿಘರ್ಷಿಸು** – ಉಜ್ಜು, ಪರಿಶೀಲಿಸು (ಪ್ರತ್ಯಕ್ಷಾನುಮಾನಂಗಳಿಂ ಕಾರ್ಯಾಕಾರ್ಯಗಳಂ ಉಪಧಾವಿಶುದ್ಧ ಮಂತ್ರಿಮಂಡದೊ ಅವಿರತಂ ನಿಘರ್ಷಿಸಿಯುಂ; **ಚಂದ್ರಪ್ರಪು**, ೨. ೬೦)

**ನಿಘಾತ** – ಹೊಡೆತ ಅಡಿ (ಕಾಲಿಟ್ಟಡಿಗಿಡೆ ನಿಘಾತದಿ ಪೊಯ್ದೊಡಾಂಕೆಗೊಂಡು ಅಣ್ಮಿ ಕಾದಿದರ್: **ಗದಾಯು**, ೮. ೯)

**ನಿಘೋರ** – ಭಯಂಕರ, ಉಗ್ರ (ರಾಮಚಂದ್ರವ್ರತೀಂದ್ರನ ದುರ್ವಾರ ನಿಘೋರ ವೀರ ತಪಮೇನಂ ಪೇೞ್ದಪೆಂ: **ಅನಂತಪು**, ೧. ೨೩)

**ನಿಘೃಷ್ಟ** – ಉಜ್ಜಿದ (ಪರಿಣಯನಾರ್ಥಂ ಭಾಸುರ ಸುರಮಕುಟ ನಿಘೃಷ್ಟಚರಣಕಮಲನಂ ಉದ್ಯದ್ವರದನಂ ಆದಿತ್ಯನಂ ಆದರದಿಂದಂ ನೆನೆದು ಬರಿಸಿದಂ ಮುನಿಮುಖ್ಯಂ: **ಪಂಚತಂತ್ರ**, ೩೬೧)

**ನಿಘ್ನ** – ಅಧೀನಕ್ಕೊಳಪಡಿಸು (ನಿಘ್ನಂ ಮಾಡುವೆಮೆಂದು ಗುಣಘ್ನರ್ ಪೊನ್ ಕೊಂಡು ಪಾರ್ವರ್ ಅಸುಗತಿಗಿೞಿದರ್: **ಸಮಯಪ**, ೧೧. ೭೯)

**ನಿಚಯ** – ಸಮೂಹ (ವಿರಹಿಜನ ನಿಚಯ ನಿಚಿತ ಮಾನಸ ಉನ್ಮತ್ತ ಕಾಮಿನೀ ಗಂಡೂಷ ಸೀಧು ಸೇಕ ಪುಳಕಿತ: **ಪಂಪಭಾ**, ೫. ೧೦ ವ)

**ನಿಚಿಕುರ** – ಮೊಗ್ಗು (ನಿಚಿಕುರವಿಕೀರ್ಣ ಪಾನೀಯ ಪೂರಪರಿವರ್ಧಿತಮಂ ಅಳಿ ಪಿಕ ಶುಕಾವಳೀ ವಿರಾವಮುಖರಿತೋದ್ಯಾನ ಭೂರುಹಮಂ .. .. **ವರ್ಧಮಾಪು**, ೪. ೬೪ ವ)

**ನಿಚಿತ** – ಒಳಗೊಂಡ (ಆತ್ಮೀಯಚೇತೋನಿಚಿತ ಮೋಹಾಂಧಕಾರಸ್ತೋಮಮಂ ಕಳೆದು: **ಆದಿಪು**, ೨. ೧೭ ವ)

**ನಿಚಿತವಚನ** – ತಕ್ಕ ಮಾತು (ನಿಚಿತವಚನಕದಂಬಕಂ ಎರ್ದೆಗೊಳಿಸೆ ಸಭೆಯ ವಿಬುಧಾವಳಿಯಂ: **ಶಾಂತಿಪು**, ೮. ೧೨೮)

**ನಿಚುಳ** – ತೊರೆ ಕಣಿಗಿಲೆ (ಪ್ಲಕ್ಷ ಕದಂಬ ನಿಂಬ ಪನಸ ಅರ್ಜುನ ತಾಲ ಲವಂಗ ಲುಂಗ ರುದ್ರಾಕ್ಷ ತುರುಷ್ಕ ಮುಷ್ಕ ನಿಚುಳ ಆಮ್ರ ಕರಂಜ ವಟ ಆದಿ ಅನೇಕ ವೃಕ್ಷ: **ಪಂಚತಂತ್ರ**, ೯೭)

**ನಿಚೋಳಕ** – ಕವಚ, ಹೊದಿಕೆ (ಪದನಖ ದೀಪ್ತಿಮಂಜರಿ ನಿಚೋಳಕದಂತಿರೆ ತನ್ನನಾವಗಂ ಪುದಿಯಲೊಡಂ .. .. ಇೞಿದಾಯ್ತು ಚಾಪಲತೆ: **ಪಂಪರಾ**, ೫. ೮೬)

**ನಿಚ್ಚಂ** – ನಿತ್ಯ, ಯಾವಾಗಲೂ (ಇದು ನಿಚ್ಚಂ ಪೊಸತು ಅರ್ಣವಂಬೊಲತಿಗಂಭೀರಂ ಕವಿತ್ವಂ: **ಆದಿಪು**, ೧. ೨೭)

**ನಿಚ್ಚಕ್ಕಂ** – ಪ್ರತಿನಿತ್ಯ (ಅರಿವಾಳ್ತಾಂಡಂ ನಿಚ್ಚಕ್ಕಿನಂದದಿಂ ಕೂಲಿಯಾಳ್ಗಳ್ ನೆರೆದಿರ್ದ ಠಾವಿಂಗೆ ಬಂದು: **ತ್ರಿಷಷ್ಟಿಪು**, ೧೪. ೧೦ ವ)

**ನಿಚ್ಚಟ** – [ನಿಶ್ಚಲ] ದೃಢ (ಚಕ್ರವ್ಯೂಹದೊಳ್ ಅಭಿಮನ್ಯು ನಿಚ್ಚಟನಾಗಿ ಪೊಕ್ಕು ಪಲರಂ ಗೆಲೆ ಕದಿ ಲಕ್ಕಣನಂ ಕೊಂದು ನಿಂದೊನಂ: **ಹರಿವಂಶ**, ೧೨. ೨೫ ವ)

**ನಿಚ್ಚಟಗಲಿ** – ಕಡುಗಲಿ (ಅಂತಪ್ಪ ನಿಚ್ಚಟಗಲಿ ಕಲಹವನೇ ಬಯಸಿ ತನಗೆ ಅಧಿಕವನಱಸುವಂ: **ಪಂಚತಂತ್ರ**, ೯೧ ವ)

**ನಿಚ್ಚಟಿಕೆ** – ನಿಶ್ಚಲತೆ (ಜೀಮೂತವಾಹನೆಂಬಂಕದ ಚಾಗಿ ನಿಚ್ಚಟಿಕೆಯಿಂದೀ ಶೈಳದೊಳ್ ಶಂಖಚೂಡನಾನಂದದೆ ಕಾದ ಪೆಂಪೆಸೆಯೆ ನಾಗಾನಂದಮಂ ಮಾಡಿದಂ: **ಪಂಪಭಾ**, ೪. ೨೬)

**ನಿಚ್ಚಣಿಗೆ** – [ನಿಃಶ್ರೇಣಿ] ಏಣಿ (ಸಗ್ಗಕ್ಕಿದು ನಿಚ್ಚಣಿಗಿಪ್ಪವೊಲಿರ್ದುದಲ್ತೆ ಜಿನಸವನಜಳಪವಿತ್ರಿತಕಟಕಂ: **ಆದಿಪು**, ೨. ೩೧)

**ನಿಚ್ಚಲವಕ್ಕಿ** – ಕಣ್ಣು ಮಿಟುಕಿಸದ ಹಕ್ಕಿ, ಶಕುನದ ಹಕ್ಕಿ, ಗೂಬೆ (ನಿಚ್ಚಂ ವಕ್ರಿಸುತ್ತಿರ್ಪ ನಿಚ್ಚಲವಕ್ಕಿಯಂ ಎಚ್ಚು ಬಾ ಎಂದು ಪೇೞ್ವುದುಂ: **ಪಂಚತಂತ್ರ**, ೧೯೭ ವ)

**ನಿಜವಿರೋಧಿ** – ನಿಜರಿಪು (ಸುರ ದನುಜ ಭುಜಗ ವಿದ್ಯಾಧರ ನರ ಸಂಕುಲದೊಳ್ ಆರನಾದೊಡಂ ಏನೋ ಗರಮುಟ್ಟಿ ಕೊಲ್ಗುಂ ಇದು ನಿಜವಿರೋಧಿಯಂ ಧುರದೊಳ್ ಎಂದು ಶಕ್ತಿಯನಿತ್ತಂ: **ಪಂಪಭಾ**, ೧. ೧೦೩)

**ನಿಜೋಳ** – ಕುಪ್ಪಸ (ಪಸಿರ್ಪುವೆತ್ತ ಪಟ್ಟಳಿಯ ನಿಜೋಳಮೊಪ್ಪಿರೆ ಪುಳಿಂದಿಯರಾದರ್ ಅಮರ್ತ್ಯಕಾಂತೆಯರ್: **ಶಬರಶಂ**, ೩. ೯)

**ನಿಜ್ಜವಣೆ** – ಅಂಗವಿನ್ಯಾಸ (ಭಂಗಿಯನಾಳೆ ನಿಜ್ಜವಣೆ ರೇಖೆ ಮನೋಹರಮಾಗೆ .. .. ಒಸೆದು ಬಾಜಿಸುವಂತೆವೊಲಾಯ್ತು ನರ್ತನಂ: **ಪಾರ್ಶ್ವನಾಪು**, ೧೨. ೨೮)

**ನಿಟಿಲ** – ಹಣೆ (ಕಂಜದಳೋಪಶೋಭಿತ ವಿಲೋಚನದೊಳ್ ನಿಟಿಲಾಗ್ರದೊಳ್ ಪೊದಳ್ದಂಜನರೇಖೆ ಕಣ್ಗೆಸೆಯೆ: **ಸುಕುಮಾಚ**, ೧೦. ೩೮)

**ನಿಟಿಲತಟ** – ಹಣೆಯ ಪ್ರದೇಶ (ಉಪನಯನಾನಂತರಂ ಒಂದುಪನಯನಂ ನಿಟಿಲತಟದೊಳುಂಟೆನೆ: **ಮಲ್ಲಿನಾಪು** ೪. ೯೩)

**ನಿಟಿಲಲೋಚನೆ** – ಹಣೆಗಣ್ಣವಳು, ದುರ್ಗೆ (ಪಟುತರಚಿತ್ತೆ ನಿಟಿಲಲೋಚನೆ ವಟವೃಕ್ಷದ ಕೆೞಗೆ .. .. ಘೋರತಪದೊಳ್ ನಿಂದರ್ಳ: **ಗಿರಿಜಾಕ**, ೯. ೩೫ ವ)

**ನಿಟಿಲಾಕ್ಷ** – ಹಣೆಗಣ್ಣ, ಶಿವ (ಕಂದರ್ಪಾಹಂಕಾರಪ್ರವಿಧ್ವಂಸನಕರ ನಿಟಿಲಾಕ್ಷಂ ಶಿವಂ: **ಗಿರಿಜಾಕ**, ೧. ೩)

**ನಿಟಿಲಾಗ್ನಿ** – ಹಣೆಯ ಬೆಂಕಿ, ಹಣೆಗಣ್ಣುರಿ (ಓವೋ ನಿಟಿಲಾಗ್ನಿಯಿಂದಂ ಬೇವುದನಾನೆತ್ತ ಬಲ್ಲೆನಲರ್ವಿಲ್ಲರಸಾ: **ಗಿರಿಜಾಕ**, ೮. ೬೧)

**ನಿಟಿಲೇಕ್ಷಣ** – ಹಣೆಗಣ್ಣು; ಹಣೆಗಣ್ಣ (ಮಹೋಗ್ರಸ್ಫುರಿತ ನಿಟಿಲೇಕ್ಷಣಂ ದೈತ್ಯರನೆಲ್ಲಂ ಕೊಲ್ವಂ ಆಪ್ತನೆನಲಾಗದು ಅಱವಂ: **ಸಮಯಪ**, ೮. ೪೯)

**ನಿಟಿಳ** – ಹಣೆ (ನಿಟಿಳತಟಘಟಿತ ಕರ ಕುಶೇಶಯಕುಟ್ಮಲನಿಂತೆಂದಂ: **ನೇಮಿನಾಪು**, ೬. ೭೭ ವ)

**ನಿಟ್ಟಾಯ** – ಕಡುಗಲಿತನ (ದುರಿತಮಂ ನಿರ್ಮೂಲಿಸಲ್ ನಿಂದ ನಿಟ್ಟಾಯಂ ನಿಟ್ಟಿಸಲೊಳ್ಪನಪ್ಪಿ ತಣಿಸಲ್ಬೇಟ್ಟಂಗೆ ಬೇಟ್ಪೀ ಸುಖೋಪಾಯಂ: **ಲೀಲಾವತಿ**, ೩. ೭೯)

**ನಿಟ್ಟಾಯು** – ನಿಡಿದು ಆಯು, ದೀರ್ಘಾಯುಸ್ಸು (ನಿಟ್ಟಾಯುವಾಗು ನೀನೆಂದಿಟ್ಟರ್ ಸೇಸೆಯಂ ಅಗಣ್ಯಪುಣ್ಯಾಂಗನೆಯರ್: **ಕಾವ್ಯಾವಲೋ**, ೨೨೩)

**ನಿಟ್ಟಾಲಿ** – ನಿಡಿದು ಆಲಿ, ಅಗಲ ಕಣ್ಣು (ಎನಿತಾನುಂ ಮರೆದೊಂದನೊಂದಿ ನೆನೆಯುತ್ತಿರ್ದಪ್ಪಳೆಂಬಂತೆ ತೊಟ್ಟನೆ ನಿಟ್ಟಾಲಿಗಳವಚ್ಚಟೆದು: **ಕುಸುಮಾಕಾ**, ೧೨. ೧೩೧; ಕಣ್ಣ ನೇರ

**ನಿಟ್ಟಾಲಿಗೊಳ್** – ಕಣ್ಣರಳಿಸು ನಿಟ್ಟಾಲಿಗೊಂಡು ಯುಧಿಷ್ಠಿರನಂ ಮುಟಟೆವಂದಾಗಳ್: **ಪಂಪಭಾ**, ೧೨. ೧೧೬ ವ)

**ನಿಟ್ಟಿಸು** – ದೃಷ್ಟಿಸಿ ನೋಡು (ಬದಗನುಮಂ ತನ್ನವಳೊಡಗೂಡಿರೆ ನಿಟ್ಟಿಸಿ ಭವರೋಷದಿಂ ಇಱಿದುದು ಅಷ್ಟವಂಕನ ಕಣ್ಣಿಂ: **ಯಶೋಧಚ,** ೩. ೪೦)

**ನಿಟ್ಟುರಿಗೊಳ್** – ನಿಡಿದು ಉರಿಗೊಂಡು, ಬಹಳವಾಗಿ ಕೋಪಿಸಿಕೊಂಡು (ದುರ್ಯೋಧನನಂ ಅಱಸಿ ಕಾಣದೆ ವಿಸ್ಮಯಂಬಟ್ಟು ಅವನ ಬಿಟ್ಟಬೀಱಂಗೆ ನಿಟ್ಟುರಿಗೊಂಡು: **ಗದಾಯು,** ೬. ೨೯ ವ)

**ನಿಟ್ಟುವಡು** – ಸಾಲಾಗಿ ನಿಲ್ಲು (ವ್ಯೂಹದೊಳ್ ನಿಟ್ಟುವಟ್ಟು ಮಣಿಮಯದಂಡನಾಯೋಗದೊಳೊಡಂಬಟ್ಟ ಪಿಡಿಗಳುಮಂ: **ಆದಿಪು** ನರಸಿಂ, ೪. ೫೬ ವ)

**ನಿಟ್ಟುಸಿರ್** – ದೀರ್ಘ ನಿಶ್ವಾಸ (ನಿಟ್ಟುಸಿರಿಂ ಕೊಲ್ವಪಿಯುಂ ಅಳುರ್ವ ದಿಟ್ಟಿಯ ನೋಟಂ: **ಪುಷ್ಪದಂಪು,** ೧. ೫೩

**ನಿಟ್ಟೆ** – [ನಿಷ್ಠೆ] ನಿಷ್ಠಾಪೂರ್ಣ (ದೇವಿಯರಿನ್ನೆಗಂ ನೆಗೞ್ದ ನಿತ್ಯನಿಯಾಮದ ನಿಟ್ಟೆ ದೇವಪೂಜಾವಿಧಿ .. .. ಫಳದಾಯಕಮಾದುದು: **ಮಲ್ಲಿನಾಪು,** ೪. ೪೬); ಶಾಶ್ವತ (ಸೊಗಯಿಪ ಜವ್ವನಂ ನೆಱೆದ ರೂಪು ನಿಸರ್ಗಮನೋಹರಂ ಮುಗುಳ್ನಗೆ ಸವಿಳಾಸ ಮೋದಂ ಒಡವುಟ್ಟಿದುವಿವು ನಿಟ್ಟೆ ಎಂಬ ದಂದುಗಂ ಎರ್ದೆಯುರ್ಚೆ: **ಶಾಂತಿಪು,** ೯. ೩೬)

**ನಿಟ್ಟೆಗೆವರ್** – ನಿಯಮಕ್ಕೊಳಪಡು (ನಿಟ್ಟೆಗೆವಂದು ಕೋಮಲಗುಣಂ ಗೆಡೆಗೊಂಡಿರೆ ಪೂವಿನಂತಿರೆ ಆಯ್ದಿಟ್ಟಪದಂ ಬೆಡಂಗೆನಿಸೆ ಬಣ್ಣಸರಂ .. .. ಕಟ್ಟುವುದು ಕಬ್ಬಮಂ ಯಬ್ಬಿನಮಾಗೆ ಕಬ್ಬಿಗಂ: **ಲೀಲಾವತಿ,** ೧. ೬೨)

**ನಿಟ್ಟೆಗೊಳ್** – ನಿಷ್ಠೆಗೊಳ್ಳು, ದೃಢವಾಗು (ನಿಟ್ಟಗೊಳ್ಗದವಂ ಕೇಳ್ವಾಗಳೆ ಸನ್ಮತಿಯಕ್ಕುಂ ತ್ರೈಲೋಕ್ಯಹಿತಮೆನಿಪ್ಪ ಆರ್ಹತಮಂ: **ಸಮಯಪ,** ೩. ೫೨)

**ನಿಟ್ಟೆಗೊಳಿಸು** – ನಿಷ್ಠೆಗೊಳಿಸು, ನಿಷ್ಠನನ್ನಾಗಿಸು (ಜೈನಯತೀಂದ್ರೋತ್ತಮರೆಂದು ನಿಟ್ಟೆಗೊಳಿಸಲ್ಕೆಂತುಂ ಪೆಱರ್ ಬಲ್ಲರೇ: **ಸಮಯಪ,** ೪. ೪೫)

**ನಿಟ್ಟೆಪಡು** – ನಿಷ್ಠೆಪಡು, ನಿಷ್ಠೆಯನ್ನು ಹೊಂದು (ಕರೆದೊಡೆ ಜೂದಿಂಗಂ ಧುರಭರಕೆ ಆಖೇಟಕ್ಕೆ ಭೂಭುಜಂಗೇ ಆಗದು ಮೆಯ್ಗುರೆದಿರಲಿ ಎಂಬ ಪುರಾತನ ಗುರುವಚನಂ ತನಗೆ ನಿಟ್ಟೆಪಟ್ಟುದಱಿಂ: **ಪಂಪಭಾ,** ೬. ೭೧)

**ನಿಟ್ಟೆಯ್ದೆ** – ಮುತ್ತೈದೆ (ಟಕಾರಕ್ಕೆ: ಕಟ್ಟಟ್ಟೆ, ನಿಟ್ಟೆಯ್ದೆ, ನಿಟ್ಟೆಸಳ್: **ಶಬ್ದಮದ,** ೧೯೧ ಪ್ರ)

**ನಿಟ್ಟೆಲ್ವು** – [ನಿಡಿದು+ಎಲ್ವು] ಉದ್ದ ಮೂಳೆ, ಬೆನ್ನುಮೂಳೆ ಪಗೆವರ ನಿಟ್ಟೆಲ್ವಂ ಮುಱಿವೊಡೆನಗೆ ಪಟ್ಟಂಗಟ್ಟಾ: **ಪಂಪಭಾ,** ೧೦. ೧೭)

**ನಿಟ್ಟೆವಡಿಸು** – ನಿಷ್ಠೆಯನ್ನು ದೃಢಗೊಳಿಸು (ಬೋಧೆಯಂ ನಿಟ್ಟೆವಡಿಸಿ ಪದಿಮೂಱು ದಿವಸಮಿಂತು ಕ್ಷಪಕಂಗೆ ಧರ್ಮಧ್ಯಾನಂ ನಿಲೆ: **ಹರಿವಂಶ,** ೧೦. ೩೧ ವ)

**ನಿಟ್ಟೆಸರಿಡು** – [ನಿಡಿದು+ಎಸರಿಡು] ಚೆನ್ನಾಗಿ ಕುದಿಯಲು ನೀರಿಡು (ಕಪ್ಪುರಶಲಿಯ ತಂಡುಲಂಗಳಂ ನಿಟ್ಟೆಸರಿಟ್ಟು ಬಾಗಿ ಮೃದುವಾದ .. .. ಅನ್ನಮನಲ್ಲದೆ ಮತ್ತಿನನ್ನಮಂ ಮುಟ್ಟುವನಲ್ಲ: **ಸುಕುಮಾಚ,** ೧೦. ೧೦೮)

**ನಿಟ್ಟೆಸಟ್** – [ನಿಡಿದು ಎಸಟ್] ನೀಳವಾದ ಪಕಳೆ (ಆಳ್ದು ನೀಳ್ದ ಕಣ್ಮಲರ್ಗಳೊಳ್ ಒತ್ತಲ್ ಉತ್ಪಳದ ನಿಟ್ಟೆಸಟಂ .. .. ಕಾಣದೆ ಕಾಯ್ದುದು ತತ್ಸಖಿಜನಂ: **ಲೀಲಾವತಿ,** ೯. ೧೩೨)

**ನಿಟ್ಟೆಸಟ್ಗವಳಿಗೆ** – ನೀಳ ಗರಿಗಳ ಓಲೆಯ ಕಟ್ಟು (ಕೇದಗೆಯ ಕುತ್ತೆಸಟಓಲೆಯನೊತ್ತಿ ನಿಟ್ಟೆಸಲ್ಗವಟಿಗೆಯಾಗೆ ಭೃಂಗವಿಟರಾಜಿ ಮನೋಜನ ವೀರವೃತ್ತಿಯಂ: **ಅನಂತಪು,** ೧. ೯೧)

**ನಿಟ್ಟೈದೆ** – ದೀರ್ಘ ಸುಮಂಗಲಿ (ಆ ಸತಿಯುಂ ಪರಸಿದರ್ ಆಯುಷ್ಮತಿ ನೀಂ ನಿಟ್ಟೈದೆಯಾಗು ಎನುತ್ತಾವರಾಗಳ್: **ಕಾದಂಸಂ,** ೭. ೬೯)

**ನಿಡಿಯ** – ನೀಳವಾಗಿರುವವನು, ನೀಳವಾದ (ಭುವನಾಂತರದೊಳ್ ನಿಡಿಯರ್ಗಂ ನಿಡಿಯರೊಳ್ ಅರಿದೇಂ ವಿಸ್ಮಯಮೇ: **ಆದಿಪು,** ೧೨. ೧೧೪)

**ನಿಡಿಯಸಿ** – [ನಿಡಿದು+ಅಸಿ] ಉದ್ದ ಕತ್ತಿ (ಪಿಡಿಕೆಯ್ ತೀವಿದ ಕೂರ್ಗಣೆ ಮಡಕಾಲ್ವರಂ ಅಲೆವ ಕಚ್ಚೆ ನಿಡಿಯಸಿಯ ಒಱೆ ಕರ್ಪಿಡಿದ ಪಣೆಕಟ್ಟು ಕೆಯ್ಪುಡೆ ಬೆಡಂಗನೊಳಕೊಳೆ ಧನುರ್ಧರರ್ ಪೆಣೆದೆಚ್ಚರ್: **ಪಂಪಭಾ,** ೧೦. ೭೧)

**ನಿಡುಗುಡಿ** – ನೀಳವಾದ ಚಿಗುರು (ಪರಿಮಳದ ಗಿಡುಗಳೆಂಬ ಪಿರಿಯ ಪೆದಸರ್ಗೆ ಕೇಯ್ನೀಡುವಂತೆ ನಿಡುಗುಡಿಯಂ ನೀಡಿ ಬಳೆದು ದವನದ ಬಾಳ್ಗೇಡಬಳಗಮುಮಂ: **ಲೀಲಾವತಿ,** ೧೧. ೫೮ ವ)

**ನಿಡುಗೋಡು** – ಉದ್ದನಾದ ಕೊಂಬು (ಅಗ್ಗದ ನಿಡುಗೋಡು ಮೇಡುವಂ ಅಮರುತ್ತುಂ ಇಱುಂಕಿದ ಕೆಚ್ಚಲ್ ಎತ್ತಮೆತ್ತಿದ ಕುಡಿವಾಲಮಂದೆಸೆಯೆ ಕರ್ಬಸುಗಳ್ ಪರಿಗೊಂಡುವಾಜಿಯೊಳ್: **ಪಂಪಭಾ,** ೮. ೧೦೪)

**ನಿಡುಮಾಳ** – ದೊಡ್ಡ ಬಯಲು (ನಿಡುಮಾಳಂ ಮುಂತೆ ನೀರಿಲ್ಲಣಮೆ ಮಗುಟ್ವೊಡಂ ಪಿಂತಣೂರ್ ಗೆಂಟು: **ಸಮಯಪ,** ೫. ೮೧)

**ನಿಡುವುರ್ವು** – ನೀಳ ಹುಬ್ಬು (ನಿಜದ ಚೆಲ್ವಮರೆ ನಿಡುವುರ್ವುಗಳ್ ನಿರ್ಮಿರ್ಪಿನಂ: **ಆದಿಪು,** ೭. ೨೭ ರಗಳೆ)

**ನಿಡುವೊಡೆ** – [ನಿಡಿದು ಪೊಡೆ] ನೀಳವಾದ ತೆನೆ (ನಿಡುವೊಡೆಗಳಿಂ ತುಱುಕಾರ್ತಿಯರ್ ತಿಱಿದು ತಂದು: **ಲೀಲಾವತಿ,** ೫. ೫೯ ವ)

**ನಿಡುಸುಯ್** – ನೀಳವಾದ ಉಸಿರು [ಬಿಡು] (ನಿಡುಸುಯ್ದು ನಲ್ಲಳ ಮುಖಾಂಬುಜಸೌರಭದೊಳ್ ಪೊದಳ್ದು ಅದೇಂ ಮಗಮಗಿಸಿತ್ತೊ ಕತ್ತುರಿಯ ಕಪ್ಪುರದೊಂದು ಕದಂಬದಂಬುಲಂ: **ಪಂಪಭಾ,** ೪. ೧೦೭)

**ನಿತಂಬ** – ಪಿರ್ರೆ (ಬಳೆದ ನಿತಂಬದೆ ಕಾಂಚೀಕಳಾಪಮಂ ಕಟ್ಟಲಣಮೆ ನೆಱೆಯದು ಎಂದಗ್ಗಳಿಸಿ ಕುಳಿಕೆಗಳಿನೇಂ ಕಣ್ಗೊಳಿಸಿದುದೋ ಸುಭಗೆಯಾದ ಸುದತಿಯ ಗರ್ಭಂ: **ಪಂಪಭಾ,** ೧. ೧೪೩); ಬೆಟ್ಟದ ತಪ್ಪಲು (ಅಂಜನಗಿರಿಯೆಂಬ ಪರ್ವತಮುಂಟು, ಅದರ ನಿತಂಬಪ್ರದೇಶದೊಳ್: **ಪಂಚತಂತ್ರ,** ೨೭೫ ವ)

**ನಿತಂಬದ್ವಯಸ** – ಪಿರ್ರೆಯವರೆಗಿನ ಆಳ (ಆ ಜಳದೇವಿ ಬೆಸಸೆ ಗಂಗಾಜಳಮಾಯ್ತು ನಿತಂಬಿನೀನಿತಂಬದ್ವಯಸಂ: **ಆದಿಪು,** ೧೧. ೧೪೪)

**ನಿತಂಬಬಿಂಬ** – ದೊಡ್ಡ ಪಿರ್ರೆ (ಆಕೆಗಳ ಪೀವರತುಂಗ ನಿತಂಬಬಿಂಬದೊಂದಗಲದ ವೃದ್ಧಿ ಪೆರ್ಚೆ ನೆಲೆವೆರ್ಚಿದುದೀ ಕೊಳಂ: **ಶಾಂತಿಪು,** ೮. ೨೮)

**ನಿತಂಬಿನಿ** – ದೊಡ್ಡ ಪಿರ್ರೆಯವಳು, ಸುಂದರಿ (ಶುದ್ಧಾಂತನಿತಂಬಿನೀನಿವಹಂ ಒಲ್ದು ಎಳಸುತ್ತಿರೆಯುಂ .. ..

ಧರಾಂಗನಾಕಾಂತನ ಚಿತ್ತವು .. .. ಒಂದದು ಅಣಂ ಸುರತೋಪಭೋಗಮಂ: **ಕಾದಂಸಂ,** ೧. ೯)

**ನಿತಂಬೋದ್ದೇಶ** – ನಿತಂಬ ಪ್ರದೇಶ (ಸಮುನ್ನತ ನಿತಂಬೋದ್ದೇಶದೊಳ್ ಪರ್ವಿ ಪಜ್ಜಳಿಸುತ್ತು ಉಜ್ಜ್ವಳಕಾಂತಿವೋಲ್: **ಆದಿಪು,** ೧೨. ೩೯)

**ನಿತಪ್ತಾಧರ** – ಒಣಗಿದ ತುಟಿ (ಉಚ್ಛ್ವಾಸನಿತಪ್ತಾಧರರುಚಿಯಂ ಮನುಜೇಂದ್ರಾಂಗನೆಯನೆಯ್ದಿ ಕಂಡಿಂತೆಂದಳ್: **ಯಶೋಧಚ,** ೨. ೩೫)

**ನಿತಾಂತ** – ಅಧಿಕವಾದ (ಕವಿಪ್ರತತಿ ನಿತಾಮತಸೇವ್ಯತೆಯಿನೊಂದಿ .. .. ಸರಸ್ವತಿ ದಯೆಗೆಯ್ಗೆ ನಮ್ಮೊಳ್ ಅನುಕೂಲತೆಯಿಂದವೆ ನಿರ್ಮಳತ್ವಮಂ: **ಕಾದಂಸಂ,** ೧. ೨)

**ನಿತ್ತರಿಸು** – ಸಹಿಸಿಕೊ, ನಿಭಾಯಿಸು (ಮುತ್ತಿನ ಪೊನ್ನ ಪೆರ್ದುಡುಗೆಯಂ ವಸನಂಗಳಂ ಇತ್ತರಣ್ಯದೊಳ್ ನಿತ್ತರಿಪಂತುನಾಡ ಗಡಿಯಂ ಮಱಿದುಂ ಪುಗದಂತೆ: **ಪಂಪರಾ,** ೪. ೭೪); ದಾಟು (ನಾಮೀ ಅವಸ್ಥೆಯೊಳ್ ಪೇಱಿತು ಕಜ್ಜಮನಾಳೋಚಿಸಿ ನೇಱಿಯಲುಂ ನಿತ್ತರಿಸಲುಂ ಅಱಿಯೆವು: **ಪಂಚತಂತ್ರ,** ೨೮೦ ವ)

**ನಿತ್ಯನ್** – ಶಾಶ್ವತನಾದವನು (ಪರಮಾತ್ಮಂ ಎನ್ನಂ ಎಂದೊಡೆ ಚರಮಾಂಗಂ ಅಪ್ರಮಿತಂ ಅಖಿಲಲೋಕ ಸಮಾನಂ ನಿರವಯವಂ ನಿತ್ಯಂ: **ಯಶೋಧಚ,** ೪. ೨೯)

**ನಿತ್ಯನಿಗೋದ** – [ಜೈನ] ಏಳನೆಯ ನರಕಕ್ಕಿಂತ ಕೀಳಾದ ಜಾಗ (ಆ ನರಕಂಗಳೇೞಱಿಂ ಕೆೞಗೆ ನಿತ್ಯನಿಗೋದಮೆಂಬ ನರಕಮಿರ್ಪುದು: **ಮಲ್ಲಿನಾಪು,** ೧೩. ೧೨೨ ವ)

**ನಿತ್ಯೋದಯ** – ಪ್ರತಿದಿನ ಉದಯಿಸುವವನು, ಸೂರ್ಯ (ನಿತ್ಯೋದಯನುಮಪ್ಪ ಗಭಸ್ತಿಮಾಲಿಗರ್ಘ್ಯಮನೆತ್ತಿದ ಹಸ್ತಕಮಲದೊಳಂಬರದೊಳಾಡುವ ಪರ್ದಿನ ಬಾಯಿಂದಂ ಬಿರ್ದು ಬರ್ದುಂಕಿದೊಂದು ಪೆಣ್ಣಿಲಿಯಂ ಕಂಡು: **ಪಂಚತಂತ್ರ,** ೬೩೭ ವ); ಸದಾ ಏಳಿಗೆ ಹೊಂದುವವನು (ಪ್ರಕೃತಿಯೊಳ್ ನಿತ್ಯೋದಯನುಂ ನಿಸರ್ಗದೊಳ್ ರಿಪುವರ್ಗದುರ್ಗನಿರ್ಭೇದಿಯುಂ: **ಶಾಂತಿಪು,** ೨. ೫೧ ವ)

**ನಿದರ್ಶನ** – ದೃಷ್ಟಾಂತ (ಮಹೀಪತಿ ಸಂಸ್ಕೃತಿಯ ಅನಿತ್ಯತೆಗಿದುವೆ ನಿದರ್ಶನಂ ಎಂದು ಮನದೊಳಿಂತೆಂದಂ: **ಚಂದ್ರಪ್ರಪು,** ೪. ೫೧ ವ);

**ನಿದಾಘ** – ಬೆಂಕಿ (ವಾಸವದಿಕ್ತಟಂ ಸಮೆದ ಮೂಷೆ ತಮಂ ಸುರಿದಿರ್ದಲಬ್ಜಸಂವಾಸಿ ಸಮೀರಂ ಏರಣಿಗನಾಗೆ ನಿದಾಘವ ದೀಪ್ತಿವರ್ತಿಯೊಳ್ ಕಾಸೆ .. .. ಪೞಂಗಾಸಿನ ಪೊನ್ನಗಂಟಿಯವೊಲೊಪ್ಪಿದುದು ಉದ್ಗತ ಭಾನುಮಂಡಲಂ: **ಅಜಿತಪು,** ೬. ೭೦); ಸುಡುವ ಬೇಸಗೆ (ಕರಂ ಕಾಯ್ಪಿನಿಂ ಕಯ್ಮಿಗುತುಂ ಬಂದತ್ತು ಅದೊಂದು ಅದ್ಭುತಮೊದವಿದ ಅಮೋಘಂ ವಿಮೇಘಂ ನಿದಾಘಂ: **ಶಾಂತೀಶ್ವಪು,** ೧೨. ೧೭); ಕಡುಬಿಸಿಲು (ನಿದಾಘದ್ಯುಮಣಿ ಪ್ರೌಢಾಂಶುಗೆ ಆಸ್ಯಾಂಬುಜಮಲರೆ: **ನೇಮಿನಾಪು,** ೩. ೬೭)

**ನಿದಾಘಮಧು** – ಗ್ರೀಷ್ಮ ಋತು (ಎಯ್ದೆ ಪಣ್ತುವು ಮಾವು ಇಂಬಾದುದು ನಿದಾಘಮಧುವಿನ ಭೇದಮದೀ ಬನದೊಳಾತಪಕ್ಕೆಡೆಯುಂಟೇ: **ಆದಿಪು,** ೧೧. ೮೭)

**ನಿದಾಘಸಮಯ** – ಬೇಸಿಗೆ ಕಾಲ (ಅಂತು ಅತಿಪ್ರಬಲಮಾದ ನಿದದಾಘಸಮಯದೊಳ್: ೭. ೯೮ ವ)

**ನಿದಾನ** – ನಿಧಿ (ಬಡವಂ ನಿದಾನಮಂ ಪಡೆದಂತೆ ಕುರುಡಂ ಕಣ್ಬಡೆದಂತೆ ಮನದೊಳ್ ಪಿರಿದುಮುತ್ಸಾಹಮುಂ ಪಡೆದಳಾತ್ಮಜರ ಬರವಿಂದೆ: **ಸುಕುಮಾಚ,** ೨. ೭೨); ಹಗ್ಗ (ಧರ್ಮಮೆ ದೇಹಿಗೆ ಇಹಪರಕರ್ಮಕ್ಕೆ ನಿದಾನಂ: **ಪುಷ್ಪದಂಪು,** ೩. ೧೦೮); ಕಾರಣ (ಹೇತು ನಿದಾನಂ ಕಾರಣಂ: **ಅಭಿಧಾವ,** ೩. ೧. ೮೦); [ಜೈನ] ಮುಂದಿನ ಜನ್ಮದಲ್ಲಿ ಇಂಥದೇ ಸುಖ ಪಡೆಯಬೇಕೆಂಬ ಆಸೆ (ಬಾಣಸಿಗನುಂ ಅರಸನಂ ಕೊಲ್ವೆನಕ್ಕೆ ಎಂದು ನಿದಾನಂಗೆಯ್ದು ಅಲ್ಪಪುಣ್ಯ ಪರಿಪಾಕದಿಂ ಸತ್ತು: **ಚಾವುಂಪು,** ಪು. ೩೪೬. ಸಾ. ೮)

**ನಿದಾನಂಗೆಯ್** – [ಜೈನ] ಮುಂದಿನ ಜನ್ಮದಲ್ಲಿ ಇಂಥದೇ ಸುಖಪಡೆಯಬೇಕೆಂದು ಆಶಿಸು (ನಂದಯಶೆಗಂತಿಯರ್ ಎಮಗೆ ಮಱುಭವದೊಳಂ ಇವರರೆ ಮಕ್ಕಳಕ್ಕೆಂದು ನಿದಾನಂಗೆಯ್ಯೆ: **ಕರ್ಣನೇಮಿ,** ೬. ೫೮ ವ)

**ನಿದಾನಂಬಡೆ** – ನಿಧಿಯನ್ನು ಪಡೆ (ಸುದಾನಮುಮಂ ಕೈಕೊಂಡು ಒಲ್ದು ಮಾಡುತಿಪ್ಪಾ ಪೆಂಡತಿಯಂ ಪಡೆದವಂ ನಿದಾನಂಬಡೆದಂ: **ಸಮಯಪ,** ೫. ೧೨೭)

**ನಿದಾನಫಲ** – [ಜೈನ] ಹಿಂದಿನ ಜನ್ಮದ ಕೊನೆಯಲ್ಲಿ ಕೈಗೊಂಡ 'ನಿದಾನ'ದ ಪರಿಣಾಮ (ಇಂತು ವಿಗತಜೀವಿತೆಯಾಗಿ ನಿದಾನಫಲದಿಂದಾ ತ್ರಿವೇದಿಯ ಗರ್ಭದೊಳ್ ನೆಲಸುವುದುಂ: **ಸುಕುಮಾಚ,** ೫. ೪೮ ವ)

**ನಿದಾನೆ** – [ಜೈನ] ಮುಂದಿನ ಜನ್ಮದಲ್ಲಿ ಇಂಥದೇ ಸುಖ ಪಡೆಯಬೇಕೆಂದು ಆಸೆ ಹೊಂದಿದವಳು (ಮಱುಭವದೊಳುಮಿವರೆ ಮಕ್ಕಳಕ್ಕೆಂದು ನಿದಾನಂಗೆಯ್ಯೆ .. .. ತಾನುಂ ನಿದಾನೆಯಾದಳ್: **ಕರ್ಣನೇಮಿ,** ೬. ೫೮ ವ)

**ನಿದ್ದೆಗಣ್ಣು** – ನಿದ್ದೆಯ ಭಾರದಿಂದಾಗಿ ಮುಚ್ಚಿಕೊಳ್ಳುವ ಕಣ್ಣು (ನಿದ್ದೆಗಣ್ಣೊಳೆರ್ದು ಗೂಗೆದಲೆಯನುದ್ದಂ ನೆಗಪಿ ಪರಿವ ಹದ್ದಿಗಳುಮಂ: .. .. ಕಂಡು: **ಲೀಲಾವತಿ,** ೫. ೧೧೪ ವ)

**ನಿದ್ರಾನಿದ್ರೆ** – [ಜೈನ] ದರ್ಶನಾವರಣೀಯಗಳಲ್ಲಿ ಒಂದು: ಮತ್ತೆ ಮತ್ತೆ ನಿದ್ದೆ ಬರುವುದು (ನಿದ್ರಾ ನಿದ್ರಾನಿದ್ರಾ ಪ್ರಚಲಾ ಪ್ರಚಲಾಪ್ರಚಲಾಸ್ತ್ಯಾನಗೃದ್ಧಿಭೇದದಿಂ ನವವಿಧಭೇದಮುಮಪ್ಪ ದರ್ಶನಾವರಣೀಯಮುಮಂ: **ಸುಕುಮಾಚ,** ೩. ೩೯ ವ), ನೋಡಿ, 'ದರ್ಶನಾವರಣೀಯ' ಮತ್ತು 'ಘಾತಿಕರ್ಮ'

**ನಿದ್ರಾಪ್ರಬೋಧಿನಿ** – ನಿದ್ದೆಯಿಂದ ಎಚ್ಚರಗೊಳಿಸುವ ಅಸ್ತ್ರ (ನಿದ್ರಾಪ್ರಬೋಧಿನಿಯೆಂಬ ದಿವ್ಯ ಬಾಣದಿಂ ಸುಗ್ರೀವಂ ಹನುಮಂ ಮೊದಲಾಗೆ ಮಿಕ್ಕ ನಾಯಕರ ನಿದ್ರಾಮುದ್ರೆಯಂ ಕಳೆವುದುಂ: **ಪಂಪರಾ,** ೧೩. ೧೩೨ ವ)

**ನಿದ್ರೆ** – ನಿದ್ದೆ (ನಿದ್ರೆಗೆಯ್ದವರ್ ತೊಟ್ಟನೆ ನಿದ್ರೆಯಿಂದೆಚ್ಚಿತ್ತು: **ಗದಾಯು,** ೯. ೩೨ ವ); [ಜೈನ] ಒಂಬತ್ತು ಬಗೆಯ ದರ್ಶನಾವರಣೀಯಗಳಲ್ಲಿ ಒಂದು (ನಿದ್ರಾ ನಿದ್ರಾನಿದ್ರಾ ಪ್ರಚಲಾ ಪ್ರಚಲಾಪ್ರಚಲಾಸ್ತ್ಯಾನಗೃದ್ಧಿಭೇದದಿಂ ನವವಿಧ ಭೇದಮುಮಪ್ಪ ದರ್ಶನಾವರಣೀಯಮುಮಂ: **ಸುಕುಮಾಚ,** ೩. ೩೯ ವ), ನೋಡಿ 'ದರ್ಶನಾವರಣೀಯ'

**ನಿಧನವೆತ್ತು** – ಬೈತಿಟ್ಟ ನಿಧಿಯನ್ನು ಮೇಲೆತ್ತು (ಪೆಱಗೆ ಕರಂಗಿಱಿದಾಗಿ ನಿಧನವೆತ್ತಿದ ಕುೞಿಯಂತಿರ್ದತ್ತು ಕಣ್ಗೆ ಪೂಗೊಳನಾಗಳ್: **ಚಂದ್ರಪ್ರಪು,** ೭. ೧೪೮)

**ನಿಧಾನ** – ಬೈತಿಟ್ಟ ಹಣ, ಐಶ್ವರ್ಯ (ಅನ್ನೆಗಮಿತ್ತ ನಿಧಾನಮಂ ತೋಱಿ ಕಣ್ಣಂ ಕಳೆವಂತೆ: **ಆದಿಪು,** ೩. ೫೧ ವ); ನೆಲೆ

**ನಿಧಾನಂಬಡೆ** – ನಿಧಿ ಪಡೆ (ಸುದಾನಮುಮಂ ಕೈಕೊಂಡೊಲ್ದು ಮಾಡುತಿರ್ಪಾ ಪೆಂಡಿತಿಯಂ ಪಡೆದವಂ ನಿಧಾನಂಬಡೆದಂ: **ಸಮಯಪ,** ೫. ೧೨೭)

**ನಿಧಾನಶಲ್ಯ** – [ಜೈನ] ವ್ರತಸ್ಥನಿಗೆ ಬರುವ ಮೂರು ಬಗೆಯ ಅಡ್ಡಿಗಳಲ್ಲಿ ಒಂದು (ಪೊಲ್ಲಮೆಯಂ ಮಾಡುವ ಮಿಥ್ಯಾಶಲ್ಯಂ ಮಾಯಾಶಲ್ಯಂ ನಿಧಾನಶಲ್ಯಮೆಂಬ ಮೂಱುಂ ಶಲ್ಯಂಗಳಂ ಪಿಂಗಿದಂ: **ಧರ್ಮಾಮೃ,** ೫. ೮೮ ವ)

**ನಿಧಿ** – ಐಶ್ವರ್ಯ, ಹೂತಿಟ್ಟ ಹಣ (ಸುರಧೇನುವೊಸೆದು ಬಂದಂತಿರೆ ನಿಧಿ ಬಂದಂತಿರೆ ಅಮರಭೂಜಂ ಬಂದಂತಿರೆ: **ಪುಷ್ಪದಂಪು,** ೧೩. ೧೨೨)

**ನಿಧಿಗಾಣ್** – ಹೂತಿಟ್ಟ ಹಣವನ್ನು ಕಾಣು (ಮರ್ದನಗಟಲ್ವೋದಂ ನಿಧಿಗಂಡಂತೆ ಪೆರ್ಚಿ : **ಧರ್ಮಾಮೃ,** ೧. ೧೦೪ ವ)

**ನಿಧಿಪುರುಷ** – ಕುಬೇರ (ನಿಧಿಪುರುಷರೆನಿಸುತೊಲವಿಂದ ಅಧಿಕಸುಖಂಬೆತ್ತು ಘೋಷಜಜನಮೆಸೆದಿರ್ಕುಂ: **ತ್ರಿಷಷ್ಟಿಪು,** ೧೫. ೪); [ಜೈನ] ಚಕ್ರವರ್ತಿ (ನಿಧಿಪುರುಷಂ ಪುಟ್ಟುವುದುಂ ನಿಧಿಗಂಡುದು ನಿಖಿಳಲೋಕಮನೆ ಜನನದೊಳ್ ಅತ್ಯಧಿಕೋತ್ಸವದಿಂದನಧನರ್ಗಧನತೆ ತಲೆದೋಱದಂತು ಪಾರ್ಥಿಮನಿತ್ತಂ; **ಪಾರ್ಶ್ವನಾಪು,** ೭. ೮೪)

**ನಿಧಿಸಮಿತಿ** – [ಜೈನ] ನವನಿಧಿಗಳ ಗುಂಪು (ಸಕಳಮಂಗಳವಿಸರಂ ನಿಧಿಸಮಿತಿ ಯಕ್ಷಕ್ಷಕರಸೆಗುಂ: **ಚಂದ್ರಪ್ರಪು,** ೧೫. ೫೫)

**ನಿಧೀಶ** – [ಜೈನ] ಚಕ್ರವರ್ತಿ (ಬಾಹುಬಲಿ ತನ್ನಿಂದಂ ನೀಧೀಶಂಗೆ ವಂಶಜರಾಜ್ಯಾಂಭಿಷವೋತ್ಸವಮಂ ನೆಗಟ್ಟುದೆಂದಾಶಂಕೆಯಂ ಮಾಡಿದಂ: **ಆದಿಪು,** ೧೪. ೧೩೩)

**ನಿಧುವನ** – ಸಂಭೋಗ (ಅನೇಕವಿಧ ನಿಧುವನಸುಖ ಸುಧಾರಸಾಧೀನಚಿತ್ತರುಂ **ಆದಿಪು,** ೪. ೫೨ ವ)

**ನಿನದ** – ಶಬ್ದ (ಕನಕಕಾಂಚೀನನದಪ್ರಗಣಿತಮಗಲ್ದ ನಲ್ಲಳ ಜಗಮಿದೆನ್ನೆರ್ದೆಯನೆಂತು ಪೊಕ್ಕಳಿಪುದಫ: **ಪಂಪಭಾ,** ೪. ೭೩)

**ನಿನ್ನೆ** – ನೆನ್ನೆ, ಇವತ್ತಿಗೆ ಹಿಂದಿನ ದಿನ (ನಿನಗೆ ನಿನ್ನೆ ತಣಿಯುಣಲಿಕ್ಕಿದನೆಂದು ಮುಳಿದು ಬಡಿದಟ್ಟಿ ಕಳೆದೊಂ: **ವಡ್ಡಾರಾ,** ಪು. ೭೭. ಸಾ. ೧೭)

**ನಿಪತತ್** – ಎರಗು, ಮುಸುರು (ಕುಮುದವನವನಧಿಮಧುರರಸ ನಿಪತತ್ ಅಳಿಮಾಳೆಯುಂ: **ಆದಿಪು,** ೭. ೨೭ ರಗಳೆ)

**ನಿಪಾತ** – [ಬಾಣ]ಪ್ರಯೋಗ (ವಿಷೋಗ್ರಾಸ್ತ್ರಮಂ ಖಗರಾಜಾಸ್ತ್ರನಿಪಾತದಿಂ ಕಿಡಿಸಿ: **ಪಂಪರಾ,** ೧೪. ೨೦)

**ನಿಪಾತಿಸು** – ನಾಶಮಾಡು; ಕೊಲ್ಲು (ಅಶನಿವೇಗನುಮಂ ಸಂಗ್ರಾಮದೊಳ್ ನಿಪಾತಿಸುವನಾವನೊರ್ವಂ೦ ಆತಂಗೆ ನಿಮ್ಮ ಮಗಳಂ ಕುಡಿಂ: **ವಡ್ಡಾರಾ,** ಪು ೬೧, ಸಾ. ೨೪)

**ನಿಪುಣ** – ನಿಷ್ಣಾತ (ಇಱಿದಱೋಳೆ ಪಿರಿದುಮರ್ಥಮನಱಿಪಲ್ ನೆಱೆವಾತಂ ಆತನಿಂದಂ ನಿಪುಣಂ: **ಕವಿರಾಮಾ,** ೧. ೧೫)

**ನಿಪ್ಪಸರ** – ಹೆಚ್ಚಾದ (ನಿಚ್ಚಲುಂ ಇಸೆ ಕಂತು ನಿಪ್ಪಸರದಿಂ ಸರದಿಂ ಸರದಿಂಪುದೋಱೆ ಕೋಗಿಲೆ: **ಜಗನ್ನಾವಿ,** ೧೦. ೧೯)

**ನಿಪ್ಪುಟಂ** – ಅಧಿಕವಾಗಿ, ಪೂರ್ತಿಯಾಗಿ (ಒಡಲ್ ಪಸಿವಾರ್ದಳುರ್ದಟ್ಟಿ ನಿಪ್ಪುಟಂ ಕರಗಿದುದು: **ಆದಿಪು,** ೮. ೬೨)

**ನಿಪ್ಪೊಸತು** – ಹೊಚ್ಚ ಹೊಸತು (ಯುಗಮಂ ನಿಪ್ಪೊಸತಪ್ಪಿನಂ ಕೃತಯುಗಂ ಮಾಡಲ್ ಸುರೇಂದ್ರಾಳಿಗಾವಗಂ ಉತ್ಸಾಹಂ ಉಂಟುಮಾಡಲ್ ಎಡೆಗೊಟ್ಟೀ ಧರ್ಮಮಂ: **ಆದಿಪು,** ೭. ೨)

**ನಿಬಂಧ** – ಕಾರಣ (ಸಜ್ಜನಪ್ರೀತಿನಿಬಂಧವಲ್ಲದೊಡೇಂ ದುರಿತಕ್ಷಯಕಾರಣಂ ಜಿನಖ್ಯಾತಿನಿಬಂಧಮೆಂಬ ಬಗೆ ಕೈಮಿಗೆ ಪೇಟ್ದಪೆನೀ ಪ್ರಬಂಧಮಂ: **ಮಲ್ಲಿನಾಪು,** ೧. ೫೧) ; ನಿಯಮ (ಸವಳದೆ ಸಂಜೆವಾಸಿಸದಪೆಮೆಂದು ನಿಬಂಧದೆ ಕರ್ಚಿ ಕಾಲ್ಗಳಂ: **ಸಮಯಪ,** ೧೪. ೨೫)

**ನಿಬಂಧನ** – ಕಟ್ಟುವುದು, [ಕಾವ್ಯ]ಕೃತಿ (ಅರ್ಥದೊಳಾದಮಾದ ಮೋಹದಿನೇಕೆ ಮಾಱುವರೊ ಪುಣ್ಯನಿಬಂಧನಮಂ ಕವೀಶ್ವರರ್: **ಮಲ್ಲಿನಾಪು,** ೧. ४೭)

**ನಿಬಂಧನೆ** – ನಿಯಮ (ಪರಿಭಾವಿಸೆ ಜನದನುರಾಗಮದೆ ನಿಬಂಧನೆಯಲ್ತೇ: **ಚಂದ್ರಪ್ರಪು,** ४. ೨೧)

**ನಿಬದ್ಧ** – ಅಂಟಿಕೊಂಡ (ಚಂದ್ರಾಪೀಡಚರಣತಳ ನಿಬದ್ಧಜೀವಿತಮಪ್ಪ ರಾಜಲೀಕಕ್ಕಂ ಪ್ರಿಯತಮಾಕೃತಿಯಂ ತೋಱಲೊಡಂ: **ಕಾದಂಸಂ,** ೭. ೫೪ ವ)

**ನಿಬದ್ಧಾಂಜಳಿ** – ಜೋಡಿಸಿದ ಕೈ, ಬೊಗಸೆ (ಸೂರ್ಯಮಿತ್ರ ಜಿನೇಂದ್ರನಂ ತ್ರಿಃಪ್ರದಕ್ಷಿಣಂಗೆಯ್ದು ಭಕ್ತಿಭರ ವಿನಮಿತೋತ್ತಮಾಂಗ ನಿಬದ್ಧಾಂಜಳಿಗಳಾಗಿ: **ಸುಕುಮಾಚ,** ೮. ೬ ವ)

**ನಿಬರ್ಹಣ** – ವಧೆ (ಪಾಸಱೆಯೊಳ್ ಕೂಸನಪ್ಪಳಿಸಿ ಬಾಲನಬರ್ಹಣ ಗರ್ಹಣಾತಿರೇಕದಿಂ ಗತಶ್ರೀಕನಾಗಿ ನಿಜರಾಜಮಧಿರಮಂ ಪೊಕ್ಕಂ: **ಜಗನ್ನಾವಿ,** ೨. ೫೪ ವ)

**ನಿಬ್ಬಂದಿಗ** – [ನಿರ್ಬಂಧಿಕ] ಕಟ್ಟಿಗೊಳಗಾದವನು (ಬಕಾರಕ್ಕೆ: ಪತಿಬ್ರತೆ–ಹದಿಬದೆ, ನಿರ್ಬಂಧಿಕಂ–ನಿಬ್ಬಂದಿಗಂ, ನಿರ್ಬುದ್ಧಿ–ನಿಬ್ಬುದ್ದಿ: **ಶಬ್ದಮದ,** ೩೦೭ ಪ್ರ)

**ನಿಬ್ಬಣ** – ಮದುವೆಯ ಉತ್ಸವ (ಬರೆ ಭರದಿಂದೆ ನಿಬ್ಬಣಕೆ ಚಿತ್ತಜನುಂ ರತಿಯುಂ ವಸಂತನುಂ ವನಲಕ್ಷ್ಮಿಯುಂ: **ನೇಮಿನಾಪು,** ೬. ೫೦)

**ನಿಬ್ಬರ** – [ನಿರ್ಭರ] ಬತ್ತುವಿಕೆ (ನಾಲಗೆ ನಿಬ್ಬರಮಾಗೆ ಕಣ್ಣಿಡರ್ ಕನಲದೆ ನಂದೆವೊಯ್ದ ತೆಱನಾಗೆ ತೃಷಾತುರನಾದನಾ ನೃಪಂ: **ಲೀಲಾವತಿ,** ೬. ೩೮)

**ನಿಬ್ಬರಂಬಿರಿ** – ಚೆನ್ನಾಗಿ ಅರಳು (ತೆಱವುಗುಡದೆ ಸೂಟ್ಯೈಸುವ ನಿಸ್ಸಾಳದ ಬಲ್ಸರಕೆ ದೆಸೆವೆಟ್ಟುಗಳ್ ನಿಬ್ಬರಂಬಿರಿಯೆಯುಂ ಬೇಗದಿಂ ನಡೆದೆತ್ತಿ ಬಂದು ಮಂಜುವೆಟ್ಟುಮಂ ಮೂವಳಸಾಗಿ ಮುತ್ತಿದಾಗಳ್: **ಕಬ್ಬಿಗಕಾ,** ೨೨೪ ವ)

**ನಿಬ್ಬರಿಸು** – ತುಂಬಿಕೊ (ನೇಸಱ ಸಾರೆ ನಿಬ್ಬರಿಸುವ ಉತ್ಪಲಮಾಲೆಯೆನಿಪ್ಪ ದೃಷ್ಟಿ ವಿನ್ಯಾಸಮನೊಯ್ಯನೆ ಓಸರಿಸಿ .. .. ಸೀತೆ .. .. ಮುಚ್ಚಿದಳ್ ಎರಟ್ಕರದಿಂ ತರಲೇಕ್ಷಣಂಗಳಂ: **ಪಂಪರಾ,** ೯. ೧೧೨)

**ನಿಬ್ಬೆಗ** – ಉದ್ವೇಗ (ಬಿಬ್ಬೋಕಂ ಕುಡಿವರಿಯಲ್ ನಿಬ್ಬೆಗದೆ ನಿನಗಕಾರಣಹಸನಮದೆಂದಳ್: **ಉದ್ಭಟಕಾ,** ೧೧. ೨೩)

**ನಿಭ** – ಸಮಾನ (ಮಧುಪವ್ಯೂಹ ನಿಭ ಕುಟಿಳ ಚಿಕುರ ಮನೋಹರೆ ಮನಸಿಜನ ಕಣೆಗೆ ದೊಣೆಯೆನೆ ನೆಗಟ್ದಳ್: **ಸುಕುಮಾಚ,** ೧. ೭೯ ಬಿ)

**ನಿಭೃತ** – ತುಂಬಿದ (ಕೆಳದೀ ನಿನ್ ಮುಖಂ ತಳಮಳಗೊಳಿಸುಗುಂ ಇಂತು ನಿಭೃತಶೃಂಗಾರರಸಂ: **ಕವಿರಾಮಾ,** ೩. ೧೯೨)

**ನಿಭೃತೇಂಗಿತ** – ರಹಸ್ಯ ಅಭಿಪ್ರಾಯವುಳ್ಳವನು (ಸನ್ಮತಿಯ ನುಡಿಯಂ ಕೇಳ್ದು ಮುನಿಯ ಸಂವೃತಾಕಾರನುಂ ನಿಭೃತೇಂಗಿತನುಮಾಗಿ: **ಶಾಂತಿಪು,** ೨. ೫೧ ವ)

**ನಿಮಗ್ನ –** ಮುಳುಗಿದ[ವನು] (ಜನನಿಯ ಮೊಗಮಂ ನೋಡಲ್ಕೆ ನಾಣ್ಚಿ ಸಿಗ್ಗಾಗಿ ಬಾಗಿ ತಲೆಯಂ ಚಿಂತಾಬ್ಧಿನಿಮರ್ಗನರಾಗಿ ಕಣ್ಣೀರನಿಕ್ಕುತ್ತಿರೆ: **ಸುಕುಮಾಚ,** ೨. ೩೦)

**ನಿಮಿತ್ತ –** ಕಾರಣ (ಮನೋವೃತ್ತಿ ನಿಮಿತ್ತಮಾಗಿ ಶಬ್ದಂ ಜನಿಯಿಸುಗುಂ ಧವಲವರ್ಣಮಕ್ಷರ ರೂಪಂ: ಶಬ್ದಮದ, ೪೪); ಅಪೇಕ್ಷೆ (ಜಟಾಯುದೇವಂ ನೀನೀ ಪೆಣನಂ ಪೊತ್ತು ತೊಟಿಲ್ವುದು ಏ ನಿಮಿತ್ತಂ ಎಂದುತೋಟಿ ನುಡಿವುದುಂ: **ಪಂಪರಾ,** ೧೬. ೫೫ ವ); ಶಕುನ (ಮಲಮಲ ಮಱುಗುತ್ತುಂ ಮನೆಗೆ ವಂದು ತನ್ನಱಿವ ನಿಮಿತ್ತಂಗಳೊಳ್ ನೀಡಿಯುಂ ನಿಟ್ಟಿಸಲಾಱದೆ: **ಸುಕುಮಾಚ,** ೩. ೫ ವ)

**ನಿಮಿತ್ತಕ –** ಜ್ಯೋತಿಷಿ (ರಥನೂಪುರಚಕ್ರವಾಳಪೌರೀವರಪುತ್ರಿ ಆ ತರುಣಿಯಂ ತರವೇಟ್ಪುದು ದೇವ ನೀಂ .. .. ಎಂದು ಪೇಟ್ದಿನೊಲವಿಂ ಜಯಗುಪ್ತ ನಿಮಿತ್ತಕೋತ್ತಮಂ: **ಶಾಂತೀಶ್ವಪು,** ೨. ೯೭)

**ನಿಮಿತ್ತಜ್ಞ –** ಜ್ಯೋತಿಷಿ (ನಿಮಿತ್ತಜ್ಞಂ ಅಂಬರ ಭೂಗೋಚರರೊಳ್ ಪರೀಕ್ಷಿಸಿ ನಿಮಿತ್ತಾಂಗಂಗಳೊಳ್ ನೋಡಿ ಕಂಡಿರದೆ ಇಂತೆಂದಂ ಬಗೆದು: **ಶಾಂತಿಪು,** ೫. ೨೧)

**ನಿಮಿತ್ತವಿದ –** ನಿಮಿತ್ತಜ್ಞ (ತ್ರಿಜಗದ ತಿರಿಕಂ ವಿದ್ಯಾಭಿಜಾತಗಂಧರ್ವಂ ನಿಮಿತ್ತವಿದಂ: **ಶಾಂತಿಪು,** ೬. ೨೪)

**ನಿಮಿತ್ತಾಂಗ –** ಕಾರಣವಾದ ಜಾಗ (ನಿಮಿತ್ತಜ್ಞಂ ಅಂಬರ ಭೂಗೋಚರರೊಳ್ ಪರೀಕ್ಷಿಸಿ ನಿಮಿತ್ತಾಂಗಂಗಳೊಳ್ ನೋಡಿ ಕಂಡಿರದೆ ಇಂತೆಂದಂ ಬಗೆದು: **ಶಾಂತಿಪು,** ೫. ೨೧)

**ನಿಮಿರ್ –** ಹರಡು, ಹೆಚ್ಚಾಗು (ಜಳಕೇಳಿ ನಿಮಿರ್ಗೆ ಭರತನ ಲಲಿತಾಂತಃಪುರದೊಳ್ ಎಂಬ ತನ್ನಟ್ಟಿಱಿಗೊಳ್: **ಆದಿಪು,** ೧೧. ೧೪೪); ನೆರವೇರು (ಅವಂ ಬೆಗದಿರೆ ನಿಮಿರ್ಗುಂ ಆತಂ ಬಗೆದೊಡೆ ಬಗೆದಂತೆ ಬಗೆದ ಬಗೆ ನಿಮಿರ್ದಪುದೇ: **ಶಾಂತಿಪು,** ೭. ೧೧); ಮೇಲಕ್ಕೆತ್ತು (ಗಗನಗಮನಕ್ಕೆ ಹಂಸಂ ಮೊಗಸಿದುದೆನೆ ನಿಮಿರ್ದ ಕೊರಳಂ: **ಕಾದಂಬ,** ೧. ೧೭೩)

**ನಿಮಿರ್ಕೆ –** ಆಧಿಕ್ಯ (ಕಾದಂಬರೀ ಪ್ರಣಯಕ್ಕೆ ನಿಮಿರ್ಕೆಯಂ ಮಾಟ್ಪುದು ಎಂತಾನುಂ ಕಯ್ಕೊಳ್ಳದಿರಲ್ ಆಕೆ ಭಗ್ನಪ್ರಣಯೆಯಾದಪ್ಪಳ್: **ಕಾದಂಸಂ,** ೫. ೫೩ ವ): ನೆಟ್ಟಗೆ ನಿಲ್ಲುವಿಕೆ

**ನಿಮಿರ್ಕೆಗುಂದು –** ಅತಿಶಯತೆ ಕುಂದು (ಅಲಂಪಿನಿಂಪು ತವದೆ ಅಟ್ಟಿಱಿಳುರ್ಕೆ ನಿಮಿರ್ಕೆಗುಂದದೆ ಆವಗಂ ಅತಿಸೌಖ್ಯಮಂ ಪಡೆವುದು; **ಆದಿಪು,** ೫. ೪೩)

**ನಿಮಿರ್ಚು –** ಹರಡಿಕೊ (ಉದಾರರಾಗೋದಯಂ ನಿಮಿರ್ಚಿದುದು ಕಣ್ಗೆ ವಿಯತ್ತಳಚಾರಣೋದಯಂ: **ಆದಿಪು,** ೫. ೪೬); ನೇರಗೊಳ್ಳು (ಗೆಲೆವಂದಂ ಎನ್ನಂ ನಿಜೋನ್ನತಿಯಿಂದಂ ಈ ಪತಿಯೆಂದು ಮೆಚ್ಚಿ ವಿನಾಯಕಂ ತಾಂ ನಿಮಿರ್ಚುಗೆ ಕಬ್ಬಮಂ ನಯದಿಂ ಗುಣಾರ್ಣವಭೂಪನಾ: **ಪಂಪಭಾ,** ೧. ೭); ಬಿಚ್ಚು (ಆ ಲೇಖನಮಂ ಕಳೆದುಕೊಂಡು ನಿಮಿರ್ಚಿ ನೋಟ್ಪನ್ನೆಗಂ: **ಕಾದಂಬ,** ೫. ೭೭); ಈಡೇರಿಸು (ಅವರ ಮನೋರಥಮಂ ನಿಮಿರ್ಚಲೆಂದು ಸ್ವೈಪು ಸಾಕಾರತೆವೆತ್ತು ಬರ್ಪಂತೆ: **ರಾಜಶೇಖ,** ೩. ೭೮ ವ)

**ನಿಮಿಷ –** ಒಮ್ಮೆ ರೆಪ್ಪೆ ಮಿಟುಕಿಸುವಷ್ಟು ಕಾಲ (ನಿಮಿಷಮಗಲ್ದು ತಾನಿರದವಳ್ ತಳರ್ದಿನಿತೊಂದು ಪೊಟ್ತು ಇದೇಕೆಮ ತಡೆದಿರ್ದಳ್: **ಕುಸುಮಾಕಾ,** ೧೩. ೩೭)

**ನಿಮಿಷಾರ್ಧ –** ಅತ್ಯಲ್ಪಕಾಲ (ನಿಮಿಷಾರ್ಧಂ ನುತಿಗೆಯ್ದೊಡಪ್ಪದೆ ವಲಂ ಚಕ್ರೇಶ್ವರತ: **ಶಾಂತೀಶ್ವಪು,** ೧೭. ೯೭)

**ನಿಮಿಸ –** ನಿಮಿಷ (ತಕ್ಕಂತೆ ಎಂಬ ಪರಿಮಿತವಚನದಿಂದಿತ್ವಕ್ಕೆತ್ವಂ ಕೆಲವಱಿೊಳಿಲ್ಲ: ನಿಶಿ–ನಿಸಿ, ವಿಷಂ–ಬಿಸಂ, ನಿಮಿಷಂ–ನಿಮಿಸಂ: **ಶಬ್ದಮದ,** ೨೮೫ ಪ್ರ)

**ನಿಮೀಲಿತ –** ಮುಚ್ಚಿಕೊಂಡ (ಕಾದಂಬರಿ ತೊಟ್ಟನೆ ಅದೃಷ್ಟ ವಜ್ರಾಭಿಘಾತೆಯಾದಂತೆ ನಿಮೋಲಿತನಯನೆಯಾಗಿ: **ಕಾದಂಸಂ,** ೬. ೧೭ ವ)

**ನಿಮೇಷ –** ರೆಪ್ಪೆ ಮಿಟುಕಿಸು (ವಿಗತನಿಮೇಷನುಂ ಎನಿಸಿ ಬರೆದನಂತೆಯುಂ ಕಂಡರಿಸಿದನಂತೆಯು ಮರವಟ್ಟನಂತೆಯುಂ .. .. ಇರ್ದಂ: **ಕಾದಂಸಂ,** ೪. ೫೬ ವ); ಅತ್ಯಲ್ಪ ಕಾಲ (ಹದಿನೆಂಟು ನಿಮೇಷದಿನಂತದೊಂದು ಕಾಷ್ಠೆ ಕಾಷ್ಠೆ ಮೂವತ್ತಾಱಿಂದಂದದು ಕಳೆ ಕಳೆಗಳ್ ಮೂವತ್ತದು ಕ್ಷಣಂ ಕಷ್ಣಮದಾಱು ಘಟಿಗೆಯೆನಿಕ್ಕುಂ: **ಅಭಿಧಾವ,** ೧. ೨. ೨)

**ನಿಮ್ನ –** ಆಳವಾದ [ಜಾಗ] (ಎಸೆವೀ ನಿಮ್ನೋತ್ತಂಗಳ್ ವಿರಾಜಿಸಿ ಚೆಲ್ವಿಂಗೆಡೆಗೊಂಡುವು: **ಆದಿಪು,** ೪. ೪)

**ನಿಮ್ನಗಾತಟ –** [ನಿಮ್ನಗೆ] ನದಿ [ದಡ] (ನಿಮಗ್ನಾತಟ ನಿಕಟವರ್ತಿಗಳಪ್ಪ ಮಹಾ ದ್ರೋಣಮುಖಂಗಳುಮಂ; **ಆದಿಪು,** ೮. ೬೩ ವ)

**ನಿಮ್ನಗೆ –** ನದಿ (ಬೇಸಗೆಗೆ ಸಿಲ್ಕಿದ ನಿಮ್ನಗೆಯಂತೆ ಮಾಗಂ ಮುಟ್ಟಿದ ದಿನಲಕ್ಷ್ಮಿಯಂತೆ .. .. ಕೊರಗಿರ್ದ ಕಾಂತೆ: **ಲೀಲಾವತಿ,** ೧೨. ೩೫)

**ನಿಮ್ನನಾಭಿ –** ಆಳವಾದ ಹೊಕ್ಕುಳು (ಮದನ ದವಾನಲಾರ್ಚಿ ತನುವಂ ಸುಡೆ ತಳ್ತ ಎಮೆಯೊಳ್ ಪಳಂಚಿ ಬೀಗಿದ ಬೆಳರ್ವಾಯೊಳ್ ಉಚ್ಚಳಿಸಿ .. .. ಎಯ್ದಿದುವು ನೇತ್ರಜಲಬಿಂದುಗಳ್ ಆಕೆಯ ನಿಮ್ನನಾಭಿಯಂ: **ಪಂಪಭಾ,** ೫. ೯)

**ನಿಮ್ನೋನ್ನತ –** ತಗ್ಗು ಏರುಗಳು (ರಸವತ್ಕಾಂತಿಯನಾಂತು ನಿಂದುದೆಸೆವೀ ನಿಮ್ನೋನ್ನತಂಗಳ್: **ಆದಿಪು,** ೪. ೪)

**ನಿಯತಂ –** ತಪ್ಪದೆ (ನಿಯತಂ ಸಮ್ಯಙ್ಮಂತ್ರ ಪ್ರಯೋಗಪಟುವೆನಿಪ ಭೂತಳಾಧೀಶ್ವರಂ ಅಪ್ರಿಯರಂ ಮರ್ದಿಸಿ ಧರೆಯಂ ಜಯಲಕ್ಷ್ಮೀಧಾಮನಾಗಿ ಪರಿರಕ್ಷಿಸುಗುಂ; **ಪಂಚತಂತ್ರ.,** ೨೯೧)

**ನಿಯತಪ್ರತೀತಿ –** ನಡೆಯಬೇಕಾದದ್ದು ನಡೆದೇ ತೀರುವುದೆಂಬ ತಿಳಿವಳಿಕೆ (ಸತತೋದಯಂ ಅಪ್ರತಿಗತಿತೀವ್ರಂ ಸದ್ದಿನಾಧಿನಾಥನುಂ ಅಸ್ತಂಗತನಾದಂತೆ ನಿಯತಪ್ರತೀತಿಯಂ ಕಳೆಯಲಕ್ಕುಮೇ ವ್ಯಾಪಕಮಂ: **ಕವಿರಾಮಾ,** ೩. ೩೦)

**ನಿಯತವೃತ್ತಸ್ಥಿತ –** ಸ್ಥಿರ ನಡತೆಯುಳ್ಳವನು (ಪರಮೋದಯರಿರ್ ಕಮಲಾಕರಬೋಧಕರಿರ್ ದಿನೇಶನುಂ ನೀನುಂ ಭಾಸ್ಕರನಿಯತ ವೃತ್ತಕ್ರಮಾನುಂ ಅರಸಾ ನಿನ್ನಂತೆ ನಿಯತವೃತ್ತಸ್ಥಿತನೇಂ: **ಕವಿರಾಮಾ** ೩. ೪೧)

**ನಿಯತಾಹಂಕೃತಿ –** ಅಹಂಕಾರವನ್ನು ನಿಯಂತ್ರಿಸಿದವನು (ನಿಯತಾಹಂಕೃತಿ ಪೂತನಾಪ್ರತಿಭಯಂ ಲೋಲಾತ್ಮಕಾ ಕಾಂತಕಂ .. .. ಯಶೋದಾಪ್ರಿಯಾತ್ಮೋದ್ಭವಂ: **ನೇಮಿನಾಪು,** ೭. ೯೩)

**ನಿಯತಿ –** ವಿಧಿ (ನಿಯತಿಯನಾರ್ ಮೀಱಿದಪರ್ ಭಯಮೇವುದೊ ಮುಟ್ಟಿದೆಡೆಗೆ ಸೈರಿಸುವುದೆ: **ಯಶೋಧಚ,** ೧. ೪೯)

**ನಿಯತಿಕ್ರಮ** – ನಿಗದಿತ ರೀತಿ (ಎರಡು ಮಾಟ್ಕೆಯೊಳೊಗೆದುವು ವಕ್ರಸ್ವಭಾವ ನಿಯತಿಕ್ರಮದಿಂ: **ಕವಿರಾಮಾ,** ೨. ೫೨)

**ನಿಯತೀ ಕೇನ ಲಂಘ್ಯತೇ** – (ಶಕುನಂಗಳ ಕ್ರಮಂ ಬಗೆಯದೆ ನಿಯತೀ ಕೇನ ಲಂಘ್ಯತೇ ಎಂಬ ನುಡಿಯಂ ನನ್ನಿಮಾಡಿ: **ಪಂಪಭಾ,** ೬. ೬೮ ವ)

**ನಿಯತ್ಯಂಗನೆ** – ಮೃತ್ಯುದೇವತೆ (ಅಂಗನೆಯರ್ಕಳ ಸವತಿ ಜರಾಂಗನೆ ತಾನವಳ ಸವತಿ ಸಂದಿರ್ಪ ನಿಯತ್ಯಂಗನೆಯಾ ಸವತಿಯುಮಂ ಪಿಂಗಿಸಿ ಪುದುವಾಟ್ವೆನಕ್ಕೆ ಮುಕ್ತ್ಯಂಗನೆಯೊಳ್: **ಅಜಿತಪು,** ೨. ೭೫)

**ನಿಯಮನಿಧಾನ** – ತಪವನ್ನೇ ನಿಧಿಯಾಗುಳ್ಳವನು, ತಪಸ್ವಿ (ಸ್ನಾನಾರ್ಥಂ ಒಂದು ಕಳಶಮಂ ನಿಯಮನಿಧಾನಂ ಎಟಲೆ ಪಿಡಿದು ಅಮಳಿನ ಗಂಗಾನದಿಗೆ ವಂದು ಸುರತನಿಧಾನಿ ಅಮರೇಂದ್ರಗಣಿಕೆಯಂ ಮುನಿ ಕಂಡಂ: **ಪಂಪಭಾ,** ೨. ೪೧)

**ನಿಯಮಿಸು** – ನಿರ್ಬಂಧಿಸು (ನಿಯಮಿಸಿ ವರ್ಣಾಶ್ರಮಾಚಾರಮಂ .. .. ಆತ್ಯಂತಿಕ ಸುಖಪದಮಂ ಪೆತ್ತ ರಾಜಾಧಿರಾಜರ್ ಪಲರಿಂದ ಇಕ್ಷ್ವಾಕುವಂಶಂ ಕುಲನದಿಯವೊಲಾಯ್ತು ಅವ್ಯವಚ್ಛಿನ್ನಂ: **ಪಂಪರಾ,** ೧. ೧೩೨); ಅಪ್ಪಣೆಗೈ (ಎನ್ನ ಬರ್ಪನ್ನಂ ಅರಸನಂ ಅಗಲದೆ ವಿಕಸಿತಶತಪತ್ರಾತಪತ್ರದ ತಣ್ಣೆಟಿಲುಮಂ ಕುಂದಲೀಯದಿರು ಎಂದು ನಿಯಮಿಸಿ: **ಪಂಪಭಾ,** ೧೩. ೧೦೫ ವ); ಕಟ್ಟಿಹಾಕು (ಶೃಂಖಲೆಯಿಂ ಹರಿಚರಣಯುಗಳಮಮಂ ನಿಯಮಿಸಿ ಶಾಡ್ವಲತೃಣತತಿಯಂ ಖಡ್ಗದಿಂ ಇಳಾಧಿಪಂ ಕೊಯ್ದು ಮುಂದೆ ಸಾರ್ಚಿದಂ: **ಕಾದಂಸಂ,** ೪. ೧೫); ಗೊತ್ತುಮಾಡು (ಸವಿತ್ರಿಗೆ ಸೀಯನಪ್ಪ ಗೇಯದಿಂ ಪೊಟ್ಟುಗಳೆಯಲ್ ನಿಯಮಿಸಿದಂ: **ಶಾಂತಿಪು,** ೯. ೧೬೮ ವ)

**ನಿಯಾಮ** – ಆಜ್ಞೆ ( ಅವನೀಪತಿ ಇಮ್ಮ ನಿಯಾಮದಿಂದಂ ಆಂ ಮನಮೊಸೆದಂತೆ ಗೆಯ್ದಂ: **ಕರ್ಣನೇಮಿ,** ೩. ೧೪೪)

**ನಿಯುದ್ಧ** – ದ್ವಂದ್ವಗಾಳಗ, ಕುಸ್ತಿ [ಮಲ್ಲಮೇಷೋದ್ಧತ ರಾಜಧಾರಕನಿಯುದ್ಧದಿಂದಂ ಆನಂದಿತಹೃದಯನಾಗಿ: **ಆದಿಪು,** ೮. ೫೦ ವ)

**ನಿಯೋಗ** – ಕಾರ್ಯ (ಮೊದಲೊಳ್ ಮಾಟ್ಟ ನಿಯೋಗಮಿಂತಿದೆನಗೆ ಎಂದಾನಂದದಿಂ ತಾನೆ ಮಾಡಿದನಾ ಚಕ್ರಿಗೆ .. .. ಪುಣ್ಯೋದಕಸ್ನಾನಮಂ: **ಆದಿಪು,** ೧೩. ೧೬); ಸೇರುವುದು; ಸೇವೆ

**ನಿಯೋಗಿ** – ರಾಜಪ್ರತಿನಿಧಿ, ಅಧಿಕಾರಿ (ಬರ್ಪ ನಿಯೋಗಿಗಳಾದ ಚೆಲ್ವಂ ಆವೆಡೆಯೊಳಂ ಈಯೆ ಕಣ್ಗೊಸಗೆಯಂ ಪಡೆದತ್ತು ಸಮಸ್ತಸಾಧನಂ: **ಆದಿಪು,** ೪. ೯೨)

**ನಿಯೋಜನೆಗೆಯ್** – ನರವೇರಿಸು (ಅವನೀಶ ನಿನ್ನ ಮನದಿಷ್ಟಮಂ ನಿಯೋಜನೆಗೆಯ್ವವು ಆವುದು ಅದಂ ಅಟೆಪೆಂದರ್: **ರಾಜಶೇವಿ,** ೩. ೮೨)

**ನಿರಂಕುಶೆ** – ಸ್ವೇಚ್ಛಾಚಾರಿಣಿ (ನಿರತಿಶಯ ರೂಪವಿಲಾಸ ನಿರಂಕುಶೆಯುಂ .. .. ಎನಿಸಿ: **ಸುಕುಮಾಚ,** ೧೧. ೧೫ ವ)

**ನಿರಂಜನ** – ಅಂಟಿಕೊಳ್ಳದ[ವನು], ವಿರಕ್ತ (ಸಕಲಸಂಸಾರಭಾರ ದುಃಖಭಾರಭಂಜನನುಂ ನಿರಂಜನನುಂ ಆಗಿ: **ಪಂಪರಾ,** ೧೬. ೮೧ ವ)

**ನಿರಂಜನಪದ** – ಪರಮಾತ್ಮಪದವಿ (ಕಾಶ್ಯಪಗೋತ್ರವಿತ್ರಂಗೆ ಕಟಿಸೂತ್ರಮಂ ಕಟ್ಟಿ ನಿರಂಜನಪದೇಚ್ಛುಗೆ ಅಂಜನಮನೆಚ್ಚು: **ಚಂದ್ರಪ್ರಪು,** ೧೨. ೧೫೬ ವ)

**ನಿರಂತರಂ** – ಸದಾ ಕಾಲ (ಪರೆದಿರೆ ರಾಗಂ ತನ್ನೊಳ್ ನಿರಂತರಂ ಗಗನವಿವರಮೊಪ್ಪಿತ್ತು: **ಕವಿರಾಮಾ,** ೧. ೧೦೨)

**ನಿರಂತರಾಯ** – ಅಡಚಣೆಗಳಿಲದೆ, ಬೇಗ (ಪುಷ್ಪಮಿತ್ರಂ ವಿಶುದ್ಧಮಪ್ಪ ಅಹಾರದಾನಮಂ ನಿರಂತರಾಯಮಾಗಿ ಮಾಡಿದಾಗಳ್: **ಪುಷ್ಪದಂಪು,** ೧೪. ೧೦ ವ)

**ನಿರಂತರಿತ** – ನಡುವೆ ಎಡೆಯಿಲ್ಲದ, ಒತ್ತೊತ್ತಾದ (ನಿರಂತರಿತ ಶಾಲಿಸಸ್ಯಚಯಶಾಡ್ವಲೋರ್ವಿತಳಂ: **ಚಂದ್ರಪ್ರಪು,** ೫. ೯೩)

**ನಿರಂಬರ** – ಬತ್ತಲೆ (ಸಂಚಿತ ಅನರ್ಘ್ಯರತ್ನತ್ರುರಾಗಿಯುಂ ಅಕಿಂಚನರೆನಿಸಿಯುಂ ನಿರಂಬರರಾಗಿಯುಂ ದಿಗಂಬರರೆನಿಸಿಯುಂ: **ಕರ್ಣನೇಮಿ,** ೧. ೭೫ ವ)

**ನಿರಘ** – ಪಾಪರಹಿತ (ನಿರಘ ನಿಖಿಲ ನಿರ್ವಾಣ ನಿರ್ವ್ಯಾಕುಲಶ್ರೀ ನಿರುತಶ್ರೀ: **ಸುಕುಮಾಚ,** ೧೧. ೭೬)

**ನಿರತಿಶಯ** – ಬಹಳ ಅತಿಶಯವಾದ (ಅಂತು ನಿರತಿಶಯವಿಲಾಸಮಂ ತಳೆದ ವಿಷಯವಿಲಾಸಿನಿಯ ಮೇಲ್ಕೊಂಡ ವಿಚಿತ್ರವಸ್ತ್ರಮೆನಿಸುವ ಉಪವನಂಗಳೊಳ್: **ಮಲ್ಲಿನಾಪು,** ೨. ೧೬ ವ)

**ನಿರಧಿಷ್ಠಾನ** – ಆಧಾರರಹಿತವಾದುದು (ನಿರಧಿಷ್ಠಾನಂ ದಿವಮೆಂಬರ್ ಅಂತಧಿಷ್ಠಾನಮಲ್ಲವೇ ನಗವಿದು ತತ್ಸುರಸದನಕ್ಕೆ: **ಜಗನ್ನಾವಿ,** ೮. ೩೧)

**ನಿರಪವಾದ** – ಅಪವಾದರಹಿತವಾದುದು (ಎನ್ನಂ ಪುಲ್ಲಿಂದಂ ನೊಚ್ಚಿದಳಂ ಕಲ್ಲಿಂದಂ ಬೆಟ್ಟಿದಳುಂ ಬಗೆವರ್ ಉಂತುಂ ಯೌವನಶ್ರೀಯುಂ ನಿರಪವಾದಮಂ ಆರ್ ಕಳೆದಪರ್: **ಶಾಂತಿಪು,** ೪. ೭೯ ವ)

**ನಿರಪೇಕ್ಷ** – ಯಾವುದಕ್ಕೂ ಆಸೆಪಡದವನು (ಅಮರರಿರ್ವರುಂ ನಿರಪೇಕ್ಷರ್: **ಶಾಂತಿಪು,** ೯. ೩೮)

**ನಿರಪೇಕ್ಷಕ** – ಅಪೇಕ್ಷೆಯಿಲ್ಲದ[ವನು] (ಪರಮಶ್ರೀವಧುವಂ ಒಲಿಸಿಯುಂ ಪರವನಿತಾ ನಿರಪೇಕ್ಷಕಂ: **ಯಶೋಧಚ,** ೧. ೧)

**ನಿರಯ** – [ಜೈನ] ಏಳನೆಯ ನರಕ (ದುರಘಕುಳಮೆನಿಪ ನಿರಮಯನಿಯದೆಯ್ದಿಪ ನಿರಯದೂತಿ ನಿದ್ರಾಮಿಷದಿಂದ ಇರದುಯ್ವಂತಿರೆ ನಿದ್ರಾಭರದಿಂದ ಅತ್ಯಯಮನೆಯ್ದಿದಂ ಚಕ್ರಧರಂ: **ಶಾಂತೀಶ್ವಪು,** ೫. ೨೨)

**ನಿರಯಜ** – ನರಕದಲ್ಲಿ ಹುಟ್ಟಿದವನು, ನಾರಕಿ (ಸಕಳ ಪ್ರಕ್ಷೋಭದೊಳ್ ವಿಹ್ವಳರಾಗಿರ್ದ ನಿರಯಜರಂ ಎಯ್ದಿ ಸುತ್ತಿಮುತ್ತಿ ಪಿಡಿದು ಉಗಿಬಗಿ ಮಾಡಿ: **ಶಾಂತಿಪು,** ೭. ೯೪ ವ)

**ನಿರಯಾವನಿ** – ನರಕಲೋಕ (ಸತ್ತವರ್ ವಸುಧೆಯನುರ್ಚಿ ಪೋಗಿ ನಿರಯಾವನಿಯೊಳ್ .. .. ಅಸದೃಶದುಃಖಮಂ .. .. ಉಂಡು: **ಕರ್ಣನೇಮಿ,** ೮. ೨೩)

**ನಿರ್ಗಳ** – ಅನಿರ್ಬಂಧ, ನಿರಾತಂಕ (ರಾಜಕುಂಜರಂಗೆ ನಿನಗಪವರ್ಗಮಾರ್ಗಂ ನಿರ್ಗಳಮೆ ವಲಂ: **ಆದಿಪು,** ೯. ೬೨ ವ)

**ನಿರವದ್ಯ** – ಕಳಂಕರಹಿತ, ಉತ್ಕೃಷ್ಟವಾದ (ಶ್ರೀಮದ್ವಿತೀಯ ತೀರ್ಥಸ್ವಾಮಿ ಜಗತ್ತ್ರಿತಯಶೇಖರಂ ಖರಂ ಭಾಸುರತೇಜೋಮೂರ್ತಿ ಭವ್ಯಜನಚಿಂತಾಮಣಿ ನಿರವದ್ಯಚರಿತಂ ಅಪಗತದುರಿತಂ: **ಅಜಿತಪು,** ೬. ೧)

**ನಿರವಧಿ** – ಮಿತಿಯಿಲ್ಲದ (ನಿರವಧಿಸಾಹಸಂ ಅತಿಭೀಕರಂ ಉದ್ಧರ ಸದ್ಗುಣಾಕಾರಂ ಸೊಗಯಿಸಿದಂ: **ಕರ್ಣನೇಮಿ,** ೫. ೭೫)

**ನಿರವಯವನ್** – ದೇಹವಿಲ್ಲದವನು (ಪರಮಾತ್ಮಂ ಎನ್ನಂ ಎಂದೊಡೆ ಚರಮಾಂಗಂ ಅಪ್ರಮಿತಂ ಅಖಿಲಲೋಕ ಸಮಾನಂ ನಿರವಯವಂ ನಿತ್ಯಂ: **ಯಶೋಧಚ,** ೪. ೨೯)

**ನಿರವಿಸು** – ನಿಯುಕ್ತಿಗೊಳಿಸು (ಹರಿ ಶಿಖಿ ಯಮ ನಿರುತಿ ಜಳಾಕರಪತಿ ಮರುತ್ ಐಳಬಿಳ ಹರ ಅಹಿಪ ಶಶಿ ಭಾಸ್ಕರರರಂ ಸೌಧರ್ಮೇಂದ್ರಂ ನಿರವಿಸಿದಂ ದಶದಿಶಾಳಿಯೊಳ್ ಬಲಸಹಿತಂ: **ಶಾಂತೀಶ್ವಪು,** ೧೪. ೧೦೯); ಬಿನ್ನವಿಸಿಕೊ, ನಿರೂಪಿಸು (ಒಂದು ಸಂದೇಶಂ ಪೇಟ್ ನಿರವಿಸಿದುದುಂಟೆ ಬರ್ಪವಸರದೊಳ್: **ಕಾದಂಸಂ,** ೬. ೧೭); ಒಪ್ಪಿಸು, ವಶಕ್ಕೆ ಕೊಡು (ಅಗ್ಗಲೆ ತನುಜನಂ ಆಗಳೆ ತನ್ನಗ್ರಜಂಗೆ ನಿರವಿಸಿ ಸತ್ತಳ್: **ಕರ್ಣನೇಮಿ,** ೩. ೧೦೯)

**ನಿರಸನ** – ಮರಣ (ಕುಮಾರರ್ ಇಂತು ಅರಿಬಲಮಂ ಉರ್ಕಿನಿಂದ ಇಕ್ಕಿ ನಿರಸನಮಣ ಎಯ್ದಿದರ್: **ಕರ್ಣನೇಮಿ,** ೧೨. ೫೪ ವ)

**ನಿರಸನಮನೆಯ್ದು** – ಕೊಲ್ಲು (ದೇವಕಿ ಪಡೆದಮಳ್ಗಳಂ ಕಂಸಂ ನಿಸ್ತ್ರಿಂಶತೆಯಿಂ ನಿರಸನಮನೆಯ್ದಿಸಿ ಋಷಿವಚನಮಂ ಪುಸಿಮಾಡಿದೆನೆಂದು ಸುಖದಿನಿರೆ: **ಕರ್ಣನೇಮಿ,** ೬. ೬೪ ವ)

**ನಿರಸ್ತ** – ದೂರೀಕರಿಸಿದ (ನತನಾದಂ ಅವಂತಿ ವಲ್ಲಭಂ ಹತ ಸುಮನೋವಿಳಾಸಂ .. .. ನಿರಸ್ತ ನಿಸ್ಸೃತ ನಯನಸ್ತಸಾರಂ ಅವಿಚಾರಂ ಇಳೇಶ್ವರ ಪಾದಪಾರ್ಶ್ವದೊಳ್: **ಪಂಪರಾ,** ೭. ೬೬); ಮೀರಿಸಿದ (ಆ ರವಮಂ ನಿರ್ಜಿತ ಕಂಠೀರವರವಮಂ ನಿರಸ್ತ ಘನರವಮಂ .. .. ಕೇಳ್ದು: **ಗದಾಯು,** ೭. ೨೨)

**ನಿರಸ್ತವಿವೇಕ** – ಕಳೆದುಕೊಂಡ ವಿವೇಕ (ನಿರಸ್ತವಿವೇಕಂಬೊಲದೇಕೆ ಮೋಹಿಸಿದಪೈ ನಿರ್ವಾಣಸಕ್ತಂಗೆ: **ಆದಿಪು,** ೧೬. ೫೯)

**ನಿರಾಕರಿಸು** – ನಿರಾಕರಣಂಗೆಯ್ (ಪರಿಚಾರಿಕೆಯರಂ ಕರೆದು ನಿರಾಕರಿಸಿ ಚಾರುದತ್ತನತ್ತ ಆರೂಮಂ ಸಾರಲೀಯದೆ: **ಕರ್ಣನೇಮಿ,** ೪. ೬೧ ವ); ಹೀಯಾಳಿಸು (ಅಂಗಭಂಗಿ ನೆಟ್ಟಗೆ ಲತೆಯಂ ನಿರಾಕರಿಪುದು: **ಶಾಂತೀಶ್ವಪು,** ೪. ೪)

**ನಿರಾಕಾರ** – [ಜೈನ] ಯಾವುದೇ ಫಲಾಪೇಕ್ಷೆಯಿಲ್ಲದೆ ಮಾಡುವ ಉಪವಾಸ (ಸಾಕಾರ ನಿರಾಕಾರವಿರಹಿತಂ ಉಪವಾಸಂ: **ಶಾಂತಿಪು,** ೬. ೪೯ ವ)

**ನಿರಾಕುಳಂ** – ನಿರುಮ್ಮಳವಾಗಿ (ಎನ್ನಿತ್ತು ಸುಖಮಂ ಸಖಿಂಗೆ ಮಾಟ್ಪೆಂ ನಿರಾಕುಳಂ: **ಕಾದಂಸಂ,** ೮. ೪೮)

**ನಿರಾಸ್ರವ** – [ಜೈನ] ಕರ್ಮದಿಂದ ಬಿಡುಗಡೆಗೊಂಡವನು (ಕಾಲಾಂತರದೊಳಾ ಜಿನಂ ವೃಜಿನಮಂ ತವಿಸುತ್ತೆ ನಿರಾಸ್ರವಂ ತ್ರಿಲೋಕಾಂತಮನೆಯ್ದೆ: **ಶಾಂತಿಪು,** ೧೨. ೪೬), ನೋಡಿ, 'ಆಸ್ರವ'

**ನಿರಾಳಂಬನ** – ಆಧಾರರಹಿತ (ಬೀಟುವಿನಂ ಕಣ್ಣುನಿರಾಳಂಬನಮಾಗೆ ಮನದ ಮೋಹಸ್ತಂಭಂ ಬೀಟೆ ವಿಷಯಾನುರಾಗಂ ನಭಸ್ಥಲದೊಳಾದುದು ಉಳ್ಕಾಪಾತಂ: **ಅಜಿತಪು,** ೬. ೪೬)

**ನಿರಿ** – ಚುಚ್ಚು (ಸ್ಮರಂ ನಿರಿದಪಂ ಎನ್ನ ಜೀವಿತಮಿದೇಕೆಯೊ ಪೋಗದು: **ಲೀಲಾವತಿ,** ೧೪. ೬೧); ಹೋಗಲಾಡಿಸು (ಆ ಪಟುಕರ್ಮದಿನಪ್ಪ ನೋವನಾವಂ ನಿರಿಯಲ್ ಸಮರ್ಥನೆಲೆ ಜೀವನೆ: **ಶಾಂತೀಶ್ವಪು,** ೯. ೧೧೯)

**ನಿರಿಂದ್ರಿಯಸುಖ** – ಇಂದ್ರಿಯಗಳಿಗೆ ಹೊರತಾದ ಸುಖ (ದುರೀಂದ್ರಿಯಸುಖಕ್ಕೆ ಕೊಕ್ಕರಿಕೆ ಪುಟ್ಟೆ ನಿರ್ವೇಗದಿಂ ನಿರೀಂದ್ರಿಯಸುಖಕ್ಕೆ ನಾಡೆ ಮನವಿಟ್ಟು ಸರ್ವಸ್ವಮಂ ಜರತ್ ತೃಣಸಮಾನವಾಗೆ ಬಗೆದು: **ಸುಕುಮಾಚ,** ೧೦. ೩೧)

**ನಿರೀಕ್ಷಣ** – ದೃಷ್ಟಿ (ನಿರೀಕ್ಷಿಸುವ ನಿರೀಕ್ಷಣಮೆ ಮನಃಪ್ರಸಾದಮಂ ಪೇಚಿದಟಿಪುಗುಂ: **ಶಾಂತಿಪು,** ೩. ೩೮)

**ನಿರೀಕ್ಷಿಸು** – ನೋಡು (ನಿರೀಕ್ಷಿಸುವ ನಿರೀಕ್ಷಣಮೆ ಮನಃಪ್ರಸಾದಮಂ ಪೇಚಿದಟಿಪುಗುಂ: **ಶಾಂತಿಪು,** ೩. ೩೮)

**ನಿರೀಹ** – ಬಯಕೆಗಳಿಲ್ಲದ[ವನು] (ನಿರೀಹಭಕ್ತಪರಮೋಕ್ಷದ ಭಕ್ತಮನಸ್ಸರೋಜಂ: **ಶಬರಶಂ,** ೫. ೧೭)

**ನಿರುಜ** – ರೋಗಗಳಿಲ್ಲದ[ವನು] (ಗುಲ್ಮದೊಳ್ ಬೆರೆಸಿರ್ದುಂ ನಿರುಜರ್ ಪರಾಂಗನೆಗೆ ಮೆಯ್ಗೊಟ್ಟಿರ್ದುಂ ಅತ್ಯಂತ ಸಚ್ಚರಿತರ್: **ತ್ರಿಷಷ್ಟಿಪು,** ೧. ೫೫)

**ನಿರುತಂ** – ನಿಶ್ಚಿತವಾಗಿ (ಅಧಿಗಮಶಿಷ್ಯೋತ್ಕರಾನುಗ್ರಹತ್ವಂ ನಿರುತಂ ಕೈಗಣ್ಮೆ ಪೊಣ್ಮುತ್ತಿರಲ್: **ಸುಕುಮಾಚ,** ೧. ೩)

**ನಿರುತಿ** – ನೈರುತ್ಯ ದಿಕ್ಕಿನ ಅಧಿಪತಿ (ಹರಿ ಶಿಖಿ ಯಮ ನಿರುತಿ ಜಳಾಕರಪತಿ ಮರುತ್ ಐಳಬಿಳ ಹರ ಅಹಿಪ ಶಶಿ ಭಾಸ್ಕರರರಂ ಸೌಧರ್ಮೇಂದ್ರಂ ನಿರವಿಸಿದಂ ದಶದಿಶಾಳಿಯೊಳ್ ಬಲಸಹಿತಂ: **ಶಾಂತೀಶ್ವಪು,** ೧೪. ೧೦೯

**ನಿರುದ್ಧೋಚ್ಛ್ವಾಸ** – ಕಟ್ಟಿಹೋದ ಉಸಿರು (ನಿರುದ್ಧೋಚ್ಛ್ವಾಸಮಪ್ಪನ್ನೆಗಂ ಪುದಿದಾ ದಂಪತಿಯಂ ಲೋಕಾಶ್ಚರ್ಯಮಂ ಮಾಡಿ ಕೊಂದುದು ಕೃಷ್ಣಾಗರುಧೂಪ ಧೂಮನಿವಹಂ: **ಆದಿಪು,** ೫. ೨೩)

**ನಿರುಪಾಧಿಕ** – ತೊಂದರೆಗಳಿಗೊಳಗಾಗದ (ನಿರುಪಾಧಿಕ ಪ್ರಕಾಶಾಂತರ ಚಿಜ್ಜ್ಯೋತಿಗೆ ಸಮಾನಮಲ್ತೆಂದು .. .. ಮಣಿದೀಪಮಂ ನಿರೀಕ್ಷಿಸಿ ನಗುವಂ: **ರಾಜಶೇವಿ,** ೪. ೬೩)

**ನಿರೂಪಣ** – ವಿವರಿಸುವಿಕೆ (ಸುರತರಾಗನಿರೂಪಣ ಕಾರಣಂಗಳಂ ತರಿಪೆಂ: **ಕವಿರಾಮಾ,** ೨. ೧೦೫)

**ನಿರೋಗರ್** – ಆರೋಗ್ಯವಂತರು (ಅಭಯರ್ ನಿರೋಗರುಂ ಶ್ರುತವಿಭವಸಮನ್ವಿತರಪ್ಪರೆಂಬುದು ಪಿರಿದಲ್ತು: **ಆದಿಪು,** ೧೦. ೧೧)

**ನಿರ್ಗಡಿ** – ವಿಚಾರಹೀನ (ಸುಡು ಪೊಲ್ಲಳನೆನ್ನದೆ ತನ್ನೊಡಮೆಯ ಕೇಡಿಂಗಂ ಅವಳ ಪೋಗಿಂಗಂ ನಿರ್ಗಡಿ ಬೆನ್ನೊಳಟಿಸಿ ಪೋದಂ ಕಡು ಮೋಹಿತರಾರುಂ ಉಚಿತಮಂ ನೆನೆದಪರೇ: **ಪಂಪರಾ,** ೬. ೩೫)

**ನಿರ್ಗತ** – ಈಚೆಗೆ ಹೊರಟ (ಕ್ರಂದತ್ ಸ್ಯಂದನ ಜಾತ ನಿರ್ಗತ ಶಿಖಿಜ್ವಾಳಾಸಹಸ್ರಂಗಳ್ ಆಟಂದೆತ್ತಂ ಕವಿದೆಟ್ಟಿ ಬೇವ ಶವಸಂಘಾತಂಗಳಂ: **ಪಂಪಭಾ,** ೧೩. ೭೧)

**ನಿರ್ಗಹನ** – ಆಳವಿಲ್ಲದ, ಸುಲಭವಾದ (ಗಹನಮನಂದು ನಿರ್ಗಹನದಿಂ ಯತಿ ಪೊಕ್ಕು: **ಕರ್ಣನೇಮಿ,** ೨. ೨೮)

**ನಿರ್ಗಳಿತ** – ಸೋರಿಹೋದ (ಆ ನರಕಯೋನಿಯೊಳ್ ಪಿರಿದಾನುಂ ನಿರ್ಗಳಿತ ಪೂತಿಗಂಧವ್ರಾತಸ್ನಾನಂಗಳ್ ಕಲಲಪರಿಮ್ಲಾನಂಗಳ್ ಪೇಸುಪತದ ಸಂತಾನಂಗಳ್: **ಶಾಂತೀಶ್ವಪು,** ೯. ೭೬)

**ನಿರ್ಗಾವಿಲ** – ದಡ್ಡನಲ್ಲದವನು (ನಿರ್ಗಾವಿಲಂ ಭೋಗಿ ನಾಟ್ಯರಸಂ ಗೀತದ ಗೊಟ್ಟಿಗೆ ಒಲ್ವಂ: **ಲೀಲಾವತಿ,** ೨. ೭೧)

**ನಿರ್ಗುಂಡಿ** – ಲಕ್ಕಿ ಗಿಡ, ಸಿಂಧುವಾರ (ಅಲಾಬೂ ನಿರ್ಗುಂಡೀ ಕೃಷ್ಣಲ ಅಮರೀ ಬಿಂಬಾಕೀರ್ಣಾಂ ತನ್ನದೀ ತಟಂ ಕಡುರಯ್ಯಂ: **ಲೀಲಾವತಿ,** ೫. ೮೦)

**ನಿರ್ಗ್ರಂಥ** – ಬತ್ತಲೆ (ಬಸಿರ್ಪೆಂಡತಿ ವೇಳಾಸ್ವಾಮಿನಿಯೆಂಬೊಳ್ ಕರ್ದಿಂಗಳಿರುಳೊಳ್ ಕಟ್ಟಿಲೆಯೊಳ್ ನಿರ್ಗ್ರಂಥಮಪ್ಪ ರೂಪಂ

ಕಂಡು ಬೆರ್ಚಿದೊಡೆ: **ವಡ್ಡಾರಾ,** ೯೦. ಸಾ ೧೨); ಪಾವನತೆ (ಅಂತೆ ಜಿನೇಶ್ವರನ ತಪದ ನಿರ್ಗ್ರಂಥದಿಂದಮೆ ಲೋಕದ ಕಾರ್ಯಂಗಳೆಲ್ಲಂ ಸಿದ್ಧಿಯಕ್ಕುಂ: **ಧರ್ಮಾಮೃ,** ೯. ೪೪ ವ); [ಜೈನ] ಬತ್ತಲೆ ಜೈನಮುನಿದೀಕ್ಷೆ (ಹಿಂಸೆಯಿಲ್ಲದಿಪುದೆ ಧರ್ಮಂ ಭಾವಿಸೆ ನಿರ್ಗ್ರಂಥಮೆ ತಪಂ: **ಕರ್ಣನೇಮಿ,** ೧. ೮೪)

**ನಿರ್ಗ್ರಂಥರೂಪು –** ದಿಗಂಬರತ್ವ, ಬತ್ತಲೆ [ವಜ್ರನಾಭಿ ನಿಜದ ರೂಪುಮಂ ನಿರ್ಗ್ರಂಥರೂಪುಮಂ ಕೈಗೊಂಡು ನೆಗಟ್ದಿಂ: **ಆದಿಪು,** ೬. ೨೭)

**ನಿರ್ಘಾತ –** ಸಿಡಿಲು (ನಿರ್ಘಾತಾಭೀಳತರರಭಸಮೋ ಲಯಕಾಳಾಂಬುದಘೋಷಮೋ ನೆಲಂ ಮೊಟಗಿದುದೋ: **ಆದಿಪು,** ೧೨. ೯೧); ಬಲವಾದ ಪೆಟ್ಟು; ಕತ್ತಿಕಾಳಗದ ಒಂದು ವರಸೆ (ಆಗಳಿರ್ವಲದ ಕಡಿತಲೆಕಾಱರ್ ಅಲಗಿನೊಳ್ ಪಳಂಚೆ ತಾಗಿ ನಿರ್ಘಾತ ಉಪ್ಪರಂ ತಾಳವಟ್ಟಂ ಅವಿತಂ ಉಟಿತಂ ಎಂಬ ಪಲವುಂ ತೆಱದದ ಇಱಿವ ಬಿನ್ನಣದೊಳ್ ನೆಱೆದು ತಾಳುಂತಟ್ಟುಂ ಪೊಯ್ಯೆ: **ಪಂಪರಾ,** ೧೩. ೫೪ ವ)

**ನಿರ್ಘೃಣ –** ನಿಷ್ಕರುಣಿ (ಕೀಟಿಡೆಯಿಡೆ ಗಂಟಲಂ ಮುಱಿದಂ ಒರ್ಮೆಯೆ ನಿರ್ಘೃಣಂ ಎನ್ನ ತಂದೆಯಂ: **ಕಾದಂಸಂ,** ೧. ೫೫)

**ನಿರ್ಜಂತುಕ –** ಜನರಿಲ್ಲದ (ನಿರ್ಜಂತುಕಪ್ರದೇಶದೊಳಿರ್ದ ಶಿಳಾಪಟ್ಟಕದ ಮೇಲೆ ಪೂರ್ವಾಭಿಮುಖನಾಗಿ .. .. ನಿಂದಂ: **ಸುಕುಮಾಚ,** ೮. ೫೮ ವ)

**ನಿರ್ಜರ –** ದೇವತೆ (ನಿರ್ಜರಕೋಟಿಯನೊಕ್ಕಿಲಿಕ್ಕಿ ಸಚ್ಚರಿತ ಜಿತಾಕ್ಷಸಂಚಯಮನಂಜಿಸಿ: **ರಾಜಶೇವಿ,** ೧. ೫)

**ನಿರ್ಜರಪರಭಂಗ –** [ನಿರ್ಜರಪರ+ಭಂಗ] ರಾಕ್ಷಸಸಂಹಾರಿ (ಪವಿತ್ರಗಾತ್ರ ನಿರ್ಜರಪರಭಂಗ ತುಂಗಮಹಿಮಾಕರ: **ರಾಜಶೇವಿ,** ೧೩. ೫೩)

**ನಿರ್ಜರೆ –** ದೇವತಾಸ್ತ್ರೀ; [ಜೈನ] ನಿರ್ಜರಾತತ್ವ, ಕರ್ಮವಿನಾಶ (ನಿರವದ್ಯ ಮಹಾವ್ರತದಿಂ ವರಸಮಿತಿಗಳಿಂ ತ್ರಿಗುಪ್ತಿಯಿಂದ ಆಸ್ರವಮಂ ದುರಿತಾರಾತಿಗಳಂ ನಿರ್ಜರಿಸುವ ತಾತ್ಪರ್ಯಮದುವೆ ನಿರ್ಜರೆಯೆನಿಕುಂ: **ಸುಕುಮಾಚ,** ೧೨. ೩೬)

**ನಿರ್ಜಳ –** ಬತ್ತಿಹೋದ (ನಿಸ್ತೃಣ ನಿರ್ಜಳ ನಿಷ್ಪ್ರವಾಳವಲ್ಲೀತರುವಾದುದು ಈ ಎಡೆಯೊಳ್ ಇನ್ನಿರವಾಗದು ಪೋಪುದುತ್ತಮಂ: **ಜಗನ್ನಾವಿ,** ೩. ೬೫)

**ನಿರ್ಜಿತ –** ಗೆದ್ದ (ಆರವಮಂ ನಿರ್ಜಿತಕಂಠೀರವರವಮಂ ನಿರಸ್ತಘನರವಮಂ ಕೋಪಾರುಣನೇತ್ರಂ ಕೇಳ್ದು ಆ ನೀರೊಳಗಿರ್ದುಂ ಬೆಮರ್ತನುರಗಪ್ರತಾಪಂ: **ಗದಾಯು,** ೭. ೨೨)

**ನಿರ್ಝರ –** ಗಿರಿನದಿ (ಮಣಿಮಕುಟ ಶಿಖರಂ ಲಂಬಣಿಗೆತ ಪೊಸಮುತ್ತು ನಿರ್ಝರಂ ಮಣಿಕಟಕಂ ಮಣಿಕಟಕಮಾಗೆ: **ಆದಿಪು,** ೧೩. ೧೩)

**ನಿರ್ಝರಪ್ಲವ –** ಗಿರಿನದಿಯ ಪ್ರವಾಹ (ಗಟಿಲನೆ ಜಘನಾಚಳದಿಂದ ಇಟಿತಂದ ಮನೋಜನಿರ್ಝರಪ್ಲವಂ ಒದವಿಂದ ಎಟೆದೊಯ್ವಂತೆ: **ಲೀಲಾವತಿ,** ೧೩. ೧೪)

**ನಿರ್ಣಯಾರ್ಥ –** ನಿರ್ದಿಷ್ಟ ಅರ್ಥ (ಪುರಜನಪದ ಶೈಲಾದಿತ್ಯಚಂದ್ರೋದಯಾಸ್ತಾಂತರ ಸಮೃಗಗಣವ್ಯಾವರ್ಣನಾ ನಿರ್ಣ್ಯಾರ್ಥಂ: **ಕವಿರಾಮಾ,** ೩. ೨೧೦)

**ನಿರ್ಣೀತ –** ನಿಶ್ಚಿತಗೊಂಡ (ಜಿನತತ್ತ್ವಂ ಸೂಕ್ತತತ್ತ್ವಂ ಜಿನಚರಿತಮೆ ನಿರ್ಣೀತ ಚಾರಿತ್ರಂ ಆದತ್ತೆನಸುಂ ವಿದ್ವಜ್ಜನಂ ಬಣ್ಣಿಸೆ ನೆಗಟ್ದುದು: **ಸುಕುಮಾಚ,** ೧. ೪೯)

**ನಿರ್ದಾಟಿಸು –** ಬಿಸುಡು, ತಿರಸ್ಕರಿಸು (ತನ್ನಂ ನಿರ್ದಾಟಿಸಿ ಕಳೆಯೆ ಪೋಗಿ ಸತ್ತು ವಿವಿಧ ಜವಂಜವ ಚಕ್ರಕ್ರಮಣದಿಂ ಬಂದು: **ಶಾಂತಿಪು,** ೭. ೪೨ ವ)

**ನಿರ್ದಾರಕ –** ಸೀಳುವವನು (ಶಂಭುವೆಂಬ ದಾರಕನುಂ ಜಿನಧರ್ಮನಿರ್ದಾರಕನುಂ ಆಗಿ ಮದ್ಯಮಧುಮಾಂಸ ಸೇವನೆಗೆಯ್ದು ನರಕತಿರ್ಯಕಾದಿ ಗತಿಗಳೊಳ್ ಪಲಕಾಲಂ ತಿರಿತಂದು: **ಪಂಪರಾ.** ೧೬. ೩೮ ವ)

**ನಿರ್ದುರಿತ –** ಪಾಪವಿಲ್ಲದವನು (ಪರಮಾತ್ಮಂ ಎನ್ನಂ ಎಂದೊಡೆ .. .. ನಿತ್ಯಂ ನಿರ್ದುರಿತಂ ಅನಂತ ಪ್ರಬೋಧದಶ್ನ ಸೌಖ್ಯಂ: **ಯಶೋಧಚ,** ೪. ೨೯)

**ನಿರ್ಧಾಟಿಸು –** ನಿವಾರಿಸು (ಕಾಪಿನವರಂ ಕೊಂದು ನಿರ್ಧಾಟಿಸಿ ಕಳೆದು ಬನಮಂ ಕೆಯ್ಕೊಂಡು: **ವರ್ಧಮಾಪು,** ೨. ೩೦ ವ)

**ನಿರ್ಧಾಮಧೂಮಂ –** ಹೊಗೆಯೂ ಉಳಿಯದಂತೆ (ಸುಮನಃಶರಂ ಏಂ ಸೂರನೊ ಚೇತಃಪುರಮಂ ನಿರ್ಧಾಮಧೂಮಮಾಗಿರೆ ಸುಟ್ಟಂ: **ನೇಮಿನಾಪು,** ೫. ೨)

**ನಿರ್ಧಾರಣ –** ವಿವರಣೆ (ಪುದಿಗುಂ ನಿರ್ಧಾರಣದಲ್ಲದೆಯೆಂಬ ದೆಕಾರದೆಡೆಗೆ ಲೋಪಂ: **ಶಬ್ದಮದ,** ೫೭)

**ನಿರ್ಧೌತ –** ತೊಳೆದ (ಗೃಹೀತಧವಳವಲ್ಕಲನುಂ ನಿರ್ಧೌತಜಟಾಕಳಾಪನುಂ .. .. ಆಗಿ ಎನ್ನಂ .. .. ಮುನಿಕುಮಾರಂಬೆರಸು ನಿಜಾಶ್ರನಮಕ್ಕೆ ಪೋಗೆವೋಗೆ: **ಕಾದಂಸಂ,** ೧. ೬೮ ವ)

**ನಿರ್ನವಿಸು –** ಬಾಗು, ಮಣಿ (ಅಮರರ ದಂತಿ ನಿರ್ನವಿಸೆಯುಂ ಶಚಿ ನೀಡೆಯುಂ ಇಂದ್ರಂ ಆಂತು ಸಂಭ್ರಮಮನನಾಗಿ ಬಾಗಿ ಕೊಳೆಯುಂ.. ..ಆದುದು ಜನ್ಮದೊಳ್ ಇಂದ್ರವಂದ್ಯನಾ: **ಶಾಂತಿಪು,** ೧೦. ೧೨)

**ನಿರ್ನಾಮಿಕೆ –** ಹೆಸರಿಲ್ಲದವಳು (ಎಂಜಲೆವುಟುಮಂ ತಿಂಬ ಪೆಸರುಮಿಲ್ಲದ ನಿರ್ನಾಮಿಕೆಯೆಂದು ಪೆಸರಾಗಿ: **ಆದಿಪು,** ೩. ೩೪ ವ)

**ನಿರ್ನಿಕ್ತ –** ತೊಳೆದ (ನೀರೊಳಗುಣ ಮುಗುಳೊಳ್ ಸಿಲ್ಕಿ ನಿರ್ನಿಕ್ತ ಸತ್ಯಂ ಸಹಕೃತ್ಯಂ ಸೂರ್ಯಮಿತ್ರಾಹ್ವಯದಿಂ ಎನಗೆ ತಾಂ ಎಂದು ಪೇಟ್ವಿಂತಿರೆ ಇರ್ದತ್ತು: **ಸುಕುಮಾಚ,** ೩. ೧೫)

**ನಿರ್ನಿಮಿತ್ತ –** ಕಾರಣರಹಿತವಾಗಿ (ಅಕ್ಕಟಾ ಮರುಳ್ದುಂಬಿಗಳೇಕೆ ಸಂಪಗೆಗಳೊಳ್ ಪಗೆಗೊಂಡುವೊ ನಿರ್ನಿಮಿತ್ತದಿಂ: **ಶಬ್ದಮದ,** ಪ್ರ ೪)

**ನಿರ್ನಿಮೇಷ –** ರೆಪ್ಪೆ ಮಿಟುಕಿಸದ (ನಿಜೇಷ್ಟಲಿಂಗಮಂ ಕರಾಬ್ಜಪೀಠದೊಳ್ ನೆಲೆಗೊಳಿಸಿ ನಿರ್ನಿಮೇಷ ಅಕ್ಷಿಯಿಂ ನಿರೀಕ್ಷಿಸಿ: **ರಾಜಶೇವಿ,** ೧೩. ೪೭ ವ)

**ನಿರ್ನೀತ –** ನಿರ್ಣೀತ, ತೀರ್ಮಾನಗೊಂಡ (ಜಿನಚರಿತಮೆ ನಿ (ತನ್ನಿಕಟದೊಳ್ ನಿಂದು ನಿರ್ನೀತವೇತನಋಣರುಂ ಶಸ್ತ್ರಾಘಾತಮರಣರುಂ ಆದ ಬಂಧುನೃಪಾಲರ: **ಚಂದ್ರಪ್ರಪು,** ೧೦. ೧೦೫ ವ)

**ನಿರ್ನೆರ –** ಆಧಾರರಹಿತ (ನೆತ್ತಿಯೊಳ್ ಬಾಳಂ ನಿರ್ನೆರಮೂಡಿ ಚಲದನೆಱಗಿಸಲಿರೆ ಭರತಂಗೆ ಎಱಗುವೆಱಕಂ ಅಂಜಮೆಯಲ್ತೇ: **ಆದಿಪು,** ೧೪. ೭೫)

**ನಿರ್ನೆರಂ –** ನಿಷ್ಕಾರಣವಾಗಿ [ಸಾಹಸದ ನಿಮ್ಮಯ್ವರುಂ ಮಕ್ಕಳಾಗಿರೆಯುಂ ನಿಚ್ಚಲುಂ ಇಂದ್ರನೋಲಗದೊಳ್ ಅಂತಾ

ಪಾಂಡುರಾಜಂಗೆ ನಿರ್ನೆರಮಪ್ಪ ಒಂದಪಮಾನದಿಂದಂ ಇನಿತೊಂದು ಊನತ್ವಮಪ್ಪಂತುಟೇ: **ಪಂಪಭಾ,** ೬. ೧೭)

**ನಿರ್ಬೇಗ** – [ನಿರ್ವೇಗ] ವೈರಾಗ್ಯ [ಉಸಿರ್ದೌ ನೀಂ ನಿನ್ನ ನಿರ್ಬೇಗಮಂ ಅಱಿದೆನಿದಂ ಶಕ್ತಿಯೊಳ್ ಮುಕ್ತಿಯಂ ಸಾಧಿಸಲಕ್ಕುಂ: **ಆದಿಪು,** ೩. ೪೪)

**ನಿರ್ಭರ** – ತುಂಬಿದ (ಮದಲೇಖೆಯ ಮಾತಿನೊಳ್ ನಿರ್ಭರಾನಂದೆಯಾಗಿ ಕಾದಂಬರಿ: **ಕಾದಂಸಂ,** ೭. ೫೪ ವ)

**ನಿರ್ಭರಂ** – ತುಂಬಿದಂತೆ, ರಭಸದಿಂದ (ಸ್ಮರನಸ್ತ್ರ ಸಮಿತಿಯದು ನಿರ್ಭರಂ ಅಂಗಮನುರ್ಚಿ ಪೋಗೆಯುಂ ಪೋಬಟಿಯಂ ದೊರಕಿಸಿಕೊಳಲಾಗದು: **ಕವಿರಾಮಾ,** ೩. ೧೮೫)

**ನಿರ್ಭರಹತಿ** – ಬಲವಾದ ಪೆಟ್ಟು (ಸುರಕರನಿರ್ಭರಹತಿಯಿಂ ಸುರದುಂದುಭಿನಿನದಂ ಅಮರವನಿತಾ ವದನಾಂಬುರುಹದಿಂ: **ಆದಿಪು,** ೭. ೭೮)

**ನಿರ್ಭರ್ತ್ಸಿತ** – ತಿರಸ್ಕೃತವಾದ (ನಿಜತೇಜೋನಿರ್ಭರನಿರ್ಭರ್ತ್ಸಿತ ರವಿಗ್ರಹನುಂ ಜನ್ಮಾಂತರಾಭ್ಯಾಸಜನಿತಾವಧಿ ಬೋಧೋದಯ ವಿದಿತಕಾಲನಿಯೋಗಮಂ .. .. ಪ್ರತಿಶ್ರುತಿಯೆಂಬಂ: **ಆದಿಪು,** ೬. ೫೨ ವ)

**ನಿರ್ಭವ** – ಹುಟ್ಟಿಲ್ಲದ[ವನು] (ಪನ್ನಿರ್ವರುಂ ಬಂದು ನಿರ್ಭವನಂ ಕಂಡು ಬೞಿಕ್ಕೆ ಬಂದಿಸಿ: **ಕರ್ಣನೇಮಿ,** ೯. ೫೦)

**ನಿರ್ಭೇದಿ** – ಸೀಳುವವನು (ನಿಯೋದಯನುಂ ನಿಸರ್ಗದೊಳ್ ರಿಪುವರ್ಗದುರ್ಗನಿರ್ಭೇದಿಯುಂ .. .. ಅಪ್ಪ ಅಮಿತಾರಿಗೆ: **ಶಾಂತಿಪು,** ೨. ೫೧ ವ)

**ನಿರ್ಭೇದಿಸು** – ಸೀಳು (ಪರವಾದಿ ತಮಸ್ತಮಮನೊಡೆವ ಬಿಡೆ ಬೆದಱಿಪ ನಿರ್ಭೇದಿಪೆಡೆಗಳಶನಿ ಹರಿದಿನಪೋದಯಂ ಎನಿಸಿದುದು ವಿದ್ಯೆ: **ಆದಿಪು,** ೩. ೭೫)

**ನಿರ್ಮಚ್ಚರ** – ಅಸೂಯೆಯಿಲ್ಲದ[ವನು] (ನಿರ್ಮಳಮಾಗಿರೆ ತಿಳಿವೊಡೆ ನಿರ್ಮಚ್ಚರನಾಗಿ ಋಷಿಯರೊಳ್ ತಿಳಿಗಱಿವಂ: **ಸಮಯಪ,** ೭. ೨೮)

**ನಿರ್ಮಲಿನ** – ಪರಿಶುದ್ಧವಾದ (ಕುಲಹೀನನೆ ಅಪ್ಪೊಡೆ ಕೇವಲಬೋಧಂ ಪರಶುರಾಮಂ ಏನೀಗುಮೆ ನಿರ್ಮಲಿನಕುಲಂಗಲ್ಲದೆ ಪಿಡಿಯಲಲ್ಲದೆ ಅಂತಪ್ಪ ದಿವ್ಯಬಾಣಾವಳಿಯಂ: **ಪಂಪಭಾ,** ೧೨. ೯೭)

**ನಿರ್ಮಾನುಷ್ಯ** – ನಿರ್ಜನ (ಪಲಾಶಪುರಮನೆಯ್ದಿ ನಿರ್ಮಾನುಷ್ಯಮಪ್ಪುದಂ ಕಮಡು ಅಲ್ಲಿ ನಿಮಿರ್ಚಿದ ನಿಡಿಯ ನೇಂಬಿಡಿದು ತಟಮನೆಯ್ದೆ: **ಚಾವುಂಪು,** ಪು. ೪೫೫. ಸಾ. ೪)

**ನಿರ್ಮಾಲ್ಯ** – ಪೂಜಿಸಿ ತೆಗೆದ ಹೂ ಪತ್ರೆ ಮುಂತಾದವು (ಕಿಟ್ಟಂ ನಿರ್ಮಾಲ್ಯಂ ಎಂಬರ್ ಇದು ಬಿಸವಂದಂ: **ಸಮಯಪ,** ೮. ೧೪)

**ನಿರ್ಮುಕ್ತಿ** – ಬಂಧರಹಿತ ಸ್ಥಿತಿ (ಪೆಱತೇಂ ನಿರ್ಮುಕ್ತಿಗೆ ಪೋಪನೆ ರುದ್ರಂ ಮಾಡದೆ ಜಗಮನಱಿದು ಮಾಣಲ್ವೇೞ್ಕುಂ: **ಸಮಯಪ,** ೧೦. ೫೧); ಮೋಕ್ಷ (ಶ್ರೀಪ್ರಭವಮುನಿಪ್ರಭುವ ಪಾದಮೂಲದೊಳ್ ನಿಷ್ಕೃತದಿಗಂಬರಶ್ರೀಕನಾಗೆ ನಿಖಿಲಕರ್ಮನಿರ್ಮುಕ್ತಿಯಿಂ ಪ್ರಾಪ್ತ ಸಪ್ತಪರಮಸ್ಥಾನನಾದಂ: **ಚಂದ್ರಪ್ರಪು,** ೪. ೨೪ ವ)

**ನಿರ್ಮುಕ್ತೋಷ್ಮ** – [ನಿರ್ಮುಕ್ತ+ಊಷ್ಮ] ಬಿಸಿಯಿಲ್ಲದ (ಜೀವಿತಾಶಯದಂತೆ ಅತ್ಯಾಯಾಮಮುಂ ಮುಕ್ತಜ್ವರದಂತೆ ನಿರ್ಮುಕ್ತೋಷ್ಣನುಂ: **ಆದಿಪು,** ೧೩. ೪೬ ವ)

**ನಿರ್ಮೋಕ** – ಹಾವಿನ ಪೊರೆ (ತರುಣ ಉರಗ ನವ ನಿರ್ಮೋಕರುಚಿರಂ ಎನಿಸಿರ್ದ ಧೌತಧವಳಾಂಬರದಿಂ ಕರಮೆಸೆದಂ: **ಕಾದಂಬ,** ೧. ೬೮)

**ನಿರ್ಯದ್ದಾನಗಜ** – [ನಿರ್ಯತ್+ದಾನಗಜ] ಸುರಿಸುವ ಮದೋದಕದ ಆನೆ, ಮದಿಸಿದ ಆನೆ ಉಜ್ಜ್ವಳತಾರಾನಗಮೆನಿಸಪುದು ನಿರ್ಯದ್ದಾನಗಜಂಗಳ ಸೌಧಶಾಲೆ: **ಚಂದ್ರಪ್ರಪು,** ೧. ೧೪೦)

**ನಿರ್ಯಾಣ** – ಆನೆಯ ಕುಡಿನೋಟ (ನಿರ್ಯಾಣೊನ್ನತ ಅವಗ್ರಾಹವಿಭಕ್ತವಿದುವಿಧಾನಶರೀರನುಂ: **ಆದಿಪು,** ೧೨. ೫೬ ವ); ಮೋಕ್ಷ, ಸಾವು (ವಿಘ್ನಸಂಘಾತಂ ಒತ್ತರಿಸುತ್ತಿರ್ದೊಡಂ ಆರ್ಹತಂ ಬಿಡುವನೆ ನಿರ್ಯಾಣಕಾಲಂಬರಂ: **ಸಮಯಪ,** ೭. ೨೧)

**ನಿರ್ಯಾಪಕಾಚಾರ್ಯ** – [ಜೈನ] ಸಲ್ಲೇಖನ ವ್ರತವನ್ನು ಉಪದೇಶಿಸುವ ಗುರು (ಆಗಳ್ ಆ ಸ್ವಯಂಬುದ್ಧಂ ನಿರ್ಯಾಪಕಾಚಾರ್ಯನಾಗಿ ಪಂಚಗುರುಸಮಕ್ಷದೊಳ್.. ..ಮಹಾಬಳನಂ ಜಾತರೂಪಧರನಂ ಮಾಡಿ: **ಆದಿಪು,** ೨. ೫೧ ವ)

**ನಿರ್ಯಾಸ** – ಮರದಿಂದ ಒಸರುವ ಅಂಟು (ತೀರಘನಸಾರ ಸರಳ ಚಂದನದ್ರುಮ ನಿರ್ಯಾಸ ಪ್ರತಿದಿನೋದೀರ್ಣ ಪಂಚಶತಯೋಜನವಿಸ್ತೀರ್ಣಮುಂ ಎನಿಸಿ: **ಮಲ್ಲಿನಾಪು,** ೨. ೬ ವ)

**ನಿರ್ಯೂಹ** – ಬಾಗಿಲು (ಕನಕಸ್ತಂಭಾವಳಂಬಂ ಸ್ಫಟಿಕಘಟಿತನಿರ್ಯೂಹಮಾನೀಳರಂಗಾವನಿ.. ..ದ್ವಾರಚತುಷ್ಕಂ ಓರಂತೆ ನಿತಾಂತಂ ಕಣ್ಗಗುರ್ವಂ ಪಡೆದುದೆಸೆವ ಸಂಗೀತಶಾಲಾಸಮಾಜಂ: **ಶಾಂತೀಶ್ವಪು,** ೧೬. ೬೬)

**ನಿರ್ಲಕ್ಷಣೆ** – ಅಮಂಗಳಸ್ವರೂಪಳು (ಅಯಶಕ್ಕೀಡಾದ ನಿರ್ಲಕ್ಷಣೆಯಂ ಅಶುಭೆಯಂ .. .. ನೀಂ ಬೆಸಗೊಳೆ ಫಲಮೇಂ ಪೇೞ್: **ಕಾದಂಬ,** ೫. ೧೯೮)

**ನಿರ್ಲೋಟಿಸು** – ತುಳಿದುಹಾಕು (ಮತ್ತಂ ವಚನನಿಚಯದಿಂ ನಿರ್ಲೋಟಿಪ ಪಾಟವಮನವಳಂಬಿಸಿ: **ಆಚವರ್ಧ,** ೧೬. ೯ ವ)

**ನಿರ್ಲೌಲ್ಯ** – ಅತ್ಯಾಸೆಯಿಲ್ಲದವನು (ಮಾನಧನಂ ನಿರ್ಲೌಲ್ಯಂ ದಾನಕ್ಕುಪಯೋಗ್ಯಂ ಉತ್ತಮಂ ಸತ್ಪಾತ್ರಂ: **ಸಮಯಪ,** ೭. ೫೪)

**ನಿರ್ವಂದ** – ನಿರ್ಬಂಧ, ಒತ್ತಾಯ (ತಂದೆ ಕಡಂಗಿ ಕಲ್ಪಿಸುವ ಕಲ್ಪಿಯನೊಲ್ಲದೆ ತಾಯ್ಮಗುೞ್ದು ನಿರ್ವಂದದಿಂ ಎಯ್ದೆ ಬಗ್ಗಿಸುವ ಬಗ್ಗಣೆಗಳ್ಕದೆ: **ಸುಕುಮಾಚ,** ೨. ೮)

**ನಿರ್ವರಂಪೊಯ್** – ಬಿರುಸಾಗಿ ಅಪ್ಪಳಿಸು ಎತ್ತಿ ನಿರ್ವಱುಮಪೊಯ್ವತಾಳವಟ್ಟದೊಳಂತಿವಳಿವಟ್ಟಮಾ ತೇರ ತೆಕ್ಕೆಗಳ್ .. .. ನುರ್ಗುನುಱಿಯಾಗಿರ್ದುವು: **ಅನಂತಪು,** ೧೪. ೩ ವ)

**ನಿರ್ವರ್ತಿತ** – ಮಾಡಿ ಮುಗಿಸಿದ (ಆಗಳ್ ಸೂರ್ಯಮಿತ್ರಂ ನಿರ್ವರ್ತಿತ ಸಂಧ್ಯಾನಿಯಮಕ್ರಿಯಾಯೋಗನಾಗಿ ರತ್ನಾಂಗುಲಿಯಂ ಅಂಗುಲಿಯಿಂದುರ್ಚಿ: **ಸುಕುಮಾಚ,** ೩. ೪ ವ)

**ನಿರ್ವರ್ತಿಸು** – ಮಾಡಿ ಮುಗಿಸು (ಅಂತು ಜಲಕೇಳಿಯಂ ನಿರ್ವರ್ತಿಸಿ ಪಾಲ್ಗಡಲ ಮಡುವಿಂ ಪೊಱಮಡುವ ಪೂರ್ಣಚಂದ್ರನಂತೆ: **ಮಲ್ಲಿನಾಪು,** ೬. ೯೫ ವ)

**ನಿರ್ವಹಣ** – ಪೂರ್ಣಗೊಳಿಸು (ಅಚ್ಚರಿಯೆ ಘನಾಹ್ವಯಂಗೆ ಪರನಿರ್ವಹಣ ಪ್ರಕೃತಿಪ್ರವರ್ತನಂ: **ಶಬರಶಂ,** ೧. ೪೪)

**ನಿರ್ವಹಣಲೇಖೆ** – ಚಿತ್ರರಚನೆಯ ಕೊನೆಯಲ್ಲಿ ಬರೆಯುವ ಮುಕ್ತಾಯರೇಖೆಗಳು (ನಿರ್ವಹಣಲೇಖೆಯಲಕ್ತಕದಣ್ಕೆ ಪತ್ತಿ ಕೈಯುಗುರ್ಗೆಸೆಯಲ್ ಸಚಿತ್ರಪಟಧರಿಣಿ ಬಂದಳ್ ಅತಿಪ್ರಮೋದದಿಂ: **ಜಗನ್ನಾವಿ,** ೧೭. ೧೧೫)

**ನಿರ್ವಹಣಸ್ಥಿತಿ** – ಮುಕ್ತಾಯದ ಹಂತ (ಪುನ್ನಮನುಂ ಅಟ್ಟೆಯಿಂ .. .. ನಿರ್ವಹಣಸ್ಥಿತಿಗೆಯ್ದುರ್ ಈ ಅಳಂಕೃತಿ ತಾಂ ಕವಿಚಕ್ರವರ್ತಿಯಾ: **ಶಾಂತಿಪು,** ೧೨. ೬೧)

**ನಿರ್ವಹಿಸು** – ಸಮರ್ಪಕವಾಗಿ ಮುಗಿಸು, ಪೂರೈಸು (ಅಹರಹರಭಿನವ ಮಣಿರುಚಿರ ಹಾಟಕ ಪ್ರಕರ ವಿರಚಿತಂಗಳಂ ಎಂದುಂ ಬಹು ಭಾಜನಂಗಳಂ ನಿರ್ವಹಿಸುವುದು ಅವರವರ್ಗೆ ಭಾಜನಾಂಗ ಮಹೀಜಂ: **ಶಾಂತಿಪು,** ೬. ೧೧೪)

**ನಿರ್ವಾಣ** – ಮುಗಿತಾಯ (ಶಾಂತಿಪುರಾಣದ ನಿರ್ವಾಣಂ ತಕ್ಕುದೆ ಮಲ್ಲಪಯ್ಯನಿಂ ತದನುಜನಿಂ: **ಶಾಂತಿಪು,** ೧. ೫೨); ಬತ್ತಲೆತನ (ನಿಂದನೇಕಾಂತನಿವಾಸಂ ಬೆಳ್ಳಿವಾಸಂ ನಿಶೆಯೊಳೆಸೆಯೆ ನಿರ್ವಾಣದೊಳ್ ಯೋಗಿನಾಥಂ: **ಸುಕುಮಾಚ,** ೪. ೧೧); ಮೋಕ್ಷ (ಜಗತ್ತ್ರಯತ್ರಾಣನುಂ ನಿರ್ವಾಣಸೀಮಂತಿನೀಕಾಂತನಾಗೆ: **ಕರ್ಣನೇಮಿ,** ೨. ೯೯ ವ)

**ನಿರ್ವಾಣಪದ** – ಮೋಕ್ಷಪದವಿ (ನಿರ್ವಾಣಪದಸ್ಥಿತನಂ .. .. ಸರ್ವೇಶ್ವರನಂ ಪೊಗಟ್ವುದಪೂರ್ವ ಗುಣಸ್ತುತಿಶತಂಗಳಿಂ ಮತಿವಂತಂ: **ಸಮಯಪ,** ೧. ೫೩)

**ನಿರ್ವಾಣರೇಖೆಗೊಳ್** – [ಚಿತ್ರದ] ಕೊನೆಯ ಗೆರೆಗಳನ್ನು ರಚಿಸು (ಸ್ಮರವಿಜಯಕ್ಕಿದೆ ನಿರ್ವಾಣರೇಖೆಯೆನೆ .. .. ತರುಣ ಬಹುವಿಧದಿಂ ನರ್ತಿಸಿದಳ್: **ಮಲ್ಲಿನಾಪು,** ೮. ೪೧)

**ನಿರ್ವಾಣಸುಖ** – ಮೋಕ್ಷಸುಖ (ವಸುಧೇಶಸುಖಂ ಗೀರ್ವಾಣಸುಖಂ ನಿರ್ವಾಣಸುಖಮುಮಂ ಕ್ರಮದಿಂ ಪೊರ್ದಿಸಲಾರ್ಪ ಧರ್ಮಮಂ: **ಸಮಯಪ,** ೪. ೯೩)

**ನಿರ್ವಾಪಣ** – ನೀಗುವಿಕೆ ತನು ನಿರ್ವಾಪಣನಿಮಿತ್ತದಿರವಂ ಪೋಲ್ಕುಂ: **ಶಾಂತಿಪು,** ೯. ೧೫೩)

**ನಿರ್ವಾಯ** – ಒಂದು ಬಗೆಯ ಬಾಣ (ನೆಱೆದು ನಿರ್ವಾಯಂ ನರುವಾಯಂ ಮುಂಮೊನೆ ನೆರಕೆ ನಾರಾಚಂ ತಗರ್ತಲೆಯಂ: **ಪಂಪಭಾ,** ೧೩. ೩೯)

**ನಿರ್ವಾಹರೇಖೆ** – ನಿರ್ವಹಣಲೇಖೆ (ಚೆಂಬೊನ್ನ ಮಯೂಖಲೇಖೆಗಳಿಂ ಆ ಚಿತ್ರ ನಿರ್ವಾಹರೇಖೆ ನೆರಂಬೆತ್ತಿರೆ: **ಜಗನ್ನಾವಿ,** ೧೭. ೧೧೭)

**ನಿರ್ವಿಕಲ್ಪ** – ವಿಕಲ್ಪಗೊಳ್ಳದ[ವನು], ಸ್ಥಿರವಾದ (ನಿರಾಲಸ್ಯದಿಂ ನಿರ್ಬಂಧದಿಂ ನಿರ್ವಿಕಲ್ಪದಿಂ ನೀಮಿರ್ವರುಂ ನಿಶ್ಚಯಮೋದುವೊಡೆ ಆಮುಂ ಈ ಮಾರ್ಗದಿಂದೋದಿಸಿ ಪಂಡಿತರಾಗೆ ಮಾಟ್ಪೆಂ: **ಸುಕುಮಾಚ,** ೨. ೫೫ ವ)

**ನಿರ್ವಿಚಿಕಿತ್ಸೆ** – [ಜೈನ] ಸಮ್ಯಗ್ದರ್ಶನದ ಎಂಟು ಅಂಗಗಳಲ್ಲಿ ಒಂದು; ದೇಹದ ಮೇಲೆ ಪ್ರೇಮ (ನಿರ್ವಿಚಿಕಿತ್ಸೆಯೊಳ್ ಅಜೆದು ಆರ್ತುರ್ವರೆ ಕೈಕೊಂಡು ಬಣ್ಣಸಲ್ಗೆಗಟ್ಟಿಅಥವಾ ನರಂ ನಿರ್ವಾಣಪದದೊಳಿರಿಸುವ ಸರ್ವಜ್ಞಶ್ರೀಗೆ ಮೊತ್ತಮೊದಲಿನಕ್ಕುಂ: **ಧರ್ಮಾಮೃ,** ೪. ೨)

**ನಿರ್ವಿನಿಸು** – ಅಸಮಾಧಾನಗೊಳ್ಳು (ಅನಿತಿನಿಸೆನಿಸದೆ ರಿಪುಬಲಂ ಎನಗಿನಿಸುಂ ನೆಱೆಯದೆಂಬ ಬಗೆ ಬಳೆದಿರೆ ನಿರ್ವಿನಿಸಿದಂ ಆ ಜಿನಚಂದ್ರಂ ಮನಸ್ವಿಗೆ ಈ ಮೂಱು ಲೋಕಮುಂ ಕಿಱಿದೆ ವಲಂ: **ಶಾಂತಿಪು,** ೪. ೮)

**ನಿರ್ವಿಶೇಷ** – ಒಂದೇ ರೀತಿ (ಸುಮನೋವಿಶಿಖಧ್ವಜಾಂಕದೊಳ್ ನಿರ್ವಿಶೇಷದಿಂ ಮತ್ಸ್ಯ ಮಕರಯುಗಳಕ್ಕೈಕ್ಯಂ: **ಕಾವ್ಯಾವಲೋ,** ೯೦೧)

**ನಿರ್ವಿಷ** – ವಿಷ ಇಳಿಯುವುದು (ನೀರಂ ಅಭಿಮಂತ್ರಿಸಿ ತಳಿಯಲೊಡಂ ನಿರ್ವಿಷಮಪ್ಪೆಂ: **ಪಂಚತಂತ್ರ,** ೧೮೪ ವ)

**ನಿರ್ವಿಷೀಕರಣ** – ವಿಷ ಇಳಿಸುವುದು (ಮದನಫಣಿ ನಿರ್ವಿಷೀಕರಣದಿವ್ಯಮಂತ್ರಸ್ವನಂ .. .. ಪೊಣ್ಮಿದತ್ತು ಮುನಿ ಪರಸೆ ಧರ್ಮವೃದ್ಧಿ ನಿನಾದಂ: **ಪಂಪರಾ,** ೬. ೨೮)

**ನಿರ್ವ್ಯಾಜಿನ** – ಪಾಪರಹಿತ (ನಿರ್ವ್ಯಾಜಿನನಪ್ಪ ಜಿನೇಂದ್ರನಂ ಒರ್ಮೆ ಕೂರ್ತು ಕೊಂಡಾಡಿದೊಡೆ: **ಧರ್ಮಮಧು,** ೧. ೩೩)

**ನಿರ್ವೃತ** – ಸಮಾಧಾನ ಪಡೆದ[ವನು] (ನೀನಿಂತಿರೆಂದು ನಿರ್ವೃತ ಅಂತರಾತ್ಮೆಯಂತೆ ನುಡಿದು ಉಸಿರದಿರ್ದೊಡಂ .. .. ಎನ್ನೊಳಿಂತೆಂದಂ: **ಕಾದಂಸಂ,** ೮. ೩೭ ವ)

**ನಿರ್ವೃತಿ** – ಮುಕ್ತಿ (ಸಂಸೃತಿಯಂ ನಿರ್ಮೂಲಿಸಿ ನಿರ್ವೃತಿಲಕ್ಷ್ಮೀವಶ್ಯತಿಲಕ ಬಿಂದುವನಾಂತಂ: **ಪಂಪರಾ,** ೧೦. ೧೨೨); ನೆಮ್ಮದಿ (ತಾಪಸವೃತ್ತಿಯೊಳ್ ನೆಗಟ್ದು ನಿರ್ವೃತಿವಿದೂರನಾಗಿಯುಂ ನಿರ್ವೃತಿನಾಮ ನದೀತೀರದ ಕಾಶ್ಯಪಾಶ್ರಮದೊಳ್ ಮುಡಿಪಿ: **ಶಾಂತಿಪು,** ೯. ೯೧ ವ); ಸಂತೋಷ (ಮನಃಪ್ರಿಯಸಮಾಗಮನ ನಿರ್ವೃತಿಯುಂ ಸಮನಿಸಿತಿಲ್ಲ: **ಕಾದಂಸಂ,** ೭. ೧೦ ವ)

**ನಿರ್ವೃತಿಶ್ರೀ** – ಮೋಕ್ಷ (ಗೌರೀಶಂಗೆ ನಿರ್ವೃತಿಶ್ರೀಯೊಳ್ ನಿಂದ ಜಿನಂಗೆ ಕೊಟ್ಟುದನೆ ಕೇಳಲ್ ಬಂದುದಿಲ್ಲ: **ಸಮಯಪ,** ೮. ೧೨೦)

**ನಿರ್ವೆಟ್ಟಿದು** – ದೃಢವಲ್ಲದ್ದು (ಮುನ್ನಂ ಬಟ್ಟಿದುವೆನಿಸುವ ಮೊಲೆ ನಿರ್ವೆಟ್ಟಿದುವಾದುವು ಬೆನ್ ಸೋಖಲೊಡಂ: **ಯಶೋಧಚ,** ೨. ೫೮)

**ನಿರ್ವೇಗ** – ಬೇಸರ (ಧರೆಯಂ ರಾಮಂಗಿತ್ತಂ ಗುರುವು ಆನಟೆಪಿಂದಿರ್ದೊಡೆ ಎನಗಕ್ಕುಂ ಕಿಂಕರಭಾವಂ ಎಂಬ ಬಗೆಯಿಂ ಭರತಂಗೆ ಒಡರಿಸಿದುದಕ್ಕುಂ ಆ ನಿರ್ವೇಗಂ: **ಪಂಪರಾ,** ೬. ೮೯); ವೈರಾಗ್ಯ (ಪೂರ್ವಭವಸ್ಮರಣೆಯಿಂದಂ ತಮ್ಮ ಪೂಣ್ಕೆಯಂ ನಿರ್ವೇಗದಿಂ ದೀಕ್ಷೆಗೊಂಡು: **ಕರ್ಣನೇಮಿ,** ೧೪. ೧೩೧ ವ)

**ನಿರ್ವೇಗತ್ರಯ** – ಮೂರು ಬಗೆಯ ವೈರಾಗ್ಯ: ಸಂಸಾರನಿರ್ವೇಗ, ಶರೀರನಿರ್ವೇಗ, ಭೋಗನಿರ್ವೇಗ (ಧಾತ್ರಿಗೆ ನೆಗಟ್ದಿ ವಿದೇಹಕ್ಷೇತ್ರದೊಳ್ ಅರ್ಹಾಭಿಧಾನಯಪ್ಪಂದಿರ ರತ್ನತ್ರಯಮಂದಿನ ನಿರ್ವೇಗತ್ರಯಂ ಒಡನೊಡನೆ ಬಂದುವಾಗಡೆ ಜಿನನಾ: **ಅಜಿತಪು,** ೬. ೪೯)

**ನಿರ್ವೇಗರಸ** – ವಿರಕ್ತಿಯ ಭಾವ[ವುಳ್ಳವನು] (ಅದಂ ಕಂಡು ಅಪಗತಮೋಹರಸನುಂ ಉಪಗತನಿರ್ವೇಗರಸನುಂ ಆಗಿ: **ಆದಿಪು,** ೧೬. ೬೧ ವ)

**ನಿರ್ವೇದ** – ದುಃಖ (ಪೆಱನಾವಂ ನಿನ್ನವೊಲ್ ಕಾಣ್ಬನೆ ಎನ್ನೀ ನಿರ್ವೇದಮಂ: **ಲೀಲಾವತಿ,** ೪. ೫೯)

**ನಿರ್ವೇದನಿ** – [ಜೈನ] ನಾಲ್ಕು ಬಗೆಯ ಧರ್ಮಕತೆಗಳಲ್ಲಿ ಒಂದು; ಪಾಪಫಲವನ್ನು ನಿರೂಪಿಸುವುದು (ಧರ್ಮಕಥೆಯೆಂದು ಆಕ್ಷೇಪಣೀಯಂ ವಿಕ್ಷೇಪಣೀಯಂ ಸಂವೇದನೀಯಂ

ನಿರ್ವೇದನೀಯಂ ಎಂದು ಚತುರ್ವಿಧಮಕ್ಕುಂ: **ಚಾವುಂಪು,** ಪು. ೪೩೫, ಸಾ. ೧೯–೨೦), ನೋಡಿ, 'ಧರ್ಮಕಥೆ'

**ನಿರ್ವ್ಯಾಕುಲ –** ಚಿಂತೆಯಿಲ್ಲದ (ಮತ್ ಕಾಯಮಂ ಇನ್ನೇಕೆ ಗಡ ಪಿಡಿದಪೆಂ ನಿರ್ವ್ಯಾಕುಲದಿಂ ಬಿಡುವೆನೆಂದು ಚಿಂತಿಸುವಿನೆಗಂ: **ಕಾದಂಸಂ,** ೮. ೧೦)

**ನಿರ್ವ್ಯಾಜ –** ಕಾರಣವಿಲ್ಲದ (ಅಬ್ಬೆ ನಿರ್ವ್ಯಾಜದಿಂ ಈಗಳ್ ಎನ್ನೆಱೆಯನೊರ್ವಳ್ ಅಪ್ರತಿಮಾನರೂಪೆಯಂ .. .. ಪದೆದು ತಂದಿರುತಿರ್ದ್ದಂ: **ಕರ್ಣನೇಮಿ,** ೭. ೬೪); ಕಪಟರಹಿತವಾದ (ನಿರ್ವ್ಯಾಜಭಕ್ತಿಯಿಂ ಅಂತು ಪೊಗಳ್ದು ಅನಂತರಂ: **ರಾಜಶೇವಿ,** ೫೧ ವ)

**ನಿರ್ಹಾಸ –** ಅರಳದ (ನಿರ್ಹಾಸಂ ಕುಚಕುಟ್ಮಲಯುಗಂ ಮುಗ್ಧಾನನಂ ವರ್ಜಿತಾಂತರ್ಹಾಸಂ: **ನೇಮಿನಾಪು,** ೧. ೭೨); ಜೋಲುಬೀಳದ

**ನಿಲ್ –;** ಚಲನೆಯನ್ನು ಸ್ಥಗಿತಗೊಳಿಸು (ನಿಲ್–ಗತಿಮುಕ್ತೌ ಸ್ಥಾಪನೇ ಚ: **ಶಬ್ದಮದ,** ಧಾ ೬೩೬); ಸ್ಥಿರವಾಗು (ಕಟ್ಟಿದಿರೊಳ್ ನಿಂದನಂ ಪಿಂಗಳಕಂ ಕಂಡು; **ಪಂಚತಂತ್ರ,** ೮೫ ವ); ತಂಗು (ತಡೆದಿಲ್ಲಿ ನಿಂದೆನಪ್ಪೊಡೆ ಮಡಿವಾದಪುದುಟಿವೆನಪ್ಪೊಡೆ ಎಲ್ಲೆಡೆ ಮುಂದೊಂದಡಿಯುಂ ತೆಱಪಣಮಿಲ್ಲ: **ಧರ್ಮಾಮೃ,** ೬. ೫೭)

**ನಿಲಯ –** ಆವಾಸ, ಮನೆ (ಮನಸಿಜನಾಯುಧನಿಲಯಂ ಮನಸಿಜನಸಮಗ್ರರಾಜ್ಯಲಕ್ಷ್ಮೀಸದನಂ: **ಸುಕುಮಾಚ,** ೯. ೫೫)

**ನಿಲವನ ಸೂಡು –** ಒಂದೇ ಸಮನಾದ ಉರಿ (ನಿಲವಿನ ಸೂಡಿಂ ಲೇಸಾಗಿ ಬೆಂದ ಬಾಡಂ ಬಾಸಣಿಟ್ಟು ಅದನೆ ಅಮೃತಮತಿಗಟ್ಟಿಸಿದಂ: **ಯಶೋಧಚ,** ೩. ೭೦)

**ನಿಲಿಂಪ –** ದೇವತೆ (ಉರಗನಿಕಾಯ ದಿಕ್ಪತಿನಿಕಾಯ ನಿಲಿಂಪನಿಕಾಯಮೆಲ್ಲಂ .. .. ತಮ್ಮ ನಿಲಯಕ್ಕಿರದೊಯ್ದಪರ್: **ಕಾದಂಬ,** ೬. ೩೨)

**ನಿಲಿಪು –** ನಿಲ್ಲಿಸು, ಪ್ರತಿಷ್ಠಾಪಿಸು (ಇಂತಿವನತ್ತೆಯಿಂ ನಿಲಿಪೆವೆಂದು ಮುನೀಶ್ವರವರೇಟು ಲಿಂಗಮಂ ತಂದಿರೆ: **ಸಮಯಪ,** ೨. ೬೨)

**ನಿಲುಂಬು –** ಒಟ್ಟುಗೂಡಿಸು (ನಿಲುಂಬು–ಪುಂಜೀಕರಣೇ: ಶಬ್ದಮದ, ಧಾ ೪೯೨); ಗುಂಪಾಗು (ಬಂದು ಕಾಲ್ಗೆಱಗೆ ಲೀಲಾಲಂಬಿಲಂಬಾಳಕಾಳಿ ನಿಲುಂಬಿರ್ದುವು ಚಕ್ರವರ್ತಿಯ ಪದಾಂಭೋಜಂಗಳೊಳ್ ಕನ್ನೆಯಾ: **ಆದಿಪು,** ೩. ೪೭); ಸಮೀಪಕ್ಕೆ ಬರು (ಅಂಬುಪ್ರತಿಬಿಂಬಿತ ರವಿ .. .. ನಿಲುಂಬಿದ ತೆರೆ ಪೊಯ್ಯೆ ಮುಳುಗುತುಂ ಮೋಹಿಸುಗುಂ: **ರಾಜಶೇವಿ,** ೨. ೬೮)

**ನಿಲೆ ನಿಲ್ –** ದೃಢವಾಗಿ ನಿಲ್ಲು (ನಿಲೆ ನಿಂದಂ ಜಿನಚಂದ್ರಭಾನುಪರಮಂ ಸಮ್ಮೇದಶೈಲಾಗ್ರದೊಳ್: **ಅನಂತಪು,** ೧೪. ೪೯)

**ನಿಲೆನುಡಿ –** ದೃಢವಾಗಿ ಹೇಳು (ಆ ಮಾತಂ ನಿಲೆನುಡಿದುದಕೇ ಮೆಚ್ಚಿ: **ಪಂಪಭಾ,** ೬. ೧೯ ವ); ಪ್ರತಿಜ್ಞೆಮಾಡು (ಎನಗಾದ ತನುಜರಂ ದ್ಯುನದಿಯೊಳ್ ಆಂ ಬಿಡುವುದರ್ಕ್ಕಂ ಕಡೆಯೊಳಾ ತಪಂಬಡುವುದರ್ಕ್ಕಂ ಪಡಂಬಡುವುದೆಂದು ನಿಲೆನುಡಿಯಿಸಿ: **ಕರ್ಣನೇಮಿ,** ೩. ೧೮ ವ)

**ನಿಲೆಬೇ–** ಒಂದೇ ಸಮನಾಗಿ ಉರಿ (ಸಲೆ ನಿಲೆ ಬೇವ ಗುಗ್ಗುಳದ ಕರ್ವೊಗೆಯಿಂದಮುಗುರ್ವನಾಳ್ದು ಕತ್ತಲಿಸುವ ಚಂಡಿಕಾಭವನದೊಳ್ ಧವಳಾಂಶುಕೆ ಶುದ್ಧಮೂರ್ತಿ .. .. ಸುವ್ರತಮಂ ಲಲಿತಾಂಗಿ ತಾಳ್ದಿದಳ್: **ಕಾದಂಬ,** ೨. ೬೫)

**ನಿಲ್ಕಿಸು –** ತಲುಪು, ಎಟುಕು (ಪಾತಾಳದಿಂ ನಿಲ್ಕಿಸಲ್ ಮುನಿಪಾಂಘ್ರಿದ್ವಯಮಂ ಫಣೀಂದ್ರನೊಲವಿಂ .. .. ಭಾವಿಸಿ ಕೂರ್ತು ನೋಡಿದಹನೋ: **ಧರ್ಮಾಮೃ,** ೮. ೬೩)

**ನಿಲ್ಲದಿಕೆ –** ನಿಲ್ಲದಿರುವುದು (ಪೂಣ್ದು ನಿಲ್ಲದಿಕೆಯಿಂ ಬಾಳ್ವಂತು ವಿಖ್ಯಾತ ಕೀರ್ತಿಯವೋಲ್ ಈ ಒಡಲ್ ಅಬ್ಬೆ ಪೇೞಿಮ್ ಎನಗೇಂ ಕಲ್ಪಾಂತರಸ್ಥಾಯಿಯೇ: **ಪಂಪಭಾ,** ೯. ೮೪)

**ನಿವರ್ತನ –** ಕುದುರೆ ಸವಾರಿಯ ಒಂದು ಬಗೆ, ಕುದುರೆ ಹಿಂದಕ್ಕೆ ಮುಂದಕ್ಕೆ ಬರುವಂತೆ ಮಾಡುವುದು (ಅಂತು ಭರತೇಶ್ವರಚಕ್ರವರ್ತಿ ಚಕ್ರಪೂಜಾಗ್ರ ತನೂಜ ಜಾತಕರ್ಮೋತ್ಸವ ನಿರ್ವರ್ತನ ಅತಿಪ್ರೀಣಿತ ಅಂತಃಕರಣನಾಗಿರ್ಪನ್ನೆಗಂ: **ಆದಿಪು,** ೧೧. ೫ ವ)

**ನಿವರ್ತನೆ –** ವಾಪಸಾಗುವುದು (ಪಸುಗೆ ನೆಲಂ ಜಲಂ ಹಯದೊಡಂಬಡು ವಂಚನೆ ಕೇಣಂ ಆಸನಂ ಕೊಸೆ ದೆಸೆ ದಿಟ್ಟಿ ಮುಟ್ಟಿ ಕೆಲಜಂಕೆ ನಿವರ್ತನೆ ಕಾಣ್ಕೆ ಪರ್ವಿದ ಏರ್ವಸನದೊಳಾದ ಬಲ್ಮೆಯೊಳ್: **ಪಂಪಭಾ,** ೧೦. ೭೮)

**ನಿವರ್ತಿಸು –** ಮರೆಯಾಗು (ನಭದಿಂ ದೇವೆಂದ್ರಚಾಪಂ ನಿವರ್ತಿಸೆತೋಯಾಶಯದಿಂ ಕಲಂಕಿ ಗೆಲೆ: **ವರ್ಧಮಾಪು,** ೯. ೪೮)

**ನಿವಸನ –** ಉಡುಗೆ (ಪರಿಧಾನಂ ನಿವಸನಂ ಅಂತದೀರಮೆಂದಿಂತು ಉಟ್ಟುದರ್ಕ್ಕೆ ಪೆಸರ್: **ಅಭಿಧಾವ,** ೧. ೧೩. ೨೦)

**ನಿವಹ –** ಸಮೂಹ (ಅರಸಿಯರ್ಗೆ ಮಹಾಶ್ವೇತೆಗೆ ಪರಿಜನನಿವಹಕ್ಕೆ ಕುಶಲಮೇ ಪೇೞ್: **ಕಾದಂಸಂ,** ೫. ೭೮)

**ನಿವಳಿಸು –** ದೃಷ್ಟಿ ತೆಗೆ (ಇಭಕುಂಭದ ಮೇಲೆ ಬರ್ಪನಂ ಪರಿದಿದಿರ್ಗೊಂಡಣುಗನನದೆಂತು ನಿವಳಿಸಿದಪೆನೋ: **ಅನಂತಪು,** ೧೨. ೫೬); ಸುತ್ತಿಸು (ಚಿನ್ನಪೂವನವಧುಚೈತ್ರನಂ ನಿವಳಿಪ ಉಜ್ವಲದೀಪಮೆನಲ್ ಕವಲ್ತು .. .. ಮೆಱೆಯುತ್ತುಂ .. .. ಎಸೆದತ್ತು ಚಂಪಕಂ: **ಜಗನ್ನಾವಿ,** ೧೪. ೩೨)

**ನಿವಾತ –** ಗಾಳಿಯಿಲ್ಲದ (ನಿರ್ಮಾಯ ನಿಷ್ಕಾಮಿ ನಿಷ್ಕಂಪ ನಿವಾತ ಜ್ಯೋತಿರೂಪಂ ನಿರುಪಮನೆನಿಸಿರ್ದಂ ವಿರೂಪಾಕ್ಷಲಿಂಗಂ: **ಗಿರಿಜಾಕ,** ೫. ೩೩); ಬೆಚ್ಚಗಿನ (ತನ್ನ ಪೆಂಡತಿಯ ಕರೆದು ಈ ತಪೋಧನಂಗೆ ನಿವಾತಮಪ್ಪ ಎಡೆಯೊಳ್ ಪಟ್ಟಿಗೆ ಎಡೆಮಾಡಿಕುಡು ಎಂದು ಕರೆದು: **ಪಂಚತಂತ್ರ,** ೧೨೭ ವ)

**ನಿವಾಸ –** ಮನೆ, ಆಶ್ರಯ (ಭವನಂ ಸದನಂ ಸದ್ಮಂ ನಿವಾಸಂ ಅವಸಥಂ ಆಸ್ಪದಂ ನಿಳಯಂ: **ಅಭಿಧಾವ,** ೧. ೧೦ .೮)

**ನಿವಾಸಿ –** ವಾಸಿಸುವವನು (ಘೋಷನಿವಾಸಗಳಿಂದಮಾಯ್ತು ಕಳಕಳನಿನದಂ: **ಜಗನ್ನಾವಿ,** ೪. ೮೦)

**ನಿವಾಳಿ –** ದೃಷ್ಟಿಪರಿಹಾರಕ (ಶರ್ವಂ ಸರ್ಪಸಂಭ್ರಮದಿಂ ಬರೆ ನಡೆತಂದಿದಿರ್ಗೊಳ್ವ ಸುವಾಸಿನಿಯರ್ ಒಯ್ಯಾರದಿಂ ನಿವಾಳಿಗಳಂ ಪಿಡಿದು ನಿವಾಳಿಸಲ್: **ಗಿರಿಜಾಕ,** ೧೦. ೭೯ ವ); ಆರತಿ (ವನಲಕ್ಷ್ಮಿಯಾಗಳೆ ನಿವಾಳಿಗೆ ತೀವಿದ ರತ್ನದೀಪಮಾಲಿಕೆಯೆನಿಸಿತ್ತು ಕುಟ್ಮಳಿತ ಚಂಪಕಸಂಚಯಮಾ ವನಾಂತದೊಳ್: **ಕುಸುಮಾಕಾ,** ೧. ೯೪)

**ನಿವಾಳಿಸು –** ಆರತಿಯೆತ್ತು (ಚಲ್ಲಕಾರ್ತಿಯರ್ ಚಲ್ಲದಿಂ ನಿವಾಳಿಸಿನಾಣಂ ಬಟಿದೀಡಾಡಿಯುಂ: **ನೇಮಿನಾಪು,** ೫. ೨ ವ) ದೃಷ್ಟಿತೆಗೆ (ಶರ್ವಂ ಸರ್ಪಸಂಭ್ರಮದಿಂ ಬರೆ ನಡೆತಂದಿದಿರ್ಗೊಳ್ವ ಸುವಾಸಿನಿಯರ್ ಒಯ್ಯಾರದಿಂ ನಿವಾಳಿಗಳಂ ಪಿಡಿದು ನಿವಾಳಿಸಲ್: **ಗಿರಿಜಾಕ,** ೧೦. ೭೯ ವ)

**ನಿವಿಷ್ಟ** – ಕುಳಿತುಕೊಂಡ[ವನು] (ಮೃಗರಾಜವಿಷ್ಟರದೊಳ್ ಬಾಳಕನಂ ಪೂರ್ವಾಭಿಮುಖನಿವಿಷ್ಟನಂ ಮಾಡುವುದುಂ: **ಆದಿಪು,** ೭. ೭೬ ವ):; ನೆಲೆಗೊಂಡ (ನೆತ್ತಿಯೊಳ್ ದರನಿಮೀಲಿತ ದೃಷ್ಟಿ ನಿವಿಷ್ಟಮಾಗೆ ಮೂಗಿನ ತುದಿಯೊಳ್ ನಿರುದ್ಧಕರಮುಂ ನಿಲೆ: **ಗದಾಯು,** ೬. ೧೫)

**ನಿವೃತ** – ಸುತ್ತುವರಿದ (ಸುಚಿತ್ತಾಚಿತ್ತ ಶೀತೋಷ್ಣ ನಿವೃತಾದಿಭೇದದಿಂ ಚತುರಶೀತಿಲಕ್ಷಪ್ರಮಾಣ ಯೋನಿಮುಖಂಗಳೊಳ್: **ಸುಕುಮಾಚ,** ೫. ೩೨ ವ)

**ನಿವೃತ್ತಿ** – ಬಿಡುಗಡೆ; ವೈರಾಗ್ಯ (ಉತ್ಕೃಷ್ಟ ನರೇಂದ್ರಪದವಿಯಂ ಬಿಸುಟ್ಟು ತಪೋಭಿಮುಖರಾಗಿ ನಿವೃತ್ತಿಯನೆಯ್ದಿದರ್: **ಜೀವಸಂ,** ೨೭. ೫೦ ವ)

**ನಿವೃತ್ತಿಧರ್ಮ** – ವೈರಾಗ್ಯಪರತೆ (ನಿನಗೆ ದಿವ್ಯಮುನಿಗೆ ಪೇಟ್ದಂತೆ ನಿವೃತ್ತಿಧರ್ಮಮಂ ಪೇಟಿಕೊಳ್ವೆಡೆ ಅದನೇ ಕ್ಷತ್ರಧರ್ಮಮಂ ಪತ್ತುವಿಟ್ಟು ನೀಂ ನೆಗಟುತಿರ್ಪ ಕಾರಣಂ: **ಪಂಚತಂತ್ರ,** ೧೬೨ ವ)

**ನಿವೇದಕ** – ಹೇಳುವ[ವನು] (ಆ ನೃಪನೋಲಗಕ್ಕೆ ಖುಷಿಯಾಗ ನಿವೇದಕನೊರ್ವನೆಯ್ದಿ ಬಂದಾನತನಾಗಿ: **ಚಂದ್ರಪ್ರಭು,** ೯. ೧೭)

**ನಿವೇದಿಸು** – ನಿರೂಪಿಸು (ರಾಮಂಗೆ ರಾಜ್ಯಮನಿತ್ತು ದಶರಥಂ ಭರತಂಬೆರಸು ತಪೋವನಕ್ಕೆ ಪೋಪುದಂ ನಿವೇದಿಸೆ ಕೈಕೆ ವಿಕಳೆಯಾಗಿ: **ಪಂಪರಾ,** ೬. ೮೮ ವ); ಅರ್ಪಿಸು (ಸುನಂದೆಯೆಂಬೆಂ ಸನತ್ಕುಮಾರಂಗೆ ಗರ್ಭದೊಳಿರ್ದಂತೆ ನಿವೇದಿಸೆಪಟ್ಟೆಂ: **ವಡ್ಡಾರಾ,** ಪು. ೫೯, ಸಾ. ೭)

**ನಿವೇದ್ಯ** – ಅರ್ಪಿತವಾದುದು, ನೈವೇದ್ಯ (ಅಕ್ಷೂಣಕನಕಪಾತ್ರೋದ್ಧೃತನಿವೇದ್ಯದಿಂ .. .. ಪೂಜಿಸಿ: **ಚಂದ್ರಪ್ರಭು,** ೬. ೧೦೨ ರಗಳೆ)

**ನಿವೇಶ** – ಸ್ಥಳ (ದೇಶಂ ವರರಾಷ್ಟ್ರಾದಿನಿವೇಶಾಂತಂ ತದ್ವಿರುದ್ಧವಚನಂ ಮಿಗೆ ಸಂಕ್ಲೇಷಕರಂ: **ಕವಿರಾಮಾ,** ೧. ೧೧೦); ರಾಜನ ಶಿಬಿರ (ಜನನಾಥಸ್ಥಾನಂ ಶಿಬಿರ ನಿವೇಶಂ: **ಅಭಿಧಾವ,** ೧. ೧೦. ೫)

**ನಿವೇಶಿತ** – ಇರಿಸಲಾದ (ನರ್ಮಸಚಿವ ಪ್ರಕೋಷ್ಠನಿವೇಶಿತ ಸವ್ಯಪಾಣಿಪಲ್ಲವನುಂ .. .. ಆಗಿ ಬರ್ಪಾಗಳ್: **ಚಂದ್ರಪ್ರಭು,** ೭. ೮೬ ವ)

**ನಿಶದಂ** – ನಿಶ್ಚಿತವಾಗಿ (ನಿಶದಂ ತೀರ್ಥಂಕರಂ ಸುತಂ ನಿನಗೆ ಬಂದು ಅಕ್ಕುಂ ಮಹಾತ್ಮಂ: **ಕರ್ಣನೇಮಿ,** ೮. ೧೧೧)

**ನಿಶಾಂತ** – ಆವಾಸ (ಜಯ ಜಯ ಮಹಾಮಹಿಮ ಹಿಮಗಿರಿಸುತಾಕಾಂತ ಜಯ ಜಯ ಸುಭಿಕ್ಷಾಟನೇಕ್ಷಿತೇಂದ್ರನಿಶಾಂತ: **ರಾಜಶೇವಿ,** ೧೪. ೧೬೯ ರಗಳೆ); [ನಿಶಾ+ಅಂತ] ರಾತ್ರಿಯ ಕೊನೆ, ಬೆಳಗಿನ ಜಾವ (ಭಾವಿ ಜಿನಜನನಿ ಸತಿ ಪವಡಿಸಿ ನಿಶಾಂತದೊಳ್: **ಆದಿಪು,** ೭. ೨೭ ರಗಳೆ)

**ನಿಶಾಂತಾಂತ** – ಏಕಾಂತ (ಪಂಶ್ಚಳಿಯರ್ ಬಂದು ಉಪಕಾಂತಸೂಚಿತ ನಿಶಾಂತಾಂತಂಗಳಂ ಪೊರ್ದಿದರ್: **ರಾಜಶೇವಿ,** ೧೧. ೨೪)

**ನಿಶಾಕರ** – ರಾತ್ರಿಯನ್ನುಂಟುಮಾಡುವವನು, ಚಂದ್ರ (ಉದಯಗಿರಿ ಕಟಕ ಕುಹರ ಪರಿಕರ ನಿಶಾಕರಂ ಹರಿದಳಿತ ನಿಜಹರಿಣ ರುಧಿರನಿಚಯ ನಿಚಿತಮಾದಂತೆ ಲೋಹಿತಾಂಗನಾಗೆ: **ಪಂಪಭಾ,** ೪. ೪೯ ವ)

**ನಿಶಾಚರಿ** – ರಾಕ್ಷಸಿ, ಪಿಶಾಚಿನಿ (ಖೇಚರಿಯೋ ಭೂಚರಿಯೋ ನಿಶಾಚರಿಯೋ ರೂಪು ಬಣ್ಣಿಸಲ್ಕೆ ಆರ್ಗಂ ಅವಾಗ್ಗೋಚರಂ ಈ ಕಾನನಮುಂ ಅಗೋಚರಂ ಇವಳ್ ಇಲ್ಲಿಗೇಕೆ ಬಂದಳೊ ಪೇಟಿಂ: **ಪಂಪಭಾ,** ೩. ೧೪)

**ನಿಶಾಟ** – ರಾಕ್ಷಸ, ಪಿಶಾಚಿ (ಆ ಶಕಟಂ ತೋರ್ಪ ನಿಶಾಟರೂಪವಂ ಅದೃಶ್ಯಂ ಮಾಡಿ ಪಟ್ಟಿರ್ಪಿನಂ: **ಜಗನ್ನಾವಿ,** ೩. ೩೧)

**ನಿಶಾಟಕೋಟಿ** – ಅಸಂಖ್ಯಾತ ರಾಕ್ಷಸರು (ಬೇಳ್ವೆಗಳ್ಗೆ ಉಪದ್ರವಂಗೆಯ್ವ ನಿಶಾಟಕೋಟಿಯಂ ನಿಶಿತ ಶರಕೋಟಿಯಿಂದಂ ಉಚ್ಚಾಟಿಸಿ ಕೆಲವು ದಿವಸಮಿರ್ದು: **ಪಂಪಭಾ,** ೪. ೧೫ ವ)

**ನಿಶಾತ** – ಹರಿತಗೊಂಡ (ಅಂತು ಗುರುನಂದನಂ ಮರುನ್ನಂದನವಿರಚಿತ ನಿಶಾತ ವಿಶಿಖಪಂಜರಮನಟಿದು ಕಟುಕುಟಂ ಮಾಡಿಯುಂ ಅನಿತಜೊಳ್ ಮಾಣದೆ: **ಪಂಪಭಾ,** ೧೨. ೬೮ ವ)

**ನಿಶಾವಸಾನ** – ರಾತ್ರಿಯ ಕೊನೆ, ಬೆಳಗು ಜಾವ (ನಿಶಾವಸಮಯ ಪ್ರಾಗ್ಭಾಗದೊಳ್ .. .. ಒರ್ವಂ ದ್ವಿಜಪ್ರವರಂ .. .. ತಂದಿಕ್ಕಿದಂ ಸ್ವಪ್ನದೊಳ್: **ಕಾದಂಬ,** ೨. ೭೨)

**ನಿಶಿತ** – ಹರಿತವಾದ (ನಿಶಿತಮತಿ ಮಹಾಸತ್ತ್ವವೃತ್ತಂ ತ್ರಿವರ್ಗೋಪೇತಂ .. .. ವರವಿಬುಧನಿವಹಸ್ತೋತ್ರಪಾತ್ರಂ ಪ್ರಶಸ್ತಂ: **ಕಾದಂಸಂ,** ೨. ೫)

**ನಿಶಿತವಿಶಿಖ** – ಹರಿತವಾದ ಬಾಣ (ನಿಶಿತವಿಶಿಖಂಗಳಿಂದೊಂದಂದಶನಿಯ ಗಿರಿಕುಲಮನಳಱುವಂತೆ ಮದೇಭಪ್ರಸರಸಹಸ್ರಂ ಕೆಡೆದುವು ವಿಶಸನದೊಳ್: **ಪಂಪಭಾ,** ೧೨. ೨೬)

**ನಿಶಿಭೋಜಿ** – ರಾತ್ರಿ ಊಟಮಾಡುವವನು, ಜೈನೇತರ (ಮುಟ್ಟುಪಡೆಂಬುದೆಂತುಮಣಕಂ ನಿಶಿಭೋಜಿಗೆ: **ಸಮಯಪ,** ೧೪. ೧೧೭)

**ನಿಶೀಥ** – ಮಧ್ಯರಾತ್ರಿ (ರಾತ್ರಿಯೊಳಂ ಮಧ್ಯರಾತ್ರಿಯಜೆಗೆ ನಿಶೀಥಂ: **ಅಭಿಧಾವ,** ೧. ೨. ೬)

**ನಿಶೀಥಿನೀ** – ಇರುಳು, ನಡುವಿರುಳು (ಸೆಜ್ಜೆವನೆಯೊಳ್ ಸುಖನಿದ್ರಾಮುದ್ರಿತಲೋಚನನಾಗಿರ್ಪಾಗಳ್ ನಿಶೀಥಿನೀ ವಿರಾಮಸಮಯದೊಳ್: **ತ್ರಿಷಷ್ಟಿಪು,** ೨೪. ೨೦೬ ವ)

**ನಿಶೀಥಿನೀನಾಥಮಂಡಲ** – ಚಂದ್ರಮಂಡಲ (ಅಂತು ನಿಶೀಥಿನೀನಾಥಮಂಡಲ ಉದಯಶಿಖರಿ ಶಿಖರ ಮಂಡನಮಪ್ಪುದುಂ: **ಜಗನ್ನಾವಿ,** ೪. ೧೧೨ ವ)

**ನಿಶೀಥಿಸ್ಥಾನ** – ನಿದಿಯ ಜಾಗ, ಸಮಾಧಿಸ್ಥಳ (ಮೊರಂಬದೊಳ್ ನಿಶೀಥಿಸ್ಥಾನದೊಳ್ ಮಣ್ಣಂ .. .. ತಂದು ಪೋಸಲೊಡನತ್ತಯುಗ್ರ ಗ್ರಹಾನೇಕ ಸರ್ಪರುಜಾ ಪೀಡೆಗಳಾಗಳಂತೆ ಕೆಡುಗುಂ: **ಸಮಯಪ,** ೧. ೨೭)

**ನಿಶೆ** – ಇರುಳು ಪರಿಪೂರ್ಣಚಂದ್ರನಂ .. .. ದರವಿಕಸದ್ವಾರಿರುಹಮಂ ಆ ಕಾಂತೆ ನಿಶೆಯ ಕಡೆಯೊಳ್ ಕಂಡಳ್: **ಪುಷ್ಪದಂಪು,** ೩. ೧೨೦)

**ನಿಶ್ಚಂಡತೆ** – ಸಮಾಧಾನ, ನಿಶ್ಚಿಂತೆ (ಉನ್ನತಾಸನಮಿತ್ತು ನಿಶ್ಚಂಡತೆಯಿಂದೆ ಕೇಳ್ದು ಅವರ ಪಕ್ಕದೆ ಧರ್ಮಮಂ: **ಕರ್ಣನೇಮಿ,** ೨. ೭೯)

**ನಿಶ್ಚಯಸಮ್ಯಕ್ತ್ವ** – (ತತ್ಪಾದಮೂಲದೊಳ್ ತಪಂಬಟ್ಟು ಪಂಚಮಹಾಬ್ರತಂಗಳಂ ಏಜೆಸಿಕೊಂಡು ಪಡಿಕಮಣಂಗೇಳ್ದ

ತದನಂತರಂ ನಿಶ್ಚಯಸಮ್ಯಕ್ತ್ವಮಂ ಕೈಕೊಂಡು: **ವಡ್ಡಾರಾ,** ಪು ೨೮, ಸಾ ೨೬)

**ನಿಶ್ಚರಣ** – ಆಸರೆಯಿಲ್ಲದವನು (ದುರ್ಯೋಧನನುಂ ಸೂರ್ಯಸುತವಿಯೋಗದಿಂ ಧೈರ್ಯಂಗೆಟ್ಟು ನಿಶ್ಚರಣಂ .. .. ಚಿಂತೆಯನಾಂತು: **ಕರ್ಣನೇಮಿ,** ೧೨. ೧೭೮ ವ)

**ನಿಶ್ಚಿಂತಂ** – ಚಿಂತೆಯಿಲ್ಲದೆ (ನಿಸ್ತಂಭಮುಂ ನಿರ್ಗವಾಕ್ಷಮುಂ ನಿಶ್ಚಿದ್ರಭಿತ್ತಿಯುಂ, ನಿರಾಶ್ರಯಮುಂ ಶುಕಶಾರಿಕಾದಿ ಶಕುನಿಕುಳವಿ ಕಳಮುಮಪ್ಪ ಮಂತ್ರಶಾಲೆಯೊಳ್ ಮಂತ್ರಿಗಳುಂ ತಾನುಂ ನಿಶ್ಚಿಂತಮಿರ್ದಾಳೋಚಿಸುವರ್: **ಪಂಚತಂತ್ರ,** ೨೭೯ ವ)

**ನಿಶ್ಚಿಂತತೆ** – ಚಿಂತೆಯಿಲ್ಲದ ಸ್ಥಿತಿ (ಸುತನೊಳ್ ಅಜಿತಜಯಂ ವಿಸ್ತೃತಮಂ ಭೂಭರಮನೆಯ್ದೆ ಯೋಚಿಸಿ ನಿಶ್ಚಿಂತತೆಯನೊಳಕೆಯ್ದಂ: **ಚಂದ್ರಪ್ರಪು,** ೭. ೩)

**ನಿಶ್ಚಿತ** – ನಿರ್ಣಯಗೊಂಡ (ಗಾಂಗೇಯನಂ ಏಗೆಯ್ದುಂ ಒಡಂಬಡಿಸಲಾಱದೆ ಸತ್ಯವತಿ ತಾನುಂ ಆತನುಂ ಆಳೋಚಿಸಿ ನಿಶ್ಚಿತ ಮಂತ್ರರಾಗಿ ಕೃಷ್ಣದ್ವೈಪಾಯನನಂ ನೆನೆದು: **ಪಂಪಭಾ,** ೧. ೮೫)

**ನಿಶ್ಚಿತಮನ** – ಸ್ಥಿರ ಮನಸ್ಸು[ಳ್ಳವನು] (ನಿಶ್ಚಿತಮನರಲ್ಲದರಂ ದುಶ್ಚರಿತರನೆಯ್ದೆ ಪಡೆದ ದೋಷಕ್ಕಂ ಪ್ರಾಯಶ್ಚಿತ್ತಮೆಂದು ಸಕಲವಿಪಶ್ಚಿನ್ನಿಧಿಯೆನಿಪ ದುರ್ಗನಂ ಬಿದಿ ಪಡೆದಂ: **ಪಂಚತಂತ್ರ,** ೫೩)

**ನಿಶ್ಚಿದ್ರ** – ಬಿರುಕಿಲ್ಲದ, ಸೀಳಕವಿಲ್ಲದ (ಕುದಿರೊಳಗಿರ್ದು ಊದಿದ ಶಂಖದ ದನಿ ನಿಶ್ಚಿದ್ರಮಾದೊಡಂ ಪೊಣ್ಮದೆ: **ಯಶೋಧಚ,** ೪. ೨೪)

**ನಿಶ್ರಾವ** – ಗಂಜಿ (ಚಾಣಕ್ಯಂಗಂ ಯಶೋಮತಿಗೆಂದು ಇರ್ವರ್ಗಂ ನಿಶ್ರಾವಮಂ ತನ್ನ ಭಾರ್ಯೆಯಪ್ಪ ನಂದವತಿಯ ಕೆಯ್ಯೊಳಟ್ಟಿದೊಡೆ: **ವಡ್ಡಾರಾ,** ಪು ೧೮೪, ಸಾ ೨೦)

**ನಿಶ್ವಾಸ** – ಉಸಿರು ಹೊರ ಬಿಡುವುದು (ಅಮರರ್ಗೆ ದೇವಪ್ರಾಣಾಯುಷ್ಯ ಪ್ರವಿಚಾರೋಚ್ಛ್ವಾಸ ನಿಶ್ವಾಸಲೇಪ್ಯ ಭೇದಂಗಳುಮಕ್ಕುಂ: **ಚಂದ್ರಪ್ರಪು,** ೩. ೩೨ ವ)

**ನಿಶ್ಶಂಕತೆ** – ಸಂಶಯರಾಹಿತ್ಯ (ನೀಂ ನಿಶ್ಶಂಕತೆಯಿಂ ಇನಿತು ದೇಹಿಗಳಂ ಕೊದೆಪೆ ನರಕದೊಳ್ ನಿವಾರಣೆವಡೆವೈ: **ಯಶೋಧಚ,** ೪. ೭೦)

**ನಿಶ್ಶಂಕೆ** – ಶಂಕೆಯಿಲ್ಲದ್ದು (ಪ್ರಥಮಾರ್ಥದ ಷಷ್ಠಿಗೆ ನಿಶ್ಶಂಕೆಯಿಂ ನೃಪನ ಪೇೞ್: **ಶಬ್ದಮದ,** ೧೪೫ ಪ್ರ ೧); [ಜೈನ] ಸಮ್ಯಗ್ದರ್ಶನದ ಎಂಟು ಅಂಗಗಳಲ್ಲಿ ಮೊದಲನೆಯದು, ಜಿನಮತದಲ್ಲಿ ಸಂಶಯವಿಲ್ಲದಿರುವುದು (ಆ ದರ್ಶನಸೌಖ್ಯಕ್ಕೆ ಅಷ್ಟಾಂಗಮುಂ ಶರೀರಕ್ಕೆ ಅವಯವಮುಂ ಶಾಖೆಯುಂ ಎಂತು ಅಂತೆ ನಿಶ್ಶಂಕೆಯುಂ ನಿಷ್ಕಾಂಕ್ಷೆಯುಂ ನಿರ್ವಿಚಿಕಿತ್ಸೆಯುಂ ಆಮೂಢದೃಷ್ಟಿತ್ವಮುಂ ಉಪಗೂಹನಮುಂ ಸ್ಥಿತಿಕರಣಮುಂ ವಾತ್ಸಲ್ಯಮುಂ ಧರ್ಮಪ್ರಭಾವನೆಯೆಂದು ಎಸೆವಂಗಮೆಂಟಱಿಂ: **ಧರ್ಮಾಮೃ,** ೧. ೭೨ ವ ಮತ್ತು ೧. ೭೩)

**ನಿಶ್ಶಲ್ಯ** – [ಜೈನ] ವ್ರತಾಚರಣೆಯ ಅಡ್ಡಿಗಳಿಲ್ಲದ್ದು: ಇವು ಮಾಯಾ, ಮಿಥ್ಯಾತ್ವ, ನಿದಾನಗಳೆಂದು ಮೂರು ಬಗೆ (ನೆಲಮನೆಯಂ ಪೊಱಮಟ್ಟು ಸ್ವಜನ ಪರಿಜನ ಬಂಧುವರ್ಗ್ಗಕ್ಕೆಲ್ಲಂ ನಿಶ್ಶಲ್ಯಂಗೆಯ್ದು : **ವಡ್ಡಾರಾ,** ಪು ೪೪, ಸಾ ೨೭)

**ನಿಶ್ಶಲ್ಯಂ** – ಅಂಟಿಕೊಳ್ಳದವನು (ಸುಗ್ರೀವಂಗೆ ರಾಜ್ಯಮಂ ಕೊಟ್ಟು ಪರಿಜನಕ್ಕೆ ನಿಶ್ಶಲ್ಯನಾಗಿ .. .. ಚಾರಣರ ಪಕ್ಕದೊಳ್ .. ... ತಪಂಬಟ್ಟು .. .. ಋದ್ಧಿಪ್ರಾಪ್ತನಾದಂ: **ಪಂಪರಾ,** ೧೦. ೧೭೩ ವ)

**ನಿಶ್ಶೇಷಂ** – ಪೂರ್ತಿಯಾಗಿ (ಕೌರವನಾಯಕ ನಿಶ್ಶೇಷಂ ಭುವನಮಶೇಷಂ ಬೞಕ್ಕೆ ಶೇಷಂಗೆ ಭರಂ: **ಗದಾಯು,** ೩. ೮೩)

**ನಿಶ್ಶ್ರೇಣಿಕ** – ಏಣಿ (ಅಣುಬ್ರತಂಗಳ್ ವಿನೇಯಾಧಾರಂಗಳ್ ಭಾಗಧೇಪ್ರಕೃತಿಗಳಮೃತಾವಾಸ ನಿಶ್ಶ್ರೇಣಿಕಂಗಳ್: **ಸುಕುಮಾಚ,** ೬. ೯)

**ನಿಶ್ಶ್ರೇಯಸ** – ಮೋಕ್ಷ (ದೇವತ್ವಂ ದೊರೆಕೊಳ್ಗುಮಲ್ತೆ ಬೞಿಯಂ ನಿಶ್ಶ್ರೇಯಸಂ ಹೂಡುಗುಂ: **ಸಮಯಪ,** ೫. ೧೫೯)

**ನಿಷಂಗ** – ಸಂಬಂಧ (ಚಿತ್ತಂ ಅಂಗಜಶರಕ್ಕೆ ನಿಷಂಗಮಾದುದು ಅಂಗಮಂ ದಿಟ್ಟಣಿಸಿತ್ತು ಕೂರ್ಪ ವಿರಹಾನಲಂ: **ಉದ್ಭಟಕಾ,** ೭. ೧೫); ಬತ್ತಳಿಕೆ (ನೀರಜದಂತೆ ನಿಷಂಗದಂತೆ ನಿಬಿಡ ಶಿಳೀಮುಖಮುಂ: **ರಾಜಶೇವಿ,** ೨. ೭೮ ವ)

**ನಿಷಣ್ಣ** – ಕುಳಿತವನು (ಅಂತಿರ್ದನಂ ತ್ರಿಃಪ್ರದಕ್ಷಿಣಂಗೆಯ್ದು ವಿವಿಧಪೂಜಾಪುರಸ್ಸರಂ ಗುರುಭಕ್ತಿಯಿಂ ವಂದಿಸಿ ತದಾಶೀರ್ವಚನಾಮೃತಭರಿತಕರ್ಣಕುಹರನುಂ ಪಾದಪ್ರದೇಶನಿಷಣ್ಣನುಂ ಆಗಿ: **ಚಂದ್ರಪ್ರಪು,** ೩. ೨ ವ)

**ನಿಷದ್ಯ** – [ಜೈನ] ಐವತ್ತೂಮೂರು ಗರ್ಭಾನ್ವಯ ಕ್ರಿಯೆಗಳಲ್ಲಿ ಒಂದು; ತೀರ್ಥಂಕರ ಶಿಶುವಿಗೆ ವಿವಿಧ ಬಗೆಯ ಅರ್ಚನೆಗಳನ್ನು ಮಾಡುವುದು (ಆಧಾನ ಪ್ರೀತಿ ಸುಪ್ರೀತಿ ಧೃತಿ ಮೋದ ಪ್ರಿಯೋದ್ಭವ ನಾಮಕರ್ಮ ಬಹಿರ್ಯಾನ ನಿಷದ್ಯ ಅನ್ನಪ್ರಾಶನ .. .. ನಿರ್ವೃತಿಯೆಂಬ ಅಯ್ವತ್ತುಮೂಱು ಗರ್ಭಾದಿ ನಿರ್ವಾಣಪರ್ಯಂತಂಗಳಪ್ಪ ಗರ್ಭಾನ್ವಯ ಕ್ರಿಯೆಗಳುಂ: **ಆದಿಪು,** ೧೫. ೧೫ ವ)

**ನಿಷದ್ವರ** – ಕೊಳಕು (ಸಕಲಲೋಕಾಘ ನಿಷದ್ವರಮಂ ಕ್ಷಾಲಿಪ ನಿರ್ಮಲಚರಿತಂ ಗಣಧರ ಚಾರುಚರಣಂ ಶರಣಂ: **ಶಾಂತೀಶ್ವಪು,** ೧. ೮)

**ನಿಷಾದ** – ಬೆಸ್ತ (ಪಂದಿ .. .. ಸತ್ತು ಅಲ್ಲಿ ನಿಷಾದನ ಮನೆಯೊಳ್ ಪೆಣ್ಣಾಯಾಯ್ತು: **ಸುಕುಮಾಚ,** ೫. ೧೯); ಹೊಲೆಯ (ಪಂದಿ .. .. ಅನಿವಿರಿದು ದುಃಖದೊಳ್ ಸಮೆದು ನಾರುಗಿದು ಪೊಗೆದು ಸತ್ತಲ್ಲಿ ನಿಷಾದನ ಮನೆಯೊಳ್ಪೆಣ್ಣಾಯಾಯ್ತು: **ಸುಕುಮಾಚ,** ೫. ೧೯); ಸಂಗೀತದಲ್ಲಿನ ಸಪ್ತಸ್ವರಗಳಲ್ಲಿ ಕೊನೆಯದು (ಷಡ್ಜ ವೃಷಭ ಗಾಂಧಾರ ಮಧ್ಯಮ ಪಂಚಮ ಧೈವತ ನಿಷಾದಂಗಳೆಂಬ ಸಪ್ತಸ್ವರಮುಮಂ: **ಅಜಿತಪು,** ೫. ೩೦ ವ)

**ನಿಷಾದಿ** – ಮಾವತಿಗ (ಎರಡಿಭಮನೇೞೆ ಕಾರ್ತಸ್ವರದೆರಡುಂ ಕೆಲದೊಳಿರೆ ನಿಷಾದಿಗಳೋರೋರ್ವರ ರೂಪುಗಾಣದಿರ್ಪ ಅರ್ಧರಾಸಿಗಧಿನಾಥನೆನಿಸಿ ದಿವ್ಯಾನ್ವಯದೊಳ್: **ಸುಕುಮಾಚ,** ೯. ೭೭)

**ನಿಷೇಕ** – ಸಾವು (ಇತ್ತ ನಿಷೇಕಮಾಗೆ ಗುರುಗೆ ಅತ್ತ ಅಭಿಷೇಕವಿಭೂತಿಗೊಂದುಗುಂ ತತ್ತನಯರ್ಕಳೊಳ್ ಮೃತಕತೂರ್ಯಮೆ ಮಂಗಳತೂರ್ಯಮಕ್ಕುಂ: **ಅಜಿತಪು,** ೨. ೧೦೫); ಆಯುಸ್ಸು (ತವೆ ತೈಲಂ ದೀಪಂ ನಂದುವಂತೆ ಗಳಿಯಿಸೆ ನಿಷೇಕಂ ಅೞಿವರ್: **ಪಂಪರಾ,** ೧. ೮೨)

**ನಿಷೇಧ** – ಇಲ್ಲವೆನ್ನುವುದು (ಗಗನಕುಸುಮಮನತ್ಯಂತಾಭಾವಮಂ ನಿಷೇಧಮಾತ್ರದಿಂದಂ ಉಂಟುಮಾಡಲಕ್ಕುಮೇ: **ಶಾಂತಿಪು,**

೮. ೧೩೮); ಮಾಡಬಾರದು ಎಂಬ ನಿಯಮ (ಪುರುಷತ್ರಯದೊಳ್ ದತ್ವ ನಿಷೇಧಂ: **ಶಬ್ದಮದ,** ೨೫೬)

**ನಿಷೇವಣೀಯ** – ಪೂಜನೀಯ (ತದ್ದೇವಂ ದೇವನಿವೇವನೀಐಮ ಅಣಿಮಾದ್ಯೈಶ್ವರ್ಯಯುಕ್ತಂ ತ್ರಿದಶದ್ದೇವೇಂಂದ್ರಂ ಮಣಿಚೂಳನೆಂಬ ಪೆಸರಿಂ ಪೆತ್ತಂ ದಿವ್ಯೈಶ್ವರ್ಯಮಂ: **ಶಾಂತಿಪು,** ೭. ೭೩)

**ನಿಷೇವ್ಯ** – ಒಳಗೊಂಡುದು (ಆ ಮಹಾವನಂ .. .. ಸ್ವರಸಮುದಯದಂತೆ ನಿಷಾದನಿಷೇವ್ಯಮುಂ: **ಚಂದ್ರಪ್ರಪು,** ೫. ೫೨ ವ)

**ನಿಷ್ಕ** – ಚಿನ್ನ (ಗೈರಿಕ ನಿಷ್ಕ ಹಿರಣ್ಯ ಮಹಾರಜತ ಸ್ವರ್ಣ ಕರ್ಬುರ ಅಷ್ಟಾಪದಂ ಇನ್ನೋರಂತಜೆ: **ಅಭಿಧಾವ,** ೧. ೬. ೭); ಒಂದು ಚಿನ್ನದ ನಾಣ್ಯ (ವಿರೋಧಿಸೇನೆಗಿದು ಸೂಸುವ ನಿಷ್ಕರಾಜಿಗಳೆನೆ ವಿಸ್ಫುಲಿಂಗಮಲಗಿಂ ಕೆದಱುತ್ತಿರೆ ಪಾಯ್ದುದವಂಬುಗಳ್: **ಜಗನ್ನಾವಿ,** ೭. ೭೮)

**ನಿಷ್ಕಂಪಪಕ್ಷ್ಮ** – ಅಲುಗಾಡದ ರೆಪ್ಪೆ (ನಿಷ್ಕಂಪಪಕ್ಷ್ಮಮಾಂತು ತರಳಾಕ್ಷಿ ವಿಸ್ಮಯದೆ ಚಕ್ರಿಯಂ ನೋಡಿದರ್ಳ್: **ಆದಿಪು,** ೧೧. ೨೦)

**ನಿಷ್ಕಶೃಂಖಲಾ[ಲೆ]** – ಚಿನ್ನದ ಸರ[ಪಳಿ] (ನಿಷ್ಕಶೃಂಖಲಾಚತುಷ್ಕಘಟಿತ ನಿರ್ಯೂಹದಂತ ಪರ್ಯಂಕಿಕಾಪಟ್ಟದೊಳಮಳವಟ್ಟು .. .. ನವಿಲುಯ್ಯಲ ಕೆಲಕಕೆ ವಂದು: **ಚಂದ್ರಪ್ರಪು,** ೮. ೪೫ ವ)

**ನಿಷ್ಕಷಾಯ** – [ಜೈನ] ಕ್ರೋಧ, ಮಾನ, ಮಾಯೆ, ಲೋಭಗಳಿಲ್ಲದ ಮನಸ್ಸಿನವನು (ಜಿತೇಂದ್ರಿಯರೆಂಬುದು ನಿಷ್ಕಷಾಯರೆಂಬುದು ಗುರುಭಕ್ತರೆಂಬುದು .. .. ವಾರಿಧಿವೇಷ್ಟಿತ ಭೂರಿಭೂತಳಂ: **ಸುಕುಮಾಚ,** ೧. ೨೩)

**ನಿಷ್ಕಾಂಕ್ಷೆ** – [ಜೈನ] ಸಮ್ಯಗ್ದರ್ಶನದ ಒಂದು ಅಂಗ, ಭೋಗಗಳನ್ನು ಬಯಸದಿರುವುದು (ಆ ದರ್ಶನಸೌಖ್ಯಕ್ಕೆ ಅಷ್ಟಾಂಗಮುಂ ಶರೀರಕ್ಕೆ ಅವಯವಮುಂ ಶಾಖೆಯುಂ ಎಂತು ಅಂತೆ ನಿಶ್ಶಂಕೆಯುಂ ನಿಷ್ಕಾಂಕ್ಷೆಯುಂ ನಿರ್ವಿಚಿಕಿತ್ಸೆಯುಂ ಅಮೂಢದೃಷ್ಟಿತ್ವಮುಂ ಉಪಗೂಹನಮುಂ ಸ್ಥಿತಿಕರಣಮುಂ ವಾತ್ಸಲ್ಯಮುಂ ಧರ್ಮಪ್ರಭಾವನೆಯೆಂದು ಎಸೆವಂಗಮೆಂಟಜೆಂ: **ಧರ್ಮಾಮೃ,** ೧. ೭೨ ವ ಮತ್ತು ೧. ೭೩)

**ನಿಷ್ಕಿಂಚನತ್ವ** – [ಜೈನ] ದಾನ ಸ್ವೀಕರಿಸದುದು, ಅಪರಿಗ್ರಹ (ಪಂಚೇಂದ್ರಿಯವಿಷಯಂಗಳಂ .. .. ಉಟಿದ ತಪೋನಿಯಮಂ ನಿಷ್ಕಿಂಚಿನತ್ವಂ ಅರ್ಹನ್ಮತದೊಳ್: **ಶಾಂತಿಪು,** ೬. ೫೬)

**ನಿಷ್ಕುಟ** – ಮನೆಯ ಕೈತೋಟ (ಗೃಹವಾಟಿ ನಿಷ್ಕುಟಂ: **ಅಭಿಧಾವ,** ೧. ೭. ೧೨); ಉಪವನ (ರಮಣಹೇತುವದು ಪುಷ್ಪವಾಟ ತಾಂ ಪೂದೋಟಂ: **ಅಭಿಧಾವ,** ೧. ೭. ೧೨)

**ನಿಷ್ಕೋಶ** – ಆನೆಯ ಪಕ್ಕೆ ಮತ್ತು ಪೃಷ್ಠಗಳ ನಡುವಣ ಭಾಗ (ಪರಿಪೂರ್ಣ ವಕ್ತ್ರನಿಷ್ಕೋಶನಂ ಮಂತ್ರಾಧಿಕಾಖ್ಯನಂ: **ಶಾಂತಿಪು,** ೪. ೨೬ ವ)

**ನಿಷ್ಕೃತಿ** – ಪರಿಹಾರ (ಮಂತ್ರಜಪದಿಂ ದಾನಾದಿಯಿಂ ನಾಡೆ ನಿಷ್ಕೃತಿ ಶಾಸ್ತ್ರಂಗಳೊಳುಂಟು ದುಸ್ತಮಹಾಪಾಪಕ್ಕಂ: **ಶಬರಶಂ,** ೪. ೧೨೬)

**ನಿಷ್ಕೃಪ** – ಕೃಪೆಯಿಲ್ಲದ[ವನು] (ನಿಷ್ಕೃಪಂ ಇಂತೀ ವಿಧವಾದ ವೈರದಿಂ ಅಡುರ್ತು ಉಗ್ರ ಉಪಸರ್ಗಂಗಳಂ ಚಪಳಂ ಮಾಡಿದಂ: **ಕರ್ಣನೇಮಿ,** ೩. ೮೧)

**ನಿಷ್ಕ್ರಯ** – ಬೆಲೆ, ಪ್ರತಿಫಲ (ಪಸುರ್ಮಣಿಯಂ .. .. ತಂದು ಉರ್ವರಾಷ್ಟ್ರತಿಲಕನಪ್ಪ ದೇವದೇವಂಗೆ ಅವಟಯ್ಸಿ ತತ್ಪರಮಪ್ರಸಾದ ನಿಷ್ಕ್ರಯಕ್ಕೆ ತಲೆಯೆಂದು ಪೂಣ್ಡಾಳಾದರ್: **ಶಾಂತಿಪು,** ೧೧. ೫೫ ವ)

**ನಿಷ್ಕ್ರಿಯ** – ಕರ್ಮರಹಿತ (ನಿಷ್ಕ್ರಿಯ ನಿರಪೇಕ್ಷ ನಿನ್ನ ಚರಣಂ ಶರಣಕ್ಕೆಮಗೆ ಇಂ ಜಿನೇಶ್ವರಾ: **ಸುಕುಮಾಚ,** ೪. ೪೮)

**ನಿಷ್ಠುರ** – ಗಡುಸಾದ (ಜವನ ಬಾಯೊಳ್ ತೂಂಕಿದಂ ತನ್ನ ನಿಷ್ಠುರ ಪಾದಾಹತಿಯಿಂ ಪ್ರಭಂಜನಸುತಂ ಹಸ್ತಪ್ರಹಾರಂಗಳಿಂ: **ಪಂಪರಾ,** ೧೧. ೧೪೨)

**ನಿಷ್ಠುರಜಿಹ್ವ** – ಉರಿಯುವ ನಾಲಗೆಯುಳ್ಳ [ಬೆಂಕಿ] (ಪರಿಕಿಪೊಡವಿಚಾರಿ ಸಿತೇತರಗತಿಯಾದಂ ಪ್ರಭಂಜನಪ್ರಿಯಂ ಅತಿನಿಷ್ಠುರಜಿಹ್ವಂ ಉಷರ್ಬುಧನಂತಿರೆ ದುರ್ಬುಧಂ ಆರೊಳೊಂದಿ ಪಡೆಯಂ ನೋವಂ: **ಚಂದ್ರಪ್ರಪು,** ೧. ೪೨)

**ನಿಷ್ಠುರನಿನದ** – ಬಿರುಸಾಗಿ ಸದ್ದು ಮಾಡುವ (ಪರಿಗಳಿತ ಪೂತಿಗಂಧರ್ ಖರ ಕಾಕ ಸೃಗಾಲ ಕರಭ ಕೌಶಿಕ ವೃಕ ವಾನರ ವಿಷದಂಷ್ಟ್ರೋತ್ಕರ ಕುರ್ಕುರ ಕೀಟಕ ಭಲ್ಲನಿಕರ ನಿಷ್ಠುರನಿನದರ್: **ಶಾಂತೀಶ್ವಪು,** ೯. ೧೦೬)

**ನಿಷ್ಣಾತ** – ಪರಿಣತ (ಕೃತಹಸ್ತಂ ಕುಶಲಂ ಶಿಕ್ಷಿತಂ ಪ್ರವೀಣಂ ವಿಚಕ್ಷಣಂ ನಿಷ್ಣಾತಂ ಕೃತಮತಿ ನಿಪುಣಂ ವಿಜ್ಞಂ ಕೃತಕರ್ಮಂ ಕೋವಿದಂ ವಿದಂಜ್ಞಂ ಜಾಣಂ: **ಅಭಿಧಾವ,** ೨. ೧. ೫)

**ನಿಷ್ಪಂದ** – ಅಲುಗಾಡದ, ಪ್ರತಿಕ್ರಿಯಾರಹಿತ (ಜಾನಕಿಯ ರೂಪಾಶ್ಚರ್ಯಮಂ ನೋಡಿ .. .. ಚಿತ್ರಿಸಿದವೊಲ್ ನಿಷ್ಪಂದರಾಗಿರ್ಪುದುಂ: **ಪಂಪರಾ,** ೫. ೬೫)

**ನಿಷ್ಪಂದಗಾತ್ರ** – ಪ್ರತಿಕ್ರಿಯಾರಹಿತ ದೇಹ (ನಿಷ್ಪಂದಗಾತ್ರನುಂ ಉದ್ಬಾಷ್ಪನಿಮಗ್ನನೇತ್ರನುಂ ಎನಲ್ ತನ್ಮಂತ್ರಿಮುಖ್ಯಾತ್ಮಜಂ: **ಕಾದಂಬ,** ೮. ೧೧೪)

**ನಿಷ್ಪತ್ತಿ** – ನೆರವೇರಿಕೆ, ಪೂರ್ಣಗೊಳಿಸುವಿಕೆ (ತತ್ಕಾರ್ಯ ನಿಷ್ಪತ್ತಿಗೆ ಉಜ್ಜಗಮೇನೆಂದು ಅವನೀಶಮ ಇಂತು ಬೆಸಗೊಂಡಂ ಮುಖ್ಯಮಂತ್ರೀಶನಂ: **ಕುಸುಮಾಕಾ,** ೪. ೮೯)

**ನಿಷ್ಪನ್ನ** – ಉದ್ಭವಿಸಿದ[ವನು] (ವ್ರತಪತಿ ಶಶಿಸೂರ್ಯ ಸಮಾಹೃತಿಯಿಂ ನಿಷ್ಪನ್ನನಾದ ತೆಱದಿಂದಿರ್ದಂ: ಚಂದ್ರಪ್ರಪು, ೨. ೮೩); ಸಿದ್ಧ (ನಿಷ್ಪನ್ನಂ ಸಿದ್ಧಂ: **ಅಭಿಧಾವ,** ೨. ೧. ೪೦)

**ನಿಷ್ಪಾದನ** – ಉಂಟುಮಾಡುವುದು, ಸೃಷ್ಟಿ (ಆವಳ್ ವನಿತಾ ನಿಷ್ಪಾದನಕ್ಕೆ ಉಜ್ಜವಣೆವಡೆದಳೋ ಪದ್ಮಜಂಗೆ: **ಲೀಲಾವತಿ,** ೪. ೨೯)

**ನಿಷ್ಪಾವ** – ಗಾಳಿಯಲ್ಲಿ ತೂರುವುದು (ಲವಂ ಅಭಿಲಾವಂ ಲವನಂ ಪವನಂ ನಿಷ್ಪಾವಂ: **ಅಭಿಧಾವ,** ೨. ೨. ೨೧); ಅವರೆ (ನಿಷ್ಪಾವಮಲ್ಲ ಸಂಜ್ಞಿಕಂ ಅದು ಅವರೆ: **ಅಭಿಧಾವ,** ೧. ೧೬. ೧೭)

**ನಿಷ್ಪ್ರಮಾಣ** – ಅಸಂಖ್ಯ, ಅಪರಿಮಿತ (ಶಲ್ಯಂ ಅದಂ ಕಂಡು ನಿಲ್ಲದೆ ನಿಜನಿಷ್ಪ್ರಮಾಣಭೀಷಣ ಚತುರಂಗ ಸೇನಾಸಮೇತಂ: **ಕರ್ಣನೇಮಿ,** ೧೨. ೬೬ ವ)

**ನಿಷ್ಪ್ರವರ** – ಅಪೌರುಷೇಯ, ದೇವರು (ನೆನೆಯುತೆ ದೇವಿ ನಿಷ್ಪ್ರವರನಂ ವರನಂ ವರನಂ ಮಹೇಶನಂ: **ಗಿರಿಜಾಕ,** ೯. ೧೨)

**ನಿಷ್ಪ್ರವೀಚಾರ** – [ಜೈನ] ಸಂಭೋಗರಾಹಿತ್ಯ [ರಹಿತ] (ನಿಷ್ಪ್ರವೀಚಾರನುಮಾಗಿ ನಿರುಪಮಾನೂನ ಸುಖಮಂ ತಳೆದು: **ಕರ್ಣನೇಮಿ,** ೨. ೬೬ ವ)

**ನಿಷ್ಯಂದಿ** – ಸೂಸುವ (ನಿಷ್ಯಂದಿ ತತ್ ದಾನಾಸಕ್ತಿಯಿಂ ಒಲ್ದು ಎಱಪ್ಪಳಿಗಳಂ ಕರ್ಣಾಗ್ರದಿಂ ಸೂವುತುಂ: **ಉದ್ಭಟಕಾ,** ೨. ೫೨)

**ನಿಸದಂ** – ನಿಶ್ಚಿತವಾಗಿ (ಸುಖಮಿರ್ದು ನೆಮ್ಮಿ ನಿರ್ಮಿಸಿದ ಅಲರೊಂದು ಬೊಂದರಿಗೆಯೊಳ್ ಕನಕಾಂಬುಜ ಪಾದಪೀಠದೊಳ್ ನಿಸದಮೆ ನೀಡಿ ಕಾಲನಿಡೆ ರಾಜಕುಮಾರನದೊಂದು ದೇಸೆಯಿಂ: **ಶಾಂತಿಪು,** ೮. ೪)

**ನಿಸರ್ಗ** – ಸ್ವಾಭಾವಿಕವಾದ (ತನ್ನ ನಿಸರ್ಗವತ್ಸಲತ್ವದಿಂ ಎನಗಾ ಪ್ರಸಾದಪದಮಂ ಮಹಾನುಭಾವೆಗೆ ಆ ಸುದತಿಗೆ ಪೇೞ್ದು ಬರ್ಪಿನಂ: **ಕಾದಂಸಂ,** ೬. ೨೮)

**ನಿಸರ್ಗಪ್ರೀತಿ** – ಸಹಜ ಪ್ರೀತಿ (ದುರ್ಗಾಧಿನಾಥನಿಯತ ನಿಸರ್ಗಪ್ರೀತಿಯಿಂ ಅಭೀಷ್ಟಮಂ ಸಕಲಸುಹೃದ್ವರ್ಗಂಬೆರಸು ಅನುಭವಿಸುಗೆ ದುರ್ಗಂ ವರ್ಗತ್ರಯಪ್ರಕೃಷ್ಟೋದಯಮಂ: **ಪಂಚತಂತ್ರ,** ೪೪೬)

**ನಿಸರ್ಗಸುಭಗಂ** – ಸಹಜಸುಂದರವಾದುದು (ಕಲಿಸಿದೊಡಂ ಬರ್ಕುಮೆ ಸಲ್ಲಲಿತ ಕವಿತ್ವಂ ನಿಸರ್ಗಸುಭಗಂ: **ರಾಜಶೇವಿ,** ೧. ೩೦)

**ನಿಸರ್ಗಸ್ನೇಹಿತೆ** – ಹುಟ್ಟಿನ ಗೆಳತಿ (ಈತಂಗಿನಿತು ವಿಭವಮುಮೆಂತಾದುದು ನಿಮ್ಮಡಿಗಂ ಕೈಯನೊಡ್ಡಿ ಪುರುಷಭೃಕ್ಷೆಯಂ ಬೇಡಿ ದೀಕ್ಷೆಯುಮಂ ನಿಸರ್ಗ ಸ್ನೇಹಿತೆಯಾದ ಕಾರಣಮುಮಂ ಇದನಱಿಯೆ ಬೆಸಸುವುದು ಎನೆ: **ಶಾಂತಿಪು,** ೯. ೮೩ ವ)

**ನಿಸಿದಿ** – [ಜೈನ] ಸನ್ಯಸನದಿಂದ ಮುಡಿಪಿದವರ ಸಮಾಧಿ (ನಿಸಿದಿಯೆಂದು ನಿವೇದಿತ ಚೈತ್ಯನಿವಾಸನುಮಾಗಿ ನಾನಾವಿಧಾರ್ಚನೆಗಳಿಂ ಪೂಜಿಸಿ ಪರಮಜಿನನಾದಂ: **ಶಾಂತೀಶ್ವಪು,** ೨. ೩೭ ವ)

**ನಿಸಿದಿಗೆ** – ನಿಸಿದಿ (ಚಂದ್ರಗುಪ್ತಮುನಿಯುಂ ಭಟ್ಟಾರರ ನಿಸಿದಿಗೆಯಂ ಬಂದಿಸುತ್ತಂ: **ವಡ್ಡಾರಾ,** ಪು. ೯೦, ಸಾ. ೧೨)

**ನಿಸು** – ಹೆಬ್ಬೆರಳು–ತೋರುಬೆರಳುಗಳಿಂದ ಅದುಮುವುದು (ಮುನಿ ಸಂಭಾವಿಸಿ ಕಳೆದಂ ನಿಜಾಸುವಂ ನಿಸುವಿಂದಂ: **ವರ್ಧಮಾಪು,** ೨. ೪೮)

**ನಿಸೃತ** – ಸುರಿದ (ಚಂದಿರಮಣಿ ನಿಸೃತ ಅಂಭಃಪ್ಲವಂ: **ಲೀಲಾವತಿ,** ೮. ೪೯)

**ನಿಸೃಷ್ಟ** – ರಾಜನಿಯೋಗಿ (ಒಂದು ದೆವಸಂ ಓಲಗದೊಳ್ ಒರ್ವನಪೂರ್ವಂ ನಿಸೃಷ್ಟಂ .. .. ಖೇಚರಂ ಬಂದು: **ಶಾಂತಿಪು,** ೨. ೧೮ ವ)

**ನಿಸೃಷ್ಟಾರ್ಥ** – ರಾಜನಿಯೋಗಿ (ವಿಭು ನಿಸೃಷ್ಟಾರ್ಥನಂ ಆಸನದೊಳ್ ಕುಳ್ಳಿರಿಂ ಎನೆ ದೂತನುಂ ಒಸೆದು ಮಹಾಪ್ರಸಾದಮೆಂದು ಅಭಿಜಾತಂ ಕುಳ್ಳಿರ್ದು: **ಶಾಂತಿಪು,** ೨. ೭೪ ಮತ್ತು ೭೪ ವ); ನೆರವೇರಿದ ಉದ್ದೇಶ (ನರಪತಿಗೆಱಗೆ ವಿಭು ನಿಸೃಷ್ಟಾರ್ಥನವಾಸನದೊಳ್ ಕುಳ್ಳಿರಿಮೆನೆ: **ಶಾಂತಿಪು,** ೩. ೭೪)

**ನಿಸೆ** – [ನಿಷಾ] ರಾತ್ರಿ (ನಿಸೆಯಪ್ಪುದುಂ ದುಗ್ಧಾಂಭೋಧಿಯೊಳ್ ಕೂಡುವಳ್ .. .. ಕೌಮುದಿಯೆಂಬ ಪೊಚ್ಚ ಪೊಸವೆಣ್: **ಲೀಲಾವತಿ,** ೨. ೫೨)

**ನಿಸೇಕ** – ನಿಷೇಕ, ಸಾವು (ಸೀತೆ ಕಡಂಗಿ ಕಾಯ್ದು ಕಡೆಗಣ್ಚಿದಳಪ್ಪೊಡೆ ಧಾತ್ರನಿಂ ತೊದಳ್ವಾತಿನೊಳೇನೊ ಪಾಂಡವರ ಕೈಯೊಳೆ ನಿನ್ನ ನಿಸೇಕಮಾಗದೇ: **ಪಂಪಭಾ,** ೯. ೪೯)

**ನಿಸ್ತಂಭ** – ಕಂಬವಿಲ್ಲದ (ನಿಸ್ತಂಭಮುಂ ನಿರ್ಗವಾಕ್ಷಮುಂ ನಿಶ್ಚಿದ್ರಭಿತ್ತಿಯುಂ, ನಿರಾಶ್ರಯಮುಂ ಶುಕಶಾರಿಕಾದಿ ಶಕುನಿಕುಳವಿ ಕಳಮುಮಪ್ಪ ಮಂತ್ರಶಾಲೆಯೊಳ್ ಮಂತ್ರಿಗಳುಂ ತಾನುಂ ನಿಶ್ಚಿಂತಮಿರ್ದಾಳೋಚಿಸುವರ್: **ಪಂಚತಂತ್ರ,** ೨೭೯ ವ)

**ನಿಸ್ತರಂಗ** – ಅಲೆಗಳಿಲ್ಲದ, ಪ್ರಶಾಂತವಾದ (ಒಳಗೆ ತತಳಿಪ ರತ್ನಂಗಳಿನೊಪ್ಪುವ ನಿಸ್ತರಂಗಮೀಂಗಡಲೆಂಬ ಅಗ್ಗಳಿಕೆಗೆಡೆಯಾಗಿ ತೊಳಗುವ ಪಳಿಕಿನ ಮಾಣಿಕ್ಯಕೋಶ ಮಂದಿರಮೆಸೆಗುಂ: **ಚಂದ್ರಪ್ರಪು,** ೧. ೧೪೮)

**ನಿಸ್ತರಿಸು** – ದಾಟಿಸು (ನಿಸ್ತರಿಸು ಕಟಕಮಂ ಬೇಗಂ ನೀನಬ್ಬ ಎಂದೆರೆಯಲ್: **ಸಮಯಪ,** ೧. ೩೯)

**ನಿಸ್ತಾರಕ** – ನಿರ್ವಹಿಸುವವನು (ಕಾರಕ ಪೂರಕ ವಸ್ತುವಿಚಾರಕ ನಿಸ್ತಾರಕರ್ಕಳೋಳಿಯೆ ಸಭೆಗೊಟ್ಟೋರಂತೆ ನಾಲ್ವರಿರ್ದು ವಿಚಾರಂಬೆಟ್ಟಂತೆ ಪೇೞ್ದ ಕೃತಿಯುಂ ಕೃತಿಯೇ: **ಅಜಿತಪು,** ೧. ೮೭); ಉದ್ಧಾರಕ (ಭೂರಿಕಳಾವಿಬೋಧಿತ ಸುಧಾಕರರ್ ಊರ್ಜಿತ ಸಾಧುಸಂಘನಿಸ್ತಾರಕರ್ ಅಂಗಜಾತ ಮಹಿಜಾತ ವಿದಾರಕರ್: **ಸುಕುಮಾಚ,** ೧. ೨೨); ದಾಟಿಸುವವನು, ಅಂಬಿಗ (ಸಂಸಾರಸಾಗರ ನಿಸ್ತಾರಕ ಕಾವುದೆಂದೆನೆ ಮಹೇಶಂ ಕಾಯ್ದನಾಶ್ಚರ್ಯದಿಂ: **ತ್ರಿಷಷ್ಟಿಪು,** ೨೯. ೨೧)

**ನಿಸ್ತುಲ** – ಹೋಲಿಕೆಯಿಲ್ಲದ (ಭೂರಿಸತ್ವಾಶ್ರಯಂ ನಿಸ್ತುಲಗಾಂಭೀರ್ಯಂ ಕರಂ ಕಣ್ಗೊಳಿಸಿಧಮ ಅಭವಾಕಾರಮುದ್ರಂ ಸಮುದ್ರಂ: **ಶಬರಶಂ,** ೧. ೩೦)

**ನಿಸ್ತ್ರಪ** – ಲಜ್ಜೆಯಿಲ್ಲದ (ನಿಸ್ತ್ರಪ ಅಗ್ರೇಸರೆಯೊಡನುಡಿವಲ್ಲಿಂದಮೇಂ ಕಷ್ಟಮುಂಟೇ: **ಕಾದಂಸಂ,** ೪. ೧೦೧)

**ನಿಸ್ತ್ರಿಂಶ** – ಕರುಣೆಯಿಲ್ಲದ (ಮೃಗಂಗಳಿರ್ದೆಡೆಯನಱಿದು ನಿಷ್ಕರುಣನವಱರುಣಜಳದೊಳೆನಗೆ ಲೀಲಾಸರೋವರಮಂ ಮಾಡೆಂದು ಪೇೞ್ದೊಡವನಾ ನಿಸ್ತ್ರಿಂಶಕರ್ಮಕ್ಕೆ ಕೊಕ್ಕರಿಸಿ: **ಆದಿಪು** ೨. ೧೪ ವ); ಕತ್ತಿ, ಖಡ್ಗ (ತ್ರಿಜಗತ್ ಸಾಶ್ಚರ್ಯ ದಂಡಸ್ಥಪತಿ ಗೃಹಪತಿ ಛತ್ರಿ ಯೋಷಿತ್ ಪುರೋಧೋಗ ಗಜ ನಿಸ್ತ್ರಿಂಶ ಅಶ್ವ ಕಿಣ್ಯ ಜಿನಮಣಿ ಚಮೂನಾಥಚಕ್ರಾಧಿನಾಥಂಗೆ: **ಆದಿಪು,** ೧೨. ೮)

**ನಿಸ್ತ್ರಿಂಶತೆ** – ಕ್ರೌರ್ಯ (ಒಡವುಟ್ಟಿದರಂ ಕೊಂದವರ ಅಡಗಂ ತಿಂದು ಅವರ ನೆತ್ತರಂ ಬೆಲಗಸೆಯೊಳ್ ಕುಡಿವ ಈ ನಿಸ್ತ್ರಿಂಶತೆಯಂ: **ಗದಾಯು,** ೩ ೨೮)

**ನಿಸ್ಪೃಹ** – ಬಯಕೆಗಳನ್ನು ತೊರೆದವನು ನಿಸ್ಪೃಹರುಂ ಬಣ್ಣಿಪರಲ್ತೆ ನಿನ್ನ ಗುಣಮಂ: **ಅಜಿತಪು,** ೧೨. ೧೨)

**ನಿಸ್ಪೃಹಸ್ವಾಂತ**– ಬಯಕೆಯಿಲ್ಲದ ಸ್ವಭಾವದವನು(ಅಂತು ನಿಸ್ಪೃಹಸ್ವಾಂತನಾಗಿ ತಪೋವನಕ್ಕಂದೇ ಪೋಗಲೆಂದೆ ನಿಶ್ಚಯಿಸಿ: **ಮಲ್ಲಿನಾಪು,** ೧೦. ೨೪)

**ನಿಸ್ವತೆ** – ಬಡತನ (ಕೆಲವು ದೆವಸದಿಂ ತನ್ನ ನಿಸ್ವತೆ ಕಾರಣಮಾಗೆ ಸಮಾಧಿಗುಪ್ತಮುನೀಂದ್ರ ಪಾದಪದ್ಮೋಪಕಂಠದೊಳ್ ಪರಮದೀಕ್ಷಾವಿಲಕ್ಷಿತ ಅಕ್ಷೂಣ ಪ್ರಮೋದನಾಗಿ: **ಶಾಂತಿಪು,** ೯. ೮೩ ವ)

**ನಿಸ್ವನ** – ಧ್ವನಿ (ಕೂಡಿರೆ ಪಟುಪಹನಿಸ್ವನಂ ಶುಭದಿನದೊಳ್ ನಾಡಾಡಿಗೆ ಅಳುಂಬಮೆನಲ್ ಮಾಡಿದನಂತಜ್ಜಂಗೆ ಮದುವೆಯಂ: **ಕರ್ಣನೇಮಿ,** ೪. ೩೯)

**ನಿಸ್ಸಂಗತ್ವಾತ್ಮಭಾವನೆ** – [ಜೈನ] ಒಂದು ಗರ್ಭಾನ್ವಯಕ್ರಿಯೆ; ಎಲ್ಲ ಸಂಗದಿಂದ ತಾನು ಬಿಡುಗಡೆಗೊಂಡಿದ್ದೇನೆಂಬ ಭಾವನೆ

ತಳೆಯುವುದು (ಬಹಿರ್ಯಾನ ನಿಷದ್ಯ ಅನ್ನಪ್ರಾಶನ .. .. ನಿಸ್ಸಂಗತ್ವಾತ್ಮಭಾವನಾ ಯೋಗನಿರ್ವಾಣಸಂಪ್ರಾಪ್ತಿ .. .. ನಿರ್ವೃತಿಯೆಂಬ ಅಯ್ವತ್ತುಮೂಱು ಗರ್ಭಾದಿ ನಿರ್ವಾಣಪರ್ಯಂತಂಗಳಪ್ಪ ಗರ್ಭಾನ್ವಯಕ್ರಿಯೆಗಳುಂ: **ಆದಿಪು,** ೧೫. ೧೫ ವ)

**ನಿಸ್ಸಾಳ** – ಡಕ್ಕೆ (ತೆಱವುಗುಡದೆ ಸೂಟ್ಟೈಸುವ ನಿಸ್ಸಾಳದ ಬಲ್ಸರಕೆ ದೆಸೆವೆಟ್ಟುಗಳ್ ನಿಬ್ಬರಂಬಿರಿಯೆಯುಂ ಬೇಗದಿಂ ನಡೆದೆತ್ತಿ ಬಂದು ಮಂಜುವೆಟ್ಟಮಂ ಮೂವಳಸಾಗಿ ಮುತ್ತಿದಾಗಳ್: **ಕಬ್ಬಿಗಕಾ,** ೨೨೪ ವ)

**ನಿಹಟದಂಶು** – ಕೋರೈಸುವ ಕಾಂತಿ (ನಿಹಟದಂಶುಜಾಳಜಟಿಳ ವಿವಿಧರತ್ನರಾಶಿಯಂ ದಿಶಾಮುಖಪ್ರಕಾಶಿಯಂ: **ವರ್ಧಮಾಪು,** ೧೧. ೫೮)

**ನಿಹತ** – ಹೊಡೆಯಲ್ಪಟ್ಟ (ಅನವರತ ನಿಹತ ನರ ಕರಿ ತುರಗ ನಿಕುರುಂಬ ಕೀಲಾಲ ಕಲ್ಲೋಲ ಪ್ರವರ್ತನ ಅನೇಕ ನದ ನದೀ ಪ್ರವಾಹಬಾಹುಳ್ಯದುಸ್ತರಾವತರಣ ಮಾರ್ಗಮಂ: **ಪಂಪಭಾ,** ೧೩. ೫೧ ವ)

**ನಿಹಿತ** – ಇರಿಸಿದ (ವಿಬುಧ ಚಿಂತಾಮಣಿಯಂ ಕಂಡು ಅವನಿತಳನಿಹಿತ ಚೂಡಾಮಣಿಯಾಗಿ ಪೊಡವಟ್ಟು .. .. ವಿನಯಪುರಸ್ಸರಂ ಇಂತೆಂದಂ: **ಕಾದಂಸಂ,** ೨. ೩೫ ವ)

**ನಿಹುತ** – ಯಜ್ಞದಲ್ಲಿ ಅರ್ಪಿಸಿದ್ದು (ಅದು ಭಸ್ಮನಿಹುತವೆಂಬಂತೆ ಮೇಲೆ ನಿಷ್ಫಲಮಕ್ಕುಂ: **ಸಮಯಪ,** ೭. ೫೫)

**ನಿಳಿಂಪ** – ದೇವತೆ (ಜಳಕೇಳೀವಿಳಸನವಿದಗ್ಧ ಖೇಚರ ನಿಳಿಂಪದಂಪತಿಯಿನಂಬುಖಾತಿಕೆ ರಯ್ಯಂ: **ಆದಿಪು,** ೧೦. ೨೬)

**ನಿಳಿಂಪನಿಳಯ** – ದೇವಲೋಕ, ಸ್ವರ್ಗ (ದೇವಾಂಗನೆಯರ್ ನಿಳಿಂಪನಿಳಯಪ್ರೋದ್ಭೂತ ಸದ್ವಸ್ತು ಸಂಕುಳದಿಂ ಶೋಧಿಸಿ: **ವರ್ಧಮಾಪು,** ೧೧. ೫೫)

**ನಿಳ್ಕು** – ಮೆಟ್ಟಂಗಾಲಲ್ಲಿ ನಿಲ್ಲು (ಬಳಸಿ ತನ್ನೊಡನೆ ಒಯ್ಯನೊಯ್ಯನೆ ಬರ್ಪ ದೇವರದೊಂದು ಗಾವುಳಿಯಂ ಇನ್ನಿರಿಂ ಎಂದು ತನ್ನನೆ ನಿಳ್ಕಿ ನೋಟ್ಟರ ಕಣ್ಗೆ: **ಪಂಪಭಾ,** ೬. ೭); ಎಟುಕಿಸಿಕೊ (ಚಂದ್ರಮಂಡಳದ ಕಳಂಕಮಂ ಕಳೆದಪಳ್ ನಗರೀಲಲಿತಾಂಗಿ ನಿಳ್ಕಿ ತೋಳ್ಗಳಿಂ ಎನೆ: **ಕಾದಂಬ,** ೨. ೧೪)

**ನಿಱಿಸು** – ಸೊಬಗು (ಭಾವಾನುಭಾವವಿಭಾವಂಗಳ್ ರಸಮನುದ್ಭಾವಿಸೆ ನಿಂದ ನಿಱಿಸು ವಿಚಿತ್ರಶೋಭಾವಹಮಾಗೆ ದಿವಿಜೇಂದ್ರಂ: **ಮಲ್ಲಿನಾಪು,** ೧೩. ೨೫); ನಿಲ್ಲಿಸು, ಸ್ಥಾಪಿಸು (ಕಿೞ್ತಿಧರ್ಮಮಂ ಭೂವರನಾವಗಂ ನಿಱಿಸಿದಂ ನಿಖಿಳಾವನಿ ರಕ್ಷಣಕ್ರಮಂ: **ಕಾದಂಸಂ,** ೨. ೩)

**ನಿಱಿ** – ಜೋಡಿಸು (ಕಿಱುನಿಱಿಯೊಳ್ ಕಿಱಿದೆಲೆಗಳ ತುಱುಗಿದ ಚೆಲ್ವೆಳಸಿ ಬಳಸಿ ವನವನಿತೆಯ ಕಯ್ನಿಱಿಯೆನೆ ನಿಱಿಗೊಂಡಿರೆ ನಿಱಿನಿಱಿಗನ ನಿಱಿದಳಿರ ನಿಱಿಯನಱಿಯೆಂ ಪೊಗೞಲ್: **ಆದಿಪು,** ೬. ೯೮); ಅಂಜಲಿಬದ್ಧವಾಗು (ಎಱಗುವ ಮಕುಟಂಗಳ್ ಚೋದ್ಯಮೆಂದತ್ತಮಿತ್ತಂ ನಿಱಿವ ಕರಯುಗಂಗಳ್: **ಆದಿಪು,** ೭. ೫೨); ನೆರಿಗೆ (ತಾಳದ ಲಯಮಂ ನಿಱಿ ನೀಳಾಳಕಮಾರದ ಪೊದಳ್ದ ಮತ್ತೆಂಬಿವು: **ಆದಿಪು,** ೯. ೨೪)

**ನಿಱಿಗ** – ಇಮ್ಮಾವು (ಬಣ್ಣಿಸಲರಸಂ ನಿಱಿಗನ ತಣ್ಣೆಳಲೊಳ್ ಕುಳಿತು ಉಚಿತೋಕ್ತಿಗಳಿಂದ: **ಉದ್ಭಟಕಾ,** ೨. ೧೦೪)

**ನಿಱಿನಿಱಿಗ** – ಸಿಹಿಮಾವು (ನಿಱಿನಿಱಿಗನ ನಿಱಿದಳಿರ ನಿಱಿಯನಱಿಯೆಂ ಪೊಗೞಲ್: **ಆದಿಪು,** ೬. ೯೮)

**ನಿಱಿಗಟ್ಟು** – ಸುಕ್ಕಾಗು (ತೆರೆಗೊನೆಯೊಳ್ ತೆರಳ್ದು ನಿಱಿಗಟ್ಟಿದ ಕತ್ತುರಿಯೊಳ್: **ಅಚವರ್ಧ,** ೪. ೭೩)

**ನಿಱಿಗೆ** – ನೆರಿಗೆ (ನಿಱಿಯ ಸೆಱಂಗನೋಸರಿಸಿ ... .. ಪೆರ್ಮೊಲೆಯಂ ಬೆರಳಿಂದವುಂಕಿ ಬಾಯ್ದೆಱೆಗಿದಿರೀಯೆ: **ನೇಮಿನಾಪು,** ೧. ೧೦೦)

**ನಿಱಿದಲೆ** – ಗುಂಗುರುಕೂದಲಿನ ತಲೆ (ನಿಱಿದಲೆಯೊಗೆಯೊಪ್ಪುದಲೆ ಒಪ್ಪುವ ತೋಳ್ ತನಗಾಗೆ ಪೊಲ್ಲದೋಳ್ .. .. ಪೂತನಿ ಗೋಪಿವೊಲಾಗೆ ಬೇಗದಿಂ: **ನೇಮಿನಾಪು,** ೭. ೭೦)

**ನಿಱಿದಳಿರ್** – ಹೊಳೆಯುವ ಚಿಗುರು (ನಿಱಿದಳಿರ ತೊಂಗಲಂ .. .. ಚಂಪಕಮಾಲೆಯೊಳ್ವೆರಸಿ ಕೋದ ಮಲ್ಲಿಗೆಯ ತಿಸರಮಂ ತೊಟ್ಟು: **ನೇಮಿನಾಪು,** ೫. ೫೫ ವ)

**ನಿಱಿವಿಡಿ** – ನೆರಿಗೆ ಹಿಡಿ (ಪೊಸದುಗುಲಮಂ ನಿಱಿವಿಡಿದುಡಿಸಿಯುಂ: **ಚಂದ್ರಪ್ರಪು,** ೬. ೬೩ ವ)

**ನಿಱಿವಿಣಿಲ್** – [ನಿಱಿ+ಪಿಣಿಲ್] ಹೊಳೆಯುವ ಜಡೆ (ತುಟಿದಳಿರ್ ಪರೆದ ಅಳಕಂ ಮಿಳಿರ್ವ ನಿಱಿವಿಣಿಲುಂ ಎಸೆದುದು: **ರಾಜಶೇವಿ,** ೧೦. ೧೦೧)

**ನಿಱಿಶ್ರಾವಕಿ** – [ಜೈನ] ಧರ್ಮಿಷ್ಠ ಜೈನಗೃಹಿಣಿ (ಮತ್ತಮೇನುಮಿಲ್ಲ ನಿಱಿಶ್ರಾವಕಿ ಕಂಡು: **ಧರ್ಮಾಮ್ಮ,** ೪. ೬೮ ವ)

**ನಿಱಿಸು** – ಸ್ಥಾಪಿಸು, ನಿಲ್ಲಿಸು (ನೃಪನಿದಿರಂ ಬಂದಾವಗಮಟ್ಟಿಯೊಳಱಿದು ನಿಱಿಸೆ: **ಆದಿಪು,** ೫. ೧೧)

**ನೀಕರಿಸು** – ಅವಹೇಳನ ಮಾಡು (ಕೂಂಟಣಿಯರ್ ಸವಿಗಂಡು ಬೇಟಕ್ಕೆ ಕಂಟಕರಾದೆವೇಕೆ ಎಂದು ನೀಕರಿಸೆಯುಂ: **ನೇಮಿನಾಪು,** ೫. ೨ ವ)

**ನೀಕಾಶ** – ಹೋಲಿಕೆಯ (ಎರಡುಂ ದೆಸೆಗಳೊಳಂ ಮನೋಜರಾಜವ್ರಾಜಧಾನೀನೀಕಾಶಮಪ್ಪ ಉದ್ಯಾನಂಗಳೊಳ್: **ಶಾಂತಿಪು,** ೧. ೬೨ ವ)

**ನೀಗು** – ಕಳೆದುಕೊ (ಎನ್ನ ಸಹೋದರನೆಂತುಂ ಶ್ರಮಮಂ ನೀಗಿ ಸುಖದಿಂ ತಣಿದೊನಕ್ಕುಂ: **ವಡ್ಡಾರಾ,** ಪು, ೫೫. ಸಾ. ೧೬)

**ನೀಚ** – ಕುಳ್ಳಾದ (ನೀಚಂ ಅವಾಗ್ರಂ ಕುಬ್ಜಂ ಖರ್ವಂ ಕುಬ್ಜಂ: **ಅಭಿಧಾವ,** ೨. ೧. ೩೭); ಕ್ಷುಲ್ಲಕ ವ್ಯಕ್ತಿ (ಸತ್ವಾಧಿಕರುಂ ತಮ್ಮ ಪರಾಕ್ರಮವನಧಿಕಬಲನೊಳಲ್ಲದೆ ನೀಚರಲ್ಲಿ ಮಾಡರ್; **ಪಂಚತಂತ್ರ,** ೧೦. ಶ್ಲೋಕ ೧೯ ಟೀಕೆ); ಚಾಡಿಕೋರ (ನೀಚಂ ಕ್ಷುದ್ರಂ ಪಿಶುನಂ ಸೂಚಕನೆಂದು ಅಱಿದುಕೊಳ್ಗೆ ಕರ್ಣೇಜಪನಂ: **ಅಭಿಧಾವ,** ೨. ೧. ೧೩)

**ನೀಚೈರ್ಗತ** – ಕುದುರೆಯ ನಡಿಗೆಯ ಒಂದು ರೀತಿ (ವಲ್ಗನ ನೀಚೈರ್ಗತಾದಿಗಳೊಳಪ್ಪ ಕ್ರಿಯೆಗಳೊಡಂಬಡೆ ಬಲ್ಲರಿಚ್ಚರಿವಡೆ ಪರಿದೊಡೆ: **ಜೀವಸಂ,** ೫೩. ೩೦ ವ)

**ನೀಚೈರ್ಗೋತ್ರ** – [ಜೈನ] ಜೀವನಿಗೆ ಅಂಟಿಕೊಳ್ಳುವ ಇಬ್ಬಗೆಯ ಗೋತ್ರಕರ್ಮಗಳಲ್ಲಿ ಒಂದು; ಹೀನಕುಲದಲ್ಲಿ ಹುಟ್ಟಲು ಕಾರಣವಾಗುವ ಕರ್ಮ (ಉಚ್ಚೈರ್ಗೋತ್ರ ನೀಚೈರ್ಗೋತ್ರ ಭೇದದಿಂ ದ್ವಿವಿಧಮಪ್ಪ ಗೋತ್ರಮುಮಂ: **ಸುಕುಮಾಚ,** ೩. ೩೯ ವ)

**ನೀಡ** – ಹಕ್ಕಿಯ ಗೂಡು, ಆಶ್ರಯ (ವಿವಿಧವಿದಗ್ಧ ವಿದ್ಯಾಧರಜನ ಕ್ರೀಡಾನೀಡಂಗಳಾಗಿ: **ಆದಿಪು,** ೧. ೬೨ ವ)

**ನೀಡಱ್** – ಮೂರ್ಛೆ (ನೀಡಱಿಂದ ಎೞ್ಚತ್ತು ವಿಷಾದ ವಹ್ನಿಗೆ ಆಜ್ಯಾಹುತಿಗಳಾಗಿ: **ಪಂಪರಾ,** ೧೪. ೧೯೨ ವ)

**ನೀಡಾಗು** – ತಡವಾಗು (ಸಹಜಾಮೋದಂ ಸೊಗಸನೀಯೆ ನೀಡಾಗದೆ ಗಾಢಾಲಿಂಗನಕ್ಕೆ ಆತುರಿಸುವಲ್ಲಿ: **ಗಿರಿಜಾಕ,** ೩. ೨೬ ವ)

**ನೀಡಿಲ್ಲದೆ** – ವಿಳಂಬಿಸದೆ (ಸುರಕರಿಕರಾನುಕಾರಿಯಪ್ಪ ನಿಜಾಭುಜಾದಂಡಮಂ ನೀಡಿ ನೀಡಿಲ್ಲದೆ ಎಱೆಸಿ ನೀವಿ ಜೇವೊಡೆದಾಗಳ್: **ಆದಿಪು,** ೧೨. ೮೭ ವ)

**ನೀಡು** – ಮುಂದೆ ಚಾಚು (ಎಱಕೆಗಳಂ ಮೆಲ್ಲನೆ ಉರ್ಜುತ್ತೆ ನಿಂದು ಒಯ್ಯನೆ ಸಾರ್ದು ಆ ತ್ರೋಟಿಯಿಂದಂ ತೊಡೆದು ಗಱಿಗಳಂ ನುಣ್ಣವಿರ್ ಬಿರ್ಚಿ ಮೆಯ್ಯಂ ತೊನೆದು ಉದ್ದಂ ನೀಡಿ ಗೋಣಂ ನವ ದಿನಮುಖದೊಳ್ ಕುಕ್ಕುಟಂ ಕೂಗಿತಾಗಳ್: **ಶಾಂತೀಶ್ವಪು,** ೧೧. ೯೬); ಕೊಡು (ನೀಡಲ್ಕೆ ಅರ್ಘ್ಯಮನೀವಂತೆವೊಲಾದುದು ಅದ್ರಿ ಹರಿಗಂಗೆ ಇಷ್ಟಾರ್ಥಸಂಸಿದ್ಧಿಯಂ: **ಪಂಪಭಾ,** ೭. ೭೭)

**ನೀಡುಂ** – ಹೆಚ್ಚಾಗಿ (ನೀಡುಂ ತೃಪ್ತಿಯನೀವ ರಾಘವನೊಳೇಂ ವೈದೇಹಿ .. .. ಮನ್ಮಥಕ್ರೀಡಾಸೌಖ್ಯಮನಪ್ಪುಕೆಯ್ದು: **ಪಂಪರಾ,** ೯. ೧೭೮) ಬಹು ಕಾಲ (ವಿಚಿತ್ರಚಿತ್ರವಿದ್ಯಾ ಕೌಶಲಮನ್ ಅತಿಕುತೂಹಳೋತ್ತಾರಿತ ಲೋಚನನಾಗಿ ನೀಡುಂ ಭಾವಿಸಿ ನೋಡಿ: **ಆದಿಪು,** ೪. ೪ ವ)

**ನೀತಿ** – ಸನ್ನಡತೆ (ನೀತಿಯೆ ರೂಪುಗೊಂಡ ತೇಜದಿಂ ನೆಲಸಿರ್ಪ ಮಹಾಪ್ರಧಾನರಿಂ .. .. ರಾಜ್ಯಮೊಪ್ಪುಗುಂ: **ಸೂಕ್ತಿಸುಧಾ,** ೫. ೨೧); ರಾಜ ನಿರ್ವಹಿಸಬೇಕಾದ ನಾಲ್ಕು ಕರ್ತವ್ಯಗಳು (ಭೃತ್ಯಪೋಷಣಂ ಪ್ರಜಾಪಾಳನಂ ಧರ್ಮರಕ್ಷಣಂ ಆತ್ಮಪ್ರಯತ್ನವೆಂಬ ನಾಲ್ಕುಂ ನೀತಿಗಳುಮಂ: **ಹರಿವಂಶ,** ೭. ೧ ವ)

**ನೀಪ** – ಕದಂಬ ವೃಕ್ಷ (ಪಸುರ್ಗವಿಲನಾದ ನೀಪದ ಕುಸುಮಮುಮಂ ದೆಸೆಗೆ ಕಂಪನೆತ್ತುವ ಲೋಧ್ರಪ್ರಸವಮುಮಂ ಸೂಟಿಗ್ಗೊಟಿಯೊಳ್ ಪಸವಟ್ಟಂದದೊಳೆ ಮುಸಱಿ ಮುತ್ತಿದುವಳಿಗಳ್: **ಪಂಪರಾ,** ೭. ೧೪೧)

**ನೀಮಾರ್ಗೆ** – [ನೀಂ+ಆರ್ಗೆ} ನೀವು ಯಾರವರು? ನೀವು ಯಾರು? [ಕುಡುವಂ ಗುರು ಪಡೆವರ್ ಪೆಱರ್ ಎಡೆಯೊಳ್ ನೀಮಾರ್ಗೆ: **ಆದಿಪು,** ೯. ೧೦೭)

**ನೀರ್** – ಜಲ (ಮೀನಂಬುಬುವುಮಂ ನೀರಿಲ್ಲದ ಕೆಱೆಯನಡುವುದುಂ .. .. ಕಂಡೆಂ; **ವಡ್ಡಾರಾ,** ಪು. ೮೫, ಸಾ. ೨೬); ಕಾಂತಿ (ಆ ಪುಣ್ಯನದಿಯನೆಯ್ದೆವಂದು ತನ್ನ ಬಾಳ ನೀರಂತೆ ಕಱಂಗಿ ಕರ್ಗಿದ ನೀರಂ ನೋಡಿ: **ಪಂಪಭಾ,** ೫. ೫೩ ವ)

**ನೀರ್ ತೆಗೆ** – ಕಾಂತಿಗುಂದು (ಜವನಟ್ಟಿ ಕೊಲ್ವ ಕೊಲೆಗಾ ಜವಂ ಜವಸ್ಥಿತಿಗೆ ಮೆಯ್ಯ ನೀರ್ ತೆಗೆವನ್ನಂ ಜವ ಜವ ಜವನಂಜಿಸಿದುವು ಜವನಾಳ್ಗಳ ತೆಱದಿನೆನ್ನ ಕೆನ್ನೆಯ ನರೆಗಳ್: **ಅಜಿತಪು,** ೨. ೬೯)

**ನೀರ** – ನೀರು (ಸಲಿಲಂ ಜೀವನಂ ಅಂಬು ತೋಯದಮ ಉದಕಂ ಪಾಥಂ ಕುಶಂ ವಾರಿ .. .. ನೀರಂ ಶರಂ ಪುಷ್ಕರಂ ಜಲ ವಾಪಂ: **ಅಭಿಧಾವ,** ೧. ೪. ೧)

**ನೀರಂಜಿಸು** – ಹೊಳಪು ಕೊಡು (ನೀರಂಜಿಸಿ ದಳಿವಿಡಿದ ಮಹಾರತ್ನದ ದೊರೆಗೆ ವಂದುದಾ ಸ್ತ್ರೀರತ್ನಂ: **ಆದಿಪು,** ೪. ೪೨)

**ನೀರಂಧ್ರ** – ಒತ್ತಾಗಿರುವ, ಗಾಢವಾದ (ಆಂಧ್ರೀ ನೀರಂಧ್ರಬಂಧುರಸ್ತನಕಾರಂ ಉದಾರ ಸರಸ್ವತೀ ಮಣಿಹಾರಂ: **ಆದಿಪು,** ೧. ೩೨)

**ನೀರಕ್ಷೀರಪರೀಕ್ಷೆ** – ಬೆರೆತಿರುವ ನೀರು ಹಾಲುಗಳನ್ನು ಬೇರ್ಪಡಿಸುವುದು (ನೀರಕ್ಷೀರಪರೀಕ್ಷಾಧೀರತೆಗಾನಲ್ಲದಿಲ್ಲೆನುತೆ ಮುಡಿಗಿಕ್ಕಿತಾ ರಾಜಹಂಸನೆನೆ ಖಗವಾರದೆ ಗಱಿಗೆದಱಿ ಜಱಿದ ಗಱಿ ನೆಱಿ ಮೆಱಿಗುಂ: **ರಾಜಶೇವಿ,** ೨. ೬೬)

**ನೀರಜ** – [ನೀ+ರಜ] ಧೂಳಿಲ್ಲದ (ನೀರಜದ ರಜದ ಪೊರೆಪು ಆ ನೀರೇಜದ ನೀರ ಪೊರೆಪು ಪೊರೆವೊರೆ ನೀಂ ಸಂಸಾರಕ್ಕೆ ನಿನಗಂ ಈ ಸಂಸಾರಂ ಪೊರೆಪೊರೆ ಪರಾತ್ಮಹಿತಿನುತಚರಿತಾ: **ಶಾಂತಿಪು,** ೧೧. ೯೬); ರಜೋಗುಣರಹಿತ (ತಳ್ತಿರೆ ತನ್ನೊಳ್ ಧರೆಯಂ ಪದಾಂಬುಜರಜಂಗಳ್ ನೀರಜಂ ಮಾಟ್ಪಿನಂ: **ಆದಿಪು,** ೯. ೧೨೪); [ನೀರ+ಜ] ಕಮಲ (ನೀರಜದ ರಜದ ಪೊರೆಪು ಆ ನೀರೇಜದ ನೀರ ಪೊರೆಪು ಪೊರೆವೊರೆ ನೀಂ ಸಂಸಾರಕ್ಕೆ ನಿನಗಂ ಈ ಸಂಸಾರಂ ಪೊರೆಪೊರೆ ಪರಾತ್ಮಹಿತಿನುತಚರಿತಾ: **ಶಾಂತಿಪು,** ೧೧. ೯೬)

**ನೀರಜವನ** – ತಾವರೆಗಳ ಸಮೂಹ (ಮಲಯಾನಿಲಂ ನವನೀರಜವನಮೆಂಬ ಕೆಂಡದೊಳ್ ದಂಡ ನಮಸ್ಕಾರಂ ಬಂದಪಂ: **ಯಶೋಧಚ,** ೧. ೩೮)

**ನೀರಡಕು** – ನೀರು ತುಂಬು (ನೀನೆಂದಂತು ತೊಱೆಗೆ ನೀರಡಕಲುಮಾದಿತ್ಯಂಗೆ ಸೊಡರಿಡಲುಂ ಇಂದ್ರಂಗೆ ದೇವಲೋಕಮಂ ಬಣ್ಣಿಸುವಂತೆಯುಂ ನೆಗೇನೆಂದು ಕಜ್ಜಂಬೇೞ್ವುದು: **ಪಂಪಭಾ,** ೯. ೧೮ ವ)

**ನೀರಡಸು** – ಬಾಯಾರು (ಎಮ್ಮತ್ತಿಗೆ ನೀರಡಸಿ ಬಟಲ್ದಿರ್ದೊಡೆ ಎಮ್ಮಣ್ಣನ ಬೆಸದಿಂ ಜಳಾಶಯಮನಱಿಸಿ ಬಂದೆಂ: **ಪಂಪರಾ,** ೭. ೧೦೬ ವ)

**ನೀರತೇರ್** – ಮೋಡ (ಇಂದ್ರಚಾಪಂಬೆತ್ತ ನೀರತೇರ್ಗಳ್ ಇಳಿದು ತಳರ್ವಂತೆಯುಂ: **ರಾಜಶೇವಿ,** ೧೩. ೭೭ ವ)

**ನೀರದ** – ಮೋಡ (ಪೊಸ ಮದದದಾನೆಯಂ ನಸೆಯ ಪೆರ್ಬಿಡಿ ಜಂಗಮ ಕಲ್ಪವೃಕ್ಷಮಂ ಮಿಸುಗುವ ಅನಲ್ಪಕಲ್ಪಲತೆ ನೀರದಮಂ ಕುಡುಮಿಂಚುಪೊರ್ದಿ ಶೋಭಿಸುವವೊಲ್; **ಶಾಂತಿಪು,** ೭. ೨೯)

**ನೀರದಪಥ** – ಮೊಡಗಳ ಹಾದಿ, ಆಕಾಶ (ನೀರದಪಥದೊಳ್ ತಗುಳ್ದು ಅರಿಗನಂ ಪೊಗೞ್ದಾಡಿದಂ ಅಂದು ದಂಡಕಾಷ್ಠದ ತುದಿಯೊಳ್ ಪಳಂಚಲೆಯೆ ಕೋವಣವಂ ಗುಡಿಗಟ್ಟಿ ನಾರದಂ: **ಪಂಪಭಾ,** ೧೨. ೨೧೯)

**ನೀರದಮಾರ್ಗ** – ಮೋಡಗಳ ಹಾದಿ, ಆಕಾಶ (ದಶರಥಕ್ಷೋಣೀಶಂ ಆಸ್ಥಾನಭುಮಿಯಂ ಆ ನೀರದಮಾರ್ಗದಿಂದಿೞಿದು: **ಪಂಪರಾ,** ೩. ೧೮)

**ನೀರದಮುಕ್ತ** – ಮೋಡವಿಲ್ಲದ (ನೀರದಮುಕ್ತ ಶೀತಕರನಂ ನವಚಂದ್ರಿಕೆ ಪೊರ್ದುವಂತೆ ಕೂಪಾರಮಂ ಇಂದ್ರಸಿಂಧು ಪುಗುವಂತೆ: **ಶಾಂತಿಪು,** ೬. ೨)

**ನೀರದರಥ** – ಮೋಡವನ್ನು ವಾಹನವಾಗುಳ್ಳವನು, ಇಂದ್ರ (ಇಂದ್ರಂ .. .. ಶತಮನ್ಯು ನೀರದರಥಂ: **ಅಅಭಿಧಾವ,** ೧. ೧. ೩೩)

**ನೀರದರವ** – ಗುಡುಗು (ಸಮದಾರಾತಿಮರಾಳನೀರದರವಂ ಸಂಕ್ರುದ್ಧವೈವಸ್ವತೋಪಮ ವಿದ್ವಿಷ್ಟಫಣೀಂದ್ರಚಂದ್ರಕಿರವಂ: **ಆದಿಪು,** ೧೧. ೧೦)

**ನೀರದಾಧ್ವ** – ಆಕಾಶ (ನಾರದಂ ಏನಿಟೆತಂದನೊ ನೀರದಾಧ್ವದಿಂ **ಜಗನ್ನಾವಿ,** ೧೦, ೬)

**ನೀರರುಹ** – ನೀರಲ್ಲಿ ಹುಟ್ಟಿದುದು, ತಾವರೆ [ಆ ರತಿ ಪಾಪಮುಂ ಪಡಣಮುಂ ಪೋಪಂತೆ ಕಾಮಂಗೆ ಮಜ್ಜನಕೆ ಎಂದೆತ್ತಿದ ಚಂದ್ರಕಾಂತ ಘಟದೊಳ್ ತಂದು ಅಟ್ಟೆಯಿಂ ಪುಷ್ಪವಾಸನೆಗೆಂದಿಕ್ಕಿದ ನೀಳ ನೀರರುಹಮಂ ಪೋಲ್ದತ್ತು ಕಟ್ಟಿಂದುವಾ: **ಪಂಪಭಾ** ಪರಿಷತ್ತು, ೪. ೫೧)

**ನೀರಳೆ** – ನೀರು ಮಜ್ಜಿಗೆ (ತಮ್ಮಳೆ ನೀರಳೆಯೆಂದಪರೆ ಮಿಕ್ಕ ಸಮಯಿಗಳೆಲ್ಲಂ: **ಸಮಯಪ,** ೧೫. ೫೦)

**ನೀರಟಿಕ್ಕೆ** – ನೀರಡಿಕೆ, ಬಾಯಾರಿಕೆ (ಭದ್ರಬಾಹುಭಟ್ಟಾರರ್ .. .. ಪಲವು ದಿವಸದಿಂದಂ ಪಸಿವುಂ ನೀರರ್ಟಿಕೆಯುಮಂ ಸೈರಿಸಿ: **ವಡ್ಡಾರಾ,** ಪು. ೯೦, ಸಾ. ೯)

**ನೀರಾಜನ** – ದೀಪ, ಆರತಿ (ದಿನದಿನದೊಳ್ ಖಂಡುಗದೆಣ್ಣೆಯಂ ಸವೆಯಲ್ ನೀರಾಜನಮಂ ಬೆಳಗುವ ನಿಯಮುಮನಂ ಮಾಡಿ: **ತ್ರಿಷಷ್ಟಿಪು,** ೪೭. ೫ ವ)

**ನೀರಾಕರ** – ಸಮುದ್ರ (ಕಣ್ಗೊಪ್ಪಿ ತೋರ್ಪುದಿದು ಉತ್ತ್ರೇಂಖತ್ ಅಸಂಖ್ಯ ಶಂಖಧವಳಂ ಗಂಭೀರನೀರಾಕರಂ: **ಪಂಪಭಾ,** ೪. ೨೪)

**ನೀರಾಜನ** – ಆರತಿ (ಮೇರುನೃಪಂಗೆ ನಭಃಶ್ರೀ ನೀರಾಜನವಿಧಿಯನೊಸೆದು ಮಾಟ್ಪಂತೆ ಎಸೆದತ್ತು ಆ ರಾತ್ರಿಕ ದೀಪದವೊಲ್ ಅಹೋರಾತ್ರಂ ಬಳಸಿ ಬರ್ಪ ತಾರಾಚಕ್ರಂ: **ಅಜಿತಪು,** ೨. ೫)

**ನೀರಾಜನಂಗೆಯ್** – ಆರತಿಯೆತ್ತು (ಕರ್ಮಭೂತಳೋಪಸರ್ಗ ವಿಧ್ವಂಸನನಿಮಿತ್ತವಾಗಿ ನೀರಾಜನಂಗೆಯ್ವಂತೆ: **ಆದಿಪು,** ೭. ೩೬ ವ)

**ನೀರಾಜಿತ** – ಮಂಗಳಾರತಿ ಎತ್ತಿದ (ಅವಲೋಕಿತತ್ರಿಲೋಕಪತಿ ಪೂಜೆಯರುಂ ನೀರಾಜಿತ ಜಿನಪತಿಚರಣೆಯರುಂ .. .. ಅಗಿ ಮಗುಳ್ದು ಬಂದು: **ಲೀಲಾವತಿ,** ೧೦. ೬೬ ವ)

**ನೀರಾಜಿಸು** – ಆರತಿ ಬೆಳಗು (ಸಮುಚಿತಪ್ರೋದ್ಭಾಸಿ ಶೃಂಗಾರನಂ ಚಾರೂದ್ಯತ್ ನಯನಾಂಶುಚಂದ್ರಿಕೆಗಳಿಂ ನೀರಾಜಿಸುತ್ತೆತ್ತಲುಂ: **ಆಚವರ್ಧ,** ೨. ೪೩)

**ನೀರಾಟ** – ನೀರಿನಲ್ಲಿನ ಆಟ, ಜಲಕ್ರೀಡೆ (ಕಣ್ಣೆಂಬ ನೆಯ್ದಿಲ್ ನೀರಾಟಮನಾಡೆ ನೋಡಿ ಪದೆಪಿಂ ತಕ್ಕೈಸಿದಂ ಮಾನದಂ: **ಲೀಲಾವತಿ,** ೧೪. ೮೭)

**ನೀರಿಟಿ** – [ಸೂತಕ] ಸ್ನಾನಮಾಡು (ತರಳಿಕೆ .. .. ಈ ಕೊಳದೊಳ್ ನೀರಿಟಿಯಿಸೆ ನೀರಿಟಿದೆನಿಲ್ಲಿ ಬೆಳಗಪ್ಪಾಗಳ್: **ಕಾದಂಬ,** ೫. ೧೯೨)

**ನೀರಿಟಿಯಿಸು** – ನೀರಿಟಿಪು (ತರಳಿಕೆ .. .. ಈ ಕೊಳದೊಳ್ ನೀರಿಟಿಯಿಸೆ ನೀರಿಟಿದೆನಿಲ್ಲಿ ಬೆಳಗಪ್ಪಾಗಳ್: **ಕಾದಂಬ,** ೫. ೧೯೨)

**ನೀರೇಜ** – ತಾವರೆ (ನೀರಜದ ರಜದ ಪೊರೆಪು ಆ ನೀರೇಜದ ನೀರ ಪೊರೆಪು ಪೊರೆವೊರೆ ನೀಂ ಸಂಸಾರಕ್ಕೆ ನಿನಗಂ ಈ ಸಂಸಾರಂ ಪೊರೆಪೊರೆ ಪರಾತ್ಮಹತಿನುತಚರಿತಾ: **ಶಾಂತಿಪು,** ೧೧. ೯೬)

**ನೀರೇಭ** – ನೀರಾನೆ (ಉತ್ತುಂಗ ಕಲ್ಲೋಲಮಾಲಾಸುರ ನೀರೇಭಪ್ರತಾನ ಪ್ರಬಳ ಮಕರವೃಂದಾದಿಗಳ್ ಶೋಭಿಸಲ್: **ತ್ರಿಷಷ್ಟಿಪು,** ೨. ೧೯)

**ನೀರೇರುಹ** – ತಾವರೆ (ಲಕ್ಷ್ಮೀಲಲನೆ ಪುದಿದಳೆನೆ ನೀರೇರುಹದಳನಯನೆ ನಾಡೆ ಕಣ್ಗೆಸೆದಿರ್ದಳ್: **ಕಾದಂಬ,** ೧. ೩೯)

**ನೀರೇಜಿಸು** – ಸಂತೋಷಪಡಿಸು (ಪಾಕಶಾಸನಂ ಅರ್ಧಾಸಮನಮೇಜಿಸಿ ನೀರೇಜಿಸಿ ಮನುಜಂಗಂ ಮಾನ್ಯಪದವಿಯಂ ಮಾಡಿದನೇ: **ಗದಾಯು,** ೩. ೪೦)

**ನೀರೇಜು** – ನೀರು ತುಂಬಿಕೊ (ನೀರೇಜಿದ ನಾಲಿಪುಣ್ಣೊಡೆದು ಸೌಳೆನೆ ಸೀಳ್ದುದು ದೋಣಿ ಪೋಪಿನಂ: **ಸುಕುಮಾಚ,** ೫. ೧೬); ಶೋಭಿಸು (ನೀರೇಜಿದ ಮಂಗಳವಸದನಮೇಜಿ ಮನಂಗೊಳಿಸಲಾರ್ತುದಾ ಕೋಮಳೆಯಾ: ಪುಷ್ಪದಂಪು, ೮. ೫೯); ಚಿಗುರು (ವನಜಂಗಳ್ ದಳವೇಜಿ ಚೂತಲತೆಗಳ್ ನೀರೇರೆ ಶೀತಾಂಶು ತೊಟ್ಟನೆ ಪೂರ್ವಾದ್ರಿಯನೇಜಿ ಮನ್ಮಥಗಜಂ ಸೊಕ್ಕೇಜಿ .. .. ಬಂದುದು ವಸಂತಂ: **ಧರ್ಮಾಮೃ,** ೧೩. ೬); ಸಂತಸಪಡು (ಏಜಿಸಿಕೊಂಡು ಹಸ್ತಿ ನಿಜಮಸ್ತಕಮಂ ಬರೆ ಕಂಡು ಗುಂಡು ನೀರೇಜಿ ಪುರಪ್ರಧಾನಜನಂ ಗುಡಿಗಟ್ಟೆ ಸಮಂತು ಬಂದು: **ಕರ್ಣನೇಮಿ,** ೨. ೯೪)

**ನೀರೋಗಿ** – ರೋಗರಹಿತ, ಆರೋಗ್ಯವಂತ (ಅನಲಂ .. .. ಉಂಡು ಖಾಂಡವವನಮಂ ನೀರೋಗಿಯಾದನೆಂಬರ್ ಗೊರವರ್: **ಸಮಯಪ,** ೧೦. ೭೬)

**ನೀರೋಡು** – ಬತ್ತಿಹೋಗು (ನೀರೋಡಿ ನಿನ್ನ ತನುವಿನ ಬಣ್ಣಂ ಬಱುಗೊಳದವೊಲಾಯ್ತು: **ಯಶೋಧಚ,** ೩. ೬)

**ನೀರ್ಗಲ್** – ಮಂಜು ಗಡ್ಡೆ; ಮುತ್ತು (ಸುಕುಮಾರಿಯರ್ಗೆ ನೀರ್ಗಲ್ಗಳ ಹಾರದೊಂದು ಪೊಱೆಯೇಕೆನುತಂ ಜಲದೇವಿ ಕೊಟ್ಟವೊಲ್ .. .. ಬೆಟ್ಟಿದುವಾಗದ ಬಿಂದುಮೌಕ್ತಿಕಂ ವಲ್ಗದುರೋಜಮಂಡಲದೊಳೇಂ ತುಱುಗಿರ್ದುವೊ ಕಾಂತೆಯರ್ಕಳಾ: **ಲೀಲಾವತಿ,** ೧೪. ೧೫)

**ನೀರ್ಗಾದಿಗೆ** – ನೀರು ತುಂಬಿದ ಕಂದಕ (ಮಧುರಾಪುರಮಂ ಬಿಸುಟ್ಟು ಪೋಗಿ ದ್ವಾರಾವತಿಯಂ ಸಮುದ್ರಮೆ ನೀರ್ಗಾದಿಗೆಯಾಗಿ ಮಾಡಿದಂ: **ಪಂಪಭಾ,** ೬. ೨೬ ವ)

**ನೀರ್ಗಾಯ್** – ಎಳನೀರು (ನೀರ್ಗಾಯ ತುಱುಗಲಿಂದೆಱಗಿದ ನಾಳಿಕೇರಭೂರುಹಂಗಳುಂ: **ಚಂದ್ರಪ್ರಪು,** ೧. ೧೦೫ ವ)

**ನೀರ್ಗಾರಿಗೆ** – ಕಂದಕ (ಮುನ್ನೀರ್ಗೆ ದೊರೆಯಾಗಿ ಬಳಸಿದ ನೀರ್ಗಾರಿಗೆ ಸಿರಿಯನದಱೊಳವಗೈಸಿಕ್ಕುಂ: **ವರ್ಧಮಾಪು,** ೧. ೬೧)

**ನೀರ್ಗಿಚ್ಚು** – ಬಡಬಾನಲ (ದೇಹಂ ಕರಂ ಕೊರಗಿ ಕಡುಬಡವಾಗಿ ನೀರ್ಗಿಚ್ಚುಗೊಂಡ ಕಮಲಿನಿಯಂತಿರಿರ್ದ ಕಾಮಿನಿಯಂ ಕಂಡು: **ಲೀಲಾವತಿ,** ೭. ೮೩ ವ)

**ನೀರ್ಗುಡಿಸು** – ತರ್ಪಣ ಕೊಡಿಸು (ದಮಿತಾರಿಯ ಭುಜಬಲ ವಿಕ್ರಮದ ಅಳವಿಗೆ ಮಚ್ಚಿ ಮಚ್ಚುಗುಡಿಸುವವೊಲ್ ಅನುಕ್ರಮದಿಂ ನೀರ್ಗುಡಿಸಿ ಯಥಾಕ್ರಮದಿಂ ಪದವಡಿಸಿ ಪಾರಲೌಕಿಕವಿಧಿಯಂ: **ಶಾಂತಿಪು,** ೪. ೫೮)

**ನೀರ್ಗುಡು** – ತರ್ಪಣ ನೀಡು ತನ್ನ ತಾಯ್ಗೆ ನೀರಿಟಿಯಲುಂ ತಂದೆಗೆ ನೀರ್ಗುಡಲುಂ ಎಂದು ಮಾಡಿ: **ಗದಾಯು,** ೬. ೨೮ ವ)

**ನೀರ್ಗೊಡು** – ನೀರ್ಗುಡು (ತನಗೆ ತಾನೆ ನೀರ್ಗೊಟ್ಟಪನೆಂಬಂತೆ ಸುರಿವ ನಿರಂತರ ಅಶ್ರುಪೂರಮುಂ .. .. ತೋಜೆ: **ಕಾದಂಬ,** ೯. ೨೯ ವ)

**ನೀರ್ಗೋಡು** – ನೀರು ಹೋಗುವ ಕೋಡಿ (ಸುಖಾಮೃತಕ್ಕೆ ನೀರ್ಗೋಡು ತಮಕ್ಕೆ ನೀಡು ನಯನಕ್ಕೆಳದಿಂಗಳ ಕಾಡು: **ಪುಷ್ಪದಂಪು,** ೯. ೧೮)

**ನೀರ್ಜೊಂಪ** – ಧಾರಾಗೃಹ, ನೀರು ಸುರಿಯುವ ಮನೆ (ಹಿಮಶೈಲಕ್ಕೆ ಸಹೋದರಮೆನಿಸಿದ ನೀರ್ಜೊಂಪಮಂ ಪೊಕ್ಕು ಶಿಶಿರಶಿಲಾತಳದೊಳ್ ಮೆಯ್ಯನಿಕ್ಕಿ: **ಕಾದಂಬ,** ೮. ೧೨೪ ವ)

**ನೀರ್ದಂದಲ್** – [ನೀರ್+ತಂದಲ್] ತುಂತುರು ಹನಿ (ಎತ್ತಂ ಪೊಕ್ಕು ನೀರೊಳ್ ಬೆರಸಿ ಬಸಿವ ನೀರ್ದಂದಲಿಂ .. .. ಮೆಲ್ಲಿತಾದತ್ತು ಮಾರ್ಗಂ: **ಲೀಲಾವತಿ,** ೬. ೬೦)

**ನೀರ್ದಳಿಪ** – ನೀರು ಎರಚುವಿಕೆ (ಗೊಜ್ಜೆಯ ಸಂಕಡಿಗಳಿಂ ಪನ್ನೀರ ನೀರ್ದಳಿಪದಿಂ ಕತ್ತುರಿಯ ಕಾಲ್ವಳಿಗಳಿಂ; **ಕುಸುಮಾಕಾ,** ೧೨. ೧೫೭ ವ)

**ನೀರ್ದಾಣ** – ನೀರಿರುವ ಜಾಗ (ಮೂಡಿಗೆ ಕುಕ್ಕಂಬಂ ಸುಟೆಸಿ ಜೊಂಪಂ ಬೀಡುಬಿಡುವ ಇಂಬು ಕದಳಿ ತೆಂಗಿನ ತಾಣಂ ಜಾಣಿಂ ನೀರ್ದಾಣಮೆಂದು ಎಡೆಯಱೆದುಂ: **ಪಂಪಭಾ,** ೫. ೪೧); ಜಲಾಶಯ (ಆಂ ನೀರ್ಧಾಣಮಂ ನೋಡಿ ಮೆಲ್ಲನೆ ಸಾರ್ದು ಅಲ್ಲಿ ಬಱಲ್ಕೆಯಂ ಕಳೆದು ಪೋಪೆಂ: **ಕಾದಂಬ,** ೪. ೧೨)

**ನೀರ್ದಿಗುರಿ** – [ನೀರ್+ತಿಗುರಿ] ನೀರಿನ ಸುಳಿ (ಸುಟೆಗಳ್ ನೀರ್ದಿಗುರಿಯವೋಲ್ ಸುಟೆದುವು ತೆರೆ ತೆರೆಯನಟ್ಟಿದುವು: **ಪಂಪರಾ,** ೧೨. ೯೦)

**ನೀರ್ದುಳುಕು** – ತರ್ಪಣ ನೀಡು (ಸವಳದೆ ಸಂಜೆವಾಸಿದಪೆಂ ಎಂದು ನಿಬಂಧಧದೆ ಕರ್ಚಿ ಕಾಲ್ಗಳಂ ದಿವಸಕರಂಗೆ ನೀರ್ದುಳುಕಿ: **ಸಮಯಪ,** ೧೪. ೨೫)

**ನೀರ್ದೆಗೆ** – ನೀರನ್ನು [[ಜೀರ್ಕೊಳವಿಯಿಂದ] ಹೀರು (ತೊಳಗುವ ಪೊನ್ನ ಜೀರ್ಕೊಟವಿಯಗ್ರಮಂ ಒಂದಿನಿತೆಟ್ಟಿ ಭಂಗಿ ಸಂಗಳಿಸಿರೆ ಮೇಲೆ ನೀರ್ದೆಗೆವ ಕೋಮಳೆ: **ಚಂದ್ರಪ್ರಪು,** ೭. ೧೩೮); ಬತ್ತಿಹೋಗು (ಇಳೇ ಕಾಯ್ವೆಱೆದುದು ಅಬ್ಧಿ ನೀರ್ದೆಗೆದುದು .. .. ಅರಣ್ಯಂ ಬೆಂದುದು ಆ ಗ್ರೀಷ್ಮದೊಳ್: **ರಾಜಶೇವಿ,** ೫. ೩೬)

**ನೀರ್ದೊಱೆ** – ನೀರ ಪ್ರವಾಹ (ಈ ಭವದೊಳ್ ಎನಗೆ ಬೆಸಕ್ಕೆ ನೀರ್ದೊಱೆಗಳಾಗಿ ಬಂದು ನಿಂದುವು: **ಶಾಂತಿಪು,** ೨. ೬೫ ವ)

**ನೀರ್ದೋಣಿ** – ನೀರು ತುಂಬುವ ದೋಣಿಯಾಕಾರದ ತೊಟ್ಟಿ (ಮಜ್ಜನಪ್ರದೇಶಕ್ಕೆ ಮಜ್ಜನೋಪಕರಣ ಸಂಪಾದನವ್ಯಗ್ರ ಪರಿಜನಂಬೆರಸು ಬಂದು ನೀರ್ಧೋಣಿಯೊಳೋಲಾಡಿ ಮಜ್ಜನಪೀಠಮನಲಂಕರಿಸಿದಾಗಳ್: **ಕಾದಂಬ,** ೧. ೬೦ ವ)

**ನೀರ್ಪೋರ್ಕುಳಿ** – ನೀರೆರೆಚಾಟದ ಸ್ಪರ್ಧೆ (ನೀರ್ಪೋರ್ಕುಳಿಯೊಳ್ ಜೋಲ್ದುಳ್ಳುಡೆ ಸಾರ್ಕೆಯೊಳೇಂ ನೃಪನ ಮನಮನಳವಡಿಸಿದುದೋ: **ಆದಿಪು,** ೧೧. ೧೪೯)

**ನೀರ್ಮಾನಿಸ** – ನೀರಿಗೆ ಸಂಬಂಧಿಸಿದ ವ್ಯಕ್ತಿ (ನೀರ್ಮಾನಿಸಂ ನದೀಜಂ ನೀರ್ಮಾನಿಸಂ ಅಬ್ಧಿಶಯನನಂ ಅಕಾರಣದಿಂ .. .. ಕೊಂಡು ಕೊನೆದುದು: **ಜಗನ್ನಾವಿ,** ೧೭. ೧೮)

**ನೀರ್ವರಿ** – ಕಾಲುವೆ (ಜಳಧಿಯುಮಂ ಲಕ್ಷ್ಮೀದಯಿತಂ ನೀರ್ವರಿಯಿಂದಾದಮೆ ಕಿಱೆದೆಂದು ಬಗೆದು ನೋಡಿದನಾಗಳ್: **ಆದಿಪು,** ೧೨. ೭೫)

**ನೀರ್ವಾನಿಸೆ** – ಲಕ್ಷ್ಮಿ (ನಿಶಿನೀರ್ವಾನಿಸೆ ಮೀನಕರ್ಕಟವೃಂದಂ ವಾಕ್ಚರಂ ತಾರಕಪ್ರಸರಂ: **ತ್ರಿಷಷ್ಟಿಪು,** ೨೪. ೧೩೮)

**ನೀರ್ವಾಯ್** – ನೀರು ಹರಿ (ಮೆಟ್ಟಲೆ ಬಲ್ಪಂದೆಡೆಯಿಲ್ಲೆಂಬಂತೆ ಪಂಕಂ ಮಸಗೆ ನೀರ್ವಾಯುತುಂ ನಾಡೆಯುಂ ಬೇರ್ಗೆಡೆದತ್ತಂ ಬೆಟ್ಟುಗಳ್ ಕುಕ್ಕುಟಿಸೆ: **ಕುಸುಮಾಕಾ,** ೬. ೩೫)

**ನೀರ್ವಾವು** – ನೀರ ಹಾವು (ಜಗುನೆಯ ನೀರ್ವಾವಂ ಪಿಡಿದನಿತಱೊಳ್ ಉರ್ವಿಶವಳಯಂ ಸುಭಟನೆನ್ನುಮೇ ಹರಿ ನಿನ್ನಂ: **ಜಗನ್ನಾವಿ,** ೧೭. ೪೪)

**ನೀರ್ವುಟ್ಟು** – ದೋಣಿ ನಡೆಸುವ ಹುಟ್ಟು (ನೀಲಾಬ್ಜಂ ನೀರ್ವುಟ್ಟಿನೆ ನೀಲಾಬ್ಜಮನಡರ್ದು ತಳರ್ವ ಬಿಜ್ಜೋದರಿ ಕಣ್ಸೋಲಮನಮರ್ಚಿದಳ್ ಪಱುಗೋಲೊಳ್ ಪೋಪಂತೆ ಗಗನಮೆಂಬಂಬುಧಿಯೊಳ್: **ಶಬಶಂವಿ,** ೧. ೪೩)

**ನೀರ್ವೂ** – ನೀರಲ್ಲಿನ ಹೂ, ತಾವರೆ (ನೇರ್ವಡಿಸಿ ಪಿಡಿದ ಕರಿಯೆಳ ನೀರ್ವೂವಂ ಚುಂಬಿಸುತ್ತ ನಾರಿಯ ನಾಣಿಂ ಸಾರ್ವ ಮೊಗಂ: **ನೇಮಿನಾಪು,** ೧. ೧೧೬)

**ನೀರ್ಸೆಱೆ** – ನೀರು ನಿಂತ ಜಾಗ (ಅದಲ್ಲದೆಯುಂ ಬೇಱೊಂನೀರ್ಸೆಱೆಗೆಯ್ದಿರ್ದು ಬಟೆಯಂ: **ಜಗನ್ನಾವಿ,** ೧೬. ೮ ವ)

**ನೀಲ** – ಗಾಢ ನೀಲಿ ಅಥವಾ ಕಪ್ಪು ಬಣ್ಣ (ನೀಲದ ಬೆಳ್ಳಿಯ ಗಾಡಿಯುಂ ಈ ಲಲಿತಾಂಗಿಯರ ಕಣ್ಗೆ ಪೋಲ್ತುಂ ನಾಂ ಕಣ್ಗೇಳಿದಮಾಗಿರೆವೆಂದೆಳವಾಳೆಗಳೋಡಿದುವು ಬಾಲೆಯರ್ ಪುಗುವಾಗಳ್: **ಪಂಪಭಾ,** ೫. ೬೧); ನವರತ್ನಗಳಲ್ಲಿ ಒಂದು (ಮೋಲೆಯೆಂಬ ಜವಳಿಗೊಡೆಗಳ್ಗೆ ಅಲರಂಬಂ ತಿರ್ದಿ ಪಿಡಿದ ನೀಲದ ಕಾವಂ: **ಅನಂತಪು,** ೧೨. ೭೪); ಸುಗ್ರೀವನ ಒಬ್ಬ ಸೇನಾನಾಯಕ (ಅಂತು ದಶಗ್ರೀವಂ .. .. ನೀಲನ ನೀಲಲೋಹಿತದಿಂ ಭೂತಗಣಮಂ ತಣಿಪಲುತ್ಕಂಠನಾಗಿ ನಿಜವರೂಥಮಂ ರಿಪುವರೂಥಿನಿಗೆ ಪರಿಯಿಸಲ್ ಒಡರಿಸುವುದುಂ: **ಪಂಪರಾ,** ೧೩. ೧೩೩ ವ)

**ನೀಲಕಂಠ** – ಶಿವ; ನವಿಲು (ಫಣಿಪೋತಂಗಳನೆತ್ತಿ ಸಾವಗಿಪ ರಾಜನ್ನೀಲಕಂಠಂಗಳಿಂ: **ಉದ್ಭಟಕಾ,** ೩. ೩೫)

**ನೀಲಗಳ** – ಶಿವ (ನಾಲಗೆಯಂ ಕೊಯ್ದರ್ಚಿಸೆ .. .. ನೀಲಗಳಂ ಕುಡದೆ ತಾನೆ ಬರ್ಕುಂ ಇದೇನೋ: **ಸಮಯಪ,** ೯. ೪೫); ನವಿಲು

**ನೀಲಗ್ರೀವ** – ನೀಲಕಂಠ (ಮೃಡ ನೀಲಗ್ರೀವ ಕಾಲಹರ ಲೋಕಾಗ್ರಜ ಪೊನ್ನಾಂಬಲೇಶ ಜಯ ಭವನಾಶಾ: **ತ್ರಿಷಷ್ಟಿಪು,** ೭. ೬೨)

**ನೀಲಲೇಶ್ಯೆ** – [ಜೈನ] ಆರು ಬಗೆಯ ಲೇಶ್ಯೆಗಳಲ್ಲಿ ಒಂದು; ಆಲಸ್ಯಕ್ಕೆ ಕಾರಣವಾದ ಕರ್ಮ (ಕೃಷ್ಣ ನೀಲ ಕಪೋತ ಲೇಶ್ಯಾಬಹ್ವಾರಂಭಪರಿಗ್ರಹತ್ವಾದ್ಯುಭಪರಿಣಮಂಗಳಿಂ ಜೀವಂ ನೆಲಸಿ: **ಆದಿಪು,** ೫. ೮೩ ವ), ನೋಡಿ, 'ಲೇಶ್ಯೆ'

**ನೀಲಲೋಹಿತ** – ಕಡುಗೆಂಪುರಕ್ತ (ನೀಲನ ನೀಲಲೋಹಿತದಿಂ ಭೂತಗಣಮಂ ತಣಿಪಲುಂ ಉತ್ಕಂಠನಾಗಿ: **ಪಂಪರಾ,** ೧೩. ೧೩೩ ವ); ಕೊರಳ ನೀಲ ಹಾಗೂ ಕೂದಲ ಕೆಂಬಣ್ಣಗಳುಳ್ಳವನು, ಶಿವ(ಈ ಪರಶುವಿಂ ಗಿರಿಶಬಂಧುವಂ ಈ ಶೂಲದಿಂ ನೀಲಲೋಹಿತನಂ ಗೆಲ್ದೆನೆಂದು ಬೇಱೆವೇಱೆ ಪೆಸರೊಳ್ ತೋಱುತ್ತುಂ **ಜಗನ್ನಾವಿ,** ೬. ೨೮ ವ)

**ನೀಲಾಂಬರ** – ಕಪ್ಪು ಬಟ್ಟೆ (ಕಂಬು ಲತಾಕಾಂತೆಗೆ ನೀಲಾಂಬರಕಂಚುಕಮಿದೆಂದು ಮಿಂದಿಂದುಸದ್ದಿಂಬಕ್ಕೆ ಲಕ್ಷ್ಮಲಕ್ಷ್ಮಿ ದಲೆಂಬುದನೆನಿಸಿದುದು ಅವನೀಶಕೇಢಶಾವಳಿಗಳ್: **ಶಾಂತಿಪು,** ೧೧. ೧೦೬); ನೀಲವಸನ [ಬಲರಾಮ] (ಅಂಬುರುಹಮಿತ್ರ ಬಿಂಬಾಡಂಬರಮಂ ಮಿಕ್ಕು ಚಕ್ರಮಿರೆ

ಕೆಲದೊಳ್ ಪೀತಾಂಬರಂ ಈಕ್ಷಿಸಿದಂ ನೀಲಾಂಬರನ ಮುಖಾರವಿಂದಮಂ ಮುದದಿಂದಂ: **ಶಾಂತೀಶ್ವಪು,** ೮. ೧೧೫)

**ನೀಲಾಚಲ** – ಕಪ್ಪು ಬೆಟ್ಟ (ಮುನ್ನೀರಂ ನೀಲಾಚಲದಿಂ ಸಾರಂಗಟ್ಟಿದವೊಲಿರೆ ಬಬಿಲ್ದು ಉಲಾಯಂ: **ಯಶೋಧಚ,** ೩. ೬೬)

**ನೀಲಾವಳಿ** – ನೀಲಿಯ ಬಟ್ಟೆ (ಮಱುದಿವಸಂ ನೀಲಾವಳಿಯನುಟ್ಟುಂ ಇಂದ್ರನೀಲಪತ್ರಂಗಳಂ ತುಟ್ಟು ಮೇಘಮಾಲೆಯಂ ಕಟ್ಟಿ ಕತ್ತುರಿಯಂ ಪೂಸಿ: **ಹರಿವಂಶ,** ೧. ೪೨ ವ)

**ನೀಲಾಳಕ** – ಕಪ್ಪು ಕೂದಲು (ನೊಸಲೊಳ್ ನೀಳ್ದಿರ್ದ ನೀಳಾಳಕಂ ಪಿಸುಣಾಡಿತ್ತು ಅಸಮಾಸ್ತನಸ್ತಹತಿಯಂ ತತ್ಕಾಮಿನೀರೂಪಕಂ: **ಲೀಲಾವತಿ,** ೪. ೧೪೩)

**ನೀಲೀರಾಗ** – ನಿಶ್ಚಲ ಪ್ರೀತಿ (ದಶವದನಂಗಾದುದು ಸೀತೆಯೊಳ್ ವೈರಾಗ್ಯಂ ಉದಾತ್ತನೊಳ್ ಪುಟ್ಟದಲ್ತೆ ನೀಲೀರಾಗಂ: **ಪಂಪರಾ,** ೧೪. ೧೧೨)

**ನೀವಳಿವಟ್ಟಂಗೆಯ್** – ನೀವಾಳಿಸಿ ತೆಗೆದಂತೆ ಕಿತ್ತೆಸೆ (ದೇವ ಅನೇಕ ದೇಶಂಗಳಂ ನೀವಳಿವಟ್ಟಂಗೆಯ್ವುತ್ತಂ ನೀಳಗಿರಿವೆಸರವ್ಯಾಳಗಜಂ ಬಂದು: **ಪುಣ್ಯಾಸ್ರ,** ೭. ೫೦ ವ)

**ನೀವಾರ** – ನವಣೆ (ನೀವಾರದ ರಾಶಿಯಂ ಬಿಡದೆ ಕಾಡಿದುದು ಆ ಕಪಿ ತಾಪಸರ್ಕಳಂ: **ಪಂಚತಂತ್ರ,** ೩೬೭)

**ನೀವಿ** – ಸೀರೆಯ ನೆರಿಗೆ (ಎಡಗೆಯ್ಯಿಂ ನೀವಿಯಂ ಸಾರ್ಚುತುಂ ಉರಸಿಜದ ಒತ್ತಂಬದಿಂ ಬಳ್ಕುತುಂ .. .. ಅಸತಿಯರ್ ಪೋದರ್ ಇಂತು ಅತ್ತಂ ಇತ್ತಂ: **ಶಾಂತೀಶ್ವಪು,** ೧೧. ೨೩); ಬಂಡವಾಳ (ವ್ಯವಹೃತಿಗತ ಮೂಲದ್ರವ್ಯಂ ನೀವಿಯಕ್ಕುಂ: **ಅಭಿಧಾವ,** ೩. ೧. ೫೦)

**ನೀವೀಬಂಧ** – ಸೀರೆಯ ಸೊಂಟದ ಗಂಟು ಅಳಕೋತ್ಸಾರಿತ ಕೇಶಸಂಚಯಮನೀವೀಬಂಧನಾವಿಷತಸ್ಖಳಿತಂ ವಿಸ್ಮೃತಿಪಕ್ಷಪಾತಂ: **ಆದಿಪು,** ೪. ೬೦)

**ನೀವೀಭರ** – ಸೀರೆಯ ಸೊಂಟದ ಗಂಟು (ಜೋಲ್ದಿರ್ದ ಬಂಬಲ್ಮುಡಿ ಶಿಥಿಲವೆತ್ತಿರ್ದ ನೀವೀಭರಂ ಕಣ್ಗೊಳಿಪನ್ನಂ ಲೀಲೆಯಿಂದುಪ್ಪವಡಿಸಿದಳ್ ಹೃದ್ಯಾಂಗಿ: **ಜಗನ್ನಾವಿ,** ೨. ೭೮)

**ನೀವು** – ಸವರು (ಶಲ್ಯನಂ ರಥಮಂ ಎಸಗಲ್ವೇಟ್ಟು ದಿವ್ಯಾಸ್ತ್ರಂಗಳ ದೊಣೆಗಳಂ ಎರಡುಂ ದೆಸೆಯೊಳಂ ಬಿಗಿದು ಕಾಳವಟ್ಟದ ಬಿಲ್ಲಂ ಕೆಂದಳದೊಳ್ ಅಮರೆ ಪಿಡಿದು ನೀವಿ ಜೇವೊಡೆದಾಗಳ್: **ಪಂಪಭಾ,** ೧೨. ೧೩೫ ವ)

**ನೀಸು** – ಈಜು (ವಳಿರೇಖೆವಡೆದ ಬಡನಡು ತೊಲೆಯೆನೆ ಕುಚಜಘನಭರಮಂ ಕರತಲದೊಳ್ ನಿಲ್ಲಿಸಿ ಲತಾಮಗಿಗೆ ನೀಸಲ್ ಕಲಿಪ ವಿಟಂ ತೂಗುವಂಗಜಂಗೆಣೆಯಾದಂ: **ಅನಂತಪು,** ೭. ೩೯)

**ನೀಹಾರ** – ಹಿಮ (ಅಭಿನವನೀಹಾರದ ಬೆಳ್ಪನೆ ಬಾರಿಸಿ ಬಾರಿಸಿ ಪಾಂಡುಕಶಿಳಾತಳಂ ಸೊಗಯಿಸುಗುಂ: **ಆದಿಪು,** ೭. ೭೪); ಮಲವಿಸರ್ಜನೆ (ಆ ಭೋಗಭೂಮಿಯೊಳ್ ಪಾತ್ರತ್ರಿತಯ ದಾನಫಲಗಳಿಂದೆ .. .. ದ್ವಿತ್ರಿದಿವಸಾಂತರಿತ ಅಮಳಕಾಕ್ಷಬದರಮಾತ್ರಾಹಾರರುಂ ವ್ಯಪಗತನೀಹಾರರುಂ .. .. ದಂಪತಿಸ್ವರೂಪದಿಂ ಪುಟ್ಟಿ: **ಚಂದ್ರಪ್ರಪು,** ೩. ೩೬ ವ)

**ನೀಹಾರಕರ** – ಹಿಮಕರ, ಚಂದ್ರ (ನೀಹಾರಕರಂ ಅಲಸಿ ಪಟ್ಟಿಗೆ ಸಾರಲೊಡಂ ಮಗುಟಿ ಮರ್ಬು ಪರ್ಬಿತ್ತಾಗಳ್: **ಲೀಲಾವತಿ,** ೩. ೯)

**ನೀಹಾರವರ್ಷ** – ಮಂಜಿನ ಮಳೆ (ಅಪರಿಮಿತ ಸ್ತಂಬೇರಮಾನೀಕ ಶೀಕರನೀಹಾರವರ್ಷದಿಂದಂ: **ಆದಿಪು,** ೧೩. ೭೭ ವ)

**ನೀಹಾರಾಗ** – ಹಿಮಬೆಟ್ಟ (ಎಲೆ ಪೊಣ್ಮಿತ್ತು ಮುರಾರಿಗೆ ಆಂತರಿಚಮೂ ಭಂಭಾರವಂ ಭಾರವಂ ನೆಲಕಂ ಪಿಂಗಿಸಿ ಕೀರ್ತಿಯಿಂದಿಟೆಸಿ ನೀಹಾರಾಗಮಂ: **ಜಗನ್ನಾವಿ,** ೧೫. ೧೬)

**ನೀಳ್** – ಅಗಲವಾಗು ಮುಚೆದ ಎಳಮೀಸೆ ನೀಳ್ದ ನಗೆಗಣ್ ಪೊಗರಾಂತ ಮೊಗಂ: **ರಾಜಶೇವಿ,** ೧೨. ೪೫); ಚಾಚು; ಹರಡು

**ನೀಳ** – ನೀಲ, ನವರತ್ನಗಳಲ್ಲಿ ಒಂದು (ನೀಳದ ಕಂಠಿಕೆಯ ಶುಂಡಾಳಶಿರೋಮಣಿಗೆ ಕಟ್ಟಿದಂತಿರೆ ಚೆಲ್ವಂ ಪಾಳಿಸುತಿರ್ದುದು: **ಪಾರ್ಶ್ವನಾಪು,** ೪. ೧೨೧); ದೀರ್ಘವಾಗಿರುವುದು (ತೋಳ ನೀಳದ ಕೆಂದಳಿರಿಂದಂ ಸಂದಣಿಸಿರ್ದ ಮದಾಳಿಯಿಂದೋಳದಿಂ: **ಪಂಪಭಾ,** ೧. ೫೮ ರಗಳೆ); ಎತ್ತರ (ಮುಗಿಲಂ ಮುಟ್ಟಿದುದಱ ನೀಳಮಂ ಮಕ್ಕಳ್ಪೆತ್ತಳ ಮದುವೆಯಂ .. .. ಬೆಸಗೊಂಬವರ ಬೆಳ್ಪನದಂತೆ: **ಧರ್ಮಾಮೃ,** ೨. ೮೪ ವ)

**ನೀಳಂ** – ನಿಡಿದಾದ, ದೀರ್ಘ (ದೆಸೆಗಳ್ ಪೆರ್ಚದೆ ಮೊಟ್ಟನಾದುವು ಅಗಲಕ್ಕೆಂಬನ್ನೆಗಂ ನೀಳಮಾಗಸದೊಳ್ ಕಾಳಸೆಗೊಂಡುದೆಂಬಿನಂ: **ಆದಿಪು,** ೧೫. ೫೦)

**ನೀಳಗಳ** – ನವಿಲು (ನೀಳಗಳಕಂಠ ತಮಾಳನೀಳ ನೀರದ ಪ್ರಸರವಿಭಾಸಿಯಾದುದು: **ಪಂಪಭಾ,** ೭. ೨೨)

**ನೀಳಚ್ಛವಿ** – ಕರಿದು ಕಾಂತಿ [ಪಿರಿದುಂ ಬನ್ನದ ಕರ್ಪೆಸೆದುದು ತೊಱೆಗಿನ್ನುಂ ಹರಗಳ ತಮಾಳನೀಳಚ್ಛವಿಯಂ: **ಪಂಪಭಾ,** ೫. ೫೪)

**ನೀಳನಗ** – ಕಪ್ಪು ಬೆಟ್ಟ ನೀಳನಗಮೆನಿಸಿ ಕಾಂಚನಶೈಳಂ ಮೊದಲಲ್ಲಿ ಜಿನಮತಪ್ರಭೆಯಿಂದಂ ಕೈಳಾಸಮೆನಿಸಿತು: **ಪಾರ್ಶ್ವನಾಪು,** ೧೪. ೮೩)

**ನೀಳಾಂಬರ** – ಬಲರಾಮ (ಎಂದ ನೀಳಾಂಬರನುಕ್ತಿಯಿಂ ಪೀತಾಂಬರಂ ವಿಗತವಿಷಾದನಾಗಿ: **ಕರ್ಣನೇಮಿ,** ೧೩. ೧೦ ವ)

**ನೀಳಾಭ್ರ** – ಕಪ್ಪು ಮೋಡಗಳು (ದೆಸೆಗೆತ್ತಂ ಗಜಱುತ್ತುಮಿರ್ಪ ಪುಲಿಯಿಂ ನೀಳಾಭ್ರಮಂ ದಂತಿಗೆತ್ತು ಸಿಡಿಲ್ದು ಆಗಸಕೆ ಎಯ್ದೆ ಪಾಯ್ವ ಪಲವುಂ ಸಿಂಗಂಗಳಿಂದೆತ್ತಗುರ್ವಿಸಿ: **ಪಂಪಭಾ,** ೭. ೨೬)

**ನೀಳಾಳಕ** – ಕಪ್ಪು ಕೂದಲು (ತಾಳದ ಲಯಮಂ ನಿಱೆ ನೀಳಾಳಮಾರದ ಪೊದಳ್ದ ಮುತ್ತೆಂಬಿವು ಮುಂ ಮೇಳಿಸಿ: **ಆದಿಪು,** ೯. ೨೪)

**ನೀಳೇಂದೀವರ** – ಕನ್ನೈದಿಲೆ (ವೀರಲಕ್ಷ್ಮೀಕರ್ಣಪೂರ ನೀಳೇಂದೀವರಶ್ಯಾಮಳಮುಮಪ್ಪ ಸೌನಂದಕಮೆಂಬ ಖಡ್ಗರತ್ನಮುಂ: **ಆದಿಪು,** ೧೧. ೩ ವ)

**ನೀಳ್ಕು** – ನಿಲುಕು, ಎಟುಕಿಸು (ನಿಡುದೋಳ್ ನೀಳ್ದುವು ನೀಳ್ಕಲುದ್ಧತ ಸಿತಚ್ಛತ್ರಂಗಳಂ : **ಮಲ್ಲಿನಾಪು,** ೪. ೧೩೯)

**ನೀಳ್ಪು** – ಉದ್ದ, ಎತ್ತರ (ಕುರುಳ ಬಂಬಲಂ ಪುಷ್ಪವಿಭ್ರಮಂ ನಯನಲೀಲೆಯಂ ನೀಳ್ಪು ತೋಳ್ದೊಂಗಲಂದಮಂ ನೆಱೆಯೆ: **ಆದಿಪು,** ೧೦. ೨೭); ವಿಸ್ತಾರ (ನೀಳ್ಪಂ ಬೆಳ್ಪುಮಂ ತಾಳ್ದಿ ಪರವನಿತೆಯರ ದೆಸೆಗೆ ಕಿಸುಗಣ್ಚಿದಂತೆ ಕಿಸುಸೆರೆವರಿದು ಸೊಗಯಿಸುವ ಶೌಚಾಂಜನೇಯನ ಕಣ್ಗಳ್: **ಪಂಪಭಾ,** ೨. ೩೯ ವ)

**ನೀಱ** – ಚೆಲುವ (ನೀಱರ್ ಪಲರಲಘುಭುಜರ್ ಭೂಪಪುತ್ರರ್ಕಳೆಲ್ಲಂ ಸನ್ನೂತರ್ ಕೂಡೆ ಬಂದೊಂದಿರೆ: **ಕರ್ಣನೇಮಿ,** ೫. ೨); ಪ್ರಿಯಕರ (ಕೆಲನಂ ನೋೞ್ಪಂತೆ ನೀಱರಂ ನೋಡುವುದುಂ ಮೊಲೆಗೆಲನಂ ತೋಱುವುದುಂ ಕುಲಟೆಯರಿರ್ಗಿವೆ ಮೊದಲ ವಿದ್ಯೆ: **ಸಮಯಪ,** ೫. ೫೨)

**ನೀಱೆ** – ಚೆಲುವೆ (ನೀಱೆಯರ ನಿಡಿಯ ಕಡೆಗಣ್ಣೀಱೆಂದೆರ್ದೆ ಬಿರಿಯೆ: **ಲೀಲಾವತಿ,** ೪. ೪೬); ಪ್ರಿಯತಮೆ (ಪೊಕ್ಕ ಪೂಗೊಳಂ ಪಾಡಱಿದ್ಯದೆ ಕಾಯ್ದು ಕುದಿಗೊಂಡುದು .. .. ನೀಱೆಯ ಮೈಯ ಬೆಂಕಿಯಿಂ: **ಕಬ್ಬಿಗಕಾ,** ೨೪೬)

**ನೀಱೇಱು** – ಲಾವಣ್ಯವನ್ನು ಹೊಂದು (ನೀಱೆಯರುನ್ನತ ಸ್ತನಭರಂಗಳ ಭಾರಮನವುಂಕಿ ಸೋಂಕೆ ನೀಱೇಱಿದರ್: **ಪಂಪರಾ,** ೫. ೬)

**ನೀೞ್ಕರಿಸು** – ತಿರಸ್ಕರಿಸು (ಮಧುಪಂಗಳ್ ತಮ್ಮಱಿಕೆಯೆ ಚೌತಮಾಗಿರೆ ನೀೞ್ಕರಿಸಿದುವು ಉಂತೆ ಚಂಪಕಕ್ಕೆಱುವುದೇ: **ಆದಿಪು,** ೧೧. ೧೧೯); ಉದ್ದಮಾಡು (ದುರಾಶಾಪಾಶಮಂ ನೀೞ್ಕರಿಸಿ ನಿಜಭುಜದ್ವಂದ್ವಮಂ ನೀಡಿ .. .. ಅಚಲ ಯೋಗಾನ್ವಿತರ್ ಕಣ್ಗೆವಂದರ್: **ಶಬರಶಂ,** ೨. ೭೧); ನಿಧಾನಮಾಡು (ಸಮುಚಿತಧನಮಂ ನೀೞ್ಕರಿಸದಿತ್ತು ಚರನಂ ಬೀೞ್ಕೊಡೆ: **ಅನಂತಪು,** ೧೩. ೫೨)

**ನುಂಗುವ ಪಾವು** – ಚಂದ್ರನನ್ನು ನುಂಗುವ ರಾಹು (ನುಂಗುವ ಪಾವಿನ ಪಲ್ಲ ನಂಜುಗಿೞ್ಚಿಡರ್ದ ಅಮೃತಾಂಶು ಮಂಡಳಮದೇಂ ಸುಡದೇ: **ನೇಮಿನಾಪು,** ೪. ೮೨)

**ನುಗುಳ್** – ನುಸುಳು (ಗಂಗಾವೈಜಯಂತೀ ಸಿಂಧುದ್ವಾರಂಗಳಂ ನಿಜವಿಜಯವರೂಥಮೊಂದಱೊಳೆ ನುಗುಳ್ದು ಲವಣಜಲಧಿಯಂ ಪೊಕ್ಕು: **ಆದಿಪು,** ೧೪. ೫೩ ವ)

**ನುಚ್ಚುನುಱೆ** – ಚೂರುಚೂರು (ಬಲ್ಲಿದರಂ ಕಲ್ಲಂ ತಾಗಿದ ಪುಳ್ಳಿಯಂತೆ ನುಚ್ಚುನುಱೆ ಮಾಡಿ: **ಧರ್ಮಾಮೃ,** ೭. ೫೪ ವ)

**ನುಚ್ಚುನೂಱು** – ನುಚ್ಚುನುಱೆ (ವಜ್ರಂ ತಾಗಿದ ಗಿರಿಯಂತೆ ನುಚ್ಚುನೂಱಕ್ಕುಂ: **ಧರ್ಮಾಮೃ,** ೧೪. ೭೪ ವ)

**ನುಡಿವಲ್ಮೆ** – [ನುಡಿ+ಬಲ್ಮೆ] ಮಾತಿನ ಚಾತುರ್ಯ, ಭಾಷಾಜ್ಞಾನ (ನುಡಿವಲ್ಮೆಯಲ್ತು ಅದೇಂ ಕಲ್ತೊಡನೆ ಓದುವುವಲ್ತೆ ಗಿಳಿಗಳುಂ ಪುರುಳಿಗಳುಂ: **ಕವಿರಾಮಾ,** ೧. ೧೦)

**ನುಡಿವಳಿ** – ಕೊಟ್ಟ ಮಾತು, ವಾಗ್ದಾನ, ಪ್ರತಿಜ್ಞೆ (ನುಡಿವಳಿಗೆ ನರನ ರಥಮಂ ಪಡುವು ಎಣ್ಗಾವುದುವರಂ ಸಿಡಿಲ್ವಿನಂ ಎಚ್ಚು ಅಚ್ಚುಡಿಯೆ: **ಪಂಪಭಾ,** ೧೧. ೨೦)

**ನುಡಿವೆಣ್** – ನುಡಿಯ ಹೆಣ್ಣು, ಸರಸ್ವತಿ (ನುಡಿವೆಣ್ಣನಾಂತ ನಾಲ್ಮೊಗಂ ಇರದಚ್ಚದಾವರೆಯ ಚೆಂದಮಂ ಅಂದು ಒಳಕೆಯ್ದೆ ಬಂದು ನೆಟ್ಟಗೆ ಬಲವಕ್ಕದೊಳ್ ನೆಲಸಿ ಕಣ್ಗೆಸೆದಂ ಬಿದಿ ನಿಂದು ನೋೞ್ಪರಾ: **ಕಬ್ಬಿಗಕಾ,** ೧೨೮)

**ನುಣ್ಗಂಟು** – ಸೊಬಗಿನ ಸಿರಿ (ನಿನ್ನ ಮೆಯ್ಯ ನುಣ್ಗಂಟೊಡವುಟ್ಟೆ ಮಟ್ಟಮಿರೆ ಮೀಱುವರಾರೊ ಮನೋಜನಾಜ್ಞೆಯಂ: **ಮಲ್ಲಿನಾಪು,** ೭. ೪೭)

**ನುಣ್ಗರೆ** – ನುಣುಪಾದ ಕರೆ (ತೆಗೆಯೆ ಚಕೋರಿ ಕರ್ಚಿ ಶಶಿಮಂಡಲದಿಂದಮೆ ಕಿೞ್ತು ಬಿಟ್ಟ ರಶ್ಮಿಗಳೆಡೆಯಂತೆ ತೋಱಿದುದು ನುಣ್ಗಱೆ: **ಲೀಲಾವತಿ.** ೨. ೨೭)

**ನುಣ್ಗಱೆ** – ಕೋಮಲ ರೆಕ್ಕೆ (ನುಣ್ಗಱೆಯಿಲ್ಲದ ವಿಧುವಿಂ ತಣ್ಗದಿರ್ ಒಗೆದಂತೆ ವಿಮಳಮುಖಮಂಡಳದಿಂ ಕಣ್ಗೊಳಿಸೆ ದಂತಕಾಂತಿ ಪವಣ್ಗಳಿದುಳ್ಕಲೆ ಖಚರವರಂ ಇಂತೆಂದಂ: **ಶಾಂತೀಶ್ವಪು,** ೨. ೫೩)

**ನುಣ್ಚರ** – ಇನಿದನಿ (ಮೆಲ್ ನುಣ್ಚರಂಗೆಯ್ವ ಹಂಸ ರಥಾಂಗಗಳಿಂ ಇರ್ಪುವೆತ್ತ ಪುಳಿಲ್ದಾಣಂಗಳಿಂ .. .. ಶಿಪ್ರಾತಟನೀತಟಸ್ಥಲಿಗಳೊಳ್: **ಕಾದಂಬ,** ೮. ೬೦)

**ನುಣ್ಣವಿರ್** – [ನುಣ್+ನವಿರ್] ಮೃದುವಾದ ತುಪ್ಪುಳು (ಎಱಕೆಗಳಂ ಮೆಲ್ಲನೆ ಉರ್ಚುತ್ತೆ ನಿಂದು ಒಯ್ಯನೆ ಸಾರ್ದು ಆ ತ್ರೋಟಿಯಿಂದಂ ತೊಡೆದು ಗಱಿಗಳಂ ನುಣ್ಣವಿರ್ ಬಿರ್ಚಿ ಮೆಯ್ಯಂ ತೊನೆದು ಉದ್ದಂ ನೀಡಿ ಗೋಣಂ ನವ ದಿನಮುಖದೊಳ್ ಕುಕ್ಕುಟಂ ಕೂಗಿತಾಗಳ್: **ಶಾಂತೀಶ್ವಪು,** ೧೧. ೯೬)

**ನುಣ್ಣಿತಂವೇೞ್** – ನಯವಾಗಿ ಮಾತಾಡು (ಪೆರ್ಜೋಡೆಯಂತೆ ನುಣ್ಣಿತಂವೇೞ್ದುವಣುಗಾಳಂತೆ ದಾಯಂಬಡೆದುಂ ಮೇಳದಂಕದಂತೆ ಸುಱಿಯಲಾದುಂ: **ಪಂಪಭಾ,** ೬. ೭೨ ವ)

**ನುಣ್ಣಿತು** – ಮೃದು [ಮಾತು] (ದುರ್ಯೋಧನಂ ಬಂದಿಕಾಱನಂತೆ ಸೆಱಗೆಯ್ದುಂ ವ್ರಣವೈದ್ಯನಂತೆ ಕೊಡಸಾರಿಯಂ ಪಿಡಿದುಂ ಸೂಳೆಯಂತೆ ಕಟಿವು ಉಟಿವನಱಿದುಂ ರಸವಾದಿಯಂತೆ ಕಟ್ಟಿಯುಂ ಪೆರ್ಜೋಡೆಯಂತೆ ನುಣ್ಣಿತಂ ವೇೞ್ದು: **ಪಂಪಭಾ,** ೬. ೭೨ ವ)

**ನುಣ್ಣಿಸು** – ನುಣುಪುಮಾಡು (ತಾರಾಚಳಮಂ ಅಸದಳಂ ನುಣ್ಣಿಪಂತೆ ಒರ್ವಳ್ ಅತ್ಯುತ್ತಮ ದಿವ್ಯಾಕಾರೆ ಕುಳ್ಳಿರ್ದು ಅತನುಹರನ ಆರಾಧಿಸುತ್ತಿರ್ದಳಾಗಳ್: **ಕಾದಂಸಂ,** ೩. ೨೩)

**ನುಣ್ಣುಡಿ** – ನಯವಾದ ನುಡಿ (ರಾಗಮನೀವ ನುಣ್ಣುಡಿಗಳಿಂ ವನಪಾಲಕನಕ್ಷಕಂ ವಸಂತಾಗಮನಮಂ ಸಮಂತಱಿಯೆ ಬಿನ್ನವಿಸುತ್ತಿರೆ: ಕುಸುಮಾಕಾ, ೫. ೪೬)

**ನುಣ್ಪು** – ನಯ, ನುಣುಪು (ನುಡಿ ಕಡುನುಂಪಂ ಆನೆ ರಾಗದೊಳೆ ಮನಂ ಕಡೆಗಣ್ಗೊತ್ತರ್ದಿರೆ ಜವ್ವನಂ ಅಡಿಯಿಟ್ಟುದು: **ರಾಜಶೇವಿ,** ೪. ೮೦); ಚೆಲುವು (ಅಸುಕೆಯ ಕೆಂಪು ಪಾದರಿಯ ಕಂಪು ಪಯೋಜಲಸತ್ಸರೋವರಪ್ರಸರದ ತಣ್ಪು ಸಂಪಗೆಯ ನುಣ್ಪು .. .. ಸುತ್ತಲುಂ: **ಸುಕುಮಾಚ,** ೯. ೪೮); ಕಾಂತಿ (ಗಲ್ಲಂ ನುಣ್ಪು ಕೈಮಿಕ್ಕು ಕನ್ನಡಿಯಂ ಪೋಲ್ತಿರೆ ಬಂದರಲ್ಲಿ ಕೆಲಬರ್ ಚೆಲ್ವಪ್ಪಿನಂ ಚೆನ್ನೆಯರ್: **ಕಬ್ಬಿಗಕಾ,** ೭೪)

**ನುಣ್ಪಳಿ** – ಹದಗೆಡು (ಈ ನುಣ್ಪಳಿಯಿಉಣಸಂ ಕಂಡು ಮನ್ಯುಕೆತ್ತು ಸುರಿಸದೆ ಇನಿಸುಂ ಕೆಟ್ಟುವೋಗಿ: **ಹರಿವಂಶ,** ೧೪. ೩೩ ವ)

**ನುಣ್ಬಸೆ** – ಮಿದುವಾದ ನೆಣ (ಮತ್ತೊಂದು ತಾಂ ಪೋಗೆ ನುಣ್ಬಸೆಯಂ ಮುಟ್ಟದೆ ಮತ್ತದೊಂದು ಕಣೆ ಕಲ್ಲಂ ತಾಗಿದಂತಾಗೆ: **ನೇಮಿನಾಪು,** ೪. ೧೪೬)

**ನುಣ್ಮಱಲ್** – ನುಣುಪಾದ ಮರಳು (ಪುದಿದಿರೆ ಪುಷ್ಪಪಾಂಸುಪಟಲಂ ಕಡುಮೆಲ್ಪಳವಟ್ಟು ಲ್ನುಣ್ಮಱಲ್ ಕೆದಱಿದ ಕೇತಕೀಕುಸುಮರೇಣುವಿನಂತಿರೆ .. .. ನಿತಂಬಿನಿ ನೆಲಂ ತವದಂತಿರೆ ಗುಜ್ಜುಮೆಟ್ಟಿದಳ್: **ಮಲ್ಲಿನಾಪು,** ೫. ೭೮)

**ನುತ** – ಹೊಗಳಲ್ಪಟ್ಟ (ನುತ ಭವ್ಯಾನೀಕ ನೀಲಾಂಬುರುಹಮಲರೆ ಮಿಥ್ಯಾತ್ವಸೂರ್ಯಾಂಶು ಕುಂದಲ್ .. .. ವಿಮಳತೆಯಂ ಮಾೞ್ಕೆ ವಾಗ್ಜ್ಯೋತಿಯಿಂದಂ: **ಧರ್ಮಾಮೃ,** ೧. ೪); ಪ್ರಸಿದ್ಧವಾದ (ಗಿರಿಜಾಕಲ್ಯಾಣಂ ಇಂತೀ ನುತಕೃತಿಯ ಪೆಸರ್: **ಗಿರಿಜಾಕ,** ೧. ೩೩)

**ನುತಿ** – [ಸ್ತುತಿ] ಹೊಗಳಿಕೆ (ನೀರಜದ ರಜದ ಪೊರೆಪು ಆ ನೀರೇಜದ ನೀರ ಪೊರೆಪು ಪೊರೆವೊರೆ ನೀಂ ಸಂಸಾರಕ್ಕೆ

ನಿನಗಂ ಈ ಸಂಸಾರಂ ಪೊರೆಪೊರೆ ಪರಾತ್ಮಹಿತಿನುತಚರಿತಾ: **ಶಾಂತಿಪು,** ೧೧. ೯೬)

**ನುತ್ತ –** ಹೊರದೂಡಿದ (ನುತ್ತಂ ನುನ್ನಂ: **ಅಭಿಧಾವ,** ೨. ೧. ೪೦)

**ನುನ್ನಂ –** ಹೊರದೂಡಿದ (ನುತ್ತಂ ನುನ್ನಂ: **ಅಭಿಧಾವ,** ೨. ೧. ೪೦)

**ನುರ್ಗಾಡು –** ನುಗ್ಗಾಡು, ಚೂರುಮಾಡು (ತೋಡುವೆಂ ಒರ್ವನ ಒಳ್ಗರುಳಂ ಉರ್ವಿಗೆ ನೆತ್ತರನೆತ್ತಿ ಪೀರ್ದು ವಿರ್ದಾಡುವೆಂ ಒರ್ವನ ಊರುಗಳಂ ಎನ್ನ ಗದಾಶನಿಘಾತದಿಂದೆ ನುರ್ಗಾಡುವೆಂ: **ಪಂಪಭಾ,** ೯. ೨೪)

**ನುರ್ಗುನುಜೆ –** ಪುಡಿಪುಡಿ, ಚುರುಚೂರು (ತೇರ ತೆಕ್ಕೆಗಳ್ ಕಲ್ಲ ಗಾಣದ ಕಣೆಯ ಬಾಯ್ಗೆ ಬಿಟ್ಟ ಕಳಿಕೆಯ ಚೆಂಡಿನಂತೆ ನುರ್ಗುನುಜೆಯಾಗಿರ್ದುವು: **ಅನಂತಪು,** ೧೪. ೭ ವ)

**ನುರ್ಗೊತ್ತು –** ಬಲವಾಗಿ ಒತ್ತು; ಸದೆಬಡಿ (ಕೌರವೇಶ್ವರನ ಊರುದ್ವಯಮಂ ಗದಾಪರಿಘದಿಂ ನುರ್ಗೊತ್ತುಗುಂ: **ಗದಾಯು,** ೫. ೫೮)

**ನುಲಿ –** ತಿರಿಚು (ನುಲಿದ ಕಾಗೆಯ ಕೆನ್ನೆತ್ತರನುಂಡ ನೆಲನೆಲ್ಲಂ ಕೆಮ್ಮಣ್ಣ ನೆಲನಾಗಿ: **ನೇಮಿನಾಪು,** ೮. ೨೨ ವ)

**ನುಸುಳ್ –** ನುಣುಚಿಕೊಳ್ಳು (ಸಪ್ತಕಕ್ಷ್ಯಾಂತರಂಗಳ ಕಾಂಚನಮಯ ತೋರಣಂಗಳಂ ನುಸುಳ್ದು .. .. ಎಯ್ದಿವರ್ಪಾಗಳ್: **ಕಾದಂಸಂ,** ೫. ೧೫ ವ)

**ನುಳಿ –** [ನುಲಿ] ಬಲೆ (ನುಳಿಯುಮಂ ಕುಳಿಯುಮಂ ಮೆಳೆಯುಮಂ .. .. ಕಳೆದು ಪೋಗಿ: **ಲೀಲಾವತಿ,** ೬. ೧೬ ವ)

**ನುಜೆ –** ಪುಡಿಯಾಗು (ನುಜೆ–ಸಂಚೂರ್ಣೇ: **ಶಬ್ದಮದ,** ಧಾ ೮೭೭)

**ನುಜೆವೋಗು –** ನುರಿತಿರು, ಕಷ್ಟ ಅನುಭವಿಸಿರು (ಮದನಹತಕನಿಂದಂ ನೆಜೆ ಮುನ್ ನುಜೆವೋದಕ್ಕಂ ತಾಂ ಪೇಟಿಜೆಯಳೆ ಮುನ್ನಮೆ ಮದೀಯ ಧೈರ್ಯಚ್ಯುತಿಯಂ: **ಕಾದಂಸಂ,** ೫. ೩೩)

**ನುಟ್ಗು –** ಪುಡಿಮಾಡು (ಶೇಷಕಂಠ ಕದಳ ಕಠಿನಾಸ್ತಿ ನುಟ್ಗಿದುದೊ ಗೋತ್ರನಗಂ ಪಿಳಿಗಿತ್ತೊ .. .. ಎನಲ್ ವಿಘೂರ್ಣಿಸಿದುದು ಇರ್ಬಲದೊಳ್ ಸಮರಾನಕ ಸ್ವನಂ: **ಪಂಪರಾ,** ೧೩. ೩೫)

**ನೂಂಕು –** ಮುನ್ನುಗ್ಗು (ರಾಜಕಂಠೀರವಂ ತಾನೆನೆ ವೀರಕ್ಷತ್ರಿಯಚೂಡಾಮಣಿ ಭರತನೃಪಂ ನೂಂಕಲುದ್ಯುಕ್ತನಾದಂ: **ಆದಿಪು,** ೧೪. ೯೮)

**ನೂಂಕುದಟೆ –** ನೂಕಲು ಬಳಸುವ ಮರದ ದಿಮ್ಮಿ (ಕಡಸಿರಗೆಯ್ದು ನೂಂಕುದಟೆಯಿಕ್ಕುವ ಬಲ್ದಸಿ ಭೀತಿಯಿಂ ಮನಕ್ಕೊಡರಿಸೆ: **ಚಂದ್ರಪ್ರಪು,** ೫. ೧೦೫)

**ನೂಕೆ ಪಾಸು –** [ಪುಣ್ಯವಂತನಿಗೆ] ನೂಕಿದಲ್ಲಿ ಹಾಸಿಗೆ [ಎಂಬ ಗಾದೆಮಾತಿನಂತೆ] (ಅಂತು ಪುಣ್ಯಭಾಜನಂಗೆ ನೂಕೆ ಪಾಸೆಂಬಂತೆ: **ಆದಿಪು,** ೩. ೭೯ ವ)

**ನೂತ –** ನುತ (ಅದೇಂ ತಾನಾಯ್ತೊ ನೂತಕ್ಷಮಾಶೀಳಂ ಕೇಸರಿಗಂ ನಿರೀಕ್ಷಣಸುಖಶ್ರೀಪಂಜರಂ ಕುಂಜರಂ: **ನೇಮಿನಾಪು,** ೫. ೯೦)

**ನೂತನ –** ಹೊಸತು (ನವ್ಯಂ ನೂತ್ನಂ ನೂತನಂ ಅಭಿನವಂ ಎನಿಪ್ಪುದು ಅಜೆಗೆ ನವೀನಂ: **ಅಭಿಧಾವ,** ೨. ೧. ೪೬)

**ನೂತನೆ –** ಹೊಸ ಹರೆಯದವಳು (ಎಸೆವಿಡಿಗೆಯ ಪೊಚೆಲ್ವೆಗೆ ನುಣ್ಪೊಡೆಯ ನೂತನೆಗೆ : **ಗಿರಿಜಾಕ,** ೩. ೯೧ ವ)

**ನೂತೆ –** ಪ್ರಸಿದ್ಧಳಾದವಳು (ಆತನ ವಧು ನೂತೆ ಯಶೋನ್ವಿತೆ ಆಕೆಗಾ ದವಿಜೆ ತನೂದ್ಭೂತೆ ಎನಿಸಿರ್ದಳ್: **ಕರ್ಣನೇಮಿ,** ೧೪. ೩೫)

**ನೂತ್ನ –** ನೂತನ (ನವ್ಯಂ ನೂತ್ನಂ ನೂತನಂ ಅಭಿನವಂ ಎನಿಪ್ಪುದು ಅಜೆಗೆ ನವೀನಂ: **ಅಭಿಧಾವ,** ೨. ೧. ೪೬); ಸುಂದರವಾದ (ಪೊಱಪೊಣ್ಮಿದುದು ಅತಿಶಯ ಸುಕಥಾನೂತ್ನರತ್ನರಶ್ಮಿಕಳಾಪಂ: **ಸುಕುಮಾಚ,** ೧. ೬೩)

**ನೂನ –** ಕೊರತೆ (ಪಟೆಯ ಸೀರೆಯಂತೆ ಗುಣದೊಳ್ ನೂನಮಾಗದೆ: **ಧರ್ಮಾಮೃ,** ೫. ೬೪ ವ)

**ನೂನಂ –** ನಿಶ್ಚಿತವಾಗಿ (ನೂನಂ ಮನಮಿಕ್ಕಿ ಪಸಿದು ಸಾಯದೆ ನೀಮೆತ್ತಾನುಂ ಪಡೆವೊಡೆ ಪಿಶಿತಮಂ ಏನಾನಮಂ ಅಱಸಿ ತಿನ್ನಿಂ ಎನಗಂ ತನ್ನಿಂ: **ಪಂಚತಂತ್ರ,** ೨೦೯)

**ನೂಪುರ –** ಕಾಲ್ಕಡಗ (ಪೋ ಬಿಡು ಕಟಿಸೂತ್ರಮಂ ತೊಡೆಯ ಬಿಣ್ಪು ಪದಾಂಬುರುಹಕ್ಕೆ ತಿಣ್ಣಂ ಎಂತು ಉಡಿಸುವುದಕ್ಕ ನೂಪುರಮಂ ಈ ತೊಡವು ಏವುದೋ ರೂಪ ಸಾಲದೇ: **ಪಂಪಭಾ,** ೩. ೪೬)

**ನೂರ್ಛಾಸಿರ –** ನೂರು ಸಾವಿರ, ಒಂದು ಲಕ್ಷ (ನೂಱ ನೂರ್ಛಾಸಿರಮಂ ವಿಗುರ್ವಿಸಿ ವಿಮಾನದ ಯಾನದ ಚೆಲ್ವಮಂ ಅವಗಯಿಸಿ: **ಶಾಂತಿಪು,** ೧೦. ೨)

**ನೂರ್ಮಡಿ –** ನೂರುಪಟ್ಟು (ತನ್ನ ತೊಡಂಕದು ಎಯ್ದೆ ನೂರ್ಮಡಿ ಮನದೊಳ್ ಪಳಂಚಲೆಯೆ ಡಕ್ಕೆಯೊಳ್ ಅಟ್ಟಜವಾಗೆ ಆಡಿದಳ್: **ಪಂಪಭಾ,** ೪. ೯೦)

**ನೂರ್ಮಡಿಸು –** ನೂರರಷ್ಟಾಗು (ಕಟ್ಟಿದಳ್ ರತ್ನನೂಪುರಮಂ ತತ್ಪದಕಾಂತಿ ನೂರ್ಮಡಿಪಿನಂ ಮಂಜೀರಕಾಂತಿಯಿಂ: **ಜಗನ್ನಾವಿ,** ೧೦. ೧೧೦)

**ನೂರ್ಮೆ –** ನೂರು ಬಾರಿ (ನೂರ್ಮೆ ಪಶು ಕಱೆವುದಂ ತಾನೂರ್ಮೆಯೆ ಕಱೆವೆರ್ಮೆಯಲ್ಲದಟೆಯೆರ್ಮೆಗಳ್ ಈ ಎರ್ಮೆಗಳೊಳಗಿಲ್ಲೆನಿಸಿರ್ದೆರ್ಮೆಯ ಪಿಂಡುಗಳಿನೊಪ್ಪುಗುಂ ಕೆಲವೆಡೆಯೊಳ್: **ಕಾವ್ಯಾವಲೋ,** ೩೫೦)

**ನೂಲ್ –** ದಾರ (ಬಿಳಿಯ ತಾವರೆಯೆಳಗಾವಿನಸಿಯ ನೂಲೊಳ್ ಕೋದ ತೋರಮಲ್ಲಿಗೆಯ ಬಿರಿಮುಗುಳ ಸರಿಗೆಯುಮಂ: **ಪಂಪಭಾ,** ೫. ೬ ವ); ಉಡಿದಾರ, ಒಡ್ಯಾಣ (ಉಡೆ ಜೋಲಲ್ ನೂಲ್ ಸಡಿಲಲ್ ಮುಡಿ ಪರೆಯಲ್ .. .. ನಡೆತಂದಲ್ ಕಾಮಯೋಗಿನೀವಿಭ್ರಮದಿಂದಂ: **ಕಾದಂಬ,** ೩. ೨೭); ಬಡಗಿಗಳು ಮಾಡುವ ಗುರುತು (ಗೋಲಾಂಗೂಲಂ ಬಂದು, ಕರಗಸಿಗರೊಂದುಭಾಗಂಬರಂ ಸೀಟ್ಟು ನೂಲ ತಲೆಯೊಳ್ ಕೀಲಂ ಬೆಟ್ಟಿರ್ದ ಮರನಂ ಕಂಡದಱ ಮೇಲೆ ಕುಳ್ಳಿರ್ದು: **ಪಂಚತಂತ್ರ,** ೮೨ ವ)

**ನೂಲತೊಂಗಲ್ –** ನೂಲ್ತೊಂಗಲ್, ಗೆಜ್ಜೆಗಳಿರುವ ಕಟಿಸೂತ್ರ (ಒದವಿದ ನೂಲ ತೊಂಗಲುಲಿಯಿಲ್ಲದೆ ಪೀನನಿತಂಬಮಾರಮಿಲ್ಲದೆ ಕುಚಮಂಡಲಂ ಪಲವುಮಂದದ ಚೆಂದದ ಚಿನ್ನಪೂಗಳಿಲ್ಲದೆ: **ಆದಿಪು,** ೩. ೪೮)

**ನೂಲತೊಡವು –** ನೂಲಿನ ಆಭರಣ (ರತ್ನದ ತೊಡವಿನ ತನೂಲ ತೊಡವಿನ, ಸೊಡರಿನ ಕಾಟ್ಕಿಚ್ಚಿನ ರಕ್ಷೆಯಂ ತರಿದು ಮೇಳಮಕ್ಕುಂ: **ಧರ್ಮಾಮೃ,** ೧೧. ೧೨೮ ವ)

**ನೂಲತೋಡಾಗು –** ಹಾಸುಹೊಕ್ಕುಗಳಂತೆ ಒಂದಾಗು; ಹರಿದ ನೂಲು ಸೇರಿಕೊಳ್ಳುವುದು (ಎನಗೆ ಎಕ್ಕಬಾಗೆ ನೋಡೀಗಳ್ ಈ ಇಳಾಲತಾಂಗಿ ಪುದುವಲ್ಲಳ್ ಅದೆಂತೆನೆ ಮುನ್ನ ನೂಲ

ತೋಡಾಗದೆ ಕೆಟ್ಟು ಪೋದವರಂ ಇಂ ಮಗುಬ್ಬುಂ ನಿಜೆಪಂತು ಬೆಳ್ಳನೇ: **ಪಂಪಭಾ,** ೯. ೪೬)

**ನೂಲಸೆಜ್ಜೆ –** ಹತ್ತಿಯ ಹಾಸಿಗೆ (ಗಗನದ ನಡುವಿರ್ಪುದು ನೂಲ ಸೆಜ್ಜೆಯಂ ನೇಜಿದವೋಲ್: **ಪಾರ್ಶ್ವನಾಪು,** ೧. ೯೮)

**ನೂಲಿಕ್ಕು –** ಜನಿವಾರ ಹಾಕು, ಮುಂಜಿ ಮಾಡು (ನೂಲಿಕ್ಕುವೊಡೆ ಉಪವಾಸಮಂ ಆಲಸ್ಯದಿಂ ಮಾಡುವರ್: **ಸಮಯಪ,** ೭. ೮)

**ನೂಲೆಟಿ –** ದಾರದ ಎಳೆ (ಎರಡರ್ಥಕ್ಕೆ; ಎಟಿಯೆಂದು ನೂಲೆಟಿಯೊಳಂ ಬರಸೆಳೆವುದಱೊಳ್ ಱಟಿಂ: **ಶಬ್ದಮದ,** ೩೩ ವೃತ್ತಿ ೧೩೫)

**ನೂಲ್ದೆಗೆ –** ದಾರವನ್ನು ಹಿಡಿದು ಸಮಮಾಡು (ಪಾರ್ಶ್ವಂಗಳಿಂ ನೂಲ್ದೆಗೆದತ್ತು ಎಂಬಂತೆ .. .. ಬಂದುದು ಇಂದ್ರಾಯುಧಾಶ್ವಂ: **ಕಾದಂಬ,** ೩. ೯); ಗೆರೆಗಳನ್ನು ಬರೆ (ಪಾರ್ಶ್ವಂಗಳಿಂ ನೂಲ್ದೆಗೆದತ್ತೆಂಬಂತೆ ಪಾಶ್ಚಾತ್ಯದೆ ಸವಡಿಸಿತ್ತೆಂಬಂತೆ ಉರುದ್ಗ್ರೀವದಿಂ ಪರ್ವುಗೆವೆತ್ತಂತೆ ಅಂಗಕಾಂತಿಪ್ರಕರದೆ .. .. ಬಂದುದು ಇಂದ್ರಾಯುಧಾಶ್ವಂ: **ಕಾದಂಬ,** ೩. ೯)

**ನೂಲ್ವಾಸ –** ದಾರದ ಕಟ್ಟು (ತಳದಿಂದವುಂಕಿ ತೊಡೆದುದ್ದಳಿಕೆಯ ನೂಲ್ವಾಸಮೆಸೆಯೆ: **ಮಲ್ಲಿನಾಪು,** ೮. ೧೮)

**ನೂಲ್ವೊಯ್ –** ನೂಲ್ದೆಗೆ ದೇವಸೇನೆ ನಡೆದತ್ತು ಓರಂತೆ ನೂಲ್ವೊಯ್ದವೋಲ್: **ಅನಂತಪು,** ೫. ೪೪)

**ನೂಸೆ ಪಾಸು –** 'ನೂಕಿದಲ್ಲಿ ಹಾಸಿಗೆ' (ಮನೆಯಿಂದಂ ಮನಗೆಂದು ಪೋಪ ತೆಱದಿಂ ಮೇಣ್ ನೂಸೆ ಪಾಸೆಂಬ ಪಾಂಗಿಂದನಿತುಂ ಯುಗಂ ತಳರ್ದು: **ಆದಿಪು,** ೫. ೭೦)

**ನೂಳ್ –** ಪುಡಿಮಾಡು (ಮಾಸಾಳ್ಗಳ್ ಕೈದೀವಿಗೆಯೊಳಱಿಸಿ ನೆಲನಂ ನೂಳ್ದು ತೂಱೆ ಕೇಱೆ: **ತ್ರಿಷಷ್ಟಿಪು,** ೨೩. ೧೦ ವ)

**ನೂಳದು –** ಅತಿಶಯವಾದುದು, ಹಿರಿದು (ನೂಳದೆಂದು ಪಿರಿದು: **ಶಬ್ದಮದ,** ಪ್ರಸಾ ೧೩೦)

**ನೂಱು –** ಒಂದು ಸಂಖ್ಯೆ, ಹತ್ತರಷ್ಟು ಹತ್ತು (ದುರ್ಜನಂಗೆ ನೂಱು ಲೇಸಂ ಮಾಡಿದೊಡಂ ಕಿಡುವುದು: **ಪಂಚತಂತ್ರ,** ೨೦೬, ಶ್ಲೋಕ ೮೯ ಟೀಕೆ)

**ನೃಕೀಟ –** ಮಾನವಕೀಟ, ಕ್ಷುದ್ರ ಮನುಷ್ಯ (ದಿವ್ಯವಚನಮಂ ಎನ್ನೊಳ್ ನುಡಿಗುಮೆ ನೃಕೀಟನೊಳ್ ನರಸಿಂಹಂ: **ಜಗನ್ನಾವಿ,** ೫. ೭೪)

**ನೃಗತಿ –** ಮನುಷ್ಯಗತಿ (ಚೈರಂತನಕ್ರಮದಿಂದೆ ಆ ಮಣಲೆಲ್ಲಮಂ ಮಗುಳೆ ಪಾರಾವಾರದೊಳ್ ಪೊಯ್ದು ಮತ್ತಮದಂ ಸೋದಿಸಿ ಕಾಣ್ಬವೋಲ್ ನೃಗತಿ ನೋಡಲ್ ನಾಡೆಯುಂ ದುರ್ಲಭಂ: **ಸುಕುಮಾಚ,** ೫. ೩೩); [ಜೈನ] ಚತುರ್ಗತಿಗಳಲ್ಲಿ ಒಂದು ನೃಗತಿ ನೋಡಲ್ ನಾಡೆಯುಂ ದುರ್ಲಭಂ: **ಸುಕುಮಾಚ,** ೫. ೩೩)

**ನೃತ್ತ –** ಗತಿಪ್ರಧಾನ ನೃತ್ಯ (ಎಲ್ಲಿತ್ತೊ ಗೀತವಾದ್ಯಂ ಸಲ್ಲಲಿತ ವಧೂಜನ ಪ್ರವೃತ್ತಂ ನೃತ್ತಂ: **ಗದಾಯು,** ೫. ४३)

**ನೃತ್ಯ –** ಅಭಿನಯಸಹಿತವಾದ ನರ್ತನ (ಶಕ್ರನೃತ್ಯದೊಳೊಡಂಬಡೆ ನರ್ತಿಸುವಲ್ಲಿ ಜತ್ತವಟ್ಟದ ಮಣಿಯಂತಿದೇಂ ಪದುಳಮಾದುದೊ ದಿವ್ಯವರೂಥಕದಂಬಕಂ: **ಆದಿಪು,** ೭. ೧೨೫)

**ನೃಪ –** ಪ್ರಜಾಪಾಲಕ, ರಾಜ (ಮಂತ್ರಪೂತಾಂಗಮಂ ನೃಪನೆಯ್ದಿದಂ ಉದ್ಯಚ್ಛೃಂಗಂ ಆ ಶತಶೃಂಗಮಂ: **ಪಂಪಭಾ,** ೧. ೧೧೫)

**ನೃಪತಿ –** ನೃಪ, ರಾಜ (ನೃಪತೀ ಪರೋಪಕಾರೀ .. .. ರಿಪುವರ್ಗಮನಲೆದು ಗೆಲ್ವೆಯಾಗಾಹವದೊಳ್: **ಕವಿರಾಮಾ,** ೨. ೨೪)

**ನೃಪಮಂಡಲ –** ರಾಜಸಮೂಹ, ನೃಪಮಂಡಲದಲ್ಲಿ ನಾಲ್ಕು ಬಗೆ: ವಿಜಿಗೀಷು, ಅರಿ, ಮಧ್ಯಮ, ಉದಾಸೀನ; ಪ್ರತಿಯೊಬ್ಬರಿಗೂ ಮಿತ್ರ, ಮಿತ್ರಾಮಿತ್ರರು (ಪಡೆಯಜೆಲಾದೊಡರಿಯಂ ಕಿಡಿಸುಗುಂ ಅಂತಃಕಳಂಕ ನೃಪಮಂಡಲಮಂ ತಡೆಯದೆ ತಮಸ್ಸ್ವಭಾವಂ ಕಿಡಿಸುವವೋಲಜೆದು ರಾಹು ಶಶಿಮಂಡಲಮಂ: **ಕವಿರಾಮಾ,** ೩. ೧೪೭)

**ನೃಪಸತಿ –** ರಾಣಿ (ನೃಪಸತಿಯರ್ಗುದಯಿಸಿದರ್ ತಪನಪ್ರತಿಮಪ್ರತಾಪರ್ ಅಭಿನವಪಾಠೀನಪತಾತಕರ್ ಇಂದ್ರಸೇನಂ ಉಪೇಂದ್ರಸೇನನುಮೆನಿಪ್ಪ ಪೆಸರೆಸೆವಿರ್ವರ್: **ಶಾಂತೀಶ್ವಪು,** ೬. ೨೮)

**ನೃಪಸುತ –** ರಾಜಕುಮಾರ (ಆ ನಾಗಪಾಶಮಂ ಜಗತೀನಾಥಂ ಪೊಸೆಯೆ ಕಟ್ಟುಗಳ್ ಬಿಟ್ಟಿರೆ ಪೋಲ್ತೆನೆಸೆದುದೊ ನೃಪಸುತನ ಅಪದಾನದ ಶಾಸನಕೆ ಲೆಕ್ಕಮಿಟ್ಟಕ್ಕರಮಂ: **ಶಾಂತಿಪು,** ೮. ೫೪)

**ನೃಪಾಮ್ನಾಯ –** [ನೃಪ+ಆಮ್ನಾಯ] ರಾಜವಂಶ (ಮನುನೃಪ ಆಮ್ನಾಯದುರ್ಗಾದ್ರಿಸಿಂಹಂ ಮನುಭೂಪಾಳ ಅನ್ವಯಶ್ರೀಭವನಕಳಶಂ ಎಂಬಂತು: **ಆದಿಪು,** ೮. ೩೪)

**ನೃಶಂಸ –** ಕ್ರೂರಿ (ಅಜೆಯಂ ಕಾಣಂ ತಂದೆಯ ಗಜೆಯೊಳಗಿರ್ದವನಂ ಎನ್ನಂ ಅಂದು ನೃಶಂಸಂ: **ಕಾದಂಸಂ,** ೧. ೫೬)

**ನೆಕ್ಕನೆ –** ಥಟ್ಟನೆ (ಚೆಕ್ಕನೆ ಸಾವುದುಮಂ ಸಿರಿ ನೆಕ್ಕನೆ ಕಿಡುವುದುಮನಜೆದು ಕಂಡುಂ ಸೊಕ್ಕುವರ್: **ಧರ್ಮಾಮೃ,** ೭. ೧೦೨)

**ನೆಕ್ಕು –** ಒಳಗೆ ಹೋಗು (ಕೊಂಕಿದ ಸಟಂ ಕಡು ನೆಕ್ಕ ಕದಂಪು ನೀಳ್ದ ತಾಟ್ಮರದವೊಲಪ್ಪ ಒಡಲ್ ಕಹಕಹಧ್ವನಿ ಕೌಳಿಕನಾದಂ ಆದುದು ಆಸುರತರಮಾಗೆ ಬಂದು ಕವಿದತ್ತು ಘಟೋತ್ಕಚರೌದ್ರಸಾಧನಂ: **ಪಂಪಭಾ,** ೧೨. ೭)

**ನೆಕ್ಕೊರವಟ್ಟೆ –** ಕುರುಚಲು ಗಿಡಗಳ ದಾರಿ (ಲಲಿತ ಲತಾಂಗಿಯ ವರಜಂಘಾಯುಗಲಂಗಳ ಭಮಗಿಯನಜೆಯೆಂ ಪೊಗಟಲ್ ನೆಕ್ಕೊರವಟ್ಟೆಯ ತೆಱನೇನಲ್ಲದೆ ಬಣ್ಣಿಪ ಬಟ್ಟೆಯನಂಭೋಜಾನನೆಯ ಊರುಯುಗಂಗಳ್: **ಸುಕುಮಾಚ,** ೫. ೫೧)

**ನೆಗಪು –** ಸುರಿಸು (ಅಮರ್ದಪ್ಪಿಕೊಂಡು ತತ್ತನುಜೆಯಗಲ್ಕೆಯೊಳ್ ನೆಗಪಿದರ್ ಬಸಮಲ್ಲದ ಬಾಷ್ಪವಾರಿಯಂ: **ಆದಿಪು,** ೪. ೫೬); ಎತ್ತಿಕೊ (ಮಾಣಿಕಮೆಂದು ಕೆಂಡಮಂ ನೆಗಪುವ .. .. ಎಗ್ಗನಂತೆ: **ಕಾದಂಬ,** ೫. ೧೨೪)

**ನೆಗರ್ತೆ –** ಪ್ರಸಿದ್ಧಿ (ರೂಪಿನ ಪೊಗರ್ತೆಯುಂ ಸಹಜದ ನೆಗರ್ತೆಯುಮಂ ಕೇಳ್ದು: **ಹರಿವಂಶ,** ೮. ೫೨ ವ)

**ನೆಗಟ್ –** ಕಾಣಿಸಿಕೊಳ್ಳು (ಷಟ್ಖಂಡಭೂಮಂಡಲೇಶ್ವರನೋರಂತೆ ನೆಗಟ್ಚಿ ನೆಗಟ್ದತ್ತೆತ್ತಂ ದ್ವಿಜನ್ಮಾನ್ವಯಂ: **ಆದಿಪು,** ೧೫. ೨೦); ಪ್ರಖ್ಯಾತಿ ಪಡೆ (ಅಲ್ಲಿ ನೆಗಟ್ದ ಜಾಬಾಲಗಳೆಂಬ ಅತ್ತಯುತ್ತಮ ಯತಿಪತಿಗಳಪತ್ಯಂ ಹಾರೀತನಾಮ ಮುನಿಪನದೊರ್ವಂ: **ಕಾದಂಸಂ,** ೧. ೬೫): ಕೈಗೊಳ್ಳು (ಇತ್ತುಂ ತೆತ್ತುಂ ಬಾಟ್ವ ಮಂಡಲಮಲ್ಲದೆ ಕೀಱೆಯುಂ ಮೀಱೆಯುಂ ನೆಗಟ್ವ ಮಂಡಲಮಿಲ್ಲ: **ಪಂಪಭಾ,** ೬. ೬೭ ವ); ಮಾಡು (ಪರಿಚಯಮಿಲ್ಲ ಎನ್ನೊಳೆಂದು ಮಿಗೆ ನಾಣ್ಚುತ್ತಿರದೆ

ಇಂದೆನ್ನೊಳ್ ಅದೆಂತು ಅಂತಿರೆ ನೀಂ ನೆಗೞ್ವುದು ನಿರಂತರಂ ಕಮಲಮುಖೀ: **ಕಾದಂಸಂ,** ೫. ೨೪); ಮೊಸಳೆ (ಛಾಯಾಲಕ್ಷ್ಯಮನೊಡ್ಡಿಯುಂ ಆಯದ ನೀರೊಳಗೆ ತನ್ನನಡಸಿದ ನೆಗೞಿಂ ಬಾಯೞಿವಿನಂ ಇಸಿಸಿಯುಂ ಅರೆ ಹೋಯಜ ಬಾಪ್ಪೆಂದು ಹರಿಗನಂ ಗುರು ಪೊಗೞೆ **ಪಂಪಭಾ,** ೨. ೬೦)

**ನೆಗೞ್ನುಡಿ** – ಶಪಥಮಾಡು (ಕಾದುವೆನೆಂದು ನೆಗೞೆ ನುಡಿವ ನುಡಿಯುಮಂ ಪಿಡಿದ ಚಲಮುಮಂ ಬಗೆದು: **ಪಂಪಭಾ,** ೧೦. ೨೬ ವ)

**ನೆಗೞೆಪಡು** – ಆಚರಣೆಗೊಳ್ಳು (ಚರಮದೇಹಧಾರಿಗಳಿಂದಂ ನೆಗೞೆಪಟ್ಟುದನೊಳ್ಳಿತಪ್ಪ ಮೋಕ್ಷಮಾರ್ಗಮಂ ಪೊರ್ದಿಯುಂ: **ವಡ್ಡಾರಾ,** ಪು. ೮೭, ಸಾ. ೩)

**ನೆಗೞ್ಚು** – ಕೈಗೊಳ್ಳು (ಧರಾಮರರೀ ಬ್ರಾಹ್ಮಣರೆಂದು ಕೊಂಡುಕೊನೆದಾ ಷಟ್ಖಂಡಭೂಮಂಡಲೇಶ್ವರನೋರಂತೆ ನೆಗೞ್ಚೆ: **ಆದಿಪು,** ೧೫. ೨೦); ಮಾಡಿಸು; ಖ್ಯಾತಿಗೊಳ್ಳು

**ನೆಗೞ್ತೆ** – ಖ್ಯಾತಿ (ಕವಿತೆಯೊಳಸೆಗೆಯ್ವ ಫಲಮಾವುದೊ ಪೂಜೆ ನೆಗೞ್ತೆ ಲಾಭಂ ಎಂಬಿವೆ ವಲಂ: **ಆದಿಪು,** ೧. ೩೬); ಕಾರ್ಯ (ಅಪೊತ್ತುಂ ಕೆಲಸಂಗೊಳ್ವ ನೆಗೞ್ತೆಗಳಂ ನೆಗೞಲೆಂತುಮಱಿಯರ್ ಜೈನರ್: **ಸಮಯಪ,** ೫. ೧೦); ಆಚರಣೆ (ಆ ವಸ್ತುಗಳಂ ಮುಟ್ಟಿಯೆ ಮೀವೊಡೆ ನೆಗೞ್ತೆಯಂ ಮಾತುಂ ಒಂದಿ ನೇರ್ಪಟ್ಟಿರ್ಕುಂ: **ಸಮಯಪ,** ೮. ೧೯); ನಡತೆ (ಇವರ ನೆಗೞ್ತೆ ಕರಂ ಪಿರಿದು ಧಿರರಕಟ ಕುಮಾರರ್: **ಯಶೋಧಚ,** ೧. ೬೧); ಘಟನೆ, ಸಂಗತಿ (ದೇವಾ ಪಿಂದಾದ ನೆಗೞ್ತೆಯನೊಂದುಮಂ ನುಡಿಯದೆ ಈ ಭವದೀಯ ಭಾಗಿನೇಯಂಗೀವುದು: **ಕರ್ಣನೇಮಿ,** ೮. ೪೩ ವ)

**ನೆಗೞ್ತೆವೆಱು** – ಖ್ಯಾತಿ ಹೊಂದು (ಪದ್ಮೆಯೆಂಬ ಕೊಳದಿಂದಂ ಗಂಗೆಯುಂ ಸಿಂಧುವುಂ ಮೊದಲೊಳ್ ಪುಟ್ಟಿ ನೆಗೞ್ತೆವೆತ್ತುವು: **ಆದಿಪು,** ೧೩. ೬೯)

**ನೆಗೞ್ದ** – ಪ್ರಸಿದ್ಧವಾದ (ಭೂಪೋತ್ತಮನಿರ್ದನೆ ಸುಖದಿಂ ಉದಾತ್ತಯಶಂ ನೆಗೞೆ ನೆಗೞ್ದಯೋಧ್ಯಾಪುರದೊಳ್: **ಆದಿಪು,** ೧೪. ೪೭)

**ನೆಗೞ್ಪು** – ನಡವಳಿಕೆ (ಅಂತೆ ಕಿಱುಕುಳ ವ್ಯಂತರಂಗಳ ಪೊಲ್ಲಗ್ರಹಂಗಳ ಶೈವಾದಿಗಳ ನೆಗೞ್ಪಪ್ರಮಾಣಮಲ್ಲದು: **ಧರ್ಮಾಮೃ,** ೯. ೬೭ ವ)

**ನೆಗೆ** – ಮೇಲಕ್ಕೆ ಹಾರು (ಸುರರೆಲ್ಲಂ ಬಡಗಲು ನೆರೆದಿರೆ ಆ ದೆಸೆ ಕುಸಿದು ತೆಂಕ ನೆಗೆದೊಡೆ: **ಸಮಯಪ,** ೧೦. ೧೧೩); ಜಿಗಿ(ಸಿಂಹಲಂಘನದಿಂ ಮೇಗೆ ನೆಗೆದು ವಜ್ರಸಮಾನಮಪ್ಪ ಕೈಯಿಂದಂ ಕುಮಾರನಾತನ ತಲೆಯಂ ತಿವಿದೊಡೆ: **ವಡ್ಡಾರಾ,** ಪು. ೫೯, ಸಾ. ೨೮)

**ನೆಗ್ಗಿಲ್ಗಾಡು** – ನೆಗ್ಗಿಲಮುಳ್ಳುಗಿಡಗಳ ಕಾಡು ಕಿಸುಗಾಡುಮಂ ನೆಗ್ಗಿಲ್ಗಾಡುಂ ನಿಡುವುಲ್ಲುಮಂ ಪೊಡೆವುಲ್ಲುಮಂ .. .. ಕಳಿದು ಪೋಗಿ: **ಲೀಲಾವತಿ,** ೬. ೧೬ ವ)

**ನೆಣ** – ಕೊಬ್ಬು (ಬಿಸುನೆತ್ತರ್ ನೆಣಂ ಅಡಗು ಎಲ್ವು ಸಮಸ್ತಂ ಸುರಿಯೆ ಕೈಗೆ ತೊವಲ್ ಉೞಿಯಲ್ ಅಗುರ್ವಿಸಿದುದು ತೀವಿದ ಗುಳ್ಳೆಯ ಪಸುಂಬೆಯ ಸೋರ್ಚಿದಂತೆ ತನು ಕೀಚಕನಾ: **ಪಂಪಭಾ,** ೮. ೭೭)

**ನೆತ್ತ** – ಲೆತ್ತ, ಪಗಡೆಯಾಟ (ನೆತ್ತಮನಾಡಿ ಭಾನುಮತಿ ಸೋಲ್ತೊಡೆ ಸೋಲಮನೀವುದೆಂದು ಕಾಡುತ್ತಿರೆ ಲಂಬಣಂ ಪಱಿಯೆ ಮುತ್ತಿನ ಕೇಡನೆ ನೋಡಿ ನೋಡಿ ಬಳ್ಕುತ್ತಿರೆ ಏವಮಿಲ್ಲದೆ ಇವಂ ಆಯ್ದುವೊ ತಪ್ಪದೆ ಪೇೞಿಂ ಎಂಬ ಭೂಪೋತ್ತಮನಂ ಬಿಸುಟ್ಟು ಇರದೆ ನಿಮ್ಮೊಳೆ ಪೊಕ್ಕೊಡೆ ಬೇಡನಲ್ಲನೇ: **ಪಂಪಭಾ,** ೯. ೬೯); ಪಗಡೆಯ ದಾಳ (ಪಾಡುವ ಗೀತಮಂ ನಿಲಿಸಿ ವೀಣೆಯನಾಳಿಯ ಕಯ್ಯೊಳಿತ್ತು ಮತ್ತಾಡುವ ನೆತ್ತಮಂ ಬಿಸುಟು: **ರಾಜಶೇವಿ,** ೭. ೪)

**ನೆತ್ತಗಾಱ** – ಪಗಡೆಯ ಆಟಗಾರ (ನೆತ್ತಗಾಱರ ಚದುರಂಗದಾಟಕಾಱರ ಒರೆಗಾಱರ ಬಾಜಿಪ ಬೀಣೆಗಾಱರ ಆಗರಮೆನೆ ಪೆಂಪು ಸೊಂಪನೊಳಕೊಂಡೆಸೆದಿರ್ಪುವು ಸೂಳೆಗೇರಿಗಳ್: **ಕಬ್ಬಿಗಕಾ,** ೩೬)

**ನೆತ್ತರ್** – ರಕ್ತ (ಪೊಲಸಟ್ಟ ನಾರ್ವ ಜೇರ್ವಡೆಗಳ ಪುಣ್ಗಳಿಮ ತೆರೆವ ನೆತ್ತರ ಕೆಯ್ ನಡುಗಲ್ಕೆ: **ಕಾದಂಬ,** ೧. ೧೫೩)

**ನೆತ್ತವಲಗೆ** – ಪಗಡೆಯ ಹಲಗೆ, ಹಾಸು (ಆಕೆಯ ಪರಿಚಾರಿಕೆಯರ್ ನೆತ್ತವಲಗೆಯಂ ತಂದು ಮುಂದಿಟ್ಟು: **ಕರ್ಣನೇಮಿ,** ೪. ೫೨ ವ)

**ನೆತ್ತಿ** – ನಡುದಲೆ (ನೆತ್ತಿಯೊಡೆದು ಸುರಿವ ಬಿಸುನೆತ್ತರ ಧಾರೆಯುಮಂ ಕಂಡದಿಂಡೆಯುಮಂ ಕಂಡು: **ಪಂಚತಂತ್ರ,** ೧೨೬ ವ); ತಲೆ (ಎತ್ತಿ ಜಿನಶಿಶುವನಾಗಳ್ ನೆತ್ತಿಯ ಮೇಲಿಟ್ಟು: **ಅಜಿತಪು,** ೪. ೧೪)

**ನೆತ್ತಿಗಣ್ಣವ** – ಶಿವ (ಮೂಜಗಕೆ ಕೇಡಂ ಮಾಡುವಾ ನೆತ್ತಿಗಣ್ಣವನೊಳ್ ಕಾದುವ ಬಲ್ಪ ಮೊಗ್ಗೆಗರನಿಂದಾಯ್ತು ಮೇಲೆತ್ತುವೆಂ: **ಕಬ್ಬಿಗಕಾ,** ೧೨೩)

**ನೆತ್ತಿಯೊಳಾನ್** – ಶಿರಸಾವಹಿಸು, ಶ್ರದ್ಧೆಯಿಂದ ಪಾಲಿಸು (ಈಶ ಶಾಸನಮಂ ನೆತ್ತಿಯೊಳಾಂತು ಬನ್ನಿಂ ಎಱಗಿಂ ಚಕ್ರೇಶ ಪಾದಾಬ್ಜದೊಳ್: **ಆದಿಪು,** ೧೪. ೩೧)

**ನೆತ್ತಿಗಣ್ಣವ** – ಹಣೆಗಣ್ಣ, ಶಿವ (ಮೂಜಗಕೆ ಕೇಡಂ ಮಾಡುವಾ ನೆತ್ತಗಣ್ಣವನೊಳ್ ಕಾದುವ ಬಲ್ಪುಂ ಒಗ್ಗೆರಗರನಿಂದರಾಯ್ದು ಮೇಲೆತ್ತುವೆಂ: **ಕಬ್ಬಿಗಕಾ,** ೧೨೩)

**ನೆತ್ತಿಮುತ್ತು** – ಆನೆಯ ಕುಂಭದಲ್ಲಿನ ಮುತ್ತು (ನೆತ್ತಿಮುತ್ತೊಡಗೂಡಿರೆ ಸುಗಿದಗಿದು ನಿಳ್ದುದಾ ಗಜಮಿಳೆಯೊಳ್: **ಶಬಶಂವಿ,** ೩. ೫೮)

**ನೆತ್ತಿವಂದ** – ಹಣೆಯ ಒಂದು ಆಭರಣ (ಬಂದುಗೆಯ ಅಲರಿನಂದಂಬೆತ್ತ ಅದಿರ್ಮುತ್ತೆಯ ನೆತ್ತಿವಂದಂಗಳುಮಂ: **ಜಗನ್ನಾವಿ,** ೬. ೧೬ ವ)

**ನೆಮ್ಮು** – ಒರಗು, ಆಶ್ರಯಿಸು (ಸುಧಾಧವಳಿತಮುಂ ಅಪ್ಪ ರಮಣೀಯ ಪ್ರಮದವನಮಧ್ಯವೇದಿಕೆಯ ಮಣಿಸ್ತಂಭಮಂ ನೆಮ್ಮಿ: **ಕಾದಂಸಂ,** ೬. ೪ ವ)

**ನೆಯ್** – ನೂಲನ್ನು ಬಟ್ಟೆಯಾಗಿ ಹೆಣೆ (ನೆಯ್– ವಸ್ತ್ರಕ್ರಿಯಾಯಾಂ: **ಶಬ್ದಮದ,** ಧಾ ೫೩೦); ತುಪ್ಪ (ನೆನೆದುರಿವ ತಲೆಯ ಕಿಚ್ಚಿನೊಳ್ ಒಗುಮಿಗೆ ನೆಯ್ವೊಯ್ವ ತೆಱದೆ ಪೊಣ್ಮಿದ ಮುನಿಸಿಂ ಭುಗಿಲನುರಿದೆಟ್ಟಿದನಾ ದಿಟ್ಟಿಗಳೊರ್ಮೆಯೆ ತೋರಕಿಡಿಗಳಿಂ ಕೆದಱುವಿನಂ: **ಕಬ್ಬಿಗಕಾ,** ೧೧೮); ಎಣ್ಣೆ

**ನೆಯ್ಗಡಲೆ** – (ಅಟ್ಟ ನೆಯ್ಗಡಲೆಯಂ ಮೆಲುತುಂ ಮಗುಳೆತ್ತಿ ಮತ್ತೆ ಮತ್ತುಗೆ ನೆಱೆ ಪೀರುತುಂ: **ಕುಸುಮಾಕಾ,** ೧೧. ೧೫೯)

**ನೆಯ್ದಿಲ್** – ನೈದಿಲೆ (ಪರ್ವಿತ್ತು ಒರ್ಮೊದಲ್ ನೆಯ್ದಿಲನೆಲ್ಲಂ ಚುಂಬಿಪಂತೆ ಉರ್ವರೆಯನನಿತುಮಂ ಚಂದ್ರಪಾದಪ್ರವಾಹಂ: **ಲೀಲಾವತಿ,** ೨. ೧೩)

**ನೆಯ್ಯೇಱೆಸು** – ಮದುಮಗಳಿಗೆ ಹಾಲುತುಪ್ಪದಲ್ಲಿ ಅದ್ದಿದ ಅಂಬುಗೋಲನ್ನು ಮುಟ್ಟಿಸುವ ಶಾಸ್ತ್ರ, ಅಭ್ಯಂಜನಸ್ನಾನ ಮಾಡಿಸು (ಅಲರಂಬಿಂ ತಲೆಯೊಳ್ ಕೆಯ್ಯಿಡುವಂತೆವೊಲ್ ಅಲರಂಬಿಂ ಅಬ್ಜಮುಖಿಗೆ ನೆಯ್ಯೇಱೆದರ್: **ಲೀಲಾವತಿ,** ೧೨. ೫೧)

**ನೆರ** – ಸಹಾಯ (ಇಱೆವೊಡೆ ನೆರವೊಳೇಮಿನಿಬರುಮಿಱೆ: **ಪಂಪಭಾ,** ೧೩. ೨೩); ಆಧಾರ (ಎನ್ನ ಬಿಲ್ಲೆ ನೆರಂ ಎಂದು ವರೂಥಂಗಳಂ ತುರಿಪದೆ ತಾನೆ ಚೋದಿಸುತುಂ: **ಪಂಪಭಾ,** ೧. ೨೦೬)

**ನೆರನ್** – ಜೊತೆಗೆ (ಎಮ್ಮ ಮಾವಂ ಬೈಕಂದಿರಿದು ತಂದ ಕೂಟ್ಗೆ ನೆರನ್ ಎಣ್ಣೆಯನಕ್ಕೆ ಉಪ್ಪನಕ್ಕೆ ಕಟೆಯನಕ್ಕೆ ಎಂದೊಪ್ಪೊಡಂ ಎಱೆಯಿಸಿಯಱೆಯಂ: **ವಡ್ಡಾರಾ,** ಪು ೪, ಸಾ ೧೪); ಚೆನ್ನಾಗಿ

**ನೆರಂಬಡೆ** – ನೆರವು ಪಡೆ (ಮನಸಿಜನ ಮಾಯೆ ವಿಧಿ ವಿಳಸನದ ನೆರಂಬಡೆಯೆ ಕೊಂದು ಕೂಗದೆ ನರರಂ: **ಯಶೋಧಚ,** ೨. ೬೧)

**ನೆರಂಬೇಟಿಸ್** – ನೆರವು ಮಾಡಲು ಹೇಳು (ನಡೆಗಟ್ಟೆಗಳಂ ಅನಿಬರ್ಗಂ ಏಱಲ್ ಕೊಟ್ಟು ಪಿಪಿದಾಳಂ ನೆರಂಬೇಟ್ಟು ಕಿಱೆದಂತರಂ ಕಟಿಪುತ್ತುಂ: **ಸುಕುಮಾಚ,** ೫೯ ವ)

**ನೆರಕೆ** – ಒಂದು ಬಗೆಯ ಬಾಣ (ನೆಱೆದು ನಿರ್ವಾಯಂ ನರುವಾಯಂ ಮುಂಮೊನೆ ನೆರಕೆ ನಾರಾಚಂ ತಗರ್ತಲೆಯಂ: **ಪಂಪಭಾ,** ೧೩. ೩೯)

**ನೆರಪು** – ಒಟ್ಟಾಗಿಸು, ಕೂಡಿಸು (ಯುವತಿರೂಪಸರ್ವಸ್ವಮಂ ಆದರದೆ ಬಿದಿ ನೆರಪಿ ಲಲನಾಸ್ವರೂಪದಿಂ ನಿಱೆಸಿತು: **ಆದಿಪು,** ೬. ೮೦); ಸಂಪಾದಿಸು (ಆ ತೀರ್ಥಕರನ ಪೆಂಪು ಉಪಮಾತೀತಂ ಅದರ್ಕೆ ಬಯಸು ಕಣ್ಣುಂ ಕಾಲುಂ ಬಾತೊಡೆ ಬರ್ಕುಮೆ ಪುಣ್ಯಮನಾತನ ನೆರಪಿದುದನೆಯ್ದೆ ನೆರಪದೆ ಮೊದಲೊಳ್: **ಶಾಂತಿಪು,** ೧. ೧೪); ಕೂಡಿಸು, ಮದುವೆ ಮಾಡು (ಪ್ರಜಾಪತಿ ಮಹಾರಾಜಂ ವಿನೋದ ದರ್ಶನಾನಂತರಂ ಪುಣ್ಯದಿನದೊಳ್ ತ್ರಿಪೃಷ್ಟನಂ ಸ್ವಯಂಪ್ರಭೆಯೊಳ್ ನೆರಪಿ: **ಶಾಂತಿಪು,** ೫. ೩೯ ವ)

**ನೆರವಿ** – ಜನರ ಗುಂಪು (ನೆರದ ನೆರವಿ ವಿಸ್ಮಯಂಬಟ್ಟಿದೇಂ ನೋಡಿದಪ್ಪುದೇನಾನುಮೊಂದು ಕೌತುಕಮಾಗಲೆವೇಟ್ಕುಂ ಎಂದು: **ಆದಿಪು,** ೪. ೩ ವ)

**ನೆರೆ** – ಸೇರು (ಅರಣ್ಯದೊಳ್ ತಿರಿತರುತಿರ್ದ ಕಣ್ಬಡಿಗರಂ ಮಗುಟ್ಟುಂ ಬಿಱುತು ಓಡಿ ಬೇಡರೊಳ್ ನೆರೆದಿರಲ್ ಒಡ್ಡಯಿಸಿ ರಾಜ್ಯದೊಳೇಂ ನೆರೆಯಲ್ಕೆ ತೀರ್ಗುಮೋ: **ಪಂಪಭಾ,** ೮. ೮೫); ಸಂಭೋಗಿಸು (ಸತ್ಯಭಾಮೆಯ ರೂಪುಗೊಂಡು ವಾಸುದೇವನೊಳ್ ನೆರೆವುದುಂ: **ಚಾವುಂಪು,** ಪು. ೪೨೯. ಸಾ. ೨); ಸಿಗು (ಮತ್ತುಱೆದ ವಿದ್ಯೆಗಳ್ ಓಜರೆ ಚಟ್ಟರ್ ಎಂಬಿನಂ ನೆರೆದುವು ಗಳ ತನ್ನೊಳಾರ್ ದೊರೆ ಗುಣಾರ್ಣವನಂತು ಕುಶಾಗ್ರಬುದ್ಧಿಗಳ್: **ಪಂಪಭಾ,** ೨. ೩೪)

**ನೆರಪು** – ಕೂಡಿಸು (ವನರುಹಸಂಭವಂ .. .. ಅಮೂಲ್ಯವೆನಿಸುವ ವಸ್ತುವಂ ನೆರಪಿ ಮಾಡಿದಂ: **ಧರ್ಮಪ,** ೧. ೪೫)

**ನೆರ್ಮ** – ಆಸರೆ, ಆಧಾರ (ಧರ್ಮಾಧರ್ಮಗಳ ಪ್ರಕ್ರಿಯೆಗಳೆ ನೆರ್ಮಂ ಜೀವಕ್ಕೆ ಮನುಜಗತಿಯೊಳ್ ಮಾಟ್ಕುಂ: **ಆದಿಪು,** ೫. ೭೮)

**ನೆರ್ಮು** – ಆಸರೆ (ಧರ್ಮಾರ್ಥಕಾಮಮೆಂಬಿವು ಧರ್ಮಾರ್ಥಿಜನಕ್ಕೆ ನೆಱೆದ ನೆರ್ಮು: **ಆದಿಪು,** ೧೦. ೫೦)

**ನೆಲ್** – ಬತ್ತ (ಪಕ್ಕಿಗಳಲ್ಲಿ ತಿಂದುಳಿದ ನೆಲ್ಗಳ ನುಚ್ಚುಗಳಂ .. ಆಯ್ದು ಎನಗಿಕ್ಕುವಂ: **ಕಾದಂಬ,** ೧. ೧೧೩)

**ನೆಲ** – ಭೂಮಿ (ಕ್ಷ್ಮಾ ಕ್ಷೋಣಿ ಭೂಮಿ ಭೂ ಗೋತ್ರೆ ನೆಲಂ: **ಅಭಿಧಾವ,** ೧. ೫. ೧)

**ನೆಲಕಲ** – ಜಿಪುಣ (ಲಕಾರಕ್ಕೆ: ನೆಲಕೆಲಂ ಎಂದು ಲೋಭಿ: **ಶಬ್ದಮದ** ೨೬ ಪ್ರ)

**ನೆಲದ ಕಲ್ಲೆ** – ನೆಲದ ಬೇಲಿ ಎಂದರೆ ಸಮುದ್ರ (ಆಕಾಶದ ಕವಿಯುಂ ನೆಲದ ಕಲ್ಲೆಯುಂ ಮುನ್ನಮೆ ಮೇರೆದಪ್ಪುವುದುಮಂ ತನ್ನೊಳ್ ಅಳವಡಿಸಿಕೊಂಡು ತಾಗಿದಾಗಳ್: **ಪಂಪಭಾ,** ೧೨. ೧೯ ವ)

**ನೆಲದೆಱೆಯ** – ಭೂಮಿಯ ಒಡೆಯ, ರಾಜ (ಒಲವಿಂದೋಲಗಿಸುವೆ ನೀಂ ನೆಲದೆಱೆಯನನೆಂದು ಬರ್ಪವೋಲ್ ಬಗ್ಗಿಪ ಕೋಗಿಲೆಯ ತೊದಳ್ನುಡಿ ಬಿರಯಿಯನಲೆಯುತ್ತಿರೆ ಬಿಡದೆ ಬಂದುದಂದು ಬಸಂತಂ: **ಕಬ್ಬಿಗಕಾ,** ೪೪)

**ನೆಲನಂಬರೆ** – ನಾಚಿಕೆ, ಭಯದಿಂದ ನೆಲದ ಮೇಲೆ ಕಾಲಿನಿಂದ ಗೀರು (ತಲೆಯಂ ಬಾಗಿ ನೆಲನನುಂದುಂಗುಟದಿಂ ಬರೆಯುತಿರ್ದು ದವನಕನ ಕೃತಕವೇಷಮಂ ಕಂಡು: **ಪಂಚತಂತ್ರ,** ೧೫೦ ವ)

**ನೆಲನುಂ ನೇಸಱುಂ ಕಾಣದಂತೆ** – ಯಾರಿಗೂ ತಿಳಿಯದಂತೆ (ಮೀನಕೇತುವಿನಂತೆ ನೆಲನುಂ ನೇಸಱುಂ ಕಾಣದಂತು ಮನೆಯೊಳಗೆ ಬಳೆಯುತ್ತುಮಿರ್ದ ಇಭ್ಯಕೇತುಕುಮಾರಂ: **ನೇಮಿನಾಪು,** ೩. ೯೩ ವ)

**ನೆಲಗಟ್ಟಿಸು** – ನೆಲಗಟ್ಟು ರಚನೆಮಾಡು (ಗಟ್ಟಿಸಿ ಸೆಂದುರದೊಳ್ ನೆಲಗಟ್ಟಿಸಿ ಚೆಂಬೊನ್ನ ನೆಲೆಯ ಚೌಪಳಿಗೆಗಳೊಳ್ ಕಟ್ಟಿಸಿ ಪಟಯಿಗೆಗಳಂ ಅಳವಟ್ಟಿರೆ ಬಿಯಂ ಅಲ್ಲಿ ಮೊಟಗೆ ಪಲವುಂ ಪಱೆಗಳ್: **ಪಂಪಭಾ,** ೨. ೬೬)

**ನೆಲಗಟ್ಟು** – ಧಮ್ಮಸ್ಸುಮಾಡಿದ ಸಮತಟ್ಟಾದ ನೆಲ (ಪಚ್ಚೆಯನೆಲಗಟ್ಟಿನೊಳಂ ರಾಜಾವರ್ತದ ಕಂಬದೊಳಂ: **ಪಂಪಭಾ,** ೩. ೭೪ ವ)

**ನೆಲಗನ್ನ** – ನೆಲದಲ್ಲಿ ತೋಡಿದ ಕನ್ನ (ನೆಲಗನ್ನದಿಂ ನೆಲವಲಕ್ಕೆ ಲಕ್ಕೆ ತೆಱದಿಂ ಕಾದುವರೆರ್ದೆ ಬಿಕ್ಕನೆ ಬಿರಿಯೆ: **ಪಾರ್ಶ್ವನಾಪು,** ೩. ೧೪೧ ವ)

**ನೆಲನನುಗ್ಘಡಿಸು** – ಹಸ್ತಲಾಘವ ನೀಡು (ನೆಲನನುಗ್ಘಡಿಪ ಕೇಯೂರಕನುಂ ಒಡವರೆ: **ಕಾದಂಬ,** ೬. ೧೧೭ ವ)

**ನೆಲಪು** – ನೆಲವು (ಆಲದ ಮರದ ಕೊಂಬಿನೊಳ್ ನೂಱೊಂದು ಕಾಲ ನೆಲಪಂ ಕಟ್ಟಿ ನೆಲಪಿನ ಕೀಳಗೆ: **ಧರ್ಮಾಮೃ,** ೨. ೮೧ ವ)

**ನೆಲಮನೆ** – ನೆಲಮಟ್ಟಕ್ಕಿಂತ ಕೆಳಗಿರುವ ಮನೆ (ಅನಿಬರುಮಂ ನೆಲಮನೆಯೊಳಿಕ್ಕಿ ಮಲ್ಲಲ್ ಪುಗುವನಿತು ಬಾಗಿಲು ಮಾಡಿ ಪ್ರತಿದಿನಕ್ಕೊಂದು ಮಲ್ಲಲ ಕೂಟುಮಂ ಒಂದು ಮೊಗಪೆ ನೀರುಮಂ ನೆಲಮನೆಯೊಳಗಣ್ಗೆ ನೀಡಿದೊಡೆ: **ವಡ್ಡಾರಾ,** ಪು ೧೮೨, ಸಾ ೯)

**ನೆಲಮಾಡ** – ಮಹಡಿ (ನೆಲಮಾಡದ ಪೊಸದೇಸಿಯ ನೆಲೆ ಮಾಡದ ಕಲ್ಪಸದನಂ .. .. ನೆಲೆಯಾದುದೆ ಸಕಲಜನ ಕಣ್ಗಂ ಮನಕಂ: **ಪಂಪರಾ,** ೧. ೨೨೬)

**ನೆಲಮುಕ್ಕು** – ಒಂದು ಜಾತಿಯ ಹಾವು (ಅಂತು ಬೆಸನಂ ಬೇಡಿಕೊಂಡು ಬೀಟ್ಕೊಂಡು ನೆಲಮುಕ್ಕಿನಂತೆ ನಭಕ್ಕೆ ನೆಗೆದು .. .. ಕಾದುತ್ತುಮಿರೆ: **ಪಂಪರಾ,** ೯. ೧೨೩ ವ)

**ನೆಲವರ** – ಸಾಯುವ ಜಾಗ (ಆಗಳ್ ಅಗುರ್ವುಂ ಅದ್ಭುತಮುಂ ಆಗೆ ತಳರ್ದು ನೆಲವರದೆಡೆಗೆ ಕಾಲೊಯ್ಗುಮೆಂಬ ಮಾತಮ ನನ್ನಿ ಮಾಟ್ಪಂತೆ ಪೌದನಪುರಕ್ಕಾಸನ್ನಮಾಗೆ ಬಂದು: **ವರ್ಧಮಾಪು,** ೪. ೩ ವ)

**ನೆಲವಾಳಿಗೆ** – ನೆಲಮನೆ (ನಡೆಸಾರಂ ನೆಲವಾಳಿಗೆ ಪೆಡಕೆಡಪುವ ಡೆಗ್ಗೆ ಬಿದ್ದಿರೆ: **ತ್ರಿಷಷ್ಟಿಪು,** ೫. ೧೧)

**ನೆಲವುವಿಡಿ** – ನೆಲವಿನ ಮೇಲೆ ಜೋಡಿಸು (ಅಡಕಿಲ ಮಡಕೆಗಳೆಂಟುಂ ವೆಡಂಗು ನಿಲೆ ನಿಲ್ವಂತೆಂಟು ಪೊಡವಿಗಳಂ ತಾಳ್ದಿದುವು ಓಗಡಿಸದೆ ಮೂಱುಂ ಮಹಾನಿಲಂಗಳ್ ಕ್ರಮದಿಂ: **ಶಾಂತಿಪು,** ೧೨. ೫೧)

**ನೆಲವೆಣ್** – ಭೂದೇವಿ (ನೆಲವೆಣ್ಣಂ ಚತುರಂಬುರಾಶಿ ರಶನಾಳಂಕಾರೆಯಂ .. .. ಕೂರಿಸಿ ನಿಜಚ್ಛತ್ರಾಮಳಚ್ಛಾಯೆಯೊಳ್: **ಕುಸುಮಾಕಾ,** ೩. ೩)

**ನೆಲಸು** – ವಾಸಿಸು (ನೆಲಸುಗೆ ನಿನ್ನ ವಕ್ಷದೊಳೆ ಭಟಖಡ್ಗಮಂಡಲೋತ್ಪಲವನವಿಭ್ರಮಭ್ರಮರಿಯಪ್ಪ ಮನೋಹರಿ ರಾಜ್ಯಲಕ್ಷ್ಮಿ: **ಆದಿಪು,** ೧೪. ೧೩೦); ನೆಲೆನಿಲ್ಲು (ಧನಶ್ರೀಯೆಂಬ ಮಹಾದೇವಿಯ ಗರ್ಭದೊಳ್ ನೆಲಸಿದಂ: **ವಡ್ಡಾರಾ,** ಪು. ೧೫೭, ಸಾ. ೧೨)

**ನೆಲೆ** – ಆಶ್ರಯ, ಆವಾಸ (ತಳತಳಿಸಿ ಪೊಳೆವ ಮಾವಿನ ತಳಿರ್ಗಳಶೋಕೆಗಳ ಮಿಸುಪ ಲತೆಗಳ ನೆಲೆ ಬಳ್ವಳ ಬಳೆದ ಬೇಟದುರುಳಿಯ ಬಳಗಂ ಇದೆಂದು ಏಳೆಯಳೆಳಸಿ ತಳೆವೆಳಗಾದಳ್: **ಪಂಪಭಾ,** ೫. ೩); ಮಾಡ (ಗಟ್ಟಿಸಿ ಸೆಂದುರದೊಳ್ ನೆಲಗಟ್ಟಿಸಿ ಚೆಂಬೊನ್ನ ನೆಲೆಯ ಚೌಪಳಿಗೆಗಳೊಳ್ ಕಟ್ಟಿಸಿ ಪಟಯಿಗೆಗಳಂ ಅಳವಟ್ಟಿರೆ ಬಿಯಂ ಅಲ್ಲಿ ಮೊಟಗೆ ಪಲವುಂ ಪಱೆಗಳ್: **ಪಂಪಭಾ,** ೨. ೬೬)

**ನೆಲೆದೊಟ್ಟು** – ಜೀತದಾಳು (ನಾವೆಲ್ಲವುಂ ನಲೆದೊಳ್ತಿರ್ ಬಳಿದೊಳ್ತಿರ್ ಸಲೆದೊಳ್ತಿರ್ ನಿಮಗೆನುತ್ತೆ ಧಾರೆಯನೆಱೆದಂ: **ಗಿರಿಜಾಕ,** ೧೦. ೯೫)

**ನೆಲೆಮಾಡ** – ಉಪ್ಪರಿಗೆ (ನೆಲೆಮಾಡಂಗಳೊಳೋಳಿವಟ್ಟ ಗುಡಿಗಳ್ ಗಂಧಾಂಬುವಿಂದಾದ ಪೂವಲಿಯಿಂ ಚೆಲ್ವೆಸೆದಿರ್ದ ಬೀದಿಗಳ್: **ಆದಿಪು,** ೭. ೧೧೩)

**ನೆಲೆಮೊಲೆ** – ಸ್ಥಿರ ಮೊಲೆ (ಅಲಘುನಿತಂಬದ ಪೊಯ್ಲೊಳ್ ನೆಲೆಮೊಲೆಯಳ್ಳೇಱೆನೊಳ್ ತೂಳ್ದಲಱುಗುಂ: **ಆದಿಪು,** ೧೧. ೧೪೬)

**ನೆಲೆಯಾಂದೆ** – [ನೆಲೆ+ಆಂದೆ] ಒಂದೆಡೆಯೇ ನಿಂತ ಗೂಬೆ (ಅದು ಕಾರಣದಿಂ ನೆಲೆಯಾಂದೆಯಂ ಅಚ್ಚಿದವೋಲ್ ಎಲೆ ಮಿಡುಕದೆ ನೆನೆಯುತಿರ್ದಿರೇನಂ ಮನದೊಳ್: **ಯಶೋಧಚ,** ೪. ೧೫)

**ನೆಲೆವಡಲಗೆ** – [ನೆಲೆ+ಪಡಲಗೆ] ಅಗಲವಾದ ಬೋಗುಣಿ (ಪಚ್ಚೆಯ ಪಸಲೆಯ ಪಸುರನಸಕಟೆದು ನಿಮಿರ್ದ ನೆಲವಡಲಗೆಯ ಜಾಗಂಗಳುಮಂ: **ಆದಿಪು,** ೮. ೧೫ ವ)

**ನೆಲೆವ[ಮ]ನೆ** – ಕರುಮಾಡ, ಉಪ್ಪರಿಗೆ (ತೊಳಗುವ ಕರುಮಾಡಂ ನೂರೆ ಬಳಸಿದ ಪೊಂಗೋಂಟೆ ಮೇರೆ ನೆಲೆವನೆ ಸೊಗಯಿಸಿಪ್ಪ ಬೆಟ್ಟುಗಳ್: **ಕಬ್ಬಿಗಕಾ,** ೨೬)

**ನೆಲೆವಾಡ** – ನಾನಾ ಅಂತಸ್ತುಗಳಿರುವ ಮನೆ ಏಱೆಂಬುದು ನೆಲೆವಾಡದೊಳ್ ಮಡಿಯೆಂಬುದು ಮರುಗದ ತಾಣದೊಳ್ .. .. ಅಲ್ಲದೆ ಇಲ್ಲ: **ಕಬ್ಬಿಗಕಾ,** ೨೩ ವ)

**ನೆಲೆವಾಟ್** – ಸ್ಥಿರವಾದ ಬಾಳ್ವೆ (ಧಾನ್ಯಮಂ ಕೊಟ್ಟು ಪೊಳ್ತಂ ಕೊಳ್ವ ನೆಲೆವಾಟಂ ಬಿಟ್ಟು ತಿರಿದುಂಬ ಮರುಳಂ ಪೋಲ್ಕುಂ: **ಧರ್ಮಾಮೃ,** ೧೦. ೬೨ ವ)

**ನೆಲೆವೀಡು** – ನೆಲಸಿರುವ ಬೀಡು (ನೆಲೆವೀಡಂ ಬೀಡುಮಾಡಲ್ ಕೆಲವುದಿವಸಮಂ ಮಾಟ್ಪುದಿನ್ನಿಲ್ಲಿ ರೂಪ್ಯಾಚಲಮಂ: **ಆದಿಪು,** ೧೩. ೨೦)

**ನೆಲೆವೆರ್ಚಿಸು** – [ನೆಲೆ+ಪೆರ್ಚಿಸು] ಅಧಿಕವಾಗಿಸು (ಜಳನಿಧಿಯಂ ನೆಲೆವೆರ್ಚಿಸಿ ನಿರತಿಶಯ ಕೌಮುದೀಪೂರಂ ಅಸದಳಂ ಬಳೆದು ಬೆಳಗುತಿರ್ಪಿನಂ: **ಆಚವರ್ಧ,** ೬. ೫೨ ವ)

**ನೆಲೆವೆರ್ಚು** – ಅಧಿಕಗೊಳ್ಳು (ತಾಂ ನಲವಿನಿಂ ನಗುತಂ ನೆಲೆವೆರ್ಚಿ ರಂಜಿಪುತ್ಪಳಿನಿಗೆ ಕೋಪದಿಂ ಮುದಿದು ಪಲ್ಮೊಱೆವಂದಮಾಯ್ತು .. .. ಉನ್ಮದ ಭೃಂಗಝುಣತ್ಕೃತಸ್ವನಂ: **ಶಾಂತೀಶ್ವಪು,** ೧೧. ೧೦); ಮೇರೆ ಮೀರು (ಉದಯಿಸೆ ಚಂದ್ರಂ ನೆಲೆವೆರ್ಚಿದರ್ಣವಂ ಘೂರ್ಣಿಪಂತೆ: **ಕಾದಂಬ,** ೨. ೧೦೨)

**ನೆಲೆವೇಱು** – ಸ್ಥಿರಗೊಳ್ಳು (ಆ ಮಾತಗಳ್ ನೆಲೆವೆತ್ತು ಆ ಯತಿಪಂಗೆ ಚಿತ್ತದೊಳಿರಲ್ ಪುಟ್ಟಿತ್ತು ಕೋಪಾನಳಂ: **ಕರ್ಣನೇಮಿ,** ೫. ೧೦೪)

**ನೆಲೆವೊಟ್ಟು** – [ನೆಲೆ+ಬೊಟ್ಟು] ಸುಂದರ ತಿಲಕ (ಪುರ್ಬೆಂಬ ಕರ್ಬಿನ ಬಿಲ್ಲಿಂ ಬರ್ದುಂಕಿದ ಮದನನ ಅಲರೆಂಬಿನಮಿಂಬಾಗಿರ್ದ ನೆಲೆವೊಟ್ಟುಂ: **ಆದಿಪು,** ೪. ೪೧ ವ)

**ನೆಲ್ಲಕೆಯ್** – ಬತ್ತದ ಗದ್ದೆ (ಗಂಡರೆಲ್ಲಂ ನೆಲ್ಲಕೆಯ್ಯಂತೆ ಪಾಟಿಯುಳ್ಳರೆ ಪೆಂಡಿರೆಲ್ಲಂ ಧನುರ್ವೇದಿಯ ಬಿಲ್ಲಿನಂತೆ: **ಹರಿವಂಶ,** ೧. ೧೮ ವ)

**ನೆವ** – ನೆಪ, ಕಾರಣ (ಸುಯೋಧನಂ ಎನಗೆ ಒಳ್ಳಿಕೆಯ್ದ ಕೃತಮಮ ಪೆಱಗಿಕ್ಕಿ ನೆಗಟ್ತೆ ಮಾಸೆ ನಣ್ಪಿನ ನೆವದಿಂದೆ ಪಾಂಡವರಂ ಆಂ ಒಳವೊಕ್ಕಡೆ ನೀಮೆ ಪೇಸಿರೇ: **ಪಂಪಭಾ,** ೯. ೬೮); ರೀತಿ

**ನೆಳಲಪಾಣಿ** – ಒಂದು ಬಗೆಯ ಬಟ್ಟೆ (ನೆಳಲಪಾಣಿಯ ಬಣ್ಣದ ಕಣದ ಬಣ್ಣವಣ್ಣಿಗೆಯ ಜವಳಿಗಳನೆ: **ಆದಿಪು,** ೪. ೩೪ ವ)

**ನೆಱ** – ಮರ್ಮ, ಸತ್ವ (ಶನಿ ನಿಲ್ವವೊಲಿಲ್ಲಿ ಪಾಟಿಗಿನ್ನೆವರಂ ಇರ್ದವು ಇನ್ನೆಮಗೆ ನಿತ್ತರಿಸಲ್ ನೆಱವಿಲ್ಲ: **ಆದಿಪು,** ೯. ೮೯)

**ನೆಱಗೊಳ್** – ಮರ್ಮವನ್ನು ತಿವಿ (ಮದನಂ ಆಕೆಯ ದೂಸಱಿಂ ಎನ್ನಂ ಎಚ್ಚಪಂ ನೆಱೆಗೊಳೆ ಪೂವಿನಂಬು ಅಲಗಿನಂಬುಗಳೆಂಬಿನಂ ಅಂಬುಜಾನನೇ: **ಪಂಪರಾ,** ೯. ೧೬೦); ಮನಸ್ಸನ್ನು ಗೆಲ್ಲು (ಕೊಳಲ್ವಾದಕರ್ ಬಂದಿರೆ ಗೀತಾರಾವದಿಂದಂ ನೆಱೆಯೆ ನೆಱಗೊಳಲ್ ರಕ್ತಕಂಠೀಜನಂ ಬಂದಿರೆ: **ಆದಿಪು,** ೨. ೩)

**ನೆಱನ್** – ಮರ್ಮಸ್ಥಾನ (ತಮ್ಮ ಪರಾಭವಮನಱೆಯೆ ತೆಱೆಯೆ ನೆಱನೆತ್ತಿ ಮೂದಲಿಸಿದಂತಾಗಿ ಪಿರಿದುಮ್ಮಳಿಕೆಯಿಂದಲ್ಲಿವೊಕ್ಕು: **ಸುಕುಮಾಚ,** ೨. ೩೭ ವ)

**ನೆಱನೆತ್ತು** – ಚುಚ್ಚಿ ಮಾತಾಡು (ಎಂದು ತನ್ನಂ ಏಱೆಗೊಂಡ ಮುಳಿಸಿನೊಳ್ ನೆಱನಲ್ಲದುದಂ ಮಾಡಿ ನೆಱನೆತ್ತೆ: **ಶಾಂತಿಪು,** ೭. ೬೦ ವ)

**ನೆಱಪು** – ನೆರವೇರಿಸು (ಪೂರ್ವೋಕ್ತ ಬಾಹುಲ್ಯದಿಂ ಲೋಕಾಕಾಶ ವ್ಯಾಪಕಕವಾಟಕ್ರಿಯೆಯಂ ನೆಱೆಪಿ: **ಆದಿಪು,** ೧೬. ೪೯ ವ)

**ನೆಱಲ್** – ಆಧರಿಸು (ನಳಿನದಳಂಗಳೊಳ್ ನೆಱಲ್ದು ಬಿರಯಿಸುವ ಜಕ್ಕವಕ್ಕಿಗಳ ಮದನಾನಲಜ್ವಾಲೆಗೆ ಜೌವನಮನೊಡರಿಸಿಯುಂ:

**ಕುಸುಮಾಕಾ,** ೪. ೨೯ ವ); ಜೋತುಬೀಳು (ಕಾವನ ಅಂಬು ಅವಱ ಬಿಣ್ಪಿನೊಳ್ ಒಯ್ಯನೆ ಜೋಲ್ದವೋಲೆ ತಾಂಬೂಲ ಕರಂಕವಾಹಿನಿಯ ಮೇಲೆ ನೆಱಲ್ದಿರೆ ಬಾಲೆ ಲೀಲೆಯಿಂ: **ಪಂಪಭಾ,** ೪. ೪೩)

**ನೆಱಲ್ದಿರು –** ನಿಶ್ಚೇಷ್ಟಿತವಾಗಿರು (ಇಡಿದಿರೆ ರೋಮಕೂಪದೊಳಗೆ ಉರ್ಚಿದ ಸಾಲ ಸರಲ್ಗಳುಂ ತೆಱಂಬಿಡಿದಿರೆ ಬೆಟ್ಟು ಒರ್ಗುಡಿಸಿದಂತೆ ನೆಱಲ್ದಿರೆ .. .. ಬಿಟ್ಟಿಂ ಏನೆಸೆದನೋ ಶರಶಯ್ಯೆಯೊಳ್ ಅಂದು ಸಿಂಧುಜಂ: **ಪಂಪಭಾ,** ೧೩, ೬೨)

**ನೆಱವಿ –** ಕೊನೆ (ಕಡೆಯೊಳ್ ಉತ್ಕೃಷ್ಟಾಯುಷ್ಯಮನೆಯ್ದೆ ನೆಱೆಯಿಸುವ ನೆಱವಿ ಭವಪರಿವರ್ತನಮೆಂಬುದು: **ಸುಕುಮಾಚ,** ೬. ೬ ವ)

**ನೆಱವಣಿ –** ಹೆಚ್ಚುಗಾರಿಕೆ (ಅಂತುಮೇಶಂ ಕಂಗುಲಿಯ ಕಲಿಯಾಂಡರ ಭಕ್ತಿಯ ನೆಱವಣಿಯಂ ಪೊಗಳ್ದು: **ತ್ರಿಷಷ್ಟಿಪು,** ೨೦. ೨೨ ವ)

**ನೆಱವು –** ಪುಷ್ಟಿ (ನೆಱವಂ ತಾಳ್ದಿದಪಾಸ್ತದುರ್ನಯ ತಮೋಬಂಧಂ ಶ್ರುತಸ್ಕಂಧಮಾದಱೆವಿಂದಂ ಗಣನಾಯಕರ್ ಸಮಱೆ: **ಆದಿಪು,** ೧. ೩೯): ಸಾಧನ ಸಂಪತ್ತು [ಅಱೆವುಂ ನೆಱವುಂ ತನ್ನೊಳ್ ನೆಱೆದಂದಱೆದಱೊಳ್ ಎಸೆಪುದು: **ಆದಿಪು,** ೩. ೬೭); ಸಂಚಯನ (ಮುಱುಕದ ಮೆಲ್ಪಿನ ಭಂಗಿಯ ನೆಱವಿನೊಳಿವೆ ಮಿಗಿಲ್ ಅವರ್ಕಂ: ಆಧಿಪು, ೧೧. ೯೫)

**ನೆಱೆ –** ಪುಷ್ಟಗೊಳ್ಳು (ಉಜ್ಜ್ವಳ ಪಂಚರತ್ನ ಭಾಸ್ವದಸದನಂಗಳಿಂ ನೆಱೆದುದಂ ಸಮೆದಂ ಪುರಮಂ ಪುರಂದರಂ: **ಆದಿಪು,** ೬. ೮೯); ಪೂರ್ಣಗೊಳ್ಳು, ನೆರವೇರು (ನೆಱೆದತ್ತೆತ್ತಾನುಂ ಈ ದಂಪತಿಯ ಬಯಕೆ: **ಆದಿಪು,** ೪. ೪೮); ಚೆನ್ನಾಗಿ (ಎಂದವರ ದೇಶನಾಮಕುಲಗೋತ್ರಂಗಳಂ ನೆಱೆಯೆ ತಿಳಿಯೆ: **ಆದಿಪು,** ೧೩. ೪೧ ವ); ಸಮಾನಶಕ್ತವಾಗು (ಮೃಗವ್ರಜದೊಡ್ಡೆಂ ಮೃಗರಾಜನಂ ನೆಱೆವುದೇ: **ಆದಿಪು,** ೧೩. ೫೭); ಮರ್ಮಸ್ಥಾನ, ಪ್ರವಾಹ (ನೆಱೆಗೊಂಡುದು ನಾರಾಚಂ ನೆಱೆಗಾಣಲ್ಕಾರ್ತುದಿಲ್ಲ ಬೀರಕೆ ಬೀಯಕ್ಕಿಱೆವ ಬೆಡಂಗನೊಳಾರ್ ದೊರೆ ನೆಱೆ ತೋರ್ಕುಮೇ ಶತ್ರುಜನಕಂ ಅರ್ಥಿಜನಕ್ಕಂ: **ಗದಾಯು,** ೧. ೧೮); ಸಾಕಾಗು, ಸಾಲು (ದಿನಮೆಲ್ಲಂ ನಿಯಮವ್ರತಕ್ಕೆ ನೆಱೆಯಿತ್ತಿಲ್ಲೆಂಬ ಸತ್ ಖ್ಯಾತಿ ನೆಟ್ಟನೆ ತನ್ನೊಳ್ ನಿಜಮಾಯ್ತು: **ಶಾಂತೀಶ್ವಪು,** ೨. ೧೧); ಚೆನ್ನಾಗಿ, ಸ್ಪಷ್ಟವಾಗಿ (ಈ ಪಕ್ಷಿಗಳ ವಿರೋಧಮಂ ಈ ತಿರ್ಯಗ್ಜಾತಿಗೆ ನುಡಿ ಗಡಣಿಸಿದ ತೆಱನಂ ನೆಱೆಯಱೆವಂತೆ ಎನಗೆ ನೇಮಿಸುವುದು: **ಶಾಂತೀಶ್ವಪು,** ೧೩. ೨೧ ವ); ದೊರಕು (ನೀಮಿಂದು ಬಂದೊಡೆ ಅವು ನೆಱೆಯವಾಗಿ ಮುತ್ತಿನೋಗರದ ಅಕ್ಕಿಯಂ ಬೆರಸಿ ಬಾಗಿದ ಕಾರಣದಿಂ .. .. ಪುಷ್ಪವಾಸನೆಯಕ್ಕಿಯಯ ಕೂಟನುಣ್ಗುಂ ಉಟೆದಕ್ಕಿಯ ಕೂಟಂ ಉಗುಳುತಿರ್ಕ್ಕುಂ: **ಸುಕುಮಾಚ,** ೧೧. ೩೫ ವ); ಹೆಚ್ಚಾಗಿ, ಸಮೃದ್ಧವಾಗಿ (ಎನಗೆ ನೆಱೆಯೆ ತುಡುಗೆಯಂ ಮಾಡಿಸಲ್ ಭಾಗಸಮುಳ್ಳೊಡೆ ನಿನಗಾಂ ಪೆಂಡತಿಯೆನಾಗಿ ನಿನ್ನೊಡವರ್ಪೆಂ: **ವಡ್ಡಾರಾ,** ಪು ೧೭, ಸಾ ೧೯); ಸಮರ್ಥವಾಗು (ನಿನ್ನ ದೈವಮಾರ್ಹತರ್ಗೇನುಂ ಬಾಧೆಗೆಯ್ಯಲ್ ನೆಱೆಯದೆಂದು ನುಡಿವುದುಂ: **ಚಾವುಂಪು,** ಪು. ೪೪೯. ಸಾ. ೩೧)

**ನೆಱೆಕೊಳ್ –** ಸರ್ವಸ್ವ ಹರಣಮಾಡು, ಚುಚ್ಚು (ನೆಱೆಕೊಳ್– ಸರ್ವಸ್ವಹರಣೇ ಮರ್ಮಭೇದೇ ಚ: **ಶಬ್ದಮದ,** ಧಾ ೯೬೫)

**ನೆಱೆಗಿವುಡ –** [ನೆಱೆ+ಕಿವುಡ] ಪೂರ್ತಿ ಕಿವುಡ (ಉಗ್ರಗ್ರಹಂ ಸೋಂಕಿದಂತೆ ಮರುಳಾಗಿಯುಂ ನೆಱೆಗಿವುಡರಂತೆ ಕಿವುಂಡುಗೇಳ್ದುಂ: **ಪಂಚತಂತ್ರ,** ೭೦ ವ)

**ನೆಱೆಗೆಲ್ಲ–** ಪೂರ್ಣ ಗೆಲವು (ನಿನ್ನನಾನೇಱೆಪೆಂ ಎನ್ನ ತೋಳ್ಗೆ ಬೞೆಯಂ ನೆಱೆಗೆಲ್ಲಮನಲ್ಲದಂದು ಬಲ್ಪೇಱೆದೆನುತ್ತವಂ ತಿರಿಪಿದಂ ನಿಜನಿಷ್ಠುರಕಾಂಷ್ಠದಂಡಮಂ: **ಚಂದ್ರಪ್ರಪು,** ೫. ೭೪)

**ನೆಱೆಗೊಳ್ –** ಮನಸೆಳೆ (ನೆಱೆಗೊಳೆ ಗಾಡಿ ನೋಟ್ಟಿ ಬಗೆ ಬರ್ಪುದುಂ: **ಪಂಪಭಾ,** ೪. ೭೬); ಆಳವಾಗಿ ನಾಟು ಮುಂದಱೆಯದೆ ಸೀತೆಯಂ ಮದನನಾಕೆಯ ದೂಸಱೆಂ ಎನ್ನಂ ಎಚ್ಚಪಂ ನೆಱೆಗೊಳೆ ಪೂವಿನಂಬು ಅಲಗಿನಂಬುಗಳೆಂಬಿನಂ: **ಪಂಪರಾ,** ೯. ೧೬೦)

**ನೆಱೆದಿಂಗಳ್ –** ಪೂರ್ಣಚಂದ್ರ (ಕೋಗಿಲೆಗಳೆಂದೊಡೆ ಬಂದೆಳಮಾವೆಂದೊಡೆ ನೆಱೆದಿಂಗಳೆಂದೊಡೆ ಉದ್ದಂ ಉರಿವಂ ಗೊರವಂ: **ಕಬ್ಬಿಗಕಾ,** ೧೧೫)

**ನೆಱೆಯಿಸು –** ಮುಗಿಸು (ಕಡೆಯೊಳ್ ಉತ್ಕೃಷ್ಟಾಯುಷ್ಯಮನೆಯ್ದೆ ನೆಱೆಯಿಸುವ ನೆಱವಿ ಭವಪರಿವರ್ತನಮೆಂಬುದು: **ಸುಕುಮಾಚ,** ೬. ೬ ವ)

**ನೆಱೆಯೆ –** ಪೂರ್ಣವಾಗಿ (ಕೂಸಂ ನೆಱೆಯೆ ಕೆಯ್ಗೆಯ್ಸಿಂ ಎಂದು ಮುನ್ನಂ ಕೆಯ್ಗೆಯ್ಸುತಿರ್ದ ತಱದ ಗುಱಗೆಯರಪ್ಪ ಅಂತಃಪುರ ಪುರಂಧ್ರಿಯರಂ ಕರೆದು ಪೇಟ್ದುದುಂ: **ಪಂಪಭಾ,** ೩. ೪೪ ವ)

**ನೆಱೆವೆಂ –** ಸಮರ್ಥನಾಗಿದ್ದೇನೆ (ಉಱದೆ ಇದಿರಾಂತು ನಿಂದ ರಿಪುಸೈನ್ಯಮಂ ಆಹವರಂಗದಲ್ಲಿ ತತ್ತಱದಱೆದು ಇಕ್ಕಲ್ ಆಂ ನೆಱೆವೆಂ ಇನ್ನಿರವೇಡ ಒಡಗೊಂಡು ಪೋಗು: **ಪಂಪಭಾ,** ೧೧. ೯೭)

**ನೆಟಲ್ –** ನೆರಳು (ನೆಟಲಂಚೆಯಂತೆ ನೆಟಲನೆ ತೋರ್ಪ ನೆಟಲ ಮರಂಗಳುಮಂ: **ಹರಿವಂಶ,** ೧೧. ೨೪ ವ); ಪ್ರತಿಬಿಂಬ

**ನೆಟಲಿಕ್ಕು –** ಪ್ರತಿಬಿಂಬಿಸು (ಸುರಶರಾಸನಂಗಳ ನೆಟಲಿಕ್ಕಿದಂತೆ ನಿಮಿರ್ದ ನಿರ್ಝರಂಗಳುಮಂ ಅಪ್ಪುಕೆಯ್ದು: **ಕಾದಂಬ,** ೯. ೧೧ ವ)

**ನೇಗಿಲ್ವಾಯ್ –** ನೇಗಿಲಿನ ಬಾಯಿ, ಗುಳ (ಒಂದರ್ಥಕ್ಕೆ: ಕುಟಮೆಂದು ನೇಗಿಲ್ವಾಯ ಕರ್ಬುನಂ: **ಶಬ್ದಮದ,** ೩೩ ವೃತ್ತಿ ೩೫)

**ನೇಣ್ –** ಹಗ್ಗ (ನಿಡು ನೇಣುಂ ಪಲವು ಸೋರೆಗಳುಮಂ ತಂದು ತೀವಿಸಿಕೊಂಡು ಆತನುಮಂ ತೆಗೆದು: **ವಡ್ಡಾರಾ,** ಪು ೧೮೭, ಸಾ೧೭); ದಾರ (ಅಕ್ಷಿದ್ವಂದ್ವಮಂ ಮುಚ್ಚಿಕೊಂಡು ನೇಣಂ ತಲೆಸುತ್ತಿಕೊಂಡು ಪಿರಿದುಂ ಪೂಮಾಲೆಯಂ ಸೂಡಿ .. .. ತಟಿಲ್ವರ್: **ಸಮಯಪ,** ೬. ३६)

**ನೇಣಜಂತ್ರ –** ಸೂತ್ರದ ಬೊಂಬೆ (ಮೆಯ್ಮರವಟ್ಟು ಕಟಿಲ್ದು ನೇಣಜಂತ್ರದವೊಲ್ ಅಮರ್ಕೆಗೆಟ್ಟು ಅಟಿಲೆ ಲಾಮಗಲಿ ಮೂರ್ಛೆಗೆ ಸಂದು: **ಆಚವರ್ಧ,** ೯. ೫೮)

**ನೇಣ ನೆರವಿ –** ಜನಿವಾರದ ಜನ, ಬ್ರಾಹ್ಮಣವೃಂದ (ವೇದಮನಂತಂ ಗಡ .. .. ಅಂತವು ಮೂಱಾದುವೆ ಪೇೞ್ ಭ್ರಾಮತಾಪುದೆಮಗೆ ನೇಣ ನೆರವಿಯ ನುಡಿಯೊಳ್: **ಸಮಯಪ,** ೧೧. ೧೨)

**ನೇಣುಗ –** ಹಗ್ಗ ಮಾಡುವವನು ಅಥವಾ ಮಾರುವವನು (ಉಗ ಪ್ರತ್ಯಯಕ್ಕೆ: ಊರುಗಂ, ನಾರುಗಂ, ಕಾರುಗಂ, ನೇಣುಗಂ: **ಶಬ್ದಮದ,** ೨೧೫ ಪ್ರ)

**ನೇಣ್ಕಾರ್ತಿ** – ಮೋಸಗಾತಿ (ಪಥಿಕರಂ ಒಳ್ಮಾತುಗಳಿಂ ಸಿಲ್ಕಿಸಿ ಪತಿಯಿಂದಗಿಯಿಪ ನಾಣ್ಕಾತಿತಂದಮಂ ನೆನೆಯಿಸದಳ್: **ಪಾರ್ಶ್ವನಾಪು,** ೧೨. ೭೭)

**ನೇಣ್ಬಲೆ** – ಕಣ್ಣಿ ಬಲೆ (ಬೆಗಡುಗೊಂಡು ನೇಣ್ಬಲೆಯ ತೊಡರೊಳ್ ತೊಡಂಕಿ ನಡುವುವ ಕುರಂಗಿಯೊಳ್ ದೊರೆಯಪ್ಪಳ್: **ಆಚವರ್ಧ,** ೪. ೫೮ ವ)

**ನೇತಾರ** – ನಾಯಕ (ಆರಾದೇಶಕ್ಕೆ: ಸವಿತಾರ, ಹೋತಾರ, ಕರ್ತಾರ: **ಶಬ್ದಮದ,** ೯೪ ಪ್ರ)

**ನೇತೃ** – ನೇತಾರ, ಮುಂದಾಳು (ಅದು ಕಾರಣದಿಂ ನಿನ್ನ ರಾಜ್ಯಕ್ಕಾತನೇ ನೇತೃವಾದಂ: **ಪಂಚತಂತ್ರ,** ೧೬೫ ವ); ಯಜ್ಞಕರ್ಮ ಆಡಿಸುವ ಮುಖ್ಯ ಪುರೋಹಿತ (ಅಗ್ನೀಧ್ರ ಮೈತ್ರಾವರುಣ ಅಗ್ನಿಪರಿಚಾರಕ ಉದ್ಗಾತೃ ನೇತೃ ಹೋತೃ ಜಮದಗ್ನಿ ಆದಿಗಳಪ್ಪ ಷೋಡಶರ್ ಋತ್ವಿಜರ್ಕಳಿಂ: **ಪಂಪಭಾ,** ೬. ३३ ವ)

**ನೇತ್ರ** – ಕಣ್ಣು; ರೇಷ್ಮೆ ಬಟ್ಟೆ (ಪಯಃಪಯೋಧಿ ಫೇನಸಂಕಾಶ ದುಕೂಲೋಪಪ್ರಚ್ಛತ್ ಆಚ್ಛಾದಿತ ವಿಚಿತ್ರ ನೇತ್ರ ಉಭಯೋಪಧಾನ ಶಯ್ಯಾತಳದೊಳ್: **ಆದಿಪು,** ೫. ೨೨ ವ)

**ನೇತ್ರತ್ರಿಭಾಗ** – ಕುಡಿನೋಟ, ಕಡೆಗಣ್ಣು (ಬಂದೆಜಗಿದ ರಾಜಚಕ್ರಮನನುಕ್ರಮದೊಳೆ ನೇತ್ರತ್ರಿಭಾಗ ಕಟಾಕ್ಷ ಸಮಗ್ರೇಕ್ಷಣಭ್ರೂವಿಭ್ರಮ: **ಆದಿಪು,** ೧೧. ೨೫ ವ)

**ನೇತ್ರದುಕೂಲ** – ರೇಷ್ಮೆ ಬಟ್ಟೆ (ಸುತ್ತಿದ ನೇತ್ರದಕೂಲದೊಳಂ .. .. ಮಂದೈಸಿ ನೆಗೆವ ಅಗರುಧೂಪಧೂಮದೊಳಂ: **ಕಾದಂಬ,** ೧. ೬೮ ವ)

**ನೇತ್ರಪಟ್ಟಿಕಾ** – ಕಣ್ಣುಪಟ್ಟಿ (ಉಗ್ರಮುಂಖಪ್ರೇಖೋಳಾನೇಕ ನೇತ್ರಪಟ್ಟಿಕಾಸಟಾಳ ಸರಳಕುಂತಹಸ್ತಂ: **ಆದಿಪು,** ೧೩. ೪೫ ವ)

**ನೇತ್ರಪಟಿ** – ರೇಷ್ಮೆ ಬಟ್ಟೆ (ಮಣಿಕುಟ್ಟಿಮಭೂಮಿಯೊಳ್ ಪಾಸಿದ ನೇತ್ರಪಟಿಯ ಮೇಗೆ ನಡೆದ ಮೃದು ಲಲಿತಮಪ್ಪ ಚರಣದ್ವಯದೊಳ್: **ವಡ್ಡಾರಾ,** ಪು ೨೯, ಸಾ ೮)

**ನೇತ್ರಪುತ್ರಿಕಾ** – ಕಣ್ಣ ಪಾಪೆ (ಅಂತು ಕಂತುಗಜ ವಿಹಾರವೀಥಿಯುಂ .. .. ನೇತ್ರಪುತ್ರಿಕಾ ಪ್ರಸಾಧನಸನಮುಂ.. .. ಎನಿಪ ಪುರ ಬಹಿಃಪುರದಿಂದೊಳಗೆ: **ಪಂಪರಾ,** ೧. ೧೧೨ ವ)

**ನೇತ್ರವಟ್ಟಣಿಗೆ** – ನೇತ್ರಪಟಿ (ಚೀನದ ಮಹಾಚೀನದ ಪಟಿಯ ಚಿತ್ರಾವಟಿಯ ಪಟ್ಟಾವಟಿಯ ಪಟ್ಟಸೂತ್ರದ ಚಿತ್ರಸೂತ್ರದ ನೇತ್ರವಟ್ಟಣಿಗೆಯ ಪುಟ್ಟಿಗೆಗಳಂ ಒಟ್ಟಿ ಬೆಟ್ಟಾಗಿ ಪುಂಜಿಸಿ: **ಸುಕುಮಾಚ,** ೧೦. ೯೧ ವ)

**ನೇತ್ರಸೂತ್ರ** – ಮಂಗಳಸೂತ್ರ (ಗೋರೋಚನ ರಸದಿಂದಂ ತೊಯ್ದ ನೇತ್ರಸೂತ್ರದ ತೆಱದಿಂ: **ಕಾದಂಬ,** ೫. ೧೯)

**ನೇತ್ರಾಂಬರ** – ನೇತ್ರಪಟಿ (ಚಿತ್ರ ನೇತ್ರಾಂಬರ ನಾನಾಹೇತಿ ಹಸ್ತೋದ್ಭಟಭಟಪೃತನಾಭೀಳಮಂ: **ಆದಿಪು,** ೧೧. ೨೪)

**ನೇತ್ರಾಧ್ವ** – ಕಣ್ಣ [ದೃಷ್ಟಿಯ] ಮಾರ್ಗ (ನಿಜ ನೇತ್ರಾಧ್ವದೊಳ್ ಆಗಳ್ ಅದಟಂ .. .. ದೊರೆಕೊಂಡು: **ಪಂಪರಾ,** ೧೦. ೨೦೯)

**ನೇತ್ರಾವಳಿ** – ನೇತ್ರಪಟಿ (ಬಿಗಿದುಟ್ಟ ನೇತ್ರಾವಳಿಯ ಚಲ್ಲಣಮುಂ ತಲೆಗೆ ಮೂದಲೆಯಾದ ಭೂರಿಭುಜಶಿಖರಂಗಳ್ಗೆ ದಿಟ್ಟಿಯಾಗದಂತೆ: **ನೇಮಿನಾಪು,** ೮. ೬೭ ವ)

**ನೇದಿಷ್ಠ** – ಹತ್ತಿರದಲ್ಲಿರುವ (ಕಾರ್ತಸ್ವರಮಕುಟಮಿದೆಂಬಂತುಮಾ ಶಕ್ರಯೋಷಿತ್ ನೇದಿಷ್ಠಂ ಪದ್ಮರಾಗೋಜ್ವಳಮುಕುರಮಿದು ಎಂಬಂತುಂ .. .. ತೋಱೆತ್ತುದಯಗಿರಿ: **ವರ್ಧಮಾಪು** ೮. ೭೭)

**ನೇಪಥ್ಯ** – ಭೂಷಣ (ಪ್ರತಿಕರ್ಮಂ ನೇಪಥ್ಯಂ ಪ್ರತಿಸಂಸ್ಕಾರಂ ಪ್ರಸಾಧನಂ ವೇಷಂ ಅಲಂಕೃತಿ: **ಅಭಿಧಾವ,** ೧. ೧೩. ೧)

**ನೇಪಥ್ಯನಿಕೇತನ** – ಸಿಂಗರಗೊಳ್ಳುವ ಜಾಗ (ನೇಪರ್ಥಯನಿಕೇತನಕ್ಕೆ ನಡೆತಂದು ಇಕ್ಕಿದ ಕನಕಪರ್ಯಂಕವಳತಳ್ಪಮಂ ಅಳಂಕರಿಸಿ: **ರಾಜಶೇವಿ,** ೧೩. ೫೯ ವ)

**ನೇಮಿ** – ಚಕ್ರದ ಪಟ್ಟಿ (ಎರಡು ತೇರೊಂದನೊಂದೆಯ್ತರೆ ನಡುಗೆ ನೆಲಂ ನೇಮಿ ಸಂಘಟ್ಟದಿಂದಂಬರದೊಳ್ ಮತ್ತೇಭ ಸಿಂಹಧ್ವಜಮಭಿನಯಮಂ ಬೀಱೆ: **ಪಂಪರಾ,** ೧೩. ೧೦೨); [ಜೈನ] ಇಪ್ಪತ್ತೆರಡನೆಯ ತೀರ್ಥಂಕರ (ನಿಪ್ಪೊಸತಾದುದು ಜಗಕೆ ನೇಮಿಪುರಾಣಂ: **ನೇಮಿನಾಪು,** ೧. ೨೮)

**ನೇಮಿಸು** – ನಿರೂಪಿಸು (ಈ ಪಕ್ಷಿಗಳ ವಿರೋಧಮಂ ಈ ತಿರ್ಯಗ್ಜಾತಿಗೆ ನುಡಿ ಗಡಣಿಸಿದ ತೆಱನಂ ನೆಱೆಯಱೆವಂತೆ ಎನಗೆ ನೇಮಿಸುವುದು: **ಶಾಂತೀಶ್ವಪು,** ೧೩. ೨೧ ವ)

**ನೇಯ** – ಕಾವ್ಯದಲ್ಲಿನ ಒಂದು ಅರ್ಥದೋಷ (ನೇಯಂ ಕವಿತೆಗೆ ನವಚಾಂಪೇಯಂ ಮಧುಕರಿಗೆ ಸಲ್ಲದಂತಿರೆ: **ಲೀಲಾವತಿ,** ೭. ೭೭)

**ನೇರ್** – ಕತ್ತರಿಸು (ಇಡಿವಾಟ್ ಉರ್ಚುವ ನೇರ್ವ ಸೀಳ್ವ ಅರಿವಂ ಏಗೋರ್ಲಲ್ವೋಪ ಪೋಟ್ವ ಇಲ್ಕಿನೊಳ್ ನಡುವುದ್ದಂ ಬಿರಿವ ಅಂಬಿನೊಳ್ ಕಿಡೆ: **ಶಾಂತಿಪು,** ೪. ३೫); ನೇರವಾಗಿರುವಿಕೆ (ನೇರಿರ್ದ ತಿದಿಗಳಂ ಸೀಟ್ಟುಂ, ಇದ್ದಿಲರಾಸಿಯಂ ಸೂಸಿಯುಂ ನಿಸರ್ಗಚಪಳಸ್ವಭಾವದಿಂದಾಡುತಿರ್ದು: **ಪಂಚತಂತ್ರ,** ೮೨ ವ)

**ನೇರಾಣಿ** – ಅಪರಂಜಿ (ಶೋಣಮಣಿದೀಪ್ತಿರುಚಿ ಕೋಣ್ಗೋಣೊಳ್ ಪಜ್ಜಳಿಸೆ ರತ್ನದೀಪ್ತಿ ಸುವರ್ಣಕ್ಷೋಣೀಧರಮೆನಿಪುದು ನೇರಾಣಿಯ ಪೊಂಬೆಸೆದ ಸಮೆದ ರಾಣೀವಾಸಂ: **ಅಜಿತಪು,** ೨. ೧೯)

**ನೇರಾಣಿಯ ಪೊನ್** – ಅಪ್ಪಟ ಬಂಗಾರ (ನೇರಾಣಿಯ ಪೊನ್ನಂತಿರೆ ಲೇಸೆನಿಪುದು .. .. ಧರ್ಮಂ ಪಿತ್ತಳೆಯಂತೆಸೆವುದು ಧರ್ಮವಾಗಿ ಸಲಲಱೆದಪುದೇ: **ಸಮಯಪ,** ೧೫. ೨೧)

**ನೇರಿಡು** – ಜೋಡಿಸಿಡು (ಮಧುಚೌತಂ ಪೂಸಿ ನೇರಿಟ್ಟ ಮಾರ್ಗದೆ ಕಂಕೆಲ್ಲದ ಶೋಣಪಲ್ಲವಚಯಂ ಚೆಲ್ವಾದುವುದ್ಯಾನೊಳ್: **ಪುಷ್ಪದಂಪು,** ೮. ೮೨)

**ನೇರಿತ್ತು** – ಸುಂದರವಾಗಿ, ಚೆನ್ನಾಗಿ [ತಾರಾಪತಿಯಾ ಸಮಸ್ತಸುರಲೋಕಮುಮಂ ನೇರಿತ್ತು ಬೆಳಗಿ ಪೋಪುದಂ: **ಆದಿಪು,** ೧೬. ೪೬); ನೇರವಾದುದು (ಸುಜನರ ಮನದಂತೆ ನೇರಿತ್ತಾಗಿ ನಲಂಬೆತ್ತಿರ್ದಲಲತೆಗಳುಮಂ .. .. ಮನೋವಲ್ಲಭೆಗೆ ತೋರುತ್ತುಂ: **ಧರ್ಮಾಮೃ,** ೧೩. ೧೬ ವ)

**ನೇರಿದ** – ನೇರ ಸ್ವಭಾವದವನು (ಒಪ್ಪಿಸಿ ಮನಮಂ ಮಾನಿನಿಗೆ ಒಪ್ಪಿಸಿ ತನುವಂ ತಪಕ್ಕೆ ಮುನಿ ಮನಸಿಜನಿಂ ಸೊಪ್ಪಾಗಿರ್ದು ಒರ್ಚವಡಿಯ ಕುಪ್ಪಸಮಂ ಪೋಲ್ತು ಪೊಱಗೆ ನೇರಿದನಾದಂ: **ಪಂಪರಾ,** ೪. ೧३)

**ನೇರಿದುವು** – ಸಮನಾದವು, ಹೊಂದಿಕೊಳ್ಳುವಂಥವು (ಕುಂದುವ ಪೆರ್ಚುವ ನಂದಿಸೆ ನಂದುವ ಮೂರ್ತಿಗಳಂ .. .. ನೇರಿದುವೆಂದುಂ .. .. ಎನಲಾಗದು: **ಸಮಯಪ,** ೮. ೮೦)

**ನೇರ್ಗಿಱಿದು** – [ನೇಱ್+ಕಿಱಿದು] ಕೊಂಚ ಚಿಕ್ಕದು (ಪೆಂಪಿಂದಮುರ್ಬಿದ ಗುಣ್ಪಿಂದಂ ಇದು ಅಬ್ಧಿಗಗ್ಗಳಮೆನಲ್ ಕುಂದೊಂದು ಕಣ್ಗೆತ್ತಿದಂತಿದು ದಲ್ ನೇರ್ಗಿಱಿದು: **ಆದಿಪು,** ೧. ೫೫)

**ನೇರ್ಗಿಱಿಯ** – ಕೊಂಚ ಚಿಕ್ಕವನು (ನೇರ್ಗಿಱಿಯಂ ವಿಶ್ವಮನಱಿವ ಮಹಿಮೆಯಿಂ ವರ್ಧಮಾನ ಜಿನಪತಿಗೆ ವರ್ಧಮಾನ ಮುನೀಂದ್ರಂ: **ಪಂಪರಾ,** ೧. ೧೫)

**ನೇರ್ಗಿಱಿಯಳ್** – ಕೊಂಚ ಚಿಕ್ಕವಳು (ಅನುಂದರಿಯೆ ಕತಿಪಯಭವಪರಿಭ್ರಮಣದಿಂ ಬಂದು ಬಾಹುಬಲಿ ಕುಮಾರನಿಂ ನೇರ್ಗಿಱಿಯಳಾಗಿ: **ಆದಿಪು,** ೮. ೫೩ ವ)

**ನೇರ್ಗೋಲ್ವರಿ** – ನೇರವಾಗಿ ಬಾಣದಂತೆ ಸಾಗು (ಅರಿನ ನಡುವುಡಿವ ನೇರ್ಗೋಲ್ವರಿದು ಉರ್ಚುವ ನಟ್ಟು ತೊನೆವ ಕಣೆಗಳ್ಗೆ ಮೊಗಂದಿರಿಯದಿರಿ: **ಪಂಪಭಾ,** ೧೦. ೭೪)

**ನೇರ್ಗೋಲ್ವೋಗು** – ನೇರ್ಗೋಲ್ವರಿ (ಇಡಿವಾಟ್ವುರ್ಚುವ ನೇರ್ವ ಸೀಳ್ವರಿವ ನೇರ್ಗೋಲ್ವೋಪ ಪೋರ್ಬಿವೆಲ್ವಿನೊಳ್ ನಡುವುದ್ದಂ ಪರಿವಂದದೊಳ್ ಕಿಡೆ: **ಶಾಂತಿಪು,** ೪. ೩೫)

**ನೇರ್ಪಡು** – ಹೊಂದು, ಅಳವಡು (ಸನ್ಯಾಸಮಂ ಮಾಳ್ಪುದೆಂಬಿವು ನೇರ್ಪಟ್ಟೆಸೆವನ್ನೆಗಂ ನೆಗಟ್ದು: **ಆದಿಪು,** ೬. ೯)

**ನೇರ್ಪಡುಗಿಡು** – ಸಾಮರಸ್ಯ ಕಳೆದುಕೊ (ನಿಮ್ಮೊಳ್ ನೇರ್ಪಡುಗಿಡದೆ ಸುಖಮ್ಮನ್ನಿನ ತೆಱದೆ ಬಾಳ್ವುದಾಂ ಬೆಸಕೆಯ್ವೆಂ: **ಗದಾಯು,** ೪. ೧೨); ಸನ್ನಡತೆಯನ್ನು ತೊರೆ (ನುಡಿ ಕಿತ್ತಡವೆನಿಸದೆ ನೇರ್ಪಡುಗಿಡದೆ ನರೇಂದ್ರನಾಜ್ಞೆಯಿಂದಿರ್ಪುದು: **ಪಂಪರಾ,** ೭. ೮೧)

**ನೇರ್ಪು** – ಕೊಲೆಯ ಸೇಡು (ಇನತನಯನ ನೇರ್ಪಿಂಗರ್ಜುನನಂ ಮುಂ ಕೊಲ್ವೆನೆನ್ನ ತಮ್ಮನ ನೇರ್ಪಿಂಗೆಗನಿಲಜನಂ ಕೊಲ್ವೆಂ: **ಗದಾಯು,** ೭. ೪೭); ನೇರತನ (ಜಾಣಿನ ಬೆಡಂಗು ವಿಬುಧಪ್ರೀಣನಕರಮೆನಿಸಿ ನೇರ್ಪು ನೇರ್ವೊಡೆ ಪೇಟ್ದಿಂ .. .. ಕವಿತೆಯಿಂ ಕವಿರತ್ನಂ: **ಸುಕುಮಾಚ,** ೧. ೩೯); ಯೋಗ್ಯತೆ (ಜಾಣಿನ ಬೆಡಂಗು ವಿಬುಧಪ್ರೀಣನಕರಮೆನಿಸಿ ನೇರ್ಪುನೇರ್ವೊಡೆ ಪೇಟ್ದಿಂ ಪ್ರಾಣಿಹಿತಾರ್ಥದಿಂ ಅಜಿತಪುರಾಣಮಂ ಅಳವಟ್ಟ ಕವಿತೆಯಿಂ ಕವಿರತ್ನಂ: **ಸುಕುಮಾಚ,** ೧. ೩೯)

**ನೇರ್ವಡಿಸು** – ಹೊಂದಿಸು, ಅಳವಡಿಸು (ಕೊಟ್ಟಕ್ಕಿಯಂ ನೇರ್ಪಡಿಸಿ ನಾಂ ಪಟ್ಟಿರ್ದ ಮಂಚದ ಸಮೀಪದೊಳಿರಿಸಿ: **ಧರ್ಮಪ,** ೯. ೨೪ ವ)

**ನೇಲ್** – ಜೋಲಾಡು (ಕಯ್ಯ ಕಳಶಮಂ ಬಳ್ಳಿಯೊಳ್ ಕಟ್ಟಿ ನೀರಂ ತೆಗೆದಾಗಳ್ ಅದಂ ಪುಲಿ ಪಿಡಿದು ನೇಲ್ವುದುಂ: **ಪಂಚತಂತ್ರ,** ೧೭೭ ವ)

**ನೇಲ್ದಿಡು** – ತೂಗುಹಾಕು (ಪಲವುದಿನಕ್ಕೊಂದು ಕೊಡಂ ತೀವಿದ ಸತ್ತುಗದ ಪುಡಿಯಂ ಪಡೆದು ಆ ಕೊಡನಂ ತನ್ನ ಪಟ್ಟಿರ್ಪ ಎಡೆಯೊಳ್ ಕಟ್ಟಿ ನೇಲ್ದಿಟ್ಟು: **ಪಂಚತಂತ್ರ,** ೨೫೩ ವ)

**ನೇವರಿಸು** – ಮೃದುವಾಗಿ ತೀಡು (ಪರೆದಳಕಾವಳಿಗಳಂ ನೇವರಿಸುತ್ತಂ ಕರ್ಣಪತ್ರಮಂ ಸೈತೊತ್ತುತ್ತಿರಲ್: **ತ್ರಿಷಷ್ಟಿಪು,** ೩. ೧೦೯)

**ನೇವಳ** – ಸೊಂಟಪಟ್ಟಿ, ನಡುಪಟ್ಟಿ (ತಲೆಚವರಂ ನೇವಳಂ ಉಜ್ವಳಿಸುವ ರೇವಂತಮಾಲೆ ಪೊಂಗಂಟೆ ಪೊದಳ್ದುಲಿವ ಕಿಱುಗೆಜ್ಜೆ: **ತ್ರಿಷಷ್ಟಿಪು,** ೨೪. ೨೯೫)

**ನೇವಾಳ** – ಸರ, ಹಾರ (ಮೇಲೆ ಬಿಟ್ಟಿ ಪಾವುಂ ನೇವಾಲಮಗೆ ಮೆಯ್ಯಱಿಯದಿರ್ಪಂ: **ಕಬ್ಬಿಗಕಾ,** ೧೧೪ ವ)

**ನೇವುರ** – ಕಾಲಂದುಗೆ (ಮತ್ತಂ ಅವಳ ಕಾಲ ನೇವುರದ ಇಂಚರಮೆಂಬ ಪೆಣ್ಣಂಚೆಯ ದನಿ ಕರ್ವುವಿಲ್ಲನೆಂಬ ಅಂಚೆಯ ಬಾಳ್ಗಿಂಬಮಲರ್ಗಣೆಯನೆಂಬ ಸೊರ್ಕಾನೆಯಂ ತೊಲಗಲೀಯದೆ ನಿಲಿಸೆಯುಂ: **ಕಬ್ಬಿಗಕಾ,** ೯೭ ವ)

**ನೇಸಱ್** – ಸೂರ್ಯ (ಕಡಲೊಳ್ ನೇಸಱಂ ಅಟ್ದಲುಂ ಪೊಡವಿಯಂ ನುರ್ಗೊತ್ತಲುಂ .. .. ಬಗೆದನಾಗಳ್ ದಪ್ಪದಿಂ ದಪ್ಪಗಂ: **ಕಬ್ಬಿಗಕಾ,** ೧೧೯); ಹಗಲು (ನೇಸಱಿಂದೊಳಗೆ ಆಂ ದಿನಕರಸುತನಂ ಇಕ್ಕಿ ಬಂದಲ್ಲದೆ ಕಾಣೆಂ ದಲ್ ಭವತ್ ಪದಾಬ್ಜಮಂ ಎಂದು ಎಟ್ದಿಂ ಉದಶ್ರುಜಳಲವಾರ್ದ್ರ ಕಪೋಳಂ: **ಪಂಪಭಾ,** ೧೨. ೧೩೪)

**ನೇಹ** – [ಸ್ನೇಹ] ಗೆಳೆತನ (ಇನಿತೊಗೆತರ್ಪ ಕಣ್ಬನಿಗಳಿಂದಮೆ ನೇಹಮಂ ಉಂಟುಮಾಡುವ ಅಂಗನೆಯರೊಳ್: **ಕಾದಂಸಂ,** ೪. ೧೧೯); ಎಣ್ಣೆ (ಅವಚಱಿಸಿ ಪೊಯ್ದ ನೇಹಂ ತವೆಯಲೊಡಂ .. .. ನಗುವವೊಲ್ ಉಜ್ವಳಿಸಿದುವು ವಿಮಳಮನೀದೀಪಿಕೆಗಳ್: **ಲೀಲಾವತಿ,** ೩. ೨೦)

**ನೇಱಿಲ್** – ನೇರಿಳೆ ಹಣ್ಣು (ಪುಟ್ಟುಂಗುರುಡಿ .. .. ಒಂದು ದಿವಸಮುದ್ಯಾನಕ್ಕೆ ಪೋಗಿ ನೇಱಿಪಣ್ಗಳಂ ನಡವರಿಸಿ ಆಯ್ದಾಯ್ದು ತಿನ್ನುತಿರ್ಪಳ್: **ವಡ್ಡಾರಾ,** ಪು, ೯. ಸಾ ೮)

**ನೇಱಿಸು** – ನೇಱಿಡು (ಧೌತವಸ್ತ್ರ ಪವಿತ್ರಾಕ್ಷಸೂತ್ರಂಗಳಂ ತಮ್ಮ ಕವಲ್ಗೊಂಬುಗಳೊಳ್ ನೇಱಿಸಿಕೊಂಡಿಂಬಿನೊಳವರೊಡನೆ ನಡೆವ ಸಾರಂಗಸಮೂಹಮುಮಂ: **ಪಂಚತಂತ್ರ,** ೧೯೮ ವ)

**ನೇಱು** – ಜೋತುಹಾಕು (ದಿವ್ಯಾಂಬರರಚಿತವಿತಾನಂಗಳಂ ನೇಱು ಮುಕ್ತಾಫಳಲಂಬೂಷಂಗಳಂ: **ಆದಿಪು,** ೧೦. ೪೭)

**ನೈಗಮ** – [ಜೈನ] ದ್ರವ್ಯಾರ್ಥಕನಯದ ಒಂದು ಬಗೆ, ವಸ್ತುವಿನ ಉದ್ದೇಶ ಗ್ರಹಿಸುವ ತಿಳಿವಳಿಕೆ (ನೈಗಮ ಸಂಗ್ರಹ ವ್ಯಹಾರ ಋಜುಸೂತ್ರ ಶಬ್ದ ಸಮಭಿರೂಢೈವಂಭುತಾದಿ ನಯವಿಭೇದದೀ: **ಸುಕುಮಾಚ,** ೩. ೩೯ ವ) ನೋಡಿ, 'ದ್ರವ್ಯಾರ್ಥಕನಯ'

**ನೈತಂಬ** – ನಿತಂಬ, ಪಿರ್ರೆ (ಸಲಿಲಕ್ರೀಡೆಯೊಳ್ ಎಯ್ದೆ ನಾಂದು ದುಗುಲಂ ನೈತಂಬಮಂ ಪತ್ತೆ: **ತ್ರಿಷಷ್ಟಿಪು,** ೨೪. ೯೯)

**ನೈದಿಲ ಪೂ** – ನೈದಿಲ್ (ಜಲಜಲನೆ ಒಟ್ಟುತಿರ್ಪ ಪರಿಕಾಲ್ ಪರಿಕಾಲೊಳ್ ಅಳುರ್ಕೆಗೊಂಡ ನೈದಿಲ ಪೂ.. .ಸಿರಿ ನೋಡುಗುಮಾ ವನಾಂತರಾಳದೊಳ್: **ಪಂಪಭಾ,** ೧. ೫೨)

**ನೈನಾದ** – ಸದ್ದು (ಶ್ರೀ ದರಹಾಸಮುಂ ವದನದೀಧಿತಿಯುಂ .. .. ಮೆಲ್ನಡೆ ಭೂಷಣಾದಿ ನೈನಾದಂ ಎಂತುಟುಜ್ವಳಿಪುದು: **ಅನುಭವ,** ೧)

**ನೈಪಥ್ಯ** – ಅಲಂಕಾರಸಾಮಗ್ರಿ (ನಾಟಕಮನಭಿನಯಿಸಿ ಕರಂ ಬಟಲ್ದು ನೈಪಥ್ಯಮಂ ಕಳೆಯಲ್ ಶಕ್ತಿಯಿಲ್ಲದೆ ನಿದ್ರಾಸಕ್ತರಾದೆವು: **ಪಂಚತಂತ್ರ,** ೨೬೬ ವ)

**ನೈಪಥ್ಯನಿಕೇತನ** – ಅಲಂಕಾರದ ಕೋಣೆ (ಮಜ್ಜನಂಬೊಕ್ಕು ನೈಪಥ್ಯನಿಕೇತನಕ್ಕೆ ಬಂದು ಕೈಗೈಯಲೊಡಂ: **ತ್ರಿಷಷ್ಟಿಪು,** ೧೮. ೪೨ ವ)

**ನೈಪುಣ್ಯ** – ನಿಪುಣತೆ, ಪರಿಣತಿ ಸುರರ್ ಬಣ್ಣಿಸೆ ಬಿರ್ದಮೆಚ್ಚು ಮೆಱೆದಂ ಕೋದಂಡನೈಪುಣ್ಯಮಂ: **ಶಾಂತಿಪು,** ೪. ೯)

**ನೈಮಿತ್ತಿಕ –** ನಿರ್ದಿಷ್ಟ ಕಾಲಕ್ಕೆ ಸಂಬಂಧಿಸಿದ; ಜ್ಯೋತಿಷಿ (ಜನಪತಿ ಬೞಿಯಂ ಸಂಭಿನ್ನನೆಂಬ ನೈಮಿತ್ತಿಕಂಗೆ ಬೞಿಯಟ್ಟಿ ಚಿರಂತನರಿಂ ದೃಷ್ಟ ಪರಂಪರ ವಿನೂತ ವಿದ್ಯಾವಿಶೇಷವಿದರಿಂ ಪೇೞಿಂ: **ಶಾಂತಿಪು,** ೫. ೨೦)

**ನೈಮಿತ್ತಿಕಾದೇಶ –** ಜ್ಯೋತಿಷಿಯ ಮಾತು(ವಿಭೀಷಣಂ ನೈಮಿತ್ತಿಕಾದೇಶಮಂ ನೆನೆದು ಭಯಚಕಿತಚಿತ್ತನಾಗಿ: **ಪಂಪರಾ,** ೯. ೧೯೧ ವ)

**ನೈಯಾಯಿಕ –** ನ್ಯಾಯದರ್ಶನಜ್ಞ, ತಾರ್ಕಿಕ (ಮುಗಿ ನೈಯಾಯಿಕ ಕೈಗಳಂ ಮರುಳಲಾ ಚಾರ್ವಾಕ ಮಾತಾಡದಿರ್ ಬಂದಪ್ಪಂ ವಾದಿಗಜೇಂದ್ರವ್ರಾತಮೃಗೇಂದ್ರಂ: **ಧರ್ಮಪ,** ೧. ೨೯)

**ನೈರಂತರ್ಯ –** ತೃಪ್ತಿ (ಭವ್ಯಜನಲಲಕ್ಷ್ಮೀರಮಣಂ ತಣಿಪೆ ಸಹಸ್ರಂ ಸಮುದಾಯಕ್ಕಾದುದಯ್ದೆ ನೈರಂತರ್ಯಂ: **ಅನಂತಪು,** ೯. ೮೮)

**ನೈರ್ಋತಿ –** ನೈಋುತ್ಯದಿಕ್ಕು, ಆ ದಿಕ್ಕಿನ ಪಾಲಕ (ಭೋರೆನೆ ತೂರ್ಯವಂಚೆಯಂ ಅಜಂ ಗಜಮಂ ಬಳವೈರಿ ಮೇಷಮಂ ಮಾರುತಬಂಧು ಸೈರಿಭಮಂ ಅಂಬುಜಮಿತ್ರಸುತಂ ನೃವಾಹಮಂ ನೈರ್ಋತಿ ಅಬ್ಧಿಪಂ ಮಕರಮಂ ಮೃಗಮಂ ಪವನಂ ವಿಮಾನಮಂ ಮಾತರಹರಪ್ರಿಯಂ ವೃಷಭನಂ ಹರನೇಱಿ ನಭಕ್ಕೆ ಸಲ್ವುದುಂ: **ಜಗನ್ನಾವಿ,** ೧. ೩೬)

**ನೈರ್ಗ್ರಂಥ್ಯ –** [ಜೈನ] ನಿಗ್ರಂಥತನ, ಸನ್ಯಾಸ (ಬಗೆ ತತ್ವಾರ್ಥವಿನಿಶ್ಚಯಂಬಡೆಯೆ ನೃರ್ಗ್ರಂಥ್ಯಂ ಪೊಯ್ದತ್ತು: **ಪುಷ್ಪದಂಪು,** ೧. ೫)

**ನೈಲಂಗಲ –** ಚೆಲ್ವಿಕೆ (ನೈಲಂಗಲಮೆನೆ ಚೆಲ್ವಿಕೆ: **ರನ್ನ ನಿಘಂಟು,** ೧೧)

**ನೈಷಂಗ –** ಬತ್ತಳಿಕೆ (ಮಾರ್ಗಣಾಡಂಬರದಿಂ ನೈಷಂಗಮಂ ಸತ್ಕವಿಕಳಿತಕಳಾರಂಬದಿಂ ಶುಂಭತ್ ಅಬ್ಜಾಕರಮಂ ಪೋಲ್ವ: **ಪುಷ್ಪದಂಪು,** ೧. ೮೨)

**ನೈಷ್ಠಿಕ –** ಒಂದು ಆಯುಧ (ತನಗೆ ದೇವೇಂದ್ರನಿತ್ತ ಐಂದ್ರಮೆಂಬ ದಿವ್ಯಾಸ್ತ್ರಮುಮಂ ನೈಷ್ಠಿಕಮೆಂಬ ಮುಷ್ಟಿಯುಮಂ ಕೆಯ್ಕೊಂಡು: **ಪಂಪಭಾ,** ೮. ೩೬ ವ)

**ನೈಷ್ಠುರ್ಯ** – ಕಾಠಿಣ್ಯ (ಕೌಸ್ತುಭಪ್ರಸರದಿಂ ನೈಷ್ಠುರ್ಯಮಂ .. .. ತಾಳ್ದಿ ನೀರಾಕರದಿಂದ ಪಿಟ್ಟಿಂದಳ್: **ಕಾದಂಬ,** ೩. ೮೦)

**ನೈಸರ್ಪ –**[ಜೈನ] ಚಕ್ರವರ್ತಿಯ ನವನಿಧಿಗಳಲ್ಲಿ ಒಂದು, ಭವನ, ಶಯ್ಯೆ, ಆಸನ ಮುಂತಾದವುಗಳನ್ನು ನೀಡುವಂಥದು (ದಿವ್ಯ ಶಯ್ಯಾಸನಪ್ರಭೇದಂಗಳಂ ಪಡೆವ ನೈಸರ್ಪಮುಂ: **ವರ್ಧಮಾಪು,** ೧೦. ೩ ವ), ನೋಡಿ, 'ನವನಿಧಿ'

**ನೊಕ್ಕ –** ತುಂಡಾದ (ನೊಕ್ಕ ಕರುಳ್ಗಳಿಂ ಒಳಮೊಕ್ಕ ಕವಿಲ್ಗಣ್ಣುರ್ವಿನಿಂ ಕೆಂದಲೆಯಿಂ: **ಹರಿವಂಶ,** ೨. ೨೪)

**ನೊಗ –** ಯುಗ, ಎತ್ತಿನ ಜೋಡಿಯ ಮೇಲಿಡುವ ಮರ (ಮಿನುಗುವ ಕೊಂಬಿನಚ್ಚು ಕಿಱುಗೊಂಬಿನ ತಳ್ತ ಅರಗೀಲ್ ಕವಲ್ತ ಕೊಂಬಿನ ಮಡವಡ್ಡವಂದ ನಳಿಗೊಂಬಿನ ಪತ್ತುಗೆ ಜೋಲ್ವ ಬಳ್ಳಿಗೊಂಬಿನ ಬಲೆ ತೋರಗೊಂಬಿನ ನೊಗಂ ನಿಡುಗೊಂಬಿನ ಮೂಂಕು ಕಣ್ಗೆ ಚೆಲ್ವೆನೆ ನಡೆತಂದುವಂದು ಅಸುಗೆಯೆಂಬ ನೆಗಟ್ಟೆಯ ತೇರ್ಗಳೆತ್ತಲುಂ: **ಕಬ್ಬಿಗಕಾ,** ೧೬೭); ನಾಲ್ಕು ಹಸ್ತದ ಅಳತೆ (ಸಂಯಮೋಪಕರಣಕ್ಕೆಡಗೈ ಬಲಗೈ ಪೆಗಲ್ಗೆ ನೇರ್ಪಡೆ ನೊಗದಂತರಂ ನಡೆಯೆ: **ಅನಂತಪು,** ೪. ೨೪)

**ನೊಚ್ಚನೆ –** ಹಾಯಾಗಿ (ಡಂಬಕರ್ .. .. ಅರ್ಥಮುಳ್ಳಿನಂ ಪೊರ್ದಿ ಮಾಡುತುಂ ಪಱಿಯೆ ತಿಂದು ನೊಚ್ಚನೆ ನೆಗೆವರ್: **ಸಮಯಪ,** ೧೨. ೪೦)

**ನೊಚ್ಚಿತು –** ಹಗುರ (ಎಮ್ಮ ಪಿತಾಮಹನಪ್ಪ ಮಾಲಿಯಂ ಮುಂ ಕಡುಕೆಯ್ದು ಕೊಂದೇೞ್ದುಕೊಂಡನಂ ಇಕ್ಕಿದೊಡೆ ಎನ್ನ ಬಾಹುವೀರ್ಯಂ ಕಡು ನೊಚ್ಚಿತಕ್ಕುಂ: **ಪಂಪರಾ,** ೧೦. ೧೫೩); ಅಲ್ಪತೆ

**ನೊಚ್ಚಿದ –** ತುಚ್ಛನಾದವನು (ಪುರಾಂಗನೆಯರ್ ನೆಱೆ ಕಾಮಶಸ್ತ್ರಸಂಭನ್ನತೆವೆತ್ತು ಕೂಡೆ ಗಱಿಯಿಂ ಕಡು ನೊಚ್ಚಿದರಾದರ್: **ಕರ್ಣನೇಮಿ,** ೩. ೧೩೫)

**ನೊಚ್ಚಿದಳ್ –** ಅಲ್ಪಳಾದವಳು (ಎನ್ನಂ ಪುಲ್ಲಿಂದಂ ನೊಚ್ಚಿದಳಂ ಕಲ್ಲಿಂದಂ ಬೆಟ್ಟಿದಳುಂ ಬಗೆವರ್ ಉಂತುಂ ಯೌವನಶ್ರೀಯುಂ ನಿರಪವಾದಮುಂ ಆರ್ ಕಳೆದಪರ್: **ಶಾಂತಿಪು,** ೪. ೭೯ ವ)

**ನೊಣೆ –** ನುಂಗು, ನಾಶಗೈ (ಮತ್ತವಾರಣನಿವಹಕ್ಕೆ ತಕ್ಕಿನ ಅಭಿಮನ್ಯುವ ಕೂರ್ಗಣೆ ಪಾಯ್ದು ನುಂಗಲುಂ ನೊಣೆಯಲುಂ ಉರ್ಚಿಮುಕ್ಕಲುಂ ಇದೇಂ ನೆಱೆ ಕಲ್ತುವೊ ಯುದ್ಧರಂಗದೊಳ್: **ಪಂಪಭಾ** ಪರಿಷತ್ತು, ೧೧. ೯೪)

**ನೊಪ್ಪಿದು –** ಹಗುರ (ತುಂಗನಿತಂಬದಿಂ ಕುಚದ ಬಿಣ್ಪೊೞೆಯಿಂ ಪೊಡರಲ್ಕಮಾಱದಿರ್ಪ ಅಂಗನೆಯರ್ ಸರೋಜಲದೊಳ್ ಅಂದವು ನೊಪ್ಪಿದುವಾಗೆ: **ಲೀಲಾವತಿ,** ೧೩. ೧೨೪)

**ನೊರಜು –** ಸಣ್ಣ ಸೊಳ್ಳೆ (ಕೆಲವು ಪದಂಗಳ್ ವಿಕಲ್ಪದಿಂ ಸಬಿಂದುಕಂಗಳಪ್ಪುವವರ್ಕೆ ಪ್ರಯೋಗಂ: ನೊರಂಜು– ನೊರಜು, **ಶಬ್ದಮದ,** ೧೫)

**ನೊರೆ –** ಡಿಂಡೀರ, ಫೇನ (ಪನಿಪುಲ್ಲ ಮುಗಿಲ ಸಂಜೆಯ ಕನಸಿನ ಸುರಧನುವನೆಗೆದ ನೊರೆಗಳ ನೆಱನಂತನಿತುಂ: **ವಡ್ಡಾರಾ,** ಪು. ೧೧೩. ಸಾ. ೧೧)

**ನೊಸಲ್ –** ಹಣೆ (ಇಸೆ ಮಸಗಿ ಭೀಮಂ ಈರಯ್ದು ಶಿತಾಸ್ತ್ರದಿಂ ಉರುಳೆ ಸೂತಂ ಉಡಿಯೆ ರಥಂ ಕೀಲಿಸೆ ಕುದುರೆ ಮುಱಿಯೆ ಪಟಿವಿಗೆ ಮಸಕದಿಂ ಎಚ್ಚೆಚ್ಚಂ ಒಂದೆ ಸರಲೊಳ್ ನೊಸಲಂ: **ಪಂಪಭಾ,** ೧೦. ೯೯)

**ನೊಸಲಕಣ್ಣದೇವ –** ಹಣೆಯಲ್ಲಿ ಕಣ್ಣುಳ್ಳವನು, ಶಿವ (ಸಂಬಂಧ ಸಂಬಂಧಕ್ಕೆ: ನೊಸಲ ಕಣ್ಣದೇವಂ: **ಶಬ್ದಮದ,** ೧೪೩, ಪ್ರ)

**ನೊಸಲಕ್ಕರ –** ಹಣೆಯ ಬರಹ (ಉರವಣಿಸಿ ತಮ್ಮನಟಿಗುಂ ಧುರದೊಳದೆಂದಂಜಿ ಹೊಗರ ನೆವದಿಂ ರಿಪುಭೂಪರ ನೊಸಲಕ್ಕರಮಿರ್ಪುವು ನೆರೆದು ಶರಣ್ಬೊಕ್ಕಿಕಾಧಿಪನ ಕೂರಸಿಯೊಳ್, **ಆಚವರ್ಧ,** ೭. ೩೦)

**ನೊಳ –** ನೊಣ (ಪೊದಳ್ದಱಗುವ ಕಣ್ಣ ಮೇಲಣ ನೊಳಂಗಳಂ ಒಯ್ಯನೆ ಸೋವುತ: **ತ್ರಿಷಷ್ಟಿಪು,** ೨. ೮೪)

**ನೋ –** ಯಾತನೆಪಡು (ತಮ್ಮನ ಮನಂ ಅಱೆದೊಡೆ ನೋಗುಂ ಎಂದುಂ ಆರುಂ ಅಱಿಯದಂತು .. .. ಪರಿಕರಂಗಳಂ ಸಲಿಸಿ: **ನೇಮಿನಾಪು,** ೫. ೫ ವ)

**ನೋನ್ –** ವ್ರತಮಾಡು (ಇವಳಂ ನೋಡಲ್ ಪಡೆದೆನ್ನ ವಿಲೋಚನಂ ಆವ ನೋಂಪಿಯಂ ನೋಂತುವೊ: **ಕಾದಂಸಂ,** ೫. ೧೯)

**ನೋಂಪಿ –** ವ್ರತ (ತಕ್ಕ ಪ್ರಾಯಶ್ಚಿತ್ತಮಂ ಕೊಂಡು ಸಿಂಹನಿಷ್ಕ್ರೀಡಿತಮೆಂಬ ನೋಂಪಿಯಂ ನೋಂತು ವಿಹಾರಿಸುತ್ತುಂ: **ವಡ್ಡಾರಾ,** ಪು ೧೭೭, ಸಾ ೧೨)

**ನೋಕಷಾಯ** – [ಜೈನ] ಚಾರಿತ್ರಮೋಹನೀಯದಲ್ಲಿ ಒಂದು ಬಗೆ, ಕಿಂಚಿತ್ ಕಷಾಯ; ಇದು ಒಂಬತ್ತು ವಿಧ – ಹಾಸ್ಯ, ರತಿ, ಅರತಿ, ಶೋಕ, ಭಯ, ಜುಗುಪ್ಸೆ, ಸ್ತ್ರೀವೇದ, ಪೊಂವೇದ ಮತ್ತು ನಪುಂಸಕವೇದ (ಕಿಱೆಕಿಱಿದು ಬೇಗದಿಂ ತನ್ನ ಪರಿಣಾಮವಿಶೇಷದಿಂ ಚತುಸ್ಸಂಜ್ವಲನ ನವನೋಕಷಾಯಂಗಳೆಂಬ ಪದಿಮೂಱು ಪ್ರಕೃತಿಗಳುಮಂ ಅಂತಃಕರಣಂ ಮಾಡಿ: **ಆದಿಪು,** ೧೦. ೧೪ ವ)

**ನೋಟಕ** – ನೋಡಿವವನು, ಪ್ರೇಕ್ಷಕ (ತೆಱಪುವಡೆದು ಅಂಗಜಂ ಕೆಯ್ಸಱೆಗೊಳೆ ನೋಟಕರ ಮನಮನಾಗಳ್ ಕೊಳದಿಂ ಪೊಱಮಡೆ ಜಿಗಿಲ್ತು ಪತ್ತಿದ ಕುಱುವಡಿಗಳೆ ಮೆಱೆದುದು ಅವರ ನಾಣ್ಗಳ ತೆಱಪಂ: **ಪಂಪಭಾ,** ೫, ೬೭)

**ನೋಡು** – ಕಾಣು (ನೋಡು–ಪ್ರೇಕ್ಷಣೇ: **ಶಬ್ದಮದ,** ಧಾ ೩೨೪); ಪರೀಕ್ಷೆಮಾಡು (ಶಲ್ಯನ ಮನಮಂ ನೋಡಲೆಂದು ಬೆಸಗೊಂಡೊಡೆ: **ಪಂಪಭಾ,** ೧೨. ೧೧೭ ವ)

**ನೋದುಃಖ** – ದುಃಖರಹಿತತೆ (ಅವರಾರ್ಯಚರಿತರ್ ನೋಕರ್ಮ ನೋದುಃಖ ಭೀಷಣಮೆಂದು ಸುರನಿರ್ವಿಶೇಷ ಸುಖಸರ್ವಸ್ವಂ ಕುರೂರ್ವೀತಳಂ: **ಶಾಂತಿಪು,** ೬. ೧೨೨)

**ನೋನ್** – ವ್ರತ ಮಾಡು (ರಾಜ್ಯಲಕ್ಷ್ಮಿಗನ್ಯಭವದೊಳಪ್ಪೊಡಂ ನೆಱೆಯೆ ನೋಂಪೆಂ: **ಆದಿಪು,** ೨. ೩೯)

**ನೋಳ್** – ಮುಂದೆ ನುಗ್ಗು (ಅಲೆದುಂ ನೋಡಿಯೊಱಲ್ದುವಿಟ್ಟ ಪದಮುಂ ನೋಳ್ದುಂ ಕಟಲ್ದುಂ ಪಳಂಚಲೆದುಂ ಮುಟ್ಟಿದ ಸೀಯನಪ್ಪ ದನಿಯುಂ: **ಆದಿಪು,** ೧೨. ೨೩); ಸನಿಹ ಹೋಗು

**ನೌ** – ಹಡಗು (ಮಹಾನದಾವಗಾಹನಸಮಯ ನೌದ್ರೋಣಿಸಂಕ್ರಮಾದಿವಿಧಾನಪ್ರಾಗಲ್ಭ್ಯನುಂ: **ಆದಿಪು,** ೧೧. ೩ ವ)

**ನೌಸಾಧನ** – ನೌಕಾಬಲ (ನೌಸಾಧನೋದ್ಯತರನಂತಾ ಸೇನಾನಿ ತ್ರಿವಂಶರಂ ಕಿಟ್ಟು: **ಶಾಂತಿಪು,** ೧೦. ೧೬೦)

**ನ್ಯಗ್ಭೂತ** – ಕೀಳುಗೈದ (ನ್ಯಗ್ಭೂತಸುರಪುರಂ ಸುವಣಿಗ್ಭಾಸಿ ಸಮಸ್ತವಸ್ತು ಪರಿಪೂರ್ಣಂ ಸಮ್ಯಗ್ಭವನರುಚಿರಮುತ್ತರ ದಿಗ್ಭಾಗದೊಳುಂಟು ಮಧುರೆಯೆಂಬುದು ನಗರಂ: **ಪಂಚತಂತ್ರ,** ೨೩೬)

**ನ್ಯಗ್ರೋಧ** – ಆಲದ ಮರ (ಪಾಲಾಶ ಅಶ್ವತ್ಥ ಅರ್ಕ ಔದುಂಬರ ನ್ಯಗ್ರೋಧ ಶಮಿ ಅಪಾಮಾರ್ಗ ಖದಿರ ಆದಿ ಶುಷ್ಕಸಮಿತ್ತುಗಳುಮಂ ಕುಶ ಅಶ್ವಲಾಯನ ವಿಶ್ವಾಮಿತ್ರಾದಿ ದೂರ್ವಾಂಕುರಪವಿತ್ರವಸ್ತುಗಳುಮಂ ಕೊಂಡು: **ಪಂಚತಂತ್ರ,** ೧೯೦ ವ)

**ನ್ಯಗ್ರೋಧಪರಿಮಂಡಲ** – ದೇಹದ ಸುತ್ತಳತೆ (ಚತುರಸ್ರಮುಂ ನ್ಯಗ್ರೋಧಪರಿಮಂಡಲಮುಂ ಸ್ವಾತಿಯುಂ ವಾಮನನುಂ ಕುಬ್ಜಮುಂ ಪುಂಡಮುಂ ಎಂದು ಸಂಸ್ಥಾನನಾಮಂ ಷಡ್ವಿಧಮಕ್ಕುಂ: **ಅಜಿತಪು,** ೧೧. ೩ ವ)

**ನ್ಯಗ್ರೋಧಪರಿಮಂಡಲೆ** – ಸುಂದರಿ (ಈಕೆ ನ್ಯಗ್ರೋಧಪರಿಮಂಡಲೆಯುಂ ಅವಧೀರಿತ ಮಹೀಪಾಲ ಕುಮಾರಮಂಡಲೆಯುಂ ಆದಳ್: **ಶಾಂತಿಪು,** ೪. ೮೮ ವ)

**ನ್ಯಸ್ತ** – ಇಡಲಾದ (ಮಂಜುಳ ಖಡ್ಗನ್ಯಸ್ತ ಹಸ್ತಂ ತಳರ್ದಂ ಅಹಿತಸೇನಾಬ್ಜಿನೀಕುಂಜರೇಂದ್ರಂ: **ರಾಜಶೇವಿ,** ೬. ೧೨)

**ನ್ಯಾಯ** – ನಿಯಮ (ನಗರೇ ಪಂಚರಾತ್ರಂ ಅಟವ್ಯಾಂ ದಶರಾತ್ರಮೆಂಬೀ ನ್ಯಾಯದಿಂ ವಿಹಾರಿಸುತ್ತುಂ: **ಸುಕುಮಾಚ,** ೩. ೭ ವ); ಸಮಂಜಸವಾದ ನ್ಯಾಯಂ ಮಂತ್ರಿಗಳುಕ್ತಿ ಬಪ್ಪನ ಮತಂ ಕಾಲೋಚಿತಂ: **ಅನಂತಪು,** ೧೩. ೬೧); ಲೋಕರೂಢಿಯಾದುದು (ಆಗಮ ಸಮಯ ನ್ಯಾಯ ವಿಭಾಗ ಕಳಾಕಾಲಲೋಕದೇಶವಿರುದ್ಧಂ: **ಕವಿರಾಜಮಾ,** ೧. ೭೦)

**ನ್ಯಾಸ** – ಇಡುವುದು (ಕೂಸಿನ ವಿಚಾರಬುನ್ಯಾಸಂ ನಿನಗಿಲ್ಲ ಮಱೆದು ಕೈಕೊಂಡುದುವೇಂದೋಸಮದೇಂ: **ಸುಕುಮಾಚ,** ೬. ೪೯)

**ನ್ಯಾಸಕಾರ** – ವಿವರಣೆ ನೀಡುವವನು (ಅವರ ವಚನಂ ಜಡಸಂಸ್ಥಾನಂ ಅವಿಜ್ಞೇಯಂ ಅದಕೇನಾನುಂ ನ್ಯಾಸಕಾರರಂ ತರವೇಱ್ಕುಂ: **ಶಾಂತಿಪು,** ೧೦. ೧೮೦)

# ಪ

**ಪಂಕ** – ಕೆಸರು (ಕುಂಕುಮ ಪಂಕ ಪಂಕಿಳಸಾರ ಘನಸಾರ ಸಾರೀಭೂತ ಶಾರದೇಂದು: **ಪಾರ್ಶ್ವನಾಪು,** ೩. ೩೨ ವ); ಲೇಪನದ್ರವ್ಯ

**ಪಂಕಜ** – ಕೆಸರಿನಲ್ಲಿ ಹುಟ್ಟಿದುದು, ತಾವರೆ (ಪಂಕಜಮುಂ ಸುಹೃದ್ವನಪಂಕಜಮುಂ ಮುಗಿವನ್ನಂ .. .. ಕುರುಕುಲಾರ್ಕನುಂ ಅರ್ಕನುಂ ಅಸ್ತಮೆಯ್ದಿದರ್: **ಗದಾಯು,** ೯. ೩೫)

**ಪಂಕಜನೇತ್ರೆ** – ಕಮಲದಂತೆ ಕಣ್ಣುಳ್ಳವಳು (ಪಂಕಜನೇತ್ರೆ ಹಂಸಗಮನಾನ್ವಿತೆ .. .. ಭ್ರಮರಜಾಳಮನೇಱಿಸಿ ಪೋಗಲೀಗುಮೇ: **ಪಾರ್ಶ್ವನಾಪು,** ೧೦. ೫೧)

**ಪಂಕಜವಕ್ತ್ರ** – ತಾವರೆಯಂತಹ ಮುಖ[ವುಳ್ಳವನು] (ಸಾಲಪ್ರಾಂಶು ವಿಶಾಲ ಲೋಲನಯನಂ ಪ್ರೋದ್ಯತ್ ವೃಷಸ್ಕಂಧಂ ಉನ್ಮೀಲತ್ ಪಂಕಜವಕ್ತ್ರಂ ಆಯತ ಸಮಗ್ರ ಉರಸ್ಸ್ಥಳಂ: **ಪಂಪಭಾ,** ೧. ೬೮)

**ಪಂಕಜವಿಷ್ಟರ** – ಕಮಲದ ಆಸನವುಳ್ಳವನು, ಬ್ರಹ್ಮ (ಪಂಕಜವಿಷ್ಟರಂ .. .. ಹರಂ ಭವಹರಂ ಮಾಣಿಕ್ಯದೇವಂ ದೇವನಾಗಿರೆ ಜಯಂ ಭದ್ರಂ ಶುಭಂ ಮಂಗಳಂ: **ಆದಿಪು,** ೧೬. ೬)

**ಪಂಕಜಾಕರ** – ಕಮಲಗಳ ಆವಾಸ, ಕೊಳ (ಮರುತ್ಪಥದಲ್ಲಿ ಪಂಕಜಾಕರದೆಡೆಯಲ್ಲಿ ತಳ್ತ ತಿಳಿಜೊನ್ನಮಂ ಅಂಚೆಗಳ್ .. .. ಒಸೆದು ಈಂಟಲ್: **ರಾಜಶೇವಿ,** ೧೩. ೪೩)

**ಪಂಕಪ್ರಭೆ** – [ಜೈನ] ಏಳರಲ್ಲಿ ನಾಲ್ಕನೆಯ ನರಕ, (ಪಂಕಪ್ರಭೆಯೊಳ್ ದಶಬ್ದ್ಯುಪಮೆಯಿಂ ದುಃಖಾಗ್ನಿಯೊಳ್ ಬೆಂದು: **ಆದಿಪು,** ೫. ೪)

**ಪಂಕಭಾಗ** – [ಜೈನ] ರತ್ನಪ್ರಭೆ ಎಂಬ ನರಕದ ಮೂರು ಭಾಗಗಳಲ್ಲಿ ಒಂದು (ರತ್ನಪ್ರಭೆಯೆಂಬ ಪೃಥ್ವಿ .. .. ಪೃಥ್ವಿ ವಜ್ರಖರ ಪಂಕಜಲಬಹುಳಭಗದಿಂ ತ್ರಿವಿಧಮಕ್ಕುಂ .. .. ಪಂಕಭಾಗಂ ಎಣ್ಬತ್ತನಾಲ್ಕುಸಾಸಿರ ಯೋಜನಂ: **ಸುಕುಮಾಚ,** ೧೧. ೪೧ ವ)

**ಪಂಕರುಹ** – ಪಂಕಜ (ತಂದಳ್ ಇಂತಿದಂ ದೇವರ ಪಾದಪಂಕರುಹದಲ್ಲಿಗೆ ಕನ್ಯೆಯದೊಂದು ಭಕ್ತಿಯಿಂ: **ಕಾದಂಬ,** ೧. ೫೨)

**ಪಂಕಿಲ** – ಕೆಸರಿನಿಂದ ಕೂಡಿದ (ಪಂಕುಲಮಾಗಿ ಗೋಕುಲದ ಗೋಮಯದಿಂ ನಡೆಗೊಳ್ವ ಘಾತದಿಂ ಕದಡಾಗಿ .. .. ತೋಱೆ: **ಲೀಲಾವತಿ,** ೫. ೮೪)

**ಪಂಕಿಳ** – ಕೆಸರು (ಜಾಜಿ ಜವದಿಂ ಕೈಯೂಜಿ ಬೀೞ್ದೇೞ್ದು ಪಂಕಿಳಮಾದ ಅಂಶುಕಮಂ ಪೊನಲ್ವರಿವ ನೀರೊಳ್ ಕರ್ಚಿ: **ರಾಜಶೇವಿ,** ೮. ೧೨೪)

**ಪಂಕಿಳಸಾರ** – (ಕುಂಕುಮ ಪಂಕ ಪಂಕಿಳಸಾರ ಘನಸಾರ ಸಾರೀಭೂತ ಶಾರದೇಂದು: **ಪಾರ್ಶ್ವನಾಪು,** ೩. ೩೨ ವ)

**ಪಂಕೇಜಗರ್ಭಾತ್ಮಜ** – [ಪಂಕೇಜಗರ್ಭ+ಆತ್ಮಜ = ಬ್ರಹ್ಮನ ಮಗ] ನಾರದ (ಎಮ್ಮನ್ವಯಕ್ಷ್ಮಾಪರ್ ಆವ ವಿಳಾಸಂಗೊಳ್ ಇರ್ಪರ್ ಏದೊರೆತು ತಾಂ ಎಮ್ಮಯ್ಯನೈಶ್ವರ್ಯಂ ಇಂತು ಇವನೆಲ್ಲಂ ತಿಳಿವಂತುಟಾಗಿ ಬೆಸಸಿಂ ಪಂಕೇಜಗರ್ಭಾತ್ಮಜಾ: **ಪಂಪಭಾ,** ೬. ೧೫)

**ಪಂಕೇಜಪತ್ರೇಕ್ಷಣೆ** – ತಾವರೆಯ ದಳದಂತೆ ಕಣ್ಣುಳ್ಳವಳು (ಮಹಾಪ್ರಳಯ ಉಲ್ಕೋಪಮ ಮತ್ ಗದಾಹತಿಯಿಂ ಅತ್ಯುಗ್ರ ಆಜಿಯೊಳ್ ಮುನ್ನಂ ಈ ಖಳ ದುಶ್ಶಾಸನನಂ ಪೊರಳ್ಚಿ ಬಸಿಱಂ ಪೋೞ್ದಿಕ್ಕಿ ಬಂಬಲ್ಗರುಳುಗಳಂ ಆನಲ್ತೆ ವಿಳಾಸದಿಂ ಮುಡಿಯಿಪೆಂ ಪಂಕೇಜಪತ್ರೇಕ್ಷಣೇ: **ಪಂಪಭಾ,** ೭. ೧೨)

**ಪಂಕ್ತಿಭೋಜನ** – ಜೊತೆಯೂಟ (ಕೆಳೆಯನ ಪಂಕ್ತಿಭೋಜನದೊಳೊರ್ಮೆ ವಿಳಾಸದೆ ಬಡ್ಡಿಸುತ್ತುಮಿರ್ಪ ಏಳೆಯಳ ತೋಳ ಮೂಲದ ಪೊಗರ್ .. .. ಕಣ್ಗೆ ಕುಡೆ ಕೌತುಕಮಂ: **ಅನಂತಪು,** ೧೧. ೨೮)

**ಪಂಗಿಗ** – ಹಂಗಿಗೊಳಗಾದವನು (ಮುಂಬಟ್ಟಿಸಿ ಕೊಲುತಿರ್ಪ ಜವನೆಂಬಱಕೆಯ ಪಗೆವಂಗದೆಂತು ಪಂಗಿಗನಪ್ಪೆಂ: **ಆದಿಪು,** ೪. ೭೭)

**ಪಂಗು** – ಹಂಗು ದಾಕ್ಷಿಣ್ಯ (ಬಜೆದೇಕೆ ಸಖೀಜನಕ್ಕೆ ಪಂಗಾದಪೆ ಆಗದು ಆರ ದೆಸೆಯಿಂದಮುಂ ಅಪ್ಪೊಡೆ ದೈವಯೋಗದಿಂದಂ ಆದಪುದು: **ಲೀಲಾವತಿ,** ೯. ೧೩೮); ಕುಂಟ (ಪಂಗು ಪೆಱವನೆನಿಕುಂ: **ಅಭಿಧಾವ,** ೧. ೧೨. ೩೯)

**ಪಂಗುತೆ** – ಕುಂಟು (ಪಿಂಗುವುದಂಧತೆ ಬಧಿರತೆ ಪಂಗುತೆ ಅಂಧಾದಿ ಜನ್ಮಿಗಭವನ ಸಭೆಯೊಳ್: **ಪಾರ್ಶ್ವನಾಪು,** ೧೬. ೮೫)

**ಪಂಚ** – ಅಪೂರ್ವ (ಅಮೋಘಾಸ್ತ್ರದಿಂ .. .. ಎಚ್ಚಂ ಎಚ್ಚಂತೆ ಮುಂ ಧೂರ್ಜಟಿಪುತ್ರಂ ಕ್ರೌಂಚಮಂ ಪಂಚಮೆನೆ ರಿಪುಮಹಾಕಲ್ಪಕಾಲಾಗ್ನಿರುದ್ರಂ: **ರಾಜಶೇವಿ,** ೬. ೮೯)

**ಪಂಚಕ** – ಐದರ ಗುಂಪು (ವಚನಪಂಚಕಂಗಳಂ ನುಡಿಯಲಾಗದದಂ ಇಂತೇಕೆ ನುಡಿವಿರೆಂದು ಮತ್ತಮಿಂತೆಂದಂ: **ಪಂಪರಾ,** ೧೫. ೬೮ ವ)

**ಪಂಚಕಲ್ಯಾಣ** – [ಜೈನ] ಜಿನನಿಗೆ ಮಾಡುವ ಐದು ಮಹೋತ್ಸವಗಳು: ಗರ್ಭಾವತರಣ, ಜನ್ಮಾಭಿಷೇಕ, ಪರಿನಿಷ್ಕ್ರಮಣ, ಕೇವಲಜ್ಞಾನ ಮತ್ತು ಪರಿನಿರ್ವಾಣ (ಸುರವೃಂದಾರಕವೃಂದ ಅನಂತಜಿನಪಶ್ರೀ ಪಂಚಕಲ್ಯಾಣ ಭಾಸ್ವರಪೂಜಾವಿಧಿಯಂ ನೆಗೞ್ಚಿ: **ಅನಂತಪು,** ೧೪. ೭೪)

**ಪಂಚಗಾರ್ತಿ** – ಪಂಚಕಾರುಕವರ್ಗಕ್ಕೆ [ಬಡಗಿ, ಅಕ್ಕಸಾಲೆ, ಕಮ್ಮಾರ, ಕಲ್ಲುಕುಟಿಗ, ಕಂಚುಗಾರ; ಅಥವಾ ಬಡಗಿ, ನೇಕಾರ, ಕ್ಷೌರಿಕ, ಅಗಸ, ಚಮ್ಮಾರ] ಸೇರಿದ ಸ್ತ್ರೀ (ಸಮಾಸಲಕ್ಷಣಕ್ಕೆ: ಮಾಲೆಗಾಱನೆಂಬ ಱಕಾರಕ್ಕೆ ರೇಫಮಾದುದಾಗಿ ಮಾಲೆಗಾರ್ತಿ, ಕಂಚಗಾರ್ತಿ, ಓಲಗಗಾರ್ತಿ, ಜಾಲಗಾರ್ತಿ, ಬಳೆಗಾರ್ತಿ, ಪಂಚಗಾರ್ತಿ: **ಶಬ್ದಮದ,** ೨೨೦, ಪ್ರ)

**ಪಂಚಗುಣ** – ಐದು ಪಟ್ಟು (ಜಗದೊಳ್ ಪತಿಹಿತದೆಡೆಯೊಳ್ ನೆಗಟ್ದ ಇನಜನಿಂ ಏಕದಂತನಿಂ ಪವನಜನಿಂ ಖಗರಾಜನಿಂ ದುರ್ಗಂ ದ್ವಿಗುಣಂ ತ್ರಿಗುಣಂ ಚತುರ್ಗುಣಂ ಪಂಚಗುಣಂ: **ಪಂಚತಂತ್ರ,** ೫೫)

**ಪಂಚಗುರು** – ಪಂಚಪರಮೇಷ್ಠಿಗಳು: ಅರ್ಹಂತ, ಸಿದ್ಧ, ಆಚಾರ್ಯ, ಉಪಾಧ್ಯಾಯ ಮತ್ತು ಸರ್ವಸಾಧುಗಳು (ಪಂಚಗುರುಸಮಕ್ಷದೊಳ್ ಬಾಹ್ಯಾಂಭ್ಯಂತರಪರಿಗ್ರಹ ಪರಿತ್ಯಾಗಪುರಸ್ಸರಂ ವೀರಸಂಸ್ಥಾನಾರೂಢನಂ ಮಹಾಬಳನಂ ಜಾತರೂಧರನಂ ಮಾಡಿ: **ಆದಿಪು,** ೨. ೫೧ ವ)

**ಪಂಚತಂತ್ರ** – ಮಿತ್ರಲಾಭ, ಮಿತ್ರಭೇದ, ಸಂಧಿವಿಗ್ರಹ, ಲಬ್ಧನಾಶ, ಅಸಂಪ್ರೇಕ್ಷ್ಯ ಕಾರಿತ್ವಗಳೆಂಬ ರಾಜನೀತಿಯಲ್ಲಿನ ಐದು ಕಾರ್ಯತಂತ್ರಗಳು (ಅನೇಕಪ್ರಕಾರಕಪಟೋಪಾಯಂಗಳಿಂದ ಅತಿಸ್ನೇಹಿತರೊಳ್ ಪೃಥಗ್ಭಾರಮಂ ಮಾಟ್ಪುದೇ ಭೇದಮೆಂಬುದು; ಅವಕಾರ್ಯಮುಮಂ ವಿಚಾರಪೂರ್ವಕಮಲ್ಲದೆ ನೆಗಟಲಾಗದೆಂಬುದನಱಿಪುವುದು ಪರೀಕ್ಷೆಯೆಂಬುದು; ಎಂತುಂ ನಂಬದರಂ ನಂಬುವಂತೆ ನುಡಿದೊಡಂಬಡಿಸಿಯೊಳಪೊಕ್ಕು ನೆಗಟ್ವುದು ವಿಶ್ವಾಸಮೆಂಬುದು; ಪೆಱರ ಬಗೆಯಱಿದು ಸಂಧಾನಂಗೆಯ್ದು ವಂಚಿಸುವುದು ವಂಚನೆಯೆಂಬುದು; ಅನ್ಯರೆಲ್ಲರುಮಂ ಅತಿಸ್ನೇಹದಿಂ ತನ್ನವರಂ ಮಾಡಿಕೊಳ್ವುದು ಮಿತ್ರಕಾರ್ಯಮೆಂಬುದು; ಇಂತು ಐದು ತಂತ್ರಗಳ ಪ್ರಕಾರಂ: **ಪಂಚತಂತ್ರ,** ೭೧ ವ)

**ಪಂಚತೆ** – ಮರಣ (ಅಂತದು ಕಡುಪಿಂ ಪಂಚತೆಯಾಗದೆ ಮಾಣ್ಗುಮೆ ವಶಗತಂಗೆ ಪಂಚೇಂದ್ರಿಯದಿಂ: **ಅಜಿತಪು,** ೨. ೮೭)

**ಪಂಚತ್ವ** – ಪಂಚತೆ, ಸಾವು (ಖಳಂ ಪಂಚತ್ವಮನೈದಿ ಮರುಚ್ಚಂಚಳಮನನೀಗಳಲ್ತೆ ವಾನರನಾದಂ: **ಆದಿಪು,** ೫. ೧೮)

**ಪಂಚದಶಪ್ರಮಾದ** – [ಜೈನ] ಧಾರ್ಮಿಕತೆಯಲ್ಲಿ ಅನಾದರವುಂಟು ಮಾಡುವ ಕ್ರೋಧ, ಮಾನ, ಮಾಯೆ, ಲೋಭ [ಎಂಬ ಕಷಾಯಗಳು]; ಸ್ತ್ರೀಕಥೆ, ಭೋಜನಕಥೆ, ರಾಷ್ಟ್ರಕಥೆ, ರಾಜಕಥೆ [ಎಂಬ ನಾಲ್ಕು ವಿಕಥೆಗಳು]; ಸ್ಪರ್ಶ, ರಸನ, ಘ್ರಾಣ, ಚಕ್ಷುಃ, ಕರ್ಣ ಎಂಬ ಐದು ಇಂದ್ರಿಯಗಳು; ನಿದ್ರೆ, ಸ್ನೇಹ ಎಂಬ ಒಟ್ಟು ಹದಿನೈದು ಪ್ರಮಾದಗಳು] (ಪಂಚದಶಪ್ರಮಾದ ವರ್ಜಿತರುಮಾಗಿ .. .. ತೀರ್ಥಕರಪುಣ್ಯಕಾರಣಂಗಳಂ ಭವಿಸುತ್ತುಂ: **ವರ್ಧಮಾಪು,** ೧೦. ೫೬ ವ)

**ಪಂಚಧಾರೆ** – ಕುದುರೆಯ ಐದು ಬಗೆಯ ನಡಿಗೆಗಳು: ಧೋರಿತ, ವಲ್ಗಿತ, ಪ್ಲುತ, ಉತ್ತೇಜಿತ, ಉತ್ತೇರಿಕ (ಅಲುಂಗದೆ ಪಂಚಧಾರೆಯೊಳ್ ಪರಿಣತಿದೋರ್ಪ ವಾಹಳಿತನಂ ಬಗೆಗೊಂಡುದು ಮಂತ್ರಿಪುತ್ರನಾ: **ರಾಜಶೇವಿ,** ೧೩. ೮೨)

**ಪಂಚನಮಸ್ಕಾರ** – [ಜೈನ] ಪಂಚಪರಮೇಷ್ಠಿಗಳಿಗೆ ಮಾಡುವ ನಮಸ್ಕಾರ ಹಾಗೂ ಹೇಳುವ ಮಂತ್ರ, ಣಮೋ ಅರಹಂತಾಣಂ, ಣಮೋ ಸಿದ್ಧಾಣಂ, ಣಮೋ ಅಯಾರಿಯಾಣಂ, ಣಮೋ ಉವಜ್ಝಾಯಾಣಂ, ಣಮೋ ಲೋಏ ಸಬ್ಬಸಾಹೂಣಂ ಎಂಬುದು (ಪಂಚನಮಸ್ಕಾರಮಂ ಆಲಿಸುತ್ತುಂ ಅವನೋದುತ್ತುಂ ಮನಂದಂದು ದೇವನೆ ತಾನಾಗಿ ಸಮಾಧಿಯೊಳ್ ನೆಱೆದು: **ಸಮಯಪ,** ೬. ೧೧೫)

**ಪಂಚನಮಸ್ಕೃತಿ** – [ಜೈನ] ಪಂಚನಮಸ್ಕಾರ (ಮುನಿವೃಂದೋಚ್ಚಾರಿತ ಪಂಚನಮಸ್ಕೃತಿಗಾಂತು ಕಿವಿಯನರ್ಹತ್ವದಮಂ ನೆನೆಯುತ್ತುಂ: **ಆದಿಪು**, ೨. ೫೭)

**ಪಂಚಪದಂಗಳ್** – [ಜೈನ] ಪಂಚನಮಸ್ಕಾರ (ಮಂಗಳಕಾರಣ ಪಂಚಪದಂಗಳಂ ಅಪವರ್ಗಮಾರ್ಗವಿರಚಿತ ಸೋಪಾನಂಗಳಂ: **ಆದಿಪು**, ೨. ೫೪)

**ಪಂಚಪರಮೇಶ್ವರರು** – [ಜೈನ] ಅರ್ಹತ್, ಸಿದ್ಧ, ಆಚಾರ್ಯ, ಉಪಾಧ್ಯಾಯ, ಸರ್ವಸಾಧುಗಳು (ಸ್ವಪ್ನಫಲಮಂ ಪೇಳ್ದ ಪುರೋಹಿತರಂ .. .. ಅರ್ಚಿಸಿ ಪಂಚಪರಮೇಶ್ವರರ ಪೂಜಾಪ್ರಭಾವ ತತ್ಪರೆಯಾಗಿರೆ: **ನೇಮಿನಾಪು**, ೨. ೨೨ ವ)

**ಪಂಚಪರಮೇಷ್ಠಿ** – [ಜೈನ] ಪಂಚಪರಮೇಶ್ವರರು (ಪಂಚಪರಮೇಷ್ಠಿಗಳಂ ಪುಜಿಸಿದಂ ಬಟೆಯಂ: **ಪಂಪರಾ**, ೧೦. ೧೪೭ ವ)

**ಪಂಚಪಲ್ಲವದ ವಾಜಿ** – ರಾಜನ ಸವಾರಿಯ ಕುದುರೆ, ರಾಜವಾಹನ (ಪಂಚಪಲ್ಲವದ ವಾಜಿಗಳೆಂದು ರಾಜವಾಹನಂಗಳ್: **ಶಬ್ದಮದ**, ಪ್ರಸಾ, ೧೩೪)

**ಪಂಚಪಾಂಡವರು** – ಯುಧಿಷ್ಠಿರ, ಭೀಮಸೇನ, ಅರ್ಜುನ, ನಕುಲ, ಸಹದೇವ; ಪ್ರತಿವಿಂಧ್ಯ, ಶ್ರುತಸೋಮ, ಶ್ರುತಕೀರ್ತಿ, ಶತಾನೀಕ, ಶ್ರುತವರ್ಮ ಎಂಬ ದ್ರೌಪದಿಯಲ್ಲಿ ಹುಟ್ಟಿದ ಐದುಮಂದಿ (ಪಾಂಡವ ಶಂಖೆಯಿಂ ಶ್ರುತ ಸೋಮಕಪ್ರಭೃತಿಗಳಪ್ಪ ಪಂಚಪಾಂಡವರ ತಲೆಗಳಂ ಕೊಂಡು .. .. ದುರ್ಯೋಧನನ ಮುಂದಿಕ್ಕಿದೊಡೆ: **ಗದಾಯು**, ೯. ೩೨ ವ)

**ಪಂಚಪ್ರಪಂಚ** – ಪಂಚಮಸ್ವರದ ವ್ಯಾಪ್ತಿ (ಪಂಚಪ್ರಪಂಚಂ ಇಂಬಾಗಿರೆ ತೇನತೇನಮೊದವಲ್ ತಾನಂ ಲಯಂ ಮುಂಚೆ ಸಂಭ್ರಮದಿಂ ಬಾಜಿಸಿದಳ್ .. .. ವೀಣೆಯಂ: **ರಾಜಶೇವಿ**, ೧೦. ೩೨)

**ಪಂಚಪ್ರಮಾ[ಮೆ]** – ಪಂಚೇಂದ್ರಿಯಗಳೆಂಬ ಐದು ಪ್ರತ್ಯಕ್ಷಜನಕ ಪ್ರಮಾಣಗಳು; ಪಿಪೀಲಿಕಾ, ವಿಹಂಗಮ, ಮರ್ಕಟ, ಗಜ, ಪೂರ್ಣ ಎಂಬ ಐದು ಪ್ರಮಾಜ್ಞಾನಗಳು (ಪಂಚೀಭೂತ ಜಗತ್ ಪ್ರಪಂಚಲಹರೀ ಪಂಚಪ್ರಮಾಮಂಜರೀ .. .. ಪಂಚಾಕ್ಷರೀ ಪಾತು ವಃ: **ರಾಜಶೇವಿ**, ೪. ೧೦೩)

**ಪಂಚಬಾಣ** – ಕಮಲ, ಅಶೋಕ, ಮಾವು, ಮಲ್ಲಿಗೆ, ನೈದಿಲೆಗಳೆಂಬ ಕಾಮನ ಐದು ಬಾಣಗಳು; ಅಥವಾ, ಸಮ್ಮೋಹನ, ಸಂತಾಪನ, ಸಂದೀಪನ, ಸಂಶೋಷಣ, ದ್ರಾವಣ ಎಂಬ ಕಾಮನ ಐದು ಬಾಣಗಳು; ಅಥವಾ, ಮನೋಮಥನ, ಮದನ, ಮೋಹನ, ಸಂತಾಪನ, ವಶೀಕರಣ; ಈ ಐದು ಬಾಣಗಳುಳ್ಳವನು, ಮನ್ಮಥ (ಮನಮಂ ಕಟ್ಟಿ ಗುಣಂಗಳಿಂ ತುಟಿದು ಪಂಚಾಚಾರದಿಂ ಪಂಚಬಾಣನ ಬಾಹಾಬಲಮಂ .. .. ದಯೆಗೆಯ್ವರಕ್ಕೆ: **ಪಂಪರಾ**, ೧. ೩)

**ಪಂಚಭೂತ** – ಪೃಥ್ವಿ, ಅಪ್ಪು, ತೇಜಸ್, ವಾಯು, ಆಕಾಶಗಳೆಂಬ ಪ್ರಕೃತಿಯ ಐದು ಮೂಲವಸ್ತುಗಳು (ಪರಮಾನಂದಪರಂಪರೆ ದೊರೆಕೊಂಡಂತಿತ್ತು ಪಂಚಭೂತಂಗಳೊಳಂ: **ಆದಿಪು**, ೭. ೩೭)

**ಪಂಚಮ** – ಐದನೆಯ (ಷೋಡಶತೀರ್ಥನಾಥ ಮದನತ್ವದ ಪಂಚಮಚಕ್ರವರ್ತಿ .. .. ಶಾಂತಿನಾಥಜಿನಚಂದ್ರ ಮುನೀಂದ್ರನದೇಂ ಕೃತಾರ್ಥನೋ: **ಶಾಂತಿಪು**, ೧೨. ೧೨. ೫೮); ಪಂಚಮವರ್ಣದವನು (ಎರಡರ್ಥಕ್ಕೆ: ತುಟಿಲಸಂದನೆಂದು ವೀರನುಂ ಪಂಚಮನುಂ ಅಕ್ಕುಂ: **ಶಬ್ದಮದ**, ೩೩ ವೃತ್ತಿ ೧೪೬)

**ಪಂಚಮಂಬೊರೆ** – ಪಂಚಮಸ್ವರದಿಂದ ಕೂಡಿರು (ಆವರಿಸುವ ಪಂಚಮಂಬೊರೆವ ನುಣ್ಚರಮಂ ನಸುಗೇಳ್ದು ಸೋಲ್ತು: **ಚಂದ್ರಪ್ರಪು**, ೧. ೧೨೪)

**ಪಂಚಮಕಾಲ** – [ಜೈನ] ಅವಸರ್ಪಿಣಿಯ ಐದು ಕಾಲಭೇದಗಳಲ್ಲಿ ಐದನೆಯದು (ಧರಣೀಪಾಳಕ ಮುನಿವರರ್ ಪಂಚಮಕಾಲದೊಳಣಮಾಗರಲ್ತೆ ಋದ್ಧಿಪ್ರಾಪ್ತರ್: **ಆದಿಪು**, ೧೫. ೪೧), ನೋಡಿ 'ಅವಸರ್ಪಿಣಿ'

**ಪಂಚಮಗತಿ** – [ಜೈನ] ಐದನೆಯ ಅವಸ್ಥೆ, ಚತುರ್ಗತಿಗಳನ್ನು ಮೀರಿದುದು, ಮೋಕ್ಷ (ಪಂಚಮಚಕ್ರಿಯೆನಿಪ್ಪಂ ಪಂಚಮಗತಿಗೆ ಅತಿಲಬ್ಧವಿಭುಗೆ ಯೋಗ್ಯಂ ಪಂಚಮಜಳಧಿಜಳಂ ತನ್ನಿಂ ಚೆಚ್ಚರಮೆಂದು ಸುರರ್ಗೆ ಸುರಪತಿ ಬೆಸಸಲ್: **ಶಾಂತೀಶ್ವಪು**, ೧೪. ೧೧೯)

**ಪಂಚಮಚಕ್ರಿ** – [ಜೈನ] ಶಲಾಕಾಪುರುಷರಲ್ಲಿ ಐದನೆಯ ಚಕ್ರವರ್ತಿ, ಶಾಂತಿ (ಪಂಚಮಚಕ್ರಿಯೆನಿಪ್ಪಂ ಪಂಚಮಗತಿಗೆ ಅತಿಲಬ್ಧವಿಭುಗೆ ಯೋಗ್ಯಂ ಪಂಚಮಜಳಧಿಜಳಂ ತನ್ನಿಂ ಚೆಚ್ಚರಮೆಂದು ಸುರರ್ಗೆ ಸುರಪತಿ ಬೆಸಸಲ್: **ಶಾಂತೀಶ್ವಪು**, ೧೪. ೧೧೯)

**ಪಂಚಮಜಳಧಿ** – ಸಪ್ತಜಲಧಿಗಳಲ್ಲಿ ಐದನೆಯದು, ಕ್ಷೀರಸಮುದ್ರ (ಪಂಚಮಚಕ್ರಿಯೆನಿಪ್ಪಂ ಪಂಚಮಗತಿಗೆ ಅತಿಲಬ್ಧವಿಭುಗೆ ಯೋಗ್ಯಂ ಪಂಚಮಜಳಧಿಜಳಂ ತನ್ನಿಂ ಚೆಚ್ಚರಮೆಂದು ಸುರರ್ಗೆ ಸುರಪತಿ ಬೆಸಸಲ್: **ಶಾಂತೀಶ್ವಪು**, ೧೪. ೧೧೯), ನೋಡಿ 'ಸಪ್ತಜಲಧಿ'

**ಪಂಚಮಶ್ರುತಿ** – ಮಹಾಭಾರತ (ಸ್ತುತಿಗೆಯ್ವಂ ಕೃತಪಂಚಮಶ್ರುತಿ ಪುರಾಣ ವ್ಯಾಸನಂ ವ್ಯಾಸನಂ: **ಜಗನ್ನಾವಿ**, ೧. ೮)

**ಪಂಚಮಹಾಪಾತಕ** – ಐದು ಮಹಾಪಾತಕಗಳು; ವಿವಿಧ ಧರ್ಮಗಳಲ್ಲಿನ ಹಾಗೂ ಕಾಲಗಳಲ್ಲಿನ ಇವುಗಳ ವಿವರಗಳಲ್ಲಿ ವ್ಯತ್ಯಾಸವಿದೆ; ಸಾಮಾನ್ಯವಾಗಿ ಹೇಳುವುದೆಂದರೆ ಬ್ರಹ್ಮಹತ್ಯೆ, ಸುರಾಪಾನ, ಸ್ವರ್ಣಸ್ತೇಯ, ಗುರುಪತ್ನೀಗಮನ, ಇವುಗಳನ್ನು ಮಾಡಿದವನ ಜೊತೆಗಿನ ಸಂಪರ್ಕ; [ಜೈನ] ಬಾಲವಧೆ, ಸ್ತ್ರೀವಧೆ, ಗೋವಧೆ, ಬ್ರಾಹ್ಮಣವಧೆ, ಋಷಿವಧೆ (ಈ ಪಂಚಮಹಾಪಾತಕಂಗಳಂ ಗೆಯ್ದವರುಂ ಅಗಮ್ಯಾಗಮನಂ ಅಪೇಯಾಪೇಯಂ ಅಭಕ್ಷ್ಯಾಭಕ್ಷ್ಯಂ ಮೊದಲಾಗೊಡೆಯ ಪೊಲ್ಲಮೆಗಳೊಳ್ ನೆಗಟ್ದು: **ವಡ್ಡಾರಾ**, ಪು ೯೬, ಸಾ ೨೨)

**ಪಂಚಮಹಾಬ್ರತ** – [ಜೈನ] ಶ್ರಾವಕರು ಆಚರಿಸಬೇಕಾದ ಪಂಚಾಣುವ್ರತಗಳನ್ನು ಮುನಿಗಳು ಮತ್ತಷ್ಟು ಗಾಢವಾಗಿ ಆಚರಿಸುವುದು (ತತ್ಪಾದಮೂಲದೊಳ್ ತಪಂಬಟ್ಟು ಪಂಚಮಹಾಬ್ರತಂಗಳಂ ಏಜೆಸಿಕೊಂಡು ಪಡಿಕಮಣಂಗೇಳ್ದ ತದನಂತರಂ ನಿಶ್ಚಯಸಮ್ಯಕ್ತ್ವಮಂ ಕೈಕೊಂಡು: **ವಡ್ಡಾರಾ**, ಪು ೨೮, ಸಾ ೨೬)

**ಪಂಚಮಹಾಭೂತ** – ಪೃಥ್ವಿ, ಅಪ್ಪು, ತೇಜ, ವಾಯು, ಆಕಾಶ (ಪಂಚಮಹಾಭೂತಕ್ಕೈದದ ಸುಖಿ ಸಂಚಿತಕರ್ಮಾರಣ್ಯ ದಹನಶಿಖಿ: **ಉದ್ಭಟಕಾ**, ೭. ೯೩)

**ಪಂಚಮಹಾವ್ರತ** – [ಜೈನ] ಪಂಚಮಹಾಬ್ರತ (ಕಸವರಮಂ ಕಸಮ ಪೂಜಿಸುವನುಂ ಏಳಿಸುವನುಂ ಸಮಾನಂ ಪ್ರತಿಭಾಷಿಸೆ ಪಂಚಮಹಾವ್ರತ ಪಂಚಸಮಿತಿ ಮಿಳಿತ ತ್ರಿಗುಪ್ತಿಗುಪ್ತಂ ಮುನಿಪಂ: **ಶಾಂತಿಪು**, ೯. ೧೧೧);

**ಪಂಚಮಹಾಶಬ್ದ** – ಐದು ವಾದ್ಯಗಳು; ಇವುಗಳ ವಿವರಗಳು ಕಾಲಕಾಲಕ್ಕೆ ಬದಲಾಗಿವೆ: ಸಾಮಾನ್ಯವಾದ ಪಟ್ಟಿಯೆಂದರೆ ಕೊಂಬು, ತಮಟೆ, ಶಂಖ, ಭೇರಿ, ವೀಣೆ, ಜಯಗಂಟೆ; ಐದು ವಾದ್ಯಗಳ ಬಾಜನೆಯ ಗೌರವ (ಇಳನ್ಮತ್ತಾಳಿನೀಗೀತ ಪಂಚಮಹಾಶಬ ವಿಜೃಂಭಿತಧ್ವನಿಲಸದ್ಗಾಂಧಾರನಾದಂ: **ಆದಿಪು,** ೧೨. ೪೮)

**ಪಂಚಮಿ** – ಶುಕ್ಲ–ಕೃಷ್ಣಪಕ್ಷಗಳಲ್ಲಿನ ಐದನೆಯ ದಿನ (ಸಿಪಕ್ಷದ ಪಂಚಮಿ ದಿನಪತಿವಾರಂ ಶುಭದ ಮೂಲನಕ್ಷತ್ರದೊಳ್ ಅನ್ವಿತಮಾಗೆ ನೆಗಟ್ಟುದೀ ಮತ್ಕೃತಿ: **ಆದಿಪು,** ೧೬. ೭೭)

**ಪಂಚಮಿಗಿತಿ** – ಪಂಚಮಸ್ತ್ರೀ (ಇತಿಗೆ; ಚಾಮರಿಗಿತಿ, ಮದ್ದಳಿಗಿತಿ .. .. ಪಂಚಮಗಿತಿ, ಪೇರಣಿಗಿತಿ: **ಶಬ್ದಮದ,** ೨೧೯ ಪ್ರ)

**ಪಂಚಮುಖ** – ಸಿಂಹ (ಸಮ್ಯಗವ್ರಾತನಭೀತಚೇತನತುಳಂ ಪೀರ್ದಂ ಗಜಾರಾತಿ ಪಂಚಮುಖಂ ತೀಕ್ಷ್ಣನಖಂ: **ಪಂಚತಂತ್ರ,** ೧೧೪)

**ಪಂಚಮುಷ್ಟಿ** – [ಜೈನ] ದೇಹದ ಐದು ಅಂಗಗಳಿಂದ ಕೂಡಿದ ನಮಸ್ಕಾರ; ಎರಡೂ ಮುಷ್ಟಿಗಳಿಂದ ತಲೆಗೂದಲು, ಮೀಸೆ, ಗಡ್ಡಗಳನ್ನು ಕಿತ್ತುಕೊಳ್ಳುವುದು (ಆ ಜಗತ್ಪತಿ .. .. ಆತ್ಮಕೇಶಕಳಾಪಂ ಬರೆ ಪಂಚಮುಷ್ಟಿಗೆ ಜಿನಶ್ರೀದೀಕ್ಷೆಯಂ ತಾಳ್ದಿದಂ: **ಶಾಂತಿಪು,** ೮. ೧೨೩)

**ಪಂಚರತ್ನ** – ಐದು ರತ್ನಗಳು, ವಿವಿಧ ಆಕರಗಳಲ್ಲಿನ ವಿವರಗಳಲ್ಲಿ ವ್ಯತ್ಯಾಸಗಳಿವೆ; ಅವುಗಳಲ್ಲಿ ಒಂದು ಪಟ್ಟಿ: (ಸುವರ್ಣ, ರಜತ, ಮುಕ್ತಾ, ಮಾಣಿಕ್ಯ, ಪ್ರವಾಳಕ ಪಂಚರತ್ನದ ಕೊಡೆಯಂ ಪಿಡಿದಮರಿ ಜನದ ಮನದಡಿವಿಡಿದಳ್: **ಆದಿಪು,** ೭. ೫)

**ಪಂಚರಾಯುಧ** – ಪಂಚರ ಎಂಬ ಆಯುಧ (ಬುಂಭುಕದೊಳ್ ತಗುಳ್ದು ಪಜ್ಜಳಿಸುವ ಪಂಚರಾಯುಧಂ .. .. ಭಯಂಗೊಳಿಸೆ: **ಪಂಪಭಾ,** ೧೦. ೭೬)

**ಪಂಚವಣ್ಣ** – ಐದು ಬಣ್ಣಗಳು: ಬಿಳಿಪು, ಹಳದಿ, ಕೆಂಪು, ಹಸುರು, ಕಪ್ಪು (ಪಂಚವಣ್ಣದ ಪಟ್ಟೆಯ ಬಿರುದಿನ ಬೀರಗಚ್ಚೆಗಟ್ಟಿರ್ದ ಪಿರಿಯ ನೇಜಯಮನೋಜೆಯಿಂದೆತ್ತಿ ಪಿಡಿದು: **ರಾಜಶೇವಿ,** ೬. ೧೧ ವ)

**ಪಂಚವಣ್ಣಿಗೆ** – ಐದು ಬಣ್ಣಗಳು (ಪೊಳೆವ ಪಂಚವಣ್ಣಿಗೆಯ ಪಟ್ಟೆಯ ತೋರದೊಂಗಲು .. .. ಲೀಲೆವಡೆದು: ೪. ೮) ವ); ಅಲಂಕಾರದ ಒಂದು ಬಗೆ (ಕಟ್ಟಿದ ಪಂಚವಣ್ಣಿಗೆಯ ಪಟ್ಟೆಯ ತೊಂಗಲೊಳ್ ಇಂದ್ರಚಾಪಮಂ ಪುಟ್ಟಿಸಿ .. .. ಮೇರೆದಪ್ಪಿ ಕವಿತಂದುದು ರೌದ್ರರಸಂ ರಣೋರ್ವಿಯೊಳ್: **ಪಂಪರಾ,** ೧೩. ೫೯)

**ಪಂಚವದನ** – ಸಿಂಹ (ಕರಟೀಘಟ ಕರಟಕನೆನೆ ನೆಗಟ್ಟಿ ಪಂಚವದನನಂಗಂ ಶಾಕ್ವರಪರಿಬೃಢನೆನಿಪಂಗಂ: **ಪಂಚತಂತ್ರ,** ೧೨೩)

**ಪಂಚವರ್ಣ** – ಐದು ಬಣ್ಣಗಳು (ತದೀಯ ಶಿರ ವರ ಪಂಚವರ್ಣಪಂಜರಮೆನೆ ಪಂಚವರ್ಣಶುಕಮೊಪ್ಪಿದುದಲ್ಲಿ: ರಾಜಶೇವಿ, ೧೪. ೭೯); ಐದು ಅಕ್ಷರಗಳು, ಪಂಚಾಕ್ಷರೀ ಮಂತ್ರ (ಚಿದ್ಘನಲಿಂಗಕ್ಕಿದು ಪೆಸರೆಂದೆನೆ ಬಣ್ಣಿಪರಾರೋ ಪಂಚವರ್ಣದ ಘನಮಂ: **ರಾಜಶೇವಿ,** ೪. ೯೪)

**ಪಂಚವಳ್ಳಿ** – ಒಚಿದು ಬಗೆಯ ಬಳ್ಳಿ (ಪಂಚವಳ್ಳಿಯಂ ಪಿತ್ತಿಲೊಳಿಟ್ಟರುಂ ಮರನ ನೆಟ್ಟರುಮೇಂ ಫಲಮುಂಬರಲ್ಲರೋ: **ಹರಿವಂಶ,** ೮. ೬೧ ವ)

**ಪಂಚವಿಂಶತಿಮಳ** – [ಜೈನ] ಇಪ್ಪತ್ತೈದು ಬಗೆಯ ದೋಷಗಳು: ಮಿಥ್ಯಾದರ್ಶನ, ಮಿಥ್ಯಾಜ್ಞಾನ, ಮಿಥ್ಯಾಚಾರಿತ್ರ, ಮಿಥ್ಯಾದೃಷ್ಟಿ, ಮಿಥ್ಯಾಜ್ಞಾನವುಳ್ಳವನು, ಮಿಥ್ಯಾಚಾರಿತ್ರವಂತ [ಈ ಆರು ಅನಾಯತನಗಳು], ದೇವಮೂಢ, ಗುರುಮೂಢ, ಸಮಯಮೂಢ [ಈ ಮೂರು ಮೂಢಗಳು], ಜ್ಞಾನ, ಕುಲ, ಬಲ, ಪೂಜೆ, ಜಾತಿ, ಐಶ್ವರ್ಯ, ತಪ, ಶರೀರ [ಈ ಎಂಟು ಮದಗಳು], ಶಂಕೆ, ಕಾಂಕ್ಷೆ, ವಿಚಿಕಿತ್ಸೆ, ಮೂಢದೃಷ್ಟಿ, ಅನುಪಗೂಹನ, ಅಸ್ಥಿತೀಕರಣ, ಅವಾತ್ಸಲ್ಯ, ಅಪ್ರಭಾವನೆ [ಈ ಎಂಟು ದೋಷಗಳು] (ಒಳಕೊಂಡ ಪಂಚವಿಂಶತಿ ಮಳದಿಂದಂ ಪಿಂಗಿ ತತ್ವರುಚಿಯಂ ತಾಳ್ದು ಉಜ್ವಳಗುಣಗಣಂಗಳಿಂದಂ ಬೆಳಗುಗುಂ ಈ ತೆಜದೆ ನಿನ್ನ ದರ್ಶನರತ್ನಂ: **ಸುಕುಮಾಚ,** ೬. ೪೬)

**ಪಂಚವಿಧಸ್ಥಾನ** – ಬಿಲ್ಲು ಗದೆ ಮುಂತಾದವನ್ನು ಹಿಡಿದು ಯುದ್ಧ ಮಾಡುವಾಗ ನಿಲ್ಲುವ ಐದು ಭಂಗಿಗಳು (ಆಲೀಢ, ಪ್ರತ್ಯಾಲೀಢ, ಸಮಪಾದ, ವೈಷ್ಣವ, ಮಂಡಲಾಗ್ರಮುಮೆಂಬ ಪಂಚವಿಧಸ್ಥಾನಂಗಳೊಳಂ .. .. ನಿಂದು: **ಗದಾಯು,** ೮. ೧ ವ)

**ಪಂಚಶತಶರಾಸನ** – ಐನೂರು ಬಿಲ್ಲುಗಳು (ಭರತೇಶ್ವರಂ ಪಂಚಶತಶರಾಸನೋತ್ಸೇಧನಪ್ಪುದಜಿಂ: **ಆದಿಪು,** ೧೪. ೧೦೭ ವ)

**ಪಂಚಶರ** – ಮನ್ಮಥ (ಅವನಿರೂಪ ಪಂಚಶರನೋಲಗದಿಂ ನಡೆತಂದಳ್ತಿಯಿಂ: **ರಾಜಶೇವಿ,** ೧೧. ೭೦); ಮನ್ಮಥನ ಐದು ಬಾಣಗಳು, ನೋಡಿ 'ಪಂಚಬಾಣ'

**ಪಂಚಶಿಖಿ** – ಐದು ತುದಿಗಳು (ಪರಮೇಶ್ವರನುಂ ಕಾರ್ತಸ್ವರದ ಚತುಷ್ಕೋಣ ಕಲಶಮುಂ ಪೋಲ್ತುವೆ ಮಂದರಶಿಖರ ಪಂಚಸೀಖಿಯಂ ಪರಿಮಳಮಿಳಿತಾಳಿಪಟಳರುಚಿ ಜಟಿಳತೆಯಿಂ: **ಅಜಿಪು,** ೪. ೭೦)

**ಪಂಚಸಮಿತಿ** – [ಜೈನ] ಈರ್ಯಾ, ಭಾಷಾ, ಏಷಣಾ, ಆದಾನನಿಕ್ಷೇಪಣ, ಉತ್ಸರ್ಗ ಎಂಬ ಐದು ಬಗೆಯ ಧಾರ್ಮಿಕ ಪ್ರವೃತ್ತಿಗಳು (ಕಸವರಮಂ ಕಸಮ ಪೂಜಿಸುವನುಂ ಏಳಿಸುವನುಂ ಸಮಾನಂ ಪ್ರತಿಭಾಷಿಸೆ ಪಂಚಮಹಾವ್ರತ ಪಂಚಸಮಿತಿ ಮಿಳಿತ ತ್ರಿಗುಪ್ತಿಗುಪ್ತಂ ಮುನಿಪಂ: **ಶಾಂತಿಪು,** ೯. ೧೧೧)

**ಪಂಚಸರ** – ಪಂಚಶರ (ಮೊದಲ ಪದಂ ಅಪಭ್ರಂಶಕ್ಕೆ ಬಾರದೆ ಉತ್ತರಪದಂ ತದ್ಭವಮಾದ ಸಮಾಸಕ್ಕೆ: ಮಂಗಲಪ್ರಸಾಧನಂ–ಮಂಗಳವಸದನಂ .. .. ಪಂಚಶರಂ–ಪಂಚಸರಂ: **ಶಬ್ದಮದ,** ೩೦೪ ಪ್ರ)

**ಪಂಚಾಂಗ** – ತಿಥಿ, ವಾರ, ನಕ್ಷತ್ರ, ಯೋಗ, ಕರಣಗಳೆಂಬ ದಿನದ ಐದು ಅಂಶಗಳು; ಔಷಧಿ ತಯಾರಿಕೆಯಲ್ಲಿ ಗಿಡಮರಗಳ ತೊಗಟೆ, ಎಲೆ, ಹೂವು, ಬೇರು, ಹಣ್ಣುಗಳೆಂಬ ಐದು ಅಂಶಗಳು

**ಪಂಚಾಂಗಮಂತ್ರ** – ಕರ್ಮಾರಂಭೋಪಾಯ, ಪುರುಷದ್ರವ್ಯಸಂಪತ್ತು, ದೇಶಕಾಲವಿಭಾಗ, ವಿನಿಪಾತಪ್ರತೀಕಾರ, ಕಾರ್ಯಸಿದ್ಧಿ ಎಂಬ ರಾಜನೀತಿಯ ಐದು ಅಂಶಗಳು (ವಿಭವಮಂ ಪಂಚಾಂಗಮಂತ್ರಂ ಚತುರ್ಬಲಮಂ ಪ್ರಾಭವಂ ಎಯ್ದೆ ಮಾಡೆ: **ಶಾಂತಿಪು,** ೫. ೭೫)

**ಪಂಚಾಂಗಶುದ್ಧಿ** – ದಿನದ ಐದು ಅಂಶಗಳಲ್ಲಿ ಯಾವುದೇ ದೋಷವಿಲ್ಲದಿರುವುದು; ಔಷಧಿತಯಾರಿಕೆಯಲ್ಲಿ ಗಿಡಮರಗಳ ಐದು ಅಂಶಗಳು ದೋಷರಹಿತ ವಾಗಿರುವುದು (ವೈದ್ಯನಂತೆ ಪಂಚಾಂಗಶುದ್ಧಿಯಂ ನೋಡಿ ಮಂತ್ರವಾದಿಯಂತೆ ಗ್ರಹಗತಿಯಂ ಕಂಡು ತಥಾಗತಮತೋಪಾಸಕನಂತೆ ತಾರಾಪಥಕ್ಕೆಜಗಿ: **ಸುಕುಮಾಚ,** ೩. ೬ ವ)

**ಪಂಚಾಂಗಸನ್ಮಂತ್ರ** – ಐದು ಅಕ್ಷರಗಳ ಶ್ರೇಷ್ಠ ಮಂತ್ರ (ಅರಿವರ್ಗಧ್ವಂಸಮಂ ಪೂರ್ಣದೆಸಗಿ ತಳೆದು ಪಂಚಾಂಗಸನ್ಮಂತ್ರಮಂ .. .. ತಾಳ್ದು: **ರಾಜಶೇವಿ,** ೧. ೧೩)

**ಪಂಚಾಂಡಕವ್ಯಕ್ತಿ** – ಐದು ವಿಭಿನ್ನ ನೋಟಗಳು (ಗಿಳಿ ಋಜ್ವಾಗತದಿಂದಂ ಅರ್ಧಋಜುವಿಂದಂ ಕೋಕಿಳಂ ಸಾಚಿಯಿಂ ಕಳಹಂಸೀಕಳಭಂ ರಥಾಂಗಮಿಥುನಂ ದ್ವ್ಯರ್ಧಾಕ್ಷಿಯಿಂ ಬರ್ಹಿಮಂಡಳಿ ಪಾರ್ಶ್ವಾಗತದಿಂದೇಂ ಪಡೆದುವೋ ಪಂಚಾಂಡಕವ್ಯಕ್ತಿ ಕಣ್ಗೊಳೆ ಕಂದರ್ಪನ ಬಾಣಪಂಚಕದವೊಲ್ ಚಿತ್ತಕ್ಕತಿಕ್ಷೋಭಮಂ: **ಮಲ್ಲಿನಾಪು,** ೫. ೩೬)

**ಪಂಚಾಗ್ನಿ** – ಐದು ಬಗೆಯ ಅಗ್ನಿಗಳು: ಪವನ, ಪಾವನ, ತ್ರೇತಾ, ಗಾರ್ಹಪತ್ಯ, ಆಹವನೀಯ; ಋಷಿಗಳ ಬೇಸಿಗೆಯ ತಪಸ್ಸಿನ ಐದು ಅಗ್ನಿಗಳು: ನಾಲ್ಕು ಕಡೆಯ ಬೆಂಕಿ ಮತ್ತು ನೆತ್ತಿಯ ಮೇಲಿನ ಸೂರ್ಯ (ಗುರೂಪದೇಶಂಗೊಳ್ಳದೆ ಪಂಚಾಗ್ನಿ ಸಾಧಕನಪ್ಪ ತಪೋಧನನಂ ಕಂಡು ಆನುಂ ಇಂತೆ ತಪಂಗೆಯ್ವೆನೆಂದು ಪಂಚಾಗ್ನಿತಾಪತಪ್ತನಾಗಿ: **ಪಂಚತಂತ್ರ,** ೧೧೬ ವ); ದಾರಿದ್ರ್ಯ, ಕ್ಷುಧೆ, ಕೋಪ, ಶೋಕ, ಅಂಗಜ ಎಂಬ ಐದು ಬೆಂಕಿಗಳು (ದಾರಿದ್ರ್ಯಾಗ್ನಿ ಮಹಾಕ್ಷುಧಾಗ್ನಿ ವಿಚಳತ್ಕೋಪಾಗ್ನಿ ಶೋಕಾಗ್ನಿ ದುರ್ವಾರ ಪ್ರಸ್ಫುರದಂಗಜಾಗ್ನಿ ಎನಿಪೀ ಪಂಚಾಗ್ನಿಯಿಂ: **ಸಮಯಪ,** ೧೫. ೧೦೩)

**ಪಂಚಾಗ್ನಿಸಾಧಕ** – ನಾಲ್ಕು ಕಡೆಯ ಬೆಂಕಿ ಮತ್ತು ನೆತ್ತಿಯ ಮೇಲಿನ ಸೂರ್ಯ ಇವುಗಳ ನಡುವೆ ತಪಸ್ಸು ಮಾಡುವವನು (ಗುರೂಪದೇಶಂಗೊಳ್ಳದೆ ಪಂಚಾಗ್ನಿಸಾಧಕನಪ್ಪ ತಪೋಧನನಂ ಕಂಡು ಆನುಂ ಇಂತೆ ತಪಂಗೆಯ್ವೆನೆಂದು ಪಂಚಾಗ್ನಿತಾಪತಪ್ತನಾಗಿ: **ಪಂಚತಂತ್ರ,** ೧೧೬ ವ)

**ಪಂಚಾಚಾರ** – [ಜೈನ] ದರ್ಶನ, ಜ್ಞಾನ, ಚಾರಿತ್ರ, ತಪ, ವೀರ್ಯ ಎಂಬ ಐದು ಆಚಾರಗಳು (ಮನಮಂ ಕಟ್ಟಿ ಗುಣಂಗಳಂ ತುಟಿದು ಪಂಚಾಚಾರದಿಂ ಪಂಚಬಾಣನ ಬಾಹಾಬಲಮಂ: **ಪಂಪರಾ,** ೧. ೩)

**ಪಂಚಾಣುವ್ರತಗಳು** – [ಜೈನ] ಶ್ರಾವಕರು ಆಚರಿಸಬೇಕಾದ ಅಹಿಂಸೆ, ಸತ್ಯ, ಅಸ್ತೇಯ, ಬ್ರಹ್ಮಚರ್ಯ, ಅಪರಿಗ್ರಹ ಎಂಬ ವ್ರತಗಳು (ಕೊಲ್ಲದ, ಪುಸಿಯದ, ಕಳ್ಳದ, ಪರಸ್ತ್ರೀಯರ್ಗೆಱಗದ, ನಿಯಮಿತ ಪರಿಗ್ರಹಮೆಂಬ ಪಂಚಾಣುವ್ರತಂಗಳ ಕೂಟಮನುಳ್ಳ: **ಧರ್ಮಾಮೃ,** ೫. ೮೮ ವ)

**ಪಂಚಾಣೂತ್ತರೆ** – [ಜೈನ] ಲೋಕಾಕಾಶದ ತುದಿಯ ನೆಲೆಯಲ್ಲಿರುವ ವಿಜಯ, ವೈಜಯಂತ, ಜಯಂತ, ಅಪರಾಜಿತ, ಸರ್ವಾರ್ಥಸಿದ್ಧಿ ಎಂಬ ಐದು 'ವಿಮಾನ'ಗಳು (ಅಂತು ಮುಡುಪಿ ಪಂಚಾಣೂತ್ತರೆಗಳ ನಾಭಿಯಪ್ಪ ಸರ್ವಾರ್ಥಸಿದ್ಧಿಯೊಳ್ ಪುಟ್ಟಿದಂ: **ಶಾಂತಿಪು,** ೯. ೧೨೦ ವ)

**ಪಂಚಾತಿಚಾರ** – [ಜೈನ] ಸಮ್ಯಗ್ದೃಷ್ಟಿಗೆ ಅಡ್ಡಿಯಾಗುವ ಶಂಕೆ, ಕಾಂಕ್ಷೆ, ನಿರ್ವಿಚಿಕಿತ್ಸೆ, ಅನ್ಯದೃಷ್ಟಿಪ್ರಶಂಸೆ, ಅನ್ಯದೃಷ್ಟಿಸಂಸ್ತವನ ಎಂಬ ಅತಿಚಾರಗಳು (ಯತಿಪಂ ಪಂಚಾತಿಚಾರ ಪ್ರಕೃತನಿಯಮದಿಂ .. .. ಅರ್ಹತ್ಪ್ರತಿಬಿಂಬಭ್ರಾಂತಿಯಂ ಮಾಡಿ: **ಚಂದ್ರಪ್ರಪು,** ೫. ೧೨೫)

**ಪಂಚಾನನ** – ಶಿವ [ಶಿವನ ಐದು ಮುಖಗಳು: ಸದ್ಯೋಜಾತ, ವಾಮದೇವ, ಅಘೋರ, ತತ್ಪುರುಷ, ಈಶಾನ] (ತಾನೊಪ್ಪಿದಂ ಶಂಭುಸಂಭವತದ್ರೇಣುಕರೂಪರೇವಣ ಮಹಾಯೋಗೀಂದ್ರ ಪಂಚಾನನಂ: **ರಾಜಶೇವಿ,** ೧. ೬೩); ಸಿಂಹ (ಸಂಜೀವಕನ ಆತ್ಮೀಯ ವನಪ್ರವೇಶಕಾರಣಮಂ ಸಪ್ರಪಂಚ ಬಿನ್ನಪಂಗೆಯ್ಯೆ ಪಂಚಾನನಂ ಕೇಳ್ದಿ ಇಂತೆಂದಂ: **ಪಂಚತಂತ್ರ,** ೧೧೧ ವ)

**ಪಂಚಾವಸ್ಥೆಗೆದಱು** – ಪಂಚತ್ವವನ್ನುಂಟು ಮಾಡು, ಮರಣವುಂಟುಮಾಡು (ಪಾಂಚಾಳನುಂ ಪಂಚಾವಸ್ಥೆಗೆದಱಲುಂ ಕರಂ ಚೆನ್ನೆಯ ರಾಗಿಯುಂ: **ಶಾಂತಿಪು,** ೮. ೭೨ ವ)

**ಪಂಚಾಶ್ಚರ್ಯ** – [ಜೈನ] ಆಹಾರದಾನ ಸಮಯದಲ್ಲಿ ಆಗುವ ಐದು ಅತಿಮಾನುಷ ಸೋಜಿಗಗಳು: ದೇವದುಂದುಭಿ ಸ್ವನ, ಪುಷ್ಪವೃಷ್ಟಿ, ಸುವರ್ಣವೃಷ್ಟಿ, ಮೆಲುಗಾಳಿ, ದೇವಪ್ರಶಂಸೆ (ಪುಗೆ ನೃಪನಿದಿರಂ ಬಂದಾವಗಂ ಅಟ್ಟೆಯೊಳಱೆದು ನಿಱಿಸೆ ದಾನೋನ್ನತಿಯೊಳ್ ಗಗನತಳದಿಂದೊರ್ಮೆಯೆ ನೆಗೆದತ್ತಾಶ್ಚರ್ಯಮಾಗೆ ಪಂಚಾಶ್ಚರ್ಯಂ: **ಆದಿಪು,** ೫. ೧೧)

**ಪಂಚಾಷ್ಟ** – ಐದೆಂಟಲ, ನಲವತ್ತು (ಪಂಚಾಷ್ಟಧನುಃಪರಿಮಿತ ಉತ್ಸೇಧಮುಂ ದಶಶಾಳಲಕ್ಷಣೋಪಜೀವಿತಮುಂ.. ..ಔದಾರಿಕ ಶರೀರಮಂ ತಳೆದು ಶಾಂತಿಕುಮಾರಂ: **ಶಾಂತೀಶ್ವಪು,** ೧೫. ೧೭ ವ)

**ಪಂಚಾಸ್ತಿಕಾಯ** – [ಜೈನ] ಜೀವ, ಪುದ್ಗಲ, ಧರ್ಮ, ಅಧರ್ಮ, ಆಕಾಶ ಎಂಬ ಐದು ಅಸ್ತಿಕಾಯಗಳು (ಜೀವಾಸ್ತಿಕಾಯಂ ಪುದ್ಗಲಾಸ್ತಿಕಾಯಂ ಧರ್ಮಾಸ್ತಿಕಾಯಂ ಅಧರ್ಮಾಸ್ತಿಕಾಯಂ ಆಕಾಶಾಸ್ತಿಕಾಯಮೆಂಬ ಪಂಚಾಸ್ತಿಕಾಯನಿಕಾಯಮುಮಂ .. .. ವ್ಯಾಖ್ಯಾನಂಗೆಯ್ಯಲ್: **ಸುಕುಮಾಚ,** ೩. ೩೯ ವ)

**ಪಂಚಾಸ್ತ್ರ** – ಐದು ಬಾಣಗಳನ್ನುಳ್ಳವನು, ಮನ್ಮಥ (ಪ್ರಾಂಚತ್ ಪಂಚಮರುದ್ವಿಹಾರನಗರೀ ಪಂಚಾಸ್ತ್ರಹೃದ್ಬೀಕರೀ: **ರಾಜಶೇವಿ,** ೪. ೧೦೩)

**ಪಂಚಾಸ್ಯ** – ಸಿಂಹ (ಕದನಪ್ರಾರಂಭಶೌಂಡಂ ರಿಪುನೃಪಬಲ ದಾವಾನಲಂ ವೈರಿಭೂಭೃತ್ ಮದವತ್ ಮಾತಂಗಕುಂಭಸ್ಥಳ ದಳನಖರೋಗ್ರಾಸಿ ಪಂಚಾಸ್ಯಧೈರ್ಯಂ: **ಪಂಪಭಾ,** ೬. ೭೭)

**ಪಂಚಿಕೆ** – ವ್ಯಾಖ್ಯಾನ (ಯುವತಿಯರ ಕರುಣಪುಣ್ಯದ ಪಂಚಿಕೆಯಿದೆನಿಸಿ: **ಕುಸುಮಾಕಾ,** ೭. ೧೩೩ ರಗಳೆ)

**ಪಂಚೇಂದ್ರಿಯ** – ಸ್ಪರ್ಶನ, ರಸನ, ಘ್ರಾಣ, ಚಕ್ಷು, ಶ್ರೋತ್ರ ಎಂಬ ಐದು ಇಂದ್ರಿಯಗಳು[ಳ್ಳವು] (ಸ್ಪರ್ಶನ ರಸನ ಘ್ರಾಣ ಚಕ್ಷುಃ ಶ್ರೋತ್ರೇಂದ್ರಿಯಸಮನ್ವಿತಂಗಳಪ್ಪ ಮನುಷ್ಯಾದಿ ಪಂಚೇಂದ್ರಿಯಂಗಳ್: **ಆದಿಪು,** ೧೦. ೬೩ ವ)

**ಪಂಚೇಷು** – ಐದು ಹೂವಿನ ಬಾಣಗಳು, ನೋಡಿ, 'ಪಂಚಬಾಣ'; ಮನ್ಮಥ (ನೀಂ ಚರಮದೇಹನ್ಪೆ ಪಂಚೇಷುವನಿಕ್ಕಿ ಗೆಲ್ದು ಪಂಚೇಂದ್ರಿಯಮಂ ಪಂಚಮಹಾಕಲ್ಯಾಣಮನಿಂ ಚೆಚ್ಚರಮೆಯ್ದಿ ಪಡೆಯ ಪಂಚಮಗತಿಯಂ: **ಅಜಿತಪು,** ೬. ೭೨)

**ಪಂಜರ** – ಪ್ರಾಣಿಪಕ್ಷಿಗಳನ್ನು ಕೂಡಿಹಾಕುವ ಸಾಧನ (ಪೊನ್ನ ಪಂಜರಮಂ ಪೊತ್ತಿರದೇಳ್ತಂದಂ ಚಂಡಿಕೆವೆರಸಿದ ಚಂಡಾಲಬಾಲಕಂ: **ಕಾದಂಬ,** ೧. ೩೪)

**ಪಂಜರಂಬಡೆ** – ಪಂಜರ ನಿರ್ಮಿಸು (ಅಸ್ತ್ರಜಾಲದಿಂ ಪಂಜರಂಬಡೆದನಂದು ವಿಯತ್ತಳದೊಳ್ ಗುಣಾರ್ಣವಂ: **ಪಂಪಭಾ,** ೨. ೭೬)

**ಪಂಜರಿಸು**– ಪಂಜರದಂತೆ ಸುತ್ತಲೂ ಆವರಿಸು (ಬಱಿಗಳೊಳ್ ತೋರುತಿರ್ಪ ಎಲ್ಲಗೊಳ್ ಪಂಜರಿಸಿದಂತೆ ಎಯ್ದೆ ಬೇರ್ಪಟ್ಟಿರೆ: **ಕಾದಂಬ,** ೧. ೧೯)

**ಪಂಜಿ** – ಹಿಂಜಿದ ಹತ್ತಿಯ ಉಂಡೆ (ತನು ಪಂಜಿವೊಲ್ ಬೆಳರ್ತಿರ್ಪಿನೆಗಂ ಹಿಮಮೆಕ್ಕಿದರಲೆವೋಲ್ ಪುದಿದಿರೆಯುಂ: **ಆದಿಪು,** ೬. ೩೩)

**ಪಂಟಿಸು** – ಹೊದಿಸು (ಮನೋನಾಥನ ಸಿರಿಮುಡಿಯೊಳ್ ವಕ್ಷದೊಳ್ ಹಾರಮಾಗಿರ್ದು ನಿತಂಬಾಭಾಗದೊಳ್ ಪಂಟಿಸಿದ ದುಗುಲಮಾಗಿರ್ದು: **ಅನಂತಪು,** ೮. ೧೬)

**ಪಂಠೀಸು** – ನೆಲದ ಮೇಲೆ ಹೊರಳಾಡು (ನುಸುಳ್ವ ಪೆಡಂಮುಗುಳ್ವ ಹೆಱಮೆಟ್ಟುವ ತಟ್ಟುವ ಮೇಲೆ ಪಾಯ್ವ ಪಂಠಿಸುವ ಕೆಲಕ್ಕೆ ಸಾರ್ವ .. .. ಅತಿದುಷ್ಟಮಪ್ಪ ಹಯಮಂ: **ಧರ್ಮಪ,** ೮. ೧೩)

**ಪಂಡಕ** – ಪುರೋಹಿತ (ವನಿತಾ ಪಶು ಪಂಡಕ ವರ್ಜ್ಯನಿವಾಸೋದ್ದೇಶದೆಡೆಗಳೊಳ್ ಚರಿಯಿಸುತುಂ ಮುನಿಪತಿ: **ಸುಕುಮಾಚ,** ೪. ೮)

**ಪಂಡಿತ** – ವಿದ್ವಾಂಸ (ಕವಿ ಗಮಕಿ ವಾದಿ ವಾಗ್ಮಿ ಪ್ರವರರ ಪಂಡಿತರ ನೆಗಟ್ದಿ ಸಬ್ಬವದವರೊಡನೆ ಅಂತು ಒಸೆದ ಅನ್ನವಾಸದೊಳ್ ಇರ್ದನಾಗಳ್ ಹರಿಗಂ: **ಪಂಪಭಾ,** ೩. ೮೦)

**ಪಂಡಿತಮರಣ** – [ಜೈನ] ಜ್ಞಾನಿಯಾಗಿ ಸಲ್ಲೇಖನದಿಂದ ಪಡೆಯುವ ಮರಣ (ಸನ್ಯಸನವಿಧಿಯಿಂ ದಂಡಿತಕರಣನಾಗಿ ಪಂಡಿತಮರಣದಿಂ ಮುಡಿಪಿ: **ಅನಂತಪು,** ೧೨. ೪೩ ವ)

**ಪಂಡಿತಮೃತಿ** – [ಜೈನ] ಪಂಡಿತಮರಣ (ಅಂದಿನ ಮೂರ್ಖವೃತ್ತಿ ಪಂಡಿತಮೃತಿಯಿಂದಲ್ಲದೆ ಅದು ನೀಗದು: **ಶಾಂತಿಪು,** ೭. ೪೦)

**ಪಂಡಿತವಕ್ಕಿ** – ಗಿಳಿ (ಪ್ರಿಯವಾದುವು ಪಡಿಯಱವಕ್ಕಿಯ ಜಡಿಪುಂ ಜಕ್ಕವಕ್ಕಿಯುಲಿ ಸಾರಸವಕ್ಕಿಯ ಕುಹಕಂ ಪಂಡಿತವಕ್ಕಿಯ ಪಠನಂ ನೃಪನ ಕಿವಿಗೆ ಕೇಳೀವನದೊಳ್: **ಮಲ್ಲಿನಾಪು,** ೬. ೭)

**ಪಂಡಿತ ಸಮಾಧಿವಿಧಿ** – [ಜೈನ] ಸಲ್ಲೇಖನ (ಮುಮುಕ್ಷುಜ್ಯಾಯಂ ಪಂಡಿತಸಮಾಧಿವಿಧಿಯಂ ತಳೆದಂ: **ಅನಂತಪು,** ೪. ೩೭)

**ಪಂಡಿತಿಕ್ಕೆ** – ಪಾಂಡಿತ್ಯ (ಇರ್ವರುಂ ಬೇಱೆ ಬೇಱೆ ಉಪಶ್ಲೋಕಿಸಿ ಕ್ರಿಯಾಕಾರಕ ಸಂಬಂಧದಿಂದಂ ವಖ್ಖಾಣಿಸಿ ತಮ್ಮ ಪಂಡಿತಿಕ್ಕೆಯಂ ಅಱಿಪಿದೊಡೆ: **ವಡ್ಡಾರಾ,** ಪು ೪, ಸಾ ೨೫)

**ಪಂತಿ** – ಸಾಲು (ಆನನ ವನಜಾತಮಂ ಕುರುಳ ಪಂತಿಗಳಂ ಪೊಳೆವಕ್ಷಿಯುಗ್ಮಮಂ: **ಧರ್ಮಾಮೃ,** ೧೧೦); ಊಟದ ಪಂಕ್ತಿ (ಅಯ್ನೂರ್ವರ್ ಮಕ್ಕಳ್ಗೊಂದೆ ಪಂತಿಯೊಳ್ ತುಯ್ಯಲಂ ಬಡ್ಡಿಸಿ: **ವಡ್ಡಾರಾ,** ಪು ೧೬೪, ಸಾ. ೨೨)

**ಪಂತಿಕಾಱ** – ಊಟದ ಪಂಕ್ತಿಯ ಮೇಲ್ವಿಚಾರಕ (ಎಡೆವಟ್ಟಲ್ಗಡ್ಡಣಿಗೆಗೆ ಪಡಿಗಕ್ಕೆ ತಗುಳ್ದ ಪಟೆಯ ಬಿತ್ತರಿಗೆಗೆ ತಕ್ಕೆಡೆಯಱಿದು ಪಂತಿಕಾಱನೆಡೆಯಱಿದು ವಿಲಾಸದಿಂದಂ ಇರಿಸಿದರಾಗಳ್: **ಸುಕುಮಾಚ,** ೧೧. ೨೬)

**ಪಂಥ** – ದಾರಿ (ಅಯನಂ ಮಾರ್ಗಮ ಸೃತಿ ಸರಣಿ ಅಧ್ವಂ ಏಕಪದಿ ಪದ್ಧತಿ ಪಂಥಂ: **ಅಭಿಧಾವ,** ೧. ೧೦. ೨); ಯೋಗ್ಯಕ್ರಮ (ಇದು ಕಡಲಂದದೆ ಕಡುಗಡಿದು ಇದಱೊಳಗಾನಿವನನಿಕ್ಕಿ ಕೋಪಮನಾಱಿಪುದೆ ಮಂಥಮೆಂದು ಬಂದಂ ತದ್ಗರದೇಶಕ್ಕೆ: **ಚಂದ್ರಪ್ರಪು,** ೫. ೪೨); ಹುರುಡು (ಆದಿದೇವಂ ದೇವದೇವಂ ಕುಡೆ ಪಡೆದ ನೆಲಕ್ಕಾರೊಳಂ ಪಂಥಮುಂಟೇ: **ಆದಿಪು,** ೧೪. ೭೭)

**ಪಂಥಾತಿಚಾರನಿಯಮ** – [ಜೈನ] ಗಮನ ಪ್ರಾಯಶ್ಚಿತ್ತ, ನಡೆಯುವಾಗ ಆಗಬಹುದಾದ ಹಿಂಸೆಗೆ ಶ್ರವಣರು ಮಾಡಿಕೊಳ್ಳುವ ಪ್ರಾಯಶ್ಚಿತ್ತ (ವಿಹಾರಿಸುತ್ತುಂ ಪರಮಜಿನಧರ್ಮಕೀರ್ತಿಯೆ ಮೂರ್ತಿಯಾದಂತೆ ಉಗ್ರೋಗ್ರತಪಶ್ಚರಣನಿರತನಾಗಿಯುಂ ಅತ್ಯಂತ ಶಾಂತಸ್ವರೂಪಮಂ ತಾಳ್ದಿ ಪಂಥಾತಿಚಾರನಿಯಮದಿಂ: **ಸುಕುಮಾಚ,** ೩. ೭ ವ)

**ಪಂದರ್** – ಚಪ್ಪರ (ಎರಡುಂ ಬಲದ ಕಡುವಿಲ್ಲರ್ ಭೋರ್ಗರೆದು ಇಸೆ ಕೂರ್ಗಣೆಯೊಳ್ ಪಂದರ್ ಇಕ್ಕಿದಂತಾಯ್ತು ಗಗನಮಂಡಲಮೆಲ್ಲಂ: **ಪಂಪಭಾ,** ೧. ೭೨)

**ಪಂದಲೆ** – ಪಚ್ಚನೆಯ ತಲೆ, ಆಗ ತಾನೇ ಕತ್ತರಿಸಿದ ತಲೆ (ಅಟ್ಟೆಯಿಂದುಣ್ಮುವ ಅಸೃಕ್ಜಲಧಾರೆ ನಾಳಮೆನೆ ಪಂದಲೆ ಪೋಲ್ತುದು ನಭದೊಳಲರ್ದ ಕೆಂದಾವರೆಯಂ: **ಪಂಪರಾ,** ೯. ೨೪)

**ಪಂದಳಿರ್** – ಹಸಿರಾದ ಚಿಗುರು (ಕೆಟಗಣ ಕೆಂದಳಿರ್ ಪುದಿದ ಮೇಗಣ ಪಂದಳಿರ್ ಒಂದಿದೊಂದು ಕೆಯ್ಗಟಿದ ಪಸುರ್ಪುಮಂ ಪೊಳೆವ ಕೆಂಪುಮಂ ಆಳ್ದಿರೆ: **ಪಂಪಭಾ,** ೫. ೩೧)

**ಪಂದಿವೇಂಟೆ** – ಹಂದಿಯ ಬೇಟೆ (ಮತ್ತಂ ಪಂದಿವೇಂಟೆಯ ಮಾತಂ ಬಿನ್ನಪಂಗೆಯ್ವಂ: **ಪಂಪಭಾ,** ೫. ೪೫ ವ)

**ಪಂದೆ** – ಹೇಡಿ (ರೌದ್ರಘೋಷಮ್ ಏರ್ವಸನಮಂ ಉಂಟುಮಾಡಿದುದು ಪಂದೆಗಮಂದಿನ ವೀರಗೋಷ್ಠಿಯೊಳ್: **ಆದಿಪು,** ೧೪. ೯೦)

**ಪಂದೆಯಂ ಪಾವಡರ್ದಂತೆ** – ಹೇಡಿಗೆ ಹಾವು ಅಡ್ಡಲಾದಂತೆ (ಪಂದೆಯಂ ಪಾವಡರ್ದಂತೆ ಮೇಗುಸಿರ್ವಿಟ್ಟು ಹಮ್ಮದಂಬೋಗಿ: **ಪಂಚತಂತ್ರ,** ೯೯ ವ)

**ಪಂದೆಗಜ್ಜ** – ಹೇಡಿಯ ಕೆಲಸ (ಬಗೆದಂದೀ ಪಂದೆಗಜ್ಜಂಗಳನಱಿಪುವ ನಿನ್ನುಕ್ತಿಯಂತಿರ್ಕೆ: **ಜಗನ್ನಾವಿ,** ೧೩. ೫೩)

**ಪಂದೊಗಲ್** – ಹಸಿಯ ಚರ್ಮ, ಅದರಿಂದ ಮಡಿದ ಚೀಲ (ಪಂದೊಗಲೊಳ್ ಪುಟುವೆರಸು ತೀವಿದಾ ನೀರುಮನುಂಡು ಗಡಂ ತಮ್ಮಾಚಾರಂ ಜಗಕ್ಕೆ ಮಿಗಿಲ್ .. .. ಎಂಬರ್ ಕೆಲಬರ್: **ಸಮಯಪ,** ೬. ೧೫)

**ಪಂದೊವಲ್** – ಸುಲಿದ ಹಸಿಯ ಚರ್ಮ (ಕ್ಷಮಾಂಗನಾಲಿಂಗಿತನಪ್ಪ ಮಹಾಮುನಿಯಂ ಮಲರ್ಚಿ ಪಟ್ಟಿರಿಸಿಯುರಃಸ್ಥಲಮಂ ನಾಭಿವರೆಗಂ ವಿದಾರಿಸಿ ಪಂದೊವಲ್ ಪೊರೆತಾಪಿನೆಗಂ .. .. ಕಾಯ್ದು ಕರ್ಬೊನ್ನ ಕೀಲ್ಗಳಂ .. .. ಇಱಿದೊಡೆ: **ವಡ್ಡಾರಾ,** ಪು ೫೧ ಸಾ ೨೯)

**ಪಂದೋಲ್** – ಪಂದೊವಲ್ (ಪಂದೋಲ್ ನೆತ್ತರ್ ಕೀವು ಅಡಗುಂದಿನ ತಾಂ ತೊಱೆದವಸ್ತು ಸತ್ತಕ್ರಿಮಿಗಳ್ ಸಂದಸ್ತಿಯೆಂಬಿವೇಟುಂ ಕುಂದದೆ ಮುಟ್ಟುಪಡಮಕ್ಕುಂ ಅರ್ಹನ ಮತದಿಂ: **ಧರ್ಮಾಮೃ,** ೫. ೯೦)

**ಪಂಪಕ** – ಒತ್ತಾದುದು, ದಟ್ಟವಾದುದು (ಪಂಪಕಮಾದ ಚಂಪಕಾಲತೆಯ ಪಿಣಿಲೇಱಿದ ಕರವೀರಲತೆಯ: **ಅನಂತಪು,** ೧೦. ೨೬ ವ)

**ಪಂಬಲ್** – ಹಂಬಲ (ನೀಂ ನರಕಕ್ಕೆ ಸಲ್ಲದಿರೆಬ ಪಾದರದ ಪಂಬಲನಿಂ ಬಿಡು ಎಂಬ .. .. ಎಂಬ ಮಾತಲ್ಲದೆ ಮಂಗಳಂ ಪೆಱವು ಮಂಗಳಮಿಲ್ಲ: **ಸಮಯಪ,** ೧೪. ೩೭)

**ಪಂಬಲಿಸು** – ಹಂಬಲಿಸು, ಹಾತೊರೆ (ಕೆಮ್ಮನೆ ದೇವಲೋಕ ಸುಖಮಂ ಮನದೊಳ್ ಪಂಬಲಿಸಿ ಮಱುಗಲೇಂ ಸಮನಿಕುಮೇ: **ಧರ್ಮಾಮೃ,** ೬. ೯೩)

**ಪಕ್ಕ** – [ಪಕ್ಷ] ಬದಿ, ಮಗ್ಗುಲು (ಎರಡು ಪಕ್ಕದೆ .. .. ಚಾಮರಮಂ ಚೆನ್ನೆಯರಿಕ್ಕೆ: **ಪಂಪರಾ,** ೨. ೧೧); ರೆಕ್ಕೆ (ಪಕ್ಕವೇನುಡಿದಿತ್ತೋ ಪಿಡಿದು ಅನ್ಯಶಾರಿಕೆ ರತವ್ಯಾಪಾರದೊಳ್ ಪೊಯ್ದಲೋ: **ಲೀಲಾವತಿ,** ೬. ೯೩)

**ಪಕ್ಕಗೂಡಾಗು** – ಮಗ್ಗುಲು ಮೇಲಾಗು (ಎಡಬಲದೊಳಗೆ ಆಂ ಬೀಟುತುಂ ಪಕ್ಕಗೂಡಾಗಿ ಒಱಗುತ್ತುಂ ಪೋಗಿ: **ಕಾದಂಸಂ,** ೧. ೬೦)

**ಪಕ್ಕಜಲ್ಲಿ** – ಎಡಬಲದ ಇಳಿಬಿಟ್ಟ ತೊಂಗಲು (ಪಸುರಂಗಿಗೆ ಪೀಲಿಯ ಪಕ್ಕಜಲ್ಲಿ ಗೇಣಳವಡೆ ತೊಟ್ಟ ಪೊಂಬುಲಿಯ ಸಮ್ಮದ ಚಲ್ಲಣಮೊಪ್ಪೆ: **ಶಬರಶಂ,** ೩. ೧೬)

**ಪಕ್ಕಣ** – ಬೇಡರ ವಾಸಸ್ಥಳ, ಕೆಳವರ್ಗದವರ ವಾಸಸ್ಥಳ (ಅನಂತರಮೆ ತೋಱಿತು ಇಂದ್ರಪುರದಂತಿರೆ ಆ ಪಕ್ಕಣಂ: **ಕಾದಂಸಂ,** ೮. ೪೧)

**ಪಕ್ಕರಿಕೆ** – [ಪಕ್ಷರಕ್ಷಾ] ಕುದುರೆಯ ಮೇಲಣ ಕವಚ (ಎರಡುಂ ಬಜೆಗಳ ಪೊನ್ ಪಕ್ಕರಿಕೆಗಳೊಳ್ ತುಱುಗಿ ನಟ್ಟು: **ರಾಜಶೇವಿ,** ೬. ೬೩)

**ಪಕ್ಕರಿಸು** – ಪಕ್ಕರಿಕೆ ಹಾಕು (ವಾರುವಮಂ ಪೀಲಿಯಿಂದೆ ಪಕ್ಕರಿಸಿ ಮನೋಹಾರಿಯೆನೆ .. .. ನೃಪಕುಮಾರಂ ಏಱುವನೊಲವಿಂ: **ನೇಮಿನಾಪು,** ೪. ೧೪೧)

**ಪಕ್ಕರೆ** – ಪಕ್ಕರಿಕೆ (ಪೊನ್ನ ಪಲ್ಲಣಂ ಪಕ್ಕರೆ ತೇಜಿವಾರು ಕಟೆದಿರ್ಕಡಿಯಾದುದು ಬಾಳ ಬಾಯೊಳ್: **ಕಬ್ಬಿಗಕಾ,** ೨೧೮); ಕೊಪ್ಪರಿಗೆ

**ಪಕ್ಕಾಗು** – ಗುರಿಯಾಗು (ನೂಪುರರವವಿಳಸತ್ ವಾಮಪಾದಪ್ರಹಾರಕ್ಕಿದಱೊಳ್ ಪಕ್ಕಾಗಿ ಗೋತ್ರಸ್ಖಲನೆ ನೆಗಟೆ: **ಆದಿಪು,** ೪. ೯); ಆಸರೆಯಾಗು (ಪಾದಪ್ರಹರಕ್ಕಿದಱೊಳ್ ಪಕ್ಕಾಗಿ ಗೋತ್ರಸ್ಖಲನೆ ನೆಗಟೆ ಪೂಮಾಲೆಯಿಂ ಮೋದುವೆತ್ತೆಂ: **ಆದಿಪು,** ೪. ೯)

**ಪಕ್ಕಿ** – [ಪಕ್ಷಿ] ಹಕ್ಕಿ (ನಿನ್ನ ಭರ್ತಾರಂ ಬಂದು ಪಕ್ಕಿಗಳಂ ಕಾಣದೆ ಬಿಟ್ಟು ಕಳೆದರಾರೆಂದು ಬೆಸಗೊಂಡೊಡೆ: **ವಡ್ಡಾರಾ,** ಪು. ೧೫೧, ಸಾ. ೭)

**ಪಕ್ಕಿವಣೆ** – ಹಕ್ಕಿಯ ಗೂಡು (ಕೇಳೀಮಯೂರಂಗಳ್ ಉದ್ದಮೊಗೆದು ಪೊಂಗಡೆಯ ಪಕ್ಕಿವಣೆಗೆ ಪಾಱೆಯುಂ: **ಆಚವರ್ಧ,** ೬. ೨೩ ವ)

**ಪಕ್ಕು** – ಗುರಿ (ಗೋವಳಿತಿಯ ಮೊಲೆಯೊತ್ತಿಂಗೆ ಪಕ್ಕಾಯ್ತು ಗೋವರ್ಧನ ವಕ್ಷೋಭಾಗಂ: **ಪಂಪರಾ,** ೧. ೧೨೨); ಕಣ್ಣಿನ ಪಿಸುರು, ಗೀಜು (ನಿರೀಕ್ಷಿಸುವ ಅಕ್ಷಿ ಪಕ್ಕು ಸಿಳ್ಳು ಉಣ್ಮುವ ಕಾಣ ತಾಣಂ: **ಸಮಯಪ,** ೫. ೬೪)

**ಪಕ್ಕುಗುಡು** – ಅವಕಾಶ ಕೊಡು (ವಂದಿಜನಮಂ ಕಣ್ಣನ್ನೆಯಿಂದೊತ್ತಿ ಸಂಮದಮಂ ತಾಳ್ದುಂ ಅದಕ್ಕೆ ಪಕ್ಕುಗುಡದೆ: **ರಾಜಶೇವಿ,** ೪. ೧೧೩)

**ಪಕ್ಕುಗೊಡು** – ಆಸರೆ ಕೊಡು (ಪುಣ್ಯಪಾಪಖಳರಿರ್ದಪರ್ ಅಂತವರ್ಗೆಕೆ ಪಕ್ಕುಗೊಟ್ಟು ಅಗವಡುತಿರ್ಪ: **ಸಮಯಪ,** ೧೫. ೧೦೦)

**ಪಕ್ಕುಮಾಡು** – ಜೊತೆಮಾಡು, ಒಡಗೂಡಿಸು (ಸೌಧರ್ಮೇಂದ್ರನೇಱಿದ ಐರಾವತಗಜೇಂದ್ರಕ್ಕೆ ನಿಜಗಜೇಂದ್ರಂಗಳಂ ಪಕ್ಕುಮಾಡಿ: **ಆದಿಪು,** ೭. ೪೯ ವ)

**ಪಕ್ಕುವಾರ್** – ಅವಕಾಶಕ್ಕಾಗಿ ಕಾಯಿ (ಬಳಸಲಿಂ ನಿನ್ನನಾ ಕಾಂತೆಯಂತಾ ನಳಿತೋಳ್ಗಳ್ ಪಕ್ಕುವಾರ್ದಿರ್ದುವು: **ಆದಿಪು,** ೪. ೨೧)

**ಪಕ್ಕುವಿಡಿ** – [ಪಕ್ಕು+ಪಿಡಿ] ಜೊತೆಯ ಹೆಣ್ಣಾನೆ (ಸಾಮಜಪತಿ ಪೊಕ್ಕು ಪಕ್ಕುವಿಡಿಯಂ ನಡೆ ಸೋಂಕುವವೋಲ್: **ಶಾಂತಿಪು,** ೮. ೧೧೦)

**ಪಕ್ಕುವೆಱು** – ಅವಕಾಶ ಪಡೆ (ರಿಪುಭೂಪರ್ ಪಕ್ಕುವೆತ್ತು ಎತ್ತಿ ತಟ್ಟಿಱಿದು ಎತ್ತಂ ಸೆಱೆಗೆಯ್ದು ಕೊಂಡು ನೆಲನಂ ತಾಂ ಆಳ್ದು: **ಶಾಂತಿಪು,** ೭. ೫೯)

**ಪಕ್ಕೆ** – ವಿಶ್ರಾಂತಿಸ್ಥಾನ (ಗರುವಿಕೆಗೆ ಇಕ್ಕೆ ಸಂದ ಜಸದೇಳ್ಗೆಗೆ ಪಕ್ಕೆ ಎನಿಪ್ಪ ಪೆಂಪಿನಿಂ: **ತ್ರಿಷಷ್ಟಿಪು,** ೧೧. ೧೪); ಹಕ್ಕಿಗೂಡು (ಪಕ್ಕಿಗಳ್ ಪಕ್ಕೆಗೆ ಸಾರ್ದುವು ಮೃಗಂಗಳ್ ನಗಮನೊತ್ತುಗೊಂಡುವು: **ಗಿರಿಜಾಕ,** ೪. ೧೦೨ ವ)

**ಪಕ್ಕೆಸಾರಿ** – ಪಟ್ಟದಾನೆಯ ಜೊತೆಗೆ ಬರುವ ಆನೆ (ಆ ಜಗದೇಕಪ್ರಭು ಪಕ್ಕೆಸಾರಿಗಿದುವೇಟ್ಕುಂ ತಕ್ಕುದೆಂದಟ್ಟಿದಂ: **ಅನಂತಪು,** ೧೩. ೪೩)

**ಪಕ್ಕೆದಲೆ** – ಮಲಗುವ ಜಾಗ (ಇಚ್ಛೆಯಗ್ಗಲಿಸಿದ ಮಾತೆ ಪಕ್ಕೆದಲೆಯೊಳ್ ವಿನುತಂ ರತಿಯಿಲ್ಲಲ ಮಿಂಡಿಯೊಳ್: **ಸೂಕ್ತಿಸುಧಾ,** ೮. ೩೯)

**ಪಕ್ವಬಿಂಬ** – ಮಾಗಿದ ತೊಂಡೆಹಣ್ಣು (ನಗೆಗಣ್ಗಳ್ ಪಕ್ವಬಿಂಬಾಧರಂ ಬೆಳರ್ಗೆಂಪಂ ಸ್ಮಿತಕಾಂತಿಯಿಂ ತಳೆದುದಿಲ್ಲ ಆಸ್ಯಾನಿಳಂ: **ಮಲ್ಲಿನಾಪು,** ೪. ೩)

**ಪಕ್ವಶಾಳಿ** – ಮಾಗಿದ ಬತ್ತದ ಪೈರು (ಪಕ್ವಶಾಳೀ ಕಣಿಶಾಳೀನಮ್ರಮೊಪ್ಪಿರ್ದದೇಂ ಗೆಲೆವಂದಿತ್ತೊ ಸುವರ್ಣವರ್ಣದಿನಿಳಾಶ್ರೀಯುಟ್ಟ ಪೊಂಬಟ್ಟೆವೋಲ್; **ಜಗನ್ನಾವಿ,** ೨. ೫)

**ಪಕ್ಷ** – ರೆಕ್ಕೆ (ಶಿಶುವಂ ಆತ್ಮ ಪಕ್ಷಪುಟದೊಳ್ ಪುದುಂಗೊಳಿಸಿಯುಂ .. .. ತಾನುಂ ಪುತ್ರದೋಹಳ ಕುತೂಹಳೆಯುಮಾಗೆ: **ಮಲ್ಲಿನಾಪು,** ೩. ೮೫ ವ); ಹದಿನೈದು ದಿನಗಳ ಅವಧಿ (ಪಾಡಿವಮದಾದಿಯೆನೆ ತಿಥಿ ಪಕ್ಷಸ್ಥಿತಿಯೊಳ್ ಪದಿನೆಯ್ದಕ್ಕಂ: **ಅಭಿಧಾವ,** ೧. ೨. ೭);

**ಪಕ್ಷಂಗೆಡು** – ಆಸೆಯಿಲ್ಲದಂತಾಗು (ಮಱುದಿವಸಂ ಭಕ್ಷ್ಯದ ದೆಸೆಗೆ ಪಕ್ಷಂಗೆಟ್ಟು ಪಾಲಿಂಗೆ ಬೆರ್ಚಿ ತುಪ್ಪಕ್ಕಿನಿಸಪ್ಪೊಡಂ ಮನಂದರಲಾಱದೆ: **ಧರ್ಮಾಮೃ,** ೧. ೧೨೫ ವ)

**ಪಕ್ಷಕುತ್ಕೀಳ** – ಗುಡ್ಡ, ಸಣ್ಣ ಬೆಟ್ಟ (ನಗನಿಕರಂ ಪಕ್ಷಕುತ್ಕೀಳಮೆಂಬಂತಿರೆ .. .. ಕಱೆದುದು ಬಹುಳಾಸಾರಮಂ ನೀರದೌಘಂ: **ಚಂದ್ರಪ್ರಪು,** ೪. ೪೧)

**ಪಕ್ಷಗಜ** – ಪಕ್ಕದಲ್ಲಿ ಸಾಗುವ ಆನೆ (ಸೈನ್ಯಾಧಿನಾಥನ ಕೆಲದೊಳ್ ಪಕ್ಷಗಜಾಧಿರೂಢನಾಗಿ ದೇವ ನೋಡೀ ತೋರ್ಪುದು: **ಆದಿಪು,** ೧೩. ೪೫ ವ)

**ಪಕ್ಷತಿ** – ರೆಕ್ಕೆಯ ಬುಡ (ಅಳಿಕುಳ ಪಕ್ಷತಿಕ್ಷಪಿತ ಪದ್ಮರಾಗಪರಾಗಂ .. .. ಪರಿದತ್ತು ಇಳೆಯೊಳ್: **ರಾಜಶೇವಿ,** ೧೦. ೧೫)

**ಪಕ್ಷದ್ವಾರ** – ಪಕ್ಕದ ಬಾಗಿಲು (ತರಳಿಕೆವೆರಸು ಪ್ರಮದವನ ಪಕ್ಷದ್ವಾರದಿಂ ಪೊಱಮಟ್ಟು ಪೋಗುತ್ತುಂ: **ಕಾದಂಬ,** ೫. ೧೪೫ ವ)

**ಪಕ್ಷಪರಿತ್ಯಾಗ** – ವಾದಿಸಲಾರದೆ ತನ್ನ ನಿಲವನ್ನು ಕೈಬಿಡುವುದು (ಪ್ರತಿವಾದಿ ನಿರುತ್ತರಮನಾಗಿ ಪಕ್ಷಪರಿತ್ಯಾಗಂ

ನಿಗ್ರಹಸ್ಥಾನಮೆಂಬುದಱಿಂ ನಿಗ್ರಹಸ್ಥಾನಮನೆಯ್ದಿಯುಮಿರದೆ: **ಶಾಂತಿಪು,** ೮. ೧೪೧ ವ)

**ಪಕ್ಷಪ್ರತಿಷ್ಠಾಪನೆಗೆಯ್** – ತನ್ನ ನಿಲವನ್ನು ಮಂಡಿಸು (ಅನೇಕ ಕುನಯೋಪಪತ್ತಿಗಳಿಂ ಪಕ್ಷಪ್ರತಿಪಾದನೆಗೆಯ್ದು ಕವಳಿಗೆಯ ಭಟ್ಟಂ ನುಡಿಯೆ: **ಶಾಂತಿಪು,** ೮. ೧೩೪ ವ)

**ಪಕ್ಷಿಸಂಪುಟ** – ರೆಕ್ಕೆಗಳ ಒಳಭಾಗ (ಪೊಕ್ಕೆಂ ತಂದೆಯ ಶಿಥಿಲ ಪಕ್ಷಸಂಪುಟದೆಡೆಯೊಳ್: **ಕಾದಂಬ,** ೧. ೧೨೯)

**ಪಕ್ಷಸಿದ್ಧಿ** – ತನ್ನ ನಿಲವನ್ನು ಸಾಧಿಸುವುದು (ಈಗಳಿಲ್ಲಿಗೇವಿಧಿಯಂ ಮಾಟ್ಟುದೆಂದು ಪೂರ್ವಪಕ್ಷದ ಪಕ್ಷಸಿದ್ಧಿಯ ವಿಸ್ತಾರಕ್ಕವಕಾಶಮಪ್ಪಂತು ನುಡಿದು: **ಶಾಂತಿಪು,** ೨. ೩೫ ವ)

**ಪಕ್ಷಿ** – ಪಕ್ಷಗಳನ್ನು ಹೊಂದಿರುವುದು, ಹಕ್ಕಿ (ಚಕಿತೋದ್ಯತ್ ಪಕ್ಷಿಪಕ್ಷಸ್ವನದೊಳಮರ್ದ ಕೋಳಾಹಳಧ್ವಾನದಿಂ ಕೊರ್ವಿ: **ಕಾದಂಬ,** ೧. ೧೨೮)

**ಪಕ್ಷೋಪವಾಸ** – [ಜೈನ] ಹದಿನೈದು ದಿನಗಳು ಸತತವಾಗಿ ಮಾಡುವ ಜಿನಮುನಿಯ ಉಪವಾಸ (ಭುವನನುತಮಾಗೆ ಪಕ್ಷೋಪವಾಸ ಮಾಸೋಪವಾಸಮಂ ನಿಯಮದೆ ಮಾಡುವ ಜಿನಮುನಿ: **ಸಮಯಪ, ೭. ೭)**

**ಪಕ್ಷ್ಮ** – ಕಣ್ಣಿನ ರೆಪ್ಪೆಗೂದಲು (ಲಲಿತಮುಖಸರಸಿಜಂ ನಿಶ್ಚಳಪಕ್ಷ್ಮಂ ಸ್ತಿಮಿತತಾರಕಂ ಭುಜಬಲಿ: **ಆದಿಪು,** ೧೪. ೧೦೫)

**ಪಕ್ಷ್ಮಪಾತನ** – ರೆಪ್ಪೆ ಮಿಟುಕಿಸುವುದು (ವಿಸ್ಮೃತಿಪಕ್ಷ್ಮಪಾತನಂ ಅಪೂರ್ವಾಲೋಕನಾಕೌತುಕ ಆಕುಳಿತ ಅಂತಃಕರಣಂ: **ಆದಿಪು,** ೪. ೬೦)

**ಪಕ್ಷ್ಮಮಾಲೆ** – ಪಕ್ಷ್ಮಪಾಳಿ (ನಿಶ್ಚಳಪಕ್ಷ್ಮಪಾಳಿಯುಂ ಅಕಂಪಿತನಪುತ್ರಿಕೆಯುಂ ಅವನತ ಅನ್ಯಮನಸ್ಕೆಯುಂ ಆಗಿ .. .. ತಾನುಂ ಪುತ್ರದೋಹಳಕುತೂಹಳೆಯುಮಾಗೆ: **ಮಲ್ಲಿನಾಪು,** ೩. ೮೫ ವ)

**ಪಕ್ಷ್ಮಸ್ಪಂದನ** – ರೆಪ್ಪೆ ಮಿಟುಕಿಸುವುದು (ಅರಮನೆಯಂ ಲಕ್ಷ್ಮೀನಿಳಯಮನೀಕ್ಷಿಸಿ ಪಕ್ಷ್ಮಸ್ಪಂದನಮನಾರೊ ಮಱೆಯದರ್ ಅದಱೊಳ್ ಪರಿಹರಿಪೆಂ: **ಚಂದ್ರಪ್ರಪು,** ೧೧. ೮೦)

**ಪಗಂಡಿಱೆ** – ಚೆನ್ನಾಗಿ ಕಾಣಿಸು (ಬಱಬಱ ಬತ್ತೆ ಬಾಯ್ ಬೆರಲ ಬಾಸುಳ ಪದ್ಧತಿ ಮಧ್ಯದೊಳ್ ಪಗಂಡಿಱೆದಿರೆ .. .. ಚಂದ್ರನಖಿ ಶೋಕರಸಾಕುಳ ಚಿತ್ತೆಯಾಗಿ: **ಪಂಪರಾ,** ೯. ೩೦)

**ಪಗಂಡುಗೊಳ್** – ಹಬ್ಬು (ಒದವಿದ ಕೋಪ ವಹ್ನಿಯುರಿ ಪೊಗೆಯಂ ನೆಗೆವಂತೆ ಪದ್ಮರಾಗದ ಹರಿನೀಲನ್ಮುಖ ವಿಭೂಷಣ ರಶ್ಮಿ ಪಗಂಡುಗೊಳ್ವಿನಂ: **ಪಂಪರಾ,** ೯. ೭೩)

**ಪಗಣೆ** – ಒಯ್ಯಾರ (ಸ್ಮರ ಶರಲಕ್ಷ್ಮಿ ಮೋಹಿಸುವ ಪಗಣೆಯಂ ಪಡೆವಂತೆ .. .. ಪಡೆದಳ್ .. .. ವಿಭಾಸುರೆಯಂ ಕುಮಾರಿಯಂ: **ಕುಸುಮಾಕಾ,** ೧೨. ೩೦)

**ಪಗರಣ** – [ಪ್ರಕರಣ] ಒಂದು ರೂಪಕಪ್ರಭೇದ, ನಾಡಾಡಿಗಳ ನಾಟಕ (ಬಹುರೂಪಂಗಳಂ ಸಲೆ ತಾಳ್ದುವ ದಿವ್ಯಲಕ್ಷ್ಮಿಯಂ ಪಗರಣಮೆಂದು .. .. ಎಂಬಂ ಭವ್ಯಂ: **ಸಮಯಪ,** ೪. ೨೧)

**ಪಗರಣದರಸ** – ನಾಟಕದ ರಾಜ, ವೇಷಧಾರಿ (ಮತ್ತೊರ್ಬಂ ಪಗೆವಂಗೆ ಕೊಟ್ಟು ಚೀ ಕೆಮ್ಮಗೆ ಬೆಸೆವವವರಸದೆಂತೊ ಪಗರಣದರಸಂ: **ಆದಿಪು,** ೧೨. ೯೮)

**ಪಗರಣದಾಟ** – ಪಗರಣ ಎಂಬ ರೂಪಕಪ್ರಭೇದ (ಅಂದಿಂದಿತ್ತ ಬಾದುಬ್ಬೆಯ ಪರ್ವಮುಂ ಪಗರಣದಾಟಮುಂ ಆದುವು: **ವಡ್ಡಾರಾ,** ಪು ೧೧೮, ಸಾ ೨೨)

**ಪಗರಣಿಗ** – ವೇಷಧಾರಿ; ಪಗರಣ ಎಂಬ ಆಟವಾಡುವವನು (ಕಾಣದಾ ರೂಪಂ ಕಂಡು ನಕ್ಕು ದುಃಖಮಂ ಮಱೆದೊಳ್ ಆಗಳ್ ಆ ನಗಿಸಿದ ಪಗರಣಿಗಂಗೆ ಪಿರಿದು ಕಸವರಮಿತ್ತೊಂ: **ವಡ್ಡಾರಾ,** ಪು ೧೧೮, ಸಾ ೨೧)

**ಪಗಲ್** – ಹಗಲು (ದಿವಸಂ ದಿನಂ ದಿವಾಹಂ ದ್ಯು ವಾಸರಂ ಘಸ್ರಮೆನೆ ಪಗಲ್: **ಅಭಿಧಾವ,** ೧. ೨. ೪)

**ಪಗಲಾಣ್ಮ** – ಸೂರ್ಯ (ಬಿರಯಿಗಳಂಜಿ ತಾಱೆ ಪಗಲಾಣ್ಮನ ಮೆಯ್ ಬಿಸುಪೇಱೆ ಮಾಗೆ ಚೆಚ್ಚರದೊಳೆ ಪಾಱೆ: **ಕಬ್ಬಿಗಕಾ,** ೪೫)

**ಪಗಲಿರುಳ್** – ಹಗಲು ಮತ್ತು ರಾತ್ರಿ (ಬ್ರಹ್ಮಾಂಡಮೆಂಬ ಕೊಪ್ಪರಿಕೆಯ ಮಧ್ಯದಲ್ಲಿ ಸೂರ್ಯನೆಂಬಗ್ನಿಯಿಂ ಪಗಲಿರುಳೆಂಬ ಅಡುಗರ್ಬುಗಳಿಂ ಮಾಸಋತುಗಳೆಂಬ ಸಟ್ಟುಗದಿಂ ತೊಳಸುತ್ತುಂ ಭೂತಂಗಳಂ ಜವನಡುತಿರ್ದಂ ಇಂತೆಂಬುದೆ ವಾರ್ತೆ: **ಪಂಚತಂತ್ರ,** ೩೩, ಶ್ಲೋಕ ೩ ಟೀಕೆ)

**ಪಗಲುಳ್ಕ** – ಉಲ್ಕೆ (ಮಿಱುಗಿದುವು ಪಗಲುಳ್ಕಂಗಳ್ ದೆಸೆಯೊಳ್ ಅವಿರಳಪ್ರಸರಂಗಳ್: **ಚಂದ್ರಪ್ರಪು,** ೬. ೧೬)

**ಪಗಲ್ತರು** – ಹೀನೈಸು (ವಕ್ತ್ರಮರೀಚಿ ಪೂರ್ಣಚಂದ್ರನ ಕದಿರಂ ಪಗಲ್ತರೆ .. .. ಬಂದನಾ ನೃಪಂ: **ರಾಜಶೇವಿ,** ೭. ೩)

**ಪಗವ** – ಹಗೇವು, ಕಣಜ (ಪಗವದ ಬತ್ತಂ ಕಿಡದಂತೆ: **ಸಮಯಪ,** ೧೨. ೪೮)

**ಪಗಿನ** – ಮರದ ಅಂಟು (ಪಚ್ಚೆಯ ಪರಲ್ಗಳಂದದ ಪಗಿನನಿರದುರ್ಚಿ: **ಲೀಲಾವತಿ,** ೧೧. ೧೧)

**ಪಗಿಲ್** – ಅಂಟಿಕೊ (ಆ ಮನೋಹರನ ಮಂದ್ಯೆಸಿ ನಿಂದ ಚಂದನದಣ್ಪಿನಿಂ ಪಗಿಲ್ತು ಬೆಳ್ಕುಱೆಸಿ ರಂಜಿಸುವ ಕೆಂಜೆಡೆಯ: **ಕಾದಂಸಂ,** ೪. ೯೬ ವ); ಸೇರು (ಕೆನೆಗಟ್ಟಿದಂತಿರೆ ಪೊರೆವೊರೆಗೊಂಡಿರೆ ಮುಗಿಲ್ ಪಗಿಲ್ತುವು ನಭದೊಳ್: **ಪಂಪರಾ,** ೭. ೧೬೫)

**ಪಗೆ** – ದ್ವೇಷ (ವಿದ್ವೇಷಂ ದ್ರೋಹಂ ವೈರಂ ವಿರೋಧಮೆನೆ ಪಗೆಯಕ್ಕುಂ: **ಅಭಿಧಾವ,** ೨. ೨. ೪); ಶತ್ರು (ರಸದಾನಾದಿಗಳೊಳ್ ಛಿದ್ರಿಸುವಮಪ್ಪೊಡೆ ಅವರ್ ಆಪ್ತವಂತರುಂ ಬುದ್ಧಿವಂತರುಂ ಆಗಿ ನೆಗಟ್ದರ್ ಇನ್ನಾವ ಮಾಟ್ಕೆಯೊಳ್ ಪಗೆಯಂ ಕೆಯ್ಗೆ ಮಾಡುವುದು ಪೇೞಿಂ: **ಪಂಪಭಾ,** ೬. ೬೭ ವ); ಅಪರಾಧಗಳಿಗೆ ಮೂಲವಾದ ಹಗೆ (ಸಾಪತ್ನ ವಾಸ್ತುಜಂ ಸ್ತ್ರೀಜಂ ವಾಗ್ಭುತತಂ ಎಂಬ ನಾಲ್ಕುಂ ಪಗೆಗಳೊಳಪ್ಪ ಅಪರಾಧಜಂ: **ಹರಿವಂಶ,** ೭. ೧ ವ)

**ಪಗೆಕಾಱ** – ಶತ್ರು (ಪಾತಕಾಱನುಳ್ನುಡಿಕಾಱಂ ಪಗೆಕಾಱನಾಗಿಯುಂ ಕೆಯ್ನಿಗೆ ತಕ್ಕಂ ಕೆಯ್ದುಕಾಱಮೆನಿಸಲ್ಕಾಱಂ: **ಕಾವ್ಯಾವಲೋ,** ೩೨೫)

**ಪಗೆವ** – ಶತ್ರು (ಜವನೆಂಬಱಿಕೆಯ ಪಗೆವಂಗದೆಂತು ಪಂಗಿಗನಪ್ಪೆಂ: **ಆದಿಪು,** ೪. ೭೭)

**ಪಗೆವಡೆ** – ಶತ್ರುಸೈನ್ಯ (ಪಗೆವಡೆಯೊಡ್ಡುಗಳಂ ಒಡೆಯಲ್ಕೆ ವೇಟ್ದಿರ್ದ್ದ ಧಗಮೆನೆ ಸ್ಯೆರಿಸುವ ಉಪಾಯಮಾವುದು ಕಱುವೇ: **ಪಂಪಭಾ,** ೧೧. ೯೧)

**ಪಗೆವಾಡಿ** – ಶತ್ರು ಪಾಳೆಯ (ಕೆಮ್ಮನೆ ಪಗೆವಾಡಿಯೊಳ್ ನಗಿಸಿಕೊಂಡೊಡೆ ಬಂದಪುದೇಂ ಸುಯೋಧನಾ: **ಪಂಪಭಾ,** ೧೦. ೧೬)

**ಪಗ್ಗ** – [ಪ್ರಗ್ರಹ] ಹಗ್ಗ (ಪರಿವ ಮನಕ್ಕೆ ಪಗ್ಗಮಿಲ್ಲಂ ನೋಡುವ ಕಣ್ಗಳ್ಗೆಡೆಗಟ್ಟಿಲ್ಲಂ: **ಅನಂತಪು,** ೧೧. ೩೨ ವ)

**ಪಚನಧಾಮ** – ಅಡಿಗೆಯ ಮನೆ (ಒಪ್ಪುವುವಲ್ಲಿ ಶಸ್ತ್ರಕುಟಿ ಕೋಶಾಗಾರಂ ಏಕಾಂತಮಂದಿರಂ ಅಭ್ಯಾಸನಿಕೇತನಂ ಪಚನಧಾಮಂ .. .. ಅವರೋಧಸ್ತ್ರೀನಿವಾಸಾಸ್ಪದಂ: **ಶಾಂತೀಶ್ವಪು,** ೧. ೧೩೭)

**ಪಚಾರಿಸು** – ಹೀಯಾಳಿಸು (ಓಡದಿರ್ ಇದಿರ್ಚು ಎನುತ್ತುಂ ಕೂಡೆ ಪಚಾರಿಸುತೆ ಬೆಂಬಿಡಿದನತಿಜವದಿಂ: **ಉದ್ಭಟಕಾ,** ೪. ೧೧೯)

**ಪಚ್ಚ** – ಮೇಲುಹಾಸಿಗೆ (ಪೊಳೆವ ಪಚ್ಚದೊಳೆ ಸೊಗಯಿಸುವ ಮೃದುತಲ್ಪದೊಳ್: **ಆದಿಪು,** ೭. ೨೭ ರಗಳೆ); ಆಭರಣ (ಮುತಿನ ಪಚ್ಚಮಂ ತುಡುವುದಂ ಮಱದೊಪ್ಪಿರೆ ಮೇಳದಾಕೆಗಳ್ ಕತ್ತುರಿ ಬೊಟ್ಟನೆಂತಿಡುವೊಡಂ ನಿಲಲೊಲ್ಲದೆ ಸಾರ್ದು: **ಕಬ್ಬಿಗಕಾ,** ೨೬೧)

**ಪಚ್ಚಕಾಱ** – ಅಲಂಕಾರ ಮಾಡುವ ವೃತ್ತಿಯವನು (ಪಚ್ಚಾಯ್ಲನೆಂದು ಪಚ್ಚಕಾಱಂ: **ಶಬ್ದಮದ,** ಪ್ರಸಾ ೧೩೬)

**ಪಚ್ಚಕ್ಖಾಣಂಗುಡು** – [ಜೈನ] ಪಚ್ಚಖ್ಖಾಣವ್ರತ [ಸೀಮಿತಕಾಲಕ್ಕೆ ಆಹಾರ ಬಿಡುವುದು] ದೀಕ್ಷೆ ಕೊಡು (ಯಾವಜ್ಜೀವಂ ಬಾಟ್ವಿನ್ನೆಗಂ ಪಚ್ಚಕ್ಖಾಣಂಗುಡುವುದೆಂದೊಡೆ: **ವಡ್ಡಾರಾ,** ಪು. ೮೨, ಸಾ. ೨೧)

**ಪಚ್ಚಡ** – [ಪ್ರಚ್ಛದ] ಹಚ್ಚಡ, ಹೊದಿಕೆ (ಅರುಣಮಣಿಕಂಕಣಪ್ರಭೆ ಪರೆದಿರೆ ಪಚ್ಚಡಿಸುವಲ್ಲಿ ಕುಂಕುಮರಸದೊಳ್ ಪೊರೆದುದು ಪಚ್ಚಡಮೆಂದೋಸರಿಸಿದಳ್: **ಪುಷ್ಪದಂಪು,** ೯. ೮೮)

**ಪಚ್ಚಡಿಕೆ** – ಪಚ್ಚಡ, ಮೇಲು ಹಾಸಿಗೆ (ಸೆಜ್ಜೆಯ ಕಾಪಿನವರ್ ಪರಿತಂದು ಶೋಧಿಸಿ ನೋಡಿ ಪಚ್ಚಡಿಕೆಯಂ ಪತ್ತಿರ್ದ ಕೂಱೆಯಂ ಕಂಡು: **ಪಂಚತಂತ್ರ,** ೨೦೦ ವ)

**ಪಚ್ಚಡಿಸು** – ಹೊದಿಸು (ಈ ಪೂವಿಂದೆ ಪಚ್ಚಡಿಸುತ್ತುಂ ಈ ದಿನಕರಕರಂಗಳ್ ನೋಡಲ್ ಬಂದು ಉತ್ಪಲಮಾಲೆಯಂ: **ಲೀಲಾವತಿ,** ೧೧. ೨೦)

**ಪಚ್ಚಣ** – [ಪ್ರಚ್ಛನ್ನ] ಮುಚ್ಚುಮರೆ (ಏ ಪಚ್ಚಣವಣ್ಣಂ ಎನ್ನಂ ಅವಿಚಾರತೆಯಿಂ ಸೆಱೆಯಿಟ್ಟೊಡೆ ಆದ ಉಮ್ಮಚ್ಚದ ಪೆರ್ಚಿನಿಂದುರಿವ ಕಿರ್ಚ್ಚಿನೊಳ್: **ಕರ್ಣನೇಮಿ,** ೩. ೧೬೧)

**ಪಚ್ಚಪಸಿವರೆಯ** – ಹೊಚ್ಚ ಹೊಸ ಹರಯ (ಪಚ್ಚಪಸಿವರೆಯದ ಅಲರ್ಗಳ ಪಚ್ಚದ .. .. ಸೊಗಯಿಪ್ಪಚ್ಚರಿಸಿಯರಂದದೆ ಮೆಱೆವ ತರುಣಿಯರೆಸೆದರ್: **ರಾಜಶೇವಿ,** ೨. ೨೨)

**ಪಚ್ಚಬಗೆ** – ಒಡೆದ ಮನಸ್ಸು (ಮೂಗರವೋಲ್ ಮೌನದೊಳೊಂದಿ ಪಚ್ಚಬಗೆಯಿಂದುಮ್ಮಚ್ಚರಮಂ ತಾಳ್ದಿದಂ: **ಪಂಪರಾ,** ೬. ೧೦೦)

**ಪಚ್ಚಯಿಲ** – ಅಲಂಕಾರ ಮಾಡುವವನು (ಇಲ ಪ್ರತ್ಯಯಕ್ಕೆ: ಪಚ್ಚಯಿಲಂ, ಘೋಟಯಿಲಂ, ಪಡೆಯಿಲಂ ಗಾವಿಲಂ: **ಶಬ್ದಮದ,** ೨೧೬ ಪ್ರ)

**ಪಚ್ಚವಡ** – ಬಚ್ಚಲು (ನಿನ್ನ ಮಜ್ಜನಂಬುಗುವ ಪಚ್ಚವಡದ ಕುಟಿಯೊಳಗೆ .. .. ಪುಟುವಾಗಿ ಪುಟ್ಟುವೆ: **ಜೀವಸಂ,** ೭. ೨೮ ವ)

**ಪಚ್ಚವಡಿಕೆ** – ಮಗ್ಗುಲು ಹಾಸಿಗೆ (ಆಕೆಯಂ ಎತ್ತಿ ಪಾಸಿನ ಪಚ್ಚವಡಿಕೆಯಂ ನೋಡಿದಾಗಳ್: **ಲೀಲಾವತಿ,** ೧೦. ೮೩ ವ)

**ಪಚ್ಚವಡಿಗೆ** – ಮಗ್ಗುಲುಹಾಸಿಗೆ (ಪಾಸಿನ ಪರೆಪಂ ಪಚ್ಚವಡಿಗೆ ಮುಚ್ಚುವ ತೆಱದಿಂ: **ಸಮಯಪ,** ೧೫. ೩೪)

**ಪಚ್ಚವಡಿತಿ** – ಹಚ್ಚಡಿಸುವಾಕೆ, ಅಲಂಕರಿಸುವವಳು (ಪಚ್ಚವಡಿತಿಯೆಂದು ಪಚ್ಚಡಿಸುವಾಕೆ: **ಶಬ್ದಮದ,** ಪ್ರಸಾ ೧೩೫)

**ಪಚ್ಚವಡಿಸು** – ಹೊದಿಸು (ಪಟ್ಟಿರ್ಪುದನಭಿನಯಿಸುವಂತೆ ಪರಾಂಗಣದೊಳ್ ಪಚ್ಚವಡಿಸಿರ್ದ ಅಮೃತಾರ್ಣವ ತರಂಗಸ್ಥೂಲಹಂಸತೂಳತಳ್ಪತಳದೊಳ್: **ನೇಮಿನಾಪು,** ೪. ೫೦ ವ)

**ಪಚ್ಚವಾಗಲ್** – ಪಚ್ಚೆಯ ಪ್ರಾಕಾರ, ಬಳ್ಳಿಮಾಡ (ಸುತ್ತಲುಂ ಬಳಸಿ ಪರ್ವಿದ ಕೇದಗೆ ಪಚ್ಚವಾಗಿಲೆಂಬೆಸಕಮನಾಳ್ದು ಪೂಗಣೆಯನಿರ್಴ ಪೊಟಲ್ಗೆಣೆಯಾದುದೀ ಬನಂ: **ಕಬ್ಬಿಗಕಾ,** ೮೦)

**ಪಚ್ಚಟೆ** – [ಪಚ್ಚು+ಅಟೆ] ಅನ್ಯೋನ್ಯತೆಯನ್ನು ತೊರೆ (ಪಟಿಯಂ ಕೇಳ್ದನೊ ಮೇಣ್ಣಡೆವಟಿಯಂ ತಪ್ಪಿದನೊ .. .. ಪಚ್ಚಟೆದನೊ ಪೇಟ್ಕಾಡಿ ನಿನ್ನೊಳಂಗಾಧಿಪತ:: **ಗದಾಯು,** ೫. ೧೪)

**ಪಚ್ಚಾಯ್ಲ** – ಅಲಂಕರಿಸುವವನು (ಪಚ್ಚಾಯ್ಲನೆಂದು ಪಚ್ಚಕಾಱಂ: **ಶಬ್ದಮದ,** ಪ್ರಸಾ ೧೩೬)

**ಪಚ್ಚಾರಿ** – ಒಂದು ಬಗೆಯ ಮರ (ಮತ್ತಿ ಮಧುಕಂ ಮುಂಗಾರೆ ಪಚ್ಚಾರಿ ದಿಂಡಲಂ ಆಲಂ .. .. ಬಕುಳಂ ಬೇವತ್ತಕಂ ಕಿಂಶುಕಂ: **ರಾಜಶೇವಿ,** ೫. ೫೬)

**ಪಚ್ಚಿಕೊಳ್** – ಹಂಚಿಕೊ (ಪೊನ್ನಂ ಪಚ್ಚುಕೊಳ್ವಂ ಎನೆ ದುಷ್ಟಬುದ್ಧಿ ಪಾಪಬುದ್ಧಿಯಾಗಲ್ಬಗೆದು: **ಪಂಚತಂತ್ರ,** ೨೩೬ ವ)

**ಪಚ್ಚು** – ಪಿಸುಮಾತಿನಲ್ಲಿ ಹೇಳು (ಕಂಸಂ ಪಡಿಯಱನಂ ಕರೆದು ಕಿವಿಯೊಳ್ ಪಚ್ಚುವುದುಂ ಆತಂ ಅಂತೆಗೆಯ್ವೆನೆಂದು ಪೋಗಿ: **ನೇಮಿನಾಪು,** ೮. ೭೨ ವ): ಭಾಗ ಮಾಡು (ಕರವಾಳಂ ಘರವಟ್ಟಿಸಿ ಶಿರೋಜಮಂ ಪಿಡಿದು ತೆಗೆದು ಗುರುವಂ ಪಚ್ಚಂತಿರೆ ಪಿರಿದು ಪೊಯ್ದಂ ಎಂತಪ್ಪರೊಳಂ ಮುಳಿಸು ಅಱವಂ ಆಗಲೇನಿತ್ತಪುದೇ: **ಪಂಪಭಾ,** ೧೨. ೩೦)

**ಪಚ್ಚುಕೊಡು** – ಹಂಚಿ ಕೊಡು (ವೃಷಭನಾಥಂ ಉಟಿದಪತ್ಯವರ್ಗಕ್ಕೆಲ್ಲಂ ಇಳಾತಳವಿಭಾಗಮಂ ಪಚ್ಚುಕೊಟ್ಟು: **ಆದಿಪು,** ೯. ೭೨ ವ)

**ಪಚ್ಚುಕೊಳ್** – ಹಂಚಿಕೊ (ಜಕ್ಕವಕ್ಕಿಗಳ್ ಸುರತಮಕರಧ್ವಜನ ಸುಭದ್ರೆಯ ವಿರಹಸಂತಾಪಮಂ ಪಚ್ಚುಕೊಂಡಸುಂಗೊಡಗಲೆ: **ಪಂಪಭಾ,** ೪. ೪೮ ವ)

**ಪಚ್ಚುಗಂಟಿಕ್ಕು** – ಕೂದಲನ್ನು ಎರಡು ಭಾಗ ಮಾಡಿ ಗಂಟುಹಾಕು (ಅಳಿನೀಳೋಜ್ವಳ ಸಹಸ್ರಕುಂತಳಂಗಳ್ ಪರಕಲಿಸಿ ಬಂದು ಪೊಱಮುಯ್ಯನಳ್ಳಿಟಿಯೆ ಪಚ್ಚುಗಂಟಿಕ್ಕಿ ಗಾಂಡೀವಧನ್ವಂ ಸನ್ನದ್ಧನಾಗಿರ್ಪನ್ನೆಗಂ: **ಪಂಪಭಾ,** ೧೨. ೨೦೨ ವ)

**ಪಚ್ಚುಗೊಡು** – ಪಚ್ಚುಕೊಡು (ರತ್ನಕಂಬಳಮಗಳಂ ಕೊಂಡೋರ್ ಒಂದಱೊಳಂ ನಾಲ್ಕು ಖಂಡಮಾಗೆ ಮೂವತ್ತೆರಡು ಖಂಡಂಗಳಂ ಮಾಡಿ ಸೊಸೆವಿರ್ಗೆ ಪಚ್ಚುಗೊಟ್ಟೊಡೆ: **ವಡ್ಡಾರಾ,** ಪು ೨೫ ಸಾ ೨೮)

**ಪಚ್ಚುಗೊಳ್**– ಹಂಚಿಕೊ, ವಿಭಾಗಿಸಿಕೊ (ಅಂಗಂಗಳೊರ್ಲ ಉಟಿದಲೊ ಕರಣಂಗಳ್ ತಮ್ಮೊಳಗೆ ಪಚ್ಚುಗೊಂಡುವೊ ಚಿತ್ತಂ ನುಂಗಿದುದೊ: **ಲೀಲಾವತಿ,** ೩. ೬೩)

**ಪಚ್ಚುಡಿ** – ಹಂಚಿಹೋಗು (ಒಡವುಟ್ಟಿದ ತಳದಳಿಸುವ ತುಡುಗೆಯ ದುಗುಲದ ನಮೇರುದಾಮಕದೊಳ್ ಪಚ್ಚುಡಿದುದು ಪರಾರ್ಧ್ಯಕೂಟದ ಬೆಡಂಗೊಡಂಬಟ್ಟುದು ಇರ್ವರುಂ ಇಂದ್ರರೊಳಂ: **ಶಾಂತಿಪು,** ೯. ೨೩೦)

**ಪಚ್ಚೆ** – ನವರತ್ನಗಳಲ್ಲಿ ಒಂದು, ಹಸಿರು ಮಣಿ (ಪೊನ್ನ ಬೆಳ್ಳಿಯ ಪದ್ಮರಾಗದ ಪಚ್ಚೆಯ ಗಿಳಿಯ ಕೋಗಿಲೆಯ ಕೊಂಚೆಯ ಅಂಚೆಯ ಕುಂತಳಿಕೆಯ ಮಾಟ್ಕೆಯ ಸಿಪ್ಪುಗಳೊಳ್ ತೀವಿ: **ಪಂಪಭಾ,** ೪. ೮೭ ವ)

**ಪಚ್ಚೆಗರ್ಬು** – ಶುದ್ಧಗೊಳಿಸದ ಕಬ್ಬಿಣ (ಹಿತಾಹಿತ ವಿವೇಕವಿಕಲಂ ಪಟಿಯಂ ಪೆತ್ತಾ ಮುನಿಪಂ ಭ್ರಾಮಕದತ್ತೆಳಸುವ ಪಚ್ಚೆಗರ್ಬುನಕ್ಕೆಣೆಯಾದಂ: **ಪಂಪರಾ,** ೪. ೮೩)

**ಪಚ್ಚಗಾಱ** – ಅಲಂಕಾರ ಮಾಡುವ ವೃತ್ತಿಯವನು (ಗಾಳಿಸು ಗೆಲ್ವನಂ .. .. ಪೂರ್ಚಿ ಪುಸಿವನಂ ಪೊಸೆದಿಕ್ಕುಗೆ ಪಚ್ಚೆಗಾಱನಂ: **ಲೀಲಾವತಿ,** ೨. ೧೦೭)

**ಪಚ್ಚೆಗೊಡೆ** – ಪಚ್ಚೆಯ ಕೊಡೆ, ಹಸಿರು ಕೊಡೆ ಪೊದಳ್ದಪಚ್ಚೆಗೋಡೆಯೆಂಬಂತೆತ್ತಿ ಪಂಕೇಜಿನೀದಳಮಂ ಬಾಳಕರೇಣುವಂ ಬಯಕೆಯೊಳ್ ಕೊಂಡಾಡುತಿರ್ದತ್ತಿಭಂ: **ಲೀಲಾವತಿ,** ೮. ೪)

**ಪಚ್ಚೆದೋರಣ** – ಹಸಿರು ತೋರಣ (ತೋರಣಕ್ಕೆ: ಕಾಂಸ್ಯತೋರಣಂ, ಮಕರತೋರಣಂ, ಪಚ್ಚೆದೋರಣಂ, ತಳಿರ್ದೋರಣಂ: **ಶಬ್ದಮದ,** ೩೧೩, ಪ್ರ)

**ಪಚ್ಚೆಲೆ** – ಹಸಿರೆಲೆ (ಕಡುಪಿಂದಾತನೊಳಾಂತರೋಡಿ ಬನಮಂ ಪೊಕ್ಕುಂ ಪೊದರ್ಪಾರ್ದು ಕಾಲ್ವಿಡಿದುಂ ಪಚ್ಚೆಲೆವಾರ್ದು ಮೆಯ್ಗರೆದು ಕೊಂಬಂ ಪೊರ್ದಿಯುಂ: **ಕಬ್ಬಿಗಕಾ,** ೧೩೪)

**ಪಚ್ಚೆಲೆದೊಂಗಲ್** – ಹಸಿರೆಲೆಯ ಗೊಂಚಲು (ಪಿರಿದುಂ ಪಚ್ಚೆಲೆದೊಂಗಲಂ ಪುಡುಕಿ ಸುಯ್ಯುತ್ತಿರ್ಕುಮೋ ಮುಗ್ಧೆ: **ಲೀಲಾವತಿ,** ೬. ೯೬)

**ಪಚ್ಚೆವಟ್ಟು** – ಪಚ್ಚೆಯ ಬಟ್ಟು, ಗುಂಡು (ಕಾವಿಕ್ಕಿದಯಸ್ಕಾಂತದ ಪೂವಂ ಚುಂಬಿಸುವ ಪಚ್ಚೆವಟ್ಟುಗಳವೋಲ್ ಇಂದೀವರಂ .. .. ಮುತ್ತಿದುವಳಿಗಳ್: **ಲೀಲಾವತಿ,** ೧೩. ೭೫)

**ಪಚ್ಚೆವಡಿಗ** – [ಪಚ್ಚೆ+ಪಡಿಗ] ಪಚ್ಚೆಯ ಉಗುಳುಪಾತ್ರೆ (ಅಲರ್ದ ಮೊಗದಿಂದೆ ನಱುದಂಬುಲಮುಗುಳ್ದಳ್ನಳಿನ ಪಚ್ಚೆವಡಿಗದೊಳ್ ಎಂಬಂತೆ ಅಲರ್ದಲರಿಂದುಗುತಂ: **ರಾಜಶೇಖ,** ೨. ೭೦)

**ಪಚ್ಚೆವರಲ್** – ಪಚ್ಚೆಯ ಹರಳು, ಹಸಿರು ಮಣಿ (ವನಲಕ್ಷ್ಮಿ ನಿಜಾನುರಾಗದಿಂ ಕೊರಳ್ತೊಡವಿಂಗೆ ಸಮೆದಿರ್ದ ಪಚ್ಚೆವರಲ ದಕಗಂಎಂಬಂತೆ ಪಸುರ್ಗಾಯ ತುಱುಗಲಿಂ: **ತ್ರಿಷಷ್ಟಿಪು,** ೭. ೬ ವ)

**ಪಚ್ಚೆವಿಲ್ಲ** – ಹಸಿರು ಬಿಲ್ಲನ್ನು [ಕಬ್ಬಿನ ಬಿಲ್ಲನ್ನು] ಪಡೆದವನು, ಮನ್ಮಥ (ಇಚ್ಚೆಗಾರ್ತಿ ಪಚ್ಚೆವಿಲ್ಲರಿಂ ಮಚ್ಚುವಡೆದಚ್ಚರಿಮಿಗೆ ತಳಿರ್ದೊಚ್ಚೇರೆಗಣ್ಣ ಪೆರ್ಚಂ ಅಚ್ಚರಿಯರಿಂ: **ರಾಜಶೇಖ,** ೧. ೧೩೫ ವ)

**ಪಚ್ಚೆಸಾರ** – ಪಚ್ಚೆಯ ಆಭರಣ (ಪಚ್ಚೆಸಾರದ ಹಾರದ ತೋರಣಂಗಳಂ ಉಗುಳುತ್ತುಂ ಬಂದು: **ಆದಿಪು,** ೪. ೨೫ ವ)

**ಪಚ್ಚೋಂತಿ** – ಊಸರವಳ್ಳಿ (ಪಗರಣಿಗರಂತೆ ಪಚ್ಚೋಂತಿಯಂತೆ ತಿರಿವನ ಪಡಪಿನಂತೆ ಸೂರ್ಯನಂತೆ: **ಧರ್ಮಾಮೃ,** ೧೪. ೭೫ ವ)

**ಪಚ್ಚೋತಿ** – ಊಸರವಳ್ಳಿ (ಮುಳ್ಮೊನೆಯಂತೆ ಕ್ರೂರಾಗಿ ಪಚ್ಚೋತಿಯಂತೆ ಪಲವುಂ ಬಣ್ಣಮಾಗಿ ಬಾಗೆಯಂತೆ ನಿಸ್ಸಾರವಾಗಿ: **ಧರ್ಮಾಮೃ,** ೨. ೬೭ ವ)

**ಪಚ್ಚೋಲೆ** – ಹಸಿಯ ಓಲೆಗರಿ, ಬಿಚ್ಚೋಲೆ, ಪಚ್ಚೆಯ ಓಲೆ [ಕಿವಿಯ ಆಭರಣ] (ಮಾಲೆಯಂ ನೆಗಪಿ ಕನ್ನಿಯಂ ಪಿಡಿದು ಅಚ್ಚ ಪಚ್ಚೋಲೆಯಂ ತಳೆದು: **ಲೀಲಾವತಿ,** ೧೧. ೬೯)

**ಪಜ್ಜ** – ಮುತ್ತಾತ (ನ್ಯಾಯವಂತರ್ ಜಿತಾತ್ಮರ್ ಪ್ರಭುಗಳ್ ಅಧಿಕಪುಣ್ಯರ್ ಮುನ್ನೆ ನಮ್ಮಜ್ಜ ಪಜ್ಜರ್: **ಶಾಂತಿಪು,** ೩. ೭೬)

**ಪಜ್ಜತಿ** – ಪದ್ಧತಿ (ಅಮರರ ಗಣಮನೆ ಪಜ್ಜತಿಯಿಂದಿರಿಸಿ ಶತಮಖಂ ಕೃತಕೃತ್ಯಂ: **ಪುಷ್ಪದಂಪು,** ೧೨. ೫೬)

**ಪಜ್ಜಳಿಕೆ** – ಕಾಂತಿ (ಆತನ ಬೆಳ್ಗೊಡೆಯ ಪಜ್ಜಳಿಸುವ ಪಜ್ಜಳಿಕೆಯೆ ತನ್ನೊಳಪೊಕ್ಕಂತೆ: **ಆದಿಪು,** ೧೧. ೫ ವ)

**ಪಜ್ಜಳಿಸು** – ಹೊಳೆ, ಪ್ರಕಾಶಿಸು [ಕನಕಗಿರಿ ರತ್ನಾಂಶುನಿಕಾಯಂ ಬೆಳಗೆ ಮೊಳೆದು ಪಜ್ಜಳಿಸುತ್ತಿರ್ಪನಂ: **ಆದಿಪು,** ೬. ೯೦)

**ಪಜ್ಜೆ** – [ಪದ್ಯಾ] ಹೆಜ್ಜೆಗುರುತು (ಪದ್ಮಾವತಿಯೆಂಬಳ್ ಆ ಸೂಕಳಾಶ್ವದ ಪಜ್ಜೆವಿಡಿದು ಬಂದು ತನ್ನರಸನಂ ಕಂಡು: **ಪಂಪರಾ,** ೧೬. ೬೫ ವ); ಅಡಿ (ಅಭಿಮಾನದ ಪಜ್ಜೆಯನೇಂ ತಪ್ಪಿ ಮೆಟ್ಟಿಲಚಿಗುಮೆ ತಕ್ಕಂ: **ಪಂಪರಾ,** ೬. ೧೦೧); ದಾರಿ (ಪಾವು ಪಾವಿನ ಪಜ್ಜೆಯನಱಿವಂತೆ ಎಮ್ಮಂದಿರ್ಗಳ್ಲದೆ ಆತನಭಿಪ್ರಾಯಮಂ ಪೆಱರ್ಗಱಿಯಲ್ ಬಾರದು: **ಪಂಚತಂತ್ರ,** ೧೭೩ ವ); ಗುರುತು (ಬಿಸುಸುಯ್ಯಿಂ ನಸುಗಂದಿ ಬಾಡಿದಧರಂ ಕಣ್ಣೀರ ಬಾನಲ್ಗಳಿಂ ಬಸಿವಾಸ್ಯಂ ತಳಗಯ್ಯ ಪಜ್ಜೆ: **ಲೀಲಾವತಿ,** ೪. ೧೪೩)

**ಪಜ್ಜೆಕಾಱ** – ಬೇಹುಗಾರ, ಗುರುತು ಹಿಡಿಯುವವನು (ತನ್ನ ಪಜ್ಜೆಯಂ ಪಜ್ಜೆಕಾಱರಱಿಯದಂತು ವಸುದೇವಕುಮಾರಂ ಪಾಯ್ದು ಪೋದಂ: **ನೇಮಿನಾಪು,** ೫. ೪೧ ವ)

**ಪಜ್ಜೆವಿಡಿ**– ಹೆಜ್ಜೆಯ ಗುರುತು ಹಿಡಿದು ಹೋಗು (ಪಜ್ಜೆವಿಡಿದು ನಡೆದು ರಾಮಲಕ್ಷ್ಮರಂ ಕಂಡು: **ಪಂಪರಾ,** ೯. ೩೩ ವ)

**ಪಟ** – ಬಟ್ಟೆ (ತದೀಯ ಸಿತಕೇತುಪಟಂ ಬರೆದಿಟ್ಟ ತಿಟ್ಟದ ಒಪ್ಪುವ ಪಟದಂತೆ ನಿಶ್ಚಳಿತಮಾದುದು ವೇಗಮುರುತ್ತ್ರಯೋಗದಿಂ: **ಶಾಂತಿಪು,** ೪. ೬೦); ತೆರೆ (ಬಿಲ್ ಪುಲ್ದಂಡೆ ಬೆಳ್ವಾರ್ ಪಟಂ ಎರೆ ಬಲೆಗಳ್ ಸಾಳುವಂ .. .. ಒಪ್ಪೆ .. .. ನಡೆದುದು ಉದ್ಯತ್ ಕಿರಾತಪ್ರಪಂಚಂ: **ಗಿರಿಜಾಕ,** ೧. ೭೯); ಚಿತ್ರ ಬರೆದ ಬಟ್ಟೆ (ನಿನ್ನ ಬರೆದ ಪಟಮಂ ಮಹಾಪೂಜಿತ ಜಿನಾಲಯದ ಮುಂದೆ ನೇಱಿದೆಂ: **ಚಾವುಂಪು,** ಪು. ೧೭೭, ಸಾ. ೧೪)

**ಪಟಂಗೊಳ್** – ಹಾರಾಡು, ಪ್ರಸಿದ್ಧಗೊಳ್ಳು (ನನ್ನಿ ಪಟಂಗೊಳ್ವಂತೆ ವಿವಿಧ ಧ್ವಜಪಟಂಗಳಂ ಕೊಂಡು ಗೆಲ್ಲಂಗೊಂಡು ತಾನುಮುತ್ತರನುಂ ವಿರಾಟಪುರಕ್ಕೆ ಮಗುಟ್ದು ಬರ್ಪಾಗಳ್: **ಪಂಪಭಾ,** ೮. ೧೦೯ ವ):

**ಪಟಕುಟಿ** – ಗುಡಾರ, ಡೇರೆ (ದೇವರಮ್ಮಮೆಂಬ ಪಟಕುಟಿಯುಂ ಸಿಂಹವಿಧೃತಮಪ್ಪ ಸಿಂಹವಾಹಿನಿಯೆಂಬ ಮೃದುಶಯ್ಯೆಯುಂ: **ಆದಿಪು,** ೧೫. ೩ ವ)

**ಪಟಚ್ಚರ** – ಹಳೆಯ ಬಟ್ಟೆ (ನಿಚ್ಚಲಿ ಕಾರಿರುಳೊಳ್ ಪೊಱಪಚ್ಚಮಂ ಉಟ್ಟಿರ್ದು ಇಱುಂಕಿ ಕಕ್ಷದೊಳ್ ಆ ಪಾಟಚ್ಚರ ಭಯದಿಂದುಟ್ಟು ಪಟಚ್ಚರಮಂ ಮನೆಗೆ ವಂದು ನಿಂದು ಅಂಗಣದೊಳ್: **ಶಾಂತಿಪು,** ೬. ೬೫);

**ಪಟಮಂಡಪ** – ಪಟಕುಟಿ, ಡೇರೆ (ಅನೇಕ ಪಟಮಂಡಪ ಉಪಶೋಭಿತಮಪ್ಪ ನಿವಾಸಭೂಮಿಯಂ ಪೊಕ್ಕು ಅರಸು ಕಜ್ಜಮಂ ತೀರ್ಚಿ: **ಕಾದಂಬ,** ೩. ೧೨೭ ವ)

**ಪಟಲ** – ಗುಂಪು (ವದನಾಬ್ಜ ಪರಿಮಳಾಗತ ಮದಾಳಿ ಪಟಲಾಂಧಕಾರಮಂ ಬೆದಱಿಪವೋಲ್: **ಕಾದಂಸಂ,** ೫.

೯೪); ಕಣ್ಣಿನ ಪೊರೆ (ಪಟಲಂ ಕಣ್ಣೊಳ್ ಕವಿದುಂಗುಟಮಂ ಮೊದಲಾಗಿ ಕಾಣೆನೆಂದೊಡೆ ಕುಲಟಾಪಟು ರಾಗಿಸಿ ಮನದೊಳಗಕ್ಕಟ ಮರ್ದಂ ಮಾಳ್ಪುಮುಸಿರದಿರಿಮೆನೆ ಪಾರ್ವಂ: **ಪಂಚತಂತ್ರ,** ೩೯೩)

**ಪಟಲಕ** – ಪರದೆ (ಶೃಂಗಾರಸದನಮಂ ಮಕುಟಾಂಗದ ಮಣಿಹಾರಕಟಕಕುಂಡಲ ನವದೇವಾಂಗವಸನಾತ್ತ ಪಟಲಕ ಸಂಗತಮಂ ಬಂದು ಲೀಲೆಯಿಂದೊಳಪೊಕ್ಕಂ: **ಚಂದ್ರಪ್ರಪು,** ೯. ೨)

**ಪಟಲಿಕೆ** – ಸಮೂಹ (ನವೀನಪ್ರಸೂನ ಮಧುವಿಲೀನಮಧುಕರ ಪಟುಲಕರ್ಬುರಿತ ರತ್ನಪಲಿಕೆಗಳಿಂ .. .. ಮನಂಗೊಳಿಪ ದೇವಪೂಜಾಗೃಹಮಂ ಪೊಕ್ಕು: **ಪಂಪರಾ,** ೧೨. ೨ ವ)

**ಪಟವಾಸ** – ಸುಗಂಧದ ಪುಡಿ, ಬುಕ್ಕಿಯ ಹಿಟ್ಟು (ದಿಶಾಯುವತಿಕೇಳಿಕೀರ್ಣಪಟವಾಸಚೂರ್ಣಂ: **ಆದಿಪು,** ೧೧. ೧೫)

**ಪಟವಾಸಕ್ಷೋದ** – ಪಟವಾಸ (ಖರಾಂಶು ಪೋಟಿ ಪಟವಾಸಕ್ಷೋದದಿಂ ಕೇಕಿಸಂಕುಳಮಾಡಿತ್ತು ನಟೀಕದಂಬದೊಡವಂದಭ್ರಾಗಮಭ್ರಾಂತಿಯಿಂ: **ಪುಷ್ಪದಂಪು,** ೪. ೩೭)

**ಪಟವಾಸಚೂರ್ಣ** – ಪಟವಾಸ (ಪಟವಾಸಚೂರ್ಣಚಯಂ .. .. ಷಟ್ಚರಣ ಗರುತ್ ಸಮೀರಹತಿಯಿಂದೊಗೆದು ಉಜ್ವಳ ಮಲ್ಲಿಕಾರಜೋಭರಿತಮದಾಗಿ ಕಣ್ಗೆಸೆದುದು: **ಶಾಂತೀಶ್ವಪು,** ೫. ೧೨೪)

**ಪಟವಿದ್ದೆ** – [ಪಟವಿದ್ಧ] ಚಿತ್ರ ಬರೆಯುವುದು (ಪಟಮಿದೆ ಸಾಲ್ಗುಂ ಅನ್ಯಭವವಲ್ಲಭನಂ ಪಟವಿದ್ದೆಯೆತ್ತಲುಂ: **ಆದಿಪು,** ೩. ೪೫)

**ಪಟಹ** – ಭೇರಿ (ಅಹಿತಮಹೀಪಾಳಹೃದಯಕವಾಟ ವಿಘಟನಪಟುಗಳಪ್ಪ ವಿಜಯಘೋಷಂಗಳೆಂಬ ಪನ್ನೆರಡು ಪಟಹಂಗಳುಂ: **ಆದಿಪು,** ೧೧. ೨೮ ವ)

**ಪಟಳ** – ಸಮೂಹ (ವಟವಿಟಪಿಪಟಳಂ ಉಡುಂಕುವಂತಿರ್ಪುದಾವ ಚೋದ್ಯಮೊ ದಿವಮಂ: **ನೇಮಿನಾಪು,** ೩. ೪೪)

**ಪಟಳಕ** – ಭರಣಿ (ಸುರೇಂದ್ರನೆರ್ದು ರತ್ನಪಟಳಕದೊಳ್ ಕೇಶಪಾಶಮನಿಟ್ಟು ಪಾಲಸಮುದ್ರದೊಳ್ ಇಕ್ಕಿಂ ಎಂದು ಕೊಟ್ಟು ಅಟ್ಟಿ: **ಹರಿವಂಶ,** ೧೩. ೨೮ ವ)

**ಪಟಳಿಕೆ** – [ಪಡಲಿಗೆ] ಬೆತ್ತದ ಬುಟ್ಟಿ (ಉದ್ದಾಮ ರಜೋರಂಜಿತಂಗಳಂ ಅನರ್ಘ್ಯರತ್ನಮಯ ಪಟಳಿಕೆಯೊಳಾಂತು ಕೊಂಡು ಪೋಗಿ: **ಆದಿಪು,** ೯. ೭೯ ವ); ತಟ್ಟೆ (ಮಣಿಮಯ ವಿಚಿತ್ರ ಪಟಳಿಕಾ ಪಟಳೀನಿಪತಿ ನಿರತಿಶಯರಮ್ಯಂ: **ವರ್ಧಮಾಪು,** ೧೧. ೬೧ ವ)

**ಪಟಾಳಿ** – ಬಟ್ಟೆಗಳ ರಾಶಿ (ಕೊನೆ ನಿಮಿರ್ದಟ್ಟಳೆಗಳ ಕೇತನ ರಕ್ತಪಟಾಳಿ ಕವಿಯೆ: **ಲೀಲಾವತಿ,** ೭. ೫)

**ಪಟಿಷ್ಠ** – ಹರಿತವಾದ, ಚುರುಕಾದ (ಅವನಿಗಧಿಪನಾದಂ ವಿದ್ವಿಷತ್ಕುಂಭಿಕುಂಭಪ್ರವಿದಳನ ಪಟಿಷ್ಠಶ್ರೇಷ್ಠಪ್ರಕೋಷ್ಠಂ: **ವರ್ಧಮಾಪು,** ೪. ೯೯); ಸಮರ್ಥವಾದ (ಭೂಮಿ .. .. ಸುಪ್ರತಿಷ್ಠಮಾಗಿಪ್ಪುದು ಸುಪ್ರತಿಷ್ಠನ ಪಟಿಷ್ಠೋದ್ದಂಡ ದೋರ್ದಂಡದೊಳ್: **ನೇಮಿನಾಪು,** ೪. ೩೪)

**ಪಟೀರ** – ಶ್ರೀಗಂಧ (ಪಟೀರದ ಏಳ್ಗೆಯ ಕಪೋತದ ಬೊಟ್ಟಿನ ಕೆಂಡದಬ್ಬಿನೀವರನಭಿಧಾನಮಂ ತಳೆದ ಭೂರುಹಂ ಒಪ್ಪುಗುಂ ಆ ವನಾಂತರದೊಳ್: **ರಾಜಶೇವಿ,** ೫. ೫೭)

**ಪಟು** – ಶಕ್ತಿಶಾಲಿ, ಉಗ್ರ (ಪೊಸಕಿಚ್ಚಂ ಪೊಸೆದು ಪಟುವಂ ಮಾಡಿ: **ತ್ರಿಷಷ್ಟಿಪು,** ೨೭. ೧೨೨ ವ); ಸಮರ್ಥ (ಘಟೆಯ ದಟದ ಉಲಿವು ಲಯಘನಘಟೆಗಳ ಮೊಟಿಗೆನಿಸೆ ಪೊಟ್ಟಗೆ ಒಡೆದತ್ತು ರಟತ್ ಪಟು ಪಟಹ ಶಂಖ ಭೇರಿಯ ಚಟುಳಿತದಿಂದ ಅತಳಪಟಂ ಅಂಬರಪಟಳಂ: **ಪಂಪಭಾ,** ೧೦. ೬೭)

**ಪಟುಮರ್ದು** – ದೇಹಪುಷ್ಟಿಯ ಮದ್ದು, ಬಲಮರ್ದು (ಪಟುಮರ್ದನುಂಡುಂ ಪೆತ್ತಪಳೇ ಜೀವನಲ್ಲಿ ನೆಲಸದೊಡೆಂತುಂ: **ಸಮಯಪ,** ೧೨. ೩೮)

**ಪಟುಮಾಡು** – ಬಲಿಷ್ಠವಾಗಿ ಮಾಡು (ದರವಚನ ಸುಧಾಹಾರಮೆ ಪಟುಮಾಟ್ಕುಂ ಉಟಿದವಾರ್ಕುಮೆ ಮಡಲ್: **ಸಮಯಪ,** ೩. ೪೪)

**ಪಟುರವ** – ದೊಡ್ಡ ಧ್ವನಿ (ಸರ್ವೋರ್ವೀವರ ಶಸ್ತ್ರಾಭ್ಯಾಸನಿಜಾವಾಸಂ ಸುಭಟಪಟಲಪಟುರವಭರಿತಂ: **ಗಿರಿಜಾಕ,** ೨. ೭೩)

**ಪಟೋಲ** – ಪಡುವಲ ಕಾಯಿ (ಕೋಶಾತಕಾಖ್ಯಂ ಕುಲಕಂ ಪಟೋಲಂ: **ಅಭಿಧಾವ,** ೧. ೮. ೩೭)

**ಪಟ್ಟ** – ಅಧಿಕಾರಸೂಚಕ ಬಾಸಿಂಗ; ಕಿರೀಟ; ರೇಷ್ಮೆವಸ್ತ್ರ (ವಿನಾಯಕಂಗೆ ಪಟ್ಟಮಂ ಬೊಟ್ಟುಮಂ ಕೊಟ್ಟು ಪೊಡೆಮಟ್ಟು: **ಪಂಚತಂತ್ರ,** ೩೯೩ ವ); ಸ್ಥಳ, ಜಾಗ (ಕೆಳೆಗೊಂಡು ಮಾಣಿಪೆವು ಎಂದು ಬಂದ ದಿನಶರಂತಮರ್ದ ಭಂಡದ ಸೊಂಪು ಪೊಂಪುಟೆ ಕಂಚುಗಾಱರ ಪಟ್ಟದೊಳ್: **ಪುಷ್ಪದಂಪು,** ೨. ೮೬)

**ಪಟ್ಟಂಗಟ್ಟು** – ವಿಧ್ಯುಕ್ತವಾಗಿ ಅಧಿಕಾರ ವಹಿಸಿಕೊಡು (ಸಂಪ್ರತಿಚಂದ್ರಗುಪ್ತನೆಂದು ಪೆಸರನಿಟ್ಟು ರಾಜ್ಯಾಭಿಷೇಕಂಗೆಯ್ದು ಪಟ್ಟಂಗಟ್ಟಿ: **ವಡ್ಡಾರಾ,** ಪು. ೭೫, ಸಾ. ೨೫)

**ಪಟ್ಟಂಬಾಜಿಸು** – ನಿರ್ನಾಮಗೊಳಿಸು (ಮೀಱಿದ ಪಗೆವನ ಪಟ್ಟಂಪಾಜಿಸುವೆನೊ ಮುನ್ನಂ ಅಮರರುಂಡಮೃತಮನೇಂ ಕಱೆಸುವೆನೊ ಖೇಚರರನಡರ್ದೆಱೆಸುವೆನೊ ಮೇರುಗಿರಿಯ ತೂಱಿಲ ತುದಿಯಂ: **ಗದಾಯು,** ೬. ೧೮)

**ಪಟ್ಟಕ** – ಪಟ, ಬಟ್ಟೆ (ತನ್ನ ಮಗಳ್ದಿರೊಳಪ್ಪ ಸ್ನೇಹದಿಂ ಅವರ ರೂಪಂ ಪಟ್ಟಕದೊಳ್ ಬರೆಯಿಸಿ: **ಚಾವುಂಪು,** ಪು. ೪೫೧. ಸಾ. ೨೬); ಪೀಠ (ಕೃಷ್ಣದ್ವೈಪಾಯನನಂ ಕಂಡಜಾತಶತ್ರು ತನ್ನೇಱಿದ ಪಟ್ಟಕದಿಂದಿೞಿದು .. .. ಸಾಷ್ಟಾಂಗವೆಱಗಿ ಪೊಡವಮಟ್ಟು: **ಪಂಪಭಾ,** ೭. ೫೯ ವ)

**ಪಟ್ಟಕಾಱ** – ರೇಷ್ಮೆ ನೇಕಾರ (ದೆಸೆದೆಸೆಗೆ ಕೆಂಪಿನ ಪಾಸಂ ಪಿಡಿದೊಗೆವ ಪಟ್ಟಕಾಱನ ತೆಱದಿಂ: **ನೇಮಿನಾಪು,** ೭. ೩೧)

**ಪಟ್ಟಣ** – ನಗರ (ಪೆಸರಾದ ಸಮಸ್ತವಸ್ತುವಲ್ಲಿಯೆ ಪೆಱತೊಂದು ಪಟ್ಟಣದೊಳಿಲ್ಲೆನೆ ಪಟ್ಟಣಮೊಪ್ಪಿ ತೋಱುಗುಂ; **ಸೂಕ್ತಿಸುಧಾ,** ೪. ೧೦೩)

**ಪಟ್ಟಣಿಗ** – ನಗರವಾಸಿ (ಎಗ್ಗುಗೊಂಡು ಪಟ್ಟಣಿಗರಿದೇಕೆ ಪೋದಪರೊ ಪೇೞೆನುತ್ತಂ ನಡೆತಂದರ್: **ಪುಣ್ಯಾಸ್ರ:** ೬. ೫೫)

**ಪಟ್ಟಣಿಗೆ** – ಪಟ್ಟೆಯ ಸೀರೆ, ದುಕೂಲ (ಮುಸುಕಿಟ್ಟ ಪಟ್ಟಣಿಗೆಯುಂ ಪೊಱಪೊಣ್ಮುವ ಕಣ್ಣ ಬೆಳ್ಪುಂ ಓಪರ ಮನದೊಳ್ ತೆಱಂಬೊಳೆವ ಬಾಳೆಗಳಂತಿರೆ: **ಆದಿಪು,** ೧೧. ೪೫)

**ಪಟ್ಟದ ಮೊದಲಿಗ** – ಅಧಿಕಾರಕ್ಕೆ ಅತ್ಯಂತ ಹಿರಿಯ ಹಕ್ಕುದಾರ (ಪಟ್ಟದ ಮೊದಲಿಗರ್ ಆಜಗೆ ಜಟ್ಟಿಗರವರೆಂದುಮಾಳ್ವ

ಮುನ್ನಿನ ನೆಲನಂ ಕೊಟ್ಟು ಬಱಿಯಟ್ಟು ನಿನಗೊಡವುಟ್ಟಿದರಾ ದೊರೆಯರಾಗೆ ತೀರದುದುಂಟೇ: **ಪಂಪಭಾ,** ೯. ೪೦)

**ಪಟ್ಟದರಸಿ –** ಪಟ್ಟದ ರಾಣಿ (ಪಟ್ಟದರಸಿಗೆ ತನೂಜಂ ಪುಟ್ಟಿದಂ ಅಳವಟ್ಟು ಪೊಂಗಂ ಆದಿತ್ಯಂಗಂ ಪುಟ್ಟಿದವೊಲಪ್ಪ ತೇಜಂ ಪುಟ್ಟಿಸುತಿರೆ: **ವರ್ಧಮಾಪು,** ೨. ೯)

**ಪಟ್ಟಬಂಧ –** ಪಟ್ಟ ಕಟ್ಟುವುದು, ಪಟ್ಟಾಭಿಷೇಕ (ಮಧುಮನೋಭವರಿರ್ವರುಂ ಅಟ್ಟಿವಟ್ಟು ಮಲ್ಲಿಗೆಗೆ ಬಸಂತದೊಳ ಬಯಸಿ ಮಡಿದರಲ್ಲದೆ ಪಟ್ಟಬಂಧಮಂ: **ಆದಿಪು,** ೧೧. ೧೦೩)

**ಪಟ್ಟಬಂಧನ –** ಪಟ್ಟಭಿಷೇಕ (ಕುರುಯುದ್ಧಲಬ್ಧಜಯನೀ ಭೀಮಂಗೆ ನೀಂ ಪಟ್ಟಬಂದನಮಂ ಮಾಟ್ಟುದು: **ಗದಾಯು,** ೧೦. ೨೩)

**ಪಟ್ಟಬಂಧ ಮಹೋತ್ಸವ –** ಪಟ್ಟಾಭಿಷೇಕ ಮಹೋತ್ಸವ (ಮುತ್ತಿನ ಪಚ್ಚೆ ಮಾಣಿಕದ ವಜ್ರದ ಕೇಱೆಯೊಳ್ ಒಂದಿ ಸಾಂದಿನೊಳ್ ಕತ್ತುರಿಯೊಂದು ಕೋಟ್ಗೆಸಱೊಳ್ ಓಕುಳಿ ಚಂದನ ಗಂಧವಾರಿಯೊಳ್ ಸುತ್ತಲುಂ ಅಟ್ಟಿಱಿಂ ಪಡೆವ ಗೇಯದ ಪೆಂಪಿನ ಅಲಂಪಂ ಆರ್ಗಂ ಆರ್ತಿತ್ತುದು ಪಟ್ಟಬಂಧ ಮಹೋತ್ಸವಂ ಆ ಪಡೆಮೆಚ್ಚೆ ಗಂಡನಾ: **ಪಂಪಭಾ,** ೧೪. ೨೦)

**ಪಟ್ಟಮಹಾದೇವಿ –** ಪಟ್ಟ ಕಟ್ಟಿಸಿಕೊಂಡ ರಾಣಿ, ಹಿರಿಯ ರಾಣಿ (ಭಟ್ಟಿನಿಯರ್ ನೃಪಸತಿಯರ್ ಪಟ್ಟಮಹಾದೇವಿ ಅಗ್ರಮಹಿಷಿಯೆನಿಕ್ಕುಂ: **ಅಭಿಧಾವ,** ೧. ೧೧. ೪೯)

**ಪಟ್ಟಮಹಿಷಿ –** ಹಿರಿಯ ರಾಣಿ (ಪಟ್ಟಕ್ಕೆ: ಪಟ್ಟಮಂಚಂ, ಪಟ್ಟಮಹಿಷಿ, ಪಟ್ಟಶರಂ: **ಶಬ್ದಮದ,** ೩೧೩, ಪ್ರ)

**ಪಟ್ಟಮಾರ್ಗ –** ರಾಜಮಾರ್ಗ (ಸಂಚರತ್ ಪೌರನಿತಂಬನ್ಯೆಂದುಕಾರಾವದಿನತಿಮುಖರಂ ತತ್ಪುರೀ ಪಟ್ಟಮಾರ್ಗಂ: **ಚಂದ್ರಪ್ರಪು,** ೧. ೧೨೨)

**ಪಟ್ಟಮಾರ್ಗಂಬಿಡಿ –** ರಾಜಮಾರ್ಗ [ನೇರಮಾರ್ಗ] ಹಿಡಿ (ಸುಬಳ ಧರಾಧೀಶ್ವರಂ .. .. ರಾಜಗೃಹಮಂ ಪೊಱಮಟ್ಟು ಪಟ್ಟಮಾರ್ಗಂಬಿಡಿದು ಪಾದಮಾರ್ಗದಿಂ ಸನ್ಮಾರ್ಗ ಮಾರ್ಗಿಗಳನೆಯ್ದೆವಂದು: **ಸುಕುಮಾಚ,** ೮. ೪೮ ವ)

**ಪಟ್ಟವಣೆ –** ಸಿಂಹಾಸನ (ಅರಮನೆಯಂ ಪೊಕ್ಕು .. .. ಓಲಗಸಾಲೆಯೊಳ್ ಸಿಂಗರದ ಚೆನ್ನನಾಂತ ಪಟ್ಟವಣೆಯ ಮೇಲೆ ಇಚ್ಚೆಗಾರ್ತಿವೆರಸು ನನೆವಿಲ್ಲ ಬಲ್ಲಹಂ ಕುಳ್ಳಿರಲ್: **ಕಬ್ಬಿಗಕಾ,** ೨೬೫ ವ); ಹಸೆಮಣೆ (ಬಿಡುಮುತ್ತಿನ ಬಳಸಿದ ಕಡೆ ನಡುವಣ ಚಡಂಬೊನ್ನ ಪಟ್ಟವಣೆ ರನ್ನದ ಕನ್ನಡಿವೆರಸು: **ಆದಿಪು,** ೪. ೩೩)

**ಪಟ್ಟವರ್ಧನ –** ಪಟ್ಟದ ಆನೆ (ಭೂವರಶಿಖಾಮಣಿ ನೆಟ್ಟನೆ ಪಟ್ಟವರ್ಧನ ದ್ವಿರದನಿಯಿಂದೆ ಮುಂದಿಟಿದು ತದ್ವನಕೇಳಿಗೆ.. ..ಪುಗುತಂದಂ: **ಶಾಂತೀಶ್ವಪು,** ೧೦. ೭೩)

**ಪಟ್ಟವಟೆ –** ರೇಷ್ಮೆ ವಸ್ತ್ರ (ಮಿಸುಗುವ ಚೌಕದ ಮುತ್ತಿನ ಪಸೆವಾಸಿನ ಪಟ್ಟವಟೆಯ ದುಗುಲದ ರುಚಿಗಳ್ ಪಸರಿಸೆ ಪೊಂಜಗಲಿ ವಿರಾಜಿಸುತಿರ್ದುದು: **ಜಗನ್ನಾವಿ,** ೧೦. ೯೫)

**ಪಟ್ಟಶಾಲೆ –** ಪಡಸಾಲೆ (ಚೈತ್ಯಾಲಯದ ಪಟ್ಟಶಾಲೆಯ ಮುಂದಣ ಪರಿಸೂತ್ರದ ಸುತ್ತಣ ಸರೋವರಂಗಳೊಳಲರ್ದ ತಾವರೆಯ ತನಿಗಂಪಂ ತಟ್ಟೈಸಿ ತೀಡುವ ತಣ್ಗಾಳಿಯ ಸೋಂಕಿಂ: **ಪಂಪರಾ,** ೭. ೪೭ ವ)

**ಪಟ್ಟಶಿಲೆ –** ಹಾಸುಗಲ್ಲು (ರಾಜಹಂಸಂ .. .. ತೀರಹಿಮಾಂಶೂಪಲದೊಂದು ಪಟ್ಟಶಿಲೆಯೊಳ್ ನಿಂದಿರ್ದಂ ಆನಂದದಿಂದಂ: **ಶಾಂತೀಶ್ವಪು,** ೧೦. ೧೦೩)

**ಪಟ್ಟಸ –** ಈಟಿ (ಪರಶು ಪಟ್ಟಸ ಮಂಡಳಾಗ್ರಧಾಮಂಗಳಿಂ: **ಕಾದಂಬ,** ೮. ೪)

**ಪಟ್ಟಸಾಲಿಗ –** ರೇಷ್ಮೆ ನೇಕಾರ (ಅಲ್ಲಿಯ ಮೂಲಿಗನಪ್ಪ ಪಟ್ಟಸಾಲಿಗಂ ಕಂಡು ತನ್ನ ಮನೆಗೊಡಗೊಂಡು ಪೋಗಿ ಪರಮಭಕ್ತಿಯಿಂದಂ ಪಥಶ್ರಮಮಂ ಆಱಿಸಿ: **ಪಂಚತಂತ್ರ,** ೧೨೭ ವ)

**ಪಟ್ಟಸೂತ್ರ –** ರೇಷ್ಮೆ ಎಳೆ (ಚೀನದ ಮಹಾಚೀನದ ಪಟೆಯ ಚಿತ್ರಾವಟೆಯ ಪಟ್ಟಾವಟೆಯ ಪಟ್ಟಸೂತ್ರದ ಚಿತ್ರಸೂತ್ರದ ನೇತ್ರವಟ್ಟಣಿಗೆಯ ಪುಟ್ಟಿಗೆಗಳಂ ಒಟ್ಟಿ ಬೆಟ್ಟಾಗಿ ಪುಂಜಿಸಿ: **ಸುಕುಮಾಚ,** ೧೦. ೯೧ ವ)

**ಪಟ್ಟಳಿಗೆ –** ಪಟ್ಟವಟೆ (ಮೌಕ್ತಿಕಂಗಳ ತೊಡವು ಉಟ್ಟ ಪಟ್ಟಳಿಗೆ ದಂತಮರೀಚಿಗಳಿಂಬೆಳರ್ತ ಬಾಯ್ಪಳಿಕಿನ ಪೆಣ್ಗೆ ಪಾಸಟಿಯೆನಿಪ್ಪ ವಿಲಾಸಿನಿ: **ಪಂಪರಾ,** ३. ೭೨)

**ಪಟ್ಟಳೆ –** ತೊಲೆ (ಪಳಿಕಿನ ಬದ್ಧಭೂಮಿ ಮಣಿವೇದಿಕೆ ಪಚ್ಚೆಯ ಭಿತ್ತಿ ವಜ್ರದ ಉಜ್ವಳಿಪ ವಿತಾನಂ ಆ ನಿಮಿರ್ದ ನೀಲದ ಪಟ್ಟಳೆ ಕಂಭಂ... ..ವಿಚಿತ್ರಮೆನೆ ಮಂಡಿತಮಾಯ್ತು ವಿವಾಹಮಂಡಪಂ: **ಶಾಂತೀಶ್ವಪು,** ೨. ೧೩೧)

**ಪಟ್ಟಾಂಶುಕ –** ಪಟ್ಟವಟೆ (ವರಪಟ್ಟಂಕುಶರಾಶಿಯಂ ಸಮದ ಹಸ್ತಿವ್ರಾತಮಂ .. .. ಪತಿಗೆ ದೂತರ್ ತೋಱಿದರ್: **ಚಂದ್ರಪ್ರಪು,** ೯. ೪)

**ಪಟ್ಟಾವಟೆ –** ರೇಷ್ಮೆ ಸೀರೆ (ಚೀನದ ಮಹಾಚೀನದ ಪಟೆಯ ಚಿತ್ರಾವಟೆಯ ಪಟ್ಟಾವಟೆಯ ಪಟ್ಟಸೂತ್ರದ ಚಿತ್ರಸೂತ್ರದ ನೇತ್ರವಟ್ಟಣಿಗೆಯ ಪುಟ್ಟಿಗೆಗಳಂ ಒಟ್ಟಿ ಬೆಟ್ಟಾಗಿ ಪುಂಜಿಸಿ: **ಸುಕುಮಾಚ,** ೧೦. ೯೧ ವ)

**ಪಟ್ಟಿ –** ಕೊಟ್ಟಿಗೆ, ರೊಪ್ಪ (ಸೋರ್ಮುಡಿಗಳಿಂ ಸೋಗೆನವಿಲ ಪಟ್ಟಿಯಂತೆಯುಂ .. .. ಲಾವಣ್ಯರಸದ ಪೊನಲಿಂ: **ಲೀಲಾವತಿ,** ೧೨. ೧೨ ವ)

**ಪಟ್ಟಿಗೆ –** ಕೊರಳ ಹಾರ (ಜೋಗಿಯ ಕೊರಲೊಳ್ ಇಂಬಾಗಿರ್ದುದು ಪೊಳೆವ ಪೊನ್ನ ಪಟ್ಟಿಗೆ: **ಲೀಲಾವತಿ,** ೪. ೭೨); ಡಾಬು (ಬೆಡಗಿನ ಸೇತಮಾಲೆ ಪಟ್ಟಿಗೆ ಕಟಿಸೂತ್ರಮೆಂಬಿವು ಮನಂಗೊಳೆ .. .. ಮೆಱೆದತ್ತು ವಿಳಾಸಿನೀಜನಂ: **ಆದಿಪು,** ೧೨. ೧೨)

**ಪಟ್ಟಿರ್ –** [√ಪಡು] ಮಲಗಿರು (ಒರ್ವ ಪಾರ್ವಂ ವಿಸ್ತೀರ್ಣ ಜೀರ್ಣ ಕರ್ಪಟಾವೃತ ಕಟಿತಟನುಂ ಆಗಿ ಬಂದು ಕಣ್ಮುಚ್ಚಲ್ ಎಡೆವೇಡೆ ತನಗವರ್ ಪಾಸಲ್ಕೊಟ್ಟ ಕೃಷ್ಣಾಜಿನಮಂ ಪಾಸಿ ಪಟ್ಟಿರ್ದನಂ: **ಪಂಪಭಾ,** ३. ३೧ ವ)

**ಪಟ್ಟಿರಿಸು –** ಮಲಗಿಸು (ಕ್ಷಮಾಂಗನಾಲಿಂಗಿತನಪ್ಪ ಮಹಾಮುನಿಯಂ ಮಲರ್ಚಿ ಪಟ್ಟಿರಿಸಿಯುರಃಸ್ಥಲಮಂ ನಾಭಿವರೆಗಂ ವಿದಾರಿಸಿ ಪಂದೊವಲ್ ಪೊರೆತಾಪಿನೆಗಂ ..ಕಾಯ್ದ ಕರ್ಬೊನ್ನ ಕೀಲ್ಗಳಂ .. .. ಇಱಿದೊಡೆ: **ವಡ್ಡಾರಾ,** ಪು ೫೧ ಸಾ ೨೯)

**ಪಟ್ಟಿಸ –** ಕುಸ್ತಿಯ ಒಂದು ಪಟ್ಟು (ಡೊಕ್ಕರಂ ಚಡಿಕೆ ತುಳಾಡಿ ಪೊಟ್ಟಮುಡುಹಂ ಮುಹಡಂ ದುಣವಟ್ಟಿ ಪಟ್ಟಿಸಂ: **ಅನಂತಪು,** ೨. ೨೭); ಒಂದು ಆಯುಧ (ಕಡುಪಂ ಪಟ್ಟಿಸವೆಂಬ ಬಿನ್ನಣದೆ ಕೃಷ್ಣಂ ಗೆಲ್ದು: **ಜಗನ್ನಾವಿ,** ೬. ३೯)

**ಪಟ್ಟಿಸಭಂಡಾರ** – ರೇಷ್ಮೆ ಬಟ್ಟೆಗಳ ಸಂಗ್ರಹ (ಮಾಣಿಕ ಭಂಡಾರಂ ಸುವರ್ಣ ಭಂಡಾರಂ ಪಟ್ಟಿಸಭಂಡಾರಂಮೆಂದಿವಱೊಳ್ ಮೋಹಿಸಿದ ಬುದ್ಧಿಯನೊಡೆಯನಾಗಿ ಆರ್ತಧ್ಯಾನದಿಂ ಸತ್ತು ಪೆರ್ವಾವಾಗಿ ಪುಟ್ಟಿ: **ವಡ್ಡಾರಾ,** ಪು ೧೪೦ ಸಾ ೨೨)

**ಪಟ್ಟುನೂಲ್** – ರೇಷ್ಮೆಯ ದಾರ, ಪಟ್ಟಸೂತ್ರ (ಅಮಳ ಸೂತ್ರಾಂತಿಕದೊಳ್ ಪದಿನಾಲ್ಕುಂ ಗಂಟನಿಕ್ಕುವುದದು ಕನಕದ ಪಟ್ಟುನೂಲ ನೂಲಭಿರಚಿತಂ: **ಅನಂತಪು,** ೧೦. ೭೪)

**ಪಟ್ಟೆ** – ರೇಷ್ಮೆ ಬಟ್ಟೆ (ಇರೆ ಮುಡಿ ಬಿರ್ಚಿ ನಾನ್ದಮರೆ ಪತ್ತಿದ ಪಟ್ಟೆಯಿನುಟ್ಟುದಿಲ್ಲದಂತಿರೆ ಕಮಳೋನ್ಮುಖಂ ಶಿಖಿವಾಸಿಯವೋಲಳಿಮಾಲೆ ಮುಂದೆ ನಿಲ್ದಿರೆ: **ಮಲ್ಲಿನಾಪು,** ೬. ೯೧)

**ಪಟ್ಟೆಡೆ** – ಮಲಗಿದ ಜಾಗ (ಪಟ್ಟೆಡೆಯೊಳ್ .. .. ಆರ್ಹತಮಾಗೆ ರಕ್ಷಿಪರ್ ಸಲೆ ಜೈನರ್: **ಸಮಯಪ,** ೪. ೮೫)

**ಪಟ್ಟೆಯ** – ಒಂದು ಆಯುಧ (ಮುದ್ಗರದ ಪರಶುವಿನ ಪಟ್ಟೆಯದ ಪಾಶದ ಅಂಕುಶದ: **ರಾಜಶೇವಿ,** ೬. ೧೧)

**ಪಱಿಸು** – ಹೇಳು (ಮಱುಭವನದೊಳಾದೊಡಂ ಆತನೊಳೆ ಬೇಟಮಕ್ಕೆಂದು ಪಱಿಸಿ ಪರಿಚ್ಛೇದಿಸಿ ಕಾಮಾಗ್ನಿಯಂ ಪುಗೆಯುಂ: **ನೇಮಿನಾಪು,** ೫. ೨ ವ)

**ಪಡ** – ಪಂಜರ (ಪಾಱಿವಮಂ ಪಡದಿಂ ಬಿಡೆ ಭೋರೆನೆ ಗಗನಕ್ಕೆ ನೆಗೆದು: **ಪುಣ್ಯಾಸ್ರ,** ೬. ೪೫)

**ಪಡಂಗು** – ಹಡಗು (ಪರಿವ ಪಡಂಗು ಬಲ್ದೆರೆಯ ಸಾಲ ಬೆಡಂಗು ನವೀನ ವಿದ್ರುಮೋತ್ಕರದಳ್ಕೆ: **ಶಬರಶಂ,** ೧. ೩೪)

**ಪಡಕೆ** – ಹಾಸಿಗೆ (ಆನುಂ ಆ ಪಂಜರದ ಪಡಕೆಯೊಳಿರ್ದು ಎನ್ನೊಳಿಂತೆಂದೆಂ: **ಕಾದಂಸಂ,** ೮. ೩೭ ವ)

**ಪಡಡಕ್ಕೆ** – ಮದ್ದಲೆ (ಚಾಮರ ಧವಳಾತಪತ್ರ ಪಡಡಕ್ಕಾದಿ ಶ್ರೀಮದ್ವಿಭವಯುತಂ ಪೌಲೋಮಿಯೆ ಬರ್ಪಂದದಂತೆ ಪೊಟಲಿಂ ಬಂದಳ್: **ಹರಿವಂಶ,** ೭. ೭೨)

**ಪಡಣ** – [ಪತನ] ಅನಿಷ್ಟ, ಕೇಡು (ಆ ರತಿ ಪಾಪಮುಂ ಪಡಣಮುಂ ಪೋಪಂತೆ ಕಾಮಂಗೆ ಮಜ್ಜನಕೆ ಎಂದೆತ್ತಿದ ಚಂದ್ರಕಾಂತ ಘಟದೊಳ್ ತಂದು ಅಟ್ಟೆಯಿಂ ಪುಷ್ಪವಾಸನೆಗೆಂದಿಕ್ಕಿದ ನೀಳನೀರರುಹಮಂ ಪೋಲ್ದತ್ತು ಕಟ್ಟಿಂದುವಾ: **ಪಂಪಭಾ** ಪರಿಷತ್ತು, ೪. ೫೧); ಅನಿಷ್ಟ ವ್ಯಕ್ತಿ (ಅವನಂ ಅಪನೀಪತಿಭವನಂ ಅವಿವೇಕದೆ ಪೋದ ಪಡಣಮಂ ತಲೆವಿಡಿವಂತೆವೊಲಱಿಸಿ ಪೋಪ ತೆಱನನಱಿಪುಗುಮಲ್ತೇ: **ಪಾರ್ಶ್ವನಾಪು,** ೪. ೪೩)

**ಪಡಪಡವಾಯ್** – ಎದೆ ಡವಗುಟ್ಟು (ಪಡಪಡವಾಯ್ವ ಮೆಲ್ಲೆರ್ದೆಗಳಂ ಕರಯುಗ್ಮದಿನೊತ್ತಿ .. .. ಪಲವಾಡಿದುದು ಅಜಿತಂಗೆ ಅಂಗನಾಜನಂ: **ಅಜಿತಪು,** ೬. ೧೨೧)

**ಪಡಪು** – ಪ್ರಯೋಜನ (ಪಡಪಿಲ್ಲದೊಡೆ ಆ ಬ್ರತಮಂ ಬಿಡುವರ್ ಪೊಲೆಯರವೊಲ್ ಎಸೆಪರ್ ಅಱಗುಲಿವೆಂಡಿರ್: **ಸಮಯಪ,** ೫. ೧೦೧); ಗಳಿಕೆ (ಪಗರಣಿಗರಂತೆ ಪಚ್ಚೋಂತಿಯಂತೆ ತಿರಿವನ ಪಡಪಿನಂತೆ ಸೂರ್ಯನಂತೆ: **ಧರ್ಮಾಮೃ,** ೧೪. ೭೫ ವ)

**ಪಡಲ** – ಹರಿವಾಣ (ಅಲೆದಮೃತದೊಡನೆ ತಾರಾಲಲನೆಯರಡಿದಳಿರನೂಡಲೆಂದು ಪದಂಗೆಯ್ದಲತೆಗೆಯ ಪಡಲದಂತೆವೊಲೆಸೆದುದು ಪರಿಪಕ್ವಬಿಂಬಂ ವಿಧುಬಿಂಬಂ: **ಲೀಲಾವತಿ,** ೨. ೭); ಪಡವಲ ಕಾಯಿ (ತೊಂಡೆ ಪಡಲಂ ಮೋಚಂ ಕೂಗರಿ ಬದನೆ ಎನಿಪ ಮೇಲೋಗರಮಂ ಪಲವನಿಕ್ಕಿದರ್ ಶಶಿಮುಖಿಯರ್: **ತ್ರಿಷಷ್ಟಿಪು,** ೧೦. ೩೨); ಬುಟ್ಟಿ

**ಪಡಲಗೆ** – [ಪಟಲಿಕಾ) ಪಡಲ (ಮುನ್ನಂ ಪೂಜಿಸಿ ಶರಮಂ ರನ್ನದ ಪಡಲಗೆಯೊಳಿಟ್ಟು: **ಆದಿಪು,** ೧೨. ೧೧೦)

**ಪಡಲಿಗೆ** – ಕಾಳುಕಡಿ ಇಡುವ ಶರಾವೆ (ಹರಿನೀಲ ಸ್ತಂಭಮುಂ ಜಾಗದ ಪಡಲಿಗೆಯುಂ .. .. ಎಳಸೆ ಬೆಡಂಗಾದುದು ಉದ್ವಾಹಗೇಹಂ: **ಪಂಪರಾ,** ೫. ೧೧೨); ಬುಟ್ಟಿ (ಚೆಂದಳಿರ ಕರಂಡಕಂ ಅರವಿಂದದಳ ಸ್ಫುಟಿಕೆ ಕದಳಿಯೆಲೆಯ ಪಡಲಿಗೆ ಚೆಲ್ವೊಂದಿರೆ: **ರಾಜಶೇವಿ,** ೧೦ ೩೪)

**ಪಡಲಿಡು** – ಚೆಲ್ಲಾಪಿಲ್ಲಿಯಾಗು (ಕೆಯ್ವೆರಲ್ ಪೊಂಗಿ ಮುಂಗೈ ಸುಲಿಸುವನ್ನಂ ಕಾಮನೆಚ್ಚಂ ಪಡಲಿಡುವಿನೆಗಂ ಪೌರನಾರೀನಿಕಾಯಂ: **ನೇಮಿನಾಪು,** ೪. ೧೪೫); ನಾಶವಾಗು (ಕೆಡೆದುವು ಬೆಟ್ಟು ಕೂಡೆ ಪರಿಗೆಟ್ಟುವ ಪೆರ್ದೊಱೆ ಭೂಜರಾಜಿ ನೇರ್ಪಡೆ ಪಡಲಿಟ್ಟು ಸೊಪ್ಪುಸೊವಡಾದುವು: **ಕರ್ಣನೇಮಿ,** ೧೧. ೫೬)

**ಪಡಲ್ವಡು** – ಚೆಲ್ಲಾಪಿಲ್ಲಿಯಾಗು (ಬೆಟ್ಟುಗಳ್ ಉಗ್ರ ಅಶನಿ ಸಂಘಟ್ಟದೆ ಕೆಡೆವಂತೆ ಭೀಮ ಭೀಮಗದಾಸಂಘಟ್ಟದೆ ಕೆಡೆದೊಡನೆ ಪಡಲ್ವಟ್ಟುವು ಕಾಳಿಂಗರಾಜ ಸಮರಗಜಂಗಳ್: **ಗದಾಯು,** ೩. ೪); ಪರಿಹರಿಸು (ಒಡಂಬಡಿಸಿ ವಾಗ್ವಿಡಂಬದಿನಾತನಂ ಬಂಧಮಂ ಪಡಲ್ವಡಿಪ ಬೇಗದಿಂದ ಇಟಿದು: **ಪಂಪರಾ,** ೨. ೨೦)

**ಪಡಲ್ವಡಿಸು** – ಚೆಲ್ಲಾಪಿಲ್ಲಿಯಾಗಿಸು (ಭೀಕರಕರ್ಮದ್ವಿಷರಂ ಪಡಲ್ವಡಿಸಲುಂ ಭವ್ಯರ್ಕಳಂ ಘೋರಸಂಸರಣ ಅಂಭೋನಿಧಿಪಾರಮಂ ಸಲಿಸಲುಂ: **ಆದಿಪು,** ೯. ೬೧); ಪರಿಹರಿಸು (ಪಡೆಯ ಬಟಲ್ಕೆಯಂ ನೆಱೆ ಪಡಲ್ವಡಿಸಲ್ಕೆ ಸಮರ್ಥಂ ಈ ಬನಂ ಬಿಡಿಸುವುದಿಲ್ಲಿ ಬೀಡಂ: **ಶಾಂತೀಶ್ವಪು,** ೧೫. ೧೦೧)

**ಪಡವಣಿಗೆ** – ಅನಿಷ್ಟ, ಪಾಪಫಲ (ಬಂಜೆಯಪ್ಪುದುಂ ಬಡತನಮಪ್ಪುದುಂ ಪಡವಣಿಗೆಯೆಂದು ಗಂಡನೊಲ್ಲದಿರೆ ಬಿಸುಟ್ಟುದುಂ ಅಶುಚಿಯೆಂದು: **ಚಾವುಂಪು,** ಪು. ೩೭೯, ಸಾ. ೩೨)

**ಪಡವು** – ಮೊಟ್ಟಣ (ತಳ್ಳೂಱಿಂ ಪಡವಿನೊಳೆಲೆಗಟ್ಟಿ ಮುಟ್ಟುಪಡೆದಱಸುವುದೇ: **ಲೀಲಾವತಿ,** ೨. ೧೧೫)

**ಪಡಿ** – [ಪ್ರತಿ] ಕದ (ತಮಿಸ್ರಗುಹೆಯ ವಜ್ರದ ಪಡಿ ತತ್ ಕ್ಷಿತಿಧರದೆರ್ದೆಯಂತೆ ಚಮೂಪತಿಯಿಂ ತೆಱೆದತ್ತು: **ಆದಿಪು,** ೧೪. ೫೬); ಸಮಾನ (ಅನವರತಂ ಇರ್ಕೆ ಮತ್ ಭಾವನೆಯೊಳ್ ಪಡಿಯಿಲ್ಲದ ಅಮಳ ಜಿನಮತ ಮಣಿಕೇತನದೆಸೆವ ಪಡಿಗಳೆನಿಸಿದ ಜಿನಸೇನಾಚಾರ್ಯ ವೀರಸೇನಾಚಾರ್ಯರ್: **ಶಾಂತೀಶ್ವಪು,** ೧. ೧೭); ಬದಲು (ಪಡಿಯಿಟ್ಟು ತೋಱುವವೊಲ್ ಆಗಡೆ ತೋಱಿದರಲ್ತೆ ಮಾಯ್ದು ಮಾಯಾವಿಗಳ್: **ಲೀಲಾವತಿ,** ೫. ೬);

**ಪಡಿಕಮಂಗೆಯ್** – [ಜೈನ] ಪ್ರಾಯಶ್ಚಿತ್ತಕ್ಕೋಸುಗ ತಪಸ್ಸು ಮಾಡು (ಪ್ರಾಯಶ್ಚಿತ್ತಂಗೊಂಡು ಪಡಿಕಮಣಂಗೆಯ್ದು ಪರಮಾಥ್ಯತಿಯವರರಾಗಿ ಪನ್ನೆರಡು ವರ್ಷಂಬರಂ ಗುರುಗಳನಗಲದೆ ತಪಂಗೆಯ್ದು: **ವಡ್ಡಾರಾ,** ಪು ೬ ಸಾ ೨೭)

**ಪಡಿಕಮಣಂಗೇಳ್** – [ಜೈನ] ಪ್ರಾಯಶ್ಚಿತ್ತಕ್ಕಾಗಿ ಧರ್ಮೋಪದೇಶವನ್ನು ಕೇಳು (ತತ್ಪಾದಮೂಲದೊಳ್ ತಪಂಬಟ್ಟು ಪಂಚಮಹಾಬ್ರತಂಗಳಂ ಏಱಿಸಿಕೊಂಡು

ಪಡಿಕಮಣಂಗೇಳ್ದ ತದನಂತರಂ ನಿಶ್ಚಯಸಮ್ಯಕ್ತ್ವಮಂ ಕೈಕೊಂಡು: **ವಡ್ಡಾರಾ,** ಪು ೨೮, ಸಾ ೨೬)

**ಪಡಿಕಮಣಂಪೇೞ್** – [ಜೈನ] ಪ್ರಾಯಶ್ಚಿತ್ತಕ್ಕಾಗಿ ಧರ್ಮೋಪದೇಶಮಾಡು (ಒಳ್ಳಿತಪ್ಪ ಮುಹೂರ್ತದೊಳ್ ದೀಕ್ಷೆಯಂ ಕೊಟ್ಟು ಪಂಚಮಹಾವ್ರತಂಗಳಂ ಏಱಿಸಿ ಪಡಿಕಮಣಮಂ ಪೇೞ್ದು ತದನಂತರಂ: **ವಡ್ಡಾರಾ,** ಪು ೬ ಸಾ ೩)

**ಪಡಿಕೆ** – ಬಂಧನ (ಆನುಂ ಆ ಪಂಜರದ ಪಡಿಕೆಯೊಳಿರ್ದು ಎನ್ನೊಳ್ ಇಂತೆಂದೆಂ **ಕಾದಂಬ,** ೧೦. ೪೪ ವ)

**ಪಡಿಕೆನಾಱು** – ಕೆಟ್ಟವಾಸನೆ ಬೀರು (ಪುಣ್ಗಳ ಬಾಯಿಂ ಪಡಿಕೆ ನಾಱ್ ಪರಸಿಗೆಗಳೊಳ್ ಒಸರ್ಗುಂ: **ಆಚವರ್ಧ,** ೧೧. ೩೮)

**ಪಡಿಗ** – [ಪತದ್ಗ್ರಹ] ಪೀಕದಾನಿ (ಎಡೆವಟ್ಟಲ್ಗೆ ಅಡ್ಡಣಿಗೆಗೆ ಪಡಿಗಕ್ಕೆ ತಗುಳ್ದ ಪಱೆಯ ಬಿತ್ತರಿಗೆಗೆ ತಕ್ಕಡೆಯಱಿದು ಪಂತಿಕಾಱರ ನೆಡೆಯಱಿದು ವಿಲಾಸದಿಂದಂ ಇರಿಸಿದಾಗಳ್: **ಸುಕುಮಾಚ,** ೧೧. ೨೬)

**ಪಡಿಗಟ್ಟು** – ಹೋಲಿಕೆ ಮಾಡು ಸುರವನಿತಾಜನಂಗಳ್ ಸುರೂಪವಿಳಾಸೆಯರೆಂದು ಬೀಗಿ ಧಿಕ್ಕರರಿಸುವಂ ಇಂದ್ರಂ ಎಮ್ಮುವಂ ಅವಂದಿರುಮಂ ಪಡಿಗಟ್ಟಿ ನೋಡುಗೆ: **ಪುಷ್ಪದಂಪು,** ೧೨. ೨೧)

**ಪಡಿಗಯಿಸು** – ಪ್ರತಿಯಾಗಿ ಮಾಡು (ವಿಕ್ರಮದಿಂ ಸಮಕರ್ತರಿಯನೆನ್ನಯ್ಯಂ ಕೊಂಡನೆಂದು ಪಡಿಗಯಿಸಲೊಡನೆ ಸಿಗ್ಗಾಗಿ: **ನೇಮಿನಾಪು,** ೮. ೧೦೬ ವ)

**ಪಡಿಗಹ** – [ಪ್ರತಿಗ್ರಹ] ಸ್ವೀಕರಿಸು (ಭಕ್ತಿಯಿಂದಂ ನಿಱಿಸಿ ಕಾಲಂ ಕರ್ಚಿ ಪಡಿಗಹಮುಚ್ಚಂ ಠಾಣಂ ಎಂದೀ ಒಂಬತ್ತು ತೆಱದಿಂದಂ ಪುಣ್ಯಮಂ ಕೈಕೊಂಡು: **ವಡ್ಡಾರಾ,** ಪು ೭ ಸಾ ೮)

**ಪಡಿಗಿಱಿ** – ಕದ ಮುಚ್ಚು (ಊರೂರ ದೈವಂಗಳುಂ ಪಡಿಗೆತ್ತೊಡಿದುವೀಕೆಗಂಜಿ: **ಲೀಲಾವತಿ,** ೨. ೧೦೨)

**ಪಡಿಗೋಂಟೆ** – ಪ್ರತಿ ಕೋಟೆ, ಕೃತಕ ಕೋಟೆ (ನಡೆಸಾರಂ ಬದ್ದರಂ ಗೆಗ್ಗೆ ಡೆಂಕಣಿ ಗುಮ್ಮಂ ಪಡಿಗೋಂಟೆಯೆಂಬ ಬಹುಕೋಟಾಯಂತ್ರಸಾಮಗ್ರಿ ತಿಂತಿಣಿಗೊಂಡಾಂತಿರೆ ಲಗ್ಗೆಗಾರ್ದು ವಸುಷೇಣಂ: **ಅನಂತಪು,** ೧೧. ೮೩)

**ಪಡಿಚಂದ** – [ಪ್ರತಿಚ್ಛಂದ] ಪ್ರತಿಕೃತಿ, ಸಮಾನ (ನಿತ್ಯಮಂಡಿತ ಜಿನಾಲಯಮಂ ಪಡಿಚಂದಮಾಗೆ ಕಣ್ಗೆಸೆದಿರೆ ನೂತ್ನರತ್ನಮಯಮಾಗಿರೆ ಮಾಡಿಸಿ: **ಸುಕುಮಾಚ,** ೧೦. ೫೫)

**ಪಡಿತಳಿಸು** – ಸನ್ನದ್ಧವಾಗು (ಅಡ್ಡಣಕಾಱರ್ ಆರ್ದು ಸಾರ್ದು ಸಂರಂಬಸಂಭ್ರಮಂ ಇಂಬುವಡೆಯೆ ತಡೆಯದೆ ಪಡಿತಳಿಸಿ ಗೊಂದಣಿಸಿ ನಿಂದು: **ರಾಜಶೇವಿ,** ೬. ೫೧ ವ); ಪ್ರತಿಭಟಿಸು (ಆಗಳ್ ಪ್ರಚಂಡಬಳನೆಂಬ ಸಿಂಹಳನ ಪಡೆವಳಂ ಪಡಿತಳುಸತ ಇದಿರ್ಚಿವರಲ್: **ರಾಜಶೇವಿ,** ೬. ೮೫ ವ)

**ಪಡಿದೆಱೆ** – ಕದ ತೆಗೆ (ನಿಜೇಶಂ .. .. ಬರ್ಪುದಂ ಕಂಡು ಎರ್ದೆ ಪಡಿದೆಱೆದಂತಾಗೆ ತಾಂ ಲಜ್ಜೆಯಂ ತೆಕ್ಕನೆ ಪೋದಳ್ ಕಾಂತೆ: **ಲೀಲಾವತಿ,** ೭. ೩೮)

**ಪಡಿಪಾಸು** – ನಡೆಮಡಿ ಹಾಸು (ಯೋಗಿ ಪದತಳಂ ಇಳೆಯಂ ಮುಟ್ಟದ ಮುಂ ದುಗುಲದ ಸೆಱಗಂ ಪಡಿಪಾಸಿ ಮೊಟ್ಟೆಗಿದಂ ಮುನ್ನಡಿಯೊಳ್: **ಚಂದ್ರಪ್ರಪು,** ೫. ೨೨)

**ಪಡಿಮಟ್ಟೆಯ** – ಏಳು ಬಗೆಯ ತಾಳಕ್ರಮಗಳಲ್ಲಿ ಒಂದು (ಧ್ರುವ ಮಟ್ಟೆಯಂ ಪಡಿಮಟ್ಟೆಯಂ ಅಟ್ಟತಾಳ ಎಕ್ಕತಾಳ ರೂಪಕಂ ರಚ್ಚೆಯ ಎಂಬ ಏೞುಂ ತೆಱದ ತಾಳಕ್ರದಿಂದ: **ಧರ್ಮಪ,** ೨. ೨೦ ವ)

**ಪಡಿಮೊಗ** – ಎದುರು, ಅಭಿಮುಖ (ಪಡಿಮೊಗಮಾಗಲೊಡಂ ಕನ್ನಡಿಯಂ ನೋಡುವರ ತೆಱದೆ ಮೆಯ್ಗುಂದುವರ್ ಉಗ್ಗಡದರಸುಗಳೆನೆ: **ಕಬ್ಬಿಗಕಾ,** ೪೨)

**ಪಡಿಯಱ** – [ಪ್ರತೀಹಾರ] ಬಾಗಿಲು ಕಾಯುವ ಕೆಲಸ[ದವನು] (ಬನದ ಪಡಿಯಱನನಂಗಂ ನಿನಗಿತ್ತೊಡೆ ಮುಗಲಿಂ ಎಂಬುದೇಂ ದೋಷಮೆ: **ಆದಿಪು,** ೧೧. ೧೩೫)

**ಪಡಿಯಱಗಟ್ಟಿಗೆ** – ದ್ವಾರಪಾಲಕನ ಕೈಯ ಕೋಲು (ಎಡೆಱಿದರನಟ್ಟು ಮೋದುವ ಪಡಿಯಱಗಟ್ಟಿಗೆಗಳ್: **ಶಬ್ದಮದ,** ೧೮, ಪ್ರ, ೨)

**ಪಡಿಯಱತಿ** – ಬಾಗಿಲು ಕಾಯುವವಳು (ಎಂದು ಪಡಿಯಱತಿ ಬಿನ್ನವಿಸೆ ರಾಜಾಧಿರಾಜಂ .. .. ಬರ್ಕೆ ಎಂಬುದುಂ: **ಕಾದಂಬ,** ೧. ೨೨ ವ)

**ಪಡಿಯಱವಕ್ಕಿ** – ಕೋಗಿಲೆ (ಪ್ರಿಯವಾದುವು ಪಡಿಯಱವಕ್ಕಿಯ ಜಡಿಪುಂ ಜಕ್ಕವಕ್ಕಿಯುಲಿ ಸಾರಸವಕ್ಕಿಯ ಕುಹಕಂ ಪಂಡಿತವಕ್ಕಿಯ ಪಠನಂ ನೃಪನ ಕಿವಿಗೆ ಕೇಳೀವನದೊಳ್: **ಮಲ್ಲಿನಾಪು,** ೬. ೭)

**ಪಡಿಯಱವೆಸ** – ಬಾಗಿಲು ಕಾಯುವ ಕೆಲಸ (ಮಹಾದೇವಿಗೆ ಪಡಿಯಱವೆಸನಂ ಕೆಲರಮರಿಯರ್ ಕೈಕೊಂಡರ್: **ಶಾಂತಿಪು,** ೯. ೧೯೨)

**ಪಡಿಯಱ** – ರೀತಿಯನ್ನು ತಿಳಿ (ಎಡವಕ್ಕದ ಬಲವಕ್ಕದ ಪಡಿಯಱದು ಎಡೆಯಱದು ನಡೆಯಿಪಿಂದ್ರನ ಪಲರುಂ ಪಡೆವಳರ ಜಡಿದು ನಡೆಯಿಪ ಪಡಿಯಱರುಲಿ ಗೆಲಿದುದುಲಿವ ಜಲನಿಧಿಯುಲಿಯಂ: **ಪುಷ್ಪದಂಪು,** ೧೦. ೪೦)

**ಪಡಿಯಱಕೆ** – ಪಡಿಯಱವೆಸ (ಪಡಿಯಱಕೆಯ ಸೀಗುರಿವಿಡಿದು ಅಡಪದ ಕನ್ನಡಿಯ ಪಡಿಗದಾಕೆಗೆಗಳೆಲ್ಲಂ: **ಕಾದಂಬ,** ೨. ೩೪)

**ಪಡಿಯಿಡು** – ಸಮಾನವಾಗು (ಪಡಿಯಿಡೆ ನಿಮ್ಮನೆಮ್ಮವಯವಂಗಳಿನೇಡಿಸಿ ಕಾಡುತಿರ್ದುದಂ ಕಡುದಿಟಮೆಂದು ನೋಯದೆ ಒಡನಾಡಿದ ನಣ್ಪನೆ ನೋೞ್ಪುದೆಂದು ನುಡಿದನುನ್ಯೆಸಿದರ್ ಕುಸುಮಕೋಮಳೆಯರ್ .. .. ಚಂಪಕಂಗಳಂ: **ಪುಷ್ಪದಂಪು,** ೧೩. ೧೦೦); ತಾಳೆ ನೋಡು (ನಡೆಯಂ ವನ್ಯಗಜಂಗಳ ನಡೆಯೊಳ್ ಸೋಗೆಗಳ ಸೋಗೆಯೊಳ್ ಸೋರ್ಮುಡಿಯಂ ನುಡಿಯಂ ಕೋಕಿಲ ರುತಿಯೊಳ್ ಪಡಿಯಿಡಲ್: **ಪಂಪರಾ,** ೭. ೧೩)

**ಪಡಿಲೇಖಿಸು** – ಪ್ರತಿಬಿಂಬವನ್ನು ರಚಿಸು (ಪದನಖರುಚಿ ಕುಟ್ಟಿಮದೊಳ್ ನಿಮಿರ್ದುವೊಡನೆ ಪಡಿಲೇಖಿಪವೋಲ್: **ಪುಷ್ಪದಂಪು,** ೧೨. ೬೭)

**ಪಡಿವಡೆ** – [ಪಡಿ+ಪಡೆ] ಪ್ರತಿ ಸೈನ್ಯ, ಶತ್ರು ಸೈನ್ಯ (ಮದಕರಿಯಂ ಹರಿಯಂ ಪಡಿವಡೆಗುರ್ಚಿದ ಕರವಾಳನೆ ತೋಱಿ ನೃಪತಿ ಗೆಲ್ಲಂಗೊಮಡಂ: **ಪಂಪಭಾ,** ೧. ೧೯)

**ಪಡಿವರಿಜು** – ಪ್ರತಿರೂಪ, ಪ್ರತಿಮೆ (ತಟಶಿಲಾತಲದೊಳ್ ಬರೆದ ಮೃಡನ ಪಡಿವರಿಜಂ ಕಂಡು ಕುಂಬಿಟ್ಟು: **ಕಾದಂಬ,** ೫. ೧೧ ವ)

**ಪಡಿವಳಕಟ್ಟಿಗೆ** – ಪಡಿಯಱಗಟ್ಟಿಗೆ (ಪೆರ್ವಿದಿರ ಸುರ್ವು ಪಡೆವಳಕಟ್ಟಿಗೆಯಾಗೆಯುಂ ಕಿಸುಗಣ್ಣೆವಿಡೆ ಜಡಿಯುತ್ತಿಪ್ಪ

ಗಂಡುಗೋಗಿಲೆಗಳೆ ಮಕಾಪ್ರಾತಿಹಾರ್ಯರಾಗೆಯುಂ: **ವರ್ಧಮಾಪು,** ೫. ೪೧ ವ)

**ಪಡಿವಾತು** – ಪ್ರತಿ ಮಾತು, ಪ್ರತ್ಯುತ್ತರ (ಅತಿಕುಟಿಲತ್ವಂ ಮಡದಿಯರ ಕುರುಳೊಲ್ಲದೆ ಪಡಿವಾತೇಂ ಜನರ ದೆಸೆಯೊಳಿಲ್ಲಾ ನಾಡೊಳ್: **ಸೂಕ್ತಿಸುಧಾ,** ೪. ೨೦)

**ಪಡಿವೆಸ** – ಸೇವೆಯ ಕೆಲಸ (ಅಡಿಯೂಟದ ಪಡಿವೆಸಕ್ಕೆ ಬೆಸಸಿದಂ: **ಅನಂತಪು,** ೪. ೭೬ ವ)

**ಪಡಿಸಣ** – ಪರೀಕ್ಷೆ, ಆಹಾರ ಪರೀಕ್ಷೆ (ಮನೋಹರಿಯಂ ಪಡಿಸಣವಂ ನೋಡಲುಂ: **ಆದಿಪು,** ೭.. ೨೧ ವ)

**ಪಡಿಸು** – ಮಲಗಿಸು (ಪದುಳದೆ ತೊಟ್ಟಿಲೊಳ್ ಪಡಿಸಿ ತೂಗಿದರ್ .. .. ಲತಾಂಗಿಯರ್: **ಜಗನ್ನಾವಿ,** ೩. ೨೮)

**ಪಡು** – ಬೀಳು (ಭಾನುಮತಿ ಬಾಯಟೆದು ಪುಯ್ಯಲಿಡುತುಂ ಬಂದು ಧರ್ಮನಂದನನ ಕಾಲ ಮೇಲೆ ಕವಿದು ಪಟ್ಟು: **ಪಂಪಭಾ,** ೭. ೩೩ ವ); ಮಲಗು (ತಚ್ಚಿಲಾಪಟ್ಟದೊಳ್ ಉತ್ಸವದಿಂ ಪಟ್ಟಿರ್ದುದು ತಳದವಿಚಳಮಪ್ಪ ಏಕಪಾರ್ಶ್ವನಿಯಮಸ್ಥಿತಿಯಂ: **ಆಚವರ್ಧ,** ೧೨. ೨೯); ಕೂಡು (ಪರಲಲನೆಯೊಳಂ ಪಡುಗೆ ಶಿವಭಕ್ತನಾಗಿರ್ದೊಡೆ ಪೊರ್ದವು ಪಾಪಮೆಂಬರ್ ಆಱಡಿಕಾರರ್: **ಸಮಯಪ,** ೧೪. ೧೦೭); [ಸೂರ್ಯ] ಅಸ್ತಮಿಸು (ಇತ್ತ ನೇಸಱ್ ಪಟ್ಟೊಡೆ ಕಿತ್ತಯ್ಯಂಗಳ್ಗೆ ಆಸನ್ನಕಾಲಮಾದುದು ಎಂಬುದಂ ಭಟ್ಟಾರರ್ ಅಱಿದು: **ವಡ್ಡಾರಾ,** ಪು ೮೩ ಸಾ ೧೦)

**ಪಡುಕೆ** – ಕೆಟ್ಟ ವಾಸನೆ (ಮೊಡೆನಾರ್ಪ ಕೊಳೆದುಗುರ್ವಿನ ಪಡುಕೆಗಳೆನೇಳದವನಿತು ಪೂತಂಗಳೆದೊಡೊಡಲೊಡನಿರ್ದಾ ನಾತದೆ: **ವರ್ಧಮಾಪು,** ೫. ೩೮); ಹೊಲಸು (ಒಡಲೆಂಬ ಪುಟಿತ ಮಾಂಸದ ಪಡುಕೆಯ ಭಾರಮಂ ಅದೇನುಂ ಬಗೆಯದೆ .. .. ನರಕಕ್ಕಟ್ಟುಗುಂ: **ಸಮಯಪ,** ೧೪. ೯೮)

**ಪಡುಕೆನಾಱು** – ಕೆಟ್ಟ ವಾಸನೆ ಬೀರು (ಆಗಿರ್ಕುಂ ಆವಗಂ ಅತ್ಯಂತ ಜುಗುಪ್ಸೆಯಿಂ ಪಡುಕೆನಾಱುತ್ತುಂ ಕ್ರಿಮಿಶ್ರೇಣಿಯಿಂ: **ಶಾಂತೀಶ್ವಪು,** ೯. ೭೫)

**ಪಡುತರ್** – ಸೂರ್ಯನು ಅಸ್ತವಾಗು (ನೇಸಱ್ ಪಡುತಂದುದು ಪೊಟ್ಟು ಪೋಯ್ತು ಪೋದಪೆಂ: **ಕಾದಂಸಂ.** ೪. ೭೩)

**ಪಡುದೆಸೆವೆಣ್** – ಪಶ್ಚಿಮದಿಕ್ಕು ಎಂಬ ಹೆಣ್ಣು (ಪಡುದೆಸೆವೆಣ್ ಸಮಂತಮರ್ದ ಚಂದ್ರಿಕೆಯೆಂಬ ಸುಸೀಧುಸಾರಮಂ ಬಿಡದೆ ಒಸೆದೀಮಟಿ: **ಉದ್ಭಟಕಾ,** ೧೦. ೧೦೩)

**ಪಡುನೇಸಱ್** – ಮುಳುಗುವ ಸೂರ್ಯ (ಪಡುನೇಸಱೆಸೆದುದು ಶರನಿಧಿನಾಥಂಗೆ ಪಿಡಿದಮಾನಿಕಗೊಡೆವೋಲ್: **ಜಗನ್ನಾವಿ,** ೪. ೧೧೧)

**ಪಡುಮಿಗಂಗುಡು** – ಬೇಟೆಯಲ್ಲಿ ಬೀಳು (ಬಿಲ್ಲರ್ಗೆ ತಮ್ಮಿಂ ತಾವೆ ಪಡಿಮಿಗಂಗುಡುವ ಚಮರೀಮೃಗಂಗಳುಂ: **ಚಂದ್ರಪ್ರಪು,** ೫. ೭೫ ವ)

**ಪಡುವಣ** – ಪಶ್ಚಿಮದ (ವಿಜಯಾರ್ಧ ಚೂಳಿಕೆಯ ಸೋಪಾನಮನೇಱೆ ಸಿಂಧುನದಿಯ ಪಡುವಣ ವೇದಿಕೆಯ ತೋರಣದ್ವಾರದಿಂದಂ ಉರ್ಚಿ: **ಅಜಿತಪು,** ೯. ೩೪ ವ); ಪಶ್ಚಿಮ ದಿಕ್ಕು

**ಪಡುವು** – ಪಶ್ಚಿಮದಿಕ್ಕು (ನುಡಿವಳಿಗೆ ನರನ ರಥಮಂ ಪಡುವು ಎಣ್ಗಾವುದುವರಂ ಸಿಡಿಲ್ವಿನಂ ಎಚ್ಚು ಅಚ್ಚುಡಿಯೆ ಭುಜಬಲದ ಹರಿಯ ಉರದೆಡೆಯಂ ಬಿರಿಯೆಚ್ಚು ಮೆಱೆದಂ ಅಳವಂ ಭೀಷ್ಮಂ: **ಪಂಪಭಾ,** ೧೧. ೨೦)

**ಪಡುವೋವರಿ** – ಮಲಗುವ ಕೋಣೆ (ಆ ಕನ್ಯೆ ಧನದೇವನ ಪಡುವೋವರಿಯ ಮನೆಯನೆಯ್ದಿ ಪಡಿಯಂ ಮಿಡಿಡೊಡೆಚ್ಚತ್ತು ಪಡಿಯಂ ತೆಱೆದು ನೋಡಿ: **ಸುಕುಮಾಚ,** ೭. ೨೧ ವ)

**ಪಡುಶಿಲೆ** – ಮಲಗುವ ಕಲ್ಲು (ಒಪ್ಪಂಬೆತ್ತುದೀ ಮುತ್ತಿನ ಪಡುಶಿಲೆಯೊಳ್ ದೇವ ಕುಳ್ಳಿರ್ಪುದೀಗಳ್: **ಕಾದಂಸಂ,** ೫. ೫೮)

**ಪಡೆ** – ಹೊಂದು (ಮೋಕ್ಷದ ಕಡೆಯಿಲ್ಲದ ಪರದುಸುಖಮನೀಗಳೆ ಪಡೆವೆಂ: **ಸುಕುಮಾಚ,** ೧೧. ೮೧); ಉಂಟುಮಾಡು (ಕಡೆಯೊಳ್ ತೀರ್ಥಂಕರಂ .. .. ಉರ್ವಿಗಿಟಿತಂದಂ ಬಂಧುರಾನಂದಮಂ ಪಡೆಯುತ್ತುಂ ಜಗತೀಜನಕ್ಕೆ: **ಶಾಂತೀಶ್ವಪು,** ೨. ೧೨೦); ಸೈನ್ಯ (ಕಾಟ್ಟುಱು ಮಸಗಿದಂತೆ ಮಸಗಿದ ದುರ್ಧರ ಧನುರ್ಧರಬಲಮುಮಂ ಶ್ವೇತ ಭೀಷ್ಮರ ಪೇಟ್ದಿ ಓಜೆಯೊಳೆರಡುಂ ಪಡೆಗಳ ಪಡೆವಳರ್ಕಳ್ ಕುರುಕ್ಷೇತ್ರದೊಳ್ ಚಿತ್ರಿಸಿದಂತೆ ಒಡ್ಡಿ ನಿಂದಾಗಳ್: **ಪಂಪಭಾ,** ೧೦. ೫೧ ವ); ಪರಿವಾರ (ಆ ವಿವಿಧ ಕಳಕಳಿಕ್ಕೆ ವನಾವಳಿಯಿಂ ಪಾಱೆ ಮೊಱೆವ ಮಧುಪಶ್ರೇಣೀರಾವದ ಘೋಷಣೆ ಕಳೆದುದು ಇಳಾವಲ್ಲಭಸುತನ ಪಡೆಯ ಮಥನಶ್ರೀಯಂ: **ಶಾಂತಿಪು,** ೮. ೬)

**ಪಡೆಪಾಳಿತನ** – ಸಂಪಾದನೆಗೈಯುವಿಕೆ (ಕುಂಟಣಿಯೊರ್ವಳ್ ತನ್ನ ಮಗಳ ಸೊಬಗಿನ ಸೊಂಪಿನ ಪಡೆಪಾಳಿತನಮನೆ ನುಡಿವುದುಂ: **ಅನಂತಪು,** ೮. ೨೪ ವ)

**ಪಡೆಪು** – ಇಷ್ಟಾರ್ಥ, ಪಡೆಯಬೇಕೆಂದಿರುವುದು (ಕಡುತಪದಿಂದೆ ನಿನ್ನ ಪಡೆಪಾವುದೊ ಗಾವಿಲ ಸಗ್ಗಮಲ್ತೆ: **ಪಂಪಭಾ,** ೭. ೯೩); ಲಾಭ (ಕನಕದ ಪೂಜೆಯ ಪಡೆಪಾದಪುದಿಲ್ಲಿ ಮುನಿಯ ದಾನದಿನಧಿಕಂ: **ಆದಿಪು,** ೫. ೬)

**ಪಡೆಪುಗಿಡು** – ಧೈರ್ಯಗೆಡು, ಲಾಭ ಹೋಗು (ಬಡಿದ ಕಾರಣಂ ಕೊಂಡುಯ್ವರ್ ಪಡೆಪುಗಿಡುವಿನೆಗಂ ಎಂದು: **ಆದಿಪು,** ೫. ೨೦)

**ಪಡೆಮಾತು** – ಸುದ್ದಿ, ವಿಷಯ (ಉತ್ತರಾಪಥಧ ಹಸ್ತಿನಪುರದಿಂ ಬಂದೆಂ ಎಂದೊಡೆ ಅಲ್ಲಿ ಪಾಂಡವರ ಪಡೆಮಾತಾವುದು ಧೃತರಾಷ್ಟ್ರ ಸುಯೋಧನರ್ ಇರ್ಪಂದಮಾವುದು ಎಂದು ಬೆಸಗೊಳ್: **ಪಂಪಭಾ,** ೩. ೩೧ ವ); ಕೀರ್ತಿ, ಕಂಡು ಕೇಳಿದ ಮಾತು (ಎಂದು ಎನಿತಾನುಂ ತೆಱದೊಳ್ ಅಳಿಪಿನ ಲಲ್ಲೆಯ ಚೆಲ್ಲದ ಪುರುಡಿನ ಮುಳಿಸಿನ ನೆವದ ಪಡೆಮಾತುಗಳಂ ನುಡಿದುಂ ಕಾಲ್ವಿಡಿದುಂ ಅಚಳಿತಧೈರ್ಯನ ಮನಮಂ ಚಲಿಯಿಸಲಾಱದೆ: **ಪಂಪಭಾ,** ೭. ೯೪ ವ); ಲೋಕೋಕ್ತಿ (ಬಡಬಾನಲಂಗೆ ಸೆಡೆದು ಇಂಗಡಲೆ ಸರಣ್ಬೊಕ್ಕುದು ಅಮರಶೈಲಮಂ ಎಂಬೀ ಪಡೆಮಾತಂ ನೀರ್ಗಾದಿಗೆ ಪಡೆಯುತ್ತುಂ ಪೊನ್ನ ಕೋಂಟೆಯಂ ಬಳಸಿರ್ಕುಂ: **ಪಂಪರಾ,** ೧. ೧೧೩)

**ಪಡೆಮೆಚ್ಚೆಗಂಡ** – [ಎದುರು] ಸೈನ್ಯವೂ ಮೆಚ್ಚಿಕೊಳ್ಳುವ ಶೂರ (ತಿಸುಳದೊಳ್ ಉಚ್ಚಳಿಪ್ಪ ಪೊಸನೆತ್ತರೆ ಕೆಂದಳಿರಾಗೆ ಕಣ್ಗೆ ಅಗುರ್ವಿಸುವಿನಂ ಒಕ್ಕು ನೇಲ್ವ ಕರುಳೋಳಿಯೆ ಬಾಳಮೃಣಾಳಮಾಗೆ ಮಿಕ್ಕಸುರರ ಮೆಯ್ಯೊಳಾದ ವಿರಹಾಗ್ನಿಯಂ ಆಱೆಸುತಿಂತೆ ತನ್ನ ಕೂರಸಿಯೊಳ್ ಅಡರ್ತು ಕೊಂದಸಿಯಳ್ ಇರ್ಕೆ ಅಸಿಯೊಳ್ ಪಡೆಮೆಚ್ಚೆ ಗಂಡನಾ: **ಪಂಪಭಾ,** ೧. ೬)

**ಪಡೆವಳ –** ಸೇನಾನಿ (ಕಾಱುಱು ಮಸಗಿದಂತೆ ಮಸಗಿದ ದುರ್ಧರ ಧನುರ್ಧರಬಲಮುಮಂ ಶ್ವೇತ ಭೀಷ್ಮರ ಪೇೞ್ದ ಓಜೆಯೊಳೆರಡುಂ ಪಡೆಗಳ ಪಡೆವಳರ್ಕಳ್ ಕುರುಕ್ಷೇತ್ರದೊಳ್ ಚಿತ್ರಿಸಿದಂತೆ ಒಡ್ಡಿ ನಿಂದಾಗಳ್: **ಪಂಪಭಾ,** ೧೦. ೫೧ ವ)

**ಪಡೆವಳಕಟ್ಟಿಗೆ –** ಸೇನಾನಿಯು ಹಿಡಿದ ದಂಡ (ಕಟಿಲೆ ಬಳೆದ ಪೆರ್ವಿದಿರೆ ಪಡೆವಳಕಟ್ಟಿಗೆಯಾಗೆಯುಂ: **ವರ್ಧಮಾಪು,** ೪. ೫೧ ವ)

**ಪಡೆವಳ್ಳ –** ಪಡೆವಳ (ದಂಡರತ್ನಂ ಪಡೆವಳ್ಳನ ಮುಂದೆ ನಡೆಯೆ ನಡೆದಂ ಭರತಂ: **ಆದಿಪು,** ೧೧. ೪೭)

**ಪಡ್ಡಳಿ –** ಕಣಿಗಿಲೆ (ಅಂತು ಪೊಕ್ಕು ಪಚ್ಚೆಯ ಪಡ್ಡಳಿಯ ಪಾದರಿಯ ಪಲಸಿನ ತೆಂಗಿನ ಕೌಂಗಿನ ದಾಲಿಂಬವನದ ... ..ಸಸಿಯ ಸಾಲ್ಗಳ ನಡುವೆ: **ಕಬ್ಬಿಗಕಾ,** ೭೯ ವ)

**ಪಣ್ –** ಹಣ್ಣು (ಪರಿದನಿಬರುಂ ಒಡನೆ ಅಡರ್ದಿರೆ ಮಮರನಂ ಮುಟ್ಟಲ್ಕೆ ಪಡೆಯದೆ ಅನಿಬರ್ಗಂ ಕಿಂಕಿರಿವೋಗಿ ಭೀಮಸೇನಂ ಪಿಡಿದಲ್ಗೆ ಪಣ್ವೊಲ್ ಅನಿಬರುಂ ಉದಿರ್ದರ್: **ಪಂಪಭಾ,** ೨. ೩೧); ಹಣ್ಣು ಬಿಡು (ಮನೆಯಂಗಣದೊಳಗೆ ಪಣ್ತು ಪರ್ವಿದ ಮಂದಾರ ನಮೇರು ಒಆರಿಜಾತದ ಬನದೊಳ್: **ಯಶೋಧಚ,** ೩. ೨); ಮಾಗು (ಇದು ನಿನ್ನೀಆಲವು ಎನ್ನೀ ಅಧರದೊಳದ ಈರ್ಷೆಯಿಂ ಪಣ್ತ ಗರ್ವಕ್ಕೆ: **ಲೀಲಾವತಿ,** ೨. ೪೬); ಸವಿಯಾಗು (ನಲಿದು ನವಿಲ್ ಜಗುರ್ತುದು ಪಿಕಧ್ವನಿ ಪಣ್ತುದು ಮಿಂಚು ಕಣ್ಗಳೊಳ್ ಮೊಳೆತುದು: **ನೇಮಿನಾಪು,** ೪. ೬೦); ಸಜ್ಜುಗೊಳಿಸು (ಮಲ್ಲಯುದ್ಧದ ನೆವದೊಳ್ ಲೊಲ್ವುದಂ ಪಣ್ಣಿ ನಿಲೆಯುಂ: **ಹರಿವಂಶ,** ೬. ೪೫ ವ)

**ಪಣ –** ಜೂಜಿನ ಒತ್ತೆ (ಪಣವುಂಡೆಂ ಬಂದಿಯೊಳ್ ಬಾಲಕನೆ ಪಲಗೆ ಜೂಜಾಡಿದೆಂ ಸೂಳೆಗೆಯ್ದೆಂ ಪಣಿದಂಬೊಯ್ದೆಂ ತೊಟಿಲ್ದೆಂ: **ನೇಮಿನಾಪು,** ೫. ೩೬); ಒಂದು ನಾಣ್ಯ (ಒಂದು ಪಣಮನಪ್ಪೊಡಂ ಪೆಱದೆ ಬಸಿಕುರ್ಟ್ಟಿಂ ಅಂಬಲಿಗಂ ಎಣ್ಣೆಗಂ ಕಟಿಗಂ ಕೊಟ್ಟು ಪೋಕುಂ: **ವಡ್ಡಾರಾ,** ಪು. ೭೭. ಸಾ. ೨೧)

**ಪಣಂಕು –** ಪಳುಂಕು, ಬಲವಾಗಿ ತಾಗು (ಕುತ್ತುವ ಕೊಂತ ನಟ್ಟ ಕಂಪಣದ ಪಣಂಕುವಿಟ್ಟಿಗಳ ಪಾಯ್ದ ಕಠಾರಿಯ ಕೋಣೊಳೆಲ್ಲಿಯುಂ ಪೆಣಮಯಮಾಗಿ: **ವರ್ಧಮಾಪು,** ೪. ೬೫)

**ಪಣವ –** ಮದ್ದಳೆ (ಆಗಳ್ ಕುರುಧ್ವಜಿನಿಯುಂ ಅನೇಕ ಶಂಖ ಕಾಹಳ ಭೇರೀ ಪಣವ ಝುಲ್ಲರೀ ಮೃದಂಗ ತೂರ್ಯಂಗಳ್ .. .. ಮೊಟಿಗೆ: **ಪಂಪಭಾ,** ೧೧. ೩೩ ವ)

**ಪಣವಧು –** ಪಣಕಾಂತೆ (ಪಯಃಕಣಪ್ರಸರವಿಚ್ಛೇದೈಕಶೀಲಂ ಮಹಾಬರದಿಂ ಸಂಚರಿಸುತ್ತೆ ಸತ್ಪಣವಧೂ ಘಂಟಾರುತಂ ಮರುತಂ: **ತ್ರಿಷಷ್ಟಿಪು,** ೨೪. ೧೪೩)

**ಪಣವನಿತೆ –** ಪಣಕಾಂತೆ (ಭೃಂಗಮಾಳಾಗರುನ್ಮಾರುತಪುಷ್ಪಂ ತೀಡಿದತ್ತು ಒಯ್ಯನೆ ಪಣವನಿತಾಗಾರಚಾರಂ ಸಮೀರಂ: **ಶಾಂತೀಶ್ವಪು,** ೧೧. ೫೩)

**ಪಣವನಿತಾಗಾರ –** ವೇಶ್ಯೆಯ ಮನೆ (ಭುಜಂಗಾವಳೀತಾಟಿತ ನಾನಾ ಘಂಟಿಕಾ ಟಂಕೃತಿರವಮುಖದಿಂ ವಾರನಾರೀ ತನೂರೋಪಿತದಿವ್ಯಾಮೋದ ನವ್ಯಾಗರುಪರಿಮಿಳಿತಂ ತೀಡಿದತ್ತೊಯ್ಯನೆ ಪಣವನಿತಾಗಾರಚಾರಂ ಸಮೀರಂ: **ಶಾಂತೀಶ್ವಪು,** ೧೧. ೫೩)

**ಪಣವು –** ದುಡ್ಡು (ರಕ್ಕಸಿಯರ ಮನೆಯ ಬೆಲ್ಲದಂತೆ ಕಲ್ಲ ಬಿಡವೆಯೊಳಿರ್ದ ಪಣವಿನಂತೆ ಸಿಡಿಲೊಳಗಿರ್ದ ಸಕ್ಕರೆಯಂತೆ: **ಧರ್ಮಾಮೃ,** ೧೩. ೧೨೨ ವ); ಒಂದು ನಿರ್ದಿಷ್ಟ ನಾಣ್ಯ

**ಪಣಾಂಗನೆ –** ಪಣಕಾಂತೆ, ಸೂಳೆ (ಶ್ವೇತನೆನಿಪ್ಪ ಪಾತಕಿ ಪಣಾಂಗನೆಗೆಂದು ಅರಲಂ ತರುತ್ತೆ ಧಾತ್ರೀತಳದಲ್ಲಿ ಬೀಳೆ: **ರಾಜಶೇವಿ,** ೩. ೯೩)

**ಪಣಾಯಿತ –** ಜೂಜು (ಪಣಾಯಿತಂ ತಾಂ ಪಣಿತಂ; **ಅಭಿಧಾವ,** ೨. ೧. ೫೨)

**ಪಣಿ –** ಘಟ್ಟಿಸು (ಕಾಯ್ಪುಂ ಬೆರಸಿ ಬೆಚ್ಚಂತಿರಲ್ ಬಯಸುವ ಬಗೆಯುಂ ಪತ್ತಿ ಪಣಿದಣಿಯಿಸುವ ಅಳಿಪುಂ ಅಳವಿಗಳಿಯೆ: **ಲೀಲಾವತಿ,** ೧೦. ೪೫ ವ); ಹಾವು (ಫಕಾರಕ್ಕೆ ಪಕಾರಂ: ಫಲಂ–ಪಲಂ, ಫಾಂ–ಪಾಳಂ, ಫನಿ–ಪಣಿ: **ಶಬ್ದಮದ,** ೨೬೯ ಪ್ರ)

**ಪಣಿಗೆ –** ಬಾಚಣಿಗೆ (ಕಾಱಿಯಂತೆ ಕೊಱಲಂ ಪತ್ತಿ ಕೊಯ್ವರ್ ಗರಗಸದಂತೆ ಮೆಯ್ಯಂ ಕೊಱೆವರ್ ಪಣಿಗೆಯಂತೆ ತಲೆಯಂ ಪತ್ತಿ ತೆಗೆವರ್: **ಧರ್ಮಾಮೃ,** ೩. ೪೩ ವ); ಬಾಳೆ ಹಣ್ಣಿನ ಚಿಪ್ಪು (ಪಣ್ಣ ಪಣಿಗೆ ಬಿಣ್ಪು ತಿಣ್ಣಮಾದಂತೆ ಕೆಲದ ಕುಜಂಗಳೊಳ್ ಎಳೆದೋಳ್ಗಳನಿಟಿಪುವ ಪೊಂಬಾಟಿಗಳುಂ: **ಲೀಲಾವತಿ,** ೬. ೬೦ ವ)

**ಪಣಿತ –** ಪಂತ, ದ್ಯೂತ (ಪಣಾಯಿತಂ ತಾಂ ಪಣಿತಂ; **ಅಭಿಧಾವ,** ೨. ೧. ೫೨)

**ಪಣಿದ –** ಕಾಳಗ (ಇಂತಪ್ಪ ಗಣಿದಮುಮಂ ಪಣಿದಮುಮಂ ಅಱಿಯೆನಬ್ಬಾ: **ಜೀವಸಂ,** ೬. ೫೮ ವ); ಕತ್ತರಿಸುವಿಕೆ (ಕೃತಾಂತಂ ಪಣಿದಂಬೊಯ್ದಂತಿರೆ ಬೇಂಟೆಕಾಱರರೆ ಬಿರ್ದರ್ದರ್: **ಲೀಲಾವತಿ,** ೬. ೧೧)

**ಪಣಿದಂಬೊಯ್ –** ಕತ್ತರಿಸಿ ಹಾಕು; ಯುದ್ಧಮಾಡು; ಪಣವಾಗಿ ಕೊಡು (ಪಲಗೆ ಜೂದಾಡಿದೆಂ ಸೂಳೆಗೆಯ್ದೆಂ ಪಣಿದಂಗೆಯ್ದೆಂ ತೊಟಿಲ್ದೆಂ: **ನೇಮಿನಾಪು,** ೫. ೩೬)

**ಪಣಿದಕಾಱ –** ಕತ್ತರಿಸುವವನು, ಕಟಾವುದಾರ (ಬಳೆಗೊಯ್ಯಲ್ ಮೂಣ್ದು ತುದಿಯೊಳೋಡಿ ಪೋಪ ಭೀರುವಪ್ಪ ಪಣಿದಕಾಱನಂತೆ: **ಶಾಂತಿಪು,** ೮. ೪೯ ವ)

**ಪಣಿದರ –** [ಫಣಿಧರ] ಶಿವ (ಕಣೆ ಕಣೆಯನುಗುಳ್ವ ತೆಱದಿಂ ಕಣೆ ಕಣೆಯಂ ಕಱೆವ ತೆಱದಿಂ ಎಂಟುಂ ದೆಸೆಯೊಳ್ ಕಣೆ ಕಣೆಯಂ ಈಂಬ ತೆಱದಿಂ ಪಣಿದರನಗಿದರಳರೆ ಕವಿದುವಾಗಳ್ ಕಣೆಗಳ್: **ಕಬ್ಬಿಗಕಾ,** ೨೩೯)

**ಪಣುಂಕು –** ಕುಗು, ಕುಸಿ (ತುಮುಟಿಲ್ಕೈರಾವತಂ ದರ್ಪಮನೆರ್ದೆಯೊಡೆಯಲ್ಪುಂಡರೀಕಂ ಪಣುಂಕಲ್ ಕುಮುದಂ .. .. ಸುರುಳ್ದಂ ಸಮದಿಂದ್ರಂ ವಹ್ನಿಕಾಲಂ ದನುಜನುದಧಿಪಂ ವಾಯುಯಕ್ಷಂ ತ್ರಿಯಕ್ಷಂ: **ಲೀಲಾವತಿ,** ೬. ೪)

**ಪಣೆ –** ಹಣೆ, ನೊಸಲು (ತೆಕ್ಕನೆ ತೀವಿರೆ ತಾಪಕ್ಕಿಕ್ಕಿದ ಸಿರಿಗಂಪು ಪಣೆಯೊಳೆಸೆದುದು ಕೋಪಂ ಮಿಕ್ಕತನು ಬೇಸಸಿದೊಡೆ ನಿಸಲಕ್ಕರಮಂ ತೊಡೆಯಲೆಂದು ಬಂದಿಂದುವವೋಲ್: **ಚಂದ್ರಪ್ರಪು,** ೮. ೮೬); ಮರದ ಕಾಂಡದ ಕವಲೊಡೆವ ಜಾಗ (ತೀವಿರ್ದತ್ತು ಮೊದಲ್ಮೊದಲ್ಗೆ ಪಣೆಯುಂ ಮೂಗಯ್ಯ ಮೂಗಯ್ಯೆನಿಸಿತ್ತಾವರ್ಕೆಯ್ದೆಳ್ ಕವಲ್ತು ಪಲವುಂ ಕೊಂಬಾದುದು: **ಆದಿಪು,** ೧೧. ೯೭); ಕಾಡುಮೃಗಗಳ ವಾಸದ ನೆಲೆ (ಇಂತು ಸಂತತಮೊಪ್ಪುವ

ಕಾಂತಾರದಂತರಾಳದೊಳ್ ಬಿಯದರ್ ಬೇಂಟೆಯಾಡಲೆಂದು ಸಂಭ್ರಮಂ ಮಿಗೆ ಸರುವಿಡಿದು ಪಡೆಯಿರ್ಪಡೆಗೆಯ್ತಂದು: **ಶಬಶಂವಿ,** ೩. ೪೪ ವ)

**ಪಣೆಕಟ್ಟು** – ಹಣೆಯ ಅಲಂಕಾರ ಪಟ್ಟಿ, ತಲೆಯ ಪಾಗು (ತೊಟ್ಟ ಎಕ್ಕವಡಂ ಮರವಿಲ್ ಕಟ್ಟಿದ ಪಣೆಕಟ್ಟು ಬೇಂಟೆವಱೆ ದೊರೆಯೊಳ್ ಒಡಂಬಟ್ಟ ಅಸಿಯ ಸುರಗಿ ದಳಿವದ ತೊಟ್ಟ ಅಂಗಿಗೆ ತನ್ನೊಳ್ ಅಮರೆ ಬೇಂಟೆಯನೊರ್ವಂ; **ಪಂಪಭಾ,** ೫. ೩೬)

**ಪಣೆಯಿಕ್ಕು** – ಹಣೆ ಚಾಚು, ತಲೆಯೆತ್ತು (ಕೋಣತಾಣಕ್ಕೆ ಪಾಱುವ ಪಾರಿವಂಗಳಂ ಪಾಱೆ ಪಣೆಯಿಕ್ಕೆಯುಂ .. .. ಅಂಚೆಯ ತುಪ್ಪುಟಂಚೆಯಂ ಪಳಂಚಲೆಯುಂ: **ಮಲ್ಲಿನಾಪು,** ೭. ೨ ವ)

**ಪಣ್ಗೊಲೆ** – ಹಣ್ಣಿನ ಗೊನೆ (ತೂಗಿ ಪಣ್ಗೊಲೆಯಿಂ ಬಳ್ಕುವ ಕೌಂಗು ಕಾಯ್ದುಱುಗಳ ಪೇಱೆರ್ದ ಚೆಂದೆಂಗು: **ಆದಿಪು,** ೧. ೬೭)

**ಪಣ್ಣನೆ** – ಸ್ವಲ್ಪಮಟ್ಟಿಗೆ (ನಿನಗಪ್ಪುದು ಈ ಅಟೆನುಡಿ ಬರ್ಕೆ ನಿನ್ನ ಪಿರಿಯಣ್ಣನೆ ಪಣ್ಣನೆ ನೋಟ್ಟಿಂ ಆತನ ಒಡ್ಡಟೆಯದ ಗಂಡವಾತಂ: **ಪಂಪಭಾ,** ೩. ೧೬); ಮೆಲುವಾಗಿ (ಕಿಱುವೀಲಿ ಕಣ್ದೆಱೆಯೆ ಸೋಗೆಗೆ ತಣ್ಣಸುವುಟ್ಟೆ ಬೆಟ್ಟವೇಸಗೆಯ ಬಿಸಿಲ್ಗೆ ತೀಡಿದುದು ತಣ್ಣನೆ ಪಣ್ಣನೆ ಪಶ್ಚಿಮಾನಿಲಂ: **ಪಂಪರಾ,** ೭. ೧೩೯)

**ಪಣ್ಣಪಣ್ಣನೆ** – ಮೆಲ್ಲಮೆಲ್ಲಗೆ (ಗಿಳಿವೆಣ್ಣ ಕಾಲಂ ಪಿಡಿದು ಪಣ್ಣಪಣ್ಣನೆ ಪೊರ್ದಿ ಪಣ್ಣಂ ಬಾಯ್ವಾಯೊಳ್ ಕುಡುವ ನೆವದಿಂದಂ ಬಿಡಿಸಿ ಚುಂಬಿಸುವ ಕೀರಕಾಮುಕನುಮಂ: **ಲೀಲಾವತಿ,** ೧೧. ೫೫ ವ)

**ಪಣ್ಣಿಗೆ** – ಆಭರಣ (ಎಸೆದೊಪ್ಪಿರ್ದ ವಿಮಾನಮಾಲೆ ಖಚರಾನೀಕಕ್ಕೆ ಚಿಹ್ನಂಗಳ್ ಆಗಸದೊಳ್ ಪಣ್ಣಿದ ಪೊನ್ನ ಪಣ್ಣಿಗೆಯ ಇಭಂಗಳ್: **ಶಾಂತಿಪು,** ೫. ೩೮)

**ಪಣ್ಣಿಗೆವಿಡಿ** – [ಪಣ್ಣಿಗೆ+ಪಿಡಿ] ಅಲಂಕೃತವಾದ ಹೆಣ್ಣಾನೆ (ಇಟಿದಳ್ ಕುಚಭರದಿಂದಂ ನಡು ಬಳ್ಕೆ ಪೊನ್ನ ಪಣ್ಣಿವಿಡಿಯಿಂ: **ಜಗನ್ನಾವಿ,** ೧೪. ೫೫)

**ಪಣ್ಣು** – ಸಜ್ಜುಮಾಡು (ಆಗಳ್ ಆಱುಂ ಋತುಗಳ ಪೂಗಳಂ ಒಂದುಮಾಡಿ ಪೂವಿನಂಬುಗಳಂ ಪಣ್ಣಲೆಂದು ಕಾಮದೇವಂ ಮಾಡಿದ ಓಜನ ಸಾಲೆಯಿರ್ಪಂತಿರ್ಪ ಪೂವಿನ ಸಂತೆಯೊಳ್: **ಪಂಪಭಾ,** ೪. ೮೦ ವ); ಸಜ್ಜಾಗು (ಬೆಳಗಪ್ಪ ಜಾವದೊಳ್ ಬೀಡುವೀಡುಗಳ್ಗೆಲ್ಲಂ ತೊಟಲ್ದೇಕಿರ್ಪಿರಿ ಏಟೆಂ ಪಣ್ಣಿಂ ಎನೆ: **ಪಂಪಭಾ,** ೧೦. ೪೮ ವ); ಮಾಡು, ರಚಿಸು (ಗುರು ಪಣ್ಣಿದ ಚಕ್ರವ್ಯೂಹರಚನೆ ಪೆಱರ್ಗರಿದು ಪುಗಲ್ ಇದಂ ಪೊಕ್ಕು ರಣಾಜಿರದೊಳ್ ಅರಿನೃಪರಂ ಇಕ್ಕಿದ ನರಸುತ ನಿನ್ನೊರೆಗೆ ದೊರೆಗೆ ಗಂಡರುಮೊಳರೇ: **ಗದಾಯು,** ೪. ೫೫)

**ಪಣ್ಣುಗೆ** – ಅಲಂಕಾರ (ಗಾಂಧರ್ವದತ್ತೆಯಂ ಪೊನ್ನ ಪಣ್ಣುಗೆಯ ಪಿಡಿಯನೇಱೆಸಿ ಚಾರುದತ್ತಂ ಮುದಗೊಂಡು: **ಹರಿವಂಶ,** ೫. ೨ ವ)

**ಪಣ್ಣೆಯ** – ಹವ್ಯಾಸ (ನಿಚ್ಚಂ ಪಣ್ಣೆಯದಾಗೆ ಜೂಜು ತನಗೆ: **ಉದ್ಭಟಕಾ,** ೧೨. ೯೨)

**ಪಣ್ಯಕರ್ಮ** – ವ್ಯಾಪಾರ (ಅಖಿಳ ಕ್ಷತ್ರಿಯಸಮೂಹಕ್ಕೆ ಶಸ್ತ್ರಕರ್ಮಮುಮಂ ವಣಿಗ್ವಂಶಕ್ಕೆ ಪಾಶುಪಾಲ್ಯ ಕೃಷಿ ಪಣ್ಯಕರ್ಮಂಗಳುಮಂ: **ಆದಿಪು,** ೮. ೬೪ ವ)

**ಪಣ್ಣವತಿ** – ತೊಂಬತ್ತಾರು (ಪುತ್ರಶೋಕಾವೇಗಂ ಕೆಡೆದಿರ್ದುದು ಪಣ್ಣವತಿ ಸಹಸ್ರಾಂಗನಾಳಿ ನೃಪನಡಿಮೊದಲೊಳ್; **ಅಜಿತಪು,** ೧೦. ೩೪)

**ಪಣ್ವಲ** – ಹಣ್ಣುಹಂಪಲ (ಒರೆದ ತಱಗೆಲೆಯೆ ಪರಿಯಣಮಾಗೆ ಪಣ್ವಲಮೆತ್ತಿದ ಬೋನಮಾಗೆ ಸಿರಿಯ ಮಹಿಮೆಯಂ ಮೆಱೆಯಲೇನಾರ್ತುದೊ ಬನದೊಳಿರ್ಪಿರವಾ ಪಾಂಡವರಾ: **ಪಂಪಭಾ,** ೭. ೨೮)

**ಪಣ್ವಳ** – ಹಣ್ಣುಹಂಪಲು (ವಾಯಸಂ ರಾಗರಸಮಯನಾಗಿ ಪಣ್ವಳಂಗಳಂ ಮುಂದಿಟ್ಟು ಪೊಡೆಮಡಲೊಡಂ: **ಪಂಚತಂತ್ರ,** ೪೨೮ ವ)

**ಪಣ್ಯವನಿತೆ** – ಪಣ್ಯವಧು (ಪಣ್ಯವನಿತೆವೋಲ್ ಕೃತಿ ಸೌಂದರ್ಯದ ಚಾತುರ್ಯದ ಕಣಿಯೆನೆ ವಿದಗ್ಧಬುಧಜನದ ಮನಮನಲೆಯಲವೇಡಾ: **ಆದಿಪು,** ೧. ೧೭)

**ಪಣ್ಯವರ್ಮವಿಧಿ** – ಸೂಳೆಯರ ಬೀದಿ (ಚೌವಟ್ಟದೊಳ್ ಬೀದಿವೀದಿಗಳೊಳ್ ಜೂಜಿನ ದಿಂಡೆಯೊಳ್ .. .. ದುರ್ಜನೋಪಗತೋದ್ದೇಶದೊಳಂ ಪಣ್ಯವರ್ಮವೀದಿ ವ್ರಾತದೊಳಂ .. .. ನೀತಿಗೆಟ್ಟಾಡುವರ್: **ಸುಕುಮಾಚ,** ೨. ೭)

**ಪಣ್ಯಾಂಗನಾ** – ಸೂಳೆ (ಪಣ್ಯಾಂಗನಾಸಂತತಿ ಸೊಗಯಿಸುಗುಂ ಮಂಜುಕಂಜಾಕರಂಬೋಲ್: **ಉದ್ಭಟಕಾ,** ೧೦. ೪೨)

**ಪಣ್ಯಾಗಾರ** – ವ್ಯಾಪಾರದ ಸ್ಥಳ, ಅಂಗಡಿ (ವಸ್ತುಗಳ ಬಟೆಯಂ ಪಣ್ಯಾಗಾರ ಸ್ವವಾಹನದೇವರೊಳ್ ಸೊಗಯಿಸೆ: **ಶಾಂತಿಪು,** ೧೧. ೨೦)

**ಪಣ್ಯಾವಾಟಿ** – ಸೂಳೆಗೇರಿ (ವರೇಣ್ಯ ಪಣ್ಯಾವಾಟಿಯಂತೆ ವಿಚಿತ್ರ ಮತ್ತವಾರಣ ವಿರಾಜಿತಮುಂ: **ಕುಸುಮಾಕಾ,** ೧. ೭೪ ವ)

**ಪತಂಗ** – ಸೂರ್ಯ (ಕಡುಸೇದೆಯನಾಂತ ಪತಂಗಾರೂಢ ವಾಜಿಯ ಕಡೆವಾಯ್ಗಳಿಂದ ಉಗುವ: **ಕಾದಂಬ,** ೧. ೧೦೧); ಈಚಲು ಹುಳು (ಶಲಭಂ ಪತಂಗಂ ಎಂದು ಅಱೆಗೆ: **ಅಭಿಧಾವ,** ೧. ೯. ೨೩); ದೀಪದ ಹುಳು (ಕೋಪಶಿಖಿಕಳಾಪಂಗಳೊಳ್ ಪುಡಪುಡನಟ್ಟಿ ಸಾಯಲೆಂದು ಪಾಯ್ವ ಪತಂಗಂಗಳಂತೆ: **ಪಂಪಭಾ,** ೧೧. ೩೯ ವ); ಹಕ್ಕಿ (ಖಗ ಅಂಡಜ ಪತತ್ರಿ ಪತಂಗಂ ವಿಕಿರಂ ಕ್ಷಿ: **ಅಭಿಧಾವ,** ೧. ೯. ೯)

**ಪತಂಗಮಂಡಲ** – ಸೂರ್ಯಮಂಡಲ (ಪತಂಗಮಂಡಲಂ ಅಪರಗಿರಿತಟನೆಯ್ದುವುದುಂ: **ಪಂಪಭಾ,** ೧೨. ೮೮ ವ)

**ಪತಂಗವೃತ್ತಿ** – ದೀಪದ ಹುಳುವಿನಂತೆ ನುಗ್ಗುವುದು (ಮತಿಹೀನರಪ್ಪ ಮನುಜರ್ ಪತಂಗವೃತ್ತಿಯನೆ ಕೊಂಡು ಕೊನೆಯುತ್ತಿರ್ಪರ್: **ಪಂಚತಂತ್ರ,** ೨೯೯)

**ಪತಗ** – ಹಕ್ಕಿ (ಏತತ್ ಪತಗ ಕುಗರಣ ಶ್ರೀಯಂ ಊಟ್ದೆತ್ತುತುಂ ಭೋಂಕನೆ ಪರ್ಬಿತ್ತುರ್ಬಿ ದೇವಾಯತನ ತತಿಯ ಶಂಖಪ್ರಭೂತ ಪ್ರಣಾದಂ: **ಕುಸುಮಾಕಾ,** ೪. ೭೩)

**ಪತತ್ರ** – ರೆಕ್ಕೆ (ಎಟಲ್ವ ಪತತ್ರಂ ಎತ್ತಿ ನಸು ನೀಡಿದ ಗೋಣ್ ತೆಱೆದ ಉದ್ಧ ಚಂಚುಮಂಡಳಂ ಅರೆಮುಚ್ಚಿದ ಅಚ್ಚಿ ಮಿಡುಕಾಡುವ ತಾಳುಗೆ: **ಶಾಂತೀಶ್ವಪು,** ೧೨. ೪೬)

**ಪತತ್ರಿ** – ರೆಕ್ಕೆಯುಳ್ಳುದು, ಹಕ್ಕಿ (ಪನಿಪುಲ್ಲಂಬುಕಣಂಗಳಂ ಕೆದಱುತುಂ ಕೋಕಂಗಳೊಳ್ ರಾಗಮಂ ನನೆವೊಯ್ದು ಉಣ್ಮಿಸುತುಂ ಪತತ್ರಿಗಳೊಳಗಿರ್ಪಾ ತೂಂಕಡಂ ನೂಂಕುತುಂ ತಣ್ಣನೆ ತೀಡಿತ್ತೆನಸುಂ ಪ್ರಭಾತಮಯ ಪ್ರೋದ್ಭೂತ ಶೀತಾನಿಳಂ: **ಶಾಂತೀಶ್ವಪು,** ೧೧. ೯೪); ಬಾಣ (ಎಱಗುಗೆ

ಎಱಗೆ ಪತತ್ರಿಗಳೇ ನಿಮ್ಮಯ ಕಳೇವರಪ್ರತತಿಗಳೊಳ್: **ಜಗನ್ನಾವಿ,** ೮. ೧೦೪)

**ಪತತ್ರಿಗೋತ್ರ** – ಪಕ್ಷಿಗಳ ಗುಂಪು (ಈ ವಾಯಸಸ್ವರಂ ದುಸ್ಸ್ವರಮಾಗಿರ್ದುದಿದುವುಂ ಪತತ್ರಿಗೋತ್ರಮಪ್ಪುದಱಿಂದ ಇದರ್ಕಱಿಪಲೆವೇಟ್ಟುಂ: **ಪಂಚತಂತ್ರ,** ೩೯೯ ವ)

**ಪತದ್ವಜ್ರ** – ಬಡಿಯುವ ಸಿಡಿಲು (ಚೋರಾಂದಕಾರ ಪತದ್ವಜ್ರ ವಿಷಾಭಿಚಾರಿಕಜರಾತಂಕಾದಿ ಭೇದಂಗಳ: **ಆದಿಪು,** ೧೬. ೯)

**ಪತಾಕಾಪಟ** – ಬಾವುಟದ ಬಟ್ಟೆ (ವ್ಯೋಮಂ ಚಿತ್ರಾತಪತ್ರಂಗಿಂ ಅತುಳಪತಾಕಾಪಟಶ್ರೇಣಿಯಿಂ: **ಪುಷ್ಪದಂಪು,** ೧೦. ೮)

**ಪತಾಕಿನಿ** – ಸೈನ್ಯ (ಅಂತು ದ್ರೋಣಂ ಎಱಗೋಣಸಾವಂ ಸಾವುದುಂ ಭೋರ್ಗರೆದಾರ್ದ ಪಾಂಡವ ಪತಾಕಿನಿಯುಮಂ ಒಂದು ತಲೆಯಾಗೋಡುವ ಕೌರವ್ಯಧ್ವಜಿನಿಯುಮಂ ಬೇಱೊಂದು ಮೊನೆಯೊಳ್ ಕಾದುತಿರ್ದ ಅಶ್ವತ್ಥಾಮಂ ಕಂಡು: **ಪಂಪಭಾ,** ೧೨. ೩೦ ವ)

**ಪತಾಕಿನೀಚಕ್ರ** – ಸೇನಾಸಮೂಹ (ಚಕ್ರೇಶ್ವರಂಗೆ ಚಕ್ರರತ್ನಸ್ಖಲನಮಂ ಪತಾಕಿನೀಚಕ್ರಪ್ರಧಾನಪ್ರಭುಗಳಱಿಯ ಬಿನ್ನಪಂಗೈದೊಡೆ: **ಆದಿಪು,** ೧೪. ೬ ವ)

**ಪತಾಕಿನೀಪತಿ** – ಸೇನಾಧಿಪತಿ (ಆಗಳ್ ಪತಾಕಿನೀಪತಿಯ ನಿಯಮದಿಂ ಪೂರ್ವದಿಗ್ಭಾಗಸ್ಥಿತಮಂ ಖಂಡಮನಪ್ರತಿಹತ ಶಾಸನಾಂಕಿತಂ ಮಾಡಿ: **ಆದಿಪು,** ೧೩. ೮೧ ವ)

**ಪತಾಕೆ** – ಬಾವುಟ, ಧ್ವಜ (ಪತಾಕೆಯೊಂದು ವಿಭ್ರಮಮನೆ ಪೋಲೆ ಪುರ್ವಿನ ಪೊಡರ್ಪೊಳಕೊಂಡುದವಳೆ ಗರ್ಭಚಿಹ್ನಂ: **ಪಂಪಭಾ,** ೧. ೧೨೦)

**ಪತಿ** – ಒಡೆಯ (ಪತಿಗಲ್ಲದೆ ಪೆಱರ್ಗೆಡೆಗುಡದ ತೆಱದೆ ನಡೆವಿಡಿದ ಬೆನ್ನ ಸಂಕಡಿ: **ಕುಸುಮಾಕಾ,** ೮. ೫೩); ಗಂಡ ವಲ್ಲಭಂ ಭರ್ತೃ ಪತಿ ಪ್ರಿಯನೆನಿಪುದು: **ಅಭಿಧಾವ,** ೧. ೧೧. ೧೧)

**ಪತಿಂವರೆ** – ಸ್ವಯಂವರದ ಅವಕಾಶವಿರುವ ಕನ್ಯೆ (ಬರವೇಟ್ಟಿಕೆಡಿರದೆ ಪತಿಂವರೆಯಂ ಮುಂದಿಟ್ಟು ಖೇಚರಾಧೀಶ್ವರನಂ ಪರಿಣಯನೋತ್ಸವಮಂ ನಾಡೆ ರಯ್ಯಮಪ್ಪಂತು ಮಾರ್ಟಿಪೆಂ ಆಮುಂ ತಾಮುಂ: **ವರ್ಧಮಾಪು,** ೩. ೬೮)

**ಪತ್ತನ** – ನಗರ (ಪತ್ತನ ನಿಗಮ ನಗರ ಪುಟಭೇದನ ನಗರೀ ಪೂಃ ಸಮಾಹ್ವಯಂ ಪುರಮಕ್ಕುಂ; **ಅಭಿಧಾವ,** ೧. ೧೦. ೫); ಗಾಡಿ ಅಥವಾ ನಾವೆಯಲ್ಲಿ ತಲುಪಬಹುದಾದ ದೊಡ್ಡ ಊರು (ನಗರ ಖೇಟ ಖರ್ವಟ ಮಡಂಬ ಪತ್ತನ ದ್ರೋಣಾಮುಖಂಗಳಂ ಜನಪದಂಗಳಂ ಕಳಿದು ಬರುತ್ತುಂ ಪರಶುರಾಮನ ಬಾಣಘಾತದಿಂ ಭಿನ್ನಮಾದ ಕ್ರೌಂಚಾಚಲದ ಶಿಖರಪ್ರದೇಶಮಂ ನೋಡುತ್ತುಂ: **ಪಂಚತಂತ್ರ,** ೨೨೪ ವ)

**ಪತ್ತಳೆ** – [ಪತ್ರಿಕಾ] ಓಲೆ, ಪತ್ರ, ಕಾಗದ (ಉದ್ಯಾನದೇಶಮನಾಳಲೆಂದು ಕಾಮನ ಕೆಯ್ಯೊಳ್ ತೊಳಗಿದ ಪತ್ತಳೆಯಂ ಕೊಂಡು ಜಾದಂ ತೊಡೆದಂತೆ: **ನೇಮಿನಾಪು,** ೪. ೬೮ ವ)

**ಪತ್ತಱು** – [ಪತ್ತು+ಆಱು] ಹದಿನಾರು (ಸೆಱಿಕೋಲ್ ಸೆಱಿಕೋಲಿಂ ಪತ್ತಱುಗಾವುದ ಬಲದ ಪವಣನನಿತಿನಿತೆಂದಾನಱಿಯೆಂ: **ಪಂಪಭಾ,** ೧೦. ೫೯)

**ಪತ್ತಿ** – ಪದಾತಿ ಸೈನಿಕ (ಪತ್ತಿ ಶಸ್ತ್ರ ದ್ಯುತಿಪರಿಕರ ಸಾಂದ್ರೀಭವಚ್ಚಂಡರೋಚೀಕಿರಣೌಘಂ: **ಆದಿಪು,** ೪. ೨೪); ಪದಾತಿಸೈನ್ಯ (ವಾಜಿಗಳಿಂದಂ ಅಪಹೃತ ವಿಕ್ರಾಂತವಿದ್ವಿಷ್ಟವಿಕ್ರಮಸಂಪತ್ತಿಗಳಪ್ಪ ಪತ್ತಿಗಳಿದಂ: **ಆದಿಪು,** ೧೪. ೪೩ ವ); ಒಂದು ರಥ, ಒಂದು ಆನೆ, ಮೂರು ಕುದುರೆ, ನಾಲ್ಕು ಕಾಲಾಳುಗಳ ಗುಂಪು (ಒಂದು ಸಾಮಜಂ ಒಂದು ತೇರ್ ಮೂಱಶ್ವಂ ಅಯ್ದು ಕಾಲಾಳ್ಗಳ್ ಪತ್ತಿಯಕ್ಕುಂ: **ಅಭಿಧಾವ,** ೧. ೧೪. ೮)

**ಪತ್ತಿಸು** – ಹತ್ತಿಸು, ಕೂಡಿಸು (ಪರಸಮಯಿಗಳೊಳ್ ಪತ್ತಿಸಿದೊಡಂ ಒಳ್ಪು ಜೈನಸಮಿತಿಗೆ ನಿರುತಂ ಪತ್ತುವ ತೆಱದಿಂ: **ಸಮಯಪ,** ೬. ೮೬); ಮನವರಿಕೆ ಮಾಡು (ಪತ್ತಿಸುತಿಪ್ಪರ್ ದಯೆಯಿಂ ಪೊಲೆಯಂಗಮಾದೊಡಂ ಸಲೆ ಜೂನರ್: **ಸಮಯಪ,** ೭. ೩೦)

**ಪತ್ತೀಂದ್ರ** – ಪದಾತಿಯ ದಳಪತಿ (ಗಗನಗಹನದೊಳೆ ಗಮಿಯಿಪ ಖಗಕ್ಕೆ ಪತ್ತೀಂದ್ರ ಧೀವರಂ ಬೀಸಿದ ರೇಣುಗಣ ನವಜಾಲಕೆ .. .. ಒಳಗಾಯ್ತು ಅನಿಮಿಷಪ್ರತಾನಂ: **ರಾಜಶೇವಿ,** ೬. ೪೩)

**ಪತ್ತು** – ಒಡಗೂಡು (ಸುರತಾಮೃತದೊಳ್ ತಣಿದು ಅಟ್ಟಱಿಂ ಜಿಗಿಲ್ತಂತಿರೆ ಪತ್ತಿ ಮೆಯ್ಗಳೆರಡಾದೊಡಮೇನಸುವೊಂದೆ: **ಆದಿಪು,** ೩. ೫); ಸಂಬಂಧ (ಕಣ್ಣೆಮಯಿಕ್ಕುವನಿತು ಪೊಟ್ಟಿಪ್ಪೊಡಂ ಉಸಿರ್ ಪತ್ತಿಲ್ಲದೆ ದುಃಖಂಗಳಂ ಅನುಭವಿಸುವರ್: **ವಡ್ಡಾರಾ,** ಪು ೯೭, ಸಾ ೨); ಸಹವಾಸ ಮಾಡು (ಮಾಹೇಶ್ವರವೃತ್ತಿಯೊಳ್ ಎಸಗುತ್ತುಮಿರ್ದು ಕಳ್ಗುಡಿವವರಂ ಪತ್ತಿದೊಡೆ ಮುಳುಯರ್ ಆರ್ಹತರ್: **ಸಮಯಪ,** ೧೩. ೩೭); ಅಂಟಿಕೊ, ಮೆತ್ತಿಕೊ (ಸುಟ್ಟಿ ತೋಱಿ ಬಸಿಱಂ ಬೆರಲ್ ಅಲ್ಲಿಯೆ ಪತ್ತಿತೆಂಬರ್: **ಸಮಯಪ,** ೧೦. ೧೭೫); ಉರಿಗೊಳ್ಳು (ಪೊಸಪುಲ್ಲೊಳ್ ಕಿಚ್ಚನಿಟು ಊದಿದೊಡೆ ಉರಿದುರಿ ಕೂರ್ಚಾಗ್ರಮಂ ಪತ್ತೆ: **ಲೀಲಾವತಿ,** ೯. ೨೦); ಒಂದು ಸಂಖ್ಯೆ (ಕುದುಕುದಿದತ್ತಣಿಂ ಕುದುರೆ ನೂಱಱಿಕೋಳಾ ಬಲದಾನೆ ಪತ್ತು ತಾಗಿದುವೆನೆ ದೋಷಮಾ ಪಿರಿದು ಸಂಖ್ಯೆಯೊಳೇಕಬಹುತ್ವಸಂಗದಿಂ: **ಕವಿರಾಮಾ,** ೧. ೧೨೦)

**ಪತ್ತುಗೆ** – ಪ್ರಾಪ್ತಿ (ಮಗಳ ಮನೋರಮೆಯ ಮದುವೆಗಂ ರಾಜ್ಯದ ಪತ್ತುಗೆಗಂ ಗುರೂಪರೋಧಕ್ಕಗಿದು: **ಆದಿಪು,** ೬. ೨); ಸಂಬಂಧ (ಎನ್ನ ನಿನ್ನ ಪತ್ತುಗೆಯ ತೊಡರ್ಪದಿಂದಂ ಪಱಿದತ್ತು ಮನಂ: **ಆದಿಪು,** ೧೨. ೩೭); ಸ್ನೇಹ (ಆ ಕಾಂತೆಯೊಳ್ ಆ ಸಕಲಮಹೀಕಾಂತಂ ವಜ್ರಲೇಪದ ಅನುಬಂಧಮಂ ಇತ್ತು ಆಕೃತಿಯಿಂ ಪತ್ತುಗೆವೆತ್ತು ಓಕುಳಿಯಾಡುವಂ ಅನಂಗರಾಗಾಮೃತದೊಳ್: **ಮಲ್ಲಿನಾಪು,** ೩. ೭೨); ಆಶ್ರಯ (ಸೊಗಯಿಪ ಸುರಭೂಜದ ಪತ್ತುಗೆಯಂ ನವಕಲ್ಪಲತಿಕೆ ಪಡೆದಂತಿರೆ ನೆಟ್ಟಗೆ ಖಚರಾಧಿಪನೆರ್ದೆಗೆತ್ತುಗೆವಡೆದಳ್ ವಾಯುವೇಗವನಿತಾರತ್ನಂ: **ಶಾಂತೀಶ್ವಪು,** ೧. ೧೫೬); ರಥದ ಅಚ್ಚು (ಮಿನುಗುವ ಕೊಂಬಿನಚ್ಚು ಕಿಱುಗೊಂಬಿನ ತಳ್ತ ಅರಗೀಲ್ ಕವಲ್ತ ಕೊಂಬಿನ ಮಡವಡ್ಡವಂದ ನಳಿಗೊಂಬಿನ ಪತ್ತುಗೆ ಜೋಲ್ವ ಬಳ್ಳಿಗೊಂಬಿನ ಬಲೆ ತೋರಗೊಂಬಿನ ನೊಗಂ ನಿಡುಗೊಂಬಿನ ಮೂಂಕು ಕಣ್ಗೆ ಚೆಲ್ವೆನೆ ನಡೆತಂದುವಂದು ಅಸುಗೆಯೆಂಬ ನೆಗಟ್ತೆಯ ತೇರ್ಗಳೆತ್ತಲುಂ: **ಕಬ್ಬಿಗಕಾ,** ೧೬೭)

**ಪತ್ತುಗೆಗುಂದು** – ಸಂಬಂಧ ಕಳೆದುಹೋಗು (ಕನಲ್ದು ಸುತ್ತಂ ಒತ್ತರಿಸಿ ಮೊತ್ತಂಗೊಂಡು ಪತ್ತುಗೆಗುಂದದೆ ಒತ್ತಿಮುತ್ತಿದುದು: **ರಾಜಶೇವಿ,** ೧. ೧೦೨ ವ)

**ಪತ್ತುಗೆವಿಡು** – ಸಂಬಂಧ ಕಳೆದುಕೊ (ಸಾದರದಿಂದ ಆ ಪಿಹಿತಾಶ್ರವವ್ರತಿ ಪದಾಂಭೋಜದೊಳ್ ದೀಕ್ಷೆಗೊಂಡಿರುತುಂ ನೆಟ್ಟನೆ ಪತ್ತುಗೆವಿಟ್ಟು ತನುವಂ .. .. ತಾಳ್ದಿ ದೇವತ್ವಮಂ:

**ಶಾಂತೀಶ್ವಪು,** ೨. ೪೪); ಬಿಟ್ಟು ಹೋಗು (ಆರಯ್ಯದೆಯುಂ ಅಱಿಯದೆಯುಂ ಮುನ್ನಮೆ ಪಶುವಿನಂತೆ ದೆಸೆದೆಸೆಗೆ ಬೆರ್ಚುವುದುಂ ಪಿತೃಪರ್ಯಾಗತಮಪ್ಪ ಬನಮಂ ಪತ್ತುವಿಡುವುದುಂ ತಕ್ಕುದಲ್ತು: **ಪಂಚತಂತ್ರ,** ೯೧ ವ); ಬಾಯಿ ತೆರೆ (ಸಂಪುಟಂ ಪತ್ತುಗೆವಿಟ್ಟು ಓರಂದದಿಂ ಸಿಂಪುಗಳುಗುೞ್ಚಿ ಸಿಡಿಲ್ತಂದ ಮುಕ್ತಾಫಲಶ್ರೇಣಿಗಳಿಂದಂ: **ಕಾದಂಬ,** ೧. ೧೧೮)

**ಪತ್ತುವಿಡಿಸು** – [ಪತ್ತು+ಬಿಡಿಸು] ಸಂಬಂಧ ತಪ್ಪಿಸು (ದೆಸೆಗಳ ಸಂದಂ ಪಱಿದು ಆಗಸದಿಂದಂ ಪತ್ತುವಿಡಿಸುವಂತೆವೊಲಿಳೆಯಂ: **ಆದಿಪು,** ೧೨. ೫೪)

**ಪತ್ತುವಿಡು** – ಸಂಬಂಧ ತಪ್ಪು (ಮೌನದೊಳಿಂತು ನೀನಿರೆ ರುವದ್ಭೃಂಗಾಳಿಯಿಂ ಪತ್ತುವಿಟ್ಟುಡುಗಿರ್ದಬ್ಜಮನೆಯ್ದೆ ಪೋಲ್ತುದು: **ಆದಿಪು,** ೩. ೩೧); ಬೇರೆಯಾಗು, ತೊರೆದು ಹೋಗು (ದೀಕ್ಷಾಭಿಮುಖನಾಗಿ ಮನೆಯಂ ಪತ್ತವಿಡುವುದು ಗೃಹತ್ಯಾಗಕ್ರಿಯೆ: **ಚಾವುಂಪು,** ೩೧೪, ಸಾ. ೧೪); ಮುಗಿದುಹೋಗು (ಮಾನಕಷಾಯಮವರ್ಗಿನ್ನುಂ ಪತ್ತುವಿಟ್ಟುದಲ್ತದಱಿಂ ಕೇಲಜ್ಞಾನೋತ್ಪತ್ತಿ ಆಗದಿರ್ದುದು: **ಆದಿಪು,** ೧೪. ೧೪೩ ವ); ದೂರಮಾಡು (ಶ್ರೀಮತ್ಯಾರ್ಯೆಯುಂ ಸಮ್ಯಕ್ತ್ವಮಾಹಾತ್ಮ್ಯದಿಂ ಸ್ತ್ರೀರೂಪಮಂ ಪತ್ತುವಿಟ್ಟು: **ಆದಿಪು,** ೫. ೭೦ ವ)

**ಪತ್ತೆಪಾಯ್** – ಹತ್ತಿರ ಸೇರು, ಸಮೀಪಿಸು (ಲತಾವೇಷ್ಟಿತದೊಳ್ ಪರಿಣತೆಯಪ್ಪುದಱಿಂ ಪತ್ತೆಪಾಯ್ದು ಅಂತೆ ಮುರಿದಿ ಅಡರ್ದು: **ಲೀಲಾವತಿ,** ೧೪. ೧೦೫ ವ)

**ಪತ್ತೆಸಾರ್** – ಪತ್ತೆಪಾಯ್ (ಅಂತು ಭೋಂಕೆನೆ ಕಂಡು ಕವತುಕಾತಿರೇಕವ್ಯಾಕುಳತೆಯಿಂ ಪತ್ತೆಸಾರ್ದು: **ತಆಈಟಂಂಠಿಣ,** ೨. ೩೭ ವ)

**ಪತ್ತೆಂಟು** – ಅನೇಕ (ಆದರದಿಂದೆ ಕೊಂಡನವಱೊಳ್ ಪತ್ತೆಂಟು ರತ್ನಂಗಳಂ: **ಆದಿಪು,** ೧೨. ೧೨೦)

**ಪತ್ರ** – ಎಲೆ (ಲಲಿತ ವಿಚಿತ್ರ ಪತ್ರಫಲಪುಷ್ಪಯುತಾಟವಿ ಸೋರ್ಕಿದಾನೆಯಂ ಬೆಳೆವುದು: **ಪಂಪಭಾ,** ೧. ೫೪); ಕಠಾರಿ (ಪತ್ರಂ ಕ್ಷುರಿಕಾ ಅಸಿಧೇನು ಸಂಜ್ಞಾಂತರಮದು ತಾಂ ಸುರಿಗೆ ಕೊಂತವೆನಿಕುಂ: **ಅಭಿಧಾವ,** ೧. ೧೪. ೧೫); ಹೂವಿನ ಎಸಳು (ಛದನಂ ಪತ್ರಂ ಪರ್ಣಂ ಛದಂ ಪಳಾಶಂ ದಳಂ ಸಮವೇಕಾರ್ಥಂ: **ಅಭಿಧಾವ,** ೧. ೭. ೫)

**ಪತ್ರಕಂ** – ಚಿತ್ರಗಳಿಗೆ ಬಣ್ಣ ಹಾಕುವ ಒಂದು ಬಗೆ (ಅನಿಲಕಂ ಪತ್ರಕಂ ಬಿಂದುಕಂ ಧೂಮ್ರಾವರ್ತನಂ ಉದ್ವರ್ತನಂ ಚಿತ್ರಪ್ರವರ್ತನಂ ಎಂಬಾಱುಂ ಪ್ರಕಾರಮುಮಂ: **ಮಲ್ಲಿನಾಪು,** ೫. ೩೬)

**ಪತ್ರಚ್ಛೇದ್ಯ** – ಎಲೆಗಳಲ್ಲಿ ಚಿತ್ರ ಬಿಡಿಸುವುದು (ಹಸ್ತಕೌಶಲಕಳಿತಮಪ್ಪ ಚಿತ್ರಕಳಾಪ ಪತ್ರಚ್ಛೇದ್ಯಾದಿ ಸಮನ್ವಿತಮಪ್ಪ ಶಿಲ್ಪಮುಮಂ: **ಆದಿಪು,** ೮. ೬೪ ವ)

**ಪತ್ರಪುಟಿಕಾ[ಕೆ]** – ಎಲೆಯಿಂದ ಮಾಡಿದ ದೊನ್ನೆ (ವಿವಿಧ ಪತ್ರಪುಟಿಕಾನಿಹಿತಂಗಳಂ ತಂದು ಮುಂದಿಟೆಪಿ: **ಚಂದ್ರಪ್ರಪು,** ೨. ೭೫)

**ಪತ್ರಭಂಗ** – ಕೆನ್ನೆ ಮೊದಲಾದವುಗಳ ಮೇಲೆ ಬರೆಯುವ ಚಿತ್ರ, ಮಕರಿಕೆ (ಶರದದ ಬಿಸಿಲಳುರೆ ಪೊಣ್ಮಿದ ಘರ್ಮಬಿಂದುಗಳಿಂ ನಾಂದು ಪುಚ್ಚಟಿದರೆವೊರೆಕನಾದ ಕುಂಕುಮಪತ್ರಭಂಗದ ಕೊರಗಿದ ನಗೆಮೊಗಂಗಳುಮಂ: **ಆದಿಪು,** ೧೧. ೭೦ ವ)

**ಪತ್ರಲೇಖಾವಳಿ** – ಪತ್ರಭಂಗ (ಸ್ವೇದಜಳಂ ಕಿಡಿಸಿದುದು ಕದಪಿನೊಳ್ ಪೊಟ್ಟಿಡೆ ಬರೆದರಸಿಯರ ಪತ್ರಲೇಖಾವಳಿಯಂ: **ಆದಿಪು,** ೧೧. ೫೪)

**ಪತ್ರಾಲಂಬನ** – ವಾದಕ್ಕೆ ನೀಡುವ ಆಹ್ವಾನ (ವಾದಿ ಸಕಲಕಲಾವೇದಿ ಸಂವಾದಾರ್ಥಿಯಾಗಿ ಬಂದು .. .. ಅರಮನೆಯ ಬಾಗಿಲೊಳ್ ನಿಂದು ಪತ್ರಾಲಂಬನಂ ಮಾಡಿರ್ಪುದುಂ: **ಸುಕುಮಾಚ,** ೨. ೧೪ ವ)

**ಪತ್ರಾಳಿ** – ಭರಣಿಗಳ ಸಮೂಹ (ದಂತಿಸಮೂಹಂ ವಾಜಿವೃಂದಂ ಮೃಗಮದ ಘನಕಾಶ್ಮೀರ ಪತ್ರಾಳಿ: **ರಾಜಶೇವಿ,** ೯. ೪೦)

**ಪತ್ರಿಕುಲಚರಿತ್ರ**– ಎಲೆಗಳಿಂದ [ಬಾಣಗಳಿಂದ] ತುಂಬಿರುವುದು (ಪರಿಕಲಿತಶಿಳೀಮುಖವಾನರಚಿಹ್ನಂ ಪತ್ರಿಕುಲಚರಿತ್ರಂ ರಿಪುಭೀಕರಂ ಎನಿಪ ಅಂತಕಕೃತ ನವತರುವಿರ್ಪಂತೆ: **ಗದಾಯು,** ೪. ೩೪)

**ಪತ್ರಿಲ** – ಗಿಡಮರ (ಉದ್ಯಾನಕೇಳೀಚಳತ್ ಪತ್ರಿಲಶಾಖಾಕಾರ ಜೈತ್ರದ್ವಿರದಕದಳಿಕಾಡಂಬರಂ: **ಆದಿಪು,** ನರಸಿಂ. ೧೩. ೮)

**ಪತ್ಸನ್ನಿಧಿ** – ಪಾದಸನ್ನಿಧಿ (ಸುವ್ರತಾರ್ಯಿಕೆಯರ ಪತ್ಸನ್ನಿಧಿಯೊಳ್ ತಳೆದಳ್ ತಪದುನ್ನತಿಯಂ ಸುಮತಿಕನ್ಯೆ ಬೇಗದೊಳಾಗಳ್: **ಶಾಂತೀಶ್ವಪು,** ೯. ೨೪)

**ಪಥಶ್ರಮ** – ಮಾರ್ಗಾಯಾಸ, ಪಯಣದ ದಣಿವು (ಉನ್ನತ ಕುಕ್ಕುಟೇಶ್ವರ ಜಿನೇಶ್ವರನಂ ಜಿನಭಕ್ತೆ ಪೋಗಿ ಕಾಣ್ಬನ್ನೆಗಂ .. .. ಅತ್ತಿಮಬ್ಬೆಗೆ ಪಥಶ್ರಮಮಾದುದು ಅಕಾಲವೃಷ್ಟಿ: **ಅಜಿತಪು,** ೧. ೬೦)

**ಪಥಪರಿಶ್ರಮ** – ಪಥಶ್ರಮ (ಕಾಳಿಂದೀನದೀಕಚ್ಛದೊಳ್ ಆತ್ಮೇಚ್ಛೆಯಿಂ ನಲಿನಲಿದು ರುಚಿರಮರಕತಶ್ಯಾಮ ದೂರ್ವಾಂಕುರಗ್ರಾಸದೊಳಂ ಅತಿಸ್ವಚ್ಛಸ್ವಾದು ಸಲಿಲಪಾನದೊಳಂ .. .. ಮೆಲ್ಲಾಡಿ ಪಥಪರಿಶ್ರಮಮಂ ಆಱಿಸಿಕೊಂಡು: **ಪಂಚತಂತ್ರ,** ೭೭ ವ)

**ಪಥಶ್ರಾಂತ** – ಪ್ರಯಾಣದ ಬಳಲಿಕೆಯನ್ನು ಹೊಂದು (ಕುದುರೆಯುಂ ಜವಂಗೆಟ್ಟುದು ನಾಂ ಪಥಶ್ರಾಂತನಾದೆಂ: **ಪಂಚತಂತ್ರ,** ೧೯೯ ವ)

**ಪಥಾರ್ತ** – ಪಯಣಿಸಿ ದಣಿದವನು (ಬಳೆದಿಮ್ಮಾವಿನ ಬಾಟೆಯೀಳೆಗಳ ಪಣ್ಣಂ ಪಣ್ಣನೋರೊರ್ಮೆ ಮೆಲ್ದು ಎಳನೀರೀಂಟಿ ಪಥಾರ್ತರಿರ್ಪರ್ ಅಧ್ವಾನಮುದ್ಯಾನದೊಳ್: **ಜಗನ್ನಾವಿ,** ೯. ೮೮)

**ಪಥಿಕ** – ಪ್ರಯಾಣಿಕ (ಪಥಿಕರ್ ಗಿಳಿಸೋದಬಲಾಜನಂಗಳಂ ಕಣ್ಣೆಮೆಯಿಕ್ಕದೀಕ್ಷಿಸೆ: **ಪಂಪರಾ,** ೧. ೧೦೭)

**ಪಥಿಶ್ರಮ** – ಪಥ[ಪರಿ]ಶ್ರಮ (ತನ ಕೀರ್ತಿಪ್ರಮದೆ ಪಥಿಶ್ರಮದಿಂ ವಿಶ್ರಮಿಸಿದಳ್ ಏಲಾಲವಂಗಲವಲೀವನದೊಳ್: **ಶಾಂತಿಪು,** ೮. ೫೫)

**ಪಥ್ಯ** – ತಕ್ಕುದಾದ (ಭೂಮೀಶ್ವರ ನಿನಗೆ ಪಥ್ಯಮಾವುದು ದಂ ಮಾಡು: **ಯಶೋಧಚ,** ೧. ೬೫)

**ಪದ** – ಸ್ಥಾನ (ಸಿರಿ ಪೆಱಸಾರ್ದ ಪಾಂಡವರವೋಲ್ ಪದವಿಲ್ಲದರುಂ: **ತ್ರಿಷಷ್ಟಿಪು,** ೫೪. ೬); ಹದ, ತಕ್ಕುದು (ಎರಡುಂ ಪಡೆಯುಂ ಒಡನೆ ಪಾರ್ದಿರ್ದಪುವು ಎನ್ನುದಯಮಂ ಆನಿಂ ತಡೆದಿರ್ಪುದು ಪದನಲ್ತೆಂದು ದಿನಪನುದಯಂಗೆಯ್ದಂ: **ಪಂಪರಾ,** ೧೩. ೯೪); ಸಂದರ್ಭ (ಆಷಾಢಭೂತಿ ತಂ ಛಿದ್ರಾನ್ವೇಷಿಯಪ್ಪುದಱಿಂ ತನಗಿದುವೆ ಪದನೆಂದು ಬಗೆದು: **ಪಂಚತಂತ್ರ,** ೧೨೬ ವ); ಸ್ಥಿತಿ (ನಿನ್ನನೀ

ಪದಕೆ ತಂದುದು ಮುನ್ನಿನ ಗೆಯ್ದು ದೋಷಂ: **ಆದಿಪು**, ೩. ೪೦)

**ಪದಂಗಾಸು** – ಹದವಾಗಿ ಕಾಯಿಸು (ಉದಯಾದ್ರಿಯೊಳ್ ಪದಂಗಾಸಿನ ಪೊನ್ನ ಪುಂಜಿಯವೊಲಿರ್ದುದು ಕಣ್ಗೆ ಹಿಮಾಂಶುಮಂಡಲಂ: ಪಂಪಭಾ, ೭. ೮೧); ಪುಟವಿಟ್ಟುದು (ಅನುವಿಸಿ ಕರೆದಟ್ಟಿಗೆ ಸೊರ್ಕಿನ ಸಿಂಧುರಮನಿಲಜವದ ವಾಜಿ ಪದಂಗಾಸಿನ ಪೊಂಗಳಲ್ಲದೀಯದ ನಿನಗೆಂತುಂ ಲೋಭಮುಂಟೆ ದಾನವಿನೋದಾ: **ಲೀಲಾವತಿ,** ೪. ೪೦)

**ಪದಂಗುಟ್ಟು** – ಉಚ್ಚರಿಸು (ಸ್ಮರ ಗುರುಶಿಷ್ಯರಂತೆ ಸಮ್ಮೋಹನ ಮಂತ್ರಮಂ ಪದಂಗುಟ್ಟುವ ಶುಕಶಾರಿಕೆಗಳುಂ: **ಪಂಪರಾ,** ೩. ೭೫ ವ)

**ಪದಂಗೊಳಿಸು** – ಹದಗೊಳಿಸು (ಪರಿಪಕ್ವಫಲರಸದಿಂ ನೆಲ್ಲನೆಲ್ಲಮಂ ಪರ್ಬಿ ಪಸರಿಸಿ ಪದಂಗೊಳಿಪ ಸರಸತರದ್ರಾಕ್ಷಾಲತೆಗಳುಂ: **ಶಬರಶಂ,** ೨. ೪೨ ವ)

**ಪದಂದಪ್ಪು** – ಹದ ತಪ್ಪು (ಅಭೀಷ್ಟವೃಷ್ಟಿ ಕರೆಯುತ್ತರ್ಕುಂ ಪದಂದಪ್ಪದೆ: **ಪುಷ್ಪದಂಪು,** ೨. ೩)

**ಪದಂದಿರಿ** – ಹೆಜ್ಜೆ ತಿರುಗಿಸು (ಅರ್ಕನ ವಾಜಿಗಳ್ ಪದಂದಿರಿಯೆ ಕಡಲ್ ಕಲಂಕೆ ಧರೆ ಕಂಪಿಸಲ್ ಅದ್ಭುತಮಾದುದಾಹವಂ: ಶಾಂತೀಶ್ವಪು, ೬. ೬)

**ಪದಂಪು** – ಪ್ರೀತಿ (ಪದಂಪೊದವೆ ತೆಗೆತೆಗೆದು ತಟ್ಟೈಸಿದನಾಗಳ್ ನೃಪತಿ ನಿಬಿಡ ನಿಜಭುಜಯುಗದಿಂ: **ಕಾದಂಬ,** ೮. ೬೨)

**ಪದಂಬಡಿಸು** – ಸಿದ್ಧಗೊಳಿಸು (ಆ ಜಿನಾಂಬಿಕೆಯ ಮುಂದೆ ಸಂಗೀತಕಮಂ ಸಂಗಳಿಸಿ ಪದಂಬಡಿಸುವೆಡೆಯೊಳ್: **ಶಾಂತೀಶ್ವಪು,** ೧೩. ೨೨೩ ವ)

**ಪದಂಬಡೆ** – ಹದವಾಗಿ ಸೇರು (ವಿಪಂಚಿಯ ನುಣ್ಚರನೊಂದೆ ಪಾಡಿ ಕೋಮಲಮೆನೆ ಚಿತ್ರಮಂ ಬರೆದು ತೋಱಿ ಪದಂಬಡೆದೆಯ್ದೆ ಮೇಳದೊಳ್ ನೆಲಸಿದ ಮಾತನಾಡಿ: **ಚಂದ್ರಪ್ರಪು,** ೩. ೯೦)

**ಪದಕ** – ಸರದ ನಡುವಿನ ಬಿಲ್ಲೆ (ಒಂದು ದಿವಸಂ ವ್ಯಂತರದೇವಂ ಕೊಟ್ಟ ಪದಕಮಂ ಸತಿಗಿತ್ತು: **ಧರ್ಮಪ,** ೧೦. ೮೪)

**ಪದಕಟಕ** – ಕಾಲುಕಡಗ (ಅರುಣಾಂಭುಜನಾಳಮಾವರಿಸಿದ ನವಫೇನಪಿಂಡಮಾಲೆಯ ಚೆಲ್ವಂ ಪರಿಭವಿಸಿ ಮೆಱೆದುದೇಕಿಲ್ಲರಸಿ ಪದಾಗ್ರದೊಳೆ ಮೌಕ್ತಿಕದ ಪದಕಟಕಂ: **ರಾಜಶೇವಿ,** ೩. ೫೭)

**ಪದಕೊರಲ್** – ಹದವಾದ ಶಾರೀರ (ಪದಕೊರಲ್ ಇಂಪಂ ಅಪ್ಪುಕೆಯೆ ಕೊಂಕು ನಯಂ ಗಮಕಂಗಳಿಂ ಪೊಡರ್ ಕೊದಳ್ ಎಟೆದಿಕ್ಕಿದಂತೆ ಸುತಿಯೊಳ್ ಸಮವಾಗಿರೆ .. .. ಮೇನಕೆ ಸರಸ್ವತಿ ಬಾಯ್ದೆಱೆದಂತೆ ಪಾಡಿದಳ್: **ಪಂಪಭಾ,** ೭. ೮೮)

**ಪದಕ್ಷೋಭ** – ಕಾಲು ತುಳಿತ (ಆಗಳ್ ಸರಭಸಪ್ರಚಾರಿತ ಪರಿಜನ ಪದಕ್ಷೋಭವಿಚಳಿತ ಮಹೀತಳಮುಂ: **ಆದಿಪು,** ೮. ೩೫ ವ)

**ಪದಗತ** – ಹಾಡುಗಾರಿಕೆಯಲ್ಲಿನ ಉಚ್ಚಾರಸಂಬಂಧೀ ಗುಣಗಳು (ನಾಮಾಖ್ಯಾತ ಉಪಸರ್ಗ ನಿಪಾತ ತದ್ಧಿತ ಸಮಾಸ ಕರತ್ರ್ಯೋಪೇತ ವ್ಯಾಕರಣ ಸಿದ್ಧಾಂತಾದಿ ಪರಿಕಲ್ಪಿತ ವಿಧಾನಕ್ಕಂ ಅವಿರುದ್ಧಮಪ್ಪ ಪದಗತದೊಳಂ: **ಹರಿವಂಶ,** ೨. ೩೧ ವ)

**ಪದಡಕ್ಕೆ** – ಭೇರಿ (ದಟದಟಿಸಿ ಮೊಟಗುವ ಮಂಗಳಘೋಷಮುಂ ಪೊಯ್ವ ಪದಡಕ್ಕೆಗಳುಂ ಸುತ್ತಿಱಿದು ನಿಂದ ಮಹಾಪ್ರಸಿದ್ಧ ಮಕುಟಬದ್ಧರುಂ: **ವರ್ಧಮಾಪು,** ೪. ೪೫ ವ)

**ಪದದಪ್ಪು** – ಹದ ತಪ್ಪು, ದಾರಿ ತಪ್ಪು (ಪದದಪ್ಪದೆಯುಮ ಬಗೆ ಬೆದಱದೆಯುಂ ಕತೆ ಕಿಡದೆಯುಂ .. .. ಆ ಜಿನಚಂದ್ರಂ ಇಂತೆಂದಂ: **ಶಾಂತಿಪು,** ೫. ೧೦)

**ಪದಧೂಳಿ** – ನಡೆಯುವಾಗ ಏಳುವ ಧೂಳು (ಪದಧೂಳೀ ಪೀತಪಾತಹಪ್ರತತಿ ನದಿಗಳಂ ತೀವುತುಂ: **ಆಚವರ್ಧ,** ೮. ೬೭)

**ಪದನ** – ಸರಿಯಾದ ಸ್ಥಿತಿ (ಪದನಂ ಕಾಣಿಸಿಕೊಳ್ವುವಲ್ಲಿ ಮಟೆಗಳ್ ಷಡ್ಭಾಗಮಂ ಕೊಂಡು ತಪ್ಪದೆ ಭೂಪರ್ ಪ್ರತಿಪಾಳಿಪರ್ ಪ್ರಜೆಗಳಂ: **ಆದಿಪು,** ೧. ೫೧); ಸಂದರ್ಭ (ಮದನ ದವಾಗ್ನಿಯಂ ನದಿಪೆ ಮಾಡಿದ ಕಾಮನದಿಯೆನಿಸುವುದು ದಿವಿಜ ದಂಪತಿ ಶತದೊದವಿದ ರತದ ಪದನಲ್ಲಿ: **ಶಾಂತಿಪು,** ೨. ೯೩)

**ಪದನಖ** – ಕಾಲುಗುರು (ಮತ್ತ ಮಾತಂಗ ಪದನಖ ಖರ್ವಿತ ಉರ್ವೀತಳಮುಂ ಪ್ರಚಂಡ ಮಾರ್ತಂಡ ಮರೀಚಿ ತೀವ್ರ ಜ್ವಳನ ಆಸ್ಫಾರ ಕರಾಳ ಕರವಾಳ ಭಾಮಂಡಳ ಪರೀತ ಉದ್ವೃತ ದೋರ್ದಂಡ ಚಂಡಪ್ರಚಂಡ ಸುಭಟ: **ಪಂಪಭಾ,** ೧೩. ೫೧)

**ಪದನಱಿ** – ಹದವನ್ನು ತಿಳಿ (ಪದನಱಿದು ನುಡಿಯಲುಂ ನುಡಿದುದನಱಿದು ಆರಯಲುಂ ಆರ್ಪರ್ ಆ ನಾಡವರ್ಗಳ್: **ಕವಿರಾಮಾ,** ೧. ೩೮); ಕ್ರಮವನ್ನು ಅರಿ (ಧಾನ್ಯಂಗಳಂ ಪದನಱಿದುಡುಗುವ ಕಳಂ ಮಾಡುವ ಒಕ್ಕುವ ಅಡಕುವ: **ಆದಿಪು,** ೬. ೭೭)

**ಪದನಿಸು** – ಆಕರ್ಷಿಸು (ತದಾನನಾಂಬುಜದ ತುಂಬಿಗಳಂ ಸುರಪುಷ್ಪವೃಷ್ಟಿ ತಾಂ ಪದನಿಸಲಾರ್ತುದಿಲ್ಲ, **ಪುಷ್ಪದಂಪು,** ೧೨. ೨೦)

**ಪದನ್ಯಸನ** – ಹೆಜ್ಜೆಯಿಡುವಿಕೆ (ರತಿಯೊಳ್ ಪದನ್ಯಸನಮಂ ಕಲ್ತ ಅಂಚೆ ಶೀತಾಂಶು ತೀವಿದ ನೆಯ್ದಿಲ್ಗೊಳನಲ್ಲದಿಲ್ಲೆನೆ ಬನಂ ಚಿತ್ರೋತ್ಸವಾಲಂಬನಂ: **ಮಲ್ಲಿನಾಪು,** ೨. ೨೮)

**ಪದನ್ಯಾಸ** – ಹೆಜ್ಜೆಯ ಗುರುತು (ಸುಹೃತ್ವದದೊಳಿಂಬುವೆತ್ತುದು ಪದನ್ಯಾಸಂ .. .. ಶ್ರೀಪೂಜ್ಯಪಾದೇಶನಾ: **ಪುಷ್ಪದಂಪು,** ೧. ೨೪); ನಡಿಗೆ (ಸ್ಮರಮಂತ್ರದೇವತೆಯವೋಲ್ ಬಾಹಾಲತಾಂದೋಳನಂ ಬಗೆಯಂ ಬಲ್ಸೆಱೆಗೆಯ್ಯೆ ಬಾಲೆ ಮೆಱೆದಳ್ ಲೀಲಾಪದನ್ಯಾಸಮಂ: **ಪಂಪರಾ,** ೫. ೪೨)

**ಪದಪದ್ಧತಿ** – ಹೆಜ್ಜೆಯ ಗುರುತು (ಪದಪದ್ಧತಿಯಂ ಸ್ಥಳಕಮಳದ ಚಡೆಲ್ವಂ ಪಡೆದ ಕೃಷ್ಣಬಳರ್ ಅಸಿತಾಂಬುದಯುಗಳದಂತೆ .. .. ಅಳಂಕರಿಸಿದರ್ .. .. ಆ ಸ್ಥಳಮಂ: **ಜಗನ್ನಾವಿ,** ೮. ೨೩

**ಪದಪರಿಕ್ರಮ** – ವ್ಯವಸ್ಥಿತ ನಡಿಗೆ (ಕರಣಾಂಗಹಾರ ಮೃದುಪದಪರಿಕ್ರಮಂಗಳ ಬೆಡಂಗುಗಳ ಜತಿಯೊಳ್ ಅಳಂಕರಿಸಿದುದು: **ಆದಿಪು,** ೭. ೧೮)

**ಪದಪಾಂಸು** – ಪದಧೂಳಿ (ನೀಂ ಬರೆ ಪೆಱತೇಂ ಕಂಸಾರೀ ಯುಷ್ಮತ್ ಪದಪಾಂಸುಗಳಿಂದೆ ಆಂ ಪವಿತ್ರಗಾತ್ರನೆಂ ಆದೆಂ: **ಪಂಪಭಾ,** ೯. ೩೨)

**ಪದಪಾತ** – ಒದೆಯುವುದು (ವನಿತಾ ಪದಪಾತದಿಂ ಅನುರಾಗಂ ತನ್ನೊಳೊದವೆ ಸಾಸಿರ್ಮಡಿಯಾದನಿತಂ ಸೂಚಿಸುತಿದುದು ಬನದೊಳ್ ಮಿಸುಪಸುಗೆ: **ಕುಸುಮಾಕಾ,** ೫. ೯೩)

**ಪದಪೀಠ** – ಪಾದಗಳನ್ನಿಟ್ಟುಕೊಳ್ಳುವ ಪೀಠ (ಪದಪೀಠದ ಸನ್ನಿಧಿಯೊಳ್ ಪದೆಪಿಂ ಕುಳ್ಳಿರಿಸಿಕೊಂಡು ಮೇಧಾವಿಳನಂ: **ಕುಸುಮಾಕಾ,** ೧೫. ೧೩೨)

**ಪದಪು** – ಭಕ್ತಿ, ಗೌರವ (ಪದಪು ಜಿನೇಂದ್ರಪಾದಕಮಳಂಗಳೊಳ್ ಆವಗಮಾಗೆ ಕರ್ಮಬಂಧದ ಬಿಗಿಪು ಒಯ್ಯನೆ ಸಡಿಲ್ದಿರೆ: **ಆದಿಪು,** ೬. ೭); ಮೋಹ; ಪ್ರೀತಿ (ಪದಪಿಂ ಧರ್ಮಮನೊಪ್ಪಿ ನಿಂದನೆಗೆ ಅಘಪ್ರಧ್ವಂಸನೋಪಾಯ ಸಂಪದಮಂ ತನ್ಮುನಿ ಪೇೞ್ದಂ: **ಸುಕುಮಾಚ,** ೬. ೫೦); ಸಂಭ್ರಮ (ಪದಪೊದವೆ ಸನತ್ಕುಮಾರಮಾಹೇಶ್ವರರಿಕ್ಕಿದರ್ ಚಾಮರಮಂ: **ಆದಿಪು,** ೭. ೫೦); ಅಂದ (ಸದಮಳ ಮುಕ್ತಾವಳಿಯಿಂ ಪೊದೆಯಿಸಿದನೊ ಚೈತ್ರನೆನೆ ತದೀಯಲತಾವಾಸದ ವಿಚಕಿಲಕುಟ್ಮಲ ವಿಸರದ ಪದಪು ಅದಂ ದೇವಿ ನಾಡೆ ನೋಡುತ್ತಿರ್ದಳ್: **ಶಾಂತೀಶ್ವಪು,** ೫. ೧೨೫)

**ಪದಬಂಧ** – ಕಾಲಿನ ಆಭರಣ, ಪೆಂಡೆಯ (ಶಾರದ ಶಶಾಂಕಶಂಕಾಜನನ ಮನೋಹರ ಹಾರಂ ಅಂಘ್ರೀನಖಕಿರಣಾಚ್ಛಾರಣ ಸಂಕಾಶ ಮೌಕ್ತಿಕ ಪದಬಂಧಂ ಆ ದೇವಂ ಶ್ರೀದೇವನಾಮಮಂ ತಾಳ್ದಿ: **ಶಾಂತಿಪು,** ೭. ೧೩ ವ)

**ಪದಯಿಸು** – ಹದಗೊಳಿಸು (ಪದಯಿಸಿ ಪಿಂಡುಗೆಯ್ದು ಸೆಳೆದುಳ್ಳುಡೆಯಂ ತೊಡೆಯಿಂದಿಱುಂಕಿ ಸೋಂಕಿದೊಡೆ: **ಲೀಲಾವತಿ,** ೧೩. ೧೩)

**ಪದವಡಿಸು** – ಹದಕ್ಕೆ ತರು (ಸಾಮದೊಳಂ ಪದವಡದೊಡೆ ಬಟೆಕಿರ್ದಪ್ಪುದಲ್ತೆ ಪದವಡಿಸಲೆನ್ನ ಬಯಕೆಯ ದಂಡಂ: **ಆದಿಪು,** ೧೪. ೪೩); ನೆರವೇರಿಸು (ದಮಿತಾರಿಯ ಭುಜಬಲ ವಿಕ್ರಮದ ಅಳವಿಗೆ ಮಚ್ಚಿ ಮಚ್ಚುಗುಡಿಸುವವೊಲ್ ಅನುಕ್ರಮದಿಂ ನೀರ್ಗುಡಿಸಿ ಯಥಾಕ್ರಮದಿಂ ಪದವಡಿಸಿ ಪಾರಲೌಕಿಕವಿಧಿಯಂ: **ಶಾಂತಿಪು,** ४. ೫೮)

**ಪದವಡು** – ಹದವನ್ನು ಹೊಂದು (ಆತನಂ ಸಾಮದಿಂದಮಳವಡಿಸಿ ನೋಡುವೆಂ ಸಾಮದೊಳಂ ಪದವಡದೊಡೆ: **ಆದಿಪು,** ೧೪. ೪೩)

**ಪದವಡೆ** – ಹಿತಕರವಾಗು (ಮದೀಯಸಿಂಹಾಸನಾಧ್ಯೆಕ ದೇಶಮನಳಂಕರಿಸಿ ಪದವಡೆದು ಸೋಂಕಿ ಕುಳ್ಳಿರ್ದ: **ಆದಿಪು,** ೪. ೯ ವ)

**ಪದವರ** – ವಂದಿ (ಜಯಜೀಯ ಪಾಯವಧಾರ್ ಎಂದು ಅಡಿಗಡಿಗುಗ್ಘಡಿಪ ಪದವರರ ಕಳಕಳದೊಳ್: **ತ್ರಿಷಷ್ಟಿಪು,** ೧೯. ೪೨ ವ)

**ಪದವಟಿ** – ಹದವಾದ ಮಳೆ (ಅಂತು ಕೊಂಡ ಪದವಟಿಗಳೊಳ್ ಕಳಮಷಷ್ಟಿಕಾವ್ರೀಹಿ ಯವ ಯಾವನಾಳ .. .. ಜೀರಕಧಾನ್ಯಕಾದಿ ವಿವಿಧಧಾನ್ಯಭೇದಂಗಳಂ: **ಆದಿಪು,** ೬. ೭೨ ವ)

**ಪದವಿಡಿ** – ಬೆದೆಯ ಹೆಣ್ಣಾನೆ (ಪದವಿಡಿಯನಱಿಸಿ ಪಾಱಿಯ್ದಿದಪುದು ಕರಿ ಪೆಱವನೊಲ್ಲದದು ತಾಂ: **ಹರಿವಂಶ,** ೨. ೪೩)

**ಪದವಿದ್ಯಾ[ದ್ಯೆ]** – ಶಬ್ದಸ್ವರೂಪ, ನಿರುಕ್ತ (ಪದವಿದ್ಯಾಮಾರ್ಗದೊಳ್ ವ್ಯಾಕರಣಪರಿಣತಾಳಾಪದೊಳ ಮಿಕ್ಕ ಷಟ್ತರ್ಕದೊಳಾರ್ಗಂ ದುರ್ಗಮೆಂಬಂತಿರೆ:: **ಸುಕುಮಾಚ,** ೨. ೧೫)

**ಪದವಿನ್ಯಾಸ** – ಹೆಜ್ಜೆಯಿಡುವ ರೀತಿ (ಪದವಿನ್ಯಾದ ತುಱುಗಲ್ ಪೊದಳೆ ಲಯಂಬೆರಸು ರಂಗಮಂ ಬಳಸಿದಂ ಆ ತ್ರಿದಾಧೀನಾಥಂ: **ಆದಿಪು,** ೭. ೧೧೯); ಶಬ್ದಗಳ ಜೋಡಣೆ (ಪದವಿನ್ಯಾಸದ ದೇಸೆ ಮಾರ್ಗದ ವಿಲಾಸಂ ಸೊಂಪುವೆತ್ತ ಅಂಗಹಾರದಲಂಕಾರದ ಬಂಧ ಭಾವದೆಸಕಂ: **ಸೂಕ್ತಿಸುಧಾ,** ೬. ೧೧೦)

**ಪದವಿಲ್** – ಸಿದ್ಧಪಡಿಸಿದ ಬಿಲ್ಲು (ನಿಜೆಗೊಂಡು ತಳಿರ್ ಪದವಿಲ್ಲ ಕೊಪ್ಪಿನೊಳ್ ಪಱಿಯಿಗೆಯಾಯ್ತು ಕಂತುಗೆ ಎನಲ್: **ಮಲ್ಲಿನಾಪು,** ೫. ೧೯)

**ಪದವೆಂಕೆ** – [ಪದ+ಬೆಂಕೆ] ಹದವಾದ ಉರಿ (ಮೆಯ್ಯ ಸಯ್ಯ ಪದವೆಂಕೆಗಳಂ ಬಿಗಿಯಪ್ಪಿದಪ್ಪುಗಳ್ ಕಳೆದುವು ನಾಣುಮಂ: **ಪಂಪಭಾ,** ೫. ೨೭)

**ಪದವೆಱು** – ಹದವನ್ನು ಹೊಂದು (ಕಾಮನ ಸರದಿಂದೆ ಲಜ್ಜೆ ಪರಿಯಲ್ ಪದವೆತ್ತ ಅನುರಾಗವಿಭ್ರಮಂ ಜನಿಯಿಸಲ್: **ಕಾದಂಬ,** ೮. ೩೪); ಅವಕಾಶ ಪಡೆ (ತಾಂ ಮೊಗಂಗುಡೆ ಪದವೆತ್ತು ಚುಂಬಿಸಿ: **ಚಂದ್ರಪ್ರಪು,** ೬. ೮೨)

**ಪದಸಂಚಯ** – ಪದಗಳ ಸಮೂಹ, ಶಬ್ದಪರಿಚಯ (ಕೆಟ್ಟುದು ಈಗಡೀಗಡಿನ ಕವವ್ರಜಕ್ಕೆ ಪದಸಂಚಯಂ: **ಶಾಂತಿಪು,** ೧೨. ೭೯)

**ಪದಸ್ಖಳನ** – ಹೆಜ್ಜೆ ತಪ್ಪುವುದು (ಪದಸ್ಖಲನಮಾದುದು ಅಂಜೆಗೆ ಇದಿರೊಳ್ ಪಿಕಂ ವಕ್ರಮಂ ತೊದಳ್ನುಡಿದುದು: **ಮಲ್ಲಿನಾಪು,** ೧೪. ೨೬)

**ಪದಾಂಬುರುಹ** – ಪಾದಕಮಲ (ಪೋ ಬಿಡು ಕಟಿಸೂತ್ರಮಂ ತೊಡೆಯ ಬಿಣ್ಪು ಪದಾಂಬುರುಹಕ್ಕೆ ತಿಣ್ಣಂ ಎಂತು ಉಡಿಸುವುದಕ್ಕ ನೂಪುರಮಂ ಈ ತೊಡವು ಏವುದೋ ರೂಪ ಸಾಲದೇ: **ಪಂಪಭಾ,** ३. ४६)

**ಪದಾಗಮಜ್ಞ** – ವ್ಯಾಕರಣವನ್ನು ಬಲ್ಲವನು (ದೋಷಮಿವು ಸಮನಿಸುಗುಂ ಪದದೊಳ್ ಪದಾಗಮಜ್ಞರ ಮತದಿಂ: **ಕಾವ್ಯಾವಲೋ,** ४३५)

**ಪದಾತಿ** – ಕಾಲಾಳು ದಳ (ಬಹು ತುರಂಗ ಪದಾತಿಬಲಪರಿವೃತನಾಗಿ .. .. ವಿದ್ಯಾನಿಕೇತನಕ್ಕೆ ವಂದು: **ಕಾದಂಬ,** ३. ೦ ವ)

**ಪದಾಬ್ಜ** – ಅಡಿದಾವರೆ (ಉತ್ತಮಗತಿಯಂ ಕೇಳ್ದು ಸುದತ್ತಾಚಾರ್ಯರ ಪದಾಬ್ಜಮಂ ಪೂಜಿಸಿದಂ: **ಯಶೋಧಚ,** ४. ೭೯)

**ಪದಾರ್ಥ** – ಅಭಿಪ್ರಾಯ. [ಪದ+ಅರ್ಥ] (ಸುಕಥಾಳಾಪಮನೋತು ಪೇೞ್ದುದು ಪದಾರ್ಥೋಕ್ತಿಯಿಂ: **ಸುಕುಮಾಚ,** ೧. ४६); ಲಾಭ, ಪ್ರಯೋಜನ (ದುರ್ವಿಮಂತ್ರಮಂ ಪರೆಪ ಟಮಾಳಮಂ ಪಿರಿದಂ ಓದಿದೊಡೆ ಅಪ್ಪ ಪದಾರ್ಥಮಾವುದೋ: **ಪಂಪಭಾ,** ೧३. ೬೬); ವಸ್ತು (ಇನಿವಿರಿದು ಪರಾಕ್ರಮುಳ್ಳ ನಿನಗೆ ತೀರದ ಪದಾರ್ಥಮಿಲ್ಲ: **ಚಂದ್ರಪ್ರಪು,** ೫. ೮४); [ಜೈನ] ತತ್ವಗಳು, ಇವು ಒಂಬತ್ತು ಬಗೆ: ಜೀವ, ಅಜೀವ, ಆಸ್ರವ, ಬಂಧ, ಸಂವರ, ನಿರ್ಜರ, ಮೋಕ್ಷ, ಪಾಪ, ಪುಣ್ಯ (ಜೀವಾದಿ ಪದಾರ್ಥಂಗಳೊಳಾವುದು ಸಂದಿಗ್ಧಮಾದೊಡಂ ಬಲಗೊಳೆ ಭವ್ಯಾವಳಿಗೆ ವಿದಮಕ್ಕುಂ: **ಅಜಿತಪು,** ೫. ೭೦)

**ಪದಿಂಬರ್** – ಹತ್ತು ಮಂದಿ (ಪೌಲಸ್ತ್ಯನ ಪದಿಂಬರ್ ಸಾಮಂತರೊಳಂ ಪ್ರಭಾಮಂಡಲನ ಸಾಮಂತರ್ .. .. ಪದಿಂಬರುಂ ಓರೋರ್ವರಂ ಗಜಿಸನ್ನೆಗಯ್ದು ಕಾದುವಲ್ಲಿ: **ಪಂಪರಾ,** ೧३. ೯೭ ವ)

**ಪದಿಕ** – ಪದಾತಿ, ಕಾಲಾಳು (ಕರಿ ಹರಿ ವರೂಥ ಪದಿಕ ಉದ್ಧುರ ವೃಷ ಗಂಧರ್ವ: **ಕರ್ಣನೇಮಿ,** ೮. ೧೧೦)

**ಪದಿನೆಂಟುದೋಷಂಗಳ್** – [ಜೈನ] ಜೀವಿಗೆ ಅಂಟುವ ಹದಿನೆಂಟು ದೋಷಗಳು: ಕ್ಷುಧೆ, ತೃಷೆ, ಭಯ, ದ್ವೇಷ, ರಾಗ, ಮೋಹ, ಚಿಂತೆ, ಜರೆ, ರೋಗ, ಮೃತ್ಯು, ಖೇದ, ಸ್ವೇದ, ಮದ, ಅರತಿ, ವಿಸ್ಮಯ, ಜನ್ಮ, ನಿದ್ರೆ, ವಿಷಾದ; ಇವು ಅರ್ಹಂತನಿಗೆ ಇರುವುದಿಲ್ಲ (ಪಸಿವು ನೀರಟ್ಕೆ ಮೊದಲಾಗೊಡೆಯ ಪದಿನೆಂಟು ದೋಷಂಗಳನಿಲ್ಲದೊಂ ಪರಮಾತ್ಮಂ: **ವಡ್ಡಾರಾ,** ಪು ೯೬, ಸಾ ೧೭)

**ಪದಿರ್** – ದ್ವಂದ್ವಾರ್ಥದ ಮಾತು, ಚಮತ್ಕಾರೋಕ್ತಿ (ಇರ್ವರ್ ಪದಿರಿನಿಂ ನುಡಿವ ಸೂಟ್ನಾತುಗಳಂ ಕಾಪಿನವರುಂ ಪೊಱಲ ಜನಮುಂ ಕೇಳ್ದು: **ವಡ್ಡಾರಾ,** ಪು ೧೨೫ ಸಾ ೧೦)

**ಪದಿರಪಱೆ** – ಸಂಕೇತಸೂಚಕ ಹರೆ, ವಾದ್ಯ (ಮಹಾಸಾಮಂತರ ಪದಿರಪಱೆಗಳಿಂದಂ ಅಗುರ್ವಾಗೆ ನಡೆದ ಬೀಡಿಂಗೆ ಬೀಡುವಿಡಲ್ ನೆಲನುಂ ಆನೆಗಂಬಕ್ಕೆ ಪೆರ್ಮರಂಗಳುಮಂ ಆ ಪಡೆಗೆ ನೆಱೆಯವೆನಿಸಿ: **ಪಂಪಭಾ,** ೯. ೧೦೪ ವ)

**ಪದಿರಿಕ್ಕು** – ಶಬ್ದಮಾಡು, ಸಂಕೇತಧ್ವನಿಮಾಡು (ಬಟಿಕ್ಕೆ ಪುಳಿಂದಂ ಮರಮನಿೞಿವವಸರಮನಾನಱಿದು ಪದಿರಿಕ್ಕಲೊಡಂ ಪವನಜವದಿಂ ಗಗನಕ್ಕೆ ನೆಗೆದು ಪೋಗಿಮೆನೆ: **ಪಂಚತಂತ್ರ,** ೪೧೭ ವ)

**ಪದಿರ್ಮಡಿ** – ಹತ್ತು ಪಟ್ಟು (ಇಲ್ಲಿಯ ಬಾೞಿಂ ಪದಿರ್ಮಡಿ ಬಾೞಂ ಮಾಡುವೆಂ ಎಂದು ಬೋಧಿಸಿ ಒಡಗೊಂಡು ಪೋಗಿ: **ವಡ್ಡಾರಾ,** ಪು ೧೮೭, ಸಾ ೩)

**ಪದುಳ** – ಕ್ಷೇಮ, ನೆಮ್ಮದಿ (ಪದುಳಂ ನಿಂದೆಡೆಗಯ್ಯೊಳೊತ್ತಿ ರಘುಜಂ ಕೊಪ್ಪಂ ಪದಾಂಗುಷ್ಠಮೂಳದೊಳಿಟ್ಟು ಏಱಿಸೆ: **ಪಂಪರಾ,** ೫. ೮೭)

**ಪದುಳಂ** – ಕ್ಷೇಮದಿಂದ, ನೆಮ್ಮದಿಯಿಂದ (ಪೆಱವೇಟು ದಿವಸದೊಳ್ ಪದುಳಂ ನಡೆದುಂ: **ಆದಿಪು,** ೫. ೪೧ ವ)

**ಪದುಳಂಗೆಯ್** – ನೆಮ್ಮದಿಯುಂಟುಮಾಡು (ಮಿಡಿದು ಪಾಯ್ವ ಮೆಲ್ಲೆರ್ದೆಯಂ ಕಂಡು ಅೞಲನಳವಡಿಸಿ ಹೃದಯಮಂ ಪದುಳಂಗೆಯ್ದು .. .. ಪಾಸಿನೊಳ್ ಪಟ್ಟಿರಿಸಿ: **ಲೀಲಾವತಿ,** ೧೦. ೭೪ ವ)

**ಪದುಳಿಕೆ** – ಕ್ಷೇಮ, ಸ್ಥಿರತೆ (ಪದುಳಿಕೆಗುಂದದಿರ್ದ ಪಳಿತಂಕದ ಚೆಲ್ವು ಸಡಿಲ್ದುದಿಲ್ಲ ಕರ್ಮದ ಬಿಗಿಪು ಒಯ್ಯನೊಯ್ಯನೆ ಸಡಿಲ್ದುದು: **ಸುಕುಮಾಚ,** ೯. ೧೭)

**ಪದುಳಿದನ್** – ಹಿತನಾದವನು (ಪದುಳಿದನಲ್ಲದನಂ ಕಲಿಸಿದೊಡಂ ತಿಳಿಪಿದೊಡಮೇಂ ನಿಲಲ್ಕಱಿಗುಮೆ ಚಿತ್ತದೊಳ್ ಆಪ್ತನ ವಚನಂ: **ಸಮಯಪ,** ೧೧. ೧೫೭)

**ಪದುಳಿಸು** – ಸಮಾಧಾನ ಹೊಂದು (ಪ್ರಾಣಹಿಂಸೆಯಂ ಮಾಡಲ್ವೇಡ ದಯಾಮೂಲಂ ಧರ್ಮಂ ಪದುಳಿಸಿ ಕೇಳ್ ಮಗನೆ: **ಯಶೋಧಚ,** ೪. ೩೫)

**ಪದೆ** – ಆಸೆಪಡು (ಪದೆದುತ್ತಂಸವತಂಸಶೋಭೆಗೆ .. .. ಪುಷ್ಪಸ್ತಬಕಂಗಳಂ ಪಱಿದೆವು: **ಆದಿಪು,** ೧೧. ೧೩೪); ಪ್ರೀತಿಸು (ಬೇಟವೆಂಬೆಳಲತೆ ಕೂಟದೊಳ್ ಪದೆದು ಪಣ್ತೆರ್ದೆಗಿಂಪಿನಲಂಪನೀಯದೇ: **ಆದಿಪು,** ೧೨. ೨೦); ಸಂತೋಷಪಡು (ಪದೆವ ಮನಂಬೆರಸೆಱಗಿದ ಪದದೊಳದೇಂ ಚೆಲ್ವುವಡೆದುವೋ .. .. ಕುಸುಮಂಗಳ್: **ಆದಿಪು,** ೭. ೪)

**ಪದೆಪು** – ಪ್ರೀತಿ (ಪದ್ಮವಿಷ್ಟರಮಂ ಕುಂದೇಂದು ಧವಳಾತಪತ್ರಮನಂದು ಕೃತೇಚ್ಛಂಗೆ ಪಡೆದು ಪದೆಪಂ ಮೆಱೆದಳ್: **ಆದಿಪು,** ೯. ೮೫); ಸಂತೋಷ, ಉತ್ಸಾಹ (ಪದೆಪಿಂ ತನ್ನಯ ಸಾರ್ಗೆ ವಂದ ಸುತೆಯೊಂದಾಶ್ಚರ್ಯ ಸೌಂದರ್ಯಸಂಪದಮಂ ಶ್ರೀಜಿನಪಾದಭಕ್ತಿಯ ಒದವಂ ಕಂಡು: **ಶಾಂತೀಶ್ವಪು,** ೨. ೨೦)

**ಪದ್ಧತಿ** – ಹೆಜ್ಜೆಯ ಗುರುತು (ನಿನ್ನ ಪೆಡೆದುಱುಗಲೊಳ್ ಎನ್ನ ಪದಪದ್ಧತಿಗಳಿರ್ಪುವು: **ಜಗನ್ನಾವಿ,** ೩. ೧೧೪ ವ); ಸಂಪ್ರದಾಯ (ಏನೆಂಬ ಸರ್ವನಾಮಂ .. .. ಬಹುವಚನಾರ್ಥಮನಾನಲ್ ಸಾಲ್ದತ್ತು ಮತ್ತೆ ಕೃತಿಪದ್ಧತಿಯೊಳ್: **ಶಬ್ದಮದ,** ೮೯); ಮಾರ್ಗ (ಅಯನಂ ಮಾರ್ಗಂ ಸೃತಿ ಸರಣಿ ಅಧ್ವಂ ಏಕಪದಿ ಪದವಿ ಪದ್ಧತಿ ಪಂಥಂ: **ಅಭಿಧಾವ,** ೧, ೧೦. ೨)

**ಪದ್ಮಕೋಶ** – ಕಮಲದ ಮೊಗ್ಗೆ (ಪದ್ಮಕೋಶಸ್ತನೆ ಚಪಲಚಕೋರಾಕ್ಷಿ ನಿಂದಿರ್ದೊಡೆ: **ರಾಜಶೇವಿ,** ೪. ೧೩)

**ಪದ್ಮಗರ್ಭ** – ಬ್ರಹ್ಮ (ಕಡೆದನೊ ಚಂದ್ರಕಾಂತಮಣಿಯಿಂ ಮದನಂ ಬಿಸಕಾಂಡಗರ್ಭದಿಂ ಪಡೆದನೊ ಪದ್ಮಗರ್ಭನೆನೆ .. .. ಷಡಂಗವೆತ್ತುದು ನರೇಂದ್ರವಧೂ ಧವಳಪ್ರಸಾಧನಂ: **ಮಲ್ಲಿನಾಪು,** ೪. ೪೦)

**ಪದ್ಮಜ** – ಬ್ರಹ್ಮ (ರೂಪಮದಮಂ ಪೋಪಿಂಗಿಸಲ್ ಪದ್ಮಜಂ ಪ್ರತಿರೂಪಂ ಪಡೆದಿಟ್ಟನಾಕೆಗೆ: **ಮಲ್ಲಿನಾಪು,** ೩. ೪೧)

**ಪದ್ಮಭವಾಂಡ** – ಬ್ರಹ್ಮಾಂಡ (ಒತ್ತಿ ಸುತ್ತಿ ತೊಡುವರ್ ಶೇಷಾಹಿಯಂ ಪಾಯ್ದು ಪೊಯ್ದೊಡೆವರ್ ಪದ್ಮಭವಾಂಡಮಂ ಮೃಡಭಕ್ತರ್ ಬಲ್ಲಿದರ್: **ರಾಜಶೇವಿ,** ೪. ೧೧೮)

**ಪದ್ಮಪತ್ರ** – ತಾವರೆಯ ಎಲೆ (ಸರೋವರಜಲಂಗಳಂ ಪದ್ಮಪತ್ರಪುಟಂಗಳಿಂ ತಂದು ಪದಪದ್ಮಂಗಳಂ ಕರ್ಚಿ ತತ್ಪಾದಪವಿತ್ರೋದಕಂಗಳಂ ಅನಿಬರುಂ ಉತ್ತಮಾಂಗದೊಳ್ ತಳಿದುಕೊಂಡಿರ್ದಾಗಳ್: **ಪಂಪಭಾ,** ೭. ೫೯ ವ)

**ಪದ್ಮಮಿತ್ರ** – ತಾವರೆಯ ಮಿತ್ರ, ಸೂರ್ಯ (ಕೆಂಪೇಱಿತು ಮೂಡಣದೆಸೆ .. .. ಸಕಳಜಗಂ ಪೆಂಪೇಱಿತು ಪದ್ಮಪತ್ರನುದಯಿಸುವಾಗಳ್: **ಗಿರಿಜಾಕ,** ೫. ೪)

**ಪದ್ಮಯೋನಿ** – ಬ್ರಹ್ಮ (ಬರೆವೊಡೆ ಚೀರಘಟ್ಟ ಕರುವಿಟ್ಟಪನೆಂದೊಡೆ ಪದ್ಮಯೋನಿ ಕಂಡರಿಪೊಡೆ ವಿದಿಶ್ವಕರ್ಮನಱಿಗುಂ ನೆಱೆಯಂ: **ಪುಷ್ಪದಂಪು,** ೨. ೯೨)

**ಪದ್ಮರಾಗ** – ಕೆಂಪು ರತ್ನ, ಮಾಣಿಕ್ಯ (ಪೊನ್ನ ಬೆಳ್ಳಿಯ ಪದ್ಮರಾಗದ ಪಚ್ಚೆಯ ಗಿಳಿಯ ಕೋಗಿಲೆಯ ಕೊಂಚೆಯ ಅಂಚೆಯ ಕುಂತಳಿಕೆಯ ಮಾಟ್ಕೆಯ ಸಿಪ್ಪುಗಳೊಳ್ ತೀವಿ: **ಪಂಪಭಾ,** ೪. ೮೭ ವ)

**ಪದ್ಮರಿಪು** – ಚಂದ್ರ (ವಿಶ್ರುತಯಶದಿಂದೆ ಪದ್ಮರಿಪುವಂ ರಿಪುವಂ .. .. ಜಯಿಸಿರ್ದಂ ಉದಾತ್ತವೈಭವಂ: **ರಾಜಶೇವಿ,** ೪. ೧೧೧)

**ಪದ್ಮವನಷಂಡ** – ಸರೋವರ (ಮಹನೀಯಂ ಸುರಸದ್ಮ ಪದ್ಮವನಷಂಡಂ .. .. ಕರಂ ಸೊಗಯಿಸುಗುಂ ಸೌರೂಪ್ಯಮೆಂಬಾಪುರಂ: **ಪಂಚತಂತ್ರ,** ೬೦)

**ಪದ್ಮವಿಷ್ಟರ** – ಕಮಲಾಸನ (ಅಂಬುಜನಿಳಯೆ ಪದ್ಮವಿಷ್ಟರಮಂ ಕುಂದೇಂದುಧವಳಾತಪತ್ರಮನಂದು ಕೃತೇಚ್ಛಂಗೆ ಪಡೆದು ಪದೆಪಂ ಮೆಱೆದಳ್: **ಆದಿಪು,** ೯. ೮೫)

**ಪದ್ಮಾಸನ** – ಕಮಲದ ಆಸನವುಳ್ಳವನು, ಬ್ರಹ್ಮ; ಒಂದು ಯೋಗಾಸನ; ಬ್ರಹ್ಮನ ಆಸನ, ಕಮಲ (ವರ ಪದ್ಮಾಸನದೊಳ್ ಜನನ್ಮಣಿಮಯಂ ಸಿಂಹಾಸನಂ ಬ್ರಾಹ್ಮಿಯೊಳ್ ಪರಮಶ್ರೀ ಗಣನ ಅಕ್ಷಸೂತ್ರಮಣಿಯೊಳ್ ರತ್ನೋಜ್ಜ್ವಲಂ ಭೂಷಣಂ: **ಗದಾಯು,** ೧. ೩)

**ಪದ್ಮಿನೀಷಂಡ** – ಪದ್ಮಷಂಡ (ಮಿಹಿರಪ್ರದ್ಯೋತಿ ಸಂಧ್ಯಾಭವನಸಮಯದೊಳ್ ಪದ್ಮಿನೀಷಂಡದೊಳ್ ಪೊದಳ್ದು .. .. ಮುಗುಳೊಳ್ ಸಿಲ್ಕಿ: **ಸುಕುಮಾಚ**, ೩. ೧೫); ಪದ್ಮಿನೀ ಜಾತಿಯ ಸ್ತ್ರೀಯರ ಸಮೂಹ (ಚಂಡವಿರೋಧಿಸಾದನ ತಮಸ್ತಮಮೋಡೆ ವಿಶಿಷ್ಟ ಪದ್ಮಿಣಿಷಂಡಮರಲ್ದು ರಾಗದಿನೊಱಿಲ್ದಿರ್: **ಪಂಪಭಾ**, ೧. ೩)

**ಪದ್ಯರಚನೆ** – ಪದ್ಯಗಳನ್ನು ಬರೆಯುವುದು (ಪದ್ಯರಚನೆಯೊಳ್ ಕಾಳಿದಾಸನುಂ ಗದ್ಯರಚನೆಯೊಳ್ ಬಾಣನುಂ .. .. ನೆಗೞ್ದರ್: **ಗದಾಯು**, ೧. ೯)

**ಪನ** – ಸಂಕೇತಸ್ಥಳ (ಪನಮೆಂದು ಸಂಕೇತಸ್ಥಂ: **ಶಬ್ದಮದ**,. ಪ್ರಸಾ ೧೪೧)

**ಪನಸಕುಜಂ** – ಹಲಸಿನ ಮರ (ಪಿರಿದುಂ ವಂಧ್ಯಾಂಗನೆಯಂತಿರೆ ತಾನಪ್ರಸವಮಾಗಿಯುಂ ಮೂಲಾಗ್ರಂ ಬರಮೆಯ್ದೆ ಕಾತು ಮಿಗೆ ಬಿತ್ತರಿಸಿರ್ದುದು ಪನಸಕುಜಂ ಅದೇನಚ್ಚರಿಯೋ: **ಶಾಂತೀಶ್ವಪು**, ೧೦. ೯೪)

**ಪನಿ** – ತೊಟ್ಟು, ತೊಟ್ಟಿಕ್ಕು (ಕಿವಿಯೊಳಮರ್ದಿನ ಪನಿ ಪನಿವಿನಂ ಎಸೆದರರೆಬರಳಿಕುಳರುತಿಯಿಂ: **ಆದಿಪು**, ೧೧. ೮೧); ಸತತವಾಗಿ ಸುರಿ (ಧಾತ್ರನೊಸರ್ವ ಅಮರ್ದಿನೊಳ್ ಅಗ್ಗಲಿಸಿದ ಲಾವಣ್ಯರಸಂಗಳೆ ಪನಿತಪುವು ಎನಿಸಿ ವನಿತೆಯ ಉಗುರ್ವೆಳಗೆಸೆಗುಂ: **ಲೀಲಾವತಿ**, ೩. ೩೬)

**ಪನಿಗೊಳ್** – ಕಂಬನಿ ಸುರಿಸು (ಜನನೀಯಗ್ರಜನಲ್ಲಿಗೆಯ್ದಿ ಬಹುಶಾಸ್ತ್ರಾರ್ಥೋಕ್ತಿಯಂ ಕಲ್ತುದಂ ಪನಿಗೊಂಡುಂಡುದನೋದಿ ಬಂದೊಡರಸಂ ಮಂತ್ರಿತ್ವಮಂ ಕೊಟ್ಟುದಂ ನೆನೆವೋ: **ಸುಕುಮಾಚ**, ೫. ೨೫)

**ಪನಿದಂದಲ್** – ತುಂತುರು ಮಳೆ (ತೋರ ಬಾಷ್ಪದ ಪನಿದಂದಲಂ ಸುರಿಯುತುಂ ಕುಸುಮಾವಳಿದೇವಿ ನಾಡೆ ನೋಡಿದಳ್: **ಕುಸುಮಾಕಾ**, ೧೨. ೧೪೪)

**ಪನಿನೀರ್** – ತಂಪಾದ ನೀರು, ಪನ್ನೀರು (ಮಳಯರುಹದ ಕರ್ಪೂರದ ಪಳಿಕಿನ ಪನಿನೀರ .. .. ಶೀತಳತೆಯಿಂ ಅವನಿಪನನಂ ಆಪ್ತರ್ ಉಜ್ಜೀವಿಸಿದರ್: **ಅನಂತಪು**, ೧೧. ೬೮)

**ಪನಿಪುಲ್** – ಇಬ್ಬನಿ ಕೂತ ಹುಲ್ಲು (ನರಭೋಗಮೆಂಬೀ ಪನಿಪುಲ್ಲಂ ನಕ್ಕೆ ತೃಷ್ಣೆ ಪೇಟ್ ಪೋದಪುದೇ: **ಆದಿಪು**, ೯. ೫೭)

**ಪನೆ** – ತಾಳೆ ಮರ (ತಳಮುಂ ತಾಳಮುಂ ಎನೆ ಪನೆ: **ಅಭಿಧಾವ**, ೧. ೮. ೪); ಹೊಸದಾಗಿ ಮೊಳೆತ ಹಲ್ಲು (ಜನಿತರಜಃಕಣಗಳ ಕಳಿತ ನವೀನದಳಪ್ರಕೀರ್ಣ ಕನಕಾಂಬುಜದಂತೆ ಎನಿಸಾನುಂ ಸೊಗಯಿಸಿದುವು ಪನೆಗಳ್ ಪುದಿದಾ ಕುಮಾರಕನ ವಿಮಳಮುಖಂ: **ಶಾಂತೀಶ್ವಪು**, ೧೫. ೬)

**ಪನ್ನ** – ಬಿಂಕ (ತನ್ನ ಪನ್ನಂ ಕಟಿಲ್ದುಂ ಮನದೊಳ್ ತೊಟ್ಟಾಗ್ರಹಮಂ ಮದ್ವಿಭುಗಮಿಭುವರಂ ಶೌರ್ಯ ಸಂಲಗ್ನಮಕ್ಕುಂ: ಚಂದ್ರಪ್ರಪು, ೯. ೧೧೨ ವ); ಪತಿತ (ಪನ್ನಂ ಪತಿತಂ ಪರಿಚ್ಯುತಂ ವಿಗತಾರ್ಥಂ: **ಅಭಿಧಾವ**, ೨. ೧. ೪೮)

**ಪನ್ನಿ** – ಜಂಬ (ಪನ್ನಿಯ ಸೋಂಕುಂ ಬಿಂಕಮುಂ .. .. ನೂಂಕುವ ಬಿಡುವ ಪೊಡರ್ಪಂ ಪೊದಲ್ದೊಪ್ಪಿರಲ್ ನಾಡೆಯುಂ ಕಂದರ್ಪದೇವಂ .. .. ರೌಢನಾದಂ: **ಕುಸುಮಾಕಾ**, ೭. ೭೫)

**ಪನ್ನಗ** – ಹಾವು (ವಿಷ ಪನ್ನಗನಂ ಪನ್ನತನನೆಡೆಯೊಳ್ ಅರಿಗಂ ತನ್ನಯ ಗರುಡಾಸ್ತ್ರದಿಂದೆ ಕುಱಿದಱಿದಱಿದಂ: **ಪಂಪಭಾ**, ೧೨. ೨೦೫); ಕಶ್ಯಪ–ಕದ್ರು ಇವರ ಸಂತತಿ, ನಾಗವಂಶ (ವಿದ್ಯಾಧರಧರರಾಗೆಯುಂ ಪನ್ನಗರ್ ಪನ್ನತಿಕೆಯಿಂ ಬಂದಾಂತೊಡೆ: **ಪಂಪಭಾ**, ೫. ೮೮ ವ)

**ಪನ್ನಗಧ್ವಜ** – ದುರ್ಯೋಧನ (ಸೋಲ್ತ ತನ್ನ ಬಲಮಂ ಅಳುಂಬಮಾದ ವಿಕ್ರಮಾರ್ಜುನನ ಭುಜಬಲಮುಮಂ ಕಂಡು ಕನಕ ತಾಳಧ್ವಜಂಗೆ ಪನ್ನಗಧ್ವಜನಿಂತೆಂದಂ: **ಪಂಪಭಾ**, ೧೧. ೧೩ ವ)

**ಪನ್ನಗಪತಾಕ** – ಸರ್ಪಧ್ವಜ, ದುರ್ಯೋಧನ (ಅಂತು ಮೂರ್ಛಾಪ್ರಸಂಗನಾದ ಪನ್ನಗಪ್ರತಾಪಂಗೆ ಶಿಶಿರೋಪಚಾರ ಕ್ರಿಯೆಗಳಂ ಮಾಟ್ಟಿ: **ಗದಾಯು**, ೩. ೭೭ ವ)

**ಪನ್ನಗಭೂಷ** – ಶಿವ (ಪನ್ನಗಭೂಷಂ ಬೇಡಲ್ ಕನ್ನೆಯಂ ಒಲವಿಂದಮಿತ್ತನಾ ಗಿರಿರಾಜಂ: **ಧರ್ಮಪ**, ೩. ೫೭)

**ಪನ್ನಗರ್** – ನಾಗರು (ವಿದ್ಯಾಧರಧರರಾಗೆಯುಂ ಪನ್ನಗರ್ ಪನ್ನತಿಕೆಯಿಂ ಬಂದಾಂತೊಡೆ: **ಪಂಪಭಾ**, ೫. ೮೮ ವ)

**ಪನ್ನಗವಿರೋಧಿ** – ಸರ್ಪವಿರೋಧಿ, ಗರುಡ (ಇವಂ ಕಂಡೊಡೆ ಪನ್ನಗವಿರೋಧಿಯುಂ ಕಾದು ಕಟಿಪುಗುಂ; **ಜಗನ್ನಾವಿ**, ೩. ೧೧೩ ವ)

**ಪನ್ನಗಶಯನ** – ವಿಷ್ಣು (ಪನ್ನಗಶಯನ ನವತರುಣೋದ್ಯೋಗದಿಂ ನಾಗೇಂದ್ರನಂ ನೋಡಿ: **ಜಗನ್ನಾವಿ**, ೨. ೫೬ ವ)

**ಪನ್ನಗಶರಣ** – ಸಮುದ್ರ (ಅಂಬುರಾಶಿ ಪನ್ನಗಶರನಂ ಅಕೂಪಾರಮ ಉದಧಿ ಪರಾವರಂ: **ಅಭಿಧಾವ**, ೧. ೪. ೨)

**ಪನ್ನತ** – ವೀರ, ಪರಾಕ್ರಮಿ (ವಿಷಪನ್ನಗನಂ ಪನ್ನತನಂ ಎಡೆಯೊಳ್ ಅರಿಗಂ ತನ್ನಯ ಗರುಡಾಸ್ತ್ರದಿಂದೆ ಕುಱಿದಱಿದಱಿದಂ: **ಪಂಪಭಾ**, ೧೨. ೨೦೫)

**ಪನ್ನತಿಕೆ** – ಶೌರ್ಯ (ಈತನಂ ಈಗಳ್ ಬನ್ನಂಬಡಿಸುತೆ ಸೋಲಿಪ ಪನ್ನತಿಕೆಯನಿತ್ತು ಪೊರೆ ಕೃಪಾಳುಗಳರಸಾ: **ಶಬರಶಂ**, ೪. ೧೦೪)

**ಪನ್ನಿರ್ಛಾಸಿರ** – ಹನ್ನೆರಡು ಸಾವಿರ (ಪನ್ನಿರ್ಛಾಸಿರ ವರ್ಷಮಂ ಜೀವಿಸಿ ಬಟಿಯಂ ಧೋಲೋಕ ಗತನಾದುದುಮಂ ಸ್ನೇಹದಿಂ ಪರೀಕ್ಷಿಸಲ್ಬಂದ ದೇವಂ: **ಪಂಪರಾ**, ೧೬. ೬೨ ವ)

**ಪನ್ನೆರಡಂಗ** – [ಜೈನ] ಜೈನಧರ್ಮಗ್ರಂಥಗಳ ಹನ್ನೆರಡು ಭಾಗಗಳು: (ಆಚಾರ .. .. ದೃಷ್ಟಿವಾದವೆಂಬ ಪನ್ನೆರಡಂಗಮುಮಂ: **ಹರಿವಂಶ**, ೧೪. ೫೩ ವ), ನೋಡಿ, **'ದ್ವಾದಶಾಂಗ'**

**ಪನ್ನೆರಡು ತೆಱದ ತಪ** – [ಜೈನ] ಜೈನಮುನಿಗಳ ಹನ್ನೆರಡು ಬಗೆಯ ತಪಸ್ಸುಗಳು (ಅನಶನ ಅವಮೌದಾರ್ಯ .. .. ಎಂಬ ಪನ್ನೆರಡು ತೆಱದ ತಪಮಂ ಕೈಕೊಂಡು: **ಹರಿವಂಶ**, ೧೪. ೫೨ ವ), ನೋಡಿ, **'ದ್ವಾದಶತಪ'**

**ಪನ್ನೊರ್ವರ್** – ಹನ್ನೊಂದು ಮಂದಿ (ವಿರಾಟಂ ಶ್ವೇತನುತ್ತರಂ ಶಂಖನೆಂಬ ಮೂವರ್ ಮಕ್ಕಳುಂ ಶತಾನೀಕ ಶತದ್ಯುಮ್ನ ಶತಚಂದ್ರಂ ಮೊದಲಾಗಿ ಪನ್ನೊರ್ವರ್ ತಮ್ಮಂದಿರುಂ ಬೆರಸು ನೆಲನದಿರೆ ಮುಂಗೋಳೊಳ್ ನಡೆಯೆ: **ಪಂಪಭಾ**, ೯. ೯೫ ವ)

**ಪಪ್ಪವ** – ಸ್ತುತಿ[ಪಾಠಕ] (ಗಡಣದ ಸಂಗಡಂ ಪೊಗಟ್ಟಿ ಪಪ್ಪವರುಂ ಬಗೆ ಮುಟ್ಟು ಮುಟ್ಟುವೊಂದೆಡೆಗೆಡೆ ಮಾಡದೆ ಎಯ್ದಿಸುವ ವಾಹನಮುಂ: **ಶಾಂತಿಪು**, ೭. ೭೪)

**ಪಪ್ಪಕ** – ರಾಜನನ್ನು ಬೆಳಿಗ್ಗೆ ಎಚ್ಚರಿಸುವವನು (ಉಪ್ಪವಡಿಸುವುದುಮಚೆಕೆಯ ಪಪ್ಪಕರೊಡನಾಡಿಗಳ್ ಪ್ರಬೋಧಿಸಿದರ್ ಮೇಲಪ್ಪ ಪದರಚನೆಯಿಂ ದೊರೆಯಪ್ಪ ಮಹಾಮಂಗಳಪ್ರಬೋಧನೆಯಿಮದಂ: **ಶಾಂತಿಪು,** ೫. ೮೩); ಬೇಟೆಯಲ್ಲಿ ಸೋವುವುದು (ಪಪ್ಪಲದಲರ್ಗಳ್ ಸಂಬಳಮಪ್ಪಿನಂ ಉಪವನಕೆ ನಿಚ್ಚವಯಣಂ ಬರುತುಂ ಪಪ್ಪಕಮಾಗಿರೆ ಪೞಮೆಗಳುಪ್ಪವಯಣಂಗೆಯ್ದುವಂದು ಪೊಸಮಲ್ಲಿಗೆಯೊಳ್: **ಅಜಿತಪು,** ೬. ೨೧)

**ಪಪ್ಪರಿಕೆ** – ಗಡಸುತನ (ಪಪ್ರಿಕೆಯೆಂದು ಕರ್ಕಶತೆ: **ಶಬ್ದಮದ,** ಪ್ರಸಾ ೧೪೨)

**ಪಪ್ಪಲ** – ಒಂದು ಬಗೆಯ ಗಿಡ (ಪಪ್ಪಲದಲರ್ಗಳ್ ಸಂಬಳಮಪ್ಪಿನಂ ಉಪವನಕೆ ನಿಚ್ಚವಯಣಂ ಬರುತುಂ ಪಪ್ಪಕಮಾಗಿರೆ ಪೞಮೆಗಳುಪ್ಪವಯಣಂಗೆಯ್ದುವಂದು ಪೊಸಮಲ್ಲಿಗೆಯೊಳ್: **ಅಜಿತಪು,** ೬. ೨೧)

**ಪಪ್ಪುಕ** – ಕೋಮಲ (ಪಪ್ಪುಕಮಪ್ಪ ಅಂಗನೆಯ ತೊಳಪ್ಪ ಅಡಿದಳಿರ್ಗೆ ಎಯ್ದೆ ಸೋಲ್ತು ತಳಿರ್ಗಳ್ ಕೆಂಪಂ ಕಪ್ಪಂಗುಡುವವೊಲ್: **ಲೀಲಾವತಿ,** ೧೨. ೭೫)

**ಪಯ** – ಕಾಲು, ಪಾದ (ಪಯಕ್ಕೆ ಪಯಂ ಕರಣಕ್ಕೆ ಕರಣಂ ರಸಕ್ಕೆ ರಸಂ: **ಪಾರ್ಶ್ವನಾಪು,** ೧೪. ೧೪೪); ನೀರು, ಹಾಲು (ಸಲಿಲಕ್ಕಂ ಪಾಲ್ಗವೆತ್ತಂ ಬವರಿಪುವು ಪಯಃ ಸಂಜ್ಞೆ: **ಅಭಿಧಾವ,** ೩. ೧. ೫೮)

**ಪಯಃಕಣ** – ನೀರಿನ ಹನಿ (ಸಮಸಾರಸಮುದ್ರಮಂ ತೃಣಪಯಃಕಣದಿಂಇಚೆಕೆಯ್ದು: **ಪಂಪರಾ,** ೧. ೧೪)

**ಪಯಃಕಣಿಕೆ** – ನೀರ ಹನಿ (ಬಳಸಿದ ಬಂಬಲ್ಗುರುಳುಳೊಳ್ ಪೊಳೆವ ಪಯಃಕಣಿಕೆ ಸಿಂಧುವಾರಲತಾಂತಾವಳಿಯೆನಿಸಿ ತುಱುಗೆ: **ಶಾಂತಿಪು,** ೧೦. ೪೮)

**ಪಯಃಕಲ್ಲೋಳ** – ನೀರಿನ ಅಲೆಗಳು (ಏಂ ಉಣ್ಮಿ ಪೊಣ್ಮಿದುದೋ ಮಂದರಕಂದರೋತ್ಥಿತ ಪಯಃಕಲ್ಲೋಳ ಕೋಳಾಹಳಂ: **ಆದಿಪು,** ೭. ೯೭)

**ಪಯಃಕೇಳಿ** – ನಿರಿನಲ್ಲಿನ ಆಟ (ಕುಂತಳಕೌಟಿಲ್ಯವೃತ್ತಿ ಪಿಂಗಿದುದಬಲಾಸಂತತಿಗೆ ಪಯಃಕೇಳಿಯೊಳ್: **ಚಂದ್ರಪ್ರಪು,** ೭. ೧೪೫)

**ಪಯಃಪತಿ** – ನೀರಿನ ಒಡೆಯ, ವರುಣ (ಅತಿಶಯ ಸಾಮವೇದಮದು ಗೋಪುರಮಾಗಿ ವಿರಾಜಿಕುಂ ಪಯಃಪತಿದಿಶೆಯೊಳ್: **ಶಬಶಂವಿ,** ೧. ೬೭)

**ಪಯಃಪಯೋಧಿ** – ಹಾಲಿನ ಸಮುದ್ರ (ಪಯಃಪಯೋಧಿ ಫೇನಸಂಕಾಶದುಕೂಲಪ್ರಚ್ಛದಾಚ್ಛಾದಿತ ವಿಚಿತ್ರ ನೇತ್ರೋಭಯೋಪಧಾನ ಶಯ್ಯಾತಲದೊಳ್: **ಆದಿಪು,** ೫. ೨೨ ವ)

**ಪಯಃಪೂರ** – ನೀರಿ[ಹಾಲಿ]ನಿಂದ ತುಂಬಿರುವುದು; ಹಾಲ ಹೊಳೆ (ನರಲೋಕಂಬರಂ ಉಣ್ಮಿ ಪೊಣ್ಮಿದ ಪಯಃಪೂರಂಗಳಿಂದಂ: **ಆದಿಪು,** ೭. ೧೦೧)

**ಪಯಃಪ್ರಸಾದ** – ಪಾದೋದಕ (ದಿವ್ಯಶಾಂಭವಪರಮಂತ್ರಮಂ ಜಪಿಸಿ ತಾಳ್ದು ತದಂಘ್ರಿಪಯಃಪ್ರಸಾದಮಂ ಸವಿನಯಂ ಆಂತು: **ರಾಜಶೇವಿ,** ೧೨. ೪೧)

**ಪಯಃಪ್ಲವ** – [ಹಾಲಿನ] ಪ್ರವಾಹ (ಪಾಲ್ಗಡಲೊಂದುಂಟಾಗದೆ ಮೇರುವ ತುದಿಯೊಳಮೀಗಳೆನಲ್ ನೆಱೆದುದಾ ಪಯಃಪ್ಲವದೆಸಕಂ: **ಆದಿಪು,** ೭. ೮೮)

**ಪಯಃಸರಣಿ** – ಸೇತುವೆ (ಸ್ಥಿರಬಂಧಂ ಸೇತು ಪಯಃಸರಣಿಯೆದಕ್ಕುಂ: **ಅಭಿಧಾವ,** ೧. ೪. ೧೭)

**ಪಯಗರಡಿ** – ಮರಿ ಹಾಕಿದ ಕರಡಿ (ಹರಿನೀಳೋಪಳಮುಂ ಪಯಗರಡಿಯುಮಿರೆ ನೀಳಯುಗಳಮೆಂದೆಳಸೆ: **ಶಾಂತಿಪು,** ೨. ೯೭)

**ಪಯಣ** – [ಪ್ರಯಾಣ] ಯಾತ್ರೆ (ಭೋಮಕೆನೆ ಪಯಣದೊಳೆಮ್ಮಂ ಸೋಂಕಿದ ಶರದೃತುವೆ ಬನದೊಳವತರಿಸಿದುದೋ: **ಆದಿಪು,** ೧೧. ೮೭); ಒಂದು ದಿನ ನಡೆಯುವ ದೂರ (ಕೆಲವಾನುಂ ಪಯಣಂಗಳ್ ಸಲೆ ಸಮನಿಸೆ: **ಕುಸುಮಾಕಾ,** ೧೫. ೮೮)

**ಪಯಣಂಬರ್** – ಪಯಣಿಸಿ ಬಾ (ಒರ್ವಂ ದೂರದಿಂ ಪಯಣಂಬಂದು ನಾಡೆಯುಂ ಬಳಲ್ದು ತಾನುಂ ತನ್ನ ವಲ್ಲಭೆಯುಂ ನಿದ್ರೆಗೆಯ್ಯುತ್ತುಮಿರ್ದುಂ: **ಧರ್ಮಾಮೃ,** ೨. ೩೦ ವ)

**ಪಯಣಂಬೋಗು** – ಪ್ರವಾಸ ಹೋಗು (ತಮ್ಮಯ್ವರುಂ ಪಾಂಚಾಳಿವೆರಸು ಪೋದ ದೆಸೆಯಂ ಆರುಂ ಅಱಿಯದಂತು ದ್ವೈತವನಮಂ ಪೊಱಮಟ್ಟು ಜಗುನೆಯಂ ಪಾಯ್ದು ಮೂಡಮೊಗದ ಪಯಣಂಬೋಗಿ: **ಪಂಪಭಾ,** ೮. ೫೦ ವ)

**ಪಯನ್** – ಹಯನು, ಈದ ಪ್ರಾಣಿ, ಕರಾವು (ಪಸುವೆರ್ಮೆ ಕುಱಿಗಳೆಂಬಿವು ವಸುಧೆಗೆ ಪಯನ್: **ಸಮಯಪ,** ೯. ೧೧೫)

**ಪಯನಾವು** – ಕರೆಯುವ ಹಸು, ಕರಾವು (ಆದೊಡವಂ ಕೊಟ್ಟು ಪಯನಾವಂ ಕೊಳ್ವೆಂ. ಅವರ್ಕೆ ಪುಟ್ಟಿದ ಪೋರಿಗಳಂ ತಿರ್ದಿಯಾರಂಬಂಗೆಯ್ದು: **ಪಂಚತಂತ್ರ,** ೨೫೪ ವ)

**ಪಯನು** – ಪಯನಾವು (ಗೋಮಂಡಳದೊಳ್ ಒಳ್ಳಿದುವಪ್ಪ ಪತ್ತು ಪಯನುಮಂ ಮೂಸಾಸಿರಗಂಡುಗ ಬತ್ತಮುಮಂ ಪ್ರಮಾಣಂ ಮಾಡಿ ಕೊಟ್ಟೊಡೆ: **ವಡ್ಡಾರಾ,** ಪು ೨೨ ಸಾ ೩)

**ಪಯಶ್ಚರ** – ಮೀನು ಮುಂತಾದ ಜಲಚರ (ಕುಪಿತ ಮರುತ್ಸುತರವಕೆ ಅಳ್ಕಿ ಪಯಶ್ಚರನಿಕರಸಂಭ್ರಮೋಲ್ಲಹರಿಕೆ ಭಾವಿಪೊಡೆ ಪಾಱುವಂತಾಯ್ತು ಕಮಲಜಾಂಡಂಬರಂ: **ಗದಾಯು,** ೭. ೨೦)

**ಪಯಷ್ಕಣ** – ಪಯಃಕಣ[ಕಣಿಕೆ] (ಎಱಕೆಗಳೊಳ್ ಪೊದಳ್ದ ಪನಿಪುಲ್ಲ ಪಯಷ್ಕಣಮಂ ಬಿದಿರ್ಚಿ ಕಣ್ಗೆಱೆದು ಇದಿರ್ಗೊಂಬಿನೊಳ್ ತೊಡೆದು .. .. ವಿಹಂಗಮಂಗಳ್ .. .. ಪಾಱಿದುವು ಎಣ್ದೆಸೆಗಂ ಪ್ರಭಾತಕಾಲದೊಳ್: **ಶಾಂತೀಶ್ವಪು,** ೧೧. ೯೭)

**ಪಯಸ್ಸದ್ಮ** – ಸಮುದ್ರ (ಅಮಲ ಪಯಸ್ಸದ್ಮದಿಂ ಶುದ್ಧವೃತ್ತಂ: **ಶಾಂತಿಪು,** ೯. ೨೧೦)

**ಪಯಿಂಛಾಸಿರ್ವರ್** – ಹತ್ತು ಸಾವಿರ [ಮಂದಿ] (ಪಟ್ಟಂಗಟ್ಟಿದ ಇಳಾಧಿನಾಥರೆ ಪಯಿಂಛಾಸಿರ್ವರ್ ಒಳ್ಳಾನೆಗಳ್ ಪಟ್ಟಂಗಟ್ಟಿದುವು ಒಂದು ಲಕ್ಕ ತುರಗಂ ಪತ್ತೆಂಟು ಲಕ್ಕಂ: **ಪಂಪಭಾ,** ೧೦. ೧೧೭)

**ಪಯೋದ** – ನೀರನ್ನು ಕೊಡುವುದು, ಮೋಡ (ಪರಿಹೃತವಸನಂ ವಿಗತಾಂಗರಾಗಂ ಅಪನೀತಭೂಷಣಂ ವಿಬುಧಜನೋದ್ಧರಣಂ ಪಯೋದ ಸಂಧ್ಯಾನುರಾಗ ಭರಣವ್ಯಪೇತ ರವಿಯಂತಿರ್ದಂ: **ಅಜಿತಪು,** ೬. ೧೨೯)

**ಪಯೋದನಾದ** – ಗುಡುಗು (ಸ್ಫುರತ್ ಅಕ್ಷೂಣ ವಿಷಾಣ ಕೋಟಿದಳಿತಪ್ರೋತ್ತುಂಗವಲ್ಮೀಕಂ ಉದ್ದುರಗಂಭೀರ ಪಯೋದನಾದಂ ಅತಿಪುಷ್ಟಾಂಗಂ .. .. ಸಂಜೀವಕಂ: **ಪಂಚತಂತ್ರ,** ೭೮)

**ಪಯೋದಪಥ** – ಮೇಘಮಾರ್ಗ, ಆಕಾಶ (ನಿರವಧಿ ಪ್ರಕಾಶಮಯಂ ತಾನಾದುದು ಭಾವಿಸಿ ನೋಡೆ ಪಯೋಧರಪಥಂ ಪ್ರಥಿತಮಾನ ದೇವಾಗಮದೊಳ್: **ಆಚವರ್ಧ,** ೧೩. ೯೧)

**ಪಯೋಧರ** – ಮೋಡ (ಚೆಲ್ವನಾವರಿಸಿದುವಂದು ಸಂದಣಿಸಿ ನೀಳ್ದ ಪಯೋಧರವಾರಿಧಾರೆಗಳ್: **ಜಗನ್ನಾವಿ,** ೪. ೨೧); ಮೊಲೆ (ನೆಗೆದ ಪಯೋಧರದ್ವಯದೊಳಾಕೆಯ ಗರ್ಭದ ರಾಜಪುತ್ರನಾರೋಗಿಸುವ ಪಾಲ್ಗಳಂ ಮಡಗಿ ಮುದ್ರಿಸಿದಂತೆ: **ನೇಮಿನಾಪು,** ೨. ೨೪)

**ಪಯೋಧರಕಾಲ** – ಮೋಡಗಳ ಕಾಲ, ಮಳೆಗಾಲ (ಪಯೋಧರಕಾಲದೊಳ್ ಎರಡು ತಡಿಯುಮಂ ಪೊಯ್ದು ಪರಿವ ತೊಱೆಗಳುಮಂ ತೊವಲ್ತು ಸೊಗಯಿಸುವ ಅಡವಿಗಳುಮಂ: **ಪಂಪಭಾ,** ೭. ೨೫ ವ)

**ಪಯೋಧರಚೂಚುಕ** – ಮೊಲೆತೊಟ್ಟು (ಒದವಿದ ಕರ್ಪನೆಯ್ದೆ ಪರಿವೃತ್ತ ಪಯೋಧರಚೂಚುಕಕ್ಕೆ: **ಆದಿಪು,** ೮. ೪೭)

**ಪಯೋಧರಶರ** – ವಾರುಣಾಸ್ತ್ರ (ವಿಯಚ್ಚರಾಧಿಪತಿಯೆಚ್ಚ ಪೃಷಾನುಪೃಷತ್ಕಮಂ ಪಯೋಧರಶರದಿಂ .. .. ಎಚ್ಚು ತೂಳ್ದಿದಂ: **ಚಂದ್ರಪ್ರಪು,** ೬. ೩೯)

**ಪಯೋಧರಪಥಗಾಮಿನೀವಿದ್ಯೆ** – ಆಕಾಶಗಾಮಿನೀವಿದ್ಯೆ (ಆತಂ ತನ್ನ ಪಯೋಧರಪಥಗಾಮಿನೀವಿದ್ಯೆಯಂ ಬೆಸಸಿದೊಡೆ: **ಆದಿಪು,** ೨. ೧೪ ವ)

**ಪಯೋಧಿ** – ಸಮುದ್ರ (ಮದಗಜ ಬೃಂಹಿತಧ್ವನಿ ತುರಂಗಮ ಹೇಷಿತಘೋಷಂ ಆದಂ ಒರ್ಮೊದಲೆ ಪಯೋಧಿಮಂಥನ ಮಹಾರವಮಂ ಗೆಲೆ: **ಪಂಪಭಾ,** ೩. ೩೮); [ಜೈನ] ಒಂದು ಕಾಲಗಣನೆ, ಸಾಗರ (ಸೌಧರ್ಮೇಶಾನಾಲಯದ ಅಮರರನೇಂ ನಿರ್ಮೂಳಿಸುವನೊ ವಿಧಿ ಪಯೋಧಿಯುಗಳಾವಧಿಯೊಳ್: **ಮಲ್ಲಿನಾಪು,** ೧೩. ೮೩)

**ಪಯೋಭೃತ್** – ಮೊಲೆ (ಪಯೋಭೃತ್ ಭರನಮ್ರಾಂಗ ಅಂಗನಾಚಾಲಿತಚಮರರುಹದ್ವಂದ್ವಪಾರ್ಶ್ವಂ: **ರಾಜಶೇವಿ,** ೩. ೨೭)

**ಪಯೋರಸ** – ನೀರು (ಕೂಡಿದ ಕೂಟದಿಂದ ಒಲಿಸಿದ ಇರ್ವರುಮಂ ಸಮಪಾತವಾರಿಯಿಂ ಕೋಡೆ ಸರಾಗದೊಳ್ ಮುಳುಗಿ ಮೂಡೆ ಮೃಗಾಂಕಕರಂ ಪಯೋರಸಂ ತೀಡುವ ತಂಬೆಲರ್ ಮನದೊಳ್ ಉರ್ಕೆಗಳಂ ಸುರತಾವಸಾನದೊಳ್ ಮಾಡೆ ರತಕ್ಕೆ ಮತ್ತೆ ಬಗೆದಂದುದು ದಂಪತಿ ಸೌಧಕೂಟದೊಳ್: **ಶಾಂತಿಪು,** ೮. ೧೦೦); ಹಾಲು (ಸಿದ್ಧಭಕ್ತಿಪುರಸ್ಸರಂ ಪಾಣಿಪಾತ್ರದೊಳ್ ಕನಕಪಾತ್ರದೊಳ್ ತೀವಿದಿಕ್ಷುರಸಮಂ ಪಯೋರಸಮುಮಂ ಪಾನಂಗಳಿಂದೆಱೆಯೆ: **ಅಜಿತಪು,** ೭. ೨ ವ)

**ಪಯೋರಾಶಿ** – ಸಮುದ್ರ (ಪಯೋರಾಶಿಗಳಂ ಮುಟ್ಟತ್ತು ದಾನಪ್ಲವದೊಡನೆ ಪರಕ್ಷೋಣಿಪಾಲಾಂಗನಾ ದೃಗ್ವಿಗಳಿಷ್ಟಾಂಬು ಧಾರಾಪ್ರಸವಂ: **ಅಜಿತಪು,** ೯. ೧೭)

**ಪಯೋರುಟ್** – ಕಮಲ (ಷಟ್ಪಾದಪಕ್ಷಾಹತಿ ಪತಿತ ಪಯೋರುಟ್ ಪರಾಗಾರುಣಶ್ರೀಮಿಳದುದ್ಯತ್ ವರ್ಣಕಂ: **ರಾಜಶೇವಿ,** ೨. ೬೨)

**ಪಯೋರುಹಜ** – ಬ್ರಹ್ಮ (ಇವರಂ ಕೂಡಿ ಪಯೋರುಹಜಂಗಕ್ಕೆ ಸಮಸಮಾಯೋಗಯಶಂ: **ಆದಿಪು,** ೪. ೨೯)

**ಪಯೋಲವ** – ನೀರ ಹನಿ (ದಿವಿಜೇಂದ್ರವನಿತೆ ದೇವಾಂಗವಸ್ತ್ರದಿಂ ತೊಡೆದಳ್ ಆ ಜಿನಾರ್ಭಕದೇಹಪ್ರವಿಲಿಪ್ತ ಸ್ನಪನ ಪಯೋಲವಮಂ ನೀರಂಜಿಪಂತೆ ರತ್ನಮನಾಗಳ್: **ಮಲ್ಲಿನಾಪು,** ೧೩. ೨)

**ಪಯ್ಯ** – ಹುಡುಗ (ಪಯ್ಯರ್ ಬಿಲ್ಗಲ್ವೆಯೆಡೆಯೊಳೆ ನೆಗಟ್ದರ್: **ಹರಿವಂಶ,** ೧೨. ೫೮)

**ಪಯ್ಸರಿಸು** – ಜಾರು, ನುಣುಚಿಕೊ (ಬಾಹುಗಳಿಂದೆ ಕಂಠಮಂ ತೊಡರೆ ಕುನುಂಗಿ ಪಯ್ಸರಿಪ ಬಿನ್ನಣಮೊಪ್ಪೆ ಕಡಂಗಿ ಕಾದಿದರ್: **ಶಬರಶಂ,** ೪. ೭೩)

**ಪರ** – ಶತ್ರು (ಪರಂ ಅಹಿತಂ ಅನ್ಯಂ ಅಸುಹೃದ್ ಅರಾತಿ: **ಅಭಿಧಾವ,** ೨. ೧. ೧೦); ಪ್ರಮುಖವಾದುದು (ಪರಂ ಪ್ರಧಾನಂ ಪ್ರವರಂ ಪ್ರವೇಕಂ: ೨. ೧. ೨)

**ಪರಂಕಲಿಸು** – ವಿಸ್ತಾರವಾಗಿ ಹರಡು (ಗಜೆಸನ್ನೆಗೆಯ್ದು ತೆಗೆನೆಱೆದು ಎಱಗಿ ಪರಂಕಲಿಸಿ ಪರ್ವಿ ಕೂಕಿಱಿದು ಇಸೆ ಕೆಂಗಱಿಯ ಮೊನೆಯಂಬುಗಳ್ ಕಣ್ದೆಱೆಯಿಸಿದುವು ಪೊಣರ್ವ ಬಿಲ್ಲ ಕಡುವಿತ್ತೆಗರಂ: **ಪಂಪಭಾ,** ೧೦. ೭೩)

**ಪರಂತಪ** – ಶತ್ರುಗಳನ್ನು ತಾಪಗೊಳಿಸುವವ, ಶೂರ (ಪರಂತಪನಾ ಜಿನಚಂದ್ರಂ ಜೈನಪಾದನತಮಕುಟ ದರ್ಶಿಯಂ ಬಿನ್ನವಿಕುಂ: **ಶಾಂತಿಪು,** ೬. ೫೭)

**ಪರಂತಪನ** – ತುಂಬ ತಾಪ ನೀಡುವ (ಅಪರಾಜಿತನಿತ್ತ ಪರಂತಪನ ತಪಶ್ಚರಣವೊಂದೆ ಪೊಱಗೆನೆ .. .. ಪವಿತ್ರಶ್ರಾವಕವ್ರತಂಗಳೊಳೋಣರ್ದಂ: **ಶಾಂತಿಪು,** ೧. ೮೭)

**ಪರಂಪರೆ** – ಒಂದನ್ನೊಂದು ಹಿಂಬಾಲಿಸುವುದು, ಅಲೆ, ಸಾಲು (ತತ್ಕಾಂತೆ ಚಿಂತಾಪರಂಪರೆಯಂ ತಾಳ್ದಿದಳ್: **ಮಲ್ಲಿನಾಪು,** ೩. ೮೭)

**ಪರಕ** – ಪರೋಕ್ಷ (ಪರಕಮೆಂದು ಪರೋಕ್ಷಂ: **ಶಬ್ದಮದ,** ಪ್ರಸಾ ೧೪೩)

**ಪರಕಲಿಸು** – ವ್ಯಾಪಿಸು (ಕಂಪಿನ ಸಿರಿಯಂ ಪರಕಲಿಸುವ ದಶಶತದಳ ಪರಿಕರದಿಂ ಪುದಿದು ಹೇಮಕೋಮಳಕಮಳಂ: **ಶಾಂತೀಶ್ವಪು,** ೧೬. ೮೪); ದಟ್ಟವಾಗು (ಮರಗಿಡುವಿನ ಕತ್ತಲೆಯುಂ ಪರಕಲಿಸಿ ಪೊದಳ್ದ ಶೋಣಮಣೀದೀಧಿತಿಯಿಂ ನೆಱೆದಿಪ್ಪುದು: **ವರ್ಧಮಾಪು,** ೫. ೫೫)

**ಪರಕಾಯಪ್ರವೇಶ** – ತನ್ನ ಪ್ರಾಣ ಮತ್ತೊಬ್ಬನ ಶರೀರದಲ್ಲಿ ಸೇರುವಂತೆ ಮಾಡುವ ಸಾಧನೆ (ಸುರಕಾಯಸ್ಥಿತಿ ಸಮನಿಸುತಿರೆ ಪರಕಾಯಪ್ರವೇಶಂ ಏವುದು ಎಂಬಂತಿರೆ ಪಕ್ಷಿ ಶರೀರದಿನವತರಿಸಿ ಸುರಂ ತನಗೆ ಮೊಟ್ಗೆ ಪೊಡೆವಡೆ: **ಶಾಂತಿಪು,** ೯. ೯೨)

**ಪರಕೆ** – ಹರಕೆ, ಆಶೀರ್ವಾದ (ಅಂತು ಸೊಗಯಿಸೆ ಪಾಡುವ ಮಂಗಳರವಂಗಳುಂ ಓದುವ ಋಚೆಗಳುಂ ಪರಸುವ ಪರಕೆಗಳುಂ ಎಸೆಯೆ ಪಸೆಯೊಳಿರ್ದು: **ಪಂಪಭಾ,** ೩. ೭೬ ವ)

**ಪರಕೆಗುಡು** – ಹರಕೆ ಒಪ್ಪಿಸು (ದೇವತೆಗೆ ಪರಕೆಗುಡೆ ನಾನಾವಿಧ ರುಜೆ ಪಿಂಗಿಪೋಗೆ ಬರ್ದುಕಿದೆನೆಂಬರ್: **ಸಮಯಪ,** ೫. ೧೧)

**ಪರಗು** – ಭೂಮಿ ಶುದ್ಧಿಗೊಳಿಸು, ಕುಂಟೆ ಹೊಡೆ (ಕಾಯ್ದು ಕರ್ಬೊನ್ನ ಸೂಜಿಗಳಂ ಬೆರಲ್ಗಳೊಳ್ ಬೆಟ್ಟುವರುಂ ನಟ್ಟು ಪರಗುವರುಂ: **ಆದಿಪು,** ೫. ೮೫ ವ)

**ಪರಚಕ್ರ** – ಶತ್ರು ಸಮೂಹ, ಶತ್ರುರಾಜ್ಯ (ಭರತಮನೋದುವ ಸಪ್ತಸ್ವರಮಂ ಗುಣಿಯಿಸುವ ಬೀಣೆವಾಜಿಪ ವಿದ್ದಂಬರೆವ ಪರಚಕ್ರಮಿಕ್ಕುವ ಪರಿಹಾಸದೊಳಿರ್ಪ ಬಿನದಮವರ್ಗಳ ಬಿನದಂ: **ಅಜಿತಪು,** ೩. ೮)

**ಪರಚಿಂತಾಕರ ಏಹಿ** – ಅನ್ಯರಿಗೆ ಚಿಂತೆಮಾಡುವವನೇ, ಹೋಗು (ಚಿಂತಿಸಿದಂ ಕಿಱುದಂಗೆಯ ಸಂತತಿಯಂ ಕೊಂದು ಕೂಗಲಿರುಳುಳಂ ಪಗಲುಂ ಚಿಂತಿಸನೇಕೊಳ್ಳಿತು ಪರಚಿಂತಾಕರ ಏಹಿಯೆಂಬ ನುಡಿಯಂ ಕಕಂಸಂ: **ನೇಮಿನಾಪು,** ೭. ೨೫)

**ಪರಡು** – ಹಿಮ್ಮಡಿಯ ಗಂಟು (ಪರಡು ನಿಗೂಢಂ ಲಲಿತ ಲತಾಂಗಿಯ ವರ ಜಂಘಾಯುಗಲಂಗಳ ಭಂಗಿಯ: **ಸುಕುಮಾಚ,** ೫. ೫೧)

**ಪರಡೆ** – ಹರಡೆ ಹಕ್ಕಿ (ಭೋರೆಂದೆಱಗಿ ಪೊಯ್ವ ಪರಡೆಗಳೆ ವಿಜಯಭೇರಿಗಳಾಗೆಯುಂ: **ವರ್ಧಮಾಪು,** ೪. ೫೧ ವ)

**ಪರತಂತ್ರ** – ಬೇರೆಯವನ ಅಧೀನ (ಪರತಂತ್ರನೆನಿಸಿದ ಎನಗೆ ಇನ್ನರಸೇವುದೊ: **ಲೀಲಾವತಿ,** ೪. ೪)

**ಪರತ್ರೆ** – ಮೋಕ್ಷ (ದುರ್ವ್ಯಸನಿಯ ಮಾಡಿದೋದೆ ನಿಮಗಾಗಮುಮಾಗಿರೆ ಅಸತ್ಯವಾದಮಂ ಪೊಸಯಿಸಿ ಜೀವನಿಲ್ಲ ಮೊಱೆಯಿಲ್ಲ ಅಱನಿಲ್ಲ ಪರತ್ರೆಯಿಲ್ಲ: **ಆದಿಪು,** ೨. ೧೧); ಸ್ವರ್ಗ (ಕುಲಮಟೆಯೆ ನೆಲಂ ಪಟೆಯೆ ಮಾನಸಿಕೆಯನೊಕ್ಕು ಪರತ್ರೆಯಂ ಬಗೆಯದೆ .. ..ಪೊಲ್ಲಮೆಯಂ ಕಳೆವಂದಮಾವುದು: **ಪಂಪರಾ,** ೧೧. ೧೦೪ ವ)

**ಪರದ** – ವ್ಯಾಪಾರಿ, ಹರದ (ನಾಗದತ್ತನೆಂಬ ಪರದಂಗಂ ಆತನ ಪರಿದಿತಿ ವಸುದತ್ತೆಗಂ ಪುಟ್ಟಿದ ನಂದಿಮಿತ್ರ: **ಆದಿಪು,** ೩. ೩೩ ವ)

**ಪರದಾರ** – ಬೇರೆಯವನ ಹೆಂಡತಿ (ನೆರೆದು ಪರದಾರಮಂ ಕಲಿವುದೆ ಚತುರತ್ವಂ .. .. ಎಂಬರ್ ಧೂರ್ತರ್: **ಕಾದಂಬ,** ೩. ೯೮)

**ಪರದಾರಗಮನ** – ವ್ಯಭಿಚಾರ (ಆಯು ತವೆ ಪಾರದರಿಗಂ ಅಪಾಯಮಂ ಎತ್ತಜೀವಂ ಉಚಿತ ವಾಕ್ಯಾರ್ಥಂ ಕೊಳ್ಳೀಯೆ ಪರದಾರಗಮನಮಂ ಆಯುಷ್ಯಾಂತಮೆನಲ್ ಮನಂದಂದಪನೇ: **ಶಾಂತಿಪು,** ೫. ೫೧)

**ಪರದಾರಾಭಿಗಮ** – ಪರಸ್ತ್ರೀ ಸಂಗ (ಪರದಾರಾಭಿಗಮಕ್ಕೆ ಹೇತುವು ಅಳಿಪಿಂಗೆ ಅನ್ಯಸ್ವಮಂ ಕೊಳ್ವ ದುಶ್ಚರಿತಂಗಂ ಪುಸಿ: **ಸಮಯಪ,** ೫. ೩೦)

**ಪರದಿತಿ** – ವ್ಯಾಪಾರಿಯ ಹೆಂಡತಿ (ನಾಗದತ್ತನೆಂಬ ಒರದಂಗಂ ಆತನ ಪರದಿತಿ ವಸುದತ್ತೆಗಂ ಪುಟ್ಟಿದ ನಂದಿಮಿತ್ರ: **ಆದಿಪು,** ೩. ೩೩ ವ)

**ಪರದು** – ವ್ಯಾಪಾರ (ನಂದಿಮಿತ್ರನೆಂಬೊಂ ಸೆಟ್ಟಿ ಸಾರ್ಥಂಬೆರಸು ಪರದಿಂಗೆ ಪೋಗುತ್ತಿದಾತಂ: **ವಡ್ಡಾರಾ,** ಪು. ೧೬೩, ಸಾ. ೨೩)

**ಪರದುಗೆಯ್** – ವ್ಯಾಪಾರಮಾಡು (ತಾಂ ಕೊಂಡಂತಿರೆ ಪೆಱರ್ಗೆ ಕುಡುಗೆ ಕುಂದಿಸಿ ಪರದುಗೆಯಲ್ ಸಲ್ಲದು: **ಸಮಯಪ,** ೫. ೪೬)

**ಪರದುವೋಗು** – ವ್ಯಾಪಾರಕ್ಕಾಗಿ ದೂರ ಹೋಗು (ವಿತ್ತಂ ತಾಂ ದೊರೆಕೊಳೆ ಕೇಲಿಹಪರಂಗಳೆರಡುಂ ಸಾಧ್ಯಂ ಎಂದು ಪರದುವೋಪೆನೆಂಬ ಬಗೆಯಂ ತಂದು: **ಧರ್ಮಾಮೃ,** ೧. ೮೧ ಮತ್ತು ೮೧ ವ)

**ಪರದೇಶಿ** – ಅನ್ಯದೇಶದವನು ಕುಲಹೀನಂ ತೊನ್ನಂ ಕುಸುಗುಳಿಗಂ ಪರದೇಶಿ ವಿತ್ತಹೀನಂ: ಸಮಯಪ, ೪. ೩೧)

**ಪರದೇಸಿ** – ಅನಾಥ (ಪರದೇಸಿಯೆ ನಮ್ಮವರೆಲ್ಲರುಮಂ ಮನವಾರೆ ತೋಱಿದು .. .. ವಂದೆಂ; ಧರ್ಮಾಮೃ, ೬. ೧೮)

**ಪರಪರಿವಾದ** – ಅನ್ಯರ ನಿಂದೆ (ಪರಪರಿವಾದಮನೆಂತುಂ ಪಿರಿದಪ್ಪತ್ತಿಯೊಳೆ ಕೇಳರ್: **ಸಮಯಪ,** ೫. ೩೩)

**ಪರಪು** – ಹರಡು, ಕೆದರು (ಪುದಿದ ಪರಾಗಮಂ ಪರಪಿಯುಂ ಪೊರೆಯೆತ್ತಿಯುಂ .. .. ಕುಸುಮಕ್ಕೆಱಗಿರ್ದ ಮದಾಳಿ: **ಲೀಲಾವತಿ,** ೯. ೧೧೮); ವಿಸ್ತಾರ (ಜಲದದ ನೆಱಲುಂ ಪರಪುಂ ವಿಲಾಸಮುಂ ಬೆಳಗುವುದಿತ ವಿದ್ಯುಲ್ಲತೆಯುಂ ನೆಲಸವು: ಕವಿರಾಮಾ, ೩. ೯೭); ಚೆಲ್ಲಾಪಿಲ್ಲಿಯಾಗಿಸು (ಅಲ್ಲಿಗೆ ಚಿತ್ರಗ್ರೀವಂ ಸಪರಿಗ್ರಹಂ ಬಂದು ಪರಪಿರ್ದ ಕೂಱಂ ಕಂಡೆಱಗಲೊಡಮಾ ಬಲೆಯೊಳ್ ಕಪೋತಂಗಳಸಂಖ್ಯಾತಂ ಸಿಲ್ಕಿ: **ಪಂಚತಂತ್ರ,** ೪೧೪ ವ)

**ಪರಪುಟ್ಟ** – [ಪರಪುಷ್ಟ] ಕೋಗಿಲೆ (ಕಳಿಕೆಗೆಳಸಿ ಚಂಚುವನಿಟ್ಟು ಓರಂತೆ ಸವಿಸವಿದು ಸೊರ್ಕಿ ನಿರಂತಂ ಕರೆದತ್ತು ಮಾವಿನೊಳ್ ಪರಪುಟ್ಟಂ: **ಗಿರಿಜಾಕ,** ೨. ೪೨)

**ಪರಪುಷ್ಟ** – ಬೇರೆಯವರಿಂದ ಪೋಷಿಸಲ್ಪಟ್ಟದ್ದು, ಕೋಗಿಲೆ (ನೀರ್ ಸುಧಾಸಮಂ ಉದ್ಯಾನವನಂ ಮದೋತ್ಕ ಪರಪುಷ್ಟೋದ್ದಾಮಕೋಳಾಹಳಂ: **ಆದಿಪು,** ೫. ೨೯)

**ಪರಭಾಗ** – ಶೋಭೆ, ಮೇಲ್ಮೆ (ಪೊಱಪೊಣ್ಮುವ ಪರಭಾಗದ ಶರೀರಕಾಂತಿ ಲಾವಣ್ಯರಸದ ತಂದಲಂ ಅಗುಂದಲೆ ಮಾಡೆಯುಂ: **ಪಂಪರಾ,** ೩. ೬೭ ವ); ಹಿಂಭಾಗ (ಅಳವಡೆ ಪರಭಾಗಂಬಡೆದು ಎಳೆಯಳಪರಭಾಗದಲ್ಲಿ ಸೋರ್ಮುಡಿ ಸೊಬಗಂ ತಳೆದೆಸದುದು ಕನಕಶಿಳಾತಳಾಗ್ರದೊಳ್ ಮುರಿದು ಪರಿದು ಪರಿದ ಜಗುನೆಯ ಪೊನಲಂ: **ಚಂದ್ರಪ್ರಪು,** ೧೧. ೧೦೦)

**ಪರಭಾಗಂಬಡೆ** – ಶೋಭೆವಡೆ (ಹರಿನೀಲಮಣಿಸ್ಫುರಿತದ ತೆರೆಗಳ ಕೆಲದೊಳ್ ಪರಭಾಗಂಬಡೆದುವವು ಪಯೋಂಭೋನಿಧಿಯೊಳ್: **ಆದಿಪು,** ೯. ೮೦)

**ಪರಭೃತ** – ಪರಪುಷ್ಟ (ನಿನ್ನಿಂಚರಮನೆ ಮನದೊಳ್ ನೆನೆವೆವಾಗಳುಂ ಪರಭೃತಮೇ: **ಆದಿಪು,** ೧೧. ೧೩೫)

**ಪರಮಶ್ರೀ** – ಮೋಕ್ಷಲಕ್ಷ್ಮಿ (ಜಯಶ್ರೀಕಾಂತೆಯುಮಂ ಪರಮಶ್ರೀಕಾಂತೆಯುಮಂ ನಿನಗೆ ಕುಡುವುದು ಈ ಸ್ಕಥನಂ: **ಯಶೋಧಚ,** ೧. ೭೦)

**ಪರಮಸ್ಥಾನ** – [ಜೈನ] ಮೋಕ್ಷಸಂಬಂಧಿ ಉತ್ತಮ ಸ್ಥಿತಿಗಳು; ಒಳ್ಳೆಯ ಹುಟ್ಟು, ಉತ್ತಮ ಶ್ರಾವಕನಾಗುವುದು, ತಪಸ್ವಿಯಾಗುವುದು, ದೇವೇಂದ್ರಪದವಿ, ಚಕ್ರವರ್ತಿಪದವಿ, ಅರ್ಹತ್ಪದವಿ, ಮೋಕ್ಷ ಎಂಬ ಏಳು (ದರ್ಶನದಿಂ ಜ್ಞಾನದಿನೊಪ್ಪುವ ಪರಮಸ್ಥಾನಮನಾಂ ಪಡೆವೆನ್ನೈ ಪಂಚಮಗತಿಯಂ: **ಅಜಿತಪು,** ೨. ೭೩)

**ಪರಮಹಂಸ** – ಕುಟೀಚಕ, ಬಹೂದಕ, ಹಂಸ, ಪರಮಹಂಸ ಎಂಬ ನಾಲ್ಕು ಪ್ರಕಾರಗಳಲ್ಲಿ ಕೊನೆಯ ವರ್ಗದ ಸನ್ಯಾಸಿ (ವಿಕ್ಲಬದಿಂ ತಾಮ ಬರವೇಟ್ಟುಂ ಪರಮಹಂಸಂ ಬಂದು ಕುಳ್ಳಿರ್ದೊಡೆ: **ಸುಕುಮಾಚ,** ೩. ೬)

**ಪರಮಾಗಮ** – ಶ್ರೇಷ್ಠ ಶಾಸ್ತ್ರಗ್ರಂಥ (ಪರಮಾಗಮಕೋವಿದನಪ್ಪುದು ಪೂರ್ವಕಾವ್ಯರಚನೆಗಳಂ ತಾಂ ಮೊದಲ್ ಕಲ್ತಂಗೆ: **ಕವಿರಾಮಾ,** ೧. ೯); [ಜೈನ] ಜಿನಾಗಮ (ಪರಮಾಗಮಮನೆಲ್ಲಮಂ ಉಚ್ಚರಿಸುವಂ ಅಂತರ್ಮುಹೂರ್ತಕಾಲದೊಳ್: **ಚಂದ್ರಪ್ರಪು,** ೧೪. ೩೫)

**ಪರಮಾಚಾರ್ಯ** – ಶ್ರೇಷ್ಠ ಗುರು (ಪರಮಾಚಾಆರ್ಯರವೊಲ್ ಸಯ್ತಿರಲಱಿಯರ್ ಕನ್ನಡಕ್ಕೆ ನಾಡವರೋಜರ್: **ಕವಿರಾಮಾ,** ೧. ೪೨)

**ಪರಮಾಣು** – ತುಂಬ ಸೂಕ್ಷ್ಮ ವಸ್ತು (ಪರಮಾಣುಪ್ರಾಯಂ ಗುಣಮಿರೆ ಮೆಚ್ಚುವ ಸುಜನರಿಂದೆ ದುರ್ಜನರೆಮಗಿಂ ಗುರುಗಳ್ ದೋಷಲವಮುಮಿರೆ ಪರಿಹರಿಪಂತೂಱಿ ತೋಱುಇ ನುಡಿವುದಱಿಂದಂ: **ಪಾರ್ಶ್ವನಾಪು,** ೧. ೮೧); [ಜೈನ] ಪುದ್ಗಲದ್ರವ್ಯದ ಸೂಕ್ಷ್ಮಾತಿಸೂಕ್ಷ್ಮ ಭಾಗ (ಅಂತು ಉಪವಾಸಕೃಶೀಕೃತಾಂಗರಾಗಿ ಶರೀರಕರ್ಮ ಪರಮಾಣುಗಳಂ ಒಡನೊಡನೆ ತವಿಸಿ: **ಶಾಂತಿಪು,** ೭. ೭೧ ವ)

**ಪರಮಾಣುಮಾರ್ಗ** – ಪರಮಾಣುಗಳ ಹಾದಿ, ಆಕಾಶ (ಜಡಿದುಯ್ದನಾ ಖಚರನಿರ್ವರುಮಂ ಪರಮಾಣುಮಾರ್ಗದಿಂ: **ಪಂಪಭಾ,** ೭. ೩೩)

**ಪರಮಾತ್ಮ** – ಶ್ರೇಷ್ಠ ಚೈತನ್ಯ, ದೇವರು (ನೆಗಟ್ದ ಮಹಾತ್ಮಂ ನರಸಿಂಹನಱುವಿನೊಳ್ ಪರಮಾತ್ಮಂ: ಪಂಪಭಾ, ೧. ೩೧); [ಜೈನ] ಜಿನ (ಪರಮಾತ್ಮಂ ನಿಶ್ಚಿತಾತಂ ಜಿನಪತಿ ಪರಮಸ್ವಾಮಿ: ಸುಕುಮಾಕಾ, ೧. ೬೦); ಕೇವಲಜ್ಞಾನಿ (ಪಸಿವು ನೀರಟ್ಕೆ ಮೊದಲಾಗೊಡೆಯ ಪದಿನೆಂಟು ದೋಷಂಗಳನಿಲ್ಲದೊಂ ಪರಮಾತ್ಮಂ: **ವಡ್ಡಾರಾ,** ಪು ೯೬, ಸಾ ೧೭)

**ಪರಮಾಯು** – [ಜೈನ] ಒಂದು ಪೂರ್ವಕೋಟಿ ಪ್ರಮಾಣದ ಜೀವಿತಾವಧಿ (ತೊಲಗದು ಪುಬ್ಬಕೋಟಿ ಪರಿಸಂಖ್ಯೆವರಂ ಪರಮಾಯು: ಆದಿಪು, ೧. ೫೨)

**ಪರಮಾರ್ಥ** – ಮೋಕ್ಷ (ಪರಮಾರ್ಥಮಂ ಮಧ್ಯಸ್ಥತೆಯುಮಂ ಅಧರಿಸುದವಧಾರಿಸುವಾಗಳ್ ದೇವತೆಯ ನುಡಿದ ನುಡಿ .. .. ನಿಮಗಱಿಯಲಕ್ಕುಮೆ: **ಶಾಂತಿಪು,** ೪. ೧೦೨ ವ); ಸತ್ಯ (ಪರಮಾರ್ಥಂ ಲೋಗರ ಕಸವರದೊಳ್ ತರಲಾಗ: **ಸಮಯಪ,** ೫. ೪೨); ನಿಶ್ಚಿತ (ಅತುಳಸುಖಸಂಪದ ಸಂತಾನಮನಾಂತು ಬಟಕ್ಕಿಂ ಭೂನುತನೆಟ್ಟರ್ಕುಂ ಎಂಬಿದುಂ ಪರಮಾರ್ಥಂ: **ಕರ್ಣನೇಮಿ,** ೪. ೧೦)

**ಪರಮಾರ್ಥಂ** – ನಿಶ್ಚಯವಾಗಿ (ಪರಮಾರ್ಥಂ ಜೈನಸಮಯಿಗಳವರ್ಗಳೆ ಬಲ್ಲರ್: **ಸಮಯಪ,** ೬. ೨೪)

**ಪರಮಾರ್ಹಂತ್ಯ** – ಅತಿಶಯವಾದ ಅರ್ಹಂತಪದವಿ (ಪರಮಾರ್ಹಂತ್ಯಮನೆಯ್ದಲಿರ್ದುದದಱಿಂ ಮೇಲುಂಟೆ ಸತ್ತ್ವಂ: **ಆದಿಪು,** ೯. ೬೨)

**ಪರಮೆ** – ದುಂಬಿ (ಪರಮೆಗಳ್ ಮಂಜುಮಂಜೀರನಾದಕ್ಕೊಡನೆ ಒಂದೊಂದಾಗಿ ಪಿಂದೈತರೆ ವಿಮಳಮರಾಳಂಗಳ್: **ರಾಜಶೇವಿ,** ೪. ೨)

**ಪರಮೇಷ್ಠಿ** – ಬ್ರಹ್ಮ (ಧನಂಜಯನಂತೆ ರುದ್ರಾಕ್ಷದಿಂ ರಂಜಿಸಿ ಪರಮೇಷ್ಠಿಯಂತೆ ಪದ್ಮಾಸನವನವಷ್ಟಂಬಿಸಿ: **ರಾಜಶೇವಿ,** ೧೦. ೫೭ ವ); [ಜೈನ] ತೀರ್ಥಂಕರ

**ಪರಮೌದಾರಿಕ** – [ಜೈನ] ಘಾತಿಕರ್ಮ ನಾಶವಾಗಿ ಅರ್ಹದವಸ್ಥೆಯಲ್ಲಿರುವ ಜೀವ (ಪರಮೌದಾರಿಕ ದಿವ್ಯಶರೀರನುಂ .. .. ಸುಂದರಾಕಾರನುಮಪ್ಪ ತೀರ್ಥಕರಕುಮಾರಂಗೆ .. .. ಪ್ರಸಾಧನಪ್ರಾರಂಭಂಗೆಯ್ಯೆ: **ಶಾಂತಿಪು,** ೧೦. ೫೬ ವ)

**ಪರಲ್** – ಕಲ್ಲಿನ ಹರಳು (ಎಡಪಿ ಪರಲ್ಗಳಂ ದೆಸೆಗೆ ಬೆರ್ಚುತೆ ಗೋವನ ಗಾಳಿಗೆಯ್ದೆ ಪಿಂದಡಸುತೆ .. .. ಬರ್ಪ ಪಲವು ಆಕಳಂ ಈಕ್ಷಿಸಿದಂ ನರಾಧಿಪಂ: **ಲೀಲಾವತಿ,** ೫. ೮೮); ರತ್ನ

**ಪರಲಿಂಗಿ** – ಅನ್ಯಧರ್ಮೀಯ (ದುಶ್ಚರಿತ್ರರಂ ಲೋಲುಪರಂ ಪರಲಿಂಗಿಗಳಂ ಪೊರ್ದಿರ್ಪಿರವಿದು ಪಾಷಂಡಿಮೂಢಂ ಎಂಬುದದಕ್ಕುಂ: **ಸಮಯಪ,** ೧೪. ೨)

**ಪರಲೋಕಕ್ರಿಯೆ** – ಅಪರಕಾರ್ಯ (ಅಜಿತಂ ತನ್ನ ತಂದೆಗೆ ಪರಲೋಕಕ್ರಿಯೆಗಳಂ ಮಾಡಿ ಬಟಿಕ್ಕಂ ತಮ್ಮಯ್ಯಂ ಮಡಗಿಟ್ಟ ವಸ್ತುವಂ ನೋಟ್ಪೆನೆಂದು ಕವಳಿಗೆಯಂ ಬಿಟ್ಟು ನೋಟ್ಪನ್ನೆಗಂ: **ಪಂಚತಂತ್ರ,** ೨೬೨ ವ)

**ಪರವತ್ಸ** – ಬೇರೆ ಹಸುವಿನ ಕರು (ಪರವತ್ಸಂಗಳ ಬಟಿಯಂ ಪರಿಗೊಳುತುಂ .. .. ನಡೆತಂದುವು ಈಂದ ಪಯಗಳ್ ಪಲವುಂ: **ಲೀಲಾವತಿ,** ೫. ೯೧)

**ಪರವ್ಯಪದೇಶ** – [ಜೈನ] ಶಿಕ್ಷಾವ್ರತದ ಒಂದು ಆಚಾರ, ಪಾತ್ರದಾನಕ್ಕೆ ಅತಿಥಿಯನ್ನು ಕರೆತರಲು ಸಂಬಂಧಿಕನಲ್ಲದವನಿಗೆ ಹೇಳುವುದು (ಕ್ರಮದೆ ಪರವ್ಯದೇಶಂ ಸಮುತ್ಸರತ್ವಂ .. .. ಅತಿಕ್ರಮಮಕ್ಕುಂ ಪಾತ್ರದಾನಮಂ ಕುಡುವೆಡೆಯೊಳ್: **ಸುಕುಮಾಚ,** ೬. ೨೨)

**ಪರವ್ಯೂಹ** – ಶತ್ರುಸೈನ್ಯ (ಪರವ್ಯೂಹಭಯಂಕರಂ ನೆಗೆದು ಪಾರ್ದಾರ್ದೆಚ್ಚೊಡೆ: **ಪಂಪಭಾ,** ೧೧. ೧೭)

**ಪರಶು** – ಗಂಡುಗೊಡಲಿ (ವೈರಿ ಪರಶುಧಾರೆಯುಂ ಅನ್ಯ ರಾಜನ್ಯ ಕೋಪಾನಲಜಲಧಾರೆಯುಂ ಆದ ನಿಜಾಜ್ಞಾಲಕ್ಷ್ಮಿಯ ಮೇಲೆ ವಸುಂಧರಾಭಾರಮಂ ನಿಲಿಸಿ: **ಮಲ್ಲಿನಾಪು,** ೩. ೨೧ ವ)

**ಪರಶುಧರ** – ಗಂಡುಗೊಡಲಿಯನ್ನು ಹಿಡಿದವನು, ಪರಶುರಾಮ (ಪರಶೂಧರಂ ಚಕ್ರಧರಂ ಸುರಪತಿ ಭುಕಾಂತೆ ಕೊಂತಿಯೆಂದೀ ಪೇಟ್ದಯ್ವರ್ ಕೂಡಿ ನಿನ್ನ ಕೊಂದಪರ್: ಗದಾಯು, ೫. ೨೬); ಗಣಪತಿ (ಪರಶುಧರಂ ಗಣಪತಿ ವಿಘ್ನರಾಜಂ .. .. ವಿನಾಯಕಂ ಹೇರಂಬಂ: **ಅಭಿಧಾವ,** ೧. ೧. ೧೭)

**ಪರಶುರಾಮ** – ಜಮದಗ್ನಿಯ ಮಗ (ನರೇಶ್ವರರಂ ನೀಂ ತಱಿದೊಟ್ಟಿದ್ಯೆ ಪರಶುರಾಮಾಕಾರದಿಂದಚ್ಯುತಾ: **ಜಗನ್ನಾವಿ,** ೧. ೬೦)

**ಪರಶುಶರ** – ಕೊಡಲಿಯಾಕಾರದ ಬಾಣ (ಪರಶುಶರನಿಕರದಿಂ ಕುಮ್ಮರಿಗಡಿದವೊಲ್ ಒಡನೆ ಕಡಿಯೆ ರಥಿಗಳ್ ರಥದಿಂ ಧರೆಗಿಟಿದು: **ಪಂಪಭಾ,** ೧೦. ೮೮)

**ಪರಶ್ವಧ** – ಕೊಡಲಿ (ಪರಶು ಕುಠಾರಾಭಿಖ್ಯಂ ಪರಶಧಂ ಸ್ವಧಿತಿಯೆಂಬುದಕ್ಕುಂ: **ಅಭಿಧಾವ,** ೧. ೧೪. ೧೫)

**ಪರಸಮಯ** – ಅನ್ಯ ಮತಧರ್ಮ (ಪರಸಮಯದ ಪಿರಿದೆನಿಸಿದ ಪುರಾಣಮಂ ಜೈನರಲ್ಲಿ ವಾಕ್ಯಮದೊಂದಂ ಪರಕಿಸಿ ನೋಟ್ಪಾಗಳ್ ಕೆಂಬರಲಿನ ಪೆರ್ಗಲ್ಲ ತೆಱನೆಂತಂತೆ ವಲಂ: **ಸಮಯಪ,** ೩. ೯೧)

**ಪರಸಮಯಿ** – ಅನ್ಯ ಮತಧರ್ಮಕ್ಕೆ ಸೇರಿದವನು (ಪರಸಮಯಿಗಳಂ ಮುದದಿಂ ಪಥಕ್ಕೆ ತರಪಾರ್ಪುದು ಸಮಯಪರೀಕ್ಷೆಯೆಂಬುದಿಂತೀ ಕಾವ್ಯಂ: **ಸಮಯಪ,** ೧. ೬೧)

**ಪರಸು** – ಆಶೀರ್ವದಿಸು (ನೋಟಂಬೆರಸು ಪರಸಿ ತಟ್ಕೈಸಿಕೊಂಡು ಅಮ್ಮ ನೀಂ ಮಮ್ಮನೆಯಪ್ಪೈ ನೋಡು ನಣ್ಪಿಂ: **ಆದಿಪು,** ೨. ೨೦); ಹರಕೆ ಮಾಡಿಕೊ (ನಿಶ್ಶೇಷಭೂಷಾರ್ಚನೆಯಂ ಸರ್ವಜ್ಞಬಿಂಬಾವಳಿಗೆ ಪರಸಿದರ್ ಮಸ್ತಕನ್ಯಸ್ತಹಸ್ತರ್: **ಆದಿಪು,** ೧೪. ೧೧೬); ಪರಶು (ಬೆಟ್ವೇಱುಗಳಿಂ ಪರಿತಂದಿಟ್ಟುಂ ಪರಸಿನೊಳೆರ್ದೆಯಂ ಸೀಳ್ದುಂ: **ಧರ್ಮಾಮೃ,** ೩. ೪೫ ವ)

**ಪರಸ್ಪರೋದೀರಿತ** – [ಜೈನ] ನಾರಕರು ಪರಸ್ಪರರು ಕೊಡುವ ದುಃಖ (ಶಾರೀರಂ ಮಾನಸಂ ಕ್ಷೇತ್ರಜಂ ಪರಸ್ಪರೋದೀರಿತಂ

ಸಂಕ್ಲಿಷ್ಟಾಸುರೋದೀರಿತಂಗಳೆಂಬ ಪಂಚಪ್ರಕಾರದುಃಖಂಗಳಂ ಅನೇಕ ಪ್ರಕಾರದಿನನುಭವಿಸುತ್ತುಂ: **ಸುಕುಮಾಚ,** ೧೧. ೪೭ ವ)

**ಪರಾಂಗಣ** – ಅಂಗಳದ ಹಿಂಭಾಗ (ಪರಾಂಗಣದೊಳ್ ಪಚ್ಚವಡಿಸಿರ್ದ ಅಮೃತಾರ್ಣವ ತರಂಗಸ್ಥೂಲ ಹಂಸತೂಳತಳ್ಪತಳದೊಳ್: **ನೇಮಿನಾಪು,** ೪. ೫೦ ವ)

**ಪರಾಂಗನಾವಿರತಿವ್ರತ** – ಅನ್ಯಸ್ತ್ರೀಯಲ್ಲಿ ಮೋಹಗೊಳ್ಳದಿರುವ ವ್ರತ (ಅನಂತವೀರ್ಯಕೇವಲಿಗಳ ಚರಣೋಪಾಂತದೊಳ್ ಕೈಕೊಂಡ ಪರಾಂಗನಾವಿರತಿವ್ರತದ ಭಂಗಮಂ ಬಗೆಯದೆ ಉಯ್ದುಂ: **ಪಂಪರಾ,** ೯ ೧೧೩ ವ)

**ಪರಾಂಗನೆ** – ಅನ್ಯಸ್ತ್ರೀ, ಮೋಕ್ಷಾಂಗನೆ (ಪರಾಂಗನೆಗೆ ಮೆಯ್ಗೊಟ್ಟಿರ್ದುಂ ಅತ್ಯಂತ ಸಚ್ಚರಿತರ್: **ತ್ರಿಷಷ್ಟಿಪು,** ೧. ೫೫)

**ಪರಾಗ** – ಹೂವಿನ ಧೂಳಿ (ಕುಸುದ ರಜಂ ಪರಾಗಂ: **ಅಭಿಧಾವ,** ೧. ೭. ೧೧); ಧೂಳು ೦ಧೂಳಿ ರಜಂ ಪರಾಗಂ: **ಅಭಿಧಾವ,** ೧. ೧೫. ೧೩)

**ಪರಾಗಪಾಂಸು** – ಪರಾಗ (ಕುಸುಮತರುಗಳ್ಮರುದಾಹತಿಯಿಂ ಪರಾಗಪಾಂಸುಪ್ರಸರಂಬೆರಸರಲಂ ಸುರಿದಪುವು: **ಜಗನ್ನಾವಿ,** ೪. ೭೦)

**ಪರಾಙ್ಮುಖ** – ಬೇರೆಡೆಗೆ ಮುಖ ತಿರುಗಿಸಿದವನು, ವಿಮುಖ (ತಮಗೆನಿತುಂ ಸಮಚಿತ್ತಮಿಲ್ಲದಿರ್ದೊಡಂ ಸಮ್ಮುಖಕ್ಕೆ ಬಂದ ಪ್ರಾಣಿಮಾತ್ರಕ್ಕೆ ಪರಾಙ್ಮುಖರಾಗಲಾಗದು: **ಪಂಚತಂತ್ರ,** ೮೫ ವ)

**ಪರಾಭೂತಿ** – ಸೋಲು, ಅವಮಾನ (ಪರ್ಬಿದತ್ತು ಎಣ್ದೆಸೆಯೊಳ್ .. .. ಅಪಯಶಂ ಈ ಶಬರನಿನೊಗೆದ ಪರಾಭೂತಿವೆತ್ತ ಕಾರಣದಿಂದಂ: **ಶಬರಶಂ,** ೪. ೯೫)

**ಪರಾಮರ್ಶೆ** – ವಿವೇಚನೆ (ಆಯೆಂಬುದು ಪೂರ್ವಪರಾಮರ್ಶೆಗಂ ಒದಗುವುಗುಮಾ ರೂಢಿಗಂ ಕವೀಶ್ವರಮತದಿಂ: **ಶಬ್ದಮದ,** ೧೮೦)

**ಪರಾಮೃಷ್ಟ** – ನಾಶವಾದುದು (ಅನಂತವೀರ್ಯನೀ ಕ್ಷೇತ್ರದೊಳ್ ಅನೇಕಕಾಲಂ ಪರಾಮೃಷ್ಟಮಾದ ಮುಕ್ತಿಮಾರ್ಗಮಂ ಸಮಜುವೆನೆಂಬಂತೆ: **ಆದಿಪು,** ೧೦. ೬೫ ವ)

**ಪರಾಯಣ** – ತತ್ಪರ (ಅವರೊಳಗೆ ದೇವಾಪಿ ನವಯೌವನಪ್ರಾರಂಭದೊಳೆ ತಪಃ ಚರಣ ಪರಾಯಣನಾದಂ; **ಪಂಪಭಾ,** ೧. ೬೫ ವ);

**ಪರಾರ್ಥಚರಿತ** – ಅನ್ಯರ ಹಿತದಲ್ಲಿ ಆಸಕ್ತ (ಉದ್ಧುರತೇಜೋನಿಳಯಂ ಪರಾರ್ಥಚರಿತವ್ಯಾಪಾರಂ ಎಂದಂದು ಖೇಚರಂ ಆನಂದದಿನೀಯೆ ನಂದನೆಯರಂ: **ಕರ್ಣನೇಮಿ,** ೪. ೧೧೪)

**ಪರಾರ್ಥ್ಯ** – ಅತ್ಯುತ್ಕೃಷ್ಟವಾದ (ಪರಮಜಿನಮಾಲೆ .. .. ನಿರಂತರಮೀಗೆ ಭವ್ಯಮಾಲೆಗೆ ಪರಾರ್ಥ್ಯಗುಣರತ್ನ ಮಾಲೆಯಂ ದಯೆಯಿಂದಂ: **ಆದಿಪು,** ೧. ೧೫)

**ಪರಾರ್ಧ್ಯ** – ಅತ್ಯುತ್ಕೃಷ್ಟವಾದ (ಪರಾರ್ಧ್ಯಮಪ್ಪ ಸುವರ್ಣರತ್ನಾದಿಗಳೊಳ್ ಎನಗಪ್ಪ ಭಾಗಮಂ ಕೊಡುವುದೆಂದು: **ಚಾವುಂಪು,** ಪು. ೪೫೪. ಸಾ. ೩೨)

**ಪರಾರ್ಧ್ಯಕೂಟ** – ಶ್ರೇಷ್ಠವಾದುದರ ಕೂಡುವಿಕೆ (ಒಡವುಟ್ಟಿದ ತಳದಳಿಸುವ ತುಡುಗೆಯ ದುಗುಲದ ನಮೇರುದಾಮಕದೊಳ್ ಪಚ್ಚುಡಿದುದು ಪರಾರ್ಧ್ಯಕೂಟದ ಬೆಡಂಗೊಡಂಬಟ್ಟುದು ಇರ್ವರುಂ ಇಂದ್ರರೊಳಂ: **ಶಾಂತಿಪು,** ೯. ೨೩೦)

**ಪರಾವರ್ತನ** – ಸುತ್ತುಹಾಕುವುದು (ಭವಪರಿಣಾಮ ಪರಾವರ್ತನದಿಂ ಬಂದು ವಿಂಧ್ಯಾಟವೀಮಧ್ಯದೊಳ್ ಸೋಮನಾಮಧೇಯ ತಾಪಸಂಗಂ ಶ್ರೀದತ್ತೆಗಂ ಮಗನಾಗಿ: **ಶಾಂತಿಪು,** ೯. ೯೧ ವ); ಬದಲಾವಣೆ (ಇರ್ವರ್ ದೇವಿಯರ್ ಆಕೃತಿಯ ಪರಾವರ್ತನದಿಂ ಮಾನವಸ್ತ್ರೀ ರೂಪದಿಂ ಪ್ರಿಯಮಿತ್ರೆಯಂ ನೋಡಲ್ಬಂದು: **ಶಾಂತಿಪು,** ೯. ೧೦೧ ವ)

**ಪರಾವೃತ್ತವದನ** – ಮುಖ ತಿರುಗಿಸಿಕೊಂಡ [ವನು] (ಪೊಸಗೆಂಪು ಪಸರಿಸಿದ ಕಣ್ಗಳಂ ಬಲ್ಪಿಂ ಬರೆತೆಗೆದು ಮಾನವಮದನಂ ಪರಾವೃತ್ತವದನನಾಗೆ: **ಲೀಲಾವತಿ.** ೪. ೧೪೬ ವ)

**ಪರಾಶರ** – ವ್ಯಾಸಮುನಿಯ ತಂದೆ, ಸ್ಮೃತಿಕಾರ (ಸತ್ಯವತಿಗೆ ಪುನಃಕನ್ಯಾಭಾವಮಂ ದಯೆಗೆಯ್ದು ಪರಾಶರಂ ಪೋದಂ: **ಪಂಪಭಾ,** ೧. ೬೯ ವ)

**ಪರಾಶರತನೂಜ** – ವ್ಯಾಸ (ಪರಿಕಿಸುವೈ ಪರಾಶರತನೂಜ: **ಸಮಯಪ,** ೧೦. ೧೭೫)

**ಪರಾಶರಾತ್ಮಜ** – ವ್ಯಾಸ (ಮುಟ್ಟೆ ಕುಕ್ಷಿಯಂ ಮುಳಿಸಿಂ ಸಂದ ಪರಾಶರಾತ್ಮಜಾಕೃತಿಯೆ ಪಿಡಿದುದೊ ಬೆರಲ ಎಂಬರ್: **ಸಮಯಪ,** ೧೦. ೧೭೬)

**ಪರಾಸು** – [ಪರ+ಅಸು] ಪ್ರಾಣ ಹೋದ (ಪುಟ್ಟಿದಾಗಳೆ ಮಾತಾಪಿತೃಯುಗಳಂಗಳ್ ಸೀಂತುಮಾಗುಳಿಸಿಯುಂ ಪರಾಸುಗಳಾಗೆ ನಿಜಶರೀರಂಗಳ್ ಮಂಜು ಕರಗುವಂತೆ ಕರಗೆ: **ಆದಿಪು,** ೫. ೪೧ ವ)

**ಪರಿ** – ಹರಿ, ಮುಂದೆ ಸರಿ (ಪೊಳೆದು ಪರಿವ ಪೊಳೆವುಲ್ಲೆಗಳುಮಂ ತಲೆಯಂ ಕುತ್ತಿ ವಿಶಾಲಂಬರಿವ .. .. ಸೋಂಕಿ ಪರಿವೆಯ ಎಯ್ಗಳುಮಂ ತಡಂಮೆಟ್ಟಿ .. .. ಪಲವನೆಚ್ಚು: **ಪಂಪಭಾ,** ೫. ೪೮ ವ); ಕೊರಕಲು (ಸಮಭೂಮಿಯೆಲ್ಲಂ ದರಿವಿರ್ದು ಪರಿವಿರ್ದು ಪಳ್ಳಮುಂ ಕೊಳ್ಳಮುಂ ಆದೊಡೆ: **ಹರಿವಂಶ,** ೧೧. ೬೨ ವ): ರೀತಿ (ಪೂಜೆಯೊಳ್ ಎಂದಿನ ಪರಿ ತಪ್ಪೆ ದೇವಿ ತಪ್ಪದೆ ಮಾಣಳ್: **ಯಶೋಧಚ,** ೧. ೪೧)

**ಪರಿಕಣೆ** – ಜಾಡು (ರವಿರಥದ ಗಾಲಿಯ ಪರಿಕಣೆಯನೆ ಪೊನ್ನ ಕೋಂಟೆ ಸೊಗಯಿಸಿ ತೋರ್ಕುಂ: **ಆಚವರ್ಧ,** ೧. ೫೦); ಕಾಲುವೆ

**ಪರಿಕರ** – ಸಂಬಂಧಿಸಿದ ಸಾಮಗ್ರಿ (ಸಕಳಸುಖ ಪರಿಕರಂಗಳಂ ಸಲಿಸಿ ಮನಮಂ ಸೆಱೆಗೆಯ್ವಂತೆ: **ನೇಮಿನಾಪು,** ೫. ೫ ವ); ಸಮೀಪ; ಸಮೂಹ (ದೊರೆಕೊಳಿಸುಗೆ ನಿನಗೆ ತಡೆಯದಾ ಪುರುಪರಮೇಶ್ವರನ ನಿರತಿಶಯಗುಣಪರಿಕರಮುಂ ತತ್ಪ್ರಾತಿಹಾರ್ಯಮುಂ ಮಂಗಳಮಂ: **ಆದಿಪು,** ೧೨. ೫೩)

**ಪರಿಕಳಿತ** – ಒಗ್ಗೂಡಿದ (ಆಗಳ್ ಆ ಸಮಯೋಚಿತ ಸುವಸ್ತು ಸಂಚಯ ಪರಿಕಳಿತಪಾಣಿಗಳಪ್ಪ ಗೀರ್ವಾಣರಮಣೀಜನಂ: **ಶಾಂತೀಶ್ವಪು,** ೧೪. ೪ ವ)

**ಪರಿಕಲಿಸು** – ಕೂಡು, ಸೇರು (ಪರಿಕಲಿಸಿ ಪರಿವ ಕರ್ಪೂರರಸದ ಪರಿಕಾಲೊಳ್ ಕಾಲಂ ನೀಡಿ: **ಲೀಲಾವತಿ,** ೧೧. ೫೬ ವ)

**ಪರಿಕಲ್ಪಂಗೆಯ್** – ನಿರ್ಧರಿಸು ಪರಿಕಲ್ಪಂಗೆಯ್ದದನ್ನಂ ಕುಡದಮರಕುಜಂ ಪೆರ್ಚು ಕುಂದುಳ್ಳುದಾ ಸಾಗರಂ: **ಕುಸುಮಾಕಾ,** ೨. ೧೩೦)

**ಪರಿಕಾಲ್** – ಕಾಲುವೆ (ಜಲಜಲನೆ ಒಱ್ಱುತಿರ್ಪ ಪರಿಕಾಲ್ ಪರಿಕಾಲೊಳ್ ಅಳುರ್ಕೆಗೊಂಡ ನೈದಿಲ ಪೂ .. .. ಸಿರಿ ನೋಡುಗುಮಾ ವನಾಂತರಾಳದೊಳ್: **ಪಂಪಭಾ,** ೧. ೫೨)

**ಪರಿಕಾಱ** – ಓಡುವವನು, ದೂತ (ಪರಿಜನಮುಂ ಆಪ್ತಜನಮುಂ ಪರಿಕಾಱರುಂ ಓಜೆವಿಡಿಯುಂ ಒಡವರೆ ವನಯದ್ವಿರದನದ ಬಂಧನ ಕೌತುಕಂ ಅರಣ್ಯಮಂ ಮುಟ್ಟೆವಂದಂ ಅಂದು ನರೇಂದ್ರಂ: **ಪಂಪರಾ,** ೪. ೧೧೮)

**ಪರಿಕಿಸು** – [ಪರೀಕ್ಷಿಸು] ಪರಿಶೀಲಿಸು (ಪರಿಕಿಪೆನೀ ಮೃಗೋದ್ಭವದ ಕಂಪುಮನೀಕೆಯ ಸುಯ್ಯ ಕಂಪುಮಂ: **ಪಂಪಭಾ,** ೮. ೬೦)

**ಪರಿಕೃತ** – ಸುತ್ತುವರಿಯಲ್ಪಟ್ಟ (ಒಂದು ದಿವಸಂ .. .. ಅಂತಃಪುರಾಂಗನಾಜನಸಂಗತಂ ಅಖಿಳಪ್ರಧಾನಪರಿವಾರ ಪರಿಕೃತನುಮಾಗಿರೆ: **ಚಂದ್ರಪ್ರಭು,** ೫. ೨ ವ)

**ಪರಿಕ್ರಮ** – ಸುತ್ತುವುದು, ಸಂಚಾರ (ಚರಣದ ಚಾರಿಯ ಚಲ್ಲಿಯ ಪರಿಕ್ರಮಕ್ರಮದ ಭಂಗಿಗಳ್ ನೆಗಟ್ದೆಡೆಯೊಳ್: **ಆದಿಪು,** ೯. ೩೯)

**ಪರಿಕ್ರಮಸಂಧಿ** – ಶತ್ರುವಿನೊಡನೆ ಮಾಡಿಕೊಳ್ಳುವ ಹದಿನಾರು ಬಗೆಯ ಸಂಧಿಗಳಲ್ಲಿ ಒಂದು; ಶತ್ರುವಿಗೆ ಅರ್ಧ ಸಂಪತ್ತಿತ್ತು ಮಾಡಿಕೊಳ್ಳುವ ಸಂಧಾನ (ಭಂಡಾರಮನಕ್ಕೆ ಅದಱೊಳರ್ಧಮನಕ್ಕೆ ಕೊಟ್ಟು ದೇಶಪ್ರವೃತ್ತಿಯಂ ರಕ್ಷಿಸುವ ಸಂಧಿ ಪರಿಕ್ರಮಸಂಧಿಯೆಂಬುದಕ್ಕುಂ: **ಪಂಚತಂತ್ರ,** ೩೦೭)

**ಪರಿಕ್ರುದ್ಧ** – ಬಹಳ ಕೋಪಗೊಂಡ (ಭವಬದ್ಧವೈರಮಂ ತಿಳಿದು ವಿಭಂಗಜ್ಞಾನದಿಂದೆ ಪರಿಕ್ರುದ್ಧಮನರ್ ನವಖಂಡಮಾಗೆ ಮಾೞ್ಪರ್: **ಮಲ್ಲಿನಾಪು,** ೧೩. ೧೦೪)

**ಪರಿಕ್ಷಯ** – ವಿನಾಶ ಕಲ್ಪವೃಕ್ಷಪರಿಕ್ಷಯದೊಳ್ ಪ್ರಜಾಜೀವನೋಪಾಯಹೇತುಗಳ್ ಅಕೃಷ್ಟಪಚ್ಯಂಗಳಾಗಿ ಬೆಳೆದೆಱಗಿರೆಯುಂ: **ಆದಿಪು,** ೬. ೭೨ ವ)

**ಪರಿಕ್ಷಿಪ್ತ** – ಸುತ್ತುವರಿಯಲ್ಪಟ್ಟ (ಜಲನಿಧಿವಳಯದಿಂ ಪರಿಕ್ಷಿಪ್ತಮಾಗಿ ಸೊಗಯಿಸುವ ಜಂಬೂದ್ವೀಪದ ಭಾರತವರ್ಷದ ಸಕಲಜಗತೀಜನಸ್ತುತ್ಯ ದಾಕ್ಷಿಣಾತ್ಯಮೆಂಬ ಜನಪದಮುಂಟು: **ಪಂಚತಂತ್ರ,** ೫೯ ವ)

**ಪರಿಖಾ[ಖೆ]** – ಕಂದಕ (ವೀಚೀಚಯಜಳಧಿನಿಭವಿಭವ ಪರಿಖಾಪರಿವೃತಮುಂ: **ಆದಿಪು,** ೩. ೮ ವ)

**ಪರಿಖಾವಾರಿ** – ಕಂದಕದ ನೀರು (ಕೋಂಟೆಗೆ ಧಾತ್ರಂ ಜೀವಂಬೊಯ್ದಂತಿರೆ ಪರಿಖಾವಾರಿ ತರಂಗಬಿಂಬ ತರಳಿತಮೆಸೆಗುಂ: **ಲೀಲಾವತಿ,** ೭. ೨)

**ಪರಿಖೆ** – ಕಂದಕ (ಮೇರು ನೃಪ ಪ್ರಾಸಾದಂ ವಾರಿಧಿ ನಿಜಪರಿಖೆ ವಜ್ರವೇದಿಕೆ .. .. ಎಂಬಿನಂ ಪುರಮೆಸೆಗುಂ: **ಯಶೋಧಚ,** ೧. ೨೮)

**ಪರಿಗೆ** – ಗುರಾಣಿ, ಅಡ್ಡಣ (ಪರಿಗೆಗಳಲ್ಲಿ ಕೀಲಿಸಿದ ಗೆಜ್ಜೆಯ ಬಚ್ಚಣೆವೆತ್ತ ಬಿಲ್ಗಳಚ್ಚರಿಗೆಡೆಯಾದ ಕನ್ನಡಿಯ ಕೂರ್ಪಿನ ಡೊಂಕಣೆಯಲ್ಲಿ ಜುಂಜಿನಂತಿರೆ ಮಿಳಿರ್ದಾಡುತಿರ್ಪ: **ಕಬ್ಬಿಗಕಾ,** ೨೯೪)

**ಪರಿಗೆಡು** – ಹದಗೆಡು, ದಾರಿ ತಪ್ಪು (ಕೆಡೆದುವು ಬೆಟ್ಟು ಕೂಡೆ ಪರಿಗೆಟ್ಟುವ ಪೆರ್ದೊಱೆ ಭೂಜರಾಜಿ ನೇರ್ಪಡೆ ಪಡಲಿಟ್ಟು ಸೊಪ್ಪುಸೊವಡಾದುವು: **ಕರ್ಣನೇಮಿ,** ೧೧. ೫೬)

**ಪರಿಗೊಳ್** – ಪಲಾಯನ ಮಾಡು, ಓಡು [ಆಡಲಾಡಿಸಲ್ ಪಾಟೆಯಂ ನಿಱಿಸಲುಂ ಪರಿಗೊಳಲ್ ತೊವಲಿಕ್ಕಲೊಳಗಂ ಬರಲ್ ಕಾಡ ಬೇಲಿಯಂ ಮಾರ್ಕಾಡನಱಿಯಲುಂ .. .. ಮಾಡಲ್ ಮಾಡಿಸಲ್ .. .. ನೀನೆ ಬಲ್ಲೆ: **ಪಂಪಭಾ,** ೫. ೪೧); ಹರಡು

**ಪರಿಗ್ರಹ** – ಸ್ವೀಕರಣ; ಸಂಸಾರ, ಪರಿವಾರ (ಪರಿಭವಂಬಟ್ಟು ಚಿಂತಿಸುತ್ತಿರ್ದ ಎನ್ನಂ ಕಂಡು ಈತಂ ಏತರ್ಕಂ ಕ್ಷಮನಲ್ಲ ಎಂದು ಎನ್ನ ಪರಿಗ್ರಹಂ ಪರೆದು ಪೋದುವು: **ಪಂಚತಂತ್ರ,** ೪೩೬ ವ); [ಜೈನ] ಮಮತೆ, ಅನವಶ್ಯಕ ವಸ್ತುಸಂಗ್ರಹ (ತ್ಯಾಜ್ಯಂ ಪರಿಗ್ರಹಂ ದಲ್ ಪ್ರಾಜ್ಯಂ ತಪಂ ಅದುವೆ ಪಾಲ್ಯಮಾ ಕೈವಲ್ಯಂ: **ಅಜಿತಪು,** ೬. ೭೭)

**ಪರಿಘ** – ಅಗುಳಿ (ಧರೆಯಂ ದ್ವಾದಶ ಚಕ್ರವರ್ತಿಗಳಿಗಿತ್ತಲ್ ದೇವ ನಿಮ್ಮೀ ಭುಜಾಪರಿಘಕ್ಕೊಪ್ಪಿಸಿ ಬೇೞ್ಪುದಂ ಪಡೆದುವು: **ಪಂಪರಾ,** ೬. ೮೪); ಕಬ್ಬಿಣದ ಒಂದು ಆಯುಧ (ವೀರವೈರಿಕ್ಷಿಪ ಗಜಘಟಾಟೋಪ ಕುಂಭಸ್ಥಳೀ ಭೇದನಂ ಉದಗ್ರ ಉದ್ಧ ಅಸಿ ಭಾಸ್ವತ್ ಭುಜಪರಿಘನಂ ಆರೂಢಸರ್ವಜ್ಞನಂ: **ಪಂಪಭಾ,** ೧. ೫೧); ಆಯುಧ (ಕುರುರಾಜಾನುಜರಂ ಪ್ರಭಂಜನಸುತಂ ಕೊಂದಿಕ್ಕುಗುಂ ಕೌರವೇಶ್ವರನ ಊರುದ್ವಯಮಂ ಗದಾಪರಿಘದಿಂ ನುರ್ಗೊತ್ತುಗುಂ: **ಗದಾಯು,** ೫. ೫೮)

**ಪರಿಘೂರ್ಣಿತ** – ಮೊರೆಯುತ್ತಿರುವ (ಸಾಹಸಿಕಂ ಮುರಾರಿ ಪುಗುತಂದಂ .. .. ಪರಿಘೂರ್ಣಿತಗೀತವಾದ್ಯಸಂದೋಹಮಂ .. .. ಶಸ್ತ್ರಗೇಹಮಂ: ಜಗನ್ನಾವಿ, ೬. ೨೮)

**ಪರಿಚಾರಿಕೆ** – ಪರಿಚಾರಕಿ (ಮೆಲ್ಲಮೆಲ್ಲನೆ ಕೆಲಕ್ಕೆ ವಂದು ಕುಂಚದ ಅಡಪದ ಡವಕೆಯ ಪರಿಚಾರಿಕೆಯರೆಲ್ಲರುಮಂ ಕಣ್ಗೆತ್ತಿ ಕಳೆದು: **ಪಂಪಭಾ,** ೪. ೬೧ ವ)

**ಪರಿಚೆ** – ಸುಗಂಧ ದ್ರವ್ಯ, ಅನುಲೇಪನ (ಕತ್ತುರಿಯೊಳಂಟಪರಿಚೆಯುಂ ಪರಿಚೆಯೊಳ್ ಪರಿಚಯಂಪಡೆದ ಮದವಟ್ಟೆಯುಂ: **ಆದಿಪು,** ೪. ೪೧ ವ)

**ಪರಿಚೋದಿಸು** – ಮುನ್ನುಗ್ಗಿಸು (ಸ್ಯಂದನಾಶ್ವಂಗಳಂ ಒಂದೆ ದೊರೆಯೊಳ್ ಪರಿಯೆ ಪರಿಚೋದಿಸಿ ಬಾಣಪಾತ ಪ್ರಮಾಣದೊಳ್ ನಿಱಿಸುವುದುಂ: **ಶಾಂತಿಪು,** ೪. ೧೦ ವ)

**ಪರಿಚ್ಛದ** – ಮುಸುಕು (ಏನೆಸೆದಿರ್ದನೊ ದೇಹದೀಪ್ತಿ ಚಂದ್ರಾತಪಮಂ ಪಳಂಚಲೆಯೆ ನೀಲ ಪರಿಚ್ಛದದಿಂ ಹಲಾಯುಧಂ: **ಪಂಪರಾ,** ೧೨. ೧೧)

**ಪರಿಚ್ಛೇದ** – ಕತ್ತರಿಸುವುದು (ಈ ಅಪಾಯಕ್ಕೆ ವಂಚನೋಪಾಯಂ ಆವುದುಂ ಇಲ್ಲ ಎನಗೆ ಪರಿಚ್ಛೇದಮೆ ಕಾರ್ಯಂ: **ಪಂಚತಂತ್ರ,** ೧೩೮ ವ); ನಿರ್ಣಯ, ನಿಷ್ಕರ್ಷೆ (ಒಱೆಯಿಂದುರ್ಚಿದ ಬಾಳ್ವೊಲಾದುದೊ ಪರಿಚ್ಛೇದಂ ಧರಾಧೀಶನಾ: **ಆದಿಪು,** ೬. ೨೩)

**ಪರಿಚ್ಛೇದಿ** – ನಿರ್ಧರಿಸಿದವನು, ನಿಶ್ಚಯ ಬುದ್ಧಿಯವನು (ಇದೇಂ ಪುರುಪರಮೇಶ್ವರಸುತರ್ ಪರಿಚ್ಛೇದಿಗಳೋ: **ಆದಿಪು,** ೧೪. ೧೩೯)

**ಪರಿಚ್ಛೇದಿಸು** – ಪರಿಚ್ಛೇದಂಗೆಯ್ (ಎಂದು ಪರಿಚ್ಛೇದಿಸಿ ಮನಮಱಿಯೆ ನುಡಿದು: **ಆದಿಪು,** ೨. ೪೯)

**ಪರಿಜನ** – ಸೇವಕಜನ (ಅಂತಾ ಪುರಜನ ಪರಿಜನಂಗಳ್ಗಳಸಿ ಬಱಿದೆ ನಲಿದು ನರ್ತಿಸುವ ಕಾರಣವೇನು: **ತ್ರಿಷಷ್ಟಿಪು,** ೨೧. ೬ ವ)

**ಪರಿಜಪನವಿಧಿ** – ಮಂತ್ರಪಠಣ (ನೆಗಟ್ದ ಅರ್ಧಮಾಗಧಿಯಂ ನೆಗಟ್ದ ಅಜಿತಾನನದೊಳ್ ಆಗಳುಂ ಅಸ್ಫುಟವಚನಂ ನೆಗಟ್ದತ್ತು ಅವ್ಯಕ್ತಾಕ್ಷರ ನಿಗೂಢ ಪರಿಜಪನವಿಧಿಗೆ ಅದೇಂ ಚೆಲ್ವಾಯ್ತೋ: **ಅಜಿತಪು,** ೫. ೬೫)

**ಪರಿಜು** – ಆಕಾರ, ಪ್ರತಿಮೆ (ಈ ಪರಿಜು ಈ ತನುಚ್ಛವಿಯಯನೀ ತೆಂಬೆಲರಿಲ್ಲದೆ ಮಾಣ್ದ ಮಲ್ಲಿಕೋಜ್ಜ್ವಲಮುಕುಳಕ್ಕಂ: **ಆದಿಪು,** ೩. ೨೦); ರೀತಿ, ಬಗೆ; ಭಂಗಿ (ಇವಳ ಈ ಪರಿಜು ಏಂ ಕಡು ನೇರಿತಾದುದೋ: **ಮಲ್ಲಿನಾಪು,** ೭. ೫೨); ರೂಪು, ವೇಷ (ಶಿವನ ಜಡೆಮುಡಿಯ ಶಶಿಕಳೆ ಭುವನದೊಳೀ ಕುವರ ಪರಿಜುವಡೆದು ಉದಯಿಸಿತೆಂಬವೊಲೆಸೆದು: **ರಾಜಶೇಖ,** ೪. ೬೪)

**ಪರಿತವಿಸು** – ನೇಮಿಸು (ಹಿತರುಂ ಅಹಿತರುಂ ಅಪ್ಪ ಪರಿಚಾರಕಿಯರಂ ಪರಿತವಿಸಿ ಪುಲಿಯಂತೆ ಪಾರ್ದಿರ್ಪರ್: **ನೇಮಿನಾಪು,** ೭. ೨೮ ವ)

**ಪರಿಡೋಣಿ** – ನೀರು ಹರಿಯುವ ದೋಣಿ (ಕೇತಕೀದಳಂಗಳ ಪರಿಡೋಣಿಯಿಂ .. .. ಸಮೆದಾಡುವ ಊಟಳಂಗಳಿಂ: **ಕಾದಂಬ,** ೭. ೨೧)

**ಪರಿಣತ** – ಪಕ್ವವಾದ (ನೀಹಾರಶಕಲ ಪರಿಣತ ಕಪಿತ್ಥಫಳಪರಿಮಳಮಧುರದಧಿಯುಮಂ: **ಆದಿಪು,** ೧೧. ೨೬ ವ); ಸಮರ್ಥ (ಪರಿಣತಕವೀಂದ್ರವದನಾಜಿರದೊಳ್ .. .. ರಂಜಿಸೆ ನರ್ತಿಪ ಸರಸ್ವತೀಲಾಸ್ಯಭೇದಮಂ ಜಡನಱಿಯಂ: ಮಲ್ಲಿನಾಪು, ೧. ೩೪; ನಿಪುಣ (ಪರಿಣತನಪ್ಪುದಱಿಂ ವ್ಯಾಕರಣದೊಳ್ ಅವಯವದಿನವಱ ಶಬ್ದಾರ್ಥಮನಚ್ಚರಿವಟ್ಟು ಭಾವಿಸುತ್ತಂ: **ಧರ್ಮಾಮೃ,** ೮. ೨೧); ಪಾಂಡಿತ್ಯವುಳ್ಳ (ಸುಭಾಷಿತಪಠಣಪರಿಣತರುಂ ಎನಿಸಿದ ಕನ್ನಿಕೆಯರೊಡನೆ .. .. ಬಿಜಯಂಗೆಯ್ದಂ: **ಕಾದಂಬ,** ೬. ೯೨ ವ)

**ಪರಿಣತವಯಸ** – ಮುದುಕ (ಜೈನದೀಕ್ಷೆಗೆ ಮೆಯ್ಯಂ ತರುಣಜನಂಗಳೆ ತರ್ಪರ್ ಪರಿಣತವಯಸರ್ಕಳಪ್ಪವರ್ ಮೆಯ್ದಾರರ್: **ಆದಿಪು,** ೧೫. ೪೪)

**ಪರಿಣತಿ** – ಪಾಂಡಿತ್ಯ (ಭರವಶದಿಂದಂ ಕುಶನೊಳ್ ನಿರಂಕುಶಂ ಲಕ್ಷ್ಮಣಂ ಪಿತೃವ್ಯಂ ದಶಕಂಧರನೊಳ್ ನೆರೆವಂತಿರೆ ಶರಪರಿಣತಿಯಂ ನೆಱೆಯೆ ಮೆಱೆದು ಕಾದುತ್ತಿರ್ದಂ: **ಪಂಪರಾ,** ೧೬. ೧೩); ಮುಪ್ಪು (ದಶರಥಂ ಪಡೆದಂ ತನುಜಾತರಂ ವಯಃಪರಿಣತಿಯೊಳ್ ವಿಭಾಂಡಕ ಮುನಿ ವರಪ್ರಸಾದದಿಂ: **ಕಾದಂಬ,** ೨. ೫೨)

**ಪರಿಣದ್ಧ** – ವಿಶಾಲವಾದ (ಲೋಕದ ಚೆಲ್ವೆಲ್ಲಮಂ ಒಳಕೊಂಡು ರೇಖೆಗೊಂಡ ಲಾಟೀಲಲಾಮನ ಪರಿಣದ್ಧ ಕಂಧರಂ ಯುವರಾಜ ಕಂಠೀಕಾಭರಣಮಂ ಕಟ್ಟುವುದರ್ಕೆ ನೋಂತು: **ಪಂಪಭಾ,** ೨. ೩೯ ವ)

**ಪರಿಣಮಿಸು** – ಸಮಾಧಾನದಿಂದಿರು, ತೃಪ್ತಿಪಡು (ಅದಱಿಂ ನಿನ್ನರ್ಥದೊಳ್ ಆದ ಅಟಿಲಂ ಪತ್ತುವಿಟ್ಟು ಪರಿಣಮಿಸಿರ್ಪುದು ಎಂತೆನೆ: **ಪಂಚತಂತ್ರ,** ೪೩೭ ವ)

**ಪರಿಣಯನ** – ಮದುವೆ (ಪಸುರ್ವಂದರ್ ಅಳಂಕಾರಂ ಪಸೆ .. .. ಪರಿಣಯನಮನದೇನೆಸೆಗುಮೆ ಜಿನರಾಜಾರ್ಚನಂ ಒಸಗೆಯೆ ಮೇಲೊಸಗೆಯಲ್ತೆ: **ಸಮಯಪ,** ೧. ೧೧೮)

**ಪರಿಣಯನೋತ್ಸವ** – ಮದುವೆಯ ಸಮಾರಂಭ (ಪರಿಣಯನೋತ್ಸವಂ ರತಿಗನಂಗನೊಳಾಗೆ ವಸಂತಕಾಂತೆಯರ್ ನೆರೆದು: **ಆದಿಪು,** ೧೧. ೧೧೭)

**ಪರಿಣಾಮಪಥ್ಯ** – ಕೊನೆಗೆ ಮಂಗಳಕರವಾದ ಪರಿಣಾಮಪಥ್ಯಮುಮಪ್ಪ ಕೃತ್ಯಮಂ ನಿಜಮನಸ್ಶರಸಚಿವ ಸಹಸಮಾಲೋಚನದಿಂ ಕಂಡು: **ಚಂದ್ರಪ್ರಪು,** ೯. ೧೨೭ ವ)

**ಪರಿಣಾಮರಮಣೀಯ**– ಕೊನೆಗೆ ಚಂದವಾಗುವುದು (ಅವಿನೀತ ರಾಜಪುತ್ರನೊಳಾಳೋಚಿಸಿದ ಮಂತ್ರದಂತೆ ಪರಿಣಾಮ ರಮಣೀಯಮಾಗದೆ ಕಿಡೆಯುಂ: **ಗದಾಯು,** ೭. ೨೬ ವ)

**ಪರಿಣಾಮಶುದ್ಧಿ** – [ಜೈನ] ಮನಃಪರಿಪಾಕ (ಪರಿಣಾಮಶುದ್ಧಿ ದೊರೆಕೊಳೆ ಪುರುಪರಮೇಶ್ವರಪದಾಬ್ಜಭಕ್ತಿಯ ಭರದಿಂ ಭರತಂಗೆ: **ಆದಿಪು,** ೧೫. ೨೨)

**ಪರಿಣಾಹ** – ವೈಶಾಲ್ಯ, ಹರಹು (ಪೆಸರಿಂದಂತದು ಸರ್ವಾರ್ಥಸಿದ್ಧಿಪಿಣಾಹದಿಂದೆ ಜಂಬೂದ್ವೀಪಕ್ಕೆ ಸಮಂ: **ಚಂದ್ರಪ್ರಪು,** ೧೧. ೨೮)

**ಪರಿಣೆಚಿತ** – ತುಂಬಿಕೊಂಡ (ಪರಿಣಚಿತ ವಿಶಾಳಹರಿನೀಳರುಚಿ ರುಚಿರವಿರಚಿತ ನೀಳಾಬ್ದರವಿಭ್ರಮಕುಟ್ಟಿಮದೊಳ್: **ಸುಕುಮಾಚ,** ೧೨. ೪೨ ವ)

**ಪರಿತಂ ಮಾಡು** – ಎದುರಾಗಿಸು (ಚಕ್ರಾಯುಧದೊಳ್ ತಮ್ಮಂಗಬಾಹ್ಯವಸ್ತುವಂ ಪರಿತಂ ಮಾಡುತ್ತಿರೆ: **ಶಾಂತಿಪು,** ೧೦. ೧೧೬ ವ)

**ಪರಿತಪ್ತ** – ಚೆನ್ನಾಗಿ ಕಾದ (ನುಣ್ಮಣಲಂ ಮಣಲ್ದೀಂಟೆ ಗೆತ್ತದಱ ಪರಿತಪ್ತ ಲೋಹರಜಸ್ಸಿಕತಳತಳದೊಳ್ ಮೆಯ್ಯನೀಡಾಡುವುದುಂ: **ಶಾಂತಿಪು,** ೭. ೯೧ ವ);

**ಪರಿತರ್** – ಧಾವಿಸು, ಆಗಮಿಸು (ಎಂದು ಗಗ್ಗರಿಕೆಗೊಳ್ವ ಸರಮಂ ಕರ್ಣಪರಂಪರೆಯಿಂ ಕೇಳ್ದು ಸಿಂಹಬಲನ ಒಡವುಟ್ಟಿದರ್ ನೂರ್ವರ್ ಕೀಚಕರುಂ ಪರಿತಂದು ಮುಳಿಸಿನೊಳ್: **ಪಂಪಭಾ,** ೮. ೭೯ ವ); ಹರಿದು ಬರು (ಹಿಮಾದ್ರಿಶೈಳಾಗ್ರದಿನಿಟೆತಂದಮರಾಪಗೆ ಕೆಟಗೆ ನಿಂದ ಜಿನಬಿಂಬದ ಮೇಲಮರ್ದಿರೆ ಪರಿತಂದುದು ಅದಱಿಂದದು ಪಾವನಮಾಯ್ತು: **ಸಮಯಪ,** ೨. ೫೩)

**ಪರಿತಾಪ** – ಬೇಗುದಿ, ಕಾವು (ನವಘನಮಾಲಾರವದಿಂದ ಅವನೀದೇವಿಯ ನಿದಾಘಪರಿತಾಪಮಂ ಅಡಂಗುವವೋಲ್: **ಜಗನ್ನಾವಿ,** ೨. ೭೦)

**ಪರಿತುಷ್ಟ** – ತೃಪ್ತಿವಡೆದ (ಇದಂ ಪುಗಲಿಂ ಗಡಿಂ ಎಂದು ಬೇಟಕಾಱರಂ ಇರದೆ ಊಱೆ ಸಾಱೆ ಜಡಿವಂತೆ ಎಸೆಗುಂ ಸಹಕಾರಕೋಮಳ ಅಂಕುರಪರಿತುಷ್ಟ ಪರಪುಷ್ಟಗಳ ಧ್ವನಿ ನಂದನಂಗಳೊಳ್: **ಪಂಪಭಾ,** ೨. ೧೩)

**ಪರಿತ್ರಾಸ** – ಭಯ (ಅಂತು ಪರಿತ್ರಾಸನಿರ್ಯಾತ ಕಿರಾತಸಮಜಾತಮೊಡವರೆ ಪನ್ನತಿಕೆಯಿಂ ಬರ್ಪಾಗಳ್: **ರಾಜಶೇಖ,** ೫. ೧೨೦ ವ)

**ಪರಿದಾಡು** – ಓಡಾಡು (ಸುಟೆಯದು ಗಾಳಿ ಮೃಗಂ ಕೆಯ್ವಟೆಗಳ ಮೇತದೊಳೆ ತಣಿದಪುವು ಪಂದಿಗಳುಂ ಪಟನವಿರ್ ಇಕ್ಕಿದುವು ಆದಂ ಪಟು ಪರಿದಾಡಲ್ ಕರಂ ಬೆಡಂಗವನಿಪತೀ: **ಪಂಪಭಾ,** ೫. ೩೮)

**ಪರಿದಿಟ್ಟಿ** – ಚಂಚಲ ದೃಷ್ಟಿ (ಸರಸೇಕ್ಷಣದ ಸವಿನೋಟಮಂ ಉಪದೇಶಿಸುವಂತೆ ದೆಸೆವಡೆದು ಮುರಿದಿಟಿ ಪರಿದಿಟ್ಟಿ ನೆಱೆ ಮೆಱೆಯೆ: **ರಾಜಶೇಖ.,** ೧. ೧೩೫ ವ)

**ಪರಿದೇವನ** – ಗೋಳಾಟ (ಪರಿದೇವನಂ ವಿಳಾಪಂ; **ಅಭಿಧಾವ,** ೧. ೧೩. ೨೯)

**ಪರಿಧಾನ** – ಉಡುವ ಬಟ್ಟೆ (ಕಂಬುಲತಾ ಸುಲಲಿತವಣಾಂಬುಧಿ ಪರಿಧಾನಮಾಗೆ ಚೆಲ್ವಂ ಪಡೆದೀಜಂಬೂದ್ವೀಪಪ್ರಭುಗೆ: **ಆದಿಪು,** ೭. ೬೨); ಉಟ್ಟವನು (ನೀಲಾಂಬುಜಶ್ಯಾಮನುಂ ಕನಕಪಿಂಗಳ ಜಟಾಬಂಧಕಳಾಪನುಂ ದಂಡಕಪಾಳಹಸ್ತನುಂ ಕೃಷ್ಣಮೃಗತ್ವಕ್‌ಪರಿಧಾನನುಂ ಆಗಿ: **ಪಂಪಭಾ,** ೧. ೬೯ ವ);

ಉಡುಪು ತೊಟ್ಟವನು (ತಾಂ ಮಧುಪಾನಾಕ್ರೀಡಾನಿರತನಾಗಿ ಪೋಗಲ್ ಬಗೆದು ಚಿತ್ರಾಂಬರಪರಿಧಾನನುಂ .. .. ಸರ್ವಾಭರಣಭೂಷಿತನುಂ ಆಗಿ: **ಪಂಚತಂತ್ರ,** ೧೨೭ ವ)

**ಪರಿಧಾವನ** – ಧಾವಿಸುವುದು (ಸ್ವಕೀಯ ಪರಿಧಾವನ ವೇಗವಿಘಟಿತವೈರಿಬಾಲಶಕಟನೆಂಬ ಶಕಟನುಮಂ .. .. ಕರೆದು: **ಜಗನ್ನಾವಿ,** ೩. ೨೨ ವ)

**ಪರಿಧಿ** – ಸುತ್ತುಗೋಡೆ (ಪರಿಧಿ ಪ್ರಾಕಾರ ವಪ್ರನಾಮಂ: **ಅಭಿಧಾವ,** ೧, ೧೦. ೬೦; ಪ್ರಭಾಮಂಡಲ (ವಿಗತದಿಗಿಭವಾಶಾದೇಶಂ ಅಸ್ತಂಗತಾರ್ಕಂ ಗಗನಪರಿಧಿ ಯಾತಪ್ರಾಣವಾತಂ ಶರೀರಂ ಸೊಗಯಿಸದವೊಲ್: **ಪಂಪರಾ,** ೬. ೧೫೬)

**ಪರಿಧೂತ** – ತ್ಯಜಿಸಲ್ಪಟ್ಟ (ಪರಿಧೂತಕೇತುಭೂತಂ ಕುರಂಗನಪಹರಿಸೆ ಮುದವನೆಯ್ದುವಂ .. .. ಚಂದ್ರಂ: **ಅನಂತಪು,** ೧. ೧೦೫)

**ಪರಿಧೂಸರ** – ಧೂಳಿಡಿ (ಆ ಸೇನಾರಜದಿಂ ಪರಿಧೂಸರಮಾದ ಉರು ನಿಜಾಮಗಮಂ ತೊಳೆಯಲ್ಕೆಂದು: **ರಾಜಶೇವಿ,** ೬. ೨೭)

**ಪರಿಧೌತ** – ಚೆನ್ನಾಗಿ ತೊಳೆದ (ಶುಭ್ರಾವಹ ವಿಭ್ರಮಾಧರಪುಟಂ ಪರಿಧೌತ ಸುಪುತ್ರ ವಲ್ಲಿಯಪ್ಪಾ ವಿಳಸತ್ಕುಚಂ: **ಕುಸುಮಾಕಾ,** ೫. ೧೫೭)

**ಪರಿನಾಳ** – ನೀರು ಹರಿಯುವ ಕಾಲುವೆ (ಕರೆಗಣ್ಮುವ ನಿಜ ಲಾವಣ್ಯರಸಂ ಪರಿನಾಳಮಿಕ್ಕಿದತ್ತೆನೆ ತಂದಲ್ ಸುರಸುಂದರಿ ಚಂದನರಸಭರಿತ ಆಯತ ಕೇತಕೀದಲ ದ್ರೋಣಿಗಳಂ: **ಪಂಪರಾ,** ೧೬. ೯೦)

**ಪರಿನಾಳಿಕೆ** – ಪರಿನಾಳ (ಅಪರಿಮಿತಂ ಪೊಣ್ಮುವ ಬಾಷ್ಪಪಯೋಧಾರಾಳಿ ಪರಿವ ಪರಿನಾಳಿಕೆಯೊಂದುಪಮೆಗೆ ಬಂದಿರ್ದುದು: **ಕಾದಂಬ,** ೭. ೨೮)

**ಪರಿನಿರ್ವಾಣ** – [ಜೈನ] ಅರ್ಹಂತನ ದೇಹಾವಸಾನ (ಪರಿನಿರ್ವಾಣಮನೆಯ್ದಿದರ್ ಮುದದೆ ಪತ್ತೊಂಬತ್ತು ಮುಂ ತೀರ್ಥಕೃದ್ವರರ್: **ಪಾರ್ಶ್ವನಾಪು,** ೧೬. ೧೬೬)

**ಪರಿನಿರ್ವಾಣಕಲ್ಯಾಣ** – [ಜೈನ] ಅರ್ಹಂತನ ದೇಹಸಂಸ್ಕಾರ, ಪಂಚಕಲ್ಯಾಣಗಳಲ್ಲಿ ಕೊನೆಯದು (ಅಮರನಿಕಾಯಂ ಸುವಿಧೀಶ್ವರಂಗೆ ಪರಿನಿರ್ವಾಕಲ್ಯಾಣ ಮಹಾಪೂಜೆಯಂ ಮಾಳ್ಪ ಭಕ್ತಿಯಿಂ ಬಂದು: **ಪುಷ್ಪದಂಪು,** ೧೪. ೫೬ ವ)

**ಪರಿನಿರ್ವೃತಿ** – ಪರಿನಿರ್ವಾಣ (ಸರ್ವಾಂಗಮಲಧರಂ ಪರಿನಿರ್ವೃತಿಸೌಖ್ಯೋನ್ಮುಖಂ: **ಚಂದ್ರಪ್ರಪು,** ೯. ೨೦)

**ಪರಿನಿರ್ವೇಗ** – ಪರಮ ವೈರಾಗ್ಯ (ಸಂಸಾರಭೋಗ ಪರಿನಿರ್ವೇಗಂ ತಪಃಪ್ರೀತಿಯಿಂ .. .. ದೀಕ್ಷೆಗೊಂಡಂ: **ಪಂಪರಾ,** ೨. ೩೬)

**ಪರಿನಿಷ್ಕ್ರಮಣಕಲ್ಯಾಣ** – [ಜೈನ] ಪಂಚಕಲ್ಯಾಣಗಳಲ್ಲಿ ಒಂದು, ತೀರ್ಥಂಕರನು ತಪಸ್ಸಿಗೆ ತೆರಳುವ ಸಂದರ್ಭದಲ್ಲಿ ನಡೆಸುವ ಉತ್ಸವ (ಪರಿನಿಷ್ಕ್ರಮಣಕಲ್ಯಾಣಮನನಾಗಿ ನಿಶ್ಚಯಿಸಲೊಡಂ ಲೋಕಾಂತಿಕದೇವರ್ ಬಂದು: **ಶಾಂತಿಪು,** ೯. ೬೦ ವ)

**ಪರಿನೀರ್** – ಕಾಲುವೆ (ಪರಿವೊನಲೆ ಪರಿನೀರಾಗೆಯಂಕುರವೊತ್ತಿ ಬೆಳೆಯುತಿರ್ದ ಕರ್ಬಿನ ಮಡಲ್ಗಳುಮಂ: **ಪಂಚತಂತ್ರ,** ೧೯೦ ವ)

**ಪರಿಪಂಥಿ** – ಶತ್ರು (ಅರಾತಿ ಪರಿಪಂಥಿ ವಿದ್ವಿಷಂ ವಿದ್ವಿಷ್ಟಂ: **ಅಭಿಧಾವ,** ೨. ೧. ೧೦); ದರೋಡೆಕೋರ (ಪರಿಪಂಥಿ ಚೋರಕಂ ತಸ್ಕರಂ: **ಅಭಿಧಾವ,** ೧. ೧೧. ೮೧)

**ಪರಿಪಡು** – ಹರಿದುಹೋಗು (ಎನ್ನ ಮಿತ್ರನಪ್ಪ ಮೂಷಕದಿಂದಲ್ಲದೆ ಈ ಪಾಶಬಂಧನಂ ಪರಿಪಡದು: **ಪಂಚತಂತ್ರ,** ४೨೦ ವ); ಓಡಿ ಬರು (ಪರಿಪಟ್ಟು ಓರಂತೆ ಆಕಾಶಮಾರ್ಗದೆ ಬಂದು ಪಾಡಟಿದ ಸಖನಂ: **ಕಾದಂಬ,** ೧೦. ೧೯)

**ಪರಿಪಾಟಿದಪ್ಪು** – ಅಸ್ತವ್ಯಸ್ತವಾಗು (ಚಾಮರದ ಕೋಮಲಪವನ ಪರಿಯಟನದಿಂ ಪರಿಪಾಟಿದಪ್ಪ ಸುಳಿಗುರುಳೆಂಬ ತುಂಬಿಯ ಬಂಬಲಂ: **ಅನಂತಪು,** ೬. ೬೯ ವ)

**ಪರಿಪಾಡಿ** – ಕ್ರಮ (ತ್ರಿಶುದ್ಧಿಯೊಳ್ ಗುರು ಪರಿಪಾಡಿಯಿಂದ ಒಸೆದು ಬಂದಿದಿ ಧರ್ಮಮನೋತು ಕೇಳ್ದು: **ಹರಿವಂಶ,** ೨. ೫೯)

**ಪರಿಪಾಱು** – ನಿರೀಕ್ಷಿಸು (ಸರಸೀತುಹಾಸ್ಯೆ ನೀನೀ ಪುರದೊಳ್ ಮಾಱುವಿನಂ ಇಂತು ನಾಮೀ ಬನದೊಳ್ ಪರಿಪಱುತುಮಿರ್ದಪೆವು: **ಹರಿವಂಶ,** ೯. ೬೯)

**ಪರಿಪೀಡನ** – ಹಿಂಸಿಸುವುದು, ಹಿಸುಕುವುದು (ಗುರುಕುಚ ಪರಿಪೀಡನಪ್ರರೂಢಾಂಕುರ ಪುಳಕಾಹತಿಚಿಂತ್ಯಮಾನ ಚಿತ್ತೇಶ್ವರಿ: **ಲೀಲಾವತಿ,** ೧೩. ೯೩)

**ಪರಿಪ್ಲವ** – ಚಂಚಲ, ಅಸ್ತವ್ಯಸ್ತ (ವಸ್ತುಹೀನಂ ಅಭಿಧಾವಮುಂಟಕ್ಕುಂ ಅಪ್ಪೊಡೆ ಶಬ್ದಾರ್ಥಸಂಬಂಧಂ ಪಾರಿಪ್ಲವ ಪರಿಪ್ಲವಮಕ್ಕು: **ಶಾಂತಿಪು,** ೮. ೧೩೮ ವ)

**ಪರಿಪ್ಲಾವಿತ** – ತೇಲಾಡುವ (ವಿಗಳತ್ ಆನಂದಾಶ್ರುಜಲ ಧಾರಾಪೂರಪರಿಪ್ಲಾವಿತನೇತ್ರನುಂ ಆಗಿ: **ಅಜಿತಪು,** ४. ೧೨ ವ)

**ಪರಿಬೃಢ** – ಮುಖ್ಯನಾದವನು (ಕರಟೀಘಟ ಕರಟಕನೆನೆ ನೆಗಟ್ದಿ ಪಂಚವದನಂಗಂ ಶಾಕ್ವರಪರಿಬೃಢನೆನಪಂಗಂ: **ಪಂಚತಂತ್ರ,** ೧೨೩)

**ಪರಿಭವ** – ತಿರಸ್ಕಾರ, ಅವಮಾನ (ಭರತಂಗೆಱಗುವರೆಂಬಿದೆ ಪರಿಭಮೆಮಗಿಂತು ಮಾನಭಂಗಂ ಬರೆ ಬರ್ಪರಸೇವುದು: **ಆದಿಪು,** ೧४. ೫೯); ಸೋಲು (ದುರ್ಧರ ಜಳಯುದ್ಧಮುಮಾದಮೆ ಪರಿಭವಮಂ ಚಕ್ರವರ್ತಿಗಿತ್ತತ್ತಾಗಳ್: **ಆದಿಪು,** ೧४. ೧೦೮)

**ಪರಿಭವಿಸು** – ತಿರಸ್ಕರಿಸು, ಅವಮಾನಿಸು (ಅಂತಿರ್ದೊಡದನೆ ದೋಷಂಗೆಯ್ದು ರೋಷಗ್ರಹಾವೇಶನಾಗಿ ನಿಷ್ಕಾರಣಂ ಪರಿಭವಿಸಿ ನೋಯಿಸಿದೆ: **ಪಂಚತಂತ್ರ,** ೧೩४ ವ); ಸೋಲಿಸು (ಅನ್ಯರ್ ಪರಿಭವಿಸಿದೊಡೆ ಅಂಜುವುದೆ ಸೈರಣೆ ಎಂಬರ್ ಧೂರ್ತರ್: **ಕಾದಂಬ,** ೩. ೯೮)

**ಪರಿಭಾವಿಸು** – ಯೋಚಿಸು, ಸೂಕ್ಷ್ಮವಾಗಿ ನೋಡು (ಆ ಹರಸುತಂ ಅತ್ಯೌತ್ಸುಕ್ಯದಿ ಪರಿಭಾವಿಪೆನೆಂದು ಹರ್ಮ್ಯತಳದಿಂದಿಳಿದಂ: **ತ್ರಿಷಷ್ಟಿಪು,** ೬೩. ೨)

**ಪರಿಭಾಷೆ** – ನಿಂದೆ (ಭರತಜರೊಳ್ ಮುನ್ನಿಲ್ಲದ ಪರಿಭಾಷೆಯಂ ಉಂಟುಮಾಡಿ ಪೆಱಗಿಡಿಯಿಟ್ಟಂ ಕುರುರಾಜಂ ಎಂದು ಲಜ್ಜಾಭರದಿಂದಂ ತಲೆಯನೆಱಗಿದಂ ಧರ್ಮಸುತಂ: **ಗದಾಯು,** ೬. ४೦)

**ಪರಿಭೂತೆ** – ತಿರಸ್ಕೃತವಾದವಳು (ಪರಿಹರಿಸಿ ಪೋಗಲಕ್ಕುಮೆ .. .. ದುಃಖಿತೆಯಂ ಸ್ಮರಪರಿಭೂತೆಯಂ ಅನನ್ಯಗತಿಕೆಯಂ ಬಾಲಕಿಯಂ: **ಕಾದಂಸಂ,** ४. ೯೦)

**ಪರಿಮಜೆಯಾಡು** – ಹಾರಾಡು (ಪಾಣ್ಬನ ಕಣ್ಗಳ್ ಪರಿಮಜೆಯಾಡಿದುವು ತನೂದರಿಯತನುನಪಾಶಮೆನಿಪ ದೋರ್ವಲ್ಲರಿಯೊಳ್: **ಪಂಪರಾ,** ೯. ೮೦)

**ಪರಿಮಾಣಪರಿಗ್ರಹವ್ರತ** – [ಜೈನ] ಆವಶ್ಯಕವಾದಷ್ಟು ಮಾತ್ರ ಹೊಂದಿರುವ ವ್ರತ (ಇರೆ ಕುಪ್ಯನಿವೇಶನ ಧನ ವರಧಾನ್ಯ ಕ್ಷೇತ್ರಮುಖ್ಯಮೆಂಬಿವು ಪವಣಿಂದಿರದೇಱಿಸುವುದು ಮತ್ತಂ ಪರಿಮಾಣಪರಿಗ್ರಹವ್ರತಕ್ಕತಿಚಾರಂ: **ಸುಕುಮಾಚ,** ೬. ೧೭)

**ಪರಿಮಿತಪರಿಗ್ರಹ** – [ಜೈನ] ಪರಿಮಾಣಪರಿಗ್ರಹವ್ರತ (ಕೊಲ್ಲದ ಪುಸಿಯದ ಕಳ್ಳದ ಸ್ವದಾರ ಸಂತೋಷಂ ಪರಿಮಿತ ಪರಿಗ್ರಹಂ ಇಂತು ಅಯ್ದು ಅಣುವ್ರತಂಗಳಂ: **ವಡ್ಡಾರಾ,** ಪು ೨೨, ಸಾ ೧೭)

**ಪರಿಮ್ಲಾನ** – ಹೆಚ್ಚು ಕಳೆಗುಂದಿದ (ಪರಿಮ್ಲಾನಸಖಿಮುಖಾಬ್ಜಮಂ ಅಭಿಕ್ಷಿಪನಲ್ಲಳ ಅಪಾಂಗದ ಇಂಗಿತಂ ಮಾನಸದೊಳ್ ತೊಡರ್ಚಿದುದು: **ರಾಜಶೇವಿ,** ೧೦. ೬೦)

**ಪರಿಯಂಕ** – ಮಂಚ (ಪರಿಯಂಕೂರ್ಜಿತ ಚೀತ್ಕೃತಂ ಪದಲಸನ್ಮಂಜೀರಕಾ ಝೇಂಕೃತಂ: **ತ್ರಿಷಷ್ಟಿಪು,** ೨೪. ೧೮೧)

**ಪರಿಯಣ** – ಹರಿವಾಣ, ತಟ್ಟೆ (ಅಪರಿಮಿತಮೆನಿಸೆ ಚೆಂಬೊನ್ನ ಪರಿಯಣದ ಬಳಸಿ ಬಣ್ಣವಣ್ಣಿಗೆಗಳೊಳ್ ಆದ ಉಪದಂಶಂಗಳ್ ತುಱುಗಿದವು ಪತ್ರ ಶಾಕಂಗಳಷ್ವತುಷ್ಟಿಕರಂಗಳ್: **ಸುಕುಮಾಚ,** ೧೧. ೨೯)

**ಪರಿಯಷ್ಟಿ** – ಶುಶ್ರೂಷೆ (ತಪೋಧನರ್ಗಿರದೆ ಗದ್ದುಗೆಗಳಂ ಕಟ್ಟಿ ಧೂಪದೀಪಂಗಳುಮಂ ಕೊಟ್ಟು ಪರಿಯಷ್ಟಿಗೆಯ್ವ ಪಟುತರ ಮರ್ಕಟಸಮೂಹಂಗಳುಮಂ: **ಪಂಚತಂತ್ರ,** ೧೯೦ ವ)

**ಪರಿಯಳ** – ಪರಿಯಣ (ಕಣ್ಗೊಳಿಸಿದರ್ ಉನ್ಮಿಷಿತ ಕರ್ಣಿಕಾರ ಲತಾಸಂಕುಳಮೆನೆ ಸುವರ್ಣಮಯ ಪರಿಯಳಮಂ ಭಕ್ಷೋಪದಂಶ ಚರು ವಿಲಸಿತಮಂ: **ಪಂಪರಾ,** ೧೬. ೯೧)

**ಪರಿಯಾಣ** – ಪರಿಯಣ (ಆಗಳ್ ಆ ಗರ್ಭಸುಖಿಯ ಬೆನ್ನೊಳ್ ಪಿರಿಯ ಪರಿಯಾಣಮಂ ಇಟ್ಟು ಇದಂ ತೆಕ್ಕನೆ ತೀವಿ ಬಡ್ಡಿಸಿದೊಡೆ: **ವಡ್ಡಾರಾ,** ಪು ೬೪ ಸಾ ೨೧)

**ಪರಿಯಿಡು** – ರಭಸದಿಂದ ಮುನ್ನುಗ್ಗು (ಭರದಿಂ ಚತುರಂಗಬಲಂಬರಸು ಅಧಟಿಂದುರ್ಬಿ ಕೊರ್ಬಿ ಪರಿಯಿಟ್ಟಾಗಳ್: **ತ್ರಿಷಷ್ಟಿಪು,** ೫. ೭)

**ಪರಿರಂಭ** – ಆಲಿಂಗನ (ವಿಜಯಲಕ್ಷ್ಮೀ ಪರಿರಂಭಣ ಪ್ರಕಟನದಕ್ಷದಕ್ಷಿಣವಿಷಾಣವಿನ್ಯಸ್ತಹಸ್ತಂ: **ಆದಿಪು,** ೧೪. ೯೦ ವ)

**ಪರಿರಂಭಣ** – ಪರಿರಂಭ, ಆಲಿಂಗನ (ಪಡೆದುವು ಎತ್ತಾನುಂ .. .. ದಿಶಾದಂತಿ ದಿಕ್ಕರಿಣೀ ಪೇಚಕ ಚುಂಬನೈಕಸುಖಮಂ ಶೇಷೋರಗಂ ಭೋಗಿನೀ ಪರಿರಂಭೋತ್ಸವಮಂ: **ಪಂಪರಾ,** ೬. ೮೪)

**ಪರಿರಂಭಿಸು** – ಅಲಿಂಗಿಸಿಕೊ (ಮಲ್ಲಣನಂ ಹಿಮಸಂಗತನಂ ಪರಿರಂಭಿಸಿ ತತ್ಸತಿ ಪಂಕಜನೇತ್ರೆ ಮಗುಟ್ದಿತೆಂದಳ್: **ಉದ್ಭಟಕಾ,** ೧೨. ೫೯)

**ಪರಿಲಂಬ** – ಸಲಕರಣೆ (ಕಾದಂಬರೀ ಸಮಾಗಮೌತ್ಸುಕ್ಯದೊಳಂ ಅಕೃತಪರಿಲಂನಾಗಿ .. .. ಇಂದ್ರಾಯುಧಮಂ ಚಂದ್ರಾಪೀಡನೇಱೆ: **ಕಾದಂಸಂ,** ೦. ವ)

**ಪರಿಲಂಬಿ** – ನೇತಾಡುತ್ತಿರುವ (ವಿನೀಲಘನಾಘನಮನಳಱಿ ಪಱೆದುದು ಮುಕ್ತಾಜಾಲಪರಿಲಂಬಿಲೋಲದುಕೂಲ ಪತಾಆವಿರಾಜಮಾನ ವಿಮಾನಂ: **ಆದಿಪು,** ೪. ೮೫)

**ಪರಿವಡಿ** – ಕ್ರಮ (ಸಮಯೋತ್ತರಾನುಕ್ರಮದಿಂ ಉತ್ಕೃಷ್ಟಸ್ಥಿತಿವರಂ ಪರಿವಡಿದಪ್ಪದೆ ಕಿಟ್ಟುವುದಂ ಭಾವಪರಿವರ್ತನಮೆಂಬುದು: **ಸುಕುಮಾಚ,** ೭. ೬ ವ)

**ಪರಿವಡಿಗೆಯ್** – ಅನುಕ್ರಮವಾಗಿ ಪಠಿಸು (ತಜ್ಜಿನೇಂದ್ರಗೃಹದೊಳ್ ಅರ್ಧ ರಾತ್ರದೊಳ್ ಸ್ವಾಧ್ಯಾಯಂಗೊಂಡು ತ್ರಿಲೋಕ ಪ್ರಜ್ಞಪ್ತಿಯಂ ಪರಿವಡಿಗೆಯ್ವಾಗಳ್; **ಸುಕುಮಾಚ,** ೧೧. ೩೮ ವ)

**ಪರಿವಡೆ** – ವಿಸ್ತಾರ (ಅರಮನೆಯಂ ಪೊಕ್ಕು ಪರಿವಡೆದ ಪಿರಿಯ ಕರುಮಾಡದ ಮುಂದಣ ಓಲಗಸಾಲೆಯೊಳ್ ಸಿಂಗರದ ಚೆನ್ನನಾಂತ ಪಟ್ಟವಣೆಯ ಮೇಲೆ ಇಚ್ಚೆಗಾರ್ತಿವೆರಸು ನನೆವಿಲ್ಲ ಬಲ್ಲಹಂ ಕುಳ್ಳಿರಲ್: **ಕಬ್ಬಿಗಕಾ,** ೨೬೫ ವ)

**ಪರಿವರ್ಧಕ** – ಅಭಿವೃದ್ಧಿಗೊಳ್ಳುವುದು; ಕುದುರೆಯನ್ನು ಸಾಕುವವನು (ಇಂದ್ರಾಯುಧಮಿರ್ಪೆಡೆಗೆ ಪರಿತಂದು ಪರಿವರ್ಧಕಹಸ್ತದಿಂದಂ ತೆಗೆದು: **ಕಾದಂಸಂ,** ೭. ೩೯ ವ)

**ಪರಿವಱೆಯಾಗು** – ಚೂರುಚೂರಾಗು (ತನ್ನಯ ನೇಟಿಲಂ ನಳಿನಾಕ್ಷಿ ಕಾಣುತಂ ಮನದೊಳೆ ಪರಿವಱೆಯಾದೆನೆಂದು ಚಿಂತಿಸುತಿರ್ದಳ್: **ಕಾದಂಬ,** ೮. ೪೮)

**ಪರಿವಾದ** – ಅಪವಾದ, ನಿಂದೆ (ಪರಿವಾದಮಂ ನೆಗಳ್ವುದೇ ಜಪಂ ಅನ್ಯಮನಃಪ್ರಸೂನಮಂ ಕೊರಗಿಪುದೇ ಜಪಂ .. .. ಎನೆ ದುರ್ಜನತಾಪಸಂ: **ರಾಜಶೇವಿ,** ೧. ೪೦)

**ಪರಿವಾದಕ** – ಸ್ವರ್ಗದ ಒಂದು ವಿಶಿಷ್ಟ ವಾದ್ಯ (ಆಗಳ್ ನಾಕಲೋಕವಾದ್ಯಂಗಳೊಳ್ ಅನೇಕಭೇದಂಗಳಪ್ಪ ಉಪವಾದಕ ಪರಿವಾದಕ ವಾದ್ಯಂಗಳೊಳ್ .. .. ನೆಗೞೆ: **ಆದಿಪು,** ೭. ೧೧೮ ವ)

**ಪರಿವಾದಿ** – ಒಂದು ವಾದ್ಯ (ಕಥೆ ಕಜ್ಜಂಗಳ ಗೀತಸ್ಮೃತಿ ನೃತ್ಯಂ ನೆತ್ತಂ ಒಗಟು ಪರಿವಾದಿ ನಿನಾದಿತಮೆಂಬ ಅನೇಕ ಭೇದಪ್ರತರ ವಿನೋದದೊಳೆ ಸತಿಗೆ ಪೊತ್ತಂ ಕಳೆವರ್: **ವರ್ಧಮಾಪು,** ೧೧. ೫೧)

**ಪರಿವಾದಿನಿ** – ಏಳು ತಂತಿಗಳ ವೀಣೆ (ನೃತ್ಯಂ ನೆತ್ತಂ ಒಗಟು ಪರಿವಾದಿನಿನಾದಿತಂ ಎಂಬ ಅನೇಕಭೇದಪ್ರತರ ವಿನೋದದೊಳೆ ಸತಿಗೆ ಪೊತ್ತಂ ಕಳೆವರ್: **ವರ್ಧಮಾಪು,** ೧೧. ೫೧)

**ಪರಿವಿಡಿ** – ಅನುಕ್ರಮ (ಸುಷಮದುಷ್ಷಮಕಾಲಂ ಚರಿಯಿಸುಗುಂ ನಾಲ್ಕನೆಯದು ಪರಿವಿಡಿಯಿಂದಪ್ಪುದಲ್ತೆ ದುಷ್ಷಮಸುಷಮಂ: **ಪಂಪರಾ,** ೧. ೫೬); ಪರಂಪರೆ (ಮುನ್ನಮೀ ಬನಂ ಪಟ್ಟಣದಂತಿರ್ಪುದೆಂದು ನುಡಿದ ನುಡಿಯಂ ಪರಿವಿಡಿಯಿಂ ನನ್ನಿ ಮಾಡಿದೆ ಎಂದು ತೊನೆಯುತ್ತೆ: **ಕಬ್ಬಿಗಕಾ.** ೮೮ ವ)

**ಪರಿವಿಷ್ಟ** – ಸುತ್ತುವರಿದ (ಶರದಭ್ರಂ ಪರಿವಿಷ್ಟಮಪ್ಪ ವಿಲಸತ್ ನೀಲಾದ್ರಿಯೆಂಬಂತೆ ಬಿತ್ತರಿಸುತ್ತಿರ್ಪ ದುಕೂಲ ಚೇಲನಗಳಿಂ ಚೆಲ್ವಾಗಿ ತೋರ್ಪ ಆ ಮದೋದ್ಧುರ ಮಾತಂಗಮಂ ಏಱೆ: **ಶಾಂತೀಶ್ವಪು,** ೩. ೧೨೫)

**ಪರಿವಿಷ್ಠೆ** – ಕುಳಿತುಕೊಂಡವಳು (ಮಣಿಮಂಚದ ಕೆಲದ ಕಾಂಚನವಿಷ್ಟರದೊಳ್ ಪರಿವಿಷ್ಠೆಯಾಗಿರ್ದಳ್: **ನೇಮಿನಾಪು,** ೧. ೧೧೦ ವ)

**ಪರಿವೀಜ್ಯಮಾನ** – ಬೀಸಲ್ಪಡುತ್ತಿರುವ (ಪರಿವೀಜ್ಯಮಾನ ಧವಳಚಾಮರಜನಿತಪವನಪರಿಪತಿ ತಾಂ: **ರಾಜಶೇವಿ,** ೧೦. ೧೫ ವ)

**ಪರಿವು** – (ಪಿರಿಯ ಪರಿವುಗಳ ಸುತ್ತಿದ ಪರಿಕಾಲ್ಗಳ ತುಱುಗಿದ ಅಣ್ಣಗಳ ತೀವಿದ ಪೊಕ್ಕರಣೆಗಳ ನೆಱೆದ ಕೆಱೆಗಳ ಸರೋವರಂಗಳ ಬೆಡಂಗು ಅಗುಂದಲೆ ಪುರದೊಳ್: **ಸುಕುಮಾಚ,** ೯. ೫೧)

**ಪರಿವೃಢ** – ಒಡೆಯ (ಸಮುಚಿತಾಸನದೊಳ್ ಸುಗ್ರೀವ ಅಂಗದ ನಳ ನೀಲ ಜಾಂಬವ ಕನುಮತ್ ಪ್ರಮುಖ ನಿಖಿಲ ಖಚರ ಪರಿವೃಢರುಂ ಇರ್ಪುದುಂ: **ಪಂಪರಾ,** ೧೨. ೧೬ ವ); ಶ್ರೇಷ್ಠವಾದ (ಕರುಣಂಗೆಯ್ದಂ ಮೃಗಗಣಪರಿವೃಢಂ ಇನ್ನಂಜವೇಡ ಆದಂ ಪುಣ್ಯಂ ದೊರೆಕೊಂಡುದು: **ಪಂಚತಂತ್ರ,** ೧೦೮)

**ಪರಿವೃತ** – ಆವೃತಗೊಂಡ (ತೆರೆ ಪಲ್ಲೆನೆ ಪಲ್ಲವತರು ಪರಿವೃತ ದರಿಯಧರಮನೆ .. .. ತೆಱದಿನಾ ತೊಱೆ ಚೆಲ್ವಿಂ: **ನೇಮಿನಾಪು,** ೧. ೬೨)

**ಪರಿವೃತ್ತ** – ದುಂಡಾದ (ಒದವಿದ ಕರ್ಪನೆಯ್ದೆ ಪರಿವೃತ್ತಪಯೋಧರಚೂಚುಕಕ್ಕೆ ಮಾಡದೆ .. .. ಬಳೆದ ಗರ್ಭಮೆ ಮನಂಗೊಳಲಾರ್ತುದು: **ಆದಿಪು,** ೮. ೪೭)

**ಪರಿವೆಸ** – ಪರಿಚಾರಿಕೆ (ಪರಿವೆಸವೋಗಲ್ ಅಚ್ಚರಸಿಯರ್ ಶ್ರುತಿಯೊಳ್ ಸಮನಾಗೆ ಪಾಡಲ್ ಅಚ್ಚರಸಿಯರ್: **ಶಾಂತಿಪು,** ೭. ೭೫)

**ಪರಿವೆಸಗೆಯ್** – ಸೇವೆ ಮಾಡು (ಅಣಿಮಾದಿಗುಣಾನ್ವಿತಾಮರರ್ ಪರಿವೆಸಗೆಯ್ವರೆಂಬೆನಜೆಯೆಂ ಪೊಗಳಲ್ ಸುರಲೋಕ ಸೌಖ್ಯಮಂ: **ಆದಿಪು,** ೩. ೨)

**ಪರಿವೇಷ** – ಸುತ್ತುವರಿಯುವಿಕೆ, ಮಂಡಳ (ರವಿ ಬಿಂಬಮನೊಳಕೊಂಡು ಪೊಳೆವ ಪರಿವೇಷದವೊಲ್ ಜಂಬೂದ್ವೀಪಮನೊಳಕೊಂಡಂಬುಧಿ ರತ್ನಾಂಶುಲೋಲ ಲಹರೀಜಾಲಂ: **ಮಲ್ಲಿನಾಪು,** ೧. ೬೦)

**ಪರಿವೇಷ್ಟಿತ** – ಸುತ್ತಲ್ಪಟ್ಟ (ಪೆಂಡವಾಸದದ ಅಗ್ಗಳದ ಸೂಳೆಯರ್ಕಳಿಂದಂ ಪರಿವಾರದಿಂದಂ ಇಂತಪ್ಪ ದಿಬ್ಯಸಭೆಯಿಂದಂ ಪರಿವೇಷ್ಟಿತನಾಗಿ: **ವಡ್ಡಾರಾ,** ಪು ೧೩೯, ಸಾ ೨೪)

**ಪರಿವೇಷ್ಟಿಸು** – ಬಳಸು, ಸುತ್ತುಗಟ್ಟು (ನೇವುರದ ಕಳಧ್ವಾನಮೊಗೆದು ನಗಮಂ ಜಗಮಂ ಪರಿವೇಷ್ಟಿಸೆ ಬರುತಿರ್ದಳ್ ಪರಮೇಶ್ವರಿ: **ಗಿರಿಜಾಕ,** ೫. ೩೦)

**ಪರಿವೊಟ್ಟೆಯವರ್** – ಒಂಟೆಯ ಮೇಲೆ ಸಾಗುವ ದೂತರು (ಇರ್ವರ್ ಪರಿವೊಟ್ಟೆಯವರ್ ಓಲೆಯಂ ಕೊಂಡು ಬಂದು ಅರಸನ ಮನೆಯ ಬಾಗಿಲೊಳ್ ನಿಂದು ಪಡಿಯಱಂಗೆ ಪೇೞ್ದೊಡೆ: **ವಡ್ಡಾರಾ,** ಪು ೧೩೦, ಸಾ ೧೮)

**ಪರಿವೊನಲ್** – ಹರಿಯುವ ಹೊಳೆ (ಪರಿವೊನಲೆ ಪರಿನೀರಾಗೆಯಂಕುರವೊತ್ತಿ ಬೆಳೆಯುತಿರ್ದ ಕರ್ಬಿನ ಮಡಲ್ಗಳುಮಂ: **ಪಂಚತಂತ್ರ,** ೧೯೦ ವ)

**ಪರಿವ್ರಾಜಕ** – ಸನ್ಯಾಸಿ (ಜಯಕೀರ್ತಿವೆಸರ ಮಗನಾಗಿ ರಾಜ್ಯಂಗೆಯ್ದು ಜನಕಸೂರಿಪಾರ್ಶ್ವದೊಳ್ ಪರಿವ್ರಾಜಕನಾಗಿ ಸಮಾದಿವೆತ್ತಂ: **ಪಂಪರಾ,** ೧೦. ೯೮ ವ)

**ಪರಿವ್ರಾಜಕವೇಷ** – ಪರ್ಯಟನಕಾರ ಸನ್ಯಾಸಿಯ ವೇಷ (ಪುಷ್ಯಮಿತ್ರನೆಂಬ ಮಗನಾಗಿ ಪರಿವ್ರಾಜಕವೇಷದೊಳ್ ನಡೆದು: **ಚಾವುಂಪು,** ಪು. ४೪೦. ಸಾ. ೨೧)

**ಪರಿವ್ರಾಜಿಕಾ** – ಸನ್ಯಾಸಿನಿ, ವಿರಕ್ತೆ (ಅನೇಕ ಪರಿವ್ರಾಜಿಕಾಸಮಾಜಂ ಸುತ್ತುಂ ಓಲಗಿಸಿತ್ತಿರಲ್ .. .. ದಾನದಿಂ ಸನ್ಮಾನಿಸುತ್ತುಮಿರ್ದ ಮಹಾಶ್ವೇತೆಯ ಪೆಱಗೆ: **ಕಾದಂಸಂ,** ೫. ೬೫ ವ)

**ಪರಿಷೇಕ** – ಸಿಂಪಡಿಸುವಿಕೆ (ಅನ್ನೆಗಂ ಅತ್ತ ದುರ್ಯೋಧನಂ ಅತಿಸಂಭ್ರಮಾಕುಳಿತಪರೀತಜನ ಉಪನೀತ ಚಂದನಕರ್ಪೂರಮಿಶ್ರಿತ ಹಿಮಶಿಶಿರ ಧಾರಾಪರಿಷೇಕದಿಂದ ಎಂತಾನುಂ ಮೂರ್ಛೆಯಿಂದೆೞ್ಚತ್ತು: **ಪಂಪಭಾ,** ೧೩. ೨ ವ)

**ಪರಿಷ್ಕೃತಿ** – ಆಭರಣ (ಚಂದ್ರಕಾಂತಿಯಂ ಕನಕಪರಿಷ್ಕೃತಿದ್ಯುತಿಕೃತಾತಪೆ ನೀಂ ತಡೆಯೆಂದರಾಳಿಯರ್: **ರಾಜಶೇವಿ,** ೭. ೮೮)

**ಪರಿಷ್ವಂಗ** – ಅಪ್ಪುಗೆ (ಎಳಮಾವಂ .. .. ಸುತ್ತಿ ತೆಂಗಾಳಿಯಂ ಸಂಚಳನಪ್ರಾಗಲ್ಭ್ಯದೊಳ್ ವಾಸನೆವಡೆದು ಪರಿಷ್ವಂಗದೊಳ್ ತಾಂಗಿ: **ಮಲ್ಲಿನಾಪು,** ೬. ೨೮)

**ಪರಿಸಂಖ್ಯೆ** – ಆವೃತ್ತಿ, ಬಾರಿ (ಕ್ಷಿತಿಯೊಳಗುಳ್ಳ ಭೂಭುಜರ ಬಿತ್ತು ಮೊದಲ್ಗಿಡೆ ಮುನ್ನಮೇಕವಿಂಶತಿ ಪರಿಸಂಖ್ಯೆಯಿಂ ತವಿಸಿ: **ಪಂಪಭಾ,** ೨. ४೫); ಎಣಿಕೆ (ಪರಿಸಂಖ್ಯಾತೀತಮೆನಲ್ ಸುರಪತಿ ವಿಕ್ರಿಯಿನಾದ ಭುಜಕೋಟಿಗಳಿಂದಿರದಾಂತುಕೊಂಡು ಪೋಲ್ತಂ ಸುರತರು ಪಣ್ತಂದಮಂ ಸುರೇಂದ್ರಾಚಳದೊಳ್: **ಕರ್ಣನೇಮಿ,** ೮. ೧४೦); ಮೊತ್ತ (ತೊಲಗದು ಪುಬ್ಬಕೋಟಿ ಪರಿಸಂಖ್ಯೆವರಂ ಪರಮಾಯು: **ಆದಿಪು,** ೧. ೫೨)

**ಪರಿಸಮಾಪ್ತಿ** – ಮುಗಿವು (ಅಂತು ಇಂದ್ರನಾನಂದ ನೃತ್ಯಮನಾಡಿದ ಪರಿಸಮಾಪ್ತಿಯೊಳ್: **ಶಾಂತಿಪು,** ೧೦. ೬೫ ವ)

**ಪರಿಸ** – ಪರುಷ, ಸ್ಪರ್ಶಶಿಲೆ (ಮಱುಜವಣಿ ಮಾಣಿಕದ ಪಾಸಱೆ ಪರಿಸದ ಮೊರಡಿ ಪರಿವ ಸಿದ್ಧರಸದ ಬಲ್ಬೊರೆ: **ಶಬರಶಂ,** ೩. ೩೦)

**ಪರಿಸರ** – ಸಮೀಪ ಪ್ರದೇಶ, ಸುತ್ತುಮುತ್ತು (ತದ್ವನ ಪರಿಸರದೊಳ್ ಬರುತುಮಿರ್ದ ಅಕಂಪನರೆಂಬರ್ ತರುಮೂಲದೊಳಿರೆ .. .. ಚಂಡಕರ್ಮಂ ಕಂಡಂ: **ಯಶೋಧಚ,** ४. ೧೨)

**ಪರಿಸೂತ್ರ** – ಮಧ್ಯಭಾಗ (ಚೈತ್ಯಾಲಯದ ಪಟ್ಟಶಾಲೆಯ ಮುಂದಣ ಪರಿಸೂತ್ರದ ಸುತ್ತಣ ಸರೋವರಂಗಳೊಳ್ ಅಲರ್ದ ತಾವರೆಯ ತನಿಗಂಪಂ ತಟ್ಟೈಸಿ: **ಪಂಪರಾ,** ೭. ४೭ ವ)

**ಪರಿಸ್ಖಲನ** – ಹೊಡೆತ, ತಾಗುವಿಕೆ (ಖರಖುರಟಂಕ ಪರಿಸ್ಖಲನಕಳಿತವಿಷಮ ವರಭೇರೀನಿಸ್ವನಮುಂ: **ಪಂಪಭಾ,** ೧೩. ೫೧ ವ)

**ಪರಿಸ್ಖಳಿತ** – ಜಾರಿ ಬಿದ್ದ (ಪೊಸಬಾಸುಟಿ ಕರರುಹರೇಖೆ ತುಱುಗಿ ರತನಾಟ್ಯಪರಿಸ್ಖಳಿತಕ್ಕೆ ಮುಳಿದು ದಂಪತಿಗಳನಂಗಜನಟನೆ ಸೆಳೆದ ಬಾಸುಟಿವೆನಿಕುಂ: **ಆದಿಪು,** ೧೨. ೧೫)

**ಪರಿಸ್ತರಣ** – ಸುತ್ತ ಹಾಸುವುದು (ಸಮಿತ್ ಪರಿಸ್ತರಣ ಪಾತ್ರಾಸಾಧನಂ .. .. ಆದಿ ಸತ್ಕ್ರಿಯೆಗಳಿಂ ಹೋಮಮಂ ಮಾಡುತ್ತಿರ್ದು: **ಗಿರಿಜಾಕ,** ೧೦. ೯೭ ವ)

**ಪರಿಸ್ಪಂದ** – ಅಲುಗಾಟ, ಕಂಪನ (ಕಿಱಿದು ಈ ಕಥಾಪರಿಸ್ಪಂದಂ ಇದಂ ನಿಮಿರ್ಚಿ ಕವಿತಾರಸಮಂ ನೆಱಪೇಟ್ದರಿಲ್ಲ ಮುನ್ನೆಂದು .. .. ಪೇೞಲಾಂ ಮನಂದಂದೆಂ: **ಮಲ್ಲಿನಾಪು,** ೧. ४೫)

**ಪರಿಸ್ರಸ್ತ** – ಬಿದ್ದುಹೋದ (ಅನೇಕಮಕುಟಬದ್ಧಶೇಖರಸಹಸ್ರ ಪರಿಸ್ರಸ್ತ ಕುಸುಮಕೇಸರರಜಮುಂ: **ಆದಿಪು,** ೧೧. ೩೫ ವ)

**ಪರಿಸ್ರುತಿ** – ಪರಿಸ್ರವಣೆ, ಮದ್ಯ (ಅಚ್ಛಪರಿಸ್ರುತಿ ಪರಿಪೂರಿತ ಕಾಂಚನಕುಂಭಮಂ ಪೂಜೆಯಂ ಮಾಡಿ: **ಉದ್ಭಟಕಾ,** ೫. ೬೭ ವ)

**ಪರಿಹಾಸ** – ಹಾಸ್ಯ, ವಿನೋದ (ಸ್ಮಿತ ದರಹಸಿತ ಭ್ರೂವಿಕ್ಷೇಪ ಆಳಾಪ ಪರಿಹಾಸವಚನಂಗಳಿಂದಂ ಅವರವರ ಅಳವಿಗಳಿಂದೆ ಸಂತಸಂಬಡಿಸಿ: **ಶಾಂತಿಪು,** ೩. ೧೧೩ ವ)

**ಪರಿಹಾಸಕೇಳಿ** – ವಿನೋದದಾಟ (ಪರಿಹಾಸಕೇಳಿ ಅತಿಕುಶಲಕಳಾಕೇಳಿಯ .. .. ಬಿನದದೊಳೆ ಸತಿಯನವರೊಸೆಯಿಸಿದರ್: **ಪುಷ್ಪದಂಪು,** ೯. ೮೨)

**ಪರಿಹೃತ** – ನಿವಾರಣೆ ಮಾಡಿದ (ಪರಿಹೃತತೃಷ್ಣ ಅಹಿತರಸಂ ದ್ವಿಜಸನ್ನಿಹಿತಂ ಗಭೀರತಾನಿರತಮತಿಪ್ರಸಾದಸುಭಗಂ .. .. ಆದ ಸನ್ಮನಿಯ ಮನಸದೊಳ್ ನೆಲಸಿರ್ದ ಹಂಸಿಯಂತಿರೆ ಮುಖಪದ್ಮದೊಳ್ ನೆರೆವ ಭರತಿಯಿಂ ಕೃತಕೃತ್ಯಳಾವಳೋ: **ಕಾದಂಬ,** ೧. ೨೦೮) ತ್ಯಜಿಸಲಾದ (ಪರಿಹೃತವಸನಂ ವಿಗತಾಂಗರಾಗಂ ಅಪನೀತ ಭೂಷಣಂ ವಿಬುಧಜನೋದ್ಧರಣಂ ಪಯೋದ ಸಂಧ್ಯಾನುರಾಗಭರಣ ವ್ಯಪೇತ ರವಿಯಂತಿರ್ದಂ: **ಅಜಿತಪು,** ೬. ೧೨೯)

**ಪರೀಕ್ಷಿಸು** – [ಪರಿ+ಈಕ್ಷಿಸು] ಚೆನ್ನಾಗಿ ನೋಡು (ಆತನ ಬುದ್ಧಿಯಂ ಪರೀಕ್ಷಿಸಲ್ವೇಡಿ ಭಟ್ಟಿಮಂಡಪದೊಳ್ ಈ ಶ್ಲೋಕಮಂ ಬರೆದು ಪೋದಂ: **ವಡ್ಡಾರಾ,** ಪು. ೧೮೪, ಸಾ. ೮)

**ಪರೀಕ್ಷೆ** – ಸೂಕ್ಷ್ಮ ಪರಿಶೀಲನೆ, ಪಂಚತಂತ್ರಗಳಲ್ಲಿ ಒಂದು: ಯಾವುದೇ ಕಾರ್ಯವನ್ನು ವಿಚಾರಿಸಿ ಮಾಡಬೇಕು ಎನ್ನುವುದು (ಆವಕಾರ್ಯಮುಮಂ ವಿಚಾರಪೂರ್ವಕಮಲ್ಲದೆ ನೆಗೞಲಾಗದು ಎಂಬುದು: **ಪಂಚತಂತ್ರ,** ೭೧ ವ)

**ಪರೀಕ್ಷೆವಂತ** – ಪರೀಕ್ಷೆ ಮಾಡುವವನು (ಅಂತು ಸುವರ್ಣಮಂ ಒರೆದುಂ ಕಡಿದುಂ ಕಾಸಿಯುಂ ಪೊಯ್ದು ನೋಡಿ ಪರೀಕ್ಷೆವಂತರ್ ಪರೀಕ್ಷಿಸಿಕೊಳ್ವಂತೆ: **ಧರ್ಮಾಪ:** ೧೦. ೩೯ ವ)

**ಪರೀತ** – ಸುತ್ತಲ್ಪಟ್ಟ, ಸುತ್ತುವರಿಯಲ್ಪಟ್ಟ (ಅನ್ನೆಗಂ ಅತ್ತ ದುರ್ಯೋಧನಂ ಅತಿಸಂಭ್ರಮಾಕುಳಿತಪರೀತಜನ ಉಪನೀತ ಚಂದನಕರ್ಪೂರಮಿಶ್ರಿತ ಹಿಮಶಿಶಿರ ಧಾರಾಪರಿಷೇಕದಿಂದ ಎಂತಾನುಂ ಮೂರ್ಛೆಯಿಂದೆಚ್ಚತ್ತು: **ಪಂಪಭಾ,** ೧೩. ೨ ವ); ಕೂಡಿರುವ (ಮತ್ತಮಧುಕರನಿಕರಝುಂಕಾರಪರೀತ ದಿಗಂತರಾಳದೊಳ್: **ಶಾಂತಿಪು,** ೧೦. ೭೭ ವ)

**ಪರೀಷಹ** – [ಜೈನ] ತಪಶ್ಚರಣಕ್ಕೆ ಇರುವ ಇಪ್ಪತ್ತೆರಡು ಬಗೆಯ ಅಡ್ಡಿಗಳು: ಹಸಿವು, ಬಾಯಾರಿಕೆ, ಚಳಿ, ಉಷ್ಣ, ಸೊಳ್ಳೆ ಮುಂತಾದವುಗಳ ಕಚ್ಚುವಿಕೆ, ಬತ್ತಲೆಯಿರುವುದರಿಂದಾಗುವ ತೊಂದರೆಗಳು, ಅರತಿ, ಸ್ತ್ರೀವಿರಹ, ಸಂಚಾರಬಾಧೆ, ಶಯ್ಯಾಬಾಧೆ, ಆಸನಬಾಧೆ, ಬೈಗುಳ, ಯಾಚನೆಯಿಂದಾ ಗುವ ತೊಂದರೆಗಳು, ಹೊಡೆತ, ಭಿಕ್ಷೆ ದೊರೆಯದ ಖೇದ, ತಪಸ್ಸಿಗೆ ತಕ್ಕ ಫಲ ಸಿಕ್ಕದಿರುವುದು, ರೋಗ, ಮುಳ್ಳುಕಲ್ಲು ಗಳಿಂದ ತೊಂದರೆ, ಅಹಂಕಾರ, ಅಜ್ಞಾನದ ಕೊರಗು, ಸ್ನಾನವಿರದ್ದರಿಂದಾ ಗುವ ಬಾಧೆ, ಜನರಿಂದ ಪುರಸ್ಕಾರ ದೊರೆಯದಿರುವುದು (ದೇಹೋತ್ಪನ್ನ ಪರೀಷಹಸಂಹತಿ ತನ್ನೊಡಲಂ ನೆಱೆಯೆ ತವಿಸುತಿರ್ಪುದುಮಂ: **ಆದಿಪು,** ೨. ೫೨)

**ಪರೀಷಹಜಯ** – [ಜೈನ] ಪರೀಷಹಗಳನ್ನು ಮೀರುವುದು (ಪೆತ್ತ ಪರೀಷಹಜಯಮೆ ತಪಂ ತಪಕೆ ಬೇಱೆ ಕೋಡೆರಡೊಳವೇ: **ಯಶೋಧಚ,** ೧. ೪೯)

**ಪರುಟವಿಸು** – ಹೇಳು, ಮಾತಾಡು (ಕರಿ ಕೇಸರಿಯಂ ಕೆಣಕಿದ ಪರಿಯಂ ಪರುಟವಿಸದಿರ್ ಮದಾಂಧತೆಯಿಂದ: **ಶಬರಶಂ,** ೪. ೨೯)

**ಪರುಠವಣೆ** – ವಿಸ್ತಾರ (ಪಲಬಗೆಯ ಪಲ್ಲಣದ ಪಕ್ಕಜಲ್ಲಿಯ ಪದ್ಮರಾಗದ ಪಾವುಡದ ಪರುಠವಣೆ ಪಸರಿಸೆ: **ರಾಜಶೇಖಿ,** ೬. ೧೧ ವ)

**ಪರುಷ** – ನಿಷ್ಠುರವಾದ, ಕರ್ಕಶ (ಪರುಷತರಮಕ್ಕಂ ಒತ್ತುಂಗರಡೆಯ ಮದ್ದಳೆಯ ಜರ್ಝರ ಧ್ವನಿಗಳವೋಲ್: **ಕವಿರಾಮಾ,** ೧. ೫೩); ಅವಲೋಹಗಳನ್ನು ಚಿನ್ನ ಮಾಡುವುದೆನ್ನಲಾದ ಕಲ್ಲು (ಪೊನ್ನಾಗವೆ ಪೊರ್ದಿ ಪರುಷಮಂ ಲೋಹಂಗಳ್: **ಮಲ್ಲಿನಾಪು,** ೩. ೯)

**ಪರುಷವಾತ** – ಬಿರುಗಾಳಿ (ರಜಮುಂ ದಿಗ್ಧೂಮಮುಂ ಸಂದಣಿಸೆ ಪರುಷವಾತಾಹತಿ ಪ್ರೋಚ್ಚಳತ್ಸಾಮಜಸೇನಾ ಕುಂಭಸಿಂಧೂರಮುಂ: **ಆದಿಪು,** ೧೪. ೮೯)

**ಪರುಷಾಟವಿ** – ಘೋರ ಅರಣ್ಯ (ಆ ಸರಸಿಯ ತಡಿವಿಡಿದಿರ್ದುದು ಪರುಷಾಟವಿಯೆಂಬ ಪೆಸರ್ ಅರಣ್ಯಗಣ್ಯಂ: **ಚಂದ್ರಪ್ರಪು,** ೫. ೪೬)

**ಪರುಷಾಳಾಪ** – ಕಠಿಣವಾದ ಮಾತು (ಪರುಷಾಳಾಪಮುಂ ಅತಿ ನಿಷ್ಠುರವೀಕ್ಷಣಮುಖವಿಕಾರಮುಂ .. .. ಅಱೆಯೆ ಫೇಟಿಸ್ಗಂ ಎಱಕಮಂ ಎರ್ದೆಯೊಳ್: **ಕವಿರಾಮಾ,** ೩. ೧೧೯)

**ಪರುಷೇಕ್ಷಣ** – ಭಯಂಕರ ನೋಟ[ವುಳ್ಳವನು] (ಸ್ಥಿರಬದ್ಧಮತ್ಸರರ್ ಭೀಕರಬದ್ಧಭ್ರುಕುಟಿಘಟಿತರ್ ಅದ್ಭುತರ್ ಅಟ್ಟಾಸುರರ್ ಅಧಿಕಕೋಪಪಾಟಲಪರುಷೇಕ್ಷಣರ್ ಎನಿಸಿ ದೃಷ್ಟಿಯುದ್ಧಂಗೆಯ್ದರ್: **ಗದಾಯು,** ೮. ೨)

**ಪರುಸವೇದಿ** – [ಸ್ಪರ್ಶವೇದಿ) ಲೋಹವನ್ನು ಚಿನ್ನವನ್ನಾಗಿಸುವ ಕಲ್ಲು, ಸ್ಪರ್ಶಶಿಲೆ (ಮೇರುವ ಪೊಂ ಕಲ್ಪಾಂಘ್ರಿಪದ ಆರವೆ ರಸದ ಒಱವು ಪರುಸವೇದಿಯ ಕಣಿ ಭಂಡಾರದೊಳ್ ಉಂಟೆನೆ ಕುಡುವ ಅನಿವಾರಿತ ದಾನಕ್ಕೆ ಪೋಲ್ವರಾರ್ ಬದ್ದೆಗನಂ: **ಪಂಪಭಾ,** ೧. ೨೮)

**ಪರೆ** – ಹರಡು (ಪರೆದಿರ್ದ ಕುರುಳ್ಗಳಂ ಓಸರಿಸಿ ಕದಂಪುಗಳಂ ಒಯ್ಯನೆ ಎಱವುತ್ತ: **ಕಾದಂಸಂ,** ೪. ೪೧); ವಿಸ್ತರಿಸು (ಬಧಿರಿತ ಸಮಸ್ತ ದಿಕ್ತಟಂ ಅಧಿರಿತ ಸರ್ವ ಇಭ್ಯಗರ್ವಿತಂ ಕ್ಷುಭಿತಾಂಭೋಸಲಿಲಂ ಪರೆದುದು ಧುರವಿಧಾನ ಪಟುಪಟಹ ಕಹಳ ಭೇರೀರಭಸಂ: **ಪಂಪಭಾ,** ೧೨. ೧೭೧); ಚದುರಿ ಕಾಣದಾಗು (ಉಟಿದ ಎರಡರೆಯಂ ನರಿ ತಿಂದುವೊ ನಾಯ್ ತಿಂದುವೊ ಪರೆದಿರ್ದುವೊ ಪೇೞಿಂ ಅಧ್ವಾರೀಶ್ವರರಾ: **ಸಮಯಪ,** ೧೦. ೭೪)

**ಪರೆಪು** – ಹರಡು, ವಿಸ್ತರಿಸು (ದುರ್ವಿಮಂತ್ರಮಂ ಪರೆಪ ಟಮಾಳಮಂ ಪಿರಿದಂ ಓದಿದೊಡೆ ಅಪ್ಪ ಪದಾರ್ಥಮಾವುದೋ: **ಪಂಪಭಾ,** ೧೩. ೬೬); ಹರಹು, ಉದ್ದಗಲ (ಪಾಸಿನ ಪರೆಪಂ ಪಚ್ಚವಡಿಗೆ ಮುಚ್ಚುವ ತೆಱದಿಂ: **ಸಮಯಪ,** ೧೫. ೩೪)

**ಪರೇಂಗಿತಜ್ಞ** – ಇತರರ ಅಭಿಪ್ರಾಯವನ್ನು ತಿಳಿಯಬಲ್ಲವನು (ಗುರುದೇವ ದ್ವಿಜಭಕ್ತಂ ತರುಣವಯಸ್ಕಂ ಪರೇಂಗಿತಜ್ಞಂ ಉದಾರಂ ಪರಿವಾರಕಲ್ಪವೃಕ್ಷಂ ಪರದಾರವಿದೂರಂ ಅಖಿಲಭುವನಾಧಾರಂ: **ಪಂಚತಂತ್ರ,** ೩೦೪)

**ಪರೇಂಗಿತಜ್ಞಾನ** – ಇತರರ ಅಭಿಪ್ರಾಯವನ್ನು ತಿಳಿಯುವ ಶಕ್ತಿ (ಪರೇಂಗಿತಜ್ಞಾನಂ ಈತಂಗುಳ್ಳುದು ಆರ್ಗಂ ಇಲ್ಲ ಈಗಳೆನ್ನ ಮನದೊಳೊದವಿದ ಮಹಾಭಯಮಪ್ಪ ಕಜ್ಜಕ್ಕೆ ಪ್ರತೀಕಾರಮಂ ಏಕಾಕಿಯಾಗಿ ಚಿಂತಿಸಲ್ಬಾರದು: **ಪಂಚತಂತ್ರ,** ೮೮ ವ)

**ಪರೇತವನ** – [ಪ್ರೇತವನ] ಶ್ಮಶಾನ (ಕಂಡವರೆಲ್ಲಂ ಎೞೆದು ಕಳೆಯೆ ಪರೇತವನಭೂಮಿಯೊಳ್ .. .. ತಾವಿರ್ಬರುಂ ತಿರಿದು ತಂದಿಕ್ಕಿದೆಂಜಲವುಟುವಂ ತಿಂದು: **ಆದಿಪು,** ೩. ೩೪ ವ)

**ಪರೋಕ್ಷ** – ಅಗೋಚರ (ಸಚಿವಸಮೂಹಂ ಮೆಚ್ಚಿ ಸಮಾಲೋಚನಗೋಚರ ಚರಾಚರಂಗೆ ಪರೋಕ್ಷಮೆಡ ಪ್ರತ್ಯಕ್ಷಮಲ್ತೆಯೆಂದು ಪರಮಾನಂದದಿಂದಭಿವಂದಿಸಿ: **ಶಾಂತಿಪು,** ೨. ೭೦ ವ); ತರುವಾಯ (ಉತ್ತರಶ್ರೇಣಿಯ ನೀಂ ಮೇಘನಾದನಾಗಿ ನಿಜಜನಪರೋಕ್ಷದೊಳ್ ವಿಯಚ್ಚರ ಚಕ್ರವರ್ತಿತ್ವಮಂ ಪಡೆದು: **ಶಾಂತಿಪು,** ೭. ೧೦೩ ವ); ಅತೀಂದ್ರಿಯವಾದುದು (ಐಂದ್ರಿಯಕಂ ಪ್ರತ್ಯಕ್ಷಂ ಅತೀಂದ್ರಿಯಮಪ್ಪುದು ಪರೋಕ್ಷಂ: **ಅಭಿಧಾವ,** ೧. ೧೨. ೨೪)

**ಪರೋಪಕಾರಾಯ ಸತಾಂ ವಿಭೂತಿಃ** – ಸತ್ಪುರುಷರ ವೈಭವವೆಲ್ಲ ಇತರರ ಉಪಕಾರಕ್ಕಾಗಿಯೇ (ಪರೋಪಕಾರವನೆ ಮಾಡುಗುಂ ಆದರದಿಂ ಪರೋಪಕಾರಾಯ ಸತಾಂ ವಿಭೂತಿಃ ಎನಿಕುಂ ಗುಣಿ ದುರ್ಗನಶೇಷಧಾತ್ರಿಯೊಳ್: **ಪಂಚತಂತ್ರ,** ೪೪೪)

**ಪರೋಪತಾಪಿ** – ಇತರರಿಗೆ ಕಷ್ಟ ಕೊಡುವವನು (ಪಾಪಿ ಪರೋಪತಾಪಿ .. .. ತಾನೆನಿಪ್ಪ ನಿಕೃಷ್ಟಂಗಂ ಅಶೇಷಜೀವದಯೆಯುಂ ಶಾಂತತ್ವಮುಂ .. .. ಪುಟ್ಟುಗುಂ: **ಸಮಯಪ,** ೧. ೮೮)

**ಪರ್ಚಿಪೇಟಿಸ್** – ಪಿಸುಗುಟ್ಟಿ ಹೇಳು (ಜಳಮಂತ್ರೋಪದೇಶಮಂ ಕಿವಿಯೊಳ್ ಪರ್ವಿಪೇಟ್ದು ಕುರುಪಿತಾಮಹಂ: **ಪಂಪಭಾ,** ೧೩. ೭೦ ವ)

**ಪರ್ಚು** – ಪಿಸುಗುಡು (ನೀಂ ಎನ್ನಂ ಪೋಗಲೆವೇಟ್ಟುದು ಎನುತ್ತುಂ ಪರ್ಚಿ ಸಖೇದನಾಗಿ ಮೆಲ್ಲನೆ ನುಡಿದಂ: **ಕಾದಂಬ,** ೮. ೧೪೭); ಗುಟ್ಟು (ಸಂಜೀವಕಂ ದಾವಪಾವಕನಾದಂ ಭವದಿಷ್ಟಸೇವಕಗಣಕ್ಕೇಂ ಪರ್ಚುವೇಂ ಮಂತಣಂ: **ಪಂಚತಂತ್ರ,** ೧೬೦)

**ಪರ್ಚುಗೋಳ್** – ಹಂಚಿಕೊ (ನುಡಿದಳ ನುಡಿಯಂ ಭಾವಿಸಿ ಕಾಂತೆಯ ಚಿಂತೆಯನಾ ವಿಭು ಪರ್ಚುಗೊಂಡು ತಳೆದು: **ರಾಜಶೇವಿ,** ೩. ೭೦)

**ಪರ್ಚುಣ್** – ಹಂಚಿ ತಿನ್ನು (ಪರ್ಚುಣ್ಣೆಂದಾಲ್ಕೆ ಏಂ ಪಾಪಿಗಳೆಲ್ಲರ್ .. .. ಮುಕ್ತಿಗೆ ಸಂದರ್: **ಸಮಯಪ,** ೧೦. ೧೭೯)

**ಪರ್ಜನ್ಯ** – ಮಳೆ (ಅಮರಸರಿತ್ ಪದ್ಮಪತ್ರೋದನೀಲೀನಿವಹಂ ಪರ್ಜನ್ಯದೋಹಪಕ್ಷಬಹುಮಹಿಷೀಸಂಕುಲಂ .. .. ನಿಂದುದು .. .. ಅಂಭೋದಕಾಲಂ; **ಅನಂತಪು,** ೯. ೭)

**ಪರ್ಜನ್ಯಗರ್ಜನ** – ಗುಡುಗು (ಕುಮಾರಂ ಪರ್ಜನ್ಯಗರ್ಜನಮಂ ಕೇಳ್ದ ಕೇಸರಕುಮಾರನಂತು ಕೆಳರ್ದು: **ಚಂದ್ರಪ್ರಪು,** ೫. ೭೪ ವ)

**ಪರ್ಜನ್ಯಜನ್ಯಧ್ವನಿ** – ಗುಡುಗು (ದಂತಕಾಂತಿಯಂ ಗೊಂಚಲ್ಮಿಂಚೆಂದು ಗರ್ಜನೆಯಂ ಪರ್ಜನ್ಯಜನ್ಯಧ್ವನಿಯೆಂದು ಮುಂದುಗೆಟ್ಟು: **ರಾಜಶೇವಿ,** ೧. ೧೦೨ ವ)

**ಪರ್ಣ** – ಎಲೆ (ಪತ್ರಂ ಪರ್ಣಂ: **ಅಭಿಧಾವ,** ೧. ೭. ೫)

**ಪರ್ಣಪುಟ** – ಎಲೆಯಿಂದ ಮಾಡಿದ ದೊನ್ನೆ (ಎನ್ನಂ ಪರ್ಣಪುಟದೊಳ್ ತಳೆದು .. .. ನಿಜಾಶ್ರಮಕ್ಕೆ ಪೋಗೆವೋಗೆ: **ಕಾದಂಬ,** ೧. ೧೭೮ ವ)

**ಪರ್ಣಲಘುವಿದ್ಯೆ** – [ಜೈನ] ಶರೀರವನ್ನು ಎಲೆಯಂತೆ ಹಗುರಮಾಡಿಕೊಳ್ಳುವ ವಿದ್ಯೆ (ವಸುದೇವನಂ ಪರ್ಣಲಘುವಿದ್ಯೆಯ ಕೆಯ್ಯೊಳ್ ಕೊಟ್ಟೊಡೆ ಅದು ಚಂಪಾಪುರದ .. .. ನಡುವಣ ಪುಳಿನತಳದೊಳಿರಿಸಿ ಪೋಗೆ: **ನೇಮಿನಾಪು,** ೬. ೧೪ ವ)

**ಪರ್ಣಶಾಲೆ** – ಯತಿಗಳ ಗುಡಿಸಲು (ಯತಿಕುಟೀರಮದು ಪರ್ಣಶಾಲೆ: **ಅಭಿಧಾವ,** ೧. ೧೦. ೨೦)

**ಪರ್ದು** – ಹದ್ದು, ಗೃಧ್ರ (ಭುಗಭುಗನೆ ಉರ್ಚಿಪಾಯ್ವ ಬಿಸುನೆತ್ತರ ಸುಟ್ಟುರೆಯಂ ನೆಲಕ್ಕೆ ಪರ್ದುಗಳ್ ಉಗಲೀಯದೆ ಅವ್ವಳಿಸಿ ಪೀರ್ವಿನಂ ಒರ್ಮೆಯೆ ಮೊಯ್ವ ಮೊಯ್ಗಳಿಂ ನೆಗೆದು ಮುಗಿಲ್ಗಳ್ ಇಟ್ಟೆಡೆಗಳೊಳ್ ತಲೆಗಳ್ ತೊಡರ್ದಿರ್ದು ಜೇನ ಮುಟ್ಟಿಗಳೆನೆ ಮೋಲ್ತುವು ಏಂ ಕಲಹಂ ಅಚ್ಚರಿಯಾಯ್ತೊ ತುರಂಗಸೈನ್ಯದೊಳ್: **ಪಂಪಭಾ,** ೧೦. ೮೦)

**ಪರ್ಪರಿಕೆಗಿಡು** – ಕರ್ಕಶತೆ ಹೋಗು, ಮೃದುವಾಗು (ಪರ್ಪರಿಕೆಗಿಡದೆ ಕಲಿವಿಷಖರ್ಪರನಿದಿರಾಂತೊಡೆ ಆಂತು ವಲಲಂ ತಳಮಂ ಮಾರ್ಕಸೆದು ತಳ್ತು .. .. ಸಿಂಹನಾದದಿನಾರ್ದಂ: **ಪಂಪಭಾ,** ೮. ೫೮)

**ಪರ್ಬ** – [ಪರ್ವ] ಉತ್ಸವ, ಹಬ್ಬ (ನಿಜಗರ್ಬದ ಅಗುರ್ಬು ಉರ್ಬಿರೆ ಕೊಂದು ಆಂ ಪರ್ಬಂ ಮಾಡೆನೆ ಸೃಗಾಲ ನಾಳೆಯೆ ನಿನಗಂ: **ಪಂಚತಂತ್ರ,** ೨೦೧)

**ಪರ್ಬು** – ಹರಡು (ಪರ್ಬು–ವಿಸ್ತಾರೇ: **ಶಬ್ದಮದ, ಧಾ** ೪೯೩)

**ಪರ್ಯಂಕ** – ಮಂಚ (ಅಮೃತಮಣಿಪೀಠಿಕಾಧಿಷ್ಠಿತ ಪರ್ಯಂಕದೊಳ್: **ಆದಿಪು,** ೭. ೨೭ ವ); ಪಲ್ಲಕ್ಕಿ; ಒಂದು ಆಸನ

**ಪರ್ಯಂಕಪೀಠ** – ಸುಖಾಸನ (ಕತಿಪಯ ಆಪ್ತಸಖೀಜನಂಬೆರಸು ಕೇಳೀನಿಳಯದ ಕನತ್ ಕನಕ ಪರ್ಯಂಕಪೀಠಮನಳಂಕರಿಸಿ ಕುಳಿರ್ದಾಗಳ್: **ರಾಜಶೇವಿ,** ೪. ೨೬ ವ)

**ಪರ್ಯಂತ** – ಎಲ್ಲೆ (ಕ್ರಮದಿಂ ಪರ್ಯಂತ ನಾನಾ ಜನಪದ ನಗರ ಗ್ರಾಮ ಪುಣ್ಯಾಶ್ರಮ ಪ್ರಾಂತಮೆ ಬೀಡಪ್ಪಂತು ಸೌಮಿತ್ರಿಯ ಸಮುಚಿತ ಪರ್ಯಷ್ಟಿಯಿಂ ಪಿಂಗೆ ಯಾತ್ರಾಶ್ರಮವೇಗಂ: **ಪಂಪರಾ,** ೭. ೨೯)

**ಪರ್ಯಟನ** – ಸಂಚಾರ (ವಿಶಾಖನಂದಿಯುಂ ಆಯುರವಸಾನದೊಳ್ ಸತ್ತು ಅನೇಕ ಭವಗಹನ ಪರ್ಯಟನದಿಂ ಬಂದೈರಾವತತೀರದ ಕಾನನಾಶ್ರಮದೊಳ್ .. .. ಭಾಜನನಾದೊಂ; **ಶಾಂತಿಪು,** ೭. ೬೨ ವ); [ಜೈನ] ಸನ್ಯಾಸಿಗಳು ಚರಿಗೆಗಾಗಿ ಮಾಡುವ ಸಂಚಾರ (ಪರ್ಯಟನಂ ತಾನೀಯಾಚರ್ಯಾರ್ಥಂ ಪರಿಮಿತವ್ರತಸ್ಥಿತಿನಿಯಮಂ: **ಅಭಿಧಾವ,** ೧. ೧೧. ೩೬))

**ಪರ್ಯಾಣ** – ತಟ್ಟೆ (ವಿಚಿತ್ರವರ್ಣ ಶಬಲಿತ ಸುವರ್ಣ ಪರ್ಯಾಣಂಗಳಿಂದುಣ್ಮುಖ ಮಯೂಖ ಮಾಣಿಕ್ಯದೀಪ ಕಿರಣರುಣಿತ .. .. ಪುತ್ರಿಕೆಗಳಿಂ: **ಪಂಪರಾ,** ೧೨. ೨ ವ)

**ಪರ್ಯಾಯ** – ಅನುಕ್ರಮ, ಸರದಿ (ಜಗಮಂ ಪರ್ಯಾಯದಿಂ ಮಾಡುಗುಂ ಅಟಿಯುತ್ತಿರ್ಕುಂ ಆವ ಕಾಲದೊಳಂ: **ಸಮಯಪ,** ೧೦. ೫೦)

**ಪರ್ಯಾವಲೋಕನ** – ಸೂಕ್ಷ್ಮವಾಗಿ ನೋಡುವುದು (ಈರ್ಯಾಮಾರ್ಗ ಪರ್ಯಾವಲೋಕನ ಮಂದಮಂದ ಗಮನನಿರತ ಅವಧಿಬೋಧಾವಧೂತರೂಪದರ್ಶನಕ್ಷಪಿತ ಸಂದೇಹ ಸಂದೋಹರ್: **ಶಾಂತಿಪು,** ೬. ೭೦ ವ)

**ಪರ್ಯಾವಸಾನ** – ಮುಕ್ತಾಯ, ಕೊನೆ (ತತ್ ಕಾರ್ಯಾಲೋಚನ ತಾತ್ಪರ್ಯಪರ್ಯಾವಸಾನದೊಳ್ ಮಜ್ಜನಂಬುಗುತ್ತುಂ: **ಸುಕುಮಾಚ,** ೩. ೨ ವ)

**ಪರ್ಯಾಷ್ಟಿ** – ಪರಿಚರ್ಯೆ (ಕ್ರಮದಿಂ ಪರ್ಯಂತ ನಾನಾ ಜನಪದ ನಗರ ಗ್ರಾಮ ಪುಣ್ಯಾಶ್ರಮ ಪ್ರಾಂತಮೆ ಬೀಡಪ್ಪಂತು ಸೌಮಿತ್ರಿಯ ಸಮುಚಿತ ಪರ್ಯಾಷ್ಟಿಯಿಂ ಪಿಂಗೆ ಯಾತ್ರಾಶ್ರಮವೇಗಂ: **ಪಂಪರಾ,** ೭. ೨೯)

**ಪರ್ಯಸ್ತಿಕೆ** – ಹಾಸುಗೆ (ಪರ್ಯಂಕಂ ಪರಿಕರಮೆನೆ ಪರ್ಯಸ್ತಿಕೆ: **ಅಭಿಧಾವ,** ೧. ೧೧. ೩೬)

**ಪರ್ಯಾಕುಲ** – ಕಳವಳ (ಅದೇಂ ಭುವನಮಂ ಪರ್ಯಾಕುಲಂ ಮಾಡಲಾದುದೊ ದುರ್ಯೋಧನಭೀಮಸೇನರ ಗದಾಯುದ್ಧಂ ಕುರುಕ್ಷೇತ್ರದೊಳ್: **ಗದಾಯು,** ೮. ೧೦)

**ಪರ್ಯಾಣ** – [ಪಲ್ಯಯನ] ಕುದುರೆಯ ಜೀನು (ಕಣ್ಣಂ ಖುರಮುಂ ತೋಱೆ ಪಕ್ಕರೆಯಿಕ್ಕಿ ಪೊಳೆವ ಪೊನ್ನ ಪರ್ಯಾಣಮಂಗಳುಮೆಸೆಯೆ ಘೋಟಕಾಯ್ಲುರ್ ಪೊಳೆಯಿಸೆ ಬಿಸುಲ್ಗುದುರೆಗಳ್ ಪೊಳೆವಂತೆ ಪೊಳೆವ ಕಡುಗುದುರೆಗಳುಮಂ: **ಪಂಪಭಾ,** ೧೦. ೫೧ ವ)

**ಪರ್ಯಾಣಕ** – ಹಲ್ಲಣ ಹಾಕಿ ಸಿದ್ಧಗೊಂಡುದು (ಯಥಾಸ್ಥಿತ ಪರ್ಯಾಣಕಮಪ್ಪ ಇಂದ್ರಾಯುಧಮನೇಱೆ: **ಕಾದಂಬ,** ೯. ೨೦ ವ)

**ಪರ್ಯಾತೀತ** – ಹೆಚ್ಚಳ (ಪರಮಾಶ್ಚರ್ಯಪರ್ಯಾತೀತ ಶಿರಃಕಂಪಂಬೆರಸು: **ಶಾಂತಿಪು,** ೧೦. ೭೫ ವ)

**ಪರ್ಯಾಪ್ತ** – ತುಂಬಿದ (ಅಂತು ಸಹಸ್ರಲೋಚನಂ ಪರ್ಯಾಪ್ತಸಹಸ್ರಲೋಚನನಾಗಿ ಸಹಸ್ರಪತ್ರಾಯತನೇತ್ರನಂ ನೋಡಿ: **ಜಗನ್ನಾವಿ,** ೪. ೧೦೧ ವ); ಕೊನೆಗೊಂಡುದು (ಕೃತವೆಂಬುದು ಪರ್ಯಾಪ್ತಂ: **ಅಭಿಧಾವ,** ೩. ೧. ೧೨೬); ತೃಪ್ತಿ ಹೊಂದುವುದು (ತಣಿವುದು ಸಾಹಿತ್ಯಂ ತರ್ಪಣವೆನಿಸುಗುಂ ಆಶಿತಂ ಭವಂ **ಪರ್ಯಾಪ್ತಂ:** ೧. ೧೬. ೭); ನಿಕಾಮವೆನೆ ಪರ್ಯಾಪ್ತಂ; ಅಭಿಧವ, ಹೇರಳವಾದುದು (**ಅಭಿಧಾವ,** ೨. ೧. ೪೨); ಸಮಗ್ರವಾದ (ಉತ್ತಮಕ್ಷಮಮಾರ್ದವ .. .. ಪರ್ಯಾಪ್ತ ದಶಧರ್ಮಂಗಳಂ ಕೈಕೊಂಡು: **ಆದಿಪು,** ೬. ೩೦ ವ)

**ಪರ್ಯಾಪ್ತಕ** – [ಜೈನ] ಪರ್ಯಾಪ್ತಿಯನ್ನು ಹೊಂದಿದ ಜೀವ (ಅಲ್ಲಿ ಸೂಕ್ಷ್ಮಬಾದರ ಪರ್ಯಾಪ್ತಕಭೇದದಿಂ ಸೂಕ್ಷ್ಮವನಸ್ಪತಿಕಾಯಂಗಳ್ .. .. ಪುಟ್ಟುತುಮಿರ್ಕುಂ: **ಮಲ್ಲಿನಾಪು,** ೧೩. ೧೨೨ ವ), ನೋಡಿ, 'ಪರ್ಯಾಪ್ತಿ'

**ಪರ್ಯಾಪ್ತಯೋಗ** – ತಪಸ್ಸನ್ನು ಪೂರ್ಣಗೊಳಿಸಿದವನು (ತನ್ಮುನೀಂದ್ರಂ ಪರ್ಯಾಪ್ತಯೋಗಂ ಕೆಯ್ಯನೆತ್ತಿಕೊಂಡು ಯಥೋವಿಹಾರದಿಂ .. .. ಚರಿಗೆವುಗೆ: **ಶಾಂತಿಪು,** ೯. ೨೧ ವ)

**ಪರ್ಯಾಪ್ತಿ** – [ಜೈನ] ನಾಮಪ್ರಕೃತಿಗಳಲ್ಲಿ ಒಂದು; ಶರೀರದ ಪುದ್ಗಲರಚನೆ ಪೂರ್ಣಗೊಂಡಿರುವುದು; ಇದರಲ್ಲಿ ಆರು ಬಗೆ: ಆಹಾರ, ಶರೀರ, ಇಂದ್ರಿಯ, ಶ್ವಾಸೋಚ್ಛ್ವಾಸ, ಭಾಷಾ, ಮನಸ್ (ಪರಾರ್ಥ್ಯರತ್ನರಚನಾವಿಚಿತ್ರೋಪಪಾದ ಶಯನತಳದೊಳ್ ಅಂತರ್ಮುಹೂರ್ತದೊಳ್ ಪರ್ಯಾಪ್ತಿಯಂ ಕೈಕೊಂಡು: **ಆದಿಪು,** ೬. ೩೭ ವ)

**ಪರ್ಯಾಯ** – ರೀತಿ (ಆಮುಂ ಪಲವುಂ ಪರ್ಯಾಯದಿಂ ಪೇಱೆದೊಡಂ ಕೇಳ್ದನಿಲ್ಲಿಲ್ಲಿಗೆ ತಕ್ಕುದಂ ನುಡಿದು ದೇವಿಯರ್ ಎಂತಾನುಂ ಒಡಂಬಡಿಸುವುದೆಂದೆನೆ: **ಪಂಪರಾ,** ೧೪. ೧೨೨ ವ); ಅನುಕ್ರಮ (ಅಂತು ಶಿಲಾಪಟ್ಟದೊಳ್ ನಿರಂತರಂ ಸೂರ್ಯರಾತ್ರಿಪ್ರತಿಮಾಪರಂಪರೆಯಂ ಪಯಾಯದಿಂದಂ ಅನುಷ್ಠಿಸುತ್ತುಂ: **ಶಾಂತಿಪು,** ೧೧. ೧೦೮ ವ); ಕೊನೆ (ಪಾಂಡವರ್ ಮರ್ಯಾದಾಪರರ್ ಅಲ್ಲಿ ಮೈಗರೆದು ಸಂದೊಂದಿರ್ದೊಡಂ ಕಾಣ್ಬೊಡಿಂ ಪರ್ಯಾಯಂ ಪೆಱತುಂಟೆ ತತ್ಪುರದ ಗೋವೃಂದಂಗಳಂ ಕೊಂಡೊಡೆ ಆಶೌರ್ಯಾನ್ವಿತರ್ ಇದರ್ಕೆ ಸೈರಿಸರ್: **ಕರ್ಣನೇಮಿ,** ೧೦. ೧೩೩)

**ಪರ್ಯಾಯಂದಪ್ಪು** – ಕ್ರಮ ತಪ್ಪು (ಪರ್ಯಾಯಂದಪ್ಪದೇಂ ಸುತ್ತಿಱಿದುವೊ ವಲಯಾಕಾರದೊಂದೊಂದಂ ಅತ್ಯಾಶ್ಚರ್ಯಂ: **ಆದಿಪು,** ೧. ೪೦)

**ಪರ್ಯಾಲೋಚನ** – ಚೆನ್ನಾಗಿ ಆಲೋಚಿಸುವುದು (ನಾವೀ ರಾಜ್ಯದೊಳ್ ತೊಡರ್ದು ಪರ್ಯಾಲೋಚನಾ ಪರಿವೃತ್ತಿ ಯೊಳೇನಪ್ಪುದು ಎಂತುಂ ಅವ್ಯಾಪಾರವೃತ್ತಿಯಾವುದುಂ ಪೊಲ್ಲದು: **ಪಂಚತಂತ್ರ,** ೮೧ ವ)

**ಪರ್ಯುಷಿತ** – ಹಳೆಯ (ಪರ್ಯುಷಿತ ಚಂದನಾಂಗರಾಗ ಧೂಸರೋರುದಂಡನುಂ .. .. ಆಗಿ: **ಕಾದಂಬ,** ೬. ೧೦ ವ)

**ಪರ್ವ** – ಜೋಡಣೆ (ಪಿಡಿದುದಿರ್ವ ಬಾಳ ಕಿಡಿಗಳಿಂ ಒಡನೊಡನಡೆವೊತ್ತಿ ತೊಟ್ಟ ಸನ್ನಣವುರಿಯಲ್ಕೊಡರಿಸಿದೊಡೆ ಅವಱ ಪರ್ವಂ ಬಿಡೆಯರದರಿಸಮಿತಿಯೊಡನೆ ಕಾದಿದದರೆಬರ್: **ಪಂಪಭಾ,** ೧೦. ೭೯); ಬೆರಳ ಗೆಣ್ಣು (ಎಮ್ಮ ವಾಮಕರದ ಈ ಹೀನಾಂಗುಳೀ ಪರ್ವಮಂ ಭರದಿಂದಂ ಮಡಿಯೊತ್ತಿಂ: **ಕರ್ಣನೇಮಿ,** ೧೩. ೮); ಕಬ್ಬಿನ ಗೆಣ್ಣು (ಪರ್ವದಿಂ ತನಿರಸವೆಚ್ಚು ಪಾಯೆ ಬಗೆಗೊಳ್ವುದು ಕರ್ವಿನ ಸುರ್ವು ತೋಂಟದೊಳ್: **ಪುಷ್ಪದಂಪು,** ೨. ೪೮); ಪುಣ್ಯಕಾಲ, ಹಬ್ಬ (ಪುರಕ್ಕಿನ್ ನಡೆತಂದು ದೇವ ಪಡೆ ಪೌರಜನಂಗಳ ಕಣ್ಗೆ ಪರ್ವಮಂ: **ಕಾದಂಸಂ,** ೨. ೩೬)

**ಪರ್ವತ** – ದೊಡ್ಡ ಬೆಟ್ಟ (ಗಿರಿ ಗೋತ್ರಂ ಶಿಖರಿ ಧ್ರಂ ಸ್ಥಿರಂ ನಗಂ ಪರ್ವತಂ: **ಅಭಿಧಾವ,** ೧. ೬. ೧)

**ಪರ್ವಸಂಘ** – ಗೆಣ್ಣು (ಮರುತಂ ಪಿಳ್ಕು ಖಗೇಶ್ವರಂ ಗಱಿ ಸುಪರ್ವರ್ ಪರ್ವಸಂಘ ಫಣಾಧರರಾಜಂ ಕಣೆ: **ಜಗನ್ನಾವಿ,** ೧೨. ೫೦)

**ಪರ್ವು** – ಹಬ್ಬು (ಪೂರ್ವಾಪರಜಳನಿಧಿಗಳ ಪರ್ವುವರಂ ನೀಳ್ದು ಶಿಖರನಿಕರಂ ನಭವಂ ಪರ್ವಿರೆ: **ಆದಿಪು,** ೯. ೧೨೧)

**ಪರ್ವುಗೆ** – ಹರಹು (ಮುಗಿದ ಕಣ್ಗಳ ಪರ್ವುಗೆಯೊಳ್ ಮೆಱೆದುವವರ ತಟ್ಟೆಮೆದುಱುಗಲ್: **ಯಶೋಧಚ,** ೨. ೨೬); ಹಬ್ಬುಗೆ, ಹರಡುವಿಕೆ (ಆನಕದ್ವನಿಯ ಪರ್ಬುಗೆಗೀ ಕಮಲೋದ್ಭವಾಂಡವಿಟ್ಟೆಡೆಯೆನೆ ದಂತವಕ್ತ್ರದನುಜಂ ನಡೆತಂದು: **ಜಗನ್ನಾವಿ,** ೯. ೬೭)

**ಪರ್ವುಗೊಳ್** – ವಿಸ್ತಾರಗೊಳ್ಳು (ಅರ್ಪಿಸುವಾಕೃತಿ ಪರ್ವುಗೊಂಡ ಬಿಲ್ಲೊದವಿದಗರ್ಜಿತಂ ಸುರಿವ ಸಾಯಕವದ್ಭುತವಾಯ್ತು ಸಾಲ್ವನಾ: **ಜಗನ್ನಾವಿ,** ೧೮. ೯೦)

**ಪಲ್** – ಹಲ್ಲು (ಪಲ್ಲಿಲ್ಲದ ಪುಲಿಯುಂ ನಖಮಿಲ್ಲದ ಸಿಂಹಮುಂ ಎನಿತು ಬಲ್ಲಿತಾದೊಡಂ ಏಗೆಯ್ವುದು: **ಧರ್ಮಾಮೃ,** ೧೩. ೧೦೦ ವ)

**ಪಲ** – ಮೂರು ತೊಲ ತೂಕ (ಪತ್ತೆಂಟು ಪಲದೊಳ್ ಒರ್ಪಲ ಕತ್ತುರಿಯಂ ಕೂಡಲ್ ಒಡನೆ ದಳವುಳ್ಳನಿತುಂ ಕತ್ತುರಿಯಪ್ಪವೊಲ್: **ಸಮಯಪ,** ೧೫. ೩೬); ಆಕರ್ಷಣೆ, ಮಾಂಸ (ಪಲಂ ಆಮಿಷ ಅಡಗು: **ಅಭಿಧಾವ,** ೧. ೧೨. ೩೦); ಹಲವು, ಅನೇಕ (ಪಲವುಂ ತೆಱದ ಬಾಡುಗಳುಂ ತುಯ್ಯಲುಂ .. .. ಬಡ್ಡಿಸಿದೊಡೆ: **ವಡ್ಡಾರಾ,** ಪು. ೭೮, ಸಾ. ೧೫)

**ಪಲಲ -** ಮಾಂಸ (ಪಲಲಂ ಪಿಶಿತಂ ಕ್ರವ್ಯಂ: **ಅಭಿಧಾವ,** ೧. ೧೨. ೩೦)

**ಪಲಕಾಲಂ –** ಬಹಳ ಕಾಲದವರೆಗೆ (ಪಲಕಾಲಮಗಲ್ದ ನಲ್ಲರಿರ್ವರುಂ ಒಂದೆಡೆಯೊಳ್ ಕೂಡಿ: **ಪಂಪಭಾ,** ೪. ೧೦೮ ವ)

**ಪಲಗಣ್ಣ –** ಇಂದ್ರ (ಬಳಸಿದ ತಾರಗೆಗಳ ಮಾರ್ಪೊಳೆವೊಂದಿದ ಪೊನ್ನ ಬೆಟ್ಟು ಕೈಯಂ ಕಾಲಂ ತಳೆದಿರ್ದುದೆಂಬಿನಂ ಕಣ್ಗೊಳಿಸಿದನಂತವರ ಪಕ್ಕದೊಳ್ ಪಲಗಣ್ಣಂ: **ಕಬ್ಬಿಗಕಾ,** ೧೨೭)

**ಪಲಗೆ –** [ಫಲಕ] ಹಲಗೆ, ಆಟದ ಹಾಸು ಒಂದು ಸಲದ ಆಟಕ್ಕೆ (ಪಲಗೆಗೆ ಪತ್ತು ಸಾಯಿರಮೆ ಗದ್ಯಣಂ ಎಂದಿರದೆ ಒಡ್ಡಿ ತಾಮ್ ಎರಟ್ಟಿಲಗೆಯಂ ಆಡಿ ಸೋಲ್ತೊಡೆ: **ಪಂಪಭಾ,** ೬. ೭೨); ಗುರಾಣಿ (ಎರಡುಂ ಬಲದ ಕಡಿತಲೆಯ ನಾಯಕರ್ ಕೆಯ್ಕೊಂಡು ಬಳ್ಳುಗೆಡೆದು ಎಕ್ಕೆವಾಱುವಾಜಿ ಪಲಗೆವಾಜಿ ಗೂಳಿಸೊರ್ಕಿ ಮಾರ್ಕೊಂಡು ಕಾದೆ: **ಪಂಪಭಾ,** ೧೦. ೮೦ ವ)

**ಪಲಗೆಗಟ್ಟು –** ಹಲಗೆಗಳನ್ನು ಜೋಡಿಸಿ ಮಾಡಿದ ಕಟ್ಟು (ಮುಚುಕುಂದದ ಮೂಲ್ಯಂಗಳಿಂ ಪೊಂದಾವರೆಯ ಪಲಗೆಗಟ್ಟುಗಳಿಂ: **ಕುಸುಮಾಕಾ,** ೧೨. ೧೫೭ ವ)

**ಪಲಗೆಜೂಜು –** ಪಗಡೆ ಜೂಜು (ಪಲಗೆಜೂಜಾಡಿದೆಂ ಸೂಳೆಗೆಯ್ದೆಂ: **ನೇಮಿನಾಪು,** ೫. ೩೬)

**ಪಲಗೆಯನಾಡು –** ಪಗಡೆ ಆಟವಾಡು (ಪಲಗೆಗೆ ಪತ್ತು ಸಾಯಿರಮೆ ಗದ್ಯಣಂ ಎಂದಿರದೆ ಒಡ್ಡಿ ತಾಮ್ ಎರಟ್ ಪಲಗೆಯನಾಡಿ ಸೋಲ್ತೊಡೆ: **ಪಂಪಭಾ,** ೬. ೭೨)

**ಪಲಗೆವಿನ್ನಣ –** ಗುರಾಣಿ ಹಿಡಿಯುವ ಕೌಶಲ (ಗರುಡಿಯೊಳಗೆ ಪಲಕೆಲಂಬರ್ ಪಲಗೆವಿನ್ನಣಂಗಳೊಡನೆ ಕಾಮನ ಪರ್ವತದಂತೆ: **ಅನಂತಪು,** ೧೧. ೪೮ ವ)

**ಪಲಲ –** ಮಾಂಸ (ವರಸಂಭಾರಮನೊಂದಿಸಿ ಪರಿಪಾಕಂಗೈದ ಪಲಲತತಿ ರಂಜಿಸುಗುಂ: **ಉದ್ಭಟಕಾ,** ೫. ೬೫)

**ಪಲವಾಡು –** ನಾನಾ ಮಾತುಗಳನ್ನಾಡು (ಈ ಸುರಸಭೆಯೊಳ್ ಪಲವಾಡುವೆನ್ನ ನಾಲಗೆ ಬಲಸ್ಥನೊರ್ವಂಗೆ ಜೀಯ ದೇವೆಂದಪುದೇ: **ಆದಿಪು,** ೧೨. ೧೦೧)

**ಪಲಸು –** ಹಲಸಿನ ಮರ, ಹಣ್ಣು (ಬೇರ್ವಿಡಿದು ಕಾಯ್ತ ಪಲಸು ಎಳನೀರ್ವೊನಲಂ ಕಱೆವ ತೆಂಗು: **ಪಂಪರಾ,** ೧. ೧೧೨)

**ಪಲಾಲ –** ಹುಲ್ಲು (ನಮಗಿದು ಪಲಾಲಭಾರಂಬೊಲ್ ಈ ಮಹೀತಲಭಾರಂ: **ಆದಿಪು,** ೧೪. ೩೩); ಜೊಂಡು (ತನಯನಂ ಪಡೆಯದೆ ಬಾಳ್ವನ ಸಂಸಾರಂ ಅಸಾರಂ ತೆನೆಯಿಲ್ಲದ ನವಪಲಾಲದಂತಿರೆ ಧರೆಯೊಳ್: **ರಾಜಶೇವಿ,** ೩. ೭೫); ನಿಷ್ಫಲ, ನಿಸ್ಸಾರ (ಲಾವಣ್ಯಮೆನ್ನದೆ ಬೇಱೊಂದು ಪಲಾಲಮಂ ಗಱಿಪಿ ಚಾತುರ್ಯಕ್ಕೆ ಮುಯ್ಯಾಂಪುದೇ: **ಸುಕುಮಾಚ,** ೧೦. ೧೧೪)

**ಪಲಾಶ –** ಮುತ್ತುಗ (ಇವರಂ ಏಕಿಲ್ಲಿ ಪುಗಲಿತ್ತೆ ಎಂದು ಅರ್ಘ್ಯಪಾನೀಯ ಪಲಾಶ ಕಾಂಡ ಕುಶ ಕುಸುಮ ಹಸ್ತಂ ಅಪ್ರಶಸ್ತಂ ಕೆಡೆನುಡಿಯೆ: **ಪಂಪರಾ,** ೭. ೧೨೫ ವ); ಮಾಂಸ ತಿನ್ನುವವನು (ನಾಱುವ ಪೊಲಸಿಂ ಕರಂ ಆ ಪಲಾಶರಿಂ ಮದ್ಯಪರಿಂ ಖಳರಿಂ ಜನ್ನದ ಮನೆಗಂ ಪೊಲೆವನೆಗಂ ಭೇದಮಿಲ್ಲ: **ಸಮಯಪ,** ೧೧. ೧೧೦)

**ಪಲಾಶವೃತ್ತಿ –** ರಾಕ್ಷಸ ನಡತೆ (ಪಲಾಶವೃತ್ತಿಯೆಂಬುದು ಅರಣ್ಯಂಗಳೊಳ್ ವರ್ಣಸಂಕರಮೆಂಬುದು ಚಿತ್ರಕರ್ಮಂಗಳೊಳ್ ಅಲ್ಲದೆ ಪೆಱವೆಡೆಯೊಳಿಲ್ಲ: **ವರ್ಧಮಾಪು,** ೧. ೪೫ ವ)

**ಪಲಿತ –** ಕೂದಲು (ನವಿರ್ ಪಲಿತಂ: **ಅಭಿಧಾವ,** ೧. ೧೨. ೨೦); ನರೆ, ನರೆಗೂದಲು (ಗರುಗಂ ಫಲತ್ರಯಂ .. .. ನಾರ ನಾಳದೊಳ್ ಅರೆದು ಇಂಬಿನೆ ಪೂಸೆ ಪಲಿತ ನಿರ್ಭಯಮಕ್ಕುಂ; **ಲೋಕೋಪಕಾ,** ೯. ೪೯)

**ಪಲಿತೌಷಧ –** ನರೆಗೂದಲನ್ನು ಕಪ್ಪಾಗಿಸುವ ಔಷಧಿ (ಇದು ಚೋರದೃಶ್ಯಾಂಜನಂ ಇದು ವೃದ್ಧಾಂಗನೆಯರೆಸೆವ ಪಲಿತೌಷಧಂ ಇಂತಿದು ಕಾಮನ ಕಾದಲಗೆನಿಸಿದುದು .. .. ಅಂಧಕಾರಮಪಾರಂ: **ಚಂದ್ರಪ್ರಪು,** ೮. ೨೦)

**ಪಲುಂಬು –** ಹಲುಬು, ದುಃಖಪಡು (ಎನ್ನ ಬಾಟ್ಕೆಯೆ ನಿರರ್ಥಕಂ ಎಂದೆನುತುಂ ಪಲುಂಬುತುಂ: **ಕಾದಂಸಂ,** ೪. ೮೬)

**ಪಲ್ಗರ್ಚಿ ಸೈರಿಸು –** ಹಲ್ಲು ಕಚ್ಚಿಕೊಂಡು ಸಹಿಸು (ಪಸುವಂ ಮೋದುವವೊಲೆ ಮೋದೆಯುಂ ಅದಂ ಕಂಡಂತೆ ಪಲ್ಗರ್ಚಿ ಸೈರಿಸಿದೆಂ ನಿನ್ನಯ ನನ್ನಿಗಿನ್ನೆವರಂ: **ಪಂಪಭಾ,** ೭. ೫೮)

**ಪಲ್ಗರ್ಚು –** ಹಲ್ಲು ಕಚ್ಚು, ಔಡುಗಚ್ಚು (ಪಲವುಂ ಸೂಟುಲಿದು ಪಲ್ಗರ್ಚಿ ಕಲ್ಲಸರದಿಂ ಸಿಲ್ಕುವಳಿದು ಮಾಣ್ಬುದುಂ ಅದೆಲ್ಲಮನರಸಂ ಕೇಳ್ದು: **ಪಂಚತಂತ್ರ,** ೧೯೭ ವ)

**ಪಲ್ಗಳೆ –** ಹಲ್ಲು ಕೀಳು (ಪಿಡಿದು ಪಲ್ಗಳೆವಂ ಪಾವಡಿಗನೆನಿಪವಂ ಅವನ ಮೆಯ್ಯಂ ಕಿಡಿಸಲಾರ್ತಪುವೆ ತಮ್ಮ ನೆಚ್ಚಿನ ನಾಗರ್: **ಸಮಯಪ,** ೯. ೮೦)

**ಪಲ್ಪಱಿಗುಟ್ಟು –** ಹಲ್ಲು ಮೊರೆ (ತುಂಬಿಗಳುಂ ಪಲ್ಪಱಿಗುಟ್ಟಿದಪುವು ಎಂಬಂತೆಯುಂ .. .. ಆಗೆ; **ಕಾದಂಬ,** ೭. ೨೩ ವ)

**ಪಲ್ಮಿಗ –** ಕೋರೆಗಳುಳ್ಳ ಮೃಗ: ಹುಲಿ, ಸಿಂಹ, ಆನೆ ಇತ್ಯಾದಿ (ಬೇಳ್ಮಿಗಮ ಪಲ್ಮಿಗಮಂ ತಣಿದುವೆಯ್ದೆ ಕಾಪಿನ ಪೊಲದೊಳ್: **ಅನಂತಪು,** ೧೧. ೩೯)

**ಪಲ್ಮೃಗ –** ಪಲ್ಮಿಗ (ತರಳಾಕ್ಷಿ ಪಲ್ಮೃಗದ ಬರಿಯೊಳ್ ಬಿಟಗ್ಗಿಮೋ ತರುಣಿಯೆನ್ನಂ ಕಾಣದೆ ಅತಿಭಯಂಗೊಳ್ಗುಮೋ: **ಕುಸುಮಾಕಾ,** ೧೪. ೧೧೯ ರಗಳೆ)

**ಪಲ್ಮೊರೆ –** ಹಲ್ಲು ಕಡಿದು ಶಬ್ದಮಾಡು (ಮೂವಳಸುವಳಸಿ ಸುತ್ತಿರ್ದುದು ಅಂಬೋಧಿಯೆಂಬಂತೆ ಗಭೀರಾರಾವದಿಂ ಪಲ್‌ಮೊರೆವವೊಲ್ ಎಸೆಗುಂ ಸುತ್ತಿ ಪಾನೀಯಖೇಯಂ: **ಸುಕುಮಾಚ,** ೯. ೫೭)

**ಪಲ್ಮೊಳೆ –** ಮೊಳೆತ ಹುಲ್ಲು (ಝಣರೆನಲ್ ಪೊಂಗೆಜ್ಜೆವೊಂದೊಂದು ಪಲ್ಮೊಳೆ ಚೆಲ್ವಾಗಿರೆ ಮುದ್ದುವೀಱಿ ನಗುತ್ತೇಳ್ತಂದಪ್ಪುವಂ ಮಾತೆಯಂ: **ರಾಜಶೇವಿ,** ೪. ೭೩)

**ಪಲ್ಯ –** [ಜೈನ] ಒಂದು ದೊಡ್ಡ ಕಾಲಪ್ರಮಾಣ; ಇದರಲ್ಲಿ ಮೂರು ಬಗೆ; ವ್ಯವಹಾರಪಲ್ಯ, ಉದ್ಧಾರಪಲ್ಯ, ಅದ್ಧಾಪಲ್ಯ (ಅವರ್ಗೆಲ್ಲಂ ಅನುಕ್ರಮದೊಳ್ ಮೂಱುಂ ಎರಡುವರೆಯುಂ ಎರಡುಂ ಒಂದುವರೆಯುಂ ಪಲ್ಯೋಪಮ ಆಯುಷ್ಯಂ: **ಅಜಿತಪು,** ೧೧. ೭ ವ)

**ಪಲ್ಯಂಕಾಸನ –** ಒಂದು ಯೋಗಾಸನ, ಎಡಪಾದವನ್ನು ಬಲತೊಡೆಯ ಮೇಲೂ ಬಲಪಾದವನ್ನು ಎಡತೊಡೆಯ ಮೇಲೂ ಇರಿಸಿ ಧ್ಯಾನಕ್ಕೆ ಕುಳಿತುಕೊಳ್ಳುವ ಭಂಗಿ (ವಸ್ತ್ರಾಭರಣಮಲ್ಯಾದಿಗಳಂ ಮೆಯ್ಯಿಂ ತೊಲಗಿಸಿ ಪೂರ್ವಾಭಿಮುಖನುಂ ನಿಬಿಡನಿಬದ್ಧ ಪಲ್ಯಂಕಾಸನನುಮಾಗಿ: **ಆದಿಪು,** ೯. ೭೬ ವ)

**ಪಲ್ಲಂ ಸುಲಿ –** ಹಲ್ಲುಜ್ಜಿ ಶುಭ್ರಗೊಳಿಸು (ಪಲ್ಲಂ ಸುಲಿವೊಡಂ ಕಿವಿತೀಂಬೊಡೆ ತುಱಿಸುವುಡೊಂ ಪುಲ್ಲಿಂದೆನಿತುಂ ಪ್ರಯೋಜನಮುಂಟು: **ಪಂಚತಂತ್ರ,** ೮೭. ಶ್ಲೋಕ ೧೨ ಟೀಕೆ)

**ಪಲ್ಲಟಂಬಾಯ್ –** ಬದಲಾವಣೆಮಾಡು (ಸೂರ್ಟವಡೆದ ಕೂಟಂ ಪಲ್ಲಟಂಬಾಯ್ತು ಬಾಯ್ಮೊಱಕಂ: **ಚಂದ್ರಪ್ರಭಪು,** ೮. ೬೮)

**ಪಲ್ಲಟಂಬೀೞ್ –** ಚೆಲ್ಲಾಪಿಲ್ಲಿಯಾಗಿ ಬೀಳು (ಒಂದೊಂದೆಡೆಯೊಳುಡಿದು ಪಲ್ಲಟಂಬಿರ್ದು ಸುರ್ವುಗೆಟ್ಟ ಪಲ್ಗಳಿಂ .. .. ಪಿಸುಣ್ಬೇಟ್ವ ಜೀರ್ಣತಾರ್ಣ ಸ್ಥಳಿಗಳುಂ: **ಚಂದ್ರಪ್ರಭಪು,** ೫. ೬೫ ವ)

**ಪಲ್ಲಟಿಸು –** ಬದಲಾಯಿಸು (ಎತ್ತಿಕೊಂಡ ಶ್ರುತಿಯಂ ಪಲ್ಲಟಿಸದೆಯುಂ: **ಪಂಪಭಾ,** ೧೪. ೩೦ ವ)

**ಪಲ್ಲಣ –** [ಪಲ್ಯಯನ] ಕುದುರೆಯ ಜೀನು (ಪೊನ್ನ ಪಲ್ಲಣಂ ಪಕ್ಕರೆ ತೇಜಿವಾರು ಕಟಿದಿರ್ಕಡಿಯಾದುದು ಬಾಳ ಬಾಯೊಳ್: **ಕಬ್ಬಿಗಕಾ,** ೨೧೮)

**ಪಲ್ಲಟಂಗಟ್ಟು –** ಜೀನು ಹಾಕು ಸುಲಕ್ಷಣಗುಣನಿಧಿಗಳ್ ಪಲ್ಲಣಂಹಟ್ಟಿ ಬಂದಿರ್ದುವು .. .. ತುರಂಗಂ: **ಪುಷ್ಪದಂಪು,** ೫. ೧೦)

**ಪಲ್ಲಣಿಸು –** ಪಲ್ಲಟಂಗಟ್ಟು (ಆಗಳ್ ಆ ಗಜದ ಬಟಿಸಂದು ನಡೆವ ಆನೆ ವಾಹಕರೊಡನೆ ಪೋಗಲೆಂದು ಪಲ್ಲಣಿಸಿ ಕೆಲದೊಳಿರ್ದ ಕೃತಕ ತುರಂಗಮಂ ತರಿಸಿ: **ಪಂಪರಾ,** ೪. ೧೧೯ ವ)

**ಪಲ್ಲಮಱಿ –** ಆನೆಯ ಮರಿ (ಪಿಡಿ ಮೊಲೆಯೂಡಿ ಪಲ್ಲಮಱಿಯಂ: **ಮಲ್ಲಿನಾಪು,** ೧೦. ೫೨)

**ಪಲ್ಲವ –** ಚಿಗುರು (ಕುಸುಮಪ್ರಸರಮೆನಿಸುವ ತುರಂಗಮುಖ ಫೇನಪಲ್ಲವಸ್ತಬಕಮುಂ: **ಆದಿಪು,** ೧೩. ೪೪ ವ); ವಿಟ (ಮಲ್ಲಿಕಾಲಲನೆಯೊಳೇಂ ಮನಂಬಿಡಿದನೋ ಬನದೊಳ್ ಸಹಕಾರಪಲ್ಲವಂ: **ರಾಜಶೇವಿ,** ೯. ೫೪)

**ಪಲ್ಲವಕ –** ವಿಟ (ಪಲ್ಲವಿಕರ ಹೃದಯೋದ್ಭವ ರಾಗಮಂ ಪಲ್ಲವಿಪ ಕಂಕೆಲ್ಲೀಪಲ್ಲವಂಗಳುಮಂ .. .. ನೀಡಿ: **ಶಾಂತೀಶ್ವಪು,** ೧೦. ೧೬ ವ)

**ಪಲ್ಲವಗ್ರಾಹಿ –** ಆಳವಾದ ಪಾಂಡಿತ್ಯವಿಲ್ಲದವನು (ಪೞನೊರ್ವನೊಲ್ದುಂ ಒಲಿಸಿಯುಂ ಒಂದೆಡೆಯೊಳ್ನಿಲ್ಲದ ಪಲ್ಲವಗ್ರಾಹಿ ಸೋಡಂಬಾಡನೆ ಬಂದು ಕಾಲ್ವಿಡಿವುದುಂ: **ಮಲ್ಲಿನಾಪು,** ೭. ೫೫ ವ ಮತ್ತು ೫೬)

**ಪಲ್ಲವನೇತ್ರೆ –** ಚಿಗುರಿನಂತೆ ಕೆಂಪಾದ ಕಣ್ಣುಳ್ಳವಳು (ಅನವರತ ಬಾಷ್ಪವಾರಿಧಾರಾಪೂರಿತ ಪಲ್ಲವನೇತ್ರೆಯುಂ: **ಗದಾಯು,** ೧. ೫೫ ವ)

**ಪಲ್ಲವಾಸ್ತರಣ –** ಚಿಗುರಿನ ಹಾಸು (ಇಂತಿಟಿದು ಸಲ್ಲತಾ ಸದನದೊಳ್ ಪಲ್ಲವಾಸ್ತರಣದಿಂ ಧರಣಿಗಲಂಕರಿಸಿ: **ಕುಸುಮಾಕಾ,** ೧೪. ೫ ವ)

**ಪಲ್ಲವಿಕ –** ವಿಟ (ಪಲ್ಲವಕಮಯಮಾಗಿಯುಂ ಪಣ್ಯಾಂಗನಾವಾಟಮಲ್ತು: **ತ್ರಿಷಷ್ಟಿಪು,** ೨. ೨೫ ವ); ಮೀನು

**ಪಲ್ಲವಿಸು –** ಚಿಗುರು (ಪಲ್ಲವಿಕರ ಹೃದಯೋದ್ಭವ ರಾಗಮಂ ಪಲ್ಲವಿಪ ಕಂಕೆಲ್ಲೀಪಲ್ಲವಂಗಳುಮಂ .. .. ನೀಡಿ: **ಶಾಂತೀಶ್ವಪು,** ೧೦. ೧೬ ವ)

**ಪಲ್ಲಾಱು –** ಹಲ್ಲಿನ ತೇವ ಒಣಗಿಹೋಗು (ಎತ್ತಿ ಕಯ್ಯಡಿದುಂ ಆಗಳ್ ಕಾಲುಡಿದುಂ ಬಟಿಲ್ದು ಪಲ್ಲಾಱೆ ಪೊಡರ್ಪುಗೆಟ್ಟು ಉಸಿರಲಪ್ಪೊಡಂ ಆಱದೆ ಪೋದೊಡೆ: **ಪಂಪಭಾ,** ೩. ೫೮)

**ಪಲ್ಲಿ –** ಹಲ್ಲಿ (ಪಲ್ಲಿಯಂತೆ ಕೇರಂ ಪತ್ತುತ್ತುಂ: **ಧರ್ಮಾಮೃ,** ೧. ೧೨೪ ವ)

**ಪಲ್ಲಿಲಿವಾಯ್ –** ಹಲ್ಲಿಲ್ಲದ ಬಾಯಿ (ಸೊಗಯಿಸುಗುಮೇ ಪಲ್ಲಿಲಿವಾಯ್ ಅಗಿಲಗಂಧಂ ಸಮಂತು ಕೂರಿಲಿ ಕುಡುಗೋಲ್: **ಕಾವ್ಯಾವಲೋ,** ೨೫೭)

**ಪಲ್ಲೆ –** ತಕ್ಕಡಿಯ ಪರಡಿ (ವಸ್ತ್ರಚಯಂಗಳನೊಟ್ಟಿ ನಿಟ್ಟಿಸಲ್ ಧರಣಿಯನಂತು ಪಲ್ಲೆ ಬಿಡದಿರ್ಪುದಕೆ ಅಚ್ಚರಿವಟ್ಟು: **ತ್ರಿಷಷ್ಟಿಪು,** ೯. ೭೧)

**ಪಲ್ವಲ –** ಕೊಳ (ಪಲ್ವಲಂ ವೇಶಂತಂ: **ಅಭಿಧಾವ,** ೧. ೪. ೧೬) ಹಳ್ಳ (ತೊಟ್ಟನೆ ಪಲ್ವಲ ಅಂಬು ತವೆ ಪತ್ತಿರದಾಕ್ಷಣವೆಟ್ಟೆ ಹೆಟ್ಟೆ ಕಾಯ್ದಿದ್ದಿಟ್ಟಿಗೆಯಂದಮಾಯ್ತು: **ಶಾಂತೀಶ್ವಪು,** ೮. ೨೦)

**ಪವಡಿಸು –** ಮಲಗು (ಇಱಿಯಲೊಲ್ಲದೆ ಬಂದು ಅರಸಂ ಮುನ್ನಿನಂತೆ ಪವಡಿಸೆ: **ಯಶೋಧಚ,** ೨. ೫೭)

**ಪವಡಿಸುವ ಮನೆ –** ಮಲಗುವ ಮನೆ (ಎಸೆವ ಪವಡಿಸುವ ಮನೆ ಚಿತ್ರಸಾಲೆ ಸುರತಾಲಯ ಮಹೀಗೃಹಂ ಆರೋಗಿಸುವ ಮನೆ ಮಂಡಪಂ ಗುಣಣಸಾಲೆ ಎಂಬಿನಿತುಮಂ ಗೃಹಾಂಗಂ ಕುಡುಗುಂ: **ಶಾಂತಿಪು,** ೬. ೧೧೬)

**ಪವಣ್ –** ಪ್ರಮಾಣ, ಅಳತೆ (ಧನದ ಪವಣ್ ಅಱಿಯರ್ ಎನಿಸಿದ ಧನಪತಿಗಳೆ ಪುರದ ಪರದರ್ ಅವರಂ ನೋಡಲ್ ಧನಪತಿ ನಿರ್ಧನಂ: **ಮಲ್ಲಿನಾಪು,** ೨. ೪೮); ಮಿತಿ (ದಾಯಿಗರತ್ತಣಿನಪ್ಪ ಅಪಾಯಕೋಟಿಗೆ ಪವಣಿಲ್ಲ ಕಲ್ಪಿಗೆ ಎಡೆಯಾವುದೊ ಪಾಟಿಯ ಬಟ್ಟೆದಪ್ಪಿ ಮುಂ ನೆಗೞ್ದೆಡೆಯಿಲ್ಲ ಪೋಗು ಜಯಮಕ್ಕೆ ಶುಭಂ ನಿಮಗಕ್ಕೆ ಮಂಗಳಂ: **ಪಂಪಭಾ,** ೭. ೨೧)

**ಪವಣಱಿ –** ಸಾಮರ್ಥ್ಯವನ್ನು ತಿಳಿದುಕೊ (ಗಱಪರ್ ಪವಣಱಿಯದೆ ಬೆಸಗೊಳೆ ಸೆಣಸಿಂ: **ಚಂದ್ರಪ್ರಪು,** ೧. ೫೭);

**ಪವಣಿಸು –** ಅಣಿಗೊಳಿಸು (ಪಡೆಯಂ ಪವಣಿಸಲಱಿಯೆಂ ಕಡುವಿರಿದೆನಿಸಿರ್ದ ವಜ್ರವೀರನ ದುರ್ಗಂ: **ಪಾರ್ಶ್ವನಾಪು,** ೩. ೪೭)

**ಪವಣ್ಗಳಿ –** ಹದ ಮೀರು (ನುಣ್ಗಱಿಯಿಲ್ಲದ ವಿಧುವಿಂ ತಣ್ಗದಿರ್ ಒಗೆದಂತೆ ವಿಮಳಮುಖಮಂಡಳದಿಂ ಕಣ್ಗೊಳಿಸೆ ದಂತಕಾಂತಿ ಪವಣ್ಗಳಿದುಳ್ಕಲೆ ಖಚರವರಂ ಇಂತೆಂದಂ: **ಶಾಂತೀಶ್ವಪು,** ೨. ೫೩)

**ಪವಣ್ಗಳೆ –** ಮಿತಿಮೀರು (ಕಳೆದ ಭವದೊಳ್ ವಿರಾಮಂಗಳೊಳೊದವಿದ ಮೋಹದಿಂ ವಿಚಾರಕ್ಕೆ ಪವಣ್ಗಳೆದ ಗುಣದಿಂ ಕರಂ ಪಳುಗಳಿದುದು ದಯೆ ತಮ್ಮನೊಳ್ ಜಗತ್ತ್ರಯಪತಿಯಾ: **ಶಾಂತಿಪು,** ೧೦. ೯೯)

**ಪವಣ್ಗೊಳಿಸು –** ಎಣಿಸು (ಕನಕನಂದಿಮುನೀಂದ್ರನ ಹೃದ್ಯಮಪ್ಪ ವಿದ್ಯಾವಳಿಯಂ ಪವಣ್ಗೊಳಿಪೊಡೆ ಅಂಬುಜಸೂನುಗೆ ಅಳುಂಬಮಾವಗಂ: **ಶಾಂತೀಶ್ವಪು,** ೧. ೨೨)

**ಪವಣ್ದೋಱು –** ಕೊನೆಗಾಣು, ಮುಗಿ (ತವದ ಆಯುಷ್ಯದ ಕುಂದದಂದದ ಬಿಯಂಗೆಯ್ದುಂ ಪವಣ್ದೋಱದ ಉದ್ಭವದೆ ಏ ನೋಂತೆಂ ಎನಿಪ್ಪ: **ಶಾಂತಿಪು,** ೭. ೮); ಹವಣು ತೋರು; ಅಳತೆಗೆ ಸಿಕ್ಕು

**ಪವಣ್ಬಡಿಸು –** ಹೊಂದಿಸು (ಪವಣ್ಬಡಿಪೊಡೆ ಈತನಂ ಈತನೆ ಪೋಲ್ವಂ ಇನ್ನರಾರ್: **ಪಂಪರಾ,** ೧. ೧೦೩)

**ಪವಣ್ಬಡೆ –** ಹೊಂದಿಕೆಗೊಳ್ಳು (ಚಿನ್ನದ ಸವಂಗಂ ಅಪೂರ್ವದ ಮೊಚ್ಚೆಯಂ ಪವಣ್ಬಡೆದ ಸುಪರ್ಣಪಾರಿವದ ಕುಪ್ಪಸಮೊಪ್ಪೆ ..

.. ಸೂಳೆಯರೊಪ್ಪಿ ತೋಱೆದರ: **ಪಂಪಭಾ,** ೯. ೧೦೩); ನಿಗದಿಯಾಗು (ಕಣ್ಬೆಳಗಂ ಲಲಿತಾಂಗದ ನುಣ್ಬೆಳಗಂ .. .. ಪವಣ್ಬಡಿಮೊಡೆ ಅತರ್ಕ್ಯಮಾದುದು: **ಕುಸುಮಾಕಾ,** ೩. ೯೩)

**ಪವಣ್ಬುಗಿಸು** – ಅಳತೆಗೆ ಅಳವಡಿಸು (ದೆಸೆಯಂತಮಂ ಪವಣ್ಬುಗಿಸಲ್ ಎರಟ್ಬಲಂಗಳ ಮದದ್ವಿಪ ವಾಹ ವರೂಥ ಕಿಂಕರಾದಿಗಳ ಪವಣ್ಗಳಂ ಪವಣಿಸಲ್ ಬಗೆದರ್ಪನೆ ಗಾಂಪನಾಗನೇ: **ಪಂಪರಾ,** ೧೩. ೧೧)

**ಪವನ** – ವಾಯು (ತಳರ್ದುದು ಕರ್ಣತಾಳ ಪವನ ಆಹತಿಯಿಂ ಜಳರಾಶಿ ಕೆಯ್ಯ ಬಳ್ವಳಿಕೆಗೆ ದಿಗ್ಗಜಂ ದೆಸೆಯಿನತ್ತ ತೆರಳ್ದುವು ಕಾಯ್ಪಿನಿಂ: **ಪಂಪಭಾ,** ೧೧. ೭೧)

**ಪವನಜ** – ವಾಯುಪುತ್ರ, ಭೀಮ (ಪವನಜನಂತು ಪೂಣ್ದು ಯುವರಾಜನ ನೆತ್ತರನಾರ್ದು ಪೀರ್ದಂ ಇಂತು ಅವಗಡದಿಂ ದಿನೇಶಜನಂ ಅಂಕದ ಗಾಂಡಿವಿ ಕೊಂದಂ: **ಪಂಪಭಾ,** ೧೩. ೮); ಆಂಜನೇಯ (ಜಗದೊಳ್ ಪತಿಹಿತದೆಡೆಯೊಳ್ ನೆಗಟ್ದಿ ಇನಜನಿಂ ಏಕದಂತನಿಂ ಪವನಜನಿಂ ಖಗರಾಜನಿಂ ದುರ್ಗಂ ದ್ವಿಗುಣಂ ತ್ರಿಗುಣಂ ಚತುರ್ಗುಣಂ ಪಂಚಗುಣಂ: **ಪಂಚತಂತ್ರ,** ೫೫)

**ಪವನಜವ** – ಗಾಳಿಯಷ್ಟು ವೇಗ (ಗಜಮಸ್ತಕಮಸ್ತಿಷ್ಕದಿಂ ಅಜೀರ್ಣಮಾಯ್ತೆಂದು ಲಂಘನಂಗೆಯ್ವವೊಲೇಂ ಗಜರಿಪು ಲಂಘಿಸಿದುದೊ ಪವನಜವದೆ ಶಿಖರಕ್ಕೆ ಶಿಖರದಿಂ ಖಗನಗದಾ: **ಅಜಿತಪು,** ೯. ೨೭)

**ಪವನತನೂಜ** – ಪವನಜ (ಪವನತನೂಜನ ಕೇಸರಿಕೇತನಮಪ್ಪ ಪಟಯಿಗೆಯಂ ಕಂಡು ಮುಟ್ಟಿವೆರ್ಪನ್ನೆಗಂ: **ಪಂಪಭಾ,** ೧೨. ೧೨೦ ವ)

**ಪವನತ್ರಯ** – ಭೂಲೋಕವನ್ನು ಆವರಿಸಿರುವ ಘನೋದಧಿ, ಘನವಾತ, ತನುವಾತಗಳೆಂಬ ಮೂರು ಬಗೆಯ ಗಾಳಿಗಳು (ಭುವನಂ ಪವನತ್ರಯಾವೃತಂ: **ಮಲ್ಲಿನಾಪು,** ೧. ೫೫)

**ಪವನಾಧ್ವ** – ವಾಯುಮಾರ್ಗ, ಆಕಾಶ (ಹರಿಯಿಲ್ಲದ ಪವನಾಧ್ವಂ ಹರಿಯಿಲ್ಲದ ಲೋಕಪಾಲಪರಿಷದ್ವಲಯಂ ಹಿರಯಿಲ್ಲದ ಕಾಂತಾರಂ: **ಜಗನ್ನಾವಿ,** ೩. ೯೫)

**ಪವನನಿರೋಧ** – ಉಸಿರು ಬಿಗಿಹಿಡಿಯುವುದು (ಪವನನಿರೋಧಮಿಲ್ಲದ ಗಳೋಷ್ಠಪುಟಾದಿ ನಿಮಿತ್ತಮಿಲ್ಲದ .. .. ನಾದಮೊಗೆದತ್ತಭವಂಗೆ ಗಭೀರತಾಯುತಂ: **ಆಚವರ್ಧ,** ೧೬. ೨೭)

**ಪವನಪಥ** – ಆಕಾಶ (ಅಪಘನಂ ಅಪಘನಂ ಇದಱೆಂದ ಪಾರಸಂಸಾರಸುಖಮನೆಯ್ದುವನೆಂಬಂ ಚಪಲಾಗ್ರಂ ಬಿಡದೀ ಪದಂ ಪವನಪಥಮಂ ಎಯ್ದಲ್ಕೆ ಬಗೆವ ಮರುಳಂ ಪೋಲ್ಕುಂ: **ಶಾಂತೀಶ್ವಪು,** ೯. ೪೧)

**ಪವಮಾನ** – ಪವನ (ದ್ವಿತೀಯ ಪ್ರಾಕಾರದೊಳಗೆ ಪಾವಕ ಮಜ್ಜಜನ ಪವಮಾನ ಪಶುಪತಿಗಳ ವಿನೋದವಿಹಾರ ಯೋಗ್ಯಂಗಳಪ್ಪ ನಾಲ್ಕುಂ ಕೋಣ್ಗಳ ಸೌವರ್ಣ ಸೌಧಂಗಳೊಳಂ: **ಶಾಂತೀಶ್ವಪು,** ೧೬. ೩೧ ವ)

**ಪವಮಾನತ್ರಿತಯ** – ಭೂಲೋಕವನ್ನು ಆವರಿಸಿರುವ ಘನೋದಧಿ, ಘನವಾತ, ತನುವಾತಗಳೆಂಬ ಮೂರು ಬಗೆಯ ಗಾಳಿಗಳು (ಪವಮಾನತ್ರಿತಯಕ್ಕೆ ಪೆಂಪುವಡೆದಾಕಾಶಕ್ಕೆ ನಿರ್ಬೋಧ ಬೋಧವಿಲೋಕಕ್ಕೊಳಗಾಗದೆ: **ಮಲ್ಲಿನಾಪು,** ೧. ೫೬)

**ಪವಳ** – [ಪ್ರವಾಳ] ಹವಳ [ಬೆರಲೊಳ್ ಬೀಣೆಯ ತಂತಿಗಳ್ ಒರಸಿದ ಕೆಂಗಲೆಗಳ್ ಅಕ್ಷಮಾಲೆಯೊಳ್ ಎಸೆದಂತಿರೆ ಪೊಸೆಯೆ ಮುತ್ತು ಪವಳಂ ಬೆರಸಿದವೊಲಾಯ್ತು ಚೆನ್ನ ತಪಸಿಯ ಕೆಯ್ಯೊಳ್: **ಪಂಪಭಾ,** ೬. ೧೦)

**ಪವಳವಾಯ್** – ಹವಳದಂತೆ ಕೆಂಪಾದ ಬಾಯಿ (ಬಂದರ್ ಪವಳವಾಯ ತಳಿರ್ವಾಯ ತೊಂಡೆವಾಯೊಳ್ವೆಂಡಿರ್: **ಜಗನ್ನಾವಿ,** ೪. ೧೨೨)

**ಪವಿ** – ವಜ್ರಾಯುಧ (ಪವಿಯಂ ಪಿಡಿದೋರಂತಿರೆ ತಿರುಪುತ್ತಂ ಅವರಂ ತಡೆಯದೆ ನಡೆದು: **ಧರ್ಮಪ,** ೩. ೫೪); ಸಿಡಿಲು (ಪವಿನಿರ್ಘೋಷೋಪಮಾನಂ ಪ್ರಳಯಘನಘಟಾ ಗರ್ಜನಾಭಂ .. .. ಪೊದಳ್ದತ್ತು ಅಸುರರಿಪುಧನುರ್ದಂಡ ಚಂಡಪ್ರಣಾದಂ: **ಜಗನ್ನಾವಿ,** ೧೩. ೭೫); ಮಿಂಚು, ದೀಪ್ತಿ (ಪವಿ ದೀಧಿತಿ: **ಅಭಿಧಾವ,** ೩. ೧. ೧೦೪); ವಜ್ರ (ಬಗೆದಿಂದ್ರಾಶಾದ್ರಿಯೆಂಬತುಳ ಪವಿಮಯಸ್ತಂಭದೊಳ್ ಸಂಜೆಯೊಳ್ .. .. ಭಗಣಂ ತತ್ಸೀಕರಂಬೊಲ್ಮೆಱೆಯೆ: **ರಾಜಶೇವಿ,** ೬. ೨೮)

**ಪವಿತ್ರ** – ಪಾವನಕರ (ನೀರೊಳ್ ಪಂಚಮಜಲಧಿಯ ನೀರೆ ಪವಿತ್ರಂ: **ಶಾಂತಿಪು,** ೧೦. ೩೮); ಕಿವಿಯ ಒಂದು ಆಭರಣ; ದರ್ಭೆಯ ಉಂಗುರ (ಅಜಸ್ರ ಸ್ರುಕ್ ಸಂದರ್ಭಪವಿತ್ರಸಂವಾಹನ ಪವಿತ್ರಿತಪಾಣಿಪಲ್ಲವನುಂ ಪುರೋಡಾಶಭೋಜನ ಪವಿತ್ರೀಕೃತಗಾತ್ರನುಂ: **ಪಂಚತಂತ್ರ,** ೨೫೨ ವ)

**ಪವಿತ್ರಗಾತ್ರ** – ಪಾವನಕರ ದೇಹದವನು (ನೀಂ ಬರೆ ಪೆಱತೇಂ ಕಂಸಾರೀ ಯುಷ್ಮತ್ ಪದಪಾಂಸುಗಳಿಂದೆ ಆಂ ಪವಿತ್ರಗಾತ್ರನೆಂ ಆದೆಂ: **ಪಂಪಭಾ,** ೯. ೩೨)

**ಪವಿತ್ರಗೋತ್ರ** – ಪಾವನಕರವಾಗಿ ಮಾಡಿಕೊಂಡ ಗೋತ್ರವುಳ್ಳವನು (ಅಂತಪ್ಪೊಡೆ ಶ್ರೋತ್ರಿಯರುಂ ಕ್ಷತ್ರಿಯರುಂ ಪಱೆಗುಟ್ಟಿ ಪಶುಯಾಗಂಗೆಯ್ದು ಈ ಲೋಕದೊಳ್ ಪಾತ್ರೀಭೂತರುಂ ಪವಿತ್ರಗೋತ್ರರುಂ ಆಗಿ: **ಪಂಚತಂತ್ರ,** ೧೧೭ ವ)

**ಪವಿತ್ರೀಕೃತ** – ಪಾವನವಾಗಿ ಮಾಡಿದ (ಮಹಾಋಷಿಯ ತಳಿದ ಕನಕ ಕಮಂಡಲುವಿನ ತೀರ್ಥೋದಕಂಗಳಿಂದ ಅಯ್ವರುಂ ಪವಿತ್ರೀಕೃತ ಮಸ್ತಕರಾಗಿರ್ದು: **ಪಂಪಭಾ,** ೬. ೧೧ ವ)

**ಪವಿಧರ** – ಇಂದ್ರ (ಅನ್ಯೋರ್ವಿಪ ಗರ್ವೋರ್ವೀಧ್ರಸಂಭೇದನ ಪವಿದರಂ ಈ ಬಂದಂ: **ರಾಜಶೇವಿ;** ೬. ೧೭)

**ಪವಿಭೃನ್ಮಣಿ** – [ಪವಿಭೃತ್+ಮಣಿ] ಇಂದ್ರನೀಲರತ್ನ (ತುಂಬಿಗಳ ಸಾಲ್ಪವಿಭೃನ್ಮಣಿಮಾಲೆ ಪುಷ್ಪಸಂಕುಳದ ರಜಂಸುಗಂಧದ ರಜಂ ತನಗಾಗಿರೆ: **ರಾಜಶೇವಿ,** ೯. ೫೪)

**ಪಶು** – ಹಸು (ಪಶುವಿನ ಜಿಹ್ವೆಯೊಳ್ ಪೊಲೆಯರಿರ್ಪೆಡೆಯೊಳ್ ಸುಧೆದೇವಿ ಪದ್ಮದೊಳ್ ಮಿಸುಗುವ ಲಕ್ಷ್ಮಿ ಪೊರ್ದಿನೆಲಸಿರ್ದಪಳ್: **ಧರ್ಮಾಮೃ,** ೯. ೫೮); ಪ್ರಾಣಿವನಿತಾಪಶುಪಂಚಕವರ್ಜ್ಯನಿವಾಸೋದ್ದೇಶದೆಡೆಗಳೊಳ್ ಚರಿಯಿಸುತುಂ: **ಸುಕುಮಾಚ,** ೪. ೮); ಬಲಿಯ ಪ್ರಾಣಿ (ಕೌರವೇಶ್ವನೀತಂ ಪಶುವಾಗೆ ಬೇಳ್ದೆಂ: **ಗದಾಯು,** ೮. ೪೬)

**ಪಶುಕರ್ಮ** – ಪಶುಬಲಿಯ ಯಜ್ಞ (ಪಶುಕರ್ಮಂ ಗೆಯ್ದೊಡೆ ದಂಡಿಸರ್ ಒಲ್ದುದನಿತ್ತು ಪೂಜಿಪರ್ ಪಾಪಿಷ್ಠರ್: **ಸಮಯಪ,** ೧೪. ೧೨೭): ಪಾಶವೀಕೃತ್ಯ (ಪಶುಕರ್ಮಂಗೆಯ್ವುದೆ ಧರ್ಮಸಾಧನಂ ವಿಪ್ರತತಿಗೆ ಪೆಱತಿಲ್ಲೊಂದುಂ: **ಸಮಯಪ,** ೧೧. ೧೦೩)

**ಪಶುಕಲ್ಪ** – ಹಸುವಿನಂತೆ ಏನೂ ತಿಳಿಯದವನು (ಶಿಷ್ಟಂ ಅವಿವೇಕಿಯಾದೊಡೆ ಕಷ್ಟಂ ಪಶುಕಲ್ಪನೆಂಬರ್: **ಸಮಯಪ,** ೯. ೬೯)

**ಪಶುಪತಿ** – ಶಿವ (ದ್ವಿತೀಯ ಪ್ರಾಕಾರದೊಳಗೆ ಪಾವಕ ಪುಜ್ಯಜನ ಪವಮಾನ ಪಶುಪತಿಗಳ ವಿನೋದವಿಹಾರಯೋಗ್ಯಂಗಳಪ್ಪ ನಾಲ್ಕುಂ ಕೋಣ್ಗಳ ಸೌವರ್ಣಸೌಧಂಗಳೊಳಂ: **ಶಾಂತೀಶ್ವಪು,** ೧೬. ೩೧ ವ)

**ಪಶುಯಾಗ** – ಪಶುವನ್ನು ಬಲಿಗೊಟ್ಟು ಮಾಡುವ ಯಾಗ (ಅಂತಪ್ಪೊಡೆ ಶ್ರೋತ್ರಿಯರುಂ ಕ್ಷತ್ರಿಯರುಂ ಪಱಿಗುಟ್ಟಿ ಪಶುಯಾಗಂಗೆಯ್ದು ಈ ಲೋಕದೊಳ್ ಪಾತ್ರೀಭೂತರುಂ ಪವಿತ್ರಗೋತ್ರರುಂ ಆಗಿ: **ಪಂಚತಂತ್ರ,** ೧೧೭ ವ)

**ಪಶುವಿಸನ** – ಗೋಹತ್ಯೆ (ದೇವಲ ಮಹಾಋಷೀಶ್ವರಂ ಪಶುವಿಸನಾದಿ ಕರ್ಮಂಗಳಂ ತೀರ್ಚಿ ಮಹಾಧ್ವರಮಂ ಮಾಡುತ್ತೆಸೆದಿರ್ದಂ: **ಉದ್ಭಟಕಾ,** ೪. ೫೬ ವ)

**ಪಶ್ಚಾತ್ಕಾಲ** – ಮುಪ್ಪು (ಪಶ್ಚಾತ್ಕಾಲದೊಳ್ ಏನಾನುಮೊಂದು ವೈರಾಗ್ಯಕಾರಣಮಗಿ ಮಗಂಗೆ ರಾಜ್ಯಪಟ್ಟಂಗಟ್ಟಿ: **ವಡ್ಡಾರಾ,** ಮು. ೯೮, ಸಾ. ೨೨)

**ಪಶ್ಚಾತ್ತಾಪ** – ತಪ್ಪುಮಾಡಿ ಆಮೇಲೆ ದುಃಖಿಸುವುದು (ಜನಮೆಂದಂತುಟೆ ಭಾವಿಸದನುನಯಮನಾಂ ನೆಗೞ್ದೆನೆಂದು ಪಶ್ಚಾತ್ತಾಪಂ ತನಗಧಿಕಮಾಗೆ: **ಪಂಪರಾ,** ೧೫. ೬೭)

**ಪಶ್ಚಿಮ** – ಬೆನ್ನು, ಹಿಂಭಾಗ (ಮುಱಿದವೆ ಕಾಲ್ಗಳ್ ಇಱಿದೇಱಿನ ಬಲ್ಪಿನೊಳ್ ಅಂತೆ ಪಶ್ಚಿಮಂ ಮುಱಿದುವೆ: **ಹರಿವಂಶ,** ೧೨. ೬೨)

**ಪಶ್ಚಿಮ ನಿಷಾದಿ** – ಹಿಂದಿರುವ ಮಾವತಿಗ (ಅನ್ನೆಗಮಿತ್ತಂ ಯುವರಾಜನಾ ಬಗೆದಭಿನಿಷಾದಿಯುಮಂ ಪಶ್ಚಿಮನಿಷಾದಿಯುಮಂ ನಿಜವಿಜಯಸಿಂಧೂರಮಂ ತಿಣ್ಣಂ ನೂಖಲುಂ ಬೆಸಸಿ: **ಆದಿಪು,** ೧೪. ೯೮ ವ)

**ಪಶ್ಚಿಮಾಭಿಮುಖ** – ಪಶ್ಚಿಮ ದಿಕ್ಕಿಗೆ ಎದುರು (ಚಕ್ರವರ್ತಿಯುಂ ಪಶ್ಚಿಮಾಭಿಮುಖನಾಗಿ ಪಯಣದ ಮೇಲೆ ಪಯಣಂಬೋಗೆ: **ಶಾಂತಿಪು,** ೧೧. ೧೦ ವ)

**ಪಸ** – ಕ್ಷಾಮ (ಆ ನಾಡೊಳ್ ಮಾನಸರ್ ಮಾನಸರಂ ತಿಂಬಂರತುಟಪ್ಪ ಮಹಾಘೋರಂ ಪಸವಾದೊಡೆ: **ವಡ್ಡಾರಾ,** ಮು ೯೨ ಸಾ ೨); ಬಯಕೆ (ಎನ್ನ ಕಣ್ಣ ಪಸವೋಡವಂತು ಮಾಡಿದರೊನಿಂತು ತಮ್ಮೊಳ್ ಕೂಡುವಂತು ಮಾಟ್ಪಿಂ: **ಹರಿವಂಶ,** ೯. ೪೧ ವ)

**ಪಸಕಾಲ** – ಬರಗಾಲ (ಪಸಕಾಲದೊಳ್ ಎಱಿಯಪನಾಗಸದಬ್ಬೆ ಬಳಾರಿ ಭೈರಂ .. .. ಎಂದಿಂತು ಸತ್ತರ್: **ಸಮಯಪ,** ೯. ೧೦೪)

**ಪಸದನ** – [ಪ್ರಸಾಧನ] ಅಲಂಕಾರ, ಒಡವೆ (ಪ್ರಸಾಧನಶಾಲೆಯೊಳಗೆ ಸ್ವಯಂಪ್ರಭೆಯನಾನೆ ಪಸದನಂಗೊಳಿಸುತ್ತುಮಿರ್ದು: **ಆದಿಪು,** ೪. ೧೧ ವ)

**ಪಸದನಂಗೊಳ್** – ಅಲಂಕಾರಗೊಳ್ಳು (ಚಂದ್ರಬಿಂಬದಿಂ ಒಪ್ಪಂಬಡೆದತ್ತೊ ಮೇಣ್ ಪಸದನಂಗೊಂಡಿರ್ದುದೋ ಪೇೞೆನಲ್: **ಕಾದಂಬ,** ೫. ೬೮)

**ಪಸರ** – ಅಂಗಡಿ (ಮಿಗೆ ಬೆಲೆಯೇಱಿದ ಪೂಲಿಯ ಮಗರಿಯ ದೋರಿಯದ ಪಟಿಯ ತಳಿರ್ವಟ್ಟೆಯ ಕಾಡಿಗೆ ನೀರಿನ ಬಟ್ಟೆಯ ಮಱಿಗೆಗಳಿಂ ಸೋಲಿಪುವು ಸೀರೆವರದರ ಪಸರಂ: **ಕಬ್ಬಿಗಕಾ,** ೩೪); ಸರಕು (ಎಸೆವ ಬಹುರತ್ನರಾಶಿಯ ಪಸರಂಗಳಿನದಱ ಬೀದಿಗಳ್ ಪಲವುಂ ರಂಜಿಸಿ ತೋರ್ಕುಮಾವಗಂ ಕುಂಭಸಂಭವಂ ಕುಡಿದ ಲವಣವಾರ್ಧಿಯ ತೆಱದಿಂ: **ಪಂಚತಂತ್ರ,** ೬೩)

**ಪಸರಂಗೆಯ್** – ಹರಡು (ರಸಭಾವಾಭಿನಯಂಗಳಂ ಭುಜಲತಾಭ್ರೂಚಾಪನೇತ್ರೋತ್ಪಲ ಪ್ರಸರಂಗಳ್ ಪಸರಂಗೆಯ್ಯುತ್ತಿರೆ: **ಆದಿಪು,** ೭. ೧೨೩)

**ಪಸರಂಗೊಡು** – ಸದರ ಕೊಡು (ಆಂ ಇವಂದಿರಂ ಆದರಿಸಿ ಪಸರಂಗೊಟ್ಟೊಡೆ ಎನಗೆ ಸುಸರಮಾಗಿ ಬೆಸಕಯ್ಯಲ್ ಅಱಿಯರ್: **ಸುಕುಮಾಚ,** ೨. ೫೨ ವ)

**ಪಸರಂಗೊಳ್** – ವಿಸ್ತಾರಗೊಳ್ಳು, ತುಂಬಿಕೊಳ್ಳು (ಕಣ್ಣಿರ ಬಾನಲ್ಗಳಿಂ ಬಸಿವಾಸ್ಯಂ ತಳಗಯ್ಯ ಪಜ್ಜೆ ಪಸರಂಗೊಂಡಿರ್ದ ಗಂಡಸ್ಥಳಂ .. .. ಪಿಸುಣಾಡಿತ್ತು ಅಸಮಾಸ್ತ್ರನಸ್ತ್ರಹತಿಯಂ ತತ್ಕಾಮಿನೀರೂಪಂ: **ಲೀಲಾವತಿ,** ೪. ೧೪೩)

**ಪಸರಂಬಡೆ** – ಪಸರಂಗೊಳ್ (ಪಲ್ಲವಪ್ರಸರದೊಳೆಯ್ದೆ ಕಣ್ಗೆ ಪಸರಂಬಡೆದೊಪ್ಪುವ ಕೆಂಪು ತುಂಬಿಯೊಳ್ ಮಿಸುಗುವ ಕರ್ಪು: **ಆದಿಪು,** ೧. ೬೬)

**ಪಸರಿಸು** – ಹರಡು (ಅಕ್ಷಮಣಿಯಂ ಸರವೇಱಿಪ ನಾರಸೀರೆಯಂ ಪಸರಿಪ .. .. ಮುನಿಮುಖ್ಯ ಕುಮಾರಮೊಪ್ಪುಗುಂ: **ಗಿರಿಜಾಕ,** ೧. ೬೪); ಹಬ್ಬಿಸು

**ಪಸಲೆ** – ಹಸುರು ಹುಲ್ಲು, ಹುಲ್ಲುಗಾವಲು (ಅವರ್ಕೆ ತಾಮಗಾಗಿ ಪಚ್ಚೆಯ ಪಸಲೆಯ ಪಸುರನಸಕಱಿದು ನಿಮಿರ್ದ ನೆಲೆವಡಲಿಗೆಯ ಜಾಗಂಗಳುಮಂ: **ಆದಿಪು,** ೮. ೧೫ ವ)

**ಪಸವ** – ಕಾಮುಕ (ಪರಲಲನೆಗಳಿಪಿ ಬಿಡೆ ಚಪ್ಪರಿಸುತ್ತಂ ಬಂದ ಪಸವನಂ ಪಾಂಬನನಂ ಅಚ್ಚರಿಯಾಗೆ ಕಾದುತಂ: **ವರ್ಧಮಾಪು,** ೪. ೨೦)

**ಪಸವಡು** – ಆಸೆಪಡು (ಪೂತ ಸುರಯಿಯ ಮುಗುಳಂ ಪಸವಟ್ಟಂತೊರ್ವಳ್ ತನಗೆ ಸರಿಗೆಗಂ ಲಂಬಣಕ್ಕಮಟ್ಟಿಯೆ ಕೊಯ್ದಳ್: **ಆದಿಪು,** ೧೧. ೧೦೩)

**ಪಸವು** – ಕೊರತೆ (ಪೊಸಪೂವಿನ ಪೊಸದುಡುಗೆಯ ಪಸವೋಡಿದುದಿಲ್ಲ ದಿವಿಜವನಿತೆಯರ್ಗಾಗಳ್: **ಆದಿಪು,** ೭. ೭೦); ಹಸಿವು, ಬರಗಾಲ, ದುರ್ಭಿಕ್ಷ (ಪಸವಿನೊಳ್ ಅನ್ನಮಂ ಸುಫಲದಲ್ಲಿ ಸುವರ್ಣಮಂ ಈವ ಯುದ್ಧದೊಳ್ ಕುಸಿಯದೆ ಸೂೞಿಗೊಳ್ಳದೆ ರಣಕ್ಕೆ ಶುಚಿತ್ವಮಂ ಅಪ್ಪುಕೆಯ್ವ ಮಾನಸಿಕೆಯ ನಾಲ್ವರುಂ ನಮಗೆ ವಂದ್ಯರ್: **ಗದಾಯು,** ೪. ೬೦)

**ಪಸವೋಡು** – ಅತ್ಯಾಸೆ ಪೂರೈಸು (ಎನ್ನ ಕಣ್ಗಳ ಪಸವೋಡೆ ನೋಡಲಣಮೀಯದೆ ನೀರ್ಗದ ಕುರುಳ್ ಮದೀಯ ಕೋಮಳೆಯ ಮುಖೇಂದುವಂ ಮಱಸಿದಂದಿನದೊಂದಟಲಿಂದಂ: **ಆದಿಪು,** ೧೨. ೩೦)

**ಪಸಾದ** – ಹಸಾದ, ಅನುಗ್ರಹ (ನುಡಿಯೊಂದು ಮಾಟವೊಂದು ಎನಿಸಿದ ಮಾನವಂಗೆನಗೆ ದೇವಿ ಪಸಾದಮನೇಕೆ ಮಾಡಿದಳ್: **ಕಾದಂಸಂ,** ೫. ೧೦೨)

**ಪಸಾಯ** – ಬಹುಮಾನ, ಉಡುಗೊರೆ (ಗಾಯಕರ್ ಪಲರುಂ ಬಂದುಣಿ ನೋಡಿಯುಂ ನುಡಿದುಂ ಅಟ್ಟುತ್ತುಂ ಪಸಾಯಂಗಳಂ: **ಆದಿಪು,** ೧೧. ೨೭)

**ಪಸಾಯನ** – ಉಡುಗೊರೆ (ಎಂದು ಬಿನ್ನಪಂಗೆಯ್ದ ತೋಟವಾಳಿಂಗೆ ಪಸಾಯನಮನಿತ್ತು ಪಟ್ಟವಣೆಯಿಂದೇಳ್ದು ಓಲಗಮಂ ಪರಯಿಸಿ: **ರಾಜಶೇವಿ,** ೧೦. ೫ ವ)

**ಪಸಾಯದಾನ** – ಮೆಚ್ಚುಗಾಣಿಕೆ, ಭಕ್ಷೀಸು (ಮುಟ್ಟಿದ ಮನಮನೆ ತೊಟ್ಟನೆ ಪಸಾಯದಾನಂಗೊಟ್ಟಳ್: **ಯಶೋಧಚ,** ೨. ೨೮)

**ಪಸಾಯ್ತ** – ರಾಜನ ಆಪ್ತ ವ್ಯಕ್ತಿ, ಅಲಂಕಾರ ಮಾಡುವವನು (ತನ್ನ ಮೇಳದ ಕೆಳೆಯನಪ್ಪ ನಗೆಗಾಱನಂ ಬಱಿಯಟ್ಟಿ ಬರಿಸಿ

ಪಸಾಯ್ತರೆಲ್ಲರುಂ ಬಗೆಯಜೆದಿಟ್ಟೆಡೆಯಂ ತೊಲಗಿ ಪೋಗೆ: **ಕಬ್ಬಿಗಕಾ,** ೫೮ ವ)

**ಪಸಾಯಿತ** – [ಪ್ರಸಾದಿತ] ಪಸಾಯ್ತ (ಪಸಾಯಿತರೊಳಂ ನುಡಿಯದೆ ಉನ್ಮೀಲಿತಲೋಚನನಾಗಿ: **ಕಾದಂಬ,** ೮. ೪ ವ); ಸಾಕುಪ್ರಾಣಿ

**ಪಸಾಯಿತೆ** – ವಸ್ತ್ರಗಳ ಮೇಲ್ವಿಚಾರಕಿ (ಈಗಳೆ ಪತ್ರಲೇಖೆವೆರಸು ಅಂಗನೆಯಲ್ಲಿಗೆ ಮುಂದೆ ಪೋಗು ನೀಂ ಬೇಹಂ ಇವಳ್ ಪಸಾಯಿತೆ: **ಕಾದಂಸಂ,** ೬. ೨೬)

**ಪಸಿ** – ಹಸಿಯಾದ, ತೇವವಿರುವ (ಸಮತ್ವಿಭಾವನಂ ಪ್ರೋಷಧವ್ರತಮೆಂದುಂ ಪಸಿಯೊಂದುಮಂ ಮುಟ್ಟೆಯೆನೆಂಬೀ ಪೂಣ್ಕೆ ಮಾಡೆಂ: **ಆದಿಪು,** ೬. ೧೦); ಹಸಿವುಗೊಳ್ಳು ೯(ಪೆಣ್ಬುಲಿ ಪಲವುದಿವಸಂ ಆಹಾರಮಂ ಪೆಱದೆ ಪಸಿದು ಮಮ್ಮಲ ಮಱುಗುತ್ತಿರ್ದು: **ವಡ್ಡಾರಾ,** ಪು. ೪೮, ಸಾ. ೧೦)

**ಪಸಿಯ ನೇತ್ರ** – ಮಬ್ಬಗಣ್ಣು (ಕದಳೀಳಾವ ಗುಂಫಿಲತೆಯಂ ಕಂಡು ಪಸಿಯ ನೇತ್ರದಿಂ ಮುದುಕಿ ಮುನಿದು ಅವಿದಿರ್ದ ನಿಜಮನೋಹರಿಯೆಂದು ಬಗೆದು: **ಲೀಲಾವತಿ,** ೧೪. ೬೪ ವ)

**ಪಸಿಯ ಬಣ್ಣ** – ಶ್ಯಾಮಲವರ್ಣ (ಕಪಟದಿಂದೆ ವಿಲಾಸಿನಿಯಾದ ವೇಷಮಂ ನೆನೆಯಿಸಿದಪ್ಪುದು ಪಸಿಯ ಬಣ್ಣಂ ಇವಳ್ಗೆನೆ: **ಕಾದಂಬ,** ೧. ೩೫)

**ಪಸಿವರೆ** – ಹಸಿರು ಅಡಗು, ಹಸಿರು ಕಣ್ಮರೆಯಾಗು (ಪಚ್ಚೆ ಪಸಿವರೆಯದ ಅಲರ್ಗಳ .. .. ತೊಳಪ ಅಚ್ಚಸಸಿಮೊಗದ ಸೊಗಯಿಪ ಅಚ್ಚರಸಿಯಂತೆ ಮೆಱೆವ ತರುಣಿಯರೆಸೆದರ್: **ರಾಜಶೇವಿ,** ೨. ೨೨)

**ಪಸು** – ಹಸು (ಪಸುವೆರ್ಮೆ ಕುಱಿಗಳೆಂಬಿವು ವಸುಧೆಗೆ ಪಯನ್: **ಸಮಯಪ,** ೯. ೧೧೫); ಹಂಚು (ಮನಮಂ ಪದಿನಾಱಿಡೆಗೆ ಪಸುತ್ತುಮಿರ್ದೊಡಂ ಚಿತ್ರಂ ಮೆಯ್ದೋಱಿತ್ತು .. .. ತೀರ್ಥಕರ ವಿದಿತಪುಣ್ಯಂ: **ಪಾರ್ಶ್ವನಾಪು,** ೧೩. ೬೬); ಕತ್ತರಿಸು (ಪಸುವೆಂಬುದು ಅಸಿಧೇನುವಿನೊಳ್ .. .. ಅಲ್ಲದೆ ಪೆಱವೆಡೆಯೊಳಿಲ್ಲ: **ವರ್ಧಮಾಪು,** ೧. ೪೫ ವ)

**ಪಸುಂಗಱಿ** – ಹಸುರಾದ ಗರಿ (ಆದಿಯಿತ್ವಮಿಲ್ಲಾಗಿ ಪಚ್ಚನೆಯೆಂಬುದರ್ಕೆ ಪಸುಂಗಱಿ, ಪಸುರ್ವಂದರ್ ಎಂದಾಯ್ತು: **ಶಬ್ದಮದ,** ೧೯೩ ಪ್ರ)

**ಪಸುಂಬ** – ಶಕುನದ ಹಕ್ಕಿ (ತೊಲಗದ ಕಂಬದಾನೆಯ ಪಸುಂಬದ ಪಕ್ಕಿಯ ಸೂಲ ಸೂಲದಿಂ ಗಿಳಿತದ ಗಂಡಗತ್ತರಿಯ ಗೂಳಿಯ ಪಂದಿಯ: **ಕಬ್ಬಿಗಕಾ,** ೨೧೧)

**ಪಸುಂಬೆ** – ಎರಡು ಒಡಲ ಹಸಿಬೆ ಚೀಲ (ಬಿಸುನೆತ್ತರ್ ನೆಣಂ ಅಡಗು ಎಲ್ವು ಸಮಸ್ತಂ ಸುರಿಯೆ ಕೈಗೆ ತೊವಲ್ ಉಟಿಯಲ್ ಅಗುರ್ವಿಸಿದುದು ತೀವಿದ ಗುಳ್ಳೆಯ ಪಸುಂಬೆಯ ಸೋರ್ಚಿದಂತೆ ತನು ಕೀಚಕನಾ: **ಪಂಪಭಾ,** ೮. ೭೭);

**ಪಸುಗೂಸು** – ಎಳೆಯ ಮಗು, ಹಸುಗೂಸು (ಪಸರಿಸೆ ಜರಾಯುಪಟಲಂ ಪಸುಗೂಸುಗಳೊಡಲೊಳವನಗಲ್ಚುವ ಮತಿಯಂ ವಸುಮತಿಗಱಿಪಿ: **ಆದಿಪು,** ೬. ೬೫)

**ಪಸುಗೆ** – ವಿವೇಕ (ನೃಪ ಪರಮಾತ್ಮನ ಪಾಟಿಯ ಪಸುಗೆಯ ನುಡಿಗೆ ಪರಮಾರ್ತನಾಗಿ: **ಪಂಪಭಾ,** ೧೨. ೧೭೬ ವ); ಔಚಿತ್ಯ (ಪೂಜ್ಯರುಮೇಕೆ ಪೇೞ್ ಪಸುಗೆದಪ್ಪುವರ್ .. .. ತಪೋರಾಜ್ಯಮಂ ಒಲ್ದುದಂ ಕುಡದೆ ಪೋಪುದು ಮಜ್ಜನಕಂಗೆ ಮಾಗಪ: **ನೇಮಿನಾಪು,** ೨. ೫೩); ಔದಾರ್ಯ (ಕರ್ಣನೊಳ್ಪಸಮಂ ವಿಕ್ರಮದುರ್ಕುಮಂ ಪಸುಗೆಯಂ ಕೇಳುತ್ತೆ ಬಂದು: **ಕರ್ಣನೇಮಿ,** ೯. ೬೭); ಶೋಭೆ (ಪೊಸ ಪಸಗೆಯ ಮಂಜಿಟಿಗೆಯ ಮಿಸುಗುವ ದೋರಿಯದ ಪಟಿಯ ಪುಲ್ಲಿಯ ಸೊಂಪಂ ಪಸರಿಸಿದ ಪಕ್ಕರಕ್ಕೆಗಳೆಸೆದಿರ್ದುವು: **ಕಬ್ಬಿಗಕಾ,** ೨೦೨); ಪಾಲು (ಮಾತಿನ ಪಸುಗೆ ಪಸುಗೆವಡೆದತ್ತೆನೆ ನುಡಿದಂ ಮಧುರಮ್ಮದುಗಭೀರಧ್ವನಿಯಿಂ: **ಆದಿಪು,** ೨. ೧೦); ಹಂಚಿಕೆ (ಭಾವದನುಭಾವದೆಸೆವ ವಿಭಾವದ ಪಸುಗೆಗಳೊಳೊಸರ್ವ ರಸದಭಿನಯಮಂ ಭಾವಿಸುವೊಡೆ: **ಆದಿಪು,** ೯. ೨೭)

**ಪಸುಗೆಗೆಡು** – ವಿವೇಕಶೂನ್ಯವಾಗು (ಒರ್ವರೊರ್ವರ ನಂಬದ ಬಗೆಯಯಿಂ ಕನಕಾಸ್ವಾದಮಿಲ್ಲದೆಯುಂ ಮರುಳ್ಗಸಗಿ ಪಸುಗೆಗೆಟ್ಟು ಪಸಿಯ ಬಡಿಗೆಗಳನೆತ್ತಿಕೊಂಡು: **ನೇಮಿನಾಪು,** ೪. ೧೧೪ ವ)

**ಪಸುಗೆವಡೆ** – ವಿವೇಕದಿಂದ ಕೂಡು (ಮಾತಿನ ಪಸುಗೆ ಪಸುಗೆವಡೆದತ್ತೆನೆ ನುಡಿದಂ ಮಧುರಮ್ಮದು ಗಭೀರಧ್ವನಿಯಿಂ: **ಆದಿಪು,** ೨. ೧೦

**ಪಸುಗೆವೋಗು** – ಹಂಚಿಕೆಗೊಳ್ಳು, ಪಾಲಾಗು (ಪಸುಗೆವೋಗದ ಶೌರ್ಯಮುಮಂ ಸೂಱೆವೋಗದ ಏಱುಮಂ .. .. ಪೊಗಟಿಸುವೆನೆಂದು ತಱಿಸಂದು:: **ಶಾಂತಿಪು,** ೪. ೩೬ ವ)

**ಪಸುರ್ಗವಿಲ** – ಹಸಿರ ಕಪಿಲಗಳ ಮಿಶ್ರವರ್ಣ (ಪಸುರ್ಗವಿಲನಾದ ನೀಪದ ಕುಸುಮಮುಮಂ ದೆಸೆಗೆ ಕಂಪನೆತ್ತುವ ಲೋಧ್ರಪ್ರಸವಮುಮಂ ಸೂಟಿಗ್ಗೊಟಿಳ್ ಪಸವಟ್ಟಂದದೊಳೆ ಮುಸಱೆ ಮುತ್ತಿದುವಳಿಗಳ್: **ಪಂಪರಾ,** ೭. ೧೪೧)

**ಪಸುರ್ಪು** – ಹಸಿರು ಬಣ್ಣ (ಪೊನಲ್ಗಳ ಕೆಂಪು ಪಸುರ್ಪು ಕರ್ಪು ಬೆಳ್ಪು ಒಳಕೊಳೆ ಶಕ್ರಕಾರ್ಮುಕವಿಳಾಸಮಂ ಏನೆರ್ದೆಗೊಂಡು ಬೇಟದತ್ತಳಗಮಂ ಉಂಟುಮಾಡಿದುದೋ ಕಾಮನ ಕಾರ್ಮುಕದಂತೆ ಕಾರ್ಮುಕಂ: **ಪಂಪಭಾ,** ೭. ೨೫)

**ಪಸುರ್ಪುವಡೆ** – ಹಸುರು ಬಣ್ಣವನ್ನು ತಾಳು (ಪಸಿಯ ನೇತ್ರಮಂ ಪಚ್ಚಡಿಸುವಂತೆ ಪಸುರ್ಪುವಡೆದ ನೆಲದೊಳ್ ಪದ್ಮರಾಗದ ಪರಲ್ಗಳಂ ಬಲಿಗೆದಱಿದಂತೆ ಉಪಾಶ್ರಯಂಬಡೆದು ಅಳಂಕರಿಸುವಿಂದ್ರಗೋಪಂಗಳುಮಂ: **ಪಂಪಭಾ,** ೭. ೨೫ ವ)

**ಪಸುರ್ಮಿಡಿ** – ಹಸಿರು ಮಿಡಿಗಾಯಿ (ಕಾಂಚವಾರದ ಕಾಂಚಿಯುಮಂ ಪಸುರ್ಮಿಡಿಯ ಪಚ್ಚೆಸಾರಮುಮಂ .. .. ಸಮೆದು ತಮತಮಗೆ ಪಸದನಂಗೊಂಡು: **ಚಂದ್ರಪ್ರಪು,** ೭. ೧೧೪ ವ)

**ಪಸುರ್ವಂದರ್** – ಹಸಿರು ಚಪ್ಪರ (ಪಸೆಯಂ ಪಸುರ್ವಂದರಮಂ ಪೊಸಯಿಸಿ ಕನ್ನೆಯರನಾನಕಧ್ವನಿ ದೆಸೆಯೊಳ್ ಪಸರಿಸೆ: **ಆದಿಪು,** ೯. ೧೨೭)

**ಪಸುರ್ವಂದದಲ್** – ಹಸಿರು ಚಪ್ಪರ (ತಳಿರ್ಗಳಸಂ ಮುಕುಂದ ರವಂ ಎತ್ತಿದ ಮುತ್ತಿನ ಮಂಟಪಂ ಮನಂಗೊಳಿಪ ವಿತಾನಪಙ್ಕ್ತಿ ಪಸುರ್ವಂದಲೊಳ್ ಒಲ್ದು ಎಡೆಯಾಡುವ ಎಯ್ದೆಯರ್: **ಪಂಪಭಾ,** ೧. ೧೦೭)

**ಪಸುವರ್** – (ಬಸನಂಗಳೆ ನಿನ್ನಂ ಬರ್ದಿಸುತಿರ್ದಪುವು ಅವಱ ಬಸದೊಳ್ ಎಸೆವುದಱಿಂ ನಾಣ್ಚಿಸುವೀ ನಾಣಿಲಿ ನಾಣಂ ಪಸುವಂದೆಲೆ ಜೀವ ನೀನದೆಲ್ಲಿಗೆವೋಪೈ: **ಅಜಿತಪು,** ೨. ೯೪)

**ಪಸುಳೆ** – ಹಸುಳೆ, ಎಳೆಯ ಮಗು (ಪಸುಳೆಗೆ ತಕ್ಕ ಮಜ್ಜನಮಿದಲ್ತು: **ಅನಂತಪು,** ೫. ೬೪)

**ಪಸುಳೆವಿಸಿಲ್** – ಎಳೆಬಿಸಿಲು (ಪ್ರಾಕಾರದ ಮಣಿಮಯವ ಪ್ರಾಕಾರದ ಪಸುಎವಿಸಿಲ ಮಸಕದಿನಿರುಳುಂ ಕೋಕನದಮುಡುಗವು: **ಅನಂತಪು,** ೧. ೧೦೨)

**ಪಸೆ** – ಹಸೆ (ಕುಸುಮದೆಸಳ ಮಿಸುಗುವ ಪೊಸವಸೆಯೊಳಸದಳಮೆಸೆಯೆ ಪಸರಿಸಿ ಪೊಸಯಿಸಿದ ಪೊಸಸುಸಿಲ ಮಸಕದ ಬಸದೊಳೆ: **ಆದಿಪು,** ೪. ೧೨ ವ); ಹಾಸಿಗೆ (ಎಸಟಿ ಪಸೆಗಳೊಳಂ .. .. ಎಂತುಮಾ ಸಂತಾಪಮಂ ಸಂತಯಿಸಲಾಱದೆ: **ಕಾದಂಬ,** ೧೦. ೫೮ ವ)

**ಪಸೆನಿಲ್** – ಹಸೆಯ ಮೇಲೆ ನಿಲ್ಲು, ಮದುವೆ ನಿಲ್ಲು (ನಿರ್ಜರಾಧಿಪರೇಳ್ತಂದಿರೆ ಶಂಭು ಕೂರ್ತು ಪಸೆನಿಂದಂ ತನ್ಮಹಾದೇವಿಯೊಳ್: **ರಾಜಶೇವಿ,** ೩. ೯೦)

**ಪಸೆವರಿಸು** – ಹಾಸನ್ನು ಹರಡು, ಹಸೆ ಹಾಸು (ಮಕುಟಬದ್ಧಪರಿವೃತಂ ಕರುಮಾಡದೊಳ್ ಮುನ್ನಂ ಪಸೆವರಿಸಿದ ಮೃಗಾಧಿರಾಜವಿಷ್ಟರದೊಳ್ ಕುಳ್ಳಿರ್ದು: **ಶಾಂತಿಪು,** ೧೧. ೮೩ ವ)

**ಪಸೆವಾಸು** – ಹಸೆಮಣೆಯಯ ಮೇಲೆ ಹಾಸುವ ಬಟ್ಟೆ (ಹಾಸು ಮಿಸುಗುವ ಚೌಕದ ಮುತ್ತಿನ ಪಸೆವಾಸಿನ ಪಟ್ಟವಟಿಯ ದುಗುಲದ ರುಚಿಗಳ್ ಪಸರಿಸೆ: **ಜಗನ್ನಾವಿ,** ೧೦. ೯೫)

**ಪಹರಣೆ** – ಮದ್ದಳೆ ಬಾಜನದ ಒಂದು ರೀತಿ (ಅಳಗಂ ಸುಳಿಯಳಗಂ ಬೊಟ್ಟಳಂ ಕತ್ತರಮುಂ ಎಸೆವ ಪೊಱಕತ್ತರವಗ್ಗಳಿಸಿರೆ ನಾನಾ ಭೇದಂಗಳ ಪಹರಣಿ ತುಡುಕುಮೋಡಿಯಂ ಬಾಜಿಸಿದಂ: **ಧರ್ಮಪ,** ೨. ೨೩)

**ಪಳಂಕು** – ಎರಚು. ಉಗ್ಗು (ಬಣ್ಣಂಗಳಂ ಕಣ್ಗೆ ಕಂಬೆಳಗೇನಾಯ್ತೊ ಪಳಂಕಿದತ್ತೊ: **ಲೀಲಾವತಿ,** ೧೪. ೪)

**ಪಳಂಚಲೆ** – ಅಪ್ಪಳಿಸು (ವಿಪಂಚೀನಾದಮೀಗಳ್ ಪಳಂಚಲೆವುತ್ತಿರ್ದಪುದಲ್ತೆ: **ಕಾದಂಬ,** ೪. ೩೧); ಸೋಕು (ವಿಪಂಚೀನಾದಂ ಇಂತೀ ಪಳಂಚಲೆಯುತ್ತಿರ್ದಪುದಲ್ತೆ ಸಾಲ್ವುದಿದೆ ತದ್ಗಂಧರ್ವರಂ ಸೋಲಿಸಲ್; **ಕಾದಂಸಂ,** ೩. ೧೯); ಥಳಥಳಿಸು (ಅಮರಕಾಂತೆಯರೆಲ್ಲರಂ ಪಳಂಚಲೆಯೆ ನೆಗೞ್ತೆವೆತ್ತ ಪತಿಭಕ್ತಿಯ ಮೈಮೆಯ ಮಾನಸಿಕ್ಕೆಯಗ್ಗಲದ ಪೊಗೞ್ತೆ: **ಆದಿಪು,** ೧. ೭೨)

**ಪಳಂಚಿನುಂಗುರ** – ಮುದ್ರೆಯುಂಗುರ (ಪಳಂಚಿನುಂಗುರದ .. .. ಸಂಕಲೆಯ ಪಿಂಡುಗಂಕಣದ ಕಲಕಲ ನಿನದಂ ಅತನು ಚಾಪಲತಾ ಟಂಕಾರ ಶರಮೋಕ್ಷ ಹೂಂಕಾರದಂತೆ ಕಿವಿಸದ್ದಂ ಕಿಡಿಸೆ: **ಪಂಪರಾ,** ೫. ೧೨೭ ವ)

**ಪಳಂಚಿಸು** – ಕುಟ್ಟು (ಸಂಬಳಿಗೋಲಿಂದಿರದೆ ಪಳಂಚಿಸಿದಳ್ ಜರ್ಝರರವಮೊಗೆಯಲ್ಕೆ ನೃಪಸಭಾಕುಟ್ಟಿಮಮಂ: **ಕಾದಂಬ,** ೧. ೩೧)

**ಪಳಂಚು** – ತಾಗು, ಸಂಘಟ್ಟಿಸು (ತ್ರಿದಶಗಣಾಧಿನಾಯಕನ ಪರ್ವಿದ ತೋಳ್ದುಱುಗಲ್ಗಳೊಳ್ ಪಳಂಚದೆ ಗಗನಂಬರಂ ನೆಗೆದು ಸೂಸುವ ಬಾಹುಪರಿಭ್ರಮಂಗಳೊಳ್ ಬೆದಱದೆ: **ಆದಿಪು,** ೭. ೧೨೫); ಚೆನ್ನಾಗಿ ಸೇರು (ಸೂರ್ಯ ಕಿರಣಂ ಅಸ್ತಮಯ ಸಮಯದೊಳ್ ತಪ್ತ ತಪನೀಯಮಯಮೆನಿಪ್ಪ ನಿಷಧ ನಗದ ಕೆಂಬೊಳಪಿನೊಳ್ ಪಳಂಚೆ: **ಪಂಪರಾ,** ೧. ೭೧ ವ); ಹೊಳೆ (ಪಳಂಚಿದ ಮುಖಾಬ್ಜಮಂ ಬಿಸಿಲ ಬಂಬಲಿಂ ತೊಯ್ದವೋಲ್ ವಿಳಾಸಮಿರೆ: **ಲೀಲಾವತಿ,** ೧೩. ೧೪೦)

**ಪಳಕ** – ಹಲಗೆ (ಪಳಕಮಾಗೆ ಕಪೋಳತಳಂ ವಿಳಾಸದಿಂದ ಅಸದಳಮೇಟಿಕುಂ ಜಯನಶಾಲೆಯ ಲೀಲೆಯನಲ್ಲಿ ಬಾಲೆಯರ್: **ಪಾರ್ಶ್ವನಾಪು,** ೭. ೩೮)

**ಪಳಕು** – ಜರ್ಜರಿತವಾಗು (ಊರವರ್ ಕಂಡು ಪಳಕಿದ ಮೆಯ್ಯೆಂದು ಅದಂ ಭಿನ್ನಪಾತ್ರೆಯೆಂದಜೆದು ಸಂಭಾಷಿಸುತಿರ್ದು: **ಹರಿವಂಶ,** ೪. ೧೫ ವ)

**ಪಳಗಂಡ** – ಗಾರೆ ಕೆಲಸಗಾರ (ಲೇಪಕಂ ಪಳಗಂಡಂ: **ಅಭಿಧಾವ,** ೧. ೧೧. ೮೩)

**ಪಳಚ್ಚನಾಗು** – ಹೊಳಪಿನಿಂದ ಕೂಡು (ಎಸೆವ ಅಮೃತಾಂಶುಬಿಂಬ ಶಾಣದೊಳ್ ಇಂತು ಬಸಂತಗಮ್ಮಱಂ [ಬಸಂತ+ಕಮ್ಮಱಂ] ಮಸೆದು ಪಳಚ್ಚನಾಗಿ ತಳಪತ್ತಿದ ಕಾಮನ ಖಡ್ಗದಂತೆ ಮೋಹಿಸಿತು: **ಶಾಂತೀಶ್ವಪು,** ೨. ೨೧); ನಿರ್ಮಲವಾಗು (ಕೊಳಂ ಪಳಚ್ಚನಾಗಿರೆ ಶಶಿರಶ್ಮಿ ಬಂದುದು ಅತಿನಿರ್ಮಲನೀರವಮಪ್ಪ ಶಾರದಂ: **ಕಾದಂಬ,** ೯. ೭೯)

**ಪಳಚನೆ** – ಹೊಳೆಯುವ (ಜಲಜಲನೆ ಕೆಂಪನುಗುಟ್ದುವು ಲಲಿತಲತಾಂಗಿಯರ ಪಳಚನೆಸೆವಧರಂಗಳ್: **ಲೀಲಾವತಿ,** ೯. ೭೫)

**ಪಳಚ್ಚನೆ** – ಹೊಳಪಿನಿಂದ ಕೂಡಿ (ಆತನ ತೀವ್ರಪ್ರತಾಪಮೆ ತನ್ನೊಳ್ ಸಂಕಮಿಸಿದಂತೆ ದಿನಕಿರಣಂಗಳೊಳ್ ಪಳಚ್ಚನಪ್ಪ ಪೊಳೆಪುಂ: **ಆದಿಪು,** ೧೧. ೫ ವ)

**ಪಳಪಳಿಸು** – ಹಳಹಳಿಸು, ಗಾಬರಿಗೊಳ್ಳು, ಕಕ್ಕಾವಿಕ್ಕಿಯಾಗು (ತಳಮಿವು ತಳಿರಿವು ಬೆರಲಿವು ಕಳಿಕೆಗಳಿವು ನಖಮಿವು ಅಲರಿವು ಎಂದಱಿಯದೆ ಕೋಮಳೆ ಪೂಗೊಯ್ವೆಡೆಯೊಳ್ ಪಳಪಳಿಸಿದಳ್ ಅತಿಮುಗ್ಧೆ ಮಾವಿನೊಳ್ ಮತ್ತೊರ್ವಳ್: **ಶಾಂತೀಶ್ವಪು,** ೧೦. ೧೨೬)

**ಪಳಯಿಸು** – ಪ್ರಲಾಪಿಸು (ಪಳಿವುದು .. .. ಎನ್ನಿನಿಯಳ ತೊಳಗುವ ವದನಂ ಅಲರ್ದ ಬೆಳ್ದಾವರೆಯಂ ಎಂದು ಪಳಯಿಸುತ್ತಿರ್ದಂ: **ರಾಜಶೇವಿ,** ೧೧. ೧೩೩ ಮತ್ತು ೧೩೩ ವ)

**ಪಳವ** – ಚರ್ಮವಾದ್ಯ (ಪಳವದ ತಿವಳಯ ಜುಂಕದ ಮೊಳಸಿನ ಜೇಕಿರದ ಸಿವಿಱ ಸಿಪ್ಪಿನ ಲಯದಿಂದ ಎಳಲದೆ ಕುಣಿದರ್: **ಅಜಿತಪು,** ೫. ೩೨)

**ಪಳವಿಸು** – [ಪ್ರಲಾಪಿಸು] ದುಃಖಿಸು, ಅಳು (ಬಹುಪ್ರಕಾರದಿಂ ಪಟವಿಸುವ ಮಹಾಶ್ವೇತೆಯಂ ಕಪಿಂಜಲನಿಂತೆಂದಂ: **ಕಾದಂಬ,** ೯. ೭೩ ವ)

**ಪಳಾಳ** – ನಿಷ್ಫಲ, ಠಕ್ಕು (ಒಳಗಱಿಯದೆ ಪೊಱಗಱಿಯದೆ ಪಳಾಳಮಂ ನುಡಿವ ನಿಮ್ಮ ನುಡಿಗೆಮಗೀಗಳ್ ಮುಳಿಯಲೆಡೆಯಿಲ್ಲ: **ಆದಿಪು,** ೯. ೧೦೫)

**ಪಳಾಳಭಾರ** – ವ್ಯರ್ಥವಾದ ಭಾರ (ನಮಗಿದು ಪಳಾಳಭಾರಂಬೊಲೀ ಮಹೀತಳಭಾರಂ: **ಆದಿಪು,** ೧೪. ೩೩)

**ಪಳಾಳವರ್ತಿ** – ಸುಮ್ಮನೆ ಕಟ್ಟಿದ್ದ ಹಗ್ಗ (ಮಂಗಿಯಂ ಕಂಡು ಸುತ್ತಿರ್ದ ಪಳಾಲವರ್ತಿಯಂ ಕಳೆದು ಭಟ್ಟಾರಕರ ಪಾದಮೂಲದೊಳ್ ತಂದಿಕ್ಕುವುದುಂ: **ಚಾವುಂಪು.** ಪು. ೪೧೫. ಸಾ. ೧೮)

**ಪಳಿಕು** – ಸ್ಫಟಿಕ (ಪಳಿಕಿನ ಕೊಡದೊಳ್ ಸೊಡರ್ಗುಡಿ ಬೆಳಗುವವೊಲ್ ಶುದ್ಧಗರ್ಭಗೃಹದೊಳ್: **ಆದಿಪು,** ೭. ೩೩)

**ಪಳಿಕುವಾಸಱೆ** – ಸ್ಫಟಿಕದ ಹಾಸುಗಲ್ಲು (ತರುಣತಮಾಲತರುವನದ ತಳದ ತಣ್ಣೆಳಲ ಪಳಿಕುವಾಸಱೆಯ ಪರ್ಣಶಾಲೆಯಲ್ಲಿ: **ರಾಜಶೇವಿ,** ೧. ೧೩೦ ವ)

**ಪಳಿತ** – ನರೆತ ಕೂದಲು (ಪಳಿತಂಗಳಂ ದರ್ಪಣದಳ್ನೋಡಿ ಕಂಡು ಪರಪತಾಕಿನೀಪತಾಕೆಯಂ ಕಂಡು ಸೆರಗಿಲ್ಲದ ಗಂಡನಂತಿರಪ್ಪೊಡಂ; **ಆದಿಪು,** ೧. ೭೯ ವ); [ಜೈನ] ಲೆಕ್ಕಕ್ಕೆ ಸಿಕ್ಕದಷ್ಟು ದೀರ್ಘಕಾಲ (ಮುಡಿಪಿ ದೇವ ಲೋಕದೊಳೆ ಪಳಿತೋಪಮಾಯುಷ್ಯಸ್ಥಿತಿಯೊಳಾಗಿ ಮಣಿಚೂಳಿಯೆಂಬ ದೇವಿಯಾಗಿ ಪುಟ್ಟಿ: **ಹರಿವಂಶ,** ೧೩. ೪೫ ವ)

**ಪಳಿನ** – ಕಣ್ಣುಗಳುಳ್ಳ (ಪಳಿನ ಶಾಖೆಗಂ ಮೇದಿನಿಗಂ ಮಂದಾನಿಳಂಗಂ ಇಂ ನಿಮ್ಮಂದಿಗರ್ಗಂ ಸಲೆ ಪರೋಪಕಾರಮೆ ಶೀಳಂ: **ನೇಮಿನಾಪು,** ೪. ೧೨)

**ಪಳಿಹಸ್ತ** – ಆನೆಯ ಸೊಂಡಿಲಿನ ಸ್ಥೂಲಹಸ್ತವೆಂಬ ಭಾಗದ ನಡುವಿನ ಅಂಗ (ಸುಸಂಚಿತ ಪ್ರೋಹ ಪಳಿಹಸ್ತಗಾತ್ರನುಂ ಪರಿಪೂರ್ಣಶ್ಲಿಷ್ಟಪಾರ್ಷ್ಣಿಯುಂ: **ಆದಿಪು,** ೧೨. ೫೬ ವ)

**ಪಳುಂಕು** – ನೂಕು, ಒತ್ತು (ಗಳದೊಳ್ತೊಳ ಮೊದಲ್ ಪಳಂಚೆ .. .. ಪೆರ್ಮೊಲೆ ವಕ್ಷಸ್ಥಳಮಂ ಪಳುಂಕೆ: **ಅನಂತಪು,** ೭. ೧೮)

**ಪಳುಂಬು** – (ಕಾದಲರಂ ಪಳಂಚಲೆವ ಪಂಚಶರಕ್ಕೆಅದಱ ಅಂಕುರಂ ಪಳುಂಬಾದುದು ಕೆಂದಳಿರ್ ಮಿಸುಪ ಕೆಂಗಱೆಯಾದುದು: **ಪುಷ್ಪದಂಪು,** ೮. ೮೧)

**ಪಳುಕು** – ಸ್ಫಟಿಕ (ಇಂದ್ರನೀಲದ ಭದ್ರದೊಳಂ ಕರ್ಕೇತನದ ಜಾಳರಿಗೆಯೊಳಂ ಪಳುಕಿನ ಚಿತ್ರಭಿತ್ತಿಯೊಳಂ ವಿವಾಹಗೇಹಮಂ ಸಮೆಯಿಸಿ: **ಪಂಪಭಾ,** ೩. ೩೪ ವ); ಬೆಳ್ಳಿ

**ಪಳುವು** – ಕಾಡು (ಪಳುವದ ಮದಕರಿಗಳ ಮದಜಳದೊಳ್ ನಿಮಿರ್ದಿರ್ದ ಮರದ ತುದಿಗೊಂಬುಗಳೊಳ್: **ಕಾದಂಬ,** ೧. ೮೧)

**ಪಳ್ಳ** – ನೀರು ಹರಿಯುವ ಹಳ್ಳ (ಬತ್ತಿ ಪಳ್ಳಂಗಳೊಳಂ ಅತಿರೌದ್ರಮಾದ ಪೇರಡವಿಯೊಳಗೆ ಬರ್ಪಾಗಳ್: **ಕಾದಂಬ,** ೮. ೦ ವ)

**ಪಳ್ಳಿವರ್** – [ಹಳ್ಳಿಯಂತೆ] ಗುಂಪಾಗಿ ಬರು (ಮುನಿದಿಂದ್ರಂಗೆ ಸುರಾಂಗನಾತತಿ ಸುರೇಂದ್ರಾವಾಸದಿಂ ಪಳ್ಳಿವಂದು ನಿತಾಂತಂ ನೆರೆದಿರ್ದರ್ ಅಂಬರದೊಳ್: **ಧರ್ಮಾಮೃ,** ೮. ೧೧೬)

**ಪಳ್ಳಿವೋಗು** – [ಹಳ್ಳಿಯಂತೆ] ಗುಂಪಾಗಿ ಗುಳೆ ಹೋಗು (ವನಜಾನೀಕಮೆ ಪಳ್ಳಿವೋಪ ತೆಱದಿಂ ಕಿತ್ತಿರ್ದು ಭೂಪಂ ತಪೋವನಮಂ ಪುತ್ರಕಳತ್ರಮಿತ್ರಸಹಿತಂ ಪೊಕ್ಕಂ: **ಆದಿಪು,** ೪. ೮೩)

**ಪಱಮೆ** – ದುಂಬಿ (ಪಪ್ಪಲದಲರ್ಗಳ್ ಸಂಬಳಮಪ್ಪಿನಂ ಉಪವನಕೆ ನಿಚ್ಚವಯಣಂ ಬರುತುಂ ಪಪ್ಪಕಮಾಗಿರೆ ಪಱಮೆಗಳುಪ್ಪವಯಣಂಗೆಯ್ದುವಂದು ಪೊಸಮಲ್ಲಿಗೆಯೊಳ್: **ಅಜಿತಪು,** ೬. ೨೧)

**ಪಱಮೆವಱೆ** – ಮರಿದುಂಬಿ (ಸಿರಿಯೆಱೆಯಂ ಮಾದೇವಂ ಸರಸತಿಯೆಱೆಯರ್ಕಳ ಅಡಿಗಳೆಂಬೀ ಕೆಂದಾವರೆಗಳ್ ಪೊರೆಗೆಮ್ಮಂ ಪೊಸಸಿರಿಗಂಪಿಂ ಪಱೆಮೆವಱೆಯಂ ಎಂತು ಅಂತೆ ಒಲವಿಂ: **ಕಬ್ಬಿಗಕಾ,** ೨)

**ಪಱೆ** – ಕಿತ್ತು ಹೋಗು, ಕತ್ತರಿಸು (ಕರ್ಮಂಗಳ ಬೇರನೆ ಪಱೆವ ತೆಱದೆ ಪಱೆದಂ ಮನಸ್ವಿ ಚಳದಳಿವಿನೀಳ ಕೇಶಾವಳಿಯಂ: **ಆದಿಪು,** ೯. ೭೭); ಅಲಂಕರಿಸು

**ಪಱೆಗಡ್ಡ** – ಹರಕುಗಡ್ಡ (ಮಾದೆಗನ ಪಱೆಗಡ್ಡಮನೆಡಗೆಯ್ಯೊಳ್ ಪಿಡಿದು: **ಧರ್ಮಾಮೃ,** ೧೦. ೧೦೨ ವ)

**ಪಱೆದೊವಲ್** – ಕತ್ತರಿಸಿದ ಧರ್ಮ (ಜೀರ್ಣಮಾಗೆ ತನು ಕೂರಲಗಿನ ಪಱೆದೊವಲೊಳಿರ್ದನಂತೆ ಆ ಮುನಿಪಂ: **ಅನಂತಪು,** ೧೨. ೩೪)

**ಪಱೆನಂಟರ್** – ಹರಿದುಹೋದ [ದೂರವಾದ] ನಂಟ (ಪೊಱಪೊಟಲೊಳಿರ್ಪರಿರ್ವರ್ ನೆಱೆದೊಕ್ಕಲ್ತನದ ಪೆಮೇಯೊಳ್ ಒಕ್ಕಲಿಗರ್ ಪೇರಱೆಕೆಯ ಶಶಿಸೂರ್ಯಆಖ್ಯರ್ ಪಱೆನಂಟರ್: **ಚಂದ್ರಪ್ರಪು,** ೫. ೮೭)

**ಪಱೆಪಡಿನುಡಿ** – ಖಂಡತುಂಡವಾಗಿ ಮಾತಾಡು (ಎಂದು ಪಱೆಪಡಿ ನುಡಿದು ಗೆಂಟಾದಂ: **ಆದಿಪು,** ೧೨. ೩೭ ವ)

**ಪಱೆಪಡಿಸು** – ಕತ್ತರಿಸು (ಅಱಮಗನಿರ್ಕೆ ಅರ್ಜುನನಿರ್ಕೆ ಅಱೆಕೆಯ ಮಾದ್ರೀಸುತರ್ಕಳಿರ್ಕೆ ಅಱೆವಗೆಯಂ ಪಱೆಪಡಿಸಲ್ಕೆ ಹಲಾಯುಧನೆಱೆದಿರ್ದಪಂ ಎನಗೆ ತೋಱೆ ಬಿಡು ಕೌರವನಂ: **ಗದಾಯು,** ೭. ೬೨)

**ಪಱೆಪಡು** – ಬಿಟ್ಟು ಹೋಗು (ಕೈನೀರೆಱೆಯಲ್ಕೆಂದಿರ್ಪ ಪದದೊಳ್ ಅತ್ಯಾಶ್ಚರ್ಯಂ ನೆಱೆದಿರೆ ಮದಾಳಿಗಯಸಂ ಪಱೆಪಡೆ ಬರ್ಪಂದದಿಂದೆ ನಂದಂ ಬಂದಂ: **ಸುಕುಮಾಚ,** ೭. ೩೨); ಕತ್ತರಿಸಿ ಹೋಗು (ಕೊಟ್ಟಸುಗಟ್ಟುಗಳಿಂದಂ ತೊಟ್ಟನೆ ಪಱೆಪಟ್ಟು ಬೀೞ್ವವೊಲ್ ಬಿರ್ದು: **ಆದಿಪು,** ೫. ೮೪); ಕೊನೆಗಾಣು (ಪುರವರದ ವಣಿಗ್ವಾಟ ಹರ್ಮ್ಯಂಗಳೊಳ್ ಮುನ್ನಿನ ಸಂಚಾರಸ್ವಭಾವಂ ಪಱೆಪಡೆ ಪದೆಪಿಂ ಲಕ್ಷ್ಮಿ ನಿಶ್ಚಿಂತಮಿರ್ಪಳ್: **ಪಂಪರಾ,** ೧. ೧೨೨)

**ಪಱೆಮಱೆ** – ಸಡಗರಗೊಳ್ಳು (ನಾಳೆ ಸಯಂಬರಮೆನೆ ಪಾಂಚಾಳ ಮಹೀಪಾಳಂ ಅಖಿಳ ಭೂಭೃತ್ ನಿಕರಕ್ಕೆ ಓಳಿಯೆ ಸಾಱೆದೊಡೆ ಅವನೀಪಾಲರ್ ಕೆಯ್ಗೆಯ್ಯಲೆಂದು ಪಱೆಮಱೆಯಾದರ್: **ಪಂಪಭಾ,** ೩. ೪೨)

**ಪಱೆಮಱೆಗೊಳ್** – ಸಂಭ್ರಮಪಡು (ಪೊಱಗೆ ಚೆಲ್ಲಿದ ಕಸ್ತೂರಿಯ ರಜಕ್ಕೆ ಪಱೆಮಱೆಗೊಂಡಬ ಮದಾಳಿಮಾಳಿಕೆ: **ರಾಜಶೇವಿ,** ೧೩. ೪೫ ವ)

**ಪಱೆಮಱೆಯಾಡು** – ಹಾರುಗುಪ್ಪೆ ಆಟವಾಡು (ಧುರದೊಳ್ ಪಱೆಮಱೆಯಾಡುವ ತೆಱದಿಂದುಱೆದಿಱೆದನೆಂಬ ನಿಯಮಂ ದೂಷ್ಯಂ: **ಶಬ್ದಮದ,** ೨೯ ಪ್ರ ೪)

**ಪಱೆವಱೆಯಾಡು** – ಹಾರುಗುಪ್ಪೆ ಆಟವಾಡು (ಪರನೃಪರಟ್ಟಿದ ಕಪ್ಪದ ಕರಿಗಳ ಮದಜಳಮನುಂಡು ಕೆಂಪೇಱೆದ ತದ್ದರಣೀಶಗೃಹಾಂಗಣದೊಳ್ ಪಱೆವಱೆಯಾಡುವುವು ಪಱಮೆವಱೆಗಳ ಬಳಗಂ: **ಚಂದ್ರಪ್ರಪು,** ೭. ೩೩)

**ಪಱೆಯಾಳ್ತನ** – ಹರಿದುಹೋದ [ಗತಿಸಿದ] ಕಲಿತನ (ಪಱೆಯಾಳ್ತನದಟಿಗಂಡಿಂದಱೆಯದೆ ಪೆರ್ಮ್ವೆರ್ಚಿ ಪೋಗಿ ಪರದನ ಮನೆಯಂ ತರುವಲಿತನದಿಂ ಪೊಕ್ಕೊಡೆ ಕುಱೆ ಸಾವಂತಲ್ಲಲಿ ಸಾವು ನಿಶ್ಚಯಮಕ್ಕುಂ: **ಧರ್ಮಾಮೃ,** ೬. ೧೩)

**ಪಱೆಯಿಡು** – ಕತ್ತರಿಸು (ಚಕ್ರದಿಂ ನಾಲ್ಕುಕಾಲುಮನೊರ್ಮೊದಲೆ ಪಱೆಯಿಟ್ಟೊಡೆ: **ವಡ್ಡಾರಾ,** ಪು, ೧೨೦. ಸಾ. ೧೯)

**ಪಱೆಯಿಸು** – ಕತ್ತರಿಸು (ಇವರೀ ಶಿರಗಳಂ ಪಱೆಯಿಸಲೊಲ್ವೊಡೇನರಿದೆ ಶಾರ್ಙ್ಗಗೆನಲ್ ಹರಿ ಬಾಣಕೋಟಿಯಿಂ ಪಱೆಯಿಸೆ: **ಜಗನ್ನಾವಿ,** ೮. ೬೪); ಲೋಚು ಮಾಡು (ತಲೆಯ ರೋಮಂಗಳೆಲ್ಲಮಂ ಪಱೆಯಿಸಿ ರಾಗದಿನೆಮಗೀವುದು: **ಧರ್ಮಾಮೃ,** ೧. ೧೦೮ ವ)

**ಪಱಿಯೆ ತಿನ್** – ಹರಿದು ತಿನ್ನು (ಅರ್ಥಮುಳ್ಳಿನಂ ಪೊರ್ದಿ ಮಾಡುತುಂ ಪಱಿಯೆ ತಿಂದು ನೊಚ್ಚನೆ ನೆಗೆವರ್: **ಸಮಯಪ,** ೧೨. ೪೦)

**ಪಱಿಯೆ ನುಡಿ** – ಖಂಡತುಂಡವಾಗಿ ಮಾತಾಡು (ಮುದುಗಣ್ಣಾಗಿ ನಿಮ್ಮಂಥು ಪಱಿಯೆ ನುಡಿವರುಮೊಳರೇ: **ಆದಿಪು,** ೯. ೧೦೫)

**ಪಱಿವಡೆ** – ಶೋಭಿಸು (ಪಕ್ಕಿಗಳ ಪೆರ್ಚಿದ ಸರಂಗಳಿಂ ಹರಣಮಬಡೆದಂತೆ ಪಱಿವಡೆದು ತಿಂತಿಣಿವಡೆದ ಪೇರಡವಿಯೊಳ್: **ಕಬ್ಬಿಗಕಾ,** ೧೭೦ ವ)

**ಪಱಿವಱಿ** – ಕೋಪಗೊಳ್ಳು (ಪೆಣ್ಣೊಲವಿಂ ಬಂದುದೆ ಸಗ್ಗಮಲ್ತೆ ಕಡು ಸೋವದೆ ತನಗಿಂತೇಕೆ ಕಿತವ ಪಱಿವಱಿಯಪ್ಪೈ: **ಲೀಲಾವತಿ,** ೧೪. ೧೧೪)

**ಪಱಿವಱಿಯಾಗು** – ಚೆಲ್ಲಾಪಿಲ್ಲಿಯಾಗು (ತೊಱೆದು ಪರೀಷಹತತಿಯಂ ಪಱಿವಱಿಯಾದ ಒಡಲಂ ಆತ್ಮನಿರಪೇಕ್ಷತೆಯಿಂ ನಿಱಿಸಿ .. .. ಅಚ್ಯುತೇಂದ್ರನೆನಾದೆಂ: **ಶಾಂತಿಪು,** ೭. ೮೪)

**ಪಱಿವಾಯಂ** – ಹರಕುಬಾಯಿಯವನು (ಚೆಚ್ಚರಿಗಂ ಪಱಿವಾಯಂ .. .. ಬಿಚ್ಚತಿಗನೆನಿಕ್ಕುಂ ಒಂದಿ ಜೈನರ ಕೆಲದೊಳ್: **ಸಮಯಪ,** ೬. ೧೦೬)

**ಪಱಿವಾಯ್ತನ** – ಒಡಕುಬಾಯಿ [ಗುಟ್ಟನ್ನಿರಿಸಿಕೊಳ್ಳದ] ವ್ಯಕ್ತಿ (ನೆಱೆ ನಿನ್ನ ಬೆನ್ನನೇನೆಂದಱಿಯೆ ನೀನಿತಱಿಂದೆ ಪಱಿವಾಯ್ತನದಿಂದ ಏನೆಂದಱಿಯದೆ ಗಱಪುವ ನುಡಿಗಳಂ ಕೈಕೊಳ್ವಾ: **ಧರ್ಮಾಮೃ,** ೫. ೧೨೧)

**ಪಱಿವೇಱು** – ಶೋಭಿಸು (ಹರಿನೀಳಸ್ಥಳಿಯೊಳ್ ಬಣ್ಣವುರಂ ಪಱಿವೆತ್ತುದು ಬಗೆ ಮರುಳ್ವನ್ನೆವರಂ: **ಚಂದ್ರಪ್ರಪು,** ೪. ೬೩ ರಗಳೆ)

**ಪಱಿವೊಱಿಸು** – [ರೆಕ್ಕೆ] ಹರಿದ ಪಾರಿವಾಳ (ಕಿಱುವರೆಗಾಲದಂದುಟಿದೆನೋಪಳನಾನವಳಂದೆ ಗಂಡರಂ ಪಱಿವೊಱಿಸಾಗೆ ಮಾಡುವಳ್: **ಜಗನ್ನಾವಿ,** ೧೬. ೧೩೪)

**ಪಱಿಸೀರೆ** – ಹರಕು ಬಟ್ಟೆ (ತೊಟ್ಟನೆ ಪಱಿಸೀರೆಗಳಂ ಬೆಟ್ಟಾಗಿರೆ ಗುಹೆಯ ಬಾಗಿಲೊಳ್ ತೀವಿಸಿದಂ: **ಧರ್ಮಾಮೃ,** ೯. ೧೧೬)

**ಪಱುಗಲ್** – ಹರಿಗೋಲು, ದೋಣಿ (ಪಱುಗಲಿಕ್ಕಿ ಪಾಯಲ್ಕಂ .. .. ಸವಿನೋಡಲ್ಕಂ ಬಗೆವುದೆಸೆವ ನವಚಂದ್ರಿಕೆಯಂ: **ವರ್ಧಮಾಪು,** ೮. ೮೦)

**ಪಱುಗೋಲ್** – ಹರಿಗೋಲು, ದೋಣಿ (ಪಱುಗೋಲ್ಗಳನಿಕ್ಕಿ ಪಾಯಿಸಲ್ ನೆಲೆಯಿನಿಸೆಂದು ನೋಡಲ್ ಒಳಪೊಕ್ಕು ದುಡುಮ್ಮಿಱಿದಾಡಲ್ ಈಸಲ್ ಅಗ್ಗಲಿಸಿದಲಂಪಿನಿಂ ಬಗೆದುದಂದು ಜನಂ ಘನಚಂದ್ರಿಕಾಂಬುವಂ: **ಅಜಿತಪು,** ೬. ೪೫)

**ಪಱಿ** – ಹರೆ, ತಂಬಟೆ (ಎನಿತಾನುಂ ಪಱೆಗಳ್ ಘನನಿನದಮನನುಕರಿಸೆ ಮನದೊಳೊದವಿದಲಂಪಿಂ: **ಆದಿಪು,** ೭. ೧೦೪)

**ಪಱೆಗುಟ್ಟು** – ತಮ್ಮಟೆ ಹೊಡಿ (ಅಂತಪ್ಪೊಡೆ ಶ್ರೋತ್ರಿಯರುಂ ಕ್ಷತ್ರಿಯರುಂ ಪಱೆಗುಟ್ಟಿ ಪಶುಯಾಗಂಗೆಯ್ದು ಈ ಲೋಕದೊಳ್ ಪಾತ್ರೀಭೂತರುಂ ಪವಿತ್ರಗೋತ್ರರುಂ ಆಗಿ: **ಪಂಚತಂತ್ರ,** ೧೧೭ ವ)

**ಪಱೆಯ** – ಹೀನ ಕುಲದವನು (ಪ್ರೌಢಿಯೊಳ್ ಎಂತಪ್ಪರುಮಂ ಕಡುಮೆಚ್ಚದೆ ಬಿನ್ನಣಿಯಹ ಪಱೆಯಂಗೆ ಒಸೆದಿರ್ದೊಡೆ: **ಹರಿವಂಶ,** ೫. ೧೫)

**ಪಱೆಯವರು** – ತಮಟೆ ಬಾರಿಸುವವರು (ರಾಜಕುಮಾರನ ಮುಂದೆ ಬಾಜಿಸುವ ಪಱೆಯವರಲ್ಲಿಗೆ ಎಂದು ಅವರೊಳ್ ಸಂಭಾಷಿಸುಮಿರ್ದು: **ಹರಿವಂಶ,** ೫. ೧೨ ವ)

**ಪಱೆವೊಟ್ಟು** – ಹರೆ ಹೊಡೆಯುವ ಹೊತ್ತು, ಸಂಜೆ (ಆಷಾಢಮಾಸದ ಚತುರ್ದಶಿಯ ದಿವಸದಂದು ಪಱೆವೊಟ್ಟು ಬಂದು ಜೋಗುಗೊಂಡಿರ್ದರ್: **ವಡ್ಡಾರಾ,** ಪು ೨೭, ಸಾ ೨೪)

**ಪಟಂಗಾಸು** – ಹಳೆಯ [ಚಿನ್ನದ] ನಾಣ್ಯ, ಅತ್ಯಂತ ಚೊಕ್ಕವಾದ ಚಿನ್ನ (ವಾಸವದಿಕ್ತಟಂ ಸಮೆದ ಮೂಷೆ ತಮಂ ಸುರಿದಿರ್ದಲಬ್ಬಸಂವಾಸಿ ಸಮೀರಂ ಏರಣಿಗನಾಗೆ ನಿದಾಘವ ದೀಪ್ತಿವರ್ತಿಯೊಳ್ ಕಾಸೆ ತೆರಳ್ದ ಪಿಂಜರಿಯವೋಲ್ ಕಿಸುಸಂಜೆ ತೆರಳ್ವಿನಂ ಪಟಂಗಾಸಿನ ಪೊನ್ನಗಂಟೆಯವೊಲೊಪ್ಪಿದುದು ಉದ್ಗತ ಭಾನುಮಂಡಲಂ: **ಅಜಿತಪು,** ೬. ೭೦)

**ಪಟಿಗ** – ಒಣ ಎಲೆ (ಒಂದರ್ಥಕ್ಕೆ: ಪಟಿಗಮೆಂದು ಒಣಗಿದೆಲೆ: **ಶಬ್ದಮದ,** ೩೩ ವೃತ್ತಿ ೭೩)

**ಪಟಿಗನ್ನಡ** – ಹಳಗನ್ನಡ, ಸಮಕಾಲೀನಕ್ಕೆ ಹಿಂದಿನ ಕನ್ನಡ (ಪಟಿಗನ್ನಡಮಂ ಪೊಲಗೆಡಿಸಿ ನುಡಿವರ್ ಆಗಮ ಬಲಹೀನರ್ ದೇಸಿಯಲ್ಲವೆಂದು ಅಱಿದಿರ್ದುಂ: **ಕವಿರಾಮಾ,** ೧. ೪೮)

**ಪಟಿಗಬ್ಬ** – ಪ್ರಾಚೀನ ಕಾವ್ಯ (ಪಟಿಗಬ್ಬಮನೆಲ್ಲಮಂ ಠಕ್ಕಿಸಿ ತಿಂದು ಕುಂಬಳದ ಮಾಟ್ಕೆಯ ಮಾಡುವೆನೆಂಬ ಸಾಸಿಗಂಗಕ್ಕಟ ಪೂಣ್ದು ನಿರ್ವಹಿಪುದೇನರಿದಾಯ್ತೆ ಮಹಾಪ್ರಬಂಧಮಂ: **ಸೂಕ್ತಿಸುಧಾ,** ೧. ೩೬)

**ಪಟಿಗಬ್ಬಿಗ** – ಹಿಂದಿನ ಕವಿ (ಪಟಿಗಬ್ಬಿಗರ್ ನುಡಿದ ಮಾತನೆ ಪಲ್ಲಟವಿಟ್ಟು ಕಟ್ಟುವಂ ಕವಿಗಳ ವೇಷದಿಂದೆ: **ಅನಂತಪು,** ೧. ೪೬)

**ಪಟಿಗಲಿ** – ಹಿರಿಯ ವೀರ (ಉಬ್ಬಾಳಿಯಳವಿಯ ಲೆಕ್ಕಕ್ಕಿಱಿದು ಬೆಸಕೆಯ್ವ ಪಟಿಗಲಿಗಳುಮಂ .. .. ನೋಡಿ: **ಗದಾಯು,** ೯. ೩೪ ವ)

**ಪಟಿಗಳ್ಳು** – [ಪಟಿ+ಕಳ್ಳು] ಹಳೆಯ ಹೆಂಡ (ಪಟಿಗಳ್ಳಂ ಕುಡಿದುರ್ಕಿ ಸೊರ್ಕಿ ಕೆಡವುತ್ತೊರ್ರೊರ್ವರೊಳ್ ಪೋರ್ದು ಪೊಯ್ದೆಱೆಯುತ್ತೋ ಪಿಡಿಯುತ್ತುಮಿರ್ಪ ಗಣಿಕಾಸಂದೋಹ: **ಲೀಲಾವತಿ,** ೨. ೧೨೭)

**ಪಟಿಗಾಂಪ** – ಹುಟ್ಟು ದಡ್ಡ (ಪಟಿಗಾಂಪರ ನುಡಿ ಮುತ್ತುಂ ಮೆಟಿಸುಂಗೋದುದಕ್ಕೆ ಭಾಷ್ಯಮಂ ಒರ್ವಂ ಕಟಿಯೋದಿದಾತನಲ್ಲದೆ ಬಟಿವಟಿಯಿಂ ಬಂದು ಬರೆಯಲಾಗದು ಅಗಣ್ಯಂ: **ಶಾಂತಿಪು,** ೧೦. ೧೮೧)

**ಪಟಿಗುಂಟಣಿ** – ಮುದಿ ಕುಂಟಣಿ (ನೂಂಕಿ ತಳೆದಂ ಚದುರಂ ನಲ್ಲರೊಳೆ ನೆರೆಯಲೀಯದ ನಿರ್ಲಜ್ಜೆಯ ಲಜ್ಜೆಯೆಂಬ ಪಟಿಗುಂಟಣಿಯಂ: **ಲೀಲಾವತಿ,** ೧೩. ೧೫)

**ಪಟಿಗೆ** – ಪತಾಕೆ (ಪಿರಿದುಂ ಪೊತ್ತಿರ್ಪಿನಂ ಪಟಿಗೆಗಳ್ ಅಕ್ಷೂಣ ನಕ್ಷತ್ರಮಾಲಾಭರಣಂ: **ನೇಮಿನಾಪು,** ೮. ೬೪)

**ಪಟಿಗೆಯ್** – ಹಳೆಯ ಹೊಲ (ಅಸವಸದಿಂ ಪಟಿಗೆಯ್ಯಂ ಕಸಮಂ ಸೋದಿಸದೆ ಬಿತ್ತಿದ ಒಕ್ಕಲಿಗನವೋಲ್ ಸಸಿಯಂ ನೋಡಿ ತಳೋದರಿ ಬಿಸುಸುಯ್ಯುಗ್ಗಂ ಬಯ್ಯುಮಂತೆ ಮಾಡಿದ ಬಿದಿಯಂ: **ಕಾವ್ಯಾವಲೋ,** ೪೫೪)

**ಪಟಿಚ್ಚಂ** – ಕಾಂತಿಯುಕ್ತ (ಧರಾಳೀವಕ್ತ್ರಮಂ ವೀಕ್ಷಿಪಾತುರದಿಂ ವೇಷ್ಟಿತ ಕಂದ ಕಾಡಪಟಮಂ ನೂಕಿರ್ದಲೋ

ವ್ಯೋಮಸೌಂದರಿ ಎಂಬಂತೆ ಪಱಿಚ್ಚನ್ನಾಯ್ತು ಗಗನಂ ಮೇಘಬ್ರಜಂ ಪೋಗೆಯುಂ: **ಶಾಂತೀಶ್ವಪು,** ೧೨. ೬೨)

**ಪಱಿದು** – ಹಳೆಯದು (ಪೊಸತುಂ ಪಱಿದುಮನಱಿದು ಪರಿಯಿಸಲ್ ನೀನೆ ಬಲ್ಲೆ: **ಪಂಪಭಾ,** ೫. ೪೬ ವ)

**ಪಱಿನವಿರ್** – ಹಳೆಯ ಕೂದಲು (ಸುಟಿಯದು ಗಾಳಿ ಮೃಗಂ ಕೆಯ್ವೆಟಿಗಳ ಮೇತದೊಳೆ ತಣಿದಪುವು ಪಂದಿಗಳುಂ ಪಱಿನವಿರ್ ಇಕ್ಕಿದುವು ಆದಂ ಪಱಿ ಪರಿದಾಡಲ್ ಕರಂ ಬೆಡಂಗವನಿಪತೀ: **ಪಂಪಭಾ,** ೫. ೩೮)

**ಪಱಿನೀರ್** – ಹಳೆಯ [ಶೇಖರಿಸಿಟ್ಟ] ನೀರು (ಪೀರ್ದ ಪಱಿನೀರ್ಗಳಂ ಅಟ್ಟಿಸಲಾಱದೆ ಎಯ್ದೆ ಕಂಟಳಿಸಿ ಮಗುಳ್ಚಿದಪ್ಪುದು ಎನಲ್: **ಲೀಲಾವತಿ,** ೧೨. ೩೮)

**ಪಱಿಪಱಿನೆ** – ಕಾಂತಿಯುಕ್ತವಾಗಿ (ಕೆಯ್ದೀವಿಗೆಗಳ್ ಪಱಿಪಱಿನೆಸೆದಿರೆ: **ಶಾಂತಿಪು,** ೮. ೬೪)

**ಪಱಿಪುಣ್** – ಹಳೆಯ ಹುಣ್ಣು, ಹಿಂದಿನ ನೋವು (ಪಲದೆವಸಕ್ಕೆಮಗೀಗಳ್ ಕಲಹಂ ದೊರೆಕೊಂಡುದು ಇಲ್ಲಿ ಮೆಱೆದಪಮಿಂ ದೋರ್ವಲದಳವನೆಂದು ಪಱಿಪುಣ್ಗಲೆಯೊಡೆವಿನಂ ಉರ್ವಿ ಕೊರ್ವಿದರ್ ಕಡುಗಲಿಗಳ್: **ಚಂದ್ರಪ್ರಪು,** ೧೦. ೬೨)

**ಪಱಿಮಱೆವು** – ಹಿಂದೆಯೇ ಮರೆತುಹೋದದ್ದು (ಪಱಿಮಱೆವುಮಾದ ನಣ್ಪಂ ಪುನರ್ನವಂ ಮಾಟ್ಪ ಬಗೆಯಿಂ ಎನ್ನನಿಂತೆಂದಟ್ಟಿದಂ ಎಮ್ಮರಸಂ: **ಶಾಂತಿಪು,** ೫. ೩೨ ವ)

**ಪಱಿಮೆ** – ಹಳೆಯ ಸಂಬಂಧ (ತನ್ನ ಪಱಿಮೆಯಂ ಮಱೆದು ಪಗೆವಂ ಬಲ್ಲಿದನಪ್ಪೊಡೆ ಅವನೊಳ್ ಕೂಡಿ ಮೇಲೆ ವಂದೊಡೆ ಅತಿಭರಮಕ್ಕುಂ: **ಪಂಚತಂತ್ರ,** ೯೪ ವ)

**ಪಱಿಯಿಗೆ** – ಧ್ವಜ, ಬಾವುಟ (ಧನು ಕಾಮಂಗಿಕ್ಷುದಂಡಂ ಪಱಿಯಿಗೆ ಮಕರಂ ಬಾಣಸಂಘಾತಮಚ್ಚಂ ನನೆಯಂಬೀ ಚಿಹ್ನಮಿಲ್ಲೆಂಬನಿತೆ ಮನಸಿಜಾಕಾರಂ: **ಆದಿಪು,** ೩. ೯೧)

**ಪಱಿಯಿಸು** – [ಪ್ರಲಾಪಿಸು] ಶೋಕಿಸು (ನಿಚ್ಚಂ ನೆನೆವೋ ನೀನಾರ್ಗೆ ನಿನ್ನಂ ಪಱಿಯಿಸುವವರಾರ್ಗೆ ಏಕೆ ಶೋಕಿಪ್ಪೆ: **ಆದಿಪು,** ೩. ೫೫)

**ಪಱಿವ** – ಒಂದು ವಾದ್ಯವಿಶೇಷ (ಕಂಕರಿಯ ಸಿವಿಱ ಪೆಂಪಿನ ಝೆಂಕಟ ಬೊಂಬುಟಿಯ ಪಱಿವದ ಉಳಿಕೆಯ ಢಕ್ಕಾಸಂಕುಳದ ತಾಳದುಲಿ: **ಪುಷ್ಪದಂಪು,** ೧೨. ೨೭)

**ಪಱಿವಾಡ** – ಕುಗ್ರಾಮ (ಪಱಿವಾಡಯ್ದುನೆ ಬೇಡೆಯುಂ ಕುಡದ ನಾನೇನೆಂದು ಸಂಧಾನಮಂ ಗಟಿಯಿಪ್ಪೆಂ: **ಪಂಪಭಾ,** ೧೩. ೨೪)

**ಪಱಿವಾತು** – ವೇದ (ರವಿಚಂದ್ರರ್ ಗಾಲಿಗಳ್ ಸಾರಥಿ ಬಿದಿ ಪಱಿವಾತು ಅಶ್ವಂ ಉರ್ವಿತಳಂ ಭೂರಿವರಾಹಂ: **ಶಬರಶಂ,** ೨. ೧೨)

**ಪಱಿವಾನಸ** – ಹಿರಿಯ ವ್ಯಕ್ತಿ (ಕಳೆಯಲ್ಕಾಗದು ನರಪತಿಕುಳಚಳಬಳದಳದನುವನಱಿವ ಪಱಿವಾನಸನಂ: **ಶಬ್ದಮದ,** ೭೭ ಪ್ರ ೪)

**ಪಱಿವಾವಿ** – ಹಳೆಯ ಬಾವಿ (ಅರಸನಂ .. .. ನಾಡೆ ಕೆಸಱನೊಡೆಯ ಪಱಿವಾವಿಯ ತಡಿಯೊಳ್ ಇೞಿದು ಕೊಂದು: **ವಡ್ಡಾರಾ,** ಪು ೧೮೦, ಸಾ ೨೩)

**ಪಱಿವಾವಿಗೆ** – ಪಱಿವಾವಿ (ಕಾಡ ಪಱಿವಾವಿಗೆಗಳೊಳಂ .. .. ಅತಿರೌದ್ರಮಾದ ಪೇರಡವಿಯೊಳ್ ಬರ್ಪಾಗಳ್: **ಕಾದಂಬ,** ೮. ೦ ವ)

**ಪಱಿವಿಗೆ** – ಧ್ವಜ, ಬಾವುಟ (ಇಸೆ ಮಸಗಿ ಭೀಮಂ ಈರಯ್ದು ಶಿತಾಸ್ತ್ರದಿಂ ಉರುಳೆ ಸೂತಂ ಉಡಿಯೆ ರಥಂ ಕೀಲಿಸೆ ಕುದುರೆ ಮುಱಿಯೆ ಪಱಿವಿಗೆ ಮಸಕದಿಂ ಎಚ್ಚೆಚ್ಚಂ ಒಂದೆ ಸರಲೊಳ್ ನೊಸಲಂ: **ಪಂಪಭಾ,** ೧೦. ೯೯)

**ಪಱಿವಿಸು** – ಪಱಿಯಿಸು (ಪತ್ತಿ ಕೇಲಯನ ಕೊರಲಂ ಪಱಿವಿಸಿ ಕಪಿಂಜಲಂ ಬಾಯಟಿದು ಅಬ್ರಹ್ಮಣ್ಯಮೆಂದು ಬಿಡೆ ಪುಯ್ಯಲ್ಚಲ್; **ಕಾದಂಸಂ,** ೪. ೮೯)

**ಪಱಿವೆ** – ಹಳೆಯ ಸಂಬಂಧ (ದ್ವಾರದೊಳಿರ್ದು ಜನಾರ್ದನನ ಪಱಿವೆಯ ಕಳತೂರ್ಯ ಮಂಗಳಕಾರ್ಯದೊಳ್ ಕೂಸನಲಂಕರಿಸಲಟ್ಟಿದಂ: **ಕರ್ಣನೇಮಿ,** ೭. ೧೬೭ ವ)

**ಪಱಿವೇಟ** – ಹಳೆಯ ಪ್ರಣಯ (ಮಸೆವುದು ಮಾಸಲಿರ್ದ ಪಱಿವೇಟಮಂ ಇಚ್ಚೆಯ ಬಿಚ್ಚತಿಕ್ಕೆಯಂ ಪೊಸೆಯಿಪುದು ಒಳ್ಕಮಂ ನಡೆಪುತಿರ್ಪುದು ಧಾತುವಂ ಒಳ್ಪಿತೆಯ್ದೆ ಪಾಟಿಸುವುದು ಕೂಟದೊಳ್ ಕುಶಲನಪ್ಪುದು: **ಶಾಂತಿಪು,** ೮. ೯೧)

**ಪಱಿಸು** – ಹಳಸು, ನೀರಸವಾಗು (ಬಾಯ್ ಸವಿಗೆಟ್ಟ ಚುಂಬನಂ ಪಱಿಸಿದ ಮಚ್ಚುಮಗ್ಗಲಿಪ ನಾಣ್ಣುಡಿಯುಂ ಸತಿಗಾಗೆ: **ಸೂಕ್ತಿಸುಧಾ,** ೮. ೩೯೪)

**ಪಱಿಹ** – ಪಟಹ, ಒಂದು ವಾದ್ಯ (ಪಱಿಹಮಂ ಕೊಂಡು ಬಾಜಿಸುತಿರ್ದಂ: **ಹರಿವಂಶ,** ೫. ೧೨ ವ)

**ಪಟಿ** – ಒಂದು ಬಗೆಯ ವಸ್ತ್ರ (ಪಟಿ ಚಿತ್ರಾವಳಿ ಜೋನೆಗವಟಿಯಂ ದೇವಾಂಗಮೆಂಬ ವಸನಂಗಳಂ: **ಆದಿಪು,** ೫. ೩೪); ದೂಷಿಸು (ಪಟಿ–ನಿಂದಾಯಾಂ: **ಶಬ್ದಮದ, ಧಾ** ೯೨೯); ದೂಷಣೆ (ಹೀನಬಲನನಧಿಕಬಲಂ ತೊತ್ತಳದುಟಿದನೆಂಬ ಲೋಕದ ಪಟಿ ಪೊರ್ದದೆ ಮಾಣೆ: **ಆದಿಪು,** ೧೪. ೧೦೨); ನಾಯಿಯನ್ನು ಓಡಿಸುವುದು (ಅಂತು ಪರಿದು ರಾಜನ್ಯಕಮಂ ಪಟಿಯಂತೆ ಪಲಾಯನಶೀಲಮ್ಮಾಡಿ ಹೇಮಪ್ರಭನಂ ಮುಟ್ಟೆವಂದು: **ಪಂಪರಾ,** ೩. ೫೮ ವ); ಲೋಹದ ಗಟ್ಟಿ (ನಾಲ್ಕರ್ಥಕ್ಕೆ: ಪಟಿಯೆಂದು ವಸ್ತ್ರವಿಶೇಷಮುಂ ದೂಷಣಮುಂ ನಾಯಂ ಸೋವುದುಂ ಲೋಹದ ಘಟ್ಟಿಯುಮಕ್ಕುಂ: **ಶಬ್ದಮದ,** ೩೩ ವೃತ್ತಿ ೧೭೯)

**ಪಟಿಕೆಯ್** – ನಿಂದನೆ ಮಾಡು, ಅವಮಾನಿಸು (ಮತ್ತಮೊಂದೆಡೆಯೊಳ್ ಪಟಿಕೆಯ್ದು ಬಂದು ನಲ್ಲಳ ಮುಳಿಸನೊಳಕೊಂಡು ಮುಖಮಂ ಮುಗುಳ್ನಗೆವೆರಸು ನುಡಿದು ಗೆಂಟಾದಂ: **ಆದಿಪು,** ೧೨. ೨೮ ವ)

**ಪಟಿಗಟಿ** – ಅಪಪ್ರಥೆಯನ್ನು ಕಳೆದುಕೊ (ಅಹಮಿಂದ್ರರ್ .. .. ಪಾಪಹರಂಗೆಱಗುವರೆನಿಸಿದ ಮಹಿಮೆಯ ಪಟಿಗಟಿದ ಪರಮಕೋಟಿಯೊಳಿರ್ಪರ್: **ಶಾಂತಿಪು,** ೯. ೧೨೪)

**ಪಟಿಗಾಳೆಗ** – ಬೈಗುಳದ [ಮಾತಿನ] ಯುದ್ಧ (ಎಂದು ಕಿಱಿದಾನುಂ ಬೇಗಂ ಅಱೆಮರುಳಾದಂತಾ ಲತೆಯೊಳ್ ಪಟಿಗಾಳೆಗಂಗಾದಿ ಬರೆವರೆ: **ಪಂಪಭಾ,** ೫. ೧೨ ವ)

**ಪಟಿಯತನಂ** – ಬಟ್ಟೆಯ ಕೆಲಸ (ಮಡಿವಳ್ಳನ ಪಟಿಯತನಮಂ ಪೋಲ್ತು ವಿಶದವಸನಾಂಗಕುಜಂ: **ಆದಿಪು,** ೫. ೩೪)

**ಪಟಿವಾವುಗೆ**– [ಪ್ರತಿಪಾದುಕಾ] ಮಂಚವಿರಿಸುವ ವೇದಿಕೆ (ಪಳಿಕಿನ ಪಟಿವಾವುಗೆಯಿಂ ತೊಳಗುವ ಹಂಸೋಪಧಾನ ಕಲ್ಪಿತ ತಲ್ಪಸ್ಥಳದಿಂ ರಂಜಿಪ ರನ್ನದ ಸೆಳೆಮಂಚದ ಮೇಲೆ ಲೀಲೆಯಿಂ ಕುಳ್ಳಿರ್ದಳ್: **ಪಂಪರಾ,** ೩. ೭೫)

**ಪೞು** – ಕಾಡು (ಸುೞಿಯದು ಗಾಳಿ ಮೃಗಂ ಕೆಯ್ವೞಿಗಳ ಮೇತದೊಳೆ ತಣಿದಪುವು ಪಂದಿಗಳುಂ ಪೞುವಿರ್ ಇಕ್ಕಿದುವು ಆದಂ ಪೞು ಪರಿದಾಡಲ್ ಕರಂ ಬೆಡಂಗವನಿಪತೀ: **ಪಂಪಭಾ,** ೫. ೩೮)

**ಪೞುಗೞೆ** – ಮಿತಿ ಮೀರು (ಅೞಲಿರದಗ್ರಜಾತನ ವಿಯೋಗದೊಳಾಗೆ ಮನಕ್ಕೆ ಮೊಕ್ಕಳಂ ಪೞಿಯಗೞೆದಿರ್ದ ತನ್ನ ಸಿರಿಯಂ ಮರುಭೂತಿ ಬಿಸುಟ್ಟು: **ಪಾರ್ಶ್ವನಾಪು,** ೪. ೫೦)

**ಪೞುವಗೆ** – [ಪೞು+ಬಗೆ] ಕಾಡು ಬುದ್ಧಿ, ದುಷ್ಟ ಸ್ವಭಾವ (ಆನರಸುಗೆಯ್ವ ಪೞುವಗೆಯನದಂ ಪರಿಹರಿಸಿದೆಂ: **ಪಂಪಭಾ,** ೧೨. ೧೨೯)

**ಪೞುವಟೆ** – [ಪೞುವ+ಬಟೆ] ಕಾಡು ದಾರಿ (ಮತ್ತಮೊಂದೆಡೆಯೊಳ್ ಪೞುವಟೆಯ ಬೇಟದ ತೋಟಿಯಂ ತೊಡರ್ದಟ್ಟುವೆತ್ತ ಪೊಲವುಲ್ಲೆ ಅಳ್ಳಿವಿಳ್ಳಿಯಾದ ಮಾತಂ: **ಆದಿಪು,** ೧೨. ೨೮ ವ)

**ಪೞಿವುಣ್** – ಹಳೆಯ ಹುಣ್ಣು, ಹಿಂದಿನ ನೋವು (ಪವಿಯ ಮುಖಘಾತದಿಂ ಡೋಣಿವೋದ ಪೞಿವುಣ್ಗೆ ಜಿಗುಳೆಯಂ ಬಿಟ್ಟವೊಲಿಪ್ಪವುದಾರ ಗಹ್ವರಾಂತರ್ನಿವಿಷ್ಟಜರದಜಗರಂಗಳಾ ಗಿರಿವರದೊಳ್: **ಸೂಕ್ತಿಸುಧಾ,** ೩. ೮೦)

**ಪೞ್ಕೆ** – ಹಾಸಿಗೆ, ಶಯನಸ್ಥಾನ (ತನ್ನ ಪೆಂಡತಿಯ ಕರೆದು ಈ ತಪೋಧನಂಗೆ ನಿವಾತಮಪ್ಪ ಎಡೆಯೊಳ್ ಪೞ್ಕೆಗೆ ಎಡೆಮಾಡಿ ಕುಡು ಎಂದು ಕರೆದು: **ಪಂಚತಂತ್ರ,** ೧೨೭ ವ)

**ಪೞ್ಕೆತೞ್ಕೈಸು** – ಬರಸೆಳೆದು ಆಲಂಗಿಸು (ಒಂದರ್ಥಕ್ಕೆ ಪೞ್ಕೆತೞ್ಕೈಸಿದಂ ತಡಕೈಯಂ ಮಾಡಿದನೆಂಬರ್ಥಂ: **ಶಬ್ದಮದ,** ೩೩ ವೃತ್ತಿ, ೭೯)

**ಪೞ್ಕೆವನೆ** – ಮಲಗುವ ಮನೆ (ಬೆಳಗಪ್ಪ ಸಮಯದೆ ಎಟ್ಟು ಒಯ್ಯನೆ ಪೞ್ಕೆವನೆಯಂ ಪೊಱಮಟ್ಟು: **ಉದ್ಭಟಕಾ,** ೧೦. ೧೩೬ ವ)

**ಪೞ್ಕೆವೆಟ್ಟ** – [ಸೂರ್ಯ] ಮಲಗುವ ಬೆಟ್ಟ, ಪಶ್ಚಿಮ (ಅನುಕ್ರಮದಿಂ ತಣ್ಬಿಸಿಲಾಯ್ತನಂತರಂ ಪೊಂಬಿಸಿಲಾದುದು ಪೊರ್ದೆ ಪೞ್ಕೆವೆಟ್ಟಮಂ ಅರ್ಕಂ: **ಪಂಪರಾ,** ೧೧. ೧೭೭)

**ಪೞ್ತೆ** – ಹತ್ತಿ (ಬಂಡಿಗಳೊಳ್ ಪೞ್ತೆಯುಂ ಧಾನ್ಯಮುಂ ತೀವಿಕೊಂಡು ಪೊೞಲ್ಗೆ ಮಾಱಲೆಂದು ಪೋಪನ್ನೆಗಂ: **ವಡ್ಡಾರಾ,** ಪು ೭೬, ಸಾ ೧೧)

**ಪಾಂಗೞಿ** – [ಪಾಂಗು+ಅೞಿ] ಹದ ತಿಳಿ (ಪಾಂಗೞಿ– ಪ್ರಕಾರಗಮನೇ: **ಶಬ್ದಮದ, ಧಾ** ೮೮೧)

**ಪಾಂಗೞೆ** – ಹದ ತಪ್ಪು, ಕ್ರಮ ತಪ್ಪು (ಘಳಿಲನೆ ನಡೆಯೆಂದು ಜಡಿದು ಸಾರಥಿಯಂ ಪಾಂಗೞೆದಂ ನಿಲಲೀಯದೆ ಅಲ್ಲಿಂದೆೞೆದುಯ್ವಂತುಯ್ದಳಾತ್ಮವರದನಂ ನರನಂ: **ಕಾವ್ಯಾವಲೋ,** ೨೬)

**ಪಾಂಗು** – ಕ್ರಮ (ನಿನಗೊರ್ವಂಗಲ್ಲವವಸ್ಥಾಂತರಂ ಮರಜನಕ್ಕೆಲ್ಲಂ ಈ ಪಾಂಗೆ: **ಆದಿಪು,** ೩. ೬); ರೀತಿ (ಮನಮೆಲ್ಲಮಂ ಕವರ್ದಪಂ ತನುವಂ ಬಡಮಾಡಿ ಕಡಿ ದಂಡಿಸಿದಪಂ ಅಂಗಜನ್ಮನ ಕವರ್ತೆಯ ದಂಡದ ಪಾಂಗು ಇದೆಂತುಟೋ: **ಪಂಪಭಾ,** ೫. ೧೩); ಉಪಾಯ (ಪಿರಿಯಮಿೞಂಗಳ್ ದೊರೆಕೊಳ್ಳದೋಡೀ ಮಿೞಂಗಳನಾವ ಪಾಂಗಿನೊಳ್ ನಾಂ ತಿಂಬೆನೆಂದು ನೀರ ತಡಿಯೊಳ್ ಮೋನಂಗೊಂಡು ಜಾನಿಸುತ್ತಿರೆ: **ಪಂಚತಂತ್ರ,** ೧೩೮ ವ); ತಲೆಯ ಪಾಗು (ಪೆಗಲ್ವರೆವಿೞಿದಾ ತುಱುಂಬರೆದ ಟೊಪ್ಪಿಗೆ ಕಟ್ಟಿದ ಪಾಂಗು ಪೊಸಿ ಸೂಗಿರಿಸಿದ ಗಡ್ಡಮೀಸೆ ಕರದೊಳ್ ಸಲೆ ಚಿತ್ರಿತ ವೇತ್ರದಂಡಮೊಪ್ಪಿರೆ ಸಹವಾಸಿಗಳ್ ತಳರ್ದಱು: **ಶಾಂತೀಶ್ವಪು,** ೧೫. ೮೯)

**ಪಾಂಗುವೆಱು** – ಕ್ರಮಬದ್ಧಗೊಳ್ಳು (ಅಸದೃಶಮೆನೆ ಮುನ್ನಂ ಶಬ್ದಶಾಸ್ತ್ರಾದಿ ವಿದ್ಯಾವಿಸರಮನುಚಿತಾಳಾಪಂಗಳಿಂ ಪಾಂಗುವೆತ್ತೋದಿಸಿದೆಂ: **ಸುಕುಮಾಚ,** ೭. ४೭)

**ಪಾಂಚಜನ್ಯ** – ಪಂಚಜನ ಎಂಬ ರಾಕ್ಷಸನ ಮೂಳೆಯಿಂದ ಮಾಡಿದ ಕೃಷ್ಣನ ಶಂಖ (ಇಕ್ಕಿ ಪಂಚಜನನಂತತ್ಪಂಚನಾಸ್ಥಿಜನಿತಮಂ ಪಾಂಚಜನ್ಯಶಂಖಮಂ ಉಪೇಂದ್ರನೀಟ್ಕೊಂಡೊಲವಿಂ: **ಜಗನ್ನಾವಿ,** ೭. ೨೩); [ಜೈನ] ಮಧುರಾನಗರದ ಚೈತ್ಯಾಲಯದಲ್ಲಿ ಹುಟ್ಟಿದ ಶಖಂ, ಕೃಷ್ಣ ಇದನ್ನು ವಶಪಡಿಸಿಕೊಳ್ಳುತ್ತಾನೆ (ಮಲ್ಲೀಮುಕುಳಮನೆನಿಸೆ ನಾಸಾಗ್ರದೊಳ್ ಪಾಂಚಜನ್ಯಂ: **ನೇಮಿನಾಪು,** ೧. ೨)

**ಪಾಂಚಾಲರಾಜತನೂಜೆ** – ಪಾಂಚಾಲದೇಶದ ರಾಜಕುವರಿ (ಪಾಂಚಾಲರಾಜತನೂಜೆ ಪಗೆವರ ಕಟುವಟ್ಟಿರ್ದ ಏಳಿದಿಕ್ಕೆಗೆ ಸಂತಸಂಬಟ್ಟು ಸೈರಿಸಲಾಱದೆ ಇಂತೆಂದಳ್: **ಪಂಪಭಾ,** ೭. ೩೮ ವ)

**ಪಾಂಚಾಲಿಕೆ** – ಬೊಂಬೆ, ಪ್ರತಿಮೆ (ತಾನೆ ಪೂಗಳ ಪಾಂಚಾಲಿಕೆಯಂತೆ .. .. ನಿರ್ಮಳ ಸ್ರಗ್ಜಾಲಮನಾಂತು ಕಾಮಿನಿಯೊರ್ವಳ್: **ಉದ್ಭಟಕಾ,** ೧. ೬४)

**ಪಾಂಚಾಳಿ** – ಪಾಂಚಾಲದೇಶದವಳು, ದ್ರೌಪದಿ (ಒತ್ತಂಬದಿಂದ ಒಳಗಂ ಪೊಕ್ಕು ಪಾಂಚಾಳಿಯಂ ಕಣ್ಗಿಡೆ ಜಡಿದು ಮುಡಿಯ ಪಿಡಿದು ತನ್ಮಧ್ಯದಿಂ ಸುಯೋಧನನ ಸಭಾಮಧ್ಯಕ್ಕೆ ತಂದು: **ಪಂಪಭಾ,** ೭. ४ ವ)

**ಪಾಂಚಾಳಿಕಾ** – ಬೊಂಬೆ (ಪಾಂಚಾಳಿಕಾಸಂಚಯದೊಳ್ ಅತುಳ ನೀಳಾಂಶುವಿಂದಾದ ಬಲ್ಕಟ್ಟಲೆಯೊಳ್: **ಲೀಲಾವತಿ,** ೭. ೮೦)

**ಪಾಂಡಿತ್ಯ** – ಆಳವಾದ ಅರಿವು (ದಶದಿಶೆಗಳೊಲೆಲ್ಲಂ ನಿನ್ನ ಪಾಂಡಿತ್ಯದ ಯಶಮಂ ಪಸರಿಸಿ: **ವಡ್ಡಾರಾ,** ಪು. ೭४, ಸಾ. ೧೫)

**ಪಾಂಡಿಮ** – ಬಿಳುಪಾದ (ಚಂದನಾಪಾಂಡಿಮ ಗಾತ್ರಂ ಗ್ರೀಷ್ಮಸಾಯಂಸಮಯದೊಳೆಸೆದತ್ತಂದು ಬಾಲಾಕಲಾಪಂ: **ಚಂದ್ರಪ್ರಪು,** ೯. ೮४)

**ಪಾಂಡು** – ಬಿಳಿಯ ಬಣ್ಣ (ಶರತ್ ಜ್ಯೋತ್ಸ್ನಾ ಪಾಂಡುಚ್ಛತ್ರರತ್ನಂಗಳಿಂ ಅಱಿಪೆ ನಿಜೈಶ್ವರ್ಯಮಂ ದಿವ್ಯಭಾಷಾವ್ಯಾಪಾರೋದಾರಂ ಆದಂ ಕುಡುಗೆ ಎಮಗೆ ಸುಖಾವಾಪ್ತಿಯಂ ಮಲ್ಲಿನಾಥಂ: **ಮಲ್ಲಿನಾಪು,** ೧. ೧); ಪಾಂಡವರ ತಂದೆ

**ಪಾಂಡುಕ** – [ಜೈನ] ಸುಮೇರು ಪರ್ವತದ ಮೇಲಿನ ನಾಲ್ಕು ವನಗಳಲ್ಲಿ ಒಂದು [ಉಳಿದವು: ಭದ್ರಪಾಲ, ನಂದನ, ಸೌಮನಸ] (ಮಂದರಶೈಲಮಂ ದಿವಿಜನಾಯಕನೆಯ್ತರೆ ಭದ್ರಶಾಲದಿಂ ಸಂಧಿಸಿ ನಿಂದ ನಂದನದಿಂದೊಪ್ಪುವ ಸೌಮನಸಾಖ್ಯದಿಂ ಮನೋನಂದನಮಪ್ಪ ಪಾಂಡುಕದಿನಾ ಗಿರಿರಾಜವಿಲಾಸಂ ಅಟ್ಟಿಯಂ ತಂದುದು ಕಾಣ್ಕೆಯಂ ತನಗೆ ತರ್ಪವೊಲ್ ಅಂತದನಿಂದ್ರನೆಯ್ದಿದಂ: **ಶಾಂತಿಪು,** ೫. ೨); ಇದರಲ್ಲಿ ತೀರ್ಥಂಕರನ ಜನ್ಮಾಭಿಷೇಕಕಲ್ಯಾಣಕ್ಕಾಗಿ ಮೀಸಲಾದ ನಾಲ್ಕು ಪೀಠಗಳಿವೆ; ಅದರಲ್ಲಿನ ಮೊದಲನೆಯ ಪೀಠ (ಮಂದರಮನ್ಯೆದಿ ಪಾಂಡುಕ ಶಿಲಾತಳಮಂ ತ್ರಿಪ್ರದಕ್ಷಿಣಂಗೈದು: **ನೇಮಿನಾಪು,** ೩. ೧೮ ವ); ಪಾಂಡುಕ ಎಂಬುದು ನವನಿಧಿಗಳಲ್ಲಿ ಒಂದು (ಹದಿನೆಂಟು ಪ್ರಕಾರದ

ಧಾನ್ಯಗಳನ್ನು ಒದಗಿಸುವ ನಿಧಿ] (ಶ್ರೀಗೃಹದೊಳ್ ಪುಟ್ಟಿದ ಕಾಳ ಮಹಾಕಾಳ ನೈಸರ್ಪ ಪಾಂಡುಕ ಪದ್ಮ ಪಿಂಗಳ ಮಾಣವಕ ಶಂಖ ಸರ್ವರತ್ನಂಗಳೆಂಬ ನವನಿಧಿಗಳುಂ: **ಆದಿಪು,** ೧೫. ೩ ವ), ನೋಡಿ, 'ನವನಿಧಿ'

**ಪಾಂಡುಕಂಬಳ** – ಬಿಳಿಯ ಕಂಬಳಿ (ಪಾಂಡುಕಂಬಳಮಿದು ಎಂಬವೊಲಾದುದು ಮಂಜಿನುರ್ವರಂ: **ಪುಷ್ಪದಂಪು,** ೬. ೩೮); [ಜೈನ] ಪಾಂಡುಕವನದ ನಾಲ್ಕು ಪೀಠಗಳಲ್ಲಿ ಒಂದು (ವಿಳಸತ್ಪಾಂಡುಕ ಪಾಂಡುಕಂಬಳ ಶಿಲಾಪಟ್ಟಂ ಶಿಲಾಪಟ್ಟಕಂಬಳ ಸತ್ಕಾಂತ್ಯತಿರತ್ನಸಂಚಳ ಶಿಲಾಪಟ್ಟಂಗಳಂ ನಾಲ್ಕು ಕೋಣ್ಗಳೊಳೊಪ್ಪಿರ್ಪುವು .. .. ಜಿನವ್ರಜಕ್ಕೆ ಸವನಸ್ಥಾನಂಗಳೀ ಶೈಳದೊಳ್: **ಪುಷ್ಪದಂಪು,** ೧೦. ೫೮)

**ಪಾಂಡುಗಾತ್ರ** – ಬಿಳಿಯ ಮೈಬಣ್ಣದವನು, ನಾರದ (ಪಾಂಡುಗಾತ್ರಂ ತಳರ್ದನಘಲತಾದಾತ್ರನಾ ಬ್ರಹ್ಮಪುತ್ರಂ: **ಜಗನ್ನಾವಿ,** ೨. ೪೪)

**ಪಾಂಡುಚ್ಛತ್ರ** – ಬೆಳ್ಗೊಡೆ (ಜಾತಿವಾಜಿಸಮಾಜಂ ಮದವದ್ಗಜೇಂದ್ರಘಟೆ ಪಾಂಡುಚ್ಛತ್ರಷಂಡಂ ನಿಗುಂಬಿಸೆ ಪುತ್ರಂಗಿದಿರ್ವಂದರಂದರಸಿಯುಂ ಭೂಪಾಲನುಂ: **ಚಂದ್ರಪ್ರಪು,** ೬. ೮೯)

**ಪಾಂಡುಭೂಮಿ** – ಬಿಳಿಯ ಮಣ್ಣು ಬೆರೆತ ಭೂಮಿ (ಬೆಳ್ ಮಣ್ ಬೆರೆಸಿದ ಮಹೀಪ್ರದೇಶಂ ನಿರಂತರಂ ಪಾಂಡುಭೂಮಿ: **ಅಭಿಧಾವ,** ೧. ೫. ೪)

**ಪಾಂಡುರ** – ಬಿಳಿದಾದ (ಕುವಲಯಪಾಂಡುರಂ ಕನಕಷಂಡವಿರಾಜಿ ಕೇಕಿತಾಂಡವರಮಣೀಯ ಕಲ್ಪಲತಿಕಾಂ: **ಆದಿಪು,** ೧೩. ೭೦); ತೊನ್ನು ರೋಗ (ಪಾಂಡುರ ಕುಷ್ಠಂ ಶ್ವಿತ್ರಂ ಕಂಡೂ ಕಂಡೂತಿ ಖರ್ಜುಗಳ್ ತಾನಕ್ಕುಂ: **ಅಭಿಧಾವ,** ೧. ೧೨. ೩೬)

**ಪಾಂಡುರತೆ** – ಬಿಳಿಪು (ಬೆಳಗಿನ ಬೆಟ್ಟಮಂ ಪಾಡುರತೆಯ ಪಿಂಡಮಂ ಪುಣ್ಯದ ಪುಂಜಮಂ: **ಲೀಲಾವತಿ,** ೮. ೯೬ ವ)

**ಪಾಂಡುರೋಗ** – ಕಾಮಾಲೆರೋಗ (ಅನಲಂ .. .. ಪಾಂಡುರೋಗದೆ ನಮೆದು ಅರ್ಜುನನೀಯಲುಂಡು ಖಾಂಡವವಮಂ ನೀರೋಗಿಯಾದನೆಂಬರ್ ಗೊರವರ್: **ಸಮಯಪ,** ೧೦. ೭೬)

**ಪಾಂಥ** – ಹಾದಿಹೋಕ (ಕೊಳದಿಂ ಮಜ್ಜನಕಾರ್ಯಮಚ್ಚನನೆಯಿಂ ಭೂಷಾವಿಧೇಯಂ ಫಲಾವಳಿಯಿಂ ಭೋಜನಕೃತ್ಯಂ.. ..ತೀರೆ ಮೆಚ್ಚಿ ಸುಚಿವರ್ ಪಾಂಥರ್ ವನೋಪಾಂತದೊಳ್: **ಅಜಿತಪು,** ೨. ೧೫)

**ಪಾಂಬ** – ಪಾಣ್ಬ, ಹಾದರಿಗ (ತಮ್ಮ ದೋಷಮಂ ತಾವೆಣಿಸದೆ ಕಳ್ಳರ್ ಕಳ್ಳರಂ ಪಾಂಬರ್ ಪಾಂಬರಂ ಮುನಿದು ಮೂದಲಿಸುವಂತೆ: **ವರ್ಧಮಾಪು,** ೧೧. ೧೯ ವ)

**ಪಾಂಶುಕೇಳಿ** – ಧೂಳಾಟ (ಅನುಪಾಂಶುಕೇಳಿ ಸದ್ಗುರುಜನಕ್ಕೆ ಸಂತಸಮನೀಯೆ ಬಾಳಕನೆಸೆದಂ: **ಪುಷ್ಪದಂಪು,** ೧೨. ೬೫)

**ಪಾಂಸು** – ಧೂಳು (ವೀರಸೇನ ಮುನೀಂದ್ರ ಖ್ಯಾತರ ಸಮಂತಭದ್ರ ಖ್ಯಾತರ ಪದಪಾಂಸು ಕಿಡಿಸುಗುಂ ಅಘಪಾಂಸುಗಳಂ; **ಪಂಪರಾ,** ೧. ೧೦); ಹೂವಿನ ಪರಾಗ (ಪುಷ್ಪಪಾಂಸುಪಟಳದೊಡನೆ ಪುಷ್ಪಶರನಾಜ್ಞೆ ದೆಸೆದೆಸೆಗೆ ಪಸರಿಸೆಯುಂ: **ಮಲ್ಲಿನಾಪು,** ೫. ೨೬ ವ)

**ಪಾಂಸುಳ** – ಧೂಳಿಯಿಂದ ಕೂಡಿದ (ಸಮೀರಂ ಉದಾರಕದಂಬಕೇತಕೀಪ್ರಸರರಜ ಸ್ವರಪ್ರಕಟಪ್ರಾಂಸುಳಂ ಆದುದು ಮೇಘಕಾಲದೊಳ್: **ಪಂಪಭಾ,** ೭. ೨೨)

**ಪಾಂಸುಳೆ** – ಹಾದರಗಿತ್ತಿ (ಬಳಸಿದುದರ್ಕವಾಜಿಖುರಘಟ್ಟಿತಮದ ಅಪರಾದ್ರಿಯಿಂದಂ ಅಚ್ಚಳಿಸಿದ ಧಾತುರೇಣುವೆನೆ ಚಕ್ರಯುಗಂಗಳ ಅಗಲ್ಕೆಗಿಚ್ಚು ಪಾಂಸುಳೆಯರ ರಾಗದೇಳ್ಗೆ ದೆಸೆವೆಣ್ಗಳ ರತ್ನವಿಭೂಷಣಾಂಶು ಕುಂಕುಮೋದಕದ ಉತ್ಪಳಿನಿಯ ಸಿಂಪಿಣಿ ಸಂಜೆಯ ಕೆಂಪು ಲೋಕಮಂ: **ಚಂದ್ರಪ್ರಪು,** ೮. ೪)

**ಪಾಕ** – ಎಳೆಯ (ಪಾಕಕುಶಕಾಶವಿಶದಂ .. .. ಕೃಷ್ಣಲಾಮರೀ ಬಿಂಬಾಕೀರ್ಣಂ ತನ್ನದೀತಟಂ ಕಡುರಯ್ಯಂ: **ಲೀಲಾವತಿ,** ೫. ೮೦)

**ಪಾಕಕುಶ** – ಎಳೆಯ ಗರಿಕೆ (ಪಾಕಕುಶಕಾಶವಿದಂ ಕಾಕಾಂದೋಳಾತ್ಮಗುಪ್ತಿ ಅಲಾಬೂ.. .. ಆಕೀರ್ಣಂ ತನ್ನದೀ ತಟಂ ಕಡು ರಯ್ಯಂ: **ಲೀಲಾವತಿ,** ೫. ೮೦)

**ಪಾಕಶಾಸನ** – ಪಾಕನೆಂಬ ರಾಕ್ಷಸನನ್ನು ನಿಗ್ರಹಿಸಿದವನು, ಇಂದ್ರ (ಕಾಂಚನರೂಪ್ಯಂಗಳಂ ಕುಂಭದಿಂ ಮೊಗೆದು ಜೈಜೈ ಎಂಬಿನಂ ಪಾಕಶಾಸನ ಹಸ್ತಾಗ್ರದೊಳೆತ್ತಿ ತಂದು ಕುಡೆ: **ಸುಕುಮಾಚ,** ೧. ೬೬)

**ಪಾಕಾಪಹ** – ಪಾಕರಿಪು, ಇಂದ್ರ (ಕುಳಭೂಭೃತ್ ಪರಿಪಂಥಿ ಪಾವಕಮುಖಂ ಪಾಕಾಪಹಂ .. .. ಸಂಕ್ರಂದನಂ: **ರಾಜಶೇವಿ,** ೩. ೪)

**ಪಾಗ** – ಹಾಗ, ಒಂದು ಚಿಕ್ಕ ಬೆಲೆಯ ನಾಣ್ಯ (ಪಾಗಕ್ಕೆ ಕೊಂಡು ದರ್ಭೆಯಂ ಆಗಳುಂ ಅದನಿಟ್ಟುಕೊಂಡು ಬೆರಲೊಳ್ .. .. ಇರ್ಪರ್: **ಸಮಯಪ,** ೧೪. ೩೦)

**ಪಾಗಡೆ** – ಪಾಡಗ, ಕಾಲುಕಡಗ (ಬಾಗಿರೆ ಪತಿಯಳಕಮನಿಂಬಾಗಿರೆ ಮುಳಿಸಾಱುವನ್ನೆಗಂ ಸಿಲ್ಕಿಸುಗೀ ಪಾಗಡೆಯೆಂದೊದವಿರೆ ಪೆಂಪಾಗಡೆ ಪದಪದ್ಮದೊಳ್ ಪೆಱಳ್ ಪದಮಿಟ್ಟಳ್: **ಲೀಲಾವತಿ,** ೧೨. ೭೮)

**ಪಾಗದ** – ಪ್ರಾಕೃತಭಾಷೆ (ಸಕ್ಕದಮುಂ ಪಾಗದಮುಂ ಅದಕ್ಕುಂ ಬಗೆದಂತೆ ಸಮಱಿ ಪೇೞಲ್: **ಕವಿರಾಮಾ,** ೧. ೪೧)

**ಪಾಗಲ್** – ಹಾಗಲ ಕಾಯಿ, ಬಳ್ಳಿ (ಸಾಗರಮೊಂದು ಕಂಕಣದಿನುರ್ವರೆ ಕಾವಲಿಯಿಂ ಕುಳಾದ್ರಿಗಳ್ ಪಾಗಲ ಕಾಯ್ಗಳಿಂ .. .. ಕರಂ ಕಿಱಿಯವಾದುವು ಕಣ್ಗೆ ಗುಣಾವಲೋಕನಾ: **ನೇಮಿನಾಪು,** ೬. ೪); ಪ್ರಾಕಾರ (ನಿರ್ಮಲಹರ್ಮ್ಯಂಗಳನೇಱಿ ಸೌಧಶಿಖರಪ್ರಾಗ್ಭಾಗಮಂ ಪತ್ತಿ ಪಾಗಲನಾಶ್ರಯಿಸಿ: **ಪುಷ್ಪದಂಪು,** ೮. ೪೭)

**ಪಾಗುಡ** – ಪಾವುಡ, ಉಡುಗೊರೆ ವಸ್ತ್ರ (ಪೆರ್ಗ್ಗಡೆಯ ಕೈಯೊಳ್ ಮದಾಂಧಗಂಧಹಸ್ತಿಯಂ ಗಂಧರಾಜನ್ಪತಿಗೆ ಪಾಗುಡಂ ಅಟ್ಟಿದೊಡೆ: **ವಡ್ಡಾರಾ,** ಪು ೩೪, ಸಾ ೪)

**ಪಾಟ** – ಹಾಡಿಕೆ (ಪಾಟಂ ಕಾಮುಕ ಗಣಮೃಗಕೋಟಿಗೆ ಮನಸಿಜನ ಗೋರಿಗಾಡುವ ಪಾಟಂ: **ಅಜಿತಪು,** ೫. ೪೪); ಪಾಠ, ಪಠ್ಯವಿಷಯ

**ಪಾಟಕಾಱ**– ಹೊಗಳುಭಟ (ಬಿರುದಂಕದ ಕೆಸಱಂಕದ ಪರಿಕಾಱರ ಪಾಟಕಾಱರರಸಾಳ್ಗಳ್: **ವರ್ಧಮಾಪು,** ೩. ೫೫)

**ಪಾಟಚ್ಚರ** – ಬಟ್ಟೆಗಳ ಕಳ್ಳ (ನಿಚ್ಚಲಿ ಕಾರಿರುಳೊಳ್ ಪೊಱಪಚ್ಚಮಂ ಉಟ್ಟಿರ್ದು ಇಱುಂಕಿ ಕಕ್ಷದೊಳ್ ಆ ಪಾಟಚ್ಚರ ಭಯದಿಂದುಟ್ಟು ಪಟಚ್ಚರಮಂ ಮನೆಗೆ ವಂದು ನಿಂದು ಅಂಗಣದೊಳ್: **ಶಾಂತಿಪು,** ೬. ೬೫);

**ಪಾಟನ** – ಸೀಳುವುದು (ವರಕರಿಕುಂಭಪಾಟನ ಪಟಿಷ್ಠಕಠೋರನಖಪ್ರಹಾರಭೇದನ ಗಳಿತಾಸ್ತ್ರರಕ್ತ ನವಮೌಕ್ತಿಕ ವಿಳಾಸ ಭಾಸುರಾನನಂ: **ಪಂಪಭಾ,** ೧೩. ೫೦)

**ಪಾಟಲ** – ತಿಳಿಗೆಂಪು ಬಣ್ಣದ (ಸ್ಥಿರಬದ್ಧಮತ್ಸರರ್ ಭೀಕರಬದ್ಧಭ್ರುಕುಟಿಘಟಿತರ್ ಅದ್ಭುತರ್ ಅಟ್ಟಾಸುರರ್ ಅಧಿಕಕೋಪ ಪಾಟಲ ಪರುಷೇಕ್ಷಣರ್ ಎನಿಸಿ ದೃಷ್ಟಿಯುದ್ಧಂಗೆಯ್ದರ್: **ಗದಾಯು,** ೮. ೨)

**ಪಾಟಲೀಪಾಟಲದಶನವಸನೆ** – ಪಾದರಿ ಹೂವಿನಂತೆ ನಸುಗೆಂಪಾದ ತುಟಿಯವಳು (ಎನೆ ಮತ್ತೊರ್ವಳ್ ಸುರಭಿ ಪಾಟಳೀಪಾಟಲದಶನವಸನೆ: **ಆದಿಪು,** ೧೧. ೧೧೪ ವ)

**ಪಾಟವ** – ತೀಕ್ಷ್ಣತೆ (ಭರದ ಜವ್ವನದ ಸುಖಪಾಟವದ ಕುಱುಪನೀಕೆಯೊಳ್ ಕಾಣಲಾದುದು: **ಅನಂತಪು,** ೮. ೯ ವ)

**ಪಾಟಳ** – ಪಾದರಿ ಹೂವು (ವಕುಳ ಪಾಟಳ ಅಶ್ವತ್ಥವ್ರಾತಂ ಲಿಕುಚ ನಾಳಿಕೇರದ್ರುಮಜಾತಂ: **ಸುಕುಮಾಚ,** ೧೦. ೫೬)

**ಪಾಟಳೀ** – ಪಾದರಿ ಗಿಡ, ಹೂ (ಪೂಗಳ ಕಂಪಿನೊಳೇಂ ಪೊಗಟಿ ಪಾಟಳೀಪರಿಮಳಂ: **ಆದಿಪು,** ೧೧. ೧೧೫)

**ಪಾಟಿಗಾಣ್** – [ಪಾಟಿ+ಕಾಣ್] ಸಮವೆಂದು ತಿಳಿ (ಅದಿರದೆ ವೀರವೈರಿಭಟರಂ ಘಟಕೋಟಿಗೆ ಪಾಟಿಗಂಡು .. .. ಘನಕಪಿತ್ಥಮನಾ ಬನದೊಳ್ ಕಡಂಗಿ ಕಿಟ್ಟಿದಟದು ಪೋದುದೇ ನಿನಗಮೀ ತೆಱದಿಂ ಕೆಡೆದಂತುಟಾದುದೇ: **ಆಚವರ್ಧ,** ೩. ೧೫)

**ಪಾಟಿತ** – ಬಿರುಕುಬಿಟ್ಟ, ಸೀಳಲ್ಪಟ್ಟ (ಕೂರಿಸೆ ಗುರುಶುಶ್ರೂಷೆಯೊಳ್ ಆ ರಾಮನಂ ಉಗ್ರ ಪರಶು ಪಾಟಿತರಿಪುವಂಶಾರಾಮನಂ ಇಷುವಿದ್ಯಾ ಪಾರಗನೆನಿಸಿದುದು ಬಲ್ಮೆ ವೈಕರ್ತನನಾ: **ಪಂಪಭಾ,** ೧. ೧೦೪)

**ಪಾಟಿದೋಱು** – ಸಮಾನವಾಗಿ ಭಾವಿಸು (ಈಟ್ಟುಳಿಗೊಂಡ ಕನ್ಯಕಾಕುಳದೊಳಗೆ ಆರ ಪೋಲ್ವೆಯವಳ್ ಈಕೆಯನೇಕೆಯೋ ಪಾಟಿದೋಱುವಿರ್: **ಪುಷ್ಪದಂಪು,** ೭. ೫೭)

**ಪಾಟಿಸು** – ನೀಡು (ಮೆಚ್ಚಂ ಪಾಟಿಸುವುವು ಮಿಥುನತತಿಗೆ ಗೃಹಮಹೀಜಾತಂ: **ಆದಿಪು,** ೫. ೩೭); ರೂಢಿಯಾಗಿರು (ಪಾಟಿಸಿ ಮಾಡಿದ ಸೊರ್ಕಿವಳಾಟಮೆ ವಲಮೆನಿಸಿ ನೆಗಟ್ದ ನೀಲಾಂಜನೆ: **ಆದಿಪು,** ೯. ೩೮); ಬೆಳೆಸು (ತೋಟಿಯಂ ಪಾಟಿಸೆ ತಾವೆ ತಮ್ಮಗಳಂ ಆರಡಿಗೊಳ್ವರೊ ನಾಡ ಗೊಡ್ಡೆಯರ್: **ಲೀಲಾವತಿ,** ೧೪. ೪೦); ಉಂಟುಮಾಡು (ಮಸೆವುದು ಮಾಸಲಿರ್ದ ಪಟವೇಟಮಂ ಇಚ್ಛೆಯ ಬಿಚ್ಚತಿಕ್ಕೆಯಂ ಪೊಸೆಯಿಪುದು ಒಳ್ಕಮಂ ನಡೆಪುತಿರ್ಪುದು ಧಾತುವಂ ಒಳ್ಳಿತೆಯ್ದೆ ಪಾಟಿಸುವುದು ಕೂಟದೊಳ್ ಕುಶಲನಪ್ಪುದು: **ಶಾಂತಿಪು,** ೮. ೯೧); ಪಾಠ ಓದು (ಬಗೆವುಗೆ ಜೈನಮನೋದದೆ ಮಿಗೆ ಪಾಟಿಸಿ ಕುಮತಿ ಕುಮತಮಂ ಪಲ್ಲಂ ನಾಲಗೆ ತಪ್ಪುವನ್ನೆಮಿರದೋದುಗೆ ಸಮ್ಯಜ್ಞಾನಿಯಾಗಲೇನಱಿದಪನೇ: **ಸಮಯಪು,** ೩. ೩೩); ಕಿತ್ತುಹಾಕು (ಸಮಂತು ಪಾಠಿಸುವೆನೊಯ್ಯನೆ ಮುಳ್ಳೊಳೆ ಮುಳ್ಳನೆಂದು ತಾನೀ ನಯದಿಂದೆ ಪೆರ್ಚಿ ಪೊರೆದದಟ್ಟುಜೊಳ್ ಅಂದೊಡನುಂಡನಲ್ಲನೇ: **ಪಂಪಭಾ,** ೯. ೬೭)

**ಪಾಠಕಾಱ** – ಹೊಗಳುಭಟ (ಅಲರ್ಗಳ್ ಘಟ್ಟಿವಳ್ಳರ ಪಸರದಂತೆ ಕಂಪಂ ಪರಕಲಿಸೆ ತುಂಬಿಯೆ ಪಾಠಕಾಱನಂತೆ ಮೊರೆಯೆ: **ಹರಿವಂಶ,** ೫. ೫ ವ)

**ಪಾಠೀನ** – ಮೀನು (ನುಣ್ಬಸೆಲೆ ಗೆತ್ತು ಎಯ್ತರೆ ಮಗುಳಿಸಿದಪ್ಪುವು ಪಾಜೆ ಪೊಳೆವ ಪಾಠೀನಂಗಳ್: **ಲೀಲಾವತಿ,** ೫. ೪೬)

**ಪಾಠೀನಚಕ್ರ** – ಮೀನು[ತಿಮಿಂಗಿಲ]ಗಳ ಸಮೂಹ (ಪಾಠೀನಚಕ್ರಕ್ಷೋದಪ್ರಕ್ಷೋಭಿತಂ ವಾರಿಧಿಯೆ ಗಗನಮಂ ಮುಟ್ಟಿ ನಿಂದಂತೆ: **ಆದಿಪು,** ೧೪. ೯೭)

**ಪಾಠೀನಪತಾಕ** – ಮನ್ಮಥ (ನೃಪಸತಿಯರ್ಗುದಯಿಸಿದರ್ ತಪನಪ್ರತಿಮಪ್ರತಾಪರ್ ಅಭಿನವ ಪಾಠೀನಪತಾಕರ್ ಇಂದ್ರಸೇನನುಂ ಉಪೇಂದ್ರಸೇನನುಂ ಎನಿಪ್ಪ ಪೆಸರೆಸಿವ ಇರ್ವರ್: **ಶಾಂತೀಶ್ವಪು,** ೬. ೨೮)

**ಪಾಡಗ** – ಕಾಲುಕಡಗ (ಗೆಜ್ಜೆಗಳ ಸಜ್ಜನೆಗೆ ಅಂದುಗೆಯಾನಂದೆಗೆ ನೇವುರದ ಭಾವಕಿಗೆ ಪಾಡಗದ ಪರುಷಕ್ಕೆ: **ಗಿರಿಜಾಕ,** ೩. ೯೧ ವ)

**ಪಾಡಟಿ** – ನೆಲೆಗೆಡು; ಸತ್ವಗುಂದು (ಪೂಡಿದ ವಾರುವಂಗಳ ತೆರಳ್ಕೆಗೆ ನೇಸಱ ತೇರ ತೇಜಿಗಳ್ ಪಾಡಟಿದಿರ್ಪಿನಂ: **ಕಬ್ಬಿಗಕಾ,** ೧೬೦); ಕಾಂತಿಗುಂದು (ನಸು ಮಾಸಿ ಪಾಡಟಿದ ರೂಪಿನೊಳ್ ಉಣ್ಮುವ ಗಾಡಿ ನಾಡೆ ಕಣ್ಗೆಡರೆ: **ಪಂಪಭಾ,** ೧೩. ೯೯)

**ಪಾಡಿ** – ಸೈನ್ಯ (ಅಂತು ಬೆಡಂಗುವೆತ್ತು ನಡೆವ ಪುಸಿವಡೆಯ ಪೆಱಗೆ ಪೞೆಯ ಪಾಡಿಯಂ ಕೂಡಿಕೊಂಡು: **ಕಬ್ಬಿಗಕಾ.** ೧೬೨ ವ); ಹಳ್ಳಿ (ಕೈ ನೀಡಿ ಮುನ್ನೀರ್ಗಳಂ ಕೆಲಬರ್ ಈರ್ದರೆ ಮಾಡುತುಂ ನಡೆದರೆತ್ತಂ ಬೀರರಾ ಪಾಡಿಯೊಳ್: **ಕಬ್ಬಿಗಕಾ,** ೧೯೫)

**ಪಾಡಿವ** – ಪಾಡ್ಯ (ಏಟ್ಟಿವಡೆದ ಪಾಡಿವದ ಚಂದ್ರನಂತೆ ಚಂದ್ರಾಪೀಡಂ ಪ್ರತಿದಿನಂ ಪ್ರವರ್ಧಮಾನನಾಗೆ: **ಕಾದಂಸಂ,** ೨. ೨೮ ವ)

**ಪಾಡಿಸು** – ಹಾಡುವಂತೆ ಮಾಡು (ಪಾಡಿಸು–ಗಾನೇ: **ಶಬ್ದಮದ,** ಧಾ ೮೨೨); ಹೊಗಳಿಸು (ಭೀತಿಯಿಂ ಬೀರಮಂ ಮಱೆದುಂ ಪಾಡಿಸಲಣ್ಮರ್ ಅಂಕಮಂ ಅವರ್ ಬಿಟ್ಟೋಡಲಣ್ಮರ್ ಭಟರ್; **ಧರ್ಮಾಮೃ,** ೨. ೪೦)

**ಪಾಡು** – ಹಾಡು, ಗಾಯನ; ಸ್ಥಿತಿ, ಅವಸ್ಥೆ (ಕಿವಿಯನೆಯ್ದೆ ಕನ್ಯಾ ಕಲಕಂಠರವಂ ಶ್ರೀಕಂಠಂ ರಾಗ ರಸೋತ್ಕಂಠಂ ಪ್ರತಿಷ್ಠೆಯೊಳ್ ಪಾಡಳಿದಂ: **ಪಂಪರಾ,** ೧೦. ೧೧೧)

**ಪಾಡುಂಗಾಱ** – ಹಾಡುಗಾರ (ಬಿಂದುಗೆ: ಪಾಡುಂಗಾಱಂ, ಅಲಸುಂಗಾಱಂ, ಜೂದುಂಗಾಱಂ, ಓದುಂಗಾಱಂ: **ಶಬ್ದಮದ,** ೨೧೧ ಪ್ರ)

**ಪಾಡುಗಾ** – [ಪಾಡು+ಕಾ] ಪರಸ್ಪರರ ಕ್ಷೇಮವನ್ನು ರಕ್ಷಿಸು, ಸುಸ್ಥಿತಿಯನ್ನು ಕಾಪಾಡು (ಇಂತು ಪಾಡುಗಾದೊಡನೊಡನಿರ್ಪರುಂ ಮೆಱೆಯಲೆಂದೆ ಶರಾಸನವಿದ್ಯೆಯಿಂ ಪಡಲ್ವಡಿಸಿದರ್: **ಪಂಪಭಾ,** ೧೧. ೧೮);

**ಪಾಡುಗೆಯ್** – ಸಂವರಿಸು, ಹದಗೊಳಿಸು (ಒಯ್ಯನೆ ಗದೆಯನಣಂ ಪಾಡುಗೆಯ್ದಿರ್ದು ಭೋರೆಂದೆಱೆಪ ಉಗ್ರಾರಾತಿಯೂರುದ್ವಯಮನಿಡೆ .. .. ಕೆಡೆದಂ ಇಳಾಭಾಗದೊಳ್ ಧಾರ್ತರಾಷ್ಟ್ರಂ: **ಪಂಪಭಾ,** ೧೩. ೯೬)

**ಪಾಡುಪಂಥ** – ಸವಾಲೆಸೆ (ನೀಡುಂ ತೋಡಿಲ್ಲದ ಪಾಡುಪಂತಂಗೊಂಡು ಸಮ್ಮದಂಮಿಗೆ ಸಮ್ಮುಖದ ಧೀರಸಾರಥಿಯಂ ಪುರ್ಬಿ ಜರ್ಬಿ: **ರಾಜಶೇವಿ,** ೬. ೬೫ ವ)

**ಪಾಣವಿಕ** – ಮದ್ದಳೆಗಾರ (ವಾದಕ ಸಂಪ್ರದಾಯದೊಳ್ ಒರ್ವ ಪಾಣವಿಕನ ಪೆಗಲ ಪಣವಮಂ ತನ್ನ ಪೆಗಲೊಳ್ ತಗುಳ್ಚಿಕೊಂಡು: **ನೇಮಿನಾಪು,** ೬. ೪೧ ವ)

**ಪಾಣಿ** – ಕೈ (ಪಾಣಿ ಕರಮುಂ: **ಅಭಿಧಾವ,** ೧. ೧೨. ೭)

**ಪಾಣಿಗ್ರಹಣಂಗೆಯಿಸು** – ಕೈಹಿಡಿಸು, ಮದುವೆ ಮಾಡಿಸು (ಅಂತು ಕೈನೀಱೆದು ಪಾಣಿಗ್ರಹಣಂಗೆಯಿಸಿದಾಗಳ್: **ಆದಿಪು,** ೪. ೪೮ ವ)

**ಪಾಣಿಚಳನ** – ನಾಟ್ಯದಲ್ಲಿನ ಕೈಯ ಚಲನೆ ಕಂಕಣರಾವಂ ಸೊಗಸಾಗೆಡ ಪಾಣಿಚಳನಂ ಚೆಲ್ವಾಗೆ .. .. ನೀಱಿ ಮೆಱೆದಳ್ ಲೇಲಾಸಲ್ಲಾಸ್ಯಮಂ: **ರಾಜಶೇವಿ,** ೧೨. ೬೨)

**ಪಾಣಿತಳ** – ಅಂಗೈ (ದೇಸೆ ವಿಳಾಸಮಂ ಪಡೆಯೆ ಗೊಂದಣವೆಕ್ಕಣಮಾಗಳಾ ನೃಪಾವಾಸದೊಳಾಡಿದತ್ತೆಸೆಯೆ ಪಾಣಿತಳಂ ಪಡೆವಂತೆ: **ಮಲ್ಲಿನಾಪು,** ೧೨. ೯)

**ಪಾಣಿತ್ರಯ** – ವಾದ್ಯವಾದನದಲ್ಲಿನ ಸಮಪಾಣಿ, ಅಧಃಪಾಣಿ, ಉಪರಿಪಾಣಿ ಎಂಬ ಮೂರು ಬಗೆಯ ಹಸ್ತವಿನ್ಯಾಸ (ವಾದಕನುಪವಾದನಿನೆಸೆದ ಹೃದ್ಯವಾದ್ಯ ವಿಶೇಷಂಗಳೊಳ್ ನೆಗೞ್ದ ಸಮಪಾಣೀಯುಂ ಅಧಃಪಾನಿಯುಂ ಉಪರಿಪಾಣಿಯುಂ ಎಂಬ ಪಾಣಿತ್ರಯದೊಳಂ .. .. ನೆಱೆದು: **ಅಜಿತಪು,** ೫. ೩೨ ವ)

**ಪಾಣಿಪಾಡು** – ತೋಟ (ಇಲ್ ಮರಾಳನಿಲ್ಲ ಕೊಳಂ ಕೊಳನಿಲ್ಲದ ಪಾಣಿಪಾಡು ಪಾಡಿಲ್ಲದ ತುಂಬಿ ತುಂಬಿಗಳ ಗೊಂದಣಮಿಲ್ಲದ ಪೂ: **ಅನಂತಪು,** ೩. ೯)

**ಪಾಣಿಪಾತ್ರ** – ಬೊಗಸೆಗೈ, ಜೈನಮುನಿಗಳು ಆಹಾರ ತೆಗೆದುಕೊಳ್ಳುವಾಗ ಹಿಡಿಯುವ ಬೊಗಸೆ (ಸಿದ್ಧಭಕ್ತಿಪುರಸ್ಸರಂ ಪಾಣಿಪಾತ್ರದೊಳ್ ಕನಕಪಾತ್ರದೊಳ್ ತೀವಿದಿಕ್ಷುರಸಮಂ ಪಯೋರಸಮುಮಂ ಪಾನಂಗಳಿಂದೆಱೆಯೆ: **ಅಜಿತಪು,** ೭. ೨ ವ)

**ಪಾಣಿಮುಕ್ತ** – ಕೈಯಿಂದ ಬಳಸಬೇಕಾದ ಆಯುಧ (ಅಸಿ ಮುಸಲ ಕಣಯ ಕಂಪಣ ಗದಾದಂಡ ತೋಮರ ಆದಿ ಆಮುಕ್ತಾಮುಕ್ತ ಪಾಣಿಮುಕ್ತ ಯಂತ್ರಮುಕ್ತಂಗಳಪ್ಪ ನಿಜನಿಶಿತ ನಿಖಿಳಾಯುಧಂಗಳಂ: **ಪುಷ್ಪದಂಪು,** ೮. ೨೮ ವ)

**ಪಾಣಿಯವಾಸ** – ಅರವಟ್ಟಿಗೆ (ಕಂಪು ಆವಗಂ ಇಲ್ಲಿ ಪಲ್ಲವಿಸೆ ಪಾಣಿಯವಾಸಮನಿಕ್ಕಿದಂತೆ ಸೌಖ್ಯವಾವುದೆಂದೊಡೀ ನದಿಯನೀಕ್ಷಿಸೆ ಪಾಂಥನ ತೃಷ್ಣೆ ಪೋಗದೇ: **ಪಾರ್ಶ್ವನಾಪು,** ೯. ೫)

**ಪಾಣ್ಬ** – ಹಾದರಿಗ (ಆ ಪಾಣ್ಬರಂಕುಸಂ ಆ ಪಾಣ್ಬೆಯರ ಗೆಯ್ದ ಗೆಯ್ತಂಗಳುಮಂ ತೋರ್ಪ ಸನ್ನೆಗಳುಮಂ ಆಡುವ ಮಿಟ್ಟುಗೊಡ್ಡಂಗಳುಮಂ ಕಂಡು ಚೋದ್ಯಂಬಟ್ಟು: **ಪಂಪಭಾ,** ೪. ೮೩ ವ)

**ಪಾಣ್ಬೆ** – ಹಾದರಗಿತ್ತಿ (ಆ ಪಾಣ್ಬರಂಕುಸಂ ಆ ಪಾಣ್ಬೆಯರ ಗೆಯ್ದ ಗೆಯ್ತಂಗಳುಮಂ ತೋರ್ಪ ಸನ್ನೆಗಳುಮಂ ಆಡುವ ಮಿಟ್ಟುಗೊಡ್ಡಂಗಳುಮಂ ಕಂಡು ಚೋದ್ಯಂಬಟ್ಟು: **ಪಂಪಭಾ,** ೪. ೮೩ ವ); ಪಾದರಿ ಮರ (ಪಾಣ್ಬೆಯ ಮೇಘನಾದದ ಇಂದಿರೆಯ ಪಟೀರದೇಳ್ಗೆಯ .. .. ಭೂರುಹಂ ಒಪ್ಪುಗುಂ: **ರಾಜಶೇವಿ,** ೫. ೫೭)

**ಪಾತ** – ಬೀಳುವಿಕೆ, ಹೊಡೆತ (ಪಾತದಿಂ ಪಿಳ್ಳನೆ ಪಿಟಿದವಲಟ್ಕಾಡೆ ಮೆಯ್ ಕೇಶಕೃಷ್ಣೋರಗನಂ ಪಿಂತಿಕ್ಕಿ ತನ್ನ ಪ್ರಿಯತಮಗರುಡಂ ಕಿತ್ತವೊಳ್ ಕೂಡುತಿರ್ದಳ್: **ಲೀಲಾವತಿ,** ೨. ೧೩೨)

**ಪಾತನ** – ಹೊಡೆತ (ಮುಳಿದ ವಿಯುಕ್ತವಲ್ಲಭಜನಂ ತಳುವಿಲ್ಲದೆ ತಕ್ಕೆಗೊಂಡುದು ಅಸ್ಖಳಿತ ಕೃಷೀಕುತೂಹಳಜನಂ ಮರವಟ್ಟಿರುತಿರ್ದುದು .. .. ಏನಳವಿಗಳುಂಬಮೋ ಪುದಿದ ಮಾಗಿಯ ಶೀತವಿಜೃಂಭಪಾತನಂ: **ಶಾಂತೀಶ್ವಪು,** ೧೨. ೮೬)

**ಪಾತಶ್ರವಣ** – ಮರಣವಾರ್ತೆ (ಕಡು ನಂಜಜಿನ ಗಾಳಿಯೊ ಮೇಣ್ ಸಮ್ಮೋಹನಾಸ್ತ್ರಮೋ ನೃಪಕುಮಾರ ಪಾತಶ್ರವಣಂ: **ನೇಮಿನಾಪು,** ೫. ೪೮)

**ಪಾತಕಿ** – ಪಾಪ ಮಾಡಿದ ವ್ಯಕ್ತಿ (ಪಾತಕಿಯೊಳ್ ಲಕ್ಷ್ಮಿಯೊಳ್ ಅತಿಕಾತರಕಾಪುರುಷಗಣನೆಯೊಳ್ ನೆರೆಯಲ್ಕಿಂತೀತನೆ ಬಗೆಗೆ: **ಆದಿಪು,** ೧೪. ೧೨೩)

**ಪಾತಾಳ** – ಕೆಳಗಿನ ಲೋಕ (ಪಾತಾಳಂ ದನುಜೇಂದ್ರನಿಕೇತಂ ಅಧೋಭುವನಂ ಉರಗಲೋಕಂ: **ಅಭಿಧಾವ,** ೧. ೩. ೫);

**ಪಾತ್ರ** – ಪಾತ್ರೆ (ಪಾತ್ರಂ ಭಾಂಡಂ ಸ್ಥಾಲಿಯಮತ್ರಂ ಭಾಜನಂ ಎನಿಕ್ಕುಂ: **ಅಭಿಧಾವ,** ೧. ೧೦. ೨೬); ದೋಣಿ, ಹಡಗು (ಜಿನೇಶ್ವರ .. .. ಭವಾಂಬೋಧಿಯ ತಡಿಯನೆಯ್ದಿಸೆಮ್ಮಂ ನಯ ನಿಕ್ಷೇಪ ಪ್ರಮಾಣ ಪಾತ್ರದಿನರುಹಾ: **ಪಂಪರಾ,** ೭. ೪೦); ನಟಿಸುವವನು{ಳು} (ವಿಚಿತ್ರಪಾತ್ರಪರಿನರ್ತನಂ ಉಣ್ಮುವ ತೂರ್ಯನಾದದೊಳ್ ಪೊಸಯಿಸೆ: **ಆದಿಪು,** ೨. ೪೧); ದಾನಸ್ವೀಕಾರಕ್ಕೆ ಯೋಗ್ಯ (ಅಹೋ ದಾನಿಯಹೋ ಪಾತ್ರಮಹೋ ದಾನಮಹೋ ದೇಯಮೆಂಬ ದಿವ್ಯಧ್ವನಿಗಳ್: **ಆದಿಪು,** ೧೦. ೪); ಆರಾಧನೆಯ ಸಮಯದಲ್ಲಿ ಉಪಯುಕ್ತವಾದುದು (ಬಲಿಭಾಜನಮುಪಯೋಗ್ಯಮಪ್ಪುದು ತಾಂ ಪಾತ್ರಂ: **ಅಭಿಧಾವ,** ೩. ೧. ೨೪)

**ಪಾತ್ರಂಬಡೆ** – ಅರ್ಹತೆಯನ್ನು ಹೊಂದು (ಪುತ್ರಂಬಡೆದನೆ ಪರಮಪವಿತ್ರೀಕೃತಭವಸುಖಾಮೃತಕ್ಕಾನೀಗಳ್ ಪಾತ್ರಂಬಡೆದೆಂ: **ಸುಕುಮಾಚ,** ೧೦. ೨೯)

**ಪಾತ್ರತ್ರಿತಯ** – ದಾನಸ್ವೀಕರಿಸುವ ಉತ್ತಮ, ಮಧ್ಯಮ, ಅಧಮರೆಂಬ ಮೂರು ವರ್ಗ (ಆ ಭೋಗಭೂಮಿಯೊಳ್ ಪಾತ್ರತ್ರಿತಯದಾನಫಳಂಗಳಿಂದೆ ಏಕದ್ವಿತ್ರಿ ಪಲ್ಯೋಪಮ ಆಯುಷ್ಯರುಂ .. .. ಪುಟ್ಟಿ: **ಚಂದ್ರಪ್ರಪು**: ೩. ೩೬ ವ)

**ಪಾತ್ರತ್ವ** – ಅರ್ಹತೆ ಹೊಂದುವುದು (ಪರಮಸ್ಥಾನನಾಮ ಕರ್ತ್ರನ್ವಯಕ್ರಿಯೆಗಳಂ ಅತಿಬಾಲವಿದ್ಯಾಕುಲಾವಧಿ ಪ್ರತಿಗ್ರಹಾದಿ ಪುರಸ್ಸರಂ ನಿರವದ್ಯಾಹಾರದಿವಿತರಣರೂಪ ಪಾತ್ರದತ್ತಿಯುಂ: **ಆದಿಪು,** ೧೫. ೧೩ ವ); (ವರ್ಣೋತ್ತಮತ್ವ ಪಾತ್ರತ್ವ ಸೃಷ್ಟ್ಯಧಿಕಾರ: **ಆದಿಪು,** ೧೫. ೧೬ ವ)

**ಪಾತ್ರದತ್ತಿ** – [ಜೈನ] ತಪೋಧನರಿಗೆ ನೀಡುವ ಆಹಾರಾದಿಗಳು (ಪಾತ್ರದತ್ತಿಯೆಂಬುದು ಮಹಾತಪೋಧನರ್ಗೆ ನಿರವದ್ಯಾಹಾರಮುಮಂ ಸಂಯಮೋಪಕರಣಮುಮಂ ಕುಡುವುದು: **ಅಜಿತಪು,** ೧೨. ೧ ವ)

**ಪಾತ್ರದಾನ** – ಪಾತ್ರದತ್ತಿ, ಯೋಗ್ಯರಿಗೆ ಕೊಟ್ಟ ದಾನ (ಭಕ್ತಿಪುರಸ್ಸರ ಪೂಜಾದಿವಿಚಿತ್ರವಿರಚನಾದಿ ಸಂಪದಾಸ್ಪದಮಾಗೆಯುಂ ಪಾತ್ರದಾನವಿಧಾನಮೇ ವಿನೋದಮಾಗೆಯುಂ: **ಆದಿಪು,** ೪. ೫೨ ವ)

**ಪಾತ್ರಮನಾಡು** – ನರ್ತನಮಾಡು (ಸೊಬಗಿನ ಮದಮಂ ಮಾಡುವರ ಮೂಗಿನೊಳ್ ಪಾತ್ರಮನಾಡದೆ ಮಾಣದು ಅನಂಗನ ಕೃತಿ: **ಯಶೋಧಚ,** ೨. ೬೨)

**ಪಾತ್ರವಿಕೀರ್ಣ** – ನದಿಯ ಹರಿಯುವ ಜಾಗ, ನಟರಿಂದ ಆವೃತವಾದುದು (ಪಾತ್ರವಿಕೀರ್ಣಂ ಆತತಸಂತಾಳಧರಂ ವಿವಿಧಾವನದ್ಧವಾ ಸೂತ್ರಿತವಂಶಾಕಾರನಿಕರಂ ಕಳಕಂಠಸಮೂಹಸಂಶ್ರಿತಂ ಚಿತ್ರಿತರೂಪಶೋಭೆಗೆಡೆಯಾದುದು ಭಾವಿಸಿ ನೋಡೆ ನಾಡೆ ತೂರ್ಯತ್ರಯಸಂಪ್ರದಾಯಮೆನೆ ಕಾನನಮಾವೃತದಿಕ್ಕುಲಾನನಂ: **ಚಂದ್ರಪ್ರಪು,** ೫. ೫೩)

**ಪಾತ್ರಸಂಕ್ರಮಣ** – ಪಾತ್ರಗಳ ವಿನ್ಯಾಸ (ದಶರೂಪಲಕ್ಷ್ಣಮುಮಂ ಪಾತ್ರಸಂಕ್ರಮಣದೊಳ್ ನೆಱೆಯೆ ತೋಱೆ .. .. ಪ್ರತ್ಯಕ್ಷಂ ಮಾಡಿದಾಗಳ್: **ಅಜಿತಪು,** ೫. ೨೮ ವ)

**ಪಾತ್ರೀಭೂತ** – ಪಾತ್ರತ್ವವನ್ನು ಹೊಂದಿದ (ಅಂತಪ್ಪೊಡೆ ಶ್ರೋತ್ರಿಯರುಂ ಕ್ಷತ್ರಿಯರುಂ ಪಱಿಗುಟ್ಟಿ ಪಶುಯಾಗಂಗೆಯ್ದು ಈ ಲೋಕದೊಳ್ ಪಾತ್ರೀಭೂತರುಂ ಪವಿತ್ರಗೋತ್ರರುಂ ಆಗಿ: **ಪಂಚತಂತ್ರ,** ೧೧೭ ವ)

**ಪಾಥ** – ನೀರು (ಸುರಭಿ ಘನಸಾರ (ಸುರಭಿ ಘನಸಾರ ಗೋಶೀರ್ಷ ಚಂದನದಿ ಸುಗಂಧದ್ರವ್ಯೋಪೇತ ಪಾಥಃಪ್ರಪೂರ್ಣ ಸುವರ್ಣಕಲಶಂಗಳಂ: **ಕರ್ಣನೇಮಿ,** ೮. ೧೪೯ ವ)

**ಪಾಥೇಯ** – ಬುತ್ತಿ (ಮೋಕ್ಷಪುರಪ್ರಸ್ಥಿತ ಭವ್ಯಪಥಿಕ ಪಾಥೇಯಮಪ್ಪ ಸಮ್ಯಕ್ತ್ವಮುಮಂ .. .. ಕಯ್ಕೊಂಡು: **ಅಜಿತಪು,** ೧೨. ೧ ವ)

**ಪಾಥೇಯಧನ** – ದಾರಿಖರ್ಚು (ಬೋಧಿದರ್ಶನಚಾರಿತ್ರಮೆ ಮೋಕ್ಷಮಾರ್ಗಪಾಥೇಯಧನಂ: **ಅನಂತಪು,** ೩. ೬೨)

**ಪಾಥೋನಿಧಿ** – ಸಮುದ್ರ (ಪಥೋನಿದೀಯಲ್ಲಿ ಪೊಕ್ಕೊಡವರಂ ತವಿಸಲ್ ಬಟೆಸಂದು: **ಪುಷ್ಪದಂಪು,** ೫. ೫೩)

**ಪಾಥೋಭೃತ್** – ಮೋಡ (ರತ್ನರುಕ್ಚಿತ್ರಿತ ಪಾಥೋಭೃತ್ ಪಟಂ ಶಂಕರಗೃಹಕಲಶಂ .. .. ಎಸೆದತ್ತು: **ರಾಜಶೇವಿ,** ೧. ೧೧೭)

**ಪಾದ** – ಕಾಲು (ಹರಿ ಪದ್ಮನಂದಿ ಪೀತಾಂಬರೋಲ್ಲಸಿತಂ ಚಕ್ರಸಹಾಯಂ ಆಕ್ರಮಿಸಿದಂ ಭೂಚಕ್ರಮಂ ಪಾದದಿಂ: **ಪುಷ್ಪದಂಪು,** ೮. ೨೩); ಕಿರಣ (ಗಭಸ್ತಿ ಪಾದಂ ತೇಜಂ: **ಅಭಿಧಾವ,** ೧. ೧. ೬೫); ಬೇರು (ಮೂಲಂ ತಾನದು ಪಾದಂ: **ಅಭಿಧಾವ,** ೧. ೭. ೫); ಕಂದರ, ಬೆಟ್ಟದ ತಪ್ಪಲು (ದರಿ ಕಂದರಂ ಬಿಲಂ ಗಹ್ವರಂ ಗುಹಾಶಕುಹರಂ ಅದ್ರಿಕುಂಜಂ ಕೊಳ್ಳಂ ಗಿರಿಪರ್ಯಂತಂ ಪಾದಂ: **ಅಭಿಧಾವ,** ೧. ೬. ೩)

**ಪಾದಂಜನ** – ಪಶ್ಚಿಮ ದಿಗ್ಗಜದ ಹೆಸರು (ಕಾಯ್ಪಿಂ ವಿದಿತಂ ಪಾದಂಜನಕ್ಕಂ ನೆರೆಪಿಡಿ ಮುಳಿಸಿಂ ಪುಷ್ಪದಂತಕ್ಕೆ ಬಲ್ಪಿಂ ಸದೃಶಂ: **ತ್ರಿಷಷ್ಟಿಪು,** ೨. ೫೫)

**ಪಾದಚ್ಛಾಯೆ** – ಹೆಜ್ಜೆಯ ಗುರುತು (ಪಾದಚ್ಛಾಯೆಯನಿಟ್ಟು ಜೋಯಿಸಮದಭಿಪ್ರಾಯಂಗಳಿಂ .. .. ಪೇೞ್ವ ಜೋಯಿಸಂ ಅದಾರ್ಗಂ ಮರ್ತ್ಯರೊಳ್ ದುರ್ಲಭಂ: **ಸುಕುಮಾಚ,** ೩. ೨೦)

**ಪಾದಜ** – ಶೂದ್ರ (ಸಂಪದದೊಳ್ ಅನೂನರಕ್ಕೆ ಪರದರ್ ಸಲೆ ಧಾರ್ಮಿಕರಕ್ಕೆ ಪಾದಜರ್: **ಪಂಚತಂತ್ರ,** ೪೪೯)

**ಪಾದಪ** – ಬೇರಿನಿಂದ ನೀರು ಹೀರುವುದು, ಗಿಡಮರ (ತಮಾಲ ಪಾದಪದ ಪಲ್ಲವಮಂ ಪಿಟಿದೊಂದು ನಿರ್ಮಲೋಪಲತಲದಲ್ಲಿ: **ಕಾದಂಸಂ,** ೪. ೩೫)

**ಪಾದಮಾರ್ಗ** – ಕಾಲುದಾರಿ (ಪಾದಮಾರ್ಗದಿಂ ಪೋಗಿ ಸೌಧರ್ಮಕಲ್ಪದೊಳ್ ಉಳ್ಳ ಕೃತಕಚೂತ್ಯಾಲಯಂಗಳಂ .. .. ಅರ್ಚಿಸಿ: **ಚಂದ್ರಪ್ರಪು,** ೪. ೬೮ ವ)

**ಪಾದರ** – ಹಾದರ, ವ್ಯಭಿಚಾರ (ಮಕ್ಕಳ್ ತನಗಾಗದೊಡಂ ತಕ್ಕರನಾರಯ್ದು ತನ್ನ ಸತಿಯೊಳ್ ನೆರಪಲ್ಕಕ್ಕುಂ .. .. ಪಾದರಕೆ ದೋಷವಿಲ್ಲೆನವೇಡಾ: **ಸಮಯಪ,** ೧೧. ೩೩)

**ಪಾದರಕ್ಕೆ** – ಪಾದರಕ್ಷೆ (ಧೋತ್ರಮುಮಂ ಪಾದರಕ್ಕೆಯಂ ಸುತ್ತಿ ತೊಡೆಯ ಕೆಟಿಗಿಕ್ಕಿರ್ದು .. .. ಪಾರ್ವರಯ್ದೆ ಛತ್ರದೊಳುಂಬರ್: **ಸಮಯಪ,** ೧೪. ೧೫೪)

**ಪಾದರಜ** – ಪಾದಧೂಳಿ (ಕಮಲವಾದ್ಯರುಂ ಪಡೆವರೇ ಹರಿಪಾದರಜೋಲವಪ್ರಸಾದಮಂ: **ಜಗನ್ನಾವಿ,** ೩. ೪೨); ನಡೆಯುವಾಗ ಏಳುವ ಧೂಳು (ನೃಪಸೇನೆಯ ಪಾದರಜದಿಂ ಅಂದೇನಯತ್ನ ಕುಂಕುಮವಿಳಾಸಮಂ ತಾಳಿದಿದುದೋ: **ಶಾಂತಿಪು,** ೧೦. ೧೫)

**ಪಾದರವಾಡು** – ವ್ಯಭಿಚಾರ ಮಾಡು (ಕಪಾಲದೊಳ್ ತಿರಿದುಂಡುಂ ಸುರಮುನಿಪತ್ನಿಯೊಳ್ ಪಾದರವಾಡಿದಂ ಆಪ್ತನೆನಲವೇಡ: **ಸಮಯಪ,** ೮. ೫೩)

**ಪಾದರಿ** – ಪಾಟಲಿ ಎಂಬ ಹೂ (ಸೊಂಪಾದ ಪಾದರಿಯ ಚೌಕಿಗೆಗಳೊಳಂ ಬಿಟ್ಟ ಬೀಡಂ ಬರೆದಂತೆ ಕಂಡರಿಸಿದಂತೆ ಕಣ್ಗೆಸೆದಿರ್ದುದು: **ಕಬ್ಬಿಗಕಾ,** ೧೮೪ ವ)

**ಪಾದರಿಗೆ** – ಹಾದರಗಿತ್ತಿ (ತುಡುಗುಣಿ ಪಾದರಿಗೆ ಱಂಡೆ ಕೀಟಜ್ಞಾತಿಯವಳ್ .. .. ಅವಳೊಲವಂ ನುಡಿಯಲ್ಕೆನಗಾಗದು: **ಸಮಯಪ,** ೫. ೭೦)

**ಪಾದರಿಗ** – ಹಾದರಿಗ, ವಿಟ (ನೀಱಿರ ಬಲ್ಪು ಪಾಱಿ ಪಾದರಿಗರ ನಾಣ್ಗಳುರ್ಕುಗಿಡೆ ಬಲ್ಮುಳಿಸಿಂದಂ ಅಗಲ್ಕೆವೆತ್ತ ನಲ್ಲರ ಜೇವೊಡೆಯ ಬಲ್ಲುಲಿ ನೀಳ್ದುದು ಕರ್ವುವಿಲ್ಲನಾ: **ಕಬ್ಬಿಗಕಾ,** ೨೩೪)

**ಪಾದಲೇಪೌಷಧಿ** – ಕಾಲಿಗೆ ಹಚ್ಚುವ ಮುಲಾಮು (ಪಾಲೇಪೌಷಧಿಪ್ರಭವದಿಂ ವಿಂಶಿತಿಸಹಸ್ರಸೋಪಾನಂಗಳಂ ಅಸಂಗದಿಂದಮೇಱಿ: **ಚಂದ್ರಪ್ರಪು,** ೭. ೫ ವ)

**ಪಾದವಿನ್ಯಾಸ** – ನಡಿಗೆಯ ರೀತಿ, ಪದ್ಯದ ಸಾಲುಗಳ ಜೋಡಣೆ; ಕಿರಣಗಳ ಹರಡುವಿಕೆ (ಅತಿಶಯಪದಾರ್ಥ ನಿಕರಪ್ರತೀತಿಯಂ ಪಡೆವ ಪಾದವಿನ್ಯಾಸಂ: **ಚಂದ್ರಪ್ರಪು,** ೧. ೪೭)

**ಪಾದವಿಷ್ಟರ** – ಪಾದಪೀಠ ಕುಲೀನರ್ ನೃಪೇಂದ್ರಮೃಗೇಂದ್ರ ಪಾದವಿಷ್ಟರದೊಳಿರ್ದರ್: **ಅನಂತಪು,** ೨. ೨೩)

**ಪಾದಸಂಕಲೆ** – ಕಾಲಿಗೆ ಹಾಕುವ ಸರಪಳಿ (ಮೊದಲಪದನಪಭ್ರಂಶಕ್ಕೆ ಬಾರದೆ ಉತ್ತರಪದಂ ತದ್ಭವಮಾದ ಸಮಾಸಕ್ಕೆ: ಪಾದಶೃಂಖಲೆ–ಪಾದಸಂಕಲೆ, ಲಿಂಗಪತ್ರಿಕೆ–ಲಿಂಗವತ್ತಿಗೆ: **ಶಬ್ದಮದ,** ೩೦೪ ಪ್ರ)

**ಪಾದಾಂತಿಕ** – ಪಾದದ ತುದಿ (ಮನಮಂ ತಪೋಧನರ ಪಾದಾಂತಿಕದೊಳ್ ನಿಱಿಸಿ ವ್ಯಾಮೋಹದ ಉಸುರ್ವಂ ಪತ್ತುವಿಡೆ ನುಡಿದು: **ಶಾಂತಿಪು,** ೪. ೮೨ ವ)

**ಪಾದಾತಂ** – ಕಾಲಾಳು, ಪದಾತಿಸೈನ್ಯ (ನಡೆದುದು ಪಾದಾತಂ ಚತುರಶಿತಿಕೋಟಿಪ್ರಮಿತಂ: **ಆದಿಪು,** ೧೧.೩೩)

**ಪಾದೂಯುಗ್ಮ** – ಹಾವುಗೆಗಳ ಜೋಡಿ (ಶಿವನಾಮಾಂಕಿತಮಂ ರತ್ನವಿರಚಿತಮಂ ಉತ್ತಮಾಂಗದೊಳ್ ಪಾದಯುಗ್ಮವನೆಸೆಯೆ ತಳೆದು: **ಕಾದಂಸಂ,** ೩. ೨೬)

**ಪಾದ್ಯ** – ಕಾಲು ತೊಳೆಯುವ ನೀರು (ಉಪಾದ್ಯ ಜಿನತೀರ್ಥೇಶಂಗೆ ಪಾದ್ಯಂಬೊಲೊಪ್ಪಿದುದು ಆದ್ಯಾಮರ ರಾಜಮೌಳಿಮಣಿಗುಚ್ಛಾಚೋಚ್ಛರೋಚಿರ್ಜಲಂ: **ಅಜಿತಪು,** ೪. ೧೨); ಪಾದ ತೊಳೆಯುವುದು (ಜನಪತಿಗಂದು ಪಾದ್ಯಮನದೇಂ ಮೆಱೆವಂತೆ ಮೆಲ್ಲನೆ .. .. ಸುಟಿದತ್ತು .. .. ಮಂದಮಾರುತಂ: **ಮಲ್ಲಿನಾಪು,** ೭. ೩೯)

**ಪಾನಕ್ರೀಡೆ** – ಮದ್ಯಸೇವನೆಯ ಆಟ (ತಾಂ ಮದ್ಯಪಾನಕ್ರೀಡಾನಿರತನಾಗಿ ಪೋಗಲ್: **ಪಂಚತಂತ್ರ,** ೧೨೭ ವ)

**ಪಾನಭೂರಂಗ** – ಮದ್ಯಸೇವನೆಯ ಜಾಗ, ಪಡಖಾನೆ (ಮತ್ತನೃತ್ಯತ್ ಪ್ರಮದಾ ಕಸ್ತೂರಿಕಾ ಮಿಶ್ರಿತ ಗುರುಕಬರೀನಿರ್ಗಳತ್ ಪುಷ್ಪಸಂದೋಹಮಂ ಉದ್ಯತ್

ಪಾನಭೂರಂಗಮಂ ಅತಿಮುದದಿಂದೆಯ್ದಿದಂ ತಂತುವಾಯಂ: **ಪಂಚತಂತ್ರ,** ೧೨೮)

**ಪಾನಿಗಟ್ಟು** – [ಜೈನ] ಚರಿಗೆಗೆ ಬಂದ ಸನ್ಯಾಸಿಗಳನ್ನು ಭಿಕ್ಷೆಗೆ ನಿಲ್ಲಿಸಿಕೊ (ಕಿತ್ತಯ್ಯಂಗಳನೊಡಗೊಂಡು ಬಂದು ಪಕ್ಕದಿರ್ದ ಪಾನಿಗಟ್ಟ ಮಾರ್ಗಮಂ ತೋಱೆ ಮಗುೞೆ ಬಿಜಯಂಗೆಯ್ಯಿಂ ಎನೆ: **ವಡ್ಡಾರಾ,** ಪು ೮೧, ಸಾ ೧)

**ಪಾನೀಯ** – ನೀರು (ಸಲಿಲಂ ಜೀವನಂ ಅಂಬು ತೋಯಂ ಉದಕಂ ಪಾಥಂ ಕುಶಂ ವಾರಿ .. .. ನೀರಂ ಶರಂ ಪುಷ್ಕರಂ ಜಲ ವಾಪಂ .. .. ಪಾನೀಯಂ ಎಂದಿಂತನಾಕುಳದಿಂದಂ ತಱಿಸಲ್ಗೆ ನೀರ್ಗೆ: **ಅಭಿಧಾವ,** ೧. ೪. ೧); ಕುಡಿಯಲು ಯೋಗ್ಯವಾದ ದ್ರವ (ಸಹಕಾರಪಕ್ವರಸಸಾರಾಸಾರ ಪಾನೀಯದಿಂ ಸವಿಶೇಷಂ ಬೆಳೆದೊಪ್ಪಿ: **ಸುಕುಮಾಚ,** ೧. ೭೪)

**ಪಾನೀಯಖೇಯ** – ಕಂದಕ (ಮೂವಳಸುವಳಸಿ ಸುತ್ತಿರ್ಪುದಂಭೋಧಿಯೆಂಬಂತೆ .. .. ಪಾನೀಯಖೇಯಂ: **ಸುಕುಮಾಚ,** ೯. ೫೭)

**ಪಾನೀಯಮಂಡಪ** – ಅರವಟ್ಟಿಗೆ ಪಾನೀಯಮಂಡಪಂಗಳೊಳ್ ಕಲಶಮನೆತ್ತಿ ನೀರೆಱುಷೆವ ಕಾಂತೆ .. .. ನೋಡಿ: **ಚಂದ್ರಪ್ರಪು,** ೧. ೯೭)

**ಪಾನೀಯಶಾಲೆ** – ಪಾನೀಯಮಂಡಪ (ಅನಂಗಶೃಂಗಾರಲೀಲೆಗಳೆನಿಪ್ಪ ಪಾನೀಯಶಾಲೆಗಳುಂ: **ಪುಷ್ಪದಂಪು,** ೯. ೨೨ ವ)

**ಪಾನೆ** – ಅಗಲಬಾಯಿಯ ಪಾತ್ರೆ (ಕಟಕಕ್ಕಮಿರ್ದ ನೆರೆ ಸಂಕಟಮೆನಿಸದೆ ತೆಱಪುಗುಡುವವೊಲ್ ಪಾನೆಯ ಕೋೞ ಕಟಕಂ ನೆರೆದುಂಡೊಡಂ ಯತ್ಕಟಮಪ್ಪಕ್ಷೀಣಋದ್ಧಿಯಂ ಮುನಿ ತಳೆದಂ: **ಅನಂತಪು,** ೯. ೧೦೨)

**ಪಾಪಪದಾರ್ಥ** – [ಜೈನ] ನವಪದಾರ್ಥಗಳಲ್ಲಿ ಒಂದು (ಪುಣ್ಯಪದಾರ್ಥಂ ಪಾಪಪದಾರ್ಥಮೆಂಬ ನವಪದಾರ್ಥಮುಮಂ .. .. ಕೈಕೊಂಡು: **ಸುಕುಮಾಚ,** ३. ३೯ ವ), ನೋಡಿ 'ನವಪದಾರ್ಥ'

**ಪಾಪಭೀರು** – ಪಾಪಕ್ಕೆ ಹೆದರುವ ವ್ಯಕ್ತಿ (ಜನಕತನೂಜೆ ನೆಟ್ಟನೆ ಮಹಾಸತಿ ಗರ್ಭಿಣಿ ಪಾಪಭೀರು: **ಪಂಪರಾ,** ೧೫. ೭೨)

**ಪಾಪರ್ಧಿ** – ಬೇಟೆ (ದ್ಯೂತ ಮದ್ಯ ಪಿಶಿತ ವೇಶ್ಯಾ ಪಾಪರ್ಧಿ ಚೌರ್ಯ ಪರದಾರಮೆಂಬ ಸಪ್ತ ವ್ಯಸನಮಂ: **ತ್ರಿಷಷ್ಟಿಪು,** ೧೯. ೫೫ ವ)

**ಪಾಪಾವಗ್ರಹ** – ಪಾಪವೆಂಬ ಬರಗಾಲ (ವಿನೇಯೋತ್ಕರ ಸಸ್ಯಾವಳಿ ಸುಗಿದಗಿದು ಕೂಡೆ ಬಾಡಿರ್ದುದು ಪಾಪಾವಗ್ರಹದಿಂ: **ಆದಿಪು,** ೧೦. ೬೬)

**ಪಾಪಾಸ್ರವ** – [ಜೈನ] ಜೀವನದಲ್ಲಿ ಹರಿದು ಬರುವ ಪಾಪಕರ್ಮಗಳು (ಆಸ್ರವಂ ಎರಡು ತೆಱಂ ಪುಣ್ಯಾಸ್ರವಂ ಒಂದು ಅದಱ ವೈಪರೀತ್ಯಭವಂ ಪಾಪಾಸ್ರವಂ: **ಶಾಂತಿಪು,** ೧೨. ೪)

**ಪಾಪೀ ಪಾಪೇನ ಹನ್ಯತೇ** - ಪಾಪಿಯು ಪಾಪದಿಂದಲೇ ಕೊಲ್ಲಲ್ಪಡುತ್ತಾನೆ (ಅಹಿಯ ವಿಷವಹ್ನಿ ನೆಗವಹಿಗೃಹಮಂ ಪೀರ್ದುರ್ಚುವಚ್ಚಭಲ್ಲನ ಬಾಯಂ ದಹಿಯಿಸಿ ಪಾಪೀ ಪಾಪೇನ ಹನ್ಯತೇ ಎಂಬ ನುಡಿಯನೇಂ ನಡೆಯಿಸಿತೋ: **ನೇಮಿನಾಪು,** ೫. ೮೫)

**ಪಾಪೆ** – ಬೊಂಬೆ (ಇಂದ್ರಜಾಲಿಗರ ಪಾಪೆಗಳುಂ ಸೀರೆಗಳುಂ ಝುಣಂಬಮುಮಂ ತೊಟ್ಟು ಶ್ಮಶಾನದೊಳುರಿವ ಕಿಚ್ಚಿನ ಪಕ್ಕದೆ ನಿಂದಿರ್ದರ್: **ವಡ್ಡಾರಾ,** ಪು ೧೯, ಸಾ ೧೨); ಕಣ್ಣುಗುಡ್ಡೆ (ಘರ್ಮೋದಬಿಂದೂತ್ಕರಂ ಸುರಿವುತ್ತಿರ್ಪುದು ಕಣ್ಣ ಪಾಪೆಗೆ ಎಲೆ ನೋಡೆಂಬಂದದಿಂ: **ಕಾದಂಬ,** ೬. ೭೦)

**ಪಾಪೋಪಚಯ** – ಪಾಪದ ರಾಶಿ ನಿನ್ನ ಪಾಪೋಪಚಯಕಾರಣದುರಾಚರಿತಮಮಂ ನೋಡಿ: **ಆದಿಪು,** ३. ३೮ ವ)

**ಪಾಮರ** – ರೈತ, ಬೇಸಾಯಗಾರ (ಗಗನಮೆನಿಪ್ಪ ಪಾಲ್ವೊಲದೊಳ್ .. .. ಚೆಲ್ಲಿ ತಾರೆಗಳೆನಿಪ್ಪ ಬಿಳ್ತುಗಳಂ .. .. ಸುಧಾಮರೀಚಿಜಳಮಂ ಸುರಿದಂ ಸಲೆ ಕಲಪಾಮರಂ: **ರಾಜಶೇವಿ,** ೧೧. ೬೮)

**ಪಾಮರಿ** – ಹಳ್ಳಿಯ ಹೆಂಗಸು (ಕೈಯ ಬಾಯೆಡೆಯೊಳ್ ಪಾಯ್ದುಗೆ ಕಂಡು ಬೆಂಡುಬೆಳಗಪ್ಪರ್ ಪಾಮರೀವಕ್ತ್ರಮಂ: **ಅನಂತಪು,** ೧. ೮೧)

**ಪಾಯ್** – ಹಾರು (ರಥದಿಂ ಧಾತ್ರಿಗೆ ಪಾಯ್ದು ಕೊಂಡು ಗದೆಯಂ ಕೆಯ್ಸಾರ್ದುದು ಅಸ್ಮತ್ ಮನೋರಥಂ ಇಂದು ಎಂದು ಕಡಂಗಿ: **ಪಂಪಭಾ,** ೧೧. ೬೬); ಮಿಡುಕು; ಹೊರಸೂಸು; ದಾಟು (ಬಿಸುಡು ನೀಂ ಬಲಗರ್ವಮಂ ಆ ಸಮುದ್ರಂ ಏಂಬಂಡಮೊ ಪಾಯ್ದೊಡೆ ಎಂದು ನಿಜಸಾಯಕದೊಳ್ ಬರೆದು ಎಚ್ಚು ಕಪ್ಪಮಂ ಕೊಂಡಂ .. .. ಪರಸೈನ್ಯಭೈರವನಂ: **ಪಂಪಭಾ,** ೬. ३३); ದುಮುಕು (ಆ ಕೋಡಗಂ .. .. ಒಂದು ದಿನಂ ಪರ್ವತಶಿಖರದಿಂ ಪಾಯ್ದು ಬಂದು .. .. ಮುನಿವರರ ಪಕ್ಕದೆ ಬಿರ್ದಿತ್ತಾಗಳ್: **ವಡ್ಡಾರಾ,** ಪು ೧೭೨, ಸಾ. ೨೪)

**ಪಾಯದಟ** – ಪದಾತಿ ಸೈನ್ಯ (ಅಂತು ಪಾಯದಟಮೆಲ್ಲಂ ಎಚ್ಚುಮುಱಿದುಂ ಕುಱಿದಱಿಯಾಗೆ ತೆಱಪುವಡೆದು: **ಚಂದ್ರಪ್ರಪು,** ೧೦. ೭೪ ವ)

**ಪಾಯವಟ್ಟ** – ಕಾಲಂದುಗೆ, ಪೆಂಡೆಯ (ಸುರಗಿಯ ಗರ್ಭರೆಗಳಂ ಸುರಹೊನ್ನೆಯ ನೂಪುರಂಗಳಂ ಮುಚುಕುಂದದ ಪಾಯವಟ್ಟಂಗಳಂ: **ತ್ರಿಷಷ್ಟಿಪು,** ೨೪. ೬೯ ವ)

**ಪಾಯವಧಾರು** – ಎಚ್ಚರದಿಂದ ನಡೆ (ಜನನಿ ಜಗಜ್ಜೀವನೆ ಮೆಲ್ಲನೆ ಪಾಯವಧಾರು ದೇವಿಯೆನೆ ನಡೆತಂದಳ್: **ಗಿರಿಜಾಕ,** ೪. ೧೮)

**ಪಾಯಸ** – ಪರಮಾನ್ನ (ವಿಧಿಯಿಂ ಪೂಜಿಸಿ ಮುದದೆ ಮಾಡಿದಳ್ ಪಾಯಸಮಂ ನವಘೃತಸಮನ್ವಿತಂ ಸಿತಸಹಿತಂ: **ಪಂಚತಂತ್ರ,** ೨೨೦)

**ಪಾಯಾಳ್** – ದೂತ (ಪಂಚಶರನ ಪಾಯಾಳನಂತೆ ಚಂಚರೀಕದ ಮುಂಚಮನೆತ್ತಿ: **ನೇಮಿನಾಪು,** ೪. ೬೮ ವ)

**ಪಾಯಿಸು** – ದಾಟಿಸು, ಮುನ್ನುಗ್ಗಿಸು [ಇಸಲೆಂದಿರ್ದ ಧನುರ್ಬಲಂ ಪೊಳೆವ ಬಾಳುಳ್ಳಂಗಳಂ ಪೋಲೆ ಪಾಯಿಸಲೆಂದಿರ್ದ ದಳಂ: **ಆದಿಪು,** ೧೪. ೧೦೦)

**ಪಾರ್** – ನೋಡು, ನಿರೀಕ್ಷಿಸು (ನಿಜಾಭಿಲಷಿತಕಾರ್ಯಸಿದ್ಧಿಯನೆ ಪಾರುತ್ತುಮಿರ್ದರ್: **ಆದಿಪು,** ३. ४೫ ವ); ಯೋಚಿಸು (ಉದಾತ್ತನಂ ಪಾರದೆ ಬಯ್ದು: **ಚಂದ್ರಪ್ರಪು,** ೮. ೬೪)

**ಪಾರ** – ಗಡಿ (ಮತಿಗುಣದಿಂ ಅತಿವಿಕ್ರಮಗುಣದಿಂ ಶಾಸ್ತ್ರಪಾರಮುಂ ರಿಪುಬಳಪಾರಮುಂ ಪಡನೆ ಸಂದುವು:

ಪಂಪಭಾ, ೧. ೪೫); ದಡ (ಪಾರಂ ಪರತಟಂ: **ಅಭಿಧಾವ,** ೧. ೪. ೧೩)

**ಪಾರಂಗಮ** – ದಾಟುವವನು (ದುರ್ವಾರ ಭವಾಬ್ಧಿತೀರ ಪಾರಂಗಮನಂ .. .. ದೇವದೇವನಂ ಪೊಗೞ್ಗೆ ಬುಧಂ: **ಸಮಯಪ,** ೧. ೫೨)

**ಪಾರಕು** – ಹಾರಕ ಎಂಬ ಧಾನ್ಯ (ಪ್ರಥಮ ದಿವಸದೊಳೆ ಪಾರಕಿನ ಕೂೞುಂ ಅವರೆಯುಂ ಎಣ್ಣೆಯುಂ ಆಡಿನ ಅಳೆಯುಮಂ ಬಡ್ಡಿಸಿದೊಡೆ: **ವಡ್ಡಾರಾ,** ಪು ೬೮, ಸಾ ೨೬)

**ಪಾರಗ** – ದಡ ಸೇರಿದವನು ಅನುಪಮಗುಣರತರ್ ಅನುಪಮತಪರ್ ಅನುಪಮಸಿದ್ಧಾಂತಪಾರಗರ್ ಎಂದೀ ವನಧಿಪರಿವೃತಸಕಳಾವನಿ ಪೊಗೞ್ವುದಾ ಸಕಳಚಂದ್ರಸಿದ್ಧಾಂತಿಗಳಂ: **ಸುಕುಮಾಚ,** ೧. ೨೯); ಪಾರಂಗತ (ಕೂರಿಸೆ ಗುರುಶುಶ್ರೂಷೆಯೊಳ್ ಆ ರಾಮನಂ ಉಗ್ರ ಪರಶುಪಾಟಿತರಿಪುವಂಶಾರಾಮನಂ ಇಷುವಿದ್ಯಾ ಪಾರಗನೆನಿಸಿದುದು ಬಲ್ಮೆ ವೈಕರ್ತನನಾ: **ಪಂಪಭಾ,** ೧. ೧೦೪)

**ಪಾರಣಾವಾಸರ** – ಪಾರಣೆಯ ದಿನ (ಪಾರಣವಾಸರಾಳಿಗಳಿಂತು ಇರ್ತೆಜನಪ್ಪ ಪುಣ್ಯದಿನಮಂ ಅಮ್ಮಿಶ್ರಮಂ ಮಾಡೆ: **ಸುಕುಮಾಚ,** ೯. ೧೨)

**ಪಾರಣಾವಿಧಿ** – ಪಾರಣೆಯ ಕ್ರಮ (ಇತ್ತ ರಾಜ್ಯಾಶ್ರಮಗುರೂರ್ವರಾಸ್ಯತಿಲಕಂ ಯಾಮಿನೀವಿಯೋಗಮಂ ನಿರ್ವರ್ತಿಸಿ ರಾಜಮಂದಿರಕ್ಕೆ ವಂದು ಪಾರಣಾವಿಧಿಯೊಳ್ ಅಮೃತಾಹಾರಮನಾರೋಗಿಸಿ: **ಶಾಂತಿಪು,** ೯. ೯೯ ವ)

**ಪಾರಣೆ** – ವ್ರತಸಂಬಂಧಿ ಉಪವಾಸದ ಮರುದಿನ ಮಾಡುವ ಊಟ (ನಮಗೆ ಪಾರಣೆಯಂ ಮಾಱ್ಪಾಗಳ್ ಅಯಥಾಕರ್ಮದ ದೋಷಂ ಸಾರ್ತರ್ಕುಂ ಅದಱಿಂ ನಾಮಿಲ್ಲಿ ಚರಿಗೆವುಗದೆ .. .. ಪೋಪಂ: **ವಡ್ಡಾರಾ,** ಪು ೧೦೩, ಸಾ ೨೧)

**ಪಾರತಂತ್ರತೆ** – ಮತ್ತೊಬ್ಬರ ಅಧೀನದಲ್ಲಿರುವುದು (ತತ್ ಕ್ಷಣೋಪಗತ ತನೂಭವಾಲಾಭಚಿಂತಾ ಪಾರತಂತ್ರತೆಯಿಂ ಮ್ಲಾನವದನನುಂ ದೀನನುಂ ಆಗಿ: **ಚಂದ್ರಪ್ರಪು** ೩. ೬೨ ವ)

**ಪಾರತ್ರಿಕ** – ಪರಲೋಕಕ್ಕೆ ಸಂಬಂಧಿಸಿದ (ಬಟಿಕ್ಕೈಂದ್ರಮ್ಮೈಹಿಪಾರತ್ರಿಕಭೋಗಮಂ ಕುಡುವಿನಂ: **ಆದಿಪು,** ೧೬. ೮)

**ಪಾರದ** – ಪಾದರಸ (ಅಮೃತಾಂಶುರಶ್ಮಿಗಳ ಕುಂಚಿಗೆಯಿಂದಮೆ ಕರ್ಚಿ ಪಾರದಂ ತೊಡೆದರೊ ಪೇೞ್ನೆ: **ಕಾದಂಸಂ,** ೩. ೨೪)

**ಪಾರದರ** – ಅನ್ಯಸ್ತ್ರೀಗಮನ (ನೋಡುವೊಡೆ ಅವನೇಕಾಂತದೊಳಾಡುವೊಡೆ ಅದು ಪಾರದರಮೆ ದಿಟಂ: **ಪಾರ್ಶ್ವನಾಪು,** ೩. ೭೩)

**ಪಾರದಂದೊಡೆ** – ಪಾದರಸ ಲೇಪನಮಾಡು (ಅಮೃತಾಂಶುರಶ್ಮಿಗಳ ಕುಂಚಿಗೆಯಿಂದಮೆ ಕರ್ಚಿ ಪಾರದಂದೊಡೆದರೊ ಪೇೞ್ನೆಲ್ ಕರಮೆ ಕಣ್ಗೆಸೆದಿರ್ದುದು ರೂಪು ಕಾಂತೆಯಾ: **ಕಾದಂಸಂ,** ೩. ೨೪)

**ಪಾರದರಿಗ** – ಹಾದರ ಮಾಡುವವನು (ಆಯು ತವೆ ಪಾರದರಿಗಂ ಅಪಾಯಮಂ ಎತ್ತಱಿವಂ ಉಚಿತ ವಾಕ್ಯಾರ್ಥಂ ಕೊಳ್ಳೀಯೆ ಪರದಾರಗಮನಮಂ ಆಯುಷ್ಯಾಂತಮೆನಲ್ ಮನಂದಂದಪನೇ: **ಶಾಂತಿಪು,** ೫. ೫೧)

**ಪಾರದೃಶ್ವ** – ಪೂರ್ತಿ ತಿಳಿದವನು (ಪದವಾಕ್ಯಪ್ರಮೇಯ ನ್ಯಾಯ ರಾಜನೀತಿಭರತಸುರತಾದಿ ಸಮಸ್ತಶಾಸ್ತ್ರಪಾರಾವಾರ ಪಾರದೃಶ್ವನುಂ .. .. ಆದಂ: **ಅನಂತಪು,** ೨. ೧೧ ವ)

**ಪಾರಮಾರ್ಥಿಕ** – ಪರಮಾರ್ಥಕ್ಕೆ ಸಂಬಂಧಿಸಿದ (ಮುಕುಳಿತ ಕರೋಪೇತಂ ದೂತಂ ಪ್ರಜಾಪತಿ ಪಾರಮಾರ್ಥಿಕವಚನ ಸದ್ಭಾವಂ: **ಶಾಂತಿಪು,** ೫. ೩೭)

**ಪಾರಯಿಸು** – ಬಯಸು (ಮೇರುನಗೋಪಕಂಠವನದೊಳ್ ವನಕೇಳಿವಿಲಾಸಮಂ ಸ್ವಯಂಭೂರಮಣಾಂಬುರಾಶಿ ವಿಲಸತ್ತಟದೊಳ್ ಜಲಕೇಳಿ ಲೀಲೆಯಂ ಪಾರಯಿಸಿರ್ದುದುಂ ನೆನೆವೊ ನೀಂ: **ಆದಿಪು,** ೩. ೮೩)

**ಪಾರಲೌಕಕವಿಧಿ** – ಅಪರಕರ್ಮ (ದಮಿತಾರಿಯ ಭುಜಬಲ ವಿಕ್ರಮದ ಅಳವಿಗೆ ಮಚ್ಚಿ ಮಚ್ಚುಗುಡಿಸುವವೊಲ್ ಅನುಕ್ರಮದಿಂ ನೀರ್ಗುಡಿಸಿ ಯಥಾಕ್ರಮದಿಂ ಪದವಡಿಸಿ ಪಾರಲೌಕಿಕವಿಧಿಯಂ: **ಶಾಂತಿಪು,** ೪. ೫೮)

**ಪಾರಸಿಗ** – ಪಾರಸಿ ದೇಶದವನು (ರುದ್ರದತ್ತಂ ಪಾರಸಿಗನ ಉಪದೇಶಮಂ ಬೇಱೆಯುಂ ಕೇಳ್ದನಪ್ಪುದಱಿಂ: **ಹರಿವಂಶ,** ೪. ೩೫ ವ)

**ಪಾರಸ್ಥಳಿ** – ತೀರ, ದಂಡೆ (ಪೂರ್ವಾಪರ ಶರನಿಧಿ ಪಾರಸ್ಥಳೀ ಲಗ್ನಂ ಉದ್ಧ ಅಸುರ ಶುಭ್ರಾದಭ್ರದೀಪ್ತಿಭ್ರಜವಿಜಿತಸರಂ.. ..ಎಂಬೊಂದೆಸಕದ ವಿಜಯಾರ್ಧಾದ್ರಿಯಂ ಚಕ್ರಿ ಕಂಡಂ: **ಶಾಂತೀಶ್ವಪು,** ೧೫. ೧೧೯)

**ಪಾರಟೆ** – ಅಳತೆ ಮೀರು (ತನ್ನ ಕುಂತಳಂ ಪಾಱೆತೆಗೆತ್ತು ಪಾರಟೆದು ಪಾಱೆದಳ್ ಏಂ ಕರಂ ಆಕೆ ಮುಗ್ಧೆಯೋ: **ಲೀಲಾವತಿ,** ೧೨. ೨೨)

**ಪಾರಾವತ** – ಪಾರಿವಾಳ (ರಾಜಹಂಸ ಪಾರಾವತ ಮಿಥುನಂಗಳ್ ಉತ್ತುಂಗ ಪ್ರಾಸಾದಶಿಖರ ಮಣಿಗವಾಕ್ಷ ಅಂತರಾಳ ವಿವಿಧ ಗೃಹಾಂತರಗತಂಗಳಾದುವು: **ಪಂಪಭಾ** ಪರಿಷತ್ತು, ೪. ೪೯ ವ)

**ಪಾರಾವಾರ** – ಸಮುದ್ರ (ಪಾರಾವಾರದಂತೆ ಅಕಲುಷಿತನುಂ ಅನಿಲನಂತೆ ನಿಸ್ಸಂಗನುಂ: **ಆದಿಪು,** ೯. ೯೩ ವ); [ಜೈನ] ಒಂದು ದೀರ್ಘ ಅವಧಿ (ಏಕಪಾರಾವಾರೋಪಮ ಆಯುಷ್ಯನುಂ ವರ್ಷಸಹಸ್ರಸಂಕಲ್ಪಕಲ್ಪಿತಮೃತಾಹಾರನುಂ .. .. ಆಗಿ: **ಆದಿಪು,** ೨. ೬೯ ವ)

**ಪಾರಾವಾರಗ** – ಪ್ರವೀಣ (ಆಗಮಮೆಲ್ಲಮಂ ಗ್ರಂಥಾರ್ಥ ಸ್ವರೂಪದಿಂ ಕಲ್ತು ಸಕಲಶಾಸ್ತ್ರಪಾರಾವಾರಗನಾಗಿ: **ವಡ್ಡಾರಾ,** ಪು. ೭೪, ಸಾ. ೨೪)

**ಪಾರಾಶರ** – ವೇದವ್ಯಾಸ (ಇದಂ ಮುನಿ ಪಾರಾಶರನೊಲ್ದು ಪೇೞ್: **ಪಂಪಭಾ,** ೮. ೫)

**ಪಾರಿಜಾತ** – ಒಂದು ಗಿಡ ಮತ್ತದರ ಹೂ (ನಮೇರು ಮಂದಾರಸಂತಾನಕ ಪಾರಿಜಾತಗಳೆಂಬ ಪೂಗಳಂ ಸುರಿಯುತ್ತಂ: **ವಡ್ಡಾರಾ,** ಪು. ೮೪, ಸಾ.೮)

**ಪಾರಿಜಾತಕ** – ಪಾರಿಜಾತ (ನಂದನವನಸಂಭವ ಹರಿಚಂದನಸಂತಾನ ಪಾರಿಜಾತಕ ವಿಲಸನ್ಮಂದಾರನಮೇರು ದ್ರುಮಸಂದೋಹದ ಕುಸುಮಕೋಟಿಯಂ: **ಪುಷ್ಪದಂಪು,** ೧೧. ೪೪)

**ಪಾರಿಣಾಮಿಕ** – [ಜೈನ] ಜೀವತ್ವ, ಭವ್ಯತ್ವ, ಅಭವ್ಯತ್ವ ಮೊದಲಾದ ಕರ್ಮಗಳು (ಭಾವೋಪಲಕ್ಷಕಂ .. .. ಜೀಬೆನೆಂಬುದು ಅವಾವುವೆಂದೊಡೆ ಔದಯಿಕಭಾವಂ ಔಪಶಮಿಕಭಾವಂ ಕ್ಷಾಯಿಕಭಾವಂ ಕ್ಷಾಯೋಪಶಮಿಕಭಾವಂ

ಪಾರಿಣಾಮಿಕಭಾವಂ ಎಂದಿಂತು ಭಾವಮಯ್ದು ತೆಱನಕ್ಕುಂ: **ಸುಕುಮಾಚ,** ೮. ೪ ವ)

**ಪಾರಿತೋಷಕ –** ಬಹುಮಾನ (ಭೂತಳಪಾಲಂ ವನಪಾಲಂಗೆ ಅಳತೆಗೆ ಮಿಗಿಲೆನಿಸಿ ಪಾರಿತೋಷಷಕಂಗಳನಿತ್ತಂ: **ಚಂದ್ರಪ್ರಪು,** ೨. ೯೨)

**ಪಾರಿಪದ –** [ಜೈನ] ಇಂದ್ರಸಭೆಯಲ್ಲಿ ಕುಳಿತುಕೊಳ್ಳುವ ಯೋಗ್ಯತೆಯವರು, ಇವರಲ್ಲಿ ಮೂರು ಬಗೆ: ಅಭ್ಯಂತರ, ಮಧ್ಯಮ ಮತ್ತು ಬಾಹ್ಯ (ಸಾಮಾನ್ಯ ತ್ರಯಸ್ತ್ರಿಂಶತ್ ಪಾರಿಪದ ಆತ್ಮರಕ್ಷಕ ಲೋಕಪಾಲಾಭಿಯೋಗ್ಯ ಕಿಲ್ಬಿಷಕ ಪ್ರಯುಕ್ತರಾಗಿ: **ಕರ್ಣನೇಮಿ,** ೮. ೧೧೯ ವ)

**ಪಾರಿಪ್ಲವ –** ಚಂಚಲವಾದ (ಪ್ಲವಗಪ್ಲುತದಿಂ ಚಾರಣನಿವಹಂ ಚಾರಣಗಣಂಗಳಂತಾಗೆ ಪಯಃಪ್ಲವದೊಳಗೆ ಮುಟ್ಟಿ ಪಾರಿಪ್ಲವನೇತ್ರೆಯರ್ ಅಮರಕಾಂತೆಯರ್ ಸೊಗಯಿಸಿದರ್: **ಅಜಿತಪು,** ೪. ೬೧); ಅಸ್ತವ್ಯಸ್ತತೆ (ವಸ್ತುಹೀನಂ ಭಿಧಾವಮುಂಟಕ್ಕುಂ ಅಪ್ಪೊಡೆ ಶಬ್ದಾರ್ಥಸಂಬಂಧಂ ಪಾರಿಪ್ಲವ ಪರಿಪ್ಲವಮಕ್ಕು: **ಶಾಂತಿಪು,** ೮. ೧೩೮ ವ)

**ಪಾರಿವ –** ಪಾರಿವಾಳ (ಪೊಂಬೆಸೆದುಪ್ಪರಿಗೆಯ ಬಿಸವಂದಮಾದ ಚುಂಚುಲೋವೆಗಳೊಳಗೆ ಬಳಸಿ ನಲಿದುಲಿವ ಪಾರಿವಂಗಳ ಕೊರಲುಲಿಯೊಳಂ: :**ಕಬ್ಬಿಗಕಾ,** ೩೭ ವ); ಪಾರಿವಾಳದ ಬಣ್ಣ (ಸಡಹುಡನಪ್ಪ ಕಟ್ಟಿ ಕೊಡೆ ಸಂತಸದಿಂ ಪೆಱಗೇಱೆ ಬರ್ಪ ಕನ್ನಡಿವಿಡಿದಾಕೆ ಚಿನ್ನದ ಸವಂಗಂ ಅಪೂರ್ವದ ಮೊಚ್ಚೆಯಂ ಪವಣ್ಗೆಡದ ಸುವರ್ಣಪಾರಿವದ ಕುಪ್ಪಸಮೊಪ್ಪೆ: **ಪಂಪಭಾ,** ೯. ೧೦೩)

**ಪಾರಿಷದ –** [ಜೈನ] ಇಂದ್ರನ ಸಭೆಯ ಸದಸ್ಯರಾದ ದೇವತಾವರ್ಗ (ಅನೇಕ ಪ್ರಕಾರ ಪಾರಿಷದ ಪರಿಸೆಯುಂ ಆತ್ಮೀಯಪರಮೈಶ್ವರ್ಯರ್ ಪ್ರಕಾಶಕಮಾಗೆ: **ವರ್ಧಮಾಪು,** ೧೦. ೬೧ ವ)

**ಪಾರಿಸು –** ಪಾರಣೆ ಮಾಡು (ಮುನಿಪಂ ಮಾಸೋಪವಾಸಾಂತರದೊಳ್ ಅನುನಯಂ ಪಾರಿಸಲ್ಕೆ ಎಂದು ಪೊಕ್ಕು: **ಹರಿವಂಶ,** ೫. ೩೪)

**ಪಾರಿಹಾರ್ಯ –** ಬಳೆ, ಕಂಕಣ (ವಿದ್ಯಾಧರೀರಮ್ಯನರ್ತನ ರಾಗೋತ್ಥಿತ ಪಾರಿಹಾರ್ಯ ರಶನಾ ಮಂಜೀರಕೋದ್ದಾಮನಿಸ್ವನದೊಳ್: **ಆದಿಪು,** ೧. ೭೦)

**ಪಾರೀಣ –** ಪಂಡಿತ (ದ್ವಾದಶಗಣಸರಸ್ಸರೋಜವಿದಳನ ಶೋಭಾಪ್ರಭಾವಪ್ರಸವಪಾರೀಣ ದಿವ್ಯವಚನ ಮರೀಚಿಮಾಲಿರೋಚಿರ್ನಿಚಯ ತ್ರಿಜಗಚ್ಚೂಡಾಮಣಿಯಂ .. .. ಪೊಡೆವಟ್ಟು: **ಶಾಂತಿಪು,** ೯. ೬೯ ವ)

**ಪಾರು –** ನೋಡು, ಕಾಯು (ಕುದಿಯುತ್ತಿರ್ದ ತುಯ್ಯಲಂ ತಣ್ಣಿತ್ತಾಗಿಯಾಱುವನ್ನೆಗಂ ಪಾರುತ್ತಿರ್ದು: **ವಡ್ಡಾರಾ,** ಪು ೬೪, ಸಾ ೨೨)

**ಪಾರುಂಬಳೆ –** ಪಾಱುಂಬಳೆ, ಚಕ್ರ, ಚಕ್ರಾಯುಧ (ನೀಱಿನುರದೊಳ್ ಮನೋಜನ ಪಾಱುಂಬಳೆಯೆನಿಸಿ ಮಲಯರುಹಪರಿಮಳಮಂ ಬೀಱುವ ಪುಳಕಾಂಕುರ: **ಲೀಲಾವತಿ,** ೧೦. ೯೨)

**ಪಾರುವ –** ಬ್ರಾಹ್ಮಣ (ಪಾರುವರಂ ಪಿರಿದುಂ ಕೊಂಡಾಡಲ್ ಜೈನರಲ್ಲರೆ ನೋಡಿಂ ಇವರಂ ಎಂಬರ್: **ಸಮಯಪ,** ೫. ೯೪)

**ಪಾರೆ –** ಹಾರೆ, ಅಗೆಯುವ ಕಬ್ಬಿಣದ ಉಪಕರಣ (ಕಡುಗಾಯ್ದ ಪಾರೆ ಎಂತುಂ ಸುಡಲಱಿಯದು ಸತ್ಯಮುಳ್ಳನಂ ಪುಸಿವನಂ ಸುಡುವುದು: **ಧರ್ಮಾಮೃ,** ೬. ೯೧)

**ಪಾರೆಯಂಬು –** ಹಾರೆ ಆಕಾರದ ಬಾಣ (ಅಂತು ತನ್ನ ಬಲಮೆಲ್ಲಮಂ ಜವನಂತೆ ಒಕ್ಕಲಿಕ್ಕಿ ಕೊಲ್ವ ಕಳಶಕೇತನನಂ ಯಜ್ಞಸೇನಂ ಏನುಂ ಮಾಣದೆ ಆತನ ಮೇಲೆ ಬಟ್ಟಿನಂಬಿನ ಬೆಳ್ಸರಿಯುಮಂ ಕೆಲ್ಲಂಬಿನ ತಂದಲುಮಂ ಪಾರೆಯಂಬಿನ ಸೋನೆಯುಮಂ ಸುರಿಯೆ: **ಪಂಪಭಾ,** ೧೨. ೨೧ ವ)

**ಪಾರ್ಕು –** ಹೆಗಲು (ಸುರಿದ ಕರುಳ್ ಕರಂ ಪಱಿದು ನೇಲ್ವ ಕರಂ ಪಱಿದೊಂದು ಪಾರ್ಕು: **ಕರ್ಣನೇಮಿ,** ೧೧. ೧೫೭)

**ಪಾರ್ಥ –** ಪೃಥೆಯ ಮಗ, ಅರ್ಜುನ (ಇಕ್ಕಿದಂ ಅಭವಂ ಪಾರ್ಥನಂ ಇಕ್ಕಿದನಾ ತ್ರಿಪುರಹರನಂ ಅರ್ಜುನಂ: **ಪಂಪಭಾ,** ೮. ೨೨)

**ಪಾರ್ಥಿವ –** ರಾಜ (ದುರ್ಯೋಧನಧೂಳಿಯುಂ ಪಾರ್ಥಿವ ಸೇನಾಧೂಳಿಯುಂ ಮುಟ್ಟದು: **ಆದಿಪು,** ೧೩. ೩೨); ರಾಜವಂಶದ (ಪಾರ್ಥಿವ ಚೂಡಾರತ್ನಂ ತೀರ್ಥಂಕರೇಂದೂದಯಾಚಳಂ ಪ್ರಾಪ್ತಾನೇಕಾರ್ಥಂ: **ಆಚವರ್ಧ,** ೧೩. ೩೯)

**ಪಾರ್ಥಿವಕುಲ –** ರಾಜವಂಶ (ಪಿರಿದೊಪ್ಪುವಣ್ಣಗೆಳೆಂಬಾ ಪುರದೊಳ್ ಪಾರ್ಥಿವಕುಲೋದ್ಭವಂ ತಾನೆನಿಸುತ್ತ: **ತ್ರಿಷಷ್ಟಿಪು,** ೫೮. ೫)

**ಪಾರ್ಥಿವಲಿಂಗ –** ಕಲ್ಲು ಮಣ್ಣು ಮುಂತಾದವುಗಳಿಂದ ಮಾಡಿದ ಲಿಂಗ (ಪೆರ್ಚುಗುಮೇ ಸಂದೇಹಂಬಡಲೆವೇಡ ಪಾರ್ಥಿವಲಿಂಗಂ: **ಸಮಯಪ,** ೯. ೧೩)

**ಪಾರ್ವ –** ಹಾರುವ, ಬ್ರಾಹ್ಮಣ (ಒರ್ವ ಪಾರ್ವಂ ವಿಸ್ತೀರ್ಣ ಜೀರ್ಣ ಕರ್ಪಟಾವೃತ ಕಟಿತಟನುಂ ಆಗಿ ಬಂದು ಕಣ್ಮುಚ್ಚಲ್ ಎಡೆವೇಡೆ ತನಗವರ್ ಪಾಸಲ್ಕೊಟ್ಟ ಕೃಷ್ಣಾಜಿನಮಂ ಪಾಸಿ ಪಟ್ಟಿರ್ದನಂ: **ಪಂಪಭಾ,** ೩. ೩೧ ವ)

**ಪಾರ್ವಂತಿ –** ಬ್ರಾಹ್ಮಣ ಸ್ತ್ರೀ (ಶ್ರೀಪರ್ವತದೊಳಿರ್ದ ತನ್ನ ಪಾರ್ವಂತಿ ಯಶೋಮತಿಗೆ ಬಱಿಯಟ್ಟಿ: **ವಡ್ಡಾರಾ,** ಪು ೧೯೦, ಸಾ ೧೬)

**ಪಾರ್ವಣ –** ಅಮಾವಾಸ್ಯೆ–ಹುಣ್ಣಿವೆಗಳಿಗೆ ಸಂಬಂಧಿಸಿದ (ಪಾರ್ವಣ ಶಶಿಬಿಂಬಕ್ಕೆ ಕೃಶತೆಯೆತ್ತಣಿನಾಯ್ತೋ: **ಲೀಲಾವತಿ,** ೧೪. ೨೨)

**ಪಾರ್ವಣಶಶಿ –** ಪರ್ವಕಾಲದ ಚಂದ್ರ (ಕನ್ನಡಿ ಪಾರ್ವಣಶಶಿಯಂತೆ ದೀಪಿಕೆ ದಿನಮಣಿಯಂ ಪಡೆದಂತೆ ಪಡೆದಳಾ ಸತಿ ಸುತನಂ: **ನೇಮಿನಾಪು,** ೨. ೨೮)

**ಪಾರ್ವತಿ –** ಪರ್ವತರಾಜನ ಮಗಳು, ಗಿರಿಜೆ (ಉಮೆ ಪಾರ್ವತಿ ಕಾತ್ಯಾಯಿನಿ ಹಿಮವತ್ಸುತೆ: **ಅಭಿಧಾವ,** ೧. ೧. ೧೬)

**ಪಾರ್ವತೀಜಾನಿ –** ಶಿವ (ಪಾರ್ವತೀಜಾನಿಗೆ ತಾನುಂ ಆತ್ಮರಮೆಯುಂ ಬಳಿಯಂ ತಳೆದಿರ್ಪಿನಂ: **ರಾಜಶೇವಿ,** ೧೦. ೬೦)

**ಪಾರ್ವತೇಯ –** ಪರ್ವತಪ್ರದೇಶವಾಸಿ (ಮೂಡಮೊಗದೆ ಪಯಣಂಬರೆ ಪಾರ್ವತೇಯೋಪಾದ ಪ್ರಧಾನಪುರಸ್ಸರನಾಗಿ: **ಶಾಂತಿಪು,** ೧೧. ೫೮ ವ)

**ಪಾರ್ವನ್ –** ಬ್ರಾಹ್ಮಣ (ಮೀನಾಗಿ ಸಾಯುತಿರ್ದಪೆಂ ಈ ಪಾರ್ವರ್ ಯಶೋಧರಂ ಸುಖದಿಂದಿರ್ಕೆ ಆ ನಾಕದೊಳ್ ಎಂದು ಉಾಲ್ದಪರ್: **ಯಶೋಧಚ,** ३. ೫೨)

**ಪಾರ್ವಿತಿ** – ಪಾರ್ವಂತಿ (ಭಾಂಡಿಲಮೆಂಬ ಪುರೋಹಿತಂಗಂ ಆತನ ಪೆಂಡತಿ ಪುಷ್ಪವತಿಯೆಂಬ ಪಾರ್ವಿತಿಗಂ ಪುಟ್ಟಿದ ಮಗಂ .. .. ಪುಷ್ಪದಾಡ: **ಧರ್ಮಾಮೃ,** ೭. ೭೨ ವ)

**ಪಾರ್ಶ್ವ** – ಮಗ್ಗುಲು (ಮಹಾಕಾಳದೊಳ್ ಸುಪ್ರಾಸುಕ ಪ್ರದೇಶಮಂ ಕಂಡು ಯೋಗಯೋಗ್ಯ ಪ್ರದೇಶಮಪ್ಪುದದೆಂದು ಏಕಾಗ್ರಚಿತ್ತದೊಳ್ ಏಕ ಪಾರ್ಶ್ವದೊಳ್ ಮೆಯ್ಯನಿಕ್ಕಿ: **ಸುಕುಮಾಚ,** ೧೨. ೧೮ ವ)

**ಪಾರ್ಶ್ವಚರ** – ಸೇವಕ, ಆಳು (ಪಾರ್ಶ್ವಚರ ಭುಚರ ಖೇಚರ ನೇತ್ರಪುತ್ರಿಕಾನಿಭೆ .. .. ನಯನೋತ್ಪಲಲ್ಪಲೇಂದು ಕಿರಣಪ್ರಭೆಯಪ್ಪುದು ತಪ್ಪದೊಪ್ಪುಗುಂ: **ಶಾಂತಿಪು,** ೫.೧೭)

**ಪಾರ್ಶ್ವನಾಥ** – [ಜೈನ] ಇಪ್ಪತ್ತಮೂರನೆಯ ತೀರ್ಥಂಕರ (ದೇವೇಂದ್ರ ಮಹೀಂದ್ರವಂದ್ಯಂ ಕುಡುಗೆ ನಮಗಭೀಷ್ಟಾರ್ಥಮಂ ಪಾರ್ಶ್ವನಾಥಂ: **ಪಾರ್ಶ್ವನಾಪು**. ೧. ೧)

**ಪಾರ್ಶ್ವಾಗತ** – ವಸ್ತುವಿನ ಮಗ್ಗುಲ ನೋಟ (ಗಿಳಿ ಋಜ್ವಾಗತದಿಂದಂ ಅರ್ಧಋಜುವಿಂದಂ ಕೋಕಿಳಂ ಸಾಚಿಯಿಂ ಕಳಹಂಸೀಕಳಭಂ ರಥಾಂಗಮಿಥುನಂ ಧ್ವ್ಯರ್ಧಾಕ್ಷಿಯಿಂ ಬರ್ಹಿಮಂಡಳಿ ಪಾರ್ಶ್ವಾಗತದಿಂದೇಂ .. .. ಕಣ್ಗೊಳೆ: **ಮಲ್ಲಿನಾಪು,** ೫. ೩೬)

**ಪಾರ್ಷ್ಣಿ** – ಹಿಮ್ಮಡಿ (ಪ್ರೋಪಹಳಿಹಸ್ತಗಾತ್ರನುಂ ಪರಿಪೂರ್ಣಶ್ಲಿಷ್ಟ ಪಾರ್ಷ್ಣಿಯುಂ ಅಂಸಕಾಳಭಗನುಂ: **ಆದಿಪು,** ೧೨. ೫೬ ವ)

**ಪಾರ್ಷ್ಣಿಗ್ರಾಹಕ** – ಹಿಂದಿದ್ದು ದಾಳಿ ನಡೆಸುವವನು [ಅಡಂಗದಾಟವಿಕರುಮಂ ಒತ್ತಿ ಬರ್ಪ ಪಾರ್ಷ್ಣಿಗ್ರಾಹಕರುಮಂ ಅಜೆದು: **ಆದಿಪು,** ೪. ೮೨ ವ)

**ಪಾಲ್** – ಹಾಲು (ಕ್ಷೀರಂ ದುಗ್ಧಂ ಪಾಲ್: **ಅಭಿಧಾವ,** ೧. ೧೬. ೧)

**ಪಾಲಕಾಪ್ಯ** – ಗಜಶಾಸ್ತ್ರ ಅಶ್ವಶಾಸ್ತ್ರಗಳನ್ನು ಬರೆದ ಒಬ್ಬ ಮುನಿ ಮತ್ತು ಆಯಾ ಶಾಸ್ತ್ರಗಳು (ಪಾಲಕಾಪ್ಯಂ ಹಾನಿತಂ ಚರಕಂ ಅಶ್ವಿನೀಮತಂ: **ವಡ್ಡಾರಾ,** ಪು ಸಾ)

**ಪಾಲಾಶ** – ಮುತ್ತುಗ (ಪಾಲಾಶ ಅಶ್ವತ್ಥ ಅರ್ಕ ಔದುಂಬರ ನ್ಯಗ್ರೋಧ ಶಮಿ ಅಪಾಮಾರ್ಗ ಖದಿರ ಆದಿ ಶುಷ್ಕಸಮಿತ್ತುಗಳುಮಂ ಕುಶ ಅಶ್ವಲಾಯನ ವಿಶ್ವಾಮಿತ್ರಾದಿ ದೂರ್ವಾಂಕುರಪವಿತ್ರವಸ್ತುಗಳುಮಂ ಕೊಂಡು: **ಪಂಚತಂತ್ರ,** ೧೯೦ ವ)

**ಪಾಲಿಕೆ** – ಪಾತ್ರೆ, ಪಾತ್ರೆ ಹಿಡಿದ (ಮಧುಪಾಲಿಕೆಯೊರ್ವಳ್ ನವ ಮಧುಪಾತ್ರೆಯನೊಲ್ದು ಬಾಯ್ಗೆ ತರಲ್: **ಉದ್ಭಟಕಾ,** ೫. ೭೬)

**ಪಾಲಿಸು** – ಕಾಪಾಡು (ಕರುನಿಸು ದೈವಮೆ ಪಾಲಿಸು ಹರಾದ್ರಿ ರಕ್ಷಿಸೆಲೆ ರಾತ್ರಿ ಶರಣಾಗು ಸರೋವರಮೇ .. .. ಎನಗೆ ಪುರುಷಭಿಕ್ಷಮನಿಕ್ಕಿಂ: **ಕಾದಂಸಂ,** ೪. ೯೫); ಆಳ್ವಿಕೆ ಮಾಡು (ತನ್ನ ವಿಕ್ರಮಮೇ ತನ್ನ ನೆಗಟ್ತೆಯೆ ತನ್ನ ಮಾತೆ ತಾನೆಸೆವ ಜಗತ್ತ್ರಯಕ್ಕೆನಿಸಿ ಪಾಲಿಸಿದಂ ನೆಲನಂ ಗುಣಾರ್ಣವಂ: **ಪಂಪಭಾ,** ೧೪. ೫೯); ಈಡೇರಿಸು (ದುಷ್ಪರಂ ತಿನ್ನದ ಸಿಂಹಂ ತನ್ನನೆ ನಂಬಿ ಬಂದಿರ್ದನ್ನನೆಂತುಂ ತಿಂಬುದಿಲ್ಲಮಾದೊಡಮಾನುಂ ನುಡಿದು ಮಾತಂ ಪಾಲಿಸುವೆನೆಂದು: **ಪಂಚತಂತ್ರ,** ೨೧೧ ವ); ಅನುಸರಿಸು (ಜಸಮಂ ಧರ್ಮಮುಮಂ ಪಾಲಿಸುವೊಡಂ ಇಹಪರಮನೊಲ್ವಡಂ ತನ್ನಂ ರಕ್ಷಿಸುವೊಡಮಾರೈದು ಪರೀಕ್ಷಿಸುವುದು ಮನುಜಂ ಸಮಸ್ತ ಕಾರ್ಯ ಸ್ಥಿತಿಯಂ: **ಪಂಚತಂತ್ರ,** ೨೭೦)

**ಪಾಲೆ** – [ಕಿವಿಯ] ಹಾಲೆ, ಕೊಪ್ಪು (ಪಾಲೆಗಳೊಳ್ ಅದೇನಮರ್ದಸೆದುದೊ ಮಿಸುಗುವ ಪತ್ರ ಮಕರ ಮಾಣಿಕ್ಯಕುಂಡಲಂ ಕಾಮಿನಿಯಾ: **ಕಾದಂಬ,** ೬. ೫೨)

**ಪಾಲ್ಗಡಲ್** – ಹಾಲಿನ ಸಮುದ್ರ, ಕ್ಷೀರಸಾಗರ (ಹಾರಮರೀಚಿಪ್ರಸರಂ ಬಳಸುತ್ತಿರೆ ಬರ್ಪಸಿಯಳ್ ಪಾಲ್ಗಡಲೊಳೆಸೆವ ಸಿರಿಯಂ ಪೋಲ್ತಳ್: **ಕಾದಂಬ,** ೩. ೫೬)

**ಪಾಲ್ಗಲ** – ಹಾಲಿನ ಮಡಕೆ (ಪೊಲೆಯರ್ ಮುಟ್ಟಿಸರೆಂತುಂ ಪೊಲಸಂ ಪಾಲ್ಗಲನಂ: **ಸಮಯಪ,** ೧೪. ೯೨)

**ಪಾಲ್ದೆನೆ** – ಎಳೆಯ ತೆನೆ (ಪಾಲ್ದೆನೆಗಳ ದೆಸೆಗಂ ಸಾರವು ಅಂಜಿ ಕೆಲವರಗಿಳಿಗಳ್: **ಪುಷ್ಪದಂಪು,** ೨. ೧೮)

**ಪಾಲ್ದೊಱೆ** – ಹಾಲಿನ ಹೊಳೆ (ತೊಱೆಗಳೆಲ್ಲಂ ಪಾಲ್ದೊಱೆಯೆನಿಸಿಯುಂ: **ಅಜಿತಪು,** ೪. ೬೭ ವ)

**ಪಾಲ್ಮರ** – ಗೀರಿದರೆ ಹಾಲು ಬರುವ ಮರ, ಆಲ, ಅರಳಿ, ಅತ್ತಿ ಇತ್ಯಾದಿ (ಮರಮಗಳೆಲ್ಲಂ ಪಾಲ್ಮರವೆನಿಸಿಯುಂ ಬಳ್ಳಿಗಳೆಲ್ಲಂ ಅಮೃತವಳ್ಳಿಗಳೆನಿಸೆಯುಂ: **ಅಜಿತಪು,** ೪. ೬೭ ವ)

**ಪಾಲ್ಮೞೆ** – ಹಾಲಿನ ಮಳೆ (ಒಸರ್ದಪುದಮರ್ದಿನ ಪಾಲ್ಮೞೆ ಪಸರಿಸಿತೆನೆ .. .. ಅಮೃತಕಿರಣಂಗಳ್: **ಆದಿಪು,** ೧೨. ೧೧)

**ಪಾಲ್ಯ** – ಪಾಲಿಸಬೇಕಾದುದು (ತ್ಯಾಜ್ಯಂ ಪರಿಗ್ರಹಂ ದಲ್ ಪ್ರಾಜ್ಯಂ ತಪಂ ಅದುವೆ ಪಾಲ್ಯಮಾ ಕೈವಲ್ಯಂ: **ಅಜಿತಪು,** ೬. ೭೭)

**ಪಾಲ್ವರಿ** – ಹಾಲಿನ ಪ್ರವಾಹ (ಸುರತರಂಗಿಣಿ ಎಂಬಂತಿರೆ ಜಿನಶಿಶುಸವನದ ಪಾಲ್ವರಿ ಎಸೆದುದು ಸುತ್ತಿ ಸುರಿದ ಸರಭಸದಿಂದಂ: **ಶಾಂತೀಶ್ವಪು,** ೧೪. ೧೩೬)

**ಪಾಲ್ವೊನಲ್** – ಪಾಲ್ದೊಱೆ (ಆ ಕುಮುದಾಕರಂಗಳ ತನಿವೆಳಗಿನ ಬಳಗಮಂ ಪಾಲ್ವೊನಲ ಪೂರಮೆಂದು ಪೀರ್ವಾಸೆಯಿಂ ಪರಿತರುತಿರ್ದ ತರುಣಕಲಹಂಸಪ್ರಸರಮುಂ: **ಕುಸುಮಾಕಾ,** ೨. ೭೧ ವ)

**ಪಾಲ್ವೊದೆ** – ಬಿಳಿಯ ಸುಣ್ಣ (ಅರೆದೊಡೆದ ಸೌಧಸಂತತಿಗೆ ಪಾಲ್ವೊದೆಯಪ್ಪ ಕಟಿಲ್ಚಿ ಕೂಡೆ ಕಪುರ್ವವಳುಕಪ್ಪ ಅಗುರ್ವಮನೊಳಕೊಂಡುದು ಚಂದ್ರಿಕೆ: **ಜಗನ್ನಾವಿ,** ೧೬. ೧೦೯)

**ಪಾವಕ** – ಅಗ್ನಿ (ಕವಿದುವು ಸಪ್ತಸಾಗರಜಲಂಗಳೆ ಲೋಕಮಂ ಎಂಬಿನಂ ಕವಿದು ಮುಗಿಲ್ಗಳಲ್ಲಿ ಕಱೆಯುತ್ತಿರೆ ಪಾವಕಂ ಉರ್ಕುಗೆಟ್ಟು ಇದೆಂತುವೊ ತೊದಳಾಯ್ತು ದಾನಂ ಎನೆ ಮಾರುತಬಾಣದೆ ಮೇಘಮಾಲಿಕಾನಿವಹಮಂ ಎಚ್ಚು ಕೂಡೆ ಶರಪಂಜರಮಂ ಪಡೆದಂ ಗುಣಾರ್ಣವಂ: **ಪಂಪಭಾ,** ೫. ೯೬); ನವಿಲು (ಸುರಪತಿಯ ಬೆಳ್ಗಡಿಯ ರಥಚರಣದ ಪಾವಕನ ಮುನಿಯ ಧರ್ಮಜನ .. .. ಪೆಸರ ಖಗಕುಳಂ ಕರಮೆಸೆಗುಂ: **ರಾಜಶೇವಿ,** ೫. ೬೦)

**ಪಾವಕದಿಕ್ಕು** – ಆಗ್ನೇಯ (ಪಾವಕದಿಕ್ಕಿನಂತೆ ವನದಂತೆ .. .. ಕಾಮಿಜನದಂತೆಸಮುತ್ಕಳಿಕಾಕುಳಂ ಕೊಳಂ: **ಪುಷ್ಪದಂಪು,** ೨. ೬೩)

**ಪಾವಡಿಗ** – ಹಾವಾಡಿಗ (ಪಾವಡಿಗನೆನಿಪವನ ಮೆಯ್ಯಂ ಕಿಡಿಸಲಾರ್ತಪುವೆ ತಮ್ಮ ನಚ್ಚಿನ ನಾಗರ್: **ಸಮಯಪ,** ೯. ೮೦)

**ಪಾವಡೆ** – ಬಟ್ಟೆ (ಪಾವನ ಪರಮ ಸುಚರಿತ್ರೆಗೆ ಪಾವಡೆಯಂ ಪಾಸಲುಂ .. .. ಪರಿಜನಮಂ ಪೆಸರ್ವೆಸರೊಳೆ ಕರೆದು: **ವರ್ಧಮಾಪು,** ೧೧. ೫೨ ವ)

**ಪಾವನಿ** – ಹನುಮಂತ, ಭೀಮ (ಕೋಪಾಗ್ನಿ ಪಾವನಿಗಂ ಪಾಂಡವಮಧ್ಯಮಂಗಂ ಒಗೆದತ್ತು ಅಂದು ಆಗಳ್ ಅತ್ಯದ್ಭುತಂ: **ಕರ್ಣನೇಮಿ,** ೧೦. ೧೧೨)

**ಪಾವಸೆ** – ಪಾಚಿ (ಶಿರೀಷಮಂಜರಿಯನೀಕ್ಷಿಸಿ ಪಾವಸೆಗೆತ್ತು ತೃಷ್ಣೆಯಿಂ ಬಲವರುತಿರ್ದುದು .. .. ಬಾಲಮರಾಳಮಂಡಳಂ: **ಕಾದಂಬ,** ೬. ೧೬೮)

**ಪಾವು** – ಹಾವು (ಅಂತು ಪಾವು ಕೊಳಲೊಡಂ ವಿಷಮವಿಷಧರವಿಷದೂಷಿತನಾಗಿರ್ದ ಕುಮಾರನಂ ಗಾರುಡಿಗರ್ ಬಂದು ಕಂಡು: **ಪಂಚತಂತ್ರ,** ೧೮೫ ವ)

**ಪಾವುಕೊಳ್** – ಹಾವು ಕಚ್ಚು (ಮನೆಗೆ ಪೋಗಿ ಇರ್ಪನ್ನೆಗಂ ಆ ಇರುಳೊಳೊ ಪಾವು ಕೊಳೆ ಸತ್ತು: **ವಡ್ಡಾರಾ,** ಪು ೧೨, ಸಾ ೮)

**ಪಾವುಗಿಱು** – ಹಾವೆಂದು ಭ್ರಮಿಸು (ಪೊಱಪೊಣ್ಮುವ ಧೂಪಧೂಮಯಷ್ಟಿಗೆ ನವಿಲೊಸೆದು ಪಾವುಗೆತ್ತಾ ಪುರದೊಳ್: **ಅಜಿತಪು,** ೨. ೧೮)

**ಪಾವುಗೆ** – [ಪಾದುಕಾ] ಪಾದರಕ್ಷೆ (ವಿಷಮೋಚಿಕೆಗಳೆಂಬ ಪಾವುಗೆಗಳುಂ ಅಭೇದ್ಯಮೆಂಬ ಕವಚಮುಂ: **ಆದಿಪು,** ೧೫. ೩ ವ)

**ಪಾವುಡ** – [ಪ್ರಾಭೃತ] ಕಾಣಿಕೆ (ಪರರ್ಗೆ ಉಪಕರಿಪ ಎಡೆಗಳ್ಗೆ ಉಪಕರಣಂ ತನು ತೃಣದ ತೆಱದೆ ಲಘು ಜೀವಿತಂ ಎಂಬೆರಡುಂ ಪಾವುಡಂ ಇಂತೀ ಬರವಿಂಗೆ: **ಕಾದಂಸಂ,** ೫. ೬೨)

**ಪಾವು ತಿನ್** – ಹಾವು ಕಚ್ಚು (ಪಾವು ತಿನೆ ಸತ್ತವಂಗೆ ಆ ಪಾವಿನ ಜೀವಿಸುವ ಬರಿಸದೊಳ್ ಭಾಗಮಂ ಆ ಪಾವಡಿಗಂ ಗಡ ಕುಡುವಂ: **ಸಮಯಪ,** ೧೦. ೧೩೦)

**ಪಾವುಮೆಕ್ಕೆ** – ಒಂದು ಕಹಿಕಾಯಿಯ ಗಿಡ (ಕಳ್ಳನ ನನ್ನಿಯಂತೆ ಪಱಣಿಯ ಶೋಭೆಯಂತೆ ಪಾವುಮೆಕ್ಕೆಯ ತಂಪಿನಂತೆ, **ಧರ್ಮಾಮೃ,** ೮. ೫೭ ವ)

**ಪಾಶಪಾಣಿ** – ಕೈಯಲ್ಲಿ ಹಗ್ಗವನ್ನೇ ಆಯುಧವಾಗಿ ಹಿಡಿದವನು, ವರುಣ (ವರುಣಂ ಪಶ್ಚಿಮದಿಕ್ಪತಿ ಶರನಿಧಿಪತಿ ಪಾಶಪಾಣಿ: ಅಭಿಧಾವ, ೧. ೧. ೪೩); ಯಮ (ನೀನುಳ್ಳೊಡೆ ಎಲ್ಲಂ ಒಳವು ಎಂದಿರೆ ನಿನ್ನುಮನಿರಿಸದೆ ಕುರುವಂಶಾನಿಮಿತ್ತರಿಪು ಪಾಶಪಾಣಿ ಸವಿನೋಡಿದನೇ: **ಗದಾಯು,** ೩. ೭೯)

**ಪಾಶುಪತ** – ಒಂದು ಶೈವಪಂಥ (ಕ್ರಮದಿಂ ವರ್ತಿಸುವಾ ಕಾಳಾಮುಖಾಖ್ಯ ಕಪಾಳಿ ಪಾಶುಪತ ಶೈವರೊಳ್ ಒರ್ವ ಮಹಾಬ್ರತಿ ಗೊರವಂ ರುದ್ರಮಾರ್ಗದಿಂ ನಡೆವಂ: **ಸಮಯಪ,** ೧೪. ೫೦)

**ಪಾಶುಪತವ್ರತೆ** – ಪಾಶುಪತ ಪಂಥಕ್ಕೆ ಸೇರಿದವಳು (ನಿರ್ಮಳೆಯಂ ಅಮಳಧೈರ್ಯಾದಿ ಗುಣಾನ್ವಿತೆಯಂ ದೃಢ ಪಾಶುಪತವ್ರತೆಯಂ ಕನ್ಯಕೆಯಂ ಅಂದು ಕಂಡಂ ಕ್ಷಿತಿಪಂ: **ಕಾದಂಸಂ,** ೩. ೩೨)

**ಪಾಶುಪತಾಸ್ತ್ರ** – ಶಿವ ಅರ್ಜುನನಿಗಿತ್ತ ಅಸ್ತ್ರ (ಪೆಱತೇನುಮನೊಲ್ಲೆಂ ನಿಮ್ಮಡಿ ಪಾಶುಪತಾಸ್ತ್ರಮಂ ದಯೆಗೆಯ್ವುದು: **ಪಂಪಭಾ,** ೮. ೨೫ ವ)

**ಪಾಷಂಡಿ** – ಧರ್ಮವಿರಹಿತ (ಧರೆಯೊಳ್ ಸಲೆ ಪಾಷಂಡಿಗಳರೆಬರ್ ಪುಟ್ಟಿಯುಮಡಂಗುವರ್: **ಆದಿಪು,** ೧೫. ೨೯)

**ಪಾಷಂಡಿಮೂಢತ್ವ** – ಧರ್ಮವಿರಹಿತನ ಸತ್ಕಾರಾದಿಗಳು (ಮತಿವಂತಂ ಸಲೆ ದೇವಮೂಢತೆಯುಮಂ ಪಾಷಂಡಿಮೂಢತ್ವಮಂ ಸತತಂ ಲೌಕಿಕಮಪ್ಪ ಮೂಢತೆಯುಮಂ ನಿರ್ವ್ಯಾಜದಿಂ ಬಿಟ್ಟು: **ಸಮಯಪ,** ೯. ೨)

**ಪಾಷಾಣ** – ಕಲ್ಲು (ಭವವಿಷಾವೇಶವಿಧ್ವಂಸನಂಗೆಯ್ದುವೆ ಮೋಹಧ್ವಾಂತಮಂ ತೂಳ್ದಿದುವೆ ಬಗೆವೊಡೆ ಏ ಬಾರ್ತೆ ಪಾಷಾಣರೂಪಂ: **ಮಲ್ಲಿನಾಪು,** ೧. ೬)

**ಪಾಷಾಣಹೃದಯ** – ಕಲ್ಲಿನಂತೆ ಕಠಿಣ ಮನಸ್ಸಿನವನು (ಪಾಷಾಣಹೃದಯರಪ್ಪೊಡೆ ದೂಷಿಸಿ ಮತ್ಕಾವ್ಯಮಂ ಪರೀಕ್ಷಿಸುಗೆ ಗುಣಾನ್ವೇಷಿಗಳಪ್ಪೊಡೆ ಕನಕನಿಕಷದೊಳೇಂ ನಿಕಷದೃಷದಮನಱಸದರೊಳರೇ: **ಲೀಲಾವತಿ.** ೧. ೬೯)

**ಪಾರ್ಷ್ಣಿ** – ಹಿಮ್ಮಡಿ (ಗೂಢ ಗುಲ್ಫ ಪಾರ್ಷ್ಣಿಗಳನೊಳಕೊಂಡ ಮನುಜಮಾಂಧಾತನ ಪೊಱ ಅಡಿಗಳ್ ವಿರೋಧಿ ಭೂಪಾಳರ ಅಡಿಗೆಱಗಿಸಿದ ಸಂತೋಷದೊಳ್: **ಪಂಪಭಾ,** ೨. ೩೯ ವ)

**ಪಾಸ** – [ಪಾಶ] ಹಗ್ಗ (ಯಾರುಮನೋಸರಿಸದೆ ಬಿಗಿದ ಪಾಸಮಿದೆಂಬಂತೆ ನೀಳ್ದ ಕೆಂಜೆಡೆಗಳೊಳಂ: **ಕಬ್ಬಿಗಕಾ,** ೧೩೦ ವ)

**ಪಾಸಗೆ** – ಪಗಡೆಯ ದಾಳ (ಭಯಮಱಿಯದ ಕಲಿಯುಂ ಚಾಗಿಯುಂ ಎನಿಸದೆ ನಾಡೆ ಲೋಭಿಯುಂ ಪಂದೆಯುಂ ಆಗಿಯೆ ಬಾಟ್ವಂಗಲ್ಲದೆ ಸೂಳೆಯ ಕಣ್ ಪಾಸಗೆಯ ಕಣ್ಣುಂ ಏಂ ಉಱುಗುಮೇ: **ಪಂಪಭಾ,** ೬. ೭೩)

**ಪಾಸಗೆ** – ಪಗಡೆಯ ದಾಳ (ಸೂಳೆಯ ಕಣ್ ಪಾಸಗೆಯ ಕಣ್ಣುಮೇನುಱುಗುಮೇ: **ಪಂಪಭಾ,** ೩. ೭೩); ಮಲ್ಲಯುದ್ಧದ ಒಂದು ವರಸೆ ಎಸೆವ ಮುಹಗ್ಗಳಂ ಠಡಕಿ ಕಕ್ಕವಡಂ ಮುಹಡಂ .. .. ಪಾಸಗೆ ವನ್ನಿಮುಟ್ಟಿ ಚಟ್ಟುಸಿರಣವಟ್ಟಿ .. .. ಎನಿಪ್ಪ ಜೆಟ್ಟಿಗನ ಬಿನ್ನಣಮೊಪ್ಪೆ ಕಾದಿದರ್: **ಚಂದ್ರಪ್ರಪು,** ೫. ೭೮)

**ಪಾಸಟಿ** – ಸಮಾನ (ಮನುಜರದೇಂ ಪಾಸಟಿಯೆ ಜಿನಾರ್ಭಕಂಗೆ ಸಕಳಾವನಿಯೊಳ್: **ವರ್ಧಮಾಪು,** ೧೪. ೭೭)

**ಪಾಸಱೆ** – ಅಗಲವಾದ ಬಂಡೆ, ಹಾಸುಬಂಡೆ (ಒಗೆವೆನೊ ಬೀಸಿ ಪಾಸಱೆಯೊಳ್ ಅಟ್ಟುವೆನೋ ಕಡಲೊಳ್ ಕರುಳ್ಗಳಂ ತೆಗೆವೆನೊ .. .. ಎಂದು ..ನುಂಗುವಂತೆ ನಡೆನೋಡಿದನಾ ಶಿಶುವಂ ನಿಶಾಚರಂ: **ಪಂಪರಾ,** ೪. ೧೭)

**ಪಾಸಿಕೆ** – ಹಾಸಿಗೆ (ಅಂಗಸಂಭವಾನಳವೊಲಪ್ಪ ಕೆಂದಳಿರ ಪಾಸಿಕೆಯುಂ ವಿಷನಾಮವುಳ್ಳ ಶೀತಳಜಳಮುಂ ವಿಷಾಹಿಕುಲಮೊಂದಿದ ಚಂದನದಣ್ಪುಂ: **ಜಗನ್ನಾವಿ,** ೧೧. ೪೪)

**ಪಾಸಿಗೆ** – ಹಾಸಿಗೆ, ಶಯ್ಯೆ (ನಾಣಿಲಿತನಂ ಬೆಂಡೇರ್ಱವ ಕಣ್ ಬೀಯದ ಅಟ್ಟಿಱೊಳಂ ಪಾಸಿಗೆ ನಾಂಬ ಮುಂಬದಳುಂಬಂ ಕೂಟದೊಳ್ ನಲ್ಲರಾ: **ಚಂದ್ರಪ್ರಪು,** ೮. ೬೯)

**ಪಾಸಿಱೆ** – ಹರಡಿಕೊಂಡಿರು (ಲತಾಮಂಟಪಂಗಳೊಳಂ ತಳರೆ ತಾಗುವ ತೆರೆದುಱುಗಲಲೆಪದಿಂ ಸೂಸಿ ಪಾಸಿಱಿದು ಬಣ್ಣವುರಂ ತೀವಿದಂತೆ ಬೆಡಂಗುವಡೆದ: **ಕಾದಂಬ,** ೯. ೧೧ ವ)

**ಪಾಸು** – ಹರಡು (ಒರ್ವ ಪಾರ್ವಂ ವಿಸ್ತೀರ್ಣ ಜೀರ್ಣ ಕರ್ಪಟಾವೃತ ಕಟಿತಟನುಂ ಆಗಿ ಬಂದು ಕಣ್ಮುಚ್ಚಲ್ ಎಡೆವೇಡೆ ತನಗವರ್ ಪಾಸಲ್ಕೊಟ್ಟ ಕೃಷ್ಣಾಜಿನಮಂ ಪಾಸಿ

ಪಟ್ಟಿರ್ದನಂ: **ಪಂಪಭಾ,** ೩. ೩೧ ವ); ಹಾಸುಗೆ (ಪಾಸುಗಳೊಳ್ ನೆಲಸಿತ್ತು ಪೂತ ಗೊಜ್ಜಗೆಗಳ ಸಿಂದುರಂಗಳೊಳಗೆ ಓಗರಗಂಪನೆ ಬೀಱುತ; **ಪಂಪಭಾ,** ೫. ೩೦)

**ಪಾಸುಂಪೊಕ್ಕುಂ –** ಹಾಸುಹೊಕ್ಕು, ಉದ್ದಗಲವಾಗಿ (ಅಂತಿದಿರುಂ ಬಱಿಯುಂ ಪಾಸುಂಪೊಕ್ಕುಂ ದುಗುಣಮುಂ ತಿಗುಣಮುಂ ಅಡ್ಡಮುಂ ತಿಡ್ಡಮುಂ ಪರಿದು: **ಗದಾಯು,** ೬. ೨೯ ವ)

**ಪಾಸು –** ಹಾಸಿಗೆ (ಅರಿಗನ ಬೇಟದೊಂದೆ ಪೊಸಬೇಟದ ಕೇಸುರಿಯಿಂದಂ ಎಯ್ದೆ ದಳ್ಳುರಿ ನೆಗೆದಂದುದು ಕೆಂದಳಿರ ಪಾಸುಗಳಿಂ; **ಪಂಪಭಾ,** ೫. ೮)

**ಪಾಸುದಳಿರ್ –** ಹಾಸಿದ ಚಿಗುರು (ಪಾಸುದಳಿರ್ ಕರಿಂಕುವರಿದಂತಿರೆ ತೊಟ್ಟಿಲರ್ವಚ್ಚಮಾಕ್ಷಣಂ ಕೇಸುರಿ ಕೊಂಡವೊಲ್ ಮಿಗೆ ಮುರುಂಟೆ .. .. ಕಾಸಿದ ಕಾಮಪುತ್ರಿಕೆವಿಲಿರ್ದಳವಳ್ ವಿರಹೋಗ್ರವಹ್ನಿಯಿಂ: **ಶಾಂತೀಶ್ವಪು,** ೫. ೧೧೧)

**ಪಾಸೆ –** ಹಾವಸೆ (ನಲ್ಲಳ್ ಅಗಲ್ದಳ್ ಉರ್ವಿರೆ ಮೆಲ್ಲದೆ ಬಾಯಲ್ಲಿ ಪಾಸೆದಳೆದು ರಥಾಂಗಂ: **ರಾಜಶೇವಿ,** ೧೧. ೧೫)

**ಪಾಳಂಬಡು –** ಹರಕೆ ಹೊರು (ಅಱಸಿ ತಿಂಬ ದೈವಕ್ಕೆ ಪೋಗಿ ಪಾಳಂಬಡುವಂತೆ ಅತಿ ಮೋಹದಿಂದೆ ಪೋದೊಡೆ ಗತಿ ಕಿಡುಗುಂ: **ಪಾರ್ಶ್ವನಾಪು,** ೪. ೪೪)

**ಪಾಳಕಾಪ್ಯ –** [ಸಂಸ್ಕೃತದ ಆನೆ ಎಂಬರ್ಥದ ಕಾಪ್ಯ ಹಾಗೂ ದ್ರಾವಿಡ ಮೂಲದ ದಂತ ಎಂಬರ್ಥದ ಪಲ್>ಪಾಳ – ಈ ಶಬ್ದಗಳು ಸೇರಿ ರೂಪಿತವಾದ ಶಬ್ದ] ಗಜಶಾಸ್ತ್ರವನ್ನು ರಚಿಸಿದ ಒಬ್ಬ ಋಷಿ, ಗಜಶಾಸ್ತ್ರ (ಚಾಣಕ್ಯಂ ಸಾಮುದ್ರಿಕಂ ಶಾಲಿಹೋತ್ರಂ ಪಾಳಕಾಪ್ಯಂ ಹಾನಿತಂ ಚರಕಂ ಅಶ್ವಿನೀಮತಂ ಬಾಹಲಂ: **ವಡ್ಡಾರಾ,** ಪು. ೪. ಸಾ.೨)

**ಪಾಳಾಸ –** ಕುದುರೆ ಕಟ್ಟುವ ಹಗ್ಗ (ಮತ್ತಂ ಮಂದುರದೊಳ್ ನಟ್ಟ ಕೆಚ್ಚಿನ ಮುಂಡಿಗೆ ಮುಱಿಯೆ ಪಾಳಾಸಂ ಪಱಿಯೆ: **ಗಿರಿಜಾಕ,** ೨. ೧೦೫ ವ)

**ಪಾಳಿ –** ಚೂರ್ಣ (ಅತಿಸುರಭಿ ಸಹಕಾರ ಕಸ್ತೂರಿ ಕರ್ಪೂರಪಾಳಿಸಮ್ಮಿಶ್ರ ತಾಂಬೂಳರಾಗಾರಕ್ತಾಧರ ಪ್ರವಾಲಪ್ರಭಾಪ್ರಕಟಿತ ಪೂರ್ವಸಂಧ್ಯಾರಾಗನುಂ: **ಆದಿಪು,** ೩. ೯೦ ವ); ಬಾವುಟ (ರಾಜಸುತರ್ ಕೆಲಬರ್ ಬರೆ ಪಾಳಿಧ್ವಜ ಸಂಕುಲಮುಂ ಭಟಕಟಕಮುಂ ಆದಲೆಯೊಳ್ ಬರೆ ವಜ್ರಬಾಹು ಪಯಣಂ ಬಂದಂ: **ಪಂಪರಾ,** ೨. ೧೨)

**ಪಾಳಿಕೇತನ –** ಸಾಲು ಧ್ವಜ (ಪಾಳಿಕೇತನಕುಳಂಗಳಂ ಮರುತ್ಪಾಳಿಚಾರುತರಪಲ್ಲವಂಗಳಿಂ ಲೀಳೆಯಿಂ ತಳೆಯೆ ರಂಜಿಸಿತ್ತು ತದ್ಬಾಳಕೋತ್ತಮನ ಮುಂದೆ ಸುತ್ತಲುಂ: ಆಚವರ್ಧ, ೧೪. ೮); ಚಾಳುಕ್ಯರ ಕಾಲದ ರಾಜಚಿಹ್ನೆ (ಮುಂದೆ ಧವಳಚ್ಛತ್ರ ಚಂದ್ರಾದಿತ್ಯ ಪಾಳಿಕೇತನಾದಿ ರಾಜಚಿಹ್ನಂಗಳುಂ ಮೊಱಗುವ ಮಂಗಳತೂರ್ಯಂಗಳೆಸೆಯೆ: **ಪಂಪಭಾ,** ೩. ೪೮ ವ)

**ಪಾಳಿಧ್ವಜ –** ಪಾಳಿಕೇತನ (ಬೆಳ್‌ಗೊಡೆಗಳುಂ ಪಾಳಿಧ್ವಜಂಗಳೂಂ ತಜಿನೆವಟಿಯಿಗೆಗಳುಂ ಚಂದ್ರಾದಿತ್ಯರ್ಕಳುಂ: **ವಡ್ಡಾರಾ,** ಪು ೧೩೩, ಸಾ ೧೯)

**ಪಾಳಿಸು –** ರಕ್ಷಿಸು (ಮೂಳರಂ ಪಾಳಿಸಿಯುಂ ಕೋಶಮಂ ಪೋಷಿಸಿಯುಂ ಇಂತು ಸಾಮ್ರಾಜ್ಯಮಂ .. .. ನಿಜಾಯತ್ತಮೆನಿಸಿದಂ: **ಚಂದ್ರಪ್ರಪು,** ೨. ೩೧); ಅನುಸರಿಸು (ರಾಮನರೇಮದ್ರನುಂ ನೆಗೞ್ದ ಪಾಂಡುನರೇಂದ್ರುನ ಪುತ್ರರಯ್ವರುಂ ಪ್ರೇಮದಾರ್ಹತಬ್ರತಮನೊಪ್ಪಿಎ ಪಾಳಿಸಿ: **ಸಮಯಪ,** ೨. ೫೭)

**ಪಾಳೆ –** ಹಾಳೆ, ಅಡಕೆಪಟ್ಟೆ (ಪೂಗೊಂಚಲುಮಂ ಸಂಪಗೆಯ ಮುಗುಳುಮಂ ಮಾವಿನ ಮಿಡಿಯ ಗೊಲಯುಮಣ ಅಡಕೆಯ ಪಾಳೆಗಳೊಳಂ ಎಳವಾಟಿಯ ಬಿಳಿಯ ಪೊರೆಗವಳಿಗೆಗಳೊಳಂ .. .. ಕಟ್ಟಿ: **ಲೀಲಾವತಿ,** ೧೩. ೩೬ ವ)

**ಪಾಳೇಳ್ –** ಹಾಳು ಬೀಳು (ಬೆಳ್ವೆಳಗಿನ ಬಾಳ್ವೆಳೆಯಂ ತಳ್ವದೆ ಬಾಂಬೊಲದೊಳನುಣಕರಶಿಖಿಶಿಖೆ ಪಾಳೇಳ್ವಿನಂ ಅಳುರ್ದು: **ರಾಜಶೇವಿ,** ೧೨. ೧೩)

**ಪಾಱ –** ವಿಟ, ಜಾರ (ಪಾಱನದಿರ್ಪಲ್ ಪಟಿಕೆಯ್ವಳನಂತೆಱಿಯನುಮಟಲಿಸಿ ಗೆಲಲಱಿದವನಾತನೆ ದೇವಂ: **ವರ್ಧಮಾಪು,** ೮. ೯೪)

**ಪಾಱಟೆ –** ಚಾಂಚಲ್ಯವಿಲ್ಲದಂತಾಗು (ಪಾಱಟೆಯದ ಮನಮ ಪೊಱಮಾಱುವ ಸಕಳೇಂದ್ರಿಯಂಗಳಂ ಪ್ರಕೃತಿಯ ನಿಟ್ಟೇಱಿದ ಮದಾಂಧಗಜಮಂ ಮೀಱೆ ಮರ್ದುಂಕುವರುಮೊಳರೇ ಮಾನವಮದನಾ: **ಲೀಲಾವತಿ,** ೪. ೪೯)

**ಪಾಱೆ –** ಹಾದರಗಿತ್ತಿ (ಪಾಱೆಕ್ಕಿ ಪಱಿವಲ್ಲಿ ಬಾಲಗಚ್ಚೆ ಕಾಲಂ ತೊಡರೆ ಕೆಡೆದೊಡೆದ ಮೊಣಕಾಲೊಳುಪ್ಪಂ ಪತ್ತಿಸಿ ಪರಿವ ಪಾಱೆಗಳುಮಂ: **ಲೀಲಾವತಿ,** ೫. ೧೧೪ ವ)

**ಪಾಱೆಕ್ಕು –** ಹಾದರ ಮಾಡು (ಪಾಱೆಕ್ಕಿ ಪಱಿವಲ್ಲಿ ಬಾಲಗಚ್ಚೆ ಕಾಲಂ ತೊಡರೆ ಕೆಡೆದೊಡೆದ ಮೊಣಕಾಲೊಳುಪ್ಪಂ ಪತ್ತಿಸಿ ಪರಿವ ಪಾಱೆಗಳುಮಂ: **ಲೀಲಾವತಿ,** ೫. ೧೧೪ ವ)

**ಪಾಱೆಸು –** ಹಾರಿಸು (ಕ್ಷಿತಿಪತಿಯ ಧೈರ್ಯಗುಣಪರ್ವತಮಂ .. .. ಅತಿ ವೇಗದೆ ಪಾಱೆಸಿದುದು ಸುತವಿರಹಪ್ರಳಯ ಪರುಷರೂಪವನಾಪಾತಂ : ಚಂದ್ರಪ್ರಪು, ೫. ೯); ಓಡಿಸು, ನಿವಾರಿಸು (ಗಾಣರ ಗೇಯಂ .. .. ಓಪಳ ಸೋಂಕು .. .. ಕಂಪು ಕಂಪನೊಳಕೊಂಡವೊಂದೆಲರೆಂಬಿವು ಅಂದು ಪಾಱೆಸುವುವು ಉದಗ್ರವೀರಭಟರ ಆಹವಕೇಳಿ ಪರಿಶ್ರಮಂಗಳಂ: **ಪಂಪಭಾ,** ೧೧. ೪); ಲಪಟಾಯಿಸು (ಆತಂ ಮಾಡುವನಾಚಾರಮಂ ಪೇಟ್ಟೊಡೆ .. .. ವೀರರ ಪಡಪಂ ಪಾಱೆಸುವಂ: **ಧರ್ಮಾಮೃ,** ೨. ೪೦ ವ)

**ಪಾಱು –** ಹಾರು (ಪಾಱುವ ಪಾಱುವಳಂದಮಂ ಬೆಡಂಗಿಣಿಯರಮೀಕೆಗೆಂದು ಪೊಗೞ್ವರ್: **ಆದಿಪು,** ೪. ೪೭); ಹರಿಗೋಲು (ಅಂತು ಪರಾರ್ಥ್ಯಮಪ್ಪ ಸ್ತ್ರೀರತ್ನಮಂ ಪೇಱಿದ ಪಾಱನೆ ಪೋಲ್ತು ಕೀಱೆ ಪಾಱುವ ಅಮಿತರಯಗಮನ ಖೇಚರವಿಮಾನಕೇತನದ ಕೋಳೊಳ್: **ಶಾಂತಿಪು,** ೨. ೮೩ ವ); ಚಾಂಚಲ್ಯ (ಪಾಱನೆ ಕರಂ ಪಿಱಿದುಂ ಗಱಿಪುತ್ತುಮಿರ್ಪಳಂ ಸಾರಿಕೆಯೆಂಬರಲ್ಲದೆ ಅಭಿಸಾರಿಕೆಯೆಂಬರೆ ಬುದ್ಧಿಯುಳ್ಳವರ್: **ಪಂಪಭಾ,** ೪. ೮೩)

**ಪಾಱುಂಬಳೆ –** ಹಾರುವ ಬಳೆ, ಚಕ್ರಾಯುಧ (ಪಾಱುವ ಪಾಱುಂಬಳೆ ಕೊಳೆ ಜೀಱೆೞ್ದುಂಬರಕೆ ತಲೆ ಸಿಡಿಲ್ದೊಡಂ ಆ ಕಾಯ್ಪಾಱದೆ ಹರಣಂಗೆಯ್ದುವು ಜಾಱಲ್ಲದೆ ಜೋದರ ಅಟ್ಟೆಗಳ್ ಕೆಲವಾಗಳ್: **ಪಂಪಭಾ,** ೧೦. ೯೫)

**ಪಾಱುಗಂಡ –** ಚಂಚಲ ವ್ಯಕ್ತಿ (ಭುಜಂಗನೆ ತೋಳೊಳಿರ್ಕೆ ಸಾಯಿರ ವರಿಸಂಬರಂ ಸುಡುವೆನಾಂ ಗಡ ಮತ್ತಿನ ಪಾಱುಗಂಡರಂ: **ಲೀಲಾವತಿ,** ೨. ೭೨)

**ಪಾಱುಗೆಯ್ತ** – ಹಾರುವಿಕೆ, ಚಂಚಲವೃತ್ತಿ, ಹಾದರ (ಮಗಳ್ ಪಾಱುಗೆಯ್ತಂ ಮಿಗೆ ನಿಚ್ಚಂ ಪಂಕಜಾಶ್ರಿತೆಯೆನಿಸಿ ಕಥಭೃರ್ಗ್ಗದೊಳ್ ಕ್ರೀಡಿಪಳ್: **ಶಬರಶಂ,** ೧. ೩೨)

**ಪಾಱುತನ** – ಹಾರಾಟ (ಪಾಱುಂ ಬಾಳಂ ಮಸೆವಂತೆ ಪಾಱುತನಮಿಂತಾಯ್ತು: **ನೇಮಿನಾಪು,** ೩. ೧೦)

**ಪಾಱುನೀಱೆ** – ಹಾರಾಡುವ ಸುಂದರಿ, ಖೇಚರಸ್ತ್ರೀ (ಎಸಟ್ಟಸಗಿದಲರ ಗೊಂಚಲ್ಗಳನಿಳಿಪ ಚಂಚರೀಕಸ ೦ಚಯದಂತೆ ಪಾಱೆನೀಱೆಯರ್ ಪುಷ್ಪಕವಿಮಾನಂಗಳಿಂದ ಅವನಿತಳಕ್ಕವತರಿಸಿ: **ಅನಂತಪು,** ೨. ೩೪ ವ)

**ಪಾಱುಬೊಜಂಗ** – ಚಂಚಲ ವಿಟ (ತೆಂಕಣ ಗಾಳಿ ಬಸಂತದೇಟ್ಗೆಯೊಳ್ .. .. ಪರಿವ ತೊಱೆಗಾಲ್ಗಳ ಸೀರ್ಪನಿಗಳನೀಂಟಿಯುಂ ಇಂತು ಪಾಱುಬೊಜಗನ ಗೆಯ್ತಮಂ ಒಳಕೊಂಡು ತೀಡೆ: **ಕಬ್ಬಿಗಕಾ,** ೪೫ ಮತ್ತು ೪೫ ವ)

**ಪಾಱೇಟಿಲ್** – ಚಿಮ್ಮಿ ಹೋಗು (ಏಱುಂ ಮಾಳವನಮಂ ಪಾಱೇಟ್ ತಗುಳ್ದಿಱಿದು ನರಗನುರಿಪಿದೊಡೆ ಕರಿಂಕೇಱಿಸಿದಾತನ ತೇಜದ ಬೀಱಲಂ ಅನುಕರಿಪುವಾದುವು ಒಗೆದುರಿಗಳ್: **ಪಂಪಭಾ,** ೧. ೩೫); ಅವಮಾನಗೊಳ್ಳು (ಪಾಱೇಟ್– .. .. ಅಪಮಾನೇಚ: **ಶಬ್ದಮದ,** ಧಾ ೯೩೦)

**ಪಾೞ್** – ಹಾಳು ಭೂಮಿ (ಇನರಶ್ಮಿಯೆಂಬ ಕಸಮಂ ಕಳೆದು ಅಂಬರಮೆಂಬ ಪಾೞನೇಱೆಸಿದುದು ಅಸಿತಾಂಬುವಾಹಕಕುಳಮೆಂಬ ಕುಟುಂಕದಂಬೋತ್ಕರಂ: **ಆದಿಪು,** ೬. ೭೧); ಬರಿದಾದದ್ದು (ಅಱೆಕೆಯ ಸರಲಿಂದೂಱೆಕೊಂಡಾವ ಮೆಯ್ಯುಂ ಪಾೞಂಬಂತಾಗೆ ಪಾರ್ದಾರ್ದುದುಱೆಸೆ ಮುಳಿಸಿಂನೂರ್ವರುಂ .. .. ಬ್‌ರ್: **ಪಂಪಭಾ,** ೧೧. ೯೫)

**ಪಾೞಂಬಡು** – ಹರಕೆ ಹೊತ್ತುಕೊ (ಸುತನಿಂದಂ ಬೇಳಾದಂ ನೆಱೆ ಪಾೞಂಬಟ್ಟಪನಟ್ಟೆ ತಿಂಬ ದೈವಕ್ಕೀಗಳ್: **ಚಂದ್ರಪ್ರಪು,** ೧೦. ೫೫)

**ಪಾೞಿ** – ಕ್ರಮ, ಸರದಿ (ಪಾೞಿಯನೊಕ್ಕು ಆಕೆಯಂ ಅಂದು ಬಂಧುಜನಮೆಲ್ಲಂ ನಿಂದು ನೋಟ್ಟಾಕೆಯಂ ತನಗಿದಿರಾಗಿ ಬರ್ಪ ಪಾಣ್ಬೆಯಂ: **ಸುಕುಮಾಚ,** ೭. ೨೯ ಮತ್ತು ೨೯ ವ); ಕರ್ತವ್ಯ (ಶನಿ ನಿಲ್ವವೊಲಿಲ್ಲಿ ಪಾೞಿಗಿನ್ನೆವರಂ ಇರ್ದೆವು ಇನ್ನೆಮಗೆ ನಿತ್ತರಿಸಲ್ ನೆಱವಿಲ್ಲ: **ಆದಿಪು,** ೯. ೮೯); ನ್ಯಾಯ [ದಾಯಿಗರತ್ತಣಿನಪ್ಪ ಅಪಾಯಕೋಟಿಗೆ ಪವಣಿಲ್ಲ ಕಲ್ಪಿಗೆ ಎಡೆಯಾವುದೊ ಪಾೞಿಯ ಬಟ್ಟೆದಪ್ಪಿ ಮುಂ ನೆಗಟ್ದೆಡೆಯಿಲ್ಲ ಪೋಗು ಜಯಮಕ್ಕೆ ಶುಭಂ ನಿಮಗಕ್ಕೆ ಮಂಗಳಂ: **ಪಂಪಭಾ,** ೭. ೨೧); ಗದ್ದೆ (ತೆನೆದುಱುಗಲೊಳ್ ಒಱೆತು ಪರಿವ ಪಾಲಂ ಕಳಹಂಸನಿಕಾಯಮೀಂಟಿ ಪಾಳಿಇಯನನವರತಂ ಬಿಡದು ಪಾೞಿಯಂ ಪಾಳಿಪವೋಲ್; **ಶಾಂತೀಶ್ವಪು,** ೧. ೯೪)

**ಪಾೞಿಗಿಡು** – ಕರ್ತವ್ಯಭ್ರಷ್ಟನಾಗು (ಒಸೆದು ಅರ್ಜುನಂಗೆ ಮುಂ ಕಳಶಸಂಭವಂ ಮಾನ್ಯಪದವಿಯಂ ಮಾಡಿದೊಡಂ ಬೆಸುಗೆಗಿಡೆ ಪಾೞಿಗಿಡೆ ತನ್ನಸುವಂ ತೆಲ್ಲಟಿಗೆಗುಡುವ ತೆಱದೊಳ್ ಕೊಟ್ಟಂ: **ಗದಾಯು,** ೨. ೧೫)

**ಪಾೞುನಾಡು** – ಹಾಳುಬಿದ್ದ ದೇಶ (ಪಾೞುನಾಡಂ ನಂಬಿ ತೀವಿದ ನಾಡಂ ಕಿಡಿಸುವ ಭೂಪನಂದಂ .. .. ಪೋಲ್ವೆಂ: **ಧರ್ಮಾಮೃ,** ೮. ೩೧ ವ)

**ಪಾೞಿಕಾಱ** – ಸರದಿಯ ಸೇವಕ (ಉದಯರಾಗಮುಂ ಒಡನೆ ಸಡಿಲೆ ಪರಿತಂದು ಎಲೆ ಪಾೞಿಕಾಱಾ ಕೇಳ್ ಎಂದು ಇಂತೆಂದರ್ಳ್: **ಹರಿವಂಶ,** ೧೪. ೧೬ ವ)

**ಪಾೞ್ಬಸದಿ** – ಹಾಳುಬಿದ್ದ ಬಸದಿ (ಪಾೞ್ಬಸದಿಯ ಪೆಣ್ಣ ಜೋಹದವೊಲ್ ಒಪ್ಪಿದಳ್ ಒರ್ವಳ್ ಅನಂಗರಾಗದಿಂ: **ಶಾಂತಿಪು,** ೮. ೮೮)

**ಪಾೞ್ಮಸಗು** – ಹಾಳುಹಾಳುಸುರಿ (ದೆಸೆ ಪಾೞ್ಮಸಗಿರ್ದಪುದು ಅಂಧನಾದೆಂ ಆರ್ ಶರಂ ಎನಗೆ ಎನ್ನ ಬಾೞ್ಕೆಯೆ ನಿರರ್ಥಕಂ: **ಕಾದಂಸಂ,** ೪. ೮೬)

**ಪಾೞ್ವಕ್ಕೆವಡು** – [ಪಾೞ್ವಕ್ಕೆ+ಪಡು] ಹಾಳುಬಿದ್ದ ಮನೆಯಲ್ಲಿ ಮಲಗು, ಅಂದರೆ ವಾಸಿಸು (ಮದೀಯ ಪ್ರಾಣವಲ್ಲಭನನೆಲ್ಲಿ ಪೊಕ್ಕುಮೆಲ್ಲಂದದೊಳಮಱಸು ಎಂದಟ್ಟಿದೊಡೆ ಬಂದಿದನಿಲ್ಲಿ ಪಸರಿಸಿ ಪಾೞ್ವಕ್ಕೆವಟ್ಟಿರ್ದೆಂ: **ಆದಿಪು,** ೪. ೨೧ ವ)

**ಪಾೞ್ವಸಿಱ್** – ಹಾಳು ಹೊಟ್ಟೆ, ಹಸಿದ ಹೊಟ್ಟೆ (ಪಾೞ್ವಸಿಱೊಳ್ ಸಾಸವೆಯಂ ಕುಡುದರಂತೆಮಱುಗಿ ಸುಂಟಿ ತಿಂದ ಬಾಯೊಳ್ ಬಿಸಿನೀರಂ ಕುಡಿದರಂತೆ ಮಿಡುಮಿಡುಮಿಡುಕಿ: **ಧರ್ಮಾಮೃ,** ೧೦, ೧೨೮ ವ)

**ಪಿಂಕು** – ಕುಕ್ಕು (ಅರೆಮುಗಿದ ದಿಟ್ಟಿ ಬಾಗಿದ ಕೊರಳ್ ಉರಮಂ ಪಿಂಕಿಕೊಂಬ ತುಂಡಂಬಿಡಿದು: **ತ್ರಿಷಷ್ಟಿಪು,** ೯. ೩೪)

**ಪಿಂಗ** – ಕಂದು ಬಣ್ಣ[ದ] (ಹಿಮಶೈಲಾಗ್ರಸ್ಸರೋರುಹರಜಃ ಪಿಂಗಾಗೆಯಂ: **ಆದಿಪು,** ೧೧. ೫೬)

**ಪಿಂಗಚಕ್ಷು** – ಕೆಂಗಣ್ಣುಳ್ಳವನು, ದುರ್ಯೋಧನ (ಪಿಂಗಚಕ್ಷುರ್ಬಲಮಂ ಅಮಮ ಪೋಲ್ತೊಪ್ಪುತ್ತಿರ್ದತ್ತರಣ್ಯಂ: **ಶಬರಶಂ,** ೩. ೨೯)

**ಪಿಂಗಲಿ** – ಗೂಬೆ (ಕಾಕಾರಿ ಕೌಶಿಕಾಖ್ಯಂ ಉಲೂಕಮ ಪಿಂಗಲಿ ನಿಶಾಟನಂ ತಾನಕ್ಕುಂ: **ಅಭಿಧಾವ,** ೧. ೯. ೧೫)

**ಪಿಂಗಲೆ** – ಗೂಬೆ (ಪೋದರಗೆಗಳ ಪಿಂಗಲೆಗಳ ಪೊಣರ್ವಕ್ಕಿಗಳ ಮಯೂರಂಗಳ ಕೋಗಿಲೆಗಳ ದನಿಯಿಂ: **ತ್ರಿಷಷ್ಟಿಪು,** ೨೭. ೮೯)

**ಪಿಂಗಳನೇತ್ರ** – ಕೆಂಗಣ್ಣು, ಶಿವ (ಪಿಂಗಳನೇತ್ರನಂ ಎಂತುಂ ಪಿಂಗದೆ ಪೂಜಿಸುತುಮಿರ್ಪ .. .. ಶಿವಭಕ್ತನುಮಂ ಗಹನಂಗೆಯ್ದರ್: **ಸಮಯಪ,** ೪. ೭೮)

**ಪಿಂಗಾಕ್ಷ** – ಪಿಂಗಚಕ್ಷು (ಎಂದು ಪಿಂಗಾಕ್ಷಂ ಕೋಪಾರುಣೀಕೃತನೇತ್ರನಾಗಿ ತನ್ನ ತಮ್ಮನ ಕಳೇಬರಮಂ ನೋಡಲಾಱದೆ ಅಲ್ಲಿಂ ತಳರ್ದು: **ಗದಾಯು,** ೫. ೮ ವ)

**ಪಿಂಗಾಲ್** – ಹಿಂಗಾಲು, ಹಿಮ್ಮಡಿ (ಅಂತು ಸೂತಿಕಾಸದನಮಂ ಪೊಕ್ಕು ದೇವಕಿಯ ಮುಂದೆ ಪಟ್ಟಿರ್ದ ಶಿಶುವಿನ ಪಿಂಗಾಲಂ ಪಿಡಿದುಕೊಂಡು: **ಜಗನ್ನಾವಿ,** ೩. ೧೩ ವ)

**ಪಿಂಗಿಸು** – ಹಿಂಗಿಸು, ಹೋಗಲಾಡಿಸು (ಸಿಂಗಮಂ ಓವದೆ ಎಕ್ಕತುಳದಿಂ ತವೆ ತೂಳ್ದಿಯೆ ಸಿಂಧುದೇಶದಿಂ ಪಿಂಗಿಸದಂ ಮಹಾಭಯಮಂ: **ಶಾಂತೀಶ್ವಪು,** ೩. ೨೮)

**ಪಿಂಗು** – ಹಿಂದೆ ಸರಿ (ಕಿಡಕಿಯನೊಲ್ದು ನೋಡಲೊಡಂ ಒರ್ಮೆಯೆ ಪಿಂಗುವುದು ಒಳ್ಪು: **ಸಮಯಪ,** ೫. ೬೬); ಕ್ಷಯಿಸು (ಮನದೆಗೊಂಡೆಮ್ಮ ಕಿಸುರ್ ಪಿಂಗುಗೆ ಅಗಲ್ವೆಡೆಯೊಳ್ ಕೆಳೆ ಸಂಗಳಿಸುಗೆ ನಿಮಗಮೆಮಗಂ: **ಆದಿಪು,** ೧೧. ೧೩೩); ಹೊರಟುಹೋಗು (ಮಾಯದ ಮರಂ ದಿಟಂ ಇಂದು ಇದು ಎನುತ್ತೆ ವಿಸ್ಮಯಸ್ಮೇರಮನೋಜ್ಞೆಯಾಗಿ ಧವಳೇಕ್ಷಣೆ ಪಿಂಗಿದಳ್ ಆ ಮಹೀಜಮಂ: **ಶಾಂತೀಶ್ವಪು,**

೧೦, ೧೨೭); ಪರಿಹಾರವಾಗು (ರುಜೆಗಳ್ ಪಿಂಗಲ್ಕೆ ಕಲ್ಯಾಣಕಾರಕಮಂ .. .. ಪೇೞ್ದು ಸರ್ವಕವೀಂದ್ರಸ್ತುತಶುದ್ಧಚಿತ್ತನೆಸೆದಂ: **ಸಮಯಪ,** ೧. ೭)

**ಪಿಂಗೂಳೆಯ** – ಹಿಂಭಾಗದ ಗುಂಪು (ಆರ್ತರೌದ್ರಧ್ಯಾನಮೆಂಬ ಮುಂಗೂಳೇಯದ ನಾಯಕರ್ವೆರಸು ದುರ್ಜನರ ಕೂಟಮೆಂಬ ಪಿಂಗೂಳೆಯದ ವೀರರ್ವೆರಸು: **ಧರ್ಮಾಮೃ,** ೧೦. ೬೫ ವ)

**ಪಿಂಗೋಳ್** – ಹಿಂಭಾಗ (ಕೇಕಯವಿಷಯಾಧೀಶ್ವರರಪ್ಪ ಕೈಕಯರಯ್ಯರುಂ ಒಂದು ಅಕ್ಷೋಹಿಣೀ ಬಲದೊಡನೆ ಸಿಡಿಲನುರುಳಿ ಮಾಡಿದಂತು ಪಿಂಗೋಳೊಳ್ ನಡೆಯೆ: **ಪಂಪಭಾ,** ೯. ೯೫ ವ)

**ಪಿಂಚಕ** – ಪುಷ್ಪಕ (ಅಂತೆಚ್ಚ ಶರಂ ಪಿಂಚಕದೊಳ್ ನಟ್ಟುರ್ಚಿ ಪಾಯೆ ಪಡಲಿಡುವ ನಿಜಗಜದಿಂ ಇಳಿಗೆ ಧುಮ್ಮಿಕ್ಕಿ: **ರಾಜಶೇವಿ,** ೬. ೮೯ ವ)

**ಪಿಂಚಕಚುಂಬನ** – ಮೊದಲ ಮುತ್ತು (ಪಿಂಚಕಚುಂಬನ ಪ್ರಾರಂಭ ಸಮಯದೊಳ್ ತೊಟ್ಟನೆ ಕಂಠೀರವರವಮಂ ಕೇಳಲ್: **ಗಿರಿಜಾಕ,** ೧. ೧೨೮ ವ)

**ಪಿಂಚು** – ಹಿಂದೆ ಬೀಳು (ಇಂಚೆಯ ಪಸವಿನ ಬೞಿದ ಕಳಂಚಿನ ಡಾವರದ ಬಾಧೆಯಿಲ್ಲದ ಪದದೊಳ್ ಮುಂಚದೆ ಪಿಂಚದೆ ಬಳೆದು ವಿರಿಂಚಿಯ ಕೆಯ್ಪಿಡಿವೊಲಾದುವಾ ನಾಡ ಊರ್ಗಳ್: **ಪಂಪಭಾ,** ೮. ೫೧)

**ಪಿಂಛಚ್ಛತ್ರ** – ನವಿಲುಗರಿಯ ಕೊಡೆ [ಉಡುಗಿ ಪಿಂಚಚ್ಛತ್ರಮಂ ಪ್ರಶ್ರಯಾಕರವೇಷೋಚಿತರ್ ಅರ್ಘ್ಯಹಸ್ತರಿರಿದಿರಂ ಬಂದರ್: **ಆದಿಪು,** ೧೨. ೬೮)

**ಪಿಂಛಾತಪತ್ರ** – [ಪಿಂಛ+ಆತಪತ್ರ] ಪಿಂಛಚ್ಛತ್ರ (ನಡೆಯೆ ತುರಗಂ ಪೊನ್ನ ಆಯೋಗಂಗಳಿಂ ಅಮರ್ದು ಅಟ್ಟಿಯಿಂ ಪಡೆಯೆ ನೆಳಲಂ ಚಂಚತ್ ಪಿಂಛಾತಪತ್ರಮೆ ಕೂಡೆ ತಮ್ಮೊಡನೆ ಬರೆ: **ಪಂಪಭಾ,** ೯. ೧೦೨)

**ಪಿಂಜರ** – ಹೊಂಬಣ್ಣ, ಕಂದುಬಣ್ಣ (ಅಮೇಯ ಕನಕಾಬ್ಜಪಿಂಜರಪರಾಗಮಂ ಗಾತ್ರದೊಳ್ ತೆವಟ್ಟಿ ಕೊಳದಿಂ ಕೊಳಕ್ಕೆಱಗುತ್ತಿರ್ಪ ವಿಭ್ರಾಜಿತ ಭ್ರಮದ್ಭ್ರಮರಸಂಕುಳಂ: **ಸುಕುಮಾಚ,** ೯. ೫೦); ಲಾವುಗೆ ಹಕ್ಕಿ [ಕಪಿಂಜರ] (ಶಶಕಪಿಂಜರಂಗಳೆರಡುಂ ಜವಂಗೆಟ್ಟು ಮೆಯ್ಮಱೆದಿರ್ದುದಣ ಅಜೆದು ಪಿಡಿದು ತಿಂದುದು: **ಪಂಚತಂತ್ರ,** ೩೨೬ ವ)

**ಪಿಂಜರರುಚಿ** – ಹೊಂಬಣ್ಣ (ವಿಳಾಸಮನಾಂತ ಯಕ್ಷಿ ಪಿಂಜರರುಚಿ ಹಂಸವಾಹನೆ ಚತುರ್ಭುಜೆ: **ಅನಂತಪು,** ೧. ೯)

**ಪಿಂಜರಿ** – ಚಿನ್ನ (ನಿದಾಘವ ದೀಪ್ತಿವರ್ತಿಯೊಳ್ ಕಾಸೆ ತೆರಳ್ದ ಪಿಂಜರಿಯವೋಲ್ ಕಿಸುಸಂಜೆ ತೆರಳ್ವಿನಂ ಪಟಂಗಾಸಿನ ಪೊನ್ನಗಂಟೆಯವೊಲೊಪ್ಪಿದುದು ಉದ್ಗತ ಭಾನುಮಂಡಲಂ: **ಅಜಿತಪು,** ೬. ೭೦); ಬೆಳ್ಳಿ (ಪಿಂಜರಿವಟ್ಟಲೊಳ್ ಮಿಱುಪ ಸೀಧುವನೀಂಟುತೆ ನೋಡಲಲ್ಲಿ ಮೇಣ್ ಮಂಜುಮುಖೇಂದು ಬಿಂಬಿಸೆ: **ಉದ್ಭಟಕಾ,** ೫. ೭೮)

**ಪಿಂಜರಿತ** – ಕಂದುಬಣ್ಣದ, ಹೊಂಬಣ್ಣದ (ಬಕ ಕರರ ಪಕ್ಷವಿಕ್ಷಿಪ್ತ ಕಂಜಕಿಂಜಲ್ಕಪುಂಜಪಿಂಜಿತ ಆಚ್ಛೋದಪರಿಪೂರ್ಣತಟಾಕ: **ಆದಿಪು,** ೧. ೫೮)

**ಪಿಂಜಳಕ** – ಧೂಳು, ಪುಡಿ (ಕ್ಷೋದಂ ಧೂಳಿ ರಜಂ ಪರಾಗಮೆಂದಿವು ತೆರಳ್ದು ಪುದಿದಿರ್ಕುದಕ್ಕುಮದು ಪಿಂಜಳಕಂ: **ಅಭಿಧಾವ,** ೧. ೧೫. ೧೩)

**ಪಿಂಜು** – ಹಿಂಜು, ಹತ್ತಿಯನ್ನು ಎಕ್ಕು (ಪಿಂಜು–ಪೃಥಕ್ಕರಣೇ: ಶಬ್ದಮದ, ಧಾ ೨೨೭)

**ಪಿಂಜೆ** – ಹಂಜಿ, ಪುಡಿ (ಬಣ್ಣಮುಂ ಪುಣ್ಯಮುಂ ಅರಿಸಿದ ಪಿಂಜೆಯಂತೆ ಪಾಱಿ ಪೋಕುಂ: **ನೇಮಿನಾಪು,** ೫. ೪ ವ)

**ಪಿಂಡ** – ಸತ್ತವರಿಗೆ ಇಡುವ ಎಡೆ, ಅನ್ನದ ಉಂಡೆ (ಸತ್ತರ್ .. .. ಪತ್ತುದಿನಂ ಕಾಗೆಯಾಗಿ ಪಿಂಡಮನುಣ್ಬರ್: **ಸಮಯಪ,** ೧೧. ೧೧೭); ಉಂಡೆ (ಬೆಳಗಿನ ಬೆಟ್ಟಮಂ ಪಾಡುರತೆಯ ಪಿಂಡಮಂ ಪುಣ್ಯದ ಪುಂಜಮಂ: **ಲೀಲಾವತಿ,** ೮. ೯೬ ವ)

**ಪಿಂಡಚ್ಚನೆ** – [ಪಿಂಡು+ಅಚ್ಚನೆ] ಸಮೂಹ ಪೂಜೆ (ಪೆಂಡಿರ ಕುಚಕೋಕಚಯಂ ಪಿಂಡಚ್ಚನೆಯಾಡುವಂತೆ ನರ್ತಿಸಿತಾಗಳ್: **ಲೀಲಾವತಿ,** ೧೨. ೧೦)

**ಪಿಂಡಚ್ಛೇದ** – ಪಿಂಡಪ್ರದಾನ ನಿಲ್ಲುವುದು (ಮಗಳಂ ಈವೆನಪ್ಪೊಡೆ ಕೊಡಗೂಸೆಂಬುದು ಪೆಸರೊಡವೆ ಮಗನಂ ಈವೆನಪ್ಪೊಡೆ ಸಂತತಿಚ್ಛೇದಮುಂ ಪಿಂಡಚ್ಛೇದಮುಂ ಅಕ್ಕುಂ ಅದಱಿಂದ ಎನ್ನನೆ ಕುಡಲ್ವೇೞ್ಕುಂ: **ಪಂಪಭಾ,** ೩. ೨೫ ವ)

**ಪಿಂಡಲು** – ರಾಶಿ (ಕೞು ಪಿಂಗೆ ಪಾಲಧಾರೆಗಳೊಕ್ಕು ನೊರೆಯ ಪಿಂಡಲು ಪೊಂಗೆ : **ಅನಂತಪು,** ೯. ೧೭ ರಗಳೆ)

**ಪಿಂಡಟಿ** – ಗುಂಪು ಒಡೆ, ಚೆದುರಿಹೋಗು (ದಿವಿಜಕುಜಂಗಳ್ ಆರವೆಗಳಾದುವು ಸಿದ್ಧರಸಂ ತಟಾಕಮಾದುವು ಸುರಧೇನು ಪಂಡಟಿಯದೊಂದೆಡೆಯೊಳ್ ನೆರೆದಿರ್ದುವು ಎಂಬಿನಂ: **ಪಂಪರಾ,** ೩. ೧೧೯)

**ಪಿಂಡಿ** – ಹಿಂಡಿ, ಎಣ್ಣೆ ತೆಗೆದ ಮೇಲೆ ಉಳಿಯುವ ಕಾಳು (ಬೂದಿಯಾದ ಮಳ್ಳಿಯಂತೆ ಪಿಂಡಿಯಾದ ಎಳ್ಳಿನಂತೆ ಬಸಿಱಂ ಪೊಕ್ಕ ಕೂಟಿನಂತೆ: **ಧರ್ಮಾಮೃ,** ೯. ೧೩ ವ)

**ಪಿಂಡಿಗೆ** – ಪಿಂಡಿ, ಕಟ್ಟು (ಪಸಿಯರಿಸಿನದ ಪಿಡಿಯೆಲೆಯ ಪಿಂಡಿಗೆಯಂ ಕರ್ಬಾಳದ ಕಟ್ಟುಗಳಂ .. .. ಎಸೆವ ಪಸುರ್ವಂದರೊಳಗೆ: **ಲೀಲಾವತಿ,** ೧೧. ೫೨ ವ)

**ಪಿಂಡಿಪಿಟಿ** – ಚೆನ್ನಾಗಿ ಹಿಂಡು, ಹಿಂಸೆ ಮಾಡು (ಒಲ್ಲಣಿಗೆಯಂ ಪಿಟಿವಂತೆ ಪಿಂಡಿಪಿಟಿವ ಪಗೆಗೆ .. .. ಈ ಪದದೊಳ್ ಕಡಿದೊಟ್ಟಿದಾಗಳ್ ಗೆಲಲಾೞ್ಕೆ: **ಪಂಪಭಾ,** ೧೨. ೨೦೬ ವ)

**ಪಿಂಡಿವಾಳ** – ಒಂದು ಆಯುಧ ವಿಶೇಷ (ಅಸಿ ಮುಸಲ ಕಣೆಯ ಕಂಪನ ಮುಸುಂಡಿ ಪಿಂಡಿವಾಳ ಮುದ್ಗರ .. .. ಪಲವುಂತೆಱದ ಕೈದುಗಳಿಂದ: **ಧರ್ಮಪ,** ೧. ೮೬ ವ)

**ಪಿಂಡು** – ತಿರಿಚು (ಸಾಯೆ ಪೊಯ್ದು ಕಿವಿಯಂ ಪಿಂಡಿದೊಡಲೊಡರ್ಚಿ ಬಂದನೇ: ಸುಕುಮಾಚ, ೨. ೬೩); ಸುರಿ (ಕಿವಿಗಳೊಳ್ ಪೀಯೂಷಮಂ ಪಿಂಡಲುರ್ವರೆಯೊಳ್ ಸಂದ ಕವಿಪ್ರವೇಕರೆ ವಲಂ ಬಲ್ಲರ್ ಪೆಱರ್ ಬಲ್ಲರೇ: **ಲೀಲಾವತಿ,** ೧. ೧೩) ಗುಂಪು (ಪಂಚಾಗ್ನಿತಾಪ ತಪ್ತಮಾನಸರಪ್ಪ ತಪೋಧನಜನಕ್ಕೆ ತಪನತಾಪಮಂ ಆಗಲೀಯದೆ ತಳಿರ್ದುಱುಗಲಂ ಪೊತ್ತು ನಭದೊಳ್ ನಲಿದಾಡುವ ಸೋಗೆನವಿಲ್ಗಳ ಪಿಂಡುಗಳುಮಂ: **ಪಂಚತಂತ್ರ,** ೧೯೦ ವ)

**ಪಿಂಡುಗಂಕಣ** – ಒಟ್ಟಾಗಿ ಕೂಡಿಸಿದ ಕೈಬಳೆ (ಗರ್ಭಿಣಿಗೆ ತತ್ಸಮಯೋಚಿತ .. .. ಮಂಗಳ ಪ್ರಸಾದನಂ ಎಸೆದತ್ತು .. .. ತಿರುಳೋಲೆ ತಾವರೆಯ ನೂಲ್ .. .. ಮುತ್ತಿನ ಸರಂ .. .. ಪೂವಿನ ಪಿಂಡುಗಂಕಣಂ: **ಪಂಪರಾ,** ೩. ೧೦೬): ತೋಳಿನ ಒಂದು ಆಭರಣ (ಸಿರಿಸದ ಬಾಸಿಗಮಂ ಮಾಂಕರಿಸುವ ನಳಿತೋಳ ಪಿಂಡುಗಂಕಣದ ಸರಂ ಮೊರೆವಳಿಗಳ ಸರಮಂ

ಚಪ್ಪರಿಸುವಿನಂ ಚೆನ್ನೆ ಪೊನ್ನೆಯರಲಂ ಕೊಯ್ದಳ್: **ಆದಿಪು,** ೧. ೯೯)

**ಪಿಂಡುಗೂಟಿಚ್** – ಮುದ್ದೆಯಾದ ಅನ್ನ (ಮೀಯದೆ ಮೆಯ್ಯೊಳ್ ಶ್ರೀಖಂಡಮಂ ಪೂಸುವೆನೆಂಬ ಪಿಂಡುಗೂಟಿಯೊಳಿಗೆ ಆಗುಳನುಣ್ಬೆನೆಂಬ: **ಧರ್ಮಾಮೃ,** ೧೨. ೧೧೪ ವ)

**ಪಿಂತನೆ** – ಹಿಂದೆಯೆ (ನೆಗಟ್ದರಿಘೂರ್ಜರ ದ್ವಿಪಘಟಾಳಿಗೆ ತನ್ನಯ ಸೂಚಿಯಾನೆ ತೊಟ್ಟಗೆ ಸಮರಾಗ್ರದೊಳ್ ಪರಿಯೆ ಪಿಂತನೆ ಸಂದುವು ರಾಜಪುತ್ರರಾ: **ಗದಾಯು,** ೧. ೧೬)

**ಪಿಂತಪಿಂತನೆ** – ಹಿಂದೆಹಿಂದೆಯೇ (ಈ ಚೋದ್ಯಮಂ ನೋಟ್ಪೆನೆಂದಾನುಮವಱ ಪಿಂತಪಿಂತನೆ ಪೋದೆಂ: **ಪಂಚತಂತ್ರ,** ೩೨೨ ವ)

**ಪಿಂತಿಕ್ಕು** – ಅಲಕ್ಷ್ಯಮಾಡು (ಸತ್ಕೃತಮಂ ಪಿಂತಿಕ್ಕಿ ಜೋಳಕ್ಕೆ ತಪ್ಪಯುಂ ಇಂ ಬಾಟ್ವುದೆ: **ಪಂಪಭಾ,** ೯. ೮೪)

**ಪಿಂತಿರಿಸು** – ಹಿಂದೆ ಬಿಟ್ಟು ಹೋಗು (ಬಟಿಕಿಂತಿಳೇಶ ಪಿಂತಿರಿಸುವೆ ಮೆಯ್ಯ ಪಿಂತೆ ನೆಟಲಿರ್ಪುದೆ ಬಾರದೆ ಮಾಣೆವೆಂದು ಪೂಣ್ದು ಅರಸಿಯರ್ ಏಱಿದರ್ ನೃಪನ ಕೂಡೆ ಪಲರ್ ಪಿರಿಯಂದಣಂಗಳಂ : **ಅನಂತಪು,** ೪. ೨)

**ಪಿಂತಿಲ್** – ಹಿತ್ತಿಲು (ಪುರದ ಮನೆಯೆನಿತು ಅದನಿತುಂ ಉಪರಿಮಾಡಂ ಮನೆಯ ಪಿಂತಿಲ್ ಎನಿತು ಅವನಿತ್ತುಂ ಸರಸಿರುಹಾಕರಕಳಿತಂ: **ಪಾರ್ಶ್ವನಾಪು,** ೭. ೪೧)

**ಪಿಂದುಂ ಪೆಱಗು** – ಹಿಂದುಮುಂದು (ತುಱುವಂ ಕಳಿಸುವ ಕೃಷ್ಣೆಯ ನಿಱಿಯಂ ಪಿಡಿದು ಉರ್ಚುವೆಟ್ದಿ ಕೊಳನಂ ಪಿಂದುಂ ಪೆಱಗಾಗಿ ಪುಗುವ ದುರ್ಣಯಂ ಅಱಿಪದೆ ಕೌರವನ ರಾಜ್ಯದ ಆಯದಕುಂದಂ: **ಗದಾಯು,** ೬. ೧೦)

**ಪಿಂಬಡು** – ಹಿಂದೆ, ತರುವಾಯ (ನಿನ್ನ ಸುಮಕೋಮಲಮಪ್ಪೆರ್ದೆ ತಂದೆಯ ತಾಯ ಬಾಟ್ಕೆ ಪಿಂಬಡಿನೊಳಿಲ್ಲ: **ಕಾದಂಸಂ,** ೭. ೨೮)

**ಪಿಕನಿಸ್ವನೆ** – ಕೋಗಿಲೆಯಂತಹ ಧ್ವನಿಯವಳು (ಪಿಕನಿಸ್ವನೆ ವಧು ತಳ್ತೆಡದ ಕೆಲದೊಳಿರೆ .. .. ನೃಪನೊಂದೆ ಕೊಂಬಬುಕೆಯ್ವಂದ ಚೂತಶಾಖೆವೊಲಿರ್ದಂ: **ಆಚವರ್ಧ,** ೭. ೧೮)

**ಪಿಕವರ್ಧನ** – ಕಾಗೆ (ಮೌಕುಳಿ ಕೃಷ್ಣಧ್ವಾಂಕ್ಷಂ ಕಾಕೋಳಂ ದ್ರೋಣಂ ಇನತನೂಜನೆನಿಕ್ಕುಂ: **ಅಭಿಧಾವ,** ೧. ೯. ೧೫)

**ಪಿಕಳ** – ಕಾಗೆ (ತಿತ್ತಿರೆ ಕೋಕಂ ಪಿಕಳ ಅಂಬಕಂ ಶಿಖಿ ಶುಕಂ .. .. ಖಗಮಿರ್ಕುಂ ತದ್ವನಾಗೌಘದೊಳ್: **ರಾಜಶೇವಿ,** ೫. ೫೯)

**ಪಿಕಾಳಿ** – [ಪಿಕ+ಆಳಿ] ಕೋಗಿಲೆಗಳ ಗುಂಪು ತಮಾಳವನಂ ಕಟ್ಟೆಲಿಸೆ ಕಂಡು .. .. ಘನಾಗಮಮಾದುದೆಂದು ಸಭ್ರಮಿಸಿ ಪಿಕಾಳಿ ಮೂಗುವಡೆ: **ಪುಷ್ಪದಂಪು,** ೬. ೧೪)

**ಪಿಕ್ಕಿ ನೋಡು** – ಹಿಕ್ಕಿ ನೋಡು, ವಿಮರ್ಶಿಸು (ಎಂತೆಂತು ಪಿಕ್ಕಿ ನೋಟಿಪ್ಪೊಡಂ ಅತಂತು ಆಗಮಂಗಳೊಳಂ ಮತ್ತಂತವರ ಚರಿತ್ರದೊಳತ್ಯಂತಂ ದಯೆ ಮುಖ್ಯಂ: **ಸಮಯಪ,** ೧೪. ೩೮)

**ಪಿಕ್ಕು** – ಹಿಕ್ಕು (ಪಿಕ್ಕುವೊಡೆ ಅತ್ತಿಯ ಪಣ್ ಅತ್ತಿಮಬ್ಬೆ ಅಲ್ಲ ಅದಱ ಗುಣಂ: **ಅಜಿತಪು,** ೧. ೭೦); ಬಿಡಿಸು; ಕೆದಕು (ಕುಲಮೆಂಬುದುಂಟೆ ಬೀರಮೆ ಕುಲಮಲ್ಲದೆ ಕುಲಮನಿಂತು ಪಿಕ್ಕದಿರಿಂ ನೀಂ ಒಲಿದಲ್ಲಿ ಪುಟ್ಟಿ ಬಳೆದಿರೊ ಕುಲಮಿರ್ದುದೆ ಕೊಡದೊಳಂ ಶರಸ್ತಂಬದೊಳಂ: **ಪಂಪಭಾ,** ೨. ೮೩)

**ಪಿಗ್ಗು** – ಹಿಗ್ಗು, ದೊಡ್ಡದಾಗು (ಪಿಗ್ಗಿ ಮಂಥರಗತಿಯಿಂ ಮರಲ್ದು ಸುಳಿದಾಡುಗುಂ ಅಲ್ಲಿ ಮರಾಳಮಂಡಲಂ: **ಧರ್ಮಮಧು,** ೨. ೩೧)

**ಪಿಚು** – ಹತ್ತಿ (ಪಿಚು ಕಾರ್ಪಾಸಂ: **ಅಭಿಧಾವ,** ೧. ೮. ೩೦)

**ಪಿಚುಮಂದ** – ಬೇವಿನ ಮರ (ಪರಿಚಾರಕಿ ತಂದು ಒಲವಿಂ ಸುರುಚಿರ ಪಿಚುಮಂದಪಲ್ಲವೋಪಚಿತಂ ಬಿತ್ತರಿಪ ಅಂಗನೆಯರ್ ಜಲದಿಂದರಸನ ಚರಣಾರವಿಂದಮಂ ಕ್ಷಾಲಿಸಿದರ್: **ಶಾಂತೀಶ್ವಪು,** ೪. ೪೭)

**ಪಿಟಕ** – ಬೊಬ್ಬೆ (ಜ್ವರ ದಾಹ ಶ್ವಾಸ ಕಾಶ ಬ್ರಣ ಪಿಟಕ ಶಿರೋರೋಗ ಸರ್ವಾಂಗಶೂಲಾದಿ ರುಜಾಸಂದೋಹ: **ವರ್ಧಮಾಪು,** ೧೧. ೨೮)

**ಪಿಟ್ಟಾದ ಪೀಱಾದ** – ನಿಸ್ಸಾರವಾದ (ಪೊರಳುತ್ತುಮಿರ್ಪ ಭಟರಿಂ ಪಿಟ್ಟಾದ ಪೀಱಾದ ಸಿಂಧುರದಿಂ .. .. ಕಣ್ಗಂ ಮನಕ್ಕಂ ಭಯಂಕರಮಾದ ಆಜಿಯೊಳ್: **ಪಂಪರಾ,** ೯. ೧೨೪)

**ಪಿಟ್ಟು** – [ಪಿಷ್ಟ] ಹಿಟ್ಟು (ಆದೊಡೆ ಪಿಟ್ಟಿನ ಕೋಟಿನಾದೊಡಂ ಇಂದೊಂದುಂ ಇಕ್ಕವೇಟ್ಪುದು: **ಯಶೋಧಚ,** ೩. ೨೦)

**ಪಿಟ್ಟಿಪೀಱಾಗು** – ಪುಡಿಪುಡಿಯಾಗು (ದಾರವಟ್ಟಿಗಂ ದಟ್ಟಿಸಿ ಕೊರಳಂ ಪಿಡಿದು ನೂಂಕೆ ಪಂಡಿತೆ ಬಿರ್ದು ಪೆಗಲ ಮೇಗಣ ರೂಪಿ ಪಿಟ್ಟಿಪೀಱಾಗೆ ಇಂತೆಂದಳ್: **ಪುಣ್ಯಾಸ್ರ,** ೫. ೨೮ ವ)

**ಪಿಟ್ಟೆನ್** – ಏನಾದರೂ ಮಾತಾಡು (ಪೆರ್ಚಿ ವಾಗ್ಗುಂಫದೊಳಾಗಳ್ ಬೆಟ್ಟೆನಲ್ ಪಿಟ್ಟೆನಲ್ ಎಡೆಗುಡದೆ ಆಶ್ಚರ್ಯಮಂ ತಾಳ್ದ ನಿಂದಂ: **ಸುಕುಮಾಚ,** ೨. ೧೫)

**ಪಿಡಿ** – ಕೈಯಲ್ಲಿ ಹಿಡಿದುಕೊ; ತೆಗದುಕೊ; ಮುಷ್ಟಿ; ಮೊದಲುಮಾಡು; ಹೆಣ್ಣಾನೆ (ವ್ಯೂಹದೊಳ್ ನಿಟ್ಟೆವಟ್ಟು ಮಣಿಮಯಮಂಡನಾಯೋಗದೊಳೊಡಂಬಟ್ಟ ಪಿಡಿಗಳುಮಂ: **ಆದಿಪು,** ೪. ೫೪ ವ)

**ಪಿಡಕುತ್ತು** – ಬಲವಾಗಿ ಚುಚ್ಚು (ಸುರಿಗೆಯೊಳ್ ಉರಮಂ ಪಿಡಿಕುತ್ತುಗುತ್ತಿ ನೆತ್ತರನುಡುಪಾನನೆ ಕುಡಿದು ತಣಿದು ಮೂರ್ಛೆಗೆ ಸಂದಳ್: **ಹರಿವಂಶ,** ೫. ೪೧)

**ಪಿಡಿಕೆಯ್** – ಮುಷ್ಟಿ (ಪಿಡಿಕೆಯ್ ತೀವಿದ ಕೂರ್ಗಣೆ ಮಡಕಾಲ್ವರಂ ಅಲೆವ ಕಚ್ಚೆ ನಿಡಿಯಸಿಯ ಒಱೆ ಕರ್ಪಿಡಿದ ಪಣೆಕಟ್ಟು ಕೆಯ್ವಡೆ ಬೆಡಂಗನೊಳಕೊಳೆ ಧನುರ್ಧರರ್ ಪೆಣೆದೆಚ್ಚರ್: **ಪಂಪಭಾ,** ೧೦. ೭೧)

**ಪಿಡಿಕೆವೆಱು** – ಹಿಡಿತಕ್ಕೊಳಗಾಗು (ತದನಂತರಂ ಎರಡುಂ ಪಡೆಯೊಳ್ ಅಬಯಘೋಷಣೆಯಂ ಸಾಱಲ್ವೇಟ್ದು ಪಿಡಿಪೆತ್ತರೆಲ್ಲರುಮಂ ಬಿಟ್ಟು ತುರಗಕಂಧರಂಗೆ ಶರೀರಸಂಸ್ಕಾರಮಂ ಮಾಡಿಸಿ: **ವರ್ಧಮಾಪು,** ೪. ೯೮ ವ)

**ಪಿಡಿಖಂಡಂಗೊಯ್** – ತುಂಡುಗಳಾಗಿ ಕತ್ತರಿಸು (ಬೇವ ಪೆಣದುರಿವ ಬಾಯ್ಗೊಂಡದೊಳ್ ತಮ್ಮ ತನುವಂ ಪಿಡಿಖಂಡಂಯ್ದು ಬೀಟ್ದಿ ಸಾಧಕರುಂ: **ನೇಮಿನಾಪು,** ೫. ೪೧ ವ)

**ಪಿಡಿಗುದುರೆ** – ಹೆಣ್ಣು ಕುದುರೆ (ಕೆಲಬರ್ ಪಿಡಿಗುದುರೆಗಳೊಳ್ ಪೆಱವರ್ ಪೊಡವಿಯೊಳ್ ಅಡಿಯಿಟ್ಟು ತಳರ್ದರ್ ಅತಿಸಂಭ್ರಮದಿಂ: **ರಾಜಶೇವಿ,** ೧೦. ೧೩)

**ಪಿಡಿ ತೀವು** – ಬೊಗಸೆ ತುಂಬು (ಪಿಡಿ ತೀವಿದ ಪೊನ್ನನಿತ್ತುಂ .. .. ದೇಹಾರಮನುಡತುಡಲಿತ್ತುಂ ಕುಡುವರಟ್ಟೆಯಿಂದಂ ಜೈನರ್: **ಸಮಯಪ,** ೭. ೩೧)

**ಪಿಡಿಪು** – ವಶ[ವಾಗು] (ಆನೀ ದನುಜಾತ್ಮಜಂಗೆ ಪಿಡಿಪಿತ್ತು ದಶಾನನಕ್ಕಿ ಬಳ್ಕೆ ಲಂಕಾ ದಹನಕ್ಕೆ ಒಡರ್ಚುವೆಂ: **ಪಂಪರಾ,** ೧೧. ೧೩೩); ಹಿಡಿತ (ಪಿಡಿಪೀವ ಮರುಳ್ಚುವ ನುಣ್ಬುವಾಸೆಯೊಳ್ ಸೆಳೆವೆಡೆ ಸಾರ್ವ

ಪೋರ್ವಳವಿಯೊಪ್ಪಿದುದು ಇರ್ವರ ಹಸ್ತಯುದ್ಧದೊಳ್: **ನೇಮಿನಾಪು,** ೮. ೯೩)

**ಪಿಡಿಪೆಱು** – ಸೆರೆಸಿಕ್ಕು (ಪಿಡಿಪೆತ್ತ ಕಳ್ಳನಂತೆ ಕಳ್ಳವತ್ತಿಗೆ ತಳವೆಳಗಾಗೆ: **ನೇಮಿನಾಪು,** ೬. ೭೦ ವ)

**ಪಿಡಿಪೆಱು** – ಪಿಡಿವಡು (ಗುಣಹತ ಕರಯುಗ ಕಾಳಿಮಕಿಣಂಗಳ್ ಎಸೆದು ಈತನೊಳ್ ರಿಪುಶ್ರೀ ಪಿಡಿಪೆತ್ತು ಅಣಿಯರಂ ಅಱಲೆ ಪನಿತಶೋಷಣ ಸಾಂಜನ ಬಿಂದುವೆಂಬ ಬಗೆಯಂ ಪಡೆಗುಂ: **ಶಾಂತಿಪು,** ೫. ೧೩೪)

**ಪಿಡುಗು** – ಸಿಡಿ (ಒಡಲುರಿಗುಂ ಮನಂ ಮಱುಗುಗುಂ ಕಿವಿ ಗೆರಜ್ರ್ರನೆ ವೋಕುಮತ್ತ ಕಣ್ ಪಿಡುಗುಗುಂ: **ಆದಿಪು,** ೧೨. ೪೦); ಸೀಳು (ನೆಲಂ ಪಿಡುಗಿತ್ತು ಸಪ್ತಸಾಗರಮುಡುಗಿತ್ತು: **ಪಂಪಭಾ,** ೧೨. ೨೦೨); ಆಸ್ಫೋಟಿಸು (ಅಂತು ನುಡಿದು ಕಾಯ್ಪಿನೊಳ್ ಪಿಡುಗಿ ನಡನಡನಡುಗಿ: **ಪಂಪಭಾ,** ೬. ೫೮ ವ)

**ಪಿಣಿಲ್** – ಹಿಣಿಲು, ಹೆಣೆದುಕೊಂಡಿರುವುದು (ಸಾಲಿಡೆ ಪೆರ್ವೆಣಂ ರಣಾವನಿತಲಂ ಇರ್ದುದು ಅಂಕುರಿತಮಾದವೊಲ್ ಒಕ್ಕ ಕರುಳ್ ಪಿಣಿಲ್ಗಳಿಂ: **ಪಂಪರಾ,** ೧೩. ೪೯); ಜಡೆ (ಇಱಿವ ಪಿಣಿಲ್ ತೆರಳ್ದೊಱೆದ ಕಣ್ಬನಿ ಮಾಣದೆ ಮೋದೆ ಶೋಕದಚ್ಚಿಱಿವೊಲಿರ್ದ ಬಾಸುಟಿನೊಳ್ ಅಟ್ಟು ಕನಲ್ದು ಬಟಲ್ದು ಜೋಲ್ದ ಮೆಯ್: **ಪಂಪಭಾ,** ೧೪. ೫)

**ಪಿಣಿಲಿಱಿ** – ಹೆಣೆದುಕೊ (ಮಲ್ಲಿಕಾಲತೆಯ ಮುಗುಳ್ಗುಡಿಗಳೊಳಂ ಚಂಪಕಲತೆಯಲರ್ಗುಡಿಗಳೊಳಂ ಪಿಣಿಲಿಱಿದು ಪೆಣೆದು .. .. ಬಳ್ವಳ ಬಳೆದ ಮೃದ್ವೀಕಾಲತೆಯ ಕಾಯಮಾನಂ: **ಅನಂತಪು,** ೭. ೧೧ ವ)

**ಪಿಣೆ** – ಹಿಂಡು (ಅರಿಸಿನದಂತೆ ಪೆಯ್ವತ್ತಿ ಪಿಣೆವರ್ ಕಾಱೆಯಂತೆ ಕೊಱಲಂ ಪತ್ತಿ ಕೊಯ್ವರ್: **ಧರ್ಮಾಮೃ,** ೩. ೪೩ ವ)

**ಪಿಣ್ಣ** – ದಪ್ಪನಾದ (ಪಿಣ್ಣನಲ್ ಕೊರ್ಬಿ ಪಾಲ್ಗೆಚ್ಚಲ ಬಿಣ್ಪಿಂ ಪಾಯ್ದು ಮೆಲ್ಲೊತ್ತುತುಂ: **ಕುಸುಮಾಕಾ,** ೬. ೩೯)

**ಪಿತರ** – [ಪಿತೃ] ಸತ್ತಿರುವ ಹಿರಿಯ (ನೆಗಟ್ತೆಯ ಬೀರರೆಲ್ಲಂ ಬಡವರ ಪಿತರರಂತೆ ಮಿಳ್ಮಿಳ ನೋಡುತ್ತಿರೆ: **ಪಂಪಭಾ,** ೭. ೩೩ ವ)

**ಪಿತಾಮಹ** – ತಂದೆಯ ತಂದೆ, ತಾತ (ನರಸಿಂಹಸುತಂಗಾರೆಣೆ ಗಗನಂ ಗಗನಾಕಾರಂ ಎನಲ್ ತಮ್ಮೊಳೆಣೆ ಪಿತಾಮಹ ಪೌತ್ರರ್: ೧. ೧೩); ಬ್ರಹ್ಮ (ಸರಸಿರುಹಂ ಬ್ರಹ್ಮಂ .. .. ವಿರಿಂಚನಂ ವಿಧಿ ಪಿತಾಮಹಂ ಚತುರಾಯಂ; **ಅಭಿಧಾವ,** ೧. ೧. ೧೧)

**ಪಿತೃ** – ತಂದೆ (ಪಿತೃ ಪವನಜಯಂ ಖಚರವಲ್ಲಭಂ ಅಂಜನೆ ಪೆತ್ತ ತಾಯ್ ಮಹಾಸತಿ ಹನುಮಂತನೆಂ ಪೆಸರೊಳಾಂ: **ಪಂಪರಾ,** ೧೦. ೯೩); ಪೂರ್ವಿಕ (ಬ್ರಾಹ್ಮಣರುಂ ಕ್ಷತ್ರಿಯರುಂ ವೇದವಿಹಿತಕರ್ಮಾನುಷ್ಠಾನ ತತ್ಪರರಪ್ಪುದಱಿಂ ಯಾಗಾತಿಥಿಪಿತೃದೇವತಾನಿಮಿತ್ತಂ ವಿಧಿಪೂರ್ವಕಂ ಪ್ರಾಣಿವಧೆಗೆಯ್ವರಲ್ಲದೆ ವೃಥಾವಧೆಗೆಯ್ವರಿಲ್ಲ: **ಪಂಚತಂತ್ರ,** ೧೧೭ ವ)

**ಪಿತೃದ್ವಂದ್ವ** – ತಾಯ್ತಂದೆಯರು (ಇದು ಸರ್ವೋರ್ವಿಗೆ ಅತ್ಯಪೂರ್ವಮೆನೆ .. .. ಪೂಜಿಸಿದಂ ತತ್ಪಿತೃದ್ವಂದ್ವಮಂ: **ಪುಷ್ಪದಂಪು,** ೧೨. ೧೩)

**ಪಿತೃಪತಿ** – ಪಿತೃಗಳ ಯಜಮಾನ, ಯಮ (ಅದಱ ವಿಶಾಳತೆವೆತ್ತಿರ್ಪ ತತ್ಪ್ರಥಮಶಾಳದೊಳಗ್ರ ಸುರಪತಿ ಪಿತೃಪತಿ ಶರಧಿಪತಿ ಧನದಪತಿಗಳ ಕೇಳೀವಿಲಾಸಶೋಭಿತಂಗಳಪ್ಪ ನಾಲ್ಕುಂ ದೆಸೆಗಳ ಮಣಿರತ್ನಹರ್ಮ್ಯಂಗಳುಮಂ: **ಶಾಂತೀಶ್ವಪು,** ೧೬. ೩೧ ವ)

**ಪಿತೃಪರ್ಯಾಗತ** – ತಂದೆಯಿಂದ ಬಂದ (ಆರಯ್ಯದೆಯುಂ ಅಱಿಯದೆಯುಂ ಮುನ್ನಮೆ ಪಶುವಿನಂತೆ ದೆಸೆದೆಸೆಗೆ ಬೆರ್ಚುವುದುಂ ಪಿತೃಪರ್ಯಾಗತಮಪ್ಪ ಬನಮಂ ಪತ್ತುವಿಡುವುದುಂ ತಕ್ಕುದಲ್ತು: **ಪಂಚತಂತ್ರ,** ೯೧ ವ)

**ಪಿತೃವನ** – ಶ್ಮಶಾನ (ದ್ವಿಷಜ್ಞಾತಂ ಚೂತಂ ಪಿತೃವನಮದಾಯ್ತು ಅಂಬುಜವನಂ .. .. ವನಿತೆಗವನಿಂ ಚಿತ್ರಭವನಿಂ: **ಲೀಲಾವತಿ,** ೭. ೮೩)

**ಪಿತೃವ್ಯ** – ತಂದೆಯ ಒಡಹುಟ್ಟಿದವನು (ಭರವಶದಿಂದಂ ಕುಶನೊಳ್ ನಿರಂಕುಶಂ ಲಕ್ಷ್ಮಣಂ ಪಿತೃವ್ಯಂ ದಶಕಂಧರನೊಳ್ ನೆರೆವಂತಿರೆ ಶರಪರಿಣತಿಯಂ ನೆಱೆಯೆ ಮೆಱೆದು ಕಾದುತ್ತಿರ್ದಂ: **ಪಂಪರಾ,** ೧೬. ೧೩)

**ಪಿತ್ತಳೆ** – [ಪಿತ್ತಲ] ಹಿತ್ತಾಳೆ, ತಾಮ್ರ–ಸತುಗಳ ಮಿಶ್ರಲೋಹ (ನೇರಾಣಿಯ ಪೊನ್ನಂತಿರೆ ಲೇಸೆನಿಪುದು .. .. ಧರ್ಮಂ ಪಿತ್ತಳೆಯಂತೆಸೆವುದು ಧರ್ಮವಾಗಿ ಸಲಲಱಿದಪುದೇ: **ಸಮಯಪ,** ೧೫. ೨೧)

**ಪಿತ್ತಾವಿಳ** – ಪಿತ್ತಸಂಬಂಧಿ ರೋಗವುಳ್ಳವನು (ತೊಳಗುವ ನಭದೊಳ್ ಪಿತ್ತಾವಿಳದೃಷ್ಟಿಗೆ ಅವಿದ್ಯಮಾನ ಮೇಚಕರುಚಿಯೊಂದೆಳಸಿ ಮಿಗೆ ತೋರ್ಪ ತೆಱದಿಂ ಖಳಂಗೆ ಕೃತಿಯೊಳಿಲ್ಲದ ದೋಷಂ: **ಪುಷ್ಪದಂಪು,** ೧. ೪೮)

**ಪಿನದ್ಧ** – ಕಟ್ಟಿರುವ, ಸೇರಿಸಿರುವ (ಸುರತರುನಂದನಂಗಳಿರ ರತ್ನಪಿನದ್ಧ ವಿಮಾನಕುಟ್ಟಿಮಾಂತರ ಸುರತಾಲಯಂಗಳಿರ: **ಆದಿಪು,** ೩. ೪)

**ಪಿನಾಕ** – ತ್ರಿಶೂಲ (ದ್ರುಪದಾತ್ಮಜಾತಂ ಓವದೆ ಪುಡಿಯೊಳ್ ಪೊರಳ್ಚಿ ತಲೆಯಂ ತೆಗೆವಲ್ಲಿ ಪಿನಾಕವೆತ್ತವೋದುದೊ ಶರವೆತ್ತವೋದುದೊ ಲಲಾಟದಿಂ ಇಂಗಳಗಣ್ಣು ಅದೆತ್ತವೋದುದೊ: **ಗದಾಯು,** ೪. ೫೧)

**ಪಿನಾಕಪಾಣಿ** – ಪಿನಾಕವನ್ನು ಧರಿಸಿದವನು, ಶಿವ (ಅಱಿಯೆಮೆ ಬಿಲ್ಲ ಬಿನ್ನಣಕೆ ಗಾಂಡಿವಿಯಲ್ತು ಪಿನಾಕಪಾಣಿಯುಂ ನೆಱೆಯನಿದಿರ್ಚಿ ನಿಮ್ಮೊಡನೆ ಕಾದಿ ಗೆಲಲ್ಕೆ: **ಗದಾಯು,** ೪. ೪೯)

**ಪಿನಾಕಿ** – ಶಿವ (ಪಿನಾಕಿಯ ಮನೋರಥಮಂ ಪುಣ್ಯಫಲದಿಂ ಪಸದನಂಗೊಳ್ವಂತೆ: **ಗಿರಿಜಾಕ,** ೫. ೭೬ ವ)

**ಪಿನ್ನೆ** – ಸೂಜಿಯ ಕಣ್ಣು (ಸೂಜಿಯ ಪಿನ್ನೆಯೊಳಂ ಮಣಿಯ ದ್ವಾರದೊಳಂ ನುಸುಳ್ವರ್ವರಿರ್ದೆಡೆಯೊಳ್ ಒರ್ವನಂ ಕತಪ್ಪ ಕಳ್ಳರ ಕಳ್ಳಂ: **ಧರ್ಮಾಮೃ,** ೬. ೧೦ ವ)

**ಪಿಪಾಸಾ** – ಬಾಯಾರಿಕೆ (ಬಂದೆನ್ನಂ ಪರವಶತೆಯೊಳ್ ಒಂದಿದತ್ತಾಗಳ್ ಪಿಪಾಸೋದ್ರೇಕಂ: **ಕಾದಂಸಂ,** ೧. ೩೯)

**ಪಿಪಾಸೆ** – ಪಿಪಾಸಾ (ಅಂತಳವುಗಳಿದ ಪಿಪಾಸೆಯುಂ ಪಸಿವುಂ ಅಸಮಯಂಬಡೆದು .. .. ನೂಂಕಿ ಕಳೆದು ಕಾಮಾನಳಂ ಅಳುರ್ದು: **ಲೀಲಾವತಿ,** ೬. ೪೨ ವ)

**ಪಿಪೀಲಿಕ** – ಇರುವೆ (ಕರಡಿ ಪಿಪೀಲಿಕಾವಳಿಗೆ ನಾಲಗೆವಾಸುವವೋಲ್ಯಮಂ ಭಯಂಕರರಸನಾಗ್ರಮಂ ಧರೆಗೆ ಪಾಸಿದಂ: **ಸಮಯಪ,** ೧೫. ೯೫)

**ಪಿಪ್ಪಲ** – ಅರಳಿಯ ಮರ (ಪಿಪ್ಪಲಂ ಅರಳಿ ಪಲಾಸಕಾಖ್ಯಂ: **ಅಭಿಧಾವ,** ೧. ೮. ೪)

**ಪಿಪ್ಪಲಿ** – ಒಂದು ಸಸ್ಯ, ಬಾಲಮೆಣಸು (ಕೃಷ್ಣಾಕಣಾಹ್ವಯಂ ಪಿಪ್ಪಲಿ: **ಅಭಿಧಾವ,** ೧. ೮. ೩೨)

**ಪಿಮ್ಮಡಿ** – ಹಿಮ್ಮಡಿ (ತಲೆಕೆಟಗಾಗಿ ಕಟ್ಟಿದಲಗೋಱೆಯನುರ್ಚಿ ಬೀೞೆ ಪಿಮ್ಮಡಿಯುಂ ಪಱೆಯೆ ಪೆಱಗಂ ನೋಡುತ್ತುಂ; **ಲೀಲಾವತಿ,** ೫. ೧೧೪ ವ)

**ಪಿರಿದುಂ** – ಹೆಚ್ಚಾಗಿ (ಭವ್ಯಾವಳಿಯಂ ಒಞರಿದುಂ ಕಂಡಾಗಳೆ ಕೂರ್ಮೆಯಿನೊಲ್ದು ನೋಟಿಪ್ಪೊಡೆ ಅದು ವಾತ್ಸಲ್ಯಂ: **ಸಮಯಪ,** ೪. ೪೬)

**ಪಿರ್ಕು** – ಬೇರ್ಪಡಿಸು (ಇಂದಿನವರ್ ಅಂದಿನವರ್ ಕೆಲರ್ ಎಂದು ಪಿರ್ಕುವ ಈ ದಂದುಗಮೆ ನಮಗನಿಂದ್ಯ: **ಧರ್ಮಮಧು,** ೧. ೪೨)

**ಪಿಲ್ಲಣಿಗೆ** – ಒಂದು ಆಯುಧ (ಕೆಯ್ಯ ಕರಿಯ ಪಿರಿಯ ಪಿಲ್ಲಣಿಗೆಯುಂಂ ಅಗುರ್ವುಂ ಉದ್ಯುತಮಾಗೆ: **ನೇಮಿನಾಪು,** ೮. ೬೭ ವ); ದೊಣ್ಣೆ (ಕವುಂಕಳೊಳ್ ಕುತ್ತಿದ ಪೊನ್ನ ಪಿಲ್ಲಣಿಗೆಯಂತಿರೆ ಕೈಟಭಮಲ್ಲನೊಪ್ಪಿದಂ: **ನೇಮಿನಾಪು,** ೮. ೮೬);

**ಪಿಶಂಗ** – ನಸುಗೆಂಪು (ಎನೆಯೆನೆ ರತ್ನರಶ್ಮಿಜಟಿಳಂ ಮಕುಟಂ ಮಣಿಕುಂಡಳಂ ಕನತ್ ಕನಕ ಪಿಶಂಗ ದೇಹರುಚಿ .. .. ಇಳಾಮರಂ ಅಂದು ಅಮರೇಂದ್ರರೂಪಮಂ: **ಪಂಪಭಾ,** ೮. ೭)

**ಪಿಶಂಗಿತ** – ನಸುಗೆಂಪು ಬಣ್ಣದಿಂದ ಕೂಡಿದ (ಆದರದಿಂದೆ ಪೊಕ್ಕು ತುಳ್ಕಿದ ಅರವಿಂದರಜಃಪಿಶಂಗಿತ ಆಚ್ಛೋದಕಮಂ: **ಆದಿಪು,** ೧೪. ೧೦೬)

**ಪಿಶಾಚ** – ದೆವ್ವ (ಪಿಶಾಚವೇಷಮಂ ಕೈಕೊಂಡುಉ ಅರಮನೆಯಂಗಣದೊಳಿರ್ದು: **ವಡ್ಡಾರಾ,** ಪು, ೩೯, ಸಾ. ೨೩); ದೇವಯೋನಿಯ ಒಂದು ವರ್ಗ (ಖೇಚರ ಕಿನ್ನರ ಯಕ್ಷ .. .. ಅದ್ಭುತಗುಣಗೋಚರರ್ ಎಯ್ದೆ ದೇವಯೋನಿಗಳೆನಿಪರ್: **ಅಭಿಧಾವ,** ೧. ೧. ೫೪)

**ಪಿಶಿತ** – ಮಾಂಸ, ಮಾಂಸದ ಅಡುಗೆ (ಒರ್ವಂ ಪಿಡಿದು ತಂದಿತ್ತ ಕುಱಿಯಂ ಆ ಮಱೆ ಕೊಂದು ಪಿಶಿತಮಂ ಮಾಡಿದೆಂ: **ಸುಕುಮಾಚ,** ೭. ೧೫)

**ಪಿಶಿತಖಂಡ** – ಮಾಂಸಖಂಡ, ಮಾಂಸದ ತುಂಡು (ಖ್ಷುಧಾರ್ತನಪ್ಪದೊಂದು ಮೃಗಧೂರ್ತಂ ಪಿಶಿತಖಂಡಕ್ಕೆ ಸಾರ್ದು: **ಪಂಚತಂತ್ರ,** ೧೨೬ ವ)

**ಪಿಶಿತಸೇವೆ** – ಮಾಂಸಸೇವನೆ (ಸೂನೆಗಾಱರೊಳ್ ಘನತರ ಹಿಂಸೆಯಂ ಪಿಶಿತಸೇವೆಯಂ ಅಂತ್ಯಜನಲ್ಲಿ .. .. ಮಾತುಚುತಂ ಧರಿತ್ರಿಯೊಳ್: **ಸಮಯಪ,** ೧೧. ೧೨೦)

**ಪಿಶಿತಾಶ** – ರಾಕ್ಷಸ (ಪಿಶಿತಾಶಂ ಪಿಡಿದು ಕಾಡುವ ಸೂಳದ ಬೀರರೊಪ್ಪಿದರ್: **ನೇಮಿನಾಪು,** ೫. ೩೩)

**ಪಿಶಿತಾಶಿ** – ಪಿಶಾಚಿ (ಈ ಪಿಶಿತಾಶಿ ದೈತ್ಯಂ ಈ ವನಧಿಯೊಳಿರ್ಪ ಜಂಬಿಕನುಂ .. .. ಸಮಾನರೇ: **ಕರ್ಣನೇಮಿ,** ೨. ೧೦೪)

**ಪಿಶಿತಾಹಾರ** – ಮಾಂಸದ ಊಟ (ಪಿಶಿತಾಹಾರಮಿಲ್ಲದೆ ಶರೀರಂ ನಿಲ್ಲದು ಏಗೆಯ್ವೆಂ ಎನೆ: **ಪಂಚತಂತ್ರ,** ೧೧೯ ವ)

**ಪಿಶುನ** – ಚಾಡಿ ಹೇಳುವುದು; ಚಾಡಿಕೋರ (ಶ್ರೀಮಜ್ಜಿನಪತಿಯಂ .. .. ಸ್ತುತಿಯಿಸಿದಂ ಪ್ರೇಮೋತ್ಕಟರಸಪಿಶುನಂ ರೋಮಾಂಚಂ ಪುದಿಯೆ ತನುವನಭಿನವಪಂಪಂ: **ಮಲ್ಲಿನಾಪು,** ೧೩. ೧)

**ಪಿಷ್ಟ** – ಹಿಟ್ಟು (ಪಿಷ್ಟೋದಕಾದಿ ದ್ರವಾನ್ವಯ ವ್ಯತಿರೇಕಾನುವಿಧಾಯಿಯಪ್ಪ ಮದಶಕ್ತಿ: **ಆದಿಪು,** ೨. ೧೦ ವ); ಪುಡಿ

**ಪಿಷ್ಟಚರ್ಚೆ** – ರಂಗೋಲಿ (ಮುನಿಕುಮಾರಿಯರಿಕ್ಕಿದ ಪಿಷ್ಟಚರ್ಚೆಯಿಂ .. .. ಎಸೆದು ತೋಱಿದುದು ಆಗಳ್ ಅಶೋಕಭೂರುಹಂ: **ಕಾದಂಸಂ,** ೧. ೭೩)

**ಪಿಷ್ಟಪೇಷಣ** – ಹಿಟ್ಟನ್ನೇ ಕುಟ್ಟುವುದು, ಪುನರುಕ್ತಿ (ನಿಚ್ಚಂ ನಿಚ್ಚಮೀ ಪಿಷ್ಟಪೇಷಣ ಚರ್ವಿತಚರ್ವಣಂ ಸುಖಮಿದೇಂ ನಿನ್ನಂ ಮರುಳ್ಮಾಡಿತೋ: **ಆದಿಪು,** ೩. ೬೯)

**ಪಿಷ್ಟಾತಕ** – ಪರಿಮಳದ ಪುಡಿ, ಬುಕ್ಕಿ ಹಿಟ್ಟು (ದಿಶಾಯುವತಿಕೇಳಿಕೀರ್ಣಪಟವಾಸಚೂರ್ಣಂ ಜಗತ್ಕುಶೇಶಯನಿವಾಸಿನೀ ಪ್ರಮದಮುಷ್ಟಿಪಿಷ್ಟಾತಕಂ: **ಆದಿಪು,** ೧೧. ೧೫)

**ಪಿಷ್ಟಾತಕೇಳಿ** – ಪರಸ್ಪರ ಸುಗಂಧದ್ರವ್ಯ ಎರಚುವ ಆಟ (ದಿವಿಜೇಂದ್ರವೃಂದ ಬೆರಸಿಂದ್ರ ನೊಸಗೆ ಮರುಳ್ಗೊಂಡು ಪಿಷ್ಟಾತಕೇಳೀವಿಧಾನಾನಂತರಂ: **ಶಾಂತಿಪು,** ೧೦. ೭೯ ವ)

**ಪಿಸುಣ್** – ಕುತ್ಸಿತ, ಚಾಡಿ (ಪಿಸುಣಿಂದೆ ಕಿಡಿಪರ್ಱ ಈ ಕ್ಷಿತಿಪತಿಗಳ್ ಇಂತು ಅವಿಚಾರದಿಂ: **ಪಂಚತಂತ್ರ,** ೧೦೬)

**ಪಿಸುಣ** – ಚಾಡಿಕೋರ (ಪಿಸುಣರ ಮಾತಿಂಗೆ ಮುನಿ ಮೊದಲಾಗಿ ಮನದೊಳ್ ಮುನಿಗು ಎಂದೊಡೆ ಆ ಸಿಂಗಂ ಮುಳಿಯದೇಕೆ: **ಪಂಚತಂತ್ರ,** ೧೦೩ ವ)

**ಪಿಸುಣಾಡು** – ಚಾಡಿ ಹೇಳು (ಮದಾಳಿಯುಂ ಪಿಂಗದೆ ದೇವಸಂತತಿಯ ಕೂಟಮನೇಂ ಪಿಸುಣಾಡಲಾರ್ತುವೋ: **ಶಬರಶಂ,** ೧. ೫೦)

**ಪಿಸುಣ್ಗೆಡೆ** – ಅಪವಾದ ಹೊರಿಸು (ನಾರದ ನಾರದಂ ನುಡಿದರೆಂಬಂತೆ ಪಿಸುಣ್ಗೆಡೆದು ಸನ್ಮಾರ್ಗಾನುವರ್ತಿಯಾಗಿ: **ಅನಂತಪು,** ೧೩. ೨೨ ವ)

**ಪಿಸುಣ್ಬೇಟೆ** – ಚಾಡಿ ಹೇಳು (ಕೆಳದಿಯನಡಂಗಿ ಕಾಡಲ್ ಮುಟುಂಕೆ ಮತ್ತೊರ್ವಳೇಂ ಪಿಸುಣ್ವೇಟ್ಟುವೊ ಕೋಮಳೆಯಿರ್ದೆಡೆಯಂ ತತ್ಪರಿಮಳಕ್ಕೆ ಮೇಗೆಳಸಿ ಸುಟಿದ ಮಧುಕರನಿಕರಂ: **ಚಂದ್ರಪ್ರಪು,** ೭. ೧೪೦)

**ಪಿಸುಟ್** – ಹಿಂಜು (ಚುರ್ಚು ಮಾರ್ನುಡಿಯದೆ ಗಾಣದೊಳ್ ಪಿಟೆ ಪಿಸುಟ್ದೆಟೆ ಪೋಟಿಸು ಪಿಂಡಿವಾಳದೊಳ್; **ಸುಕುಮಾಚ,** ೬. ೫೨)

**ಪಿಹಿತ** – ಮರೆಮಾಡಿದ (ಧೂಳೀಪಟಲಪಿಹಿತಕೇತು ದ್ವಿಪಾನೀಕಘಂಟಾನಿವಹವ್ಯಾಪಾರಂ ಅಲ್ಲಿಂ ಬಟಿಕ ಹಯಖುರಧ್ವಾನಂ ಅಲ್ಲಿಂ ಬಟಿಕ್ಕ: **ಆದಿಪು,** ೧೪. ೯೪)

**ಪಿಳಿ** – ಹಿಳಿ, ಹಿಂಡು (ಜಳಸಖಂ ಜಳಕಿರಣಾವಳಿಯಂ ಪಿಳಿದಂತೆವೋಲ್ ಮರೀಚಿಕೆ ಕೆಱೆಗುಂ: **ರಾಜಶೇಖಿ,** ೫. ೩೮)

**ಪಿಳಿಗು** – ಸೀಳು (ಶೇಷಕಂಠ ಕದಳ ಕಠಿನಾಸ್ತಿ ನುಟ್ಗೆದುದೊ ಗೋತ್ರನಗಂ ಪಿಳಿಗಿತ್ತೊ .. .. ಎನಲ್ ವಿಘೂರ್ಣಿಸಿದುದು ಇರ್ಬಲದೊಳ್ ಸಮರಾನಕ ಸ್ವನಂ: **ಪಂಪರಾ,** ೧೩. ೩೫)

**ಪಿಳುಕು** – ಮರಿ (ಬೇಡಂ ಪಿಳುಕೊತ್ತಿನ ತಾಯೋಡಲ್ ಬಿಟ್ಟಲ್ಲಿ ಕೊಂಡು ಬಂದು ಪಿಳುಕಂ ಬೇಡಿತಿಗೆ ಸಲಹಲಿತ್ತೊಡೆ: **ಯಶೋಧಚ,** ೩. ೩೬)

**ಪಿಳ್ಕು** – ಹಿಳಿಕು, ಗರಿಯಿರುವ ಬಾಣದ ಹಿಂಭಾಗ (ತೋರ್ಪೆನೆನ್ನ ಭುಜವೀರ್ಯಮನೆಂದು .. .. ಪಿಳ್ಕು ನಾರಿಯೊಳ್ ಕೋದು ಕದಂಪನೆಯ್ದೆ ಧನುವಂ ತೆಗೆದು ಅರ್ಪಿಸಿದಂ ಜನಾರ್ದನಂ: **ಪಂಪರಾ,** ೧೪. ೧೭೫)

**ಪಿಳ್ಳೆ** – ಮಗು (ಕರಮೇಟ್ಗೆಯುಳ್ಳ ಪಿಳ್ಳೆಗಳೆರಡುಮನೋಲಗಿಸುವಂ ನೃಪಂಗಲ್ಲಿಯ ಮಾದರನಿತ್ತ ಚಂಡಕರ್ಮಂಗೆ ಅರಸನವಂಗೆ ನೋಡಿ ಸಲಹು ನೀನೆಂದಿತ್ತಂ: **ಯಶೋಧಚ,** ೩. ೭೭)

**ಪಿಜೆತಿನಿ** – [ಹೆಣವನ್ನೇ ತಿನ್ನುವ] ಪಿಶಾಚ ಪಿಜೆತಿನಿಯಂ ವ್ಯಂತರಮಂ ಪಜೆಕರುಮಂ ಪೂಜಿಸಲ್ಕೆವೇಟ್ಟುಂ ಎನುತ್ತುಂ .. .. ರೂಢೀಯ ಶೈವರ್: **ಸಮಯಪ,** ೯. ೯೭)

**ಪಿಟೆ** – ಹಿಂಡು (ನಿನ್ನಂ ಘಾತಿಸಿ ಬಿಡದಲೆದು ಪಿಟೆದು ಪಿಂಡಿದ ದುಃಖವ್ರಾತಮಿದು ಮಗಳೆ ನಿನ್ನ ಪುರಾತನ ದುಷ್ಕರ್ಮವಿಟಪಿಕಟುಫಲಂಗಳ್: **ಆದಿಪು,** ೩. ೩೮)

**ಪಿಟೆದು ಪಿಂಡು** – ತುಂಬ ಹಿಂಸೆ ಕೊಡು (ಈ ತೆಜದಿಂದಂ ನಿನ್ನಂ ಘಾತಿಸಿ ಪಿಟೆದುಪಿಂಡಿದ ದುಃಖವ್ರಾತಮಿದು ಮಗಳೆ ನಿನ್ನ ಪುರಾತದುಷ್ಕರ್ಮವಿಟಪಿಕುಕಫಲಂಗಳ್; **ಆದಿಪು,** ೩. ೩೮)

**ಪಿಟೆಸು** – ಹಿಂಡುವಂತೆ ಮಾಡು (ಅಯ್ಯೂರ್ವರ್ ಋಷಿಯರ್ಕಳ್ ಗಾಣದೊಳ್ ಪಿಟೆಸಿಕೊಂಡುದಂ ಮನೆಯೊಳ್ ಬಗೆದು: **ವಡ್ಡಾರಾ,** ಪು ೧೭೯, ಸಾ ೭)

**ಪೀಠಮರ್ದಕ** – ಶೃಂಗಾರ ವಿಷಯದಲ್ಲಿ ನಾಯಕನಿಗೆ ಸಹಾಯ ಮಾಡುವವನು (ನಾಗರಿಕ ವಿಟ ವಿದೂಷಕ ಪೀಠಮರ್ದಕರೆಂಬ ನಾಯಕರುಂ ದಕ್ಷಿಣಾನುಕೂಲ ಶಠ ದುಷ್ಟರೆಂಬ ಅನುನಾಯಕರುಂ ಬೆರಸು: **ತ್ರಿಷಷ್ಟಿಪು,** ೨೪. ೧೪೧ ವ)

**ಪೀಠಿಕಾಪ್ರಕರಣ** – ಆರಂಭದ ಘಟನೆ (ಲಕ್ಷ್ಮೀವರನವತಾರಕ್ಕೆ ಪೀಠಿಕಾಪ್ರಕರಣದಂತಿರೆ ಬಂದನಂತಭೋಗೀಶ್ವರನಾ ದೇವಕಿಯ ಗರ್ಭದೊಳ್ ಜನಿಯಿಸಿದಂ: **ಜಗನ್ನಾವಿ,** ೨. ೬೦)

**ಪೀಠಿಕೆ** – ಪೀಠ, ಆಸನ (ಪೊಂದಾವರೆಯ ಪೂಗಳಿಂ ಪೀಠೀಕೆಯಂ ಸಮೆದು ಜಿನಪ್ರತಿಮೆಯನಲ್ಲಿ ನಿಲಿಸಿ: **ಪಂಪರಾ,** ೧೬. ೬೫ ವ)

**ಪೀಡನ** – ರಾಜನ ಐದು ವ್ಯಸನಗಳು: ಸ್ವಭಾವ ಪ್ರದೋಷ ಪ್ರಸಂಗಗುಣ ಪ್ರತಿಲೋಮ ಪೀಡನ – ಇವುಗಳಲ್ಲಿ ಐದನೆಯದು (ವೈರಾಗ್ಯ ಅಗ್ನಿ ಉದಕ ವ್ಯಾತಂಕ ಮಾರಿಗುತ್ತ ದುರ್ಭಿಕ್ಷ ಅತಿವೃಷ್ಟಿ ಅನಾವೃಷ್ಟಿಗಳೆಂಬ ಎಂಟುಂ ಪೀಡನಂ ಎಂಬುದಕ್ಕುಂ: **ಪಂಚತಂತ್ರ,** ೧೩೭ ವ)

**ಪೀಡಿಸು** – ಹಿಂಸಿಸು, ಕಾಟಕೊಡು (ಅಪಥ್ಯದಲುಂಬವನ ವ್ಯಾಧಿಗಳ್ ಪೀಡಿಸುವುವು: **ಪಂಚತಂತ್ರ,** ೨೩೪, ಶ್ಲೋಕ ೧೧೫ ಟೀಕೆ)

**ಪೀತ** – ಹೀರಿಕೊಂಡ (ಚಳಚ್ಚಾಮರವಾತ ಪೀತನಿಜಘರ್ಂಆರ್ಂಭಃಕಣಂ .. .. ಇರ್ದನಂದು ಸುಖದಿಂ ವಿದ್ವಿಷ್ಟವಿದ್ರಾವಣಂ: **ಪಂಪಭಾ,** ೩. ೮೫): ಹಳದಿ (ಪೀತಂ ಹರಿತ್ ಪಲಾಶಂ ಹರಿತಂ: ಅಭಿಧಾವ, ೨. ೧. ೬೫)

**ಪೀತಕ** – ಜವೆಗೋಧಿ (ಯವಮದು ಪೀತಕಂ; **ಅಭಿಧಾವ,** ೧. ೧೬. ೧೭)

**ಪೀತಚ್ಛತ್ರ** – ಚಿನ್ನದ ಕೊಡೆ (ಯಶೋಮತ ಕುಸುಮಾವಳಿವೆರಸು ಉನ್ನತ ಪೀತಚ್ಛತ್ರನಂದನಂ ನಡೆತಂದಂ: **ಯಶೋಧಚ,** ೪. ೧)

**ಪೀತನ** – ಅಂಬಟೆ ಗಿಡ (ನಾರಂಗ ಪೀತನ ಜಂಬೂ ಸಹಕಾರ ದಾಡಿಮ ಫಲವ್ರಾತಂಗಳಿಂದ .. .. ನೋಟ್ಪರ ಅಮರ್ತರ್ ಆಚಳೋದ್ಯಾನಮಂ: **ನೇಮಿನಾಪು,** ೨. ೭೨)

**ಪೀತವಸನ** – ರೇಷ್ಮೆ ವಸ್ತ್ರ[ಧಾರಿ], ವಾಸುದೇವ (ಪೀತವಸನಂ .. .. ಉಪೇಂದ್ರಂ ದುರ್ಜಯಂ ರಾಮಚಂದ್ರನ ಪಿಂದಂ ನಡೆತಂದಂ ಆಯತಸಿತಾಂಭೋಜೇಕ್ಷಣಂ ಲಕ್ಷ್ಮಣಂ: **ಪಂಪರಾ,** ೬. ೭೭)

**ಪೀತಾಂಬರ** – ಪೀತವಸನ (ಪೀತಾಂಬರಮಂ ಕೊಳ್ಳಿದಂ ಪೊದೆದು ಮುದದಿನಿರ್ದು ಆಕೆ ತಾಯ್ ಎಂದಜೆವುದು: **ಕರ್ಣನೇಮಿ,** ೯. ೧೮ ವ); ಕೃಷ್ಣ (ಅಂಬುರುಹಮಿತ್ರ ಬಿಂಬಾಡಂಬರಮಂ ಮಿಕ್ಕು ಚಕ್ರಮಿರೆ ಕೆಲದೊಳ್ ಪೀತಾಂಬರಂ ಈಕ್ಷಿಸಿದಂ ನೀಲಾಂಬರನ ಮುಖಾರವಿಂದಮಂ ಮುದದಿಂದಂ: **ಶಾಂತೀಶ್ವಪು,** ೮. ೧೧೫)

**ಪೀತಾಂಬರಧರ** – ಶ್ರೀಕೃಷ್ಣ (ಪೀತಾಂಬರಧರನಂ ಪುರುಹೂತ ಶಿಲೀಮುಖನಿಕಾಯಮೆಜಗಿದುದು: **ಜಗನ್ನಾವಿ,** ೧೩. ೯೧)

**ಪೀತಾಂಶುಕ** – ಹೊಂಬಣ್ಣದ ಕಾಂತಿಯವನು, ಅಗ್ನಿ (ದಂತವಕ್ತ್ರರಂ ನಿಸರ್ಗವೈರದಿಂದ ಸುರವೈರಿಯ ಪೆಸರ್ಗಳೆ ತನಗಸಹ್ಯಂಗಳಾಗೆ ಹರಿನಾಮಯುಕ್ತನೆಂದು ಪಾವಕನಂ ಮೂವೀದಿವಡಿಸಿಯುಂ .. .. ಕಾಳಿಯಸರ್ಪದರ್ಪದಳನಂ ಅದಿರದಿದಿರೊಳ್: **ಜಗನ್ನಾವಿ,** ೯. ೫೩ ವ)

**ಪೀನ** – ದಪ್ಪವಾಗಿರುವ (ಕಂಕಣರವಂ ಮೆಯ್ದೋಜೆ ಪೀನಸ್ತನಂ ನಲಿಯಲ್ ಮೌಕ್ತಿಕಪತ್ರಮೊಲೆಯಲ್: **ತ್ರಿಷಷ್ಟಿಪು,** ೧೫. ೩೦)

**ಪೀನಂ** – ಹೆಚ್ಚಾಗಿ (ಲಯಮಂ ಕರ್ಮತಮಸ್ತಮಕ್ಕೆ ಜಯಮಂ ಧರ್ಮಕ್ಕೆ ಪೀನಂ ಪರಾಜಯಂ ದೋಷಗಣಕ್ಕೆ : **ಆದಿಪು,** ೬. ೧೦೯)

**ಪೀನಸ** – ನೆಗಡಿ (ಪೀನಸಮೆನೆ ನೆಗಡಿ: **ಅಭಿಧಾವ,** ೧. ೧೨. ೩೫)

**ಪೀನೋದರ** – ಡೊಳ್ಳು ಹೊಟ್ಟೆ[ಯುಳ್ಳವನು] (ದ್ರುತಯಾನೋತ್ಕಂಪಿಪೀನೋದರಂ ಅವನಿಪನೊಡ್ಡೋಲಗಕ್ಕೆ ವಂದಂ ಪ್ರತಿಹಾರಂ: **ಚಂದ್ರಪ್ರಪು,** ೨. ೭೪)

**ಪೀಯೂಷ** – ಅಮೃತ (ಪ್ರೇಮಪೀಯೂಷದಿಂ ಪಿರಿದುಂ ನಾಂದಿಸುವಂತೆ ಕಾಂತೆ ಪದೆದಾಗಳ್ಪೊಯ್ದಳ್: **ಶಾಂತೀಶ್ವಪು,** ೧೦. ೧೭೭); ಹಾಲು (ಜಗಮೆಲ್ಲಂ .. .. ಪೀಯ್ಯೂದೆ ತಣಿದುದೊ ಬೆಳ್ದಿಂಗಳೊಳ್ ಸಂದುದೋ ಸಂದೆಗಮೇನೆಂಬಂತದೇಂ ಪರ್ವಿದುದೊ ನೃಪತಿಸ್ಫೂರ್ತಿ ಕೀರ್ತಿಪ್ರತಾನಂ: **ಪುಷ್ಪದಂಪು,** ೩. ೧೪)

**ಪೀಯೂಷಾರ್ಣವ** – ಕ್ಷೀರಸಮುದ್ರ (ಶಿವೈಕಸಮುದಯ ಪೀಯೂಷಾರ್ಣವಚಂದ್ರಂ ಎನಿಪ್ಪಂ .. .. ಸುಕವಿ ಸುರಂಗಂ: **ತ್ರಿಷಷ್ಟಿಪು,** ೧. ೩೫)

**ಪೀರ್** – ಹೀರು (ಕಜೆಗಟ್ಟಲೆಯಂ ತವೆ ಪೀರುತುಂ .. .. ಬಂದುದುದಯಾದ್ರಿಯನರ್ಕನೇಜೆದಂ: **ಕುಸುಮಾಕಾ,** ೧೪. ೨೦); ಚಪ್ಪರಿಸು (ಪಥಿಕನೊರ್ವ ತರುಣಿಯ ಲಾವಣ್ಯರಸಮಂ ಅಕ್ಷಿಗಳಿಂದಂ ಬರೆ ಪೀರ್ದು ದಣಿದು: **ಗಿರಿಜಾಕ,** ೨. ೨೩)

**ಪೀಲಿ** – ನವಿಲುಗರಿ (ಮನೋಜಂ ಶೂಲಿಯ ನೊಸಲುರಿಗಣ್ಣಿಂ ಪೀಲಿಯ ಕಣ್ಣೆಂಬನಾವಂ ಎನಗಿದಿರೆಂಬಂ: **ಪಂಪರಾ,** ೫. ೪೪)

**ಪೀಲಿಗರಗ** – [ಪೀಲಿ+ಕರಗ] ನವಿಲುಗರಿಗಳಿಂದ ಅಲಂಕೃತಗೊಂಡ ಗಡಿಗೆ (ಪರಿಜನಂಗಳ್ ತಳಿದ ಪೀಲಿಗರಗದಾಲಿಗುಡುವ ನೀರ ತೋರವನಿಯ

ತಂದಲೊಂದುಗೆಯೊಳಮೆಂತಾನುಂ ಹಮ್ಮದದಿನಗಲ್ದು: **ಚಂದ್ರಪ್ರಭ,** ೫. ೧೯ ವ)

**ಪೀಲಿದಟಿಕೆ** – ಪಿಂಛಾತಪತ್ರ (ತರದಿಂ ಮೇಲೊಗೆದಿರ್ಪ ಪೀಲಿದಟಿಗಳ್ ತಳ್ತಾಗಸಂ ರೂಪುಗೆಟ್ಟಿರೆ .. .. ಬಂದುದಳವಿಂ ಪಾಡು ಇಂತು ಮುಕ್ಕಣ್ಣನಾ: **ಕಬ್ಬಿಗಕಾ.** ೧೯೪)

**ಪೀವರ** – ದೊಡ್ಡದಾದ (ಆ ಸಕಲ ಲಕ್ಷ್ಮೀನಿವಾಸವಿಶಾಲವಕ್ಷಸ್ಥಲನಂ ತಮ್ಮ ನಿಬಿಡನಿಬದ್ಧ ಪೀವರಸ್ತನಂಗಳಿಂ ಕೂಂಕಿಯುಂ: **ಸುಕುಮಾಚ.** ೧೦. ೧೦೧ ವ)

**ಪೀಱು** – ಕೆದರು (ಪೀಱು–ವಿಕೀರ್ಣೇ: **ಶಬ್ದಮದ,** ಧಾ ೮೮೨); ಇರಿಚಲು (ಪಾಱುವ ವಿಮಾನದೊಂದಳ್ಳೇಱಿಂ ಪಱೆದಗುವ ಮುಗಿಲ ನೀರ್ಗಳ ಪಲವುಂ ಪೀಱುಗಳೊಳೆಳಸಿ ಖಚರನಾಱೆಸಿದುದು ಗಗನದೊಳ್ ವಿಯತ್ತಳಪವನಂ: **ಆದಿಪು,** ೪. ೮೬)

**ಪೀಟಿಗೆ** – [ಪೀಠಿಕಾ] ಪೀಠ, ಸಿಂಹಾಸನ (ನೀನುಳ್ಳೊಡೆ ಉಂಟು ರಾಜ್ಯಂ ನೀನುಳ್ಳೊಡೆ ಪಟ್ಟಮುಂಟು ಬೆಳ್ಗೊಡೆಯುಂಟಯ್ ನೀನುಳ್ಳೊಡೆ ಉಂಟು ಪೀಟಿಗೆ ನೀನಿಲ್ಲದೆ ಇವೆಲ್ಲಂ ಒಳವೆ ಅಂಗಾಧಿಪತೀ: **ಗದಾಯು,** ೫. ೨೦)

**ಪುಂಕಿಸು** – ಊದು, ಧ್ವನಿಗೈ (ಸುಷಿರವಾದ್ಯವಿಶಾರದನಪ್ಪ ಕಿನ್ನರಂ ತನ್ನಯ ಸೊಳಹಯೆಂಬ ವಾಸಮಂ ಕೊಂಡು ಹೆಲ್ಲಣಿಯಂಪುಂಕಿಸಿ: **ಶಾಂತೀಶ್ವಪು,** ೧೬. ೬೭ ವ)

**ಪುಂಖ** – ಗರಿ, ಬಾಣದ ಹಿಳಿಕು (ಪುಳಕೋತ್ಕರಮೊಗೆದುವು .. .. ಸ್ಮರನ ಸರಲ್ಗಳ್ ನಾಂಟಲ್ ಶರೀರಮಂ ಪತ್ತಿನಿಂದ ಪುಂಖಂಗಳವೋಲ್: **ಕಾದಂಬ,** ೪. ೧೦೫)

**ಪುಂಖಾನುಪುಂಖ** – ಬಾಣಪರಂಪರೆ (ನೈಷ್ಠಿಕಮೆಂಬ ಮುಷ್ಟಿಯೊಳಂ ಪುಂಖಾನುಪುಂಖಮೆಂಬ ಶರಸಂಧಾನದೊಳ್ ಅವಯವದೊಳ್ ತೆಗೆದೊಡೆ: **ಪಂಪಭಾ,** ೨. ೫೨ ವ)

**ಪುಂಖಾನುಪುಂಖಂ** – ಬಾಣಗಳು ಒಂದನ್ನೊಂದು ಹಿಂಬಾಲಿಸುವಂತೆ (ಅಂತು ಪುಂಖಾನುಪುಂಖಂ ಇಸುವುಱುಂ: **ಪಂಪರಾ,** ೧೪. ೧೩೪ ವ)

**ಪುಂಗವ** – ಹೋರಿ, ವೃಷಭ (ಸಲ್ಲಿಂಗನಿಜಾಂಗ ಪುಂಗವತುರಂಗ ಭುಜಂಗಭೂಷ: **ಶಬರಶಂ,** ೫. ೨೬); ಶ್ರೇಷ್ಠ (ಸಂಗತ ಮಣಿರುಚಿಯಂ ಜಿನಪುಂಗವನಡಿಗೆಱಗುವೆಡೆಯೊಳ್ ಇನಿಸಿನಿಸಱೆಯಲ್ ಪಾಂಗಾದುದು ಸುರಗಿರಿಕೂಟಂಗಳುಮಂ ಪ್ರಣತ ಸುರಕಿರೀಟಂಗಳುಮಂ: **ಅಜಿತಪು,** ೫. ೫)

**ಪುಂಗವಧ್ವಜ** – ವೃಷಧ್ವಜ, ಶಿವ (ಪುರುಷಪುಂಗವಂ ಪುಂಗವಧ್ವಜಂಗೆ ಆತ್ಮಾರ್ಪಣಂಗೆಯ್ದು ಇನಿಸಾನುಂ ಪೊಳ್ತು ಅನಿಮಿಷಾಕ್ಷಿಯಿಂ ನಿರೀಕ್ಷಿಸಿ: **ರಾಜಶೇವಿ,** ೧೩. ೫೪ ವ)

**ಪುಂಜ** – ಹುಂಜ (ರಂಜಿಸಿದುದು ಪುಂಜಂ ಅಗ್ಗದ ಸುವಸ್ತುವಿನಂತಿರೆ ತಳ್ತು ಪೇಂಟೆಯೊಳ್: **ಯಶೋಧಚ,** ೩. ೭೮); ಗುಂಪು

**ಪುಂಜಿ** – ಉಂಡೆ (ಪದಂಗಾಸಿದ ಪೊನ್ನ ಪುಂಜಿಯವೊಲಿರ್ದುದು ಕಣ್ಗೆ ಹಿಮಾಂಶುಮಂಡಲಂ: **ಪಂಪಭಾ,** ೩. ೮೦)

**ಪುಂಜಿಕೆ** – ರಾಶಿ (*ದೆಸೆಗಳ್ ನಿಜಾಂಶುವಿಂ ರಂಜಿಸುತಿರೆ ಪುಂಜಿಸಿದ ಪೊನ್ನ ಪುಂಜಿಕೆಯಿಂದಂ ಕೊಸಗಿನ ಮರದುಱುಂಗಲ್ ಅರಲ್ದೆಸೆವಂತೆಸೆದಿರ್ಪುದಲ್ಲಿ ಬಜ್ಜರವಸರಂ: **ಜಗನ್ನಾವಿ,** ೯. ೧೦೭); ಗೊಂಚಲು (ತಾರಾವಸಂತಂ ತದ್ವನೇಂದುಮಂಡಲದ ಜೊನ್ನದ ಪುಂಜಿಕೆಯಂತಿರಲೆ ಎಸೆದುವೆರಡುಂ ಕೆಲದೊಳ್: **ಶಾಂತೀಶ್ವಪು,** ೧೩. ೨೧೮)

**ಪುಂಜಿಸು** – ಗುಡ್ಡೆ ಮಾಡು (ಚೀನದ ಮಹಾಚೀನದ ಪಟಿಯ ಚಿತ್ರಾವಟಿಯ ಪಟ್ಟಾವಟಿಯ ಪಟ್ಟಸೂತ್ರದ ಚಿತ್ರಸೂತ್ರದ ನೇತ್ರವಟ್ಟಣಿಗೆಯ ಪುಟ್ಟಿಗೆಗಳಂ ಒಟ್ಟಿ ಬೆಟ್ಟಾಗಿ ಪುಂಜಿಸಿ: **ಸುಕುಮಾಚ,** ೧೦. ೯೧ ವ)

**ಪುಂಜೀಕೃತಂ ಮಾಡು** – ರಾಶಿಮಾಡು (ಅಮಿತಾಂಭೋನಿಧಿ ವಾಳುಕಪ್ರಕರಮಂ ಪುಂಜೀಕೃತಂ ಮಾಡಿ ಚೋದ್ಯಮದಾಗಲ್ ಮಱಲೊಂದನಲ್ಲಿ ಕುಱೆಪಂ ಮಾಡಿಟ್ಟು: **ಸುಕುಮಾಚ,** ೫. ೩೩);

**ಪುಂಡರೀಕ** – ಬಿಳಿಯ ತಾವರೆ (ಸಾರ್ದತ್ತು ಜಕ್ಕವಕ್ಕಿಯ ಪೊಣರುಂ ಗ್ಲಪಿತಮನಮಾಗಳುದ್ದಂಡ ಪುಂಡರೀಕೋಜ್ಜ್ವಳಾತಪತ್ರದ ನೆೞಲಂ: **ಆದಿಪು,** ೧೧. ೫೦); ಬೆಳ್ಗೊಡೆ (ಕನತ್ಕನಕದಂಡಮಂಡಿತ ಪುಂಡರೀಕನಿಕರವಾವರಿಸಿ ತಳರ್ದೆತ್ತಲುಂ: **ಕರ್ಣನೇಮಿ,** ೮. ೧೧೫ ವ); ಹುಲಿ (ಮಾನಿತ ಪುಂಡರೀಕರುಚಿರಂ ವಿಲಸದ್ವರಗಂಡಮಂಡಲಂ .. .. ನೆಲಸಿ ನಿಲೆ ಸರಸ್ವತಿ ರಾಗದಿಂ: **ಪಂಚತಂತ್ರ,** ೪); ಗಿಳಿ (ಪಿಂಗಳೆ ಗೋಣಿ ಭಲ್ಲ ಶಶ ಜಂಬುಕ ವಾನರ ಪುಂಡರೀಕ ಸಾರಂಗ ... .. ಜಾಲಸಂಚರಣದಿಂದೊಪ್ಪಿತ್ತು ವಿಂಧ್ಯಾಚಳಂ: **ಉದ್ಭಟಕಾ,** ೨. ೪೩); ಆಗ್ನೇಯ ದಿಗ್ಗಜದ ಹೆಸರು (ಅದಟಿಂದ ಐರಾವತಕ್ಕಂ ಸಮಂ ಅತಿಬಳದಿಂ ಪುಂಡರೀಕಕ್ಕಂ ಸಮಂ: **ತ್ರಿಷಷ್ಟಿಪು,** ೨. ೫೫)

**ಪುಂಡರೀಕಿಣಿ** – ಬೆಳ್ದಾವರೆವನ (ವಿನಯಾದಿತ್ಯನೆ ಪೊಯ್ಸಳ ಜನಪತಿಗಳ ಕೀರ್ತಿ ಪುಂಡರೀಕಿಣಿಗೆ ಉನ್ಮೀಲನಮಂ ಒಡರ್ಚಿದಂ: **ಯಶೋಧಚ,** ೧. ೧೦)

**ಪುಂಡಾಗು** – ಕೇಡಾಗು (ಪದುಳಿದನಲ್ಲದನಂ ಕಲಿಸಿದೊಡಂ .. .. ನಿಲಲ್ಕಱೆಗುಮೆ ಚಿತ್ತದೊಳ್ ಆಪ್ತನ ವಚನಮದು ಪುಸಿದೊಡಂ ಪುಂಡಾಗಲೆಂತುಂ ಅಱೆಯದ ತೆಱದಿಂ: **ಸಮಯಪ,** ೧೧. ೧೫೭)

**ಪುಂಡ್ರಾಂಬುಜ** – ಬಿಳಿದಾವರೆ (ಮರಾಳಜಾಳಮೆನಸುಂ ಪೊರ್ದಿತ್ತು ಪುಂಡ್ರಾಂಬುಜೋದ್ದಾಮಶ್ರೀಯವಿಳಾಸಮಂ ದ್ವಿಗುಣಿಸುತ್ತಬ್ಜಾಕರಶ್ರೇಣಿಯೊಳ್: **ಕುಸುಮಾಕಾ,** ೬. ೪೮)

**ಪುಂಡ್ರೇಕ್ಷುವಾಟಿ** – ಬಿಳಿಯ ಕಬ್ಬಿನ ಗದ್ದೆ (ರಸಮೊಸರ್ವುವು ಪುಂಡ್ರೇಕ್ಷುವಾಟಿಕೋಟಿಗಳದೞೊಳ್: **ಆದಿಪು,** ೧. ೫೯)

**ಪುಂಡ್ರೇಕ್ಷುದಂಡ** – ಪಟ್ಟೆಕಬ್ಬು ಜಲ್ಲೆ (ಸೊಗವೆರಸಿದ ಪುಂಡ್ರೇಕ್ಷುದಂಡಂಗಳನುರ್ಚಿ ಬಾಳವೇರ್ಗಳಂ ಬಿಗಿದು: **ರಾಜಶೇವಿ,** ೧೦. ೩೧ ವ)

**ಪುಂಡ್ರೇಕ್ಷುವಾಟ** – ಪಟ್ಟೆಕಬ್ಬಿನ ತೋಟ (ವಿಜಯಾಸ್ತ್ರಮಿವೆ ಮನೋಜಂಗೆ ಎನೆ ಬರ್ಪುವು ಜನದ ಮನಕೆ ಪುಂಡ್ರೇಕ್ಷುವಾಟಮುಂ ಪುಷ್ಪವಾಟಮುಂ ಪೊಱವೊೞಲೊಳ್: **ಅಜಿತಪು,** ೨. ೧೨)

**ಪುಂಭಾವ** – ಗಂಡಸಿನ ಮನೋಭಾವ (ಅಬಳಾಬೃಂದಮದೀಕ್ಷಿಸಿ ಹೃದಯದೊಳಮದೇಂ ಪುಂಭಾವಮಂ ಪುದುಂಗೊಳಿಸಿದುದೋ: **ಚಂದ್ರಪ್ರಭ,** ೭. ೧೩೧)

**ಪುಂವೇದ** – [ಜೈನ] ಗಂಡುಜೀವಕ್ಕೆ ಹೆಣ್ಣಿನ ಮೋಹವುಂಟುಮಾಡುವ ಕರ್ಮ (ಕ್ರಮಕ್ರಮದೊಳೆ

ನಪುಂಸಕವೇದಮುಮಂ ಸ್ತ್ರೀವೇದಮುಮಂ ಪುಂವೇದಮುಮಂ .. .. ಘಾತಿಸಿ: **ಆದಿಪು,** ೧೦. ೧೪ ವ)

**ಪುಂಶ್ಚಲ** – ವಿಟ (ರಾಗದಿಂ ಮೆಱೆದುದು ತೆಂಬೆಲರ್ ಬಿಡದೆ ಪುಂಶ್ಚಲನಂದದೆ ಸುಪ್ರಭಾತದೊಳ್: **ತ್ರಿಷಷ್ಟಿಪು,** ೨೭. ೧೦೭)

**ಪುಂಶ್ಚಲಿ** – ಹಾದರಗಿತ್ತಿ (ಪೊದಿಜೆವ ಅಚ್ಚಿಗದಿಂದಂ ಮೆಚ್ಚಿದ ಬಗೆಯಿಂ ಸ್ಮರಕೇಳಿಗೆಳಸಿದರ್ ಪುಂಶ್ಚಲಿಯರ್: **ಲೀಲಾವತಿ,** ೧೩. ೧೦೭)

**ಪುಂಶ್ಚಳಿ** – ಹಾದರಗಿತ್ತಿ, ಗಂಡುಬೀರಿ (ಪಕ್ಷಿತತಿ ಕೂಡೆ ಕುಲಾಯಮನೆಯ್ದೆ ಪುಂಶ್ಚಳೀಸಮಿತಿ ಪೊಡರ್ಪನೆಯ್ದೆ ರವುಯೆದುದಂ ಆಕ್ಷಣಂ ಅಸ್ತಶೈಳಮಂ: **ಶಾಂತೀಶ್ವಪು,** ೩. ೫೪)

**ಪುಂಸವನ** – ಷೋಡಶಸಂಸ್ಕಾರಗಳಲ್ಲಿ ಒಂದು, ಗರ್ಭಿಣಿಗೆ ಗಂಡುಮಗುವಾಗಲೆಂದು ಮಾಡುವ ಸೀಮಂತೋನ್ನಯನ (ಕಾಂತೆ ಪುಂಸವನಂ ಮಾಡುವದೊಂದರ್ಥಾಂತರದಿಂದ ಅವನೀಶಂ ಸರಸವಾಡಿ ಕಾಡುಗುಮೆಂದೋ: **ಪುಷ್ಪದಂಪು,** ೩. ೮೮)

**ಪುಂಸ್ಕೇಸರಿ** – ಗಂಡು ಸಿಂಹ, ನರಸಿಂಹ (ತೀಕ್ಷ್ಣನಖರಂಗಳಿಂ ಆಸುರಮಾಗಿ ಸೀಳ್ದ ಪುಂಸ್ಕೇಸರಿಗಂ ಬಲಾಧಿಕಂ ಅಸಾಧ್ಯತರಂ ನೆಗಳ್ವಂ ವೃಷಾಧಿಪಂ: **ಪಂಚತಂತ್ರ,** ೧೬೧)

**ಪುಂಸ್ಕೋಕಿಳ** – ಗಂಡು ಕೋಗಿಲೆ (ಮಧುಕರನಿಕರಮುಂ ಪುಂಸ್ಕೋಕಿಳಕಳಾಪಮುಂ ರಾಜಕೀರಕದಂಬಮುಂ ಮುಂದೆ ನಡೆಯಱಿದೋಲಗಿಸುತ್ತುಂ ಬರೆ: **ಶಾಂತಿಪು,** ೭. ೧೨೮ ವ)

**ಪುಗಲ್** – ಕೋಗಿಲೆಯ ಕೂಜನ; **'ಹೊಗಬೇಡ'** ಎಂಬ ಮಾತು (ನಂದನವನಪವನಂ ಬಱಿವಂದೊಡಗೊಂಡೊಯ್ದು ಪುಗಿಸೆ ಬನಮಂ ಪುಗಲ್ ಎಂಬೊಂದು ಅನ್ಯಭ್ರತಕ್ಕಾಣತಿ ವಂದಂತಾಯ್ತು ಬೆಸಸೆ ಕುಸುಮಾಮೋದಂ: **ಶಾಂತಿಪು,** ೮. ೩)

**ಪುಗಲಿಂ** – ಪ್ರವೇಶಿಸಬೇಡಿರಿ (ಇದಂ ಪುಗಲಿಂ ಗಡಿಂ ಎಂದು ಬೇಟಕಾಱರಂ ಇರದೆ ಊಱೆ ಸಾಱೆ ಜಡಿವಂತೆ ಎಸೆಗುಂ ಸಹಕಾರಕೋಮಳ ಅಂಕುರಪರಿತುಷ್ಟ ಪರಪುಷ್ಟಗಳ ಧ್ವನಿ ನಂದನಂಗಳೊಳ್: **ಪಂಪಭಾ,** ೨. ೧೩)

**ಪುಗಿಲ್** – ಪ್ರವೇಶ (ಎಳವಿಸಿಲೀಗಳಿಗಳೆ ಮುದಿರ್ದುದು .. .. ಉನ್ಮದಷಟ್ಪದವೃಂದಮೀಗಳಿಗಳೆ ಮೊರೆದತ್ತು .. .. ಪುಗಿಲದಾಗಲೆವೇಡ ವಸಂತರಾಜನಾ: **ಆದಿಪು,** ೧೩. ೫); ಬಾಗಿಲು (ಕತ್ತುರಿಮೃಗಮದದೊಳ್ ಪುದಿದೆತ್ತಂ ಮಗಮಗಿಸೆ ಕಂಪು ಪೊಂಪುಱಿ ಪುಗಿಲೊರ್ಳ: **ಆದಿಪು,** ೯. ೧೨೦); ಆರಂಭ (ಯಾತ್ರೆಗವನೀತಲಪತಿಯಂ ಪ್ರೇರಿಸಿತ್ತು ಪುಗಿಲೊಳ್ ಶರದಂ: **ಶಾಂತಿಪು,** ೧೧. ೧೪೦); ಕತ್ತಿವರಸೆಯ ಒಂದು ಭಂಗಿ; ಕೋಗಿಲೆಯ ಕೂಜನ (ಉಣ್ಮುವ ಉಯ್ಯಲ ಪೊಸಗಾವರಂ ಪುಗಿಲೊಳ್ ಏಂ ಎಸೆದತ್ತೋ ಬಸಂತಮಾಸದೊಳ್: **ಪಂಪಭಾ,** ೨. ೧೨)

**ಪುಗಿಲ್ಗರೆ** – ಕೂಜಿಸು, ಧ್ವನಿಗೈ (ಮೆಯ್ಯ ಮಸಿ ಕೊರಲ ಬಕ್ಕಳೆ ಪೊಯ್ಯೆ ಪುಗಿಲ್ಗರೆವ ಕೆಯ್ಯ ಕಂಕರಿಕೆ ಕರಂ ರಯ್ಯಮೆನೆ ಪಾಡುರ್ತಿಳ್: **ಕಾವ್ಯಾವಲೋ,** ೩೦೯)

**ಪುಗುಳ್** – ಬೊಕ್ಕೆ, ದದ್ದು (ಕಠಿನಭೂಮಿಯೊಳ್ ನಡೆದೊಡೆ ಕಿಱುಗಲ್ಗಳುಂ ಪೆಟ್ಟೆಗಳುಂ ಅಗುಟ್ದು ಪುಗುಳೊಡೆದು ಪೊಱಮಟ್ಟು: **ವಡ್ಡಾರಾ,** ಪು ೨೯, ಸಾ ೧೦)

**ಪುಗುಳೇೞ್** – ಬೊಕ್ಕೆಯೇಳು (ಗೋಪರ್ ತಂತಮ್ಮೊಡಲೊಳ್ ಪುಗುಳೇೞೆ ಪೋಗಿ ಪುಯ್ಯಲ್ಚುವುದುಂ: **ಜಗನ್ನಾವಿ,** ೩. ೮೭)

**ಪುಗುಳೊಡೆ** – ಪುಗುಳೇೞ್ (ಕಠಿನಭೂಮಿಯೊಳ್ ನಡೆದೊಡೆ ಕಿಱುಗಲ್ಗಳಂ ಪೆಟ್ಟೆಗಳುಂಗುಟ್ಟ್ದು ಪುಗುಳೊಡದು: **ವಡ್ಡಾರಾ,** ಪು. ೨೯, ಸಾ. ೧೦)

**ಪುಗ್ಗಾಯಿಲ** – ಗರ್ವಿಷ್ಠ (ಮಲೆವರ್ ಸಾಮಂತರ್ ಮಂಡಳೇಶ್ವರರ್ ಮನ್ನೆಯರ್ ಕುಱುಂಬರ್ ಪುಗ್ಗಾಯಿಲರ್ ಎನಿಸುವ ಅರಸು ಮಕ್ಕಳ್ ಪಲರುಂ: **ವರ್ಧಮಾಪು,** ೩. ೫೨)

**ಪುಚ್ಚವಣಂ** – ಪರೀಕ್ಷೆ (ಪುಚ್ಚವಣಂ ನೋಡುವೆನೆನ್ನೆಚ್ಚೆಯೊಳೀ ಮುನಿಯ ವರದ ಮಹಿಮೆಯಂ ಎನುತ ಅಂದು ಉಚ್ಚಸ್ತನಿ ಗಂಗೆಗೆ ಶಫರ ಉಚ್ಚಳಿತ ತರತ್ತರಂಗೆಗೆ ಒರ್ವಳೆ ಬಂದಳ್: **ಪಂಪಭಾ,** ೧. ೯೦)

**ಪುಚ್ಚಱಿ** – ನಾಶವಾಗು (ಬಿಸಿಲಳುರೆ ಪೊಣ್ಮಿದ ಘರ್ಮಬಿಂದುಗಳಿಂ ನಾಂದು ಪುಚ್ಚಱಿದರೆವೊರೆಕನಾದ ಕುಂಕುಮಪತ್ರಭಂಗದ ಕೊರಗಿದ ನಗೆಮೊಗಂಗಳುಂ: **ಆದಿಪು,** ೧೧. ೭೦ ವ)

**ಪುಚ್ಚಱಿಸು** – ಕರಗಿಹೋಗು, ನಾಶವಾಗು (ಪುಚ್ಚಱಿಸು–ಲಯೇ: **ಶಬ್ದಮದ,** ಧಾ ೭೯೧)

**ಪುಚ್ಛ** – ಬಾಲ (ನಾನಾ ಕರಿ ಮಕರ ಪುಚ್ಛಪ್ರಹಾರ ಪ್ರತಾಪೋದ್ಗಳಿತ: **ಗಿರಿಜಾಕ,** ೧. ೪೬)

**ಪುಜ್ಯಜನ** – ನಿರುತಿ (ದ್ವಿತೀಯ ಪ್ರಾಕಾರದೊಳಗೆ ಪಾವಕ ಪುಜ್ಯಜನ ಪವಮಾನ ಪಶುಪತಿಗಳ ವಿನೋದವಿಹಾರ ಯೋಗ್ಯಂಗಳಪ್ಪ ನಾಲ್ಕುಂ ಕೋಣ್ಗಳ ಸೌವರ್ಣ ಸೌಧಂಗಳೊಳಂ: **ಶಾಂತೀಶ್ವಪು,** ೧೬. ೩೧ ವ)

**ಪುಟ** – ದೊನ್ನೆ (ಸರೋವರಜಲಂಗಳಂ ಪದ್ಮಪತ್ರ ಪುಟಂಗಳಿಂ ತಂದು ಪದಪದ್ಮಂಗಳಂ ಕರ್ಚಿ ತತ್ಪಾದಪವಿತ್ರೋದಕಂಗಳಂ ಅನಿಬರುಂ ಉತ್ತಮಾಂಗದೊಳ್ ತಳಿದುಕೊಂಡಿರ್ದಾಗಳ್: **ಪಂಪಭಾ,** ೭. ೫೯ ವ)

**ಪುಟಂನೆಗೆ** – ಭಂಗನೆ ನೆಗೆ (ಕೋಪದಿಂ ಪೊಡೆಸೆಂಡುವೊಡೆಯುತಿರ್ದುದೆಂಬಂತೆ ಪೊಡರದೆ ಪುಟಂನೆಗೆದು ಮಗುೞ್ಚೆ: **ಪಾರ್ಶ್ವನಾಪು,** ೬. ೯೯ ವ)

**ಪುಟಪಾಕ** – ಶುದ್ಧಿಗೊಳಿಸಲು ಬೇಯಿಸುವುದು (ಪಸಿಯ ತೊವಲ ತಿದಿಯೊಳ್ ಪುದಿದು ಪುಟಪಾಕಂ ಸುಡುವರುಂ: **ಆದಿಪು,** ೫. ೮೫ ವ)

**ಪುಟವಿಡು** – ಪುಟಕ್ಕೆ ಹಾಕು, ಶುದ್ಧಿಗೊಳಿಸು (ಪುಟವಿಟ್ಟಳವಟ್ಟ ಮಿಸುನಿವೋಲ್ ಮಂಗಳನಿರ್ಮಳರುಚಿರೂಪೆ ಕಣ್ಗೆಸೆದಿರ್ದಳ್: **ಗಿರಿಜಾಕ,** ೩. ೨೪)

**ಪುಟವೇಱು** – ಶೋಭೆಯನ್ನು ಪಡೆ (ನಯದೆ ಪುಟವೇಱೆ ನಿತಂಬಿನಿ ಕಾರೊಳೆಸೆವ ಕಾದಂಬಿನಿಯಂದದೆ ಮಂದಮಂದಗಮನದೆ ನಡೆದಳ್: **ಕಾದಂಬ,** ೨. ೭೭)

**ಪುಟಿಕೆ** – ಭರಣಿ, ದೊನ್ನೆ (ಪದ್ಮಪತ್ರ ಪುಟಿಕೆಯಿಂ ಕುಳಿರ್ವತಿಳಿನೀರ್ಗಳುಮಂ .. .. ಮಕರಂದಂ ತಂದು ನೀಡೆ: **ಲೀಲಾವತಿ,** ೫. ೫೯ ವ)

**ಪುಟ್ಟಿ** – ಜೇನುಗೂಡು (ಪಂದಲೆಗಳ ಜೇನ ಪುಟ್ಟಿಗಳೆನೆ ಕೊರ್ವಿದ ಕೊಂಬುಗಳಲ್ಲಿ ಪಕ್ಕಿವೋಲ್ ಚಿಲಿಮಿಲಿಯೆಂದುವೆರ್ದ ಕೊಲೆಗಳ್ಕುಣಪಾಲಯದ ಆಲದೋಳಿಯೊಳ್: **ನೇಮಿನಾಪು,** ೫. ೩೭)

**ಪುಟ್ಟಿಗೆ** – ಸೀರೆ (ಚೀನದ ಮಹಾಚೀನದ ಪಟೆಯ ಚಿತ್ರಾವಟೆಯ ಪಟ್ಟಾವಟೆಯ ಪಟ್ಟಸೂತ್ರದ ಚಿತ್ರಸೂತ್ರದ ನೇತ್ರವಟ್ಟಣಿಗೆಯ ಪುಟ್ಟಿಗೆಗಳಂ ಒಟ್ಟಿ ಬೆಟ್ಟಾಗಿ ಪುಂಜಿಸಿ: **ಸುಕುಮಾಚ,** ೧೦. ೯೧ ವ); ಬುಟ್ಟಿ (ಪುಟ್ಟಿಗೆಯುಮಂ ಪೂವುಮಂ ತಳಿಗೆಯೊಳಿಟ್ಟುಕೊಂಡು ಪೋಪುದಂ ಕಂಡು: **ಜೀವಸಂ,** ೧೨. ೩೩ ವ)

**ಪುಟ್ಟು** – ಜನ್ಮಿಸು (ಚೀಃ ಸತ್ತರೇಂ ಪುಟ್ಟರೆ ಪೊಱಮಡು ನೀಂ ಕೈದುಗೊಳ್: **ಗದಾಯು,** ೭. ೧೩); ಜನ್ಮ (ಸಾವುಂ ಪುಟ್ಟುಮದಿಲ್ಲದನಾವನವಂ ದೇವನಾತನೆಂದುದೆ ತತ್ತ್ವಂ: **ಪಂಚತಂತ್ರ,** ೧೯೧); ಮರದ ಸೌಟು (ಪುಟ್ಟಂ ಸಟ್ಟುಗಮಂ ಕೊಂಡಟ್ಟಾಜಿಸಿ ಬೋನವಿಟ್ಟು ಬಂದೆಯೊ: **ಗದಾಯು,** ೭. ೩೬); ದೋಣಿ ನಡೆಸುವ ಸಾಧನ (ತಿಂದ ಗಜಂಗಳೆ ನಾವೆಯಾಗೆ ಪುಲ್ ಮರುಳ ಕುಟುಂಬಮಂ ಪೆಣದ ಕೈಗಳೆ ಪುಟ್ಟುಗಳಾಗೆ: **ಪಂಪರಾ,** ೧೩. ೬೬)

**ಪುಟ್ಟುಂಗುರುಡ** – ಹುಟ್ಟು ಕುರುಡ (ಪುಟ್ಟುಂಗುರುಡಂ ಕಾಣ್ಬನೆ ಬಟ್ಟೆಯಂ ಅಮಳಾಕ್ಷನಂತೆ: **ನೇಮಿನಾಪು,** ೪. ೫೫)

**ಪುಟ್ಟುವಿನೆಗಂ** – ಉಂಟಾಗುವ ರೀತಿಯಲ್ಲಿ (ಲತೆಗಳ್ ಜಂಗಮರೂಪದಿಂದೆ ನೆರದುವೋ ದಿವ್ಯಾಪ್ಸರೋವೃಂದಂ ಈ ಕ್ಷಿತಿಗೇಂ ಇಂದ್ರನ ಶಾಪದಿಂದ ಇಟೆದುವೋ ಪೇೞೆಂಬ ಶಂಕಾಂತರಂ ಮತಿಗಂ ಪುಟ್ಟುವಿನೆಗಂ: **ಪಂಪಭಾ,** ೪. ೩೯)

**ಪುಡಿ** – ಹಿಟ್ಟು (ಬದ್ದವಣದ ಪುಡಿವೊಳ್ ಬೆನ್ನೊಳ್ ಬಿಡದಲುಗೆ ಕುಸುಮಕುಳರಜಂ: **ಆದಿಪು,** ೭. ೭೩); ಮಣ್ಣು (ಮಚ್ಚರದಿಂ ಒರ್ವರನೊರ್ವರಂ ಉಚ್ಚಳಿಸಿ ತಗುಳ್ದು ಗೋವರ್ ಆರ್ದು ಇಸೆ ಕೀೞಿಂ ಕರ್ಚಿ ಪುಡಿಯೊಳ್ ಪೊರಳ್ದುವು ನಚ್ಚಿನ ಕಾಂಭೋಜವಾಜಿಗಳ್ ಕೆಲವಾಗಳ್: **ಪಂಪಭಾ,** ೮. ೯೪)

**ಪುಡಿಕೆ** – ಭರಣಿ, ಪೆಟ್ಟಿಗೆ ಪೊಟ್ಟಣ (ಪರತಪಮಂ ಕಸವೆಂದು ಆ ಪುರಾಣಮಂ ಪುಸಿಯ ಪುಡಿಕೆಯೆಂದು .. .. ಬಗೆವನೆ ನಿರುತಂ ದರ್ಶನಿಕನಪ್ಪದನಲ್ಲಂ: **ಸಮಯಪ,** ೪. ೧೨೮)

**ಪುಡುಕುನೀರ್** – ಕುದಿಯುವ ನೀರು (ಕೇಸರಿಗಳಂ ಪಿಡಿದು ಪುಡುಕುನೀರೊಳದ್ದುವಂತೆ ಸುರಕರಿಗಳ್ ಉಡಿದೀಡಾಡಿದ ತೀರಭೂರುಹಂಗಳೊಳ್: **ಲೀಲಾವತಿ,** ೮. ೪೮ ವ)

**ಪುಡುಕುನೀರಟ್ಟು** – ಕುದಿನೀರಲ್ಲಿ ಅದ್ದು (ಸಮುದ್ರದೊಳ್ ಮಹಾಪಾತಾಳದ ಮೊದಲೊಳಿಕ್ಕಿ ಪುಡುಕುನೀರಟ್ಟುತ್ತಂ ಪಿರಿದು ಬೇಗಂ ದುಃಖಮನೆಯ್ದಿಸಿ: **ವಡ್ಡಾರಾ,** ೧೪೫, ೧೨)

**ಪುಡುಕೆ** – ಪುಡಿಕೆ, ಪೆಟ್ಟಿಗೆ (ಪುಡುಕೆಯ ಪೊಂಗಳಾರೊಡನೆ ಭೂತಳಮಾರೊಡನೆ ಅಂಗನಾಳಿಯಾರೊಡನೆ .. .. ಪೋದುವು ರಾಜ್ಯಮನೆಂತೊ ನಂಬುವರ್: **ಅಜಿತಪು,** ೨. ೧೦೩)

**ಪುಣಿಲ್** – ಮರಳುದಿಣ್ಣೆ (ತಿಳಕವಿಡುವ ಪೊಳೆ ಪುಸಿಯ ಪುಣಿಲ್ ಟಕ್ಕಿನ ಬಿಸಲತೆ ಮುತ್ತಂ ಮುಕ್ಕುಳಿಸಿದ ಪವಳಂ ಅವಳ ಮರುಳಿಸುವಂಗಂ: **ನೇಮಿನಾಪು,** ೪. ೩೭)

**ಪುಣುಂಬು** – ಬಾಣ (ಪೊಗೆ ಪರ್ಬಲ್ ಕಾಯ್ದ ಪುಣಂಬುಗಳುಂ ಕುಸುಮಾಸ್ತ್ರಂ ಇಸುತಮಿರ್ದಪನೆನೆ: **ಕಾದಂಬ,** ೫. ೧೦೭)

**ಪುಣ್ಣಮಿ** – [ಪೂರ್ಣಿಮಾ] ಹುಣ್ಣಿಮೆ, ಪೂರ್ಣ ಚಂದ್ರನಿರುವ ದಿನ (ಸುಕುಮಾರಸ್ವಾಮಿಯುಂ .. .. ಕಾರ್ತಿಕಮಾಸದ ಪುಣ್ಣಮಿಯಂದು ಸುಖದಿಂದೆ ಉಂದಿರ್ದಂ: **ವಡ್ಡಾರಾ,** ೨೯, ಸಾ. ೭

**ಪುಣ್ಬಡಿಸು** – ಹುಣ್ಣು ಮಾಡು, ಗಾಯಗೊಳಿಸು (ವಿಜಿಗೀಷು ಬಲ್ಪಿನಿಂ ಋಕ್ಷಜನಂ ಸೆಱೆವಿಡಿಯೆ ಕಂಡು ಕಾಯ್ದೆಡಱೆದಂ ಏನಜೇಯ ಭುಜಬಲನೋ ಸಮರದೊಳ್ ಯಮರಾಜಂ: **ಪಂಪರಾ,** ೧೦. ೧೬೧)

**ಪುಣ್ಬಡು** – ಗಾಯಗೊಳ್ಳು (ಕಿಱೆದು ಸಮಯದಿಂ ಆ ವಿರಾಟನ ಬಲಂ ಪುಣ್ಗೆಟ್ಟು ಚಲಂಗೆಟ್ಟು ತಲಗುವುದುಂ; **ಕರ್ಣನೇಮಿ,** ೧೦. ೧೪೮ ವ)

**ಪುಣ್ಯಜನ** – ಪುಣ್ಯವಂತರು ಹಾಗೂ ರಾಕ್ಷಸರು (ಆ ಪುರವರೇಣ್ಯಂ ಧಿಷ್ಣಮಾಗಿಯುಂ ನಕ್ತಂಚರಯುಕ್ತಮಲ್ತು ಅಗಣ್ಯ ಪುಣ್ಯಜನಮಯಮಾಗಿಯುಂ ವಿಬುಧರಹಿತಮಲ್ತು: **ಶಾಂತೀಶ್ವಪು,** ೧. ೧೩೨ ವ)

**ಪುಣ್ಯಪದಾರ್ಥ** – [ಜೈನ] ನವಪದಾರ್ಥಗಳಲ್ಲಿ ಒಂದು (ಜೀವಪದಾರ್ಥಂ .. .. ಪುಣ್ಯಪದಾರ್ಥಮುಂ ಪಾಪಪದಾರ್ಥಮುಂ ಎಂಬ ನವಪದಾರ್ಥಮುಮಂ .. .. ಕೈಕೊಂಡು: **ಸುಕುಮಾಚ,** ೩. ೩೯ ವ)

**ಪುಣ್ಯಪಾಠಕ** – ಶುಭ ನುಡಿಯುವವನು (ಸೂತ ನಟ ವಂದಿಮಾಗಧ ವೈತಾಳಿಕ ಕಥಕ ಪುಣ್ಯಪಾಠಕ ವಿಪ್ರ ಉದ್ಘೂತರವಂ ಎಸೆಯೆ: **ಪಂಪಭಾ,** ೧೨. ೧೦೬)

**ಪುಣ್ಯಯಜ್ಞ** – [ಜೈನ] ದೀಕ್ಷೆ ಪಡೆದವನು ಮಾಡುವ ಚತುರ್ದಶಪೂರ್ವಗಳ ಓದುವಿಕೆ ಮತ್ತು ಕೇಳುವಿಕೆ; ಆರನೆಯ ದೀಕ್ಷಾನ್ವಯಕ್ರಿಯೆ (ಅವತಾರ ವೃತ್ತಿಲಾಭ ಸ್ಥಾನಲಾಭ ಗಣಗ್ರಹಣ ಪೂಜಾರಾಧ್ಯ ಪುಣ್ಯಯಜ್ಞ ದೃಢಚರ್ಯ ಉಪಯೋಗತ್ವಮೆಂಬ ಎಂಟುಂಬೆರಸು .. .. ನಾಲ್ವತ್ತೆಂಟು ದೀಕ್ಷಾನ್ವಯಕ್ರಿಯೆಗಳುಮಂ: **ಆದಿಪು** ೧೫.. ೧೬ ವ)

**ಪುಣ್ಯವಾಸರ** – ಶುಭದಿನ (ತತ್ಪೂಜಾಕರಣ ಪುಣ್ಯವಾಸರಂಗಳೊಳ್ ಉಪವಾಸನಿರತಪರಿಮಿತ .. .. ಚಂದನಕರ್ಪೂರ ಪರಿಮಳಸುರಭಿಗಂಧೋದಕಂಗಳಿಂದ ಅಭಿಷೇಕಂಗೆಯ್ದು: **ಆದಿಪು,** ೧೬. ೧)

**ಪುಣ್ಯಸ್ತ್ರೀ** – ಸೂಳೆ (ಪುಣ್ಯಸ್ತ್ರೀಯರ್ ಉಚ್ಚಿಷ್ಟದಾಗರಮಪ್ಪಾ ಪಡಿಗಕ್ಕೆ ಸಾಮ್ಯಸ್ಥಾನಂ: **ಸಮಯಪ,** ೫. ೬೯)

**ಪುಣ್ಯಾಂಗನೆ** – ಪುಣ್ಯಸ್ತ್ರೀ (ಪುಣ್ಯಾಂಗನಾನೀಕದೊಳ್ ಕೆಳೆಗೊಂಡು .. .. ಮಾತಾಡುತುಂ ರಾಗದಿಂ ಸುಟೆವೃತ್ತಿರ್ಪರಂತಿರೆ .. .. ಬಲ್ಲರೇ: **ಸಮಯಪ,** ೬. ೩೯)

**ಪುಣ್ಯಾಹ** – ಪುಣ್ಯದಿನ (ಕೃತಭವ್ಯೋತ್ಸವ ಮಾಘ ಶುದ್ಧ ದಶಮೀ ಪುಣ್ಯಾಹಯುಕ್ತಂ ಪ್ರಜಾಪತಿಯೋಗಂ ಬೆರೆದಂದು .. .. ಆದುದು ಅಂದು ಅಜಿತತೀರ್ಥೇಶಾಬ್ಜಮಿತ್ರೋದಯಂ: **ಅಜಿತಪು,** ೩. ೨೨)

**ಪುಣ್ಯೋದ** – ಪವಿತ್ರಜಲ (ಆ ನೃಪನಾಗಳ್ .. .. ಪುಣ್ಯೋದಂ ಉತ್ತಮಗಂಧಂ ವಿಮಲಾಕ್ಷತಂ. ಸುರಭಿಪುಷ್ಪಂ ದಿವ್ಯಧೂಪಂ ಸುದೀಪಂ ಉದಂಚಚ್ಚರು ಸತ್ಫಲಾವಳಿ ಎನಿಪ್ಪ ಅಷ್ಟಾರ್ಚನಾನೀಕದಿಂದಮೆ ತಾನರ್ಚಿಸಿ: **ಶಾಂತೀಶ್ವಪು,** ೬. ೪೯)

**ಪುತ್ತನೇಱು** – ಯುದ್ಧದಲ್ಲಿ ಶರಣಾಗುವುದನ್ನು ಸೂಚಿಸಲು ಹುತ್ತದ ಮೇಲೆ ಹತ್ತು (ಪೆಣ್ಣುಡೆಯುಟ್ಟಿರೆ ಪುತ್ತನೇಱೆ ಕೊಲ್ಲದ ತುಟಿಲಾಳ್ತನಕ್ಕೆ ಸಮನಾವನೊ ಸಾಹಸಭೀಮನೊಳ್: **ಗದಾಯು,** ೧. ೨೨)

**ಪುತ್ತಳಿ** – ಬೊಂಬೆ (ಪುಳಿಗರ್ಚಿದ ಪಳಿಕಿನ ಪುತ್ತಳಿ ಕಪ್ಪುರದೊಪ್ಪ ಸಲಗೆಯಿಂ ಖನಿಮಿನುಕಂ ತಳೆದಂತಿರೆ ಪರಿಜಂ

ಕಣ್ಗೊಳಿಸಿದುದು ಆ ಕಾಂತೆ ತಳೆದ ಬೆಳ್ವಸದನದೊಳ್: **ಶಾಂತೀಶ್ವಪು,** ೧೪. ೧೬)

**ಪುತ್ತು** – ಹುತ್ತ, ಗೆದ್ದಲ ಗೂಡು (ಮಡಗಿಡಲೆಂದು ಪುತ್ತಿನೊಳಗೊಯ್ಯನೆ ಕುತ್ತಿದ ಕಯ್ಯಂ: **ಆದಿಪು,** ೨. ೪೦)

**ಪುತ್ತೇಱು** – ಪುತ್ತನೇಱು (ಪುತ್ತೇಱಿದನಂ ಕೈದುವನಿತ್ತನೇರ್ಪೆತ್ತನಂ ರಣಾಂಗಣದೊಳ್ ಬೆನ್ನಿತ್ತನನಿಱಿಯರಮೋಘಂ ಮತ್ತೆನಿಸದೆ ತುಟಿಲ ಸಂದ ಜನಮಂ ಜಗದೊಳ್: **ಪಂಚತಂತ್ರ,** ೩೪೨)

**ಪುತ್ರ** – ಮಗ (ನಂದನ ತನುಜಜನ್ಮ ತೋಕ ಸುತ ಪುತ್ರ ತನೂಭವ ನಾಮಕಂ: **ಅಭಿಧಾವ,** ೧. ೧೧. ೧೭)

**ಪುತ್ರಂ ಚ ಶಿಷ್ಯಂ ಚ ತಾಡಯೇನ್ನತು ಲಾಲಯೇತ್** – ಮಗನನ್ನೂ ಶಿಷ್ಯನ್ನೂ ಹೊಡೆಯಬೇಕೇ ಹೊರತು ಮುದ್ದಿಸಬಾರದು (ಪುತ್ರಂ ಚ ಶಿಷ್ಯಂ ಚ ತಾಡಯೇನ್ನತು ಲಾಲಯೇತ್ ಎಂಬ ಪೂರ್ವಾಚಾರ್ಯೋಕ್ತಿಯಂ ಕೈಕೊಳ್ಳದೆ .. .. ಮಗನಂ ಶಿಕ್ಷಿಸದಿರ್ದುದಱಿಂ ಇಂತಾಯ್ತು: **ಧರ್ಮಾಮೃ;** ೨. ೫೧ ವ)

**ಪುತ್ರದೋಹಳ** – ಗಂಡುಮಗುವನ್ನು ಪಡೆಯುವ ಬಯಕೆ (ತಮ್ಮ ಮೆಯ್ಮಱೆವಿನಮಿರ್ಬರುಂ ನಮೆದರೇನವರ್ಗಾದುದೊ ಪುತ್ರದೋಹಳಂ: **ಪಂಪರಾ,** ೧. ೧೩೫)

**ಪುತ್ರದೌಹೃದ** – ಪುತ್ರದೋಹಳ (ಇವು ಮೊದಲಾಗೆ ಪಲವುಂ ಪುತ್ರದೌಹದಂಗಳಂ ಪಂಬಲಿಸುತುಮಿರ್ದರ್: **ಪುಷ್ಪದಂಪು,** ೩. ೯೯ ವ)

**ಪುತ್ರಾಂತರಾಯ** – ಮಕ್ಕಳಾಗುವುದಕ್ಕಿರುವ ಅಡ್ಡಿ (ಪುತ್ರಂತರಾಯಂ ಪುರಾತನ ದುಷ್ಕರ್ಮವಿಪಾಕಮೊಬೆಸಿಂ: **ಸುಕುಮಾಚ,** ೯. ೧೦೯)

**ಪುತ್ರಿ** – ಮಗಳು (ತನಯನದಲ್ಲಿ ದುಹಿತೃ ನಂದನೆ ಪುತ್ರಿ ತನೂಜೆ ಸೂತಿ ತಾನೆನಿಕುಂ: **ಅಭಿಧಾವ,** ೧. ೧೧. ೧೭)

**ಪುತ್ರಿಕಾ** – ಬೊಂಬೆ (ಮನಸಿಜನ ವಶೀಕರಣ ಅಂಜನಪುಂಜದ ಪುತ್ರಿಕಾಳಿಯೆನೆ ಕಾಳಿಮಮಂ ತನಿಗೆದಱುವ ತನುರುಚಿ ಮೋಹನಮಯಮಾಗಿರ್ದರ್ ಎಸೆವ ಶಬರಾಂಗನೆಯರ್: **ಶಾಂತಿಪು,** ೩. ೭೯)

**ಪುತ್ರಿಕೆ** – ಬೊಂಬೆ (ಪೞವುಮಱಿಕೆಯ ಕುಸುಮಂಗಳಂ ಸಮೆದ ವಿಚಿತ್ರಪುತ್ರಿಕೆಗಳೊಳಗೆ: **ಲೀಲಾವತಿ,** ೧೧. ೬೧ ವ); ವಿಗ್ರಹ (ಚೇಲಶಿಲಾದಿ ಕೃತಂ ಪಾಂಚಾಳಿಕೆ ತಾನೆನಿಕ್ಕುಂ ಪುತ್ರಿಕೆ: **ಅಭಿಧಾವ,** ೧. ೧೦. ೩೮)

**ಪುತ್ರೋತ್ಸಾಹ** – ಮಗ ಹುಟ್ಟಿದ ಸಂತೋಷ (ಚೆಂಗಳದೇವಿ ತನಗೆ ಪುತ್ರೋತ್ಸಾಹಮಿಲ್ಲೆಂದು ಚಿಂತಿಸುತಿರಲ್: **ತ್ರಿಷಷ್ಟಿಪು,** ೧೦. ೧೦ ವ)

**ಪುದಿ** – ತುಂಬು, ಸೇರು (ಅದಱೊಳಗೆ ಪುದಿದು ಮಂದೈಸಿದ ಕಟ್ಟಿಲೆಗಗಿದು ಸುಗಿವ ಪೆರ್ಬಡೆಯಂ ಕಂಡು: **ಆದಿಪು,** ೧೩. ೪೭); ಬಾಗಿಲಿನ ಪಕ್ಕ (ಪುದಿ [ಹುದಿ]–ಆಚ್ಛಾದನೇ ದ್ವಾರಪಾರ್ಶ್ವೇ ಚ: **ಶಬ್ದಮದ,** ಧಾ ೪೧೪)

**ಪುದಿವು** – ಸೇರುವಿಕೆ; ಗುಂಪು (ಸಂಜನಿತಮುದರಲ್ಲಿ ಸುತ್ತಿದ ಘನಸಾರದ ಪುದಿವನಡರ್ದ ಲತೆಗಳ ಮನೆಯೊಳ್ ಪೊಕ್ಕಿರೆ: **ಕರ್ಣನೇಮಿ,** ೫. ೩೧); ಆವರಣ (ಮಾಕಂದ ನಂದನದ ಬಳಸಿನೊಳಂ ಅಶೋಕವನದ ಪುದಿವಿನೊಳಂ ನಾಗಚಂಪಕ ವನದ ಸುತ್ತಿನೊಳಂ ಅತಿ ರಮಣಿಯಮಾಗಿ .. .. ರಂಜಿಕುಂ: **ಪಂಪರಾ,** ೪. ೧೨೮ ವ ಮತ್ತು ೧೩೦)

**ಪುದು** – ಸಮಾನ (ತೇಜಂ ಪುದುವಿಲ್ಲೆನಿಸಿ ವಿರಾಜಿಸೆ ಪರರಾಜಮಂಡಲಂ ತನ್ನಿಂ ನಿಸ್ತೇಜಂಬೆತ್ತಿರೆ: **ಪಂಪರಾ,** ೨. ೬೬); ಜೊತೆಗೆ ಸೇರಿರು (ಈ ದುರಾತ್ಮನೊಳ್ ಪುದುವೆನಗೇವುದು ಎಂದು ಬರುತಿರ್ದಪನಲ್ತೆ ಶರಣ್ಬುಗಲ್ ಭವತ್ಪದ .. .. ವಿಭೀಷಣಂ: **ಪಂಪರಾ,** ೧೨. ೭೭)

**ಪುದುಂಗೊಳಿಸು** – ಬೆರಸು (ಪೊಳೆವೆಳಮಿಂಚಿನಂತೆಸೆದು ಗಾಡಿಯೊಳೊಂದಿದ ತನ್ನ ರೂಪು ಕಣ್ಗೊಳೆ ಸವಿಯಂ ಪುದುಂಗೊಳಿಪ ಚಿತ್ರರತಂಗಳ ಭಂಗಿಗಳ್: **ಆದಿಪು,** ೨. ೭೧); ಬೆರೆತುಹೋಗು (ಕನ್ನಡಿಯ ಕಲಶದ ಬಣ್ಣವುರದ ಆರತಿಗಳೆಡೆಗೆಡೆಗಿಡಿಸಿದ ಪಂಚರತ್ನದ ಕದಿರ ಪೊದಱೊಳ್ ಪುದುಂಗೊಳಿಸಿ ನೆಗೆದ ಜಾಗದ ಪಡಲಿಗೆಗಳ ಅಗೆಯ ತುಱುಗಲಿಂ: **ಅನಂತಪು,** ೬. ४೧ ವ); ಪಡೆ, ಹೊಂದು (ನಾಂದಮರೆ ಪತ್ತಿದಂಬರದಿಂದೆಸೆವ ಅರಸಿಯ ನಿತಂಬಬಿಂಬಮಂ ಅಬಳಾವೃಂದಮದೀಕ್ಷಿಸಿ ಹೃದಯದೊಳ್ ಅಂದೇಂ ಪುಂಭಾವಮಂ ಪುದುಂಗೊಳಿಸಿದುದೋ: **ಚಂದ್ರಪ್ರಪು,** ೭. ೧೩೧)

**ಪುದುಗೊಳ್** – ಬೆರೆತುಕೊ (ಕಳ್ವ ಕಳ್ವರೊಳ್ ಸಲೆ ಪುದುಗೊಳ್ವ ಪಾದರಮನಾಡಿಸುವ ಆಡುವ ಕಾಂಕ್ಷೆಯೊಳ್ ಮನಂ ಸಲಿಸುವ: **ಸುಕುಮಾಚ,** ೫. ೪೪)

**ಪುದುವಾೞ್** – ಕೂಡಿಬಾಳು (ಉಡಿಸಿಯುಮೂಡಿಯುಂ ಅಟ್ಟಿಯಿನೆಡೆಯುಡುಗದೆ ಸಲಿಸಿ ಪಲವು ಕಾಲಂ ಪುದುವಾೞ್ದೊಡಲಾತ್ಮನೊಡನೆ ಪೋಗದೆ: **ಆದಿಪು,** ೩. ೬೧); ದಾಂಪತ್ಯ ನಡೆಸು (ಅಂಗನೆಯರ್ಕಳ ಸವತಿ ಜರಾಂಗನೆ ತಾನವಳ ಸವತಿ ಸಂದಿರ್ಪ ನಿಯತ್ಯಂಗನೆಯಾ ಸವತಿಯುಮಮಂ ಪಿಂಗಿಸಿ ಪುದುವಾೞ್ವೆನಕ್ಕೆ ಮುಕ್ತ್ಯಂಗನೆಯೊಳ್: **ಅಜಿತಪು,** ೨. ೭೫)

**ಪುದುವಾೞ್ಕೆ** – ಸಹಬಾಳುವೆ (ನಾಂ ಗಡ ಮಧ್ಯಸ್ಥಂ ನುಡಿದಂ ಗಡ ಪುದುವಾೞ್ಕೆಯೆನಗಮುಪವರ್ಗಂ ಸಂಧಾನಂ: **ಗದಾಯು,** ೭. ೪೯)

**ಪುದುವು** – ರಾಶಿ, ಒಟ್ಟಿಲು (ಪೊಳೆವೆಳವಿಸಿಲೊಳ್ ಬೆಳ್ಸರಿ ತೋರವನಿಯ ಪುದುವಿನೊಳರಲ್ದ ತಿಳಿಗೊಳನೆ ನಭದೊಳಿಟಿದಂತಿರ್ಕುಂ: **ಆದಿಪು,** ೧೧. ೮); ವರ್ಚಸ್ಸು (ಚಕ್ರರೂಪದಿನಿರ್ದಪುದು ನಿನ್ನ ದಂಡನೀತಿಯ ಪುದುವೆ ವಲಂ ದಂಡರತ್ನಮೆಂಬುದು ಪೞತೇಂ: **ಆದಿಪು,** ೧೩. ೨೭); ಜೊತೆ, ಸಹವಾಸ (ಆ ದುರ್ಮದನಶ್ವಗ್ರೀವನಾ ಕೋಟಲೆಯ ಪುದುವು ಅದೇತರ್ಕೆ: **ಶಾಂತೀಶ್ವಪು,** ೨. ೧೦೮); ಜಂಟಿ ಒಡೆತನ (ಎನಗೆ ಎಕ್ಕಬಾಗೆ ನೋಡೀಗಳ್ ಈ ಇಳಾಲತಾಂಗಿ ಪುದುವಲ್ಲಳ್ ಅದೆಂತೆನೆ ಮುನ್ನ ನೂಲ ತೋಡಾಗದೆ ಕೆಟ್ಟು ಪೋದವರಂ ಇಂ ಮಗುಟ್ದುಂ ನಿಱಿಪಂತು ಬೆಳ್ಪನೇ: **ಪಂಪಭಾ,** ೯. ೪೬)

**ಪುದುವೊಗು** – ಹೊಂದಿಕೊ (ಪುಣ್ಯಹೇತು ಅಘಹೇತುಗಳ್ ಅನ್ಯರಸಂಗಳಾಗಿಯುಂ ಶಾಂತಮೆನಿಪ್ಪ ತಜ್ಜಿನಕಥಾರಸದೊಳ್ ಪುದುವೊಕ್ಕು ಮಾಡುಗುಂ ಶಾಂತಿಯಂ: **ಮಲ್ಲಿನಾಪು,** ೧. ೪೯)

**ಪುದ್ಗಲ** – [ಜೈನ] ಪರಮಾಣುಗಳ ಸಂಯೋಗದಿಂದ ಉಂಟಾದ ಹಾಗೂ ಸ್ಪರ್ಶ, ಗಂಧ, ಬಣ್ಣಗಳನ್ನು ಹೊಂದಿದ ಅಜೀವಸತ್ವ (ಚೇತನಾರಹಿತಮಜೀವತತ್ತ್ವಂ ಅದು ಗತಿಸ್ಥಿತ್ಯವಗಾಹ ಶರೀರಾದಿ ವರ್ತನಾಹೇತು ಧರ್ಮಾಧರ್ಮಾಕಾಶ ಪುದ್ಗಲಕಾಲಭೇದದಿಂ ಪಂಚವಿಧಂ: **ಆದಿಪು,** ೧೦. ೬೩ ವ)

**ಪುದ್ಗಲದ್ರವ್ಯ** – [ಜೈನ] ಭೌತಿಕ ಜಗತ್ತಿನ ನಿರ್ಮಾಣಕ್ಕೆ ಕಾರಣವಾದ ಷಡ್ದ್ರವ್ಯಗಳಲ್ಲಿ ಒಂದು (ಷಡ್ದ್ರವ್ಯಂಗಳ ಗುಣಪರ್ಯಾಯಮುಮಂ .. .. ವ್ಯಾಖ್ಯಾನಂಗೆಯ್ಯಲ್: **ಸುಕುಮಾಚ,** ೩. ೩೯ ವ), ನೋಡಿ, 'ಷಡ್ದ್ರವ್ಯ'

**ಪುದ್ಗಳ** – [ಜೈನ] ಪುದ್ಗಲ (ಅತತ್ವದೊಳ್ ನಿಲಿಸದ ಭಾವಂ ಅಟೆಿಸದ ಪುದ್ಗಳಂ ಇಲ್ಲೆನೆ ಕರ್ಮಬಂಧದಿಂ ಬಲವರುತಿರ್ಪ ಈಾಟಣದ ಗುಂಡಿಗೆಯಂತಿರೆ: **ಸುಕುಮಾಚ,** ೫. ೩೨)

**ಪುನರುಕ್ತ** – ಮತ್ತೆ ಹೇಳಿದ (ಪುನರುಕ್ತಂ ಸಂಧಿದೋಷಂ ಸ್ವರತತಿ ಪದೂರ್ಣೋಕ್ತಿದೋಷಗಳೆಂದೆಂಬಿನಿತುಂ ದೋಷಂಗಳಂ ಬಿಟ್ಟು: **ಸೂಕ್ತಿಸುಧಾ,** ೧೬. ೩೯)

**ಪುನರ್ಜಾಯಕ್ಷಯಶ್ರೀ** – ಪುನರ್‌ಜನ್ಮವನ್ನು ಇಲ್ಲವಾಗಿಸುವ, ಮೋಕ್ಷ (ನೆಟ್ಟನೆ ಪುನರ್ಜಾತಕ್ಷಯಶ್ರೀಗೆ ತಾಯ್ಗುರು ರತ್ನತ್ರಿತಯಾವಭಾವಿ ಬಹುಬಂಧಚ್ಛೇದಿ: **ಸುಕುಮಾಚ,** ೧. ೬)

**ಪುನರ್ನವ** – ಪುನಃ ಹೊಸದಾಗುವ (ಒಡವುಟ್ಟಿಯುಂ ಒಡವಳೆದುಂ ಕಡೆಯೊಳ್ ನೀನೆನ್ನನಿಂತು ಕಂಡುಂಬಂದಿರ್ದೊಡೆ ಉಡಿದೀ ನಮ್ಮಿರ್ವರ ತೊಡರ್ಪಿದಂ ನೀಂ ಪುನರ್ನವಂ ಮಾಡಿನ್ನುಂ: **ಶಾಂತಿಪು,** ೭. ೧೦೪)

**ಪುನರ್ಭವ** – ಮರುಹುಟ್ಟು (ಈತಂಗೆ ಅನುನಯದಿಂ ಏನೋ ಕೃತ್ಯಂ ಪುನರ್ಭವಂ ನಿನ್ನ ದಯೆಯಿಂ ಇಂ ಸಮನಿಸುಗುಂ: **ಕರ್ಣನೇಮಿ,** ೪. ೩೧)

**ಪುನ್ನಾಗ** – ಗಂಡಾನೆ (ಕವಿಪುನ್ನಾಗಂ ಬಲ್ಲವೊಲ್ ಏನನಿಂಬಾಗಿರಲ್ ಅಱೆದಪನೆ ಕುಕವಿ ಸತ್ಕೃತಿರಸಮಂ: **ಉದ್ಭಟಕಾ,** ೧. ೨೦); ಸುರ ಹೊನ್ನೆ (ಇದೆನ್ನ ವಿಮಾನಮಂ ಬಳಸಿ ತಳ್ತ ಪುನ್ನಾಗನಾಗ ದಿವ್ಯತರುನಂದನಂ: **ಆದಿಪು,** ೪. ೮)

**ಪುನ್ನಾಮೋ ನರಕತ್ತ್ರಾಯತ ಇತಿ ಪುತ್ರ:** – ಪುತ್ ಎಂಬ ಹೆಸರುಳ್ಳ ನರಕದ ದೆಸೆಯಿಂದ ಕಾಪಾಡುವವನೇ ಪುತ್ರ (ಪುನ್ನಾಮೋ ನರಕತ್ತ್ರಾಯತ ಇತಿ ಪುತ್ರ: .. .. ಎಂಬ ವಾಕ್ಯಾರ್ಥಮಂ ಕೇಳ್ದು: **ಕಾದಂಬ,** ೨. ೪೬ ವ)

**ಪುಪ್ಪಕ** – ಬಿಸಿ (ಕುಳಿರ್ವ ತಿಳಿನೀರ್ಗಳುಮಂ ಪುಪ್ಪಕಮಾಗಿ ಕನಲ್ದಳುರ್ದಪ್ಪುದು ಕಾಮಿನಿಯ ಮೆಯ್ಯ ಬೆಂಕೆ: **ಲೀಲಾವತಿ,** ೧೧. ೪೫)

**ಪುಬ್ಬ** – [ಜೈನ] ಮುನಿ ಅರಿಯಬೇಕಾದ ಹದಿನಾಲ್ಕು ಬಗೆಯ ಜ್ಞಾನ (ಉತ್ಪಾದ ಪೂರ್ವಾಗ್ರಾಯಿಣೀಯ ವೀರ್ಯಾನುಪ್ರವಾದ ಅಸ್ತಿನಾಸ್ತಿಪ್ರವಾದ ಆತ್ಮಪ್ರವಾದ ಸತ್ಯಪ್ರವಾದ ಜ್ಞಾನಪ್ರವಾದ ಕರ್ಮಪ್ರವಾದ ಪ್ರತ್ಯಾಖ್ಯಾನ ನಾಮಧೇಯ ವಿರ್ಯಾನುವಾದ ಕಲ್ಯಾಣನಾಮಧೇಯ ಪ್ರಾಣವಾದಕ್ರಿಯಾವಿಶಾಲ ಲೋಕಬಿಂದುಸಾರಮೆಂಬ ಪದಿನಾಲ್ಕುಂ ಪುಬ್ಬಂಗಳೊಳಂ ನೆಱೆಯೆ: **ಹರಿವಂಶ,** ೧೪. ೫೩ ವ)

**ಪುಬ್ಬೆ** – [ಜೈನ] ದೀರ್ಘ ಕಾಲಾವಧಿ, ಎಪ್ಪತ್ತುಲಕ್ಷ ಮೂವತ್ತು ಸಾವಿರ ಕೋಟಿ ವರ್ಷಗಳು (ಪುಬ್ಬಕೋಟಿ ಪರಿಸಂಕ್ಯೆವರಂ ಪರಮಾಯುಂ: **ಆದಿಪು,** ೧. ೫೨)

**ಪುಯ್ಯಲ್** – ಕೂಗಾಟ (ನಿಚ್ಚನಿಚ್ಚಂ ತೊಂಡಿಕೆಗೆಯ್ದು ಪುಯ್ಯಲ ಮಾಡುತ್ತಿರೆ: **ಹರಿವಂಶ,** ೫. ೩೧ ವ); ಹುಯ್ಯಲು, ಗೋಳು (ಆ ಪುಯ್ಯಲನಾರಯ್ದು ಬರ್ಪನೆಂದು ಭೀಮನನಿರಿಸಿ ಕೊಂತಿ ತಾನೆ ಪೋಗಿ: **ಪಂಪಭಾ,** ೩. ೨೪ ವ); ಯುದ್ಧ (ಪುಯ್ಯಲ್ಗೆ ವಂದ ಖರದೂಷಣ ರನವರ ಸೇನೆವೆರಸು ಕೊಂದು: **ಪಂಪರಾ,** ೧೦. ೨೭ ವ)

**ಪುಯ್ಯಲಿಕ್ಕು** – ರಕ್ಷಣೆಗಾಗಿ ಕೂಗಿಕೊ (ನಾಗನಿಕರಮುಂ ಮರ್ತ್ಯನಿಕರಮುಂ ತರದಿಂ ದೇವನಿಕರಮುಂ ನಿಮ್ಮೊಳಿಗಮನೆ ಭರದಿಂ ಪುಯ್ಯಲಿಕ್ಕೆ ಕಳಿಪಿದರೆನ್ನಂ: **ಗಿರಿಜಾಕ,** ೬. ೨೫)

**ಪುಯ್ಯಲಿಗ** – ಸಾರುವವನು (ತಂತಮ್ಮ ಆಯುಧಂಗಳಂ ಕೊಂಡು ನಡೆಗೊಂಡು ಪೊಯ್ಯಯಲಿಗರೊಡನೆ ಪೊಱಮಟ್ಟು: **ಹರಿವಂಶ,** ೧೧. ೪೨ ವ)

**ಪುಯ್ಯಲಿಡಿಸು** – ಗೋಳಾಡಿಸು (ತುಱುಪಟ್ಟಿಯ ಕಿಱುಮಕ್ಕಳಂ ಬಲ್ಮಕ್ಕಳಂ ಮಿಂಡಮಕ್ಕಳುಮಂ ಒಂದೆ ಕೋಲೊಳ್ ತಂದು ಪುಯ್ಯಲಿಡಿಸುವ ಕೃಷ್ಣನಂ: **ನೇಮಿನಾಪು,** ೭. ೮೫ ವ)

**ಪುಯ್ಯಲಿಡು** – ಪುಯ್ಯಲಿಕ್ಕು (ಪುರೋಪವನಮೆಲ್ಲಮಂ ತುಱಿದು ಪಲರ್ ಬಾಯ್ವಱಿದು ಪುಯ್ಯಲಿಡೆ ಕಡುಕೆಯ್ದು ಉಕ್ಕೆವಗುದುರೆ ಪೊಱಲನಟಲಿಸಿತಾಗಳ್: **ಪಂಪರಾ,** ೪. ೧೦೬)

**ಪುಯ್ಯಲಿಸು** – ಪುಯ್ಯಲಿಕ್ಕು (ಈ ನೃಪನೆಂದಚ್ಚಿಗದೊಳೆ ಪುಯ್ಯಲಿಪಂತೆವೊಲೊಗೆದುದು ಚಳದನಿಲಹತ ಪಯೋನಿಧಿನಾದಂ: **ಆದಿಪು,** ೧೨. ೭೬)

**ಪುಯ್ಯಲ್ಚು** – ಪುಯ್ಯಲಿಕ್ಕು (ತಜ್ಜನೋತ್ಕರಂ ಎಟ್ಟಿಂದನಿತುಂ ಪ್ರಜಾಪತಿ ಮಹಾರಾಜಂಗೆ ಪುಯ್ಯಲಿಚಿದರ್: **ಶಾಂತೀಶ್ವಪು,** ೩. ೭)

**ಪುಯ್ಯಲ್ವೋಗು** – ಕಾಳಗಕ್ಕೆ ಹೋಗು (ಪುಯ್ಯಲ್ಗೆ ಪೋದಂ = ಪುಯ್ಯಲ್ವೋದಂ: **ಶಬ್ದಮದ,** ೧೭೩ ಪ್ರ)

**ಪುರ** – ನಗರ (ಪತ್ತನ ನಿಗಮ ನರ ಪುಟಭೆದನ ನಗರೀ ಸಮಾಹ್ವಯಂ ಪುರಮಕ್ಕುಂ: **ಅಭಿಧಾವ,** ೧. ೧೦. ೫)

**ಪುರಂದರ** – ಇಂದ್ರ (ಉಜ್ಜ್ವಳ ಪಂಚರತ್ನಭಾಸ್ವಸದನಂಗಳಿಂ ನೆಱೆದುದಂ ಸಮೆದಂ ಪುರಮಂ ಪುರಂದರಂ: **ಆದಿಪು,** ೬. ೮೯)

**ಪುರಂದರಚಾಪ** – ಇಂದ್ರಚಾಪ, ಕಾಮನ ಬಿಲ್ಲು (ವರ್ಣರಂಜಿಯೊಂದೆಸಕಮೊ ತಾನಿದೆಂದೆನಿಸಿತಂದು ಪುರಂದರಚಾಪವಿಭ್ರಮಂ: **ಚಂದ್ರಪ್ರಪು,** ೪. ೫೦)

**ಪುರಂದರಪುರ** – ಇಂದ್ರನ ಊರು, ಅಮರಾವತಿ (ಚತುರ ಖೇಚರವಾರವಧೂ ನಿಧಾನಮಾದಿತ್ಯಪುರಂ ಪುರಂದರಪುರ ಪ್ರತಿಮಂ: **ಚಂದ್ರಪ್ರಪು,** ೬. ೫)

**ಪುರಂಧ್ರಿ** – ಹೆಂಗಸು (ಅಂತು ಮನಸಿಜನಾವೇಶಮಂತ್ರದಿಂ ಸ್ತೋಭಂಗೊಂಡಂತೆ ಪುರಪುರಂಧ್ರೀಕ್ಷೋಭಮಾಗೆ: **ಆದಿಪು,** ೧೧. ೨೩ ವ); ಮುತ್ತೈದೆ (ತಾರಾಪುರಂಧ್ರೀ ಕಪೋಳಸ್ಥಳಪತ್ರಂ ಚಂದ್ರಕಾಂತೋಪಳ ಸಲಿಲರಾಸಿ .. .. ಪಸರಿಸಿ ಪರ್ಬಿತ್ತು ಚಂದ್ರಾಂಶುಜಾಳಂ: **ಮಲ್ಲಿನಾಪು,** ೭. ೩೨)

**ಪುರಃಪ್ರದರ್ಶಿತ** – ಮುಂಚೆಯೇ ತೋರಿಸಿದ (ವನಪಾಲ ಪುರಃಪ್ರದರ್ಶಿತಾನಂತರಂ ಅನಂತತರುಲತಾಸಂದೋಹ ಸಂದರ್ಶನಾನಂದಕಂದಳಿತ ಹೃದಯಾರವಿಂದನುಂ: **ರಾಜಶೇವಿ,** ೧೦. ೧೫ ವ)

**ಪುರಭೃತ್** – ಪುರದ ಒಡೆಯ (ಖೇಚರಸೈನ್ಯಂ ವಿಜಯಾರ್ಧಾಚಲತಟಧಾತುರೇಣುರಕ್ತಂ ಪುರಭೃತ್ ಗೋಚರಕೋಪಾಗ್ನಿ ಶಿಖಾರೋಚಿಃ ಪಟಲೋಪಲಿಪ್ತ ಎನಿಸಿದುದಾಗಳ್: **ಶಾಂತಿಪು,** ೪. ೬)

**ಪುರಮಥನ** – ತ್ರಿಪುರಗಳನ್ನು ಸುಟ್ಟವನು, ಶಿವ (ಪುರಮಥನರೂಪದಿಂ ನೀಂ ಮರುಳ್ಗಳೊಡನಾಡಿದ್ಯೆ: **ಜಗನ್ನಾವಿ,** ೪. ೧೦೪)

**ಪುರವಿಜಯ** – ಶಿವ (ಪುರವಿಜಯಂಗೆ ತನ್ನ ಸುತೆಯಪ್ಪ ಉಮೆಯಂ ನಲವಿಂದಮಿತ್ತು: **ತ್ರಿಷಷ್ಟಿಪು,** ೩೩. ೧೫೯)

**ಪುರಹರ** – ಪುರಮಥನ (ಪುರಹರನಿರ್ದಪಂ ನಿರುಪಮಾನತಪೋಮಯನಾಗಿ: **ಗಿರಿಜಾಕ,** ೬. ೧೩)

**ಪುರಾಕೃತ** – ಹಿಂದೆ ಅಥವಾ ಹಿಂದಿನ ಜನ್ಮಗಳಲ್ಲಿ ಮಾಡಿದ (ತನ್ನಿಂದ್ರನಾಗೆ ಬಗೆದು .. .. ಪುರಾಕೃತಪುಣ್ಯದಿಂ ಸುಖಮನನುಭವಿಸುತ್ತಿರೆ: **ಪಂಪರಾ,** ೧೦. ೧೫೯ ವ)

**ಪುರಾಣ** – ಹಳೆಯ (ನೆರೆದಿಸುತಿರೆ ತೋಲ್ವುಲ್ಲೆಯಂ ಇರದೆ ಅದು ಬಿಟ್ಟೊಡೆ ಪುರಾಣ ಕೂಪದೊಳ್ ಅದಂ ಇನ್ನು ಅರಿದು ತೆಗೆವಂದಂ ಎಂದವರಿರೆ ಬಳಸಿಯುಮಲ್ಲಿ ಕಂಡು ನಕ್ಕಂ ದ್ರೋಣಂ: **ಪಂಪಭಾ,** ೨. ೫೧)

**ಪುರಾಣ ಕಥಾಂಗ** – [ಜೈನ] ಪುರಾಣ ಕಥೆಗಳ ನಿರೂಪಣೆಯ ಎಂಟು ಅಂಗಗಳು (ಸಕಲಜ್ಞ ಪ್ರತಿಪಾದ್ಯಮಪ್ಪ ಭುವನಂ ದೇಶಂ ಪುರಂ ರಾಜವೃತ್ತಕಂ ಅರ್ಹದ್ವಿಭವಂ ಚತುರ್ಗತಿ ತಪೋಮಾರ್ಗಂ ಫಳಂ ತತ್ಪುರಾಣ ಕಥಾಂಗಂಗಳ್ ಇವು ಎಂಟು ಎನಿಕ್ಕುಂ: **ಮಲ್ಲಿನಾಪು,** ೧. ೫೪)

**ಪುರಾಣಕಮಠ** – ಪುರಾತನವಾದ ಆಮೆ, ವಿಷ್ಣುವಿನ ಕೂರ್ಮಾವತಾರ (ದುರ್ವಹಧಾತ್ರೀಭರಮಂ ಪುರಾಣಕಮಠಂ ಬೆಂಬತ್ತೆ ಪೊತ್ತಿರ್ದೊಡೆ ಅವಹಿತಂ ಪ್ರಜೆಗೆ: **ಲೀಲಾವತಿ,** ೧. ೮೭)

**ಪುರಾಣಕವಿ** – ಹಿಂದಿನ ಕವಿ (ಪುರಾಣಕವಿ ಪ್ರಭು ಪ್ರಯೋಗಾವಿಳ ಸದ್ಗುಣೋದಯಮನಾರಯ್ದುವಜಿಂ ಸಮೆದೊಂದು ಕಾವ್ಯದಿಂ .. .. ಮುದಮಂ ತನಗಾಗಿಸಿದೊಂ ಕವೀಶ್ವರಂ: **ಕವಿರಾಮಾ,** ೨. ೧೫೫); ಪುರಾಣ ರಚಿಸಿದ ಕವಿ (ವಾಕ್‌ಶ್ರೀಸುಭಗಂ ಪುರಾಣಕವಿಯುಂ ಧರೆಗಾಗಿರೆ .. .. ನಾಡೊವಜನಾದನೊ ಪೇಟ್ ಕವಿತಾಗುಣಾರ್ಣವಂ: **ಪಂಪಭಾ,** ೧೪. ೬೨)

**ಪುರಾಣಕೂಪ** – ಹಳೆಯ ಬಾವಿ (ತೊಟ್ಟನೆ ಮುಂದಿರ್ದ ಪುರಾಣಕೂಪಮಂ ಕಂಡು ತೃಷೆಯಿಂ ನೀರ್ಗುಡಿಯವೇಟ್ಕೆಂದು ನೋಡಿ: **ಪಂಚತಂತ್ರ,** ೧೪೪ ವ)

**ಪುರಿ** – ಹುರಿ, ಕಾಯಿಸು (ಪುರಿದಂತಾದುವು ಪೂವಿನಂಬು ವಿನಿವಿಲ್ ನಿಸ್ಸಾರಮಾದತ್ತು .. .. ಕಂತು ಸೀದ ಕರಿಯಂತಾದಂ: ೧. ೧೬)

**ಪುರಿಗಣೆ** – ಹೆಚ್ಚಿನ ಶಕ್ತಿಯ ಬಾಣ (ಪಿಡಿದನೆ ಪುರಿಗಣೆಯಂ ಎರಟ್ಸುಡಿದನೆ ಬಳ್ಕಿದನೆ ತಾನೆ ತನ್ನನೆ ಚಲಮಂ ಪಿಡಿದು ಅಟೆದಂ ಎಂದು ದೇವರ ಪಡೆ ಗಡಣದೆ ಪೊಗಟ್ದುದು ಇನತನೂಜನ ಗಂಡಂ: **ಪಂಪಭಾ,** ೧೨. ೨೧೬)

**ಪುರಿವರಲ್** – ಬಿಸಿಯಾದ ಕಲ್ಲು (ಪರಲುಮಂ ಪುರಿವರಲುಮಂ ಕಿಸುಗಾಡುವಂ ನೆಗ್ಗಿಲ್ಗಾಡುವಂ .. .. ಕಳೆದು ಪೋಗಿ: **ಲೀಲಾವತಿ,** ೬. ೧೬ ವ)

**ಪುರೀಷ** – ಮಲ, ಅಮೇಧ್ಯ (ಸಿಂಬುಟು ಕೀವು ಕೆರಂಕು ಅಸೃಗಂಬು ಮಲಂ ಮೂತ್ರಂ ಆ ಪುರೀಷಂ ಜೀವಂ ಬೆಂಬಿಡದೀ ಪಂದೊವಲ ಪಸುಂಬೆಯೊಳ್ ಈ ಒಡಲೊಳಾವ ಸುಖಮಿರ್ದಪುದೋ: **ಅಜಿತಪು,** ೬. ೫೪)

**ಪುರು** – ವಿಪುಲವಾದ, ಹಿರಿದಾದ (ದೊರೆಕೊಳ್ಗುಂ ಸಿರಿಯುಂ ದರಿದ್ರಮುಂ ಇವೆಂತುಂ ಪೂರ್ವಕರ್ಮಂಗಳಿಂ ಪರಮಾರ್ಥಂ ಪುರುಧರ್ಮದಾನಫಲದಿಂ: **ಶಾಂತೀಶ್ವಪು,** ೬. ೧೧೮)

**ಪುರುಚರಿತ** – ತೀರ್ಥಂಕರಚರಿತೆ (ಹೃದಯಂ ಸ್ವಾಧೀನಧರ್ಮಂ ಮತಿ ಪುರುಚರಿತಂ ಶೀತಲಂ ಸುವ್ರತಂ ತಾಂ ಅದಟಿಂ ಪ್ರತ್ಯಕ್ಷ ತೀರ್ಥೇಶ್ವರಂ: **ಲೀಲಾವತಿ,** ೧. ೯೪)

**ಪುರುಡಿ** – ಹೊಟ್ಟೆಕಿಚ್ಚು ಪಡುವವಳು (ಅವನ ಸತಿ ಪುರುಡಿ ನೆವದಿಂ ಬವರಮನೆ ಪೊಣರ್ಚಿ ಮಾರಿದತ್ತಾತ್ಯೆ ಮಹಾಹವಶೀಲೆ ತನ್ನ ಮನೆಯಿಂದವೆ ಪೊಱಮಡಿಸಿದಳ್ ಕನಲ್ದು ಪದ್ಮಾವತಿಯಂ: **ಪುಣ್ಯಾಸ್ರ,** ೨. ೪೩)

**ಪುರುಡಿಗ** – ಹೊಟ್ಟೆಕಿಚ್ಚು ಪಡುವವನು (ಪೆಱರಂ ದೂಱುವರೊಳ್ ತೆಱನಱಿಯದೆ ನುಡಿವವರೊಳ್ ಆಗಮಾರ್ಥಮನೇನೆಂದಱಿಯದರೊಳ್ ಪುರುಡಿರೊಳ್ ಬಱುದಲೆಯೆಂದೆಳಸಿ ಕೇಳಲಾಗದು ಪುರುಷಂ: **ಧರ್ಮಾಮೃ,** ೬. ೧೫೦)

**ಪುರುಡಿಸು** – ಸ್ಪರ್ಧೆ ಮಾಡು (ಕಱೆವಂ ಶರವೃಷ್ಟಿಯಂ ಆತ್ಮಜನಕಂ ಇಂದ್ರಂ ಎನುತ್ತುಂ ಪುರುಡಿಸಿ ಶರವೃಷ್ಟಿಯಂ ಆ ಗಿರಿಶಾಗ್ರದೊಳೆಯ್ದೆ ಕಱೆದಂ ಅರ್ಜುನಂ ಅದಟಂ: **ಶಬರಶಂ,** ೪. ೪೧); ಹೊಟ್ಟೆಕಿಚ್ಚುಪಡು (ಕಳಕಂಠಂ ಪುಗಿಲೆಂಬೀ ಕಳನಿನದಂ ವಕ್ರಮಾಗಿಯುಂ ನೃಪನ ಮನಂಗೊಳಲಾರ್ತುದು ಪುರುಡಿಪ ನಲ್ಲಳ ನಲ್ಮೆಯ ವಕ್ರವಚನದಂದದಿನಾಗಳ್: **ಮಲ್ಲಿನಾಪು,** ೬. ೯)

**ಪುರುಡು** – ಹುರುಡು, ಸ್ಪರ್ಧೆ (ರಾಗಮಿಲ್ಲದ ಸುಸಿಲ್ ಅಟ್ಕಱಿಲ್ಲದ ಪದಂ ನೆವಮಿಲ್ಲದ ಕಾಯ್ಪು ಬೇಟಮಿಲ್ಲದ ಪುರುಡು ಏವಮಿಲ್ಲದ ಅಟಲ್: **ಆದಿಪು,** ೧೨. ೪೫)

**ಪುರುದೇವ** – ಆದಿ ತೀರ್ಥಂಕರ (ಪುರುದೇವಾದಿಗಳೊಲಿಸಿದ ಪರಮಶ್ರೀವಧುವಂ ಒಲಿಸಿಯುಂ ಪರವನಿತಾ ನಿರಪೇಕ್ಷಕಂ: **ಯಶೋಧಚ,** ೧. ೧)

**ಪುರುಷ** – ಮನುಷ್ಯ (ನೃ ನರ ಮನುಜನ್ಮ ಮಾನವ ಮನುಷ್ಯ ಪಂಚಜನ ಮರ್ತ್ಯ ಸಂಜ್ಞಂ ಪುರುಷಂ; **ಅಭಿಧಾವ,** ೧. ೧೧. ೧); ಗಂಡ (ಸಂಸ್ಕಾರಿಸಲೀ ವನಿತೆಯರ್ಗವರವರ ಪುರುಷರಂ ಕುಡವೇಟ್ಕುಂ: **ಪಂಪಭಾ,** ೧೪. ೮); ಪೌರುಷ (ಪುರುಷಮಂ ಸಮಕಟ್ಟುಮನಪ್ಪೊಡೆ ಪೊಕ್ಕಿಱಿಯಲಣ್ಮುವರಿಲ್ಲ: **ಪಂಪಭಾ,** ೬. ೬೭ ವ)

**ಪುರುಷಕಾರ** – ಮನುಷ್ಯತ್ವ (ಮತಿಗೆಟ್ಟು ಬಾಯ್ಗೆವಂದಂತೆ ತಿರಸ್ಕರಿಸುವುದು ಪುರುಷಕಾರಮೆ ಗುರುವಂ: **ಸುಕುಮಾಚ,** ೨. ೬೭)

**ಪುರುಷತ್ರಯ** – ಬ್ರಹ್ಮ ವಿಷ್ಣು ಮಹೇಶ್ವರರು (ದೇವ ಪುರುಷತ್ರಯಾಕಾರಪ್ರಧಾನ ಜಯ: **ಜಗನ್ನಾವಿ,** ೫. ೧೦೩ ರಗಳೆ)

**ಪುರುಷಧರ್ಮ** – ಗಂಡ ಪಾಲಿಸಬೇಕಾದ ಧರ್ಮ (ಪರಪರಿಗೃಹೀತೆಗಳಿಪಂ ತರೆ ಪುರುಷಂ ಪುರುಷಧರ್ಮಮಟೆಗುಂ: **ಪಂಪರಾ,** ೪. ೯೭)

**ಪುರುಷಭಿಕ್ಷ** – ಗಂಡನಿಗೆ ಜೀವದಾನ ಮಾಡುವುದು (ರಿಕ್ಕಟದ ಶಕ್ತಿಯಂ ಮುಂದಿಕ್ಕಿಯುಂ ಆತ್ಮಾಂತರಂಗದೊಳ್ ಮುಳಿಸಂ ಪಿಂದಿಕ್ಕಿಯುಂ .. .. ಇಕ್ಕೆಮಗೆ ಪುರುಷಭಿಕ್ಷಮನರಸಾ: **ಜಗನ್ನಾವಿ,** ೩. ೧೧೨)

**ಪುರುಷಭೈಕ್ಷೆ** – ಪುರುಷಭಿಕ್ಷ, ಗಂಡನ್ನನು ಉಳಿಸಿಕೊಡಲು ಬೇಡಿಕೆ (ಈತಂಗಿನಿತು ವಿಭವಮುಮೆಂತಾದುದು ನಿಮ್ಮಡಿಗಂ ಕೈಯನೊಡ್ಡಿ ಪುರುಷಭೈಕ್ಷೆಯಂ ಬೇಡಿ ದೀಕ್ಷೆಯುಮಂ

ನಿಸರ್ಗಸ್ನೇಹಿತೆಯಾದ ಕಾರಣಮುಮಂ ಇದನಱಿಯೆ ಬೆಸಸುವುದು ಎನೆ: **ಶಾಂತಿಪು,** ೯. ೮೩ ವ)

**ಪುರುಷರ್ ಮೂವರ್** – ತ್ರಿಮೂರ್ತಿಗಳು: ಬ್ರಹ್ಮ, ವಿಷ್ಣು, ಮಹೇಶ್ವರ (ಪುರುಷರ್ ಮೂವರೊಳ್ ಒರ್ವನೆಂಬರ್ ಅಂಬರಸುರಪ್ರಧ್ವಂಸಿಯೆಂಬರ್ ಜಗದ್ಗುರುವೆಂಬರ್ ಪೆಱರ್ಗೇಕೆ ತೇರನೆಸಪಂ ಧರ್ಮಾನುಜಂಗೇಕೆ ಕಿಂಕರನಾದಂ ಕರವೇೞಿಯಾದಂ: **ಗದಾಯು,** ೩. ೪೩)

**ಪುರುಷವರ** – ನಪುಂಸಕ (ಇದಿರ್ವಪ್ಪ ಪುರುಷವರನಂ **'ಕಾದಂಬರೀದೇವಿ ಎಲ್ಲಿರ್ದಪಳ್'** ಎಂಬುದುಂ: **ಕಾದಂಬ,** ೭. ೧೬ ವ)

**ಪುರುಷವೇದ** – [ಜೈನ] ಇಪ್ಪತ್ತೆಂಟು ಪ್ರಕಾರದ ಮೋಹನೀಯಕರ್ಮಗಳಲ್ಲಿ ಒಂದು, ಗಂಡಿಗೆ ಹೆಣ್ಣಿನ ಮೋಹವುಂಟುಮಾಡುವ ಕರ್ಮ (ಪುಉಷವೇದಮಂ ಸಂಜ್ವಳನಚತುಃಕ್ರೋಧಮಾನ ಮಾಯಾಲೋಭಂಗಳಂ ಒರ್ಮೆಯೆ ನಿರ್ಮೂಳಿಸಿ ತಳೆದನಜೇಯಂ ಜಯಾಂಗನಾಲಿಂಗನಮಂ: **ಮಲ್ಲಿನಾಪು,** ೧೪. ೬೨)

**ಪುರುಷಬ್ರತ** – ಬ್ರಹ್ಮಚರ್ಯ (ಸೀತಾದೇವತೆಯಂ ತರ್ಪನ್ನೆಗಮೋವದೆ ಪುರುಷವ್ರತೋಚಿತಂ ವೀರರಸಂ: **ಕವಿರಾಮಾ,** ೩. ೧೮೯)

**ಪುರುಷಾಂತರಸಂಧಿ** – ರಾಜನು ಮಾಡಿಕೊಳ್ಳುವ ಹದಿನಾರು ಬಗೆಯ ಸಂಧಿಗಳಲ್ಲಿ ಒಂದು; ಇನ್ನೊಬ್ಬ ರಾಜನ ಸೇನಾಧಿಪತಿಯಿಂದ ತನ್ನ ಕಾರ್ಯ ಸಾಧಿಸಿಕೊಳ್ಳುವುದು (ನಿನ್ನ ನಾಯಕರಿಂದೆನ್ನ ಕಾರ್ಯಮಂ ಸಾಧಿಸಿದೊಡೆ ನುಡಿದ ಪಣಮಂ ಕುಡುವೆನೆಂಬುದು ಪುರುಷಾಂತರಸಂಧಿ ಎಂಬುದಕ್ಕುಂ: **ಪಂಚತಂತ್ರ,** ३೦೭ ವ), ನೋಡಿ 'ಷೋಡಶಸಂಧಿ'

**ಪುರುಷಾಕಾರ** – ಗಂಡಸಿನ ರೂಪು; ಪೌರುಷ (ಸಮರಜಯಂ ದೈವಾಯತ್ತಂ ಅದಱಿಂ ಆ ಪುರುಷಕಾರಂ ಎಮಗಾಯ್ತೀಗಳ್ ಯಮನಂದನಾದಿಗಳೊಳ್ ಒಂದೆ ಮೆಯ್ಯೊಳ್ ಆಂತಿಱಿವೆಂ ಎನ್ನ ಚಲಮಂ ಮೆಱೆವೆಂ: **ಗದಾಯು,** ೩. ೪೬); ಪ್ರತಿಷ್ಠೆ (ನಿನ್ನ ಪುರುಷಾಕಾರಮುಂ ಮನೋಹರಾಕಾರಮುಂ ಅವಾರ್ಯವೀರ್ಯಮುಂ ಇನ್ನೆವರಂ ಶ್ರವಣಭೂಷಣಮಾಗಿರ್ದುವು: **ಪಂಪರಾ,** ೧೧. ೫೩ ವ)

**ಪುರುಷಾಕಾರದ ಪುರುಳ್** – ಭಯಂಕರ ಸ್ವರೂಪದ ರಹಸ್ಯ (ನರಿ ಹರಿಯ ಪುರುಷಾಕಾರದ ಪುರುಳಂ ಅಱಿವುದಪ್ಪುದಱಿಂ ಶಂಕಿಸದೆ ಮತ್ತಂ ಇಂತೆಂದಂ: **ಪಂಚತಂತ್ರ,** ೨೪೫ ವ)

**ಪುರುಷಾಯಿತ** – ಸಂಭೋಗದ ಒಂದು ಆಸನ (ಕಾಂತನಂ ಮೆಚ್ಚಿಸಲ್ ವಿದಗ್ಧಪುರುಷಾಯಿತಂ ತಗುಳೆ ನರ್ತಕೀಲೀಲೆಯಿಂದದೊಂದು ಪೊಸಗಾರ ಸೋಗೆನವಿಲಾಟಮಂ ತೋಱಿದಳ್: **ಆದಿಪು,** ೧೨. ೧೩)

**ಪುರುಷಾರ್ಥ**– ಮನುಷ್ಯನ ಪರಮಧ್ಯೇಯಗಳು: ಧರ್ಮ ಅರ್ಥ ಕಾಮ ಮೋಕ್ಷ; ಮೋಕ್ಷ (ಪುರುಷಾರ್ಥಪ್ರಸೂತ .. .. ದಶದಿಶಾಮುಖಮಂಡಲ ಮಂಡನೀಭೂತ ವಿಶದಯಶಃಪ್ರಹಾಸನಂ: **ನೇಮಿನಾಪು,** ೧. ೬೮ ವ)

**ಪುರುಹೂತ** – ಅನೇಕರಿಂದ ಪ್ರಾರ್ಥಿತನಾದವನು, ಇಂದ್ರ (ಪವಿತ್ರೀಭೂತಮಪ್ಪ ಭೂತಳೋದ್ದೇಶದೊಳುತ್ಪತ್ಸ್ಯಮಾನ ಭಾವಿತೀರ್ಥಕರಪುಣ್ಯದೂತಾಹೂತಂ ಪುರುಹೂತಂ ಬಂದು: **ಆದಿಪು,** ೬. ೮೮ ವ)

**ಪುರುಳ್** – ವಸ್ತು, ಚೈತನ್ಯ (ದೊರೆಯಲ್ಲದಂಗೆ ನುಡಿವುದು ಪುರುಳಿಲ್ಲದ ಮತನೆಮ್ಮೊಳಂ ನುಡಿವುದೆ ಪೇೞ್: **ಆದಿಪು,** ೧೪. ೮೦); ಸತ್ವ (ಪುರುಳಿಲ್ಲದಂಗೆ ಜೈನಂ ದೊರೆಕೊಂಡುಂ ದುಶ್ಚರಿತ್ರಮಂ ಬಿಡದುದಱಿಂ ಚಿರಕಾಲಂ ನಿಲ್ಲಕ್ಷಿಯದು: **ಸಮಯಪ,** ೪. ३೯); ಸಂಪತ್ತು, ಧನ (ಪರಸತಿಗೆ ಸೋಲ್ತು ತಮ್ಮ ಪುರುಳೆಲ್ಲಮನಿತ್ತು .. .. ನರಕ್ಕೆ ಪೋಪುದು: **ಸಮಯಪ,** ೫. ೬೫); ಯೋಗ್ಯತೆ (ಲೋಕದೊಳೆಲ್ಲಂ ಕರಂ ಅವಿವೇಕಿಗಳೆನಿಪಾ ಮಹೇಶ್ವರರರ್ಕಲ ಪುರುಳಂ ಏಕಱಿಸುವುದು: **ಸಮಯಪ,** ೮. ೪೩); ಔಚಿತ್ಯ (ಬಂಧುವರ್ಗಮಂ ಕೊಲ್ವಾತಂ ಮನಮೊಸೆದು ಕೇಳ್ವ ಅರ್ಜುನನೆನೆ ಮತ್ತಾ ಧರ್ಮದಲ್ಲಿ ಪುರುಳಱಿಸುವುದೇ: **ಸಮಯಪ,** ೧೦. ೧೬೮)

**ಪುರುಳಿ** – ಹೆಣ್ಣು ಗಿಳಿ (ತುಂಬಿ ಗಿಳಿ ಪುರುಳಿ ಕೋಗಿಲೆಯೆಂಬಿವುವೆರಸಮರತರುಗಳ್ ಇಂದ್ರನ ಬೆಸದಿಂದಂ ಬಂದುವು: **ಆದಿಪು,** ೬. ೯೨)

**ಪುರೋಗಮ** – ಮುಂದಾಳು (ಪುರೋಗಮಂ ಪ್ರಾಗ್ರಹರಂ ವರೀಯಂ ವರಿಷ್ಠಂ ಅಗ್ರೇಸರಂ ಅಗ್ರಗಣ್ಯಂ: **ಅಭಿಧಾವ,** ೨. ೧. ೨) ಸೇನಾಪತಿ (ಅಗ್ರೇಸರಂ ಪುರಸ್ಸರಂ ಅಗ್ರಣಿ ಮುಖ್ಯಂ ಪರೋಗಮಂ ಪ್ರಷ್ಠಂ .. .. ಚಮೂಪತಿಯೆನಿಕುಂ: **ಅಭಿಧಾವ,** ೧. ೧೪. ೯)

**ಪುರೋಡಾಶ** – ಹವಿಸ್ಸಾಗಿ ಅರ್ಪಿಸುವ ಹುರಿದ ಹಿಟ್ಟು, ಹುತಶೇಷ (ಅಜಸ್ರ ಸ್ರುಕ್ ಸಂದರ್ಭಪವಿತ್ರಸಂವಾಹನ ಪವಿತ್ರಿತಪಾಣಿಪಲ್ಲವನುಂ ಪುರೋಡಾಶಭೋಜನ ಪವಿತ್ರೀಕೃತಗಾತ್ರನುಂ: **ಪಂಚತಂತ್ರ,** ೨೫೨ ವ)

**ಪುರೋಧಸ** – ಪುರೋಹಿತ (ಅಂತು ಬಿನ್ನವಿಸಿದ ಪುರೋಧಸಪುರಸ್ಸರಂ .. .. ರಾಜ್ಯಾಭಿಷವಣಮಂಡಪದೊಳ್ ಮಂಗಳವಿಧಾನಮನವ್ಯವಧಾನಂ ಮಾಡಿಮೆಂದು ಕಟಿಪಿದಾಗಳ್: **ಅನಂತಪು,** ३. ೯೨ ವ)

**ಪುರೋಪರಿ** – ಪಟ್ಟಣದ ಮೇಲ್ಭಾಗ (ಪೋಪೆಡೆಯೊಳ್ ಪುರೋಪರಿಯೊಳಂ ವಿದ್ಯೆಯಿಂ ಅತಿವಿಸ್ತರಪ್ರಸ್ತರಮನಾವರಿಸಿ ಪೋದಂ: **ಕರ್ಣನೇಮಿ,** ೧೦. ೮೯ ವ)

**ಪುರೋಪಾಂತ** – ನಗರದ ಹತ್ತಿರ (ಉಗ್ರಪ್ರತಾಪೋರ್ಜಿತ ತೇಜಶ್ಚಕ್ರಂ ಇರ್ದತ್ತೊಳಪುಗದೆ ಪುರೋಪಾಂತದೊಳ್ ಚಕ್ರಿಚಕ್ರಂ: **ಆದಿಪು,** ೧೪. ३)

**ಪುರೋಭಾಗ** – ಮುಂಭಾಗ (ಅನಿಂದ್ಯರಾಜಭವನ ಪುರೋಭಾಗದೊಳ್ ಇರ್ದು ನಡೆದಪರವರ್: **ಶಾಂತಿಪು,** ३. ೧೫ ವ)

**ಪುರೋಭಾಗಿ** – ತಪ್ಪು ಹುಡುಕುವವನು (ದೋಷಗ್ರಾಹಿ ಪರೋಭಾಗಿ: **ಅಭಿಧಾವ,** ೨. ೧. ೧)

**ಪುರೋಹಿತ** – ಧಾರ್ಮಿಕವಿಧಿಗಳನ್ನು ನಡೆಸುವವನು (ನಾಮಕರಣೋತ್ಸವಮಂ ಮಾಡಲೆಂದು ಗಾರ್ಗ್ಯನೆಂಬ ಪುರೋಹಿತಂ .. .. ಪರಸಿ ಪೋಪುದುಂ: **ಜಗನ್ನಾವಿ,** ३. ೨೬ ವ)

**ಪುರೋಹಿತರತ್ನ** – [ಜೈನ] ಚಕ್ರವರ್ತಿಗೆ ದೊರಕುವ ಏಳು ಜೀವರತ್ನಗಳಲ್ಲಿ ಒಂದು; ಉತ್ತಮ ಪುರೋಹಿತ (ಧರ್ಮಕಾರ್ಯದಿಕುಶಲನುಮಪ್ಪ ಬುದ್ಧಿಸಾಗರಮೆಂಬ ಪುರೋಹಿತರತ್ನಮುಂ .. .. ಎಂದಿಂತು ಜೀವಾಜೀವರತ್ನಂಗಳಂ ಪೂಜಿಸಿ: **ಆದಿಪು,** ೧೭. ೨೩)

**ಪುರ್ಗು** – ಬೇಯು (ಪುಡುಪುಡನರೆ ಪುರ್ಗಿ ಜೋಲ್ದೆಬಿಲ್ವಡಗಾಗಿ ಸುರುಳ್ದು ಸುರುಳ್ದು ಬಾಯ್ವಿಟ್ಟಿಕ್ಕುಂ: **ಸುಕುಮಾಚ,** ೫. ೧೫)

**ಪುರ್ವಿಕ್ಕು** – ಹುಬ್ಬು ಹಾರಿಸು (ಪೊಲ್ಲಿವಳ್ ಪಟಿಗಂಜಳ್ ಭರತಾದಿಗಳ್ ಪಲವುಕಾಲಂ ತನ್ನೊಳೊತಿರ್ದವರ್ ಕಟಿದಂದಾ ಕ್ಷಣದೊಳ್ ಧರಾರಮಣಿ ಮತ್ತೊರ್ವಂಗೆ ಪುರ್ವಿಕ್ಕುವಳ್: **ಪಂಪರಾ,** ೬. ೬೯)

**ಪುರ್ವು** – ಹುಬ್ಬು (ಮನಮಿರೆ ಪುರ್ವಿನ ಮೊದಲೊಳ್ ಮನದೊಳಗಿರೆ ವಾಯು ಕರಣತತಿ: **ಯಶೋಧಚ,** ೪. ೧೩)

**ಪುಲ್** – ಹುಲ್ಲು, ದರ್ಭೆಯ ಪವಿತ್ರ (ಬೆರಲೊಳ್ ಪುಲ್ಲಿಲ್ಲದೆ ದೇವರನರ್ಚಿಸೆ .. .. ಫಲಮಂ ರಾಕ್ಷಸರೊಯ್ವರ್ ಎಂಬರ್ ಪಾರ್ವರ್: **ಸಮಯಪ,** ೧೧. ೮೯)

**ಪುಲಕ** – ರೋಮಾಂಚನ (ಒದವೆ ಪುಲಕಾಂಕುರಂಗಳ್ .. .. ಎಟ್ಟಿಳ್ ತರಳನಯನೆ ಸಂಭ್ರಮದಿಂದಂ: **ಕಾದಂಸಂ,** ೫. ೨೨)

**ಪುಲಿಂದ** – ಬೇಟೆಗಾರ, ಬೇಡ (ವನಚರ ಕಿರಾತ ಧಾನುಷ್ಕ ನಿಷಾದ ಪುಲಿಂದ ಶಬರ ಭಿಲ್ಲಾಖ್ಯಂ ಬೇಡಂ: **ಅಭಿಧಾವ,** ೧. ೧೧. ೮೮)

**ಪುಲಿಗಿಲ್** – ಹೊಂಗೆಮರ (ಪುಲಿಗಿಲುಂ ಉತ್ತರಣೆಯುಮಂ .. .. ಬನ್ನಿಯ ಮರನುಂ ಕುಲದೆಯ್ವಮಿದೆಂದು ಕೊಂಡುಕೊನೆವರ್ ಮೂಢರ್: **ಸಮಯಪ,** ೯. ೫೭)

**ಪುಲಿಗೋಣ** – ಹುಲಿಯಂತೆ ಶಕ್ತಿಯುತವಾದ ಕೋಣ (ಎಯ್ ಪಾವಂ ಪಗೆ ಮಿಗೆ ತಿಂದುದು ಮೇವಂತಿರೆ ಪುಲ್ಲ ಸರವಿಯಂ ಪುಲಿಗೋಣಂ: **ಯಶೋಧಚ,** ೩. ೪೫)

**ಪುಲಿದೊವಲ್** – ಹುಲಿಯ ಚರ್ಮ (ಪುಲಿದೊವಲೆಸೆದುದು ಜೋಗಿಗೆ .. .. ವಿದ್ಯಾಬಲದಿಂ ಹರನುಟ್ಟುದುಮಂ ಸುಲಿದುಟ್ಟು ಅಭಿಮಾನಮಂ ಅವನೊಳ್ ಅಭಿನಯಿಸುವವೋಲ್: **ಲೀಲಾವತಿ,** ೪. ೭೦)

**ಪುಲಿದೋಲ್** – ಹುಲಿಯ ಚರ್ಮ (ಮಸಣದೊಳ್ ಪಡುವಂ ಪುಲಿದೋಲನುಟ್ಟು ಭೀಕರಕರಿಚರ್ಮಮಂ ಪೊದೆವಂ .. .. ಎಂದು ಜೇಂಕರಿಸುವರ್ .. .. ವಿಕಳಾತ್ಮರ್ ಈಶನಂ: **ಸಮಯಪ,** ೮. ೬೨)

**ಪುಲಿಯುಗುರ್** – ಮಕ್ಕಳಿಗೆ ಹಾಕುವ ಒಂದು ಆಭರಣ (ಅರಳೆಲೆ ಪೊಂಗುನೂಲ್ ಪುಲಿಯುಗುರ್ ಮಣಿಕಿಂಕಿಣಿ ಗೆಜ್ಜೆ ರಕ್ಕೆ ಕುಂಡಲಯುಗ ಮುತ್ತು ಕಾಲ್ಗಡಗಂ ಅಂದುಗೆ ಕಂಕಣ ಕಿಂಕಿಣೀಗಣಂ ಕಲ ಮಣಿನೂಪುರಂ ತನಗೊಡಂಬಡೆ: **ಅಜಿತಪು,** ೫. ೬೨)

**ಪುಲುವಟ್ಟೆ** – ಸಣ್ಣ ದಾರಿ, ಕಾಲುದಾರಿ (ಒಂದು ಮಹಾಹಿ ತೊಟ್ಟಗೆ ಬರೆ ಪುಲುವಟ್ಟೆಯೊಳ್ ತೊಲಗಲಿಂಬಿಲ್ಲದೆ ಬಿಲ್ಲಂ ಕೊಂಡು ವಿಷದೂಷಿತಮಪ್ಪ ಅಂಬಂ ತೊಟ್ಟಿಸುವುದುಂ: **ಪಂಚತಂತ್ರ,** ೪೩೪ ವ)

**ಪುಲೋಮಪುತ್ರಿ** – ಶಚೀದೇವಿ (ಎತ್ತಿ ತಂದಳ್ ಆದರದೆ ಪುಲೋಮಪುತ್ರಿ ಪರಮೇಶ್ವರನಂ ಜಿತಶತ್ರುಪುತ್ರನಂ: **ಅಜಿತಪು,** ೪. ೧೩)

**ಪುಲ್ಗರ್ಚು** – ಶರಣಾಗತಿಯನ್ನು ಸೂಚಿಸಲು ಬಾಯಲ್ಲಿ ಹುಲ್ಲನ್ನು ಕಚ್ಚಿ ಹಿಡಿ (ಕರುಣಿಸೆಲೆ ಶಬರ ತುಡದಿರು ಸರಲಂ ನೀನೆಂದೆನುತ್ತೆ ಪುಲ್ಗರ್ಚಿದವೋಲ್ ಮರವಟ್ಟು: **ಕುಸುಮಾಕಾ,** ೧೪. ೪೨)

**ಪುಲ್ಗಿಚ್ಚು** – [ಹುಲ್ಲಿನ ಬೆಂಕಿಯಂತೆ] ಬೇಗ ಆರುವ ಬೆಂಕಿ (ಸಿರಿಯಪ್ಪೊಡೆ ಪುಲ್ಗಿಚ್ಚಿನ ದೊರೆ ರಾಜ್ಯವಿಭೂತಿ ಮುಗಿಲ ನೆಳಲ ಸಮಾನಂ ತರುಣತ್ವಮಪ್ಪಡೆ ಇಂದ್ರನ ವರಚಾಪದ ಸರಿ: **ಧರ್ಮಾಮೃ,** ೭. ೯೮)

**ಪುಲ್ಗುಡಿ** – ಹುಲ್ಲಿನ ಗುಡಿಸಲು (ತೃಣಕುಟಿ ಪುಲ್ಗುಡಿ: **ಅಭಿಧಾವ,** ೧. ೧೦. ೯)

**ಪುಲ್ಗೊನರ್** – ಹುಲ್ಲಿನ ಚಿಗುರು, ಮೊಳಕೆ (ಗಿಳಿಯೆಚಿಂಕೆಯ ಬಣ್ಣದ ಪುಲ್ಗೊನರ್ ಪೊದಳ್ದುದು ಪೊಲದೊಳ್: **ಜಗನ್ನಾವಿ,** ೪. ೬)

**ಪುಲ್ಗೋಡ** – [ಪುಲ್+ಕೋಡ] ಕ್ಷುದ್ರ ಕೋತಿ (ಜೋಡಾಡಿ ಪುಲ್ಗೋಡನಂ ಪಿಡಿದುಯ್ವಂತೆವೊಲುಯ್ದಂ ಅಪ್ರತಿಹತಂ ಸವಮಿತ್ರಿ ಶತ್ರುಂಜಯಂ: **ಪಂಪರಾ,** ೮. ೩೨)

**ಪುಲ್ದಂಡೆ** – ಹುಲ್ಲಿನ ಹಗ್ಗ (ಪೊಡೆ ಬಿಲ್ ಪುಲ್ದಂಡೆ ಬೆಳಳಾರ್ ಪಟಂ ಎರೆ ಬಲೆಗಳ್ .. .. ಒಪ್ಪೆ ವಿಂಧ್ಯಾಟವಿಗೆ ನಡೆದುದು ಉದ್ಧತ್ ಕಿರಾತಪ್ರಪಂಚಂ: **ಗಿರಿಜಾಕ,** ೧. ೭೯)

**ಪುಲ್ಬಂಟ** – ಹುಲು ಬಂಟ, ಸಾಮಾನ್ಯ ವೀರ (ಪುಲ್ಬಂಟನಂ ನಂಬಿ ಬಲ್ವಂಟನಂ ಬಿಡುವ ಪಗೆಗಾಱಿನುಮಂ .. .. ಪೇಲ್ವೆಂ: **ಧರ್ಮಾಮೃ,** ೮. ೩೧ ವ)

**ಪುಲ್ಮರುಳ್** – ಕ್ಷುಲ್ಲಕ ಪಿಶಾಚಿ (ಆಂ ಮರುಳೆನೊ.. ..ನೀಂ ಮರುಳಯೋ ಪೇಟಿ ಪೇಟಿದೊಡೆ ಪೋಗದಿರು ಈಶ್ವರನಾಣೆ ಎಂದು ಪುಲ್ಮರುಳ್ ಇನಿಸಾನುಮಂ ತಗೆದು ಕಾಡಿದುದಲ್ಲಿ ಫಣೀಂದ್ರಕೇತುವಂ: **ಪಂಪಭಾ,** ೧೩. ೫೫)

**ಪುಲ್ಮಾನಸ** – ಹುಲುಮಾನವ (ಇಕ್ಷ್ವಾಕುವಂಶತಿಲಕನಪ್ಪ ರಾಮನುಂ ಪುಲ್ಮಾನಸನೆಣದೆಣಿಸಿ .. .. ನುಡಿವೈ: **ಚಾವುಂಪು,** ಪು. ೩೮೭. ಸಾ. ೨೫)

**ಪುಲ್ಲಂ ಕರ್ಚು** – ಶರಣಾಗತಿಯನ್ನು ಸೂಚಿಸಲು ಬಾಯಲ್ಲಿ ಹುಲ್ಲು ಕಚ್ಚಿಕೊ (ಕೆಲರ್ ಶರಣೆಂದು ಕುಮಾರನ ಕಾಲ್ಗೆಱಗಿ ಪುಲ್ಲಂ ಕರ್ಚಿ ಪೊಡೆವಟ್ಟರ್: **ವಡ್ಡಾರಾ,** ಪು. ೬೨, ಸಾ. ೧೫),

**ಪುಲ್ಲಡಕಿ** – ಹುಲ್ಲು ಮಾರುವವನು (ರಾಜಕುಮಾರನ ಕೆಳೆಯಂ ಬಿಟ್ಟು ಪುಲ್ಲಡಿಯೊಳ್ ಕೆಳೆಗೊಳ್ವಂತೆ ಸೀರೆಯಂ ಬಿಟ್ಟು ನಾರನುಡುವಂತೆ: **ಧರ್ಮಾಮೃ,** ೧೧. ೧೧೨ ವ)

**ಪುಲ್ಲ ಬೆಂಟೆ** – ಹುಲ್ಲಿನ ಹಗ್ಗ (ಪುಲ್ಲಬೆಂಟೆಯಂ ಪೊಸೆದು ಕಿಚ್ಚುಮೆಣ್ಣೆಯ ಕೊಡನುಂ ಬೆಂಟೆಯುಮಂ ಕೊಂಡು ಪೊಗಿ ಭಟಾರರ ಮುಂದಿಟ್ಟು: **ವಡ್ಡಾರಾ,** ೧೫೩, ಸಾ. ೧೦)

**ಪುಲ್ಲವಟುಕ** – ಹೂವಾಡಿಗ (ತಂದರ್ ಸುರವಟುಕರ್ ಪುಲ್ಲವಟುಕರಂತಿರೆ ಪೂವಂ: **ಅಜಿತಪು,** ೫. ೭೭)

**ಪುಲ್ಲವಡಿಗ** – ಹೂವಾಡಿಗ (ಕುಸುಮಪುರದ ಪುಲ್ಲವಡಿಗಂ ಕುಸುಮದತ್ತನೆಂಬವಂ: **ಪುಣ್ಯಾಸ್ರ,** ೨. ೩೦ ವ)

**ಪುಲ್ಲವಡಿಗಿತಿ** – ಹೂವಾಡಗಿತ್ತಿ (ಪುಲ್ಲವಡಿಗಿತಿಯರೆತ್ತಿ ಪಿಡಿದ ಮಾಲೆಪೂವಿನ ನಱುಗಂಪಿಂಗೆ ಕವ್ವರೆಗೊಡು ಮುತ್ತಿ ಮುಸುಚಿ ಮೊರೆವ ಮಱಿದುಂಬಿಗಳ ಇಂಚರದೊಳಂ: **ಕಬ್ಬಿಗಕಾ,** ೩೭ ವ)

**ಪುಲ್ಲಿ** – ಒಂದು ಬಗೆಯ ಬಟ್ಟೆ (ಪೊಸ ಪಸಗೆಯ ಮಂಜಿಟಿಗೆಯ ಮಿಸುಗುವ ದೋರಿಯದ ಪಟಿಯ ಪುಲ್ಲಿಯ ಸೊಂಪಂ ಪಸರಿಸಿದ ಪಕ್ಕರಕ್ಕೆಗಳೆಸೆದಿರ್ದುವು: **ಕಬ್ಬಿಗಕಾ,** ೨೦೨)

**ಪುಲ್ಲಿಗೆ** – ಊಟದೆಲೆ (ಎಳ್ ಬಂದೊಡೆ ಕೊದಳಿಯಂ ಬೆಳಸು ಬಂದೊಡೆ ನೆಲನಂ ಸಾಲಂ ಬಂದೊಡೆ ಒಟ್ಟೆಗುತ್ತನಂ ಕಟ್ಟಿದ ಕೂಳನುಂಡೊಡೆ ಪುಲ್ಲಿಗೆಯಂ ಬಿಡುವಂತೆ: **ಧರ್ಮಾಮೃ,** ೧೪. ೯೬ ವ)

**ಪುಲ್ಲೆ –** ಹುಲ್ಲೆ, ಜಿಂಕೆ (ತಲೆವೊಲದ ನಾನಲ್ವಳ್ಳದ ದರಿಯ ಕುತ್ತುಜಿಂಗೆ ಕೊಣಕಿಡುವ ಪುಲ್ಲೆ ಎರಲೆಯ ಜವಕ್ಕೆ ಪಕ್ಕುಗೊಟ್ಟು: **ಮಲ್ಲಿನಾಪು,** ೭. ೨ ವ)

**ಪುಲ್ಲೆವಱಿ –** ಜಿಂಕೆಯ ಮರಿ (ಅಸು ಪೋಪ ಪುಲ್ಲೆವಱಿಯಂ ಕೈಯಿಂದಂ ಕೊಂಡು ಬೇಡಂ ಅಗುರ್ವಿಂ ನಡೆಗೊಂಡಂ; **ಕುಸುಮಾಕಾ,** ೧೪. ೫೫)

**ಪುಲ್ವಗೆ –** [ಪುಲು+ಬಗೆ] ಹೀನ ಯೋಚನೆ (ತನ್ನ ನುಡಿಯಂ ಕಡೆಗಣಿಸದೆ ಒಡಂಬಡುಗುಂ ಎಂಬ ಪುಲ್ವಗೆಯಿಂ ಆ ಪಾಣ್ಬೆಯಿಂತೆಂದಳ್: **ಕರ್ಣನೇಮಿ,** ೭. ೧೪೬ ವ)

**ಪುಲ್ವಟ್ಟೆ –** ಕಾಲುದಾರಿ (ಬಿಜಯಂಗೆಯ್ವುದೆಂದು ಕೈಮುಗಿದು ಪುಲ್ವಟ್ಟೆಯಿಂ ಪೇರಡವಿಯಂ ಪೊಱಮಡಿಸಿ: **ಧರ್ಮಾಮೃ,** ೩. ೬೯ ವ)

**ಪುಲ್ವಿಡಿ –** ಪುಲ್ಗರ್ಚು, ಶರಣಾಗತನಾಗು (ಪುಲ್ವಿಡಿಯೆ ಸಚಿವತನಯಂ ಕಾಲವಿಡಿಯೆ ನಿಜೇಶಂ ಅವಳಗಲ್ಕೆಗಳೊಂದಂ ಕಲ್ವಂತೆ ಪಲಗೆವಿಡಿದಳ್ ಕಲ್ಪಾಂತಶೋಭಂ ಕಱಿದುದು ಕಿಡಿಯಂ ಕೋಪದುದ್ರೇಕದಿಂ: **ಲೀಲಾವತಿ,** ೧೪. ೨೮)

**ಪುಷ್ಕರ –** ತಾವರೆ (ಕಳಹಂಸೆ ಸಾರ್ದಪುದು .. .. ಪೊಳೆವ ಪುಷ್ಕರಮಂ ನಸುದೋರ್ಪ ಕುಂಭಮಂ: **ಲೀಲಾವತಿ,** ೮. ೭೯); ಸೊಂಡಿಲ ತುದಿ (ಪರಿಪೂರ್ಣೋತ್ಕಟದಾನಧಾರೆ ಕಟದಿಂ ಪಾಯ್ತರ್ಪುದುಂ ಪೆರ್ಚಿ ಪುಷ್ಕರದಿಂ ಶೀಕರನಿರ್ಝರಂ ಸುರಿವುದುಂ: **ಆದಿಪು,** ೧೨. ೫೮); ಡಮರುಗ (ನವಮೇಘಧ್ವನಿ ಪುಷ್ಕರಧ್ವನಿ ತರತ್ತರಾಳಿ ಪುಷ್ಪೋಪಹಾರವಿಳಾಸಂ ರುಚಿರಾಂಬುದಂ .. .. ವಿಯದ್ರಂಗದೊಳಂದದೇಂ ನಲಿದುದೋ: **ಆದಿಪು,** ೬ ೭೨); ಆಕಾಶ (ಪುರಹರ ಪೂರ್ಣ ಪುಷ್ಕರ ಸರಿದ್ಧರ ವಾರ್ಧರವಾಹವಂದ್ಯ: **ಶಬರಶಂ,** ೫. ೨೯); ಜಾರ (ಇಂದೆ ಮೇಲ್ವಾಯ್ದೆನಪ್ಪೊಡೆ ಪುಷ್ಕರಂ ಎನ್ನಂ ಕೊಂದಪ್ಪಂ: **ಪಂಚತಂತ್ರ,** ೩೯೦ ವ); ಬ್ರಹ್ಮ (ಪುಷ್ಕರನಾಸ್ಥಾನದ ಮಾಳ್ಕೆಯಿಂದೆ ಇರಿದೊಪ್ಪುತ್ತಿರ್ದುದಂತಾ ವನಂ: **ತ್ರಿಷಷ್ಟಿಪು,** ೨. ೧೨೬); ಹಾವಿನ ಹೆಡೆ (ನಯನತ್ರಯಾಂಚಿತವಪುಷ್ಕರ ಪುಷ್ಕರ ಪುಷ್ಕರಾಂಕ: **ರಾಜಶೇವಿ,** ೧೩. ೫೨)

**ಪುಷ್ಕರಿಣಿ –** ಹೊಕ್ಕರಣೆ, ಕೊಳ (ಸರಸಿ ಸರ ಕಾಸಾರಂ ಸರೋಜಿಷಂಡಂ ತಟಾಕಂ ಆಧಾರಂ ಪುಷ್ಕರಿಣಿಯದು: **ಅಭಿಧಾವ,** ೧. ೪. ೧೫)

**ಪುಷ್ಕಳಾವರ್ತ –** ಪ್ರಳಯಕಾಲದ ಮೋಡದ ಬಗೆಗಳಲ್ಲಿ ಒಂದು (ದ್ರೋಣ ಮಹಾದ್ರೋಣ ಪುಷ್ಕಳಾವರ್ತ ಸಂವರ್ತಕಂಗಳೆಂಬ ಮುಗಿಲ್ಗಳಂ ಬೆಸಸಿದಾಗಳ್: **ಪಂಪಭಾ,** ೫. ೯೫ ವ)

**ಪುಷ್ಕಳಾವರ್ತಕ –** ಮೋಡದ ರಾಶಿ (ಭೂಧರವಿರೋಧಿ ಭೂಧರಂಗೆ ಕ್ರುದ್ಧನಾಗಿ ಪುಷ್ಕಳಾವರ್ತಕ ಬಲಾಹಕನಿಕಾಯಮಂ ಕರೆದು: **ಜಗನ್ನಾವಿ,** ೪. ೮೪ ವ)

**ಪುಷ್ಟಿ – ಬಲ** (ತನ್ನಿಷ್ಟವನ್ನಂ ಉತ್ತರಮಕ್ಕುಂ ಧೃತಿ ತುಷ್ಟಿ ಪುಷ್ಟಿ ವಿಭವಂ ಸೌಭಾಗ್ಯಂ ಇಷ್ಟಾಂಗನಾ ಸುರತಂ ಕಾಂತಿ ಅಗುಂತಿ ಶಾಂತಿ ವಿಭವಂ ಭದ್ರಂ ಶುಭಂ ಮಂಗಳಂ; **ಪಂಪಭಾ,** ೧೪. ೬೫)

**ಪುಷ್ಪ –** ಹೂ (ಕುಸುಮಂ ಪ್ರಸೂನ ಸುಮನಃಪ್ಸವಾಖ್ಯಂ ಪುಷ್ಪಂ: **ಅಭಿಧಾವ,** ೧. ೭. ೧೧)

**ಪುಷ್ಪಂಗತಿ –** ಉನ್ನತ ಬದುಕು (ಒಕ್ಕುದುಂಡು ಪುಷ್ಪಂಗತಿವೆತ್ತು ಬಾಳ್ವುದರಿದಲ್ಲ ಎನುತುಂ; **ತ್ರಿಷಷ್ಟಿಪು,** ೯. ೮)

**ಪುಷ್ಪಕವಿಮಾನ –** ಕುಬೇರನ ವಿಮಾನ, ಆನಂತರ ಇದು ರಾವಣನ ವಶಕ್ಕೆ ಬಂತು (ಪುಷ್ಪಕವಿಮಾನದ ರತ್ನಖಚಿತಪುತ್ರಿಕಾಸಂಕುಲಂ ಅಟ್ಟೊಡೆ ಅಟ್ಟುವು ಬೆಮರ್ತೊಡೆ ಕೂಡೆ ಬೆಮರ್ತುವು: **ಪಂಪರಾ,** ೯. ೧೦೯)

**ಪುಷ್ಪಕಳಂಬ –** ಹೂಬಾಣ; ಮನ್ಮಥ (ಜೇವಣಶಾಲೆ ತುಂಬಿಗಳ ಪುಷ್ಪಕಳಂಬನ ಶಸ್ತ್ರಶಾಲೆ: **ರಾಜಶೇವಿ,** ೯. ೫೩)

**ಪುಷ್ಪಕೇತನ –** ಮನ್ಮಥ (ತನು ಮೃದು ಕುಚಂ ಸ್ತಬ್ಧಂ ಶೀಲಂ ಕರಂ ರುಜು ಪುಷ್ಪಕೇತನನಿಭಕಚೋದ್ಬಂಧಂ .. .. ಎಂಬ ಪೆಂಪಿನ ತನೂಜೆಯಂ ಕೊಟ್ಟಂ ಶಾಂತೀಶ್ವರಂಗೆ ನಭಶ್ಚರಂ: **ಶಾಂತಿಪು,** ೧೧. ೬೯)

**ಪುಷ್ಪಚಾಪ –** ಪುಷ್ಪಕಳಂಬ (ಗಣಿಕಾಸೃಷ್ಟಿಯಂ ಪುಷ್ಪಚಾಪಂ ಪೊಸತಂ ಮಾಡಿಟ್ಟನೊ: **ಆದಿಪು,** ೧. ೮೨)

**ಪುಷ್ಪದಂತ –** ಸೂರ್ಯ, ಚಂದ್ರ (ಪುಷ್ಪದಂತರುಮಂ ನೀರಜವಾಸಿನಿಯುಮಂ ಅಹಿತವ್ರಜಭಂಜನಮಪ್ಪ ಚಕ್ರವೆಂಬಿವನಾಗಳ್: **ಕರ್ಣನೇಮಿ,** ೬. ೬೬); ವಾಯವ್ಯ ದಿಕ್ಕಿನ ದಿಗ್ಗಜ (ಮುಳಿಸಿಂ ಪುಷ್ಪದಂತಕ್ಕೆ ಬಲ್ಪಿಂ ತಾಂ ಸಾರ್ವಭೌಮಕ್ಕೆ ಎಣೆ: **ತ್ರಿಷಷ್ಟಿಪು,** ೨. ೫೫); [ಜೈನ] ಒಂಬತ್ತನೆಯ ತೀರ್ಥಂಕರ (ಪುಷ್ಪದಂತ ಶ್ರೀಪಾದಂಗಳ್ ಸಮುತ್ಪಾದಿಸುಗೆಮಗೆ ಹೃದಿಂದೀವರಾನಂದದೊಳ್ಪಂ: **ಪುಷ್ಪದಂಪು,** ೧. ೧)

**ಪುಷ್ಪದರ್ಶನ –** ರಜಸ್ವಲೆಯಾಗುವಿಕೆ (ಮಕ್ಕಳನೀಯದೆ ನೋಡೆ ನಾಡೆ ನೋಯಿಸಿದಪ್ಪುದು ಇಕ್ಷುಪುಷ್ಪದವೊಲೆನ್ನಯ ನಿಷ್ಫಲ ಪುಷ್ಪದರ್ಶನಂ: **ಪಂಪಭಾ,** ೧. ೧೧೭)

**ಪುಷ್ಪದಾಮ –** ಹೂವಿನ ಮಾಲೆ (ಕುಸುಮಮಾಲಿಕೆಯಿಂ ಪೊಱಿ ಪುಷ್ಪದಾಮ ಮೇಖಲೆ ನಡೆಗೆ ಅಡ್ಡಿ ಕಣ್ಮಲರ್ಗೆ ಕಾಡಿಗೆ ಬಿಣ್ಣಿತು: **ಕಾದಂಬ,** ೬. ೨೩)

**ಪುಷ್ಪಲಾವಕ –** ಹೂವಾಡಿಗ (ಹರಿಯಂ ಕಾಣ್ಬುದುಮಾದುದು ಪರಮಜ್ಞತೆ ಪುಷ್ಪಲಾವಕಂಗಮಿದೇನಚ್ಚರಿ: **ಜಗನ್ನಾವಿ,** ೬. ೧೪)

**ಪುಷ್ಪಲಾವಿ –** ಹೂವಾಡಗಿತ್ತಿ (ನಿಜಾಸ್ಯಂ ಮಂದಹಾಸಪ್ರಭೆಯನುಗುೞೆ ನಿಂದಿರ್ದುದು ಇಂತೊಪ್ಪೆ ಸುಯ್ಗಂಪಿನ ಪೆಂಪಿಂ ಕೂಡೆ ಕಂಪೇೞಿಸುತಮಲರ್ಗಳಿಂ ಪುಷ್ಪಲಾವೀಕದಂಬಂ: **ಶಾಂತೀಶ್ವಪು,** ೧೧. ೪೯)

**ಪುಷ್ಪವತಿ –** ರಜಸ್ವಲೆ (ಮಲಿನಿಕೆ ಪುಷ್ಪವತಿ ರಜಸ್ವಲೆ ಉದಕ್ಕೆ ಋತುಮತಿ: **ಅಭಿಧಾವ,** ೧. ೧೧. ೧೩)

**ಪುಷ್ಪವಾಟ –** ಹೂದೋಟ (ಸರೋರುಹಷಂಡದಿಂ ಇಕ್ಷು ಪುಷ್ಪವಾಟಂಗಳಿಂ ಆವ ಮಂಡಲಮುಮಂ ಗೆಲೆವಂದುದು ವೆಂಗಿಮಂಡಲಂ: **ಅಜಿತಪು,** ೧. ೨೧)

**ಪುಷ್ಪವಾಟಿ –** ಹೂದೋಟ (ನೀಲನೀರರುಹದ ಕಂಪು ಕೆತಕಿಯ ಕಂಪು ಎಸೆಗುಂ ಸಲೆ ಪುಷ್ಪವಾಟಿಯೊಳ್: **ಗಿರಿಜಾಕ,** ೨. ೬೧)

**ಪುಷ್ಪವಾಸನೆ –** ಹೂವಿನ ಕಂಪು ಸೇರಿಕೊಳ್ಳುವುದು (ಆ ರತಿ ಪಾಪಮುಂ ಪಡಣಮುಂ ಪೋಪಂತೆ ಕಾಮಂಗೆ ಮಜ್ಜನಕೆ ಎಂದೆತ್ತಿದ ಚಂದ್ರಕಾಂತ ಘಟದೊಳ್ ತಂದು ಅಟ್ಟೆಯಿಂ ಪುಷ್ಪವಾಸನೆಗೆಂದಿಕ್ಕಿದ ನೀಳನೀರರುಹಮಂ ಪೋಲ್ದತ್ತು ಕಟ್ಟೆಂದುವಾ: **ಪಂಪಭಾ** ಪರಿಷತ್ತು, ೪. ೫೧)

**ಪುಷ್ಪಸಮಯ –** ಹೂಬಿಡುವ ಸಮಯ, ವಸಂತಮಾಸ; ಮುಟ್ಟಾಗುವ ಸಮಯ (ಮೂಡಿದ ಮೊಡವಿ ಮುಗುಳ್ಮೊಗವೀಡಿಱಿವುನ್ಮಂಜರೀಸ್ತನಂ ತೋಳ್ಮೊದಲೊಳ್

ತೀಡುವ ನಱುಗಂಪೇಂ ಪಿಸುಣಾಡಿದುದೊ ಸತಿಗೆ ಪುಷ್ಪಸಮಯಮಂ: **ಪುಷ್ಪದಂಪು,** ೩. ೧೧೫)

**ಪುಷ್ಪಸಾಯಕ** – ಪುಷ್ಪಶರ (ಕಾಂತಾರಾಗ ನಿವಾಸನಾಗಿಯುಂ ಪುಷ್ಪಸಾಯಕನಲ್ತು: **ತ್ರಿಷಷ್ಟಿಪು,** ೨೭. ೪೧ ವ)

**ಪುಷ್ಪಸ್ರಗ್ರಜ** – ಹೂವಿನ ಪರಾಗ (ಇದು ತತ್ಕಂಠವಿಲಂಬಿದೇವಕುಜಪುಷ್ಪಸ್ರಗ್ರಜೋವಿಭ್ರಮಂ: **ರಾಜಶೇವಿ,** ೧೩. ೪೪)

**ಪುಷ್ಪಾಂಜಲಿ** – ನಾಟಕ–ನಾಟ್ಯಗಳ ಆರಂಭದಲ್ಲಿ ಬೊಗಸೆಯಿಂದ ಹೂಗಳನ್ನೆರಚುವುದು (ಪುಷ್ಪದಂತ ಮಲಧಾರಿಗಳಂ ಬಲಗೊಂಡು ಪಾಡಿ ಮಾಡುವೆಂ ಅಲಘು ಗುಣಸ್ತವನಪುಣ್ ಪುಷ್ಪಾಂಜಲಿಯಂ: **ನೇಮಿನಾಪು,** ೧. ೧೯)

**ಪುಷ್ಪಾತಿಶಯ** – ಹೆಣ್ಣಿನ ಮಾಸಿಕ ಋತುಸ್ರಾವ (ಈ ತನುವಲ್ಲಿ .. .. ಪ್ರಸವಮೊಂದಱೊಳಮೊಂದದೆ ತಾನೇತಕ್ಕೆ ನಿಷ್ಫಲಂ ಪುಷ್ಪಾತಿಶಯಂಬಡೆದು ಬೇಸಱಂ ಬೀಱುವುದೋ: **ಪುಷ್ಪದಂಪು,** ೩. ೮೫)

**ಪುಷ್ಪಾಪಚಯ** – ಹೂ ತಿರಿಯುವುದು (ರಾಜನ ಪರಿವೃತದೊಳಿರ್ಪ ಕಾಂತಾಜನಂ ಪುಷ್ಪಾಪಚಯದೊಳ್ ಮನಸ್ಕರಾಗಿ: **ತ್ರಿಷಷ್ಟಿಪು,** ೨೩. ೫೧ ವ)

**ಪುಷ್ಪಾಸಾರ** – ಪುಷ್ಪವರ್ಷ (ಸುರಪುಷ್ಪಾಸಾರದಿಂದಂ ಸುರಗಣಪಟಹಪ್ರಸ್ಫುರದ್ಧ್ವಾನದಿಂದಂ ಸುರವಿರಚಿತ ಮಂದಾನಿಳಾಂದೋಳದಿಂದಂ: **ಆದಿಪು,** ೧೦. ೧೮)

**ಪುಷ್ಪೇಷುಚಾರ** – ಹೂಬಾಣ (ತುಱುಗೆ ಪುಷ್ಪೇಷುಚಾರಂ ನಭಂ ಪೂವಿನ ಪಂದರ್ ಭುತಳಂ ಪೂವಿನ ಪೊಸ ಪಸೆಗಳ್: **ನೇಮಿನಾಪು,** ೪. ೧೫೨)

**ಪುಷ್ಪೋಪಹಾರ** – ಹೂವಿನ ಕಾಣಿಕೆ (ನವಮೇಘಧ್ವನಿ ಪುಷ್ಕರಧ್ವನಿ ತರತ್ತರಾಳಿ ಪುಷ್ಪೋಪಹಾರವಿಳಾಸಂ ರುಚಿರಾಂಬುದಂ .. .. ವಿಯದ್ರಂಗದೊಳಂದದೇಂ ನಲಿದುದೋ: **ಆದಿಪು,** ೬. ೭೨)

**ಪುಸಿ** – ವಚನಭಂಗ (ಚಾಳುಕ್ಯವಂಶದೊಳೆಲ್ಲಿಯುಂ ಇನ್ನೆವರಂ ನುಡಿದು ಪುಸಿವುದುಂ ಆಡಿ ಅಳುಪುವುದುಂ .. .. ಕನಸಿನೊಳಪ್ಪೊಡಂ ಇಲ್ಲ: **ಗದಾಯು,** ೨. ೭ ವ)

**ಪುಸಿಗ** – ಪುಸಿಯುಳ್ಳಂ (ನನ್ನಿಯಂ ನುಡಿವನಂ ಪುಸಿಗನೆಂಬರ್ ಪುಸಿವಾತುಗನಂ ನೆಲದೊಳೀತನೆ ಪುಸಿಯಿಲ್ಲದವಣ ಎಂಬರ್: **ಪಂಚತಂತ್ರ,** ೧೦೪)

**ಪುಸಿಯಱಿತ** – ಮಿಥ್ಯಾಜ್ಞಾನ (ಪುಸಿದೈವದ ಪುಸಿಯಱಿತದ ಪುಸಿಧರ್ಮದ .. .. ದೆಸೆವೋಗರ್ ಅದೆಂತುಂ ಆವ ತೆಱದಿಂ ಜೈನರ್: **ಸಮಯಪ,** ೬. ೭೫)

**ಪುಸಿವಡೆ** – ಹುಸಿ [ಮಾಯಾ] ಸೈನ್ಯ (ನಾಲ್ಕುಂ ತೆಱದ ಪುಸಿವಡೆಯಂ ಬಿಜ್ಜೆಯಿಂ ಪುಟ್ಟಿಸಿ ಮುಂಗುಡಿಯೊಳ್ ನಡೆವಂತೆ ಬೆಸಸಿ: **ಕಬ್ಬಿಗಕಾ,** ೧೫೩ ವ)

**ಪುಸಿವಾತುಗ** – ಸುಳ್ಳುಗಾರ (ನನ್ನಿಯಂ ನುಡಿವನಂ ಪುಸಿಗನೆಂಬರ್ ಪುಸಿವಾತುಗನಂ ನೆಲದೊಳೀತನೆ ಪುಸಿಯಿಲ್ಲದವಣ ಎಂಬರ್: **ಪಂಚತಂತ್ರ,** ೧೦೪)

**ಪುಸಿವೋಗು** – ವ್ಯರ್ಥವಾಗು, ಬಂಜರಾಗು (ಪಸವಿಟ್ಟೆ ಬೞಿಂ ಪೆಱವುಂ ಭಯಂಗಳಾಕುಳಿತೆಗಳಿಲ್ಲ ಧಾತ್ರಿ ಪುಸಿವೋಗದು: **ಆದಿಪು,** ೧. ೫೨)

**ಪುಳ್** – ಹಕ್ಕಿ (ಪಿಂಗಿಸುವವೊಲ್ ಪೊಸ ನೆಲ್ಲಿರೆ ಪುಳ್ಗಳಂ: **ಕವಿರಾಮಾ,** ೧. ೧೩೧)

**ಪುಳಕ** – ರೋಮಾಂಚನ (ಪುಳಕನಿತಾಂತ ಜರ್ಜರಿತ ಕರ್ಣಾವತಂಸೆಯರಪ್ಪ ಕಾಂತೆಯರ್ಕಳ ದರಹಾಸ ಚಂದನರಸಾಭಿಷವಂ .. .. ಒಪ್ಪೆ: **ಕಾದಂಬ,** ೨. ೨೬)

**ಪುಳಿ** – ಹುಳಿ, ಹುಳಿಯಾಗುವಿಕೆ (ಮಧು ಸೀಧು ಕಟು ಸೀಧು ಪೋ ಪುಳಿತ ಕಳ್ಳಲ್ತುಂ ಕರಂ ಕಯ್ಯುತ್ತಿರ್ಪುದು: **ಪಂಪಭಾ,** ೪. ೮೮) ['ಮಧು ಸೀಧು' ಡಿಎಲ್‌ಎನ್ ಒಪ್ಪಿದ ಪಾಠ]

**ಪುಳಿಂಚು** – ಹುರುಪು (ಇಂಚರದ ಮರ್ದಿನ ಪುಳಿಂಚಿನ ಕಿವಿಗಳ್ಗೆ .. .. ಮಿಡಿದ ವಿಪಂಚಿಯೆನೆ ಪುಳಿಂದಿ ಪಡಿದಳ್: **ಲೀಲಾವತಿ,** ೮. ೩೧)

**ಪುಳಿಂದ** – ಬೇಡ (ಭ್ರಾಂತಿಯಿಂದ ಎನ್ನಯ ಮರದಡಿಯೊಳ್ ನಿಂದನೊರ್ವ್ವಂ ಪುಳಿಂದಂ: **ಕಾದಂಸಂ,** ೧. ೪೯)

**ಪುಳಿಂದಮಂದಿರ** – ಬೇಡನ ಮನೆ (ಬರ್ಪ ರಾಜಪುತ್ರನಂ ಪುಳಿಂದಮಂದಿರದೊಳೊಂದು ಪಂಜರಗತನಾಗಿರ್ದ ಶುಕಪತತ್ರಿ ಕಂಡು: **ಪಂಚತಂತ್ರ,** ೧೮೮ ವ)

**ಪುಳಿಂದಿ** – ಬೇಡಿತಿ (ಎರಳೆಗಂಡು ಮುಗ್ಧ ಪುಳಿಂದೀಪ್ರಸರಂ ಪಿಡಿಯಲ್ ಬಗೆದಂದು: **ತ್ರಿಷಷ್ಟಿಪು,** ೨೭. ೬)

**ಪುಳಿಗರ್ಚು** – ಹುಳಿ ಹಚ್ಚಿ ತೊಳೆ (ಪುಳಿಗರ್ಚಿದ ಪಳಿಕಿನ ಪುತ್ತಳಿ ಕಪ್ಪುರದೊಪ್ಪ ಸಲಗೆಯಿಂ ಖನಿಮಿನುಕಂ ತಳೆದಂತಿರೆ ಪರಿಜಂ ಕಣ್ಗೊಳಿಸಿದುದು ಆ ಕಾಂತೆ ತಳೆದ ಬೆಳ್ವಸದನದೊಳ್: **ಶಾಂತೀಶ್ವಪು,** ೧೪. ೧೬)

**ಪುಳಿಚೇಟಲ್** – ಹಪ್ಪಳಿಕೆ ಏಳು, ಬೊಬ್ಬೆ ಏಳು (ಕಡುಗಾಯ್ದುಗ್ರಾತಪಜ್ವಾಳೆಗೆ ಮಿಗೆ ಪುಳಿಚೇಟಲ್ಕೆ ಬೆಂಬೆಂದು ಬಾಯಂ ಬಿಡುತಂ ತೇಕುಣ್ಮಿ ಜಿಹ್ವಾಲತೆಯೆಟಲೆ ಜವಂಗುಂದುತುಂ ಬಂದು .. .. ಸೈರಿಭಂಗಳ್: **ಶಾಂತೀಶ್ವಪು,** ೧೨. ೩೬)

**ಪುಳಿನ** – [ಪುಲಿನ] ಮಳಲು ದಿಣ್ಣೆ (ಆತನಂತಃಪುರಸ್ತ್ರೀಯರ್ .. .. ತಳಿದೆಳದಳಿರ ಜೊಂಪಂಗಳೊಳಂ ಕುಳಿರ್ವ ಪುಳಿನಂಗಳೊಳಂ ಕೋಡುವ ಧಾರಾಗೃಹಂಗಳೊಳಂ: **ಆದಿಪು,** ೧೧. ೭೪ ವ)

**ಪುಳಿನತಳ** – ಪುಳಿನ (ವನದೊಳ್ ಪುಳಿನತಳದೊಳ್ ಅಱಸಿದುದು ಕಾಂತೆಯಂ ಕಳಹಂಸಂ: **ಗಿರಿಜಾಕ,** ೨. ೫೬)

**ಪುಳಿನಸ್ಥಳ** – ಪುಳಿನತಳ (ಪುಳಿನಸ್ಥಳಮಂ ಮಱೆಯಿಸಿ ತೊಳಗುವ ನಕ್ಷತ್ರಮಾಲೆಯಂತಿರೆ ಮಣಿಮೇಖಳೆ: **ಮಲ್ಲಿನಾಪು,** ೩. ೪೬)

**ಪುಳುಂಗಾಱ** – ಹಕ್ಕಿ ಹಿಡಿಯುವವನು (ಚಂಪಾನಗರದೊಳ್ ಒರ್ವಂ ಪುಳುಂಗಾಱಂ ಗರುಡವೇಗನೆಂಬೊಂ ಆತಂಗೆ ನೀಂ ಮುನ್ನಿನ ಭವದೊಳ್ ಪೆಂಡತಿಯಯ್: **ವಡ್ಡಾರಾ,** ಪು ೧೫೦, ಸಾ ೨೨)

**ಪುಳುಂಬು** – ಬಾಣ (ಕುಟ್ಮಳಿತಚಂಪಕಪ್ರಚಯಮುಂ ಕಾಮನಿಸುವ ಕಾದ ಪುಳುಂಬಿನಂಬುಗಳ ಪೊದೆಯೆಂದು ಹೆಡವಿಸುತ್ತುಂ: **ಶಾಂತೀಶ್ವಪು,** ೧೧. ೬೫)

**ಪುಳ್ಳಳೆ** – ಹುಳಿಮಜ್ಜಿಗೆ (ಆಮಥು ಪುಳ್ಳಳೆ ಪಾಲಂ ಕಿಡಿಸುವಂತೆ ಉಗ್ರಸೇನನಂ ಕಿಡಿಸಿ .. .. ಸೆಱೆಗೆಯ್ದುವೆ .. .. ನಿರ್ವೇಗಕ್ಕೆ ಕಾರಣಮಾಗೆ: **ನೇಮಿನಾಪು,** ೬. ೭೭ ವ)

**ಪುಳ್ಳಿ** – ಪುರುಲೆ, ಚಿಕ್ಕ ಕಟ್ಟಿಗೆ (ನೀನೊಲ್ಲದೊಡೆ ಒಂದು ದೊಡ್ಡ ಪೊಱೆ ಪುಳ್ಳನೀವೆಂ ಅದರ್ಕೆ ನೀನಿದಂ .. .. ಈವುದು ಎನೆ ಆ ರಜಕಂ ಕುಡೆ: **ಧರ್ಮಪ,** ೯. ೯)

**ಪುಳ್ಳಿವೇಡ** – ಕ್ಷುದ್ರ ಬೇಡ (ಪುಳ್ಳಿವೇಡನೆಂಬುದು ಎನಗಪ್ಪುದು ಸಾಯಲಮ್ಮದವರ್ ಇನ್ನೆನಗಾಂತು ಸಾವರ್: **ಹರಿವಂಶ,** ೯. ೧೬ ವ)

**ಪುಟಿ** – ಹುಳಿತುಹೋಗು (ಬೆನ್ನೊಳ್ ನಾಳಿಬಿರ್ದು ಕಜಿಮೆಯಾಗಿ ಪುಟಿತು ನಮೆದು ಸತ್ತು ಮತ್ತಮಾ ಪೊಟಿಲೊಳ್ ಪೇಪಂದಿಯಾಗಿ ಪುಟ್ಟಿ: **ವಡ್ಡಾರಾ,** ಪು ೯, ಸಾ ೨)

**ಪುಟಿಯಿಸು** – ಹುಳಬಿದ್ದು ಹಾಳಾಗು (ಆ ಮಹಾನುಭಾವೆಯ ತನುವುಂ .. .. ಕೊಳೆದು ಪುಟಿಯಿಸಿ ಪೋಪುದುಂ: **ಕರ್ಣನೇಮಿ,** ೬. ೮೩ ವ)

**ಪುಟಿಲ್** – [ಪುಲಿನ] ಮಳಲು ದಿಣ್ಣೆ (ತಮ್ಮಿರ್ದ ಲತಾಗಾರದ ಪುಟಿಲೆಡೆಯಂ ಸೀತಾ ರಮಣಿಗೆ ಸುಟ್ಟಿ ತೋಜಿದಂ ರಘುವೀರಂ: **ಪಂಪರಾ,** ೧೫. ೨೪); ತೋಪು, ಉದ್ಯಾನವನ (ಪುಟಿಲೊಳಗೆ ಸುಳಿವುದು ಉಪವನಪವನಂ: **ಆದಿಪು,** ೬. ೧೦೧)

**ಪುಟುಕ** – ಕ್ಷುಲ್ಲಕ ವ್ಯಕ್ತಿ (ಪರನೃಪರನಲ್ಲದೆ ಈ ಪುಟುಕರನ್ ಇಜಿವುದೆ ಮದ್ಭುಜಾಸಿಯಿದು: **ಯಶೋಧಚ,** ೨. ೫೪)

**ಪುಟುಕು** – ಹುಳುಕು, ಬೊಬ್ಬೆ (ಸುಯ್ವೆಂಕೆಯಿಂ ಕೋಮಲಾಧರ ಬಿಂಬಂ ಪಟುಕೆಟ್ಟು ಪಕ್ಷ್ಮಪುಟಮಂ ಬೆಚ್ಚಂತೆ ಕನ್ನುಚ್ಚೆ: **ಕುಸುಮಾಕಾ,** ೧೦.೧೮)

**ಪುಟು ಪತ್ತು** – ಹುಳು ಹಿಡಿ (ಅದರಡಗು ಮುಗ್ಗಿ ಪುಟು ಪತ್ತಿದೊಡೆ ಆಜಲ್ ಪರಪೆ ಕಾಗೆಯುಂ ನಾಯುಂ ಮುಟಿದುದನೆ ಶುದ್ಧಮಂ ಮಾಟ್ಪುದು: **ಯಶೋಧಚ,** ೩. ೫೮)

**ಪುಟುಬೆಜಟಿ** – ಹುಳುಗಳಿರುವ ಬೆರಣಿ (ಪುಟುಬೆರಟಿಯೊಳಗಣ ಪುಟುವಂ ಸಾರ್ರಿಸುವಲ್ಲಿ ದಯೆಯಿಂದ ಆರೈಚುದೆನಿಪ್ಪ ಮನೆಗಳಲ್ಲವೆ ತೀರ್ಥಂ: **ಸಮಯಪ,** ೬. ೯೯)

**ಪುಟುವಗೆ** – [ಪುಟು+ಬಗೆ] ಕೆಟ್ಟ ಯೋಚನೆ (ಬಗೆಯದಿರೆಯಿರೆ ಕೃತಾಂತಂ ಬಗೆದಂ ಪೆಜತೊಂದನಾರ ಪುಟುವಗೆಯುಮವಂ ಬಗೆಯದಿರೆ ನಿಮಿರ್ಗುಂ ಆತಂ ಬಗೆದೊಡೆ ಬಗೆದಂತೆ ಬಗೆದ ಬಗೆ ನಿಮಿರ್ದಪುದೇ: **ಶಾಂತಿಪು,** ೭. ೧೧)

**ಪುಟುವಚ್ಚೆ** – ಹುಳುವಿನ ರೆಕ್ಕೆ (ಸೂಡಿದ ಉತ್ಪಳದಳಮಾಲೆ ತಾಳ್ದ ಪುಟುವಚ್ಚೆಯ ಬೊಟ್ಟು: **ಶಬರಶಂ,** ೩. ೯)

**ಪುಟುವಾನಸ** – ಕ್ಷುದ್ರ ವ್ಯಕ್ತಿ (ಚಾಗದೊಳ್ಪಿನಮಚ್ಚೊತ್ತದೆ ಮಾಣ್ದು ಬಾಟ್ವ ಪುಟುವಾನಸನೆಂಬನಜಾಂಡಮೆಂಬುದೊಂದತ್ತಿಯ ಪಣ್ಣೊಳೊರ್ಪ ಪುಟುವಲ್ಲದೆ ಮಾನಸನೇ: **ಪಂಪಭಾ,** ೫. ೭೫)

**ಪುಟ್ಗೆ** – ಹುಗ್ಗಿ, ಪೊಂಗಲು (ಪುಟ್ಗೆಯೆಂದು ಉರ್ದು ತೊವರಿ ಹೆಸಱು ಮೊದಲಾದವನಿಕ್ಕಿ ಅಟ್ಟ ಕೂಟ್: **ಶಬ್ದಮದ,** ೩೩ ವೃತ್ತಿ, ಒಂದರ್ಥಕ್ಕೆ, ೮೫)

**ಪುಟ್ಗು** – ಸುಟ್ಟು ಹೋಗು (ಪೊಗೆ ಪುಗೆ ಕಣ್ಣಂ ಸಿಂಗಂಗಳಳುರೆ ಗರ್ಜಿಸಿ ಲಂಗಿಸಿ ಪುಡುಪುಡನೆ ಪುಟ್ಗೆಸತ್ತುವು ಪಲವುಂ: **ಪಂಪಭಾ,** ೫. ೯೨)

**ಪೂ** – ಹೂ (ಕಂಪಿಲ್ಲದ ಪೂ ಸುಪುತ್ರನಿಲ್ಲದ ಭವನಂ: **ಅಜಿತಪು,** ೬. ೯೨); ಹೂ ಬಿಡು (ಕನ್ನಡಮೆನಿಪ್ಪಾ ನಾಡು ಚೆಲ್ವಾಯ್ತು ಮೆಲ್ಲೆಲರಿಂ ಪೂತ ಕೊಳಂಗಳಿಂ ಕೆಱೆಗಳಿಂ ಕಾಲೂರ್ಗಳಿಂ ಕೆಯ್ಗಳಿಂ: **ಕಬ್ಬಿಗಕಾ,** ೧೮)

**ಪೂಗ** – ಸಮೂಹ (ಪೂಗಂ ವ್ರಜಮುಂ ಕೌಂಗುಂ: **ಅಭಿಧಾವ,** ೩. ೧. ೫೧); ಅಡಕೆ (ಅತಿಲಲಿತ ಪೂಗಭೂಜಾತಂ ತಾಂಬೂಲಲತೆಗೆ ಎಂಬವೊಲ್ ಸಮಲೀಲಂ ನಿಜತನಯನೆನ್ನ ತನುಜೆಗೆ ತಕ್ಕಂ: **ಆದಿಪು,** ೪. ೨೮)

**ಪೂಗಣೆಯ** – ಹೂಬಾಣದವನು, ಮನ್ಮಥ (ಮಿಸುಪ ಕೊಸಗಿನ ಚೆಲ್ವೇಂ ಪುಟ್ಟಿಸಿದುದೊ ಪೊಸಸಿರಿಗೆ ಎಱವೆಟ್ಟಿನೆ ಪೂಗಣೆಯನಿರ್ಪ ನೆಲೆಮಾಡದವೋಲ್: **ಕಬ್ಬಿಗಕಾ,** ೮೬)

**ಪೂಗವನ** – ಅಡಕೆ ತೋಟ (ನಾಗ ನಕ್ತಮಾಲವನದ ಪೂಗವನ ತಮಾಲವನದ ಲೀಲೆ ಕರಮೆ ಕಣ್ಗೆವರ್ಕು: **ಅಜಿತಪು,** ೧. ೮)

**ಪೂಗೀಫಲ** – ಅಡಕೆ [ಕಾಯಿ] (ಅಡಪವಳ್ಳಂ ನೀಡಿದ ಆರ್ದ್ರ ಪೂಗೀಫಲಂಗಳುಮಂ ಕರ್ಪೂರ ನಾಗವಲ್ಲೀ ಧವಲ ಲಲಿತಂಗಳುಮಂ: **ಸುಕುಮಾಚ,** ೧೧. ೩೨ ವ)

**ಪೂಗುಡಿ** – ಹೂವಿನ ಕೊನೆ, ಹೂಗೊಂಚಲು (ಎಳಲತೆ ಮಾಧವೀಲತೆಯ ಪೂಗುಡಿಯೊಳ್ ಪೆಣೆದಂತೆ: **ಅನಂತಪು,** ೪. ೮೦)

**ಪೂಗೊಳ** – ಹೂವುಗಳಿಂದ ಕೂಡಿದ ಕೊಳ (ಬೆಳೆದೆಱಗಿರ್ದ ಕೆಯ್ವೊಲನೆ ಕೆಯ್ವೊಲನಂ ಬಳಸಿರ್ದ ಪೂತ ಪೂಗೊಳಗಳೆ ಪೂತ ಪೂಗೊಳಗಳಂ ಬಳಸಿರ್ದ ವಿಚಿತ್ರನಂದನಾವಳಿಗಳೆ ನಂದನಾವಳಿಗಳಂ ಬಳಸಿರ್ದ ಮದಾಳಿಸಂಕುಲಂಗಳೆ ವಿಷಯಾಂಗನಾ ಲುಳಿತಕುಂತಳದಂತೆವೊಲ್ ಒಪ್ಪಿ ತೋಱುಗುಂ: **ಪಂಪಭಾ,** ೧. ೫೩)

**ಪೂಜೆ** – ಆರಾಧನೆ, ಗೌರವ [ಕವಿತೆಯೊಳಾಸೆಗೆಯ್ವ ಫಲಮಾವುದೊ ಪೂಜೆ ನೆಗಟ್ತೆ ಲಾಭಂ ಎಂಬವೆ ವಲಂ: **ಆದಿಪು,** ೧. ೩೬)

**ಪೂಜೆಗ** – ಸತ್ವಹೀನ (ಚಾಗಿಯಂ ಲುಬ್ಧನೆಂಬರ್ ಭೋಗಿಯಪ್ಪನಂ ಪೂಜೆಗನೆಂಬರ್ ಸೌಭಾಗ್ಯಮುಳ್ಳವನಂ ಪಾಣ್ಬನೆಂಬರ್: **ಪಂಚತಂತ್ರ,** ೧೦೪ ವ)

**ಪೂಜೋಪಲಂಭನ** – [ಜೈನ] ಗರ್ಭಾನ್ವಯಕ್ರಿಯೆಗಳಲ್ಲಿ ಒಂದು, ಗುರುವಿನ ಮೂಲಕ ಧರ್ಮವನ್ನು ತಿಳಿಯುವುದು (ಆಧಾನ ಪ್ರೀತಿ ಸುಪ್ರೀತಿ ಧೃತಿ ಮೋದ ಪ್ರಿಯೋದ್ಭವ ನಾಮಕರ್ಮ .. .. ಇಂದ್ರಾಭಿಷೇಕ ಗುರು ಪೂಜೋಪಲಂಭನ .. .. ನಿರ್ವೃತಿಯೆಂಬ ಅಯ್ವತ್ತುಮೂಱು ಗರ್ಭಾದಿ ನಿರ್ವಾಣಪರ್ಯಂತಂಗಳಪ್ಪ ಗರ್ಭಾನ್ವಯಕ್ರಿಯೆಗಳುಂ: **ಆದಿಪು,** ೧೫. ೧೫ ವ)

**ಪೂಡು** – ಜೋಡಿಸು, ಹೂಡು (ತನಗೆ ವಿನಾಯಕಂ ದಯೆಯಿನಿತ್ತ ಜಯಾಸ್ತ್ರಮಂ ಉರ್ಚಿಕೊಂಡು ಭೋಂಕೆನೆ ಶರಾಸನದೊಳಾಂತು ಅದನಾಗಡೆ ಪೂಡಿ .. .. ಎಚ್ಚೊಡೆ: **ಪಂಪಭಾ,** ೧೨. ೧೬೮); ರಥಕ್ಕೆ ಕುದುರೆಯನ್ನು ಕಟ್ಟು (ದಿವ್ಯಸಂಭವಂಗಳಪ್ಪ ಶ್ವೇತಾಶ್ವಂಗಳೊಳ್ ಪೂಡಿದ ದಿವ್ಯರಥಮುಮಂ ದಧೀಚಿಗಂಡಸ್ಥಮಪ್ಪ ಗಾಂಡೀವಮೆಂಬ ಬಿಲ್ಲುಮಂ.. ..ಕೆಯ್ಕೊಂಡು: **ಪಂಪಭಾ,** ೫. ೭೭ ವ)

**ಪೂಣ್** – ಪ್ರತಿಜ್ಞೆ ಮಾಡು (ಅಖಂಡಿತಮತಿ ಪಂಡಿತೆಯುಂ ತನ್ನ ಪೂಣ್ದು ಪೋದ ಕಜ್ಜಮಂ ಸಾಧ್ಯಂ ಮಾಡಿ ಬಂದು: **ಆದಿಪು,** ೮೪ ವ); ನಿಯಮಿಸು (ಮೊದಲೊಳ್ ಪೂಣ್ದೊಂದು ಕಜ್ಜಕ್ಕೆ ಅಧಿಪನ ಬೆಸದಿಂ ಬಂದು ಬೇಱೊಂದು ಕಜ್ಜಕ್ಕೆ ಇದಂ ಈಗಳ್ ಗೊಟ್ಟಿಗೆಯ್ವಂದನುಚಿತಂ: **ಶಾಂತಿಪು,** ೨. ೮೦); ಹೂಳು (ಬಾಣದಿಂ ಅಸುಹೃದ್ಬಲಮಂ ಕಾಣಲ್ಕೆ ಅಣಂ ಆಗದೆಂಬಿನಂ ಪೂಣ್ದು: **ಕರ್ಣನೇಮಿ,** ೧. ೧೧೬)

**ಪೂಣಿಕೆ** – ಪ್ರತಿಜ್ಞೆ (ವಿದಗ್ಧತೆಯಿಲ್ಲ ಬದ್ದಿನೊಳ್ ಪೂಣಿಕೆಯಿಲ್ಲ; **ಹರಿವಂಶ,** ೩. ೬೧)

**ಪೂಣಿಗ** – ಶಪಥ ಮಾಡಿ ಬಾಣ ಬಿಡುವವನು, ಹಟಗಾರ (ವಯಲ್ಗೆ ಮೆಯ್ದೋಱುವೆವೆಂಬ ಪೂಣಿಗರ್ ಅಡಂಗಿ ಕುನುಂಗಿ ಸಿಡಿಲ್ದು ಜೋಲ್ದು ಕಾಯ್ಪಾಱ ನಭಕ್ಕೆ ಪಾಱಿದುದು: **ಪಂಪಭಾ,** ೧. ೧೧೯)

**ಪೂಣಿಗತನ** – ದೃಢ ವಿಚಾರ (ಕೆಂಗೋಲ್ಮಸಗಿದ ಸಿಂಹಕ್ಕೆ ಪೂಣಿಗತನದಿಂದ ಏನಾನುಮೊಂದಂ ನುಡಿದೆನಪ್ಪೊಡೆ ಎನ್ನನೆ ಮುನ್ನಂ ಆಪೋಶನಂಗೊಳ್ಗುಂ: **ಪಂಚತಂತ್ರ,** ೨೩೦ ವ)

**ಪೂಣಿಸು** – ಬಿಲ್ಲಿಗೆ ಬಾಣ ಹೂಡು (ಅದೇಂ ತಿರವೋ ಪೂಣಿಸಿದ ಮುಷ್ಟಿ ಭೂರಿಶ್ರವನಾ: **ಪಂಪಭಾ,** ೧೧. ೧೪೧; ಆಜ್ಞೆಗೈ (ಬೆಸನನಿರ್ಮೆ ಕೇಳದಂತ ಪೂಣಿಸಿ ಕಟಿಪಿ: **ಆದಿಪು,** ೧೩. ೮೦ ವ); ಶಪಥ ಮಾಡು (ಎನ್ನನೆ ನಚ್ಚಿದಂ ಅನುವರಕೆ ಎನ್ನನೆ ಪೂಣಿಸಿದಂ ಎನಗೆ ಎರಟ್ಟಿಂಡಮುಂ ಓರನ್ನರೆ: **ಪಂಪಭಾ,** ೧೦. ೧೨); ನಿಷ್ಕರ್ಷೆಯಾಗುವಂತೆ ಮಾಡು (ಎಂದವರ ದೇಶನಾಮಕುಲಗೋತ್ರಂಗಳಂ ನೆಱೆಯೆ ತಿಳಿಯೆ ಬಿನ್ನಪಂಗೆಯ್ದು ಭೃತ್ಯಭಾವಮಂ ಪೂಣಿಸಿ: **ಆದಿಪು,** ೧೩. ೪೧ ವ)

**ಪೂಣೆ ಪುಗು** – ನಿರ್ಧಾರದಿಂದ ನುಗ್ಗು (ಅರಾತಿಕಾಳಾನಳಂ .. .. ದಿವ್ಯಶರಾಸನಂಗಳಂ ಕೊಂಡು ಪೂಣೆ ಪುಗುವರಾತಿಬಲಮಂ ಮಾರ್ಕೊಂಡು ತೆಗೆನೆಱೆದಿಸೆ: **ಪಂಪಭಾ,** ೩. ೬೯ ವ)

**ಪೂಣ್ಕೆ** – ಪ್ರತಿಜ್ಞೆ (ಕೊಂಡು ಪೋಪೆಂ ಮದೀಯ ಪುರಕ್ಕೆ ಎನ್ನಯ ಪೂಣ್ಕೆ ತೀರ್ಗುಂ: **ಪಂಪರಾ,** ೪. ೧೦೫): ದೃಢತೆ (ತುದಿಯೆಯ್ದಿತ್ತೆನಗೆನ್ನ ಪೂಣ್ಕೆ ನಿನಗಂ ಪುಣ್ಯೋದಯಂ ಸಾರ್ಚಿ ಬಂದುದು: **ಆದಿಪು,** ೪. ೧೮)

**ಪೂಣ್ಕೆಗೆಯ್** – ಶಪಥಗೈ (ತದೀಯ ಪ್ರಿಯಮಂ ನಿಮಿರ್ಚಡೊಡನೆ ಮ್ನಮಿತ್ರತ್ವಮೇ ಬಾಟ್ಟಿ ತತ್ಸತಿಯಂ ತಂದೆಪೆನೆಂದು ಮಂತ್ರಿತನಯಂತಾಂ ಪೂಣ್ಕೆಗೆಯ್ವಾಗಳ್ ಉಣ್ಮಿತು .. .. ಭೇರೀಗಭೀರಸ್ವನಂ: **ಕುಸುಮಾಕಾ,** ೧೦. ೧೦೪)

**ಪೂತಕ್ರತಾಯಿ** – ಇಂದ್ರನ ಹೆಂಡತಿ, ಶಚೀದೇವಿ (ಮಾಯಾಶಿಶುವಂ ತಂದಿಟ್ಟಾಯೆಡೆಯೊಳ್ ಬೇಗನೆತ್ತಿಕೊಂಡಳ್ ಭುವನತ್ರಾಯಿಯಂ ಆ ಜಿನಶಿಶುವಂ ತಾಯಿಲೆ ಪೂತತ್ರತಾಯಿ ದಾದಿಯ ತೆಱದಿಂ: **ವರ್ಧಮಾಪು,** ೧೨. ೮)

**ಪೂತ** – ಹೂಬಿಟ್ಟ (ಮದಾಳಿನಾದದಿನಿದು ಪಾಡಿ ಪೂತ ಸೆಳೆಗೊಂಬುಗಳಾಟದಿನಾಡಿ ನಮ್ಮನಿಂದಿದಿರ್ಗೊಳಲ್ ಇರ್ಪವೊಲ್ ಸೊಗಯಿಸಿರ್ದುದು: **ಆದಿಪು,** ೯. ೧೧೩); ಪವಿತ್ರ (ಎನಿತಾನುಂ ತೆಱದಿಂದ ಇಂಬಿನೆ ಸೋದಿಸಿ ಸೌಖ್ಯಮಾಗಿ ಅಡುವುದಱೆಂ .. .. ಪೂತಂ ಉಣ್ಬುವಲ್ಲಿ ಕುಲೀನರ್: **ಸಮಯಪ,** ೬. ೧೦೧)

**ಪೂತಗ್ರಾವ** – ಪವಿತ್ರ ಶಿಲೆ (ತುದಿಯೊಳ್ ಪಾಂಡುಕವೆಸೆದಿರ್ದುದೊ ಜಿನಪತಿಸವನವಾರಿಪೂತಗ್ರಾವಂ: **ಆದಿಪು,** ೨. ೨೯)

**ಪೂತಿ** – ಕೆಟ್ಟ ವಾಸನೆ (ಉದ್ಧತ ಪೂತಿ ಗಂಧ ಸುವಿಧಾರಂ ರೌದ್ರವಾಯ್ತು .. .. ಪಕ್ಕಣಂ: **ತ್ರಿಷಷ್ಟಿಪು,** ೨೭. ೩೩)

**ಪೂತಿಗಂಧ** – ಕೆಟ್ಟ ವಾಸನೆ[ಯುಳ್ಳ] (ಪರಿಗಳಿತ ಪೂತಿಗಂಧರ್ ಖರ ಕಾಕ ಸೃಗಾಲ ಕರಭ ಕೌಶಿಕ ವೃಕ ವಾನರ ವಿಷದಂಷ್ಟ್ರೋತ್ಕರ ಕುರ್ಕುರ ಕೀಟಕ ಭಲ್ಲನಿಕರ ನಿಷ್ಠುರನಿನದರ್: **ಶಾಂತೀಶ್ವಪು,** ೯. ೧೦೬)

**ಪೂತಿಯ ಬೆಕ್ಕು** – ಪುನುಗು ಬೆಕ್ಕು (ಚೇಳ್ ಇಲಿ ಪೂತಿಯ ಬೆಕ್ಕು ಘೇರವಂ ಕರಿ ಕಳಭಂ ವೃಕಂ ಚಮರಿ .. .. ಮೊದಲಾದನೇಕ ಮೃಗಮಿರ್ಪುವು: **ತ್ರಿಷಷ್ಟಿಪು,** ೨೭. ೨೩)

**ಪೂತಿವೆಕ್ಕು** – ಪುನುಗು ಬೆಕ್ಕು (ಮರೆ ನರಿ ಪೂತಿವೆಕ್ಕು ನಕುಲಂ ಮರವಾವುಗಳೆಂಬಿವಾಗಳುಂ ಕೆರಮೆಸೆದಿರ್ಪಿನಂ ಮೆಱೆದುದಾ ವಿಪಿನಂ: **ಶಬಶಂವಿ,** ೩. ೩೪)

**ಪೂದಂದಲ್** – ಹೂ ಮಳೆ (ಪೆಣ್ದುಂಬಿಗಳ್ ಮುತ್ತುತ್ತುಂ ಮುಸುಱುತ್ತುಂ ಬರೆ ಬಂದುದಿಂದ್ರವನದಿಂ ಪುದಂದಲ್: **ಪಂಪಭಾ,** ೯. ೯೬)

**ಪೂದುಱುಂಬು** – ಹೂವಿರುವ ತುರುಬು, ಮುಡಿ (ಪೂದುಱುಂಬಿಗೆ ಮೇಗೆ ನೆಗೆದ ತುಂಬಿಗೊಡೆಯುಂ ಎತ್ತಿದ ಬೆಳ್ಗೊಡೆಯುಂ ಎಂಬ ಸವಡಿಗೊಡೆಯುಂ: **ಲೀಲಾವತಿ,** ೧. ೧೦೬ ವ)

**ಪೂದೊಡಂಬೆ** – ಹೂಗೊಂಚಲು, ಹೂವಿನ ದಿಂಡು (ಬಲ್ಮೊಲೆ ಪೂದೊಡಂಬೆಯಂತಿರೆ ಬನಮೆಯ್ದುವಂತೆಸೆಯೆ ಪೆಣ್ಬಡೆ ಬಂದಳದೊಂದು ಬಿಂಕದಿಂ .. .. ಅಂತು ವನಲಕ್ಷ್ಮಿ: **ರಾಜಶೇವಿ,** ೭. ೧೬ ಮತ್ತು ೧೬ ವ)

**ಪೂಪುಟಿಗೆ** – ಹೂಬುಟ್ಟಿ (ಭೂಪತಿಗೆ ಕೈಮುಗಿದು ಪೂಪುಟಿಗೆಯಂ ತೆಗೆದು ಹರುಷದಿಂ ನೋಡುತಿರೆ ಕರತಳಕೆ ನೀಡುತಿರೆ: **ರಾಜಶೇವಿ,** ೧೦. ೫೭ ರಗಳೆ)

**ಪೂಪುಣುಂಬು** – ಹೂಬಾಣ (ಅನಾದೇಶವ್ಯಂಜನಕ್ಕಂ ಸ್ವರಕ್ಕಂ ಕಿಱಿದೆಡೆಯೊಳ್ ವತ್ವಮಿಲ್ಲ; ಪ–ಪಲ್ಲಱೆಗುಟ್ಟಿದಂ, ಕೈಪಱೆಗುಟ್ಟಿಯಾಡಿದರ್, ಪೂಪುಣುಂಬಂ: **ಶಬ್ದಮದ,** ೭೭, ಪ್ರ. ೧೬)

**ಪೂಮಿಡಿ** – ಎಳೆಯ ಮಿಡಿಗಾಯಿ, ಕಸಗಟ್ಟೆ ಕಾಯಿ (ಮರ್ಮರಪತ್ರಂ ಅಂಬುತಳಮಂ ನಡುವಂತಿರೆ .. .. ಪೂಮಿಡಿಯ ಪೂವಿನ ಕಾಯ್ಗಳ ಕಯ್ದುವುಳ್ಕುಗುಂ: **ಶಾಂತಿಪು,** ೭. ೯೪)

**ಪೂರ** – ಪ್ರವಾಹ (ಬಿಡದೆ ಅಟಿಲ್ವ ಬಂಧುಜನದ ಒಟ್ಟುಡಿಯದ ಕಣ್ಣೀರ ಪೂರಂ ಆ ಪ್ರೇತಮಂ ಓಗಡಿಸದೆ ಸುಡುವುದು ಗಡಂ ಇನ್ನುಡುಗುವುದೀ ಶೋಕಮಂ ಸರೋಜದಳಾಯತಾಕ್ಷೀ: **ಪಂಪಭಾ,** ೨. ೨೮)

**ಪೂರಂಗವಿ** – ಪ್ರವಾಹ ಸುತ್ತುವರಿ (ಸಭೆಯೆಲ್ಲಂ ಹೊನ್ನ ನೀರಿಂದರೆ ಬಳಿದವೊಲಿರ್ಪ್ಪದೇಕೀ ಜಗದ್ವಲ್ಲಭನಂಗಚ್ಛಾಯೆ ಪೂರಂಗವಿದ ಪಸರದಿಂದೆ: **ಅನಂತಪು** ೧೦. ೩೪)

**ಪೂರಕ** – ಪ್ರಾಣಾಯಾಮದ ಒಂದು ಅಂಗ (ಕುಂಭಕ ಸಂರೇಚಕ ಪೂರಕಂ ಪರಿಮಳೋನ್ಮಿಶ್ರಂ .. .. ನಂಜಿನ ಸುಯ್ಯ ಗಾಳಿ ನೃಪನಂ ಕೊಂದಿಕ್ಕಿತು: **ಶಾಂತಿಪು,** ೬. ೯೩)

**ಪೂರಾಂಬು** – ಪ್ರವಾಹದ ನೀರು ನೊರೆವುಲ್ಲಂ ಮೇದು ಎರಟ್ಬಿಣ್ ತುಮುಟಿ ಕುಡಿದು ಪೂರಾಂಬುವಂ .. .. ಮಾಹಿಷಿಸಂತತಿ ವಿಪಿನಭವಂ ಕಣ್ಗಗುರ್ವಾಯ್ತು ಕಾರೊಳ್: **ಚಂದ್ರಪ್ರಪು,** ೪. ೪೮)

**ಪೂರಿಗೆ** – ಒಂದು ಸಿಹಿ ಭಕ್ಷ್ಯ (ಪುರವರೇಶನ ಮಾಡಿದ ಚೈತ್ಯಕ್ಕಿಟ್ಟಿಗೆಗಳ್ ಬರೆ ನೋಡಿ ಕಲ್ಲುರಿಗನೊಯ್ಯನೆ ಪೂರಿಗೆಗೊಟ್ಟೈದಾಱನೆ ಕೊಂಡು: **ಆದಿಪು,** ೫. ೧೯)

**ಪೂರಿಸು** – ತುಂಬು (ಆರ ಮೃದೂಕ್ತಿಯಂ ಬಯಸಿ ಕೇಳ್ದು ತನೂಜ ಮದೀಯಕರ್ಣದೊಳ್ ಪೂರಿಪೆನಿಂ ರಸಾಯನಮಂ: **ಚಂದ್ರಪ್ರಪು,** ೫. ೧೭); ಶಂಖ ಊದು

(ಮದೀಯ ಶಂಖಮನಿದನಾರ್ ಪೂರಿಸಿದರೆಂದು ಶಂಖನುದಾರಂ ಬೆಸಗೊಂಡಂ: **ಕರ್ಣನೇಮಿ,** ೧೦. ೧೦೭)

**ಪೂರ್ಣಪಾತ್ರ –** ಉಡುಗೊರೆ (ಅರಸಂ .. .. ಸರಭಸಂ ಒಲವಿಂ ಸಚಿವೋತ್ತರೀಯಮಂ ಪೂರ್ಣಪಾತ್ರಂಮೆಂದು ಎಟೆಕೊಂಡಂ: **ಕಾದಂಸಂ,** ೨. ೨೫)

**ಪೂರ್ಣಶಶಾಂಕ –** ಪೂರ್ಣಚಂದ್ರ (ಪೆತ್ತುದು ಪೂರ್ಣಶಶಾಂಕರ ಮೊತ್ತಮಂ ಎನೆ ಮಧುಪಮಿಳಿತಸಿತಸರಸಿಜದೊಂದು ಒತ್ತಂಬದಿಂದಂ ಎನಸುಂ ಬಿತ್ತರಿಸುತ್ತಿರ್ದುದು ಆ ಸರೋರುಹಷಂಡಂ: **ಶಾಂತೀಶ್ವಪು,** ೧೦. ೧೦೦)

**ಪೂರ್ವಕೋಟಿ –** [ಜೈನ] ಒಂದು ಕೋಟಿ 'ಪೂರ್ವ'ಗಳಷ್ಟು ಕಾಲಾವಧಿ (ಪೂರ್ವಕೋಟ್ಯಾಯತಾಯುರ್ಮಿತಿವೃತ್ತಂ ಷಡ್ವಿಧೇತಿಪ್ರತತಿನಿಯತಂ ಐನೂಱು ಬಿಲ್ ಮರ್ತ್ಯಮೂರ್ತ್ಯುನ್ನತಿಯೆಂದುಂ ತನ್ನೊಳೆಂಬೀ ಸ್ತುತಿವಡೆದುದು ಸೌಖ್ಯಾವಗಾಹಂ ವಿದೇಹಂ; **ಚಂದ್ರಪ್ರಪು,** ೧. ೭೬)

**ಪೂರ್ವಧರ –** [ಜೈನ] 'ಚತುರ್ದಶ ಪೂರ್ವ'ಗಳನ್ನು ಚೆನ್ನಾಗಿ ಬಲ್ಲವನು (ಚತುಶ್ಶ್ರುತ ಪ್ರಮಿತನಿಖಿಳ ಪೂರ್ವಧರನುಂ ಪನ್ನಿರ್ಛಾಸಿರ ಪ್ರಮಾಣದಕ್ಷಶಿಕ್ಷಕರುಂ: **ಕರ್ಣನೇಮಿ,** ೧೪. ೧೪೩ ವ)

**ಪೂರ್ವಪಕ್ಷ –** ಪ್ರಮೇಯವನ್ನೆದುರಿಸಲು ಹೂಡುವ ಯುಕ್ತಿ (ಉಪಪತ್ತಿಯುಕ್ತಂ ಇದನಿಂ ಕಯ್ಕೊಳ್ ನಿನ್ನ ತಂದೆಯೆಂದುದನೆನೆ ಭೂಮಿಪನೆಂದಂ ನಿಮ್ಮಯ ಪೂರ್ವಪಕ್ಷಮೆಮಗಾದುದೇ ವಲಂ ಸಿದ್ಧಾಂತಂ: **ಗದಾಯು,** ೪. ೮)

**ಪೂರ್ವೇತರ –** ಪೂರ್ವವಲ್ಲದ, ಪಶ್ಚಿಮ (ತಿಗ್ಮಾಂಶುವೆಂದೆಂಬ ನವೀನಸ್ವರ್ಣಸ್ತಿಂಡಮಂ .. .. ಪೂರ್ವೇತರಶರಧಿಯೊಳ್ ಕಾಲನೆಂಬ ಓಜಂ ಅಳ್ದಲ್ ಜನಿಸುತ್ತ ಉರ್ಬೇಳ್ದುದೋ ಕಾರ್ಬೊಗೆಯೆನೆ ದೆಸೆದೀವಿತ್ತು ಘೋರಾಂಧಕಾರಂ: **ರಾಜಶೇವಿ,** ೧೧. ೧೮)

**ಪೂರ್ವೋಕ್ತ –** ಹಿಂದೆ ಹೇಳಿದ (ಪೂರ್ವೋಕ್ತಸ್ಥಿತಿಯೊಳ್ ವಜ್ರಕವಾಟೋದ್ಘಾಟನಂಗೆಯ್ದು: **ಶಾಂತಿಪು,** ೧೧. ೬೭ ವ)

**ಪೂರ್ವೋತ್ತರಾಶೆ –** ಈಶಾನ್ಯ ದಿಕ್ಕು (ಅಂತು ಬಂದು ಪಾಂಡುಕವನದ ಪೂರ್ವೋತ್ತರಾಶಾಮುಖ ನಿವಾಸಿಯಾಗಿ: **ಆದಿಪು,** ೭. ೭೩ ವ)

**ಪೂರ್ವೋದಿತ –** ಪೂರ್ವೋಕ್ತ (ಪುನರುಕ್ತಮೆಂಬುದಕ್ಕುಂ ನೆನೆಯದೆ ಪೂರ್ವೋದಿತಾರ್ಥಪದಪದ್ಧತಿಗೊಂದಿನಿಸುಂ ವಿಶೇಷಮಿಲ್ಲದೆ ಜನಿಯಿಸಿದ ಪದಾರ್ಥಂ: **ಕವಿರಾಮಾ,** ೧. ೮೪)

**ಪೂರ್ವೋಪಾರ್ಜಿತ –** ಹಿಂದೆ ಸಂಪಾದಿಸಿದ (ನೀಳನೆಂಬ ಮಾದೆಗಂಗಂ ಕೌಶಾಂಬಿಯೆಂಬ ಮಾದೆಂಗಿಗಂ ಮಗಳಾಗಿ ಪೂರ್ವೋಪಾರ್ಜಿತ ಶುಭಾನುಪೂರ್ವಿನಾಮ ಕರ್ಮೋರ್ವೀರುಹ ಪರಿಪಾಕಫಳಮನನುಭವಿಸುತ್ತುಂ: **ಸುಕುಮಾಚ,** ೫. ೨೧ ವ)

**ಪೂಲಿ –** ಒಂದು ಸಸ್ಯ (ಪೂಲಿಯ ಪಣ್ಣಂತೆ ಪೊಱವಾಯ್ವ ಕೀವುಂ ಮುದುಕರಂತೆ ಲೋಳೆ ಸುರಿವ ಬಾಯುಂ: **ಧರ್ಮಾಮೃ,** ೪. ೪೭ ವ); ವಸ್ತ್ರವಿಶೇಷ (ಪೊಸ ಪಸಗೆಯ ಮಂಜಿಟಿಗೆಯ ಮಿಸುಗುವ ದೋರಿಯದ ಪಟೆಯ ಪುಲ್ಲಿಯ ಸೊಂಪಂ ಪಸರಿಸಿದ ಪಕ್ಕರಕ್ಕೆಗಳೆಸೆದಿರ್ದುವು: **ಕಬ್ಬಿಗಕಾ,** ೨೦೨)

**ಪೂವಲಿ –** ಹೂಗಳಿಂದ ಮಾಡಿದ ಅಲಂಕಾರ (ಪಸರಿಸೆ ಪೂವಲಿಗಳ್ ಬಾಜಿಸೆ ಬದ್ದವಣಂಗಳ್ ಒಡನೆ ಮಿಳ್ಳಿಸೆ ಗುಡಿಗಳ್ ದೆಸೆಬಿದ್ದವಾದೊಡೆ ತರುಣಿಯರ್ ಒಸಗೆಯ ಮೇಲೆ ಒಸಗೆಯಾದುದು ಅಂದು ಅರಮನೆಯೊಳ್: **ಪಂಪರಾ,** ೩. ೧೩೪); ರಂಗೋಲಿ (ನೆಲೆಮಾಡಂಗಳೊಳೋಳಿವಟ್ಟ ಗುಡಿಗಳ್ ಗಂಧಾಂಬುವಿಂದಾದ ಪೂವಲಿಯಿಂ ಚೆಲ್ವೆಸೆದಿರ್ದ ಬೀದಿಗಳ್: **ಆದಿಪು,** ೭. ೧೧೩); ಹೂವನ್ನು ಚೆಲ್ಲುವುದು (ರವಿಮಥನುತ್ಸವ ಧ್ವಜನಿವಹಂ ತುಡುಕಿದವು ಕೆದಱಿದುವು ಪೂವಲಿಗಳ್ .. .. ಬದ್ದವಣಂ ಬಾಜಿಸಿದುವು ಒಡನೆ ಮಿಥಿಳಾಪುರದೊಳ್: **ಪಂಪರಾ,** ೬. ೪೭)

**ಪೂವಸೆ –** ಹೂವಿನ ಹಾಸು (ಲತಾಂಗಿ ಪೂವಸೆಯೊಳ್ ಮೆಯ್ಯನೀಡಾಡಿದಳ್: **ಕುಸುಮಾಕಾ,** ೧೩. ೦೪)

**ಪೂವಿನಂಬು –** ಹೂವಿನ ಬಾಣ (ಆಗಳ್ ಆಱುಂ ಋತುಗಳ ಪೂಗಳಂ ಒಂದುಮಾಡಿ ಪೂವಿನಂಬುಗಳಂ ಪಣ್ಣಲೆಂದು ಕಾಮದೇವಂ ಮಾಡಿದ ಓಜನ ಸಾಲೆಯಿರ್ಪಂತಿರ್ಪ ಪೂವಿನ ಸಂತೆಯೊಳ್: **ಪಂಪಭಾ,** ೪. ೮೦ ವ)

**ಪೂವಿನ ಬಾಡು –** ಹೂವಿನ ತರಕಾರಿ (ಪೂವಿನ ಬಾಡುಗಳಂ ಕ್ಷೀರಾವನಿಜಾತದ ಫಲಂಗಳಂ ಬಳ್ಳಿಯುಮಂ ಶ್ರಾವಕನಪ್ಪಂಗಾಗದು: **ಸಮಯಪ,** ೬. ೮)

**ಪೂವಿಲ್ಲ –** ಮನ್ಮಥ (ಪುಣ್ಣಿಲ್ಲದೆಯುಂ ಪೂವಿಲ್ಲನ ಶರಹತಿಯಿಂ ನೀವನೆ ತಳೆದಪುದಿದೆನ್ನ ಹೃದಯಂ: **ಪಾರ್ಶ್ವನಾಪು,** ೧೧. ೬೦)

**ಪೂವೆಂಚೆ –** ಹೂಗೊಳ (ಪೂವೆಂಚೆಯಿಂ ಪೊಱಮಟ್ಟಂಚರಮಂ ಉಡುಗದೆ ಪರಿದು ಮುತ್ತುವ ಮತ್ತಮರಾಳಂಗಳುಮಂ: **ಲೀಲಾವತಿ,** ೫. ౭౨ ವ)

**ಪೂಷಾಹ್ವಯ –** ಪೂಷನ್ ಎಂಬ ಹೆಸರಿನವನು, ಸೂರ್ಯ (ಪೂಷಾಹ್ವಯನ ಭಗನ ಪಲ್ಗಂಗಳಂ ಕಿತ್ತು ದೇವರ್ ಮತಿಗೆಟ್ಟಿರ್ದೋಡಲ್ ಆ ದಕ್ಷನ ತಲೆಗಡಿದು: **ತ್ರಿಷಷ್ಟಿಪು,** ೩೦. ೩೧)

**ಪೂಸರ –** ಹೂಬಾಣಗಳವನು, ಮನ್ಮಥ (ಬಲ್ಲೆಯನಿಟ್ಟುಳಿಗೊಂಡು ಬೇಗದಿಂ ಕದಕದಪಂ ತೊಡರ್ಚಿಂ ಎಳೆದೇರನಂ ಓಡಿಪೆನೆಂದು ಪೂಸರಂ: **ಕಬ್ಬಿಗಕಾ,** ಪರಿಷತ್ತು ೧೫೩)

**ಪೂಸು –** ಸವರು, ಲೇಪಿಸು (ನಿಶೀಥಿಸ್ಥಾನದೊಳ್ ಮಣ್ಣನಾದರದಿಂದೊರ್ಮೆಯೆ ತಂದು ಪೂಸಲೊಡಂ .. .. ರುಜಾಪೀಡೆಗಳಂತೆ ಕಿಡುಗುಂ: **ಸಮಯಪ,** ೧. ೨೭); ನೈವೇದ್ಯ ಮಾಡು (ಭೂತನಿಕಾಯಕ್ಕೊಯ್ದು ಸರುಗಮಂ ಪೂಸಿದೊಡಂ .. .. ಘನಮಾಗದು ಬೆಳಸು ನಿಯತಂ: **ಸಮಯಪ,** ೯. ೪೦); ಹೂಸುಬಿಡು (ಪೂಸು–ವಿಲೇಪನೇ ಅಪಾನವಾಯೌ: **ಶಬ್ದಮದ,** ಧಾ ೭೦೦)

**ಪೂಸಿಕೊಳ್ –** ಲೇಪಿಸಿಕೊ (ಇದು ಪೀಲಿದು ಮೆಯ್ನೀರೆಂಬುದನಱಿಯದೆ ಮೆಯ್ಗೆ ಪೂಸಿಕೊಳ್ವುವು ಮಕ್ಕಳ್: **ಧರ್ಮಾಮೃ,** ೫. ೧೧೫)

**ಪೊಟಿಸ್ –** ಹೂತುಹೋಗು (ಈ ನೆಲದೊಳ್ ಇನಿತು ಕಾಲಮುಂ ಆನಿರ್ದೆಂ ಪೂಟ್ಟು ಲಿಂಗಮಪ್ಪೆಂ .. .. ಕಲ್ಗಳೆ ಮಾನಸರೊಳ್ ನುಡಿದು ಕನಸುದೋಱಿತ್ತೆಂಬರ್: **ಸಮಯಪ,** ೮. ೨೬); ಗುಂಡಿ ಮುಚ್ಚು; ಕವಿದುಕೊ

**ಪೃಚ್ಛನೆ** – [ಜೈನ] ಪಂಚವಿಧಸ್ವಾಧ್ಯಾಯಗಳಲ್ಲಿ ಒಂದು; ಶಬ್ದ–ಅರ್ಥಗಳ ಬಗ್ಗೆ ಪ್ರಶ್ನಿಸಿ ನಿರ್ಣಯ ಮಾಡಿಕೊಳ್ಳುವುದು (ಮುನಿಪತಿ ವಾಚನೆಯಿಂ ಪೃಚ್ಛನೆಯಿಂ ಅನುಪ್ರೇಕ್ಷೆಯಿಂ ತದಾಮ್ನಾಯದಿಂ ಒಯ್ಯನೆ ಧರ್ಮಕಥನದಿಂದಂ ವಿನುತಸ್ವಾಧ್ಯಾಯಮೆಂಬ ತಪಮಮಂ ತಳೆದಂ: **ಸುಕುಮಾಚ,** ೪. ೧೮)

**ಪೃಚ್ಛೆ** – ಪ್ರಶ್ನೆ (ಪರಮಹಂಸಂ ಬಂದು ಕುಳ್ಳಿರ್ದೊಡೆ ಇತ್ತು ಬಟಿಕ್ಕ ಅರ್ಘ್ಯಮಂ ಎಯ್ದೆ ನೀಂ ಎಮಗೆ ಪೇೞಿಂ ಸ್ವೇಚ್ಛೆಯಿಂ ಪೃಚ್ಛೆಯಂ: **ಸುಕುಮಾಚ,** ೩. ೬)

**ಪೃತನಾಜಾಳ** – ಸೇನಾಸಮೂಹ (ಉದ್ಭಟಭಟಪೃತನಾಜಾಳಮಂ ಚಿತ್ತದೊಳ್ ವೀರರಸಂ ಕೈಗಣ್ಮಿ ಪೊಣ್ಮುತ್ತಿರೆ ನಿಜಬಲಮಂ ನೋಡಿದಂ ಸಾರ್ವಭೌಮಂ: **ಆದಿಪು,** ೧೪. ೮೭)

**ಪೃತನಾಪತಿ** – ಸೇನಾಪತಿ (ಮುನ್ನಿನಂದದಿಂ ಪೃತನಾಪತಿ ತದೀಯ ಗುಹಾದ್ವಾರಮಂ ತೆಱೆದು ಮ್ಲೇಚ್ಛಖಂಡಮಂ ಉಂಡಿಗೆಸಾಧ್ಯಂ ಮಾಡಿ: **ಶಾಂತೀಶ್ವಪು,** ೧೨. ೮೮ ವ)

**ಪೃತನಾ[ನೆ]** – ಸೇನೆ (ಪತ್ತಿಯೆಂದುಂ ಸೇನೆಯೆಂದುಂ ಸೇನಾಮುಖಮೆಂದುಂ ಗುಲ್ಮಮೆಂದುಂ ವಾಹಿನಿಯೆಂದುಂ ಪೃತನೆಯೆಂದುಂ ಚಮುವೆಂದುಂ ಅನೀಕಿನಿಯೆಂದುಂ ಇಂತು ಎಂಟು ತೆಱದಿಂ ಪಡೆಗೆ **ಪೆಸರಕ್ಕುಂ:** ೧೩. ೪ ವ); ಒಂದು ಅಕ್ಷೌಹಿಣಿಯ ತೊಂಬತ್ತನೇ ಒಂದು ಭಾಗ (ಪೃತನೆಗಳ್ ಮೂಱೊಂದಿ ತೋಱೆ ಚಮೂ ಅದು ಮೂಱು ಅನೀಕಿನಿ ಪತ್ತು ಅನೀಕಿನಿ ಅಕ್ಷೌಹಿಣಿಯೆನಿಕುಂ: **ಅಭಿಧಾವ,** ೧. ೧೪, ೮)

**ಪೃಥಕ್** – ಬೇರೆ, ಪ್ರತ್ಯೇಕ (ಪೃಥಗ್ಜೀವರೆ ನಲ್ಲರೆಂದಱೆದೊಡೆ ಅಕ್ಕಟ ಧಾತ್ರನ ಮಾಟವಿಂತುಟೇ: **ಜಗನ್ನಾವಿ,** ೬. ೧೦೪)

**ಪೃಥಕ್ತ್ವವಿತರ್ಕವೀಚಾರ** – [ಜೈನ] ಎಂಟನೆಯ ಗುಣಸ್ಥಾನದಿಂದ ಹನ್ನೆರಡನೆಯ ಗುಣಸ್ಥಾನದ ಕೆಲವು ಭಾಗಗಳವರೆಗೆ ನಡೆಯುವ ಶುಕ್ಲಧ್ಯಾನ; ಪ್ರಥಮಶುಕ್ಲಧ್ಯಾನ ಪೃಥಕ್ತ್ವವಿತರ್ಕವಿಚಾರಮೆಂಬ ಮೊದಲ ಶುಕ್ಲಧ್ಯಾನದೊಳ್ ಸಮಾಹಿತಂ ಉಪಶಾಂತಗುಣಸ್ಥಾನದೊಳ್ ಪ್ರಾಣಪರಿತ್ಯಾಂಗಂಗೆಯ್ದು: **ಆದಿಪು,** ೬. ೩೪ ವ)

**ಪೃಥಗ್ಜನ** – ಸಾಮಾನ್ಯ ಮನುಷ್ಯ, ಪಾಮರ (ಪೃಥಗ್ಜನದಂತೆ ಉದಾತ್ತಚಿತ್ತಂ ಜನಪತಿ ಧೈರ್ಯಾಂಬುರಾಶಿ ಚಳಿಯಿಸಿದಪನೇ: **ಅಜಿತಪು,** ೧೦. ೪೮)

**ಪೃಥಗ್ಭಾವ** – ಬೇರೆ ಎಂಬ ಭಾವನೆ (ಅನೇಕಪ್ರಕಾರ ಕಪಟೋಪಾಯಂಗಳಿಂ ಅತಿಸ್ನೇಹಿತರೊಳ್ ಪೃಥಗ್ಭಾವಮಂ ಮಾಟ್ಪುದೇ ಭೇದಂ ಎಂಬುದು: **ಪಂಚತಂತ್ರ,** ೭೧ ವ)

**ಪೃಥಾಸುತರ್** – ಕುಂತಿಯ ಮಗ [ಮಕ್ಕಳು] (ನಿರ್ದೋಷಿಗಳೊಳ್ ಪೃಥಾಸುತರೊಳ್ ಇಂ ಮಗುೞ್ದುಂ ಮುದುವಾೞೆಂಬೆನೇ: **ಪಂಪಭಾ,** ೧೩. ೧೪)

**ಪೃಥಿವೀಶ್ವರ** – ಭೂಮಿಯ ಒಡೆಯ, ಒಡೆಯ (ಆ ಪೃಥಿವೀಶ್ವರಂ ಪಗಲ ತಿಂಗಳನಚ್ಚರಿವಟ್ಟು ನೋಡಿದಂ: **ಚಂದ್ರಪ್ರಪು,** ೯. ೬)

**ಪೃಥು** – ವಿಶಾಲವಾದ, ದೊಡ್ಡದಾದ (ಸುರೇಂದ್ರನ ಕುಲಿಶಾಯುಧಕುಲಮೆನಿಪ ಅನಂತ ಪೃಥು ಫಲದಿಂ ಎಸೆದುದೆನಸಂ ಪನಸಂ: **ಶಾಂತೀಶ್ವಪು,** ೧೦. ೯೫)

**ಪೃಥುಕ** – ಅವಲಕ್ಕಿ (ಪೃಥುಕಮೆನಲ್ ಅವಲಕ್ಕುಂ: **ಅಭಿಧಾವ,** ೧. ೧೬. ೧೧)

**ಪೃಥುಕತ್ವ** – ಶೈಶವ (ದೊರೆವೆತ್ತುದು ಪೃಥುಕತ್ವಂ ಪರಮನೊಳ್ ಆತ್ಮೀಯಜನನಿಯುದರದೊಳಿರ್ದುಂ ಪರಿಕಿಪೊಡೆ ಆಕ್ರಾಂತಾಚರಾಚರಗೋಚರಸಕಳಭುವನನಾದುದಱಿಂ: **ಚಂದ್ರಪ್ರಪು,** ೧೨. ೧೬೬)

**ಪೃಥುಕುಂಭ** – [ಆನೆಯ] ವಿಶಾಲವಾದ ಕುಂಭಸ್ಥಳ (ಪೃಥುಕುಂಭಂ ದೀರ್ಘಹಸ್ತಂ ವಿಪುಳತರರದಂ ಪೀನಬದ್ಧೋದರಂ .. .. ಏಂ ಬಂದುದೋ ದಂತಿಜಾಳಂ: **ರಾಜಶೇವಿ,** ೧೩. ೬೭)

**ಪೃಥುಶರೀರ** – ದೊಡ್ಡ ದೇಹ (ಸೃಗಾಲ ಶಾರ್ದೂಲಕಾಕಂಗಳ್ ಕಥಕನ ಪೃಥುಶರೀರಮಂ ಸೀೞ್ದು ಸೀೞುಂಬುಳಾಡಿ ಕೊಂದುವು: **ಪಂಚತಂತ್ರ,** ೨೧೧)

**ಪೃಥುಳ** – ವಿಶಾಲವಾದ (ಶ್ರೀ ರಮಣೀರಮಣಂ ಪೃಥುಳೋರುಸ್ಥಳಂ ಅಹಿತಕುಂಭಿಕುಂಭಸ್ಥಳ ನಿರ್ದಾರಣಪಟು ಭುಜದಡಂ ದಾರುಣಕೋಪಂ ಪ್ರತಾಪಿ ಸಾಹಸಭೀಮಂ: **ಗದಾಯು,** ೭. ೧)

**ಪೃಥ್ವಿ** – ಭೂಮಿ (ಸ್ಥಿರೆ ಧರಣಿ ಧಾತ್ರಿ ಮೇದಿನಿ ಧರಿತ್ರಿ ಧರೆ ಯವನಿ ಪೃಥ್ವಿ ರಸೆ ವಸುಧೆ ವಸುಂಧರೆ ಕು ಮಹಿ ಜಗತಿ ವಿಶ್ವಂಭರೆ ಗೋ ಕ್ಷ್ಮಾ ಕ್ಷೋಣಿ ಭೂಮಿ ಭೂ ಗೋತ್ರೆ ನೆಲಂ: **ಅಭಿಧಾವ,** ೧. ೫. ೧)

**ಪೃಥ್ವೀವಲ್ಲಭ** – ಭೂಮಿಯ ಒಡೆಯ, ರಾಜ [ಶ್ರೀವಧುವಂ ನಿಜಭುಜಶೌರ್ಯಾವಷ್ಟಂಭದೊಳೆ ಕಯ್ಗೆಮಾಡಲ್ ಜಯಲಕ್ಷ್ಮೀವಲ್ಲಭನಿರ್ದಂ ಪೃಥ್ವೀವಲ್ಲಭಂ ಉದಿತಕೀರ್ತಿ ಸಾಹಸಭೀಮಂ: **ಗದಾಯು,** ೬. ೧)

**ಪೃಷತ** – ತುಂತುರು ಹನಿ (ಪೃಷತ ವಿಪುಟತ್ಸಂಜ್ಞಂ: **ಅಭಿಧಾವ,** ೧. ೪. ೧೪)

**ಪೃಷತ್ಕ** – ಬಾಣ (ಉತ್ಕೋಪದಹನದೊಡನೆ ಪೃಷತ್ಕಂಗಳ್ ಕೋಟಿಗಣಿತದಿಂದ ಉಱುವಿನಂ ಆರ್ದ ಉತ್ಕಚದಿಂ ಉಱದೆ ಘಟೋತ್ಕಚನಂ ಬಿಟ್ಟು ಮೂರ್ಛೆವೋಪಿನಂ ಎಚ್ಚಂ: **ಪಂಪಭಾ,** ೧೧. ೮)

**ಪೃಷ್ಠಭಾಗ** – ಹಿಂಭಾಗ (ಧನುರ್ಗುಣ ವೇಗತಾಡನ ಆಕಳಿತವಿಕೀರ್ಣ ಕೋಷ್ಠಮೆನೆ ಕೂರ್ಮನಿಷ್ಠುರ ಪೃಷ್ಠಭಾಗಮೆಂದು .. .. ಧರಿತ್ರಿ ಬಂದು ನಿಶ್ಚಳಿತೆಯಿನಿರ್ಪಳಲ್ತೆ ಭುಜಮಂಡಳದೊಳ್: ವಸುಧಾಧಿನಾಥನಾ: **ಚಂದ್ರಪ್ರಪು,** ೩. ೨೦)

**ಪೆಂಕುಳಿಗಲಿ** – ಆವೇಶಗೊಂಡ ಶೂರ (ಕರ್ಚಿದವುಂಡುಂ ಕಡಿತಲೆಯುಂ ಬೆರಸು ಮೊರೆಯುತ್ತುಂ ಪರಿವ ಪೆಂಕುಳಿಗಲಿಗಳುಮಂ: **ಲೀಲಾವತಿ.,** ೫. ೧೧೪ ವ)

**ಪೆಂಕುಳಿಗೊಳ್** – ಆವೇಶಗೊಳ್ಳು (ಪೆಂಕುಳಿಗೊಂಡ ಮದೇಭವೈರಿವೋಲ್ ಕೆಳರ್ದು: **ಪಂಪಭಾ,** ೧೦. ೧೧೩)

**ಪೆಂಕುಳಿನಾಯ್** – ಹುಚ್ಚು ನಾಯಿ (ಪೆಂಕುಳಿನಾಯಂ ಬಡಿವಂತಿರೆ ಪಾಟುಡುವಂ ಬಡಿವಂತಿರೆ ಬಡಿದದನಿಬರಂ ಕೌರವರಂ: **ಗದಾಯು,** ೩. ೧೧)

**ಪೆಂಗುರು** – ಕೊಕ್ಕರೆ (ಕಾಗೆ ಗೂಗೆ ಪರ್ದು ಚಕೋರಂ ಹಂಸೆ ಕುರ್ಕು ಗಿಳಿ ಪುರುಳಿ ಪೆಂಗುರು ಕಾರಂಡಂ ಆಂದೆ ಮೊದಲಾಗೊಡೆಯ ಗಗನಚರಂ: **ವಡ್ಡಾರಾ,** ಪು ೯೭, ಸಾ ೯)

**ಪೆಂಟು** – (ಪೆಂಟನೆಳೆದಂತಾಗುತ್ತಿರೆ ಪೋದ ಪೇರುಡುಗಳ ಹಲ್ಲೆವಜ್ಜೆಗಳುಮಂ: **ಕುಸುಮಾಕಾ,** ೧೪. ೨೯ ವ)

**ಪೆಂಟೆ** – ಪ್ರಾಣಿಗಳಲ್ಲಿ ಹೆಣ್ಣು (ನಿಬ್ಬರಿಸಿದ ಬೇಳ್ಕರಿಸಿದೆಲೆಗಳಿನದೆಲೆಗಳ ಬರಿಸುವುದು ಅನುನಯದೆ ಪೆಂಟೆ ಗೆಂಟರ ವಿಟರಂ: **ಪುಷ್ಪದಂಪು,** ೨. ೮೨)

**ಪೆಂಡತಿ** – ಹೆಂಡತಿ, ಪತ್ನಿ (ಕಾಷ್ಠಕೂಟಂ ತನ್ನ ಪೆಂಡತಿ ಜಯಘಂಟೆಯೆಂಬೊಳನಿಂತೆಂದುಕಲ್ಪಿಸಿದಂ: **ವಡ್ಡಾರಾ,** ಪು. ೭೭. ಸಾ. ೫); ಹೆಂಗಸು (ತನ್ನ ಕುಲಮುಂ ಚಲಮುಂ ದೊರೆಯಿಂ ಕಿಡೆ ಬಾಳ್ವಂ ಗಂಡರೂಪಿನೊಳ್ ಗಂಡನಲ್ತು ಪೆಂಡತಿಯೆ ವಲಂ: **ಆದಿಪು,** ೧೨. ೯೬)

**ಪೆಂಡವಾಸ** – ರಾಣಿವಾಸ, ಅಲ್ಲಿನ ಹೆಂಗಸರು (ಲೀಲೆಯಿಂ ಪೆಂಡವಾಸದೊಳ್ ಪೆಂಡಿರೊಯ್ಯನೊಯ್ಯನೆ ನಡೆದರ್: **ಆದಿಪು,** ೧೧. ೪೧)

**ಪೆಂಡವಾಸಗೇರಿ** – ಸೂಳೆಗೇರಿ (ಆ ಪೆಂಡವಾಸಗೇರಿಯೊಳಗೆ ಸೌಭಾಗ್ಯದ ಭೋಗದ ಚಾಗದ ರೂಪುಗಳ್ ಮನಸರೂಪಾದಂತೆ: **ಪಂಪಭಾ,** ೪. ೮೬ ವ)

**ಪೆಂಡಿರ್** – ಹೆಂಗಸರು (ಲೀಲೆಯಿಂ ಪೆಂಡವಾಸದೊಳ್ ಪೆಂಡಿರೊಯ್ಯನೊಯ್ಯನೆ ನಡೆದರ್: **ಆದಿಪು,** ೧೧. ೪೧)

**ಪೆಂಡಿರ್ಗಾಳೆಗ** – ಹೆಂಗಸರ ಬರಿಯ ಮಾತಿನ ಜಗಳ (ಕಾಳೆಗಮನುಟಿದು ಪೆಂಡಿರ್ಗಾಳೆಗಮಂ ಮಾಟ್ಕೆ: **ಪಂಪರಾ,** ೧೩, ೧೩೯)

**ಪೆಂಪು** – ಹೆಚ್ಚಿಕೆ (ಸಿಗ್ಗನುಟಿ ಮುಳಿಸಂ ನೀನೆಂದಿಂಗಂ ಬಿಸುಡು ಈ ತಮ್ಮಂರೊಳಿಂತಿಂತು ಕಡ್ಡುವರ್ಪುದು ಪೆಂಪೇ: **ಆದಿಪು,** ೧೪. ೧೨೮); ಕೀರ್ತಿ (ಅನುಪಮ ವಿಕ್ರಮಕ್ರಮಂ ಉದಾರಗುಣಂ ಋತವಾಕ್ಯಂ ಎಂಬ ಪೆಂಪೆನಲಿವು ಮೂಱ್ ನಾಲ್ಕೆ ಗುಣಂ: **ಪಂಪಭಾ,** ೧೨. ೯೩)

**ಪೆಕ್ಕ** – ಹೆಚ್ಚಾದ, ಕಟುವಾದ (ಸುಡುವಡಗಿಂ ಪರಂ ಪೊಗೆವ ಪರ್ಬುವ ಕರ್ಬೊಗೆ ಪೆಕ್ಕಮಪ್ಪ ಪೆರ್ಬಡಿಕೆಯ ನಾತಂ: **ಲೀಲಾವತಿ,** ೬. ३೫)

**ಪೆಕ್ಕಣ** – [ಪ್ರೇಕ್ಷಣ] ನೃತ್ಯ (ಹೃದ್ಯ ವಾದ್ಯಲಯದೋಜೆಯಿಂ ಒಂದೆಲಯಕ್ಕೆ ಲಕ್ಕೆಯಂ ಮೆಟ್ಟುವ ಪೆಕ್ಕಣಂ .. .. ಲೀಲೆಯಂ ಪುಟ್ಟಿಸೆ: **ಮಲ್ಲಿನಾಪು,** ೪. ३೦)

**ಪೆಕ್ಕಳಿಸು** – ಹುರಿದುಂಬಿಸು (ಅದಂ ಕಂಡು ಕಂಸಂ ಪಂದಿಗೇಱದ ನಾಯಂ ಪೆಕ್ಕಳಿಸುವಂತೆ ತೊಡೆಯನಪ್ಪಳಿಸಿ: **ನೇಮಿನಾಪು,** ೮. ೧೦೬ ವ)

**ಪೆಕ್ಖಣ** – [ಪ್ರೇಕ್ಷಣ] ನೋಟ (ಪವಣಱಿದು ಪೆಕ್ಖಣ ಪಠ್ಠಿಯೋಲ್ ತಕ್ಕನೆನಿಸಿ: **ಧರ್ಮಪ,** ೨. ೨३ ವ)

**ಪೆಗಲ್** – ಹೆಗಲು, ಭುಜ (ಬಲದೇವಂ ದುರ್ಯೋಧನಂಗೆ ಆಯು ಬರ್ಪಂತೆ ಪೆಗಲೊಳ್ ಹಲಾಯುಧಮನಿಕ್ಕಿಕೊಂಡು ಜಂಗಮಪರ್ವತಮೆ ಬರ್ಪಂತೆ ಬಂದು: **ಪಂಪಭಾ,** ೧३. ೮೮ ವ)

**ಪೆಟ್ಟಮೆಟಿಸು** – ಮರದ ದಿಮ್ಮಿಗೆ ಕಟ್ಟಿ ಎಳೆಯಿಸು (ಬೆಟ್ಟೇಱ ಬೀಟ್ವರಂ ಪೆಟ್ಟಮೆಟಿಸಿಕೊಳ್ವರಂ .. .. ನೆರೆದು ನೋಡುವರಂತೆ: **ಧರ್ಮಾಮೃ,** ೯. ೧३ ವ)

**ಪೆಟ್ಟಮೆಟಿ** – ಮರದ ದಿಮ್ಮಿಗೆ ಕಟ್ಟಿ ಎಳೆಸುವ ಶಿಕ್ಷೆ (ತಳಾಱರ್ ತಕ್ಷಕನಂ ಕನಲವೋರಿಗಳ್ ಪೂಡಿ ಪೆಟ್ಟಮೆಟಿದಪರ್ ಎಂಬುದುಂ ನಾಗಶ್ರೀ ಕನ್ಯಕೆ ಕರುಣರಸಾರ್ದ್ರಹೃದಯೆಯಾಗಿ: **ಸುಕುಮಾಚ,** ೭. ೫ ವ)

**ಪೆಟ್ಟವೆಟಿ** – ಪೆಟ್ಟಮೆಟಿ (ಮೂವತ್ತಾಱು ಗುಣದಿಂ ಭಾವಜನಂ ಕಟ್ಟಿ ಪೆಟ್ಟವೆಟಿದರ್: **ಪಂಪರಾ,** ೧. ೧೯)

**ಪೆಟ್ಟು** – ಗೂಟ ನಡುವಂತೆ ಹೊಡಿ (ಗುಡಿಯನೆತ್ತುವರಂತೆ ಗೂಂಟಮಂ ಪೆಟ್ಟುವರ್ ಪರ್ದಿನಂತೆ ಕೀಟ್ವರ್: ಧರ್ಮಾಮೃ, ३. ೪३ ವ); ಚುಚ್ಚು (ಒಣಗಿದ ಮರದ ಕೊಂಬಂ ತಂದು ಮುನೀಶ್ವರನ ಜಂಘೆಯೊಳ್ ಪೆಟ್ಟುವುದುಂ: **ಪುಣ್ಯಾಸ್ರ,** ३. ೮೫ ವ)

**ಪೆಟ್ಟುವೆರ್ಚು** – ಗರ್ವದಿಂದ ಕೂಡು, ಉಬ್ಬು (ಮರಗಳೆ ಮುನ್ನಿತ್ತಿನಿಸಂ ಮರವಟ್ಟುವು ಪೆಟ್ಟುವೆರ್ಚಿ ಕುದಿದಿತ್ತೊಡಮೀ ಧರಣೀತಳಕ್ಕೆ: **ಆದಿಪು,** ೬. ೫೦)

**ಪೆಟ್ವೆ** – ಹೆಂಟೆ (ಕಡಕುಂ ಪೆಟ್ವೆಯುಂ ಒತ್ತೆ ಮೆಲ್ಲಡಿಗಳಂ ಬಳ್ಕುತ್ತುಂ ಅಳ್ಕುತ್ತುಂ ಓರಡಿಗೆ ಒರ್ಮೊರ್ಮೆ ಕುಳುತ್ತುಂ ಏಱುತಿರೆ: **ಪಂಪಭಾ,** ३. ೯)

**ಪೆಡಂಗಲಸು** – ಮುಗ್ಗರಿಸು (ಕಿಱುವೇಂಟೆಯ ನಾಯ್ಗಳಿಂದ ಮುಟ್ಟುಪಟ್ಟ ಪೆಣ್ಮೊಲನಂತೆ ಭಯಮಂ ಎಡೆಗಲಿಸಿ ಬೆಳ್ಪೋಟಂ ಓಡಿ ಜವಂಗೆಟ್ಟು ಕಾಲ್ ಪೆಡಂಗಲಿಸೆ ಬೀಱುತ್ತುಂ ಏಱುತ್ತುಂ ಎಂತಾನುಂ ಎಯ್ದಿ: **ಶಾಂತಿಪು,** ೭. ೯೧ ವ)

**ಪೆಡಂಗಾಲ್** – ಹಿಂಗಾಲು, ಪ್ರಾಣಿಗಳ ಹಿಂದಿನ ಕಾಲುಗಳು (ಪೊಱಮಟ್ಟ ಮುಂದುಂ ಪೆಡಂಗಾಲೊಳ್ ಅಡಂಗಿದ ಬಾಲಮುಂ .. .. ಮೋಪ ಅಳ್ಳೆವಂದಿಯಂ ಕಂಡು: **ಲೀಲಾವತಿ,** ೬. ೧೬ ವ)

**ಪೆಡಂಮಗುಟ್** – ಹಿಂದಕ್ಕೆ ಹೋಗು (ನೆರೆದರಸುಮಕ್ಕಳೆಲ್ಲರಾ ಬಿಲ್ಲಂ ಕಂಡು ಬಲ್ಗರಂ ಪೊಡೆದಂತೆ ಪೆಡಂಮಗುಟಿ: **ಪಂಪರಾ,** ೫. ೮೨ ವ)

**ಪೆಡಂಮೆಟ್ಟಿಸು** – ಹಿಮ್ಮೆಟ್ಟಿಸು (ಘನಪ್ರತಾಪಮಹಿಮಾಲಘುತರಂ ಅವನಿಯಂ ಪೆಡಂಮೆಟ್ಟಿಸಿದಂ: **ರಾಜಶೇವಿ,** ೬. ೧೧೫)

**ಪೆಡಂಮೆಟ್ಟು** – ಹಿಮ್ಮೆಟ್ಟು (ಏನೆಸೆದುದೊ ಪವಳಂ ಮುಕ್ತಾವಿಸರಂ ಜಾಂಬವಳಂ ಪೆಡಂಮೆಟ್ಟಲೊಡಂ: **ರಾಜಶೇವಿ,** ೬. ೧೧೪)

**ಪೆಡಗೆ** – ಗೂಡೆ (ಮತ್ತೊಂದು ದಿವಸಂ ಪೆಡಗೆಯೊಳ್ ಎಳ್ಳಂ ತುಂಬಿ ಆವ ಮಾನದೊಳ್ ಅಳದುಕಂಡಪರ್ ಆ ಮಾನದೊಳ್ ಎಣ್ಣೆಯಂ ಅಳದು ಮಗುಟ್ದಿಟ್ಟುವುದೆನಲ್: **ಪುಣ್ಯಾಸ್ರ,** ३. ३೦ ವ)

**ಪೆಡಗೆಯ್ಗಟ್ಟು** – ಹೆಡಮುರಿಗೆ ಕಟ್ಟು (ನಿನ್ನ ಪೆಡಗೆಯ್ಗಟ್ಟಂ ಶರದಿಂ ಬಿಡಿಸಿದನಲ್ಲನೆ ಸರಿತ್ಸುತಂ ಬನ್ನವಿನ್ನವು ಎಂಬುವುಮೊಳವೇ: **ಪಂಪಭಾ,** ೮. ೫३)

**ಪೆಡಗೈಗಟ್ಟು** – ಹೆಡಮುರಿಗೆ ಕಟ್ಟು (ಪೆಂಡಿರೆಲ್ಲಂ ಪರಿಚಾರಕಿಯರಂ ಕೂಡಿಕೊಂಡು ಅಜ್ಜಗಾಪಿನಜ್ಜರಂ ಪಿಡಿದುರುಳ್ಚಿ ಎನ್ನಸಂಕಲೆಯಿಂ ಪೆಡಗೈಗಟ್ಟಿ: **ನೇಮಿನಾಪು,** ೫. ೨ ವ)

**ಪೆಡಗೊಳ್** – ಕುಸಿದು ಹೋಗು (ನೆಕ್ಕ ಕದಂಪು ಪತ್ತಿ ಪೆಡಗೊಂಡ ಕೊರಲ್ ಪುಣಿಚೆರ್ದ ಕೀನಿವಲ್.. .. ಅಗುರ್ವಿಸೆ ಬಂದನದೊರ್ವ ಪಾರ್ವಂ; **ಲೀಲಾವತಿ,** ೬. ೫೬)

**ಪೆಡತಲೆ** – ಹೆಕ್ಕತ್ತು (ಪೆಡತಲೆ ಮಿಗೆ ನೋಗುಂ .. .. ಮೂಲವ್ಯಾಧಿಯುಂ ಅಡಸುಂ ಇಂತಿನಿತೆ ಜೂದಿನಿಂದಪ್ಪ ಫಲಂ: **ಸಮಯಪ,** ೬. ೫೦); ತಲೆಯ ಹಿಂಭಾಗ (ನುಡಿಯೆ ನುಡಿಯೆ ನಾಲಗೆಯಂ ಪಿಡಿದು ಪೆಡತಲೆಯಿಂದುರ್ಚುವರುಂ: **ಆದಿಪು,** ೫. ೮೫ ವ)

**ಪೆಡಸಾರ್** – ಹಿಂದಕ್ಕೆ ಹೋಗು (ನೆತ್ತರಂ ಪಡೆಯದೆ ಆಕಾಶಕ್ಕೆ ಬಾಯಂ ತೆಱೆದು ಊಳ್ವ ಬಳ್ಳುಗಳುಮಂ ನರವುಮಂ ಬರಿಯುಮಂ ಪತ್ತಿ ತೆಗೆದು ಪೆಡಸಾರ್ವ ನರಿಗಳುಮಂ ತಾನೆ ಸೋದು: **ಪಂಪಭಾ,** ೧३. ೫೬ ವ)

**ಪೆಡೆ** – ಹಾವಿನ ಹೆಡೆ (ಫಣಾಪ್ವಯಂ ಪೆಡೆಯಕ್ಕುಂ: **ಅಭಿಧಾವ,** ೧. ३. ೮)

**ಪೆಡೆವಣಿ** – ಹಾವಿನ ಹೆಡೆಯಲ್ಲಿದೆಯೆನ್ನಲಾದ ಮಣಿ (ಕಡುಗಾದ ಪೆಡೆವಣಿಗೆ ತಲೆಗೊಡಪುತ್ತಂ ಭಯಮನುಳಿದು ಪುಗೆ ಸೋಗೆಯ ಸೊಂಪಡರ್ದ ಪೊಸಪೀಳಿಯೊಳ್: **ರಾಜಶೇವಿ,** ೫. ೪೩)

**ಪೆಡೆವರಲ್** – ಪೆಡೆವಣಿ (ಪೆಡೆವರಲಲಾವುದೊ ರನ್ನದ ಸೊಡರಾವುದೊ ಪೇಟಿಮೆಂಬಿನಂ ಸಂದೆಗಂಗಟ್ಟಿಡಿದಿರೆ ನಾಗಾಂಗನೆಯರ್: **ಪಂಪರಾ,** ೧೬. ೯೨)

**ಪೆಣ್** – ಹೆಣ್ಣು, ಹೆಂಗಸು (ಪರಮ ಜಿನೇಂದ್ರವಾಣಿಯೆ ಸರಸ್ವತಿ ಬೇಱದು ಪೆಣ್ಣ ರೂಪಮಂ ಧರಿಯಿಸಿ ನಿಂದುದಲ್ತು: **ಆದಿಪು,** ೧. ೯); ಮಗಳು (ಪೆಣ್ ದುಹಿತೃ ನಂದನೆ ಪುತ್ರಿ ತನೂಜೆ: **ಅಭಿಧಾವ,** ೧. ೧೧. ೧೭)

**ಪೆಣ** – ಹೆಣ, ಶವ (ತುರಷು ಪರಿವಾರಗಳೆಮ್ಮ ಪೆಣನಂ ತುಟಿದುಂ ಪರಿಗುಂ ದಲ್: **ಪಂಪಭಾ,** ೮. ೯೫)

**ಪೆಣದಿನಿ** – ಹೆಣಗಳನ್ನು ತಿನ್ನುವುದು, ಪಿಶಾಚಿ (ಪೆಣದಿನಿಗಳ ತಂಡಂ ಬಲ್ವೆಣಗಳನಱಸುತ್ತುಮಲ್ಲಿ ಬರೆವರೆ: **ಗದಾಯು,** ೪. ೧೫)

**ಪೆಣೆ** – ಹೆಣೆ, ಸೇರಿಸು (ಪಿಡಿಕೆಯ್ ತೀವಿದ ಕೂರ್ಗಣೆ ಮಡಕಾಲ್ವರಂ ಅಲೆವ ಕಚ್ಚೆ ನಿಡಿಯಸಿಯ ಓಱ ಕರ್ಪಿಡಿದ ಪಣೆಕಟ್ಟು ಕೆಯ್ಪಡೆ ಬೆಡಂಗನೊಳಕೊಳೆ ಧನುರ್ಧರರ್ ಪೆಣೆದೆಚ್ಚರ್: **ಪಂಪಭಾ,** ೧೦. ೭೧); ಹೆಣೆದುಕೊಳ್ಳು (ಪೆಣೆ– ಮಿಶ್ರಬಂಧನೇ: **ಶಬ್ದಮದ,** ಧಾ೩೭೭)

**ಪೆಣ್ಗತ್ತೆ** – ಹೆಣ್ಣು ಕತ್ತೆ (ಲಂಗಿಗರ ಮನೆಯೊಳ್ ಪೆಣ್ಗತ್ತೆಯಾಗಿ ಪಿರಿಯ ಪೊಱೆಗಳಂ ಪೊತ್ತು ಪೋಗಿ ಬೆನ್ನೊಳ್ ಕಱುಮೆಯಾಗಿ ನಾಳಿ ಬಿರ್ದು: **ವಡ್ಡಾರಾ,** ಪು ೧೩, ಸಾ ೪)

**ಪೆಣ್ಗಾಡಿ** – ಹೆಣ್ಣಿನ ಚೆಲುವು (ವರಂಬಡೆದನೋ ಪೆಣ್ಗಾಡಿಯಂ ಚಂದ್ರಮಂ ನನೆಯಂಬಂ ತವೆ ನೋಂತು ಪೆಣ್ಬರಿಜನೆಂಬಂತಾಕೆ ಕಣ್ಗೊಪ್ಪಿದಳ್: **ಲೀಲಾವತಿ,** ೩. ೪೭)

**ಪೆಣ್ಗೂಸು** – ಹೆಣ್ಣು ಮಗು (ಗರ್ಭದ ಪೆಣ್ಗೂಸಿಂಗಂ ಗರ್ಭಿಣಿಗಂ ಬಾಧೆ ಪಿಂಗೆ ಪೆತ್ತಾಗದೆ ಗರ್ಭಾರ್ಭಕನುಯ್ವೆನೆಂಬೀ ದುರ್ಭಾವನೆಯಿಂ ವಿದೇಹಿಯಂ ಕಾದಿರ್ದಂ: **ಪಂಪರಾ,** ೪. ೧೫); ಹೆಂಗಸು (ಈ ಪೊತ್ತಿನೊಳೀ ಪೆಣ್ಗೂಸೀ ಪಸದನಮೆಸೆದು ಪೋಪುದೆಲ್ಲಂ ಇದು ಅಘಟನವ್ಯಾಪಾರಂ: **ಸುಕುಮಾಚ,** ೭. ೨೦)

**ಪೆಣ್ಗೂಳಿ** – ಹೆಣ್ಣಿಗ (ಪೇಡಿಯ ಬಿತ್ತೀ ದ್ರುಪದನ ನೋಡಿರೆ ಪೆಣ್ಗೂಳಿಮತ್ಸ್ಯನುಂ ಪಾಂಡವರೊಳ್ ಕೂಡಿ ಬರೆ ನಚ್ಚಿದಂ ಹರಿ ನಾಡಾಡಿಗಳಲ್ಲದೊಳ್ಳೆಯಪಿಂಡಂ: **ಕರ್ಣನೇಮಿ,** ೧೧. ೧೦೧)

**ಪೆಣ್ದಂಡ** – [ಪೆಣ್+ತಂಡ] ಹೆಂಗಸರ ಗುಂಪು (ಪೆಣ್ದಂಡಮಿಂದ್ರಾಣಿಯೆಂದುದನೆಂದೆಂದು ಎಡೆಯಾಡುತಿರ್ಪುದೆನೆ ಮತ್ತೇನೆಂದದಂ ಬಣ್ಣಿಪೆಂ: **ಆದಿಪು** ನರಸಿಂ, ೮. ೨೨)

**ಪೆಣ್ಬಕ್ಕಿ** – ಹೆಣ್ಣು ಹಕ್ಕಿ (ಒಂದು ದಿವಸಂ ಗಂಡುವಕ್ಕಿ ಪೆಣ್ಬಕ್ಕಿಯಂ ಎಮದುದು: **ಚಾವುಂಪು,** ಪು. ೩೪೩. ಸಾ. ೧೮)

**ಪೆಣ್ಬರಿಜು** – [ಪೆಣ್+ಪರಿಜು] ಹೆಣ್ಣ ರೂಪು (ಮೊಗಮೀಸೆ ಬಾರದೋಪರ್ ಸೊಗಯಿಸಿ ಪೆಣ್ಬರಿಜನಿಟ್ಟು ಬರೆ .. .. ಸ್ಮರಕೇಳಿಗೆಳಸಿದರ್ ಪುಂಶ್ಲಿಯರ್: **ಲೀಲಾವತಿ,** ೧೩. ೧೦೭)

**ಪೆಣ್ಬುಯ್ಯಲ್** – [ಹೊತ್ತೊಯ್ಯುವಾಗಿನ] ಹೆಣ್ಣ ಆಕ್ರಂದನದಿಂದಾಗಿ ನಡೆಯುವ ಹೋರಾಟ (ತುಱುಗೋಳೊಳ್ ಪೆಣ್ಬುಯ್ಯಲೊಳ್ ಎಱೆವೆಸದೊಳ್ ನಂಟನ ಎಡಱೊಳ್ ಊರಱುವಿನೊಳಂ ತಱಸಂದು ಗಂಡುತನಮನೆ ನೆಱುಪದವಂ ಗಂಡನಲ್ಲಂ ಎಂತುಂ ಷಂಡಂ: **ಗದಾಯು,** ೨. ೨೪)

**ಪೆಣ್ಮೊಲ** – ಹೆಣ್ಣು ಮೊಲ (ಕಿಱುವೇಂಟೆಯ ನಾಯ್ಗಳಿಂದ ಮುಟ್ಟುಪಟ್ಟ ಪೆಣ್ಮೊಲನಂತೆ ಭಯಮಂ ಎಡೆಗಲಿಸಿ ಬೆಳ್ಪೋಟಂ ಓಡಿ ಜವಂಗೆಟ್ಟು ಕಾಲ್ ಪೆಡಂಗಲಿಸೆ ಬೀಱುತ್ತುಂ ಏಱುತ್ತುಂ ಎಂತಾನುಂ ಎಯ್ದಿ: **ಶಾಂತಿಪು,** ೭. ೯೧ ವ)

**ಪೆತ್ತಂ** – ಹಡೆದವನು, ತಂದೆ (ಅಖಿಳಜಗತ್ಕೀಶ್ವರನೆ ಗಡಂ ಪೆತ್ತಂ: **ಸಮಯಪ,** ೧೦. ೩೫)

**ಪೆಪ್ಪಳಿಸು** – ಪೆಳ್ಪಳಿಸು, ಭಯಪಡು, ನಡುಗು (ತನ್ನ ಜಸದಂತೆ ಪಸರಿಸಿದ ಅಚ್ಚವೆಳ್ದಿಂಗಳಂ ಆಕೆಯ ಕಣ್ಗಳ ಬೆಳ್ಪಿನ ತಳರ್ಪು ಎನುತ್ತುಂ ಪೆಪ್ಪಳಿಸಿ ಚಂದ್ರನಂ ನೋಡಿ: **ಪಂಪಭಾ,** ೪. ೬೯ ವ)

**ಪೆಪ್ಪುಳಿಸು** – ಪೆಪ್ಪಳಿಸು (ಬೆಳ್ಪಾಳ್ ಕಳ್ಪಾಳ ಸರಮಂ ಕೇಳ್ದಂತೆ ಪೆಪ್ಪುಳಿಸಿ ಮಗುಟ್ದು ಮನೆಗೆ ಬಂದು: **ಪಂಚತಂತ್ರ,** ೧೭೯ ವ)

**ಪೆಬ್ಬೇಲಿ** – ಎತ್ತರವಾದ ಬೇಲಿ (ಮೃಗಗಣಮಂ ಒಂದೆಡೆಯೊಳ್ ಮುಗಿಸಿ ಪೊಱಗೆ ಪೆಬ್ಬೇಲಿಯಂ ಕೇಱಸೆ: **ಚಾವುಂಪು,** ಪು. ೪೧೩. ಸಾ. ೧೯)

**ಪೆಮ್ಮರುಳ್** – ದೊಡ್ಡ ದೆವ್ವ (ಪೆಮ್ಮರುಳ ಮೇಗೆ ಸೂರ್ಕೆನೆ ತಾಮ್ಮುನ್ನಮೆ ಮುಗ್ಧೆಯದಱ ಮೇಗುದಯಿಸೆಕೋಪಂ ಮಿಗೆ ತನ್ನ ಪೆಱಲ್ಗಂ ಸಮ್ಮನಿಸಳೆ ಕೂರ್ತು ಕಣ್ಣ ಕಾಣ್ಬವರೊಳರೇ: **ಲೀಲಾವತಿ,** ೧೪. ೩೧)

**ಪೆರೆ** – ಪೊರೆ (ದಂಡಕ ರಿಸಿಯರ ಮೆಯ್ಯ ತೊಗಲ್ ಪಾವಿನ ಪೆರೆ ಸುಲಿವಂತೆ ಸುಲಿದು ಪೋಗಿ: **ವಡ್ಡಾರಾ,** ಪು ೧೭೨, ಸಾ ೨)

**ಪೆರೆಗಳೆ** – ಹಾವು ಪೊರೆ ಕಳಚು (ಗವಸಣಿಗೆಗಳೆದು ಕುಡೆ ನೋಡಿ ವೀಣೆಗಾ ನೃಪತಿ ನೀಡಲಣ್ಮನೆ ಕರಪಲ್ಲವಮಂ ಪೆರೆಗಳೆದ ಮನೋಜ ವಿಷೋರಗಮೆಂದು ಬಗೆದನಕ್ಕುಂ ಮನದೊಳ್: **ಆಚವರ್ಧ,** ೫. ೧೭)

**ಪೆರೆನೊಸಲ್** – ಚಂದ್ರನಂತಹ ಹಣೆ (ಲಲನಾಜನಕ್ಕೆ ತಾನೀ ಲಲನೆ ದಿಟಂ ತಿಲಕಮೆಂದು ವರ್ಣಿಸುತ ಒಲವಿಂ ತಿಲಕಿಸುವ ತೆಱದಿಂ ಒರ್ವಳ್ ತಿಲಕಮನಿಟ್ಟಳ್ ತನೂದರಿಯ ಪೆರೆನೊಸಲೊಳ್: **ಶಾಂತೀಶ್ವಪು,** ೪. ೨೪೨)

**ಪೆರೆಯಿಕ್ಕು** – ಪೆರೆಗಳೆ (ಖೇಚರಪತಿ ಭೀಕರ ರೂಪು ನಿಜದಿಂ ಪೆರೆಯಿಕ್ಕಿದ ಕೃಷ್ಣಸರ್ಪನಿರ್ಪಂತಿರ್ದಂ: **ಪಂಪರಾ,** ೧೦. ೩೧)

**ಪೆರ್ಕಣ** – ಪೆಕ್ಕಣ, ನೃತ್ಯ (ಬೆತ್ತವಣ್ಣಿಗಲೆಯಂ ಸಮಗಟ್ಟುವ ಬೆಟ್ಟುಗೂಂಟಮಂ ಬಸಿವ ಪುಳಿಂದಸಂಕುಳದ ಪೆರ್ಕಣದಿಂದೆಸೆದತ್ತುಪಕ್ಕಣಂ: **ಚಂದ್ರಪ್ರಪು,** ೫. ೫೪)

**ಪೆರ್ಕಳ** – ಆಧಿಕ್ಯ (ಇಂತಳಿವಿಗಟೆದ ಸೊಬಗಿನ ಸೊಂಪು ಪೆರ್ಕಳಮಾಗಿರ್ಪುದುಂ: **ಕಬ್ಬಿಗಕಾ,** ೯೭ ವ)

**ಪೆರ್ಕಳಿಸು** – ಹೆಕ್ಕಳಿಸು, ಗರ್ವಿಸು (ಸಕಲಲೋಕಸ್ತುತೆಯಿಂ ಗೌರಿಯಿನಾಯ್ತು ಅದನೀಗಳ್ ಬಾರಿಸಲ್ ಅತಿಜಡರಿದೇಕೆ ಪೆರ್ಕಳಿಸುವರೋ: **ಲೀಲಾವತಿ,** ೧೪. ೧೧೬)

**ಪೆರ್ಗಡಿತ** – ದೊಡ್ಡ ಕಡಿತ, ಲೆಕ್ಕದ ಪುಸ್ತಕ (ಧಿರರ್ ಶಂಕರಶಾರ್ಙ್ಗಿಗಳ್ ಪೊಣರೆ ತ್ವಂಗಟ್ಟದಿಂ ಭುತಳಂ ನೀರೊಳ್ ಪಾಸಿದದೊಂದು ಪೆರ್ಗಡಿತದಂತಳ್ಳಾಡಲ್: **ಜಗನ್ನಾವಿ,** ೧೮. ೨೬)

**ಪೆರ್ಗಡೆ –** ಹೆಗ್ಗಡೆ, ದೊಡ್ಡ ಅಧಿಕಾರಿ (ಶಂತನು ಪೊಟಿಲ್ಗೆ ಮಗುಟ್ಬು ವಂದು ಅವರಯ್ಯನಪ್ಪ ದಾಶರಾಜನಲ್ಲಿಗೆ ಕೂಸಂ ಬೇಡೆ ಪೆರ್ಗಡೆಗಳಂ ಅಟ್ಟಿದೊಡೆ: **ಪಂಪಭಾ,** ೧. ೭೦ ವ)

**ಪೆರ್ಗಡೆತನ –** ಮುಖ್ಯಾಧಿಕಾರಿಯ ಹುದ್ದೆ (ನೀಮಾರ್ಗೆ ಇದೇಕೆ ಕಿಡೆನುಡಿದಪಿರ್ ಇಟ್ಟಿಡೆವೆರ್ಗಡೆತನದೊಳ್ ಇದೇವಡೆವಿರ್: **ಆದಿಪು,** ೯. ೧೦೭)

**ಪೆರ್ಗಣ –** ಹೆಗ್ಗಣ (ಓವೊ ಪೆರ್ಗನಮನಿಕ್ಕಿ ಮನೆ ಮಾಡುವಂದವಕ್ಕುಂ ಕಡೆಯೊಳ್: **ಧರ್ಮಾಮೃ,** ೩. ೭೩)

**ಪೆರ್ಗಣಿ –** ಪಿರಿದು ಗಣಿ, ದೊಡ್ಡ ಗಣಿ (ಲತೆಗಳ ಜನ್ಮಭೂಮಿ ಪುಳಿನಂಗಳ ಪೆರ್ಗಣಿ .. .. ತಣ್ಣೇಟಲ ತಾಯ್ವನೆ ತಾನೆನಿಸಿರ್ದುದಾ ವನಂ: **ಕುಸುಮಾಕಾ,** ೧೧. ೧೭೯)

**ಪೆರ್ಗಾವಲಿ –** ದೊಡ್ಡ ಕಾವಲಿ (ಒಲೆಗಳ್ವೊಲ್ಕಾಯ್ದುವು ಎಂಟು ದಿಗಿಭದ ಬಿದುಗಳ್ ಕಾಯ್ದು ಕರ್ಬೊನ್ನ ಪೆರ್ಗಾವಲಿವೋಲಾಯ್ತು ನೆಲಂ: **ಜಗನ್ನಾವಿ,** ೧೭. ೭೩)

**ಪೆರ್ಚಾಳ್ –** ಗೌರವಾನ್ವಿತ ವ್ಯಕ್ತಿ (ಕೋಪಪ್ರಸಾದಮುಳ್ಳವರೆ ದೈವಮೆಂದೊಡೆ ಮನ್ನೆಯರುಂ ಅರಸರುಂ ತಳಾಱರುಂ ದಂಡಾಧಿಪರುಂ ಪೆರ್ಚಾಳ್ಗಳುಂದೈವಮಪ್ಪರ್: **ಧರ್ಮಾಮೃ,** ೯. ೭೩ ವ)

**ಪೆರ್ಚಿಸು –** ಹೆಚ್ಚಿಸು (ಆದಿಜಿನೇಂದ್ರಚಂದ್ರಂ ಆದರದೊಳೆ ಬೋಧವಾರ್ಧಿಯನೆ ಪೆರ್ಚಿಸುತಿರ್ಕೆ ವಿನೇಯಕೋಟಿಯಾ: **ಸಮಯಪ,** ೩. ೯೮)

**ಪೆರ್ಚು –** ಹೆಚ್ಚಾಗು (ಮನದೊಳ್ ತ್ರೈಭುವನಮಂ ಆಳ್ದನಿತುವರಂ ತನಗೆ ಸಂತಸಂ ಪೆರ್ಚಿಯುಂ ಅಂದು ಇನಿಸು ಅಂಧನೃಪಂ ತನ್ನಯ ಜನದೊಳ್ ಕೆಲನಱಿಯೆ ಕೃತಕಶೋಕಂಗೆಯ್ದಂ: **ಪಂಪಭಾ,** ೩. ೮); ಆಧಿಕ್ಯ (ಕೋಪದ ಪೆರ್ಚಿನೊಳ್ ನಡುಗುವೂರುಯುಗಂ ಕಡುಪಿಂದರಲ್ವ ನಾಸಾಪುಟಂ: **ಪಂಪಭಾ,** ೭. ೬); ಕತ್ತರಿಸು (ಒಸಗೆಯ ಮೇಲೆ ಮತ್ತೊಸಗೆ ಪೊಕ್ಕುಟಿ ಪೆರ್ಚಿನ ಮೇಲೆ ಪೆರ್ಚು: **ಅನಂತಪು,** ೧೨. ೮೧)

**ಪೆರ್ಚುಗೆ –** ಹೆಚ್ಚಿಗೆ, ಅತಿಶಯ (ಪರಿಚಯದೊಂದು ಪೆರ್ಚುಗೆಯೊಳೀ ಶುಕಂ ಆ ಕುಸುಮಾವಳಿ ತನೂದರಿಯ ಕುಚಾಗ್ರದಲ್ಲಿ ಪಱೆತಂದೆಱಗಲ್ಕೆ: **ಕುಸುಮಾಕಾ,** ೧೩. ೨೬)

**ಪೆರ್ಜಸ –** [ಪಿರಿದು+ಜಸ] ಹೆಚ್ಚಿನ ಯಶಸ್ಸು (ಪೆರ್ಜಸಮನೆ ಪಿಡದೆನ್ನನೆ ರಣದೊಳಟಿವೆಂ: **ಪಂಪಭಾ,** ೯. ೮೭)

**ಪೆರ್ಜೋಡೆ –** ಹಿರಿಯ ಸೂಳೆ (ದುರ್ಯೋಧನಂ ಬಂದಿಕಾಱನಂತೆ ಸೆಱೆಗೆಯ್ದುಂ ವ್ರಣವೈದ್ಯನಂತೆ ಕೊಡಸಾರಿಯಂ ಪಿಡಿದುಂ ಸೂಳೆಯಂತೆ ಕಟಿವು ಉಟಿವನಱಿದುಂ ರಸವಾದಿಯಂತೆ ಕಟ್ಟಿಯುಂ ಪೆರ್ಜೋಡೆಯಂತೆ ನುಣ್ಣಿತಂ ವೇಟ್ದು: **ಪಂಪಭಾ,** ೬. ೭೨ ವ)

**ಪೆರ್ದೊಱೆ –** [ಪಿರಿದು ತೊರೆ] ದೊಡ್ಡ ನದಿ, ಕೃಷ್ಣಾ ನದಿ (ಪರಿತಂದು ಸಯ್ತು ಪೆರ್ದೊಱೆ ಸಿರಿಪರ್ವತದಲ್ಲಿ ತೊಲಗಿದೊಡೆ ಕಂಡು ಮಹೇಶ್ವರಂ .. .. ಪೀರ್ದು ಪರಿದುದೆಂಬರ್ ಮೂಢರ್: **ಸಮಯಪ,** ೧೨. ೧೫)

**ಪೆರ್ಬಂಟು –** ದೊಡ್ಡ ಸೈನ್ಯ (ತಲೆಕೆಳಗಾಗಿ ಕಟ್ಟಿದಲಗೊಱೆಯನುರ್ಚಿ ಬೀಟೆ ಪಿಂಮಡಿಯುಂ ಪಱೆಯೆ ಪೆಱಗಂ ನೋಡುತ್ತುಂ ಪರಿವ ಪೆರ್ಬಂಟುಮಂ: **ಲೀಲಾವತಿ,** ೫. ೧೧೪ ವ)

**ಪೆರ್ಬಂದಿ –** ದೊಡ್ಡ ಹಂದಿ, ವರಾಹಾವತಾರ (ಧರಣಿಯಂ ಪೆರ್ಬಂದಿ ಕಿಟ್ಟಿತ್ತಿದೊಂದೆಡೆ ನೀರ್ ತೀವಿತೆನಲ್ಕೆ ಪೆಂಪುವಡೆಗುಂ ಗುಣ್ಪಿಂದೆ ಪಂಪಾಸರಂ: **ಕಾದಂಸಂ,** ೧. ೩೭)

**ಪೆರ್ಬಾರಿ –** ಪಕ್ಕೆಯ ಮೇಲ್ಭಾಗ (ಬೆರ್ವಟ್ಟೆಯಂ ಮುಟ್ಟಿ ಮೆಯ್ದಿಡೆ ಭಾಳಾಗ್ರಮನೆಯ್ದೆ ಬಿಟ್ಟ ಕುಣಪವ್ರಾತಂಗಳಾ ಬಟ್ಟೆಯೊಳ್ ಮಡದಿಂ ಪೆರ್ಬಾರಿಗೆಯ್ದಲಿರ್ದಮೃತವ್ಯೂಹಂ ಕರಂ ಭೀಕರಂ: **ಲೀಲಾವತಿ,** ೬. ೭)

**ಪೆರ್ಬಿಡಿ –** ದೊಡ್ಡ ಹೆಣ್ಣಾನೆ (ಪೊಸ ಮದದದಾನೆಯಂ ನಸೆಯ ಪೆರ್ಬಿಡಿ ಜಂಗಮ ಕಲ್ಪವೃಕ್ಷಮಂ ಮಿಸುಗುವ ಅನಲ್ಪಕಲ್ಪಲತೆ ನೀರದಮಂ ಕುಡುಮಿಂಚುಪೊರ್ದಿ ಶೋಭಿಸುವವೊಲ್; **ಶಾಂತಿಪು,** ೭. ೨೯)

**ಪೆರ್ಬೊನಲ್ –** ಭಾರಿ ಪ್ರವಾಹ (ರತ್ನಾಭರಣಪ್ರಭಾಪ್ಸರವಾದಂ ತಳ್ತು ತದ್ವೀಥೀಕಾಂತಾರದೊಳ್ ಪೆರ್ಬೊನಲಂದದಿಂ ಪರಿಯೆ: **ಕಾದಂಬ,** ೬. ೨೯)

**ಪೆರ್ಮಗ –** ಹಿರಿಯ ಮಗ (ಪೆರ್ಮಗಂ ಜೋಕೊವರಂ ಸಾವಾಗ ಕಾಯಲಾಱದ ಕೀವಿಲಿ ಪೇಟೆ ಪೆಱಗೆ ಮಾಡಲಾರ್ಪಳೆ ಸುಖಮಂ: **ಸಮಯಪ,** ೯. ೧೦೯)

**ಪೆರ್ಮರುಳ –** ದೊಡ್ಡ ಮೂರ್ಖ (ಸಾಮ್ರಾಜ್ಯಸೌಖ್ಯಪ್ರಮತ್ತಾತ್ಮನೆ ದಲ್ ಮತ್ತೆನ್ನವೊಲ್ ಪೆರ್ಮರುಳರೊಳರೆ: **ಶಾಂತೀಶ್ವಪು,** ೧೨. ೧೧೧)

**ಪೆರ್ಮರೆ –** ದೊಡ್ಡ ಜಿಂಕೆ (ಪೆರ್ಮರೆಯುಂ ಮದಕರಿಯುಂ ಇರ್ಪ ಅರಣ್ಯಮೀ ಧರ್ಮಭೂಮಿಯಾಗದಿದೇನೋ: **ಸಮಯಪ,** ೧೪. ೧೩೫)

**ಪೆರ್ಮಱವೆ –** ಮಹಾ ಮರೆವು, ಮೂರ್ಛೆ, ಮೈಮರೆವಂತೆ ಮಾಡುವಂತದ್ದು (ಪೆರ್ಮಱವೆಯ ಮೆಯ್ಸಿರಿ ಪಾತಕದೆಱದಿಟ್ಟ ಪಯಸದ ಬೆಟ್ಟು ಕಾಮನ ಕೆಯ್ತಂ: **ಶಾಂತೀಶ್ವಪು,** ೬. ೭೨)

**ಪೆರ್ಮಟೆ –** ಭಾರಿ ಮಳೆ (ಆತನ ಚಾಗಂ ಪೆರ್ಮಟೆ ಜಾತಕಪೋತಕಮಂ ಅಲಸೆ ಕೊಳ್ವವೊಲ್ ಅರ್ಥಿವ್ರಾತಮಂ ಅಲಸಿದುದು ಪೆರ್ಮಾತಿನ ತೊಡವಿಂ ಮದಾಂದಕರಿಯಿಂ ಹರಿಯಿಂ: **ಶಾಂತಿಪು,** ೯. ೧೫೪)

**ಪೆರ್ಮಾತು–** ಗರ್ವದ ಮಾತು (ಭಯಮೇಕೆ ಅಕ್ಕುದದೆಂತುಟೆಂದು ಅದಟುಮಂ ಪೆರ್ಮಾತುಮಂ ಭೂತಧತ್ರಿಯೊಳೋರಂತೆ ನೆಗಟ್ಚಿ: **ಪಂಪಭಾ,** ೧೨. ೧೭೫); ಗಂಭೀರ ನುಡಿ (ಭೂತಳದೊಳ್ ಅರ್ಥವಿಹೀನನ ಶಥಂ ಅಣ್ಮು ಪೆರ್ಮಾತು ಕುಲಂ ನೆಗಟ್ತೆ ಇನಿತುಂ ವಿಫಲಂ: **ಕಾವ್ಯಾವಲೋ,** ೫೩); ಪ್ರಸಿದ್ಧಿ (ಆತನ ಚಾಗಂ ಪೆರ್ಮಟೆ ಜಾತಕಪೋತಕಮಂ ಅಲಸೆ ಕೊಳ್ವವೊಲ್ ಅರ್ಥಿವ್ರಾತಮಂ ಅಲಸಿದುದು ಪೆರ್ಮಾತಿನ ತೊಡವಿಂ ಮದಾಂದಕರಿಯಿಂ ಹರಿಯಿಂ: **ಶಾಂತಿಪು,** ೯. ೧೫೪)

**ಪೆರ್ಮೆ –** ಹಿರಿಮೆ (ಪರಮಾರ್ಹಂತ್ಯಪ್ರಭೆ ಕುಡುಗೆ .. .. ಸಂಪ್ರೀತಿಯಿಂ .. .. ಪೆರ್ಮೆಯಂ ಕೇಸರಿಪೀಠಂ ಕಾಂತಿಯಂ: **ಲೀಲಾವತಿ,** ೩. ೭೦)

**ಪೆರ್ಮೆತನ –** ದೊಡ್ಡಸ್ತಿಕೆ (ಕೆಮ್ಮನೆ ಅವಕ್ಕೆ ಪೆರ್ಮೆತನಮಂ ಬಱೆದೇಱೆಸಿ ಸೂಱೆವೋದಪರ್: **ಸಮಯಪ,** ೫. ೬೪)

**ಪೆರ್ವಡಹ –** ಸುರಿಮಳೆ, ಜಡಿಮಳೆ (ಪಕ್ಷಿಗಳಿರ್ದುದೆಱಂಕೆಯಗ್ರದಿಂ ಜಲಲವಬಿಂದುಗಳ್ಸುರಿಯೆ ಪೆರ್ವಡಹು ಬಿಡೆ ಸೋರ್ವಗುರ್ವಿನೊಳ್: **ಶಾಂತೀಶ್ವಪು,** ೧೨. ೫೭)

**ಪೆರ್ವಡುಕೆ** – ತೀರ ಹೊಲಸು (ನರವಿನ ಪುತ್ತಂ ಅಮೇಧ್ಯದ ತವರ್ಮನೆ ಕೀವಿನ ಕೊಂಡಂ ಎಲ್ವಿನಾಗರವು ಅಱಿದೋಲ ಪೆರ್ವಡುಕೆ: **ಸಮಯಪ,** ೬. ೩೪)

**ಪೆರ್ವಱೆ** – ದೊಡ್ಡ ಹರೆ [ವಾದ್ಯ] (ಎಡೆಯೊಳ್ ದೂಂಟಿಂದೆ ದೂಂಟಿಂಗೆ ಪೆರ್ವಱೆಯಂ ಪೊಯ್ಸಿ ಕೆಲಕ್ಕೆ ನಾಣ್ಚಿ ತಲೆಗುತ್ತಿರ್ಪ ಆಕೆಯೇಂ ಜೋಡೆಯೇ: **ಪಂಪಭಾ** ಪರಿಷತ್ತು, ೪. ೮೨)

**ಪೆರ್ವಟು** – [ಪಿರಿದು ಪಟು] ದಟ್ಟ ಕಾಡು (ಅಂತೆಂತಾನುಮೆಯ್ದೆವಂದು ಉಜ್ಜಯಿನಿಯ ಪಡುವಣ ಪಡರ್ವಟುವಂ ಕಟೆದು: **ಪಂಪರಾ,** ೭. ೧೦೩ ವ)

**ಪೆರ್ವೈತ್ತಿಕ** – ಪಿತ್ತವಿಕಾರ (ವಿಮೋಹವಶದಿಂ ಪೆರ್ವೈತ್ತಿಕಂಗೊಡೆ ಇಂ ಜಿನವಾಕ್ಯಾಮೃತಸೇವೆಯಿಂ ಕಿಡಿಸಿ ಇದಂ: **ಜೀವಸಂ,** ೧೦. ೧೭)

**ಪೆರ್ಬಾವು** – ಹೆಬ್ಬಾವು, ದೊಡ್ಡ ಸರ್ಪ (ಮಾಣಿಕ ಭಂಡಾರಂ ಸುವರ್ಣ ಭಂಡಾರಂ ಪಟ್ಟಿಸಭಂಡಾರಂಮೆಂದಿವಱೊಳ್ ಮೋಹಿಸಿದ ಬುದ್ಧಿಯನೊಡೆಯನಾಗಿ ಆರ್ತಧ್ಯಾನದಿಂ ಸತ್ತು ಪೆರ್ವಾವಾಗಿ ಪುಟ್ಟಿ: **ವಡ್ಡಾರಾ,** ಪು ೧೪೦ ಸಾ ೨೨)

**ಪೆರ್ವಿದಿರ್** – ಹೆಬ್ಬಿದಿರು, ದಟ್ಟ ಬಿದಿರ ಮೆಳೆ (ಒಣಗಿದುದೊಂದು ಪೆರ್ವಿದಿರ ಪೆರ್ವೊದಱೆಂ ಮೊರೆದು ಉರ್ವಿದ ಆಶುಶುಕ್ಷಿಣಿಯವೊಲ್ ಆಂತ ಖಟ್ಟಿನಿವಹಕ್ಕೆ ರಥಕ್ಕೆ ದಟಿಕ್ಕೆ ಮತ್ತವಾರಣನಿವಹಕ್ಕೆ ತಕ್ಕಿನ ಅಭಿಮನ್ಯುವ ಕೂರ್ಗಣೆ ಪಾಯ್ದು ನುಂಗಲುಂ ನೋಣೆಯಲುಂ ಉರ್ಚಿಮುಕ್ಕಲುಂ ಇದೇಂ ನೆಱೆ ಕಲ್ತುವೊ ಯುದ್ಧರಂಗದೊಳ್: **ಪಂಪಭಾ** ಪರಿಷತ್ತು, ೧೧. ೯೪)

**ಪೆರ್ವೊದಱ್** – ದಟ್ಟವಾಗಿ ಬೆಳೆದ ಪೊದೆ (ಒಣಗಿದುದೊಂದು ಪೆರ್ವಿದಿರ ಪೆರ್ವೊದಱೆಂ ಮೊರೆದು ಉರ್ವಿದ ಆಶುಶುಕ್ಷಿಣಿಯವೊಲ್ ಆಂತ ಖಟ್ಟಿನಿವಹಕ್ಕೆ ರಥಕ್ಕೆ ದಟಿಕ್ಕೆ ಮತ್ತವಾರಣನಿವಹಕ್ಕೆ ತಕ್ಕಿನ ಅಭಿಮನ್ಯುವ ಕೂರ್ಗಣೆ ಪಾಯ್ದು ನುಂಗಲುಂ ನೋಣೆಯಲುಂ ಉರ್ಚಿಮುಕ್ಕಲುಂ ಇದೇಂ ನೆಱೆ ಕಲ್ತುವೊ ಯುದ್ಧರಂಗದೊಳ್: **ಪಂಪಭಾ** ಪರಿಷತ್ತು, ೧೧. ೯೪)

**ಪೆಲ್ಲಯಿಸು** – ತುಂಬು, ಆವರಿಸು (ವರಸುಧಾಜಳಪ್ರವಾಹಂ ಪ್ರಸರಿಸಿ ಪರಿದು ಮಂದರೋದಾರಕಂದರ ದರಿಪ್ರದೇಶಂಗಳೊಳೆಲ್ಲಂ ಅಲ್ಲಗಲ್ಲಿಗೆಲ್ಲಿಯಾನುಂ ಪೆಲ್ಲಯಿಸಿ ನಿಂದುಂ: **ವರ್ಧಮಾಪು,** ೧೨. ೨೪ ವ)

**ಪೆಲ್ಲಾಪೆಲ್ಲಿ** – ಚೆಲ್ಲಾಪಿಲ್ಲಿ (ಗುದಿಗೆಗಳಂ ಪಿಡಿದು ಕಿಡಿಗುಟ್ಟಿದಂತೆ ಮೇಘಮುಖದೊಳೆ ತಾಗೆ ಪೆಲ್ಲಾಪೆಲ್ಲಿಯಿಂ ಭರಂಗೆಯ್ದು ಕಾದುವಲ್ಲಿ: **ವರ್ಧಮಾಪು,** ೯. ೫೫ ವ)

**ಪೆಸರ್ಗೊಳ್** – ಹೆಸರು ಹೇಳು, ಹೆಸರಿಸು (ಜೈನಸಮಯಿಗಳುಮಂ ಪೆಸರ್ಗೊಂಡನಿತಱೊಳೆ ಕಿನಿಸುವಂ .. .. ಭವಾಬ್ಧಿಯೊಳ್ ಬೇವಾತಂ: **ಸಮಯಪ,** ೧೩. ೪೩): ಹೆಸರು ಪಡೆ, ಖ್ಯಾತಿಗೊಳ್ಳು (ದ್ವಾರಾವತೀಪುರಂ ಪುರಂದರಪುರೀವಿಳಾಸಮಂ ಪೆರ್ಗೊಂಡಂತೆ ಮೆಱೆದಿರ್ಪುದು: ೧೨. ೪೩ ವ)

**ಪೆಳರ್ವಡು** – ಭಯಪಡು (ಬಿಕ್ಕನೆ ಬಿರಿವಂತೆ ಬಂದ ಬಲದೊಳ್ ಪೆರ್ವಟ್ಟು ಮದಕ್ಕೆ ವಂದ ಕಂಪಿನ ಕಳಭಂಬೊಲಿರ್ದುದತಿದರ್ಪ ರಸಾಕರನದೊಂದು ಸೂಕರಂ: **ನೇಮಿನಾಪು,** ೩. ೬೫)

**ಪೆಳವಳಿಸು** – ಪೆಳ್ವಳಿಸು, ನಡುಗು (ಭಯಂಗೊಳ್ವ ಬೆಳ್ಳರುಮಂ ಉಬ್ಬರಿಸುವ ಕುರುಡರುಮಂ ಪೆಳವಳಿಸುವ ಕಿವುಡರುಮಂ ಕಂಡು: **ಲೀಲಾವತಿ,** ೫. ೧೧೪ ವ)

**ಪೆಳಱಿಸು** – ಹೆದರಿಸು (ಉಂಜೆಯ ದನಿ ದಿಕ್ಪಾಲರನಂಜಿಸೆ ತಳ್ತೊಗೆವ ಕೋಡ ಕಾಳೆಯ ದನಿ ದಿಕ್ಕುಂಜರಮಂ ಪೆಳಱಿಸೆ ನಭಮಂ ಜೇವೊಡೆಯುಲಿಪು ಸುತ್ತಿ ಮುತ್ತಿತ್ತಾಗಳ್; **ಪಂಪರಾ,** ೪. ೫೬)

**ಪೆಳಱು** – ಭಯಪಡು (ವದನಸುಧಾಸೂತಿ ಬೆಳಗೆ ಪೆಳಱಿದ ತಮಮಿಂ ಪುದಿದು ಪೆಱಗಿರ್ದುದು ಎನಿಪುದು ಮದಗಜಗಮನೆಯ ವಿನೀಳಕೇಶಕಳಾಪಂ: **ಆದಿಪು,** ೮೨); ಹೆದರಿಸು (ಸೀಧುಸೀಕರಮಾದ ಉಗ್ರವಸಂತದಂತಿ ಪೆಳಱೆತ್ತು ಒಲ್ದಿರ್ದಗಲ್ದಿರ್ದೊರು: **ಶಾಂತಿಪು,** ೭. ೧೩೭); ಭಯ (ಬಿತ್ತರಿಪ ಬಟಿಲ್ ಪೆಳರ್ವರಸು ಸುತ್ತುವ ಅಪಾಂಗಮಾಲೆಯಿಂ ಬರೆ: **ಕಾದಂಸಂ,** ೭. ೧೨)

**ಪೆಳ್ವಳಿಸು** – ಪೆಪ್ಪಳಿಸು, ಭಯಪಡು, ನಡುಗು; ಪಿಳಿಪಿಳಿ ನೋಡು (ಇದೇನೆನುತ್ತುಂ ಆಂ ಪೊಟಿಲೊಳಗಿರ್ದು ಮೆಲ್ಲನೆ ನಿಳ್ಕಿ ನಿಳ್ಕಿ ಪೆಳ್ವಳಿಸಿ ನೋಟ್ಪನ್ನೆಗಂ: **ಕಾದಂಸಂ,** ೧. ೪೮ ವ)

**ಪೆಱಕಣ್ದೆಱವು** – ಹಿಂದಿನದಕ್ಕೆ ಕಣ್ಣು ತೆರೆಯುವುದು, ಹಿಂದಿನ ಜನ್ಮದ ನೆನಪು (ಅಚ್ಯುತಕಲ್ಪದ ಶುಕ್ಲಲೇಶ್ಮೆ ಲೆಪ್ಪದ ಕರು ವಜ್ರದಂಡದ ಬಲಂ ಕೊಳೆಪುದ್ಗತ ತಿಗ್ಮರೋಚಿ ಬಣ್ಣದ ರುಚಿ ಮಿಂಚುಮಿಂಚು ಪೆಱಕಣ್ದೆಱೆವಾಗಿರೆ: **ಅನಂತಪು,** ೬. ೧೮)

**ಪೆಱಕಾಲ್ಗೊಳಿಸು** – ಹಿಂದಿನ ಕಾಲುಗಳ ಮೇಲೆ ನಿಲ್ಲಿಸು (ಅಶ್ವಮನೇಱುತೆ ಪೊಳಯಿಸಿ ಮಿಗೆದಂಡೆಗುಡುತಿದಿರ್ಚುತೆ ಪೆಱಕಾಲ್ಗೊಳಿಸಿ ಪೆಡಂಮೆಟ್ಟುತ್ತ: **ರಾಜಶೇವಿ,** ೧೩. ೮೫)

**ಪೆಱಗಡಿಯಿಡು** – ಹೆಜ್ಜೆ ಹಿಂದಿಡು (ಭರತಜರೊಳ್ ಮುನ್ನಿಲ್ಲದ ಪರಿಭಾಷೆಯಂ ಉಂಟುಮಾಡಿ ಪೆಱಗಡಿಯಿಟ್ಟಂ ಕುರುರಾಜಂ ಎಂದು ಲಜ್ಜಾಭರದಿಂದಂ ತಲೆಯನೆಱಗಿದಂ ಧರ್ಮಸುತಂ: **ಗದಾಯು,** ೬. ೪೦)

**ಪೆಱಗನೆ** – ಹಿಂದೆಯೇ (ಮತ್ತೋರ್ವಳ್ ಕನ್ನಡಿಯಂ ನೋಡುವಾಗಳ್ ಅಱೆಯಲೀಯದೆ ಪೆಱಗನೆ ಬಂದು ನಲ್ಲಂ ನಿಂದಿರಲ್: **ಲೀಲಾವತಿ,** ೨. ೫೮ ವ)

**ಪೆಱಗಂ ತಗುಳ್** – ಬೆನ್ನಟ್ಟು (ಬಲದೇವನನುಮತದೊಳ್ ಪೆಱಗಂ ತಗುಳ್ವ ಯಾದವಬಲಮುಂಟಪ್ಪಡಂ ಅಂಬುಗಾಣಿಸಲ್ ನೀನೆ ಸಾಲ್ವಯ್: **ಪಂಪಭಾ,** ೫. ೨೦ ವ)

**ಪೆಱಗಣ್** – ಹಿಂಬದಿ (ಅವರ್ಗಳನಿಬರುಂ ಪೆಱಗಣ್ಗುರುಳ್ದು ಬಿಟ್ಟೋಡಿದು ಮಹಾಚೋದ್ಯಂ ಸಾರೆ ಪೋಗಿ ನೋಟ್ಪೆವೆಂದು ಪೋಪರ್: **ವಡ್ಡಾರಾ,** ಪು. ೯೬, ಸಾ. ೭)

**ಪೆಱಗಣ** – ಹಿಂಬದಿಯ (ಬೇಲಿಯ ಕೆಲದೊಳಲ್ಲದೆ ಪೆಱಗಣ ಉಲುಪಿಂಗಂ ಉಳ್ಳೊಳಕ್ಕಂ ಗೆಂಟಾಗಿ ಬೀಡಂ ಬಿಡಿಸಿ: **ಪಂಪಭಾ,** ೫, ೪೭ ವ); ಹಿಂದೆ ಸಂಭವಿಸಿದ (ಉಪವಾಸಕ್ಕಲಸಿ ಕರಂ ತಪಮಂ ಬಿಸುಡಲ್ಕೆ ಬಾರದವನೀತಳದೊಳ್ ವಿರೀತಮಾಗೆ ಪೆಱಗಣ ತಪದಿಂದಲ್ಲದೆ ಪೊಗಟ್ತೆಯಾಗದು ಬೇಗಂ: **ಧರ್ಮಾಮೃ,** ರ. ೨೬)

**ಪೆಱಗಾಗು** – ಹಿಂದಾಗು, ಹಿಂದೆ ಬೀಳು (ಪೆಱೆಯ ವಿಲಾಸಮದೀಗಳ್ ಪೆಱಗಾಯ್ತೆನೆ ರೂಪವತಿಯ ಪೆಱೆನೊಸಲೆಸೆಗುಂ: **ಮಲ್ಲಿನಾಪು,** ೩. ೬೭)

**ಪೆಱಗಿಕ್ಕು** – ಹಿಂದಕ್ಕೆ ಸರಿಸು, ಹಿಂದಿಡು (ಸುಯೋಧನಂ ಎನಗೆ ಒಳ್ಳಿಕೆಯ್ದು ಕೃತಮಂ ಪೆಱಗಿಕ್ಕಿ ನೆಗಟ್ತೆ ಮಾಸೆ ನಣ್ಪಿನ

ನೆವದಿಂದೆ ಪಾಂಡವರಂ ಆಂ ಒಳವೊಕ್ಕಡೆ ನೀಮೆ ಪೇಸಿರೇ: **ಪಂಪಭಾ,** ೯. ೬೮); ಮೀರು, ಉಲ್ಲಂಘಿಸು (ಸಂಧಿಯಾದಪುದೆನುತ ಮಱುಗದಿರ್ ಅಣ್ಣನ ಮಾತಂ ಪೆಱಗಿಕ್ಕುವೆಂ ಅಜ್ಜನಿದ್ದು ಮಾಣ್ಬೊಡಮೀಯೆಂ: **ಗದಾಯು,** ೧. ೭೨)

**ಪೆಱಗು** – ಹಿಂದೆ (ಅಱೆಯಮೆಯಿಂದಂ ಪೋದುವು ಪೆಱಗಣ ಜನ್ಮಂಗಳ್ ಎಂದು ಆಪೊತ್ತು ಮಱುಗಲ್ವೇಡ: **ಸಮಯಪ,** ೧. ೧೪೧)

**ಪೆಱಗುಗುಡು** – ಬೆನ್ನು ತೋರಿಸು, ಹಿಂದಿರುಗು (ಅಱೆದು ಶುಕಪ್ರಿಯಕಾಮಿನಿ ಗಱೆ ಗದಗದ ನಡುಗೆ ಪಿಡಿಗೆ ಪೊಣ್ಮಿದ ಮುನಿಸಿಂ ಪೆಱಗುಗುಡೆ ಕೀರಕಾಮುಕನೆಱಗಿದಂ ಇನಿಯಳ ಪದಕ್ಕೆ ಸಂಭ್ರಮದಿಂದಂ: **ಲೀಲಾವತಿ,** ೬. ೯೮)

**ಪೆಱಗುಗೆಯ್** – ವಿಮುಖವಾಗು (ಕೆಲರ್ ಕಾಣ್ಬುಮೆಂದು ಕುಡಿಯಲುಂ ಪೆಱಗಣಿಂ ಪೆಱಗುಗೆಯ್ದು ಜಗುಳ್ದುಂ; **ಆದಿಪು,** ೯. ೯೨ ವ); ಕಡೆಗಣಿಸು

**ಪೆಱಗೆ** – ಹಿಂಬದಿಗೆ (ಮಱೆದು ಅರಸಂ ಒಱಗಿದಣ ಎಂದು ಒಯ್ಯನೆ ಸಾರ್ದು ಪೆಱಗೆ ಪಟ್ಟಪ್ಪಾರ್ಗಳ್: **ಯಶೋಧಚ,** ೨. ೫೭); ಹೊರಗೆ (ಜೀವಂ ಪೋದೊಡೆ ಪೆಱಗೆ ಕಳೇವರದಂಗಮನೆ ಗಂಗೆಯೊಳಿಕ್ಕಿದೊಡತ್ತಾವನೊ ಸಗ್ಗಮನೆಯ್ದುವಂ: **ಸಮಯಪ,** ೧೦. ೧೨೫); ಆನಂತರ; ಹಿಂದೆ (ಅಲ್ಲಿಂ ಪೆಱಗೆ .. .. ಎಟ್ಟಿಂದಂ ಚಂಡಿಕೆವೆರಸಿದ ಬಾಲಕಂ ಮತ್ತೊರ್ವಂ: **ಕಾದಂಸಂ,** ೧. ೧೪ ವ ಮತ್ತು ೧೫)

**ಪೆಱಗೆಡೆ** – ಹಿಂದೆ ಬೀಳು, ಹಿಮ್ಮೆಟ್ಟು (ತನ್ನ ಭಿಕರಾಘಾತದೊಳ್ ಜಾಱೆ ಪಱೆವಱೆದು ಪೆಱೆಗೆಡೆದು ತಾಱವಱಾದ ಕಾಂಭೋಜಾವಳಿಗಳ .. .. ಕೈಗುತ್ತಿ ನೋಡಿಯುಂ: ಗದಾಯು, ೬. ೨೮ ವ)

**ಪೆಱತು** – ಮತ್ತೊಂದು, ಬೇರೆ (ನಿಜಸೌಜನ್ಯ ಪ್ರಭಾವಮಂ ಮೆಱೆವಿರಲ್ಲದೆ ಏಂ ಪೆಱತುಂಟೇ: **ಕಾದಂಸಂ,** ೫. ೬೦)

**ಪೆಱದೆಗೆ** – ಹಿಂದೆಗೆ, ಹಿಮ್ಮೆಟ್ಟು (ತಲ್ಲಣದಿಂ ಪೆಱದೆಗೆವ ಬಿದಿವೆಡಂಗನೆಂಬ ಬಿಂಜಮಾಣಿಕನೆಂಬ ಹರಿರಾಯನೆಂಬ ತೋರಹತ್ತನೆಂಬ ಚೌವಟಮಲ್ಲನೆಂಬ ಮುಱೆವ ರಕ್ಕಸನೆಂಬ ರಾಯದಟಸೂಱೆಕಾರನೆಂಬ ತನ್ನೊಡ್ಡಿನ ಪೇರಾನೆಗಳಂ ಕಂಡು: **ಕಬ್ಬಿಗಕಾ,** ೨೨೩ ವ)

**ಪೆಱದು** – ಪೆಱತು (ತಮ್ಮ ಕೊಂಡು ಪೋದ ಭಂಡಮಂ ಮಾಱೆ ಪೆಱದಂ ತಮ್ಮ ನಾಟ್ಕೆ ಅಪೂರ್ವಮಪ್ಪ ಭಂಡಮಂ ತೀವಿಕೊಂಡು .. .. ಬಂದಿರ್ದರ್: **ವಡ್ಡಾರಾ,** ಪು ೭೧, ಸಾ ೨೫)

**ಪೆಱಪಿಂಗಿಸು** – ಹಿಂದೆ ಬೀಳುವಂತೆ ಮಾಡು (ರಜನೀತಿಸ್ಮರಣೆಯಂ ಪೆಱಪಿಂಗಿಸಿ ಪದ್ಮಿನೀವಧೂ ವದನಸರೋಜಮಂ ಪದಪಿಂದಮೆ ನೋಡುವೆಂ: **ಕಾದಂಬ,** ೮. ೧೦೪)

**ಪೆಱಪಿಂಗು** – ಹಿಂದೆ ಸರಿ (ಕಡು ಗಡಿಯಪ್ಪ ಎರಡಾನೆಗಳ್ ತಮ್ಮೊಳ್ ಪೋರೆಲ್ ಸಾರ್ದುಂ ಪೆಱಪಿಂಗಿ ಪೋದುದುಮಂ: **ವಡ್ಡಾರಾ,** ಪು ೮೫, ಸಾ ೨೫); ಪರಿಹಾರಗೊಳ್ಳು (ಸ್ಮರಶಾಪಂ ಪೆಱಪಿಂಗೆ ಸೂಳೆಯರೊಳಂಗಂವೊಂದಿ ಕೂಡಿರ್ದಗಂಡರನಾಟಂದಲೆದಟ್ಟಿ ಪೊಯ್ದು ಕಳೆದು .. .. ಸೂಳೆಯರೊಳುಗ್ರಾಟೋಪದಿಂ ಬಲ್ಮೆಯಿಂ ನೆರವಂ ಭೂಭುಜನಂದನಂ: **ಧರ್ಮಾಮೃ,** ೨. ೨೫)ಹೊರಬರು (ಅವಳ ನಗೆಮೊಗದೊಳೊಯ್ಯನೊಯ್ಯನೆಱಗಿದ ಕಣದ ಎಸೆವ ಪೊಸದಾವರೆಗೆಱಕದಿಂದೆಱಗಿದ ಪರಿದುಂಬಿಯಂತೆ ಪೆಱಪಿಂಗಲಾರ್ತುವಿಲ್ಲ : **ಕಬ್ಬಿಗಕಾ,** ೬೩ ವ)

**ಪೆಱಪೆಱಗನೆ** – ಹಿಂದೆ ಹಿಂದೆಯೇ (ನುಡಿದು ತಪ್ಪಿದೊಡೆ ನುಂಗಲಱೆಯದೊನಲ್ಲೆನೆಂದು ರೂಪುಗರೆದು ಪೆಱಪೆಱಗನೆ ಬರುತಿರ್ದಂ: **ಸುಕುಮಾಚ,** ೭. ೧೭ ವ)

**ಪೆಱರ್** – ಬೇರೆಯವರು, ಅನ್ಯರು (ಎನ್ನ ತೆಱದಿಂದಾರ್ ನೋಂತರ್ .. .. ಎಂದು .. .. ರಾಗಿಪಂ ಭುವನದೊಳ್ ಧನ್ಯಂ ಪೆಱರ್ ಧನ್ಯರೇ: **ಸಮಯಪ,** ೬. ೬೮)

**ಪೆಱರೊಡವೆ** – [ಪೆಱರ+ಒಡವೆ] ಬೇರೆಯವರ ಸ್ವತ್ತು (ಮಗಳಂ ಈವೆನಪ್ಪೊಡೆ ಕೊಡಗೂಸೆಂಬುದು ಪೆಱರೊಡವೆ ಮಗನಂ ಈವೆನಪ್ಪೊಡೆ ಸಂತತಿಚ್ಛೇದಮುಂ ಪಿಂಡಚ್ಛೇದಮುಂ ಅಕ್ಕುಂ ಅದಱೆಂದ ಎನ್ನನೆ ಕುಡಲ್ವೇಳ್ಕುಂ: **ಪಂಪಭಾ,** ೩. ೨೫ ವ)

**ಪೆಱಲಾಗ** – ಪಡೆಯಲಾಗದು (ಭಟಾರಾ ಲವಟುಗಳ ಕೈಯಲ್ ಪಗಲುಣಲುಂ ಅಡಲುಂ ಪೆಱಲಾಗ ಮೇಲ್ವಾಯ್ದು ಎಱೆದು ಕೊಂಡುಂಬರ್: **ವಡ್ಡಾರಾ,** ಪು ೯೨, ಸಾ ೩)

**ಪೆಱವು** – ಬೇರೆಯವು (ಚಿಕಿತ್ಸಾಗೂಢ ಪ್ರೌಢಮಪ್ಪ ಗದಾಂಗಮುಮಂ ಪೆಱವುಂ ವಿದ್ಯಾಕಳಾ ಕಳಾಪಮುಮಂ ತ್ರಿದಶವರ್ಗಕ್ಕುಪದೇಶಂಗೆಯ್ಯುತ್ತುಂ ಬಾಲಭಾವಮಂ ಪೆಱಗಿಕ್ಕಿ ಯೌನಪ್ರಾದುರ್ಭಾವಕ್ಕೆ ಇದಿಱಾಗಿ: **ಶಾಂತಿಪು,** ೧೦. ೯೦ ವ)

**ಪೆಱೆಸು** – ಹೆರಿಸು, ಹೆರಿಗೆ ಮಾಡಿಸು (ದೇವಕಿಯಮಳಂ ಪೆತ್ತಳ್ ಜೀವಂಜಸೆ ಪೆಱೆಸೆ ಹರಿಯ ಬೆಸದಿಂದಂ ಮಾಯಾವಿ ಪರಿತಂದು ನೈಗಮದೇವಂ ತಂದಿಕ್ಕೆ ಮುಂದೆ ಮಾಯಾಶಿಶುವಂ: **ನೇಮಿನಾಪು,** ೭. ೨೯)

**ಪೆಱು** – ಹೆರು, ಹಡೆ (ವಿತತಶ್ರೀಸಂಪತ್ತಂ ಶತಮಖನದೃಶಾನುಭಾವನೊಲವಿಂ ಪೆತ್ತಂ: **ಕವಿರಾಮಾ,** ೨. ೪೪); ಪಡೆ (ಗುಣಕ್ಕಾಗರಮಾಗಿ ನಿಂದ ತನುವಂ ಪೆತ್ತು ಅಟ್ಟೆಯಿಂ ಜೈನದೊಳ್ ನೆಗಱಂ ತಾನೆನಿಪಂ: **ಸಮಯಪ,** ೬. ೬೯); ನಿರ್ಮಿಸು (ದ್ಯುನದೀಕಂಜಾಳಗೆಟ್ಟಿರ್ಪಳಿ ಸಮುದಯಮೋ .. .. ತಿಗ್ಮನಿದಾಘೋರ್ವಿಜಮಂ ತೂಳ್ದಿಸನಿಲಪಥಶ್ರೀ ಪೆಱುತ್ತಿರ್ಪ ಭಾನೀಕಿನಿಯೋ ಪೇಟೆಂಬಿನಂ ಪೊಣ್ಮಿದುದು ಎಸೆವ ಅಸಿತೋತ್ತಾನ ಮೇಘಪ್ರತಾನಂ: **ಕುಸುಮಾಕಾ,** ೬. ೯); ಮರಿ ಹಾಕು (ಮಧುರಾಲಾಪೆ ಮಱುದಿವಸಂ ತತ್ತಿಗಳಂ ಪೆತ್ತು ಬಟಿಕ್ಕೆ ನಿಜಪ್ರಾಣೇಶ್ವರನುಂ ತಾನುಂ ಕುಡುಕಂ ಕೊಳಲಡವಿಗೆ ಪೋಪುದುಂ: **ಪಂಚತಂತ್ರ,** ೨೨೫ ವ); ಮಗುವನ್ನು ಪಡೆ (ಪೆಱು– .. .. ಪ್ರಸೂತೇ ಚ: **ಶಬ್ದಮದ,** ಧಾ ೮೮೩)

**ಪೆಱುಕು** – ಹೆಕ್ಕು (ಪೆಱುಕಿ ತಿಂದು ಬಾಟಿಪ್ಪೊಂ ಬೈಕಂಗುಳಿ ಬೇಡಿ ಪೊಟಿಲೆಲ್ಲಮಂ ತೊಟಿಲ್ದು ಬಸಿಱಿಂ ಪೊರೆವೊಂ ದೇಸಿಗಂ ಆರುಮಿಲ್ಲದೊಂ: **ವಡ್ಡಾರಾ,** ಪು ೪೬, ಸಾ ೮)

**ಪೆಱೆ** – ಚಂದ್ರ (ಪೆಱೆಯ ವಿಲಾಸಮದೀಗಳ್ ಪೆಱಗಾಯ್ತೆನೆ ರೂಪವತಿಯ ಪೆಱೆನೊಸಲೆಸೆಗುಂ: **ಮಲ್ಲಿನಾಪು,** ೩. ೬೭)

**ಪೆಱೆಯಂಬು** – ಅರ್ಧಚಂದ್ರಾಕಾರದ ಬಾಣ (ಪೆಱೆಯಂಬಂ ತೀವಿ ತೊಟ್ಟು ಹಸ್ತನ ತಲೆಯಂ ಪಱೆಯೆಚ್ಚಂ: **ಪಂಪರಾ,** ೧೩. ೮೭)

**ಪೆಟಕು** – ಜಗಳ (ಒಂದರ್ಥಕ್ಕೆ: ಪೆಟಕೆಂದು ಜಗಳಂ: **ಶಬ್ದಮದ,** ೩೩ ವೃತ್ತಿ ೮೬)

**ಪೆಟವ** – ಹೆಳವ, ಊನಗಾಲಿನವನು (ಸಾರಥಿ ಪೆಟವಂ ವಿಷಮವಿಷೋರಗನಾ ನೇಣು ಹಯಗಳೇೞು ಆಕಾಶಂ ದಾರಿ

ರಥಚಕ್ರಮೊಂದೆ ಆಶ್ಚರ್ಯವಿಂದುವರ್ಕನ ಚರಿತಂ: **ಸಮಯಪ,** ೧೧. ೫೦)

**ಪೆಱಜು** – ಚದುರಿ ಹೋಗು (ಚಕೋರಂಗಳ ಬಱಗಂ ಪೆಱಜಿದುವು ಕರಂ ದಿನಮುಖದೊಳ್: **ಕುಸುಮಾಕಾ,** ೧೪. ೧೯)

**ಪೆಟ್ಟಳಿಸು –** ನಡುಗು (ರಾವಣನ ದಿವ್ಯ ರಥದ ಗಜಾವಳಿ ಪೆಟ್ಟಳಿಸೆ ಬೆರ್ಚೆ ರವಿಯ ಹಯಂಗಳ್ ತೀವಿದುದು ಗಗನಮಂ ವಜ್ರಾವರ್ತ ಧನುರ್ಲತಾ ಗನ ಜ್ಯಾರವಮಂ: **ಪಂಪರಾ,** ೧೪. ೧೪೧)

**ಪೇಂಕುಳಿಗೊಳ್ –** ಹುಚ್ಚಾಗು (ದುಃಖದೊದವಿಂ ಬಾಯ್ವಿಟ್ಟು ಗೋಳಿಟ್ಟು ಪೇಂಕುಳಿಗೊಂಡು ಆದ ವಿಷಾದದಿಂ ಪುಱಿತು ಸತ್ತು ಇತ್ತ ಅಂತೆ ಕಾಲಾಂತರದೊಳ್: **ಸುಕುಮಾಚ,** ೫. ೨೦)

**ಪೇಂಟೆ –** ಹುಂಜ (ಸುಪಕ್ಷದಿಂದೆ ರಂಜಿಸಿದುದು ಪುಂಜಂ ಅಗ್ಗದ ಸುವಸ್ತುವಿನಂತಿರೆ ತಳ್ತು ಪೇಂಟೆಯೊಳ್: **ಯಶೋಧಚ,** ३. ೭೮)

**ಪೇಕುಳಿನಾಯ್ –** ಕ್ಷುಲ್ಲಕವಾದ ನಾಯಿ (ಪಳಿಯೆಂದೊಡೆ ಅಂಜುಗುಂ ಪೇಕುಳಿನಾಯೊಳಾಗಿ ಖಳಂ: **ಧರ್ಮಮಧು,** ೧. ೬೩)

**ಪೇಚಕ –** ಬಾಲದ ಬುಡ (ಪಡೆದುವು ಎತ್ತಾನುಂ .. .. ದಿಶಾದಂತಿ ದಿಕ್ಕರಿಣೀ ಪೇಚಕ ಚುಂಬನೈಕಸುಖಮಂ ಶೇಷೋರಗಂ ಭೋಗಿನೀ ಪರಿರಂಭೋತ್ಸವಮಂ: **ಪಂಪರಾ,** ೬. ೮೪)

**ಪೇಜವಿತಿ –** ಒಂದು ಬಗೆಯ ನಡಿಗೆ (ಗೋಮೂತ್ರ ಮಂಡಲಮುಂ ಆಕಾಶಂ ಪೇಜವಿತಿಯೆಂಬ ವಿಧಿಗಳೊಳ್ ಬಂದು ನೆಲೆಗಿಡಿಸಲುಂ ಪೊಲಗಿಡಿಸಲುಂ ಬಲ್ಲಂ: **ಶಾಂತಿಪು,** ३. ೨३ ವ)

**ಪೇಟಕ –** ಸಮೂಹ (ಇನಿತಮರ ಪಟಹ ಪೇಟಕಂ ಇನಿತಮರ ವಿಮಾನ ಪಟಲಂ ಇನಿತಮರ ಪತಾಕಿನಿ ಎಂದು .. .. ಬಂದರಮರ ಪರಿಬೃಢರಾಗಳ್: **ಪಂಪರಾ,** ೧೬. ೮೪)

**ಪೇಡಿ –** ಹೇಡಿ ಪೇಡಿಯಪ್ಪ ಅರಸಿನ ಮಾತಿನಂತೆ ಬೇಸಗೆಯ ಮುಗಿಲಂತೆ: **ಧರ್ಮಾಮೃ,** ೯. ೧३ ವ); ನಪುಂಸಕ (ನಪುಂಸಕಂ ಪೇಡಿ ಷಂಡಕಂ ತಾಂ ಷಂಡಂ: **ಅಭಿಧಾವ,** ೧, ೧೧. ೨೬)

**ಪೇನ್ –** ಹೇನು, ಕೂದಲಲ್ಲಿ ಸೇರುವ ಹುಳು (ಸೋರ್ಮುಡಿ ಸೀರ ಪೇನ ಪುಱುಪುತ್ತು: **ಸಮಯಪ,** ೫. ೬೪)

**ಪೇಪಂದಿ –** ಹೆಣ್ಣು ಹಂದಿ, ಹೇಲು ತಿನ್ನುವ ಹಂದಿ (ಬೆನ್ನೊಳ್ ನಾಳಿಬಿರ್ದು ಕಱಮೆಯಾಗಿ ಪುಱಿತು ನಮೆದು ಸತ್ತು ಮತ್ತಮಾ ಪೊಱಲೊಳ್ ಪೇಪಂದಿಯಾಗಿ ಪುಟ್ಟಿ: **ವಡ್ಡಾರಾ,** ಪು ೯, ಸಾ ೨)

**ಪೇರಡಗು –** ಹೆಚ್ಚಾದ ಮಾಂಸ (ದೆಸೆದೆಸಗೆ ನರಶಿರಂ ತೆತ್ತಿಸಿದುವು ಮದಿಲೊಳ್ ಅಬ್ಬೆ ಪೆರಡಗಗಿನ ಪೆರ್ಬೆಸನದೆ .. .. ಅವಲೋಕಿಪವೊಲ್: **ಯಶೋಧಚ,** ೧. ೫೭)

**ಪೇರಡವಿ –** ದಟ್ಟ ಕಾಡು (ಅತಿರೌದ್ರಮಾದ ಪೇರಡವಿಯೊಳಗೆ ಬರ್ಪಾಗಳ್: **ಕಾದಂಬ,** ೮. ೦ ವ)

**ಪೇರಡಿ –** ದೊಡ್ಡ ಪಾದ (ಪದದಾದಿಯ ಹ್ರಸ್ವಕ್ಕೆ ಬಹುಳತೆಯಿಂ ದೀರ್ಘಮಕ್ಕುಂ: ಪೇರಾನೆ ಪೇರಡವಿ ಪೇರೊಕ್ಕಲ್ ಪೇರಡಿ ಪೇರೊಡಲ್: **ಶಬ್ದಮದ,** ೧೯೧ ಪ್ರ); ನಾಯಿ (ನಾರಾಚಂ ಕವಲ್ಗಣ್ಣಿ ಪೇರಡಿ ಖಡ್ಗಂ ಬಡಿಕೊಳ್ಗಳೊಪ್ಪೆ ಜವದಿಂದೆಟ್ಟಿತಂದರಾ ಧೀವರರ್: **ಶಬರಶಂ,** ३. ೨३)

**ಪೇರಡ್ಡ –** ತಿರಸ್ಕಾರ ಮಾಡುವಿಕೆ (ಅಂತುದಾಸೀನಮಾನಸಂ ಮಸಕಮಿಲ್ಲದ ಸಾರ್ವಭೌಮಂ ಪೇರಡ್ಡಮಾಗಿ ಕೆಲದ ಚಕ್ರಾಯುಧದೊಳ್ ತಮ್ಮಂಗಬಾಹ್ಯವಸ್ತುವಂ ಪರಿತಂ ಮಾಡುತ್ತಿರೆ: **ಶಾಂತಿಪು,** ೧೦. ೧೧೬ ವ)

**ಪೇರಣಿ –** ದೊಡ್ಡ ಸೈನ್ಯ (ಅಂತು ಪೇರಣಿ ಪೆಣಮಯಮಾಗೆ ಮೇರೆದಪ್ಪಿದ ಪೂರ್ವಾಪರ ಪಾರಾವಾರ ವೀಚಿಯ ನಿಚಯಮೆನಿಸಿ: **ಪಂಪರಾ,** ೧३. ೫೬ ವ)

**ಪೇರರ್ವಿ –** [ಪಿರಿದು+ಅರ್ವಿ] ದೊಡ್ಡ ತಡಸಲು (ಪೇರರ್ವಿಗಳ್ವೆರಸು ಜಾಜಿನ ಪರ್ವತಂಗಳಂತೆ ಕೆಡೆದು: **ಪಂಪಭಾ,** ೧೦. ೯೬ ವ)

**ಪೇರೀಳೆ –** ಹೇರಿಳೆ (ಬಾಳೆಯ ಕರ್ಜೂರದ ಕಿತ್ತೀಳೆಯ ಕಂಮರದ ರಂಜಿಪಿಮ್ಮಾವಿನ ಪೇರೀಳೇಯ ನಾರಂಗದ ಕಂಚೀಳೇಯ ತನಿವಣ್ಣನಿಕ್ಕೆ ಮೆಲ್ದು: **ಧರ್ಮಾಮೃ,** ೧. ೧೨೦)

**ಪೇರುಡು –** ದೊಡ್ಡ ಉಡು (ಪೆಂಟನೆಳೆದಂತಾಗುತ್ತಿರೆ ಪೋದ ಪೇರುಡುಗಳ ಹಲ್ಲೆವಜ್ಜೆಗಳುಮಂ: **ಕುಸುಮಾಕಾ,** ೧೪. ೨೯ ವ)

**ಪೇರುರ –** ವಿಶಾಲವಾದ ಎದೆ (ನಿತ್ಯವಸಂತಂ ಪೇರುರುಮಾಗಿರೆ ತಾಳ್ದಿದರಾರೊ ಯಶೋಧರನೃಪೇಂದ್ರ ನೀನಲ್ಲದನ್ಯರ್: **ಯಶೋಧಚ,** ३. ೧)

**ಪೇರೊಡಲ್ –** ದೊಡ್ಡ ಹೊಟ್ಟೆ, ದೇಹ (ಕಾರಿರುಳ ತಿರುಳ ಬಣ್ಣ ಕೂರಿದುವೆನೆ ತೊಳಪ ದಾಡೆ ಮಿಳಿರ್ವ ಉರಿಗೇಸಂ ಪೇರೊಡಲ್ ಎಸೆದಿರೆ ಪುಟ್ಟಿದಂ ಆರುಂ ಅಗುರ್ವಿಸೆ ಮಗಂ ಘಟೋತ್ಕಚನೆಂಬಂ: **ಪಂಪಭಾ,** ३. ೨೦)

**ಪೇಲ್ –** ಮಲ (ಪಂದಿಗಳೊಡನಾಡಿದ ಕಱುವುಂ ಪಂದಿಯಂತೆ ಪೇಲಂ ತಿಂಗೆಂಬುದು: **ಧರ್ಮಾಮೃ,** ४६); ಮಲವಿಸರ್ಜಿಸು (ಪೇಲ್–ಮಲವಿಸರ್ಜನೇ: **ಶಬ್ದಮದ,** ಧಾ ೬೪೪)

**ಪೇಶಲ –** ಸುಂದರವಾದ (ಮನೋವಿಕಾಸಮಂ ಕನ್ನಡಿಸಿತ್ತು ಸೀತೆಯ ಮುಖಾಂಬುರುಹಂ ದರಹಾಸ ಪೇಶಲಂ: **ಪಂಪರಾ,** ೧೧. ೮೭)

**ಪೇಶಳ –** ಸುಂದರ (ಕಣ್ಗೊಳಿಸಿರ್ದುದಾ ವಧೂವರಸಲೀಳ ಪೇಶಳರಕ್ಕೆ ಪಾಣೀಗ್ರಹಣಂ: **ವರ್ಧಮಾಪು,** ३. ೯೫)

**ಪೇಶಿ –** ಮಾಂಸ (ದಿವ್ಯಾಹಾರಮೆತ್ತಲ್ ಪೂತಿಗಂಧಮಪ್ಪ ಪಿಶಿತ ಪೇಶಿಯೆತ್ತಲ್: **ವರ್ಧಮಾಪು,** ೬. ೪ ವ)

**ಪೇಸಿಕೆ –** ಹೇಸಿಕೆ, ಅಸಹ್ಯ (ನೀನಲಬ್ಧಸಮ್ಯಗ್ದರ್ಶನೆಯಪ್ಪುದಱಿಂ ಪೇಸಿಕೆಯಂ ತಾಳ್ದದೆ: **ಶಾಂತೀಶ್ವಪು,** ೮. ೧३೨ ವ)

**ಪೇಸು –** ಜುಗುಪ್ಸೆಪಡು (ಸುಯೋಧನಂ ಎನಗೆ ಒಳ್ಳಿಕೆಯ್ದ ಕೃತಮಂ ಪೆಱಗಿಕ್ಕಿ ನೆಗೞ್ತೆ ಮಾಸೆ ನಣ್ಪಿನ ನೆವದಿಂದೆ ಪಾಂಡವರಂ ಆಂ ಒಳವೊಕ್ಕಡೆ ನೀಮೆ ಪೇಸಿರೇ: **ಪಂಪಭಾ,** ೯. ೬೮)

**ಪೇಸುಗೆ –** ಜಿಗುಪ್ಸೆ (ಘೋರಂ ಕಷ್ಟಂ ಇದಂ ಪೊರ್ದಲಾಗದೆಂಬ ಪೇಸುಗೆಯಂ ಪತ್ತುವಿಡುವುದು: **ಚಾವುಂಪು,** ಪು. ३३४, ಸಾ. ೨೦)

**ಪೇಸುತಪ –** ಜಿಗುಪ್ಸೆ ತರುವ ತಪಸ್ಸು (ಭಾವಿಸುವಂದಿನಿತು ಪೇಸುತಪಮಂ ಕಾಣೆಂ: **ಧರ್ಮಾಮೃ,** ೭. ೬೮)

**ಪೇಸುಪತ –** ಹೊಲಸು (ಆ ನರಕಯೋನಿಯೊಳ್ ಪಿರಿದಾನುಂ ನಿರ್ಗಳಿತ ಪೂತಿಗಂಧವ್ರಾತಸ್ಥಾನಂಗಳ್ ಕಲಲಪರಿಮ್ಲಾನಂಗಳ್ ಪೇಸುಪತದ ಸಂತಾನಂಗಳ್: **ಶಾಂತೀಶ್ವಪು,** ೯. ೭೬)

**ಪೇಸೇಟಿಸ್** – ಜಿಗುಪ್ಸೆಯುಂಟಾಗು (ಪೆಸರ ನಾಯಕರಂ ಪೆಸೇಟಿ ಕೊಲ್ವುದುಂ ಕಂಡು ಇಂದಗಿ ಮುಟ್ಟೆವರ್ಪುದುಂ: **ಪಂಪರಾ,** ೧೧. ೧೩೨ ವ)

**ಪೇಳಿಗೆ** – [ಪೇಟಿಕಾ) ಪೆಟ್ಟಿಗೆ, ಬುಟ್ಟಿ (ತನಗೆ ತಕ್ಕನಿತು ದಾನಂಗೆಯ್ಯಲ್ವೇಟ್ಟುಮೆಂದು ದೇವರ ಪೇಳಿಗೆಯೊಳಿಕ್ಕಿ ಬಟಿಕ್ಕ ತಾನುಂ ಆಷಾಢಭೂತಿಯುಂ ಕ್ರೌಂಚಪುರಮಂ ಪೊಱಮಟ್ಟು ಕಿಱಿದಂತರಂ ಪೋಗಿ: **ಪಂಚತಂತ್ರ,** ೧೨೪ ವ)

**ಪೇಱು** – ಹೇರು, ಹೊರುವಷ್ಟು ಪ್ರಮಾಣ (ಒಂದು ಪೇಱು ಪೊನ್ನಂ ಕುಡುವೆಂ: **ವಡ್ಡಾರಾ,** ಪು. ೧೫೭, ಸಾ. ೨೨); ಹೊರಿಸು (ನನೆಯನೆ ಪೇಱಿ ಕೆಂದಳಿರೊಳೆಯ್ದೆ ಬಟಲ್ದೆಳಮಾವು: **ಆದಿಪು,** ೧. ೬೫)

**ಪೇಟಿಸ್** – ಹೇಳು (ಇಂದು ನೃಪಂಗೆ ಸಂಭವಿಸಿದಂ ಭುಜಶಕ್ತಿ ಸಮೀರನನಂದನಂ ನಂದನನೆಂದು ಪೇಟ್ದು: **ಕುಸುಮಾಕಾ,** ೬. ೧೦೪); ಆಜ್ಞೆಮಾಡು (ಅಂತು ಭೀಮಸೇನನಂ ಇಂದ್ರನ ಮೇಲೆವೇಟ್ವಂತೆ ಪೂರ್ವದಿಶಾಭಾಗಕ್ಕೆವೇಟ್ದು: **ಪಂಪಭಾ,** ೬. ೨೮ ವ); ನಿರೂಪಿಸು (ಒಂದರ್ಥಕ್ಕೆ: ಪೇಟ್ದನೆಂದು ನಿರೂಪಿಸಿದಂ: **ಶಬ್ದಮದ,** ೩೩ ವೃತ್ತಿ ೮೮)

**ಪೇಟಿಕ್ಕೆ** – ಹೇಳಿಕೆ (ತತ್ಪ್ರಪಂಚಮಂ ನಿಜಪ್ರಿಯಸಖಿಯ ಪೇಟ್ಕೆಯಿಂ ಕೇಳದು: **ಜಗನ್ನಾವಿ,** ೧೩. ೫ ವ); ಅಪ್ಪಣೆ (ಸುರರಾಜನದೊಂದು ಪೇಟ್ಕೆಯಿಂ ಸುರಪಥದಿಂದೆ ಬಂದುವಭಿಷೇಕಮಹೋತ್ಸವದೊಳ್ ಮುಕುಂದನಾ: **ಜಗನ್ನಾವಿ,** ೮. ೧೦೩)

**ಪೈತಿಗ** – ಪಿತ್ತವಿಕಾರಗೊಂಡ (ಈ ಪೈತಿಗಲರ್ಗೆ ಎಣೆಯಿಲ್ಲೆನುತುಂ ಚಿತ್ತಭವನಿತ್ತ ಜಯಸಂಪತ್ತಿಯ ಕಹಳಾರವಂಬೊಳ್ ಅಳಿರವಮಮೆಸೆಗುಂ: **ಪಾರ್ಶ್ವನಾಪು,** ೯. ೧೫)

**ಪೈತ್ತಿಕ** – ಪಿತ್ತಸಂಬಂಧಿ ದೋಷ (ಕಂಪಿಂದೇನಲೆದುದೊ ಪೈತ್ತಿಕದಂತಿರೆ ತಲೆಗೇಱುವ ಕುಸುಮನಿಚಯಮಾ ಕಾಶ್ಮೀರಂ: **ಆದಿಪು,** ೧೧. ೧೨೮)

**ಪೈಶಂಗಿತ** – ನಸುಹಳದಿ (ಅಧರಮಯೂಖಾಳಿಯಿಂದೆತ್ತಲುಂ ಪಾಂಡುರಿತಂ ಪೈಶಂಗಿತಂ ಕರ್ಬುರಿತಮರುಣಿಸಿತು ವ್ಯೋಮರಂಗಂ ಬೆಡಂಗಂ: **ಚಂದ್ರಪ್ರಪು,** ೧೨. ೭೭)

**ಪೈಶಾಚಕ** – ದೆವ್ವಬಡಿದವನು (ಪದಂಗೆಟ್ಟಂಗೆ ಪೈಶಾಚಕಂಗೆ .. .. ಬೀಸಿದ ಕಣ್ಮಾಯದ ಕುಂಚದಂತಿರೆ: **ಕಾದಂಬ,** ೫. ೭೯)

**ಪೈಶೂನ್ಯ** – ಚಾಡಿಮಾತು (ಪರಿವಾದಂ ಪೈಶೂನ್ಯಂ ಪರಮರಹಸ್ಯಪ್ರಕಾಶಕರಣಂ .. .. ಸತ್ಯವ್ರತಕ್ಕೆ ಅತಿಕರಮಕ್ಕುಂ: **ವರ್ಧಮಾಪು,** ೭. ೯)

**ಪೊಂಕ** – ಗರ್ವ (ತೆರಳ್ದಿದುವಗುರ್ವಿಂ ಪರ್ಬಿ ಬಂದಿರ್ದ ಮೇಘಮುಖಾಹೀಂದ್ರರ ಪೊಂಕಮಂ ಜಯಕುಮಾರೋನ್ಮುಕ್ತ ಬಾಣಾಳಿಗಳ್: **ಆದಿಪು,** ೧೩. ೬೧); ಉಬ್ಬಟೆ (ಅಲರ್ದರೆಗಟಿಗೆಯ ಜಾದಿಯ ಮಲೆಪುಂ ಮಲ್ಲಿಗೆಯ ಪೊಂಕಮುಂ: **ಆದಿಪು,** ೧೧. ೧೨೨); ಉತ್ಸಾಹ; ವಿಕಾಸ (ಬಿಂಕಂ ಪೊಂಕಂಗಿಡಿಸೆ ನನೆವಿಲ್ಲಾತನಂ ತೊಟ್ಟ ದಿವ್ಯಾಲಂಕಾರಂಗಳ್ ನಯನ ಸುಖಮಂ ನೀಡೆ: **ಪಂಪರಾ,** ೭. ೧೩೧)

**ಪೊಂಗವಚ** – ಚಿನ್ನದ ಕವಚ (ಅಟ್ಟೆಜನಕ್ಕಾ ಪೊಂಗವಚಂಗಳನಿತ್ತರ್ ಪಾಂಗವಚಂಬಡುವಿನಂ ಮಹಾವೀರಭಟರ್: **ಚಂದ್ರಪ್ರಪು,** ೦. ೬೪)

**ಪೊಂಗವಡಿಕೆ** – ಚಿನ್ನದ ಕವಡಿಕೆ, ಒಂದು ಆಭರಣ (ಎಡೆಗಿಱಿದಿರೆ ಪೊಂಗವಡಿಕೆ ಬಿಡೆ ಘಲ್ಲನೆ ಗೆಜ್ಜೆ: **ಜಗನ್ನಾವಿ,** ೩. ೪೪)

**ಪೊಂಗವಳಿಗೆ** – ಚಿನ್ನದ ಕವಳಿಗೆ, ಚಿನ್ನದ ಸಣ್ಣ ಅಡಕೆಲೆ ಪೆಟ್ಟಿಗೆ (ಕವಿತೆಗೆ ವಾಗ್ದೇವತೆ ಕಿಟ್ಟುವಳಿಗೆವಿಡುವಂತೆ ತಂಬುಲದಿಂದೀವಿದ ಪೊಂಗವಳಿಗೆಯಂ ಪಿಡಿದು ಅಂಬಿಕೆಗೆ ಅವಟಯ್ದಿದಳ್ ಒರ್ವಳ್ ಇಂದ್ರವಧು ತಂಬುಲಮಂ: **ಶಾಂತಿಪು,** ೯. ೧೮೦)

**ಪೊಂಗಳಂತಿಗೆ** – ಚಿನ್ನದ ಗಳಂತಿಗೆ, ನೀರಿನ ಪಾತ್ರೆ (ತಣ್ಪಿನ ನೀರ್ ಸೆಱೆಯಾದ ಪೊಂಗಳಂತಿಗೆಯಿರೆ ಸಜ್ಜೆಯೋವರಿಯಿದೋವರಿ ಮಾಡಿತು ಕಂತುಗೆಮ್ಮುಮಂ: **ಚಂದ್ರಪ್ರಪು,** ೮. ೬೨)

**ಪೊಂಗಳಸ** – ಚಿನ್ನದ ಕಳಶ (ಅಭ್ಯುದಯಕರಮೆನಿಪ ಕರುಮಾಡದ ಶಿಖರದೊಳೊಪ್ಪಿ ತೋಱುಗುಂ ಪೊಂಗಳಸಂ: **ಸುಕುಮಾಚ,** ೧೦. ೫೦)

**ಪೊಂಗಱಿ** – ಚಿನ್ನದ ಗರಿ, ಬಾಣಕ್ಕೆ ಕಟ್ಟುವ ಗರಿ (ರವಿಕಿರಣಗಳಸ್ತಮಿಸೆ ಕಟ್ಟಲೆ ಕೈಮಿಗೆ ಸುತ್ತಿ ಮುತ್ತಿ ದಿಗ್ವಿವರಮನಾಗಸಂ ಪೊಳೆವ ಪೊಂಗಱಿಯಿಂ ಕವಿಲಾಗೆ .. .. ಬಾಣಸಂಕುಳಂ ಕವಿದುವು: **ಪಂಪರಾ,** ೧೩. ೪೩)

**ಪೊಂಗು** – ಉಬ್ಬು (ತನುವಳಿರೇಖೆಗಳ್ ಕಿಡೆಯುಮೆಟ್ಟಿ ಬೆಡಂಗಿನದೊಂದು ರೇಖೆಯಂ ತನಗೆಡೆಮಾಡಿ ಪೊಂಗೆ: **ಆದಿಪು,** ೮. ೪೬); ಮೈ ಹಿಗ್ಗಿಸು, ಮೈಮುರಿ (ಮಲೆವ ಮರಲ್ವ ಜಿಱೊಪ್ಪುವ ಮಲಂಗುವ ಪೊಂಗುವ ತಳ್ತು ಪಾಯ್ವ .. .. ಸೂಕರನಾಟಮದು ಏನಳುಂಬಮೋ: **ಶಬರಶಂ,** ೪. ೧೨); ಸೊಕ್ಕು (ಪೊಂಗುವ ಮಲೆಪರ ಮಲೆಗಳ ಡಂಗಂಗಳ್ ಮಲೆವ ಮಂಡಲಂಗಳ್ ಪ್ರತ್ಯಂತಗಳ್ ಎನಲ್ ಒಳವೆ ಪಾಂಡವರಂ ಗೆಡೆಗೊಳೆ ನಿನಗೆ ಕುರುಕುಳಾಂಬರಭಾನೂ: **ಪಂಪಭಾ,** ೯. ೩೯)

**ಪೊಂಗುನೂಲ್** – ಅರಿಸಿನದ ದಾರ, ಒಂದು ಆಭರಣ (ಅರಳೆಲೆ ಪೊಂಗುನೂಲ್ ಪುಲಿಯುಗುರ್ ಮಣಿಕಿಂಕಿಣಿ ಗೆಜ್ಜೆ ರಕ್ಕೆ ಕುಂಡಲಯುಗ ಮುತ್ತು ಕಾಲ್ಗಡಗಂ ಅಂದುಗೆ ಕಂಕಣ ಕಿಂಕಿಣೀಗಣಂ ಕಲ ಮಣಿ ಾಪುರಂ ತನಗೊಡಂಬಡೆ: **ಅಜಿತಪು,** ೫. ೬೨)

**ಪೊಂಗುಱಿವ** – ಚಿನ್ನದ ದ್ವೀಪ (ಪಾಲ್ಗಡಲೊಳಗಣ ಪೊಂಗುಱುವಂ ಗಡಂ ಎನಿಸಿದುದು ಅಮರನಗಂ ಇದೇನಚ್ಚರಿಯೋ: **ವರ್ಧಮಾಪು,** ೧೨. ೩೫)

**ಪೊಂಜಲಗೆ** – [ಪೊನ್+ಸಲಗೆ] ಚಿನ್ನದ ಸಲಾಕೆ (ಪೊಂಜಲಗೆಯಂತೆ ಕಿರ್ಚಿಂದಂ ಜಾನಕಿ ಶುದ್ಧೆಯಾಗೆ ಜನನಿಯ ಕೆಲದೊಳ್ ಸಂಜಾತ ಪುಲಕ ಕಲಿಕಾರಂಜಿತ ತನುಗಳ್ ಲವಾಂಕುಶರ್ ಕುಳ್ಳಿರ್ದರ್; **ಪಂಪರಾ,** ೧೬. ೩೧)

**ಪೊಂಜುರಿಗೆ** – [ಪೊನ್+ಸುರಿಗೆ] ಚಿನ್ನದ ಕಠಾರಿ (ಹಟತ್ಕಟೀಸೂತ್ರ ಪರಿಸ್ಫುರಿತದೊಳಂ ಕಟ್ಟಿದ ಪೊಂಜುರಿಗೆಯೊಳಂ ಜನಮನೇಂ ಮನಂಗೊಳಿಸಿದುದೋ: **ಆದಿಪು,** ೪. ೩೬)

**ಪೊಂಜೆಳೆಮೈ** – ಬಂಗಾರದ ಬಣ್ಣದ ಕೋಮಲ ಶರೀರ (ನೀರಾಟಮನಾಡಿಪೋದ ವಾರನಾರಿಯರ ಪೊಂಜೆಳೆಮೈಯೊಳ್ ರಂಜಿಸಿರ್ದ ರಜನೀರಜಂಗಳಿಂ ಕದಡೇಳ್ದು: **ರಾಜಶೇವಿ,** ೧೨. ೩೯ ವ)

**ಪೊಂದಾವರೆ** – ಹೊಂಬಣ್ಣದ ತಾವರೆ (ಕೊಂದೆನ್ನ ಮಗನಂ ಇಂ ಭಯದಿಂದಂ ರಸೆವೊಕ್ಕುಂ ಅಜನ ಗುಂಡಿಗೆವೊಕ್ಕುಂ ಮಂದರಧರನ ಈ ಪೊರ್ಕುಟಿ ಪೊಂದಾವರೆವೊಕ್ಕು ಮೇಣವಂ ಬರ್ದುಕುವನೇ: **ಪಂಪಭಾ,** ೧೧. ೧೨೧)

**ಪೊಂದು** – ಸೇರು (ಬೇಟದ ಲಲ್ಲೆಯ ಬಲ್ಮೆ ಪತ್ತಿ ಸುತ್ತಿಸೆ ಪುರುಡಿಂಬಿಕ್ಕೆಸೆ ಬಿಯಮಾಗಿಸಿ ಪೊಂದದವಂ ಬೊಜಂಗನೇ: **ಆದಿಪು,** ೧೨. ೧೭); ಆಗಿ ಹೋಗು (ಅಲ್ಲಿಂ ಬಟೆಯಿಂ ಅನೇಕ ಕೋಟಿ ಸಂವತ್ಸರಂಗಳ್ ಪೊಂದಿದಿಂ ಬಟೆಯಂ: **ಆದಿಪು,** ೬. ೫೬ ವ); ಮರಣಹೊಂದು (ಮುನ್ನಂ ಪವನ ಪ್ರಹಾರದಿಂ ತೈಲವುಳ್ಳೊಡಂ ನಂದುವಂತೆ ಪೊಂದುವರೀಗಳ್: **ಪಂಪರಾ,** ೧. ೮೨)

**ಪೊಂಪುಟಿ** – ಹೆಚ್ಚಿಕೆ (ಜಿನನಾಥಸ್ವಾಮಿ ಕಲ್ಯಾಣದಿಂ ಜಗದ ಒಳ್ಪು ಪೊಂಪುಳಿವೋದ ಪೆಂಪು ಸುರಕೇಳೀಲೀಲೆಯಿಂ ತಳ್ತ ಪೆಂಪು.. ..ಪೆತ್ತುದಾ ಪರ್ವತಂ: **ಸುಕುಮಾಚ,** ೧. ೬೭); ರೋಮಾಂಚ (ಮಹಾದೇವನ ಮೂರ್ತಿಯಂ ಕಂಡು .. .. ಪೊಂಗಿ ಪೊಱೆಯೇಱೆ ಪೊಂಪುಟಿವೋಗಿ: **ಉದ್ಭಟಕಾ,** ೧೨. ೧೩೮ ವ); ಉತ್ಸಾಹ (ಎಂಬ ಪೆಂಪು ದೊರೆವೆತ್ತು ಕಥಾರಸಂ ಅತಿಶಯಮುಂ ಪೊಂಪುಟಿಯೋಳಿಯುಂ ಆಗೆ: **ಶಾಂತಿಪು,** ೬. ೫೯ ವ)

**ಪೊಂಪುಟಿವೋಗು** – ಅಧಿಕವಾಗು, ಚೆನ್ನಾಗು, ವ್ಯಾಪಿಸು (ಕಡೆಗಣ್ಣೊಳ್ ತುಳುಂಕಿಯುಂ ಕದಪಿನೊಳ್ ಪೊಂಪುಟಿವೋಗಿಯುಂ ಭ್ರೂವಿಭ್ರಮದೊಳ್ ಪೊನಲ್ವರಿದುಂ: **ಆದಿಪು,** ೭. ೧೨೬ ವ); ಪುಳಕಿತವಾಗು (ಪೊಂಪುಳಿವೋಗೆ ರಾಗವೆರಡುಂ ಕೆಲದೊಳ್ ಮದನಾನುರಾಗಮಂ ಸಿಂಪಿಸುವಂತೆ ಬಾಜಿಸುವ ಬಂಚದ ನುಣ್ಚರದೊಳ್: **ಮಲ್ಲಿನಾಪು,** ೧೧. ೭೬)

**ಪೊಂಬಕ್ಕರಗೆ** – ಚಿನ್ನದ ರಕ್ಷಾಕವಚ (ಪರಿದುವು .. .. ಘೋಟಕಾಲ್ಗಳ್ ಪರಿಯಿಸೆ ತರದಿಂ ಪೊಂಬಕ್ಕರಗೆಯ ತುರಗಂಗಳಾಹವಾಂಭೋನಿಧಿಯೊಳ್: **ಚಂದ್ರಪ್ರಪು,** ೧೦. ೭೮)

**ಪೊಂಬಟ್ಟ** – ಚಿನ್ನದ ಪಟ್ಟ [ಬಾಸಿಗ] (ಪೆತ್ತೆನಗೆ ನೀಂ ಪೊಂಬಟ್ಟಮಂ ಕಟ್ಟಿದೈ: **ಧರ್ಮಾಮೃ,** ೨. ೬೪)

**ಪೊಂಬಟ್ಟೆ** – ಪೀತಾಂಬರ (ಪಕ್ವಶಾಳಿ ಕಣೇಶಾಳೀನಮ್ರಂ ಒಪ್ಪಿರ್ದು ಅದೇಂ ಗೆಲೆವಂದ್ರೊ ಸುವರ್ಣವರ್ಣದಿಣ ಇಳಾಶ್ರೀಯುಟ್ಟ ಪೊಂಬಟ್ಟೆವೋಲ್: **ಜಗನ್ನಾವಿ,** ೨. ೫)

**ಪೊಂಬಡಲಿಗೆ** – ಚಿನ್ನದ ತಟ್ಟೆ (ಪೊಂಬಾಳೆ ಸಿರ್ಪಿನ ಸೇಸೆ ಪೊಂಬಡಲಿಗೆಯೊಳ್ ಒಂದೊಂದಂ ಚೆಲ್ವಾಗೆ: **ನೇಮಿನಾಪು,** ೨. ೨೦)

**ಪೊಂಬಟಿ** – ಹೊಂಬಾಳೆ, ಅಡಕೆತೆಂಗುಗಳ ಹೂಗೊಂಚಲು (ಎಳಮಾವಿನ ಚೆಲ್ವಿಂ ಪೊಂಬಟಿಗಂಪಿಂ .. .. ತಣಿಯಿಪುದು ಜನಂಗಳ ಪಂಚೇಂದ್ರಿಯಮಂ: **ಕಾದಂಬ,** ೧೦. ೬೨)

**ಪೊಂಬೆಟ್ಟ** – ಚಿನ್ನದ ಬೆಟ್ಟ, ಮೇರು (ಪೊಂಬೆಟ್ಟಮಂ ನೂಂಕಲುಂ ಪೆಡೆಯಂ ತೊಟ್ಟನೆ ಮೆಟ್ಟಿ ಬಾಸುಗಿಯಂ ಆದಂ ಸೀಟಲುಂ ಪೊತ್ತು ಬಾನೆಡೆಯಂ ಬೇಗದಿನೆತ್ತಲುಂ ಬಗೆದನಾಗಳ್ ದಪ್ಪದಿಂ ದಪ್ಪಗಂ: **ಕಬ್ಬಿಗಕಾ,** ೧೧೯)

**ಪೊಂಬೆಸ** – ಚಿನ್ನದ ಕೆಲಸ (ಚೆಲ್ವಂ ಪಡೆದ ಈ ಜಂಬೂದ್ವೀಪಪ್ರಭುಗೆ ಇದು ಪೊಂಬೆಸದೊಳ್ ಸಮೆದ ಮಕುಟಮಿರ್ಪಂತಿರ್ಕುಂ: **ಆದಿಪು,** ೭. ೬೨)

**ಪೊಕ್ಕರಣೆ** – ಹೊಕ್ಕರಣೆ, ಪುಷ್ಕರಿಣಿ, ಕೊಳ (ಪಿರಿಯ ಪರಿವುಗಳ ಸುತ್ತಿದ ಪರಿಕಾಲ್ಗಳ ತುಱುಗಿದ ಅಣ್ಣಗಳ ತೀವಿದ ಪೊಕ್ಕರಣೆಗಳ ನೆಱೆದ ಕೆಱೆಗಳ ಸರೋವರಂಗಳ ಬೆಡಂಗು ಅಗುಂದಲೆ ಪುರದೊಳ್: **ಸುಕುಮಾಚ,** ೯. ೫೧)

**ಪೊಕ್ಕಿಱೆ** – [ಶತ್ರುಸೈನ್ಯದೊಳಕ್ಕೆ] ನುಗ್ಗಿ ಹೋರಾಡು (ಪುರುಷಮಂ ಸಮಕಟ್ಟುವಮಪ್ಪೊಡೆ ಪೊಕ್ಕಿಱೆಯಲಣ್ಮುವರಿಲ್ಲ: **ಪಂಪಭಾ,** ೬. ೬೭ ವ)

**ಪೊಕ್ಕು** – ಹೊಕ್ಕು, ನೆಯ್ಗೆಯ ಅಡ್ಡ ಎಳೆ (ಗಜದಂತಪರ್ವತದ ಮೇರುವಿನ ಪಾಸಿನ ಪೊಕ್ಕಿನ ಮಾಣಿಕದ ಕಾಂತಿಯ .. .. ಕೂಡಿದಂತೆ ಮಹಾಪುರುಷರ ಸಮ್ಯಕ್ತ್ವದೊಳಾದ ಕೂಟಂ: **ಧರ್ಮಾಮೃ,** ೫. ೧೨೯ ವ)

**ಪೊಕ್ಕುಟ ಪೂ** – [ವಿಷ್ಣುವಿನ] ಹೊಕ್ಕುಳಿನ ಹೂ (ಮೂಲೋಕಕ್ಕೋಜನೆನಿಸುವಜನಂ ಪೊಕ್ಕುಟ ಪೂವಿಂದೆ ಪಡೆದುದುಂಟೆನಿಸಿರ್ದಂ: **ಅನಂತಪು,** ೧೨. ೮೨)

**ಪೊಗಡ** – ಪಗಡೆ ಮರ, ಬಕುಳ (ಪೊಗಡದ ಪೊಸವೂವಿನ ತುಡುಗೆಗಳ್ಗಮಧರದ ಪೊದಳ್ದ ತನಿಗಂಪಿಂ ಮೃಗನಯನೆಯರನೆ ಬಿಡದೋಲಗಿಸಿದವು ಅಳಿನಿಕರಂ: **ಆದಿಪು,** ೧೧. ೧೦೬)

**ಪೊಗರ್** – ಕಾಂತಿ (ಗಮಕಂ ಪ್ರಯೋಗ ಆಭೋಗಂಅಂಕಾರಂ ಪೊಗರ್ ನಯಂ ಮಿಱುಗು ಪೊದಳ್ದಮರೆ: **ಆದಿಪು,** ೭. ೧೬); ಉತ್ಸಾಹ (ದನಿಯ ಪೊಗರ್ ಮನೋಭವನ ಬಾಳ್ವೊಗರಂತಿರೆ .. .. ವನಚರಿ ಪಾಡಿದಳ್ ಮಧುರಗೀತಿಗಳಂ: **ಲೀಲಾವತಿ,** ೮. ೩೨)

**ಪೊಗರ್ತೆ** – ಹೊಗಳಿಕೆ (ಪ್ರದ್ಯುಮ್ನಕುಮಾರಂಗೆ .. .. ರೂಪಿನ ಪೊಗರ್ತೆಯುಂ ಸಹಜದ ನೆಗರ್ತೆಯುಮಂ ಕೇಳ್ದು: **ಹರಿವಂಶ,** ೮. ೫೨ ವ)

**ಪೊಗರ್ವಟ್ಟು** – ಪ್ರಭಾಮಂಡಲ (ಪೊಗರ್ವಟ್ಟಿನ ಅತನುಬಾಣದ ಪೊಗರಂ ನುಣ್ಪೊಗರೊಳಿಟಿಸಿ .. .. ಸೊಗಯಿಸುವವೊ ಬಾಹುಮೂಲಂ ಆ ಕಾಮಿನಿಯಾ: **ಮಲ್ಲಿನಾಪು,** ೩. ೫೩)

**ಪೊಗರ್ವಟ್ಟೆ** – ಹೊಳೆಯುವ ವಸ್ತ್ರ (ರಾಂತಕ್ಕೆ: ಬಿದಿರ್ದಟ್ಟಿ, ಪೊಗರ್ವಟ್ಟೆ: **ಶಬ್ದಮದ,** ೫೩ ಪ್ರ)

**ಪೊಗಸು** – ಬೆಳಗುಜಾವ [ಇಂದು ಪೇಟೀಗಳೊ ಬಯ್ಗಿಯೋ ಪೊಗಸೊ ನಾಳೆಯೊ ನಾಡಿದೊ ನಿನ್ನ ಜೀವಿತಂ: **ಆದಿಪು,** ೩. ೬೩)

**ಪೊಗಟ್** – ಹೊಗಳು, ಸ್ತುತಿಮಾಡು; ಹೊಗಳಿಕೆ (ಎಲ್ಲಿಲ್ಲದ ಮಾಮಗಲ್ಯಮಂ ಎಲ್ಲಂ ಸ್ತುತಿಮಾಡೆ ತಮಗೆ ಪೊಗಟದು ಸಲ್ಗುಂ: **ಸಮಯಪ,** ೮. ೨೧೭)

**ಪೊಗಟಿಸು** – ಸ್ತುತಿಗೈಸು (ನಿಲ್ಲಲೊಲ್ಲದೆ ವೈರಾಗ್ಯಮೆ ಕುಲವಟಿಯೆಂಬಂತೆ ತಂದೆಯಿಂ ಮುನ್ನಂ ನಿರ್ಮಲ ಜಿನದೀಕ್ಷೆಗವರ್ ಪೂಣ್ದು ಅಲಂಘ್ಯ ದಮಮಂ ಧರಿತ್ರಿಯಿಂ ಪೊಗಟಿಸಿದರ್: **ಶಾಂತಿಪು,** ೯. ೫೩)

**ಪೊಗಟ್ತೆ** – ಹೊಗಳಿಕೆ (ಗುರುಗಳ ಪೊಗಟ್ತೆಗೆ ರಾಗಿಸಿ ಸಂತೋಸಂಬಟ್ಟಿರ್ದೊಡೆ: **ವಡ್ಡಾರಾ,** ಪು. ೮೨, ಸಾ. ೨೪)

**ಪೊಗಟ್ತೆವಡೆ** – ಹೊಗಳಿಕೆಯನ್ನು ಹೊಂದು (ಅಖಿಳಕಳಾನೈಪುಣ್ಯಜನವರೇಣ್ಯನುಮೆನಿಸಿ ಪೊಗಟ್ತೆವಡೆದು ರಂಜಿಪ ಅಮಿತವಚನನೊಡನೆ: **ರಾಜಶೇವಿ,** ೪. ೮೨ ವ)

**ಪೊಗಟ್ತೆವೆಱು** – ಹೊಗಳಿಕೆಯನ್ನು ಹೊಂದು ನಯಮಂ ತಾಳ್ದಿ ಪೊಗಟ್ತೆವೆತ್ತು ಭುವನಕ್ಕಾರಾಧ್ಯೆಯಾದತ್ತಿಮಬ್ಬೆಯ .. .. ಗುಣಕ್ಕಾರುಂ ಸಮಂ ಪೋಲ್ವರೇ: **ಅಜಿತಪು,** ೧೨. ೧೩)

**ಪೊಗೆ** – ಹೊಗೆ, ಹೊಗೆಯಾಡು (ಮನೆಮನೆದಪ್ಪದೆ ನೆಗೆದುದು ತನಿಗಿರ್ಚನೆ ದಹನವಿದ್ಯೆಯಿಂ ಸುಟ್ಟಂ ಪಾವನಿ ಲಂಕೆಯಂ ಅಸುರಾಧೀಶನ ಮನಂ ಉರಿವನ್ನಂ ಆನನಂ ಪೊಗೆವನ್ನಂ: **ಪಂಪರಾ,** ೧೧. ೧೪೪)

**ಪೊಗೆಗುಡಿ** – ಹೊಗೆಯುಗುಳುವ [ದೀಪದ] ಕುಡಿ (ನೆಗೆವ ಪೊಗೆಗಡಿಗಳಿಂದೇಂ ಸೊಗಯಿಸುತಿರ್ದಪುವೊ ಸುತ್ತಲುಂ ಕಟ್ಟಿಲೆಯಂ .. .. ಕೆಯ್ದೀವಿಗೆಗಳ್: **ಆಚವರ್ಧ,** ೫. ೮)

**ಪೊಗೆಗೊಳ್** – ಹೊಗೆ ಆವರಿಸು (ಪೊಗೆಗೊಂಡ ಚಿತ್ರಲತೆ ದೂಳಗೊಂಡ ಪುತ್ತಳಿಗೆ .. .. ಕಾರ್ಮುಗಿಲೊಳಕೊಂಡವೆಳ್ಸೆಯೆನೆ ಮೃಗಲೋಚನೆ ಸೀತೆ: **ಪಂಪರಾ,** ೧೧. ೮೩)

**ಪೊಗೆಗೊಳಿಸು** – ಧೂಪ ಹಾಕು (ಕಳೆ ಕರ್ಪೂರದ ಕಸವಂ ತಳಿ ಕತ್ತುರಿನೀರನಿಕ್ಕು ಮುತ್ತಿನ ಕಡೆಯಂ ಬೆಳಗು ಮಣಿದೀಪಮಂ ಪೊಗೆಗೊಳಿಸು ಅಗರುವಂ ಎಂಬರಲ್ಲಿ ಸೂಳೆವಳರ್ಕಳ್: **ಜಗನ್ನಾವಿ,** ೯. ೧೦೦)

**ಪೊಚ್ಚ** – ಪ್ರವಾಹ, ನದಿ (ಮೇಲ್ವಾಯ್ವ ಪತ್ಸ್ಯಂಗಳಿಂ ಪೆಂಪಿಡಿದು ಒಪ್ಪಿತ್ತಲ್ಲಿ ಫೇನಸ್ಮಿತೆಯೆನಿಸುವ ಪೊಚ್ಚಂ ಪೊದಲ್ದೊಪ್ಪದಿಂದಂ; **ರಾಜಶೇವಿ,**೬. ೨೩)

**ಪೊಚ್ಚಂಬೋಗು** – ಕಳಂಕ ಹೊಂದು (ಮಚ್ಚರದಿಂ ಜಿನಮತಮಂ ಚುಚ್ಚಳನಪ್ಪನ್ಯಸಮಯಿ ಪೊಲ್ಲೆಂದೊಡೆ ಅದೇಂ ಪೊಚ್ಚಂಬೋಕುಮೆ: **ಸಮಯಪ,** ೧೩. ೫೧)

**ಪೊಚ್ಚಱ** – ಗೋಚರಿಸು (ಭೀಷ್ಮರಂ ಶರಶಯ್ಯಾಗತರಂ ಕಱುತ್ತು ಗುಜಿಯೆಚ್ಚಾ ಪೊಚ್ಚಱಂ .. .. ಪಾಂಡುಪುತ್ರರೆ ಬಲ್ಲರ್: **ಗದಾಯು,** ೩. ೩೩); ಪರಾಕ್ರಮ (ಮೂಡೆ ಪೊಚ್ಚಱನೊಳಕೊಂಡು ತಳ್ತಿಱಿಯೆ ಮಚ್ಚರದಿಂ ಧುರದೊಳ್ ಧನುರ್ಧರ್: **ವರ್ಧಮಾಪು,** ೪. ೫೯)

**ಪೊಚ್ಚಱತನ** – ಗರ್ವ, ಹೆಮ್ಮೆ (ಪೊಚ್ಚಱತನದೆ ನುಡಿವನೆನಿಸಿಪ್ಪ ಅಱಗುಲಿಗಂ ಮೊಗ್ಗೆ ಸೂನೃತವ್ರತಮೆಂತುಂ: **ಸಮಯಪ,** ೫. ೩೧)

**ಪೊಚ್ಚಱಿಸು** – ಹೆಮ್ಮೆ ತೋರಿಸು, ಉಬ್ಬಿಸು (ಇಲ್ಲದ ಗುಣಮಂ ಅಂತೆ ಬಿಡದೇಱಿಸಿ ಪೊಚ್ಚಱಿಸುತುಂ: **ಕಾದಂಬ,** ೩. ೧೦೨); ಚೆನ್ನಾಗಿ ಗೋಚರಿಸು (ಪೊಚ್ಚಱಿಸೆ ಶಿಶುಪಾಳಶಿರಮಂ ಪಱಿಯೆಚ್ಚಂ ಕೃಷ್ಣಂ ಉಷ್ಣತೇಜೋನಿಳಯಂ: **ಕರ್ಣನೇಮಿ,** ೭. ೫೮)

**ಪೊಚ್ಚಱು** – ತೋರ್ಪಡು (ಪೊಚ್ಚಱು–ಸ್ಫುರಣೇ: **ಶಬ್ದಮದ,** ಧಾ ೮೮೬); ಪರಾಕ್ರಮ (ಪಾಂಚಾಳಿಯನೆಟೆವದಟೇನಾದುದೋ ಗಂಡ ಪೇೞ್ ಪೊಚ್ಚಱೆಂತಾ ಮಾತುಮಿಂತಿರವೆನೆ ನಗೆಯಂ ಮಾಡಿದೈ: **ಪಂಪಭಾ,** ೧೩. ೭೭)

**ಪೊಚ್ಚುಂಬೋಗು** – ಹಂಚಿಹೋಗು (ಪೊಚ್ಚುಂಬೋಗದ ಶೌರ್ಯಮದಚ್ಚರಿಯಾಗಿರೆ ಮೃಗಾರಿಯಂ ಪಕ್ಕಱಲಿಂ ಮಚ್ಚರಿಸಿ ಕೊಂದು: **ವರ್ಧಮಾಪು,** ೩. ೨೩)

**ಪೊಟ್ಟಣವಾರಿ** – ಪೊಟ್ಟಣದ [ದೊನ್ನೆಯ] ನೀರು (ಮುನಿಗಳ ಕೆಯ್ಯ ಕುಂಚಣಿಗೆ ಚಾಂದ್ರಮಸೀದಳಕುಂಡಿಕಾಳಿ ತಜ್ಜಿನಭವನಕ್ಕೆ ದುಗ್ಧನಿಧಿ ಕಟ್ಟಿದ ಪೊಟ್ಟಣವಾರಿಗಟ್ಟಿದತ್ತೆನಿಸಿತು: **ಅನಂತಪು,** ೩೩೧)

**ಪೊಟ್ಟಮುಡುಹ** – ಕುಸ್ತಿಯ ಒಂದು ವರಸೆ (ಡೊಕ್ಕರಂ ಚಡಿಕೆ ತುಳಾಡಿ ಪೊಟ್ಟಮುಡುಹಂ ಮುಹಡಂ ದುಣವಟ್ಟೆ ಪಟ್ಟಿಸಂ: **ಅನಂತಪು,** ೨. ೨೭)

**ಪೊಟ್ಟಗೆ** – ಘಟ್ ಎಂದು [ಘಟೆಯ ದೞದ ಉಲಿವು ಲಯಘನಫಟೆಗಳ ಮೊಱಗೆನಿಸೆ ಪೊಟ್ಟಗೆ ಒಡೆದತ್ತು ರಟತ್ ಪಟು ಪಟಹ ಶಂಖ ಭೇರಿಯ ಚಟುಳಿತದಿಂದ ಅತಳಪಟಂ ಅಂಬರಪಟಳಂ: **ಪಂಪಭಾ,** ೧೦. ೬೭)

**ಪೊಟ್ಟಳ** – ಪೊಟ್ಟಣ, ದೊನ್ನೆ ಮುಂತಾದವು (ಜೀವಿತಮರಣಂಗಳೆಂಬಿವಱೆಟ್ಟಳಮಂ ಪುಸಿಯ ಪೊಟ್ಟಳಮುಮಕ್ಕುಂ: **ಶಾಂತಿಪು,** ೮. ೧೩೨ ವ)

**ಪೊಟ್ಟಳಿಗೆ** – ಪೊಟ್ಟಣ, ಗಂಟು (ಸಾಸಿರ ದೀನಾರದ ಸಮಕಟ್ಟಿನ ನಾಲ್ಕು ಪೊಟ್ಟಳಿಗೆಯನೊಂದೆ ಮಾಡಿ ನಾಲ್ವರ ನಡುವಿರಿಸಿ: **ಸುಕುಮಾಚ,** ೫. ೮ ವ)

**ಪೊಟ್ಟಳಿಸು** – ಉಬ್ಬು, ಗರ್ವಿಸು (ಪರಶುರಾಮನನಂಜಿಸಿದ ವೀರಂಗೆ ವೀರಪಟ್ಟಮಂ ಕಟ್ಟಿ ಪಗೆವರಂ ಎನ್ನ ಮಂಚದ ಕಾಲೊಳ್ ಕಟ್ಟಿದೆನೆಂದು ಪೊಟ್ಟಳಿಸುವ ಸುಯೋಧನನ ನುಡಿಯಂ ಅವಕರ್ಣಿಸಿ ಕರ್ಣನಿಂತೆಂದಂ: **ಪಂಪಭಾ,** ೧೦. ೧೫ ವ)

**ಪೊಟ್ಟುವಡೆ** – ಹೊಟ್ಟಿನಂತಾಗು, ವ್ಯರ್ಥವಾಗು (ತರ್ಕದೊಳ್ ಬಾದುಂ ಬರ್ಕುಡಿಗಟ್ಟಿ ಪೊಟ್ಟುವಡೆದೆಂ ದುರ್ಮದದಿಂದಿನ್ನೆಗಂ: **ಸುಕುಮಾಚ,** ೩. ೪೩)

**ಪೊಟ್ಟೆ** – ಹೊಟ್ಟೆ (ಪೊಟ್ಟೆ ಬಟ್ಟಾಗಿರ್ದ ಪೆಱನಟ್ಟ ನಡುವಂ ನೋಡಿ ಪೊಕ್ಕು ಮಿಟ್ಟೆಂದು ಮಿಡುಕಲಣ್ಮದೆ: **ಗದಾಯು,** ೯. ೩೪ ವ)

**ಪೊಟ್ಟೆಗವಡಿಕೆ** – ದೊಡ್ಡ ಕವಡೆ (ಲೆಕ್ಕವಲಗೆಯಂ ಕಾಡಿಗೆಯೊಳ್ ಪುಟ್ಟಿಸಿ ಪೊಟ್ಟೆಗವಡಿಕೆಯೊಳೊರಸಿದಂತೆ: **ಶಾಂತಿಪು,** ೯. ೧೪೩ ವ)

**ಪೊಟ್ಟೆವಾಯ್** – ಹೊಟ್ಟೆಯುಬ್ಬರಿಸು (ಅಂತು ಪೊಟ್ಟೆವಾಯಲ್ತಿಂದು ಸೂಲೆ ಪುಟ್ಟಿ ಸತ್ತು ಅಗ್ನಿಭೂತಿ ವಾಯುಭೂತಿಗಳಾದಿರ್: **ಪುಣ್ಯಾಸ್ರ,** ೬. ೫೬ ವ); ರೆಪ್ಪೆ ಅದುರುವಿಕೆ, ಒಂದು ಶಕುನ (ಪೊಟ್ಟೆವಾಯ್ವ ಚಕ್ಷುಗೆ ಪಿರಿದಾದುದಕ್ಕುಮೆ ಪರಿಸ್ಫುರಿತಂ ಪೆಱತೇನೊ ದೇವಿಯಾಕೆಗೆ ವರನಂ ಮನೋಹರನನಿಂದು ಕುಡಲ್ ಕಡುಗೂರ್ತಳಾಗಳೇ: **ಲೀಲಾವತಿ,** ೧೧. ೫೫)

**ಪೊಟ್ಟೆವೋಗು** – ಪೊಟರೆಯಾಗು, ಟೊಳ್ಳಾಗು (ತಾಱಿದ ಅಂಕಿದ ನಱುಂಕಿದ ಕೊಂಬು ಒಣಗಿರ್ದ ಪೊಟ್ಟೆವೋದ ಒಱಗಿದ ವೃಕ್ಷದಿಂದ ಅಱಿವುದು ಆಯೆಡೆಯೊಳ್ ಜಳಮಾಗದೆಂಬುದಂ: **ಲೋಕೋಪಕಾ,** ೫. ೪)

**ಪೊಡಕರಿಸು** – ಉತ್ಸಾಹಗೊಳ್ಳು (ಪಾಂಥನೆರ್ದೆ ತಣ್ಪಿನ ಸೋನೆಯನಾಂತ ಮಾಳ್ಕೆಯಿಂ ಪೊಡಕರಿಸುತ್ತೆ ಪೆರ್ಚಿ: **ಗಿರಿಜಾಕ,** ೨. ೧೯)

**ಪೊಡರ್** – ಅಲುಗಾಡು, ನಡುಗು (ಪೊಳೆದು ಉಳ್ಕುವ ಕುಡುದಾಡೆಯ ಪೊಳಪು ನೊಸಲ್ಗಡರ್ದು ಪೊಡರ್ವ ಪುರ್ವೆಸೆವಿನಂ ಅವ್ವಳಿಸುವ ಮುಳಿಸಿನ ದಳ್ಳುರಿಗಳಂ ಉಗುಟ್ಟಿವೊಲ್ ಉಗುಟ್ದಿಂ ಅಸುರಂ ಉರಿವ ಪಟೆಗಳಂ; **ಪಂಪಭಾ,** ೬. ೫೯); ಪ್ರಕಟಗೊಳ್ಳು (ಮಿಡುಕಲಣಂ ಅಱಿಯದಿರ್ದೆಂ ಪೊಡರದ ಗಱಿಯವನೆ ತನ್ನ ತಂದೆಯ ಕೆಲದೊಳ್: **ಕಾದಂಬ,** ೧. ೧೨೭); ಪ್ರತಿಭಟಿಸು (ಕೇಶಪಾಶಮನಂತಾಗಡೆ ಪಱಿದು ತಪಂಗೊಂಡಂ ಪೊಡರ್ವ ಅರಿಯಂ ವಜ್ರನಾಭಿಯುಂ ಬೆಂಕೊಂಡಂ: **ಆದಿಪು,** ೬. ೨೪); ಸ್ಫುರಣೆ (ಪದಕೊರಲ್ ಇಂಪಂ ಅಪ್ಪುಕೆಯೆ ಕೊಂಕು ನಯಂ ಗಮಕಂಗಳಿಂ ಪೊಡರ್ ಕೊದಲ್ ಎಟೆದಿಕ್ಕಿದಂತೆ ಸುತಿಯೊಳ್ ಸಮವಾಗಿರೆ .. .. ಮೇನಕೆ ಸರಸ್ವತಿ ಬಾಯ್ದೆಱೆದಂತೆ ಪಾಡಿದಳ್: **ಪಂಪಭಾ,** ೭. ೮೮)

**ಪೊಡರ್ಕೆ** – ಚಲನೆ (ಒದವಿದ ನಿದ್ರೆ ದೂತಜನಗರ್ಜನದಿಂ ಕಿಡೆ ಹೃದ್ಗುಹಾಂತರಾಳದಿನುರುಕೋಸಿಂಹಂ ಇರದೆಟ್ಟುದು

ಮೀಸೆಯ ಕೆತ್ತು ಕೇಸರಂ ಕೆದಱುವ ಭಮಗಿ ಪುರ್ವಿನ ಪೊಡರ್ಕೆಯೆ ಮೇಯ್ಮೃಷೇವೋಜೆ ಕಣ್ಗಳಿಂದುದಯಿಪ ಕೆಂಪದು ಆಗುಟಿಪ ವಕ್ತ್ರದ ಕೆಂಪೆನೆ ರಾಜಮೇರುವಾ: **ಚಂದ್ರಪ್ರಪು,** ೬. ೨೩)

**ಪೊಡರ್ಪು** – ಚಲನೆ (ಇನಿಸಪ್ಪೊಡಂ ಪೊಡರ್ಪಂ ಅಪ್ಪುಕೆಯ್ಯದೆ ಅಟೆಯೆ ಪೂದಳೆದುದು ಎನಿಪ ಪುರ್ಬಿನ ಕುಡಿವೆರಸು: **ಕಾದಂಬ,** ೫. ೪೪ ವ); ಅತಿಶಯತೆ (ತೋಳ್ವಲಮಂ ಪಡೆದಂ ಪರಪ್ರತಾಪಂ ಪೊಡರ್ಪುಗಿಡುವಂತೆ ವಜ್ರಬಾಗು ಕುಮಾರಂ: **ಪಂಪರಾ,** ೧. ೧೩೮); ಪ್ರತಾಪ (ದಿನಪಂ ತೋರ್ಪಂ ಮಧ್ಯಂ ದಿನದೊಳ್ ತೇಜದ ಪೊಡರ್ಪಂ: **ಗದಾಯು,** ೧. ೨೦); ಉಬ್ಬುವಿಕೆ, ಆವೇಶ (ತನ್ನ ಮನದ ಪೊಡರ್ಪುಮಂ ಕೂರ್ಪುಮನುಂಟುಮಾಡಿ ನುಡಿದಂ: **ಪಂಪಭಾ,** ೧೦. ೨೩); ಪ್ರಕಾಶ, ಕಾಂತಿ (ತುಡುಗೆಯ ಮಣೀದೀಧೀತಗಳ ಪೊಡರ್ಪು ಮೇಗೊಗೆದು ಕೊಡೆವೊಲೆಸೆದಪುದು: **ಆದಿಪು,** ೭. ೫); ಉತ್ಸಾಹ, ಸಡಗರ (ಪಕ್ಷಿತತಿ ಕೂಡೆ ಕುಲಾಯಮನೆಯ್ದೆ ಪುಂಶ್ಚಳೀಸಮಿತಿ ಪೊಡರ್ಪನೆಯ್ದೆ ರವುಯೆದುದಂ ಆಕ್ಷಣಂ ಅಸ್ತಶೈಳಮಂ: **ಶಾಂತೀಶ್ವಪು,** ೩. ೫೪); ತೀವ್ರತೆ (ಒಡಲಿಂ ಪೋದುದು ಮುನಿಸಿನ ಪೊಡರ್ಪು ನಕ್ತಂಚರಂಗೆ ಶಿಶುಸನ್ನಿಧಿಯೊಳ್: **ಪಂಪರಾ,** ೪. ೧೯)

**ಪೊಡರ್ಪುಗುಂದು** – ಶೌರ್ಯಗುಂದು; ಉತ್ಸಾಹಗುಂದು [ಮನದ ಪೊಡರ್ಪುಗುಂದದೆ ಲತಾಲಯ ಕೇಳೀವಿಹಾರದಲ್ಲಿ .. ..ತಗುಳ್ದು ಬರಲಾರ್ಪಿರೆ: **ಆದಿಪು,** ೧೧. ೧೩೮)

**ಪೊಡರ್ಪುದೋಱು** – ಶಕ್ತಿ ಪ್ರದರ್ಶಿಸು (ಆನಗಿದಱಿದಿರ್ದೊಡೆನ್ನೊಳೆ ಚಲದಿನೆನ್ನೊಳೆ ಪೊಂಗಿ ಪೊಡರ್ಪುದೋರ್ಪಂ: **ಆದಿಪು,** ೧೨. ೩೩)

**ಪೊಡವಡು** – ನಮಸ್ಕಾರಮಾಡು (ಧರ್ಮಪುತ್ರನಾ ಮುನೀಂದ್ರಂಗೆ ಸಾಷ್ಟಾಂಗವೆಱಗಿ ಪೊಡವಡೆ: **ಪಂಪಭಾ,** ೭. ೬೬ ವ)

**ಪೊಡವಡಿಕೆ** – ನಮಸ್ಕಾರ (ಕಾದಂಬರೀದೇವಿ .. .. ನಿಮಗೆ ಪೊಡವಡಿಕೆಯಂ ಬಿನ್ನವಿಸಲ್ವೇಟ್ಟು ಅಟ್ಟಿದಳ್: ೬. ೩ ವ)

**ಪೊಡವಿ** – [ಪೃಥುವಿ] ಭೂಮಿ (ಪೊಡವಿ ಷಟ್ಖಂಡಕ್ಕೆ ಅಡಿಯಿಡುವಡಿಗಳಂ ತೊಳಗಿ ಬೆಳಗುವ ಪೆಱನೊಸಲಂ ಪಡೆದ .. .. ಬಾಲಕನಂ: **ಶಾಂತಿಪು,** ೧೦. ೯)

**ಪೊಡವಿಪತಿ** – ಭೂಮಿಯ ಒಡೆಯ, ರಾಜ (ಪೊಡವಿಪತಿ ಗೊರವನೆನೆನ ಪೇಟ್ಟಿಡೆಯದುವದೆಕರಿಸಿ ಕಬ್ಬಿಗರ್ದೂಱನೆಯುಂ: **ಕವಿರಾಮಾ,** ೧. ೪೯)

**ಪೊಡವೀಶ** – ಭುಮಿಯ ಒಡೆಯ (ಪೊಡವೀಶರ್ ಭುವನೈಕಮಲ್ಲನುತ ಪಾದಾಂಭೋಜರ್ ಅತ್ಯೂರ್ಜಿತರ್ ದೃಢಚಿತ್ತರ್ ಗುಣಚಂದ್ರಪಂಡಿತರ್: **ಧರ್ಮಾಮೃ,** ೧, ೨೫)

**ಪೊಡೆ** – ಏಟುಕೊಡು (ಪೊಡೆ– ಪ್ರಹರಣೇ: **ಶಬ್ದಮದ,** ದಾ ೩೩೧); ಹೊಟ್ಟೆ (ಪೊಡೆಯೆಂಬುದು ಬೆಳೆಗೆಯ್ಯೊಳ್ ಕಱೆಯೆಂಬುದು ತುಱುಗಾರ್ತಿಯರೊಳ್ .. .. ಅಲ್ಲದೆ ಇಲ್ಲ: **ಕಬ್ಬಿಗಕಾ,** ೨೩ ವ); ತೆನೆ (ಸಸಿಯಂತೆ ಪೊಡೆಯಂತೆ ಪಾಲ್ದೆನೆಯಂತೆ ಕೊಯ್ಲಾದಂತೆ: **ಧರ್ಮಾಮೃ,** ೧೨. ೧೪ ವ)

**ಪೊಡೆಗಿಚ್ಚು** – ಹೊಟ್ಟೆಯ ಬೆಂಕಿ, ಜಠರಾಗ್ನಿ (ಕೆಡೆದಂ ಭೋಜನೆ ಸಗ್ಗದಿಂದೆ ನಹುಷಂ ಪಾವಾಗಿ ಹುಂಕಾರದಿಂ ಪೊಡೆಗಿಚ್ಚಿಂದವೆ ಜೀರ್ಣನಾದನಸುರಂ ವಾತಾಪಿ: **ಕಾದಂಬ,** ೧. ೮೭)

**ಪೊಡೆಮಡು** – ನಮಸ್ಕರಿಸು (ಪೊಡೆಮಡಲೆತ್ತುವ ಕೈಗಳ್ ಪೊಡೆಯಲ್ಕೆತ್ತುಗುಮೆ: **ಯಶೋಧಚ,** ೪. ೪೬)

**ಪೊಡೆಯಲರ** – ಹೊಕ್ಕುಳಲ್ಲಿ ಹೂವಿರುವವನು, ವಿಷ್ಣು (ಆತಂ ತಾವರೆಯಂತೆ ಸಿರಿಯೊಳೊಂದಿಯುಂ ಪೊಡೆಯಲರನೆನಿಸಂ ಸಿಡಿಲಂತೆ ಕಾಯ್ಪುನಾಮರತುಂ ಬಿಸಯಗದಿರನೆನಿಸಂ: **ಕಬ್ಬಿಗಕಾ,** ೪೩ ವ)

**ಪೊಡೆವಡು** – ನಮಸ್ಕರಿಸು (ಕಂಡು ಪೊಡೆವಡುವನಿತುವರಮೆನ್ನ ಮನದೊಳಱವಿಲ್ಲದೆಯುಂ ಅಸವಸದೊಳಾದ ಮನದೆಱಕದಿನೆಱಗಿ ಪೊಡೆವಟ್ಟು: **ಆದಿಪು,** ೩. ೩೬ ವ); ಹೊಡೆಯಲ್ಪಡು (ಆ ಮುನೀಂದ್ರನಂ ಬಲೋಪೇಂದ್ರರ್ ಪೊಡೆಮಟ್ಟು ಕಟಿಪೆ ಪೊಡೆವಟ್ಟ ಸೆಂಡಿನಂತೆ ಗಗನಕ್ಕೊಗೆದಂ: **ಅನಂತಪು,** ೧೩. ೪೧ ವ)

**ಪೊಡೆಸೆಂಡು** – ಒಂದು ಆಟ, ಹೊಡೆಯುವ ಚೆಂಡು (ಅಭಿನವ ಜಲಧರತತಿಗಳ್ ನಭಕ್ಕೆ ನೆಗೆವುವು ಖಗಾದ್ರಿಗೆಣೆಯಿಂ ಸೂರ್ಯಪ್ರಭತನಯನತುಳ ಭುಜಬಲವಿಭವಂ ಪೊಡೆಸೆಂಡುವೊಯ್ದ ಬೆಟ್ಟಂಗಳವೋಲ್: **ನೇಮಿನಾಪು,** ೨. ೯೧)

**ಪೊಣರ್** – ಹೋರಾಡು (ಮರಕತಮಣಿಶೈಲಮನನುಕರಿಸುವ ಭುಜಬಲಿಯೊಳಿರದೆ ಪೊಣರ್ವುದುಂ: **ಆದಿಪು,** ೧೪. ೧೧೯); ಪೈಪೋಟಿ ಮಾಡು (ನೀಲನಿಷಧಗಿರಿಗಳ್ ಒಂದೊಂದಱೊಳ್ ಬಂದು ಪೊಣರ್ದು ನಿಲ್ವಂತೆ ನಿಂದು: **ಆದಿಪು,** ೧೪. ೧೦೪ ವ); ಜೋಡಿ (ತಪನಕರಂ ತನುಗಳನುರ್ಚಿ ಪೋಗೆ ಸಾರ್ದತ್ತು ಜಕ್ಕವಕ್ಕಿಯ ಪೊಣರುಂ .. .. ನೆಟಿಲಂ: **ಆದಿಪು,** ೧೧. ೫೦); ಜೊತೆ, ಜೋಡಿ ಯುಗಳಂ ಯುಗ್ಮಂ ದ್ವಂದ್ವಂ ಯುಗಂ ಉಭಯಂ ಯಾಮಳಂ ದ್ವಯಂ ದ್ವಿತಯಂ ಸಂಜ್ಞೆಗಳಿವೆ ಪೊಣರೊಳ್: **ಅಭಿಧಾವ,** ೨. ೧. ೩೫); ಕಾಂತಿ (ಪಸಿದೆಯೆಲೆ ಕಂದ ಬತ್ತಿತು ಬಸುಱೆದು ಕಳೆಗುಂದಿತು ಆನನಂ ಕಣ್ ಪೊಣರ್ಗಳ್ ಮಸುಳ್ದುವು: **ರಾಜಶೇವಿ,** ೧೩. ೧೧೪)

**ಪೊಣರಟೆ** – ಬೇರೆಬೇರೆಯಾಗು ಇನಿಯಳ್ ಪೊಣರಟೆದೊಡೆ ಅದಂ ನೆನೆನೆನೆದುಂ ಸುಯ್ದು ಸುಯ್ದು ಅಟಲ್ದು ಅಳ್ಳಳ್ತು ಅಜ್ಜಿನಿದಪ್ಪದೆ ನೋಡಿ ನೋಡಿ ಜಾನಿಸಿದುದು ಅತುಲಶೋಕಂ ಕೋಕಂ: **ಜಗನ್ನಾವಿ,** ೧೬. ೯೭)

**ಪೊಣರ್ಕೆ** – ಹೋರಾಟ (ನೆತ್ತಮನಾಡಲ್ ಈ ಘನಸುವೃತ್ತ ಪಯೋಧರೆಯೊಳ್ ಪೊಣರ್ಕೆ ಕೇಳ್ ಅತ್ತಳಗಂ ದಿಟಂ: **ಕರ್ಣನೇಮಿ,** ೪. ೫೩)

**ಪೊಣರ್ಗಳಸ** – ಹೊಳೆಯುವ ಕಳಶ (ನೃಪನೇಟ್ತಂದೊಡೆ ಆನಂದದಿಂದಂ ಮಿಱುಗುತ್ತಿರ್ಪನ್ನೆಗಂ ಕನ್ನಡಿ ಪೊಣರ್ಗಳಸಂಬೊತ್ತವೊಲ್ ಪೆತ್ತುದಿಂಪಂ: **ಲೀಲಾವತಿ,** ೧೩. ೭೨)

**ಪೊಣರ್ಚು** – ಜೊತೆಗೂಡಿಸು, ಸ್ಪರ್ಧಿಸು (ಒರ್ವ ಗಂಧರ್ವನೊಳೆ ಚಿತ್ರಾಂಗದಂ ದ್ವಂದ್ವಯುದ್ಧಮಂ ಪೊಣರ್ಚಿ ಕುರುಕ್ಷೇತ್ರಮಂ ಕಳಂಬೇಟ್ದು: **ಪಂಪಭಾ,** ೧. ೭೩ ವ)

**ಪೊಣರ್ವಕ್ಕಿ** – ಜೋಡಿಯಾಗಿರುವ ಹಕ್ಕಿ, ಚಕ್ರವಾಕ (ಬನಗಳೊಳ್ ತಾಣಂದರಮಾಗಿರ್ಪ ಕೆಂಗಣ್ವಕ್ಕಿ ಅಲರ್ವಕ್ಕಿ ಕನ್ನಡವಕ್ಕಿ ಪೊಣರ್ವಕ್ಕಿ ಮೊದಲಾದ ದಟ್ಟಿಯ ಕೂರಾಳ್ಗಳುಂ: **ಕಬ್ಬಿಗಕಾ,** ೧೫೩ ವ)

**ಪೊಣ್ಮಿಸು** – ಹೊಮ್ಮಿಸು, ಉಂಟುಮಾಡು (ಷಟ್ಪದಂ ಗಾನಂಬೊಣ್ಮಿಸುತ್ತುಂ ಶಸಿಯುದಯದೋಳೊಪ್ಪಿತ್ತು ರಾಜೋಪಚಾರಂ: **ಗಿರಿಜಾಕ,** ೪. ೯೬)

**ಪೊಣ್ಮು** – ಹೊಮ್ಮು, ಹೊರಸೂಸು (ಬಗೆಯೊಳ್ ಪೊಣ್ಮೆ ದಯಾರಸಂ ಚರಿತದೊಳ್ ಕೈಗಣ್ಮೆ ಚಾರಿತ್ರಂ: **ಆದಿಪು,** ೧. ೫); ಸಂಭ್ರಮಿಸು (ಅದಂ ಅಟ್ಟಿಜೆಂದಡರಿ ಭಾವಿಸಿ ಭಾವಿಸಿ ನೋಡಿ ನೋಡಿ ಚೆಚ್ಚರಮವನೀತಳಮಂ ತನಗೆ ಸಾರ್ದಪೊಲೊರ್ಮೊದಲುಣ್ಮಿ ಪೊಣಿದಂ: ಧರ್ಮಾಮೃ, ೬. ೫೦); ವೃದ್ಧಿಯಾಗು (ಇನಿತೊಂದುದ್ವೇಗಂ .. .. ಮರುಕಂ .. .. ಪುಟ್ಟಿತು ಏಕೆ ಅಕಾರಣದಿನುದಯಿಸಿತ್ತು ಏತಜಿಂ ಪ್ರಾಪಿಸಿತ್ತಾವನಿನಾದತ್ತೆಂತು ಪೊಣ್ಮಿತ್ತು ಎನೆ: **ಜಗನ್ನಾವಿ,** ೧. ೨೯)

**ಪೊತ್ತಗೆ** – ಪುಸ್ತಕ, ಆಗಮಗ್ರಂಥ (ಯತಿಯಂ ಪೊತ್ತಗೆ ದಲೆಂದು ಮನ್ನಿಪುದದಜಿಂ: **ಸಮಯಪ,** ೭. ೪೯)

**ಪೊತ್ತಡಿ** – ಹಣದ ಚೀಲ (ತನ್ನ ಪೊತ್ತಡಿಯೊಳ್ ಪೊನ್ನುಗಳಂ ತೆಗೆದು ಅಕೃತ್ಯಪುಣ್ಯನ ಕೈಯಲಿಕ್ಕಲ್: **ಪುಣ್ಯಾಸ್ರ,** ೧೨. ೨೦ ವ)

**ಪೊತ್ತಱ್** – ಹೊತ್ತಾರೆ (ಪೊತ್ತಜೆಂಗಿಲ್ಲದ ಚಂದ್ರಕಾಂತಿ ನೆಲೆಗೊಂಡುದು ಕಂಡುಂ ಅದೇಕೆ ಕಾವ್ಯದೊಳ್ ಬಲ್ಲ ಮಹಾತ್ಮರುಂ ನಿಲಿಸಲೊಲ್ಲರೊ ಭಂಗ ಚಲದ್ಗುಣಂಗಳಂ: **ಲೀಲಾವತಿ,** ೧. ೬೧)

**ಪೊತ್ತಱೆ** – ಹೊತ್ತಾರೆ, ಬೆಳಿಗ್ಗೆ (ನುಡಿದುದನೀಗಳಾಗ ಪೊಗಸುಂ ಪರೆ ಪೊತ್ತಱೆ ನಾಳೆ ನಾಡಿದು ಎಂದಡಗದೆ: **ಅಜಿತಪು,** ೧೨. ೧೮)

**ಪೊತ್ತಿಸು** – ಉರಿಯಿಸು (ಬನಮೆಂಬ ಮದನನೃಪನರಮನೆಯೊಳ್ ಪೊತ್ತಿಸಿದ ದೀಪಮಾಲೆಯ ಮಾಡಕ್ಕನುರೂಪಮಾಗಿ ಪಣೆಯಿಂ ಕೊನೆವರೆಗಂ ಪೂತುವರರೆ ಚಂಪಕನಿಕರಂ: **ಚಂದ್ರಪ್ರಪು,** ೭. ೫೩)

**ಪೊತ್ತು** – ಹತ್ತಿ ಉರಿ (ಕಾಯ್ಪಿನಿಂ ದಿಶಾವೆರಸಂಬರಂ ಪೊಗೆದು ಪೊತ್ತಿದುದು: **ಪಂಪಭಾ,** ೧೧. ೭೧); ಸೀದು ಹೋದುದು (ಪೊತ್ತು–ಅಗ್ನಿಪಟೂಕರಣೇ, ಅತಿ ಪಕ್ವಾನ್ನೇ ಚ: **ಶಬ್ದಮದ,** ಧಾ ೩೭೯); ಸುಡು (ಪುಲ್ಲು ಪೊತ್ತಿ ಪೊಗೆದುರಿದು ಮಂದುರಮಂ ಪೊತ್ತಿದೊಡಲ್ಲಿಯರೆಬೆಂದ ತುರಗಂಗಳನರಸಂ ಕಂಡು: **ಪಂಚತಂತ್ರ,** ೨೪೪ ವ)

**ಪೊದಳ್** – ಹೊಮ್ಮು, ಪ್ರಕಟವಾಗು (ಆಯತಿಯ ಬೀರದ ಚಾಗದ ಮಾತುಗಳ್ ಪೊದಳ್ದೊದವಿರೆ ತತ್ಪ್ರಶಸ್ತಿಗಳೆಳ್ ಅಂತವನೊಯ್ಯನೊಯ್ಯನೆ ನೋಡಿ: **ಆದಿಪು** ನರಸಿಂ, ೧೩. ೭೧); ಶೋಭಿಸು (ತಮಗೆ ಪೊದಳ್ದೊದವಿದ ತಾವು ಮನೋಹರ ಸುರತಭವನಮುಂ ಪಾಸುಂ ಮಂಚಮುಮಾಗಿರೆ ನೆರೆವರ್: **ಸಮಯಪ,** ೫. ೫೬); ಸೇರು, ಅಂಟಿಕೊ (ನುಡಿ ಪುಸಿಯೊಳ್ ಪೊದಳ್ದಿರದು .. .. ಎನೆ ಬಣ್ಣಿಸಲಾರ್ ಗಳ ಭವ್ಯಕೋಟಿಯಂ: **ಸಮಯಪ,** ೬. ೨); ಚದುರು (ಆ ಸತಿಯಿಕ್ಕಿದ ಕಣ್ಣ ನೀರ ಧಾರೆಗಳೊಳೆ ನಾಂದು ಎಲರ್ಚಿ ಪೊದಳ್ದು ಒರ್ಮೆಯೆ ಪಾಜಿದುವು ಉನ್ಮದಾಳಿಗಳ್: **ಪಂಪಭಾ,** ೫. ೧೦); ಹೊಮ್ಮು (ನಿಡುಸುಯ್ದ ನಲ್ಲಳ ಮುಖಾಂಬುಜಸೌರಭದೊಳ್ ಪೊದಳ್ದು ಅದೇಂ ಮಗಮಗಿಸಿತ್ತೊ ಕತ್ತುರಿಯ ಕಪ್ಪುರದೊಂದು ಕದಂಬದಂಬುಲಂ: **ಪಂಪಭಾ,** ೪. ೧೦೭); ವ್ಯಾಪಿಸು (ಚಾಗದ ಕಂಬಮಂ ನಿಜೆಸಿ ಬೀರದ ಶಾಸನಮಂ ನೆಗಟ್ಟಿ ಕೋಳ್ಪೋಗದ ಮಂಡಲಂಗಳನೆ ಕೊಂಡು ಜಗತ್ತ್ರಿತಯಂಗಳೊಳ್ ಜಸಕ್ಕೆ ಆಗರಮಾದ ಬದ್ದೆಗನಿಂ ಆ ನರಸಿಂಹನಿಂ ಅತ್ತ ನಾಲ್ವರಲ್ ಮೇಗು ಪೊದಳ್ದ ಚಾಗದೊಳಂ ಒಂದಿದ ಬೀರದೊಳಂ ಗುಣಾರ್ಣವಂ: **ಪಂಪಭಾ,** ೧. ೫೦)

**ಪೊದಱ್** – ಪೊದರು, ದಟ್ಟ ಪೊದೆ (ಕಡುಪಿಂದಾತನೊಳಾಂತರೋಡಿ ಬನಮಂ ಪೊಕ್ಕುಂ ಪೊದಱ್ ಪಾರ್ದು ಕಾಲ್ವಿಡಿದು ಪಚ್ಚಲೆವಾರ್ದು ಮೆಯ್ಗರೆದು ಕೊಂಬಂ ಪೊರ್ದಿಯುಂ: **ಕಬ್ಬಿಗಕಾ,** ೧೩೪)

**ಪೊದಱುಗಟ್ಟು** – ದಟ್ಟೈಸು (ಕೆದಜೆ ನಾಂದಿ ಪೊದಱುಗುಟ್ಟುವ ಕದಲಿಗದಿರನುನರದಿನುರವಣಿಸಿ ನೆತ್ತಿಯಿಂ ಪೊತ್ತು ನೆಗೆದು: **ಅನಂತಪು,** ೭. ೮೦ ವ)

**ಪೊದಳ್ಕೆ** – ಮೂಡುವಿಕೆ (ಇದು ನೃಪತೇಜಶ್ಚಕ್ರದ ಪೊದಳ್ಕೆ ತಾನಲ್ತೆಚಕ್ರರೂಪದಿನಿರ್ದಪುದು: **ಆದಿಪು** ನರಸಿಂ, ೧೩. ೨೭); ಅತಿಶಯತೆ (ಹೃದಯದಲಂಪು ಪೋಗೆ ಪದೆದೀಂಟಟದೆ ಮುನ್ನಮೆ ತನ್ನ ಕಂಪಿನಿಂ ಮದದ ಪೊದಳ್ಕೆಯಂ ಮನಕೆ ಮಾಟ್ಪ ವಿನೂತನವೃಕ್ಷಧಾನ್ಯಸಾರದೆ: **ಶಾಂತೀಶ್ವಪು,** ೩. ೮೧); ತೇಜಸ್ಸು (ಕ್ಷಾಯಿಕದೃಷ್ಟಿ ತುಷ್ಟಿಯೊಳೊಡಂಬಡೆ ಜೈನವಚೋಮೃತಂ ಮುಖಶ್ರೀಯ ಪೊದಳ್ಕೆಯಂ ಬೆಳಗೆ: **ಶಾಂತಿಪು,** ೧.೪)

**ಪೊದಳ್ಚು** – ಉಂಟುಮಾಡು (ತಾಂ ಮೊಗಂಗುಡೆ ಪದವೆತ್ತು ಚುಂಬಿಸಿ ಭಯಂಗೆಯೆ ಬಲ್ವೊಸಂ ಪೊದಳ್ಚಿ ನಾಣ್ಗಿಡೆ ನೆರೆದೂಢೆಯಂ ಪ್ರಥಮಸಂಗಮದೊಳ್ ಕುವರಂ ಮರುಳ್ಚಿದಂ: **ಚಂದ್ರಪ್ರಪು,** ೬. ೮೨)

**ಪೊದೆ** – ಹೊದೆದುಕೊ (ಆತನ ರತ್ನಗಂಬಳಿಯಂ ಪೊದೆದು ತನ್ನ ಮನೆಗೆ ಬರ್ಪೊನಂ ಕಂಡು: **ವಡ್ಡಾರಾ,** ಪು. ೩೯, ಸಾ. ೨); ಬತ್ತಳಿಕೆ (ಬಿರಯಿಗಳಂ ಇಸಲ್ ಅನಂಗಂಗೆ ಅರಲಂಬಿನ ಪೊಸದೆಯನಖಿಳವನದೇವತೆಯರ್ ವಿರಚಿಸಿ ನೀಡಲ್ ಬಂದಂತಿರಲ್ ಎಸೆವರ್ ಪುಷ್ಪಮಾಲಿಕಾಧಾರಿಣಿಯರ್: **ಪುಷ್ಪದಂಪು,** ೨. ೭೯); ಪೊದರು (ಮೆಯ್ಮಱೆದು ಲಜ್ಜೆಯಂ ತೊಱೆದು ಪೊದೆಯೊಳಿರ್ದ ಪೆಣ್ಗರಡಿಯಂ ಕಂಡು ಕಾತರತನದಿಂ ಪಿಡಿದದಂ ನೆರೆಯಲ್: **ಧರ್ಮಪ,** ೩. ೯೫ ವ)

**ಪೊದೆಗೆದಱು** – ಹರಡು (ಪೊದಗೆದಜಿರ್ದ ಪೂಗಣೆಯ ಕೆಂಗಜೆಯಂತೆ .. .. ಪೂತ ಚೂತದ ಕಿಱುಗೊಂಬಿನೊಳ್ ನಿಜೆದಳಿರ್ಮೆಱೆದತ್ತು: **ಅನಂತಪು,** ೬. ೮೨)

**ಪೊದೆಯಿಸು** – ಹೊದಿಸು (ಪೊದೆಯಿಸು–ಆಚ್ಛಾದನೇ: **ಶಬ್ದಮದ,** ಧಾ ೮೨೪); ಆವರಿಸು (ಘುಸೃಣೋದಕಧಾರೆ ನವಾರುಣಾಂಶುವೋಲ್ ಪೊದೆಯಿಸಿತು ಅಂಬುಜಾನನೆಯರೆಂಬ ನವಾಂಬುಜಿನೀ ಕದಂಬಮಂ: **ಜಗನ್ನಾವಿ,** ೧೪. ೧೦೭)

**ಪೊನ್** – ಚಿನ್ನ (ಮೇರುವ ಪೊನ್ ಕಲ್ಪಾಂಘ್ರಿಪದಾರವೆ ರಸದೊಱವು ಪರುಸವೇದಿಯ ಕಣಿ ಭಂಡಾರದೊಳುಂಟೆನೆ ಕುಡುವ ಅನಿವಾರಿತದಾನಕ್ಕೆ ಪೋಲ್ವರಾರ್ ಬದ್ದೆಗನಂ: **ಪಂಪಭಾ,** ೧. ೨೮); ಒಂದು ಚಿನ್ನದ ನಾಣ್ಯ (ಮತ್ತಮಲ್ಲಿ ಕೋಟಿ ಪೊಂಗೆ ಘಂಟೆಯಲುಗುವ ಕಿಱುಕುಳ ಬೊಜಂಗರುಮಂ ಸುಣ್ಣದೆಲೆಯಂ ಒತ್ತೆಯಿಟ್ಟು ಮದದಾನೆಯುಮಂ ಮಾಣಿಕಮುಮಂ ಒತ್ತೆಯಿಡಿಸಲಟ್ಟುವ ಚಿಕ್ಕ ಪೋರ್ಕುಳಿಬೊಜಂಗರುಂ: **ಪಂಪಭಾ,** ೪. ೮೭ ವ)

**ಪೊನಲ್** – ಹೊನಲು, ಪ್ರವಾಹ (ಪೊನಲ್ಗಳ ಕೆಂಪು ಪಸುರ್ಪು ಕರ್ಪು ಬೆಳ್ಪು ಒಳಕೊಳೆ ಶಕ್ರಕಾರ್ಮುಕವಿಳಾಸಮಂ

ಏನೆರ್ದೆಗೊಂಡು ಬೇಟದತ್ತಳಗಮಂ ಉಂಟುಮಾಡಿದುದೋ ಕಾಮನ ಕಾರ್ಮುಕದಂತೆ ಕಾರ್ಮುಕಂ: **ಪಂಪಭಾ,** ೭. ೨೫)

**ಪೊನಲ್ವರಿ** – ಪ್ರವಾಹವಾಗಿ ಹರಿ (ಕಡೆಗಣ್ಣೊಳ್ ತುಳುಂಕಿಯುಂ ಕದಪಿನೊಳ್ ಪೊಂಪುಟಿವೋಗಿಯುಂ ಭ್ರೂವಿಭ್ರಮದೊಳ್ ಪೊನಲ್ವರಿದುಂ: **ಆದಿಪು,** ೭. ೧೨೬ ವ)

**ಪೊನ್ನ ಬೆಟ್ಟು** – ಚಿನ್ನದ ಬೆಟ್ಟ, ಮೇರುಪರ್ವತ (ಬಳಸಿದ ತಾರಗೆಗಳ ಮಾರ್ಪೊಳೆವೊಂದಿದ ಪೊನ್ನ ಬೆಟ್ಟು ಕೈಯಂ ಕಾಲಂ ತಳೆದಿರ್ದುದೆಂಬಿನಂ ಕಣ್ಗೊಳಿಸಿದನಂತವರ ಪಕ್ಕದೊಳ್ ಪಲಗಣ್ಣಂ: **ಕಬ್ಬಿಗಕಾ,** ೧೨೭)

**ಪೊನ್ನಲರ್** – ಬಂಗಾರದ ಹೂ (ಮಾಣಿಕದ ಸೊಡರ್ಗಳಿಂ ನೇರಾಣಿಯ ಪೊನ್ನಲರ್ಗಳಿಂ ಗೀರ್ವಾಣಾರ್ಚಿತನಂ ನರೇಂದ್ರವಧುವರ್ಚಿಸಿದಳ್: **ಮಲ್ಲಿನಾಪು,** ೪. ೨೭)

**ಪೊನ್ನಾಯುಗ** – [ಕತ್ತಿಯ] ಚಿನ್ನದ ಹಿಡಿಕೆ (ರಂಜಿಸಿದುದು ಪೊನ್ನಾಯುಗದ ಪೊನ್ನ ಬಜ್ಜರಿ ಕಟಿಯೊಳ್: **ಅನಂತಪು,** ೬. ೫೦)

**ಪೊನ್ನಾಯೋಗ** – ಚಿನ್ನದಿಂದ ಮಾಡಿದ ಆಭರಣ (ನಡೆಯೆ ತುರಗು ಪೊನ್ನಾಯೋಗಂಗಳಿಂದಮರರ್ದಟ್ಟೆಯಿಂ: **ಪಂಪಭಾ,** ೯. ೧೦೨)

**ಪೊನ್ನು** – ಚಿನ್ನ (ಬಳ್ಳಿ ಮೊದಲಾಗಿ ಮೊದಲೊಳಗೆಳ್ಳನಿತುಂ ಪೊನ್ನನಿಕ್ಕದೊಡೆ ಪರ್ಬದು .. .. ಪೊನ್ನುಳ್ಳ ನರನಿತ್ತೊಡಲ್ಲದೆ: **ಲೀಲಾವತಿ,** ೧. ೪೩)

**ಪೊನ್ನುಯ್ಯಲ್** – ಚಿನ್ನದ ಉಯ್ಯಾಲೆ (ತನ್ನೊಡನಾಡುವ ಕುವರಿಯರುಂ ಬೆರಸು ಪೋಗಿ ಮನಕ್ಕೆ ಬಂದ ಪೂವಿನಾಭರಣಮಂ ತೊಟ್ಟು ಚೂತಮಹೀಜದ ಕೆಳಗಣ ಪೊನ್ನುಯ್ಯಲನೇಱೆ: **ಧರ್ಮಾಮೃ,** ೧೪ ವ)

**ಪೊನ್ನೆ** – ಹೊನ್ನೆ ಮರ, ಪುನ್ನಾಗ (ಪಲಸು ಆಲಂ ತಡಸು ಆಸು ತೇಗು ತದುಕಿಂಚಿಲ್ ಪೊನ್ನೆ ಚೆನ್ನಂಗಿ ಬೊಬ್ಬುಲಿ ಇರ್ಬೀಡ ಅರನೇಱಿಲ್ ಇಪ್ಪೆ ಸಿರಿಸಂ ಹಾಡಂಗಿ **ಪಾರ್ಶ್ವನಾಪು,** ೧೨. ೫೮)

**ಪೊನ್ನೊಡೆಯ** – ಕುಬೇರ (ಸಸಿಯ ಮೆಯ್ವೆಳಗಿಂದೆ ಪೊನ್ನೊಡೆಯನಂ ಪೆಂಪಿಂದೆ ಮಾದೇವನಂ ಪೆಸರ್ವೆತ್ತಿಂಚರದಿಂದೆ ಸಂದ ಬಿದಿಯಂ ಜಾಣಿಂದೆ ಮೆಯ್ಗಣ್ಣನಂ ಪೊಸತಪ್ಪಗ್ಗದ ಗಾಡಿಯಿಂದೆ ಪಿರಿದುಂ ಬೆಳ್ಮಾಡಿ ಬೇಟ್ವಿಂತುಟುಬ್ಬಸಮಂ ಮಾಡುವ ಬರ್ದೆಯರ್ ಪಲರುಂ ಕಣ್ಗೇಂ ಬೆಡಂಗಾದರೋ: **ಕಬ್ಬಿಗಕಾ,** ೧೦೬)

**ಪೊನ್ನೊರೆ** – ಹೊಂಬಣ್ಣ (ಪೊನ್ನೊರೆದನ್ಯದೀಪಮೆಱೆವಂತಿರೆ ಮಾಣಿಕ್ಯಪ್ರದೀಪಮೇನೆಡಱುಗುಮೇ: **ಪಂಪರಾ,** ೯. ೧೮೦); ಚಿನ್ನದ ಗೆರೆ (ಮಾರಣಮಂತ್ರಾಕ್ಷರಮಂ ಪೊನ್ನೊರೆಯಿಮದಂ ಬರೆದಂತಾ ನೃಪನ ತೋಳ ಬಾಳ್ವೊಗರೆಸೆಗುಂ: **ಮಲ್ಲಿನಾಪು,** ೩. ೧೫)

**ಪೊನ್ನೊಱೆ** – ಚಿನ್ನದ ಒರೆ (ಪೊಸದುಕುಲಂ ಬೆಡಂಗಮರ್ದ ಪಟ್ಟೆಗೆ ಪೊನ್ನೊಱೆ ಸೇತಮಾಲೆ ಬಣ್ಣಸರಂ: **ವರ್ಧಮಾಪು,** ೮. ೬೩)

**ಪೊಮ್ಮಗಿಲ್** – ಚಿನ್ನದ ಪೌಳಿಗೋಡೆ (ಸರಸ್ಸಮಿತಿ ಪೊಮ್ಮಗಿಲ ಸುತ್ತಲುಂ ರಂಜಿಕುಂ: **ಪಂಪರಾ,** ೪. ೧೩೦)

**ಪೊಮ್ಮತ್ತಿ** – ಚಿನ್ನದ ಮಚ್ಚೆ (ಉತ್ತುಂಗ ಕುಚಾದ್ರಿಯ ಪೊಮ್ಮತ್ತಿಯ ಮೊಳೆ ಮೊಳೆತ ಜರಗಿನಂತಿರೆ ಕಾಣಲ್ಬೆತ್ತ ಸತಿಗಾಯ್ತು ಸುತನಂ ಪೆತ್ತಂತಪ್ಪೊಂದು ಸಮತಸಂ: **ನೇಮಿನಾಪು,** ೨. ೪)

**ಪೊಮ್ಮದಿಲ್** – ಚಿನ್ನದ ಪೌಳಿಗೋಡೆ (ನಿತಾಂತಂ ಓಲಗಿಸಲಟ್ಟಿದ ಸಾನುವದೆತ್ತಂ ಬಂದೆಳಸಿರ್ದಪುದೆಂಬಿನಂ ಸೊಗಯಿಪ್ಪುದು ಪೊಮ್ಮದಿಲುಗ್ರಾಂಶೂದ್ಗತಮಾಗಿರೆ ಕೆಮ್ಮುಗಿಲ್: **ಪುಷ್ಪದಂಪು,** ೨. ೯೦)

**ಪೊಮ್ಮಱಿ** – ಚಿನ್ನದ ಜಿಂಕೆ, ಕಾಂಚನಮೃಗ (ಮೆಯ್ಗಳ್ ಮಿಱುಮಿಱನೆ ಮಿಱುಗೆ ಪೊಸಪೊಮ್ಮಱಿಯಂತಿರೆ ಪರೆವುವಲ್ಲಿ ಹರಿಣಂಗಳ್: **ಲೀಲಾವತಿ,** ೯. ೪೧)

**ಪೊಮ್ಮಟಿ** – ಚಿನ್ನದ ಮಳೆ (ಅಲರ್ವಟಿ ಪೊಮ್ಮಟಿ ಮಂದಾನಿಳಂ ಅನಿಮಿಷ ದುಂದುಭಿಸ್ವನಂ ದಿವಿಜಮುಖೋಚ್ಚಾಳಿತ ಅಹೋದಾನಸ್ವನಂ ಇಳಾತಳಾಶ್ಚರ್ಯಮಾಯ್ತು ಪಂಚಾಶ್ಚರ್ಯಂ: **ಚಂದ್ರಪ್ರಪು,** ೧೪. ೧೨)

**ಪೊಮ್ಮಿದರ್** – ಶ್ರೇಷ್ಠರು (ದಿಮ್ಮಿದರ್ ಅಕ್ಕರಕ್ಕಱಿವರೊಳ್ ನುಡಿಯೊಳ್ ಕಡುಜಾಣರ್ ಅಂದದೊಳ್ ಪೊಮ್ಮಿದರ್ ಒಂದಿ ನಿಂದ ಸಿರಿಯೊಳ್ ಪಿರಿಯರ್: **ಕಬ್ಬಿಗಕಾ,** ೧೦)

**ಪೊಮ್ಮೀನ್** – ಹೊಳೆಯುವ ತಾರಗೆ (ಇದು ಬಾನಿಂ ಬರ್ಪ ಪೊಮ್ಮೀಂಬೊಣರ ತೆಱನಿದಲ್ತು ಒಂದಮಳ್ಮಿಂಚು ಮಿಂಚಲ್ಲದೆ ಇವರ್ ಚಂದ್ರಾರ್ಕರೇಂ .. .. ಎಂದುರ್ವಿದಲಂಪಿನಿಂ ನೋಡೆ ಭೂಪಂ ಗಗನದಿನಿೞಿದರ್ ಚಾರಣರ್ ಚಾರುರೂಪರ್: **ನೇಮಿನಾಪು,** ೨. ೫೯)

**ಪೊಯ್** – ಹೊಡೆ (ಪೊಯ್–ತಾಡನೇ: **ಶಬ್ದಮದ,** ಧಾ ೫೩೨) ಹೊಡೆತ (ಭುಗಭುಗನೆ ಉರ್ಚಿಪಾಯ್ವ ಬಿಸುನೆತ್ತರ ಸುಟ್ಟುರೆಯಂ ನೆಲಕ್ಕೆ ಪರ್ದುಗಳ್ ಉಗಲೀಯದೆ ಅವ್ವಳಿಸಿ ಪೀರ್ವಿನಂ ಒರ್ಮೆಯೆ ಪೊಯ್ವ ಪೊಯ್ಗಳಿಂ ನೆಗೆದು ಮುಗಿಲ್ಗಳ್ ಇಟ್ಟೆಡೆಗಳೊಳ್ ತಲೆಗಳ್ ತೊಡರ್ದಿರ್ದು ಜೇನ ಪುಟ್ಟಿಗಳೆನೆ ಪೋಲ್ತುವು ಏಂ ಕಲಹಂ ಅಚ್ಚರಿಯಾಯ್ತೊ ತುರಂಗಸೈನ್ಯದೊಳ್: **ಪಂಪಭಾ,** ೧೦. ೮೦); ಸುರಿ (ಪೊಸಪೂವಿನೊಳ್ ಪೊರೆದು ಪೊಣ್ಮಿದ ಕಂಪು ಮೊಗಂಗಳಂ ಚಳಿಲ್ಲನೆ ಕೊಳೆ ಪೊಯ್ಯೆ ತೀಡಿದುದು ತೆಂಕಣ ಗಾಳಿ ವಸಂತಮಾಸದೊಳ್: **ಪಂಪಭಾ,** ೫. ३४); ಮೃದಂಗವಾದನ (ಅತ್ತಮಿತ್ತಂ ನಿಜೆವ ಕರಯುಗಂಗಳ್ ಪೊಯ್ವ ದೇವಾನಕಂಗಳ್ .. .. ಬೆಡಗಂ ಮೆಱೆಯೆ: **ಪಂಪಭಾ,** ೭. ೫೨); ಆಕಾರಕ್ಕೆ ತರಲು ಬಡಿ (ಅಂತು ಸುವರ್ಣಮಂ ಒರೆದುಂ ಕಡಿದುಂ ಕಾಸಿಯುಂ ಪೊಯ್ದು ನೋಡಿ ಪರೀಕ್ಷೆವಂತರ್ ಪರೀಕ್ಷಿಸಿಕೊಳ್ವಂತೆ: **ಧರ್ಮಪು:** ೧೦. ೩೯ ವ); ಎರಚು (ಕೆಮ್ಮನೆ ಕೈಗಾದಿರದೋವದೆ ಉಪ್ಪನೊಲೆಯೊಳ್ ಪೊಯ್ವಂತೆ ಪಾಱೆಟಿ ದುರ್ಜನನಂ ಬಯ್ವುದು ಬಯ್ದೊಡಲ್ಲದವನಂ ಪೇಟ್ ಭಾವಿಸಲ್ ಬರ್ಕುಮೇ: **ಸೂಕ್ತಿಸುಧಾ,** ೧. ३२)

**ಪೊಯಿಲ್** – ಹೊಡೆತ (ಪೊಯ್ದೊಡೆ ಬಱುಬಂ ಪೊಯಿಲ್ವೆತ್ತಂತೆ ಏನುಂ ಅಱಿಯದೆ .. .. ನಡನಡುಗಿ: **ಪಂಪಭಾ,** ೮. ೭೦)

**ಪೊಯ್ನೀರ್** – ಸುರಿಯುವ ನೀರು (ಮಟಿಯಿಲ್ಲದೆ ಪೊಯ್ನೀರಿಂ ಬೆಳೆಗುಮೆ ಧರೆ .. .. ಕೋಮಳಮಕ್ಕಮೆ ಸಹಜಮಿಲ್ಲದಾತನ ಕಬ್ಬಂ: ಧರ್ಮಾಮೃ, ೧. ೪೯); ಕಡೆದ ಮೊಸರು, ಮಜ್ಜಿಗೆ (ದದಿಘಂಥಂ ಮಸ್ತುಮೆಂಬುದಕ್ಕುಂ ಪೊಯ್ನೀರ್: **ಅಭಿಧಾವ,** ೧. ೧೬. ३)

**ಪೊಯ್ವಡೆ** – ಪೆಟ್ಟು ತಿನ್ನು (ಪೊಯ್ವಡೆದಂತೆ ಪಂದೆಯಂ ಪಾವಡರ್ದಂತಾಗಿರೆ ಯಶೋಧರಂ ಬೆಱಗಾದಂ: **ಯಶೋಧಚ,** ३. ೨೬)

**ಪೊಯ್ದುಪಡು** – ಹೊಡೆದು ಕೊಲ್ಲು (ಹರಿಣಧರ ಹರಿಣನಂ ಪೂಮರದಡಿಯೊಳ್ ಪೊಯ್ದುಪಟ್ಟ ಪುಲಿಗಳಿವೆನಿಕುಂ ಪರೆದರುಣ ಸಿತಾಸಿತಮಪ್ಪ ರಾಗದಿಂ ಬೀಡೆವಟ್ಟ ಬೆಟ್ಟದ ಸಜೆಗಳ್: **ಅಜಿತಪು,** ೯. ೨೪)

**ಪೊಯ್ಲು** – ಪೊಯಿಲ್ (ವಜ್ರಮುಷ್ಟಿಯ ಪೊಯ್ಲೊಳಂ ಬಾಳ ಕೋಳೊಳಮ್ ಉಚ್ಚಳಿಸಿದ ಕಪಾಲದ ಓಡುಗಳಂ ಗಂಗೆಗಟ್ಟುತ್ತುಂ: **ಪಂಪಭಾ,** ೧೧. ೨ ವ)

**ಪೊರಜೆ** – ದಪ್ಪವಾದ ಹಗ್ಗ (ರನ್ನದ ಪೊರಜೆ ನವಾಂಭೋದ ಮಾದ್ಯತ್ ಗಜಕ್ಕಿಕ್ಕಿದುದೋ ಪೇಟೆಂಬಿನಂ ಕಣ್ಗೆಸೆದುದು ಶಬಲಚ್ಛಾಯೆಯಿಂ ಶಕ್ರಚಾಪಂ: **ಪಂಪರಾ,** ೭. ೧೪೫)

**ಪೊರಸು** – ಹಗ್ಗದ ಮಂಚ (ಕೂಸಂ ಮಿಸಿಸಿ ಮನೆಯ ಮುಂದೊಂದು ಪೊರಸಿನ ಮೇಲೆ ಪಟ್ಟಿರಿಸಿದಾಗಳ್: **ಹರಿವಂಶ,** ೬. ೯ ವ)

**ಪೊರಳ್** – ಉರುಳು (ಪೊರಳ್–ಲುಠನೇ: **ಶಬ್ದಮದ,** ಧಾ ೯೬೭); ಹೊರಳು, ಚಲಿಸು (ನುಡಿವೊಡೆ ನಾಲಗೆ ಪೊರಳದೆ ಕಿಡುಗುಂ ನೆಱೆ ಮೂಗನಾಗಿ ನಮೆಗುಂ: **ಧರ್ಮಾಮೃ,** ೬. ೧೨೭)

**ಪೊರಳಿ** – ರಾಶಿ (ತಾಪದಿಂ ಮೃಣಾಳನಾಳದ ಪೊರಳಿಯಂ ಪೊರಳ್ದು ತಳ್ಕೈಸೆಯುಂ: **ನೇಮಿನಾಪು,** ೫. ೨ ವ)

**ಪೊರಳ್ಕೆ** – ತೊಳಲಾಟ (ಇದೇಂ ವಿಚಿತ್ರಮೊ ಸಂಸಾರಮುಂ ಇದೆನ್ನ ಕರ್ಮವಿಕಾರದಿಂದಾದ ಪೊರಳ್ಕೆಯೆಂದಂತೆ ನೋಟ್ಪಿಂ: **ಹರಿವಂಶ,** ೪. ೩೭ ವ)

**ಪೊರಳ್ಚು** – ಹೊರಳಿಸು (ಅಸ್ತ್ರಾನಳಂ ಕಿಡಿಯಿಂ ಕೆಂಡದಿನೇಂ ಪೊರಳ್ಚಿದುವೊ ತನ್ಮೇಘಾಮರಾನೀಕಮಂ: **ಆದಿಪು,** ೧೩. ೬೬)

**ಪೊರೆ** – ಪದರ (ದಿವ್ಯತಳ್ಪತಳದ ಪೊರೆಯೊಳಗೆ ನೆಗೆದ ಕೆಮ್ಮುಗಿಲ ತೆಗಳಿಗೆಯ ಪೊರೆಯೊಳ್ .. .. ತೊಳತೊಳಗಿ ಪೊಱಮಡುವೆಳನೆಸಱ ಬಳಗದ ಬೆಳಗಂ: **ಆದಿಪು,** ೨. ೬೧ ವ); ಕೂಡಿರು (ಕಪ್ಪುರದ ರಜಂಬೊರೆದ ಕರಕಾಂಬುವ ತಳಿದು ದರವುರನೆಟ್ಟಿಚೆಸೆ: **ಆದಿಪು,** ೪. ೧೭); ಸಂಬಂಧ (ನಿಮಗೆಮ್ಮ ಕಜ್ಜದೊಳ್ ಪೊರೆಯುಂಟೇ: **ಆದಿಪು,** ೯. ೧೦೭); ವ್ಯಾಪಿಸು (ಮೃಗಭೂ ಖದ್ಧ ವಿಳಾಸಿನೀ ಕಬರಿಕಾಬಂಧಗಳಂ ಪೊತ್ತು ಮಲ್ಲಿಗೆಯೊಳ್ ಭಾವಿಸಿ ಧೂಪದೊಳ್ ಪೊರೆದು ತತ್ಕಾಂತಾ ರತಿಸ್ವೇದಬಿಂದುಗಳೊಳ್ ನಾಂದು ಕುರುಳ್ಗಳೊಳ್ ಸುಟಿದು ಮುಂದೊಂದಿರ್ದ ಸೌಭಾಗ್ಯಘಂಟೆಗಳೊಂದಿ ಇಂಚರದೊಳ್ ಪಳಂಚಿ ಸುಟಿದತ್ತು ಅಂದೊಂದು ಮಂದಾನಿಳಂ: **ಪಂಪಭಾ,** ೪. ೮೦); ರಕ್ಷಣೆ (ಒಂದುಂ ಎಡಂಬಡುಂ ಪೊರೆಯುಂ ಇಲ್ಲ ಅವರ್ಗೆ ಎಂಬುದಂ ಎಯ್ದೆ ನಂಬಿ ನಾಡಂ ದಯೆಗೆಯ್ದು ನೀಂ ಕುಡುವಿನಂ: **ಪಂಪಭಾ,** ೯. ೪೩); ಅಂಟಿಕೊ (ದೊರೆಯಾದುದುದುರ್ಯಶದೊಳ್ ಪೊರೆಯದ ಚರಿತಂ: **ಗದಾಯು,** ೧. ೧೩): ಸಲಹು (ಅಸುಹೃತ್ಸೇನೆಗೆ ಸಾಲ್ವಂ ಒರ್ವನೆ ಗಡಂ ರುದ್ರಾವತಾರಂ ಗಡಂ ನೊಸಲೊಳ್ ಕಣ್ ಗಡಂ ಎಂದು ನೆಚ್ಚಿ ಪೊರೆದೆಂ: **ಗದಾಯು,** ೨. ೧೧); ಸಮೀಪ (ಶ್ರೀನದಿಯ ತೊಱೆಯ ಪೊರೆಯೊಳ್ ಎತ್ತುಗಳ ಕಾರಣದಿಂ ಕಲಹಮಾಗಿ ಕಾದಿ ಸತ್ತು ಸಂಗಣಿಸಿದ ಆರ್ತದಿಂ .. .. ದುಷ್ಟಗಜಂಗಳಾಗಿ ಪುಟ್ಟಿ: **ಶಾಂತೀಶ್ವಪು,** ೧೨. ೧೧೭ ವ)

**ಪೊರೆದು ಪೊಣ್ಮು** – ತುಂಬಿ ತುಳುಕು (ಪೊಸಪೂವಿನೊಳ್ ಪೊರೆದು ಪೊಣ್ಮಿದ ಕಂಪು ಮೊಗಂಗಳಂ ಚಳಿಲ್ಲನೆ ಕೊಳೆ ಪೊಯ್ಯೆ ತೀಡಿದುದು ತೆಂಕಣ ಗಾಳಿ ವಸಂತಮಾಸದೊಳ್: **ಪಂಪಭಾ,** ೫. ೩೪)

**ಪೊರೆದೋಱು** – ಅರಳು (ಪರೆಯೆ ಪಸುರ್ಪು ಬೆಳ್ಪಡರೆ ಬಲುಗುಳೊಳ್ ಪೊರೆದೋಱೆ ತೆಂಬೆಲರಪೊರ್ರೆವೊರೆಯಂ ಸಡಿಲ್ಚೆ: **ಆದಿಪು,** ೧೧. ೧೧೦)

**ಪೊರೆಪು** – ಸಂಪರ್ಕ (ನೀರಜದ ರಜದ ಪೊರೆಪು ಆ ನೀರೇಜದ ನೀರ ಪೊರೆಪು ಪೊರೆವೊರೆ ನೀಂ ಸಂಸಾರಕ್ಕೆ ನಿನಗಂ ಈ ಸಂಸಾರಂ ಪೊರೆಪೊರೆ ಪರಾತ್ಮಹತಿನುತಚರಿತಾ: **ಶಾಂತಿಪು,** ೧೧. ೯೬)

**ಪೊರೆಪುಗುಜೆ** – ಸಾಕಿ ಬೆಳೆಸಿದ ಕುರಿ (ಅಂತಿರೆ ಪೊರೆಪುಗುಜೆಯೆ ದಿವಿಜಸಂತತಿಗೆ ಚಂದ್ರಂ: **ಸಮಯಪ,** ೧. ೪೩)

**ಪೊರೆಪುದೋಱು** – ಸಂಭ್ರಮಗೊಳ್ಳು (ವಿಳಾಸಿನೀ ನಯನಕೈರವದಿಂ ದೆಸೆ ಕೂಡೆ ಪೂಗೊಳಂದೋಱೆ ವಿಳಾಸದೊಳ್ ಪೊರೆಪುದೋಱಿದುದಾಗ ಮನಂ ನೃಪೇಂದ್ರನಾ: **ಅನಂತಪು,** ೩. ೬೫)

**ಪೊರೆಯೆತ್ತು** – ಪದರ ಬಿಡಿಸು (ಅಚ್ಚವೆಳ್ದಿಂಗಳನೀಗಳ್ ಪೊರೆಯೆತ್ತಿದರೆಂಬಂತೊಳ್ಪಂಗೆಡೆಗೊಂಡು ಸೊಗಯಿಸುವ ಮಂಡಗೆಯಂ .. .. ಬಟ್ಟಲೋಳಿಟ್ಟರ್: **ಪಾರ್ಶ್ವನಾಪು,** ೮. ೫೦)

**ಪೊರೆಯೇಱಿಸು** – ಚಿಗುರಿಸು (ಅಶೋಕೆಯನೊದೆದು ಅಂಕುರಮಂ ಪುಟ್ಟಿಪ ಪದ್ಮಮುಖಿಯಂ ಕುರುವಕಮಂ ಪರಿರಂಭಣದಿಂ ಪೊರೆಯೇಱಿಸುವ ತರುಣಿಯರಿಂ: **ಗಿರಿಜಾಕ,** ೭. ೧೧ ವ); ಉತ್ಸಾಹಗೊಳಿಸು (ತನ್ನ ಕೀರ್ತ್ಯಂಗನೆಯ ಏಟಗಮಂ ಒಸೆದೇಱಿ ಮಿಗೆ ಬಂಧುಗಳುಮಂ ಆ ತಂದೆಯೊಡನೆ ಪೊರೆಯೇಱಿಸಿದಂ: **ಪಾರ್ಶ್ವನಾಪು,** ೭. ೯೪)

**ಪೊರೆಯೇಱು** – ಉತ್ಸಾಹಿಸು (ಪರೆವುದು ದುರಿತತಮಿಸ್ರಂ ಪೊರೆಯೇಱುವುದು ಅಮಳದೃಷ್ಟಿ .. .. ಯಶೋಧರಚರಿತ ಕಥಾಶ್ವರಣಮೆಂಬ ಚಂದ್ರೋದಯದೊಳ್: **ಯಶೋಧಚ,** ೧. ೨೬); ತೀಕ್ಷ್ಣಗೊಳ್ಳು (ಪರೆವುದು ದುರಿತತಮಿಸ್ರಂ ಪೊರೆಯೇಱುವುದು ಅಮಳದೃಷ್ಟಿ: **ಯಶೋಧಚ,** ೧. ೨೬)

**ಪೊರೆಯೊರೆ** – ಮುಚ್ಚುಮರೆ (ಶ್ರೀಪ್ರಭವಿಮಾನದೊಳ್ ಉಪಪಾದತಳ್ಪತಳದ ಪೊರೆಯೊಳಂ ಪೊರೆಯೊರೆಯಿಲ್ಲದ ಮದನರಾಗರಸದೊಳ್ ಮದನರಾಗರಸದೊಳ್ ಪೊರೆದು: **ಆದಿಪು** ನರಸಿಂ, ೨. ೭೨ ವ)

**ಪೊರೆವಿಡು** – ಪೊರೆಯನ್ನು ಕಳಚಿಕೊ (ಪೊರೆವಿಡೆ ಸೋಂಕಿ ತೆಂಕಣೆಲರೂದಲೊಡಂ ಸ್ಮರದಗ್ಧಭೂಜಮಂಕುರಿಸಿರೆ: **ಲೀಲಾವತಿ,** ೯. ೬೫)

**ಪೊರೆವೊರೆ** – [ಪೊರೆ+ಪೊರೆ] ಪದರು ಪದರು (ಪರೆಯೆ ಪಸುರ್ಪು ಬೆಳ್ಪಡರೆ ಬಲುಗುಳೊಳ್ ಪೊರೆದೋಱೆ ತೆಂಬೆಲರಪೊರ್ರೆವೊರೆಯಂ ಸಡಿಲ್ಚೆ: **ಆದಿಪು,** ೧೧. ೧೧೦); ದೂರ ದೂರ (ನೀರಜದ ರಜದ ಪೊರೆಪು ಆ ನೀರೇಜದ ನೀರ ಪೊರೆಪು ಪೊರೆವೊರೆ ನೀಂ ಸಂಸಾರಕ್ಕೆ ನಿನಗಂ ಈ ಸಂಸಾರಂ ಪೊರೆಪೊರೆ ಪರಾತ್ಮಹತಿನುತಚರಿತಾ: ಶಾತಿಪು, ೧೧. ೯೬)

**ಪೊರೆವೋಗು** – ಉತ್ಸಾಹ ಕುಂದು (ಪೊರೆವೋಗದ ಕಟ್ಟಾಯಮುಮಂ ಓರೆವೋಗದ ಚಲಮುಮಂ .. ..

ನೋಟಕರಪ್ಪಿನಮಪ್ಪವರಿಂ ಪೊಗಟಿಸುವೆನೆಂದು ತಱಿಸಂದು: **ಶಾಂತಿಪು,** ೪. ೩೬ ವ)

**ಪೊರ್ಕುಳಿ –** ಹೋರಾಟ (ಸ್ಮರಶರಕಾಂತೆ ಕತ್ತಲೆಯ ಜೊನ್ನದ ಪೊರ್ಕುಳಿಯಂ ನಿವಾರಿಸಲ್ಕಿರದೆ ಎಡೆವೊಕ್ಕಳೆಂದೆನೆ ಲತಾಂಗದ ಸೌರಭದೊಂದಲಂಪು ಮಿಕ್ಕಿರೆ: **ಶಾಂತೀಶ್ವಪು,** ೨. ೧೭); ಜಗಳ (ಅವಳ ಪೊರ್ಕುಳಿಯೊಳಂ ಬಟಿಲ್ದು ನಿದ್ರಿತನಪ್ಪುದುಂ: **ಪಂಚತಂತ್ರ,** ೧೯೯ ವ)

**ಪೊರ್ಕುಳಿಗೆಯ್ –** ಹೊಡೆದಾಡು (ಪೂವಿನೊಳಾದೊಡಂ ಮಱಿದು ಪೊರ್ಕುಳಿಗೆಯ್ವುದು ಬುದ್ಧಿಯಲ್ತು ಶೌರ್ಯಾವಿಪಲನಪ್ಪನುಂ ಹಗೆಯನೊಳ್ಪಗೆಯಿಂ ಸಲೆ ಗೆಲ್ವುದುತ್ತಮಂ: **ಶಾಂತೀಶ್ವಪು,** ೭. ೧೨೪)

**ಪೊರ್ಕುಟ್ –** ಹೊಕ್ಕುಳು (ಕೊಂದೆನ್ನ ಮಗನಂ ಇಂ ಭಯದಿಂದಂ ರಸವೊಕ್ಕುಂ ಅಜನ ಗುಂಡಿಗೆವೊಕ್ಕುಂ ಮಂದರಧರನ ಈ ಪೊರ್ಕುಟಿ ಪೊಂದಾವರೆವೊಕ್ಕು ಮೇಣವಂ ಬರ್ದುಕುವನೇ: **ಪಂಪಭಾ,** ೧೧. ೧೨೧)

**ಪೊರ್ದಿಸು –** ಹೊದ್ದಿಸು, ಸೇರಿಸು (ಗೀರ್ವಾಣಸುಖಂ ನಿರ್ವಾಣಸುಖಮುಮಂ ಕ್ರಮದಿಂ ಪೊರ್ದಿಸಲಾರ್ಪ ಧರ್ಮಮಂ: **ಸಮಯಪ,** ೪. ೯೩)

**ಪೊರ್ದು –** ಸೇರು (ಪೊರ್ದಲೊಡಂ ವಿನೇಯಜನಸಂಘಾತಕ್ಕೆ ಮಾಣಿಕ್ಯದೇವಪದಾಂಭೋಜ ವರಪ್ರಸಾದಮೆ ಜಯಂ ಭದ್ರಂ ಶುಭಂ ಮಂಗಳಂ: **ಆದಿಪು,** ೧೬. ೭) ಹೊಂದು (ಇರ್ದೆಡೆಯಱಿದು ಆಗಮದಿಂ ಪೊರ್ದುವುದು ಓಲಗಿಪುದು ಆಪ್ತನಂ ಜೈನಂ: **ಸಮಯಪ,** ೮. ೧೦೩); ಸಮೀಪ ಹೋಗು (ಮಲಿನರನೆ ಪೊರ್ದುವಯ್ ನಿರ್ಮಲರತ್ತಲ್ ಪೊರ್ದಲೊಲ್ಲ: **ಗದಾಯು,** ೯. ೧೦); ಉಂಟಾಗು (ಸುತನ ಪರಾಭವದಿಂದ ಉನ್ನತಿ ಕುಸಿಯಲ್ ತನಗೆ ಪೊರ್ದೆ ನಿಸ್ತೇಜಂ: **ಕರ್ಣನೇಮಿ,** ೧೨. ೧೭೭)

**ಪೊರ್ದುಗೆ –** ಸಂಬಂಧ (ಸಂಬಂಧವೆಂದು ಪೊರ್ದುಗೆ ಅಭೀಧೇಯಮೆಂದು ಅರ್ಥಂ: **ಶಬ್ದಮದ,** ೭ ವೃತ್ತಿ); ಸಾಮೀಪ್ಯ (ಎವೆ ಮಱಿಯಾದೊಡೆ ಒಂದಿನಿತು ಸೈರಿಸಲಾಗದ ಕೂರ್ಮೆ ಪೆರ್ಮೆವೆತ್ತ ವಿಭವಮುಂ ವಿಚಾರಿಸದ ಪೊರ್ದುಗೆ: **ರಾಜಶೇವಿ,** ೧೧. ೧೬೦)

**ಪೊಲ್ –** ಹೊಲಿಗೆ ಹಾಕು (ಅಡಿಯೊಳ್ ಪಾಸಿದ ಚರ್ಮರತ್ನಪಟಮಂ ತಚ್ಛತ್ರರತ್ನಂ ಬೆಡಂಗೊರದೋರಂತಿರೆ ಮುಟ್ಟೆ ಪೊಲ್ದ ತೆಱದಿಂದಿಂಬಾಗೆ: **ಆದಿಪು,** ೧೩. ೬೦); ಕೆಡುಕು, ಕೆಟ್ಟದ್ದು (ಜೈನಂ ಪೊಲ್ಲಪ್ಪ ಕತದೆ ಕೈಕೊಳಲೊಲ್ಲರ್ ನಾಡವರ್ಗಳ್ ಅದಱಿನೆಂಬರ್ ಮೂರ್ಖರ್: **ಸಮಯಪ,** ೧೩. ೧೫)

**ಪೊಲ –** ಹೊಲ, ಭೂಮಿ (ಪೊಲಂ ಪಸುರೇಱಿ ಕಾಡಮಲ್ಲಿಗೆ ನನೆಯೇಱಿ: **ಜಗನ್ನಾವಿ,** ೪. ೪); ಸಂಗತಿ (ತೊಳಗುವ ನಭದೊಳ್ ಪಿತ್ತಾವಿಳ ದೃಷ್ಟಿಗೆ ಅವಿದ್ಯಮಾನಮೇಚಕ ರುಚಿಯೊಂದೆಳಸಿ ಮಿಗೆ ತೋರ್ಪ ತೆಱದಿಂ ಖಳಂಗೆ ಪೊಲನಲ್ತೆ ಕೃತಿಯೊಳಿಲ್ಲದ ದೋಷಂ: **ಪುಷ್ಪದಂಪು,** ೧. ೪೮); ಆಶ್ರಯ (ಪುಸಿ ಪೊಲಲನಲ್ತು ನಾಲಗೆಗೆ ಪಂದೆತನಂ ಮೊಱಿಯಲ್ತ ಕೈಯ ಕೂರಸಿಗೆ: **ಪಂಪರಾ,** ೬. ೧೧೪)

**ಪೊಲಂಬಿಗ –** ಹೊಲಬಿಗ, ದಾರಿ ತೋರಿಸುವವನು (ಕುರುಡನಪ್ಪ ಪೊಲಂಬಿಗನಂ ನಂಬಿ ಗಟ್ಟದಿಟ್ಟೆಡೆಯೊಳ್ ಇರುಳ್ ದೂರದೇಶಕ್ಕೆ ಪಯಣಂಬೋಪೆನೆಂಬಾತನುಂ .. .. ಬುದ್ಧವಂತರಲ್ಲರ್: **ಧರ್ಮಾಮೃ,** ೭. ೨೨ ವ)

**ಪೊಲಂಬು –** ಹೊಲಬು, ದಾರಿ (ತೇಜಿಗಳ ಕಾಲ ದೂಳಿ ನೆಗೆದು ಕೊಳುಗುಳದೊಳ್ ಪಸರಿಸಿ ಬೀರರಂ ಅರಸುವ ಅಚ್ಚರಸಿಯರಂ ಪೊಲಂಬುಗಿಡಿಸೆಯುಂ: **ಕಬ್ಬಿಗಕಾ,** ೨೨೪ ವ); ಸ್ವರೂಪ (ನಾವದಱ ಪಲಂಬಂ ಬಲ್ಲುದಿಲ್ಲ ನೀವು ಬಲ್ಲಡೆ ಪೇೞಿಂ: **ಪುಣ್ಯಾಸ್ರ,** ೬. ೫೫ ವ)

**ಪೊಲಂಬುದಪ್ಪು –** ದಾರಿ ತಪ್ಪು (ರವಿರಥದ ಕುದುರೆಯೊಳೊಂದು ಪೊಲಂಬುದಪ್ಪಿ ನೆಲಕ್ಕಿೞಿದುದೆಂಬಂತೆ ಚೆಲ್ವನಪ್ಪ ವಾಜಿಯ ರೂಪನಳವಡಿಸಿ: **ಪುಣ್ಯಾಸ್ರ,** ೫. ೬೨ ವ)

**ಪೊಲಗಿಡು –** ದಾರಿತಪ್ಪು (ಖಚರನಿಯಕ್ಕಿದಿರ್ವೋಗಿ ದಿಟ್ಟಿಗಳ್ ಪೊಲಗಿಡೆ ಚಿತ್ತಜನ ಉಜ್ಜುಗಮುಮಂ ಮಱಿದಿರ್ದವೊಲಿರ್ದ ನಲ್ಲಳಂ: **ಆಚವರ್ಧ,** ೪. ೭೬)

**ಪೊಲಗೇರಿ –** ಹೊಲೆಯರು ವಾಸಿಸುವ ಜಾಗ (ಆ ಮೊಸಳೆ ತನುವನುಱಿದು ಬಟಿಕ್ಕಾ ಪೊಲಗೇರಿಯಾಡಿನುದರದೆ ನೆಲಸಿ: **ಯಶೋಧಚ,** ೩. ೯೯)

**ಪೊಲತಿ –** ಹೊಲೆಯ ಹೆಂಗಸು (ನೀಳನೆಂಬ ಮಾದೆಗಂಗಂ ಕೇಶಿಯೆಂಬ ಮಾದೆಗಿಗಂ ಮಗಳ್ .. .. ಪೊಲತಿಯಾಗಿ ಪುಟ್ಟಿ: **ವಡ್ಡಾರಾ,** ಪು. ೯. ಸಾ. ೭)

**ಪೊಲನಾಗು –** ದೃಷ್ಟಿಗೆ ಬೀಳು (ಪೊಗಟ್ದು ಮಹಾತ್ಮರ ಉಜ್ಜ್ವಲಮೆನಿಪ್ಪ ಗುಣಂಗಳಂ ಉಜ್ಜ್ವಲ ಪ್ರಸಿದ್ಧಿಗೆ ಪೊಲನಾಗದೆ .. .. ಪೊಗಟ್ದು ದುರಾತ್ಮನಂ .. .. ಓದಿದವಂ ಕೃತಿಯೇ ಕರತಾರ್ಥನೇ: **ಪಂಪರಾ,** ೧. ೩೫)

**ಪೊಲಮಚ್ಚು –** ತನ್ನ ಸ್ಥಳದ ಬಗೆಗಿನ ಅಭಿಮಾನ (ನಿಲೆ ಪೊಲಮಚ್ಚು ತಮ್ಮ ಮನದೊಳ್ ಸಲೆ ಕಟ್ಟಸು ಪರ್ವಿದುರ್ವಿಯೊಳ್ ಚಲದಿಱಿದಾಂತು ಬಿಟ್ಟ ಭಟರಂತ್ರದತೊಂತುಳಿಯೊಳ್: **ಕರ್ಣನೇಮಿ,** ೧೦. ೧೫೩)

**ಪೊಲನಾಗು –** ಎಡೆಯಾಗು (ಪೊಗಟ್ದು ಮಹಾತ್ಮರುಜ್ವಲಮೆನಿಪ್ಪ ಗುಣಂಗಳನುಜ್ವಲಪ್ರಸಿದ್ಧಿಗೆ ಪೊಲನಾಗದೆ .. .. ಪೊಗಟ್ದು ದುರಾತ್ಮನಂ .. .. ಓದಿದವಂ ಕೃತಿಯೇ ಕೃತಾರ್ಥನೇ: **ಪಂಪರಾ,** ೧. ೩೫)

**ಪೊಲಬು –** ಹಾದಿ (ಪುರೂರವನೆಂಬ ಬೇಡಂ ಒಂದು ದಿವಸಂ ಆ ಮಧುರವನದೊಳ್ ಸಾಗರಸೇನಮುನೀಶ್ವರಂ ಪೊಲಬುಗೆಟ್ಟಿರ್ಪುದುಂ ಅವರಂ ಕಂಡು: **ಶಾಂತೀಶ್ವಪು,** ೨. ೫೯ ವ)

**ಪೊಲವಾನಸೆ –** ಪೊಲತಿ (ಚರಿಗೆವೋಗುತ್ತುಂ ನಾನಾನೂನ ದುಃಖಪೀಡಿತಮಾನಸೆಯಾಗುತ್ತಮಿರ್ದ ಪೊಲವಾನಸೆಯಂ ಕರುಣಂ ಕೈಮಿಗೆ ಕಂಡು: **ಸುಕುಮಾಚ,** ೫. ೨)

**ಪೊಲಸಟ್ಟೆ ನಾಱು –** ಹೊಲಸಿನಿಂದಾಗಿ ಕೆಟ್ಟ ವಾಸನೆ ಸೂಸು (ಕಾಡಪಂದಿಗಳ ಬಲ್ಣೆಣದಿಂ ಪೊಲಸಟ್ಟೆ ನಾರ್ವ ಜೇಡೆಗಲ ಮುಣ್ಗಳಿಂ ತೊರೆವ ನೆತ್ತರ ಕೆಯ್ ನಡುಗಲ್ಕೆ ನೀಡಿ: **ಕಾದಂಬ,** ೧. ೧೫೩)

**ಪೊಲಸು –** ಕೊಳೆ (ಭೇದವು ಆ ಕ್ಷಯಪವನಂಗಂ ಆತನ ಗದಾಪವನಂಗಂ ಅದೊಂದೆ ರಕ್ತ ಚರ್ಚೆಯ ಪೊಲಸು: **ಜಗನ್ನಾವಿ,** ೯. ೬೪); ಮಾಂಸ (ಪೊಲಸಟ್ಟ ಕಲನಂ ಎಂತುಂ ಕಲಸರ್ ಮಡಕೆಗಳೊಳ್: **ಸಮಯಪ,** ೧೪. ೯೩)

**ಪೊಲಸುನಾಱು –** ಪೊಲಸಟ್ಟೆ ನಾಱು (ಪೊಲಸುನಾಱುವ ಮೆಯ್ಯನೆ ಕರ್ಚಲೆಂದು ಚೆಚ್ಚರಂ ಅಪರಾಂಬುರಾಶಿಗೆ ಇೞಿವಂತೆ ಇೞಿದಂ ಕಮಳೈಕಬಾಂಧವಂ: **ಪಂಪಭಾ,** ೧೧. ೫೧)

**ಪೊಲಿ –** ಹೊಲಿ, ಹೊಲಿಗೆ ಹಾಕಿ ಸೇರಿಸು (ಕುಪ್ಪುಸದಂತೆ ಬೆನ್ನಂ ಪತ್ತಿ ಕೆತ್ತುವರ್ ಸಿಪ್ಪಿಗನಂತೆ ಪೊಲಿವರ್: **ಧರ್ಮಾಮೃ,** ೩. ೪೩ ವ)

**ಪೊಲೆ –** ಕಳಂಕ (ಪೊಲೆ ಮಸಗಿ ದಿಕ್ಕುವರೆಗಂ ತಲಸದೆ ಭಾರತಮನೆಯ್ದಿ ಕಿಡೆ ಪೇಟ್ಟುದಱಿಂ ಪೊಲೆಯರ ಬಸಿಱೊಳ್ಬಂದಮ್ಮಳಿನಾತ್ಮಂ ವ್ಯಾಸನೆಂಬ್: **ಸಮಯಪ,** ೧೦. ೧೭೭); ಮುಟ್ಟಿನ ಮೈಲಿಗೆ (ಪೊಲೆ ಪಿಂಗದೆ ಪೊಂಗುವುದಕ್ಕಲಸುವರಾ ಜನಂಗಳ್: **ಪುಷ್ಪದಂಪು,** ೩. ೮೬)

**ಪೊಲೆಗಲಸು –** ಮೈಲಿಗೆ ಮಾಡು (ಪೊಲೆಗಲಸೆ ಬಂಧುಜನಮುಂ ಪೊಲೆಯರುಂ ಒಂದೆಡೆಯೊಳೊಂದೆ ನರಕಕ್ಕಿಟಿವರ್: **ಸಮಯಪ,** ೯. ೯೩)

**ಪೊಲೆಗೆಳೆ –** ಕೆಟ್ಟ ಗೆಳೆಯ (ಆ ಪಾಪಕರ್ಮಂ ಪೊಲೆಗೆಳೆಯಂತೆಯುಂ ಶಾಂತಿಗೆಯ್ಯೆ ಬೇತಾಳಂ ಮೂಡಿದಂತೆ: **ಪಂಚತಂತ್ರ,** ೧೫೧ ವ)

**ಪೊಲೆಬೂತು –** ಕ್ಷುದ್ರ ವ್ಯಕ್ತಿ (ಪಾಣ್ಬೆಯಪ್ಪ ಸಜ್ಜನಯಂತೆ ಸಿಡಿಮಿಡಿಗೊಳ್ಳದೆ ಪೊಲೆಬೂತಿನಂತೆ ಕಿಡೆನುಡಿಯದೆ .. .. ನಿಂದು ಸುವ್ರತಂಗಂ ತಾಳ್ದಿ: **ಧರ್ಮಾಮೃ,** ೧೦. ೨೫ ವ)

**ಪೊಲೆಮಸಗು –** ಹೊಲೆತನ ಹೆಚ್ಚಾಗು (ಪೊಲೆ ಮಸಗಿ .. .. ಪೊಲೆಯರ ಬಸಿಱೊಳ್ ಬಂದಂ ಮಲಿನಾತ್ಮಂ ವ್ಯಾಸಂ ಎಂಬರ್: **ಸಮಯಪ,** ೧೦. ೧೭೭)

**ಪೊಲೆಯ –** ಹೊಲೆಯ (ಪೊಲೆಯರ್ತಮ್ಮಯ ಕೇರಿಗೆ ಪೊಲೆಯರ್ಬರೆ ತುಷ್ಟಿ ಮಾಟ್ಪರ್: **ಸಮಯಪ,** ೪. ೮೭) ; ನೀಚ (ನಿನ್ನಿಂದ ಬಿಟ್ಟು ಪೊಲೆಯರ್ಯಿನ್ನುಂ ಮುನ್ನಾದೊಡೆ ಒಳರೆ ಇಂತೀ ಪುರದೊಳ್: **ಪುಣ್ಯಾಸ್ರ,** ೬. ೨೨)

**ಪೊಲೆವಡು –** ಅಸ್ಪೃಶ್ಯವಾಗು (ಅಗ್ನಿ ಮುಟ್ಟಿದೊಡೆ ಅವನಾ ಮನೆಯಿಂದೆ ಕಳೆವರೆನ್ನರುಮನೆಲ್ಕೆ ಪೊಲೆವಟ್ಟುದಾಗದಿರ್ಕುಮೆ ದೆಯ್ವಂ: **ಸಮಯಪ,** ೮. ೧೮೬)

**ಪೊಲೆವಟ್ಟು –** [ಪೊಲೆ+ಪಟ್ಟು] ಹೊಲೆಗೇರಿ (ಎಯ್ದಿದಂ ಪೊಲೆಯನಾ ಪೊಲೆವಟ್ಟಿನೊಳಿರ್ದ ಕನ್ನೆಯಂ: **ಕಾದಂಸಂ,** ೮. ೩೬)

**ಪೊಲೆವನೆ –** ಹೊಲೆಯನ ಮನೆ (ಜನ್ನದ ಮನೆಗಂ ಪೊಲೆವನೆಗಂ ಭೇದಮಿಲ್ಲ ನೋಡುವೊಡೆಂತುಂ: **ಸಮಯಪ,** ೧೧. ೧೧೦)

**ಪೊಲ್ಲ –** ಕೆಟ್ಟುದು, ಹೀನವಾದ (ಅಂತು ನೆಲಸುವುದುಂ ಆಕೆಗೆ ಪೊಲ್ಲ ಬಯಕೆಯೆ ತೋರ್ಪುದುಂ: **ಕರ್ಣನೇಮಿ,** ೫. ೧೦೬ ವ)

**ಪೊಲ್ಲಕೆಯ್ –** ಕೆಟ್ಟದ್ದನ್ನು ಆಲೋಚಿಸು (ಕಳವಂ ಮಿಥ್ಯೆಯಂ ಏಱಿಸಿ ಕಳತ್ರದೊಳ್ ಪೊಲ್ಲಕೆಯ್ದರ್ ಎಂದು ಇಲ್ಲದುದಂ ಗಟಿಪಿದೊಡೆ ದಂಡಕಂ ಕಡುಮುಳಿದಂ: **ಪಂಪರಾ,** ೯. ೯)

**ಪೊಲ್ಲದು –** ಅಯೋಗ್ಯವಾದುದು, ಕೆಟ್ಟುದು (ತಪನಸುತಂ ಬೇಱೆ ಪೊಲ್ಲದಂ ನುಡಿದನಾವಗಂ ಬಿಸುಟಂ ರಕ್ಷಿಪ ಕಯ್ದುವಂ: **ಗದಾಯು,** ೨. ೨೦)

**ಪೊಲ್ಲಮಾನಸ –** ದುಷ್ಟ ವ್ಯಕ್ತಿ (ಅಧಮರ ಪೊಲ್ಲಮಾನಸರ ದುರ್ಜನರ ಜಾರಜಾತರ ವಿಜಾತಿಗಳ್ಗೆ ಯೋಗ್ಯಮಪ್ಪ ಅಯೋಗ್ಯಮಂ: **ವಡ್ಡಾರಾ,** ಪು ೮, ಸಾ ೧೪)

**ಪೊಲ್ಲಮಾನಸಿ –** ದುಷ್ಟ ಹೆಣ್ಣು (ಈ ಪೊಟ್ಟು ಎತ್ತ ಪೋದಪ್ಪಯ್ ಪೊಲ್ಲಮಾನಸಿಯೆ ಎಂದಾತಂ ಪಿಡಿದು ಕಾಡೆ: **ವಡ್ಡಾರಾ,** ಪು ೧೬, ಸಾ ೫)

**ಪೊಲ್ಲಮೆ –** ಹೊಲಸು (ಸಂಸಾರದ ಪೊಲ್ಲಮೆಯುಮಂ ತಂತಮ್ಮ ಬಗೆವ ಕಾರ್ಯ್ಯಮುಮನವರ ಮುಂದೆ ನುಡಿದೊಡೆ: **ವಡ್ಡಾರಾ,** ಪು ೪೩, ಸಾ ೧೦); ಕಳಂಕ (ವಿಚಾರಪರರವರಂತುಂ ಭಾವಿಸಿ ತಿಳಿದುಂ ತಮ್ಮಯ ದೇವರ ಪೊಲ್ಲಮೆಯಂ ಅಂತುಮಿಂತುಂ ಬಿಡುವರ್: **ಸಮಯಪ,** ೮. ೨೨೭); ಕೆಟ್ಟತನ (ಅವನೀನಾಥನ ಗೆಯ್ದ ಪೊಲ್ಲಮೆಗಂ ಎನ್ನ ಒಳ್ಪಿಂಗಂ ಇಂ ಸಕ್ಕಿಯಾಗಿ ಅವಂ ಈವಂತುಟಂ ಅದಂ ಬಲ್ಲಂತು ಕಾಲ್ಗುತ್ತಿ ನೋಡು: **ಪಂಪಭಾ,** ೯. ೨೬)

**ಪೊಲ್ಲಾ –** ತಪ್ಪೇ? (ಗುಣಿಗಳ್ ನಿರ್ಮಳನೆನಲ್ ಏಕಾಗದಂಜದೆಂಬುದು ಪೊಲ್ಲಾ: **ಸಮಯಪ,** ೮. ೪೫)

**ಪೊಲ್ಲಿ –** ದುಷ್ಟಳು (ಪೊಲ್ಲಿವಳ್ ಪಟಿಗಂಜಳ್ ಭರತಾದಿಗಳ್ ಪಲವುಕಾಲಂ ತನ್ನೊಳೊತಿರ್ದವರ್ ಕಟಿದಂದಾ ಕ್ಷಣದೊಳ್ ಧರಾರಮಣಿ ಮತ್ತೊರ್ವಂಗೆ ಪುರ್ವಿಕ್ಕುವಳ್: **ಪಂಪರಾ,** ೬. ೬೯)

**ಪೊಲ್ಲಲಿಂಗಿ –** ಕೆಟ್ಟ ಸನ್ಯಾಸಿ (ಪೊನ್ನ ತಳಿಗೆಯೊಳ್ ನಾಯ್ ತುಯ್ಯಲನುಣ್ಬುದಂ ಕಂಡುದಱಿಂ ಪೊಲ್ಲಲಿಂಗಿಗಳ್ ಅರಸರ್ಕಳಿಂದಂ ಪೂಜಿಸೆಪಡುವರ್: **ವಡ್ಡಾರಾ,** ಪು. ೮೬, ಸಾ. ೨೮)

**ಪೊಸ –** ಹೊಸ, ನೂತನ (ಒರ್ವಳ್ ಪೊಸ ಶ್ರಾವಕಿ .. .. ಕಟ್ಟಿಲೆಯೊಳ್ ನಿರ್ಗ್ರಂಥರಪ್ಪ ರೂಪು ಕಂಡು ಬೆರ್ಚಿದೊಡೆ: **ವಡ್ಡಾರಾ,** ಪು. ೯೨, ಸಾ. ೧೧)

**ಪೊಸಂತಿಲ್ –** ಹೊಸಿಲು (ಎನಗೆ ಪೊಸಂತಿಲೀ ನೆಗಟ್ದವಜ್ರದ ವೇದಿಕೆ ಗೋಷ್ಪದಂ ದಲೀ ವನನಿಧಿ: **ಆದಿಪು,** ೧೨. ೭೧)

**ಪೊಸಂಬ –** ಹೊಸಬ (ವಿಚಾರಿಸದುಂತೆ ಪೊಸಂಬರೊತ್ತೆಯಂ ಕೊಳ್ವುದು ತಕ್ಕುದಲ್ತು: **ಶಬ್ದಮದ,** ೧೬೪ ಪ್ರ ೨)

**ಪೊಸತಿಲ್ –** ಹೊಸಿಲು (ಅಸುವೆ ಒರಲ್ ಒನಕೆ ಗೂಟಂ ಪೊಸತಿಲ್ .. .. ಸಮಸ್ತಂ ದೆಯ್ವಮಿಂತಿವೆಂಬರ್ ಮೂಢರ್: **ಸಮಯಪ,** ೯. ೮೧)

**ಪೊಸಕಿಟ್ಟಳ –** ಹೊಸ [ಯೌವನದ] ಸೊಕ್ಕು (ಪತ್ತೆ ಸಾರ್ವವರಂ ತರ್ಜಿಸಿ ಕಾಮನ ಪಡಿಯಱಿತಿವೊಲೆಸೆದಳ್ ಪೊಸ ದೇಸೆಕಾರ್ತಿ ಪೊಸಕಿಟ್ಟಳದೊಳ್; **ನೇಮಿನಾಪು,** ೨. ೧೪);

**ಪೊಸಗನ್ನಡ –** ಹೊಸ ಕನ್ನಡ (ಪೊಸಗನ್ನಡದಿಂ ವ್ಯಾವರ್ಣಿಸುವೆಂ ಸತ್ಕವಿತೆಯನೆಂದು ಕನ್ನಡಂ ಚಿಂತಿಸಿ ಕೂಡಲಾಱದೆ ಅಕ್ಕಟ ಮಿಸುಕದ ಸಕ್ಕದಮನಿಕ್ಕುವವನುಂ ಕವಿಯೇ: **ಧರ್ಮಾಮೃ,** ೧. ೪೧)

**ಪೊಸಗಳಮೆ –** [ಪೊಸ+ಕಳಮೆ] ಹೊಸ ಬತ್ತ (ಪೊಸಜಾದಿಯ ಬೆಳೆದೊಱಗಿದ ಪೊಸಗಟಮೆಯ ಪೊಸತರಲ್ದ ತಾವರೆಗಳ ಕಂಪಸದಳಮೆಸೆದಿರೆ ದೆಸೆದೆಸೆಗೊಸಗೆಯೆ ಬರ್ಪಂತೆ ಕ್ಕೆ ಮಂದುದು ಶರದಂ: **ಆದಿಪು,** ೧೧. ೩)

**ಪೊಸಗಾರ್ –** [ಪೊಸ+ಕಾರ್] ಆರಂಭದ ಮಳೆಗಾಲ, ಮುಂಗಾರು [ನರ್ತಕೀಲೀಲೆಯಿಂದದೊಂದು ಪೊಸಗಾರ ಸೋಗೆನವಿಲಾಟಮಂ ತೋಱಿದಳ್: **ಆದಿಪು,** ೧೨. ೧೩)

**ಪೊಸತಿಕ್ಕು–** [ಪೊಸತಂ+ಇಕ್ಕು] ಹೊಸದಕ್ಕೆಂದು ಬಲಿಕೊಡು (ರಣದೊಳ್ ರಾವಣನಂ ಜವಂಗೆ ಪೊಸತಿಕ್ಕಲ್ ತಾರಶೈಲಕ್ಕೆ

ತೆಂಕಣದಂ ಕಂಕಣದಂತೆ ಕೈಗೆವರಿಸಲ್ ಭೂಚಕ್ರಮಂ: **ಪಂಪರಾ,** ೩. ೧೬೦)

**ಪೊಸತು –** ಹೊಸತು, ನವೀನವಾದುದು (ನೆಲನುಂ ಪೊಟ್ಟುಂ ಪೊಲನುಮನಜಿದು ಬಟಿಯೊಳ್ ಪೊಸತುಂ ಪಟದುಮನಜಿದು ಪರಿಯಿಸಲ್ ನೀನೆ ಬಲ್ಲಯ್: **ಪಂಪಭಾ,** ೫. ೪೬ ವ)

**ಪೊಸದಳಿಂಬ –** ಹೊಸ ವಸ್ತ್ರ (ಓಲಗಶಾಲೆಯೊಳಗಣ ಕಪ್ಪುರವಳಿಕಿನ ಜಗುಲಿಯ ಮೇಗಣ ಕುಸುಮದೆಸಳ ಮಿಸುಗುವ ಪೊಸದಳಿಂಬದ ಮೇಗೆ ಕಿಜಿದು ಬೇಗಂ ವಿಶ್ರಮಿಸಿ: **ಆದಿಪು,** ೧೧. ೭೩ ವ)

**ಪೊಸದಳೆ –** ಹೊಸ ಛತ್ರಿ (ಭ್ರಾಜಿವೇಣೀಸ್ರಗ್ಮ್ಯಾಳಿಬ್ರಜಂ ಪೀಲಿಯ ಪೊಸದಳೆಯಂ ಪೋಲೆ .. .. ಬಂದಳ್ .. .. ಪರಪುತುಂ ಕಾತಿಯಂ ಕಾಂತೆಯೊರ್ವಳ್: **ಲೀಲಾವತಿ,** ೬. ೫೦)

**ಪೊಸ ಮಾಣಿ –** ಹೊಸ ಹುಡುಗ (ಸಜ್ಜೆಯ ಕಾಪಿನವನೊರ್ವಂ ಪೊಸಮಾಣಿ ಬರೆದಂ ಇದಂ: **ಪಂಚತಂತ್ರ,** ೨೬೬ ವ)

**ಪೊಸಯಿಸು –** ಹೊಸತಾಗಿ ಮಾಡು (ಮೆಲ್ಪು ಮೇಳಮಂ ಪೊಸಯಿಸೆ ತನ್ನ ಮುನ್ನಟಿವು ಬೇಟದ ಲಲ್ಲೆಯ ಬಲ್ಮೆಪತ್ತಿ ಸುತ್ತಿಸೆ: **ಆದಿಪು,** ೧೨. ೧೭); ರಚನೆ ಮಾಡು (ಪುಸಿಯ ಪರಾಮಗನಾರತದ ಮದ್ಯದ ಮಾಂಸದ ಮೆಯ್ಗೊಟಲ್ದ ದುರ್ವ್ಯಸನಿಯ ಮಾಡಿದೋದೆ ನಿಮಗಾಗರಮಾಗಿರೆ ಅಸತ್ಯವಾದಮಂ ಪೊಸಯಿಸಿ: **ಆದಿಪು,** ೨. ೧೧); ಉಂಟುಮಾಡು, ನಡೆಸು (ವಸುಮತಿವೆಸರ್ ಅನ್ವರ್ಥಂ ವಸುಧೆಗೆನಲ್ ಕಜ಼ಿದು ಮಟಿಯಂ ದಾನವ್ಯಸನಿ ದಶರಥನದೇಂ ಪೊಸಯಿಸಿದನೊ ಚೌಲೋಪನಯನ ಮಹಿಮೋತ್ಸವಮಂ: **ಪಂಪರಾ,** ೩. ೧೪೨)

**ಪೊಸವಟ್ಟ –** [ಪೊಸ+ಪಟ್ಟ] ಹೊಸ ಪೀಠ, ಹೊಸತಾದ ಬಾಸಿಂಗ (ಅದು ಚಿತ್ತಜಂಗೆ ಕುಲದೈವಂ ಅದು ಅಂಗಜಚಕ್ರವರ್ತಿಗೆತ್ತಿದ ಪೊಸವಟ್ಟಂ ಅಂತದು ಮನೋಜನ ಕೈಪಿಡಿ: **ಆದಿಪು,** ೨. ೭೪)

**ಪೊಸವಡಿ –** ಹೊಸ ಮಡಿಬಟ್ಟೆ (ಪೊವಡಿಯಿಂ ಪಚ್ಚವಡಿಸಿದ ಹಂಸತೂಳತಲ್ಪಮಂ .. .. ಏಜಿದ ಬೇಗದಿಂ: **ಲೀಲಾವತಿ,** ೧೦. ೩೭ ವ)

**ಪೊಸವಾಣಿತಿವುಲ್ಲೆ –** ಹಸಿ ಬಾಣಂತಿ ಜಿಂಕೆ (ಪಸುರ್ವುಲ್ಲಂ ಮೇವುತಿರ್ದ ಪೊಸವಾಣಿತಿವುಲ್ಲೆ .. .. ಕೊಣಸುಮಂ ಬಿಟ್ಟು ಬರಲಾಜದೆ: **ಪುಷ್ಪದಂಪು,** ೩. ೭೬ ವ)

**ಪೊಸವಾಸಣಿಗೆ –** [ಪೊಸ+ಬಾಸಣಿಗೆ] ಹೊಸತಾದ ಮುಸುಕು (ಬಾಸಣಿಸಿದ ಚಿನ್ನದ ಪೊಸವಾಸಣಿಗೆಯ ಪೊಸ ಸಿವಿಗೆ ಮಣಿಮಯಕಳಶೋದ್ಭಸಿ ದೆಸೆಯೊಳೆಸೆಯೆ: **ಆದಿಪು,** ೧೧. ೪೦)

**ಪೊಸವಾಸಿಗ –** [ಪೊಸ+ಬಾಸಿಗ] ಹೊಸ ಹೂಮಾಲೆ (ಸುರಕುಸುಮದ ಪೊಸವಾಸಿಗಮೆರಡುಂ ಕರತಳದೊಳೆಸೆಯೆ: **ಆದಿಪು,** ೧೦. ೨೦)

**ಪೊಸೆ –** ಹಗ್ಗ ಹೊಸೆ (ಕೆಂಗಲೆಗಳ್ ಅಕ್ಷಮಾಲೆಯೊಳ್ ಎಸೆದಂತಿರೆ ಪೊಸೆಯೆ ಮುತ್ತು ಪವಳಂ ಬೆರಸಿದವೊಲಾಯ್ತು: **ಪಂಪಭಾ,** ೬. ೧೦); ಕಾಣಿಸು, ಉಂಟಾಗು (ಪೊಸೆಯದೆ ಪಜ್ಜೆಗಳಂ ನಾಲ್ದೆಸೆಯೊಳಂ .. .. ಮಿಸುಕದೆ ಸಲೆ ನಿಂದು ಎಸಕಂ ಪಸರಿಸಿದರ್: **ಸಮಯಪ,** ೧. ೧೬); ಕಡೆಗೋಲು (ಪೊಸೆ– .. .. ಮಂಥದಂಡೇ ಚ: **ಶಬ್ದಮದ,** ಧಾ ೭೦೧); ಕಡೆ (ನೀರಂ ಪೊಸೆದುಂ ಬೆಣ್ಣೆಯನಾರಾನುಂ ಪಡೆದವರೊಳರೆ: **ಸಮಯಪ,** ೨. ೧೩)

**ಪೊಸೆಯಿಸು –** ಲೇಪಿಸು (ಅಧರಕ್ಕೆ ಬಣ್ಣನಂ ಪೊಸೆಯಿಸುವಂತೆ .. .. ಬಣ್ಣಮಂ ಬಿಸಿಯುದಕಂಗಳಿಂ ಮಿಸಿಸಿದರ್: **ಲೀಲಾವತಿ,** ೧೨. ೫೬); ಮೊಸರಿನಂತೆ ಕಡೆ

**ಪೊಸ್ತಕ –** ಪುಸ್ತಕ (ದಯೆಯಂ ಸನ್ಮಾರ್ಗಮಂ ಪೇಟಿಪ್ಪೊಡೆ ಮಟದೊಳಗಾ ಪೊಸ್ತಕಂ ಬೆಚ್ಚನಿರ್ಕುಂ: **ಸಮಯಪ,** ೧೪. ೪೭)

**ಪೊಳಂಕು –** ಮಿರುಗು (ನದಿ ಕಣ್ದೆಜೆದಂತೆ ಪೊಳಂಕಿದ ಮೀನಂ ಮೊಸಳೆ ಪಯೆ: **ಯಶೋಧಚ,** ೩. ೪೮); ಅಗಿದು ತಿನ್ನು (ಪೊಳಕು, ಪೊಳಂಕು–ಚರ್ವಣಕ್ರಿಯಾಯಾಂ: **ಶಬ್ದಮದ,** ಧಾ ೫೭)

**ಪೊಳಕಿಸು –** ಮೆಲುಕು ಹಾಕು (ಕಾಗೆಯಂತೆ ಕಡೆಗನ್ಣೊಳೆ ನೋಡುತ್ತುಂ ಕೀಚಿಟ್ಟ ಕುದುರೆಯಂತೆ ಬಾಯಂ ಪೊಳಕಿಸುತ್ತುಂ: **ಧರ್ಮಾಮೃ,** ೫. ೯೧ ವ)

**ಪೊಳಕು –** ಹಾರಿ ಬರು (ತಿರುವಿಂ ಪೊಳಕಿದ ಕಾಮನ ಸರಲಂತಿರೆ ಬಂದಳ್: **ಪುಷ್ಪದಂಪು,** ೯. ೧೦೮); ಅಗಿದು ತಿನ್ನು (ಅರೆಮುಗಿದಿರ್ದ ಕಣ್ ಮುರಿದ ಮೀಸೆ ತುಜುಂಬಿದ ಜಾಜಿಪತ್ತೆ ಕತ್ತರಿಸಿದ ಗಡ್ಡಂ .. .. ತಂಬುಮಂ ಪೊಳಕುತ್ತೆ ರಾಗದಿಂ ಪರಕೆಗೆ ಕೊಟ್ಟ ಪಂದಲೆಯಗುಂದಲೆಯಾದುದು ಬೀರನಣ್ಮಿನಾ: **ನೇಮಿನಾಪು,** ೫. ೩೧)

**ಪೊಳಪು –** ಹೊಳಪು, ಕಾಂತಿ (ಅಧರಮನಧರಂ ಮಾಡಿ ಪೊಳೆವ ಸುಲಿಪಲ್ಲ ಪೊಳಪುಂ ಸುಲಿಪ್ಪ ಪೊಳಪೆಂಬ ತನ್ನ ಬಾಳ ಪೊಳಪನೆ ಮೆಜಿದು: **ಆದಿಪು,** ೪. ೪೧ ವ)

**ಪೊಳೆ –** ಹೊಳೆ, ಮಿರುಗು (ಮರುದಾತ್ಮಜ ನಿಜರಿಪು ತಲೆಗರೆದಿರ್ದಪನಿಲ್ಲಿ ನೋಡು ಕೊಳದೊಳಗೆ ಎಂಬಂತಿರೆ ಪೊಳೆದು ತೋರ್ಪ ಜಲಚರಪರಿಕರಮಜೆಪಿದುವು ತಾಮೆ ದುರ್ಯೋಧನನಂ: **ಗದಾಯು,** ೬. ೪೬); ನುಸುಳು, ತಪ್ಪಿಸಿಕೊ (ಆತನ ಅಳವು ಅತ್ತಳಗಮಾಗೆ ಪೊಳೆದು ಪೋಗಲ್ ಬಗೆಯೆ ನಗಧರನಜಿದು: **ಕರ್ಣನೇಮಿ,** ೬. ೧೪೨ ವ)

**ಪೊಳೆವಾಳ್–** [ಪೊಳೆ+ಬಾಳ್] ಹೊಳೆಯುವ ಕತ್ತಿ (ಬೆಳಗುವ ಕಿಸುಸಂಜೆಮುಗಿಲ್ ಪೊಳೆವಾಳ್ ಮಿಂಚೆನಿಸೆ ಕಾದಿದರ್ ಘೋಟಕಾಯ್ಲರ್: **ಜಗನ್ನಾವಿ,** ೭. ೫೮)

**ಪೊಳ್ಳು –** ಒಳಗು ಗಟ್ಟಿಯಲ್ಲದುದು, ಜೊಳ್ಳು (ಧಾನ್ಯಮಂ ಕೊಟ್ಟು ಪೊಳ್ಳಂ ಕೊಳ್ವ ನೆಲೆವಾಟಂ ಬಿಟ್ಟು ತಿರಿದುಂಬ ಮರುಳಂ ಪೋಲ್ಕುಂ: **ಧರ್ಮಾಮೃ,** ೧೦. ೬೨ ವ)

**ಪೊಳ್ಳುಮರ –** ತೊಸಕಲು ಮರ (ತನ್ನೆರ್ದೆಯುಂ ಪೊಳ್ಳುಮರನಂ ಕಿರ್ಚಳುರ್ವಂತೊಳಗೊಳಗಳುರೆ: **ಪಂಪಭಾ,** ೨. ೮೮ ವ)

**ಪೊಜ ಅಡಿ –** ಅಡಿಯ [ಹೆಜ್ಜೆಯ] ಮೇಲುಭಾಗ (ಲಲಾಟಪಟ್ಟದೊಡನೆ ಲಲಿತೋನ್ನತಂಗಳಾದ ಪೊಜ ಅಡಿಗಳುಂ ಉಗುರ್ಗಳೊಡನೆ ದೀಪ್ತಿಯೊಳ್ ಪುದಿದು: **ಆದಿಪು,** ೩. ೯ ವ)

**ಪೊಜಂಡ –** ಗೂನು ಬೆನ್ನಿನವನು (ನುಡಿದರ್ ಮೂಗರ್ ಪೊಜಂಡರ್ಕಳಪ್ಪವರ್ಗೆ ಇಂಬಾದುದು ಮೆಯ್: **ಹರಿವಂಶ,** ೯. ೨೬)

**ಪೊಱಕತ್ತರ** – ಮದ್ದಳೆ ಬಾರಿಸುವ ಒಂದು ರೀತಿ (ಅಳಗಂ ಸುಳಿಯಳಗಂ ಬೊಟ್ಟಳಂ ಕತ್ತರಮುಂ ಎಸೆವ ಪೊಱಕತ್ತರವಗ್ಗಳಿಸಿರೆ ನಾನಾ ಭೇದಂಗಳ ಪಹರಣಿ ತುಡುಕುಮೋಡಿಯಂ ಬಾಜಿಸಿದಂ: **ಧರ್ಮಪ,** ೨. ೨೩)

**ಪೊಱಗಣಂ** – ಹೊರಗಿನವನು (ಅರಿಷಡ್ವರ್ಗಮಂ ಅವನೀಶ್ವರನಾಟಲೆಯ ಪೊಱಗಣರಿಗೆ ಜಯಾಂಗನೆ ಪಲ್ಮೊರೆದಪಳೆನೆ ಪರಿದುವು .. .. ರಥಗಳ್: **ಶಾಂತಿಪು,** ೧೦ ೧೨೯)

**ಪೊಱಗು** – ಹೊರಭಾಗ (ಪೊಸತು ಪಟಿದೆಱದು ಪೊಱಗೊಳಗು ಸಮನೆನಿಪ್ಪಿವಱೊಳ್: **ಕಾವ್ಯಾವಲೋ,** ೨೩೯); ಹೊರತಾದುದು (ಎನಿಬರರಸುಗಳುಂ ಎಱಗಿದೊಡೆದೆನಗೆ ಎವಂದಪುದೊ ಬಾಹುಬಲಿ ಪೊಱಗೆನೆ: **ಆದಿಪು,** ೧೪. ೨೮)

**ಪೊಱಪಚ್ಚ** – ಮೇಲುಹೊದಿಕೆ, ಹೊರ ವೇಷ (ನಿಚ್ಚಲಿ ಕಾರಿರುಳೊಳ್ ಪೊಱಪಚ್ಚಮಂ ಉಟ್ಟಿರ್ದು ಇಱುಂಕಿ ಕಕ್ಷದೊಳ್ ಆ ಪಾಟಚ್ಚರ ಭಯದಿಂದುಟ್ಟು ಪಟಚ್ಚರಮಂ ಮನೆಗೆ ವಂದು ನಿಂದು ಅಂಗಣದೊಳ್: **ಶಾಂತಿಪು,** ೬. ೬೫)

**ಪೊಱಪಾಯ್** – ಹೊರಹೊರಡು (ಬಿಸಿಲ್ .. .. ಪೊಱಪಾಯೆ ಕಣ್ಗೊಳಿಸಿ ಬಂದುದು ಬೈಗಿನ ಪೊಟಿಸ್ತು ಬೇಗದಿಂ: **ಲೀಲಾವತಿ,** ೬. ೮೪)

**ಪೊಱಪೊಣ್ಮು** – ಹೊರಹೊಮ್ಮು, ಹೊರಕ್ಕೆ ಚಿಮ್ಮು (ಗುರೂಪದೇಶಮಾವರಿಸೆ ಜಿನೇಂದ್ರಭಕ್ತಿ ಪೊಱಪೊಣ್ಮೆ ದಯಾರಸಮಿಂತು ನಾಡೆಯುಂ ಪರಿಕರದಿಂ ಮನಕ್ಕಱಿವು ಸಾರೆ: **ಆದಿಪು,** ೫. ೫೩)

**ಪೊಱಮಡಿಸು** – ಹೊರಕ್ಕೆ ಬರುವಂತೆ ಮಾಡು (ಮುನ್ನಿನ ದಿವಸದೊಳಗಣ ಪರಿಜನಮೆಲ್ಲಮಂ ಪಾರ್ವರಂ ಊಡುವ ನೆವದೊಳೆ ಪೊಱಮಡಿಸಿ: **ಪಂಪಭಾ,** ೩. ೪ ವ)

**ಪೊಱಮಡು** – ಹೊರಬರು, ಜಾಗ ಬಿಟ್ಟು ಹೋಗು [ಪುಗುವ ಪೊಱಮಡುವ ತೆಱನಿರ್ದವುಗುವಳ್ ಪೊಱಮಡುವಳೆನಿಸೆ: **ಆದಿಪು,** ೯. ೩೦)

**ಪೊಱಮಾಱು** – ಪಲಾಯನಮಾಡು (ಮದನನ ಕಾಯ್ಪು ಮಾಣ್ಗೆ ಸರಸೀರುಹಜನ್ಮನ ಮೆಚ್ಚು ತೀರ್ಗೆ ಕೋಳ್ಗುದಿ ಮನದಿಂದಂ ಇಂದು ಪೊಱಮಾಱುಗೆ: **ಪಂಪಭಾ** ಪರಿಷತ್ತು, ೫. ೧೮); ನಿತಂಬ (ಮತ್ತಮಾ ನೃಪೋತ್ತಮನೊಳ್ .. .. ವೃತಿಯೆಂಬುದು ಊರುಸ್ತಂಭದೊಳ್ ಪೊಱಮಾಱೆಂಬುದು ನಿತಂಬಸ್ಥಳದೊಳ್ .. .. ಅಲ್ಲದೆ: **ವರ್ಧಮಾಪು,** ೮. ೨೪ ವ)

**ಪೊಱವಾಯ್** – ಹೊರಚಾಚು (ಬಿಟ್ಟ ಬಾಯಕ್ಕುಳಿಸಿರ್ದ ಪೊಟ್ಟೆ ಪೊರೆವಾಯ್ದಿರ್ದೆಯರ್ವಿಪ ಪುರ್ವು: **ಆಚವರ್ಧ,** ೧೫. ೩೮)

**ಪೊಱವಾಱ** – ನಿತಂಬ (ನಡುನಡುಗೆ ಬಿಗಿದೊಗೆದ ಪೆರ್ಮೊಲೆಯ ಬಿಣ್ಪಿನಿಂ ಕಡೆದು ಮಾಡಿದುವೆನಿಪ ಪೊಱವಾಱದಿಣ್ಪಿನಿಂ: **ಅಜಿತಪು,** ೪. ೭)

**ಪೊಱವೀಡು** – ಊರ ಹೊರವಲಯದಲ್ಲಿನ ಬೀಡು (ಅತಿಮನೋಹರಮಾದ ವನಪತಿಯ ಭವನವನಿವೇಶದಿಂದಂ ಅಂದಂಬಡೆದ ಪೊಱವೀಡಂ ಸೋಮಾನ್ವಯಪ್ರದೀಪಂ ಪುಗುವಾಗಳ್: **ಶಾಂತಿಪು,** ೧೦. ೧೪೭ ವ)

**ಪೊಱವೊಟಿಲ್** – ಊರ ಹೊರವಲಯ (ಆ ಪುರದ ಪೊರವೊಟಿಲ ವೈಹಾಳಿಯ ಬಯಲಿಂದೋಳಗೆ: **ಗಿರಿಜಾಕ,** ೨. ೭೬ ವ)

**ಪೊಱಸು** – ಬಿಳಿಯ ಪಾರಿವಾಳ (ದೇವತೆ ಮುಳಿದು ಪೊಱಸುಗಳನಿವಿರಿಯವು ದಂಸಮಸಕಂಗಳಂ ವಿಗುರ್ವಿಸೆ .. .. ವೇದನೆಯಪ್ಪಂತು: **ವಡ್ಡಾರಾ,** ೧೩೪, ಸಾ ೧೮)

**ಪೊಱು** – ಹೊರು, ಭಾರ ತೆಗೆದುಕೊ (ಪೊಱು–ಶಿರೋಧಾರಣೆ: **ಶಬ್ದಮದ,** ಧಾ ೮೮೮); ಸಹಿಸು (ಇನಿವಿರಿದು ಪರಾಭವಂಪ್ರಾಕೃತಪುರುಷಂಗಂ ಕಾಪುರುಷಂಗಂ ಪೊತ್ತುನಿಲ್ವುದರಿದು: **ಶಾಂತಿಪು,** ೪. ೬೬ ವ)

**ಪೊಱೆ** – ಹೊರೆ (ಪುಳ್ಳಿಯ ಪೊಱೆಯಂ ಪೊತ್ತು: **ವಡ್ಡಾರಾ,** ಪು. ೭೭, ಸಾ. ೨೩) ಭಾರ (ತನುಗೆ ಪೊಱೆ ತುಡುಗೆ ನವಲೇಪನಮೆ ಮಳಂ ಗೀತಮಟ್ಟೆ: **ಆದಿಪು,** ೯. ೫೫)

**ಪೊಱೆಕಾಱ** – ಹೊರೆ ಹೊತ್ತವನು (ಗುಲ್ಮದಂತೊತ್ತುವರ್ ಪೊಱೆಕಾಱರಂತೆ ಬಿಗಿದು ಕಟ್ಟುವರ್: **ಧರ್ಮಾಮೃ,** ೩. ೪೩ ವ)

**ಪೊಱೆಗಟ್ಟು** – ಹೊರೆಯಾಗಿ ಕಟ್ಟು (ಅಂತು ಪೊನ್ನಂ ಪೊಱೆಗಟ್ಟಿಕೊಂಡು ಮತ್ತಂ ಆ ಪುಣಿಸೆಯ ಮರದೊಳ್ ಪೊಕ್ಕು ಅಡಂಗಿರ್ಪುದುಂ: **ಪಂಚತಂತ್ರ,** ೨೨೧ ವ)

**ಪೊಱೆಯೇಱು** – ಉತ್ಸಾಹಗೊಳ್ಳು (ಮಹಾದೇವನ ಮೂರ್ತಿಯಂ ಕಂಡು .. .. ಪೊಂಗಿ ಪೊಱೆಯೇಱೆ ಪೊಂಪುಟಿವೋಗಿ: **ಉದ್ಭಟಕಾ,** ೧೨. ೧೩೮ ವ)

**ಪೊಟಕು** – ಸಹಜ ಆಕಾರ (ಒಂದರ್ಥಕ್ಕೆ: ಪೊಟಕೆಂದು ಸಾಮಾನ್ಯಾಕೃತಿ: **ಶಬ್ದಮದ,** ೩೩ ವೃತ್ತಿ ೯೨)

**ಪೊಟಲ್** – ಪಟ್ಟಣ (ಅಂತಾಗಲೊಂದು ಉತ್ತರಂ ಬಳೆಯೆ ಸೊಗಯಿಸುವ ಪೊಟಲೊಳ್ ಅಷ್ಟಶೋಭೆಯಂ ಮಾಡಿ: **ಪಂಪಭಾ,** ೩. ೨ ವ); ಪೊಟರೆ (ಇಂದಾಂ ಪೋಗಿ ಸಂಪೂರ್ಣಮಾಗಿ ಪೊನ್ನಂ ತಂದೆಪೆನೆಂದು ನೇಸಱ್ ಪಡಲೊಡಂ ಮರದ ಪೊಟಲಂ ಪುಗಲೆಂದು ಪೋಪಳ್ಗೆ: **ಪಂಚತಂತ್ರ,** ೨೨೧ ವ)

**ಪೊಟಲಿಚ** – ನಗರವಾಸಿ (ಈ ಪೊಟಲ ಪೆಂಡಿರೆಲ್ಲರಂ ಮಱೆದು .. .. ಪೊಟಲಿಚರೆಲ್ಲರುಂ ಒಲ್ಲನುಲಿದು ಮೊಱೆಯಿಟ್ಟು ನಿನ್ನ ಮೊಱೆಗೆಟ್ಟ ನಡೆವಳಿಯನಾಕ್ಷೇಪಿಸಿ: **ನೇಮಿನಾಪು,** ೫. ೭ ವ)

**ಪೊಟಲೊಡೆಯ** – ಊರಿನ ಯಜಮಾನ (ತೊಟಲಲಾಱದೆ ಅಟಲನೆಯ್ದಿದ ಪೊಟಲೊಡೆಯನೆ ಮಗಂ ಪುಟಿಲನಾವರಿಪ ನೆಟಲನೊಳಕೊಂಡ ಬೆಟಲಮರನಂ ಘಳಿಲನೆ ಕಂಡು ತಳವೆಳಗಾಗಿ ಮಱೆಗೊಂಡಿರ್ಪುದುಂ: **ಆಚವರ್ಧ,** ೨. ೪೯ ವ)

**ಪೊಟಲ್ವೀದಿ** – ನಗರದ ಬೀದಿ (ಪಗೆಗಳುಮಂ ಪೆಂಡಿರುಮಂ ಮಿಗೆ ಸೋಲಿಪುದವನ ಬೀರಮುಂ ಗಾಡಿಯುಂ ಆವಗಮಡಿಸಿ ತಾಗೆ ಕಣೆಯುಂ ಮುಗುಳ್ಗಣೆಯುಂ ಮೊನೆಯೊಳಂ ಪೊಟಲ್ವೀದಿಯೊಳಂ: **ಕಬ್ಬಿಗಕಾ,** ४೧)

**ಪೊಟೆ** – ನದಿ (ಕಳಿಂದನಂದನೆಯ ತಟದೊಳ್ ಅಂಬಿಯದ ಪೊರ್ದುಗೆಯಿಂ ಪೊಟೆಯೊಳಿರ್ದಳ್: **ಕರ್ಣನೇಮಿ,** ೧೪. ೯ ವ)

**ಪೊಟೆಗಟ್ಟು** – ನದಿಯಾಗಿಸು (ಗಟಿಯಿಸುವ ತಮಂ ಮೂಡಲ್ ಪೊಟೆಗಟ್ಟುವ ಸಂಜೆಗೆಂಪು ಪಡುವಲ್ ಕೈಕೊಂಡೆಟಲೆ ಧರೆಗರ್ಧನಾರಿಯ ತಟೆವಿಡಿದಂತಾಯ್ತು ಗಗನಮಂಡಲಮಿನಿಸುಂ: **ಅನಂತಪು,** ೭. ೭೨)

**ಪೊಟಿಮೆಟ್ಟು** – ಪೂಜೆಗಾಗಿ ನೀರಿಗೆ ಇಳಿ (ಇಟಿದೊಡೆ ಕೂರದ ಪೆಂಡಿರ ಕೆಟಗಾದಪೆವೆಂದು ರತ್ನಸೋಪಾನಕದೊಳ್ ಗಟಗಟನಿಟಿಯದೆ ಬಾಣತಿ ಪೊಟಿಮೆಟ್ಟುವ ತೆಱದೆ ಗುಜ್ಜುಮೆಟ್ಟಿದರರೆಬರ್: **ಅನಂತಪು,** ೭. ೩೪)

**ಪೊಟ್ಟಿ** – ಚಿನ್ನದ ಪಾತ್ರೆ (ಭಟಾರಾ ಪ್ರಾಸುಕಮಪ್ಪ ನೀರಂ ಪೊಟ್ಟಿದೊಳ್ ಕುಡಿದು ನಿಮ್ಮ ಸೇದೆಯನಾಱಿಸಿಂ: **ವಡ್ಡಾರಾ,** ೧೦೩, ಸಾ ೩೦)

**ಪೊಟ್ಟಿಡು** – ಹೊತ್ತಾರೆ, ಬೆಳಗು (ಪೊಟ್ಟಿಡಿನ ಬೇಗಂ ಬಸದಿಗೆ ವಂದು ವಾಹನದಿಂದಿಟಿದು ಬಲಗೊಂಡು ಬಂದು: **ವಡ್ಡಾರಾ,** ಪು ೭೯, ೧೪)

**ಪೊಟ್ಟಿಡೆ** – ಹೊತ್ತಾರೆ (ಲಲಾಟಕುಂಕುಮಸ್ವೇದಜಳಂ ಕಿಡಿಸಿದುದು ಕದಪಿನೊಳ್ ಪೊಟ್ಟಿಡೆ ಬರೆದರಸಿಯರ ಪತ್ರಲೇಖಾವಳಿಯಂ: **ಆದಿಪು,** ೧೧. ೫೪);

**ಪೊಟ್ಟಱ್** – ಹೊತ್ತಾರೆ, ಬೆಳಿಗ್ಗೆ (ಪೊಸತಲರ್ದ ಪದದೊಳುಣ್ಮುವ ಪೊಸಗಂಪಂ ಪಡೆದು ಪೊಟ್ಟಱೊಳ್ ಜನಮಂ ಸೋಲಿಸುಗುಂ: **ಆದಿಪು,** ೧೧. ೧೧೩)

**ಪೊಟ್ಟಱ್** – ಪೊಟ್ಟಱ್ (ಇಂದಿನ ಪೊಟ್ಟಱೆಯೊಳ್ ಅಯ್ಯನೆನ್ನಂ ಕರೆದು: **ಕಾದಂಸಂ,** ೮. ೨೧ ವ); ಹಗಲು (ಜಟಮಟಿಸಿಕೊಂಡು ನಿಮ್ಮೀ ಘಟಿಯಿಸುವ ಈ ಸಂಧಿ ಕೌರವರ್ಕಳೊಳ್ ಎನ್ನಿಂ ಘಟಿತ ಜರಾಸಂಧ ಉರಸ್ತಟ ಸಂಧಿವೊಲ್ ಒಂದೆ ಪೊಟ್ಟಱೊಳ್ ವಿಘಟಿಸದೇ: **ಪಂಪಭಾ,** ೯. ೨೩);

**ಪೊಟ್ಟು** – ಹೊತ್ತು, ಸಮಯ (ಪೊಟ್ಟೊಂದು ಬಣ್ಣವಾಗಿಪ್ಪವರ್ ಏನಜೆವರೆ ಜೈನರ ತೆಱದಿಂ ಪಱೆದಿಕ್ಕಲ್ ಬಲ್ಲಿತಪ್ಪ ಕರ್ಮದ ತೊಡರಂ: **ಸಮಯಪ,** ೧೪. ೧೬)

**ಪೋ** – ಹೋಗು, ಮುಂದೆ ಸಾಗು (ಆನೊಂದಂ ಬೇಡಿದಪೆಂ ನೀನೆನಗದನೀವುದಣ್ಣ ಮಾರ್ಕೊಳ್ಳದೆ ಪೋ ನೀನೆನ್ನದೆ ಮುನಿಸಿಲ್ಲದೆ ಮೋನಂಗೊಂಡಿರದೆ ಬಿಚ್ಚತಿಕ್ಕೆಯೊಳಿನಿಸಂ: **ಧರ್ಮಾಮೃ,** ೨. ೧೦೮); ನಿವಾರಣೆಗೊಳ್ಳು (ಎನಗೀ ಜನ್ಮವಿಂದಿಂತೆ ಬಂಜೆತನದಿಂ ಪೋಕುಮೋ: **ಸುಕುಮಾಚ,** ೯. ೧೦೯)

**ಪೋಂತು** – ಹೋತ (ಅಲ್ಲಿಯೆ ಪೋಂತಪ್ಪುದುಂ ಅದು ಮೆಲ್ಲನೆ ತೆನೆ ತೀವಿ ಸುಟಿಯೆ: **ಯಶೋಧಚ,** ೩. ೫೫)

**ಪೋಗಂಡ** – ಅಂಗಹೀನ (ಆ ಗಂಡನನಪ್ಪಿದ ತೋಳ್ ಪೋಗಂಡನನಪ್ಪುವಂತೆ ಮಾಡಿದ ಬಿದಿಯಂ .. .. ಕಂಡೆನಾದೊಡೆ ಬಿಟ್ಟಪೆನೇ: **ಯಶೋಧಚ,** ೨. ೬೦)

**ಪೋಗಾಡು** – ನೀಗಿಕೊ (ತನ್ನಿರ್ದ ಮನೆಯಂ ಮಾಜೆಯವಳ್ಗೆ ಪೋಗಾಡಿ ತದನಂತರಂ ತನ್ನ ತಾಯಲ್ಲಿರ್ದಂತಪ್ಪ ವಸ್ತುಗಳಂ ಕಟಿಪುವುದೆಂದು ಪೇಟ್ದಿಟ್ಟಲ್: **ಪುಣ್ಯಾಸ್ರ,** ೪. ೧೮ ವ)

**ಪೋಗು** – ಹೋಗು (ಪೋಗು–ಗಮನೇ: **ಶಬ್ದಮದ,** ಧಾ ೧೩೩); ಹೋಗುವಿಕೆ (ಈಗಳಿನೆಮ್ಮ ಪೋಗು ಗೆಂಟನಿತೆಡೆಯಂ ತಗುಳ್ದು ಬರಲಾರ್ಪಿರೆ ನಿಮ್ಮ ವಿಳಾಸಯಾನದಿಂ: **ಆದಿಪು,** ೧೧. ೧೩೮); ಜೀರ್ಣವಾಗು (ಕಷಾಯಂ ಒಗೆಯುತ್ತಿರೆ ಪೋದ ಪರಾರ್ಥ್ಯವಸ್ತ್ರದಂತೆ ಆ ವಿಭುಗೆ ಆದುದಂದು ವಿಶದಂ ಬಹಿರಂಗಮಂತರಂಗಮುಂ: **ಶಾಂತಿಪು,** ೯. ೩೩)

**ಪೋಗೊದೆ** – ದೂರ ಹೋಗುವಂತೆ ಒದೆ (ಮಂದಸಿನ ಮುಚ್ಚುಳಮನುಂಗುಟದಿಂದೆ ಮೀಂಟಿ ಪೋಗೊದೆದು: **ಜಗನ್ನಾವಿ,** ೬. ೩೧)

**ಪೋಡುಂಗಾಱ** – ಸೌದೆ ಕತ್ತರಿಸುವವನು (ಕುಮ್ಮರಿಯಂ ಸುಡಲೆಂದು ತುಂಗಭದ್ರನೆಂಬ ಪೋಡುಂಗಾಱಂ ಸೊರ್ಕಿ ತೂಂಕಡಿಂದ ಇರುಳ್ ಕಟ್ಟಿಂಗಳ್ ಕಡುಗತ್ತಲೆಯೊಳ್ ಬಂದು: **ವಡ್ಡಾರಾ,** ಪು ೧೫೭, ಸಾ ೧೮)

**ಪೋಡುಗಾಱ** – ಸೌದೆ ಕತ್ತರಿಸುವವನು (ದನುಜೇಂದ್ರನ ಸೇನೆಯ ವಜ್ರದ ದೋರ್ದಂಡಂಗಳಂ ಕುಠಾರಾಯುಧದಿಂ ಮನುಜೇಂದ್ರನ ಸೇನೆಯ ವಿಘಟನಾಱಯೊಳ್ ಪೋಡುಗಾಱನಂತಿರೆ ತಱೆದಂ: **ಪಂಪರಾ,** ೧೩. ೧೦೫)

**ಪೋತ** – ಹಡಗು, ದೋಣಿ (ಧರ್ಮಪೋತಚ್ಯುತರ್ ಅನವಧಿಸಂಸಾರವಾರಾಶಿಮಧ್ಯಾಸ್ಪದ ಸರ್ವಗ್ರಾಸಿ ಭೀಮಾಂತಕ ವದನಮಹಾಗರ್ತದೊಳ್ ಮಗ್ನರಾದರ್: **ಆದಿಪು,** ೯. ೫೮); ಮರಿ (ಪಿಡಿಯ ಪೋತಂ ಪಿಡಿದೋಡಿದುದು ಅಂದು ಪೂತ್ಕೃತಕ್ಕಗಿದಗಿದೊಳ್: **ಲೀಲಾವತಿ,** ೮. ೧೭)

**ಪೋತಕ** – ಮರಿ (ಮುತ್ತಿನ ಸೂಸಕಂಗಳಂ ಬಾಳಮೃಣಾಳಮೆಂದೆ ಕರ್ದುಕಲ್ ಬಗೆಗುಂ ಕಳಹಂಸಪೋತಕಂ: **ಮಲ್ಲಿನಾಪು,** ೨. ೬೧)

**ಪೋತಪಾತ್ರ** – ಹಡಗು (ಜನನರೌದ್ರಸಮುದ್ರಮಂ ಎಂತು ದಾಂಟುವಂ ಜಿನಮತಪೋತಪಾತ್ರಮನಾಮಿಲ್ಲದೊಡೆ: **ಕರ್ಣನೇಮಿ,** ೨. ೯)

**ಪೋತರ್** – ಹೋಗು (ನವಮಧುಕರಚಾಂಪೇಯಂ ಪೋತರೆ ಮನೋನುರಾಗದಿನಾಗಳ್: **ಲೀಲಾವತಿ,** ೮. ೧) ಹೊರಬರು (ಉಸಿರೊತ್ತಿಂ ತಿದಿಯಂತಿರೊತ್ತಿರೆ ಬಸಿಱ್ ಪೋತಂದ ಕಣ್ ಬಿಟ್ಟ ಬಾಯ್.. .. ಮುಡಿಯೊಳ್ ಪೊರಳ್ವ ಪಗೆಯಂ ಕಣ್ಣಾರ್ವಿನಂ ನೋಡಿದಳ್: **ಪಂಪಭಾ,** ೧೨. ೧೫೧)

**ಪೋತ್ರ** – ನೇಗಿಲ ಗುಳ (ಎನಸುಂ ಪೋತ್ರಾಭಿಘಾತಂ ಪಡೆದು ಬಿಡದೆ ಪೆತ್ತಳ್ ಕ್ಷಮಾವೃತ್ತಿಯಿಂದೆಮ್ಮನೆ ತಾನಿಂತು ತಾಯಪ್ಪ ಅವನಿ: **ಶಾಂತೀಶ್ವಪು,** ೧೩. ೧೩೩); ಚೂಪಾದ [ಹಂದಿಯ] ಮೂತಿ (ದಬ್ಬಣದಂತೆ ನಿಬ್ಬಣಮಾದ ಕೋದಲ್ಗಳೊಳ್ ಕೋದ ಪೆಣಂಗಳಂ ಪೋತ್ರಮೆಯ್ದದೆ ಪಡೆಯಂ ಪಿಡಿದು ಪೊಡೆದೊಳ್ತೂಂಕುವಂತೆಯುಂ .. .. ಮೊಗಮನೆತ್ತಿ ಮೆಯ್ಯಂ ನಿಮಿರ್ದು ಅದಿರದಿದಿರೇಱುವೆಕ್ಕಲವಂದಿಯಂ ಕಂಡು: **ಲೀಲಾವತಿ,** ೭. ೧೪ ವ)

**ಪೋತ್ರಿ** – ಹಂದಿ (ಖರದಂಷ್ಟ್ರ ಕೋಳ ಸೂಕರ ವರಾಹ ಕಿಟಿ ಘೃಷ್ಟಿ ಪೋತ್ರಿ ನಾಮಂ: **ಅಭಿಧಾವ,** ೨೧ ೯. ೨)

**ಪೋದಗೆ** – ಪೋತಕ ಎಂಬ ಪಕ್ಷಿ (ನೆರೆದುದು ವಿರಹಿಜನಮನಸ್ ತೃಣಶರಣದೊಳ್ ಅಂಗಜದವಾಗ್ನಿಯಂ ನೆಱಪುತ್ತುಂ ನೆರೆದಭ್ರಂ ಕೊರ್ವಿದುದು ಅಚ್ಚರಿಯಿಂ ಪೋದಗೆಯ ಗರ್ಭಮಂ ಕೊರ್ವಿಸುತುಂ: **ಶಾಂತೀಶ್ವಪು,** ೧೨. ೪೦)

**ಪೋಬರವು** – ಹೋಗಿಬರುವುದು (ಅರಸನ ಪಟ್ಟದಿಂಬಟಿಯಮೀ ದಿವಿಜಾಳಿಗೆ ಮಾಣ್ದುದಿಲ್ಲ ಪೋಬರವು ಇವರಯ್ವರುಮಂ ಮಗುಟೆ ತರ್ಪರುಮಪ್ಪುದಜೆಂದಮಿಲ್ಲಿ ಕೊಕ್ಕರಿಕೆಗೆ ಪೇಟಿಮಾವುದೆಡೆ: **ಆದಿಪು,** ೯. ೭೪)

**ಪೋಬಟೆ** – ಹೋದ ದಾರಿ (ಸ್ಮರನಸ್ತ್ರ ಸಮಿತಿಯದು ನಿರ್ಭರಂ ಅಂಗಮನುರ್ಚಿ ಪೋಗೆಯುಂ ಪೋಬಟೆಯಂ ದೊರಕಿಸಿಕೊಳಲಾಗದು: **ಕವಿರಾಮಾ,** ೩. ೧೮೫)

**ಪೋರ್** – ಕಾದು (ಭಗಿಲ್ ಮಾಡದಲ್ಲಿ ಸವಣನೊಡನೆ ಆ ಪೋರುತ್ತಿರ್ಪೊಳ್ ನೋಡಿಂ ಎಂದು ಅರಸಂಗೆ ತೋಱೆ: **ವಡ್ಡಾರಾ,** ಪು ೧೧೭, ಸಾ ೨೨); ಸ್ಪರ್ಧಿಸು (ಗಂಗಾವಾರಿಯೊಳ್ ಪೋರ್ವ ನಿರ್ಝರಧಾರಾತತಿ

ಪಾಂಡುವಿಂ ಸೊಗಯಿಸಿತ್ತಾ ಚಿತ್ರಕೂಟಾಚಲಂ: **ಕುಸುಮಾಕಾ,** ೧. ೬೮); ಹೋರಾಟ (ವಾರಿಯಳರ್ದಿಕೊಳ್ವ ಅರಣ್ಯವಾರಣಂಗಳೊಡನೆ ಭರದಿ ಪೋರ್ಗಂ ಮೊಗಂಬುಗುವ ಪೆರಾನೆಗಳ ತೊಳವಿಗೆಗಳೊಳಂ: **ಚಂದ್ರಪ್ರಪು,** ೫. ೪೦ ವ); ತೂತು, ಬಿಲ (ಪುತ್ತಿನ ಪೋರಿಂ ಪೊಱಮಟ್ಟು ಪೋದ ಮಧುಪಂ ತನ್ನಿಂದ ತಾನಾಗಿ ಬರ್ಪಿನಂ: **ನೇಮಿನಾಪು,** ೧. ೯೦)

**ಪೋರಗ** – ಒಂದು ಆಯುಧ (ಪೊಯೆ ಕಾಳವಟ್ಟದಿಂ ಪೋರಗದಿಂದೆ ಪೊಯ್ದನೆರಡುಂ ಸರಿವೋದುವು ಲಾಗುಬೇಗದೊಳ್: **ಅನಂತಪು,** ೧೧. ೬೧)

**ಪೋರಟೆ** – ಕಾಳಗ (ಕೃಷ್ಣಗಜಂಗಳ ಪೋರಟೆಯಿಂದಭಿಲಶಿತ ವೃಷ್ಟಿಯಾಗದುದಂ .. .. ಸೂಚಿಸುಗುಂ: **ಪುಣ್ಯಾಸ್ರ,** ೯. ೧೬ ವ)

**ಪೋರಿ** – ಹೋರಿ (ಎತ್ತೀದುದು ಕೋಣನಂ ಆ ಮುತ್ತೆಮ್ಮೆಯೆ ಪೋರಿಯೀದುದು ಎಂಬೋದುಗಳಂ .. .. ಪುರಾಣಮೆನುತುಂ ಕೇಳ್ವರ್: **ಸಮಯಪ,** ೧೦. ೧೮೬)

**ಪೋರಿಸು** – ಹೋರಾಡಿಸು (ತಗರಂ ಕೋಟಿಗಳಂ ಎಸೆವೆಮೇವೋರಿಯಂ ಪಪಿಷ್ಠರ್ ಮಿಗೆ ಬಸನದಿಂದೆ ಪೋರಿಪರ್: **ಸಮಯಪ,** ೫. ೧೫)

**ಪೋರ್ಕುಳಿ** – ಜಗಳಗಂಟ (ಸುಣ್ಣದೆಲೆಯನೊತ್ತೆಯಿಟ್ಟು ಮ್ದದಾನೆಯುಮಂ ಮಾಣಿಕಮುಮಂ ಒತ್ತೆವಿಡಿಸಲೆಳಸುವ ಚಿಕ್ಕ ಪೋರ್ಕುಳಿ ಬೊಜಂಗರುಮಂ ನೋಡಿ: **ಪಂಪಭಾ,** ೪. ೮೭ ವ), ಹೋರಾಟಗಾರ (ವಸುಧಾವಲ್ಲಭೆ ಮೇಘಕಾಲ ವಿಟನೊಳ್ ಸಂಭೋಗಮಂ ಮಾಡೆ ಬಣ್ಣಸರಂ ಪೋರ್ಕುಳಿಯಿಂದಲೇ ಪಱಿದು ಸೂಸಿತ್ತು: **ಪಂಪರಾ,** ೭. ೧೪೬); ಪ್ರಣಯ ಕಲಹ (ಚಿಕ್ಕ ಪೋರ್ಕುಳಿ ಬೊಜಂಗರುಂ ಕತ್ತುರಿಬಿಯಮಂ ಮೆಱೆದು ಕತ್ತುರಿಯೊಳ್ ಪೂಸ್ದು ಕತ್ತುರಿಮಿಗದಂತಿರ್ಪ ಕತ್ತುರಿಬೊಜಂಗರುಮಂ: **ಪಂಪಭಾ,** ೪. ೮೭ ವ); ಹೋರಾಟ (ಅಂತು ನೆಟಿಲೊಳ್ ಪೋರ್ಕುಳಿಯಾಡುವಂತೆ ಒರ್ವರೊರ್ವರಂ ಗೆಲಲ್ ನೆಱೆಯದಿರೆ: **ಗದಾಯು,** ೮. ೨೫ ವ)

**ಪೋರ್ತ** – ಯುದ್ಧ, ಕಲಹ (ವ್ಯಾಳವನಗಜದ ಪೋರ್ತದ ಕೇಳಿಗೆ ವಿಜಯಾರ್ಧಶೈಲಪತಿ ಸವೆಯಿಸಿ ತಂದೋಳಿಯೆ ನಿಱೆಸಿದ ಬೆಳ್ಳಿಯ ಲಾಳವಿಂಡಿಗೆವೊಲಿರ್ಪುವಿದಱ ಮಡಲ್ಗಳ್: **ಶಾಂತಿಪು,** ೨. ೧೦೪)

**ಪೋರ್ತಂಗೊಳ್** – ಹೋರಾಟ ಮಾಡು (ಆ ಗಜಮಲ್ಲನೊಳ್ ಪೋರ್ತಂಗೊಂಡುದೆ ಮಲ್ಲಸಿಂಗರಂಗೆಯ್ದಂತಾಗೆ ಗೆಲ್ಲಂಗೊಂಡು: **ನೇಮಿನಾಪು,** ೮. ೮೬ ವ)

**ಪೋಲ್** – ಹೋಲಿಕೆ ಹೊಂದಿರು (ಪೋಲ್–ಸಾದೃಶ್ಯೇ: **ಶಬ್ದಮದ,** ಧಾ ೬೪೬)

**ಪೋಲಿಸು** – ಹೋಲಿಕೆ ಮಾಡು (ಸತ್ಯಾಶ್ರಯದೇವನೆ ಪೃಥ್ವೀವಲ್ಲಭಂ ಕಥಾನಾಯಕನಾಗೆ ಅನಿಲಜನೊಳ್ ಪೋಲಿಸಿ ಪೇಳ್ದನೀ ಗದಾಯುದ್ಧಮಂ ಮಹಾಕವಿ ರನ್ನಂ: **ಗದಾಯು,** ೧. ೩೧)

**ಪೋಲ್ಕೆ** – ಹೋಲಿಕೆ, ಸಾದೃಶ್ಯ (ಶೀರ್ಣನಾಳಿಕೇರ ಪರ್ಣಂಗಳೊಳಂ ಅಮರ್ಕೆಯುಂ ಪೋಲ್ಕೆಯುಂ ಒಲ್ವುಂ ಚೆಲ್ವುಮಾಗೆ .. .. ಪಸದನಂಗೊಂಡು: **ಚಂದ್ರಪ್ರಪು,** ೭. ೧೧೫ ವ)

**ಪೋಲ್ವೆ** – ಪೋಲ್ಕೆ (ಅಂತು ಕೊಟ್ಟ ಅಯ್ದು ಮಂತ್ರಂಗಳಂ ಆಹ್ವಾನಂಗೆಯ್ದು ನಿನ್ನ ಬಗೆಗೆ ಬಂದ ಪೋಲ್ವೆಯ ಮಕ್ಕಳಂ ಪಡೆವೆ ಎಂದು ಬೆಸಸಿದೊಡೆ: **ಪಂಪಭಾ,** ೧. ೮೯ ವ)

**ಪೋಷ್ಯವರ್ಗ** – ರಕ್ಷಿಸಬೇಕಾದ ಬಂಧುಬಳಗ (ಕಡಲ ತಡಿಯ ನೆಲನಂ ಪಡೆದರ್ ಭವದೀಯಪುತ್ರರ್ ಉಳ್ಳಳವಿಗಳೊಳ್ ಪಡೆದುದು ಬಂಧುಜನಂ ನಿಮ್ಮಡಿಗಾವೇಂ ಪೋಷ್ಯವರ್ಗದಿಂದಂಪೊಱಗೇ: **ಆದಿಪು,** ೯. ೯೮)

**ಪೋಸ** – ಕತ್ತಲಾಗುವ ಮುಂಚೆ ಊಟ ಮಾಡುವ ನಿಯಮ (ಪೋಸಂ ಮಾಡಿಮೆನುತ್ತಿರ್ಪ ಮನೆಗಳಲ್ಲವೆ ತೀರ್ಥಂ: **ಸಮಯಪ,** ೬. ೧೦೦)

**ಪೋಳಿಗೆ** – [ಸ್ಫೋಟಕ] ಹೋಳಿಗೆ (ಸಿಂಹದ ದಾರಿಯೊಳಿರ್ದ ಗಾರಿಗೆಯಂತೆ ಡಾಕಿನಿಯರ ಕೈಯ ಪೋಳಿಗೆಯಂತೆ ರಕ್ಕಸಿಯರ ಕೈಯ ಬೆಲ್ಲದಂತೆ: **ಧರ್ಮಾಮೃ,** ೧೩. ೧೨೨ ವ); ಬೊಕ್ಕೆ (ಗಂಡ ಸ್ಫೋಟಕ ಸಮಾಹ್ವಯಂ: **ಅಭಿಧಾವ,** ೧. ೧೨. ೩೬)

**ಪೋಟ್** – ಸೀಳು (ಮಹಾಪ್ರಳಯ ಉಲ್ಕೋಪಮ ಮತ್ ಗದಾಹತಿಯಿಂ ಅತ್ಯುಗ್ರ ಆಜಿಯೊಳ್ ಮುನ್ನಂ ಈ ಖಳ ದುಶ್ಶಾಸನನಂ ಪೊರಳ್ಚಿ ಬಸಿಱಂ ಪೋಟ್ಟಿಕ್ಕಿ: **ಪಂಪಭಾ,** ೭. ೧೨); ಬಿರುಕು (ನಾರ್ಗಳ ಪೊರೆಯಲ್ಲಿ ಪೋಟ್ಟಳೆಡೆಯಲ್ಲಿ .. .. ಗಿಳಿಗಳ ಪಿಂಡುಗಳ್.. .. ಇರ್ಪುವು: **ಕಾದಂಸಂ,** ೧. ೪೦); ತುಂಡು, ಭಾಗ (ಮಲ್ಲಿಕಾರ್ಜುನಂ ಎರಟ್ ಪೋಟಾದುದು ಕಂಡು ಕಂಡು .. .. ಮತ್ತೆ ಪೂಜಿಸುವರ್: **ಸಮಯಪ,** ೯. ೮); ಮರದ ಪೊಟರೆ (ತಳಿರ್ಗಳಿರುಂಬಿನಲ್ಲಿ .. .. ಪೋಳ್ಗಳೆಡೆಯಲ್ಲಿ ಕವಲ್ಗಣಿಯಲ್ಲಿ .. .. ಸಹಸ್ರಮುಂ ನಿರಾಕುಳಂ ಅನುರಾಗದಿಂ ಪಲವು ದೇಶದೊಳಿರ್ಪುವು ಬಂದು ಭೂಪತೀ: **ಕಾದಂಬ,** ೧. ೧೦೪)

**ಪೋಟಿಲ್** – ಮರದ ಪೊಟರೆ (ಪಿರಿದಪ್ಪ ಪೋಟಿಲೊಳಗೆ ಆ ಸರಸಫಳಂ ಕೆಯ್ ಕರ್ದುಂಕೆ ಬಿರ್ದತ್ತಾಗಳ್: **ನೇಮಿನಾಪು,** ೩. ೮೧)

**ಪೋಟ್ಮರ** – ಟೊಳ್ಳು ಮರ (ಅಲ್ಲಿ ತನ್ನಂ ಕಾಣಲೊಡನಿರ್ಮಡಿಸಿದ ಶೋಕದಾವಾನಲಂ ಎರ್ದೆಯೊಳ್ ಪೋಟ್ಮರದ ಕಿರ್ಚಿನಂತಳುರೆ ತಳಮಳಗಾಗಿ: **ಶಾಂತಿಪು,** ೧. ೯೪ ವ)

**ಪೌರಂದರ** – ಇಂದ್ರಾಸ್ತ್ರ (ಎನಗೆ ವಿದ್ಯಾಧರಮೆ ಧನಮಪ್ಪುದಱಿಂ ದಿವ್ಯಾಸ್ತ್ರಂಗಳಂ ದಯೆಗೆಯ್ವುದೆನೆ ವಾರುಣವಾಯವ್ಯಾಗ್ನೇಯ ಪೌರಂದರಾದಿ ಪ್ರಧಾನಾಶ್ತ್ರಂಗಳಮ ಕುಡೆ ಕೊಂಡು: **ಪಂಪಭಾ,** ೨. ೪೬ ವ)

**ಪೌರಂಧ್ರೀ** – ಸ್ತ್ರೀ (ಅನೇಕಪ್ರಸಾಧನಪ್ರಯೋಗ ಪ್ರವೀಣೆಯರಪ್ಪ ಅತಿಪ್ರೌಢ ಪುರಂಧ್ರಿಯರ್ ನೋಡಿ: **ಆದಿಪು,** ೪. ೪೨ ವ)

**ಪೌರಲೋಕ** – ಪುರಜನರು (ಪ್ರಭುವಿಂ ಮತ್ಸ್ವಾಮಿ ತಾನಲ್ಲದೆ ಪೆಱರೆನುತುಂ ನೋಡೆ ತತ್ ಪೌರಲೋಕಂ ವಿಭುಸದ್ಮಂಗಂಡು ಬಂದು: **ಚಂದ್ರಪ್ರಪು,** ೭. ೧೫೪)

**ಪೌರವ** – ಪುರುವಿನ ಮಗ, ಭರತ [ಮಾಗಧರಂ ಗೆಲ್ದಂತೆವೊಲಾಗೆ ವರತನುವನೊತ್ತಿ ಕಪ್ಪಂಗೊಂಡು ಉದ್ಯೋಗದ ಕಲಿತನಮಂ ಪೊಗಟ್ವಾಗಳ್ ಅವಾಙ್ಮನಸಗೋಚರಂ ಪೌರವನಾ: **ಆದಿಪು,** ೧೩. ೩)

**ಪೌರವಧು** – ಪಟ್ಟಣದ ಹೆಣ್ಣು (ಸೌರಭಕುಸುಮವಿಹಾರಂ ಪೌರವಧೂಶ್ವಸಿತ ಪದ್ಮಗಂಧವಿಚಾರಂ .. .. ಸುಟಿವುದಲ್ಲಿ ಚಾರು ಸಮೀರಂ: **ಜಗನ್ನಾವಿ,** ೨. ೨೫)

**ಪೌರಸ್ತ್ಯ** – ಪೂರ್ವದಿಕ್ಕಿನ (ಪೌರಸ್ತ್ಯರಾಜಸಾಧನಪರನಾಗಿ ಮುಂದಂ ನಡೆಯೆ: **ಶಾಂತಿಪು,** ೧೦. ೧೫೮ ವ)

**ಪೌರುಷ** – ಗಂಡಸುತನ (ರಣಮೆಂಬ ರಾತ್ರಿಯೊಳ್ ಸಲೆ ಬರುತಿರ್ಪಳೆಂದುಂ ಅಭಿಸಾರಿಕೆಯಂದದೆ ರಾಜ್ಯಲಕ್ಷ್ಮಿ ತನ್ನೊಲವಿನೊಳೆಂದೊಡಾ ನೃಪನ ಪೌರುಷಮೇಂ ಪೊಗಟಲ್ಕೆವೇಟ್ಕುಮೇ: **ಕಾದಂಬ,** ೧. ೧೩): ಮೇಲೆತ್ತಿದ ಬಾಹು (ಸಿರಕ್ಕೆ ಮೇಲೆತ್ತಿದ ಬಾಹು ಪೌರುಷಂ: **ಅಭಿಧಾವ,** ೧. ೧೨. ೧೪)

**ಪೌರೋಹಿತ್ಯ** – ಪುರೋಹಿತನ ಕೆಲಸ (ಹರಿ ಪೌರೋಹಿತ್ಯಮಂ ತಾಳ್ದೆ ರಾಗಿಸಿ ಶಕ್ರಾಮಗನೆ ದಾದಿಯಾಗೆ .. .. ಜಿನಂಗೆಸೆದುದಂತಾ ನಾಮಕರ್ಮೋತ್ಸವಂ: **ಶಾಂತಿಪು,** ೧೦. ೭೮)

**ಪೌರ್ಣಮಾಸಿ** – ಹುಣ್ಣಿಮೆ (ನೆಟ್ಟನೆ ನೆಱೆದು ಬಿಂಬದಿಂ ಪೂರ್ಣನಾಗೆ ರಾಕಾಖ್ಯೆ ಪೌರ್ಣಮಾಸಿಯೆನಿಕುಂ: **ಅಭಿಧಾವ,** ೧. ೨. ೯)

**ಪೌರ್ಣಮೀದಿನ** – ಹುಣ್ಣಿಮೆಯ ದಿನ (ಕಾರ್ತಿಕಮಾಸದ ಪೌರ್ಣಮೀದಿನದೊಳ್ ಸುಕುಮಾರನ ಮೋಹಬಂಧನ ಬಳ್ಳವಳ್ಳಿಯ ತೊಡರ್ಪಂ ಪಱಿಪಡೆ ಬಿಡಿಸುವಂತೆ ಯೋಗವಿಡಿಸಿ: **ಸುಕುಮಾಚ,** ೧೧. ೩೮ ವ)

**ಪೌಲಸ್ತ್ಯ** – ರಾವಣ (ಪೌಲಸ್ತ್ಯನ ಲಂಕಾಪುರಮನುರಿಪಿದಂ .. .. ಹನುಮಂತಂ: **ಪಂಪರಾ,** ೧೧. ೧೭೦)

**ಪೌಲೋಮ** – ಪುಲೋಮೆಯ ಮಕ್ಕಳು, ಒಂದು ರಾಕ್ಷಸವರ್ಗ (ನಿವಾತಕವಚ ಕಾಳಕೇಯ ಪೌಲೋಮತಳತಾಳುಕರೆಂಬ ಅಱುವತ್ತುಕೋಟಿ ರಕ್ಕಸರೆನಗೆ ಗೆಲ್ದೀಯಲ್ವೇಟ್ಕುಂ: **ಪಂಪಭಾ,** ೮. ೨೭ ವ)

**ಪೌಲೋಮಿ** – ಪುಲೋಮನ ಮಗಳು, ಶಚೀದೇವಿ (ಚಾಮರ ಧವಳಾತಪತ್ರ ಪಡಡಕ್ಕಾದಿ ಶ್ರೀಮದ್ವಿಭವಯುತಂ ಪೌಲೋಮಿಯೆ ಬರ್ಪಂದದಂತೆ ಪೊಟಲಿಂ ಬಂದಳ್: **ಹರಿವಂಶ,** ೭. ೭೨)

**ಪೌಷ್ಯಮಾಸ** – ಪುಷ್ಯಮಾಸ (ಪೌಷ್ಯಮಾಸದ ಪೌರ್ಣಮೀದಿನದಂದು ಪಲ್ಯಂಕಾಸನದಿಂದಂ ಯೋಗನಿರೋಧದೊಳ್ ಪೂರ್ವಾಭಿಮುಖನಾಗಿರ್ದಂ: **ಆದಿಪು,** ೧೬. ೪೦ ವ)

**ಪೌಳೋಮಿ** – [ಪುಲೋಮನ ಮಗಳು] ಶಚೀದೇವಿ (ನೇಮಿನಾಥಂಗೆ ಸುರಯೂಥನಾಥಂ .. .. ಪೌಳೋಮೀದತ್ತ ದಿವ್ಯಾರ್ಚನಾನಿಚಯದಿನರ್ಚಿಸಿ: ೧೩. ೮೯ ವ)

**ಪ್ರಕಂಪನ** – ನಡುಗಿಸುವವನು, ಗಾಳಿ (ಪ್ರಕಂಪನಜೇವಪ್ರಕಂಪನನಪ್ಪೆನಗೆ ಗೋಪಾಲಯುಕ್ತನೊಳ್ ಭೇದಮಯುಕ್ತಂ: **ಜಗನ್ನಾವಿ,** ೫. ೬೧ ವ)

**ಪ್ರಕಟ** – ಕಾಣುವ (ಪ್ರಕಾಶಂ ಪ್ರಕಟಂ: **ಅಭಿಧಾವ,** ೨. ೨. ೧೪); ಕೀರ್ತಿಪಡೆದವನು (ಪ್ರಕಟರ್ ನೀತಿವಿದರ್ ನೃಪರ್: **ಪುಷ್ಪದಂಪು,** ೧೩. ೮೯); ಮಾತು ಹೇಳಿಕೊಡುವ ನಟ (ಓದಿಸುವ ನಟಂ ಪ್ರಕಟಂ: : **ಅಭಿಧಾವ,** ೧. ೧೧. ೭೫)

**ಪ್ರಕಟಿತ** – ವ್ಯಕ್ತವಾದ (ಪ್ರಕಟಿತವಿಳಾಸನಧಿರಾಜಕುಮಾರಂ ನಳಿನಕೇತು ಕಂಡವರಂ: **ಶಾಂತಿಪು,** ೯. ೧೦)' ಪ್ರಸಿದ್ಧ (ಸುಕುಮಾರಂ .. .. ಪ್ರಕಟಿತಮದಱಾ ಪ್ರಯೋಗಮೀತೆಱನಕ್ಕುಂ: **ಕವಿರಾಮಾ,** ೨. ೭೦)

**ಪ್ರಕಟಿತಚಿತ್ತ** – ಕಾಣಿಸಿದ ಮನಸ್ಸಿನವನು (ಇನಿತು ಕೊಂಕಿಂ ನುಡಿದಂ ಪ್ರಕಟಿತಚಿತ್ತಂ ಭೂನಾಯಕಂ ಏನ್ ಅಣಕಕ್ಕೆ ಸವಣನುಂ ಸೈರಿಪನೇ: **ಯಶೋಧಚ,** ೨. ೬೮)

**ಪ್ರಕಟಿಸು** – ತೋರ್ಪಡಿಸು (ಸಮ್ಯಗ್ದರ್ಶನಂ .. .. ಕವಲ್ತು ಸಮ್ಯಕ್ಚರಿತ್ರಮಂ ಪ್ರಕಟಿಸುಗುಂ: **ಆದಿಪು,** ೫. ೫೯)

**ಪ್ರಕರ** – ನಿಕರ, ಗುಂಪು (ಶುಕಶಾರಿಕಾವಿಹಗಪ್ರಕರಂ ಮುಂ ಕೇಳ್ದ ವಚನಮಂ ನುಡಿವುದು ಕೌತುಕಮಲ್ಲದೆ: **ಕಾದಂಸಂ,** ೧. ೨೫)

**ಪ್ರಕರ್ಷ** – ಶ್ರೇಷ್ಠವಾದ; ಶ್ರೇಷ್ಠತೆ (ಲಸಿತ ಸ್ವಾಭಾವಿಕ ನತ ಮಂದೋಚ್ಛ್ವಾಸ ಪ್ರಕರ್ಷ ನಾಸಾವಿಳಾಸಂ ಆ ನರ್ತಕಿಯಾ: **ಲೀಲಾವತಿ,** ೪. ೧೧೬)

**ಪ್ರಕಾಂಡಕ** – ತುದಿಯಿಂದ ಬರಬರುತ್ತ ದಪ್ಪಗೊಳ್ಳುವ ಹಾರ (ಪ್ರತ್ಯೇಕ ಶೀರ್ಷಕ ಉಪಶೀರ್ಷಕ ಅವಘಾಟಕ ಪ್ರಕಾಂಡ ತರಳತರ ಬಂಧೋಪಪದ ಪಂಚಕಸಮೇತಂಗಳಾಗಿ: **ಆದಿಪು,** ೮. ೫೪ ವ)

**ಪ್ರಕಾರ** – ರೀತಿ (ಸುಕುಮಾರನೆಂಬ ಪೆಸರ್ .. ಸಾರ್ಥಕಮಾದುದೆಂದು ನಾನಾಪ್ರಕಾರದಿಂ ಪ್ರಕಾಶಂಗೆಯ್ದಂ ಭೂಪಂ: **ಸುಕುಮಾಚ,** ೧೧. ૩೬)

**ಪ್ರಕಾಶ** – ಬಿಸಿಲು (ಪ್ರಕಾಶಂ ಆತಪಮಕ್ಕುಂ: ಕಾಣುವ (ಪ್ರಕಾಶಂ ಪ್ರಕಟಂ: **ಅಭಿಧಾವ,** ೧. ೧. ೬೬); ಕಾಂತಿ, ಹೊಳಪು (ದೇವಿಯ .. .. ಪ್ರಕಾಶ ಗರ್ಭಪ್ರಭೆಯಂತೆಯುಂ .. .. ಮಹತ್ತ್ವಮಂ ಪಡೆದೆ: **ಜಗನ್ನಾವಿ,** ೨. ೯೬ ವ); ಸಮಾನ, ಸದೃಶ (ಸದೃಶಂ ಸಮಂ ಸಮಾನಂ ಸದೃಕ್ಸದೃಕ್ಷಂ ನಿಭಂ ಪ್ರಕಾಶಂ: **ಅಭಿಧಾವ,** ೨. ೧. ೩೬)); ಕಾಣುವ (ಪ್ರಕಾಶಂ ಪ್ರಕಟಂ: **ಅಭಿಧಾವ,** ೨. ೨. ೧೪)

**ಪ್ರಕೀರ್ಣ** – ತುಂಬಿದ (ಜನಿತರಜಃಕಣಗಳ ಕಳಿತ ನವೀನದಳಪ್ರಕೀರ್ಣ ಕನಕಾಂಬುಜದಂತೆ ಎನಿಸಾನುಂ ಸೊಗಯಿಸಿದುವು ಪನೆಗಳ್ ಪುದಿದಾ ಕುಮಾರಕನ ವಿಮಳಮುಖಂ: **ಶಾಂತೀಶ್ವಪು,** ೧೫. ೬)

**ಪ್ರಕೀರ್ಣಕ** – [ಜೈನ] ಒಂದು ನರಕದ ಹೆಸರು (ಆ ಬಿಲಂಗಳುಂ ಇಂದ್ರಕ ಶ್ರೇಢೀಬದ್ಧ ಪ್ರಕೀರ್ಣಕಗಳೆಂದು ಮೂಱುತೆಱನಕ್ಕುಂ: **ಆದಿಪು,** ೫. ೮೩ ವ); [ಜೈನ] ಮೂರು ಬಗೆಯ ವಿಮಾನಗಳಲ್ಲಿ ಒಂದು (ವರವಿಮಾನಂಗಳ್ ಇಂದ್ರಕ ಶ್ರೇಣೀಬದ್ಧ ಪ್ರಕೀರ್ಣಕಗಳೆಂದು ಮೂದೆಱನಕ್ಕುಂ; **ಚಂದ್ರಪ್ರಪು,** ೩. ೩೨ ವ); [ಜೈನ] ಜ್ಯೋತಿರ್ಲೋಕದ ಜ್ಯೋತಿಗಳಲ್ಲಿ ಒಂದು ಚಂದ್ರಾದಿತ್ಯ ನಕ್ಷತ್ರ ತಾರಕಾ ಪ್ರಕೀರ್ಣಕ ವಿಕಲ್ಪಜ್ಯೋತಿರ್ಗಣಾಲಂಕೃತಮಾಗಿರ್ದ: **ಅಜಿತಪು,** ೧೧. ೨೨ ವ)

**ಪ್ರಕಂಪಿತ** – ಕೆರಳಿದ (ಪ್ರಕಂಪಿತ ಮೃಗಪತಿ ಶಿಶುಸನ್ನಿಕಾಶರವಿಕಟಭೀಷಣಭ್ರೂಭಂಗರ್ ನಕುಲ ಸಹದೇವರ್ಕ: ಪಂಪಭಾ, ೭. ೮); ಭಯಂಕರ ಕೋಪ (ಪ್ರಕಂಪಿತದಿಂ ತೆಗೆದಿಸೆ ಮಸ್ತಕದಿಂ ಕರಿ ನೊಂದು ತಿರುಗೆ: **ಗಿರಿಜಾಕ,** ೧. ೧೧೧)

**ಪ್ರಕೃತ** – ಪ್ರಸ್ತುತ (ಪ್ರಕೃತ ಸ್ವದ್ರವ್ಯಕ್ಷೇತ್ರಕಾಲಭಾವಾಶ್ರಯಂಗಳಿಂ .. .. ಪೇರ್ವಡೆದಿರ್ಕುಂ: **ಚಂದ್ರಪ್ರಪು,** ೧೪. ೫೩)

**ಪ್ರಕೃತಿ** – ವಸ್ತುವಿನ ಮೂಲರೂಪ (ಅರಸನಾತನ ಮನುಷ್ಯಾತೀತಮಪ್ಪ ಪ್ರಕೃತಿಯಂ ಕಂಡು: ಶಾಂತಿಪು, ೮. ೧೨೬ ವ); ಸಹಜಸ್ವಭಾವ (ಪೊತ್ತುದಚ್ಚರಿಯೆ ಘನಾಹ್ವಯಂಗೆ ಪರನಿರ್ವಹಣ ಪ್ರಕೃತಿಪ್ರವರ್ತನಂ: **ಶಬರಶಂ,**

೧. ೪೪); ಪ್ರಜೆಗಳು (ಆಗಳಾ ಕಂಸಕೃತವಿಕೃತಿಯಿಂ ಪ್ರಕೃತಿಕ್ಷೋಭಮಾಗೆ: **ಜಗನ್ನಾವಿ,** ೬. ೭೧ ವ); [ಜೈನ] ಜೀವನಿಗೆ ಫಲಗಳನ್ನು ನೀಡುವ ಕರ್ಮ (ಎಟ್ಟಿತ್ತೆರಡುಂ ಪ್ರಕೃತಿಗಳಂ ದೂರೀಕೃತಂ ಮಾಡಿ: **ಪಂಪರಾ,** ೧೬. ೮೦ ವ); [ಜೈನ] ಹದಿನಾರು ಕರ್ಮಪ್ರಕೃತಿಗಳು: ನಿದ್ರಾನಿದ್ರಾ, ಪ್ರಚಲಾಪ್ರಚಲಾ, ಸ್ತ್ಯಾನಗೃದ್ಧಿ, ನರಕಗತಿ, ತಿರ್ಯಗ್ಗತಿ, ಏಕೇಂದ್ರಿಯಜಾತಿ, ದ್ವೀಂದ್ರಿಯಜಾತಿ, ತ್ರೀಂದ್ರಿಯಜಾತಿ, ಚತುರಿಂದ್ರಿಯಜಾತಿ, ನರಕಗತಿ ಪ್ರಾಯೋಗಾನುಪೂರ್ವಿ, ತಿರ್ಯಗ್ಗತಿ ಪ್ರಾಯೋಗಾನುಪೂರ್ವಿ, ಆತಪ, ಉದ್ಯೋತ, ಸ್ಥಾವರ, ಸೂಕ್ಷ್ಮ, ಸಾಧಾರಣ (ಎಂಬ ಪದಿನಾಱು ಪ್ರಕೃತಿಗಳುಮಂ ನಿರವಶೇಷಂ ಕಿಡಿಸಿ: **ಆದಿಪು,** ೧೦. ೧೪ ವ)

**ಪ್ರಕೃತಿಬಂಧ** – [ಜೈನ] ಅಷ್ಟವಿಧಕರ್ಮಗಳು ತಮಗೆ ಅನುಗುಣವಾದ ಕರ್ಮಸಂಬಂಧವನ್ನು ಹೊಂದುವುದು (ಮೂಲಪ್ರಕೃತಿಗಳೆಂಟುಮಂ ಬಾದರಸ್ವರೂಪದಿಂ ನೂಱ ನಾಲ್ವತ್ತೆಂಟು ವಿಕಲ್ಪಮಾದುತ್ತರಪ್ರಕೃತಿಗಳಮಂ ಒಳಕೊಂಡು ಅನುಬಂಧಿಸುವ ಬಂಧಂ ಪ್ರಕೃತಿಬಂಧಮೆಂಬುದಕ್ಕುಂ: **ಸುಕುಮಾಚ,** ೮. ೨೭ ವ)

**ಪ್ರಕೃಷ್ಟ** – ಉತ್ಕೃಷ್ಟ (ಚಕ್ರಧರ ಪ್ರಕೃಷ್ಟಭೋಗಾವಧಿ ದೇವರಾಜವಿಭವಾವಧಿ ಎಂದೊಡೆ ಫಲಮನೇವೊಗಟ್ಟಿಪ್ಪುದೊ ಪಾತ್ರದಾನದಾ: **ಸಮಯಪ,** ೭. ೪೭); ಮುಖ್ಯವಾದ (ಅಪ್ರಾಕೃತ ಪ್ರಕೃಷ್ಟಾಲೋಕಪಾಲಪರಿಪಾಲಿನ ಸಾಹಸನುಂ .. .. ಅಪ್ಪ ಸ್ತಿಮಿತಸಾಗರಮಹೀವಲ್ಲಭಂಗೆ: **ಶಾಂತಿಪು,** ೧. ೧ ವ)

**ಪ್ರಕೃಷ್ಟೋದಯ** – ಅತ್ಯಂತ ಅಭಿವೃದ್ಧಿ (ದುರ್ಗಾಧಿನಾಥನಿಯತ ನಿಸರ್ಗಪ್ರೀತಿಯಿಂ ಅಭೀಷ್ಟಮಂ ಸಕಲಸುಹೃದ್ವರ್ಗಂಬೆರಸು ಅನುಭವಿಸುಗೆ ದುರ್ಗಂ ವರ್ಗತ್ರಯಪ್ರಕೃಷ್ಟೋದಯಮಂ: **ಪಂಚತಂತ್ರ,** ೪೪೬)

**ಪ್ರಕೋಪ** – ರೋಷಾವೇಶ (ಕಣ್ಣೀರ ಪೆರ್ವೊನಲಿಂ ನಂದಿಸಿದಳ್ ಪ್ರಕೋಪಶಿಖಿಯಂ ಪಾಯ್ದಪ್ಪಿದಳ್ ನಲ್ಲನಂ: **ರಾಜಶೇವಿ,** ೧೧. ೧೩೫)

**ಪ್ರಕೋಷ್ಠ** – ಮೊಳಕೈಯಿಂದ ಮಣಿಕಟ್ಟಿನವರೆಗಿನ ಭಾಗ, ಮುಂಗೈ (ತಟಿದ್ವಳಯವಿಳಸಿತಂಗಳಾಗಿ ನಿಜಪ್ರಕೋಷ್ಠನಿಶ್ಚಿತಂಗಳಪ್ಪ ವೀರಾಂಗಂಗಳೆಂಬ ಕಟಕಂಗಳುಂ: **ಆದಿಪು,** ೧೫. ೩ ವ)

**ಪ್ರಕ್ರಮ** – ಕೆಲಸದ ಆರಂಭ (ಉಪಕ್ರಮಂ ಪ್ರಕ್ರಮಂ: **ಅಭಿಧಾವ,** ೨. ೨. ೧೭)

**ಪ್ರಕ್ಷಾಳನಂಗೆಯ್** – ತೊಳೆದು ಶುದ್ಧಿ ಮಾಡು ಚರಣಪ್ರಕ್ಷಾಳನಂಗೆಯ್ದು ಸನ್ಮುದದಿಂದರ್ಚಿಸಿ ಭಕ್ತಿಯಿಂದೆ ಪೊಡೆವಟ್ಟಾಗಳ್: **ಸುಕುಮಾಚ,** ೪. ೨೨)

**ಪ್ರಕ್ಷಿಪ್ತ** – ಚೆಲ್ಲಿದ (ಚಕಿತ ಪ್ರಕ್ಷಿಪ್ತ ಪಕ್ಷ್ಮಾಂತರದೊಳ್ ಎಳವೆಯಂ ಮೀಱದಂತಿರ್ಪ ದೀರ್ಘಾಂಬಕ ಶಸ್ತ್ರಾಲೇಖೆಯಂ .. .. ಮಿಂಚಡರೆ: **ನೇಮಿನಾಪು,** ೪. ೯೧)

**ಪ್ರಕ್ಷೇಪಣ** – ದೂರ ಸರಿಸುವುದು (ಭೂಪಾಳಮಗವಟಯಿಸಿದುದಾ ಪೂಗೊಳದೊಳ್ವಿಚಿತ್ರಕಾಂಡಪಟೀ ಪ್ರಕ್ಷೇಪಣವಿಳಾಸಮಂ ತತ್ಸೋಪಾನೋತ್ತಾನಮಣಿಮಯ ಮಯೂಖವಿತಾನಂ: **ಮಲ್ಲಿನಾಪು,** ೬. ೭೩)

**ಪ್ರಕ್ಷೋಭ** – ಅಲ್ಲೋಲಕಲ್ಲೋಲ, ಗೊಂದಲ (ಸಕಳ ಪ್ರಕ್ಷೋಭದೊಳ್ ವಿಹ್ವಳರಾಗಿರ್ದ ನಿರಯಜರಂ ಎಯ್ದಿ ಸುತ್ತಿಮುತ್ತಿ ಪಿಡಿದು ಉಗಿಬಗಿ ಮಾಡಿ: **ಶಾಂತಿಪು,** ೭. ೯೪ ವ)

**ಪ್ರಖ್ಯಾತಿವೆಱು** – ಪ್ರಸಿದ್ಧಿ ಹೊಂದು (ಸಂತತಜಿನಸವನೋದ್ಯತ್ವಯೋಧಾರೆಯಿಂ ಮಾಡಿ ಕರಂ ಪ್ರಖ್ಯಾತಿವೆತ್ತಂ ನೃಪತನಯನನೇಕಾಂತವಿದ್ಯಾವಿನೋದಂ: **ಚಂದ್ರಪ್ರಪು,** ೪. ೮೪)

**ಪ್ರಗಣಿತ** – ಪರಿಗಣಿಸಿದ (ಬಗೆದು ಮೇಣ್ ಪರಮಧರ್ಮಮನರ್ಥಿಯಿಂ ಅನ್ವಯಪ್ರಗಣಿತಾಭ್ಯುದಯ ಮೋಕ್ಷಸುಖಾಶ್ರಯಹೇತುವಂ ನೆಗಟ್ಗೆ: **ಕವಿರಾಮಾ,** ೩. ೨೨೨); ಅತಿಶಯತೆ (ಕನಕಕಾಂಚೀನಿನದನಿನದ ಪ್ರಗಣಿತಮಗಲ್ದ ನಲ್ಲಳ ಜಗನಮಿದೆನ್ನೆರ್ದೆಯನೆಂತು ಪೊಕ್ಕಳಿಪುವುದೋ: **ಪಂಪಭಾ,** ೪. ೭೩)

**ಪ್ರಗತ** – ವಿರಳವಾದ (ಸಕಲಜನವಿನುತಂ .. .. ಪ್ರಗತಗುಣಗಣಂ ಅರಿಬಲವಿಘಟನಂ ಕಂಡನಣುವನಂ ಆ ರಘುರಾಮಂ: **ಕವಿರಾಮಾ,** ೨. ೨೯)

**ಪ್ರಗಲ್ಭ** – ಪ್ರೌಢ, ಪ್ರತಿಭಾವಂತ (ಅತಿ ಸುಕಂಠನುಂ ಅತಿ ಪ್ರಗಲ್ಭನುಂ ಅಪ್ಪ ಮುಖ್ಯಗಾಯಕಂ ತಾಳನಿವರ್ತನಂ ಮಾಡಿ: **ಮಲ್ಲಿನಾಪು,** ೮. ೧೫ ವ)

**ಪ್ರಗಲ್ಭೆ** – ಜಾಣೆ, ಪ್ರೌಢೆ (ಕೆಯ್ಗೆ ಸೆಳೆಯಂ ಸಖಿ ಕೊಟ್ಟಳ್ ಇದೇಂ ಪ್ರಗಲ್ಭೆಯೋ: **ನೇಮಿನಾಪು,** ೨. ೧೧)

**ಪ್ರಗೀತ** – ಪ್ರಸಿದ್ಧವಾದ (ಮೊನೆಗಾಱರಂ ಪ್ರಗೀತರಂ ಇಂಬಾಗಿರೆ ಚೌಪಳಿಗೆಗಳೊಳ್ ಕುಳ್ಳಿರಿಸಿದರ್: **ಪಂಪಭಾ,** ೨. ೬೭)

**ಪ್ರಗೀತಿ** – ಪ್ರಶಂಸೆ (ಮಿಗೆ ಕನ್ನಡಗಬ್ಬಂಗಳೊಳ್ ಅಗಣಿತಗುಣ ಗದ್ಯಪದ್ಯಸಮ್ಮಿಶ್ರಿತಮಂ ನಿಗದಿಸುವರ್ ಗದ್ಯಕಥಾಪ್ರಗೀತಿಯಿಂ ತಚ್ಚಿರಂತನಾಚಾರ್ಯರ್ಕಳ್: **ಕವಿರಾಮಾ,** ೧. ೨೭)

**ಪ್ರಗುಣ** – ಸರಳವಾದ, ನೇರವಾದ (ಪ್ರಗುಣಂ ಅಕುಟಿಲಂ ರಿಜು ಸರಳಂ: ಅಭಿಧಾವ, ೨. ೧. ೩೮); ಶ್ರೇಷ್ಠ ಗುಣ (ಬಗೆದು ಮಾರ್ಗದ್ವಿತಯಗತಿಗಳಂ ಪ್ರಗುಣಗುಣಗಣೋದಯರ್ಕಳೆ .. .. ಬೆರಸಿ ಪೇಳ್ಗೆ ರಸವಿಶೇಷದೊಳ್: **ಕವಿರಾಮಾ,** ೨. ೯೮)

**ಪ್ರಗ್ರಹ** – ಸೆರೆಮನೆ (ಚೈತ್ಯಾಲಯಂ ಮತ್ತಮಿತ್ತುದು ಸಪ್ತಾಶ್ವನ ಸಪ್ತಸಪ್ತಿಗೆ ಸಮಗ್ರ ಪ್ರಗ್ರಹಾಶಂಕೆಯಂ: **ಪಂಪರಾ,** ೪. ೧೨೯); ಕಿರಣ (ಪ್ರಗ್ರಹ ಅಂಶು ರಶ್ಮಿ ಸಮಾಹ್ವಂ: **ಅಭಿಧಾವ,** ೩ ೧. ೧೧)

**ಪ್ರಘಟ್ಟ** – ಸಂಗತಿ, ಘಟನೆ (ಆ ಪ್ರಘಟ್ಟಮಂ ವಿಶಾಖಭೂತಿ ಭೂಪಾಳಂ ಕೇಳ್ದು ಅತೀವ ಸಂಭ್ರಮಭ್ರಾಂತಚಿತ್ತಂ: **ವರ್ಧಮಾಪು,** ೨. ೩೫ ವ)

**ಪ್ರಘಟ್ಟಕ** – ಸಮಾರಂಭ, ಸನ್ನಿವೇಶ (ವಿಚಾರಿಸದೆ ಈ ದಿಗ್ವಿಜಯ ಪ್ರಘಟ್ಟಕದೊಳ್ ಉರ್ವೀಭೃತ್ಸಮಾಜಕ್ಕೆ ನೋಯಿಸಿದಂ ನಿರ್ನೆರಮೆನ್ನೆಂದು ಮೊರೆಯಿಟ್ಟಂತಾಯ್ತು ರೂಪ್ಯಾಚಳಂ: **ಶಾಂತಿಪು,** ೧೧. ೪೦)

**ಪ್ರಘಟ್ಟನ** – ಪ್ರಘಟ್ಟಕ (ಈ ಪ್ರಘಟ್ಟನಕ್ಕೇಗೆಯ್ವೆಮೆಂದು ಪೇಟೆ ಆ ಮಂತ್ರಿಗಳಿಂತೆಂದರ್: **ಪಂಚತಂತ್ರ,** ೨೭೮ ವ)

**ಪ್ರಘಣ** – ಮೊಗಸಾಲೆ, ಅಂಗಳ (ಪ್ರಘಣಂಗಳೊಳ್ ಇರ್ಕುಂ ದೂಪಘಟಂಗಳ್ ನಾಟ್ಯಶಾಲೆಗೆ ಓರೊಂದೊಗೆದಲ್ಲಿ ಘನಾದ್ಭುಮುಮಂ ಪುದಿಗುಂ ಮಘವನಿವಾಸಮುಮಂ ಅಗರುಧೂಪಸ್ತೋಮಂ: **ಮಲ್ಲಿನಾಪು,** ೧೪. ೧೦೮)

**ಪ್ರಘಾತ** – ಯುದ್ಧ, ಕಲಹ (ಸಮರಂ ಸಂಗ್ರಾಮಂ ಯುದ್ಧಂ ಆಜಿ ಆಯೋಧನಂ ಸಮೀಕಂ ಕದನಂ ಸಮಿತಿ ರಣಂ ಪಥನಂ ಜನ್ಯಂ ಆಹವಂ ಸಂಯುಗಂ ಪ್ರಘಾತಂ ಕಲಹಂ: **ಅಭಿಧಾವ,** ೧. ೧೪. ೧); ಕತ್ತರಿಸುವಿಕೆ (ಸಮ್ಯಕ್ತ್ವಂ .. ..

ಸಾಮ್ಯೋರ್ವೀಜಪ್ರಘಾತಂ ರಜನಿಸುರತರಾಗಂ ಮಹತ್ ಬ್ರಹ್ಮಚರ್ಯಂ: **ಶಾಂತಿಪು,** ೬. ೫೦)

**ಪ್ರಚಂಡ** – ತೀಕ್ಷ್ಣವಾದ (ಮತ್ತ ಮಾತಂಗ ಪದನಖ ಖರ್ವಿತ ಉರ್ವೀತಳಮುಂ ಪ್ರಚಂಡ ಮಾರ್ತಂಡ ಮರೀಚಿ ತೀವ್ರ ಜ್ವಳನ ಆಸ್ಫಾರ ಕರಾಳ ಕರವಾಳ ಭಾಮಂಡಳ ಪರೀತ ಉದ್ಧತ ದೋರ್ದಂಡ ಚಂಡಪ್ರಚಂಡ ಸುಭಟ: **ಪಂಪಭಾ,** ೧೩. ೫೧ ವ); ಭಯಂಕರ (ಮತ್ತೇಭ ವಧಪ್ರಚಂಡಯಮದಂಡವದೇಂ ಮಾಣ್ಬುದೆ ಪಿಪೀಲಿಕಾವಧವಿಧಿಯಂ: **ಜಗನ್ನಾವಿ,** ೨. ೫೪)

**ಪ್ರಚಂಡೆ** – ಹಟಮಾರಿ ಹೆಣ್ಣು (ಮುಂದೆ ನಿಂದಿರ್ದ ಗಂಡನಂ ಕಂಡು ಪ್ರಚಂಡೆ ವಂಚನೋಪಾಯಮಂ ಕಾಣದೆ ಬಿಲ್ಲುಂಬೆಱಗುಮಾಗಿರೆ: **ಪಂಚತಂತ್ರ,** ೧೨೯ ವ)

**ಪ್ರಚಯ** – ಸಮೂಹ (ನಿಚಿತ ಕುಳೀರನ ಕ್ರಮಕರಪ್ರಕರಂ ಕರಿಕೂರ್ಮದರ್ದುರ ಪ್ರಚಯಂ: **ಧರ್ಮಪ,** ೧. ೩೯)

**ಪ್ರಚಲ** – ಅಲ್ಲಾಡುವ, ಚಂಚಲ (ಫಣಿರಾಜಸ್ಪರ್ಧಿದೀರ್ಘಂ ಪ್ರಚಲದಸಿಲತಾಲೋಲಜಿಹ್ವಾಂಕುರಂ .. .. ತಳೆಯೆ ಧರಣೀಯಂ: **ಲೀಲಾವತಿ,** ೧. ೮೬)

**ಪ್ರಚಲಾಪ್ರಚಲಾ** – [ಜೈನ] ನಿದ್ರೆಯ ಒಂದು ಪ್ರಭೇದ – ಪದೇ ಪದೇ ತೂಕಡಿಸುವುದು, ಜೊಲ್ಲು ಸುರಿಸುವುದು ಮುಂತಾದ ಲಕ್ಷಣಗಳುಳ್ಳ ನಿದ್ರೆ (ಕೇವಲದರ್ಶನಾವರಣೀಯಂ ನಿದ್ರಾನಿದ್ರಾ ಪ್ರಚಲಾಪ್ರಚಲಾ ಪ್ರಚಲಾಸ್ತ್ಯಾನಗೃದ್ಧಿಭೇದದಿಂ ನವವಿಧಭೆದಮಪ್ಪ ದರ್ಶನಾವರಣೆಯಮುಂ: **ಸುಕುಮಾಚ,** ೩. ೩೯ ವ)

**ಪ್ರಚಳಿತ** – ನಡೆಯುತ್ತಿರುವ (ಸಸಂಭ್ರಮಪ್ರಚಳಿತ ಸಮದ ಗಜಘಟಾಘಂಟಾರವಂಗಳಿಂದಂ .. .. ಅಗುರ್ವಾಗೆ: **ಪಂಪಭಾ,** ೯. ೧೦೪ ವ)

**ಪ್ರಚಾರ** – ಬೀಸುವಿಕೆ (ಸುರತೂರ್ಯಧ್ವಾನಂ ಎಯ್ದುರ್ವಲರ ಸರಿ ಪೊದಳ್ದಿರ್ದ ರೈಧಾರೆ ದೇವೇಂದ್ರರ ಅಹೋದಾನ ಪ್ರಸಿದ್ಧಧ್ವನಿ ಸುರಭಿಸಮೀರಪ್ರಚಾರಂ ಜಗಕ್ಕಚ್ಚರಿ ಪಂಚಾಶ್ಚರ್ಯಂ: **ಆದಿಪು,** ೪. ೯೮)

**ಪ್ರಚುರ** – ಪ್ರಸಿದ್ಧವಾದ (ಸ್ತುತಿಗೆಯ್ವೆಂ .. .. ಚತುರೋಕ್ತಿಪ್ರಚುರಾರ್ಥಕಾವ್ಯಜನಿತ ಉರ್ವೀಹರ್ಷನಂ ಹರ್ಷನಂ: **ಜಗನ್ನಾವಿ,** ೧. ೮); ಅಧಿಕವಾದ (ಪ್ರಚುರಕಲಾನ್ವಿತರ್ .. .. ದೋಷಾಪಚಯಪ್ರಕಾಶರೆನೆ ಬಾಲಚಂದ್ರದೇವಪ್ರಭಾವಮೇನಚ್ಚರಿಯೋ: **ಮಲ್ಲಿನಾಪು,** ೧. ೨೦)

**ಪ್ರಚ್ಛದ** – ಹಚ್ಚಡ, ಹೊದಿಕೆ, ಮಗ್ಗುಲು ಹಾಸಿಗೆ (ತನ್ನ ಚೆಂಬೊನ್ನ ಕನ್ನೆಮಾಡದ ಓವರಿಯೊಳಗೆ ಗಂಗಾತರಙ್ಗಧವಳದುಕೂಲ ಪ್ರಚ್ಛದಾಚ್ಛಾದಿತ ಮೃದುತಳ್ಪದೊಳ್: **ಆದಿಪು,** ೩. ೨೧ ವ)

**ಪ್ರಚ್ಛನ್ನ**– ವೇಷ ಮರೆಸಿಕೊಂಡ (ಬೆನ್ನೊಳೆ ಪೋದಂ ದೋಷದ ಬೆನ್ನೊಳೆ ಸಂದಿಸುವ ದಂಡದಂತೆ ಅರಸಂ ಪ್ರಚ್ಛನ್ನದಿಂ: **ಯಶೋಧಚ,** ೨. ೪೮); ರಹಸ್ಯ (ಖಚರೇಂದ್ರನೆತ್ತಿ ಬರುತಿರ್ಪಾ ವೃತ್ತಾಂತದ ಆದ್ಯಂತಮಂ ತಿಳಿದು ಏೞ್ತಂದು ಅರಸಂಗಂ ಅದಂ ಪ್ರಣಿಧಿಗಳ್ ಪ್ರಚ್ಛನ್ನದಿಂ ಪೇೞೆಯುಂ: **ಶಾಂತೀಶ್ವಪು,** ೩. ೬೦)

**ಪ್ರಚ್ಛಾದನ** – ಮರೆಸಿರುವುದು (ಸ್ವಗುಣಪ್ರಚ್ಛಾದನಂ ಅನ್ಯಗುಣಾವಿಷ್ಕರಣಂ .. .. ಉಚ್ಚಗೋತ್ರದಾಸ್ರವಮಕ್ಕುಂ: **ಸುಕುಮಾಚ,** ೮. ೨೫)

**ಪ್ರಜಾನುರಾಗ** – ಪ್ರಜೆಗಳ ಪ್ರೀತಿಗೆ ಪಾತ್ರನಾದವನು (ಅತಿಪ್ರವರ್ಧನ ಪ್ರಜಾನುರಾಗನುಂ ಅತಿಪ್ರಬಲರಣರಾಮನುಂ ಎನಿಸಿದ ರಣರಂಘಸಿಂಹನಿಂ .. .. ಪುಟ್ಟಿದ: **ಗದಾಯು,** ೨. ೭ ವ)

**ಪ್ರಜಾಪತಿ** – ಬ್ರಹ್ಮ (ಪ್ರಜಾಪತಿಯ ರೂಪನಿರ್ಮಾಣ ಕೌಶಲಮುಮಂ .. .. ಲಕ್ಷ್ಮಿಯ ವಿವೇಕಮುಂ .. .. ನೀನುಂ ಕಾಣ್ಬೆ: **ಕಾದಂಬ,** ೬. ೬೮ ವ); ಪ್ರಭವಾದಿ ಸಂವತ್ಸರಗಳಲ್ಲಿ ಒಂದು (ಪ್ರಜಾಪತಿ ಸಂವತ್ಸರ ಚೈತ್ರಮಾಸ ಸಿತಪಕ್ಷದ್ವಾದಶೀ ತಾರಕಾಪತಿವಾರಂ: **ಪಂಚತಂತ್ರ,** ೪೪೮)

**ಪ್ರಜಾಪಾಲನ** – ಪ್ರಜೆಗಳನ್ನು ರಕ್ಷಿಸುವಿಕೆ (ಕ್ಷತ್ರಿಯಜಾತಿಗೆ ಸತ್ಯ ತ್ಯಾಗ ಪ್ರಜಾಪಾಲನ ಶರಣಾಗತರಕ್ಷಣ ಪ್ರಹರಣ ಕ್ಷಮಾಗುಣಾಚರಣಮುಮಂ .. .. ನಿಱೆಸಿ: **ಆದಿಪು,** ೮. ೭೩ ವ)

**ಪ್ರಜಾಸಂಬಂಧಾಂತರ** – [ಜೈನ] ಅತಿಬಾಲವಿದ್ಯಾ, ಕುಲಾವಧಿ, ವರ್ಣೋತ್ತಮತ್ವ, ಪಾತ್ರತ್ವ, ಸೃಷ್ಟ್ಯಧಿಕಾರ, ವ್ಯವಹಾರೇಶಿತ್ವ, ಅವಧ್ಯತ್ವ, ಅದಂಡ್ಯತ್ವ, ಮಾನಾರ್ಹತ್ವ, ಪ್ರಜಾಸಂಬಂಧಾಂತರ ಎಂಬ ಜೈನಬ್ರಾಹ್ಮಣನ ಹತ್ತು ಅಧಿಕಾರಗಳು (ಅತಿಬಾಲವಿದ್ಯಾ .. .. ಪ್ರಜಾಸಂಬಂಧಾಂತರಮೆಂಬ ಪತ್ತುಂ ಅಧಿಕಾರಗಳುಮನಱೆಪಿ: **ಆದಿಪು,** ೧೫. ೧೬ ವ)

**ಪ್ರಜೆ** – ಒಂದು ದೇಶದ ಜನ (ವಿಷಯಂ .. .. ಅದಱೊಳವುದು ಕೃತವಾಸಂ ಅದು ಜನಂ ಪ್ರಜೆ ಲೋಕಂ; **ಅಭಿಧಾವ,** ೧. ೧೦. ಮೊದಲ ಪದ್ಯ)

**ಪ್ರಜ್ಞ** – ಪಂಡಿತ (ಪ್ರಜ್ಞರ್ಗೆ ಆಗಮಮುಂ ಲೋಕಜ್ಞರ್ಗೆ ಅಱೆವನಿತನುಸಿರ್ವುದೆಗ್ಗು: **ಅನಂತಪು,** ೩. ೨)

**ಪ್ರಜ್ಞಪ್ತಿ** – [ಜೈನ] ಒಂದು ಬಗೆಯ ವಿದ್ಯೆ (ತಜ್ಞೇಂದ್ರ ಗೃಹದೊಳರ್ಧ ರಾತ್ರದೊಳ್ ಸ್ವಾಧ್ಯಾಯಂಗೊಂಡು ತ್ರಿಲೋಕ ಪ್ರಜ್ಞಪ್ತಿಯಂ ಪರಿವಡಿಗೆಯ್ವಾಗಳ್: **ಸುಕುಮಾಚ,** ೧೧. ೩೮ ವ)

**ಪ್ರಜ್ಞಾ** – ಪ್ರತಿಭೆ, ಬುದ್ಧಿಶಕ್ತಿ (ಪ್ರತಿಭಾ ಸಂವಿತ್ ಪ್ರಜ್ಞಾ ಮತಿ ಮೇಧಾ: **ಅಭಿಧಾವ,** ೨. ೧. ೩)

**ಪ್ರಜ್ಞಾನ್ವಿತ** – ಪಂಡಿತ (ಪ್ರಜ್ಞಾನ್ವಿತನಪ್ಪಂ ಪಂಡಿತಂ ವಿಪಶ್ಚಿತ್ ಭಿಷಣಂ: **ಅಭಿಧಾವ,** ೨. ೧. ೩)

**ಪ್ರಜ್ವಳ** – ಚೆನ್ನಾಗಿ ಉರಿಯುವ (ಪ್ರಜ್ವಳಮಾಯ್ತು ವಹ್ನಿ ಹಿಮಗಂಧೋದ್ಗಾರಿಯಾಯ್ತಂದು ಗಾಳೀ: **ಪುಷ್ಪದಂಪು,** ೧೦. ೩)

**ಪ್ರಣತ** – ಬಾಗಿದ, ವಿಧೇಯವಾದ (ಸಂಗತ ಮಣಿರುಚಿಯಂ ಜಿನಪುಂಗವನಡಿಗೆಱಗುವೆಡೆಯೊಳ್ ಇನಿಸಿನಿಸಜೆಯಲ್ ಪಾಂಗಾದುದು ಸುರಗಿರಿಕೂಟಂಗಳುಮಂ ಪ್ರಣತ ಸುರಕಿರೀಟಂಗಳುಮಂ: **ಅಜಿತಪು,** ೫. ೫)

**ಪ್ರಣತಾರಾತಿ** – ಶತ್ರುಗಳಿಂದ ನಮಸ್ಕರಿಸಿಕೊಳ್ಳುವವನು (ಪ್ರಣತಾರಾತಿ ಧನುರ್ಗುಣ ಕಿಣೀಕೃತೋದ್ಯತ್ ಪ್ರಕೋಷ್ಠಂ ಅನುಪಮಧೈರ್ಯಂ ರಣಕೇಳೀಲೋಲಂ ವಾರಣ ವಾಜಿ ರಥಾಶ್ವಭಟಬಲಪ್ರಖ್ಯಾತಂ: **ಪಂಚತಂತ್ರ,** ೩೦೫)

**ಪ್ರಣತಾರಿ** – ಪ್ರಣತಾತಾರಿ (ಈ ಒಳ್ಗುಣಮುಂ ಕಲಿತನಮುಂ ಇವೇಂ ಪ್ರಣತಾರೀಸೂತಸುತನೊಳೊಡವುಟ್ಟುಗುಮೇ: **ಪಂಪಭಾ,** ೧೨. ೯೮)

**ಪ್ರಣತಿ** – ಬಾಗುವಿಕೆ, ನಮಸ್ಕಾರ (ಅದಱೆಂದಮಿವಱೊಳ್ ಅರ್ಹತ್ಪದಪದ್ಮಪ್ರಣತಿ ಮುಖ್ಯಮೊಸಗೆಯುಂ ಎಮಗೆ ಇನ್ನಿದಱೆಂದಮಿಲ್ಲಿ ಮೇಲಾವುದು: **ಆದಿಪು,** ೧೦. ೫೧)

**ಪ್ರಣಯ** – ಹೆಣ್ಣು–ಗಂಡಿನ ಪ್ರೀತಿ (ಪ್ರೇಮಪ್ರಮೋದಂ ಪ್ರಣಯ: ಅಭಿಧಾವ, ೩. ೧. ೩೮); ಪ್ರಸಾದಗುಣ (ಪ್ರಸಾದಂ ಪ್ರಣಯಂ:೨. ೩. ೧೭); ಆತ್ಮೀಯತೆ (ಪ್ರಣಯಮಿನನ್ಯಸಾಧಾರಣಮೆನಿಪ ಭವತ್ಪ್ರಸಾದಮೆಂಬ ಅಮೃತದಿನಾಂ ತಣಿದೆಂ: ಆದಿಪು, ೪. ೩೦); ಗೌರವ (ಪ್ರಣಯಂ ಕೈಮಿಗೆ .. .. ಮೊಡೆವಟ್ಟಂ .. .. ವಿಶ್ವಂಭರನಾ ತ್ರಿಲೋಕವಿಭು ವಿಶ್ವೇಶಂಗೆ ಸದ್ಭಕ್ತಿಯಿಂ: **ಕುಸುಮಾಕಾ,** ೧೫. ೧೪೯)

**ಪ್ರಣಯಕೇಳಿ** – ಸಂಭೋಗಕ್ರಿಯೆ (ದೇವಕೀದೇವಿ .. .. ಬಹುವಿಧ ಪ್ರಣಯಕೇಳಿವಿಳಾಡಂಬ ಸಂಭೋಗಸುಖಸುಧಾರಸತೃಪ್ತಿಯಿಂ ಸುಖಸುಪ್ತೆಯಾಗಿರ್ಪಿನಂ: **ಜಗನ್ನಾವಿ,** ೨. ೫೯ ವ)

**ಪ್ರಣಯಾಲಂಬಿನಿ** – ಪ್ರೀತಿಯನ್ನು ಪಡೆದಿರುವವಳು (ಪ್ರಣಯಾಲಂಬಿನಿಯಂತೆ ಪೂತನಿ ಯಶೋಸಾಕಾರದಿಂ ಬಂದು: **ಜಗನ್ನಾವಿ,** ೩. ೨೪)

**ಪ್ರಣಯಿನಿ** – ಪ್ರೇಯಸಿ (ಪ್ರಣಯಿನಿ ಆಸಕ್ತಿಯುಕ್ತಂ ಗಗನಗಹನಸದ್ಯುಕ್ತಿಯವ್ಯಕ್ತಮಲ್ತೇ: **ಚಂದ್ರಪ್ರಪು,** ೧. ೬೪)

**ಪ್ರಣವ** – ಬೀಜಾಕ್ಷರ, ಓಂಕಾರ (ಪ್ರಣವೋಚಿತ ಕಲಶೋದ್ಧಾರಣಮಂತ್ರದಿಂ ಇಂದ್ರಿರ್ವರುಂ ಕಲಶೋದ್ಧಾರಣಮಂ ಸ್ವಚಿತ್ತವಸತಿಗೆ ಮಣಿಕಲಶಮನಿಡುವ ತೆಱದೆಮಾಡಿದರೊಲವಿಂ: **ಪಾರ್ಶ್ವನಾಪು,** ೧೪. ೭೩)

**ಪ್ರಣಾದ** – ದೊಡ್ಡ ಶಬ್ದ, ಕೂಗು (ಘನಪಥಮಂ ಪಳಂಚಲೆವ ಸೌಧಚಯಂಗಳಿಂ ಆಡುತಿರ್ಪ ಕೇತನತತಿಯಿಂ ಕರೀಂದ್ರ ಗಳ ಗರ್ಜನೆಯಿಂ ಪಟಹಪ್ರಣಾದಮಂ ಘನರವಮೆಂದೆ ನರ್ತಿಸುವ ಕೇಕಿಗಳಿಂ: **ಪಂಪಭಾ,** ೪. ೫)

**ಪ್ರಣಾಳ** – ನೀರು ಹರಿದುಹೋಗುವ ದೋಣಿ, ನೀರುಗಂಡಿ (ತ್ರಿಭುವನ ಪ್ರಾಸಾದರಮ್ಯ ಪ್ರಣಾಳದವೋಲ್ ಕಣ್ಗೆಸೆವ ಇಂದುಮಂಡಲ: **ಕಾದಂಬ,** ೫. ೧೪೪)

**ಪ್ರಣಿಧಿ** – ಬೇಹುಗಾರ (ಖಚರೇಂದ್ರನೆತ್ತಿ ಬರುತಿರ್ಪಾ ವೃತ್ತಾಂತದ ಆದ್ಯಂತಮಂ ತಿಳಿದು ಏಟ್ಟಿಂದು ಅರಸಂಗಂ ಅದಂ ಪ್ರಣಿಧಿಗಳ್ ಪ್ರಚ್ಛನ್ನದಿಂ ಪೇೞೆಯುಂ: **ಶಾಂತೀಶ್ವಪು,** ೩. ೬೦); ಆನೆಯನ್ನು ಪಳಗಿಸುವ ಮಾವುತ (ಸರ್ವಾಂಗಸನ್ನಾಹರುಂ ಪ್ರಣಿಧಿತ್ರಯ ಪ್ರೇರಿತ ಭದ್ರಗಜರುಂ ತೆರಳ್ಚುವುದರ್ಕೆ ಇದುವೆ ಪದನ್: **ಜಗನ್ನಾವಿ,** ೭. ೭೦ ವ); ತಿಳಿವಳಿಕೆ, ಜ್ಞಾನ (ಒಡನೋದಿದಳ್ ಸರಸ್ವತಿ ಗಡ ಇನಿತುಂ ಪ್ರಣಿಧಿ ಸುಕವಿರತ್ನಾಕರನಾ: **ವರ್ಧಮಾಪು,** ೧. ೨೯)

**ಪ್ರಣಿಪಾತ** – ನಮಸ್ಕಾರ (ಬರ್ದುಂಕಿದೊರುಂ ಪಿರಿಯನ ಮುನಿಸಿಂಗೆ ಪ್ರಣಿಪಾತಪ್ರತೀಕಾರಮೆಂದಱಿದರಸನ ದಂಡನಾಯಕಂಗೆ ಶರಣಾಗತರಾಗಿ ನಿಜಶಿರಸ್ತ್ರಾಣ ಪರಾಯಣರಾದರ್: **ಶಾಂತಿಪು,** ೧೧. ೨೪ ವ)

**ಪ್ರಣಿಹಿತ** – ಸ್ಥಾಪಿಸಿದ (ಪ್ರಣಿಹಿತ ಕಲಶಾವಳಿ ಕಿಂಕಿಣಿಯೊಳ್ ಮೊಱಮಡುವ ಪುಗುವ ಜನದುಲಿಯುಲಿಯೊಳ್ ತೋಣೆಯಾಗೆ .. .. ಗೋಪುರಂ ಸೊಗಯಿಸುಗುಂ: **ಪುಷ್ಪದಂಪು,** ೨. ೬೭)

**ಪ್ರಣೀತ** – ನಿರ್ದೇಶಿಸಿದ (ನಾರದಾದಿ ಪ್ರಣೀತ ಗಾಂಧರ್ವವಿದ್ಯಾವಿಶೇಷಂಗಳೊಳಂ ಭರತಪ್ರಣೀತ ನೃತ್ಯಶಾಸ್ತ್ರದೊಳಂ .. .. ಅತಿಪ್ರವೀಣನುಂ: **ಪಂಪಭಾ,** ೨. ೩೪ ವ)

**ಪ್ರಣುತ** – ಪ್ರಸಿದ್ಧವಾದ (ಪ್ರಣುತಪದಾಂತರೀಕರಣಮಂತದೆ ತಾಣದೊಳಾದೊಡಂ ಮಹಾಗುಣಮನೆ ತರ್ಕುಂ: **ಕವಿರಾಮಾ,** ೧. ೧೨೨)

**ಪ್ರತತಿ** – ಸಮೂಹ (ನಿತಂಬಿನೀ ನಿವಹಂ ಒಲ್ದೆಳಸುತ್ತಿರೆಯುಂ .. .. ಅಱೆಯೆಂ ಒಂದಣಂ ಸುರತೋಪಭೋಗಮಂ: **ಕಾದಂಬ,** ೧. ೧೮)

**ಪ್ರತರ** – ಗಾಢವಾದ (ಅತಿತೂರ್ಯಚ್ಚಕ್ರರೋಚಿರ್ವಳಯವಿಳಸನಂ ನನ್ನವೋನ್ಮೌಳಿರತ್ನಪ್ರತರಭೀಷುಪ್ರಕಾಶಂ ಬೆಳಗೆ: **ವರ್ಧಮಾಪು,** ೯. ೩೩); ವಿಸ್ತಾರವಾದ (ದಂಡಕವಾಟಪ್ರತರ ಲೋಕಪೂರಣಕ್ರಿಯೆಗಳಂ ಪ್ರತಿಸಮಯಂ ಪ್ರಯೋಗಿಸಿ: **ಪಂಪರಾ,** ೧೬. ೭೯ ವ)

**ಪ್ರತರಕ್ರಿಯಾ** – [ಜೈನ] ಪರಿನಿರ್ವಾಣ ಸಮಯದಲ್ಲಿ ಆತ್ಮನು ವಿಸ್ತಾರಗೊಳ್ಳುವ ಸ್ಥಿತಿ (ಲೋಕಾಕಾಶವ್ಯಾಪಕ ಕವಾಟಕ್ರಿಯೆಯಂ ನೆಱಪಿ ತದನಂತರಸಮಯದೊಳ್ ವಾತವಳಯಮುಱೆಯೆ ಜೀವಪ್ರದೇಶಂಗಳಿಂ ಲೋಕಪ್ರದೇಶಮಂ ಪರ್ವಿ ನಿರ್ವರ್ತಿತ ಪ್ರತರಕ್ರಿಯಾ ವಿಶೇಷಂ: **ಆದಿಪು,** ೧೬. ೪೯ ವ)

**ಪ್ರತಾನ** – ಗುಂಪು (ಜಳರಾಶಿಶ್ರೇಣಿ ಕಂಪಲ್ ಮಸಗೆ ಬಲಪದೋದ್ಧೂತ ಧೂಳಿವ್ರಜವ್ಯಾಕುಳದಿಂ ದಿಗ್ಮಾಳೆ ಚಂದ್ರಾತಪವಿಸರದ ಅಗುರ್ವಾಗೆ .. .. ನಡೆದುದು ಭೂಪಸೇನಾ ಪ್ರತಾನಂ: **ಶಾಂತೀಶ್ವಪು,** ೧೨. ೭); ಕವಲುಗೊಂಡ ರೆಂಬೆಗಳು

**ಪ್ರತಾಪ** – ಬೆಳಕು (ಪತಿವಿಯೋಗಹೃದಯಖಿದ್ಯದ್ವನಿತಾ ಹೃದಯಂಗಳೊಳಾವಗಂ ಉರಿವುದು ಕಡುಪಿನೊರ್ಳ ನೃಪಪ್ರತಾಪಜ್ವಲನಂ: **ಕಾದಂಬ,** ೧. ೧೪)

**ಪ್ರತಾಪೋಷ್ಮ** – [ಪ್ರತಾಪ+ಊಷ್ಮ] ಶೌರ್ಯಪ್ರಖರತೆ (ಕುಲಕ್ರಮಾಯಾತಪ್ರತಾಪೋಷ್ಮಮಂ ಪತ್ತುವಿಡುವುಡುವ ಅರಾತಿಗಳ ಸಂಖ್ಯೆಯೊಳಂ: **ಆದಿಪು,** ೧೪. ೮೪ ವ)

**ಪ್ರತಾರಕ** – ದಾಟಿಸುವವನು (ದುಷ್ಟ ಅಪಸಂಸಾರಶರಧಿ ಪ್ರತಾರಕನಂ ಅರ್ಹದ್ಭಟ್ಟಾರಕನಂ ಸ್ತುತಿಯಿಸಿ: **ಕರ್ಣನೇಮಿ,** ೩. ೧೮೪ ವ)

**ಪ್ರತಾರಣ** – ಮೋಸಗೊಳಿಸುವುದು, ವಂಚನೆ (ವಾರಣಾವತಂ ಸಂದ ಸಭಾಪ್ರತಾರಣಕೆ ಕಾರಣಂ ಎಂದಱೆಪಲ್ಕೆ ಬೇಡಿದರ್ ಸಂಧಿಗೆಯಲ್ಕೆ ಬೇಡಿದರೆ: **ಗದಾಯು,** ೩. ೨೧)

**ಪ್ರತಾರಿಸು** – ವಂಚಿಸು (ಕೆಲರ್ ಧೂರ್ತರ್ ಅರಸುಗಳಂ ಪ್ರತಾರಿಸುತಿರ್ಪರ್: **ಕಾದಂಬ,** ೩. ೯೭ ವ)

**ಪ್ರತಿ** – ಸಮಾನ (ಪ್ರತಿಯೆನಗಿಲ್ಲ ಸಲ್ಲಲಿತರೂಪದಿಂ ಈ ತ್ರಿಜಗಂಗಳಂಗನಾತತಿಯೊಳಿದೊಂದೆ ತಾಂ ಪ್ರತಿ ನಿಜಪ್ರತಿಮಾನಂ: **ಶಾಂತೀಶ್ವಪು,** ೪. ೨೪೫); ಪರ್ಯಾಯವಾದ (ಪ್ರತಿಗೃಹಕುಂಕುಮಚ್ಛಟಿಗಳಿಂ ಪ್ರತಿಮಂದಿರರರಂಗವಲ್ಲಿಯಿಂ ಪ್ರಭವನೋತ್ಸವಧ್ವಜದಿಂ ಆ ಪೊಱಲೊಪ್ಪಿರೆ: **ಜಗನ್ನಾವಿ,** ೧೨. ೫೮); ಹೋಲಿಕೆಯ (ಸದೃಶಂ ಪ್ರತಿಪದವೀಪ್ಸಾರ್ಥದಾಯಕಂ ಪ್ರತಿ: **ಅಭಿಧಾವ,** ೩. ೧. ೧೧೧

**ಪ್ರತಿಕಾರ** – ಪ್ರತಿ ಮಾಡುವವನು (ಹತದೈವಂ ಪ್ರಾರಂಭಂ ಪ್ರತಿಕಾರಂ ದೀರ್ಘಸೂತ್ರ ತತ್ಪ್ರತಿಕಾರಂ ಶತಮಾದೊಡೆ ಅಂತು ಮೋಕ್ಷಂ ಹತೋರುಗೆನಗಾವುದು ಇಂ ಗಡ ಪ್ರತಿಕಾರಂ: **ಗದಾಯು,** ೯. ೨೫

**ಪ್ರತಿಕೂಲ** – ವಿರುದ್ಧವಾದ (ಪ್ರತಿಕೂಲಕರ್ಮಮೇಘಂ ಪ್ರತಿಸಮಯಾನುಗತಗುಣವಿಶೋಧಿಮಹಾಮಾರುತದಿಂ ಕಿಡೆ: **ಪಾರ್ಶ್ವನಾಪು,** ೫. ೩೯)

**ಪ್ರತಿಕೃತಿ** – ಮೂರ್ತಿ, ಪ್ರತಿಮೆ (ಚೈತ್ಯಾಲಯಂಗಳೊಳ್ ಆದಿಭಟ್ಟಾರಕಾದಿಯಾಗೆ ಭವಿಷ್ಯತೀರ್ಥಕರ ಪ್ರತಿಕೃತಿಗಳಂ ಪಂಚರತ್ನಮಯಂಗಳಂ ಮಾಡಿಸಿ: **ಆದಿಪು,** ೧೬. ೧ ವ)

**ಪ್ರತಿಕ್ರಮಣ** – [ಜೈನ] ಸಾಧುಗಳ ಇಪ್ಪತ್ತೆಂಟು ಮೂಲಗುಣಗಳಲ್ಲಿ ಒಂದು, ಗುರುವಿನಲ್ಲಿ ಪಶ್ಚಾತ್ತಾಪಪೂರ್ವಕ ನಿವೇದನ (ಪರಮದೀಕ್ಷಾಮಾರ್ಗದೊಳ್ ದೀಕ್ಷೆಯಂ ದಯೆಗೆಯ್ದು ಪ್ರತಿಕ್ರಮಣಮಂ ಪೇೞ್ವುದುಂ: **ಸುಕುಮಾಚ,** ೩. ೩೫ ವ)

**ಪ್ರತಿಗ್ರಹ** – ದಾನ ಸ್ವೀಕರಿಸುವುದು (ಎಂತು ಭವಿಷ್ಯದ್ವಿಜವರ್ಣಕ್ಕೆ ಅಧ್ಯಯನ ಅಧ್ಯಾಪನ ದಾನ ಪ್ರತಿಗ್ರಹ ಯಜನ ಯಾಜನ ವಿಶಿಷ್ಟವೃತ್ತಿಯುಮಮ .. .. ನಿಜೆಸಿ: **ಆದಿಪು,** ೯. ೭೩ ವ); ಬ್ರಾಹ್ಮಣನ ಆರು ಕೆಲಸಗಳಲ್ಲಿ ಒಂದು, ನೋಡಿ 'ಷಟ್ಕರ್ಮ'

**ಪ್ರತಿಘಾತ** – ಎದುರು ಹೊಡೆತ (ಪ್ರತಿಘತಾಯತಲೋಲ ಕಂಕಣಝುಣಜಂಕಾರಚಂಚತ್ಕಳಹತಿ .. .. ರಮ್ಯಮಾಯ್ತು: ಸೂಕ್ತಿಸುಧಾ, ೧೪. ೩೦) ಹೊಡೆತ (ನಡುಗೆ ಧರಾತಳಂಕದಳಿಕಾಪರಿಪ್ರತಿಘಾತದಿಂ: **ಪಂಪರಾ,** ೧೩. ೭೫); ಕೊಲ್ಲುವುದು, ವಧೆ (ವಿಶಸನ ಮಾರಣ ವಿಶರಣ ನಿಶುಂಬನ ಕ್ಷಣನ ಸೂದನ ಪ್ರತಿಘಾತಂ: **ಅಭಿಧಾವ,** ೧. ೧೪. ೪)

**ಪ್ರತಿಪಕ್ಷನ್** – ಎದುರಾಳಿ (ಚತುರಂಗಬಲ ಸಮೇತಂ ಪ್ರತಿಪಕ್ಷಂ ಶೂರನಾದೊಡೇನಂ ಮಾಡಂ: **ಯಶೋಧಚ,** ೪. ೩೪)

**ಪ್ರತಿಪತ್ತಿ** – ಗೌರವ ಕಾಣಿಕೆ (ಬಂದ ವಿದ್ಯಾಧರರಂ ಯಥೋಚಿತ ಪ್ರತಿಪತ್ತಿಗಳಿಂ ಸಂತೋಷಂಬಡಿಸಿ: **ಆದಿಪು,** ೪. ೮೯ ವ); ಮಾಡಬೇಕಾದ ಕೆಲಸ (ಪ್ರತಿಪತ್ತಿ ಮೂಢೆಯೆನಿಸಿರ್ದ ತರುಣಿಯಂ .. .. ಪರಸಿದರ್: **ಕಾದಂಬ,** ೯. ೧೧೨)

**ಪ್ರತಿಪತ್ತಿಮೂಢೆ** – ದಿಕ್ಕು ತೋಚದಾದವಳು ಪ್ರತಿಪತ್ತಿಮೂಢೆಯೆನಿಸಿರ್ದ ತರುಣಿಯಂ ಗುರುಜನಕ್ಕೆ ಪೊಡೆವಡಿಪುದುಂ: **ಕಾದಂಸಂ,** ೭. ೬೯)

**ಪ್ರತಿಪತ್ನಿ** – ಸವತಿ (ಕ್ಷಿತಿನಾಥಾಪಾಂಗಿತ ವಿಲೋಚನೆಯರ್ ಶ್ರೀಯೊರ್ವಳಾ ಜಯಶ್ರೀಯೊರ್ವಳ್ ಪ್ರತಿಪತ್ನಿಯೊಳರ್ ಎನಿಸಲ್ಕೆ: **ಶಾಂತಿಪು,** ೧. ೭೪)

**ಪ್ರತಿಪದ್ದಿನ** – [ಪ್ರತಿಪತ್+ದಿನ] ಪಾಡ್ಯಮಿ (ನುತಮಾರ್ಗಶಿರದ ಶುದ್ಧ ಪ್ರತಿಪದ್ದಿನದ ಪರಯಾಮದೊಳ್: **ಪುಷ್ಪದಂಪು,** ೧೩. ೧೦೩)

**ಪ್ರತಿಪನ್ನ** – ಸ್ವೀಕೃತವಾದುದು (ಎನಗಂ ತಾಂ ಪ್ರತಿಪನ್ನಮೆಂಬ ಬಗೆಯುಂ ತಾನಂತುಪಾದೇಯಮೇ: **ಚಂದ್ರಪ್ರಪು,** ೮. ೮೮)

**ಪ್ರತಿಪನ್ನಿಕೆ** – ವಿವೇಕ (ಪ್ರತಿಪನ್ನಿಕೆಗಿಡೆ ದಶರಥಸುತಂ ಆ ವಿಭು ಮುಳಿದವಂಗೆ ಜವನುಂ ಮುಳಿಗುಂ: **ಪಂಪರಾ,** ೧೦. ೪೭)

**ಪ್ರತಿಪಾದುಕ** – ಸಣ್ಣ ಪೀಠ (ಅನೇಕರತ್ನರಚಿತ ಪ್ರತಿಪಾದುಕವಿನ್ಯಸ್ತ ಕಾಂಚನಮಂಚೋಪಶೋಭಿತದೊಳ್ .. .. ನಿದರಾರಸವಶಗತರಾಗಿರ್ದರ್: **ಆದಿಪು,** ೫. ೨೨ ವ)

**ಪ್ರತಿಪಾದ್ಯ** – ಸಮರ್ಥನಯೋಗ್ಯ, ವಿವರಿಸುವ (ಸಕಲಜ್ಞ ಪ್ರತಿಪಾದ್ಯಮಪ್ಪ ಭುವನಂ ದೇಶಂ ಪುರಂ ರಾಜವೃತ್ತಕಂ ಅರ್ಹದ್ವಿಭವಂ ಚತುರ್ಗತಿ ತಪೋಮಾರ್ಗಂ ಫಳಂ ತತ್ಪುರಾಣ ಕಥಾಂಗಂಗಳ್ ಇವು ಎಂಟು ಎನಿಕ್ಕುಂ: **ಮಲ್ಲಿನಾಪು,** ೧. ೫೪); ಕೊಡಬೇಕಾದದ್ದು (ಜೀವಿತೇಶ್ವರರೆನಿಪ್ಪವರ್ಗಂ ಪ್ರತಿಪಾದ್ಯಮಪ್ಪುದು: **ಕಾದಂಬ,** ೬. ೧೨೪)

**ಪ್ರತಿಬುದ್ಧ** – ಅರಳಿದ (ಪ್ರತಿಬುದ್ಧಂ ತ್ವನ್ಮುಖಮುಚಿತತಾರಕಂ ತುಂಬಿವೆರಸದ ಅಂಬುಜಂ: **ಶಾಂತಿಪು,** ೫. ೮೭); ಬುದ್ಧಿವಂತ (ಪ್ರತಿಬುದ್ಧರಂ ಕುಜೆತ್ತೀ ಸ್ಥಿತಿಯಿಂದಂ ಕಿಜೆದು ಮಾರ್ಗಸೂಚನೆಗೆಯ್ದೆಂ ಮತಿವಂತರಜೆದು ಪೇೞ್ವುದು ವಿತರ್ಕದಿಂ ಮತ್ತಮುಕ್ತಶೇಷಮನಿದಱೊಳ್: **ಕಾವ್ಯಾವಲೋ,** ೪೨೧)

**ಪ್ರತಿಬೋಧಿಸು** – ಉಪದೇಶ ಮಾಡು (ಮುನ್ನಿನ ಭವದೊಳ್ ತನ್ನಂ ಪ್ರತಿಬೋಧಿಸಿ ಮಹಾಪುರುಷನಪ್ಪುದನಜೆದು: **ಸುಕುಮಾಚ,** ೬. ೨ ವ); ಎಚ್ಚರಿಸು (ಎಂದು ತನ್ನಂ ಪ್ರತಿಬೋಧಿಸಿದ ನಿಜತನೂಜನ ವಚನತಿಗ್ಮರೋಚಿ ರುಚಿನಿಚಯದಿಂ ಆತ್ಮೀಯ ಚೇತೋನಿಚಿತ ಮೋಹಾಂಧ ತಮಸ್ತೋಮಮಂ ಕಳೆದು: **ಆದಿಪು,** ೨. ೧೭ ವ)

**ಪ್ರತಿಭಾವತ್ವ** – ಪ್ರತಿಭೆಯನ್ನು ಹೊಂದಿರುವುದು (ಪ್ರತಿಭಾವತ್ವಮುಂ ಅಕೃತಕ ಚತುರತೆಯುಂ .. .. ತರ್ಕುಂ ಪ್ರತೀತಿಯಂ ವಾಗ್ವಿದಗ್ಧತಾ ನಿಪುಣತೆಯೊಳ್: **ಕವಿರಾಮಾ,** ೧. ೧೧)

**ಪ್ರತಿಭೆ** – ಬುದ್ಧಿಶಕ್ತಿ (ಪ್ರತಿಭಾ ಸಂವಿತ್ ಪ್ರಜ್ಞಾ ಮತಿ ಮೇದಾ: **ಅಭಿಧಾವ,** ೨. ೧. ೩೦); ನವೋನವೋನ್ಮೇಷಶಾಲಿನಿಯಾದ ಪ್ರಜ್ಞೆ (ಪ್ರತಿಭೆ ನಿಸರ್ಗಮುಂಟು ಕಿಜೆದೋದು ಗಳೊಳ್ ಕಿಜೆದುಂಟು ಬಲ್ಮೆ: **ಗದಾಯು,** ೧. ೫೦)

**ಪ್ರತಿಮ** – ಸಮಾನ[ನಾದವನು] (ಅಮೃತಾಂಭೋರಾಶಿಪೂರ ಪ್ರತಿಮ ನಿಜತಪಸ್ಸಂಚಯಂ ಪವಿತೋ: **ಕಾದಂಸಂ,** ೩. ೨೩)

**ಪ್ರತಿಮಾನ** – ಹೋಲಿಕೆ; ಆನೆಯ ಎರಡು ದಂತಗಳ ನಡುವಣ ಭಾಗ (ಕಡೆವಾಯಿಂ ಪ್ರತಿಮಾನದೊಳ್ ಅಡಸಿದ ತಳಿರುದಿರೆ ತಳ್ತ ಕೆಯ್ಯೊಳೆ ಕೆಯ್ಯಂ ಪಿಡಿದು: **ನೇಮಿನಾಪು,** ೫. ೯೫)

**ಪ್ರತಿಮಾಯೋಗ** – [ಜೈನ] ಪ್ರತಿಮೆಯಂತೆ ನಿಂತು ಮಾಡುವ ತಪಸ್ಸು (ರತ್ನತ್ರಯಮಂ ಸಾಧಿಸಿದ ಠಾವಿನೊಳ್ ಒಂದು ರಾತ್ರಿ ಪ್ರತಿಮಾಯೋಗದೊಳಿರೆ: **ಧರ್ಮಪ,** ೧. ೮೫ ವ)

**ಪ್ರತಿಮುಖರ** – ಮುಖಂಡ (ತದ್ವೇತ್ರಹಸ್ತಪ್ರತಿಮುಖರ ಪ್ರೋದ್ಗತಾಭೀಳಘೋಷಂ .. .. ಸಭಾವಾಸವಕ್ತ್ರಂ: **ಗಿರಿಜಾಕ,** ೩. ೪)

**ಪ್ರತಿಮೆ** – ವಿಗ್ರಹ (ಅರಸಂ ಇರ್ವರುಮಂ ಎರಡು ಕಾಯ್ದು ಕರ್ಬೊನ್ನ ಪ್ರತಿಮೆಗಳನಪ್ಪವೇಟಿಮೆಂದು ತಳಾಱಂಗೆ ಬೆಸವೇೞ್ದೊಡಂ: **ವಡ್ಡಾರಾ,** ಪು೨೧, ಸಾ. ೨೧)

**ಪ್ರತಿಮೆ ನಿಲ್** – ಪ್ರತಿಮೆಯಂತೆ ನಿಶ್ಚಲವಾಗಿ ತಪಸ್ಸಿಗೆ ನಿಲ್ಲು (ಪೊಟಲೊಳ್ ಬಟ್ಟೆಯ ಕಣ್ಣೊಳ್ ರಾತ್ರಿ ಪ್ರತಿಮೆ ನಿಂದೊರ್: **ವಡ್ಡಾರಾ,** ಪು ೧೫೨, ಸಾ ೧೨)

**ಪ್ರತಿರವಂಗುಡು** – ಮಾರ್ದನಿ ನೀಡು (ಉರುತರಪರ್ವತಂ ಪ್ರತಿರವಂಗುಡೆ .. .. ಜವದಿನೇಳ್ತರುತಿರ್ದುದು ಸೊರ್ಕಿದೆಕ್ಕಲಂ: **ಶಬಶಂವಿ,** ೪. ೫)

**ಪ್ರತಿರೂಪ** – ಪ್ರತಿಬಿಂಬ (ಪ್ರತಿರೂಪಂ ಪ್ರತಿಬಿಂಬಂ: **ಅಭಿಧಾವ,** ೧. ೩. ೧೪); ತದ್ರೂಪ, ಪ್ರತಿಮೆ (ಅಂತು ಆ ತಾಮ್ರಮಯ ಗುಹ್ಯಕ ಪ್ರತಿರೂಪಂ ಕಿಚ್ಚಿಂಗೆ ತೋಜೆದ ಅರಗು ಕರಗುವಂತೆ ಕರಗಿ ಪೊನಲ್ವರಿಯೆ: **ಶಾಂತಿಪು,** ೬. ೨೯ ವ)

**ಪ್ರತಿರೋಧಿಸು** – ತಡೆಯೊಡ್ಡು (ಪ್ರತಿರೋಧಿಸಿ ವಜ್ರದ ಪರ್ವತಗಳೆನಿತಾನುಂ ಇರ್ದೊಡವನವಯವದಿಂ ಸ್ವತನುವೆ ಭೇದಿಸಪಾರ್ಪ ಪ್ರತಿಘತದಿನಾದಮೆಸೆದನಿಂದ್ರಪ್ರತಿಮಂ: **ಚಂದ್ರಪ್ರಪು,** ೧೪. ೩೩)

**ಪ್ರತಿಲಂಭನ** – ಮರಳಿ ಪಡೆಯುವುದು (ಎಲ್ಲಿದಳ್ ಮದನ್ವಯಜೀವ ಪ್ರತಿಲಭನಹೇತು: **ಕಾದಂಸಂ,** ೭. ೬೭)

**ಪ್ರತಿಲೇಖನ** – [ಜೈನ] ನಿತ್ಯವೂ ಭೂಮಿ, ಉಪಕರಣ ಮುಂತಾದುವನ್ನು ಶುದ್ಧಿಗೊಳಿಸುವುದು (ಪ್ರತಿಲೇಖನದೊಳ್ ಆಲೋಕಿತಮನುಚಿತಮೆಂದು ಪಲವು ಕಣ್ಬಡೆದವೋಲಾ ಯತಿಪತಿಯ ದಯಾರ್ದ್ರಜಮೇನತಿಶಯಮಾದತ್ತೊ ಮೇದುರಂ ಮಾಯುರಂ: **ಮಲ್ಲಿನಾಪು,** ೧೦. ೯೩)

**ಪ್ರತಿಲೋಮ** – ವಿರುದ್ಧವಾದ (ಪ್ರತಿಕೂಲಂ ಪ್ರತಿಲೋಮಂ ಪ್ರತೀಪಮಕ್ಕುಂ ಉಪಸವ್ಯ ಶಬ್ದೈಕಾರ್ಥಂ: **ಅಭಿಧಾವ,** ೨. ೧. ೪೪); ರಾಜನ ಐದು ವ್ಯಸನಗಳು: ಸ್ವಭಾವ ಪ್ರದೋಷ ಪ್ರಸಂಗಗುಣ ಪ್ರತಿಲೋಮ ಪೀಡನ – ಇವುಗಳಲ್ಲಿ ನಾಲ್ಕನೆಯದು (ಸಂಧಿವಿಗ್ರಹಯಾನಾಸನ ದ್ವೈಧೀಭಾವ ಸಮಾಶ್ರಯಂಗಳೆಂಬ ಆಱುಂ ಗುಣಂಗಳೊಳಂ ಸಂಧಿಕಾರ್ಯದೆಡೆಯೊಳ್ ವಿಗ್ರಹಮನೆತ್ತಿಕೊಳ್ವುದುಂ, ವಿಗ್ರಹಮಪ್ಪೆಡೆಯೊಳ್ ಸಂಧಿಯಂ ಒಡರ್ಚುವುದುಂ ಉಟಿದ ಗುಣಂಗಳುಮಂ ಈಯಂದದದೊಳ್ ಪ್ರತಿಲೋಮಂಗೆಯ್ವುದುಂ ಪ್ರತಿಲೋಮಮೆಂಬ ವ್ಯಸನಮಕ್ಕುಂ, **ಪಂಚತಂ,** ೧೩೭ ವ)

**ಪ್ರತಿವಾದಿ** – ವಾದಿಗೆ ಎದುರಾದವನು (ಕಂಡಲ್ಲದೆ ಅಱಿಯೆನೆಂಬರ್ ಎಂಬ ನಾಣ್ಣುಡಿಯಂ ಪೋಲ್ಕುಂ ಎಂಬುದುಂ ಪ್ರತಿವಾದಿ ನಿರುತ್ತರನಾಗಿ: **ಶಾಂತಿಪು,** ೮. ೧೪೧ ವ)

**ಪ್ರತಿವಿತರ್ಕಿತ** – ಚೆನ್ನಾಗಿ ವಿವೇಚನೆ ಮಾಡಿದ (ಪ್ರತಿವಿತರ್ಕಿತ ಲಕ್ಷಣಲಕ್ಷ್ಯನಾಶ್ರಿತ ಮಹಾನೃಪತುಂಗ ಸಭಾಸದಂ: **ಕವಿರಾಮಾ,** ೩. ೨೧೯)

**ಪ್ರತಿವಿಧಾಯಿ** – (ನೀನೊರ್ವ ಬ್ರಾಹ್ಮಣನೊಡನೆ ಬಟ್ಟೆಬರುತಂ ದೇವತಾಜಾತಿ ಪಾಷಂಡಮೋಹ ಪ್ರತಿವಿಧಾಯಿಗಳಪ್ಪ ಕಥೆಗಳಂ ಪೇೞ್: **ಚಾವುಂಪು,** ಪು. ೪೪೭. ಸಾ. ೩೦)

**ಪ್ರತಿವಿದ್ಯೆ** – [ಜೈನ] ಮಾಯಾಸೃಷ್ಟಿಯನ್ನು ಹೋಗಲಾಡಿಸುವ ವಿದ್ಯೆ (ಪ್ರತಿವಿದ್ಯನಾಕೆ ಕುಲಕ್ಷತಿಯಂ ಪತಿಗಪ್ಪ ಹಾನಿಯಂ ಬಗೆಯದೆ ದುರ್ಮತಿ ಕೊಟ್ಟಳ್: **ಪಂಪರಾ,** ೧೧. ೧೯೩)

**ಪ್ರತಿಷೇಧ** – ತಡೆ (ಕುರುಪಿತಾಮಹಂ ಸಂಜಯನಂ ಧೃತರಾಷ್ಟ್ರನಲ್ಲಿಗೆ ಸಂಧಾನವಾರ್ತೆಯಂ ಸಮಕೊಳಿಸುವಂತೆ ಅನಾಗತಬಾಧಾಪ್ರತಿಷೇಧಂ ಮಾಡುವಂತಟ್ಟಿ: **ಪಂಪಭಾ,** ೧೩. ೭೦ ವ)

**ಪ್ರತಿಷೇಧೋಕ್ತಿ** – ಅಲ್ಲಗಳೆಯುವಿಕೆಯ ಮಾತು (ಜೀವನಿಲ್ಲೆಂಬ ನಿನ್ನ ಪ್ರತಿಷೇಧೋಕ್ತಿಯಿಂದಮೆ ಜೀವಸಿದ್ಧಿ ಹೇಳಾಸಾಧ್ಯಂ ಎಂತೆನೆ ಉಳ್ಳುದಂ ಅಲ್ಲದೆ ಆರ್ಗಂ ಇಲ್ಲೆನಲ್ ಬಾರದು: **ಶಾಂತಿಪು,** ೮. ೧೩೮)

**ಪ್ರತಿಷ್ಠಿತ** – ಶಾಶ್ವತ (ನಿಜರೂಪವಿಜಿತ ಮಕರಧ್ವಜಂ ಅಖಿಳದಿಶಾಂತರ ಪ್ರತಿಷ್ಠಿತಕೀರ್ತಿಧ್ವಜಂ ಅದನಾಳ್ದಂ ಧರಣೀಧ್ವಜನೆಂಬಂ ಖೇಚರೇಂದ್ರಂ: **ಚಂದ್ರಪ್ರಪು,** ೬. ೬); ಸ್ಥಾಪನೆಗೊಂಡ (ಆ ಜಂಬೂದ್ವೀಪದ ನಟ್ಟನಡುವೆ .. .. ವಿಶಾಲರತ್ನಶಿಲಾಪ್ರತಿಷ್ಠಿತ ಭಗ್ವಜ್ಜನ್ಮಾಭಿಷೇಕ ಸಿಂಹಾಸನಾಲಂಕೃತಮುಂ ಆಗಿ: **ಆದಿಪು,** ೧. ೪೯ ವ)

**ಪ್ರತಿಸಂಸ್ಕಾರ** – ಅಲಂಕಾರ (ಪ್ರತಿಕರ್ಮಂ ನೇಪಥ್ಯಂ ಪ್ರತಿಸಂಸ್ಕಾರಂ ಪ್ರಸಾಧನಂ ವೇಷಂ: **ಅಭಿಧಾವ,** ೧. ೧೩. ೧)

**ಪ್ರತಿಸಮಯಂ** – ಸದಾ ಕಾಲವೂ (ಪ್ರತಿಸಮಯಂ ಅನಂತಗುಣಶಕ್ತಿಖಚಿತೈಕಪರಿಣಾಮನಿವೃತ್ತಿಕರಣಕ್ಷಪಕನಾಗಿ: **ಆದಿಪು,** ೧೦. ೧೪ ವ)

**ಪ್ರತಿಸೀರಾ[ರೆ]** – ಪರದೆ (ಆಪಟೀ ಪ್ರತಿಸೀರಾ ಕಾಂಡೆಪಟೆ ತಿರಸ್ಕರಿಣಿಕಾಖ್ಯೆ ಜವನಿಕೆಯಕ್ಕುಂ: **ಅಭಿಧಾವ,** ೧. ೧೦. ೨೩)

**ಪ್ರತಿಹತ** – ಮರು ಏಟು ತಿಂದ, ಸೋತ (ಪ್ರತಿಹತಮಾದುದು ಪರಶುರಾಮನಿಗಾ ರಘುರಾಮನಾ ಸರಿತ್ಪತಿ ಕುವರಂಕರಾಮನಿಂ: **ಗದಾಯು,** ೧. ೨೪)

**ಪ್ರತಿಹಾರದೇಶ** – ಹೆಬ್ಬಾಗಿಲು (ವಿಮಾನದಿಂದಿಳಿದು ರಾಜಗೃಹ ಪ್ರತಿಹಾರದೇಶದೊಳ್ ನಿಂದು: **ಗಿರಿಜಾಕ,** ೬. ೨೨)

**ಪ್ರತೀಂದ್ರ** – [ಜೈನ] ದೇವವರ್ಗ, ಭವನಿವಾಸಿ, ವ್ಯಂತರದೇವ, ಜ್ಯೋತಿದೇವ, ಕಲ್ಪವಾಸಿ ಇಂದ್ರರುಗಳಲ್ಲಿ ಪ್ರತಿಯೊಬ್ಬನಿಗೂ ಇರುವ ಕೆಳಗಿನವನು (ಮತ್ತಂ ಆ ಪ್ರತೀಂದ್ರಂ ಬಂದು ಉಪೇಂದ್ರಂಗೆ ಇಂತಪ್ಪ ದಿನದೊಳ್ ಪುತ್ರನಕ್ಕುಮೆಂದು ಬೆಸಸೆ: **ಕರ್ಣನೇಮಿ,** ೮. ೩೩ ವ ಮತ್ತು ೩೪)

**ಪ್ರತೀಕಾರ** – ನಿವಾರಣೆ (ಬರ್ದುಕಿದೊರುಂ ಪಿರಿಯನ ಮುನಿಸೆಂಬುದು ಪ್ರಣಿಪಾತಪ್ರತೀಕಾರಮೆಂದಱಿದು ಅರಸನ ದಂಡನಾಯಕರ್ಗೆ ಶರಣಾಗತರಾಗಿ: **ಶಾಂತಿಪು,** ೧೦. ೨೪ ವ); ರಾಜ ಶತ್ರುವಿನ ಮೇಲೆ ಸೇಡು ತೀರಿಸಿಕೊಳ್ಳುವ ರೀತಿ (ಭೂರಿ ಕರ್ಮಣ ಆರಂಭೋಪಾಯ ಪುರುಷ ದ್ರವ್ಯಸಂಪತ್ ದೇಶಕಾಲವಿಭಾಗ ವಿನೀಪಾತ ಪ್ರತೀಕಾರಮನೊಡರ್ಚಿ: **ಹರಿವಂಶ,** ೭. ೧ ವ)

**ಪ್ರತೀಕಾರಸಂಧಿ** – ರಾಜನು ಮಾಡಿಕೊಳ್ಳುವ ಹದಿನಾರು ಬಗೆಯ ಸಂಧಿಗಳಲ್ಲಿ ಒಂದು; ಉಪಕಾರಕ್ಕೆ ಪ್ರತ್ಯುಪಕಾರ ಮಾಡುವ ಒಪ್ಪಂದ (ಪರಸ್ಪರ ಉಪಕಾರಂಗೆಯ್ವುದು ಪ್ರತೀಕಾರ ಸಂಧಿಯೆಂಬುದಕ್ಕುಂ: **ಪಂಚತಂತ್ರ,** ೩೦೭ ವ) ನೋಡಿ 'ಷೋಡಶಸಂಧಿ'

**ಪ್ರತೀಕ್ಷಣ** – ಎದುರು ನೋಡುವುದು (ಅತಿಪುರಸ್ಸರಂ ಇದಿಇರ್ಗೊಂಱು ತತ್ಕ್ರಿಯಾಪರಿಮಾಪ್ತಿಪ್ರತೀಕ್ಷಣಪರನವರಂ ಗುರುಭಕ್ತಿಪೂರ್ವಕಂ ಬಂದಿಸಿ: **ಆದಿಪು,** ೨. ೩೩ ವ)

**ಪ್ರತೀಚಿ** – ಪಶ್ಚಿಮ, ಪಡುವಣದಿಕ್ಕು (ಆನುಂ ಪ್ರತೀಚೀಸಮಾಗಮ ಸಂತುಷ್ಟನೆನಪ್ಪೆನೆಂದು ದಿನಪಂ ರಕ್ತತ್ವದಿಂ ಪೋಗೆ: **ಶಾಂತಿಪು,** ೯. ೬೦)

**ಪ್ರತೀತ** – ಪ್ರಸಿದ್ಧವಾದ (ಇಂತಿವಱ ತೋರ್ಕೆಯಿಂ ಗರ್ಭದರ್ಭಕನಳುರ್ಕೆಯುಂ ಅದಟುಂ ಅಖಿಲಜನ ಪ್ರತೀತಮಾಗೆ: **ಪಂಪರಾ,** ೧೦. ೧೪೪ ವ); ವಿಶದವಾದ ಅರ್ಥ (ಪ್ರತೀತ ಶಬ್ದಂ ವಿಶದಾರ್ಥಮಕ್ಕುಂ: **ಅಭಿಧಾವ,** ೨. ೨. ೧೨)

**ಪ್ರತೀತಿ** – ಅರ್ಥವಾಗು (ದ್ರವ್ಯಾನುಯೋಗಮೆಂಬುದುಂಟು ಅದು ನಿಮ್ಮನ್ನರಪ್ಪ ನಿಶಿತಮತಿಗಳ್ಗೆ ಪಂಚರಾತ್ರಿಯೊಳೆ ಪ್ರತೀತಿಯಕ್ಕುಂ: **ಸುಕುಮಾಚ,** ೩. ೩೭ ವ)

**ಪ್ರತೀಯಮಾನ** – ಕಾಣುವ, ತೋರುವ (ಅಂತವರೊಧ ಪರಿಚಾರಿಕಾಚತುರ ವಿಳಾಸಿನೀ ಪ್ರತೀಯಮಾನ ಶೋಭಾವಿಭವನಪ್ಪ ಅಕಳಂಕಾಚಾರಸಾರನಪ್ಪ ವಜ್ರಾಯುಧನ ಎರಡುಂ ಕೆಲದೊಳಂ .. .. ಬಂದರ್ ಕೆಲರ್ ಯೋಷಿಜ್ಜನರ್: **ಶಾಂತಿಪು,** ೮. ೨೨ ವ)

**ಪ್ರತೀಹಾರಕ** – ಪಡಿಯಱ, ಬಾಗಿಲು ಕಾಯುವವನು (ಲಂಬೋದರಂ ಲಂಬಕೂರ್ಚಕಲಾಪಂ ಸಿತಕಂಚುಕಂ ತ್ವರಿತದಿಂ ಬಂದಂ ಪ್ರತೀಹಾರಕಂ: **ಪಂಪರಾ,** ೨. ೨೦

**ಪ್ರತೀಹಾರಿ** – ಬಾಗಿಲು ಕಾಯುವವಳು (ಒಡ್ಡೋಲಗದೊಳಿರ್ಪಾಗಳ್ ಪ್ರತೀಹಾರಿ ವಂದು: **ಕಾದಂಸಂ,** ೧. ೧೧ ವ)

**ಪ್ರತೋಳಿ** – ರಾಜಬೀದಿ (ಪಂಚರತ್ನತೋರಣ ದ್ಯುತಿಸಮುದ್ದ್ಯೋತಿ ಕನಕಪ್ರಾಕಾರ ಪ್ರತೋಳಿದ್ವಾರಮಂ ಎಯ್ದೆವಂದಾಗಳ್: **ಆದಿಪು,** ೧೧. ೨೩ ವ)

**ಪ್ರತೋಳಿಕಾ** – ರಾಜಬೀದಿ (ಫಳಕುಸುಮಪರಿರಚಿತ ಚಾರುತರವಾರಣಾನ್ವಿತ ತದುದ್ಯಾನ ಪ್ರತೋಳಿಕಾದ್ವಾರಮಂ ಪೊಕ್ಕು: **ರಾಜಶೇವಿ,** ೧೦. ೧೫ ವ)

**ಪ್ರತ್ನ** – ಪ್ರಾಚೀನ (ಪ್ರತ್ನಕವಿಪ್ರವರರ್ ಮೇಣ್ ನೂತ್ನಕವಿಪ್ರವರ್ ಅಕ್ಕೆ ಜಿನನ ಅಭಿಷವಮಂ ಯತ್ನದೆ ಪೇೞ್ವೊಡಮೇಂ ಕವಿರತ್ನನ ಜನ್ಮಾಭಿಷೇಕಮಂ ಪೋಲ್ತಪುವೇ: **ಅಜಿತಪು,** ೪. ೮೨)

**ಪ್ರತ್ಯಂತ** – ಸಮೀಪ (ಪ್ರತ್ಯಂತ ದೇಶ ಭೂಭೃದಪತ್ಯರನೆೞ್ಬಟ್ಟಿ ಪುಗಿಸಿ ಕಾಂತಾರ ನಗೋಪತ್ಯಕಮಂ ಕೌಸಲ್ಯಾಪತ್ಯಂಗೆ ಓಲಗಿಪೆಂ ಅವರ ಹರಿವಿಷ್ಟರಮಂ: **ಪಂಪರಾ,** ೬. ೧೫೪); ಸುತ್ತಮುತ್ತಲ (ಬಳವತ್ ಪ್ರತ್ಯಂತ ಭೂಪಾಳಕನಿಕರ ಮಹಾವಾಹಿನೀವಾಹಿನೀಸಂಕುಳಂ ಅತ್ಯುತ್ಸಾಹದಿಂದಂ ಪುಗೆ: **ಆದಿಪು,** ೧೩. ೪೫); ಗಡಿಪ್ರದೇಶ (ಪೊಂಗುವ ಮಲೆಪರ ಮಲೆಗಳ ಡಂಗಂಗಳ್ ಮಲೆವ ಮಂಡಲಂಗಳ್ ಪ್ರತ್ಯಂತಗಳ್ ಎನಲ್ ಒಳವೆ ಪಾಂಡವರಂ ಗೆಡೆಗೊಳೆ ನಿನಗೆ ಕುರುಕುಳಾಂಬರಭಾನೂ: **ಪಂಪಭಾ,** ೯. ೩೯)

**ಪ್ರತ್ಯಂತಭೂಪಾಲಕ** – ನೆರೆರಾಜ್ಯದ ರಾಜ (ಬಲವತ್ ಪ್ರತ್ಯಂತಭೂಪಾಲಕನಿಕರ ಮಹಾವಾಹಿನೀವಾಹಿನೀಸಂಕುಲಂ ಅತ್ಯುತ್ಸಾಹದಿದ ಪುಗೆ ದೆಸೆದೆಸೆಯಂ: **ಆದಿಪು,** ೧೩. ೪೫)

**ಪ್ರತ್ಯಕ್ಷ** – ಕಣ್ಣಿಗೆ ಕಾಣುವ (ಪ್ರತ್ಯಕ್ಷಮಾಗೆ ದಯೆಯಿಂ ಕಾತ್ಯಾಯನೀದೇವಿ .. .. ತಾನಿತ್ತಳ್ ಪ್ರಸೂನಮಾಲೆಯಂ: **ಕುಸುಮಾಕಾ,** ೧೨. ೨೩); ಇಂದ್ರಿಗೋಚರವಾದುದು (ಐಂದ್ರಿಯಕಂ ಪ್ರತ್ಯಕ್ಷಂ ಅತೀಂದ್ರಿಯಪ್ಪುದು ಪರೋಕ್ಷಂ: **ಅಭಿಧಾವ,** ೧. ೧೨. ೨೪)

**ಪ್ರತ್ಯಕ್ಷಪ್ರಮಾಣ** – ಕಣ್ಣೆದುರಿಗಿನ ಪುರಾವೆ (ಪಿಷ್ಟೋದಕ ಗುಡಧತಕ್ಯಾದಿಯತ್ತಣಿಂ ಮದಶಕ್ತಿ ಪುಟ್ಟುವಂತೆ ಪುಟ್ಟುಗುಂ ಆ ಭೂತಂಗಳುಂ ಕಾಯಾಕಾರಪರಿಣತಗಳಕ್ಕುಂ ಇದು ಪ್ರತ್ಯಕ್ಷಪ್ರಮಾಣಸಿದ್ಧಂ: **ಶಾಂತಿಪು,** ೮. ೧೨೮ ವ)

**ಪ್ರತ್ಯಕ್ಷಫಲ** – ಕಣ್ಣಿಗೆ ಕಾಣುವ ಪ್ರಯೋಜನ (ಸತ್ಕರ್ಮಂ ಪ್ರತ್ಯಕ್ಷಫಲಮನೀವುದು ಪುಸಿಯೇ: **ಪುಷ್ಪದಂಪು,** ೩. ೧೦೮)

**ಪ್ರತ್ಯಗ್ಭೂಧರ** – [ಪ್ರತ್ಯಕ್+ಭೂಧರ] ಪಶ್ಚಿಮಾದ್ರಿ (ಪ್ರತ್ಯಕ್ಭೂಧರವಾತ್ಮಾಧಿತ್ಮಕದೊಳ್ ತಳೆದಸ್ತಗತಿಯಿಂ ಬೀೞ್ವ ಆದಿತ್ಯನನೆಂದುಮದಾರ್ಗಂ ನಿತ್ಯಪರಾರ್ಥ್ಯೈಕವೃತ್ತನಕ್ಕುಂ ಗ್ರಾಹ್ಯಂ: **ಚಂದ್ರಪ್ರಪು,** ೮. ೩)

**ಪ್ರತ್ಯಗ್ರ** – ನವೀನವಾದ (ಪ್ರತ್ಯಗ್ರ ಚಿಂತಾಮಣಿಮಯ ರಚನಾಶ್ಚರ್ಯನಿಶ್ಶೇಷಭೂಷಾರ್ಚನೆಯಂ ಸರ್ವಜ್ಞಬಿಂಬಾವಳಿಗೆ ಪರಸಿದರ್: **ಆದಿಪು,** ೧೪. ೧೧೬)

**ಪ್ರತ್ಯನೀಕ** – ನಿವಾರಣೆ (ಎಂದು ಕಾಲಸ್ವರೂಪ ನಿರೂಪಣಂಗೆಯ್ದು ಅವರ ಶೋಕಪ್ರತ್ಯನೀಕಮಂ ಅದಿರ್ಪಿದಂ: **ಪಂಪರಾ,** ೧. ೮೪ ವ)

**ಪ್ರತ್ಯಭಿಜ್ಞಾನ** – ಗುರುತಿಸುವುದು (ತದೇಕತ್ವಗ್ರಾಹಕ ಪ್ರತ್ಯಭಿಜ್ಞಾನಮುಂ ಲೂನಪುನರ್ಜಾತ ನಖಕೇಶಾದಿಗಳೊಳ್ ಪೂರ್ವಾಪರ್ಯೈಕತ್ವಮಿಲ್ಲದಲ್ಲಿಯುಂ ಕಾಣಲಕ್ಕುಂ: **ಆದಿಪು,** ೨. ೯ ವ)

**ಪ್ರತ್ಯಭಿಜ್ಞೆ** – ಗುರುತು (ಇಂದ್ರಾಯುಧದ ಪ್ರತ್ಯಭಿಜ್ಞೆಯೊಳಂ ಅನುಪ್ರಭಾವಿತ ರಾಜಪುತ್ರಲೋಕದೊಳಂ .. .. ಇರ್ದಪಂ: **ಕಾದಂಬ,** ೮. ೧೦೭ ವ)

**ಪ್ರತ್ಯಯ** – ನಂಬಿಕೆ (ವಿಶ್ವಾಸಂ ಪ್ರತ್ಯಯಮೆಂಬುದಕ್ಕುಂ: **ಅಭಿಧಾವ,** ೨. ೧. ೭೯), ನಂಬಿಕೆಯುಂಟುಮಾಡುವ ಕಾರ್ಯ (ಚಂದ್ರಾಪೀಡ ಚರಣಕಮಲಂಗಳಂ ದೃಢ ಪ್ರತ್ಯಯದಿಂ ಆರಾಧಿಸುತ್ತಿರ್ದಳ್: **ಕಾದಂಸಂ,** ೭. ೫೪ ವ); ಉಪಾಯ (ಏನಾನುಂ ಪ್ರತ್ಯಯದಿಂ ಪ್ರಾತೀತಿಕಂ ಮಾಡೆ ಚಾರುದತ್ತಂ ನಂಬಲ್ ಆ ಡಂಬಕಂ ಒಂದು ದೆವಸಂ: **ಕರ್ಣನೇಮಿ,** ೪. ೮೫ ವ)

**ಪ್ರತ್ಯಯಂಗೆಯ್** – ಪ್ರತಿಜ್ಞೆಮಾಡು (ನೀನೆನ್ನಂಕಾಡವೇಡಾಂ ತೊಡರ್ದವಸರದೊಳ್ ಪ್ರತ್ಯಯಂಗೆಯ್ದೆನೊರ್ವಂಗೆ: **ಸುಕುಮಾಚ,** ೭. ೨)

**ಪ್ರತ್ಯರ್ಥಿ** – ಪ್ರತಿವಾದಿ, ವೈರಿ (ಪ್ರತ್ಯರ್ಥಿ ಬಂದನಿಲ್ಲ ಪಿರಿದುಂ ಪೊಟ್ಟು ಪೋದುದು ಎನಗೆ ಕರ್ತವ್ಯಮಾವುದು ಎಂದು ನುಡಿತ್ತಿರ್ಪನ್ನೆಗಂ: **ಪಂಚತಂತ್ರ,** ೨೪೨ ವ)

**ಪ್ರತ್ಯವಾಯ** – ಕೇಡು, ತೊಂದರೆ (ಅಂತೀತನ ಕಟಕಕ್ಕೆ ನಿತ್ಯಕ್ಷಯವ್ಯಯಪ್ರತ್ಯವಾಯಂಗಳಂ ಮಾಡಿ ಬೇಸಜೆಸಿ: **ಆದಿಪು,** ೧೩. ೫೮ ವ)

**ಪ್ರತ್ಯಾಖ್ಯಾನ** – ತಿರಸ್ಕಾರ (ದ್ವಾದಶದಿನಂಬರಂ ಆಹಾರ ಪ್ರತ್ಯಾಖ್ಯಾನಮಂ ಕೈಕೊಂಡು ಪಾರಣೆಯ ದಿನನೊಳ್: **ಪಂಪರಾ,** ೧೬. ೬೨ ವ); [ಜೈನ] ಇಪ್ಪತ್ತೆಂಟು ಬಗೆಯ ಮೋಹನೀಯಗಳಲ್ಲಿ ಒಂದು, ಮುಂದೆ ಪಾಪ ಮಾಡದಿರುವ ಪ್ರತಿಜ್ಞೆ (ಚತುರ್ವಿಧಾಹಾರ ಶರೀರ ಪ್ರತ್ಯಾಖ್ಯಾನ ಪೂರ್ವಕಂ ಸನ್ಯಸನದಿಂ ಮುಡಿಪಿ: **ಶಾಂತಿಪು,** ೪. ೯೭ ವ); ನೋಡಿ, 'ಮೋಹನೀಯ'

**ಪ್ರತ್ಯಾಲೀಢ** – ಯುದ್ಧಮಾಡುವಾಗ ನಿಲ್ಲುವ ಒಂದು ಭಂಗಿ (ಆಲೀಢ ಪ್ರತ್ಯಾಲೀಢ ಸಮಪಾದ ವೈಷ್ಣವ ಮಂಡಲಾಗ್ರಮುಮೆಂಬ ಪಂಚವಿಧಸ್ಥಾನಕೃತಂಗಳೊಳಂ: **ಗದಾಯು,** ೮. ೧ ವ); ನೋಡಿ, 'ಪಂಚವಿಧಸ್ಥಾನ'

**ಪ್ರತ್ಯಾಶೆ** – ಪಡೆಯುವ ಭರವಸೆ (ಪ್ರಿಯತಮ ಸಮಾಗಮ ಪ್ರತ್ಯಾಶೆಯಿಂ ಕರಣೀಯವಾವುದು ಅದನೆ ಮಾಡವೇೞ್ಪುದು: **ಕಾದಂಸಂ,** ೭. ೫೨ ವ)

**ಪ್ರತ್ಯಾಸನ್ನ** – ಸಮೀಪ (ಪ್ರತ್ಯಾಸನ್ನದೊಳ್ ಇರ್ಪುದು ಯತ್ಯಾಶ್ರಮಂ: **ಕಾದಂಸಂ,** ೧. ೬೫)

**ಪ್ರತ್ಯಾಸನ್ನಭವ್ಯ** – [ಜೈನ] ಬೇಗ ಮೋಕ್ಷ ಪಡೆಯುವ ಜೀವ (ಆ ಜೀವಂ ಅಭವ್ಯನಲ್ಲ ಪ್ರತ್ಯಾಸನ್ನಭವ್ಯಂ: **ಸುಕುಮಾಚ,** ೫. ೨೨ ವ)

**ಪ್ರತ್ಯಾಸನ್ನಮೃತ್ಯು** – ಸಮೀಪಿಸಿರುವ ಸಾವು (ಬಹ್ವಾರಂಬಸಂರಂಭ ರೌದ್ರಧ್ಯಾನಪರಿಣತಂ ಉಪಾರ್ಜಿತನರಕಾಯುಷ್ಯಂ ಪ್ರತ್ಯಾಸನ್ನಮೃತ್ಯುವಾಗಿ: **ಆದಿಪು,** ೨. ೧೧ ವ)

**ಪ್ರತ್ಯುತ್ಥಾನ** – ಅತಿಥಿ ಬಂದಾಗ ಗೌರವಸೂಚಕವಾಗಿ ಎದ್ದು ನಿಲ್ಲುವುದು (ಪ್ರತ್ಯುತ್ತಾನಾನಂತರಂ ಅತ್ಯುನ್ನತ ಕನಕ ಸಿಂಹಾಸನಮಂ ಮುನಿಗಿತ್ತು: **ಜಗನ್ನಾವಿ,** ೨. ೪೨)

**ಪ್ರತ್ಯುತ್ಪನ್ನಪ್ರತಿಭ** – ಕಾಲಕ್ಕನುಗುಣವಾಗಿ ಹೊಳೆಯುವ ಪ್ರತಿಭೆಯುಳ್ಳವನು (ಜನಪದಸಮಭಿಜಾತನುಂ

ಅನ್ವಯಾಗತನುಂ ಅಭಿರೂಪನುಂ ಪ್ರತ್ಯುತ್ಪನ್ನಪ್ರತಿಭನುಂ: **ಆದಿಪು,** ೧೪. ೪೩ ವ)

**ಪ್ರತ್ಯುತ್ಪನ್ನಮತಿ** – ಕಾಲಕ್ಕನುಗುಣವಾಗಿ ಪ್ರತಿಕ್ರಿಯೆ ತೋರಿಸುವ ಬುದ್ಧಿ (ಆಕೆಯ ಪ್ರತ್ಯುತ್ಪನ್ನಮತಿಯಂ ಮನಂಗೊಂಡು ಪೊಗಟುತ್ತುಂ: **ಶಾಂತಿಪು,** ೮. ೮೫ ವ)

**ಪ್ರತ್ಯುದ್ಗಮನ** – ಅತಿಥಿ ಬಂದಾಗ ಎದುರುಗೊಳ್ಳುವುದು (ವೈಶಂಪಾಯನ ಪ್ರತ್ಯುದ್ಗಮನಾರ್ಥಂ ತಂದೆಯಂ ಬೀಟ್ಕೊಂಡು: **ಕಾದಂಸಂ,** ೬. ೨೯ ವ)

**ಪ್ರತ್ಯೂರ್ಜಿತ** – [ಪ್ರತಿ+ಊರ್ಜಿತ] ಮತ್ತೆ ಏಳಿಗೆ ಹೊಂದಿದವನು (ಕತಿಪಯದಿನದಿಂ ಪ್ರತ್ಯೂರ್ಜಿತರಾದಪ್ಪುದುಮಂ .. .. ಬಿನ್ನವಿಸೆ: **ಕಾದಂಬ,** ೯. ೮೫ ವ)

**ಪ್ರತ್ಯೂಷ** – ಬೆಳಗು ಜಾವ (ಪ್ರತ್ಯೂಷಂ ದಿವಸಮುಖಂ ಪ್ರಾತಃಕಾಲ್ಯ ಉಷಃಸಮಯಂ: **ಅಭಿಧಾವ,** ೧. ೨. ೪)

**ಪ್ರತ್ಯೂಷಕೃತ್ಯ** – ಬೇಳಗಿನ ಜಾವ ಮಾಡಬೇಕಾದ ಕಾರ್ಯ (ನೃಪನೊಡರಿಸಿದಂ ಬೇಗಂ ಪ್ರತ್ಯೂಷಕೃತ್ಯಮಂಗಳವಿಧಿಯಂ: **ಪುಷ್ಪದಂಪು,** ೮. ೨೪)

**ಪ್ರತ್ಯೇಕಂ** – ಭಿನ್ನವಾಗಿ (ಪ್ರತ್ಯೇಕಂ ಪಾರ್ಥನಿರಲ್ ದೈತ್ಯಂ ಅಸಂಖ್ಯಾತ ಕೋಟಿಮೂರ್ತಿಯನಾಂತೊಂದಿ ಅತ್ಯಾರ್ಭಟೆಯಿನಿರ್ದಂ ಪ್ರತ್ಯಗ್ರಭ್ರಾಂತಿ ಕೃಷ್ಣನೊಳ್ ನೆಗಟ್ವೆನೆಗಂ: **ಜಗನ್ನಾವಿ** ೧೫. ೬)

**ಪ್ರಥಮ** – ಮೊದಲನೆಯ[ದು] (ಪ್ರಥಮ ದ್ವಿತೀಯ ಕಲ್ಪಪ್ರಥಿತ ಸುರಾಂಗನೆಯರ ಇತರ ಕಲ್ಪಜರ್ಗೆ ಮನೋರಥಮಂ ಪುಟ್ಟಿಸುವರ್: **ಅಜಿತಪು,** ೧೧. ೨೭)

**ಪ್ರಥಮಕಲ್ಪ** – [ಜೈನ] ಮೊದಲ ಸ್ವರ್ಗ, ಸೌಧರ್ಮ (ಪ್ರಥಮಕಲ್ಪಾಂರೇಂದ್ರಂ .. .. ದಿವಿಜೇಂದ್ರಲೋಕೋತ್ತಮ ಭೂಷಣಂಗಳಂ ತುಡಿಸೆ: **ಶಾಂತಿಪು,** ೧೦. ೫೭ ವ)

**ಪ್ರಥಮಕಲ್ಯಾಣ** – [ಜೈನ] ತೀರ್ಥಂಕರನಿಗೆ ಮಾಡುವ ಪಂಚಕಲ್ಯಾಣಗಳಲ್ಲಿ ಮೊದಲನೆಯದು, ಗರ್ಭಾವತರಣ (ದೇವೇಂದ್ರಂ .. .. ಪ್ರಥಮಕಲ್ಯಾಣಮಂ ನಿರ್ವರ್ತಿಸಿದಂ: **ಆದಿಪು,** ೭. ೩೨ ವ)

**ಪ್ರಥಮದ್ವೀಪ** – [ಜೈನ] ಎಂಟು ಮುಖ್ಯ ದ್ವೀಪಗಳಲ್ಲಿ ಮೊದಲನೆಯದು, ಜಂಬೂದ್ವೀಪ (ಅಂತತಿಕ್ರಾಂತ ಜ್ಯೋತಿಃಕಲಾಪಮುಂ ಪ್ರಾಪ್ತಪ್ರಥಮದ್ವೀಪಮುಂ ಆಗಿ : **ಚಂದ್ರಪ್ರಪು,** ೧೨. ೧೪೩ ವ)

**ಪ್ರಥಮಮಂಗಳ** – ಅತ್ಯಂತ ಶುಭಕರವಾದುದು (ಲೋಕಪತಿಗಿಟ್ಟಂ ಅನುಸ್ಮೃತಮಾತ್ರ ಪಾಪವಿಚ್ಛೇದನಮಂ ಜಗತ್ ಪ್ರಥಮಮಂಗಳಮಂ ಹರಿಶಾಂತಿನಾಮಮಂ: **ಶಾಂತಿಪು,** ೧೦. ೭೯)

**ಪ್ರಥಮಸಂಗಮ** – ಮೊದಲ ಸಂಭೋಗ (ಪಾಂಗಜೆದಪ್ಪಿ ತಾಂ ಮೊಗಂಗುಡೆ ಪದೆತ್ತು ಚುಂಬಿಸಿ ಭಯಂಗೆಯೆ ಬಲ್ವೆಣಸಂ ಪೊದಳ್ಚಿ ನಾಣ್ಗಿಡೆ ನೆರೆದೂಡೆಯಂ ಪ್ರಥಮಸಂಗಮದೊಳ್ ಕುವರಂ ಮರುಳ್ಚಿದಂ: **ಚಂದ್ರಪ್ರಪು,** ೬. ೮೨)

**ಪ್ರಥಮಾನುಯೋಗ** – [ಜೈನ] ತೀರ್ಥಂಕರರು ಉಪದೇಶಿಸಿದ ಶಾಸ್ತ್ರಸಮುದಾಯದಲ್ಲಿ ಮೊದಲನೆಯದು (ಎರಡು ಪರಿಕರ್ಮಮುಂ ಎಂಬತ್ತೆಂಟು ಸೂತ್ರಂಗಳುಮಂ ಪ್ರಥಮಾನುಯೋಗಮುಮಂ .. .. ಯಥೋವಿಧಿಯಿಂ ನೋಂತು: **ಆದಿಪು,** ೩. ೪೦ ವ), ನೋಡಿ 'ಅನುಯೋಗ'

**ಪ್ರಥಿತ** – ಪ್ರಖ್ಯಾತವಾದ (ಸಹಾಯರಿಲ್ಲದಿರ್ದೊಡಂ ಉರ್ವೀಪ್ರಥಿತಭುಜಬಲಸಹಾಯದೆ ಪೃಥಿವೀಪತಿ ತಾನೆ ಕಾದಲುದ್ಯತನಾದಂ: **ಗದಾಯು,** ೭. ೬೭)

**ಪ್ರಥಿಮ** – ವಿಶಾಲವಾಗಿರುವುದು (ಪೃಥುತ್ವಮೆಂಬುದಕ್ಕಂ ಪ್ರಥಿಮಂ: **ಅಭಿಧಾವ,** ೨. ೨. ೨೮)

**ಪ್ರಥುಳ** – ದೊಡ್ಡದಾದ (ನೇಮಿಯ ವಿದ್ಯಾ ಪ್ರಥುಳ ಜಳಧಿಭವಕೃತಿ ರೂಪದೆ ಕೌಸ್ತುಭಕೆ ಸುಭಗ ವಲ್ಲಭನಾದಂ: **ನೇಮಿನಾಪು,** ೧. ೪೪)

**ಪ್ರದಕ್ಷಿಣ** – ಎಡಗಡೆಯಿಂದ ಬಲಗಡೆಯೆಡೆ ಸುತ್ತು ಹಾಕುವುದು (ಶ್ರೀಪಾದದ್ವಿತಯ ಪ್ರದಕ್ಷಿಣಕೃತಿವ್ಯಾಸಕ್ತಗೀರ್ವಾಣಕಾಂತಾಪಾಂಗ ಪ್ರತಿಬಿಂಬಕೋಟಿಘಟಿತ ಸ್ಮೇರಸ್ಥಳೇಂದೀವರ ಶ್ರೀಪೂರ್ಣಂ: **ಚಂದ್ರಪ್ರಪು,** ೧. ೧)

**ಪ್ರದರ** – ಬಾಣ (ಮೇಘಮುಖಾಸ್ತ್ರಂಗಳ್ಗೆ ವಾಯುಪ್ರದರಮಂ ಉರಗಾಸ್ತ್ರಕ್ಕೆ ತಾರ್ಕ್ಷೇಷುವಿಂ .. .. ಇಟ್ಟಂ: **ವರ್ಧಮಾಪು,** ೪. ೯೫)

**ಪ್ರದಾರಿತ** – ಸೀಳಿದ (ವಿಳೋಳ ವೀಚೀರಯಂ ಪ್ರದಾರಿತ ಕುಳಾಚಲೋದಧಿಪರೀತಮಾಗಿರ್ದ ಜಂಬೂದ್ವೀಪದೊಳಗೆ: **ಪಂಪಭಾ,** ೧. ೫೧ ವ)

**ಪ್ರದೀಪ** – ದೀಪ (ನಿಸರ್ಗಶೌಚಾದಿಗುಂಗಳಿಂ ಬೀಟ್ಟುಂಡಿಕ್ಕಿದ ಭೈತ್ರಮುಮಂ ನಿಶ್ಚಲಪ್ರದೀಪ ಪವಿತ್ರಪ್ರದೀಪಮುಮಂ ಪೋಲ್ತು: **ಶಾಂತಿಪು,** ೧೦. ೯೨ ವ); ಅಭಿವೃದ್ಧಿ (ಮೇಘವರ್ಣಂ ಪ್ರದೀಪಿಯ ಮಾತುಗಳ್ಗೆ ಕೋಪಂ ಪ್ರದೀಪಮಾಗೆ ಮನದೊಳ್ ಮುನಿದು: **ಪಂಚತಂತ್ರ,** ೧೪೬ ವ)

**ಪ್ರದೀಪಕ** – ಬೇಳಕನ್ನೀಯುವ[ವನು] (ಈ ಬರ್ಪ ಪಾರ್ವಂ ಈ ಭವದೊಳೆ ಕರ್ಮಕ್ಷಯ ಭಾಗಿಯೆನಿಕ್ಕುಂ ಸಾಕ್ಷಾತ್ ಜಿನಶಾಸನ ಪ್ರದೀಪಕನಕ್ಕುಂ: **ಸುಕುಮಾಚ,** ೩. ೧೦)

**ಪ್ರದೀಪಕತೆ** – ಬೆಳಗುವಿಕೆ (ಇದು ಚಿತ್ರಂ ವಜ್ರಾಂಗನೆಎ ದೃಢೀಕೃತಮಾರ್ದ್ರವಪ್ರಭಾವಂ ನಿಸ್ನೇಹದವಂಗೆ ಭುವನಭವನಪ್ರದೀಪಕತೆ ನಿನಗೆ ಜಿನ ಜಗತ್ತ್ರಯಮಿತ್ರಾ: **ಚಂದ್ರಪ್ರಪು,** ೭. ೧೨)

**ಪ್ರದೀಪಕಲಿಕಾ[ಕೆ]** – ಬೆಳಕಿನ ಕುಡಿ (ಅಮಲತರಪ್ರದೀಪಕಲಿಕಾಕೃತಿಯಿಂ ಸ್ವಪರಪ್ರಕಾಶನ ಕ್ಷಮಮೆನಿಸಿರ್ದ ತಮ್ಮ ಮತಿಯಿಂ ಜಿನರಾಜಚರಿತ್ರಮಂ ಪವಿತ್ರಮಂ ಒಲವಿಂದೆ ಪೇಟ್ದು: **ಚಂದ್ರಪ್ರಪು,** ೧. ೩೭)

**ಪ್ರದೇಶ** – ಜಾಗ (ವಾತವಲಯಮುಟಿಯೆ ಜೀವಪ್ರದೇಶಂಗಳಿಂ ಲೋಕಪ್ರದೇಶಮಂ ಪರ್ವಿ: **ಆದಿಪು,** ೧೬. ೪೯)

**ಪ್ರದೇಶಬಂಧ** – [ಜೈನ] ಬಂಧನವನ್ನು ಹೊಂದಿರುವ ಕರ್ಮಗಳ ಸಂಖ್ಯೆಯ ನಿರ್ಣಯ (ಜೀವ ಕರ್ಮ ಪ್ರದೇಶಯೋಗಂ ಪ್ರದೇಶಬಂದಮೆನಿಕ್ಕುಂ: **ಚಂದ್ರಪ್ರಪು,** ೧೬. ೨೫)

**ಪ್ರದೇಶಸೌಷ್ಠವ** – ಒಂದು ಕಲಾಕೃತಿಯ ವಿವಿಧಾಂಶಗಳ ಚೆಲುವು (ಇದು ಭುಪಾಮನರೂಪು ಇದು ಲೆಪ್ಪದ ರೂಪು ಎನಲೆಂತುಮಜೆಯಲರಿದೆನೆ ಬಗೆಗೊಂಡುದು ನಡೆವ ನುಡಿವ ತೆಱದಿಂ ಪ್ರದೇಶಸೌಷ್ಠವಮದೇಂ ವಿಚಿತ್ರಮೋ ಚಿತ್ರಂ: **ಪಂಪರಾ,** ೩. ೨೬)

**ಪ್ರದೋಷ** – ರಾಜನ ಐದು ವ್ಯಸನಗಳು: ಸ್ವಭಾವ ಪ್ರದೋಷ ಪ್ರಸಂಗಗುಣ ಪ್ರತಿಲೋಮ ಪೀಡನ – ಇವುಗಳಲ್ಲಿ ಎರಡನೆಯದು, (ಬಾಹ್ಯಾಂತಃಪ್ರಕೃತಿಗಳೆರಡುಂ ಒರ್ಮೆಯೆ

ಪ್ರಕೋಪಂಗೆಯ್ವುದು ಪ್ರದೋಷಮೆಂಬುದಕ್ಕುಂ: **ಪಂಚತಂತ್ರ,** ೧೩೭ ವ); ರಾತ್ರಿಯ ಆರಂಭ, ಸಾಯಂಕಾಲ (ರಾತ್ರಿಯ ಮುಖಂ ಪ್ರದೋಷಂ: **ಅಭಿಧಾವ,** ೧. ೨. ೬);

**ಪ್ರದ್ಯೋತ** – ಕಿರಣ, ಕಾಂತಿ (ನಿಜಪ್ರದ್ಯೋತದಿಂ ಪಶ್ಚಿಮಶಿಖರಿ ಶಿರೋಭಾಗದೊಳ್ ಬಿಟ್ಟುದು ಎಂಬಂತೆ ಇನಬಿಂಬ ರಂಜಿಸಿತ್ತು: **ಕಾದಂಸಂ,** ೨. ೪೯)

**ಪ್ರಧನ** – ಯುದ್ಧ (ಪರಭೃತಂ ನಿಗಪ್ಪನೆ ಯುದ್ಧದೊಳ್ ಬಿಗುರ್ತೋಡದೆ ಮಾಣ್ಬನೇ ಮೃಗಧರರಂ ಮಧುಪಂ ಪ್ರಧನಕ್ಕೆ ಯೋಗ್ಯನೇ: **ಪಂಪರಾ,** ೧. ೨೩)

**ಪ್ರಧಾನ** – ಮುಖ್ಯ (ಪರಂ ಪ್ರಧಾನಂ .. .. ಅಗ್ರೇಸರಂ ಅಗ್ರಗಣ್ಯಂ: **ಅಭಿಧಾವ,** ೨. ೧. ೨); ರಾಜನ ಪ್ರಮುಖ ಅಧಿಕಾರಿ (ಪರಿವಾರಮಂ ಪ್ರಧಾನರನಿರಿಸಿ ಯಶೋಮತಿಗೆ ರಾಜ್ಯಮಂ ಕೊಟ್ಟು ಯಶೋಧರಂ ತಪಕೆ ನಡೆಯಲ್ಕಿರೆ: **ಯಶೋಧಚ,** ೩. ೩೦)

**ಪ್ರಧಾನಮಂತ್ರಿ** – ಮುಖ್ಯ ಅಮಾತ್ಯ (ನಿಜಪ್ರಿಯ ಪ್ರಧಾನಮಂತ್ರಿ ಮತಿವರನೊಳಂ .. .. ಆಲೋಚಿಸಿ: **ಆದಿಪು,** ೪. ೮೯ ವ)

**ಪ್ರಧಾನಶ್ರೇಷ್ಠಿ** – ಮುಖ್ಯ ವರ್ತಕ (ಪ್ರಧಾನಶ್ರೇಷ್ಠಿ ಧನಮಿತ್ರನೊಳಾಲೋಚಿಸಿ: **ಆದಿಪು,** ೪. ೮೯ ವ)

**ಪ್ರಧ್ವಂಸ** – ಸರ್ವನಾಶ (ನೃಸಿಂಹನೆನಿಪ್ಪಾಕೃತಿಯಿಂ ಹಿರಣ್ಯಕಶಿಪು ಪ್ರಧ್ವಂಸಮಂ ಮಾಡಿದೈ: **ಜಗನ್ನಾವಿ,** ೧. ೫೮)

**ಪ್ರಧ್ವಾನ** – ದೊಡ್ಡ ಶಬ್ದ (ಪ್ರಧ್ವಾನಂಗೆಯ್ದಂಗೆ ತಳಿಗೆವೆರಸಿತ್ತು ಅವಂಗೂನಮನೇಜೆಸಿ ಪಾರ್ವಂ ತಾನಾತನ ಸುಕೃತಮಂ ಗಡ ಕೊಂಡೊಯ್ವಂ: **ಸಮಯಪ,** ೧೧. ೯೫)

**ಪ್ರಪಂಚ** – ಸಂಗತಿ, ವಿಚಾರ (ಪ್ರಭಾಮಂಡಲನ ಪೋದ ಜನ್ಮದೊಳಾದ ವೃತ್ತಾಂತಮುಮಂ ಈ ಭವದೊಳಾದ ಸೀತಾಪ್ರಪಂಚಮುಮಂ ಕೇಳ್ದು ತಿಳಿದು: **ಪಂಪರಾ,** ೬. ೩೧ ವ)

**ಪ್ರಪಂಚಿತ** – ವಿಸ್ತಾರವಾದ (ಮೂವರ ಭವಪ್ರಪಂಚಿತ ಪ್ರೀತಿ ನಿಮಿತ್ತಂ ಮತ್ತಮೊಂದು ಹಿತೋಪದೇಶಮಂ ಕೇಳ್ವೊಡೆ: **ನೇಮಿನಾಪು,** ೪. ೯ ವ)

**ಪ್ರಪತ್ತಿ** – ಶರಣಾಗತಿ (ರಿಪುಜಯಕಾರಣಶರಮಂ ಪ್ರಪತ್ತಿಯಿಂ ಪಡೆವೆನೆಂದು ಬಯಸುತ್ತೆ ಎಮ್ಮಿಂ ತಪಮಿರ್ದಪಂ ಆ ಮುನಿ: **ಶಬರಶಂ,** ೨. ೧೧೭)

**ಪ್ರಪಾ** – ಅರವಟ್ಟಿಗೆ (ದಿಟ್ಟಿಗಳಿಂದ ಈಂಟುವರಾ ಪ್ರಪಾ ಪ್ರಣಯಿನೀ ಲಾವಣ್ಯ ನೀರಂಗಳಂ: **ಮಲ್ಲಿನಾಪು,** ೨. ೨೨)

**ಪ್ರಪಾಂಗನೆ**– ಅರವಟ್ಟಿಗೆಯಲ್ಲಿ ನೀರು ಕೊಡುವ ಹೆಂಗಸು; ಅರವಟ್ಟಿಗೆಯ ಸೇವಕಿ (ಲಾವಣ್ಯತೋಯಮಂ ಆಲೋಚನಮಾತ್ರದಿಂ ಪಱೆದು ಪಾಂಥಶ್ರೇಣಿ ನೀರಟ್ಕೆಯಂ ಶ್ರಮಮಂ ತೀರಮೆಯಂ ಪ್ರಪಾಮಗನೆಯರಂ ಕಣ್ಣಾಗುವುದಾ ದೇಶದೊಳ್: **ಪಂಪರಾ,** ೧. ೧೦೩)

**ಪ್ರಪಾಕಾಂತೆ** – ಪ್ರಪಾಂಗನೆ (ಭೃಂಗಾರ ಶೀತಲತೋಯಂಗಳಂ ಆಂತು ಪಾಣಿತಳದೊಳ್ ಪೊಯ್ವರ್ ಪ್ರಪಾಕಾತೆಯರ್: **ಲೀಲಾವತಿ,** ೬. ೧೨೯)

**ಪ್ರಪಾತ** – ಕೊರಕಲು, ಜಲಪಾತ (ಹಿಮವತ್ಪರ್ವತದ ಸಿಂಧುಪ್ರಪಾತಮನೆಯ್ದಿ: **ಆದಿಪು,** ೧೩. ೬೭ ವ)

**ಪ್ರಪಾಪ್ರಣಯಿನಿ** – ಪ್ರಪಾಂಗನೆ (ದಿಟ್ಟಿಗಳಿಂದ ಈಂಟುವರಾ ಪ್ರಪಾ ಪ್ರಣಯಿನೀ ಲಾವಣ್ಯ ನೀರಂಗಳಂ: **ಮಲ್ಲಿನಾಪು,** ೨. ೨೨)

**ಪ್ರಪೆ** – ಅರವಟ್ಟಿಗೆ (ಪ್ರಪೆಯೆಂಬುದಱೆಗೆ ಪಾನೀಯಶಾಲೆ: **ಅಭಿಧಾವ,** ೧. ೧೦. ೨೦)

**ಪ್ರಬಂಧ** – ಕಾವ್ಯ (ನಿರ್ಮಳತತ್ತ್ವಬೋಧಂ ಉದ್ಯೋತಿಪುದೆಂಬುದಂ ಬಯಸಿ ಪೇಟಿಲೊಡರ್ಚಿದೆಂ ಈ ಪ್ರಬಂಧಮಂ: **ಜಗನ್ನಾವಿ,** ೧. ೧೭)

**ಪ್ರಬೋಧನೆ** – ಎಚ್ಚರಗೊಳ್ಳುವುದು (ಮುಕುಳನ ನಿಮೀಳನಂಗಳ್ ವಿಕಾಸಹಾಸಪ್ರಬೋಧನೋನ್ಮೇಷಂಗಳ್ ಪ್ರಕಟಿಸುಮೈಕ್ಯಮಂ: **ಕಾವ್ಯಾವಲೋ,** ೯೧೪); ತಿಳಿವಳಿಕೆ (ಮಾನಕಷಾಯಂ ಕಾರಣಮಾಗಿ ಸತ್ತು ಬೆಳ್ಗತ್ತೆಯುಂ ಪೇಪಂದಿಯುಂ ನಾಯುಂ ಪೊಲೆಯರ ಕೂಸುಂ ಆಗಿ ರಿಸಿಯರ ಪ್ರಬೋಧನೆಯಿಂದಂ ಬ್ರತಂಗಳಂ ಕೈಕೊಂಡು: **ವಡ್ಡಾರಾ,** ಪು ೨೪, ಸಾ ೫)

**ಪ್ರಭಂಜನ** – ಬಿರುಗಾಳಿ (ವನಧಿದಿಪಕುಲಾದ್ರಿಮುದ್ರಿತ ಜಗಚ್ಚಕ್ರಂ ಯುಗಾಂತ ಪ್ರಭಂಜನನೀರಾವತ ಚಕ್ರದಂತೆ ತಿರಿವಂತಾಳ್ಗುಂ ನಿರಾಳಂಬಂ: **ಅಜಿತಪು,** ೨. ೩); ವಿಧ್ವಂಸಕ (ಪ್ರಭಂಜನಸಖ ಪ್ರಭಾವಪ್ರಭಂಜನನಪ್ಪನಗೆ ಕುಲಹೀನವನಿತಾಸ್ತನ್ಯೋಪ ಮಪ್ಪನೊಳ್ ಅನುಬಂಧಿಕೆಯತಿಕಷ್ಟಂ: **ಜಗನ್ನಾವಿ,** ೫. ೬೧ ವ)

**ಪ್ರಭಂಜನಪ್ರವರ** – ವಾಯವ್ಯಾಸ್ತ್ರ (ಆ ಪ್ರಭಂಜನಪ್ರವರಂ ಮೇಘಮಾರ್ಗದೊಳೆ ಮೇಘಬಾಣಮಂ ಪ್ರತಿಹತಂ ಮಡೆ: **ಜಗನ್ನಾವಿ,** ೧೩. ೧೦೫ ವ)

**ಪ್ರಭಂಜನಪ್ರಿಯ** – ಗಾಳಿಯ ಗೆಳೆಯ, ಅಗ್ನಿ (ಪ್ರಭಂಜನಪ್ರಿಯಂ ಅತಿನಿಷ್ಠುರಜಿಹ್ವಂ: **ಚಂದ್ರಪ್ರಪು,** ೧. ೪೨)

**ಪ್ರಭಂಜನಸುತ** – ವಾಯುಪುತ್ರ, ಭೀಮ (ಕುರುರಾಜಾನುಜರಂ ಪ್ರಭಂಜನಸುತಂ ಕೊಂದಿಕ್ಕುಗುಂ ಕೌರವೇಶವರನ ಊರುದ್ವಯಮಂ ಗದಾಪರಿಘದಿಂ ನುರ್ಗೊತ್ತುಗುಂ: **ಗದಾಯು,** ೫. ೫೮)

**ಪ್ರಭವ** – ಹುಟ್ಟಿದ (ಸಕಲ ಜಗಜ್ಜನಂ ಮಕರಕೇತು ಗೆಲೆ ಮದನನೃಪನ ನಾಟಕವಿಜಯಾನಕರವದಂತೆಸೆಗುಂ ಕ್ಷೀಬಕೀರ ಮತ್ತಾಳಿ ಪರಭೃತಪ್ರಭವರಂ: **ಅಜಿತಪು,** ೬. ೧೦)

**ಪ್ರಭಾತ** – ಬೆಳಿಗ್ಗೆ (ಪನಿಮುಲ್ಲಂಬುಕಣಂಗಳಂ ಕೆದಱುತುಂ ಕೋಕಂಗಳೊಳ್ ರಾಗಮಂ ನನೆವೊಯ್ದು ಉಣ್ಮಿಸುತುಂ ಪತತ್ರಿಗಳೊಳಗಿರ್ಪಾ ತೂಂಕಡಂ ನೂಂಕುತುಂ ತಣ್ಣನೆ ತೀಡಿತ್ತೆನಸುಂ ಪ್ರಭಾತಮಯ ಪ್ರೋದ್ಭೂತ ಶೀತಾನಿಳಂ: **ಶಾಂತೀಶ್ವಪು,** ೧೧. ೯೪)

**ಪ್ರಭಾವಲ್ಲಭ** – ಸೂರ್ಯ (ಸುಕವಿವ್ರಂದಸ್ತೋತ್ರಪಾತ್ರಂ ಷಡಕ್ಷರದೇವಂ ಸರಸಪ್ರಬಂಧಸುಭಗಾಂಭೋಜಪ್ರಭವಲ್ಲಭಂ: **ರಾಜಶೇವಿ,** ೧. ೬೮)

**ಪ್ರಭುಶಕ್ತಿ** – ರಾಜನ ಮೂರು ಶಕ್ತಿಗಳಲ್ಲಿ ಒಂದು, (ಹರಿನೀಲವಜ್ರ ಮೌಕ್ತಿಕ ಮರಕತ ಮಾಣಿಕ್ಯ ಕಾಂಚನಾಂಚಿತವಸ್ತೂತ್ಕರಮುಂ ವರ ಕರಿ ಹರಿ ಭಟಭರಮುಂ ಪ್ರಭುಶಕ್ತಿ ಭೂತಲೇಶಂಗೆಂದುಂ: **ಪಂಚತಂತ್ರ,** ೨೮೫) ನೋಡಿ, 'ಶಕ್ತಿತ್ರಯ'

**ಪ್ರಭೂತ** – ಉಟಾದ (ಅಭಿಮನ್ಯು ಮರಣವಾರ್ತಾ ಪ್ರಭೂತ ಶೋಕಾಗ್ನಿ ಧರ್ಮತನಯನಂ ಇರದಂದು ಅಭಿಭವಿಸಿ ತನ್ನಂ ಅಳುರ್ದಂತೆ ಭಾಸ್ಕರಂ ಕೆಂಕಮಾದಂ ಅಸ್ತಾಚಲದೊಳ್: **ಪಂಪಭಾ,** ೧೧. ೧೦೬)

**ಪ್ರಭೃತಿ** – ಶ್ರೇಷ್ಠ (ಶ್ರೀವಿಭೂತಿಪ್ರಭೃತಿಯನುರೆ ಪತ್ರೂರ್ವಕಂ ಲೇಪಂನಂಗೈದು: **ರಾಜಶೇವಿ,** ೩. ೪೬); ಮೊದಲಾದ (ಯಾಚಕ ವಾಚಕ ನರ್ತನ ಕಥಕ ಪುಣ್ಯವಾಚಕ ಪ್ರಭೃತಿ ಸಮಸ್ತಜನಕ್ಕಂ ಬೇಡಿದುದಂ ಕೊಟ್ಟು: **ಸುಕುಮಾಚ,** ೬. ೨೫ ವ)

**ಪ್ರಮತ್ತ** – [ಜೈನ] ಆತ್ಮನ ಎರಡು ಅವಸ್ಥೆಗಳಲ್ಲಿ ಒಂದು (ಅಂತರ್ಮುಹೂರ್ತಕಾಲಂ ಪ್ರಮತ್ತ ಅಪ್ರಮತ್ತ ಪರಾವರ್ತನಸಹಸ್ರಂಗೆಯ್ದು: **ಆದಿಪು,** ೧೦. ೧೪), ಇನ್ನೊಂದು 'ಅಪ್ರಮತ್ತ'

**ಪ್ರಮದ** – ಆನಂದ (ಇದುವೆ ಸುಕವಿಪ್ರಮೋದಪ್ರದಂ ಇದುವೆ ಸಮಸ್ತಭವ್ಯಲೋಕಪ್ರಮದಪ್ರದಂ ಎನೆ ನೆಗಟ್ಟಿ **ಆದಿಪು**ರಾಣದೊಳ್ ಅಜೆವುದು ಕಾವ್ಯಧರ್ಮಮಂ ಧರ್ಮಮುಮಂ: **ಆದಿಪು,** ೧. ೩೮)

**ಪ್ರಮದಂಬೆಱು** – ಆನಂದ ಹೊಂದು (ಪ್ರಮದಂಬೆತ್ತ ಚಕೋರದಂಪತಿಯವೋಲ್: **ಕುಸುಮಾಕಾ,** ೪. ೫೯)

**ಪ್ರಮದವನ** – ಅಂತಃಪುರಸ್ತ್ರೀಯರ ಉದ್ಯಾನವನ (ಪ್ರಮದವನಂ ಶುದ್ಧಾಂತಃಪ್ರಮದಾಜನದೊಡನೆ ಕೂಡಿ ವಿಹರಿಪ್ಪ ವನಂ: **ಅಭಿಧಾವ,** ೧. ೭. ೧೩)

**ಪ್ರಮದಾ[ದೆ]** – ಹೆಂಗಸು, ಸುಂದರಿ (ಪರಮುಕ್ತಿ ಪ್ರಮದಾ ಮುಖ್ಯೈಕಮುಕುರಂ ಮೋಹಾಂಧಕಾರೌಘಭಾಸ್ಕರಬಿಂಬಂ: **ರಾಜಶೇವಿ,** ೧. ೩)

**ಪ್ರಮಾಣ** – ಗಡುವು (ಯಶೋಭದ್ರೆಯ ಬೇಡಿದ ಮೋನದ ದಿವಸದ ಪ್ರಮಾಣಾವಸಾನದೊಳ್ .. .. ಜಾತಿಸ್ಮರನಾಗಿ: **ವಡ್ಡಾರಾ,** ಪು. ೨೮. ಸಾ. ೮)

**ಪ್ರಮಾಣಂ ಮಾಡು** – ಅಳತೆಮಾಡು (ಗೋಮಂಡಳದೊಳ್ ಒಳ್ಳಿದುವಪ್ಪ ಪತ್ತು ಪಯನುಮಂ ಮೂಸಾಸಿರ ಕಂಡುಗ ಬತ್ತಮುಮಂ ಪ್ರಮಾಣಂ ಮಾಡಿ ಕೊಟ್ಟೊಡೆ: **ವಡ್ಡಾರಾ,** ಪು ೨೨ ಸಾ ೩)

**ಪ್ರಮಾಣಸಿದ್ಧ** – ದೃಢೀಕರಣಗೊಂಡುದು (ಅದಱಿಂದವಂ ಆತ್ಮವಚನಂ ಪ್ರಮಾಣಸಿದ್ಧಂಗಳಾಗಿ ಪದಾರ್ಥಂಗಳೆಲ್ಲಂ ಪ್ರತ್ಯಕ್ಷಂಗಳಲ್ಲದುವಿಲ್ಲ: **ಶಾಂತಿಪು,** ೧೮. ೪೦ ವ)

**ಪ್ರಮಾದಫಲಕ** – ಆಕಸ್ಮಿಕದ ಸಂದರ್ಭದಲ್ಲಿ ಪಾರಾಗಲು ಹಡಗಿನಲ್ಲಿ ಬಳಸುವ ಹಲಗೆ (ಪತ್ತಿ ಪ್ರಮಾದಫಲಕಮಂ ಅತ್ಯುಗ್ರಗ್ರಾಹನಿವಹಸಂಕ್ಷೋಭಿತದೊಳ್ ಮತ್ತೀ ರತ್ನಾಕರದೊಳ್ ಪುತ್ರಿಕೆಯೆನೆ ಬಟ್ಟಳಿಂತು ಬಾಟ್ವಿದೆ ಚೋದ್ಯಂ: **ಕವಿರಾಮಾ,** ೨. ೩೬)

**ಪ್ರಮಾದವಲಗೆ** – ಪ್ರಮಾದಫಲಕ (ಜನ್ಮಜಳಧಿಯೊಳ್ ದೇಹಬಹಿತ್ರಮದೊಡೆಯೆ ಜೈನಮೆಂಬಾ ಪ್ರಮಾದವಲಗೆಯನೆ ಪಿಡಿಯದವನಡಿಗಿಟಿಗುಂ: **ಸಮಯಪ,** ೧೩. ೬೩)

**ಪ್ರಮಿತ** – ಪ್ರಸಿದ್ಧವಾದ (ಭಗ್ನೋಪದಂಶಫೃತಸಿತನಿಚಯಹೃದ್ಯದಿಂ ವರ್ತಿಕಾರತ್ನೋರಮಿತದೀಪ್ತದಿಂ: **ಚಂದ್ರಪ್ರಪು,** ೬. ೧೦೨); ಅಳತೆಯುಳ್ಳ (ಅಧೋಲೋಕಂ ಮಧ್ಯಮಲೋಕಂ ಊರ್ಧ್ವಲೋಕಂ ಕ್ರಮದಿಂ ತ್ರಸನಾಳಮೇಕರಜ್ಜುಪ್ರಮಿತಂ: **ಅಜಿತಪು,** ೬. ೫೬)

**ಪ್ರಮಿತಿ** – ಅಳತೆ (ಒಸೆದಱುದಿಂಗಳ್ವರಂ ಪಂಚರತ್ನೋತ್ಕರದಿಂ ಸಾರ್ದ ತ್ರಿಕೋಟಿಪ್ರಮಿತಿಯ ಮಟೆಯಂ ಪಣ್ಣಿದಂ ಲೋಕಪಾಳಂ: **ಶಾಂತಿಪು,** ೯. ೧೬೨೦)

**ಪ್ರಮುದಿತ** – ಆನಂದಕರವಾದ (ಪ್ರಮುದಿತಭವ್ಯಮಂ ಸುಕವಿಸಂಕುಳಸೇವ್ಯಮಂ .. .. ಜಿನಾನ್ವಯಕ್ರಮಯುತ ಕಾವ್ಯಮಂ ನೆಱೆಯೆ ನಿರ್ಮಿಸಿ: **ಚಂದ್ರಪ್ರಪು,** ೧೬. ೮೨); ಅರಳಿದ (ಪ್ರಮುದಿತ ಕಂಕೇಲ್ಲಿಯವೋಲ್ ಪ್ರಮದಾಪದಜತುರಸಾಂಕಿತಂ .. .. ರಾಜಿಪುದು: **ಕುಸುಮಾಕಾ,** ೨. ೯೮)

**ಪ್ರಮೃಷ್ಟ** – ಲೇಪಿಸಿದ (ಅಂತಾರೋಗಿಸಿದಿಂ ಬಟೆಯಂ ಆಚಮಿತ ಚಂದ್ರಕಾಂತದ್ರವಸುರಭಿಸಲಿಲನುಂ ಘನಸಾರ ಚಂದನಸಾರ ಪ್ರಮೃಷ್ಟ ಕರತಳನುಂ: **ಆದಿಪು,** ೧೧. ೨೭ ವ)

**ಪ್ರಮೋದ** – ಸಂತೋಷ (ಇದುವೆ ಸುಕವಿಪ್ರಮೋದಪ್ರದಂ ಇದುವೆ ಸಮಸ್ತಭವ್ಯಲೋಕಪ್ರಮದಪ್ರದಂ ಎನೆ ನೆಗಟ್ಟಿ **ಆದಿಪು**ರಾಣದೊಳ್ ಅಜೆವುದು ಕಾವ್ಯಧರ್ಮಮಂ ಧರ್ಮಮುಮಂ: **ಆದಿಪು,** ೧. ೩೮)

**ಪ್ರಯತ** – ಶುದ್ಧತೆ (ಕ್ಷಯವೃಜಿನಂ ಜಿನಸಮಯಂ ಸ್ಮಯರಹಿತಂ ಹಿತವಚಃಪ್ರಿಯಂ ಪ್ರಿಯಧರ್ಮಂ ಪ್ರಯತಯುತಂ ಸದ್ವಿನಯಂ ನಯವಾಕ್ಪ್ರಸರಂ ಸರಸ್ವತೀಮುಖಮುಕುರಂ: **ಸುಕುಮಾಚ,** ೧. ೫೧)

**ಪ್ರಯೋಗ** – ನಿದರ್ಶನ (ಲಕಾರ ಕುಳಂಗಳ ವರ್ಣಾವೃತ್ತಿಗೆ ಪ್ರಯೋಗಂ – ದೆಸೆಗಳನಳುರ್ದು ಸುಡಲ್ಕೆಳರ್ದು ಮಿಳಿರ್ದು ತಳರ್ದತ್ತಾಗಳ್: **ಶಬ್ದಮದ,** ೨೯ ಪ್ರ ೩೦); ಪರೀಕ್ಷೆ ಮಾಡುವುದು, ಪರಿಶೀಲನೆ (ಅದು ಸಾಧನ ದೂಷಣ ಪ್ರಯೋಗಾನ್ಯಥಾನುಪತ್ತಿಯಿಂ ಬಹಿರರ್ಥಸಿದ್ಧಿಯಕ್ಕುಂ: **ಆದಿಪು,** ೨. ೧೦ ವ)

**ಪ್ರಯೋಗಿಸು** – ಉಪಯೋಗಿಸು (ಅದಱ ವಿಶೇಷವಿಭಾಗಮಂ ಉದಾಹರಣಮಾರ್ಗದಿಂ ಪ್ರಯೋಗಿಸಿ ತೋರ್ಪೆಂ: **ಕವಿರಾಮಾ,** ೩. ೯೯); ಬಳಸು (ಸಾಮಾದ್ಯುಪಾಯಂಗಳಿಂ ಶತ್ರುಗಳಂ ವಂಶಮಾಡಲಾರದೆ ಅಪಸರಣಮೇ ಶರಣಮಾಗಿರ್ದುದುವಂ ಪ್ರಯೋಗಿಸದೆ ಶಬ್ದಶ್ರವಣಮಾತ್ರಕ್ಕೆ ಭಯಂಗೊಂಡೋಡಿದಿರಪ್ಪೊಡೆ: **ಪಂಚತಂತ್ರ,** ೯೨ ವ)

**ಪ್ರಯೋಜ್ಯ** – ಬಳಸಲು ತಕ್ಕುದಾದ (ಸಾಮಂ ಪ್ರಿಯಜನಪ್ರಯೋಜ್ಯಂ ಅಲ್ಲದೆಡೆಯೊಳ್ ಉನ್ನತವಿಳಸಿತಂ: **ಶಾಂತಿಪು,** ೩. ೯೩ ವ)

**ಪ್ರರತ್ನ** – ಶ್ರೇಷ್ಠವಾದ ಮಣಿ (ಭೂಭುಜನಿಕರಕಿರೀಟಪ್ರತ್ನ ಪ್ರಭೂನತಾಂತೊರದ್ಯೋತ ನೂತ್ನೋದಕಜನಿತ ಪದಾಂಭೋಜಂ: **ಗಿರಿಜಾಕ,** ೩. ೨)

**ಪ್ರರೂಢ** – ಚೆನ್ನಾಗಿ ಬೆಳೆದ (ಪ್ರರೂಢಯೌವನ ಮನೋಹರನುಂ ಕವಚಹರನುಂ ಆದ ನಿಜತನೂಜನಂ ನೋಡಿ: **ಚಂದ್ರಪ್ರಪು,** ೨. ೬೭); ಹೆಚ್ಚಾದ (ಬರಿಸಿ ಕ್ಷಿತಿಪತಿಯಂ ಸಯ್ತಿರಿಸಿ ಪ್ರಿಯಕುಶಲವಾರ್ತೆಯಂ ಬೆಸಗೊಂಡು ಸ್ಥಿರಮಿರ್ದು ಪ್ರಭು ನುಡಿಯೆ ಪ್ರರೂಢಮುದನಾದನಾತನೆಂಬುದು ದೂಷ್ಯಂ: **ಕವಿರಾಮಾ** ೨. ೭)

**ಪ್ರರೋಚನಾ** – ನಾಟಕದ ಒಂದು ಭಾಗ, ಆರಂಭದಲ್ಲಿ ಪ್ರೇಕ್ಷಕರ ಅಭಿರುಚಿಯನ್ನು ಹುಟ್ಟಿಸುವುದು (ನಾಂದೀ ಪ್ರರೋಚನಾ ಪ್ರಸ್ತಾವನಾ ಇತಿವೃತ್ತ ಸಂಧಿ ಪ್ರವೇಶ ವಿಷ್ಕಂಭ ಕಪೋತಿಕಾ ವ್ಯಾಳಿಕಾದಿ ಲಕ್ಷಣೋಪೇತಂಗಳಪ್ಪ ನಾಟಕಂಗಳೊಳಂ: **ಪಂಪಭಾ,** ೨. ೩೪ ವ)

**ಪ್ರರೋಹ** – ಮೊಳಕೆ (ನಿಮಿರ್ದುವು ಸಂಧ್ಯಾರುಣ ಕಿರಣಮಾಲೆಗಳ್ ಗಗನವಾರ್ಧಿವೇಲಾವನ ವಿದ್ರುಮದ ಕದಳೀಪ್ರರೋಹಂ ನಿಮಿರ್ದಪುವೆಂಬಂಬಂತೆ ಚಂದ್ರಬಿಂಬದಿನಾಗಳ್: **ಮಲ್ಲಿನಾಪು,** ೭. ೨೬)

**ಪ್ರಲಂಬ** – ಜೋತುಬಿದ್ದ (ನೀಲದ ನೆಲಗಟ್ಟಿಂ ಮಣಿಧೂಳೀಸಾಳಂ ಪ್ರಲಂಬ ಪಲ್ಲವಮೆಸೆಗುಂ: **ನೇಮಿನಾಪು,** ೨. ೪೩)

**ಪ್ರಲಾಪಂಗೆಯ್** – ರೋದಿಸು (ಅಂತು ಕಾಲಪ್ರಾಪ್ತನಪ್ಪುದುಂ ಲಕ್ಷ್ಮಣನಂತಃಪುರಪುರಂಧ್ರಿಯರ್ ಕಂಡತಿಪ್ರಲಾಪಂಗೆಯ್ವುದುಂ: **ಪಂಪರಾ,** ೧೬. ೪೯ ವ)

**ಪ್ರವಚನ** – [ಜೈನ] ಜಿನವಾಣಿಯ ವ್ಯಾಖ್ಯಾನ (ಪ್ರಕಟಿತಜಿನಪ್ರವಚನಪ್ರಕಾರದೊಳ್: **ಸುಕುಮಾಚ,** ೬. ೬)

**ಪ್ರವಣ** – ತಲ್ಲೀನವಾದವನು (ಪ್ರವಣಂ ಅತಿತತ್ಪರಂ: **ಅಭಿಧಾವ,** ೨. ೧. ೧೮); ಆಸಕ್ತ (ಗುರುಶೈಕ್ಷ್ಯಗ್ಲಾನ ಸಂಘ ಪ್ರವಣಗಣತಪೋನಿಷ್ಕಿತಾನೀತಸಾಧೂತ್ಕರದೊಳ್: **ಸುಕುಮಾಚ,** ೪. ೧೭); ಸಾಮರ್ಥ್ಯ (ಪದಂ ಅರ್ಥಪ್ರತಿಪಾದನ ಪ್ರವಣಂ ಅರ್ಥಂ ಶಬ್ದಸಂಪತ್ತಿ ಸಂಪದವು ಅಕ್ಲಿಷ್ಟಪದಾರ್ಥಸಂಗತಿ ರಸಪ್ರಸ್ಯಂದಿ ಮಾಟ್ಕುಂ: **ಮಲ್ಲಿನಾಪು,** ೧. ೩೭): ಪಾಂಡಿತ್ಯ (ಆವೊಂ ವಾದಿ ಕಥಾತ್ರಯ ಪ್ರವಣದೊಳ್ .. .. ದಿವ್ಯಮುನಿವೋಲ್ ವಿಖ್ಯಾತಿಯಂ ತಾಳ್ದಿದಂ: **ಪಂಪರಾ,** ೧. ೨೪)

**ಪ್ರವರ** – ಶ್ರೇಷ್ಠವಾದ (ಇದೇಂ ವೃಜಿನಬಂಧಮೋ ಕುಸೃತಿಬಂಧಸಂಬಂಧಂ ಎಂದದೇಂ ತಳೆದನೋ ಮುನಿಪ್ರವರನಾಗಳ್ ಉದ್ವೇಗಮಂ: **ಸುಕುಮಾಚ,** ೪. ೬೧); ಅಗ್ರ ವ್ಯಕ್ತಿ (ಕವಿ ಗಮಕಿ ವಾದಿ ವಾಗ್ಮಿ ಪ್ರವರರ ಪಂಡಿತರ ನೆಗಟ್ದಿ ಸಬ್ಬವದವರೊಡನೆ ಅಂತು ಒಸೆದ ಅನ್ನವಾಸದೊಳ್ ಇರ್ದನಾಗಳ್ ಹರಿಗಂ: **ಪಂಪಭಾ,** ೩. ೮೦)

**ಪ್ರವರ್ತಕ** – ಮೂಲಪುರುಷ (ಈ ಭವಕ್ಕೆಂಟನೆಯ ಭವದೊಳ್ ಭರತದೊಳ್ ನೀನಾದಿತೀರ್ಥಪ್ರವರ್ತಕನಾದಂದು ಈ ಶ್ರೀಮತಿ ದಾನತೀರ್ಥಪ್ರವರ್ತಕಂ ಶ್ರೇಯಾಂಸನಕ್ಕುಂ: **ಆದಿಪು,** ೫. ೧೩ ವ)

**ಪ್ರವರ್ತನ** – ಹೊರಳುವುದು (ಅನವರತ ನಿಹತ ನರ ಕರಿ ತುರಗ ನಿಕುರುಂಬ ಕೀಲಾಲ ಕಲ್ಲೋಲ ಪ್ರವರ್ತನ ಅನೇಕ ನದ ನದೀ ಪ್ರವಾಹಬಾಹುಳ್ಯ ದುಸ್ತರಾವತರಣ ಮಾರ್ಗಮಂ: **ಪಂಪಭಾ,** ೧೩. ೫೧ ವ); ತೊಡಗುವಿಕೆ (ಪಂಚಾಣುವ್ರತಾದಿ ಪ್ರವರ್ತನಸ್ವಭಾವ ಸಂಯಮುಮಂ: **ಆದಿಪು,** ೧೫. ೧೩ ವ)

**ಪ್ರವರ್ಧ[ಮಾ]ನ** – ವೃದ್ಧಿಗೊಳ್ಳುವ (ಬಲದೇವ ವಾಸುದೇವರ್ .. .. ಮಾತಾಪಿತೃಗಳನುರಾಗದೊಡನೆ ಪ್ರಮೋದ ಪ್ರವರ್ಧಮಾನಮಾಗೆ ಸುಖಮಿರ್ಪನ್ನೆಗಂ: **ಶಾಂತಿಪು,** ೧. ೮೦ ವ)

**ಪ್ರವಲ್ಹಿಕಾ** – ಪ್ರಹೇಲಿಕೆ, ಸಮಸ್ಯಾಪೂರಣ (ಉಲ್ಲಸಿತ ಪ್ರವಲ್ಹಿಕಾ ಪಾನಗಾನಾದಿ ವಿವಿಧ ವಿನೋದ: **ಆಚವರ್ಧ,** ೬. ೪೪ ವ)

**ಪ್ರವಳ** – ರಭಸವಾಗಿ ಚಲಿಸುವ (ಪ್ರವಳ ಕರಿ ಮಕರ ಘೂತ್ಕಾರವಾತದಿಂದುದ್ದಮೊಗೆವ ಜಲಬಿಂದುಗಳಿಂ ದಿವದೊಳೆ ತಾರಕಿತಂ ಮಾಡುವುದು ನಭೋಘಾಗಮಂ ದದಂಭಃಪೂರಂ: **ಚಂದ್ರಪ್ರಪು,** ೧೦. ೪೯)

**ಪ್ರವಾಹಿನಿ** – ನದಿ (ಮಹಾಪ್ರವಾಹಿನೀಸಲಿಲಸಮ್ಮಿಶ್ರಕರ್ಪೂರದಳ ಬಹುಳಕಾಂತಿದಂತುರಿತ ಚಂದ್ರಕಾಂತಕಲಶಂಗಳಿಂ: **ಪಂಪರಾ,** ೧೨. ೨ ವ)

**ಪ್ರವಾಳ** – ಚಿಗುರು (ಅದಜಿಂ ಪ್ರವಾಳಪತ್ರಪುಷ್ಪಾಂಕುರಂಗಳಿಂದಂ ಸಂಕೀರ್ಣಮಪ್ಪ ರಾಜಾಂಗಣಮಂ ಮೆಟ್ಟದೆ ಪೆಱತೊಂದೆ ಬಟ್ಟೆಯೊಳ್ ಬಂದೆವು: **ಆದಿಪು,** ೧೫. ೧೧ ವ); ಹವಳ (ಆ ಪ್ರವಾಳಪಾಟಲಾಧರೆಯೊಳ್ ಆ ನವಾಮ್ರದ್ರುಮ ಪಲ್ಲವಾಧರಂ: **ಆದಿಪು,** ೮. ೨೩ ವ)

**ಪ್ರವಾಳಪಾಟಲ** – ಹವಳದಂತೆ ಕೆಂಪಾದ (ಆ ಪ್ರವಾಳಪಾಟಲಾಧರೆಯೊಳ್ ಆ ನವಾಮ್ರದ್ರುಮಪಲ್ಲವಾಧರಂ: **ಆದಿಪು,** ೮. ೨೩ ವ)

**ಪ್ರವಿಮಲ** – ಪರಿಶುದ್ಧವಾದ (ಪ್ರವಿಮಲಸದ್ಗೀರ್ವಾಣದಾತವ್ಯ ಸಾಯಕ ಸಂಪೂರ್ಣ ಕಳಾಪ್ರವೀಣನಂ ಇಳಾಭಾರಕ್ಷಮ ಅಕ್ಷೂಣನಂ .. .. ಸರ್ವಲಕ್ಷಣಸಂಪೂರ್ಣಂ ಅಪ್ಪ ಮಗನಂ ಅಮೋಘಂ ಪಡೆವೆಂ: **ಪಂಪಭಾ,** ೧. ೧೩೪ ಮತ್ತು ೧೩೪ ವ)

**ಪ್ರವೀರ** – ಮಹಾ ಪರಾಕ್ರಮಿ (ಬಗೆಯದೆ ದಾನವಾಧಿಪನ ದೋರ್ಬಲಮಂ ಖಚರಪ್ರವೀರರಂ ಬಗೆಯದೆ: **ಪಂಪರಾ,** ೧. ೧೩೪)

**ಪ್ರವೃತ್ತ** – ಪ್ರವರ್ತಿತವಾದ, ಆರಂಭಿಸಿದ (ಎಲ್ಲಿತ್ತೊ ಗೀತವಾದ್ಯಂ ಸಲ್ಲಲಿತವಧೂಜನಪ್ರವೃತ್ತಂ ನೃತ್ತಂ: **ಗದಾಯು,** ೫. ೪೩)

**ಪ್ರವೃತ್ತಿ** – ವೃತ್ತಾಂತ (ಮಹಾಶ್ವೇತಾಪ್ರವೃತ್ತಿಯಂ ಶೋಕಭಾರದಮಂ ತಾಳ್ದಿದವೋಲ್: **ಕಾದಂಬ,** ೫. ೨೦೭)

**ಪ್ರವೇಕ** – ಶ್ರೇಷ್ಠ (ಕಿವಿಯೊಳ್ ಪೀಯೂಷಮಂ ಪಿಂಡಲ್ ಉರ್ವರೆಯೊಳ್ ಸಂದ ಕವಿಪ್ರವೇಕರೆ ವಲಂ ಬಲ್ಲರ್ ಪೆಱರ್ ಬಲ್ಲರೇ: **ಲೀಲಾವತಿ.** ೧. ೧೩)

**ಪ್ರವ್ರಜಿತ** – ಸಂಚರಿಸುವವನು, ಸನ್ಯಾಸಿ (ಎಮ್ಮೀ ಸ್ಥಿತಿಯಿಂ ಪ್ರವ್ರಜಿತಮಪ್ಪುದು ಉಚಿತಂ ಮಗನೇ: **ವರ್ಧಮಾಪು,** ೨. ೩೯); ಸನ್ಯಾಸ (ದ್ವಿಜಕುಲನೆನಿಸುವನೀ ಪ್ರವ್ರಜಿತದೊಳ್ ಎಸಗಿದೊಡೆ ದೋಷಮುಂಟೆಂದು ಮನುವ್ರಜವಾಕ್ಯಮುಂಟು: **ಸುಕುಮಾಚ,** ೩. ೩೦)

**ಪ್ರವ್ರಜ್ಯ** – [ಸಂಚಾರ ಮಾಡುವ] ಸನ್ಯಾಸದೀಕ್ಷೆ (ಹೇಯಂ ಸಾಮ್ರಾಜ್ಯಂ ಉಪಾದೇಯಂ ಪ್ರವ್ರಜ್ಯಮೆಂದು ಮಾಣದೆ ರಾಜ್ಯಶ್ರೀಯಂ ಕೊಟ್ಟಂ: **ಆದಿಪು,** ೧೬. ೬೨)

**ಪ್ರಶಮಿಸು** – ಉಪಶಮನಗೊಳ್ಳು (ವಿಶದಯಶ ಧರ್ಮಂ ಅಷ್ಟಾದಶಕೋಟ್ಯನುಕೋಟಿಸಾಗರೋಪಮಕಾಲಂ ಪ್ರಶಮಿಸಿ ನಿಂದುದು: **ಆದಿಪು,** ೯. ೬೩)

**ಪ್ರಶಮೆ** – ಸಮಾಧಾನ (ನಿಮಗಭ್ಯದಯಮೆ ತಾಮೆಮಗೆ ನಿತ್ಯಕರ್ಮಾನುಷ್ಠಾನದ ಪ್ರಶಮೆಯಪ್ಪುದು ಎಂದು ಅತಿಮುದದಿಂದಭ್ಯುದಯಮಾಗೆ ಪರಸಲ್ಬಂದೆಂ: **ಅನಂತಪು,** ೧೩. ೩೨)

**ಪ್ರಶಸ್ತ** – ಉತ್ತಮವಾದ, ಮಂಗಳಕರವಾದ (ಪ್ರಶಸ್ತಲಗ್ನದೊಳ್ ಆತ್ಮೀಯಸ್ವಾಮಿಯಪ್ಪ ಅತಿಬಳಮಹರಾಜನನಂ ಉಚಿತಪ್ರತಿಪತ್ತಿಗಳಿಂ ಕಂಡು: **ಸುಕುಮಾಚ,** ೨. ೭೩ ವ)

**ಪ್ರಶಸ್ತಿ** – ಹೊಗಳಿಕೆ (ದರ್ಪನ ವರ್ಣನೆ ದರ್ಪಕನ ಪ್ರಶಸ್ತಿ: **ಗಿರಿಜಾಕ,** ೪. ೧೨೦); ಬಿರುದು ಸಮನೆನಿಸುವರ್ ಪ್ರಶಸ್ತಿಕ್ರಮದೊಳ್ .. .. ಎನಲ್ ಸಮನೆನಿಪರೆ ಗುಣದೊಳ್ ಅರಿಗನೊಳ್ ಸಾಮಂತರ್: **ಪಂಪಭಾ,** ೧. ೪೯)

**ಪ್ರಶಾಂತಿ** – ಶಾಂತವಾದ ಸ್ಥಿತಿ (ಭೂಪಾಟೋಪಂ ಬರ್ಕುಮೆ ವೃಜಿನವಿಲೋಪಿ ಜಿನೇಂದ್ರಪ್ರಶಾಂತಿಯೊರೆಗಂ ದೊರೆಗಂ: **ಶಾಂತಿಪು,** ೧೧. ೮೯); [ಜೈನ] ಐವತ್ತಮೂರು ಗರ್ಭಾನ್ವಯಕ್ರಿಯೆಗಳಲ್ಲಿ ಒಂದು, ವೈರಾಗ್ಯ ವೃತ್ತಿ (ಆಧಾನ ಪ್ರೀತಿ ಸುಪ್ರೀತಿ ಧೃತಿ ಮೋದ ಪ್ರಿಯೋದ್ಭವ ನಾಮಕರ್ಮ .. .. ಗೃಹೀಶಿತ್ವ ಪ್ರಶಾಂತಿ ಗೃಹತ್ಯಾಗ .. .. ನಿರ್ವೃತಿಯೆಂಬ ಅಯ್ವತ್ತುಮೂಱು ಗರ್ಭಾದಿ

ನಿರ್ವಾಣಪರ್ಯಂತಂಗಳಪ್ಪ ಗರ್ಭಾನ್ವಯ ಕ್ರಿಯೆಗಳುಂ: **ಆದಿಪು,** ೧೫. ೧೫ ವ) ನೋಡಿ, 'ಗರ್ಭಾನ್ವಯಕ್ರಿಯೆ'

**ಪ್ರಶ್ರಯ** – ನಮ್ರತೆ, ವಿನಯ (ಉಡುಗಿ ಪಿಂಛಚ್ಛತ್ರಮಂ ಪ್ರಶ್ರಯಾಕರವೇಷೋಚಿತರ್ ಅರ್ಘ್ಯಹಸ್ತರ್ ಇದಿರಂ ಬಂದರ್ ಭಯಭ್ರಾಂತಿಯಿಂ: **ಆದಿಪು,** ೧೨. ೬೮)

**ಪ್ರಷ್ಠೌಹಿ** – ಮೊದಲ ಸಲ ಗಬ್ಬವಾದ ಹಸು (ಓಹೋ ಹೊಗಳದಿರೆನಿಸಿದುವಾ .. .. ಪ್ರಷ್ಠೌಹಿ .. .. ದುಗ್ಧಧಾರಾಧ್ವನಿಗಳ್: **ಲೀಲಾವತಿ,** ೫. ೧೦೮)

**ಪ್ರಸಂಗ** – ಸಂಪರ್ಕ (ತನ್ನ ಪರಿಚಾರಕಜನದ ವಧೂಜನದ ಪ್ರಸಂಗಮನಲ್ಲದುಟಿದ ಜನದ ಸೋಂಕುಮಂ ಪ್ರಸಂಗಮುಮಂ ಎಂತುಟೆಂದಱಿದವನಲ್ಲಂ: **ಸುಕುಮಾಚ,** ೧೧. ೩೫ ವ); ಸನ್ನಿವೇಶ(ದಿವಿಜೇಂದ್ರಂಗಾದುದು ಗೀತವಾದ್ಯನೃತ್ಯಪ್ರಸಂಗಂ ಅಜಿತನ ಕೆಲದೊಳ್: **ಅಜಿತಪು,** ೫. ೮೩)

**ಪ್ರಸಂಗಗುಣ** – ರಾಜನ ಐದು ವ್ಯಸನಗಳು: ಸ್ವಭಾವ ಪ್ರದೋಷ ಪ್ರಸಂಗಗುಣ ಪ್ರತಿಲೋಮ ಪೀಡನ – ಇವುಗಳಲ್ಲಿ ಮೂರನೆಯದು (ಅಂಗನಾ ದ್ಯೂತ ಮೃಗಯಾ ಪಾನ ವಾಗ್ದಂಡ ಹರ್ಷಾರ್ಥದೂಷಣಗಳೆಂಬ ಏೞುಂ ಪ್ರಸಂಗಗುಣಮೆಂಬುದಕ್ಕುಂ, ಕಾಂತಾ ದ್ಯೂತ ಮೃಗಯಾ ಪಾನಂಗಳ್ ನಾಲ್ಕುಂ ಕಾಮಜಂಗಳ್, ಉೞಿದ ವಾಗ್ದಂಡ ಹರ್ಷಾರ್ಥ ದೂಷಣಂಗಳ್ ಮೂಱುಂ ಕ್ರೋಧಜಂಗಳಕ್ಕುಂ: **ಪಂಚತಂತ್ರ,** ೧೩೭ ವ)

**ಪ್ರಸನ್ನ** – ಸ್ವಚ್ಛವಾದ (ಅನಾವಿಳಂ ಪ್ರಸನ್ನಂ ಸ್ವಚ್ಛಂ: **ಅಭಿಧಾವ,** ೨. ೧. ೬೦)

**ಪ್ರಸನ್ನತೆ** – ಸಂತೃಪ್ತಿ (ಪ್ರಸನ್ನತೆಯನಾಂತುವಾ ಪದದೊಳ್ ಆಸೆಗಳ್ ಪೆತ್ತುದಾಗಸಂ ವಿಶದಭಾವಮಂ: **ಆಚವರ್ಧ,** ೧೫. ೭೪)

**ಪ್ರಸನ್ನೆ** – ಕಳ್ಳು, ಹೆಂಡ (ಮೈರೇಯಂ ಆಸವಂ ಮಧು ವಾರಂ ಮದ್ಯಂ ಪ್ರಸನ್ನೆ ಹಾಲಂ ಕಲ್ಯಂ ।ವಾರುಣಿ ಕಾದಂಬರಿಯದು ಸೀರಿಪ್ರಿಯೆ ಸೀಧು ಮದಿರೆ ಸುರೆ ಜಗಳಂ ಕಳ್: **ಅಭಿಧಾವ,** ೧. ೧೬. ೫)

**ಪ್ರಸರ** – ವಿಸ್ತಾರ (ಪ್ರಭಾಪ್ರಸರವಾದಂ ತಳ್ತು ತದ್ವೀಥಿಕಾಂತಾರದೊಳ್ ಪೆರ್ಬೊನಲಂದದಿಂ ಪರಿಯೆ: **ಕಾದಂಸಂ,** ೫. ೧೭); ಗುಂಪು (ನೇಮಿಯ ವಾಕ್‌ಪ್ರಸರಂ ಅದಱ ಎಸಕದಿಂ ನಿಷ್ಪಿಸತಾದುದು ಜಗಕೆ ನೇಮಿನಾಥಪುರಾಣಂ: **ನೇಮಿನಾಪು,** ೧. ೨೮)

**ಪ್ರಸವ** – ಹೆರಿಗೆ (ಪ್ರಸವಂ ಜನಿ: **ಅಭಿಧಾವ,** ೧. ೩. ೩); ಹುಟ್ಟು (ತ್ರಿಭುವನಕ್ಕಿದು ಭೂಮಿಯೆಂಬ ಪೆಂಪೊದವಿರೆ ಪೆರ್ಮೆಯಿಂ ವಿದಿಸೆಯೆಂಬುದು ನಚ್ಚಿನ ರಾಜಧಾನಿ: **ಕಾದಂಬ,** ೧. ೧೫); ಹೂವು (ಕಟ್ಟಿಲೆಯನಲೆವ ಸೊಡರ್ಗುಡಿಗಳನೀ ಅಳ್ಳಿಱಿದಲೆವುವು ಬನದೊಳಗುಳ್ಳಲರ್ದು ಉಜ್ವಳಿಪ ಚಂಪಕಪ್ರಸವಂಗಳ್: **ಆದಿಪು,** ೧೧. ೬೭)

**ಪ್ರಸವಸಮಯ** – ಹೆರಿಗೆಯ ಕಾಲ (ತನ್ಮಹಾದೇವಿಯ ಪರಿಪೂರ್ಣ ಪ್ರಸವಸಮಯಂ ಮಾರ್ಗಶಿರ ಬಹುಳ ದಶಮಿಯಾಗೆ: **ಪುಷ್ಪದಂಪು,** ೧೦. ೧ ವ)

**ಪ್ರಸವಾಂಗ** – [ಜೈನ] ಮಾಲ್ಯಾಂಗ ಎಂಬ ಒಂದು ಕಲ್ಪಕುಜ, ಹೂಮಾಲೆಗಳನ್ನು ಒದಗಿಸುವ ಕಲ್ಪಕುಜ (ವಸನಾಂಗ ಆತೋದ್ಯಾಂಗ ಪ್ರಸವಾಂಗ ಜ್ಯೋತಿರಂಗ ದೀಪಾಂಗ ಅನ್ನಾಂಗ ಸುರಾಂಗ ಭಾಜನಾಂಗ ಅವಸಥಾಂಗ ವಿಭೂಷಣಾಂಗ ದಶಕಲ್ಪಕುಜಂ: **ಚಂದ್ರಪ್ರಪು,** ೩. ೩೪) ನೋಡಿ, 'ಅಂಗಕಲ್ಪಕುಜ'

**ಪ್ರಸವಾಗಾರ** – ಹೆರಿಗೆ ಕೋಣೆ (ಪ್ರಸವಾಗಾರದಂತೆ ನಿಷಿದ್ಧಾನ್ಯಪ್ರವೇಶಮುಂ ರಾಜಭವನದಂತೆ ಕೃತರಕ್ಷಾ ವಿಧಿಯುಂ: **ಆದಿಪು,** ೧೩. ೪೬ ವ)

**ಪ್ರಸಹ** – ಶಾಶ್ವತವಾದ (ಅಸಹಾಯಸಾಹಸ ವಿನೋದಿ ವಿವಿಕ್ತಚಿತ್ರ ಪ್ರಸಹ ಪ್ರಜಕಾಶಿತ ಮಹೋದಯತತ್ತ್ವಸತ್ತ್ವಂ: **ಕವಿರಾಮಾ,** ೩. ೨೨೯)

**ಪ್ರಸಾಧನ** – ಅಲಂಕಾರ (ವಿದ್ಯಾಧರಪ್ರಸಾಧನಂ ಎನಗಿಂದಿನೊಳಿನಿತೆಂಬಂತೆ ನೆಱೆಯೆ ಕೈಗೆಯ್ದು: **ಆದಿಪು,** ೨. ೫೦ ವ); ಆಭರಣ (ಪ್ರಸಾಧನಂ .. .. ವಿಭೂಷಾ ಪ್ರತಾನ ಆಭರಣಮೆಂಬುವವು ತೊಡವಕ್ಕುಂ; **ಅಭಿಧಾವ,** ೧. ೧೩. ೧)

**ಪ್ರಸಾಧನಶಾಲೆ** – ನೇಪಥ್ಯಗೃಹ (ಪಂಚರತ್ನಪ್ರಭಾಪ್ರಸಾದಿತ ಪ್ರಸಾಧನಶಾಲೆಯೊಳಗೆ ಸ್ವಯಂಪ್ರಭೆಯಂ ಆನೆ ಪಸದನಂಗೊಳಿಸುತ್ತುಮಿರ್ದು: **ಆದಿಪು,** ೪. ೧೧ ವ)

**ಪ್ರಸಿದ್ಧಾನ** – ಪ್ರಖ್ಯಾತಿ (ಪ್ರಸಿದ್ಧಾನಮಂ ಪಡೆದ ಪರಾರ್ಥನುಂ ಶಾಶ್ವತಮೆಂಬುದು ಅನುಕ್ತಸಿದ್ಧಮಲ್ಲದಂದು ಅಭಿಧಾನಂ ನಿರರ್ಥಕರಮುಂ ಆಧಾರರಹಿತಮುಮಕ್ಕುಂ: **ಶಾಂತಿಪು,** ೮. ೧೩೮ ವ)

**ಪ್ರಸುಪ್ತ** – ನಿದ್ದೆ ಮಾಡುತ್ತಿರು[ವವನು] (ಶಯ್ಯಾಗೃಹಕ್ಕೆ ಬಿಜಯಂಗೆಯ್ದು ದುಕೂಲಪ್ರಚ್ಛದಾಚ್ಛಾದಿತ ವಿಶಾಲ ಹಂಸತೂಲತಲ್ಪದೊಳ್ ಸುಖಪ್ರಸುಪ್ತನಿರೆ: **ಪಂಪರಾ,** ೧೧. ೧೮೫ ವ)

**ಪ್ರಸೂತಿ** – ಹೆರಿಗೆ (ಪ್ರಸೂತಿ ಉದ್ಭಾವದಿಂ ಎಮ್ಮವ್ವೆ ಕೞಿದಳ್ ಅಂತು ಆ ಕ್ಷಣದೊಳ್: **ಕಾದಂಬ,** ೧. ೧೧೧)

**ಪ್ರಸೂನ** – ಹೂವು, ಮೊಗ್ಗು (ದೆಸೆಗಳ ಮೇರೆಯಂ ನಿೞಿಸಿ ಪೋಪುದುಂ ಆಭರಣಪ್ರಸೂನಸದ್ವಸನವಿಲೇಪನಾದಿಗಳೊಳಂ ಕೆಲವಂ ಗುಱಿಮಾಡಿಕೊಂಡು: **ಆದಿಪು,** ೬. ೮)

**ಪ್ರಸೂನವಿಶಿಖ** – ಪುಷ್ಪಾಯುಧ, ಮನ್ಮಥ (ಒರ್ವ ಸುಂದರಿ ಬಂದೀಕ್ಷಿಸಿದಳ್ ಪ್ರಸೂನವಿಶಿಖ ಶ್ರೀರೂಪನಂ ಭೂಪನಂ: **ರಾಜಶೇವಿ,** ೭. ೧೦)

**ಪ್ರಸೂನಾಯುಧ** – ಪ್ರಸೂನವಿಶಿಖ (ಪುಷ್ಪಮಾಲಾಯುತೆಯಾಗಿ ರಾಗದಿಂ ಉಪೇಶ್ವರನೊಳ್ ನೆಱೆವ ಅಟ್ಟಿಱಿಂ ಪ್ರಸೂನಾಯುಧತಾಪತಪ್ತೆ .. .. ಹರಿಣಾಕ್ಷಿ: **ಪಂಚತಂತ್ರ,** ೧೨೯)

**ಪ್ರಸ್ಖಲಿತ** – ಮುಗ್ಗರಿಸಿದ (ವಿದ್ಯುತ್ಕೇಶವಿದ್ಯಾಧರಂ ತ್ವರಿತಪ್ರಸ್ಖಲಿತಪ್ರಯಾಣರಭಸಂ ಶುದ್ಧಾಂತಕಾಂತಾಜನಂ ಬೆರಸುತ್ಕಂಪಿತನೋಡಿ ದಿವ್ಯಮುನಿಪಾದಾಂಭೋಜಮಂ ಪೊರ್ದಿದಂ: **ಪಂಪರಾ,** ೧೦. ೧೦೯)

**ಪ್ರಸ್ತರ** – ಬಂಡೆಗಲ್ಲು (ಭೂಮೀಧರಮೆಲ್ಲಂ ಮೇರು ತತ್ ಪ್ರಸ್ತರನಿಕರಮದೆಲ್ಲಂ ಲಸತ್ ನಾಕರತ್ನಂ .. .. ಎನಲ್ ಎಸೆವ ಈ ಪಂಪೆಯೊಳ್: **ಉದ್ಭಟಕಾ,** ೩. ೫೫); ಬಂಡೆಗಳಿಂದ ತುಂಬಿ ಕಡಿದಾದ ದಾರಿಯಿರುವ ಭೂಪ್ರದೇಶ (ಆವ ದೆಸೆಯೊಳು ಬಟ್ಟೆಯಿಲ್ಲದೆ ಸಱಿವೀಟ್ಟು ಉಚ್ಚಮಪ್ಪ ಬೆಟ್ಟುಗಳ ನಡುವೆ ಕರಮಸಿದಪ್ಪ ಬಟ್ಟೆಯಾಗೇಱುವುದುಂ ಪ್ರಸ್ತರಮೆಂಬುದಕ್ಕುಂ: **ಪಂಚತಂತ್ರ,** ೨೯೭ ವ)

**ಪ್ರಸ್ತರಣ** – ಹಾಸಿಗೆ (ತಮಾಳದಳಪ್ರಸ್ತರಣಂ ಲತಾಮಗಿ ಮಳಯಕ್ರೋಡಾಚಳಂ ನೀನುಂ ಈಮದನಾಕಾರಾನುಮಂ

ಇಲ್ಲಿ ನಿಚ್ಚಲುಮಿರಿಂ ಕೇಳಿವಿನೋದಂಗಳಿಂ: **ಶಾಂತಿಪು,** ೫. ೧೪೨)

**ಪ್ರಸ್ತಾರ** – ಹಾಸಿಗೆ (ಆರೋಗಿಸಿ ನೃಪಸುತಂ .. .. ಮೃದುಪಲ್ಲವಪ್ರಸ್ತಾರದೊಳ್ ಆ ಲತೆಯ ಮನೆಯೊಳೊಱಗಿದನಾಗಳ್: **ಲೀಲಾವತಿ,** ೫. ೬೪)

**ಪ್ರಸ್ತಾವ** – ಸಮಯ (ಪರಶುರಾಮಂ ಮಱೆದು ಒರಗಿದಾ ಪ್ರಸ್ತಾವದೊಳ್ ಆ ಮುನಿಗೆ ಮುನಿಸಂ ಮಾಡಲೆಂದು ಇಂದ್ರಂ ಉಪಾಯದೊಳ್ ಅಟ್ಟಿದ ವಜ್ರಕೀಟಂಗಳ್: **ಪಂಪಭಾ,** ೧. ೧೦೪ ವ)

**ಪ್ರಸ್ತಾವನಾ** – ಆರಂಭ (ಇಂ ಬೆಸಸಿಂ ಭಾರತಿಕಂಗೆ ನಾಟ್ಯಘಟನಪ್ರಸ್ತಾವನಾಟೋಪಮಂ: **ಆದಿಪು,** ೯. ೧೨); ವಿಷಯ; ಸಂದರ್ಭ, ನಾಟಕದ ಒಂದು ಭಾಗ (ನಾಂದೀ ಪ್ರರೋಚನಾ ಪ್ರಸ್ತಾವನಾ ಇತಿವೃತ್ತ ಸಂಧಿ ಪ್ರವೇಶ ವಿಷ್ಕಂಭ ಕಪೋತಿಕಾ ವ್ಯಾಳಿಕಾದಿ ಲಕ್ಷಣೋಪೇತಂಗಳಪ್ಪ ನಾಟಕಂಗಳೊಳಂ: **ಪಂಪಭಾ,** ೨. ೩೪ ವ)

**ಪ್ರಸ್ತುತ** – ಈ ಸಂದರ್ಭ (ಅಸ್ತಾಂ ತಾವತ್ ಮಂತ್ರಾಲೋಚನಂ ಆರ್ಯ ನಮಗಂ ಆ ಕೌಶಿಕಪತ್ರಿ ಸ್ತೋಮವಲ್ಲಂಭಂಗ ಪ್ರಸ್ತುತಮತಿವೈರಮಾದ ತೆಱನಂ ಮೊದಲೊಳ್: **ಪಂಚತಂತ್ರ,** ೩೧೧); ಸನ್ನಿವೇಶಕ್ಕೆ ತಕ್ಕನಾದ (ಭೃಂಗೀನಾಟ್ಯಸ್ವನಂ ಪ್ರಸ್ತುತ ನಾನಾ ವಾದ್ಯಘೋಷಂಬೆರಸಿ ಬಳೆದುದೆತ್ತೆತ್ತಲುಂ ಪರ್ಬಿತಾಗಳ್: **ರಾಜಶೇವಿ,** ೧೪. ೧೬೪)

**ಪ್ರಸ್ಥ** – ಬೆಟ್ಟದ ತಪ್ಪಲು (ಅ ನಗ ಕಟಕಂ ಪ್ರಸ್ಥಂ ಸಾನು ತಟಂ ಭೃಗು ನಿತಂಬಂ ಅಂತದು ತಟ್ಟಿಲ್: **ಅಭಿಧಾವ,** ೧. ೬. ೨)

**ಪ್ರಸ್ಥಾನ** – ಪ್ರಯಾಣ, ಜೈತ್ರಯಾತ್ರೆ (ಪಳಿಕಿನ ಶಿಲಾಪಟ್ಟಂ ಪ್ರಸ್ಥಾನದೊಳ್ ವಿಜಯದ್ವಿಪಾವಳಿಯ ದರಿಗೊಂಡುದ್ದೇಶಂ.. ..ತದ್ದ್ವಿಪಾಳಿ ದಿಗತದೊಳ್ ತಳೆದುದು ಜಯಸ್ತಂಭಶ್ರೀಯಂ ತ್ರಿಕೂಟಮಹೀಧರಂ: **ಶಾಂತಿಪು,** ೧೧. ೧೮)

**ಪ್ರಸ್ಥಾನತೂರ್ಯ** – ಪ್ರಯಾಣಕ್ಕೆ ಮುನ್ನ ಅಥವಾ ಜೈತ್ರಯಾತ್ರೆ ಹೊರಡುವಾಗ ಮಾಡುವ ವಾದ್ಯರವ (ಆನಂತರಂ ವಸಂತವನವನಕೇಳೀ ಪ್ರಸ್ಥಾನತೂರ್ಯಂಗಳಂ ಪೊಯ್ಸಿದಾಗಳ್: **ಚಂದ್ರಪ್ರಪು,** ೭. ೭೭ ವ)

**ಪ್ರಸ್ಥಾನಪಾಂಶು** – ಪ್ರಯಾಣಕಾಲದಲ್ಲಿ ಏಳುವ ಧೂಳು (ದಿನನಾಥರಥಪ್ರಸ್ಥಾನಪಾಂಶುವೆವಿಸಿ ದಿಶಾಸ್ಥಗಿತಂ ರಂಜಿಸಿತ್ತು ಸಂಧ್ಯಾರಾಗಂ: **ಮಲ್ಲಿನಾಪು,** ೭. ೭೩)

**ಪ್ರಸ್ಫಾರ** – ಹೊಳೆಯುವ (ಲೋಕೈಕಭೀಕರಮಾಟಂದಂದು ನೀಲಮೇಘನಿಕಟಪ್ರಸ್ಫಾರದಂಭೋಳಿವೊಲ್: **ಪಂಪರಾ,** ೧೪. ೧೭೪)

**ಪ್ರಸ್ಫುಟ** – ಕಾಂತಿಯುಕ್ತವಾದ (ವಿನುತ ಶ್ವೇತಾತಪತ್ರಾವಳಿ ಅರುಣಮಣಿಪ್ರಸ್ಫುಟೋತ್ತುಂಗಸಿಂಹಾಸನಮಂ .. .. ಆನಂದದಿಂ ತಂದರಾಗಳ್: **ಪಂಚತಂತ್ರ,** ೩೧೭)

**ಪ್ರಸ್ಫುರಿತ** – ಹೊರಸೂಸಿದ (ಪರುಟವಿಸದಿರ್ ಮದಾಂಧತೆಯಿಂದ ಆಂತರಿತಬಲಾಹಕಪ್ರಸ್ಫುರಿತನೊಳ್ ಅತುಳಬಳ ಗಾಂಡಿವಿಯೊಳ್: **ಶಬರಶಂ,** ೪. ೨೯)

**ಪ್ರಸ್ಯಂದ** – ಸುರಿಯುವ ಧಾರೆ (ಮುಖರಸಪ್ರಸ್ಯಂದಮಂ ತೃಷ್ಣೆಯಿಂ ಕುಡಿವಂತೆ ಏನತಿ ಮುಗ್ಧೆ ಚುಂಬಿಸಿದಳೋ ಪ್ರಾಣೇಶವಕ್ತ್ರೇಂದುವಂ: **ಲೀಲಾವತಿ,** ೨. ೫೯)

**ಪ್ರಸ್ಯಂದಿ** – ಸುರಿಯುವ (ಪದಂ ಅರ್ಥಪ್ರತಿಪಾದನಪ್ರವಣಂ ಅರ್ಥಂ ಶಬ್ದಸಂಪತ್ತಿ ಸಂಪದವು ಅಕ್ಲಿಷ್ಟ ಪದಾರ್ಥಸಂಗತಿ ರಸಪ್ರಸ್ಯಂದಿ ಮಾಟ್ಕುಂ ಮನೋಮುದಮಂ: **ಮಲ್ಲಿನಾಪು,** ೧. ೩೭)

**ಪ್ರಹತಿ** – ಹೊಡೆತ (ಎನ್ನಂ ಇಳೇಶ್ವರ ನೀಂ ಕೆರಳ್ಚಿ ಮೇಣ್ ಪ್ರಹತಿಯಂ ಆನದನೆಯ್ದುವೆ ಅದೆಂತೆಲೆ ತೀರ್ಚದೆ ನಿನ್ನನಿರ್ಪನೇ: **ರಾಜಶೇವಿ,** ೬. ೯೧)

**ಪ್ರಹನ್ಯಮಾನ** – ನುಡಿಸುವ, ಬಾಜಿಸುವ (ಯೌವನಮದಮುದಿತ ಮಾರ್ದಳಿಕ ವಾಂಶಿಕ ಪ್ರಹನ್ಯಮಾನ ವಾದ್ಯ ಮಾನ ಮೃದಂಗ ವಂಶನಿನದಲಯಚ್ಛಂದ ಸುಂದರನಟತ್ಸುಂದರೀ ಸಂದೋಹಮುಂ: **ಆದಿಪು,** ೭. ೩೭. ವ)

**ಪ್ರಹರಣ** – ಏಟು (ರಣಾಂಗಣದಂತೆ ಚಮೂರಚಿತ ಪ್ರಕರಣವಿಶೀರ್ಣರೂಪಮುಂ: **ಚಂದ್ರಪ್ರಪು,** ೫. ೫೨ ವ); ಆಯುಧ (ಶಸ್ತ್ರಂ ಪ್ರಹರಣಂ ಆಯುಧಂ ಅಸ್ತ್ರಂ ಹೇತಗೆ ಸಮಾಖ್ಯೆ: **ಅಭಿಧಾವ,** ೧. ೧೪. ೧೩); ಗದೆಯ ಹೊಡೆತದ ವಿಳಂಬಿತ, ಆಕುಂಚಿತ, ಆಸ್ಫೋಟಿತ, ಆಕ್ಷಿಪ್ತ, ಉದ್ಭ್ರಾಮಿತ, ದಿಗ್ಭ್ರಾಮಿತ, ಉಚಿತ, ವಿರುದ್ಧ, ಅಚಿಂತ್ಯ ಎಂಬ ಎಂಟು ಬಗೆಗಳಲ್ಲಿ ಒಂದು (ಎಣ್ಬಂ ತೆಱದ ಪ್ರಹರಣಂಗಳೊಳಂ ಅತಿಪರಿಚಿತರಾಗಿ ವೈಶಾಖಸ್ಥಾನದೊಳ್ ನಿಂದು: **ಗದಾಯು,** ೮. ೧ ವ)

**ಪ್ರಹಸನಪಾತ್ರ** – ನಾಟಕದ ಪಾತ್ರ (ಲೌಕಿಕಚರಿತಂ ಪ್ರಹಸನಪಾತ್ರವೆನುತ್ತುಂ ಮಹಿತಾಚಾರದೊಳೆ ನಡೆವಂ ಉತ್ತಮಜೈನಂ: **ಸಮಯಪ,** ೪. ೧೪೪)

**ಪ್ರಹಸ್ತ** – ಚಾಚಿದ ಹಸ್ತ (ಪರಸ್ಪರ ವಿರೋಧ ವಿಕ್ಷೇಪ ಹರ್ಷಿತ ಮಾರ್ಗಪ್ರಹಸ್ತಪ್ರಾಸಾದಿತಘೋರಸಂಗ್ರಾಮರುಂ: **ಪಂಪಭಾ,** ೧೩. ೯೨ ವ); ರಾವಣನ ಒಬ್ಬ ಮಂತ್ರಿ (ಅರಮನೆಗಿದಿರ್ಚುವರ್ ಸಮರಾರಂಭಕ್ಕಾಮೆ ಮುಖ್ಯನಾಯಕರೆನುತ್ತಾರಿಂ ಮುನ್ನಂ ಸೆರಗಂ ಪಾರದೆ ಹಸ್ತಪ್ರಹಸ್ತರುಱದೊಟ್ಟದರ್: **ಪಂಪರಾ,** ೧೩. ೧೨)

**ಪ್ರಹಾರ** – ಹೊಡೆತ (ನಖಪ್ರಹಾರಭರದಿಂದೈದಾಱುಂ .. .. ಏಣಶ್ರೇಣಿಯಂ ಪಾಯ್ದು ಕೊಂದುದು: **ಪುಷ್ಪದಂಪು,** ೫. ೭೧)

**ಪ್ರಹಾರತ್ರಯ** – ವಾದ್ಯ ನುಡಿಸುವ ಮೂರು ನಲೆಗಳು (ಸಮಪ್ರಹಾರ ವಿಷಮಪ್ರಹಾರ ಸಮವಿಷಮಪ್ರಹಾರಮೆಂಬ ಪ್ರಹಾರತ್ರಯದೊಳಂ: ಅಜಿತಪು, ೫. ೩೨ ವ)

**ಪ್ರಹೀಣ** – ತೀರ ಇಲ್ಲದಿರುವ (ಜೂಜಿನ ದಿಂಡೆಯೊಳ್ ತಗರಕೇಳೀವಿದ್ಯೆಯೊಳ್ .. .. ಪಣ್ಯವರ್ಮ ವೀಥಿವ್ರಾತದೊಳಂ .. .. ವಿನಯ ಪ್ರಹೀಣರ್ ಅವಿನೀತರ್ ನೀತಿಗೆಟ್ಟಾಡುವರ್: **ಸುಕುಮಾಚ,** ೨. ೭)

**ಪ್ರಹೇಳಿಕೆ** – ಒಗಟು (ಮತ್ತಂ ಆಹಾರೋತ್ತರ ಅನ್ನವಾಸಕ ಅಧಿಷ್ಠಿತ ಮಹಾಪ್ರಸಾದಪ್ರದವಿನೋದ .. .. ಪ್ರಹೇಳಿಕಾಸಮಸ್ಯಾ ಸಮಾಸೋದಿತ ಕಾಲದೊಳ್: **ಶಾಂತಿಪು,** ೯. ೧೯೨ ವ)

**ಪ್ರಹ್ಲಾದ** – ಅತೀವ ಸಂತೋಷ (ಪರಮತತ್ತ್ವಪರಿಚಿತ ಗುರುಜನಮನಃಪ್ರಹ್ಲಾದಜನಕನುಂ: **ಚಂದ್ರಪ್ರಪು,** ೪. ೮೦ ವ)

**ಪ್ರಹ್ವಪರ** – ವಿನೀತ, ನಮ್ರ (ಪ್ರಹ್ವಪರನಾಗಿ ನಿಲಿಪುದು ಜಿಹ್ವಾಗ್ರದೊಳ್ ಅರುಹನೆಂಬ ಮೂಱಕ್ಕರಮಂ: **ಸಮಯಪ,** ೧. ೯೬)

**ಪ್ರಳಯ** – ವಿನಾಶ (ಪ್ರಳಯದ ಮೂರಿಯುಂ ಆಕಾಶದ ಕವಿಯುಂ ನೆಲದ ಕಲ್ಲೆಯುಂ ಮುನ್ನಮೆ ಮೇರೆದಪ್ಪುವುದುಮಂ: **ಪಂಪಭಾ,** ೧೨. ೧೯ ವ)

**ಪ್ರಳಯಾನಳ** – ಪ್ರಳಯಕಾಲದ ಬೆಂಕಿ (ಎಂಬತ್ತುನಾಲ್ಕು ಲಕ್ಕ ಬಂಡಿಯೊಳ್ ತಡತಂಡದೆ ತೀವಿದ ಕಾಂಡಪ್ರಳಯಾನಳ ವಿಸ್ಫುಲಿಂಗೋಪಮಾನಂಗಳಪ್ಪ ನಿಶಿತಕಾಂಡಂಗಳಿಂದೊಡ್ಡಿದ ಚತುರ್ಬಲಂಗಳ ಮೆಯ್ಯೊಳ್: **ಪಂಪಭಾ,** ೧೧. ೧೯ ವ)

**ಪ್ರಾಂಗಣ** – ಅಂಗಳ (ಅಳಿಗಳ ರಸಿತಂ ದ್ವಿಗುಣಿಸಿತು ನೃಪಗೃಹ ಪ್ರಾಂಗಣದೊಳ್: **ಪುಷ್ಪದಂಪು,** ೪. ೩೫)

**ಪ್ರಾಂಚತ್** – ಶೋಭಿಸುವ (ನೋಡಿದನಿತ್ತಲ್ ಶಬರೋತ್ತಮಾಂಗದೆಡೆಯಂ ಪ್ರಾಂಚದ್ಗುಣಂ ಫಲ್ಗುಣಂ: **ಶಬರಶಂ,** ೪. ೧೦೯)

**ಪ್ರಾಂಜಲಿ** – ಮುಗಿದ ಕೈಗಳು (ಪ್ರಾಂಜಲಿ ವಿಬುದ್ಧಮತಿಗೆ ನಿರಂಜನನಿಂದಾದುದು ಅಮಳದೃಷ್ಟಿವಿಕಾಸಂ: **ವರ್ಧಮಾಪು,** ೧೪, ೧೬)

**ಪ್ರಾಂಶು** – ಉನ್ನತ, ಎತ್ತರವಾದ (ಸಾಲ ಪ್ರಾಂಶು ವಿಶಾಲ ಲೋಲನಯನಂ ಪ್ರೋದ್ಯತ್ ವೃಷಸ್ಕಂಧಂ ಉನ್ಮೀಲತ್ ಪಂಕಜವಕ್ತ್ರಂ ಆಯತ ಸಮಗ್ರ ಉರಸ್ಸ್ಥಳಂ: **ಪಂಪಭಾ,** ೧. ೬೮); ಹೊಳಪು (ಖರಖಡ್ಗಪ್ರಾಂಶು ವಿದ್ಯುದ್ಯುತಿ ಪರಿಗೆಗಳ್ ಅಂಭೋಧರಂಗಳ್ ಗಜಪ್ರೋತ್ಕರಶುಂಭತ್ ಬೃಂಹಿತಂ ಪೆರ್ಮೊಳಗು: **ರಾಜಶೇವಿ,** ೬. ೧೩)

**ಪ್ರಾಕಟಂ** – ಬಹಿರಂಗವಾಗಿ (ಈ ಕನ್ನಿಕೆಯಂ ಬಲ್ಪಿಂ ಪ್ರಾಕಟಂ ಆನೊಯ್ವುತ್ತಿರ್ದಪೆಂ .. .. ಅಡ್ಡಂ ಬನ್ನಿಂ: **ಕರ್ಣನೇಮಿ,** ೭. ೪೫)

**ಪ್ರಾಕಾರ** – ಆವರಣ (ದ್ವಿತೀಯ ಪ್ರಾಕಾರದೊಳಗೆ ಪಾವಕ ಪುಜ್ಯಜನ ಪವಮಾನ ಪಶುಪತಿಗಳ ವಿನೋದವಿಹಾರ ಯೋಗ್ಯಂಗಳಪ್ಪ ನಾಲ್ಕುಂ ಕೋಣ್ಗಳ ಸೌವರ್ಣ ಸೌಧಂಗಳೊಳಂ: **ಶಾಂತೀಶ್ವಪು,** ೧೬. ೩೧ ವ)

**ಪ್ರಾಕೃತ** – ಸಾಮಾನ್ಯ ವ್ಯಕ್ತಿ (ಪ್ರಾಕೃತನಲ್ಲನೀ ದಶರಥಾಗ್ರತನೂಭವಂ ಏಕವಾಕ್ಯಂ ಆಶಾಕರಿ ಕರ್ಣ ಚಾಮರಯಶಂ ಚರಮಾಂಗಂ: **ಪಂಪರಾ,** ೫. ೭೨); ಒಂದು ಭಾಷೆ

**ಪ್ರಾಕೃತಜನ** – ನಾಡಾಡಿಗಳು (ಪ್ರಾಕೃತಜನಂಗಳ ಗಮನಮೇ ಸಮಸ್ತವೇದಿಗೆ ಹೃದಯಂಗಮಮಾಗದು: **ಶಾಂತಿಪು,** ೪. ೧೦೨ ವ)

**ಪ್ರಾಕೃತಪುರುಷ** – ಪ್ರಾಕೃತ ಜನ (ಗುರುವೆಂಬುದಜೆಂ ಪ್ರಾಕೃತಪುರುಷರ ಪೇಳ್ದಿಂತೆ ಗೆಯ್ವರೆಂದೊಡೆ ಬೋಧಾಕರರ್: **ಸಮಯಪ,** ೩. ೪೧)

**ಪ್ರಾಕೃತವೇಷ** – ಸಹಜ ರೂಪ (ದವನಕನ ಕೃತಕವೇಷಮಂ ಕಂಡು ಪ್ರಾಕೃತವೇಷಮೆಂದು ನಂಬಿ: **ಪಂಚತಂತ್ರ,** ೧೫೦ ವ)

**ಪ್ರಾಕ್ತನ** – ಹಿಂದಿನ (ಪ್ರಾಕ್ತನಪುಣ್ಯಪ್ರಾಪ್ತಿಯಿಂದಾ ಬಯಕೆಸಮನಿಕುಂ ಚಿಂತೆವೇಡಂ: **ಮಲ್ಲಿನಾಪು,** ೪. ೧೭)

**ಪ್ರಾಗಲ್ಭ್ಯ** – ಪ್ರೌಢಿಮೆ *ಸುಹೃದ್ಬಲಕಂ ಮಾರ್ವಲಕಂ ಗುಣಾರ್ಣವ ಶರಪ್ರಾಗಲ್ಭ್ಯಮಂ ತೋಱುವಂ: **ಪಂಪಭಾ,** ೩. ೩೩); ಧೈರ್ಯ (ಸುಕುಮಾರಪ್ರಕೃತಿಯಪ್ಪ ನಾರೀಜನಕ್ಕೆ ಪ್ರಾಗಲ್ಭ್ಯಂ ದೊರೆಕೊಳ್ವುದಲ್ಲ: **ಕಾದಂಬ,** ೮. ೩೪ ವ)

**ಪ್ರಾಗ್ಜನ್ಮ** – ಹಿಂದಿನ ಜನ್ಮ (ಪ್ರಾಗ್ಜನ್ಮಕಥಾವಳಿಯೆಲ್ಲಮಂ ಬಗೆದು ನೋವೆನಗಾದುದು: **ಆದಿಪು.** ೩. ೩೩)

**ಪ್ರಾಗ್ಭಾಗ** – ಮೊದಲ ಭಾಗ (ನಿಶಾವಸಾನಸಮಯ ಪ್ರಾಗ್ಭಾಗದೊಳ್ .. .. ದ್ವಿಜಪ್ರವರಂ .. .. ಪುಂಡರೀಕವಂ .. .. ತಂದಿಕ್ಕಿದಂ ಸ್ವಪ್ನದೊಳ್: **ಕಾದಂಸಂ,** ೨. ೧೬)

**ಪ್ರಾಗ್ರ** – ಮುಖ್ಯನಾದವನು (ಉಗ್ರತಪದಿಂದೆಯತುಳ ಸಮಗ್ರೆಯನಭವಂಗೆ ವಧುವೆನಿಪ್ಪಳನಾನವ್ಯಗ್ರದೆ ಪಡೆವೆಂ ಕುಧರಪ್ರಾಗ್ರನೆ ಕಳಿಪೆಂದು ಮೇನೆ ನುಡಿದವಸರದೊಳ್: **ಗಿರಿಜಾಕ,** ೩. ೮)

**ಪ್ರಾಗ್ವಂಶ** – ಯಜಮಾನನ ಕೋಣೆ (ಮಯಂ ವಿಸ್ಮಯಮಾಗೆ ಮಾಡಿದ ಸಭಾವಿಸ್ತಾರಮಂ .. .. ಯಾಗದೇವಯಜನ ಪಪ್ರಾಗ್ವಂಶಪತ್ನೀವಿಚಿತ್ರಶಾಲೆಗಳಂ: **ಜಗನ್ನಾವಿ,** ೧೭. ೭)

**ಪ್ರಾಙ್ಮುಖ** – [ಪ್ರಾಕ್+ಮುಖ] ಪೂರ್ವಾಭಿಮುಖವಾದ (ಮುನ್ನಮೆ ನಿಜೆಸಿದ ಮಣಿಖಚಿತೋನ್ನತ ಹರಿಪೀಠದೊಳ್ .. .. ಪ್ರಾಙ್ಮುಖದಿಂದುನ್ನತಸುರಮೌಳಿ ಲಾಲಿತಾಂಗ್ರಿದ್ವಯನಂ: **ಆದಿಪು,** ೮. ೬೮)

**ಪ್ರಾಚೀ** – ಪೂರ್ವ (ಪ್ರಾಚೀಮುಖಮೃಗಮದಂ ಉರ್ವೀಚಳದಳಕಂ .. .. ಬರೆವರೆ ಸೂಚೀನಿರ್ಭೇದಮಾದುದು ಅಂದಿನ ತಿಮಿರಂ: **ಲೀಲಾವತಿ,** ೬. ೮೯)

**ಪ್ರಾಚೀನಬರ್ಹಿ** – ಇಂದ್ರ (ಪ್ರಾಚೀನಬರ್ಹಿ ಕೇಳ್ವಂ ವಾಚಸ್ಪತಿ ಪೇಳ್ವಂ ಎನೆ: **ಅಭಿಧಾವ,** ೩. ೧. ೧೩೫)

**ಪ್ರಾಚ್ಯಶೈಲ** – ಪೂರ್ವದ ಬೆಟ್ಟ (ಮನುವಂಶ ಪ್ರಾಚ್ಯಶೈಲದ್ಯುಮಣಿ ಜನಿಯಿಸಿದಂ ಚಕ್ರವರ್ತಿಪ್ರಧಾನಂ: **ಆದಿಪು,** ೮. ೩೯)

**ಪ್ರಾಜ್ಯ** – ಜನಭರಿತವಾದ, ವಿಶಾಲವಾದ (ಬೇಡಮ್ಮ ನೀನುಂ ತಪೋವನಮಂ ಸಾರ್ವುದುಂ ಆನದಾರ್ಗೆ ಮೆಱೆವೆಂ ಮತ್ ಪ್ರಾಜ್ಯಸಾಮ್ರಾಜ್ಯಮಂ: **ಆದಿಪು,** ೧೪. ೧೩೨); ಶ್ರೇಷ್ಠ (ತ್ಯಾಜ್ಯಂ ಪರಿಗ್ರಹಂ ದಲ್ ಪ್ರಾಜ್ಯಂ ತಪಂ ಅದುವೆ ಪಾಲ್ಯಮಾ ಕೈವಲ್ಯಂ: **ಅಜಿತಪು,** ೬. ೭೭)

**ಪ್ರಾಣ** – ಜೀವಿಯಲ್ಲಿನ ಚೈತನ್ಯ (ಪ್ರಾಣದಿನಧಿಕಂ ಎನಗೆ ನೀಂ: **ಪಾರ್ಶ್ವನಾಪು,** ೩. ೨೪)

**ಪ್ರಾಣತ** – [ಜೈನ] ಹದಿನಾರು ಕಲ್ಪಗಳಲ್ಲಿ ಒಂದು (ಸೌಧರ್ಮ ಈಶಾನ ಸನತ್ಕುಮಾರ ಮಾಹೇಂದ್ರ ಬ್ರಹ್ಮ ಬ್ರಹ್ಮೋತ್ತರ ಲಾಂತವ ಕಾಪಿಷ್ಠ ಶುಕ್ರ ಮಹಾಶುಕ್ರ ಶತಾರ ಸಹಸ್ರಾರ ಆನತ ಪ್ರಾಣತ ಅರಣ್ಯ ಅಚ್ಯುತಮೆಂಬ ಪದಿನಾಱುಂ ಕಲ್ಪಂಗಳೊಳಂ: **ವಡ್ಡಾರಾ,** ಪು ೯೭, ಸಾ ೨೬)

**ಪ್ರಾಣನ** – ಬದುಕಿಸುವುದು (ಎನ್ನ ತಂದೆ.. .. ಮತ್ ಪ್ರಾಣನ ಪ್ರಯತ್ನತತ್ಪರನಾಗಿ: **ಕಾದಂಸಂ,** ೧. ೪೩ ವ)

**ಪ್ರಾಣಿವಧೆಗೆಯ್** – ಪ್ರಾಣಿಗಳನ್ನು ಕೊಲ್ಲು (ಪ್ರಾಣಿವಧೆಯೆ ಪರಮ ಪಾತಕಮೆಂಬುದಱಿಂ ಪ್ರಾಣಿವಧೆಗೆಯ್ಯಲಾಗದೆನೆ: **ಪಂಚತಂತ್ರ,** ೧೧೭ ವ)

**ಪ್ರಾಣೋಪಕಾರ** – ಜೀವವನ್ನುಳಿಸುವುದು (ನಿಮ್ಮಡಿ ನೀಮೆನಗೆ ಪ್ರಾಣೋಪಕಾರಂ ಗೆಯ್ದಿರ್ ನಿಮಗೇನಾನುಂ ಅಧ್ವಾನಮಾದಾಗಳೆನ್ನಂ ನೆನೆದೊಡಾಂ ಬಂದು ದೇವರ ಸೇವೆಯಂ ಮಾಡಿ ಪೋಪೆಂ; **ಪಂಚತಂತ್ರ,** ೧೭೯ ವ)

**ಪ್ರಾತಿಹಾರ್ಯ** – ಯಕ್ಷಿಣಿ (ರಾಜಾಂಗನೆಗೆ ಮನೋದಾರತರ ಪ್ರಾತಿಹಾರ್ಯಮಂ ಪ್ರಕಟಿಸುಗುಂ ಸ್ವಾರಾಜಾಂಗನೆಯರ್: **ವರ್ಧಮಾಪು,** ೧೧. ೩೯); ಗಾರುಡಿಗ, ಯಕ್ಷಣಿಕಾರ (ಗಂಡುಗೋಗಿಲೆಗಳೆ ಮಹಾಪ್ರಾತಿಹಾರ್ಯರಾಗೆಯುಂ ಬೌವಳಿಸಿ ಗಟಿಪುವ ಗಿಳಿವಿಂಡಿನೋಳಿಗಳೆ ಸಬ್ಬವರಾಗೆಯುಂ: **ವರ್ಧಮಾಪು,** ೫. ೪೧ ವ); [ಜೈನ] ಕೇವಲಜ್ಞಾನ ಪಡೆದ ತೀರ್ಥಂಕರನಿಗೆ ಒದಗುವ ಅಶೋಕವೃಕ್ಷ, ದಿವ್ಯಪುಷ್ಪ ವೃಷ್ಟಿ, ದಿವ್ಯಧ್ವನಿ, ಚಾಮರ, ಆಸನ, ಭಾಮಂಡಲ, ದೇವದುಂದುಭಿ,

ಛತ್ರಗಳೆಂಬ ಎಂಟು ಸವಲತ್ತುಗಳು (ಪುರುಪರಮೇಶ್ರನಂದನ ದೊರೆಕೊಳಿಸುಗೆ ನಿನಗೆ ಪುರುಪರಮೇಶ್ವರನ ನಿರತಿಶಯಗುಣಪರಿಕರಮುಂ ತತ್ ಪ್ರಾತಿಹಾರ್ಯಮುಂ ಮಂಗಳಮಂ: **ಆದಿಪು,** ೧೨. ೫೩)

**ಪ್ರಾತೀತಿಕ** – ಅರ್ಥಪ್ರತೀತಿಯುಳ್ಳದ್ದು (ವಿದಿತಂ ಪ್ರಾತಿತಿಕಂ ಕೋಮಳಮತಿಸುಭಗಂ ಸುಂದರಂ ಸೂಕ್ತಿಗರ್ಭಂ .. .. ಕಾವ್ಯಮೇಂದನ್ವಿತಸುಕವಿಜನಂ ಮೆಚ್ಚಿ ನಿಚ್ಚಂ ಮನಂಗೊಳ್ವುದಱಿಂದಂ ನೆಟ್ಟನೀತಂ ಸುಕವಿಮನೋ ಮಾನಸೋತ್ತಂಸಹಂಸಂ: **ಆದಿಪು,** ೧. ೨೬); ಪ್ರಭಾವ (ಏನಾನುಂ ಪ್ರತ್ಯಯದಿಂ ಪ್ರಾತೀತಿಕಂ ಮಾಡೆ ಚಾರುದತ್ತಂ ನಂಬಲ್ ಆ ಡಂಬಕಂ ಒಂದು ದೆವಸಂ: **ಕರ್ಣನೇಮಿ,** ೪. ೮೫ ವ)

**ಪ್ರಾದುರ್ಭಾವ** – ಹುಟ್ಟುವಿಕೆ (ಚಿಕಿತ್ಸಾಗೂಢ ಪ್ರೌಢಮಪ್ಪ ಗದಾಂಗಮುಮಂ ಪೆಱವುಂ ವಿದ್ಯಾಕಳಾ ಕಳಾಪಮುಮಂ ತ್ರಿದಶವರ್ಗಕ್ಕುಪದೇಶಂಗೆಯ್ಯುತ್ತುಂ ಬಾಲಭಾವಮಂ ಪೆಱಗಿಕ್ಕಿ ಯೌನಪ್ರಾದುರ್ಭಾವಕ್ಕೆ ಇದಿಱಾಗಿ: **ಶಾಂತಿಪು,** ೧೦. ೯೦ ವ)

**ಪ್ರಾದೇಶ** – ಚೋಟು [ಒಂದು ಉದ್ದಳತೆ] (ಭುವನತ್ರಯಮಂ ಪ್ರಾದೇಶಮಾತ್ರಮಾಗಿ ಬಗೆದು ಪೊಱಮಡುವನ್ನೆಗಂ: **ಕಾದಂಬ,** ೩. ೧೬ ವ)

**ಪ್ರಾಪಣ** – ಸ್ವೀಕರಿಸುವುದು (ಮತ್ತಮುತ್ಪಾದಿತ ಘ್ರಾಣೇಂದ್ರಿಯಪ್ರಾಪಣಂಗಳಪ್ಪ ಗಂಧಾಪಣಂಗಳೊಳ್: **ಚಂದ್ರಪ್ರಪು,** ೧. ೧೨೯)

**ಪ್ರಾಪಣಿಕ** – ವ್ಯಾಪಾರಿ (ವಣಿಜಂ ವೈದೇಹಂ ಪ್ರಾಪಣಿಕಂ: **ಅಭಿಧಾವ,** ೧. ೧೧. ೬೩)

**ಪ್ರಾಪ್ತ** – ದೊರೆತ (ಶ್ರೀಷೇಣಭೂಪತಿ .. .. ಪ್ರಾಪ್ತಸಪ್ತಪರಮಸ್ಥಾನನಾದಂ: **ಚಂದ್ರಪ್ರಪು,** ೪. ೨೪ ವ)

**ಪ್ರಾಪ್ತಿ** – ಲಾಭ; ಅಷ್ಟಸಿದ್ಧಿಗಳಲ್ಲಿ ಒಂದು, ಏನನ್ನು ಬೇಕಾದರೂ ಹೊಂದುವ ಶಕ್ತಿ (ಮಹರ್ಧಿಕದೇವರಾಗಿ ಅಣಿಮಾ ಮಹಿಮಾ ಲಘಿಮಾ ಪ್ರಾಪ್ತಿ ಪ್ರಾಗಲ್ಭ್ಯಂ ಈಶತ್ವಂ ವಶಿತ್ವಂ ಕಾಮರೂಪಿತ್ವಂ ಎಂಬೀ ಅಷ್ಟಗುಣೈಶ್ವರ್ಯಂಗಳೊಳ್: **ವಡ್ಡಾರಾ,** ಪು. ೯೮, ಸಾ. ೫), ನೋಡಿ 'ಅಷ್ಟಸಿದ್ಧಿ'

**ಪ್ರಾಪ್ಯ** – ಹೊಂದಬಹುದಾದ (ಪ್ರಾಪ್ಯಮೆಂದು ಎಯ್ದಲ್ ಪಡೆವುದು: **ಶಬ್ದಮದ,** ೧೩೮ ವೃತ್ತಿ)

**ಪ್ರಾಭವ** – ಮೇಲ್ಮೆ (ವಿಭವಮಂ ಪಂಚಾಂಗಮಂತ್ರಂ ಚತುರ್ಬಲಮಂ ಪ್ರಾಭವಂ ಎಯ್ದೆ ಮಾಡೆ ಪಡೆದಂ .. .. ವಯೋವಿಭ್ರಾಜಕಂ ರಾಜಕಂ: **ಶಾಂತಿಪು,** ೫. ೭೫)

**ಪ್ರಾಭಾತಿಕ** – ಬೆಳಗಿನ ಸಮಯದ (ಕೇವಲಜ್ಞಾನದಿಂ ವಿಶೇಷನಿಶ್ಚಯಮಂ ಮಾಡುವೆನೆಂದು ಸಕಳ ಪ್ರಾಭಾತಿಕ ಕ್ರಿಯೆಯಂ ನಿರ್ವರ್ತಿಸಿ: **ಆದಿಪು,** ೧೫. ೨೧ ವ)

**ಪ್ರಾಭೃತ** – ಹಿರಿಯರಿಗೆ ಸಲ್ಲಿಸುವ ಕಾಣಿಕೆ (ಅರಸಂ ಆ ಪ್ರಾಭೃತಮಂ ಕೋಶಾಧ್ಯಕ್ಷರಿಂ ಕೈಕೊಳಲ್ವೇಟ್ಟು: **ವರ್ಧಮಾಪು.** ೩. ೫೮ ವ)

**ಪ್ರಾಯ** – ಹರೆಯ (ಪ್ರಾಯದ ಪೆಂಪೆ ಪೆಂಪೆಮಗೆ: **ಪಂಪಭಾ,** ೧೪. ೧೭); ವಯಸ್ಸು (ಕ್ರಮಕ್ರಮದಿಂ ಉಖದಿಂ ಬೆಳೆದು ಮುಂಜಿಗಟ್ಟುವ ಪ್ರಾಯಮಾದೊಡೆ: **ವಡ್ಡಾರಾ,** ಪು. ೭೩, ಸಾ. ೨೦); ಸಮಯ (ಆ ಪ್ರಾಯದೊಳ್ ಮತ್ತಮೊರ್ವ ದೇವತೆ ಲೋಯಿಸರದ ಮೇಲೆ ಭಂಡಿ ಪರಿದಂತು ಮಾಟ್ಪಿಂ ಎಂದು: **ನೇಮಿನಾಪು,** ೭. ೭೬ ವ)

**ಪ್ರಾಯಶ್ಚಿತ್ತ** – ನಡೆದ ತಪ್ಪಿಗೆ ಮಾಡಿಕೊಳ್ಳುವ ಪರಿಹಾರವಿಧಿ (ಈ ನಾಯನೀಡಾಡಿ ಪ್ರಾಯಶ್ಚಿತ್ತಮಂ ಕೈಕೊಳ್ಳಿಮೆಂದು ಪೇಟ್ದು ಪೋಪುದುಂ; **ಪಂಚತಂತ್ರ,** ೨೧೩ ವ); [ಜೈನ] ಅಭ್ಯಂತರತಪಗಳಲ್ಲಿ ಒಂದು; ತಿಳಿಯದೆ ನಡೆದಿರಬಹುದಾದ ತಪ್ಪಿನ ಪರಿಹಾರಕ್ಕೆ ನಡೆಸುವ ಚಿತ್ತಶೋಧನೆ (ಅಭ್ಯಂತರತಪಷಟ್ಕದೊಳಂ ಪ್ರಾಯಶ್ಚಿತ್ತ ವಿನಯ ವೈಪೃತ ಸ್ವಾಧ್ಯಾಯ ಧ್ಯಾನ ವ್ಯುತ್ಸರ್ಗಗಳಂ ಕೈಕೊಂಡು: **ಆದಿಪು,** ೬ ೩೩ ವ), ನೋಡಿ 'ಅಭ್ಯಂತರತಪಸ್ಸು'

**ಪ್ರಾಯೋಗ್ಯತಾಲಬ್ಧಿ** – [ಜೈನ] ಒಂದು ಲಬ್ಧಿ, ಕ್ರಮವಾಗಿ ಕರ್ಮಕ್ಷಯವಾಗುವುದು (ಕಾಲಲಬ್ಧಿ ಕರಣಲಬ್ಧಿ ಉಪಶಮಲಬ್ಧಿ ಕ್ಷಯೋಪಶಮಲಬ್ಧಿ ಪ್ರಾಯೋಗ್ಯತಾಲಬ್ಧಿ ಎಂಬ ಲಬ್ಧಿಪಂಚಕಮುಮಂ .. .. ಕೈಕೊಂಡು: **ಸುಕುಮಾಚ,** ೩. ೩೯ ವ), ನೋಡಿ 'ಲಬ್ಧಿಪಂಚಕ'

**ಪ್ರಾಯೋಪಗಮನ** – [ಜೈನ] ನಿರಾಹಾರಿಯಾಗಿ ಮರಣವನ್ನು ಹೊಂದುವ ವ್ರತ (ಆಯಿರ್ದ ಮಾಟ್ಕೆಯೊಳ್ ಪರಮಾಯುಷ್ಯಾಂತಂಬರಂ ನಿರಾಕುಳಮಾಗಿರ್ಪಾಯಿರವಿನ ಜೈನಾಭಿಪ್ರಾಯಂ ಪ್ರಾಯೋಪಗಮನದಿಂ ತೊರೆಯಿಸಿದಂ: **ಆದಿಪು,** ೨. ೫೩)

**ಪ್ರಾಯೋಪಯೋಗ ಸಂನ್ಯಸನ** – [ಜೈನ] ತನ್ನ ರೋಗಕ್ಕೆ ಉಪಚಾರ ಮಾಡಿಕೊಳ್ಳದೆ ಇತರರೂ ಉಪಚಾರ ಮಾಡದಂತೆ ಪ್ರಾಣ ಬಿಡುವ ತಪಸ್ಸು (ಇರ್ಪತ್ತೆರಡು ದಿವಸಮುಂ ಪ್ರಾಯೋಪಯೋಗ ಸಂನ್ಯಸನದಿಂ .. .. ಅಚ್ಯುತಕಲ್ಪದ ಸಾಂತಕರ ವಿಮಾನದೊಳ್ ಅಚ್ಯುತೇಂದ್ರನಾಗಿ: **ನೇಮಿನಾಪು,** ೪. ೧೬)

**ಪ್ರಾಯೋಪವೇಶ** – ಪ್ರಾಯೋಪಗಮನ (ಮುನಿರಾಜಂ .. .. ಅಳ್ಕದೆ ಅಚಾಮ್ಲವರ್ಧನಮಂ ತಪ್ಪದೆ ನೋಂತು ತಪ್ಪತನುವಂ ಪ್ರಾಯೋಪವೇಶಕ್ಕೆ ತಂದು: **ಶಾಂತಿಪು,** ೯. ೮೪)

**ಪ್ರಾರಂಭ** – ಉದ್ಯಮ, ಕಾರ್ಯ (ಸಕಳಕ್ಷತ್ರಿಯಮೋಹದಿಂ ನಿಜಭುಜಪ್ರಾರಂಭದಿಂ ಪೋಗೆ ತಾಗಿ ಕೆಲರ್ ನೊಂದೊಡೆ: **ಪಂಪಭಾ,** ೧. ೭೪)

**ಪ್ರಾರಬ್ಧ** – ಪ್ರಾರಂಭಿಸಲ್ಪಟ್ಟ (ಅಣಿಮಾದ್ಯಷ್ಟಗುಣ ಪ್ರವೀಣವಿಭವಂ .. .. ಪಟುನಟನ ಪ್ರಾರಬ್ಧಸಂಗೀತಕಂ ತಣಿದು ಸಂತತಮಿಂತು ದಿವ್ಯಸುಖದೊಳ್ ಸಂಸಾರಸಾರೋದಯಂ: **ಆದಿಪು,** ೨. ೭೯)

**ಪ್ರಾರ್ಥಿಸು** – ಬೇಡಿಕೊ (ಅಸುರಾಂತಕನುಂ ತಾನುಂ ಎಂತಾನುಂ ಪ್ರಾರ್ಥಿಸಿದೊಡೆ ಒಡಂಬಟ್ಟ ಅಜಾತಶತ್ರುಗೆ: **ಪಂಪಭಾ,** ೧೨. ೧೩೪ ವ)

**ಪ್ಲವಗ** – ಕೋತಿ (ಪ್ಲವಗ ಪ್ಲುತ ಉತ್ಪತದ್ವಿಃ ಕಿರುನಿಕರ ಗುರುಚ್ಛನ್ನ ಶಾಖಾಂತರಾಳಂ: **ನೇಮಿನಾಪು,** ೫. ೭೪)

**ಪ್ರಾಲಂಬ** – ಜೋತಾಡುವ (ಪ್ರಾಲಂಬ ರಕ್ತಾಮ್ರಗುಚ್ಛ ಸಂದೋಹದಿಂ: **ಕಾದಂಬ,** ೮. ೪)

**ಪ್ರಾಲೇಯ** – ಮಂಜು (ನಿಯತ ಪ್ರಾಲೇಯ ದೀಪ್ತಿದ್ಯುಮಣಿ .. .. ಇರ್ಪುದು ಅವ್ಯಾಹತ ಜಿನಪತಿ ಬೋಧಾವಲೀಕಂ ತ್ರಿಲೋಕಂ: **ನೇಮಿನಾಪು,** ೧. ೫೩)

**ಪ್ರಾಲೇಯಾಂಶು** – ಚಂದ್ರ (ಪ್ರಾಲೇಯಾಂಶುವಿಭೂಷಿತಂ ತರಳತಾರಾನೀಕ ಕಾಪಾಲಮಾಲಾಲಂಕಾಱುಮ ಎನಲ್ಕೆ: **ಕಾದಂಬ,** ೧. ೨೩೯)

**ಪ್ರಾವರಣ** – ಉತ್ತರೀಯ (ಧಾನ್ಯನಿಚಯದೊಡನೆ ಅನೇಕ ಧಾನ್ಯಸದನಂಗಳುಂ ಕ್ಷೌಮದುಕೂಲಾದಿ ದಿವ್ಯವಸನ ವಿವಿಧ ಪ್ರಾವರಣವಿಶೇಷಂಗಳುಂ: **ಆದಿಪು,** ೧೫. ೩ ವ)

**ಪ್ರಾವೃಟ್ಕಾಲ** – ಮಳೆಗಾಲ (ಪ್ರಾವೃಟ್ಕಾಲದೊಳಡಸಿ ಮಹಾವರ್ತದ ಮಱೆಗಳಮೋಘಮೇಘಂ ಕೊಳೆಸ್ವಸ್ಥಾವಿಷ್ಕೃತ ಚಿತ್ತಂ ಧೈರ್ಯಾವಷ್ಟಂಭದೊಳ್ ವೃಕ್ಷಮೂಲದೊಳಿರ್ದಂ: **ಅಜಿತಪು,** ೧೨. ೨)

**ಪ್ರಾವೃತ** – ಸುತ್ತುವರಿದ (ವನಧಿಪ್ರಾವೃತಧಾರಿಣೀತಳದೊಳ್ ಇಂತು ಈಯಂದದಿಂ ಪೇೞ್ವನೊರ್ವನುಮಂ ಕಾಣೆನೆ: **ಸುಕುಮಾಚ,** ೩. ೧೩)

**ಪ್ರಾವೃಷ** – ಪ್ರಾವೃಟ್ಕಾಲ (ವಸಂತಪ್ರಿಯನ ವಿರಹದೊಳ್ ಗ್ರೀಷ್ಮತಾಪಜ್ವರಂ ಮೇದಿನಿಗಾದುದು ಪುಟ್ಟಿ ಮೇಲೇಂ ತಳಿದುದೊ ಮಱೆಯಂ ಪ್ರಾವೃಷಂ: **ನೇಮಿನಾಪು,** ೩. ೧೦೩)

**ಪ್ರಾಶ್ನಿಕ** – ತೀರ್ಪುಗಾರ (ಆತನುಂ ಪ್ರಾಶ್ನಿಕರಾಗಿರ್ದ ವಿಶ್ವಾವಸು ತುಂಬುರ ನಾರದರ್ಕಳನ್ನರಪ್ಪ ಗಂಧರ್ವ ನಿಪುಣಾಚಾರ್ಯರೆಲ್ಲಂ: **ಹರಿವಂಶ,** ೨. ೩೨ ವ)

**ಪ್ರಾಸ** – ಒಂದು ಆಯುಧ, ಕೊಂತ (ನಿಬಿಡಪೀಡಿತ ಪ್ರಾಸ ಮುಷ್ಟಿದುರ್ಧರ ಅಶ್ವಾರೋಹಕತುರಂಗಬಲ ಅವಗಾಢಮುಂ: **ಆದಿಪು,** ೧೪. ೯೩ ವ)

**ಪ್ರಾಸಾದ** – ಉಪ್ಪರಿಗೆ (ಮಹಾಪ್ರಾಸಾದದಂತಿರ್ಪುದು ಆವಗಂ ಆಶ್ಚರ್ಯಮನಪ್ಪುಕೆಯ್ದು ವಿಜಯಾರ್ಧಖ್ಯಾತ ಧಾತ್ರೀಧರಂ: **ಶಾಂತೀಶ್ವಪು,** ೮. ೭); [ಜೈನ] ಬಸದಿ; ಸ್ವರ್ಗದಲ್ಲಿನ ವೈರಾಜ, ಪುಷ್ಪಕ, ಕೈಲಾಸ, ಮಣಿಕ, ತ್ರಿವಿಷ್ಟಪ ಎಂಬ ಐದು ಹಾಗೂ ಭೂಮಿಯ ಮೇಲಿನ ಸ್ವಸ್ತಿಕ, ವರ್ಧಮಾನ, ನಂದ್ಯಾವರ್ತ, ಸರ್ವತೋಭದ್ರ, ವಲಚ್ಛಂಬಿಕ ಎಂಬ ಐದು ಪ್ರಾಸಾದಗಳು (ಪ್ರಾಸಾದಾಂತರದಿಂದಮಯ್ದು ಜಿನಚೈತ್ಯಾಗಾರಮೊಂದಿಂತೆ ವಿನ್ಯಾಸಂ ನಾಡೆ ಬೆಡಂಗುವೆತ್ತಿರೆ .. .. ತದ್ಭೂಮಿ ಕಣ್ಗೊಪ್ಪುಗುಂ: **ಚಂದ್ರಪ್ರಪು,** ೧೫. ೨೨)

**ಪ್ರಾಸುಕ** – ಶುದ್ಧವಾದ (ಭಟಾರಾ ಪ್ರಾಸುಕಮಪ್ಪ ನೀರಂ ಪೊಟ್ಟೆದೊಳ್ ಕುಡಿದು ನಿಮ್ಮ ಸೇದೆಯನಾಱಿಸಿಂ: **ವಡ್ಡಾರಾ,** ೧೦೩, ಸಾ ೩೦;, ಹುಳ ಬೀಳದ

**ಪ್ರಾಳೇಯಾಚಳ** – ಹಿಮವತ್ಪರ್ವತ (ಪೋಗವೇೞ್ದು ಪ್ರಸನ್ನ ಕತಿಪಯಪ್ರಯಾಣಂಗಳಿಂ ಪ್ರಾಳೇಯಾಚಳಮಧ್ಯಮಕೂಟಮಂ ಎಯ್ದೆವರ್ಪುದುಂ: **ಶಾಂತಿಪು,** ೧೧. ೫೭ ವ)

**ಪ್ರಿಯಂಗು** – ನವಣೆ (ಈ ಭಾಗದೊಳ್ ಅಭಿನವ ಪ್ರಿಯಂಗುಶ್ಯಾಮಾಂಗಂ ಅರ್ಧಚಂದ್ರ ಬುದ್ಬುದ ವ್ಯಾಕೀರ್ಣ ತ್ರಿಶೂಲ: **ಆದಿಪು,** ೧೩. ೪೫ ವ)

**ಪ್ರಿಯಕ** – ಜಿಂಕೆ, ಕಡವೆ (ಪ್ರಿಯಾಳ ಪ್ರಿಯಕ ಕುರವಕ ಅಶೋಕ .. .. ಭೂಜಾವಕೀರ್ಣ: **ನೇಮಿನಾಪು,** ೩. ೩೫); ಹೊನ್ನೆಮರ (ಕದಳೀ ಪ್ರಿಯಕ ಶಿವಾರ್ಜುನ.. .. ಆಸ್ಪದಮಾಯ್ತು .. .. ಪಾದಪ ಕದಂಬದಿಂ ಮೃಗಕದಂಬದಿಂದಾ ವಿಪಿನಂ: **ನೇಮಿನಾಪು,** ೩. ೩೭)

**ಪ್ರಿಯೋದ್ಭವ** – [ಜೈನ] ಒಂದು ಗರ್ಭಾನ್ವಯಕ್ರಿಯೆ, ಜಾತಕರ್ಮ (ಆಧಾನ ಪ್ರೀತಿ ಸುಪ್ರೀತಿ ಧೃತಿ ಮೋದ ಪ್ರಿಯೋದ್ಭವ ನಾಮಕರ್ಮ .. .. ನಿರ್ವೃತಿಯೆಂಬ ಅಯ್ವತ್ತುಮೂಱು ಗರ್ಭಾದಿ ನಿರ್ವಾಣಪರ್ಯಂತಂಗಳಪ್ಪ ಗರ್ಭಾನ್ವಯ ಕ್ರಿಯೆಗಳುಂ: **ಆದಿಪು,** ೧೫. ೧೫ ವ), ನೋಡಿ 'ಗರ್ಭಾನ್ವಯಕ್ರಿಯೆ'

**ಪ್ರೀಣನ** – ತೃಪ್ತಿಪಡಿಸುವಿಕೆ (ಬುಧಜನಪ್ರೀಣನಾಗ್ರೇಸರಗ್ರಾಮಣಿ ಧರ್ಮಾಂಭೋಜಷಂಡದ್ಯುಮಣಿ: **ಅಜಿತಪು,** ೧೨. ೧೫)

**ಪ್ರೀಣನಕರ** – ತೃಪ್ತಿಯುಂಟುಮಾಡುವಂತಹ (ಜಾಣಿನ ಬೆಡಂಗು ವಿಬುಧಪ್ರೀಣನಕರಮೆನಿಸಿ ನೇರ್ಪುನೇರ್ವೊಡೆ ಪೇೞ್ದಿಂ ಪ್ರಾಣಿಹಿತಾರ್ಥದಿಂ ಅಜಿತಪುರಾಣಮಂ ಅಳವಟ್ಟ ಕವಿತೆಯಿಂ ಕವಿರತ್ನಂ: **ಸುಕುಮಾಚ,** ೧. ೩೯)

**ಪ್ರೀಣಿತ** – ಸಂತುಷ್ಟಿಗೊಂಡ (ಅಂತತಿಪ್ರಮೋದ ಪ್ರೀಣಿತಾಂತಃಕರಣನಾಗಿ: **ಆದಿಪು,** ೯. ೧೩೨ ವ)

**ಪ್ರೀತಿ** – ರಸಾನುಭವ (ಪರಮ ಪ್ರೀತಿ ನಿಮಿತ್ತಂ .. .. ಬಂಧುರ ಕಾವ್ಯನಿಬಂಧದಿಂ ಹಿತಂ: **ಕಾವ್ಯಾವಲೊ,** ೨. ೪); ಸ್ನೇಹ (ಸ್ನೇಹಮರ್ಜಯಂ ಸಖ್ಯಂ ಸೌಹಾರ್ದಂ ಪ್ರೀತಿಮೈತ್ರಿ ಸಾಪ್ತಪದೀನಂ ಸೌಹೃದಂ: **ಅಭಿಧಾವ,** ೨. ೨. ೪); [ಜೈನ] ಒಂದು ಗರ್ಭಾನ್ವಯಕ್ರಿಯೆ; ಗರ್ಭವತಿಯು ಮೂರನೇ ತಿಂಗಳಲ್ಲಿ ಮಾಡುವ ಜಿನಪೂಜೆ (ಆಧಾನ ಪ್ರೀತಿ ಸುಪ್ರೀತಿ ಧೃತಿ ಮೋದ ಪ್ರಿಯೋದ್ಭವ ನಾಮಕರ್ಮ .. .. ನಿರ್ವೃತಿಯೆಂಬ ಅಯ್ವತ್ತುಮೂಱು ಗರ್ಭಾದಿ ನಿರ್ವಾಣಪರ್ಯಂತಂಗಳಪ್ಪ ಗರ್ಭಾನ್ವಯಕ್ರಿಯೆಗಳುಂ: **ಆದಿಪು,** ೧೫. ೧೫ ವ)

**ಪ್ರೀತಿಭೂಮಿ** – ಪ್ರೇಮಪಾತ್ರ ಸ್ತ್ರೀ, ಹೆಂಡತಿ (ಹಿರಣ್ಯಪುರಮನಾಳ್ವ ಗರುಡವೇಗಂಗಂ ತದೀಯ ಪ್ರೀತಿಭೂಮಿ ಪ್ರೀತಿಷೇಣೆಗಂ ಮಕ್ಕಳ್ ಇಂದ್ರತಿಲಕಂ ನಭಸ್ತಿಲಕನುಂ: **ಶಾಂತಿಪು,** ೯. ೪೯ ವ)

**ಪ್ರೀಯ** – ಪ್ರೀತಿ (ಪ್ರೀಯದೆ ಬಂದು ನಿನ್ನ ಮನಮೊಲ್ದಮರೋಳಿಗಳಿಂ ವಿಚಿತ್ರಶೋಭಾಯುತ ಭೂಮಪ್ರಸರಮಂ ಸಮೆದು: **ಶಾಂತೀಶ್ವಪು,** ೧೦. ೫೮)

**ಪ್ರೇಂಖತ್** – ತೂಗಾಡುವ (ಮಾಣಿಕ್ಯಮಾಳಾಂಶುಪಿಂಜರಿತಂ ಪ್ರೇಂಖತ್ ಅಸಂಖ್ಯವಾಜಿವಿಳಸತ್ ವೀಚೀಚಯಂ: **ಆದಿಪು,** ೧೪. ೯೨)

**ಪ್ರೇಂಖೋಲ** – ತೂಗಾಟ (ಪ್ರೇಂಖೋಲಾನೇಕ ನೇತ್ರಪಟ್ಟಿಕಾ .. .. ಲಾಟಬಲಂ: **ಆದಿಪು,** ೧೩. ೪೫ ವ)

**ಪ್ರೇಂಖೋಳನ** – ತೂಗಾಟ (ಪವನಪ್ರೇಂಖೋಳನ ಪ್ರೋಚ್ಚಳಿತ ಮರಕತಸ್ಥೂಲ ರತ್ನಾವಳೀ ಪಲ್ಲವಮಾಳಾ ತೋರಣಂಗಳ್: **ನೇಮಿನಾಪು,** ೫. ೧೧೯); ಉಯ್ಯಾಲೆ ಆಗಳ್ ಪ್ರೇಂಖೋಳನ ವಿಳಸದಿಂದಾಸರಮಂ ಲೀಲಾಸರಮಂ ಉತ್ತರಿಸುವಂತೆ ಉತ್ತರಿಸಿ: **ಚಂದ್ರಪ್ರಪು,** ೫. ೪೫ ವ)

**ಪ್ರೇಂಖೋಳಿತ** – ತೂಗಾಡುವ (ಅತಿಪ್ರಚುರಚಳತ್ ಅವನಿಪಾಳಸಂಚಳತ್ ಚಾಮರಮರುತ್ ಪ್ರೇಂಖೋಳಿತ ಆಭರಣವಿಚಿತ್ರನೇತ್ರವೈಜಯಂತಿಕಾಂಚಳನುಂ: **ಆದಿಪು,** ೧೨. ೬೧ ವ); ನಡುಗುವ (ಪ್ರೆಂಖೋಳಿತಂ ಪ್ರಕಂಪಿತಮಕ್ಕುಂ: **ಅಭಿಧಾವ,** ೨. ೧. ೪೦)

**ಪ್ರೇಕ್ಷಣ** – ನೋಟ (ಅಸಮಪ್ರೇಕ್ಷಣವೀಕ್ಷಣೈಕರಸಮ ಪಾರ್ದಿರ್ದುದೀ ರಾಜಪುತ್ರಸಮೂಹಂ: **ಆದಿಪು,** ೯. ೧೨); ನೃತ್ಯವಿಶೇಷ, ಪೆಕ್ಕಣ (ಪ್ರೇಕ್ಷಣಮಂ ಮುದದಿ ಬಂದೀಕ್ಷಿಪ ವಿಟತತಿಯ ಕಣ್ಗೆ ಬಲೆಯೆನಿಸಿದ ಕಂಜಾಕ್ಷಿಯರಿರೆ ಪಲರಲ್ಲಿ ವಿವಕ್ಷಿತನಾ ಚಾರುದತ್ತಂಅಭಿವೀಕ್ಷಿಸಿದಂ: **ಕರ್ಣನೇಮಿ,** ೪. ೪೬)

**ಪ್ರೇಕ್ಷಾಗೃಹ** – ಪ್ರದರ್ಶನಶಾಲೆ (ವರ್ಧಮಾನಮೆಂಬೀಕ್ಷಣಪ್ರಿಯ ಪ್ರೇಕ್ಷಾಗೃಹಮುಂ: **ಆದಿಪು,** ೧೫. ೩ ವ)

**ಪ್ರೇಕ್ಷಾಸದನ** – ಪ್ರೇಕ್ಷಾಗೃಹ (ವರ್ಧನಾಭಿಧಾನ ಪ್ರೇಕ್ಷಾಸದನಂಗಳಿಂದಂ: **ಶಾಂತಿಪು** ೧೧. ೮೪ ವ)

**ಪ್ರೇತ** – ಶರೀರ ಬಿಟ್ಟ ಜೀವ; ಹೆಣ (ಬಿಡದೆ ಅಟಿಲ್ವ ಬಂಧುಜನದ ಒಟ್ಟುಡಿಯದ ಕಣ್ಣೀರ ಪೂರಂ ಆ ಪ್ರೇತಮಂ ಓಗಡಿಸದೆ ಸುಡುವುದು ಗಡಂ ಇನ್ನುಡುಗುವುದೀ ಶೋಕಮಂ ಸರೋಜದಳಾಯತಾಕ್ಷೀ: **ಪಂಪಭಾ**, ೨. ೨೮)

**ಪ್ರೇತವನ** – ಶ್ಮಶಾನ (ಪ್ರೇತವನಂ ಮೃತವನಂ ಶ್ಮಶಾನವದಕ್ಕುಂ: **ಅಭಿಧಾವ**. ೧. ೧೧. ೪೫)

**ಪ್ರೇಮ** – ಪ್ರೀತಿ (ಪ್ರೇಮದೊಳೆ ತನ್ನ ಬೆನ್ನೊಳೆ ಧೂಮಪ್ರಭೆ ನಾರಕತ್ವಮೆಟ್ಟಿಂದವಲ್: **ಪಾರ್ಶ್ವನಾಪು,** ೬. ೧೦೫)

**ಪ್ರೇಯಸ** – ಪ್ರಿಯಕರ (ಆಗಳ್ ಶಚೀಪ್ರೆಯಸಂ ಜನ್ಮಾಭಿಷೇಕ ಮಂಗಳೋಪಕರಣನಾಗಿ: **ಅಜಿತಪು**, ೪. ೪೩ ವ)

**ಪ್ರೇಯಸಿ** – ನಲ್ಲೆ (ಅನ್ಯ ಜನ್ಮದೊಳಕ್ಕುಂ ದುರ್ಗತಿ ಕ್ಲೇಶಮೆಂದು ಅಧಿರಾಜರ್ ಕೆಲರಾಲಿಸರ್ ಮಱೆದುಂ ಅನ್ಯ ಪ್ರೇಯಸೀವಾರ್ತೆಯಂ: **ಪಂಪರಾ**, ೧೨. ೫೯)

**ಪ್ರೇರಣ** – ಪ್ರಚೋದನೆ (ಭಕ್ತಿಪ್ರಿಯಾಪ್ರೇರಣದಿಂ ತದ್ವರ್ಣನೋಪಕ್ರಮದೊಳೆಳಸಿದೆಂ ಭ್ರಾಂತನೆಂ: **ಚಂದ್ರಪ್ರಪು,** ೧. ೬೪)

**ಪ್ರೇಷಣ** – [ಜೈನ] ಒಂದು ದೇಶವ್ರತಾತಿಚಾರ, ದೂತರನ್ನು ಕಳಿಸಿ ಕೆಲಸ ಮಾಡಿಸುವುದು (ಕಪಟದೊಳೇಂ ಪ್ರೇಷನಶಬ್ದ ಪುದ್ಗಲಕ್ಷೇಪಮುದಿತಾನಯನಂ ತಾವಪಚಾರಂಗಳ್ ರೂಪಾನುಪಾತಮುಂ ಪ್ರಮಿತ ದೇಶನಿಯಮವ್ರತದೊಳ್: **ಸುಕುಮಾಚ,** ೬. ೧೯) ನೋಡಿ, 'ದೇಶವ್ರತಾತಿಚಾರ'

**ಪ್ರೋಕ್ತ** – ಹೇಳಲಾದ (ಇನ್ನದಕ್ಕೇಬಾರದುವೆಲ್ಲಂ ವ್ಯಕ್ತಂ ನ್ಯಾಯವಿರುದ್ಧಂ ಪ್ರೋಕ್ತಮಹಾದೋಷಮಂತು ಪೇೞಲ್ಕೆಂತುಂ: **ಕವಿರಾಮಾ,** ೧. ೧೦೬)

**ಪ್ರೋಚ್ಚಂಡ** – ತುಂಬ ಭಯಂಕರವಾದ (ವೀರಲಕ್ಷ್ಮೀಸದನ ಪ್ರೋಚ್ಚಂಡ ದೋರ್ಮಂಡನಂ .. .. ಇರ್ಪಂ: **ಪುಷ್ಪದಂಪು,** ೨. ೯೬)

**ಪ್ರೋಚ್ಚಳಿತ** – ಮೇಲಕ್ಕೆ ಹಾರಿದ (ಜಿನಜನೋತ್ಸವದೊಳ್ ಮೇದಿನಿಗಿರಿಸಿದ ಕಾಂಚನಧ್ವಜಸ್ತಂಭಮಿದೆಂಬಿನೆಗಂ ಸೋಗಯಿಸಿದುದು ಮೇರುನಗಂ ಪ್ರೋಚ್ಚಳಿತ ದುಗ್ಧಪೂರದುಕೂಲಂ: **ಚಂದ್ರಪ್ರಪು,** ೧೨. ೧೩೬)

**ಪ್ರೋಜ್ಝಿತಚಾಪ** – ಬಿಲ್ಲು ಹಿಡಿಯುವುದನ್ನು ಬಿಟ್ಟವನು (ಗುರುವಂ ಪ್ರೋಜ್ಝಿತಚಾಪನಂ ಪುಸಿದು ಕೊಂದು: **ಗದಾಯು,** ೩. ೩೩)

**ಪ್ರೋಡ್ಡೀನ** – ಮೇಲೆ ಹಾರಿದ (ಪ್ರೋಡ್ಡೀನ ದೀನಶ್ರಮದೊಳೊಗೆದ ರೋಮಾಂಚಮಂ ಶೀತವಾತ ಸ್ತಿಮಿತೋಪಸ್ಪರ್ಶ ರೋಮಾಂಚದೊಳೆ ಬೆರಸಿದಳ್: **ನೇಮಿನಾಪು,** ३. ೨೨)

**ಪ್ರೋತ್ಕರ** – ಗುಂಪು (ಮಕುಟರತ್ನಪ್ರಕರಸ್ಫುರಿತ ಪ್ರದ್ಯೋತ ಪ್ರೋತ್ಕರವಿಳಸಿತವಳಯದೊಳಗೆ ಶಿವನೆಸೆದಿರ್ದಂ: **ಗಿರಿಜಾಕ,** ೧೦. ೧೦೭)

**ಪ್ರೋತ್ಕಲಿತ** – ಮೇಲಕ್ಕೆ ಹಾರಿದ (ಪ್ರೋತ್ಕಲಿತ ಅಂಭಃಕುಂಭಿಕುಂಭೋನ್ಮದ ರಸವಿಲಸತ್ಕ್ಷೋಭರೌದ್ರಂ ಸಮುದ್ರಂ: **ಪಂಚತಂತ್ರ,** ೨೧೫)

**ಪ್ರೋತ್ತುಂಗ** – [ಪ್ರ+ಉತ್ತುಂಗ] ತುಂಬ ಎತ್ತರವಾದ (ರಜತಮಣಿ ಕನಕನೀಳಾಂಶುಜಾಳ ವಿಲುಳಿತ ವಿರಾಜಿತ ಪ್ರೋತ್ತುಂಗ ಧ್ವಜಮಾಳಾ ಪರಿವೃತದಿಂ: **ಸುಕುಮಾಚ,** ೧೦. ೪೮)

**ಪ್ರೋತ್ಪಿಹಿತ** – ಚೆನ್ನಾಗಿ ಮುಚ್ಚಿದ (ವರುಣಾಶಾಬ್ಧಿಪಯಃಪ್ರವಾಹ ವಿತತಸ್ನಾನಂ ವಿನಿರ್ಧೂತ ಧಾತ್ರೀರಜಃ ಪ್ರೋತ್ಪಿಹಿತ ಅಂಗಂ: **ರಾಜಶೇವಿ**, ೮. ೧೦೬)

**ಪ್ರೋಥ** – ಮೂಗಿನ ಹೊಳ್ಳೆ (ಸ್ಫಿಜ್ ಪ್ರೋಥಂ: **ಅಭಿಧಾವ,** ೧೨. ೫) )

**ಪ್ರೋದ್ಗತ** – ಚಾಚಿಕೊಂಡಿರುವ, ಹೊಮ್ಮಿದ (ತದ್ವೇತ್ರ ಹಸ್ತಪ್ರತಿ ಮುಖರಪ್ರೋದ್ಗತಾಭೀಳಘೋಷಂ: **ಗಿರಿಜಾಕ,** ३. ४)

**ಪ್ರೋದ್ಯತ್** – ಮೇಲಕ್ಕೇಳುವ (ಪ್ರೋದ್ಯತ್ ತರಂಗೋಚ್ಚರತ್ ಅಮರನದೀ ಶೀಕರೋದಾರ ತಾರಾರಾಮಂ: **ಕಾದಂಸಂ,** ೧. ೧); ಉಬ್ಬಿಕೊಂಡ

**ಪ್ರೋದ್ದಾನ** – ಆನೆಯ ಸುರಿಯುವ ಮದಜಲ (ಕ್ಷಿತಿಚಕ್ರಂ ಗತಿಚಕ್ರಗಂಧಗಳಿತ ಪ್ರೋದ್ದಾನಜಂಭಾಳಶೋಭಿತಂ: **ಪುಣ್ಯಾಸ್ರ,** ೧. ೪೧)

**ಪ್ರೋದ್ದಾಮ** – ಅತಿಶಯವಾದ, ಶ್ರೇಷ್ಠವಾದ (ಸಮದಾನೇಕಪಮಂ ಮಹಾಭಯದಮಂ ಪ್ರೋದ್ದಾಮಜಂಬೂಕದಂಬಮಂ ಅಭ್ರಂಕಷಕೂಟಮಂ .. .. ಋಷ್ಯಮೂಕಮಂ ಆನಂದದಿನೆಯ್ದಿದಂ ಸಕಲಕಾಕಾನೀಕಲಕ್ಷ್ಮೀಶ್ವರಂ: **ಪಂಚತಂತ್ರ,** ३३५)

**ಪ್ರೋದ್ಧೂತ** – ಮೇಲೇಳುತ್ತಿರುವ (ಪನಿಪುಲ್ಲಂಬುಕಣಂಗಳಂ ಕೆದಱುತುಂ ಕೋಕಂಗಳೊಳ್ ರಾಗಮಂ ನನೆವೊಯ್ದು ಉಣ್ಮಿಸುತುಂ ಪತತ್ರಿಗಳೊಳಗಿರ್ಪಾ ತೂಂಕಡಂ ನೂಂಕುತುಂ ತಣ್ಣನೆ ತೀಡಿತ್ತೆನಸುಂ ಪ್ರಭಾತಮಯ ಪ್ರೋದ್ಭೂತ ಶೀತಾನಿಳಂ: **ಶಾಂತೀಶ್ವಪು,** ೧೧. ೯೪)

**ಪ್ರೋದ್ಭಾಸಿ** – ಚೆನ್ನಾಗಿ ಹೊಳೆಯುವ (ಗಿರಿಶ ಚಂಚಜ್ಜಟಾಜಾಲಜೂಟವ್ಯೋಮ ಪ್ರೋದ್ಭಾಸಿ ಚಂದ್ರಂ ತ್ರಿಭುವನಜನಕೆ ಆನಂದಮಂ ಮಾಡುಗೆಂದುಂ: **ಕಾದಂಬ,** ೧. ೧)

**ಪ್ರೋದ್ಭೂತಂ** – ಆವಿರ್ಭವಿಸಿದುದು (ತತ್ ಆನನ ಪ್ರೋದ್ಭೂತಂ ಸಿದ್ಧಾಂತಮಾರ್ಗಂ: **ಸುಕುಮಾಚ,** ೫. ३೯)

**ಪ್ರೋದ್ಭೇದ** – ಮುರಿದುಹೋದ; ಮುರಿಯುವಿಕೆ [ಮಾದ್ಯತ್ ಗಜಗಂಡಕಷಣಪ್ರೋದ್ಭೇದದಿಂ ಸಾರ್ದು ಬಂದು ಇದಿರೊಳ್ ಕೂಡುವುದಿಲ್ಲಿ ಚಂದನರಸಂ ಕೆಂಬೊನ್ನ ಟಂಕಂಗಳೊಳ್: **ಪಂಪಭಾ,** ೪. ೨೨)

**ಪ್ರೋನ್ಮಿಳಿತ** – ಚೆನ್ನಾಗಿ ಮಿಲನಗೊಂಡ (ಗಂಭೀರ ಭೀಮೋಜ್ವಳರಾವ ಪ್ರೋದ್ಭುತ ಪ್ರೋನ್ಮಿಳಿತ ಘುಳುಘುಳು ಧ್ವಾನಮಂಬೋನಿನಾದಂ: **ಗಿರಿಜಾಕ,** ೧. ४६)

**ಪ್ರೋಷಧ** – [ಜೈನ] ಉಪವಾಸದ ಹಿಂದಿನ ಮತ್ತು ಮುಂದಿನ ದಿನ ಒಂದೇ ಹೊತ್ತು ಊಟಮಾಡುವ ವ್ರತ (ಪ್ರೋಷಧವ್ರತ ಪವಿತ್ರಗಾತ್ರೆಯರೆಮಾಗಿ ಮತ್ತಂ ಅಲ್ಲಿಯೆ ಕಿಕ್ಕಿಱಿಗಿಱಿದು: **ಶಾಂತಿಪು**, ४. ೯೫ ವ)

**ಪ್ರೋಹ** – ಆನೆಯ ಭುಜಸ್ಥಲದ ನಡುವಣ ಅಂಗಭಾಗ (ಸುಸಂಚಿತ ಪ್ರೋಹ ಪಳಿಹಸ್ತಗಾತ್ರನುಂ ಪರಿಪೂರ್ಣಶ್ಲಿಷ್ಟ ಪಾರ್ಷ್ಣಿಯುಂ: **ಆದಿಪು,** ೧೨. ೫೬ ವ)

**ಪ್ರೌಢಿ** – ಜಾಣತನ (ಆಚಾರ್ಯರೆಮ್ಮಂ ನಿಯಮಿಸುಗೆ ನಿಜಾನುಗ್ರಹಪ್ರೌಢಿಯಿಂದಂ: **ಪುಷ್ಪದಂಪು,** ೧. ३)

**ಪ್ಲಕ್ಷ** – ಬಸರಿಮರ (ಪ್ಲಕ್ಷ ಕದಂಬ ನಿಂಬ ಪನಸ ಅರ್ಜುನ ತಾಲ ಲವಂಗ ಲುಂಗ ರುದ್ರಾಕ್ಷ ತುರುಷ್ಕ ಮುಷ್ಕ ನಿಚುಳ ಆಮ್ರ ಕರಂಜ ವಟ ಆದಿ ಅನೇಕ ವೃಕ್ಷ: **ಪಂಚತಂತ್ರ,** ೯೭)

**ಪ್ಲಕ್ಷ್ಯ** – ಅತ್ತಿಮರ; ಆಲದ ಮರ (ಬಸರಿ ಪರ್ಪಟೀ ಪ್ಲಕ್ಷಾಹ್ವಂ: **ಅಭಿಧಾವ,** ೧. ೮. ೨)

**ಪ್ಲವ** – ಪ್ರವಾಹ (ಮದನರಸ ಪ್ಲವಂ ಕವಿಯೆ ತಣ್ಣಸನಾಗದೆ ತೃಷ್ಣೆ: **ಶಾಂತಿಪು,** ೮. ೯೭); ಕಪ್ಪೆ (ಕುಳೀರಾರ್ಭಕಸಂಘಂ ಪ್ಲವಂ ಕಿಂಬುಳಕಚಯಮಿರಲ್ ತೋರ್ಕುಂ ಅಂಭೋನಿಧಾನಂ: **ಉದ್ಭಟಕಾ,** ೧. ೩೭); ಅರವತ್ತು ಸಂವತ್ಸರಗಳಲ್ಲಿ ಒಂದು (ಜಗತ್ಪ್ರಕಟ ಪ್ಲವಸಂವತ್ಸರದ ಕಾರ್ತಿಕಂ ಮುದಮನೀಯೆ: **ಆದಿಪು,** ೧೬. ೭೫)

**ಪ್ಲವಂಗವಿದ್ಯೆ** – [ಜೈನ] ಕೋತಿಯ ವೇಷ ತಾಳುವ ಒಂದು ವಿದ್ಯೆ (ಇತ್ತಲಣುವಂ ಪ್ಲವಂಗವಿದ್ಯೆಯಿಂ ಕಪಿಮೂರ್ತಿಯಂ ಕೈಕೊಂಡು: **ಚಾವುಂಪು,** ಪು. ೩೮೪. ಸಾ. ೨೦)

**ಪ್ಲವಗಕೇತು** – ಕಪಿಧ್ವಜ (ಅಮಿತ ಚತುರಂಗ ಸೇನಾ ಸಮನ್ವಿತರ್ ಪ್ಲವಗಕೇತುಗಳ್ ಮಾರುತಮಾರ್ಗಮನೆಳಸಿ ಬಳಸಿ ನಡೆದರ್: **ಪಂಪರಾ,** ೧೩. ೨೬)

**ಪ್ಲವಗಪ್ಲುತ** – ಕುಪ್ಪಳಿಸು (ಪ್ಲವಗಪ್ಲುತದಿಂ ಚಾರಣನಿವಹಂ ಚಾರಣಗಣಂಗಳಂತಾಗೆ ಪಯಃಪ್ಲವದೊಳಗೆ ಮುಟ್ಟಿ ಪಾರಿಪ್ಲವನೇತ್ರೆಯರ್ ಅಮರಕಾಂತೆಯರ್ ಸೊಗಯಿಸಿದರ್: **ಅಜಿತಪು,** ೪. ೬೧)

**ಪ್ಲವನ** – ಪ್ರವಾಹ (ಉದ್ಗತನಿರ್ಝರಪ್ಲವನದಿಂ ಗಂಗಾ ಸರಿತ್ಪೂರಮಂ ನಗುವಂತುನ್ನತಿವೆತ್ತ .. .. ವಸಂತಗಿರಿಯಂ ಕಂಡಂ ಮಹೀಮಂಡನಂ: **ಪಂಪರಾ,** ೨. ೧೩)

**ಪ್ಲುತ** – ಹಾರುವ (ಪ್ಲುತಲೀಲಾ ಮೃಗಜಾಳಮಂ .. .. ಕೃತಕಾದ್ರೀಂದ್ರದ ಶೀತಕೋಶ ಗುಹೆಯಂ ಪೊಕ್ಕಂ ಮಹೀವಲ್ಲಭಂ: **ಲೀಲಾವತಿ,** ೪. ೧೬)

**ಪ್ಲುಷ್ಟ** – ಸುಟ್ಟ (ಭಾಳವಿಲೋಚನಪ್ರಭವಭಸ್ವತ್ ಜಾತವೇದಶ್ಶಿಖಾನಿವಹಪ್ಲುಷ್ಟರತೀಶಂ ಇಷ್ಟಸುಖಮಂ ದುರ್ಗಂಗೆ ದೀರ್ಘಾಯುಮಂ: **ಪಂಚತಂತ್ರ,** ೨)

**ಪ್ಲೋಷ** – ಸುಡುವ (ಸದ್ಯಸ್ಸಂತಾಪಿತ ಲೋಹಪುತ್ರಿಕಾ ಪರಿರಂಭಸಂಭೃತ ಪ್ಲೋಷಚಲಜ್ಜಾಂಗಳ ಗಳದ್ರುಧಿರ: **ಆದಿಪು,** ೫. ೮೭ ವ)

# ಫ

**ಫಣ** – ಹಾವಿನ ಹೆಡೆ (ಶೇಷಂ ಫಣಂ ಬಳ್ಳಿಸುರ್ಕಿದಪಂ ಸೀರೆಯ ಸಿಂಬಿವೊಲ್ ಖಳನೃಪಾಲಾಕ್ಷೌಹಿಣೀ ಭರದಿಂ: **ಜಗನ್ನಾವಿ,** ೧. ೩೦)

**ಫಣಭೃತ್** – (ಉರಗಂ ಭೋಗಿ ಸರಿಸರಪಂ ಫಣಿ .. . ಫಣಭೃತ್ .. .. ಸರ್ಪಂ: **ಅಭಿಧಾವ,** ೧. ೩. ೭)

**ಫಣಮಣಿ** – ಹಾವಿನ ಹೆಡೆಯ ಮಣಿ (ಚೂಡಾಮಣಿಗೆಜಿಗೆ ಚಕ್ರಿಪದದೊಳ್ ಫಣಮಣಿ ಮನರುಕ್ತಿ ಪಾಂಡ್ಯಪತಿಗಾಯ್ತಾಗಳ್: **ಶಾಂತಿಪು,** ೧೧. ೪)

**ಫಣಾಪತಿ** – ಆದಿಶೇಷ (ಅದು .. .. ಮಹತ್ವದಿಂದ ಇಟೆವುದು ಧನಪತಿ ದಿವಿಜಪತಿ ಫಣಾಪತಿಇಉರಮಂ: **ಪುಷ್ಪದಂಪು,** ೨. ೩೩)

**ಫಣಾಮಣಿ** – ಫಣಮಣಿ (ಸಮಸ್ತ ಉರ್ವೀಧರ ಅಶೇಷ ಶೇಷ ಮಹಾನಾಗ ಫಣಾಮಣಿ ದ್ಯುತಿಯನೇಂ ಖದ್ಯೋತದೊಳ್ ಕಾಣ್ಬರೇ: **ಪಂಪಭಾ,** ೫. ೭೬)

**ಫಣಿ** – ಹೆಡೆಯುಳ್ಳುದು, ಹಾವು (ಉರಗಂ ಭೋಗಿ ಸರಿಸರಪಂ ಫಣಿ .. . ಫಣಭೃತ್ .. .. ಸರ್ಪಂ: **ಅಭಿಧಾವ,** ೧. ೩. ೭)

**ಫಣಿಕಟಕ** – ಶಿವ (ಫಣಿಕಟಕನ ಕೆಟಗೆ ಬಯ್ಕೆಯಿರ್ದಪುವೆಂಬರ್: **ಸಮಯಪ,** ೨. ೬೫)

**ಫಣಿಗಳ್** – ರಾಹುಕೇತುಗಳು (ಚಂದ್ರ ಕುಜ ಬುಧ ಅಮರಗುರು ದೈತ್ಯಾರಾಧ್ಯಮಂದಫಣಿಗಳಂ ಆರಾಧಿಪನ್ ಒಂದು ಮಣೆಗೆ ತಂದನಿಬರುಮಂ: **ಸಮಯಪ,** ೮. ೧೬೩)

**ಫಣಿಗೃಹ** – ಹುತ್ತ (ಸುಖನಿಧಿ ಕಂಠೀರವವಿಷ್ಟರ ದಿನಧಿಕನಮರಾಲಯದಿಂ ಧೀರಂ ಫಣಿಗೃಹದಿಂದಂ ವೀರಂ: **ಶಾಂತಿಪು,** ೯. ೨೧೧)

**ಫಣಿಗೇಹ** – ಫಣಿಗೃಹ (ಫಣಿಫಣಾಸ್ಫುರಿತದೀಪಿಕಾವ್ಯೆಹಮಂ ಕ್ವಣಿತಮಣಿಕಿಂಕಿಣೀನಿನದ ಫಣಿಗೇಹಮಂ .. .. ನೋಡಿ: **ಆದಿಪು,** ೭. ೨೭)

**ಫಣಿದಷ್ಟ** – ಹಾವು ಕಚ್ಚಿದವನು (ಫಣಿದಷ್ಟನ ನಾಲಗೆಗೆ ಎಂತು .. .. ಮಧುರಂಗಳೆ ತಿಕ್ತರಸಂಗಳಾಗಿ ಸಂಕ್ರಮಿಸುಗುಂ .. .. ಅಂತೆ ಕುದೃಷ್ಟಿಗೆ .. .. ತೋರಷುಗುಂ: **ಸಮಯಪ,** ೧೧. ೧೫೪)

**ಫಣಿಪತಿಕೇತನ** – ಧ್ವಜದಲ್ಲಿ ಹಾವಿನ ಚಿಹ್ನೆಯುಳ್ಳವನು, ದುರ್ಯೋಧನ (ಫಣಿಪತಿಕೇತನಧೂಮಕೇತುವುಂ ಪಾಂಡವಬಾಲಪ್ರದೀಪನುಂ .. .. ಎನಿಸಿದ ಭೀಮಸೇನಂ: **ಗದಾಯು,** ೨. ೧ ವ)

**ಫಣಿಪ್ರಭು** – ಫಣಿಪತಿ (ಫಣಿಪ್ರಭುಗಂ ಎತ್ತಮತ್ತಳಗಮಲ್ತೆ ರೂಪಸ್ತವಂ: **ಆದಿಪು,** ೧೩. ೯೦)

**ಫಣಿಭೂಷಣ** – ಹಾವುಗಳೆಂಬ ಆಭರಣ (ಮುಳಿಸು ಲಲಾಟನೇತ್ರಶಿಖಿ ಮೆಚ್ಚೆ ವಿನೂತ ರಸಪ್ರಸಾದಂ ಉಜ್ವಳಜಸಂ ಅಗಸಂಗತ ಲಸತ್ ಭಸಿತಂ ಪ್ರಭುಶಕ್ತಿ ಶಕ್ತಿ ನಿರ್ಮಳಮಣಿಭೂಷಣಂ ಫಣಿಭೂಷಣಂ ಆಗೆ ನೆಗಟ್ತೆಯಂ ಮದುಂಗೊಳಿಸಿದಂ ಈಶ್ವರಂ ನೆಗಟ್ದ ಉದಾರಮಹೇಶ್ವರಂ ಈಗೆ ಭೋಗಮಂ: **ಪಂಪಭಾ,** ೧. ೨)

**ಫಣಿರಾಜಕೇತನ** – ಫಣಿಪತಿಕೇತನ (ನಿಜತೇಜದಿಂ ಆಂತ ದೈತ್ಯರಂ ತಳವೆಳಗಾಗೆ ಕಾದಿ ಚಳಿತು ಎಯ್ದಿ ಬಟಲ್ದು ಅಪರಾಂಬುರಾಶಿಯೊಳ್ ಮುಟುಗುವ ತೀವ್ರದೀಧಿತಿವೊಲ್ ಆ ಕೊಳದೊಳ್ ಫಣಿರಾಜಕೇತನಂ ಮುಟುಗಿದಂ: **ಪಂಪಭಾ,** ೧೩. ೭೪)

**ಫಣಿಲೋಕ** – ನಾಗಲೋಕ (ಅನಿಮಿಷಲೋಕಮಂ ವಿಬುಧರಿಂ ಫಣಿಲೋಕಮಂ ಉಗ್ರಸಾಧನದಿಂ .. .. ಅದೇನನುಕರಿಸಿತ್ತೊ ರಾಜಭವನಂ: **ಶಾಂತಿಪು,** ೩. ೧೨)

**ಫಣಿಶಯನ** – ಹಾವನ್ನೇ ಹಾಸಿಗೆಯಾಗುಳ್ಳವನು, ವಿಷ್ಣು (ರಕ್ಷಿಪುದೀ ಕಾಳಿಯ ಫಣೀಂದ್ರನಂ ಫಣಿಶಯನಾ: **ಜಗನ್ನಾವಿ,** ೩. ೧೦೪)

**ಫಣೀಂದ್ರ** – ಆದಿಶೇಷ (ಪಡೆಮೆಚ್ಚೆ ಗಂಡನ ಗಂಡಗಾಡಿಯಂ ಕಂಡು ಫಣೀಂದ್ರನ ಕನ್ನೆ ಕನಕಲತೆಯೆಂಬ ನಾಗಕನ್ನೆ ಕಣ್ಬೇಟಗೊಂಡು: **ಪಂಪಭಾ,** ೪. ೧೫ ವ)

**ಫಣೀಂದ್ರಕೇತು** – ಸರ್ಪಕೇತನ, ದುರ್ಯೋಧನ (ಆಂ ಮರುಳೆನೊ .. .. ನೀಂ ಮರುಳಯೋ ಪೇಟಿ ಪೇಟಿದೊಡೆ ಪೋಗದಿರು ಈಶ್ವರನಾಣೆ ಎಂದು ಮಲ್ಮರುಳ್ ಇನಿಸಾನುಮಂ ತಗೆದು ಕಾಡಿದುದಲ್ಲಿ ಫಣೀಂದ್ರಕೇತುವಂ: **ಪಂಪಭಾ,** ೧೩. ೫೫)

**ಫಲ** – ಹಣ್ಣು (ಪುಷ್ಪಫಲಪತ್ರಶಾಖಾ ನಿಮಿತ್ತಂ ವನಮಂ ತೊಟಲ್ವ

ಮುನಿಕುಮಾರರಂ ಕೊಲ್ವುದುಮದಂ ಕಂಡು ದುರ್ವಾಸಂ ಮುಳಿದು: **ಪಂಚತಂತ್ರ,** ೩೬೮ ವ); ಪ್ರಯೋಜನ (ಕೊಂಬ ಕಾರ್ಯವನೂ, ಕುಡುವಕಾರ್ಯವನೂ, ಮಾಡುವಕಾರ್ಯವನೂ ಇವೆಲ್ಲವನ್ನೂ, ಆ ಹೊತ್ತೇ ಮಾಡದಿರ್ದೊಡೆ ಕಾಲವಾ ಫಲವಂ ಕಿಡಿಸುವುದು: **ಪಂಚತಂತ್ರ,** ೩೭೧, ಶ್ಲೋಕ ೧೭೮ ಟೀಕೆ); ಫಲಿತಾಂಶ (ಹಿರಣ್ಯರೋಮನಾ ಪಕ್ಷಿಗಳಂ ಕಾದ ಪುಣ್ಯದ ಫಲವೆನಿತಾದೊಡಂ ತನ್ನ ಮುನ್ನಿನ ದುಷ್ಕೃತವನನುಭವಿಸಿದಲ್ಲದೆ ಪೋಗದೆಂಬುದನಱಿಪುವಂತೆ: **ಪಂಚತಂತ್ರ,** ೪೨೫ ವ)

**ಫಲಕ** – ಹಣ್ಣು (ನವಕಳಿಕಾಂಕುರಪ್ರಕರಮಂ ನವಕೋಕಿಲಕುಟ್ಮಲಂಗಳಂ ನವಫಲಕಂಗಳಂ .. .. ತೋಱಿದುವಂದಿನ ಬಂದ ಮಾವುಗಳ್: **ಅಜಿಪು,** ೬. ೨೪); ಗುರಾಣಿ (ಉಗ್ರದಾಡೆ ಅಸಿ ಫಲಕಂ ಚಲ್ಲಣದುಡೆ ಪೊಂದೊಡರ್ ಒಪ್ಪಲ್ ರಣಧೀರನೆನಿಪ್ಪ: **ತ್ರಿಷಷ್ಟಿಪು,** ೩೩. ೩)

**ಫಲಪೂರ** – ಮಾದಳ (ಫಲಪೂರಂ ಜನ್ಮಸಾಫಲ್ಯಸಂಸ್ಥಿತಿಯಂ ಮಾಡಿದುದೆಂದು ನೋಡಿದಳಲಂಪಿಂ: **ಪುಷ್ಪದಂಪು,** ೩. ೧೦೬)

**ಫಲವತಿ** – ಗರ್ಭಿಣಿ (ಪಲಕಾಲಂ ಪುಷ್ಪವತಿಯೆನಾದಪೆನೆಂದುಂ ಫಲವತಿಯಾದಪೆನಿಲ್ಲ ಎಂದು ಲತಾಲಲಿತಾಂಗಿ ಬಾಡಿ ಪಾಡಟೆದೆಂಗುಂ: **ಸುಕುಮಾಚ,** ೯. ೯೮)

**ಫಲಸಾರ** - (ವಿಯಚ್ಚರಸಂಕುಲಕ್ಕೆ ನೆಟ್ಟಗೆ ಪರಿಪಕ್ವಮಪ್ಪ ಫಲಸಾರಮನಿತ್ತು ನಿಜೋನ್ನತಿಕ್ಕೆಯಂ ಪೊಗಳಿಸಿಕೊಳ್ವೆಂ: **ಶಾಂತೀಶ್ವಪು,** ೧೦. ೯೧)

**ಫಲಾಶಿ** – ಹಣ್ಣು ತಿನ್ನುವವನು (ವಿವಿಧಮೂಲಫಲಾಶಿಗಳುಂ ಸರೋವರನದೀನಿರ್ಝರಾಂಬುಪಾಯಿಗಳುಂ ಅಗಿ: **ಆದಿಪು,** ೯. ೯೩ ವ)

**ಫಲಿತ** – ಹಣ್ಣುಗಳನ್ನು ಬಿಟ್ಟಿರುವ (ಕದಳೀಪ್ರಮುಖ ಫಲಿತಭೂಜರಾಜಿಗಳ್: **ಪುಷ್ಪದಂಪು,** ೫. ೮೭ ವ)

**ಫಲ್ಗು** – ಚಿಕ್ಕದು (ಕೂಸನೆಯಿನ್ನುಂ ಶಾಸ್ತ್ರಾಭ್ಯಾಸಂ ಪಿರಿದಿಲ್ಲ ಫಲ್ಗು: **ವರ್ಧಮಾಪು,** ೧೪. ೧೩)

**ಫಳಕಾರ** – ಉಪಕಾರ ಮಾಡುವವನು (ಇಳೆಯೊಳಗೆಲ್ಲ ಸಿಂಹಚೂಡನೆ ಫಳಕಾರಂ ಚಂಡಶಾಸನಂ ಬಗೆವೊಡೆ ಭೂತಳದೊಳ್ ಕೃತಘ್ನಂ: **ಅನಂತಪು,** ೧೧. ೫೫)

**ಫಳಪಕಾಂತತೆ** – ಫಲ ಬಿಟ್ಟ ತಕ್ಷಣ ನಾಶವಾಗುವುದು, ವಾರ್ಷಿಕ ಬೆಳೆ (ಫಳಪಾಕಾಂತತೆಯ ಓಷಧಿಗಳ ತೆಱದಿಂದೆ ಸಮನಿಸಿತ್ತಕಟ .. .. ದಂಪತಿಯೊಳ್: **ಚಂದ್ರಪ್ರಪು,** ೩. ೪೦)

**ಫಳವತಿ** – ಹಣ್ಣು ಬಿಡುವ ಮರಗಿಡ (ಫಳವತಿಯಪ್ಪ ಕಲ್ಪಲತೆ ಪುಷ್ಪವಿಲಾಸಮನಪ್ಪುಕೆಯ್ವವೊಲ್: **ಮಲ್ಲಿನಾಪು,** ೪. ೩)

**ಫಳಿನ** – ಹಣ್ಣು ಬಿಟ್ಟ ಮರ (ಫಳಮುಳ್ಳುದು ಫಳಿನಂ: **ಅಭಿಧಾವ,** ೧. ೭. ೨)

**ಫಳಿನೀ**– ಪ್ರಿಯಂಗು ಬಳ್ಳಿಯ ಹಣ್ಣು (ಫಳಿನಿ ಶ್ಯಾಮಂ ಪ್ರಿಯಂಗು ನಾಮಂ ನೆಗೞ್ಗುಂ: **ಅಭಿಧಾವ,** ೧. ೮. ೪)

**ಫಾಲ್ಗುನ** – ಚಾಂದ್ರಮಾನದ ಹನ್ನೆರಡನೆಯ ತಿಂಗಳು (ವಿಶ್ವನಾಥನಾದಿಜಿನಂ ಫಾಲ್ಗುನ ಬಹುಲೈಕಾದಶಿಯೊಳಂ ಅನಂತಸುಖನಿಲಯನುತ್ತರಾಷಾಢದೊಳೀ ಧ್ಯಾನಮರೀಚಿಯಿಂ ಬೆದಱೆ: **ಆದಿಪು,** ೧೦. ೧೬)

**ಫಾಲ್ಗುನನಂದೀಶ್ವರ** – [ಜೈನ] ಫಾಲ್ಗುಣದಲ್ಲಿ ಆಚರಿಸುವ ಒಂದು ವ್ರತ (ಫಾಲ್ಗುನನಂದೀಶ್ವಮಾದುದಾಗಳ್ ಉಭಯಬಲಮುಂ ಉಭಯಘೋಷಣೆಯುಂ ಘೋಷಿಸಿ ಕಾಳೆಗಮಂ ಉಟಿದಿರ್ಪುದುಂ: **ಪಂಪರಾ,** ೧೪. ೮೩ ವ)

**ಫುಲ್ಲ** – ಅರಳಿದ (ತಿಳಿಗೊಳನಂ ಫುಲ್ಲಪಂಕೇಜಮಂ ನಿರ್ಮಳತಾರಾಧೀಶನಂ ಪೋಲ್ತು: **ಅಜಿತಪು,** ೧. ೪೦)

**ಫುಲ್ಲಶರ** – ಹೂಬಾಣ (ಫುಲಲಶರಶಿಖಿಯ ಪೊಗೆಯೆನೆ ಪಲ್ಲವಿಸಿದ ಆಶೋಕೆಯಿಂದೆ ಪುಗೆ ಬಂದಳಿಗಳ್ ಮಲ್ಲಿಗೆಯಲರ್ಗಣ್ಣಳಂ: **ಲೀಲಾವತಿ,** ೯. ೧೧೧); ಮನ್ಮಥ (ಫುಲ್ಲಶರಂಗಿಸುವೆಡೆಗಿವೆ ನಲ್ಲಂಬುಗಳೆನಿಸಿ ತುಱುಗಿ ಮಲರ್ದಲರ್ದಲರ್ದಸೆವೀ ಮೊಲ್ಲೆಯುಂ: **ಆದಿಪು,** ೧೧. ೧೧೪)

**ಫುಲ್ಲಸರಳ್** – ಹೂಬಾಣ (ಫುಲ್ಲಸರಳ್ ಬಸಂತದ ಪುಗಿಲ್ ನೆಱೆದಿಂಗಳ ತಣ್ಬಿಸಿಲ್ ಮುಗುಳ್ಮಲ್ಲಿಗೆ ಬಂದ ಮಾಮಲೆವ ತೆಂಕಣಗಾಳಿ .. .. ಎಂಬಿನಂ ಬಲ್ಲವರಂ ಮನಂಗೊಳಿಸುಗುಂ ಕೃತಿ ಸತ್ಕೃತಿ ನಾಗಚಂದ್ರನಾ: **ಮಲ್ಲಿನಾಪು,** ೧. ೪೪)

**ಫೂತ್ಕಾರ** – ಶಬ್ದಸಹಿತ ಉಸಿರು ಬಿಡುವಿಕೆ (ಮಾಕಂದಗಜ ಫೂತ್ಕಾರಂ ರಥಾಂಗರಥಚೀತ್ಕಾರಂ .. .. ಬೆರಸಿ ಬಳೆದಾಗಸಮಂ ಮುಸುಂಕೆ: **ಗಿರಿಜಾಕ,** ೮. ೮ ವ)

**ಫೂತ್ಕೃತಿ** – ಫೂತ್ಕಾರ (ಭೃಂಗವಧೂಝಂಕೃತಿ ಶಂಖಫೂತ್ಕೃತಿರುತಂ .. .. ಉದ್ಘಕೋಕಿಳರವಂ ಭೇರೀಘನಧ್ವಾನಮಾಗೆ ವಸಂತಂ .. .. ಅದೇಂ ಬಂದುದೋ: **ಚಂದ್ರಪ್ರಪು,** ೭. ೩೭)

**ಫೇನ** – ನೊರೆ (ಉಟ್ಟ ದುಗುಲಂ ಗಂಗಾನದೀ ಫೇನಂ ಉಜ್ವಲಮುಕ್ತಾಭರಣಂ ತರತ್ತರಳ ತಾರೋದಾರ ಭಾ ಭಾರಂ .. .. ಕಣ್ಗೊಪ್ಪಿತಾ ಕಾಂತೆಯಾ: **ಪಂಪಭಾ,** ೧. ೧೩೭)

**ಫೇರವ** – ನರಿ (ಬೆಕ್ಕು ಫೇರವಂ ಕರಿ ಕಳಭಂ ವೃಕಂ ಚಮರಿ .. .. ಮೊದಲಾದನೇಕ ಮೃಗಮಿರ್ಪುವು ತದ್ವನಾಂತರಾಳದೊಳ್: **ತ್ರಿಷಷ್ಟಿಪು,** ೨೭. ೨೩)

## ಬ

**ಬಂಕ** – ಮೂಲೆ (ಅದರ ಬಂಕದೊಳ್ ಒಪ್ಪುಗುಂ ಉಜ್ವಲಾಂಗನನ್ವಿತ ಬಹುಸಂಖ್ಯರುದ್ರಗಣ ಸೇವಿತಂ ಅಗ್ಗದ ನೀಲರೋಹಿತಂ: **ಶಬರಶಂ,** ೧. ೬೭)

**ಬಂಕು** – ಬಾಗು, ವಕ್ರವಾಗು (ಬಂಕು–ಕೌಟಿಲ್ಯೇ: **ಶಬ್ದಮದ,** ಧಾ ೬೦)

**ಬಂಗು** – ಬೂಜು (ಅವನುಪಕಾರಮಂ ಫೇಟವೇಟ್ವುದೆ ನಮ್ಮ ತಿರಿದು ತಂದುಣ್ಬಶನಕ್ಕೆ ಅವರಣ್ಣೆ ಸೂಜಿಮೊನೆಯೆನಿಸುವ ಎಣ್ಣೆಯುಂ ಬಂಗುಮಾದ ಕಟಿಯುಂ ಪೇೞ್ಗುಂ; **ಸುಕುಮಾಚ,** ೨. ೬೮)

**ಬಂಚ** – [ವಂಶ] ಕೊಳಲು (ಮದನಾನುರಾಗಮಂ ಸಿಂಪಿಸುವಂತೆ ಬಾಜಿಸುವ ಬಂಚದ ನುಣ್ಚರದೊಳ್: **ಮಲ್ಲಿನಾಪು,** ೧೧. ೭೬); ಪೀಳಿಗೆ (ಶಕಾರಕ್ಕೆ ಚಕಾರಂ: ಶಷ್ಕುಲಿ–ಚಕ್ಕುಲಿ, ವಂಶಂ–ಬಂಚಂ: **ಶಬ್ದಮದ,** ೨೭೭ ಪ್ರ)

**ಬಂಚರ** – ವೀಣೆ, ತಂಬೂರಿ (ಕಳಕಂಠಕಳರವಂ ಪಂಚಮದ ಬಂಚದಿಂಚರಮೆನಿಸೆ: **ಶಬರಶಂ,** ೨. ೪೨ ವ)

**ಬಂಚಿಸು** – ವಂಚಿಸು (ಲಸನ್ನೇತ್ರಂಗಳಂ ಕೂಡೆ ಬಂಚಿಸುತುಂ ಮೆಟ್ಟುವ ಮೆಟ್ಟಿನೊಳ್ಪು: **ಆದಿಪು,** ೭. ೧೨೩); ತಪ್ಪಿಸು (ಕೆಲಕೆಲವು ಅವಿನಾಣಂಗಳಂ ನಾಣ್ಚಿ ಬಂಚಿಸಿ ಪಿರಿದುಮನುರಾಗದಿಂಮೆನ್ನ ಬರೆದ ಪಟಮನಿದನರ್ಚಿಸಿ: **ಆದಿಪು,** ೩. ೪೩ ವ); ಮರೆಮಾಚು (ಕನ್ಯಕಾರೂಪ ದರ್ಶನದಿಂ ತತ್ಪುಲಕಂಗಳಂ .. .. ಬಂಚಿಸಿಯುಂ ಏಂ ಮೇಲ್ವಾಯ್ದುದಂ .. .. ತಾಂಗಿದನಿಲ್ಲ: **ಪಂಪರಾ,** ೫. ೬೩)

**ಬಂಜ** – [ವಂಧ್ಯ] ನಿರ್ವೀರ್ಯ (ನಿನ್ನೊಡನಿರ್ದ ಬೊಜಂಗರ್ ನಿನ್ನಂತಿರೆ ಬಂಜರಲ್ಲರ್ ಅದಟರ್ಕಳ್ ಅವರ್: **ಧರ್ಮಾಮೃ,** ೨.೭೯)

**ಬಂಜೆ** – [ವಂಧ್ಯಾ] ಗೊಡ್ಡು (ಮಗನಂ ಪಡೆವಂತಿರೆ ಬಂಜೆಗೆ ಮರ್ದಂ ಮಾಟ್ಪಂ: **ಸಮಯಪ,** ೧೨. ೩೫)

**ಬಂಜೆತನ** – ಗೊಡ್ಡುತನ (ಎನಗೀ ಜನ್ಮವಿಂದಿಂತೆ ಬಂಜೆತನದಿಂದಂ ಪೋಕುಮೋ: **ಸುಕುಮಾಚ,** ೯. ೧೦೯)

**ಬಂಜೆ ಮಾಡು** – ಹಾಳುಮಾಡು (ವಿಜಯಲಕ್ಷ್ಮಿವೊಲೀತನ ತೋಳ ತಪ್ಪಿನೊಳ್ ಪೊಸಯಿಸು ನಲ್ಮೆಯಂ ದಿವಸಲಕ್ಷ್ಮಿಯನೇಕೆಯೋ ಬಂಜೆಮಾಡುವೈ: **ಪಂಪರಾ,** ೯. ೧೬೭)

**ಬಂಜೆವೊಟ್ಟು** – ವ್ಯರ್ಥವಾದ ಸಮಯ (ಮಧ್ಯಾಹ್ನದ ಪೊಟ್ಟಿಲ್ಲದ ಪೊಟ್ತು ಬಂಜೆವೊಟ್ಟು ತಾನದು ಪೊಟ್ತೀ: **ನೇಮಿನಾಪು,** ೧. ೭೯)

**ಬಂಟು** – ಶೌರ್ಯ (ಕುಂದಿನಿಂದೆಚ್ಚನದು ಬಂಟಂದುಮಲ್ಲದೆ ನಿಂದುದು ಎಂದು ನಿಂದು: **ಆಚವರ್ಧ,** ೭. ೫೩)

**ಬಂಟುತನ** – ಶೌರ್ಯ (ಸೊಕ್ಕುವುದೆ ಬಂಟುತನ .. .. ತರಳತೆಯೆ ನೋಡುತ್ಸಾಹಮೆಂಬರ್ ಧೂರ್ತರ್: **ಕಾದಂಬ,** ೩. ೯೮)

**ಬಂಡ** – ಸರಕು (ಪಲಂಬರ್ ಪರದರ್ ಸತ್ತರ್ ಉಟಿದರೆಲ್ಲರುಂ ಕೆಟ್ಟೋಡೆ ಬಂಡಮುಂ ಎಟ್ತುಗಳುಂ ಮೊದಲಾಗೆಲಮ್ಲುಂ ಕಳ್ಳರ್ ಕಳ್ಳರ್ ಕೊಂಡು ಪೋದರ್ರ; **ವಡ್ಡಾರಾ,** ಪು ೭೬, ಸಾ ೧೪)

**ಬಂಡಣ** – ಯುದ್ಧ (ಇದಿರ್ಚಿ ಪೊಣರ್ಚುವ ವರೂಥಿಗಳ ತಂಡದ ಗಂಡುಗೊಂಡ ಬಂಡಣಮಂ ಕಂಡು: **ರಾಜಶೇವಿ,** ೬. ೬೯ ವ)

**ಬಂಡಳಿಸು** – ಮಾತಾಡು (ಅರಗಿಳಿವಿಂಡು ಬಂಡಳಿಪ ಸಾರಿಕೆ ಚಾವಳಿಮನ್ಮದದಾಳಿ ಗಾವರಿಸುವ ಸೋಗೆ ಕೇಗುವ .. .. ಬನಮೊಪ್ಪಿದುದು: **ಪುಷ್ಪದಂಪು,** ೧೪. ೨೩)

**ಬಂಡಾಡು** – [ಬಂಡು+ಆಡು] ಮಕರಂದ ಹೊಮ್ಮು (ಬಂಡಾಡೆ ಮೇಲೆ ಮಧುಕರಮಂಡಳಿಗಳ್ ಬಿಟ್ಟು ಮಿಳಿರ್ವ ಮಡದಿಯ ಮುಡಿ ಮಾರ್ಕೊಂಡುದು ಕಾರ್ಮುಗಿಲಡಿಯೊಳ್ ತಾಂಡವಮಂ ಮೆಱೆವ ಸೋಗೆನವಿಲ ಬೆಡಂಗಂ: **ಆಚವರ್ಧ,** ೫. ೫೫)

**ಬಂಡಾರ** – {ಭಂಡಾರ] ರಾಜನ ಬೊಕ್ಕಸ (ಎಲ್ಲಮಂ ಬಂಡಾರಂ ಪೊಕ್ಕವೆಂದುಂ ಪೊಱಮಡವೆಂದುಂ ಜಡಿದು ಬಗ್ಗಿಸಿಕೊಂಡುಣೆ: **ವಡ್ಡಾರಾ,** ೨೨, ೭)

**ಬಂಡಿ** – ಗಾಡಿ ಬಂಡಿಗಳೊರ್ಳ ಪಟ್ಟೆಯಂ ಧಾನ್ಯಮಂ ತೀವಿಕೊಂಡು ಪೊಟಲ್ಗೆ ಮಾಱಲೆಂದು ಪೋಪನ್ನೆಗಂ: **ವಡ್ಡಾರಾ,** ಪು. ೭೬, ಸಾ. ೧೦)

**ಬಂಡು** – ಹೂವಿನ ಮಕರಂದ (ಓಗರವೂಗಳ ಬಂಡಂ ಎಯ್ದೆ ಪೀರುತ್ತ ಒಡವಂದುವು ಇಂದ್ರವನದಿಂ ಮಱಿದುಂಬಿಗಳ್; **ಪಂಪಭಾ,** ೧೧. ೮೧)

**ಬಂಡುಣ್** – ಮಕರಂದ ಹೀರು (ಕೂಡುತಿರ್ಪ ರಥಾಂಗಂ ನಲಿದಾಡಿ ನರ್ತಿಪ ನವಿಲ್ ಬಂಡುಂಬ ಪೆಣ್ದುಂಬಿ: **ಸುಕುಮಾಚ,** ೧. ೭೩)

**ಬಂಡುವೋಗು** – ಲಜ್ಜೆಗೊಳ್ಳು (ತಪದಿಂದಂ ಗುಣದಿಂದಂ ಪುರದೊಳ್ ಪಲವು ದಿವಸಂ ಮೆಚ್ಚಾಗಿರ್ದಲ್ಲಿಯೆ ಬಂಡುವೋದ್ಯೆ: **ಧರ್ಮಾಮೃ,** ೬. ೮೨ ವ)

**ಬಂದ** – ಫಲಬಿಟ್ಟ (ಮಧುಮಾಸದ ಗೋಸನೆ ತುಂಬಿಯಿಂಚರಂ ಬಂದ ಎಳಮಾವಿನೇಟ್ಗೆ: **ಕಾದಂಸಂ,** ೭. ೧೪)

**ಬಂದಂಬಿಡು** – ಆಸೆಯನ್ನು ಬಿಡು (ಮನಸಂ ಸೈತಿಟ್ಟು ಬಾಬ್ವಾಸೆಯಿಂ ಬಂದಂಬಿಟ್ಟು ವಿಮೋಹಮಂ ಬಿಸಿಟು ಕಣ್ಣಂ ಮುಚ್ಚಿ: **ಧರ್ಮಾಮೃ,** ೪. ೫೧)

**ಬಂದ ಕರ್ಬು** – ಬಲಿತ ಕಬ್ಬು (ಕಾಯ್ತು ಕರೆವಂತಿರ್ದತ್ತು ಚೆಂದೆಂಗು ಸಾರಲೆವಂತಿರ್ದುದು ಬಂದ ಮಾವು: **ಆದಿಪು,** ೧೧. ೬೮)

**ಬಂದ ದೂವೆ** – ಚಿಗುರಿದ ಎಳೆ ಹುಲ್ಲು (ಚಂದ್ರನನಂಭೋನಿಧಿ ಬಂದ ದೂವೆ ಮಲೆಯಂ ಕಾರ್ಗಾಲಮಂ ಸೋಗೆ ನೆನೆವಂತಾಂ ನೆನೆವೆಂ ಸರೋಜಮುಖಿಯಂ: **ಆದಿಪು,** ೧೨. ೩೧)

**ಬಂದಿ** – ಸೆರೆ (ಎನಗಿಂದಿಂಗಾಱು ತಿಂಗಳ್ ಸಮನಿಸಿದಪುದಿಲ್ಲೆಲ್ಲಿಯುಂ ಬಂದಿ ಮಂಚಲ್; **ಸುಕುಮಾಚ,** ೭. ೧೮); ಸೆರೆಯಾಳು (ಭೂನಾಯಕಂ ಬಿಡಿಸೆ ಬಿಟ್ಟ ಬಹು ಬಂದಿಯಿಂ ಕರಮೆ .. .. ಕಣ್ಗೆಸೆದುದು ನರೇಂದ್ರಭವನಾಂಗಣಂ: **ಅಜಿತಪು,** ೪. ೭)

**ಬಂದಿಕಾಱ** – ಸೆರೆ ಹಿಡಿಯುವವನು (ದುರ್ಯೋಧನಂ ಬಂದಿಕಾಱನಂತೆ ಸೆಱೆಗೆಯ್ದುಂ ವ್ರಣವೈದ್ಯನಂತೆ ಕೊಡಸಾರಿಯಂ ಪಿಡಿದುಂ ಸೂಳೆಯಂತೆ ಕಟಿವು ಉಟಿವನಱಿದುಂ ರಸವಾದಿಯಂತೆ ಕಟ್ಟಿಯುಂ ಪೆಱೋರ್ಡೆಯಂತೆ ನುಣ್ಣಿತಂ ವೇಟ್ಟು: **ಪಂಪಭಾ,** ೬. ೭೨ ವ)

**ಬಂದಿಗೆ** – ಕತ್ತಿಯ ಹಿಡಿಕೆ (ಕಾವಿಲ್ಲದೆ ಕೊಡೆವಿಡಿವೆನೆಂಬಂತೆ ಬಂದಿಗೆಯಿಲ್ಲದೆ ಸುರಗಿವಿಡಿಯದೆ ಅರಸುಗೆಯ್ವೆನೆಂಬಂತೆ: **ಧರ್ಮಾಮೃ,** ೪. ೨೯ ವ)

**ಬಂದಿವಿಡಿ** – ಸೆರೆಹಿಡಿದು ಸುಲಿಗೆ ಮಾಡುವುದು (ಕಳವನೆ ಮರ್ಚಿ ಪೆರ್ಚಿ ಬೆಸನಂ ಪೆಱರರ್ಥಮನೀಳ್ದುಕೊಳ್ವ .. .. ಸಂಚಳಿಸದೆ ಪೊಕ್ಕು ಬಂದಿವಿಡಿದವಾಯಿಲಮೊಡ್ಡುವ ನಿನ್ನ ಗೊಡ್ಡಮಂ: **ವರ್ಧಮಾಪು,** ೫. ೩೧)

**ಬಂದಿಸು** – ವಂದಿಸು, ನಮಸ್ಕರಿಸು (ಕೌಶಂಬಿಗೆ ವಂದು ಉದಯಾವತ ಪರ್ವತದೊಳ್ ಸಿದ್ಧಕ್ಷೇತ್ರಂಗಳೆಲ್ಲಮಂ ಬಂದಿಸಿ ತೀರ್ಥೋಪವಾಸಂಗೆಯ್ದು: **ವಡ್ಡಾರಾ,** ಪು ೭. ಸಾ ೪)

**ಬಂದುಗೆ** – [ಬಂಧೂಕ] ಒಂದು ಬಗೆಯ ಹೂ (ನಗೆಮೊಗಂ ಅಬ್ಜಮಾಗೆ ಮಿಗೆ ಬಾಯ್ದೆಱೆ ಬಂದುಗೆಯಾಗೆ .. .. ಪಸೆಯೊಳ್ ದೇವಿ ಕುಳ್ಳಿರ್ದಳಾಗಳ್: **ಲೀಲಾವತಿ,** ೧೧. ೬೧)

**ಬಂದುಗೆಯರಲ್** – ಬಂಧೂಕದ ಹೂ (ಅರಗಿಳಿಯ ಪಿಂಡು ಬಂದುಗೆಯರಲಂದದ ಚಂಚುವಿಂದೆ ಕಟಿಮೆಯ ತೆನೆಯಂ ಬರೆ ಕರ್ಚಿ ಪಾಱೆತಿರ್ದುವು: **ಲೀಲಾವತಿ,** ೫. ೩೮)

**ಬಂಧ** – ಐಹಿಕ ವ್ಯಾಮೋಹ (ಬಂಧಂ ಬಂಧಕಾರಣಂ ಮೋಕ್ಷಂ ಮೋಕ್ಷಕಾರಣಂ: **ವಡ್ಡಾರಾ,** ಪು. ೬, ಸಾ. ೧೬); ಕಾವ್ಯರಚನೆ (ಬಗೆ ಪೊಸತಪ್ಪುದಾಗಿ ಮೃದುಬಂಧದೊಳೊಂದುವುದು ಒಂದಿ ದೇಸಿಯೊಳ್ ಪುಗುವುದು: **ಪಂಪಭಾ,** ೧. ೮)

**ಬಂಧಕಿ** – ಜಾರೆ (ಮೇಲೆ ಬಿಟ್ಟು ಆಂ ಎಳಸಿದಪೆನೆನಲ್ ಬಂಧಕೀ ಧಾರ್ಷ್ಟ್ಯಮಲ್ತೇ: **ಕಾದಂಸಂ,** ೬. ೧೧)

**ಬಂಧಪಟಧರ** – (ತನಗೆಂದುದುಮಂ ಕೊಳ್ವಂ ಮನೆವೊರ್ದಂ ಬಂಧಪಟಧರಂ ಸಲೆ ಭೈಕ್ಷಾಶನಿ ಗುರುಪದಾಂತಿಕಾಶ್ರಿತಂ ಎನಿಸಿದಂ ಉದ್ದಿಷ್ಟವಿರತನೆಂಬುದು ಪೆಸರಿಂ: **ಶಾಂತೀಶ್ವಪು,** ೧೩. ೭೭)

**ಬಂಧವಿದ** – ಕುಶಲ ಕೆಲಸಗಾರ (ಬಂದವಿದಂ ಕಟ್ಟಿದ ಪಲತೆಱದ ಮಣಿಯ ಸೂಸಕದ ನೆಟಿಲ್ ಕುಟ್ಟಿಮತಲದೊಳ್ ಪೊಳೆದು: **ಚಂದ್ರಪ್ರಪು,** ೬. ೪೬)

**ಬಂಧಿಸು** – ಕಟ್ಟಿಹಾಕು (ತಸ್ಕರರಂ ಬಾರಿಸಿ ಕಷ್ಟರಂ ಕೆಡಿಸಿ ದಂಡಂಗೊಂಡು ಮಿಂಡರ್ಕಳಂ ಭರದಿಂ ಬಂಧಿಸಿ .. .. ಪಾಲಿಪುದು ಧತ್ರೀಚಕ್ರಮಂ ಕ್ಷತ್ರಿಯಂ: **ಧರ್ಮಾಮೃ,** ೨. ೫೨)

**ಬಂಧು** – ನಂಟ (ಬಂಧುಗಳ ಬಂಧುರಮೆನೆ .. .. ಕೈಕೊಳ್ಳದೆ .. .. ಪಾಸಱೆಯೊಳ್ ಕೂಸನಪ್ಪಳಿಸಿ: **ಜಗನ್ನಾವಿ,** ೨. ೫೩ ವ)

**ಬಂಧುರ** – ಸುಂದರ, ಮನೋಹರ (ಅಳಿವೃತಮಪ್ಪ ಕೊಂಬಿಳಿಯೆ ಸೆಂಬುಳಿಗೋಲ್ ವಸನಂ ಮಿಸುರ್ಪ ಕೆಂದಳಿರ್ ಅತಿಪಕ್ವ ಬಂಧುರ ಫಲಂ: **ಶಾಂತಿಪು,** ೭. ೧೩೬)

**ಬಂಧುರತೆ** – ಚೆಲುವು (ತಳೋದರಿಗೆ ವೃಕೋದರನಾಗಿಪಂ ಕಚಬಂಧಬಂಧುರತೆಯಂ: **ಗದಾಯು,** ೧. ೭೧)

**ಬಂಧೂಕ** – ಬಂದುಗೆ, ಕೆಂಪು ಹೂ ಬಿಡುವ ಒಂದು ಮರ (ಜಪಾಪ್ರಸವರಕ್ತಾಶೋಕ ಬಂಧೂಕ ಶೋಣಮಣಿ ಜ್ಯೋತಿಗಳೆಕ್ಕೆಯಿಂ ಕಂಡೆ: **ಆದಿಪು,** ೧೬. ೩)

**ಬಂಬಣಂಬಾಡು** – ಅಧಿಕವಾಗಿ ಸೊರಗು (ವಿರಕಾಕುಳೆಯಲರ್ದ ಲತೆಗಳಂ ಪೊರ್ದಲಣ್ಮದೆ ತನ್ನಂತೆ ಬಂಬಣಂ ಬಾಡಿರ್ದ ಜಾದಿಯಂ ನೋಡಿ: **ಪಾರ್ಶ್ವನಾಪು,** ೯. ೬೯ ವ)

**ಬಂಬಲ್** – ಗುಂಪು (ತುಂಬಿಯ ಬಂಬಲ್ಗಳಂ ಕೆಂದಾವರೆಯರಲ್ಗಳೊಳ್ ಪುದಿದುಯ್ವಂತೆ: **ಆದಿಪು,** ೨. ೩೯ ವ); ಸುರುಳಿ (ಭ್ರಮದ್ಭ್ರಮರಸಂಕುಲಂ ಕುರುಳ ಬಂಬಲಂ ಪುಷ್ಪವಿಭ್ರಮಂ: **ಆದಿಪು,** ೧೦. ೨೭)

**ಬಂಬಲ್ಮಾಡು** – ಬಂಬಣಂಬಾಡು (ಕೂಟ್ವೆಡೆಯದನಂತೆ ಬಂಬಲ್ಬಾಡುತ್ತುಂ: **ಧರ್ಮಾಮೃ,** ೧. ೧೧೬ ವ)

**ಬಂಬಲ್ಗುರುಳ್** – ಸುರುಳುಸುರುಳಿಯಾದ ಕರುಳು (ಮಹಾಪ್ರಳಯ ಉಲ್ಕೋಪಮ ಮತ್ ಗದಾಹತಿಯಿಂ ಅತ್ಯುಗ್ರ ಆಜಿಯೊಳ್ ಮುನ್ನಂ ಈ ಖಳ ದುಶ್ಶಾಸನನಂ ಪೊರಳ್ಚಿ ಬಸಿಱಂ ಪೋೞ್ದಿಕ್ಕಿ ಬಂಬಲ್ಗರುಳುಗಳಂ ಆನಲ್ತೆ ವಿಳಾಸದಿಂ ಮುಡಿಯಿಪೆಂ ಪಂಕೇಜಪತ್ರೇಕ್ಷಣೇ: **ಪಂಪಭಾ,** ೭. ೧೨)

**ಬಂಬಲ್ಗುರುಳ್** – ಗುಂಗುರುಗೂದಲು (ಬೀಸುವ ಚಾಮರದ ಗಾಳಿಯಲೆಪಿನೊಳಲ್ಲುಗುವ ಬಂಬಲ್ಗುರುಳ ಬಂಬಲಿಂದಂ: **ಆದಿಪು,** ೪. ೯ ವ)

**ಬಂಬಳಂ ಬಾಡು** – ತುಂಬ ಒಣಗಿಹೋಗು (ಪಸಿವಿಂದಂ ತೃಷೆಯಿಂದ ಪಥಶ್ರಮದಿಂದ ಆದಮಾನುಂ ಸೇದೆಗೆಟ್ಟು ಬಂಬಳಂ ಬಾಡಿರ್ಪನ್ನೆಗಂ: **ವಡ್ಡಾರಾ,** ಪು. ೧೧೦, ಸಾ. ೨೩)

**ಬಂಬಳಿಸು** – ತುಂಬಿ ಬರು (ತುಱುಗೆಮೆಯ ತೆಕೇಯೊಳ್ ಬಂಬಳಿಪ ಕಣ್ಬನಿಗಳೊಸರೆ ಮಸುಳನಾದ ದಿಟಿಯಂ: **ಆಚವರ್ಧ,** ೪. ೬೨ ವ)

**ಬಂಭರ** – ದುಂಬಿ (ಫಲದಳಿಗೊಂಚಲ್ ಇಂದ್ರಧನು ಕಾರ್ಮುಗಿಲ್ ಅಲ್ಲಿಯ ಬಂಭರಾಳಿ ಉಜ್ವಳಕರಿಬೃಂಹಿತಂ ಜಲಧರಧ್ವನಿ: **ಉದ್ಭಟಕಾ,** ೨.೪೭)

**ಬಂಭ್ರಮತ್** – ಸುತ್ತುತ್ತಿರುವ (ಬಂಭ್ರಮತ್ ಭ್ರಮರರವಂಗಳೊಳ್ ಬೆರಸಿ ಮಾರುತಂ ಒಯ್ಯನೆ ಬಂದು ತೀಡಿದತ್ತು: **ಕಾದಂಸಂ,** ೩. ೧೧)

**ಬಂಹಿಮವತ್** – ಅತಿಶಯವಾದ (ಹಿಮರುಚಿ ಕುಂದೆ ಕುಂದೆ ನೆಱೆದೊಪ್ಪುವ ಚಂದ್ರಿಕೆ ಕುಂದುವಂತೆ ಬಂಹಿಮವತ್ ಅಪಾರ ಸಾಗರ: **ಶಾಂತಿಪು,** ೭. ೭೮)

**ಬಕ** – ಬಕಪಕ್ಷಿ (ಬಕ ಕಲಹಂಸ ಬಲಾಕ ಪ್ರಕರ ಮೃದುಕ್ವಣಿತರಮ್ಯಮಿದಿರೊಳ್ ತೋಱೆತ್ತು ಕೊಳಂ ಪರಿವಿಕಸಿತ ಕನಕ ಕಂಜಕಿಂಜಲ್ಕಪುಂಜಪಿಂಜರಿತಜಳಂ: **ಪಂಪಭಾ,** ೮. ೩೮); ಒಬ್ಬ ರಾಕ್ಷಸ (ಅಯ್ವರೊಳಂ ನಾಮ್ಮಾಣದೆ ಬಕನ ಬಾರಿಗೊರ್ವನನೀವೆಂ: **ಪಂಪಭಾ,** ೩. ೨೬)

**ಬಕವೇಸಿತನ** – ಮೋಸದ ಹಾದರ (ಇಂತು ಬಕವೇಸಿತನದಿಂ ಮಾಯಾನಿಸ್ಪೃಹನಾಗಿ: **ಧರ್ಮಾಮೃ,** ೬. ೩೭ ವ)

**ಬಕಾರಿ** – ಬಕನನ್ನು ಕೊಂದವನು, ಭೀಮ (ವನಜಾತಪ್ರಿಯಬಂಧುಗೆ ಅಂಗಪತಿಯಂ ಧರ್ಮಂಗೆ ನಿನ್ನಂ ಹುತಾಶನಮಿತ್ರಂಗೆ ಬಕಾರಿಯಂ ಕುಲಿಶಿಗಂ ಗಾಂಡೀವಿಯಂ ಪೆತ್ತೆಂ: **ಗದಾಯು,** ೧೦. ೨೧)

**ಬಕುಳ** – ನಾಗಕೇಸರ ಎಂಬ ಮರ (ಬಕುಳದ ಪೂವಿನಕ್ಷವಳಯಕ್ಕೆ ದುಕೂಲದ ಚೆಲ್ವನಪ್ಪ ಸುಳಿಗೆಗೆ .. .. ಮಿಕ್ಕಗುರುವ ಬೂದಿಗೊಡ್ಡೆ ತನುವಂ: **ಶಾಂತಿಪು,** ೮. ೯೦)

**ಬಕೋಟ** – ಬಕಪಕ್ಷಿ (ಒಂದು ಬಕೋಟಂ ಆಟಂದು ಮೀಂಗಳಂ ಮುಟುಂಗಿಸೆ ಮುಳಿದ ಅರಸಂ ಇಂತೆಂದಂ: **ಲೀಲಾವತಿ,** ೧೪. ೮೧ ವ)

**ಬಕೋಟ ಕುಟುಂಬ** – ಬಕಗಳ ಸಮೂಹ (ಆವೆಗಳ್ ಎಳೆಮೀನ್ ಪೊಳೆದೊಡಂ ಒಳಪೋಗದಿರ್ಪುವು ಜಳಾಶಯಪ್ರಾಂತದೊಳ್ ಬಕೋಟಕುಟುಂಬಂ: **ಲೀಲಾವತಿ,** ೯. ೧೪)

**ಬಕ್ಕಂಬಯಲ್** – ಪೂರ್ತಿ ತೆರಪಾದ ಬಯಲು (ಹಿಮಸಮಯದೊಳಧಿಪಂ ತಾ ಹಿಮದಿಂದೆಲುವಡೆಯೆ ಬಗೆಯ ಬಕ್ಕಂಬಯಲೊಳ್ ಹಿಮನಿಧಿಯೆಮನಿಧಿ ಸಲೆ ಧೈರ್ಯಮಹಾಂಬುಧಿ ಬಳ್ವಿವಾಸದೊಳಿರ್ದಂ: **ಅಜಿತಪು,** ೧೨. ೩)

**ಬಕ್ಕಣ** – [ಭಕ್ಷಣ] ತಿನಿಸು (ತಲೆಗಳ ಬಟ್ಟಲಿಂ ಮೊಗೆದು ನೆತ್ತರನಾಗಳೆ ಈಂಟಿಯೀಂಟಿ ಮೆಯ್ಗಲಿಗಳ ಕಂಡದಿಂಡೆಗಳ ಬಕ್ಕಣಮಂ ತವೆ ಮೆಲ್ದು ಮೆಲ್ದು: **ಕಬ್ಬಿಗಕಾ,** ೨೨೩)

**ಬಕ್ಕಬಯಲು** – ಬಟಾ ಬಯಲು (ಆ ಸಮಯದೊಳ್ ಅಗ್ನಿಶಿಖಾಮುಖಕ್ಕೆ ದೂರಮಪ್ಪ ಬಕ್ಕಬಯಲ ತಾಣದೊಳ್ ದೊಮ್ಮಳಿಸಿ ನಿಂದು ಬಹುಜನಂಗಳ್ ಉಮ್ಮಳಿಸಿ ತಮ್ಮೊಳಿಂತೆಂದರ್: **ಪಂಪರಾ,** ೧೧. ೧೫೫ ವ)

**ಬಕ್ಕಳೆ** – ಕಂಠದ ಹಾರ (ಮೆಯ್ಯ ಮಸಿ ಕೊರಲ ಬಕ್ಕಳೆ ಪೊಯ್ಯೆ ಪುಗಿಲ್ಗರೆವ ಕೆಯ್ಯ ಕಂಕರಿಕೆ ಕರಂ ರಯ್ಯಮೆನೆ ಪಾಡುರ್ತಿಳ್: **ಕಾವ್ಯಾವಲೋ,** ೩೭೯)

**ಬಕ್ಕುಡಿ** – ತಲ್ಲಣ (ಚುಂಬನಂ ಅಪ್ಪು ಚಪ್ಪರಣೆ ಬೇಡುವ ಬಕ್ಕುಡಿ ಕಾಯ್ಪು ಕೂಡುವ ಅಟ್ಟುಂಬರಿ ಎಂಬಿವಾಗೆ: **ನೇಮಿನಾಪು,** ೫. ೭೧)

**ಬಕ್ಕುಡಿಗೆಯ್** – ವಾದಿಸು ವಟುಗಳೋದುಗಳನಾಲಿಸಿ ತಪ್ಪಂ ಪಿಡಿವುವು ಉಪನ್ಯಾಸದೆ ಬಕ್ಕುಡಿಗೆಯ್ವುವು ಮುನಿಗಳೊಡನೆ ಶುಕಶಾರಿಕೆಗಳ್: **ಜಗನ್ನಾವಿ,** ೧೬. ೫೧)

**ಬಕ್ಕೆ** – ಒಂದು ವಿಧದ ಹಲಸಿನ ಹಣ್ಣು (ಗೊಲೆಯೊಳ್ಪಣ್ತುದು ಮೈಂದವಾಟೆ ಪಥಿಕರ್ಬರ್ಕೆಂದು ಭೃಂಗಂಗಳಿಂದುಲಿವಂತಿರ್ದುದು ಪಣ್ತ ಬಕ್ಕೆ ತನಿವಣ್ಣಾಗಿರ್ದುದು: **ಆದಿಪು,** ೧೧. ೬೮)

**ಬಕ್ಕೆವಲಸು** – ಬಕ್ಕೆ (ಅನ್ಯಕುಜಮಂ ಅಳಿರವದೆ ನಗುವವೊಲ್ ಪಣ್ತ ಬಕ್ಕೆವಲಸುಗಳೆಸೆಗುಂ: **ಲೀಲಾವತಿ,** ೬. ೧೨೦)

**ಬಗಟು** – ತೊಡೆಗಳನ್ನು ಅಗಲಿಸು, ಭಾಗ ಮಾಡು (ಬಗಟು– ಊರುವಿಶ್ಲೇಷೇ: **ಶಬ್ದಮದ,** ಧಾ, ೨೫೩)

**ಬಗರಗೆ** – ತೋಡಿದ ಗುಂಡಿ, ಚಿಲುಮೆ (ಪಥಿಕರ್ ಅಱಲ್ಗೊಂಡು ತೋಡಿದ ಅಱುಂಬುನೀರ ಬಗರಗೆಗಳುಮಂ: **ಕಾದಂಬ,** ೦. ವ); ಬೋಕಿ ಬಿಂಚು (ಉಡುವ ಪುಲಿದೊವಲೊ ಕೈಯೊಳ್ ಪಿಡಿದಾ ಲಾಗುಳದ ಕೋಲೊ ಬಗರಿಗೆಯೊ ಕೆಂಜೆಡೆಯೊ ಪೂಸುವ ಬೂದಿಯೊ ಬಡಗೊರವಂಗೇಕೆ ತನಗೆ ಕಾದುವ ಬೆಸನಂ: **ಕಬ್ಬಿಗಕಾ,** ೧೪೮)

**ಬಗಿ** – ಬೆದಕು (ನಿಷ್ಠುರದಿಕ್ಕಿ ಮೆಟ್ಟಿ ಪುಟುಗಳ್ ಕರಮೆಲ್ಲೆಡೆ ಪತ್ತಿ ಬಗಿದು ತನೆ ಮೆಯ್ಯುಡಗಂ: **ಧರ್ಮಾಮೃ,** ೩. ೪೮)

**ಬಗೆ** – ಯೋಚನೆ ಮಾಡು (ನಿಮಿತ್ತಜ್ಞಂ ಅಂಬರ ಭೂಗೋಚರರೊಳ್ ಪರೀಕ್ಷಿಸಿ ನಿಮಿತ್ತಾಂಗಂಗಳೊಳ್ ನೋಡಿ ಕಂಡಿರದೆ ಇಂತೆಂದಂ ಬಗೆದು: **ಶಾಂತಿಪು,** ೫. ೨೧); ಪರಿಗಣಿಸು (ಶಲ್ಯನಂ ಅಂದು ಅಶಲ್ಯನಂ ಬಗೆವವೊಲ್ ಏಳಿದಂಬಗೆದು ದಂತಿಯಂ ಆಗಡೆ ತೋಟಿಕೊಟ್ಟು ತೊಟ್ಟಗೆ ರಥಮಂ ಪಡಲ್ವಡಿಸಿ ಪೂಟ್ದಂ ಅರಾತಿಯಂ ಅಸ್ತ್ರಕೋಟಿಯಿಂ: **ಪಂಪಭಾ** ಪರಿಷತ್ತು, ೧೦. ೧೧೧); ಮನಸ್ಸು (ತುಂಗ ಭವದ್ಬೋಧದ ಬೆಳಗಿಂಗೆ ಒಳಗಪ್ಪನಿತು ಎನ್ನ ಬಗೆ ಪುಗದು: **ಆದಿಪು,** ೮. ೧೦); ಚಿಂತಿಸು, ಧ್ಯಾನಿಸು (ಮುಳಿಸಿನ ದಳ್ಳುರಿಗನುಗುಟುತ್ತುಂ ಚಕ್ರರತ್ನಮಂ ಬಗೆದು ಬೆಸಸಿದಂ ಭರತೇಶಂ: **ಆದಿಪು,** ೧೪. ೧೧೫); ಆಲೋಚನೆ (ಇದಂ ಪಿರಿದು ಮಾಡಿ ಪೇಟ್ವೆನೆಂಬ ಬಗೆ ಮನದೊಳ್ ಮಿಗೆ ಮಾಣದಾಕ್ಷಣದೊಳಲ್ಲಿಂ ತಳರ್ದು: **ಪಂಚತಂತ್ರ,** ೯೬, ವ)

**ಬಗೆ ಕದಡು** – ಚಿತ್ತಕ್ಷೋಭೆಗೊಳ್ಳು (ಪೋದಂ ಬಗೆ ಕದಡಿ ತಾಯ ಪೊರೆಗೆ ನೃಪೇಂದ್ರಂ: **ಯಶೋಧಚ,** ೨. ೭೦)

**ಬಗೆಗಕಾಱ** – (ರಂಜಿಪಾ ಬಗೆಯ ರಸಾಂಧಿಯಪ್ಪ ಬಗೆಕಾಱರ ಮೊತ್ತದಿನೊಪ್ಪಿತು ಓಲಗಂ: **ಕುಸುಮಾಕಾ,** ೩. ೧೬)

**ಬಗೆಗಲ್** – [ಬಗೆ+ಕಲ್] ಮನಸ್ಸನ್ನು ತಿಳಿ (ಈ ಕಿಱೆಯವಳ್ ನಮಗೊಂದುಮಂ ಇಂತುಟೆನ್ನಳ್ ಇನ್ನುಂ ಬಗೆಗಲ್ವಂ ಅನ್ನೆವರೆಗಂ ಉಮ್ಮಳಿಸುತ್ತಿರದಿರ್: **ಆದಿಪು,** ೩. ೨೬)

**ಬಗೆಗೆಡು** – ವಿವೇಕ ಕಳೆದುಕೊ (ಬದ್ಧರೋಷಿಯುಂ ಯುದ್ಧಾಭಿಲಾಷಿಯುಂ ಅಕಾರಣದದ್ವೇಷಿಯುಂ ಅಪ್ಪ ಪಗೆವನ ಮನೆಯಂ ಬಗೆಗೆಟ್ಟು ಪೊಕ್ಕಂದು: **ಪಂಚತಂತ್ರ,** ೨೮೦ ವ)

**ಬಗೆಗೊಳ್** – ಲಕ್ಷ್ಯಕ್ಕೆ ತಂದುಕೊ (ಅರ್ಕಕೀರ್ತಿಗಂ ಜ್ಯೋತಿರ್ಮಾಲೆಗಂ ಅಮಿತತೇಜಂ ಎಂಬೊಂ ಮಗನಾದೊಂ ಖೇಚರೇಂದ್ರ ಬಗೆಗೊಳ್ವುದು ಇದಂ: **ಶಾಂತಿಪು,** ೫. ೬೮); ಮನಮೆಚ್ಚಿಸು (ವಿಪುಳಕಂಟಕನಂ ಇನಿಸಂ ಕೊಂಡಿರದೆ ಕೊಂದು ಗೆಲ್ಲಂಗೊಂಡಂ ಬಗೆಗೊಳ್ವರೆಱದೆ ವಿಜಯಾಂಗನೆಯಂ: **ಶಾಂತಿಪು,** ೫. ೫೫); ಆಕರ್ಷಿಸು [ಕಳಕಂಠಗೀತಂ ಬಗೆಗೊಳೆಯುಂ ವೀಣಾಕ್ವಣಂ ಮನಂಗೊಳೆಯುಂ: **ಆದಿಪು,** ೧೧. ೨೮)

**ಬಗೆಗೊಳಿಸು** – ಮನಸ್ಸನ್ನು ಗೆಲ್ಲು, ಆಕರ್ಷಿಸು (ಸಮುಜ್ಜ್ವಳಕನಕವರ್ಣೆ ಮಿಗೆ ಬಗೆಗೊಳಿಸಿದಳ್ ಉದ್ಯಾನಕೇಳಿಲೀಲಾಕ್ಷಣದೊಳ್: **ಶಾಂತಿಪು,** ೮. ೧೮)

**ಬಗೆದರ್** – [ಬಗೆ+ತರ್] ನಿಶ್ಚಯ ಮಾಡು (ಕೂಡಿದ ಕೂಟದಿಂದ ಒಲಿಸಿದ ಇರ್ವರುಮಂ ಸಮಪಾತವಾರಿಯಿಂ ಕೋಡೆ ಸರಾಗದೊಳ್ ಮುಟುಗಿ ಮೂಡೆ ಮೃಗಾಂಕಕರಂ ಪಯೋರಸಂ ತೀಡುವ ತಂಬೆಲರ್ ಮನದೊಳ್ ಉರ್ಕೆಗಳಂ ಸುರತಾವಸಾನದೊಳ್ ಮಾಡೆ ರತಕ್ಕೆ ಮತ್ತೆ ಬಗೆದಂದುದು ದಂಪತಿ ಸೌಧಕೂಟದೊಳ್: **ಶಾಂತಿಪು,** ೮. ೧೦೦)

**ಬಗೆದೀರ್** – [ಬಗೆ+ತೀರ್] ತೃಪ್ತಿಹೊಂದು (ದಿವ್ಯ ಮುನಿಪುಂಗವರಂಬಗೆದೀರ್ಪಿನಂ .. .. ಪತಿವ್ರತಾಗುಣದಿಂ ಮೆಚ್ಚಿಸು ನೀಂ: **ಪಂಪಭಾ,** ೧. ೧೧೮)

**ಬಗೆದೋಱು** – ಇಂಗಿತವನ್ನು ತೋರಿಸಿಕೊ (ಅಂಗನೆ ನೀಂ ಗರ್ವಿಸಿದಪ್ಪೆಯೆಂದು ಬಗೆದೋಱಂ ನಲ್ಲನೇನೊಲ್ಲನೇ: **ಅನಂತಪು,** ೮. ೪೧)

**ಬಗೆಪೋಗು** – ಮನದಟ್ಟಾಗು (ಬಗೆ ಪೋಯ್ತೀಗಳೆ ಎಲೇ ಇದ್ದೆ ತುಹಿನಕ್ಷೋಣೀಧ್ರದುತ್ತುಂಗಸಾನುಗಳೊಳ್ ಭೋರೆನೆ ಬಂದು ಪಾಯ್ವುದದೆ ನೋಡಾಕಾಶಗಂಗಾಜಲಂ: **ಕಾವ್ಯಾವಲೋ,** ೪೮)

**ಬಗೆಯಱೆ** – ಇಂಗಿತವನ್ನು ತಿಳಿದುಕೊ (ಪಲವು ಪೂಮಾಲೆಗಳಂ ಬಗೆಯಱೆದು ಓಲಗಿಪುದು ಮಾಲೆಗಾಱನಂ ಪೋಲ್ತುದು ಉಗ್ರಮಾಲ್ಯಮಹೀಜಂ: **ಆದಿಪು,** ೫. ೩೬)

**ಬಗೆವಲೆ** – ಹೃದಯವೆಂಬ ಬಲೆ (ಕಾಲ್ಗೊಳ್ ತೊಡರ್ದ ನರೇಶ್ವರರ ಬಗೆವಲೆ ತೊಡಕಂ ಪರಿಹರಿಪವೊಲ್ ಆಂತಳಬಲೆ ಹರಿಣಪ್ಲುತಮಂ: **ರಾಜಶೇವಿ,** ೧೨. ೯೩)

**ಬಗೆವೇರ್ಚು** – ಮನಸ್ಸು ಅರಳು (ಆನಂದಾಶ್ರುವೊಗೆಯೆ ಬಗೆವೇರ್ಚುತ್ತಿರ್ಮಡಿ ಮೂವಡಿ ನಾಲ್ವಡಿ ಅಯ್ವಡಿ ಸಂತಸದಿಂದೆ ತಂದೆ ಮಗಳಂ ಕರೆದಂ: **ಗಿರಿಜಾಕ,** ೩. ೧೦೪)

**ಬಗೆವುಗು** – ಮನಂಬುಗು, ಮನಸ್ಸನ್ನು ಸೇರು (ಬಗೆವುಗೆ ಜೈನಮನೋದದೆ ಮಿಗೆ ಪಾಟಿಸಿ ಕುಮತಿ .. .. ಸಮ್ಯಕ್‌ಜ್ಞಾನಿಯಾಗಲೇನಜೆದಪನೇ: **ಸಮಯಪ,** ೩. ೩೩)

**ಬಗೆವೇಟ್** – ಸಮಾಧಾನಪಡಿಸು [ತನಯರನಿಟ್ಟು ಸಂತತಿಯೊಳ್ ಇಂತೆಮಗಂ ಬಗೆವೇಟದೇಕೆ ಪೋದನೊ ನೃಪಂ: **ಆದಿಪು,** **ಆದಿಪು,** ೯. ೭೬)

**ಬಗ್ಗ** – [ವ್ಯಾಘ್ರ] ಹುಲಿ (ಪೊದಱೆಂದಂ ಪೊಱಮಟ್ಟು ಕಟ್ಟಿದಿರೊಳ್ ಆರ್ಪಿನಂ ಗರ್ಜಿಸುತ್ತಿರ್ಪ ಬಗ್ಗದ ಬಲ್ಗಂಡಿಕೆಗಂಡು ಗಂಡುಗಲಿ ಬೇಡಂ: **ರಾಜಶೇವಿ,** ೫. ೯೯); [ವರ್ಗ] ಗುಂಪು; [ಭರ್ಗ] ಶಿವ

**ಬಗ್ಗಣೆ** – ಕೋಗಿಲೆಯ ಕೂಜನ (ವಿಪಂಚಿಯಿಂಚರಂ ನಲ್ಲಳ ಲಲ್ಲೆ ಕೋಗಿಲೆಯ ಬಗ್ಗಣೆ ತುಂಬಿಯ ಗೇಯತಂ ಎಂಬಿನಂ ಬಲ್ಲವರಂ ಮನಂಗೊಳಿಸುಗುಂ ಕೃತಿ ಸತ್ಕೃತಿ ನಾಗಚಂದ್ರನಾ:

**ಮಲ್ಲಿನಾಪು,** ೧. ೪೪); ಗದರಿಕೆ (ಸ್ಮರಶರಮೇವುವೆಂಬ ಶಿಶಿರಾಶುವ ತಣ್ಣದಿರೇವುವೆಂಬ ತೆಂಬೆರಲರಲೇವುವೆಂಬ ಕಳಕಂಠಿಯ ಬಗ್ಗಣೆಯೇವುವೆಂಬ .. .. ಬದ್ದರಂ ಅಱಿಯಟ್ಟಿ ಸಂತಮಿರಲೀಯದೆ ಬಾಳಬಸಂತವಾರಣಂ: **ಅಜಿತಪು,** ೬. ೨೬);

**ಬಗ್ಗಿಸು –** ಇಂಚರವುಂಟುಮಾಡು (ಮಾವನೆ ಮಱಿಗೊಂಡು ಬಗ್ಗಿಸುವ ಕೋಗಿಲೆ ಕೋಗಿಲೆಯಿರ್ಕೆದಾಣದೊಳ್ ಜಿನುಗುವ ತುಂಬಿ: **ಆದಿಪು,** ೧. ೬೫); ಗದರಿಸು (ಕಳಕಳಿಪ ಅಮರಿಯರಂ ಕಣ್ಣೊಳೆ ಬಗ್ಗಿಸುವಲ್ಲಿ .. .. ಕರಮೆರ್ದೆಗೊಳಿಸಿದುದಾಕೆಯ ವಿಭ್ರಮಭ್ರೂಭಂಗಂ: **ಆದಿಪು,** ೭. ೧೫); ಬೈಯಿ (ಪಾರ್ವರ ಪರದರ ಒಳ್ವೆಂಡಿರ್ಕಳೆಲ್ಲರುಮಂ ಎಟ್ಟಿದು ತಂದು ಬಗ್ಗಿಸಿಯುಂ ಒಟ್ಟಯಿಸಿಯುಂ: **ವಡ್ಡಾರಾ,** ಪು ೧೬೬, ಸಾ ೯); ಜಬರಿಸು (ಕಿಱಿಯಂದು ತಂದೆ ಬಗ್ಗಿಸಲಱಿಯದೆ ತಾಯ್ ಜಡಿದು ತಿಳಿಪಲಱಿಯಳೆ: **ಸುಕುಮಾಚ,** ೨. ೬೨); ಮೂದಲಿಸು (ತಂದೆ ಕಡಂಗಿ ಕಲ್ಪಿಸುವ ಕಲ್ಪಿಯನೊಲ್ಲದೆ ತಾಯ್ಮಗುಟ್ಟು ನಿರ್ವಂದದಿಂ ಎಯ್ದೆ ಬಗ್ಗಿಸುವ ಬಗ್ಗಣೆಗಳ್ಗದೆ: **ಸುಕುಮಾಚ,** ೨. ೮)

**ಬಚ್ಚ –** [ವೈಶ್ಯ] ವ್ಯಾಪಾರಿ (ಧನದ ಭವನಮೆನಿಪ ಸಿರಿಯ ಬಚ್ಚರ ಆಪಣಂಗಳಿಂ ಪೊದಳ್ದ ಕಾವಣಂಗಳಿಂ: **ಪಂಪಭಾ,** ೧. ೫೮)

**ಬಚ್ಚಣೆ –** ವೇಷ, ಸೋಗು (ಪರಿಗೆಗಳಲ್ಲಿ ಕೀಲಿಸಿದ ಗೆಜ್ಜೆಯ ಬಚ್ಚಣೆವೆತ್ತ ಬಿಲ್ಗಳಚ್ಚರಿಗೆಡೆಯಾದ ಕನ್ನಡಿಯ ಕೂರ್ಪಿನ ಡೊಂಕಣಿಯಲ್ಲಿ ಜುಂಜಿನಂತಿರೆ ಮಿಳಿರ್ದಾಡುತಿರ್ಪ: **ಕಬ್ಬಿಗಕಾ,** ೨೦೪)

**ಬಚ್ಚಲ್ –** ನಾಲೆ (ವಾಪೀಕೂಪದೀರ್ಘಿಕಾಘಟೀಯಂತ್ರಪ್ರವಾಹಂ ಪುಗುವ ಬಚ್ಚಲ್ಗಳ ಪೊಱಮಡುವ ತೂಂಬುಗಳ ಬೆಡಂಗು ಕಣ್ಗೆ ನಿರವಿಸೆ: **ಅನಂತಪು,** ೭. ೨೪ ವ)

**ಬಚ್ಚವಸರ –** [ಬಚ್ಚ+ಪಸರ] ವ್ಯಾಪಾರಿಗಳ ಅಂಗಡಿಗಳ ಸಾಲು (ಬಾಗಿಲ್ವಾಡದ ಮುಂದಣ ಭಾಗಂಗಳ ಬಚ್ಚವಸರಮರ್ಥಿಗೆ ಕುಡುವುದ್ಯೋಗದ ಪಸರಮೆ ವಿತ್ತಸಮಾಗಮದಿಂ ಗೆಯ್ದೊನಿಲ್ಲ ಪರದಂ ಪರದಂ: **ಶಾಂತಿಪು,** ೩. ೧೫)

**ಬಚ್ಚಿಸು –** ಬಣ್ಣ ಹಾಕು (ಬರೆಯಲ್ಬಾರದು ಬಚ್ಚಿಸಲ್ಕರದು: **ಅನಂತಪು,** ೧. ೧೧೪)

**ಬರ್ಚಿಸು –** ಬಚ್ಚಿಸು (ಬರೆದು ಬರ್ಚಿಸಿದಂತೆವೊಲಾಗೆ .. .. ನೂತನವಾ ಇಕೇತನಂ: **ಜಗನ್ನಾವಿ,** ೧೦. ೯೩)

**ಬಜಾವಣೆ –** ಬಾಜನೆ, ವಾದ್ಯ ಬಾರಿಸುವಿಕೆ (ತೇನತೇನಮೊದವಲ್ ತಾನ ಲಯಂ ಮುಂಚಲ್ಸಂಭ್ರಮದಿಂ ಬಾಜಿಸಿದಳ್ ಬಜಾವಣೆಯಿನಂದಂಬೆತ್ತವಳ್ ವೀಣೆಯಂ: **ರಾಜಶೇವಿ,** ೧೦. ೩೨)

**ಬಜ್ಜರ –** [ವಜ್ರ] ನವರತ್ನಗಳಲ್ಲಿ ಒಂದು (ನಿಡಿದಾದ ಬಾಹುಬಳಂ ಉನ್ಮದಸಿಂಧುರಕಂಧರಕ್ಕೆ ಬಜ್ಜರದ ಅಮಳ್ಗಂಬಮಾದ ತೊಡೆ .. .. ನೃಪೇಂದ್ರನಾ: **ಅನಂತಪು,** ೨. ೨)

**ಬಜ್ಜರವಸರ –** ವಜ್ರದ ಅಂಗಡಿ (ದೆಸೆಗಳ್ ನಿಜಾಂಶುವಿಂ ರಂಜಿಸುತಿರೆ ಪುಂಜಿಸಿದ ಪೊನ್ನ ಪುಂಜಿಕೆಯಿಂದಂ ಕೊಸಗಿನ ಮರದುಱುಗಲರಲ್ದೆಸೆವಂತೆಸೆದಿರ್ಪುದಲ್ಲಿ ಬಜ್ಜರವಸರಂ: **ಜಗನ್ನಾವಿ,** ೯. ೧೦೭)

**ಬಜ್ಜೆಗುಂಟಣಿ –** ಧೂರ್ತೆಯಾದ ಕುಂಟಲಗಿತ್ತಿ (ಬಜ್ಜೆಗುಂಟಣಿ ಸಜ್ಜೆವನೆಯ ಬಾಗಿಲಂ ಪತ್ತಿ ಮಱಿಗೇಳುತ್ತಿರ್ದೊಳಗಂ ಪೊಕ್ಕು, **ಚಂದ್ರಪ್ರಪು,** ೮. ೫೯ ವ)

**ಬಟ್ಟನೆ –** ದುಂಡಗೆ (ಪುಟ್ಟುವ ಗಾಳಿಯ ಬಱಿಯನೆ ಬಟ್ಟನೆ ಸುಟಿಗೊಳೆ ಮರುದ್ವಿಮಾನಪ್ರಕರಂ: **ಜಗನ್ನಾವಿ,** ೧. ೪೫)

**ಬಟ್ಟನೆ ಬರ್ –** ಸುತ್ತುತ್ತ ಬರು (ಪೆಣ್ಣಾಗೆ ಮೇಣಂತಂಬರದೊಳ್ ಬಟ್ಟನೆ ಬರ್ಪೊಡತ್ಯಧಿಕಲಾರ್ಭಂ: **ಲೋಕೋಪಕಾ,** ೧೨. ೨೦)

**ಬಟ್ಟನೇಱಿಲ್ –** ಗುಂಡು ನೇರಿಳೆ ಹಣ್ಣು (ಆ ಬಟ್ಟೆಯೊಳ್ ಬೆದಕಿ ಬಟ್ಟನೇಱಿಲ ಚೆಂಗಾರೆಯ ಮೆಲ್ದುಗುಟ್ಟಿ ಸಹಕಾರೋಚ್ಚಿಷ್ಟಪಕ್ವಂಗಳಂ: **ಸುಕುಮಾಚ,** ೪. ೫೭)

**ಬಟ್ಟಲ್ –** ದುಂಡಾದ ಪಾತ್ರೆ (ಪಿರಿದೊಂದು ಕಾಜಿನ ಬಟ್ಟಲೊಳ್ ಕಮ್ಮಿತಪ್ಪ ನೀರಂ ತೀವಿ ಚಂದ್ರಬಿಂಬಂ ನೀರೊಳ್ ಕಾಣ್ಬಂತಿರೆ ಮಾಡಿ: **ವಡ್ಡಾರಾ,** ಪು. ೧೮೬, ಸಾ. ೧೬)

**ಬಟ್ಟಸರಿ –** ಸುತ್ತಾಡು (ತಿಟ್ಟನೆ ತಿರಿದು ಬಟ್ಟಸರಿವಂದೊಡೆ ಮೆಯ್ಯ ಬಣ್ಣಮುಂ ಪುಣ್ಯಮುಂ ಅರಿಸಿನದ ಪಿಂಜೆಯಂತೆ ಪಾಱಿ ಪೋಕುಂ: **ನೇಮಿನಾಪು,** ೫. ೪ ವ)

**ಬಟ್ಟಾಡು –** [ಗೋಲಿ, ಚೆಂಡು ಮೊದಲಾದ] ದುಂಡಾದ ವಸ್ತುಗಳೊಡನೆ ಆಟವಾಡು (ವಟ್ಟಂದೆತ್ತುದು ಬೆಳ್ಳಿಯ ಬೆಟ್ಟಂ ಬಿಣ್ಪಿಂಗೆ ಎನಿಪ್ಪ ಕೋಟಿಕಶಿಲೆಯಂ ಬಟ್ಟಾಡಿದ ಬಾಹಾಬಲಂ ಇಟ್ಟಳವು ಎಂಟನೆಯ ಕೇಶವಂಗಿದಿರುಂಟೇ: **ಪಂಪರಾ,** ೧೨. ೬೮)

**ಬಟ್ಟಿಗೆ –** ಬಣ್ಣ ಬಳಿಯುವ ಕುಂಚ (ಪಳಿಕಿನ ಪಲಗೆಯುಮಂ ಬಣ್ಣವಣ್ಣಿಗೆಯ ಬಟ್ಟಿಗೆಗಳುಂ ತಾನೆ ತಂದು ಕೊಟ್ಟು: **ಲೀಲಾವತಿ,** ೭. ೮೮ ವ)

**ಬಟ್ಟಿಗೆವಲಗೆ –** [ಮೃತ್ತಿಕಾಫಲಕ] ಚಿತ್ರ ಬರೆಯುವ [ಮಣ್ಣಿನ] ಹಲಗೆ (ಬರೆಯಲೆಂದು ಬಟ್ಟಿಗೆವಲಗೆಯಂ ತರಿಸಿ ತಿಟ್ಟಮಿಟ್ಟು ಬರೆವನ್ನೆಗಂ: **ಆದಿಪು,** ೪. ೬೩ ವ)

**ಬಟ್ಟಿತು –** ದುಂಡಾದ (ಪೊಱೆಯಲ್ಲದೆ ಬಟ್ಟಿತಪ್ಪ ಬಾಯ್ದೆಱೆ: **ಪಂಪಭಾ,** ೧. ೧೦೮)

**ಬಟ್ಟಿದು –** ದುಂಡಾದ (ಮುನ್ನಂ ಬಟ್ಟಿದುವೆನಿಸುವ ಮೊಲೆ ನಿರ್ವಟ್ಟಿದುವಾದುವು ನೃಪಂಗೆ ಬೆನ್ ಸೋಂಕಲೊಡಂ: **ಯಶೋಧಚ,** ೨. ೫೮)

**ಬಟ್ಟಿನಂಬು –** ದುಂಡಾದ ಅಲಗುಳ್ಳ ಬಾಣ (ಅಂತು ತನ್ನ ಬಲಮೆಲ್ಲಮಂ ಜವನಂತೆ ಒಕ್ಕಲಿಕ್ಕಿ ಕೊಲ್ವ ಕಳಶಕೇತನನಂ ಯಜ್ಞಸೇನಂ ಏನುಂ ಮಾಣದೆ ಆತನ ಮೇಲೆ ಬಟ್ಟಿನಂಬಿನ ಬೆಳ್ಸರಿಯುಮಂ ಕೆಲ್ಲಂಬಿನ ತಂದಲುಮಂ ಪಾರೆಯಂಬಿನ ಸೋನೆಯುಮಂ ಸುರಿಯೆ: **ಪಂಪಭಾ,** ೧೨. ೨೧ ವ)

**ಬಟ್ಟು –** [ವೃತ್ತ] ಬಚ್ಚದಾಟ (ಒಡನಾಡಿಯುಂ ಒಡನೋದಿಯುಂ ಒಡವೆಳೆದುಂ ಗುಳ್ಳೆಗೊಟ್ಟಿ ಬಟ್ಟು ಉಳಿಸೆಂಡು ಪೊಡೆಸೆಂಡಿಂಬಿವನಾಡುತ್ತ ಒಡವಳೆದರ್ ತಮ್ಮೊಳೆಳಸೆ ತತಂಗೆಡೆಗಳ್: **ಪಂಪಭಾ,** ೨. ೩೦); ದುಂಡಾದ ಬಿಲ್ಲೆ (ಭ್ರಮರಸಂಕುಳಂ ಬನದೊಳಟ್ಟೆಯಿಂದಾಡುತಿರ್ಪ ಮನ್ಮಥನ ಪೊನ್ನ ಬಟ್ಟುಗಳ ಪೋಲ್ವೆಯಂ ಪುಟ್ಟಿಕುಂ: **ಸುಕುಮಾಚ,** ೯. ೫೦); ಬಿಲ್ಲೆಯಾಟ (ಒಡನಾಡಿಯುಂ ಒಡನೋದಿಯುಂ ಒಡವಳೆದುಂ ಗುಳ್ಳೆಗೊಟ್ಟಿ ಬಟ್ಟು ಉಳಿಸೆಂಡುಂ ಪೊಡೆಸೆಂಡು ಇವಂ ಆಡುತ್ತ ಒಡವಳೆದರ್ ತಮ್ಮೊಳೆಳಸೆ ತಂತಂಗೆಡೆಗಳ್:

**ಪಂಪಭಾ,** ೨. ೩೦); ತೂಕದ ಬಿಲ್ಲೆ (ಪೆರ್ಮೊಲೆ ಕಾಯ್ದ ಕರ್ಬೊನದ ಬಟ್ಟುವೊಲಾಯ್ತು: **ಲೀಲಾವತಿ,** ೧೪. ೧೦೬)

**ಬಟ್ಟುಗೆಯ್** – ಉಂಡೆಮಾಡು (ಸಿಡಿಲಂ ನೆಟ್ಟನೆ ಬಟ್ಟುಗೆಯ್ದು ತೆಱನಪ್ಪಾ ದಿಟ್ಟಿಯುಂ: **ಶಾಂತೀಶ್ವಪು,** ೩. ೫)

**ಬಟ್ಟೆ** – [ವರ್ತ್ಮ] ದಾರಿ (ಆ ಬಟ್ಟೆಯೊಳ್ ಇನಿತಡಗುಂ ಕೆಯ್ಸಾರದೆಂದು ಆತುರಿಸುತ್ತುಂ .. .. ನಿಂದನೊರ್ವಂ ಪುಳಿಂದಂ: **ಕಾದಂಸಂ,** ೧. ೪೯)

**ಬಟ್ಟೆಗ** – ದಾರಿಹೋಕ (ನಲವಿಂ ಬೆಳಗೆಯ್ಗೆಱಗುವ ಪಕ್ಕಿಗಳನಲೆದು ಸೋವ ನಾಡ ಗಾಡಿಕಾರ್ತಿಯರ ಗಾಡಿಕಾರ್ತಿಯರ ಗಾಡಿಗೆ ಸೋಲ್ತು ನಿಲ್ವ ಬಟ್ಟೆಗರ: **ಕಬ್ಬಿಗಕಾ,** ೧೭ ವ)

**ಬಟ್ಟೆಗಟ್ಟು** – ದಾರಿಗೆ ಅಡ್ಡಕಟ್ಟು, ದರೋಡೆಮಾಡು (ಅಡವಿಯೊಳ್ ಕಳ್ಳರ್ ಬಟ್ಟೆಗಟ್ಟಿ ಮೇಲ್ವಾಯ್ದಿಱಿದೊಡೆ: **ವಡ್ಡಾರಾ,** ಪು. ೭೬, ಸಾ. ೧೩)

**ಬಟ್ಟೆಗಳ್ವ ಕಳ್ಳ** – ದಾರಿಹೋಕರನ್ನು ಸುಲಿಯುವ ಕಳ್ಳ (ಆವೆಡೆ ದುರ್ಗಮಮಂ ಅಲ್ಲಿಯೆ ಭಾವಭವಂ ಬಟ್ಟೆಗಳ್ವ ಕಳ್ಳನ ತೆಱದಿಂದ: **ಪಾರ್ಶ್ವನಾಪು,** ೩. ೯೯)

**ಬಟ್ಟೆಗಾಣ್** – ದಾರಿಕಾಣು, ಉಪಾಯ ಹೊಳೆ (ನಭಂಬರಂ ಪೊದಳ್ದೊದವಿದ ಕೋಮಟೆಯಂ ನುಗುಳ್ದು ಪೋಗಲಃಪತಿಗೆ ಬೇಱೆ ಬಟ್ಟೆಗಾಣದೆ ತಡೆದಿರ್ಪಂ: **ಪುಷ್ಪದಂಪು,** ೨. ೬೪)

**ಬಟ್ಟೆಗೆಡು** – ದಾರಿ ತಪ್ಪು (ಒಂದಟವಿ ಪ್ರದೇಶದೊಳ್ ಬಟ್ಟೆಗೆಟ್ಟು ಎಮಗಿಲ್ಲಿ ದಾರಿತೋರ್ಪರಾರ್ ಎಂದು ಪೆಱದುಪಾಯಮಿಲ್ಲ ಎಂದು: **ಚಾವುಂಪು,** ಪು. ೪೫೦. ಸಾ. ೨೪)

**ಬಟ್ಟೆಬರು** – ದಾರಿಯಲ್ಲಿ ನಡೆತರು (ನೀನೊರ್ವ ಬ್ರಾಹ್ಮಣನೊಡನೆ ಬಟ್ಟೆಬರುತಂ ದೇವತಾಜಾತಿ ಪಾಷಂಡಮೋಹ ಪ್ರತಿವಿಧಾಯಿಗಳಪ್ಪ ಕಥೆಗಳಂ ಪೇೞೆ: **ಚಾವುಂಪು,** ಪು. ೪೪೭. ಸಾ. ೩೦)

**ಬಟ್ಟೆಯ ಕಣ್** – ದಾರಿಯ ಮುಂಭಾಗ (ಪೊಟಿಲೊಳ್ ಬಟ್ಟೆಯ ಕಣ್ಣೊಳ್ ರಾತ್ರಿ ಪ್ರತಿಮೆ ನಿಂದೊರ್: **ವಡ್ಡಾರಾ,** ಪು ೧೫೨, ಸಾ ೧೨)

**ಬಟ್ಟೆವರ್** – ದಾರಿಯಲ್ಲಿ ನಡೆ (ಭಟಾರಾ ನಿನ್ನೆ ಬಟ್ಟೆವಂದುಪವಾಸಂಗೆಯ್ದು ಸೇದೆವಟ್ಟಿರ್: **ವಡ್ಡಾರಾ,** ಪು. ೯೦, ಸಾ. ೨೫); ಪ್ರಯಾಣಿಸು (ಭಟಾರಾ ನಿನ್ನೆ ಬಟ್ಟೆವಂದು ಉಪವಾಸಂಗೆಯ್ದು ಸೇದೆವಟ್ಟಿರ್: **ವಡ್ಡಾರಾ,** ಪು. ೯೦, ಸಾ. ೨೫)

**ಬಟ್ಟೆವೋಗು** – ದಾರಿಯನ್ನು ಅನುಸರಿಸು (ನಿಮ್ಮ ಮುದುಗಣ್ತನದೊಳಿದೇಂ ಉಂತೆ ಬಟ್ಟೆವೋಪೊಡೆ ಪೋಗಿಂ: **ಆದಿಪು,** ೯. ೧೦೭)

**ಬಟ್ಟೆವೋಪ** – ದಾರಿಹೋಕ, ಪ್ರಯಾಣಿಕ (ಇರದೂರೂರ ಪೊಲಂಗಳೊಳ್ ಸುಟಿವರಂ ಸೀಟ್ಟಿಕ್ಕುತುಂ ಬಟ್ಟೆವೋಪರಂ ಎಬ್ಬಟ್ಟಿ ಕೊಲುತ್ತುಂ ಆಂತ ಭಟರಂ ತುತ್ತೆತ್ತುತಂತಿರ್ದ ಸಿಂಧುರವಿದ್ವಿಷ್ಟಯದಿಂದ ಸಿಂಧುವಿಷಯಂ ಪಾಟಾಗೆಯುಂ: **ಶಾಂತೀಶ್ವಪು,** ೩. ೭)

**ಬಡಕ** – ಬಡಕಲು ವ್ಯಕ್ತಿ (ಕಪ್ರತ್ಯಯಕ್ಕೆ: ಬಡಕಂ ನಿಡುಕಂ ಕಿಡುಕಂ ಒಣಕಂ: **ಶಬ್ದಮದ,** ೨೧೬ ಪ್ರ)

**ಬಡಗಣ್** – ಉತ್ತರದಿಕ್ಕು (ಮೇರು ಪಡುವಣ್ಗೆ ಸೀತಾಶೀರಂ ತೆಂಕಣ್ಗೆ ನೀಲಗಿರಿ ಬೆಗಣ್ಗೆ ಆ ತಾರಂ ದ್ರಾವಣರಣವಕ್ಷಾರಂ ಮೂಡಣ್ಗೆ ತನಗೆ ಸೀಮೆಯೆನಿಕ್ಕುಂ: **ಮಲ್ಲಿನಾಪು,** ೨. ೯)

**ಬಡಗಣ** – ಉತ್ತರದಿಕ್ಕಿನ (ಜಂಬೂದ್ವೀಪದ ಮೇರುವಿನ ಮೂಡಣ ವಿದೇಹದ ಸೀತಾನದಿಯ ಬಡಗಣ ತಡಿಯೊಳ್: **ಆದಿಪು,** ೩. ೮ ವ)

**ಬಡಗಮೊಗ** – ಉತ್ತರಾಭಿಮುಖ (ಬಡಗಮೊಗದಿರ್ದು ಕರ್ಮದ ತೊಡರಂ ಪಱಿವಂತೆ ಕೇಶಪಾಶಮನಂತಾಗಡೆ ಪಱಿಸು: **ಆದಿಪು,** ೬. ೨೪)

**ಬಡಗಲ್** – ಉತ್ತರದಿಕ್ಕು (ಕಂಜಾಂಬಕೆ ಕೇಳ್‌ಬಡಗಲ್ ರಂಜಿಪುದು ವಿಲಾಸಮೆಂಬ ನಗರಂ: **ಉದ್ಭಟಕಾ,** ೧೧. ೩೦)

**ಬಡಗಿ** – [ವರ್ಧಕಿ] ಮರಗೆಲಸದವನು (ನೃಪತಿ ತನ್ನ ಬಡಗಿಗಳ್ ವಿಶ್ವಕರ್ಮನುಂ ವಿಶ್ವಮತಿಯೆಂಬೊರಂ ಕರೆಯಿಸಿ: **ವಡ್ಡಾರಾ,** ಪು. ೧೪೭, ಸಾ. ೪)

**ಬಡಗು** – ಉತ್ತರದಿಕ್ಕು (ಅಟ್ಟುದಿಲ್ಲೆಳೆ ತೇಂಕಿರ್ದುದು ಭಾರದಿಂ ಬಡಗೆನಲ್ ಪೆಂಪಾರ್ಗಗಸ್ತ್ಯಂಬರಂ: **ಪಂಪಭಾ,** ೪. ೨೦)

**ಬಡತನ** – ಕೃಶತೆ (ಎಂದು ಮನದ ಮಱುಕಮುಮಂ ಎರ್ದೆಯ ಕುದಿಪಮುಮಂ ಬಗೆಯ ಕುಱಿಪಮುಮಂ ಮೆಯ್ಯ ಬಡತನಮುಮಂ ಅಱಿಯೆ ತೋಱೆ ನುಡಿದೊಡೆ: **ಪಂಪಭಾ,** ೪. ೬೮ ವ); ದಾರಿದ್ರ್ಯ

**ಬಡದೇಸಿಗ** – ಅನಾಥ (ಬಡದೇಸಿಗಂ .. .. ತೊನ್ನನಾದೊಡವಂ ಪಟ್ಟೆಡೆಯೊಳ್ .. .. ಆರ್ಹತಮಾಗೆ ರಕ್ಷಿಪರ್ ಸಲೆ ಜೈನರ್: **ಸಮಯಪ,** ೪. ೮೫)

**ಬಡನಡು** – ತೆಳುವಾದ ಸೊಂಟ (ನೆಲೆಮೊಲೆಯ ಬಿಣ್ಪಿಂಗೆ ಬಡನಡು ಬಳ್ಕೆ: **ಗಿರಿಜಾಕ,** ೨. ೧೦೫ ವ)

**ಬಡಪ** – ಜಡಿಮಳೆ (ತಂದಲ್ಲೋನೆ ನಟ್ಟ ಬಡಪಮೆನಲ್ಸುರಿದುವು ಬಿಡದೆ: **ಜಗನ್ನಾವಿ,** ೪. ೩೨)

**ಬಡಬ** – ಬಡಬಾಗ್ನಿ (ಬಡಬನ ಅಳುರ್ಕೆಯೊ ಭೈರವನ ಅಡರ್ಪೊ ಮಿಳ್ತುವಿನ ದರ್ಪಮೋ .. .. ಮಾರ್ಪೊಡೆಯೊ: **ರಾಜಶೇವಿ,** ೬. ೮೨)

**ಬಡಬಡಾಗು** – ತುಂಬ ಸೊರಗಿಹೋಗು (ತಳಿದಶನಾದಿ ತಪದಿಂ ಕಳೇವರಂ ಬಡಬಡಾಗಿ ಗಿಡಿಗಿಡಿಜಂತ್ರಂ ಮಿಳಿಮಿಳಿಗಣ್ಗಳೆನಲ್ ನೋಂತಳ್: **ಸುಕುಮಾಚ,** ೯. ೮)

**ಬಡಬೆ** – ಕುದುರೆ (ತುರಂಗಮೆನೆ ಕುದಿರೆ ಬಡಬೆ ವಾಮಿಯೆನಿಕ್ಕುಂ:: **ಅಭಿಧಾವ,** ೧. ೧೪. ೨೨)

**ಬಡಬಾಗ್ನಿ** – ಬಡಬಶಿಖಿ (ಜಿನಭಾವನೆಯೆಂಬ ಬಡಬಾಗ್ನಿಯಿಂ ವಿಷಯಸಾಗರಮಂ ಪೀರದೆ .. .. ಶಾಶ್ವತಸುಖಂ ದೊರೆಕೊಳ್ಳದು: **ಧರ್ಮಾಮೃ,** ೭. ೫೫ ವ)

**ಬಡವಡು** – ಬಡವಾಗು, ಕೃಶವಾಗು (ನೋಂತ ಬಡವಟ್ಟೊಡಲಂ ಸಲ್ಲೇಖನದಿಂದಿಟಿಪಿದೊಡಲ್ಲದದೇಂ ದೇವನಾಗಲೆನಗಂ ನಿನಗಂ: **ಅನಂತಪು,** ೬. ೬)

**ಬಡವಾ** – ಬಡಬಾಗ್ನಿ (ಬಡವಾಮುಖದನ್ನಮಪ್ಪ ಬಾಣಾವಳಿಯಿಂ ಮಹೋದದೀಯ ಜೀವನಮಂ ತವುವನ್ನಮೀಂಟಿದಂ: ೧೩. ೯೯)

**ಬಡವಾನಳ** – ಬಾಡಬಾಗ್ನಿ (ಸಾಗರಮೆ ಬಡವಾನಳಭೀತಿಯಿಂ ಭೂಭೃತ್ಪತಿಯಂ ಶರಣ್ಬೊಕ್ಕುದೆಂಬಂತೆ ಕಣ್ಗೆಂಬಾಗಿ: **ಪಾರ್ಶ್ವನಾಪು,** ೭. ೩೩ ವ)

**ಬಡವು** – ಬಡವಾಗಿರುವುದು, ಕೃಶವಾಗಿರುವುದು (ದೇವ, ನಿಮ್ಮ ಕೋಪಮುಂ ಪ್ರತಾಪಮುಂ ಎಮ್ಮಂದಿಗರಪ್ಪ ಬಡವುಗಳ್ಗಲ್ಲದೆ ಪೆಱರ್ಗಿಲ್ಲ: **ಪಂಚತಂತ್ರ,** ೧೪೫ ವ)

**ಬಡಹ** – ಜಡಿಮಳೆ (ಪೋದುದು ಆಗಳಂತೆಡೆವಿಡಿದಿರ್ದ ಶಕ್ರಧನುವಾ ಬಡಹಂ ಬರೆ ಮೇಘ ಕಾಲದೊಳ್: **ಕುಸುಮಾಕಾ,** ೬. ३೪)

**ಬಡಿ** – ದೊಣ್ಣೆ (ಬಡಿ ಕೊಳೆ ಕಾಯುಂ ಪಣ್ಣುಂ ಪಱಿದು ಉದಿರ್ವ ಮಾಳ್ಕೆಯಿಂ ಕಿಱಿವಿರಿಯರ್ ಮಡಿವರಂ ಅನುಕ್ರಮದಿಂ ಸಾವೊಡರಿಸುವುದಲ್ತೆ ಕದಳೀಘಾತಂ: **ಪಂಪರಾ,** ೧. ೮३); ಏಟು ಕೊಡು (ಬಡಿ–ತಾಡನೇ: **ಶಬ್ದಮದ,** ಧಾ ३३೨)

**ಬಡಿಗೆ** – ಕೋಲು, ದೊಣ್ಣೆ (ಬಡಿವ ಬಡಿಗೆಗಳೆ ಕೋಳೊಳ್ ತೊಡೆಯದು ಸಲೆ ಪೊಟ್ಟಿಗೊಡೆದು ಕಡಿವಡೆದೆತ್ತಂ: **ಸುಕುಮಾಚ,** ೫. ೧೫)

**ಬಡಿಗೆಕಾಱ** – ದಂಡಧಾರಿ (ಮುಂತಣ ಮಾವಂತರ ಪಿಂತಣ ಬಡಿಗೆಕಾಱರ ನಡುವಣ ವೀರ ಜೋದರ .. .. ಕೋಳಾಹಳದಬ್ಬರದುಬ್ಬರಮಾಗೆ: **ಗಿರಿಜಾಕ,** ೬. ೫೫ ವ)

**ಬಡಿಗೋಲ್** – ಹೊಡೆಯಲು ಬಳಸುವ ಕೋಲು (ಪೇಱಿನ ಮೇಲೆ ಪಾಸಱೆ ಏಱಿನ ಮೇಲೆ ಬಡಿಗೋಲ್ ಕೊಲೆಯ ಮೇಲೆ ಕವರ್ತೆಯೆಂಬಂತೆ: **ಧರ್ಮಾಮೃ,** ೧. ೧೬೨ ವ)

**ಬಡಿತಂಗಾಸು** – ಬಡಿಯಲು ಹದವಾಗಿ ಕಾಯಿಸು (ಬಾಟೆವಾಟೆ ತಿದಿಯುಗಿವರುಂ ಮಿಡುಮಿಡುಕೆ ಬಡಿತಂಗಾಸುವರುಂ: **ಆದಿಪು,** ೫. ೮೫ ವ)

**ಬಡಿವೇಱು** – ಏಟು ತಿನ್ನು (ಊರ ಸೀರೆಗಗಸಂ ಬಡಿವೆತ್ತನೆನಿಪ್ಪ ಜನರ ನಾಟಿಸ್ನಡಿ ನಿನಗೆ: **ಜಗನ್ನಾವಿ,** ೬. ೭)

**ಬಡಿಸು** – ಊಟಕ್ಕಿಡು (ನೆಟ್ಟನೆ ತಾಂ ಸವಿಯೊಳೊಂದಿರೆ ಭೋಜನಮನಟ್ಟು ಬಡಿಸು ನಾಮಱಿಯದೆನಸುಂ ಸವಿಯಂ: **ಕವಿರಾಮಾ,** ೨. ೧೫೭)

**ಬಡಿಹ** – ಪೆಟ್ಟು (ಮಕ್ಕಳಂತೆ ಅಱಲ್ವೆಯೊಳಂ ನೀರ್ ಮುಟ್ಟಿದ ಕೆಂಡದಂತೆ ಉಪಶಮದೊಳಂ .. .. ನೆರೆದಿರ್ಪುದುಂ: **ಧರ್ಮಾಮೃ,** ೫. ೮३ ವ)

**ಬಡ್ಡಿಗೊಳ್** – ಬಡ್ಡಿಯನ್ನು ಪಡೆ (ಕಾವೇರಿಯ ಕಾಲನಾ ತಿಗುಳನೇಂ ಕಡಗೊಂಡನೊ ಬಡ್ಡಿಗೊಂಡನೋ: **ಶಬ್ದಮದ,** ೧೭೮, ಪ್ರ ३)

**ಬಡ್ಡಿಸು** – ಬಡಿಸು, ಊಟಕ್ಕೆ ನೀಡು (ಮಗಮಗಿಪ ಮಣಿಸರವಳಿಗೆಯ ಪಾಯಸಮಂ ಅಸದಳಂ ಬಡ್ಡಿಸಿದರ್: **ಶಾಂತೀಶ್ವಪು,** ೧೫. ೫೭)

**ಬಣಂಬೆ** – ಬಣಬೆ, ಮೆದೆ (ನೆತ್ತರ ತೊಱೆಯುಂ ನೇಣದ ಪಳ್ಳಂಗಳುಂ ಪೆಣದ ಬಣಂಬೆಗಳುಂ ಕೋಟ್ಕೆಮುಳ ಕೋರ್ಟಕೆಸಱುಂ ಅಗುರ್ವುವಡೆಯೆ: **ಪಂಪರಾ,** ೧३. ೫೪ ವ)

**ಬಣಗು** – ಕ್ಷುದ್ರ (ಪಣಮಿಲ್ಲದೆ ಅಟಮಟಿಸುವ ಬಣಗುಗಳಂ ನೆವವನಿಟ್ಟು ಬಿಟ್ಟು: **ಉದ್ಭಟಕಾ,** ೧೦. ೬೬)

**ಬಣ್ಣ** – ರಂಗು (ಶುಭಲಕ್ಷಣಾಂಕಿತಮಾಗಿ ಕೆಂದಾವರೆಯ ಬಣ್ಣದಂತಪ್ಪ ತಳಮುಮಂ ಕಂಡು: **ವಡ್ಡಾರಾ,** ಪು, ೧೪೮, ಸಾ. ೧೮); ವರ್ಣಚಿತ್ರ (ಅಂತೋಲಗಂಗೊಟ್ಟು ಕುಳ್ಳಿರ್ದ ಭಿತ್ತಿಯೊಳ್ ಅಂದಂಬಡೆವಂತು ಬಚ್ಚಿಸಿದ ಬಣ್ಣಂಗಳಂ ಬೇಱವೇಱೆ ನೋಡಿ ಮೆಡಚ್ಚುತಿರ್ಪಾಗಳ್: **ಕಬ್ಬಿಗಕಾ,** ೬೬ ವ); ವಸ್ತ್ರ (ದೆಯ್ವದ ಜನ್ನಿಗೆಯುಮಂ ಆ ದೆಯ್ವದ ಬಣ್ಣಮುಮಂ .. .. ಕಳ್ಳರ್ ಕೊಂಡೊಯ್ವಲ್ಲಿ ಕಾಯಲಾಱದ ದೆಯ್ವಂಗಳ್: **ಸಮಯಪ,** ೯. ೧೦೫)

**ಬಣ್ಣವಣ್ಣಿಗೆ** – ನಾನಾ ಬಣ್ಣಗಳಿಂದ ಕೂಡಿದುದು (ಚೆಂಬೊನ್ನ ಪರಿಯಣದ ಬಳಸಿ ಬಣ್ಣವಣ್ಣಿಗೆಗಳೊಳಾದ ಉಪದಂಶಂಗಳ್ ತುಱುಗಿದವು ಪತ್ರಶಾಕಂಗಳ್ ಇಷ್ಟತುಷ್ಟಿಕರಂಗಳ್; **ಸುಕುಮಾಚ,** ೧೧. ೨೯); ಬಣ್ಣ ಹಚ್ಚುವುದು (ಬಣ್ಣದ ಕಣದ ಬಣ್ಣವಣ್ಣಿಗೆಯ ಜವಳಿಗಳನೆ ಮೊಗಂ ನೋಡದೆ ಸೂಸಿದಾಗಳ್: **ಆದಿಪು,** ೪. ३೪ ವ)

**ಬಣ್ಣವಳಿ** – [ಬಣ್ಣ+ಅಳಿ] ಕಳೆಗುಂದು (ಪಣ್ಣ ಬಾಯಿನಮಂ ಬಣ್ಣವಳಿಯದೆ ಕೊಟ್ಟು ಚೂತವಲ್ಲಭನೆಂಬ ಪೆಸರಿಟ್ಟು: **ಗಿರಿಜಾಕ,** ೨. ೭೧ ವ)

**ಬಣ್ಣವಾಸಿಗ** – ಬಣ್ಣದ ಹೂಗಳ ಬಾಸಿಗ, ಮಾಲೆ (ನಮೇರುಮಂದಾರಪಾರಿಜಾತದ ಬಣ್ಣವಾಸಿಗಂಗಳುಂ: **ಆದಿಪು,** ೨. ೬೨ ವ)

**ಬಣ್ಣವುರ** – [ವರ್ಣಪೂರ] ಬಣ್ಣದ ರಂಗೋಲಿ, ಬಣ್ಣಬಣ್ಣದ ಬಟ್ಟೆ (ಬಣ್ಣವುರಂ ತೀವಿದಂತೆ ಬೆಡಂಗುವಡೆದ ಬಣ್ಣವಣ್ಣಿಗೆಯ ನೀರ್ವೂಗಳ ರಜಂಗಳುಮಂ: **ಕಾದಂಬ,** ೯. ೧೧ ವ)

**ಬಣ್ಣಸರ** – ಬಣ್ಣಬಣ್ಣದ ಮಣಿಗಳ ಸರ (ಬಣ್ಣಸರಂಗೊಂಡಂತಿರೆ ಬಣ್ಣಸರಂ ಸೊಗಯಿಸಿದುದು ಏನವಳ್ ಪರಿಣತೆಯೋ: **ಆದಿಪು,** ೯. ३೧)

**ಬಣ್ಣಸರಂಗೊಳ್** – ಬಣ್ಣಬಣ್ಣದ ಸರವನ್ನು ತೆಗೆದುಕೊ (ಬಣ್ಣಸರಂಗೊಂಡಂತಿರೆ ಬಣ್ಣಸರಂ ಸೊಗಯಿಸಿದುದು ಏನವಳ್ ಪರಿಣತೆಯೋ: **ಆದಿಪು,** ೯. ३೧)

**ಬಣ್ಣಸರಂಗೋ** – ಬಣ್ಣ ಬಣ್ಣದ ಮಣಿಗಳನ್ನು ಪೋಣಿಸು (ಜೈನರಲ್ಲದರ್ ಬಣ್ಣಬಣ್ಣಸರಂಗೋದಂತೆ ಧರ್ಮಶಾಸ್ತ್ರಂ ಪೇೞ್ವರ್: **ಸಮಯಪ,** ೧೪. ೧३३)

**ಬಣ್ಣಿಗೆಗಯ್ದು** – ವಿವಿಧಾಯುಧ (ಓರೋರ್ವರಂ ಬಣ್ಣಿಗೆಗಯ್ದುವಂ ಪಿಡಿದು ನಾರಕರೋವದೆ ಕುತ್ತಿ ಕೊಯ್ದೊಡಂ: **ಪಾರ್ಶ್ವನಾಪು,** ೬. ೯३)

**ಬತ್ತ** – ನೆಲ್ಲು (ಅಗ್ಗದ ಬತ್ತದ ಪೆವರ್ವೆಳಸಿಂದೆ .. .. ದೊರೆವೆತ್ತುದು ವೆಂಗಿಮಂಡಲಂ: **ಅಜಿತಪು,** ೧. ೨೨)

**ಬತ್ತಂಗುಟ್ಟು** – ಹೊಟ್ಟು ತೆಗೆಯಲು ಬತ್ತ ಕುಟ್ಟು (ಬತ್ತಂಗುಟ್ಟುವಂತೆ .. .. ದರ್ಶನಮುಂ ನಿಶ್ಶಂಕೆಯುಂ ಎಂಬೆರಡುಮಂ ಲೇಢಸು ಮಾಡುವುದು: **ಧರ್ಮಾಮೃ,** ೨. ೨ ವ)

**ಬತ್ತಲೆಗ** – ದಿಗಂಬರ ಸನ್ಯಾಸಿ (ತಲೆವಱಿದುಟ್ಟುದಿಕ್ಕಿ ಸುರಲೋಕಸುಖಂಗಳನುಣ್ಬೆವೆಂಬ ಬತ್ತಲೆಗರ ಮಾತುಗೇಳದಿರು: **ಆದಿಪು,** ೨. ೯)

**ಬತ್ತಿ** – [ವರ್ತಿ] ದೀಪದ ಉರಿಯುವ ಹತ್ತಿಯ ಎಳೆ (ಸೊಡರೊಳ್ ಬತ್ತಿಯುಂ ಎಣ್ಣೆಯುಂ ಒಡನಟಿದವೊಲ್ ಆಯುವುಂ ಶರೀರಮುಂ ಅಮಳಂ: **ಶಾಂತಿಪು,** ೯. ೧೧೮)

**ಬತ್ತುಂಬಯ** – ಹಾಲು ಬತ್ತಿಹೋದ ಹಸು (ಬಕಾರಕ್ಕೆ: ಬತ್ತುಂಬಯಂ ಒತ್ತುಂಬಳ್ಳಿ ಅಟ್ಟುಂಬರಿ: **ಶಬ್ದಮದ,** ೧೮೧, ಪ್ರ ೪)

**ಬತ್ತುಗೆ** – ಬತ್ತುವಿಕೆ, ಒಣಗುವಿಕೆ (ಸುರಿವ ಬಾಷ್ಪಜಳಂ ಕರುಣಾರ್ದ್ರಹಾರವಂ ಬಳೆಯಿಸೆ ಬಾಯಿ ಬತ್ತುಗೆನಿಂತೆರ್ದೆಗೆಟ್ಟಟಿುತುಂ .. .. ಬಿಟ್ಟಿಳಂದಜಿತಸೇನೆ: **ಚಂದ್ರಪ್ರಪು,** ೫. ೧೧)

**ಬದಂಗ** – ಕೀಳಾಳು (ಮೊಕ್ಕಳಂಬಡುವ ಬದಂಗನಂ ಬೆಸನಿಯಲ್ಲದಳ್ ಆತನನೊಟ್ಟಿ ಸುಟ್ಟಪಳ್: **ಲೀಲಾವತಿ,** ೨. ೭೬)

**ಬದಗ** – ಜಾರ (ಮುಸಿನುಡಿವಾತನ ಖಳನ ಕೆಲೆಯನ ಬದಗನ ಬೂತಿನ ಮಾತು ದಿಟವಲ್ತು: **ಲೀಲಾವತಿ,** ೨. ೩೪); ಸೇವಕ (ಕರುಮಾಡದ ಪಕ್ಕದೊಳಿರ್ದ ಪಟ್ಟದಾನೆಯ ಬದಗಂ ಬಿನದಕೆ ಪಾಡುತ್ತಿರೆ: **ಯಶೋಧಚ,** ೨. ೨೭ ಮತ್ತು ೨೮)

**ಬದಗು** – ಹಾದರ (ಎತ್ತಿದ ಬರ್ದೊ ಮೇಣ್ ಬದಗೊ ಪೇಟೆಂ ಇದೀಕೆಯ ಕೂರ್ಪೊ: **ಲೀಲಾವತಿ,** ೨. ೭೮); ಕುಟಿಲತೆ (ಬದಸೆಂ[ಬದಗೆಂ]ದು ಕೌಟಿಲ್ಯಂ: **ಶಬ್ದಮದ,** ಪ್ರಸಾ ೧೬೬)

**ಬದಗುಗೆಯ್** – ಊಳಿಗತನವನ್ನು ಮಾಡು [ಪೆಱರ ಕೀಟೆಲೊಳ್ ಎಮ್ಮೆಬ್ಬೆಯುಂ ಮುತ್ತಬ್ಬೆಯುಂ ಸಾರ್ದು ಬದಗುಗೆಯ್ದುಣೆ: **ಆದಿಪು,** ೩. ೩೪ ವ)

**ಬದಗುಳಿಗ** – ಸೇವಕ, ಗುಲಾಮ (ಬದಗುಳಿಗನ ತೋಳ್ಮುಟ್ಟಿದ ಸುದತಿಯೊಳ್ ಇಂಬಾಗದಂತೆ ಕೆಟ್ಟುದು ಪುಳಿ ಮುಟ್ಟಿದ ದುಗ್ಧದಂತೆ: **ಯಶೋಧಚ,** ೨. ೫೯)

**ಬದಣೆ** – ಬದನೆ (ಹಾಗಲ ಹಡಲಂ ಗುಳ್ಳಂ ಕೂಗುರಿ ಕೂಷ್ಮಾಂಡ ಅವರೆ ಬದಣೆಗಳಿಂ ಲೇಸಾಗಿರೆ: **ಧರ್ಮಪ,** ೨. ೫೮)

**ಬದರ** – ಬೋರೆ ಅಥವಾ ಎಲಚಿ ಮರ, ಹಣ್ಣು (ಅಹಿತ ಬಹು ಬದರದಳವ್ಯೂಹ ತಿರೋಹಿತ .. .. ಪಾಯ್ದುದೊಂದು ವಿಹಂಗಂ: **ನೇಮಿನಾಪು,** ೫. ೭೦)

**ಬದರಿ** – ಬದರ (ತೆಂಗು ತಾಟ್ ಬದರಿ ದಾಡಿಮಂ ಅಮ್ಮಡೆ ಮಾತುಳಂಗಂ ಇಮ್ಮಾವು: **ಆಚವರ್ಧ,** ೨. ೩)

**ಬದರೀಫಲ** – ಬೋರೆ ಹಣ್ಣು (ಮೌಕ್ತಿಕನಿಕರಂ ಸುರಿದಿರೆ ಮುಗ್ಧ ವನೇಚರಿ ಬದರೀಫಲವೆನುತ್ತ ಆಯುತ್ತಿರ್ದಳ್: **ತ್ರಿಷಷ್ಟಿಪು,** ೨೭. ೭೮)

**ಬದಸು** – ಕುಟಿಲತೆ (ಬದಸೆಂ[ಬದಗೆಂ]ದು ಕೌಟಿಲ್ಯಂ: **ಶಬ್ದಮದ,** ಪ್ರಸಾ ೧೬೬)

**ಬದ್ದ** – ಗಾಢ (ಬದ್ದಮೆಂದು ಗಾಢಂ: **ಶಬ್ದಮದ,** ಪ್ರಸಾ ೧೬೮)

**ಬದ್ದರ** – ಬಾಣಗಳ ಏಟಿನಿಂದ ರಕ್ಷಿಸಿಕೊಳ್ಳುವ ಸಾಧನ (ಪಾಯ್ವ ಕೂರ್ಗಣೆಗೆ ಬದ್ದರಮೊಡ್ಡಿಪ ಕೋಂಟೆಗಾವಗಂ ಕೆಡಪುವ ಗಗ್ಗೆ: **ಚಂದ್ರಪ್ರಪು,** ೫. ೧೦೬)

**ಬದ್ದವಣ** – ಮಂಗಳವಾದ್ಯ (ಇಡಿದಿರೆ ಪೂತಮರದ್ರುಮದ ಇಡುವುಗಳೊಳ್ ಬದ್ದವಣದ ಪುಡಿವೊಲ್: **ಆದಿಪು,** ೭. ೭೩)

**ಬದ್ದವಣಂಬೊಯ್** – ಮಂಗಳವಾದ್ಯವನ್ನು ಬಾರಿಸು (ಮುನೀಶನಾದೇಶಂಗೆಯ್ದು ಪೋಗೆಂದು ಕಳುಪಿದೊಸಗೆಗೆ ಮನದೊಳೆ ಗುಡಿಗಟ್ಟಿ ಬದ್ದವಣಮಂಬೊಯ್ದು .. .. ಬನಮಂ ಪೊಕ್ಕು: **ಜಗನ್ನಾವಿ,** ೧೨. ೫೨ ವ)

**ಬದ್ದಿಸ** – ಅವುಕುವುದು ಬದ್ದಿಸಂ [ಬಡ್ಡಿಸಂ] ಎಂದು ಅವುಂಕುಹಂ: **ಶಬ್ದಮದ,** ಪ್ರಸಾ ೧೯೯)

**ಬದ್ದು** – ಪ್ರೌಢಿಮೆ (ವಿದಗ್ಧತೆಯಿಲ್ಲ ಬದ್ದಿನೊಳ್ ಪೂಣಿಕೆಯಿಲ್ಲ: **ಹರಿವಂಶ,** ೩. ೬೧)

**ಬದ್ದೆ** – ಪ್ರೌಢೆ (ಕಾತರಿಸದೆ ಕೂಡೆ ಲಲ್ಲಯಿಸದೆ ನೋಡ ಬಸಮಾಗಿ ಬಸಮಟಿದು ಬಳಸದೆ ಬಟೆಕೆಯ್ದ ಬದ್ದೆಯನೊಲಿಪನಾವಂ: **ಸುಕುಮಾಚ,** ೭. ೧೩); ಸೂಳೆ (ಕೋಳ್ಗಗ್ಗಳಮಾದ ಮನೆಗಂ ತೋಳ್ಗಗ್ಗಳಮಾದ ಬದ್ದೆಗಂ ಬೇಸತ್ತು: **ಶಾಂತಿಪು,** ೮. ೭೮ ವ); ಎಳವೆಯ ಚರ್ಯೆ, ಮುದ್ದು (ಪದಮುಮನಿಂಬುಮನಣಮಱಿಯದೇವುದು ಬದ್ದೆ ಬೆಳ್ಮಿಗಂ ಪಜ್ಜೆ ದಲೆಂಬುದನೆರಡುಮಂ ಅಜಿವಾತನೆ ಚದುರಂ ಚದುರಂಗೆ ಬದ್ದಜ್ಜೆಗಳೊಳವೇ: **ಪಂಪಭಾ,** ೫. ೪೫)

**ಬದ್ದೆದಲ್ಲಟಿ** – [ಬದ್ದೆ+ತಲ್ಲಟಿ] ಪ್ರೌಢೆಯರಿಗೆ ತಲ್ಲಣ ಉಂಟುಮಾಡುವವನು (ಕೂಟದೊಳುಣ್ಮಿದ ಬೆಚ್ಚತಟ್ಕೆಯೊಳ್ ಕೂಟಸುಖಂಗಳಂ ಪಡೆದನೇಂ ಚದುರಂಗಳ ಬದ್ದೆದಲ್ಲಟಿಂ: **ಪಂಪಭಾ,** ೩. ೮೨)

**ಬದ್ದೆವಜ್ಜೆ** – [ಬದ್ದೆ+ಪಜ್ಜೆ] ಬಾಲ್ಯದ ಹೆಜ್ಜೆಗುರುತು, ಚರ್ಯೆ, (ಪದಮುಮನಿಂಬುಮನಣಮಱಿಯದೇವುದು ಬದ್ದೆ ಬೆಳ್ಮಿಗಂ ಪಜ್ಜೆ ದಲೆಂಬುದನೆರಡುಮಂ ಅಜಿವಾತನೆ ಚದುರಂ ಚದುರಂಗೆ ಬದ್ದಜ್ಜೆಗಳೊಳವೇ: **ಪಂಪಭಾ,** ೫. ೪೫)

**ಬದ್ಧ** – ಸುತ್ತುವರಿದ (ಸಕಲ ಬದ್ಧಾಶ್ರವನಿರೋಧದಿಂ ಅಯೋಗಿಕೇವಲಿ ಗುಣಸ್ಥಾನಮಂ ಪೊರ್ದಿ ಪ್ರಾಣಾಪಾಯಪ್ರಚಾರಂ ಸಮುಚ್ಛಿನ್ನ ಕ್ರಿಯಾವೃತ್ತಿ ಧ್ಯಾನಪ್ರವರ್ತಿತಪರನಾಗಿ: **ಪಂಪರಾ,** ೧೬. ೭೯ ವ); ಧರಿಸಿದ (ಅತ್ಯುನ್ನತಂ ದಕ್ಷಿಣಾಂಸದ ಬದ್ಧ ಶ್ಲಥಬಾಹುಕೀರ್ತಿ ಕಳೆದತ್ತು ಅಂದಾದ ಸಂದೇಹಮಂ: **ಶಾಂತಿಪು,** ೫. ೧೪೮)

**ಬದ್ಧಭೂಮಿ** – ನೆಲಗಟ್ಟು (ಪಳಿಕಿನ ಬದ್ಧಭೂಮಿ ಮಣಿವೇದಿಕೆ ಪಚ್ಚೆಯ ಭಿತ್ತಿ ವಜ್ರದ ಉಜ್ವಳಿಪ ವಿತಾನಂ ಆ ನಿಮಿರ್ದ ನೀಲದ ಪಟ್ಟಳೆ ಕಂಭಂ... ..ವಿಚಿತ್ರಮೆನೆ ಮಂಡಿತಮಾಯ್ತು ವಿವಾಹಮಂಡಪಂ: **ಶಾಂತೀಶ್ವಪು,** ೨. ೧೩೧)

**ಬದ್ಧಭ್ರುಕುಟಿ** – ಕೋಪದಿಂದ ಗಂಟಿಕ್ಕಿದ ಹುಬ್ಬುಗಳುಳ್ಳವನು (ಸ್ಥಿರಬದ್ಧಮತ್ಸರರ್ ಭೀಕರಬದ್ಧಭ್ರುಕುಟಿಘಟಿತರ್ ಅದ್ಭುತರ್ ಅಟ್ಟಾಸುರರ್ ಅಧಿಕಕೋಪಪಾಟಲಪರುಷೇಕ್ಷಣರ್ ಎನಿಸಿ ದೃಷ್ಟಿಯುದ್ಧಂಗೆಯ್ದರ್: **ಗದಾಯು,** ೮. ೨)

**ಬದ್ಧರಸ** – ಸ್ನೇಹದಿಂದ ಕೂಡಿದವನು (ಬಿನ್ನಪಂಗೆಯ್ಯಲೊಡಂ ಬದ್ಧರಸನುಂ ಸಿದ್ಧರಸವೇದನುಂ ಆದ ರಸವಾದಿಯಂತೆ ಜ್ವಲನಜಟಿ ರಾಗಿಸಿ: **ಶಾಂತಿಪು,** ೫. ೩೭ ವ)

**ಬದ್ಧರೋಷಿ** – ಸ್ಥಿರ ಕೋಪವುಳ್ಳವನು (ಬದ್ಧರೋಷಿಯುಂ ಯುದ್ಧಾಭಿಲಾಷಿಯುಂ ಅಕಾರಣದದ್ವೇಷಿಯುಂ ಅಪ್ಪ ಪಗೆವನ ಮನೆಯಂ ಬಗೆಗೆಟ್ಟು ಪೊಕ್ಕಂದು: **ಪಂಚತಂತ್ರ,** ೨೮೦ ವ)

**ಬದ್ಧಾಂಜಲಿ** – ನಮಸ್ಕಾರಪೂರ್ವಕವಾಗಿ ಮುಗಿದ ಕೈಗಳು (ಬದ್ಧಾಂಜಲಿಯಾಗಿ ಪ್ರಣಾಮಪುರಸ್ಸರಂ ಅಪ್ಪ ಎನ್ನ ಬಿನ್ನಪಮಂ ಪೇಟ್ವುದು: **ಕಾದಂಸಂ.** ೬. ೨೭ ವ)

**ಬದ್ಧೋರ್ವಿ** – ಬದ್ಧಭೂಮಿ (ನಲವಿಂ ನರ್ತಿಪ ವೃದ್ಧಕಾಂತೆಯರುಮಂ ಬದ್ಧೋರ್ವಿಯೊಳ್ ಕೂಡೆ ಪೂವಲಿಯಂ .. .. ನೋಡುತ್ತುಂ .. .. ಖಚರೇಂದ್ರನಿಂತು ಪುಗುತಂದಂ ಸೂತಿಕಾಸದ್ಮಮಂ: **ಶಾಂತೀಶ್ವಪು,** ೪. ೪೭)

**ಬಧಿರ** – ಕಿವುಡ (ಭಾವಬಂಧುರಂ ಕವಿತಾವಿಷಯಂ ಕಠಿಣ ಹೃದಯನಪ್ಪ ಜಡಾತ್ಮಂಗೇವುದೊ ರತಿಯಿನಿದಂ ಕವಿಗೀವುದೆ ಬಧಿರಂಗೆ ಸುಂದರೀಸೀತ್ಕಾರಂ: **ಮಲ್ಲಿನಾಪು,** ೧. ೩೬)

**ಬಧಿರತೆ** – ಕಿವುಡು (ಘೋಸಘಂಟಾರವಂ ದಿಗ್ರದನೀಶ್ರೋತಕ್ಕೆ ಸಂಪಾದಿಸೆ ಬಧಿರತೆಯಂ: **ಪುಷ್ಪದಂಪು,** ೫. ೯)

**ಬಧಿರಿತ** – ಕಿವುಡುಂಟುಮಾಡಿದ (ಅನೇಕದುಂದುಭಿಬಧಿರಿತ ಸಕಳದಿಙ್ಮಂಡಳಂ ಆಖಂಡಳನರಸಮಿತಿವೆರಸು ಅಯೋಧ್ಯಾ ಪುರಕ್ಕೆ ಅಭಿಮುಖನಾದಾಗಳ್: **ಆದಿಪು,** ೭. ೧೦೭ ವ)

**ಬನ** – ತೋಪು (ಬನಕಂ ಪೊಲಕಂ (ನಡೆಯಲ್ಕಿಸಿನಾಱಿದೆ ಮಱುಗುವಾರ್ಯರಂ ಕಂಡು ಮನೋಜನಿತದಯಂ ಕರಿ ಹರಿ ವಾಹನಂಗಳಂ ಪಡೆದು ವಿಮಲವಾಹನನಾದಂ:

**ಆದಿಪು,** ೬. ೫೮); ಉದ್ಯಾನ (ಬನದ ತಳಿರ್ ಕಳಿಕೆ ಮುಗುಳ್ ನನೆ ಬಿರಿಮುಗುಳಲರೆ ಗೊಂಚಲೆಂಬಿವು ವನಜಾನನೆಯರ ಪೂದುಡುಗೆಗೆ ಮಟ್ಟನದುವೇಂ ಪೆಂಪೊ ಭರತನಂತಃಪುರದಾ: **ಆದಿಪು,** ೧೦. ೧೨೫); ಒಳ್ಳೆಯ ಬಟ್ಟೆ (ಮಣಿಕನಕಭಾಜನಂಗಳೊಳ್ ಪಟ್ಟಸೂತ್ರದ ನೇತ್ರದ ಬನದ ಮಹಾಚೀನದ ದೇವಾಂಗದ ಮಂಗಳಜವಳಿಗಳನಾಂತು ಬರ್ಪಕಾಂತೆಯರ್: **ಆಚವರ್ಧ,** ೭. ೨)

**ಬನ್ನ –** [ಭಗ್ನ] ಅವಮಾನ ; ಸೋಲು (ತನ್ನೊಳಗಣ ಪನ್ನಗನಂ ಮುಂ ನೀಂ ಪಿಡಿದು ಒಗೆಯೆ ಕಾಯಲಾಱದೆ ಪಿರಿದುಂ ಬನ್ನದ ಕರ್ಪೆಸೆದುದು ತೊೞಗೆ ಇನ್ನುಂ ಹರಗಳ ತಮಾಳ ನೀಳಚ್ಛವಿಯಿಂ: **ಪಂಪಭಾ,** ೫. ೫೪); ಕಷ್ಟ (ಅನ್ನೆಯದಿಂ ನಡೆದವನಂ .. .. ಸಾವನ್ನಂ ಬನ್ನಂಬಡಿಸುವುದೆ ಕಾರ್ಯಂ ಎಂಬರ್ ಕೆಲರ್: **ಆಚವರ್ಧ,** ೨. ೫೩)

**ಬನ್ನಂಬಡು –** ಅವಮಾನಗೊಳ್ಳು (ನಿನ್ನ ಗುರು ವರ್ಧಮಾನಂ ಬನ್ನಂಬಡುವಂತೆ ಮಾಡುವೆಂ ನಡೆ ಪೋಪಂ: ಆಚವರ್ಧ< ೧೬. ೧೪); ಸೋಲು (ನಿನ್ನ ಗುರು ವರ್ಧಮಾನಂ ಬನ್ನಂಬಡುವಂತೆ ಮಾಡುವೆಂ ನಡೆ ಪೋಪಂ: **ಆಚವರ್ಧ,** ೧೬. ೧೪); ಕಷ್ಟಕ್ಕೊಳಗಾಗು (ಮುನ್ನಿನ ಭವದೊಳ್ ಗೊರವನಾಗಿ ಕಾಂಚೀಪುರದೊಳ್ ತಿೞಿದು ಪಲಪು ಕಾಲಂ ಬನ್ನಂಬಟ್ಟು ಪೊನ್ನಂ ಪಡೆದೇತರ್ಕಂ ಕುಡದೆ ಮಡಗಿದೊಡೆ: **ಪಂಚತಂತ್ರ,** ೪೩೩ ವ)

**ಬನ್ನಂಬೆಱು –** ದುಃಖ ಹೊಂದು (ಮುನ್ನುಱೆ ಬನ್ನಂಬೆತ್ತನಂ ಪುಷ್ಪಲಪುರದ ಹಯಗ್ರೀವನಂ ಕರ್ಮದಿಂದಂ ಮಱಿದಾಂ ಮೆಯ್ವಿಟ್ಟು ನಿದ್ರಾಸುದಿನಟಿಲೆ ಬಂದು .. .. ಎನ್ನೋಪಳಂ ಕೊಂಡು ಪೋದಂ; **ಪುಷ್ಪದಂಪು,** ೬. ೩);

**ಬನ್ನದ ಕೂಟ್ –** ಕಷ್ಟದ ಊಟ (ನಿನ್ನಂ ನಿನ್ನ ನನ್ನಿಯನೆ ಕಾದು ನಿನ್ನನುಜರ್ ಬನ್ನದ ಕೂಟನುಂಡರ್ ಪನ್ನೆರಡು ವರ್ಷ ಬೇಡದಂತೆ ಅಡವಿಯೊಳ್ ನಾರಸೀರೆಯನುಟ್ಟು ಬೇರುಮಂ ಬಿಕ್ಕೆಯಂ ತಿಂದು ಕಂದಿ ಕುಂದಿ ಪಂದೆಯ ಮನದಂತಳ್ಳಾಡುತಿರ್ಪರ್: **ಪಂಚತಂತ್ರ,** ೩೦೭ ವ)

**ಬನ್ನಿ –** ಒಂದು ಮರ (ಪುಲುಗಿಲುಂ ಉತ್ತರಣೆಯುಮಂ ಅಂತೆ ಲೊಕ್ಕಿಯುಂ ಮತ್ತೆ ಮುತ್ತಂ ಆ ಎಕ್ಕೆಯುಮಂ ಕೊಲೆಯುಂ ಬನ್ನಿಯ ಮರನಂ ಕುಲದೆಯ್ವಮಿದೆಂದು ಕೊಂಡುಕೊನೆವರ್ ಮೂಢರ್: **ಸಮಯಪ,** ೯. ೫೭)

**ಬಪ್ಪ –** ಬೊಪ್ಪ, ತಂದೆ (ನ್ಯಯಂ ಮಂತ್ರಿಗಳುಕ್ತಿ ಬಪ್ಪನ ಮತಂ ಕಾಲೋಚಿತಂ ನಿಮ್ಮಭಿಪ್ರಾಯಂ ನೆಟ್ಟನಲಂಘ್ಯಂ: **ಅನಂತಪು,** ೧೩. ೬೨)

**ಬಭ್ರು –** ಕಂದು ಬಣ್ಣ (ಪಿಂಗಂಕಪಿಲಂ ಬಭ್ರು ಪಿಶಾಂಗಂ ಹರಿ ಪಿಂಗಳಂ: **ಅಭಿಧಾವ,** ೨. ೧. ೬೫); (ಮುಂಗುಸಿ (ನಕುಳಂ ಅೞಿಗೆ ಬಭ್ರುವೆನಿಕ್ಕುಂ: **ಅಭಿಧಾವ,** ೧. ೯. ೫೦); ವಿಷ್ಣು (ವನಮಾಲಿ ಬಭ್ರುವುಂ ಭುವನನಾಥಂ ಅಜಿತಂ ದಶಾರ್ಹತನಯಂ ವಸುದೇವನ ತನಯಂ ಆತ್ಮಭು ಪದ್ಮನಾಭಂ ವಿಶ್ವರೂಪಿ ವಿಷ್ವಕ್ಸೇನಂ: **ಅಭಿಧಾವ,** ೧. ೧. ೨೧)

**ಬಮ್ಮೇತಿ –** [ಬ್ರಹ್ಮೇತಿ] ಬ್ರಾಹ್ಮಣ ಹತ್ಯೆ, ಒಂದು ಮಹಾ ಪಾತಕ (ಲೋಕಮಂ ಕಿಡಿಸಿದ ಬಮ್ಮೇತಿಯಲೆಯದೊಡೆ ಮೊಗದೊಳಗೇತರ್ಕೆ ಪಿತಾಮಹಂ ಚತುರ್ಮುಖನಾದಂ: **ಲೀಲಾವತಿ,** ೧. ೩೫)

**ಬಯ್ –** ಮುಚ್ಚಿಡು (ಶ್ವಯುವಾಗಿ ಪುಟ್ಟಿ ಸುಟಿಗುಂ ಮುಂ ಬಯ್ತ ಭಂಡಾರದೊಳ್: **ಆದಿಪು,** ೨. ೧೫); ಮಣ್ಣಿನಲ್ಲಿ ಹೂಳು (ತನ್ನ ಮುನ್ನಿನ ಬಯ್ತ ಕೆಲದೊಳ್ ಪುಲಿಯಾಗಿ ಪುಟ್ಟಿ: **ಚಾವುಂಪು,** ಪು. ೧೭೯, ಸಾ. ೪); ತೆಗಳು (ಅದನಾತಂ ಬಯ್ದೊಡನಲ್ಲ ನಾಂ ಬಯ್ದೆಂ: **ವಡ್ಡಾರಾ,** ಪು. ೮, ಸಾ. ೩)

**ಬಯಕಾಱ –** ಮೇಳದವನು (ಬೀಣೆಯಂ ದೃಢಮುಷ್ಟಿಯಿಂ ನೆಗಪಿ ಪಿಡಿದಡಿಗೊಳ್ವ ಬಯಕಾಱರ ತೆರಳ್ಕೆಯಿಂ: **ರಾಜಶೇವಿ,** ೧೨. ೧೦೬ ವ)

**ಬಯಕೆ –** ಆಸೆ (ಸಾಮದೊಳಂ ಪದವಡದೊಡೆ ಬಟಿಕಿರ್ದಪ್ಪುದಲ್ತೆ ಮದವಡಿಸಲೆನ್ನ ಬಯಕೆಯ ದಂಡಂ: **ಆದಿಪು,** ೧೪. ೪೩); ಬಸಿರಿರ ಆಸೆ (ನೀನುಂ .. .. ಶ್ರೀಮತಿಯ ಗರ್ಭದೊಳ್ ನೆಲಸಿರೆ ಆಕೆಗೆ ಎಲ್ಲಾ ಜೀವಂಗಳಂ ದಯೆಗೆಯ್ವ ಬಯಕೆಯಾದುದು: **ವಡ್ಡಾರಾ,** ಪು. ೧೫೧, ಸಾ. ೧೫)

**ಬಯಕೆಗವಿ –** ಬಯಕೆ ಹೊಂದಿದ ಕವಿ (ಅಹಂಕಾರದೊಳ್ ಬಾತು ಬಲ್ಮೆಗೆ ಹಾರೈಸುವರೇಕೆ ಬಯಕೆಗವಿಗಳ್ ಕೆಲಬರ್: **ಲೀಲಾವತಿ,** ೧. ೨೪)

**ಬಯಕೆವೆಂಡಿರ್ –** ಬಯಕೆಯುಂಟಾದ ಹೆಣ್ಣು, ಬಸಿರಿ (ಬಯಕೆವೆಂಡಿರಂತೆ ಉಗುಟುತ್ತುಂ ನೀರೊಳಗೆ ಮುಟುಂಗುವರಂತೆ ಮೂಗಂ ಮುಚ್ಚಿಕೊಳ್ಳುತ್ತುಂ: **ಧರ್ಮಾಮೃ,** ೪. ೪೮ ವ)

**ಬಯಕ್ಕೆ –** ಬಯಕೆ (ಸೂಡುಶಯ್ಯೆಗಳ ಬಯಕ್ಕೆ ಜೊಂಪಲರ್ದವು ಪಾಸುಗಳೊಳ್ ನೆಲಸಿತ್ತು ಪೂತ ಗೊಜ್ಜಗೆಗಳ ಸಿಂದುರಂಗಳೊಳಗೆ ಓಗರಗಂಪನೆ ಬೀಱುತ; **ಪಂಪಭಾ,** ೫. ೩೦)

**ಬಯಲ್ದಾವರೆ –** ನೆಲದಾವರೆ (ಮೃಣಾಳಂಗಳೆಲ್ಲಮಂ ಮುಱಿಯಿಸದಿರೆಂದು ಕೇಯ್ಗುಗಿವಂತೆ ಮುಗಿವ ಬಯಲ್ದಾವರೆಗಳೊಳ್: **ಕಾದಂಬ,** ೮. ೪೬ ವ)

**ಬಯಲ್ದೊಱೆ –** ವಿಶಾಲವಾಗಿ ಬಯಲಲ್ಲಿ ಹರಿಯುವ ನದಿ (ಮಧುರಾಪುರಮಂ ಪೊಱಮಟ್ಟು ಬಯಲ್ದೊಱೆವರಿವ ಬಟ್ಟೆಯೊಳ್ ಉದ್ದೇಶಕ್ಕೆ ಬರ್ಪಲ್ಲಿ: **ಜಗನ್ನಾವಿ,** ೩. ೭ ವ); ಮರೀಚಿಕೆ (ತೊಱೆಗಳ್ ಉರ್ಕುಗೆಟ್ಟು ಅಱತು ಬಯಲ್ದೊಱೆಯಾದುವು ಬಾಂದೊಱೆ ಬಿಸುದೊಱೆಯಾದುದು: **ಜಗನ್ನಾವಿ,** ೧೭. ೬೬)

**ಬಯಲ್ವಿಟ್ –** ತಳ ಕಾಣಿಸು (ಆ ಕುಮಾರಂ ಬಿಟ್ಟ ಭರದಿಂದೆ ವಾರಿಯೆರಟ್ಟೆಸೆಗಂ ಪಚ್ಚು ಸೂಸೆ ಕೊಳದೊಳಗೆ ಬಯಲ್ಬಿಟ್ಟುದು: **ಚಂದ್ರಪ್ರಪು,** ೫. ೪೩)

**ಬಯ್ಕ –** ಬೈಕ, ಭಿಕ್ಷೆ (ಅವಜ್ಞೆಗೆಯ್ದು ನಾಯ್ಗುಗದೆಡೆಯೆಲ್ಲಂ ಪುಗಿಸಿ ಬಯ್ಕದ ಭಜನಮಾಗೆ ಮಡಿ ತೊಟ್ಟೆ ವಿಭು ಸಾಯೆ ಮೊಯ್ದು ಕಿವಿಯಂ ಪಿಡಿದೂಡಲೊಡರ್ಚೆ ಬಂದನೇ: **ಸುಕುಮಾಚ,** ೨. ೬೩)

**ಬಯ್ಕೆ –** ನಿಧಿ (ಫಣಿಕಟಕನ ಕೆಟಗೆ ಬಯ್ಕೆಯಿರ್ದಪುದೆಂಬರ್: **ಸಮಯಪ,** ೨. ೬೫); ಗುಟ್ಟು (ಬಗೆಯ ಬಯ್ಕೆಯನೊಪ್ಪಿಸುವಾಗಳ್ ನೀನೆ ವಲಂ ದೊರೆ: **ಆದಿಪು,** ೩. ೩೩)

**ಬಯ್ಕೆಗೊಳ್ –** ಅಡಗಿಕೊಳ್ಳು (ಮುನಿವಂದು ಅಧಿಕಂ ಗಡ ದೇವನಿಕಾಯದೆ ಬಯ್ಕೆಗೊಂಡು .. .. ಬಸಿಱಕೊಳಿಕ್ಕಿದಂ ಶಸ್ತ್ರಚಯಮುಮಂ: **ಸಮಯಪ,** ೧೦. ೧೪೧)

**ಬಯ್ಗಿರುಳ್** – [ಬಯ್ಗು+ಇರುಳ್] ರಾತ್ರಿಯ ಕೊನೆ, ಬೆಳಗಿನ ಜಾವ (ಬಯ್ಗಿರುಳಿನ ಮನೋಹರಿಯೆಂಬ ಜಾವದಾಗಳ್ ಬಿಳಿದಪ್ಪ ಕಾಡಾನೆಯಂ ಕಾಣ್ಬುದಂ: **ವಡ್ಡಾರಾ,** ಪು. ೧೫೭, ಸಾ. ೧೫)

**ಬಯ್ಗು** – ಸಾಯಂಕಾಲ (ಅರಸನಂ ಬಯ್ಗು ಇರುಳಿನ ಜಾವದೊಳ್ ಉದ್ಯಾನವನಕ್ಕೊಡಗೊಂಡು ಪೋಗಿ ಗುಂಡಿತಪ್ಪುದೊದು ನಾಡೆ ಕೆಸಱನೊಡೆಯ ಪೞವಾವಿಯ ತಡಿಯೊಳ್ ಇೞಿದು ಕೊಂದು: **ವಡ್ಡಾರಾ,** ಪು ೧೮೦, ಸಾ ೨೩)

**ಬಯ್ಗುಂಬೊೞ್ತು** – ಸಂಜೆಯ ಹೊತ್ತು (ಮಜ್ಜನಭೋಜನಾದಿಗಳಂ ಮಾಡಿ ಬಯ್ಗುಂಬೊೞ್ತು ಅಪ್ಪುದುಂ ನಿಜಭವನಕ್ಕೆ ಬಂದು: **ಕಾದಂಸಂ,** ೬. ೦ ವ)

**ಬಯ್ಗುಳ್** – ತೆಗಳಿಕೆ (ಬಯ್ಗುಳ್ ಶಪನಂ ಅದು ಆಕ್ರೋಶನಾಮಮುಂ ತಾನಕ್ಕುಂ; **ಅಭಿಧಾವ,** ೧. ೧೩. ೩೪)

**ಬಯ್ಗೆ** – ಬೈಗು, ಸಂಜೆ (ನಿನ್ನ ಮೊಲಗಟ್ಟಿಲೆಗಾಂ ಬೆಱಗಾದೆಂ ಇಂದು ಪೇೞ್ ಈಗಳೋ ಬಯ್ಗೆಯೋ ಮೊಗಸೊ ನಾಳೆಯೊ ನಾಡಿದೊ ನಿನ್ನ ಜೀವಿತಂ: **ಆದಿಪು,** ೩. ೬೩)

**ಬಯ್ತ** – ಅಡಗಿಸಿಟ್ಟ (ದಿವಿಜತತಿ ಬಯ್ತ ಕೈದುವಂ ಅವಸರದೊಳ್ ಬೇಡೆ ಸುರಭಿಯ ನಕ್ಕಿಸೆ .. .. ಕಯ್ದುವಾದುವಾ ಗೊರವನೆಲ್ವು: **ಸಮಯಪ,** ೧೦. ೧೪೨)

**ಬಯ್ತಿಡು** – ಸಂಗ್ರಹಿಸು (ನಾನಾವಿಧ ಧಾನ್ಯಂಗಂ ಪದನಱಿದುಡುಗುವ ಕಣಂ ಮಾಡುವ ಒಕ್ಕುವ ಅಡಕುವ ಬಯ್ತಿಡುವ ವಿವಿಧಭಾಜನಂಗಳೊಳಡುವ: **ಆದಿಪು,** ೬. ೭೭ ವ)

**ಬರ** – [ವರ] ಅನುಗ್ರಹ (ಬರಂಗಳಂ ಪದಪಿನಿಂದ ಈವಂತೆ ದೃಕ್ಸೃಷ್ಟಿ ರಾಜಿಸೆ ದಿವ್ಯಾಂಗನೆ ನೋಡಿದಳ್: **ಕಾದಂಸಂ,** ೩. ೩೬)

**ಬರಗಲೆ** – ಒಂದು ಆಭರಣವಿಶೇಷ (ಸರಿಗೆಗಿವು ಲಂಬಣಕ್ಕಿವು ಬರಗಲೆಗಿವು ಮುಗುಳ್ಗಳೆಮ್ಮ ಮೇಖಳೆಗಿವು .. .. ಎಂದಾದರದಿಂ ಕೊಯ್ದರ್: **ಆದಿಪು,** ೭. ೬೯)

**ಬರಡಗೆ** – (ವರಣ್ಡಕ] ಜಗಲಿ, ಮೋಟುಗೋಡೆ (ಬರಡಗೆಯೇಱಿದಂ ಬಸಿದ ಸೂಲಮನೇಱಿದಂ ಒತ್ತೆಯಗೊಟ್ಟವಂ ಕರೆದಭಿಮಾನಮಂ ಪೆಱರ್ಗೆ ಕೊಟ್ಟವಂ ಅಟ್ಟಿಱಿದುಯ್ದು ರಾಗದಿಂ ನೆರೆದನೆ ದೂಳಿಯೊಳ್ ನೆರೆದಂ: **ಲೀಲಾವತಿ,** ೨. ೧೦೧)

**ಬರತೆಗೆ** – ಬರಸೆಳೆ, ಗಾಢವಾಗಿ ಸೆಳೆದುಕೊ (ಕೇಯೂರಕನಂ ಬರತೆಗೆದಪ್ಪುವ ಸುಖಕ್ಕೆ ನೆಲೆಯೆನಿಸಿರ್ಪಂ: **ಕಾದಂಸಂ,** ೭. ೫)

**ಬರವಿಗ** – ಬರುವವನು, ಅತಿಥಿ (ಬರವನ ಬರವಿಂಗೆ ಶಯ್ಯಾಸನಮಂ ರಯ್ಯಂ ಮಾಡಿರಿಸೆ ಪೀಠಮರ್ದಕಂ ಸಾರ್ದು ನೋಡಿ: **ಚಂದ್ರಪ್ರಭು,** ೮. ೬೧ ವ)

**ಬರಿ** – ಮಗ್ಗುಲು, ಪಕ್ಕೆ (ನೆತ್ತರಂ ಪಡೆಯದೆ ಆಕಾಶಕ್ಕೆ ಬಾಯಂ ತೆಱೆದು ಊಳ್ವ ಬಳ್ಳುಗಳುಮಂ ನರವುಮಂ ಬರಿಯುಮಂ ಪತ್ತಿ ತೆಗೆದು ಪೆಡಸಾರ್ವ ನರಿಗಳುಮಂ ತಾನೆ ಸೋದು: **ಪಂಪಭಾ,** ೧೩. ೫೬ ವ)

**ಬರಿಗಂಡ** – ಪಕ್ಕೆಯ ಮಾಂಸಖಂಡ ಬರಿಗಂಡಂ ಪಿಣಿಲೇಱಿ ರೋಮಮುಡಿದಿರ್ಬೆನ್ನಾಗೆ ಮುಂಗಾಲಗಲ್ತರೆ ಬಿರ್ಕುರ್ವೆ .. .. ಸೊಗಯಿಸಿತ್ತು ಉತ್ಕೇಕರಂ ಸೂಕರಂ: **ಚಂದ್ರಪ್ರಭು,** ೫. ೬೦)

**ಬರಿಯೆಲ್ವು** – ಪಕ್ಕೆಲುಬು (ಭಗದತ್ತನಾನೆ ಬರಿಯೆಲ್ವುಡಿವನ್ನೆಗಂ ಒತ್ತೆ ಗಂಡನಾಗನೆ: **ಗದಾಯು,** ೩. ೨೭)

**ಬರಿವೊನಲ್**– ದಡ ಮೀರಿ ಹರಿಯುವ ನದಿ (ಕಿಱುಮಱಲ ದಿಣ್ಣೆಯೊಳ್ ಪರಿವ ಬರಿವೊನಲೆಸೆದುವೋರೊಂದು ತಾಣದೊಳ್: **ಅನಂತಪು,** ೯. ೧೬ ರಗಳೆ)

**ಬರಿಸ** – ವರ್ಷ (ಬರಿಸದ ಮಾಸಂಗಳ್ ಪನ್ನೆರಡಱೊಳಂ .. .. ಪನ್ನೆರಡು ಪೆಸರ್: **ಸಮಯಪ,** ೮. ೧೩೯)

**ಬರುಂಟು** – ಬೆರಳಿನಿಂದ ಚುಚ್ಚು, ತಿವಿ (ತಂದೆಯ ಮರಲುಂದಿದಲ್ಲಿಗೆ ಪೋಗಿ ಬರುಂಟಿ ಎಟ್ಟಿ ಪೊಟ್ಟಳಿಗೆಯಂ ತಂದೆಗೆ ಕೊಟ್ಟಳ್: **ವಡ್ಡಾರಾ,** ಪು ೧೭, ಸಾ ೨೩)

**ಬರುಹ** – ಬರುವಿಕೆ (ನಾಯಬಾಲಮಂ ಕಾಸಿತಿರ್ದುಹವುಂ, ಸೌಳುವಣ್ಣಿನಲ್ಲಿ ಮಱಿ ಬರುಹವುಂ, ಕುರುಡಂಗೆ ಕನ್ನಡಿಯಂ ತೋರುಹವುಂ .. .. ಇವಱೋಪಾದಿ: **ಪಂಚತಂತ್ರ,** ೨೦೬ ಶ್ಲೋಕ ೮೭ ಟೀಕೆ)

**ಬರೆ** – ಅಕ್ಷರರೂಪದಲ್ಲಿಡು (ಗುಣಸೌಂದರಿಯೆಂಬೊಳ್ .. .. ಪಂದೋಲೆಯಂ ಇಂತೆಂದು ಬರೆದಳ್: **ವಡ್ಡಾರಾ,** ಪು. ೧೬೩, ಸಾ. ೮); ಅಭ್ಯಾಸಕ್ಕಾಗಿ ತಿದ್ದು (ಬರೆಯದೆ ಬಂದ ಸುದ್ದಗೆಯ ಸೂತ್ರಮನೊಂದೆ ಮುಹೂರ್ತಮಾತ್ರದಿಂ ಬರಿಸಿದುದು: **ಪಂಪಭಾ,** ೭. ೩೪); ಚಿತ್ರಿಸು (ಬರೆಯಲ್ ಬ್ರಹ್ಮಂಗಮೇಂ ಬರ್ಕುಮೇ ಎಂದು ಮುನ್ನಂ ವಿಚಿತ್ರ ಚಿತ್ರವಿದ್ಯಾಕೌಶಲಮಂ .. .. ಭಾವಿಸಿ ನೋಡಿ: **ಆದಿಪು,** ೪. ೪); ಗೆರೆ ಎಳೆ, ಗೆರೆ (ಅಸಿಯರಸನಂ ಗೆಲ್ದೊಡೆ ಗಿಳಿ ನೆಲದೊಳ್ ಎರಡು ಬರೆಯಂ ಬರೆಗುಂ: **ವಡ್ಡಾರಾ,** ಪು. ೧೦೮, ಸಾ. ೨೭)

**ಬರೆಪಂಬೊಗು** – ಬರಹಕ್ಕೆ ಸಿಕ್ಕು (ಬರೆಪಂಬೊಕ್ಕು ಉಚ್ಚರಿಸಲ್ಬಾರದುವು ಅಕ್ಷರಮಲ್ತು ಅವು ಘನಸ್ವನಾದಿ ಧ್ವನಿಗಳ್: **ಶಬ್ದಮದ,** ೧೨)

**ಬರೆಪಕಾಱ** – ಬರೆಯುವವನು (ಪೂಣ್ದು ಪೇೞ್ದ ಕೃತಿಬಂಧಮುಂ ಬರೆಪಕಾಱರ ಕೈಗಳ ಕೇಡು: **ಪಂಪಭಾ,** ೧. ೧೨)

**ಬರ್ಕಟಬಯಲ್** – ಬಟಾ ಬಯಲು, ಏನೂ ಇಲ್ಲದ ಬಯಲು (ತಮಮಾಗಳ್ ಬರ್ಕಟಬಯಲಾದರ್ಕನುದಯಿಸುವಾಗಳ್:: **ಗಿರಿಜಾಕ,** ೫. ೫)

**ಬರ್ಕುಡಿ** – ಜಗಳ, ವಿವಾದ (ಮರುತ್ಸುತನ ಕೆಯ್ಯಂಪಿಡಿದು ನಿಮ್ಮೊಳಿದೇಂ ಬರ್ಕುಡಿಯೆಂದಾತನಂ ನಿವಾರಿಸಿ: **ಕರ್ಣನೇಮಿ,** ೯. ೨೬ ವ); ವಿವಾದ (ನಣ್ಪಿನಿಂ ನುಡಿ ನುಡಿವಂತು ಬರ್ಕುಡಿಯೆ: **ಲೀಲಾವತಿ,** ೨. ೧೧೩)

**ಬರ್ಕೆ** – ನೆಲಹಲಸು (ಸವಿಗಂ ಕಂಪಿಂಗಮಾಯ್ತಿರ್ಕೆ ಪಣ್ತು ಎನಸುಂ ಬರ್ಕೆ ರಸಕ್ಕೆ ಪಕ್ಕೆಸನಿಸಿ ಕೊರ್ವಿತ್ತು: **ಪಾರ್ಶ್ವನಾಪು,** ೯. ೯)

**ಬರ್ಕೆವಲಸು** – ನೆಲಹಲಸು (ಬರ್ಕೆವಲಸುಗಳೊಳ್ ಅಸುರರ ತೆರ್ಕೆಯನೆಟ್ಟಿಟ್ಟ ಪೊಯ್ವುದುಂ ಕೋಟ್ಟಿದುಳುಂ ಬರ್ಕೆಯ ತೊಳೆಯುಂ ಸೂಸಿದುವು ಆರ್ಕಡುಕೆಯ್ದು ಅನಿಲಜಂಗೆ ಕೂರ್ಪಂ ತೋರ್ಪರ್: **ಪಂಪರಾ,** ೧೧. ೧೨೦)

**ಬರ್ಚಿಸು** – ಲೇಪಿಸು, ಬಣ್ಣ ಬಳಿ (ಪೊಸನನೆಯೊಳ್ ಪಸುರ್ಪಂ.. .. ತುಂಬಿಯೊಳ್ ಮಿಸುಗುವ ಕರ್ಪು ಬರ್ಚಿಸಿದವೊಲ್: **ಆದಿಪು,** ೧. ೬೬)

**ಬರ್ಚು** – ಬೇರ್ಪಡು (ನಿಜಮೋಹದಿಂ ಅಱಸುತ್ತಂ ಅಸುವಿಂ ಬರ್ಚಿದ ನಿಜಸತಿಗಂಡು ಎರ್ದೆಗೆರ್ಚಱಿದಾ ವಜ್ರಮುಷ್ಟಿ ವಿಹ್ವಳನಾದಂ: **ಕರ್ಣನೇಮಿ,** ೬. ೨೮)

**ಬರ್ಜನ** – ಭರ್ಜನ, ಹುರಿಯುವುದು (ಅಯಃಕುಂಭಿಪಾಕದೊಳಂ ಮಂಜರೀಕ ಬರ್ಜನದೊಳಂ ಅಂಗಾರಾವಗಾಹದೊಳಂ: **ವರ್ಧಮಾಪು,** ೧೫. ೮ ವ)

**ಬರ್ದನ್** – [√ಬಾಟ್] ಬದುಕಿದವನು (ತಮಗಾಗಿ ಬರ್ದನಂ ದುಃಖಂ ಮುಂಕೊಂಡುಯ್ಯೆ ಕಾಯರ್: **ಸಮಯಪ,** ೫. ೧೫೦)

**ಬರ್ದಿಲ** – ಸ್ವರ್ಗ (ಬರ್ದಿಲಂ ಸಗ್ಗಕ್ಕೆ ಪೆಸರ್: **ಶಬ್ದಮದ,** ೫೫)

**ಬರ್ದಿಸು** – ಎಣ್ಣೆಯಲ್ಲಿ ಕರಿ (ಬಸನಂಗಳೆ ನಿನ್ನಂ ಬರ್ದಿಸುತಿರ್ದಪುವು ಅವಱ ಬಸದೊಳ್ ಎಸೆವುದಱಿಂ ನಾಣ್ಚಿಸುವೀ ನಾಣಿಲಿ ನಾಣಂ ಪಸುವಂದೆಲೆ ಜೀವ ನೀನದೆಲ್ಲಿಗೆವೋಪೈ: **ಅಜಿತಪು,** ೨. ೯೪)

**ಬರ್ದು** – ಮರಣ ಹೊಂದು (ಮತ್ತೆ ನೃಪತಿ ವಿಸ್ಮಯದಿಂ ಕೇಳ್ವುದುಂ ಉಸಿರ್ದರ್ ಭವದೊಳ್ ಬರ್ದಿದ ಮಾತರ ಪಿತರರಂ ಪಿತಾಮಹರಿರವಂ: **ಯಶೋಧಚ,** ೪. ೫೪); ಜಾಣ್ಮೆ (ಪೊಗಟ್ತೆಯನಾಂತಳ್ ಆವಳ್ ಆ ಸರಸತಿ ಕೂರ್ಮೆಯಿಂದ ಒಸೆದು ಮಾಡುಗೆ ಕಬ್ಬದ ಬರ್ದಿನೇಟ್ಗೆಯಂ: **ಕಬ್ಬಿಗಕಾ,** ೩); ಪ್ರೌಢಿಮೆ (ಎಳಸಿ ಬಳಸಿ ಬಂದಿರ್ದ ಪಾಟದಾಟದ ಮುದ್ದಿನ ಬರ್ದಿನ ಪರಿವಾರದೇವಿಯರುಮಂ: **ಆದಿಪು,** ೨. ೬೫ ವ); ಬದುಕು (ಭವವಾರಾಶಿಯೊಳಿಂತು ಜೀವನಿವಹಂ ಬರ್ದುತ್ತುಮಿರ್ಕುಂ: **ಆದಿಪು,** ೧೬. ೫೯)

**ಬರ್ದುಂಕಿಸು** – ಕಾಪಾಡು (ತಂತ್ರಂಬೆರಸು ಪೋಗಿ .. .. ಒಡ್ಡಾಯನನ ನೆಱೆಯಂ ಬರ್ದುಂಕಿಸಿ ರಾಜಗೃಹಕ್ಕೊಡಗೊಂಡು ಪೋದೊಡೆ: **ವಡ್ಡಾರಾ,** ಪು. ೧೬೫, ಸಾ. ೧೫)

**ಬರ್ದುಂಕು** – ಬದುಕು (ಲಘುತರಮಪ್ಪ ಸೇವೆಯಿಂ ತನ್ನಿಚ್ಛೆಯೊಳ್ ಬರ್ದುಂಕುವ ಶುನಕಂ ಲೇಸೆಂದು ವಿದ್ವಾಂಸರ್ ಪೇಳ್ವರ್: **ಪಂಚತಂತ್ರ,** ೧೦೬, ಶ್ಲೋಕ ೨೪ ಟೀಕೆ); ಜಾರು, ನುಸುಳು (ಪುರ್ಬಂಬ ಕರ್ಬಿನ ಬಿಲ್ಲಿಂ ಬರ್ದುಂಕಿದ ಮದನನೊಡ್ಡಣದಂತೆ: **ಆದಿಪು,** ೪. ೪೧ ವ)

**ಬರ್ದುಕಾಡು** – ಪಾರಾಗು (ನಲ್ಲಳ ಮುಖಾಂಬುಜಮಂ ನಡೆ ನೊಡಿ ನೋಡಿ ಸಾಯದೆ ಬರ್ದುಕಾಡಿದಂ ಜವನ ಬಾರಿಯೊಳಂ ಬರ್ದುಕಾಡದಿರ್ಕುಮೇ: **ಆದಿಪು,** ೧೨. ೨೫)

**ಬರ್ದುಕು** – ಬದುಕು (ಕರ್ಬಿನ ಬಿಲ್ಲಂ ಮಸೆದ ಮದನನಲರ್ಗಣೆ ಬರ್ದುಕಿತ್ತೆನಿಸುತ್ತೊಳಪೊಕ್ಕಳ್: **ಆದಿಪು,** ೯. ೧೯)

**ಬರ್ದುಗಾರ್ತಿ** – ವೇಶ್ಯೆ (ಎನಿಪ ಅಗಣ್ಯ ಲಾವಣ್ಯ ಪಣ್ಯಾಂಗನಾಜನದ .. .. ಬರ್ದುಗಾರ್ತಿಯರ ಬಹಿರಂಗಣಗಳೊಳ್: **ಪುಷ್ಪದಂಪು,** ೨. ೭೭ ವ)

**ಬರ್ದುಗೆ** – ಮರಣ (ನೀಮೆಲ್ಲರುಂ ಎನ್ನ ಬರ್ದುಗೆಯಂ ಆ ನಲ್ಲಂಗೆ ಪೇೞಿಂ: **ಕಾವ್ಯಾವಲೋ,** ೧೨೯)

**ಬರ್ದುಗೆಡು** – ನೈಪುಣ್ಯವನ್ನು ಕಳೆದುಕೊ (ಮನದಳಿಪಿಂ ತಮಾಳ ಲತಿಕಾಂಗಿಯರಾಟಿಸೆ ಬರ್ದುಗೆಟ್ಟು ಕಾಂಚನಲತಿಕಾಂಗಿಯರ್ ಬಯಸೆ ಸೋಲ್ತು: **ಆದಿಪು,** ೨. ೪೬)

**ಬರ್ದುನುಡಿ** – ಜಾಣ್ಮೆಯ ನುಡಿ (ಪಾಲೊಳ್ ಒಂದಿರ್ಪವೋಲ್ ಒಪ್ಪಂಬೆತ್ತ ಇನಿದಾದ ಬರ್ದುಬನುಡಿಯಂ ತಳ್ತೋಜೆಯುಂ.. ..ತಪ್ಪೊಂದುಂ ತಲೆದೋಱದಂತೆ .. .. ಈ ಕಬ್ಬಂ: **ಕಬ್ಬಿಗಕಾ,** ೫)

**ಬರ್ದುವೆಂಡಿರು** – ಪ್ರೌಢೆ (ಬಸಂತನೊಲ್ದೊಲಿಸಿ ಕಾಡುವ ರೂಢಿಯ ಬರ್ದುವೆಂಡಿರಂ ನಿಲೆ ಸೆಱೆಗೆಯ್ವೆನೆಂದು: **ಕಬ್ಬಿಗಕಾ,** ೪೭)

**ಬರ್ದೆ** – ಬರ್ದುವೆಣ್, ವೇಶ್ಯೆ (ಪೊಸತಪ್ಪಗ್ಗದ ಗಾಡಿಯಿಂದೆ ಪಿರಿದುಂ ಬೆಳ್ಮಾಡಿ ಬೇಟ್ಪಿಂತುಟುಬ್ಬಸಮಂ ಮಾಡುವ ಬರ್ದೆಯರ್ ಪಲರುಂ ಕಣ್ಗೇಂ ಬೆಡಂಗಾದರೋ: **ಕಬ್ಬಿಗಕಾ,** ೧೦೬)

**ಬರ್ದೆಗೆಯ್ತ** – ಪ್ರೌಢಕಾರ್ಯ (ಸೂಳೆವಂಟರ ಸೊಬಗಿಂಗೆ ಮೈಮಱೆದು ಮೆಚ್ಚುವ ಬಿಂಕದ ಬರ್ದೆಗೆಯ್ತದೊಳ್ ಬೆರಸಿದೊಡೆ ಅಂದೆ ಬರ್ದೆಂ: **ಲೀಲಾವತಿ,** ೨. ೭೨)

**ಬರ್ಬರ** – ಒಂದು ಸುಗಂಧದ್ರವ್ಯ, ಗೋರೋಚನ (ಗಂಧಮುಡೆಯಂ ಸೊಪ್ಪಾಗದಂತುಟ್ಟು ಬರ್ಬರಮಂ ಪೂಸಿ ತೊಟಿಲ್ವರ್: **ಸಮಯಪ,** ೬. ೩೬)

**ಬರ್ಬೂರ** – ಬೊಬ್ಬುಳಿ, ಜಾಲಿಮರ (ಇಷ್ಟಾರ್ಥಮಂ ತವೆ ಮಾಡಲ್ ಸುರಪಾದಪಂ ನೆಱೆಗುಂ ಈ ಬರ್ಬೂರವೃಕ್ಷಂಗಳೀವವೆ: **ರಾಜಶೇಖಿ,** ೩. ೪೨)

**ಬರ್ಮಂ** – ಬ್ರಹ್ಮ (ಬರ್ಮನುಮಾ ವಿಶ್ವಕರ್ಮನುಂ ಶೋಭೆಯಂ ನಿರ್ಮಿಸಲೆಂದು ವಧೂವರರೂಪಾಗಿ ನಿರ್ಮಿಸಿದಂತೆ ಮಿಸುಗಿತ್ತು: **ಲೀಲಾವತಿ,** ೧೧. ೫೨)

**ಬರ್ಹಿ** – ನವಿಲು (ವನಬರ್ಹಿಗಳಂ ಮೇಘಧ್ವನಿ ತಣಿಪುವ ತೆಱದೆ ದೇವ ನಿನ್ನಯ ದಿವ್ಯಧ್ವನಿ ತಣಿಪಿದಪುದು ವಿಷ್ಟಪಜನಮಂ ಸಕಲ ತ್ರಿವಿಷ್ಟಪೈಕಾಧಿಪತೀ: **ಅಜಿತಪು,** ೮. ೧೧); ಕುಶ (ಕುಶಂ ಕುಥಂ ಬರ್ಹಿ ಪವಿತ್ರ ದರ್ಭಂ: **ಅಭಿಧಾವ,** ೧. ೮. ೩೭)

**ಬರ್ಹಿಣ** – ನವಿಲು (ಭೂತಳಾಧಿನಾಥನರ್ಥಿಸಂಘತಾನವ ಬರ್ಹಿಣಾನಂದಕರಂ ಪ್ರತ್ಯಗ್ರಜಲಧರಾಗಮಂ: **ಸುಕುಮಾಚ,** ೧. ೭೯ ವ)

**ಬಲ್** – ಸಮರ್ಥವಾಗಿರು (ನೆಲೆಗಿಡಿಸಲುಂ ಪೊಲೆಗಿಡಿಸಲುಂ ಬಲ್ಲೆಂ: **ಶಾಂತಿಪು,** ೩. ೨೩ ವ); ತಿಳಿ (ಬವರದೊಳೇಂ ಬಲ್ಲಂ ಕರಮೊವಜುಗೆಯಲ್: **ಪಂಪಭಾ,** ೧೨. ೩);

**ಬಲ** – ಬಲಭಾಗ (ಬಲದ ಕೆಯ್ಯೊಳ್ ಭೈಕ್ಷದ ಭಾಜನಮಂ ಪಿಡಿದು .. .. ಪಗಲುಣ್ಣೆಂ: **ವಡ್ಡಾರಾ,** ಪು. ೯೨, ಸಾ. ೧೭); ರಾಜನಿಗಿರಬೇಕಾದ ಮೂರು ತೆರನಾದ ಶಕ್ತಿಗಳು: ಮಿತ್ರಬಲ, ತಂತ್ರಬಲ, ಕಾಲಬಲ (ಮಿತ್ರಗುಣಸಂಪನ್ನರಪ್ಪ .. .. ಇಂತೀ ಬಲಂಗಲೋಳೊಂದುಮಿಲ್ಲ: **ಪಂಚತಂತ್ರ,** ೨೯೭ ವ); ಸೈನ್ಯ (ಆಱುಂಬಲಗಳ್ವೆರಸೊದವಿದ ಸಂಗ್ರಾಮ ಸಂರಂಭದಿಂದಂ .. .. ಆಜಿಗೆ ಬಂದೊಡ್ಡಲ್ಕೆ: **ಆದಿಪು,** ೧೪. ೮೨); ಬಲರಾಮ (ಬಲಂ ಏಕಕುಂಡಲಂ .. .. ಹಲಿ ಬಲಭದ್ರಂ ಮುಸಳಿ ಕಾಮಪಾಳಂ ರಾಮಂ: **ಅಭಿಧಾವ,** ೧. ೧. ೨೫)

**ಬಲಂಗೆಡು** – ಶಕ್ತಿಗುಂದು (ಬೆಚ್ಚದೆ ಬೆದಱದೆ ಬಲಂಗುಡದೆ ಮನಂಗುಂದದೆ ಕೆಲಸಂ ಸಾರದೆ ಸಕಾಯಮಂ ಪಾಱದೆ ಮಹಾವಟವೃಕ್ಷದ ಕೆಟಿಗೆ ವಿಪುಳತಪದಿಂದ ಅಪರ್ಣೆ ಒಪ್ಪುತ್ತುಮಿರೆಯಿರೆ: **ಗಿರಿಜಾಕ,** ೯. ೫೮ ವ)

**ಬಲಂಬೊಯ್** – [ಬಲಂ+ಪೊಯ್] ಶಕ್ತಿ ನೀಡು (ವಿದ್ಯಾಸಾಮರ್ಥ್ಯದಿಂ ಇದರ್ಕೆ ಬಲಂಬೊಯ್ದು ತಾಮುಮೀ ನೆರವಿಯೊಳ್ ಅದೃಶ್ಯರಾಗಿ ನೋಡುತ್ತುಮಿರ್ದರ್: **ಶಾಂತಿಪು,** ೯. ೫೫ ವ)

**ಬಲಕರ್ವೀಕೃತ** – ಶಕ್ತಿಗುಂದಿದವನು (ಶ್ರೀಕೃಷ್ಣಂ .. .. ಬಲಕರ್ವೀಕೃತನಾ ದೈತ್ಯ ಖಳನ ಪೊಟಿಲ್ಗೆಯ್ತಂದಂ: **ಜಗನ್ನಾವಿ,** ೬. ೧)

**ಬಲಗೆಲ** – [ಬಲ+ಕೆಲ] ಬಲಬದಿ (ಬಲಗೆಲದೊಳ್ ಮಯಾಶುಶುವನಿರಿಸಿ ಪಾಣಿಕುಶೇಶಯಯುಗದಿಂದೆ ನೆಗಪಿದಳ್ ಜಿನಶಿಶುವಂ: **ಆಚವರ್ಧ,** ೧೩. ೯೫)

**ಬಲಗೊಳ್** – ಪ್ರದಕ್ಷಿಣೆ ಹಾಕು (ಶ್ರೀಮಜ್ಜಿನಭವನಮಂ ಅಖಿಳಾಮರನರಖಚರಚಕ್ರವರ್ತಿಸ್ತುತಮಂ ಮೂಮೆ ಬಲಗೊಂಡು: **ಆದಿಪು,** ೪. ೧)

**ಬಲದಂ** – ಬಲಬದಿಯಲ್ಲಿರುವ ವ್ಯಕ್ತಿ (ದಕಾರಕ್ಕೆ: ಕೆಲದಂ ಬಲದಂ ಅಲ್ಲದಂ ಇಲ್ಲಿದಮ ಎಲ್ಲಿದಂ: **ಶಬ್ದಮದ,** ೧೨೧ ಪ್ರ)

**ಬಲದಲನ** – ಬಲವನ್ನು ಕುಂದಿಸುವವನು, ಬಲನೆಂಬ ರಕ್ಕಸನನ್ನು ಕೊಂದವನು, ಇಂದ್ರ (ಕುಲಗೋತ್ರವೈರಿಯುಂ ಬಲದಲನನುಂ ಎಂದು ಅಮರಪತಿಯನೊಲ್ಲದೆ ಪೋದರ್ ಕುಲಗೋತ್ರ ವೀರಭಟರುಂ ಬಲನಾಥರುಂ ಉಂತುಂ ಅಮರರೇ ನೋಡುವರ್: **ಜಗನ್ನಾವಿ,** ೧೩. ೭೯)

**ಬಲದೇವ** – ಬಲರಾಮ (ತಂದೆ ವಸುದೇವಂ .. .. ದೇವಕಿ ತಾಯ್ ನಂದನಂ ಅನ್ವಜಂ ಶ್ರೀಸುಂದರಿ ತನಗಿನಿಯಳ್ ಅಗ್ರಜಂ ಬಲದೇವಂ: **ಅಭಿಧಾವ,** ೧, ೧. ೨೪); [ಜೈನ] ಅರವತ್ತು ಮೂವರು ಶಲಾಕಾಪುರುಷರಲ್ಲಿನ ಒಂಬತ್ತು ಮಂದಿಯಲ್ಲಿನ ಬಲದೇವರ ಗುಂಪು; ವಿಜಯ, ಅಚಲ, ಸುಧರ್ಮ, ಸುಪ್ರಭ, ಸುದರ್ಶನ, ನಂದಿ, ನಂದಿಮಿತ್ರ, ರಾಮ, ಪದ್ಮ ಎಂಬುವವರು (ಶ್ರೀವರ್ಮನುಂ ವಿಭೀಷಣನುಂ ಎಂಬ ಪೆಸರೊಳ್ ಬಲದೇವ ವಾಸುದೇವರೆನಿಸಿ ಬಳೆಯೆ: **ಆದಿಪು,** ೩. ೫೦ ವ)

**ಬಲದೋಳ್ದಲೆ** – ಬಲದ ಭುಜ (ನನೆಯಂಬಂ ನೆಲನಂ ಬಲದೋಳ್ದಲೆಯಲ್ಲಿ ತಾಳ್ದಿದಂ: **ಕಬ್ಬಿಗಕಾ,** ೩೯)

**ಬಲಭಿಚ್ಚಾಪ** – [ಬಲಭಿತ್+ಚಾಪ] ಇಂದ್ರನ ಬಿಲ್ಲು, ಕಾಮನ ಬಿಲ್ಲು (ಆ ಪುರದ ರತ್ನಭವನ ಕಳಾಪದ್ಯುತಿ ನೆಗೞ್ ಗಗನತಳದೊಳ್ ಬಲಭಿಚ್ಚಾಪರುಚಿಗೆತ್ತು ಮತ್ತೆ ಕಳಾಪಿಗಳಾಡುವುದು ಮಧುರಕೇಕಾರವದಿಂ: **ಅಜಿತಪು,** ೨. ೧೭)

**ಬಲಮರ್ದು** – ಧಾತುಪುಷ್ಟಿಯ ಔಷಧ (ಬಲಮರ್ದೆನೆ ಅಂಕದೌಷಧಂ: **ರನ್ನ ನಿಘಂಟು,** ೪)

**ಬಲರಿಪು** – ಇಂದ್ರ (ಬಲದೇವ ವಾಸುದೇವರ್ ಬಲರಿಪುನಿಭರಿರದೆ ಜಿನನಂ ಅರ್ಚಿಸಿ: **ಕರ್ಣನೇಮಿ,** ೧೧. ೧೩೬)

**ಬಲವಕ್ಕ** – ಬಲದ ಪಕ್ಕ (ನುಡಿವೆಣ್ಣನಾಂತ ನಾಲ್ಮೊಗಂ ಇರದಚ್ಚದಾವರೆಯ ಚೆಂದಮಂ ಅಂದು ಒಳಕೆಯ್ದೆ ಬಂದು ನೆಟ್ಟಗೆ ಬಲವಕ್ಕದೊಳ್ ನೆಲಸಿ ಕಣ್ಗೆಸೆದಂ ಬಿದಿ ನಿಂದು ನೋಟ್ಪರಾ: **ಕಬ್ಬಿಗಕಾ,** ೧೨೮)

**ಬಲವರ್** – ಪ್ರದಕ್ಷಿಣೆ ಹಾಕು, ತಿರುಗು (ಅತತ್ವದೊಳ್ ಮನಂ ನಿಲಿಸದ ಭಾವಂ ಅಟೆಸದ ಪುದ್ಗಳಂ ಇಲ್ಲೆನೆ ಕರ್ಮಬಂಧದಿಂ ಬಲವರುತಿರ್ಪ ಊಾಟಣದ ಗುಂಡಿಗೆಯಂತಿರೆ: **ಸುಕುಮಾಚ,** ೫. ೩೨)

**ಬಲವಿರೋಧಿ** – ಬಲನೆಂಬ ರಕ್ಕಸನನ್ನು ಕೊಂದವನು, ಇಂದ್ರ (ಸವಣಂ ಬಳಪಂಗೊಳೆ ಗಾಂಡಿವಿ ಬಿಲ್ಗೊಳೆ ಬಲವಿರೋಧಿ ವಜ್ರಂಗೊಳೆ ದಾನವರಿಪು ಚಕ್ರಂಗೊಳೆ ಕೌರವಾರಿ ಗದೆಗೊಳೆ ಪೊಣರ್ಕೆಗಾವಂ ನಿಲ್ವಂ: **ಶಬ್ದಮದ,** ೧೭೮ ಪ್ರ ೮)

**ಬಲವೈರಿ** – ಬಲವಿರೋಧಿ, ಇಂದ್ರ (ಮಾನಸರ್ಗಮಘಟಂ ಬಲವೈರಿಗಂ ಅಳೆಯಲರಿದು ವಿಕ್ರಿಯೆಯಿಂದಂ: **ಸಮಯಪ,** ೧೦. ೯೪)

**ಬಲಸ್ಥ** – ಬಲಿಷ್ಠ (ಏಂ ಬಲಸ್ಥನೊ ಭೀಮಂ: **ಪಂಪಭಾ,** ೧೧. ೬೮)

**ಬಲಾಂತಕ** – ಬಲವಿರೋಧಿ (ಅಂತು ಬಲವಂದು ಬಲಾಂತಕಂ ಅಘಬಲಾಂತಕಂಬೆರಸು ಬಳಾಹಕ ನಿರ್ಮಿತ ತ್ರಿವಿಧ ಸೋಪಾನದಿಕ್ಕೆಲದೊಳಂ ದೇವನಿಕಾಯಂ ಬರೆ: **ಅಜಿತಪು,** ೪. ೩೧ ವ)

**ಬಲಾಕ** – ಬೆಳ್ಳಕ್ಕಿ (ಬಕ ಕಲಹಂಸ ಬಲಾಕ ಪ್ರಕರ ಮೃದುಕ್ವಣಿತರಮ್ಯಮಿದಿರೊಳ್ ತೋಱೆತ್ತು ಕೊಳಂ: **ಪಂಪಭಾ,** ೮. ೩೮)

**ಬಲಾಕೆ** – ಬಲಾಕ (ಪಳುಕಿನ ಬಲಾಕೆಗಳೊಳಂ ಬರೆದ ಸುರಶರಾಸನಂಗಳೊಳಂ: **ಕಾದಂಬ,** ೭. ೨೧ ವ)

**ಬಲಾಢ್ಯ** – ಬಲಿಷ್ಠ[ನಾದವನು] (ಗಿರಿಯಂತೆ ಬಿಣ್ಣಿದಂ ಸುರಕರಿಯಂತೆ ಬಲಾಢ್ಯಂ ಅಬ್ಧಿಯಂತೆ ಗಭೀರಂ: ಶಬ್ದಮದ, **೨೨೫,** ಪ್ರ ೨)

**ಬಲಾಧಿಕೃತ** – ಸೇನಾಧಿಪತಿ (ಬಲಾಧಿಕೃತನಪ್ಪ ಬಲಾಹಕನೆಂಬನಂ ಬೆಸಸೆ: **ಕಾದಂಬ,** ೩. ೦ ವ)

**ಬಲಾಧ್ಯಕ್ಷ** – ಬಲಾಧಿಕೃತ (ಅಂತು ಅತಿತ್ವರಿತಗಮನ ನಿಶ್ಚಿತಮನನಾಗಿ ಬಲಾಧ್ಯಕ್ಷನಂ ಬರಿಸಿ: **ಆದಿಪು,** ೪. ೯೦ ವ)

**ಬಲಾರಿ** – ಇಂದ್ರ (ಮೊಱೆಯಿಡೆ ಕೇಳ್ದು ಚಕ್ರಧರನುಂ ಜಳಜೋದ್ಭವನುಂ ಬಲಾರಿಯುಂ: **ಗಿರಿಜಾಕ,** ೬. ೭)

**ಬಲಾವಲೇಪ** – ಬಲದ ಕಾರಣದಿಂದಾದ ದರ್ಪ ಅದನಾರ್ಳವಂ .. .. ನಿಜಭುಜಬಲಾವಲೇಪಪ್ರತಾಪಾಟೋಪಂ ಆರ್ಜಿತ ಅನೇಕಶತ್ರುವೆಂಬರಸಂ: **ಅಜಿತಪು,** ೨. ೨೩ ವ)

**ಬಲಾಹಕ** – [ಪ್ರಳಯಕಾಲದ] ಮೋಡ (ಅಂತು ಬಲವಂದು ಬಲಾಂತಕಂ ಅಘಬಲಾಂತಕಂಬೆರಸು ಬಲಾಹಕ ನಿರ್ಮಿತ ತ್ರಿವಿಧ ಸೋಪಾನದಿಕ್ಕೆಲದೊಳಂ ದೇವನಿಕಾಯಂ ಬರೆ: **ಅಜಿತಪು,** ೪. ೩೧ ವ)

**ಬಲಿ** – ಬಲಿಷ್ಠವನ್ನಾಗಿಸು (ಬಲಿದು ಕಾಲ್ಗಾಪಿನ ಅಣಿವೆರಸು ನಿಂದ ಜಾವದ ಮದಗಜಂಗಳುಮಂ: **ಆಚವರ್ಧ,** ೯. ೫೬ ವ); ಬಲಿ ಚಕ್ರವರ್ತಿ (ಬಲಿಯಂ ವಾಮನರೂಪದಿಂದಮೆ ವಲಂ ಮುಂ ಬೇಡಿದೆಂ ಭೂರಿಭೂತಲಮಂ: **ಪಂಪಭಾ,** ೯. ೨೦); ದೇವತೆಗೆ ನೀಡುವ ಆಹುತಿ (ಇಂಬಟೆಯಂ ಬಲಿಗೆದರಿದ ಕೂಟನಱಸಿ ತಿಂದು ಕಾಲಮಂ ಕಳಿಪುತಿರ್ದು: **ಚಾವುಂಪು,** ಪು. ೪೯೦. ಸಾ. ೩); [ಜೈನ] ಪ್ರತಿವಾಸುದೇವರಲ್ಲಿ ಒಬ್ಬ; ಗಟ್ಟಿಯಾಗು (ನೀಮುಮೀಗಳ್ ವನಸಿಂಹನ್ಯಾಯದಿಂ ದುರ್ಗದೊಳೆ ಬಲಿದು ನಿಂದಲ್ಲಿ: **ಆದಿಪು,** ೧೩. ೫೮)

**ಬಲಿಂದಮ** – ಬಲಿಯನ್ನು ದಮನಮಾಡಿದವನು, ವಾಮನ, ವಿಷ್ಣು (ಬಲಿವಿಂದನಿಂ ಬಿಲ್ಲ ಬಲ್ಮೆಯಂ ಪೊಗಟೆಸಿದಂ: **ಪಂಪಭಾ,** ೫. ೪೮)

**ಬಲಿಕೆಯ್** – ಗಟ್ಟಿಯಾಗಿ ಮಾಡು (ವಿಲಾಸವತಿ ಧೀರತೆಯಿಂ ಬಲಿಕೆಯ್ದು ಚಿತ್ತಮಂ: **ಕಾದಂಬ,** ೮. ೧೫೬)

**ಬಲಿಗೆದಱು** – ಆಹುತಿ ನೀಡು (ಪರಲ್ಗಳಂ ಬಲಿಗೆದಱಿದಂತೆ ಪಸುರ್ಪೆಸೆವ ನೆಲದೊಳ್ ಉಪಾಶ್ರಯಂಬಡೆದಳಂಕರಿಸುವ ಇಂದ್ರಗೋಪಂಗಳುಮಂ ಕಿಸುಗಾಡ ನೆಲಂಗಳೆಳದಳಿರ ಬಣ್ಣಮಂ ಕೆಯ್ಕೊಂಡಂ: **ಪಂಪಭಾ,** ೭. ೨೫ ವ)

**ಬಲಿಪುಷ್ಪ** – ಕಾಗೆ (ಕೆಲವಾನುಂ ದಿವಸದೊಳ್ ಆ ಬಲಿಪುಷ್ಪಂ ಸಂಪುಷ್ಪನಾಗಿ ಬಟಿಕ್ಕೆ ಕೌಶಿಕಾಧೀಶನಿವಾಸಮುಮಂ.. ..ಆರ್ಯೆದು: **ಪಂಚತಂತ್ರ,** ೩೭೧ ವ)

**ಬಲಿಬಲಪ್ರಧ್ವಂಸಿ** – ಬಲಿಯ ಬಲವನ್ನು ನಾಶಮಾಡಿದವನು, ವಾಮನ, ಶ್ರೀಕೃಷ್ಣ (ಇಳಾವಿಖ್ಯಾತನಂ ಕೂರ್ತು ನೋಡಲುಂ ಅಟ್ಟಿಕ್ಕರ್ತು ಅಮರ್ದು ಅಪ್ಪಲುಂ ಪಡೆವೆ ಇಂದು ಎಂಬಂತೆ ಕೆತ್ತಿತ್ತು ದಲ್ ಬಲಗಣ್ಣುಂ ಬಲದೋಳುಂ ಆ ಬಲಿಬಲಪ್ರಧ್ವಂಸಿಗೆ ಅಂದು ಇಟ್ಟಳಂ: **ಪಂಪಭಾ,** ೪. ೩೩);

**ಬಲಿಭುಕ್** – ಬಲಿಪುಷ್ಪ, ಆಹುತಿಯಿತ್ತುದನ್ನು ತಿನ್ನುವುದು, ಕಾಗೆ (ಶುಷ್ಕ ಪತ್ರ ಪಟ ವೀರುತ್ ಘಾಸಕಾರ್ಪಾಸಸಂತ್ರಿಕಜಾಲಂ ಬಲಿಭುಗ್ಬಲಂ ನಡೆದುದು ಅಂಭೋದಾಧ್ವದೊಳ್ ರಾಗದಿಂ: **ಪಂಚತಂತ್ರ,** ೩೭೬)

**ಬಲಿಬಂಧನ** – ಬಲಿಂದಮ, ವಿಷ್ಣುವಿನ ವಾಮನಾವತಾರ (ದುರ್ಯೋಧನನುಮಾಗಳೆ ಬಂದು ಬಲಿಬಂಧನನ ತಲೆದೆಸೆಯೊಳ್ ಕುಳ್ಳಿರೆ: **ಪಂಪಭಾ,** ೯. ೧೦ ವ)

**ಬಲಿಭೋಜನ** – ಕಾಗೆ (ತೀವಿದ ತಾರಗೆ ತುತ್ತುಗಳ್ಗೆ ಮೇಲುರವಣಿಸುತ್ತೆ ಬರ್ಪ ಬಲಿಭೋಜನಜಾಲಮೋ ಮರ್ಬಿನೇರ್ಳಗೆಯೋ: **ರಾಜಶೇವಿ,** ೧೧. ೨೧)

**ಬಲಿಭೋಜಿ** – ಕಾಗೆ (ನಮಗೆ ಅತರ್ಕ್ಯತರಂ ದಿಟವೆಂದು ಪೋದರ್ ಅಂದು ಅನಿಬರುಂ ಒಂದೆ ಬಿಲ್ಲಗಿದು ತತ್‌ಖಚರರರ್ ಬಲಿಭೋಜಿರಾಜಿವೋಲ್: **ಕರ್ಣನೇಮಿ,** ೧೦. ೮೭)

**ಬಲಿಭೋಜ್ಯ** – ಕಾಗೆ (ಬಲಿಭೋಜ್ಯಂಗೆ ನವೀನಚೂತದ ಇನಿವಣ್ ಚಂದ್ರಾಂಶು ಕಳ್ಳಂಗೆ .. .. ಒಪ್ಪುಗೆಯ್ಯದೊಡದೇಂ: **ಉದ್ಭಟಕಾ,** ೧. ೧೮)

**ಬಲಿಮುಖ** – ಕೋತಿ (ಪಲಗೆಗಳೆರಡುಂ ತೊಟ್ಟನೆ ಮರ್ಮಪ್ರದೇಶವಂ ಔಂಕುವುದುಂ ಆ ಬಲಿಮುಖಂ ಕಾಲಮುಖಮಂ ಎಯ್ದಿತ್ತು: **ಪಂಚತಂತ್ರ,** ೮೨ ವ)

**ಬಲಿರಿಪು** – ಬಲಿಂದಮ (ಬಲಿರಿಪು ಬಾಣಾವಳಿಯಂ ಬಲವೈರಿಯ ಬಲದ ಮೇಲೆ ಕಱೆದಂ: **ಜಗನ್ನಾವಿ,** ೧೩. ೭೬)

**ಬಲಿಸ್ನಪನ** – [ಜೈನ] ಜಿನನಿಗೆ ಮೂರೂ ಸಂಜೆಗಳಲ್ಲಿ ಮಾಡುವ ಅಭಿಷೇಕ ಬಲಿಸ್ನಪನಮೆಂಬುದು ಮೂಱುಂ ಸಂಜೆಯೊಳ್ ಮಾಟ್ಟಿ ಜಿನಾಭಿಷೇಕಂ: **ಅಜಿತಪು,** ೧೨. ೧ ವ)

**ಬಲಿಹರಣಂಗೆಯ್** – ಬಲಿಯನ್ನು ಅರ್ಪಿಸು (ವಿಹಂಗಚಯ ಮಾಡುವೆಡೆಯೊಳೆಲ್ಲಿಯುಂ ಬಲೆಯಂ ಪಾಸಿ ಬಲಿಹರಣಂಗೆಯ್ದಂತೆ: **ಪಂಚತಂತ್ರ,** ೪೧೪ ವ)

**ಬಲೀಮುಖ** – ಕೋತಿ (ಮರಣಾಭಿಮುಖನಪ್ಪ ಬಲೀಮುಖನಂ ಕಂಡು ಕರುಣಾಜಲಮುಮಂ ಕಮಂಡಳು ಜಳಮುಮಂ ಮೊಗದೊಳ್ತಳಿಯೆ: **ನೇಮಿನಾಪು,** ೪. ೧೨೬ ವ)

**ಬಲೀವರ್ದ** – ಎತ್ತು (ವಷ ಸೌರಭೇಯ ಗೋಪತಿ ರಷಭ ಬಲೀವರ್ದ ಶಾಕ್ವರೋಕ್ಷಕಕುದ್ವತ್ ವೃಷಭಾಖ್ಯಂ ಅನಡ್ವಾಹಂ ವಷಾಮಂ: **ಅಭಿಧಾವ,** ೧. ೧೫. ೧)

**ಬಲೆ** – ದಾರದಿಂದ ಹೆಣೆದ ಬೇಟೆಯಾಡುವ ಸಾಧನ, ಜಾಲ (ವಿಹಂಗಚಯ ಮಾಡುವೆಡೆಯೊಳೆಲ್ಲಿಯುಂ ಬಲೆಯಂ ಪಾಸಿ ಬಲಿಹರಣಂಗೆಯ್ದಂತೆ: **ಪಂಚತಂತ್ರ,** ೪೧೪ ವ)

**ಬಲ್ಕಣಿ** – ಮಹಾ ಶೂರ, ಪರಿಣತ (ನೀನಿಸಾನುಂ ಬಲ್ಕಣಿಯ ಗಂಡನೆ: **ಹರಿವಂಶ,** ೬. ೫೦ ವ)

**ಬಲ್ಕಣಿತನ** – ಶೌರ್ಯ (ಅಣಿದಾರ್ದು ತೋಟೆ ಬಿಡೆ ಬಲ್ಕಣಿತನದಿಂದ: **ವರ್ಧಮಾಪು,** ೪. ೭೨)

**ಬಲ್ಗರ** – ಬಲಿಷ್ಠ ಗ್ರಹ (ನುಡಿದಪೆಯಿಲ್ಲ ನೀಂ ಮಗಳೆ ನಿನ್ನಿದೇಂ ಪೊಡೆದತ್ತೊ ಬಲ್ಗರಂ: **ಲೀಲಾವತಿ,** ೨. ೧೧೭)

**ಬಲ್ದಡಿಗ** – ಮಹಾ ಬಲಶಾಲಿ (ಉನ್ನತ ಮಸ್ತಕಸ್ಥಳದೊಳ್ ಅಂಬುಗಳ್ ಅಟ್ಟುಡಿದಿರ್ದೊಡಂ ಅತ್ತಮಿತ್ತನೆಟೆತಂದು ಬಲ್ದಡಿಗರ್ ಇಟ್ಟುಟೆನೊಳ್ ಕಿಟೆ ನೊಂದೆಂ ಎನ್ನದೆ: **ಪಂಪಭಾ,** ೧೧. ೩)

**ಬಲ್ಪಳಿ** – [ಬಲ್ಪು+ಅಳಿ] ಶಕ್ತಿಗುಂದು (ದೆಸೆದೆಸೆಗೆ ಕರೆಕರೆದು ಬಾಯಾಟೆ ಬಲ್ಪಳಿದು ನಿಂದಿರಲಾಱದೆ ಕಾಲ್ ಕುಪ್ಪಳಿಸಿ ಭೋಂಕನೆ ಕುಳಿರ್ದು: **ಗಿರಿಜಾಕ,** ೮. ೭೭ ವ)

**ಬಲ್ಪು** – ಬಲಾತ್ಕಾರ; ದೃಢತೆ (ತೊಱೆ ಬಲ್ಪಿಂದೊಯ್ಯದಂತಾಗಿರೆ ನಿಲಿಪುದು ಸನ್ಮಾರ್ಗದಿಂದಂ ಮುನೀಂದ್ರರ್: **ಸಮಯಪ,** ೭. ೩೯)

**ಬಲ್ಪುದೋಱು** – ಬಲ್ಪುದೋಱಿಸು (ಏಱನೆ ಸೂಱೆಗೊಂಡು ನುಡಿವೀ ನುಡಿಯಲ್ಲದೆ ಮತ್ತಂ ಆಸನಂದೋಱುವ ಬಲ್ಪುದೋಱುವ ಎರ್ದೆದೋಱುವ ಕಯ್ಪೆಸರಂಗಳ್ ಎಮ್ಮಂ ಉಂತೆ ಏಱಿವು: **ಪಂಪಭಾ,** ೮. ೨೦)

**ಬಲ್ಮಿಡಿ** – ದೊಡ್ಡ, ಬಲಿತ ಕಾಯಿ (ತೂಗಿರ್ದ ಬಲ್ಮಿಡಿಯ ತೂಗುಂಗೊಂಬಿನೊಳ್ವಾಯ್ದು ಮಂಡಳಿಸುತ್ತಿರ್ಪ ಶುಕಾಳಿ: **ಆದಿಪು,** ೧೧. ೯೬)

**ಬಲ್ಮುಗುಳ್** – ದೊಡ್ಡ ಮೊಗ್ಗು (ಪರೆಯೆ ಪಸುರ್ಪು ಬೆಳ್ಪಡರೆ ಬಲ್ಮುಗುಳೊಳ್ ಪೊರೆದೋಱೆ ತಂಬೆಲರ್: **ಆದಿಪು,** ೧೧. ೧೧೦)

**ಬಲ್ಮೆ** – ಶಕ್ತಿ (ಜೀವಮದೊಂದೆ ದೇಹವೆರಡಿಂವರ್ಗೆ ಎಂಬ ಅಭಿಶಂಕೆಯಂ ಧರಿತ್ರೀವಳಯಕ್ಕೆ ಮಾಡುವುದು ತಮ್ಮೊಳವಂದಿರ ನಲ್ಮೆ ಬಲ್ಮೆ ಶೋಭಾವಹ ಮೂರ್ತಿ ಕೀರ್ತಿ ಸದೃಶಸ್ವರೂಪದಿಂ: **ಆಚವರ್ಧ,** ೩. ೩೫); ಶ್ರೇಷ್ಠತೆ, ಪ್ರೌಢಿಮೆ (ಕೂರಿಸೆ ಗುರುಶುಶ್ರೂಷೆಯೊಳ್ ಆ ರಾಮನಂ ಉಗ್ರ ಪರಶು ಪಾಟಿತರಿಪುವಂಶರಾಮನಂ ಇಷುವಿದ್ಯಾ ಪಾರಗನೆನಿಸಿದುದು ಬಲ್ಮೆ ವೈಕರ್ತನನಾ: **ಪಂಪಭಾ,** ೧. ೧೦೪); ಬಲಾತ್ಕಾರ (ನಿಷ್ಠುರಕೋಪಂ ಪಿಡಿದೊತ್ತಿ ಸೂಳೆಯರೊಳುಗ್ರಾಟೋಪದಿಂ ಬಲ್ಮೆಯಿಂ ನೆರೆವಂ ಭೂಭುಜನಂದನಂ: **ಧರ್ಮಾಮೃ,** ೨. ೨೫)

**ಬಲ್ಮೆಯೋದು** – ಮಹಾವಿದ್ಯೆ, ಕಠಿಣವಿದ್ಯೆ (ಪುಸಿಧರ್ಮದ ಪುಸಿವ ಬಲ್ಮೆಯೋದುಗಳಂ ತಾಂ ಪಸರಿಸುವ ಠಕ್ಕಸಮಯದ ದೆಸೆವೋಗರ್: **ಸಮಯಪ,** ೬. ೭೫)

**ಬಲ್ಮೊಗ** – ಗಂಭೀರ ಮುಖಮುದ್ರೆ (ಮೇಲ್ಮಲೆಗೆಯ್ಯದೆ ಬಲ್ಮೊಗಂ ಮಾಡಿ ತನ್ನಳಿಯಂದಿರ ಮೊಗಮಂ ನೋಡಿ: **ಸುಕುಮಾಚ,** ೨. ೫೨ ವ)

**ಬಲ್ಲಡಗು** – ಒಳ್ಳೆಯ ಮಾಂಸ (ನಿಗ್ಗಡಿ ಜೀವಂ ಪಶುಗಳ ಬಲ್ಲಡಗಂ ಸಲೆ ಪೇಱೆ ತಟ್ಗೆ ನರಕಕ್ಕಟ್ಟುಗಂ: **ಸಮಯಪ,** ೧೪. ೯೮)

**ಬಲ್ಲಡವಿ** – ದಟ್ಟ ಕಾಡು (ಆಗಸಮಂ ನುಂಗಿದುದೆನೆ ಕಟ್ಟಲಿಸಿ ಕಱಂಗಿದ ಬಲ್ಲಡವಿ ಕಣ್ಗೆ ಪಡೆದುದಗುರ್ವಂ: **ಪಂಪರಾ,** ೭. ೧೧೪)

**ಬಲ್ಲಣಿ** – ದೊಡ್ಡ ದಂಡು (ಗಜೆನೆಟಲಿಂ ಜಗಂ ನೆರೆ ತಮೋಮಯಮಾಗಿಸುತುಂ ಕಡಂಗಿ ಬರ್ಪಜೆಕೆಯ ಬಿಲ್ಲ ಬಲ್ಲಣಿಯಂ: **ಶಾಂತೀಶ್ವಪು,** ೩. ೯೭)

**ಬಲ್ಲಹ** – [ವಲ್ಲಭ] ಯಜಮಾನ (ಕೊಡುವ ಬಾಡಕ್ಕಂ ಜೀವಧನಂಗಳ್ಗಂ ಬಿಡುವೆಣ್ಣಂ ಲೆಕ್ಕಮಿಲ್ಲೆನಿಸಿ ರಾಗಂಗಿಡದೆ ಕೊಂಡಾಡಿದಂ ಬಲ್ಲಹನಱಿಯೆ ಗುಣಾರ್ಣವಂ ಕವಿತಾಗುಣಾರ್ಣವನಂ: **ಪಂಪಭಾ,** ೧೪. ೫೫); ಶೂರ (ಇದಾರರಸಂ ಇದಾರ ಬಲ್ಲಹಂ ಇದಾರ ಕರೀಂದ್ರಂ ಇದಾರ ಸಿಂಹವೆಂದು ಇರದಮರ್ದಪ್ಪಿದಳ್: **ಜಗನ್ನಾವಿ,** ೩. ೩೯)

**ಬಲ್ಲಾಳ್** – ಬಲವಾದ ಆಳು, ಶೂರ (ಬಲ್ಲಾಳ್ಗೆ ಬಟ್ಟೆ ಸಯ್ತು ಎಂದು ಎಲ್ಲಿಲ್ಲದ ಸಿತಮತಂಗಳುಂ ಪುಸಿವುದು: **ಸಮಯಪ,** ೧೧. ೧೫೧)

**ಬಲ್ಲಾಳ್ತನ** – ಶೌರ್ಯ (ಮೇಗಿಲ್ಲದ ಬಲ್ಲಾಳ್ತನದಾಗರಮೆನೆ ನೆಗೞ್ದ ತತ್ಪ್ರಥಾನಂದನರುದ್ಯೋಗದ ಚಾಗದ ಯಾಗದ ಭೋಗದ ಮೈಮೆಗೆ ಸುಯೋಧನಂ ಬೆಱಗಾದಂ: **ಪಂಪಭಾ,** ೬. ೬೭); ಬಲಾತ್ಕಾರ (ಬಲ್ಲಾಳ್ತನದೊಳ್ ಎನ್ನಂ ಅನುಭವಿಸಲ್ ಬಂದೊಂ ನೀನುಂ ವರ್ಣಾಶ್ರಮ ಗುರುವೈ ಎನ್ನಂ ಕಾವುದು: **ಶಾಂತಿಪು,** ೬. ೬೫ ವ)

**ಬಲ್ಲಿಗೆ** – ಆನೆಯನ್ನು ಕಟ್ಟಿಹಾಕುವ ಲೋಹದ ಸಂಕೋಲೆ (ಕುಪ್ಪಳಿಸುವಂದುಗೆಯ ತೊಡರ ಬಲ್ಲಿಗೆಯ ಬಲ್ಲುಲಿಗಂ: **ಅನಂತಪು,** ೨. ೨೯ ವ)

**ಬಲ್ಲಿತ್ತಱ ಕೋಡು ಕೂರಿತು** – ಬಲಿಷ್ಠರ ಕೊಂಬು ಹರಿತ, ಬಲಿಷ್ಠರು ಹೇಗೆ ನಡೆದುಕೊಂಡರೂ ಸರಿ (ಇನ್ನಿದು ಬಲ್ಲಿತ್ತರ ಕೋಡು ಕೂರಿತು ಅದನಂತಿಂತಿಂತುನಲ್ ಬರ್ಕುಮೇ: **ಆದಿಪು,** ೧. ೨೫)

**ಬಲ್ಲಿತ್ತು** – ಬಿಗಿಯಾಗಿ, ಬಲವಾಗಿ (ವಿಚಿತ್ರವಸ್ತ್ರಂಗಳಂ .. .. ಕಂಬದೊಳೆ ಬಲ್ಲಿತ್ತುಗಟ್ಟಿ ಬಟೆಯದನಾ ಮಾಡದ ಪೆಱಗಣ್ಗೆಟೆಯಲಿಕ್ಕಿ: **ಸುಕುಮಾಚ,** ೧೧. ೮೩ ವ)

**ಬಲ್ಲಿತ್ತು ಮಾಡು** – ದೃಢಗೊಳಿಸು (ಬಡತಪ್ಪಡಿ ತನ್ನಪ್ಪಾ ಗುಡಿಸಂ ಬಲ್ಲಿತ್ತು ಮಾಟ್ಪೆನೆಲ್ಲಂದದಿಂ ಎಂದೊಡೆ ದೇವನಗಲದಿಪ್ಪಾ ಪಶುವಂ ಕೆಡೆಯಲ್ಕಣಮೀಯದಂತು ರಕ್ಷಿಸವೇಡಾ: **ಸಮಯಪ,** ೯. ೬೧)

**ಬಲ್ಲಿದ** – ಶೂರ (ಬಲ್ಲಿದಂ ಸುರನಾ ಮಾಗಧನಲ್ಲಿ ಭೂಭುಜನ ದೋರ್ದಂಡಕ್ಕೆ ಪುಣ್ಯೋದಯಂ ನೆರಮಕ್ಕೆ: **ಆದಿಪು,** ೧೨. ೧೨೫)

**ಬಲ್ಲುಲಿ** – ಜೋರಾದ ಧ್ವನಿ (ಕೋಗಿಲೆಗಳ್ ಪೊಸಮಾಮರಂಗಳೊಳ್ ಬಲ್ಲುಲಿಯಿಂದೆ ಬಗ್ಗಿಸುತುಮಿಂತಿದೆ ಬಂದುದು ಸುಗ್ಗಿ: **ಕಬ್ಬಿಗಕಾ,** ೫೪); ಹಿರಿಮೆಯ ನುಡಿ (ಪಲವುಂ ನಾಲಗೆಯುಳ್ಳವಂ ಬಗೆವೊಡೆಂದುಂ ಬಣ್ಣಿಸಲ್ಕಾಱನಾ ನೆಲನಂ ಮತ್ತಿನ ಮಾನಿಸರ್ ಪೊಗೞಲೇನಂ ಬಲ್ಲರ್ ಎಂಬೊಂದು ಬಲ್ಲುಲಿಯಂ ನೆಟ್ಟನೆ ತಾಳ್ದು ಕನ್ನಡಮೆನಿಪ್ಪಾ ನಾಡು ಚೆಲ್ವಾಯ್ತು: **ಕಬ್ಬಿಗಕಾ,** ೧೮)

**ಬಲ್ಲೆ** – ಪೊದೆ (ಬಿಗಿದು ಪುಗಲ್ಕರಿದೆಲ್ಲಯುಂ ಒಗೆದ ಮರಂ ಪೊದಱು ಬಳ್ಳಿ ಗಿಡುವೆಂಬಿವಱಿಂ ಮಿಗಿಲೆನಿಪ ಬಲ್ಲೆ ನಗಸಾನುಗಳೊಳಂತಾವ ಮೆಯ್ಯೊಳಂ ಪುದಿದಿರ್ದುಂ: **ಕಾವ್ಯಾವಲೋ,** ೯೭); ಬಳಿಕ (ಮತ್ತೆ ಎಂಬರ್ಥದೊಳ್ ಉಸಿರ್ವರ್ ಬಿತ್ತೆಗರಾ ಬಲ್ಲೆ ಬಟೆಗಳಂ ಕಾಲಾರ್ಥಂ: **ಶಬ್ದಮದ,** ೩೩೪)

**ಬಲ್ವಲ** – ಬಲಿಷ್ಠ ಸೈನ್ಯ (ಗೆಲಲೆನಗೆ ರಿಪುಬಲಂ ಬಲ್ವಲಮಾದೊಡೆ ಸಿಂಹನಾದಮಂ ಮಾಟ್ಪೆಂ: **ಪಂಪರಾ,** ೯. ೯೭); ಬಹು ರಭಸದಿಂದ ಕೂಡಿದುದು (ಬಲ್ವಲನಲ್ಲದೀಯಲೆಯುತಿರ್ದುದು ತೆಂಕಣ ಗಾಳಿ ಕಾಮನೀ ಕೊಲ್ವನೆ ಚಂದ್ರನೀ ಕೊಱೆಯ ತಿಂಬನೆ: **ಲೀಲಾವತಿ,** ೧೦. ೫೩)

**ಬಲ್ವಲಾಗು** – ಹೆಚ್ಚಾಗು (ಚಾಗದ ಬಲ್ವಲಾದ ಪೊನಲಿಂ ಬಳೆದೊಪ್ಪುವ ನಾಳಿಕೇರದಿಂ .. .. ಸೊಗಯಿಸಿರ್ಪುವು: **ಮಲ್ಲಿನಾಪು,** ೨. ೩೫)

**ಬಲ್ವಲಿಕೆ** – [ಬಲ್+ಬಲಿಕೆ] ಹೆಚ್ಚಿನ ಶಕ್ತಿ (ಬಲ್ವಲಿಕೆಯಿಂದಿರ್ಚಿದ ಬಿಲ್ವಡೆ ತನ್ನೆಚ್ಚ ನಿಶಿತಶರಸಂಹತಿಯಿಂದ ಎಲ್ವಡಗಾಯ್ತು ಅನಿತುಮದೆನೆ ಬಿಲ್ವಲ್ಮೆಯ ಮಾತಮಾನುಷಂ ಮಾಧವನಾ: **ಕಾವ್ಯಾವಲೋ,** ೬೯)

**ಬಲ್ವಿಡಿ** – ಗಟ್ಟಿಯಾಗಿ ಹಿಡಿ (ಈಗಲೆ ಬಲ್ವಿಡಿವಿಡಿದು ಶರಣ್ಬುಗು ಜಿನೇಂದ್ರಪದಸರಸಿಜಮಂ: **ಆದಿಪು,** ೨. ೫೮); ಬಲವಾದ ಹಿಡಿತ (ಜಸಮದೊಂದೆ ಕಿಡದು ಅದನಾಮ ಬಲ್ವಿಡಿವಿಡಿದು ನೆಗೞ್ದೆಂ: **ಪಂಪಭಾ,** ೧೨. ೧೮೧)

**ಬಲ್ವೆಣ** – ದೊಡ್ಡ ಹೆಣ (ಪೆಣದಿನಿಗಳ ತಂಡಂ ಬಲ್ವೆಣಗಳನಱಸುತ್ತುಮಲ್ಲಿ ಬರೆಬರೆ: **ಗದಾಯು,** ೪. ೧೫)

**ಬಲ್ವೆಣಸು** – [ಬಲ್+ಪೆಣಸು] ಹೆಚ್ಚಿನ ರಭಸ (ಬಲ್ವೆಣಸಂ ಪೊದಳ್ಚಿ ಪಾಂಗಱಿದು ನಾಣ್ಗಿಡೆ ನೆರೆದೂಡೆಯಂ ಪ್ರಥಮಸಂಗಮದೊಳ್ ಕುವರಂ ಮರುಟ್ಚಿದಂ: **ಚಂದ್ರಪ್ರಪು,** ೬. ೮೩)

**ಬಲ್ಸರ** – ರಭಸವಾದ ಧ್ವನಿ (ತೆಱವುಗುಡದೆ ಸೂಟ್ಟೈಸುವ ನಿಸ್ಸಾಳದ ಬಲ್ಸರಕೆ ದೆಸೆವೆಟ್ಟುಗಳ್ ನಿಬ್ಬರಂಬಿರಿಯೆಯುಂ ಬೇಗದಿಂ ನಡೆದೆತ್ತಿ ಬಂದು ಮಂಜುವೆಟ್ಟಮಂ ಮೂವಳಸಾಗಿ ಮುತ್ತಿದಾಗಳ್: **ಕಬ್ಬಿಗಕಾ,** ೨೨೪ ವ)

**ಬಲ್ಸರಿ** – ಜೋರಾದ ಮಳೆ (ಸರಳ ಪೊದಳ್ದ ಬಲ್ಸರಿಯ ಕೋಳ್ಗಿರಲಾಱದೆ ತೆರಳ್ದು ದುರ್ಧರ ಹಯಂ ಅೞ್ಗೆ ಸಂದಣಿಸಿ ಸಂದಣಿ ಕೋಳ್ಗುದಿಗೊಂಡು: **ಪಂಪಭಾ** ಪರಿಷತ್ತು, ೩. ೭೦)

**ಬವಣಿಗೆ** – ಪ್ರದಕ್ಷಿಣೆ, ಸುತ್ತಾಟ (ಬವಣಿಗೆ ಜಿನೇಂದ್ರ ಪೂಜೋತ್ಸವದೊಳಂ ಒಡ್ಡೋಲಗಂ ಜಿನಾಸ್ಥಾನದೊಳ್ ಆ ದಿವಿಜೇಂದ್ರಂಗಾದುದು ಗೀತವಾದ್ಯನೃತ್ಯಪ್ರಸಂಗಂ ಅಜಿತನ ಕೆಲದೊಳ್: **ಅಜಿತಪು,** ೫. ೮೩)

**ಬವನ** – [ವಮನ] ವಾಂತಿ (ಮತ್ ಚಿತ್ತಂ ಮೃತಮಾಷಮುಖಂ ಮತ್ತೆನಿಸದೆ ಬವನಮೆಯ್ದಿಪವೊಲ್ ಉಂಬವನಂ: **ಲೀಲಾವತಿ,** ೧. ೩೭)

**ಬವರ** – ಕಾಳಗ (ಬವರದೊಳೇಂ ಬಲ್ಲಂ ಕರಂ ಒವಜುಗೆಯಲ್ ಪೆಱರ್ಗೆ ಕರಮೆ ತನಗೆ ಅಱಿಯಂ ಅದೆಂತುವೊ ನುಡಿ ತಪ್ಪದು ಕಮ್ಮಱಿಯೊವಜಂ ಬಿಲ್ಲೊವಜಂ ಎಂಬುದು ಮಾಡುವೆನೇ: **ಪಂಪಭಾ,** ೧೨. ೩); ಜಗಳ (ನಡೆಯಿಂ ನಿಮ್ಮಿಬ್ಬರ ಬವರಮಂ ತಿರ್ದುವಂ ಎಂದು ವಟವೃಕ್ಷದ ಸಮೀಪಕ್ಕೆ ವಂದು: **ಪಂಚತಂತ್ರ,** ೨೪೨ ವ); [ಭ್ರಮರ] ದುಂಬಿ (ಪರಿವೃತರೇಫಲೋಪಕ್ಕೆ: ದ್ರೋಣಿ–ದೋಣಿ .. .. ಭ್ರಮರಂ–ಬವರಂ; **ಶಬ್ದಮದ,** ೨೭೫, ಪ್ರ ೨)

**ಬವರಂಗೆಯ್** – ಹೋರಾಡು (ನೀಮಿರ್ವರುಮಿಲ್ಲಿರ್ದು ಬವರಂಗೆಯಲ್ವೇಡ, ತಕ್ಕರ ಸಮೀಪಕ್ಕೆ ಪೋಗಿ ವಿಚಾರಂಗೆಯ್ದು ಅವರ್ ಪೇೞ್ದಂತೆ ಕೇಳಿಮೆನೆ: **ಪಂಚತಂತ್ರ,** ೩೨೨ ವ)

**ಬವರಿ** – [ಭ್ರಮರಕ] ಬುಗುರಿ (ಮಕ್ಕಳಿಟ್ಟ ಬವರಿಯಂತೆ ಮಾಣದೆ ತಿರುಗುವ ಬಾೞುಮಂ ನಂಬಿ ಮೆಯ್ಯಱಿಯದೆ ಭೋಗಾಕಾಂಕ್ಷೆಯಿಂದಿರ್ದೆನಪ್ಪಡೆ: **ಧರ್ಮಾಮೃ,** ೯. ೧೩ ವ)

**ಬವರಿಗೊಡು** – ವೇಗವಾಗಿ ತಿರುಗು (ಉನ್ಮೀಲಿತಮನಂ ಅಮರೀಸಮಲೀಲಂ ಹರಿ ಬವರಿಗೊಟ್ಟನಾಟ್ದು ಬೆಡಂಗಿಂ: **ಶಾಂತಿಪು,** ೧೦. ೬೫)

**ಬವರಿವರಿ** – ಸುತ್ತುವರಿ (ಕನಲ್ಕೆಯಿಂ ಬಱಿಸಂದು ಬವರಿವರಿದು ತುಱುಗಿ ತುಡುಂಕುವ ಜಾಯಿಲಂಗಳಂ ಲೆಕ್ಕಿಸದೆ: **ಶಬರಶಂ,** ೪. ೧೭ ವ)

**ಬವರಿಸು** – ವ್ಯಾಪಿಸು, ಆವರಿಸು (ವಿಶುದ್ಧಕೀರ್ತಿ ಬವರಿಪ ಕವಿಪರಮೇಷ್ಠಿಗಳ ಕರುಣಂ ಎಮಗಾಭರಣಂ: **ಧರ್ಮಮಧು,** ೧. ೨೪); ಉಂಟಾಗು (ನವವಧುವ ಶಂಕೆಯಂ ಕಳೆವ ವಿದಗ್ಧವಿಟಂಬೊಲಲೆವ ತೆರೆಗಳ್ ಬವರಿಸಿ ಸೋಂಕುತ್ತುಂ: **ಆದಿಪು,** ೧೧. ೧೪೫)

**ಬವಸು** – ಬೇಸಾಯ (ಬವಸೆಂದು ವ್ಯವಸಾಯಂ: **ಶಬ್ದಮದ,** ಪ್ರಸಾ ೧೭೨)

**ಬವಸೆ** – ಆಸೆ (ಮುನಿಚರ್ಯಾಕಾಲಂ ಈ ಧಾರ್ಮಿಕ ಜಿನಗೃಹಮಂ ಪುಣ್ಯಮೆಯ್ತರ್ಪ ಕಾಲಂ ಜಿನದತ್ತಾದೇವಿ ದಾನಂಗುಡುವ ಬವಸೆಯೊಳ್ಗಾಲಂ ಈ ಕಾಲಮಾರುಂ ಮನೆಯೊಳ್ ಸೂನಂಗಳಂ ಸಂಧಿಸಿಡೆ ತಿಮಿರೆಯಾಚಾರದಿಂದೆಂದು ಪೃಥ್ವೀಜನಕೆಲ್ಲಂ ಸಾಱುವಂತೇನೊಗೆದುದು ಮಿಗೆ ಮಧ್ಯಾಹ್ನ ಶಂಖಪ್ರಣಾದಂ: **ನೇಮಿನಾಪು,** ೧. ೭೮) ; [ವ್ಯವಸಾಯ] ಪ್ರಯತ್ನ (ದಾರುಣ ಸಂಸರಣ ವಿಷೋರ್ವೀರುಹಮಂ ಕೀೞ್ವ ಬವಸೆಯಿಂದಿರ್ದಪಂ ಈ ಧೀರಂ: **ಪಂಪರಾ,** ೨. ೧೬)

**ಬವಳಿವರಿ** – ತಿರುಗು, ಸುತ್ತುಹಾಕು (ಕೆನ್ನೆತ್ತರೊಳ್ ಒರ್ವರೊರ್ವರಂ ತಳ್ಕಿಱಿದುಂ ಬೊಬ್ಬಿಱಿದುಂ ತ್ರಿಪುಂಡ್ರಮಿಟ್ಟುಂ ಕೂಕಿಱಿದುಂ ತೇಗಿಯುಂ ಸಸಿನೆವರಿದುಂ [ಡಿಎಲ್ಎನ್ ಒಪ್ಪಿದ ಪಾಠ] ಬವಳಿವರಿದುಂ ಬಾನಂಗುಳಿಗೆವರಿದುಂ ಸೂಟ್ಟರಿದುಂ ಆಡುವಾಗಳ್ ಉಭಯಬಲಂಗಳ್: **ಪಂಪಭಾ,** ೧೨. ೧೫೮ ವ)

**ಬಸ** – [ವಶ] ಅಂಕೆ (ಕಾತರಿಸದೆ ಕೂಡೆ ಲಲ್ಲಯಿಸದೆ ನೋಡ ಬಸಮಾಗಿ ಬಸಮಱಿದು ಬಳಸದೆ ಬಱಿಕೆಯ್ದು ಬದ್ದೆಯನೊಲಿಪನಾವಂ: **ಸುಕುಮಾಚ,** ೭. ೧೩); ಬಲ (ಎನ್ನ ಸುಶರೀರದೊಳಿರ್ದುದು ಜೀವಂ ಈ ಒಡಲ್ ಕರಗಿದುದಿಲ್ಲ ಎನ್ನ ಬಸಮಲ್ತು ಒಡಲ್: **ಆದಿಪು,** ೩. ೧೪)

**ಬಸಂ ಮಾಡು** – ಅಧೀನಪಡಿಸಿಕೊ (ತನ್ನಟ್ಟಿದೋಲೆಗಂ ಇಟ್ಟ ಉಂಡಿಗೆಗಂ ಬಸಂಮಾಡಿದ ನನೆವಿಲ್ಲಬಲ್ಲಹಮ ನಿಮ್ಮಡಿಗಳ ಪೆಸರಂ ಪಲಂಬರಿಂ ಕೇಳ್ದು ಕೆಳೆತನಮಂ ಬಳೆಯಿಸುವಿಚ್ಛೆಯಿಂ ಎನ್ನಂ ಕಳಿಪಿದಂ: **ಕಬ್ಬಿಗಕಾ,** ೧೩೧ ವ)

**ಬಸಂತ** – [ವಸಂತ] ಚೈತ್ರ–ವೈಶಾಖ ತಿಂಗಳುಗಳು (ಬಸಂತದೊಳ್ ಬಸದಿಯ ಬಾಗಿಲಂ ತೆಱೆದ ಮಾಟ್ಕೆಯೊಳಿರ್ದುವು ಬಂದ ಮಾವುಗಳ್: **ಆದಿಪು,** ೧. ೬೬); ಸಂತೋಷದಾಯಕ[ವಾದ] (ಧರೆ ನಿರ್ದಾಯಾದ್ಯಮೆಂದಾ ಸುಯೋಧನನಾಳುತ್ತಿರೆ ಸಂದ ಹಸ್ತಿನಪುರಂ ಸಂತಂ ಬಸಂತಂ ಕರಂ: **ಪಂಪಭಾ,** ೩. ೩೨)

**ಬಸದನ** – ಸಿಂಗಾರ (ಸುರಯಿಯ ಬಿರಿಮಿಗುಲೊಳು ರವದಳಿಪತಿ ಬಿರಿಯಿಸೆ ಬೆರೆಸುವ ಬಸನದ ಬೆಸನಿರೆ: **ನೇಮಿನಾಪು,** ೬. ೮)

**ಬಸದಾಗು** – ತಲ್ಲೀನವಾಗು, ಪರವಶವಾಗು (ಬಸದಾಗೆ ಮರ್ತ್ಯನೇಂ ಸಾಧಿಸನೇ ನಿರ್ವಾಣಪದವಿಯಂ ಕ್ರಮದಿಂದಂ: **ಸಮಯಪ,** ೬. ೫೩)

**ಬಸದಿ** – [ವಸತಿ] [ಜೈನ] ಜಿನಗೃಹ (ಅರಸನುಂ ಕರ್ಮಕ್ಷಯಮುಂ ಅಕ್ಷಯದಾನಮುಂ ಅಕ್ಕೆ ಎಂದು ಪರಸಿ ಪೊಱಮಟ್ಟು ಬಸದಿಗೆ ಪೋಪಾಗಳ್: **ವಡ್ಡಾರಾ,** ಪು. ೭೮, ಸಾ. ೨೬)

**ಬಸದು** – ಶುದ್ಧ (ಆಚಾರಂ ಬಸದಾಗಿ ಸದ್ಗುಣಗಣಂ ಮುಂತಾಗಿ .. .. ಆಚಾರ್ಯಂ ಎಮಗೀವರಕ್ಕೆ ನಯನಿಕ್ಷೇಪ ಪ್ರಮಾಣಂಗಳಂ: **ನೇಮಿನಾಪು,** ೧. ೪)

**ಬಸನ** – [ವ್ಯಸನ] ಅತ್ಯಾಸಕ್ತಿ (ಪುಸಿ ಬಸನಮೆಂದು ಕೆಲಬರ್ ಕುಸಿವರ್ ನಾಲಗೆಯನಿಕ್ಕುಟಿರೊಳ್: **ಆದಿಪು,** ೫. ೮೭); ವ್ಯಾಮೋಹ (ಬಸನದಿಂ ವನಿತೆಯರೊಳ್ ಭೋಗಿಸುವುದು ಸಚ್ಚರಿತಂಗಾಗದು: **ಸಮಯಪ,** ೫. ೭೧)

**ಬಸನಿ** – [ವ್ಯಸನಿ] ಬಸನವುಳ್ಳವನು[ಳು] (ಮತ್ತೊರ್ವಳ್ ಪಸದನದ ಬಸನಿ ನಿಜತರ ಕಿಸಲಯರುಚಿ ಪಸುರೊಳೆಸೆಯೆ ಮಿಡಿಯಂ ಕೊಯ್ದಳ್: **ಆದಿಪು,** ೧೧. ೧೦೧)

**ಬಸನಿಗ** – ಬಸನಿ (ಅಡಗಿನ ಬಸನಿಗನ್ನೆ ತಿನ್ ಪಿಡಿ ಎಂದು ಅವನಡಗನವನ ಬಾಯೊಳ್ ಗಿಡಿವರ್: **ಆದಿಪು,** ೫. ೮೬)

**ಬಸನಿಗತನ** – ಕೆಟ್ಟ ಸ್ವಭಾವ (ನಾಯ್ ಬಸನಿಗತನಮಂ ಕಂಡು ಕಿಸುಗುಳಿಯಂ ಜವನುಂ ಉಯ್ಯಲೇಂಪೇಸಿದನೋ: **ಯಶೋಧಚ,** ೩. ೭೨)

**ಬಸನಿಗೆ** – ಪ್ರಣಯಕಾತರೆ (ಬಸನಿಗೆಯರೊಸಗೆ ಮುತ್ತಿನ ಹಸಿತಂ ಬೆಳ್ವಳಗಿನುರುಳಿ ಬೆಳ್ದಿಂಗಳ ಬೆಳ್ವಸನಮೆನಲೇಂ ಬಿರಿದುದೊ ಪೊಸಮಲ್ಲಿಗೆ; **ಲೀಲಾವತಿ,** ೯. ೧೦೯)

**ಬಸಮಱಿ** – ಶಕ್ತಿಗುಂದು (ಕಾತರಿಸದೆ ಕೂಡೆ ಲಲ್ಲಯಿಸದೆ ನೋಡ ಬಸಮಾಗಿ ಬಸಮಱಿದು ಬಳಸದೆ ಬಱಿಕೆಯ್ದು ಬದ್ದೆಯನೊಲಿಪನಾವಂ: **ಸುಕುಮಾಚ,** ೭. ೧೩) ಮೂರ್ಛೆ ಹೋಗು (ಬಸಮಱಿವಿನೆಗಂ ಮನಸಿಜನಿಸೆ ನಿನ್ನ ಕೆಲಕ್ಕೆ ವಂದೊಡೆನ್ನಂ ಬಿಡೆ ಬಗ್ಗಿಸೆ ಮಧುವಿಕಾರಿ ಕೋಗಿಲೆ ಕಿಸುಗಣ್ಣುವೆ ನೀಂ: **ಮಲ್ಲಿನಾಪು,** ३. ३२)

**ಬಸಮಾಡು** – ವಶಮಾಡು (ಸಮವಾಯಮಪ್ಪುದಲ್ತೆಂದು ಬಸಮಾಡಿ ದೋಷವಿರಹಿತನಾಪ್ತಂ: **ಆದಿಪು,** ೫. ೫೪)

**ಬಸಮುಱು** – ಸ್ವಾಧೀನ ತಪ್ಪು (ಬಸಮುತ್ತು ಮುಚ್ಚೆ ಕಣ್ಣಾಲಿಗಳಿಚ್ಚೆಗೆಟ್ಟು ಕಪಿಕೇತನನಾಗಳೆ ಮುಚ್ಚೆವೋಗೆ: **ಪಂಪರಾ,** ೧೩. ೧೪೪)

**ಬಸಯಿಸು** – ಸ್ವಾಧೀನಪಡಿಸಿಕೊ (ಬಸಯಿಸಲ್ ಇಂಬುಕೆಯಲ್ ಒಳಪೊಯ್ಸಲ್ ಒಡಂಬಡಿಸಲ್ ಪ್ರಮೋದಮಂ ಪೊಸಯಿಸಲ್ ಆಱಿಸಲ್ ನೆರೆದುಮೊಲ್ಲದೆ ಚಿತ್ತಂ ಉದಾತ್ತಚಿತ್ತೆಯಾ: **ಶಾಂತಿಪು,** ೮. ೧೦೩)

**ಬಸಮಾಗು** – ವಶವಾಗು, ಅಧೀನವಾಗು (ದುರ್ವ್ಯಸನಕ್ಕೆ ಪುಣ್ಯಪುರುಷರ್ ಬಸಮಾಗಿ ಮನುಷ್ಯಭವಮಂ ಉಱಿವುದು ಚದುರೇ: **ಸಮಯಪ,** ೬. ೬೩)

**ಬಸವಱಿ** – ಶಕ್ತಿಗುಂದು (ಬಸವಱಿದು ಕಣ್ಣ ನೀರಿಂ ದೆಸೆಗೆಟ್ಟು ಎಲೆ ಮಗನೆ ನಿನ್ನನಾರ್ ಕಾಯಲ್ಕೆ ಸಮರ್ಥರ್ ಎನುತ್ತ: **ಕಾದಂಸಂ.** ೧. ೫೨)

**ಬಸವಾಗು** – ಬಸಮಾಗು (ಪಸರಿಸಿ ಪೊಸಯಿಸಿದ ಪೊಸಸುಸಿಲ ಮಸಕದ ಬಸದೊಳೆ ಬಸವಾಗಿಯುಂ ಅಸಿಯಳೆನಗೆ ಅಸವಸದೊಳೆ ಬೆಸೆದು ಪೋಗಿ: **ಆದಿಪು,** ೪. ೧೨ ವ)

**ಬಸಿ** – ಒಸರು, ಸುರಿ (ಬೆಚ್ಚನೆ ಬಸಿವಿಂದುಕಾಂತ ಕರಸಂಕುಳಮೊಯ್ಯನವುಂಕಿ ಸೋಂಕೆ ಸೋಂಕಿನೊಳ್

ಒಱೆವಿಂದುಕಾಂತಮಣಿಪುತ್ರಿಕೆಯಂದದಿಂ ಒಪ್ಪಿ ತೋಱಿದಳ್: **ಆದಿಪು,** ೪. ೪೯) ಹರಿತಗೊಳಿಸು (ಆತನಂ ಶ್ಮಶಾನಕ್ಕೆಱೆದುಕೊಂಡು ಪೋಗಿ ದರ್ಕ್ಕಂ ಬಸಿದು ಸೂಲದೊಳಿಕ್ಕು: **ವಡ್ಡಾರಾ,** ಪು ೧೨೪, ಸಾ ೨೯); ಗೂಟ (ಪೊಱೆಸಿದ ಗಾಲಿಯೊಳಂ ನಿಱಿಸಿದ ಬಸಿಯೊಳಂ ಪೂಸಿದ ಡೆಂಕಣಿಯೊಳಂ .. .. ಕೈಗೆಯ್ದು: **ಅನಂತಪು,** ೧೦. ೮೨ ವ)

**ಬಸಿಯ** – ಕ್ರೂರ ವ್ಯಕ್ತಿ (ಅಕಾರಾದೇಶಕ್ಕೆ: ಪಿರಿಯಂ ಕಿಱಿಯಂ ಬಸಿಯಂ ಬಿಸಿಯಂ: **ಶಬ್ದಮದ,** ೧೬೩ ಪ್ರ ૩)

**ಬಸಿರ್ಪೂಸು** – ಬಸಿರಿನಲ್ಲೇ ಓಲೈಸು (ಆಕೆಯುಂ ನಿನಗೆ ಬಸಿರ್ಪೂಸಿ ಪೆತ್ತು ನಿನ್ನಂ ಕಾಣದೀಗಳ್ .. .. ಸತ್ಯಭಾಮೆಯೆಂಬಳ್ ಆಕೆಯ ಮಗಂ ಭಾನುಕುಮಾರಂಗೆ ಕುಡಲೆಂದು .. .. ಒಯ್ದಪ್ಪರ್: **ಹರಿವಂಶ,** ೯. ೫ ವ)

**ಬಸಿರ್ಪೆಂಡತಿ** – ಬಸಿರಿ ಹೆಂಗಸು (ಬಸಿರ್ಪೆಂಡತಿ ವೇಳಾಸ್ವಾಮಿನಿಯೆಂಬೊಳ್ ಕರ್ದಿಂಗಳಿರುಳೊಳ್ ಕಟ್ಟಿಲೆಯೊಳ್ ನಿರ್ಗ್ರಂಥಮಪ್ಪ ರೂಪಂ ಕಂಡು ಬೆರ್ಚಿದೊಡೆ: **ವಡ್ಡಾರಾ,** ಪು ೯೦, ಸಾ ೧೧)

**ಬಸಿಱ್** – ಹೊಟ್ಟೆ (ಈ ಖಳ ದುಶ್ಶಾಸನನಂ ಪೊರಳ್ಚಿ ಬಸಿಱಂ ಪೋೞ್ದಿಕ್ಕಿ ಬಂಬಲ್ಗರುಳುಗಳಂ ಆನಲ್ತೆ ವಿಳಾಸದಿಂ ಮುಡಿಯಿಪೆಂ ಪಂಕೇಜಪತ್ರೇಕ್ಷಣೇ: **ಪಂಪಭಾ,** ೭. ೧೨); ಗರ್ಭಕೋಶ (ಖಳನಿಲ್ಲೀ ವಸುಮತಿಯೊಳ್ ಗಾಂಧರಿಯ ಬಸಿಱಂ ಮೇಣ್ಮಗುೞೆ ಪೋಗಿ ಪೊಕ್ಕಿರ್ದಪನೋ: **ಗದಾಯು,** ೬. ೨೧)

**ಬಸಿಱಂಪೊಸೆ** – ಹೊಟ್ಟೆ ಹೊಸೆ, ಹೊಟ್ಟೆಕಿಚ್ಚು ಪಡು (ಮುನ್ನಂ ಕುಂತಿಯೆ ಪಡೆದಳ್ ಗರ್ಭದ ಚಿಹ್ನೆಯದಿನ್ನೇವುದೆಂದು ಬಸಿಱಂ ಪೊಸೆದಳ್: **ಪಂಪಭಾ,** ೧. ೧೨೯)

**ಬಸಿಱ ಕುತ್ತ** – ಹೊಟ್ಟೆಯ ಬೇನೆ (ಗ್ರಹದಂತೆ ಪೀಡೆಯಂ ಮಾೞ್ಪುದು ಬಸಿಱ ಕುತ್ತದಂತೆ ನಮೆಯಿಸುವುದು: **ಧರ್ಮಾಮೃ,** ೪. ೧೦೬ ವ)

**ಬಸಿಱಾರ್** – ಹೊಟ್ಟೆ ತುಂಬು (ಪಾಞ್ಚಾಲರಾತಿಯ ಮೆಯ್ಯ ನೆತ್ತರಂ ಕಂಡು ಸೂೞೆಸಿನೊಳಿವನ ನೆತ್ತರ್ಕೊಡಂ ತನಗೆ ಬಸಿಱಾರೆ ಕುಡಿಯಲುಂ ದ್ರೌಪದಿಯ ಕೇಶಪಾಶಮಂ ತೊಯ್ದು ಮುಡಿಯಲುಂ ನೆಱೆಯದು: **ಪಂಪಭಾ,** ೧೨. ೧೪೮ ವ)

**ಬಸಿಱುರ್ಚು** – ಮಲವಿಸರ್ಜನೆಯಾಗು (ತವೆ ಕಿಱುಕುಸಾಲೆ ನಿಜಸ್ಯೆಂಧವ ಬಿಲ್ವಂ ಲೊಕ್ಕಿಯಾಲಮೊಟ್ಟೊಟ್ಟೆ ಸರೋಜವಸಲೆ ಬಸಿರಿಯಾವರೆಯೆಂಬಿವು ಮಾಣಿಸುಗಿರದೆ ಪಶುಗೆ ಬಸಿಱುರ್ಚುವುದಂ: **ಲೋಕೋಪಕಾ,** ೯. ೨೦೩)

**ಬಸಿಱೊಡೆ** – ಗರ್ಭಪಾತವಾಗು (ಸುಣ್ಣದಿಂ ಅರಿಷಿನದಿಂ ಕೆಂಪಪ್ಪುದು ಎಲೆಯಡಿಕೆ ಸುಣ್ಣದಿಂ ಪಲ್ ಕಱೆಯಪ್ಪುದು ಅಣಿಲೆ ತಿಗಡೆಯಿಂ ಬಸಿಱೊಡೆವುದು: **ಧರ್ಮಾಮೃ,** ೯. ೭૩ ವ)

**ಬಸುಱು** – ಹೊಟ್ಟೆಪಾಡು (ಬಂದ ಬಸುಱುಮಂ ವೃಂದಮುಮಂ ಪೊರೆಯಲ್ಕೆ ಮಱುಗುವಾತಂ: **ಸಮಯಪ,** ೫. ೧೪೮)

**ಬಸೆ** – ಹೆಣ್ಣು ಆನೆ (ಬಾಲೇಭಂ ಬಸೆಯ ಪೆಱಗೆ ಬಂದುದು ಕೊಳದಿಂ: **ಲೀಲಾವತಿ,** ೮. ೧೮); ಗೊಡ್ಡು ಹಸು, ಕೊಬ್ಬು (ವತ್ವಕ್ಕೆ ಬಕಾರಂ: ಬಸೆಯೆಂದು ನೆಣಮುಂ ಹೆಣ್ಣಾನೆಯುಂ ಗೊಡ್ಡಾಕಳುಂ ಅಕ್ಕುಂ: **ಶಬ್ದಮದ,** ೨೭೨ ಪ್ರ)

**ಬಸ್ತಕ** – ಹೋತ (ಮತ್ತದೊಂದು ಬಸ್ತಕಂ ಅದನಿಱೆಯಲ್ ಸತ್ತು ಪೊಕ್ಕುದಜೆಯೊಳ್ ಜೀವಂ: **ಯಶೋಧಚ,** ૩. ೫೪)

**ಬಹಳ** – ಅಧಿಕ (ಅತಿ ಬಹಳ ದಹ್ಯಮಾನ ಕಾಳಾಗರು ಧೂಪಧೂಮಯಷ್ಟಿಘಟಿತ .. .. ಧೂಪಂಗಳಿಂದಂ: **ಆದಿಪು,** ೨. ૩೨ ವ)

**ಬಹಿಃಕರಿಸು** – ವ್ಯಕ್ತಮಾಡು (ಅಂತಃಕರಣದೊಳಾಂತ ಅಮಳವೃತ್ತಿಯಂ ಕೂಡೆ ಬಹಿಃಕರಿಪಂತೆ: **ಜಗನ್ನಾವಿ,** ೧೨. ೯೦); ಹೊರಹಾಕು (ಇರಿಸಿ ತಮೋಗುಣಮಂ ಮಿಕ್ಕ ರಜಸ್ಸತ್ವಂಗಳಂ ಬಹಿಃಕರಿಸುವವೊಲ್ ಅರುಣಾಧರಪಾಂಡುರ ದಶನರುಚಿಗಳಾನನದಿನೊಗೆಯೆ ಲಾಂಗಲಿ ನುಡಿದಂ: **ಜಗನ್ನಾವಿ,** ೧೫. ೮೦)

**ಬಹಿಃಪುರ** – ಊರ ಹೊರವಲಯ (ಬಹಿಃಪುರ ಕೇಳೀವನದೊಡವು ರತಿಯ ಪೊಸಜೌನದೊಡವೆನೆ ನೆಱೆಯೆ: **ಪಂಪರಾ,** ೧. ೧೧೧)

**ಬಹಿತ್ರ** – [ಭ್ಯಿತ್ರ] ಹಡಗು (ಅಂತು ಬಿಣ್ಣುಂಡಿಕ್ಕಿದ ಬಹಿತ್ರದಂತೆ ಅಲ್ಲಿಂ ತಳರದೆ ನಿಂದ ತನ್ನ ರಥಮಂ ಕಂಡು: **ಆದಿಪು,** ೧೨. ೮೬); ತೆಪ್ಪ (ಅತ್ಯಂತ ನಿರ್ಮಳ ಸನ್ಮಾರ್ಗ ಬಹಿತ್ರಂ ಇಲ್ಲಿ ದೊರೆಕೊಂಡತ್ತು: **ಸುಕುಮಾಚ,** ૩. ೪೧)

**ಬಹಿರಿಗೆ** – ಬಯಲು ಪ್ರದೇಶ (ಪೊೞಲನರ್ತಿಯೊಳ್ ನೋಡುತ್ತಂ ಬರೆ ಪುರ ಬಹಿರಿಗೆಯೊಳ್ ಬಿಟ್ಟಿರ್ದ ಪಿರಿಯ ಬೀಡಂ ಕಂಡು: **ಹರಿವಂಶ,** ೯. ೫ ವ)

**ಬಹಿರುದ್ಯಾನ** – ಊರ ಹೊರಗಿನ ಉದ್ಯಾನವನ (ಬಹಿರುದ್ಯಾನಾಂತರದೊಳ್ ಸಹಸೋದಿತ ಮತ್ತಕೋಕಿಲೋಚ್ಚೈರ್ಧ್ವಾನಂ ಮುಹುರಾಕರ್ಣಿಸೆ: **ಕವಿರಾಮಾ,** ೧. ೫೬)

**ಬಹಿರುಪವನ** – ಬಹಿರುದ್ಯಾನ (ಕುಸುಮಿತ ಬಹಿರುಪವನ ಭೂಪ್ರಸರದೊಳಿರ್ದ ಅಮಿತಕೀರ್ತಿಕೇವಳಿಯಂ ಬಂದಿಸಿ ಮತ್ ಭವಪದ್ಧತಿಯಂ ಬೆಸಗೊಳೆ ಬೆಸಸಿದನಘಾರಿ ದಿವ್ಯಧ್ವನಿಯಿಂ: **ಶಾಂತಿಪು,** ೬. ೮೫)

**ಬಹಿರ್ಮಂಡಳ** – ಶತ್ರುರಾಜ್ಯ (ನಿನಗರಸ ಬಹಿರ್ಮಂಡಳಮನೆ ಸಮಱಲ್ಕಿನಿತು ಬರಿಸಮುಂ ಪೋದುವು: **ಆದಿಪು,** ೧೪. ೧೫)

**ಬಹಿರ್ಯಾನ** – [ಜೈನ] ಒಂದು ಗರ್ಭಾನ್ವಯಕ್ರಿಯೆ, ಮಗುವನ್ನು ಬಾಣಂತಿಮನೆಯಿಂದ ಹೊರಗೆ ಒಯ್ಯುವುದು (ನಾಮಕರ್ಮ ಬಹಿರ್ಯಾನ .. .. ತ್ಯಾಗ ನಿವೃತ್ತಿಯೆಂಬಯ್ವತ್ತಮೂಱು .. .. ಗರ್ಭಾನ್ವಯಕ್ರಿಯೆಗಳುಂ: **ಆದಿಪು,** ೧೫. ೧೫ ವ), ನೋಡಿ, 'ಗರ್ಭಾನ್ವಯಕ್ರಿಯೆ'

**ಬಹುರೂಪಿಣಿ** – [ಜೈನ] ಬಯಸಿದ ರೂಪ ಧರಿಸುವ ಒಂದು ಮಾಯಾವಿದ್ಯೆ (ತಳದಿಂ ಕಳಶಂಬರಂ ಒಂದಳವಿಯ ರೂವಾರಮೆನಿಸಿ ಬಹುರೂಪಿಣಿಯೊಲ್ವೊಳಗೆಗಳಿಂ ಜ್ಯೋತಿರ್ಮಂಡಳದವೊಲ್ ಒಪ್ಪುವುವು ನಾಡೆಯುಂ ಕರುಮಾಡಂ: **ಅಜಿತಪು,** ೨. ೨೦)

**ಬಹುಲಿಮ** – ಸಮೃದ್ಧವಾದ (ಚಿತ್ತಕ್ಕೆ ಮಾಡಿತ್ತೊಲವಂ ತಾರುಣ್ಯಮಾಸಾಧಿತತಬಹುಲಿಮಲಾವಣ್ಯಶೋಭಾವರೇಣ್ಯಂ: **ಚಂದ್ರಪ್ರಪು,** ೪. ೬)

**ಬಹುಶ್ರುತ** – ನಾನಾ ಶಾಸ್ತ್ರಗಳನ್ನು ತಿಳಿದ ಪಂಡಿತ (ಪರಿಮೃತನಾದನೆ ವೀಸ್ರುತಬಹುಶ್ರುತೋದಾತ್ತಯಶಂ: ಸುಕುಮಾಚ, ೨. ೧೨)

**ಬಹುಳ** – ತಿಂಗಳಿನ ಎರಡನೆಯ ಅರ್ಧಭಾಗ (ವಿತತಾಷಾಢದ ಬಹುಳ ಪ್ರತಿಪದ್ದಿನದಂದು ಕೀರ್ತಿ ನೆಗೞ್ದಿರೆ: **ಆದಿಪು,** ೮.

೬೬); ಆಧಿಕ್ಯ (ಬಹುಳಂ ಪುರು ಭೂರಿ ಸುಪ್ರಭೂತಂ: **ಅಭಿಧಾವ,** ೨. ೧. ೫೫)

**ಬಹುಳತೆ** – ಆಧಿಕ್ಯ (ಮುತ್ತಿನ ಮಕುಟಮಿದೆನಿಸಲಾರ್ತುದು ಅತಿಬಹುಳತೆಯಿಂ: **ಅಜಿತಪು,** ೪. ೫೮)

**ಬಹುಳಾಳಾಪ** – ಅತಿ ಮಾತು (ಬಹುಳಾಳಾಪದೊಳೇಂ .. .. ಮಹನೀಯಂ ಅನ್ನದಾನದ ಮಹಿಮೆ: **ಸಮಯಪ,** ೭. ೫೭)

**ಬಹ್ವಾರಂಭಪರಿಗ್ರಹ** – [ಜೈನ] ಪಂಚಮಹಾಪಾತಕಗಳಲ್ಲಿ ಒಂದು, ತುಂಬ ಪ್ರಯತ್ನದಿಂದ ಹಣ ಸಂಪಾದಿಸುವುದು (ಬಹ್ವಾರಂಭಪರಿಗ್ರಹವಿಹ್ವಳಂ ಇಂದ್ರಿಯಸುಖಾರ್ಥಿ ಸಂಸಾರಗುಹಾಗಹ್ವರದೊಳಗಿರುಳಿನ ಚಕ್ರಹ್ವದವೊಲ್ ಮಱುಗದೇಂ ಸುಖಂಬಡೆದಪನೇ: **ಆದಿಪು,** ೩. ೬೮)

**ಬಳ** – [ಬಲ] ಸೈನ್ಯ (ಪರಭೃತದ ಪುರುಳಿಯ ಕಳಕಳಂ ಅಂಗಜನ ಬಳದ ಕಳಕಳಂ ಎನಿಕುಂ: **ಲೀಲಾವತಿ,** ೬. ೧೨೮); ಬಲರಾಮ (ಕೃಷ್ಣ ಬಳರ್ ಮಳಯಜ ಮೃಗಮದ ಸುಗಂಧದಣ್ಪಂ ತಳೆದರ್: **ಜಗನ್ನಾವಿ,** ೬. ೨೧)

**ಬಳಗ** – ಗುಂಪು (ಅಟೆದಟ್ಟಿದ ಕರಿಘಟೆಗಳ ಬಳಗದಿಂ ಉಚ್ಚಳಿಸಿ ಮೊರೆವ ನೆತ್ತರ ತೆರೆಗಳ್: **ಪಂಪಭಾ,** ೫. ೩೨); ರಾಶಿ (ಎಳದಳಿರ ಬಳಗದೊಳ್ ಪೊರಳ್ದು ಪೊರಳ್ದು: **ಗಿರಿಜಾಕ,** ೩. ೧೦೩ ವ); ದಟ್ಟತೆ (ಕಾದಲರ ಪುರುಡಿನೆಸಕದೊಡನೆ ಇರುಳ ಬಳಗಂ ಬಡಬಡಾಗೆಯುಂ: **ಚಂದ್ರಪ್ರಪು,** ೭. ೬೨ ವ)

**ಬಳಜ** – ಬಾಗಿಲು ತಿವುರಿ ಗುಡಿ ಗೂಡಾರಂ ಝುಂಪಾಳಿ ಚೌಕಿಗೆ ಜಂಪೆ ಮಂಡವಿಗೆ ಬಳಜಂ ಬಾಗಿಲ್ವಾಡಂ ಬನಂ ಮೊಗಸಾಲೆಯೆಂಬಿದಱ ಪಸುರಿಂ .. .. ಮಾಡಿತ್ತು ಕಣ್ಗನುರಾಗಮಮಂ: **ಅನಂತಪು,** ೧೩. ೭೩)

**ಬಳಪ** – ಬರೆಯುವ ಮೃದುವಾದ ಕಲ್ಲು (ಪಡೆದ ಧನಕ್ಕೆ ಲೆಕ್ಕಮಿಡಲ್ ಇಂದ್ರನಗಂ ಬಳಪಂ ಧರಾತಳಂ ಕಡಿತಂ ಅಹೀಶ್ವರಂ ತಗುಳೆ ಬಾಚಿಸುವೊಂ ಸುರಮಂತ್ರಿ ಕೂಡುವೊಂ: **ಶಾಂತಿಪು,** ೯. ೧೪೭)

**ಬಳಪದೋಲೆ** – ಬಳಪದ ಕಲ್ಲಿನಿಂದ ಮಾಡಿದ ಕಿವಿಯ ಓಲೆ (ಚಂದನಮಂ ತೊಡೆದು ಜಾದಿಯಂ ಮುಡಿದು ಮುತ್ತಂ ತೊಟ್ಟು ಬೆಳ್ಮಡಿಯುಟ್ಟು ಬಳಪದೋಲೆಯನಿಟ್ಟು: **ಲೀಲಾವತಿ,** ೭. ೫೩ ವ)

**ಬಳಪಂಗೊಳ್** – ಬರೆಯಲು ತೊಡಗು (ಸವಣಂ ಬಳಪಂಗೊಳೆ ಗಾಂಡಿವಿ ಬಿಲ್ಗೊಳೆ ಬಲವಿರೋಧಿ ವಜ್ರಂಗೊಳೆ ದಾನವರಿಪು ಚಕ್ರಂಗೊಳೆ ಕೌರವಾರಿ ಗದೆಗೊಳೆ ಪೊಣರ್ಕೆಗಾವಂ ನಿಲ್ವಂ: **ಶಬ್ದಮದ,** ೧೭೮, ಪ್ರ ೮)

**ಬಳಪಂದೊಡೆ** – ಬಳಪದ ಕಲ್ಲಿನಿಂದ ಬಿಳಿ ಬಣ್ಣ ಹಾಕು (ಕತ್ತರಸಿದ ಗಡ್ಡಂ ಇಟ್ಟ ತಿಲಕಂ ಬಳಪಂದೊಡೆದ ಓಲೆ: **ನೇಮಿನಾಪು,** ೫. ೩೦)

**ಬಳಬಳಿಕೆ** – ಒಂದು ಭಂಗಿ (ವಚನ ಚಮತ್ಕಾರಮಂ ಬಳಬಳಿಕೆಯ ಚಂಚುರತೆಯಂ ಹಸ್ತಚಾರಣದ ವಿಸ್ತಾರಮಂ .. .. ತೋಱುತ್ತುಮಿರೆ: **ಕುಸುಮಾಕಾ,** ೭. ೬೩ ವ)

**ಬಳಮರ್ದು** – ವೀರ್ಯಪುಷ್ಟಿಯ ಔಷಧ (ಬಳಮರ್ದಂ ಅಂಗಜಂಗರೆದವೊಲ್ ಈಳೆಸಾಂದರೆವರ್ ಇಂಬಳವಟ್ಟರೆ ಘಟ್ಟಿವಳ್ತಿಯರ್: **ಮಲ್ಲಿನಾಪು,** ೨. ೪೭)

**ಬಳಮರ್ದುಕಾಱ** – ವೀರ್ಯಪುಷ್ಟಿಕರ ಮದ್ದನ್ನು ತಯಾರಿಸುವವನು (ಕಾಮದೇವನೆಂಬ ಬಳಮರ್ದುಕಾಱನ ಮಾಡಿದ ಮರ್ದಿನಂತೆ ಬಳೆದು ದಳಂಬಡೆದು: **ಪಂಪಭಾ,** ೪. ೮೭ ವ)

**ಬಳರಿ** – [ಭಟ್ಟಾರಿಕಾ] ಮಹಾಕಾಳಿ (ಎಕ್ಕಲದೇವಿಗಂ ಆ ಮಾಲಕ್ಕನಿಗಂ ಬನದ ಬಳರಿಗಂ ಮೈಲಾರಂಗೆ ಅಳ್ಕದೆ ಜಾತ್ರೆಯ ಮಾಟ್ಪಂ .. .. ಆತಂ ಕೌಳಂ: **ಸಮಯಪ,** ೪. ೧೨೩)

**ಬಳರಿತನ** – ಆ ಉಗ್ರದೇವತೆಯ ಸ್ವಭಾವ (ಬಳರಿತನಮಂ ಬಿಟ್ಟು ಆ ದೇವಿ ನೆಗಟ್ದಣ್ಣಿಗೇಜೆಯೊಳ್ ಶ್ರಾವಕಿಯೆನೆ ರೂಢಿವೆತ್ತು ದೇವತೆಯಾದಳ್: **ಸಮಯಪ,** ೨. ೭೦)

**ಬಳರಿಪುಶರಾಸನ** – ಕಾಮನಬಿಲ್ಲು (ಜಲಬುದ್ಬುದ ಚಲ ವಿದ್ಯುತ್ ವಿಲಸನ ಬಳರಿಪುಶರಾಸನಂಗಳ್ ನಿರುತಂ ಬಲ ವಿಭವ ರೂಪ ಯೌವನ ವಿಲಾಸವಿಲಯಕ್ಕಿವಲ್ತೆ ದೃಷ್ಟಾಂತಂಗಳ್: **ಅಜಿತಪು,** ೨. ೧೦೮)

**ಬಳಲ್ಮೊಗ** – ದಣಿದ[ವನ] ಮುಖ (ಎಸೆವ ಬಳಲ್ಮೊಗಂ ಉಷ್ಣಮನುಸಿರ್ವುಸಿರ್ ಅನುರಾಗವೇಱುವಕ್ಷಿದ್ವಿತಯಂ .. .. ಯನು ಮನೋಹರಂ ಮಾನಿನಿಯಾ: **ಗಿರಿಜಾಕ,** ೨. ೨೧)

**ಬಳವತ್** – ಬಲಿಷ್ಠ, ಪ್ರಬಲವಾದ [ಮನಂ ಆರಾಧಿತ ಹೋಮಭೂಮಿ ಪಶುಗಳ್ ಕಾಮಾತುರರ್ ಬಂದ ಮಾವನಿತುಂ ಸ್ಥಾಪಿತ ಯೂಪಕೋಟಿ ಬಳವತ್ಕಾಮಾಗ್ನಿ ಹೋಮಾಗ್ನಿ ಚಂದನ ಕರ್ಪೂರ ಮೃಣಾಳನಾಳಮೆ ಪೊದಳ್ದ ಇಧ್ಮಂಗಳ್ ಇಂತಾಗೆ ತಾನಿನಿತುಂ ಕಾಮನ ಬೇಳ್ವೆಯೆಂದು ಸುಗಿದಳ್ ತನ್ವಂಗಿ ಬೆಳ್ದಿಂಗಳೊಳ್; **ಪಂಪಭಾ,** ೪. ೫೯)

**ಬಳವಳಿಸು** – ಆಯಾಸಪಡು (ಬಳವಳಿಸುಮಿರ್ದುದು ಸಮಂತು ಮೃಗೌಘಮದಾ ನಿದಾಘದೊಳ್: **ಕುಸುಮಾಕಾ,** ೮. ೧೨೬)

**ಬಳವಿ** – ಬೆಳವಣಿಗೆ, ವಿಸ್ತಾರ (ತಿಂಗಳ ಬಳವಿಯಂ ಉಚ್ಚತರಂಗಾಂಬುಧಿ ಬಳೆವ ತೆಱದಿಂ ಅನುದಿನದಿಂದಂ ತಿಂಗಳ ಬಳವಿಯಿನಂತಾ ಶೃಂಗಾರಾಂಬುಧಿಗೆ ಗರ್ಭವೇಂ ಬಳೆದತ್ತೋ: **ಸುಕುಮಾಚ,** ೧೦. ೧೩)

**ಬಳವಿಗೆ** – ಬೆಳವಣಿಗೆ (ನಿಜಾಂಗದೊಂದು ಬಳವಿಗೆಯೊಳ್ ತಾಂ ನಿಮಿರ್ದಿರೆ ಕುಸುಮಾವಳಿಯಷ್ಟಮ ವರ್ಷೋಚಿತ ವಯೋವಿರಾಜಿತೆಯಾದಳ್: **ಕುಸುಮಾಕಾ,** ೧೨. ೩೭)

**ಬಳವಿರೋಧಿ** – ಇಂದ್ರ (ಬಟೆಯಂ ಆ ಬಳವಿರೋಧಿ ಪೂಜಿತನ ಪದಪಯೋಜಂಗಳಿಗೆ ಬೇಱೆ ಬೇಱೆ ಪೆಱೆನೊಸಲಿನೆಱಗಿಸಿ: **ನೇಮಿನಾಪು,** ೨. ೯ ವ)

**ಬಳವಿವಡೆ** – ಬೆಳವಣಿಗೆ ಹೊಂದು, ಹೆಚ್ಚು (ಅಳವಿಗಟೆದಳಿಂಪುಂ ಬಳವಿಗವಡೆದಟ್ಟಱುಮಂ ಓರೋರ್ವರೊಳ್ ನೆಱೆದು: **ಆದಿಪು,** ೪. ೫೨ ವ)

**ಬಳಸಿಗ** – ಕುಪ್ಪಸಿಗ, ಯುದ್ಧಕವಚ ತೊಟ್ಟವನು; ಸುತ್ತುವರಿದ (ಘನದೀರ್ಘ ಸುಕೋಮಳವಂಶ ವಂಶದಿಂ ಬಳಸಿಗಮೆತ್ತಲುಂ ತುಱುಗಿ ಪರ್ವಿಗುರ್ವಿನ ಬಿಂಬಬಿಂಬದಿಂ: **ಗಿರಿಜಾಕ,** ೧. ೫೨)

**ಬಳಸು** – ಸುತ್ತುಗಟ್ಟು (ಬಳಸುವ ಕಣ್ ಮಿಳಿರ್ವ ಕುರುಳ್ ನಳಿಮೊಗಮೆನೆ ಸೊಬಗಿವಳ್ಗೆ ನಾಟ್ಯರ್ತನಮೇ: **ಆದಿಪು,** ೪. ೪೪); ಸುತ್ತುಮುತ್ತು ಓಡಾಡು (ನೆರೆದಿಸುತಿರೆ ತೋಲ್ವುಲ್ಲೆಯಂ ಇರದೆ ಅದು ಬಿಟ್ಟೋಡೆ ಪುರಾಣಕೂಪದೊಳ್ ಅದಂ ಇನ್ನು ಅರಿದು ತೆಗೆವಂದಂ ಎಂದವರಿರೆ ಬಳಸಿಯುಮಲ್ಲಿ ಕಂಡು ನಕ್ಕಂ ದ್ರೋಣಂ: **ಪಂಪಭಾ,** ೨. ೫೧); ಪಕ್ಕೆ (ಬರಿಯ ಬಳಸಿಂಗಂ ಬಂದು ಕಾಡುವ ಬಳ್ಕುಗಳುಮಂ ನರವನುಗಿವ

ನರಿಗಳುಮಂ ಸೆರೆಯಂ ತೆಗೆವ ಸೀಳ್ನಾಯ್ಗಳುಮಂ: **ಗದಾಯು,** ೫. ೩ ವ)

**ಬಳಾಕೆ** – [ಬಲಾಹಕ] ನೀರುಹಕ್ಕಿ (ಪಿಕಂ ಬಳಾಕೆಯಂ ಬಱಿಸಲ್ ಆಸೆಗೆಯ್ಯೆ .. .. ಶಿಖಾವಳಂ ಪುದಿದುದು ಅಂಧತಮಂ ಭುವನಾಂತರಾಳಮಂ: **ಆಚವರ್ಧ,** ೬. ೩೨)

**ಬಳಾರ** – ತಾಪಸಿ (ಭೂತಲಂ ಬಿರಿಯೆ ಸಿಡಿಲ್ ಸಿಡಿಲ್ದೆಱಗೆ ಕಲ್ಲ ಬಳಾರನವೊಲ್ ತಪೋಧನಂ ಮರಮೊದಲಿರ್ದಂ: ಅನಂತಪು, ೪. ೧೯)

**ಬಳಾರಿ** – ಮಹಾಕಾಳಿ (ಬಳಾರಿಯ ಮನೆಯಂ ಪರಕೆಯ ಕುಱಿಯಂ ಪುಗಿಸುವಂತೆ ವಟವಿಟಪಿಕೋಟರ ಕುಟೀರಾಂತರಮಂ ಪುಗಿಸಿ: **ಪಂಚತಂತ್ರ,** ೨೪೧ ವ)

**ಬಳಾಹಕ** – ಮೋಡ (ಅಂತು ಬಲವಂದು ಬಲಾಂತಕಂ ಅಘಬಲಾಂತಕಂಬೆರಸು ಬಳಾಹಕ ನಿರ್ಮಿತ ತ್ರಿವಿಧ ಸೋಪಾನದಿಕ್ಕೆಲದೊಳಂ ದೇವನಿಕಾಯಂ ಬರೆ: **ಅಜಿತಪು,** ೪. ೩೧ ವ)

**ಬಳಾಹಿತ** – ಇಂದ್ರ (ಬಳಾನುಜಬಲಿಪ್ರಿಯೆ ಕಳಾಂಚಿತ ಜಳೋದ್ಭವೇ ಬಳಹಿತಮುಖಾಮರನತೇ .. .. ಜಯ ಜಯಾ: **ರಾಜಶೇವಿ,** ೧೦. ೧೧೧)

**ಬಳಿನೀರ್ಗುಡಿ** – '**ದಿವ್ಯ**'ಕ್ಕಾಗಿ ಅಭಿಷೇಕ ಮಾಡಿದ ನೀರು ಕುಡಿ (ಬಳಿನೀರ್ಗುಡಿದಂತಿರೆ ಕುಡಿವರ್ ಕರವತಿಗೆಯ ನೀರಂ ಪಲಂಬರ್: **ಸಮಯಪ,** ೬. ೧೮)

**ಬಳಿಭುಕ್** – ಕಾಗೆ (ಬಳಿಭುಕ್ ಗೃಧ್ರ ಕದಂಬಂ ಅಂಬರದೊಳ್ ಉಗ್ರಶದಚಾಪದಶ್ರೇಣಿ ಭೂತಳದೊಳ್ ನರ್ತಿಸೆ: **ಪಂಚತಂತ್ರ,** ೨೩೪)

**ಬಳಿಮುಖ** – ಮಂಗ (ಬಳಿಮುಖ ಧರ್ಮಬಹಿರ್ಮುಖ ಚಳಮತಿ ನೀಂ ರೌದ್ರಭಾವಮಂ ತಳೆದು ಇಂತೇಕೆ ಒಳಪುಗುವೆ: **ಕರ್ಣನೇಮಿ,** ೩. ೭೫)

**ಬಳಿಯ** – ಬಲಿಷ್ಠ (ಪಟವಗೆಗಳಾಱುಮಂ ಗೆಲ್ದಳವಿಂ ಕಯಯಿಕ್ಕಿ ನಿಂದ ಕಲಿಯೆಂದುಂ ತನ್ನೊಳಗಂ ಪೊಱಗಂ ತೋಱಿದ ಬಳಿಯಂಗೆ ಎಱಗಿರ್ದು ಬಾಟ್ಟುದೀ ಮೂಲೋಕಂ: **ಕಬ್ಬಿಗಕಾ,** ೧೭೯)

**ಬಳುಂಕು** – ಬಳಕು, ನಡುಗು (ಪೊರಜೆವೊಲಿಂಬಾಗೆ ಬಾಲಂ ಬಳುಂಕುತ್ತಿರೆ ಗಾತ್ರಂ: **ಲೀಲಾವತಿ,** ೮. ೨೪)

**ಬಳೆ** – ವೃದ್ಧಿಗೊಳ್ಳು; ದೊಡ್ಡದಾಗು [ಅಯ್ವರ್ ಕೂಸುಗಳುಂ ಏಟ್ಟೆಗ್ವಾಡಿವದ ಚಂದ್ರನಂತೆ ಉತ್ತರಾಭಿವೃದ್ಧಿಯೊಳ್ ಸೊಗಯಿಸಿ ಬಳೆಯೆ: **ಪಂಪಭಾ,** ೨. ೩); [ವಲಯ] ಕಂಕಣ, ಕಡಗ (ಬಳೆಯ ಪೇಱಿನಾನೆ ಮೆಟ್ಟಿದಂತೆ ನುರ್ಚುನೂಱಪ್ಪಿನಂ ಅವುಂಕಿ: **ಪಂಪಭಾ,** ೮. ೭೬ ವ)

**ಬಳೆಗಾಱ** – ಬಳೆ ಮಾರುವವನು (ಬಳೆಗಾಱರ ತಂಬುಲಿಗರ ಮಣಿಗಾಱರ ಗಂದಿಗರಾಪಣಂಗಳೊಳ್ನಡೆತಂದರ್: **ಜಗನ್ನಾವಿ,** ೬. ೧೮)

**ಬಳೆಗೊಯ್** – ಕೊರಳು ಕತ್ತರಿಸು (ಊರುಂ ಮೂಳೆಯುಂ ತಿಂಬಗುರುಪಯಗರಿಯ ತನಿಗೊಂಬಂ ಬಳೆಗೊಯ್ಯಲ್ ಪೂಣ್ದು ತುದಿಯೊಳೋಡಿ ಪೋಪ ಭಿರುವಪ್ಪ ಪಣಿದಕಾಱನಂತೆ: **ಶಾಂತಿಪು,** ೮. ೪೯ ವ)

**ಬಳೆಗೋ** – ಹತೋಟಿಗೆ ತರು (ಬಳೆಗೋದುದು ಕೀರ್ತಿದಿಶಾಕಳಭಂಗಳ ನಿಗ್ಗವಂಗಳೊಳ್ ರಿಪುಕಾಂತಾವಳಿಯೊಳ್ ಭವತ್ಪ್ರತಾಪಂ ಬಳೆಗಳೆಯಿಸೆ ತಾನದಕ್ಕೆ ಮಚ್ಚರಿಸುವವೋಲ್: **ಯಶೋಧಚ,** ೩. ೪)

**ಬಳೆದೊಡಿಸು** – ಸಳೆಯನ್ನು ತನ್ನವಳನ್ನಾಗಿ ಮಾಡಿಕೊಳ್ಳುವ ಒಂದು ವಿಧಿ (ಪೆಱರ ಪೆಂಡಿರ್ಗೆ ಬಳೆದೊಡಿಸುವ ಪೆಂಡರಿಂ ಕೊಟ್ಟು ಮಾನ್ಯಂಬಡೆವ ಮಗಳ ಮಾಱೆ ಮದುವೆಯಪ್ಪ: **ಧರ್ಮಾಮೃ,** ೯. ೧೧೯ ವ)

**ಬಳೆದೊಡು** – ಹೆಣ್ಣಿಗನಾಗು (ಗಂಡುಗೆಟ್ಟು ಬಳೆದೊಟ್ಟು ಬೃಹನ್ನಳೆಯಾಗಿ ಪಾರ್ಥನಿದಿರವುಮೆನಲ್ಕೆ ರಂಬೆಯಶಪಮೊ ತನ್ನ ಪಾಪಮೋ: **ಗದಾಯು,** ೩. ೩೦)

**ಬಳೆಯೆ ನುಡಿ** – ಹೆಚ್ಚಾಗಿ ಮಾತಾಡು (ಒಂದು ಮನೆವಾರ್ತೆಗಿದೇನೆಂದರಸ ಬಳೆಯೆ ನುಡಿದಪೆ: **ಆದಿಪು,** ೧೪. ೩೦)

**ಬಳ್ಕು** – ತೊನೆದಾಡು, ನಡುಗು (ಕಡಕುಂ ಪೆಟ್ವೆಯುಂ ಒತ್ತೆ ಮೆಲ್ಲಡಿಗಳಂ ಬಳ್ಕುತ್ತುಂ ಅಳ್ಕುತ್ತುಂ ಓರಡಿಗೆ ಒರ್ಮೊರ್ಮೆ ಕುಳುತ್ತುಂ ಏಱುತಿರೆ: **ಪಂಪಭಾ,** ೩. ೯); ಗುಳ್ಳೆ ನರಿ (ಬರಿಯ ಬಳಸಿಂಗಂ ಬಂದು ಕಾಡುವ ಬಳ್ಕುಗಳುಮಂ ನರವನುಗಿವ ನರಿಗಳುಮಂ ಸೆರೆಯಂ ತೆಗೆವ ಸೀಳ್ನಾಯ್ಗಳುಮಂ: **ಗದಾಯು,** ೫. ೩ ವ)

**ಬಳ್ವಳ** – ಅತಿಶಯ (ಬಳ್ವಳ ಬಳೆದ ಬಾಳಚೂತದ ಬಾಳ್ಗೊಂಪಂಗಳುಮಂ .. .. ಒಳಗು ಮಾಡಿ: **ನೇಮಿನಾಪು,** ೩. ೧೦ ವ)

**ಬಳ್ವಳ ನೀಳ್** – ತುಂಬ ದೀರ್ಘವಾದ (ಬಳ್ವಳ ನೀಳ್ದ ಕಣ್ಮಲರ ತಳ್ತಮೆಯಿಂ ಕರೆಗಣ್ಮಿ ಬೆಳ್ಗಡಲ್ಗಳ್ ಪರಿಯಲ್ಕಂ: **ಪಂಪಭಾ,** ೭. ೬೮)

**ಬಳ್ವಳ ಬಳೆ** – ದೊಡ್ಡದಾಗಿ ಬೆಳೆಯುವುದು (ಮಾಧವೀಲತೆಯ ಬಳ್ಳವಳ್ಳಿಯ ಬಳ್ಳಿಗಾವಣದ ಮುಂದೆ ಬಳ್ವಳ ಬಳೆದೆಳದಳಿಸುವ ಪೊಸ ಕೆಂದಳಿರ ಗೊಂದಳದೊಳೆ: **ಆದಿಪು,** ೧೧. ೭೩ ವ)

**ಬಳ್ವಳಂ** – ಅತಿಶಯವಾಗಿ (ಕವಲ್ತು ಕಣ್ಬೆಳಗು ಬಳಸಿ ಬಳ್ವಳ ಬಳೆದೊತ್ತುವ ಕತದಿಂ ಎಮೆಯಿಕ್ಕದೊಡೆ: **ಲೀಲಾವತಿ,** ೪. ೧೦೨)

**ಬಳ್ವಳಿಕೆ** – ಹೊಯ್ದಾಟ, ಬೀಸಾಟ (ತಳರ್ದುದು ಕರ್ಣತಾಳ ಪವನ ಆಹತಿಯಿಂ ಜಳರಾಶಿ ಕೆಯ್ಯ ಬಳ್ವಳಿಕೆಗೆ ದಿಗ್ಗಜಂ ದೆಸೆಯಿನತ್ತ ತೆರಳ್ದುವು ಕಾಯ್ಪಿನಿಂ: **ಪಂಪಭಾ,** ೧೧. ೭೧); ವಿಸ್ತಾರ; ಬೆಳವಣಿಗೆ (ತನ್ನ ಬಳ್ವಳಿಕೆಯೊಳ್ ಸೆಳೆಗೊಂಬನೆ ಪೋಲ್ತು: **ಆದಿಪು,** ೧೨. ೩೮)

**ಬಳ್ಳ** – ಧಾನ್ಯದ ಒಂದು ಅಳತೆ (ಸೆಟ್ಟಿಯ ಬಳ್ಳಂ ಕಿಱಿದು: **ಪಂಪಭಾ,** ೧೨. ೧೭೫)

**ಬಳ್ಳಂಗೋಱಿ** – ಬಳ್ಳದಂತೆ ಅಗಲವಾಗಿ ತೂತುಮಾಡು (ಪಲ್ಗಳಂ ನುರ್ಗುಗುಟ್ಟುವುದುಂ ಕೈಗಳಂ ಗೊಟ್ಟಂಗೋಱುವುದುಂ ಬಾಯಂ ಬಳ್ಳಗೋಱುವುದುಂ: **ಸುಕುಮಾಚ,** ೧೧. ೪೭ ವ)

**ಬಳ್ಳಿ** – ಲತೆ, ಹಬ್ಬುವ ಸಸ್ಯ (ಬಳ್ಳಿಯಂ ಕೊರಲೊಳ್ ತಗುಳ್ಚಿಯೆಟಲೆ ಪಿಡಿದುಕೊಂಡು: **ವಡ್ಡಾರಾ,** ಪು. ೧೨೦, ಸಾ. ೧೬); ಅಕ್ಷರ ಬಳ್ಳಿ, ಕಾಗುಣಿತ (ಜನಾರ್ದನಂ ಸುಕವಿವಲ್ಲಭಂ ಆತನ ಮುಂದೆ ಗಣ್ಯರೇ ಚಂದದ ಬಳ್ಳಿಸಂಕಲೆಯೊಳ್ ಅಕ್ಕರಮಂ ಸೆಱೆಗೆಯ್ವ ಕಕ್ಕಸರ್: **ಅನಂತಪು,** ೧. ೪೯)

**ಬಳ್ಳಿಗವುಂಗು** – [ಬಳ್ಳಿ+ಕವುಂಗು] ಎಳೆಯ ಅಡಕೆಯ ಸಸಿ (ಬಳ್ಳಿಗವುಂಗಂ ತಳ್ತೆಲೆವಳ್ಳಿಯ ಕಟ್ಟಿಲೆಯನಲೆವ ಸೊಡರ್ಗುಡಿಗಳಂ: **ಆದಿಪು,** ೧೧. ೬೭)

**ಬಳ್ಳಿಗಾವಣ** – ಬಳ್ಳಿಮಾಡ, ಲತಾಮಂಟಪ (ಮಾಧವೀಲತೆಯ ಬಳ್ಳವಳ್ಳಿಯ ಬಳ್ಳಿಗಾವಣದ ಮುಂದೆ ಬಳ್ವಳ ಬಳೆದೆಳದಳಿಸುವ ಪೊಸ ಕೆಂದಳಿರ ಗೊಂದಳದೊಳ್: **ಆದಿಪು,** ೧೧. ೭೩ ವ)

**ಬಳ್ಳಿಮಾಡ** – ಬಳ್ಳಿಯಿಂದ ರಚಿತವಾದ ಮಂಟಪ (ತನ್ನ ಮಾಡದ ಪೆಱಗೆ ಪದಿನೆಂಟು ಬಳ್ಳಿಮಾಡಂಗಳಂ ಮಾಡಿಸಿ ಕೊಟ್ಟು: **ಹರಿವಂಶ,** ೪. ೪೩ ವ)

**ಬಳ್ಳಿಮಿಂಚು** – ಬಳ್ಳಿಯಂತೆ ಹಬ್ಬುವ ಮಿಂಚು (ರಾಜಿಪುವು ಬಳ್ಳಿಗವುಂಗಿನ ತಟ್ಟೆ ಬಳ್ಳಿಮಾವಿನ ಮನೆ ಬಳ್ಳಿಮಲ್ಲಗೆಯ ಮಂಡಪಂ: **ಶಾಂತಿಪು,** ೭. ೧೩೦)

**ಬಳ್ಳಿವಜೆ** – ಬಳ್ಳಿಯ ರೀತಿ ಹಬ್ಬು (ಮಣಿಮಂಚದೊಳ್ ಇರ್ವರುಂ ಕುಳ್ಳಿರ್ದು ಬಳ್ಳಿವಜೆವ ನಿಡುನೇಹದಿಂದಡರಿ ನೊಡಿ: **ರಾಜಶೇಖ,** ೧೧. ೧೩೫ ವ)

**ಬಳ್ಳಿವಳ್ಳಿ** – ಬಳ್ಳಿಯಂತೆ ಹಬ್ಬಿಕೊಂಡಿರುವುದು (ಮಾಧವೀಲತೆಯ ಬಳ್ಳವಳ್ಳಿಯ ಬಳ್ಳಿಗಾವಣದ ಮುಂದೆ ಬಳ್ವಳ ಬಳೆದೆಳದಳಿಸುವ ಪೊಸ ಕೆಂದಳಿರ ಗೊಂದಳದೊಳ್: **ಆದಿಪು,** ೧೧. ೭೩ ವ)

**ಬಳ್ಳಿವಾಯ್** – ಬಳ್ಳಿಯಂತೆ ಸಾಲಾಗಿ ಹೋಗು (ಸಪ್ತಚ್ಛದ ಗಂಧದ ಸೊವಡು ಮುಟ್ಟೆ ಮದಕರಿ ಕುಳಮೋವದೆ ಬಳ್ಳಿವಾಯ್ದು ಗರಿ ತುಳ್ಕಿದ ಗಿರಿ ಪರಿವಂತೆ ಪರಿದು ಮರವಾಯ್ದಿರ್ಕುಂ: **ಶಾಂತಿಪು,** ೯. ೧೪೦)

**ಬಳ್ಳಿವೆರ್ಚು** – ಬಳ್ಳಿವರಿ ಆಕಾಶಗಂಗಾ ಪ್ರವಾಹಂ .. .. ಬಯಲೊಳ್ ಬೆಳ್ಳಂಗೆಡೆದು ಬಳ್ಳಿವರರ್ಚಿಯುಂ: **ಚಂದ್ರಪ್ರಪು,** ೮. ೪೪ ವ)

**ಬಳ್ಳಿವೆಳಗು** – ಬಳ್ಳಿಯಂತೆ ಹಬ್ಬಿದ ಕಾಂತಿ ನಿಮಿರ್ವ ಬಳ್ಳಬೆಳಗುರ್ದಿದ ಕಾಲೆನೆ ಗಱಟ್ಟುವುದತನುಗೆ ನನೆಗಟ್ಟುವ ನೆಪದೆ ಪುಷ್ಪಲಾವೀನಿವಹಂ: **ಆಚವರ್ಧ,** ೧. ೬೩)

**ಬಳ್ಳಿವೆಳ್ಪು** – ಬಳ್ಳಿವೆಳಗು (ಗಂಗೆ ಬೞಲ್ದವೊಲ್ನೆಲಕೆ ಬೆಳ್ಳಿಯ ಬೆಟ್ಟದಬಳ್ಳಿವೆಳ್ಪು ಬೆಳ್ಳಂಗೆಡೆದೊಪ್ಪೆ: **ನೇಮಿನಾಪು,** ೨. ೭೦)

**ಬಳ್ಳು** – ನರಿ (ನೆತ್ತರಂ ಪಡೆಯದೆ ಆಕಾಶಕ್ಕೆ ಬಾಯಂ ತೆಱೆದು ಊಳ್ವ ಬಳ್ಳುಗಳುಮಂ ನರವುಮಂ ಬರಿಯುಮಂ ಪತ್ತಿ ತೆಗೆದು ಪೆಡಸಾರ್ವ ನರಿಗಳುಮಂ ತಾನೆ ಸೋದು: **ಪಂಪಭಾ,** ೧೩. ೫೬ ವ)

**ಬಳ್ಳುಗರೆ** – ಊಳಿಡು (ಕೊರೆವಳ್ ಪಲ್ಲಿಂ ಬಲ್ಪೈಗರೆವಳ್ ಕನವರಿಸಿ ಬಳ್ಳುಗರೆವಳ್ ಬಾಯಿಂ ಸುರಿವುದು ನೊರೆ: **ಸೂಕ್ತಿಸುಧಾ,** ೮. ೪೪೯)

**ಬಳ್ಳುಗೆಡೆ** – ಬೊಗಳು (ಕೊಳ್ಳಿಗಳಿಂ ಬಿಡದೋವದೆ ಸೂಸುವ ಬಳ್ಳುಗೆಡೆದು ಬಿಸುವುಡಿಯಂ ಸೂಸುವ: **ವರ್ಧಮಾಪು,** ೧೩. ೨೧)

**ಬೞ**– ಕ್ಷಾಮ, ಕೊರತೆ (ಇಂಚೆಯ ಪಸವಿನ ಬೞದ ಕಳಿಂಚಿನ ಡಾವರದ ಬಾಧೆಯಿಲ್ಲದ ಪದದೊಳ್: ಪಂಪಭಾ, ೯. ೫೧)

**ಬೞಗಾಲ** – ಕ್ಷಾಮಕಾಲ (ಬಜಗಾಲದ ಕೆಱೆಯಂತೆ ನೆಱೆ ಬತ್ತಿದ ಬಾಯುಂ, ಬೇತಾಳನ ಬಸಿಱಂತೆ ಬೆನ್ನಂ ಪತ್ತಿದ ಬಸಿಱುಂಬೆರಸು ಬರ್ಪ ವೃದ್ಧ ತಾಪಸನಂ ಕಂಡು: **ಪಂಚತಂತ್ರ,** ೧೨೭ ವ)

**ಬೞಟು** – ಕೆದರು (ಮುಂದಣಡಿಯಿಂ ನೆಲನಂ ಬೞಟುತ್ತೆ ಕೋಪದಿಂ ಘುಡುಘುಡಿಸುತ್ತೆ ಪಲ್ಮೊಱೆದು: **ತ್ರಿಷಷ್ಟಿಪು,** ೨೭. ೨೫)

**ಬೞಪ** – ಬಯಕೆ (ಸಾಱೆ ಬೞಲ್ದ ಮೆಯ್ಗೆ ಚೇತರಣೆಯಲರ್ಚೆ ಬಯ್ಗೆ ಬೞಪಂ ಬರಿಸುತ್ತಿರೆ ಪೋದ ಕೂಟಮಂ ಪರಿವಿಡಿಗೆಯ್ಯೆ ಚಿತ್ತಮೆಳಸಿತ್ತು ರತಂತಸುಖಾಂತಮೋಪರಾ: **ಚಂದ್ರಪ್ರಪು,** ೮. ೭೦)

**ಬೞಬೞ** – [ಪೂರ್ತಿ] ಬತ್ತಿಹೋಗು (ಬೞಬೞನಾಗೆ ತಾಱೆಸಿದನುರ್ವರೆಯಂ ರವಿ: **ಅನಂತಪು,** ೯. ೧೩)

**ಬೞಸಿಡಿಲ್** – ಮೋಡವಿಲ್ಲದೆ ಹೊಡೆಯುವ ಸಿಡಿಲು (ಎಡವಱದೊಳ್ ಎಱಗಿ ಬೞಸಿಡಿಲ್ ಇಡುಮುಡುಕನೆ ಪೊಡೆದುದೆನಿಸಿ ಪಾಂಡ್ಯನ ರಥದ ಅಚ್ಚು ಉಡಿದು ಅಗ್ಗಿತಟ್ಟಿ ಕೊಂಡುವು ಕಡುಗೂರಿದುವೆನಿಪ ಗುರುತನೂಜನ ಕಣೆಗಳ್: **ಪಂಪಭಾ,** ೧೨. ೮೨)

**ಬೞಕೆಯ್** – ಬರಿದುಮಾಡು, ನಾಶಗೊಳಿಸು (ಅನೇಕ ಶಿವಭಕ್ತರಂ ತಱೆದು ಬಱಕೆಯ್ಯುತ್ತಿರ್ಪ ಸುದ್ದಿಯಂ ನಂಬಿಯಣ್ಣಂ ಕೇಳ್ದು: **ತ್ರಿಷಷ್ಟಿಪು,** ೫. ೬ ವ)

**ಬೞುಂಟು** – ಗೀಚು, ಕೆದಕು (ಪೊಗೆಯಡಂಗೆಗವಿದ ದೂವೆಯಂತಿರೆ ಬೞುಂಟಿದೊಡೆ ಬಿಸಿಯನುಗುಟ್ವ ಕಪ್ಪುರದ ನುಣ್ಮಳಲ ಜಗುಲಿಯುಂ: **ಆಚವರ್ಧ,** ೫. ೬೩ ವ)

**ಬೞುಗೊಳ** – ಬತ್ತಿಹೋದ ಕೊಳ (ನೀರೋಡಿ ನಿನ್ನ ತನುವಿನ ಬಣ್ಣ ಬೞುಗೊಳದವೊಲಾಯ್ತು: **ಯಶೋಧಚ,** ೩. ೬)

**ಬೞುನುಡಿ** – ಬರಡು ಮಾತು (ಒಡವುಟ್ಟಿದರ್ ಎಂಬೀ ಬೞುನುಡಿವಡರ್ಪೆರದಿರ್ಕೆ ಮಱುಮೆಯ್ಯೊಳ್ ಅದಾರೊಡವುಟ್ಟುವರ್: **ಶಾಂತೀಶ್ವಪು,** ೧೩. ೧೨೧)

**ಬೞುವ** – ಏನೂ ಇಲ್ಲದವನು, ನಿರಾಯುಧ (ಮಾತಿನೊಳೇನೊ ಕೆಯ್ದುಗೆಯ್ ಬೞುವ ಆಜಿಶ್ರಾಂತನಂ ಯಶೋಧನಂ ಇಱೆಯಂ: **ಶಾಂತಿಪು,** ೪. ೫೧); ಬಡವ (ಕಿಱೆಯಂ ಮುತ್ತಂ ಧನದಂ ಬೞುವಂ ತೊಱೆದಂ ಗೃಹಸ್ಥನೆನ್ನದೆ ಮುಂಬಿಟ್ಟಱಿಸಿ ಕೊಲುತಿರ್ಪ ಜವನಂ: **ಆದಿಪು,** ೪. ೭೭)

**ಬೞುವಾತು** – ಬೞುನುಡಿ (ಮಾತಱೆಯದ ಮಾತು ತಮ್ಮ ಬೞುವಾತುಗಳೊಳ್ ಪುದಿದು: **ಪಂಪಭಾ,** ೪. ೯೫)

**ಬೞುವಾತುಗುಟ್ಟು** – ಬರಡು ಮಾತಾಡು (ಬೞುವಾತುಗುಟ್ಟಿ ಪೋಪರೆ ಗಂಡರುಂ: **ಶಬ್ದಮದ,** ೧೭೮ ಪ್ರ ೫)

**ಬೞೆ** – ಬತ್ತಿಹೋಗು (ಖೇದಾನಳನುರಿದೆರ್ದು ಮನೋದಾರುವನಳುಱೆ ಧೃತಿಯುಮಱೆವುಂ ಬೞೆಯಲ್ ಹಾ ದೇವಿ ಹಾ ದೇವಿ ಎನುತುಂ ಅವನಿಪತಿ ಮೂರ್ಛಿಸಿದಂ: **ಶಾಂತೀಶ್ವಪು,** ೫. ೧೮೨)

**ಬೞಲ್** – ಜೋತು ಬೀಳು (ತರಳಾಪಾಂಗಂ ಬೞಲ್ಬಲ್ಕುಡಿ ಬಡನಡು ರಂಭೋರು: **ಶಬರಶಂ,** ೩. ೭); ದಣಿವು (ಬಿತ್ತರಿಪ ಬೞಲ್ ಪೆಳರ್ವೆರಸು ಸುತ್ತುವ ಅಪಾಂಗಮಾಲೆಯಿಂ ಬರೆ: **ಕಾದಂಸಂ,** ೭. ೧೨); ಜೋಲು (ನನೆಯನೆ ಪೇಱೆ ಕೆಂದಳಿರೊಳೆಯ್ದೆ ಬೞಲ್ದೆಳಮಾವು: **ಆದಿಪು,** ೧. ೬೫)

**ಬೞಲ್ಕೆ** – ಆಯಾಸ (ಬಟ್ಟೆಯ ಬೞಲ್ಕೆಯಂ ಕಳೆದು ಕೌಶಿಕನಂ ಕೊಂಡಾಡುತಿರ್ಪುದುಂ: **ಧರ್ಮಾಮೃ,** ೧೨. ೧೧೮ ವ)

**ಬೞಲ್ಕೆವೋಗು** – ದಣಿವುಗೊಳ್ಳು (ದಿವ್ಯಾಹಾರಮಂ ಕೆಯ್ಕೊಳಿಕ್ಕುವುದುಂ ಆಕಂಠಂ ಉಂಡು ಬೞಲ್ಕೆವೋಗಿರ್ಪುದುಂ: **ಧರ್ಮಾಮೃ,** ೧೧೯ ವ)

**ಬಟಿಲ್ಚು** – ನಿಶ್ಚೇಷ್ಟಿತನಾಗಿಸು (ನಿಶ್ಚೇಷ್ಟಾಯಾಂ: **ಶಬ್ದಮದ,** ಧಾ ೨೦೩); ಕೆಳಕ್ಕೆ ಬೀಳಿಸು (ಬಟಿಲ್ಚು–ಅವಸ್ರಂಸನೇ: **ಶಬ್ದಮದ,** ಧಾ ೨೦೪)

**ಬಟಿಲ್ಮುಡಿ** – ಇಳಿಬಿದ್ದ ಕೇಶರಾಶಿ (ಮೃಗಮದದಣ್ಪು ಜಾದಿಯ ಬಳಲ್ಮುಡಿ ನೆಯ್ದಿಲ ಕರ್ಣಪೂರಂ: **ಆದಿಪು,** ೧೨. ೧೨)

**ಬಟಿಸು** – ಉಪಯೋಗಿಸು (ಬಟಿಸಿದ ಪಾತ್ರೆಯಂ ಬರುತೆ ಕೆರ್ಪಿನ ಕಾಲೊಳೆ ನೂಂಕಿ: **ಸಮಯಪ,** ೧೦. ೭೯); ಭೋಗಿಸು (ಕೂಡದನ್ನೆಗಂ ಕೂಡದಂತಿರಲಕ್ಕುಂ ಬಸಮಾಗದನ್ನೆಗಂ ಬಟಿಸಲಕ್ಕುಂ; **ಸುಕುಮಾಚ,** ೭. ೧೩); ಭೋಗ (ಪೆಂಡಿರ ವಶಮಾಗಿ ಮಹೀಮಂಡಲದೊಳ್ ಪಲರುಮೆಯ್ದಿದರ್ ದುರ್ಗತಿಯಂ ಪಂಡಿತರಪ್ಪವರದಜೆಂ ಪೆಂಡಿರ ಬಟಿಸಿಂಗೆ ಬೇಗಮೆಳಸುವರಲ್ಲಂ: **ಧರ್ಮಾಮೃ,** ೧೧. ೧೬)

**ಬಟೆ** –ಗುಡಿಸು (ಬಟೆ–ಸಮ್ಮಾರ್ಜನೇ: **ಶಬ್ದಮದ,** ಧಾ ೯೩೫); ಒರೆಸು, ತೊಡೆದು ಹಾಕು (ನಿಟಿಲಾಗ್ರಘರ್ಮಜಲಮಂ ಬೆರಲಿಂ ಬಟೆಯುತ್ತುಂ: **ಕುಸುಮಾಕಾ,** ೧೦. ೯); ಅಲಂಕಾರ ಮಾಡು (ತನ್ನ ತಂದನರ್ಘ್ಯರತ್ನದಿಂ ವಿವಿಧಮಣಿ ಕಿರಣಚಯದಿಂದವನಿಪನಂ ಬಟೆದು ಕೊಟ್ಟನರ್ಥಿಜನಕ್ಕಾ ದಿವಿಜೇಂದ್ರಂ: **ಶಾಂತಿಪು,** ೧೧. ೧೦); ಜಾಗ (ಸುಟೆವೆಳವೆಂಡಿರ ಕಡೆಗಣ್ ಬಟೆಯಂ ಪಸರಿಸುವ ಬೆಳಗು ಬೆಳದಿಂಗಳ ಪೊಂಪುಟೆಯೆಂದು: **ಚಂದ್ರಪ್ರಪು,** ೬. ४೭); ಸಮೀಪ (ಗಟೆಯ ಬಟೆಯ ಪಾವಿನಂತೆ ಬೆಂಬಟೆಯಂ ತಗುಳ್ದು: **ಸುಕುಮಾಚ,** ೬. ೫೩ ವ); ಹಿಂದುಗಡೆ, ದಾರಿ (ಬೀಣೆಯ ಕೊಟಲ ಬೆದಂಡೆಯ ಗಾಣರ ಬಟೆವಿಡಿದು ಸುಟೆದು ಕುಂದಿಂ ಕಥಕಶ್ರೇಣಿಯೊಡನೆಳಸಿ ಬಳಸುವ ನಾಣಿಲಿಗಳಂ ಈ ಬುಧಾಳಿಯೊಳ್ ಪುಗಿಸುವುದೇ: **ಸುಕುಮಾಚ,** ೨. ೨೪); ಪೀಳಿಗೆ, ವಂಶ (ಪಗೆಯಂದಮುಂ ಆ ರಾಮರ ಪಗೆಯೊಳ್ ಸಮಂ ಅವರ ಪಿಡಿವ ಬಿಲ್ ಬಿಲ್ ಎಮ್ಮಂಬುಗಳುಂ ಅವರಿತ್ತ ನಲ್ಲಂಬುಗಳೆನೆ ಬಟೆಗಾಯದಂತು ಚಲಮನೆ ಕಾವೆಂ: **ಪಂಪಭಾ,** ೧೨. ३೯); ಸಂದೇಶವಾಹಕ (ಮನುವಂಶಧ್ವಜಂ ಸೇನಾನಾಯಕಂಗೆ ಬಟೆಯನಟ್ಟಿದಾಗಳ್ ಆತಂ ಬಂದು: **ಆದಿಪು,** ೧೩. ३೧ ವ)

**ಬಟೆಕೊಳ್**– ಕ್ರಮವಾಗಿ ಜೋಡಿಸು (ಬಟೆಕೊಳ್–ಕ್ರಮಸಂಧಾನೇ: **ಶಬ್ದಮದ, ಧಾ** ೯೭೦)

**ಬಟೆಕ್ಕ** – ಆನಂತರ (ಇಂದೆ ಹಳಿಯುಂ ಗಡ ಕೂಡುವಂ ಆತನಂ ಗೆಲಲ್ ಬಂದಪುದೇ ಬಟೆಕ್ಕ ಅದುವೆ ಕಾರಣಮಾಗಿ ಉಳಿದಿರ್ದಂ ಅಂಧರಾಣ್ನಂದನಂ: **ಪಂಪಭಾ,** ೧೩. ೭೫)

**ಬಟೆಗಳಿಪು** – ಹಿಂದೆಯೇ ಕಳುಹಿಸು (ಅಗಲಲಾಜದೆ ಕಳಿಪುತ್ತುಂ ಕಳಿಯೆ ಪೋಗಿ ತದಾನುಗ್ರಹಮಂ ಮೀಜಲಣ್ಮದೆ ಕಣ್ಮಲರ ಮಾಲೆಯನೆ ಬಟೆಗಳಿಪಿ: **ಅನಂತಪು,** ೯. ೯೨ ವ)

**ಬಟೆಗೊರಲ್** – ಹಕ್ಕಿಗಳ ಗಂಟಲ ಇಳಿಜಾರು ಭಾಗ (ಐದರ್ಥಕ್ಕೆ: ಬಟೆಯೆಂದು ಬಟ್ಟೆಯುಂ ವಂಶಮುಂ ಕರೆವನುಂ ಲೇಪಿಸುವುದುಂ ಪಿಂಗಲಿಯ ಬಟೆಗೊರಲುಂ ಅಕ್ಕುಂ: **ಶಬ್ದಮದ,** ३३ ವೃತ್ತಿ, ೧೮೧)

**ಬಟೆಗೊಳ್** – ಹಿಂದೆಯೇ ಹೋಗು (ಮುಂದಣ ಮಿಗಮಂ ಕಟೆಪದೆ ಸಂದಿಸಿ ಬಟೆಗೊಳ್ವ ಮಿಗಮುಮಂ ಕಟೆಪದೆ ತಾನೊಂದಳವಿದಪ್ಪದೆಚ್ಚು: **ಪಂಪಭಾ,** ೫. ४೮)

**ಬಟೆನೀರ್** – ಸೂಳೆ ಕುಡಿಯುವ ವಿಟನ ಎಂಜಲು ನೀರು (ಕುಡಿದೊಡೆ ಪೊಟ್ಟೆಯಿಂದೆ ಬಟೆನೀರ್ ಪೊಱಪಾಯ್ವುವೆ: **ಚಂದ್ರಪ್ರಪು,** ೮. ೬೧)

**ಬಟೆನೀರ್ಗುಡಿ** – ಕೋಶಪಾನ ದಿವ್ಯದಲ್ಲಿ ಕುಡಿಯುವ ಅಭಿಷೇಕ ಮಾಡಿದ ನೀರು ಕುಡಿ (ಬಟೆನೀರ್ಗುಡಿದಂತಿರೆ ಕುಡಿವರ್ ಕರವತಿಗೆಯ ನೀರಂ ಪಲಬರ್: **ಸಮಯಪ,** ೬. ೧೮); ವಿಟನ ಎಂಜಲು ನೀರು [ಸೂಳೆ] ಕುಡಿ (ಪೊಸವೇಟಮಂ ಪೊಯ್ದುಕೊಳಲುಂ ಮತ್ತಿನ ಗಂಡರ್ಮೊಱೆಯಿಲ್ಲರೆಂದು ಮನದೊಳಗೆ ಬಟೆನೀರ್ಗುಡಿದ ಬದ್ದೆಯರ್: **ನೇಮಿನಾಪು,** ೫. ೨ ವ)

**ಬಟೆಯ** – ವಿಧೇಯ (ಒಂದರ್ಥಕ್ಕೆ: ಬಟೆಯನೆಂದು ವಿಧೇಯಂ: **ಶಬ್ದಮದ,** ३३ ವೃತ್ತಿ ೯೭)

**ಬಟೆಯಂ** – ಆನಂತರ (ಬಟೆಯಂ ಯಕ್ಷಕರ್ದಮದ ಕೆಯ್ಗುಟ್ಟಿಯೊಳ್ ಕೆಯ್ಯಂ ತಿಮಿರ್ದು ತಂಬುಲಮಂ ಕೊಂಡು: **ಪಂಪಭಾ,** ३. ೭೯ ವ)

**ಬಟೆಯಟ್ಟು** – ಸಂದೇಶವಾಹಕನ್ನು ಕಳಿಸು (ಜನಪತಿ ಬಟೆಯಂ ಸಂಭಿನ್ನನೆಂಬ ನೈಮಿತ್ತಿಕಂಗೆ ಬಟೆಯಟ್ಟೆ ಚಿರಂತನರಿರ್ ದೃಷ್ಟ ಪರಂಪರ ವಿನೂತ ವಿದ್ಯಾವಿಶೇಷವಿದರಿರ್ ಪೇಟೆಂ: **ಶಾಂತಿಪು,** ೫. ೨೦)

**ಬಟೆಲ್ಚು** – ಕೆಳಕ್ಕೆ ಜಾರುವುದು (ಬಟೆಲ್ಚು – ಅವಸ್ರಂಸನೇ: **ಶಬ್ದಮದ,** ಧಾ ೨೦३)

**ಬಟೆವರ್** – ಸಮೀಪ ಸಾರು (ನೋಟ್ಕೆ ಪರ್ವವನೀ ಬಾಲಕರೆಂಬಿದರ್ಕೆ ಬಟೆವಂದೆಂ ಭೋಜರಾಜಾಜ್ಞೆಯಿಂ: **ಜಗನ್ನಾವಿ,** ೫. ೮೫)

**ಬಟೆವಟೆ** – ಹಿಂದು ಹಿಂದೆಯೇ (ಜಾತ್ಯಶ್ವದಂತೆ ಬೇಗಮಾಗಿ ಕೋಳಿಕಾಳಿಕಾಱನಂತೆ ಬಟೆವಟೆವಿಡಿದು ತುಂಬಿನ ನೀರಂ ಉರ್ಚಿದಾಗಳಂತೆ ಪರಿದು ಅಳುರ್ದುಕೊಳ್ವುದಿದು ಪಂದಿವೇಂಟೆಯ ನಾಯ್: **ಪಂಪಭಾ,** ೫. ४೬ ವ); ವಂಶಪಾರಂಪರ್ಯ (ಪಟಗಾಂಪರ ನುಡಿ ಮುತ್ತುಂ ಮೆಟಸುಂಗೋದುದಕ್ಕೆ ಭಾಷ್ಯಮಂ ಒರ್ವಂ ಕಟೆಯೋದಿದಾತನಲ್ಲದೆ ಬಟೆವಟೆಯಿಂ ಬಂದು ಬರೆಯಲಾಗದು ಅಗಣ್ಯಂ: **ಶಾಂತಿಪು,** ೧೦. ೧೮೧); ಹೆಣ್ಣುಮಕ್ಕಳಿಗೆ ಕೊಡುವ ಉಡುಗೊರೆ (ಕೊಟ್ಟಂ ತಂಗಿಗೆ ಬಟೆವಟೆಯೆಂದಿಂತು ಸರ್ವಸ್ವಮೆಲ್ಲಮಂ ಪುರುಷೋತ್ತಮಂ: **ಪಂಪಭಾ,** ೫. ೨೬)

**ಬಟೆವಟೆಗೊಡು** – [ತವರಿನವರು] ಹೆಣ್ಣುಮಗಳಿಗೆ ಉಡುಗೊರೆ ನೀಡು (ತನ್ನ ಮಗಳಪ್ಪ ಸುಮತಿಗೆ ಬಳಿವಟೆಗೊಟ್ಟು: **ವಡ್ಡಾರಾ,** ಪು. ೧೦೮. ಸಾ. ೨೨)

**ಬಟೆವಟೆಗೊಳ್** – ಬಟೆವಟೆಯನ್ನು ಪಡೆ (ನಿನ್ನೀ ಪೊಟಲಂ .. .. ನಿನ್ನೀ ಕುಲಧಮನಂ ಒಡನೊಡನೆ ಬಟೆವಟೆಗೊಳ್ವಂ: **ಪುಷ್ಪದಂಪು,** ೭. ೬೧)

**ಬಟೆಸಲ್** – ಹಿಂಬಾಲಿಸು (ನನ್ನಿಯಿನಾ ಶ್ರೀವಿಜಯನ ಬೆನ್ನನೆ ಬಟೆಸಂದು ಪೋಗಿ ದೀಕ್ಷಿತನಾಗಿರ್ದು: **ಶಾಂತೀಶ್ವಪು,** ೫. ೫३)

**ಬಟ್ಚು** – ಜಾರು (ದೇವಲೋಕದ ಸುಖಮಂ ಪಲಕಾಲಂ ಅನುಭವಿಸಿ ಆಯುಷ್ಯಾಂತದೊಳ್ ಬಟ್ಚೆ ಬಂದು ಇಲ್ಲಿ .. .. ಧನಶ್ರೀ ಎಂಬ ಮಹಾದೇವಿಯ ಗರ್ಭದೊಳ್ ನೆಲಸಿದನ್: **ವಡ್ಡಾರಾ,** ಪು ೧೫೭, ಸಾ ೮)

**ಬಟ್ಟು** – ಬರ್ದು, ಸಾಯಿ (ಪೊಲತಿಯಾಗಿ ಪುಟ್ಟಿ ವ್ಯಾಧಿಪೀಡಿತೆ ಕ್ಷುಧಾಗ್ನಿಯಿಂ ಬಟ್ಟಿದೊಳ್: **ವಡ್ಡಾರಾ,** ಪು ೯, ಸಾ ೮)

**ಬಟ್ಟುಂ** – [√ಬಾಟ್] ಬದುಕಿಯೂ (ಒಳ್ಪಿದನೆನಿಸದೆ ಬಟ್ಟುಂ ಕಳ್ಪರೊಡಗೂಡಿಯುಂ .. .. ಮಱುಗುತಿರ್ಪುದೆ ಕಡೆಯೊಳ್: **ಸಮಯಪ,** ೧೩. ೬೪)

**ಬಟ್ಟುಂಕು** – ಬದುಕು ಹಾಗೂ ಒಕ್ಕಲಾಗು (ಎರಡರ್ಥಕ್ಕೆ: ಬಟ್ಟುಂಕಿದನೆಂದು ಜೀವಿಸಿದಂ ಒಕ್ಕಲಾದವನಕ್ಕುಂ: **ಶಬ್ದಮದ,** ೩೩ ವೃತ್ತಿ ೧೫೭)

**ಬಾ** – ಊದಿಕೊ (ಪುರಾಕೃತಸಂಕೃತಫಲಂಗಳಂ ನೆನೆದು ಅನವರತಮಟ್ಟು ಚಿಂತಾನಿದ್ರೆಯಿಂ ದರ್ದುರಮಾದ ಮೊಗಮುಂ: ಶಾಂತಿಪು, ೪. ೭೯ ವ); ಹೆಮ್ಮೆಸಂತೋಷಗಳಿಂದ ಉಬ್ಬುಪುರುಳೀಲದಹಂಕಾರದೊಳ್ ಬಾತು ಬಲ್ಮೆಗೆ ಹಾರೈಸುವರೇಕೆ ಬಯಕೆಗವಿಗಳ್: **ಲೀಲಾವತಿ,** ೧. ೨೪)

**ಬಾಂಗಡಲ್** – ಆಕಾಶದ ನದಿ (ಬಡಬಾಸೆಯೆಂಬ ಜಗುನೆಯೊಳ್ ಒಡವರೆಯಲ್ ಕುಚಹಿಮಾದ್ರಿಯಿಂದ್ಯೆದುವ ಬಾಂಗಡಲೆನೆ .. .. ಪೊಸಪೊಂಗೊಡದಿಂ ಮಧು ಸೂಸೆ: **ರಾಜಶೇಖರ ವಿ,** ೧೦. ೮೨)

**ಬಾಂಜಗುನೆ** – ಆಕಾಶದ ಯಮುನಾ ನದಿ (ಮಿಗೆ ಬಾಂಜಗುನೆಗೆ ನೆಗೆದುವೊ ನೊರೆಯೆನೆ ಬಗೆಗೊಂಡುವು ಬಾನೊಳೊಗೆದ ಬಿಳಿಯ ಮುಗಿಳ್ಗಳ್: **ಲೀಲಾವತಿ,** ೫. ೨೨)

**ಬಾಂದೊಱೆ** – ಆಕಾಶದ ನದಿ, ದೇವಗಂಗೆ (ಆತ್ಮವಿಟತ್ತ್ವಮಂ ಉಂಟೊಡೆತಾಗಿ ಮಾಡಿ ಬಾಂದೊಱೆಯನೆ ಪೊತ್ತು ಗೌರಿಗೆ ಕವಲ್ದೊಱೆಗೆಯ್ದಿದಂ ಈ ಪ್ರದೇಶದೊಳ್: **ಪಂಪಭಾ,** ೭. ೭೫)

**ಬಾಂದೊಱೆದಲೆಯ** – ತಲೆಯಲ್ಲಿ ಗಂಗೆಯನ್ನು ಧರಿಸಿದವನು, ಶಿವ (ಅನ್ನೆಗಮಿತ್ತಲಾ ಬಾಂದೊಱೆದಲೆಯನ ಸಾಪಂದಳೆದು ಬಂದು ನೀನೀ ಪೂವಿನ ಪೊಟಲೊಳ್ ನನೆಯೆಂಬರಸನಾದೆ: **ಕಬ್ಬಿಗಕಾ,** ೨೪೯ ವ)

**ಬಾಂದೊಱೆಯ ಮಗ** – ಭೀಷ್ಮ (ಅಱನ ಮಗಂ ಪ್ರಾರ್ಥಿಸೆ ಬಾಂದೊಱೆಯ ಮಗಂ ಮಾಡೆ ಸಂಧಿಯಾದಪುದೆನುತುಂ ಮಱುಗುವೆಂ: **ಗದಾಯು,** ೧. ೭೨)

**ಬಾಂದೊಱೆಯ ಸುತ** – ಬಾಂದೊಱೆಯ ಮಗ (ಚಂದ್ರಹಾಸದ ಕೂರ್ಪಿನೊಳಂ ರುದ್ರನ ಕಾಯ್ಪಿನೊಳಂ ನೆರೆದು ಬಾಂದೊಱೆಯ ಸುತನೊಡ್ಡಿ ನಿಲೆ: **ಕರ್ಣನೇಮಿ,** ೧೨. ೮೮ ವ)

**ಬಾಂಧವ** – ನಂಟ (ನಮ್ಮಂಧನರೇಂದ್ರನ ಮೊಗಮಂ ಗಾಂಧಾರಿಯ ಮೊಗಮಂ ಆವ ಮೊಗದೊಳೆ ನೋೞ್ಪೆಂ: **ಗದಾಯು,** ೩. ೭೦)

**ಬಾಂಬ** – ಕುರುಬ (ಬಾಂಬನೆಂದು ಕುಱುಂಬಂ: **ಶಬ್ದಮದ,** ಪ್ರಸಾ ೧೭೭)

**ಬಾಂಬರಿ** – [ಬಾನ್+ಪರಿ] ಗಗನ ಸಂಚಾರ (ಅವಳ್ಗೇಭಂಡಂ ಬಾಂಬರಿಯೊಳ್ ಮಾರ್ತಂಡನುಮಂ ಪುಲ್ಲುಕಡ್ಡಿಗಂ ಕೈಕೊಳ್ಗಳ್: **ನೇಮಿನಾಪು,** ೩. ೬)

**ಬಾಂಬಾವು** – [ಬಾನ್+ಪಾವು] ಆಕಾಶದ ಹಾವು, ರಾಹು (ಇನಮಂಡಲಮಂ ಪಿಡಿಯಲ್ಕೆ ಅನುಗೆಯ್ದು ಎಟ್ಟಿಂದ ಬಾಂಬಾವೆನೆ: **ಉದ್ಭಟಕಾ,** ೫. ४೨)

**ಬಾಂಬೊಟಲ್** – ಆಕಾಶದ ಪಟ್ಟಣ (ಬಾಂಬೊಟಲನುರ್ಕಿಂ ಮೂಱುಮಂ ಸುಟ್ಟು ಜನ್ನವನುಣ್ಬಣ್ಣರಂ ಆರ್ದು ಕೊಂದು: **ಕಬ್ಬಿಗಕಾ,** ೧೨೩)

**ಬಾಕುಳ** – ಆಸೆಯಿಂದ ಕೂಡಿದ (ಕರ್ದುಂಕಿ ಮೇಣ್ ಪೊಳೆವೊಡೆ ಪೇಟದೇಂ ಬಗೆವೊಡೆ ಓಪಳ ಬಾಕುಳ ಲೋಚನಂಗಳಂ: **ಲೀಲಾವತಿ,** ೧೪. ೮೨)

**ಬಾಕುಳಿ** – ಆಸೆಗಾರ (ಒಸಗೆಗಂಪನುಣ್ಬ ಬಾಕುಳಿ ದುಂಬಿಗಳ ಪೆಡದಲೆಯಂ ಪಿಡಿದು ಮಂದೈಸಿಮುಂದೆ ಕವಿವ ಮಧುಕರ್ದಮದೊಳರ್ದಿಯುಂ: **ಲೀಲಾವತಿ,** ३. ೨೦ ವ)

**ಬಾಕುಳೆ** – [ವ್ಯಾಕುಲೆ] (ಬಾಕುಳೆಯರ ಬಯ್ಕಡಿವಡೆದ ಸೆಳೆದು ಬರ್ದೆಯರ್ ಉಡಿಸಿದೊಡೆ ಉಡೆ ಕಲ್ತ ಕೊವರಂ ಅಭಿನವಮದನಂ: **ಅನಂತಪು,** ೧. ೫೮)

**ಬಾಗಿಲ್** – ದ್ವಾರ, ಒಳಹೊಗುವ ದಾರಿ (ಗರುಡಂಗಂ ಅಡರಲ್ಬಾರದ ಸಮುತ್ತುಂಗಶಿಖರಂಗಳ್ ನಾಲ್ಕುಂ ದೆಸೆಯೊಳುಮಾಗಿ ಬಾಗಿಲೊಂದೆಯಾಗಿರ್ಪುದು ಗುಹ್ಯಾಖ್ಯಮೆಂಬುದಕ್ಕುಂ: **ಪಂಚತಂತ್ರ,** ೨೯೭ ವ)

**ಬಾಗಿಲ್ಮಾಡ** – ಪುರದ ಗೋಪುರ (ಬಾಗಿಲ್ಮಾಡದ ಪೊಱಗಣ ದೆಸೆಯೊಳ್ ತಂತಮ್ಮ ವಾಹನಗಳಿಂದಿೞಿದು: **ವಡ್ಡಾರಾ,** ಪು ೮೦ ಸಾ ೧೩)

**ಬಾಗಿಲ್ವಾಡ** – ಬಾಗಿಲ ಚೌಕಟ್ಟು (ನಾರದಂ ಗಗನವೀಧಿಯಿಂ ಮಿಥಿಲೆಗೆ ಬಂದು ಕನ್ನೆವಾಡದ ಬಾಗಿಲ್ವಾಡಮಂ ಪುಗುವಾಗಳ್: **ಪಂಪರಾ,** ೪. ೮೧ ವ); ಊರ ಹೆಬ್ಬಾಗಿಲು (ಸಾಕೇತನಗರಮಂ ಕನಕಪ್ರಾಕಾರದ ಬಾಗಿಲ್ವಾಡಂಗಳೊಳಂ ರಾಜಮಂದಿರದ ಗೋಪುರದ್ವಾರಂಗಳೊಳಂ: **ಆದಿಪು,** ೧೬. ೩೭ ವಂ

**ಬಾಗು** –ಬಗ್ಗು (ದೇವೋತ್ತಮಾಂಗಂಗಳುಂ ಬಾಗಿದುವು ತ್ರೈಲೋಕ್ಯನಾಥೋದಯಮಂ ಅಱಿಪುವಂತಾ ತ್ರಿಲೋಕಕ್ಕಮಾಗಳ್: **ಆದಿಪು,** ೭. ३೯); ಗೂನಾಗು (ಗುಡಿಲಂತೆ ಬಾಗಿದ ಬೆನ್ನುಂ ಪುಟ್ಟಿನಂತೆ ಬೆರಳ್ಗಳಿಲ್ಲದ ತಳಮುಂ: **ಧರ್ಮಾಮೃ,** ४. ४७ ವ); ಫಲವತ್ತಾದ ಪ್ರದೇಶ (ಅಳಿಯಿಲ್ಲದಬ್ಜವನಮಿಲ್ಲ ಉದ್ಯಾನಸಂತಾನಮಿಲ್ಲದ ಬಾಗಿಲ್ಲ: **ಶಾಂತಿಪು,** ೯. ೧೩೩); ಧ್ವನಿಯ ಬಳುಕು (ಉಚ್ಚ ನೀಚ ಸ್ಥಾಯಿ ಸಂಚಾರಿ ಠಾಯಿ ಬಾಗು ನಿಬದ್ಧಾಬದ್ಧ ದ್ವಾವಿಂಶತಿ ಶ್ರುತಿ ಏಕವಿಂಶತಿ ಮೂರ್ಚನೆ ಗಳಿಸಿಯೆ .. .. ಪಾಡುತ್ತಿರೆಯುಂ: **ಶಾಂತೀಶ್ವಪು,** ೧೬. ೬೭ ವ); ಬೇಯಿಸು (ನೀಮಿಂದು ಬಂದೊಡೆ ಅವು ನೆಱೆಯವಾಗಿ ಮುತ್ತಿನೋಗರದ ಅಕ್ಕಿಯಂ ಬೆರಸಿ ಬಾಗಿದ ಕಾರಣದಿಂ .. .. ಪುಷ್ಪವಾಸನೆಯಕ್ಕಿಯಯ ಕೂಟನುಣ್ಗುಂ ಉಟಿದಕ್ಕಿಯ ಕೂಟಂ ಉಗುಳುತಿರ್ಕ್ಕುಂ: **ಸುಕುಮಾಚ,** ೧೧. ೩೫ ವ)

**ಬಾಗುಳ** – [ವ್ಯಾಕುಲ] ಚಿಂತೆ (ಬಯಕೆಯ ಬಾಗುಳಂ ಆ ಕಾಂತೆಯೊಖಿಮಥದು ನೆಗಟ್ಟುದು: **ವರ್ಧಮಾಪು,** ೧೧. ೬೨)

**ಬಾಚಿ** – ಮರ ಕೆತ್ತುವ ಸಾಧನ (ಬಾಚಿಯಂ ತಡಂಗಡಿದುಂ ಕೊಂತದಿಂ ತಗುಟ್ಟಿಱಿದುಂ: **ಧರ್ಮಾಮೃ,** ३. ४३ ವ)

**ಬಾಚಿಸು** – ಪಠಿಸು, ಓದು (ಮಹೋತ್ಸವದಿಂದಂ ರಾಜಾದೇಶವಣ ಆಗಳ್ ಬಿರ್ಚಿ ನೋಡಿ ತಾಂ ಬಾಚಿಸಿದಂ: **ಕಾದಂಸಂ,** ೫. ೯೯)

**ಬಾಚಿಸುವೊಂ** – ಓದಿ ಹೇಳುವವನು (ಪಡೆದ ಧನಕ್ಕೆ ಲೆಕ್ಕಮಿಡಲ್ ಇಂದ್ರನಗಂ ಬಳಪಂ ಧರಾತಳಂ ಕಡಿತಂ ಅಹೀಶ್ವರಂ ತಗುಳೆ

ಬಾಚಿಸುವೊಂ ಸುರಮಂತ್ರಿ ಕೂಡುವೊಂ: **ಶಾಂತಿಪು,** ೯. ೧೪೭)

**ಬಾಜನೆ** – [ವಾಚನ] ಪಠನ, ಓದುವಿಕೆ (ಚಕಾರಕ್ಕೆ ಜಕಾರಂ; ಸೂಚೀ–ಸೂಜಿ ಕಾಚಂ–ಗಜು ವಾಚನಾ–ಬಾಜನೆ ವಚಾ–ಬಜೆ: **ಶಬ್ದಮದ,** ೨೬೯ ಪ್ರ); ವಾದ್ಯ ನುಡಿಸುವಿಕೆ (ಪಾಡುವ ಸುರಗಣಿಕಾಜನಂ ಆಡುವ ದೇವಾಂಗನಾಜನಂ ಬಾಜನೆಯಂ ಮಾಡುವ ಅಮರಿಜನಂ ತೇಂಕಾಡಿಸುವುದು ರಾಗರಸದೊಳ್ ಅಮರನ ಸಭೆಯಂ: **ಅನಂತಪು,** ೧೨. ೪೧)

**ಬಾಜನೆಗಬ್ಬ** – ಒಂದು ಬಗೆಯ ಕಾವ್ಯ (ಪಲತೆಱದ ಪದ್ಯದಿಂದಂ ಲಲಿತವಚೋರಚನನಿಚಯಪದ್ಧತಿಕೆಗಳಿಂ ಸಲೆ ನಿಲೆ ಸಮೆದುದು ಸರಸಾಖಿಲ ವರ್ಣನಮಾದೊಡದುವೆ ಬಾಜನೆಗಬ್ಬಂ: **ಕಾವ್ಯಾವಲೋ:** ೯೫೫)

**ಬಾಜಿಸು** – ಪಠಿಸು, ಓದು (ಕರಂಡಕದೊಳಿರ್ದ ಲೇಖಪತ್ರಮಂ ತೋಱಿ ತಲೆಯೊಳಿಟ್ಟುಕೊಂಡು ಓಲೆಯಂ ಬಾಜಿಸಿ: **ಚಾವುಂಪು,** ಪು. ೩೭೨. ಸಾ. ೪); ವಾದ್ಯ ನುಡಿಸು (ಅತಿಮಧುರೋದ್ಭಸಿತಗಂಭೀರನಾದದಿಂ ಬಾಜಿಸಿದಂ: **ಆದಿಪು,** ೧೪. ೪೬)

**ಬಾಡ** – [ವಾಟ] ಹಳ್ಳಿ (ಕೊಡುವ ಬಾಡಕ್ಕಂ ಜೀವಧನಂಗಳ್ಗಂ ಬಿಡುವೆಣ್ಣಂ ಲೆಕ್ಕಮಿಲ್ಲೆನಿಸಿ ರಾಗಂಗಿಡದೆ ಕೊಂಡಾಡಿದಂ ಬಲ್ಲಹನಱಿಯೆ ಗುಣಾರ್ಣವಂ ಕವಿತಾಗುಣಾರ್ಣವನಂ: **ಪಂಪಭಾ,** ೧೪. ೫೫)

**ಬಾಡಗೆ** – ವಸ್ತುವಿನ ಉಪಯೋಗಕ್ಕೆ ಕೊಡುವ ಶುಲ್ಕ (ಒಂದಂಗಡಿಯಂ ಬಾಡಗೆಗುಡಿಂ ಎಂದು ಗಂದಿಗವಸರದೊಳಂ ಕ್ರಯವಿಕ್ರಯಂಗೆಯ್ವುತ್ತುಂ ಇರ್ದು ಪೋಪುದುಂ: **ಹರಿವಂಶ,** ೪. ೧೦ ವ)

**ಬಾಡಬವಹ್ನಿ** – ಬಡಬಾಗ್ನಿ (ಕಡಲಬಳಗಂ ಬಾಡಬವಹ್ನಿತಾಪಮಂ ಪರಿಹರಿಸಲ್ಕೆ ಬಂದಿರ್ಪ ತಾಣಂ: **ಕಾದಂಬ,** ೭. ೨೩)

**ಬಾಡವ** – ಕುದುರೆ (ಸ್ವಕೃತ ಪರಿಣಯನ ಮಣಿಪುತ್ರಿಕೆಗಳಂ ಉತ್ತುಂಗರತ್ನಪರ್ಯಂಕಿಕೆಯಂ ಸುತ್ತಾರಿಕೆಗಳನೇಣೀ ಪ್ರಕಾಂಡಮಂ ಬಾಡವಂಗಳಂ ಹಂಸಂಗಳಂ: **ವರ್ಧಮಾಪು,** ೩. ೯೯); ಬ್ರಾಹ್ಮಣ (ಶಾಂಡಿಲ್ಯ ಬಾಡವಂಗಂ ತತ್ಸುಂದರಿ ಪಾರಾಶರಿಗಂ ಶ್ಥಾವರನೆಂಬೀ ಪೆಸರಿಂ ಎಸೆವ ನಂನನನಾದಂ: **ಆಚವರ್ಧ,** ೧೦. ೬೪)

**ಬಾಡವಾನಲ** – ಬಾಡವಾಗ್ನಿ (ಕೀಳ ಆಭೀಳನಂ ಬಾಡವಾನಲನಂ ಬಾರಿಸು ನೀಂ ಎನುತ್ತುಂ ಎನಿತಾನುಂ ಪೇಟಿಲೆಟ್ಟಿಂದುದು .. .. ಚಂದ್ರಾತಪಂ: **ಶಾಂತೀಶ್ವಪು,** ೧೧. ೪೪)

**ಬಾಡಿಸು** – ಬಾಣಲಿಯಲ್ಲಿ ಹುರಿ (ಚಮ್ಮಟಿಗೆಗಂಶುಕಕಿಚ್ಚೊಳಗಾಗಿ ಬೆಟ್ಟಿದರ್ ಬಾಡಿಸುವೇಱಬಾಡಿಸುವ ಹೇಱುವ ಕಟ್ಟುವ ಆವಗಂ ಹೂಡುವ ದುಃಖದಿಂತಿರಿಕಜಾತಿಯ ಕೋಟಲೆ ಕುಂದದೊಂರ್ಎಯುಂ; **ಅನಂತಪು,** ೯. ೪೩); ಕಳೆಗುಂದಿಸು (ತೇಜಂ ಬಾಡಿಸುತಿರ್ಪ ರೇಖೆಯೊ ಚಿರಂ ಬಾಟ್ಸಾಸೆಯಿಂದೀ ಮಹಾರಾನೋರ್ಡುವ ತೀವ್ರ ತೇಜದ .. .. ಭಸ್ರಂ ಅಸ್ತದೊಳ್ ಕೆಡೆವುದಂ ಕಂಡುಂ; **ನೇಮಿನಾಪು,** ೪. ೫೪); ನಂಜಿಕೊ (ಕರೆಯದೆ ಕಾಡಿ ಕಂಡಿಸುವ ಕೂಂಟಣಿಯಂ ನೊಣೆಗಬ್ಬೆ ತಿಂಗೆ ಬೆಂಗರುಟೆ ಬಳಾರಿ ಬಾಡಿಸುಗೆ ಚಂಡಿಕೆ ನುಂಗುಗೆ: **ಲೀಲಾವತಿ,** ೨. ೧೦೬)

**ಬಾಡು** – ಮಾಂಸ (ಲೇಸಾಗಿ ಬೆಂದ ಬಾಡಂ ಬಾಸಣಿಸಿಟದನೆಯಮೃತಮತಿಗಟ್ಟಿಸಿದಂ: **ಯಶೋಧಚ,** ೩. ೭೦); ತರಕಾರಿ (ಸುಗಂದ ಪರಿಮಳಂ ನಾರ್ಪ ತುಪ್ಪಮಂ ಪಲವು ತೆಱದ ಬಾಡುಗಳುಂ ತುಯ್ಯಲುಂ .. .. ಮೊದಲಾಗೊಡೆಯ .. .. ಭಕ್ಷ್ಯರೂಪಂಗಳುಮಂ: **ವಡ್ಡಾರಾ,** ಪು ೭೮, ಸಾ ೧೬); ಕಾಂತಿಗುಂದು (ಸಸ್ಯಾವಳಿ ಸುಗಿದಗಿದು ಕೂಡೆ ಬಾಡಿರ್ದುದು: **ಆದಿಪು,** ೧೦. ೬೬)

**ಬಾಡುಂದಳಿರ್** – ಬಾಡಿಹೋದ ಚಿಗುರು (ಬಟಿಲ್ಲಟಿದುದುಂ ಅಱೆಪುವ ಬಾಡುಂದಳಿರ ಪಾಸಿಕೆಗಳುಮಂ: **ಕಾದಂಬ,** ೮. ೦ ವ)

**ಬಾಣ** – ಶರ, ಅಸ್ತ್ರ (ಗುಣಾರ್ಣವಂ ಮತ್ತಂ ಐಂದ್ರ ವಾರುಣ ವಾಯವ್ಯ ಆಗ್ನೇಯಾ ಪಾರ್ವತಾದಿ ಬಣಂಗಳಂ ತುಡೆ: **ಪಂಪಭಾ,** ೨. ೭೬ ವ)

**ಬಾಣತಿಸೂಳೆ** – ಚಿಕ್ಕ ಕೂಸಿರುವ ಸೂಳೆ (ಬಾಣತಿಸೂಳೆಯಂತೆ ಸಿಡಿಮಿಡಿಗೊಂಡು ತಳಾಱಿನಂ ಕಂಡ ಕಳ್ಳನಂತೆ ಕುಸಿದು: **ಧರ್ಮಾಮೃ,** ೩. ೧೮ ವ)

**ಬಾಣಧಿ** – ಬತ್ತಳಿಕೆ (ಅಂತಮೋಘಬಾಣಂ ಬಾಣಧಿಯಿಂ ಬಾಣಮನುರ್ಚಿಕೊಂಡು: **ಆದಿಪು,** ೧೨. ೮೮)

**ಬಾಣಪಂಚಕ** – ಮನ್ಮಥನ ಐದು ಬಾಣಗಳ ಗುಂಪು (ಅದೇಂ ಪಡೆದುವೋ ಪಂಚಾಂಡಕವ್ಯಕ್ತಿ ಕಣ್ಗೊಳೆ ಕಂದರ್ಪನ ಬಾಣಪಂಚಕದವೊಲ್ ಚಿತ್ತಕ್ಕತಿಕ್ಷೋಭಮಂ: **ಮಲ್ಲಿನಾಪು,** ೫. ೩೬)

**ಬಾಣಸ** – ಅಡಿಗೆ (ಅನೇಕ ಸ್ತ್ರೀಯರರ್ವೆರಸು ಬಾಣಸದ ಮನೆಗೇಳ್ತಂದು ಬೋನಮಂ ಸಮೆವುತ್ತಿರ್ಪಾಗಳ್: **ತ್ರಿಷಷ್ಟಿಪು,** ೧೦. ೨೬ ವ)

**ಬಾಣಸಿಗ** – ಅಡಿಗೆಯವನು (ತನ್ನ ಬಾಣಸಿಗನಾಗಿದ್ ವಲ್ಲಲನಂ ಕರೆದು ಪೇಟ್ದಾಗಳ್: **ಪಂಪಭಾ,** ೮. ೫೭ ವ)

**ಬಾಣಸಿಗೆ** – ಬಾಣಸಿಗಿತ್ತಿ (ಬಾಣಸಿಗೆಯರ್ .. .. ಹಯ್ಯಂಗವೀನಮುಮಂ ಅರಸಂಗಂ ಪಂಕ್ತಿಯೊಳುಣ್ಬ ಪರಿಜನಕ್ಕೆಲ್ಲಂ ಬಡ್ಡಿಸಿದಾಗಳ್: **ಸುಕುಮಾಚ,** ೧೦. ೨೯ ವ)

**ಬಾಣಸು** – ಅಡುಗೆ (ಇಂದಿನ ಬಾಣಸಕ್ಕೆ ಎನ್ನಂ ನಿವೇದಿಸಿದೆಂ, ದೇವರ್ ಕೈಕೊಳ್ಳಿಂ: **ಪಂಚತಂತ್ರ,** ೨೧೧ ವ); ಅಡುಗೆಯ ಮನೆ (ನಿಶ್ಚಿಂತಂ ಪೊಕ್ಕರ್ ಪಸಿದ ಕೃತಾಂತನ ಬಾಣಸುವೊಲಿರ್ದ ಮಾರಿಯ ಮನೆಯಂ: **ಯಶೋಧಚ,** ೧. ೫೩)

**ಬಾಣಹತಿ** – ಬಾಣದ ಏಟು (ದೇವ ನಿಜೋಗ್ರ ಬಾಣಹತಿಯಿಂ ತಲೆಗಳ್ ಗಗನಕ್ಕೆ .. .. ಪಾಱುತಿರ್ಪಿನಂ: **ಜಗನ್ನಾವಿ,** ೧. ೬೧)

**ಬಾಣಾಸನ** – ಬಿಲ್ಲು (ಪಂಚವಿಂಶತಿ ಅತ್ಯನ್ವಿತ ಸಪ್ತಶತ ಬಾಣಾಸನೋಚ್ಛ್ರಯನುಂ ನಳಿನಪ್ರಮಾಣ ಆಯುಷ್ಯನುಮಾಗಿ: **ಆದಿಪು,** ೬. ೫೭ ವ)

**ಬಾಣಾವಾಸ** – {ಬಾಣ+ಆವಾಸ] ಬತ್ತಳಿಕೆ (ಶೋಣಾಶ್ವಂಗಳ್ ರಜತರಥಮಂ ಪೂಡೆ ಕುಂಭಧ್ವಜಂ ಗೀರ್ವಾಣಾವಾಸಂಬರಂ ಅಡರೆ ಮಾಱೊಡ್ಡು ದಲ್ ಸಾಲದು ಎನ್ನೀ ಬಾಣಾವಾಸಕ್ಕೆ ಎನುತುಂ: **ಪಂಪಭಾ,** ೧೧. ೫೬)

**ಬಾಣಿ** – [ವಾಣಿ] ಸರಸ್ವತಿ (ಜಾಣಿಂ ಬಾಣಿ ಎನಿಪ್ಪ ಅದೊಂದು ಪೆಸರಂ ಮುನ್ನಿತ್ತಂ: **ಕಾದಂಸಂ,** ೧. ೩)

**ಬಾತುಕೊಳ್** – ಸಂತೋಷದಿಂದ ಉಬ್ಬಿಹೋಗು (ಮನೆಯೊಳ್ಮಯ್ಮೆಗೆ ಬಾತುಕೊಂಡು ಸಿರಿಯೊಳ್ ಕಣ್ಗಾಣದೆ ಒಡ್ಡಯ್ಸುವಂದಿನ ನೀಮಾರ್ಗೆ ಎಲಗೆ ನಿಮ್ಮನಾವಱಿಯೆಂ: **ಸುಕುಮಾಚ,** ೪. ೨೬)

**ಬಾದಣ** – [ವಾತಾಯನ] ಗವಾಕ್ಷಿ (ನೃಪತಿಯ ಪ್ರಾಸಾದದ ಶಿಖರದ ಮಧ್ಯಪ್ರದೇಶಮಂ ಬಾದಣದಂತಿರೆ ಛಿದ್ರಂ ಮಾಡಿ: **ವಡ್ಡಾರಾ,** ಪು ೧೮೬, ಸಾ ೧೪)

**ಬಾದರ** – ಹತ್ತಿ, ಅರಳೆ (ಬಾದರಮದು ಪಿಚವ್ಯಾಖ್ಯಂ ಅಜೆಗೆ ಪಿಚು ಕಾರ್ಪಾಸಂ: **ಅಭಿಧಾವ,** ೧. ೮. ೩೦); [ಜೈನ] ಜೀವಗಳ ಹದಿಮೂರು ಪ್ರಕೃತಿಗಳಲ್ಲಿ ಒಂದು (ಬಾದರಯಶಸ್ಕೀರ್ತಿರುಚ್ಚೈರ್ಗೋತ್ರತೀರ್ಥಕರನಾಮಗಳೆಂಬ ಪದಿಮೂಱುಂ ಪ್ರಕೃತಿಗಳುಮಂ ನಿರ್ಮೂಲಂ ಕಿಡಿಸಿ: **ಆದಿಪು,** ೧೬. ೪೯ ವ)

**ಬಾದರರೂಪ** – [ಜೈನ] ಸ್ಥೂಲ ರೂಪ (ಬಾದರರೂಪದಿಂದೆ ಕೊಲ್ಲದ ಪರನಾರಿಗಾಟಿಸದ ಕಳ್ಳದ ಅಸತ್ಯದೊಳೊಂದಾಗಳುಂ ಕುದುದಪತೃಷ್ಣೆಯಂ ಕುಸಿದು ಮಾಣಿಸುವ ಅಯ್ದುಂ ಅಣುವ್ರತಂಗಳಂ .. .. ತಾಳ್ದಿ: **ಆದಿಪು,** ೬. ೭)

**ಬಾದವಣ** – ಗವಾಕ್ಷಿ (ಬಾದವಣಂ ವಾತಾಯನಂ ಗವಾಕ್ಷಂ ಜಾಳಂ: **ಅಭಿಧಾವ,** ೧. ೧೦. ೧೧)

**ಬಾದವಣಂಬೋಗು** – ತೂತಾಗು (ಪೂಗಣೆಯಿಂ ಬಾದವಣಂಬೋಗಿರೆ ಹೃದಯಂ ನಿರರ್ಗಳಂ ಕವಿದಪುವು .. .. ದೀರ್ಘನಿಶ್ವಾಸಂಗಳ್: **ಆಚವರ್ಧ,** ೬. ೧೫)

**ಬಾದು** – [ವಾದ] ಮಾತು (ತಿಱಿಕಲ್ಲಾಡುವ ಬೊಟ್ಟುವೋರಿಸುವ ಸೆಡಂ ಪೊಯ್ವ ಬಾದಿಂಗೆ ಕೈನಿಱಿದೆರ್ದಾಡುವ: **ಸುಕುಮಾಚ,** ೨. ೬)

**ಬಾದುಗುಟ್ಟು** – ತರ್ಕಮಾಡು (ಪರಮನ ಪೋಲ್ವೆವಿ ಬರ್ಪಂತಿರೆ ತನ್ನೊಳ್ ಬಾದುಂಗುಟ್ಟಿ ಸುರಡಿಂಬರ್ ಬಿತ್ತರಿಸಿದ ವಿಕ್ರಿಯೆಯೊಳ್ಪಂತಿರೆ ಸಹಜಾತಿಶಯದಿಂದೆ ಸೊಬಗಂ ಸೋಲ್ವರ್: **ಅನಂತಪು,** ೬. ೧೧)

**ಬಾದುಗೆಯ್** – ಬಾದುಗುಟ್ಟು (ಪುರೋಪವನದೊಳಿರ್ದ ಮತಿಸಾಗರಮುನಿಪತಿಯೊಳ್ ಬಾದುಗೆಯ್ದು: **ಆದಿಪು,** ೩. ೭೫ ವ)

**ಬಾದುಬ್ಬೆ** – ಬಾದುಬ್ಬೆ, ಒಂದು ದೇವತೆಯ ಹೆಸರು (ಅಂದಿಂದಿತ್ತ ಬಾದುಬ್ಬೆಯ ಪರ್ವಮುಂ ಪಗರಣದಾಟಮುಂ ಆದುವು: **ವಡ್ಡಾರಾ,** ಪು ೧೧೮, ಸಾ ೨೨)

**ಬಾಧೆ** – ಹಿಂಸೆ, ಕಾಟ (ಇಂಚೆಯ ಪಸವಿನ ಬಱದ ಕಳಿಂಚಿನ ಡಾವರದ ಬಾಧೆಯಿಲ್ಲದ ಪದದೊಳ್ .. ಇರ್ದುವಾ ನಾಡೂರ್ಗಳ್: **ಪಂಪಭಾ,** ೮. ೫೧)

**ಬಾನ್** – ಕುಂಬಾರಿಕೆ, ಆಕಾಶ, ಬೆರಣಿಯ ರಾಶಿ (ಬಾನದ– ಕುಲಾಲಕರಣೇ ಆಕಾಸ ಗೋಮಯಪಿಂಡ ಪುಂಜಯೋಃ: **ಶಬ್ದಮದ,** ಧಾ. ೪೪೪)

**ಬಾನಂಗುಳಿಗೆ** – ಬೆರಣಿ (ನಕಾರಕ್ಕೆ: ಮೀನಂಬುಳ್, ಬಾನಂಗುಳಿಗೆ: **ಶಬ್ದಮದ,** ೧೮೩, ಪ್ರ ೨); ನಕ್ಷತ್ರ ಮಂಡಲ (ಕೆನ್ನೆತ್ತರೊಳ್ ಒರ್ವರೊರ್ವರಂ ತಳ್ಕಿಱಿದುಂ ಬೊಬ್ಬಿಱಿದುಂ ತ್ರಿಪುಂಡ್ರಮಿಟ್ಟುಂ ಕೂಕಿಱಿದುಂ ತೇಗಿಯುಂ ಸಸಿನೆವರಿದುಂ (ಡಿಎಲ್ಎನ್ ಒಪ್ಪಿದ ಪಾಠ] ಬವಳಿವರಿದುಂ ಬಾನಂಗುಳಿಗೆವರಿದುಂ ಸೂಟ್ವರಿದುಂ ಆಡುವಾಗಳ್ ಉಭಯಬಲಂಗಳ್: **ಪಂಪಭಾ,** ೧೨. ೧೫೮ ವ)

**ಬಾನಲ್** – ಧಾರೆ (ಪೊದಳ್ದ ಕಣ್ಬನಿಯ ಬಾನಲ ತಣ್ಣಸದೊಳ್ ಪಗಿಲ್ತು ಪಾವಸೆಗೊಳೆ .. .. ಪೆಣ್ಣ ಜೋಹದವೊಲೊಪ್ಪಿದಳ್ ಒರ್ವಳನಂಗರಾಗದಿಂ: **ಶಾಂತಿಪು,** ೮. ೮೮); ನೀರಿನ ಕುಂಟೆ (ನಾನಲುಮಂ ಬಾನಲುಮಂ .. .. ಬಳ್ಳಿಯುಮಂ ಕಳ್ಳಯುಮಂ ಕಳೆದು ಪೋಗಿ: **ಲೀಲಾವತಿ,** ೬. ೧೬ ವ); ಮಸುಕು (ಉಣ್ಮೆ ಬೆಮರ್ ನಸುಬಾನಲಾದ ಬೊಟ್ಟೆಂಬಿವು ಕೂಟದೊಂದು ಸವಿಯಂ ಪಿಸುಣಾಡುವುವೀ ಲತಾಂಗಿಯಾ: **ಚಂದ್ರಪ್ರಪು,** ೮. ೭೨)

**ಬಾನಲ್ಗೊಳ್** – ಕಾಂತಿಹೀನಗೊಳ್ಳು (ಬೆಳ್ಪೇಱೆ ಬಾನಲ್ಗೊಂಡ ವದನಮಂಡಲಂ .. .. ಜಡತೆಗೆಡೆಯಾದ ಯಾನಮುಂ ಬೆರಸು ಮೆಲ್ಲನಲ್ಲಿಗೆ ವಂದು: **ಕುಸುಮಾಕಾ,** ೧೩. ೪೬ ವ)

**ಬಾನಲ್ವೊರೆ** – ಕಣ್ಣೀರ ಧಾರೆಯಿಂದ ಕೂಡಿರು (ವ್ಯಸ್ತ ಭೃಂಗಾಳಕಂ ಪ್ರಸ್ಖಳಿತೋದ್ಯದ್ವೇಣಿ ಬಾನೊಲ್ವೊರೆದಮಳ ಕಪೋಳಸ್ಥಳಂ: **ಶಾಂತೀಶ್ವಪು,** ೧೧. ೬೯)

**ಬಾನಲ್ವರಿ** – ಧಾರೆಯಾಗಿ ಸುರಿ (ಕಣ್ಣಿರೆ ಬಾನಲ್ವರಿದು ಬೆಳಪ ಮೈ ಮೈಯ ಸಂತಾಪದಿಂ ಬಾಡವ ವಕ್ತ್ರಂ: **ಜಗನ್ನಾವಿ,** ೧೧. ೬)

**ಬಾನಾಡಿ** – ಟಿಟ್ಟಿಭ ಎಂಬ ಹಕ್ಕಿ (ಶಿಖಿ ಶುಕಂ ಬಾನಾಡಿ ಪೆರ್ಬಕ್ಕಿ ಹೆಂಗುರು ಕಾಕಂ ಚಿಲುಕೂಲಿ ರತ್ನಖಗಮಿರ್ಕುಂ ತದ್ವನಾಗೌಘದೊಳ್: **ರಾಜಶೇವಿ,** ೫. ೫೯)

**ಬಾನುದ್ದಂ** – ಆಕಾಶದಷ್ಟು ಎತ್ತರ (ಕುಧರೊಡನೆ ನೃಪಾಸ್ಥಾನದೊಳಿರ್ದಪ್ಪೆನೆಂದು ಕುಕವಿಕದಂಬಂ ಬಾನುದ್ದಮಪ್ಪುದೇಕೆ: **ಲೀಲಾವತಿ,** ೧. ೨೬)

**ಬಾನೆಡೆ** – ಆಕಾಶ ಪ್ರದೇಶ (ಬಗ್ಗಿಪ ಕೋಗಿಲೆಯೆಂಬ ಪೊಯ್ ನಿಸ್ಸಾಣದ ಬಲ್ಲರಂ ಕಿವಿಯ ಬಾನೆಡೆಯಂ ಬಳಸಿತ್ತು ಬೇಗದಿಂ: ಕಬ್ಬಿಗಕಾ, ೧೫೩)

**ಬಾನ್ನವಿರ** – ಆಗಸದಲ್ಲೆಲ್ಲ ಕೂದಲಿರುವವನು, ಶಿವ (ಬಾನ್ನವಿರಂ ಒಳ್ವರಿಜಂ ತಳೆದೊಪ್ಪಿ ತೋಱಿದಂ: **ಶಬರಶಂ,** ೫. ೯)

**ಬಾಪು** – ಮೆಚ್ಚಿಗೆಯ ಉದ್ಗಾರ (ಉತ್ತುಂಗಂ ಬಾಪೆಂದು ಧಾತ್ರಿ ಕೈಮುಗಿವಿನೆಗಂ ಉಪವಾಸದೊಳ್ ನೆಗಟ್ಟಿಂ ಪ್ರೋಷಧೋಪವಾಸನೆಂಬ ನಾಲ್ಕನೆಯ ಶ್ರಾವಕನಕ್ಕುಂ: **ಧರ್ಮಾಮೃ,** ೫. ೯೨ ಮತ್ತು ೯೨ ವ)

**ಬಾಪುರಿ** – ನಾಗಮುರಿಗೆ (ಉಜ್ವಳಿಪ ಗೊಜ್ಜಗೆಯ ಸಜ್ಜುಕದ ಚಳಿಕಿಗೆಯ ನಜ್ಜಗೆಯ ಪಜ್ಜಳಿಪ ಬಜ್ಜರದ ಬಾಪುರಿಯ: **ರಾಜಶೇವಿ,** ೧೦. ೫೭ ರಗಳೆ)

**ಬಾಪ್ಪು** – ಮೆಚ್ಚಿಗೆಯ ಉದ್ಗಾರ (ಅರೆಹೋಯಜ ಬಾಪ್ಪೆಂದು ಹರಿಗನಂ ಗುರು ಪೊಗಟ್ಟಿಂ: **ಪಂಪಭಾ,** ೨. ೬೦)

**ಬಾಯ್** – ಬಾಯಿ (ಬೇತಾಳಂಗಳ್ ಮೊಱೆದು ತೆಱೆದು ಬಾಯ್ಗಳಂ ಆ ಪಾತಾಳಬಿಲಂಗಳವೋಲ್ .. .. ಕುಣಿಯೆ ಭಯಮಯನಾದೆಂ: **ಕವಿರಾಮಾ,** ೩. ೧೯೩); ಬಿರುಕು (ಮೇಲ್ವಾಯ್ದು ಪೊಯ್ದತ್ತು ಕೈಯೇಱಿಡೆಯಿಂ ಬಾಯೇಱ ಬಾಯಿಂದೊಡನೆ ರುಧಿರಮುಂ ಕಂಡಮುಂ ಸೂಸುವನ್ನಂ: **ಪಂಪರಾ,** ೨. ೫೫)

**ಬಾಯಂಬಡಿ** – ದಬಾಯಿಸು (ಪೆಱರ ಬಯ್ಗುಳಂ ಸೈರಿಸುವುದರಿದೊ ಪೆಱರೊಡನೆ ಬಾಯಂಬಡಿವುದರಿದೋ: **ಧರ್ಮಾಮೃ,** ೭. ೪೬ ವ)

**ಬಾಯಂ ಬಿಡು** – ಹಲುಬು (ಕಿನ್ನರರ್ ಇನ್ನಾರ ಮಱೆಯಂ ಪುಗುವಮೆನೆಯುಂ ಕಿಂಪುರುಷರ್ ಕಾಪುರುಷರಂತೆ ಬಾಯಂ ಬಿಡೆಯುಂ: **ಪಂಪಭಾ,** ೫. ೮೮ ವ)

**ಬಾಯನೆ ಬಿಡು** – ಬಾಯಂಬಿಡು (ಬಿಡೆ ಪಿಣಿಲಂ ಕುರುಧ್ವಜಿನಿ ತೊಟ್ಟನೆ ಬಾಯನೆ ಬಿಟ್ಟುದು ಅಂದು ಗಂಡುಡೆಯುಡೆ ಗಂಡುಗೆಟ್ಟುದು: **ಪಂಪಭಾ,** ೮. ೧೦೧)

**ಬಾಯನ** – ಕಾಣಿಕೆ (ಬರ್ಪುದು ಬಾಯನಕೆಂದು ದಿಗ್ವಧೂತತಿಯನೆ ಪೌರಲಕ್ಷ್ಮಿ ಕರಪಲ್ಲವದಿಂ ಕರೆವಂದಮಾಯ್ತು: **ಕುಸುಮಾಕಾ,** ೬. ೧೦೬)

**ಬಾಯ ಬಿಯಗ** – ಮಾತಾಡುವ ನಿರ್ಬಂಧ (ದೇವರ್ಕಳ ಬಾಯ ಬಿಯಗಮಂ ಕಳೆಯಿಸುವ್ಯೆ: **ಅನಂತಪು,** ೧೩. ೩೬)

**ಬಾಯಟೆ** – ಬಾಯಿ ಸೋಲು (ಕಾದಂಬರಿಯನುಟಿದು ಎತ್ತವೋಪೆ ಎಂದು ಬಾಯಟೆದು ಪಟವಿಸುತ್ತುಮಿರ್ದಳ್: **ಕಾದಂಸಂ,** ೭. ೨೫ ವ); ಪ್ರಲಾಪಿಸು (ಛಾಯಾಲಕ್ಷ್ಯಮನೊಡ್ಡಿಯುಂ ಆಯದ ನೀರೊಳಗೆ ತನ್ನನಡಸಿದ ನೆಗಟಿಂ ಬಾಯಟೆವಿನಂ ಇಸಿಸಿಯುಂ: **ಪಂಪಭಾ,** ೨. ೬೦)

**ಬಾಯಾರ್** – ಕೂಗಾಡು (ಧರ್ಮಬುದ್ಧಿ ತತ್ಕೂರ್ಮೆಗಿಡಲ್ನುಡಿದು ನೀಂ ಗೆಲೆ ಬಾಯಾರ್ದು ಪೋಗಲ್ವಡೆಯೆ ವಿಚಾರಗೆಯ್ವಮೆಂದು, ಧರ್ಮಾಧಿಕರಣರಲ್ಲಿಗೆ ಬಂದಿರ್ವರುಂ ತತ್ಪ್ರಪಂಚಮೆಲ್ಲಮಂ ಸವಿಸ್ತರಂ ನುಡಿದು: **ಪಂಚತಂತ್ರ,** ೨೩೭ ವ)

**ಬಾಯಿನ** – ಕಾಣಿಕೆ, ಬಾಗಿನ (ಕೇಸರಂ ಬೆರೆಸಿದ ಪೊನ್ನ ಬಾಯಿನದ ಬಟ್ಟಲಿವೆಂಬಿನಂ ಆರ್ದ್ರಕೇಸರಂ ಬೆರೆಸಿದ ಚೆಲ್ವು ತಳೆಸಳದೇನೆಸದಿರ್ದುದೊ ಕರ್ಣಿಕಾರದಾ: **ಆದಿಪು,** ೧೧. ೧೧೭)

**ಬಾಯೊಱ಼್** – ಬಾಯಲ್ಲಿ ನೀರು ಒಸರು (ಸಿಂಹಂ ಮಱುಗುತ್ತಂಬಟ್ಟು ಗೊಂಕರ ಕಟ್ಟೆಯಂ ಬಯಸಿ ಬಾಯೊಱೆತು ತನಗನುಚರನಪ್ಪುದೊಂದು ನರಿಗೆ ಪೇೞ್ವುದುಂ: **ಪಂಚತಂತ್ರ,** ೪೦೭ ವ)

**ಬಾಯ್ಕುಟ್ಟು** – ಹರಟೆ ಹೊಡೆ (ಸದ್ದೃಷ್ಟಿಯೆ ಬಾಯ್ಕುಟ್ಟದೆ ಕಾಣ್ಗುಂ ಧರ್ಮದ ಬಟ್ಟೆಯ ನೆಱ್ ಕಾಣಲಱೆವನಕ್ಕು ಮದಾಂಧಂ, **ನೇಮಿನಾಪು,** ೪. ೫೫)

**ಬಾಯ್ಕೇಳ್** – ವಿಧೆಯನಾಗಿರು (ಅಗುರ್ವಿಸುವ ಆಜ್ಞೆಗಮಳ್ಕಿ ಮುನ್ನೆ ಬಾಯ್ಕೇಳಿಸಿದರಾತಿ ಮಂಡಳಿಕರ್: **ವರ್ಧಮಾಪು,** ೨. ೮)

**ಬಾಯ್ಕೇಳಿಸು** – ವಶಪಡಿಸಿಕೊ, ಆಜ್ಞಾಧೀನನಾಗಿಸು (ಸೇನಾನಾಯಕಂ ಮ್ಲೇಚ್ಛಖಂಡಮಂ ಪ್ರದಕ್ಷಿಣಂಗೆಯ್ದು ಬಾಯ್ಕೇಳಿಸಿ: **ಆದಿಪು,** ೧೩. ೩೯ ವ)

**ಬಾಯ್ಗಾಳೆಗ** – ಮಾತಿನ ಕಾಳಗ (ಆಂ ಬಿಲ್ಗಾಳೆಗಮೆಂದೇ ಬಗೆದೆಂ ಬಾಯ್ಗಾಳೆಗಮನೀಗಳಱೆದೆಂ: **ಶಾಂತಿಪು,** ೪. ೫೦ ವ)

**ಬಾಯ್ಗೂಟ** – ಚುಂಬನ (ಮಸಪ ನಸುಲಜ್ಜೆಯಂ ಮಾಣಿಸಿದುದು ಬಾಯ್ಗೂಟದಿಂಪು: **ಚಂದ್ರಪ್ರಪು,** ೬. ೮೩)

**ಬಾಯ್ಗೂಡು** – ಹರಿತಗೊಳಿಸು (ಬಾಯ್ಗೂಡಿದುದಾ ಕುಸುಮಾಸ್ತ್ರನ ಚಕ್ರಮಿದೆಂಬೆಸಕಮನಾಳ್ದತ್ತು ಪಸದನದಂ ದ್ರೌಪದಿಯಾ: **ಪಂಪಭಾ,** ೩. ೪೭): ಚುಂಬಿಸು (ಸಾರ್ಚಿ ಬಾಯ್ಗೂಡಿ ವಿಲಾಸದಿಂ ಕೆಲೆವ ಪಾರಿವಂ .. .. ಕುಕಿಲ್ವ ಪಿಕಂ ವಿಯೋಗಿಗೇಂ ಮಾಡದೆ ಪೋಕುಮೇ ಮದನನಂಡಲೆಯಂ: **ಶಬಶಂವಿ,** ೧. ೫೨)

**ಬಾಯ್ಗೆಯ್** – ಬಾಯಿ ಮಾಡು, ಕೂಗಾಡು (ಪೊರಳೆ ವಾರಿಧಿಗಳ್ ಕಲಂಕಿದುವೆರ್ದೆ ಮೆಯ್ಯನುದಗ್ರಮಂದರಂ ಅದಂದಲುಗಿತ್ತು ಬಾಯ್ಗೆಯೆ ದಿಗ್ಗಜಂ .. .. ಪೆಂಪಿದೇಂ ಪಿರಿದಾಯ್ತೊ ದೈತ್ಯವರಾಹನಾ: **ಪಂಪಭಾ,** ೮. ೧೫)

**ಬಾಯ್ದಾರೆ** – ಹರಿತವಾದ ಅಲಗು (ಬಾಳ ಬಾಯ್ದಾದಾರೆಯ ಸೋಂಕೆಂದು ಕದಳಿದಳಸ್ಪರ್ಶನಕ್ಕೆ ದರ್ಪಂಗೆಟ್ಟು ಒಪ್ಪಂಗುಂದುತ್ತುಂ: **ಗಿರಿಜಾಕ,** ೪. ೧೦೮ ವ)

**ಬಾಯ್ದೆಱ್** – ಮಾತಾಡು (ಪದಕೊರಲ್ ಇಂಪಂ ಅಪ್ಪುಕೆಯೆ ಕೊಂಕು ನಯಂ ಗಮಕಂಗಳಿಂ ಪೊಡರ್ ಕೊದಳ್ ಎಱಿದಿಕ್ಕಿದಂತೆ ಸುತಿಯೊಳ್ ಸಮವಾಗಿರೆ .. .. ಮೇನಕೆ ಸರಸ್ವತಿ ಬಾಯ್ದೆಱೆದಂತೆ ಪಾಡಿದಳ್: **ಪಂಪಭಾ,** ೭. ೮೮); ಹಂಬಲಿಸು; ತುಟಿ (ಮಿಸುಗುವ ತನ್ನ ಬಾಯ್ದೆಱೆಯೊಳಾಲದ ಪಣ್ಣನೆ ಮೈಯ ಬಣ್ಣದೊಳ್ ಕೊಸಗನೆ .. .. ಪೋಲ್ತು: **ಆದಿಪು,** ೧೨. ೩೮)

**ಬಾಯ್ವಸ** – ಬಾಯಿಯ ಬಯಕೆ (ಬಾಯ್ವಸವೋಡದಂತೆ ಅಡರೆ ಚುಂಬಿಸೆಯುಂ ಬಗೆದೆಂತು ತಳ್ತೊಡಂ ಮೆಯ್ವಸವೋಡದಂದಪ್ಪು ಗಡ ಕಣ್ಬೆಸವೋಡದಿದೆಂತು ನೋಡೆಯುಂ: **ನೇಮಿನಾಪು,** ೬. ೭)

**ಬಾಯ್ವೆಸ** – ಬಾಯಿಯ ಕೆಲಸ, ಚುಂಬನ ಇತ್ಯಾದಿ (ಮೆಯ್ವೆಸದಿಂ ಕೆಯ್ವೆಸದಿಂ ಬಾಯ್ವೆಸದಿಂ ಮಂತ್ರತಂತ್ರದಿಂದಂ ಸುಖಮಂ ಮೆಯ್ಯಿಡೆ ವನಿತೆಗೆ ಪಡೆದಾಮೋಯವೋಗಕ್ಕೆಳಸಿ ಸೋಲ್ವನಟ್ಟುವೊಜಂಗಂ: **ಕಾವ್ಯಾವಲೋ,** ೬೭)

**ಬಾಯ್ಸವಿ** – ಮಧುರವಾದುದು (ಬಾಯ್ಸವಿಗೆ ಮೆಯ್ಸವಿ ಕಣ್ಸವಿಯಪ್ಪ ರೂಪು: **ಶಬ್ದಮದ,** ೭೮ ಪ್ರ ೯); ಬಾಯಿ ರುಚಿ (ಬಾಯ್ಸವಿಯ ನಾಲಗೆಯಿಂದೊಕ್ಕನೆ ಸವಱುತ ಮುಂಗಾ ಒನಿಯೊಳು ಮಿಕ್ಕಿರ್ದವಾ ಪುಲಿವಿಂಡು: **ಅನಂತಪು,** ೧೨. ೪೧)

**ಬಾರ್** – ಚರ್ಮ (ನೀರೊಳ್ ನೀರಿಟೆವನಲ್ಲ ಪಂದಿಯ ಬಾರಂ ಕೊಱೆದದಱ ನೆತ್ತರೊಳ್ ನೀರಿಟೆದೆಂ: **ಸೂಕ್ತಿಸುಧಾ,** ೩. ೨೨೬); ಚಾವಟಿ (ಗೀರ್ವಾಣ ಮುನಿ ಪೊಱಮಡುತ್ತುಂ ಸಾಣೆಯ ಬಾರಂತೆ ಪೋದ ಕೆಯ್ಯೊಳೆ ಮಗುಟ್ದಿಂ: **ಅನಂತಪು,** ೧೩. ೨೩); ಲಗಾಮು (ಅನ್ನೆಗಂ ನಕುಳನುಂ ಅಂಕವಣೆಯುಂ ಬಾಳುಂ ಬಾರುಂ ಚಮ್ಮಟಿಗೆಯುಮಂ ಒರ್ವ ಕೀಟಾಳಿಂ ಪಿಡಿಯಿಸಿಕೊಂಡು ಬಂದು: **ಪಂಪಭಾ,** ೮. ೫೪ ವ); ಚರ್ಮಸುಲಿದು ಪಟ್ಟಿಗಟಿಮಾಗಿಸು, ನೀರನ್ನು ಬಸಿ (ಬಾರ್–ಚರ್ಮವಲ್ಲೀಕರಣೇ ದ್ರವದ್ರವ್ಯನಿರ್ಮುಕ್ತೌ: **ಶಬ್ದಮದ,** ಧಾ ೫೯೦)

**ಬಾರ್ಗುತ್ತ** – ಒಂದು ಜೂಜಾಟ (ನೆತ್ತಂ ಚದುರಂಗಂ ಬಾರ್ಗುತ್ತಂ ಕಡದೊಂಟಿ ಗೊಟ್ಟಿ ಜೂದೆಂಬಿವಂ ಆಡುತ್ತುಮಿರಲಾಗದು: **ಸಮಯಪ,** ೬. ೪೮)

**ಬಾರ** – [ದ್ವಾರ] ಬಾಗಿಲು (ಶ್ರೀದ್ವಾರಂ–ಸಿರಿದರಂ, ವಿಕಲ್ಪದಿಂ ಸಿರಿಯವಾರಂ, ಸಿರುಯಬಾರಂ; ವಕ್ರದ್ವಾರಂ–ವಂಕದರಮ, ವಂಕದಾರಂ, ವಂಕಬಾರಂ: **ಶಬ್ದಮದ,** ೩೧೧ ಪ್ರ)

**ಬಾರವಟ್ಟಿಗೆ** – [ದ್ವಾರಪಟ್ಟಿಕಾ] ಬಾಗಿಲ ಚೌಕಟ್ಟು (ಬಕುಳದ ಬೋದಿಗೆಗಳಿಂ ಬಂಧೂಕದ ಬಾರವಟ್ಟಿಗೆಗಳಿಂ ಕೇತಕಿಯ ಕಂಟವಲಗೆಗಳಿಂ: **ಕುಸುಮಾಕಾ,** ೧೨. ೧೫೭ ವ)

**ಬಾರಸ** – ದ್ವಾದಶ (ಒಗೆಯೆ ಕವಿಲ್ತ ಕಾಸೆ ಪೊಸ ಜನ್ನಿವರಂ ಶಿಖಿ ಕೋವಣಂ .. .. ಬಾರಸದ ಬೊಟ್ಟು: **ನೇಮಿನಾಪು,** ೬. ೨೪)

**ಬಾರಸಿ** – ದ್ವಾದಶಿ (ತತ್ಕಾಲದೊಳ್ ಮಾಘ ಬಹುಳ ಬಾರಸಿ ವಿಶ್ವಯೋಗದೊಳ್ ತ್ರಿಜ್ಞಾನಧರ ಪುಟ್ಟೆ: **ಚಾವುಂಪು,** ೨೫೧, ಸಾ. ೧೯)

**ಬಾರಿ** – ಸರದಿ (ತಳವಱ ಕಳ್ಳರ ಬಾರಿಯೊಳೊಳಗಾಗದೆ ನಿನ್ನ ಬರ್ದುಕಿ ಬಂದಂದಂ ಇದು ಆರಳವು ಈಗಳುಂಬಮಂಬುಜದಳಾಕ್ಷಿ ಪೋಗಬ್ಬೆ ಬೇಗಂ ಎಂಬುದುಂ: **ಸುಕುಮಾಚ,** ೭. ೨೪); ಆಕ್ರಮಣ, ದಾಳಿ (ತಳವಱ ಕಳ್ಳರ ಬಾರಿಯೊಳೊಳಗಾಗದೆ ನಿನ್ನ ಬರ್ದುಕಿ

ಬಂದಂದಮಿದಾರಳವು: **ಸುಕುಮಾಚ,** ೭. ೨೪); ದವಡೆ (ಅರಣ್ಯದೊಳ್ ಚರಿಯಿಪ ರೌದ್ರರಾಕ್ಷಸರ ಬಾರಿಗೆ ಬಿಟ್ಟಿಳೊಕಾಂತೆ ಎಂದು ಭೂವರ ಕುಸುಮೇಷುದೂರಿಸಿ ಪಲುಂಬಿದಂ: **ಕುಸುಮಾಕಾ,** ೧೪. ೧೧೪); ಕಾಮೋದ್ರೇಕ (ಪುಗಿಲಂ ಪೋರಿಯಂ ಬಾರಿಯಂ ಸನ್ನೆಯಂ ನೂಱುವಮರ್ಚುವ ನಿಲ್ವೆಡೆಯುಂ ಬಗೆಯಂ ತೆಗೆಯನಲ್ಲಾಟಮಂ .. .. ನೀಂ ಬಲ್ಲೆ ಬೇಂಟಿಕಾಱರೊಳೆಲ್ಲವಾನೆ ಬಲ್ಲೆಂ: **ಪಂಪಭಾ,** ೫. ೪೩); ಕಾಮಕ್ರೀಡೆ (ಮುದುಪಂ ಗಡ ಕೊಟ್ಟನೊತ್ತೆಯಂ ಗರಗರನಾಯ್ತು ಬಲ್ಮೆ ಮುದುಗೂಗೆಯ ಬಾರಿಗೆ ಕೇನೆ ತಾನೆನೆಮ್ಮೆಗರೆದೆನಗೊತ್ತೆಗೊಟ್ಟ ಸುಖ ಮಾಱೆವೆವಟ್ಟದನ್ನಕ್ಕ ಬಟ್ಟಿಪೆಂ: **ಸೂಕ್ತಿಸುಧಾ,** ೮. ೪೨೨); ಆಹುತಿ, ಬಲಿ (ಆತನಂ ಪವಮಾನಸೂನು ಬಾರಿಯ ನೆವದಿಂ ಪೋಗಿ ಪೀನಾಶಂಗಾಪೋಶನಮನಿತ್ತು ಮತ್ತಂ ಬರೆ: **ಕರ್ಣನೇಮಿ,** ೯. ೫೨ ವ); ಖೆಡ್ಡಾ (ಗಂಧಹಸ್ತಿಯೊಡನೆ ಬಾರಿಯೊಳ್ ಮೂವತ್ತೆರಡು ಗಜಕ್ರೀಡೆಗಳಿಂದಂ ನೀಡುಂ ಬೇಗಂ ಕ್ರೀಡಿಸಿ: **ವಡ್ಡಾರಾ,** ಪು. ೩೪, ಸಾ ೧೪)

**ಬಾರಿಕ** – ಸರದಿಯನ್ನು ತಿಳಿಸುವವನು (ಬಾಯಾಳುವೆಂಬ ಬಳ್ಳುಮಂ ಬಾರಿಕನಂ ಮಾಡಿ ಪಲಕಾಲಂ ಸಲುತುಮಿರ್ಪುದುಂ: **ಪಂಚತಂತ್ರ,** ೧೪೪ ವ)

**ಬಾರಿಸು** – ತಪ್ಪಿಸು, ತಡೆ (ಅಭಿನವನೀಹಾರದ ಬೆಳ್ಪನೆ ಬಾರಿಸಿ ಬಾರಿಸಿ ಪಾಂಡುಕಶಿಲಾತಳಂ ಸೊಗಯಿಸುಗುಂ: **ಆದಿಪು,** ೭. ೭೪); ಪರಿಹರಿಸು (ಭೀಮಸೇನನ ಮಹಾಪ್ರತಿಜ್ಞೆಯುಮಂ ಆರ್ಗಂ ಬಾರಿಸಲ್ಬಾರದು ಕೆಯ್ಗಟಿದ ಮನೆವಾಟ್ಟೆ ಬುದ್ಧವೇಟಲೆಡೆಯಿಲ್ಲ: **ಪಂಪಭಾ,** ೭. ೧೬ ವ); ಎಚ್ಚರಿಸು (ಅದೆಂತೆಂದೊಡ್ಡಿಪ್ಪರ್ ಬಾರಿಸಿದೊಡಂ ಮಾಣದೆ ದುಷ್ಪರನೊಳಕೊಂಡು ಕೆಟ್ಟರ ಕಥೆಗಳಂ ಪೇಟ್ವೆಂ ಕೇಳಿಮೆಂದಿಂತೆಂದಂ:: **ಪಂಚತಂತ್ರ,** ೧೯೩ ವ)

**ಬಾರೆತ್ತು** – ಚರ್ಮ ಸುಲಿ (ಬಾರೆತ್ತಿ ಸೀಟಿಯುಂ ಗುಗ್ಗುಳಂಬೊತ್ತಿಸೆಯುಂ ಅಸಗವೊಯಲ್ವೊಯ್ಯೆಯುಂ; **ಅಜಿತಪು,** ೧೧. ೧೧ ವ)

**ಬಾರೇಟಿ್** – ಚರ್ಮ ಕಿತ್ತು ಬರು (ಕಾಲಿಂ ಬಾರೇಟೆ ಬದಗಂ ಒದೆದೊಡೆ ಕೇರೆ ಪೊರಳ್ವಂತೆ ಕಾಲ ಮೇಲೆ ಪೊರಳ್ದಳ್: **ಯಶೋಧಚ,** ೨. ೫೦)

**ಬಾರ್ಗುತ್ತ** – ಜೂಜಾಟ (ನೆತ್ತಂ ಚದುರಂಗಂ ಬಾರ್ಗುತ್ತಂ ಕಡದೊಂಟಿ ಗೊಟ್ಟಿ ಜೂದೆಂಬಿವನಾಡುತ್ತುಂ ಇರಲಾಗದು ಆಗಮದತ್ತಲ್ ಮನಮಾಗೆಪೊಟ್ಟುಗಳೆವನೆ ಚದುರಂ: **ಸಮಯಪ,** ೬. ೪೮)

**ಬಾರ್ಚು** – ತಲೆಗೂದಲು ತಿದ್ದು (ಪಸರಿಸಿ ಪಂದಲೆಯಂ ಮೆಟ್ಟಿಸಿ ವೈರಿಯ ಪಲ್ಲ ಪಣಿಗೆಯಿಂ ಬಾರ್ಚಿ ಪೊದಳ್ದೊಸಗೆಯಿಂ ಅವನ ಕರುಳ್ಗಳೆ ಮೊಸವಸಿಗಮಾಗೆ ಕೃಷ್ಣೆಯಂ ಮುಡಿಯಿಸಿದಂ: **ಪಂಪಭಾ,** ೧೨. ೧೫೫); ರಾಶಿಯಾಗಿಸು (ಬಾರ್ಚು–ಪುಂಜೀಕರಣೇ: **ಶಬ್ದಮದ,** ಧಾ ೨೦೫)

**ಬಾರ್ತೆ** – ಪ್ರಯೋಜನ (ಒದವಿದ ಜಸಮಂ ಉಪಾರ್ಜಿಸದ ಅಧಮನದೇತರ್ಕೆ ಬಾರ್ತೆ ಜೀವನ್ಮೃತಕಂ: **ಆದಿಪು,** ೧೨. ೯೭)

**ಬಾರ್ತೆಗಿಡು** – ಉಪಯುಕ್ತತೆಯನ್ನು ಕಳೆದುಕೊ (ನಡೆಗಿಡೆ ಕೀರ್ತಿ ಬಾರ್ತೆಗಿಡೆ ಲಕ್ಷ್ಮಿ ಮೊದಲ್ಗಿಡೆ ಮಾನಸಿಕ್ಕೆ ನೇರ್ಪಡುಗಿಡೆ ಸತ್ಯಶೌಚಗುಣಸಂಪದವೇಳಿದನಾದಂ: **ಪಂಪರಾ,** ೯. ೮೫)

**ಬಾರ್ತೆಗೆಯ್** – ಗಮನಿಸು, ಲಕ್ಷಿಸು (ಉನ್ಮದ ಮಧುಕರ ಝೇಂಕಾರಮಂ ಕೌಮುದೀಸಂಪದಮಂ ಪುಂಸ್ಕೋಕಿಲ ಆಲಾಪಮಂ ಅಲೆವೆಲರಂ ಬಾರ್ತೆಗೆಯ್ಯಂ ಮನೋಜಂ: **ಮಲ್ಲಿನಾಪು,** ३. ೨೬)

**ಬಾಲ** – ಪ್ರಾಣಿಗಳ ಪುಚ್ಛ (ದುರ್ಜನ ಸ್ವಭಾವಮಂ ಕಂಡು ಯತ್ನದಿಂ ನಡಸುವೊಡಂ ನೈಜಗುಣಂ ಬಿಡದು; ಅದು ಎಹಗೆಂದೊಡೆ ನಾಯಬಾಲಮಂ ಕಾಸಿ ತಿರ್ದಿದೊಡಂ ಕೊಂಕು ಮಾಣದಹಗೆ: **ಪಂಚತಂತ್ರ,** ೧೭೩, ಶ್ಲೋಕ ೬೬ ಟೀಕೆ); ಎಳಸಾದುದು, ಮರಿ ಬಾಲಮೃಣಾಳಮಂ ಪಿಡಿದು ಕೀೞ್ವೊಲಶ್ರಮದಿಂ ಮನೋಭವ ವ್ಯಾಲಗಜೇಂದ್ರ ದಂತಯುಗಳಂಗಳಂ ಏಕೆಯೊ ಕಿಟ್ಟಿಂ: **ಪಂಪರಾ,** ೬. ३೦)

**ಬಾಲಕಾಲ** – ಎಳವೆಯ ಕಾಲ (ಮೃಗಶೃಂಗನೆಂಬೊಂ ತಾಪಸಕುಮಾರಂ ಆತಂ ಬಾಲಕಾಲಪರಿಗೃಹೀತ ತಾಪಸಾಚರಣಂ: **ಶಾಂತಿಪು,** ೭. ೪३ ವ)

**ಬಾಲಕೈತಕಶಿಖಾ** – ಎಳೆಯ ತಾಳೆಯ ಹೂವಿನ ತುದಿ (ಅವತಂಸೀಕೃತ ಬಾಲಕೈತಕಶಿಖಾ ಸಂದಿಗ್ಧ ಮುಗ್ಧಾಮೃತಾಂಶುವಿಹಾಯಸ್ಸರಿದಂಬುಚುಂಬಿತ ಜಟಾಜೂಟಾಂತರಂ: **ಪಂಚತಂತ್ರ,** ೨)

**ಬಾಲಗಚ್ಚೆ** – ಹಿಂದುಗಡೆಯ ಕಚ್ಚೆ (ಕೆಂದಳಿರ್ಗೊಂಚಲ ವಲ್ಲಣಂ ಪ್ರವಾಳದಂತೆಸೆವ ಬಾಲಗಚ್ಚೆ ಬಲಕಿಕ್ಕಿದ ಚಂಪಕಮಾಲೆ ಶೋಭೆಯಂ ಬಳೆಯಿಸೆ ನಿಂದ ನಚ್ಚಣಿಯ ಭಾವಮಂ ಆವನೊಱಲ್ದು ನೋಡಿದಂ: **ಲೀಲಾವತಿ,** ೧೧. ೬೫)

**ಬಾಲದುಡಿಗೆ** – ಮಕ್ಕಳ ಆಭರಣ (ಆ ಬಾಲಕಂ ಬಾಲದುಡಿಗೆಗಳಂ ತೊಟ್ಟು ನಡೆಗಲ್ತೊಂದು ದಿವಸಂ ಗೋವ್ರಜಂಗಳೊಳ್ ಸೋಂಕುವುದನಾಂ ಕಂಡೆಂ: **ಪಂಚತಂತ್ರ,** ೨೫೪ ವ)

**ಬಾಲವತಿ** – ಬಾಣಂತಿ (ಮಾಡಿದರ್ ಮೆಱೆವಿನಮೊಲ್ದು ಬಾಲವತಿಗಂದು ಅಭಿಷೇಕಮಂ ಅಂಗನಾಜನಂ: **ಶಾಂತೀಶ್ವಪು,** ४. ೫೨)

**ಬಾಲಾತಪ** – ಎಳೆಬಿಸಲು (ಪೆಣ್ದುಂಬಿಗಳ್ .. .. ಅಶೋಕಮಂಜರಿಯಂ ಸಾರ್ವುವು ಪಲ್ಲವೋಲ್ಲಸಿತಮಂ ಬಾಲಾತಪಭ್ರಾಂತಿಯಿಂ: **ಮಲ್ಲಿನಾಪು,** ೨. ೨೭)

**ಬಾಲೇಂದುಶೇಖರ** – ಈಶ್ವರ (ಕೆಲವು ದಿವಸಕ್ಕೆ ಬಾಲೇಂದುಶೇಖರಶಕ್ವರಾಕಾರಮಂ ತಾಳ್ದಿ: **ಪಂಚತಂತ್ರ,** ೭೭ ವ)

**ಬಾವನ್ನ** – ಶ್ರೀಗಂಧ (ಕಂಪೊತ್ತರಿಸುವ ಬಾವನ್ನಮನಿತ್ತಂ ಕಾಣ್ಕೆಯಂ ಇಳಾಧಿಪಂಗೆ ಪುಳಿಂದಂ: **ರಾಜಶೇವಿ,** ೫. ೨೫)

**ಬಾವರಿ** – [ಜೈನ] ಮಧುಕರಯಾತ್ರೆ, ಚರಿಗೆಗೆ ಹೋಗುವುದು (ಈರ್ಯಾಶುದ್ಧಿಹೃಚ್ಛುದ್ಧಿಗಂ ಪ್ರಾದುರ್ಭಾವಮನೀಯೆ ಬಾವರಿಗೆವಂದಂ ಪಾರ್ಶ್ವಯೋಗೀಶ್ವರಂ: **ಪಾರ್ಶ್ವನಾಪು,** ೧೫. ೮೨)

**ಬಾವರಿವುಗು** – [ಜೈನ] ಚರಿಗೆಗೆ ಹೋಗು (ಈ ಮೆಯ್ಯಂ ನಿಱಿಸಲ್ವೇಡಿ ಪೊಟಲೊಳಗೆ ಚರಿಗೆವೊಕ್ಕು ಬಾವರಿವುಗುತ್ತುಂ ಬಂದು: **ವಡ್ಡಾರಾ,** ४೬, ಸಾ ೨೯)

**ಬಾವಿ** – [ವಾಪಿ] ನೀರಿಗಾಗಿ ತೋಡಿದ ಗುಂಡಿ (ಮಟಿಗಾಲಮುಂಟೆಂದು ತಪ್ಪಿದ ಜೋಯಿಸಂ ಬಾವಿಯ ನೀರನಡಕಿ ನಿರ್ವೊಯ್ದನೆಂಬ ಕಥೆಯಂತೆ: **ಪಂಚತಂತ್ರ,** ೧೯೭ ವ)

**ಬಾವುದೆವಸ** – ಪಾರಣೆ ದಿನ (ನಾಳೆ ಆವುದೆವಸದೊಳ್ ದೇವತೆಗೆ ಪರಕೆಗುಡುವಂ ಈತನಂ ಇಂದಿನ ದೆವಸಂ ಕಾದಿರಿಂ: ಜೀವಸಂ, ೩. ೩೬ ವ)

**ಬಾಷ್ಪ** – ಕಣ್ಣೀರು (ಕಟಿಲೆ ನಿಜಹರ್ಷ ಬಾಷ್ಪದ ಮಱಿವನಿ ಧರ್ಮಾನುರಾಗ ಮೇಘಧ್ವನಿವೋಲ್ .. .. ಎಱಂಕೆಯ ಪೊಯ್ ಘಳಿಲನೆ ಕೂಗಿದುವು: **ಯಶೋಧಚ,** ೪. ೩೭)

**ಬಾಷ್ಪಲವ** – ಕಣ್ಣೀರ ಹನಿ (ಎಲರುಗಿದೊಡೆ ಅಲರ್ವುಡಿ ತನ್ನಲರ್ಗಣ್ಣೊಳ್ ಸೂಸೆ ಮಲ್ಲಿಕಾವಧು ಬಂದುಂ ಬಲಿವೂದುವಂತೆಸೆಯೆ ಬಾಷ್ಪಲವಂ ಸುರಿವಂತೆ ಮಧುಕಣಂಬಿಡೆ ಮೆಱಿದಳ್: **ರಾಜಶೇವಿ,** ೧೦. ೨೭)

**ಬಾಸಣ** – ಭಾಷಣ (ದೋಸದ ಮಾತು ಪೊರ್ದದನೆ ಬಲ್ಲರಗ್ಗದ ಕನ್ನಡಂಗಳಿಂ ಬಾಸಣಮಾಗೆ ಪೇಟ್ದನೊಲವಿಂ ನೆಱಿ ಕಬ್ಬಿಗರೊಪ್ಪೆ: **ಕಬ್ಬಿಗಕಾ,** ೨೭೧)

**ಬಾಸಣಿಗೆ** – ಮುಚ್ಚಳ, ಹೊದಿಕೆ (ದುಗುಲದ ಬಾಸಣಿಗೆಯಂ ಕಳೆದು .. .. ಕಾದಂಬರೀದೇವಿಯಟ್ಟಿದ .. .. ಮಲಯಜವಿಲೇಪನಮುಮಂ ಅರಸಂಗೆ ತೋಱೆ: **ಕಾದಂಸಂ,** ೫. ೭೮ ವ)

**ಬಾಸಣಿಸು** – ಮುಚ್ಚು (ಬಾಸಣಿಸಿದ ಚಿನ್ನದ ಪೊಸವಾಸಣಿಗೆಯ ಪೊನ್ನ ಸಿವಿಗೆ ಮಣಿಮಯಕಳಶೋದ್ಭಾಸಿ ದೆಸೆದೆಸೆಯೊಳೆಸೆಯೆ: **ಆದಿಪು,** ೧೧. ೪೦)

**ಬಾಸರ** – ಮೆರುಗು (ನಿಜಾಂಶು ಪಾಸಿದ ದುಗುಲಕ್ಕೆ ಬಾಸರದ ಮಾಸರಮಂ ಕುಡೆ ಬಂದ ಯೋಗಿರೂಪದ ನಿಧಿಯಂ: **ಅನಂತಪು,** ೯. ೮೫); ಆಕರ್ಷಕ ವಸ್ತ್ರ (ಉಟ್ಟ ಬಾಸರದ ಬಂಬಲ್ ಡೊಳ್ಳು ಚೆಲ್ವಾಗೆ ಸಂಭಿನ್ನಶ್ರೋತೃಧರಾಮರಂ ನೃಪತಿಗಾಶೀರ್ವಾದಮಂ ಮಾಡಿದಂ: **ಶಾಂತೀಶ್ವಪು,** ೨. ೪೯)

**ಬಾಸಿಗ** – ಹೂ ಮಾಲೆ, ದಂಡೆ (ಸೂಡಿದ ಪಾರಿಜಾತದ ನಮೇರುವ ಬಾಸಿಗಮೊಯ್ಯನೊಯ್ಯನಿರ್ಪೋಡಿದುದು ಅಂದಿನಂಗರುಚಿ ಕಣ್ಗೆಳಿದಾಯ್ತು: **ಆದಿಪು,** ೩. ೩)

**ಬಾಸು** – ಮಲವಿಸರ್ಜಿಸು (ತುರಿಪದೆ ಕೊಂಡುಪೋಗಿ ಕರವತ್ತಿಯನೋತದಿನಿಟ್ಟು ಬಾಸುವರ್: **ಸಮಯಪ,** ೧೪. ೨೭)

**ಬಾಸುಗಿ** – [ವಾಸುಕಿ] ಆದಿಶೇಷ (ಪೊಂಬೆಟ್ಟಮಂ ನೂಂಕಲುಂ ಪೆಡೆಯಂ ತೊಟ್ಟನೆ ಮೆಟ್ಟಿ ಬಾಸುಗಿಯಂ ಆದಂ ಸೀಱಲುಂ ಪೊತ್ತು ಬಾನೆಡೆಯಂ ಬೇಗದಿನೆತ್ತಲುಂ ಬಗೆದನಾಗಳ್ ದಪ್ಪದಿಂ ದಪ್ಪಗಂ: **ಕಬ್ಬಿಗಕಾ,** ೧೧೯)

**ಬಾಸುಟಿ್** – ಬಾಸುಂಡೆ (ಮಿಳಿರ್ವಸಿಯ ಪಸಿಯ ಪೊಸಬಾಸುಟಿ ಕರರುಹರೇಖೆ ತುಱುಗಿ ರತನಾಟ್ಯಪರಿಸ್ಥಲಿತಕ್ಕೆ ಮುಳಿದು: **ಆದಿಪು,** ೧೨. ೧೫)

**ಬಾಸುಟಕ್ಕೊಗ** – ಊದಿದ ಮುಖ (ಸುರಿತಂದಶ್ರು ಪ್ರವಾಹಂ ಬಱಿತೊಣಗಿದ ಬಾಸುಟಕ್ಕೊಗಂ .. .. ಮುಚ್ಚಿದ ನಯನಯುಗಂ: **ಕುಸುಮಾಕಾ,** ೧೩. ೭೯)

**ಬಾಸೆ** – ರೋಮರಾಜಿ (ಮುನ್ನಿನ ಚೆಲ್ವನಪ್ಪಸಿಯ ಬಾಸೆಗೆ ಕರ್ಪೆಸೆದತ್ತೆ ಚೋದ್ಯಮಿದೆಂದು ಮರಲ್ದು ಬಣ್ಣಿಸಿದರ್ ಇಂದ್ರನ ಕಾಂತೆಯರ್: **ಆದಿಪು,** ೭. ೩೧); ನಿರ್ಧಾರ (ದೇವಿ ತನ್ನಯ ತನುವಂ ನಿಲೆ ಪಿಡಿವ ಬಾಸೆಯಂ ಮಾಡುಗುಮೋ: **ಕಾದಂಸಂ,** ೬. ೨೨); [ಭಾಷಾ] ಮಾತು (ಆತನನಾಕೆಗಳ್ ಬಾಸೆಯೊಳಿಂತೆಂದರ್: **ಪಂಪಭಾ,** ೪. ೯೫ ವ)

**ಬಾಹತ್ತರ** – ಎಪ್ಪತ್ತೆರಡು (ವಿಷಯ ಗೃಹಾಮಾತ್ಯ ದಂಡಾಧಿನಾಥಾವಳಿ ಧರ್ಮಾದ್ಯಕ್ಷ ಕೋಶಾಧಿಪ ತಳವರ ಹಾಸ್ಯಾದಿ ತಂತ್ರಾಳಿಪಾಳಾವಳಿ ರಾಜಶ್ರೇಷ್ಠಿ ಸೇನಾಪರಿಕರಣ ಪುರೋಧೋಧಿಕಾರ ಅಂಗರಕ್ಷಾವಳಿ ಮುಖ್ಯಂಬೆತ್ತ ಬಾಹತ್ತರದೆಸಕದ ನಾನಾ ನಿಯೋಗಿಪ್ರತಾನಂ: **ಶಾಂತೀಶ್ವಪು,** ೧೫. ೯೦)

**ಬಾಹತ್ತರನಿಯೋಗ** – ರಾಜಸೇವೆಯ ಎಪ್ಪತ್ತೆರಡು ಮಂದಿ ಅಧಿಕಾರಿಗಳ ಗುಂಪು: ಗುರು, ಮಹಾಪ್ರಧಾನ, ಸಾಮಂತ, ಸೇನಾಪತಿ, ದ್ವಾರಪಾಲಕ, ಅವಸಾರಿಕಾ, ಘಟಿಕಾನಿರ್ಧಾರಕ, ಗಣಕ, ಲೇಖಕ, ಪೌರಾಣಿಕ, ಪುರೋಹಿತ, ಜ್ಯೌತಿಷಿಕ, ಕಾವ್ಯಜ್ಞ, ವಿದ್ವಜ್ಜನ, ದೇವತಾರ್ಚಕ, ಮಾಲ್ಯಾಕಾರಕ, ಪರಿಮಳಕಾರಕ, ಗೋಷ್ಠಾಧಿಕಾರ, ಗಜಾಧಿಕಾರ, ಅಶ್ವಾಧಿಕಾರ, ಭಂಡಾರಾಧಿಕಾರ, ಧಾನ್ಯಾಧಿಕಾರ, ಅಂಗರಕ್ಷಕ, ಸೂತ, ಸೂದ, ಭೇತಾಳ, ಮಲ್ಲ, ತಾಂಬೂಲಿಕ, ತಾಳವೃಂತಕ, ನರವಾಹಕ, ಚಾತ್ರಿಕ, ಚಾಮರಿಕ, ಕಳಾಚಿಕ, ಕರಶಾರಿಕಾ, ಕರಪಾಲಿಕ [ಕರದೀಪಕಾರ], ಪಾದುಕಾದಾರ, ನರ್ತಕ, ಗಾಯಕ, ವೈಣಿಕ, ಶಾಕುನಿಕ, ಮಾಗಧ, ವೈತಾಳಿಕ, ಪರಿಹಾಸಕ, ಕಾಂಚುಕ, ಕ್ಷೌರಕ, ರಜಕ, ಸೌಚಿಕ, ಚರ್ಮಕಾರಕ, ಮುದ್ರಾಧಿಕಾರ, ಪುರಪಾಲಕ, ವನಪಾಲಕ, ನರವೈದ್ಯ, ಗಜವೈದ್ಯ, ಅಶ್ವವೈದ್ಯ, ಪಶುವೈದ್ಯ, ಭೇರಿವಾದಕ, ಮುರಜವಾದಕ, ರೌಮಕ, ಶಿಲಾಚ್ಛೇದಕ, ಕಾಂಸ್ಯಕಾರಕ, ಕುಂಭಕಾರಕ, ಚಿತ್ರಕಾರಕ, ವ್ಯಾವಹಾರಿಕ, ಮೃಗಯಾರ್ಥಿ, ಪಕ್ಷಿಪೋಷಕ, ಫಣಿಹಾರಕ, ರಾಯಭಾರ, ಉಗ್ರಾಣಾಧಿಕಾರ, ವೇಶ್ಯಾಜನ, ಬಂಟು, ಸ್ವರ್ಣಕಾರ, ಕಠಾರಿಕ (ಅಲ್ಲಿಗಲ್ಲಿಗೆ ಗುಜಿಗುಜಿಗೊಂಡು .. .. ಮಱುಗುವ ಬಾಹತ್ತರನಿಯೋಗದ ಅಧಿಕಾರಿಗಳುಮಂ: **ವರ್ಧಮಾಪು,** ೫. ೯ ವ)

**ಬಾಹಪ್ಪರಿಸು** – ತೋಳು ತಟ್ಟು (ಅಖ್ಖಡದೊಳ್ ಪೊಕ್ಕು ಬಾಹಪ್ಪಳಿಸಿ ಬಲ್ಪುದೋಱಿಸಿದ ಮಲ್ಲನನುರ್ಬುತ್ತೆ ಒಯ್ಯನೊಳಪೊಕ್ಕು: **ಗಿರಿಜಾಕ,** ೨. ೧೦೫ ವ)

**ಬಾಹಲ** – ವೈದ್ಯಶಾಸ್ತ್ರ (ಶಾಲಿಹೋತ್ರಂ ಪಾಳಕಾಪ್ಯಂ ಹಾನಿತಂ ಚರಕಮಶ್ವಿನೀಮತಂ ಬಾಹಲಂ ಸುಸ್ರುತಂ ಕ್ಷಾರಪಾನೀಯಂ ಮೊದಲಾಗೊಡೆಯ ನರವೈದ್ಯಂಗಳುಮಂ: **ವಡ್ಡಾರಾ,** ಪು. ೪. ಸಾ. ೧)

**ಬಾಹಲ್ಯ** – ಹರಹು, ವಿಸ್ತಾರ (ತ್ರಿಭುವನಭವನ ಕಲಶಾಯಮಾನಮುಂ ಯೋಜನದ್ವಿತಯಾಂತ್ಯ ಬಾಹಲ್ಯಮುಂ ಅಷ್ಟಯೋಜನಮಧ್ಯಬಾಹಲ್ಯಮುಂ: **ಸುಕುಮಾಚ,** ೧೧. ೭೫ ವ)

**ಬಾಹಾಸ್ಫಾಲನ** – ತೋಳುಗಳನ್ನು ಚಪ್ಪರಿಸುವುದು (ಕುವರನ ಬಾಹಾಸ್ಫಾಲನರವಂ ಉರ್ಬಿಸೆಯಗಿದು ಪಾಡಿ ಬಿಡದೊದಱುತ್ತಿರ್ದವೊಲಾದುದು .. .. ಪ್ರತಿಘೋಷಂ: **ಚಂದ್ರಪ್ರಪು,** ೫. ೭೭)

**ಬಾಹಾಸ್ಫಾಲನಂಗೆಯ್** – ತೋಳುಗಳನ್ನು ಚಪ್ಪರಿಸು (ಸಂಸದೆ ಬಾಹಾಸ್ಫಾಲನಂಗೆಯ್ದು ದಿಗ್ವಲಯಂ ಮಾರ್ದನಿಯಿಟ್ಟವೋಲ್ ಗಜಱಿದಂ ಚಾಳುಕ್ಯಕಂಠೀರವಂ: **ಗದಾಯು,** ೬. ೪೭)

**ಬಾಹಿಗೆ** – ಹೊರಭಾಗ (ಪೊಟಲಂ ಪೊಱಮಟ್ಟು ಪುರದ ಬಾಹಿಗೆಯನೆಯ್ದುವಾಗಳ್ ಗಾಂಗೇಯದ್ರೋಣಕೃಪ ವಿದುರಾದಿಗಳ್ ಕೊಂತಿವೆರಸು ಎಯ್ದೆವಂದು: **ಪಂಪಭಾ,** ೭. ೨ ವ)

**ಬಾಹಿತ್ಥ** – ಆನೆಯ ಹಣೆ (ಕರಮಂ ಸಂಜೋಗಮಂ .. .. ಘಾಟಮಂ ಬಾಹಿತ್ಥಮಂ ಪುಷ್ಕರಮಂ ಲೋಚನಘಟ ಮನಿಷೀಕಾಂತಮಂ ಕೂಡೆ ತೀರೀ ಶರಸಂಘಾತಂಗಳುಚ್ಚುತ್ತಿರೆ ಕೆಡೆದುವು ಇಭಾನೀಕಂ: **ವರ್ಧಮಾಪು,** ೪. ೭೯)

**ಬಾಹು** – ತೋಳು (ದಿಕ್ಕರಿಕರಾನುಕಾರಿಗಳಪ್ಪ ಬಾಹುಗಳಿಂದಮೋರೊರ್ವರಂ ತೆಗೆದಪ್ಪಿ: **ಪಂಪರಾ,** ೪. ೩೩ ವ); ಬಾವು, ಊದಿಕೊಳ್ಳುವಿಕೆ (ಬಾಹಿನ ಡೊಳ್ಳಿನಂತೆ ಸೂಳೆಯ ಕರೆಹದಂತೆ ಕುಂಟಣಿಯ ಕೂರ್ಮೆಯಂತೆ: **ಧರ್ಮಾಮೃ,** ೭. ೭೧ ವ); ಹುಣ್ಣು (ವೇದವತಿಯ ಮೊಗದೊಳೊಂದು ಬಾಹು ಹುಟ್ಟಿ ಪೊಲ್ಲದರಲ್ಲದರಂ ಪೊಲ್ಲರೆಂದು ನುಡಿದೊಡೀ ಬಾಹಾದುದು ಎಂದು ಎಲ್ಲರ್ಗಂ ತಿಳಿಯೆ ಪೇೞ್ದು: **ಪಂಪರಾ,** ೧೬. ೩೯ ವ)

**ಬಾಹುದಣೆ** – ಕುಸ್ತಿಯ ಒಂದು ಪಟ್ಟು (ಚಟ್ಟುಸಿರಣವಟ್ಟಿ ಬಾಹುದಣೆ ಖಮ್ಮರಿ ಕತ್ತರಿ ಖೋಡವಂಕುಶಂ ಸಸಿಕುವೆನಿಪ್ಪ ಜೆಟ್ಟಿಗನ ನಚ್ಚಿನ ಬಿನ್ನಣಮೊಪ್ಪೆ ಕಾದಿದರ್: **ಚಂದ್ರಪ್ರಪು,** ೫. ೭೮)

**ಬಾಹುಪರಿಭ್ರಮ** – ತೋಳ ಬೀಸಾಟ (ತೋಳ್ದುಱುಗಲ್ಗಳೊಳ್ ಪಳಂಚದೆ ಗಗನಂಬರಂ ನೆಗೆದು ಸೂಸುವ ಬಾಹುಪರಿಭ್ರಮಂಗಳೊಳ್ ಬೆಱದೆ: **ಆದಿಪು,** ೭. ೧೨೫)

**ಬಾಹುಪೂರ** – ತೋಳಿನ ಆಭರಣ (ಬಂದುಗೆಯ ಬಾಹುಪೂರಮುಂ ದಾಡಿಮೀಬೀಜದ ಕರ್ಣಾವತಂಸಮುಂ .. .. ಮಿಗೆ ಸೊಗಸಂ ಮೂವಡಿಸೆ: **ಗಿರಿಜಾಕ,** ೭. ೧೧ ವ)

**ಬಾಹುಮೂಲ** – ಕಂಕುಳು (ಅನಂಗರಾಜನ ಬಯ್ತಿಟ್ಟಮರ್ದಂ ಕೊಳೆ ತಳಿದುದು ನಾಭಿಮೂಳಮುಂ ಬಾಹುಮೂಲಮುಂ ಸುರವಧುವಾ: **ಆದಿಪು,** ೯. ೩೫)

**ಬಾಹುರಕ್ಕೆ** – ತೋಳ ಕವಚ, ಭುಜತ್ರಾಣ (ಗುರು ಕವಚಂ ಕರ್ಣಂ ಬಾಹುರಕ್ಕೆ ಸುರಸಿಂದುನಂದನಂ ಸೀಸಕಂ: **ಗದಾಯು,** ೨. ೨೮)

**ಬಾಹುಲ್ಯ** – ಹರಹು, ವಿಸ್ತಾರ (ಲಕ್ಷಯೋಜನಬಾಹುಲ್ಯಮನಾಂತು ರತ್ನಪ್ರಭೆಯೆಂಬ ಪೃಥ್ವಿಯಿರ್ಕುಂ: **ಸುಕುಮಾಚ,** ೧೧. ೪೧ ವ)

**ಬಾಹುವಲಯ** – ಬಾಹುಪೂರ (ಮೊದಲ ಪದನಪಭ್ರಂಶಕ್ಕೆ ಬಾರದೆ ಉತ್ತರಪದಂ ತದ್ಭವಮಾದ ಸಮಾಸಕ್ಕೆ: ಬಾಹುವಲಯಂ–ಬಾಹುವಳೆ: **ಶಬ್ದಮದ,** ೩೦೪ ಪ್ರ)

**ಬಾಹುವಳನ** – ತೋಳುಗಳ ಚಲನೆ (ಆಕೆಯರ ನವವಿಧ ಬಾಹುವಳನದಿಂದೆಲಲತೆಯ ಬಳ್ಳಿ ಚಳಿಸಿದಂತೆಯುಂ .. .. ಅತಿಮನೋಹರಮಾಗೆ: **ಚಂದ್ರಪ್ರಪು,** ೧೨. ೧೯೪ ವ)

**ಬಾಹುವಿಕ್ಷೇಪ** – ಬಾಹುವಳನ (ಮೂವತ್ತೆರಡುಂ ತೆಱದ ಚಾರಿಚಾರಿಸೆ ತಮ್ಮೊಳ್ ಪತ್ತಿಸಿದುವು ದೃಷ್ಟಿಗಳಂ ಪತ್ತುಂ ತೆಱನೆನಿಪ ಬಾಹುವಿಕ್ಷೇಪಂಗಳ್: **ಮಲ್ಲಿನಾಪು,** ೮. ೩೪)

**ಬಾಹ್ಯ** – ಹೊರಗಿನ (ಬಾಹ್ಯ ಅಭ್ಯಂತರ ಪರೀಷಹಂಗಳಂ ತೊಱೆದು ದ್ವಾದಶವಿಧಮಪ್ಪ ತಪ್ದೊಳ್ ನೆಗೞ್ದು: **ವಡ್ಡಾರಾ,** ಮ ೧, ಸಾ. ೯)

**ಬಾಹ್ಯತಪ** – [ಜೈನ] ಅನಶನ, ಅವಮೌದರ್ಯ, ವೃತ್ತಿಪರಿಸಂಖ್ಯಾನ, ರಸಪರಿತ್ಯಾಗ, ವಿವಿಕ್ತಶಯ್ಯಾಶನ ಮತ್ತು ಕಾಯಕ್ಲೇಶ ಎಂಬ ಆರು ಬಗೆಯ ದೇಹದಂಡನೆಯ ತಪಸ್ಸು (ಘೋರತರೋಗ್ರ ಬಾಹ್ಯತಪದುನ್ನತಿಯಂ ಸಮಸಂದು ಕೂಡೆ ವಿಸ್ತಾರಿಸಲ್ ಅಂತರಂಗತಪಮುಂ: **ಕರ್ಣನೇಮಿ,** ೨. ೧೦)

**ಬಾಹ್ಯಪ್ರಕೃತಿ** – ರಾಜನ ಹೊರಗಿನ ಮೂಲ ಆವಶ್ಯಕತೆಗಳು (ರಾಷ್ಟ್ರಪಾಲ ಅಂತಪಾಲ ಪ್ರತ್ಯಂತವಾಸಿಗಳೆಂಬ ಬಾಹ್ಯಪ್ರಕರತಿಗಳುಮಂ: **ಹರಿವಂಶ,** ೭. ೧ ವ)

**ಬಾಹ್ಯಾರ್ಥಸಿದ್ಧಿ** – ಬೇರೆಯ ಅರ್ಥವನ್ನು ಉಂಟುಮಾಡುವುದು (ವಿಜ್ಞಾನವ್ಯತಿರಿಕ್ತ ಸಾಧನವಾಕ್ಯೋಪನ್ಯಾಸದಿಂ ಸಾಧಿಸುವೊಡಾ ವಾಕ್ಯಮೆ ಬಹಿರರ್ಥಮಪ್ಪುದಱಿಂ ಬಾಹ್ಯಾರ್ಥಸಿದ್ಧಿಯಕ್ಕುಂ: **ಆದಿಪು,** ೨. ೧೦ )

**ಬಾಹ್ಯಾಳಿ** – ವೈಹಾಳಿ, ಕುದುರೆ ಸವಾರಿಯ ಬಯಲು (ಸಂಚಾರಿತತುರಗಪರಿಮ ಗ್ರಾಹ್ಯಾಳಿಗಳೆನಿಪ ಬಾಹ್ಯಾಳಿಗಳುಂ ಅನುದಿನವಿನೋದಿತಾನೇಕಕರಿಗಳೆನಿಸುವಾನೆವಱಿಗಳುಂ .. .. ತನಗನುಶೋಭೆಯಂ ಪಡೆಯೆ: **ಪುಷ್ಪದಂಪು,** ೯. ೨೨ ವ)

**ಬಾಳ್** – ಕತ್ತಿ (ಕೀಱೆ ನೆತ್ತಿಯೊಳ್ ಬಾಳಂ ನಿರ್ನೆರಮೂಱೆ ಚಲದಿನೆರಗಿಸಲಿರೆ ಭರತಂಗೆಱಗುವೆಱಕಂ ಅಚಿಜಮೆಯಲ್ತೇ: **ಆದಿಪು,** ೧೪. ೭೫)

**ಬಾಳ** – ಲಾಮಂಚ (ಕುಳಿರ್ವ ಬಾಳದ ಬೇರ್ಗಳ ಕೇರ್ಗಳಿಂ .. .. ಒಪ್ಪಿ ತೋರ್ಪ ಜಲಮಂಟಪ: **ಕಾದಂಬ,** ೮. ೧೨೩); ಎಳೆಯದಾದ (ನೇಲ್ವ ಕರುಳೋಳಿಯೆ ಬಾಳಮೃಣಾಳಮಾಗೆ ಮಿಕ್ಕಸುರರ ಮೆಯ್ಯೊಳಾದ ವಿರಹಾಗ್ನಿಯಂ ಆಱಿಸುತಿಂತೆ ತನ್ನ ಕೂರಸಿಯೊಳ್ ಅಡರ್ತು ಕೊಂದಸಿಯಳ್ ಇರ್ಕೆ ಅಸಿಯೊಳ್ ಪಡೆಮೆಚ್ಚೆ ಗಂಡನಾ: **ಪಂಪಭಾ,** ೧. ೬)

**ಬಾಳಕಾಲ** – ಕೂಸಾಗಿದ್ದ ಕಾಲ (ಬಾಳಕಾಲದೊಳೆ ತೊಟ್ಟಿಲಿಗಂ ಗಜಪ್ರಿಯನಪ್ಪುದಂ ಸಲೆ ತೋಱೆದಂ: **ಪಂಪಭಾ,** ೧. ೪೩)

**ಬಾಳಕೇಳಿ** – ಮಗುವಿನ ಆಟ (ತೊಡರ್ದಮರ್ದ ಬಾಳವಣ್ಣದ ತುಡುಗೆ ಪಳಂಚಲೆವ ಪಂಚಜಡೆ ನೊಸಲೊಡಂಬಡುವರಳೆಲೆಯಿವಱಿಂ ಚೆಲ್ವಿಡಿದಿರ್ದುದು ಬಾಳಕೇಳಿ ಧರ್ಮಾತ್ಮಜನಾ: **ಪಂಪಭಾ,** ೨. ೪)

**ಬಾಳಪ್ರವಾಳ** – ಎಳೆಯ ಚಿಗುರು (ಪದೆದುತ್ತಂಸವಸಂತಶೋಭೆಗೆ ಭವತ್ ಬಾಳಪ್ರವಾಳೋಲ್ಲಸನ್ನ್ಮದುಪುಷ್ಪಸ್ತಬಕಂಗಳಂ ಪಱೆದೆವು: **ಆದಿಪು,** ೧೧. ೧೩೪)

**ಬಾಳವಣ್ಣ** – ಕತ್ತಿಯ ಬಣ್ಣ, ನೀಲಿ (ತೊಡರ್ದಮರ್ದ ಬಾಳವಣ್ಣದ ತುಡುಗೆ ಪಳಂಚಲೆವ ಪಂಚಜಡೆ ನೊಸಲೊಡಂಬಡುವರಳೆಲೆಯಿವಱಿಂ ಚೆಲ್ವಿಡಿದಿರ್ದುದು ಬಾಳಕೇಳಿ ಧರ್ಮಾತ್ಮಜನಾ: **ಪಂಪಭಾ,** ೨. ೪)

**ಬಾಳ ಬಾಯ್** – ಕತ್ತಿಯ ಅಲಗು (ಬಾಳ ಬಾಯೊಳ್ ಕಿಱಿದೆಡೆಯೊಳ್ ನಡೆಯಬರ್ಕುಮಲ್ಲದೆ .. .. ಆರ್ಹತದೊಳ್ ನಡೆಯಬಾರದು: **ಸಮಯಪ,** ೧೫. ೫೫)

**ಬಾಳಮೃತಿ** – ಸಮ್ಯಕ್ತ್ವವನ್ನು ಪಡೆಯದೆ ದುಡುಕಿ ಮಾಡಿಕೊಳ್ಳುವ ಆತ್ಮಹತ್ಯೆ (ಅತಿವಯನಾಗಿ ಬಾಳಮೃತಿಯಿಂದಟೆದಂದಿನ ಮೂರ್ಖವೃತ್ತಿ ಪಂಡಿತಮತಿಯಿಂದಮಲ್ಲದೆ ಅದು ನೀಗದು: **ಶಾಂತಿಪು,** ೭. ೪೦)

**ಬಾಳವಂದ** – [ಬಾಲಬಂಧ] ಮಕ್ಕಳ ಉಡುಪು (ಜಿನಗಂಧೋದಕದಿಂ ಬಾಳನನಾಗಳ್ಮಿಸಿಸಿ ಬಾಳವಂದಂಗಳಂ ಒಯ್ಯನೆ ತುಡಸಿದಾಗಳ್ ಆ ಶಿಶು ಜಿನಶಿಶುವೆಂಬಿನೆಗಂ ಏಂ ಮನಂಗೊಳಿಸಿದುದೋ: **ಸುಕುಮಾಚ,** ೧೦. ೩೪)

**ಬಾಳವತ್ಸ** – ಎಳೆಗರು (ಅತಿರುಚುರ ಬಾಳವತ್ಸಾನ್ವಿತ ಗೋಕುಲದಿಂ ಎಸೆಗುಂ ಆವನ ಮನೆ ಭೂನುತನಂ ಆ ಮಹಾತ್ಮನೆಂಬರ್: **ಸಮಯಪ,** ೯. ೬೫)

**ಬಾಳಮತಿ** – [ಜೈನ] ಹುಡುಗುಬುದ್ಧಿ[ಯವನು], ಮೂರ್ಖ (ಆ ಕೊಳನನದಂ ಬಾಳಮತಿ ಪುರುಷರತ್ನದ ಪೇಳಿಗೆಯಂ ಮುಚ್ಚುವಂತೆ ಮುಚ್ಚಿದನಂಗದಿಂ: **ಶಾಂತಿಪು,** ೮. ೫೦)

**ಬಾಳಮೃಣಾಳ** – ತಾವರೆಯ ಎಳೆಯ ದಂಟು (ಮುತ್ತಿನ ಸೂಸಕಂಗಳಂ ಬಾಳಮೃಣಾಳಮೆಂದೆ ಕರ್ದುಕಲ್ ಬಗೆಗುಂ ಕಳಹಂಸಪೋತಕಂ: **ಮಲ್ಲಿನಾಪು,** ೨. ೬೧)

**ಬಾಳರ** – ಕತ್ತಿ ಮಸೆಯುವ ಅರ (ಗಾಳದ ಡೊಂಕಿಯಗ್ರಮನೆ ಬಾಳರನಿಂ ಪಿಡಿದರ್ದುಆರ್ದ್ರದಿಂ ಜಾಳಿಸಿ ಜಾಲಮಂ ಬಿಸಿಲೊಳಿಕ್ಕುವ .. .. ಶಬರರರ್ಕಳಿನಿಂತೆಸೆದತ್ತು ಪಕ್ಕಣಂ: **ಶಾಂತೀಶ್ವಪು,** ೩. ೭೪)

**ಬಾಳವಂದ** – [ಬಾಲ ಬಂಧ] ಮಕ್ಕಳ ಉಡುಪು (ಪಲವಂದದ ಚಂದದ ಬಾಳವಂದಮೊಪ್ಪಿರೆ ಪಿತೃಮಾತೃಗಳ್ಗೆ ಪಡೆದರ್ ತನಯರ್ ನಯನೋತ್ಸವಂಗಳಂ: **ಪಂಪರಾ,** ೩, ೧೪೧)

**ಬಾಳವಚ್ಚ** – ಮಕ್ಕಳ ಉಡುಪು (ರಕ್ಕೆವಣಿ .. .. ಮೊಕ್ಕಳಗಾಡಿಗೆ ಜಡೆ ಸೂಡರ್ವಕ್ಕಿನ ಬೊಟ್ಟೆಂಬ ಬಾಳವಚ್ಚದಿನೆಸೆದಂ: **ಪುಷ್ಪದಂಪು,** ೪. ೪೯)

**ಬಾಳವಿದ್ಯೆ** – ಎಳವೆಯಲ್ಲಿ ಕಲಿತ ವಿದ್ಯೆ (ಗಾಂಧರ್ವಮೆಂಬುದೆಮ್ಮ ಬಾಳವಿದ್ಯೆ ಅದಱೊಳೆಮ್ಮಂ ರಂಜಿಸುವಂರ್ ಪ್ರೌಢರಿಲ್ಲ: **ಶಾಂತಿಪು,** ೨. ೨೧ ವ)

**ಬಾಳಾಗಮ** – ಕತ್ತಿಯ ವಿದ್ಯೆ (ಚಾರಿಸಿ ಬಾಳಾಗಮಮಂ ಅವತಾರಂಗೆಯ್ದಂತೆ ಕಾಲದಂತಕನನೆ ಪೋಲ್ತು ಆರುತ್ತುಂ ಕವಿವ ಅದಟರಂ ಓರೊಂದೋರೊಂದೆ ಪೊಯ್ದು ಕೊಂದರ್ ಪಲರಂ: **ಪಂಪಭಾ,** ೧೦. ೮೩)

**ಬಾಳಿ** – ವಾಲಿ [ಇಂದ್ರನ ಮಗ] (ಬಾಳಿಯನಂಜಿಸಿ ಭುಜಬಲಶಾಳಿಯನೋಡಿಸಿ ಸಹಸ್ರ ಬಾಹುವನ್ನಿನ್ನಾರ್ ಬಾಳಮಸೆಯಿಂ ದಶಾನನ ಕೀಱ್ಕಾಡುವರೊ ನೆಲದೊಳುಳ್ಳರಸುಗಳಂ: **ಪಂಪರಾ,** ೧೪. ೧೯೮)

**ಬಾಳಿಸು** – ನಟ್ಟ (ಪೇರುರದೊಳ್ ನೆಲಸಿದ ಲಕ್ಷ್ಮೀಕರಿಣಿಗೆ ಬಾಳಿಸಿದ ರನ್ನದಮಲ್ಗಂಬದವೋಲ್: **ಯಶೋಧಚ,** ೨. ೮)

**ಬಾಳು** – ಶಕ್ತಿ (ಅನ್ನೆಗಂ ನಕುಳನುಂ ಅಂಕವಣೆಯುಂ ಬಾಳುಂ ಬಾರುಂ ಚಮ್ಮಟಿಗೆಯುಮಂ ಒರ್ವ ಕೀಱಾಳಿಂ ಪಿಡಿಯಿಸಿಕೊಂಡು ಬಂದು: **ಪಂಪಭಾ,** ೮. ೫೪ ವ)

**ಬಾಳುಡಿ** – ಕತ್ತಿಯ ತುಂಡು (ಬಾಳುಡಿ ಪಾಱೆ ಬೀೞ್ ಪಗಲುಳ್ಕದವೊಲ್ ರುಧಿರಂ ದಿಗಂತಮಂ ಮೇಳಿಸಿ .. .. ಭಯಂಕರಮಾಯ್ತು ತುರಂಗ ಸಂಗರಂ: **ಪಂಪರಾ,** ೧೩. ೬೩)

**ಬಾಳುಳ್ಕ** – ಕತ್ತಿಯ ಝಳಪು (ಇಸಲೆಂದಿರ್ದ ಧನುರ್ಬಲಂ ಪೊಳೆವ ಬಾಳುಳ್ಕಂಗಳಂ ಪೋಲೆ: **ಆದಿಪು,** ೧೪. ೧೦೦)

**ಬಾಳೆ** – ಒಂದು ಬಗೆಯ ಮೀನು (ಪೊಱಮೊಣ್ಮುವ ಕಣ್ಣ ಬೆಳ್ಪುಂ ಓಪರ ಮನದೊಳ್ ತೆಱಂಬೊಳೆವ ಬಾಳೆಗಳಂತಿರೆ: **ಆದಿಪು,** ೧೧. ೪೬)

**ಬಾಳೆಗಣ್** – ಮೀನಿನಾಕಾರದ ಕಣ್ಣು (ಪೊಳೆದೊಪ್ಪೆ ಬಾಳೆಗಣ್ ಬಿಸಜಮುಖಂ ಮರುಚ್ಚಳಿತಮೊಂದೆ: **ಶಬಶಂವಿ,** ೨. ೫೩)

**ಬಾಳೆವಾಯ್** – ಒಂದು ಬಗೆಯ ಆಭರಣ (ಕಳನೂಪುರಂ ಒತ್ತುಡೆ ಗೆಜ್ಜೆ ಬಾಳೆವಾಯ್ ಸಂಜನಿತ ಅತಿಮುಗ್ಧವದನಂ: **ವರ್ಧಮಾಪು,** ೧೨. ೫೯)

**ಬಾೞ್** – ಜೀವಿಸು (ಅರಾತಿಗಳ್ಗಳ್ಕಿ ತನ್ನ ಕುಲಮಂ ಚಲಮಂ ದೊರೆಯುಂ ಕಿಡೆ ಬಾೞ್ವಂತು ಗಂಡರೂಪಿನೊಳ್ ಗಂಡನಲ್ತು ಪೆಂಡಡತಿಯೆ ವಲಂ: **ಆದಿಪು,** ೧೨. ೯೬); ಬದುಕು (ಶಂಕಾತಂಕದ ಸುತ್ತಿನೊಳಗುಟಿದುಟಿ ನಮೆವ ಬಾೞಂ ಬಾೞ್: **ಕರ್ಣನೇಮಿ,** ೧೩. ೬೪); ಸೀಳು (ಕರಗಸಗಳಿಂದಂ ಮರನಂ ಪೋೞ್ವಂತೆ ಕೆಯ್ಯಂ ಕಾಲನಗಲ್ಚಿ ಪಿಡಿದಡಸಿ ಕಟ್ಟಿಯುದ್ದಂಬಿಡಿದು ಬಾೞ್ವುದುಂ: **ವಡ್ಡಾರಾ,** ಪು ೧೨೭, ಸಾ ೧೫)

**ಬಾೞ** – ಲಾಮಂಚ (ಕಮಲದ ಸರಂಗಳಿಂ ಬಾೞದ ಬಿಜ್ಜಣಿಗೆಗಳಿಂ ಬಿತ್ತರಿಪ .. .. ಲತಾಮಂಟಪಮಂ ಪೊಕ್ಕು: **ಕುಸುಮಾಕಾ,** ೧. ೧೫೭ ವ)

**ಬಾೞಸು** – ಬದುಕಿಸು, ಪೋಷಣೆ ಮಾಡು (ರಸಂ ತಿಂದ ಮೆಯ್ಗೆ ತಕ್ಕ ಪ್ರತೀಕಾರದ ಮರ್ದುಗಳಂ ಮಾಡಿಯಾತನಂ ಬಾೞಸಿ ಕೞುಪಿದಂ: **ವಡ್ಡಾರಾ,** ಪು. ೧೮೭, ಸಾ. ೧೯)

**ಬಾೞುಕ** – ಸೀಳಿ ಒಣಗಿಸಿದ ತರಕಾರಿ (ಒಂದರ್ಥಕ್ಕೆ: ಬಾೞುಕವೆಂದು ಸೀಳ್ದೊಣಗಿ ಬಾಳ್ದ ಶಾಕಂ: **ಶಬ್ದಮದ,** ೩೩ ವೃತ್ತಿ, ೧೦೨)

**ಬಾೞುಕಮಾಗು** – ಒಣಗಿಹೋಗು, ಸತ್ವಗುಂದು (ಒಂಬತ್ತು ತಿಂಗಳು ಬತ್ತಿ ಬಾೞುಕವಾಗಿ ಪೊತ್ತ ಬೇನೆಯಂ ಪೆತ್ತ ಬೇನೆಯುಮಂ ತಿನಲಾಱೆಂ: **ನೇಮಿನಾಪು,** ೭. ೩೫ ವ)

**ಬಾೞೆ** – ಬಾಳೆಯ ಮರ (ಭೀಮಸೇನಂ .. .. ಬಾೞೆಯ ಚೆಲ್ವನಪ್ಪ ಬನಮಂ ಕಾಡಾನೆ ಪೊಯ್ದಂತೆ ಪೊಯ್ದಿನಿಸುಂ ಮಾಣದೆ ನೀಚಕೀಚಕನಿಕಾಯಧ್ವಂಸನಂ ಮಾಡಿದಂ: **ಪಂಪಭಾ,** ೮. ೮೦)

**ಬಾೞೆವಾೞೆ** – ಬದುಕಿರುವಾಗಲೇ (ಬಾೞೆವಾೞೆ ತಿದಿಯುಗಿವರುಂ ಮಿಡುಮಿಡುಕೆ ಬಡಿತಂಗಾಸುವರುಂ: **ಆದಿಪು,** ೫. ೮೫ ವ)

**ಬಾೞ್ಕೆ** – ಬದುಕು (ಸತ್ತೊಡೆ ಪುಟ್ಟರೆ ತನಗಿದೇಕೆ ಬಾೞ್ಕೆಯ ಮೋಹಂ: **ಧರ್ಮಾಮೃ,** ೪. ೫೦), ಆಯುಸ್ಸು (ನೆಱೆ ಬಾೞ್ಕೆಯೊಳಾದ ತೃಷ್ಣೆಯಂ ಪರಿಹರಿಸಲ್ಕಂ ಆರ್ಗಂ ಅಱೆದಾಗಿಯುಂ: **ಕಾದಂಬ,** ೫. ೧೯೧)

**ಬಾೞ್ಕೆಗೊಡು** – ಬದುಕಿಗೆಂದು ಉಂಬಳಿ ಕೊಡು (ಕರುಣಾಗ್ರಾಮಮಂ ಈ ಮಾಮರಕ್ಕೆ ಮಧು ಬಾರ್ಳಕೆಗೊಟ್ಟು ಪಿಸುವಲಗೆಗಳಿಂ ಬರೆದೆತ್ತಿದ ಶಸನಕೇಂ ದೊರೆಯಾದುವೊ ಸೊನೆಯ ಪನಿ ಪಗಿಲ್ತೆಳದಳಿರ್ಗಳ್: **ಮಲ್ಲಿನಾಪು,** ೬. ೨೧)

**ಬಾೞ್ಗಂಬ** – ಆನೆ ಕಟ್ಟುವ ಕಂಬ (ನುಣ್ದೊಡೆಯೆಂಬ ಪೊಂಬಾೞೆಯ ಬಾಳ್ಗಂಬಂ ಅಲರ್ಗಣೆಯನೆಂಬ ಸೊರ್ಕಾನೆಯಂ ತೊಲಗಲೀಯದೆ ನಿಲಿಸೆಯುಂ: **ಕಬ್ಬಿಗಕಾ,** ೯೭ ವ)

**ಬಾೞ್ಗುದಿ** – ಪ್ರಾಣಸಂಕಟ (ಕೋಳ್ಗುದಿ ಬಾೞ್ಗುದಿಯಾಗಿ ಬೇವ ದಳ್ಳುರಿಗಳ ಮಾಲೆಗೊಂಡ ಬೆಳಗಿಂ ಬೆಳಗಾಯ್ತೆರಡುಂ ಬಲಂಗಳೊಳ್: **ಅನಂತಪು,** ೧೧. ೯೭)

**ಬಾೞ್ಜೊಂಪ** – ಬಳ್ಳಿಮಾಡ (ಪಸುರ್ಪೆಸೆವ ಬಾೞ್ಜೊಂಪಕ್ಕಂ ಒಂದೊಂದೆ ತಣ್ಬನಿಯೊಳ್ ಕೋಡಿಸುತಿರ್ಪ ಬಿಜ್ಜಣಿಗೆಗಂ ಪಕ್ಕಾಗದೇಂ ಪೋಪರೇ: **ಆದಿಪು,** ೧. ೭೫)

**ಬಾೞ್ತೆ** – ಬಾಳುವಿಕೆ, ಪ್ರಯೋಜನ (ನಾಲ್ಕು ವೇದಂಗಳೊಳ್ ನಾಲ್ಕುಂ ಋಚಂಗಳಂ ಪೇೞ್ದು ಸಿತ ದೂರ್ವಾಂಕುರವಿಮಿಶ್ರಂಗಳಪ್ಪ ಶೇಷಾಕ್ಷತೆಗಳಂ ಕೊಟ್ಟು ಮುಂದೆ ನಿಂದನಂ ನಿಮಗೆ ಬಾೞ್ತೆಯಪ್ಪುದಂ ಬೇಡಿಕೊಳ್ಳಿಂ ಎನೆ: **ಪಂಪಭಾ,** ೫. ೭೦ ವ); ಇಷ್ಟವಾದುದು (ನಿಮಗೆ ಬಾೞ್ತೆಯಪಪುದಂ ಬೇಡಿಕೊಳ್ಳಿಂ; **ಪಂಪಭಾ,** ೫. ೭೦ ವ);

ಕೆಲಸ (ಏ ಬಾಟ್ತಿಗೆ ಬಂದರಿಲ್ಲಿಗಿವರ್ ಎಂದಾರಯ್ವಂ: **ಕರ್ಣನೇಮಿ,** ೧. ೭೭)

**ಬಾಟ್ತಿಗೆಯ್** – ಆಸೆಪಡು (ಇಂದುಗತಿಯಂತೆ ರಾಜ್ಯಮನೊಂದರ್ಕಂ ಬಾಟ್ತಿಗೆಯ್ಯದಾದನೊ ತೊಱೆದಂ ಮಂದರಧೈರ್ಯಂ ನೃಪಂ: **ಪಂಪರಾ,** ೬. ೨೪); ಲೆಕ್ಕಿಸು (ಕೀರ್ತಿಗೆ ದೆಸೆ ಸಾಲವೆಂಬಿನೆಗಂ ಅರ್ಣವ ಮೇಖಲೆಯಂ ಧರಿತ್ರಿಯಂ ಬಗೆಯನೆ ಬಾಟ್ತಿಗೆಯ್ಯನೆ .. .. ರಾಘವಂ: **ಪಂಪರಾ,** ೬. ೧೧೨)

**ಬಾಟ್ತಿ ಮಾಡು** – ಉದ್ಯೋಗ ಮಾಡು (ಪುದ್ಗಳಮಂ ಬಾಟ್ತಿಮಾಡಿ ಪೊರೆಯರ್ ಜೈನರ್: **ಸಮಯಪ,** ೬. ೩೧)

**ಬಾಟ್ತಿಯಾಗು** – ಉಪಯುಕ್ತನಾಗು (ಅರಸುಂಗೆಯ್ವಾತಂಗೆ ಎಂತಪ್ಪನುಂ ಬಾಟ್ತಿಯಾಗದನಿಲ್ಲಂ: **ಪಂಚತಂತ್ರ,** ೮೭ ವ)

**ಬಾಟ್ದಿಲೆ** – ಜೀವಂತ ಸೆರೆಯಾಳು (ಧುರದೊಳ್ ಬಾಟ್ದಿಲೆದಂದು ಅಂಬರಚರರಂ ಕರೆದು ಪೇಟ್ದು .. .. ಕಳಿಪಿದಂ ತದಾತ್ಮಜಸಹಿತಂ: **ಆಚವರ್ಧ,** ೮. ೭೩)

**ಬಾಟ್ದಿಲೆವಿಡಿ** – ಬಾಟ್ದಿಲೆಗೊಳ್ (ತಾರಗೆಗಟಿಯೆ ನೆಯ್ದಿಲ್ ನೀರಂ ಪುಗೆ ಕೂಡೆ ಮರ್ಬು ಮೆಯ್ವೆರ್ಚೆ ಕಡಲ್ ನೀರೋಡುವಿನಂ ಪೆಱೆಯಂ ಬೀರದಿನಾ ಗೊರವನೆಯ್ದೆ ಬಾಟ್ದಿಲೆವಿಡಿದಂ: **ಕಬ್ಬಿಗಕಾ,** ೧೧೭)

**ಬಾಟ್ನೆಣ** – ದೇಹದಿಂದ ಆಗ ತಾನೇ ಹೊಮ್ಮಿದ ಕೊಬ್ಬು(ಕರುಳ್ವಿಣಿಲ ಪೊರಟ್ಕೆ ರುಂಡದಡಕಿಲ್ ನರದುರ್ಬು ಕಪಾಲದೋಳಿ ಬಾಟ್ನೆಣದೆಡೆ ಖಂಡದಿಂಡೆ ಬಿಸುನೆತ್ತರ ಪೆರ್ಬೊನಲ್ ಅರ್ಬಿಸಲ್ಕೆ ಮಾರ್ಗಣಾಘಾತದಿಂ ಕವಿಸಿದಂ ವಿರೋಧಿಸೈನ್ಯಮಂ: **ಜಗನ್ನಾವಿ,** ೭. ೮೪)

**ಬಾಟ್ನೆಲ** – ಫಲವತ್ತಾದ ಭೂಮಿ (ಫಲಭರದಿಂ ಅಲ್ಲಾಡುವ ಬಳ್ಳಿವನದ ಬಾಟ್ನೆಲದಿಂ ತೆರಳ್ದು .. .. ತಿಳಿಗೊಳನಂ ಕಂಡು: **ಲೀಲಾವತಿ,** ೮. ೮೦ ವ)

**ಬಾಟ್ಮೊದಲ್** – ಬದುಕಿನ ಬಂಡವಾಳ (ಅದು ಸುಖದೊಂದು ಪಿಂಡಂ ಅದು ಪುಣ್ಯದ ಪುಂಜಂ ಅದು ಅಂಗಜಂಗೆ ಬಾಟ್ಮೊದಲ್ ಅದು ಚಿತ್ತಜಂಗೆ ಕುಲದೈವಂ: **ಆದಿಪು,** ೭೪); ಜೀವನಸರ್ವಸ್ವ (ಒದವಿದ ಕೋಟಲೆಗಳ ಬಾಟ್ಮೊದಲೆನಿಸಿದ ಬಾರ್ತೆಗೆಟ್ಟ ಕೃತಂ: **ಕಾದಂಬ,** ೫. ೧೮೨); ತವರು (ಆದಿಮಧ್ಯ ಅವಸಾನಮೊಡಂಬಡೆ ತನ್ನೊಳಂ ಸಂತದೊಳಂ ಇದೇಂ ಬಸಂತದ ಅದಗುಂತಿಗೆ ಬಾಟ್ಮೊದಲಾಯ್ತೆ ಮಾಮರಂ: **ಶಾಂತಿಪು,** ೭. ೧೪೩)

**ಬಾಟ್ಮೊಸರ್** – ಗಟ್ಟಿ ಮೊಸರು (ಇದು ಬಾಟ್ಮೊಸರ್ ಇದು ಕಟಿಲ್ ಇಂತಿದು ರುಚಿವೆತ್ತಿರ್ದ ಪಾನಂ ಇದು ಮಜ್ಜಿಗೆ ತಾನಿದು ಶಿಖರಿಣಿ ಎನುತುಂ ತಿಂಬಿದಿಂಬಿ ತಂದೆಱದರಬಲೆಯರ್ ಸಿರ್ಪುಗಳಿಂ: **ಸುಕುಮಾಚ,** ೧೧. ೩೧)

**ಬಾಟ್ವಂದರ್** – [ಬಾಟ್+ಪಂದರ್] ಬಳ್ಳಿಮಾಡ (ಕಾಯ್ತ ಬಳ್ಳಿಗೌಂಗಿನ ಪಸುರ್ವಂದರುಮಂ ಪಣ್ತ ಮಧುರದ್ರಾಕ್ಷೆಯ ಬಾಟ್ವಂದರುಮಂ ಇರ್ಕೆಲದೊಳಿಕ್ಕಿಸಿ: **ನೇಮಿನಾಪು,** ೩. ೧೦ ವ)

**ಬಾಟ್ವನೆ** – ತವರುಮನೆ (ತಳಿರ ಜೊಂಪಮೆ ಬಾಟ್ವನೆ ಕಲ್ಪನಾಮೃತ ಆಹಾರಮೆ ಜೀವಿತಂ .. .. ತರಳಾಕ್ಷಿಗೆ: **ಲೀಲಾವತಿ,** ೯. ೧೨೮)

**ಬಾಟ್ವೂ** – ಹೊಸ ಹೂ (ಬಾಟ್ವೂಗಳಿಂ ನಿತ್ಯಪೂಜೆವಡೆದಂತಿರ್ದ ಜಿನಪ್ರತಿಮೆಯಂ ಬಂದಿದಿ: **ಲೀಲಾವತಿ,** ೭. ೧೦೧ ವ)

**ಬಾಟ್ವೆ** – ಬಾಳುವೆ, ಬದುಕು (ಎಮ್ಮುಳ್ಳುದಂ ನೆಱೆ ಕೊಂಡೆಮ್ಮಯ ಬಾಟ್ವೆಯೊಳ್ ನಿಜೆಸುವಂ ನೀಂ: **ಪಂಪಭಾ,** ೬. ೩೦)

**ಬಾಟ್ವೇಲಿ** – ಗಿಡಪೊದೆಗಳ ಬೇಲಿ (ಆ ಪೊಟಿಲ ಪೊಱವೊಟಿಲೊಳೆ ಕಱಂಗಿದ ಪೊಂಗೇದಗೆಯ ಬಾಟ್ವೇಲಿಯಿಂದೊಳಗೆ ಮನಸಿಜಂಗೆ ಪಿಡಿದ ಪೀಲಿದಟೆಯಂತೆ: **ಮಲ್ಲಿನಾಪು,** ೨. ೨೪ ವ)

**ಬಿಂಕ** – ಆಡಂಬರ, ವಿಲಾಸ (ತಮ್ಮ ಬೀರಮಂ ಬಿಂಕಮುಮಂ ತೆಱವುಂ ತೆಲ್ಲಂಟಿಯುಂ ಎಂದರಿಕೇಸರಿಗಾಗಳೀವವೋಲ್ ಬೆನ್ನಿತ್ತರ್: **ಪಂಪಭಾ,** ೩. ೭೨)

**ಬಿಂಗ** – ದುಂಬಿ (ಋತ್ವಕ್ಕಿತ್ವಂ: ಋತು–ರಿತು .. .. ಭೃಂಗಂ–ಬಿಂಗಂ .. .. ಭೃಂಗಾರಂ–ಬಿಂಗಾರಂ: **ಶಬ್ದಮದ,** ೨೮೨ ಪ್ರ)

**ಬಿಂಗಾರ** – [ಭೃಂಗಾರ] ಕಾಗೆ ಬಂಗಾರ (ಋತ್ವಕ್ಕಿತ್ವಂ: ಋತು–ರಿತು .. .. ಭೃಂಗಂ–ಬಿಂಗಂ .. .. ಭೃಂಗಾರಂ–ಬಿಂಗಾರಂ: **ಶಬ್ದಮದ,** ೨೮೨ ಪ್ರ)

**ಬಿಂಗಾರಿ** – ತಗಡು (ತೊಡರ್ಚಿದ ಝಲ್ಲಿಗಳ ಕೀಲಿಸಿದ ಪೊನ್ನ ಬಿಂಗಾರಿಗಳ ಸಾಲ್ಗೊಳಿಸಿದ ಮಾಣಿಕದಿಂಡೆಗಳ: **ರಾಜಶೇವಿ,** ೮. ೫ ವ)

**ಬಿಂಜ** – [ವಿಂಧ್ಯ] ಅಡವಿ (ನಡೆವ ನಂಜಿನ ಬಿಂಜದಂತೆಯುಂ ಕರ್ಬುಲಿಯ ಪಿಂಡಿನಂತೆಯುಂ .. .. ಅಗುರ್ವುಂ ಅದ್ಭುತಮುಂ ಆದುದು: **ಪಂಪರಾ,** ೪. ೫೪ ವ)

**ಬಿಂಜದಡವಿ** – ವಿಂಧ್ಯಾಟವಿ, ವಿಂಧ್ಯದ ಕಾಡು (ಅಲ್ಲಿಂದಂ ನಡೆದರ್ ಬಿಂಜಮೆಂಬ ಬಿಂಜದಡವಿಯೊಳವರ್ಗಳ್: **ಲೀಲಾವತಿ,** ೬. ೧೯)

**ಬಿಂಜಮಾಣಿಕ** – ವಿಂಧ್ಯಪರ್ವತದ ಮಾಣಿಕ್ಯ, ಒಂದು ಬಿರುದು (ತಲ್ಲಣದಿಂ ಪೆಱದೆಗೆವ ಬಿದಿವೆಡಂಗನೆಂಬ ಬಿಂಜಮಾಣಿಕನೆಂಬ ಹರಿರಾಯನೆಂಬ ತೋರಹತ್ತನೆಂಬ ಚೌವಟಮಲ್ಲನೆಂಬ ಮುಱಿವ ರಕ್ಕಸನೆಂಬ ರಾಯದಟಸೂಱೆಕಾರನೆಂಬ ತನ್ನೊಡ್ಡಿನ ಪೇರಾನೆಗಳಂ ಕಂಡು: **ಕಬ್ಬಿಗಕಾ,** ೨೨೩ ವ)

**ಬಿಂಡಿವಾಳ** – ಈಟಿ (ಮುಸಲ ಕಣಾಯ ಕಂಪನ ಮುಸುಂಡಿ ಬಿಂಡಿವಾಳ .. .. ಪಾಶಾಂಕುಶಾದಿ ಶಸ್ತ್ರಾಸ್ತ್ರಂಗಳೊಳ್ ಎಚ್ಚು: **ಪಂಪರಾ,** ೧೩. ೭೬ ವ)

**ಬಿಂದ** – ಗುಂಪು (ಋತ್ವಕ್ಕಿತ್ವ: ವೃಂದಂ–ಬಿಂದಂ, ಮೃಗಂ–ಮಿಗಂ: **ಶಬ್ದಮದ,** ೨೮೨ ಪ್ರ)

**ಬಿಂದು** – ಆನೆಯ ಹಣೆಯ ಮೇಲಣ ಮಚ್ಚೆ (ಶಂಖ ಚಕ್ರ ನಂದ್ಯಾವರ್ತ ಸ್ವಸ್ತಿಕ ಧ್ವಜಾವರ್ತ ರಕ್ತಬಿಂದು ಉಚಿತನುಂ: **ಆದಿಪು,** ೧೨. ೫೬ ವ); ಅನುಸ್ವಾರ ಚಿಹ್ನೆ (ಬಿಂದುವನುಸ್ವಾರಂ ತಾನೆಂದಕ್ಕುಂ ಸೊನ್ನೆ ಮುತ್ತುವೋಲ್ ವೃತ್ತತೆಯಿಂ ಸಂದಿರ್ಪುವಂತೆದಡಕಿಲ್ವೊಂದಿರೆ ಮಣಿಗೊಪ್ಪುವೋಲ್ ವಿಸರ್ಗಮೆನಿಕ್ಕುಂ: **ಶಬ್ದಮದ,** ೨೧); ತೊಟ್ಟು (ಜಲಲವಮದು ಬಿಂದು: **ಅಭಿಧಾವ,** ೧. ೪. ೧೪)

**ಬಿಂದುಕ** – ಚಿತ್ರಗಳಿಗೆ ಬಣ್ಣ ಹಾಕುವ ಒಂದು ಕ್ರಮ (ಅನಿಲಕಂ ಪತ್ರಕಂ ಬಿಂದುಕಂ ಧೂಮ್ರಾವರ್ತನಂ ಉದ್ವರ್ತನಂ ಚಿತ್ರಪ್ರವರ್ತನಂ ಎಂಬಾಱುಂ ಪ್ರಕಾರಮುಮಂ: **ಮಲ್ಲಿನಾಪು,** ೫. ೪೨)

**ಬಿಂದುವಿಡು** – ತೊಟ್ಟಿಡು (ಲಲಿತಾಂಗಂ ಇಂದುಕಾಂತಮೆನಲ್ಕೆ ಬಿಂದುವಿಡುತಿರ್ಪುದು ಸುಯ್ಯೆಲರ್: **ಕಾದಂಬ,** ೮. ೪೭)

**ಬಿಂಬ** – ಮಂಡಲ (ಬಿಂಬದೊಳಗಿರ್ಪ ಜಿನಪ್ರತಿಬಿಂಬಕ್ಕೆಳೆಯಿಂದೆ ಪೆರ್ಚಿ ಕಣ್ಣೆಂಜಲ್ಗಿಗಿಂದ್ರಂ ಬಿಗಿದ ಪೊನ್ನ ಕಾಹಳೆಯೆಂಬಿನಂ ಎಸೆದಂ ಮೃಗಾಂಕನರ್ಧೋದಯದೊಳ್: **ಅನಂತಪು,** ೭. ೮೦); ತೊಂಡೆಯ ಹಣ್ಣು (ತೊಂಡೆ ದಲೋಷ್ಠೀ ಬಿಂಬಂತುಂಡಿ ಸಮಾಭಿಖ್ಯಂ: **ಅಭಿಧಾವ,** ೧. ೮. ೨೯)

**ಬಿಂಬಫಲ** – ತೊಂಡೆಯ ಹಣ್ಣು (ಕಮನೀಯದ ಬಿಂಬಫಲೋಷ್ಠದಿಂಪು ಮೇಣಾದುದೆನುತ್ತೆ ಬಣ್ಣಿಸೆ ಬುಧಾವಳಿ ಕೀರ್ತಿಪೆಂ ಈ ಪ್ರಬಂಧಮಂ: **ಉದ್ಭಟಕಾ,** ೧. ೩೩)

**ಬಿಂಬಾಧರೆ** – ತೊಂಡೆಯ ಹಣ್ಣಿನಂತೆ ಕೆಂಪಾದ ತುಟಿಯುಳ್ಳವಳು (ಈ ಧರೆಯ ಪೆಂಡಿರುದ್ಧ ಪಯೋಧರೆಯ ಮನೋಜರಾಗ ರಸಪೂರಿತ ಬಿಂಬಾಧರೆಯ ಕಂಬುಕಮ್ರಶಿರೋಧರೆಯ ಬೆಡಂಗನಾರುಮೇನೆಯ್ದುವರೇ: **ಆದಿಪು,** ೪. ೪೬)

**ಬಿಂಬಿಸು** – ಪ್ರತಿರೂಪ ಉಂಟುಮಾಡು (ಕರ್ಣೋತ್ಪಲಂಗಳ್ ಕಪೋಲಬಿಮಬದೊಳ್ ಬಿಂಬಿಸೆಯುಂ: **ಕಾದಂಬ,** ೧. ೫೮ ವ)

**ಬಿಕ್ಕ** – ಇನ್ನೂ ತಾಯ ಕಾಲು ಕುಡಿಯುವ ಆನೆಯ ಮರಿ (ಅಪಹಸಿತ ಬಿಕ್ಕಪೋತಕಳಭ ಜನಕಲ್ಯಾಣಯೌಧತರಪ್ರಾಯ ಗಜಯೂಥಕೋಳಾಹಳಾರಾಬದೊಳ್: **ವರ್ಧಮಾಪು,** ೫. ೬೨ ವ))

**ಬಿಕ್ಕಿರಿ** – ಸೊಕ್ಕೆ[ಯಂತೆ ಗುಂಯ್‌ಗುಡು] (ತಲೆದೂಗಿ ಬಿಕ್ಕಿರಿವವೊಲ್ ಮೊರೆವ ಗೀತದಿಂ: **ಕಾದಂಬ,** ೮. ೪)

**ಬಿಕ್ಕು** – ಗಂಟಲು ಕಟ್ಟು (ಜಿನಂ ಬಿಕ್ಕುವ ತೇಂಖುವ ತೇಗುವ ಕಂಟಳಿಸುವ ಅಖಿಳವಿಕೃತಿಗೆ ಸಲ್ಲಂ: **ಪುಷ್ಪದಂಪು,** ೧೨. ೯೪); ಗದ್ಗದಿಸು (ಬಿನ್ನಪಂಗೆಯ್ವ ಒಕ್ಕಲಿಗನಂತೆ ಬಿಕ್ಕುತ್ತುಂ: **ಧರ್ಮಾಮೃ,** ೧. ೧೧೬ ವ) ಉಸಿರೆಳೆದುಕೊ (ಕೆಲರ್ ಕುದುಕುಳಿ ರಕ್ಕಸರ್ ಬಿಸುಗೆಗಳ್ವೆರಸು ಉಗ್ರ ಮಹಾಗಜಂಗಳಂ ಚದುರ್ಗಿಡೆ ನುಂಗಿ ಬಿಕ್ಕಿ ಕುಡಿದರ್ ಬಿಸುನೆತ್ತರ ಕಾಟ್ಪುರಂಗಳಂ: **ಪಂಪಭಾ,** ೧೨. ೮); ಮಾಂಸ (ಮರುಳ ಮುಂಗೆಯ್ಯುಮಂ ಬಿಕ್ಕುಮಂ ನಿಬ್ಬರಿ ಬಾಯೊಳ್ ಪೊಕ್ಕಡಂ ಕಂಡಿಸುವ ಸಿಡಿದ ಬೇತಾಳನಂ: **ನೇಮಿನಾಪು,** ೫. ೪೦)

**ಬಿಕ್ಕುಳಿಸು** – ವಾಂತಿಮಾಡು, ಕಕ್ಕು (ಬಿಕ್ಕುಳಿಸು–ಉದಗಗಾರೇ: ಶಬ್ದಮದ, ಧಾ ೭೯೩); ಶಬ್ದಮಾಡು (ಕೂಕಿಡುವ ಕುಕಿಲ್ವ ಬಿಕ್ಕುಳಿಪ ತೇಗುವ ತನ್ನ ತಪಡಂಕದೆಯ್ದೆ ನೂರ್ಮಡಿ ಮನದೊಳ್ ಪಳಂಚಲೆಯೆ ಡಕ್ಕೆಯೊಳಟ್ಟಜವಾಡಿದಳ್: **ಪಂಪಭಾ,** ೪. ೯೦)

**ಬಿಕ್ಕೆ** – ಗೆಡ್ಡೆ (ಅಡವಿಯೊಳ್ ನಾರಸೀರೆಯನುಟ್ಟು ಬೇರುಮಂ ಬಿಕ್ಕೆಯಂ ತಿಂದು ಕಂದಿ ಕುಂದಿ ಪಂದೆಯ ಮನದಂತಳ್ಳಾಡುತಿರ್ಪರ್: **ಪಂಚತಂತ್ರ,** ೩೦೭ ವ)

**ಬಿಕ್ಕೆನ್ನದೆ** – ತುಟಿಪಿಟಕ್ಕೆನ್ನದೆ (ಬೆಕ್ಕಂ ಕಂಡ ಇಲಿಯಂತಿರು ಸಿರ್ಕುಸಿದು ಕುನುಂಗಿ ತತ್ಸಾಭಾಭ್ಯಂತರದೊಳ್ ಮಾರ್ಕೊಳ್ಳದೆ ಮಾರ್ನುಡಿಯದೆ ಬಿಕ್ಕೆನ್ನದೆ ಮಿಡುಕದಿರ್ದರಂತಿರ್ಪಿನೆಗಂ: **ಸುಕುಮಾಚ,** ೨. ೨೦)

**ಬಿಗಿಪು** – ಬಿಗಿತ, ಬಂಧನ (ಪದಮಲರ್ಗಳಂದದಿಂ ಬಂಧದ ಬಿಗಿಪಿನೊಂದಿ ನಿಲೆ ಸಮುಜ್ವಳಕಾಂತಿ: **ವರ್ಧಮಾಪು,** ೧. ೧೦)

**ಬಿಗುಣ** – ದ್ವಿಗುಣ, ಎರಡರಷ್ಟು (ತೇನತೇನಮವತಂ ಬಿಗುಣಂ ತಿಗುಣಂಗೊಳಲ್ ಮೊಗಂಬೊಕ್ಕ ಗಜಂಗಳಂ .. .. ಪಿಂಗಿಪಂ: **ಅನಂತಪು,** ೬. ೧೨)

**ಬಿಗುರ್** – ಹೆದರು (ಲವಧೃತಿಯಿಲ್ಲದೆ ಒರ್ಮೆಯುಂ ಅರಾತಿಭಯಕ್ಕೆ ಬಿಗುರ್ತು ಡಕ್ಕೆವಾಜುವ ನೃಪಯೂಧವಕ್ಷದೊಳಿರಲ್ಕೆ ಅಣಂ ಒಲ್ಲದೆ.. .. ಅತುಳಲಕ್ಷ್ಮಿ: **ಶಾಂತೀಶ್ವಪು,** ೪. ೭೯); ವಿರೋಧಿಸು (ಚಕ್ರಿಗೆ ಬಿಗುರ್ವ ಮಂಡಲಮೊಳವೇ: **ವರ್ಧಮಾಪು,** ೯. ೬೯); ವಿಷಣ್ಣವಾಗು (ಕಣ್ಣ ನೀರಿನಡಿಗುಣ್ಮೆ ಪಾಯ್ತರೆ ಮುಖೇಂದು ಬಿಗುರ್ತಿರೆ: **ಅಜಿತಪು,** ೬. ೧೨೧); ಗರ್ವಿಸು (ಬಿಗುರ್ತೀ ಕೌರವರ್ ಕೂಡೆ ನೂರ್ವರುಮಂ ಕೊಲ್ವೆಂ: **ಪಂಪಭಾ,** ೭. ೧೫

**ಬಿಗುರ್ವಣೆ** – ಭಯ (ಬಿಗುರ್ವಣೆ ರಥೂದ್ವಹ ಸನ್ನಿಧಿಯಿಂದದೃಶ್ಯಮಪ್ಪುದುಂ: **ಪಂಪರಾ,** ೫. ೮೬)

**ಬಿಗುಟು** – ಅಳು, ಬಿಕ್ಕು (ಎರ್ದೆಯೊಳ್ ಕಿರ್ಚು ಬಿರ್ದಂತಾಗೆ ಜೋಗಂಬೋಗಿ ತಲೆಯಂ ಬಾಗಿ ಮನ್ಯುಮಿಕ್ಕು ಬಿಗುಟುತ್ತುಂ: **ಜೀವಸಂ,** ೨. ೨೪ ವ)

**ಬಿಚ್ಚಂದ** – ಹರ್ಮ್ಯ (ವಿಚ್ಛ್ಯಂದಂ–ಬಿಚ್ಚಂದಂ: **ಶಬ್ದಮದ,** ೨೭೧ ಪ್ರ)

**ಬಿಚ್ಚತ** – [ವಿಸ್ತೃತ] ವಿಸ್ತಾರ (ಮೊರೆವ ಮದಾಳಿ ಸಂಭ್ರಮದೆ ಕೂಗುವ ಕೋಗಿಲೆಯಲ್ಲಿ ಬಿಚ್ಚತಂ ಬಳಸುವ ಜಕ್ಕವಕ್ಕಿ .. .. ಮಱೆದು ಮಾಣವು: **ಸುಕುಮಾಚ,** ೯. ೪೯)

**ಬಿಚ್ಚತಂ** – ನಿರ್ಬಂಧವಿಲ್ಲದೆ, ಅಧಿಕವಾಗಿ (ಬಸಂತದೊಳ್ ಕಳಿಕೆಗರ್ಚಿದ ಕೋಗಿಲೆಯಂತೆ ಬಿಚ್ಚತಂ ನಲಿವುದು ಕಂಡರಾರ್ ಮಱುಭವಂಗಳಂ: **ಆದಿಪು,** ೨. ೯)

**ಬಿಚ್ಚತಿಕೆ** – ವಿಸ್ತಾರ (ಎಂಬಿನಿತಂ ಮೆಚ್ಚಿ ಬಿಚ್ಚತಿಕೆಯಿಂ ಪರಿಭಾವಿಸದೆ ಈ ದುರಾತ್ಮ ದುರ್ಜನರ್ಗೆ .. .. ಒಸೆದಿತ್ತಂ ಉದಾತ್ತವೃತ್ತಿಯಂ: **ಸುಕುಮಾಚ,** ೨೬)

**ಬಿಚ್ಚತಿಕ್ಕೆ** – ಬಿಚ್ಚತಿಕೆ (ಮಸೆವುದು ಮಾಸಲಿರ್ದ ಪಟಿವೇಟಮಂ ಇಚ್ಚೆಯ ಬಿಚ್ಚತಿಕ್ಕೆಯಂ ಪೊಸೆಯಿಪುದು ಒಳ್ಕಮಂ ನಡೆಪುತಿರ್ಪುದು ಧಾತುವಂ ಒಳ್ಪಿತೆಯ್ದೆ ಪಾಟಿಸುವುದು ಕೂಟದೊಳ್ ಕುಶಲನಪ್ಪುದು: **ಶಾಂತಿಪು,** ೮. ೯೧); ಧಾರಾಳತನ

**ಬಿಚ್ಚತಿಗ** – ಅತಿಶಯ ವ್ಯಕ್ತಿ (ಖಳನುಂ ಬಿಚ್ಚತಿಗನೆನಿಕ್ಕುಮೊಂದಿ ಜೈನರ ಕೆಲದೊಳ್: **ಸಮಯಪ,** ೬. ೧೦೬)

**ಬಿಚ್ಚನೆ** – ಅಗಲವಾಗಿ (ಎನ್ನನುರಿಪುವಂತು ಕೆಚ್ಚನಾಗೆ ಬಿಚ್ಚನೆ ಬಿಟ್ಟ ದಿಟ್ಟಿಗಳಿಂ ನೋಡಿ: **ಕಾದಂಸಂ,** ೭. ೪೫ ವ); ಥಟ್ಟನೆ (ಅಭಿನವ ಜಪಾಪ್ರೂನಮಂ ಪ್ರಸರಂಗೆಯ್ದಂತೆ ಕೆಂಪಂ ತಳೆದು ಬಿಚ್ಚನೆ ಬಿಟ್ಟು ತೋರ್ಪ: **ವರ್ಧಮಾಪು,** ೪. ೧೫ ವ)

**ಬಿಚ್ಚಳಿಸು** – ಹರಡು, ವಿಸ್ತರಿಸು (ಎಂದರಸರ್ ಪಕ್ಕದೊಳ್ ಸುತ್ತುಗೊಂಡು ಬೆರ್ಚಿ ಬಿಚ್ಚಳಿಸುತ್ತುಂ ಬರೆ ಕಿಂಚಿತ್ ಅವನತಾನನಂ ತದ್ ಆವ್ರೀಡನಾಗಿ: **ಶಾಂತಿಪು,** ೮. ೬೫ ವ); ಹೊಗಳು (ನಿರಸೂಯರ್ ನಿರಪೇಕ್ಷರ್ ಪರಗುಣಜ್ಞರ್ ಪಂಡಿತರ್ಕಳ್ ನಿರಂತರಂ ಒಲ್ದು ಆಲಿಪ ಮೆಚ್ಚಿ ಬಿಚ್ಚಳಿಪ ಭಾಸ್ವತ್ ಕಾವ್ಯಮಂ: **ಶಾಂತೀಶ್ವಪು,** ೧. ೪೯); ಧ್ವನಿಮಾಡು (ಎಳಸಿವ ಪುರುಳಿಯ ಗಟಿಪುವ ಗಿಳಿಯ ತೆಱಂದಿರಿದು ಮೊರೆವ ಪೆಣ್ದುಂಬಿಯ ಬಿಚ್ಚಳಿಪ ಪರಭೃತದ ಕಳಕಳದೊಳ್: **ಆದಿಪು,** ೬. ೯೪)

**ಬಿಚ್ಚುವ** – ಸನ್ಯಾಸಿ (ಆ ಬಿಚ್ಚುವಂ ವಿದ್ಯೆಗಳೊಳೆಲ್ಲಮೊಚ್ಚತಂ ನೋಡಿದೊಡೊಂದೊಂದರ್ಕೆ ಮಚ್ಚರಿಸಿದಂತೆ ಪಚ್ಚು ಪಸರಿಸಿ: **ಸುಕುಮಾಚ,** ೩. ೬ ವ)

**ಬಿಜಯಂಗೆಯ್** – ಆಗಮಿಸು; (ಎಲೆ ದೇವಾ ಭೀಷ್ಮರಿತ್ತಲಿರ್ದಪರ್ ಇತ್ತ ಬಿಜಯಂಗೆಯ್ಯಿಂ: **ಗದಾಯು,** ೫. ೩೭ ವ); ತೆರಳು (ದೇವ ನೀವಿಂ ತಡೆಯದೆ ಬಿಜಯಂಗೆಯ್ವುದದೌಚಿತ್ಯಂ: **ಕುಸುಮಾಕಾ,** ೯. ೧೧೫)

**ಬಿಜ್ಜಣಿಗೆ** – ಬೀಸಣಿಗೆ, ತಾಳವೃಂತ (ತೆರೆಗಳ ಮೆಲ್ಪಿಂದೆ ನೀರ್ ಬಿಜ್ಜಣಿಗೆಯ ತೆಱದಿಂ ಬೀಸೆ: **ಕಾದಂಸಂ,** ೫. ೫೮)

**ಬಿಜ್ಜೆ** – [ವಿದ್ಯಾ] ಜ್ಞಾನ (ಬರ್ಪನೆಯಪ್ಪೊಡೆ ಈ ಧರಾಭರಮನಶೇಷಮಂ ನಿಜತನೂಭವರ್ಗೀವದೆಳೆ ಪಚುಕೊಟ್ಟು ಭೋಂಕರಿಸುವ ದೇವಕೋಟಿಗಳ ಬಿಜ್ಜೆಗಳೊಳ್ ತೊಡರ್ದೇಕೆ ಪೋಪಂ: **ಆದಿಪು,** ೯. ೭೫); [ಜೈನ] ದೇಹವನ್ನು ಬದಲುಮಾಡುವ ಶಕ್ತಿ, ವೈಕುರ್ವಣಶಕ್ತಿ (ದೇವಕೋಟಿಗಳ ಬಿಜ್ಜೆಗಳೊಳ್ ತೊಡರ್ದೇಕೆ ಪೋಪನೀ ದೊರೆಯನನಾರ್ಳದನಂ ಪಡೆವುಪಾಯಮಾವುದೊ ಜನ್ಮಜನ್ಮದೊಳ್: **ಆದಿಪು,** ೯. ೭೫)

**ಬಿಜ್ಜೆಗ** – ಪರಿಣತ, ಚತುರ (ಸರಭಸದಿಂದೆರಟ್ಟಲದ ಬಿಲ್ವಡೆಯೊಳ್ ಸಲೆ ಬಿಲ್ಲ ಬಿಜ್ಜೆಗರ್ ಸುರರನಡರ್ತುಕೊಳ್ವ .. .. ಬೇಗಮದೆಂತುಟೊ; **ಶಾಂತೀಶ್ವಪು,** ೮. ೬೬)

**ಬಿಜ್ಜೆವಳ** – ವಿದ್ಯಾಬಲ (ಸರಸತಿಯಡಿದಳಿರ್ಗೆ ತಲೆದುಡುಗೆಯೆನೆ ಪೆಸರ್ವಡೆದ ಬಿಜ್ಜೆವಳದಿಂ ಸಮೆದ ಕಾವನಗೆಲ್ಲಂ ಮೆಱೆಯುತಿರ್ಪುದು: **ಕಬ್ಬಿಗಕಾ,** ೨೭೨ ವ)

**ಬಿಜ್ಜೋದರ** – ವಿದ್ಯಾಧರ (ರಾಜಕುಮಾರಕಮುಂ ಗಣಿಕಾಜನಮುಂ ಚತುರಬುಧಕದಂಬಕಮುಂ ರಾರಾಜಿಸೆ ಸಭೆಯೊಳ್ ರಾಜಮನೋಜಂ ಬಿಜ್ಜೋದರರ ಓಲಂಗಂಗೊಟ್ಟಿರ್ದಂ: **ಮಲ್ಲಿನಾಪು,** ೮. ೧೩)

**ಬಿಜ್ಜೋದರಿ** – ವಿದ್ಯಾಧರಿ (ಆ ಬನಂ ಮುಗಿಲೆಡೆಯೊಳ್ ಎಡೆವಿಡದೆಡೆಯಾಡಿ ಬಟಿಲ್ದ ಬಿಜ್ಜೋದರಿಯರ್ಕಳ ಅಱವಟ್ಟಿಗೆದಾಣಮೆಂಬಂತೆ ಎಸೆವ ಎಳನೀರ್ಗಳಂ ಪೊತ್ತ ಆಗಸದೆಡೆಗಡರ್ವ ಚೆಂದೆಂಗಿನ ಮರಂಗಳೊಳಂ: **ಕಬ್ಬಿಗಕಾ,** ೨೭ ವ)

**ಬಿಟ್ಟಿ** – [ವಿಷ್ಟಿ] ಯುದ್ಧಕಾಲದಲ್ಲಿ ಮಾಡಬೇಕಾಗಿದ್ದ ಪುಕ್ಕಟೆ ಕೆಲಸ, ಶೋಧನ, ವಹನ, ಅಪನಯನ ಎಂಬ ಮೂರು ಬಗೆಯ ಕೆಲಸಗಳು – ಇವು 'ಮೂವಿಟ್ಟಿ'ಗಳು (ತನ್ನ ಸುಖಕಲ್ಲದೆ ಕೇಳಿಕೆ ಯಾರ ಬಿಟ್ಟಿಯೋ: **ಲೀಲಾವತಿ,** ೨. ೧೧೪)

**ಬಿಟ್ಟಿಯವಂದಿರ್** – ಬಿಟ್ಟಿ ಕೆಲಸದ ಆಳುಗಳು (ಬಿಟ್ಟಿಯವಂದಿರ ಕಯ್ಯಿಂದಿಟ್ಟಿಗೆಗೊಂಡವನೊಟ್ಟಿದಂ: **ಆದಿಪು,** ೫. ೧೯)

**ಬಿಟ್ಟಿರ್** – ತಂಗು, ಬೀಡುಬಿಡು (ಇಂದ್ರಾಯುಧದ ಪಜ್ಜೆವಿಡಿದು ಬಂದು ಬಿಟ್ಟಿರ್ದ ನಿಜಸ್ಕಂಧಾವಾರಮಂ ಕಂಡು: **ಕಾದಂಸಂ,** ೫. ೭೪ ವ)

**ಬಿಟ್ಟೇಱು** – ಈಟಿ (ಬಿಟ್ಟೇಱು ಸುರಿಗೆ ಸಬಳ ಸಲ್ಲೆಹ ಸೂಲಿಗೆ .. .. ಆದಿಯಾದ .. .. ಕೈದಯಗಳಿಂದ: **ಧರ್ಮಪ,** ೧. ೮೬ ವ)

**ಬಿಡವೆ** – ಇರುಕಲು (ರಕ್ಕಸಿಯರ ಮನೆಯ ಬೆಲ್ಲದಂತೆ ಕಲ್ಲ ಬಿಡವೆಯೊಳಿರ್ದ ಪಣವಿನಂತೆ ಸಿಡಿಲೊಳಗಿರ್ದ ಸಕ್ಕರೆಯಂತೆ: **ಧರ್ಮಾಮೃ,** ೧೩. ೧೨೨ ವ)

**ಬಿಡಾಲ** – ಬೆಕ್ಕು (ಬಿಡಾಲಂ ಇಲಿಯಂ ಕೊಲ್ವಂತೆ ಅಶ್ರಮದೊಳೆ ಕೊಂದಪಂ: **ಪಂಚತಂತ್ರ,** ೪೦೮ ವ)

**ಬಿಡಾಳ** – ಬಿಡಾಲ (ಡಾಳಂಗಪ್ಪಯಿಸಿದುದು ಬಿಡಾಳಕ್ಕಂ ಪಾಲಕಾಪನಿತ್ತೊಲಾಯ್ತು: **ಪಾರ್ಶ್ವನಾಪು,** ೩. ೧೧೨)

**ಬಿಡಿಸು** – ಬೇರೆ ಮಾಡು; ಬಿಡುಗಡೆಗೊಳಿಸು; ಬೀಡು ಬಿಡುವಂತೆ ಮಾಡು (ಅಲ್ಲಿ ಚೆಲ್ವಾಗಿರೆ ಬಿಡಿಸಿದಂ ಉರ್ವೀಶ್ವರಂ ತನ್ನ ಬೀಡಂ: **ಆದಿಪು,** ೧೩. ೨೦)

**ಬಿಡು** – ಬಿಚ್ಚು (ನರಂ ಆ ನರಪತಿಗಳ ವಿಸ್ತರಬಂಧಮೆಲ್ಲಮಂ ಕರಂ ಕರುಣಿಸಿ ಬಿಟ್ಟಿರಲ್: **ಕರ್ಣನೇಮಿ,** ೧೦. ೭೫); ತ್ಯಜಿಸು (ಭಂಡಾರಂ ಸವೆದೆಡೆ ಪ್ರಜೆ ಕೆಟ್ಟೆಡೆ ಹಗೆ ಸಮಿಪವಾದೆಡೆಯಲ್ಲಿರಲಾಗದು, ಯುದ್ಧಂ ಮಾಡಲಾಗದು, ಆ ದೇಶಮಂ ಬಿಟ್ಟು ಪೋಪುದು: **ಪಂಚತಂತ್ರ,** ೯೨, ಶ್ಲೋಕ ೧೫ ಟೀಕೆ)

**ಬಿಡುದಾಣ** – ಬಿಡಾರ (ರಾಜಶೇಖರನರೇಂದ್ರಂಗೆ .. .. ಬಿಡುದಾಣಂ ಮಾಡಿಕೊಟ್ಟು ಮಜ್ಜನ ಭೋಜನಾದಿ ಸಮುಚಿತ ಉಪಚಾರಕ್ಕೆ ತಕ್ಕ ಪರಿಚಾರಕಜನಮಂ ನಿಯಾಮಿಸಿ: **ರಾಜಶೇವಿ,** ೭. ೯೩ ವ)

**ಬಿಡುವು** –ಸುರಿವು (ವಿಡೂರಜಂಗಳ್ ಕೊಡಂಗಳ ಬಿಡುವಿನಂ ಘೃತಾಭಿಷೇಕಮನತಿ ಸಂತೈಸುವಂತೆಯುಂ .. .. ಅಭಿನಯಿಸುತ್ತುಂ: **ಅನಂತಪು,** ೫. ೭೧ ವ)

**ಬಿಡುವೆಣ್** – ಸಖಿ (ಕೊಡುವ ಬಾಡಕ್ಕಂ ಜೀವಧನಂಗಳ್ಗಂ ಬಿಡುವೆಣ್ಣಂ ಲೆಕ್ಕಮಿಲ್ಲೆನಿಸಿ ರಾಗಂಗಿಡದೆ ಕೊಂಡಾಡಿದಂ ಬಲ್ಲಹನಱಿಯೆ ಗುಣಾರ್ಣವಂ ಕವಿತಾಗುಣಾರ್ಣವನಂ: **ಪಂಪಭಾ,** ೧೪. ೫೫)

**ಬಿಡುವೊನ್** – ಬಿಡಿಯಾದ ಚಿನ್ನ[ದ] ನಾಣ್ಯ (ಅರ್ಥಿಸಂತತಿಗೀಯಲ್ ಬಿಡುವೊನ್ನುಮನಾಳ್ಗಟ್ಟುವ ತೊಡರೊಳ್ ತೊಡರಿರ್ದರ್ ಅರಸುಮಕ್ಕಳ್ ಕೆಲಬರ್: **ಪಂಪಭಾ,** ೧೦. ೩೮)

**ಬಿಡೆ ನುಡಿ** – ನಿಷ್ಠುರ ಮಾತಾಡು (ಒದವಿದ ಮುನಿಸಿಂದಂ ನಿನ್ನಿದಿರೊಳ್ ಬಿಡೆ ನುಡಿದು .. ..ಪೋದೆನುಬ್ಬೆಗದಿಂ: **ಕಾದಂಸಂ,** ೪. ೫೨)

**ಬಿಡೌಜ** – ಇಂದ್ರ (ನಾಟ್ಯದೋಜೆಗೆ ಬಿಡೌಜನಾಡಿದೊಡೆ ದಿವಿಜೆಯರ್ ಮಾಣ್ದಪರೇ: **ಅಜಿತಪು,** ೫. ೩೫)

**ಬಿಡೌಜಸ** – ದೇವತೆ (ನೇಜೆಯದಿಂದಿಱದೆತ್ತಿ ನಿಜೌಜಮನೆ ಬಿಡೌಜಸರ್ಗೆ ತೋರ್ಪಂತೆ ಅಸಹ್ಯದ್ರಾಜಿಯನೆ .. .. ಮಹಾಜಿಯೊಳ ತಳರ್ದುದು: **ರಾಜಶೇವಿ,** ೬. ೬೫)

**ಬಿಣ್** – ಕೊಂಡುಕೊ (ಸುರಪನ ವಜ್ರಮುಂ ಹರಿಯ ಕೌಸ್ತುಭಮುಂ ಹರನಿಂದುಲೇಖೆಯುಂ ವರುಣನ ಮುತ್ತಿನ ಎಕ್ಕಸರಮುಂ .. ..ಬೆಲೆಗೆ ಬಿಣ್ಣಿದುವಲ್ಲಂ: **ಪಂಪರಾ,** ೧. ೧೨೧)

**ಬಿಣ್ಗುಂಡು** – ಲಂಗರು ಗುಂಡು (ಅಂತು ಬಿಣ್ಗುಂಡಿಕ್ಕಿದ ಬಹಿತ್ರದಂತೆ ಅಲ್ಲಿಂ ತಳರದೆ ನಿಂದ ತನ್ನ ರಥಮಂ ಕಂಡು: **ಆದಿಪು,** ೧೨. ೮೬)

**ಬಿಣ್ಗೊಂಚಲ್** – ದೊಡ್ಡ ಗೊಂಚಲು (ಕೋಮಲಂ ಕಿಸಲಯಂ ಬಿಣ್ಗೊಂಚಲ್ ಆಶ್ಲೇಷನಿಷ್ಠುರಂ: **ಲೀಲಾವತಿ,** ೧೪. ೯೩)

**ಬಿಣ್ಗೊನೆ** – ದೊಡ್ಡ ಗೊನೆ (ಪಣ್ಗಾಯ್ಗಳ ತಳ್ತ ತುಱುಗಲ ಬಿಣ್ಗೊನೆಯಿಂ ತೂಗಿ ತೊನೆವ ಕೌಂಗಂ: **ಕಾವ್ಯಾವಲೋ,** ೨೧೮)

**ಬಿಣ್ಣಿತ್ತು** – ಭಾರವಾದ (ತಲೆ ಬಿಣ್ಣಿತ್ತು ಎಂಬ ಮಱುಕದಿಂದಂ ಎಂತತಿ ನೇಮಮಂ ನಡೆತಂದನಂತೆ ನಿಲೆ ರಣಮುಖದೊಳ್: **ಅಚವರ್ಧ,** ೭. ೬೨)

**ಬಿಣ್ಣಿದ** – ಭಾರವಾದವನು (ಕಟ್ಟಳಿಪಿಂದ ಒಳ್ಗುಣಮಂ ಬಿಟ್ಟುಂ ಲಘುಪಾತ್ರನಾಗಿ .. .. ನೆಟ್ಟನೆ ಬಿಣ್ಣಿದನೆನಿಕ್ಕುಂ: **ಸಮಯಪ**, ೧೫. ೩೫)

**ಬಿಣ್ಪರಿ** – ಬೇಟೆಯ ಜಾಗ (ಹರಿಣೀಲೋಚನೆ ದೀವಂ ಆಂ ಹರಿಣನೆಂ ಪೆರ್ಗಾಡಿದೀ ಬೀಡು ಬಿಣ್ಪರಿ: **ಅನಂತಪು,** ೧೧. ೪೨)

**ಬಿನ್ಪಿಗೆ** – ಕಾಠಿಣ್ಯ (ಬಿಣ್ಪಿಗೆಯಿಂದಂತಾ ವನಿತೆಯ ಗುರುಜಘನಮೇಂ ಮನಂಗೊಳಿಸಿದುದೋ: **ತ್ರಿಷಷ್ಟಿಪು,** ೨. ೧೪೦)

**ಬಿಣ್ಪು** – ಭಾರ (ಸಾಸಿರ್ವರ್ ಏಜೆದೊಡಲ್ಲದೆ ಈ ಓಡಂ ನಡೆಯದು ಎಂಬುದುಂ ಆಂ ಅನಿಬರ ಬಿಣ್ಪುಮಪ್ಪೆಂ ಏಜೆಸೆಂದೊಡೆ ಗೆಯ್ವೆಂ ಎಂದೊಡಂ ಏಜೆಸಿ ನಡೆಯಿಸುವಲ್ಲಿ: **ಪಂಪಭಾ,** ೧. ೬೮ ವ); ಅತಿಶಯತೆ (ಆತನ ಪುರುಷಾರ್ಥದ ಪುರುಳುಂ ಶಕ್ತಿಯಳವುಂ ಕಲಿತನದ ಗುಣ್ಪುಂ ಪರಾಕ್ರಮದ ಬಿಣ್ಪುಂ ಕರತಳಾಮಳಕಮಾಗಿರ್ದಪ್ಪುದು: **ಪಂಚತಂತ್ರ,** ೧೫೬ ವ); ಹಿರಿಮೆ (ವಿಶ್ವಂಭರಾಭರಮಂ ತನ್ನ ಭುಜಾಗ್ರದೊಳ್ ತಳೆದು ಬಿಣ್ಪಂ ತಾಳ್ದಿದೀ ಧೈರ್ಯಮಂದರನಂ ತಾಳ್ದಿದೆಂ: **ಮಲ್ಲಿನಾಪು,** ೮. ೧೦)

**ಬಿಣ್ಪೊಱೆ** – ಭಾರವಾದ ಹೊರೆ (ಕೂಸಿನ ತಲೆಯೊಳ್ ಬಿಣ್ಪೊಱೆಯನಿಟ್ಟವೋಲ್ ಅಸುಖಕರಂ: **ಕವಿರಾಮಾ,** ೨. ೬)

**ಬಿತ್ತಣ** – ಬೀಜ ಬಿತ್ತುವಿಕೆ (ಕೆಯ್ಯುಱುಮೆಯಂತೆ ಕೆಯ್ಯೊಳ್ ಪದಂಬಡೆದಂತೆ ಬಿತ್ತಣದಂತೆ ರಾಶಿಯಂತೆ: **ಧರ್ಮಾಮೃ,** ೧೨. ೧೪ ವ)

**ಬಿತ್ತರ** – [ವಿಸ್ತಾರ] ಹರಹು (ಸಮಯಗ್ರಂಥಂಗಳಂ ತಂದು ಬಿತ್ತರದಿಂ ಬಿತ್ತಿದ ಕೊಂಡಕುಂದಮುನಿವಿಖ್ಯಾತಿ ಲೋಕೋತ್ತಮಂ: **ಸಮಯಪ,** ೧. ೧೦)

**ಬಿತ್ತರಂಗೆಯ್** – ಪೀಠವಾಗು (ಯೋಗಾಭ್ಯಾಸಂಗೆಯ್ವ ಯೋಗೀಂದ್ರಬೃಂದಕ್ಕೆ ಯೋಗಾಸನಮಾಗಿ ಸುತ್ತುಗೊಂಡು ಬಿತ್ತರಂಗೆಯ್ವಂತಿರ್ದ ಭೋಗೀಂದ್ರವೃಂದಮುಮಂ: **ಪಂಚತಂತ್ರ,** ೧೯೦ ವ)

**ಬಿತ್ತರಂಬಡೆ** – ಅತಿಶಯವಾಗು (ಸಂಪಗೆಯ ಮುಗುಳುನಗೆಗಳಂ ತೆತ್ತಿಸಿ ಬಿತ್ತರಂಬಡದ ಜವಳಿವಡಿಗಳೊಳಂ: **ಚಂದ್ರಪ್ರಪು,** ೭. ೯೫ ವ)

**ಬಿತ್ತರಂಬೆಱು** – ವಿಸ್ತಾರಗೊಳ್ಳು (ಕಟ್ಟಲೆಯ ಕಾರಾಗಾರದಂತೆ ಬಿತ್ತರಂಬೆತ್ತು ಬಿಚ್ಚತಂ ಪರ್ವಿದ ತಮಾಳಮಾಳ ಪರಂಪರೆಗಳಿಂ: **ಚಂದ್ರಪ್ರಪು,** ೧. ೧೦೫ ವ)

**ಬಿತ್ತರಿಕೆ** – ವಿಸ್ತಾರಿಕೆ (ಬೆಡಂಗು ಬಿತ್ತರಿಕೆಯಂ ಬೀಱಿ ಬಾಜಿಸುತ್ತಿರೆಯುಂ: **ಶಾಂತೀಶ್ವಪು,** ೭. ೯೩ ವ)

**ಬಿತ್ತರಿಗೆ** – ಸಿಂಹಾಸನ (ಏಡೆವಟ್ಟಲ್ಗೆ ಅಡ್ಡಣಿಗೆಗೆ ಪಡಿಗಕ್ಕೆ ತಗುಳ್ದ ಪಟಿಯ ಬಿತ್ತರಿಗೆಗೆ ತಕ್ಕಡೆಯಜೀದು ಪಂತಿಕಾಱರ ನೆಡೆಯಜಿದು ವಿಲಾಸದಿಂದಮಿರಿಸಿದಾಗಳ್: **ಸುಕುಮಾಚ,** ೧೧. ೨೬); ಮೆತ್ತನೆಯ ಪೀಠ (ಲಕ್ಷ್ಮೀಮತಿ ಮೊದಲಾಗಿರೆ ತನ್ನಿರ್ಕೆಲದೊಳ್ ಅಬ್ಬದ ಎಳೆಯೆಲೆಗಳ ಬಿತ್ತರಿಗೆಗಳೊಳ್ ಅರಸಿಯರ್ ನೆಮ್ಮಿ ರಾಗದಿಂ ಕನಕ ರಜತ ಸಿಕತಿಳತಳದೊಳ್: **ಶಾಂತಿಪು,** ೮. ೫)

**ಬಿತ್ತರಿಸು** – ವಿಸ್ತರಿಸು (ಪರಿಮಳಮನೆಣ್ದೆಸೆಗೆ ಬಿತ್ತರಿಸುವ ನನೆಗಣೆಗಳಿಂದೆ ಗಿರಿಪತಿತನಯಾ ವಿರಹಾತಪಮೊಗೆಯಲ್: ಗಿರಿಜಾಕ, ೭. ೭೦); ತುಂಬಿರು (ಬಹುಸಾರಸದಾರವದಿಂ ಸಮಂತು ಬಿತ್ತರಿಪ ಸುದರ್ಶನಾಬ್ಜನಿಳಯಂ ನೆರೆ ನಾದಮಯಂ ನಿರಂತರಂ: **ಶಾಂತೀಶ್ವಪು,** ೧೦. ೧೫೪); ಗೌರವಿಸು (ಹರಿಹರಹಿರಣ್ಯಗರ್ಭರಂ ಉರವಣೆಯಿಂ ಗೆಲ್ದ ಕಾಮನಂ ದೀಪ್ರ ತಪೋಭರದಿಂದ ಉರಿಪಿದರ್ ಎನೆ ಬಿತ್ತರಿಸದರಾರ್ ವೀರಣಂದಿ ಸೈದ್ಧಾಂತಿಕರಂ: **ಪಂಪರಾ,** ೧. ೨೭)

**ಬಿತ್ತಿಗ** – ಪ್ರೌಢ, ಪಂಡಿತ (ಮಾರ್ಮಲೆದು ಬಿಲ್ಲ ಬಿತ್ತಿಗರೊರ್ಮೊದಲಿನ ಕಣೆಗಳುರ್ಚಿ ಪೋದುವು ನೆಱನಂ: **ಪಂಪರಾ,** ೧೩. ೪೧))

**ಬಿತ್ತು** – ಬೀಜ (ಕ್ಷಿತಿಯೊಳಗುಳ್ಳ ಭೂಭುಜರ ಬಿತ್ತು ಮೊದಲ್ಗಿಡೆ ಮುನ್ನಂ ಏಕವಿಂಶತಿ ಪರಿಸಂಖ್ಯೆಯಿಂ ತವಿಸಿ ಸರ್ವನಿವೇದಕಮೆಂಬ ಯಜ್ಞದೊಳ್: **ಪಂಪಭಾ,** ೨. ೪೫); ಬೀಜ ನೆಡು (ಬಿತ್ತು–ಬೀಜಸ್ಥಾಪನೇ: **ಶಬ್ದಮದ,** ಧಾ ೩೯೧)

**ಬಿದಿ** – [ವಿಧಿ] ದೈವ (ಉನ್ನತ ಧವಳಚ್ಛತ್ರಚ್ಛನ್ನ ವಿಯತ್ತಳನಂ ಇಂದುಕುಳತಿಳಕನಂ ಇಂತು ಅನ್ನೆಯದಿಂದ ಈ ಪಟುವಿನೊಳ್ ಎನ್ನರಸನಂ ಇಂತು ಬಿದಿಯೆ ತಂದಿಕ್ಕುವುದೇ: **ಪಂಪಭಾ,** ೨. ೨೨); ಸೃಷ್ಟಿಕರ್ತ (ಬಿದಿ ಜಗಮಂ ಬಿತ್ತರಿಸಿದಂ ಈ ಪರಿಯೊಳ್ ಎನಲ್ ಸರಳ್ಗಳ ಮಳೆಗಱೆದರ್: **ತ್ರಿಷಷ್ಟಿಪು,** ೨೪. ೩೦೬); ಅದೃಷ್ಟ (ಎಂದು ಕಿರಾತಂ ಬೇಸತ್ತು ಬೆಚ್ಚನೆಸುಯ್ದು ಬಿದಿಯಂ ಬಯ್ದು ತನ್ನ ಮನೆಗೆ ಮಗುಟ್ದಂ: **ಪಂಚತಂತ್ರ,** ೪೨೦ ವ)

**ಬಿದಿಗೆ** – [ದ್ವಿತೀಯೆ] ಚಾಂದ್ರಮಾನ ಪಕ್ಷದ ಎರಡನೆಯ ದಿನ (ಗರ್ಭಾವತರಣಂ ಆಷಾಡ ಬಹುಲ ಬಿದಿಗೆಯ ಉತ್ತರಾಷಾಢನಕ್ಷತ್ರದ ಬೆಳಗಪ್ಪ ಜಾವದೊಳ್: **ಆದಿಪು,** ೭. ೩೨ ವ)

**ಬಿದಿಗೆಯ ಚಂದ್ರ** – ಬೆಳೆಯುವ ಚಂದ್ರ (ಆತನುಂ ಬಿದಿಗೆಯ ಚಂದ್ರನಂತೆ ಕ್ರಮಕ್ರಮದಿಂ ಸುಖದಿಂ ಬೆಳೆದು: **ವಡ್ಡಾರಾ,** ಪು. ೭೩, ಸಾ. ೧೯)

**ಬಿದಿರ್** – ಕೊಡವು (ಮೆಯ್ಯಂ ಅದಿರ್ದು ಕೈಯಂ ಬಿದಿರ್ದು ಅವನಂ ಬಿರ್ದಿ ಕಂಡು ನಕ್ಕು ಇಂತೆಂದಳ್: **ವಡ್ಡಾರಾ,** ಪು ೧೮೮, ಸಾ ೨೦); ಚದುರಿಸು (ಬಿದಿರ್ದು ಈಡಾಡಿ ಕೆಲಂಬರಂ ಕೆಲಬರಂ ನಿಟ್ಟೆಲ್ವು ನುರ್ಗಾಗೆ ಕಾಯ್ದೊದೆದು .. .. ಕೊಂದಂ ಮರುನ್ನಂದನಂ: **ಪಂಪರಾ,** ೧೧. ೧೪೩); ಬಿದಿರ ಗಳೆ (ಕೌಸಂಬಿಯೆಂಬ ಪೊಟಲೊಳ್ ಮಿಳಿಯ ಬಿದಿರ ಮೇಗೇಱೆ ಆಕಾಶದೊಳಾಡುವ ವಿದ್ಯಾಧರಲಂಗಿಗರ ಮನೆಯೊಳ್ ಪೆಣ್ಗತ್ತೆಯಾಗಿ ಪುಟ್ಟಿ: **ವಡ್ಡಾರಾ,** ಪು ೮, ೨೬); ಪಸರಿಸು (ಬೆಳ್ವೆಳಗುಂ ಬಿದಿರುತ್ತೆ ಕಂಚಗಾಱರ ಪಸರಂ ಪೊದಳ್ದೆಸೆವುದು: **ಕುಸುಮಾಕಾ,** ೨. ೧೦೪)

**ಬಿದಿರ್ಚು** – ಹರಡು (ಎಱಕೆಗಳೊಳ್ ಪೊದಳ್ದ ಪನಿಪುಲ್ಲ ಪಯಷ್ಕಣಮಂ ಬಿದಿರ್ಚಿ ಕಣ್ಗೆಱೆದು ಇದಿರ್ಗೊಂಬಿನೊಳ್ ತೊಡೆದು .. .. ವಿಹಂಗಮಂಗಳ್ .. .. ಪಾಱಿದುವು ಎಣ್ದೆಸೆಗಂ ಪ್ರಭಾತಕಾಲದೊಳ್: **ಶಾಂತೀಶ್ವಪು,** ೧೧. ೯೭); ಕಳಚು (ಮೋಹಪಾಶದ ತೊಡರಂ ಬಿದಿರ್ಚಿ ದೆಸೆಯಂತುವರಂ ನಿಜಕೀರ್ತಿಯಂ ನಿಮಿರ್ಚಿಯುಂ: **ಪಂಪರಾ,** ೨. ೨೬)

**ಬಿದಿರ್ದಟ್ಟಿ** – ಬಿದಿರಿನಿಂದ ಮಾಡಿದ ತಡಿಕೆ (ರಾಂತಕ್ಕೆ: ಬಿದಿರ್ದಟ್ಟಿ, ಪೊಗರ್ವಟ್ಟೆ: **ಶಬ್ದಮದ,** ೫೩ ಪ್ರ)

**ಬಿದಿರ್ಮುತ್ತು** – ಬಿದಿರಿನಲ್ಲಿ ಸಿಕ್ಕುತ್ತದೆ ಎಂದು ನಂಬಲಾದ ಮುತ್ತು (ತೋರ ಬಿದಿರ್ಮುತ್ತಿನ ನವಹಾರದ ಕೆಂದಳಿರ್ಗಳುಡೆಯ

ವನಚರಿಯೊರ್ವಳ್ .. .. ನವಸಂಧ್ಯಾರಾಗದೊಳೆಸೆವ ನಿಶೆಯನನುಕರಿಸಿರ್ದಳ್: **ಜಗನ್ನಾವಿ,** ೧೬. ೧೮)

**ಬಿದಿವಸ –** ವಿಧಿವಶ (ಬಿದಿವಶದಿಂದೆ ಪುಟ್ಟುವುದು ಪುಟ್ಟಿಸುವಂ ಬಿದಿ: **ಪಂಪಭಾ,** ೧೨. ೧೮೨)

**ಬಿದಿವೆಡಂಗ –** ಹೊಯ್ಸಳ ಸೈನ್ಯದ ಆನೆಗಳ ಬಿರುದು (ತಲ್ಲಣದಿಂ ಪೆಱದೆಗೆವ ಬಿದಿವೆಡಂಗನೆಂಬ ಬಿಂಜಮಾಣಿಕನೆಂಬ ಹರಿರಾಯನೆಂಬ ತೋರಹತ್ತನೆಂಬ ಚೌವಟಮಲ್ಲನೆಂಬ ಮುಱಿವ ರಕ್ಕಸನೆಂಬ ರಾಯದಟಸೂಱೆಕಾರನೆಂಬ ತನ್ನೊಡ್ಡಿನ ಪೇರಾನೆಗಳಂ ಕಂಡು: **ಕಬ್ಬಿಗಕಾ,** ೨೨೩ ವ)

**ಬಿದು –** [ವಿಧು] ಆನೆಯ ಕುಂಭಸ್ಥಳ (ಮದವತ್ ಕರಿಗಳ ಬಿದುವಂ ವಿದಾರಂಗೆಯ್ದು ಕೊಲ್ವ ಕಂಠೀರವಕಂ: **ಗದಾಯು,** ೩. ೪೮); ಗಂಡಸ್ಥಳ (ಬಿದುವೊಳ್ ಬಿಡದೊಟ್ಟಿಕೊಳುತ್ತೆ ಗಂಧಮಂ ಪಡೆದೆಡೆಯಾಡುತಿರ್ದ ಕರಿ ತಾಳ್ದುದು ಗಂದಗಜಾಭಿಧಾನಮಂ: **ರಾಜಶೇವಿ,** ೨. ೧೧೩)

**ಬಿದುಗದಿರ್ –** ಬೆಳುದಿಂಗಳು (ಬಿದುಗದಿರಿಂತು ನೆಲಸಿರ್ಕೆ ರಿಗೆ ಸಂದುದುಮೆಂದು ತೊಲಗದಿರುತಿರ್ಕೆ: **ರಾಜಶೇವಿ,** ೧. ೮೯)

**ಬಿದುಗಲ್ –** ಚಂದ್ರಕಾಂತಶಿಲೆ (ಜೊನ್ನದೊಂದು ಪುತ್ತಳಿಯವೊಲೊಪ್ಪವೆತ್ತ ಬಿದುಗಲ್ಲಿನ ಬೊಂಬೆಯ ಪಾಂಗಿನಂತೆ ಸೊಂಪಳವಡೆ ಬಂದುದಂ ಕನಸಿನೊಳ್ ನೆಱೆಯೆ ನೋಡಿದೆಂ: **ಕಬ್ಬಿಗಕಾ,** ೬೫)

**ಬಿದುತಟ –** ಗಂಡಸ್ಥಳ (ಬಿದುತಟದೊಳ್ ಕಂದದೊಳ್ ಬಕ್ಕ ಮೆಯ್ ಪೊಕ್ಕಿರೆ: **ನೇಮಿನಾಪು,** ೩. ೬೬)

**ಬಿದ್ದಂಬರಿ –** ಬೀಳುವಂತೆ ಓಡು (ಬಟ್ಟೆಯೊಳ್ ಬಿದ್ದಂಬರಿದುಂ ಅಡವಿಯೊಳ್ ಬಿಸಟಂಬರಿದುಂ ಉರ್ವಿಯಂ ಪೂಟ್ದುಂ ಆಗಸಮನೊತ್ತಿಯುಂ .. .. ತತ್ತಮೋಬಳಂ .. .. ನೆಲಸೆ: **ಆಚವರ್ಧ,** ೬. ೩೨ ವ)

**ಬಿನದ –** ವಿನೋದ (ಸವಿಯುಂ ಪುದುಂಗೊಳಿಪ ಚಿತ್ರರತಂಗಳಭಂಗಿಗಳ್ ಮನಂಗೊಳೆ ನಗೆ ಸಬ್ಬವಂ ಬಿನದಮೆಂಬಿಱಿಂ ಲಲಿತಾಂಗನಂ ಮನಂಗೊಳಿಸುವ: **ಆದಿಪು,** ೨. ೭೧)

**ಬಿನುಗು –** ಬಡವ (ಬಿನುಗಂ ನಂಬಿ ತೆಱುವೊಕ್ಕಲಂ ಕಳೆವ ಪ್ರಭುವುಮಂ: **ಧರ್ಮಾಮೃ,** ೮. ೩೧ ವ)

**ಬಿನ್ನ –** ಬಿನ್ನಹ (ಜ್ವಲನಜಟಿ ಮಹಾರಾಜಂ ಮಹೀತಲಾಲಿಂಗಿತ ಲಲಾಟಪಟ್ಟನಾಗಿ ವಿನಯದಿಂ ಕಾರ್ಯಮಂ ಬಿನ್ನವಿಕ್ಕೆ: **ಶಾಂತೀಶ್ವಪು,** ೨. ೧೦೧ ವ); ಕಳೆಗುಂದು (ಗಿರಿಮಲ್ಲಿಗೆ ಬೀತು ಬಿನ್ನನಾಗೆಯುಂ ಕಡವು ಮೊಗರಾಗಂಗಿಡೆಯುಂ .. .. ಅತಿಪ್ರಕಾಶಮಾದ ಶರತ್ ಪ್ರವೇಶದೊಳ್: **ಪಂಪರಾ,** ೭. ೧೬೩ ವ); ಮೌನ (ಬಿನ್ನನಾಗಿ ಸುಮ್ಮನಿರ್ದ ಕರಗದಡಪದ ಮಡಿಯ ಭಂಡಾರದ ಮನೆಗಳಂ: **ವರ್ಧಮಾಪು,** ೫. ೯ ವ)

**ಬಿನ್ನಗೆ –** ಕಳೆಗುಂದಿದ (ಇನ್ನಱುದಿಂಗಳುಂಟೆನೆ ನಿಜಾಯು ಸುರಪ್ರಕರಂ ಮೊಗಂಗಳಂ ಬಿನ್ನಗೆ ಮಾಡೆಯುಂ: **ಶಾಂತಿಪು,** ೭. ೭೯)

**ಬಿನ್ನಣ –** [ವಿಜ್ಞಾನ] ಚಾತುರ್ಯ (ಮುತ್ತಿದ ಜಾಯಿಲಂಗಳಂ ಕ್ಷಣದೊಳಿದಿರ್ಚಿ .. .. ಕುರುತ್ತಿಱಿವ ಇಟ್ಟಿಯಂ ಅಂಡುಗೊಂಡು ಬಿನ್ನಣದೆ ಬಿದಿರ್ಚಿ: **ಶಬರಶಂ,** ೪. ೧೦)

**ಬಿನ್ನಣಿ –** ನಿಪುಣ (ಪ್ರೌಢಿಯೊಳ್ ಎಂತಪ್ಪರುಮಂ ಕಡುಮೆಚ್ಚದೆ ಬಿನ್ನಣಿಯಹ ಪಱೆಯಂಗೆ ಒಸೆದಿರ್ದೊಡೆ: **ಹರಿವಂಶ,** ೫. ೧೫)

**ಬಿನ್ನಣಿಗ –** ಕುಶಲಕರ್ಮಿ (ಒಂದು ದಿವಸಂ ಮಧ್ಯಾಹ್ನ ಸಮಯಮಪ್ಪನ್ನೆಗಂ ಭರಂಬಟ್ಟು ಕೆಲಸಂಗೈದಲ್ಲಿಯ ಬಿನ್ನಣಿಗರುಂ ಕರ್ಮಕಾರರುಂ ತಮ್ಮ ತಮ್ಮ ಮನೆಗೆ ಉಣಲ್ ಪೋಪುದುಂ: **ಪಂಚತಂತ್ರ,** ೮೨ ವ)

**ಬಿನ್ನನೆ –** ತೊಂದರೆ (ತನ್ನ ಬಿನ್ನನಿರ್ದ ಮೊಗದಿಂ ತವಿಲ್ದಿರೆ ವಿಲಾಸಮುಂ ಮುಂದೆ ಕಂಡನಲ್ಲಿ ಕಮಳಾಕ್ಷಿಯಂ ವೃಷಭಲಕ್ಷಣಂ ಲಕ್ಷ್ಮಿಯಂ: **ಗದಾಯು,** ೯. ೩); ಮೌನವಾಗಿ (ಎನ್ನಣುಗದಮ್ಮನಿಲ್ಲದೆ ಬಿನ್ನನೆ ಸಾಮ್ರಾಜ್ಯಮಿನಿತುಮಾದ ಎಱಕಮುಂ ಅತ್ಯುನ್ನತಿಯಲ್ತು ಎನಗೆ: **ಆದಿಪು,** ೧೪. ೬೨)

**ಬಿನ್ನಪ –** [ವಿಜ್ಞಾಪನ] ಅರಿಕೆ (ದೇವ ಬಿನ್ನಪಂ ಇಂದು ಖಾಂಡವಮಂ ಕೃಶಾನುತಗುಳ್ದು ನಾನಾ ವಿಧಂ ಸುಡೆ: **ಪಂಪಭಾ,** ೫. ೯೪)

**ಬಿನ್ನಪಂಗೆಯ್ –** ಅರಿಕೆ ಮಾಡು (ಮಂತ್ರಿಯರಸಂಗಿತೆಂದದು ಬಿನ್ನಪಂಗೆಯ್ದಂ: **ವಡ್ಡಾರಾ,** ಪು. ೮೧, ಸಾ. ೧೩)

**ಬಿನ್ನವಿರ್ –** ಸುಮ್ಮನಿರು ಆಣ್ಚೆ ತಲೆಯಂ ಬಾಗಿ ಬಿನ್ನನಿರೆಯುಂ: **ಲೀಲಾವತಿ,** ೪. ೩೪ ವ); ಖಿನ್ನವಾಗಿರು ಮಾಸಿ ತಾಱಿದ ಕುರುಳ್ಗಳಂ ತನ್ನ ಬಿನ್ನವಿರ್ದ ಮೊಗದಿಂ ತವಿಲ್ದಿರೆ ವಿಲಾಸಮುಂ ಮುಂದೆ ಕಂಡನಲ್ಲಿ ಕಮಲಾಕ್ಷಿಯಂ: **ಗದಾಯು,** ೯. ೩)

**ಬಿನ್ನವಿಸು –** ಬಿನ್ನಪಂಗೆಯ್ ದೇವ ಕೈಕೊಂಡು ಕಾವುದು ನೀನೆಂದು ಸುರಾಳಿ ಬಿನ್ನವಿಸೆ: **ಧರ್ಮಾಮೃ,** ೧. ೧೫೭)

**ಬಿನ್ನಾಣ –** ಬಿನ್ನಣ (ಬಂದು ನಿಂದನಂ ಕಂಡು ವಿರಾಟಂ ನಿನ್ನ ಬಿನ್ನಾಣಮೇನೆಂದು ಬೆಸಗೊಳೆ: **ಪಂಪಭಾ,** ೮. ೫೩ ವ)

**ಬಿಪ್ಪಂಡ –** ವ್ಯರ್ಥ (ಕೆಲವು ಪದಂಗಳ್ ನಿಯತದಿಂ ದ್ವಿತ್ವಂಗಳಪ್ಪುವವರ್ಕೆ ಪ್ರಯೋಗಂ: ಬಿಪ್ಪಂಡಂ [ವ್ಯರ್ಥ]: **ಶಬ್ದಮದ,** ೪೬, ವೃತ್ತಿ ೩೮)

**ಬಿಪ್ಪಂಡಿಸು –** ದ್ವೇಷಿಸು (ಸತ್ಯಮಂ ಬಾರ್ತೆಗೆಯ್ಯಳ್ ಮತಿಯಂ ಬಿಪ್ಪಂಡಿಪಳ್: **ಕಾದಂಬ,** ೩. ೮೨)

**ಬಿಬ್ಬಿಱಿವಲ್ –** ಉಬ್ಬು ಹಲ್ಲು (ಮುರುಟಿದ ಕಿವಿ ಬಿಬ್ಬಿಱಿವಲ್ ಕುಸಿಗೊರಲ್ ಇಟಿದೆರ್ದೆ ಪೊಱಂಟ ಬೆನ್ ಬಾತ ಬಸಿಱ ಅಡಂಗಿದ ಜಘನಂ: **ಯಶೋಧಚ,** ೨. ೩೮)

**ಬಿಬ್ಬೋಕ –** ಹುಸಿಮುನಿಸು (ಲಾವಣ್ಯರೂಪವಿಭ್ರಮ ಭಾವಕ ಬಿಬ್ಬೋಕ ಲಲಿತ ಕಿಲಕಿಂಚಿತ ಲೀಲಾವಿಹೃತಿಗಳಿಂದಾ ಲೀಲಾವಿಗಂ ನಾಲ್ವರಲ್ಗೆ ತಾಂ ಮಿಗಿಲೆನಿಕುಂ; **ಲೀಲಾವತಿ,** ೧೪. ೧೦೫)

**ಬಿಭೀಷಿಕಾ –** ಅಂಜಿಕೆ (ಕರವಾಳಚಾಳನಪ್ರಕಟಿತ ಭಟಬಿಭೀಷಿಕಾಡಂಬರಂ ಅತಿ ಅತಿಸ್ಫುಟವೀರಶೃಂಗಾರ ನಾಟಕಾಭಿನಯನಟವೃಂದಂ: **ಆದಿಪು,** ೧೩. ೪೫ ವ)

**ಬಿಮ್ಮುಗರೆ –** ಬಿಕೋ ಎನ್ನು (ವಿಳಾಸಿನೀಜನದ ಬಿನದಮಿಲ್ಲದೆ ಬಿಮ್ಮುಗರೆಯುತ್ತಿರ್ದ ಅವಿನಾಣಿಗಳ ಬಾಗಿಲ್ ಕೆತ್ತಂತೆ ಬಿನ್ನನಾಗಿ ಸುಮ್ಮನಿರ್ದ: **ವರ್ಧಮಾಪು,** ೫. ೯ ವ)

**ಬಿಯ –** [ವ್ಯಯ] ವೆಚ್ಚ (ಗಟ್ಟಿಸಿ ಸೆಂದುರದೊಳ್ ನೆಲಗಟ್ಟಿಸಿ ಚೆಂಬೊನ್ನ ನೆಲೆಯ ಚೌಪಳಿಗೆಗಳೊಳ್ ಕಟ್ಟಿಸಿ ಪಟಿಯಿಗೆಗಳಂ ಅಳವಟ್ಟಿರೆ ಬಿಯಂ ಅಲ್ಲಿ ಮೊಟಿಗೆ ಪಲವುಂ ಪಱೆಗಳ್: **ಪಂಪಭಾ,** ೨. ೬೬); ದಾನ (ಸಾಸಿರ ಪೊಂಗೆಯ್ದುಂ ಚೀ ಕಾಸಟಮೆಂದು ಒಂದು ಲಕ್ಕಗೆಯ್ವುದಿರ್ಕಂ ಮಾಸರಂ ಉಡಲೆಂದು ಅಧಿಕ ವಿಳಾಸದಿಂದ ಉಡಲಿಕ್ಕಿ ನೆಱೆಯೆ ಬಿಯಮಂ ಮೆಱೆದಂ: **ಪಂಪಭಾ,** ೩. ೪೪)

**ಬಿಯಂಗೆಯ್** – ವ್ಯಯಮಾಡು (ತವದ ಆಯುಷ್ಯದ ಕುಂದದಂದದ ಬಿಯಂಗೆಯ್ದುಂ ಪವಣ್ಗೊಡಿಜಿದ ಉದ್ಭವದೆ ಏ ನೋಂತೆಂ ಎನಿಪ್ಪ: **ಶಾಂತಿಪು,** ೭. ೮)

**ಬಿಯಕಾರ್ತಿ** – ಬೆಲೆವೆಣ್ಣು (ಓಲಗದಲ್ಲಿ .. .. ಕಣ್ಗೆಸೆದರ್ ನಗೆಗಾರ್ತಿಯರ್ .. .. ಒಲ್ಮೆಕಾರ್ತಿಯರ್ ಲೀಲೆಯನಾಂತು ನಿಂದ ಬಿಯಗಾರ್ತಿಯರ್ ಅಗ್ಗದ ಗಾಡಿಕಾರ್ತಿಯರ್: **ಪಾರ್ಶ್ವನಾಪು,** ೧೨. ೯)

**ಬಿಯಕಾಱ** – ದುಂದುಗಾರ (ಬಿಯಕಾಱನೊಪ್ಪುವ ಪ್ರಿಯತಮನಾಗೆ ಪೆರ್ಮೆಯ ಬೆಳಸು ಫಳಂ ಆ ಪೆಣ್ಣು ನೋಂತ ನೋಂಪಿಯ ಫಲಮೆಲಗೆ ಬೆಲೆವೆಣ್ಣೇ: **ಲೀಲಾವತಿ,** ೨. ೩೯)

**ಬಿಯಗ** – ಮದುವೆಯಿಂದಾದ ಸಂಬಂಧಿ; ಬೀಗ (ತಚ್ಚೈವಾಲಯದ ಕವಾಟಂಗಳನಿಕ್ಕಿ ತೆಱೆಯದಂತೆ ಸಂಕಲೆಯಂ ಪೂಡಿ ಬಿಯಗಮನಿಕ್ಕಿ: **ತ್ರಿಷಷ್ಟಿಪು,** ೨೭. ೧೩೧ ವ)

**ಬಿಯದ** – [ವ್ಯಾಧ] ಬೇಟೆಗಾರ (ಬೇಡಿದೊಡೆ ಈಯದೆ ಎಯ್ದೆ ಬಿಯದರ್: **ಕಾದಂಬ,** ೧. ೧೪೭)

**ಬಿಯಳ** – [ವ್ಯಾಳ] ಕಾಡಾನೆ (ಇತ್ವದ ಮುಂದಿನ ಹ್ರಸ್ವಕ್ಕೆ: ವ್ಯಾಳಂ–ಬಿಯಳಂ: **ಶಬ್ದಮದ,** ೨೬೮ ಪ್ರ)

**ಬಿಯ್ಯಗ** – ಬೀಗ, ಮದುವೆಯಿಂದಾದ ಸಂಬಂಧಿ (ವಿಶ್ವಂಭರಾವನಿಪಂ ಬಿಯ್ಯಗನೆಂಬಿದಂ ಪಡೆವೆನೇಂ ಪೇೞೆಂತು ಮೇಧಾವಿಳಾ: **ಕುಸುಮಾಕಾ,** ೧೫. ೭೪)

**ಬಿರಯಿ** – [ವಿರಹಿ] ಅಗಲಿದವ (ಸುರಯಿಯೊಳ್ಗಿಳಿ ಮಗುಟ್ವರಗಿಳಿ ಬಿರಯಿಗೆ ಮೊರೆವಂತೆ ಮೊರೆವ ಮಱೆದುಂಬಿ: **ಆದಿಪು,** ೬. ೧೦೦)

**ಬಿರಯಿಸು** – ವಿರಹಿಸು, ವಿರಹವನ್ನು ತಾಳಿಕೊ (ಬಿರಯಿಸಲ್ ಅಣಂ ಇನ್ನಾಱೆಂ ಆನೆಂದುಂ ಅಲ್ಲಾಡುತಿರ್ಕುಂ: **ಲೀಲಾವತಿ,** ೧೪. ೪೮)

**ಬಿರಿ** – ಅಗಲು (ಬಿರಿವ ನಲ್ಲರಗಲ್ದು ಕನಲ್ದೊನಲ್ದು ನಲ್ಲರ ದೆಸೆಯಿಂದಮಟ್ಟು: **ಆದಿಪು,** ೩. ೮೬); ಅರಳು (ಮಲ್ಲಿಗೆಗಳ್ ವಸಂತದೊಳ್ ಬಿರಿದೊಡೆ ನಲ್ಲರಂ ನೆನೆದ ನಲ್ಲರ ಮೆಲ್ಲೆರ್ದೆಗಳ್: **ಆದಿಪು,** ೧೧. ೧೧೦); ಬಿರುಕು ಬಿಡು [ಕೊರೆವೊಡೆ ಬೆಟ್ಟುಗಳ್ ಬಿರಿವುವು ಉಣ್ಮುವ ಲಾಳೆಯ ಲೋಳೆಗಳ್ ಪೊನಲ್ವರಿವುವು ಕೆಮ್ಮಿ ಕುಮ್ಮಿದೊಡೆ ತೋಳೊಳೆ ಜೀವವಿಯೋಗಮಪ್ಪುದು: **ಪಂಪಭಾ,** ೪. ೧೦೦)

**ಬಿರಿಕು** – ಬಿರುಕು, ಒಡಕು (ರಸದಾಲಿಂಬದ ಪಣ್ಣ ಬಿತ್ತು ಬಿರುಕಿಂ ತೋರ್ಪಂತೆಯುರ್ಬೆಟ್ಟಿ ಪೆರ್ಬಿಸಿಲಿಂದಿರ್ಬಗಿಯಾದ ಮಸ್ತಕದೊಳಂ: **ಸೂಕ್ತಿಸುಧಾ,** ೧೦ ೧೦೩)

**ಬಿರಿಗಳಿಕೆ** – [ಬಿರಿ+ಕಳಿಕೆ] ಅರಳುವ ಮೊಗ್ಗು (ಕುರುವಕದ ಅಂಕುರಮಂ ಅದಱ ಬಿರಿಗಳಿಕೆಯುಮಂ .. .. ತಾವರೆಯೆಲೆವಟ್ಟಲ್ಗಳೊಳಮೊಟ್ಟಿ ಕಟ್ಟಿ: **ಲೀಲಾವತಿ,** ೧೩. ೩೬ ವ)

**ಬಿರಿಮುಗುಳ್** – ಬಿರಿಗಳಿಕೆ (ತಳಿರ ನಿಱೆದಳಿರ ಮುಗುಳ ಬಿರಿಮುಗುಳ ಮಿಡಿಯ ಕಿಱುಮಿಡಿಯ ಬಲ್ಮಿಡಿಗಳೊಳೆಱಗಿ: **ಪಂಪಭಾ,** ೫. ೫ ವ)

**ಬಿರಿಯಿಸು** – ಬೇರ್ಪಡಿಸು (ಬಿರಿಯಿಸೆ ಬೇಟದೊಳ್ ಬಿರಿವ ನಲ್ಲರಗಲ್ದುಕನಲ್ದೊನಲ್ದು: **ಆದಿಪು,** ೩. ೮೬); ಅರಳಿಸು

**ಬಿರುದ** – ಬಿರುದನ್ನು ಪಡೆದವನು (ಬಿರುದರಂ ಒತ್ತಿ ಬೀರರಂ ಅಡಂಗಿಸಿ ಕೊಂಕಿಗರಂ ಕಟಲ್ಚಿ ಚೆನ್ನರಂ ಅಡಿಗೊತ್ತಿ ಮಂಡಳಿಕರಂ ಬೆಸಕಯ್ಸಿ .. .. ಮಾಡಿರೆ ರಾಜಸೂಯಮಂ: **ಪಂಪಭಾ,** ೭. ೧೮); ಗೌರವಾನ್ವಿತ (ಧನದರನ್ನರಿರಿವರೆನಿಪ ಪರದರಿಂ ದೇವರಿನ್ನರಿವರೆನಿಪ ಬಿರುದರಿಂ: **ಪಂಪಭಾ,** ೩. ೨೨)

**ಬಿರುದಂಕ** – ಬಿರುದು ಪಡೆದವನ ಖ್ಯಾತಿ (ಬಿರುದಂಕದಂತೆ ಪೋಗದೆ ಕಾದುವರ್: **ಧರ್ಮಾಮೃ,** ೩. ೪೩ ವ)

**ಬಿರುದಿನಂಕ** – ಬಿರುದಿನ ಮಲ್ಲ, ಭಟ (ಎಡೆಯಿಂದೋಲಾಡಿದ ಬಿರುದಿನಂಕದಂತಿರೆ ಖಚರಂ: **ಆದಿಪು,** ೩. ೬೪)

**ಬಿರುದಿನ ತೊಡರ್** – ಬಿರುದಿನ ಸಂಕೇತವಾದ ಕಾಲಿನ ಬಳೆ (ಬಿರುದಿನ ತೊಡರ್ ಝುಣಝುಣಸಲೇಳ್ದು: **ರಾಜಶೇಖರ,** ೬. ೧೧ ವ)

**ಬಿರುದು** – ಪ್ರಶಸ್ತಿ (ಚಕ್ರವರ್ತಿ ಹರ್ಷನರೇಂದ್ರ ಪ್ರವರಂ ಕುಡೆ ಪಡೆದಂ ವಶ್ಯವಾಣಿ ಕವಿಚಕ್ರವರ್ತಿವೆಸರಂ ಬಾಣಂ: **ಪಂಚತಂತ್ರ,** ೧೫)

**ಬಿರ್ಚು** – ಬೇರ್ಪಡಿಸು (ಬಿರ್ಚು–ವಿಭಜನೇ: **ಶಬ್ದಮದ,** ಧಾ ೨೦೬); ಬೇರೆಯಾಗು (ಹಂಸಮಿಥುನಮಂ ನೋಡಿ ನಸುನಗುತ್ತುಮಿವು ಬೆರ್ಚುಗುಂ ತೊಲಗಿಮೆಂದು .. .. ಪರಿಜನಮುಮಂ ತೊಲಗಿಸಿ: **ಆಚವರ್ಧ,** ೪. ೯ ವ); ಹರಡು (ಕರಿಯಂ ಸೀಳ್ದೀಡಾಡುವನೆ ಬಿರ್ಚಿ ಜೆಡೆಯನರ್ದಾಡುವವನೇ: **ಸಮಯಪ,** ೮. ೬೯)

**ಬಿರ್ದಿ** – [ವೃದ್ಧಾ] ಮುದುಕಿ (ಮೆಯ್ಯಂ ಅದಿರ್ದು ಕೈಯಂ ಬಿದಿರ್ದು ಅವನಂ ಬಿರ್ದಿ ಕಂಡು ನಕ್ಕು ಇಂತೆಂದಳ್; **ವಡ್ಡಾರಾ,** ಪು ೧೮೮, ಸಾ ೨೦)

**ಬಿರ್ದಿಕ್ಕು** – ಔತಣವಿಡು (ಭೀಮಸೇನಂ ಉದ್ದಾಮಕೋಪದಿಂ ಕುರುರಾಜನ ವರಜವ್ರಾತಮಂ ಜವಂಗೆ ಬಿರ್ದಿಕ್ಕಿದಂ: **ಕರ್ಣನೇಮಿ,** ೧೨. ೮೩ ವ)

**ಬಿರ್ದಿನ** – ಅತಿಥಿ (ನರಪತಿ ಬಿರ್ದಿನನೆಂದಾದರದಿಂ ಗೃಹಲಕ್ಷ್ಮೀ ಬೋನಮೆತ್ತಿದುದೆಂಬಂತಿರೆ ಚೋದ್ಯಮಪ್ಪಿನಂ ಬಿತ್ತರದೆತ್ತಿದ ಬೋನದಿರವು ಚೆಲ್ವಾಯ್ತಾಗಳ್: **ಸುಕುಮಾಚ,** ೧೧. ೨೩); ಬೀಗರು (ಮನೆಯವರಿರ್ದಂತಿರೆ ಬಿರ್ದಿನರಂ ತೇಳ್ ತಿಂದುದು ಎಂಬ ಗಾದೆಯವೋಲ್: **ತ್ರಿಷಷ್ಟಿಪು,** ೭. ೧೦೦)

**ಬಿರ್ದು** – ಔತಣ (ತೊಡರ್ದಂ ಸೈನ್ಯಂ ಬೆನ್ನಿತ್ತೊಡಱೆಯೆನಾಂತೊಡದನ್ನೆಱೆ ಪರ್ದಿಂಗೆ ಬಿರ್ದನಿಕ್ಕುವೆನೀಗಳ್: **ಚಂದ್ರಪ್ರಪು,** ೧೦. ೮೮)

**ಬಿರ್ದುವರ್** – ಔತಣಕ್ಕೆ ಆಗಮಿಸು (ನೆಗಟ್ದಮರನಗೇಂದ್ರಮಂ ಆ ದಿಗಿಭೇಂದ್ರಂ ಪೊರ್ದಿದಲ್ಲಿ ಸುರತೂರ್ಯರವಂ ನೆಗಟ್ವೆನೆಗಂ ಕನಕಾದ್ರಿಗೆ ಖಗಾದ್ರಿ ಸಂತಸದೆ ಬಿರ್ದುವಂದಂತಿರ್ಕುಂ: **ಅಜಿತಪು,** ೪. ೨೬)

**ಬಿರ್ದೂಟ** – ಔತಣದೂಟ (ಸದ್ದರ್ಶನಮಂ ಬಿಡುವಾತಂ ಬಿರ್ದೂಟವನೊಡಂಬಡದೆ ಗಂಜಿಗುಡಿವ ಮರುಳಂ ಪೋಲ್ಕುಂ: **ಧರ್ಮಾಮೃ,** ೧೦. ಪದ್ಯಗಳು ೪೩ ಮತ್ತು ೪೪ ರ ನಡುವಣ ಪದ್ಯ)

**ಬಿರ್ದ್ದು** – ಔತಣ (ಆತನುಂ ಅರಸಂಗೆ ಬಿರ್ದ್ದು ಮಾಡಿದ ಬಟಿಕ್ಕೆ ಕೂಸಂ ಬೇಡಿಯಟ್ಟಿ ಪೆತ್ತು ಪ್ರಶಸ್ತ ದಿವಸ ವಾರ ನಕ್ಷತ್ರ ಮುಹೂರ್ತದೊಳ್ ಮದುವೆನಿದು: **ವಡ್ಡಾರಾ,** ಪು ೧೬೩, ಸಾ ೧೮)

**ಬಿಲ್** – ವಿಕ್ರಯಮಾಡು ಹಾಗೂ ಧನುಸ್ಸು (ಬಿಲ್–ವಿಕ್ರಯೇ ಕೋದಂಡೇ ಚ: **ಶಬ್ದಮದ,** ಧಾ ೬೫೦); ಬಿಲ್ಗಾರರ ಸೈನ್ಯ

(ಬಲ್ಸರಿಯ ಕೋಳ್ಗಿರಲಾಱದೆ ಬಿಲ್ ತೆರಳ್ದು ದುರ್ಘರಹಯಮಟ್ಟೆ ಸಂದಣಿಸಿ ಕೋಳ್ಗುದಿಗೊಂಡುದು: **ಪಂಪಭಾ,** ೩. ೭೧); ಒಂದು ಬಗೆಯ ಮರ (ತಂಡಸು ಬಿಳಿಲ್ ಬಿಲ್ ಮತ್ತಿ ಬೇವತ್ತಿ .. .. ಎಂಬೀ ಮರದುಱುಗಲಿಱುಂಬಿನಿಂದ ಅತಿಗಹನಮೆನಿಪ ಗಹನಾಂತರದೊಳಗೆ: **ಪಾರ್ಶ್ವನಾಪು,** ೧೨. ೫೮)

**ಬಿಲ** – ಡೊಗರು, ಗವಿ (ಅವಟಂ ಛಿದ್ರಂ ಕುಹರಂ ವಿವರಂ ಶ್ವಭ್ರಂ ಬಿಲಂ ದರಂ ರಂಧ್ರಂ ಗರ್ತವೇಕಾರ್ಥಂಗಳ್: **ಅಭಿಧಾವ,** ೧. ೩. ೬)

**ಬಿಲೇಶಯ** – ಹಾವು (ಗಳಾನ್ವಿತ ಹಲಾಹಲಬಿಲೇಶಯ ಕಳೇವರವಿಳಾಸದೆ ಕಳಂಕರಹಿತೇ .. .. ಜಯ ಜಯಾ: **ರಾಜಶೇವಿ,** ೧೦. ೧೧೧)

**ಬಿಲ್ಗಲ್ಪಿ** – [ಬಿಲ್+ಕಲ್ಪಿ] ಧನುರ್ವಿದ್ಯೆ (ಪೊಱಮುಯ್ಯಂ ತನಗೆ ತಿಣ್ಣಂ ತೆಗೆನೆಱೆದಿಸೆ ಬಿಲ್ಗಲ್ಪಿ ತನ್ನೇಱನೊಳ್ ಕಣ್ದೆಱೆದತ್ತು ಎಂಬಂತುಂ: **ಶಾಂತಿಪು,** ೪. ೪೨)

**ಬಿಲ್ಲ** – [ಭಿಲ್ಲ] ಬೇಡ (ಪೊಲ್ಲ ಗಡ ತೆಗೆಯಲಪ್ಪೊಡೆ ಬಿಲ್ಲನಂ ಎದು ಎನಗೆ ಪುಂಡರೀಕಂ ಪೇೞ್ದಿತ್ತು: **ಪಂಚತಂತ್ರ,** ೧೮೦)

**ಬಿಲ್ಲಜಾಣ** – ಬಿಲ್ವಿದ್ಯಾ ನಿಪುಣ (ಕನಕಕಲಶಧ್ವಜನುಮೆನಿಸಿದ ಬಿಲ್ಲ ಜಾಣಂ ದ್ರೋಣನಟೆವಿನೊಳಂ .. .. ಸುಯೋಧನಂ ಚಿಂತಾಕ್ರಾಂತನಾಗಿ: **ಗದಾಯು,** ೨. ೧೦ ವ)

**ಬಿಲ್ಲಣಿ** – ಬಿಲ್ಗಾರ [ಸೈನ್ಯ] (ರಣಗಟ್ಟಲೆ ಕೈಮಿಗೆ ಬಿಲ್ಲಣಿ ಕಡುಕೆಯ್ದುಭೈಬಲದೊಳಿಂಬಿಕ್ಕುಮುದುಂ: **ಪಂಪರಾ,** ೧೩. ೩೯)

**ಬಿಲ್ಲ ಬಲ್ಮೆ** – ಬಿಲ್ಗಾಣಿಕೆ (ಬಿಲ್ಲ ಬಲ್ಮೆಯುಂ ಕುಲಮುಂ ನಿರ್ವ್ಯಾಜಂ ಮಸುೞ್ದುವು: **ಗದಾಯು,** ೨. ೧೮)

**ಬಿಲ್ಲ ಬಲ್ಲಣಿ** – ಬಿಲ್ಗಾರರ ಸೈನ್ಯ (ಗಜೆನೆಟಲಿಂ ಜಗಂ ನೆರೆ ತಮೋಮಯಮಾಗಿಸುತುಂ ಕಡಂಗಿ ಬರ್ಪಜೆಕೆಯ ಬಿಲ್ಲ ಬಲ್ಲಣಿಯಂ: **ಶಾಂತೀಶ್ವಪು,** ೩. ೯೭)

**ಬಿಲ್ಲ ಬಲ್ಲಹ** – ಬಿಲ್ಲಜಾಣ (ಕನ್ನಡಿಗಳ ಬಳ್ಳಿವೆಳ್ಳು ಕುಡುಮಿಂಚಿನವೋಲಿರೆ ಗಾಳಿವಟ್ಟೆಯೊಳ್ ನಡೆವನ ಕಾಯ್ಪು ತಣ್ಣಗಿರೆ .. .. ಗಡಣಿಸಿ ಬಂದು ಕೋಲ ಮಟಿಯಂ ಕಱೆದರ್ ಮಿಗೆ ಬಿಲ್ಲ ಬಲ್ಲಹರ್: **ಕಬ್ಬಿಗಕಾ,** ೨೦೬)

**ಬಿಲ್ಲ ಬಿತ್ತೆಗ** – ಬಿಲ್ಲಜಾಣ ಬಿಲ್ಲ ಬಿತ್ತೆಗರ್ ಕಡುಪೊತ್ತುಂಬಜೆಯದೆ ತಮ್ಮೊಳ್ ಸಲೆ ಸುರಗಿಜೆದಟೆದರ್ ಅವಂಧ್ಯಮಲ್ತೆ ವೀರೋದ್ರೇಕಂ: **ಚಂದ್ರಪ್ರಪು,** ೧೦. ೭೧)

**ಬಿಲ್ಲ ಬಿನ್ನಣಿ** – ಬಿಲ್ಲಜಾಣ (ಧನುರ್ವೇದಿಯುಂ ಶಬ್ದವೇದಿಯುಂ ಅಪ್ಪ ಬಿಲ್ಲ ಬಿನ್ನಣಿಯನೊರ್ವನಂ ಕರೆದು: **ಪಂಚತಂತ್ರ,** ೧೯೭ ವ)

**ಬಿಲ್ಲವ** – ಬಿಲ್ಲಜಾಣ (ಕುದುರೆ ತಗುಳ್ದುವು ಆ ದೆಸೆಯ ಬಿಲ್ಲವರಂ ಸುಟಿದಾನೆ ನಿಂದು ಮೆಟ್ಟಿದುವು: **ಕವಿರಾಮಾ,** ೧. ೧೨೦)

**ಬಿಲ್ಲಾಳ್** – ಬಿಲ್ಗಾರ (ದೊಣೆಯಿಲ್ಲದ ಬಿಲ್ಲಾಳ್ ಬಿನ್ನಣಮಿಲ್ಲದ ಕಿಱುಪು ಮಂತ್ರಿಯಿಲ್ಲದರಸು .. .. ಸೊಗಯಿಸಿದಪುದೇ: **ಅಜಿತಪು,** ೬. ೯೭)

**ಬಿಲ್ಲುಂ ಬೆಱಗು** – ಕಕ್ಕಾವಿಕ್ಕಿ, ತಳಮಳ (ಪ್ರಚಂಡೆ ವಂಚನೋಪಾಯಮಂ ಕಾಣದೆ ಬಿಲ್ಲುಂ ಬೆಱಗುಮಾಗಿರೆ: **ಪಂಚತಂತ್ರ,** ೧೨೯ ವ)

**ಬಿಲ್ಲೆಱೆಯ** – ಬಿಲ್ವಿದ್ಯೆಯ ಗುರು ಬಿಲ್ಲೆಱೆನೆಂದುದೆ ಮತು ಮೀಱದಿಂ; **ಶಬ್ದಮದ,** ೨೪೫ ಪ್ರ ೨); ದ್ರೋಣ (ಬಿಲ್ಲೆಱೆಯನೊಡ್ಡಿದಂ ಅಂಕದ ಚಕ್ರವ್ಯೂಹಮಂ ಆಹವರಂಗದೊಳ್: **ಪಂಪಭಾ,** ೧೦. ೮೬)

**ಬಿಲ್ಲೊವಜ** – ಬಿಲ್ಲೆಱೆಯ (ಬವರದೊಳೇಂ ಬಲ್ಲಂ ಕರಂ ಒವಜುಗೆಯಲ್ ಪೆಱರ್ಗೆ ಕರಮೆ ತನಗೆ ಅಱೆಯಂ ಅದೆಂತುವೊ ನುಡಿ ತಪ್ಪದು ಕಮ್ಮಜೆಯೊವಜಂ ಬಿಲ್ಲೊವಜಂ ಎಂಬುದು ಮಾಡುವೆನೇ: **ಪಂಪಭಾ,** ೧೨. ೩)

**ಬಿಲ್ವಡೆ** – ಬಿಲ್ಗಾರಸೇನೆ (ಬಲ್ವಲಿಯಿಂದಿರ್ದಿರ್ಚಿದ ಬಿಲ್ವಡೆ ತನ್ನೆಚ್ಚ ನಿಶಿತಶರಸಂಹತಿಯಿಂದೆಲ್ಲಡಗಾಯ್ತು: **ಕಾವ್ಯಾವಲೋ,** ೬೯)

**ಬಿಲ್ವೊಯ್** – ಬಿಲ್ಲ ಹೆದೆ ಮಿಡಿದು ಠೇಂಕಾರಮಾಡು (ಇದಿರಾದ ಖೇಚರನನಾಂ ಬಿಲ್ವೊಯ್ದು ಕೊಂದಿಕ್ಕೆ: **ಶಾಂತಿಪು,** ೭. ೮೩)

**ಬಿಸ** – ವಿಷ (ಕೊಳ್ದಪ್ಪಿದ ಉರಗಕಾಂತೆಯಂತೆ ಕಡುಬಿಸಮಂ ಉಗುೞ್ದು ಸೊಂಕು ಸೋಲಿಸುಗುಂ ಎಂಬಂತೆ: **ಲೀಲಾವತಿ,** ೧೪. ೩೩ ವ); ಕಮಲದ ದಂಟು (ಮಟಿಗಾಲದೊಳ್ .. .. ಬಿಸತತಿಯಂ ಮೊಟೆಯಲ್ಲಮಂ ಉಪ್ಪುಂಗಾಯ್ಗಳಂ ಆಗಲ್ ಸೇವಿಸಲ್ಕೆ ಭೀತಂ ಜೈನಂ: **ಸಮಯಪ,** ೬. ೯); ನೀರು (ಇಲ್ಲಿ ನಡೆತಂದೆವು ಅಪ್ಪಿದೆವಿಲ್ಲಿ ಬಿಸಂಗೊಂಡೆವಿಲ್ಲಿ ಬಾಯೂಡಿದೆವಿಲ್ಲಿ .. .. ಕರಂ ನೆನೆದು ಸುಯ್ದುದು ಕೋಕಂ: **ರಾಜಶೇವಿ,** ೧೧. ೧೭)

**ಬಿಸಕಾಂಡ** – ಕಮಲದ ದಂಟು, ನಾಳ (ಕೆಂದಳಿರಂ ಗಿಳಿ ತಾಮ್ರತುಂಡದಿಂ ಇಱೆದಪುದು ಆಮ್ರದೊಳ್ ಮಿಡಿಗಳಂ ಬಿಸಕಾಂಡಮನಂಚೆ ಚಂಚುವಿಂ: **ಮಲ್ಲಿನಾಪು,** ೫. ೨೯)

**ಬಿಸಜ** – ತಾವರೆ (ಬಿಸಜದೆಸಟ್ಗಳಂ ಬಿಡೆ ಸಡಿಲ್ಚಿ .. .. ಬಮದೆಸಗಿತು ಸುಪ್ರಭಾತದ ಸಮೀರಣಂ: **ಪಾರ್ಶ್ವನಾಪು,** ೧೦. ೭೮)

**ಬಿಸಟಂಬರಿ** – ಮನಬಂದಂತೆ ಓಡು (ಮಾಮಸಮಸಗಿ ಬಿಸಟಂಬರಿವ ಮದಕರಿಯಂ ಕುಮಾರಂ ಕಂಡು: **ನೇಮಿನಾಪು,** ೫. ೧೧೩ ವ)

**ಬಿಸಜಭವ** – ಕಮಲಸಂಭವ, ಬ್ರಹ್ಮ (ಬಿಸಜಭವನಕ್ಕೆ ಮೃಡನಕ್ಕೆ ಅಸುರಾಂತಕನಕ್ಕೆ: **ಪಂಪಭಾ,** ೧೧. ೧೨೦)

**ಬಿಸರುಹ** – ತಾವರೆ (ಬಿಸರುಹದಳಂಗಳಿಂ ಪೊದೆಯಿಸಿರ್ದ ಹಿಮಗೃಹವನವನಿಪಾಲಂ ಕಂಡಂ: **ಕಾದಂಸಂ,** ೫. ೮೬)

**ಬಿಸಲತೆ** – ತಾವರೆಯ ಬಳ್ಳಿ (ನಳಿನೀಸಂಮೋಹನಾಸ್ತ್ರಂ ಕುಮುದನಯನಕರ್ಪೂರಕಾಂಡಂ ಚಕೋರೀತಿಳಕಂ ಶೃಂಗಾರಸಿಂಧುಪ್ಲವ ಬಿಸಲತೆ .. .. ಪಸರಿಸಿ ಪರ್ಬಿತ್ತು ಚಂದ್ರಾಂಶುಜಾಳಂ: **ಮಲ್ಲಿನಾಪು,** ೭. ೩೨)

**ಬಿಸವಂದ** – ಆಶ್ಚರ್ಯ (ಇದಱಂದಂ ಬಿಸವಂದಂ ಇಂತಿದಮರೇಂದ್ರಾವಾಸದೊಂದಂದಂ ಇಂತಿದು ದಲ್ ದೇವವಿಮಾನದಂದಂ: **ಆದಿಪು,** ೪. ೫)

**ಬಿಸಸನ** – [ವಿಶಸನ] ಕತ್ತಿ; ಕೊಲ್ಲುವುದು (ಬಿಸಸನದೊಳ್ ದಶಮುಖನಂ ದೆಸೆವಲಿಗುಡಲೆಂದು ಭರತ ಶತ್ರುಘ್ನರ್ .. .. ಸನ್ನಾಹ ಭೇರಿಯಂ ಪಯಿಸುವುದುಂ: **ಪಂಪರಾ,** ೧೪. ೬೨)

**ಬಿಸಿ** – ಶಾಖವುಳ್ಳದ್ದು (ತಾಳ್ದಿದ ವಿರಹದೊಳೀಕೆಗೆ ಬೆಳ್ದಿಂಗಳ್ ಬಿಳಿಯ ಕಿರ್ಚು ಸಸಿ ಬಿಸಿ: **ಗಿರಿಜಾಕ,** ೪. ೧೧೬)

**ಬಿಸಿದು** – ಬಿಸಿಯಾದ[ದ್ದು] (ಬಿಸಿದಪ್ಪ ತುಪ್ಪಮನಱೆಯದೆ ಶಿಶು ನುಂಗಿದಂತೆ ಚಿಂತಿಸಿ ಮನದೊಳ್ : **ಧರ್ಮಾಮೃ,** ೮. ೭)

**ಬಿಸಿನಿ** – ಕಮಲಿನಿ (ಬಿಸಿನಿ ಬಿಸಿಲಂ ಉಟ್ಟಳೆಂಬಂತೆ ಬಿಗಿದುಟ್ಟ ಮಿಸುನಿವಟ್ಟೆ ಮಿಸುಗುತ್ತಿರೆ: **ರಾಜಶೇವಿ,** ೫. ೧೯ ವ)

**ಬಿಸಿಲ್** – ಸೂರ್ಯಕಿರಣ (ನಡುವಗಲ ಬಿಸಿಲ್ ತನ್ನಂ ಸುಡೆ ವನಕರಿ .. .. ಪೊಕ್ಕುದಾಗ ಬಗೆದಾ ಕೊಳನಂ: **ಕವಿರಾಮಾ,** ೩. ೧೧೫)

**ಬಿಸಿಲುಗೊಳ್** – ಬಿಸಿಲಿನಂತೆ ಹೊಳೆ (ದೇವನ ದಿವ್ಯಚ್ಛಾಯೆ ಪ್ರತಿಬಿಂಬಿಸೆ ಬಿಸಿಲುಗೊಂಡು ಸೋಂಕಿಜಿದ ಕಣ್ಣಂ ತುಳ್ಕೆ: **ಶಾಂತಿಪು,** ೯. ೩೩ ವ)

**ಬಿಸಿಲ್ಗುದುರೆ** – ಮರೀಚಿಕೆ (ಪೋಳಾಯ್ಲುರ್ ಪೊಳೆಯಿಸೆ ಬಿಸಿಲ್ಗುದುರೆಗಳ್ ಪೊಳೆವಂತೆ ಪೊಳೆವ ಕಡುಗುದುರೆಗಳುಮಂ .. .. ಒಡ್ಡಿ ನಿಂದಾಗಳ್: **ಪಂಪಭಾ,** ೧೦. ೫೧ ವ)

**ಬಿಸು** – ಬೆಸುಗೆ ಹಾಕು (ಆಗಳ್ ಎಡೆವಿಡದೆ ಮುಚ್ಚಿ ಬೆಚ್ಚಂತಿರ್ದ ಕಣ್ಗಳಂ ಎಂತಾನುಂ ತೆಱೆದು: **ಕಾದಂಸಂ,** ೪. ೬೦ ವ)

**ಬಿಸುಗಣ್ಗೊರವ** – ಉರಿಯುವ ಕಣ್ಣಿನ ಯತಿ, ಶಿವ (ಬಿಸುಗಣ್ಗೊರವಂ ಕಾವನ ತೋಳ್ವಲಮಂ ಅಱಿವೆನೆಂದೇಟ್ಟಿಂದಂ; **ಕಬ್ಬಿಗಕಾ,** ೨೨೬)

**ಬಿಸುಗಣ್ಣ** – ಹಣೆಗಣ್ಣ, ಶಿವ (ಮತ್ತಮದೊರ್ವಂ ಬಿಸುಗಣ್ಣ ಮುಂದೆ ನಿಂದು ತಾನಿಂತೆಂದಂ: **ಕಬ್ಬಿಗಕಾ,** ೧೮೮)

**ಬಿಸುಗದಿರ್** – ಬಿಸಿಯ ಕಿರಣ, ಬಿಸಿಲು (ಬಿಸುಗದಿರ್ ನೆತ್ತರ್ ಕಾಯ್ವನ್ನಂ ಸುಡುತಿರೆ ಪಥಿಕರ್ ಬೆನ್ನಂ ಕೊಂಡೋಡಿ ಮೆಳೆಯ ನೆೞಲಂ ಸಾರ್ದರ್: **ಲೀಲಾವತಿ,** ೫. ೩೭)

**ಬಿಸುಗದಿರ** – ಬಿಸಿಯಾದ ಕಿರಣಗಳವನು, ಸೂರ್ಯ (ಬಿಸುಗದಿರನ ಕಡುಗಾಯ್ಪಂ ಮಸುಳಿಸಿದುವು ತುಱುಗಿ ನೆಗೆದು ನಾಲ್ಕುಂ ದೆಸೆಯಂ ಮುಸುಕಿದುವು ಮುಳಿದರಂ ಜಂಕಿಸಿದುವು ಬಿಡದಾರ್ದು ಕಾವನೆಚ್ಚಲರ್ಗಣೆಗಳ್: **ಕಬ್ಬಿಗಕಾ,** ೨೩೫)

**ಬಿಸುಗೆ** – ಬೆಸುಗೆ, ಸೇರಿಕೆ (ಕೃತವಿಧಾಸ್ತ್ರವೀರ ಭಟಕೋಟಿ ಭಯಂಕರಮಾಗೆ ಬೀಸುವ ಆವುತಿಯ ಕಳಂಕಪಂಕದೊಳೆ ಪೆರ್ಚಿದ ಕಟ್ಟಿಲೆ ತೀವ್ರಶಸ್ತ್ರಸಂಹತಿಗಳ ದೀಪ್ತಿಯಿಂ ಬಿಸುಗೆಯಾಗೆ: **ಪಂಪಭಾ,** ೧೦. ೫೦); ಅಂಬಾರಿ (ವಿಜಯಲಕ್ಷ್ಮೀಕರವಳಯ ವಿಭ್ರಮ ಕರಚಕ್ರಂಗಳಿಂದಂ ತೀವಿದ ಬಿಸುಗೆಯೊಳೆಸೆದು: **ಆದಿಪು,** ೧೪. ೯೦ ವ)

**ಬಿಸುಟ** – ಹೀನವಾದ (ಸಾಮ್ರಾಜ್ಯಸುಖೋನ್ನತಿಯೊಳ್ ತೊಡರ್ದಾನಿರೆಯುಂ ಕ್ಷಿತಿಪರೊಳ್ ಎನ್ನಿಂದೆ ಬಿಸುಟ ಕಷ್ಟರುಂ ಒಳರೇ: **ಶಾಂತೀಶ್ವಪು,** ೭. ೮೧)

**ಬಿಸುಡು** – ಬಿಸಾಕು, ಎಸೆ (ಕೊಲ್ಲೆಂ ಬಿಸುಡಾಯುಧಮಂ ಪುಲ್ಲಂ ಕರ್ಚೆ ಏಱು ಪುತ್ತಂ: **ಕವಿರಾಮಾ,** ೩. ೧೯೯)

**ಬಿಸುದೊೞೆ** – ಬಿಸಿಯ ತೊರೆ, ಬೆಂಕಿಯ ತೊರೆ (ತೊೞೆಗಳ್ ಉರ್ಕುಗೆಟ್ಟು ಅಱಿತು ಬಯಲ್ದೊೞೆಯಾದುವು ಬಾಂದೊೞೆ ಬಿಸುದೊೞೆಯಾದುದು: **ಜಗನ್ನಾವಿ,** ೧೭. ೬೬)

**ಬಿಸುವುಡಿ** – [ಬಿಸು{ಪು}+ಪುಡಿ] ಕಾದ ಮಣ್ಣು (ಬಳ್ಳುಗೆಡೆದು ಬಿಸುವುಡಯಂ ಸೂಸುವ ಬಾನಂ ತಾಗಿರೆ ಮಿಲ್ಲಿಸೆ ಪಾಱುವ: **ವರ್ಧಮಾಪು,** ೧೩. ೨೧)

**ಬಿಸುಸುಯ್** – ಬಿಸಿಯುಸಿರು [ನಿಟ್ಟುಸಿರು] ಬಿಡು (ನಿನ್ನನಿನ್ನಾರ್ ಕಾಯಲ್ಕೆ ಸಮರ್ಥರ್ ಎನ್ನುತ್ತ ಆಗಳ್ ಬಿಸುಸುಯ್ದಂ: **ಕಾದಂಬ,** ೧. ೧೫೦)

**ಬಿಸುಟಿಪ್ಪೊಡಂ** – ಬಿಸುವುದಾದರೂ (ಉತ್ತಮಕುಲಶೈಲಂ ಉನ್ನತಿಯಂ ಏಳಿದವಾಗೆ ಬಿಸಟಿಪ್ಪೊಡಂ ಬಿಸುಟ್ಕೆಮ ಬಿಸುಡೆಂ ಮದೀಯ ಪುರುಷವ್ರತಮೊಂದುಮಂ: **ಪಂಪಭಾ,** ೧. ೮೩)

**ಬಿಸುಟ್ಕೆಮ** – ಬಿಸುಡಲಿ (ಉತ್ತಮಕುಲಶೈಲಂ ಉನ್ನತಿಯಂ ಏಳಿದವಾಗೆ ಬಿಸಟಿಪ್ಪೊಡಂ ಬಿಸುಟ್ಕೆಮ ಬಿಸುಡೆಂ ಮದೀಯ ಪುರುಷವ್ರತಮೊಂದುಮಂ: **ಪಂಪಭಾ,** ೧. ೮೩)

**ಬಿಳಿ** – ಬಿಳುಪು [ಬಣ್ಣದ] (ಬಿಳಿಯ ತಾವರೆಯೆಸಟಿರೊಳ್ ಮಾಡಿದ ಬೆಳ್ಗೊಡೆ ರಯ್ಯಮಾಗೆ: **ಪಂಪಭಾ,** ೧೩. ೧೦೮)

**ಬಿಳಿಯರಳೆ** – ಬೆಳ್ಳನೆಯ ಹತ್ತಿ (ಬಿಳಿಯರಳೆಯಂತೆ ಗಂಗಾಜಳದಂತೆ .. .. ಪವಿತ್ರಮತ್ತಿಮಬ್ಬೆಯ ಚರಿತಂ: **ಅಜಿತಪು,** ೧೨. ೬)

**ಬಿಳಿಯಾಲಿ** – ಕಣ್ಣುಗುಡ್ಡೆಯ ಬಿಳಿಪು ಭಾಗ (ಕಾಡಿಗೆಯೊಳ್ ಕೂಡಿ ಬಿಳಿಯಾಲಿಯಿಂ ಕರಿಯಾಲಿಯಿಂದೆಮೆಯಿಂ ಕಣ್ಗೊಪ್ಪುವಂತೆ: **ಧರ್ಮಾಮೃ,** ೧೨. ೩ ವ)

**ಬಿಳಿಲ್** – ಒಂದು ಮರ (ಬಿಳಿಲ್ ಬಲ್ಮತ್ತಿ ಬೇವತ್ತಿ ಸೆಳ್ಳಿಲವಂ ಸಂಪಗೆ ತುಂಬುರಂಬಡೆ ಕವುಂಗು ಇಮ್ಮಾವು ಕಕ್ಕಿಮ್ಮರಂ: **ಪಾರ್ಶ್ವನಾಪು,** ೧೨. ೫೮)

**ಬಿಳ್ದಿಂಗಳ್** – ಬೆಳುದಿಂಗಳು (ಬಿಸಿಲುಂ ಬಿಳ್ದಿಂಗಳುಂ ಕಟ್ಟೆಲೆಮುಂ ಎನಸುಂ ಒಂದಿರ್ಪ್ಪವೆಂಬಂದದಿಂ ಕಟ್ಟಿಸಿದ: **ಕುಸುಮಾಕಾ,** ೨. ೬೬)

**ಬಿಱು** – ಬಿರುಸಾದ ಸಮಾಸಗಳಲ್ಲಿ ಬೆಟ್ಟಿತು ಎಂಬುದಕ್ಕೆ ಆದೇಶವಾಗಿ ಬರುವ ರೂಪ (ಬೆಟ್ಟಿತರ್ಕೆ ಬಿಱುವೆಂಬುದುಂ .. .. ಆದೇಶಮಕ್ಕುಂ: **ಶಬ್ದಮದ,** ೧೯೫ ವೃತ್ತಿ)

**ಬಿಱುಗಾಳಿ** – ಚಂಡಮಾರುತ (ಬಿಱುಗಾಳಿ ದೂಳಿಗಳನಾಗಿಸಿ ಬಾಧಿಸಿದತ್ತು ತದ್ವಳಂ: **ಆಚವರ್ಧ,** ೧೫. ೩೯)

**ಬಿಱುತು** – ಭಯಪಟ್ಟು (ಅರಣ್ಯದೊಳ್ ತಿರಿತರುತಿರ್ದ ಕಣ್ಬಾಡಿಗರಂ ಮಗುಟ್ಟಂ ಬಿಱುತು ಓಡಿ ಬೇಡರೊಳ್ ನೆರೆದಿರಲ್ ಒಡ್ಡಯಿಸಿ ರಾಜ್ಯದೊಳೇಂ ನೆರೆಯಲ್ಕೆ ತೀರ್ಗುಮೋ: **ಪಂಪಭಾ,** ೮. ೮೫)

**ಬಿಱುತೋಡು** – [ಭಯದಿಂದ] ಜೋರಾಗಿ ಓಡು (ನಾರದನ ವಿಕೃತಾಕಾರಮಂ ಕಂಡು ತರುಣಿ ಹರಿಣಿಯಂತೆ ಬೆರ್ಚಿ ಬಿಱುತೋಡುವುದುಂ: **ಪಂಪರಾ,** ೪. ೮೨ ವ)

**ಬಿಱುಬಿದ್ದಂಬೋಗು** – ಏಟಿನಿಂದ ಗಾಯ ಹೊಂದು (ಅಂಗಯ್ಯಿಂ ಮೊಗಮಂ ಮುಸುಂಬು ಬಿಱುಬಿದ್ದಂಬೋಗೆ ವೀರಂಗೆ ದೋರ್ಭಂಗಂ ಮಾಡಿದಂ: **ಪಂಪರಾ,** ೮. ೨೯)

**ಬಿಱುಬು** – ರಭಸ (ಬಿಱುಬಿಂದಂ ಬೀಸೆ ಗದೆಯ ಗಾಳಿಯ ಕೋೞೆಟ್ಟಿಜಿಸಿದುದು ಭೀಮನಂ: **ಗದಾಯು,** ೮. ೩೨)

**ಬಿಱುಮಳೆ** – ಜೋರಾಗಿ ಸುರಿಯುವ ಮಳೆ (ಅಲರ್ಗಳ ಬಿಱುಮಳೆ ಎಸಳ್ಗಲ ಸೋನೆ ಪರಾಗ ಪರಿಮಳದ ತುಂತುಱುಗಳ್: **ಗಿರಿಜಾಕ,** ೩. ೬೧)

**ಬಿಱುವರಿ** – ರಭಸವಾದ ಓಟ (ಬಿಱುವರಿಯ ಬೇಗದಿಂದಂ ಕುಱುಪಿನ ಪಟಯಿಗೆಗಳೊಲೆಯೆ ಪೆರ್ಗಡೆಲೆಡೆಯೊಳ್ ನೆೞೆ ನಾವೆ ತಾಗುವಂದದೆ ತೆಱಪಿಲ್ಲದೆ ತೇರ್ಗಳೊಡ್ಡು ತಾಗಿದುದಾಗರ್ಗ: **ಕಬ್ಬಿಗಕಾ,** ೨೧೩)

**ಬಿಱುವಿಸಿಲ್** – ಪ್ರಖರ ಬಿಸಿಲು (ಬಾನ್ಬಟ್ಟೆಯೊಳ್ ಬಿಱುವಿಸಿಲ್ ಬೆನ್ನಂ ಸುಡೆ: **ಶಬಶಂವಿ,** ೩. ೩೫ ವ)

**ಬಿಱುವೊಯಿಲ್** – ಬಲವಾದ ಹೊಡೆತ (ಕುಱು, ಬಿಱು, ಕುಡು ಎಂಬಿವರ್ಕೆ: ಕುಱುಗಯ್, ಬಿಱುವೊಯಿಲ್, ಬಿಱುಬಿರ್ದಂ: **ಶಬ್ದಮದ,** ೧೯೫ ಪ್ರ)

**ಬಿಱುಸರಿ** – ಬಿಱುಮಳೆ (ಬಲ್ಸರಿ ಬಿಱುಸರಿ ಪೆರ್ಮಟಿೞೆ ಮೆಲ್ಸರಿ .. .. ಸುರಿದುವು ಬಿಡದೆ ಮಟಿೞೆಗಳ್: **ಜಗನ್ನಾವಿ,** ೪. ೩೨)

**ಬಿಟಿಕ್ಕಿ** – ಬಿಕ್ಕೆ, ಒಂದು ಕಾಡುಮರದ ಕಾಯಿ (ಬಿಟ್ಕೆಯಂ ಬೇರುಮಂ ಉಂಡು ಅಡವಿಯೊಳಗಿರ್ಪ ಮುನಿಗಳ ನಡವಳಿ ಎತ್ತ ಎತ್ತ ಯುವತಿಜನದ ಅನುರಾಗಂ: **ಕಾದಂಸಂ,** ೪. ೪೯)

**ಬಿಟ್ಟಿರು** – ಕೆಳಕ್ಕೆ ಬೀಳು (ನಱುಸುಯ್ಯ ಕಂಪಿನಿಂಪಿಂಗೆ ಎಱಗುವ ಮದಭೃಂಗಮಾಲೆ ಬಿಟ್ಟಿರುತಿರೆ ಪೂತೆಱಗಿದ ಚಂಪಕಲತೆಯಂ ನೆಱೆ ಪೋಲ್ತಳ್ ವಿರಹಿದಹನ ದಾಹಿನಿಯಾಗಳ್: **ಶಾಂತೀಶ್ವಪು,** ೫. ೧೧೩)

**ಬಿಟಿತ್ತಾಗು** – ಬಿದ್ದು ನೆಲವನ್ನು ತಾಗು (ನಿಟ್ಟೆಲ್ವು ನುರ್ಗಾಗೆ ಕಾಯ್ದೊದೆದು ಕೆಲಂಬರಂ ಕೆಲಬರಂ ಬಿಟಿತ್ತಾಗೆ ಪೊಯ್ದಣ್ಮಿ .. ..ಕೊಂದಂ ಮರುನ್ನಂದನಂ: **ಪಂಪರಾ,** ೧೧. ೧೪೩)

**ಬಿಟ್ಟು** – ಬಿತ್ತು, ಬೀಜ (ಪುದಿದ ತನಿವಣ್ಣಬಿರಿಕಿಂದುದಿರ್ದತ್ತಂ ರಾಸಿಯಾದ ಬಿಟ್ಟುಗಳಿಂ ಪೆಂಪೊದವಿದ ಪಲವುಂ ದಾಳಿಂಬದ ಮರಗಳ್ ರನ್ನವಸರದಂತೆಸೆದಿರ್ಕುಂ: **ಕಬ್ಬಿಗಕಾ,** ೮೩)

**ಬೀ** – ನಾಶವಾಗು (ಆವ ಅಲರುಂ ಪಣ್ಣುಂ ಬೀತು ಓವುವು ಗಡ ಬೀಯವಲ್ಲಿ ಮಲ್ಲಿಗೆಗಳುಂ ಇಮ್ಮಾವುಗಳುಂ ಎಂದೊಡೆ ಇಂ ಪೆಱತಾವುದು ಸಂಸಾರಸಾರ ಸರ್ವಸ್ವಫಲಂ: **ಪಂಪಭಾ,** ೧. ೫೫); ಒಣಗಿಹೋಗು (ಚೂತಕುಜವ್ರಾತಂಗಳ್ ಬೀತುವು ನವಕುಂದವೃಂದ ಅಂದು ಒಲವಿಂ ಪೂತುವು: **ತ್ರಿಷಷ್ಟಿಪು,** ೮. ೨೨)

**ಬೀಗು** – ಉಬ್ಬು (ಮದನ ದವಾನಲಾರ್ಚಿ ತನುವಂ ಸುಡೆ ತಳ್ತ ಎಮೆಯೊಳ್ ಪಳಂಚಿ ಬೀಗಿದ ಬೆಳರ್ವಾಯೊಳ್ ಉಚ್ಚಳಿಸಿ .. .. ಎಯ್ದಿದುವು ನೇತ್ರಜಲಬಿಂದುಗಳ್ ಆಕೆಯ ನಿಮ್ನನಾಭಿಯಂ: **ಪಂಪಭಾ,** ೫. ೯); ಸಂತೋಷಪಡು (ಬೀಗು–ಸಂತೋಷಭಾವೇ ಸ್ಥೌಲ್ಯೇ ಚ: **ಶಬ್ದಮದ,** ಧಾ ೧೩೮; ಸಮೃದ್ಧಿಯಾಗು (ಬೆಳೆದು ಬೀಗಿ ತಮ್ಮಿಂ ತಾವೆ ಬಿರಿದು ಬಿರಿದಟ್ಟು ಸುರಿವ ದಾಳಿಂಬದ ಪಣ್ಗಳ ತನಿರಸದ ಪರಿವೊನಲೆ ಪರಿನೀರಾಗೆಯಂಕುರವೊತ್ತಿ ಬೆಳೆಯುತಿರ್ದ ಕರ್ಬಿನ ಮಡಲ್ಗಳುಮಂ: **ಪಂಚತಂತ್ರ,** ೧೯೦ ವ); ಗರ್ವಿಸು (ಪೊಂಗಿ ಕಡಂಗಿ ಬೀರದೊಳೆ ಬೀಗುವ: **ಪಂಪಭಾ,** ೯. ೫೪)

**ಬೀಜ** – ಹಣ್ಣಿನ ಕಾಳು (ಆ ದಾಡಿಮದ್ರುಮದೊಳ್ ಬಿಡೆ ಸವಿಯಲ್ ಬೀಜಮನುಗಿವೆಡೆಯೊಳ್ ಚಂಚೂಪುಟಂಗಳಂ ಬಿಡದೆಂತುಂ ತೊಡಗಿರ್ದೊಡೆ: **ಕುಸುಮಾಕಾ,** ೯. ೨೩)

**ಬೀಜಕ** – ಬಕುಳದ ಮರ (ವಕುಳಂ ಕಸರತರು ಬೀಜಕವಕ್ಕುಂ: **ಅಭಿಧಾವ,** ೧. ೮. ೫)

**ಬೀಜನ** – ವೀಜನ, ಬಿಸಣಿಗೆ (ಹಿಮರೋಚಿಯ ತಣ್ಗದಿರ್ಗಳ್ಗೆ ಶೀತಶೀತಳಿಕೆಯ ಬೀಜನಕ್ಕೆ ಗುಱಿಯಾಯ್ತು ವಿಯೋಗಿಜನಂ ಬಸಂತದೊಳ್: **ವರ್ಧಮಾಪು,** ೧೦. ೪೮)

**ಬೀಜಪೂರ** – ದೊಡ್ಡೀಳೆ, ಈಳೆ ಜಾತಿಯ ಮರ, ಹಣ್ಣು (ಖರ್ಜೂರವೃಂದಂ ಕ್ರಮುಕಸಮಿತಿ ನೀಪವ್ರಜಂ ಬೀಜಪೂರಪ್ರಕರಂ ನಾರಂಗಸಂಘಂ: **ಪುಷ್ಪದಂಪು,** ೯. ೧೫)

**ಬೀಜಭೋಜಿ** – ಬಿತ್ತನೆ ಕಾಳು ತಿನ್ನುವವನು, ಅವಿವೇಕಿ (ನಿನ್ನನಱಿಯುತ್ತುಮೆ ನೆಟ್ಟಗೆ ಅಟ್ಟೆ ಬೀಜಭೋಜಿಗಳವೊಲ್ ಅಪ್ಪುದು: **ಕರ್ಣನೇಮಿ,** ೧೨. ೩೧)

**ಬೀಜಾವಾಪ** – ಬಿತ್ತನೆ (ಅಘದಿಂ ಬೀಜಾವಾಪಮೆನೆ ಜನ್ಮಲತೆಗೆ ಕಲಾಪಿಸ್ತ್ರೀಯುದರದಲ್ಲಿ ವಿಂಧ್ಯದೊಳೊಗೆದಂ: **ಯಶೋಧಚ,** ೩. ೩೪)

**ಬೀಟೆಯ ಕಾಲ್** – ಬಿರಿದ ಕಾಲು (ಬೀಟೆಯ ಕಾಲಿಂ ಬಾರೇಱೆ ಬದಗನೊದೆದೊಡೆ ಕೇರೆ ಪೊರಳ್ವಂತೆ ಕಾಲ ಮೇಲೆ ಪೊರಳ್ದಳ್: **ಯಶೋಧಚ,** ೨. ೫೦)

**ಬೀಟೆವರಿ** – ಬಿರುಕು ಬಿಡು (ಬೀಟೆವರಿದಿರ್ದ ಮಡಂ ಸೆರೆಗೊಂಡ ಕಾಲ್ಗಳಿಂ ಮನಕೆ ವಿರಕ್ತಿಯಂ ಪಡೆವಮುಪ್ಪಿನ ಪಾರ್ವನದೊರ್ವನೊಪ್ಪಿದಂ: **ಪುಣ್ಯಾಸ್ರ,** ೩. ೮೧)

**ಬೀಡಂಬಿಡಿಸು** – ಬಿಡಾರ ಹೂಡುವಂತೆ ಮಾಡು (ಕಡುಪಗಲಾದುದು ಬೀಡಂಬಿಡಿಸುವುದೀ ಪುಣ್ಯನದಿಯ ತಡಿಯೊಳ್ ದೇವರ್: **ಆದಿಪು,** ೧೧. ೬೭)

**ಬೀಡನೆತ್ತು** – ಬಿಡಾರವನ್ನು ತೆಗೆ (ಮಱುದಿವಸಂ ಬೀಡನೆತ್ತಿ ಕತಿಪಯ ಪಯಣಂಬೋಗಿ: **ಧರ್ಮಾಮೃ,** ೧. ೧೫೪ ವ)

**ಬೀಡಿಕೆ** – ಬಿಡಾರ (ಮೆಱೆವ ಹರ್ಮ್ಯಮಂ ಅತ್ಯಾದರದಿಂ ಬೀಡಿಕೆಯಾಗಿತ್ತಿರದೆ ಒಲವಿಂ ಮಗುಳ್ದು ನಿಜಗೃಹಕೇಳ್ತಂದಂ: **ತ್ರಿಷಷ್ಟಿಪು,** ೬೧. ೫೦)

**ಬೀಡು** – ಪಟ್ಟಣ (ನಾಡೊಳ್ ಕೌಶಲದೇಶಮೊಂದೆ ಪುರದೊಳ್ ಸಾಕೇತಮೊಂದೆ .. .. ಮನ್ಮಥನೆ ಬಣ್ಣಿಗೆಯ್ದನೆಂದೊಡೆ ಆ ನಾಡಂ ಬೀಡಂ .. .. ಏವಣ್ಣಿಪಂ ಬಣ್ಣಿಪಂ: **ಪಂಪರಾ,** ೧. ೧೦೦); ಬಿಡಾರ, ವಾಸಸ್ಥಾನ (ತಳ್ತ ಬಣ್ಣವಣ್ಣದ ಗುಡಿ ತೊಂಬೆಗೊಂಚಲ್ ಎಲೆಯಿಕ್ಕಿದ ಕಾವಣಮೆಲ್ಲಿಯುಂ ಪೊದಳ್ದೊದವಿರೆ ಕಣ್ಗೆ ಕಂಡುವು ಅಖಿಳಾವನಿಪಾಳರ ಬಿಟ್ಟ ಬೀಡುಗಳ್: **ಪಂಪಭಾ,** ೩. ೩೮)

**ಬೀಡುಗೆಯ್** – ಬೀಡು ಬಿಡು (ತೃಣಜಲಸಮೃದ್ಧಮಾದ ಎಡೆಯೊಳ್ ಬೀಡುಗೆಯ್ದು: **ಕಾದಂಬ,** ೯. ೦ ವ)

**ಬೀಡುದಾಣ** – ಬಿಡಾರದ ಜಾಗ (ಸಕಲ ರಾಜಲೋಕಮಂ ಬೀಡುದಾಣಂಗಳ್ಗೆ ಪೋಗಲ್ವೇಳ್ದು: **ಕಾದಂಬ,** ೮. ೧೨೦ ವ)

**ಬೀಡುಬಿಡು** – ಬಿಡಾರ ಮಾಡು, ಶಿಬಿರ ಹಾಕು (ಮೂಡಿಗೆ ಕುಕ್ಕಂಬಂ ಸುಟಿಸಿ ಜೊಂಪಂ ಬೀಡುಬಿಡುವ ಇಂಬು ಕದಳಿ ತೆಂಗಿನ ತಾಣಂ ಜಾಣಿಂ ನೀರ್ದಾಣಮೆಂದು ಎಡೆಯಱಿದುಂ: **ಪಂಪಭಾ,** ೫. ೪೧)

**ಬೀಡೆ** – ಬಿರುಕು, ಸೀಳಕ (ದಾಡಿಮದ ಬೀಡೆಯೊಳ್ ಚಂಚುಪುಟಂ ತೊಡರ್ದೊಡೆ ಕೀರ್ ಕೀರೆನುತುಂ ಸಿಡಿಮಿಡಿಗೊಳುತಿರ್ದುದು ಒಂದು ಕೀರಕಿಶೋರಂ: **ಶಾಂತೀಶ್ವಪು,** ೧೦. ೮೦); ಬಯಲು (ಮರೀಚಿಜಳಮಂ ತಡೆಯದೆ ಕುಡಿಯಲ್ ಮಿಗೆ ಬಾಯ್ವಿಡುವಂತಿರೆ ಬಿರಿದ ಬೀಡೆಗಳ್ ಬಿಡದೆಸೆಗುಂ: **ರಾಜಶೇವಿ,** ೫. ೩೩)

**ಬೀಡೆವಡು** – ಬಿರುಕುಂಟಾಗು (ಹರಿಣಧರ ಹರಿಣನಂ ಪೂಮರದಡಿಯೊಳ್ ಪೊಯ್ದುಪಟ್ಟ ಪುಲಿಗಳಿವೆನಿಕುಂ ಪರೆದರುಣ ಸಿತಾಸಿತಮಪ್ಪ ರಾಗದಿಂ ಬೀಡೆವಟ್ಟ ಬೆಟ್ಟದ ಸಱೆಗಳ್: **ಅಜಿತಪು,** ೯. ೨೪)

**ಬೀಡೆವಣ್** – ಬಿರಿದ ಹಣ್ಣು (ಬೀಡೆವಣ್ಗಳಿನೆಸೆದಿರ್ಪ ದಾಡಿಮತರುವ್ರಜಮಾ ಬನದೊಳ್ ವಿರಾಜಿಕುಂ: **ಕುಸುಮಾಕಾ,** ೧. ೯೧)

**ಬೀಡೆವರಿ** – ಬಿರುಕುಂಟಾಗು (ಖೇದದಿಂದ ಎರ್ದೆಯೊಡೆದಂತಿರೆ ಕೂಡೆ ಬೀಡೆವರಿದುವು ನಿರಂತರೋತ್ತಪನ ತಾಪದಿಂ ಪೆರ್ಗೆಱೆಗಳ್: **ಪಂಪರಾ,** ೭. ೮೮)

**ಬೀಣೆ** – ವೀಣೆ (ಬೀಣೆಯ ಕೊಟಲ ಬೆದಂಡೆಯ ಗಾಣರ ಬಟಿವಿಡಿದು ಸುಟಿದು ಕುಂದಿಂ ಕಥಕಶ್ರೇಣಿಯೊಡನೆಳಸಿ ಬಳಸುವ ನಾಣಿಲಿಗಳಂ ಈ ಬುಧಾಳಿಯೊಳ್ ಪುಗಿಸುವುದೇ: **ಸುಕುಮಾಚ,** ೨. ೨೪)

**ಬೀಣೆಗಾಱ** – ವೀಣೆ ನುಡಿಸುವವನು (ಬಾಜಿಪ ಬೀಣೆಗಾಱರ ಆಗರಮೆನೆ ಪೆಂಪು ಸೊಂಪನೊಳಕೊಂಡೆಸೆದಿರ್ಪುವು ಸೂಳೆಗೇಱಿಗಳ್; **ಕಬ್ಬಿಗಕಾ,** ೩೬)

**ಬೀಣೆವಾಜಿಸು** – ವೀಣೆಯನ್ನು ನುಡಿಸು (ಚಕ್ರಿ ಬೀಣೆವಾಜಿಸೆ ಸುತಿಗೂಡಿ ತಾರಯಿಪ ತುಂಬಿಗಳಿಂತಿವು: **ಆಚವರ್ಧ,** ೫. ೬೧)

**ಬೀತು** – ಮುಗಿದುಹೋಗಿ (ನೆಚ್ಚಿನ ಎಲರ್ ಒಯ್ಯನೆ ಜಾಱದೆ ಬಂದ ಮಾವು ಬೀತು ಒಱಗದೆ ಗಂಡುಗೋಗಿಲೆಯ ಸೊರ್ಕು ಒಳಸೋಱದೆ ಸೈತೆ ಪೋಕುಮೇ: **ಕಬ್ಬಿಗಕಾ,** ೧೮೧)

**ಬೀದಿ** – [ವೀಥೀ] ದಾರಿ (ಎಸೆವ ಬಹುರತ್ನರಾಶಿಯ ಪಸರಂಗಳಿನದಱ ಬೀದಿಗಳ್ ಪಲವುಂ ರಂಜಿಸಿ ತೋರ್ಕುಮಾವಗಂ: **ಪಂಚತಂತ್ರ,** ೬೩)

**ಬೀದಿಗೊಳ್** – ದಾರಿ ಹಿಡಿದು ಹೋಗು (ಕಂಪಿನ ಪೊಱಲಂ ಪೊಕ್ಕು ಬೀದಿಗೊಂಡು ಬರ್ಪಾಗಳ್: **ಕಬ್ಬಿಗಕಾ,** ೨೪೯ ವ)

**ಬೀದಿವರಿ** – ಹಬ್ಬು (ಬಯಲೊಳ್ ಬೀದಿವರಿದುಂ .. .. ಉರ್ವಿಯಂ ಪೊಱ್ದುಂ ಆಗಸಮನೊತ್ತಿಯುಂ .. ತತ್ತಮೋಬಳಂ .. .. ನೆಲಸೆ: **ಆಚವರ್ಧ,** ೭. ೩೨ ವ); ಅಲೆದಾಡು (ಗೊರವರ ಡುಂಡುಚಿಯೆ ಬೀದಿವರಿಯ ಬೀರನ ಕಥೆಯೇ: **ಧರ್ಮಮಧು,** ೧. ೫೭)

**ಬೀದಿವಾಡು** – ಬೀದಿಯ ಹಾಡು (ನೀರಸರಱಿವಂತೇನಿದು ತಾರೆಲೆಯೇ ಬೀದಿವಾಡೇ ತುಮುಕೇ: **ಗಿರಿಜಾಕ,** ೧. ೩೦)

**ಬೀಭತ್ಸರಸ** – ನವರಸಗಳಲ್ಲಿ ಒಂದು (ಹಾಸ್ಯರಸಮಾಮಧುರೋಕ್ತಿಗಳಿಂದಮಲ್ತೆ ಬೀಭತ್ಸರಸಾಂತರಂ ಶಿಥಿಲ ಬಂಧದಿಂ: **ಕವಿರಾಮಾ,** ೨. ೧೦೦)

**ಬೀಭತ್ಸು** – ಭಯಂಕರವಾದ (ಕಾಕೋಳೂಕ ಸೃಗಾಲ ಶಾರ್ದೂಲೋಷ್ಟ್ರಖರಮುಖದಿಂಗಳನನುಕರಿಸುವ ಮಹಾಬೀಭತ್ಸುಗ ಕಶ್ಮಿತೋತ್ಪತ್ತಿಸ್ಥಾನಂಗಳೊಳ್: **ಸುಕುಮಾಚ,** ೧೧. ೪೧ ವ); ಅಸಹ್ಯಕರವಾದ[ದ್ದು] (ಮತ್ಸರಮಂ ಜಿನಮತದೊಳ್ ವತ್ಸಲತೆಯನುಂಟುಮಾಡಿ ಕುಮತದೊಳ್ ಅವರ್ ಕುತ್ಸಿತ ಯೋನಿಗಳೊಳ್ ಬೀಭತ್ಸು ಶರೀರಂಗಳಾಗಿ ತಿರಿತರುತಿರ್ದರ್: **ಪಂಪರಾ,** ೧೫. ೪೧)

**ಬೀಯ** – [ವ್ಯಯ] ವೆಚ್ಚ (ನೆಱೆಗೊಂಡುದು ನಾರಾಚಂ ನೆಱೆಗಾಣಲ್ಕಾರ್ತುದಿಲ್ಲ ಬೀರಕೆ ಬೀಯಕ್ಕಿಱಿವ ಬೆಡಂಗನೊಳಾರ್ ದೊರೆ ನೆಱೆ ತೋರ್ಕುಮೇ ಶತ್ರುಜನಕಂ ಅರ್ಥಿಜನಕ್ಕಂ: **ಗದಾಯು,** ೧. ೧೮)

**ಬೀಯಂಗೆಯ್** – ದಾನಮಾಡು (ಪೇರಾನೆಗಳ ತೇರ್ಗಳ ವಂಗಡಮಂ ತಂಡತಂಡದಿಂ ಬೀಯಂಗೆಯ್ವ ಅರಸುಮಕ್ಕಳ ಮುಂದೋದಿ ಮೆಚ್ಚಂ ಕೊಳ್ವರ್: **ಕಬ್ಬಿಗಕಾ,** ೩೭ ವ)

**ಬೀರ** – ಶೂರ (ನಿನ್ನಂ ಉಱುಗಿಸಲುಂ ಆಜಿಯೊಳ್ ಎನ್ನಂ ಬೆಂಕೊಂಡು ಕಾದಲುಂ ಬಂದು ಈಗಳ್ ಬಿನ್ನನೆ ಮೊಗದಿಂ ಬೀರರ್ ಬೆನ್ನಿತ್ತುದಂ ಇನಿಸು ನೋಡ ಸರಸಿಜಮುಖೀ: **ಪಂಪಭಾ,** ೩. ೭೩); ಶೌರ್ಯ (ಚಾಗದ ಕಂಬಮಂ ನಿಱಿಸಿ ಬೀರದ ಶಾಸನಮಂ ನೆಗಟ್ಟೆ ಕೋಳ್ಪೋಗದ ಮಂಡಲಂಗಳನೆ ಕೊಂಡು ಜಗತ್ತ್ರಿತಯಂಗಳೊಳ್ ಜಸಕ್ಕೆ ಆಗರಮಾದ ಬದ್ದೆಗನಿಂ ಆ ನರಸಿಂಹನಿಂ ಅತ್ತ ನಾಲ್ವರಲ್ ಮೇಗು ಪೊದಳ್ದ ಚಾಗದೊಳಂ ಒಂದಿದ ಬೀರದೊಳಂ ಗುಣಾರ್ಣವಂ: **ಪಂಪಭಾ,** ೧. ೫೦)

**ಬೀರಗಚ್ಚೆ** – ಯುದ್ಧಕಾಲದ ವೀರರ ಕಚ್ಚೆ, ವೀರಗಚ್ಚೆ (ವಸುಧೇಶನ ಕಣ್ಗೆಸಿಸುಂ ಮಿಸುಗುವ ಪೊಸಮಸೆಯ ಪೊನ್ನ ಕೂರಂಕುಸವಾಳಿಸಿ ಬರಿಯ ಬೀರಗಚ್ಚೆಯೊಳೆಸೆದುದು ಕಾರ್ಮುಗಿಲ ಕೆಲದ ಕುಡುಮಿಂಚಿನವೊಲ್: **ಚಂದ್ರಪ್ರಭು,** ೯. ೯೨)

**ಬೀರತಣೆ** – ಸತ್ತ ವೀರನಿಗೆ ಅರ್ಪಿಸುವ ತರ್ಪಣ (ಬಟ್ಟೆಯ ಕಣ್ಣೊಳ್ ಕಲ್ಗಳನಿಟ್ಟು ಅವರೆಲೆ ಬೀರತಣೆಯನಿತ್ತುಂ ಮೂಢರ್: **ಸಮಯಪ,** ೧೨. ೩)

**ಬೀರನ ಗುಡಿ** – ಸತ್ತ ವೀರನ ಸ್ಮಾರಕ (ಮತ್ತಿನ ಬೀರನ ಗುಡುಗಳ ಮುಂದೆ ಕುಣಿವುದು ಆವ ಉಚಿತಗುಣಂ: **ಸಮಯಪ,** ೯. ೯೫)

**ಬೀರಮದ್ದಳೆ** – ಒಂದು ರಣವಾದ್ಯ (ಕೋಕಿಲಾರವಮದು ಬೀರಮದ್ದಳೆಯ ನಿಸ್ವನಮಾಗಿರೆ: **ಚಂದ್ರಪ್ರಭು,** ೭. ೪೨)

**ಬೀರರವ** – ವೀರಘೋಷ, ವೀರನ ಕೂಗು (ತೆಗೆಯೆ ಬೀರರವದೆ ಮೇಲೆ ಪರಿದ ಮದಗಜಂಗಳಿಂ ಚಳತ್ತುರಂಗಂಗಮಗಳಿಂದಂ: **ಪಂಪಭಾ,** ೧. ೫೮)

**ಬೀರವಟ್ಟ** – ಸೇನಾಪತಿಯ ಪಟ್ಟ (ಬೀರವಟ್ಟಮಂ ಆನಿರೆ ನೀಂ ಈ ಸೂತಸುತಂಗೆ ಎಡೆಗೊಂಡು ಕೈವಾರದಿಂದ ಒಸೆದು ಇತ್ತೊಡಂ ಏನಾಯ್ತು: **ಪಂಪಭಾ,** ೧೨. ೪೩)

**ಬೀರವದ್ದಳೆ** – ರಣವಾದ್ಯ (ಬಿರುದಿನ ಬೀರವದ್ದಳೆಯ ಪದಿರ ಪಱೆಯ ಕಹಳೆಯಕಳಕಳಂ ಕಿವಿಶಬ್ದಂಗಿಡೆ ದಿವಮನೆಯ್ದೆ: **ಪಂಪರಾ,** ೧೩. ೩೪ ವ)

**ಬೀರವರ್ತಿ** – ಸೈನಿಕ (ಬಿರುದಾಂತ ಬಲಂಗಳನೆತ್ತಿ ನುಂಗಿ ಮತ್ತುಗುಱದ ಬೀರವರ್ತಿನಿಕರಂಗಳ: **ಅನಂತಪು,** ೨. ೨೮)

**ಬೀರವಸದನಂಗೆಯ್** – ವೀರನ ಅಲಂಕಾರ ಮಾಡಿಕೊ (ಮಸಿವಡೆಯಂ ಬಿಚ್ಚೆಯಿಂ ಪುಟ್ಟಿಸಿ ಮುಂಗುಡಿಯೊಳ್ ನಡೆವಂತೆ ಬೆಸಸಿ ಕಣ್ಗಿಂಬಾಗಿರೆ ಬೀರವಸದನಂಗೆಯ್ದು: **ಕಬ್ಬಿಗಕಾ,** ೧೫೩ ವ)

**ಬೀರವಱೆ** – ರಣಹಲಗೆ ಎಂಬ ವಾದ್ಯ (ಬಾರಿಸುವ ಬೀರವಱೆಯ ಪೊಡೆವ ಡಕೆಯ ಪಿಡಿದ ಬಿರುದಿನ ಕಾಳೆ ಬಲ್ಲುಲಿಯ ಸಡಗರಂ: **ಕಬ್ಬಿಗಕಾ,** ೧೯೨ ವ)

**ಬೀರಸಂಕಲೆ** – [ವೀರಶೃಂಖಲೆ] ವೀರನ ಕಾಲ್ಗಡಗ (ಪೊನ್ನ ಬೀರಸಂಕಲೆಯ ತೋಳಪ್ಪ ಕನ್ನಡಿಯ ಚೆನ್ನಡಿಯಡ್ಡಣವೆಡ್ಡಮಾಗೆ: **ಕಬ್ಬಿಗಕಾ,** ೨೧೧)

**ಬೀವು** – [ಬೆನ್ನ] ಹುರಿ (ಬೆನ್ನ ಬೀವಂ ತೆಗೆವ ಬೇತಾಳರುಮಂ: **ಗದಾಯು,** ೫. ೩ ವ); ನರ (ಕೀವಿನ ನೆತ್ತರ ತಿಪ್ಪೆ ಬೀವಿನಂದಂ ಬಿಗಿದಿರ್ದ ಪೆರ್ನೆಣದ ಖಂಡದ ಮಾಂಸದ ತಾಣಮಲ್ಲವೇ: **ಧರ್ಮಾಮೃ,** ೫. ೧೮); ಹಗ್ಗ (ತನ್ನೆಸೆವ ರತ್ನಮಾಲೆಯಂ ಉನ್ನತನಂತೆಸೆಯೆ ಬೀವು ಮಾಡಿ ಬಟಿಕ್ಕಾ ಕನ್ನೆ ಕೈಯ್ಯೊಳ್ ಕೊಟ್ಟು: **ಕರ್ಣನೇಮಿ,** ೮. ೫೬)

**ಬೀಸರ** – ವ್ಯರ್ಥ (ಬಿಸರುಹದೆಸಳ್ಪೊರೆಯ ನಸುದೆಱಪಿನೊಳ್ ಮುಸುಂಡನಿಟ್ಟು ಬೀಸರವಾಗದ ಒಸಗೆಗಂಪನುಣ್ಬ: **ಲೀಲಾವತಿ,** ೩. ೨೦ ವ); ನಿಂದನೆ (ಕೂಸಂ ಕೊಟ್ಟಪೆನೆಂಬೀ ದೂಸಱ ನೀವಿಂತವಜ್ಞೆಗೆಯ್ಯುತ್ತೆನ್ನಂ ಬೀಸರಮನೆ ನುಡಿದಪಿರಿ: **ಪಂಚತಂತ್ರ,** ೩೬೫)

**ಬೀಸರಂಬೋಗು** – ವ್ಯರ್ಥವಾಗು (ಅಲರ ಬಿಜ್ಜಣಿಗೆಯಿಂ ಬೀಸೆ ಬೀಸರಂಬೋಗುದಂತೆ ಹಸನಂ ಹಸಂಗೆಡೆ: **ರಾಜಶೇವಿ,** ೭. ೯೨ ವ)

**ಬೀಸಾಡು** – ಬಿಸಾಕು, ಎಸೆ (ಬೀಸಾಡು–ಕರವಿಮೋಚನೇ: **ಶಬ್ದಮದ,** ಧಾ ೩೩೮)

**ಬೀಸು** – ಬಿಸುಡು (ಕಾಲನವುಂಕೆಪತ್ತಿ ಪಿಡಿದೋವದೆಭೋರೆನೆ ಬೀಸಿ ಕುಂಬದೊಳ್ ಲೀಲೆಯಿನಟ್ಟಿಮೋದಿಸೆನೆ: **ಧರ್ಮಾಮೃ,** ೯. ೧೨೧); ಬಲೆಯಂತಹುದನ್ನು ಹರಡು (ನಾಳೆ ಬಂದು ಜಾಲಮಂ ಬೀಸಿ ಮತ್ಸ್ಯಂಗಳಂ ಪಿಡಿವಮೆಂದು ನುಡಿವ ಮಾತನನಾಗತಮತಿ ಕೇಳ್ದು: **ಪಂಚತಂತ್ರ,** ೨೨೪ ವ); ಗಾಳಿ ಹಾಕು (ಬಟಿಲ್ದರ ಮೊಗದೊಳ್ ನೀರಂ ತಳಿದು ಬೀಸಿ ಚೇತರಿಸಿದಾಗಳ್ ಮತ್ತಂ ದಂಡಣೆಗಳಂ ಮಾಡುವಂತೆ: **ಧರ್ಮಾಮೃ,** ೧೦. ೬೫ ವ); ದೊಣ್ಣೆಯಂತಹುದನ್ನು ಝಳಪಿಸು (ಗದೆಯಂ ಬೀಸುವ ಬೆಡಂಗು ರಂಜಿಸಿತು ಭೀಮದುರ್ಯೋದನರಾ: **ಗದಾಯು,** ೧೨. ೧೬೧ ವ); ತಿರುಗಿಸು (ಕವೆಯಾರಮಂ ಬೀಸಿದಂತೆ ಬಟ್ಟಿತ್ತಾಗಿ ತೋರ್ಪುದು ಸೊನ್ನೆ: **ಶಬ್ದಮದ,** ೨೭ ವೃತ್ತಿ)

**ಬೀಸುಂಬಲೆ** – ಹರಡುವ ಬಲೆ (ಅಖಿಲಮೃಗಪಟಳಮಂ ಪಿಡಿಯಲೊಡತರಿಸಿ ಸಮೆದ ಶಮನ ಶಬರನ ಬೀಸುಂಬಲೆಯ ಪಾಸಮೆನಿಸಿ: **ಆಚವರ್ಧ,** ೧೦. ೫ ವ)

**ಬೀಳುಡೆ** – ಉಟ್ಟು ಕಳಚಿದ ಬಟ್ಟೆ (ಮುಂದಲೆಯ ಒಳ್ಗುರುಳ್ ಪಿಡಿತವಟ್ಟಿದ ಬೀಳುಡೆ ತೋಳ ಸೋಂಕು: **ಧರ್ಮಮಧು,** ೧. ೭೬)

**ಬೀಱು** – ಹೊರಸೂಸು (ವೃತ್ತೋತ್ತುಂಗಸ್ತನೆಯರ್ ಶ್ರಮಮುತ್ತುಮದೇಂ ಸುರಭಿಗಂಧಮಂ ಬೀಱಿದರೋ: **ಆದಿಪು,** ೧೧. ೭೩); ಹಬ್ಬುವಂತೆ ಮಾಡು (ಅಗರುವ ಮೆಚ್ಚು ಅಚ್ಚ ಸಿರಿಕಂಡದೊಳ್ ಅಗ್ಗಲಿಸಿತ್ತು ಸೂಡುಶಯ್ಯೆಗಳ ಬಯಕ್ಕೆ ಜೊಂಪಲರ್ದವು ಪಾಸುಗಳೊಳ್ ನೆಲಸಿತ್ತು ಪೂತ ಗೊಜ್ಜಗೆಗಳ ಸಿಂದುರಂಗಳೊಳಗೆ ಓಗರಗಂಪನೆ ಬೀಱುತ; **ಪಂಪಭಾ,** ೫. ೩೦); ಪ್ರಕಟಪಡಿಸು ಎಲ್ಲಾ ರತ್ನಂಗಳುಮನೊಳಕೊಂಡೊಳ್ಪನಂಭೋಧಿ ಲೋಕಕೆಲ್ಲಂ ಬೀಱಲ್ ಪೊಱಗೆ ಕಸಮಂ ನಿಚ್ಚಮೀಡಾಡುತಿರ್ಕುಂ: **ಕಾವ್ಯಾವಲೋ,** ೨೫೨); ಇಷ್ಟದಿಂದ ಕೊಡು (ಬೀಱು– ಸ್ವೇಚ್ಛಾಪ್ರದಾನೇ: **ಶಬ್ದಮದ,** ಧಾ ೮೯೧)

**ಬೀೞ್** – ಕೆಳಕ್ಕೆ ಕುಸಿ (ಬಿೞ್ದುದು ಭರದೆ ಸಿಡಿಲ್ದತ್ತ ಕರ್ಣೋತ್ತಮಾಂಗಂ: ಪಂಪಭಾ, ೧೨. ೨೦೩) ಜೋತು ಬೀಳು (ಲತಾಮಂಟಪದೊಳೆಸೆವ ಬೀೞ್ ಜೊಂಪದೊಳ್: **ಕಾದಂಸಂ,** ೬. ೩೩); ಕೊರತೆ (ಬೀೞ್ ಎಂದೊಡಂ ಎಂತುಂ ನಂಬುವುದೆ ಕೌಳಸಮಯದ ನುಡಿಯಂ: **ಸಮಯಪ,** ೧೦. ೮೩): ಉದುರು (ಮಾತಂಗಕುಂಬದಿಂ ರಣಭೂತಲದೊಳ್ ಬಿೞ್ದುವೊಡನೆ ಮೌಕ್ತಿಕಮಣಿಗಳ್: **ಪಂಪರಾ,** ೧೩. ೭೭); ದುಮುಕು (ಕಂಬಳಕನೆಂಬ ಬೇಡನೊಂದು ಪುಲಿ ತನ್ನನಟ್ಟಿವರೆ ಪ್ರಾಣಭಯದಿಂ ದೆಸೆಗಾಣದೆ ಪುರಾಣಕೂಪದೊಳ್ ಬಿರ್ದಂ: **ಪಂಚತಂತ್ರ,** ೧೭೮ ವ); ಎರಗು (ಮಡುವಿಂ ಪೊಱಮಟ್ಟು ಬಂದೊಂದೊಂದಱ ಕಾಲಮೇಲೆ ಬಿರ್ದಾನಂದಾಶ್ರುಗಳನಿಕ್ಕಿ: **ಪಂಚತಂತ್ರ,** ೪೫೯ ವ); ಹಳಸು (ಮೂರರ್ಥಕ್ಕೆ: ಬಿೞ್ದುದೆಂದು ಪಟಿಸಿದುದುಂ ಸತ್ತುದುಂ ಕೈಜೋಲ್ದುದುಮಕ್ಕುಂ: **ಶಬ್ದಮದ,** ೩೩ ವೃತ್ತಿ ೧೭೩)

**ಬೀೞಲ್** – ಬಿಳಲು (ಏಱುಂ ಮಾಳವಮಂ ಪಾಱೀೞ್ ತಗುಳ್ದಿೞಿದು ನರಗನುರಿಪಿದೊಡೆ ಕರಿಂ ಕೇಟಿಸಿದಂ ಆತನ ತೇಜದ ಬೀೞಲಂ ಅನುಕರಿಪುವಾದುವೊಗೆದು ಉರಿವುರಿಗಳ್: **ಪಂಪಭಾ,** ೧. ೩೫)

**ಬೀೞುಡೆ** – ಬೀೞುಡುಗೆ (ಮಡಗೂೞ್ ಬೀೞುಡೆ ಬಾಯತಂಬುಲಂ ಇವು ಅಸ್ಪೃಶ್ಯಂಗಳೇನಲ್ಲಮೇ: **ಪಂಪರಾ,** ೯. ೧೮೧)

**ಬೀೞ್ಕೊಳಿಸು** – ಹೊರಡಲು ಅನುಮತಿ ಕೊಡು (ದಿವಿಜರಾಜನಂ ಯಥಾಯೋಗ್ಯದಾನಸನ್ಮಾನದಿಂ ಬೀೞ್ಕೊಳಿಸಿ ಕಟುಪಿ: **ಜಗನ್ನಾವಿ** ೧೧. ೮೯ ವ)

**ಬೀೞ್ಗುಂಡು** – ಬಿಣ್ಗುಂಡು, ಲಂಗರು ಗುಂಡು (ನಿಸರ್ಗಶೌಚಾದಿಗುಂಗಳಿಂ ಬೀೞ್ಗುಂಡಿಕ್ಕಿದ ಭೈತ್ರಮುಮಂ ನಿಶ್ಚಲಪ್ರದೀಪ ಪವಿತ್ರಪ್ರದೀಪಮುಮಂ ಪೋಲ್ತು: **ಶಾಂತಿಪು,** ೧೦. ೯೨ ವ)

**ಬೀೞ್ಗೊಂಬು** – ನೇತಾಡುವ ರೆಂಬೆ (ಒಂದು ಕಬ್ಬಾವ್ರಕುಜದ ಬೀೞ್ಗೊಂಬಿನ ಪಸುರೆಲೆಯ ಕುಸುಂಕುಱಿಳೊಳಗೆ .. .. ತನಿವಣ್ಣಂ ತಿಱಿಯಲ್: **ನೇಮಿನಾಪು,** ೩. ೮೦ ವ)

**ಬೀೞ್ತರ್** – ಬಿದ್ದು ಹೋಗು, ಉದುರು (ಕೇಸುರಿ ಸೂಸೆ ತನ್ನ ಮೊಗದಿಂ ಕಿಡಿ ಬೀೞ್ತರೆ ತನ್ನ ಕಣ್ಗಳಿಂದ .. .. ಎಡೆವೊಕ್ಕಂ ಅರಿಂಜಯನಂಜನಾಸುತಂ: **ಪಂಪರಾ,** ೧೧. ೧೦೭)

**ಬೀೞ್ನೆಲ** – ಬರಡು ಭೂಮಿ (ತುಱುಪಟ್ಟಿಯ ದರಿಯ ಬೀೞ್ನೆಲನದೇನುಮಿಲ್ಲಾ ನಾಡೊಳ್: **ಸೂಕ್ತಿಸುಧಾ,** ೪. ೮)

**ಬುಂಭುಕ** – ಕುಚ್ಚು, ಗೊಂಚಲು (ಚೆಂಬೊನ್ನ ಮಾಂಗಾಯ ಗೊಂಚಲ್ಗಳ ಪೊಂದಳಿರ ತೊಂಗಲ್ಗಳ ಸುತ್ತುಂಗೊಂಡ ಸರಿಗೆಯ ಮುತ್ತಿನ ಬುಂಭುಕಂಗಳ ನಡುವೆ: **ಆದಿಪು,** ೮. ೧೫ ವ)

**ಬುಗುಟು** – ಬೋರೆ (ಬುಗುಟು ನೆಗೆದೊಡೆ ಶಿರದೊಳ್ ತರದಿಂದೆ ತರ್ದು ನೆಗೆದಂತಿರೆ ಪಿರಿದಪಮಾನಮೆಯ್ದಿದಂ ದುಶ್ಚರಿತಂ: **ಪಾರ್ಶ್ವನಾಪು,** ೪. ೨೬)

**ಬುಕ್ಕ** – ಹೃದಯ (ಕಬಳಿತ ವಲ್ಲೂರಂ ಗಿಳಿತ ಬುಕ್ಕಂ ಆ ಪೀತರಕ್ತಂ: **ನೇಮಿನಾಪು,** ೫. ೪೧)

**ಬುತ್ತಿ** – [ಭುಕ್ತಿ] ಪ್ರಯಾಣ ಕಾಲದಲ್ಲಿ ಕಟ್ಟಿಕೊಂಡ ಊಟ (ಜೀವದ ಸೆಱೆವನೆ ಜವನೆಂಜಲಿಸಿದ ಬುತ್ತಿ ತನುವೆನಿಪ್ಪುದು ಮಸಿಯೇ: **ಚಂದ್ರಪ್ರಪು,** ೧೦. ೧೧೧)

**ಬುತ್ತಿಯಿಡು** – ನೈವೇದ್ಯ ಮಾಡು (ಪುರದ್ವಾರದೊಳ್ ಅಡಗಂ ಬುತ್ತಿಯಿಟ್ಟು ಎಲ್ವಿನಿಂ ಪೂವಲಿಗೆಯ್ದು .. .. ಪೊಕ್ಕಂ ದನುಜಂ ಪೊಟಿಲಂ: **ಜಗನ್ನಾವಿ,** ೬. ೧೦)

**ಬುದ್ಧವಪು** – ಬೌದ್ಧಾವತಾರ (ಅಂಬುಜೋದರಂ ಇರದಂದು ಬುದ್ಧವಪುವಂತದನಾಗಳೆ ತಾಳ್ದಿ: **ಸಮಯಪ,** ೧೦. ೫೯)

**ಬುದ್ಧಿ** – ಪ್ರತಿಭೆ (ಪ್ರತಿಭಾ ಸಂವಿತ್ಪ್ರಜ್ಞಾ ಮತಿ ಮೇಧಾ ಬುದ್ಧಿ: **ಅಭಿಧಾವ,** ೨. ೧. ೩); [ಜೈನ] ಏಳು ಬಗೆಯ ಋದ್ಧಿಗಳಲ್ಲಿ ಒಂದು (ಬುದ್ಧಿತಪೋವಿಕ್ರಯೌಷಧಿರಸ ಬಲಾಕ್ಷೀಣಾಭಿಧಾನ ಸಪ್ತರ್ಧಿಗಳೊಳಂ ನೆಱೆದಂ: **ಆದಿಪು,** ೬. ೩೩ ವ), ನೋಡಿ 'ಋದ್ಧಿ'

**ಬುದ್ಧಿಗಲಿಸು** – ಅರಿವುಂಟುಮಾಡು (ಇನ್ನಾಂ ನಿನಗೇನೆಂದು ಬುದ್ಧಿಗಲಿಸಿದಪೆಂ ನಿನಗೆ ಕ್ಷೇಮಮುಂ ಎನಗೆ ತೇಜಮುಮೆಂತಕ್ಕುಮಂತೆ ಮಾಡೆಂದು ಬೇಗಂ ಪೋಗೆಂಬುದುಂ: **ಪಂಚತಂತ್ರ,** ೯೩ ವ)

**ಬುದ್ಧಿಗೆಡು** – ವಿವೇಚನೆಯನ್ನು ಕಳೆದುಕೊ (ಮತಿಗೆಟ್ಟರ್ ಧೃತಿಗೆಟ್ಟರ್ ಗತಿಗೆಟ್ಟರ್ ಬುದ್ಧಿಗೆಟ್ಟರ್ ಉನ್ನತಿಗೆಟ್ಟರ್: **ಗಿರಿಜಾಕ,** ೮. ೨೩)

**ಬುದ್ಧಿವೇೞ್** – ಉಪದೇಶ ಮಾಡು (ಅದು ಕಾರಣದಿಂ ಮೀವುದು ಉಣ್ಬುದು ಉಡುವುದು ಮೋನದಿಂದಿರವೇಡೆಂದು ಬುದ್ಧಿವೇೞೆ: **ಧರ್ಮಾಮೃ,** ೩. ೮೧ ವ)

**ಬುದ್ಧಿವೃದ್ಧ** – ತಿಳಿವಳಿಕೆಯಲ್ಲಿ ಹಿರಿಯ (ಆತನ ಮಾತಂ ಮಾರ್ಕೊಂಡು ಸಮಸ್ತಶಾಸ್ತ್ರವಿಚಾರಸಾರನುಂ ಚತುರುಪಧಾವಿಶುದ್ಧನುಂ ಬುದ್ಧಿವೃದ್ಧನುಂ .. .. ವಸುಭಾಗಭಟ್ಟಂ: **ಪಂಚತಂತ್ರ,** ೬೭ ವ)

**ಬುದ್ಧೀಂದ್ರಿಯ** – ಕಣ್ಣು ಮುಂತಾದ ಪಂಚೇಂದ್ರಿಯಗಳು (ಅಕ್ಷಾದ್ಯಂ ಬುದ್ಧೀಂದ್ರಿಯಂ ಅಂತಯ್ದುಂ; **ಅಭಿಧಾವ,** ೧. ೧೨. ೨೪)

**ಬುದ್ಬುದ** – ನೀರ ಗುಳ್ಳೆ (ನೊರೆಯಿಂ ಬುದ್ಬುದದಿಂ ಕಣಾವಳಿಗಳಿಂದ ಆವರ್ತದಿಂ ತುಂತುಱಿಂ: **ಗಿರಿಜಾಕ,** ೧. ೪೭)

**ಬುಧ** – ಪಂಡಿತ (ನಿರಂತರಂ ಕಡಿಕಡಿದಿತ್ತ ಪೊನ್ನೆ ಬುಧ ಮಾಗಧ ವಂದಿಜನಕ್ಕೆ ಕೊಟ್ಟ ಕೋಡೆ ಎಡಱದೆ ಬೇಡಿಂ ಓಡಿಂ ಇದು ಚಾಗದ ಬೀರದ ಮಾತು ಕರ್ಣನಾ: **ಪಂಪಭಾ,** ೧. ೯೯); ಚಂದ್ರನ ಮಗನಾದ ಬುಧ [ನವಗ್ರಹಗಳಲ್ಲಿ ಒಂದು] ಸೋಮತನೂಜಂ ಬುಧಂ: **ಅಭಿಧಾವ,** ೧. ೧. ೭೨)

**ಬುಧಾಳಿ** – ಪಂಡಿತವರ್ಗ (ಬೀಣೆಯ ಕೊಟಿಲ ಬೆದಂಡೆಯ ಗಾಣರ ಬೞಿವಿಡಿದು ಸುೞಿದು ಕುಂದಿಂ ಕಥಕಶ್ರೇಣಿಯೊಡನೆಳಸಿ ಬಳಸುವ ನಾಣಿಲಿಗಳಂ ಈ ಬುಧಾಳಿಯೊಳ್ ಪುಗಿಸುವುದೇ: **ಸುಕುಮಾಚ,** ೨. ೨೪)

**ಬುಭುಕ್ಷಿತ** – ಹಸಿದ (ಬುಭುಕ್ಷಿತನೆಂ ಭೋರ್ಗರೆಯುತ್ತುಂ ಪಾಯ್ದಂ ಅೞಿಯೆ ಸಪರಿಗ್ರಹನೆಂ: **ಪಂಚತಂತ್ರ,** ೪೨೧)

**ಬುಲ್ಲವಿಸು** – [ಮನಸ್ಸನ್ನು] ಅರಳಿಸು (ಲಲ್ಲೆಯಱಿದು ಬುಲ್ಲವಿಸಿ ಸೋಲವಱಿದು ಸೊರ್ಕುಗೊಳಿಸಿ .. .. ಜಕ್ಕವಲಕ್ಕಿಯಂತೆ ಸುಸಿಲೆಸಗಲ್ ಉಜ್ಜುಗಿಸಿರ್ಪನ್ನೆಗಂ: **ರಾಜಶೇವಿ,** ೮. ೮೨ ವ)

**ಬೂತಟ್ಟು** – ಕುಚೋದ್ಯಕ್ಕೆ ದೂತನನ್ನು ಕಳಿಸು (ಜವನೆರ್ದೆಯಂ ಮೆಟ್ಟುವೀಶಂಗೆ ಬೂತಟ್ಟುವಗುರ್ವಂ ತೋಱಿದಪ್ಪೆಂ: **ಜಗನ್ನಾವಿ,** ೧೩. ೩೮); ಸ್ಪರ್ಧೆಗೆ ಆಹ್ವಾನಿಸು (ಮನೋಜವಕ್ಕೆ ಬೂತಟ್ಟುವ ತಕ್ಕು ಮಿಕ್ಕು ಬರೆ ಬಂದುವು ಪೊಂಬಿಲಿದೋಲ ಪಲ್ಲಣಂಗಟ್ಟಿದ ಪಟ್ಟಸಾಹಣದ ವಾಜಿಗಳಂದು ಜಯೋತ್ಸವಾಜಿಗಳ್: **ಮಲ್ಲಿನಾಪು,** ೯. ೩)

**ಬೂತಾಟ** – ಪಿಶಾಚಿಯ ಆಟ (ಅಂತಾಕೆಗಳ್ ತೂಗಿ ತೊನೆವ ತೊನೆಪಂಗಳುಮಂ ಮರಸರಿಗೆವಿಡಿದು ಬಿಲ್ವಿಡಿದಾಡುವ ಬೂತಾಟಂಗಳುಮಂ ನೋಡಿ: **ಪಂಪಭಾ,** ೪. ೯೦ ವ); ಕಪಟ, ತೋರಿಕೆ (ಬೞಿದೆಯುಂ ಬೂತಾಟವಿನ್ನೇಕೆ: **ಕಾದಂಬ,** ೬. ೮೩); ಮೋಸ (ರಣಸಂಜಾತ ಲಕ್ಷ್ಮಿಯ ಅಗ್ಗದ ಬೂತಾಟಮೊ ತಿಳಿಯೆನೆಂದು ಚಿಂತಿಸಿದಂ: **ಶಬರಶಂ,** ೪. ೯೭)

**ಬೂತು** – [ಭೂತ] ಪಿಶಾಚಿ (ಈತಂ .. .. ಜಿನಮಾರ್ಗದೊಳಂತೇತರ್ಕೆ ನಡೆವನೆನ್ನದೆ ಬೂತಿನವೋಲ್ ಅಂದಚಂದಂಗೆಡೆವರ್ ಧೂರ್ತರ್: **ಸಮಯಪ,** ೧೩. ೨೦); ನಾಚಿಕೆಗೆಟ್ಟವನನು (ಜಾತಿ ಸೂಳೆಗೆ ರಣಭೀತನ ಪುಸಿನುಡಿವಾತನ ಖಳನ ಕೆಳೆಯನ ಬದಗನ ಬೂತಿನ ಮಾತು ದಿಟಪಲ್ಲು: **ಲೀಲಾವತಿ,** ೨. ೩೪): ವಂಚಕ (ಬೂತಿಂಗೆ ದ್ರಮ್ಮಮಂ ಕೊಟ್ಟು ಒಡಂಬಡಿಸಿ ತಲೆಯಂ ಕಿರಿಸಿ ಕರಿಯ ಕೋವಣವನುಡಿಸಿ ಪಲ್ಗಳೊಳ್ ಕವಡಿಕೆಯಂ ಕಟ್ಟಿಸಿಕುಂಚಮಂ ಕೊಟ್ಟು: **ವಡ್ಡಾರಾ,** ಪು ೧೭೭, ಸಾ ೧೭)

**ಬೂತುಗೊಳ್** – ಪಿಶಾಚಿ ಮೆಟ್ಟು, ಆವೇಶಗೊಳ್ಳು (ನೆಟ್ಟನೆ ಬೂತುಗೊಳ್ವ ತೆಱದಿಂ ದಶಕಂಧರನಾಡಿ ಪಾಡಿ ನಾಣ್ಗೆಟ್ಟಿರೆ: **ಪಂಪಭಾ,** ೯. ೫೩);

**ಬೂದವೇೞು** – ಬೂದಿಬಣ್ಣವನ್ನು ಹೊಂದು (ಮೊದಲಿಂ ಕವಲ್ತು ಕೊರ್ಬಿ ಬೂದವೇೞೆ ಬೆಳೆದು ಬೆಳಗಾಯ ಬಣ್ಣಮಾಗಿ: **ಲೀಲಾವತಿ,** ೮. ೪೧ ವ)

**ಬೂದಿ** – ವಿಭೂತಿ (ಜಸಮೆ ತನಗೆ ಮೆಯ್ಸಿರಿಯೆಂಬುದನಱಿಪುವಂತೆ ಪೂಸಿದ ಬೂದಿಯೊಳಂ .. .. ಪುಲಿದೊವಲಿನೊಳಂ .. .. ಮೇಲ್ವೊದಿಕೆಯೊಳಮ ಚೆಲ್ವನಾಂತು: **ಕಬ್ಬಿಗಕಾ,** ೧೩೦ ವ)

**ಬೂವ** – [ಭೂಮ] ಮದುವೆಯಯಲ್ಲಿ ನವದಂಪತಿಗಳು ಜೊತೆಗೆ ಮಾಡುವ ಊಟ (ತದನಂತರಂ ಬೂವಮಂ ಅರ್ಪಿಸಿದಿಂ ಬೞಿಯಂ ಅರಸನಂ ಅರಲ ಸೆಜ್ಜೆವನೆಯೊಳಿರಿಸಿ: **ಲೀಲಾವತಿ,** ೧೩. ೪ ವ)

**ಬೃಂದ** – ಗುಂಪು (ಅದೆಂತು ಉಚಿತಂ ಅಕ್ಕುಂ ಆತ್ಮ ಗುಣಬೃಂದಂ ಇಂತೀ ಜಗಕ್ಕೆ: **ಕಾದಂಸಂ,** ೬. ೨೯)

**ಬೃಂದಾರಕತರು** – ದೇವತೆಗಳ ಮರ, ಕಲ್ಪವೃಕ್ಷ (ತೀರ ಮಹೀರುಹನಿಕರಂ ನೀರೊಳ್ ಪ್ರತಿಬಿಂಬಿಸಿದೊಡೆ ಪೋಲ್ತುದು ತತ್ಕಾಸಾರಂ ಬೃಂದಾರಕತರುವಾರಮಂ ಒಳಕೊಂಡು ಪೆಂಪುವಡೆದಂತೆಸೆಗುಂ: **ರಾಜಶೇವಿ,** ೨. ೭೫)

**ಬೃಂಹಿತ** – ಆನೆಯ ಘೀಳಿಡುವಿಕೆ (ಘನಾಘನನಿನಾದದಿಂ ಬೃಂಹಿತಂಗೆಯ್ವ ವಿಜಯಗಜಮಂ ನೆಲನಂ ಪೊಕ್ಕಡಂಗಿದ ಪಗೆವರಂ ಅಗುಟ್ದು ಕೊಲ್ವುದಂ ಉದಾಹರಿಸುವಂತೆ: **ಪಂಪಭಾ,** ೯. ೯೫ ವ)

**ಬೃಹಂದಳೆ** – ಬೃಹನ್ನಳೆ (ಬಾಳೆಯರಂ ದಲಾಡಿಪ ಬೃಹಂದಳೆ ಫಲ್ಗುಣಂ: **ಪಂಪಭಾ,** ೯. ೬); ಅಜ್ಞಾತವಾಸ ಕಾಲದಲ್ಲಿ ಅರ್ಜುನ ತಳೆದಿದ್ದ ನಪುಂಸಕನ ವೇಷ (ಒಂದಬ್ದದೊಳೆ ಬೃಹದಳೆಯಾಗೆಂದು ಮುನಿದು ಶಾಪಮನಿತ್ತಳ್: **ಪಂಪಭಾ,** ೮. ೨೯)

**ಬೃಹಸ್ಪತಿ** – ದೇವಗುರು (ಅಂಗೀರಸ ಸುರೇಜ್ಯಂ ಧಿಷಣಂ ಗೀಃಪತಿ ದ್ವಿಜಮಂತ್ರಿ ವಾಚಸ್ಪತಿ ಮತ್ತಾಮಗಿರಸಂ ವಾಕ್ಪತಿ ಜೀವಂ ಗುರುವೆಂಬಿನಿತುಮಿವು ಬೃಹಸ್ಪತಿನಾಮಂ: **ಅಭಿಧಾವ,** ೧. ೧. ೭೩೦

**ಬೃಹಸ್ಪತಿಮತ** – ಚಾರ್ವಾಕಮತ, ನಿರೀಶ್ವರವಾದ (ಶ್ರಾವಕಮಾನಿಗಳಂ ಅನೇಕವಿಧದಿಂ ಉಪಜೀವಿಪರ್ ಅಜ್ಞಾನಿಗಳ ಬುದ್ಧಿಪೌರುಷಹೀನಮಜೀವಿಕೃತಂ ಬೃಹಸ್ಪತಿಮತದೊಳ್: **ಶಾಂತಿಪು,** ೮. ೧೩೦)

**ಬೆಂಕೆ** – ಉರಿ, ಬೆಂಕಿ (ಅದಱ ಬೆಂಕೆ ಪೋಪಿನಂ ಎಱಗಿಸು ನೀಂ ಮ್ಲೇಚ್ಛಖಂಡಮಂ ಪಡುವಣದಂ: **ಆದಿಪು,** ೧೩. ೩೩)

**ಬೆಂಕೆಗಣ್** – ಉರಿಯುವ ಕಣ್ಣು (ಈಶನ ಬೆಂಕೆಗಣ್ಣ ಬಾಂದವನೆನೆ ಶೌರಿ ಮರ್ದಿಸಿದಂ ಅಪ್ರತಿಮಮಲ್ಲರೆನಿಪ್ಪ ಮಲ್ಲರಂ; **ಜಗನ್ನಾವಿ,** ೬. ೭೩)

**ಬೆಂಕೊಳ್** – ಹಿಂಬಾಲಿಸು, ಬೆನ್ನಟ್ಟು (ನಿನ್ನಂ ಉೞುಗಿಸಲುಂ ಆಜಿಯೊಳ್ ಎನ್ನಂ ಬೆಂಕೊಂಡು ಕಾದಲುಂ ಬಂದು ಈಗಳ್ ಬಿನ್ನನೆ ಮೊಗದಿಂ ಬೀರರ್ ಬೆನ್ನಿತ್ತುದಂ ಇನಿಸು ನೋಡ ಸರಸಿಜಮುಖೀ: **ಪಂಪಭಾ,** ೩. ೭೩)

**ಬೆಂಗೆವರ್** – ಬೆನ್ನ ಮೇಲೆ ಹತ್ತು (ನಿಜವಿಜಯಸಿಂಧುರದ ಬೆಂಗೆವಂದು: **ಆದಿಪು,** ೧೪. ೬ ವ)

**ಬೆಂಗೆವಾಯ್** – ಹಾರಿ ಬೆನ್ನ ಮೇಲೆ ಕುಳಿತುಕೊ (ಮದಾಂಧ ಗಂಧಸಿಂಧುರಮಪ್ಪ ಪಟ್ಟವರ್ಧನನ ಬೆಂಗೆವಾಯ್ದು.. .. ಸುಯೋಧನಂ ಪೊಱಮಟ್ಟಂ: **ಪಂಪಭಾ,** ೧೦. ೨೬ ವ)

**ಬೆಂಚೆ** – ಕುಂಟೆ, ನೀರು ನಿಂತ ಜಾಗ (ಬಿರಯಿಗಳಂಜಿ ತಾಱ ಪಗಲಾಣ್ಮನ ಮೆಯ್ ಬಿಸುಪೇಱ ಮಾಗೆ ಚೆಚ್ಚರದೊಳೆ ಪಾಱ ಬೆಂಚೆಗಳೊಳ್ ಕೆಸಱಾಱ: **ಕಬ್ಬಿಗಕಾ,** ೪೫)

**ಬೆಂಟೆ** – ಹಗ್ಗ (ಪುಲ್ಲಬೆಂಟೆಯಂ ಪೊಸೆದು ಕಿಚ್ಚುಮೆಣ್ಣೆಯ ಕೊಡನುಂ ಬೆಂಟೆಯುಮಂ ಕೊಂಡು ಪೊಗಿ ಭಟಾರರ ಮುಂದಿಟ್ಟು: **ವಡ್ಡಾರಾ,** ೧೫೩, ಸಾ. ೧೦)

**ಬೆಂಡುನೆಗೆ** – ಬೆಂಡಾಗು, ಸತ್ವಗುಂದು (ಕುಮುದ ಕೇಸರದ ರಸದೊಳಿರ್ದ ಚರಣಚಯಮಂ ಕೀಟಲಾಱದೆ ಪಱವಂಡಿನೊಳ್ ಬೆಂಡುನೆಗೆದು ಪೊರಳ್ದು ನರಳ್ದು ಮೊರೆವ ಱದುಂಬಿಗಳ ಗಱಯಂ ಗಿಱ್ಱನೆ ತೆಗೆದು ನೆಗಪಿಯುಂ: **ಲೀಲಾವತಿ,** ೩. ೨೦ ವ)

**ಬೆಂಡುಬೆಳಗಾಗು** – ಆಶ್ಚರ್ಯಚಕಿತರಾಗು (ಕೈಯ ಬಾಯೆಡೆಯೊಳ್ ಪಾಯ್ದುಗೆ ಕಂಡು ಬೆಂಡುಬೆಳಗಪ್ಪರ್ ಪಾಮರೀವಕ್ತ್ರಮಂ: **ಅನಂತಪು,** ೧. ೮೧)

**ಬೆಂಡುಮುಗುಟ್** – ಬೋರಲಾಗು (ಮುಡಿಯ ಪೂಱನ ರಜದಿಂ ವಾಸಿಸಿದೆ ನೀರ ಕದಡಿಂದಾಸವದೊಳ್ ಸೊರ್ಕಿ ಬೆಂಡುಮುಗುಟ್ದುವು ಮೀಂಗಳ್: **ಪಂಪಭಾ,** ೫. ೬೫)

**ಬೆಂಡೇಟ್** – ಬೆಂಡಿನಂತೆ ತೇಲು (ಮೀನೇಕ್ಷಣಂ ಸೋಲದ ರಸದೊದವಿಂ ಸೊರ್ಕಿ ಬೆಂಡೇಟ್ವಿನಂ: **ಕಾದಂಬ,** ೯. ೧೦)

**ಬೆಂತರ** – [ವ್ಯಂತರ] ಪಿಶಾಚಿ (ಸಮೆದು ಬಂದುದು ಚರಣಾಯುಧಂ ಅದಱ ಚಿತ್ರಪರಿಶೋಭೆಗೆ ಬೆಂತರನೊಮದು ಆಶ್ರಯಿಸಿರ್ದುದು: **ಯಶೋಧಚ,** ೩. ೨೪)

**ಬೆಂದಗುಳ್** – [ಬೆನ್+ತಗುಳ್] ಅಟ್ಟಿಸಿಕೊಂಡು ಹೋಗು (ಚಾರುದತ್ತಂ ಚಾಪಹಸ್ತನಾಗಿ ಭೋರೆಂದಿಸಲ್ ಅವಂದಿರಂ ಬೆಂದಗುಳ್ದು: **ಕರ್ಣನೇಮಿ,** ೪. ೭೦ ವ)

**ಬೆಂದ ಮಗಂದಿರ್** – ಕೆಟ್ಟುಹೋದ ಮಕ್ಕಳು (ಬೆಂದ ಮಗಂದಿರ್ ಜೈನದೊಳ್ ಎಂದುಂ ನಯದಿಂದೆ ನುಡಿಯರ್: **ಸಮಯಪ,** ೧೩. ೪೦)

**ಬೆಂದೊವಲ್** – ಬೆನ್ನ ತೊಗಲು (ಗೆಯ್ಯೆ ಮೃಗತೃಣಿಕೆಯಂ ಜಳಮೆಂದು ತೃಷ್ಣೆಯಿಂ ಪಗಲಿಟೆವನ್ನೆಗಂ ಪರಿದು ಗಂಟಲುರಂಬಮಾಱ ಬೆಂದೊವಲ್ ತೆಗಳಿಗೆ ಬೀಱ .. .. ನಡೆಗೆಟ್ಟುವು ತೃಷ್ಣೆಯಿನಾರೋ ಬೇಯದರ್: **ಪಂಪರಾ,** ೭. ೯೩)

**ಬೆಂಬತ್ತು** – ಹಿಂಬಾಲಿಸು (ಬಡಪಂ ಬೆಂಬತ್ತೆ ಮೇಪಂ ಮಱದು: **ಚಂದ್ರಪ್ರಪು,** ೪. ೪೭)

**ಬೆಂಬರಂ** – ಬೆನ್ನಿನವರೆಗೆ (ಮಿಡಿಯಿಂ ಬೆಂಬರಮೆಯ್ದೆ ನೀಟ್ದ ಶಬಸಂಘಾತಂಗಳ್: **ಲೀಲಾವತಿ,** ೬. ೭)

**ಬೆಂಬರಿ** – [ಬೆಂ+ಪರಿ] ಬೆಂಬತ್ತು (ವನಿತೆ ಮೃಗಾವಲೋಕನ ಕುತೂಹಲಮಂ ನೆಲೆ ಮಾಣ್ದು ಮತ್ತಂ ಎನ್ನಿನಿಯನದೇಕೆ ಬೆಂಬರಿಯುತಿರ್ದಪನೋ: **ಶಾಂತೀಶ್ವಪು,** ೫. ೧೫೮)

**ಬೆಂಬಲ** – ಹಿಂದಿರುವ ಸೈನ್ಯ (ಮಲಯಮಾರುತನ ಬೆಂಬಲಮುಮಂ ಚೈತ್ರಮಿತ್ರನ ಮುಂಬಲಮುಮಂ .. .. ದರ್ಪಕನ ದರ್ಪಂಬೆಱಸು: **ಅನಂತಪು,** ೬. ೨೨ ವ); ನೆರವು (ತಂಗಾಲಿಯುಂ ತಿಂಗಳುಂ ಬನಮುಂ ಬೆಂಬಲಮಾಗಿ ತೀರ್ಚವೆಗಡಂ ಕೊಂಡುಗ್ಗಿಯೊಳ್ ಸುಗ್ಗಿಯಂ: **ಅಜಿತಪು,** ೬. ೨೮)

**ಬೆಂಬಲಂಬಾಯ್** – ನೆರವಿಗೆ ಹೋಗು (ಪಾಂಚಾಳರಾಜ ತನೂಜೆಯ ಮಾತಿಂಗೆ ಬೆಂಬಲಂಬಾಯ್ವಂತೆ ಭೀಮಸೇನನಿಂತೆಂದಂ: **ಪಂಪಭಾ,** ೭. ೫೨ ವ)

**ಬೆಂಬಟೆ** – ಹಿಂಭಾಗ ಗಟೆವಟೆಯ ಪಾವಿನಂತೆ ಬೆಂಬಟೆಯಂ ತಗುಳ್ದು ಪರಿತರೆ: **ಸುಕುಮಾಚ,** ೬. ೫೩ ವ); ಅನುಸರಿಸು[ವುದು] (ಒಂದರ್ಥಕ್ಕೆ: ಬೆಂಬಟೆಯೆಂದು ಪಿಂದೆ ಬರ್ಪುದು: **ಶಬ್ದಮದ,** ೩೩ ವೃತ್ತಿ ೧೦೭)

**ಬೆಂಬಿಡಿ** – ಹಿಂಬಾಲಿಸು (ಮನದ ಪಿಂತಣೆ ಧೈರ್ಯಂ ನಡೆಗೊಂಡುದು ಧೈರ್ಯದ ಬೆಂಬಿಡಿದೊರ್ವಳ ಜೀವಮಿರದೆ ಪೋದತ್ತಾಗಳ್: **ಜಗನ್ನಾವಿ,** ೫. ೯೯)

**ಬೆಂಬೀಟ್** – ಅಂಗಾತಾಗಿ ಬೀಳು (ಕಾದಲಾಱದೆ ಬೆಂಬಿಟ್ಟೊಡೆ ಕಾದಲೆಂದು ಬೆಸನಂ ಪೂಣ್ದಂ ಗಡಂ ದ್ರೋಣಂ: ಪಮಪಭಾ, ೧. ೫೫); ಶರಣಾಗು (ತೋರಜೆಕೆಯಾಳ್ಗಳ್ ಬಳ್ಕಿ ಬೆಮಬೀಟ ಪೆರ್ಚಿದ ಕಂಪಿಂಗೆಳಸಿರ್ಪ ತುಂಬಿಕರಿಕಂ ತಾಗಿರ್ಪಿನಂ ಬಂದುದೊ ರ್‍ಕೊದಲೊಳ್ ಮಾವಿನ ಬಳ್ಳಿ ಮಲ್ಲಿಗೆಯ ಕೋಲೆತ್ತೆತ್ತಲುಂ ಕಾವನಾ: **ಕಬ್ಬಿಗಕಾ,** ೨೩೮); ಹೊಂಚುಹಾಕು (ಕರಂ ಬೆಂಬಿಟ್ಟು ದುರ್ಯುಕ್ತಿಯಿಂದದಯಂ ಧರ್ಮಜನಿಕ್ಕಿದಂ ಗುರುವಂ: **ಪಂಪಭಾ,** ೧೨. ೩೫)

**ಬೆಕ್ಕರಿಸು** – ಗರ್ವಪಡು (ಜಂಕರಿಸಂ ಕಾತರಿಸಂ ಮಾಂಕರಿಸಂ ಬೆಕ್ಕಸಂಬಡಂ ಬೆಕ್ಕರಿಸಂ ಹೂಂಕರಿಸಂ ನಿರ್ವಿನಿಸಂ ಜೀಂಕರಿಸಂ ಜಿನುಗಂ ಅವನಿಸಂ ಕೊಕ್ಕರಿಸಂ: **ಅಜಿತಪು,** ೫. ೮೯)

**ಬೆಕ್ಕಸ** – ಆಶ್ಚರ್ಯ (ಬೇಟ್ಟುತ್ತರ್ ಬೆಕ್ಕಸಮುತ್ತರ್ ಭಯರಸದಿಂ ದೆಸೆಗೆಟ್ಟರ್ ಕಂಡದೃಷ್ಟಪೂರ್ವಮನಾರ್ಯರ್: **ಪಂಪರಾ,** ೧. ೭೧)

**ಬೆಕ್ಕಸಂಬಡು** – ಬೆರಗಾಗು (ಬಗೆಯನುಱ ಸೆಱವಿಡಿದ ವಿದ್ಯಾಧರವಿಳಾಸಕ್ಕಂ ಬೆಕ್ಕಸಂಬಟ್ಟು: **ಆದಿಪು,** ೨. ೪೧ ವ)

**ಬೆಕ್ಕಸಂಬೆಱಗು** – ಮಹಾ ಆಶ್ಚರ್ಯ (ಒಕ್ಕಲಿಗರು ಸಾಕ್ಷಿಯಿಲ್ಲದೆ ಸಾಲಂಗೊಟ್ಟವರಂತೆ ಬೆಕ್ಕಸಂಬೆಱಗಾಗೆ: **ಧರ್ಮಾಮೃ,** ೨. ೪೧ ವ)

**ಬೆಕ್ಕಸಮುಱು** – ಅಚ್ಚರಿ ಪಡು (ಸಕ್ಕದಗಬ್ಬಮಂ ಮಿಸುಪ ಕನ್ನಡಗಬ್ಬಮನೊಲ್ದು ಕೋವಿದರ್ ಬೆಕ್ಕಸಮುತ್ತು ಮಚ್ಚಿ ಪೊಗಟಯುತ್ತಿರೆ: **ಶಬರಶಂ,** ೫. ೬೨)

**ಬೆಕ್ಕು** – ಮಾರ್ಜಾಲ (ಬೆಣ್ಣೆಯಂ ತಿಂದ ಬೆಕ್ಕಿನಂತೆ ಅಱಯಲೀಯದೆ ಮತ್ತೆಯಟೆದ ಮತ್ಸ್ಯಂಗಳನೀ ತೆಱದೊಳ್ ತಿನುತಿರ್ದು: **ಪಂಚತಂತ್ರ,** ೧೩೮ ವ)

**ಬೆಗಡು** – ಭಯ (ಓಸರಿಸದ ಸಿಡಿಲಂ ಸಮೆಯದ ಸರಿವಟೆಯಂ ಕಂಡು ಬೆಗಡುಗೊಂಡರ್ ಬೇಡರ್: **ನೇಮಿನಾಪು,** ೮. ೧೦) ಆಶ್ಚರ್ಯ (ಸರಿ ಸುರಿಯೆ ಮಿಂಚು ಮುಳ್ಳಿಸೆ ಸುರಚಾಪಂ ನೆಗೆಯೆ ಬೆಗಡುಗೊಂಡವರಂ ಸಂವರಿಸಿ .. .. ಕಳೆದನವರುಮ್ಮಳಮಂ: **ಪಂಪರಾ,** ೧. ೮೧)

**ಬೆಗಡುಗೊಳ್** – ಆಶ್ಚರ್ಯಪಡು (ಚಂದ್ರೋದಯವಾದುದಂ ತಂತುವಾಯಿಕೆ ಕಂಡು ಬೆಗಡುಗೊಂಡು ಪಾಣ್ಬನಂ ಬೀಟ್ಕೊಂಡು ಪೊಱಮಟ್ಟು: **ಪಂಚತಂತ್ರ,** ೧೩೨ ವ)

**ಬೆಗುರ್ತುಗೊಳ್** – ಭಯಗೊಳ್ಳು (ವಿರೋಧಿ ಬೆಗರ್ತುಗೊಂಡು ಎನಸುಂ ಉರದೆಯ್ತಂದಂ ಕಾದಲ್ಕೆ ಪೂಣ್ದು: **ವರ್ಧಮಾಪು,** ೪. ೨೭)

**ಬೆಗಟಿಚ್** – ಭಯ (ಕನಲ್ದು ಪನಲ್ದು ಬೆಗಟುತ್ತು ಬೆಗಟ್ ಮಿಗೆ: **ಹರಿವಂಶ,** ೧೪. ೪೫)

**ಬೆಗಟ್ಟು** – ಬೆರಗು (ಅಂತಾಪುರದಹಿತರ್ಗೆ ಬೆಗಟ್ಟಿನೀಯುತ ಅಗಟಿಸೆದಿರ್ಕುಂ: **ಉದ್ಭಟಕಾ,** ೧. ೪೩)

**ಬೆಗುರ್** – ಭಯಪಡು (ಪೂವಂ ತಂಬುಲಮಂ ಸದ್ಭವದಿಂ ಅಟ್ಟುವ ಬೆಗುರ್ತು ನಲ್ಲಳ ನೆನೆಯಲ್ ತಾವಟ್ಟುವ ಕಾಮುಕದಿಂದೋವೆಡೆಯೊಳಮಾದುದಂದು ಶೃಂಗಾರಮಯಂ: **ವರ್ಧಮಾಪು,** ೮. ೮೧)

**ಬೆಚ್ಚನೆ** – ಬಿಸಿಯಾಗಿ (ಆ ಲಲಿತಾಂಗಿ ಬೆಚ್ಚನುಸಿರ್ದಚ್ಚರಿವೆತ್ತಿರೆ ಮೂರ್ಛೆವೋಪುದುಂ: **ಆದಿಪು,** ೩. ೨೩)

**ಬೆಚ್ಚರಂ** – ಶೀಘ್ರವಾಗಿ (ಆ ಮಹಾದೇವಿಯರುವರದೊಳಂ ಬರ್ಪ ಲೋಕೇಶನಂ ಬೆಚ್ಚರಮಾ ವಿತ್ತೇಶನಂ ಪೇಟ್ವುದುಂ ಒಸೆದಱುದಿಂಗಳ್ವರಂ: **ಶಾಂತಿಪು,** ೯. ೧೬೨)

**ಬೆಚ್ಚಳಿಸು** – ದಿಗ್ಭ್ರಮೆಗೊಳ್ಳು (ದಿಕ್ಪಾಳಕಂ ಬೆಚ್ಚಳಿಸೆ ಕುಣಿದನಾನಂದದಿಂ ದೇವರಾಜಂ: **ವರ್ಧಮಾಪು,** ೧೨. ೫೩)

**ಬೆಚ್ಚಿಸು** – ಹೆದರು (ಅದಟರ ಚೆನ್ನಪೊಂಗರ ಸಬಂಗಳ ತೊಟ್ಟುಟಿಯೊಳ್ ತೊಡಂಕಿ ನಿಲ್ಲದೆ ಪೊಱಮಟ್ಟ ತಮ್ಮ ಮನದೊಳ್ ಮಿಗೆ ಬೆಚ್ಚಿಸಿದಂತೆ ತೋಱುವ: **ಪಂಪಭಾ,** ೮. ೧೦೪)

**ಬೆಚ್ಚು** – ಬೆಸುಗೆ ಹಾಕು (ಸ್ಮರನಜೆದು ಮದನಮುದ್ರಾಸ್ವರೂಪರಂ ಕಾಸಿ ಬೆಚ್ಚಂ: **ಆಚವರ್ಧ,** ೪. ೮೯)

**ಬೆಚ್ಚುನೀರ್** – ಹುಟ್ಟಿದಾಗ ಮಗು ಅಳಲೆಂದು ಚಿಮುಕಿಸುವ ತಣ್ಣೀರು (ಮಱೆಯದೆ ಬೆಚ್ಚುನೀರೆಱೆದು ತೊಟ್ಟಿಲೊಳಿಟ್ಟು .. .. ತನಿವೆರ್ಚುವ ಸೈಪೆನಗೆಂದು ಸಾರ್ದುಮೋ: **ಚಂದ್ರಪ್ರಪು,** ೩. ೪೫)

**ಬೆಜ್ಜ** – ವೈದ್ಯ (ಅಣುಗಾಳ್ಗಳ ಕೊಂಡಾಟದಾನೆಗಳ ನಚ್ಚಿನ ಕುದುರೆಗಳ ಪುಣ್ಗಳಂ ಉಡಿಯಲುಂ ಓವಲುಂ ಮರ್ದು ಬೆಜ್ಜರುಮಂ ಅಟ್ಟುತ್ತುಂ: **ಪಂಪಭಾ,** ೧೧. ೨ ವ)

**ಬೆಜ್ಜು** – ಚಿಕಿತ್ಸೆ ಮಾಡು (ಬೆಜ್ಜಂ ಕಜ್ಜಮುಂ ಆಯುಗೆ ನೆರಮಲ್ಲದೆ ತಾಮೆ ಬಾಟಿಸಲ್ ನೆಱೆಗುಮೆ: **ಜೀವಸಂ,** ೨. ೧೯ ವ)

**ಬೆಜ್ಜಿಗೆಯ್** – ಬಡಾಯಿ ಕೊಚ್ಚು (ಚಂಡಭುಜಗರ್ವದಿಂದಂ ಗಂಡಂ ಮುಂದಿಟ್ಟು ಬೆಜ್ಜಿಗೆಯ್ವೆನ್ನರುಮಂ ಪೆಂಡಿರನೀಗೆಂದಟ್ಟಿದ ತೊಂಡಂ ಉನ್ನಾರ ಕಥೆಯೊಳಂ ಕೇಟ್ಟೆಡೆಯೆಂ: **ವರ್ಧಮಾಪು,** ೪. ೧೯)

**ಬೆಟ್ಟ** – ಗಿರಿ (ಬೆಟ್ಟದ ಮೇಗಣಿಂ ಪಾಯ್ತರ್ಪ ನಿರ್ಝರಶಿಕರಂಗಳಿಂ ಮೆಯ್ಯಾಗ್ಯಾಯನಮಾಗಿ: **ವಡ್ಡಾರಾ,** ಪು. ೧೧೮, ಸಾ. ೫)

**ಬೆಟ್ಟನೆ** – ಬಿರುಸಾಗಿ, ಒರಟಾಗಿ (ಎಂದು ಬೆಟ್ಟನೆ ನುಡಿಯೆ ಪದ್ಮನಾಭಂ ಸಭಯನಾಗಿ ಮುಟ್ಟಣ್ಮದೆ ಪೋಗಿ: **ಕರ್ಣನೇಮಿ,** ೧೦. ೮೯ ವ)

**ಬೆಟ್ಟವೆಟ್ಟನೆ** – ಒರಟಾಗಿ (ದಶಕಂಠಂ ಉದಂಚಿತ ಕಂಠನಾಗಿ ಬಿಟ್ಟಟ್ಟದೆ ಬೆಟ್ಟವೆಟ್ಟನುಸಿರ್ದು ಅಟ್ಟಿದೊಡೆ ಇರ್ದಪುದಲ್ತೆ ಕಾಳೆಗಂ: **ಪಂಪರಾ,** ೧೧. ೨೩)

**ಬೆಟ್ಟವೇಸಗೆ** – ಬಿರು ಬೇಸಿಗೆ (ಕಿಱುವಿಲಿ ಕಣ್ದೆಱೆಯೆ ಸೋಗೆಗೆ ತಣ್ಣಸುವುಟ್ಟೆ ಬೆಟ್ಟವೇಸಗೆಯ ಬಿಸಿಲ್ಗೆ ತೀಡಿದುದು ತಣ್ಣನೆ ಪಣ್ಣನೆ ಪಶ್ಚಿಮಾನಿಲಂ: **ಪಂಪರಾ,** ೭. ೧೩೯)

**ಬೆಟ್ಟಾಗಿ** – ದೊಡ್ಡದಾಗಿ (ಚೀನದ ಮಹಾಚೀನದ ಪಟೆಯ ಚಿತ್ರಾವಟೆಯ ಪಟ್ಟಾವಟೆಯ ಪಟ್ಟಸೂತ್ರದ ಚಿತ್ರಸೂತ್ರದ ನೇತ್ರವಟ್ಟಣಿಗೆಯ ಪುಟ್ಟಿಗೆಗಳಂ ಒಟ್ಟಿ ಬೆಟ್ಟಾಗಿ ಪುಂಜಿಸಿ: **ಸುಕುಮಾಚ,** ೧೦. ೯೧ ವ)

**ಬೆಟ್ಟಿತಾಗು** – ಕಠಿಣವಾಗು (ಒಳಗಂ ಭೇದಿಸದನ್ನಂ ಚಳಬುದ್ಧಿಗೆ ಪೊಱಗಂ ಬೆಟ್ಟಿತಾಗಿರ್ಕುಂ .. .. ಜಿನವಚನಂ: **ಸಮಯಪ,** ೩. ೨೬)

**ಬೆಟ್ಟಿತು** – ಒರಟಾದುದು, ಕಷ್ಟಕರವಾದುದು (ಬೆಟ್ಟಿತಪ್ಪ ಕಡಿಯಾಣದೇರ್ಗಳುಮಂ .. .. ಎಂತು ಸೈರಿಸಿದೆ: **ಕಾದಂಸಂ,** ೮. ೨೪ ವ)

**ಬೆಟ್ಟಿದ** – ಕಠಿಣ, ಕ್ರೂರ (ಎನ್ನಂ ಪುಲ್ಲಿಂದಂ ನೊಚ್ಚಿದಳಂ ಕಲ್ಲಿಂದಂ ಬೆಟ್ಟಿದಳುಂ ಬಗೆವರ್ ಉಂತುಂ ಯೌವನಶ್ರೀಯುಂ ನಿರಪವಾದಮುಂ ಆರ್ ಕಳೆದಪರ್: **ಶಾಂತಿಪು,** ೪. ೭೯ ವ)

**ಬೆಟ್ಟಿತ್ತು** – ಗಡಸು (ಬಿಸಿದುಂ ಬೆಟ್ಟಿತ್ತುಂ ಉಸಿರದೇಂ ತೀರ್ದಪುದೇ: **ಪಂಪಭಾ,** ೪. ೬೦)

**ಬೆಟ್ಟಿಸು** – ಚುಚ್ಚು (ಪಿಂತಣ ಮುಂತಣ ಕಾಲ್ಗಳಲ್ಲಿ ಬೆಟ್ಟಿಸಿ ದಸಿಯಂ ನೆಣಮುರ್ಚೆ ಬೆಂಕಿಯಿಂ ಕೆಳಗಣ ಮೆಯ್ಯಂದುರುಪಿ ಬರಿಯ ಬಾಡಂ ತೆಗೆದಂ: **ಯಶೋಧಚ,** ೩. ೬೯)

**ಬೆಟ್ಟು** – ಇರಿ (ಕಾಯ್ದ ಕರ್ಬೊನ್ನ ಸೂಜಿಗಳಂ ಬೆರಲ್ಗಳೊಳ್ ಬೆಟ್ಟುವರುಂ: **ಆದಿಪು,** ೫. ೮೫ ವ); ಸಿಕ್ಕಿಸು (ಒಂದು ಗೋಲಾಂಗೂಲಂ ಬಂದು ಕರಗಸಿಗರೊಂದು ಭಾಗಂಬರಂ ಸೀಳ್ದು ನೂಲ ತಲೆಯೊಳ್ ಕೀಲಂ ಬೆಟ್ಟಿರ್ದ ಮರನಂ ಕಂಡು: **ಪಂಚತಂತ್ರ,** ೮೨ ವ); ಬೆಟ್ಟ (ಇಡಿದಿರೆ ರೋಮಕೂಪದೊಳಗೆ ಉರ್ಚಿದ ಸಾಲ ಸರಲ್ಗಳುಂ ತೆಱಂಬಿಡಿದಿರೆ ಬೆಟ್ಟು ಒರ್ಗುಡಿಸಿದಂತೆ ನೆಱಿಲ್ದಿರೆ .. .. ಬಿಟ್ಟಿಂ ಏನೆಸೆದನೋ ಶರಶಯ್ಯೆಯೊಳ್ ಅಂದು ಸಿಂಧುಜಂ: **ಪಂಪಭಾ,** ೧೩, ೬೨)

**ಬೆಟ್ಟುಂಬೊಟಿ** – ಬೆಟ್ಟದ ಮೇಲಿಂದ ಹರಿದು ಬರುವ ನದಿ, ಪ್ರವಾಹ (ಬೆಟ್ಟುಂಬೊಟೆಯೆಂಬುದು ಕೃತ್ತಲ್ಲದಲ್ಲಿಯುಂ ಸಂದುದು: **ಶಬ್ದಮದ,** ೧೮೧, ಪ್ರ)

**ಬೆಟ್ಟುಗೂಂಟ** – ನೆಡುವ ಗೂಟ (ಹೊಸೆಯಿಪ ಬೆತ್ತಗಣ್ಣವಲೆಯಂ ಸಮಕಟ್ಟುವ ಬೆಟ್ಟುಗೂಂಟಮ ಬಸಿವ ಪುಳಿಂದಸಂಕುಳದ ಪೆರ್ಕಣದಿಂದೆಸೆದತ್ತು ಪಕ್ಕಣಂ: **ಚಂದ್ರಪ್ರಪು,** ೫. ೫೪)

**ಬೆಟ್ಟೇಱು** – ಬೆಟ್ಟ ಹತ್ತು (ಅಸಮಗ್ರ ಸಲೆ ಜಾತ್ರೆಯೋಗಿ ಭರದಿಂ ಬೆಟ್ಟೇಱಿಯುಂ ಮತ್ತೆ ಪೂಜಿಸುವರ್: **ಸಮಯಪ,** ೯. ೮)

**ಬೆಡಂಗ** – ಚೆಲುವ (ತಳಿರೊಳ್ ನೀನೆ ಬೆಡಂಗನೈ ನನೆಗಳೊಳ್ ನೀಂ ನೀಱನೈ: **ಆದಿಪು,** ೧೦. ೯೬)

**ಬೆಡಂಗಡರ್** – ಸೌಂದರ್ಯ ಪಡೆ (ಏಂ ಬೆಡಂಗಡರ್ದರೋ ರುಚಿಮದ್ವಿಚಳಲ್ಲತಾಮುಗಿಯರ್: **ಅನಂತಪು,** ೭. ೨೮)

**ಬೆಡಂಗಿ** – ಸುಂದರಿ (ಜಡೆಗಳ ಬೆಡಂಗಿ ಭಸಿತದ ಫಾಲಲೋಚನೆ ರುದ್ರಾಕ್ಷಿಯ ಭದ್ರಾಂಗಿ: **ಗಿರಿಜಾಕ,** ೯. ೧೬ ವ)

**ಬೆಡಂಗು** – ಸೊಗಸು, ರಮ್ಯತೆ (ಕರಣಾಂಗಹಾರಮೃದುಪದ ಪರಿಕ್ರಮಂಗಳ ಬೆಡಂಗುಗಳ ಜತಿಯೊಳ್ ಅಳಂಕರಿಸಿದುದೆಂಬಿನಂ: **ಆದಿಪು,** ೭. ೧೮)

**ಬೆಣ್ಣೆ** – ದಧಿಸಾರ, ನವನೀತ (ಬೆಣ್ಣೆಯಂ ತಿಂದ ಬೆಕ್ಕಿನಂತೆ ಅಱಿಯಲೀಯದೆ: **ಪಂಚತಂತ್ರ,** ೧೩೮ ವ)

**ಬೆತೆ** – [ವ್ಯಥೆ] ಅಳಲು (ಅಕಾರಕ್ಕೆ ಎತ್ವಂ: ವ್ಯಥೆ–ಬೆತೆ: **ಶಬ್ದಮದ,** ೨೮೫ ಪ್ರ)

**ಬೆದಂಡೆ** – ಒಂದು ಹಾಡು (ಬೀಣೆಯ ಕೊಟಲ ಬೆದಂಡೆಯ ಗಾಣರ ಬಟೆವಿಡಿದು ಸುಟೆದು ಕುಂದಿಂ ಕಥಕಶ್ರೇಣಿಯೊಡನೆಳಸಿ ಬಳಸುವ ನಾಣಿಲಿಗಳಂ ಈ ಬುಧಾಳಿಯೊಳ್ ಪುಗಿಸುವುದೇ: **ಸುಕುಮಾಚ,** ೨. ೨೪)

**ಬೆದಂಡೆಗಬ್ಬ** – ಒಂದು ಕಾವ್ಯಪ್ರಕಾರ, ಕಂದವೃತ್ತಗಳಿರುವ ಒಂದು ಕಾವ್ಯರೂಪ (ಕಂದಮುಂ ಅಮಳಿನ ವೃತ್ತಮುಂ ಒಂದೊಂದೆಡೆಗೊಂಡು ಜಾತಿಜಾಣ್ ಎಸೆಯೆ ಬೆಡಂಗೊಂದಿವಱೊಳ್ ಅಮರೆ ಪೇಟಲ್ ಸುಂದರ ರೂಪಾ ಬೆದಂಡೆಗಬ್ಬಮದಕ್ಕುಂ: **ಕವಿರಾಮಾ,** ೧. ೩೪)

**ಬೆದಕು** – ಹುಡುಕು, ಗೀರು (ಮುನ್ನ ಮಾಡಿದ ಸಾಹಸಂಗಳಂ ಮಾಟ್ಪಂತೆ ಮುಂಗೆಯ್ವಲದೊಳ್ ಬೆದಕಿ ನೋಡಿಯುಂ: **ನೇಮಿನಾಪು,** ೮. ೯೯ ವ)

**ಬೆದಱಟ್ಟು** – ಹೆದರಿಸಿ ಓಡಿಸು (ವನಾಂತರಂಗದ ಕಟ್ಟಿಲೆಯಂ ಬೆದರಱಟ್ಟುತುಂ: **ಜಗನ್ನಾವಿ,** ೧೭. ೧೦೦)

**ಬೆದಱಿಸು** – ಹೆದರಿಸು (ಮುದುಡಿಸುತಂ ಕೈರವಮಂ ಬೆದಱಿಸುತುಂ ಕೌಶಿಕಂಗಳಂ .. .. ಮೂಡಿದಂ ಅರ್ಕಂ: **ಗಿರಿಜಾಕ,** ೫. ೮)

**ಬೆದಱು** – ಅಂಜಿಕೆ (ಕಾಪುಂ ಮೇಪುಂ ತೋಡುಂ ಬೀಡುಂ ದೆಸೆಯುಂ ಕೊಸೆಯುಂ ಮೆಚ್ಚುಂ ಬೆಚ್ಚುಂ ಪೋಗುಂ ಮೇಗುಂ ಬೆದಱುಂ ಕೆದಱುಂ ಪೆರ್ಚುಂ ಕುಂದುಮನಱೆದು: **ಪಂಪಭಾ,** ೫. ೪೩. ವ); ಹೆದರು (ಧ್ಯಾನಮರೀಚಿಯಿಂ ಬೆದಱೆ ಘಾತಿತಮಸ್ತಮಂ: **ಆದಿಪು,** ೧೦. ೧೭)

**ಬೆದೆ** – ಬಿತ್ತನೆಗೆ ಯೋಗ್ಯವಾದ ಭೂಮಿ (ದೇವ ಬೀಜವಿರೆ ಬಿತ್ತರೆ ಬೆದೆಯಾದ ಭೂಮಿಯೊಳ್: **ಕರ್ಣನೇಮಿ,** ೧೨. ೩೧); ಕಾಮೋದ್ರೇಕ

**ಬೆದೆಗೂಡಿಸು** – ಬಿತ್ತನೆಗೆ ಭೂಮಿಯನ್ನು ಹದಗೊಳಿಸು (ಅಂಬಿನ ಮೞೆ ರಕ್ತವಾರಿ ಬೆದೆಗೂಡಿಸೆ ಸಾಲಿಡೆ ಪೆರ್ವೆಣಂ ರಣಾವನಿತಲಂ ಇರ್ದುದು ಅಂಕುರಿತ ಮಾದವೊಲ್ ಒಕ್ಕ ಕರುಳ್ವಿಣಿಲ್ಗಳಂ: **ಪಂಪರಾ,** ೧೩. ೪೯)

**ಬೆದೆಯಾಗು** – ಕಾಮೋದ್ರೇಕಗೊಳ್ಳು (ಬೆದೆಯಾದ ತಾಯನೇಱೆತ್ತದು ಸೊರ್ಕಿದ ಗೂಳಿ ತಾಯನೇಱೆತ್ತೆಂಬಂದದೆ: **ಯಶೋಧಚ,** ೩. ೫೪)

**ಬೆದೆವಾವು** – ತಳುಕುಹಾಕಿಕೊಂಡ ಹಾವು (ತವಕದಿನಪ್ಪಿ ತಲ್ಲಣದೆ ಚುಂಬಿಸಿ ನಿಲ್ಲದೆ ಕೂಡಿ .. .. ಮಿಡುಂಕುವ ಬೆದೆವಾವಿನಂತಗಲಲಾಱದೊಲ್ದುವು ಜಕ್ಕವಕ್ಕಿಗಳ್: **ಅನಂತಪು,** ೭. ೭೦)

**ಬೆನ್** – ಬೆನ್ನು, ಹಿಂಭಾಗ (ದೇವತೆ ನವಿಲ ರೂಪಿನಿಂದೆತ್ತಿಕೊಂಡು ಬೆನ್ನೊಳಿಟ್ಟು .. .. ಲತಾಮತಪದೊಳಿರಿಸಿ ಪೋದೊಡೆ: **ವಡ್ಡಾರಾ,** ಪು. ೧೦೮. ಸಾ. ೪)

**ಬೆನ್ನಟ್ಟು** – ಹಿಂಬಾಲಿಸು (ಶರವ್ರಾತಂಗಳುಂ ನುರ್ಗಿ ಕಣ್ಗಿಡೆ ಬೆನ್ನಟ್ಟಿದನಂತು ನಮ್ಮ ಹರಿಗಂ ಗಂಡಂ ಪೆಱರ್ ಗಂಡರೇ: **ಪಂಪಭಾ,** ೧೧. ೧೩)

**ಬೆನ್ನನೆ** – ಹಿಂದೆಯೇ (ಒರ್ವ ಕುಮಾರ ತಪಸ್ವಿ .. .. ಪೊಸವೂಗಳಂ ಅಟ್ಟೆಯೊಳ್ ಆಯ್ದು ಕೊಯ್ದು ಬೆನ್ನನೆ ಬರಲ್: **ಕಾದಂಸಂ,** ೪. ೬)

**ಬೆನ್ನನೆ ಬರ್** – ಹಿಂಬಾಲಿಸು (ಮಿಂಚಿನ ಬಟೆಯ ಮೊಟಂಗುವೋಲ್ ಬೆನ್ನನೆ ಬಂದಳ್: **ಶಾಂತಿಪು,** ೭. ೨೮)

**ಬೆನ್ನೀ** – [ಬೆನ್+ಈ] ಬೆನ್ನು ಕೊಡು, ಪಲಾಯನಮಾಡು (ನಿನ್ನಂ ಉಟುಗಿಸಲುಂ ಆಜಿಯೊಳ್ ಎನ್ನಂ ಬೆಂಕೊಂಡು ಕಾದಲುಂ ಬಂದು ಈಗಳ್ ಬಿನ್ನನೆ ಮೊಗದಿಂ ಬೀರರ್ ಬೆನ್ನಿತ್ತುದಂ ಇನಿಸು ನೋಡ ಸರಸಿಜಮುಖೀ: **ಪಂಪಭಾ,** ೩. ೭೩)

**ಬೆನ್ನೀರ್** – ಬಿಸಿ ನೀರು (ಮುನ್ನೀರ್ ಬೆನ್ನೀರೆನೆ ಬೆರಸಲಣ್ಣ ತಣ್ಣೀರೊಳವೇ: **ಪಂಪರಾ,** ೯. ೯೨)

**ಬೆಬ್ಬಸ ಬೆಸೆ** – ಹೆಮ್ಮೆಯಿಂದ ಬೀಗು (ತಾನೆ ತನ್ನ ಬೀರಕ್ಕೆಟ್ಟಱೆದ ಕಟ್ಟೆಯಂತೆ ಬೆಬ್ಬಸಬೆಸೆದು ಬ್ರಹ್ಮನಂ ಕೂರಿಸಿದ ಕತ್ತೆಯಂತೆ ಆರುಮಂ ಕೈಕೊಳ್ಳದೆ: **ನೇಮಿನಾಪು,** ೭. ೯೧ ವ)

**ಬೆಬ್ಬಳವೋಗು** – ಗಾಬರಿಗೊಳ್ಳು (ನಿಲ್ಲಾರದೆನಿಸುವ ನೋವಿಂಗೆ ಬೆಬ್ಬಳವೋಗಿ: **ಧರ್ಮಾಮೃ,** ೧. ೧೧೬ ವ)

**ಬೆಬ್ಬಳಿಸು** – ಬೆಬ್ಬಳವೋಗು (ಬೆಬ್ಬಳಿಸಿ ಬಳೆದ ಅಲರ್ವ ಕಣ್ಣಿಂ ಜಳರುಹಮಂ ಗೆಲಿಸುವಂತಿರೆ ಎಸೆದಳ್ ಕೊಳದೊಳ್: **ಲೀಲಾವತಿ,** ೧೩. ೧೨೯)

**ಬೆಬ್ಬೆ** – ಗಾಬರಿ (ಪುರುಷನ ಉದಗ್ರ ಸಾಹಸದ ನೋಟ ತಗುಳ್ದಡೆ ಬೆಬ್ಬೆ ಪೋಕುಮೇ: **ಹರಿವಂಶ,** ೪. ೧೨)

**ಬೆಮರ್** – ಬೆವರು ಸೂಸು (ಬೆಮರ್–ಸ್ವೇದಭಾವೇ: **ಶಬ್ದಮದ,** ಧಾ ೫೫೫); ಬೆವರು (ಸುರಿಯೆ ಬೆಮರ್ ಕುರುಳ್ವಿಡಿದು ಮುತ್ತುಗಳಂ ಮಟೆದುಂಬಿ ಕಾಣುವಂತಿರೆ: **ಪಂಪಭಾ,** ೮. ೬೦)

**ಬೆಯ್** – ಸುಡು (ವಿರಹಾನಳನಳುರೆ ವಿಯಚ್ಚರರಾಜಂ .. .. ಕಾಯ್ಪಿಂದುರಿಯುತ್ತುಂ ಬೆಯ್ವ ಶೈಲಮಿರ್ಪಂತಿರ್ದಂ: **ಧರ್ಮಾಮೃ,** ೩. ೧೬

**ಬೆಯ್ವೊಲ** – ಸುಡುವ ನೆಲ (ಕೆಯ್ವೊಲನುಮಂ ಬೆಯ್ವೊಲನುಮಂ ಕಱುಂಬುಮಂ ಇಱುಂಬುಮಂ .. .. ಕಳೆದು ಪೋಗಿ: **ಲೀಲಾವತಿ,** ೬. ೧೬ ವ)

**ಬೆರಂಟು** – ನೆಲವನ್ನು ಕೆರೆ (ಭೂಭಾಗಮಂ ಅತ್ಯುತ್ಸಾಹದಿಂ ದಕ್ಷಿಣ ಖುರದೆ ಬೆರಂಟಿತ್ತು ದಿವ್ಯಾಶ್ವಮಾಗಳ್: **ಕಾದಂಸಂ,** ೨. ೪೨)

**ಬೆರಕೆ** – ಮಿಶ್ರಣ (ಪರಿಪರಿಯ ರನ್ನದೊಡವಿನ ಬೆರಕೆಯ ಬೆಳಗಡರೆ ಮೆಯ್ಯನಗ್ಗದ ಪೆಂಡಿರ್ ನರೆದಲರ ಚವರಮಂ ಬಿತ್ತರದಿಂ ಬೀಸುತ್ತುಮಿರ್ದರೆರಡುಂ ಕೆಲದೊಳ್: **ಕಬ್ಬಿಗಕಾ,** ೧೮೯); ಕೂಟ ಬೆರಕೆಗೆ ಪೇಸುವಳ್ ಬೊಜಗರಪ್ಪರ ನಂಟರೊಳಂಗಹೀನರುಂ ತರುವಲಿ ಗಂಡರುಂ ಮನೆಗೆ ಬಂದೊಡೆ ನಾಣ್ಚುವಳ್: **ಲೀಲಾವತಿ,** ೨. ೮೧)

**ಬೆರಗಱೆ** – ಉಪಾಯ ತಿಳಿ (ಒಂದ ಸಿಂಗದ ಮೇಲೆ ಬೆರಗಱೆಯದ ಬೆಳ್ಳಾಳ್ ಪಾಯ್ವಂತೆ ಕಿಟ್ಟಿಬಾಳ್ವೆರಸು ಪಾಯ್ವುದುಂ: **ಪಂಪಭಾ,** ೧೧. ೧೦೩ ವ)

**ಬೆರಗು** – ಉಪಾಯ (ಸೆರಗಂ ಬೆರಗಂ ಬಗೆಯದೆ ಪುರಮಂ ಪೊಱಮಟ್ಟು ಕಾದಿ ಮಾಲಿಯ ಬಾಹಾಪರಿಘ ನಿಶಿತಾಸ್ತ್ರ ಹತಿಯಿಂ ಸುರಲೋಕ ಪ್ರಾಪ್ತನಾದನಾ ನಿರ್ಘಾತಂ: **ಪಂಪರಾ,** ೧೦. ೧೩೧)

**ಬೆರಟು** – ಕಾಲಿನಿಂದ ಕೆರೆ (ಪುಲಿಗೆಱೆಯಲ್ಲಿ .. .. ನೆಲದೊಳೆ ಪೂೞ್ದುದಂ ಬೆರಟಿ ಕಂಡು ಅದನೊರ್ಮೆಯೆ .. .. ರುದ್ರಂ ಒಗೆತಂದಣ ಇದಲ್ತೆ ಸ್ವಯಂಭುವೆಂದು .. .. ಅರ್ಚಿಸುವರ್: **ಸಮಯಪ,** ೨. ೬೭)

**ಬೆರಲ್** – ಬೆರಳು (ಬೆರಲ ಕೊರಲ ಕೂಟಂ ಬೆರಲಂ ಮಿಡಿಯಿಸಿದುದು: **ಆದಿಪು,** ೯. ೧೧೭)

**ಬೆರಲಂ ಮಿಡಿಯಿಸು** – ಸೋಜಿಗಗೊಳಿಸು (ಬೆರಲ ಕೊರಲ ಕೂಟಂ ಬೆರಲಂ ಮಿಡಿಯಿಸಿದೆನಿಸಿ ರಾಗದ ತೊಡರೊಳ್ ತೊಡರ್ದರ್ದಪುವಲ್ಲಿ ಕಿನ್ನರಯುಗಳಂ: **ಆದಿಪು,** ೯. ೧೧೭)

**ಬೆರಸು** – ಸೇರು (ಬೆರಸು–ಸಮ್ಮಿಶ್ರೇ: **ಶಬ್ದಮದ,** ಧಾ ೭೦೭); ಕೂಡಿಸು (ಆ ವರ ಚಕ್ರವಾಳಪುರದೊಳ್ ಕಳಭಾಷಿಣಿ ಮುಖ್ಯಮಪ್ಪ ಕಾಂತಾವಳಿಯುತರಂ ಬೆರಸಿ ತಾನಿರುತಿರ್ದ ಬಳಿಕ್ಕಂ: **ಕುಸುಮಾಕಾ,** ೧೫. ೨೪); ಸಂಭೋಗಿಸು (ಪೆಂಡಿರ್ ಪೆಂಡಿರೊಳ್ ಅದೆಂತು ಬೆರಸುವರಬಲೇ: **ಪಂಪಭಾ,** ೧. ೭೬)

**ಬೆರ್ಕು** – ಬೆಕ್ಕು, ಮಾರ್ಜಾಲ (ಬೆರ್ಕುಂ ಓಂತಿಯುಂ ಕಪ್ಪೆಯುಂ ಮುಂಗುರಿಯುಂ ಮೊದಲಾಗೊಡೆಯ ಸ್ಥಲಚರಂಗಳ್:: **ವಡ್ಡಾರಾ,** ಪು. ೯೭, ಸಾ. ೬)

**ಬೆರ್ಚಿಸು** – ಭಯಪಡಿಸು (ತಪೋವನದ ಮುನಿಜನದ ಪರಮಾನುರಾಗಮಂ ಪೆರ್ಚಿಸಿ ಕಾಮಾನುರಾಗಮಂ ಬೆರ್ಚಿಸಿ ತದಾಶ್ರಮದೊಳ್ ಆಶ್ರಮಕ್ಕೆ ಗುರುವಾಗಿ ಪಾಂಡುರಾಜನಿರ್ಪನ್ನೆಗಂ: **ಪಂಪಭಾ,** ೧. ೧೧೬ ವ)

**ಬೆರ್ಚು** – ಹೆದರು (ಬೆರ್ಚು–ಸಂತ್ರಾಸೇ: **ಶಬ್ದಮದ,** ಧಾ ೨೦೮); ಹೆದರಿಸಲು ಕಟ್ಟುವ ಬೆದರುಬೊಂಬೆ (ವಾರಿಯ ಬೀರರ್ ಪಾಟಿಯೊಳೆಸೆದರ್ ಪಾಪದ ಜೋಳದ ಬೆಳಸಿಂಗೆ ಬೆರ್ಚುಗಟ್ಟಿದ ತೆಱದಿಂ: **ಯಶೋಧಚ,** ೧. ೫೫)

**ಬೆಲಗಸೆ** – ಬೊಗಸೆ (ಒಡವುಟ್ಟಿದರಂ ಕೊಂದವರ ಅಡಗಂ ತಿಂದು ಅವರ ನೆತ್ತರಂ ಬೆಲಗಸೆಯೊಳ್ ಕುಡಿವ ಈ ನಿಸ್ತ್ರಿಂಶತೆಯಂ: **ಗದಾಯು,** ೩ ೨೮)

**ಬೆಲೆ** – ವಸ್ತುವಿನ ವಿನಿಮಯ ಮೌಲ್ಯ (ಮೂಲ್ಯಂ ಬೆಲೆ: **ಅಭಿಧಾವ,** ೧. ೧೧. ೭೨)

**ಬೆಲೆಗುಡು** – ವಿನಿಮಯದ ಹಣ ಕೊಡು (ಕಱಿಯದೆ ಪಾಲಂ ಬಯಸುವ ಬೆಲೆಗುಡದೆ ಬಂಡಮಱಸುವ: **ಧರ್ಮಾಮೃ,** ೧೨. ೧೪ ವ)

**ಬೆಲೆಯಿಡಿಸು** – ಮೌಲ್ಯಮಾಪನ ಮಾಡಿಸು (ರತ್ನಕಂಬಲಮಂ ನಿಮಿರ್ಚಿ ತೋರ್ಪುದುಂ ಅಪೂರ್ವವಸ್ತುವಪ್ಪುದನಱಿದು ವಸ್ತುಪುರುಷರಿಂ ಬೆಲೆಯಿಡಿಸಿ: **ಸುಕುಮಾಚ,** ೧೦. ೧೧೭ ವ)

**ಬೆಲೆವೆಣ್** – ಹಣಕ್ಕೆ ಸಿಗುವ ಹೆಣ್ಣು, ಸೂಳೆ (ಕಡುಗೂರ್ಪಿಲ್ಲದ ಕರವಾಳ್ ಕಡುಪಿಲ್ಲದ ಕುದುರೆ ಗಾಡಿಯಿಲ್ಲದ ಬೆಲೆವೆಣ್ .. ..ಅರ್ತಿಯಂ ಮಾಡುಗುಮೇ: **ಅಜಿತಪು,** ೬. ೯೬)

**ಬೆಲ್ಲವತ್ತ** – [ಬಿಲ್ವಪತ್ರ] ಶಿವನಿಗೆ ಪ್ರಿಯವಾದ ಪತ್ರೆ (ಮರುಳರಸಂಗೆ .. .. ಉತ್ತರಣೆಯ ಬೆಲ್ಲವತ್ತದ ತೊಳಂಚೆಯ ಪತ್ರೆಯನೊಂದನಿತ್ತು .. .. ಅಮರತ್ವನಮಂ ಪಡೆಯಿಂ ಎಂಬರ್: **ಸಮಯಪ,** ೮. ೧೨)

**ಬೆಲ್ಲವಾತು** – ಬೆಲ್ಲದಂತೆ ಸಿಹಿಯಾದ ಮಾತು, ನಟನೆಯ ನುಡಿ (ಎಲ್ಲಿಯಾನುಂ ಬೆಲ್ಲವಾತುಗಳಿಂ ಕೈಕೊಂಡು ರಾಜ್ಯಮಂ ಕಿಡಿಸಲ್ಬಗೆದೆಯಪ್ಪೊಡೆ ಉಪೇಕ್ಷಿಸಲ್ ವಾರದು: **ಪಂಚತಂತ್ರ,** ೧೭೩ ವ)

**ಬೆವಸಾಯ** – [ವ್ಯವಸಾಯ] ಬೇಸಾಯ, ಕೃಷಿ (ಒಬ್ಬಳೇ ಹೆಂಡತಿ; ಮೂವರ್ ಪುತ್ರರ್; ಎರಡಾರ ಬೆವಸಾಯಂ; ಹತ್ತು ಹಸುಕಱಹ; ಮಧ್ಯದೇಶದೊಳ್ ಸುಕ್ಷೇತ್ರಮಪ್ಪ ತಾಣದೊಳಿರ್ಪುದೇ ಸೇವ್ಯಂ: **ಪಂಚತಂತ್ರ,** ೧೧೭, ಶ್ಲೋಕ ೩೫ ಟೀಕೆ); ಪ್ರಯತ್ನ (ಪುಣ್ಯಮಿಲ್ಲದೆ ಬೆವಸಾಯದಿಂ ಸಿರಿಯಕ್ಕುಮೆಂದೆಯಪ್ಪೊಡೆ ನೆತ್ತಿ ತಱಂಟಾಗೆ ಪುಳ್ಳಿಯನಡಕುವ ಬಡವರ್ಗಂ ಬಟ್ಟೆಗಟ್ಟಿ ಬಡಿವ ಬೇಡರ್ಗಮ ಸಿರಿಯೇಕಾಗದು: **ಧರ್ಮಾಮೃ,** ೬. ೮೬ ವ)

**ಬೆವಸಾಯಂಗೆಯ್** – ಪ್ರಯತ್ನ ಮಾಡು (ಬೆವಸಾಯಂಗೆಯಲ್ ಇನ್ನುಂಮುಂಟು ಎಡೆ ಕೃಪಾಶ್ವತ್ಥಾಮರುಳ್ಳಂತೆ ಪಾಂಡವರಂ ಗೆಲ್ವುದಸಾಧ್ಯಮಾಯ್ತೇ: **ಪಂಪಭಾ,** ೧೩. ೫೦)

**ಬೆಸ** – ಕೆಲಸ, ಕರ್ತವ್ಯ (ಬೆಸೆಮ್ಮನೀಗಳಿಂತೀ ಬೆಸದೊಳ್ ಕಡೆಗಣಿಸಿ ಬಟಿಯುಮಾವೆಡೆಯೊಳ್ ನೀಂ ಬೆಸಸುವೆಯೊ: **ಆದಿಪು,** ೧೨. ೯೪); ಆದೇಶ (ಧೃತರಾಷ್ಟ್ರನ ಬೆಸದೊಳ್ ವಾರಣಾವತಕ್ಕೆ ಪೋಗಿ ತದರ್ಧದಗ್ಧ ಕಳೇವರಂಗಳಂ ಸಂಸ್ಕರಿಸಿ ಜಳದಾನಾದಿ ಕ್ರಿಯೆಗಳಂ ಮಾಡಿ: **ಪಂಪಭಾ,** ೩. ೮ ವ); ಎರಡರಿಂದ ಭಾಗವಾಗದ ಸಂಖ್ಯೆ (ಪೂಡುವ ಕುದುರೆ ಬೆಸಂ ಕೊಂಡೋಡುವ ತೇರ್ಗೊಂದೆಗಾಲಿ ಪೊಡೆವಂ ಪೆಟವಂ ಕೇಡಿಂಗಲಸಿದೊಡಕ್ಕುಮೆ ನೋಡಿರೆ ರವಿ ಕೆಡೆದನಸ್ತಗಿರಿಮಸ್ತಕದೊಳ್: **ನೇಮಿನಾಪು,** ೫. ೧೪)

**ಬೆಸಂಬಡೆ** – ಅನುಜ್ಞೆ ಹೊಂದು (ಕನ್ನಡದೊಳ್ ಬಿಂದುವಿಕಲ್ಪಕ್ಕೆ: ಬೆಸಂಬಡೆದಂ–ಬೆಸವಡೆದಂ: **ಶಬ್ದಮದ,** ೧೭೮, ಪ್ರ ೨)

**ಬೆಸಂಬೆಱು** – ಬೆಸಂಬಡೆ (ನೆರೆದೆತ್ತಂ ಭಗಣಂ ನಿರೀಕ್ಷಿಸೆ ಬೆಸಂಬೆತ್ತೇಱು ಚಿತ್ತೋದ್ಭವಂ ಬರೆ ಲಕ್ಷ್ಮಸ್ಥಲದಿಂದಂ ಅಬ್ದಪಥವೀಧೀಭಾಗದೊಳ್: **ಚಂದ್ರಪ್ರಪು,** ೮. ೩೩)

**ಬೆಸಂಬೇಟಿಸ್** – ಆಜ್ಞೆ ನೀಡು (ಕಡಲೊಳ್ ನೀರ್ದರ್ಪುದಭ್ಯಾಸಿಗಳಿವು ನೆರವಕ್ಕೆಂದು ಶಕ್ರಂ ಬೆಸಂಬೇಟಿಪ್ಪೊಡೆ ನಾನಾವರ್ಣದಭ್ರಾವಳಿ ನೆರೆದು: **ಪುಷ್ಪದಂಪು,** ೧೧. ೧೫)

**ಬೆಸಕೆಯ್** – ಸೇವೆಗೈ, ಹೇಳಿದ ಕೆಲಸ ಮಾಡು (ಪುಣ್ಯಕ್ಷಯದೊಳ್ ತನ್ನ ವಿದ್ಯೆಗಳುಂ ತನಗೆ ಬೆಸಕಯ್ಯದಿರೆ: **ಆದಿಪು,** ೨. ೧೪ ವ)

**ಬೆಸಕೆಯ್ಸು** – ಅಧೀನಕ್ಕೆ ಬರುವಂತೆ ಮಾಡು (ಬಿರುದರಂ ಒತ್ತಿ ಬೀರರಂ ಅಡಂಗಿಸಿ ಕೊಂಕಿಗರಂ ಕಟಲ್ಚಿ ಚೆನ್ನರಂ ಅಡಿಗೊತ್ತಿ ಮಂಡಳಿಕರಂ ಬೆಸಕಯ್ಸಿ .. .. ಮಾಡಿರೆ ರಾಜಸೂಯಮಂ: **ಪಂಪಭಾ,** ೭. ೧೮)

**ಬೆಸಕೇಳ್** – ಆಜ್ಞೆ ಪಾಲಿಸು (ಇಂದಜಿತಂ ತಪೋವನಕೆ ಪೋದನಧೀಶನೆ ಪೋಗೆ ಮಾಣಲಾಗೆಂದು ಒಡವೋಗಲಿರ್ದಮದಱಿಂ ಬೆಸಕೇಳ್ದಪೆಂ; **ಅಜಿತಪು,** ೬. ೧೧೦)

**ಬೆಸಗಲಿ** – ಆಜ್ಞೆ ಪಾಲಿಸುವವನು (ಆಳ್ದನ ಬೆಸನಂ ಮರಳಿ ಕೇಳದ ಬೆಸಗಲಿಗಳುಮಂ .. .. ನೋಡಿ: **ಗದಾಯು,** ೯. ೩೪ ವ)

**ಬೆಸಗೊಳ್** – ವಿಚಾರಿಸು (ಆ ಪಟದೊಳಾಕೆ ಬರೆಯದೆ ಬಂಚಿಸಿದ ಅವಿನಾಣಂಗಳನಱಿಯೆ ಬೆಸಗೊಂಡು ಪಟಮಂ ಕೈಗೊಂಡು: **ಆದಿಪು,** ೩. ೪೫ ವ)

**ಬೆಸದಪ್ಪು** – ಆಜ್ಞೆ ಮೀರು (ಬೆಸನೆಂದು ಪೂಣ್ದು ದೇವರ ಬೆಸನಂ ಸುಕುಮಾರರೆನಿಪ ರಾಜಕುಮಾರರ್ ಬೆಸೆದಪ್ಪಿದರೆನಗೆ

ಅನಿತೊಂದು ಸೈಪು ಸಮನಿಸದೆ ಬರ್ದುಕಿ ಬಂದೆಂ ನರಪತೀ: **ಅಜಿತಪು,** ೧೦. ೩೨)

**ಬೆಸದವ** – ಕೆಲಸದಾಳು (ಕಾಷ್ಠಕೂಟನೆಂಬ ಬೆಸದವಂ .. .. ಪೊಟಲ್ಗೆ ವರ್ಪೊನಂ ಕಂಡು: **ವಡ್ಡಾರಾ,** ಪು. ೭೬, ಸಾ. ೨೨)

**ಬೆಸನ** – ಆಜ್ಞೆ (ಬೆಸಸಿದೊಡದು ಮಾರ್ಕೊಳ್ಳದೆ ಬೆಸನಂ ಬಲವಂದು ಬಾಹುಬಲಿಯಂ: **ಆದಿಪು,** ೧೪. ೧೧೭); [ವ್ಯಸನ] ದುಃಖ; ಚಟ, ಏಳು ವ್ಯಸನಗಳು (ದ್ಯೂತಂ ಪಾನಂ ವೇಶ್ಯಂ ಮೃಗಯಾ ವಾಕ್ಪಾರುಷ್ಯ ಅರ್ಥದೂಷಣ ದಂಡಪಾರುಷ್ಯಮೆಂಬುಂ ಬೆಸನಂಗಳಂ ಪೊರ್ದದೆ: **ಹರಿವಂಶ,** ೭. ೧)

**ಬೆಸನಂ ಪಾರ್** – ಅಪ್ಪಣೆಗೆ ಕಾಯು (ಬೆಸನಂ ಪಾರ್ದಿರೆ ಭೂಪತಿಪ್ರತತಿಗಳ್: **ಕರ್ಣನೇಮಿ,** ೨. ೯೭)

**ಬೆಸಮುಟ್ಟು** – ಕೆಲಸದ ಉಪಕರಣ (ಕನ್ನಡಿಯಂ .. .. ಮುನ್ನಾಕಾಶಕ್ಕೆ ನೆಲಕೆ ಬೆಸಮುಟ್ಟಿಂಗಂ .. .. ತೋಱೆ ಬೞಿಕೆ ನೋಟ್ಟಿರ್: **ಸಮಯಪ,** ೧೨. ೪)

**ಬೆಸನಿಗ** – ವ್ಯಸನ[ಚಟ]ಗಳಿಗೆ ಒಳಗಾದವನು (ಮಧು ಮದ್ಯದ ಬಸನಿಗ ಕುಡಿ ಮಧು ಮದ್ಯಮನೆಂದು ಸಪ್ತಧಾತುದ್ರವಮಂ ವಿಧಿಯಿಂ ತಂದೆಱೆವರ್: **ಸುಕುಮಾಚ,** ೧೧. ೪೫)

**ಬೆಸಲ್** – ಹೆರಿಗೆ (ಅಂತು ಆಗಸಂ ಈಂದಂತೆಯುಂ ಎಳೆ ಬೆಸಲಾದಂದಂತೆಯುಂ ಮುನ್ನೀರ್ ಮೇರೆವರಿದಂತೆಯುಂ ನಡೆದು ಭಂಡಣದೆಡೆಯೊಳ್: **ಕಬ್ಬಿಗಕಾ,** ೧೯೮ ವ)

**ಬೆಸಲಾಗು** – ಹೆರು (ಅಳಘುಭುಜರ್ ಕಂಡರ್ ಭೂಲಲನೆಯೆ ಬೆಸಲಾದಳೆನಿಸಿ ಬಿಟ್ಟಾ ಬೀಡಂ: **ಕರ್ಣನೇಮಿ,** ೭. ೪೧)

**ಬೆಸಲೆ** – ಬಾಣಂತಿ (ಧನಶ್ರೀ ಮಹಾದೇವಿಯುಂ ನವಮಾಸಂ ನೆಱೆದು ಬೆಸಲೆಯಾಗಿ ಮಗಂ ಪುಟ್ಟಿದೊಡೆ: **ವಡ್ಡಾರಾ,** ಪು ೧೫೯ ಸಾ ೧೩)

**ಬೆಸಲೆಯಾಗು** – ಮಗುವನ್ನು ಹೆರು (ತತ್ಕಾಲಸಂಜನಿತೋತ್ಕೃಷ್ಟ ಮುಹೂರ್ತದೊಳ್ ಬೆಸಲೆಯಾದಳ್ ದೇವಿ ಸತ್ಪುತ್ರನಂ: **ಶಾಂತೀಶ್ವಪು,** ೪. ೪೩)

**ಬೆಸಸು** – ಆಜ್ಞೆಮಾಡು (ಬೆಸಸಿದೊಡದು ಮಾರ್ಕೊಳ್ಳದೆ ಬೆಸನಂ ಬಲವಂದು ಬಾಹುಬಲಿಯಂ: **ಆದಿಪು,** ೧೪. ೧೧೭); ಹೇಳು, ನಿರೂಪಿಸು (ಶ್ರೀವಿದಿತಾರ್ಥಾಲಂಕಾರಾವಳಿಯಂ .. .. ಭಾವಿಸಿ ಬೆಸಸಿದನಖಿಳಧರಾವಲ್ಲಭಂ: **ಕವಿರಾಮಾ,** ೩. ೧)

**ಬೆಸುಗೆಗಿಡು** – ಸಂಬಂಧ ಹಾಳಾಗು (ಒಸೆದು ಅರ್ಜುನಂಗೆ ಮುಂ ಕಳಶಸಂಭವಂ ಮಾನ್ಯಪದವಿಯಂ ಮಾಡಿದೊಡಂ ಬೆಸುಗೆಗಿಡೆ ಪಾಟಿಗಿಡೆ ತನ್ನಸುವಂ ತೆಲ್ಲಟಿಗೆಗುಡುವ ತೆಱದೊಳ್ ಕೊಟ್ಟಂ: **ಗದಾಯು,** ೨. ೧೫)

**ಬೆಸೆ** – ಗರ್ವಿಸು (ಪೊಸಸುಸಿಲ ಮಸಕದ ಬಸದೊಳೆ ಬಸದಾಗಿಯುಮಸಿಯಳೆನಗಸವಸದೊಳೆ ಬೆಸೆದು ಪೋಗಿ: **ಆದಿಪು,** ೪. ೧೨ ವ); ಗರ್ವ (ಕುಲಧನಂ ಸಮದಗಜಂ ಜಾತ್ಯಶ್ವಮೆಂಬಿವಂ ಮತ್ತೊರ್ಬ ಪಗೆವಂಗೆ ಕೊಟ್ಟು ಬೆಸೆವವಂ ಅರಸದೆಂತೊ ಪಗರಣದರಸಂ: **ಆದಿಪು,** ೧೨. ೯೮); ವಿರೋಧಿಸು (ಸೆಣಸಲ್ ಮಾರ್ಮಲೆಯಲ್ ಬೆಸಕ್ಕೆ ಬೆಸೆಯಲ್ ದಂಡೋಪನತ್ಯಕ್ಕೆ ಟೆಂಠಣಿಸಲ್; **ಶಾಂತಿಪು,** ೯. ೧೮೫); ಹತ್ತಿ ಹಿಂಜುವ ಬಿಲ್ಲು (ಬೆಸೆ–ಗರ್ವೇ ಕಾರ್ಪಾಸಚಾಪೇ ಚ: **ಶಬ್ದಮದ,** ಧಾ ೭೦೮)

**ಬೆಸೆಕೋಲ್** – ಹತ್ತಿ ಹಿಂಜುವ ಬಿಲ್ಲು (ಕುಡುವೊಡೆ ನಿಸ್ತ್ರಪಂ ಕುಡುವುದೇಱೆಸಿದಂ ಬೆಸೆಕೋಲೆಂದು ಪೇೞ್ಕುಡುವುದೆ ಕನ್ಯಂ

**ಬೆಸೆಯಿಷು** – ಬೆಸೆಕೋಲ್ (ವಿಸಸನದೊಳ್ ನೀನೆಂದೀ ಬೆಸೆಯಿಷುಗಳ ಬಲ್ಪುಮೆಲ್ಪುಮಂ ನೀನೆ ಪರೀಕ್ಷಿಸು: **ಕರ್ಣನೇಮಿ,** ೧೨. ೨೩೪)

**ಬೆಳ್** – ದಡ್ಡ (ಲಲಿತಪದಂ ಪ್ರಸನ್ನಕವಿತಾಗುಣಮಿಲ್ಲದೆ ಪೂಣ್ದು ಪೇೞ್ದ ಬೆಳ್ಗಳ ಕೃತಿಬಂಧಮುಂ ಬರೆಪಕಾಱರ ಕೈಗಳ ಕೇಡು: **ಪಂಪಭಾ,** ೧. ೧೨)

**ಬೆಳಂತಿಗೆ** – ಹೊಳಪು (ತೊಳಪ ಅಚ್ಚ ಬೆಳಂತಿಗೆಯ ಓಲೆ ಅಚ್ಚ ಮುತ್ತಿನ ತೊಡವು ಅಚ್ಚ ಮಲ್ಲಿಗೆಯ ಸೋರ್ಮುಡಿ: **ನೇಮಿನಾಪು,** ೨. ೧೫); ಹೊಳೆಯುವ, ಶುಭ್ರವಾದ (ಕಾಂತಿಯೊಳೆ ಪುದಿದು ಬೆಳಪ ಬೆಳಂತಿಗೆ ಬೆಳ್ದಿಂಗಳಲರ್ದ ಪೊಸಜಾದಿ: **ಆದಿಪು,** ೧೧. ೯); ಉಜ್ವಲ, ಶುಭ್ರ (ಬೆಳಂತಿಗೆ ಬೆಳ್ಪನಾಳ್ದ ಪಂಕರುಹಮನಾಳಿಗೊಳ್ವ ನಗೆಗಣ್ ಜಗದೊಳ್ ಮೆಱೆಗುಂ ನೃಪೇಂದ್ರನಾ: **ಅನಂತಪು,** ೨. ೨)

**ಬೆಳಕಂಡಿ** – ಗವಾಕ್ಷ (ನೆಲನಗಲಕೆ ತೀವಿದ ಕಳ್ತಲೆಯಂ ಕಳೆಯಲ್ಕೆ ಗಗನದೊಳ್ ಪಲವುಂ ಬೆಳಕಂಡಿಗಳಂ ಸಮೆದಂ: **ಧರ್ಮಪ,** ೨. ೧೧)

**ಬೆಳಗಿಲಿಗಣ್** – ಹೊಳಪಿಲ್ಲದ ಕಣ್ಣು, ಕುರುಡುಗಣ್ಣು (ಲಿಕಾರಕ್ಕೆ: ಪಲ್ಲಿಲಿವಾಯ್, .. .. ಬೆಳಗಿಲಿಗಣ್, ನಾಣಿಲಿವೆಣ್: **ಶಬ್ದಮದ,** ೧೯೭ ಪ್ರ)

**ಬೆಳಗು** – ಪ್ರಕಾಶಿಸು (ಬೆಳಗು–ಕಾಂತೌ: **ಶಬ್ದಮದ,** ಧಾ ೧೩೯); ಪ್ರಕಟಪಡಿಸು (ಬೆಳಗುವೆನಿಲ್ಲಿ ಲೌಕಿಕಮಂ ಅಲ್ಲ ಜಿನಾಗಮಮಂ: **ಪಂಪಭಾ,** ೧೪. ೬೦); ದೀಪ ಹೊತ್ತಿಸು ಬೆಳಗಪ್ಪ ಜಾವದಾಗಳ್ ಸೊಡರ್ಗುಡಿಗಳ ಬೆಳಗಿ ಪೂಜೆಗೆಯ್ತರೆ ದೀಪಾವಳಿಯೆಂಬುದು: **ಸಮಯಪ,** ೨. ೪೫); ಮೆರುಗುಗೊಳಿಸು (ಬೆಳಗಿದ ಮಣಿದರ್ಪಣಮಂ ತಿಳಿದ ಸರೋವರಮಂ ಇೞಿಸಿ ನಿಮ್ಮಮನದೆ ನಿರ್ಮಲಿನತರಮಾಯ್ತು ಜಗತೀತಿಳಕನ ನೆಗೞ್ದಜಿಯಜಿನನ ಚಿತ್ತಮುದಾತ್ತಂ: **ಅಜಿತಪು,** ೧. ೬೯); ಹೊಳಪು (ಕೊಟ್ಟ ಮಣೀಕಂಗಳ ಬೆಳಗಿಟ್ಟಳಂ ತನಗೊಡಂಬಡೆ: **ಪಂಪಭಾ,** ೪. ೪೦); ಹಗಲು ಬೆಳಗಿನೊಳಂ ಕಾಣದು ನಿಶೆಯೊಳ್ ಕಾಣ್ಬುದು ಪೆಗ್ಗಣಕ್ಕೆ: **ಧರ್ಮಾಮೃ,** ೧. ೯೭)

**ಬೆಳತಿಗೆ** – ಬಿಳುಪು, ಪ್ರಕಾಶ (ಬೆಳ್ದಿಂಗಳ ಬೆಳತಿಗೆಯಂ ಪಂಸೆ ಪಾಲ್ಗೆತ್ತು ಸಾರ್ದಪ್ಪುದೊ: **ಲೀಲಾವತಿ,** ೨. ೨೦); ಬಿಳಿಯ ಹಕ್ಕಿ (ಮಿಱುಗುವ ಬೆಳತಿಗೆ ಕಣ್ಬೊಣರ ಒಱತೆಯ ಜಲದೊಳಗೆ ಪೊಳೆಯೆ .. .. ಎಳಮೀನ್ಗಳ್: **ಲೀಲಾವತಿ,** ೬. ೪೩)

**ಬೆಳತಿಗೆವಸದನ** – [ಬೆಳತಿಗೆ+ಪಸದನ] ಶುಭ್ರವಸನ, ಬಿಳಿಯ ಬಟ್ಟೆ (ಬೆಳತಿಗೆವಸದನಮೆಸೆದಿರೆ ತಳಿರ್ಜೊಂಪದೊಳ್ ಉಯ್ಯಲನಾಡಿ ನರಪತಿ .. .. ಕುಳ್ಳಿರ್ದಂ: **ಯಶೋಧಚ,** ೪. ೧೦)

**ಬೆಳದಿಂಗಳ** – ಬಿಳಿ ಧೂಪದ ಮರ (ಬೆಳದಿಂಗಳಂ ಪುಣಿಸೆ ಜಾಲಂ ಅಂಕೋಲೆ ಬೊಬ್ಬುಳಿ ಮಾವು ಅಂಬಟೆ: **ರಾಜಶೇವಿ,** ೫. ೫೬)

**ಬೆಳರ್** – ಬಿಳಿಚಿಕೊ (ತನು ಪಂಜಿವೊಲ್ ಬೆಳರ್ತಿರ್ಪಿನೆಗಂ ಹಿಮಂ ಎಕ್ಕದರಲೆವೊಲ್ ಪುದಿದಿರೆಯುಂ: **ಆದಿಪು,** ೬. ೩೩); ಪ್ರಕಾಶ ಬೀರು ಶಶಿಕಾಂತಮುಕುರದಂತಿರೆ ಶಶಿಮುಖಿಯ ಕದಂಪುಗಳ್ ಬೆಳರ್ತುವು: **ಪಂಪರಾ,** ೪. ೩)

**ಬೆಳರ್ಗೆಂಪು** – ಹೊಳೆಯುವ ಕೆಂಪು[ಬಣ್ಣ] (ಒದವಿ ತಗುಳ್ದ ಗಗ್ಗರಿಕೆ ಸೂಸುವ ಕಣ್ಬನಿ ಕಣ್ಗಳೊಳ್ ಕಲಂಕಿದ ಬೆಳರ್ಗೆಂಪು ಕಣ್ಗೆ ವರೆ: **ಆದಿಪು,** ೧೨. ೨೫)

**ಬೆಳರ್ಪೇಱು** – ಬಿಳಿಚಿಕೊ (ಬೆಬರ್ಪೇಱಿದಾಸ್ಯೋಜ್ಜ್ವಲಪದ್ಮಂ .. .. ತಾಪದಿಂದರ್ಪಱಿದಾ ಬಿಂಬಾಧರಂ: **ಕುಸುಮಾಕಾ,** ೧೩. ೭೬)

**ಬೆಳಮಾರ್ಡ** – ಧವಳಾಗಾರ, ಬಿಳಿಯ ಬಣ್ಣದ ಮನೆ (ಪಾಡದ ರಾಗಂ ಓದದ ಇನಿಗಬ್ಬಂ ಒಡರ್ಚದ ಸಿಂಗರಂ ಬೆಳಮಾರ್ಡದ ಅಗಲ್ದರ ಆನನಂ ಅಳುಂಬಮಂ ಆನದ ನಲ್ಮೆ: **ರಾಜಶೇಖ,** ೧೨. ೫೩)

**ಬೆಳರ್ವಾಯ್** – ಬಿಳಿಚಿಕೊಂಡ ತುಟಿ (ಮದನ ದವಾನಲಾರ್ಚಿ ತನುವಂ ಸುಡೆ ತಳ್ತ ಎಮೆಯೊಳ್ ಪಳಂಚಿ ಬೀಗಿದ ಬೆಳರ್ವಾಯೊಳ್ ಉಚ್ಚಳಿಸಿ .. .. ಎಯ್ದಿದುವು ನೇತ್ರಜಲಬಿಂದುಗಳ್ ಆಕೆಯ ನಿಮ್ನನಾಭಿಯಂ: **ಪಂಪಭಾ,** ೫. ೯)

**ಬೆಳಲ** – ಬೇಲದ ಮರ (ಆಗದು ತಾಱೆಯ ನೆಟಿಲೊಳ್ ಪೋಗಲ್ ವಿಪ್ರಂಗೆ ಬೆಳಲ ನೆಟಿಲೊಳ್ ಮಱೆದುಂ ಪೋಗಲ್ಕೆ: **ಸಮಯಪ,** ೧೧. ೬೭)

**ಬೆಳಸು** – ಫಸಲು, ಬೆಳೆ (ಪದವಟ್ಟು ಬಿತ್ತಿದಂದು ಇಟ್ಟಳಮಪ್ಪುದೊಂದು ಬೆಳಸಂ ಪಡೆವಂತೆ ಸಮಸ್ತಧಾತ್ರಿಯೊಳ್: **ಸಮಯಪ,** ೭. ೬೬)

**ಬೆಳೆ** – ಅಭಿವೃದ್ಧಿ (ಆತಂ ಕ್ರಮಕ್ರಮದಿಂ ಸುಖದಿಂ ಬೆಳೆದು ನವಯೌವನನನಾಗಿರ್ಪನ್ನೆಗಂ: **ವಡ್ಡಾರಾ,** ಪು. ೭೦, ಸಾ. ೨೯); ಸಸ್ಯಗಳ ವೃದ್ಧಿ (ಬೆಳೆ–ಸಸ್ಯವೃದ್ಧೌ: **ಶಬ್ದಮದ,** ಧಾ ೯೭೨); ಪೈರಿನಿಂದ ಕೂಡಿರು (ಮಹಾಸತಿಯಿರ್ದ ಮಂಡಲಂ ಬೆಳೆವುದು ಬೇಡಿದಂತೆ ಮಱೆ ಕೊಳ್ವುದು: **ಅಜಿತಪು,** ೧. ೭೫)

**ಬೆಳೆಗೆಯ್** – ಪೈರು ತುಂಬಿದ ಹೊಲ (ನಲವಿಂ ಬೆಳೆಗೆಯ್ಗೆಱಗುವ ಪಕ್ಕಿಗಳನಲೆದು ಸೋವ ನಾಡ ಗಾಡಿಕಾರ್ತಿಯರ: **ಕಬ್ಬಿಗಕಾ,** ೧೭ ವ)

**ಬೆಳೆನೆಲ** – ಸಾಗುವಳಿಯ ಭೂಮಿ (ಬೆಳೆನೆಲಸೊಂದು ಮೆಚ್ಚಿನೆಡೆಯುಂ ಬಿಡಲಿಲ್ಲದನೇಕಧಾನ್ಯಸಂಕುಳ ಬಹುವರ್ಣಪೂರ್ಣ ಕಣಿಶಾವಳಿಯಿಂ ನವರತ್ನರಾಶಿಯಂ ಬೆಳೆದವೊಲಿರ್ಪುದು: **ಅನಂತಪು,** ೧. ೭೬)

**ಬೆಳೆವತ್ತರ್** – [ಬೆಳೆ+ಮತ್ತರ್] ಸಾಗುವಳಿಯ ಭೂಮಿ (ಊರೂರ್ಗಳ್ದಪ್ಪದೆ ಮಾದಾರಂ ಬೆಳೆವತ್ತರಂ ಪಡಲ್ದಾಣಮಂ ಆಹಾರಮಸಾರ್ವಡೆಯುಮನೀವರಿತಮಾರ್ತಿವರೆಂದುಮಾ ನಾಡವರ್ಗಳ್: **ವರ್ಧಮಾಪು,** ೧೧. ೮)

**ಬೆಳ್ಕನೆವೋಗು** – ದಿಗ್ಭ್ರಾಂತನಾಗು (ನಾಕಲೋಕಚ್ಯುತಿಯಂ ಆಗಳಱಿದು ಮನದೊಳಳ್ಕಿ ಬೆಳ್ಕನೆವೋಗಿ: **ಆದಿಪು,** ೩. ೩ ವ)

**ಬೆಳ್ಕರಿಸು** – ಬಿಳಿಪಾಗು (ನೊಸಲೊಳಿಕ್ಕಿದ ಮಂದವಪ್ಪ ಚಂದನದಣ್ಪಿಂ ಪತ್ತಿ ಪಗಿಲ್ತು ಬೆಳ್ಕರಿಸಿದ ಅಳಕನಿಕರಮುಂ: **ಕಾದಂಬ,** ೫. ೧೪೪ ವ)

**ಬೆಳ್ಕಾಡು** – ಬೆಂಗಾಡು, ಏನೂ ಇಲ್ಲದ ಪ್ರದೇಶ (ಆಕೆಯಂ ಬೆಳ್ಕಾಡೊಳ್ ಮಸಣದೊಳ್ ಕೊಂಡುಪೋಗಿಕ್ಕಿಂ ಎಂದು ಆಳ್ಗಳ್ಗೆ ಬೆಸನಂ ಪೇೞ್ದು: **ವಡ್ಡಾರಾ,** ಪು ೧೧೨, ಸಾ ೩)

**ಬೆಳ್ಕುಱು** – ಹೆದರು (ಬೆಳ್ಕುಱೆ ರಿಪುಸೇನೆ ತೇರನೊಸೆದು ಆನೆಸಗುತ್ತಿರೆ ಕರ್ಣನಂ ಗೆಲಲ್ ನೆಱೆವರೆ: **ಪಂಪಭಾ,** ೧೨. ೧೦೦)

**ಬೆಳ್ಕುಱು** – ಭಯಪಡು (ದುರ್ವೀಕರ ಭೀಕರಾಸ್ತ್ರಕೆ .. .. ದಿಗಧಿಪರ್ ಬೆಳ್ಕುತ್ತರ್: **ಕರ್ಣನೇಮಿ,** ೧೨. ೧೬೮)

**ಬೆಳ್ಗಡಲ್** – ಬಿಳಿಯ ಸಮುದ್ರ (ಬಳ್ವಳ ನೀಳ್ದ ಕಣ್ಮಲರ ತಳ್ತಮೆಯಿಂ ಕರೆಗಣ್ಮಿ ಬೆಳ್ಗಡಲ್ಗಳ್ ಪರಿಯಲ್ಕಂ: **ಪಂಪಭಾ,** ೭. ೬೮)

**ಬೆಳ್ಗತ್ತೆ** – ಬಿಳಿಯ ಕತ್ತೆ (ಮಾನಕಷಾಯಂ ಕಾರಣಮಾಗಿ ಸತ್ತು ಬೆಳ್ಗತ್ತೆಯುಂ ಪೇಪಂದಿಯುಂ ನಾಯುಂ ಪೊಲೆಯರ ಕೂಸುಂ ಆಗಿ ರಿಸಿಯರ ಪ್ರಬೋಧನೆಯಿಂದಂ ಬ್ರತಂಗಳಂ ಕೈಕೊಂಡು: **ವಡ್ಡಾರಾ,** ಪು ೨೪, ಸಾ ೫)

**ಬೆಳ್ಗುಂಬಳ** – ಬಿಳಿಯ [ಬೂದ] ಕುಂಬಳ (ನಿಂಬದ ಕುಸುಮಂಗಳಂ ಔದುಂಬರಪಂಚಕಮಂ ಅಂತೆ ನವನೀತಮಂ ಆಣಂಬೆಯಂ ಅನಾರತಂ ಬೆಳ್ಗುಂಬಳಮಂ ಗಿಣ್ಣಂ ಉಣ್ಣದಿರ್ಪುದಮೋಘಂ: **ಸುಕುಮಾಚ,** ೬. ೪೩)

**ಬೆಳ್ಗೊಡೆ** – ಅಧಿಕಾರ ಸಂಕೇತವಾದ ಬಿಳಿಯ ಕೊಡೆ (ಪೇೞ್ ಮಗನೆ ಬೇಳ್ಗೊಡೆಯೆಲ್ಲಿದುದೆತ್ತ ಪೋಯ್ತು ಸುತ್ತಿಱಿದ ಚತುರ್ಬಲಂ ನಿನಗಮೀಯಿರವಾದುದೆ ವೈರಿಭೂಪರಿಂ: **ಪಂಪಭಾ,** ೧೩. ೬೪)

**ಬೆಳ್ಗನ** – ದಡ್ಡತನ (ರಾಜಸಮಾಜಂ ಆಜಿಗೆ ಉಱದೆ ಎಯ್ತಂದತ್ತು ನೀರ್ಗೆತ್ತು ಬೆಳ್ತನದಿಂ ಕತ್ತರಿವಾಣಿಯಂ: **ಪಂಪರಾ,** ೩. ೪೮)

**ಬೆಳ್ದೊನ್** – ಬಿಳಿಯ ತೊನ್ನು (ಬೆಳ್ದೊನ್ನಪ್ಪಂತಿರೆ ತಳಿಯೆ ನೀರಂ ಅದನಿದಿರರಸಂ ನೀರ್ದಳಿದು ಕಳೆದನೆಂಬರ್ ಮೂಢರ್: **ಸಮಯಪ,** ೧೨. ೧೬)

**ಬೆಳ್ನವಿರ್** – ಬಿಳಿಯ [ನರೆತ] ಕೂದಲು (ಬೆಳ್ನವಿರ್ ತುಱುಗಿ ನಿರಂತರಂ ಬಳಪಮಂ ತೊಡೆದಂತಿರೆ: **ಸೂಕ್ತಿಸುಧಾ,** ೩. ೩೭)

**ಬೆಳ್ಪ** – ಬೆಪ್ಪ, ಮೂಢ (ಮದುವೆಯ ಕೂಟಂ ನಂಬಿ ಮನೆಯ ಧಾನ್ಯಮಂ ಸೂಱೆಗೊಡುವ ಬೆಳ್ಪನುಮಂ: **ಧರ್ಮಾಮೃ,** ೮. ೩೧ ವ)

**ಬೆಳ್ಪಡರ್** – ಬೆಳ್ಳಗಾಗು (ಚುಂಬಿಸಿ ಬೀಗಿ ಬೆಳ್ಪಡರ್ದ ಬಾಯ್ದೆಱೆ .. .. ಪೊರ್ಕುಳಿಯಂದಮೆ ಹಂತಿದಪ್ಪಿ ತಾಱುಂಬಱಿಯುಂ ತೆರಳ್ದ ಕುರುಳ್: **ಚಂದ್ರಪ್ರಪು,** ೮. ೭೨)

**ಬೆಳ್ಪಸದನ** – ಬಿಳಿಯ ಉಡುಗೆ (ಅಲರ್ದ ಪೊಸಜಾದಿ ದಿಶಾಕಾಂತೆಯ ಬೆಳ್ಪಸದನದ ದಗುಂತಿಯನೇಂ ನಾಡೆಯುಂ ಮಾಡಿದುದೋ: **ಅದಿಪು,** ೧೧. ೯)

**ಬೆಳ್ಪಳ** – ಅಲುಗಾಟ (ಬೆಳ್ಪಳಮೆಂದು ಸಂಚಳಂ: **ಶಬ್ದಮದ,** ಪ್ರಸಾ ೧೮೭)

**ಬೆಳ್ಪಳಿಸು** – ಭಯಪಡು (ಚಿಂತಾತುರನಾಗಿ ಬೆಳ್ಪಳಿಸಿ ಬೇವಸಮಂ ತಳೆದಂ ಧನಂಜಯಂ: **ಶಬರಶಂ,** ೪. ೧೧೩); ಉಜ್ವಲವಾಗು (ವಿಲೋಚನಕಾಂತಿ ನೀಳ್ದು ಬೆಳ್ಪಳಿಸೆ ಪೊರಟ್ದಿ ಮೆಯ್ಯ ತನಿಗಂಪೆನಸುಂ ಪರೆದೇಱೆ ಕಾಂತೆ... .. ಮುಂಬರಿಯೆ: **ಶಾಂತೀಶ್ವಪು,** ೧೧. ೫೬)

**ಬೆಳ್ಪು** – ಬಿಳಿಪು (ಉಡಮೊಗಮೆಂಬ ತಾವರೆಯ ನೀಳ್ದೆಸಳೊಳ್ ಮಱೆದುಂಬಿ ಪಾಯ್ದು ಒಡಂಬಡನೊಳಕೊಂಡು ಕಣ್ಮಲರ ಬೆಳ್ಪುಗಳ್ ಆಲಿಯ ಕರ್ಪಿನೊಳ್ ಪೊದಳ್ದು: **ಪಂಪಭಾ,** ೫. ೭೮); ಕಾಂತಿ (ನೀಳ್ಪಂ ಬೆಳ್ಪುಮಂ ತಾಳ್ದಿ ಪರವನಿತೆಯರ ದೆಸೆಗೆ ಕಿಸುಗಣ್ಚಿದಂತೆ ಕಿಸುಸೆರೆವರಿದು ಸೊಗಯಿಸುವ ಶೌಚಾಂಜನೇಯನ ಕಣ್ಗಳ್: **ಪಂಪಭಾ,** ೨. ೩೯ ವ); ಸ್ವಚ್ಛತೆ; ದಡ್ಡತನ

**ಬೆಳ್ಪುವೆಱು** – ಬಿಳುಪನ್ನು ಹೊಂದು (ತೊಂಗಲ್ಗೊಂಡಿರ್ದು ಬೆಳ್ಪಾದಸುಗೆಯ ತಳಿರಂ ಕಂಪುದೀವಿರ್ದ ಪೂವಂ ಮಾಂಗಾಯಂ ಪೊಚ್ಚ ಪೊಂಬಾಟಿಯ ಮರುಗಮಂ .. .. ಬೆಳ್ಪುವೆತ್ತಿರ್ದಿಂಗೋಲಂ ಪಣ್ತ ದಾಳಿಂಬಗಳನೊಲವಿಂ ತೋಂಟಿಗಂ ಕೊಟ್ಟನೊರ್ವಂ: **ಕಬ್ಬಿಗಕಾ,** ೭೦)

**ಬೆಳ್ಪೇಱು** – ಬಿಳಿಚಿಕೊಳ್ಳು (ಬಸಿಱ ತೆಳ್ಪಟಿದಿತ್ತೆ ಮೊಗಂ ಬೆಳ್ಪೇಱಿದುದೇ ಕುಚಚೂಚುಕಂ ಮಸುಳ್ಗುದೇ ತ್ರಿವಳೀರುಚಿಯುಂ ಮೇಣ್ ಕುಂದಿತೇ: **ಆದಿಪು,** ೭. ೩೧)

**ಬೆಳ್ಪೊಱಸು** – ಬಿಳಿ ಪಾರಿವಾಳ (ಬಿನದದಿಂ ನೋಟ್ಪವರಿನ್ನರಗಿಳಿಯುಂ ಬೆಳ್ಪೊಱಸುಂ ನೆರೆದಂದುಮಮ ಅಱಸಿಕೊಳ್ವರೆಮ್ಮೊಳಮೋಘಂ: **ಸೂಕ್ತಿಸುಧಾ,** ೮. ೪೧೮)

**ಬೆಳ್ಮಡಿ** – ಬಿಳಿದಾದ ಬಟ್ಟೆ (ಬೆಳ್ಮಡಿಯನುಟ್ಟು ಬಳಪದೋಲೆಯನಿಟ್ಟು ಶ್ವೇತಮಾಲೆಯನೆಟಲೆ ಬಿಟ್ಟು ಕೈಗ್ಯೆಯ: **ಲೀಲಾವತಿ,** ೭. ೫೩ ವ)

**ಬೆಳ್ಮಾಡು** – ಬೆಪ್ಪನಾಗಿ ಮಾಡು, ಮರುಳುಗೊಳಿಸು (ರಘುಪ್ರವೀರಂ ಅಯ್ಯಮ ನುಡಿಯಂ ಪರಿಪಾಲಿಸಲೆಂಗುಮೆ ಪೇೞ್ ಧರೆಯಂ ಬೆಳ್ಮಾಡಿಕೊಂಡರೆಂಗುಂ ಲೋಕಂ: **ಪಂಪರಾ,** ೬. ೧೪೧)

**ಬೆಳ್ಮಸೆ** – ಹೊಳೆಯುವಂತೆ ಮಸೆ, ಉಜ್ಜು (ಪೊದಳ್ದ ಬೆಳ್ಮಸೆವಿಲ್ ರಣದೇವತೆಯಟ್ಟಹಾಸದಂತೊಗೆಯೆ: **ಜಗನ್ನಾವಿ,** ೭. ೭೮)

**ಬೆಳ್ಮಳಲ್** – ಬಿಳಿಯ ಮರಳು (ಭೃಗುದೇವತಾಪ್ರಹಾಸಮರೀಚಿ ಪ್ರಕರಮೆನೆ ಬೆಳ್ಳಂಲ್ ಪುದಿದು ಕರಂ ಕಣ್ಗೆಸೆದುದಸದಳಂ ಶ್ರಮಕುಟಿಯೊಳ್: **ಕುಸುಮಾಕಾ,** ೭. ೬೧)

**ಬೆಳ್ಮಾಡು** – ಮರುಳು ಮಾಡು (ಸಸಿಯಂ ಮೆಯ್ವೆಳಗಿಂದೆ ಪೊನ್ನೊಡೆಯನಂ ಪೆಂಪಿಂದೆ ಮಾದೇವನಂ ಪೆಸರ್ವೆತ್ತಿಂಚರದಿಂದೆ ಸಂದ ಬಿದಿಯಂ ಜಾಣಿಂದೆ ಮೆಯ್ಗಣ್ಣನಂ ಪೊಸತಪ್ಪಗ್ಗದ ಗಾಡಿಯಿಂದೆ ಪಿರಿದುಂ ಬೆಳ್ಮಾಡಿ ಬೇಟ್ಪಿಂತುಟುಬ್ಬಸಮಂ ಮಾಡುವ ಬರ್ದೆಯರ್ ಪಲರುಂ ಕಣ್ಗೇಂ ಬೆಡಂಗಾದರೋ: **ಕಬ್ಬಿಗಕಾ,** ೧೦೬)

**ಬೆಳ್ಮಿಗ** – ಸಾಧು ಪ್ರಾಣಿ (ಎಮ್ಮ ಪಾಸಿದ ಚಿತ್ರಪಟಮೆಂಬ ಬಲೆಯೊಳ್ ನಿಮ್ಮಂತಪ್ಪ ಬೆಳ್ಮಿಗಂಗಳಾಗಳೆ ತೊಡರ್ಗುಂ: **ಆದಿಪು,** ೩. ೮೯ ವ); ಒಂದು ಬಗೆಯ ಜಿಂಕೆ (ಕೃಷ್ಣಸಾರಂ ವಾತಪ್ರಮಿಯೆನೆ ಬೆಳ್ಮಿಗ; **ಅಭಿಧಾವ,** ೧. ೯. ೭)

**ಬೆಳ್ಮುಗಿಲ್** – ಬಿಳಿ ಮೋಡ (ಮಿಸುಗುವ ಬೆಳ್ಮುಗಿಲೊಳಗುದಯಿಸುವ ಇನಬಿಂಬದವೊಲೆಸೆವ .. .. ಬಾಲನಂ ನೃಪಾಲಂ ಕಂಡಂ: **ಕುಸುಮಾಕಾ,** ೬. ೮೭)

**ಬೆಳ್ಮೃಗ** – ಬೆಳ್ಮಿಗ (ಬೆಳ್ಮೃಗರಾಜಿಯಿಂ ಪ್ರಚುರಪಕ್ಕಣಸಂತತಿಯಿಂ ನಿರಂತರಂ ಬಾಳ್ಮೊದಲಾಗೆ ರೌದ್ರನಗೆ ತೋರ್ಪುದು ರಮ್ಯಕಮೆಂಬ ಕಾನನಂ: **ಪುಣ್ಯಾಸ್ರ,** ೭. ೬೪)

**ಬೆಳ್ಮೊಗ** – ಬಿಳಿಚಿಕೊಂಡ ಮುಖ (ಅಳವಳಿಸಂ ಬೆಬ್ಬಳಿಸಂ ಕಳವಳಿಸಂ ಕನಲಂ ಒನಲಂ ಅಟ್ಟಿಂ ಚಳವಳಿಸಂ ಚಪ್ಪರಿಸಂ ತಳವಳಿಸಂ ಬೇಸಱಿಯ್ದು ಬೆಳ್ಮೊಗದಿನಿರಂ: **ಅಜಿತಪು,** ೫. ೯೦)

**ಬೆಳ್ವಕ್ಕಿ** – ಬಿಳಿಯ ಹಕ್ಕಿ, ಬಲಾಕ (ತರದೆ ಪಾಱಿದುವು ಬೆಳ್ವಕ್ಕಿ ನೂಲ್ದೆಗೆದಂತೆ ನೆರೆದ ಕಾಮನ ಬಿಲ್ಗೆ ಬಿಳಿಯದಿರು ಬಿಗಿದಂತೆ: **ಅನಂತಪು,** ೯. ೧೬ ರಗಳೆ)

**ಬೆಳ್ವಸದನ** – [ಬೆಳ್+ಪಸದನ] ಬಿಳಿಯ ಉಡುಗೆ (ಬೀರಸಿರಿಯ ಬೆಳ್ವಸನದ ಬೆಳಗಿನಂತೆ ದಂತಕಾಂತಿ ಪಸರಿಸೆ: **ಪಂಪರಾ,** ೧೨. ೯೯ ವ)

**ಬೆಳ್ವಳಿಸು** – ಬೆಳ್ಳಗೆ ಹೊಳೆ (ತೊನೆಯುತ್ತಿರೆ ತಾರಹಾರಂ ಉಜ್ವಳಿಸೆ ಮೊಗಂ ವಿಳಾಸಮನೆ ತೋಱೆ ವಿಲೋಚನಕಾಂತಿ ನೀಳ್ದು ಬೆಳ್ವಳಿಸೆ: **ಶಾಂತೀಶ್ವಪು,** ೧೧. ೫೬)

**ಬೆಳ್ವಾಯ್** – ಬಿಳಿಚಿಕೊಂಡ ಬಾಯಿ (ಬಿಸುಸುಯ್ವ ಬೆಂಕೆಯಲೆಪಿಂ ಪಳ್ವಿರ್ದ ಬೆಳ್ವಾಯ ದರ್ದುಱಂ ಏಂ ಮಾಣ್ಬುದೆ: **ಲೀಲಾವತಿ,** ೨. ೬೫)

**ಬೆಳ್ವಿಟ್ಟು** – [ಬೆಳ್+ಪಿಟ್ಟು] ಬಿಳಿಯ ಪುಡಿ (ಪಿಟ್ಟೆಂಬ ಪೆಸರ್ ಕಳವೆಯ ಪಿಟ್ಟಿಂಗಂ ಭೂತಳಾಗ್ರದೊಳ್ ಭಾವಿಸೆ ಬೆಳ್ವಿಟ್ಟಿಂಗಂ ಅಕ್ಕುಮಾದೊಡೆ ಪಿಟ್ಟಿನೊಳಿರ್ಪೊಂದು ರುಚಿಯನದು ತಳೆದಪುದೇ: **ಧರ್ಮಾಮೃ,** ೧. ೧೪೩)

**ಬೆಳ್ವೆಳಗು** – ಹೊಳೆಯುವ ಬೆಳಕು (ತೊಳಗುವ ಮುತ್ತಿನೋಲೆಗಳ ಬೇಳ್ವೆಳಗಿಂ ಪೆರ್ಮೆವೆತ್ತು ಕಣ್ಗೊಳಿಸದಳಾಕೆ ಪಾಲ್ಗಡಲ ಪೆರ್ದೆರೆಯಂತಿರೆ: **ಕಬ್ಬಿಗಕಾ,** ೬೫)

**ಬೆಳ್ವೊಟ್ಟು** – ಬಿಳಿಯ ಹಿಟ್ಟು (ಪರದನ ಪೆರ್ಮನೆಯೊಳ್ ಪರ್ಕ್ಕರಮಂ ಬೆಳ್ವೊಟ್ಟು ಎಂದು .. .. ಕತ್ತುರಿಯಂ ಹರಿ ನೀಲ .. . ಮುಟ್ಟಿಮರಜಮಿದೆಂದು: **ನೇಮಿನಾಪು,** ೩. ೮೯)

**ಬೆಳ್ವೊನಲ್** – ಬೆಳ್ಳಗೆ ಹರಿಯುವ ಪ್ರವಾಹ (ಸಂತತಮಾ ಸುರಾಪಗೆತ ಬೆಳ್ವೊನಲಂ ಪದೆಪಿಂದುಗುಳ್ವ ಹೇಮಂತ ನಗೇಂದ್ರಮಂ: **ಕುಸುಮಾಕಾ,** ೧೫. ೨೦)

**ಬೆಳ್ಸರಿ** – ಬೆಳ್ಳಗಿನ ಧಾರೆಯ ಮಳೆ (ಎಳವಿಸಿಲೊಳ್ ಬೆಳ್ಸರಿ ತೋರವನಿಯ ಪುದುವಿನೊಳ್ ಅರಲ್ದ ತಿಳಿಗೊಳನೆ ನಭದೊಳಿಟೆದಂತಿರ್ಕುಂ: **ಆದಿಪು,** ೧೧. ೮)

**ಬೆಳ್ಸುಟಿ** – ಬಿಳಿಯ ಚಿಗುರು (ಬೇಳ್ಸುಟಿ ಪುಟ್ಟೆ ಕೇದಗೆಗಳ ಸೊರ್ಕು ಚೇತರಿಸೆ ಚಾದಗೆಗಂಚಿರಮಾಗೆ ರಾಗಮಂಚಿಗೆ .. .. ತೀಡಿದುದು ತಣ್ಣನೆ ಪಣ್ಣನೆ ಪಶ್ಚಿಮಾನಿಲಂ: **ಪಂಪರಾ,** ೭. ೧೩೯); ನೀರಿನ ಸುಳಿ (ತೋಳ್ಗೆ ದಂತದ ಬಳೆಯಂತಿರಲ್ ಸುಳಿದು ಸುತ್ತುವ ಬೆಳ್ಸುಟಿಯೆಂಬ ಚಂದ್ರಬಿಂಬದ ಕರೆಯಂತೆ ತೋರಿದುದು ಕುಂತಳವಾಗಳನಂತನಾಥನಾ: **ಅನಂತಪು,** ೯. ೨೫)

**ಬೆಳ್ಳ** – ದಡ್ಡ (ಎನಗೆ ಎಕ್ಕಬಾಗೆ ನೋಡೀಗಳ್ ಈ ಇಳಾಲತಾಂಗಿ ಪುದುವಲ್ಲಳ್ ಅದೆಂತೆನೆ ಮುನ್ನ ನೂಲ ತೋಡಾಗದೆ ಕೆಟ್ಟು ಪೋದವರಂ ಇಂ ಮಗುಟ್ದುಂ ನಿಱಿಪಂತು ಬೆಳ್ಳನೇ: **ಪಂಪಭಾ,** ೯. ೪೬)

**ಬೆಳ್ಳಂಗೆಡೆ** – ಪ್ರವಾಹದಂತೆ ಬೀಳು (ಪೊಸತಂ ಸ್ತ್ರೀರಾಜ್ಯಮಂ ಮೇಣ್ಣಡೆದನೊ ಬಿದಿ ಲಾವಣ್ಯಸಿಂಧುಪ್ರವಾಹಂ ಪೊಸತೀಗಳ್ಬಂದು ಬೆಳ್ಳಂಗೆಡೆದುದೊ: **ಆದಿಪು,** ೧. ೮೨); ಬೆಳ್ಳಗೆ ಹರಡು (ಬೆಟ್ಟದ ಬೆಳ್ಪಿವೆಳ್ಪು ಬೆಳ್ಳಂಗೆಡೆದೊಪ್ಪೆ .. .. ಕಣ್ಗೆ ಕರಂ ಮನೋಹರಂ: **ನೇಮಿನಾಪು,** ೨. ೭೧)

**ಬೆಳ್ಳಕ್ಕರಿಗ** – ಬೆಪ್ಪನಾದ ಪಂಡಿತ, ಕೂಚುಭಟ್ಟ (ಶುಷ್ಕವೈಯಾಕರಣಂಗಂ ಶುಷ್ಕ ತಾರ್ಕಿಕಂಗಂ ಬೆಳ್ಳಕ್ಕರಿಗಂಗಂ ವಿಷಯಮೆ ಕಾವ್ಯಂ ಅತಿಚತುರಕವಿಕದಂಬಕವಿಷಯಂ: **ಆದಿಪು,** ೧. ೨೪)

**ಬೆಳ್ಳಡಿ** – ಗೊರವ; ಗರುಡ (ಸುರಪತಿಯ ಬೆಳ್ಳಡಿಯ ರಥಚರಣದ .. .. ಭಾಸುರವಾದ್ಯದ ಪೆಸರ ಖಗಕುಳಂ ಕರಮೆಸೆಗುಂ: **ರಾಜಶೇವಿ,** ೫. ೬೦)

**ಬೆಳ್ಳವಾಸ** – [ಜೈನ] ಚಳಿಗಾಲದಲ್ಲಿ ಪ್ರವಾಹದಲ್ಲಿ ನಿಂತು ಮಾಡುವ ತಪಸ್ಸು (ತನು ತನಗಲ್ತು ಎಂದೇಕಾಂತ ನಿವಾಸದೊಳಿಂತು ಬೆಳ್ಳವಾಸದೊಳಿರ್ದಂ: **ಆದಿಪು,** ೬. ೩೩)

**ಬೆಳ್ಳಾಗು** – ಅವಿವೇಕಿಯಾಗು (ಈ ವಿಮೋಹದೊಳದೇಕೆ ಗಡಂ ಬಗೆಯಂ ತಗುಳ್ಚಿ ಬೆಳ್ಳಾದಪನಕ್ಕಟಾ ಖಚರಂ: **ಆದಿಪು,** ೨. ೩೫)

**ಬೆಳ್ಳಾನೆ** – ಬಿಳಿಯ ಆನೆ, ಐರಾವತ (ಅಂತು ಬೆಳ್ಳಾನೆ ಬೆಳೆಗೆಯ್ಯಂ ಪೊಕ್ಕಂತಿರಾಂತ ಬಲಮಂ ಪಡಲ್ವಡಿಸೆ: **ಕರ್ಣನೇಮಿ,** ೧೪. ೮೫ ವ)

**ಬೆಳ್ಳಾರ** – ಬಿಳಿಯ ಮುತ್ತಿನ ಹಾರ (ಜಗಮನಾವಗಂ ಸುತ್ತಿದ ಮುನ್ನೀರೆಂಬುದು ಬಿರುದಿನ ಬೆಳ್ಳಾರ ಎನಿಸಿದುದು ಅದಟರಾಯ ಕೋಳಾಹಳನಾ: **ಯಶೋಧಚ,** ೧. ೧೫); ಬಲೆ (ಆಗಮಮೆ ಬೆಳ್ಳಾರಂ ಮಹಾದೀಕ್ಷೆ ಕೂರ್ಗಣೆ ತರ್ಕಂ ಬಡಿಕೋಲ್ .. .. ಜಾನಮೆ ಕವಣೆ ನಾರಾಚಂ ತಪೋವಿಸ್ತರಂ: **ಶಬರಶಂ,** ೩. ೨೫)

**ಬೆಳ್ಳಾಲ** – ದೊಡ್ಡ ಬಲೆ (ಕೆಯ್ವೊಡೆ ಬೆಳ್ಳಾಲಂ ಗಾಳದ ಕಟ್ಟಿಗೆ ಕೌಳೇಯಕವಿತತಿ ಸೆಂಡುಕೋಲ್ ಅಸಿಚಕ್ರಂ: **ಪಾರ್ಶ್ವನಾಪು,** ೧೨. ೭೪)

**ಬೆಳ್ಳಾಳ್** – ಅವಿವೇಕಿ, ಮೂರ್ಖ (ಬೆಳ್ಳಾಳ್ ಕಳ್ಳಾಳ ಸರಮಂ ಕೇಳ್ದಂತೆ ಪೆಪ್ಪಳಿಸಿ ಮಗುಟ್ದು ಮನೆಗೆ ಬಂದು: **ಪಂಚತಂತ್ರ,** ೧೨೯ ವ)

**ಬೆಳ್ಳಿ** – ಶುಕ್ರಗ್ರಹ (ಪೊತ್ತಡರ್ದೊಂದೆ ಬೆಳ್ಳಿ ಬೆಳಗಿತ್ತು ಮಾಗಿಯೊಳ್: **ಲೀಲಾವತಿ,** ೯. ೫)

**ಬೆಳ್ಳಿಯ ಬೆಟ್ಟ** – ಕೈಲಾಸಪರ್ವತ (ಬೆಳ್ಳಿಯ ಬೆಟ್ಟಮಲ್ತುಜಾದಿನ ನಗಮೆಂಬಶಂಕೆಯನೆ ಮಾಡಿದುದಾ ವಿಜಯಾರ್ಧಪರ್ವತಂ: ಶಾಂತಿಪು, ೪. ೩೩)

**ಬೆಳ್ಳಿಯುತ್ತರಿಗೆ** – ಬೆಳ್ಳಿ ಜರಿಯ ಉತ್ತರೀಯ (ವರಕಮಂಡಲಮೊಪ್ಪೆ ಹಸ್ತದೊಳೋಜೆವೆತ್ತಿರೆ ಬೆಳ್ಳಿಯುತ್ತರಿಗೆ ಜನ್ನಿವರಂ ಬೆಡಂಗಳವಟ್ಟು .. .. ಭಾಸುರ ಚತುರ್ವದನಂ ವಿರಾಜಿಸೆ: **ಧರ್ಮಾಮೃ,** ೫. ೧೩೩)

**ಬೆಳ್ಳಿಗೊಡೆ** – ಬೆಳ್ಳಿಯ ಕೊಡೆ, ಬೆಳ್ಗೊಡೆ (ಶಕ್ರಂಗೆತ್ತಿ ಮಾಣಿಕಗೊಡೆ ಪೊಂಗೊಡೆ ಬೆಳ್ಳಿಗೊಡೆಯೆನಿಸಿದುದು ವಿಧುಬಿಂಬಂ: **ಜಗನ್ನಾವಿ,** ೧೬. ೦೬)

**ಬೆಳ್ಳಿವೆಟ್ಟ** – ಬೆಳ್ಳಿಯ ಬೆಟ್ಟ (ಬೆಳ್ಮುಗಿಲನುಟ್ಟ ಬೆಳ್ಳವೆಟ್ಟದಂತೆ ಬೆಳ್ಳುಂಬಟ್ಟೆಯನುಟ್ಟು: **ಲೀಲಾವತಿ,** ೧೨. ೮೭ ವ)

**ಬೆಳ್ಳುಂಬಟ್ಟೆ** – ಬಿಳಿಯ ಬಟ್ಟೆ (ಬೆಳ್ಮಿಗಿಲನುಟ್ಟ ಬೆಳ್ಳಿವೆಟ್ಟದಂತೆ ಬೆಳ್ಳುಂಬಟ್ಟೆಯನುಟ್ಟು .. .. ರಯ್ಯಮಾಗಿ: **ಲೀಲಾವತಿ,** ೧೨. ೮೭ ವ)

**ಬೆಳ್ಳುಳ್ಳಿ** – ಬಿಳಿಯ ಉಳ್ಳಿ, ಲಶುನ (ಕನಲ್ವ ಕೆಂಡದ ಮೇಲೆ ಪೞೆಯ ಬೇವಿನೆಣ್ಣೆಯೊಳ್ ತೊಯ್ದಿಕ್ಕಿದ ಬೆಳ್ಳುಳ್ಳಿಯ ಕಂಪಿನಂತೆ: **ಪಂಪಭಾ,** ೧೩. ೭೧ ವ)

**ಬೆಳ್ಳೆರಲೆ** – ಹೆದರಿದ ಜಿಂಕೆ (ರಾಜಸುತಸಂದೋಹಂ ಗಱಿ ಸೋಂಕದೆ ಬೆಳ್ಳೆರಲೆಗೆಗಱಿಮೂಡಿದ ತೆಱದಿನೋಡಿ ಪೋದತ್ತಾಗಳ್: **ಪಂಪರಾ,** ೩. ೫೬)

**ಬೆಳ್ಳೆರಳೆ** – ಹೆದರಿದ ಜಿಂಕೆ (ಕಡುಗರ್ಪುವೆತ್ತು ಬಿತ್ತರಿಪ ದೀಪದೆರಳೆಗಳಂ ಬೆಳ್ಳೆರಳೆಗಳೆನಿಸಿಯುಂ .. .. ಪಳಚ್ಚನೆ ಪಜ್ಜಳಿಪ ಸಾಂದ್ರಚಂದ್ರಾತಪಾಡಂಬರದೊಳ್: **ಶಾಂತೀಶ್ವಪು,** ೧೧. ೪೭ ವ); ಪುಕ್ಕಲ (ಬೆಳ್ಳೆರಳೆಗಳಪ್ಪ ಲೋಕದ ಜಡಾತ್ಮರನಂಜಿಪನೆಂದು ಧಾರಿಣೀಧರವಧು ಕಾಮನಂ ನಗುವ ಭಂಗಿಯೊಳಿರ್ದುವು ವಾರಿಜಾಕರಂ: **ಧರ್ಮಾಮೃ,** ೧೩. ೧೬)

**ಬೆಳ್ಳೋಟ** – ತಪ್ಪು ಓಟ (ಕಿಱುವೇಂಟೆಯ ನಾಯ್ಗಳಿಂದ ಮುಟ್ಟುಪಟ್ಟ ಪೆಣ್ಮೊಲನಂತೆ ಭಯಮಂ ಎಡೆಗಲಿಸಿ ಬೆಳ್ಳೋಟಂ ಓಡಿ ಜವಂಗೆಟ್ಟು ಕಾಲ್ ಪೆಡಂಗಲಿಸೆ ಬೀೞುತ್ತುಂ ಏೞುತ್ತುಂ ಎಂತಾನುಂ ಎಯ್ದಿ: **ಶಾಂತಿಪು,** ೭. ೯೧ ವ)

**ಬೆಱಂಟು** – ಬಱುಂಟು, ಗೀಚು, ಗೆಬರು (ಭೂಭಾಗಮಂ ಅತ್ಯುತ್ಸಾಹದಿಂ ದಕ್ಷಿಣಖುರದೆ ಬೆಱಂಟಿತ್ತು ದಿವ್ಯಾಶ್ವಂ: **ಕಾದಂಬ,** ೩. ೧೫)

**ಬೆಱಗಾಗು** – ವಿಸ್ಮಯಪಡು (ಬ್ರಹ್ಮಯ್ಯಂಗೆ ಮಹಾದೇವಿ ಬಡ್ಡಿಸಿದೊಡೆ ದೇಶಿಗಂ ಕಂಡು ಬೆಱಗಾಗಿ: **ವಡ್ಡಾರಾ,** ಪು. ೭೮, ಸಾ. ೧೯)

**ಬೆಱಗಾಗುಹ** – ಆಶ್ಚರ್ಯವಾಗುವಿಕೆ; ತಳಮಳ (ತಳಮಳಗೆಂದು ಬೆಱಗಾಗುಹ: **ಶಬ್ದಮದ,** ಪ್ರಸಾ ೯೯)

**ಬೆಱಗು** – ಸೆಡೆತ (ಸುರಭಿಯ ತೊರೆದ ಕುಚಂಗಳ ಬೆಱಗಂ ಬೆರಲಿಳಿಸೆ ಪರಮಹಸ್ತಪುಟಾಂತರದೊಳ್ ಅಮೃತಮೆನೆ ಕಱೆದಾ ವರವಧು ಪುತ್ರಾರ್ಥಿ ಪಾತ್ರಶೇಷಮನುಣ್ಬಳ್: **ಪುಷ್ಪದಂಪು,** ೩. ೧೦೯)

**ಬೆಱಟಿ** – ಬೆರಣಿ, ಸಗಣಿ (ಪತ್ತುಂ ಬೆರಲೊಳ್ ಸೊಡರಂ ಪತ್ತಿಸುವರ್ ಪೇಲ ಬೆಱಟಿಗಳಂ ಇಱಿಯಿಸುವರ್: **ಸಮಯಪ,** ೯. ೧೨೨)

**ಬೆಱೆ** – ಕಂಗೆಡು (ಬೆಱೆತುಳಿದೆನಾಗಿಯುಂ ತನು ಕಿಱಿದಾಗಿಯುಂ ಅತ್ತಮಾಯುಮುಂಟಾಗಿಯುಂ ಮೇಣಱಿಯಂ ಕಾಣಂ ತಂದೆಯ ಗಱಿಯೊಳಗಿರ್ದವನೆನ್ನನಂದು ನೃಶಂಸಂ: **ಕಾದಂಬ,** ೧. ೧೫೪); ಅಹಂಕಾರಪಡು (ನೀನೀ ಧರಿತ್ರೀಧರಸಾನುಸ್ಥಾನದಿಂ ಪೋಗದೆ ಬೆಱತಿರೆ ನಿನ್ನಂ ಸಮಂತೆನ್ನ ಬಾಹಾಪರಿಘಾತಕ್ಕೆ ಪಕ್ಕಾಗಿಸಿ .. .. ಜಠರಶಿಖಾಜ್ವಾಲಿಕಾಮಾಲೆಗೀವೆಂ: **ಶಾಂತೀಶ್ವಪು,** ೯. ೧೪೧)

**ಬೆೞಲ್** – ಬೆಳಲ, ಬೇಲದ ಮರ (ಬಿಣ್ಗೊನೆ ಕೊಂಬುಗೊಂಬಿನೊಳ್ ತೀವಿರೆ .. .. ನೇಱಿಲ್ ಇಂಚಡಕೆ ಬಾೞೆ ಬೆೞಲ್ ಹಲಸು ಈೞೆ ಕಮ್ಮರಂ: **ಆಚವರ್ಧ,** ೨. ೩)

**ಬೆಳ್ಕುಱು** – ಭಯಪಡು (ಬೆಳ್ಕುತ್ತರ್ ಬೆಕ್ಕಸಮುತ್ತರ್ ಭಯರಸದಿಂ ದೆಸೆಗೆಟ್ಟರ್ ಕಂಡು ಅದೃಷ್ಟಪೂರ್ವಮನಾರ್ಯರ್: **ಪಂಪರಾ,** ೧. ೭೧)

**ಬೇ** – ಬೆಯ್, ಸುಡು (ಹರನೀಕ್ಷಿಸೆ ಜಳನಿಳಯಂ ಹರಿಮೇಖಳೆಯಿಂದೆ ಬೇತು ದಲ್ದಶದಿಶೆಗಳ್ ಪಿರಿದಡಗಿ ಪೋದುವು: **ತ್ರಿಷಷ್ಟಿಪು,** ೨೪. ೧೨೧); ಸಂಕಟಪಡು (ರುಜೆಯೊಳ್ ಬೇವಂಗೆ ದಿವ್ಯೌಷಧಂ .. .. ದುರೌಘವಶದಿಂ ಬೇವರ್ಗೆ ತತ್ಸುವ್ರತಂ: **ಧರ್ಮಾಮೃ,** ೩. ೯)

**ಬೇಂಟ** – ಪ್ರಣಯ (ಅಂತಾ ಬಾಲೆ ಕಾಯ್ದ ಪುಡಿಯೊಳಗೆ ಬಿಸುಟ್ಟ ಎಳವಾಳೆಯಂತೆ ಸುರತ ಮಕರಧ್ವಜನೊಳಾದ ಬೇಟದೊಳ್ ಮಮ್ಮಲ ಮಱುಗುತಿರ್ದಳ್: **ಪಂಪಭಾ,** ೫. ೧೦ ವ)

**ಬೇಂಟಂಗೊಳ್** – ಪ್ರಣಯೋತ್ಸಾಹ ಹೊಂದು (ಆನೊರ್ವಳ್ಗೆ ಬೇಟಂಗೊಂಡಿರ್ದಂ: **ವಡ್ಡಾರಾ,** ಪು. ೧೩೧. ಸಾ. ೧೧)

**ಬೇಂಟಕಾಱ** – ಬೇಟೆಗಾರ (ಬೇಂಟಕಾಱನಂತೆ ಅಡಿವಜ್ಜೆಯನಱಿಸಯುಂ: **ಗದಾಯು,** ೬. ೨೮ ವ)

**ಬೇಂಟಗಾಱ** – ಪ್ರಣಯಿ, ಕಾಮುಕ (ಜಾರೆಯ ಮಾತಂ ನಂಬಿ ತನ್ನ ಪೆಂಡತಿಯಂ ಬಿಡುವ ಬೇಂಟಗಾಱನುಮಂ ಕಳ್ಳನ

ನುಡಿಯಂ ನಂಬಿ ತಳಾಱನಂ ಕೊಳ್ವ ಗ್ರಾಮಣಿಯುಮಂ: **ಧರ್ಮಾಮೃ,** ೮. ೩೧ ವ)

**ಬೇಂಟೆ** – ಕಾಡುಪ್ರಾಣಿಗಳನ್ನು ಕೊಲ್ಲುವುದು (ಎಂದು ಬಿನ್ನಪಂಗೆಯ್ದು ಬೇಂಟೆಯಾತಂಗೆ ಮೃಗವ್ಯಾಯಾಮ ಕಾರ್ತಿಕೇಯಂ ಮೆಚ್ಚಿ ಮೆಚ್ಚುಗೊಟ್ಟು ತೊವಲನಿಕ್ಕೆಂದು ಮುಂದೆ ಪೇೞ್ದಿಟ್ಟೆ ನಾರಾಯಣನುಂ ತಾನುಂ .. .. ಬೇಂಟೆಗೆ ಪೊಱಮಟ್ಟು: **ಪಂಪಭಾ,** ೫. ೪೭ ವ)

**ಬೇಂಟೆಗಾರ್ತಿ** – ಬೇಟೆಗಾರ ಹೆಣ್ಣು (ಪಾಂಥರ್ ಬಲವಂದು ಬೇರ್ಳ್ಮೃಗದವೋಲ್ ಸಾರ್ತಂದು ಬೆಳ್ಳಾಗೆ ಪಾಮರಿಯರ್ ಕಾಮನ ಬೇಂಟೆಗಾರ್ತಿಯರೆನಿಪ್ಪಾಶಂಕೆಯಂ ಮಾಡುವರ್: **ಸೂಕ್ತಿಸುಧಾ,** ೪. ೭೬)

**ಬೇಂಟೆಗಾಱ** – ಬೇಟೆಯಾಡುವವನು (ಕ್ರೂರರಪ್ಪ ಬೇಂಟೆಗಾಱರೊಳ್ಕೂಡಿ .. .. ಪಂಚಮಹಾಶಬ್ದಮನೊಲ್ಲದೆ ಬೇಂಟೆ ಪಱೆಯಂ ಪೊಯ್ಸಿ .. .. ಬೇಂಟೆಗೆ ಪೋಪ ರೌದ್ರಾತ್ಮರ್: **ಧರ್ಮಾಮೃ,** ೭. ೩೭ ವ)

**ಬೇಂಟೆಯಾತ** – ಬೇಟೆಗಾರ (ಎಂದು ಬಿನ್ನಪಂಗೆಯ್ದು ಬೇಂಟೆಯಾತಂಗೆ ಮೃಗವ್ಯಾಯಾಮ ಕಾರ್ತಿಕೇಯಂ ಮೆಚ್ಚಿ ಮೆಚ್ಚುಗೊಟ್ಟು ತೊವಲನಿಕ್ಕೆಂದು ಮುಂದೆ ಪೇೞ್ದಿಟ್ಟೆ ನಾರಾಯಣನುಂ ತಾನುಂ .. .. ಬೇಂಟೆಗೆ ಪೊಱಮಟ್ಟು: **ಪಂಪಭಾ,** ೫. ೪೭ ವ)

**ಬೇಂಟೆವಱೆ** – [ಬೇಂಟೆ+ಪಱೆ] ಬೇಟೆಯ ಡೋಲು (ತೊಟ್ಟ ಎಕ್ಕವಡಂ ಮರವಿಲ್ ಕಟ್ಟಿದ ಪಣೆಕಟ್ಟು ಬೇಂಟೆವಱೆ ದೊರೆಯೊಳ್ ಒಡಂಬಟ್ಟ ಅಸಿಯ ಸುರಗಿ ದಳಿವದ ತೊಟ್ಟ ಅಂಗಿಗೆ ತನ್ನೊಳ್ ಅಮರೆ ಬೇಂಟೆಯನೊರ್ವಂ; **ಪಂಪಭಾ,** ೫. ೩೬)

**ಬೇಗ** – ಹೊತ್ತು (ಊಳ್ವ ಬಗ್ಗಿಸುವ ಬೇಗದೊಳಾ ಕಟಕಂಗಳೆಯ್ದೆ ಕೆಯ್ಕೊಂಡುವು ಮಂದರಕ್ಷುಭಿತ ದುಗ್ಧಪಯೋಧಿ ಗಂಭೀರನಾದಮಂ; **ಪಂಪಭಾ,** ೧೦. ೪೯); ತ್ವರೆ, ವೇಗ (ಇಂತು ಭರತರಾಜನ ರಥದ ಮನೋರಥದ ಬೇಗಮೊದವಿದುದಾಗಳ್: **ಆದಿಪು,** ೧೨. ೮೦)

**ಬೇಗಡೆವೆಸ** – ವೆಜ್ಜದ ಕೆಲಸ, ರತ್ನಕ್ಕೆ ರಂಧ್ರ ಕೊರೆಯುವ ಕೆಲಸ (ಕಡೆಪದ ಕಾಂತಿ ಕಂಡರಣೆಯುನ್ನತಿ ಚಿತ್ರದ ಚಿತ್ತವೃತ್ತಿ ಬೇಗಡೆವೆಸದೇೞ್ಗೆಯಲ್ಲಿ ಪೊಸತಾದುದು: **ಚಂದ್ರಪ್ರಪು,** ೧. ೧೪೪)

**ಬೇಗಯ್ಯೆ** – ಚಳಕ (ಕಡುಗೆಯ್ಯನಾಗಿ ಶೀಘ್ರಸಂಧಾನಮಿಸುವ ಅಶ್ವಗ್ರೀವನ ತಕ್ಕುಂ ಬೇಗಯ್ಯೆಯುಂ ಕಿಡೆ: **ಶಾಂತಿಪು,** ೫. ೬೦ ವ)

**ಬೇಗುದಿಗೊಳ್** – ಬಿಸಿಲಿನಿಂದ ಬಳಲು (ಬಿಸಿಲೊಳ್ ಬೇಗುದಿಗೊಂಡವಂ ತಣ್ಗೊಳನಂ ಪೊಕ್ಕಂತೆಯುಂ ಬಡವಂ ಕಸವರಮಂ ಕಂಡಂತೆಯುಂ: **ಕಬ್ಬಿಗಕಾ,** ೨೫೦ ವ); ಸಂತಾಪಗೊಳ್ಳು

**ಬೇಗೆ** – ಉರಿ, ಜ್ವಾಲೆ (ಘೋರಕಾಂತಾರಮನೊಂದು ಬೇಗೆ ಪರಿವಂತು ರಥಂ ಪರಿದತ್ತು: **ಪಂಪಭಾ,** ೮. ೯೮); ಸಂಕಟ (ವಿರಹಿಗೆ ಬೇಗೆಯಂ ಪ್ರಿಯರ್ಗೆ ರಾಗಮಂ ಆಗಿಸುಗುಂ ಬನಂಗಳೊಳ್ ಮೊರೆವ ಮದಾಳಿ: **ಸೂಕ್ತಿಸುಧಾ,** ೪. ೪೧)

**ಬೇಗೆಗಿರ್ಚು** – ಬೆಂಕಿಯ ಜ್ವಾಲೆ (ಬೇಗೆಗಿರ್ಚಿನೊಳ್ ಬೇವವೊಲಿರ್ದುರ್ವಿರ್ವಲದ ಬಿಲ್ಲಣಿಗಳ್ ರಣರಂಗಭೂಮಿಯೊಳ್: **ಪಂಪರಾ,** ೧೩. ೪೮)

**ಬೇಂಟ** – ಪ್ರಣಯ (ವಿಸ್ಮಯಮಪ್ಪಿನಮಾ ಸ್ವಯಂಪ್ರಭೆ ಲಲಿತಾಂಗನಳ್ಕೆರ್ದೆಗೆ ತೊಟ್ಟನೆ ಬೇಂಟಮೆ ಪುಟ್ಟೆ ಪುಟ್ಟಿದಳ್: **ಆದಿಪು,** ೨. ೭೩)

**ಬೇಂಟೆಪಱೆ** – ಬೇಟೆಯ ಕಾಲದಲ್ಲಿ ಹೊಡೆಯುವ ತಮಟೆ (ಹಾರಾದ್ಯಾಭರಣಂಗಳನೊಲ್ಲದೆ ತೋಲ್ಗಟ್ಟಿ ಪಂಚಮಹಾಶಬ್ದಮನೊಲ್ಲದೆ ಬೇಂಟೆಪಱೆಯಂ ಪೊಯ್ಸಿ: **ಧರ್ಮಾಮೃ,** ೭. ೩೭ ವ)

**ಬೇಟ** – [√ಬೇಡು] ಅಭಿಲಾಷೆ, ಪ್ರಣಯ (ಮೇಲ್ವಾಯ್ದುಂ ಏವೈಸಿಯುಂ ಪಿರಿದುಂ ಉಂದುವ ಬೇಟದೊಂದು ಸುಸಿಲಂ ನೋಯಿಕ್ಕುಂ: **ಆದಿಪು,** ೧೨. ೨೩)

**ಬೇಟಕಾಱ** – ಪ್ರಣಯಿ (ಇದಂ ಪುಗಲಿಂ ಗಡಿಂ ಎಂದು ಬೇಟಕಾಱರಂ ಇರದೆ ಊಱೆ ಸಾಱೆ ಜಡಿವಂತೆ ಎಸೆಗುಂ ಸಹಕಾರಕೋಮಳ ಅಂಕುರಪರಿತುಷ್ಟ ಪರಪುಷ್ಟಗಳ ಧ್ವನಿ ನಂದನಂಗಳೊಳ್: **ಪಂಪಭಾ,** ೨. ೧೩)

**ಬೇಟಕಾರ್ತಿ** – ವೇಶ್ಯೆ (ಮತ್ತೊರ್ವ ಬೇಟಕಾರ್ತಿ ತಾಯ ಕಣ್ಣ ಬಂಚಿಸಿ ತನ್ನ ಮೋಪಿನಾಕೆಯ ಮನೆಗೆ ಪೋಪಬೇಟದಾಣ್ಮನಂ ಪಿಡಿದು: **ಪಂಪಭಾ,** ೪. ೯೮ ವ)

**ಬೇಟದಚ್ಚಿಗ** – ಪ್ರಣಯ ಕಾತರತೆ (ಕಂತು ಬಿಲ್ದೆಗೆಯೆ ಬಟಿಕ್ಕೆ ಕೈದೆಗೆವ ಗಾವಿಲಗೆ ಏವುದೊ ಬೇಟದಚ್ಚಿಗಂ: **ಲೀಲಾವತಿ,** ೧೪. ೩೭)

**ಬೇಡ** – ಬೇಟೆಯ ವೃತ್ತಿಯವನು (ಕಾಡೊಳ್ ಬೇಡರಂತೆ ತೊಟಿಲ್ವ ದಾಯಿಗರ ಕಂದಿ ಕುಂದಿದ ಮೊಗಂಗಳಂ ನೋಡುವುದುಂ: **ಪಂಪಭಾ,** ೭. ೩೨ ವ); ನಿರಾಕರಣೆಯನ್ನು ಸೂಚಿಸುವ ಅವ್ಯಯ (ಬೇಡ ವಿರೋಧಮೆಂತುಂ ಅರಿಕೇಸರಿಯೊಳ್ ಸಮಸಂದು ಸಂಧಿಯಂ ಮಾಡು: **ಪಂಪಭಾ,** ೧೩. ೫೪)

**ಬೇಡಕೊಟ್ಟ** – [ಬೇಡ+ಕೊಟ್ಟ] ಬೇಡರ ವಾಸಸ್ಥಳ (ಧನ್ವಂತಿರಿಯುಂ ಅಂತೆ ನಾಲ್ವರಂ ಕರೆದು ನೀವೀ ಬೇಡಕೊಟ್ಟದೊಳ್ ಮಾಂಸಮಂ ತನ್ನಿ ಎಂದು ಅಟ್ಟುವುದುಂ: **ಧರ್ಮಾಮೃ,** ೨. ೧೨೪ ವ)

**ಬೇಡರಸ** – ಬೇಡರ ಮುಖ್ಯಸ್ಥ (ತಮ್ಮಾಳ್ದನಪ್ಪ ಬೇಡರಸಂಗೆ ದೇವತೆ ಬಂದು ಭೀಮವನದೊಳಿರ್ದಳ್ ಅಲ್ಲಿಗೆ ಪೋಗಿ ನಿಮ್ಮ ಬೇೞ್ವ ವರಮಂ ಬೇಡಿಕೊಳ್ಳಿಂ ಎಂದು ಬಿನ್ನಪಂಗೆಯ್ವುದುಂ: **ಧರ್ಮಾಮೃ,** ೩. ೫೭ ವ)

**ಬೇಡವಟ್ಟ** – ಬೇಡರ ಹಟ್ಟಿ (ಎನ್ನಂ ಪಿಡಿದುಕೊಂಡು ದಕ್ಷಿಣಾಭಿಮುಖನಾಗಿ ಪೋಪುದುಂ ಬೇಡವಟ್ಟಮಂ ಕಂಡು ಕಂಟಣಿಸುತ್ತುಂ ಬರುತಿರೆ: **ಕಾದಂಸಂ,** ೮. ೩೫ ಮತ್ತು ೩೫ ವ)

**ಬೇಡವಟ್ಟು** – ಬೇಡವಟ್ಟ (ಕಂಟಕರೋಡದ ಬೇಡವಟ್ಟು ಪೋಗದ ಕಲಿಗೋಂಟೆ ಸಿಲ್ಕದ .. .. ಖಳರ್ ಅನ್ಯಮಂಡಳದೊಳಿಲ್ಲ: **ಪುಷ್ಪದಂಪು,** ೫. ೫೫)

**ಬೇಡವಡೆ** – ಬೇಡರ ಗುಂಪು, ಸೈನ್ಯ (ಬೇಡವಡೆ ಮುಸುಱೆಕೊಂಡೆಸಾಡೆ ಸುರುಳ್ದಗಿದು ಕೊಡೆಯ ಚರ್ಮದ ಮಱೆಯೊಳ್ ಗೂಡುಗೊಳುತಿರ್ದ ಶೌರ್ಯಕ್ರೀಡೆಯ ದಿಗ್ವಿಜಯಮೆಸೆದುದೆಮ್ಮಗ್ರಜನಾ: **ಆದಿಪು,** ೧೪. ೭೨)

**ಬೇಡವಳ್ಳಿ** – ಬೇಡರು ವಾಸಿಸುವ ಹಳ್ಳಿ (ಅಡವಿಯೊಳ್ ದುಷ್ಪಾಶ್ವಮನೇಱೆ ಪಂದಿಯ ಬೞಿಯಂ ತಗುಳ್ವೊಡೆ ಅದು ಗಾಳಿಗೊಂಡು ಒಂದು ದೆಸೆಗೆ ಪರಿದು ವಿಂಧ್ಯಾಟವಿಯ

ನಟ್ಟನಡುವೆ ಸುರಮ್ಯಮೆಂಬ ಬೇಡವಳ್ಳಿಯ ಸಾರೆ: **ವಡ್ಡಾರಾ,** ಪು ೧೬೨, ಸಾ ೧೭)

**ಬೇಡವೆಣ್** – ಬೇಡರ ಹೆಣ್ಣು (ಕೋಡಗಂಗಂ ನೀಡುಂ ನೋಡಿ ನಗೆಗಡಲೊಳ್ ಓಲಾಡುವ ಬೇಡವೆಣ್ಗಳಿಂ: **ರಾಜಶೇವಿ,** ೫. ೫೫ ವ)

**ಬೇಡಿತಿ** – ಬೇಡ ಹೆಂಗಸು (ಅಲರ್ಗಣ್ ಪೊಂಗಿದ ಲೋಳಿವಾಯ್ ನಗೆಮೊಗಂ .. .. ಚೆಲ್ವಾಗಿರೆ ನಿಂದ ಬೇಡತಿಯರಂ ಕಂಡಂ ಮಹೀವಲ್ಲಭಂ: **ಕಾವ್ಯಾವಲೋ,** ೨೦೬)

**ಬೇಡಿತ್ತು** – ಬೇಡಿದುದು (ಕುಮಾರನನೆತ್ತಿದಂಗೆ ಬೇಡಿತ್ತಂ ಕುಡುವೆನೆಂದು ಡಂಗುರಂಬೊಯ್ಸಲೊಡಂ: **ಪಂಚತಂತ್ರ,** ೧೮೫ ವ)

**ಬೇಡಿದಂ** – ಬೇಡಿದವನು, ಯಾಚಕ (ಬೇಡಿದನ ಇಷ್ಟಮಂ ಸಲಿಪುದು ಕರ್ಣಂಗೆ ಜನ್ಮವ್ರತಂ: **ಶಬ್ದಮದ,** ೮೨ ಪ್ರ ३)

**ಬೇಡು** – ಬಯಸು (ಭೀಮ ನಕುಳ ಸಹದೇರ್ಗಳ್ಗೆ ದುರ್ಯೋಧನನ ತಮ್ಮನಪ್ಪ ಯುಯುತ್ಸುಗಂ ಅವರ್ ಬೇಡಿದ ನಾಡುಗಳನೆ ಕುಡಿಸಿ ಸಂತಸಂಬಡಿಸೆ: **ಪಂಪಭಾ,** ೧೪. ३೬ ವ); ಯಾಚಿಸು (ಜಾತಿಜರಾಮರಣಂಗಳಿಂದಪ್ಪ ಬಾಧೆಯಿನಗಲ್ದ ಶಾಶ್ವತಮಪ್ಪ ಮೋಕ್ಷಸುಖಂಗಳನೆ ಬೇಟ್ಪೆನ್: **ವಡ್ಡಾರಾ** ೧೧३, ಸಾ ೨೨); ಬೇಡಸಮೂಹ (ಬೇಡು–.. .. ಶಬರಸಮೂಹೇ ಚ: **ಶಬ್ದಮದ,** ಧಾ ३೪೦)

**ಬೇತಾಳ** – ಪಿಶಾಚಿ (ಆ ಜಿನಭವನದೊಳ್ ವಸಿಯಿಸುವ ದೇವತೆಗಳೆಲ್ಲಂ ಇವರಲ್ಲದುದಂ ನೆಗಟ್ದಪ್ಪರೆಂದಗುರ್ವಾಗೆ ಬೇತಾಳರೂಪುಗಳಂ ವಿಗುರ್ವಿಸಿ: **ಪಂಪರಾ,** ೧೪. ೯೦ ವ)

**ಬೇದನೆ** – [ವೇದನಾ] ಸಂಕಟ (ವತ್ವಕ್ಕೆ ಬಕಾರಂ: ವೇದನೆ– ಬೇದನೆ: **ಶಬ್ದಮದ,** ೨೭೧ ಪ್ರ)

**ಬೇನೆ** – ಕಾಯಿಲೆ (ದುರ್ಬಲಂಗಂ ಅಸಹಾಯಂಗಂ ಪ್ರತಿಕೂಲಂಗೆಯ್ದನಪ್ಪವಂಗಮಾವ ಕಜ್ಜಮುಂ ಬೆಜ್ಜೆಯಿಲ್ಲದ ಬೇನೆಯಂತೆ ತೀರಲಱಿಯದೆನೆ: **ಪಂಚತಂತ್ರ,** ೧೪೧ ವ); ನೋವು (ರೋಮರೋಮಂದಪ್ಪದೆ ಸರ್ವಾಂಗಮಂ ವೃಶ್ಚಿಕಸಹಸ್ರಂಗಳೊಡನೆ ಮಿಡಿದಂತಪ್ಪ ಬೇನೆಗಂ ಅನಂತಗುಣಮೆನಿಪ ದೇಹವ್ಯಥೆಯನೊದವಿಸುತ್ತುಂ: **ಆಚವರ್ಧ,** ೧೧. ೧೫ ವ); ಹೆರಿಗೆಯ ನೋವು (ಬೇನೆಯಿನಕ್ಕಿಗಳ್ ನಸುಮುಗುಳ್ತಿರೆ .. .. ತಟಭೂಜದೊಳೊಂದು ಕರೇಣು ಸೂಲಿಸುತ್ತೇನಣವಲ್ಲಿ ಮಾಡಿದುದೋ ಬೇಡರೊಳಂ ಕರುಣಾನುಭವಮಂ: **ಪುಷ್ಪದಂಪು,** ೫. ೮೨)

**ಬೇನೆ ಮೂಡು** – ತೊಂದರೆಯಾಗು, ನೋವಾಗು (ಎಮ್ಮ ಮಗಳಿಂಗೆ ಬ್ರತಂಗಳಂ ಆಮುಂ ಕೊಟ್ಟೊಡೆ ನಿನಗೆ ಬೇನೆ ಮೂಡಿತ್ತೆ: **ವಡ್ಡಾರಾ,** ಪು ೨೨, ಸಾ ೨೬)

**ಬೇರ್** – ಮೂಲ, ಬುಡ (ಭೀಮನುಮೊತ್ತಿ ಕಿಟ್ತು ಬೇರೊಡನೆ ಮಹೀಜಮೊಂದನಿಡೆಯುಂ: **ಪಂಪಭಾ,** ३. ೧೮)

**ಬೇರು** – ಬೇರ್ (ಪನ್ನೆರಡುವರ್ಷ ಬೇಡರಂತಡವಿಯೊಳ್ ನಾರಸೀರೆಯ ನುಟ್ಟು ಬೇರುಮಂ ಬಿಕ್ಕೆಯುಮಂ ತಿಂದು ಕಂದಿ ಕುಂದಿ ಪಂದೆಯ ಮನದಂತಳ್ಳಾಡುತಿರ್ದಪರ್: **ಪಂಚತಂತ್ರ,** ३೦೬ ವ)

**ಬೇರುಗ** – ಮೂಲಿಕೆಗಳ ವ್ಯಾಪಾರಿ (ಉಗ ಪ್ರತ್ಯಯಕ್ಕೆ: ನಾರುಗಂ ಬೇರುಗಂ ಊರುಗಂ ಕಾರುಗಂ ನೇಣುಗಂ: **ಶಬ್ದಮದ,** ೨೧೫ ಪ್ರ)

**ಬೇರೂಱು** – ನೆಲೆನಿಲ್ಲು (ನಭೋಭಾಗದಿಂ ಇಂದ್ರಚಾಪಮನಿತುಂ ಭೂಭಾಗದೊಳ್ ಬಂದು ತೊಟ್ಟನೆ ಬೇರೂಱಿದವೋ: **ಆದಿಪು,** ೭. ೨೪)

**ಬೇರ್ಕೈ** – ತೊಲಗಿಸು (ಇನಿವಾತನಾಡಿ ಮುನಿಸಂ ಬೇರ್ಕೈದು ನೇಹಂ ಮನಕ್ಕನುವಪ್ಪಂತಿರೆ ಮಾಡಿ: **ರಾಜಶೇವಿ,** ೧೧. ೧೦೧)

**ಬೇರ್ಗೊಳ್** – ಬೇರಿನಂದ ಆರಂಭಿಸಿ (ಬೇರ್ಗೊಂಡು ಕಣ್ತ ಪಲಸು ಎಳನೀರ್ಗಾಯಂ ತಳೆದ ತೆಂಗು .. .. ನೇರ್ಗಿಱಿಯವು ಕಲ್ಪತರುಗೆ ಸಿರಿಯಿಂದೆನುತುಂ: **ಚಂದ್ರಪ್ರಪು,** ೧೫. ೨೬)

**ಬೇರ್ನೆಲೆವೋಗು** – ಬೇರೆ ನೆಲೆಗೆ ಹೋಗು (ಕಾರ್ಯಾಂತರದೆ ಬೇರ್ನೆಲೆವೋದ ನಲ್ಲನ ಪಿಂಬಡಿಯೊಳ್ ಪಂಬಲಿಸಿಸುತಿರ್ದ ಬಿಂಬಫಲದಶನವಸನೆ: **ಅನಂತಪು,** ೮. ೨೦ ವ)

**ಬೇರ್ಪಡು** – ಪ್ರತ್ಯೇಕವಾಗು (ದಯಾಮೂಲಮಂ ಸಾವದ್ಯವ್ಯಾಪಾರಮಂ ಬೆರ್ಪಡೆ ತಿಳಿಪುವ ಉಪಾಧ್ಯಾಯರಾಧೇಯರೆಮ್ಮೊಳ್: **ಮಲ್ಲಿನಾಪು,** ೧. ೪); ಹರಡಿಕೊ (ಬೇರ್ಪಡು–ವಿವಿಕ್ತೇ ವಿವರೇ ಚ: **ಶಬ್ದಮದ,** ಧಾ ३೪೧)

**ಬೇರ್ವೆರಸು** – ಬೇರಿನೊಡನೆ, ಬುಡಸಹಿತ (ಬೇರ್ವೆರಸು ಕಿಟ್ತಿ ಪಲವುಂ ನೀರ್ವೂಗಳನೊಚ್ಚಿಕೊಂಡು ಬರ್ಪ ಗಜೇಂದ್ರಂ .. .. ಸುಕರೀಂದ್ರಮೆನಿಸಿದಾಗಳ್: **ಕಾವ್ಯಾವಲೋ,** ೭೧)

**ಬೇರ್ವರಿ** – ಬೇರುಬಿಡು (ರೂಪು ಶಾಸನಂ ಬರೆದುದು .. .. ಉರ್ಚಿ ಪೊಕ್ಕು ಬೇರ್ವರಿದುದು ಬೆಚ್ಚುದುದು ಅಚ್ಚಿಱಿದುದು ಎನ್ನರ್ದೆಯೊಳ್ ಲಲಿತಾಂಗದೇವನಾ: **ಆದಿಪು,** ३. ४३)

**ಬೇವತ್ತಕ** – ಒಂದು ಮರ (ಮತ್ತಿ ಮಧುಕಂ ಮುಂಗಾರೆ ಪಚ್ಚಾರಿದಿಂಡಲಂ ಆಲಂ .. .. ಬಕುಳಂ ಬೇವತ್ತಕಂ ಕಿಂಶುಕಂ: **ರಾಜಶೇವಿ,** ೫. ೫೬)

**ಬೇವತ್ತಿ** – ಒಂದು ಮರ (ಬಿಳಿಲ್ ಬಲ್ಮತ್ತಿ ಬೇವತ್ತಿ ಸೆಳ್ಳಲವಂ ಸಂಪಗೆ ತುಂಬುರಂಬಡೆ ಒವುಂಗು ಇಮ್ಮಾವು ಕಕ್ಕಿಮ್ಮರಂ: **ಪಾರ್ಶ್ವನಾಪು,** ೧೨. ೫೮)

**ಬೇವಸ** – ಆಯಾಸ (ಆವಡವಿಗಳೊಳ್ ಪಣ್ಣಲಂ ಆವಗಂ ಒಳವು ಅಲ್ಲಿಗಱಸಿ ಪರಿಪರಿದು ಕರಂ ತಾವಡಿಗೊಳ್ವ ಈ ಭೀಮನ ಬೇವಸಮಿದು ನಿನ್ನ ಮನಮಂ ಒನಲಿಸಿತಿಲ್ಲಾ: **ಪಂಪಭಾ,** ೭. ४೬); ವ್ಯಥೆ (ಮತ್ ಪ್ರಾಗ್ಜನ್ಮ ಕಥಾವಳಿಯೆಲ್ಲಮಂ ಬಗೆದು ನೋವೆನಗಾದುದು ನೋವಂತುಂತೆನಗಾವುದು ಬೇವಸಂ: **ಆದಿಪು,** ३. ३३); ಚಿಂತೆ (ಪೆಱರ್ ಎನ್ನಂ ಮರುಳೆಂದೊಡೆ ಮೇಗಾನದಱ ಬೇವಸಕ್ಕಾಱೆಂ ಎಂದು ಬಟಿಲ್ದಿರ್ಪಂತು ಧರ್ಮಮೇನರಿದೇ: **ಜೀವಸಂ,** ೨. ೭ ವ)

**ಬೇವಸಂಬಡೆ** – ಬೇವಸಂಬಡು (ಅಲರ್ಗೊಂಚಲಂ ಚಂಚರೀಕಶಾಬಕಂ ಕಾಣದುದ್ದೇಶಕ್ಕೆ ಬಯಲೊಳೆಱಗಿ ಬಱಿದೆ ಬೇವಸಂಬಡೆಯೆಯುಂ: **ಆಚವರ್ಧ,** ೬. ४४ ವ)

**ಬೇವು** – ಪಿಚುಮಂದ, ಅರಿಷ್ಟ (ನಿಂಬಂ ಅರಿಷ್ಟಂ ಪಿಚುಮಂದಂ ಬೇವು: **ಅಭಿಧಾವ,** ೧. ೮. ೧೦)

**ಬೇಸಗೆ**– [ವೈಶಾಖ] ಸೆಕೆಗಾಲ ವಿದ್ಯೆಗಳಿಂದಮೆ ಬೇಸಗೆಯ ಮಟಿಗಾಲಂ ಮಾಡಿ: **ವಡ್ಡಾರಾ,** ಪು. ೧೫೯. ಸಾ. ೫)

**ಬೇಸರ್ನುಡಿ** – ಬೇಜಾರಿನಿಂದ ಕೂಡಿದ ಮಾತು (ರೇಫಕ್ಕೆ: ಕೆಸರ್ಮಲ್ಲಿಗೆ ನೇಸರ್ಮಯಣಂ ಬೇಸರ್ನುಡಿ: **ಶಬ್ದಮದ,** ೧೮४ ಪ್ರ ४)

**ಬೇಸಱಿಸು** – ಬೇಸರವುಂಟುಮಾಡು (ಪಿರಿದುಂ ಬೇಸಱಿಸಿದುವು ಬಿರಯಿಯಂ ಜಳದಂಗಳ್: **ಚಂದ್ರಪ್ರಪು,** ೪. ೩೪)

**ಬೇಸಱು** – ಬೇಜಾರು[ಪಟ್ಟುಕೊ] (ಬೇಸಱ್ ಲೋಕಮಂ ತಗುಳ್ದು ಸುಟ್ಟ ಅೞಲಿಂದೆ ಖರಾಂಶು ನಾರಕಾವಾಸದೊಳ್ ಆೞ್ವವೋಲ್ ಅಪರವಾರ್ಧಿಯೊಳ್ ಆೞ್ವುದುಂ: **ಪಂಪಭಾ,** ೩. ೮೧)

**ಬೇಸಱಿಯ್ದು** – ಬೇಸರಪಟ್ಟುಕೊ (ಅಳವಳಿಸಂ ಬೆಬ್ಬಳಿಸಂ ಕಳವಳಿಸಂ ಕನಲಂ ಒನಲಂ ಅೞ್ಕಂ ಚಳವಳಿಸಂ ಚಪ್ಪರಿಸಂ ತಳವಳಿಸಂ ಬೇಸಱಿಯ್ದು ಬೆಳ್ಮೊಗದಿನಿರಂ: **ಅಜಿತಪು,** ೫. ೯೦)

**ಬೇಹಾರಿ** – ವ್ಯಾಪಾರಿ (ನಾಂ ಬೇಹಾರಿಯಪ್ಪುದಱಿಂದ ಎಮ್ಮ ಜಾತಿಧರ್ಮಕ್ಕೆ ಧರ್ಮಬುದ್ಧಿ ಅಧರ್ಮಬುದ್ಧಿಯಾಗಿ ಧನಮಂ ಬಂಚಿಸಿಕೊಂಡು ಎನ್ನ ಮನೆಗುಯ್ವೆಂ: **ಪಂಚತಂತ್ರ,** ೨೪೨ ವ)

**ಬೇಳ್** – ಹೋಮ ಮಾಡು (ಗಾಳು ಗೊರವಂ ತಗುಳ್ಚಿ ಪಳಾಳಮಂ ಏನೊಂದನಪ್ಪೊಡಂ ಗೞಪಿದೊಡೆ ಆ ಬೇಳುನುಡಿ ಕೇಳ್ದು ಕೆಮ್ಮನೆ ಬೇಳಲ್ ನಿಮಗಂತು ರಾಜಸೂಯಂ ಮೊಗ್ಗೇ: **ಪಂಪಭಾ,** ೬. ೨೪); ದಿಗ್ಭ್ರಾಂತಿ (ಮಾಱಾಂತಿಱಿವಲ್ಲಿ ಬೇಳಿ ಭಯದಿಂ ಬಿಱುತು ಓಡನ್ಯೆ ನಿನ್ನಧೀಶನುಂ: **ವರ್ಧಮಾಪು,** ೪. ೨೪); ದಡ್ಡ [ಭೋಗೀಂದ್ರಭೋಗಂ ಮಹೇಂದ್ರಮಹೈಶ್ವರ್ಯಂ ಇವೆಲ್ಲಂ ಅಧ್ರುವಂ ಇವಂ ಬೇೞ್ಪಂತು ಬೇಳನಲ್ಲೆಂ: **ಆದಿಪು,** ೧೦. ೬೧)

**ಬೇಳ** – ಹುಚ್ಚ, ತಿಳಿವಳಿಕೆಯಿಲ್ಲದವನು (ಭೋಗೀಂದ್ರಭೋಗಂ ಮಹೇಂದ್ರಮಹೈಶ್ವರ್ಯಂ ಇವೆಲ್ಲಂ ಅಧ್ರುವಂ ಇವಂ ಬೇೞ್ಪಂತು ಬೇಳನಲ್ಲೆಂ: **ಆದಿಪು,** ೧೦. ೬೧)

**ಬೇಳಂಬ** – ಸಂಭ್ರಮ (ರಾಜ್ಯಾಭಿಲಾಷೆಯಿಂದಿರ್ದೆನಪ್ಪೊಡೆ .. .. ಪಾಡುವ ರಾಗದಂತೆ ಬೇಳಂಬದ ಪರ್ವದಂತೆ ಕಡೆಯೊಳ್ ಪೇಸುಪಥಂ: **ಧರ್ಮಾಮೃ,** ೭. ౭೧ ವ); ಗಲಿಬಿಲಿ, ಗೋಜಲು (ಅಱಿಯೆಂ ಮತ್ತಾ ಪುರಂ ಚೆಲ್ವ ಆ ಪುರಂ ಇಂಬು ಆ ಪುರಂ ಒಳ್ಳಿತು ಆ ಪುರಮದು ಅಂತು ಇಂತು ಎಂಬ ಬೇಳಂಬಮಂ: **ಅನಂತಪು,** ೧. ೧೨೦)

**ಬೇಳಂಬಿಗ** – ನಕಲಿ, ಹಾಸ್ಯಗಾರ (ದಂಡದ ಬೇಳಂಬಿಗರ ಬೆದಂಡೆಯ ತಳಿಗೆಯ ಮಹೇಂದ್ರಜಾಲಿಗಳ ಮನಂಗೊಂಡೆಸೆವ ನೆಗೞ್ವಂಚೆಯ ತಂಡಂಗಳಿವಾವ ದೆಸೆಯೊಳಂ ಕಡುಪೆಯ್ಯಂ: **ವರ್ಧಮಾಪು,** ೧೧. ೨೦)

**ಬೇಳಾಗು** – ಬೆಪ್ಪಾಗು (ಇವುಮಿಲ್ಲದಿರ್ದ ಕವಿಗಳ್ ಕಾವ್ಯಂಗಳಂ ಮಾಡುವಾಗ್ರಹಮಂ ಮಾಡಿದೊಡೆ ಆ ಗ್ರಹಂ ಪೊಡೆದವೋಲ್ ಬೆಂಡಾಗಿ ಬೇಳಾಗರೇ: **ಅನಂತಪು,** ೧. ೩೮)

**ಬೇಳಾವನ** – [ವೇಲಾವನ] ಸಮುದ್ರದ ತಡಿ (ಬೇಳಾವನಪರಿವೃತ ಚತುರುದಧಿವಳಯವಳಯಿತ ಜಂಬೂದ್ವೀಪದ ಭರತಖಂಡದ ವಿನೀತಾಖಂಡದೊಳ್: **ಹರಿವಂಶ,** ೧. ೧೭ ವ)

**ಬೇಳುನುಡಿ** – ಮರುಳುಗೊಳಿಸುವ ನುಡಿ (ಗಾಳು ಗೊರವಂ ತಗುಳ್ಚಿ ಪಳಾಳಮಂ ಏನೊಂದನಪ್ಪೊಡಂ ಗೞಪಿದೊಡೆ ಆ ಬೇಳುನುಡಿ ಕೇಳ್ದು ಕೆಮ್ಮನೆ ಬೇಳಲ್ ನಿಮಗಂತು ರಾಜಸೂಯಂ ಮೊಗ್ಗೇ: **ಪಂಪಭಾ,** ೬. ೨೪)

**ಬೇಳುವೆ** – ಮಾಟ (ಕುಟಿಲ ಮಂತ್ರ ತಂತ್ರ ಯಂತ್ರ ಬೇಳುವೆ ತಿಲಕ ತಿಗರು: **ತ್ರಿಷಷ್ಟಿಪು,** ೨೩. ೧೭ ವ)

**ಬೇಳೆಗೆಯ್** – ಒಡೆ, ಬೇರ್ಪಡಿಸು (ಒಗುಮಿಗೆ ಬೇಳೆಗೆಯ್ದ ಮೆಳಸಂ ತಳಿದಲ್ಲದ ಚಲ್ಲಿಯಂ ಪವಣ್ಬುಗೆ ಕಲಸಿರ್ದ ತಣ್ಗಲಸುಗೂೞನಿಳಾಪತಿಗಿತ್ತಂ ಅೞ್ತಿಯಿಂ: **ಲೀಲಾವತಿ,** ೫. ೬೨)

**ಬೇಳ್ವೆ** – ಹೋಮ, ಯಜ್ಞ (ಬೇಳ್ವೆಗಳ್ಗೆ ಉಪದ್ರವಂಗೆಯ್ವ ನಿಶಾಟಕೋಟಿಯಂ ನಿಶಿತಶರಕೋಟಿಯಿಂದಂ ಉಚ್ಚಾಟಿಸಿ ಕೆಲವು ದಿವಸಮಿರ್ದು: **ಪಂಪಭಾ,** ೪. ೧೫ ವ); ಮಾಟ (ಅತ್ತ ದುರ್ಯೋಧನನ ಬೆಸದೊಳ್ ಆತನ ಪುರೋಹಿತಂ ಕನಕಸ್ವಾಮಿಯೆಂಬಂ ಪಾಂಡವರ್ಗೆ ಆಭಿಚಾರಮಾಗೆ ಬೇಳ್ವ ಬೇಳ್ವೆಯ ಕೊಂಡು: **ಪಂಪಭಾ,** ೮. ೪೨ ವ)

**ಬೇಳ್ವೇನೆ** – [ಬೇಳ್+ಬೇನೆ] ಸಂತಾಪ (ಓರಂತೆ ನೆಟ್ಟನೆ ಬೇಳ್ವೇನೆ ತಗುಳ್ದು ಕೊಂದಪುದು ಅದರ್ಕಾಂ ಏವೆನಬ್ಬಾನೇ: **ಶಾಂತೀಶ್ವಪು,** ೧೧. ೬೦)

**ಬೇಱಿರಿಸು** – ಪ್ರತ್ಯೇಕವಾಗಿರಿಸು (ವ್ರತಹೀನರನಿಬರುಮಂ ಕ್ಷಿತಿಪತಿ ಬೇಱಿರಿಸಿ ಮಾನ್ಯರಂ ಮನ್ನಿಸೆ: **ಆದಿಪು,** ೧೫. ೧೩)

**ಬೇಱೂರ್** – ಬೇರೆಯ ಊರು (ಬೇಱೂರ್ಗೆವೋದ ನಲ್ಲರ ನೆನೆದು ದೂಱಿಸುವ ನೀಱೆಯರ ನಿಡುಸುಯ್ಯ ಗಡಣದಿಂ: **ಕಬ್ಬಿಗಕಾ,** ೪೫ ವ)

**ಬೇಱೆ** – ಪ್ರತ್ಯೇಕವಾದುದು (ಮರಕತಮಣಿವಿರಚಿತ ವಿಮಲಭಿತ್ತಿ ಪೊಗೞಲ್ಕರಮರಿದದು ಬೇಱೆ ಭಿತ್ತಿ: **ಆದಿಪು,** ೪. ೩೧ ರಗಳೆ); ಅನ್ಯ (ನೀಂ ಬೆಱಾಂ ಬೇಱೆಂಬ ಭಿನ್ನಬುದ್ಧಿ ನಿನಗಂ ನನಗಂ ಬೇಡ: **ಪಂಚತಂತ್ರ,** ೧೯೬ ವ)

**ಬೇಱೆವೇಱೆ** – ಬೇರೆ ಬೇರೆ, ಪ್ರತ್ಯೇಕ (ವಾಸುಗಿಯುಂ ಅಱಿಯಲಾಱದೆ ಬೇಸಱುಗುಂ ದೇಶಿ ಬೇಱೆವೇಱಪ್ಪುದಱಿಂ: **ಕವಿರಾಮಾ,** ೧. ೪೬)

**ಬೇೞ್** – ಬೇಡು (ನಡೆಗೞ್ತೆಗಳಂ ಅನಿಬರ್ಗಂ ಏಱಲ್ ಕೊಟ್ಟು ಪಿರಿದಾಳಂ ನೆರಂ ಬೇೞ್ದು ಕಿಱಿದಂತರಂ ಕಟಿಪುತ್ತುಂ: **ಸುಕುಮಾಚ,** ೨. ೫೯ ವ)

**ಬೇಟೆ** – ಹೇಡಿ (ಕಾಳಾಂತಕನಂತೆ ನಾಡೆ ಹಳಿಯುಂ ಹರಿಯುಂ ಕಡುಕೆಯ್ದು ಪಾಯ್ದು ಮಾಱಾಂತಿಱಿದುವಲ್ಲಿ ಬೇಟೆ ಭಯದಿಂ ಬಿಱಿತೋಡನೆ ನಿನ್ನಧೀಶನುಂ: **ವರ್ಧಮಾಪು,** ೪. ೨೪)

**ಬೇೞ್ಕುಂ** – ಬೇಕು (ನೆರಪಲ್ವೇೞ್ಕುಮೆ ತಿಣ್ಣಂ ತೀಕ್ಷ್ಣಾಯುಧಂ ಬೇೞ್ಕುಮೇ: **ಜೀವಸಂ,** ೧೧. ೧೮)

**ಬೇೞ್ಪರ್** – ಬೇಡುವವರು (ಈಡಿತ ಜಿನವರ ಶಾಸನ ಚೂಡಾಮಣಿ ಬುಧರ್ಗೆ ಅನಲ್ಪ ಕಲ್ಪಕುಜಂ ಕೆಯ್ ನೀಡಿದ ಬೇೞ್ಪರ ನೆರವಿಗೆ ನೀಡಿಲ್ಲದೆ ಕುಡುವ ಉದಾತ್ತಂ ಆ ಜಿನಚಂದ್ರಂ: **ಶಾಂತಿಪು,** ೧. ೩೨)

**ಬೈ** – ಬಯ್, ಮರೆಮಾಡು (ನಾರಾಯಣ ಬಾಹುದಂಡದಳವಂ ನೋಡಲ್ ಗದಾದಂಡದಿಂ ಹಲಂ ಕೂಡಿದ ಚಾಪ ದಂಡ ಯುಗಮಂ ಬೈತಲ್ಲಿ ಕಾದಿರ್ಪುದುಂ: **ಪಂಪರಾ,** ೫. ೨೯)

**ಬೈಕಂಗುಳಿ** – ಭಿಕ್ಷುಕ (ಪೆಱುಕಿ ತಿಂದು ಬಾೞ್ವೊಂ ಬೈಕಂಗುಳಿ ಬೇಡಿ ಪೊೞಲೆಲ್ಲಮಂ ತೊೞಲ್ದು ಬಸಿಱಂ ಪೊರೆವೊಂ ದೇಸಿಗಂ ಆರುಮಿಲ್ಲದೊಂ: **ವಡ್ಡಾರಾ,** ಪು ೪೬, ಸಾ ೮)

**ಬೈಕಂಗೊಳ್** – ಭಿಕ್ಷೆ ಬೇಡು (ತಿರಿವುದು ಬೇಕಂಗೊಳ್ವುದು ಮೊರೆವುದು ಮಱಿದುಂಬಿಯಲ್ತು: **ಕಾವ್ಯಾವಲೋ,** ೫೯೫)

**ಬೈಕಂದಿರಿ** – ಭಿಕ್ಷೆಗಾಗಿ ಸುತ್ತು (ಎಮ್ಮ ಮಾವಂ ಬೈಕಂದಿರಿದು ತಂದ ಕೂೞ್ಗೆ ನೆರಂ ಎಣ್ಣೆಯನಕ್ಕೆ ಉಪ್ಪನಕ್ಕೆ ಕಟಿಯನಕ್ಕೆ ಎಂದೊಪ್ಪೊಡಂ ಎಱೆಯಿಸಿಯಱೆಯಂ: **ವಡ್ಡಾರಾ,** ಪು ೪, ಸಾ ೧೪)

**ಬೈಕುಂಗುಳಿ** – ಭಿಕ್ಷುಕ (ಕಿಸುಗುಳನಪ್ಪ ಬೈಕುಂಗುಳಿಯುಮಂ ಕಟ್ಟುಪಟ್ಟ ಕಳ್ಳನುಮಂ ಕಂಡು : **ಜೀವಸಂ,** ೩. ೧೫ ವ)

**ಬೈಕೆ** – ಮುಚ್ಚಿಟ್ಟ ವಸ್ತು, ಹೂಳಿಟ್ಟ ದ್ರವ್ಯ (ಇವರ ಬಯ್ತ ಬೈಕೆಯಂ ಆ ಪೊಟಿಲ ಕಳ್ಳವಳನೊರ್ವಂ ಆ ವನದೊಳ್ ಏನಾನುಂ ನಿಮಿತ್ತದೆ ತೊಟಿಲ್ವಂ ಅದಂ ಕಂಡು: **ಕರ್ಣನೇಮಿ,** ೩. ೭೦ ವ)

**ಬೈಕೆಗೊಡು** – ಒತ್ತೆಯಾಗಿಸು (ಬಗೆಗೆ ಬಂದೊಡಮೆಯಂ ಒಲ್ದಾನೆರೆದಾಗಳೆ ಕುಡಿಮೆಂದಾ ನೃಪತಿಗೆ ಕೈಕೆ ಬೈಕೆಗೊಟ್ಟಳ್ ಮೆಚ್ಚಂ: **ಪಂಪರಾ,** ೩. ೬೭)

**ಬೈಗು** – ಸಂಜೆ (ಮೂಱನೆಯ ದಿವಸದಂದು ಬೈಗಿನ ಪೊೞ್ತಱೊಳ್ ದೇವರ್ಕ್ಕಳ್ ಬಂದು: **ವಡ್ಡಾರಾ,** ಪು. ೨೯, ಸಾ. ೨೦)

**ಬೈತಂಗೊಳ್** – ಬಚ್ಚಿಟ್ಟಿದ್ದನ್ನು ಪಡೆ (ಮುಂದಿಟ್ಟು ಚಕ್ರಮಂ ತಿರಿ ತಂದುದುಮಂ ಪೂಟಿದಿರ್ದು ಬೈತಂಗೊಳ್ವೊಂದಂದದೆ ಕೊಂಡುದುಮಂ ಅದೇನೆಂದುನ್ನತಿ ಮಾಡಿ ಪೊಗೞ್ವೆಯೊಳಗಱಿಯದುದೇ: **ಆದಿಪು,** ೧೪. ೬೭)

**ಬೈತರ್** – ಸೇರಿಸು, ಅಂಟಿಸು (ಬರೆದರೊ ಬೈತರೊ ಪೊಲ್ದರೊ ಪೊರೆದರೊ .. .. ಎನೆಗಿರಿರಾಜತನೂಜೆ ಪೂಜೆಯೊಳ್ ರಾಜಿಸುವಳ್: **ಗಿರಿಜಾಕ,** ೩. ೧೦೨)

**ಬೈತಲೆ** – ಸೀಮಂತ (ನೀಳ್ದ ಬೈತಲೆ ಸೀಮಂತ ಸಮಾಹ್ವಯಂ: **ಅಭಿಧಾವ,** ೧. ೧೨. ೨೦)

**ಬೈತ್ರ** – [ವಹಿತ್ರ] ಹಡಗು (ಚಕ್ರರತ್ನಮದಱೊಳ್ ನಿರ್ಬಾಧಿತಮಿರ್ದತ್ತು ಪೆರ್ವಡೆ ವಾರಾಶಿಯೊಳಿರ್ದ ಬೈತ್ರದೊಳಗಂದೆತ್ತಂ ತೆರಳ್ಚಿದವೊಲ್: **ಆದಿಪು,** ೧೩. ೬೦)

**ಬೈಸಿಕೆ** – ಓಡುವಿಕೆ (ತೊಡೆ ಕೆಯ್ ಬೈಸಿಕೆಯಳವಡೆ ಮಡದಿನವುಂಕಿದೊಡೆ ಪನ್ನೆರಡು ಯೋಜನಮಂ ಗಡ ಲಂಘಿಸಿ ಹಯರತ್ನಂ: **ಪಾರ್ಶ್ವನಾಪು,** ೧೧. ೩೪)

**ಬೊಂಗ** – ಒಂದು ಬಗೆಯ ವಸ್ತ್ರ (ಬೊಂಗದ ನಾರಂಗದ ದೇವಾಂಗದ ಪಲತೆಱದ ಸಕಲ ವಟ್ಟೆಗಳಂ ಗೇಹಾಂಗಣದೊಳ್ ಮೆಟ್ಟುವ ತಾಣಂಗಳೊಳ್ ಓರಂತೆ ಪಾಸಿ: **ಸುಕುಮಾಚ,** ೧೦. ೯೦)

**ಬೊಂದರಿಗೆ** – ಮೇಲು ಹೊದಿಕೆ (ನೀಡಿ ಕಾಲನರೆಬರ್ ಮಲಂಗಿದರ್ ಪೊಳೆವ ತಳಿರ ಬೊಂದರಿಗೆಗಳೊಳ್: **ಆದಿಪು,** ೧೧. ೭೮); ಮತ್ತೆ (ಸುಖಮಿರ್ದು ನೆಮ್ಮಿ ನಿರ್ಮಿಸಿದ ಅಲರೊಂದು ಬೊಂದರಿಗೆಯೊಳ್ ಕನಕಾಂಬುಜ ಪಾದಪೀಠದೊಳ್ ನಿಸದಮೆ ನೀಡಿ ಕಾಲನಿಡೆ ರಾಜಕುಮಾರನದೊಂದು ದೇಸೆಯಿಂ: **ಶಾಂತಿಪು,** ೮. ೪)

**ಬೊಂದಿ** – ಶರೀರ (ಅವಯವದಿಂ ಜೀವಂ ಬೊಂದಿವೆರಸು ಸಗ್ಗಕ್ಕೆ ಪಾರುಗುಂ: **ಸಮಯಪ,** ೧೦. ೮೨)

**ಬೊಂದಿಗೆವಾಯ್** – ಹರಕು ಬಾಯಿ (ಬಿದಿರಿದ ಮುತ್ತುವಲ್ಲ ಮುರಿಮೂಗಿನ ಬೊಂದಿಗೆವಾಯ ಪೊಂಗುಗಲ್ಲದ ಪಸುರ್ಗಣ್ಣ .. .. ಲುಬ್ಧಕರಿರ್ದರ್: **ಪುಷ್ಪದಂಪು,** ೫. ೮೯)

**ಬೊಂದುಕ** – ಚಿಂದಿ ತೊಡುವವನು (ಉಕಪ್ರತ್ಯಯಕ್ಕೆ: ಸಣ್ಣುಕಂ ಜೋಡುಕಂ ಬೊಂದುಕಂ ದಿಂಡುಕಂ: **ಶಬ್ದಮದ,** ೨೧೪, ಪ್ರ)

**ಬೊಂಬುಟಿ** – ಒಂದು ವಾದ್ಯ (ಕಂಕರಿಯ ಸಿವಿಱ ಪೆಂಪಿನ ಝೊಂಕಟ ಬೊಂಬುಟಿಯ .. .. ಉಲಿ ನೆಗಟ್ದು ಕರ್ಣಾಮೃತಸಮುದ್ರಘೂರ್ಣನಮಾಯ್ತೋ: **ಪುಷ್ಪದಂಪು,** ೧೨. ೨೭)

**ಬೊಕ್ಕಣ** – ಚೀಲ ಪಿಸುಣಂ ಪೇಟಿಡ್ದೊಡೆ ಏವುದೋ ಕಿಸುಜಡೆಯುಂ ಬೂದಿ ಕಚ್ಚಟಂ ಬೊಕ್ಕಣಮುಂ: **ಜಗನ್ನಾವಿ,** ೫. ೫೩)

**ಬೊಜಂಗ** – [ಭುಜಂಗ] ವಿಟ (ಬೇಟದ ಲಲ್ಲೆಯ ಬಲ್ಮೆ ಪತ್ತಿ ಸುತ್ತಿಸೆ ಪುರುಡಿಂಬುಕ್ಕೈಸೆ ಬಿಯಮಾಗಿಸಿ ಪೊಂದದಂ ಬೊಜಂಗನೇ: **ಆದಿಪು,** ೧೨. ೧೭)

**ಬೊಜಂಗತನ** – ವಿಟನ ಸ್ವಭಾವ (ನಿದ್ರೆಯಲ್ಲಿ ಮೆಲ್ಲಗೆ ತೊಡೆ ಮೇಲೆ ಬೀೞ್ ಮಹನಾಮಿ ಬೊಜಂಗತನಕ್ಕೆ ನೋಡೆ ಸೂಳೆಗೆ ಕೊಡವೇಟ್ದಿರೀ ಪಟಿಬಳಾರಿಗೆ ಕೊಟ್ಟನೊರ್ವನೊತ್ತೆಯಂ: **ಸೂಕ್ತಿಸುಧಾ,** ೮. ೩೮೩)

**ಬೊಜಗ** – ವಿಟ (ಬೆರಕೆಗೆ ಪೇಸುವಳ್ ಬೊಜಗರಪ್ಪರ ನಂಟರೊಳ್: **ಲೀಲಾವತಿ,** ೨. ೮೧)

**ಬೊಟ್ಟಳ** – ಮದ್ದಳೆ ಬಾರಿಸುವ ಒಂದು ರೀತಿ (ಅಳಗಂ ಸುಳಿಯಳಗಂ ಬೊಟ್ಟಳಂ ಕತ್ತರಮುಂ ಎಸೆವ ಪೊಱಕತ್ತರವಗ್ಗಳಿಸಿರೆ ನಾನಾ ಭೇದಂಗಳ ಪಹರಣಿ ತುಡುಕುಮೋಡಿಯಂ ಬಾಜಿಸಿದಂ: **ಧರ್ಮಪ,** ೨. ೨೩)

**ಬೊಟ್ಟು** – ತಿಳಕವೃಕ್ಷ (ಕಪೋತದ ಬೊಟ್ಟಿನ ಕೆಂಡದಬ್ಬನೀವರನ ಅಭಿಧಾನಮಂ ತಳೆದ ಭೂರುಹಂ ಒಪ್ಪುಗುಂ ಆ ವನಾಂತದೊಳ್: **ರಾಜಶೇವಿ,** ೫. ೫೭)

**ಬೊಟ್ಟುವೋರಿಸು** – ಒಂದು ಆಟ (ತಿಱಿಕಲ್ಲಾಡುವ ಬೊಟ್ಟುವೋರಿಸುವ ಸೆಡಂ ಪೊಯ್ವ ಬಾದಿಂಗೆ ಕೈನಿಱಿದೆರ್ದಾಡುವ: **ಸುಕುಮಾಚ,** ೨. ೬)

**ಬೊಟ್ಟೆ** – ಸೂಳೆ (ಒಟಿವಳನೆಳಸಲ್ ಬೊಟ್ಟೆಯನಟುಗಿಸಲ್ ಅಡವಡಿಸೊಲಿಯಿಸಿ ಪಾಱನದಿರ್ಪಲ್ ಪಟಿಕೆಯ್ವಳನಂತೆಱ್ಯಿನುಮಟಲಿಸಿ ಗೆಲಲಱಿದವನಾನಾತನೆ ದೇವಂ: **ವರ್ಧಮಾಪು,** ೮. ೯೪)

**ಬೊಡ್ಡಣಬಾವಿ** – [ವರ್ಧನವಾಪಿ] ತುಂಬಿದ ಬಾವಿ (ಸುದರ್ಶನಮೆಂಬ ಮಣಿಕುಟ್ಟಿಮಮಪ್ಪ ಬೊಡ್ಡಣ ಬಾವಿಯೊಳ್ ಕರ್ಪೂರ ಕಾಳಾಗರು ತುರುಷ್ಕ ಕುಂಕುಮ ಚಂದನಾದಿ ಸುಗಂಧ ದ್ರವ್ಯಂಗಳಿಂ ಬೆರಸೆ: **ವಡ್ಡಾರಾ,** ಪು ೧೩೬, ಸಾ ೨೨)

**ಬೊಬ್ಬಿಡು** – ಹರ್ಷೋದ್ಗಾರ ಮಾಡು, ಕೂಗು (ಭಿಲ್ಲಪ್ರಕರಮಡಸಿ ಕೂರ್ನಾಯ್ಗಳಂ ಬಿಟ್ಟು ಬೊಬ್ಬಿಟ್ಟು: **ಗಿರಿಜಾಕ,** ೧. ೧೦೧)

**ಬೊಬ್ಬಿಱಿ** – ಬೊಬ್ಬಿಡು (ಕೆನ್ನೆತ್ತರೊಳ್ ಒರ್ವರೊರ್ವರಂ ತಳ್ಕಿಱಿದುಂ ಬೊಬ್ಬಿಱಿದುಂ ತ್ರಿಪುಂಡ್ರಮಿಟ್ಟುಂ ಕೂಕಿಱಿದುಂ ತೇಗಿಯುಂ ಸಸಿನೆವರಿದುಂ [ಡಿಎಲ್ಎನ್ ಒಪ್ಪಿದ ಪಾಠ] ಬವಳಿವರಿದುಂ ಬಾನಂಗುಳಿಗೆವರಿದುಂ ಸೂೞ್ವರಿದುಂ ಆಡುವಾಗಳ್ ಉಭಯಬಲಂಗಳ್: **ಪಂಪಭಾ,** ೧೨. ೧೫೮ ವ)

**ಬೊಬ್ಬುಲಿ** – ಗೊಬ್ಬಳಿ ಮರ (ಕೆಲಬಲದ ಕಿಱುವೆಟ್ಟಿನೊಳ್ ಪುಟ್ಟಿದ ಬೇವು ಬೊಬ್ಬುಲಿಗಳಂ ತನ್ನಂತೆ ಮಾಟ್ಪಿ ಸಿರಿಕಂಡವೆಟ್ಟಿನೊಳ್ ಪುಟ್ಟಿಯುಂ: **ಕಬ್ಬಿಗಕಾ,** ೪೫ ವ)

**ಬೊಬ್ಬುಳಿಕೆ** – ನೀರ ಗುಳ್ಳೆ (ಬೆಳಗುವ ತಾರನಿಕರಮಾ ಕಡಲೊಳ್ ನಸುತೇಂಕುದೇಂಕಿ ಬೊಬ್ಬುಳಿಕೆಗಳಂತೆ ತೋಱಿದುವು: **ಆದಿಪು,** ೭. ೯೮)

**ಬೊಬ್ಬುಳಿಸು** – ಗುಳ್ಳೆ ಉಂಟಾಗು (ಕೆಸಱುರ್ಬುರ್ಬೇಳೆ ನೀರ್ಬೊಬ್ಬಳಿಸಿ ಬುಳುಬುಳುಂಏಂಕಿ ವಂದೆಯ್ದಿ ಕಂಪಂ ಮಸಗುತ್ತುಂ: **ಜಗನ್ನಾವಿ,** ೧೭. ೬೪)

**ಬೊಮ್ಮನ ಡೋವಿಗೆ** – ಬ್ರಹ್ಮಕಪಾಲ (ಎಮ್ಮಾಪ್ತನೀಶಂ ಉಣ್ಬಂ ಬೊಮ್ಮನ ಡೋವಿಗೆಯೊಳ್: **ಸಮಯಪ,** ೧೪. ೮೫)

**ಬೊಮ್ಮಪಾಸ** – [ಬ್ರಹ್ಮಪಾಶ] ಬಿಡಿಸಲಾಗದ ಬಂಧ (ಆಕೆಯ ಹಾಸಮೊ ಬೊಮ್ಮಪಾಸಮೋ ತರುಣಿಯ ತೋಳೊ ಬಾಳೊ ಸುಡು ಸೂಳೆಯ ಕೂಟಮೊ ಕಾಳಕೂಟಮೋ: **ಲೀಲಾವತಿ,** ೨. ೧೦೧)

**ಬೊಮ್ಮರಕ್ಕಸ** – [ಬ್ರಹ್ಮರಾಕ್ಷಸ] ಪಿಶಾಚಿಯಾದ ಬ್ರಾಹ್ಮಣ (ಸಾಸಿರ ಪೊನ್ನಂ ಕೊಂಡು ಮಹಾರಣ್ಯದೊಳಗೆ ಬರ್ಪನಂ ಒರ್ವ ಬೊಮ್ಮರಕ್ಕಸಂ ಕಂಡು ಪಿಡಿದು ತಿನಲೆಂದು ತೆಗೆವುದುಂ: **ಪಂಚತಂತ್ರ,** ೨೧೭ ವ)

**ಬೊಮ್ಮೆತಿ** – [ಬ್ರಹ್ಮಹತ್ಯಾ] ಪಂಚ ಮಹಾಪಾತಕಗಳಲ್ಲಿ ಒಂದಾದ ಬ್ರಾಹ್ಮಣನ ಕೊಲೆ (ನಿನಗೆ ಬೊಮ್ಮೆತಿಯಾಗೆ ಸಾವೆನೆಂದವರ ಕಾಣ್ಬಲ್ಲಿ ಒಂದು ಮರದೊಳ್ ಬಳ್ಳಿಯಂ ಕಟ್ಟಿ ಕೊರಲೊಳ್ ಸುತ್ತಿ ನೇಲ್ದು ಸತ್ತಳ್: **ಜೀವಸಂ,** ೧೦. ೩೭ ವ)

**ಬೊಲ್ಲವಣೆ** – ಚರ್ಮವಾದ್ಯವನ್ನು ನುಡಿಸುವ ವಿನ್ಯಾಸ (ಬಹುರೇಖೆಯ ಚಾರಣೆಯ ಧಿಕ್ಕವಣೆಯ ಸೇವಣೆ ಬೊಲ್ಲವಣೆಯ ಬೆಡಂಗು ಬಿತ್ತರಿಕೆಯಂ ಬೀಜಿ ಬಾಜಿಸುತ್ತಿರೆಯುಂ: **ಶಾಂತೀಶ್ವಪು,** ೭. ೯೩ ವ)

**ಬೋದಿಗೆ** – ಕಂಬದ ಮೇಲೆ ತೊಲೆಯಿಡಲು ಬಳಸುವ ಸಾಧನ (ಪವಳದ ಕಂಬಂ ಪಳಿಕಿನೆಸೆವ ತೊಲೆ ವಜ್ರದ ಮತ್ತವಾರಣಂ ಮುತ್ತಿನ ಮಂಡವಿಗೆ ಕಿಸುಗಲ್ಲ ಬೋದಿಗೆ ನವಮರಕತರತ್ನ ತೋರಣಂ ಪ್ರಾಕಾರಂ: **ಸುಕುಮಾಚ,** ೧೦. ೪೫)

**ಬೋಧ** – ಜ್ಞಾನಿ (ಬೋಧರ್ ಬೋಧರನಪ್ಪಿದೊಡೆ ಬೂದಿ ಬೂದಿಯ ನಾದಿತ್ತು ಆದಂ ಎನಲ್ ನೆಗೞ್ದರ್: **ಸಮಯಪ,** ೧೪. ೮೯); ಜ್ಞಾನ (ಬೋಧನಿಧಿ ಸಕಲಚಂದ್ರತಪೋಧನರ್ ಅಧಿಗತ ವಿನೂತ ವಿದ್ಯಾತ್ರಿತಯರ್: **ಅನಂತಪು,** ೧. ೨೯)

**ಬೋಧದೃಷ್ಟಿ** – ಜ್ಞಾನದೃಷ್ಟಿ (ಜಗಮೆಲ್ಲಂ ನಿಜ ಬೋಧದೃಷ್ಟಿಯೊಳೆ ಕಾಣಲ್ ಬಂದುದು: **ಜಗನ್ನಾವಿ,** ೧೬೩)

**ಬೋಧಾಕರ** – ಬೋಧ (ಗುರುವೆಂಬುದಱಿಂ ಪ್ರಾಕೃತಪುರುಷರ ಪೇೞ್ದಂತೆ ಗೆಯ್ವರೆಂದೊಡೆ ಬೋಧಾಕರರ್: **ಸಮಯಪ,** ೩. ೪೧)

**ಬೋಧಾವಾಪ್ತಿ** – ಜ್ಞಾನಲಾಭ (ಬೋಧಾವಾಪ್ತಿಯಿಂದಂ ಸುಖಾಕರನಾಗೆಂದು ಫಲಪ್ರದೋಕ್ತಿ ತಳಿದಂ ಶೇಷಾಕ್ಷತೌಘಂಗಳಂ: **ಆದಿಪು,** ೯. ೬೪)

**ಬೋಧಾವಾಸಪ್ರಿಯ** – ಅರ್ಹಂತ, ಜಿನ (ವಾಸವ ಆಸನಕಂಪದಿನಾ ಸಮಯದೊಳವಧಿಯಂ ಪ್ರಯೋಗಿಸಿ ಬೋಧಾವಾಸಪ್ರಿಯನ ಉದಯಮನಱಿದು ಆಸನದಿಂದೆರ್ದು ಮೂಱು ಸೂಟ್ ಪೊಡೆವಟ್ಟಂ: **ಆದಿಪು,** ೭. ೪೨)

**ಬೋಧಾಳು** – ಜ್ಞಾನಿ, ಬುದ್ಧಿವಂತ (ಭೂವರಂಗೆ .. .. ಪೇೞ್ದು ಈ ಕ್ಷಣಂ ಕೊಂಡು ಬಾಯೆನುತಂ ಅಟ್ಟಿದಂ ಬುಧನುತಂ ಬೋಧಾಳು ಮೇಧಾವಿಳಂ: **ಕುಸುಮಾಕಾ,** ೯. ೭೪)

**ಬೋಧಿ** – ಅರಿವು, ಜ್ಞಾನ (ಬೆಸಗೊಳೆ ದಶನದ್ಯುತಿ ದೆಸೆದೆಸೆಯ ತಮಃಪಟಮಂ ಉಗಿಪಟಂಗೊಳೆ ದೇವಂ ಬೆಸಸಿದನಾ ಕನ್ನೆಗೆ ಪಸರಿಸೆ ಚಿತ್ತವಿಶೋಧಿ ಬೋಧಿಪರಿಣಾಂಗಳ್: **ಶಾಂತಿಪು,** ೪. ೬೫)

**ಬೋಧಿಸು** – ಕಲಿಸು (ಸನ್ಮಾರ್ಗದಿಂ ಸಲ್ವ ಸಾಧುಗಳೆಮ್ಮಂ ದಯೆಯಿಂದೆ ಬೋಧಿಸುತಮಿರ್ಕೆಂದು ಜಿನೇಂದ್ರೋಕ್ತಿಯಂ: **ಸುಕುಮಾಚ,** ೧. ೫)

**ಬೋಧೋದಯ** – ಜ್ಞಾನೋದಯ (ಎಮಗೆ .. .. ದೇವೇಂದ್ರಮುನಿಪದಾಬ್ಜಂ ಜಯನಂದಿಮುನಿಕ್ರಮ ಕಮಳಮೀಗೆ ಬೋಧೋದಯಮಂ: **ಆದಿಪು,** ೧. ೧೩)

**ಬೋನ** – [ಭೋಜನ] ಆಹಾರ, ಊಟ (ಸುತ್ತಿದ ಕರಗದ ನೀರುಮನೆತ್ತಿದ ಬೋನಮುಮನಿದಿರೊಳಿಟ್ಟಿರೆ ಬನ್ನಿಂ ಇತ್ತೇಟಿಕ್ತಾಯೆಂದರ್: **ಆದಿಪು** ನರಸಿಂ, ೯. ೧೨೬)

**ಬೋನಮಿಡು** – ಊಟವಿಕ್ಕು (ಪುಟ್ಟಂ ಸಟ್ಟುಗಮಂ ಕೊಂಡಟ್ಟಾಱಿಸಿ ಬೋನಮಿಟ್ಟು ಬಂದೆಯೊ: **ಗದಾಯು,** ೭. ೩೬)

**ಬೋನವೇಳಿಗೆ** – [ಬೋನ+ಪೇಳಿಗೆ] ಅಡುಗೆಯ ಪಾತ್ರೆ (ಅನ್ನೆಗಂ ಭೀಮಸೇನನುಂ ಬೋನವೇಳಿಗೆಯಂ ಸಟ್ಟುಗಮುಮಂ ಒರ್ವ ಪರಿಚಾರಕನಿಂ ಪಿಡಿಯಿಸಿಕೊಂಡು ಬಂದು: **ಪಂಪಭಾ,** ೮. ೫೩ ವ)

**ಬೋನಮೆತ್ತು** – ಊಟ ಸಿದ್ಧಪಡಿಸು (ಅಮೃತಮತಿಯಂ ಅಮೃತಾಹಾರದ ಬೋನಮನೆತ್ತಲುಂ.. ..ಪೇೞ್ದಾಗಳ್: **ಆದಿಪು,** ೭. ೨೧ ವ)

**ಬೋರಗುದುರೆ** – ಕಂದುಬಣ್ಣದ ಕುದುರೆ (ವಾರುವದ ಬೋರಗುದುರೆಗಳೊಳ್ ಪೂಡಿದ ಪಸುರ್ವೊನ್ನ ರಥಮನೇಱಿ: **ಪಂಪಭಾ,** ೧೨. ೫೩ ವ)

**ಬೋರೆಯ** – ನೆಲ ಹಾಸು (ಪೊಂಬಟ್ಟೆಯ ಬೋರೆಯದೊಳ್ ತುಂಬಿದ ಬಿಡುಮುತ್ತಿನಕ್ಕಿಯಂ ಮೆಟ್ಟಿರ್ದಂದೇಂ ಬಗೆವುಗಿಸಿದುದೊ ಹೇಮಾಂಬುಜದ ಮರಾಳಮಿಥುನಮಂ ತನ್ಮಿಥುನಂ: **ಅನಂತಪು,** ೬. ೫೫)

**ಬೋಸರಿಗ** – ಮೋಸಗಾರ (ಕಾಮದೇವಂಗೆ ಬೋಸರಿಗಂ ನಿಂದುಱಿಯೆಂಬರಾ ಪುರದ ವೇಶ್ಯಾವಾಟದೊಳ್ ಚೇಟಿಯರ್: **ಸೂಕ್ತಿಸುಧಾ,** ೪. ೧೩೩)

**ಬೋಸರಿಸು** – ತೋರಿಕೆಯ ಮರ್ಯಾದೆಮಾಡು (ಬೋಸರಿಸು– ಮಿಥ್ಯಾದರೇ: **ಶಬ್ದಮದ,** ಧಾ ೭೯೮)

**ಬೋಹಣ** – ಮದ್ದಲೆಗೆ ಮೆತ್ತುವ ಮೇಣ (ಲೋಹಚಕ್ರದಿಂ ಪಳೆಯ ಬೋಹಣಮನುದ್ದಿ ಭಾರತಿಯ ಮುಖಕಮಲದೊಳ್ ಕತ್ತುರಿಯ ಬೊಟ್ಟನಿಡುವಂತೆ ಪೊಸ ಬೋಹಣಮಂ ಉದ್ದಿ: **ಧರ್ಮಪ,** ೨. ೨೩ ವ)

**ಬೋಳಯಿ[ವಿ]ಸು** – ಸಮಾಧಾನಪಡಿಸು (ಸೆಜ್ಜೆವನೆಗುಯ್ದು ಸಜ್ಜನಸ್ನೇಹದಿಂ ಸಾಗಿಸಿ ನೋಡಿ ಭೋಗದೊಳ್ ಬೋಳಯಿಸಿ ರಾಗದೊಳ್ ಮೇಲಯಿಸಿ: **ಗಿರಿಜಾಕ,** ೨. ೧೦೫ ವ)

**ಬೋಳಹ** – [ಪ್ರಾ: ಪೋಲ] ಹೋಗು (ಓಸರಿಗೆಯೊಳ್ ತೊಟ್ಟಿಲೊಳ್ ಇರ್ದ ಅವ್ಯಕ್ತ ಕಿಱುಗೂಸು ಬೋಳಹ ಬೋಳಹ ಭಟ್ಟಾರಾ ಎಂದತ್ತು: **ವಡ್ಡಾರಾ,** ಪು ೮೫, ಸಾ ೧೨)

**ಬೋಳೆಯಂಬು** – ಹರಿತವಾದ ಬಾಣ (ಬೋಳೆಯಂಬಿಂದ ಇಸಲ್ ಪಸುಱೇಱಿಂ ಮರೆ ದೊಪ್ಪನೆ ಉರ್ವರೆಗೆ ಬೀೞಲ್: **ಕುಸುಮಾಕಾ,** ೧೪. ೪೧)

**ಬೋಳೆಯ** – ದೇವತೆ (ಭಸಿತಂ ಕಣ್ ಮೆಱೆಯಲ್ ಸೊಂಪಿನ ಜಡೆಗಳ್ ನೆಱೆ ಬೋಳೆಯರಾಯತನದಿ ಬಂದಂ ಗಿರಿಶಂ: **ತ್ರಿಷಷ್ಟಿಪು,** ೫೧. ೮)

**ಬೋಳೈಸು** – ಪ್ರೀತಿ ತೋರಿಸು (ಮತ್ತಗಜಂ ಪರಿವ ಕರಿಣಿಯ ಬಳಿಸಂದು ಬೋಳೈಸಿ ಕರಮಂ ನೆಗಪಿ ಕೂಡುವ: **ಗಿರಿಜಾಕ,** ೧. ೧೨೮ ವ)

**ಬೋಱ್** – ಬಿಲ್ಲು (ಒಂದರ್ಥಕ್ಕೆ ಬೋಱೆಂದು ಚಾಪಂ: ಶಬ್ದಮದ, ೩೩ ವೃತ್ತಿ ೧೧೦)

**ಬೋಱ** – ಸಾವು, ಮುಂಡ, ಒಂದು ಔಷಧ (ಮೂರರ್ಥಕ್ಕೆ: ಬೋಱಮೆಂದು ಮಿಟ್ಟುವುಂ ಮುಂಡಮೆಂದು ಒಂದೌಷಧಮುಮಕ್ಕುಂ: **ಶಬ್ದಮದ,** ೩೩ ವೃತ್ತಿ ೧೭೪)

**ಬೋಱತರ** – ಮುಂಡಿ, ಒಂದು ಔಷಧ ಸಸ್ಯ (ಭೃಂಗಂ ಮಾರ್ಕವಂ ಅಲಂಬುಸಂ ಬೋಱತರಂ: **ಅಭಿಧಾವ,** ೧. ೮. ೨೭)

**ಬೋಱಸು** – ತಲೆಗೂದಲು ತೆಗೆ (ಕಿಡೆ ಮೂಗೋಱಂ ಬೋಱಸಿ ನಡುದಲೆಯೊಳ್ ಮೆಟಱಸನೊಡೆದು: **ಶಬ್ದಮದ,** ಪ್ರ ೪)

**ಬೋಱುಮಂಡೆ** – ಕೂದಲಿಲ್ಲದ ತಲೆ (ಕರದ ಕಮಂಡಲಂ ಕಿಱೆಯ ಚಂಡಿಕೆ ಮಿಂಚುವ ಬೋಱುಮಂಡೆ: **ಶಾಂತೀಶ್ವಪು,** ೭. ೯೫)

**ಬೋಱೆ** – ಒಂದು ಬಗೆಯ ಬಾಣ (ಒಂದರ್ಥಕ್ಕೆ: ಬೋಱೆಯೆಂದು ಒಂದಂಬಿನ ಭೇದಂ: **ಶಬ್ದಮದ,** ೩೩ ವೃತ್ತಿ ೧೧೧)

**ಬೋಱೆಯ** – ದೇವತೆ (ಇಂದ್ರಂ ಈತನೆ ಮತ್ತಮಿವರ್ ದಿಕ್ಪಾಳರೆ ಬೋಱೆಯರ್ ಈಕೆಯರ್ ಚಂದ್ರವಕ್ತ್ರೆಯರ್ ಅಗ್ಗದ ದೇವಸ್ತ್ರೀಯರೆ: **ಲೀಲಾವತಿ,** ೪. ೧೩೬)

**ಬೌವಳಿಸು** – ಕಲಕಲರವವುಂಟುಮಾಡು (ಗಂಡುಗೋಗಿಲೆಗಳೆ ಮಹಾಪ್ರಾತಿಹಾರ್ಯರಾಗೆಯುಂ ಬೌವಳಿಸಿ ಗಱಪುವ ಗಿಳಿವಿಂಡಿನೋಳಿಗಳೆ ಸಬ್ಬವರಾಗೆಯುಂ: **ವರ್ಧಮಾಪು,** ೫. ೪೧ ವ)

**ಬ್ಯಸನಿ** – [ವ್ಯಸನಿ] ದುಶ್ಚಟದವನು (ರೌದ್ರಧ್ಯಾನಿ ಮಹಾಬ್ಯಸನಿಯಂತೆ .. .. ದರ್ಮಧ್ಯಾನಿಗಳಾಗಲ್ಕೆ ಬಗೆವರ್: **ಸಮಯಪ,** ೧೪. ೪೫)

**ಬ್ಯಾದಿ** – [ವ್ಯಾಧಿ] ರೋಗ (ಸೊಡರಂ ನೋಡಿದಾಗಳ್ ಕಣ್ಣೀರ್ಗಲ್ ಸುರಿವುದುಂ ಕಂಡೀಗಳ್ ಈತಂಗೆ ಬ್ಯಾದಿಗಳೆಂದು ಬಗೆದಿರ್ಪಿನಂ: **ವಡ್ಡಾರಾ,** ಪು. ೨೬, ಸಾ. ೧೭)

**ಬ್ಯಾಸ** – ವ್ಯಾಸ (ಪರಾಶರಮುನೀಶ್ವರಂ ಕೊಡಗೂಸಂ ಕಿಡಿಸೆ ಗಡಂ ಬ್ಯಾಸಂ .. .. ಜಾಲಗಾಱತಿಗೊಗೆದಂ: **ಸಮಯಪ,** ೧೦. ೧೫೩)

**ಬ್ರಜ** – ವ್ರಜ, ಗುಂಪು (ಧರಾಳೀವಕ್ತ್ರಮಂ ವೀಕ್ಷಿಪಾತುರದಿಂ ವೇಷ್ಟಿತ ಕಂದ ಕಾಂಡಪಟಮಂ ನೂಕಿರ್ದಳೋ ವ್ಯೋಮಸೌಂದರಿ ಎಂಬಂತೆ ಪಳಚ್ಚನಾಯ್ತು ಗಗನಂ ಮೇಘಬ್ರಜಂ ಪೋಗೆಯುಂ: **ಶಾಂತೀಶ್ವಪು,** ೧೨. ೬೨)

**ಬ್ರತ** – [ವ್ರತ] ನೋಂಪಿ (ಧಾರಿಣೀಮಹಾದೇವಿ .. .. ಗುರುಭಕ್ತಿಗೆಯ್ದು ಬಂದಿಸಿ ಶ್ರಾವಕಬ್ರತಂಗಳಂ ಏಱಸಿಕೊಂಡು ಬಱಕಿಂತೆಂದಳ್: **ವಡ್ಡಾರಾ,** ಪು, ೮೦, ಸಾ. ೧೮)

**ಬ್ರತಿ** – ವ್ರತಿ (ಒಕ್ಕಲಿಗಂ ಬ್ರತಿಯಾದಂದಕ್ಕುಂ ಕರ್ಚಲ್ಕೆ ಮದಮನುಱುಗೆ ಕುಲಜ್ಞಂ: **ಸಮಯಪ,** ೫. ೧೪೧)

**ಬ್ರಹ್ಮ** – ಮೋಕ್ಷ (ಮೋಕ್ಷಂ ಮುಕ್ತಿಪದಂ ಬ್ರಹ್ಮಂ ಕೈವಲ್ಯಪದವಿ ಶಿವಗತಿ ನಿರಾಮಯಂ ನಿರ್ವಾಣಂ: **ಅಭಿಧಾವ,** ೧. ೩. ೧೯); [ಜೈನ] ಹದಿನಾರು ಕಲ್ಪಗಳಲ್ಲಿ ಒಂದು (ಸೌಧರ್ಮ ಈಶಾನ ಸನತ್ಕುಮಾರ ಮಾಹೇಂದ್ರ ಬ್ರಹ್ಮ ಬ್ರಹ್ಮೋತ್ತರ ಲಾಂತವ ಕಾಪಿಷ್ಠ ಶುಕ್ರ ಮಹಾಶುಕ್ರ ಶತಾರ ಸಹಸ್ರಾರ ಆನತ ಪ್ರಾಣತ ಅರಣ್ಯ ಅಚ್ಯುತಮೆಂಬ ಪದಿನಾಱುಂ ಕಲ್ಪಂಗಳೊಳಂ: **ವಡ್ಡಾರಾ,** ಪು ೯೭, ಸಾ ೨೬)

**ಬ್ರಹ್ಮಚರ್ಯ** – ಇಂದ್ರಿಯನಿಗ್ರಹ (ತಪಂ ಛಲಂ ಅಕಿಂಚನ್ಯಂ ನಯಂ ಬ್ರಹ್ಮಚರ್ಯಮೆ ಮನೋನ್ನತಿ: **ಸುಕುಮಾಚ,** ೧. ೨೬)

**ಬ್ರಹ್ಮಘ್ನ** – ಬ್ರಾಹ್ಮಣ ಹಂತಕ (ಗೋಘ್ನನ ಪಾಪಮುಮಂ ಬ್ರಹ್ಮಘ್ನನ ಪಾಪಮುಮಂ ಎಮಗೆ ಪೊಂಗುಡಿಂ ಈಗಳೆ ನಿಘ್ನಂ ಮಾಡುವೆಂ: **ಸಮಯಪ,** ೧೧. ೭೯)

**ಬ್ರಹ್ಮಪುತ್ರ** – ಬ್ರಹ್ಮನ ಮಗ, ನಾರದ (ತಳರ್ದನಘಲತಾದಾತ್ರನಾ ಬ್ರಹ್ಮಪುತ್ರಂ: **ಜಗನ್ನಾವಿ,** ೨. ೪೪)

**ಬ್ರಹ್ಮಸೂತ್ರ** – ಹಾರ (ಪೊಳೆಯುತ್ತುಂ ಬ್ರಹ್ಮಸೂತ್ರಮೇನೊಪ್ಪಿದುದೋ: **ಕಾದಂಸಂ,** ೩. ೨೮); ಜನಿವಾರ (ವಿಚಿತ್ರತಿಳಕವಿಳಸಿತಲಲಾಟನುಂ ತಾರಾತರಳ ಮುಕ್ತಾಫಳಕಲಿತ ಜಾನುಲಂಬಿತ ಬ್ರಹ್ಮಸೂತ್ರನುಂ: **ಆದಿಪು,** ೧೧. ೧೦ ವ)

**ಬ್ರಹ್ಮಸ್ವ** – ಬ್ರಾಹ್ಮಣನ ಸ್ವತ್ತು (ಆ ದುರಾತ್ಮಂ ಮಹಾತ್ಮನ ಧನಮಂ ಕೊಂಡು ಬ್ರಹ್ಮಸ್ವಹರಣಮಂ ಸುವರ್ಣಹರಣಮಂ ಗೆಯ್ದು: **ಪಂಚತಂತ್ರ,** ೧೨೬ ವ)

**ಬ್ರಹ್ಮಸ್ವಹರಣ** – ಬ್ರಾಹ್ಮಣನ ಆಸ್ತಿಯನ್ನು ಲಪಟಾಯಿಸುವುದು (ಆ ದುರಾತ್ಮನಾ ಮಹಾತ್ಮನ ಧನಮಂ ಕೊಂಡು ಬ್ರಹ್ಮಸ್ವಹರಣಮಂ ಸುವರ್ಣಹರಣಂಗೆಯ್ದಾ ಪಾತಕಂ ನರಕಗೆತಿಗೆಯ್ದುವ ಧೂರ್ತತನದಿಂ ಕುಟಿಲಮಾರ್ಗ ಅಂತರ್ಗತನಾಗಿ ಪೋಗೆ: **ಪಂಚತಂತ್ರ,** ೧೨೬ ವ)

**ಬ್ರಹ್ಮಾಂಡ** – ವಿಶ್ವ (ವಿವಿಧ ಬ್ರಹ್ಮಾಂಡಂ ಮಾಧವ ನಿನ್ನವಕಾಶಂ: **ಜಗನ್ನಾವಿ,** ೩. ೧೦೭)

**ಬ್ರಹ್ಮೋತ್ತರ** – [ಜೈನ] ಹದಿನಾರು ಕಲ್ಪಗಳಲ್ಲಿ ಒಂದು (ಸೌಧರ್ಮ ಈಶಾನ ಸನತ್ಕುಮಾರ ಮಾಹೇಂದ್ರ ಬ್ರಹ್ಮ ಬ್ರಹ್ಮೋತ್ತರ ಲಾಂತವ ಕಾಪಿಷ್ಠ ಶುಕ್ರ ಮಹಾಶುಕ್ರ ಶತಾರ ಸಹಸ್ರಾರ ಆನತ ಪ್ರಾಣತ ಅರಣ್ಯ ಅಚ್ಯುತಮೆಂಬ ಪದಿನಾಱುಂ ಕಲ್ಪಂಗಳೊಳಂ: **ವಡ್ಡಾರಾ,** ಪು ೯೭, ಸಾ ೨೬)

**ಬ್ರಾಹ್ಮ** – [ಜೈನ] ಒಂದು ಮುಹೂರ್ತ (ಬೆಳಗಪ್ಪ ಜಾವದ ಬ್ರಾಹ್ಮಮೆಂಬ ಮುಹೂರ್ತದೊಳ್: **ಶಾಂತಿಪು,** ೯. ೨೧೫ ವ)

**ಬ್ರಾಹಣಸಮಿತಿ** – ಬ್ರಾಹ್ಮಣರ ಗುಂಪು (ಗಣನಾತೀತ ಆಜ್ಯಾಹುತಿಗಣದಿಂದಂ ತಣಿಯೆ ಜಾತವೇದನುಂ ಆ ಬ್ರಾಹ್ಮಣಸಮಿತಿ ಬೇಳೆ ದೇವರ್ ತಣಿಯುಂಡರ್ ನೆರೆದು ದಿವ್ಯ ಹವ್ಯಾಮೃತಮಂ: **ಪಂಪಭಾ,** ೬. ೩೭)

**ಬ್ರಾಹ್ಮಿ** – ಸರಸ್ವತಿ (ಶ್ರುತದೇವಿ ವಾಣಿ ವಾಗ್ಭಾರತಿ ವಚನಂ ವಾಚಿ ಗೀರ್ ಬ್ರಾಹ್ಮಿ ಸರಸ್ವತಿ ವರದೆಯಾಗಿ ಪದಪದ್ಧತಿಯನೊಡಂಬಡೆ ನಿರ್ಮಿರ್ಚಿ ತಿರ್ದುಗೆ ದಯೆಯಿಂ: **ಅಭಿಧಾವ,** ೧. ೧. ೭)

# ಭ

**ಭಂಗ** – ಮುರಿಯುವುದು (ತುಂಗವನ್ಯಮತಂಗಜದಂತಾಘಾತ ನಿಪಾತಿತಸಲ್ಲಕೀಭಂಗಮಂ .. .. ನೃಪನೆಯ್ದಿದಂ ಉದ್ಯತ್ಶೃಂಗಮನಾ ಶತಶೃಮಗಮಂ: **ಪಂಪಭಾ,** ೧. ೧೧೫); ಸೋಲು (ಭಂಗಮಾಗಿಯುಂ ಪರಾಜಿತಸಂಯುಗಮಲ್ತು: **ತ್ರಿಷಷ್ಟಿಪು,** ೨. ೨೫ ವ); ಅವಮಾನ (ಈ ದೊರೆಯಮುಂ ಅಳವಟಿಯೆ ವಸುಂಧರೆಯೊಳ್ ತಂದಿಕ್ಕಿ ಭಂಗಮಂ ಮಾಡುವೆನೇ: ಆದಿಪು, ೧೪. ೧೧೨); ಅಲೆ (ಭಂಗಕ್ಕೆ ಪಕ್ಕಾದೆನೆಂದು ಆತ್ಮಗತೌರ್ವಾಗ್ನಿಚ್ಛಲಂಬೆತ್ತ ಅಬಿಲುರಿಯೊಳಕೊಂಡಂತೆ ತೋರ್ಕುಂ ಸಮುದ್ರಂ: **ಶಬರಶಂ,** ೧. ೩೨); ದೋಷ (ಕಾವ್ಯಮೆನಿಸಿರ್ದು ವಿಬುಧಸೇವ್ಯಂ .. .. ಭಂಗವಿರಹಿತಂ .. .. ಎನಿಸಿ ಕುಜನಾಭವ್ಯಂ ಮತ್ಕೃತಿ ಚಮತ್ಕೃತಿಪ್ರದಮಲ್ತೇ: **ರಾಜಶೇವಿ,** ೧. ೮೧); ಚಲನೆ (ಭಂಗಮನಂತುಂ ತಳೆದ ಲತಾಮಗಮನಿಂ ನಿನ್ನ ಕೋಮಳಾಂಗದ ಚೆಲ್ವಿಂ ಗೆಲ್ದು: **ಚಂದ್ರಪ್ರಪು,** ೭. ೭೫)

**ಭಂಗಂಬೆಱು** – ಅಲುಗಾಡು, ಅಸ್ಥಿರಗೊಳ್ಳು (ಪಿರಿದುಮೆರ್ದೆ ಡವಕೆ ವಾಜಿಸುತಿರೆ ಭಂಗಂಬೆತ್ತು ಹಾರಲತೆ ಘನಕುಚದೊಳ್ ಕರವಿಕ್ಷೇಪದೆ ನರ್ತಿಸೆ ನರೇಂದ್ರನಂದನನನೊಲ್ದು ನೋಡಿದಳೊರ್ವಳ್: **ಕಾದಂಬ,** ೩. ೨೮)

**ಭಂಗವ್ಯಾಕುಳಿತ** – ಅಲೆಗಳಿಂದ ಅಸ್ತವ್ಯಸ್ತಗೊಂಡ (ಆ ಮಹಾರ್ಣವಂ ಸಮುದ್ರಮಾಗಿಯುಂ ಅಪಾರವಿಸ್ತಾರಿಯುಂ ಭಂಗವ್ಯಾಕುಳಿತಮಾಗಿಯುಂ ಅಚ್ಯುತಪ್ರಭಾವಬಾಸುರಮುಂ .. .. ಎನಿಸಿರ್ದುದು: **ಜಗನ್ನಾವಿ,** ೧. ೪೪ ವ)

**ಭಂಗಿ** – ರೀತಿ (ಆವ ಭಂಗಿಯಿಂ ನೋಡುವೊಡೆ ಎನ್ನೊಳಿಲ್ಲ ಗುಣಲೇಶಂ: **ಕಾದಂಸಂ,** ೫. ೫೯); ಬಾಗು, ತಿರುವು (ನೆಲೆನೆಲೆ ಭಂಗಿ ಭಂಗಿ ಪದವಣ್ ಬೆಳರ್ವಾಯ್ ಪೆಱತಲ್ಲಿದೆಂತೊ ಕೋಮಲತೆ ಪೇಟಿಮೆನ್ನಿನಿಯಳಂ ಮಱಿಗೊಂಡುದೊ ಸೂಱಿಗೊಂಡುದೋ: **ಪಂಪಭಾ,** ೫. ೧೨) ಒನಪು (ಅಂಗುಲಿಯಂ ಓಪಂ ಒಲವಿಂ ಪಿಡಿದಾ ಭಂಗಿಗೆ ಮೆಲ್ಲನೆ ಸಖಿಯರ್ ಪಿಂಗಲ್ಕೆ: **ತ್ರಿಷಷ್ಟಿಪು,** ೧೯. ೧೦)

**ಭಂಗಿಭಾಷಿತ** – ವಿಶಿಷ್ಟ ರೀತಿಯ ಮಾತು (ಭಂಗಿಭಾಷಿತದಿಂ ಆತನಂ ಪ್ರೀತನಂ ಮಾಡಿ: **ಪುಷ್ಪದಂಪು,** ೭. ೪೯ ವ)

**ಭಂಗಿವಡೆ** – ವಿಲಾಸವನ್ನು ಪಡೆ (ಭಂಗಿವಡೆವಿನೆಗಂ ಓದಿನ ಪಾಂಗೆಸೆವ ಆರಭಟಿಯಲ್ಲಿ .. .. ಮಂಗಳಪಾಠಕತೆವೆತ್ತರ್ ಅರೆಬರ್ ಅಮರ್ತ್ಯರ್: **ಆಚವರ್ಧ,** ೧೪. ೯)

**ಭಂಗಿವೆಱು** – ಭಂಗಿವಡೆ (ದೇವಗಜದಂಗಮರೀಚಿಯ ಭಂಗಿವೆತ್ತಿರಲ್ ಬಗೆಗೊಳಿಸಿತ್ತು ಚಂದನರಸಂದೊಡೆದಂದದೆ ಪೂರ್ವದಿಙ್ಮುಖಂ: **ಜಗನ್ನಾವಿ,** ೧೬. ೧೦೩)

**ಭಂಗಿಸು** – ಸೋಲಿಸು (ಸಂದ ಕಾಮದೇವನುಮಂ ರೂಪಿನೊಳಾದಂ ಭಂಗಿಸಿ: **ಧರ್ಮಾಮೃ,** ೪. ೧೨೮); ತಡೆಗಟ್ಟು (ಭಂಗಿಪೊಡೆ ಒಗೆದು ಸೂಸುವ ಶೃಂಗಾರರಸಕ್ಕೆ ಸೇತುಗಟ್ಟುವವೋಲ್ ಚಿತ್ತಂಗೊಳಿಪ ರತ್ನಕಾಂಚಿನಂಗನೆಯ ನಿತಂಬದೊಳ್ ತೊಡರ್ಚಿದಳೊರ್ವಳ್: **ಶಾಂತೀಶ್ವಪು,** ೪. ೨೩೨)

**ಭಂಗುರ** – ಸುಲಭವಾಗಿ ಮುರಿದು ಹೋಗುವ, ಕ್ಷಣಿಕವಾದ (ಭಂಗುರಂ ಉಳ್ಕುವಂತೆ ನರಜನ್ಮಂ ಅದಂ ಬಗೆದುಂ ವಿವಾಹಕಾರ್ಯಂಗಳ ಕಾಮಸೇನೆಗಳ .. .. ಆದರದೊಳ್ ಮನಮಂ ತೊಡರ್ಚಿ .. .. ಮಾಣ್ಬುದು ಮರುಳ್ತನಮಲ್ತೆ: **ಅಜಿತಪು,** ೬. ೪೭); ಕೊಂಕಿದ, ಬಾಗಿದ (ಭಂಗುರ ಕರಾಳದಂಷ್ಟ್ರಂ ಪಿಂಗಳನಯನಂ .. .. ಸಿಂಗಮಂ ಜಿನಾಂಬಿಕೆ ಕಂಡಳ್: **ಸೂಕ್ತಿಸುಧಾ,** ೭. ೩೮); ಗಂಟಿಕ್ಕಿಕೊಂಡ (ಭಂಗುರಭೀಷಣಭ್ರುಕುಟದಂಷ್ಟ್ರಂ ಉದಗ್ರದವಾನಲಪ್ರಭಾ ಭಂಗಪಿಶಂಗಕೇಸರಸಟಾವೃತರೌದ್ರಮುಖಂ: **ಪಂಚತಂತ್ರ,** ೭೯)

**ಭಂಗುರಕೇಶಿ** – ಗುಂಗುರು ಕೂದಲುಳ್ಳವಳು (ಭಂಗುರಕೇಶಿ ನಲ್ಲನ ತಳಂಗಳೊಯ್ಯನೆ ಮೆಯ್ಯನಿಕ್ಕಿ: **ಕಾವ್ಯಾವಲೋ,** ೯೪೫)

**ಭಂಗುರವೇಣಿ** – ಗುಂಗುರು ಕೂದಲುಳ್ಳವಳು (ಭಂಗುರವೇಣಿ ಎಂಬ ಬಂಧುರನದಿ ರಂಜಿಸಿತ್ತು ಮಹಿಕಾಂತೆಯ ಭಂಗುರವೇಣಿಯೆಂಬಿನಂ: **ಪುಷ್ಪದಂಪು,** ೬. ೯)

**ಭಂಜನ** – ನಾಶಗೊಳಿಸುವ (ಅಂತು ಸಮದಕುಂಜರ ಘಟಾಪುಂಜಭಂಜನಂ ಮೃಗಾಧಿರಾಜಂ ಕೈನೀಡಿ ಸಂಜೀವಕನನನೇಕ ಪ್ರಕಾರ ಸನ್ಮಾನಕ್ರಿಯೆಗಳಿಂ ತಣಿಪಿ: **ಪಂಚತಂತ್ರ,** ೧೧೦ ವ)

**ಭಂಜಿತ** – ಅವಮಾನಿತ (ವಿಕ್ರಿಯಾಬಳದಿಂ ತಾಂ ಬಳೆಯಲ್ಕೆ ಭಂಜಿತ ಮಹಾಮಂತ್ರಿಕ್ರಮಂ ತ್ರಿಕ್ರಮಂ: **ನೇಮಿನಾಪು,** ೬. ೨೯)

**ಭಂಜಿಸು** – ಅವಮಾನಮಾಡು (ಭಂಜಿಸು–ಅವಮಾನೇ: **ಶಬ್ದಮದ,** ಧಾ ೭೩೮); ಸೋಲಿಸು (ಸಖಿಯರ್ ಝುಣಝುಣರೆನೆ ಬಳಸಿ ಭಂಜಿಸುವ ಐರಾವತಂ ಮಲ್ಲವೇಷದಿಂದಿರಾದೊಡಂ .. .. ಡೊಕ್ಕರಿಸಿ ಪಿಡಿವರ್: **ಗಿರಿಜಾಕ,** ೨. ೧೦೫ ವ)

**ಭಂಡ** – ಮಾರಾಟದ ಸರಕು (ತಮ್ಮ ಕೊಂಡು ಪೋದ ಭಂಡಮಂ ಮಾಱಿ ಪೆಱದಂ ತಮ್ಮ ನಾಟ್ಕೆ ಅಪೂರ್ವಮಪ್ಪ ಭಂಡಮಂ ತೀವಿಕೊಂಡು .. .. ಬಂದಿರ್ದರ್: **ವಡ್ಡಾರಾ,** ಪು ೭೧, ಸಾ ೨೫)

**ಭಂಡಣ** – ಯುದ್ಧ (ತೇಜಿಗಳನೋವದೆ ಭಂಡಣದಲ್ಲಿ ಸೀಟಬಿದಿರ್ದೊಡೆ ಪೆಸರಾನೆಯಂ ಮುಱಿಯದಿರ್ದೊಡೆ ನಚ್ಚಿನ ನಿನ್ನ ಲೆಂಕನೇ: **ಕಬ್ಬಿಗಕಾ,** ೧೯೭)

**ಭಂಡಾರ** – [ಭಾಂಡಾರ] ಖಜಾನೆ (ನೀರಂ ಕಳೆದಾಗಳ್ ಇಂದ್ರನ ಭಂಡಾರಂ ತೆಱೆದಂತಪ್ಪ ಲೇಸಪ್ಪ ನಾನಾ ಮಣಿಯ ವಿಚಿತ್ರ ಭೂಷಣಂಗಳಂ ಪಲವುಮಂ ಕಂಡು: **ವಡ್ಡಾರಾ,** ಪು ೨೬, ಸಾ ೨೦)

**ಭಂಭಾ** – ಒಂದು ಚರ್ಮವಾದ್ಯ, ಭೇರಿ (ಪಟುಪಟಹ ತುಣವ ಭಂಭಾ ಮರ್ದಳೆ ಝಲ್ಲರಿ ಮುಕುಂದ ತಾಳ ಕಾಹಳ ಶಂಖ ವಂಶ ವೀಣಾಸ್ವರಂಗಳೆಸೆಯೆ: **ವಡ್ಡಾರಾ,** ಪು ೮೪, ಸಾ ೨೯)

**ಭಕ್ತಿ** – ಪೂಜ್ಯಭಾವನೆ (ದೇವರೊಳಂ ಗುರುಗಳೊಳಂ ಆಗಮದೊಳಂ ನಂಬುಗೆಯುಂ ನಲ್ಮೆಯುಂ ಭಕ್ತಿಯುಂ ಅನೂನಮಾಗೆ: ಸುಕುಮಾಚ, ೩. ೪೬ ವ); ಸೇವೆ (ಉಪಚಾರಂ ಸೇವನೆ ಪರ್ಯುಪಾಸ್ಯೆ ವರಿವಸ್ಯೆ ಭಕ್ತಿ ಶುಶ್ರೂಷಾರ್ಥಂ: **ಅಭಿಧಾವ,** ೧. ೩. ೧೪)

**ಭಕ್ಷಣ** – ಊಟ (ಉಣಿಸು ಅಭ್ಯವಹರಣಂ ಭಕ್ಷನ ಅಶನಂ ಜಿಗ್ಧಿ ಜೇಮನಂ ಭುಕ್ತಿ: **ಅಭಿಧಾವ,** ೧. ೧೫. ೭)

**ಭಕ್ಷ್ಯ** – ಆಹಾರ (ನಿಡಿಯರ್ ಬಲ್ಲಾಯದ ಬಲ್ದಡಿಗರ್ ವಂದಿರ್ದರಯ್ವರಾಲವ ಕೆಟಗಿಂ ತೊಡರ್ದರ್ ನಮ್ಮಯ ಭಕ್ಷ್ಯದೊಳ್: **ಪಂಪಭಾ,** ೩. ೧೨)

**ಭಗ** – ಕೀರ್ತಿ, ಯಶಸ್ಸು (ಪೊಗಟೆ ಜಗತೀಚಕ್ರಂ ದಿಕ್ಚಕ್ರದೊಳ್ ಭಗಮವಗಂ ನೆಗಟೆ ವಿಜಯೋದ್ಯೋಗವ್ಯಾಭಾಸಮಾನ ಮಹೋದಯಂ: **ವರ್ಧಮಾಪು,** ೨. ೩೧); ಸೂರ್ಯ (ಭಗನ ಪಲ್ಕಂಗಳಂ ಕಿತ್ತು ದೇವರ್ ಮತಿಗೆಟ್ಟಿರ್ದೊಡಲ್ ಆ ದಕ್ಷನ ತಲೆಗಡಿದು: **ತ್ರಿಷಷ್ಟಿಪು,** ೩೦. ೩೧); ಸ್ತ್ರೀಯೋನಿ (ಸ್ಮರಸದನಂ ಉಪಸ್ಥಂ ಭಗಂ ಯೋನಿನಾಮಂ: **ಅಭಿಧಾವ,** ೧. ೧೨. ೪)

**ಭಗಂದರ** – ಒಂದು ಗುಹ್ಯರೋಗ (ಪಿಟಕಂ ಶೂಲ ಭಗಂಧರಂ ಕುಷ್ಠ .. .. ಮೊದಲಾಗೊಡೆಯ ಏಱುನೂಱು ವ್ಯಾಧಿಗಳ್: **ವಡ್ಡಾರಾ,** ಪು. ೬೯, ಸಾ. ೧೧)

**ಭಗಣ** – ನಕ್ಷತ್ರಸಮೂಹ (ಗಗನತಳದೊಳ್ ಪಲವುಂ ಬೆಳಕಂಡಿಗಳಂ ಸಮೆದಂ ಜಳಜಜನೆನೆ ತೊಳಗಿ ಬೆಳಗಿದುವು ಭಗಣಂಗಳ್: **ಧರ್ಮಪು,** ೨. ೧೧)

**ಭಗಣೇಶ** – ನಕ್ಷತ್ರಸಮೂಹದ ಒಡೆಯ, ಚಂದ್ರ (ಚಿದಾಕಾಶಾಂಗಣೋನ್ಮಧ್ಯದೊಳ್ ಭಗಣೇಶಂಬೊಲ್ ಅಜಸ್ರಂ ಒಪ್ಪುವ ಭವಂ ರಕ್ಷಿಕ್ಕೆ ಭಕ್ತಾಳಿಯಂ: **ಉದ್ಭಟಕಾ,** ೧. ೩)

**ಭಗವ** – ವೈಷ್ಣವ ಸನ್ಯಾಸಿ (ಕರವತಿಗೆಯ ಕೊಟೆನೀರ್ ಪಾರ್ವರಿಗಂ ಭಗವರಿಗಂ ಅಂತೆ ವ್ಯಾಧರಿಗಂ ತಾಂ ಪರಮ ಪವಿತ್ರಂ: **ಸಮಯಪ,** ೬. ೧೩)

**ಭಗವಂತ ವೇಷ** – ಸನ್ಯಾಸಿಯ ಸೋಗು (ಮಹಾಪದ್ಮನಂ ಕಿಡಿಸಿದಲ್ಲದೆ ಕಾಸೆಗಳಂ ಕಳೆಯೆನೆಂದು ಜಾದಿನ ಸೇಲೆಗಳನ್ನುಟ್ಟು ಭಗವಂತ ವೇಷಮಂ ಕೈಕೊಂಡು: **ವಡ್ಡಾರಾ,** ಪು ೧೮೬, ಸಾ ೬)

**ಭಗವತಿ** – ದೇವತೆ, ದುರ್ಗೆ (ಭಗವತಿಯಂ ಸ್ತುತಿಯಿಸಲ್ .. .. ತಾಂ ಗಡ ಮಗುಳ್ದಿತ್ತಳ್ ಕಳೆದ ಕಣ್ಣನೆಂಬರ್: **ಸಮಯಪ,** ೯. ೨೨)

**ಭಗವತಿಯೇಱು** – ದೇವಿಯ ಯುದ್ಧ, ದೇವಿ ಮೈಮೇಲೆ ಬಂದಾಗ ಉಂಟಾಗುವ ಉರುಬು (ಭಗವತಿಯೇಱುವೆರ್ವ ತೆಱದಿನಾಯ್ತಿವರೇಱು: **ಪಂಪಭಾ,** ೧೦. ೧೩)

**ಭಗಾಕ್ಷ** – ಇಂದ್ರ (ವಿರೂಪಾಕ್ಷ ಯಕ್ಷಸಖ ದಕ್ಷಮಖಪ್ರಕ್ಷಯ ಭಗಾಕ್ಷಹರ ನಿರಪೇಕ್ಷ: **ತ್ರಿಷಷ್ಟಿಪು,** ೨೬. ೨೮)

**ಭಗೀರಥ** – ಒಬ್ಬ ಚಕ್ರವರ್ತಿ (ದೀಕ್ಷಾಗ್ರಹಣಮನೋರಥಂ ಮಹಾರಥಂ ಭಗೀರಥಂಗೆ ಸಾಮ್ರಾಜ್ಯಪದವಿಯಂ ದಯೆಗೆಯ್ದು: **ಅಜಿತಪು,** ೧೧. ೧ ವ)

**ಭಗ್ನ** – ಒಡೆದುದು (ಭಿನ್ನಂ ಭಂಗುರ ಭಗ್ನಂಭಿನ್ನಂ ವೃಕ್ಣಂ ಛಿತಮಕ್ಕುಂ: **ಅಭಿಧಾವ,** ೨. ೧. ೪೮); ಮುರಿದುಹೋದ (ನಂದಗೋಪಂ .. .. ಭಗ್ನವಾಗಿರ್ದಾ ಮಹಾಸ್ಕಂಧಶಾಖಾರ್ಜುನ ವಿಟಪಿಯುಮಂ .. ..: **ಜಗನ್ನಾವಿ,** ೩. ೩೯ ವ)

**ಭಗ್ನಮನೋರಥ–** ಕೈಗೂಡದ ಆಸೆಯುಳ್ಳವನು (ಭಗ್ನಮನೋರಥಂ ರತಿಸುಖಾಸವಸೇವೆಗೆ ಪಂಚಬಾಣ ಪಂಚಾಗ್ನಿ ತಪಕ್ಕೆ ನಿಲ್ವ ವಿರಹಾತುರನಂತಿರೆ: **ನೇಮಿನಾಪು,** ೪. ೧೨೮)

**ಭಟ** – ಸೈನಿಕ (ಕರಿಕುಳಮಂ ಹರಿಚಯಮಂ ವರೂಥತತಿಯಂ ಭಟೌಘಮಂ: **ತ್ರಿಷಷ್ಟಿಪು,** ೧೯. ೫೧)

**ಭಟಕಟಾಹ** – ಸೈನಿಕಸಮೂಹ (ಭಟಕಟಾಹಕ್ಕೆ ಕಣ್ಣಿಂದೆ ಸೂಸುತ್ತುರಿಯಂ ಕಲ್ಪಾಂತದುಗ್ರಾಂತಕನ ಮಸಕಮಂ ತಾಳ್ದಿದಂ ರಾಜಪುತ್ರಂ: **ಚಂದ್ರಪ್ರಪು,** ೫. ೧೦೭)

**ಭಟಸಂಘ** – ಭಟಕಟಾಹ (ಭಟಸಂಘಕ್ಕೆ ಅದಟೆಂತುಟು ಅಂತುಟೆ ಮುಖಿಂಭೋಜಕ್ಕೆ ಮೂಗೆಂತುಟು ಅಂತುಟೆ .. .. ದರ್ಶನಂ ಸಕಲಧರ್ಮಕ್ಕಂ: **ಧರ್ಮಾಮೃ,** ೧. ೬೮೦

**ಭಟಾರ** – [ಭಟ್ಟಾರ] ಗುರು (ಎನ್ನಂ ಜ್ಯೋತಿಷಮಂ ಕಲ್ಪಿಪ್ಪುದೆಂದೊಡೆ ಭಟಾರರೆಂದರ್: **ವಡ್ಡಾರಾ,** ಪು. ೫. ಸಾ. ೨೭)

**ಭಟ್ಟ** – ಪಂಡಿತ (ಅರಸಂಗೆ ತಂದೊಪ್ಪಿಸುವುದುಂ ಅರಸನಾ ಭಟ್ಟನಂ ನೆಟ್ಟನೆ ಕಳ್ಳನೆಂದೆ ಬಗೆದೀ ದುಷ್ಟಂಗೆ ತಕ್ಕುದಂ ಮಾಡಿಮೆನೆ: **ಪಂಚತಂತ್ರ,** ೩೨೬ ವ)

**ಭಟ್ಟಮಂಡಪ** – ವಿದ್ವತ್ಸಭೆ ಸೇರುವ ಜಾಗ, ಸಭಾಮಂದಿರ (ಆತನ ಬುದ್ಧಿಯಂ ಪರೀಕ್ಷಿಸಲ್ವೇಡಿ ಭಟ್ಟಮಂಡಪದೊಳ್ ಈ ಶ್ಲೋಕಮಂ ಬರೆದು ಪೋದಂ: **ವಡ್ಡಾರಾ,** ಪು. ೧೮೪, ಸಾ. ೮)

**ಭಟ್ಟಾರ** – ಗೌರವಸೂಚಕ ವಿಶೇಷಣ (ಓಸರಿಗೆಯೊಳ್ ತೊಟ್ಟಿಲೊಳ್ ಇರ್ದ ಅವ್ಯಕ್ತ ಕಿಱುಗೂಸು ಬೋಳಹ ಬೋಳಹ ಭಟ್ಟಾರಾ ಎಂದತ್ತು: **ವಡ್ಡಾರಾ,** ಪು ೮೫, ಸಾ ೧೨)

**ಭಟ್ಟಿಗೆಯ್** – ಭಟ್ಟಿಯಿಳಿಸು, ಬೇಯಿಸಿ ಕರಗಿಸಿ ಸೋಸು (ವಜ್ರಮೂಷೆಯೊಳಿಕ್ಕಿ ಭಟ್ಟಿಗೆಯ್ವಂತೂದಿ ಕರಗಿಪುದುಂ: **ಶಾಂತೀಶ್ವಪು,** ೯. ೧೧೦ ವ)

**ಭಟ್ಟಿಣಿ** – ರಾಣಿ (ನರನಾಥನ ಭಟ್ಟಿಣಿ ತತ್ಪುರಾಣದೊಳು ಪುತ್ರರಿಲ್ಲದವರ್ಗೆ ಇಹಪರ ತಾವೆರಡಿಲ್ಲವೆಂಬವುದಂ ಉಱೆ ಕೇಳ್ದು: **ತ್ರಿಷಷ್ಟಿಪು,** ೧೭. ೬೯)

**ಭಟ್ಟಿನಿ** – ಮಹಾರಾಣಿ (ಭಟ್ಟನಿಯರ್ ನೃಪಸತಿಯರ್ ಪಟ್ಟಮಹಾದೇವಿ ಅಗ್ರಮಹಿಷಿಯೆನಿಕ್ಕುಂ: **ಅಭಿಧಾವ,** ೧. ೧೧. ೪೯)

**ಭಟ್ಟಿತ್ತಿ** – ಒಂದು ದೇವತೆ (ಪಸಾಯಮಿತ್ತ ಮಕುಟದ ಮುಕುಳಮನಾ ಕುಮಾರಿ ಮುಡಿಯಪೊಟ್ಟು ಭಟ್ಟಿತ್ತಿಗೆ ಪೊಡೆಮಟ್ಟು: **ನೇಮಿನಾಪು,** ೬. ೧೭ ವ)

**ಭಡಿತ–** ಸಲಾಕಿ ಮುಂತಾದ್ದಕ್ಕೆ ಚುಚ್ಚಿ ಬೇಯಿಸಿದ ಮಾಂಸ (ಭಡಿತಂ ತಾಂ ಶೂಲ್ಯಂ ಸುಟ್ಟಡಗು: **ಅಭಿಧಾವ,** ೧. ೧೬. ೧೪)

**ಭಣಿತಿ** – ಮಾತು (ಎಂದು ನುಡಿದ ವಕ್ರಭಣಿತಿಗಳಾಶ್ಚರ್ಯಮಂ ಪುಟ್ಟಿಸೆ: **ಜಗನ್ನಾವಿ,** ೮. ೧೦೭ ವ)

**ಭಣಿತೆ** – ಜನಜನಿತ (ನೀನೊಂದು ಭಣಿತೆಯ ಕಥೆಯಂ ಪೇೞ್ದು ನಮ್ಮ ನಿರ್ವಾಹಮಂ ಕಿಡಿಸದೆ ಎನ್ನೆಂದುದಂ ಗೆಯ್: **ಪಂಚತಂತ್ರ,** ೨೪೦ ವ)

**ಭದ್ರ** – ಉಪ್ಪರಿಗೆ (ಆಗಳ್ ದ್ರುಪದಂ ಪಚ್ಚೆಯ ನೆಲಗಟ್ಟಿನೊಳಂ .. .. ಇಂದ್ರನೀಲದ ಭದ್ರದೊಳಂ .. .. ಚಂದ್ರಕಾಂತದ ಚಂದ್ರಶಾಲೆಯೊಳಂ ಒಪ್ಪುವ ವಿವಾಹಗೇಹಮಂ ಸಮೆಯಿಸಿ: **ಪಂಪಭಾ,** ೩. ೭೪ ವ); ಮಂಗಳಕರ (ಕರಿಯಿಂ ಭದ್ರಯುತಂ ಸರೋಜದೆ ಗುಣಾಧಾರಂ .. .. ಕಳಾನಿಧಿ ಕುಮಾರಂ ಪುಟ್ಟುವಂ ನಿಶ್ಚಯಂ: ೪. ೨೯); ಶುಭಲಕ್ಷಣದ ಯುದ್ಧದ ಆನೆ (ಧುರದೆಡೆಯನಾಂತು ನಡೆವುದು ಧುರೀಣ ಧವರೇಯ ಧುರ್ಯ ನಾಮಂ ಭದ್ರಂ: **ಅಭಿಧಾವ,** ೧. ೧೫. ೩)

**ಭದ್ರಜಾತಿ** – ತುಂಬು ಲಕ್ಷಣಗಳ ಆನೆ (ಅಂತು ಜಾತಿಸ್ಮರನಾಗಿ ಭದ್ರಜಾತಿ ರೂಪಧರರ ಪಾದಪಯೋಜಾತಕ್ಕೆ: **ಪಾರ್ಶ್ವನಾಪು,** ೪. ೧೪೮ ವ)

**ಭದ್ರಬಾಹು** – [ಜೈನ] ಉತ್ತರಭಾರತದಿಂದ ಶ್ರವಣಬೆಳುಗೊಳಕ್ಕೆ ಚಂದ್ರಗುಪ್ತನ ಜೊತೆ ಬಂದನೆನ್ನಲಾದ ಮುನಿ (ಇಂತು ಪದಿನಾಱುಂ ಕಂಡ ಕನಸುಗಳ ಫಲಂಗಳಂ ಸಂಪ್ರತಿ ಚಂದ್ರಗುಪ್ತಂಗೆ ಭದ್ರಬಾಹುಭಟ್ಟಾರರ್ ಪೇೞ್ದು: **ವಡ್ಡಾರಾ,** ಪು. ೮೭, ಸಾ. ೧೮)

**ಭದ್ರಮನ** – ಸಾತ್ವಿಕ ಸ್ವಭಾವ (ಅಂಬೋಧನಿನಾದಂ ಭದ್ರಮನಂ ಮನೋಜವ ಚತುರಶೀತಿಲಕ್ಷಪ್ರಮಿತಂ: **ಆದಿಪು,** ೧೧. ೨೯)

**ಭದ್ರಮುಸ್ತಕ** – ಕೊನ್ನಾರು ಗೆಡ್ಡೆ (ಏಳುವಾಳುಕ ಸಂಜ್ಞಿಕಂ ಐಳೇಯಂ ಭದ್ರಮುಸ್ತೆ : **ಅಭಿಧಾವ,** ೧. ೮. ೨೪)

**ಭದ್ರಲಕ್ಷಣ** – ಭದ್ರ ಎಂಬ ಜಾತಿಯ ಆನೆಯ ಲಕ್ಷಣಗಳು (ವರದಾನೋನ್ನತ ಭದ್ರಲಕ್ಷಣವದಂ ಪದ್ಮಾನುಷಂಗಿತ್ವಮಾಗಿರೆ ಪೆಂಪಚ್ಚರಿಯಾದ ದೇವಗಣಮಂ ರಕ್ಷಿಕ್ಕೆ ಭೂಚಕ್ರಮಂ: **ಜಗನ್ನಾವಿ,** ೧. ೫)

**ಭದ್ರಶಾಲ** – [ಜೈನ] ಮೇರುಪರ್ವತದ ಮೇಲಿರುವ ನಾಲ್ಕು ವನಗಳಲ್ಲಿ ಒಂದು: ಉಳಿದ ಮೂರು: ನಂದನ, ಸೌಮನಸ, ಪಾಂಡುಕ (ಮಂದರಶೈಲಮಂ ದಿವಿಜನಾಯಕನೆಯ್ತರೆ ಭದ್ರಶಾಲದಿಂ .. .. ಗಿರಿರಾಜವಿಲಾಸಂ ಅತ್ತೆಯಂ ತಂದುದು ಕಾಣ್ಕೆಯಂ ತನಗೆ ತರ್ಪವೊಲ್ ಅಂತದನಿಂದ್ರನೆಯ್ದಿದಂ: **ಶಾಂತಿಪು,** ೫. ೨)

**ಭದ್ರಶಾಳ** – ಭದ್ರಶಾಲ (ಉನ್ಮತ್ತ ಅಳಿಕೀರಂಗಳ ಕಳರುತಿಯಂ ಪೋಲ್ವಿನಂ ತನ್ನಿತಂಬಸ್ಥಳದೊಳ್ ತಾಳ್ದಿತ್ತು ಚಿತ್ರಾಂಬರ ವಿಳಸನಮಂ ಭದ್ರಶಾಳಂ ವಿಶಾಳಂ: **ಮಲ್ಲಿನಾಪು,** ೧೨. ೫೯)

**ಭದ್ರಹಸ್ತಿ** – ಭದ್ರಗಜ (ಎಂಬತ್ತುನಾಲ್ಕು ಲಕ್ಕೆ ಗಂಧಸಿಂದುರಂಗಳಪ್ಪ ಭದ್ರಹಸ್ತಿಗಳುಂ: **ಆದಿಪು,** ೧೫. ೩ ವ)

**ಭದ್ರಾಸನ** – ಸಿಂಹಾಸನ (ಅನೇಕ ರತ್ನಖಚಿತ ಸಿಂಹಾಸನಮುಂ ಅದಱೆರ್ಕೆಲದೊಳಿರ್ದ ಭದ್ರಾಸನಂಗಳುಂ ವಿರಾಜಿಸುವುವು: **ಕರ್ಣನೇಮಿ,** ೮. ೧೩೨ ವ)

**ಭದ್ರಿಸು** – ಕ್ಷೌರ ಮಾಡು (ಭದ್ರಿಸು–ಮುಂಡನಕ್ರಿಯಾಯಾಂ: **ಶಬ್ದಮದ,** ಧಾ ೭೩೭)

**ಭಯ** – ಅಂಜಿಕೆ (ಭಯಂ ಉತ್ತು ಎಲ್ಲ ದಿಂಡುಗಳ ವಸ್ತ್ರಂಗಳಂ ಬೇಱೆ ಬೇಱೆ ಬಿಚ್ಚಿ ನೋಡುತ್ತಿರ್ಪನ್ನೆಗಂ: **ತ್ರಿಷಷ್ಟಿಪು,** ೯. ೫೯ ವ)

**ಭಯರಸ** – ಹೆದರಿಕೆ (ಪಾರ್ವತೀದೇವಿಗೆ ಕೌತುಕರಸದೊಳಾನಂದಂ ಪುಟ್ಟೆ ಭಯರಸದೊಳ್ ಭಕ್ತಿಯುಣ್ಮೆ: **ಗಿರಿಜಾಕ,** ೫. ೪೨ ವ)

**ಭಯವಿಹ್ವಳ** – ಭಯದಿಂದ ತತ್ತರಿಸು (ಆತ್ಮಬಳಮನೀಕ್ಷಿಸಿ ಭಯವಿಹ್ವಳಸಿಂಹಳಂ ಆ ಕೊಳುಗುಳದಿಳೆಯಂ ಬೆಂಗೊಟ್ಟು ಜಗುಳ್ದಂ ಅತಿಜವದಿಂದಂ: **ರಾಜಶೇವಿ,** ೬. ೧೧೦)

**ಭಯಾನಕ** – ನವರಸಗಳಲ್ಲಿ ಒಂದು (ಸತತಂ ಭಯಾನಕೋದ್ಯತ್ಸುರಸಂ ಕರಂ ವಿಷಮಬಂಧದಿಂ .. .. ಊರ್ಜಿತೋಕ್ತಿಗಳಿನಕ್ಕತಿ ರೌದ್ರರಸಂ ರಸಾವಹಂ: **ಕವಿರಾಮಾ,** ೨. ೧೦೦)

**ಭರಂಗೆಯ್** – ಕಾರ್ಯಭಾರವನ್ನು ಹೊರು (ಧೃತರಾಷ್ಟ್ರಂ ನುಡಿದಾರ್ತನೇ ಹರಿ ಭರಂಗೆಯ್ದಾರ್ತನೇ ನೀಂ ಪೃಥಾಸುತರಂ ನೋಯಿಸಲಾಗದೆಂದು ನುಡಿದೇಮಾರ್ತೆಮೇ: ಪಂಪಭಾ< ೧೦. ೧೦); ಉತ್ಸಾಹಪಡು (ಭರಂಗೆಯ್ದೊಡೆ ಉರ್ಕುಳ್ಳ ಸಾಮಂತನಿಕಾಯಂ ಯಂತ್ರಮುಕ್ತಾನಳ ಶರದೃಷದಾಸಾರವಿಧ್ವಂಸಮಕ್ಕುಂ: **ಆದಿಪು,** ೧೩. ೫೮); ಆರ್ಭಟಿಸು (ಹರಿಯುಂ ತಾನುಂ ಭರಂಗೆಯ್ದು ತನ್ನ ಎಸಕಂ ಕಾಯದೆ ಅಧರ್ಮಯುದ್ಧದೆ ನರಂ ಕೊಲ್ವಲ್ಲಿ ಕಂಡು ಇಂತುಪೇಕ್ಷಿಸಿ ನೀಮುಂ ನಡೆ ನೋಡುತ್ತಿರ್ದಿರಿ ಎನೆ ಮತ್ತಿನ್ನಾರಂ ನಂಬುವೆಂ: **ಪಂಪಭಾ,** ೧೧. ೮೩)

**ಭರಂಬಡು** – ಚುರುಕಾಗಿ (ಒಂದು ದಿವಸಂ ಮಧ್ಯಾಹ್ನ ಸಮಯಮಪ್ಪನ್ನೆಗಂ ಭರಂಬಟ್ಟು ಕೆಲಸಂಗೈದಲ್ಲಿಯ ಬಿನ್ನಣಿಗರುಂ ಕರ್ಮಕಾರರುಂ ತಮ್ಮ ತಮ್ಮ ಮನೆಗೆ ಉಣಲ್ ಪೋಪುದುಂ: **ಪಂಚತಂತ್ರ,** ೮೨ ವ)

**ಭರಣ** – ರಕ್ಷಣೆ (ತೋಱೆತ್ತೆತ್ತೆಮಾದಂ ಹರಿಣಭರಣ ಚಾತುರ್ಯಮಂ ಚಾತುರಂಗಂ: **ಚಂದ್ರಪ್ರಪು,** ೧. ೩೦)

**ಭರತ** – ಭರತಮುನಿಯಿಂದ ರಚಿತವಾದ ನಾಟ್ಯಶಾಸ್ತ್ರ (ಭರತಮನೋದುವ ಸಪ್ತಸ್ವರಮಂ ಗುಣಿಯಿಸುವ ಬೀಣೆವಾಜಿಪ ವಿದ್ದಂಬರೆವ ಪರಚಕ್ರಮಿಕ್ಕುವ ಪರಿಹಾಸದೊಳಿರ್ಪ ಬಿನದಮವರ್ಗಳ ಬಿನದಂ: **ಅಜಿತಪು,** ೩. ೮); ಒಬ್ಬ ಚಕ್ರವರ್ತಿ (ಭರತನ ವಂಶದೊಳ್ ನೆಗೞ್ದಿ ಪಾಂಡುಗೆವುಟ್ಟಿಯುಂ: **ಪಂಪಭಾ,** ೩. ೧೧); ಶ್ರೀರಾಮನ ತಮ್ಮ (ಶುಭದಿನ ಮುಹೂರ್ತದೊಳ್ ಸುಮಿತ್ರೆ ಲಕ್ಷ್ಮಣನಂ ಕೈಕೆ ಭರತನಂ ಸುಪ್ರಭೆ ಶತ್ರುಘ್ನನಂ ಪಡೆವುದುಂ: **ಪಂಪರಾ,** ೩. ೧೩೩ ವ); [ಜೈನ] ಆದಿತೀರ್ಥಂಕರನ ಹಿರಿಯ ಮಗ, ತ್ರಿಷಷ್ಠಿ ಶಲಾಕಾಪುರುಷರಲ್ಲಿ ಒಬ್ಬ (ಭರತಂ ಮುನ್ನಾದಿ ತೀರ್ಥೇಶ್ವರನ ಚರಣಮಂ ತೀರ್ಥಭೂಪಾಲಂ .. .. ಪೂಜಿಸಿದಂ: **ಅಜಿತಪು,** ೮. ೨೫); ಒಂದು ಜನಪದ (ಆ ತಿರ್ಯಗ್ಲೋಕದ ನಟ್ಟನಡುವೆ ಲವಣಜಲಧಿಪರಿವೃತಮಾಗಿ ಭರತ ಹೈಮವತ .. .. ಐರಾವತಂಗಳೆಂಬ ಏೞುಂ ಜನಪದಗಳುಂಟು: **ಆದಿಪು,** ೧. ೪೮ ವ)

**ಭರತಕುಲ** – ಪಾಂಡವ–ಕೌರವರ ರಾಜವಂಶ (ಭರತಕುಲೇಂದು ಕಲಂಕಂ ಭರತಾನ್ವಯ ರಾಜಭವನ ರಾಜಕಪೋತಂ ಕುರುಕೇತುವೆಲ್ಲಿದಂ: **ಗದಾಯು,** ೬. ೩೨)

**ಭರತಕ್ಷೇತ್ರ** – ಭರತವರ್ಷ (ಮನೋಹರಮುಮೆನಿಸಿದ ಭರತಕ್ಷೇತ್ರದ ಮಧ್ಯದೊಳ್ ಮಧ್ಯದೇಶಮುಂಟು: **ಜಗನ್ನಾವಿ,** ೨. ೧ ವ)

**ಭರತಾಗಮ** – ನಾಟ್ಯವಿದ್ಯೆ (ಭರತಾಗಮಲಕ್ಷ್ಮಿಗೆ ನಿಜಕರಣಮಳಂಕರಣಂ ಅಂಗಹಾರಂ ಹಾರಂ: **ಚಂದ್ರಪ್ರಪು,** ೧೨. ೧೭೯)

**ಭರತಾನ್ವಯ** – ಭರತವಂಶ (ಸತ್ಯನೆಂಬವಂಗೆ ಭರತನೆಂಬವನಾದಂ ಆತನಿಂ ಬೞಿಕ ಭರತಾನ್ವಯಂ ಎಂಬುದಾದುದು: **ಗದಾಯು,** ೫. ೪೪ ವ)

**ಭರತೋರ್ವಿ** – ಭರತಕ್ಷೇತ್ರ (ಅಯ್ದನೆಯಂ ತಜ್ಜಿನಚಕ್ರವರ್ತಿ ಜಿನನಾಥಂ ಷೋಡಶಂ ಧರ್ಮಚಕ್ರಯುಕ್ತಂ ಭರತೋರ್ವಿಗಿಂತು ಸಲೆ ನೋಂತಂ ಶಾಂತಿತೀರ್ಥೇಶ್ವರಂ: **ಶಾಂತಿಪು,** ೧. ೧೬)

**ಭರಭಾರ** – ಪಾಲಿಸುವ ಜವಾಬ್ದಾರಿ (ತಂಗೆವಿರ ಭರಭಾರಕ್ಕಮಡಸಿದ ಬಡತನಕ್ಕಂ ಎಡರ್ಗಂ ಅಳ್ಕದೆ ನೀಮ ಪೊತ್ತು ನಿತ್ತರಿಸುತ್ತುಮಿರೆ: **ಶಾಂತಿಪು,** ೪. ೬೬ ವ)

**ಭರವಶ** – ಅತಿಯಾದ ವೇಗ (ಬೆಳ್ಳೆರಲೆಗೆ ಗಱೆಮೂಡಿದವೋಲ್ ಭರವಶದಿಂ ಪೊಕ್ಕನೋಡಿ ಲಂಕಾಪುರಮಂ: **ಪಂಪರಾ,** ೯. ೧೪೦)

**ಭರಿಕೆಯ್** – ಸೊಂಡಿಲು (ಭರಿಕೆಯ್ಯನಾನದ ಮಹಾಗಜದಾನವನೋ: **ಶಬರಶಂ,** ೪. ೩)

**ಭರಿಕೆಯ್ವಿಲ** – ಆನೆಯ ಸೊಂಡಿಲ ಬಾಯಿ (ನೀಡಿದ ಭರಿಕೆಯ್ವಿಲದೊಳ್: **ಶಬರಶಂ,** ೩. ೫೮)

**ಭರಿತ** – ತುಂಬಿರುವ (ಭರಿತ ನವಯೌವನಶ್ರೀ ತರುಣಿಯ ಕೇಳಿವಿಶಾಳಶೈಳದ್ವಯದಂತಿರೆ .. .. ಎಸೆದತ್ತು ಕೋಮಳೆಯ ಕುಚಯುಗಳಂ: **ಶಾಂತೀಶ್ವಪು,** ೧೩. ೧೯೨)

**ಭರ್ಗ** – ರುದ್ರ, ಶಿವ (ಕದನಾಂಗಣಭರ್ಗ ಭವತ್ ಪ್ರಸಾದದಿಂ ಸ್ವಜನರೊಳೊಂದಿ ಮಿಕ್ಕ ವಿಭವೋನ್ನತಿವೆತ್ತೆಂ: **ಕರ್ಣನೇಮಿ,** ೫. ೧೧೧)

**ಭರ್ತಾರ** – ಗಂಡ (ನಿನ್ನ ಭರ್ತಾರಂ ಬೇಂಟೆಯಾಡಿ ಪಲವುಂ ಲಾವುಗೆಯುಂ ಉಂಕೆ ಕೊರಸುಂ ಮೊದಲಾಗೊಡೆಯ ಪಕ್ಷಿಜಾತಿಗಳಂ ಬಲೆಯನೊಡ್ಡಿ ಪಿಡಿದು: **ವಡ್ಡಾರಾ,** ಪು ೧೫೧, ಸಾ ೩)

**ಭರ್ತಾರಿ** – ಹೆಂಡತಿ (ಎನ್ನ ಭರ್ತಾರಿಯು ಮಾವಿನ ಪಣ್ಣನೇಕೆ ಬಯಸಿದಳಿನಿತಾನುಂ ವಸ್ತುನಿಕರಮಿರ್ದುಂ ತಿನಿಸಂ: **ಧರ್ಮಾಮೃ,** ೮. ೨೮)

**ಭರ್ತೃ** – ಗಂಡ (ವಲ್ಲಭಂ ಭರ್ತೃ ಪತಿ ಪ್ರಿಯನೆನಿಪುದಜೆಗೆ: **ಅಭಿಧಾವ,** ೧. ೧೧. ೧೧); ಒಡೆಯ, ಯಜಮಾನ (ಪ್ರಭು ಪರಿವೃಢಂ ಈಶಂ ಸ್ವಾಮಿ ಭರ್ತೃ ಪತಿ ನಾಥಂ ಅಧಿಪಂ ಈಶ್ವರಂ: **ಅಭಿಧಾವ,** ೨. ೧. ೯)

**ಭರ್ತೃಹರಿತ** – ಗಂಡನಿಲ್ಲದ, ವಿಧವೆ (ಭರ್ತೃಹರಿತ ಸ್ತ್ರೀಯುಂ ಪರಿತ್ಯಕ್ತಸುಂದರಿಯುಂ ತೊಟ್ಟಿನ ಅಮೇಧ್ಯಭಾಜನದ ಸಾಮ್ಯಂ: **ಸಮಯಪ,** ೫. ೬೯)

**ಭರ್ತೃಭೈಕ್ಷ** – ಪತಿಭಿಕ್ಷೆ, ಪುರುಷಭಿಕ್ಷೆ (ಅದಂ ಕೇಳ್ದ ಗಗನಚರಿಯೊರ್ವಳ್ ಬಂದು ಅರಸಂಗೆಱಗಿ ಪೊಡೆವಟ್ಟು ಎನಗೆ ಭರ್ತೃಭೈಕ್ಷಮಂ ದೇವರ್ ಇಕ್ಕಲೆವೇಳ್ಕುಂ ಎಂಬುದುಂ: **ಶಾಂತಿಪು,** ೯. ೮೨ ವ)

**ಭರ್ಮ** – ಚಿನ್ನ (ಸಾಹಿಯಾಣದ ಚೀನದ ಧವಳವಟ್ಟದ ಭರ್ಮದ ಜೊಂಗದ ದೇವಾಂಗದ ಸಕಳವಟ್ಟೆಗೆಗಳುಮಂ: **ಆದಿಪು,** ೪. ೩೪ ವ)

**ಭರ್ಮಾಚಲ** – ಚಿನ್ನದ ಬೆಟ್ಟ, ಮೇರು (ತನ್ಮನುಚೋಳನ ಧರ್ಮದೇಟ್ಗೆಯಂ ಭರ್ಮಾಚಲಕಾರ್ಮುಕಂ ಕಂಡು ಮೆಚ್ಚಿ .. .. ಪ್ರಸನ್ನಮಾಗೆ: **ಉದ್ಭಟಕಾ,** ೧೨. ೮೬ ವ)

**ಭಲ್ಲ** – ಅರ್ಧಚಂದ್ರಾಕಾರದ ಬಾಣ (ಕರಯುಗ್ಮದಿಂ ಕಱೆದ ಭಲ್ಲದ ಸೆಲ್ಲದ ಪಿಂಡಿವಾಳದ ಇಟ್ಟಿಯ .. .. ಸರಿಯಂ ಶರಾನಿಳವಿಘಾತದೆ ತೂಳ್ದಿದನಾಗಳಚ್ಯುತಂ: **ಆಚವರ್ಧ,** ೮. ೬೨); ಕರಡಿ (ಪರಿಗಳಿತ ಪೂತಿಗಂಧರ್ ಖರ ಕಾಕ ಸೃಗಾಲ ಕರಭ ಕೌಶಿಕ ವೃಕ ವಾನರ ವಿಷದಂಷ್ಟ್ರೋತ್ಕರ ಕುರ್ಕುರ ಕೀಟಕ ಭಲ್ಲನಿಕರ ನಿಷ್ಠುರನಿನದರ್: **ಶಾಂತೀಶ್ವಪು,** ೯. ೧೦೬)

**ಭಲ್ಲಾತ** – ಗೇರು ಮರ (ಭಲ್ಲಾತಂ ಅರುಷ್ಕರಂ: **ಅಭಿಧಾವ,** ೧. ೮. ೯)

**ಭಲ್ಲೂಕ** – ಕರಡಿ (ವೃಕ ಭಲ್ಲೂಕ ಸುಗಂಡ ಚಂಡಹರಿಣಶ್ರೇಣೀ ರುರು ಉರು ಉಗ್ರ ಶಲ್ಯಕ ಸಾರಂಗ ಶಶಾವಳೀ ಶರಭ ಗೋಲಾಂಗೂಲಮಾಲಾ ಪರಿಪ್ರಕರ ಆಭೀಳ ಸೃಗಾಳಜಾಳಂ ಮದವತ್ ಶುಂಡಾಲ ಶಾರ್ದೂಲ ಕಾಕಕುಳ ವ್ಯಾಳ ಕರಾಳ ವಿಸ್ಫುರತ್ ಅರಣ್ಯಾನೀ ಮಹೀದೇಶದೊಳ್: **ಪಂಚತಂತ್ರ,** ೧೪೨)

**ಭವ** – ಜೀವಿತಾವಧಿ (ಎನಿತೆನಿತು ಕಟಿದ ಭವಮಂ ನೆನದಪೆ ಎನಿತೆನಿತು ಭವದ ಬಂಧುಗಳಂ ನೀಂ ನೆನೆದಪೆ: **ಆದಿಪು,** ೨. ೬೦); ಜನ್ಮ (ಕಳೆದ ಭವದೊಳ್ ವಿರಾಮಂಗಳೊಳೊದವಿದ ಮೋಹದಿಂ ವಿಚಾರಕ್ಕೆ ಪವಣ್ಗಳೆದ ಗುಣದಿಂ ಕರಂ ಪಳುಗಳಿದುದು ದಯೆ ತಮ್ಮನೊಳ್ ಜಗತ್ತ್ರಯಪತಿಯಾ: **ಶಾಂತಿಪು,** ೧೦. ೯೯); ಸಂಸಾರ (ಇನ್ನೆಗಂ ಓರಂತೆ ತೊಟಲ್ದೆಂ ಇಂ ತಿರಿಯಲಾಱೆಂ ಭವಾಂಬೋಧಿಯೊಳ್: **ಆದಿಪು,** ೯. ೬೦); ಶಿವ (ಭವಂ ಈಶಂ ಶಂಭು ರುದ್ರಂ ಪಶುಪತಿ ಗಿರಿಶಂ ಭರ್ಗಂ ಶೂಲಿ ಭವಾನೀಧವಂ: **ಅಭಿಧಾವ,** ೧. ೧. ೧೩); [ಜೈನ] ತೀರ್ಥಂಕರ (ಭವನ ತನುಭಾಳಮಂಡದ ನವಮಂಡನದಿಂದಮೊಪ್ಪೆ: **ಶಾಂತಿಪು,** ೧೦. ೬೦)

**ಭವಚತುಷ್ಟಯ** – [ಜೈನ] ದೇವ, ಮನುಷ್ಯ, ತಿರ್ಯಕ್, ನರಕ ಎಂಬ ನಾಲ್ಕು ಬಗೆಯ ಹುಟ್ಟುಗಳು (ಕಷ್ಟತರಮಂ ಕಷಾಯಚತುಷ್ಟಯದೆಡೆಗಿಡಿಸಿ ದೇವ ಕಿಡಿಸಿಯೆ ಭವಚಾತುಷ್ಟಯಮಂ ಇನ್ನನಂತ ಚತುಷ್ಟಯಮಂ ಪೊರ್ದು ಪೊರ್ದದಿರು ಸಂಸೃತಿಯಂ: **ಅಜಿತಪು,** ೬. ೭೩)

**ಭವತ್** – ನಿನ್ನ (ಭವತ್ ಊರುಯುಗಂಗಳಂ ಆಜಿರಂಗದೊಳ್ ಗಿಜಿಬಿಜಿಮಾಡಲೆಂದು ಅವನ ಪೂಣ್ದುದು ನಿಕ್ಕುವಂ ಆಗದಿರ್ಕುಮೇ: **ಪಂಪಭಾ,** ೯. ೫೨)

**ಭವದೀಯ** – ನಿನ್ನ (ಸಕಳೋರ್ವೀತಳಪೂಜ್ಯಮಪ್ಪ ಭವದೀಯ ಪ್ರಾಜ್ಯರಾಜ್ಯಕ್ಕೆ ಕಂಟಕನಾದಂ ಕ್ರಮದಿಂದೆ: **ಪಂಚತಂತ್ರ,** ೧೬೦)

**ಭವದೀಯಸ್ವ** – ನಿನ್ನ ಆಸ್ತಿ (ವಿಶ್ವಜನಾಳಿಗೆ ಭವದೀಯಸ್ವಂ ಕರತಳಿತಗತಸ್ವಂ ಅನ್ಯಸ್ವಂ ಬ್ರಹ್ಮಸ್ವಂ ರಾಜಸ್ವಂ ದೇವಸ್ವಂ ಕೀರ್ತಿಸ್ವ ದುರ್ಗ ವಿಶ್ವಾವನಿಯೊಳ್: **ಪಂಚತಂತ್ರ,** ೪೪೫)

**ಭವನ** – ದೊಡ್ಡ ಮನೆ, ಇದರಲ್ಲಿ ಅನೇಕ ಬಗೆಗಳು (ಏಕಶಾಲ ದ್ವಿಶಾಲ ತ್ರಿಶಾಲ ಚತುಶ್ಶಾಲ ಪಂಚತಳ ಮಹಾಮಾಟ ಕೂಟ ಸ್ವಸ್ತಿಕ ವಳಭಿಪದ್ಮ ಗುಲ್ಮೋತ್ಪಳ ನಂದ್ಯಾವರ್ತ ಶ್ರೀಭದ್ರಶಾಲಾದ್ಯನೇಕ ರಮ್ಯಭವನಂಗಳುಮಂ: **ಹರಿವಂಶ,** ೭. ೧೫ ವ)

**ಭವನಾಂಗ** – [ಜೈನ] ಹತ್ತು ಬಗೆಯ ಕಲ್ಪವೃಕ್ಷಗಳಲ್ಲಿ ಒಂದು (ಭವನಾಂಗಂ ಕಲ್ಪಭುಜಂ ಸಮೆದ ಬಹುವಿಧೋತ್ತುಂಗ ಹರ್ಮ್ಯಾವಳೀ ಗರ್ಭವಿಲಾಸಾವಾಸದೊಳ್: **ಚಂದ್ರಪ್ರಪು,** ೩. ೩೮)

**ಭವನಾಮರ** – ಭವನವಾಸಿಗ (ಭವನಾಮರರುಂ ವ್ಯಂತರನಿವಹಮುಂ ಆ ಜ್ಯೋತಿರಮರತತಿಯುಂ: **ಕರ್ಣನೇಮಿ,** ೮. ೧೦೯ ವ)

**ಭವನಿಬದ್ಧ** – ಸಂಸಾರದ ಕಟ್ಟುಪಾಡು (ನಿನಗೆ ಪಥ್ಯಮಾವುದು ಅದಂ ಮಾಡು ಆಮೂಲಚೂಲಂ ಎಮಗೆ ಭವನಿಬದ್ಧಂ ಅಟಲಿಸಿತೆಮ್ಮಂ: **ಯಶೋಧಚ,** ೧. ೬೫)

**ಭವಪದ್ಧತಿ** – ಭವಾವಳಿ (ಕುಸುಮಿತ ಬಹಿರುಪವನ ಭೂಪ್ರಸರದೊಳಿರ್ದ ಅಮಿತಕೀರ್ತಿಕೇವಳಿಯಂ ಬಂದಿಸಿ ಮತ್ ಭವಪದ್ಧತಿಯಂ ಬೆಸಗೊಳೆ ಬೆಸಸಿದನಘಾರಿ ದಿವ್ಯಧ್ವನಿಯಿಂ: **ಶಾಂತಿಪು,** ೬. ೮೫)

**ಭವಪರಿಣತಿ** – ಬೇರೆ ಬೇರೆ ರೂಪಗಳಲ್ಲಿ ಹುಟ್ಟುವುದು (ದಯಿತಾಸಂಬಂಧಬಂಧಂ ಭವಪರಿಣತಿ ತನ್ಮೂಲಮೀ ಬೇವಸಂ ನಿಶ್ಚಯಂ: ಶಾಂತಿಪು, ೯. ೧೪)

**ಭವಪರಿವರ್ತನ** – ಭವಪರಿಣತಿ (ಕಡೆಯೊಳ್ ಉತ್ಕೃಷ್ಟಾಯುಷ್ಯಮನೆಯ್ದೆ ನೆಱೆಯಿಸುವ ನೆಱವಿ ಭವಪರಿವರ್ತನಮೆಂಬುದು: **ಸುಕುಮಾಚ,** ೬. ೬)

**ಭವಪಾಶ** – ಸಂಸಾರಬಂಧನ (ಬಿಡಿಸಿ ವಧೂಜನಮಂ ಒಡಂಬಡಿಸಿ ಪಿತೃದ್ವಯಮಂ ಅಖಿಳವಿಷಯಸುಖಕ್ಕೊಗಡಿಸಿ ಭವಪಾಶಮಂ ಪಱಿಪಡಿಸಿ: **ಪುಷ್ಪದಂಪು,** ೧೩. ೭೫)

**ಭವಪ್ರತ್ಯಯಜ್ಞಾನ** – [ಜೈನ] ಅವಧಿಜ್ಞಾನ, ಕಾಲದೇಶಗಳ ಎಲ್ಲೆಯನ್ನು ಮೀರಿ ಸಂಗತಿಗಳನ್ನು ಅರಿಯಬಲ್ಲ ಜ್ಞಾನ (ಆ ದೇವಂ ಭವಪ್ರತ್ಯಯಜ್ಞಾನಂ ತೊಟ್ಟನೆ ಪುಟ್ಟೆ ಪೂರ್ವಭವದೊಳ್ತೊಟ್ಟೊಂದು ವೃತ್ತಾಂತಮಂ: **ಆದಿಪು,** ೨. ೬೬)

**ಭವಬದ್ಧಕ್ರೋಧ** – ಜನ್ಮಾಂತರದ ಕೋಪ (ಬೆಟ್ಟಿನೊಳೊಂದು ಬೆಟ್ಟು ಭವಬದ್ಧಕ್ರೋಧದಿಂ ಕಾಯ್ದು ತಾಗುವುದುಂ: **ನೇಮಿನಾಪು,** ೪. ೧೨೦)

**ಭವರಿಪು** – [ಜೈನ] ಅರ್ಹಂತ (ಇಂದ್ರ ಭವರಿಪುವಂ ಸ್ತುತಿಯಿಸಿ ಮುಕುಟವಿಘಟ್ಟಿತಪಾದನಾದನನುನಯದಿಂದಂ: **ಪುಷ್ಪದಂಪು,** ೧೧. ೫೮)

**ಭವರೋಷ** – ಜನ್ಮಾಂತರದ ಕೋಪ (ತನ್ನವಳೊಡಗೂಡಿರೆ ನಿಟ್ಟಿಸಿ ಭವರೋಷದಿಂ ಇಱಿದುದು ಅಷ್ಟವಂಕನ ಕಣ್ಣಂ: **ಯಶೋಧಚ,** ೩. ೪೦)

**ಭವವಧು** – ಪಾರ್ವತಿ (ಅವರ್ಗೆ ಸುತೆ ಕುಸುಮಮಾಳಿಕೆ ಭವವಧುಗಂ ದೇವರಾಜವಧುಗಂ ಮಿಗಿಲ್: **ಕರ್ಣನೇಮಿ,** ೯. ೩೯)

**ಭವಸ್ಮರಣೆ** – ಹಿಂದಿನ ಜನ್ಮದ ನೆನಪು, ಜಾತಿಸ್ಮರಣೆ (ಮಱಿಯಂಚೆಯ .. .. ಕಂಡೆನಗೆ ತೋಱುತ್ತುಂ ಭವಸ್ಮರಣೆ ತೊಟ್ಟನೆ ಪುಟ್ಟೆ: **ಮಲ್ಲಿನಾಪು,** ೪. ೧೬ ವ)

**ಭವಸ್ಮೃತಿ** – ಭವಸ್ಮರಣೆ (ಭವಸ್ಮೃತಿ ಪುಟ್ಟಿತೊ ಮೇಣ್ ವರಪ್ರಸಾದೋನ್ನತಿಯಾದುದೋ: **ಕಾದಂಬ,** ೧. ೭೭)

**ಭವಾಂತರವ್ಯಾಮೋಹ** – ಹಿಂದಿನ ಜನ್ಮದಿಂದ ಬಂದ ಮೋಹ (ಕಣ್ಣಱಿಯದೊಡಂ ಕರುಳಱಿಯದೆ ಮತಱುಗಿಸದಿರ್ಪುದೆ ಭವಾಂತರವ್ಯಾಮೋಹಂ: **ಯಶೋಧಚ,** ೩. ೪೪)

**ಭವಾದ್ರಿ** – ಶಿವನ ಬೆಟ್ಟ, ಕೈಲಾಸ (ಭವಾದ್ರಿಯಂ ಏಱಿದೆ ನಾಡೆ ನೋಡಿ ಕೊಳೆ ಮಾಯವಾಗದೆ: **ಕಾದಂಬ,** ೪. ೬೦)

**ಭವಾನೀಧವ** – ಶಿವ (ಭವಂ ಈಶಂ ಶಂಭು ರುದ್ರಂ ಪಶುಪತಿ ಗಿರಿಶಂ ಭರ್ಗಂ ಶೂಲಿ ಭವಾನೀಧವಂ: **ಅಭಿಧಾವ,** ೧. ೧. ೧೩)

**ಭವಾಮಯ** – [ಭವ+ಆಮಯ] ಭವರೋಗ (ಭದ್ರಮಯಮೂರ್ತಿ ಭವಾಮಯಮೂರ್ತಿ ಭಾಸ್ಕರರುಚಿ ಮೂರ್ತಿ ಭಕ್ತಹಿತಮೂರ್ತಿ: **ಶಬರಶಂ,** ೫. ೨೨)

**ಭವಾವಳಿ** – ಹುಟ್ಟುಸಾವುಗಳ ಪರಂಪರೆ (ಹಸ್ತಿಯ ತನ್ನ ಮುನ್ನಿನ ಭವಾವಳಿಯೆಲ್ಲಮನೆಯ್ದೆ ಪೇೞ್: **ಪಂಪರಾ,** ೧೫. ೫೩)

**ಭವಾಳಿ** – ಭವಾವಳಿ (ಅಂತು ಭವಾಳಿಯನೋಳಿಯೆ ಪೂರ್ವಾಪರಪರಾಮರ್ಶನಂಗೆಯ್ದು: **ಶಾಂತಿಪು,** ೫. ೭ ವ)

**ಭವಿತವ್ಯ** – ಮುಂದೆ ನಡೆಯುವುದು (ಎನ್ನ ಭಾಗ್ಯಕ್ಕಂ ಭವಿತವ್ಯಕ್ಕಂ ಅನುಸಾರಿಗಳೆ ಸಹಾಯರಾದರಿವರ ಮೇಲೆ ದೋಷಮಿಲ್ಲೆಂದು ಮತ್ತವರ್ಗಿಂತೆಂದಂ: **ಪಂಚತಂತ್ರ,** ೨೧೯ ವ)

**ಭವಿಷ್ಯತ್** – ಮುಂದೆ ಸಂಭವಿಸುವ (ಅಂತು ಭವಿಷ್ಯತ್ ದ್ವಿಜನ್ಮವರ್ಣಕೆ ಅಧ್ಯಯನಧ್ಯಾಪನ ದಾನಪ್ರತಿಗ್ರಹ ಯಜನ ಯಾಜನ ಶಿಷ್ಟವೃತ್ತಿಯುಮಂ .. .. ನಿಱಿಸಿ: **ಆದಿಪು,** ೮. ೭೩ ವ)

**ಭವ್ಯ** – ಕ್ಷೇಮ (ತಂಗಿ ಪೇೞ್ ಭವ್ಯವೆ ನಿನಗೆ: **ಕಾದಂಬ,** ೬. ೭೪); [ಜೈನ] ಮೋಕ್ಷಕ್ಕೆ ಅರ್ಹನಾದ ಜೀವ (ಆತನಭವ್ಯನಲ್ಲಂ, ಭವ್ಯನೇ, ಭವ್ಯನಾಗಿಯುಂ ಆಸನ್ನಭವ್ಯಂ: **ಆದಿಪು,** ೨. ೩೫ ವ)

**ಭವ್ಯಚಿಂತಾಮಣಿ** – ಭವ್ಯರ ಆಸೆಗಳನ್ನು ನೆರವೇರಿಸುವವನು (ಗುಣಮೆಂಟುಂ ಬಂದು ತನ್ನೊಳ್ ಪೆಣೆದಿರೆ .. .. ಭವ್ಯಚಿಂತಾಮಣಿಯುಂ ತಾನಾಗಿ: **ಆದಿಪು,** ೧. ೪)

**ಭವ್ಯತೆ** – [ಜೈನ] ಮೋಕ್ಷ ಪಡೆಯುವ ಅರ್ಹತೆ (ಅಮರೇಂದ್ರನುಂ ಶಚಿಯುಂ ಈ ಮರಣಂ ನಮಗಾದೊಡಲ್ತೆ ಭವ್ಯತೆ ಬಳೆದಿರ್ಕುಮೆಂದು ಬಯಸುತ್ತಿರೆ: **ಶಾಂತಿಪು,** ೭. ೪೦)

**ಭವ್ಯಪದ್ಮಾಕರಬೋಧಾದಾಯಿ** – ಭವ್ಯರೆಂಬ ತಾವರೆ ಕೊಳಕ್ಕೆ ಜ್ಞಾನ ನೀಡುವವನು (ನಾಭಿರಾಜಾಂಗನೆ ವಿಶದಯಶೋ ಭಾಗಿಯಂ ಭವ್ಯಪದ್ಮಾಕರ ಬೋಧಾದಾಯಿಯಂ ತಿಗ್ಮಕರನುದಯದೊಳ್ ಪುತ್ರನಂ ಪೆತ್ತಳಾಗಳ್: **ಆದಿಪು,** ೭. ೩೬)

**ಭವ್ಯಪ್ರಕರ** – ಭವ್ಯಜನಸಮೂಹ (ಅಕಳಂಕಚಂದ್ರ ವಾಕ್‌ಚಂದ್ರಿಕೆಯಿಂ ಧವಳಿಸೆ ದಿಗಂಬರಶ್ರೀ ಭವ್ಯಪ್ರಕರ ಚಕೋರಂ ನಲಿದುದು ಮುಕುಳಿತವಾಯ್ತು ಅನ್ಯವಾದಿವದನಾಂಭೋಜಂ: **ಮಲ್ಲಿನಾಪು,** ೧. ೧೬)

**ಭವ್ಯಪ್ರಬೋಧಬೋಧಿ** – [ಜೈನ] ಬೋಧಿದುರ್ಲಭ ಎಂಬ ದ್ವಾದಶಾನುಪ್ರೇಕ್ಷೆಗಳಲ್ಲಿ ಒಂದು (ಅಭಿವಿನುತಧರ್ಮರತಿಯು ದುರ್ಲಭಂ ಅದು ಭವ್ಯಪ್ರಬೋಧಬೋಧಿಯೆನಿಕ್ಕುಂ: **ಸುಕುಮಾಚ,** ೧೨. ೩೭), ನೋಡಿ, 'ದ್ವಾದಶಾನುಪ್ರೇಕ್ಷೆ'

**ಭವ್ಯೇತರ** – ನೀಚ, ಕೆಟ್ಟವನು (ಗುರುಗಳ ವಚನಂ .. .. ಭವ್ಯೇತರನಪ್ಪನ ಕಿವಿಯೊಳ್ ಪುಗೆ ಪಿರಿದೆನಿಸುವ ಕರ್ಣಶೂಲೆಯಂ ಪುಟ್ಟಿಸುಗುಂ: **ಕಾದಂಬ,** ೩. ೭೪)

**ಭವ್ಯೋತ್ಸವ** – [ಜೈನ] ಮೋಕ್ಷಾಪೇಕ್ಷಿಗಳ ಸಂತೋಷ (ಶ್ರೀಯಂ ತಳೆದಂ ತ್ರಿಜಗಜ್ಜ್ಯಾಯಂ .. .. ಭವ್ಯೋತ್ಸವಮದಾಯಿನಿಯಂ ಜೈನಜನಮನೋಹರಚರಿತಂ: **ಚಂದ್ರಪ್ರಪು,** ೧೬. ೧)

**ಭಷಕ** – ನಾಯಿ (ರಾತ್ರಿಜಾಗರಕ ಭಷಕ ಕೌಲೇಯಕ ಕುಕ್ಕುರನಾಮಂ ಶ್ವಾನಂ ಶುನಿ: **ಅಭಿಧಾವ,** ೧. ೧೫. ೧೦)

**ಭಸಿತ** – ಬೂದಿ, ವಿಭೂತಿ (ಮುಳಿಸು ಲಲಾಟನೇತ್ರಶಿಖಿ ಮೆಚ್ಚೆ ವಿನೂತ ರಸಪ್ರಸಾದಂ ಉಜ್ವಳಜಸಂ ಅಗಸಂಗತ ಲಸತ್ ಭಸಿತಂ ಪ್ರಭುಶಕ್ತಿ ಶಕ್ತಿ ನಿರ್ಮಳಮಣಿಭೂಷಣಂ ಫಣಿಭೂಷಣಂ ಆಗೆ ನೆಗೞ್ತೆಯಂ ಪುದುಂಗೊಳಿಸಿದಂ ಈಶ್ವರಂ ನೆಗೞ್ದ ಉದಾರಮಹೇಶ್ವರಂ ಈಗೆ ಭೋಗಮಂ: **ಪಂಪಭಾ,** ೧. ೨)

**ಭಸಿತಪುಂಡ್ರಕ** – ಹಣೆಯ ಮೇಲಿನ ಮೂರೆಳೆ ವಿಭೂತಿ ಪಟ್ಟೆ (ಎಸೆದತ್ತು ನಾಡೆಯುಂ ಪೆಱನೊಸಲೊಳ್ ಭಸಿತಪುಂಡ್ರಕಂ ಮುನಿವರನಾ: **ಕಾದಂಬ,** ೧. ೧೭೨)

**ಭಸ್ತ್ರಿಕೆ** – ತಿದಿ (ಆ ಭಾನುಬಿಂಬಮಂ ಲೀಲಾ ಭಸ್ತ್ರಿಕೆಯಂದು ಪೊಯ್ವವೊಲ್ .. .. ಎಸೆದತ್ತು .. .. ಕುವಲಯಾಪೀಡೇಭಂ: **ಜಗನ್ನಾವಿ,** ೬. ೪೯)

**ಭಸ್ಮರಜ** – ವಿಭೂತಿಯ ಪುಡಿ (ಸರಿಗೆಯೊಳ್ ಸಮೆದ ಅಕ್ಷಮಾಲಿಕೆ ಪೊನ್ನ ಮುಂಜಿ ತೊಳಪ್ಪ ಕಪ್ಪುರದ ಭಸ್ಮರಜಃ ತ್ರಿಪುಂಡ್ರಕಂ ಒಪ್ಪೆ ಪಿಂಗಜಟಾಳಿ ತಾವರೆಯ ಸೂತ್ರದೊಳಾದ ಜನ್ನವಿರಂ ದುಕೂಲದ ಕೋವಣಂ ಕರಂ ಒಡಂಬಡೆ ನೋಟಕರ್ಕಳಂ ಆ ತಪಸ್ವಿ ಮರುಳ್ಚಿದಂ: **ಪಂಪಭಾ,** ೬. ೮)

**ಭಸ್ಮಾಂತರಿತದೇಹ** – ಬೂದಿಯಾದ ದೇಹ (ಬೆಂದ ಬೀಜಂ ಮುಟ್ಟದಂತೆ ಭಸ್ಮಾಂತರಿತದೇಹಂ ನಿಶ್ಚಯಂ ಮುಟ್ಟುವುದಿಲ್ಲ: **ಪಂಚತಂತ್ರ,** ೧೧೭ ವ)

**ಭಸ್ಮೋದ್ಧೂಳಿತ** – ಬೂದಿ [ವಿಭೂತಿ] ಬಳಿದುಕೊಂಡ (ಆಷಾಭೂತಿಯಂ ಮಾತ್ರಾಭಾಂಡಕ್ಕೆ ಕಾಪಿರಿಸಿ ಪಾದಪ್ರಕ್ಷಾಳನಂಗೆಯ್ದು ಭಸ್ಮೋದ್ಧೂಳಿತಗಾತ್ರನಾಗಿ ದೇವತಾಸಮಾರಾಧನೆಗೆ ಕುಳ್ಳಿರ್ದು: **ಪಂಚತಂತ್ರ,** ೧೨೫ ವ)

**ಭಾ** – ಕಾಂತಿ (ಸುಲಿಪಲ್ ಮಿಂಚಿನ ಗೊಂಚಲುಟ್ಟ ದುಗುಲಂ ಗಂಗಾನದೀಫೇನಂ ಉಜ್ಜ್ವಲಮುಕ್ತಾಭರಣಂ ತರತ್ತರಳ ತಾರೋದಾರ ಭಾ ಭಾರಂ .. .. ಕಣ್ಗೊಪ್ಪಿತ್ತಾ ಕಾಂತೆಯಾ: **ಪಂಪಭಾ,** ೧. ೧೩೭)

**ಭಾಂಕಾರ** – ಗದ್ದಲ (ಆ ಪ್ರಯಾಣಭೇರೀಭಾಂಕಾರಮೆಂಬ ಹೂಂಕಾರದೊಳೆ .. .. ಮುಬಹಿರ್ವಾಣದ ಮರಿಸರಪ್ರದೇಶದೊಳ್: **ಅನಂತಪು,** ೧೩. ೭೩ ವ)

**ಭಾಂಡ** – ಪಾತ್ರೆ (ವಸ್ತ್ರಂ ಮನೆಮುಟ್ಟು ಭಾಂಡಮೆಂಬಿವನಿನಿತಜೆಂ ಅಗ್ಗಳಮನಾಳೆನೆಂಬಂ ಜೈನಂ: **ಸಮಯಪ,** ೫. ೮೪)

**ಭಾಂಡಸಂಕರ** – ಪಾತ್ರೆಗಳನ್ನು ಮೈಲಿಗೆಗೊಳಿಸುವುದು (ಗಂಡುನೆರೆದುಕೊಂಡು ತುಡುಗುಣಿಯಾಗಿ ಭಾಂಡಸಂಕರಗೆಯ್ಯುತ್ತಿರ್ಪುದುಂ ಆ ಋಷಿಸ್ತ್ರೀಯರ್ ಮುಯ್ಯಲಿಡೆ: **ಪಂಚತಂತ್ರ,** ೩೬೬ ವ)

**ಭಾಂಡೀರ** – ಆಲದ ಜಾತಿಯ ಮರ (ಆ ಭಾಂಡೀರಮೆಂಬ ಮಹಾವಟವಿಟಪಿಯೊಳ್: **ಜಗನ್ನಾವಿ,** ೪. ೪೬ ವ)

**ಭಾಗಧೇಯ** – ಅದೃಷ್ಟ, ಭಾಗ್ಯ (ಅಗಣಿತ ಭಾಗಧೇಯಕೃತ ಮೂಲಗುಣಂಗಳಂ ಅಂದಣುಬ್ರತಾದಿಗಳಂ ಅನಾಕುಲಂ ಬೆಸಸಿದಂ ಮುನಿಪುಂಗವಂ: **ಸುಕುಮಾಚ,** ೫. ೪೬); ಹಕ್ಕುದಾರ, ದಾಯಾದಿ (ಎನಲ್ ವಿಶಾಖಭೂತಿಭೂವಲ್ಲಭಂ ಆ ಭಾಗದೇಯನನಿಂತೆಂದಂ: **ವರ್ಧಮಾಪು,** ೨. ૩೮ ವ)

**ಭಾಗಸ** – ಹಣ (ಎನಗೆ ನೆಜೆಯೆ ತುಡುಗೆಯಂ ಮಾಡಿಸಲ್ ಭಾಗಸಮುಳ್ಳೊಡೆ ನಿನಗಾಂ ಪೆಂಡತಿಯೆನಾಗಿ ನಿನ್ನೊಡವರ್ಪೆಂ: **ವಡ್ಡಾರಾ,** ಪು ೧೭, ಸಾ ೧೯)

**ಭಾಗಿನೇಯ** – ಭಗಿನಿ [ಅಕ್ಕ ಅಥವಾ ತಂಗಿ]ಯ ಮಗ, ಸೋದರಳಿಯ (ನಿನ್ನ ನಲ್ಲನೆ ಗಡಂ ಮತ್ ಭಾಗಿನೇಯಂ ಮಹೋತ್ಸವದಿಂ ಬಂದಪಂ: **ಆದಿಪು,** ೩. ೮೪)

**ಭಾಗೆ** – ಭಾಗ, ಪಾಲು (ಕಳ್ದು ತಂದೊಡಮೆಯಂ ಮುಂದಿಟ್ಟು ನಿಗಪ್ಪ ಭಾಗೆಯಂ ಕೊಳ್ಳೆನೆ: **ಚಾವುಂಪು,** ಪು. ೪೧೫. ಸಾ. ೩೦)

**ಭಾಜನ** – ಪಾತ್ರೆ (ಅನತಿಶಯಮುಖಭಾಜನಜನಕ್ಕೆ ಭಾಜನಮಿದಪ್ಪುವೆಂಬಂತೆ ಕನತ್ಕನಕಮಣಿಖಚಿತ ಬಹುಭಾಜನಂಗಳಂ ಭಾಜನಾಂಗತರು ಕುಡುತರ್ಕುಂ: **ಆದಿಪು,** ೫. ૩೮); ಪಾತ್ರ (ದೇವರೆ ಭಾಜನಂ ವಿದಿತ ರತ್ನಚಯಕ್ಕೆ: **ಕಾದಂಸಂ,** ೧. ೨೦)

**ಭಾಜನಾಂಗ** – [ಜೈನ] ಒಂದು ಕಲ್ಪವೃಕ್ಷ (ಕನತ್ಕನಕಮಣಿಖಚಿತ ಬಹುಭಾಜನಂಗಳಂ ಭಾಜನಾಂಗತರು ಕುಡುತರ್ಕುಂ: **ಆದಿಪು,** ೫. ૩೮); ಅಮೂಲ್ಯವಾದ ಪಾತ್ರೆಗಳನ್ನು ಕೊಡುವಂತದ್ದು, ನೋಡಿ, 'ಅಂಗಕಲ್ಪಕುಜ'

**ಭಾದ್ರಪದ** – ಚಾಂದ್ರಮಾನದ ಆರನೆಯ ತಿಂಗಳು (ಸ್ಥಿರಭಾದ್ರಪದಸಿತಾಷ್ಟಮಿಗಿರದೊಪ್ಪಿರೆ .. .. ಪುಷ್ಪದಂತ ಜಿನಪತಿ ಪರಮಶ್ರೀಮುಕ್ತಿಲಕ್ಷ್ಮಿಯಂ ಕೆಯ್ಕೊಂಡಂ: **ಪುಷ್ಪದಂಪು,** ೧೪. ೫૩)

**ಭಾನಾಬಿ** – ತೇಜೋಕೇಂದ್ರ (ಊನಮ್ಮಾಡುಗುಂ ಜನು ಬಾಟೆಯ ಕಂಭಂಗಳನೆಂದೊಡೆ ಏವೊಗೆಟ್ಟಿನೋ ಭಾನಾಭಿಯಂ ನಾಭಿಯಂ:: **ಪಂಪರಾ,** ೧. ೯೫)

**ಭಾನುತನೂಜ** – ಸೂರ್ಯನ ಮಗ, ಕರ್ಣ (ನೀನುಳ್ಳೊಡುಂಟು ಬೆಳ್ಗೊಡೆ ನೀನಿಲ್ಲದಿವೆಲ್ಲಮೊಳವೆ ಭಾನುತನೂಜಾ: **ಶಬ್ದಮದ,** ೧૩೭ ಪ್ರ ೧)

**ಭಾನು** – ಸೂರ್ಯ (ಭವಂ ಭವನ ಗೋತ್ರದಿಂದ ಅಜಂ ಅಜಾಂಡದಿಂ ಭಾನು ಭಾನುವೀಥಿಯಿಂ ಇಳಾತಳಂ ತಳದಿನೆಯ್ದೆ ಕಿಟ್ಟಿಟ್ಟು: **ಪಂಪಭಾ,** ೧೧. ೧૩૩)

**ಭಾನುಜೆ** – ಯಮುನೆ (ಸಿಂಧುರಾಗಬಂಧುರೆ ಧೃತತುಂಗಭದ್ರೆ ಜಿತಭಾನುಜೆ .. .. ಕವೇರಕನ್ಯೆ ಕೆಳೆಗೊಂಡಳನೇಕ ನದೀವಿಳಾಸಮಂ: **ರಾಜಶೇವಿ,** ೨. ೭)

**ಭಾನುಬಿಂಬ** – ಸೂರ್ಯಮಂಡಲ (ಉದ್ಗತಭಾನುಬಿಂಬಂ .. .. ನಿಜಮುಖದೊಳ್ ಪುಗುವ ಮತಂಗಜಪತಿವೆರಸಿಂತು ಕನಸು ಪದಿನಾಱುಮನಂಬುಜವದನೆ ಕಂಡಳ್: **ಪುಷ್ಪದಂಪು,** ೯. ೯೯ಪ)

**ಭಾನುಮತಿ** – ದುರ್ಯೋಧನನ ಹೆಂಡತಿ (ನೆತ್ತಮನಾಡಿ ಭನುಮತಿ ಸೋಲ್ತೊಡೆ ಸೋಲಮನೀವುದೆಂದು ಕಾಡುತ್ತಿರೆ: **ಪಂಪಭಾ,** ೯. ೬೯)

**ಭಾನುರಿಪು** – ರಾಹು (ಭಾನುರಿಪು ಸಿಂಹಿಕಪ್ರಿಯಸೂನು ತಮಂ ರಾಹು ಗಗನಚರಭುಜಗಂ ಸ್ವರ್ಭಾನು ವಿಧುಂತುದಂ ಅಂತದು ತಾನಕ್ಕುಂ: **ಅಭಿಧಾವ,** ೧. ೧. ೭೫)

**ಭಾನುವಳಯ** – ಸೂರ್ಯಮಂಡಲ (ಕರಂಗಳಡಂಗಿ ಕಿಲುಂಬುಗೊಂಡ ಕನ್ನಡಿಗೆಣೆಯಾಯ್ತು ಭಾನುವಳಯಂ ದಿವಿಜಾಪಗೆ ನೋಡೆ ನೋಡೆ ಕರ್ಪಡರ್ದೆಣೆಯಾದುದು ಆ ಯಮುನೆಗೆ ಅಗ್ಗದ ಯಾಗದ ಧೂಮದ ಏಟ್ಗೆಯೊಳ್: **ಪಂಪಭಾ,** ೬. ૩೬)

**ಭಾನುವೀಥಿ** – ಸೂರ್ಯನ ಮಾರ್ಗ, ಆಕಾಶ (ಭವಂ ಭವನ ಗೋತ್ರದಿಂದ ಅಜಂ ಅಜಾಂಡದಿಂ ಭಾನು ಭಾನುವೀಥಿಯಿಂ ಇಳಾತಳಂ ತಳದಿನೆಯ್ದೆ ಕಿಟ್ಟಿಟ್ಟು: **ಪಂಪಭಾ,** ೧೧. ೧૩૩)

**ಭಾಮಂಡಲ** – ಕಾಂತಿಯ ಬಳಸು (ಮತ್ತ ಮಾತಂಗ ಪದನಖ ಖರ್ವಿತ ಉರ್ವೀತಳಮುಂ ಪ್ರಚಂಡ ಮಾರ್ತಂಡ ಮರೀಚಿ ತೀವ್ರ ಜ್ವಳನ ಆಸ್ಫಾರ ಕರಾಳ ಕರವಾಳ ಭಾಮಂಡಳ ಪರೀತ ಉದ್ಯತ ದೋರ್ದಂಡ ಚಂಡಪ್ರಚಂಡ ಸುಭಟ: **ಪಂಪಭಾ,** ೧૩. ೫೧); [ಜೈನ] ಪ್ರಭಾವಲಯ, ಅರ್ಹಂತನಿಗಿರುವ ಎಂಟು ಪ್ರಾತಿಹಾರ್ಯಗಳಲ್ಲಿ ಒಂದು (ಇರೆ ಭಾಮಂಡಲದೀಪ್ತಿಯ ಪರೆಪುಂ ಛತ್ರತ್ರಯಪ್ರಭಾಪರಿಕರಮುಂ: **ಆದಿಪು,** ೧೦. ೪೦)

**ಭಾಮಾ** – ಹೆಣ್ಣು (ಚೋಳಧರಾಭಾಮಾಧಿಪತಿ ಮನೀಜ್ಞ ಶ್ರೀಮಹಿತಂ ಪೃಥುಳಭಾಗ್ಯಮಂ ಪದೆದಿತ್ತಂ: **ರಾಜಶೇವಿ,** ૩. ೨೫)

**ಭಾಮಿನೀವೇದ** – [ಜೈನ] ಸ್ತ್ರೀವೇದ, ಮೂರು ಬಗೆಯ ವೇದಗಳಲ್ಲಿನ ಒಂದು (ಅಭಿಭವಿಸಿ ನಪುಂಸಕವೇದ ಭಾಮಿನೀವೇದಯುಗಳದೊಡನೊಡನೆ ಜಗದ್ವಿಭು ಹಾಸ್ಯ ರತಿ ಶೋಕ ಭಯ ಜುಗುಪ್ಸೆಗಳನಾಱುಮಂ ಬೆಂಕೊಂಡಂ: **ಮಲ್ಲಿನಾಪು,** ೧೪. ೬೧)

**ಭಾರಂಗಿ** – ಒಂದು ಮರ (ಪಲಸು ಆಲಂ ತಡಸು ಆಸು ತೇಗು ತದುಕಿಂಚಿಲ್ ಪೊನ್ನೆ ಚೆನ್ನಂಗಿ ಬೊಬ್ಬುಲಿ ಇರ್ಬಿಡ ಅರನೇಜಿಲ್ ಇಪ್ಪೆ ಸಿರಿಸಂ ಹಾಡಂಗಿ ಭಾರಂಗಿ ನೇಳಲ್ ಎರಂ ಪಾದರಿ ತಾಟ್ ತಂಡಸು: **ಪಾರ್ಶ್ವನಾಪು,** ೧೨. ೫೮)

**ಭಾರತ** – ಭರತವಂಶಕ್ಕೆ ಸಂಬಂಧಪಟ್ಟ (ಭರತನಪಾರಗುಣಂ ತನ್ನ ಪೆಸರೊಳಮರ್ದೆಸೆಯೆ ಯಶೋಭಾವಂ ಕುಲಮು ಕಥೆಯುಂ ಭರತಮೆನೆ ನೆಗಟ್ದಿಂ: **ಪಂಪಭಾ, ೧.** ೬೩); ಮಹಾಭಾರತ ಕಾವ್ಯ (ಭಾರತದೊಳಗಣ ಕಥೆಯೆಲ್ಲಮೀ ಗದಾಯುದ್ಧದೊಳಂತು ಒಳಕೊಂಡತ್ತು: **ಗದಾಯು,** ೧. ೪೫); ಭಾರತ ಯುದ್ಧ (ಭಾರತಂ ಕಲಹಂ ಇದಿರ್ಚುವಂ ಹರಿಗಂ ಅಪ್ಪೊಡೆ ಮೊಕ್ಕಳಮೇಕೆ ಪಳಂಚಲದಪೆಯಣ್ಣ: **ಪಂಪಭಾ,** ೧೦. ೨೩); ಭಾರತಯುದ್ಧ ನಡೆದ ಪ್ರದೇಶ (ಅಂತು ಭಾರತಂ ಸಮರಭಾರಾವತಾರಮಾಗೆ: **ಗದಾಯು,** ೯. ೩೭ ವ)

**ಭಾರತಿ** – ಸರಸ್ವತಿ (ಶಿವನ ವಿವಾಹೋನ್ನತಿಯ ಈ ಕೃತಿಯೆಂದೆನೆ ಭರತಿ ಎನಗೆ ಅನುಕೂಲೆಯಾಗದಿರಲ್ ಅಣ್ಮುವಳೇ: **ಗಿರಿಜಾಕ,** ೧. ೯)

**ಭಾರತಿಕ** – ನರ್ತಕ (ತುಱುಗಿದ ನಾಲ್ಕುಂ ಲಕ್ಕೆಯುಂ ಅಱುವತ್ತು ಸಾಸಿರಂಗಳಿಂ ಮೇಲಯ್ನೂರಱುವತ್ತುಪದ್ವಜಂ ಕೈನಿಱಿದವು ಭಾರತಿಕನಾಗೆ ಮಂದಸಮೀರಂ: **ಮಲ್ಲಿನಾಪು,** ೧೪. ೧೧೬); ನಟ (ಇಂ ಬೆಸಸಿಂ ಭಾರತಿಕಂಗೆ ನಾಟ್ಯಘಟನ ಪ್ರಸ್ತಾವನಾಟೋಪಮಂ: **ಆದಿಪು,** ೯. ೧೨)

**ಭಾರತಿಕವಿದ್ಯೆ** – ನಟನಕಲೆ, ನಾಟ್ಯ (ಭಾರತಿಕವಿದ್ಯೆಯೊಳ್ ತೂರ್ಯತ್ರಿತಮಾಧುರ್ಯಮಾನ ಭಾವಭಂಗಿಯುಮಂ .. .. ಮಾಟ್ಪಿಂ: **ಅನಂತಪು,** ೬. ೯ ವ)

**ಭಾರತೀಕರ್ಣಪೂರ** – ಸರಸ್ವತಿಯ ಓಲೆ (ಆನಂದಾಶ್ರುವಂ ತಾಳ್ದಿದಂ ಅಮಲಯಶಂ ಭರತೀಕರ್ಣಪೂರಂ: **ಪಂಪರಾ,** ೨. ೨೭)

**ಭಾರತೀಪತಿ** – ಬ್ರಹ್ಮ (ಎಂದು ಭಾರತೀಪತಿ ಚತುರಪರಿಮಿತ ಉದಾರ ಗಂಭೀರಭಾಷಿತಂಗಳಿಂ ಬಿನ್ನಪಂಗೆಯ್ಯೆ: **ಜಗನ್ನಾವಿ,** ೧. ೬೬ ವ)

**ಭಾರತೀಭಾಗಧೇಯ** – ಸರಸ್ವತಿಯ ಭಾಗ್ಯದಂತಹವನು (ದಾನೋತ್ಕರದೊಳ್ ಮಂದಾರಮೆಂತು ಅಂತೆಸೆದಂ ಅಭಿಭವಂ ಭಾರತೀಭಾಗಧೇಯಂ: **ರಾಜಶೇವಿ,** ೪. ೧೨೪)

**ಭಾರತೀಭಾಳನೇತ್ರ** – ವಿದ್ಯೆಯಲ್ಲಿ ಹಣೆಗಣ್ಣನಂತಹವನು (ನಂದನಂ ತದ್ಧರಣೀಶಾವಾಸದೊಳ್ ಶೋಭಿಸುತಿರೆ ಬಳೆದಂ ಭಾರತೀಭಾಳನೇತ್ರಂ: **ಚಂದ್ರಪ್ರಪು,** ೩. ೧೦೪)

**ಭಾರದ್ವಾಜ** – ಭರದ್ವಾಜನ ಮಗ, ದ್ರೋಣ; ಕಾಡಹತ್ತಿ ಮರ (ಬಂಧುರ ಭಾರದ್ವಾಜ ಶಾಂಡಿಲ್ಯಕ .. .. ತಾಪಸಪ್ರೋತ್ಕರಮಂ ಸೋಮಾರ್ಕರುಕ್ಷಾಂಚಿತಮದು ನಭಮಂ ಪೋಲ್ತು ಚೆಲ್ವಾಯ್ತರಣ್ಯಂ: **ರಾಜಶೇವಿ,** ೫. ೭೫)

**ಭಾರಾವತಾರ** – ಭಾರವನ್ನಿಳಿಸುವುದು (ಅಂತು ಭಾರತಂ ಸಮರಭಾರಾವತಾರಮಾಗೆ: **ಗದಾಯು,** ೯. ೩೭ ವ)

**ಭಾರ್ಯೆ** – ಹೆಂಡತಿ (ನಾಗದತ್ತನೆಂಬೊಂ ಪರದಣಂ ಆತನ ಭಾರ್ಯೆ ಗಂಗೆಯೆಂಬೊಳ್ ಆ ಇರ್ವರ್ಗಂಮಗಂ ನಾಗಸೂರನೆಂಬೊಂ: **ವಡ್ಡಾರಾ,** ಪು ೨೧, ಸಾ ೧೬)

**ಭಾರ್ಗವ** – ಭೃಗುವಂಶಜ, ಪರಶುರಾಮ (ಭಾರ್ಗವಂಗೆ ತಾನೆ ಭಾರ್ಗವನಾಗಿ ಯುವರಾಜಕಂಠಿಕಾಪರಿಕಲಿತ ಕಂಠಲುಂಠನುಂ ಆಗಿ: **ಪಂಪಭಾ,** ೧. ೬೮ ವ); ಬಿಲ್ಲುಗಾರ (ಭಾರ್ಗವಂಗೆ ತಾನೆ ಭಾರ್ಗವನಾಗಿ ಯುವರಾಜ ಕಂಠಿಕಾಪರಿಕಲಿತ ಕಂಠಲುಂಠನುಂ ಆಗಿ: **ಪಂಪಭಾ,** ೧. ೬೮ ವ); ಬಾಣ (ಚರರಂ ತಾಗಿದುದು ಉಗರ ಭಾರ್ಗವಚಯಂ ವಿತ್ರಸ್ತಲೋಕತ್ರಯಂ: **ಆಚವರ್ಧ,** ೮. ೪೮)

**ಭಾವ** – ಸೋದರಮಾವನ ಮಗ (ತಮ್ಮ ಭಾವನಂ ಧನದೇವಂ ಕರೆದೀ ನೆಗಟಿಂ ಬಿಡಿಸೆಂಬುದುಂ: **ಸುಕುಮಾಚ,** ೭. ೧೬ ವ); ಅಭಿಪ್ರಾಯ, ಆಶಯ (ಭಾವಮೆಂಬುದಕ್ಕುಂ ಕವಿಗಳಾ ಭಾವಿಸಿ ಮನದ ಬಗೆಯೊಂದಿದರ್ಥಂ: **ಕವಿರಾಮಾ,** ೩. ೨೦೭); ರಸೋತ್ಪಾದನಕರ ಚಿತ್ತವೃತ್ತಿ (ವೃತ್ತಿಯೊಳ್ ರಸಮಂ ಸಂಚಾರಿಸುವ ಭಾವಮಂ ವಿಸ್ತಾರಿಸುವ ಬೆಡಂಗು ಬೇಡ್ ನೀಲಾಂಜನೆಯಾ: **ಆದಿಪು,** ೯. ೨೬); ಆತ್ಮೀಯತೆಯ ಸಂಬೋಧನೆ (ಆತನಿದಿರಂ ಬಂದೇಂ ಭಾವ! ಬಂದಿರ್ ಎಂದು, ಬಟಿಕ್ಕೆ ನಿಮಗೆ ಪೇಟ್ದಿ ಕಥೆಯಂ ಪೇಟಿಮೆನೆ: ದೇವದತ್ತನಿಂತೆಂದಂ: **ಪಂಚತಂತ್ರ,** ೨೧೮ ವ); ಮನೋಧರ್ಮ (ಭಾವಂ ಭಾಸುರತತ್ತ್ವಗರ್ಭಮಯನಂ ಚಾರಿತ್ರ್ಯಗರ್ಭಂ: **ಚಂದ್ರಪ್ರಪು,** ೧. ೨೪); ಆಶಯ (ಭಾವಂ ಪೊಣ್ಮಿದ ಸದಭಾವಂ ದನಿಯಿಂ ಪೊದವಿದ ದನಿಯೆನಿದೆ ಪೇಟ್ದಪಂ ಕವಿತಿಳಕಂ: **ಪುಷ್ಪದಂಪು,** ೧. ೬೨)

**ಭಾವಕ** – ರಸಿಕ (ಭಾವಕನೆಂದೊಡಂ ಚದುರನೆಂದೊಡಂ ಅರ್ ಪೆಱರಾರೊ ನೀನೆ: **ಪಂಪಭಾ,** ೪. ೯೬)

**ಭಾವಚೇಷ್ಟೆ** – ಭಾವನೆಗಳಿಗನುಗುಣವಾದ ಶಾರೀರಕ ಚೇಷ್ಟೆ (ಧೈರ್ಯವಂತು .. .. ಚೇತದೊಳುಣ್ಮೆ ಕನ್ನೆ ತಳೆದಳ್ ಕಿಲಿಕಿಂಚಿತ ಭವಚೇಷ್ಟೆಯಂ: **ಚಂದ್ರಪ್ರಪು,** ೫. ೧೨೨)

**ಭಾವಜ** – ಮನ್ಮಥ (ಮೂವತ್ತಾಱುಂ ಗುಣದಿಂ ಭಾವಜನಂ ಕಟ್ಟಿ ಪೆಟ್ಟಿವೆಟೆದರ್ ವೃಷದಿಂ ಭಾವಿಪೊಡೆ ಮೇಘಚಂದ್ರ ತ್ರೈವಿದ್ಯರದೆಂತೊ ಶಾಂತರಸಮಂ ತಳೆದರ್: **ಪಂಪರಾ,** ೧. ೧೯)

**ಭಾವಜರುಜೆ** – ಕಾಮಬಾಧೆ (ಭಾವಜರುಜೆಗೆ ಔಷಧಮಂ ಸೇವಿಸುವಂದದೊಳೆ ಸೇವಿಪಂ ತದ್ವ್ರತಿಕಂ: **ಸಮಯಪ,** ೫. ೭೨)

**ಭಾವನ** – [ಜೈನ] ನಾಲ್ಕು ಬಗೆಯ ದೇವತೆಗಳಲ್ಲಿ ಒಂದು ಬಗೆ; ಭವನವಾಸಿ (ವನವಧೂಬ್ರಾತಂ ಔತ್ಸುಕ್ಯವತ್ ಭಾವನಭಾಮಾರಾಜಿ ತದ್ಭಾವನಸುರರ್: **ಆದಿಪು,** ೧೦. ೩೬)

**ಭಾವನಸುರ** – ಭವನಿವಾಸಿ ದೇವತೆ (ವನವಧೂಬ್ರಾತಂ ಔತ್ಸುಕ್ಯವತ್ ಭಾವನಭಾಮಾರಾಜಿ ತದ್ಭಾವನಸುರರ್: **ಆದಿಪು,** ೧೦. ೩೬)

**ಭಾವನಿರ್ದ್ವಂದ್ವ** – ಭಾವನೆಯಲ್ಲಿ ದ್ವಂದ್ವವಿಲ್ಲದ[ವನು], ಸಮಪ್ರಜ್ಞೆಯವನು (ಭಾವನಿರ್ದ್ವಂದ್ವನಾಗಿಯೆ ನೀಂ ರಕ್ಷಿಸು ರಾಹಿಣೇಯನೆನಿಪ ಅಸ್ಮತ್ಪುತ್ರನಂ: **ಜಗನ್ನಾವಿ,** ೩. ೨೩)

**ಭಾವನೆ** – ಅನುಸಂಧಾನ, ಧ್ಯಾನ (ನಿನ್ನ ರೂಪಭಾವನೆಯೊಳೆ ಕೂಡಿ ನಿನ್ನತುಳನಾಮಜಪಕ್ರಿಯೆಯಲ್ಲಿ ನಿಟ್ಟೆವೆಟ್ಟು: **ಚಂದ್ರಪ್ರಪು,** ೮. ೮೩); ಗೌರವ [ಜಿನನ ನಮಸ್ಕಾರಮಂತ್ರಂಗಳೊಳ್ ಭಾವನೆಯಂ ತಾಳ್ದಟ್ಟಿಯಿಂದಂ ಜಿನಮಹಿಮೆಗಳಂ ಮಾಡು ನೀಂ ಭವ್ಯನೈ: **ಆದಿಪು,** ೩. ೭)

**ಭಾವಭವ** – ಮನಸ್ಸಿನಲ್ಲಿ ಹುಟ್ಟಿದವನು, ಮನ್ಮಥ (ಭಾವಭವಂಗೆ ಭಂಗಮನೆ ಸಂಗಳಿಪ ಉಗ್ರತಪಃಪ್ರಭಾವಮಂ ಭಾವಿಪೊಡೆ ಅಪ್ರತರ್ಕ್ಯಂ; **ಶಾಂತೀಶ್ವಪು,** ೧. ೨೨)

**ಭಾವವಿದ** – ಇತರರ ಭಾವಗಳನ್ನು ತಿಳಿಯಬಲ್ಲವನು (ವಿವಿಧಕಳಾಭಿಜ್ಞಂ ಭಾವವಿದಂ ರಸರಸಿಕಂ .. .. ನೃಪತತಿಮಹಿತಂ: **ಪುಷ್ಪದಂಪು,** ೧. ೬೫)

**ಭಾವಶುದ್ಧಿ** – [ಜೈನ] ವೀತರಾದನಾದವನಿಗೆ ಮನಸ್ಸು ಶುದ್ಧವಾಗುವುದು; ಇದು ಅಷ್ಟಶುದ್ಧಗಳಲ್ಲಿ ಒಂದು (ಭಾವಶುದ್ಧಿ ವಿಶೇಷದಿಂದಮನಿಂದಿತೆಯುಮಾರ್ಯನಾಗೆ ಸತ್ಯಭಾಮೆ ತದಾರ್ಯೆಯಾದಳ್: **ಶಾಂತಿಪು,** ೬. ೧೨೪ ವ)

**ಭಾವಶುದ್ಧಿಗೆಡು** – ಮನಸ್ಸಿನ ನೈರ್ಮಲ್ಯವನ್ನು ಕಳೆದುಕೊ (ಭಾವಶುದ್ಧಿಗೆಟ್ಟು ಕೋಪಾಗ್ನಿ ಪೆರ್ಚಿ ರೌದ್ರಧ್ಯಾನದೊಳ್ ಸತ್ತತುಳಬಲಪರಾಕ್ರಮನಪ್ಪ ಸಿಂಗನಾಗಿ ಪುಟ್ಟಿದಿರ್: **ಪಂಚತಂತ್ರ,** ೧೧೬ ವ)

**ಭಾವಳಯ** – ಪ್ರಭಾವಲಯ (ಭಾವಳಯ ವಿಲಸಿತ ಅಶೋಕ ಮಂದಾರ ವರ್ಷಚ್ಛಾಯಾಚ್ಛನ್ನಾಂಗನಾದ್ಯಂ ತ್ರಿಭುವನ ವಿನುತಂ ನೇಮಿ ರಕ್ಷಿಕ್ಕೆ ನಮ್ಮಂ: **ನೇಮಿನಾಪು,** ೧. ೧)

**ಭಾವಾತ್ಮ** – ತತ್ವಜ್ಞ (ಸದ್ಭಾವವಿಚಾರಮನಜೆವಾ ಭವಾತ್ಮಂ ಮೆಯ್ಯನೋವನೇನಜೆದಪನೇ: **ಸುಕುಮಾಚ,** ೧೨. ೨೬)

**ಭಾವಿ** – ಭವಿಷ್ಯದ (ಆದಿಜಿನೇಶ್ವರಂ ಮೊದಲ ಚಕ್ರಿಗೆ ಭಾವಿಜಿನೇಂದ್ರನಾಮತೀರ್ಥೋದಯಮಾಳೆಯಂ ಬೆಸಸೆ: **ಶಾಂತಿಪು,** ೧೦. ೭೯); [ಜೈನ] ಕರ್ಮವಶದಿಂದ ಆಗಲೇಬೇಕಾದುದು (ಭಾವಿಯೆನಿಸಿರ್ದ ಭೋಗದೊಳಾವುದು ನಿಶ್ಚಯಮತೀತಮದತೀತಮೆನಲ್: **ಚಂದ್ರಪ್ರಪು,** ೨. ೩೬)

**ಭಾವಿತಾತ್ಮ** – ಪರಿಪಕ್ವ ಮನಸ್ಸಿನವನು, ಆತ್ಮಜ್ಞಾನಿ (ದೃಢಚಿತ್ತನಾಗಿ ಭಾವಿಸಿದನೊ ಭಾವಿತಾತ್ಮನೆನೆ ಷೋಡಶಭಾವನೆಯಿಂ ಮುನೀಶ್ವರಂ: **ಮಲ್ಲಿನಾಪು,** ೧೧. ೩೫)

**ಭಾವಿಸು** – ಅಸ್ತಿತ್ವದಲ್ಲಿರು (ನಾಡದಾ ಕನ್ನಡದೊಳ್ ಭಾವಿಸಿದ ಜನಪದಂ ವಸುಧಾವಳಯವಿಲೀನವಿಶದವಿಷಯವಿಶೇಷಂ: **ಕವಿರಾಮಾ,** ೧. ೩೬); ಲಕ್ಷ್ಯಕೊಡು, ಪರಿಶೀಲಿಸು (ಶ್ವಸಿತಗತಿ ನಿಂದು ಕಡುತಣ್ಣಸನೆಯ್ದಿದ ಗಾತ್ರಮಂ ಸ್ವಯಂಪ್ರಭೆ ತಾನೀಕ್ಷಿಸಿ ಪತಿಯಿರಮನೆರೆ ಭಾವಿಸಿದಳ್ ಕರತಲಮನೊಡ್ಡಿ ನಾಸಾಗ್ರಿಮದೊಳ್: **ಶಾಂತೀಶ್ವಪು,** ೫. ೨೩); ಮಿಶ್ರಗೊಳ್ಳು (ಮೃಗಭೂ ಋದ್ಧ ವಿಳಾಸಿನೀ ಕಬರಿಕಾಬಂಧಗಳಂ ಪೊತ್ತು ಮಲ್ಲಿಗೆಯೊಳ್ ಭಾವಿಸಿ ಧೂಪದೊಳ್ ಪೊರೆದು ತತ್ಕಾಂತಾ ರತಿಸ್ವೇದಬಿಂದುಗಳೊಳ್ ನಾಂದು ಕುರುಳ್ಗಳೊಳ್ ಸುಟಿದು ಮುಂದೊಂದಿರ್ದ ಸೌಭಾಗ್ಯಘಂಟೆಗಳೊಂದಿ ಇಂಚರದೊಳ್ ಪಳಂಚಿ ಸುಟಿದತ್ತು ಅಂದೊಂದು ಮಂದಾನಿಳಂ: **ಪಂಪಭಾ,** ೪. ೮೦); ವಿಚಾರಮಾಡು (ಭಾವಿಸುವೊಡೆ ಅದಱ ಪೆಂಪತಿಸುಲಭಂ: **ಕವಿರಾಮಾ,** ೧. ೧೩); ಅರಿತುಕೊ (ಕನ್ಯೆಯದೊಂದು ಭಕ್ತಿಯಂ ಭಾವಿಸಿ ನೀನಿದಂ ನೃಪತಿ ಕೈಕೊಳವೇಜ್ವುದು ರಾಜಕೀರಮಂ: **ಕಾದಂಬ,** ೧. ೫೨)

**ಭಾವುಕ** – ಸಹೃದಯ (ಪ್ರಕಟತರಂ ಶಬ್ದಂ ಶಾಬ್ದಿಕಸಮ್ಮತಂ ಅರ್ಥದೃಷ್ಟಿ ಮನಃಕೌತುಕಜನಕಂ ಭಾವಂ ಭಾವುಕಭಾವ್ಯಂ ಕಾವ್ಯತತಿಯೊಳಗ್ಗಳ ನಿನ್ನಾ: **ಚಂದ್ರಪ್ರಪು,** ೧. ೫೮)

**ಭಾವೆ** – ಚೆಲುವೆ (ಭಾವೆ ಭಾವಿತನೂಭವಾನುಕ್ರಮ ಪ್ರಭವಭಾವಂಗಳಂಭಾವಿಸಿ ಪಲುಂಬಿ ಪಂಬಲಿಸಿಯುಂ: **ಚಂದ್ರಪ್ರಪು,** ೨. ೨೭)

**ಭಾವೋದ್ಭವ** – ಮನಸ್ಸಿನಲ್ಲಿ ಹುಟ್ಟಿದವನು, ಮನ್ಮಥ (ಭಾವೋದ್ಭವನಿಂ ಪರವಶೆಯಾದೆಂ ಸೊಕ್ಕಿದ ಅಳಿನಿಯ ತೆಱದಿಂ: **ಕಾದಂಬ,** ೫. ೩೩)

**ಭಾವ್ಯ** – ಮುಂದೆ ನಡೆಯುವಂಥ[ದು] (ಸುಸ್ಥಿರಂ ಶ್ರೀವಿಭವಂ ಜೀವಕ್ಕೆ ಸಮನಿಕುಂ ಯದ್ಭಾವ್ಯಂ ತದ್ಭವತಿಯೆಂಬ ನುಡಿಯುಳ್ಳದಱಿಂ: **ಪಾರ್ಶ್ವನಾಪು,** ೬. ೭); ಆಸ್ವಾದ್ಯವಾದುದು ಭಾವಂ ಭಾವುಕಭಾವ್ಯಂ ಕಾವ್ಯತತಿಯೊಳಗ್ಗಳ ನಿನ್ನಾ: **ಚಂದ್ರಪ್ರಪು,** ೧. ೫೮)

**ಭಾಷಾಂತರದೋದು** – ಸರಳವೂ ಋಜುವೂ ಅಲ್ಲದ ಮಾತು (ಇಂತೆಂದು ದವನಕಂ ಭಾಷಾಂತರದೋದುಗಳಂ ಓದೆ ಗೋಪತಿಗೆ ಭಯಭ್ರಾಂತಿ ಪಿರಿದಾಗಿ: **ಪಂಚತಂತ್ರ,** ೨೦೪)

**ಭಾಷಾವಿದ** – ಭಾಷೆಯಲ್ಲಿ ಪಾಂಡಿತ್ಯ ಗಳಿಸಿದವನು (ದೋಷಂಗಳಿಂತು ಮಿಗೆ ಸಂಶ್ಲೇಷದೊಳಾದುದು ಸುಲವಿತ್ತಭೆಯೊಳ್ ದೂಷಿಸುಗುಂ ಕೃತಿವಧುವಂ ಭಾಷಾವಿದರ್: **ಕವಿರಾಮಾ,** ೧. ೧೦೦)

**ಭಾಷಾಸಂಸ್ಕರಣ** – ಭಾಷೆಯ ತಪ್ಪುಗಳನ್ನು ತಿದ್ದುವುದು (ಭಾಷಾಸಂಸ್ಕರಣಪ್ರಮಾಣ ನಯವಿಕ್ಷೇಪರ್ ಜಿನೇಂದ್ರಾಗಮಾಶೇಷಜ್ಞರ್ ನಿಕಷಜ್ಞರಪ್ಪುದುಚಿತಂ ವಿದ್ವತ್ಸಭಾಮಧ್ಯದೊಳ್; **ಸುಕುಮಾಚ,** ೧. ೪೭)

**ಭಾಷಿತ** – ಹೇಳಲ್ಪಟ್ಟ[ದ್ದು]. ನುಡಿ (ಭಾಷಿತಮಂ ತಾಂಚಳಮನನಾಗದೆ ಬಗೆದೊಡೆ ಋಳನುಂ ಜೈನಮತಕ್ಕೆ ಘಟಿಲನೆ ಬರ್ಕುಂ: **ಸಮಯಪ,** ೩. ೨೯)

**ಭಾಷ್ಯ** – ಅರ್ಥ, ವ್ಯಾಖ್ಯಾನ (ಪಟಿಗಾಂಪರ ನುಡಿ ಮುತ್ತುಂ ಮೆಟಸುಂಗೋದುದಕ್ಕೆ ಭಾಷ್ಯಮಂ ಒರ್ವಂ ಕಟೆಯೋದಿದಾತನಲ್ಲದೆ ಬಟೆವಟೆಯಿಂ ಬಂದು ಬರೆಯಲಾಗದು ಅಗಣ್ಯಂ: **ಶಾಂತಿಪು,** ೧೦. ೧೮೧)

**ಭಾಸುರ** – ಪ್ರಕಾಶ (ಹರಿಹರದೇವನ ಉನ್ನತ ಕೃತಿ ಪ್ರಸರಂ ಭುವನೈಕಭಾಸುರಂ: **ಗಿರಿಜಾಕ,** ೧. ೧೮)

**ಭಾಸ್ಕರ** – ಸೂರ್ಯ (ರವಿ ಮಾರ್ತಂಡಂ ಪತಂಗಂ ತಪಿ ತಪಂ ಇನಂ ಭಾನು ಪೂಷಂ ಸಹಸ್ರಾಂಶು ವಿಪಸ್ವಂತಂ ಖಗಂ ಭಸ್ರಂ ಅಹಿಮಕರಂ ಸೂರ್ಯಂ ಅಂಭೋಜಮಿತ್ರಂ ದಿವಸೇಂದ್ರಂ ಬ್ರಧ್ನನಂಸು ಗ್ರಹಪತಿ ಹರಿದಶ್ವಂ ತಮೋವೈರಿ ಹಂಸಂ ಸವಿತಾರಂ ಸೂರಂ ಅರ್ಕಂ ದ್ಯುಮಣಿ ತರಣಿ ಸಪ್ತಾಶ್ವಂ ಆದಿತ್ಯನಕ್ಕುಂ: **ಅಭಿಧಾವ,** ೧. ೧. ೬೪)

**ಭಾಸ್ಕರಸುತ** – ಸೂರ್ಯನ ಮಗ, ಕರ್ಣ (ಧರೆಯೊಳ್ ವೀರದ ಪೆಂಪಿಂ ನರನಿಂದಿರ್ಮಡಿ ಬಕಾರಿಯಿಂ ಮೂವಡಿ ಭಾಸ್ಕರಸುತನಿಂ ನಾಲ್ವಡಿ ಮುರಹರನಿಂದೈವಡಿ ನೆಗಟ್ತೆಯದಟರ ಭೀಮಂ: **ಶಬ್ದಮದ,** ಪ್ರ ೧೫)

**ಭಾಸ್ವತ್** – ಹೊಳೆಯುವ (ವೀರವೈರಿಕ್ಷಿತಿಪ ಗಜಘಟಾಟೋಪ ಕುಂಭಸ್ಥಳೀಭೇದನಂ ಉದಗ್ರ ಉದ್ಧ ಅಸಿ ಭಾಸ್ವತ್ ಭುಜ ಪರಿಘನಂ ಆರೂಢಸರ್ವಜ್ಞನಂ: **ಪಂಪಭಾ,** ೧. ೫೧)

**ಭಾಸ್ವರ** – ಉಜ್ವಲವಾದ (ಭಾಸ್ವರಭಕ್ತಿಯಿಂದೆಱಗೆ ದೇವಗಣಂ **ಪುಷ್ಪದಂಪು,** ೧. ೧೯)

**ಭಾಸ್ವರಬೋಧ** – ದಿವ್ಯಜ್ಞಾನ[ವನ್ನು] ಹೊಂದಿದವನು] (ಭಾಸ್ವರಬೋಧ ನೀನಜೆಪಿದ್ದೆ ನುಡಿಯೊಳ್ ನೃಪನೀತಿಸಾರಸರ್ವಸ್ವಮಂ: **ಶಾಂತಿಪು,** ೨. ೫೪)

**ಭಾಳ** – ಹಣೆ (ಭಾಳಂ ಸುರುಚಿರ ಸುಕೃತವಿಶಾಳಂ ವಿಷಮಾಕ್ಷವಿರಥಕಾಳಂ: **ಗಿರಿಜಾಕ,** ೧೦. ೪೮)

**ಭಾಳವಿಲೋಚನ** – ಹಣೆಗಣ್ಣು (ಭಾಳವಿಲೋಚನಪ್ರಭವಭಸ್ವತ್ ಜಾತವೇದಶ್ಶಿಖಾನಿವಹಪ್ಲುಷ್ಟರತೀಶಂ ಇಷ್ಟಸುಖಮಂ ದುರ್ಗಂಗೆ ದೀರ್ಘಾಯುಮಂ: **ಪಂಚತಂತ್ರ,** ೨)

**ಭಾಳಾಕ್ಷಿ** – [ಫಾಲಾಕ್ಷಿ] [ಜೈನ] ಹಣೆಯಲ್ಲಿ ಕಣ್ಣುಳ್ಳವಳು, ಜ್ವಾಲಾಮಾಲಿನಿ ಎಂಬ ಯಕ್ಷಿ (ಚಳತ್ ಭಾಳಾಕ್ಷಿ ಸಂಪ್ರೀತಿಯಿಂ ಜ್ವಾಳಾಮಾಲಿನಿ ಮಾಟಕ್ಕೆ ಮತ್ಕೃತಿಗೆ ನಿರ್ವಿಘ್ನೋಕ್ತಿನಿವಾಹಮಮಂ: **ಚಂದ್ರಪ್ರಪು,** ೧. ೯)

**ಭಾಳೇಕ್ಷಣ** – ಹಣೆಗಣ್ಣು (ಮನಸಿಜಂ ಭಾಳೇಕ್ಷಣಂ ಪೆತ್ತಂ ಎಂಬೆಸಕಂ ಕೆಯ್ಮಿಗಲ್ ಅಂದು ಅಪ್ಪಸದನಂಗೊಂಡಿರ್ದ ತತ್ಕಾಂತೆ: **ಕರ್ಣನೇಮಿ,** ೯. ೮೪)

**ಭಿಂಡಿವಾಳ** – ಒಂದು ಆಯುಧ, ಭಲ್ಲೆ (ಕಣೆಯ ಕಂಪಣ ಮುಸಲ ಮುಸುಂಡಿ ಭಿಂಡಿವಾಳ ತೋಮರ ಮುದ್ಗರ ಮಹಾ ವಿವಿಧಾಯುಧಂಗಳೊಳಿಟ್ಟುಂ ಇಱಿದುಂ ಅಗುರ್ವು ಅದ್ಭುತಮಾಗೆ ಕಾದುವಾಗಳ್: **ಪಂಪಭಾ,** ೧೨. ೧೧೮ ವ)

**ಭಿಕ್ಷು** – ಶಿವ (ಧನದಂ ಭಿಕ್ಷುಸಖಂಗೆ ಎಳ್ಳನಿತು ಧನಮೀಯದೆ ಅದನಾ ನಾಮಮಂ ಸುಮ್ಮನೆ ಬಂದುದೆಂದು ನಗುತುಂ: **ರಾಜಶೇಖಿ,** ೨. ೯೫)

**ಭಿಕ್ಷುಕ** – ಜೈನಯತಿ, ಶ್ರಮಣ (ತದಾಶ್ರಮಿಯಪ್ಪ ಲೋಹಿತಾಶ್ವನೆಂಬ ಭಿಕ್ಷುಕಂ ಬಂದು ಚಾರುದತ್ತಂ ಸಮಕ್ಷಮದೊಳಿರ್ದೆತ್ತಣಿಂ ಬಂದಿರೆತ್ತ ಪೋದಪಿರ್ ಎಂಬುದುಂ: **ಕರ್ಣನೇಮಿ,** ೪. ೮೪ ವ)

**ಭಿತ್ತಿ** – ಗೋಡೆ (ಪಳುಕಿನ ಭಿತ್ತಿಯಿಂದೆ ಶಶಿಕಂತದ ಬಾಗಿಲುವಾಡದಿಂದೆ .. .. ರತ್ನಕೂಟಗೃಹದಿಂ: **ಧರ್ಮಪ,** ೧. ೭೪)

**ಭಿತ್ತಿಚಿತ್ರ** – ಗೋಡೆಯ ಮೇಲೆ ರಚಿಸಿದ ಚಿತ್ರ (ಭಿತ್ತಿ ಚಿತ್ರಾಳೋಕೈಕವಿನೋದದಿಂದಿದು ಮೊದಲ್ ಪಂಚೇಂದ್ರಿಯ ಪ್ರೀತಿಗೆಂಬಾಳೋಚಕ್ಕೆಡೆಯಾಗಿ ರಯ್ಯಮೆನಿಸಿತ್ತುರ್ವೀಶ ಶಯ್ಯಾಗೃಹಂ: **ಪುಷ್ಪದಂಪು,** ೯. ೯೮)

**ಭಿದೆ** – ಒಡೆಯುವುದು (ಭಿದೆ ಸ್ಫುಟನಮಕ್ಕುಂ: **ಅಭಿಧಾವ,** ೨. ೨. ೨೨)

**ಭಿನ್ನ** – ಬೇರೆಯಾದುದು (ಭಿನ್ನಂ ಭೇದಿತಂ ಉಪಾಂಗಿತಂ: **ಅಭಿಧಾವ,** ೨. ೧. ೪೦); ಒಡೆದದ್ದು (ಭಿನ್ನಂ ಭಮಗುರ ಭಗ್ನಂ: **ಅಭಿಧಾವ,** ೨. ೧. ೪೮)

**ಭಿನ್ನಭಾಜನ** – ಒಡೆದ ಮಡಕೆ, ಬೋಕಿ ಬಿಂಚು [ವಿಜ್ಞಾನಮಾತ್ರಮೇ ತತ್ವಂ ಆತ್ಮಾದಿತತ್ವಮಿಲ್ಲೆಂಬ ನಿನ್ನ ಮಾತು ಭಿನ್ನಭಾಜನಸಮಾನಂ: **ಆದಿಪು,** ೨. ೧೦ ವ)

**ಭಿನ್ನವಿದ್ಯ** – ವಿದ್ಯೆಯನ್ನು ಕಳೆದುಕೊಂಡವನು (ಬಹುರೂಪದಿಂ ಕಾಡುತ್ತಿರ್ದಸುರಂ ದೀನಜನತಾಕಲಪ್ರಿಪನಿಂ ಭಿನ್ನವಿದ್ಯನುಂ ಅಭಿನ್ನಸಪನ್ನಾಹನುಂ ಆಗಿ ಪೆಱತೆಗೆದು ಪೋಗಿ: **ಶಾಂತಿಪು,** ೬. ೩೮ ವ)

**ಭಿಲ್ಲ** – ಬೇಡರವನು (ಭಿಲ್ಲಾಖ್ಯಂ ಬೇಡನವಂ ತಾನಕ್ಕುಂ: **ಅಭಿಧಾವ,** ೧. ೧೧. ೮೮)

**ಭಿಲ್ಲಪಲ್ಲಿ** – ಬೇಡರು ವಾಸಿಸುವ ಹಳ್ಳಿ (ಸೊಗಯಿಪುದೀ ಕಾನನೋದ್ದೇಸಮೋರಂತಿರೆ ನಾನಾ ಭಿಲ್ಲಪಲ್ಲಿ ಖಗಮೃಗ ಲತಿಕಾವೃಕ್ಷಗುಲ್ಮಾವಕಾಶಂ: **ಪುಷ್ಪದಂಪು,** ೫. ೬೯)

**ಭಿಲ್ಲಪಳ್ಳಿ** – ಭಿಲ್ಲಪಲ್ಲಿ (ಸರಿಯಾನೆಗಳ್ ಗಜೆಕೆ ಮೇವಮುಗಿಲ್ ದೊಣೆ ಭಿಲ್ಲಪಳ್ಳಿ ಕಿನ್ನರಮಿಥುನಾಳಿಗಳ್ ವಿಷಯಮಾಗಿರೆ ತೀರ್ವುದು ಶೈಲವರ್ಣನಂ: **ಸೂಕ್ತಿಸುಧಾ,** ೩. ೧)

**ಭಿಷಕ್ ಪರಿಷತ್** – ವೈದ್ಯವೃಂದ (ಕುಶಲ ಭಿಷಕ್ ಪರಿಷತ್ ಸಂಪಾದಿತ ಕಲ್ಯಾಣಾಮೃತಾಹಾರಂಗಳಿರ್ದಂತೆ: **ಆದಿಪು,** ೮. ೩೨ ವ)

**ಭಿಷಗ್ಜನ** – ವೈದ್ಯರ ಸಮೂಹ (ಗುರುಜನ ಭಿಷಗ್ಜನ ಗಣಕಜನ ಗಣಿಕಾಜನ ಧಾತ್ರೀಜನ ಕಾಲಮಹತ್ತಿರವಿಕಾರಿಜನಮಂ ಸಮರ್ಪಿಸುವುದುಂ: **ಮಲ್ಲಿನಾಪು,** ೪. ೬೨ ವ)

**ಭಿಷಗ್ದೋಷ** – ವೈದ್ಯನು ಮಾಡುವ ತಪ್ಪು (ಮತ್ತಮಾತುರಂ ಔಷಧಭೀರುವಾದೊಡಂ ಭಿಷಗ್ದೋಷಮಾಗದಂತೆ ನಿಮ್ಮ ಪೇಟ್ಟುದನುಪೇಲ್ವಿಸಿದೊಡೆನ್ನ ದೋಷಂ: **ಶಾಂತಿಪು,** ೪. ೧೦೧ ವ)

**ಭೀಂಕೃತಿ** – ಬಾಣದ ಠೇಂಕಾರ (ಬಿಲ್ಗಾಱರ ಗುಣಠಂಕೃತಿ ಚಾಪಪ್ರಯುಕ್ತ ಶರನಿಕರ ಮಹಾಭೀಂಕೃತಿ ನೋಟ್ಟಿಮರರ್ಗೆ ಭಯಂಕೃತಿಗೆಯ್ದುದು: **ರಾಜಶೇಖಿ,** ೬. ೪೬)

**ಭೀಕರ** – ಭಯಂಕರ[ವಾದುದು] (ಭೀಕರ ಕರಿ ಮಕರನಿಕರ ಭಿನ್ನತರಂಗಾನೀಕ ಲವಣಾಂಬುರಾಶೀ ವೃತಾಕೃತಿ ಕಮನೀಯಮುಂಟು ಜಂಬೂದ್ವೀಪಂ: **ಶಾಂತಿಪು,** ೧. ೫೬)

**ಭೀತಿ** – ಭಯ (ಭೀತಿಯನುಂಟುಮಾಡುಮಿವಂಗೆ ಶರಾಸನ ಬಾಣಾಚಲಂ: **ಕುಸುಮಾಕಾ,** ೧೦. ೩೧)

**ಭೀಮ** – ಭಯವುಂಟುಮಾಡುವ (ಗಿರಿಯಂ ಭೀಮ ಉಪಸರ್ಗಮಂ ಗಡ ತಾಮಸದಿಂದ ಮಾಡಿದಂ ಸುದರ್ಶನದೇವಂ: **ನೇಮಿನಾಪು,** ೪. ೧೧೦); ಪಾಂಡುವಿನ ಮಗ (ಭೀಮ ಅಶ್ವತ್ಥಾಮರಿರ್ವರುಂ ಚೇತರಿಸಿ ಸೂತಪತಾಕಾತುರಂಗಮೋಪೇತ ರಥಂಗಳನೇಱಿಕೊಂಡು: **ಪಂಪಭಾ,** ೧೨. ೭೭ ವ)

**ಭೀಮಭೀಮ** – ಭಯಂಕರನಾದ ಭೀಮ (ಬೆಟ್ಟುಗಳ್ ಉಗ್ರ ಅಶನಿ ಸಂಘಟ್ಟದೆ ಕೆಡೆವಂತೆ ಭೀಮಭೀಮಗದಾ ಸಂಘಟ್ಟದೆ ಕೆಡೆದೊಡನೆ ಪಡಲ್ವಟ್ಟುವು ಕಾಳಿಂಗರಾಜ ಸಮರಗಜಂಗಳ್: **ಗದಾಯು,** ೩. ೪)

**ಭೀಮಸೇನ** – ಪಾಂಡುವಿನ ಮಗ ಭೀಮ (ಭೀಮಸೇನ ಚರಣಪ್ರಹರಣಗಳಿತ ಶೋಣಿತಾರ್ದ್ರಮೌಳಿಯುಮಾಗಿ: **ಪಂಪಭಾ,** ೧೩. ೧೦೨ ವ)

**ಭೀಮಸೇನಿಕ** – ಪಚ್ಚಕರ್ಪೂರ (ಆಡುವ ಪಾರಿಜಾತಕದ ಕಪ್ಪುರವಳ್ಳಿಯ ನೆಲವತ್ತಿಯಾಯ್ದಡಕೆಯ ಭೀಮಸೇನಿಕದ ತಂಬುಲದಿಂ: **ಶಾಂತಿಪು,** ೧೦. ೯೫)

**ಭೀರು** – ಹೆದರುವವನು (ಭೀರು ಕರಂ ಕಾತರಂ ಭಯಸ್ಥಂ ತ್ರಸ್ತಂ: **ಅಭಿಧಾವ,** ೨. ೧. ೧೨)

**ಭೀಷಣ** – ಭಯವುಂಟುಮಡುವ (ಭೀಷಣಂ ಅಧಿಕಕ್ರೂರಂ ರೌದ್ರಂ ಪ್ರಚಂಡಂ ಉಲ್ಬಣಮಕ್ಕುಂ: **ಅಭಿಧಾವ,** ೨. ೧. ೫೩)

**ಭೀಷ್ಮ** – ಭಯಂಕರವಾದ (ನಿಲೆ ಭೂಭೃತ್ತಟದೊಳ್ ಸಮಗ್ರತರ ಭೀಷ್ಮಗ್ರೀಷ್ಮದೊಳ್ ಯೋಗಿ ಕಲ್ನೆಲೆಯೊಳ್: **ಕರ್ಣನೇಮಿ,** ೨. ೬೨); ಶಂತನು–ಗಂಗೆಯರ ಮಗ (ಅಂತು ಭಿಷ್ಮಂ ಗ್ರೀಷ್ಮಕಾಲದ ಆದಿತ್ಯನಂತೆ ಕಾಯ್ದು ಅಂತಕಾಲದ ಅಂತಕನಂತೆ ಕೆಳರ್ದು: **ಪಂಪಭಾ,** ೧೧. ೪೦ ವ)

**ಭೀಷ್ಮಿಸು** – ಉಗ್ರರೂಪವನ್ನು ಪಡೆ (ಅಮಾತ್ಯಂಗುಸಿರ್ದಂ ವಸುದೇವಂ ಭಿಷ್ಮಿಸೆ ಕೋಪಾರಕ್ತನೇತ್ರಂ ಅರಿಬಳಚೈತ್ರಂ: **ಕರ್ಣನೇಮಿ,** ೫. ೫೨)

**ಭುಂಭುಕ** – ಆಶ್ಚರ್ಯಕರ (ನಿರ್ಮಳ ತೇಜೋಭುಂಭುಕಮಾಯ್ತಿಳೆಗಚ್ಚರಿ ವೀರಣಂದಿ ಮಲಧಾರಿಗಳಾ: **ಸಮಯಪ,** ೧. ೨೧)

**ಭುಕ್ತಪ್ರತ್ಯಾಖ್ಯಾನವಿಧಿ** – [ಜೈನ] ಕ್ರಮವಾಗಿ ಆಹಾರಪಾನೀಯಗಳನ್ನು ತ್ಯಾಗಮಾಡುವುದು (ನಾಗಶ್ರೀಯುಂ ಭುಕ್ತಪ್ರತ್ಯಾಖ್ಯಾನವಿಧಿಯಿಂ ರತ್ನತ್ರಯಮಂ ಸಾಧಿಸಿ

ಅಚ್ಯುತಕಲ್ಪದೊಳ್ ದೇವನಾಗಿ ಪುಟ್ಟಿದೊಳ್: **ವಡ್ಡಾರಾ,** ಪು ೨೪, ಸಾ ೨೦)

**ಭುಗಿಲಿಡು –** ಚಿಮ್ಮು (ತಗರಾಗಿ ಕಾದಿ ನೆತ್ತರ್ ಭುಗಿಲಿಡೆ ತಲೆಯೊಡೆದು ಸತ್ತು ಸತ್ತು: **ಪುಣ್ಯಾಸ್ರ,** ೪. ೭)

**ಭುಜ –** ತೋಳು (ವೀರವೈರಿಕ್ಷಿತಿಪ ಗಜಘಟಾಟೋಪ ಕುಂಭಸ್ಥಳೀಭೇದನಂ ಉದಗ್ರ ಉದ್ಧ ಅಸಿ ಭಾಸ್ವತ್ ಭುಜಪರಿಘನಂ ಆರೂಢಸರ್ವಜ್ಞನಂ: **ಪಂಪಭಾ,** ೧. ೫೧)

**ಭುಜಂಗ –** ಹಾವು (ಭುಜಂಗ ಝಷ ಶಿಂಶುಮಾರಾದಿ ಜಲಚರ ಸಂಕೀರ್ಣೋಭಯ ತಟಪ್ರಾಪ್ತ ಪೂರ್ಣ ಮಹಾನದಿಯಂ ಆ ವೃಭಂ ಪಾಯಗದು: **ಹರಿವಂಶ,** ೬. ೫ ವ); ವಿಟ (ಭುಜಂಗಾವಳೀತಾಟಿತ ನಾನಾ ಘಂಟಿಕಾಟಂಕೃತಿ ರವಮುಖದಿಂ ವಾರನಾರೀ ತನೂರೋಪಿತ ದಿವ್ಯಾಮೋದ ನವ್ಯಾಗರುಪರಿಮಿಳಿತಂ ತೀಡಿದತ್ತೊಯ್ಯನೆ ಪಣವನಿತಾಗಾರ ಚಾರಂ ಸಮೀರಂ: **ಶಾಂತೀಶ್ವಪು,** ೧೧. ೫೩)

**ಭುಜಂಗಾಧಿಪ –** ಆದಿಶೇಷ (ಊರುಭುಜಂಗಳ್ ಭುಜಂಗಾಧಿಪಂಗಂ ಪಡೆವನ್ನಂ ಸೋಲುಮಂ .. .. ಯೌವನಶ್ರೀ ಪಡೆದುದು ನೃಪಪುತ್ರಾಂಗದೊಳ್ ನಾಡೆ ಚೆಲ್ವಂ: **ಚಂದ್ರಪ್ರಪು,** ೨. ೨೪)

**ಭುಜಂಗಾಸ್ತ್ರ –** ಸರ್ಪಾಸ್ತ್ರ (ಖಗೇಂದ್ರಾಸ್ತ್ರಂ ಭುಜಂಗಾಸ್ತ್ರಮಂ ಗೆಲೆ ಗೆಲ್ವಾಸೆಯನಂದು ಕೇಶವನಿಕುಂಭರ್ ತಮ್ಮೊಳ್ಚಾಡಿದರ್: **ಜಗನ್ನಾವಿ,** ೧೫. ೩೦)

**ಭುಜಂಗಿ –** ಹೆಣ್ಣು ಹಾವು (ನಿಮ್ಮ ಮಗಳನೀತಂ ವಿಷಮ ಭುಜಂಗಿಯೆಂದಂ ಎನೆ ಮುಳಿದು: **ಚಾವುಂಪು,** ೨೨೧, ಸಾ. ೨೩)

**ಭುಜಗ –** ಹಾವು (ಸುರ ದನುಜ ಭುಜಗ ವಿದ್ಯಾಧರ ನರ ಸಂಕುಲದೊಳ್ ಆರನಾದೊಡಂ ಏನೋ ಗರಮುಟ್ಟೆ ಕೊಲ್ಗುಂ ಇದು ನಿಜವಿರೋಧಿಯಂ ಧುರದೊಳ್ ಎಂದು ಶಕ್ತಿಯನಿತ್ತಂ: **ಪಂಪಭಾ,** ೧. ೧೦೩)

**ಭುಜಗಧ್ವಜ –** ಬಾವುಟದಲ್ಲಿ ಹಾವಿನ ಗುರುತಿರುವವನು, ದುರ್ಯೋಧನ (ಒದವಿದರುನ್ನತಮೂರ್ತಿಗಳ್ ಒದವಿ ಗದಾಯುಧದೆ ಭೀಮಭುಜಗಧ್ವಜರುಂ: **ಗದಾಯು,** ೮. ೬)

**ಭುಜಗಶಿಶು –** ಹಾವಿನ ಮರಿ (ಅಸಿತ ಭುಜಶಿಶುತರಳತರವಾರಿ ಖಡ್ಗಖೇಟಕ ವ್ಯಗ್ರಕರದ್ವಯ ಉದ್ದಾಮಪದಾತಿಬಹಳಂ: **ಆದಿಪು,** ೧೩. ೪೫ ವ)

**ಭುಜಗಾರಿ –** ಹಾವಿನ ವೈರಿ, ಗರುಡ (ಕುರುಕುಲಮಂ ಬಕಾರಿ ಭುಜಗವ್ರಜಮುಂ ಭುಜಗಾರಿ ದಾನವೇ ಶ್ವರಕುಲಮಂ ಮುರಾರಿ ಭುಜವಿಕ್ರಮದಿಂ ತವೆಕೊಂದ ಮಾಟ್ಕೆಯಿಂ: **ಪಂಚತಂತ್ರ,** ೩೨೮)

**ಭುಜಬಲ –** ಬಾಹುಬಲ, ಪರಾಕ್ರಮ (ಭೂಜಬಲಮಂ ಪವಣ್ಬಡಿಪೊಡಪ್ರತಿಮಂ .. .. ಮತ್ತೆ ಸಾಧಿಸಿದವಂ ಬಹುರೂಪಿಣಿಯಂ ದಾನವಂ: **ಪಂಪರಾ,** ೧೪. ೮೫)

**ಭುಜಬಲಿ –** [ಜೈನ] ಆದಿತೀರ್ಥಂಕರನ ಮಗನಾದ ಬಾಹುಬಲಿ (ಪುರತನಯರ್ ಭುಜಬಲಿಯುಂ ಭರತನುಮೆನೆ ದೊರೆಗೆವಂದೊಡೆ: **ಆದಿಪು,** ೧೪. ೮೧)

**ಭುಜವಿಕ್ಷೇಪ –** ನಾಟ್ಯದಲ್ಲಿನ ಬಾಹುಚಲನೆ (ಈರಯ್ದೆನಿಸಿದ ಭುಜವಿಕ್ಷೇಪದಿಂ ದಿಗ್ವಿಭಾಗಂ ಪರಭಾಗಂಬೆತ್ತುವೊಂಭತ್ತೆನಿಪ ನಯನಭೇದಂಗಳಿಂದೆಂಬಿನಂ ನಿಬ್ರಹರ್ಷಾಯತ್ತಚಿತ್ತಂ ದಿವಿಜಪರಿವೃಢಂ ತಾಂಡವಪ್ರೌಢಿವೆತ್ತಂ: **ಮಲ್ಲಿನಾಪು,** ೧೩. ೨೯)

**ಭುಜಶಿಖರ –** ತೋಳಿನ ಮೇಲ್ಭಾಗ, ಹೆಗಲು (ಕುಲಶಿಖರಿ ಶಿಖರೋತ್ತುಂಗಂಗಳಾದ ಭುಜಶಿಖರಂಗಳುಂ: **ಆದಿಪು,** ૩. ೯ ವ)

**ಭುಜಾಕ್ರಾಂತ –** ಸ್ವಂತ ಶೌರ್ಯದಿಂದ ಗೆದ್ದ (ಅಜಿತಂಜಯ ಮಹಾರಾಜಂ ಯುವರಾಜಂಬೆರಸು ನಿಜಭುಜಾಕ್ರಾಂತ ರಾಜಸಮಾಜಂಬೆರಸು .. .. ಇರೆ: **ಚಂದ್ರಪ್ರಪು,** ೫. ೨ ವ)

**ಭುಜಾಸ್ಫಾಲನ –** ತೋಳು ತಟ್ಟುವುದು (ಅಂತುಂ ಬಿಸುಟ್ಟು ಮಲ್ಲಯುದ್ಧಸನ್ನದ್ಧರಾಗಿರ್ವರುಂ ಭುಜಾಸ್ಫಾಲನಂ ಮಾಡಲೊಡಂ: **ಚಂದ್ರಪ್ರಪು,** ೫. ೭೬ ವ)

**ಭುಜಿಷ್ಯ –** ಸೇವಕ (ಸೇವಕಂ ಅನುಚರಂ ಉಪಜೀವಿನರಂ ಕಿಂಕರಂ ಭುಜಿಷ್ಯಂ ದಾಸಂ: **ಅಭಿಧಾವ,** ೧. ೧೧. ೫೭)

**ಭುಜಿಷ್ಯೆ –** ಸೇವಕಿ (ಕಳಿಂಗೇಶನ ಮುಂದೆ ನಿಜೆಸಿ ನೃಪಕನ್ನಿಕೆಯನಿಂತೆಂಗುಂ ಭುಜಿಷ್ಯೆ ಭೃಂಗೀಧ್ವನಿ ತನ್ನ ದನಿಗೆ ಸಮನೆನಿಸುವಿನಂ: **ಶಾಂತಿಪು,** ೫. ೧೩೨)

**ಭುಲ್ಲವ –** ಉತ್ಸಾಹ (ಎಲ್ಲಾ ಶಸ್ತ್ರಮನಾಂತು ಅತಿ ಭುಲ್ಲವದಿಂ ವೀರರ್ ಅಧಟನಿಂ ಪರಿಯಿಟ್ಟರ್: **ತ್ರಿಷಷ್ಟಿಪು,** ೬. ೬)

**ಭುಲ್ಲವಿಸು –** ಉಬ್ಬು (ಕುಟಿಲಾನ್ವಿತೆಯರ್ ಭುಲ್ಲವಿಸಲೇತಕೆ ಎನ್ನದಿರ್ ಒಲ್ಲದೊಡಾ ವಿಷಯಬದ್ಧಂ ಆತ್ಮದ್ರೋಹಂ: **ಅನುಭವ,** ೧೮)

**ಭುವನ –** ಲೋಕ, ಭೂಮಿ (ಹರಿಹರದೇವನ ಉನ್ನತ ಕೃತಿ ಪ್ರಸರಂ ಭುವನೈಕಭಾಸುರಂ: **ಗಿರಿಜಾಕ,** ೧. ೧೮); ಮನೆ

**ಭುವನೇಜ್ಯ –** ಲೋಕಪೂಜ್ಯ (ಭುವನೇಜ್ಯರ್ ಪೂಜ್ಯಪಾದರ್ ದಮಿತಕುಮತರ್ ಅತ್ಯುದ್ಧಮಾಂಗಲ್ಯಭಾವಪ್ರವಿನೂತರ್: **ಕರ್ಣನೇಮಿ,** ೧. ೧೦)

**ಭೂಗೋಚರ –** ಮನುಷ್ಯ (ತಕ್ಕುಗಿಡೆ ಕಿಂಕರಭಾವಂ ನಿನಗೆ ಸಮನಿಸಿತ್ತು .. .. ನೀಚಭೂಗೋಚರರೊಳ್: **ಪಂಪರಾ,** ೧೪. ೧೧)

**ಭೂಗೋಳ –** ಭೂಮಂಡಲ (ಆದಿವರಾಹರೂಪದೊಳೆ ನೀನಂದೆತ್ತಿದೈ ಗೋಮಿನೀಧರಂ .. .. ಭೂಗೋಳಮಂ: ಜಗನ್ನಾವಿ, ೧. ೫೭)

**ಭೂಚಕ್ರ –** ಭೂಮಂಡಲ (ನಿಮ್ಮೀ ಕ್ರಮಕಮಲಕ್ಕೆ ಎಱಗದೆ ವಕ್ರಿಸಿ ಭೂಚಕ್ರದೊಳಗೆ ಬಾಳ್ವರುಂ ಒಳರೇ: **ಪಂಪಭಾ,** ೧೧. ೩೦)

**ಭೂಚರ –** ಮನುಷ್ಯ (ಪುರುಜಿನನಾದಿಯಾಗೆ ಜಿನಪುಂಗವರರುಂ .. .. ಚಕ್ರಿಗಳುಂ ಏಂಗಳ ಭುಚರರಲ್ಲದಾರೊ ಖೇಚರರ್: **ಪಂಪರಾ,** ೫. ೨೪)

**ಭೂಚರಿ –** ಮನುಷ್ಯಸ್ತ್ರೀ (ಖೇಚರಿಯೋ ಭೂಚರಿಯೋ ನಿಶಾಚರಿಯೋ ರೂಪು ಬಣ್ಣಿಸಲ್ಕೆ ಆರ್ಗಂ ಅವಾಗ್ಗೋಚರಂ ಈ ಕಾನನಮುಂ ಅಗೋಚರಂ ಇವಳ್ ಇಲ್ಲಿಗೇಕೆ ಬಂದಳೊ ಪೇಟಿಂ: **ಪಂಪಭಾ,** ೩. ೧೪)

**ಭೂಜ –** ಮರ (ಅಧಿಕೋನ್ನತ ಗಜನಿವಹಂ ಭೂಜಪ್ರತತಿಯಂ ಉಡಿವಂತೆ ಪುಲ್ಲನೇನುಡಿದಪುದೇ: **ಪಂಚತಂತ್ರ,** ೧೦೦)

**ಭೂಜಾಂಗವೃತ್ತಿ –** ಪ್ರವಾಹಕ್ಕೆ ಸಿಕ್ಕಿದ ಮರದಂತಹ ವರ್ತನೆ (ಭೂಜಾಂಗವೃತ್ತಿಯಂ ಬಿಸುಟು ಆ ಜಗದಧಿಪಂಗೆ ವೈತಸಾವಳಿಪರಿದಂದಾ ಜಳಕೆಱಗುವವೋಲ್ ನಯಭಾಜನರೆಱಗಿದರ್ ಅಜಿಂಹರೆನಿಸಿಹ ಸುಹ್ಮರ್: **ಶಾಂತಿಪು,** ೧೦. ೧೫೯)

**ಭೂಜಾತ** – ಭೂಮಿಯಲ್ಲಿ ಹುಟ್ಟಿದುದು, ಮರ (ಪಲ್ಲವಿತ ಕುಸುಮಿತ ಮುಕುಲಿತ ಫಲಿತ ಮಂಜರೀರಂಜಿತ ಚೂತ ಭೂಜಾತಂಗಳಂ: **ಸುಕುಮಾಚ,** ೯. ೧೯೭ ವ)

**ಭೂತಚತುಷ್ಟ** – ಪೃಥ್ವಿ, ಅಪ್ಪು, ತೇಜಸ್, ವಾಯು ಎಂಬ ಮೂಲವಸ್ತುಗಳು (ಅಂಗ ಅಂಗದೊಳೆಲ್ಲಂ ತೀವಿರ್ಪಂ ಭೂಚತುಷ್ಟ ಅವಯವದಿಂ ಅನ್ಯಂ ಆತ್ಮಂ ಅತಿಚೈತನ್ಯಂ: **ಯಶೋಧಚ,** ೪. ೧೭)

**ಭೂತಧಾತ್ರಿ** – ಭೂಮಿ (ಭಯಮೇಕಕ್ಕುಂ ಅದೆಂತೆಂದು ಅದಟುಮಂ ಪೆರ್ಮಾತುಮಂ ಭೂತಧಾತ್ರಿಯೊಳೋರಂತೆ ನೆಗಟ್ಟೆ .. .. ಸೆಟ್ಟಿಯ ಬಳ್ಳಂ ಕಿಡೆದು ಎಂಬುದೊಂದು ನುಡಿಯಂ ನೀಂ ನಿಕ್ಕುವಂ ಮಾಡಿದೈ: **ಪಂಪಭಾ,** ೧೨. ೧೭೫)

**ಭೂತನಾಥ** – ಶಿವ (ಕರ್ಣಾರ್ಜುನರೇಱಂ ನೋಡಲ್ಕೆ ಭುತನಾಥಂ ಬಂದಂ: **ಪಂಪಭಾ,** ೧೨. ೧೪೬)

**ಭೂತಪುಣ್ಯ** – ಹಿಂದೆ ಮಾಡಿದ ಪುಣ್ಯದ ಫಲ (ಉತ್ತಮಪಾತ್ರದಾದ ದಾನಾನುಮೋದದ ಭೂತಪುಣ್ಯದಿಂ: **ಶಾಂತಿಪು,** ೬. ೯೭ ವ)

**ಭೂತಬಲಿ** – ಭೂತ, ದೈವಗಳಿಗಾಗಿ ಕೊಡುವ ಬಲಿ (ಭೂತಬಲಿಯಿಕ್ಕುವಲ್ಲಿಗೆ ಪಾತಕನುಂ ಬಂದು ದಾನಮಂ ಬೇಡುಗೆ .. .. ಪುಣ್ಯಹೇತುವೆಂಬರ್: **ಸಮಯಪ,** ೧೧. ೯೩)

**ಭೂತವಾದಿ** – ನಿರೀಶ್ವರವಾದಿ (ಅನೇಕ ಯುಕ್ತೋಕ್ತಿಗಳಿಂ ಭೂತವಾದಿಯಪ್ಪ ಮಹಾಮತಮಂ ನಿರಾಕರಿಸಿ: **ಆದಿಪು,** ೨. ೧೦ ವ)

**ಭೂತಾಂಗನಾ** – ಪಿಶಾಚಸ್ತ್ರೀಯರು (ಭೂತಾಂಗನಾನಿಕರಂ ಶೋಣಿತವಾರಿಯಂ ಕುಡಿದು ಅಗುರ್ವಪ್ಪನ್ನೆಗಂ ಸೂಸೆ ನೋಡ ಕವಿಲ್ತಿರ್ದುದು ಕೂಡೆ ಸಂಜೆಗವಿದಂತಾ ದ್ರೋಣನಿಂ ಕೊಳ್ಗುಳಂ; **ಪಂಪಭಾ,** ೧೨. ೨೫)

**ಭೂತಿ** – ಐಶ್ವರ್ಯ (ಭೂತಿ ಸಂಪತ್ತಿ: **ಅಭಿಧಾವ,** ೩. ೧. ೭೧); ಬೂದಿ (ಮನೋಜಾತಮಹೋತ್ಸಾಹರ್ ತದ್ಭೂತಿಯನಿಟ್ಟರ್ ತ್ರಿಪುಂಡ್ರಮಂ ದಿವಿಜೇಂದ್ರರ್: **ಆದಿಪು,** ೧೬. ೫೩)

**ಭೂತೇಶ** – ಶಿವ (ಧರೆಯೊಳಗೆ ಈ ಭಕ್ತಂಗಾರ್ ದೊರೆ ಎನುತಂ ನುಡಿದನಾಗಳಾ ಭೂತೇಶಂ: **ತ್ರಿಷಷ್ಟಿಪು,** ೧೮. ೯೨)

**ಭೂದೇವ** – ಬ್ರಾಹ್ಮಣ (ಭೂದೇವರೆ ಜಗದೊಳಗೆಂದು ಆದರಿಸುವವಂಗೆ ಜೈನವೆಸರೆಂತೆಸೆಗುಂ: **ಸಮಯಪ,** ೪. ೧೩೧)

**ಭೂಧರ** – ಬೆಟ್ಟ, ಪರ್ವತ (ಶರಭಂಗಳ್ಗಿಡೆ ಸಿಂಹದುರ್ವು ವನಗಂದೇಭೋತ್ಕರಕ್ಕೆಂದುಂ ಆಗರಮ್ ಈ ಭೂಧರಂ: **ಆದಿಪು,** ೧೩. ೮೨)

**ಭೂಪ್ರಸರ** – ಪ್ರದೇಶ (ಕುಸುಮಿತ ಬಹಿರುಪವನ ಭೂಪ್ರಸರದೊಳಿರ್ದ ಅಮಿತಕೀರ್ತಿಕೇವಳಿಯಂ ಬಂದಿಸಿ ಮತ್ ಭವಪದ್ಧತಿಯಂ ಬೆಸಗೊಳೆ ಬೆಸಸಿದನಘಾರಿ ದಿವ್ಯಧ್ವನಿಯಿಂ: **ಶಾಂತಿಪು,** ೬. ೮೫)

**ಭೂಭರ** – ರಾಜ್ಯದ ಹೊರೆ (ಸುತನೊಳಜಿತಂಜಯಂ ವಿಸ್ತೃತಮಂ ಭೂಭರಮನೆಯ್ದೆ ಯೋಜಿಸಿ ನಿಶ್ಚಿಂತತೆಯನೊಳಳಕಯ್ದಂ: **ಚಂದ್ರಪ್ರಪು,** ೭. ೩)

**ಭೂಭಾಗ** – ನೆಲದ ಮೇಲೆ (ಭೂಭಾಗದೊಳ್ ತಂದು ತಾಟಿಸುತುಂ ಕೋಟಲೆಗೊಳ್ವ ರತ್ನಮಕುಟದ್ಯೋತ ಉತ್ತಮಾಂಗಂ ವಿರಾಜಿಸುವನ್ನಂ ಪೊರಳ್ವ ಪಗೆಯಂ ಕಣ್ಣಾರ್ವಿನಂ ನೋಡಿದಳ್: **ಪಂಪಭಾ,** ೧೨. ೧೫೧)

**ಭೂಭುಜ** – ರಾಜ (ಇಳೆಯೊಳ್ ಇಂದ್ರನೆನೆ .. .. ಶೂದ್ರಕನೆಂಬ ಭೂಭುಜಂ: **ಕಾದಂಬ,** ೧. ೮)

**ಭೂಭುವನ** – ಭೂಲೋಕ (ಸತ್ಕೀರ್ತಿಯಂ ಭೂಭುವನಂ ನಿಲ್ವನ್ನೆಗಮ ತಾಳ್ದಿದ ಸುಕವಿಗಳಿಂದಕ್ಕೆ ವಿದ್ಯಾಪ್ರಸಾದಂ: **ಮಲ್ಲಿನಾಪು,** ೧. ೨೩)

**ಭೂಭೃತ್** – ಬೆಟ್ಟ; ರಾಜ (ಅಂತು ಪಾಂಡುರಾಜಂ ಅಧಿಕತೇಜನುಂ ಅವನತವೈರಿಭೂಭೃತ್ ಸಮಾಜನುಂ ಆಗಿ ನೆಗಟುತ್ತಿರ್ದೊಂದು ದಿವಸಂ: **ಪಂಪಭಾ,** ೧. ೧೧೦ ವ)

**ಭೂಭೃತ್ಪತಿ** – ರಾಜ (ಶಾಂತರೂಪದಿನಿರ್ದತ್ತು ಅಳುರುತ್ತಮಿರ್ದ ಕೋಪಾನಳನಿಂದುಪಶಾಂತನಾದ ಭೂಭೃತ್ಪತಿವೋಲ್: **ಆದಿಪು,** ೧೩. ೪೦); ಬೆಟ್ಟಗಳ ನಾಯಕ, ಮೇರು (ಸಾಗರಮೆ ಬಡವಾನಳ ಭೀತಿಯಿಂ ಭೂಭೃತ್ಪತಿಯಂ ಶರಣ್ಬೊಕ್ಕುದು ಎಂಬಂತೆ ಕಣ್ಗೆಂಬಾಗಿ: **ಪಾರ್ಶ್ವನಾಪು,** ೭. ೩೩ ವ)

**ಭೂಭೃತ್ಸುತೆ** – ಗಿರಿಸುತೆ, ಪಾರ್ವತಿ (ಗೌರೀಪತಿಯ ಬಿನದಕ್ಕೆ ಭೂಭೃತ್ಸುತೆ ಬೇಡತಿಯಾದ ತೆಱನಂ ಅನುಕರಿಸಿದಳ್: **ಕಾದಂಬ,** ೧. ೩೮)

**ಭೂಮಾನ** – ಭೂಮಿಯ ತೂಕ (ಓಜಾಯಿತರೋಜೆಯೊಲವರದ ಭೂಮಾನಕ್ಕಂ ಸಕ್ಕಸಮನಾಗಿ ತೂಗಿದಂತೆ: **ಅನಂತಪು,** ೨. ೩೦ ವ)

**ಭೂಮಿಕೆ** – ಉಪ್ಪರಿಗೆ (ಭೂಮಿಕೆಯ ಕೆಟಗೆ ಕಾಣ್ಬರ್ ತಾಮುತ್ಸವದಿಂದಲದಱ ಮೊದಲೊಳ್ ಜಿನನಂ: **ಸಮಯಪ,** ೨. ೬೪); ಭೂಮಿ (ಭೂಮಿಕೆಯೊಳಿಕ್ಕಿದ ವಿಶಾಲ ಹಂಸತೂಲದೊಳ್ ಅರಸಿಯುಂ ತಾನುಂ ಕುಳ್ಳಿರ್ದು: **ಚಂದ್ರಪ್ರಪು,** ೬. ೯೬ ವ)

**ಭೂಮಿಗೃಹ** – ನೆಲಮಾಳಿಗೆ (ಭೂಮಿಗೃಹ ಪ್ರವೇಶ ಮಂಜೂಷಿ ಜಯಾಮಂಜೂಷಾಜಲಾವಗಾಹಾದಿ ರಕ್ಷೋಪಾಯಗಳನೇಕಮಂ ಮಂತ್ರಿಗಣಂ ನುಡಿದು ತೋಱೆ: **ಶಾಂತಿಪು,** ೯. ೬)

**ಭೂಮಿಪ** – ರಾಜ (ಉಪಪತ್ತಿಯುಕ್ತಂ ಇದನಿಂ ಕಯ್ಕೊಳ್ ನಿನ್ನ ತಂದೆಯೆಂದುದನೆನೆ ಭೂಮಿಪನೆಂದಂ ನಿಮ್ಮಯ ಪೂರ್ವಪಕ್ಷಮೆಮಗಾದುದೇ ವಲಂ ಸಿದ್ಧಾಂತಂ: **ಗದಾಯು,** ೪. ೮)

**ಭೂಮಿಭೃತ್** – ರಾಜ (ಮೇರುವಿಂ ಭೂಮಿಭೃತ್‌ವರಂ ಅಬ್ಧಾಹಿತಂ ಕಳಾನಿಧಿಕುಮಾರಂ ಪುಟ್ಟುವಂ ನಿಶ್ಚಯಂ: **ರಾಜಶೇವಿ,** ೪. ೨೯)

**ಭೂರಿ** – ವಿಶಾಲವಾದ (ವಾರಿಧಿವೇಷ್ಟಿತ ಭೂರಿಭೂತಳಂ: **ಸುಕುಮಾಚ,** ೧. ೨೨); ಅಧಿಕವಾದ (ಭೂರಿ ವಿಕಲ್ಪದೋಷಮುಂ .. .. ದೋಷಮುಮಂ ಈ ತೆಱದಿಂ ತಡೆಸಲ್ಕೆ ಪಂಡಿತರ್: **ಕವಿರಾಮಾ,** ೧. ೧೧೩)

**ಭೂರುಹ** – ಮರ[ಗಿಡ] (ಆಗಳ್ ಅದೊಂದು ಮುಂದೆಸೆದು ತೋಱಿದುದು ಆಗಳ್ ಅಶೋಕಭೂರುಹಂ: **ಕಾದಂಸಂ,** ೧. ೭೩)

**ಭೂರ್ಜ** – ಒಂದು ಬಗೆಯ ಮರ (ಕಕುಭ ಅಶೋಕ ಕದಂಬ ಲುಂಗ ಲವಲೀ ಭೂರ್ಜ ಆರ್ಜುನ ಅನೋಕಹ ಪ್ರಕರಂ: **ಪಂಪಭಾ,** ೫. ೮೦)

**ಭೂವರ** – ರಾಜ (ಭೂವರಶಿಖಾಮಣಿ ನೆಟ್ಟನೆ ಪಟ್ಟವರ್ಧನ ದ್ವಿರದನಿಯಿಂದೆ ಮುಂದಿಟೆದು ತದ್ವನಕೇಳಿಗೆ.. ..ಪುಗುತಂದಂ: **ಶಾಂತೀಶ್ವಪು,** ೧೦. ೭೩)

**ಭೂಶಯ್ಯೆ** – ನೆಲದ ಹಾಸುಗೆ, ನೆಲದ ಮೇಲೆ ಮಲಗುವಿಕೆ (ಸುಕುಮಾರಶ್ರೀಯನಾಳ್ದಾ ನಿತಂಬಿನಿ ಭೂಶಯ್ಯೆಗೆ ಜಾಗರಕ್ಕೆ ಅಶನಕ್ಕೆ .. .. ಒಡಲಂ ನಿಯೋಜಿಸಿದಳ್: **ಮಲ್ಲಿನಾಪು,** ೪. ೩೬)

**ಭೂಷಣ** – ಆಭರಣ; ಅಲಂಕಾರ (ಸಮಂತು ಅಲಂಕರಿಸಿದಂ ಶಾಂತೀಶನಂ ದಿವ್ಯಗಂಧ ದರಸ್ಮೇರ ನಮೇರು ಚಾರು ಕುಸುಮ ಕ್ಷೌಮಾಂಶುಕ ಅನರ್ಘ್ಯ ಭಾಸ್ವದನೇಕೋತ್ತಮ ಭೂಷಣಾವಳಿಗಳಿಂ ಸಂಕ್ರಂದನಾನಂದದಿಂದಂ: **ಶಾಂತೀಶ್ವಪು,** ೧೬. ೩)

**ಭೂಷಣಾಂಗ** – [ಜೈನ] ಒಂದು ಕಲ್ಪವೃಕ್ಷ, ಆಭರಣಗಳನ್ನು ನೀಡುವಂಥದು (ಭಾಜನಾಂಗದ ವಸ್ತ್ರಾಂಗದ ಭೂಷಣಾಂಗದ ಅಳವಂ ಚಕ್ರೇಶ್ವರಂ ತಾಳ್ದಿದಂ: **ಆದಿಪು,** ೪. ೩೫), ನೋಡಿ, 'ಅಂಗಕಲ್ಪಕುಜ'

**ಭೂಷಾವಿಧೇಯ** – ಅಲಂಕರಿಸುವುದು (ಕೊಳದಿಂ ಮಜ್ಜನಕಾರ್ಯಂ ಅಚ್ಚನನೆಯಿಂ ಭೂಷಾವಿಧೇಯಂ ಫಲಾವಳಿಯಿಂ ಭೋಜನಕೃತ್ಯಂ .. .. ತೀರೆ ಮೆಚ್ಚಿ ಸುಟೆವರ್ ಪಾಂಥರ್ ವನೋಪಾಂತದೊಳ್: **ಅಜಿತಪು,** ೨. ೧೫)

**ಭೂಷೆ** – ಆಭರಣ (ಆರ್ಹಂತ್ಯಧರ್ಮಂ ತನಗಾರ್ಮಂ ಭೂಷೆ ರತ್ನತ್ರಯಮನೆ ನೆಗಟ್ದಂ ಧಾತ್ರಿಯೊಳ್ ಶಾಂತಿನಾಥಂ: **ಸುಕುಮಾಚ,** ೧. ೫೫)

**ಭೃಂಗ** – ದುಂಬಿ (ಕೋಪದಿಂ ಪುದಿದು ಪಲ್ಮೊಳೆವಂದಮಾಯ್ತು .. .. ಉನ್ಮದ ಭೃಂಗಝುಣತ್ಕೃತಸ್ವನಂ: **ಶಾಂತೀಶ್ವಪು,** ೧೧. ೧೦); ಒಂದು ಔಷಧ ಸಸ್ಯ, ಗರಗದ ಸೊಪ್ಪು (ಭೃಂಗಂ ಮಾರ್ಕವಂ ಅಲಂಬುಸಂ ಬೋಟಿತರಂ: **ಅಭಿಧಾವ,** ೧. ೮. ೨೭)

**ಭೃಂಗಾರ** – ಬಂಗಾರದ ಕಳಶ, ಪಾತ್ರೆ (ಸಾರಮಿದು ರತ್ನಮಯ ಭೃಂಗಾರಂ ಹರಿಪೀಠಮಿದು ಜಗತ್ತ್ರಿತಯಾಳಂಕಾರಂ: **ಆದಿಪು,** ೧೩. ೧೭)

**ಭೃಂಗಾರಿ** – ಭೃಂಗಾರ (ತೋರಮೊಲೆಗಳ ಮೊಗಂಗಳ್ ರಾರಾಜಿಸಿ ಕರ್ಪುವೆತ್ತು ಮೋಹನ ಧೂಮೋದ್ಗಾರಿಗಳಂ ಕಾಂಚನ ಭೃಂಗಾರಿಗಳಂ ಪೊಲ್ತುವು ಅರಸಿಂಗದೆಳವಸಿಱೊಳ್: **ಪಂಪರಾ,** ೩. ೯೫); ಜೀರುಂಡೆ (ಚೀರೀ ಝಿಲ್ಲಿಕಾ ಭೃಂಗಾರೀ ಶಬ್ದಂ ಸಮಾನವಾಚ್ಯಂ: **ಅಭಿಧಾವ,** ೧. ೯. ೨೩)

**ಭೃಂಗಾರು** – ಭೃಂಗಾರ (ಗೃಹೀತ ಚಾಮರ ತಾಳವೃಂತ ಭೃಂಗಾರು ವಾರಾಂಗನಾಸಹಸ್ರಸಂಗತಮುಂ .. .. ಅಪ್ಪ ರಾಜಮಂದಿರಮಂ ಪೊಕ್ಕು: ೮. ೧೨೦ ವ); ಮಂಗಳ ಕಳಸ (ಮಂಗಳಕುಂಭಂ ಪೂರ್ಮಘಟಂ ಗುಂಡಿಗೆ ಗುಂದಿಕಾಖ್ಯೆ ಕನಕಾಳುಗೆ ತಾಂ ಭೃಂಗಾರು: **ಅಭಿಧಾವ,** ೧. ೧೦. ೨೮)

**ಭೃಂಗಿ** – ಹೆಣ್ಣು ದುಂಬಿ (ಶ್ರೀಮದಗಣ್ಯಪುಣ್ಯನಿಧಿ ಜೈನಪದಾಂಬುಜಭೃಂಗಿ .. .. ಅಂಕದ ರೋಹಿಣಿ ಯಕ್ಷಿ ದಾನಚಿಂತಾಮಣಿ ಮಾಟ್ಕೆ ಚಿಂತಿತ ಮನೋರಥಮಂ ಕವಿಚಕ್ರವರ್ತಿಯಾ: **ಅಜಿತಪು,** ೧. ೧೪)

**ಭೃಗುವಿದ್ಯಾ[ದ್ಯೆ]** – ಶಸ್ತ್ರವಿದ್ಯೆ (ಭೃಗುವಿದ್ಯಾಪಾರಗನಪ್ಪ ಭದ್ರಚಂಡನ ಮೊಗಮನೀಕ್ಷಿಸಿದನಾ ನರೇಂದ್ರ ಮುಕುಂದಂ: **ಕುಸುಮಾಕಾ,** ೭. ೫೭)

**ಭೃತ** – ಕಾಪಾಡಿದ (ಕರಖಡ್ಗನಿಕೃತ್ತಮದಾಂಧದೈತ್ಯಸಂಘಾತೆ ಭೃತ ಅಂಗಜಾತೆ ಶರಣಮಗಮರಾರ್ಚಿತಪಾದಪಂಕಜೇ: **ಶಬರಶಂ,** ೫. ೪೭); ಹಿಡಿದ (ಅನಲಾಕ್ಷಂ ಭೃತಖಡ್ಗಶೂಲವಿಲಸತ್ ಖಟ್ವಾಂಗಢಕ್ಕಂ: **ಶಬರಶಂ,** ೧. ೫೮)

**ಭೃತಕ** – ಸೇವಕ (ಭೃತಕಂ ಕೃತಕಪ್ರಣಯಮೆಂದಱಿಯದೆ ನೆಱೆ ಕೂರ್ತಳೆದತ್ತು: **ಸುಕುಮಾಚ,** ೭. ೨೮ ವ)

**ಭೃತವಂಶ** – ಕೊಳಲನ್ನು ಹಿಡಿದವನು, ಕುಲರಕ್ಷಕ (ಭೃಗುವಂಶನಾಗಿಯುಂ ವ್ಯಪಗತರಾಗಾಸಕ್ತ ಸಿಂಹನಂದ್ಯಾಚಾರ್ಯ ವ್ರತಪತಿ: **ಚಂದ್ರಪ್ರಪು,** ೧. ೧೯)

**ಭೃತವಿಪಶ್ಚಿದ್ವರ್ಗ** – [ಭೃತ+ವಿಪಶ್ಚಿತ್+ವರ್ಗ] ಪಂಡಿತರನ್ನು ಪೋಷಿಸುವವನು (ಧಾರಿಣಿ ಬಣ್ಣಿಕುಂ ನಿಜಯಶೋವಲ್ಲೀ ವ್ರತಾಂಭೋದಮಾರ್ಗನಂ ಆರಾಧಿತಭರ್ಗನಂ ಭೃತವಿಪಶ್ಚಿತ್ ವರ್ಗನಂ ದುರ್ಗನಂ: **ಪಂಚತಂತ್ರ,** ೫೪)

**ಭೃತ್ಯ** – ಸೇವಕ (ಅರಿನೃಪರುತ್ಸವಮಂ ಕೇಳ್ದಿರೆಯುಂ ಸೆಂಡಾಡುತ್ತಿರೆಯುಂ ಆನೆಯಂ ಏಱುತ್ತಿರೆಯುಂ ಮಂತಣದೊಳ್ ಕುಳ್ಳಿರೆಯುಂ ಬಿನ್ನವಿಸಲಾಗದು ಎಂತುಂ ಭೃತ್ಯಂ: **ಪಂಚತಂತ್ರ,** ೮೪); ರಾಜನ ನಾಲ್ಕು ಬಗೆಯ ಸೇವಕರು (ಕರ್ಮಣ್ಯ ಮಂತ್ರ ಲಾಭ ದಾಯಕಂ ಸಾಂಗ್ರಾಮಿಕಮೆಂಬ ನಾಲ್ಕುಂ ತೆಱದ ಭೃತ್ಯರುಮಂ: **ಹರಿವಂಶ,** ೭. ೧ ವ)

**ಭೇಕ** – ಕಪ್ಪೆ (ಅನಿಶಂ ಭೇಕಾಳಿಗೆ ವಾಹನಮಾಗೆಂದೆನಗೆ ರೌದ್ರಶಾಪಮನಿತ್ತಂ ಮುನಿಸಿಂ ತದ್ವಿಪ್ರಂ: **ಪಂಚತಂತ್ರ,** ೩೮೫)

**ಭೇದ** – ಪ್ರಕಾರ (ಭೇದಂ ಭಿದೆಯುಂ ವಿಶೇಷಮುಂ: **ಅಭಿಧಾವ,** ೩. ೧. ೨೨); ಸೀಳು (ಉಪಜಾಹಂ ಭೇದಂ: **ಅಭಿಧಾವ,** ೨. ೨. ೧೯); ಪಂಚತಂತ್ರಗಳಲ್ಲಿ ಒಂದು, ಗೆಳೆಯರಲ್ಲಿ ಒಡಕು ತರುವುದು (ಅನೇಕಪ್ರಕಾರ ಕಪಟೋಪಾಯಂಗಳಿಂ ಅತಿಸ್ನೇಹಿತರೊಳ್ ಪೃಥಗ್ಭಾವಮಂ ಮಾಟ್ಪುದೇ ಭೇದಂ ಎಂಬುದು: **ಪಂಚತಂತ್ರ,** ೭೧ ವ)

**ಭೇದಂಬಡು** – ದೂರವಾಗು (ದುರ್ವಾದದಿಂದಿನ್ನೆಗಂ ಭೇದಂಬಟ್ಟಿರ್ದೆಗೆಟ್ಟು ಕೆಟ್ಟೆಂ: **ಸುಕುಮಾಚ,** ೩. ೪೩)

**ಭೇದಿಸು** – ಸೀಳು (ಬೆಟ್ಟಿತಪ್ಪ ಕಲ್ಲುಗಳುಳ್ಳ ಬೆಟ್ಟಮಂ ಸಿಡಿಲುಂ ನೀರುಂ ಭೇದಿಸುವಹಗೆ: **ಪಂಚತಂತ್ರ,** ೨೩೧ ಶ್ಲೋಕ ೧೧೪ ಟೀಕೆ); ರಹಸ್ಯ ಬಯಲುಮಾಡು (ಭೇದಿಸಿ ಸಹದೇವಿಗೆ ಮಗನಾದುದನೊರ್ವಂ ಧನಾರ್ಥಿ ಮೆಚ್ಚಂ ಪಡೆವೊಂದಾದರದಿನಱಿಪೆ: **ಪಂಪರಾ,** ೨. ೩೫)

**ಭೇದೋಪಾಯ** – ಚತುರೋಪಾಯಗಳಲ್ಲಿ ಒಂದು (ಲೇಸಾಗಿ ಪ್ರಯೋಗಿಸಿದ ಭೇದೋಪಾಯವು ಸ್ಥಿರವಹಮತಿಯಂ ಭೇದಿಸುವುದು: **ಪಂಚತಂತ್ರ,** ೨೩೧ ಶ್ಲೋಕ ೧೧೪ ಟೀಕೆ)

**ಭೇರುಂಡ** – ಎರಡು ತಲೆಗಳ ಕಾಲ್ಪನಿಕ ಪಕ್ಷಿ (ಅಂತು ಸಿಂಹ ಶರಭ ಭೇರುಂಡಾದಿ ಮೃಗವರ್ಗಂಗಳಿಂದತಿ ರಮಣೀಯಯವಾದ ತಿಱುಕಾಳತ್ತಿ ನಾಮದ ಅಚಳೇಂದ್ರದೊಳ್: **ತ್ರಿಷಷ್ಟಿಪು,** ೨೭. ೩೨ ವ)

**ಭೇಷಜ** – ಔಷಧಿ (ದಿವ್ಯಶಸ್ತ್ರ ಪ್ರಹರಣ ಭರಮನಪಹರಿಸುವ ಭೇಷಜ ಪ್ರಯೋಗಮಂ ಒಡರಿಸುವಮೆಂದು ಶೋಕೋದ್ರೇಕಮಂ ಉಪಶಮಿಸುವುದುಂ: **ಪಂಪರಾ,** ೧೪. ೩೪ ವ)

**ಭೈಕ್ಷ** – ಭಿಕ್ಷೆ (ಪುರುಷ ಭೈಕ್ಷಮನಿಕ್ಕು ದಯಾಪರತ್ವಮಂ ಮೆಱೆ ಮಱುವಾತು ಬೇಡ: **ನೇಮಿನಾಪು,** ೧. ೯೧)

**ಭೈಕ್ಷಾಶನಿ** – ಭಿಕ್ಷುಕ (ತನಗೆಂದುದುಮಂ ಕೊಳ್ವಂ ಮನೆವೊರ್ದಂ ಬಂಧಪಟಧರಂ ಸಲೆ ಭೈಕ್ಷಾಶನಿ ಗುರುಪದಾಂತಿಕಾಶ್ರಿತನೆನಿಸಿದಂ ಉದ್ದಿಷ್ಟವಿರತನೆಂಬುದು ಪೆಸರಿಂ: **ಶಾಂತೀಶ್ವಪು,** ೧೩. ೭೭)

**ಭೈತ್ರ** – [ಬಹಿತ್ರ] ಹಡಗು (ದಿನಾಬ್ಧಿಯಂ ಧೈರ್ಯಮೆಂಬ ಭೈತ್ರದಿಂ ಇಳಾಧಿನಾಥಂ ತರಿಯಿಸಿದಂ: **ಕಾದಂಬ,** ೮. ೧೨೫)

**ಭೈತ್ರಕಾಱ** – ಹಡಗು ನಡೆಸುವವನು (ಮದುವೆಯಂ ದಾಟಿಕಾಱರಿಂದರಸುಗಳಂ ಭೈತ್ರಕಾಱರಿಂ ದ್ವೀಪಂಗಳಂ ಜೋಯಿಸರಿಂ ಗ್ರಹಣಮನಜೀವಂತೆಯುಂ: **ಧರ್ಮಾಮೃ,** ೯. ೪೧ ವ)

**ಭೈರವ** – ರುದ್ರ, ಭಯಂಕರ, ಶಿವನ ರುದ್ರ ರೂಪ (ಭೈರವನ ಜವನ ಮಾರಿಯ ಮೂರಿಯವೊಲ್ ನಿಂದ ಮಾರಿದತ್ತಂ: **ಯಶೋಧಚ,** ೧. ೫೮)

**ಭೈರವಿ** – ದುರ್ಗೆ (ಚಾಮುಂಡಿ ಕರ್ಣಮೋಟಿ ಮಹಾಮಾಯಮೂರ್ತಿ ಚರ್ಚಿಯುಂ ಭೈರವಿಯಾ ನಾಮಮಿವಕ್ಕುಂ: **ಅಭಿಧಾವ,** ೧. ೧. ೧೯)

**ಭೈಷಜ್ಯ** – ಚಿಕಿತ್ಸೆ, ವೈದ್ಯ (ಆ ದಾನಚಿಂತಾಮಣಿಗೆ ಆಹಾರಾಭಯ ಭೈಷಜ್ಯ ಶಾಸ್ತ್ರದಾನದೊಳಂ .. .. ತೀರ್ಥಕರಜನನಿಗೆ .. .. ಗರ್ಭದೋಹಳಂ ನೆಗೞ್ಗೆ: **ಅಜಿತಪು,** ೩. ೨೧ ವ)

**ಭೈಷಜ್ಯಕ** – ಜ್ವರ (ಶರ್ವಂ .. .. ನಂದಿಪ್ರಮುಖ ನಿಖಿಲಪ್ರಮಥಯೂಥಮನಲ್ಲಿಂ ಪೆಱಗೆ ಭೈಷಜ್ಯಕಾದಿ ಜ್ವರಮುಮಂ ಬೆಸಸೆ: **ಜಗನ್ನಾವಿ,** ೧೮. ೯ ವ)

**ಭೋಂಕು** – ಗಾಬರಿಗೊಳ್ಳು (ಬೊಬ್ಬಿಡೆ ತತ್ಕೌರವಸೇನೆ ಪಾಂಡವಬಲಂ ಭೋಂಕಲ್ಕೆ ಅದಂ ಕಂಡು ಕಣ್ಗಿಡೆ ಭೀಮಾತ್ಮಜಂ: **ಕರ್ಣನೇಮಿ,** ೧೨. ೧೧೨)

**ಭೋಂಕನೆ** – ತಕ್ಷಣ, ಇದ್ದಕ್ಕಿದ್ದಂತೆ (ನನೆಯಂಬನೆ ಕರ್ಚಿ ಪಾಱಿದಪುದೋ ಶೃಂಗಾರವಾರಾಶಿ ಭೋಂಕನೆ ಬೆಳ್ಳಂಗೆಡೆದತ್ತೊ ಕಾಮನ ಎಱೆ ಮೆಯ್ವೆರ್ಚಿತ್ತೊ ಪೇೞ್ ಈಕೆಗೆ ಎಂಬಿನಂ: **ಪಂಪಭಾ,** ೪. ೪೨)

**ಭೋಂಕಲ್** – ಭೋಂಕನೆ, ತಟ್ಟನೆ (ಶ್ರೀನಾರೀಪತಿ ದೀಕ್ಷೆಯಂ ಕೊಳಲೊಡಂ ಭೋಂಕಲ್ ಮನಃಪರ್ಯಾಯಜ್ಞಾನಂ ಪುಟ್ಟಿದುದು: **ಆದಿಪು,** ೧೬. ೭೩)

**ಭೋಗ** – ವಿಷಯಸುಖಾನುಭವ (ಭೋಗಂ ವಿಷಯಾನುಭವಂ: **ಅಭಿಧಾವ,** ೩. ೧. ೭೩) ; ಹಾವಿನ ಹೆಡೆ (ಶ್ರೀಮತ್ ನಾಗೇಂದ್ರ ಭೋಗ ಸ್ಫುರತ್ ಅರುಣಮಣಿ ದ್ಯೋತಿ ಸಂಧ್ಯಾನಿಬದ್ಧ ಪ್ರೇಮಂ: **ಕಾದಂಸಂ,** ೧. ೧)

**ಭೋಗನಾಯಕ** – ಮಂಡಲವನ್ನು ರಕ್ಷಿಸುವವನು (ಭೋಗಿಗಳ್ ಭೋಗಿಗಳೆಂಬ ಭೋಗಿಗಳೆ ಭೋಗಿಗಲ್ಲಿಯ ಭೋಗನಾಯಕರ್: **ಪಂಪಭಾ,** ೪. ೧೬)

**ಭೋಗಭೂತಲ** – ಭೋಗಭೂಮಿ (ತನ್ನೊಳೆ ಸರಿದೊರೆ ಸುರರೇಂ ಭೋಗಭೂತಲಂ ಸುಖಮಯಮೋ: **ಚಂದ್ರಪ್ರಪು,** ೩. ೩೬)

**ಭೋಗಭೂಮಿ** – [ಜೈನ] ಭೂಮಿಯ ಮೇಲೆ ಪುಣ್ಯವಂತರು ಹುಟ್ಟುವ ಪ್ರದೇಶ (ಈ ಭರತಾವನಿ ಭೋಗಭೂಮಿ ಭೂಭಾಗಿ ಸುಖಾಪ್ತಿಯಂ ಪಡೆದುದು: **ಶಾಂತಿಪು,** ೧೨. ೨೪)

**ಭೋಗರತ್ನ** – ಹಾವಿನ ಹೆಡೆಯ ಮಣಿ (ಮಿಕ್ಕಂ ವಿಷವಹ್ನಿಯಿಂ ವಿಳಯಕಾಲಜ್ವಾಲೆಯಂ ಭೋಗರತ್ನದ ಚೆಲ್ವಿಂ ದ್ಯುತಿಮಾಲೆಯಂ ಮಸಕದಿಂದಂಭೋಳಿಯಿಂ ಕಾಳಿಯಂ: **ಜಗನ್ನಾವಿ,** ೩. ೮೪)

**ಭೋಗವತಿ** – ಪಾತಾಳಲೋಕದ ರಾಜಧಾನಿ (ಶತಸಪ್ತತಂತುಗೆ ಅಮರಾವತಿಯಂ ಫಣಿಪತಿಗೆ ನೆಗಟ್ದ ಭೋಗಾವತಿಯಂ ಮತಿಗೆಟ್ಟು ಜಡರ್ ಬಣ್ಣಿಸುವ ತೆಱದಿ ಬಣ್ಣಿಪೆಮೆ ನಿನಗೆ ಮುಕ್ತಿಯ ಸುಖಮಂ: **ಅಜಿತಪು,** ೬. ೮೦)

**ಭೋಗಾಂಗ** – ಸುಖಸಾಧನ (ಭೋಗಾಂಗಮಾಗಿಯುಂ ಕೃಷ್ಣಾಗರುಧೂಪಂ ಮುಸುಂಕಿ ಕೊಂದಿಕಿದುದಾ ಭೋಗಿಗಳಂ: **ಆದಿಪು,** ೫. ೨೫)

**ಭೋಗಾಂತರಾಯ** – [ಜೈನ] ಭೋಗದಲ್ಲಿ ವಿಘ್ನವನ್ನುಂಟುಮಾಡುವ ಕರ್ಮ (ಆ ಮಹಾಭಾಗ್ಯೆಗೆ ಭೋಗಾಂತರಾಯಮನುಂಟುಮಾಡಿದ ನೋವುಂ ಮಕ್ಕಳ್ ಪಡೆಯದ ನೋವುಂ ಅೞಲಂ ಒದವಿಸೆ: **ನೇಮಿನಾಪು,** ೧. ೯೨ ವ)

**ಭೋಗಾಭೋಗ** – ಭೋಗಸಾಮಗ್ರಿಗಳಿಂದ ಸಿಕ್ಕುವ ಸುಖ (ವಿದ್ಯುತ್ ಕ್ಷಣಿಕಂ ನಿಟ್ಟೆಯೆ ತನುಭೃದ್ಗಣ ಯೌವನ ರೂಪ ವಿಭವ ಭೋಗಾಭೋಗಂ: **ಆದಿಪು,** ೪. ೭೫)

**ಭೋಗಿ** – ರಸಿಕ (ಮಾಲೆಗಾಱನ ಪೊಸಬಾಸಿಗಂ ಮುಡಿವ ಭೋಗಿಗಳಿಲ್ಲದೆ ಬಾಡಿಪೋಗದೇ: **ಅನಂತಪು,** ೧. ೪೫); ರಾಜ (ವಿಮಳವಾಹನ ಯೋಗೀಶ್ವರಪಕ್ಕದೊಳ್ ಮುಮುಕ್ಷುತ್ವಮಂ ಆ ಭೋಗಿ ತಳೆಯಲ್ಕೆ: **ಕರ್ಣನೇಮಿ,** ೨. ೧೪); ವಿಲಾಸವತಿ (ಚರಿತಂ ಬಂದರ್ ಕಣ್ಗೊಪ್ಪಿರಲ್ ವರಭೋಗಿಯರ್: **ಪಂಪಭಾ,** ೯. ೧೦೨); ಸರ್ಪ (ತತ್ ಭೋಗಿ ಫಣಾದ್ಯುತಿಯೆ ಕಟ್ಟಿಲೆಯಂ ತಲೆದೋಱಲೀಯದು: **ಪಂಪಭಾ,** ೪. ೧೬)

**ಭೋಗಿನಿ** – ಹೆಣ್ಣು ಹಾವು (ಪೆಡೆಯುಡುಗಿದ ಭೋಗಿನಿಯೆಮೆಮಿಡುಕಂ ಸಂಗಳಿಸಿದಮರಿ .. .. ಎಂಬೀ ನುಡಿಗೆಡೆಗೊಟ್ಟಳ್ ಲತಾಂಗಿ ನವತರುಣಿಮದೊಳ್: **ಚಂದ್ರಪ್ರಪು,** ೫. ೧೦೦)

**ಭೋಗಿಭೋಗ** – ಹಾವಿನ ಹೆಡೆ (ಇಂತು ಸಂಸೃತಿಭೋಗಂಗಳ್ ಭೋಗಿಭೋಗದಿಂ ವಿಷಮಂಗಳ್: **ಆದಿಪು,** ೨೫)

**ಭೋಗಿಸು** – ಅನುಭವಿಸು (ನಿಚ್ಚಲುಮಾ ಬಿಯಮಾ ವಿನೋದಮಾ ಪಸದನಮಾ ವಿಳಸದೊಳೊಡಂಬಡೆ ಭೋಗಿಸಿದಂ ಗುಣಾರ್ಣವಂ: **ಪಂಪಭಾ,** ೧೪. ೩೮)

**ಭೋಗೀಂದ್ರ** – ಭೋಗಿಪತಿ; ಚಕ್ರವರ್ತಿ (ಆಗಳ್ ಜಯಪಟಹಂ ದಿಙ್ನಾಗಂಗಳ್ ಬೆರ್ಚೆ ಭೋರೆನೊಗೆಯಲ್ ಹರಿಯುಂ ಭೋಗೀಂದ್ರನಂತೆ ಪುರಮಂ .. .. ಪೊಕ್ಕು: **ಕರ್ಣನೇಮಿ,** ೭. ೯೫)

**ಭೋಜನ** – ಊಟ, ಆಹಾರ (ಮಜ್ಜನ ಭೋಜನಾದಿ ದಿವಸವ್ಯಾಪಾರಂಗಳಂ ತೀರ್ಚಿಸಿ: **ಪುಷ್ಪದಂಪು,** ೪. ೭೩ ವ)

**ಭೋಜನಭೂಮಿ** – ಊಟದ ಮನೆ (ಭೋಜನಭೂಮಿಗೆ ರಾಜಹಂಸ ವಿಳಾಸದಿಂ ಬಿಜಯಂಗೆಯ್ದು: **ಆದಿಪು,** ೧೧. ೨೬ ವ)

**ಭೋಜನಾಂಗ** – [ಜೈನ] ಬಯಸಿದ ಆಹಾರ ನೀಡುವ ಕಲ್ಪವೃಕ್ಷ, ನೋಡಿ (ಅಮೃತಾನ್ನಮನೊಲ್ದೀಗುಂ ಆಗಳುಂ ಭೋಜನಾಂಗ ಕಲ್ಪಾವನಿಜಂ: **ಆದಿಪು,** ೫. ೩೯), 'ಅಂಗಕಲ್ಪಕುಜ'

**ಭೋಜನೌಕ** – ಊಟದ ಮನೆ (ಒಪ್ಪುವುವಲ್ಲಿ ಶಸ್ತ್ರಕುಟಿ ಕೋಶಾಗಾರಂ ಏಕಾಂತಮಂದಿರಂ ಅಭ್ಯಾಸನಿಕೇತನಂ ಪಚನಧಾಮಂ ಸ್ನಾನಸದ್ಮಂ ಮನೋಹರ ಶಯ್ಯಾವಸಥಂ ವಿಭೂಷಣಗೃಹಂ ದೇವಾರ್ಚನಾವಾಸಂ ಅಂಬರವೇಶ್ಮಂ ವರ ಭೋಜನೌಕಂ ಅವರೋಧಸ್ತ್ರೀ ನಿವಾಸಾಸ್ಪದಂ: **ಶಾಂತೀಶ್ವಪು,** ೧. ೧೩೭)

**ಭೋರ್ಗರೆ** – ಭೋರ್ ಎಂದು ಶಬ್ದಮಾಡು (ಭೋರ್ಗರೆದೂದುವ ಗಾಳಿ ಸಿಡಿದು ಪೊಯ್ವ ಸಿಡಿಲ್: **ಆದಿಪು,** ೬. ೩೨); ಬೇಗ (ತರಳಿಕೆ ಭೋರನೆ ಚಂದ್ರಾಪೀಡ ಶರೀರಮಂ ಸಾರ್ದು: **ಕಾದಂಸಂ,** ೭. ೨೫ ವ)

**ಭೌತಿಕ** – ಪಂಚಭೂತಗಳಿಂದಾದ (ಈ ಧರಣೀಭಾರಮನಾಂ ಬಿಸುಟಿಪ್ಪೊಡದು ಚೀ ಲೋಕಕ್ಕೆ ಖಾತ್ವಾಸಮೀಕರಣಂ ಭೌತಿಕಮೋದಕವ್ಯತಿಕರಂ ತಾನೆಡಂಬುದಂ ಮಾಡದೇ: **ಆದಿಪು,** ೪. ೮೧); ತಪಸ್ವಿ (ಆ ಭೌತಿಕಂ ಅರಸಂ ತಾನೆಂದು ಕುಡವನಲ್ಲೆಂ ಕನ್ಯಾವರೆಯಂ ಗತಯೌವನರ್ಗೆ ಎನಲ್: **ಕರ್ಣನೇಮಿ,** ೩. ೨೬)

**ಭೌತಿಕಮೋದವ್ಯತಿಕರ** – ಒಂದು ಲೌಕಿಕ ನ್ಯಾಯ, ಗುಂಡಿಯನ್ನು ಅಗೆಯುವುದು ಅದನ್ನು ಮುಚ್ಚುವುದು, ನಿರರ್ಥಕ ಕೆಲಸ (ಈ ಧರಣೀಭಾರಮನಾಂ ಬಿಸುಟಿಪ್ಪೊಡದು ಚೀ ಲೋಕಕ್ಕೆ ಖಾತ್ವಾ ಸಮೀಕರಣಂ ಭೌತಿಕಮೋದಕವ್ಯತಿಕರಂ ತಾನೆಂಬುದಂ ಮಾಡದೇ: **ಆದಿಪು,** ೪. ೮೧)

**ಭೌಮ** – ಭೂಮಿಗೆ ಸಂಬಂಧಿಸಿದ (ಕಣ್ಗೊಂಡುದೆತ್ತಂ ಪರಿಯುತ್ತುಂ ಭೌಮವೈಹಾಯಸವಧವಿಧಮಂ ತೋಱುತುಂ ದಂತಿಸೈನ್ಯಂ: **ಜಗನ್ನಾವಿ,** ೭. ೬೦); ಭೂದೇವಿಯ ಮಗ, ಅಂಗಾರಕಗ್ರಹ (ಭೌಮನಂದಗ್ರಗ್ರಾಹದೊಳ್ .. .. ಧಿಷಣಕರ್ಕಿಯೊಳ್ ಸಂತಮಿಂತಿರ್ಪಿನಂ.. .. ಪುತ್ರನಂ ಪೆತ್ತಳಾಗಳ್: **ಸುಕುಮಾಚ,** ೧೦. ೨೬); ಭೂದೇವಿಯ ಮಗ, ನರಕಾಸುರ (ಚೋದಿತರಥನಸುರಾರಿಗೆ ಮಾರಾಂತಂ ಆಜಿಭೀಮಭೌಮಂ: **ಜಗನ್ನಾವಿ,** ೧೨. ೩೫)

**ಭೌಮವಿಹಾರ** – ವಿನೋದಾರ್ಥವಾದ ಭೂಸಂಚಾರ (ಅನಂತವೀರ್ಯನುಂ ಮಹಾಬಲನುಮೆಂಬ ಪೆಸರೊಳಸುರರಾಗಿ ಪುಟ್ಟಿ ಭೌಮವಹಾರಾರ್ಥಂ ಪೋಗಿ: **ಶಾಂತಿಪು,** ೯. ೨೭ ವ)

**ಭೌಮಾಷ್ಟಮಿ** – ಮಹಾನವಮಿಯ ಹಿಂದಿನ ಅಂದರೆ ಆಶ್ವಯುಜ ಶುಕ್ಲ ಅಷ್ಟಮಿ (ಚಂಡಿಕೆಯ ಪೂಜೆಗೆಟ್ಟಿಂದಂ ನಾನಾ ವಿಧದರ್ಚನೆಯಿಂ ಮಾನೋಮಿಯ ಮುಂದೆ ಬಂದ ಭೌಮಾಷ್ಟಮಿಯೊಳ್: **ಯಶೋಧಚ,** ೩. ೨೩); ನೋಡಿ, 'ಜೀವದಯಾಷ್ಟಮಿ'

**ಭೌರಿಕ** – ಬೊಕ್ಕಸದ ಸುವರ್ಣಾಧಿಕಾರಿ (ಐರಣಿಕಂ ಕುರುಕುರುಕಾರಂ ತದಧ್ಯಕ್ಷಂ ಭೌರಿಕನೆನಿಕುಂ: **ಅಭಿಧಾವ,** ೧. ೧, ೮೦)

**ಭ್ರಕುಂಸ[ನ]** – ಸ್ತ್ರೀವೇಷಧಾರಿ ನಟ (ಸ್ತ್ರೀವೇಷಧರಂ ಭ್ರಕುಂಸನಂ ಎನೆಯುಂ ಭ್ರಕುಂಸಂ ಎನೆಯುಂ ನೆಗಟ್ಟುಂ: **ಅಭಿಧಾವ,** ೧. ೧೧. ೭೫)

**ಭ್ರಮ** – ಭ್ರಾಂತಿ (ಜನಿತ ಕುದೃಷ್ಟಿ ಭ್ರಮಂ ಅತಿಘನ ಮೋಹತಮಃಪಟಾವೃತಂಜಗಂ: **ಚಂದ್ರಪ್ರಪು,** ೯. ೩೦)

**ಭ್ರಮಣ** – ತಿರುಗುವುದು (ತೂಳಿಕಾಭ್ರಮಣಪರಿಗತ ತೂಳಿಕಾತಳಮಪ್ಪ ಮನಕ್ಕೆ: **ಚಂದ್ರಪ್ರಪು,** ೪. ೧೮ ವ); ಹುಟ್ಟುಸಾವುಗಳ ಪರಂಪರೆ (ಪುಟ್ಟಿ ಕಟ್ಟಿದಾಯುಷ್ಯದ ವಿರಾಮದೊಳ್ ಸತ್ತು ನಾನಾ ಭ್ರಮಣದಿಂ ಒಂದು ಪೂರ್ವೋಕ್ತಸಮಯದ ತದ್ವಿತೀಯಾದಿ ಸಮಯದೊಳ್ ಪುಟ್ಟುತ್ತುಂ ಸಾವುತ್ತುಂ: **ಸುಕುಮಾಚ,** ೬. ೬ ವ)

**ಭ್ರಮತ್** – ತಿರುಗುವ (ಅಮೇಯ ಕನಕಾಬ್ಜಪಿಂಜರಪರಾಗಮಂ ಗಾತ್ರದೊಳ್ ತೆವಟ್ಟಿ ಕೊಳದಿಂ ಕೊಳಕ್ಕೆಱಗುತ್ತಿರ್ಪ ವಿಭ್ರಾಜಿತ ಭ್ರಮತ್ ಭ್ರಮರಸಂಕುಳಂ: **ಸುಕುಮಾಚ,** ೯. ೫೦)

**ಭ್ರಮರ** – ದುಂಬಿ (ಕಮಳವಿಮೋಹದಿಂ ಈ ನಿನ್ನ ಮೊಗಕ್ಕೆಱಗುವುದು ತೋಱುವುದಾ ಸರಸಿಜಮಂ ಭ್ರಮರಂ: **ಕವಿರಾಮಾ,** ೩. ೬೯)

**ಭ್ರಮರಕ** – ದುಂಬಿ (ಅನುನಯದಿನೆಱಗಿದಳ್ ಸೀತೆ ನಗುವಿನಂ ಭ್ರಮರಕಂ ಭ್ರಮದ್ ಭ್ರಮರಕರವಂ: **ಪಂಪರಾ,** ೬. ೪೧); ಮುಂಗುರುಳು (ಅನುಜೆ ನಿಜಾಗ್ರಜ ಪದ ಕೋಕನಕ್ಕಾನಂದ ಬಾಷ್ಪ ಮಧು ಬಿಂದುವನಿತ್ತು ಅನುನಯದಿನೆಱಗಿದಳ್ ಸೀತೆ ನಗುವಿನಂ ಭ್ರಮರಕಂ ಭ್ರಮತ್ ಭ್ರಮರಕಮಂ: **ಪಂಪರಾ,** ೬. ೪೧); ಕಣ್ಣ ಕಾಡಿಗೆ (ಬಾಷ್ಪಸರಿತ್ ವ್ಯಾಲಗ್ನಕೀರ್ಣ ಭ್ರಮರಕಂ ಅಮೃತಾಪಾಂಡುಗಂಡಸ್ಥಲಂ .. .. ವಿರಹಾಕ್ರಾಂತೆ ತತ್ಕಾಂತೆಯಿರ್ದಳ್: **ರಾಜಶೇವಿ,** ೭. ೭೬); ಹಣೆಯ ಮೇಲಿನ ಮುಂಗುರುಳು (ಕುಂತಳಂ ಅಳಕಂಗಳ್ ಕರುರುಳೋಳಿಗಳ್ ಭ್ರಮಕರಂ: **ಅಭಿಧಾವ,** ೧. ೧೨. ೨೦)

**ಭ್ರಮರಹಿತ** – [ಭ್ರಮರ+ಹಿತ] ದುಂಬಿಗೆ ಹಿತಕರವಾದ, [ಭ್ರಮ+ರಹಿತ] ಭ್ರಮೆಯಿಲ್ಲದ (ಭ್ರಮರಹಿತಂ ವೈಭಾತಿಕಸಮೀರನೆಸೆಗಿದುದು ಪೋಲ್ತು ಸುವಿಧಿಯ ಬಗೆಯಂ: **ಪುಷ್ಪದಂಪು,** ೧೩. ೫೮)

**ಭ್ರಮರಾಳಕಿ** – ದುಂಬಿಯ ಹಾಗೆ ಕಪ್ಪಾದ ಕೂದಲುಳ್ಳವಳು (ಲೀಳೆಯೊಳೆ ತಾಮೆ ನಡೆಪಿದ ಕೇಳೀವನಲತೆಗಳಂ ನಿರೀಕ್ಷಿಸಿ ಸುಯ್ಯಾದ್ದಾಳವಳಯಂಗಂಗಳಂ ಭ್ರಮರಾಳಕಿಯತ್ ಬಾಷ್ಪವಾರಿಯಿಂ ಪೂರಿಸಿದರ್: **ಪುಷ್ಪದಂಪು,** ೧೩. ೯೯)

**ಭ್ರಮರಿ** – ಹೆಣ್ಣು ದುಂಬಿ (ವಾಯಸದಂತೆ ನೋಡು ಬಕದಂತಿರೆ ಮೆಲ್ಲನೆ ಮೆಟ್ಟು ಕಚ್ಚಪೋಪಾಯದಡಂಗಿ ನಿಲ್ ಭ್ರಮರಿವೋಲ್ ಭ್ರಮಿಯಂತಿರೆ ಬೆಚ್ಚರಾಗು .. .. ನೆಱಿಯೆ ಕಲತಪುದೇಶಕನಾಗು ಲೋಕದೊಳ್: **ಶಬ್ದಮದ,** ೨೪೧, ಪ್ರ ೪); [ನೃತ್ಯದಲ್ಲಿನ] ತಿರುಗುವಿಕೆ (ತಿರುಗುವ ಸಿರಿಯೊಂದಂದದವಂ ಅಭಿನಯಿಸುವಳಿವಳೇಂದೆನೆ ಕಾಣಿಸಿದಳ್ ಅದ್ಭುತಭ್ರಮರಿಗಳಿಂ: **ರಾಜಶೇವಿ,** ೧೨. ೮೬)

**ಭ್ರಮರಿಗುಡು** – ಗುಂಡಾಗಿ ತಿರುಗು (ವಾಸವನ್ ಅಪೂರ್ವ ನಾಟ್ಯವಿಳಾಸದೆ ತಾಂ ಭ್ರಮರಿಗುಡುವುದುಂ ನೇತ್ರ ಸಹಸ್ರ ಅಸಿತರುಚಿ ಕರ್ನೆಯ್ದಿಲ ಬಾಸಿಗಮಂ ಬೀಸಿದಂತುಟಾದುದು ಸಭೆಯೊಳ್: **ಅಜಿತಪು,** ೫. ೧೫)

**ಭ್ರಷ್ಟಾಚಾರ** – ದುರಾಚಾರಿ (ನೀವೆತ್ತಾನುಂ ಮರುಳ್ಗೊಂಡಿರೋ ಮರುಳಿಕ್ಕಿ ಅಟ್ಟುದನುಂಡಿರೋ ಪೇಟಿಂ ಅಲ್ಲದಾಗಳ್ ನೀನೆತ್ತಲೀ ಚಂಡಾಲಕರ್ಮದೊಳ್ ತೊಡರ್ದು ಇಂತು ಭ್ರಷ್ಟಾಚಾರನಾದೆ: **ಪಂಚತಂತ್ರ,** ೨೧೧ ವ)

**ಭ್ರಾಂತ** – ಅಸ್ಥಿರ (ನೀನಿಂತು ಚಿಂತಾಕ್ರಾಂತನುಂ ಭ್ರಾಂತಚಿತ್ತನುಮಾಗಿರ್ಪುದಾವ ಕಾರಣಂ: **ಪಂಚತಂತ್ರ** ೧೫೦ ವ); ಯುದ್ಧರಥವನ್ನು ನಡೆಸುವ ಒಂದು ಬಗೆ (ಆಗಳ್ ಸವ್ಯಾಪಸವ್ಯ ಭ್ರಾಂತೋದ್ಭ್ರಾಂತಂಗಳೆಂಬ ರಥಕಲ್ಪ ವಿಶೇಷವಿನ್ಯಾಸಂಗಳನಱಿದು: **ಪಂಪಭಾ,** ೧೨. ೭೫ ವ)

**ಭ್ರಾಂತತೆ** – ಭ್ರಮೆ (ಅಧಿಕಭ್ರಾಮತತೆಯಂ ಧರಿಯಿಸಿ ಕಡುಗಂದಿ ಜಿನುಗುವಾಱಿಡಿಯಾದಂತಿರೆ ತೋರ್ಪಿರ್ ಪರಿಜನಮಂ ಹರಿಸದೊಳೊಡಗೂಡಿ ತೋಱು ಚರಣಾಂಬುಜಮಂ : **ಚಂದ್ರಪ್ರಪು,** ೫. ೧೫)

**ಭ್ರಾಂತಾತ್ಮ** – ಭ್ರಮೆಗೊಂಡ ಮನಸ್ಸುಳ್ಳವನು (ಅಶ್ವಗ್ರೀವನೆಟ್ಟಿಂದಂ ಅಹಿತನ ಮೊನೆಯತ್ತೆತ್ತಣಂ ಪೇೞ್ ತ್ರಿಪೃಷ್ಠಂ ಭ್ರಾಂತಾತ್ಮಂ ತೋಱು ತೋಱೆಂದೊದಱೆ: **ಶಾಂತಿಪು,** ೫. ೫೮)

**ಭ್ರಾಂತಿ** – ದಿಕ್ಕು ತೋಚದಿರುವುದು (ಪವಿಭಯ ಭ್ರಾಂತಿಯಿಂದಂ ಶರಣ್ಬೊಕ್ಕುದು ತನ್ನಂ ಗೋತ್ರಧಾತ್ರೀಧರತತಿ: **ಜಗನ್ನಾವಿ,** ೧. ೪೫); ಸಂದೇಹ (ಭ್ರಾಂತಿಯನುೞಿದು ಅಂತು ಇಂತು ಉಂತು ಎಂಬಿವು ತಾಂ ಪ್ರಕಾರಕಾಲ್ಯಾರ್ಥಂಗಳ್: **ಶಬ್ದಮದ,** ೩೩೫)

**ಭ್ರಾಜಿ** – ಹೊಳೆಯುವ (ಭ್ರಾಜಿವೇಣೀಸ್ರಗ್ಗ್ರಾಳಿಬ್ರಜಂ ಪೀಲಿಯ ಪೊಸದಳೆಯಂ ಪೋಲೆ: **ಲೀಲಾವತಿ,** ೬. ೫೦)

**ಭ್ರಾಜಿತ** – ಪ್ರಕಾಶಮಾನವಾದ (ಕಣ್ಗೆ ವಂದತ್ತು .. .. ಕಂಜಸೂತ್ರೋಜ್ವಳ ರಜ್ಜುಭ್ರಾಜಿತಂ ಚಂದನದ ಮಣೆಯಿಂ: **ಲೀಲಾವತಿ,** ೧೧. ೫೭)

**ಭ್ರಾಜಿಷ್ಣು** – ಪ್ರಕಾಶಮಾನ (ಭ್ರಾಜಿಷ್ಣು ಸಮದಸಾಮಜರಾಜಿ ಶಿರಃಪೀಠದಳನ ದಕ್ಷಂ .. .. ಮೃಗರಾಜಂ: **ಪಂಚತಂತ್ರ,** ೨೪೬)

**ಭ್ರಾತೃವ್ಯ** – ಸಹೋದರನ ಮಗ (ಭ್ರಾತೃಸುತಂ ಭ್ರಾತೃವ: **ಅಭಿಧಾವ,** ೧. ೧೧. ೨೩)

**ಭ್ರಾಮಕ** – ಅಯಸ್ಕಾಂತ (ತತ್ತರುಣಿಯ ಬಟಿವಟಿಯಂ ಪತ್ತಿ ಹಿತಾಹಿತ ವಿವೇಕ ವಿಕಲಂ ಪಟಿಯಂ ಪೆತ್ತು ಆ ಮುನಿಪಂ ಭ್ರಾಮಕದತ್ತ ಎಳಸುವ ಪಚ್ಚೆಗರ್ಬುನಕ್ಕೆಣೆಯಾದಂ: **ಪಂಪರಾ,** ೪. ೮೩)

**ಭ್ರುಕುಟಿ** – ಹುಬ್ಬುಗಂಟು (ಈರ್ಷೆಯಿಂದಂ ಭ್ರುಕುಟಿಗಳಿವೆ ಪೊಣ್ಮುತ್ತಮಿರ್ದಪ್ಪುವು ಎಂಬಂದದೆ: **ಕಾದಂಬ,** ೨. ೧೧)

**ಭ್ರೂ** – ಹುಬ್ಬು (ಪುರ್ಬುವಲ್ಲಿ ತಾಂ ಭ್ರೂ ನಾಮಂ: **ಅಭಿಧಾವ,** ೧. ೧೨. ೧೮)

**ಭ್ರೂಕೋಟಿ** – ಭ್ರುಕುಟಿ (ಕಾಮಕಾರ್ಮುಕಕರಸಂಚಳನಮನೆ ಪೋಲ್ತು ಕರಮೆರ್ದೆಗೊಳಿಸಿದುದಾಕೆಯ ವಿಭ್ರಮ ಭ್ರೂಭಂಗಂ: **ಆದಿಪು,** ೭. ೧೫)

**ಭ್ರೂಲತೆ** – ಬಳ್ಳಿಯಂತಹ ಹುಬ್ಬು (ನಗೆಗಣ್ ಮಿಂಚಿನ ಗೊಂಚಲಂ .. .. ಭ್ರೂಲತೆ ಶಕ್ರಚಾಪಲತೆಯಂ .. .. ಆಂತ ಕಾಂತೆಯರ ಸತ್ಯಸ್ನೇಹಮುಂ: **ಲೀಲಾವತಿ,** ೪. ೬೬)

**ಭ್ರೂವಿಕ್ಷೇಪ** – ಭ್ರೂಲಾಸ್ಯ (ಸ್ಮಿತ ದರಹಸಿತ ಭ್ರೂವಿಕ್ಷೇಪ ಆಳಾಪ ಪರಿಹಾಸವಚನಂಗಳಿಂದಂ ಅವರವರ ಅಳವಿಗಳಿಂದೆ ಸಂತಸಂಬಡಿಸಿ: **ಶಾಂತಿಪು,** ೩. ೧೧೩ ವ)

**ಭ್ರೂವಿಕ್ಷೇಪಣ** – ಭ್ರೂಲಾಸ್ಯ (ತತ್ ಭ್ರೂವಿಕ್ಷೇಪಣಪ್ರೇರಿತಂ ಮೇಘನಾದಂ ಆದರದಿಂ ಬಂದು .. .. ಸಮರಸನ್ನಾಹಭೇರಿಯಂ .. .. ಪೊಡೆಯಲ್: **ರಾಜಶೇವಿ,** ೬. ೩೦ ವ)

**ಭ್ರೂವಿಭ್ರಮ** – ಭ್ರೂಲಾಸ್ಯ (ಲೋಲೇಕ್ಷಣಂ ಸಂಚಲತ್ ಕುಂತಳಂ ಭ್ರೂವಿಭ್ರಮಂ ಶೋಭಿಸೆ ತಿಳಿಗೊಳನಂ ಫುಲ್ಲ ಪಂಕೇಜಮಂ ನಿರ್ಮಳ ತಾರಾಧೀಶನಂ ಪೋಲ್ತೆಸೆಯೆ: **ಅಜಿತಪು,** ೨. ೪೦)

**ಭ್ರೂಸಂಜ್ಞೆ** – ಹುಬ್ಬಿನಿಂದ ಮಾಡುವ ಸನ್ನೆ (ತದೀಯ ಸಚಿವ ಭ್ರೂಸಂಜ್ಞೆಯಿಂ ಸಾರ್ದು ಮೆಲ್ಲಗೆ ಕುಳ್ಳಿರ್ದುದು ತನ್ಮಹೀಶಕುಲಂ: **ಕುಸುಮಾಕಾ,** ೩. ೧೦೦)

# ಮ

**ಮಂಗಲತೊರಣ** – ಶುಭಸಮಾರಂಭದಲ್ಲಿ ಕಟ್ಟುವ ತೋರಣ (ತ್ರಿಭುವನ ಮಂಗಲತೋರಣನಿಭಮಂ ಪ್ರವಚನಮನೆಯ್ದಿ ರೈಸ್ತಂಭಸಮಪ್ರಭರ್ ಅಂತರ್ನಿರ್ಭೃತೋನ್ನತವಿಭವರ್ ಭೂತಬಲಿ ಪುಷ್ಪದಂತಾರ್ಚಾರ್: **ಚಂದ್ರಪ್ರಪು,** ೧. ೧೫)

**ಮಂಗಳ** – ಶುಭಕರವಾದ; ಅಂಗಾರಕ; ಮಂಗಳಕರ ಗೀತೆ (ಮಂಗಳಮನೆ ಪಾಡುತ್ತುಂ ಮಂಗಳಧಾರಿಣಿಯರಾಗಿ ಮುಂದಂ ನಡೆವಾಶಾಂಗನೆಯರಿಂದೆ: **ಆದಿಪು,** ೭. ೪೮)

**ಮಂಗಳಂಬಾಡು** – ಶುಭಕರವಾದ ಗೀತೆಯನ್ನು ಹಾಡು (ನೆರೆದೊಡನೆ ಮಂಗಳಂಬಾಡೆ ಗಾಯಕಗಣಂ ಕರಮೆ ಕಣ್ಗೆಸೆದುದು ನರೇಂದ್ರಭವನಾಂಗಣಂ: **ಅಜಿತಪು,** ೪. ೭)

**ಮಂಗಳಕರ** – ಶುಭಕರ (ಮಂಗಳಕರ ಭುವನಾಧಿಕ ಮಂಗಳನಂ ಅನಂತಬೋಧನಿಧಿಯಂ ನಿಧಿಗಳ್ ಸಂಗಡದೋಲಗಿಸುವುದು ಉಚಿತಂ ಗಡಮೆನೆ ನೆಲಸಿ ಗೋಪುರದೊಳೋಲಗಿಕುಂ: **ಪಾರ್ಶ್ವನಾಪು,** ೧೬. ೬೮)

**ಮಂಗಳಕಾರಣ** – ಶುಭಕ್ಕೆ ಕಾರಣವಾದ[ದ್ದು] (ಮಂಳಕಾರಣಪಂಚಪದಂಗಳಂ .. .. ಅಕ್ಷಯ ಮಂತ್ರಪದಂಗಳನೋದುವುದು ನೆಱೆಯೆ ನಿಶ್ಚಲಮತಿಯಿಂ: **ಆದಿಪು,** ೨. ೫೪)

**ಮಂಗಳಕೇತು** – ಶುಭಸೂಚಕವಾದ ಧ್ವಜ (ಮಂಗಳಕೇತುವಿರಾಜಿತಂ ಅಂಗೀಕೃತನೀಲಭಾನುತಮಸಂ ಪರಿಷತ್ತಂಗಬುಧಗುರು ಕವಿರಾಜಂಗತಿನವಗ್ರಹಪರೀತಂ ಉದ್ವಾಹಗೃಹಂ: **ಅನಂತಪು,** ೬. ೪೮)

**ಮಂಗಳಗಾಯಕ** – ಶುಭಪ್ರದ ಹಾಡುಗಳನ್ನು ಹೇಳುವವನು (ಗೀರ್ವಣಮಂಗಳಗಾಯಕರೆ ಸಂಗೀತಗಾಯಕರಾಗೆ ನಿಳಿಂಪ ಭರತಿಕರೆ ನಟ್ಟುವರಾಗೆ: **ಶಾಂತಿಪು,** ೧೦. ೬೦ ವ)

**ಮಂಗಳಗಾಯಿ[ಕಾ]ಕೆ** – ಶುಭಪ್ರದ ಹಾಡುಗಳನ್ನು ಹೇಳುವವಳು (ಮಂಗಳಗಾಗಾಯಿಕಾ ಮಧುರಗಾನದಿನೆಟ್ಚಱನೆಯ್ದಿ ನಿತ್ಯಕೃತ್ಯಂಗಳ ಮಂಗಳಾಚರಣಮಂ ನೆಗಟುತ್ತೆ: **ಪುಷ್ಪದಂಪು,** ೩. ೧೨೧)

**ಮಂಗಳಗುಣ** – ಸದ್ಗುಣ[ವಂತ] (ಮಂಗಳಗುಣರೇೞುಂ ನರಕಂಗಳ ನಾರಕರ ದಂಡನಾದಿಗಳಂ ದುಃಖಂಗಳಂ ಅಭಿವರ್ಣಿಸಿದೊಡೆ: **ಅಜಿತಪು,** ೧೧. ೩)

**ಮಂಗಳತೂರ್ಯ** – ಮಂಗಳವಾದ್ಯ (ಮಂಗಳತೂರ್ಯನಾದಂ ಎಸೆಯುತ್ತಿರ್ಪನ್ನೆಗಂ ಚಕ್ರಿ ರಾಗಿಸಿ ಕೆಯ್ನೀರ್ ಎಱೆದಂ ಗುಣಾರ್ಣವ ಮಹೀಪಾಲಂಗಂ ಆ ಕನ್ನೆಯಂ: **ಪಂಪಭಾ,** ೫. ೨೫)

**ಮಂಗಳದ್ರವ್ಯ** – ಶುಭಸಮಾರಂಭದಲ್ಲಿ ಬಳಸುವ ವಸ್ತುಗಳು (ಅನಿಬರ್ ಇಂದ್ರರುಂ ಅಭಿಷೇಕಮಂಗಳದ್ರವ್ಯಂಗಳಂ ಕೂಡಿ ಶಚೀದೇವಿ .. .. ನೀಡೆ: **ಶಾಂತಿಪು,** ೧೦. ೩೭ ವ)

**ಮಂಗಳಧಾರಿಣಿ** – ಮಂಗಳದ್ರವ್ಯಗಳನ್ನು ಹಿಡಿದವಳು (ಮಂಗಳಮನೆ ಪಾಡುತ್ತುಂ ಮಂಗಳಧಾರಿಣಿಯರಾಗಿ ಮುಂದಂ ನಡೆವಾಶಾಂಗನೆಯರಿಂದೆ: **ಆದಿಪು,** ೭. ೪೮)

**ಮಂಗಳಪಾಠಕ** – ಹೊಗಳುಭಟ್ಟ (ಆಗಳ್ ಮಜ್ಜನಾವಸರ ಮಂಗಳಪಾಠಕ ಮಧುರನಿನದಮನಾಲಿಸುತ್ತುಂ: **ಆದಿಪು,** ೮. ೭೦ ವ)

**ಮಂಗಳಪ್ರಸಾಧನ** – ಶುಭಕರವಾದ ಅಲಂಕರಣ (ಮಂಗಳಪ್ರಸಾಧನಸನಾಥನುಂ ವಿನೀತನುಂ: **ಶಾಂತಿಪು,** ೧೦. ೯೯ ವ)

**ಮಂಗಳವಸದನಂಗೊಳ್** – ಶುಭಕಾರ್ಯಕ್ಕೆ ತಕ್ಕುದಾಗಿ ಅಲಂಕರಿಸಿಕೊ (ಅಂತು ಉಭಯಬಲಂಗಳೊಳಂ ವೀರಜನಜನಿತಾಳಾಪಂಗಳ್ ನೆಗೞೆ ವಿಕ್ರಮಾರ್ಜುನಂ ಅನಂತನುಂ ತಾನುಂ ಜಲಕ್ಕನಿರೆ ಪಲ್ಲಂ ಸುಲಿದು ಅಗಣ್ಯಪುಣ್ಯ ತೀರ್ಥೋದಕಂಗಳಂ ಮಿಂದು ಮಂಗಳವಸದನಂಗೊಂಡು: **ಪಂಪಭಾ,** ೧೦. ೪೬ ವ)

**ಮಂಗಳಸೂತ್ರ** – ಮಾಂಗಲ್ಯ, ತಾಳಿ (ಧರಣೀಕಾಂತೆಯ ಪರಿಣಯಕೆಂದು ತಳೆದ ಮಂಗಳಸೂತ್ರದ್ವಯಮೆನೆ ಮಿಸುಗಿರ್ದುವು ಕಂಕಣಯುಗಳಂ: **ಕುಸುಮಾಕಾ,** ೬. ೧೩೫)

**ಮಂಗಳಾಚರಣ** – ಶುಭಕಾರ್ಯ (ಮಂಗಳಗಾಗಾಯಿಕಾ ಮಧುರಗಾನದಿನೆೞ್ಚಱನೆಯ್ದಿ ನಿತ್ಯಕೃತ್ಯಂಗಳ ಮಂಗಳಾಚರಣಮಂ ನೆಗೞುತ್ತೆ: **ಪುಷ್ಪದಂಪು,** ೩. ೧೨೧)

**ಮಂಗಳಾನಕ** – ಶುಭಸಂದರ್ಭಗಳಲ್ಲಿ ಬಾರಿಸುವ ವಾದ್ಯ (ಈ ನಿಜತನೂಜೆಯಂ ಉತ್ಸವಮಂಗಳಾನಕ ಧ್ವನಿದೆಸೆಯಂ ಪಳಂಚಲೆವಿನಂ ನೆರಪೀಗಳೆ ವಜ್ರಜಂಘನೊಳ್: **ಆದಿಪು,** ೪. ೨೬)

**ಮಂಗಳೆ** – ದುರ್ಗೆ (ಮಾನ್ಯೆ ಮಾನಿನಿ ಮಹನೀಯೆ ಮಂಗಳೆ ಮಹೇಶ್ವರಿ: **ರಾಜಶೇವಿ,** ೧೩. ೧೬)

**ಮಂಚಕ** – ಪರ್ಯಂಕ, ಮಲಗಲು ಬಳಸುವ ಸಾಧನ (ಕೌಮುದಿ ಮಂಚಕ ಅಂಘ್ರಿಮಣಿಪೀಠವಿಳಂಬಿತ ಹಾರತಾರಕಂ .. .. ವಿಳಾಸಮನೀವುದು: **ಆಚವರ್ಧ,** ೧. ೬೮)

**ಮಂಚಲ್** – ಮೋಸ (ಮಂಚಲ್ ಕಳವಾಱಡಿ ಭಯಸಂಚಯಮೆಂಬಿವಱ ಪೆಸರುಮಿಲ್ಲಾ ನಾಡೊಳ್: **ಪುಷ್ಪದಂಪು,** ೨. ೫); ಸೆರೆ (ಎನಗಿಂಗಿಂದಿಗಾಱು ತಿಂಗಳ್ ಸಮನಿಸಿದಪುದಿಲ್ಲ ಎಲ್ಲುಂ ಬಂದಿಮಂಚಲ್ ಖನನಪ್ರಾರಂಭ ಚೌರ್ಯಾದಿಗಳ್ ಅನಶನಮೀಗಳ್ ಚತುರ್ವಾಸರಂ ಭೋಜನಮಾತ್ರಂ ಬಂದೊಡಿದಾಂ ಸಲವಿಭವಮಂ ಪೆತ್ತೆಂ: **ಸುಕುಮಾಚ,** ೭. ೧೮)

**ಮಂಚಲಂಬಿಡಿ** – ಕಣ್ಸೆರೆ ಹಿಡಿ, ಮೋಹಗೊಳಿಸು (ನಡೆ ನೋೞ್ಪರ ಕಣ್ಗಳನೆಯ್ದೆ ಮಂಚಲಂಬಿಡಿವ ವಿಳಾಸಿನೀನಿಹವಂ ಏೞೆದುದಿಂತು ಕರೇಣುಜಾಲಮಂ: **ಶಾಂತೀಶ್ವಪು,** ೧೦. ೬೭)

**ಮಂಚಿಗೆ** – ಅಟ್ಟಳೆ (ಮಂಚಿಗೆಯ ಕಂಬದಲ್ಲಿ ನಿಱಿಸಿ ಪೊದಿಸಿ: **ಧರ್ಮಪ,** ೩. ೧೧)

**ಮಂಜರಿ** – ಗೊಂಚಲು (ದಿವ್ಯ ಕುಸುಮಮಂಜರಿಯ ನವತಂಸಂ ಮಾಡಿ ಪಾರಿಜಾತಜನ್ಮಮಂ ಸಫಲಂ ಮಾೞ್ಪುದು: **ಕಾದಂಸಂ,** ೪. ೧೬ ವ)

**ಮಂಜರಿಸು** – ಗೊಂಚಲಾಗು (ಕೆಂಪಿನ ಕಂಪಿನ ಮಂಜರಿಯಂತೆ ಮಂಜರಿಸಿ ಮಗಮಗಿಸಿ ಮರಿಪುಗೊಂಡು ಸೊಬಗುಕೊಂಬುಗೊಂಡು ಅರಿಸಿನದ ಕೊಂಬುಗಳಂ ಸೊಪ್ಪುಗುಟ್ಟಿ: **ಲೀಲಾವತಿ,** ೧೨. ೬೭ ವ)

**ಮಂಜಿ** – ನಾರು (ಅಲರಿಂದೆ ಮಂಜಿ ಬಂದುಱು ತಲೆಗೇಱಿದ ತೆರದೆಬಂದ ಬಿಂದಮಂ ಅಭವಾಚಲದೊಳ್ ಇರವೇೞುತುಂ: **ಉದ್ಭಟಕಾ,** ೫. ೧೦೮)

**ಮಂಜಿನ ಮಟೆ** – ಮಂಜಿನ ಧಾರೆ (ಮುಸುಕಿದ ಮಂಜಿನ ಮಾಟೆಯೊಳ್ ನಸುದೋಱುವ ಶೋಣ ಕಮಲಯುಗದಂತೆ: **ಕುಸುಮಾಕಾ,** ೧೦. ೫೦)

**ಮಂಜಿಟಿಗೆ** – [ಮಂಜಿಷ್ಠಾ] ನಸು ಹಳದಿ ಹೂ ಬಿಡುವ ಒಂದು ಸಸ್ಯ (ಪೊಸ ಪಸಗೆಯ ಮಂಜಿಟಿಗೆಯ ಮಿಸುಗುವ ದೋರಿಯದ ಪಟಿಯ ಪುಲ್ಲಿಯ ಸೊಂಪಂ ಪಸರಿಸಿದ ಪಕ್ಕರಕ್ಕೆಗಳೆಸೆದಿರ್ದುವು: **ಕಬ್ಬಿಗಕಾ,** ೨೦೨)

**ಮಂಜಿಮ** – ಸೊಗಸು (ಕಮಳದಳಾಯತೇಕ್ಷಣರುಚಿಪ್ರಸರಂ ಬಸಿತಪುಂಡ್ರಮಂಜಿಮಯುತಫಾಲಂ ಆ ಲಲಿತ ಕುಂಡಳ ಮಂಡಿತಗಂಡಮಂಡಳಂ: **ರಾಜಶೇವಿ,** ೧೪. ೬೪)

**ಮಂಜೀರ** – ಕಾಲಿನ ಒಂದು ಆಭರಣ, ಕಾಲ್ಗೆಜ್ಜೆ (ಲಲನಾ ಮಂಜೀರನಾದಕ್ಕೆ ಎಳಸುವ ಕಳಹಂಸಂಗಳಂ ಕಂಡು: **ಕಾದಂಬ,** ೨. ೫೯)

**ಮಂಜೀರಕ** – (ವಿದ್ಯಾಧರೀರಮ್ಯನರ್ತನ ರಾಗೋತ್ಥಿತ ಪಾರಿಹಾರ್ಯ ರಶನಾ ಮಂಜೀರಕೋದ್ದಾಮನಿಸ್ವನದೊಳ್: **ಆದಿಪು,** ೧. ೭೦)

**ಮಂಜು** – ಹಿಮ, ಕಾವಳ (ಕಾಂಡಪಟದಂತಿರ್ಪನ್ನೆಗಂ ಮಾಡಿ ಮಂಜನಲಂಪಟ್ಟಱನೀಯೆ ಕೂಡುವೆಡೆಯೊಳ್ ಜ್ಞಾನಸ್ವರೂಪಂ ಮಹಾಮುನಿಪಂ ಪುಟ್ಟಿದಂ: **ಪಂಪರಾ,** ೧. ೬೯); ಇಂಪಾದ (ಮಧುರಂ ಮಂಜುಳ ಮಂಜು ಸೌಮ್ಯಂ: **ಅಭಿಧಾವ,** ೨. ೧. ೫೮)

**ಮಂಜುಘೋಷ** – ಇಂಪಾದ ಧ್ವನಿ (ಮಂಜುಘೋಷಮಂ ಬೀಱುವ ಸಿಂಜೀನೀವಳಯಕಾಂಚಿಗಳೆಂಬಿವಱೆಂದದೊಂದು ಚೆಲ್ವೇಱಿರೆ ಭೋಗಿ ಭಾಮಿನಿಯರಾ ಮಡುವಿಂ ಪೊಱಮಟ್ಟರಟ್ಟಿಯಿಂ: **ಜಗನ್ನಾವಿ,** ೩. ೧೦೨)

**ಮಂಜುಘೋಷೆ** – ಒಬ್ಬ ಅಪ್ಸರೆಯ ಹೆಸರು (ಮೇನಕೆ .. .. ಮಂಜುಘೋಷೆಯೆಂಬೀ ನೆಗೞ್ದಗ್ಗದಚ್ಚರಿಯಪ್ಪ ವಿಳಾಸಮಂ ನಿಜನಟನೈಕದೇಶಮೆ ತಱುಂಬಿದುದು: **ಪುಷ್ಪದಂಪು,** ೨. ೭೭)

**ಮಂಜುಮಾಡು** – ದೃಷ್ಟಿಗೆ ಮಬ್ಬುಗವಿಸು (ಕೃಷ್ಣನೆ ಮಂಜುಮಾಡಿದ ವ್ಯಥಾಲಪಂಗಳಂ ತತ್ತ್ವಮೆಂದು ತಗುಳ್ದಾಗಳುಂ ಓದುವರ್: **ಸಮಯಪ,** ೧೦. ೧೭೧)

**ಮಂಜುವೆಟ್ಟ** – ಹಿಮದ ಬೆಟ್ಟ, ಕೈಲಾಸ (ತೆಱವುಗುಡದೆ ಸೂೞೈಸುವ ನಿಸ್ಸಾಳದ ಬಲ್ಸರಕೆ ದೆಸೆವೆಟ್ಟುಗಳ್ ನಿಬ್ಬರಂಬಿರಿಯೆಯುಂ ಬೇಗದಿಂ ನಡೆದೆತ್ತಿ ಬಂದು ಮಂಜುವೆಟ್ಟಮಂ ಮೂವಳಸಾಗಿ ಮುತ್ತಿದಾಗಳ್: **ಕಬ್ಬಿಗಕಾ,** ೨೨೪ ವ)

**ಮಂಜುಸಿಂಜಿತ** – ಇಂಪಾದ ಧ್ವನಿ (ರಂಜಿಸುವ ಹಂಸರವಮುಂ ರಂಜಿಸದಿನ್ನಿದಱ ಕೆಲದೊಳೆಂಬಿನೆಗಂ ಅದೇಂ ಲಂಜಿಕೆಯರ ಗುಂಜನ್ಮಣಿ ಮಂಜೀರಕ ಮಂಜುಸಿಂಜಿತಂ ರಂಜಿಸಿತೋ: **ಅಜಿತಪು,** ೫. ೪೨)

**ಮಂಜೂಷ** – ಪೆಟ್ಟಿಗೆ (ಬಾಳಕನ ಕೆಲದೊಳ್ ಸುರಿದಿರಿಸಿ ಮಂಜೂಷೆಯ ಕೆಲವಲಗೆಯೊಳ್: ಈ ರತ್ನಂಗಳಂ ಕೊಂಡೀ ಕುಮಾರನಂ ಪ್ರಯತ್ನದಿಂ ರಕ್ಷಿಸುಗೆ: **ಕರ್ಣನೇಮಿ,** ೩. ೪೦ ವ)

**ಮಂಜೂಷೆ** – ಮಂಜೂಷ (ಕಾಂಚನ ಮಂಜೂಷೆಯೊಳೊಪ್ಪುವ ಜನಪತಿಸುತನಂ ನೃಪಾಳ ಕೃಷ್ಣಂ ಕಂಡಂ: **ನೇಮಿನಾಪು,** ೪. ೯೬)

**ಮಂಟಪ** – ಓಲಗಶಾಲೆ (ಮಂಟಪಂ ಜನಾಶ್ರಯಂ: **ಅಭಿಧಾವ,** ೧. ೧೦. ೧೯); ದೇವತಾಮೂರ್ತಿಯಿರುವ ಕಟ್ಟಡ (ಅಪ್ರತಿಮಂಗಳಪ್ಪ ರೂವಾರದಿನಾರುಮಂ ಬಗೆಗೊಳಲ್ ಪರಿಶೋಭಿಪ ಮಂಟಪಂಗಳಿಂ: **ಸುಕುಮಾಚ,** ೯. ೫೮)

**ಮಂಟಯ** – ಸಣ್ಣ ಮನೆ (ಅಂತು ಬಂದಾ ಪಾರ್ವರ ಮಂಟಯದೊಳ್ ಕುಳ್ಳಿರ್ಪುದಾ ಸಮಯದೊಳ್ ಇಂದ್ರದತ್ತನೆಂಬ ವೃದ್ಧವೈಶ್ಯನೊರ್ವಂ .. .. ಆ ಮಂಟಯಕ್ಕೆ ಬರ್ಪುದುಂ: **ಪುಣ್ಯಾಸ್ರ,** ३. ೯ ವ)

**ಮಂಟಿಗೆ** – ಗೆಜ್ಜೆ (ನಸುಗೆಯರಲುಂಗುರಮನುತ್ತಳದ ಮಂಟಿಗೆಯಂ ಉಜ್ವಳಿಪ ಗೊಜ್ಜಗೆಯ ಸಜ್ಜಕದ ಚಳಕಿಗೆಯ: **ರಾಜಶೇವಿ,** ೧೦. ೫೭ ರಗಳೆ)

**ಮಂಡಕ** – ಒಂದು ಭಕ್ಷ್ಯ, ಮಂಡಿಗೆ (ಅಲ್ಪದಶನದಂಶಮಾತ್ರ ಖಂಡನೀಯ ಮಂಡಕಮುಮಂ: **ಆದಿಪು,** ೧೧. ೨೬ ವ)

**ಮಂಡಗೆ** – ಮಂಡಕ (ಪೂರಿಗೆ ಇಡ್ಡಲಿಗೆ ಸೋದಿಗೆ ಲಾವಣಿಗೆ ಘೃತಪೂರಂ ಲಡ್ಡುಗೆ ಮಂಡಗೆ ಮೊದಲಾಗೊಡೆಯ ಪದಿನೆಂಟುಂ ತೆಱದ ಭಕ್ಷ್ಯರೂಪಂಗಳುಮಂ: **ವಡ್ಡಾರಾ,** ಪು ೭೮ ಸಾ ೧೬)

**ಮಂಡನ** – ಅಲಂಕಾರ (ಮೆಯ್ಯಿಂ ಮಂಡನಾಳಂಕರಣವಚನದಿಂ ವೃತ್ತವಕ್ಷೋಜದಿಂ ಸತ್ವದದಿಂದೊಪ್ಪಿರ್ದ ವಾಕ್ಸುಂದರಿ ಪರಮ ವಚೋವೃದ್ಧಿಯಂ ಮಾಡುಗೆಮ್ಮೊಳ್: **ಸುಕುಮಾಚ,** ೧. ೭)

**ಮಂಡನವಿಧಿ** – ಅಲಂಕರಿಸುವ ಕೆಲಸ (ಉಪ್ಪವಡಿಸಿ ಮಜ್ಜನ ಮಂಡನವಿಧಿಯಂ ಲತಾಂಗಿ ನಿರ್ವರ್ತಿಸಿ ಭೂಮಂಡಳಪತಿಗಜೆಪಿದೊಡೆ: **ಆದಿಪು,** ೭. ೨೮); ಆಭರಣ (ಮಂಡನಂ ವಿಭೂಷಾಪ್ರತಾನ ಆಭರಣಂ ಎಂಬಿವು ತೊಡವಕ್ಕುಂ: **ಅಭಿಧಾವ,** ೧. ೧३. ೧)

**ಮಂಡನಾಯೋಗ** – ಆನೆಯ ಮೇಲೆ ಅಲಂಕಾರಕ್ಕಾಗಿ ಹಾಕುವ ಜೂಲು (ಮಣಿಮಯ ಮಂಡನಾಯೋಗದೊಳ್ ಒಡಂಬಟ್ಟ ಪಿಡಿಗಳುಮಂ: **ಆದಿಪು,** ೪. ೫೪ ವ)

**ಮಂಡನೀಭೂತ** – ಅಲಂಕೃತಗೊಂಡ (ವಿದ್ಯಾಮಂಡಪ ಮಂಡನೀಭೂತ ಜಗತ್ಯಾಗ್ರ ಸಿಂಹಾಸನದೊಳ್ .. .. ಅಳಂಕರಿಸಿರ್ಪುದುಂ: **ನೇಮಿನಾಪು,** ೬. ३೯ ವ)

**ಮಂಡಪ** – ದೇವಾಲಯದ ಸಭಾಮಂಟಪ (ಜಿನಮಂದಿರದ ಮುಂದಣ ಮಂಡಪದೊಳ್ ನಿಂದಿರ್ಪುದುಂ: **ಶಾಂತಿಪು,** ೯. ೮೭ ವ); ಓಲಗಶಾಲೆ (ಎಸೆವ ಪವಡಿಸುವ ಮನೆ ಚಿತ್ರಸಾಲೆ ಸುರತಾಲಯ ಮಹೀಗೃಹಂ ಆರೋಗಿಸುವ ಮನೆ ಮಂಡಪಂ ಗುಣಣಸಾಲೆ ಎಂಬಿನಿತುಮಂ ಗೃಹಾಂಗಂ ಕುಡುಗುಂ: **ಶಾಂತಿಪು,** ೬. ೧೧೬)

**ಮಂಡಲ** – ರಾಜ್ಯದ ಭಾಗ (ಇತ್ತುಂ ತೆತ್ತುಂ ಬಾಳ್ವ ಮಂಡಲಮಲ್ಲದೆ ಕೀಱೆಯುಂ ಮೀಱೆಯುಂ ನೆಗಟ್ವ ಮಂಡಲಮಿಲ್ಲ: **ಪಂಪಭಾ,** ೬. ೬೭ ವ); ಕುಷ್ಠ ರೋಗ (ಮಂಡಲಮಕ್ಕುಂ ಕುಷ್ಠಂ: **ಅಭಿಧಾವ,** ೧. ೧೨. ३೬); ಗುಂಪು (ಆಗಳವರ ಮಸಕಮಂ ಕಂಡಟು ಭಯಂಗೊಂಡು ಖಚರಮಂಡಲಂ ಪ್ರಭಾಮಂಡಲಂಗೆ ಕನ್ನೆ ಕೈಸಾರ್ದಳೆಂದು ಪೆಱಸಾರ್ದು ನೋಡುತಿರ್ಪುದುಂ: **ಪಂಪರಾ,** ೫. ೭೫ ವ)

**ಮಂಡಲಂಗೊಳ್ಳು** – ಸುರುಳಿಯಾಗಿ ಸುತ್ತಿಕೊ, ಸುತ್ತುಹಾಕು (ಪೆರ್ಬಾವಿನಂತೆ ಮಂಡಲಂಗೊಳ್ಳುತ್ತುಂ ಜಾವದ ಕಾಪಿನವರಂತೆ ಏಱುತ್ತುಂ ಜಂಘಾಮಿಲ್ಲದನಂತೆ ಕುಳ್ಳಿರುತ್ತುಂ: **ಧರ್ಮಾಮೃ,** ೧, ೧೨೪ ವ)

**ಮಂಡಲಾಗ್ರ** – ತುದಿಯಲ್ಲಿ ಬಾಗಿದ ಕತ್ತಿ, ಅಡಾಯುಧ (ಸುತಾರೆಯಂ ಅಂಜಲಂಜಲ್ ಎಂದು ಮಂಡಲಾಗ್ರಮಂಡಿತ ದೋರ್ದಂಡರೆಂ ಆಗಿ ಪೋಗಿ ಪಗೆವನೊಳ್ ತಡೆಯದೆ ತಾಗುವ ಎಮ್ಮ ರಭಸಮಂ ಕೇಳ್ದು: **ಶಾಂತಿಪು,** ೬. ३३ ವ); **ಗದಾಯು**ದ್ಧದಲ್ಲಿನ ಒಂದು ವರಸೆ (ಆಲೀಢ ಪ್ರತ್ಯಾಲೀಢ ಸಮಪಾದ ವೈಷ್ಣವ ಮಂಡಲಾಗ್ರಮುಮೆಂಬ ಪಂಚವಿಧ ಸ್ಥಾನಂಗಳೊಳಂ .. .. ನಿಂದು: **ಗದಾಯು,** ೮. ೧ ವ)

**ಮಂಡಲಾಧೀಶ** – ಮಂಡಲದ ಒಡೆಯ, ರಾಜ (ಸೇನಾಶಕ್ತಿಯಿಂದೋಲಗಿಸುವ ನೃಪರಿಂ ಓಲಗಿಸುವ ನೃಪರಿಂ ಮಂಡಲಾಧೀಶರಿಂ ದೋರ್ಬಲವದ್ದಂಡೇಶರಿಂದುರ್ಬಿಸುವ ಪೆಸರ ಸಾಮಂತರಿಂ: **ಕುಸುಮಾಕಾ,** ३. ೨೨)

**ಮಂಡಲಿ** – ಗುಂಪು (ಮರೆವಿಂಡು ಬೆಕ್ಕು ಮುಂಗುರಿ ಮುಸಲವ್ರಜಂ ಕರಡಿ ಮಂಡಲಿ: **ಗಿರಿಜಾಕ,** ೧. ೭३)

**ಮಂಡವ** – ಬಳ್ಳಿ ಹಬ್ಬಿಸಲು ಮಾಡಿದ ಚಪ್ಪರ (ಬಳಸಿದ ಬಳ್ಳಿಮಲ್ಲಿಗೆಯ ಮಂಡಪದೊಳ್ ಸುಟಿದಾಡಿ ಮತ್ತೆಯುಂ ಕಳೆಯಲಿನಿತ್ತುಮಾಜಿದವಳುರ್ಬಿದ ತನ್ನಯ ಮೆಯ್ಯ ಬೆಂಕೆಯಂ: **ಕಬ್ಬಿಗಕಾ,** ೨೪೭)

**ಮಂಡವಿ** – ಮಂಟಪ (ಮಡಲ್ಗೊಂಡ ಮಲ್ಲಿಗೆಯ ಮಂಡವಿಗಳೊಳಂ ಸಂಪಗೆಯ ಜೊಂಪದ ಚಂಪೆಯದೊಳಂ.. ..ಬಿಟ್ಟ ಬೀಡು: **ಕಬ್ಬಿಗಕಾ,** ೧೮೪ ವ)

**ಮಂಡವಿಗೆ** – [ಮಂಟಪಿಕಾ] ಸಣ್ಣ ಮಂಟಪ, ವಿತಾನ (ಚಿತ್ತಜನೃಪಂಗೆ ಚೈತ್ರಂ ಮುತ್ತಿನ ಮಂಡವಿಗೆಯಂ ವಿಚಿತ್ರದೆ ಸಮೆದಂತೆತ್ತಿದನೆನೆ ಮಿಗೆ ತಳ್ತದಿರ್ಮುತ್ತೆ ಮುಗುಳ್ತೆಸೆಯುತ್ತಿರ್ದುದು ಅತ್ತೊಂದೆಡೆಯೊಳ್: **ಶಾಂತೀಶ್ವಪು,** ೧೦. ೯೭)

**ಮಂಡಳ** – ಸೂರ್ಯನ ಸುತ್ತಲಿನ ಪರಿವೇಷ (ಕಿರಣಮುಮಂ ಮಂಡಳಮಂ ಖರಕರನಂ .. .. ಪೊಗಟಿಲ್ದೊಡೆ ಎಮಗಮೀಗುಮೆ ಬರಮಂ: **ಸಮಯಪ,** ೯. ೧೯); ಬಿಂಬ (ಬಿಂಬಂ ವಳಯಂ ಮಂಡಳಂ ಎಂಬಿವಭಿನ್ನಾರ್ಥರ್ಥಂ: **ಅಭಿಧಾವ,** ೧. ೧. ೭೦)

**ಮಂಡಳಿಕ** – ಸಾಮಂತ (ನಕುಳನುಂ ತೆಂಕಣ ದೆಸೆಯ ಮಲೆಪರಂ ಮಂಡಳಿಕರುಮಂ ಅಸಿಯರಾಗೆ ಕವರ್ದುಕೊಂಡು ಲಂಕೆಯ ಮೇಗೆ ನಡೆದು: **ಪಂಪಭಾ,** ೬. ३೨ ವ)

**ಮಂಡಳಿಗೊಳ್** – ಗುಂಪುಗೂಡು (ಮಂಡಳಿಗೊಂಡು ಸಿಂಪಿಸುವ ಕುಂಕುಮವಾರಿಯ ಚೆಂಚಗೆಂಚು ಕೈಗೊಂಡು ವಿಲಾಸಿನಿಯರ್ಕಳ ದೇಸೆ: **ಅನಂತಪು,** ೭. ३೦)

**ಮಂಡಳಿಸು** – ವೃತ್ತಾಕಾರವಾಗಿ ತಿರುಗು (ತುಱುಗಿರ್ದ ಬಲ್ಮಿಡಿಯ ತೂಗುಂಗೊಂಬಿನೊಳ್ಪಾಯ್ದು ಮಂಡಳಿಸುತ್ತಿರ್ಪ ಶುಕಾಳಿ: **ಆದಿಪು,** ೧೧. ೯೬)

**ಮಂಡೂಕ** – ಕಪ್ಪೆ (ಮಂಡೂಕಬಹಳಮಂ ಖರ ದಂಡೋತ್ಪಲ ಕುಮುದರಾಜಿರಂಜಿತಮಂ ಕಾ ರಂಡಕಳಹಂಸಷಟ್ಪದಮಂಡಿತಮಂ ಕಂಡುದೊಂದು ಕೊಳನಂ ಸರ್ಪಂ: **ಪಂಚತಂತ್ರ,** ३೮३)

**ಮಂಡೆ** – ತಲೆ (ಉತ್ಸುಕತನದಿಂ ಪೆಟ್ಟುವೆರ್ಚಿ ಕಡುವೆಸನಂ ಮಾಟ್ಟಿ ಸೊಸೆ ಮಾವನ ಮಂಡೆಯಂ ಬೋಟೆಸಿದಳ್ ಎಂಬಂತೆ: **ಧರ್ಮಾಮೃ**. ೬. ೩೪ ವ); ತಲೆಬುರುಡೆ (ಬೆನ್ನನೇಱೆ ಮಂಡೆಯ ಚೆಂಡಿಕೆಯಂ ಕರ್ಚಿ ಸೆಳೆದ ಸೋಗೆಯ ಮಱೆಯ ಮುದ್ದುತನಮಂ .. .. ಮುಂಡಾಡುತುಂ: **ನೇಮಿನಾಪು**, ೧. ೯೨ ವ)

**ಮಂತ** – [ಮಂಥ] ಕಡೆಗೋಲು (ಥಕಾರಕ್ಕೆ ತಕಾರಂ: ಮಂಥಂ–ಮಂತಂ; ಮಂತಮೆಂದು ಕಡೆಗೋಲುಂ ಮೊಸರ ಮೇಲಣ ನಿಡಿಯುಮಕ್ಕುಂ: **ಶಬ್ದಮದ**, ೨೬೯ ಪ್ರ)

**ಮಂತಣ** – [ಮಂತ್ರಣ] ಆಲೋಚನೆ (ಅರಿನೃಪರುತ್ಸವಮಂ ಕೇಳ್ದಿರೆಯುಂ ಸೆಂಡಾಡುತ್ತಿರೆಯುಂ ಆನೆಯಂ ಏಱುತ್ತಿರೆಯುಂ ಮಂತಣದೊಳ್ ಕುಳ್ಳಿರೆಯುಂ ಬಿನ್ನವಿಸಲಾಗದು ಎಂತುಂ ಭೃತ್ಯಂ: **ಪಂಚತಂತ್ರ**, ೮೪); ಗುಂಪು (ಮಾಲೆಗಾರ್ತಿಯರ ಮಂತಣಮೊಪ್ಪುಗುಂ ಅಲ್ಲಿ ಸಂತತಂ: **ರಾಜಶೇವಿ**, ೨. ೧೦೪)

**ಮಂತಣದ ಸಾಲೆ** – ಸಮಾಲೋಚನ ಮಂದಿರ (ಚಿತ್ರಶಾಲೆಯೊಳಿನಿಸೊರ್ಮೆ ಮಂತಣದ ಸಾಲೆಯೊಳಿಂದಿರದೊರ್ಮೆ .. .. ಪೊೞ್ತುಗಳೆವಂ ಕವಿತಾಕಳಿಕಾಮ್ರಕೋಕಿಳಂ: **ಲೀಲಾವತಿ**, ೪. ೧೨– ೧೪)

**ಮಂತಣಮಿರ್** – ಸಮಾಲೋಚನೆ ಮಾಡು (ದುಶ್ಶಾಸನ ಕರ್ಣ ಶಕುನಿ ಸೈಂದವರೆಂಬ ದುಷ್ಟಚತುಷ್ಟಯದೊಳ್ ಮಂತಣಮಿರ್ದು: **ಪಂಪಭಾ**, ೬. ೬೭ ವ)

**ಮಂತಣಸೂಲ** – ಈಟಿ (ಜವನ ಮಂತಣಸೂಲದಂತೆ ನೆಗೆದ ಕೊಂತದ ಕೂರ್ಮೊನೆಯ ಕೋಲಾಟಕ್ಕೆ ತಾರಗೆವಟ್ಟೆಯೊಳ್ ನಡೆವ ಬಿಜ್ಜೋದರಿಯರ್ ಪುಗಲಱಿಯದೆ ಸಿಡಿಮಿಡಿಗೊಳುತ್ತಿರೆಯುಂ: **ಕಬ್ಬಿಗಕಾ**, **೨೨೪** ವ)

**ಮಂತಣಿ** – [ಮಂಥಣಿ] ಮೊಸರಿನ ಪಾತ್ರೆ (ಥಕಾರಕ್ಕೆ ತಕಾರಂ: ಮಂಥಣಿ–ಮಂತಣಿ: **ಶಬ್ದಮದ**, ೨೬೯ ಪ್ರ)

**ಮಂತು** – ಮಂತ್ರಿ (ಇತ್ವಕ್ಕುತ್ವಂ: ಗ್ರಂಥಿ–ಗಂಟು, ಸಂಧಿ–ಸಂದು, ಮಕ್ಷಿ–ಮಚ್ಚು, ಮಂತ್ರಿ–ಮಂತು: **ಶಬ್ದಮದ**, ೨೯೩ ಪ್ರ); ಕಡೆಗೋಲು (ಮಂಥಣಿ ಗರ್ಗರಿ ಕಡೆಗೋಲ್ ಮಂಥಾನ ಮಂತು ಅವಂತೆಲ್ಲಂ ಖಜಕಂ: **ಅಭಿಧಾವ**, ೧. ೧೦. ೩೧)

**ಮಂತ್ರ** – ಸಮಾಲೋಚನೆ (ಗಾಂಗೇಯನಂ ಏಗೆಯ್ದುಂ ಒಡಂಬಡಿಸಲಾಱದೆ ಸತ್ಯವತಿ ತಾನುಂ ಆತನುಂ ಆಲೋಚಿಸಿ ನಿಶ್ಚಿತಮಂತ್ರರಾಗಿ ಕೃಷ್ಣದ್ವೈಪಾಯನನಂ ನೆನೆದು: **ಪಂಪಭಾ**, ೧. ೮೫)

**ಮಂತ್ರಗುಪ್ತಿ** – ಸಮಾಲೋಚನೆ (ಆ ಮುನಿನಾಥಂ ತ್ರಿಗುಪ್ತಿಯೊಳ್ ನೆರೆದಂ ಈ ಮಹೀನಾಥಂ ಮಂತ್ರಗುಪ್ತಿಯೊಳ್ ನೆರೆದಂ: ಆದಿಪು, ೬. ೨೪ ವ)

**ಮಂತ್ರದೇವತೆ** – ಮಂತ್ರದ ಅಭಿಮಾನಿ ದೇವತೆ (ಮನಸಿಜ ಮಂತ್ರದೇವತೆಯರಂಗನೆಯರ್: **ಶಾಂತಿಪು**, ೮. ೧೯)

**ಮಂತ್ರಪದ** – ಮಂತ್ರಾಕ್ಷರ (ಮಂತ್ರಪದಕ್ಕೆ ಉರಗಂ ಸುಗಿವಂತೆವೊಲ್ ಅಗಿದು ಸುಗಿದು ತಲೆಗರೆದಿರ್ಪಂ: **ಪಂಪಭಾ**, ೭. ೪೩)

**ಮಂತ್ರಪೂತ** – ಮಂತ್ರದಿಂದ ಪಾವನಗೊಂಡ (ಮಂತ್ರಪೂತಾಂಗಮಂ ನೃಪನೆಯ್ದಿದಂ ಉದ್ಯಚ್ಛೃಂಗಂ ಆ ಶತಶೃಂಗಮಂ: **ಪಂಪಭಾ**, ೧. ೧೧೫)

**ಮಂತ್ರಮೂಲೋಹಿ ವಿಜಯಃ** – ಜಯಕ್ಕೆ ಮಂತ್ರಾಲೋಚನೆಯೇ ಮೂಲವಲ್ಲವೇ (ಚತುರಂಗಬಲಮದೇವುದೊ ಸನ್ಮಂತ್ರಮೆ ಸಾಲ್ಗುಂ ಪುಸಿಗುಮೆ ದೇವ ಮಂತ್ರಮೂಲೋಹಿ ವಿಜಯಃ ಎಂಬೀ ವಾಕ್ಯಂ: **ಪಂಚತಂತ್ರ**, ೨೮೪)

**ಮಂತ್ರವಾದ** – ಇಂದ್ರಜಾಲ (ಮಂತ್ರವಾದಂ ಮೊದಲಾಗೊಡೆಯ ಶಾಸ್ತ್ರಂಗಳೆಲ್ಲಮುಮಂ ಈ ಕೂಸನೋದಿಸಿದಾ: **ವಡ್ಡಾರಾ**, ಪು. ೨೩., ಸಾ. ೧೭)

**ಮಂತ್ರವಾದಿ** – ಐಂದ್ರಜಾಲಿಕ (ಕೊಟ್ಟಂ ಅರ್ಥಿಜನಕ್ಕಾ ದಿವಿಜೇಂದ್ರಂ ಬಳವಿಯ ಮಂತ್ರವಾದಿಯೆನೆ ಮಕುಟಬದ್ಧಸಮಾಜಂ: **ಶಾಂತಿಪು**, ೧೧. ೧೦)

**ಮಂತ್ರವಿದ** – ಮಂತ್ರವಾದಿ (ವಿದ್ವೇಷಕಾರಿಯಪ್ಪ ಪುಷ್ಪಮಾಲೆಯಂ ಮಂತ್ರವಿದರುಪದೇಶದಿಂ .. .. ಪರಿಚಾರಿಕೆಯರ ಕೈಯೊಳಟ್ಟುವುದುಂ: **ಶಾಂತಿಪು**, ೯. ೫೦ ವ)

**ಮಂತ್ರಶಕ್ತಿ** – ರಾಜನ ಶಕ್ತಿತ್ರಯಗಳಲ್ಲಿ ಒಂದು (ಹಿತರ್ ಅರ್ಥಶಾಸ್ತ್ರಕುಶಲರ್ ಚತುರುಪಧಾವಿಶುದ್ಧರೆನಿಪ ವರಸಚಿವರೊಳ್ ಅನ್ವಿತಮಾಗೆ ಮಾಟ್ಟಿ ಕಾರ್ಯಂ ಪತಿಗೆಂದುಂ ಮಂತ್ರಶಕ್ತಿ ಮನುಮುನಿಮತದಿಂ: **ಪಂಚತಂತ್ರ**, ೨೮೬) ನೋಡಿ, **'ಶಕ್ತಿತ್ರಯ'**

**ಮಂತ್ರಶಾಲೆ** – ಸಮಾಲೋಚನೆಯ ಭವನ (ವಾಲಿ ಮಂತ್ರಶಾಲೆಯಂ ಸುಗ್ರೀವಂಬೆರಸು ಪೊಕ್ಕು ಮಂತ್ರಿಮಂಡಲಮುಂ ಆಪ್ತಪರಿಜನಮುಮಂ ಬರಿಸಿ: **ಪಂಪರಾ**, ೧೦. ೧೬೯ ವ)

**ಮಂತ್ರಸಿದ್ಧ** – ಮಂತ್ರಶಕ್ತಿಯನ್ನು ಕೈವಶಮಾಡಿಕೊಂಡವನು (ಮಹನೀಯಂ ಮಂತ್ರಸಿದ್ಧಂ ಬಿಡೆ ಪಿಡಿದ ಮಹಾಮುದ್ರೆಯಂ ಕಂಡು: **ಪಾರ್ಶ್ವನಾಪು**, ೪. ೧೪೮)

**ಮಂತ್ರಾಕ್ಷರ** – ಮಂತ್ರದಲ್ಲಿನ ಅಕ್ಷರ ಅಥವಾ ವರ್ಣ (ಎನಗಂ ಸಮ್ಮೋಹನಮಾದುದಕ್ಕುಂ ಅಂದಣ್ಣನ ಸೂನೃತವಚನವೆಂಬ ಮಂತ್ರಾಕ್ಷರದಿಂ: **ಗದಾಯು**, ೧. ೬೨)

**ಮಂತ್ರಾವಾಸ** – ಮಂತ್ರಶಾಲೆ (ಮಂತ್ರಾವಾಸದೊಳ್ ಮಂತ್ರನಿಶ್ಚಿತನಾಗಿ ಈಗಡೆ ಕಾದಿದಲ್ಲದೆ ಇಳೆಯಂ ನೀನೆಂತುಮಿತ್ತಪಯ್: **ಪಂಪಭಾ**, ೮. ೮೭)

**ಮಂತ್ರಿಮಂಡಲ** – ಸಚಿವ ಸಮಿತಿ (ವಾಲಿ ಮಂತ್ರಶಾಲೆಯಂ ಸುಗ್ರೀವಂಬೆರಸು ಪೊಕ್ಕು ಮಂತ್ರಿಮಂಡಲಮುಂ ಆಪ್ತಪರಿಜನಮುಮಂ ಬರಿಸಿ: **ಪಂಪರಾ**, ೧೦. ೧೬೯ ವ)

**ಮಂತ್ರಿಗುಣ** – ಮಂತ್ರಿಗೆ ಇರಬೇಕಾದ ಗುಣಗಳು (ಗೂಢಲಕ್ಷಣ ಭಿನ್ನಪ್ರತಿಸಂಧಾನ ಸಂಧಿದೂಷಣ ಪರಚಿತ್ತಾಪರೀಕ್ಷಾಲಕ್ಷಣಂ ಎಂಬ ಮಂತ್ರಿಗುಣಗಳಿಂ: **ಪಂಚತಂತ್ರ**, ೭೮ ವ)

**ಮಂತ್ರಿಸು** – ವಿಷ ಇಳಿಯಲು ಮಂತ್ರ ಹಾಕು (ಕುಮಾರನಂ ಗಾರುಡಿಗರ್ ಬಂದು ಕಂಡು ತಮ್ಮ ತಮ್ಮಱಿವಂದದಿಂ ಮಂತ್ರಿಸಿದೊಡೆಂತುಂ ನಿರ್ವಿಷಮಾಗದಿರ್ಪುದುಮರಸಂ ಕಂಡು: **ಪಂಚತಂತ್ರ**, ೧೮೫ ವ)

**ಮಂಥಣಿ** – ಕಡೆಗೋಲು (ಮಂಥಣಿ ಗರ್ಗರಿ ಕಡೆಗೋಲ್: **ಅಭಿಧಾವ**, ೧. ೧೦. ೩೧)

**ಮಂಥನ** – ಕಡೆಯುವುದು (ಮದಗಜ ಬೃಂಹಿತಧ್ವನಿ ತುರಂಗಮ ಹೇಷಿತಘೋಷಂ ಆದಂ ಒರ್ಮೊದಲೆ ಪಯೋಧಿಮಂಥನ ಮಹಾರವಮಂ ಗೆಲೆ: **ಪಂಪಭಾ**, ೩. ೩೮)

**ಮಂಥರ** – ಮಂದವಾದ ಚಲನೆಯುಳ್ಳ (ಚಿರವಿಕ್ಷೋಭಿತ ಸಿಂಧುತೋಯಶಿಶಿರಂ ತತ್ತೀರನಾನಾಲತೋತ್ಕರ ಸಂಘಟ್ಟನಮಂಥರಂ .. . .ವಿಜಯಾರ್ಧೋಪಾಂತ ಮಂದಾನಿಳಂ: **ಆದಿಪು**, ೧೩. ೯)

**ಮಂಥರಗತಿ** – ನಿಧಾನವಾದ ನಡಿಗೆ (ಮಂಥರಗತಿ ನಿಜಮಂದಿರಕ್ಕೆ ವಮದಂ ಮುಕುಂದಂ ಅಸವಸದಿಂದಂ: **ಆಚವರ್ಧ**, ೫. ೧೩)

**ಮಂಥಾಚಳ** – ಹಾಲುಗಡಲನ್ನು ಕಡೆಯಲು ಕಡೆಗೋಲಾಗಿ ಬಳಸಿದ ಬೆಟ್ಟ, ಮಂದರ ಪರ್ವತ (ಅಸುರರಂ ಉಱೆ ಸೀಳ್ದಿಕ್ಕಿ ಸಂತೋಷಮಂ ಧರುಣಿಗೀವುತ್ತಂತೆ ಮಂಥಾಚಳಪವಿಯೆನಿಸುತ್ತೊಪ್ಪಿದಂ: **ತ್ರಿಷಷ್ಟಿಪು**, ೨೪. ೨೨೭)

**ಮಂಥಾನ** – ಕಡೆಗೋಲು (ಮಂಥಣಿ ಗರ್ಗರಿ ಕಡೆಗೋಲ್ ಮಂಥಾನ ಮಂತು ಅವಂತೆಲ್ಲಂ ಖಜಕಂ: **ಅಭಿಧಾವ**, ೧. ೧೦. ೩೧)

**ಮಂದ** – ಶನಿಗ್ರಹ (ಸೌರಂ ಸೂರ್ಯನಂ ಅರ್ಚಿಪೊಡೆ .. .. ಮಂದ ಫಣಿಗಳಂ ಆರಾಧಿಪನೊಂದು ಮಣೆಗೆ ತಂದನಿಬರುಮಂ: **ಸಮಯಪ**, ೮. ೧೬೩)

**ಮಂದತೆ** – ನಿಧಾನ ಗತಿ (ಅನಿಲಂ ತೀಡಿದುದು ನಡೆ ಮಂದತೆಯಿಂದಂ: **ಕುಸುಮಾಕಾ**, ೬. ೫೫)

**ಮಂದಪವನ** – ಮೆಲುಗಾಳಿ (ಎಸಗಿತ್ತಂದು ಅನುಕೂಲ ಮಂದಪವನಂ: **ಪಂಪಭಾ**, ೯. ೯೬)

**ಮಂದಮನ** – ನಿರುತ್ಸಾಹ (ಚಂಪಕಗಂಧಿ ಮಂದಮನದೊಳ್ ಕಟಿಪಲ್ ಬರೆ ಮಾಣ್ದು ಮಾರುತೋತ್ಕಂಪಿತ ಚೂತನಂದದೊಳ್ ಇನ್ನಿರು ನೀನೆನೆ: **ಶಾಂತಿಪು**, ೮. ೯೩)

**ಮಂದಯಿಸು** – ಸಾಂದ್ರಗೊಳ್ಳು (ಪತ್ತಿತ್ತೆತ್ತಮಾಕಾಶದೊಳ್ ಆನಿಲಪಥಂ ಧಾರಿಣೀಚಕ್ರದೊಳ್ ಕಾಳಸೆಗೊಂಡತ್ತು ಎಂಬಿನಂ ಮಂದಯಿಸಿ: **ಆದಿಪು**, ೧೪. ೯೫)

**ಮಂದರ** – ಮಂದರವೆಂಬ ಪರ್ವತ (ಎಂದು ಮಂದರಕ್ಷುಭಿತಪಯೋಧಿನಾದದಿಂ ಗಜಱೆ ಗರ್ಜಿಸಿ ನುಡಿದ ದವನಕನಗಭೀರಾಳಾಪಂಗಳಂ ಸಂಜೀವಕಂ ಕೇಳ್ದು: **ಪಂಚತಂತ್ರ**, ೧೦೩ ವ); ಪೂಜಾಮಂಟಪ (ಜಿನಮಂದಿರದ ಮುಂದೆ ಮಂದರಮಂ ಮಾಡಿಸಿ ಪಂಚರತ್ನ ಸಂಚಯದಿಂ ಅದಕ್ಕೆ .. .. ಬಲವರಿಸಿ: **ನೇಮಿನಾಪು**, ೪. ೧೪ ವ); [ಜೈನ] ತೀರ್ಥಂಕರರ ಪಂಚಕಲ್ಯಾಣಗಳು ನಡೆಯುವ ಸ್ಥಳ, ಮೇರುಪರ್ವತ ಜಗತೀವಿಶ್ರುತ ಮಂದರಕ್ಕೆ ನಡೆಯಲ್ ಪೇೞ್ದು: **ಪುಷ್ಪದಂಪು**, ೧೦. ೨೯)

**ಮಂದರಕ್ಷುಭಿತ** – ಮಂದರಪರ್ವತದಿಂದ ಕಡೆಯಲ್ಪಟ್ಟ (ಬೇಗದೊಳಾ ಕಟಕಂಗಳೆಯ್ದೆ ಕೆಯ್ಕೊಂಡುವು ಮಂದರಕ್ಷುಭಿತ ದುಗ್ಧಪಯೋಧಿ ಗಂಭೀರನಾದಮಂ; **ಪಂಪಭಾ**, ೧೦. ೪೯)

**ಮಂದರಧರ** – ವಿಷ್ಣು (ಕೊಂದೆನ್ನ ಮಗನಂ ಇಂ ಭಯದಿಂದಂ ರಸೆವೊಕ್ಕುಂ ಅಜನ ಗುಂಡಿಗೆವೊಕ್ಕುಂ ಮಂದರಧರನ ಈ ಪೊರ್ಕುಟಿ ಪೊಂದಾವರೆವೊಕ್ಕು ಮೇಣವಂ ಬರ್ದುಕುವನೇ: **ಪಂಪಭಾ**, ೧೧. ೧೨೧)

**ಮಂದರಯಾನ** – ಮಂದಗತಿ (ಮಂದರಯಾನಮೊಡರ್ಚಿತು ಆನನಂ ಮಿಸುಗೆ ಬೆಳೆರ್ತು ಪೂರ್ಣಶಶಿಕಾಂತಿಯನಾಂತುದು ಗರ್ಭದೇಟ್ಗೆಯೊಳ್: **ಪಂಚತಂತ್ರ**, ೨೫೩)

**ಮಂದರಾದ್ರಿ** – ಮಂದರಪರ್ವತ (ಕೊಡಂಬೆರಸು ಆಳಿಗಟ್ಟಿ ಭೋರ್ ಭೋರೆನೆ ಪೋಪ ಬರ್ಪ ಅಮರಸಂಹತಿ ಪೋಲ್ತುದು ಮಂದರಾದ್ರಿಗಂ ಕ್ಷೀರಪಯೋಧಿಗಂ ಹರಿಯ ಕಟ್ಟಿದ ಜಂಗಮಸೇತುಬಂಧಮಂ: **ಶಾಂತಿಪು**, ೧೦. ೪೫)

**ಮಂದಸಿ** – ಪೆಟ್ಟಿಗೆ (ಮಂದಸಿನೊಳಿರ್ದ ತಳಾರನ ಸಾಕ್ಷಿ ನುಡಿಯಿಸಿದೊಡಂ ಮತ್ತಮಿಲ್ಲೆನೆ: **ಚಾವುಂಪು**, ೨೧೭, ಸಾ. ೨೫)

**ಮಂದಸಿಕೆ** – ಆಲಸ್ಯ, ಅನಿಶ್ಚಿತತೆ (ಸೋಲಗೆಲ್ಲಮೆಂಬುದನಾರ್ ಬಲ್ಲರೆಂದು .. .. ಮಂದಸಿಕೆಯಿ ನುಡಿಯೆಯುಂ: **ವರ್ಧಮಾಪು**, ೪. ೩೪ ವ)

**ಮಂದಸು** – [ಮಂಜೂಷ] ಪೆಟ್ಟಿಗೆ, ಭರಣಿ (ಕುಮಾರನಂ ಆಗಳೆ ಕೊಂಡುಬಂದವರ್ ಸೊಗಯಿಸುತಿಇರ್ಪ ಮಂದಸಿನೊಳಿಕ್ಕಿ: **ಕರ್ಣನೇಮಿ**, ೩. ೪೦)

**ಮಂದಹಾಸ** – ಮಂದಸ್ಮಿತ, ಮುಗುಳುನಗೆ (ಲಲಿತಾನನಾಂಬುಜವಲರ್ದಸೆದುದು ಮಂದಹಾಸಂ ಮುರಹರನಾ: **ಜಗನ್ನಾವಿ**, ೩. ೩೨)

**ಮಂದಾಕಿನಿ** – ಗಂಗಾನದಿ (ಮಂದಾಕಿನೀ ಪುಳಿನಾಯಮಾನಪ್ರಚ್ಛದಾಚ್ಛಾದಿತಮಪ್ಪ ಶಯ್ಯಾತಳದೊಳ್: **ಪಂಚತಂತ್ರ**, ೧೯೫ ವ)

**ಮಂದಾಕಿನೀನಂದನ** – ಭೀಷ್ಮ (ಎಂದು ನುಡಿದ ಮಂದಾಕಿನೀನಂದನನ ಮತಿಂಗೆ ಯಮನಂದನಂ ಆನಂದಮನಸ್ಕನಾಗಿ: **ಪಂಚತಂತ್ರ**, ೩೩೧ ವ)

**ಮಂದಾರ** – ಒಂದು ಸುವಾಸನೆಯ ಹೂ (ನಮೇರು ಮಂದಾರ ಸಂತಾನಕ ಪಾರಿಜಾತಗಳೆಬ ಪೂಗಳಂ ಸುರಿಯುತ್ತುಂ: **ವಡ್ಡಾರಾ**, ಪು. ೮೪, ಸಾ. ೮); ಪಾರಿಜಾತ (ಕುಂದ ಮುಚುಕುಂದ ಮಂದಾರ ಇಂದೀವರ ನಂದ್ಯಾವರ್ತ ತ್ರಿಸಂಧ್ಯಾ ಬಂಧೂಕ ಕದಂಬ ಕನಕ ಕರವೀರ ಕರ್ಣಿಕಾರ ಕುಮುದವನವಕುಳ ಕುರವಕ ಕಮಲ ತಿಲಕ ಚಂಪಕ ಪಾಟಲಿ ಪಾರಿಜಾತ ಜಾತಿ ಪುನ್ನಾಗ ಮಲ್ಲಿಕಾದಿ ಅನೇಕ ಸುರಭಿಕುಸುಮಂಗಳಂ: **ಪಂಚತಂತ್ರ**, ೧೯೦ ವ)

**ಮಂದಿರ** – ಮನೆ, ಆವಾಸಸ್ಥಾನ (ಕಂಸಮಹಾಮಂದಿರಮಧ್ಯದ ಮಣಿಗೃಹದಿಂದಗಲದೆ ನಲಿಯುತ್ತಿರ್ದರಾ ದಂಪತಿಗಳ್: **ಜಗನ್ನಾವಿ**, ೨. ೫೨)

**ಮಂದೀಭೂತ** – ಕ್ಷೀಣವಾದ (ತನಯನಾನನಂ ಅವನೀವಲ್ಲಭಂ ಮಂದೀಭೂತಮೋಹರಸಾನುಬಂಧಿಗಳಪ್ಪ ದೃಷ್ಟಿಗಳಿಂ ನೋಡಿ: **ಚಂದ್ರಪ್ರಪು**, ೪. ೧೯ ವ)

**ಮಂದುರ** – ಕುದುರೆ ಲಾಯ (ಎಳಸಿದುವು ತುಹಿನಕರಮಂದಳಮಂ ತೀವ್ರಾತಾಪಕ್ಕೆ ಸುಗಿದಗಿದ ಹಯಾವಳಿ ಸಂದೆಯಮೇನೆನಿಪುವು ಪಳುಕಿನ ಮಂದುರದೊಳಿರ್ದ ಜಾತ್ಯಶ್ವಂಗಳ್: **ಮಲ್ಲಿನಾಪು**, ೨. ೫೩)

**ಮಂದುರಿಗ** – ಲಾಯದ ಅಧಿಕಾರಿ (ಮುರರಿಪು ರಾಮರ್ ಸುಟೆದರ್ ಕರಿಶಿಕ್ಷಕರ ಅಶ್ವಶಿಕ್ಷಕರ ಜೋದರ ಮಲ್ಲರ ಮಾವಂತರ ಮಂದುರಿಗರ ನೇಗಟ್ಬಾವಾಸವಾರಿಗಳ ಕೇರಿಗಳೊಳ್: **ಜಗನ್ನಾವಿ**, ೬. ೨೬)

**ಮಂದೇಹರ** – ಕತ್ತಲೆ (ಮಂದೇಹರನಂ ಅಸಿಯಿಂದೆ ತಱೆಯಲ್ ಅಂಬರವಿರ್ದಾವರಿಸಿದ ಅರುಣಾಂಬುರುಚಿಯೆನೆ ಪಿರಿದೆಸೆದುದು ಮೂಡದೆಸೆಯ ಸಂಧ್ಯಾರಾಗಂ: **ತ್ರಿಷಷ್ಟಿಪು**, ೨೪. ೨೨೫)

**ಮಂದೈಸು** – ದಟ್ಟವಾಗು (ದೆಸೆಯಂ ನುಂಗಿ ದಿನೇಶನಂ ನೊಣೆದು ರೋದೋಭಾಗಮಂ ಪೀರ್ದು ಸಂದಿಸಿ ಮಂದೈಸಿ ಧನುರ್ಬಲಂಗಳಿಸೆ: **ಪಂಪರಾ**, ೧೩. ೪೫)

**ಮಂದ್ರ** – ಗಂಭೀರವಾದ [ಧ್ವನಿ] (ಸರಸ ಸಾರಸೋತ್ತಾರವಂಶಸ್ವರದೊಳ್ ಉಪಾಶ್ರಯಂಬಡೆದು ಪಾಡುವ ಪೆಣ್ದುಂಬಿಯ ಮಂದ್ರನಾದದಿಂ ಶ್ರುತಿಸುಭಗಮಾಗೆ: **ಮಲ್ಲಿನಾಪು**, ೩. ೮೨ ವ)

**ಮಕರ** – ಮೊಸಳೆ, ಮೀನು (ನನೆಯಂಬಂ ಮಿಗೆ ಕಣ್ಮಲರ್ ಮಕರಮಂ ಕ್ರೋಡಧ್ವಜಂ ಪೋಲೆ ಕರ್ಬಿನ ಬಿಲ್ಲಂ ಗೆಲೆ ಪುರ್ಬು.. .. ನೂತನಕಂದರ್ಪಂ: **ಗದಾಯು,** ೧. ೬);

**ಮಕರಂದ** – ಹೂವಿನ ಬಂಡು (ನಂದನನಾ ಪ್ರಸವಪ್ರಭೂತಮಕರಂದಾಮೋದಮಂ ತಂದು: **ಸುಕುಮಾಚ,** ೪. ೪೫)

**ಮಕರಕುಂಡಲ** – ಕಿವಿಯ ಕಡಕು (ಮಕರಕುಂಡಲ ಮಣಿಪ್ರಭಾ ರಕ್ತಗಂಡಮಂಡಲನುಂ .. .. ಮಹಾನುಭಾವಂ: **ಕಾದಂಬ,** ೫. ೧೮೩ ವ)

**ಮಕರಕೇತು** – ಮೀನಧ್ವಜ, ಮನ್ಮಥ (ಸಕಲ ಜಗಜ್ಜನಂ ಮಕರಕೇತು ಗೆಲೆ ಮದನನೃಪನ ನಾಟಕ ವಿಜಯಾನಕರವದಂತೆಸೆಗುಂ ಕ್ಷೀಬಕೀರ ಮತ್ತಾಳಿ ಪರಭೃತಪ್ರಭವರಂ: **ಅಜಿತಪು,** ೬. ೧೦)

**ಮಕರತೋರಣ** – ಮೀನಿನ ಆಕಾರದ ತೋರಣ (ರಂಜಿಕುಂ ಮಕರತೋರಣಮೀಕ್ಷಣ ಸೌಖ್ಯಕಾರಣಂ: **ಪುಷ್ಪದಂಪು,** ೨. ೯೧)

**ಮಕರಧ್ವಜ** – ಮಕರಕೇತು (ಅಂತಾ ಬಾಲೆ ಕಾಯ್ದು ಪುಡಿಯೊಳಗೆ ಬಿಸುಟ್ಟ ಎಳವಾಳೆಯಂತೆ ಸುರತ ಮಕರಧ್ವಜನೊಳಾದ ಬೇಟದೊಳ್ ಮಮ್ಮಲ ಮಱುಗುತಿರ್ದಳ್: **ಪಂಪಭಾ,** ೫. ೧೦ ವ)

**ಮಕರಪತ್ರ** – ದೇಹದ ಮೇಲೆ ಬರದುಕೊಳ್ಳುವ ಅಲಂಕಾರ ಚಿತ್ರ (ಸುರುಚಿರ ಮೌಕ್ತಿಕ ಹಾರಾಂದೋಳ ಮಕರಪತ್ರಾಂಕಿತ ಪೀನಪಯೋಧರಮುಂ: **ತ್ರಿಷಷ್ಟಿಪು,** ೧೮. ೫೪ ವ)

**ಮಕರವ್ಯೂಹ** – ಮೊಸಳೆಯಾಕಾರದ ಸೈನ್ಯವ್ಯೂಹ (ಮಕರವ್ಯೂಹಮನೊಡ್ಡಿ ನಿಂದನಸುರಂ .. .. ತದ್ವ್ಯೂಹಮಂ ನೋಡಿ ಸಮ್ಮುಖದೊಳ್ತಾಂ ಮೊನೆಯಾಗೆ ಭೆದಿಸುವ ಸೂಚೀವ್ಯೂಹದೊಳ್ ದಾನವಾಂತಕನಾಂತಂ: **ಅನಂತಪು,** ೧೩. ೯೪)

**ಮಕರಾಂಕಚಾಪ** – ಕಾಮನ ಬಿಲ್ಲು (ಘನ ಮಕರಾಂಕಚಾಪಮೆನೆ ರಂಜಿಪ ಪುರ್ಬಿನ ಕನ್ನೆ ಮೀನಲೋಚನೆ: **ತ್ರಿಷಷ್ಟಿಪು,** ೨೪. ೧೯೯)

**ಮಕರಿಕಾಪತ್ರ** – ಅಲಂಕಾರಕ್ಕಾಗಿ ದೇಹದ ಮೇಲೆ ಬರೆದುಕೊಳ್ಳುವ ಚಿತ್ರ (ಅಲಕಂ ಮಂದಾರಶೂನ್ಯಂ ಕದಪು ಮಕರಿಕಾಪತ್ರಶೂನ್ಯಂ ಲಲಾಟಂ ತಿಲಕಾಳಂಕಾರಶೂನ್ಯಂ: **ಆದಿಪು,** ೩. ೧೩)

**ಮಕರಿಕೆ** – ಮಕರಿಕಾಪತ್ರ (ಕದಪಿದು ಪೊದಲ್ದ ಮಕರಿಕೆಯಂ ತಾಳದೆ ಕಱೆವೆರಸದ ಶಸಿಬಿಂಬದ ಪೋಲ್ಕೆಯನಾಳ್ವುದು ಏಕೆ ಕಮಲದಳಾಕ್ಷೀ: **ರಾಜಶೇವಿ,** ೩. ೬೦)

**ಮಕರೇಶ** – ಮೊಸಳೆಯನ್ನು ವಾಹನವಾಗಿ ಪಡೆದವನು, ವರುಣ (ಮಕರೇಶ ಚಾರುಚಾಮರಮರುತಂ .. .. ಇದೆಂದು ವಿತರ್ಕಿಪನ್ನಮಸ್ಫುರಿತ ದವಾನಳಂ ಸುಟಿದುದೊಯ್ಯನೆ ಪಶ್ಚಿಮದಿಗ್ಭವಾನಿಳಂ: **ಜಗನ್ನಾವಿ,** ೪. ೨)

**ಮಕುಟ** – ಕಿರೀಟ (ಆತಂ ನಿಜಭುಜವಿಜಯಖ್ಯಾತಿಯನಾಳ್ದ ಆಳ್ದಂ ಅಧಿಕಬಲಂ ಅವನಿಪತಿವ್ರಾತಮಣಿಮಕುಟ ಕಿರಣದ್ಯೋತಿತಪಾದಂ: **ಪಂಪಭಾ,** ೧. ೧೬)

**ಮಕುಟಬದ್ಧ** – ಕಿರೀಟ ಧರಿಸಿದವನು, ರಾಜ (ಮಹಾಮಂಡಳಿಕಪ್ರಮುಖಮಕುಟಬದ್ಧರ್ ಮಾಟ್ಟಿ ಚತುರ್ಮುಖಮುಂ: **ಆದಿಪು,** ೧೫. ೧೩ ವ)

**ಮಕುಟಭಂಗ** – ಕಿರೀಟವನ್ನು ಒಡೆಯುವುದು (ಮಕುಟಭಂಗ ಪ್ರತಿಜ್ಞೆಯಂ ತೀರ್ಚಲೆಂದು ಕುರುಕುಲಾಂತಕನಂ ಮಾಮಸಕಂ ಮಸಗಿ: **ಗದಾಯು,** ೮. ೩೭ ವ)

**ಮಕುಟಮಣಿ** – ಕಿರೀಟದಲ್ಲಿ ಸೇರಿಸಿದ ರತ್ನ (ಮಕುಟಮಣಿ ಸೊಡರ್ಗಳನೆ ಮಸ್ತಕಸಹಿತಮೆ ನೆಗೆದು ತಿರುಗುವಾ ಪರಿಯಣಮೇಂ ಪ್ರಕಟಿಸಿದುದೊ ಕೃಷ್ಣನ ವಿಜಯಕಾಂತೆಗಾಕಾಶಲಕ್ಷ್ಮಿ ನಿವಳಿಪ ತೆಱದಿಂ: **ಜಗನ್ನಾವಿ,** ೧೭. ೫೪)

**ಮಕುಟಮಸ್ತಕ** – ಕಿರೀಟ ಧರಿಸಿದ ತಲೆ (ನತಭೂಮೀಪಾಲರ ಮಕುಟಮಸ್ತಕದ ನಿಜತೇಜೋ ರೂಪಕಮೆ .. .. ಮೆಱೆವಿನಂ ಯಶೌಘಂ ಮೆಱೆವಂ: **ಯಶೋಧಚ,** ೨. ೨)

**ಮಕ್ಕಳೆವು** – ಮಕ್ಕಳಾಗಿದ್ದೇವೆ (ನಿಮ್ಮಯ ಧರ್ಮದ ಮಕ್ಕಳೆವು ಎಮ್ಮಂ ಕಡೆಗಣಿಸಿ ನಿಮಗೆ ನೆಗಟ್ಟುದು ದೊರೆಯೇ: **ಪಂಪಭಾ,** ೧೧. ೧೨೮)

**ಮಕ್ಷಿಕಾ** – ನೊಣ (ಮಕ್ಷಿಕಾಶಂಕೆಗುಣ್ಣರೇ ಧೂಮಕ್ಕೆ ಸಮಂತು ಬೆರ್ಚಿ ಪಚನವ್ಯಾಪಾರಮಂ ಮಾಣ್ಬರೇ: **ಧರ್ಮಪ,** ೧. ೩೬)

**ಮಖ** – ಯಜ್ಞ (ಈ ಧರಾಮರಜನಮಿಲ್ಲದಂದು ಮಖದಿಂ ಜಗದಿಂ ಬಱಿಕೆಯ್ಯದಿರ್ಕುಮೇ: **ಸಮಯಪ,** ೧೪. ೧೨೯)

**ಮಖಪುರುಷ** – ಯಜ್ಞಪುರುಷ, ವಿಷ್ಣು (ಮಖಪುರುಷನಿರ್ದ ದಸೆಗಭಿಮುಖನಾದೊಡೆ ಪೋಯ್ತುಘಂ ಪರಾಙ್ಮುಖಂ ಅಂತರ್ಮುಖಮಾದುದು ಮಾನಸಂ: **ಜಗನ್ನಾವಿ,** ೫. ೬೭)

**ಮಖಶಿಖಿ** – ಯಜ್ಞದ ಬೆಂಕಿ (ಮಖಶಿಖಿ ಮಖಸಂಭವಲೋಹಖುರಗಳಿವೆನಿಪ ಪಟ್ಟಸಾಹಣದ ಹಯಂ ಮುಖಲೀನಖಲಿನೋತ್ತಾನಖಣತ್ಕೃತಮೊದವೆ ನಿಂದುವಂದು ಅರಮನೆಯೊಳ್: **ಮಲ್ಲಿನಾಪು,** ೯. ೪)

**ಮಖಾವಾಸ** – ಯಜ್ಞಮಂಟಪ (ರಾಗದೆ ಕೈಗೊಟ್ಟೊಡಗೊಮಡು ಪೊಕ್ಕಂ ಅಖಿಳೋರ್ವೀಶಂ ಮಖಾವಾಸಮಂ: **ಕುಸುಮಾಕಾ,** ೪. ೧೧೬)

**ಮಗಮಗಿಸು** – ಪರಿಮಳ ಬೀರು [ನಿಡುಸುಯ್ದು ನಲ್ಲಳ ಮುಖಾಂಬುಜಸೌರಭದೊಳ್ ಪೊದಳ್ದು ಅದೇಂ ಮಗಮಗಿಸಿತ್ತೊ ಕತ್ತುರಿಯ ಕಪ್ಪುರದೊಂದು ಕದಂಬದಂಬುಲಂ: **ಪಂಪಭಾ,** ೪. ೧೦೭)

**ಮಗರಿ** – ಒಂದು ವಿಧವಾದ ಬಟ್ಟೆ (ಮಿಗೆ ಬೆಲೆಯೇಱಿದ ಪೂಲಿಯ ಮಗರಿಯ ದೋರಿಯದ ಪಟೆಯ ತಳಿರ್ವಟ್ಟೆಯ ಕಾಡಿಗೆ ನೀರಿನ ಬಟ್ಟೆಯ ಮಟೆಗೆಗಳಿಂ ಸೋಲಿಪುವು ಸೀರೆವರದರ ಪಸರಂ: **ಕಬ್ಬಿಗಕಾ,** ೩೪)

**ಮಗಿಲ್** – ಪ್ರಾಕಾರ (ಆ ಮಗಿಲ ಗವನಿಯೊಳಗೆ ಎಳಸಿದುವು ತುಹಿನಕರಮಂಡಳಮಂ ತೀವ್ರಾತಾಪಕ್ಕೆ: **ಮಲ್ಲಿನಾಪು,** ೨. ೫೨ ವ ಮತ್ತು ೫೩)

**ಮಗುರ್ಚು** – ಹಿಂದಿರುಗು (ಆತನಂ ಬಯ್ದುಂ ಆತಂಗೆ ಬಯ್ಯುಳಪ್ಪಂತು ಮಗುರ್ಚಿದ ತರ್ಕಮುಮಂ ಮನದ ದರ್ಪಮುಮಂ ಅಱೆದು: **ಹರಿವಂಶ,** ೯. ೧೬ ವ)

**ಮಗುಟಿ್** – ಮರಳಿ ಬರು (ಅರಸರೀಗಳೆ ಬಂದಪ್ಪರ್ ಅಂಜದಿರಿ ಎಂದು ಆಸೆವಾತುಗಳೊಳಾಱಿಸಿ ನುಡಿದೊಡಗೊಂಡು ಮಂದಿರಕ್ಕೆ ಮಗುಟ್ದರ್: **ಆದಿಪು,** ೯. ೭೬ ವ); ಸಂತೋಷಿಸು (ಸುರಯಿಯೊಳ್ ಗಿಳಿ ಮಗುಟ್ವರಗಿಳಿ ಬಿರಯಿಗೆ ಮೊರೆವಂತೆ ಮೊರೆವ ಮಱಿದುಂಬಿ: **ಆದಿಪು,** ೬. ೧೦೦); ಪುನಃ (ರಸೆಗಿಟಿದನೊ ಮೇಣ್

ನಾಲ್ಕುಂ ದೆಸೆಗಳ ಕೋಣೆಗಳೊಳ್ ಉಱಿದನೋ ಖಳಂ ಇಲ್ಲಿ ಈ ವಸುಮತಿಯೊಳ್ ಗಾಂಧಾರಿಯ ಬಸಿಱಿಂ ಮೇಣ್ ಮಗುೞ್ ಪೋಗಿ ಪೊಕ್ಕಿರ್ದಪನೋ: **ಗದಾಯು,** ೬. ೨೧)

**ಮಗುೞ್** – ಮತ್ತೆ, ಪುನಃ (ಅಂತಪ್ಪೊಡೆ, ನೀವೀಕಥೆಯಂ ಮಗುೞ್ ಪೇೞಲ್ ಬಲ್ಲಿರಪ್ಪೊಡಿಂತಪ್ಪ ಕಥೆಗಳನನಂತಂ ಪೇೞ್ವೆನೆಂಬುದುಂ: **ಪಂಚತಂತ್ರ,** ೭೧ ವ)

**ಮಗುೞ್ಚು** – ಹಿಂದಿರುಗಿಸು (ಅಂತು ಕುದುರೆಯಂ ಮಗುೞಿ ಮತ್ತಮಿಂತೆಂದ: **ಕಾದಂಸಂ,** ೩. ೯ ವ); ವಾಂತಿಮಾಡು (ಪಗಲೆಲ್ಲಂ ಕರಪುಟಂಗಳಿಂ ಪೀರ್ದುದಂ ಆಗಸಪಥಶ್ರಮದಿಂ ರವಿ ಮಗುೞ್ಚಿದಂತಾಯ್ತು ಮಿಸುಪ ಕೆಂಬಸಿಲುಗಳುಂ: **ಕಾದಂಬ,** ೩. ೪೯); ತೇಯು (ಮೃಗಮದಮೆಯ್ದೆ ಕಣ್ಣ ಬೆಳಗಿಂ ಮಲಯೋದ್ಭವದಂತೆ ತೋಱೆ .. .. ಕತ್ತುರಿ ಮಗುೞ್ಚುವರ್ ಅಲ್ಲಿಯ ಘಟ್ಟಿವಳ್ತಿಯರ್: **ಸೂಕ್ತಿಸುಧಾ,** ೪. ೧೧೪)

**ಮಗುೞ್ದುಂ** – ಮತ್ತೆಯೂ, ಪುನಃ (ಅಂತು ಮುನಿವೃಷಭನಂ ಕಿಱಿದತರಂ ಕಟಿಪಿ ಮಗುೞ್ದು ಮಗುೞ್ದುಂ ಕಾಂತಾರಾಂತರಮಂ ಪುಗುವನ್ನೆಗಂ .. .. ನೋಡಿದರಾಗಳ್: **ಆದಿಪು,** ೧೦. ೭)

**ಮಗ್ಗಿಸು** – ಹೋಗಲಾಡಿಸು (ಯಶೌಘನ ವಿರಹದ ಪರಿತಾಪಮಂ ಯಶೋಧರನ ಯಶೋಹರಿಚಂದನ ಚರ್ಚೆಯಿಂ .. ..ಮಗ್ಗಿಸಿದಳ್: **ಯಶೋಧಚ,** ೨. ೧೪)

**ಮಗ್ಗು** – ಮಬ್ಬು, ಆರು (ಜಾವದುಕ್ಕಡದ ಉಲಿ ಮಗ್ಗಿದ ಪೊತ್ತು ಸೂೞ್ಗೆ ಕರುಮಾಡದ ಪಕ್ಕದೊಳಿರ್ದ ಪಟ್ಟದಾನೆಯ ಬದಗಮ ಬಿನದಕೆ ಪಾಡುತ್ತಿರೆ: **ಯಶೋಧಚ,** ೨, ೨೭ ಮತ್ತು ೨೮); ಕುಗ್ಗಿಹೋಗು (ಸ್ಮರಂ ಈಶಾಭೀಳಬಾಳಾಂಬಕಶಿಮುಖದೊಳ್ ಮಗ್ಗಿದಂ ಮುನ್ನಂ ಎಂದು .. .. ಸಮ್ಮೋಹಿಸುವನಸಮ ಸೌಂದರ್ಯಸಾರಂ ಕುಮಾರಂ: **ಶಾಂತೀಶ್ವಪು,** ೪. ೧೧೫)

**ಮಗ್ಗುಲ್** – ಬದಿ, ಪಕ್ಕ (ಒಂದು ಮಗ್ಗುಲೊಳ್ ಪಕ್ಕೆಯನತ್ತು ಸಾಕಿದುದ ನೋಡುತಲೆನ್ನಯ ನಾಯನೆಕ್ಕಲಂಗಿಕ್ಕೆಂ: **ಸೂಕ್ತಿಸುಧಾ,** ೩. ೨೨೪)

**ಮಗ್ಗುಲಿಕ್ಕು** – ಪಕ್ಕಕ್ಕೆ ಒರಗು (ಮಗ್ಗುಲಿಕ್ಕಿರ್ದುದು ಮುನ್ನೀರಂ ನೀಲಾಚಲದಿಂ ಸಾರಗಟ್ಟಿದವೊಲಿರೆ ಬೞಲ್ದು ಉಲಾಯಂ: **ಯಶೋಧಚ,** ೩. ೬೬)

**ಮಗ್ನತೆ** – ತನ್ಮಯತೆ, ಏಕಾಗ್ರತೆ (ಮಗ್ನತೆಯಿನೆೞಗಿ ಸುಯ್ಯಲೆರಗ್ನಿಯಿನಱಿದಳಿಗಳುಗುಳುತಿರೆ ಪೊತ್ತುದು ಸಂಲಗ್ನವಿರಹಾಗ್ನಿ ತಾಪೋದ್ವಿಗ್ನೆಯ ನಾಸಿಕಮಭೇದಮಂ ಚಂಪಕದೊಳ್: **ಚಂದ್ರಪ್ರಪು,** ೫. ೧೩೦)

**ಮಘವ** – ಇಂದ್ರ (ಮಘವಂ ಅಘವಿಘಾತಾರ್ಥಂ ಉದ್ಧತಾಭಿನಯಪ್ರಾಯಮುಂ ಆರಭಟೀವೃತ್ತಿಯುಕ್ತಮುಂ ಅಪ್ಪ ತಾಂಡವಮನಾಡಲ್ ಉದ್ಯೋಗಂಗೆಯ್ದು: **ಆದಿಪು,** ೭. ೧೧೫ ವ)

**ಮಚ್ಚ** – ಚಿನ್ನದ ಶುದ್ಧತೆ (ಒರೆಯಂ ನೋಡದೆ ನೋಡಿ ಚಿನ್ನಮನೆ .. .. ಮಚ್ಚಮನೆ ಲೀಲಾಮಾತ್ರದಿಂ ಕಟ್ಟುವ ಅಚ್ಚರಿಯಿಂದಾ ಪುರದಲ್ಲಿ ಚಿನ್ನವರದರ್ ತಾಮಿಂತು ವಿಭ್ರಾಜಿಪರ್: **ಶಾಂತೀಶ್ವಪು,** ೧. ೧೨೧); ಮಾತ್ಸರ್ಯ (ಮಚ್ಚದಿಂ ಚೆಚ್ಚರದಿಂದಂ ಕಿೞ್ತು ಬೇತಾಳನ ತಲೆಯನೆ ನಕ್ತಂಚರಂ ತಿದಂ: **ನೇಮಿನಾಪು,** ೫. ೪೦)

**ಮಚ್ಚರ** – ಅಧಿಕ ಅಪೇಕ್ಷೆ (ಭೋಗದೊಳ್ ಬಹುವಿಚಾರಂ ತತ್ವದೊಳ್ ಮಚ್ಚರಂ ಜಿನಧರ್ಮಕ್ರಿಯೆಯೊಳ್ ನಿರಂತರಿತಮೋಹಂ .. .. ಅಲ್ಲದಿಲ್ಲ ಅಂತಾ ಮಹೀಮರ್ತ್ಯರೊಳ್: **ಶಾಂತೀಶ್ವಪು,** ೧೩. ೧೩೮); ಅಸೂಯೆ (ಪಿರಿದುಂ ಕಾಯ್ಪಿನೊಳ್ ಎಯ್ದೆ ಕಾಯ್ವ ಸಮಕಟ್ಟಿಂ ದೋಷಮಲ್ತು ಅಕ್ಕ ಮಚ್ಚರಮುಂ ಮೋಘಂ ಎಡಂಬಡುಂ ಕಲುಷಮುಂ ಮುನ್ನುಳ್ಳುದು .. .. ನಿಷ್ಕಾರಣಂ ಕಾಯ್ವರೇಂ: **ಪಂಪಭಾ,** ೭. ೩೫)

**ಮಚ್ಚರಕಾಱ** – ಅಸೂಯೆ ಉಂಟುಮಾಡುವವನು (ಮಹಾಧರ್ಮದೊಳ್ ಮಚ್ಚರಕಾಱಂ ಭಾವಕೋತ್ಪಾದಕ ರಸಿಕಕವಿಸ್ತೋಮದೊಳ್ ನೇಮಿಚಂದ್ರಂ: **ನೇಮಿನಾಪು,** ೧. ೩೭)

**ಮಚ್ಚು** – ಮೆಚ್ಚಿಕೆ (ಸರಳಾಳಾಪಂಗಳಿಂ ಜತ್ತಿಸುವ ಬಗೆಗೆಲಕ್ಕೆಂದು ಕೂರ್ತಿಚ್ಚೆ ಬೆಚ್ಚಂತಿರೆ ಮಚ್ಚಂ ಮೆಚ್ಚಿದಂದದೊಳೆ ಸಲಿಪ: **ಸುಕುಮಾಚ,** ೯. ೬೩); ಬಹುಮಾನ (ಒಸಗೆವಾತಂ ಪೇೞ್ದವಂಗೆ ಮಚ್ಚುಗೊಟ್ಟು ಅಲ್ಲಿಂದೆೞ್ದು ಪೋಱಮಟ್ಟು: **ಕಾದಂಸಂ,** ೨. ೨೫ ವ)

**ಮಚ್ಚುಗುಡಿಸು** – ಕಾಣಿಕೆ ಕೊಡಿಸು (ದಮಿತಾರಿಯ ಭುಜಬಲ ವಿಕ್ರಮದ ಅಳವಿಗೆ ಮಚ್ಚಿ ಮಚ್ಚುಗುಡಿಸುವವೊಲ್ ಅನುಕ್ರಮದಿಂ ನೀರ್ಗುಡಿಸಿ ಯಥಾಕ್ರಮದಿಂ ಪದವಡಿಸಿ ಪಾರಲೌಕಿಕವಿಧಿಯಂ: **ಶಾಂತಿಪು,** ೪. ೫೮)

**ಮಚ್ಚುಗೆವೆಱು** – ಮೆಚ್ಚಿಗೆಯನ್ನು ಪಡೆ (ಒರ್ಮೆಗೊರ್ಮೆಗೆ ಎರ್ದೆಯೊಳ್ ಬೈತಿಚ್ಚೆಯೊಳ್ ಕೂರ್ಮೆ ತಳ್ತಿರವಿಂ ಮಚ್ಚುಗೆವೆತ್ತ ಪತ್ತುಗೆಯಿನಂತಾ ನಾಲ್ವರಂದಿರ್ವರಿರ್ವರೆ ಯುಗ್ಮದ್ವಯಮಾದರ್: **ಶಾಂತಿಪು,** ೬. ೧೨೩)

**ಮಜ್ಜ** – ಸಾರ, ಸತ್ವ (ಸಾರಂ ಮಜ್ಜಂ: **ಅಭಿಧಾವ,** ೧. ೭. ೬)

**ಮಜ್ಜನ** – [ಮಾರ್ಜನ] ಸ್ನಾನ (ಆ ರತಿ ಪಾಪಮುಂ ಪಡಣಮುಂ ಪೋಪಂತೆ ಕಾಮಂಗೆ ಮಜ್ಜನಕೆ ಎಂದೆತ್ತಿದ ಚಂದ್ರಕಾಂತ ಘಟದೊಳ್ ತಂದು ಅೞ್ತಿಯಿಂ ಪುಷ್ಪವಾಸನೆಗೆಂದಿಕ್ಕಿದ ನೀಳನೀರರುಹಮಂ ಪೋಲ್ದತ್ತು ಕೞ್ಪಿಂದುವಾ: **ಪಂಪಭಾ** ಪರಿಷತ್ತು, ೪. ೫೧)

**ಮಜ್ಜನಂಬುಗು** – ಸ್ನಾನಮಾಡು (ಉದಿತೋದಿತನಂ ದಿಗಿಭಗಂಳೆಂಟುಂ ಒಳ್ಪೊಡರಿಸಿ ಮಜ್ಜನಂಬುಗಿಸೆ ಕಂಡುದೞಿಂ ಕಮಲಾಭಿರಾಮನಂ: **ಪಂಪಭಾ,** ೧. ೧೪೧)

**ಮಜ್ಜನಪೀಠ** – ಸ್ನಾನಮಾಡುವಾಗ ಕುಳಿತುಕೊಳ್ಳುವ ಮಣೆ, ಅಭಿಷೇಕಪೀಠ (ವಿಭವಂ ಜನ್ಮಾಭಿಷೇಕಕ್ಕೆ ತಾನೆ ವಲಂ ಮಜ್ಜನಪೀಠಮಾದತಿಶಯಂ ಹೇಮಾದ್ರಿಗುನ್ಮುದ್ರಿತಂ: **ಮಲ್ಲಿನಾಪು,** ೧. ೬೪)

**ಮಜ್ಜನವಳ್ಳ** – ಸ್ನಾನಮಾಡಿಸುವವನು (ಮಜ್ಜನಪೀಠಂ ಸುರಗಿರಿ ಮಜ್ಜನಜಳವಮೃತಜಳಧಿಜಳವು ಅಮರೇಂದ್ರಂ ಮಜ್ಜನವಳ್ಳನುಮೆನೆ ಜಿನಮಜ್ಜನಮಹಿಮೆಯ ಬೆಡಂಗಂ ಏವಣ್ಣಿಪುದೋ: **ಆದಿಪು,** ೭. ೧೦೩)

**ಮಟ** – ಮಠ (ಮಟದೊಳಗಾ ಪೊಸ್ತಕಂ ಬೆಚ್ಚನಿರ್ಕುಂ: **ಸಮಯಪ,** ೧೪. ೪೭)

**ಮಟ್ಟ** – ಸಮಪ್ರದೇಶ (ಪಡೆಗಡ್ಡಮಿರ್ದ ಬೆಟ್ಟಿಟ್ಟೆಡೆ ಮಟ್ಟಮಿೞುಂಬಮೆಂಬಿವಂ ಸಣ್ಣಿಸಿ ಸಾರ್ವೆಡೆ ನಡೆವ ದಂಡರತ್ನಂ ಮುಂದೆ ನಡೆಯೆ: **ಆದಿಪು,** ೧೧. ೪೭)

**ಮಟ್ಟಂ** – ಸುಮ್ಮನೆ (ದಾರುಣ ಭಾವಮಂ ಉಪಸಂಹಾರಿಸಿ ಕಣ್ಣಱಿದು ಮಟ್ಟಂ ಟಣ್ಣನ ಕೆಲದೊಳ್ ವಾರಿಜನಾಭಂ

ಗರುಡೋದ್ಗಾರ ಹರಿನ್ಮಣಿಯ ಕೆಲದ ಫಣಿಯವೊಲಿರ್ದಂ: **ಪಂಪರಾ,** ೬. ೧೪೭)

**ಮಟ್ಟನಾಗು** – ಖಾಲಿಯಾಗು (ಬನದ ತಳಿರ್ ಕಳಿಕೆ ಮುಗುಳ್ ನನೆ ಬಿರಿಮುಗುಳ್ ಅಲರ ಗೊಂಚಲೆಂಬಿವು ವನಜಾನನೆಯರ ಪೂದುಡುಗೆಗೆ ಮಟ್ಟನಾದುವೇಂ ಪೆಂಪೊ ಭರತನಂತಃಪುರದಾ: **ಆದಿಪು,** ೧೧. ೧೨೯)

**ಮಟ್ಟಮಿರ್** – ಸುಮ್ಮನಿರು, ತೆಪ್ಪಗಿರು (ಪವನಜನ ಆಸ್ಯಮಲ್ತಿದು ಅವನ ಆನನಮಪ್ಪೊಡೆ ಮಟ್ಟಮಿರ್ದು ನೋಡುವುದೆ ಮದೀಯವಕ್ತ್ರಮನೆ ಕೆಮ್ಮನೆ: **ಗದಾಯು,** ೯. ೩೩)

**ಮಟ್ಟಯಿಸು** – ಸಮಗೊಳಿಸು (ಪರೀಷಹಮಂ ಬೆನ್ನಟ್ಟಿ ವಿಹಿತಮನನುಷ್ಠಿಸಿ ಮಟ್ಟಯಿಸಿದ ಕರಣಯೋಗಂ ಅಘನಿರ್ಹರಣಂ: **ಮಲ್ಲಿನಾಪು,** ೧೪. ೫೯)

**ಮಟ್ಠೆಯ** – ಏಳು ಬಗೆಯ ತಾಳಕ್ರಮಗಳಲ್ಲಿ ಒಂದು (ಧ್ರುವ ಮಟ್ಠೆಯಂ ಪಡಿಮಟ್ಠೆಯಂ ಅಟ್ಟತಾಳ ಎಕ್ಕತಾಳ ರೂಪಕಂ ರಚ್ಚೆಯ ಎಂಬ ಏೞುಂ ತೆಱದ ತಾಳಕ್ರದಿಂದ: **ಧರ್ಮಪ,** ೨. ೨೦ ವ)

**ಮಡ** – ಕಾಲಿನ ಹರಡು (ಮಡದೆಡೆ ನಾಲ್ವೆರಲ್ ಅಂಗುಟದೆಡೆಯೊಳ್ ಗೇಣಾಗೆ ನಿಲ್ವುದಿಚ್ಛಾಗತಂ: **ಆದಿಪು,** ೯. ೮೪); ರಥದ ಚೌಕಟ್ಟು (ಕದನದೊಳಾರ್ದು ಸಾರ್ದು ಇಸೆ ಮಹಾರಥದ ಅಚ್ಚು ಸಿಡಿಲ್ದುದು ಈಸು ಸೂಸಿದುದು ಅರಗೀಲ್ ಕೞಲ್ದುದು ಮಡಂ ಕಡಿವೋದುವು: **ಪಂಪರಾ,** ೧೩. ೬೯); ಕಡಾಣಿ (ಮಿನುಗುವ ಕೊಂಬಿನಚ್ಚು ಕಿಱುಗೊಂಬಿನ ತಳ್ತ ಅರಗೀಲ್ ಕವಲ್ತ ಕೊಂಬಿನ ಮಡವಡ್ಡವಂದ ನಳಿಗೊಂಬಿನ ಪತ್ತುಗೆ ಜೋಲ್ವ ಬಳ್ಳಿಗೊಂಬಿನ ಬಲೆ ತೋರಗೊಂಬಿನ ನೊಗಂ ನಿಡುಗೊಂಬಿನ ಮೂಂಕು ಕಣ್ಗೆ ಚೆಲ್ವೆನೆ ನಡೆತಂದುವಂದು ಅಸುಗೆಯೆಂಬ ನೆಗಟ್ತೆಯ ತೇರ್ಗಳೆತ್ತಲುಂ: **ಕಬ್ಬಿಗಕಾ,** ೧೬೭)

**ಮಡಂಬ** – ಐನೂರು ಹಳ್ಳಿಗಳಿಂದ ಸುತ್ತುವರಿದ ನಗರ (ಪಂಚಶತಗ್ರಾಮ ಪರೀತಂಗಳಪ್ಪ ಮಡಂಬಂಗಳುಮಂ: **ಆದಿಪು,** ೮. ೬೩ ವ)

**ಮಡಕಾಲ್** – ಮಂಡಿಯಿಂದ ಕಣಕಾಲಿನವರೆಗಿನ ಭಾಗ (ಪಿಡಿಕೆಯ್ ತೀವಿದ ಕೂರ್ಗಣೆ ಮಡಕಾಲ್ವರಂ ಅಲೆವ ಕಚ್ಚೆ ನಿಡಿಯಸಿಯ ಒೞಿ ಕರ್ಪಿಡಿದ ಪಣೆಕಟ್ಟು ಕೆಯ್ವಡೆ ಬೆಡಂಗನೊಳಕೊಳೆ ಧನುರ್ಧರರ್ ಪೆಣೆದೆಚ್ಚರ್: **ಪಂಪಭಾ,** ೧೦. ೭೧)

**ಮಡಗಿಡು** – ಜೋಪಾನವಾಗಿಡು (ಒಡವೆಯುಮಂ ಒಡಲುಮಂ ಮಡಗಿಡದೆ ಅಂತವನೆಯ್ದಿ .. .. ತವಿಸುವವಂ ಪಡೆವುದು ಪಿರಿದಾಯ್ತೆ ಪರಮಸೌಖ್ಯಾಸ್ಪದಮಂ: **ಸಮಯಪ,** ೧೫. ೮೮)

**ಮಡಗು** – ಇರಿಸು, ಗೋಪ್ಯವಾಗಿಡು (ಅಂತು ಕೆಯ್ಕೊಂಡು ಅನಂತರಂ ಕಂತು ತನ್ನ ಮಾಯಾಪಡೆಯಂ ಮಡಗಿ ಪಡಲಿಟ್ಟು: **ಕರ್ಣನೇಮಿ,** ೭. ೧೭೯ ವ)

**ಮಡಗೂೞ್** – ಎಂಜಲನ್ನ, ಉಚ್ಛಿಷ್ಟ (ಈತನೊಳ್ ತೊಟ್ಟ ಕಿಂಕರಭಾವಂ ಎಮಗಕ್ಕಿಗೊಟ್ಟು ಮಡಗೂೞುಣ್ಬಂದಮಂ ಪೋಲದೇ: **ಆದಿಪು,** ೧೪. ೩೨)

**ಮಡಮೇೞಿಸು** – ಹಿಮ್ಮಡಿಗೆ ಕಟ್ಟು (ತಳಿರೆಕ್ಕವಡಮಂ ಮಡಮೇೞಿಸಿ ಕೈಗೊಟ್ಟು ಮಯೂಖನಿರ್ಝರಗಿರಿಯಿಂದಂ ಇೞಿಪಿ .. .. ಕುಸುಮಾಕರೋದ್ಯಾನಮಂ ಪುಗಿಸಿ: **ಲೀಲಾವತಿ,** ೧೦. ೯೭ ವ)

**ಮಡಲ್** – ಕೊಂಬೆ (ಒಡಲಂ ಸಂಸೃತಿಲತಿಕೆಯ ಮಡಲಂ ಬಹುದುಃಖಬಹಳಲಹರಿಕೆಗಳ ಪೆರ್ಗಡಲಂ: **ಪುಷ್ಪದಂಪು:** ೧೩. ೩೩); ಹಬ್ಬುವುದು (ನಿಲ್ತುವು ರಸಂಗಳಿಲ್ಲಿ ಮಡಲ್ತು ಎನೆ ಭಂಗಿಯೊಳ್ ಅನಂಗಜಂಗಮಲತೆವೊಲ್ ನಿಲ್ತು: **ಆದಿಪು,** ೯. ೨೦); ವಿಸ್ತಾರ; ಸೋಗೆ (ಅಂಕುರವೊತ್ತಿ ಬೆಳೆಯುತ್ತಿರ್ದ ಕರ್ಬಿನ ಮಡಲ್ಗಳುಮಂ: **ಪಂಚತಂತ್ರ,** ೧೯೦ ವ)

**ಮಡಲಿಡು** – ವ್ಯಾಪಿಸು (ವನಮೆಯ್ದೆ ಸೇವ್ಯಮಾಯ್ತವನಿಗೆ ಕೂಡೆ ಬೇರ್ಪರಿದ ಸಾಲ್ ಮಡಲಿಟ್ಟ ಕರ್ವು ಒಲ್ಲವಿದಿ ಅಶೋಕಂ: **ಆಚವರ್ಧ,** ೨. ೧೬)

**ಮಡಲ್ಗೊಳ್** – ವ್ಯಾಪಿಸು (ಮಡಲ್ಗೊಂಡ ಮಲ್ಲಿಗೆಯ ಮಂಡವಿಗಳೊಳಂ ಸಂಪಗೆಯ ಜೊಂಪದ ಚಂಪೆಯದೊಳಂ: **ಕಬ್ಬಿಗಕಾ,** ೧೮೪ ವ)

**ಮಡವಿಡು** – (ಮಿಱುಪ ತದೀಯ ಚಿತ್ರಪಟಮಂ ತೆಗೆದಾಂ ಮಡವಿಟ್ಟೊಡೆ ಅಲ್ಲಿಕಣ್ದೆಱೆದು ಮದಾಲಸಾಕ್ಷಿಗಳನೀಕ್ಷಿಸಿ ಕಾಣದೆ ಏನುಮಂ: **ಕುಸುಮಾಕಾ.** ೧೨. ೧೨೩)

**ಮಡಸನ್ನೆ** – ಸವಾರಿ ಕಾಲದಲ್ಲಿ ಕುದುರೆಯನ್ನು ಹಿಮ್ಮಡಿಯಿಂದ ತಿವಿದು ಚೋದಿಸುವುದು (ಮಡಸನ್ನೆ ಮನದೊಳ್ ಅಂಕುರಿಸುವಲ್ಲಿ ಮುನ್ನಂ ಪರಿದು ಶರಧಿಯನೆಡಗಲಿಪ .. .. ವಾಘೆಗಳವಟ್ಟು: **ಗಿರಿಜಾಕ,** ೬. ೫೫ ವ)

**ಮಡಿ** – ತಿರಿ, ಕೀಳು (ಮಡಿದು ತಂದಿಟ್ಟ ಪೊಸನೆಯ್ದಿಲ ಕಾವನಾವಗಂ ಗೆಲ್ದ ರತ್ನಕುಂಡಲಂಗಳ ಪೊಳಪನೊಳಕೊಂಡಂತೆ ನಸುನೇಲ್ವ ಕರ್ಣಾಟೀ ಕರ್ಣಪೂರನ ಪಾಲೆಗಳುಂ ಸರಸ್ವತಿಯಾಡುವ ಲೀಲಾಂದೋಳದಂತಾದುವು: **ಪಂಪಭಾ,** ೨. ೫೯ ವ); ಸಾಯು (ಮಡಿ–ಮರಣೇ: **ಶಬ್ದಮದ,** ಧಾ ೩೪೨); ಒಗೆದ ಬಟ್ಟೆ (ಒಗೆಯುತ್ತುಮಿರ್ದ ಮಡಿವಳನ ಮುಂದಣ ಮಡಿಯುಮಂ ತನ್ನೊಡನೆಯ ಗೋವಳಿಗರುಟ್ಟ ಮೈಲಗೆಯುಮಂ ಮಧುಸೂದನಂ ಕಂಡು: **ನೇಮಿನಾಪು:** ೮. ೭೫ ವ); ಜಮೀನಿನ ಭಾಗ (ಕೞಿವೆಯ ಮಡಿಗಳ ಬೞಿವಿಡಿದು ಬೆಳೆದ ಚೆಂಗಣಿಗಿಲೆಯ ಕಂಪಿನೊಳ್ ಪೊರೆದು: **ಕಬ್ಬಿಗಕಾ,** ೪೫ ವ); ಮುದಿರು (ನಾಲಗೆ ಮಡಿದುದು ಎನುತ್ತಿಂತು ಪೇೞುತ್ತಿರಲ್: **ಕಾದಂಸಂ,** ೧. ೨೭); ಮಡಿಸು, ಬಾಗಿಸು (ಎನ್ನ ಎಡಗೈಯ ಕಿಱು ಕುಣಿಕೆಯ ಮಡಿಯೊತ್ತಿರೆ ನೋೞ್ಪೆಮೆಂದು ನೀಡಿದ ಬೆರಲಂ: **ಹರಿವಂಶ,** ೧೩. ೨೦)

**ಮಡಿಪು** – ಕೊಲ್ಲು (ಪ್ರಾಣಿಗಳಂ ಮಡಿಪದೆ ನೋಯಿಸದೆ ಕಾವುದೆಂಬಂ ಜೈನಂ: **ಸಮಯಪ,** ೫. ೬)

**ಮಡಿಯಿಸು** – ಸಾಯಿಸು (ಮುಡಿಯಂ ಪಿಡಿದೆೞೆದವನಂ ಮಡಿಯಿಸಿ ಮತ್ತವನ ಕರುಳ ಪಿಣಿಲಿಂದೆನ್ನ ಮಡಿಯಿಸುವಿನೆಗಂ ಮುಡಿಯಂ ಮುಡಿಯೆಂ: **ಪಂಪರಾ,** ೭. ೧೦)

**ಮಡಿವರ್ಗ** – ಒಗೆದ ಬಟ್ಟೆಗಳ ರಾಶಿ (ಮುಱಿದಿಕ್ಕಿ ಸುಬ್ಬರಸೂೞಿಯಾಗೆ ಮಡಿವರ್ಗಮಂ ಗೋವರ್ಕಳ್ಗೆ ಸೂೞಿಗೊಟ್ಟಸಗವೋೞಿಯಂ ಪುಯ್ಯಲಿಡಿಸೆ: **ನೇಮಿನಾಪು,** ೧೦. ೮೦ ವ)

**ಮಡಿವಳ್ತಿ** – ಅಗಸಗಿತ್ತಿ (ನಡೆಯಿಪರನುಲೇಪನಮಂ ಮಡಿಯಂ ಮಾಲೆಯಂ ಅಮರ್ತ್ಯಲೋಕದವಂ ತಂದೆಡೆವಿಡದೆ ಘಟ್ಟಿವಳ್ತಿಯ ಮಡಿವಳ್ತಿಯ ಮಾಲೆಗಾರ್ತಿಯಂದದಿನರೆಬರ್: **ಚಂದ್ರಪ್ರಪು,** ೧೦. ೧೩೩)

**ಮಡಿವಳ್ಳ** – ಅಗಸ (ಎಡಮಡಗದೆ ಸಂದಿಸಿ ಮೀವ ಉಡುವ ತುಱುಂಬುವ ಜಲಾಂಬರಸ್‌ಕ್ತತಿಯಿಂ ನಡೆದರ್ ಮಜ್ಜನವಳ್ಳರ ಮಡಿವಳ್ಳರ ಮಾಲೆಗಾಱರಂದದೆ ದಿವಿಜರ್: **ಅಜಿತಪು,** ೫. ೯೩)

**ಮಡಿವು** – ಸಾವು (ನಿನಗಾದುದು ಇಂದು ಈ ಕೊಳೆಯಂಬಿನೊಳ್ ಈ ಕಾನನದ ಹೀನಂ ಇಸೆ ಮಡಿವಾಯ್ತೇ: **ಕರ್ಣನೇಮಿ,** ೧೪. ೧೦೦)

**ಮಡು** – ಬಿಗಿಯಾಗಿಡು (ಮಡು–ದೃಢಸಂಧಾನೇ: **ಶಬ್ದಮದ,** ಧಾ ೩೪೩); ನದಿಯ ಆಳವಾದ ಜಾಗ (ಪಾವುಗಳಂ ಕೊಳಿಸಿ ಮಹಾಗ್ರಾವಮಂ ಉಱದೆ ಅಡಸಿ ಕಟ್ಟಿ ಕೊರಲೊಳ್ ಗಂಗಾದೇವಿಯ ಮಡುವಿನೊಳ್ ಅೞ್ದಿದರ್ ಏವಯಿಸದೆ ತಮ್ಮ ಕುಲಮಂ ಅಡಿಗಟ್ಟುವವೋಲ್: **ಪಂಪಭಾ,** ೨. ೩೨); ಕೊಳ (ಧ್ಯಾನದೊಳ್ ಅಭವಂ ನೆಱೆದು ಇನಿಸಾನುಂ ಅರೆಮುಚ್ಚಿ ಕಣ್ಗಳಂ ನಿಶ್ಚಳಿತಂ ತಾನಿರ್ದು ಮಱೆದು ಕೆಂದಿದ ಮೀನಂ ತಳ್ತಾಡದಿರ್ದ ಮಡುವಂ ಪೋಲ್ತಂ: **ಪಂಪಭಾ,** ೮. ೧೩)

**ಮಡುಗೊರ್ವು** – ತುಂಬಿಕೊಂಡಿರುವುದು (ಪೊಳೆವ ತನುಚ್ಛಾಯೆ ಮೆಯ್ವೆರ್ಚೆ ಕೆಚ್ಚಲ್ ಮಡುಗೊರ್ವಂ ತಾಳ್ದಿ: **ಶಾಂತೀಶ್ವಪು,** ೩. ೮೮)

**ಮಡುಗೊಳ್** – ತುಂಬಿಕೊಳ್ಳು (ಅಡರ್ದೇಱೆ ಕೋಡಗಂಗಳ್ ಕಡುಪಿಂದೀಡಾಡುವ ಘಟಿಲನೊಡೆದದ ಎಳಗಾಯಿಂದೆ ಎಡೆವಿಡಿದೊಸರ್ವೆಳನೀರ್ಗಳ್ ಮಡುಗೊಂಡೋವುತ್ತುಂ ಇರ್ಪವಲ್ಲಿಯ ಬನಂ; **ಕಬ್ಬಿಗಕಾ,** ೨೧)

**ಮಣ್** – ಮೃತ್ತಿಕೆ (ಸ್ನಾತಕವ್ರಾತಕ್ಕೆ ಶೌಚಕಾರ್ಯನಿಮಿತ್ತ ದರಿಯ ಮಣ್ಣಂ ಕೋಡೊಳೆತ್ತಿ ತಂದವರ ಮುಂದಿಕ್ಕುವ ಭದ್ರಗಜವ್ರಜಮುಮಂ: **ಪಂಚತಂತ್ರ,** ೧೯೦ ವ); ಭೂಮಿ (ಕಣ್ಣಿಲ್ಲದೆ ಕಾಣ್ಬೆನೆಂಬ ಮಣ್ಣಿಲ್ಲದೆ ಬೆಳೆವೆನೆಂಬ ಸತಿಯಿಲ್ಲದೆ ಸುತರಂ ಪಡೆವೆನೆಂಬ: **ಧರ್ಮಾಮೃ,** ೧. ೬೪ ವ)

**ಮಣಕು** – ಕಮಟುವಾಸನೆ (ಆವ ಜಾತಿ ಅದಾರೆಂದಱಿಯದೆ ಮಿಂದು ಮುಟುಂಕಿಯುಂ ಅಱಿಯದ ಮಣಕಿನ ಬಣಂಬೆಗೆ ಆನೆಱಗುವೆನೇ: **ಯಶೋಧಚ,** ೪. ೪೯)

**ಮಣಲ್** – ಮರಳು (ಚೈರಂತನಕ್ರಮದಿಂದೆ ಆ ಮಣಲೆಲ್ಲಮಂ ಮಗುಳೆ ಪಾರಾವಾರದೊಳ್ ಪೊಯ್ದು ಮತ್ತಮದಂ ಸೋದಿಸಿ ಕಾಣ್ಬವೊಲ್ ನೃಗತಿ ನೋಡಲ್ ನಾಡೆಯುಂ ದುರ್ಲಭಂ: **ಸುಕುಮಾಚ,** ೫. ೩೩)

**ಮಣಲ್ದಿಂಟೆ** – ಮರಳ ದಿಬ್ಬ (ವೈತರಣಿಯ ಪಿರಿಯ ದರಿಯಂ ಮೆಟ್ಟಿ ನುಣ್ಣಿಣಲಂ ಮಣಲ್ದಿಂಟೆಗೆತ್ತು ಅದಱ ಪರಿತಪ್ತ ಲೋಹರಜಸ್ಸಿಕತಿಳತಳದೊಳ್ ಮೇಯ್ಯನೀಡಾಡುವುದುಂ: **ಶಾಂತಿಪು,** ೭. ೯೧ ವ)

**ಮಣಿ** – ನಮಿಸು ರತ್ನ (ಮಣಿ–ನಮನೇ: **ಶಬ್ದಮದ,** ಧಾ ೩೭೮); ಹೆದರು (ಅಂತಣಿ ಮಣಿಯದೆ ಸೆಣಸಿ ಪೊಣರ್ದು ಕಿಱಿದು ಪೊಟ್ಟು ಕಾದಿ ನಿಂದಾಗಳ್: **ಪಂಪಭಾ,** ೧೦. ೮೫ ವ);

**ಮಣಿಕ** – ಮೊದಲ ಕರು ಹಾಕಿದ ಹಸು (ಪೊಸನಸೆಯ ಸೊವಡನಘ್ರಾಣಿಸಿ ಮಣಿಕದ ಮಿಡುಕುಗಚ್ಚೆಯೊಳ್ ಮೊಗವೆತ್ತು ಎಸೆದುದು ವೃಷಂ: **ಲೀಲಾವತಿ,** ೫. ೯೩)

**ಮಣಿಕಟಕ** – ರತ್ನದ ಕಟಕ ಹಾಗೂ ಸಾನು ಪ್ರದೇಶ (ಮಣಿಮಕುಟಂ ಶಿಖರಂ ಲಂಬಣಿಗೆಯ ಪೊಸಮುತ್ತು ನಿರ್ಝರಂ ಮಣಿಕಟಕಂ ಮಣಿಕಟಕಮಾಗೆ ತದ್ಗಿರಿಗೆಣೆಯಾದಂ ತನ್ನ ಪೆಸರೊಳಂ ವಿಜಯಾರ್ಧಂ: **ಆದಿಪು,** ೧೩. ೧೩)

**ಮಣಿಕುಟ್ಟಿಮ** – ರತ್ನಖಚಿತ ನೆಲಗಟ್ಟು (ರಂಜಿಸೆ ಚರಣಾಲಕ್ತಕ ರಂಜನೆ ಮಣಿಕುಟ್ಟಿಮಂಗಳಂ: **ಆದಿಪು,** ೮. ೧೮)

**ಮಣಿಗರ್ಭೆ** – ಭೂಮಿ (ತನ್ನಂ ಪೊತ್ತು ಮನ್ನಣೆಯಿಂ ಮುನ್ನಂ ಪೊರೆಯೇಱಿಸಿ ಪೊರೆದ ಮಣಿಗರ್ಭೆಗೆ ಅಣಿಯರಂ ಬಾಗಿ: **ಶಬಶಂವಿ,** ೨. ೪೨ ವ)

**ಮಣಿಗಾಱ** – ರತ್ನಪಡಿವ್ಯಾಪಾರಿ (ಪರದರ ಪಾರ್ವರ ಗೋಟಿಕಾಯ್ಲರ ಜೋದರ ಮಾಲೆಗಾಱ ಮಣಿಗಾಱರ .. .. ಆಲಯಂಗಳ್ ಮೆಱೆಗುಂ: **ಜಗನ್ನಾವಿ,** ೨. ೨೨)

**ಮಣಿತ** – ಸುರತಧ್ವನಿ (ಅದನೇನಂ ಪೇೞ್ವೆನಿಂ ಪೇೞ್ದವಳ ಮಣಿತಮಂ: **ಲೀಲಾವತಿ,** ೧೩. ೨೬)

**ಮಣಿನೂಪುರಮಂಜುಶಿಂಜಿತ** – ರತ್ನಖಚಿತ ಕಾಲಂದುಗೆಯ ಇನಿದನಿ (ಆಗಳೇಂ ಪೊದಳ್ದೆಸೆದುದೊ ಚಾರುದೇವಗಣಿಕಾ ಮಣಿನೂಪುರಮಂಜುಶಿಂಜಿತಂ: **ಆದಿಪು,** ೭. ೨೨)

**ಮಣಿಮರೀಚಿ** – ರತ್ನಕಿರಣ (ಎಳವೆಂಡಿರಿಂದಂ ಏಂ ಪಡೆದುವೊ ಲೀಲೆಯಂ ಮಣಿಮರೀಚಿ ವಿಚಿತ್ರನಾಟ್ಯಶಾಲೆಗಳ್: **ಮಲ್ಲಿನಾಪು,** ೨. ೫೫)

**ಮಣಿಯೇಱು** – ಗಂಟೆಯ ಸದ್ದು (ಮದನ ಮದಕುಂಜರದ ಮಣಿಯೇಱಂ ಮೀಱುವ ರಾಜಹಂಸ ಕೂಜಿತಮುಂ .. .. ಅನುಕೂಲಮಾಗೆ: **ಪಂಪರಾ,** ೩. ೮೧ ವ)

**ಮಣಿರಶನಾ** – ರತ್ನದ ಡಾಬು (ಸುರಗಣಿಕಾ ಗುಂಜನ್ಮಣಿರಶನಾ ಮಣಿಮಂಜೀರ ಮಂಜುಶಿಂಜಿತಂ ರಂಜಿಸುಗುಂ: **ಆದಿಪು,** ೮. ೧೮)

**ಮಣಿವಿಷ್ಟರ** – ರತ್ನದ ಪೀಠ (ಆದರದಿಂದ ಅನರ್ಘ್ಯ ಮಣಿವಿಷ್ಟರದೊಳ್ ಕುಳ್ಳಿರ್ದು: **ಆದಿಪು,** ೧೫. ೪೨)

**ಮಣಿವೆಸ** – ರತ್ನಗಳನ್ನು ಜೋಡಿಸುವ ಕೆಲಸ (ವಿನಿರ್ಮಿಸಿದ ಸುಯ್ಯಾಣವೆಸದ ಕತ್ತರಿವೆಸದ ಮಣಿವೆಸದ ಮೇಲ್ಗಟ್ಟಿನೊಳಂ: **ಆಚವರ್ಧ,** ೭. ೩ ವ)

**ಮಣಿಸರವಳಿಗೆ** – ಬಟವಿ, ದುಂಡುಗವಲಿ (ಪೊಳೆವ ಶರಚ್ಚಂದ್ರಿಕೆಯೊಳ್ ಮುಳುಂಕಿ ನಸುದೋರ್ಪ ತಾರೆಗಳ ತೆಱದಿಂ ಕಣ್ಗೊಳಿಸಿ ಮಗಮಗಿಪ ಮಣಿಸರವಳಿಗೆಯ ಪಾಯಸಮಂ ಅಸದಳಂ ಬಡ್ಡಿಸಿದರ್: **ಶಾಂತೀಶ್ವಪು,** ೧೫. ೫೭)

**ಮಣಿಶುಕ್ತಿ** – ಸುಗಂಧದ್ರವ್ಯ (ನವಚಂದ್ರಕಾಂತಚಷಕಂಗಳ್ ಚಂದನಕ್ಷೋದದಿಂ ತೀವಿರ್ದುಂ ಮಣಿಶುಕ್ತಿಗಳ್ ಪರಿಮಳತ್ ಕಾಶ್ಮೀರಸಾರಾಂಬುವಿಂ ತೀವಿರ್ದುಂ: **ಚಂದ್ರಪ್ರಪು,** ೬. ೫೪)

**ಮಣೆ** – ಆಸನ, ಪೀಠ (ಅಗ್ರಾಸನದೊಳುಣಲೆಂದು ಒಂದು ಮಣೆಯನೇಱಿರ್ದೊನನಿಂತೆಂದಂ: **ವಡ್ಡಾರಾ,** ಪು. ೧೮೫, ಸಾ. ೨೫)

**ಮಣ್ಬೆಱು** – ಜಮೀನನ್ನು ಹೊಂದು (ರಾಗಮೊದವೆ ಬೆಲೆವೆಣ್ ಪೆಣ್ಣಂ ಪೆತ್ತಂತಿರೆ ಪಾರ್ವಂ ಮಣ್ಬೆತ್ತಂತಿರೆ ಪಿರಿದು ಸಂತಸಂ ಮಿಗೆ: **ಧರ್ಮಾಮೃ,** ೧. ೧೦೪)

**ಮಣ್ಮಟಿ** – ಭಯಂಕರ ಸಾವು (ಆಹವ ದೋಹಳಂ ತಮಗೆ ಕೈಮಿಗೆ ಬಾಳಱೆವೊಯ್ಗೆ ಬೆರ್ಚದುತ್ಸಾಹಮನಪ್ಪುಕೆಯ್ದು ಇಱಿದು ಪೋಗದೆ ಮಣ್ಮಟಿಯಾಗೆ: **ಪಂಪರಾ,** ೧೩. ೬೫)

**ಮಣ್ಮಟಿಸು** – ತಳಮಳಗೊಳ್ಳು (ಶೈಳಮನೆತ್ತುವುದುಂ ಗೋಪಾಳಂ ಫಣಿಮಣಿಗಳೆಸೆಯೆ ಮಣ್ಮಟಿಸುವ ಪಾತಾಳಾಹಿವಿತತಿ: **ನೇಮಿನಾಪು,** ೮. ೧೫)

**ಮತ್** – ನನ್ನ (ಆಜಿರಂಗದೊಳ್ ಮುಂದೆ ಸಮಾನನಾಗಿ ಬೆಸದೆ ಇರ್ಪವನುಂ ತುಱುಕಾಱನಾಗೆ ಮತ್ ಸ್ಯಂದನ ಚೋದನಕ್ರಮಮದುಂ ಪೋಲೆಯಂಗೆ ಅಮರ್ದು ಇರ್ಕುಂ: **ಪಂಪಭಾ,** ೧೨. ೯೪)

**ಮತಂಗಜ** – ಆನೆ (ಪರ್ವಿತ್ತು ಮತಂಗಜ ಉಚ್ಚಳಿತ ಕಂಜಾಳೀರಜಸ್ತೋಮಮಂ: **ಕಾದಂಬ,** ೧. ೧೩೦)

**ಮತಿ** – ಬುದ್ಧಿ (ಪ್ರತಿಭಾ ಸಂವಿತ್‌ಪ್ರಜ್ಞಾ ಮತಿ ಮೇಧಾ ಬುದ್ಧಿ: **ಅಭಿಧಾವ,** ೨. ೧. ३) ಅರಿವು (ಲತೆಗಳ್ ಜಂಗಮರೂಪದಿಂದೆ ನೆರದುವೋ ದಿವ್ಯಾಪ್ಸರೋವ್ರಂದಂ ಈ ಕ್ಷಿತಿಗೇಂ ಇಂದ್ರನ ಶಾಪದಿಂದ ಇಟಿದುವೋ ಪೇಟೆಂಬ ಶಂಕಾಂತರಂ ಮತಿಗಂ ಪುಟ್ಟುವಿನೆಗಂ: **ಪಂಪಭಾ,** ೪. ೩೯)

**ಮತಿಜ್ಞಾನ** – [ಜೈನ] ಎಂಟು ವಿಧವಾದ ಜ್ಞಾನಗಳಲ್ಲಿ ಒಂದು, ಮನನ (ಇರ್ಪತ್ತೊಂದು ಮತಿಜ್ಞಾನಭೇದಮುಮಂ .. .. ಯಥೋಚಿತವಿಧಿಯಿಂ ನೋಂತು: **ಆದಿಪು,** ३. ४೦ ವ)

**ಮತ್ಕುಣ** – ತಿಗಣೆ (ತಚ್ಛಿದ್ರಭಾಗಮಂ ಪೊಕ್ಕುದತಿತ್ವರಿತಗತಿ ಮತ್ಕುಣಂ: **ಪಂಚತಂತ್ರ,** ೨೦೦)

**ಮತ್ತಂ** – ಪುನಃ (ನುಡಿಯಿಸಿ ಕೇಳ್ಗುಂ ಹರಿಗನ ಪಡೆಮಾತನೆ ಮಾತು ತಪ್ಪುಳ್ಳೊಡಂ ಮತ್ತಂ ಅದಂ ನುಡಿಯಿಸುಗುಂ: **ಪಂಪಭಾ,** ४. ೫೬); ಅಲ್ಲದೆ(ಕುಱಿತವರಲ್ಲದೆ ಮತ್ತಂ ಪೆಱರುಂ ತಂತಮ್ಮ ನುಡಿಯೊಳೆಲ್ಲರ್ ಜಾಣರ್: **ಕವಿರಾಮಾ,** ೧. ३೯)

**ಮತ್ತಕಾಶಿನಿ** – ಮೋಹವನ್ನುಂಟುಮಾಡುವವಳು (ಮತ್ತೊ ಒಂದೆಡೆಯೊಳ್ ಒರ್ವ ಮತ್ತಕಾಶಿನಿ ಗಿಳಿಯಂ ಪಾಱಿಪಲ್ಲಿ: **ರಾಜಶೇವಿ,** ೨. ೧೮ ವ)

**ಮತ್ತವಾರಣ** – ಮದಿಸಿದ ಆನೆ (ಒಣಗಿದುದೊಂದು ಪೆರ್ವಿದಿರ ಪೆರ್ವೊದಱಿಂ ಮೊರೆದು ಉರ್ವಿದ ಆಶುಶುಕ್ಷಿಣಿಯವೋಲ್ ಆಂತ ಖಟ್ಗನಿವಹಕ್ಕೆ ರಥಕ್ಕೆ ದಟಕ್ಕೆ ಮತ್ತವಾರಣನಿವಹಕ್ಕೆ ತಕ್ಕಿನ ಅಭಿಮನ್ಯುವ ಕೂರ್ಗಣೆ ಪಾಯ್ದು ನುಂಗಲುಂ ನೊಣೆಯಲುಂ ಉರ್ಚಿಮುಕ್ಕಲುಂ ಇದೇಂ ನೆಱಿ ಕಲ್ತುವೊ ಯುದ್ಧರಂಗದೊಳ್: **ಪಂಪಭಾ** ಪರಿಷತ್ತು, ೧೧. ೯४); ಜಗಲಿ (ಪವಳದ ಕಂಬಂ ಪಳಿಕಿನೆಸೆವ ತೊಲೆ ವಜ್ರದ ಮತ್ತವಾರಣಂ ಮುತ್ತಿನ ಮಂಡವಿಗೆ ಕಿಸುಗಲ್ಲ ಬೋದಿಗೆ ನವಮರಕತರತ್ನ ತೋರಣಂ ಪ್ರಾಕಾರಂ: **ಸುಕುಮಾಚ,** ೧೦. ४೫); ರಥದಲ್ಲಿ ಯೋಧನು ನಿಲ್ಲುವ ಜಾಗ (ದೈತ್ಯಕುಲಕದಳಿವನಮತ್ತವಾರಣಂ ಅದಱ ಮತ್ತವಾರಣ ಸ್ಥಿತಿಯುಮಂ .. .. ನಿಜಾಗ್ರಂಗೆ ತೋಱಿ ನಾಡೆಯುಂ ಮೆಚ್ಚಿ: **ಜಗನ್ನಾವಿ,** ४. ೭೫ ವ); ಒರಗುದಿಂಬು (ಭದಿಪರ್ಯಂತಂ ತನೆಮಿಮ್ಮಿರ್ಪುದು ತಾನದು ಮತ್ತವಾರಣಂ: **ಅಭಿಧಾವ,** ೧. ೧೦. ೧೫)

**ಮತ್ತಾಲಂಬನ** – ಒರಗುದಿಂಬು (ರಾಜ್ಯಲಕ್ಷ್ಮೀ ಲೀಲಾಲಂಬನಂ ಎನಿಸಿದ ಬಿಸುಗೆಯ ಮತ್ತಾಲಂಬನಮಂ ಅವಳಂಬಿಸಿ: **ಆದಿಪು,** ೧४. ೧೦೨ ವ)

**ಮತ್ತಿ** – ಮಚ್ಚೆ (ನಿನ್ನ ಮೊಲಗೆಲದೊಳ್ ಚಿನ್ನದಗಲದ ಪೊನ್ನ ಬಣ್ಣದ ಮತ್ತಿ ಮತ್ತೆನಿಸದೆ ಮೂಡಿದುದು: **ನೇಮಿನಾಪು,** ೨. ३ ವ); ಆ ಹೆಸರಿನ ಮರ (ಮತ್ತಿ ಮಧುಕಂ ಮುಂಗಾರೆ ಪಚ್ಚಾರಿದಿಂಡಲಂ ಆಲಂ .. .. ಬಕುಳಂ ಬೇವತ್ತಕಂ ಕಿಂಶುಕಂ: **ರಾಜಶೇವಿ,** ೫. ೫೬)

**ಮತ್ತಿಕಾಯ್** – ಒಂದು ಆಭರಣ (ಕೆಂಜೆಡೆ ಮತ್ತಿಕಾಯ್ ಪುಲಿಯುಗುರ್ ಕಡಗಂ ಮಣಿ ಪೊಂಗು .. .. ಸಂಜನಿತಾತಿ ಮುಗ್ಧ ವದನಂ: **ವರ್ಧಮಾಪು,** ೧೨. ४೯)

**ಮತ್ತಿನ** – ಉಳಿದ, ಅನಂತರದ (ಅಂತಾದೊಡೆ ಆ ವ್ರತಮಿರ್ಕೆ ಮತ್ತಿನ ಜೊತ್ತಿಸಿ ಕೊಟ್ಟ ಅಸಿತವ್ರತಂಗಳಂ ಆ ಜಿನಮುನಿಗೆ ಕೊಟ್ಟು ಬರ್ಪಂ: **ಸುಕುಮಾಚ,** ೭. ೫ ವ)

**ಮತ್ತೆನಿಸು** – ತಪ್ಪು (ಕುತ್ತಮಿನಿಸಾದೊಡೆ ಅನ್ಯರ್ ಮತ್ತೆನಿಸದೆ ಬಳರಿಗೊಯ್ದು ಕುಡುವರ್ ಕುಱಿಯಂ: **ಸಮಯಪ,** ೫. ೧೯)

**ಮತ್ತೇಭವಿಕ್ರೀಡಿತ** – ಮದ್ದಾನೆಯ ಆಟ (ಮಸಕಂ ಕಾಯ್ದ ಜವಂ ಜವಂಗಮಿದಿರೊಳ್ ನೋಡಲ್ಗುರ್ವಾಗೆ ಮಾಂದಿಸಿಮೀ ವಂದುದು ಕೊಂದುದೆಂದು ಭಯದಿಂ ವಿಪ್ರರ್ ತೆರಳ್ದೋಡೆ .. .. ಆಶ್ರಮಕ್ಕಿಂತು ಬೇವಸಮಂ ಮಾಡುವುದಾಯ್ತುದೊಂದು ವಿಭವಂ ಮತ್ತೇಭವಿಕ್ರೀಡಿತಂ: **ಪಂಪಭಾ,** ೮. ३೭); ಒಂದು ಅಕ್ಷರ ವೃತ್ತ (ಹರಿಣೀ ಮತ್ತೇಭವಿಕ್ರೀಡಿತ ಲಲಿತಮಯೂರಾನ್ವಿತಂ ಛಂದಮಂ .. .. ಪೋಲ್ತು ಚೆಲ್ವಾಯ್ತರಣ್ಯಂ: **ರಾಜಶೇವಿ,** ೫. ೭೫)

**ಮತ್ತೊಂದು** – ಇನ್ನೊಂದು (ಬಗೆ ಮತ್ತೊಂದೆನೆಯುಂ ಗೆಯ್ವೊಗಂ ಇತ್ತೊಂದೆನೆಯುಂ ಅಂಗುಳೀ ನಖಚಯಕಾಂತಿಗಳಂ ಅವಟಯ್ಸಿ ಸಲೆ ಪಾಸಗಯದೆಸೆದೆಸೆ ಪೊರಳ್ಚಿದಂ ಮತ್ತೊರ್ವಂ: **ಶಾಂತಿಪು,** ೫. ೧೦೫)

**ಮತ್ಸರ** – ಅಸೂಯೆ (ಮತ್ಸರಮಯ ಉರಗಕ್ಕಂ ಆಗ್ರಹ ಮಹಾಗ್ರಹಕ್ಕಂ ಕೋಪಮದಾನೇಕಪಕ್ಕಂ ಪಕ್ಕಾಗೆ: **ಶಾಂತಿಪು,** ३. ೭೨ ವ)

**ಮತ್ಸ್ಯ** – ಮೀನು (ಮೀನಂ ಶಫರಂ ತಿಮಿ ಪಾಠೀನಂ ಝಷಂ ಅನಿಮಿಷಂ ವಿಶಾರಂ ಮತ್ಸ್ಯಂ ಮೀನವೆಸರ್: **ಅಭಿಧಾವ,** ೧. ४. ೫); ಒಂದು ದೇಶ (ಸೊಕಮಿರ್ಕೆ ಅಕ್ಕಟ ದರ್ಭಪಾಣಿ ಯಮಜಂ ದರ್ವೀಕರಂ ವಾಯುಪುತ್ರಕನುಂ ಜರ್ಜರಹಸ್ತಂ ಇಂದ್ರತನಯಂ ದಸ್ರಾತ್ಮಜರ್ ದಂಡಮುಷ್ಟಿಕರರ್ ಶಸ್ತ್ರವಿಡಂಬಂ ಐವುದರ್ವರ್ಗಂ ಪಾಂಚಾಲಿಯುಂ ಗಂಧದಾಯಕಿಯಾಗಿರ್ಪಿನಂ ಅಂದು ಮತ್ಸ್ಯಗೃಹದಿಂದ ಈ ನಿಗ್ರಹಂ ಪೊಲ್ಲದೇ: **ಗದಾಯು,** ३. ३४)

**ಮತ್ಸ್ಯಕ** – ವಿರಾಟ ರಾಜ (ಮತ್ಸ್ಯಕನಲ್ಲಿ ವಲಲನಯ್ ಸೂದಕರ್ಮಿ ನಿನಗಿಂತು ಗಂಡಗೌನುಮಾಯ್ತೇ: **ಗದಾಯು,** ೭. ३೬)

**ಮತ್ಸ್ಯನ್ಯಾಯ** –ದೊಡ್ಡ ಮೀನು ಸಣ್ಣ ಮೀನನ್ನು ನುಂಗುವ ಕ್ರಮ, ದುರ್ಬಲನನ್ನು ಪ್ರಬಲನು ಪೀಡಿಸುವುದು (ದುಷ್ಟಬಳವಜ್ಜನಗ್ರಸನದಿಂ ದುರ್ಬಲಜನಂಗಳೊಳ್ ಮತ್ಸ್ಯನ್ಯಾಯಂ ಪ್ರವರ್ತಿಸುಗುಮೆಂದು: **ಆದಿಪು,** ೮. ೭४ ವ)

**ಮತ್ಸ್ಯಾವತಾರ** – ವಿಷ್ಣುವಿನ ಹತ್ತು ಅವತಾರಗಳಲ್ಲಿ ಮೊದಲನೆಯದಾದ ಮೀನಿನ ಅವತಾರ (ಬಹುತಾಪಕ್ಕೆ ಬಿಗುರ್ತು ವಿಷ್ಣು ಪಡೆವಂ ಮತ್ಸ್ಯಾವತಾರಕ್ಕಿನಂ ತುಹಿನಾದ್ರೀಂದ್ರವನೊತ್ತುಗೊಂಡು ನಡೆವಂ: **ಪಂಪರಾ,** ೭. ೯೮)

**ಮಥನಶ್ರೀ** – ಕಲರವ, ಗಲಾಟೆ (ಆ ವಿವಿಧ ಕಳಕಳಿಕ್ಕೆ ವನಾವಳಿಯಿಂ ಪಾಱಿ ಮೊಱೆವ ಮಧುಪಶ್ರೇಣೀರಾವದ

ಘೋಷಣೆ ಕಳೆದುದು ಇಳಾವಲ್ಲಭಸುತನ ಪಡೆಯ ಮಥನಶ್ರೀಯಂ: **ಶಾಂತಿಪು,** ೮. ೬)

**ಮದ** – ಉತ್ಸಾಹ (ರಮಣಿನಿವಹಕ್ಕೆ ಕಾಮಕಾತರತೆಯಂ ಅಂಗಜಂಗೆ ಮದಮಂ ಜನದೃಷ್ಟಿಗಪೂರ್ವತುಷ್ಟಿಯಂ .. .. ಇತ್ತನಂದು .. .. ನೃಪಾತ್ಮಜಂ: **ಪುಷ್ಪದಂಪು,** ೪.೭೦); ಸೊಕ್ಕು (ಮದಂ ಉತ್ಸೇಕ ಉದ್ದವಂ ದರ್ಪ: ಅಭಿಧಾವ, ೨. ೨. ೭); [ಜೈನ] ಜ್ಞಾನ, ಪೂಜಾ, ಜಾತಿ, ಕುಲ, ಬಲ, ಐಶ್ವರ್ಯ, ತಪ, ವಪು ಎಂಬ ಎಂಟು ಮದಗಳು (ಏಟುಂ ಭಯಂಗಳಂ ಬಿಟ್ಟು ಎಂಟು ಮದಂಗಳಂ ಉಟಿದು .. .. ತಪೋಮಾರ್ಗದೊಳ್: **ಅನಂತಪು,** ೧೨. ೩೨ ವ); ಆನೆಯ ಮದೋದಕ (ಕಾಯ್ಗಳಿಂದಮಿಂಬಾಗಿರೆ ಸೋರ್ದ ಸೋನೆ ಮದಮಾಗಿರೆ ಮಾವಿನ ಬಂದ ಕೋಡೆ ಕೋಡಾಗಿರೆ ಕೋಡುಗೊಂಡು ಪರಿದತ್ತು ವಸಂರಗಜಂ: **ಪಂಪಭಾ,** ೨. ೧೫)

**ಮದನ** – ಮನ್ಮಥ (ಮದನ ದವಾನಲಾರ್ಚಿ ತನುವಂ ಸುಡೆ ತಳ್ತ ಎಮೆಯೊಳ್ ಪಳಂಚಿ ಬೀಗಿದ ಬೆಳರ್ವಾಯೊಳ್ ಉಚ್ಚಳಿಸಿ .. .. ಎಯ್ದಿದುವು ನೇತ್ರಜಲಬಿಂದುಗಳ್ ಆಕೆಯ ನಿಮ್ನನಾಭಿಯಂ: **ಪಂಪಭಾ,** ೫. ೯)

**ಮದನಕೇಳಿ** – ರತಿಕ್ರೀಡೆ (ವಸಂತದೊಳ್ ಮದನಕೇಳೀಸೂತ್ರಮಂ ಪಾರದೋದಿದ ಕೀರಂ .. .. ಬನಂ ಚಿತ್ತೋತ್ಸವಾಲಂಬನಂ: **ಮಲ್ಲಿನಾಪು,** ೨. ೨೮)

**ಮದನಜಲ** – ಮನ್ಮಥದ್ರವ [ಸಂಭೋಗಸಮಯದಲ್ಲಿ ಸ್ತ್ರೀ ಸ್ರವಿಸುವ ದ್ರವ] (ನೋರೊಳಗಳ್ಕಿದ ನೆವದಿಂದಾ ರೂಪದಾನನಂ ಮೃಗಾಕ್ಷಿಯರಪ್ಪರ್ ಸಾರೆ ಬಿಡುತಂದು ಕೂಡಲ್ ನೀರಂತಿರೆ ಬೆರಸೆ ಮದನಜಲಮುಂ ಜಲಮುಂ: **ಶಾಂತಿಪು,** ೮. ೪೨)

**ಮದನದ್ರವ** – ಮದನಜಲ (ತೆಗೆದಪ್ಪಿದೊಡೆ ಉನ್ನಿದ್ರಾಂಭೋಜಾಸ್ಯೆಗೆ ಮದನದ್ರವಮುಂ ಕಣ್ಣನೀರುಂ ಉಣ್ಮಿದುವಾಗಳ್: **ಆದಿಪು,** ೧೨. ೪೪)

**ಮದನಪತತ್ರಿ** – ಮನ್ಮಥನ ಬಾಣ (ಮದನಪತತ್ರಿ ನಿನ್ನ ದೆಸೆಗಾಣದಂ ಮೋಹಮಹಾಹಿ ನಿನ್ನನಣ್ಮದು: **ಪಂಪರಾ,** ೫. ೯)

**ಮದನರಸ** – ಮದನಜಲ [ವದನರಸಂ ಮದನರಸಂ ಪೊದಳ್ದುದೆನಿಸುವಿನಂ ಅಮರಿ ನರ್ತಿಸೆ ಚೆಲ್ವಂ ಪುದಿದುದುರಚೆಲ್ಲಿಯೊಳೆಸೆದುದು ತದುರೋಜಸರೋಜ ಮುಕುಳಯುಗಸಂಚಳನಂ: **ಆದಿಪು,** ೭. ೧೯)

**ಮದನವಿಕಾರ** – ಕಾಮದಿಂದಾಗಿ ಮನಸ್ಸಿನಲ್ಲಾಗುವ ವ್ಯತ್ಯಾಸ (ಮದನವಿಕಾರದಿಂ ಮೆಱೆವ ಪಾರಿವಮಿಲ್ಲದ ರಾಜಕೀರಮಿಲ್ಲದ .. .. ಸೂಳೆವನೆಯಿಲ್ಲದವಿಲ್ಲವು ಸೂಳೆಗೇರಿಯೊಳ್: **ಮಲ್ಲಿನಾಪು,** ೨. ೪೫)

**ಮದನಾವತಾರ** – ಒಂದು ವಿಧವಾದ ಛತ್ರಿ (ಮದನಾವತಾರಮಂ ಕನಕದಂಡಚಾಮರಂ ಉನ್ಮದೇಭಮಂ ಉತ್ತುಂಗದ ಛತ್ರಗಾವೆಯಂ ಪಡೆದುದಾತ್ತ ಕವಿತಿಲಕನೆನಿಸಿದಂ ಕವಿರನ್ನಂ: **ಅಜಿತಪು,** ೧೨. ೪೯)

**ಮದನಾಸ್ತ್ರ** – ಕಾಮಬಾಣ (ಮದನಾಸ್ತ್ರಂ ಖರಸಾಣೆಗಾಣಿಸಿದುದು ಎಂಬಂತಾಗೆ ನಿನ್ನೊಂದು ಕಂದಿದ ಮೆಯ್ .. .. ರಾಗದಿಂ ಎನ್ನೊಳ್ ಸುಕಮಿರ್ಪುದು: **ಪಂಪಭಾ,** ೮. ೬೬)

**ಮದನೋನ್ಮತ್ತೆ** – ಕಾಮದಿಂದ ಮದಿಸಿದವಳು (ಮನಮಂ ಪತ್ತಿಸಿ ಜೊತ್ತಿಸೆ ಮದನೋನ್ಮತ್ತೆಯರ್ ಅವಯವದೆ ಬಂದರ್ ಅರಸಿಯರ್ ಅರೆಬರ್: **ಪಂಪಭಾ,** ೫. ೫೯)

**ಮದಪಟ್ಟ** – ಆನೆಯ ಕಪೋಲದ ಮೇಲೆ ಮದರಸ ಇಳಿಯುವುದರಿಂದಾದ ಗೆರೆ (ಸಮದಂ ಯಾನಮೆ ಮಂದಮಂದಗಮನಂ ಕಸ್ತೂರಿಕಾಪಂಕಪಟ್ಟಮೆ ಧಾರಾಮದ ಪಟ್ಟಮಾಯ್ತು ಎನಿಪಿನಂ: **ಆದಿಪು** ನರಸಿಂ, ೧೧. ೨೧)

**ಮದಪಟ್ಟಿಕೆ** – ಮದಪಟ್ಟ (ಮಕರಾಂಕ ದ್ವಿಪ ಮದಪಟ್ಟಿಕೆಯೆನಿಸಿ ಕಪೋಲಮೂಲಮಂ ಮುಟ್ಟಿದುವು .. .. ಮಧುಪಂಗಳ್: **ಪಂಪರಾ,** ೩. ೯೪)

**ಮದರ** – [ಮದ್ರ] ಸಂತೋಷ (ಅರತಿ ಮದರ ಹಾಹಾ ಹಾ ಮರಗಾರಾತಿಘಾತೀಪುರುಷಯುಪಮ ಹಾ ಹಾ ಹಾ: **ವರ್ಧಮಾಪು,** ೫. ೧೨)

**ಮದರದನಿ** – ಮದಿಸಿದ ಆನೆ (ಮದರದನಿ ಕಂಭಮಂ ಕಿಱ್ತಿದಿರೆ ನೆಲಂ ಭೋರನೆಯ್ತರಲ್: **ಕರ್ಣನೇಮಿ,** ೫. ೧೦೧)

**ಮದಲೇಖೆ** – ಮದಪಟ್ಟಿಕೆ (ಹರಜಟಾಜೂಟಕ್ಕೆ ಚಂದ್ರಲೇಖೆಯಿರ್ಪಂತೆ ದಿಕ್ಕರಿಕಟತಟಕ್ಕೆ ಮದಲೇಖೆಯಿರ್ಪಂತೆ .. .. ಸೊಗಯಿಸುತಿರ್ದುದು: **ಪಂಪಭಾ,** ೧. ೫೭ ವ)

**ಮದಲೋಲ** –ಮತ್ತು ಬರಿಸುವಷ್ಟು ಚಂಚಲವಾದ (ವದನಂ ಇದಲ್ತು ಅಂಬುರುಹಂ ಮದಲೋಲ ವಿಲೋಚನಂಗಳಲ್ಲಮಿವು ಅಳಿಗಳ್ ಮದಮಲ್ಲಿದು ವಿಕಸನಂ : **ಕವಿರಾಮಾ,** ೩. ೨೪)

**ಮದವಕ್ಕಳ್** – ಮದುಮಕ್ಕಳು, ವಧೂವರರು (ವಿಜಯನೆಂಬ ಮಂತ್ರಿ ಉರ್ಕ್ಕೆವದಿಂದ ಅವರ ಪೇಟ್ದ ಮದವಕ್ಕಳಂ ನಿರಾಕರಿಸಿ ಮನೋಹರಿಯ ರೂಪಿಂಗಂ ಜವ್ವನಕ್ಕಂ ಕಳಾಗುಣಂಗಳನಱಿವುರ್ಕ್ಕಂ ಅವರ್ ಯೋಗ್ಯರ್ ಮದವಕ್ಕಳಲ್ಲರ್: **ವಡ್ಡಾರಾ,** ಪು ೪೦, ಸಾ ೨೫)

**ಮದವಟ್ಟೆ** – ಮದಪಟ್ಟಿಕೆ, ಕೆನ್ನೆಯ ಮೇಲೆ ಬರೆದ ರೇಖೆಗಳು (ಕಪೋಲದೊಳ್ ನವಧೂಮಲೇಖೆ ಚೆಲ್ವಿದಿರ್ಗೊಳೆ ಗಾಡಿವೆತ್ತು ಅಡರ್ದು ಕತ್ತುರಿಯೊಳ್ ಮದವಟ್ಟೆಯಂ ವಿಳಾಸದೆ ತೆಗೆದಂತೆ: **ಪಂಪಭಾ,** ೩. ೭೬)

**ಮದವತ್** – ಮದಿಸಿದ, ಮದದಿಂದ ತುಂಬಿದ (ಕದನಪ್ರಾರಂಭಶೌಂಡಂ ರಿಪುನೃಪಬಲದಾವಾನಲಂ ವೈರಿಭೂಭೃತ್ ಮದವತ್ ಮಾತಂಗಕುಂಭಸ್ಥಳ ದಳನಖರೋಗ್ರಾಸಿ ಪಂಚಾಸ್ಯಧೈರ್ಯಂ: **ಪಂಪಭಾ,** ೬. ೭೭)

**ಮದವಳಿಗೆ** – ಮದುವಣಗಿತ್ತಿ (ಬಲದೇವ ವಾಸುದೇವ ಸಮುದ್ರವಿಜಯಾದಿಗಳ್ ಮುಂದಿಟ್ಟು ಒಡಗೊಂಡು ಮದವಳಿಗೆಯ ಮನೆಯೊಳ್ ಮದುವೆ ನೆಱಪುವೆನೆಂದು: **ಹರಿವಂಶ,** ೧೩. ೨೨ ವ)

**ಮದವಾರಣ** – ಮದಿಸಿದ ಆನೆ (ಎನಿತು ಮದವಾರಣಂ ಕ್ರೋಧಿನಿ ಪೊಕ್ಕುಂ ಸಿಂಪೋಹತಮಂ ಗೆಲ್ಗುಮೆ ಮಾತಿನೊಳೇನೊ ಕೆಯ್ದುಗೆಯ್ ಬಱುವನಂ ಆಜಿಶ್ರಾಂತನಂ ಯಶೋಧನಂ ಇಱಿಯಂ: **ಶಾಂತಿಪು,** ೪. ೫೧)

**ಮದಶಿಖಿ** – ಮದಿಸಿದ ನವಿಲು (ಗಿಳಿಯ ಮದಶಿಖಿಯ ಕೊಂಚೆಯ ಕೊಳರ್ವಕ್ಕಿಯ ಕುಕಿಲ್ವ ಕಳಹಂಸೆಯ .. .. ಕಳಕಳಂ ಅಂಗಜನ ಕಳಕಳಮೆನಿಕುಂ: **ಲೀಲಾವತಿ,** ೬. ೧೨೮)

**ಮದಸ್ತಂಬೇರಮಬೃಂಹಿತ** – ಮದ್ದಾನೆಯ ಘೀಂಕಾರ (ಬಹುಸ್ನಿಗ್ಧಂಗಳಪ್ಪ ಮದಸ್ತಂಬೇರಮಬೃಂಹಿತಂಗಳಿಂದಂ ಯುಗಪದಾಸ್ಫಾಲಿತಾನೇಕದುಂದುಭಿಧ್ವನಿ ಮಧುರಗೀತಂಗಳಪ್ಪ ಹಯಹೇಷಿತಂಗಳಿಂದಂ: **ಆದಿಪು,** ೧೪. ೮೬ ವ)

**ಮದಾನೇಕಪ** – ಮದರದನಿ (ನಾಲಕೋಕಮದಾನೇಕಪಂ ನಟ್ಟು ನಿಂದು ಬೀಸಿದೊಡೆ ಬಿಸುಡುವುದುಂ: **ಆದಿಪು,** ೩. ೪೦ ವ)

**ಮದಾಲಸ** – ಮತ್ತಿನಿಂದ [ಗರ್ವದಿಂದ] ಜಡಗೊಂಡ (ಮೀಂಗಳನೊರ್ಮೆ ಕೈರವಮನೊರ್ಮೆ ಚಕೋರಮನೊರ್ಮೆ .. .. ಬಾಲೆಯ ಮದಾಲಸಮುಗ್ಧ ವಿಶಾಲಸಸ್ಮಿತಾಪಾಂಗಮುಗುಟ್ಟುವು: **ಮಲ್ಲಿನಾಪು,** ೭. ೫೦)

**ಮದಾವಿಳ** – ಮದದಿಂದ ಕೆಟ್ಟ (ವಿಳಸದ್ಧರ್ಮಮನೆ ಬಿಸುಟು ಭೋಗಿಪ ಮದಾವಿಳನಂ ಭೋಗಿಪ ವಸ್ತುಗಳೊಳಗಣ ಪುಟುವೆಂಗೆ: **ಸಮಯಪ,** ೬. ೩೫)

**ಮದಾಳಿ** – ಸೊಕ್ಕಿದ ದುಂಬಿ (ಮುಗುಳ್ವದನಾದ ಸಂಪಗೆ ಮಡಲ್ತ ಅದಿರ್ಮುತ್ತೆ ಮರಲ್ದರಲ್ದ ಮಲ್ಲಿಗೆ ಕಾಕಳಿಯೊಳ್ ಆಣತಿಗೆಯ್ವ ಮದಾಳಿ: **ಪಂಪಭಾ,** ೫. ೩೫)

**ಮದಿರಾ** – ಮದ್ಯ (ಅಂಗನಾವದನ ಮದಿರಾಮೋದ ಸ್ವೇದಾಂಬುವಂ ತವೆ ಪೀರ್ದು ಕೌಮುದಿಯೊಳ್ ಅಲರ್ದಿರ್ದ ಉದ್ಯತ್ ನೀಲೋತ್ಪಲಂಗಳ್: **ಅಜಿತಪು,** ೬. ೬೩)

**ಮದಿರಾಕ್ಷಿ** – ಮಾದಕವಾದ ಕಣ್ಣುಳ್ಳವಳು ಣೆಧಿಯಂ ಕಂಡಂತೊಳಗಿಡೆ ಮದಿರಾಕ್ಷಿಯನಿಂದ್ರನಿಡಿದ ನನೆಗಣೆಯಿಂ ತೀವಿ ದೊಣೆಗೆಣೆಗೆರ್ದೆ ಕಕೋಟ್ಟುದಿಗೊಳೆ: **ಶಾಂತಿಪು,** ೬. ೭೫)

**ಮದಿರಾಮದ** – ಮದ್ಯದ ಅಮಲು (ಅಂತು ತಂತುವಾಯಿಕೆ ಪೊಱಮಟು ಕಿಱಿದಂತರಂ ಪೋಗುತ್ತುಂ ಕಟ್ಟಿದಿರೊಳ್ ತಾರ್ಮುಟ್ಟಾಗೆ ಮದಿರಾಮದ ಉನ್ಮತ್ತನಾಗಿ ತನ್ನಿಚ್ಛೆಯಿಂ ಮೆಚ್ಚಿದಂತೆ ಗಟಿಪುತ್ತುಂ ಬರ್ಪ ಮನೆಯಾಣ್ಮನ ಸರಮಂ .. .. ಕೇಳ್ದು: **ಪಂಚತಂತ್ರ,** ೧೨೯ ವ)

**ಮದಿರೋನ್ಮತ್ತ** – ಮದ್ಯದಿಂದ ಅಮಲೇರಿದ (ತಮ್ಮುಮಂ ಇಂತಿದಿರುಮಂ ಏನೆಂದಱಿಯರ್ ಮದಿರೋನ್ಮತ್ತರವೊಲ್ ಅವನಿಪಾಲರ್ ಪಲರುಂ: **ಚಂದ್ರಪ್ರಪು,** ೧೦. ೧೧೭)

**ಮದಿಲ್** – ಗೋಡೆ (ಮದಿಲಡರ್ವ ಭೇಕದಂತೆವೊಲ್ ಉದಯತಟಾಗ್ರದಿಂ ಉರುಳ್ದಂ ಇನಂ ಅಂಬುಧಿಯೊಳ್: **ಲೀಲಾವತಿ,** ೬. ೩)

**ಮದೀಯ** – ನನ್ನ, ನನಗೆ ಸಂಬಂಧಪಟ್ಟ (ಮದೀಯ ಮನೋಗತ ಕಾಮಸಾಗರದ ಒದವಿಂಗೆ ನಲ್ಲಳ ವಿಲೋಚನ ಚಂದ್ರಿಕೆಯೊಂದೆ ಸಾಲದೇ: **ಪಂಪಭಾ,** ೫. ೧೧)

**ಮದುವಣಿಗತನ** – ಮದುಮಗನ ಭಾವ (ಮೆಱೆದಿರ್ದಂ ದೇವೋತ್ತುಂಗಂ ಪುಳಕಿತನಾಗುತ್ತುಂ ಮದುವಣಿಗತನಮಂ ಉಱುಷೆ ನಟಿಯಿಸುತುಂ: **ಗಿರಿಜಾಕ,** ೧೦. ೪೬)

**ಮದುವಳಿಗೆ** – ಮದುವೆ ಹೆಣ್ಣು (ನಾಂದೀಮುಖದೊಸಗೆಗೆ ಕೆಯ್ಗೆಯ್ಯುವೆಂದು ಮದುವಳಿಗೆಯಲ್ಲಿಗೆ ಅಟ್ಟಿದೊಡೆ: **ಹರಿವಂಶ,** ೯. ೬ ವ)

**ಮದುವೆಗಟಿಪು** – ಮದುವೆಗೆ ಬಂದವರನ್ನು ಬೀಳ್ಕೊಡು (ಬಿನ್ನನಿರ್ದು ಸುರಶೈಳಮದೊಂದು ಮದುವೆಗಟಿಪಿದ ಮನೆವೊಲ್: **ಆದಿಪು,** ೭. ೧೦೮)

**ಮದುವೆನಿಲ್** – ಮದುವೆಯಾಗು (ಆನಕಧ್ವನಿ ದೆಸೆಯೊಳ್ ಪಸರಿಸೆ ತಂದರ್ ಪಿರಿದೊಂದೊಸಗೆಳಿರದರಸ ಮದುವೆನಿಲ್ಲೆಂದರೆಬರ್: **ಆದಿಪು,** ೯. ೧೨೭)

**ಮದುವೆನಿಱಿಸು** – ಮದುವೆ ಮಾಡಿಕೊಡು (ಈ ಮಹೀತಳ ರಾಜ್ಯದೊಳ್ ನಿಱಿಸುವುದುಂ ಮದುವೆನಿಱಿಸುವುದುಂ ಎನಗಶಕ್ಯಾನುಷ್ಠಾನಂ: **ಆದಿಪು,** ೮. ೮ ವ)

**ಮದುವೆನೆರೆ** – ಮದುವೆಯ ಮೂಲಕ ಸೇರು (ಷೋಡಶಸಹಸ್ರಸುರಕನ್ಯೆಯರಂ ದನುಜಪುರಸ್ಥೆಯರಂ ಮದುವೆನೆರೆದಪೆಂ: **ಜಗನ್ನಾವಿ,** ೧೧. ೮೯)

**ಮದೆವಳ್** – ಮದುವೆಯ ಹೆಣ್ಣು (ಅನ್ನೆಗಂ ಆ ಮದೆವಳ್ ರಕ್ಕಸನಲ್ಲಿಗೆ ಬಂದು ಏನೆನ್ನಂ ನೀಂ ಮೆಚ್ಚಿದಂತಂ ಮಾಡೆಂದು ತನ್ನಂ ತೋಱಿದೊಡೆ: **ವಡ್ಡಾರಾ,** ಪು ೧೬, ಸಾ ೨೩)

**ಮದೆವಳಂ** – ಮದೆವಳ್ (ಮದೆವಳಂ ಪೋಗಲ್ವೇಟ್ಟು ಪೂಜಿಸಿ ಕಟಿಪಿದೊಡೆ ಆಕೆಯುಂ ತನ್ನ ಮನೆಗೆ ಪೋದಳ್ ಇಂತು ಅವರ್ ಒಳ್ಪಿದರಾದರ್: **ವಡ್ಡಾರಾ,** ಪು ೧೭, ಸಾ ೬)

**ಮದೇಭ** – ಮದಕರಿ (ಮದನಮದೇಭಂ ಕಡಿಕೆಯ್ಯದನ್ನೆಗಂ ಸಲ್ಗುಮಾರ ಬೀರಂಗಳುಂ: **ಅಜಿತಪು,** ೨. ೮೭)

**ಮದೇಭಗಾಮಿನಿ** – ಮದ್ದಾನೆಯಂತೆ ನಿಧಾನವಾಗಿ ನಡೆಯುವವಳು (ಮಾದೇವಿ ಮದೇಭಗಾಮಿನಿ ಜಗತ್ತ್ರಿತಯಾಂಬಿಕೆ ನಾಮದಿದಮ್ಮೈರಾವಧು: **ಶಾಂತಿಪು,** ೯. ೧೫೫)

**ಮದೋತ್ಕ** – ಅಮಲೇರಿದ, ಸೊಕ್ಕಿದ (ಮೆಲ್ಲನಲ್ಲಿ ಸುಟೆಗುಂ ಮಂದಾನಿಳಂ ನೀರ್ ಸುಧಾಸಮಂ ಉದ್ಯಾನವನಂ ಮದೋತ್ಕಪರಪುಷ್ಟಕೋಳಾಹಳಂ: **ಆದಿಪು,** ೫. ೨೯)

**ಮದ್ದಳೆ** – ಮೃದಂಗ (ಕಾವ್ಯರಚನೆ .. .. ಈನಂ ಪರುಷತರಮಕ್ಕುಂ ಒತ್ತುಂಗರಡೆಯ ಮದ್ದಳೆಯ ಜರ್ಝರಧ್ವನಿಗಳವೋಲ್: ಕವಿರಾಮಾ, ೧. ೫೩)

**ಮದ್ದುಗುಣಿಕೆ** – ದತ್ತೂರದ ಗಿಡ (ಉರಗನ ವಿಷಮೇಱಿದರುಂ ಸಿರಿಯುಳ್ಳರುಂ ಮದ್ದುಗುಣಿಕೆಯಂ ತಿಂದವರುಂ ಪಿರಿದುಂ ಪಿತ್ತಾಧಿಕರುಂ ಧರೆಯೊಳ್ ಮೆಯ್ಯಱಿಯರೆಂಬ ನುಡಿ ತಪ್ಪುಗುಮೇ: **ಧರ್ಮಾಮೃ,** ೪. ೧೧೮)

**ಮದ್ಯ** – ಅಮಲೇರಿಸುವ, ಹೆಂಡ (ಮದ್ಯ ಮಧು ಮಾಂಸವೆಂಬಿವನಾದ್ಯಂತಂ ತೊಱೆವುದು: **ಸುಕುಮಾಚ,** ೫. ೪೧)

**ಮದ್ಯಪ** – ಹೆಂಡಕುಡುಕ (ಪ್ರಾಯಶ್ಚಿತ್ತಂ ಸ್ವರ್ಣಸ್ತೇಯಿಗೆ ಗಡ ಮದ್ಯಪಂಗೆ .. .. ಆಯುಧದಿಂದಕಟ ಲಿಂಗವಿಚ್ಛಿತ್ತಿ ಗಡ: **ಸಮಯಪ,** ೧೧. ೭೩)

**ಮದ್ಯಪಾಃ ಕಿಂ ನ ಕುರ್ವಂತಿ** – ಹೆಂಡಕುಡುಕ ಏನು ತಾನೇ ಮಾಡುವುದಿಲ್ಲ? (ಮದ್ಯಪಾಃ ಕಿಂ ನ ಕುರ್ವಂತಿ ಎನುತ್ತುಂ ಪಂಡಿತರ್ಕಳ್ ನುಡಿವರ್: **ಸಮಯಪ,** ೧೪. ೫೮)

**ಮದ್ಯಾಂಗ** – [ಜೈನ] ಹತ್ತು ಕಲ್ಪಕುಜಗಳಲ್ಲಿ ಒಂದು, ಮದ್ಯ ನೀಡುವಂಥದು (ಮಧುಗಳನೆಡೆಯುಡುಗದೆ ಕುಡುಗುಂ ಉಚಿತ ಮದ್ಯಾಂಗಕುಜಂ: **ಆದಿಪು,** ೫. ೩೨)

**ಮಧು** – ವಸಂತ (ಮಧುಮನೋಭವರಿರ್ವರುಮಟ್ಟಿವಟ್ಟು ಮಲ್ಲಿಗೆಗೆ ಬಸಂತದೊಳ್ ಬಯಸಿ ಮಾಡಿದರಲ್ಲರೆ ಪಟ್ಟಬಂಧಮಂ: **ಆದಿಪು,** ೧೧. ೧೦೭); ಮದ್ಯ (ಕುಡಿದೊಡೆ ಸೊರ್ಕಿಸದವು ನಾಣ್ಗೆಡಿಸದವು ಮನಕ್ಕಲಂಪನೀವುವು ರತಮಂ ನಡೆಯಿಪುವೆನಿಸುವ ಮಧುಗಳನೆಡೆಯುಡುಗದೆ ಕುಡುಗುಂ:

**ಆದಿಪು,** ೫. ೩೨); ಜೇನುತುಪ್ಪ (ಅಲರಿರ್ಪ ಪುಷ್ಪಮಧುವಿಂ ಮಧುವಿಂ ವನಮೊಪ್ಪಿ ತೋಱುಗುಂ: **ತ್ರಿಷಷ್ಟಿಪು,** ೬೧. ೨೯)

**ಮಧುಕ –** ಹಿಪ್ಪೆ ಮರ (ಮತ್ತಿ ಮಧುಕಂ ಮುಂಗಾರೆ ಪಚ್ಚಾರಿದಿಂಡಲಂ ಆಲಂ .. .. ಬಕುಳಂ ಬೇವತ್ತಕಂ ಕಿಂಶುಕಂ: **ರಾಜಶೇವಿ,** ೫. ೫೬)

**ಮಧುಕರ –** ದುಂಬಿ (ಪಿಕಕುಲದ ಸೊರ್ಕು ಮಧುಕರನಿಕರದ ಮದವ ಅರಗಿ:ಳಿಗಳ ಗರ್ವಂ: **ಗಿರಿಜಾಕ,** ೨. ೪೫)

**ಮಧುಕರಿ –** ಹೆಣ್ಣು ದುಂಬಿ (ಮಧುಕರಿ ನವಾಮ್ರದೊಳ್ ಮಾಯ್ದುಗ್ಗಮೆಲವದೊಳ್ ಪಾಯ್ದುವುದೇ: **ಶಾಂತಿಪು,** ೫. ೧೫೬)

**ಮಧುಕೋಶ –** ಜೇನುಗೂಡು, ಮದ್ಯಪಾನ ಪಾತ್ರೆ (ಪಾನಪ್ರದೇಶದಂತೆ ಪರಿಗತ ಮಧುಕೋಶಶತಮುಂ ವಿಕೀರ್ಣ ವಿವಿಧಕುಸುಮಮುಂ: **ಕಾದಂಬ,** ೧. ೮೫ ವ)

**ಮಧುದ್ರವ –** ಮದ್ಯ (ವಿಧುಮುಖಿ ಮೆಲ್ಲಮೆಲ್ಲನೆ ಮಧುದ್ರವಮಂ ಸವಿದೀಂಟುವಲ್ಲಿ: **ಜಗನ್ನಾವಿ,** ೧೬. ೧೧೬)

**ಮಧುಪ –** ದುಂಬಿ (ಈ ಮಧುಪಂ ದಳಿತಾಂಭೋಜಾಮೋದಾಸಕ್ತನಕ್ಕಟಾ: **ಆದಿಪು,** ೪. ೭೨); ಹೆಂಡಕುಡುಕ (ಮಧುಪಂ ಕದನಕೆ ಯೋಗ್ಯನೇ: **ಪಂಪರಾ,** ೧. ೨೩)

**ಮಧುಪರ್ಕ –** ಮೊಸರು, ತುಪ್ಪ ನೀರು, ಜೇನುತುಪ್ಪ ಮತ್ತು ಸಕ್ಕರೆಗಳ ಮಿಶ್ರಣ (ಅರ್ಘ್ಯಮೆತ್ತಿ ಮಧುಪರ್ಕ ವೇತ್ರಾಸನ ತಾಂಬೂಲ ದಾನಾದಿಗಳಿಂ ಸಂತಸಂಬಡಿಸಿ: ಪಂಪಭಾ, ೨. ೫೨ ವ)

**ಮಧುಪಿಂಗಳ –** ಜೇನಿನಂತಹ ಹೊಂಗೆಂಪು ಬಣ್ಣ (ಶಾರದನೀರದಾಕೃತಿಯ ಮೆಯ್ ಮಧುಪಿಂಗಳಮಪ್ಪ ದಿಟ್ಟಿ: **ಚಂದ್ರಪ್ರಪು,** ೧೨. ೬೮)

**ಮಧುಪ್ರಸಂಗ –** ವಸಂತ ಸಮಯ (ಆ ಪ್ರಸ್ತಾವದೊಳ್ ಆ ಮಧುಪ್ರಸಂಗ ರಾಗರಸತರಂಗಿತೆಯಾದ ವನಲಕ್ಷ್ಮೀ ವಿಲಾಸಮಂ ವನಪಾಲಕ ಅವನಿಪಾಲಂಗೆ ಅಱಿಪಲೆಂದು: **ಮಲ್ಲಿನಾಪು,** ೫. ೪೦ ವ)

**ಮಧುಮಥನ –** ಮಧು ಎಂಬ ರಾಕ್ಷಸನನ್ನು ಕೊಂದವನು, ಕೃಷ್ಣ (ಅತ್ತ ಮನುಜಮನೋಜನುಂ ಮದನಪರಿತಾಪಕ್ಕಾಱದೆ ಉಮ್ಮಳಿಸಿ ಮಧುಮಥನನ ಕಣ್ಣಂ ಬಂಚಿಸಿ .. .. ವನಮಂ ಎಯ್ದೆವಂದು: **ಪಂಪಭಾ,** ೫. ೧೦ ವ)

**ಮಧುಲಿಟ್ –** ದುಂಬಿ (ಮಧುಪಾನಮತ್ತ ಮಧುಲಿಟ್ ಝೇಂಕಾರದಿಂ ಪಾಡುವಂತಿರೆ: **ನೇಮಿನಾಪು,** ೫. ೧೦೧)

**ಮಧುವಿಕಾರಿ –** ಮಧುವನ್ನು ಹೀರಿ ಸೊಕ್ಕೇರಿದ (ಮಧುವಿಕಾರಿ ಕೋಗಿಲೆ ಕುಸುಗಣ್ಣುವೆ ನೀಂ: **ಮಲ್ಲಿನಾಪು,** ೩. ೩೨)

**ಮಧುವಿಕೃತಿ –** ವಸಂತವಿಕಾರ (ಕಳಕಂಠಕ್ಕೆ ಅತನುಗೆ ಚಾಪಳತಾರೋಹಣವಿಕಾರವು ಅಳಿಗೆ ಆಮ್ರಕುಜಾವಳಿಗೆ ಮಧುವಿಕೃತಿ ಮಾನವಕುಳಕ್ಕೆ ಕನಸಿನೊಳಮಿಂತಿಲ್ಲಾ ನಾಡೊಳ್: **ಮಲ್ಲಿನಾಪು,** ೨. ೨೦)

**ಮಧುವಿಹಂಗ –** ದುಂಬಿ (ಮಧುಕುಟ್ಟಿಮತಳದ ಪೂವಲಿಯಂ ಬಿಟ್ಟು ಪಾಱುವ ಮಧುವಿಹಂಗಂಗಳ ಹುಂಕಾರದೊಳಂ ಮುಂದೆ ಬಂದೋದುವ ಮಂಗಳಪಾಠಕರ ಜಯಜಯಾದಿ ಮಧುರವಂಗಳೊಳಂ: **ಕಾದಂಬ,** ೧. ೫೮ ವ)

**ಮಧುವ್ರತ –** ಮಧುವಿಹಂಗ, ದುಂಬಿ (ರತಿಗೆ ಮುಡಿಯಲ್ಕೆ ಮದನಂಗೆ ತುಱುಂಬಲ್ಕೆ ಇರ್ದುದೆಂದು ಮಧು ಸುಟಿದ ಮಧ್ಯವ್ರತಮುಮನಲೆದಪನೆಂಬೀ ಪ್ರತೀತಿಗೆ ಇರುವಂತಿಯಂತೆ ನೋಂತ ಅಲರೊಳವೇ: **ಆದಿಪು,** ೧೧. ೧೧೧)

**ಮಧುಸೇಕ –** ದೋಹದಕ್ರಿಯೆ (ಅಣುವ್ರತಮಂ ಮುನಿವರನೊಳ್ ಕೈಕೊಂಡ ತೆಱದೆ ಮಧುಸೇಕಮನಾದಱಿಸದೆ ವಕುಳಂ ಮುಕುಳಮನರಲಂ ಧರಿಸಿದುದು: **ಚಂದ್ರಪ್ರಪು,** ೨. ೯೨)

**ಮಧೂತ್ಸವ –** ವಸಂತೋತ್ಸವ (ನವಕಳಿಕಾಂಕುರಪ್ರಕರಮಂ ನವಕೋಕಿಲಕುಟ್ಮಲಂಗಳಂ .. .. ಮಧೂತ್ಸವದೊಳಿವೆಮ್ಮ ತಂದೊಡಮೆ ಎಂದಿದಿರೊಳ್ ಪಿಡಿದು ಅಂಗಜಂಗೆ ಲೆಕ್ಕವಣಿಗೆದೋಱುವಂತೆಸೆದು ತೋಱಿದುವಂದಿನ ಬಂದ ಮಾವುಗಳ್: **ಅಜಿತಪು,** ೬. ೨೪)

**ಮಧೂಳಿ –** ಇರುವಂತಿಗೆ (ಮೌಳಿಯೊಳ್ ಉದ್ಭ್ರಮತ್ ಭ್ರಮರಭಾರವಿಭಗ್ನ ಮಧೂಳಿ ಮಾಲತೀಮಾಳೆ ಮನಕ್ಕೆ ವಂದೆಸೆದುದು: **ಶಾಂತಿಪು,** ೩. ೩೬)

**ಮಧ್ಯ –** ಸೊಂಟ (ತಾಟಕಂಗಳ್ ಕಪೋಲಸ್ಥಲಮನಲೆಯೆ ಮಧ್ಯಂ ಕರಂ ಬಳ್ಕೆ: **ಉದ್ಭಟಕಾ,** ೮. ೧೫); ಸಂಗೀತದಲ್ಲಿನ ಸ್ವರಸಪ್ತಕಗಳಲ್ಲಿ ಒಂದು (ಕೋಗಿಲೆ ಗಿಳಿ ತುಂಬಿ ಮಹೀಶನ ಕಿವಿಗಾಗಳ್ ಕ್ರಮದಿತ್ತುವು ತಾರಮಧ್ಯಮಂದ್ರಸ್ವರದಿಂ: **ಚಂದ್ರಪ್ರಪು,** ೭. ೮೨)

**ಮಧ್ಯಂದಿನ –** ನಡುಹಗಲು (ಆಗಡೆ ಪೋಣ್ಮಿತ್ತಲ್ಲಿ ಮಧ್ಯಂದಿನ ಸಮಯ ಸಮುದ್ಭೂತ ಶಂಖಪ್ರಣಾದಂ; **ಕಾದಂಬ,** ೧. ೫೮)

**ಮಧ್ಯಮತನು –** ಅತಿರೇಕಗಳಿಲ್ಲದ ಹದವಾದ ದೇಹಗಾತ್ರ (ಮೃದುಮಧ್ಯಮತನು ಹಿತಮಿತಮೃದುವಚನಂ ಲಲಿತಮಧುರ ಸುಂದರವೇಷಂ: **ಆದಿಪು,** ೧. ೨೯)

**ಮಧ್ಯಲೋಕ –** ಊರ್ಧ್ವಲೋಕ ಮತ್ತು ಅಧೋಲೋಕಗಳ ನಡುವಣ ಭೂಲೋಕ (ನೆಲಸಿರ್ದಪ್ಪುದಸ್ಥಳಂಬಿಡಿದ ಅಧೋಲೋಕಂ ಸಮಂತೆಯ್ದೆ ಸುತ್ತಲುಮಿರ್ದಪ್ಪುದು ಮಧ್ಯಲೋಕಂ ಎಸೆದಿರ್ದಾ ಚೂಳಿಕಾಭಾಗದಾದಲೆಯೊಳ್ ನಿಂದಪ್ಪುದೂರ್ಧ್ವಲೋಕಂ: **ಆದಿಪು,** ೧. ೫೦)

**ಮಧ್ಯಸ್ಥ –** ಮಧ್ಯಸ್ಥಿಕೆಗಾರ (ಬಾಹುಬಲಿಕುಮಾರನ ಭರತೇಶ್ವರನ ಪಕ್ಷದ ರಾಜಲೋಕಮನೆರಡುಂ ದೆಸೆಯೊಳಂ ಮಧ್ಯಸ್ಥರಾಗಿ ಮಿಡುಕದೆ ನೋಡುತ್ತಿರ್ಪಂತು ನಿಯಮಿಸಿದಾಗಳ್: **ಆದಿಪು,** ೧೪. ೧೦೪ ವ)

**ಮಧ್ಯಸ್ಥತೆ –** ಉದಾಸೀನತೆ, ಅಲಕ್ಷ್ಯ (ಪರಮಾರ್ಥಮಂ ಮಧ್ಯಸ್ಥತೆಯುಮಂ ಅಧರಿಸುದವಧಾರಿಸುವಾಗಳ್ ದೇವತೆಯ ನುಡಿದ ನುಡಿ .. .. ನಿಮಗಱಿಯಲಕ್ಕುಮೆ: **ಶಾಂತಿಪು,** ೪. ೧೦೨ ವ)

**ಮಧ್ಯಸ್ಥವೃತ್ತಿ –** ತಟಸ್ಥತೆ, ನಿಷ್ಪಕ್ಷಪಾತ ದೃಷ್ಟಿ (ಜೈನಾಗಮವಾದ್ಯಂತಂ ನೇರಾಣಿಯ ಹೊನ್ನಂತುಟು ಮಧ್ಯಸ್ಥವೃತ್ತಿಯಿಂ ನೋಟ್ಪಾಗಳ್: **ಸಮಯಪ,** ೩. ೨೪)

**ಮಧ್ಯಾಜಿರ –** ನಡುವಣ ಅಂಗಳ (ಭಸ್ವದ್ಭಿತ್ತಿಯಂ ಸುತ್ತಿರೆ ಸುರುಚಿರಚಿತ್ರಂ ಹರಿದ್ರತ್ನಮಧ್ಯಾಜಿರಮಂ .. .. ಬೆಡಂಗಾದುದುತ್ಸಾಹಗೇಹಂ: **ಪಂಪರಾ,** ೫. ೧೦೨)

**ಮನಂಗಲ್ –** ಮತ್ತೊಬ್ಬರ ಮನಸ್ಸನ್ನು ಅರಿತುಕೊ [ನಿನ್ನ ಬಲ್ಲ ಮಾಟ್ಕೆಯೊಳೆಲ್ಲಮೆಲ್ಲಂದದೊಳಂ ಒಡಂಬಡಿಸಿ ಮನಂಗಲ್ವುದೆಂದು ನಿಯೋಜಿಸಿ: **ಆದಿಪು,** ೩. ೨೬ ವ)

**ಮನಂಗಲಿ –** ಮಾನಸಿಕವಾಗಿ ಪರಾಕ್ರಮಿಯಾದವನು )ಸೆರಗಂ ಬಗೆದೋಡಿದರೊಂದು ಪೊಟ್ಟುಮೊಂದರ್ಕಮಿದಿರ್ಚಲಾಱದೆ ಮನಂಗಲಿಗಳ್ ಕದನತ್ರಿಣೇತ್ರನಂ: **ಪಂಪಭಾ,** ೮. ೧೦೮)

**ಮನಂಗಾಣ್** – ಸ್ಪಷ್ಟವಾಗಿ ಅರಿತುಕೊ (ಮಾತಾಡಿ ಮನಂಗಾಣ್ಬೆನೆಂದು ಮಂತ್ರಿವರಂ ಮಾತಾಡಿಸಿಯುಂ ಮಾತಾಡದೆ ನೋಡದೆ ಕಂದರ್ಪದೇವನಿಂತಿರುತಿರ್ದಂ: **ಕುಸುಮಾಕಾ,** ೮. ೧೦೧)

**ಮನಂಗಾಪು** – ಮನೋನಿಗ್ರಹ (ಕೀಚಕಂ ಕಾಮದೇವಂ ಮಾಡಿದ ಯಾಚಕನಂತೆ ಕರಮೆ ನಾಣ್ಗೆಟ್ಟು ಮನಂಗಾಪು ಅಱಿದು ಅಳಿಪಿ ನೋಡಿ: **ಪಂಪಭಾ,** ೮. ೫೯ ವ)

**ಮನಂಗಿಡು** – ಎದೆಗುಂದು (ಪಿಡಿದು ತಳಾಱರೋವದೆ ಕನಲ್ದು ಮನಂಗಿಡೆ ಕಟ್ಟಿ ಶಂಕೆಯಿಂ:. **ಧರ್ಮಾಮೃ,** ೧೨. ೧೫೩)

**ಮನಂಗೆಯ್** – ನಿರ್ಧಾರಮಾಡು (ಸುಗ್ರೀವಾದಿಗಳುಂ ಮಗುಳ್ದು ಕಾದಲ್ ಮನಂಗೆಯ್ದು ಬರೆ: **ಪಂಪರಾ,** ೧೪. ೧೪೧ ವ)

**ಮನಂಗೊಳ್** – ಆಕರ್ಷಿಸು (ಪುರಾತನ ಭವ ಸ್ನೇಹಕ್ಕೆ ಪುಣ್ಯಂ ಮಹಾಸುಖಮಾಗುತ್ತಿರೆ ಬಂದು ಪುಟ್ಟಿ ಗುರುವುಂ ತಾನುಂ ಮನಂಗೊಂಡರ್: **ಶಾಂತಿಪು,** ೭. ೧೨೧); ಮೆಚ್ಚು (ಆಕೆಯ ಪ್ರತ್ಯುತ್ಪನ್ನಮತಿಯಂ ಮನಂಗೊಂಡು ಪೊಗಟುತ್ತುಂ: **ಶಾಂತಿಪು,** ೮. ೮೫ ವ); ಮನಸ್ಸಿಗೆ ಹಿಡಿಸು (ಮನಂಗೊಳ್– ಚಿತ್ತವಿಮೋಹನೇ: **ಶಬ್ದಮದ,** ಧಾ ೯೭೫); ಅಪೇಕ್ಷೆಪಡು (ವಿನಯದಿಂದೆಱಗಿ ಮನಂಗೊಂಡು ಯತಿಪತಿಯೊಳ್ ಕೈಕೊಂಡನವಂ ಕಾಕಮಾಂಸವಿರತಿವ್ರತಮಂ: **ಆಚವರ್ಧ,** ೧೬. ೫೬); ಸಂತುಷ್ಟಿಗೊಳ್ಳು (ಅಂತು ಮನಂಗೊಳೆ ನೋಟ್ಪಿನಂ: **ಪುಷ್ಪದಂಪು,** ೩. ೭೬ ವ)

**ಮನಂಗೊಳಿಸು** – ಆಹ್ಲಾದವುಂಟುಮಾಡು (ತಳಿರ್ಗಳಸಂ ಮುಕುಂದ ರವಂ ಎತ್ತಿದ ಮುತ್ತಿನ ಮಂಟಪಂ ಮನಂಗೊಳಿಪ ವಿತಾನಪಙ್ಕ್ತಿ ಪಸುರ್ವಂದಲೊಳ್ ಒಲ್ದು ಎಡೆಯಾಡುವ ಎಯ್ದೆಯರ್: **ಪಂಪಭಾ,** ೧. ೧೦೭); ಆಕರ್ಷಿಸು (ನೆಗಟ್ದರಸಂ ಮನಂಗೊಳಿಸೆ ಮಾರ್ಗಮೊಡಂಬಡೆ ದೇಸೆ ಕಬ್ಬಮಂ ಬಗೆಗೊಳಲಿಂತು ಪೇಟ್ದುದು ಮಹೀಭೂಜಸಾರ್ಥಕಂ: **ಗದಾಯು,** ೧. ೩೬)

**ಮನಂದರ್** – ನಿಶ್ಚೈಸು (ನಿಮ್ಮನೆ ನೋಡಿ ಮದ್ಗುರುವಿಯೋಗಮನಾಱಿಪೆವೀಗಳೀ ತಪಕ್ಕಮ್ಮ ಮನಂದರಲ್ ನಿಮಗೆ ಸಲ್ಲದು: **ಆದಿಪು,** ೪. ೬೮)

**ಮನಂದೆಗೆ** – ಹಿಂಜರಿ (ಸಿದ್ಧರ್ ಸಮರಕೇಳಿಗಪ್ರಸಿದ್ಧರೆನಿಸಿ ಮನಂದೆಗೆಯೆಯುಂ ಸಾಧ್ಯರ್ ಕಳೇಲಸಾಧ್ಯರೆನಿಸಿ ಬೆಂಗೊಟ್ಟೋಡೆಯುಂ: **ಜಗನ್ನಾವಿ,** ೧೩. ೭೭ ವ)

**ಮನಂಬಡು** – ಸಮ್ಮತಿಸು (ಬಂಧುಗಳ್ ಮನಂಬಡೆ ಕಡುರಯ್ಯಮಾಯ್ತು ಅಮಿತತೇಜನೊಳಂದು ವಿವಾಹಮಂಗಳಂ: **ಆದಿಪು,** ೪. ೫೩)

**ಮನಂಬಸು** – ಇಮ್ಮನವಾಗು, ಒಡೆದ ಮನಸ್ಸು (ಪ್ರಸನ್ನಗಂಭೀರಚಿತ್ತದಿಂದಿದನವಧಾರಿಪುದು ಯುವರಾಜ ಮನಂಬಸದೊರ್ಮೆಗೆ ಸಲಿಪುದೆಮ್ಮ ಮುದುಗಣ್ತನಮಂ: **ಆದಿಪು,** ೧೪. ೧೦೪)

**ಮನಂಬಿಡೆ** – ಮನಃಪೂರ್ವಕವಾಗಿ (ಒಡವಳೆದಂಬರೇಚರರನ್ವಿತ ಮಂತ್ರಿಸಮೂಹಮಂ ಮನಂಬಿಡೆ ಪೊರೆದಿಷ್ಟಜನಮಂ ಕರೆದು: **ಆದಿಪು,** ೨. ೫೦)

**ಮನಂಬುಗು** – ಮನಸ್ಸಿಗೆ ನಾಟು (ಪುಗೆ ಪೊಱಮಡೆ ತನ್ನ ಮನಂಬುಗುವಂತಿರೆ ತನ್ನ ಮಕುಟಶಿಖರಮನವು ನೆಟ್ಟಗೆ ತಾಗುವಂತುಮಾಗಿರೆ: **ಆದಿಪು,** ೧೬. ೩೮)

**ಮನಂಬೊಯ್** – ಮನದಟ್ಟುಮಾಡು (ಮನಂಬೊಯ್ದು ಜೈನ ಯತೀಂದ್ರೋತ್ತಮರೆಂದು ನಿಟ್ಟೆಗೊಳಿಸಲ್ಕೆಂತುಂ ಪೆಱರ್ ಬಲ್ಲರೇ: **ಸಮಯಪ,** ೪. ೪೫)

**ಮನಂಮಿಗು** – ಧೈರ್ಯಗುಂದು (ಮೃಗಾಧಿಪತಿ ನೋಡಿ ಕರುಣಾರಸಾರ್ದ್ರಹೃದಯನಾಗಿ ಮನಂಮಿಕ್ಕು ಖಿನ್ನನಾಗಿರ್ದ ಪಿಂಗಳಕನಲ್ಲಿಗೆ ದವನಕಂ ಬಂದು: **ಪಂಚತಂತ್ರ,** ೨೪೫ ವ)

**ಮನಃಕಂಪ** – ಎದೆನಡುಕ, ಭಯ (ಎನ್ನ ನುಡಿದ ನುಡಿಯೇ ತನಗೆ ಮನಃಕಂಪಮಂ ಪಡೆಯೆ: **ಆದಿಪು,** ೩. ೬೪ ವ)

**ಮನಃಕ್ಷತ** – ಮನಸ್ಸಿನ ಮೇಲಾದ ಪೆಟ್ಟು (ಅತಿವಿಶದವಿಶಾಲ ಊರುಕ್ಷತದಿಂದೊಱೆದನಿತು ಜಡೆಯುಮಂ ನಾಂದಿ ಮನಃಕ್ಷತದೊಡನೆ ಎಟ್ಟರಿಸಿದುದು ಉತ್ಥಿತಮಾ ವಂದಸ್ರಮಿಶ್ರಗಂಧಂ ಮುನಿಯಂ: **ಪಂಪಭಾ,** ೧. ೧೦೫)

**ಮನಃಪರ್ಯಾಯ** – [ಜೈನ] ಐದು ವಿಧವಾದ ಜ್ಞಾನಗಳಲ್ಲಿ ಒಂದು; ಇತರರ ಅಂತರಂಗವನ್ನು ತಿಳಿಯುವುದು (ತ್ರಿರಾತ್ರಂ ದೀಕ್ಷೋಪವಾಸಂಗೆಯ್ದು ಲಬ್ಧಸಪ್ತರ್ಧಿಭೂಷಣಂ ಮನಃಪರ್ಯಾಯಜ್ಞಾನ ಪ್ರತಿಬಿಂಬದರ್ಪಣನಾಗಿ: **ಶಾಂತಿಪು,** ೧೧. ೧೦೬ ವ); ನೋಡಿ, 'ಜ್ಞಾನ'

**ಮನಃಪವನವೇಗಿ** – ಮನಸ್ಸು ಮತ್ತು ಗಾಳಿಗಳಷ್ಟು ವೇಗವುಳ್ಳದ್ದು (ಭಾವಿಸದ ಮುನ್ನಮೆ ಪಾಂಡುಕಮೇಖಳಾವನಕ್ಕೆ ಅಡರ್ದುದು ಇದೇಂ ಮನಃಪವನವೇಗಿಯೋ ಶಕ್ರನ ವಿಕ್ರಿಯಾಗಜಂ: **ಮಲ್ಲಿನಾಪು,** ೧೨. ೬೬)

**ಮನಃಪ್ರವೀಚರಣ** – ಮನಸ್ಸಿನಲ್ಲಿ ಇಂದ್ರಿಯ ಸುಖಾನುಭವ (ಕೂಡಿಸದ ಕೂಟದ ಸಂತಸಮೆಭಿವೆಲ್ಲಮಾರಯ್ಯೆ ಮನಃಪ್ರವೀಚರಣದಿಂ ಸಮಸಂದು: **ಚಂದ್ರಪ್ರಪು,** ೯. ೫೬)

**ಮನಃಪ್ರವೀಚಾರ** – ಮನಃಪ್ರವೀಚರಣ (ಮಾದೇವಿಯರೆಣ್ಬರ್ ಮದನೋದಯಮಂ ಕುಡೆ ಮನಃಪ್ರವೀಚಾರದೊಳಂತಾ ದೇವಂ ಸಂಚಿತಪುಣ್ಯೋದಯದಿಂದನಿತು ಮಹಿಮೆಯಂ ಕೈಕೊಂಡಂ: **ಆದಿಪು,** ೬. ೧೪)

**ಮನಕತ** – [ಮನಃಕ್ಷತ] ಮನಸ್ತಾಪ (ಉದಯಾಸ್ತಸಮಯಮೀ ಚಂದ್ರದಿವಾಕರಮಂಡಲಕ್ಕಂ ಇಲ್ಲಿಂದಂ ತೋರ್ಪುದು ತಾರಕಾಳಿ ನಭಮಂ ಪುದಿದಿರ್ಕುಮಿದರ್ಕೆ ನಿಮಗೆ ಮನಕತಮುಂಟೇ: **ಆದಿಪು,** ೬. ೫೫)

**ಮನಕ್ಕೆ ತರ್** – ಗಮನ ಹರಿಸು (ನೆಗೆಯುತ್ತುಮಿರ್ಪ ತುಂಬಿಗಳಱಪಂ ಮನಕ್ಕೆ ತರಲಾರ್ತುವು: **ಪಂಪರಾ,** ೩. ೭೭)

**ಮನಕ್ಕೆ ವರ್** – ಇಷ್ಟವಾಗು (ಬಳೆದ ಮುನಿಸಿನೊಳ್ ಕೆಚಚನಾದ ಕಣ್ ದೆಸೆಗೆ ಕೆಂಪನೊದವಿಸಿದುದು ದಿಗ್ವನಿತೆಯರ್ಗೆ ರಕ್ತಬಲಿಯಂ ಮನಕ್ಕೆವರೆ ಬಳೆದ ಮುನಿಸೆ ಕುಡುವಂತಾಗಳ್: **ಆದಿಪು,** ೧೪. ೨೩)

**ಮನದನ್ನ** – ಪ್ರೀತಿಪಾತ್ರ (ಗಿಳಿಯ ಬಣ್ಣದ ಕುದುರೆಗಳೊಳ್ ಪೂಡಿದಜಿತಂಜಯಮೆಂಬ ರಥಮನೇಱಿ ತನ್ನ ಮನದನ್ನನಪ್ಪ ಸಾರಥಿಯಂ ಚೋದಿಸಲ್ವೇಟ್ದು: **ಆದಿಪು,** ೧೨. ೭೪ ವ)

**ಮನದನ್ನಳ್** – ಪ್ರಿಯೆ (ಮನದನ್ನಳಪ್ಪ ಕೆಳದಿಗೆ ಮನಮಂ ಮುಂದಿಟ್ಟು ಬಟಿಕೆ ಕಳಿಪಿದೊಡೆ: **ಯಶೋಧಚ,** ೨. ೩೩)

**ಮನದೆಗೊಳ್** – ಮನಸ್ಸಿಗೆ ತಂದುಕೊಳ್ಳು (ಭಂಗಿಗಳೊಳೆಮ್ಮೊಳಾದೀ ಸಂಗಡಮಂ ನೀಮೆ ಮನದೆಗೊಂಡೆಮ್ಮ ಕಿಸುರ್ ಪಿಂಗುಗೆ ಅಗಲ್ವೆಡೆಯೊಳ್: **ಆದಿಪು,** ೧೧. ೧೩೩)

**ಮನದೆಗೊಳಿಸು** – ಮನಸ್ಸಿಗೆ ಹಿಡಿಸು, ಆಕರ್ಷಿಸು (ವಿನಯಂ ಸಹಜಂ ಕೃತ್ರಿಮಮೆನಿಸಿದುವು ಅವು ಬೇಱೆವೇಱೆ ವಿದ್ವಜ್ಜನಮಂ ಮನದೆಗೊಳಿಸುವುವು: **ಆದಿಪು,** ೧೪. ೬೩)

**ಮನಮಾರೆ** – ತೃಪ್ತಿಯಾಗುವ ಹಾಗೆ (ಅಂತು ಕಣ್ಣಾರೆ ನೋಡಿ ಮನಮಾರೆ ಪೊಗೞೆ: **ಅಜಿತಪು,** ೪. ೧೫ ವ)

**ಮನಮಿಗು** – ಎದೆಗುಂದು, ಮನಸ್ಸು ಕುಸಿ (ಮನಮಿಕ್ಕು ಒಯ್ಯನೆ ನುಡಿದಂ ಪತ್ರಲೇಖೆಗೆ ಅವನಿಪತನಯಂ: **ಕಾದಂಬ,** ೮. ೫೩)

**ಮನಮುರಿ** – ಮನಸ್ಸನ್ನು ಬೇರೆಡೆ ತಿರುಗಿಸು (ವನಿತೆಯುಮಂ ನಂಟರುಮಂ ತಂದೆಯುಮಂ ಪೆತ್ತ ತಾಯಿಯುಮಂ ವೃತ್ತಿಯುಮಂ ಮನಮುರಿದು ತೊಱೆದು: **ಧರ್ಮಾಮೃ,** ೬. ೪೨)

**ಮನಮೆಳದಾಗು** – ಮನಸ್ಸು ಹಿಂಜರಿ (ಮನಮೆಳದಾಗೆ ವೈರಿಗೆ ಮನೀಷಿಜನಂ ಮನಮೀಯೆ ಮಾನಿನೀ ಜನಂ ಅಭಿಮಾನಮಂ ಮಱೆಯೆ .. .. ಸ್ತವನೀಯಮಾದುದು ಆತನ .. ..ಪರಿಪೂರ್ಣ ಯೌವನಂ: **ಪಂಪರಾ,** ೩. ೯)

**ಮನಮೊಸೆ** – ಮನಸ್ಸಿಗೆ ಒಪ್ಪು (ಮನಮೊಸೆದಿರ್ಪನಂ ಕಿಱಿದು ವಸ್ತುವನಿತ್ತೊಡೆ ಸಾಲ್ವುದು ಎಂದು ಮೆಲ್ಲನೆ ನುಡಿದು ಅರ್ಥಮಂ ನೆಱೆ ಕಟಿಲ್ಚುವುದು ಆತನೊಳ್ ಅಂಬುಜಾನನೇ: **ಶಾಂತೀಶ್ವಪು,** ೧೧. ೭೬)

**ಮನವಾಲ್ಗುಡಿ** – ಮನಸ್ಸಿನಲ್ಲೇ ಹಾಲುಕುಡಿ, ಕನಸು ಕಾಣು (ಮಹಾವಿಭೂತಿಯೊಳ್ ನೆರೆವೆನಮೋಘಮೆಂದು ಮನವಾಲ್ಗುಡಿವಂಗೆ ಅದು ಕೂಡದಂತೆವೋಲ್: **ಸಮಯಪ,** ೯. ೧೩೧)

**ಮನಸಲ್** – ಮನಸೋಲು (ನಾವೆಯೊಡನೇಱೆ ಪುಟ್ಟನಿಕ್ಕುತ್ತಿರೆ ಯೋಜನಗಂಧಿಯಂಬಿಗಿತ್ತಿಗೆ ಮನಸಂದಂ ನದಿಯ ಮಧ್ಯದೊಳ್ ಮುನಿನಾಥಂ: **ಧರ್ಮಪ,** ೭. ೨೫)

**ಮನಸಿಜ** – ಮನ್ಮಥ (ಮನಸಿಜನ ವಶೀಕರಣ ಅಂಜನಪುಂಜದ ಪುತ್ರಿಕಾಳಿಯೆನೆ ಕಾಳಿಮಮಂ ತನಿಗೆದಱುವ ತನುರುಚಿ ಮೋಹನಮಯಮಾಗಿರ್ದರ್ ಎಸೆವ ಶಬರಾಂಗನೆಯರ್: **ಶಾಂತಿಪು,** ೩. ೭೯); [ಜೈನ] ಬಾಹುಬಲಿಯ ಹೆಸರುಗಳಲ್ಲಿ ಒಂದು (ಚಿತ್ತಜಂ ಚಿತ್ತಭವಂ ಮನಸಿಜಂ ಅನಂಗಂ ಅಂಗಜನೆನೆ ನೆಗಟ್ದುವು ಬಾಹುಬಲಿಗೆ ಪಲವುಂ ಪೆಸರ್ಗಳ್: **ಆದಿಪು,** ೮. ೫೩)

**ಮನಸ್ಖಳನ** – ಉತ್ಸಾಹ ಕುಗ್ಗುವುದು (ಚಕ್ರಿ .. .. ಮನಸ್ಖಳನಮಾಗೆ ವಿಸ್ಮಯಂಬಟ್ಟು: **ಆದಿಪು** ೧೪. ೬ ವ)

**ಮನಸ್ತಾಪ** – ದ್ವೇಷ (ಕೃಷ್ಣೆಗೆ ಮಿಗೆ ದೊರೆಕೊಳಿಸದೆ ಕೋಪಮುಂ ಮನಸ್ತಾಪಮುವಂ: **ಗದಾಯು,** ೧. ೫೯)

**ಮನಸ್ವಿ** – ದೃಢಚಿತ್ತ (ಕರ್ಮದ ಬೇರನೆ ಪಱಿವ ತೆಱದೆ ಪಱಿದಂ ಮನಸ್ವಿ ಚಳದಳಿವಿನೀಳಕೇಶಾವಳಿಯಂ: **ಆದಿಪು,** ೯. ೭೭)

**ಮನೀಷಿ** – ವಿದ್ವಾಂಸ (ಮನಮೆಳದಾಗೆ ವೈರಿಗೆ ಮನೀಷಿಜನಂ ಮನಮೀಯೆ ಮಾನಿನೀ ಜನಂ ಅಭಿಮಾನಮಂ ಮಱೆಯೆ .. .. ಸ್ತವನೀಯಮಾದುದು ಆತನ .. .. ಪರಿಪೂರ್ಣ ಯೌವನಂ: **ಪಂಪರಾ,** ೩. ೯)

**ಮನುಕುಲ** – ಮನುಷ್ಯ ಸಮುದಾಯ (ಮನುಕುಲಮಿಂದು ಪುಣ್ಯಮಯಮಾದುದು: **ಆಚವರ್ಧ,** ೯. ೬)

**ಮನುಚರಿತಾಷ್ಟಕವರ್ಗವಿಧಾನ** – ಕೃಷಿ, ವ್ಯಾಪಾರಾಭಿವೃದ್ಧಿ, ದುರ್ಗರಚನೆ, ಸೇತುನಿರ್ಮಾಣ, ಗ್ರಾಮಾರಣ್ಯ ರಕ್ಷಣೆ, ರತ್ನಶೋಧನೆ, ಗಜಾಶ್ವಶಾಲಾವ್ಯವಸ್ಥೆ, ಕಪ್ಪ ವಸೂಲಿ ಎಂಬ ಎಂಟು ಕಾರ್ಯಗಳು (ಮನುಚರಿತಾಷ್ಟಕವರ್ಗವಿಧಾನನುಂ ನವನಿಧಿಸಂಪೂರ್ಣನುಂ ಪಾಲಿತದಶದಿಶಾಚಕ್ರನುಂ ಏಕಾದಶರುದ್ರಾವತಾರನುಂ ದ್ವಾದಶರಾಜಾರ್ಕ ಪ್ರಯುಕ್ತ ಗುಪ್ತಚರನುಂ .. .. ವಸುಂಧರಾವಳಯಮಂ .. .. ನಿಜಭುಜಾಗ್ರದೊಳ್ ತಾಳ್ದು: **ಪಂಚತಂತ್ರ,** ೬೫ ವ)

**ಮನುಜ** – ಮನುವಿನ ಮಗ (ಮರುದೇವಿಗೆ ನಾಭಿನರೇಶ್ವರಂಗೆ ಮಗನಾದ ಮನುಜನಿಂ ಪುಟ್ಟಿದುದು ಈ ಧರೆಗೆ ಜೈನಧರ್ಮಂ: **ಸಮಯಪ,** ೨. ೨): ಮಾನವ (ಗೂಢ ಗುಲ್ಫ ಪಾರ್ಷ್ಣಿಗಳನೊಳಕೊಂಡ ಮನುಜ ಮಾಂಧಾತನ ಪೊಱ ಅಡಿಗಳ್ ವಿರೋಧಿ ಭೂಪಾಳರ ಅಡಿಗೆಱಗಿಸಿದ ಸಂತೋಷದೊಳ್: **ಪಂಪಭಾ,** ೨. ೩೯ ವ)

**ಮನುಜಗತಿ** – [ಜೈನ] ಮನುಷ್ಯ ಜನ್ಮ; ಚತುರ್ಗತಿಗಳಲ್ಲಿ ಒಂದು (ಮನುಜಗತಿ ಗತಿಗಳೊಳ್ ಪಾವನಂ: **ಪಂಪರಾ,** ೧೬. ೪೪), ನೋಡಿ 'ಚತುರ್ಗತಿ'

**ಮನುಜತೆ** – ಮನುಷ್ಯತ್ವ (ಅವನ ಮನುಜತೆಯ ತನು ನೋಟ್ಪವರೊಳ್ ಮಾಣಿಸಿದುದು ಆದಮೆ ಎಮೆಯಿಕ್ಕುವುದಂ: **ಚಂದ್ರಪ್ರಪು,** ೪. ೮೩)

**ಮನುಜನ್ಮ** – ಮನುಷ್ಯ (ನೃ ನರ ಮಾನವ ಮನುಷ್ಯ ಪಂಚಜನ ಮರ್ತ್ಯ ಸಂಜ್ಞಂ ಪುರುಷಂ: **ಅಭಿಧಾವ,** ೧. ೧೧. ೧)

**ಮನುಜಾಧೀಶ** – ರಾಜ(ಮನುಜಾಧೀಶಸಮೂಹಸಂವರಣದಿಂ .. .. ಆಲಯಮಾತ್ರೊಂದು ಪಿರಿದುಂ ಚೆಲ್ವಿಂಗೆ ರಾಜಾಲಯಂ: **ಆದಿಪು,** ೮. ೩೬)

**ಮನುಜೇಂದ್ರಾಂಗನೆ** – ರಾಣಿ (ಮಾರ್ಗಾವಲಗ್ನನೇತ್ರೆಯಂ ಉಚ್ಛ್ವಾಸನಿತಪ್ತಾಧರೆಯಂ ಮನುಜೇಂದ್ರಾಂಗನೆಯಂ ಎಯ್ದೆ ಕಂಡಿಂತೆಂದಳ್: **ಯಶೋಧಚ,** ೨. ೩೫)

**ಮನುಮತ** – ಮನ್ಮಥ (ಬಿರಯಿಗಳಂ ಬೆರ್ಚಿಸಲಿದೆ ಪರಮಾಸ್ತ್ರಂ ಮನುಮತಂಗೆ ಎನಿಪ್ಪ ವಸಂತಂ ಬರಲ್: **ಕಾದಂಸಂ,** ೮. ೫೧)

**ಮನುಮಾರ್ಗ** – ಸ್ಮೃತಿಗನುಗುಣವಾದ ನಡವಳಿಕೆ (ಮನುಮಾರ್ಗದೊಳ್ ಏಕಾದಶ ದಿನದೊಳ್ ತನಯಂಗೆ ವಿಪ್ರಜನಸಮುಚಿತಮಾಯ್ತೆನೆ ಸಚಿವಂ ವೈಶಂಪಾಯನನೆಂಬೀ ಪೆಸರನಿಟ್ಟನಧಿಕೋತ್ಸವದಿಂ: **ಕಾದಂಬ,** ೨. ೧೧೮)

**ಮನುಷ್ಯಜಾತಿ** – ಮನುಕುಲ (ಬೇಱುಂಟೆ ಮನುಷ್ಯಜಾತಿ ತಾನೊಂದೆ ವಲಂ: **ಆದಿಪು,** ೧೫. ೧೪)

**ಮನುಷ್ಯಧರ್ಮ** – ಕುಬೇರ (ಸುರಿ ರಾಜಿಸೆ ನವರತ್ನವೃಷ್ಟಿಯಂ ನೀಂ ನಿಚ್ಚಂ ಎಂದು ಸೌಧರ್ಮೇಂದ್ರಂ ಮನುಷ್ಯಧರ್ಮಂಗೆ ಬೆಸಸಿ: **ಕರ್ಣನೇಮಿ,** ೮೨ ಮತ್ತು ೮೨ ವ)

**ಮನುಷ್ಯಲೋಕ** – ಭೂಲೋಕ (ಅದು ದಿವಿಜೇಂದ್ರಲೋಕಂ ಇದು ಮನ್ಮಥರೂಪ ಮನುಷ್ಯಲೋಕಂ: **ಆದಿಪು,** ೯. ೧೯)

**ಮನೆಗಟ್ಟು** – ನೆಲಸು (ಸಿರಿ ನಿಂದಳ್ ಮನೆಗಟ್ಟಿ ಪೇರುರದೊಳ್; **ಆಚವರ್ಧ,** ೭. ೩೬)

**ಮನೆಯ** – ಮನೆಯ ಯಜಮಾನ [ಮನೆಯನಿವಂ ಮನೋಭವನಿವಂ ಪೊಸಸುಗ್ಗಿಯೊಳ್ ಆದ ಅದೊಂದು ಕಿತ್ತಂ ಇವಂ: **ಪಂಪಭಾ,** ೪. ೯೭)

**ಮನೆಯಾಣ್ಮ** – ಮನೆಯ ಯಜಮಾನ, ಗಂಡ (ನೋಡಿ ನಾಡಾಡಿಯಲ್ಲದ ಆಕೆಗಳ ಜೋಡೆಗೆಯ್ತಂಗಳಂ ಕಂಡು ಇದು ಮನೆಯಾಣ್ಮನಂ ಮಾಱುವಂದಮಲ್ಲದೆ ಪೂಮಾಱುವಂದಂ

ಅಲ್ತು ಎಂದು ಮುಗುಳ್ನಗೆ ನಗುತುಂ: **ಪಂಪಭಾ,** ೪. ೮೧ ವ)

**ಮನೆದೈವ –** ಕುಲದೇವರು (ಆನಂತಪ್ಪ ಒರ್ಬ ತಾಯ್ಗಂ ತಂದೆಗಂ ಪುಟ್ಟಿದೆನಾದೊಡೆ, ನಾಂ ಪತಿವ್ರತೆಯಾದೊಡೆ, ಮನದೈವಂಗಳೆನಗೆ ಸನ್ನಿದಮಾದೊಡೆನ್ನ ಮೂಗು ಮುನ್ನಿನಂತಾಗಲೀ ಕಟ್ಟಿರ್ದ ಕಟ್ಟೆಲ್ಲಂ ಬಿಟ್ಟುಪೋಗೆಲೆವೇಟ್ಟುಂ: **ಪಂಚತಂತ್ರ,** ೧೩೪ ವ)

**ಮನೆದೊಟ್ಟು –** ಮನೆ ಕೆಲಸದವಳು (ಪೋದ ಮಾರಿಯನ್ನಳೆ ಮನೆದೊಟ್ಟು ಸೀರ್ಕರಡಿಯನ್ನಳೆ ನಾದುನಿ: **ಪಂಪಭಾ,** ೪. ೯೮)

**ಮನೆಯಾಣ್ಮ –** ಮನೆಯೊಡೆಯ (ಮಿಥ್ಯಾಪ್ರಳಾಪಂಗಳಿಂ ಪದಪಿಂದಂ ಮನೆಯಾಣ್ಮನಂ ಮಱುಸುತಂ: **ಸಮಯಪ,** ೫. ೫೪)

**ಮನೆವಾರ್ತೆಗೆಯ್ –** ಸಂಸಾರ ಸಾಗಿಸು (ಅಂತವಂ ಕರಹದ ಸೂಳೆ ಸುತ್ತುವಳೊ ಕುತ್ತುವಳೊ ಮನೆವಾರ್ತೆಗೀವಳೋ: **ಅನಂತಪು,** ೮. ೪೮)

**ಮನೆವಾಟಿ –** ಸಾಂಸಾರಿಕ ಜೀವನ (ತತ್ವಭೇದಿಗಳುಂ ಮನೆವಾಟಿನಾಸೆವಡಲಾಗದು: **ಶಾಂತಿಪು,** ೪. ೮೨ ವ)

**ಮನೆವಾಟಿದಮ್ಮ –** ಗೃಹಸ್ಥಧರ್ಮ (ಮನೆವಾಟಿದಮ್ಮಮವೆಲ್ಲಮಂ ನೀನೆ ಬಲ್ಲೆ: **ಪಂಚತಂತ್ರ,** ೧೯೯ ವ)

**ಮನೆವಾಟ್ಟಿ –** ಗೃಹಕೃತ್ಯ (ಭೀಮಸೇನನ ಮಹಾಪ್ರತಿಜ್ಞೆಯುಮಂ ಆರ್ಗಂ ಬಾರಿಸಲ್ಬಾರದು ಕೆಯ್ಗೆಟಿದ ಮನೆವಾಟ್ಟಿ ಬುದ್ಧವೇಟಲೆಡೆಯಿಲ್ಲ: **ಪಂಪಭಾ,** ೭. ೧೬ ವ)

**ಮನೆವೆಂಡತಿ –** ಗೃಹಿಣಿ (ಮುಕ್ತಿಯೊಳಾಂ ಕೂಡುವೆನೆನುರ್ತರ್ ಅದೇಂ ಕೂಡಲ್ ಬರ್ಪಂತೆ ಮುಕ್ತಿ ಮನೆವೆಂಡತಿಯೇ: **ಸಮಯಪ,** ೧೪. ೧೪)

**ಮನೆವೆರ್ಗಡೆ –** ಅರಮನೆಯ ವ್ಯವಹಾರಗಳನ್ನು ನೋಡಿಕೊಳ್ಳುವ ಅಧಿಕಾರಿ (ಅರಸಂಗೆ ಮನೆವೆರ್ಗಡೆ ಮುದ್ರಾಂಕಿತಮಪ್ಪ ಯಪಾಯಮನದ ಮುದ್ರೆಯಂ ಕಳೆದು: **ಶಾಂತಿಪು,** ೨. ೨೨ ವ)

**ಮನೋಗತ –** ಅಭಿಪ್ರಾಯ (ತಮ ಕಂಡನಿತಱೊಳೆ ತೆರಳ್ದೆನ್ನಾ ಮನೋಗತಧ್ವಾಂತಬಂಧಮಳಱತ್ತೆಲ್ಲಂ: **ಕವಿರಾಮಾ,** ೨. ೬೭); ಆಶಯ (ಮದೀಯ ಮನೋಗತ ಕಾಮಸಾಗರದ ಒದವಿಂಗೆ ನಲ್ಲಳ ವಿಲೋಚನಚಂದ್ರಿಕೆಯೊಂದೆ ಸಾಲದೇ: **ಪಂಪಭಾ,** ೫. ೧೧)

**ಮನೋಗದ –** ಚಿಂತೆ, ದುಃಖ (ಕಾತುದು ಭೀತಿವಲ್ಲರಿ ಮನೋಗದಮುಂ ತಳಿಸಂದು ನಿಂದುದು ಉದ್ಭೂತಮಹಾದ್ಭುತಂ: **ಶಬರಶಂ,** ೪. ೧೧೩)

**ಮನೋಗಮ್ಯ –** ಊಹಿಸಿಕೊಳ್ಳಬಹುದಾದ (ನಯನಕ್ಕೆಡ ಗಮ್ಯನಲ್ಲಂ ಪ್ರಿಯಂ ಮನೋಗಮ್ಯಂ: **ಜಗನ್ನಾವಿ,** ೫. ೧೦೧)

**ಮನೋಗ್ಲಾನಿ –** ಮಾನಸಿಕ ವ್ಯಥೆ(ಜನಿತ ಜನಮನೋಗ್ಲಾನಿ ನಿದಾಘಂ ನಿದಾಘಂ: **ಚಂದ್ರಪ್ರಪು,** ೯. ೬೬)

**ಮನೋಜ –** ಕಾಮ, ಮನ್ಮಥ (ಚೇಟಿಕೆ ಬೀಸುವ ಕುಂಚಂ ಎಯ್ದೆ ಮೆಯ್ದೋಱುವ ಗಾಡಿ ಕಾಂಚನದ ದಂಡದ ಸೀಗುರಿ ನೋಟಿಪ್ಪೊಡೆ ಆರುಮಂ ಮಾಱೆ ಮನೋಜನ ಒಡ್ಡು ಎನಿಸಿದರ್: **ಪಂಪಭಾ,** ೯. ೧೦೦)

**ಮನೋಜದ್ರವ –** ಮನ್ಮಥಜಲ, ವೀರ್ಯ (ಮಧು ಮನೋಜದ್ರವಂ ಪೊಣ್ಮೆ ನಿಲ್ಲಲ್ ನಲವಿಂದಂ ಕೂಡಿದಂ ತದ್ವನವನಿತೆಯೊಳ್ ಆತ್ಮೀಯ ಕಾಂತಂ ವಸಂತಂ: **ಕುಸುಮಾಕಾ,** ೫. ೨೯)

**ಮನೋಜನಿತ –** ಮನಸ್ಸಿನಲ್ಲಿ ಜನಿಸಿದ (ಮನೋಜನಿತ ಮುದಂ ಅನಿಲತನಯನಂ ಅನನ್ಯತವಚನ ಪ್ರಪಂಚಿಂತಿರೆ ನುಡಿದು: **ಕವಿರಾಮಾ,** ೨. ೪೨)

**ಮನೋಜವ –** ಮನಸ್ಸಿನ ವೇಗ (ಜ್ಯೋತಿರ್ವನಮಂ ಮನೋಜವದಿನೆಯ್ದಿ: **ಶಾಂತಿಪು,** ೬. ೩೪)

**ಮನೋಜಸೂದನ –** ಮನ್ಮಥಸಂಹಾರಿ, ಶಿವ (ನೊಸಲೊಳ್ ಕಣ್ಣುಳ್ಳ ಮನೋಜಸೂದನಂ ಪೆಱನದಾವನಾನೆ ದಲ್: **ಜಗನ್ನಾವಿ,** ೩. ೪೬)

**ಮನೋಜಾಗಮ –** ಕಾಮಶಾಸ್ತ್ರ (ಅಂಬರಚರ ಮಿಥುನ ರತಾಂಡಂಬರದೊಡನೊಗೆದ ನಗದ ಮಾರ್ದನಿ ಕಿವಿಗಂ ತುಂಬಿ ಮನೋಜಾಗಮ ಗುರುವೆಂಬುದನೊಡನೆಂಬ ಶಿಷ್ಯನಂ ಪೋಲ್ತಿರ್ಕುಂ: **ಶಾಂತಿಪು,** ೨. ೧೦೨)

**ಮನೋಜಾತ –** ಮನ್ಮಥ (ಆ ಪುರಸ್ತ್ರೀ ಭ್ರೂವಿಕ್ಷೇಪಕ್ಕೆ ಸೇನಾಪತಿಪದವಿಯನಿತ್ತಂ ಮನೋಜಾತಂ: **ಮಲ್ಲಿನಾಪು,** ೨. ೪೪)

**ಮನೋಜ್ಞ –** ಸುಂದರವಾದ (ಮುಕ್ತಿಕನ್ಯಕೆ ಸುರರಾಜನ ಮುಂದೆ ಮಾಲೆಯೂಡಿದ ಮನೋಜ್ಞ ಸಿತಸಿಂಧುವಾರ ಮಾಲೆಯನಿಟೆಕುಂ: **ಶಾಂತಿಪು,** ೧೦. ೪೬)

**ಮನೋನಂದನ –** ಆಹ್ಲಾದಕಾರಿಯಾದುದು (ಮನೋನಂದನಮಪ್ಪ ಪಾಂಡುಕದಿನಾ ಗಿರಿರಾಜವಿಲಾಸಂ ಅಟ್ಟಿಯಂ ತಂದುದು: **ಶಾಂತಿಪು,** ೫. ೨)

**ಮನೋಬಲ –** ಮನಸ್ಸಿನ ಸ್ಥೈರ್ಯ (ತನ್ನ ಚಾತುರ್ದಂತ ಬಲಮಟಿದೊಡಂ ಮನೋಬಲಮಟಿಯದೆ: **ಶಾಂತಿಪು,** ೪. ೩೨ ವ)

**ಮನೋಭಂಗ –** ನಿರಾಶೆ (ಸೇನಾಭಂಗಮುಂ ಮನೋಭಂಗಮುಮಪ್ಪಂತು ಪುಸಿವಾರ್ತೆಯಂ ಪೆಟ್ಟಿಂ: **ಸುಕುಮಾಚ,** ೭. ೫ ವ)

**ಮನೋಭವ –** ಮನಸ್ಸಿನಲ್ಲಿ ಹುಟ್ಟಿದ[ವನು], ಮನ್ಮಥ [ಮನೆಯನಿವಂ ಮನೋಭವನಿವಂ ಪೊಸಸುಗ್ಗಿಯೊಳ್ ಆದ ಅದೊಂದು ಕಿತ್ತಂ ಇವಂ: **ಪಂಪಭಾ,** ೪. ೯೭)

**ಮನೋಭಿಲಷಿತ –** ಇಷ್ಟಪಟ್ಟ (ಮಹಾಬಲ ಖಚರೇಂದ್ರಂ .. .. ಮನೋಭಿಲಷಿತ ವಿಷಯಸುಖಾನುಭವನಿರತನುಂ ಆಗಿ: **ಆದಿಪು,** ೨. ೨೩ ವ)

**ಮನೋಮುದ –** ಮಾನಸಿಕ ಸಂತೋಷ (ಸಾಹಸಭಿಮಂಗೆ ಮನೋಮುದಂಬೆರಸು ಕೃಷ್ಣಂ ಕಟ್ಟಿದಂ ಪಟ್ಟಮಂ: **ಗದಾಯು,** ೧೦. ೨೨)

**ಮನೋರಥ –** ಆಸೆ (ರಥದಿಂ ಧಾತ್ರಿಗೆ ಪಾಯ್ದು ಕೊಂಡು ಗದೆಯಂ ಕೆಯ್ಸಾರ್ದುದು ಅಸ್ಮತ್ ಮನೋರಥಂ ಇಂದು ಎಂದು ಕಡಂಗಿ: **ಪಂಪಭಾ,** ೧೧. ೬೬)

**ಮನೋರಥಮಹೀರುಹ –** ಇಷ್ಟವನ್ನು ಪೂರೈಸುವ ಮರ, ಕಲ್ಪವೃಕ್ಷ (ತೋಯಜನಾಭಂ .. .. ವತ್ಸಕುಲಮಂ ಕಾದಂ ಕಾಯೆ .. .. ಮನೋರಥಮಹೀರುಹಂ ನಾಕಿಗರ್ಳ: **ಜಗನ್ನಾವಿ,** ೩. ೭೭)

**ಮನೋರುಜೆ –** ಮಾನಸಿಕ ಕಾಯಿಲೆ (ಎಮ್ಮ ಬಿತ್ರಿಪ ಶಿಶಿರಕ್ರಿಯೆಯಂ ತನ್ನ ಮನೋರುಜೆಗದಕ್ರಿಯೆಯಾಗೆ ಕಂಡು: **ಚಂದ್ರಪ್ರಪು,** ೮. ೮೮ ವ)

**ಮನೋವಲ್ಲಭ** – ಮನಸ್ಸಿನ ಒಡೆಯ, ಪ್ರಿಯಕರ (ಬಂದು ಮನೋವಲ್ಲಭನ ಸಿಂಹಾಸನಾರ್ಧಕ್ಕೆ ಅಲಂಕಾರಮಾಗಿರ್ದು: **ಪುಷ್ಪದಂಪು,** ೩. ೧೨೧ ವ)

**ಮನೋವಿರತಿ** – ಆಸಕ್ತಿಯಿಲ್ಲದಿರುವುದು (ಸ್ತುತಿನುತ ತತ್ವದೊಳ್ ನುತಿ ಜಿನೇಂದ್ರಬಿಂಬದೊಳ್ ಉಕ್ತಿ ತದ್ಗುಣಸ್ತುತಿರತದೊಳ್ ಮನೋವಿರತಿ ಭೋಗಕದಂಬದೊಳ್ .. .. ಸಮಸಂದಿರೆ: **ಚಂದ್ರಪ್ರಪು,** ೯. ೬೦)

**ಮನೋಹರಿ** – ಚೆಲುವೆ (ನೆಲಸುಗೆ ನಿಶ್ಚಳಮೀ ಭಟಖಡ್ಗಮಂಡಳೊತ್ಪಲವನ ವಿಭ್ರಮ ಭ್ರಮರಿಯಪ್ಪ ಮನೋಹರಿ ರಾಜ್ಯಲಕ್ಷ್ಮಿ: **ಆದಿಪು,** ೧೪. ೧೩೦)

**ಮನ್ನಣೆ** – ಗೌರವ (ಮೈಮೆಯ ಮನ್ನಣೆಯೊಳೀಗಳ್ ಕರಂ ಮನಮನಲರ್ಚೆ: **ಪಂಪಭಾ,** ೧೪. ೪೫)

**ಮನ್ನೆಯ** – ಮಾಂಡಳಿಕ (ಮಣ್ಣ ಕೋಂಟೆಯಂ ನಂಬಿ ಕಲ್ಲ ಕೋಂಟೆಯನೊಡೆದ ಮನ್ನೆಯನುಮಂ: **ಧರ್ಮಾಮೃ,** ೮. ೩೧ ವ); ಮುಖಂಡ (ಮನ್ನೆಯರಾಳಂತೆ ಕಾದಿಯಲಸದೆ: **ಪಂಪಭಾ,** ೫. ೪೬ ವ)

**ಮನ್ಮಥ** – ಕಾಮ (ಮನಸಿಶಯಂ ಪ್ರದ್ಯುಮ್ನಂ ಮನೋಭವಂ ಕಂತು ಮನ್ಮಥಂ ಕಂದರ್ಪಂ ಮನಸಿಜಂ ಅನಂಗಂ ಅಂಗಜಂ ಅನ್ಯಜಂ ಮಕರಕೇತು ಮರಮ ಮದನಂ: **ಅಭಿಧಾವ,** ೧. ೧. ೨೭)

**ಮನ್ಮನಲಪಿತ** – ತೊದಲು ನುಡಿ (ದರಹಸಿತಂ ಹಸಿತಂ ಸುಂದರಮನ್ಮನಲಪಿತರುಚಿತರಂಗಿತಮೆಂಬೀ ಪರಿವಿಡಿದು ಬಾಲಕೇಳಿಯೆ ಕರಮೆ ಮರುಳ್ಚಿದುದು ತಾಯುಮಂ ತಂದೆಯುಮಂ: **ಆದಿಪು,** ೮. ೩೮)

**ಮನ್ಯು** – ವ್ಯಥೆ (ಕರುಣಾರಸಾರ್ದ್ರಹೃದಯಂ ಮನ್ಯು ಗದ್ಗದಕಂಠನುಮಾಗಿ ನೀಡುಂ ಭಾವಿಸಿ ನೋಡಿ: **ಸುಕುಮಾಚ,** ೪. ೬೦ ವ)

**ಮನ್ಯೂದ್ಗತ** – ಶೋಕಭರಿತವಾದ (ರಿಪುನೃಪ ಕುಳಾಂಗನಾಜನ ಮನ್ಯೂದ್ಗತ ಬಾಷ್ಪಸಲಿಲ ಧಾರಾ ಪ್ರತಾನದಿಂ ಕೀರ್ತಿವಲ್ಲಿಯಂ ಬೆಳಯಿಸಿದಂ: **ಪಂಪರಾ,** ೧. ೧೩೬)

**ಮನ್ವಂತರ** – ಹದಿನಾಲ್ಕು ಮಂದಿ ಮನುಗಳಲ್ಲಿ ಪ್ರತಿಯೊಬ್ಬನ ಆಳ್ವಿಕೆಯ ಅವಧಿ (ಆದಿಯ ಮನ್ವಂತರದೊಳ್ ಅಶೀತಿಭಾಗಿಪಲ್ಯದೊಳಾ ಮನ್ವಂತರದಶಮಾಂಶಂ ಮನ್ವಂತರಮಕ್ಕುಂ: **ಪಂಪರಾ,** ೧. ೮೮)

**ಮಮ್ಮ** – ಮೊಮ್ಮಗ (ನೀಂ ಮಮ್ಮನೆಯಪ್ಪೈ ನೋಡು ನಣ್ಪಿಂ ನಿಮಗಮೆಮಗಮಾಮ್ನಾಯದಿಂ ಬಂದುದಿಂತೀ ಜಿನಧರ್ಮಂ: **ಆದಿಪು,** ೨. ೨೦)

**ಮಮ್ಮಲ** – ವಿಶೇಷವಾಗಿ (ಅಂತಾ ಬಾಲೆ ಕಾಯ್ದ ಪುಡಿಯೊಳಗೆ ಬಿಸುಟ್ಟ ಎಳವಾಳೆಯಂತೆ ಸುರತ ಮಕರಧ್ವಜನೊಳಾದ ಬೇಟದೊಳ್ ಮಮ್ಮಲ ಮಱುಗುತಿರ್ದಳ್: **ಪಂಪಭಾ,** ೫. ೧೦ ವ)

**ಮಮ್ಮಟಿ** – ಕ್ಷೋಭೆ (ತುರಂಗಸೇನೆಗಳಂತೆರಡುಂ ಕರಂ ಪರಿಸಿ ಮಮ್ಮಟಿಯಾಗಿರೆ ಕಂಡು: **ಕರ್ಣನೇಮಿ,** ೧೧ ೧೬೪)

**ಮಮ್ಮಟಿಸು** – ಭಯದಿಂದ ತತ್ತರಿಸು (ಅಂತು ಮುಂಬಗಲ್ವರಂ ತುಮುಱಿ ಕಾದುವ ಸಮರಭರಂ ಮನೋರಾಗಮಂ ಮಾಡೆಯುಂ ಮಮ್ಮಟಿಸಿ ಪಾಂಡವಕೌರವಬಲದ ಕಲಿಕೆಯ ಪ್ರಧಾನ ನಾಯಕರ್ಕಳ್: **ಪಂಪಭಾ,** ೧೩. ೩೭ ವ)

**ಮಮ್ಮಟಿಗೊಳ್** – ಮಮ್ಮಟಿಸು (ದೊಮ್ಮಳಿಸಿ ಮಮ್ಮಟಿಗೊಳ್ವ ಗೋಗುಗಳನಟ್ಟಿಕೊಂಡು .. .. ಮಱಿಗೆ ಪೋಗಿ: **ನೇಮಿನಾಪು,** ೮. ೧೦ ವ)

**ಮಯೂಖ** – ಕಾಂತಿ, ಕಿರಣ (ಲಕ್ಷ್ಮಣಂ ಮಣಿ ಕಿರೀಟ ಕಿರಣದಿಂ ತದೀಯ ಪದನಖ ಮಯೂಖಮಂ ಕೊರ್ವಿಸೆ: **ಪಂಪರಾ,** ೬. ೧೭೫ ವ)

**ಮಯೂಖಲೇಖಾ[ಖೆ]** – ಕಿರಣಪಂಕ್ತಿ (ಆ ಪುರಸ್ತ್ರೀಯ ರತ್ನಕಂಠಿಕಾ ಮಯೂಖಲೇಖಾವಿಲಾಸಮಂ ತಳೆದು: **ಮಲ್ಲಿನಾಪು,** ೨. ೪೯ ವ)

**ಮಯೂರ** – ನವಿಲು, ಒಂದು ಅಕ್ಷರವೃತ್ತದ ಹೆಸರು (ಹರಿಣೀ ಮತ್ತೇಭವಕ್ರೀಡಿತ ಲಲಿತ ಮಯೂರಾನ್ವಿತಂ ಛಂದಮಂ: **ರಾಜಶೇವಿ,** ೫. ೭೫)

**ಮಯೂರಪಿಂಛ** – ನವಿಲುಗರಿ (ಮಯೂರಿಕೆಯೆಂಬಳ್ ಮಯೂರಪಿಂಛದ ಆಲವಟ್ಟಮನಿಕ್ಕಲುಂ: **ತ್ರಿಷಷ್ಟಿಪು,** ೧೭. ೧೪೯ ವ)

**ಮಯೂರರಥ** – ಷಣ್ಮುಖ (ಗೌರೀಸುತಂ ವಿಶಾಖಂ ತಾರಕರಿಪು ಷಣ್ಮುಖಂ ಮಹಾಸೇನಂ ಕ್ರೌಂಚಾರಿ ಗುಹಂ ಸೇನಾನಿ ಮಯೂರರಥಂ ಸ್ವಾಮಿ ಕರ್ತಿಕೇಯಂ ಸ್ಕಂದಂ: **ಅಭಿಧಾವ,** ೧. ೧. ೧೮)

**ಮಯೂರಾತಪತ್ರ** – ನವಿಲುಗರಿಯ ಕೊಡೆ [ಸಕಲದಿಕ್ಚ್ರಚಳಿತ ರಾಜಪುತ್ರಮಯೂರಾತಪತ್ರನಿಚಯಮೆ ಸಂಚಾರೀಭೂತ ಚೂತಭೂಜಾರಾಮಮಾಗೆ: **ಆದಿಪು,** ೧೩. ೬ ವ)

**ಮಯೂರಿ** – ಹೆಣ್ಣು ನವಿಲು (ಆತೋದ್ಯಮಂ ಕೇಳ್ದು ಮೆಚ್ಚಿ ಮಯೂರೀಲಟಹಪ್ರವೃತ್ತ ವಿಲಸತ್ ನೃತ್ಯಂಗಳಂ ಮೆಚ್ಚಿ ನೋಡೆ: **ಅಜಿತಪು,** ೯. ೩೪)

**ಮರಂದ** – ಮಕರಂದ (ಕರಂ ಕಣ್ಗೆಸೆದಿರ್ಪುದು ಪುಷ್ಪ ಸುಂದರಮರಂದ ಪರಿಪ್ಲವಭೃಂಗಝುಂಕರಣ: **ಧರ್ಮಮಧು,** ೧. ೧೨)

**ಮರಕತ** – ಪಚ್ಚೆ (ಮರಕತ ಮುದ್ರಾರುಚಿಯಿಂ ಪರಭಾಗಂಬಡೆದು ಭುಜಲತಾಪಲ್ಲವದಂತಿರೆ ತಂಬುಲವಂ ಕೊಟ್ಟಳ್ ನರೇಂದ್ರವಧುವಿಂಗೆ ದಿವಿಜವಧು ಮತ್ತೊರ್ವಳ್: **ಮಲ್ಲಿನಾಪು,** ೧೧. ೬೩)

**ಮರಕಗಟ್ಟು** – ಮರದ ಬುಡದ ಪಾತಿ (ಮರಗಟ್ಟೆಂಬಂತೆ ಸುತ್ತುಂ ಮೊದಲೊಳ್ ಅಜಗರಂ .. .. ನೀಳ್ದಂತಿರೆ: **ಕಾದಂಬ,** ೧. ೧೦೦)

**ಮರಗಟ್ಟಲೆ** – ದಟ್ಟವಾದ ಕತ್ತಲೆ (ತುಱುಗೆದೆಗಣ್ಣ ಕಾಂತಿ ಮರಗಟಲೆಯಂ ಬೆದಱಿಟ್ಟೆ ತೊಂಡೆವಾಯ್ದೆಱಿ ಕಿಸುಸಂಜೆವೀಱಿ: **ಜಗನ್ನಾವಿ,** ೧೬. ೨೫)

**ಮರಗೆರಸಿ** – ಮರಕೋತಿಯಾಟ (ಹರಿವರಿ ಪಾಱುಂಬಳೆ ಮರಗೆರಸಿ ಕುಳಿಲ್ಸೆಂಡು ಬಟ್ಟು ತಿಱಿಕಲ್ಲು ಅಟ್ಟುಂಗರೆ ಹೊಣೆಗುಂಡು ಎಂಬಿವಂ: **ಜಗನ್ನಾವಿ,** ೪. ೪೪)

**ಮರಗೊಂಬು** – ಮರದ ಕೊಂಬೆ (ಮರಗೊಂಬಿನೊಳವುಂಕಿದ ಸೆಲ್ಲದ ಮುಷ್ಟಿ: **ಆಚವರ್ಧ,** ೮. ೫೧); ಮರಕೋತಿಯಾಟ (ವಿನೋದರಸದ ಬಸದಿಂ ಮರಗೊಂಬನಾಡುತಿರ್ದ ವೀರಜಿನಕುಮಾರನಂ ದೂರದೊಳೆ ಭೋಂಕನೆ ಕಂಡು: **ಆಚವರ್ಧ,** ೧೪. ೬೭ ವ)

**ಮರಗೋಡು** – ಮರದ ಕೊಂಬೆ (ತೊಲಗೆ ಬಿಸಿಲ್ ನೆಟಿಲ್ಗೆ ತಲೆಯಂ ಮರಗೋಡೆಲೆ ಕೂಡೆ ಕುತ್ತಿ ಕಟ್ಟಲೆ ಕವಿದಂದದಿಂ ಕವಿಯೆ: **ಲೀಲಾವತಿ,** ೬. ೮೪)

**ಮರದುಱುಗಲ್** – ಮರಗಳ ತೋಪು (ಪರ್ವತದ ಮೇಲೆ ಕಱಂಗಿ ಕಟ್ಟಿಲಿಸಿದ ಮರದುಱುಗಲ ನಡುವೆ ಸುಧಾಧವಳಿತ ಉತ್ತುಂಗ ರಮ್ಯಹರ್ಮ್ಯಂಗಳಂ ಕಾಣ್ಬಿರಪ್ಪೊಡೆ ಅದು ಹಿಡಿಂಬಪುರಂ: **ಪಂಪಭಾ,** ೩. ೧೮ ವ)

**ಮರಮೊಗ** – ಮರದ ಮುಖವಾಡ (ಲೋಗರ್ ಪಗರಣಿಗರಾಗಿ ಎನಿತಾನುಂ ತೆಱದ ರೂಪುಗಳಂ ಕೈಕೊಂಡು ಮರಮೊಗಂಗಳನಿಟ್ಟು ಬಂದು ಆಡಿಯುಂ ಪಾಡಿಯುಂ ನಗಿಸಿಯುಂ: **ವಡ್ಡಾರಾ,** ಪು ೧೧೮, ಸಾ ೧೪)

**ಮರಮೊದಲ್** – ಮರದ ಬುಡ (ಮುನಿಂದ್ರಂ ಬೇರೂಱಿದ ಬೀಳಲಂತೆ ಮರಮೊದಲಿರ್ದಂ: **ಚಂದ್ರಪ್ರಪು,** ೧೧. ೧೪)

**ಮರಲ್** – ಹಿಂದಿರುಗು (ಎರೆವ ಮರಲ್ವ ಲಲಲ್ಲಯಿಪ ಕಾಲ್ವಿಡಿವೆಂಬುದನಿಂಬುಕೆಯ್ದಳಂಕರಣವಿಳಾಸಮಂ ಮೆಱೆವ: **ಆದಿಪು,** ೩. ೪೩); ಹೂ ಬಿಡು (ಬಿಕ ಮರಲ್ದರಲ್ದ ಕುಕವಿವ್ರಜಶಾಲ್ಮಲಿಯಂ .. .. ಸರಸ್ವತಿಯೆಂಬ ತುಂಬಿ ಬಂದೆಱಗುಗೆ: **ಲೀಲಾವತಿ.** ಐ. ೬)

**ಮರಲುಂದು** – ಮೈಮರೆತು ನಿದ್ದೆ ಮಾಡು (ತಂದೆಯ ಮರಲುಂದಿದಲ್ಲಿಗೆ ಪೋಗಿ ಬರುಂಟಿ ಎಟ್ಟಿ ಪೊಟ್ಟಳಿಗೆಯಂ ತಂದೆಗೆ ಕೊಟ್ಟಳ್: **ವಡ್ಡಾರಾ,** ಪು ೧೭, ಸಾ ೨೩)

**ಮರಲ್ಚು** – ಹಿಂದಿರುಗಿಸು (ತೊಲಗದ ಜವ್ವನಂ ತವದ ಮೆಚ್ಚು ಮರಲ್ಚುವ ನೋಟಮತ್ತೆಯಂ ಸಲಿಸುವ: **ಆದಿಪು,** ೫. ೪೨)

**ಮರವಟ್ಟಿರು** – ಜಡವಾಗಿರು (ಮುಳಿದ ವಿಯುಕ್ತವಲ್ಲಭಜನಂ ತಳುವಿಲ್ಲದೆ ತಕ್ಕೆಗೊಂಡುದು ಅಸ್ಖಳಿತ ಕೃಷೀಕುತೂಹಳಜನಂ ಮರವಟ್ಟಿರುತಿರ್ದುದು .. .. ಏನಳವಿಗಳುಂಬಮೋ ಪುದಿದ ಮಾಗಿಯ ಶೀತವಿಜೃಂಭಪಾತನಂ: **ಶಾಂತೀಶ್ವಪು,** ೧೨. ೮೬)

**ಮರವಡು** – ಸ್ತಬ್ದನಾಗು, ಮರದ ಹಾಗೆ ಜಡವಾಗು (ಬಂದತಿ ದೀನಮುಖರ್ ನೆರೆದೆಂದರ್ ಮರವಟ್ಟು ಕುಡದೆ ಕಲ್ಪಮಹೀಜಂ ನಿಂದುವು ಜಠರಾನಳನಿಂ ಬೆಂದುವು: **ಆದಿಪು,** ೬. ೭೪); ಮೈಮರೆ (ಅಂತಃಪೀಡಾಕ್ರಾಂತಿಯನೊಂದಿತು ಪೊಟ್ಟು ಮರವಟ್ಟಿರ್ದಳ್: **ಕಾದಂಬ,** ೮. ೬೪)

**ಮರವಾನಸ** – ಮರದಿಂದ ಮಾಡಿದ ಮನುಷ್ಯನ ಗೊಂಬೆ (ಈ ಧರಣೀತಳಕ್ಕವಿವೇಕಿಯ ಮರವಾನಸನಿತ್ತ ಚಾಗಮೇನಿರ್ದಪುದೇ: **ಆದಿಪು,** ೬. ೫೦)

**ಮರವಾನಸೆ** – ಮರದಿಂದ ಮಾಡಿದ ಹೆಣ್ಣಿನ ಗೊಂಬೆ (ಮಾನಸೆಯಣಮಲ್ಲಳಿಂತು ಮರವಾನಸೆಯಾಗಿಯುಂ ಆದುದೊಂದು ಮಾನಸಿಕೆ: **ಆದಿಪು,** ೧೨. ೩೮)

**ಮರವಾನಿಸ** – ನಿಷ್ಕರುಣಿ (ಮನದೊಳ್ ಸೈರಿಸಲಾಱೆಂ ನಿನಗೆನಸುಂ ಕರುಣಮಿಲ್ಲ ಮರವಾನಿಸನಯ್: **ಕವಿರಾಮಾ,** ೨. ೮೩)

**ಮರವಾಯ್** – ಜೋರಾಗಿ ನುಗ್ಗು (ಮದಹಸ್ತಿಯಂತೆ ಮರವಾಯ್ವ ಪುಲಿಗಳಿನತಿ ಭಯಂಕರಾಕಾರಮಪ್ಪ ದ್ವೈತವನಕ್ಕೆ ಬಂದು: **ಪಂಪಭಾ,** ೭. ೨೯ ವ)

**ಮರವಾಳ್** – ಮರದ ಕತ್ತಿ (ಕರವಾಳಂ ಮಸೆವಂದದೆ ಮರವಾಳಂ ಮಸೆಯೆ ಕೂರಿತಮಕ್ಕುಮೆ; **ಗದಾಯು,** ೨. ೨೫)

**ಮರವಿಲ್** – ಮರದ ಬಿಲ್ಲು (ತೊಟ್ಟ ಎಕ್ಕವಡಂ ಮರವಿಲ್ ಕಟ್ಟಿದ ಪಣೆಕಟ್ಟು ಬೇಂಟೆವಱೆ ದೊರೆಯೊಳ್ ಒಡಂಬಟ್ಟ ಅಸಿಯ ಸುರಗಿ ದಳಿವದ ತೊಟ್ಟ ಅಂಗಿಗೆ ತನ್ನೊಳ್ ಅಮರೆ ಬೇಂಟೆಯನೊರ್ವಂ; **ಪಂಪಭಾ,** ೫. ೩೬)

**ಮರಸರಿಗೆ** – ದೊಡ್ಡಚೆಂಬು, ಮರದ ಪಾತ್ರೆ (ಅಂತಾಕೆಗಳ್ ತೂಗಿ ತೊನೆವ ತೊನೆಪಂಗಳುಮಂ ಮರಸರಿಗೆವಿಡಿದು ಬಿಲ್ವಿಡಿದಾಡುವ ಬೂತಾಟಂಗಳುಮಂ ನೋಡಿ ಗಂಧೇಭವಿದ್ಯಾಧರಂ ಇಂತೆಂದಂ: **ಪಂಪಭಾ,** ೪. ೯೦ ವ)

**ಮರಳ್** – ಕುದಿ (ದಿಟ್ಟಿ ಮರಳ್ದು ನಂದಿದಪುದು ಎನ್ನುಮಂ: **ಕಾದಂಬ,** ೧. ೧೬೬)

**ಮರಾಳ** – ಹಂಸ (ಮಱೆಗಿಳಿವಿಂಡು ಮಿಂಚುವ ಮರಾಳದ ಪಿಂಡು ಅಲರ್ವಕ್ಕಿವಿಂಡು ತಟ್ಟೆಱಗಿ ಬರಲ್: **ಶಾಂತೀಶ್ವಪು,** ೧೪. ೯೮)

**ಮರಾಳಗತಿ** – ಹಂಸದ ನಡಿಗೆ (ಮರಾಳಗತಿಗಳ್ ಚಕ್ರಾಂಕವಕ್ಷೋಜಮಂಡಳೆಯರ್ ವರ್ತಿಸಿದರ್ ಕುಮಾರನ ಮನಶ್ರೀಸಾರಕಸಾರದೊಳ್: **ಪುಷ್ಪದಂಪು,** ೧೨. ೧೦೨)

**ಮರಾಳಗಾಮಿನಿ** – ಹಂಸದ ನಡಿಗೆಯವಳು (ವಾರಿಜಾನನೆಗೆ ಮರಾಳಗಾಮಿನಿಗೆ .. .. ಸೀಮೆಯಾಯ್ತು ಜೀವನದಭಿಲಾಷೆ ಕಂತುಪರಿತಾಪದೊಳ್: **ಪುಷ್ಪದಂಪು,** ೪. ೬೯)

**ಮರಾಳಯಾನೆ** – ಹಂಸದಂತೆ ಮೆಲುನಡಿಗೆಯುಳ್ಳವಳು (ಸುೞಿದ ಮರಾಳಯಾನೆಯರ ಅಪಾಂಗಮರೀಚಿಚಯಂ ತ್ರಿವರ್ಣಮಂ ಗೞಿಯಿಸೆ: **ಚಂದ್ರಪ್ರಪು,** ೭. ೧೧೮)

**ಮರಾಳತೂಳ** – ಹಂಸದ ತುಪ್ಪುಳು (ಶಯನಸ್ಥಾನದೊಳ್ ದುಕೂಲಪ್ರಚ್ಛಾದಿತ ಮರಾಳತೂಳಶಯ್ಯಾತಳಮಂ ಅಲಂಕರಿಸಿದಲ್ಲಿ: **ಜಗನ್ನಾವಿ,** ೧೧. ೫೪ ವ)

**ಮರಾಳಿ** – ಹೆಣ್ಣು ಹಂಸ (ಸರಸಿರುಹಂಗಳಿಂದಿೞಿದ ಮತ್ತಮರಾಳಿಗಳಂತೆ: **ಅನಂತಪು,** ೭. ೩)

**ಮರಾಳಿಕಾತೂಳತಲ್ಪ** – ಹಂಸದ ತುಪ್ಪುಳಿನಿಂದ ಮಾಡಿದ ಹಾಸಿಗೆ (ವರಮಂಚಮಣಿದ್ಯುತಿಧೃತ ಮರಾಳಿಕಾತೂಳತಳ್ಪದೊಳ್ ತಾಮೆಸೆದರ್ .. .. ಖಚರದಂಪತಿಗಳವೊಲ್: **ಯಶೋಧಚ,** ೨. ೨೨)

**ಮರಿಚ** – ಮೆಣಸು (ಮರಿಚವ್ಯಾಕೀರ್ಣಕರ್ಣಂಕರರ ತನುವ್ರತಗ್ರಂಥಿಪರ್ಣಚ್ಛದಂ ಕತ್ತುರಿವೆಕ್ಕಂ .. .. ಸೊಗಯಿಪುದು: **ಪುಷ್ಪದಂಪು,** ೫. ೬೯)

**ಮರಿಪುಗೊಳ್** – ಸುವಾಸನೆಯನ್ನು ಹೊಂದು (ಕೆಂಪಿನ ಕಂಪಿನ ಮಂಜರಿಯಂತೆ ಮಂಜರಿಸಿ ಮಗಮಗಿಸಿ ಮರಿಪುಗೊಂಡು ಸೊಬಗುಕೊಂಬುಗೊಂಡು ಅರಿಸಿನದ ಕೊಂಬುಗಳಂ ಸೊಪ್ಪುಗುಟ್ಟಿ: **ಲೀಲಾವತಿ,** ೧೨. ೬೭ ವ)

**ಮರೀಚ** – ಮೆಣಸು (ಭವನ ಹರಿಣಂಗಳ್ಗೆ ಮರೀಚಪಲ್ಲವಂಗಳಂ ನೀಡಲುಂ.. .. ಕರೆದು ಪೇೞ್ವ: **ಕಾದಂಬ,** ೬. ೨೫ ವ)

**ಮರೀಚಿ** – ಕಿರಣ, ಕಾಂತಿ (ಧ್ಯಾನಮರೀಚಿಯಿಂ ಬೆದಱೆ ಘಾತಿತಮಸ್ತಮಂ: **ಆದಿಪು,** ೧೦. ೧೭)

**ಮರೀಚಿಕೆ** – ಮೃಗಜಲ (ಜಳಜಸಖಂ ಜಳಕಿರಣಾವಳಿಯಂ ಪಿಳಿದಂತೆವೋಲ್ ಮರೀಚಿಕೆ ಮೆಱೆಗುಂ: **ರಾಜಶೇವಿ,** ೫. ೩೮)

**ಮರೀಚಿಮಾಲಿ** – ಕಿರಣಗಳಿಂದ ಆವೃತನಾದವನು, ಸೂರ್ಯ (ದ್ವಾದಶಗಣ ಸರಸ್ಸರೋಜವಿದಳನ ಶೋಭಾಪ್ರಭಾವಪ್ರಸವ ಪಾರೀಣ ದಿವ್ಯವಚನಮರೀಚಿಮಾಲಿ ರೋಚಿರ್ನಿಚಯ ತ್ರಿಜಗಚ್ಚೂಡಾಮಣಿ: **ಶಾಂತಿಪು,** ೯. ೬೯ ವ)

**ಮರುಚ್ಚಂಚಳಮನ** – [ಮರುತ್+ಚಂಚಳಮನ = ಗಾಳಿಯಂತೆ ಚಂಚಲಚಿತ್ತ[ವುಳ್ಳವನು] (ಖಳಂ ಪಂಚತ್ವಮನೈದಿ

ಮರುಚ್ಚಂಚಳಮನಂ ಈಗಳಲ್ತೆ ವಾನರನಾದಂ: **ಆದಿಪು,** ೫. ೧೮)

**ಮರುಗ** – ಸುಗಂಧಿತ ಎಲೆಗಳ ಸಸ್ಯ (ಅಲ್ಲಲ್ಲಿಗೆ ಬೆರಸಿದ ಮರುಗದ ಕೋದ ಪಾದರಿಯ ಬಳಸಿದ ತುಳಸಿಯ .. .. ವನಮಾಲೆಗಳೂಮಂ: **ಜಗನ್ನಾವಿ,** ೬. ೧೬ ವ)

**ಮರುಚ್ಚಾಪ** – [ಮರುತ್+ಚಾಪ] ಕಾಮನ ಬಿಲ್ಲು (ಮದನವೇಗೆ ತತ್ಪತಿಗೆ ಮರುಚ್ಚಾಪದೊಳಂ ಅಧಿಪ ಮಿಥ್ಯಾರೂಪದೊಳಂ ಮಾಡದಿರ್ ಗುಣಾರೋಪಣಮಂ: **ಪಂಪರಾ,** ೮. ೫೮)

**ಮರುಚ್ಛಿಲ್ಪಿ** – [ಮರುತ್+ಶಿಲ್ಪಿ] ದೇವತೆಗಳ ಶಿಲ್ಪಿ (ಕಲ್ಪಜಪತಿ ಬೆಸಸೆ ಮರುಚ್ಛಿಲ್ಪಿಗಳ್ ಉದ್ವಾಹಗೇಹವಂ ಸಮೆದರ್ ಅತಿಸ್ವಲ್ಪಸಮಯದೊಳ್: **ಚಂದ್ರಪ್ರಪು,** ೧೩. ೩೬)

**ಮರುಜ್ಜವ** – [ಮರುತ್+ಜವ] ಗಾಳಿಯ ವೇಗ (ಮರುಜ್ಜವದಿಂ ಅಟ್ಟಾಸುರಂ ಮಸಗಿ ರಾಸಭಂ ಬಂದುಮಾ ವಾಸವಸೈನ್ಯಮಂ .. .. ಪಡಲ್ವಡಿಸುತ್ತುಮಿರೆ: **ಜಗನ್ನಾವಿ,** ೪. ೩೯ ವ)

**ಮರುತ್** – ಗಾಳಿ (ಒಪ್ಪಿದುದು ಮಾಮರನಲ್ಲಿ ಮನೋಜ್ಞ ರತನಸಂಕುಳಮನೆ ಕಾತ ಕಲ್ಪಕುಜದಂತೆ ಮರುದ್ಗತ ನಂದನಸ್ಥಿತಂ: **ಶಬರಶಂ,** ೨. ೪೩); ಒಬ್ಬ ದಿಕ್ಪಾಲಕ (ಶತಮಖ ಹುತವಹ ಯಮ ನೈರುತಿ ವರುಣ ಮರುತ್ ಕುಬೇರ ಶೂಲಧರರ್ ದಿಕ್ಪತಿಗಳ್ ಅವರೆಣ್ಬರುಂ ಕ್ರಮಗತಿಯಿಂ ಪ್ರಾಚ್ಯಾದಿಗೆ ಅಭಿರಕ್ಷಣನಿರತರ್: **ಅಭಿಧಾವ,** ೧. ೧. ೪೮)

**ಮರುತ** – ಗಾಳಿ (ಪವಮಾನಂ ಶ್ವಸನಂ ಗಂಧವಹಂ ಸತತಗತಿ ಮಾತರಿಶ್ವಂ ಮರುತಂ ಪವನಂ ಪ್ರಭಜನಂ ವಾಯು ವಾತಂ ಅನಿಲಂ ಸಮೀರಣಂ ಪೃಷದಶ್ವಂ: **ಅಭಿಧಾವ,** ೧. ೧. ೪೪)

**ಮರುತಾಧ್ವ**– ಆಕಾಶ (ಮರುತಾಧ್ವಂ ಶಿವಮಂದಿರಂ ಧರೆ ಲಸತ್ ಪೀಠಂ ಮಹಾನಿರ್ಝರೋತ್ಕರಂ ಅಗ್ರೋದಕಂ: **ತ್ರಿಷಷ್ಟಿಪು,** ೧. ೪೫)

**ಮರುತ್ಕುಜ** – ದೇವತೆಗಳ ಮರ, ಕಲ್ಪವೃಕ್ಷ (ವಿಜಿಗೀಷುವೆನಿಸಿದಾ ಭೂಭುಜವಲ್ಲಭ ಮೇರುಮೇಖಳಾಲಕ್ಷ್ಮಿ ಮರುತ್ಕುಜಮಂ ಪಡೆದುದೊ ಪೇಟಿರೆ ವಿಜಯಾಂಬಿಕೆ ಪಡೆದಳ್ ಅಜಿತಭಟ್ಟಾರಕರಂ: **ಪಂಪರಾ,** ೧೦. ೭೪)

**ಮರುತ್ತನೂಜ** – ಹನುಮಂತ (ಅನವದ್ಯಾಚರಣಕ್ಕೆ ಉದಾಹರಣಂ ಉದ್ಯತ್ಕೀರ್ತಿಗೆ ಆಧಾರಂ ಆಳ್ದನ ಕಾರ್ಯಕ್ಕೆ ಮರುತ್ತನೂಜಂ .. .. ಎಂದು ಪೊಗಟ್ಟುಂ ವಿದ್ವಜ್ಜನಂ ದುರ್ಗನಂ: **ಪಂಚತಂತ್ರ,** ೫೦)

**ಮರುತ್ತರಂಗಿಣಿ** – ದೇವನದಿ, ಗಂಗೆ (ಮೃಡಂ ಪಾರ್ವತೀಸ್ಪೃಹೆಯಂ ಬಿಟ್ಟು ಮರುತ್ತರಂಗಿಣಿಯಂ ಆಲಿಂಗನಂ ಮಾಡುವಂ: **ಪಂಪರಾ,** ೭. ೯)

**ಮರುತ್ತ್ರಿಕ** – [ಜೈನ] ಮೂರು ಬಗೆಯ ವಾಯುಗಳು (ಅದು ಅನಾದಿ ಅನಿಧನಯುತಂ ಅದು ಅಕೃತ್ರಿಮಂ ಅದು ಮರುತ್ತ್ರಿಕವೇಷ್ಟಿತಂ: **ಆದಿಪು,** ೧. ೪೪) ನೋಡಿ, 'ವಾಯುತ್ರಿತಯ'

**ಮರುತ್ಪತಿ** – ದೇವೇಂದ್ರ (ತತ್ಪುರಪತಿ ವರವಿಭವ ಮರುತ್ಪತಿ ತೇಜೋವಿರಾಜಿತ ಅಹಃಪತಿ ಚಂಚತ್ಪರಮಯ ಯಶಃಪತಿ ವಿದ್ವತ್ಪೂಜ್ಯಂ ಜ್ವಲನಜಟಿಮಹಾಖಚರೇಜ್ಯಂ: **ಶಾಂತೀಶ್ವಪು,** ೧. ೧೪೬)

**ಮರುತ್ಪಥ** – ವಾಯುಮಾರ್ಗ, ಆಕಾಶ (ಶರನಿಧಿಯಲ್ಲಿ ವೃಕ್ಷತತಿಯಲ್ಲಿ ಮರುತ್ಪಥದಲ್ಲಿ .. .. ಅಂಚೆಗಳುನ್ಮದಾಳಿಗಳ್ .. .. ಉಡಿಯಲಾಟಿಪುವು: **ರಾಜಶೇವಿ,** ೧೩. ೪೩)

**ಮರುತ್ಪಾಲಕ** – ಮರುತ್ಪತಿ (ತ್ರೈಲೋಕ್ಯಪಾಲಕಂ ಗೋಪಾಲಕನಾಗಿರ್ದ ಲೀಲೆಯಂ ಕಂಡು ಮರುತ್ಪಾಲಕನೆನಗೆ ಅಕ್ಷಿಸಹಸ್ರಾಲಂಬನಮಿಂದು ಸಫಲಮೆಂದೀಕ್ಷಿಸಿದಂ: **ಜಗನ್ನಾವಿ,** ೪. ೧೦೧)

**ಮರುದಧ್ವಾಪಗೆ** – ದೇವಗಂಗೆ (ಮರುದಧ್ವಾಪಗೆಯುಂ ಕೆಸರ್ಮಸಗಿಸಲ್ ಸೇನಾವಳೀ ಯಾನಜಾತ ರಜಸ್ಸಕುಲಂ .. .. ಜಗದ್ವ್ಯಾಕೀರ್ಣಮಾಗಲ್ಕೆ .. .. ಮಹೀಧರಾಗ್ರಧರೆಯೊಳ್ ಬಿಟ್ಟಂ ನರೇಂದ್ರಾತ್ಮಜಂ: **ಶಾಂತೀಶ್ವಪು,** ೩. ೬೮)

**ಮರುದ್ಗಿರಿ** – ದೇವತೆಗಳ ಬೆಟ್ಟ, ಮೇರು (ಮರುದ್ಗಿರಿಯಲ್ಲಿ ಘನಘಟಾವಳಿ ಸುರಿದುದು ಪಯಮಂ ಮೃದಂಗನಿನದಸ್ತನಿತಂ: **ಚಂದ್ರಪ್ರಪು,** ೫. ೩೦)

**ಮರುದ್ದಿಶೆ** – ವಾಯುವಿನ ದಿಕ್ಕು, ವಾಯವ್ಯ (ಎಸೆದಂ ಮರುದ್ದಿಶೆಯ ಬಾಗಿಲೊಳೊಲ್ದು ಕಪಾಲಿಭೈರವಂ: **ಶಬಶಂವಿ,** ೧. ೬೨)

**ಮರುದ್ವರ** – ದೇವೇಂದ್ರ (ಅನತಿಶಯಪುಣ್ಯಪುಣ್ಯಾರ್ಚನತತ್ಪರಂ ಆ ಮರುದ್ವರಂ .. .. ಇಂತೈತಂದಂ: **ಚಂದ್ರಪ್ರಪು,** ೯. ೫೭)

**ಮರುದ್ವೇಗ** – ವಾಯುವೇಗ (ಭವದಾಜ್ಞಾಮಣಿಮೌಳಿಯಾಗಿ ಲಿಖಿತಂಗೊಂಡು ಆ ಮರುದ್ವೇಗದಿಂದವೆ ಪೋಪನ್ನೆಗಂ: **ಶಾಂತೀಶ್ವಪು,** ೨. ೯೫)

**ಮರುನ್ನದಿ** – [ಮರುತ್+ನದಿ] ದೇವನದಿ (ಕದಡೆ ಕಲಂಕದಿರ್ಕುಮೆ ಕರುನ್ನದಿಯುಂ: **ನೇಮಿನಾಪು,** ೭. ೧೭)

**ಮರುನ್ನಂದನ** – [ಮರುತ್+ನಂದನ] ವಾಯುವಿನ ಮಗ, ಭೀಮ [ಅಂತು ಗುರುನಂದನಂ ಮರುನ್ನಂದನವಿರಚಿತ ನಿಶಾತವಿಶಿಖಪಂಜರಮನಟೆದು ಕಟಕುಟಂ ಮಾಡಿಯುಂ ಅನಿತಜೊಳ್ ಮಾಣದೆ: **ಪಂಪಭಾ,** ೧೨. ೬೮ ವ)

**ಮರುನ್ನಿಲಯ** – ದೇವಲೋಕ (ಕುಲನಗಮಂ ಅಡರ್ವ ಜಲನಿಧಿ ಜಲಮಂ ಪಾಯ್ವ ಅಹಿನಿವಾಸಮಂ ಪುಗುವ ಮರುನ್ನಿಲಯಕ್ಕೆ ಒಗೆವೀತನ ಕೀರ್ತಿಲತಾಂಗಿ ಚಲಾಂಗಿ ಖಚರಂ ಅಚಳಿತಂ ಅಬಲೇ: **ಶಾಂತಿಪು,** ೫. ೧೫೪)

**ಮರುನ್ಮನ** – ಉಸಿರಾಟದ ಗಾಳಿ (ತನುಕೃತತಾಪನಾಗದೆ ಅತಿದೂರಕೆ ಪೋಗದೆ ಯತ್ನದಿಂ ಮರುನ್ಮನಮಂ ಒಜಲ್ದು ಕಟ್ಟದೆ .. .. ನುಡಿದಂಗೆ ಮುಕ್ತಿಗುಡುತಿರ್ಪುದೆಂದೊಡೆ ಆರೊ ಬಣ್ಣಿಪರ್: **ರಾಜಶೇವಿ,** ೪. ೮೬)

**ಮರುನ್ಮಾರ್ಗ** – ಮರುತ್ಪಥ (ಇಷ್ಟಮಿತ್ರನೆ ಬರುತ್ತಿರ್ದಂ ಮರುನ್ಮಾರ್ಗದಿಂ: **ಕಾದಂಸಂ,** ೮. ೫೫)

**ಮರುಮರೀಚಿಕಾ** – ಬಿಸಿಲುಗುದುರೆ (ಎಂತು ಮರುಮರೀಚಿಕಾ ಸ್ವಪ್ನೇಂದ್ರಜಾಲಾದಿಗಳೊಳ್ ವಿಶದದರ್ಶನಾವಗಮ್ಯ ಜಲಕರಿತುರಗನರಾದಿಗಳ್: **ಆದಿಪು,** ೨. ೯ ವ)

**ಮರುವ** – ಮರುಗ (ಪರಿಮಳಿತಸೌಂದರಂ ಬಂಧುರಗಂಧಂ ಮದನರಾಗವರ್ಧನಕರಮೀ ಮರುವಂ: **ಆದಿಪು,** ೧೧. ೧೨೭)

**ಮರುವಕ** – ಮರುಗ (ಭೋಗಿಜನದ ಹರ್ಷಂ ಪೆರ್ಚುವಂತೆ ಮರುವಕವು ಅಚ್ಚರಿಯಾಗೆಯುಂ: **ತ್ರಿಷಷ್ಟಿಪು,** ೨೪. ೨೩ ವ)

**ಮರುಳ್** – ಮೌಢ್ಯ, ಹುಚ್ಚು (ಅಂತು ಗಗನತಳಕುಸುಮಮನೆ ಬಯಸಿ ಮರುಳ್ಗೊಂಡ ಮರುಳನಂತೆ: **ಆದಿಪು,** ೩. ೧೧ ವ); ಹುಚ್ಚ (ಮರುಳ ಕಣ್ಗೆ ಸಾಸಿವೆಯೆ ಕೊಡದ ತೋರಂ: **ಸಮಯಪ,** ೧೫, ೬೨); ದೆವ್ವ (ಆಡುವ ಮರುಳ್ಗಳಂ ನಡೆನೋಡಿದುದಟೆನಿಂತುಕನಸಿನೊಳ್ ಮಕ್ಕಳ್ಗಂ ಕೂಡೆ

ಪೆಸರಿಟ್ಟು ಸಲೆ ಕೊಂಡಾಡಿದಪರ್ ವ್ಯಂತರರ್ಕಳಂ ಜಡಮತಿಗಳ್: **ಆದಿಪು,** ೧೫. ೩೯); ಮೋಹಗೊಳ್ಳು (ನಗರಮೆಲ್ಲಂ ತನ್ನಂ ನೋಡಿ ಮರುಳ್ದು ಬೆನ್ನನೆ ಬರೆ: **ಕರ್ಣನೇಮಿ,** ೧೨೫ ವ)

**ಮರುಳ** – ದಡ್ಡ (ಸರೋಜಾತಾದಿ ನಿಸ್ಸಾರವಸ್ತುಗಳೊಳ್ ಪೋಲಿಸುವಂತುಟೇಂ ಮರುಳನೇ ರೂಪಂ ವಿಚಿತ್ರಾಂಗಿಯಾ: **ಆದಿಪು,** ೬. ೮೫); ಹುಚ್ಚ (ಜಂಘಾಬಲಮಿಲ್ಲದನಂತೆ ಕುಳ್ಳಿರುತ್ತುಂ ಮರುಳನಂತೆ ತನ್ನೊಳ್ ತಾನೆ ನುಡಿಯುತ್ತುಂ: ಧರ್ಮಾಮೃ, ೧. ೧೨೪ ವ)

**ಮರುಳರಸ** – ಶಿವ (ಅಕ್ಕಟ ಮರುಳರಸಂ ರುದ್ರನಲ್ಲಂ: **ಸಮಯಪ,** ೮. ೯೭)

**ಮರುಳಾಗು** – ಮೋಹಗೊಳ್ಳು (ನವಯೌವನೆ ಮರುಳಾದೆಯೀತಂಗೆ ಗುಜಿಮಾಡಿದನೆ ನಿನ್ನ ಮನುಮತಂಗೆ: **ಕಾದಂಬ,** ೩. ೨೯); ಬುದ್ಧಿಗೇಡಿಯಾಗು (ಮರುಳಾಗದೆ ಎನ್ನ ನುಡಿಗುತ್ತರಮಂ ಮುನ್ನಿತ್ತು ಕುಡಿಯೆ ಕಜ್ಜಂ ನಿನಗೆ: **ಪಂಪಭಾ,** ೮. ೪೭)

**ಮರುಳ್ಚು** – ಮೋಹಗೊಳಿಸು, ಮರುಳುಗೊಳಿಸು (ಬಾಲಕೇಳಿಯೆ ಕರಮೆ ಮರುಳ್ಚಿದುದು ತಾಯುಮಂ ತಂದೆಯುಮಂ: **ಆದಿಪು,** ೮. ೩೮)

**ಮರುಳ್ಮಾಡು** – ಮೋಹಗೊಳಿಸು (ಕಾಮದೇವನಯ್ದರಲಂಬಿನ ಶಕ್ತಿಗಳುಮನೊಂದು ಮಾಡಿ ಲೋಕಮೆಲ್ಲಮಂ ಮರುಳ್ಮಾಡಲೆಂದು ಪೆಣ್ಮಾಡಿದನಕ್ಕುಂ: **ಪಂಪಭಾ,** ೪. ೭೫ ವ)

**ಮರುಳಾಟ** – ತಿಳಿಗೇಡಿ ವರ್ತನೆ (ನೀನವರುಮನವರ ದೈವಮುಮಂ ಕೊಂಡಾಡುವ ಮರುಳಾಟಕ್ಕೆನಗೆ ಒಇರಿದುಂ ವಿಸ್ಮಯಮಾದಪುದು: **ಧರ್ಮಾಮೃ,** ೧. ೯೫ ವ); ಪಿಶಾಚಿಗಳ ಕಾಟ (ಕೊಳ್ಗುಳದೊಳ್ ಮರುಳಾಟವಾಡುವಾಂ ಮರುಳೆನೊ ವಿಕ್ರಮಾರ್ಜುನನೊಳೊಲ್ಲದೆ ಸಂದಿಯನುರ್ಕಿ ಕೆಟ್ಟ ನೀಂ ಮರುಳಯೋ ಪೇಟಿ: **ಪಂಪಭಾ,** ೧೩. ೫೫)

**ಮರುಳಿಕ್ಕು** – ಮಂಕುಬಡಿಸುವ ಮದ್ದನ್ನು ಉಣಿಸು (ನೀವೆತ್ತಾನುಂ ಮರುಳ್ಗೊಂಡಿರೋ ಮರುಳಿಕ್ಕಿ ಅಟ್ಟುದನುಂಡಿರೋ ಪೇಟಿಂ: **ಪಂಚತಂತ್ರ,** ೨೧೨ ವ)

**ಮರುಳಿಸು** – ಮೋಹಗೊಳಿಸು (ಮರುಳಿಸಲ್ತಾನಾರ್ತುಂ ಅತ್ಯಂತಸೌಂದರಕಾಂತಾಜನಮಂ: **ಆದಿಪು,** ೮. ೫)

**ಮರುಳ್ಗವಿ** – ತಿಳಿಗೇಡಿಯಾದ ಕವಿ (ನವಭೂತ ಭಾಷೆಯಿಂ ಕುಜುಪುವೇಟ್ಟು ತಾಂ ಅಡ್ಡಗವಿತೆಯಂ ಮಾಡಿ ಮಹಾವ್ಯವಸಾಯಂಗೆಯ್ವ ಮರುಳ್ಗವಿಗಳ್ ತಾವೇಂ ಗುಣಾಢ್ಯರಂ ಮಸುಳಿಸರೇ: **ಗದಾಯು,** ೪. ೪೨)

**ಮರುಳ್ಗೊಳ್** – ಭ್ರಾಂತಿಗೊಳ್ಳು (ಮರುಳ್ಗೊಂಡಂತೆ ಇಂದ್ರಾಯುಧಮಿರ್ಪೆಡೆಗೆ ಪರಿತಂದು: **ಕಾದಂಸಂ,** ೭. ೩೯ ವ); ಸಡಗರಿಸು (ಜಾತಕರ್ಮೋತ್ಸವದೊಳ್ ಪರಿಜನಮುಂ ಪುರಜನಮುಮೋ ಒಸಗೆ ಮರುಳ್ಗೊಂಡು ನಿರ್ಭರಕ್ರೀಡಾರಸಪರವಶರಾದರ್: **ಆದಿಪು,** ೭. ೧೧೨ ವ)

**ಮರುಳ್ಚು** – ಮರುಳು ಮಾಡು, ಆಕರ್ಷಿಸು (ಸರಿಗೆಯೊಳ್ ಸಮೆದ ಅಕ್ಷಮಾಲಿಕೆ ಪೊನ್ನ ಮುಂಜಿ ತೊಳಪ್ಪ ಕಪ್ಪುರದ ಭಸ್ಮರಜಃ ತ್ರಿಪುಂಡ್ರಕಂ ಒಪ್ಪೆ ಪಿಂಗಜಟಾಳಿ ತಾವರೆಯ ಸೂತ್ರದೊಳಾದ ಜನ್ನವಿರಂ ದುಕೂಲದ ಕೋವಣಂ ಕರಂ ಒಡಂಬಡೆ ನೋಟಕರ್ಕಳಂ ಆ ತಪಸ್ವಿ ಮರುಳ್ಚಿದಂ: **ಪಂಪಭಾ,** ೬. ೮)

**ಮರುಳ್ವಡೆ** – [ಮರುಳ್+ಪಡೆ] ದೆವ್ವಗಳ ಸಮೂಹ (ವಾಜಿಯುಂ ವಾಹಕರುಂ ಮರುಳ್ವಡೆಯುಂ ಆಗಡೆ ತಮ್ಮೊಡನಡೆ ರಾಗದಿಂ: **ಪಂಪರಾ,** ೧೩. ೬೫)

**ಮರೆ** – ಒಂದು ಬಗೆಯ ಜಿಂಕೆ (ಚೇತಃಪರಿಣಮನಸುಖದೆ ಸುಟಿದುವು ಕೇಸರಿ ಎರಳೆ ಪುಲ್ಲೆ ಮರೆ ಸಾರಂಗಂ: **ಅನಂತಪು,** ೩. ೩೬)

**ಮರ್ಕಟ** – ಕೋತಿ (ಜರಂಧರತಾಪಸರ ಕಯ್ಯಂ ಪಿಡಿದೆಡಲೀಯದೆ ನಡೆಯಿಸುವ ಚಪಳಮರ್ಕಟಂಗಳಿಂ ವನಹರಿಣಂಗಳಿಂ ಕರಪುಷ್ಕರಂಗಳಿಂ ತಂದು ಪೂಗಿಡುಗಳ್ಗೆ ನೀರೆಱೆವ: **ಕಾದಂಬ,** ೧. ೧೮೫ ವ)

**ಮರ್ಕಟಧ್ವಜ** – ಅರ್ಜುನ (ಪೊಣರ್ದರುರ್ಬಿ ವೃಷಧ್ವಜ ಮರ್ಕಟಧ್ವಜರ್: **ಶಬಶಂವಿ,** ೪. ౭೨)

**ಮರ್ಕಟಬಂಧ** – ಬಿಗಿಯಾದ ಹಿಡಿತ, ಬಿಗಿ ಕಟ್ಟು (ತದೀಯಶೌರ್ಯಮನೆತ್ತುಂಗೋಲ್ಗೊಳ್ವಂತೆ ಮೇಗಣಿಂ ಮೇಗೆ ಪಿಡಿದಪ್ಪಿಕೊಂಡುಮರ್ಕಟಬಂಧದಿಂ ಕಟ್ಟಿ ತಂದು: **ಶಾಂತಿಪು,** ೧. ೧೬೪ ವ)

**ಮರ್ಚು** – ಪ್ರೀತಿ (ನಿರ್ಮಳಿಕೆಯ ಮರ್ಚಿಂಗಂ ವನಮಾಲೆಯ ಪೆರ್ಚಿಂಗಂ ಹಿತೋಪದೇಶಮಂ ಪೇಟ್ವೆಂ: **ಲೀಲಾವತಿ,** ೧೩. ೧೨೫ ವ)

**ಮರ್ತ್ಯಾಂಗ** – ಮನುಷ್ಯದೇಹ (ಇನನಿಂದು ಜ್ಯೋತ್ಸ್ನೆಯಂ ತಾಳ್ದಿದಂ ಅನಲಂ ಅನವಷ್ಟಂಭಮೋಡಿತ್ತು ಮರ್ತ್ಯಾಂಗನಿಕಾಯಂ ಬಿಬ್ಬಿನಂ ಬೆಕ್ಕನೆ ಬಿರಿದಪುದು: **ಸುಕುಮಾಚ,** ೪. ೧೧)

**ಮರ್ದಳೆ** – ಮದ್ದಳೆ (ಪಟುಪಟಹ ತುಣವ ಭಂಭಾ ಮರ್ದಳೆ ಝಲ್ಲರಿ ಮುಕುಂದ ತಾಳ ಕಾಹಳ ಶಂಖ ವಂಶ ವೀಣಾಸ್ವರಂಗಳೆಸೆಯೆ: **ವಡ್ಡಾರಾ,** ಪು ೮೪, ಸಾ ೨೯)

**ಮರ್ದಿಸು** – ತುಳಿದುಹಾಕು (ಎರಡರ್ಥಕ್ಕೆ: ತುಟಿದನೆಂದು ಕಾಲೊಳ್ ಮರ್ದಿಸಿದನುಂ ಘಾಸಿಮಾಡಿದನಕ್ಕುಂ: **ಶಬ್ದಮದ,** ೩೩ ವೃತ್ತಿ ೧೪೪); ಕೊಲ್ಲು (ನಿಯತಂ ಸಮ್ಯಙ್ಮಂತ್ರ ಪ್ರಯೋಗಪಟುವೆನಿಪ ಭೂತಳಾಧೀಶ್ವರನ ಪ್ರಿಯರಂ ಮರ್ದಿಸಿ ಧರೆಯಂ ಜಯಲಕ್ಷ್ಮೀಧಾಮನಾಗಿ ಪರಿರಕ್ಷಿಸುಗುಂ: **ಪಂಚತಂತ್ರ,** ೨೯೧)

**ಮರ್ದು** – ಔಷಧ (ಭವದವಾಗ್ನಿಯೊಳ್ ಬೇವ ಜೀವರಾಶಿಗೆ ಭವದ್ವಚೋಮೃತಮೆ ಮರ್ದು ಅನಂಗಾಂತಕಾ: **ಆದಿಪು,** ೧೩. ೮೬)

**ಮರ್ದುವೇಟ್** – ಔಷಧವನ್ನು ಸೂಚಿಸು (ಆರ್ತನ ತೆಱನಱಿಯದೆ ಮರ್ದುವೇಟ್ವ ಬೆಜ್ಜನ ತೆಱದಿಂ; **ಕವಿರಾಮಾ,** ೩. ೧೫೧)

**ಮರ್ಬು** – ಕತ್ತಲೆ (ಸೋನೆ ಸುತ್ತಲುಂ ಭೋರೆನುತೊರ್ಮೆ ಸೈಗಱೆಯೆ ತೊಟ್ಟನೆ ಪರ್ವಿದ ಮರ್ವಿನಿಂದ: **ಕಬ್ಬಿಗಕಾ,** ೨೧೪); ಆವರಿಸು (ಕಾಮಾತುರಾವಳಿಯಂ ಮಾರಶರಾಳಿ ನುಂಗೆ ಜಗಮಂ ಮರ್ಬಿತ್ತು ಘರ್ಮಾಗಮಂ: **ತ್ರಿಷಷ್ಟಿಪು,** ೧೨. ೭)

**ಮರ್ಮ** – ದೇಹದ ಸೂಕ್ಷ್ಮ ಭಾಗ, ಹೃದಯ (ಆದರಿಸಿ ಲೋಗರ ಮರ್ಮಮನೆಯ್ದೆ ಭೇದಿಪೊಂದಿರವೆ ಪೊದಳ್ದ ಜಾಣಂ ದುರ್ಜನತಾಪಸನೇಂ ಕೃತಾರ್ಥನೋ: **ರಾಜಶೇವಿ,** ೧. ೪೦); ರಹಸ್ಯ

**ಮರ್ಮಪ್ರದೇಶ** – ದೇಹದ ಸೂಕ್ಷ್ಮ ಭಾಗ (ಪಲಗೆಗಳೆರಡುಂ ತೊಟ್ಟನೆ ಮರ್ಮಪ್ರದೇಶವಂ ಔಂಕುವುದುಂ ಆ ಬಲಿಮುಖಂ ಕಾಲಮುಖಮಂ ಎಯ್ದಿತ್ತು: **ಪಂಚತಂತ್ರ,** ೮೨ ವ)

**ಮರ್ಮರಪತ್ರ** – ಮರಮರ ಸದ್ದುಮಾಡುವ ಎಲೆ ಮರ್ಮರಪತ್ರಮಂಬುತಳಮಂ ನಡುವಂತಿರೆ ನಟ್ಟೊಡೆ: **ಶಾಂತಿಪು,** ೭. ೯೪)

**ಮರ್ಮವೇದಿ** – ಮರ್ಮಜ್ಞ (ಪಿರಿಯಂಗಂ ಮರ್ಮವೇದಿಗಂ ಮೂರ್ಖಂಗಂ ನರಪತಿಗಂ .. .. ದೆಯ್ವಕ್ಕಂ ಅಂಜವೇಟ್ಟುಂ: **ನೇಮಿನಾಪು,** ೭. ೧೮)

**ಮರ್ಮೋದ್ಘಾಟನ** – ಮನಸ್ಸನ್ನು ನೋಯಿಸುವುದು (ನಿನ್ನ ಮಹಿಮೆಗಿದು ನಡೆವಳಿಯೇ ಎಂದು ಮರ್ಮೋದ್ಘಾಟನಂಗೆಯ್ದು: **ಪಂಪರಾ,** ೯. ೧೪೫ ವ)

**ಮರ್ಯಾದಾವಿಪ್ರತಿಪತ್ತಿ** – ಗಡಿವಿವಾದ (ಆಱನೆಯ ಕುಳಧರಂ ಪುಟ್ಟಿ ಮರ್ಯಾದಾವಿಪ್ರತಿಪತ್ತಿಯಿಂದಂ ಊಳ್ವ ಆರ್ಯಜನಕ್ಕೆ ಆಘಾಟಶುದ್ಧಿಯಂ ಮಾಡಿ: **ಆದಿಪು,** ೬. ೫೭ ವ)

**ಮರ್ಯಾದೆ** – ಎಲ್ಲೆ (ಅಬ್ಧಿಯುಂ ಒರ್ಮೆ ಕಾಲವಶದಿಂ ಮರ್ಯಾದೆಯಂ ದಾಂಟದೇ: **ಪಂಪರಾ,** ೯. ೮೬); ಪದ್ಧತಿ (ನೆಲನಂ ಮರ್ಯಾದೆಯಿಂ ಪಾಲಿಸಿ ನಿಯಮಿಸಿ ವರ್ಣಾಶ್ರಮಾಚಾರಮಂ .. .. ರಾಜಾಧಿರಾಜರ್: **ಪಂಪರಾ,** ೧. ೧೩೨)

**ಮರ್ವು** – ಮಂಕು (ಒದವಿದ ಚಿಂತೆ ಪೆರ್ಚೆ ಪಸಿವಿಲ್ಲದೆ ಮರ್ಬೆರ್ದೆಯುರ್ಬೆ ನಿದ್ರೆಯಿಲ್ಲದೆ ಬಗೆ ಬೆರ್ಚೆ: **ಆದಿಪು,** ೧೨. ೨೨)

**ಮಲಂಗು** – ಒರಗು (ಮನಂಗೊಳಿಸುವ ಪಳಿಕಿನ ಚೌಪಳಿಗೆಯ ನೀಲ ಶಿಲಾಸ್ತಂಭಮಂ ಮಲಂಗಿ .. .. ನಿರತಿಶಯಮಾಗಿರ್ಪುದುಂ: **ಪಂಪರಾ,** ೫. ೫೭ ವ); ನಿದ್ರಿಸು (ನೀಡಿ ಕಾಲನರೆಬರ್ ಮಲಂಗಿದರ್ ಪೋಳೆವ ತಳಿರ ಬೊಂದರಿಗೆಗಳೊಳ್: **ಆದಿಪು,** ೧೧. ೭೮); ದಿಂಬು (ಅಲರ್ಗಳ ತಲೆಗಿಂಬಿನಿಂದಂ ಅಲರ ಮಲಂಗಿಂದ ಅಲರ ದಳಿಂಬದಿಂ ಇಂಬಾದ ಅಲರ್ವಾಸಿನ ಮೇಲೆ ಲೀಲೆಯಿಂ ಕುಳ್ಳಿರ್ದಂ: **ಪಾರ್ಶ್ವನಾಪು,** ೯. ૩೦)

**ಮಲಗು** – ದಿಂಬು (ಉಪರಿ ಭೂಮಿಕೆಯ ಮಲಗುಗಳೊಳ್ ಮನಃಪ್ರಿಯರ ವಾಮಾಂಕವಿನ್ಯಸ್ತರಾಗಿ: **ಶಾಂತೀಶ್ವಪು,** ೧೧. ೧೯ ವ)

**ಮಲಧಾರಿ** – [ಜೈನ] ಸನ್ಯಾಸಿ (ಎಮಗೆ ಮಲಧಾರಿ ಸಿದ್ಧಾಂತಮುನೀಶ್ವರಚರಣಸರಸೀರುಹಮಂ .. .. ಜಯನಂದಿ ಮುನಿಕ್ರಮಕಮಳಮೀಗೆ ಬೋಧೋದಯಮಂ: **ಆದಿಪು,** ೧. ೧೩)

**ಮಲಮಱುಗು** – ಮಮ್ಮಲ ಮರುಗು (ಬೆಱಗಾಗಿ ಋಷಿಯರಂ ಪೊದಿದನಪ್ಪೊಡೆ ನಮಗಲ್ಲನೆಂದು ಮನದೊಳ್ ಮಲಮಱುಗಿ: **ಧರ್ಮಾಮೃ,** ೮. ૩૩ ವ)

**ಮಲಯ** – ಕುಲಪರ್ವತಗಳಲ್ಲಿ ಒಂದು (ಮಲಯಕ್ಷ್ಮಾಧರ ಮೇಖಳಾಪರಿಗತಶ್ರೀಖಂಡಷಂಡಂಗಳೊಳ್ ನಲವಿಂದೊಂದಿ ಬಟಿಲ್ದ ಭೋಗಿಮಿಥುನಂಗಳ್: **ಚಂದ್ರಪ್ರಪು,** ೭. ೪೦)

**ಮಲಯಜ** – ಶ್ರೀಗಂಧ (ಕರಿದಾದೊಡೆ ಕತ್ತುರಿಯಂ ಮುರುಡಾದೊಡೆ ಮಲಯಜಂಗಳಂ ಕೊಂಕಿದೊಡೇಂ ಸ್ಮರಚಾಪಮಂ ಇಳಿಕೆಯ್ವರೇ: **ಯಶೋಧಚ,** ೨. ೪೨)

**ಮಲಯರುಹ** – ಶ್ರೀಗಂಧದ ಮರ (ಹರಿಣಧರನೊಳ್ವಿಷಂ ಮಲರುಹದೊಳನಲಾರ್ಚಿ ನಿನ್ನ ವದನೋದರದೊಳ್ ಪರುಷತರವಚನಮಪ್ಪುದು ದುರವಾಪಂ: **ಕವಿರಾಮಾ,** ૩. ೭೯)

**ಮಲಯಾನಿಲ** – ಸುಗಂಧಪೂರಿತ ತಂಗಾಳಿ (ಪೊದಳ್ದ ಬಲ್ಮುಗುಳ್ಗಳ ತಂದಲಂದು ಕವಿತಂದುದು ಅದಂ ತನಿಸೋಂಕುಸೋಂಕಿ ಮೆಲ್ಲಗೆ ಮಲಯಾನಿಲಂ ಸುಟಿದೊಡೆ ಅಂದು ಜಗಂ ಪೊಸತಾದುದು: **ಪಂಪಭಾ,** ೧೪. ೧೯)

**ಮಲಯೋದ್ಭವ** – ಮಲ[ಳ]ಯರುಹ (ಸೋರ್ಮುಡಿ ಮಾಲೆಯಿಂ ಕದಪುಗಳ್ ಮಲಯೋದ್ಭವಪತ್ರಭಂಗದಿಂ ಪೆರ್ಮಾಲೆ ಹಾರದಿಂದೆಸೆಯೆ ಬಂಬಲವಾಡಿದ ರೂಪು: **ಮಲ್ಲಿನಾಪು,** ೪. ೭೬)

**ಮಲರ್** – ಅರಳು, ವಿಕಸಿಸು (ಈಕೆಯ ಮುಖೇಂದುಬಿಂಬದಿನೀ ಕನಕಸರೋಜಮೆಂತು ಮಲರ್ದತ್ತು: **ಆದಿಪು,** ೭. ೭); ಹೂ (ಮಧ್ಯಾಹ್ನದ ಬಿಸಿಲ್ ಅಳುರಳ್ ಕಣ್‌ಮಲರ್ ನಟ್ಟು: **ಕಾದಂಸಂ,** ೧. ೬೦)

**ಮಲರ್ಚು** – ಮುಖ ತಿರುಗಿಸು (ಕ್ಷಮಾಂಗನಾಲಿಂಗಿತನಪ್ಪ ಮಹಾಮುನಿಯಂ ಮಲರ್ಚಿ ಪಟ್ಟಿರಿಸಿಯುರಃಸ್ಥಲಮಂ ನಾಭಿವರೆಗಂ ವಿದಾರಿಸಿ ಪಂದೊವಲ್ ಪೊರೆತಾಪಿನೆಗಂ .. .. ಕಾಯ್ದು ಕರ್ಬೊನ್ನ ಕೀಲ್ಗಳಂ .. .. ಇಱಿದೊಡೆ: **ವಡ್ಡಾರಾ,** ಪು ೫೧ ಸಾ ೨೯)

**ಮಲೀಮಸ** – ಕ್ಷುದ್ರ[ವಾದ], ಮಾಸಿದ (ಅಗ್ರಜನಿರಲ್ ಪಟಿಗಂಜದೆ ಪಾಪಭೀರುವಾಗದೆ ಭರತಂಗೆ ರಾಜ್ಯಭರಮಂ ಕುಡವೇಟ್ಟಿ ಮಲೀಮಸೋಕ್ತಿಗಳ್: **ಪಂಪರಾ,** ೬. ೯೬)

**ಮಲೆ** – ಗರ್ವಿಸು (ಅದಿರದಿದಿರ್ಚಿ ತಳ್ತಿಱಿಯಲ್ ಈ ಮಲೆದೊಡ್ಡಿದ ಚಾತುರಂಗಬಲಮೆಂಬುದು ನಿನಗೊಡ್ಡಿ ನಿಂದುದು: **ಪಂಪಭಾ,** ೧೦. ೬೪); ಬೆಟ್ಟ (ಮಲೆಗಳ ಮೇಲಿರ್ದುಂ ಪೆರ್ಮೊಲೆಗಳ ಮೇಲಿರ್ದರಧಿಕ ದುಶ್ಚಾರಿತ್ರರ್: **ಧರ್ಮಾಮೃ,** ೬. ೪೪); ಬೆಟ್ಟಸೀಮೆ (ಮಲೆಯುಂ ಮಂಡಲಮುಂ ಬೆಳರ್ಚುವಂತು ಕೊಂಡಾಡುವ ನಾಲ್ವರುಮನುಜರೊಳಗೆ ನೆಗಟ್ದರಿಗನ ತೇಜಮೆ ತೊಳಗಿ ಬೆಳಗೆ: **ಪಂಪಭಾ,** ೪. ೧೦)

**ಮಲೆತರ್** – ಸೊಕ್ಕು ಪಲ್ಲೆಗಾಟಿಸಿ ಮಲೆತರ್ಪರಲೆಯ ಸೋಲಮನಟ್ಟೆಯೊಳರಿಕೇಸರಿನಿಂದು ನೋಟ್ಪುದೊಂದರಸಲ್ತೇ: **ಪಂಪಭಾ,** ೫. ೪೪)

**ಮಲೆಪರ್** – ಬೆಟ್ಟಸೀಮೆಯ ಅರಸುಗಳು (ಮಲೆಪರ್ ಮಂಡಳಿಕರ್ ಕಱುಂಬರ್ ಅದಟರ್ ವೀರರ್ಕಳುಂ ತಮ್ಮ ಬಾಟ್ದಲೆಯಂ ಬೇಡಿದ ವಸ್ತುವಾಹನಮುಮಂ ಮುಂದಿಟ್ಟು ಮೂವಿಟ್ಟಿಯ ಒಕ್ಕಲವೋಲ್ ಇಂ ಬೆಸಕಯ್ಯೆ ಸಂತಮಿರುತುಂ: **ಪಂಪಭಾ,** ೯. ೧೦); ಅಹಂಕರಿಸುವವರು (ಮಲೆಪರ್ಗಭಿಚಾರಕ್ರಿಯೆ ವಲಮೆನಿಸಲ್ ಚಕ್ರಪೂಜನಂ ಸಕಳಮಹೀವಳಯಕ್ಕೆ ಶಾಂತಿಕರ್ಮಂ ವಲಮೆನಿಸಲ್ ಜಾತಕರ್ಮಮೇಂ ನೆಱೆದತ್ತೋ: **ಆದಿಪು,** ೧೧. ೫)

**ಮಲೆಪು** – ಗರ್ವ (ಜಾದಿಯ ಮಲೆಪುಂ ಮಲ್ಲಿಗೆಯ ಪೊಂಕಮುಂ ಬಟಿಕವನಾರ್ತಲೆಯೊಳ್ ತಾಳ್ದುವರ್: **ಆದಿಪು,** ೧೧. ೧೦೮); ಉಬ್ಬಟೆ (ಅಲರ್ದರೆಗಟಿಗೆಯೆ ಜಾದಿಯ ಮಲೆಪುಂ ಮಲ್ಲಿಗೆಯ ಪೊಂಕಮುಂ: **ಆದಿಪು,** ೧೧. ೧೨೨)

**ಮಲೆಯೆಲರ್** – ಬೆಟ್ಟದ ಕಡೆಯಿಂದ ಬೀಸುವ ಗಾಳಿ (ಮಲೆಯೆಲರಲೆಪುಂ .. .. ಕೋಗಿಲೆಯ ಜಡಿಪುಂ ಒಡನೆಗಟ್ಟಿನಂ: **ಅಜಿತಪು.** ೨. ೧೪)

**ಮಲ್ಲ** – ಜಟ್ಟಿ ಸುಯೋಧನಂ ಮಲ್ಲಂ ವಿಷಖರ್ಪರನೆಂಬಂ ತನ್ನ ಮಲ್ಲರೆಲ್ಲರುಇಮಮಂ ಕೊಂದೊಡೆ: **ಪಂಪಭಾ,** ೮. ೫೭ ವ)

**ಮಲ್ಲಂತಿಗೆ** – [ಮಲ್ಲವಸ್ತ್ರಿಕಾ] ಮಲ್ಲರು ಧರಿಸುವ ಬಟ್ಟೆ (ಸಾಹಸಭೀಮಮ ಮಲ್ಲಂತಿಗೆಯನಪ್ಪೊಡಂ ಸಡಿಲಿಸದವನಂ ಅವಯವದೊಳಿಂತೆಂದಂ: **ಪಂಪಭಾ,**

**ಮಲ್ಲಂತಿಗಿಱೆ** – ಮಲ್ಲನಿಗೆ ಕಾಸೆಯನ್ನು ಕೊಡು ೩. ೧೬ ವ)(ನಿನ್ನನೀ ಮನೆಯೊಳಗೆ ದಿಟದದೇವತೆಯಂತೆ ಮಲಗಿ ಮಲ್ಲಂತಿಗಿಱೆದು ಕುಳ್ಳಿರಲೀಯೆಂ: **ನೇಮಿನಾಪು,** ೭. ೫೦ ವ)

**ಮಲ್ಲಗಳ** – [ಮಲ್ಲ+ಕಳ] ಕುಸ್ತಿಯ ಕಣ (ಪಾದಾಹತಿಯಿಂ ಭೂರೇಣುವಾಗೆ ಹರಿ ಚಾಣೂರರ್ ಮತ್ತೊಂದು ಮಲ್ಲಗಳನಂ ಸಮೆದರ್: **ನೇಮಿನಾಪು,** ೮. ೯೫)

**ಮಲ್ಲದಾಳ** – ಮಲ್ಲರು ತೋಳು ತೊಡೆ ತಟ್ಟಿಕೊಳ್ಳುವುದು (ಪಳುಕಿನ ಕೋಡುಗಲ್ಗಳೊಳ್ ಪೊಳೆವ ತಮ್ಮ ನೆೞಲ ನೆರೆದ ಮಲ್ಲರ ನೆರವಿಯಾಗಲುಂ ನಿಕುಂಜೋಪಾಂತ ಜರ್ಝರನಿರ್ಝರಧ್ವನಿಯೆ ಮಲ್ಲದಾಲಮಾಗಿಯುಂ: **ಚಂದ್ರಪ್ರಪು,** ೫. ೭೭ ವ)

**ಮಲ್ಲಯುದ್ಧ** – ದ್ವಂದ್ವ ಕಾಳಗ, ಇದರ ಬಗೆಗಳು (ಲಂಘನ ವಲ್ಗನ ಪ್ಲವನ ವಿಕ್ರಮ ಭ್ರಮರಿ ಕರಂಗಳಂ ಸಾರ್ಚಿ ಮುನ್ನಂ ಧರ್ಮಹಸ್ತಮಂ ನೀಡಿ ಪೊಕ್ಕಮರ್ದು ಸಮಲತಾ ಬಹುಕಳಿ ಕತ್ತರಿಗಳಿಂ ಗಾಯಮಱೆದೊತ್ತಿ: **ಹರಿವಂಶ,** ೬. ೫೦ ವ)

**ಮಲ್ಲಲ್** – ಪಾತ್ರೆ (ಅನಿಬರುಮಂ ನೆಲಮನೆಯೊಳಿಕ್ಕಿ ಮಲ್ಲಲ್ ಪುಗುವನಿತು ಬಾಗಿಲು ಮಾಡಿ ಪ್ರತಿದಿನಕ್ಕೊಂದು ಮಲ್ಲಲ ಕೂೞುಮಂ ಒಂದು ಮೊಗಪೆ ನೀರುಮಂ ನೆಲಮನೆಯೊಳಗಣ್ಗೆ ನೀಡಿದೊಡೆ: **ವಡ್ಡಾರಾ,** ಪು ೧೮೨, ಸಾ ೯)

**ಮಲ್ಲವಱಿ** – ಜಟ್ಟಿಗಳ ಹರೆ (ದೇವದುಂದುಭಿನಾದಂ ಪೊಱಪಲ್ಲ ಮಲ್ಲವಱೆಯೊಂದಿ ಇಂದೋಳಂ ಎಕ್ಕೆಕ್ಕೆಯಿಂ: **ನೇಮಿನಾಪು,** ೮. ೯೨)

**ಮಲ್ಲವೋರ್** – ಕುಸ್ತಿಮಾಡು (ಗಜಮಲ್ಲನೊಳ್ ಪ್ರತಿಮಲ್ಲಂ ಮಲ್ಲವೋರ್ದು ಸಿಂಹನಾದದಿಂ ಆರ್ದು: **ನೇಮಿನಾಪು,** ೮. ೮೪ ವ)

**ಮಲ್ಲಟಿ** – ದೇಹದ ಬಾಧೆ ಹಾಗೂ ಸುತ್ತಿ ಬರುವುದು (ಎರಡರ್ಥಕ್ಕೆ: ಮಲ್ಲಟಿಯೆಂದು ಶರೀರವ್ಯಾಕುಲತೆಯುಂ ಸುತ್ತಿಬರ್ಪುದುಮಕ್ಕುಂ: **ಶಬ್ದಮದ,** ೩೩ ವೃತ್ತಿ ೧೪೯)

**ಮಲ್ಲಟಿಗೊಳ್** – ತಳಮಳಗೊಳ್ಳು (ಮುಟಿದಡ್ಡವಾಯ್ದು ಗಿಳಿ ಮಲ್ಲಟಿಗೊಂಡೊಳಸಾರೆ ಮಾವು ಕೈಮಱೆಯೆ ತೆರಳ್ದು ರೂವುಗಿಡೆ: **ಕಬ್ಬಿಗಕಾ,** ೨೪೪); ಮೂರ್ಛೆಗೊಳ್ಳು (ತೀವ್ರಕಂಪನಮೆರ್ದೆಗಾಗೆ ತಲ್ಲಣಿಸಿ ಮಲ್ಲಟಿಗೊಳ್ವರ್ ಅರಾತಿಭೂವರರ್: **ರಾಜಶೇವಿ,** ೫. ೧೩)

**ಮಲ್ಲಾಮಲ್ಲಿ** – ಯುದ್ಧ, ಸ್ಪರ್ಧೆ (ಅನ್ನೆಗಂ ಇತ್ತ ನರನಂದನನ ಬಟಿವಟಿಯಂ ತಗುಳ್ದು ಗಟಿವಟಿಯ ಪಾವಿನಂತೆ ಚಕ್ರವ್ಯೂಹಮಂ ಪುಗಲ್ ಎಂದು ಬರ್ಪ ದ್ರುಪದ .. .. ಘಟೋತ್ಕಚಾದಿಗಳೊಡನೆ ಮಲ್ಲಾಮಲ್ಲಿಯಾಗಿ ಕಾದುವ ಕುಂಭಸಂಭವನಲ್ಲಿಗೆ ದುರ್ಯೋಧನಂ ಬಂದು: **ಪಂಪಭಾ,** ೧೧. ೯೬ ವ)

**ಮಲ್ಲಿಕಾವೃತಿ** – ಮಲ್ಲಿಗೆ ಪೊದೆ (ಮಲ್ಲಿಕಾವೃತಿಯೊಳ್ ವಲ್ಲಭೆಯಂ ತೋಟಿಲ್ದರಸಿದಂ ವಿದ್ಯಾವಧೂವಲ್ಲಭಂ: **ಲೀಲಾವತಿ,** ೧೪. ೫೪)

**ಮಲ್ಲಿನಾಥ** – [ಜೈನ] ಒಬ್ಬ ತೀರ್ಥಂಕರ (ದಿವ್ಯಭಾಷಾವ್ಯಪಾರೋದಾರನಾದಂ ಕೊಡುಗೆಮಗೆ ಸುಖಾವಾಪ್ತಿಯಂ ಮಲ್ಲಿನಾಥಂ: **ಮಲ್ಲಿನಾಪು,** ೧. ೧)

**ಮಶಕ** – ಸೊಳ್ಳೆ (ಮಶಕೋತ್ಕರಮೆತ್ತಂ ಕವಿಯೆ ಸೆಡೆವುದೇಂ ಮದಗಜಂ: **ಶಬರಶಂ,** ೪. ೪೫)

**ಮಸ** – ಕಾಮತೃಷೆ (ಚುಂಬಿಸಿದುದು ಮೇಲ್ವಾಯ್ದೊತ್ತಂಬದಿ ಪುಷ್ಪವತಿಯಾದ ನಳಿನೀಜತೆಯಂ ತುಂಬಿ ಮಸದಿಂ: **ವರ್ಧಮಾಪು,** ೧೦. ೪೧)

**ಮಸಕ** – ಉತ್ಕಂಠೆ (ಸಪ್ತಚ್ಛದಗಂಧಮನೀ ವನೇಭಮಾಘ್ರಾಣಿಸಿ ಪೆರ್ಚಿದ ಮಸಕದಿಂದೆ ಪಾಯಲ್ಕದಿರ್ಪುಗೆಯ್ದಪ್ಪುದುದು ನೋಡ ವನವೇದಿಕೆಯಂ: **ಆದಿಪು,** ೧೧. ೬೪); ತೀಕ್ಷ್ಣತೆ (ಕುಸುಮಿಸಿದ ಕುಸುಮದೆಸಳ ಮಿಸುಗುವ ಪೊಸವಸೆಯೊಳಸದಳಮೆಸೆಯೆ ಪಸರಿಸಿ ಪೊಸಯಿಸಿದ ಪೊಸಸುಸಿಲ ಮಸಕದ ಬಸದೊಳೆ: **ಆದಿಪು,** ೪. ೧೨ ವ); ಆಧಿಕ್ಯ (ಮಕ್ಕಳ್ ಒಸಗೆಯಂ ಈವುದು ನಿನ್ನೆಸಕದ ಮಸಕಮನೆ ಪೋಲ್ವ ಮಗನಂ ಮಘವಾ: **ಪಂಪಭಾ,** ೧. ೧೩೯); ಉತ್ಸಾಹ (ಇಸೆ ಮಸಗಿ ಭೀಮಂ ಈರಯ್ದು ಶಿತಾಸ್ತ್ರದಿಂ ಉರುಳೆ ಸೂತಂ ಉಡಿಯೆ ರಥಂ ಕೀಲಿಸೆ ಕುದುರೆ ಮುಱಿಯೆ ಪಟವಿಗೆ ಮಸಕದಿಂ ಎಚ್ಚೆಚ್ಚಂ ಒಂದೆ ಸರಲೊಳ್ ನೊಸಲಂ: **ಪಂಪಭಾ,** ೧೦. ೯೧); ಗುಂಗುರು, ಸೊಳ್ಳೆ (ದೇವತೆ ಮುಳಿದು ಪೊಱಸುಗಳಣ ಇವಿರಿಯವು ದಂಸ ಮಸಕಂಗಳಂ ವಿಗುರ್ವಿಸೆ ಮೆಯ್ಯೆಲ್ಲಮನಿರುಳ್ ನಾಲ್ಕು ಜಾವಮುಂ ತಿನೆ: **ವಡ್ಡಾರಾ,** ಪು ೧೩೪, ಸಾ ೧೯); ಪ್ರಭಾವ (ಲಯಕಾಲಮೃತ್ಯುವಿನಡರ್ಪೊ ಎನೆ ಮಿಸುಪ ಮಸಕಮಂ ತಳೆದನವಂ: **ಶಬರಶಂ,** ೪. ೩೮)

**ಮಸಕಂಗುಂದು** – ಉತ್ಸಾಹಗುಂದು (ಮಸಕಂಗುಂದದೆ ಅರಾತಿಪಾರ್ಥಿವರ ಕಾಂತಾನೇತ್ರನೀರೇಜದೊಳ್ ಬಿಸುನೀರಂ .. .. ನೋಡಿ: **ಲೀಲಾವತಿ,** ೧. ೯೮)

**ಮಸಗು** – ರೇಗು, ಕೋಪಗೊಳ್ಳು (ಕಾಲ್ಡುಱು ಮಸಗಿದಂತೆ ಮಸಗಿದ ದುರ್ಧರ ಧನುರ್ಧರಬಲಮುಮಂ ಶ್ವೇತ ಭೀಷ್ಮರ ಪೇಲ್ದಿ ಓಜೆಯೊಳೆರಡುಂ ಪಡೆಗಳ ಪಡೆವಳರ್ಕಳ್ ಕುರುಕ್ಷೇತ್ರದೊಳ್ ಚಿತ್ರಿಸಿದಂತೆ ಒಡ್ಡಿ ನಿಂದಾಗಳ್: **ಪಂಪಭಾ,** ೧೦. ೫೧ ವ); ವಿಜೃಂಭಿಸು (ಮಸಗಿ ಚಿಳಾತಾವರ್ತರ ಬೆಸದಿಂದಂ ಬಂದ ಮೇಘಮುಖರಂ ತೂಳ್ದೋಡಿಸೆ: **ಆದಿಪು,** ೧೪. ೫೮); ವ್ಯಾಪಿಸು (ಕಾರ್ಗತ್ತಲೆ ಮಸಗೆ ಮುಸುಱುವ ಮಱಿದುಂಬಿಯ ಬಂಬಲೊಳಂ: **ಕಾದಂಬ,** ೧. ೯೮ ವ); ಉಂಟಾಗು (ಕೆಸರ್ಮಸಗಿದ ಮುಮುದಕೇಸರದ ರಜದೊಳರ್ದ ಚರಣಚಯಮಂ ಕೇೞಲಾಱದೆ: **ಲೀಲಾವತಿ,** ೩. ೨೦ ವ)

**ಮಸಣ** – [ಶ್ಮಶಾನ] ಸುಡುಗಾಡು (ಆಕೆಯಂ ಬೆಳ್ಕಾಡೊಳ್ ಮಸಣದೊಳ್ ಕೊಂಡುಪೋಗಿಕ್ಕಿಂ ಎಂದು ಆಳ್ಗಳ್ಗೆ ಬೆಸನಂ ಪೇಲ್ದು: **ವಡ್ಡಾರಾ,** ಪು ೧೧೨, ಸಾ ೩)

**ಮಸಣವಟ್ಟಿಗೆ** – ಮಸಣ (ಪಾಣ್ಬನಂ ಕೊಂಡುಪೋಗಿ ಪುರದ ಪಱವೊಱಲ ಮಸಣವಟ್ಟಿಗೆಯ ಮಧ್ಯದೊಳು ವಧಿಯಿಸುವುದು ಎಂದು ನಿರೂಪಮಂ ಕುಡುವುದುಂ: **ಪುಣ್ಯಾಸ್ರ,** ೫. ೨೯ ವ)

**ಮಸಣಿಗೆ** – ಒಂದು ಕ್ಷುದ್ರ ದೇವತೆ (ವರಮೀಗುಮೆ ಮೈಲಾರಂ ಕೇತಂ ಕಾಟಂ ಮಾರಿಗೆ ಮಸಣಿಗೆಯೆನಿಪ್ಪ ಕೊಱೆದೆಯ್ವಂಗಳ್: **ಸಮಯಪ,** ೯. ೧೨೭)

**ಮಸಿ** – ಕಪ್ಪು ಬಣ್ಣ (ಮೆಯ್ಯೆಲ್ಲಂ ಮಸಿಯಂ ಪೂಸಿ ಬೋಟಿದಲೆವೆರಸು .. .. ಬರ್ಪೊನಂ ಅರಸಂ ಕಮಡಂ: **ವಡಾರಾ,** ಪು. ೧೧೮. ಸಾ. ೧೬); ಕಾಡಿಗೆ (ಸಂಪಗೆಯಂ ಮುಡಿಯೆ ಸೊಗಯಿಸದದಿರ್ಮುತ್ತೆಯಲರಂ ಮಸಿಯೊಳೆ ಸವನಾದ ಗೊಜ್ಜಗೆಯಂ: **ಆದಿಪು,** ೧೧. ೧೦೯); ಕಲೆ (ತಿಮಿತ್ತಿಳಕಮೆಂಬುದು ಪಸುಗೂಸಿಂಗೆ ಮಸಿಯೆಂಬುದು ಹುರಿಯೋಡಿಂಗೆ: **ಅನಂತಪು,** ೨. ೨೮ ವಂ

**ಮಸಿಮುಸುಡನ್** – ಕಪ್ಪು ಮೂತಿಯವನು (ಈ ಮಸಿಮುಸುಡನ ಜೀವಕಪ್ಪಿನಿಂ ಕಂದಿದೊಡೆ ಎಣ್ದೆಸೆಯನಡರ್ದಎನ್ನ ಕೀರ್ತಿಪ್ರಸರದೆ ಕುಡಿ ಕಯ್ಪೆಸೊರೆಯ ಕುಡಿಯವೊಲಕ್ಕುಂ: **ಯಶೋಧಚ,** ೨. ೫೫)

**ಮಸುರಿಗೆ** – ದಿಂಬು (ಅಲರ ಮಸುರಿಗೆಯೊಳುಸಿರ್ದುಳ್ಳಲರ್ದಡ್ಡಂ ನಿಮಿರ್ದ ಲತೆಯ ಮೇಲೆ ವಿಳಾಸಂ ನಿಲೆ ನೀಡಿ ಕಾಲಂ: **ಆದಿಪು,** ೧೧. ೭೮)

**ಮಸುಳ್** – ಮಾಸು, ಮಂಕಾಗು (ಮಣಿಮಕುಟಂ ಅಸವಸದಿಂದಂ ಚಕ್ರಿಯ ಪೊದಳ್ದ ತೇಜಕ್ಕೆ ಮಸುಳ್ದು: **ಆದಿಪು,** ೧೩. ೧೪)

**ಮಸುಳ** – ಕಪ್ಪಗಿರುವವನು (ಕವಿದ ಮದಾಳಿಯಿಂ ಮಸುಳನಾಗಿ ಪಯೋಜರಜಂಗಳೊಳ್ ಕವಿಲ್ಗವಿಲನುಮಾಗಿ ಬಂದ ಮಲಯಾನಿಲಂ: **ಪಂಪಭಾ,** ೨. ೧೪)

**ಮಸುಳಿಸು** – ಮಂಕುಗೊಳಿಸು (ನವಭೂತ ಭಾಷೆಯಿಂ ಕುಱುಪುವೇಟ್ದು ತಾಂ ಅಡ್ಡಗವಿತೆಯಂ ಮಾಡಿ ಮಹಾವ್ಯವಸಾಯಂಗೆಯ್ವ ಮರುಳ್ಗವಿಗಳ್ ತಾವೇಂ ಗುಣಾಢ್ಯರಂ ಮಸುಳಿಸರೇ: **ಗದಾಯು,** ೪. ೪೨); ಕುಗ್ಗು (ಇನ್ನಾಂ ನಿನಗೆ ಮುಳಿದೊಡೆನ್ನ ಜಸಂ ಮಸುಳಿಸುಗುಮುಸಿರದೆ ಪೋಗು, ಮೇಲಪ್ಪುದಂ ನಾನೆ ಬಲ್ಲೆಂ: **ಪಂಚತಂತ್ರ,** ೨೪೫ ವ)

**ಮಸುಳೆವರ್** – ಮಾಸಿಹೋಗುವಂತೆ ಮಾಡು (ಬಳೆದುವು ತೋಳ್ಗಳ್ ಎಕ್ಕೆಯಿಂ ಅಮಳ್ ಬಳೆವಂತಿರೆ ಮುಯ್ಯುಗಳ್ ಕುಳಾಚಳಶಿಖರಂಗಳಂ ಮಸುಳೆವಂದುವು ಪರ್ವಿದ ವಕ್ಷಮೀ ಕ್ಷಮಾತಳ ಕುಳಲಕ್ಷ್ಮಿಗಾಯ್ತು ಕುಳಮಂದಿರಂ: **ಪಂಪಭಾ,** ೨. ೩೭)

**ಮಸುಳ್ಕೆವೇಱು** – ಕಾಂತಿಹೀನವಾಗಿರು (ಪಸರಿದ ತಮದಿಂ ರಜದಿಂ ಮಸುಳ್ಕೆವೆತ್ತಿರದೆ ದೆಸೆಗಳುಂ ದಿಗ್ದೇವೀವಿಸರದ ಮೊಗದೊಳೆನಸುಂ ಪ್ರಸನ್ನಭವಮನದೇಂ ಪುದುಂಗೊಳಿಸಿದುದೋ: **ಚಂದ್ರಪ್ರಪು,** ೧೬. ೪೬)

**ಮಸೂರಿಕಾ** – ಕಡಲೆ (ತಿಳ ಮಸೂರಿಕಾದಿ ಶುಭ ವ್ಯಂಜನರಂಜಿತ ಪ್ರಶಸ್ತಾವಯವಂಗಳುಮಂ: **ಪಂಪರಾ,** ೩. ೧೪೫ ವ); ಮಚ್ಚೆ (ಪರಮನ ಪರಮೌದಾರಿಕಶರೀರಮೊಪ್ಪಿದುದು .. .. ತಿಲಮಸೂರಿಕಾಪ್ರಮುಖನವಶತವ್ಯಂಜನಂಗಳೊಳ್ ಕೂಡಿ: **ಪುಷ್ಪದಂಪು,** ೧೨. ೭೮ ವ)

**ಮಸೃಣ** – ಮೆತ್ತನೆಯ, ನಯವಾದ (ತೀರ್ಥಜಲಂಗಳಿಂದಂ ಅತಿ ಮಸೃಣಘಸೃಣ ಗೋಶೀರ್ಷ ಚಂದನ ಅಗುರು ಕರ್ಪೂರಸಂಮಿಶ್ರಿತ ಸುರಭಿಗಂಧಂಗಳಿಂದಂ: **ಆದಿಪು,** ೨. ೩೨ ವ)

**ಮಸೃಣಿತ** – ಹೊಳಪಾದ, ನಯವಾಗಿರುವ (ಅಂತನೇಕ ಮಕುಟಬದ್ಧ ಮಣಿಮಕುಟಮಣಿಕರ್ಷಣಸೃಣಿತಚರಣಂ ಆಪ್ತಾಧಿರಾಜ್ಯಂ: **ಆದಿಪು,** ೮. ೭೨ ವ)

**ಮಸೃಣೋಕ್ತಿ** – ಮೃದುಮಾತು (ಮಸೃಣೋಕ್ತಿಯಿಂ ಅವನತಿಯಿಂ ಪ್ರಸನ್ನ ವೀಕ್ಷಣದಿಂ .. .. ಯದುಕುಲಮಂ ಭವಿಸುತಿರ್ದಂ ಮನುಜಭಾವಮಂ ದನುಜಹರಂ: **ಜಗನ್ನಾವಿ,** ೭. ೩೩)

**ಮಸೆ** – ಹರಿತಗೊಳಿಸು (ಕರವಾಳಂ ಮಸೆವಂದದೆ ಮರವಾಳಂ ಮಸೆಯೆ ಕೂರಿತಮಕ್ಕುಮೆ; **ಗದಾಯು,** ೨. ೨೫); ಹೊಳಪು ನೀಡು (ಮಸೆವುದು ಮಾಸಲಿರ್ದ ಪಟಿವೇಟಮಂ ಇಚ್ಚೆಯ ಬಿಚ್ಚತಿಕ್ಕೆಯಂ ಪೊಸೆಯಿಪುದು ಒಳ್ಕಮಂ ನಡೆಪುತಿರ್ಪುದು ಧಾತುವಂ ಒಳ್ಪಿತೆಯ್ದೆ ಪಾಟಿಸುವುದು ಕೂಟದೊಳ್ ಕುಶಲನಪ್ಪುದು: **ಶಾಂತಿಪು,** ೮. ೯೧); ಅಲಗು, ಮೊನೆ (ಕಡಿತಲೆಯ ಕೊಂತದ ಮಸೆ ಅಸುಂಗೊಳ್ವಿನಂ ಎಸೆಯೆ: **ವರ್ಧಮಾಪು,** ೪. ೪೪ ವ)

**ಮಸೆಯಂ ಪತ್ತಿಸು** – ಗಾಯಮಾಡು (ಮಸೆಯಂ ಪತ್ತಿಸುವ ಕೈದುಬಿನ್ನಣಮಂ ಈಕ್ಷಿಸಲಾಗ: **ಸಮಯಪ,** ೫. ೧೨೪)

**ಮಸೆಯಂಬು** – ಹರಿತವಾದ ಬಾಣ (ಪೊಸಮಸೆಯಂಬುಗಳ್ ದೆಸೆಗಳಂ ಮಸುಳ್ವವನ್ನಗಮೆಯ್ದೆ ಪಾಯೆ: **ಪಂಪಭಾ,** ೧೧. ೬೫)

**ಮಸೆವಡು** – ಹರಿತಗೊಳ್ಳು (ಮಸೆವಟ್ಟುಜ್ವಲದರ್ಪಣಂ ಪೊಸದಳಿರ್ ಪೂಮಾಲೆ ಸೇಷಾಕ್ಷತಂ ಬಿಸಸೂತ್ರಂ .. .. ತನ್ನೊಳೊಪ್ಪೆ: ಜಗನ್ನಾವಿ, ೧೦. ೯೬)

**ಮಸ್ಕರಿ** – ಸನ್ಯಾಸಿ (ಆತನ ಪೆಂಡತಿ ದುರ್ಮನಸ್ಕೆ ಮಸ್ಕರಿ ಸಮಯಮಂ ಪಿಡಿದರ್ಪಳ್: **ಪಂಪರಾ,** ೯. ೩ ವ)

**ಮಸ್ಕರಿಮಾರ್ಗ** – ಸನ್ಯಾಸಿವೃತ್ತಿ (ಪೂರ್ವಸ್ಥಿತಿಯೊಳೆ ಮಸ್ಕರಿಮಾರ್ಗದೊಳೆಸಗಿ ಮತ್ತಂ ಮಾಹೇಂದ್ರಕಲ್ಪದೊಳ್ ದೇವನಾಗಿ: **ವರ್ಧಮಾಪು,** ೬. ೧೮ ವ)

**ಮಸ್ಕರಿಸಮಯ** – ಮಸ್ಕರಿಮಾರ್ಗ (ಆತನ ಪೆಂಡತಿ ದುರ್ಮನಸ್ಕೆ ಮಸ್ಕರಿಸಮಯಮಂ ಪಿಡಿದಿರ್ಪಳ್: **ಪಂಪರಾ,** ೯. ೩ ವ)

**ಮಸ್ತಕ** – ತಲೆ (ಮಹಾಋಷಿಯ ತಳಿದ ಕನಕ ಕಮಂಡಲುವಿನ ತೀರ್ಥೋದಕಂಗಳಿಂದ ಅಯ್ವರುಂ ಪವಿತ್ರೀಕೃತ ಮಸ್ತಕರಾಗಿರ್ದು: **ಪಂಪಭಾ,** ೬. ೧೧ ವ)

**ಮಸ್ತಕಪಿಂಡ** – ಆನೆಯ ಕುಂಭಸ್ಥಳ (ಉನ್ನತ ಸಮ್ಯಕ್ಸಮುದ್ಗತವ್ಯೂಢ ಮಸ್ತಕಪಿಂಡನುಂ .. ..ಅಪ್ಪ ವಿಜಯಾರ್ಧಪರ್ವತ ಗಜೇಂದ್ರಂ ಬಂದು: **ಆದಿಪು,** ೧೨. ೫೬ ವ)

**ಮಸ್ತಿಷ್ಕ** – ಮೆದುಳು (ಗಜಮಸ್ತಕಮಸ್ತಿಷ್ಕದಿಂ ಅಜೀರ್ಣಮಾಯ್ತೆಂದು ಲಂಘನಂಗೆಯ್ವವೊಲೇಂ ಗಜರಿಪು ಲಂಘಿಸಿದುದೊ ಪವನಜವದೆ ಶಿಖರಕ್ಕೆ ಶಿಖರದಿಂ ಖಗನಗದಾ: **ಅಜಿತಪು,** ೯. ೨೭)

**ಮಹ** – ಉತ್ಸವ, ಹಬ್ಬ (ಜಿನಮಹಾಮಹಮಂ ಮಹೇಂದ್ರೋದ್ಯಾನದ ಜಿನಾಲಯಂಗಳೊಳ್ ಎಲ್ಲಮಂ ಅನುದಿನಂ ಮಾಡುತ್ತುಮಿರಲ್: **ಪಂಪರಾ,** ೧೫. ೬೪ ವ)

**ಮಹತ್ತರ** – ಅಧಿಕಾರಿ (ರಾಜಾಧಿರಾಜಂ ನಿಮಗಟ್ಟಿ ಮಹಾಪ್ರಸಾದಂ ಬಿನ್ನಪಮೆಂದು ಮುಂದಿಟ್ಟು ಮಹತ್ತರಂ ಮಹತ್ತರಯೋಗ್ಯ ಮಹೀನಿಹಿತಾಸನಸದೊಳಿರ್ಪುದುಂ: **ಆದಿಪು,** ೧೪. ೪೫ ವ)

**ಮಹತ್ತರದೇವಿ** – [ಜೈನ] ಜನಸಾಮಾನಿಕ ದೇವತೆ (ಚೆಂಬೊನ್ನ ತಳಿಗೆಗಳೊಳ್ ತೆಕ್ಕನೆ ತೀವಿದ ಸೇಸೆಗಳುಂ ಬೆರಸು ಮಹತ್ತರದೇವಿಯರ್ ಬಂದು ಒಡವಟ್ಟು: **ಆದಿಪು,** ೨. ೬೭ ವ)

**ಮಹತ್ತರಿಕೆ** – ಮಹತ್ತರದೇವಿ (ವಿಕಟಕೂಟಾಧೀಶೇಯರಪ್ಪ ರುಚಿಕರುಚಕಾಸ್ಯೆ ರುಚಿಕಾಂತೆ ರುಚಿಕಪ್ರಭೆಯೆಂಬೀ ನಾಲ್ವರುಂ ದಿಕ್ಕುಮಾರಿಕಾ ಮಹತ್ತರಿಕೆಯರುಮಂ .. .. ಬೆಸುವುದಂ: **ಆದಿಪು,** ೭. ೩ ವ)

**ಮಹನೀಯ** – ಶ್ರೇಷ್ಠ ವ್ಯಕ್ತಿ (ಸಹಜವಿಭೂಷಣದಂತಿರೆ ಮಹನೀಯಕ್ಷುಣ್ಣಲಕ್ಷಣಂ ಮಿಸುಗೆ: **ಕಾದಂಬ,** ೨. ೧೦೬)

**ಮಹರ್ಧಿಕ** – ತುಂಬ ಪ್ರಭಾವಶಾಲಿಯಾದವನು (ಭಾಸುರದೇವಕೋಟಿವಿಭುವಪ್ಪ ಮಹರ್ಧಿಕನಪ್ಪ ವಾಸವಂಗೆ ಆಸನಕಂಪಮಂ ಪಡೆದು ತೀರ್ಥಕರತ್ವಮನಿತ್ತಂ: **ಆದಿಪು,** ೧೬. ೮೧)

**ಮಹಳ** – [ಮಹಾಲಯ] ಶ್ರಾದ್ಧ (ಸತ್ತುಗದ ಪುಡಿಯಂ ಪಡೆದು ಆ ಕೊಡನಂ ತನ್ನ ಪಟ್ಟಿರ್ಪ ಎಡೆಯೊಳ್ ಕಟ್ಟಿ ನೇಲ್ದಿಟ್ಟು ಮಹಳದ ಪಕ್ಷದೊಳೊಂದು ದಿವಸಂ: **ಪಂಚತಂತ್ರ,** ೨೫೩ ವ)

**ಮಹಳಮಿಕ್ಕು** – ತಿಥಿ ಮಾಡು (ಮಹಳಮಿಕ್ಕಿದೊಡೆ ಪೇಳೊಸರ್ವುದದು ಜೈನಭಕ್ತಿಯೆಂಬರ್ ಪೆಂಡಿರ್: **ಸಮಯಪ,** ೫. ೯೪)

**ಮಹಾಕಾಯ** – ಭಾರಿ ದೇಹವುಳ್ಳವನು (ಅನುಕಪ್ಯರೂಪ್ಯ ಕನಕಾಂಬರರತ್ನಾಭರಣಭಾರಧರಣಧೌರೇಯ ಮಹಾಕಾಯವೈವಧಿನಿಕರಮುಮಂ .. .. ಬರಿಸಿ ಕುಳ್ಳಿರಿಸಿ: **ಚಂದ್ರಪ್ರಭ,** ೧೭. ೧೦)

**ಮಹಾಕಾವ್ಯ** – ಅಷ್ಟಾದಶ ವರ್ಣನೆಗಳಿಂದ ಕೂಡಿದ ಶ್ರೇಷ್ಠ ಕಾವ್ಯ (ಕೀರ್ತಿ ನೆಗೞ್ವೆತೀ ಲೋಕದೊಳ್ ಬಲ್ಮೆ ರಂಜಿಸೆ ಬಲ್ಲರ್ಗಡೆಗೊಂಡು ಬಣ್ಣಿಸೆ ಮಹಾಕಾವ್ಯಂಗಳೊಳ್ ಮೆಚ್ಚಿ ಬಣ್ಣಿಸುವೆಂ ಪುಣ್ಯಪುರಾಣಂ ಜಿತಮನೋಜಾತ ಅಜಿತಸ್ವಾಮಿಯಾ: **ಅಜಿತಪು,** ೧. ೯೬)

**ಮಹಾಕಾಳ** – ಕಡುಗಪ್ಪು ಬಣ್ಣ (ಎರಡುಂ ಭಾಗದೊಳಿರ್ದ ಮಹಾಕಾಳರೂಪಮಂ ನಿಂದು ನೋಡುತ್ತುಂ: **ಶಾಂತಿಪು,** ೩. ೧೯ ವ); ಶಿವನ ಪ್ರಮಥರಲ್ಲಿ ಒಬ್ಬ (ಗೀತನೃತ್ಯಕ್ಕೆಡೆಯಪ್ಪಂತಲ್ಲಿ ಕೋಲಾಹಲಮನುಡುಗಿಸುತ್ತುಂ ಮಹಾಕಾಳನಿರ್ಪಂ: **ರಾಜಶೇಖ,** ೧೪. ೧೬೩); [ಜೈನ] ಚಕ್ರವರ್ತಿಯ ಬಳಿಯ ನವನಿಧಿಗಳಲ್ಲಿ ಒಂದು (ಕಾಳ ಮಹಾಕಾಳ ಪದ್ಮ ಪಾಂಡುಕ ನೈಸರ್ಪ ಮಾಣವಕ ಪಿಂಗಳ ಶಂಖ ಸರ್ವರತ್ನಂಗಳೆಂಬೊಂಬತ್ತು ನಿಧಿಗಳುಮಂ ಅನುಕ್ರಮದೊಳರ್ಚಿಸಿ: **ಚಂದ್ರಪ್ರಭ,** ೬. ೧೦೨ ವ); ವಿಷದ ಹಣ್ಣು ಬಿಡುವ ಒಂದು ಮರ, ಕಾಂಜೀರ ವೃಕ್ಷ (ಉನ್ಮತ್ತಂ ಕಿಂಪಾಕಮದು ಮಹಾಕಾಳಾಖ್ಯಂ: **ಅಭಿಧಾವ,** ೧. ೮. ೩೬)

**ಮಹಾಗ್ರಾವ** – ದೊಡ್ಡ ಕಲ್ಲು (ಪಾವುಗಳಂ ಕೊಳಿಸಿ ಮಹಾಗ್ರಾವಮಂ ಉಱಿದೆ ಅಡಸಿ ಕಟ್ಟಿ ಕೊರಲೊಳ್ ಗಂಗಾದೇವಿಯ ಮಡುವಿನೊಳ್ ಅಟ್ಟಿದರ್ ಏವಯಿಸದೆ ತಮ್ಮ ಕುಲಮಂ ಅಡಿಗಟ್ಟುವವೋಲ್: **ಪಂಪಭಾ,** ೨. ೩೨)

**ಮಹಾಜನ** – ಜನಸಮೂಹ (ದುರಾತ್ಮಂ ಆತ್ಮೀಯ ಭವನದೊಳ್ ಸದಾಕಾಲಂ ಮಹಾಜನಕ್ಕೆ ಸಹಸ್ರಭೋಜನಮನಿಕ್ಕುವಂ ಗ್ರಹಣ ಸಂಕ್ರಮಣ ಪುಣ್ಯತಿಥಿಗಳೊಳಂ: **ಸುಕುಮಾಚ,** ೨. ೬೯ ವ)

**ಮಹಾತಪ** – [ಜೈನ] ಸಿಂಹ ನಿಷ್ಕ್ರೀಡತಾದಿ ಮಹಾತಪಗಳು (ಉಗ್ರೋಗ್ರ ತಪದಿಂ ದೀಪ್ತತಪಂ ಮಹಾತಪಂ ಘೋರತಪಂ ಎಂದಿವು ಮೊದಲಾಗೊಡೆಯ ತಪಂಗಳಂ ಗೆಯ್ಯೆ ತಪದ ಮಾಹಾತ್ಮ್ಯದಿಂದಂ ಆಮೋಷಧಿ ಖೇಲೋಷಧಿ ಜವೋಷಧಿ ವಿಪ್ರೋಷಧಿ ಸರ್ವೋಷಧಿಯೆಂದಿವು ಮೊದಲಾಗೊಡೆಯ ಋದ್ಧಿಗಳ್ ಪುಟ್ಟಿದೊಡಂ: **ವಡ್ಡಾರಾ,** ಪು ೬೯, ಸಾ ೩)

**ಮಹಾದ್ವಕೃತಿ** – ಶ್ರೇಷ್ಠ ಕಾವ್ಯ (ಮಹಾದ್ವಕೃತಿಗಳಂ ಒಡರಿಸಲಾರ್ಪಾತಂ ಎಲ್ಲರಿಂದಂ ಬಲ್ಲಂ: **ಕವಿರಾಮಾ,** ೧. ೧೬)

**ಮಹಾನದಿ** – ಹದಿನಾಲ್ಕು ಪವಿತ್ರ ನದಿಗಳು: ಸರಸ್ವತೀ, ಭಾಗೀರಥೀ, ಯಮುನಾ, ಗೋದಾವರೀ, ಕೃಷ್ಣವೇಣೀ, ತಾಮ್ರಪರ್ಣಿ, ಸುವರ್ಣಮುಖೀ, ನರ್ಮದಾ, ತುಂಗಭದ್ರಾ, ಚಂದ್ರಭಾಗಾ, ಚರ್ಮಣ್ವತೀ, ಕುಮುದ್ವತೀ, ಸರಯೂ, ಫಲ್ಗುನೀ, ಅಥವಾ ಗಂಗಾ, ಸಿಂದು, ರೋಹಿತ್, ರೋಹಿತಾಸ್ಯಾ, ಹರಿತ್, ಹರಿಕಾಂತಾ, ಸೀತಾ, ಸೀತೋದಾ, ನಾರೀ, ನರಕಾಂತಾ, ಸುವರ್ಣಕೂಲಾ, ರೂಪ್ಯಕೂಲಾ, ರಕ್ತಾ, ರಕ್ತೋದಾ (ಚತುರ್ದಶ ಮಹಾನದಿಗಳ ನೀರುಮಂ ತಟತಟ ತೊಳಗುವ ಕಳಧೌತಕಳಶಂಗಳೊಳ್ ತೆಕ್ಕನೆ ತೀವಿ ತಂದ ವಾರವನಿತಾಜನಕ್ಕಂ: **ಪಂಪಭಾ,** ೧೪. ೧೭ ವ)

**ಮಹಾನಾಗ** – ಮಹಾಸರ್ಪ (ಸಮಸ್ತ ಉರ್ವೀಧರ ಅಶೇಷ ಶೇಷ ಮಹಾನಾಗ ಫಣಾಮಣಿ ದ್ಯುತಿಯನೇಂ ಖದ್ಯೋತದೊಳ್ ಕಾಣ್ಬರೇ: **ಪಂಪಭಾ,** ೫. ೭೬)

**ಮಹಾನಿಧಾನ** – ಮಹಾ ಸಂಪತ್ತು (ದಿವ್ಯ ಮಹಾನಿಧಾನಂ ಇದಿರೊಳ್ ಕೋಳ್ವೋದುದೋ ಪೇೞಿಮೆಂಬುದನೆಂಬನ್ನೆಗಂ: **ಸುಕುಮಾಚ,** ೧೦. ೯೩): ಮಹಾ ಸಂಪಪತ್ತುಳ್ಳವನು (ಆ ತಂದೆಯ ಭಕ್ತನ ವಿದ್ಯಾತಿಶಯ ಮಹಾನಿಧಾನನನ್ವಯಂ ಉಪಮಾತೀತಂ: **ಶಾಂತಿಪು,** ೧. ೪೧)

**ಮಹಾನಿಲ** – [ಜೈನ] ಭೂಲೋಕವನ್ನು ಆವರಿಸಿರುವ ವಾಯು (ಎಂಟುಂ ಪೊಡವಿಗಳಂ ತಾಳ್ದದುವೋಗಡಿಸದೆ ಮೂಱುಂ ಮಹಾನಿಲಂಗಳ್ ಕ್ರಮದಿಂ: **ಶಾಂತಿಪು,** ೧೨. ೫೧)

**ಮಹಾನುಭಾವ** – ಹಿರಿಮೆ, ಔನ್ನತ್ಯ (ಧರಣೇಂದ್ರನವರ ಮಹಾನುಭಾವಮುಮಂ ಆದಿದೇವನೊಳಾದ ನಿರ್ಭರಭಕ್ತಿಯುಮಂ ಮೆಚ್ಚಿ ನಿಜರೂಪಂ ತೋಱಿದಾಗಳ್: **ಆದಿಪು,** ೯. ೧೦೯ ವ)

**ಮಹಾನೈಷ್ಠಿಕ** – ನಿಷ್ಠಾವಂತ ತಪಸ್ವಿ (ಈ ತಪೋಧನನಪ್ಪೊಡೆ ಮಹಾನೈಷ್ಠಿಕಂ ಮತ್ತಮಿಂತಂಗೀ ಕನ್ನೆಯೆಂತುಂ ಮಗಳಾಗಳೆಂದು ದಿವ್ಯಜ್ಞಾದಿಂದ ಆಕೆಗೆಮೂಷಿಕೆಯಪ್ಪುದಂ ಅಱಿದು: **ಪಂಚತಂತ್ರ,** ೩೬೩ ವ)

**ಮಹಾಪಥ** – ಹೆದ್ದಾರಿ (ಮಹಚ್ಛಬ್ದಕ್ಕೆ: ಮಹಾಪಾತಕಂ–ಮಪಾತಕಂ ಮಹಾಪಥಂ–ಮಾಪತಂ: **ಶಬ್ದಮದ,** ೩೦೬ ಪ್ರ)

**ಮಹಾಪುರಾಣ** – [ಜೈನ] ತ್ರಿಷಷ್ಟಿಶಲಾಕಾ ಪುರುಷರನ್ನು ಕುರಿತ, ಜಿನಸೇನರು ಮತ್ತು ಗುಣಭದ್ರರಿಂದ ಸಂಸ್ಕೃತದಲ್ಲಿ ರಚಿತವಾದ ಪುರಾಣ (ಜಿನರ್ಗಂ ತ್ರಿಕಾಲಯೋಗಂ ಜಿನರ್ಗಂ ಸ್ವಾಧ್ಯಾಯಂ ಅಯ್ದುಮಾಸಮಿತಿಗಳುಂ ಜಿನರ್ಗಮೊಳವು ಉಳ್ಳೊಡಂ ನೆಱೆಯೆ ನೋಡಿ ನಂಬುಗೆ ಮಹಾಪುರಾಣದೊಳ್ ಬುಧರ್: **ಅಜಿತಪು,** ೧೨. ೩೦)

**ಮಹಾಪುರುಷ** – ಮೂವತ್ತೆರಡು ಲಕ್ಷಣಗಳಿಂದ ಕೂಡಿದ ಶ್ರೇಷ್ಠ ವ್ಯಕ್ತಿ (ಪೞೆವರುಮಂ ತವಿಸಿ ಕೞೆಯದೆ ಉೞೆವಣೆನಾದಂ ಪೞೆಕೆಯ್ದು ತೊಟ್ಟನುೞೆದಂತುೞೆದ ಮಹಾಪುರುಷರ್ ಅಱೆಯದುೞೆದರೆ ಸಿರಿಯಂ: **ಕವಿರಾಮಾ,** ೩. ೧೭೫)

**ಮಹಾಪ್ರಬಂಧ** – ದೊಡ್ಡ ಕಾವ್ಯ (ಪುದಿದ ಜಸಂ ಪೊದಳ್ದ ಚಳಂ ಒಂದಿದ ಅಳಂಕೃತಿ ಕೈತ ದೇಸಿ ಎಂಬುದಂ ಎನೆ ವಸ್ತುವಿದ್ಯೆಯೆನೆ ಕಬ್ಬಮೆ ಮುನ್ನಂ ಅವಂತಿವಲ್ಲದಲ್ಲದೆ

ಪೆಱವಿಲ್ಲ ಕಬ್ಬಂ ಎನೆ ಮುನ್ನಿನ ಕಬ್ಬಮನೆಲ್ಲಮಂ ಇಕ್ಕಿಮೆಟ್ಟಿದುವು ಸಮಸ್ತಭಾರತಮುಂ ಆದಿಪುರಾಣ ಮಹಾಪ್ರಬಂಧಮುಂ: **ಪಂಪಭಾ,** ೧೪. ೫೯)

**ಮಹಾಪ್ರಾಣತೆ** – ಅಪ್ರತಿಮ ಶಕ್ತಿ (ಇದಱ ಮಹಾಪ್ರಾಣತೆಗೆ ಇನ್ನಿದಱೊದವಿದ ತೇಜದೇೞ್ಗೆಗೆ ಅಚ್ಚರಿಯಾಗಿರ್ದುದು: **ಕಾದಂಸಂ,** ೨. ೪೦)

**ಮಹಾಭಾಗ** – ಅತ್ಯಂತ ಶ್ರೇಷ್ಠನಾದವನು, ಪುಣ್ಯಶಾಲಿ (ಮಹಾಭಾಗನ ತೋಳ್ ತೊಡರಲೊಡಂ ಅವಳ ವಿದ್ಯಾವಿಡಂಬನಂ ಬಿಟ್ಟು ಪಾಱೆ ಪೋದತ್ತಾಗಳ್: **ಲೀಲಾವತಿ,** ೧೪. ೯೪); ಗಂಡಸನ್ನು ಸಂಬೋಧಿಸುವ ಪರಿ (ಸ್ವಾಗತಮೆ ನಿನಗೆ ಮಹಾಭಾಗನೆ: **ಕಾದಂಬ,** ೪. ೬೩)

**ಮಹಾಭಾಗೆ** – ಮಹಾನುಭಾವೆ (ಮಾದ್ಯತ್ ಕಾಮತಾಕದಂಬಂ ಬಳಸಿ ಬಳೆಯಿಸಿತ್ತಾ ಮಹಾಭಗೆಗಾಗಳ್; **ಲೀಲಾವತಿ,** ೧೧. ೭೧)

**ಮಹಾಭಾರಾವತಾರ** – ಭೂಮಿಯ ಭಾರವನ್ನು ಇಳಿಸಲು ಮಾಡುವ ಯುದ್ಧ (ನಿನ್ನ ಒರಂಟುತನಂ ಕೈಗಟಿವಾಯ್ತು ಅದಪ್ಪೊಡೆ ಮಹಾಭಾರಾವತಾರಂ ರಣೋದ್ಯತನಾಗು ಎಂಬುದಂ ಎಮ್ಮಂ ಅನ್ಯರವೊಲೇಂ ನೀಂ ಪ್ರಾರ್ಥಿಸಲ್ವೇೞ್ಪುದೇ: **ಪಂಪಭಾ,** ೧೦. ೧೦)

**ಮಹಾಭೋಗ** – ತುಂಬ ಸಂತೋಷದಿಂದ ಕೂಡಿರುವುದು, ವಿಶಾಲವಾದ ಅಂಗಳವನ್ನು ಹೊಂದಿರುವುದು (ಬಗೆಯೆ ಬಹುಭೂಮಿಕ ಮಾನಗುಣೋನ್ನತಿಸಂಯುತಂ ಮಹಾಭೋಗಂ ತನ್ನ ಗರಜನಾವಳಿಯುಂ ಹರ್ಮ್ಯಗೃಹಾವಳಿಯುಂ ಎಂದೊಡೊಳ್ಪನೇವಣ್ಣಿಪುದೋ: **ಚಂದ್ರಪ್ರಪು,** ೩. ೧೮)

**ಮಹಾಭೋಗಿ** – ಪರಮ ಸುಖಿ (ಆ ಮಹಾಯೋಗಿ ಗುಣಂಗಳಂ ಈ ಮಹಾಭೋಗಿ ನೆಲನಂ ಪರಿಪಾಲಿಸಿದಂ: **ಆದಿಪು,** ೬. ೨೪ ವ)

**ಮಹಾಮಂಡಳಪತಿ** – ರಾಜನಿಗೆ ಮಾತ್ರ ಅಧೀನನಾದ ರಾಜ್ಯದ ಪ್ರಮುಖ ಅಧಿಕಾರಿ (ಏ ಮಾತೊ ಕೋಟಿಕೋಟಿ ಗ್ರಾಮಾಧಿಪರೆಱಗೆ ಮುಂದೆ ನುಡಿದು ಜಗಚ್ಚೂಡಾಮಣಿಗೆ ಮಕುಟಬದ್ಧ ಮಹಾಮಂಡಳಪತಿಗಳಾದರ್ ಎಣ್ಬಾಸಿರ್ವರ್: **ಶಾಂತಿಪು,** ೧೦. ೧೦೫)

**ಮಹಾಮಹ** – [ಜೈನ] ಮಹಾರಾಜನು ಚತುರ್ಮುಖ ಮಂಟಪದಲ್ಲಿ ಮಾಡುವ ಜಿನಪೂಜೆ (ಜಿನಭವನದೊಳ್ ಎಂಟು ದಿವಸಂಬರಂ ಮಹಾಮಹಮೆಂಬ ಜಿನಮಹಿಮೆಯಂ .. .. ಮಾಡಿದಿಂಬಟೆಯಂ: **ಆದಿಪು,** ೨. ೪೯ ವ)

**ಮಹಾಮಹತ್ತರೆ** – ಅಂತಃಪುರದ ಮುಖ್ಯ ಸೇವಕಿ (ವಂಶವರ್ಧನೆ ಎಂಬಾಕೆ ಮಹಾಮಹತ್ತರೆ ನರೇಂದ್ರಾಸ್ಥಾನಮಂ ಪೊರ್ದಿದಳ್: **ಕಾದಂಬ,** ೨. ೮೦)

**ಮಹಾಮಹ** – [ಜೈನ] ಒಂದು ಉತ್ಸವ (ಮುಖ್ಯ ಸೌಖ್ಯಭಾಜನಂ ಅಮರಂ ತ್ರಿಲೋಕತಿಲಕಂಗೆ ಮಹಾಮಹಮಂ ಪೊಣರ್ಚಿದಂ: **ಶಾಂತಿಪು,** ೭. ೩೧)

**ಮಹಾಮಾತ್ರ** – ಗಜಶಾಲೆಯ ಮುಖ್ಯಸ್ಥ (ತದೀಯ ಅನೇಕ ಮಹಾಮಾತ್ರಂ ರಾಜಗುಪ್ತನೆಂಬೊಂ ಆತಂ ಅಧೀತ ಸಕಳಶಾಸ್ತ್ರನಾಗಿಯುಂ ವಿತ್ತಹೀನಂ: **ಶಾಂತಿಪು,** ೯. ೮೩ ವ)

**ಮಹಾರಥ** – ಹತ್ತು ಸಾವಿರ ಯೋಧರ ವಿರುದ್ಧ ಯುದ್ಧಮಾಡಬಲ್ಲ ರಥಿಕ (ಉಡಿದ ನೊಗಂ ಧ್ವಜಂ ಪಲಗೆ ಕೀಲ್ ಕವರ್ ಅಚ್ಚು ತುರಂಗಮಂ ರಥಂ ಕಿಡೆ ಕವರಿಂದಗುರ್ವಂ ಒಳಗೊಂಡಿರೆ ತಳ್ತಿಱಿದರ್ ಮಹಾರಥರ್: **ಪಂಪಭಾ,** ೧೧. ೩೮)

**ಮಹಾಲಯ** – [ಮಹಾ+ಆಲಯ] ದೊಡ್ಡ ಭವನ, [ಮಹಾ+ಲಯ] ಮಹಾ ವಿನಾಶ (ನೆಗೞ್ದ ಮಹಾಲಯಮಲ್ಲದೆ ಮಹಾಲಯಮದಿಲ್ಲ: **ಪುಷ್ಪದಂಪು,** ೨. ೪)

**ಮಹಾವಾತ್ಯೆ** – ಬಿರುಗಾಳಿ (ಇಂದ್ರಿಯಲುಬ್ಧಕ ಸ್ವಚ್ಛಂದವಿಹಾರ ಗಹನಭೂಮಿಯುಂ ದುರ್ಯಶಃಪಾಂಶುಪ್ರಸರ ಮಹಾವಾತ್ಯೆಯುಂ ಅಪ್ಪ ಪಾತಕಿಯೊಳ್: **ಆದಿಪು,** ೧೪ ೧೨೨ ವ)

**ಮಹಾವೀರ** – [ಜೈನ] ಇಪ್ಪತ್ತನಾಲ್ಕನೆಯ ತೀರ್ಥಂಕರನಾದ ವರ್ಧಮಾನ (ಶ್ರೀ ವರ್ಧ್ಮಾನ ಸನ್ಮತಿದೇವ ಮಹಾವೀರ ವೀರಮುಖ್ಯ ಸಮಸ್ತೋರ್ವೀನಿಳಯವಿನುತ ದಶಶತಪಾವನ ಮಂಗಳಂ ಜಿನಂ ತಳೆದೆಸದಂ: **ಆಚವರ್ಧ,** ೧೬. ೩೦)

**ಮಹಾವ್ರತ** – [ಜೈನ] ಮುನಿಗಳು ಪಾಲಿಸಬೇಕಾದ ಪಂಚವ್ರತಗಳ ಗರಿಷ್ಠ ಆಚರಣೆ; ಪಂಚಪಾಪಗಳನ್ನು ಮನಸ್ಸಿನಲ್ಲಿ ಮತ್ತು ಕೃತಿಯಲ್ಲಿ ಮಾಡದ, ಮಾಡಿಸದ ಹಾಗೂ ಅವುಗಳಿಗೆ ಒಪ್ಪಿಗೆ ನೀಡದ ಹೀಗೆ ಒಂಬತ್ತು ಪ್ರಕಾರದ ಮುನಿಗಳ ವ್ರತ (ಒಳ್ಳಿತಪ್ಪ ಮುಹೂರ್ತದೊಳ್ ದೀಕ್ಷೆಯಂ ಕೊಟ್ಟು ಪಂಚ ಮಹಾವ್ರತಂಗಳಂ ಏಱಿಸಿ: **ವಡ್ಡಾರಾ,** ಪು ೬, ಸಾ ೩)

**ಮಹಾಶುಕ್ರ** – [ಜೈನ] ದ್ವಾದಶಕಲ್ಪಗಳಲ್ಲಿ ಏಳನೆಯದು (ಸೌಧರ್ಮ ಈಶಾನ ಸನತ್ಕುಮಾರ ಮಾಹೇಂದ್ರ ಬ್ರಹ್ಮ ಬ್ರಹ್ಮೋತ್ತರ ಲಾಂತವ ಕಾಪಿಷ್ಠ ಶುಕ್ರ ಮಹಾಶುಕ್ರ ಶತಾರ ಸಹಸ್ರಾರ ಆನತ ಪ್ರಾಣತ ಅರಣ್ಯ ಅಚ್ಯುತಮೆಂಬ ಪದಿನಾಱುಂ ಕಲ್ಪಂಗಳೊಳಂ: **ವಡ್ಡಾರಾ,** ಪು ೯೭, ಸಾ ೨೬); ನೋಡಿ, 'ದ್ವಾದಶಕಲ್ಪ'

**ಮಹಾಸಂಧಿವಿಗ್ರಹಿ** – ಯುದ್ಧ-ಶಾಂತಿಗಳ ಬಗ್ಗೆ ವ್ಯವಹರಿಸುವ ಸಚಿವರಲ್ಲಿ ಹಿರಿಯ (ಶ್ರೀಮನ್ಮಹಾಸಂಧಿವಿಗ್ರಹಿ ದುರ್ಗಸಿಂಹ ವಿರಚಿತಮಪ್ಪ ಪಂಚತಂತ್ರದೊಳ್: **ಪಂಚತಂತ್ರ,** ಆಶ್ವಾಸಾಂತ್ಯ ಗದ್ಯ)

**ಮಹಾಸತಿ** – ಪತಿವ್ರತೆ (ನಿನ್ನನ್ನರ್ ಮಹಾಸತಿಯರಾರುಮಿಲ್ಲ ಬೇಗಂ ಪೋಗೆಂಬುದುಂ: **ಸುಕುಮಾಚ,** ೭. ೨೪ ವ); ಪತಿಯೊಡನೆ ಸಹಗಮನ ಮಾಡಿದವಳು; (ಅಂತು ಗುಂಡೆಲ್ಲಂ ಪೊಗೞೆ ಗುಂಡಮಬ್ಬೆ ಮಹಾಸತೀಸಮುಚಿತಾಚಾರದೊಳಂ ಆಭರಣದೊಳ್ ನೆಗೞೆ: **ಅಜಿತಪು,** ೧. ೪೬ ವ)

**ಮಹಾಸಾಮಂತ** – ಅಧೀನರಾಜರುಗಳಲ್ಲಿ ಮುಖ್ಯನಾದವನು (ಸಾಮಂತ ಮಹಾಸಾಮಂರ್ಗೆ ಸ್ವಾಮಿಯಪ್ಪೀ ಪೃಥ್ವೀಶ್ವರಂ ಬಂದೆನನ್ನುಮನರ್ಚಿಸಿ ಬಂದಿಸಿ ನೀಚವೃತ್ತಿಯಿಂ ಕಿಂಕುರ್ವಾಣಂಗೆಯ್ದಪ್ಪಂ: **ವಡ್ಡಾರಾ,** ಪು. ೭೯, ಸಾ. ೨೫)

**ಮಹಾಸ್ಥಳ** – ದೊಡ್ಡ ನದಿ ತಟಾಕಗಳಿಂದ ಪರಿವೃತವಾದ ಭೂಪ್ರದೇಶ (ಅಗಾಧಮಪ್ಪ ಬೃಹತ್ತಟಾಕಂಗಳಿಂ ಕರ್ಕಶಖರದಂಡಸಲಿಲವಿತಾನವಿರಾಜಿತ ಸರೋವರ ಪರಿವೃತಮಪ್ಪ ಭೂಪ್ರದೇಶಂ ಮಹಾಸ್ಥಳಮೆಂಭುದಕ್ಕುಂ: **ಪಂಚತಂತ್ರ,** ೨೯೭ ವ)

**ಮಹಾಹವ** – ಭಾರಿ ಕದನ (ಪೊಳೆವ ಮಿಂಚುಗಳಂತಿರೆ ಕೇತುಗಳ್ ಜಳವೃಂದದವೋಲಿರೆ ಹಸ್ತಿಗಳ್ ಗಳಿತಧಾರೆಗಳಂತಿರೆ ಪತ್ತಿಗಳ್ ಬಳಸಿ ಕಾರ್ಗೆಣೆಯಾಯ್ತು ಮಹಾಹವಂ: **ಕವಿರಾಮಾ,** ೧. ೧೪೪)

**ಮಹಾಹಿ** – ಮಹಾಸರ್ಪ, ಆದಿಶೇಷ (ಅಬ್ಧಿಯೊಳಿಲ್ಲದ ವಿಷಮಂ ಮಹಾಹಿಯೇಂ ತೋಱದೆ ಪೇಳ್: **ರಾಜಶೇವಿ,** ೧. ೪೨)

**ಮಹಾಹ್ರದ** – ಮಡು (ವಾಪಿ ತಟಾಕಂ ದೀರ್ಘಿಕೆ ಕೂಪಂ ನಿಮ್ನಗೆ ಮಹಾಹ್ರದಂಗಳ್ .. .. ಇರ್ಪುವಾ ಜನಪದದೊಳ್: **ತ್ರಿಷಷ್ಟಿಪು,** ೨. ೨೯)

**ಮಹಾಹ್ರದೆ** – ದೊಡ್ಡ ಮಡುಗಳನುಳ್ಳವಳು (ನರ್ಮದೆಯಂ ಮಹಾಹ್ರದೆಯಂ ವಿಪ್ರಂ ಸಮಂತೆಯ್ದಿದಂ: **ಪಂಚತಂತ್ರ,** ೩೨೪)

**ಮಹಿ** – ಭೂಮಿ (ಸ್ಥಿರೆ ಧರಣಿ ಧಾತ್ರಿ ಮೇದಿನಿ ಧರಿತ್ರಿ ಧರೆ ಯವನಿ ಪೃಥ್ವಿ ರಸೆ ವಸುಧೆ ವಸುಂಧರೆ ಕು ಮಹಿ ಜಗತಿ ವಿಶ್ವಂಭರೆ ಗೋ ಕ್ಷ್ಮಾ ಕ್ಷೋಣಿ ಭೂಮಿ ಭು ಗೋತ್ರೆ ನೆಲಂ: **ಅಭಿಧಾವ,** ೧. ೫. ೧೦)

**ಮಹಿಚಕ್ರ** – ಭೂಮಂಡಲ (ಮಹಿಚಕ್ರಕ್ಕಿದು ಚೋದ್ಯಮಲ್ತು ಎನಿಸುವಂತೆ ಆರ್ತಿವುದುಂ ಕಂಡು ಸಸ್ಪೃಹರೆಲ್ಲಂ ಗೆಳೆಗೊಂಡು ಬಣ್ಣಿಸುವರ್: **ಅಜಿತಪು,** ೧೨. ೧೨)

**ಮಹಿಜ** – ಮರ [ಕಳಿಕಾಂಕುರ ಕುಸುಮೋತ್ಕರ ಫಳಪಲ್ಲವರಹಿತ ಮಹಿಜಮಂ ಕಂಡುದಱಿಂ: **ಆದಿಪು,** ೧೫. ೩೪)

**ಮಹಿತ** – ಗೌರವಪೂರ್ವಕವಾದ (ಅವಧರಿಪುದು .. .. ಭವಹರ ಹರ ಗಿರಿಜಾಧವ ಮದೀಯಮಹಿತವಿಜ್ಞಾನಪನಮಂ: **ಶಬರಶಂ,** ೨. ೨೬)

**ಮಹಿತೆ** – ಗೌರವಾಸ್ಪದೆ (ಆ ಮಹಿಪನ ಅಗ್ರಮಹಿಷಿ ಮಹೀಮಹಿತೆಯೆನಿಪ್ಪ ವೀತಶೋಕಾಹ್ವಯೆ: **ಕರ್ಣನೇಮಿ,** ೨. ೬೯)

**ಮಹಿಧರ** – ಪರ್ವತ (ಹಿಮವತ್ಕುತ್ಕೀಳದೊಂ ಮಂದರ ಮಹಿಧರದೊಳ್ .. .. ಚೈತ್ಯಾವಸಪೂಜೋತ್ಸವದಿಂ ಅಗಲನಲ್ಲಮದಮೆಂದುಂ ಸುರೇಂದ್ರಂ; **ಸುಕುಮಾಚ,** ೯. ೪೧); ಕೂರ್ಮಾವತಾರದಲ್ಲಿ ಭೂಮಿಯನ್ನು ಹೊತ್ತ ವಿಷ್ಣು (ಎಳೆಯಂ ವಿಕ್ರಮದಿಂ ತರಲ್ ಮಹಿಧರಂ ಮುನ್ ಪಂದಿಯಾದಂತೆ: **ಪಂಪಭಾ,** ೮. ೫೫)

**ಮಹಿಭಾರ** – ಭೂಮಿಯ ಭಾರ (ಅತಿ ಭಿನ್ನಮಾಯ್ತು ಮಹಿಭಾರದಿನೆನ್ನ ಭುಜಂ: **ನೇಮಿನಾಪು,** ೧. ೧೧೯)

**ಮಹಿಭುಜ** – ರಾಜ (ಸೊಗಯಿಸೆ ಸಿಂಹನಂದೆಯುಂ ಅನಿಂದಿತೆಯುಂ ತನುಜನ್ಮಭೂಮಿಗಳಿವರಿಂದಮಾ ಮಹಿಭುಜಂ ಕರಮೊಪ್ಪಿದಂ: **ಶಾಂತಿಪು,** ೬. ೬೦)

**ಮಹಿಮೆ** – [ಜೈನ] ಪೂಜೆ (ಜಿನನ ನಮಸ್ಕಾರಮತ್ರಂಗಳೊಳ್ ಭಾವನೆಯಂ ತಾಳ್ದಟ್ಟಿಯಿಂದಂ ಜಿನಮಹಿಮೆಗಳಂ ಮಾಡು: **ಆದಿಪು,** ೩. ೭)

**ಮಹಿಷ** – ಕೋಣ (ಕರಿ ಮಹಿಷ ಮೇಷ ಮಲ್ಲಸ್ವರೂಪದಿಂ ತಮಗೆ ತಾವೆ ಪೋಱಿ ಸುರರ್ಕಳ್ ಪರಮನ ಮನಕ್ಕೆ ಅವೊಂದುಂ ಬರಲಾಱವೆ ವೀತರಾಗನಪ್ಪುದಱಿಂದಂ: **ಅಜಿತಪು,** ೫. ೮೧)

**ಮಹಿಷನಾಥ** – ದಿಕ್ಪಾಲಕರಲ್ಲಿ ಒಬ್ಬನಾದ ಯಮ (ಅಮರನಾಥ ಮಹಿಷನಾತ ಸರಿನ್ನಾಥ ಧನನಾಥಸನಾಥಮಪ್ಪ ದಿಕ್ಪಾಲರ ಕೇಳೀಪ್ರಾಸಾದಂಗಳಿಂದಂ: **ಅಜಿತಪು,** ೭. ೨೦ ವ)

**ಮಹಿಷಾಶ್ವಮಾಮೇಳನೇ ಸಹ ವಿನಶ್ಯತಿ** – ಎಮ್ಮೆ ಕುದುರೆಗಳು ಸೇರಿದರೆ ಒಟ್ಟಿಗೇ ನಾಶವಾಗುತ್ತವೆ (ಇರ್ವರುಂ ಸಮಾನಬಲರಾದಂದು ಮಹಿಷಾಶ್ವಮಾಮೇಳನೇ ಸಹ ವನಶ್ಯತಿ ಎಂಬುದಕ್ಕುಂ: **ಪಂಚತಂತ್ರ,** ೯೧ ವ)

**ಮಹಿಷಿ** – ಎಮ್ಮೆ (ರೋಮಂಥಫೇನಾವಳಿ ಗಂಗಾಶ್ರೀಯ ಸೊಂಪಂ ಕುಡುತಿರೆ ಮಹಿಷೀವೃಂದಮಿರ್ದತ್ತದೆತ್ತಂ: **ಕುಸುಮಾಕಾ**೬. ૩೯); ಮಹಾರಾಣಿ (ಶುದ್ಧಾಂತನಿಳಯದಂತೆ ಅನೇಕಮಹಿಷೀಸಮೇತಮುಂ ನೀಳಾಬ್ಜನಾಳದಂತೆ ನಿಷ್ಕಂಟಕಾತ್ಮಮುಂ .. .. ಎಂಬ ಮಹನೀಯ ಮಹಿಮೆಯಂ ತಳೆದು: **ಪುಷ್ಪದಂಪು,** ೯. ૩೦ ವ)

**ಮಹಿಳೆ** – ಗೃಹಿಣಿ (ಕುಲವಧು ಸಾಧ್ವಿ ಪತಿವ್ರತೆ ಕುಲಪಾಳಿಕೆ ಸತಿ ಜಾಯೆ ದಾರಂ ಕ್ಷೇತ್ರಂ ಮಹಿಳೆ ಪುರಂಧ್ರಿ ಕಳತ್ರಂ ಗೃಹಿಣಿ ಸಜ್ಜನಕ್ಕೆ ಪೆಸರಿಂತಿಸುಂ: **ಅಭಿಧಾವ,** ೧. ೧೧. ૩)

**ಮಹೀಗೃಹ** – ನೆಲಮನೆ (ಎಸೆವ ಪವಡಿಸುವ ಮನೆ ಚಿತ್ರಸಾಲೆ ಸುರತಾಲಯ ಮಹೀಗೃಹಂ ಆರೋಗಿಸುವ ಮನೆ ಮಂಡಪಂ ಗುಣಣಸಾಲೆ ಎಂಬಿನಿತುಮಂ ಗೃಹಾಂಗಂ ಕುಡುಗುಂ: **ಶಾಂತಿಪು,** ೬. ೧೧೬)

**ಮಹೀಚರ** – ಮಾನವ (ಸಕಲಮಹೀಚರಖೇಚರನಿಕಾಯಸೇವ್ಯತೆಗೆ ವೃದ್ಧಸೇವಿತ್ವಮೆ ಯೋಜಕಮಾದುದು: **ಶಾಂತಿಪು,** ೨. ૩೯)

**ಮಹೀಜ** – ಮರ (ಅಹರಹರ್ ಅಭಿನವ ಮಣಿರುಚಿರ ಹಾಟಕ ಪ್ರಕರ ವಿರಚಿತಂಗಳಂ ಎಂದುಂ ಬಹು ಭಾಜನಂಗಳಂ ನಿರ್ವಹಿಸುವುದು ಅವರವರ್ಗೆ ಭಾಜನಾಂಗ ಮಹೀಜಂ: **ಶಾಂತಿಪು,** ೬. ೧೧೪)

**ಮಹೀಜಾತ** – ಮರ (ಮಹೀಜಾತಂ ಶುಕಂ ಭೃಂಗ ಪುಷ್ಕರಜಂ .. .. ರಂಜಿಸುತಿರ್ಪ: **ತ್ರಿಷಷ್ಟಿಪು,** ೨. ೧೨೬)

**ಮಹೀತಳ** – ಭೂಮಂಡಲ ವೈರಿಗಳನೆ ಕೊಂದು ವಾರಿಧಿಪರೀತ ಮಹೀತಳಮಂ ನಿಮಿರ್ಚಿ ಜೆಟ್ಟಿಗರಂ ಅಯೋನಿಸಂಭವರಂ ಆಳ್ದು ಅರಿವರ್ಗದೊಳಾಂತು ಕಾದೆಯುಂ: **ಪಂಪಭಾ,** ೧૩. ೧೦૩)

**ಮಹೀತಳಾಶ್ಲಿಷ್ಟಜಾನುಲಲಾಟಪಟ್ಟರ್** – ಭೂಮಿಗೆ ಮೊಣಕಾಲು ಹಣೆಗಳನ್ನು ತಾಕಿಸಿದವರು, ಸಾಷ್ಟಾಂಗ ನಮಸ್ಕಾರ ಮಾಡಿದವರು (ಅಂತಃಪುರ ವೃದ್ಧಕಂಚುಕಿಗಳ್ ಬಂದು ಮಹೀತಳಾಶ್ಲಿಷ್ಟಜಾನು ಲಲಾಟಪಟ್ಟರ್ ಪ್ರಣಾಮಾರ್ಪಣ ಪುರಸ್ಸರಂ: **ಆದಿಪು,** ೧೦. ೪೮ ವ)

**ಮಹೀಧರ** – ಪರ್ವತ (ಹಿಮವತ್ ಮಹಾಹಿಮವತ್ ನಿಷಧನೀಲರಗ್ನಿಶಿಖರಿಗಳೆಂಬ ವರ್ಷಧರ ಮಹೀಧರಂಗಳಿಂದಂ .. .. ಎಸೆದು: **ಆದಿಪು,** ೧. ೪೮ ವ)

**ಮಹೀಧ್ರ** – ಬೆಟ್ಟ (ತಾರಮಹೀಧ್ರೋಪಾಂತ್ಯದೊಳ್ ಸಂತತಂ ಅಮರನಿಕಾಯಾನ್ವಿತಂ ವಿಶ್ರುತಾಕೃತ್ರಿಮ ಚೈತ್ಯಾವಾಸ ಪೂಜೋತ್ಸವದಿಂ ಅಗಲನಲ್ಲಿಂಮೆಂದುಂ ಸುರೇಂದ್ರಂ: **ಸುಕುಮಾಚ,** ೯. ೪೧)

**ಮಹೀಧಾಸ್ತ್ರ** – ಬೆಟ್ಟಗಳನ್ನು ಸುರಿಸುವ ಅಸ್ತ್ರ (ತಿಮಿರಾಸ್ತ್ರಕ್ಕೆ ಅಂಶುಬಾಣಂಗಳಂ .. .. ತುಂಗ ಮಹೀಧರಾಸ್ತ್ರಕ್ಕೆ ಚಂಡಾಂಶುನಿಶಿತನಿಕಾಯಂಗಳಂ ತೊಟ್ಟು: **ವರ್ಧಮಾಪು,** ೪. ೯೫)

**ಮಹೀನಾಥ** – ಭೂಮಿಯ ಒಡೆಯ, ರಾಜ (ಆ ಮುನಿನಾಥಂ ತ್ರಿಗುಪ್ತಿಯೊಳ್ ನೆರೆದನೀ ಮಹೀನಾಥಂ ಮಂತ್ರಗುಪ್ತಿಯೊಳ್ ನೆರೆದಂ: **ಆದಿಪು,** ೬. ೨೪ ವ)

**ಮಹೀಪತಿ**– ಮಹೀನಾಥ (ಜಿತವಿಶ್ವಕರ್ಮಪರಿನಿರ್ಮಿತ ಕೃತಿಯಂ ತ್ರಿಃಪ್ರದಕ್ಷಿಣಂಗೆಯ್ದು ಮಹೀಪತಿ ಗಂಧಕುಟಿಯನಾ ಜಿನಪತಿಯಿದಿರೊಳ್ ನಿಂದು: **ಶಾಂತಿಪು,** ೮. ೧೫೭)

**ಮಹೀಪಾಲ** – ಮಹೀಪತಿ (ಮಂಗಳತೂರ್ಯನಾದಂ ಎಸೆಯುತ್ತಿರ್ಪನ್ನೆಗಂ ಚಕ್ರಿ ರಾಗಿಸಿ ಕೆಯ್ನೀರ್ ಎಱೆದಂ ಗುಣಾರ್ಣವ ಮಹೀಪಾಲಂಗಂ ಆ ಕನ್ನೆಯಂ: **ಪಂಪಭಾ,** ೫. ೨೫)

**ಮಹೀಪಾಳ** – ಮಹೀಪತಿ (ಮಹೀಪಾಳರೊಳಾದ ಕಾರ್ಯಗತಿಗಳ್ ಬಗೆಯಲ್ಕೆ ಬಹುಪ್ರಕಾರಮೋ ಎಂಬ ಪುರಜನ ಆಳಾಪಂಗಳ್ ನೆಗೞೆ: **ಪಂಪಭಾ,** ೯. ೬ ಮತ್ತು ೬ ವ)

**ಮಹೀಭುಜ** – ರಾಜ (ಅಂಬರಮೆಲ್ಲಂ ಅಂಬಿನೊಳೆ ಪೂೞೆ ಮಹೀಭುಜರ್ ಎತ್ತಂ ಎಚ್ಚ ಕಿತ್ತಂಬುಗಳ್ ಎತ್ತಂ ಅವ್ವಳಿಸೆ: **ಪಂಪಭಾ,** ೧೧. ೪೨)

**ಮಹೀಮಂಡಲ** – ಭೂಮಂಡಲ (ಬಣ್ಣವುರಂ ತೀವಿದ ಮಾೞ್ಕೆಯಾಯ್ತು ನವಿಲಿಂ ಕುಂದಂಗಳಿಂದ ಇಂದ್ರಗೋಪ ವಿಳಾಸಂಗಳಿಂ ಆಲಿಕಲ್ಲ ಪರಲಿಂ ಕಾರೊಳ್ ಮಹೀಮಂಡಲಂ: **ಪಂಪಭಾ,** ೭. ೨೪)

**ಮಹೀರುಹ** – ಮಹೀಜ (ಮೞೆದುಂಬಿಯ ಬಂಬಲಿಂ ಮನಂಗೊಳಿಪ ಪುನ್ನಾಗ ಮಹೀರುಹಂಗಳೊಳಂ.. ..ಅತಿ ರಮಣೀಯಮಾಗಿ : **ಮಲ್ಲಿನಾಪು,** ೨. ೨೪ ವ)

**ಮಹೀವರ** – ರಾಜ (ಪ್ರೇಮಪೀಯೂಷದಿಂ ಪಿರಿದುಂ ನಾಂದಿಸುವಂತೆ ಕಾಂತೆ ಪದೆದಾಗಳ್ಪೊಯ್ದಳ್ ಅಂತಾ ಮಹೀವರಶೋಭಾಂಗದ ಮೇಲೆ ಲೀಲೆಯೊದವಿಂ ಕರ್ಪೂರಪೂರಾಂಬುವಂ: **ಶಾಂತೀಶ್ವಪು,** ೧೦. ೧೭೭)

**ಮಹೇಂದ್ರಕಲ್ಪ** – [ಜೈನ] ಹದಿನಾರು ಸ್ವರ್ಗಗಳಲ್ಲಿ ನಾಲ್ಕನೆಯದು (ತಪೋವಧುವಿನೊಳ್ ಮದುವೆ ನಿಂದು ನಿಜಾಯುರವಸಾನೊಳ್ ಮಹೇಂದ್ರಕಲ್ಪದೊಳ್ ಸಾಮಾನಿಕ ನಿಳಿಂಪರಾದರ್: **ನೇಮಿನಾಪು,** ೩. ೩೨ ವ)

**ಮಹೇಂದ್ರಜಾಲ[ಳ]** – ಅರವತ್ತನಾಲ್ಕು ಕಲೆಗಳಲ್ಲಿ ಒಂದು, ಇಂದ್ರಜಾಲ (ಕ್ರೂರಾಸ್ತ್ರಪಾತ ಚಿತ್ರಹಾರಣಮಹೇಂದ್ರಜಾಲ ರೌದ್ರಾದಿರಸಂ ಚಾರುತರಸ್ಫುಟ ಬಂಧದೊಳ್ ಆರಭಟೀವೃತ್ತಿಯಿಂದಭಿವ್ಯಂಜಿಸುಗುಂ: **ಕಾವ್ಯಾವಲೋ,** ೮೪೧)

**ಮಹೇಂದ್ರಜಾಲಿಗ** – ಯಕ್ಷಿಣಿಗಾರ (ಪಲವುಂ ಚೋದ್ಯಂಗಳಂ ವಿಕ್ರಿಯಾಬಳದಿಂದಾಡಿ ಮಹೇಂದ್ರಜಾಲಿಗನುಮಂ ಪೋಲ್ತಂ ಸುರಾಧೀಶ್ವರಂ: **ಆದಿಪು,** ೭. ೧೨೨)

**ಮಹೋಕ್ಷ** – ದೊಡ್ಡ ಎತ್ತು (ಗಂಡಂ ಸೂಸುತುಂ ಬಂದುದು ಮದವಿದಳತ್ಪಿಂಗಳಾಕ್ಷಂ ಮಹೋಕ್ಷಂ: **ಲೀಲಾವತಿ,** ೫. ೮೭)

**ಮಹೋತ್ಸವ** – ಸಂತೋಷ, ಸಡಗರ (ಸಮದಂ ಸಮ್ಮದಂ ಆನಂದಂ ಉದ್ಭವಂ ಮತ್ಸಬಾಜನಂ ಪ್ರೇಮಂ ಪ್ರೀತಿ ಮಹೋತ್ಸವಂ ಪ್ರಮೋದಂ: **ಅಭಿಧಾವ,** ಕಾಡಸಮಾಪ್ತಿ, ೨); ದೊಡ್ಡ ಉತ್ಸವ (ಪಿಂಗಳಿತಪಿಶಂಗಿತ ಅರುಣಿತ ದಿಜ್ಮುಖಮಾದುದು ತನ್ಮಹೋತ್ಸವಂ: **ಆದಿಪು,** ೭. ೧೧೪)

**ಮಹೋದಧಿ** – [ಮಹಾ+ಉದಧಿ] ಮಹಾ ಸಮುದ್ರ (ತ್ವತ್ ವಚನಮಹೋದಧಿಯೊಳ್ ಕಿೞಿದನೞಿವುದಂ ನುಡಿವೆಂ: **ಶಾಂತಿಪು,** ೨. ೩೭)

**ಮಳ** – ಕೊಳೆ (ತನುಗೆ ಪೊೞೆ ತುಡುಗೆ ನವಲೇಪನಮೆ ಮಳಂ ಗೀತಮಟ್ಟೆ: **ಆದಿಪು,** ೯. ೫೫)

**ಮಳಯಜ ರಸ** – ಶ್ರೀಗಂಧದ ರಸ (ಮಳಯಜರಸಮುಂ ವಿಧುಕರಮುಂ ತನ್ನನೀಯಲೇನಾರ್ತಪುವೇ: **ಸಮಯಪ,** ೫. ೩೮)

**ಮಳಯಮಹೀಜ** – ಶ್ರೀಗಂಧದ ಮರ (ನೆಗೞ್ದೇ ಕರ್ಪೂರ ಕಾಳಾಗರು ಮಳಯಮಹೀಜಂಗಳ್ ಏಳಾಲತಾಳೀ ಸ್ಥಗಿತಂಗಳ್ ಕಣ್ಗೆವಂದಿರ್ದುವಂ ಇವನೆ ವಲಂ ಕೊಂಬುಗೊಂಡ ಅಂಗಜಂ .. .. ಎಚ್ಚು ಮೆಚ್ಚಂ ಸಲಿಸುವಂ: **ಪಂಪಭಾ,** ೪. ೨೩)

**ಮಳಯರುಹ** – ಶ್ರೀಗಂಧದ ಮರ (ಮಳಯರುಹಂ ಬೇಳ್ಪನಿತುಂ ತಿಳಿಯಲ್ಕೆ .. .. ತೇದರ್ಪಿಸು: **ತ್ರಿಷಷ್ಟಿಪು,** ೩೪. ೧೦)

**ಮಳವೆ** – ರಾಶಿ (ಬಿಡುಮುತ್ತಿನ ಪೇಱುಗಳಂ ತಡೆಯದೆ ಕರ್ಪುರದ ಪಿರಿಯ ಮಳವೆಗಳಂ ತಂದಿಡು ಮಾಣಿಕ ಭಂಡಾರದ ಪುಡಿಕೆಗಳಂ ಮಂಗಳಕ್ಕೆ ತಕ್ಕುಡುಕೆಗಳಂ: **ಸುಕುಮಾಚ.** ೧೦.೯೧)

**ಮಳಿನ** – ಮಲಿನ, ಕಪ್ಪು (ರಜನಿ ಪರಿಮಳಕೇಮದುತ್ಪಳಂ ಅಳಿಪಿದೊಡೆ ಅದು ತೋರ್ಪವೊಲ್ ಅಳಿಮಳಿನಂ ಶಶಿಕಳಂಕಮೇಂ ರಂಜಿಸಿತೋ: **ರಾಜಶೇವಿ,** ೧೧. ೫೭)

**ಮಳಿಮ್ಲುಚ** – ಕಪ್ಪಾದುದು (ಅರುಚಿನಿಟಳಂ ಕಾಚಮಣಿದ್ಯುತಿ ಮಳಿಮ್ಲುಚಂ ಕಚಮವಳಾ: **ವರ್ಧಮಾಪು,** ೧೧. ೭೯)

**ಮಳೀಮಸ** – ಕೊಳಕು ತುಂಬಿದ (ವಿಷಮವಿಷಸದೃಶ ವಿಷಯಾಮಿಷಕಾಂಕ್ಷೆಯೆ ತಿಣ್ಣಮಾಗೆ ಮತಿಗೆಟ್ಟು ಮಳೀಮಸನಾದೆಂ ಇನ್ನೆಗಂ ನಿರ್ವಿಷನಾಗಿಪುದೆನ್ನಂ ಉರುತರಪಃಪ್ರತಿವಿಷದಿಂ: **ಸುಕುಮಾಚ,** ೮. ೩೭); ಕಪ್ಪು (ಮಳಿಮಸ ವರ್ಣಂ ಪರಿತಂದುದೊಂದು ನವದೂರ್ವಾಕರ್ದಭಂ ಗರ್ದಭಂ: **ನೇಮಿನಾಪು,** ೭. ೯೦)

**ಮಱಕೆಂದು** – [ಮೈಮರೆತು] ಗಾಢವಾಗಿ ನಿದ್ದೆಮಾಡು (ಮಱಕೆಂದಿದರೆನುವಂತೆ ನಾಲ್ವರುಮನೆತ್ತಿ ತಾಂ ಮುನ್ನಂ ತಂದರಣೆಯಂ ಕೊಟ್ಟು ಕೃತಾಂತನಂತರ್ಧಾನಕ್ಕೆ ಸಂದಂ: **ಪಂಪಭಾ,** ೮. ೪೮ ವ)

**ಮಱಪಿಕ್ಕು** – ಮರೆಮಾಚು (ದೈನ್ಯಮಂ ಗಳಪಲೊಡರ್ಚೆ ಗದ್ಗದಿಪ ಮಾತುಗಳಂಮಱಪಿಕ್ಕಿ: **ರಾಜಶೇವಿ,** ೧೦. ೩೫); ವಂಚನೆಮಾಡು (ವಿಶ್ವಾಸಘಾತಕರೊಯ್ದರ್ ಮಱಪಿಕ್ಕಿ ನಮ್ಮರಸನಂ ನಮ್ಮಲ್ಲಲಿಗಿನ್ನೇವೆವೋ: **ಪುಷ್ಪದಂಪು,** ೧೩. ೮೯); ಪರವಶಗೊಳಿಸು (ತುಂಬಿಯಂದದಿಂ ಚುಂಬಿಸಿ ಸೊಕ್ಕನಿಕ್ಕಿಮಱಪಿಕ್ಕಿ ಪದಂ ಬಿಡೆ: **ಲೀಲಾವತಿ,** ೧೩. ೧೬)

**ಮಱಪು** – ಮರೆಯುವಂತೆ ಮಾಡು (ವದನಪಂಕಜಮಂ ಮಱಪೆಂಬ ಮುಚ್ಚುಳಿಂದರೆ ಮುಗುಳ್ಚಚ್ಚಿಯಂ ಸವಿಯ ಮುಚ್ಚಿದ ಮುಚ್ಚಿಯಿನಾಚೆ ಚಿತ್ತಮಂ: **ಲೀಲಾವತಿ,** ೧೩. ೧೨); ಮರೆಯುವಂತೆ ಮಾಡು (ಚುಂಬನದಿಂಪು ರತಕ್ಕನಿತ್ತು ಸಮ್ಮನಿಸದು ತದ್ರತಂ ಮಱಪುದೇ ನುಮಂ ಒರ್ಮೊದಲಾಗಳೇಗುವೆಂ: **ಚಂದ್ರಪ್ರಪು,** ೮. ೮೨)

**ಮಱಲಿಚೆ** – ಸಾಯುವಂತೆ ಇರಿ, ಹೊಡೆ (ದಂಡುವಂದ ಮಹಾಸಾಮಂತರಂ ಮಱಲಿಚೆದು ಗೆಲ್ದ ಸಾಮಂತ ಚೂಡಾಮಣಿಯ ಬೀರಮುಮಂ: **ಪಂಪಭಾ,** ೯. ೫೨ ವ)

**ಮಱಲುಂದು** – ಮಱಕೆಂದು, ಗಾಢವಾಗಿ ನಿದ್ದೆಮಾಡು (ಮುನ್ನೆ ಮಱಲುಂದಿದನೆಬ್ಬಿಱುವಂತೆ ಪುಟ್ಟಿದಂ: **ಆದಿಪು,** ೨. ೬೨)

**ಮಱಲುಂದುವೋವರಿ** – ಮಲಗುವ ಮನೆ (ಅರಮನೆಯಂ ಪೊಕ್ಕು ಅರಸನ ಮಱಲುಂದುವೋವರಿಯಂ ಪೊಕ್ಕು: **ವಡ್ಡಾರಾ,** ಪು. ೧೨೩, ಸಾ ೧೧)

**ಮಱವೆ** – ನೆನಪಿಲ್ಲದಿರುವುದು (ಅಱವು ಮಱವೆಗಳೆನಿಪ್ಪೆರಡಱ ಮಧ್ಯಾವಸ್ಥೆಯೊಳ್ ಮನಂ ಪಿರಿದಾನುಂ ನೃಪ ಮನೋಜಂ: **ಕುಸುಮಾಕಾ,** ೯. ೧೦೯); ಮೂರ್ಛೆ (ತಱಸಂದು ಮಱವೆಯಿಂದಂ ಕಿೞಿದಾನುಂ ಪೊಟ್ಟುಮಲ್ಲಿ ದೇವಿಯರ್ ಇಂತೆಚ್ಚಱನೆಯ್ದಿರೆಯುಂ: **ಕುಸುಮಾಕಾ,** ೧೩. ೫೭)

**ಮಱಸುಂದು** – ಮೈಮರೆ (ರವಿಸುತ ಮಱಸುಂದಿರ್ದಪೆಯೊ ಮೇಣ್ ಬೞಲ್ದಿರ್ದಪೆಯೊ: **ಗದಾಯು,** ೫. ೧೫)

**ಮಱೆ** – ಎಳೆಯದು (ಶಿಶು ಶಾಬಂ ಪೋತಂ ಮಱೆ ಕಿಶೋರಕಂ: **ಅಭಿಧಾವ,** ೧. ೧೪. ೨೫)

**ಮಱುಕ** – ದುಃಖ, ತಳಮಳ (ಮಱುಕಂ ಅಮಾಯಮಪ್ಪ ಅಪಮೃತ್ಯುವೆಂಬಿವಲ್ಲಿಗೆ ಪೊಱಗೆಂದೊಡಿಂ ಸುಖಮಂ ಏವೊಗಟ್ಟಿಪ್ಪುದೊ ಭೋಗಭೂಮಿಯಾ: **ಆದಿಪು,** ೫. ೩೦); ಕರುಣೆ (ಆಯಿಲದ ಅಳುಪಿನ ಇೞಿವಿೞಿಯಿಂ ಕುತ್ತದ ಮಱುಕದ ಚಿತ್ತವೃತ್ತಿಯಿಂ ಅಪಮೃತ್ಯುವಿನ ಸತ್ವಭಾಧೆಯ ಗಂಧಾಗಂಧಮುಂ ಇಲ್ಲ: **ಶಾಂತಿಪು,** ೬. ೧೦೨ ವ); ಮೋಹ (ದೆಸೆಗೆಡಿಸದಿರದು ವಿಷಯಸಮೂಹಕ್ಕೆಱಗಿ ಬಿಡದಂತೆ ಪತ್ತುವ ಮಱುಕಂ: **ಕಾದಂಬ,** ೩. ೭೨)

**ಮಱುಕಣಿಸು** – ಮರಳಿ ಬರು (ಬಂಧುಜನನಿರೀಕ್ಷಣದಿಂ ಶೋಕಂ ಮಱುಕಣಿಸೆ ಬಾಯೞಿದು ಪಳಯಿಸುವ ಕುಂತಿಯುಮಂ: **ಪಂಪಭಾ,** ೨. ೨೯ ವ)

**ಮಱುಕಳಿಸು** – ಮರಳಿ ಬರು (ನೀಂ ಮರ್ದಂ ತರ್ಪೆಯೆಂಬಾಸೆಯಿಂ ಜೀವಮಂ ಪಿಡಿದಿರ್ಪಳ್ ನೀಂ ಬೞಿದೆ ಬಂದುದನೞಿದಾಗಳೆ ಮಱುಕಳಿಸಿ ಮನವಿಕ್ಕಿದಳಪ್ಪೊಡೆ ಬೞಿಕ್ಕಸಾಧ್ಯಮಕ್ಕುಂ: **ಪಂಚತಂತ್ರ,** ೪೦೪ ವ)

**ಮಱುಕುಳಿ** – ಮರುಗುವ ಸ್ವಭಾವದವನು (ಮಱುಕುೞಿಯಳಿಯಂ ಕುಳಿಯಂ ಮೋಳಿಗೆ ಜಾಳಿಗೆ ತಳಿಗೆಯಳಿರ್ಬಳಸು ಬಳಸಿಗಂ ಮೊಳೆ ತಾಂ; **ಶಬ್ದಮದ,** ೩೬)

**ಮಱುಗಿಸು** – ಕುದಿಸು (ತುಱುಪೆಯ ಬೇರನಿಕ್ಕಿ ತಱುಪೆರ್ಮೆಯ ಪಾಲಂ ಅರ್ಧಮಪ್ಪಿನಂ ಮಱುಗಿಸಿ: **ಲೋಕೋಪಕಾ,** ೮. ೧೦) ಸುಡು ಮಹಾವಿಷದ ಸಂಕಳೊಳಿಕ್ಕಿ ಕಾಯ್ಸಿ ತನುವಂ ಮಱುಗಿಸುವುದುಂ: **ಶಾಂತೀಶ್ವಪು,** ೯. ೧೧೦ ವ); ನೋವಿಗೊಳಪಡಿಸು (ಮನುಷ್ಯಜನ್ಮಮಂ ಪಱುಗಿಸಿ ನಿನ್ನೀ ಪದಕೆ ತಂದುದು ಮುನ್ನಿನ ಗೆಯ್ದ ದೋಷಂ ಇನ್ನೞಿದು ಜಿನೇಂದ್ರಧರ್ಮಜಳದಿಂ ಕಳೆ ಕರ್ಚಿ ಕಳಂಕಪಂಕಮಂ: **ಆದಿಪು,** ೩. ೪೦)

**ಮಱುಗು** – ಕುದಿ (ಅಳರ್ದು ಕೊಳೆ ಭೀಮಕೋಪಾನಳಂ ಎಸರ್ಗಾಯ್ದಿಟ್ಟ ತೆಱದೆ ಮಱುಗಿದುದಾಗಳ್; **ಗದಾಯು** ೭. ೨೧); ತವಕಿಸು, ಪರಿತಪಿಸು ಎರಡರಪ್ಪಾಗು [ಮಗನೞಲೊಳ್ ಕರಂ ಮಱುಗುತ್ತಿರ್ಪಿನಂ ಎನ್ನ ತನೂಜನಾಳ್ವ ಸಾವಿಗಂ ಅೞಿವಾಗೆ ಶೋಕರಸಂ ಇರ್ಮಡಿಸಿತ್ತು: **ಪಂಪಭಾ,** ೧೩. ೧೦೫)

**ಮಱುಗುತ್ತಂಬಡು** – ರೋಗವು ಮರುಕಳಿಸು (ಅಂತಾ ಸಿಂಹಂ ಮಱುಗುತ್ತಂಬಟ್ಟು ಗೊಂಕರ ಕಟ್ಟೆಯಂ ಬಯಸಿ ಬಾಯೊಱೆತು ತನಗನುಚರನಪ್ಪುದೊಂದು ನರಿಗೆ ಪೇೞ್ವುದುಂ: **ಪಂಚತಂತ್ರ,** ೪೦೭ ವ)

**ಮಱುಜವಣಿ** – ಸಂಜೀವಿನಿ (ಮಱುಜವಣಿ ಮಾಣಿಕದ ಪಾಸಱೆ ಪರಿಸದ ಮೊರಡಿ ಪರಿವ ಸಿದ್ಧರಸದ ಬಲ್ಲೊಱೆ: **ಶಬರಶಂ,** ೩. ೩೦)

**ಮಱುದಿನ** – ಮಾರನೆಯ ದಿನ (ಆ ಪಾಣ್ಬೆಯ ಡಂಭತನಕ್ಕೆ ಬೆಱಗಾಗಿ ಮಱುದಿನಂ ಅರ್ಧರಾತ್ರಿಯೊಳೆರ್ದು ಪಯಣಂ ಬೋಗಿ ನಿಶಾವಸಾನಸಮಯಮಪ್ಪಾಗಳ್: **ಪಂಚತಂತ್ರ,** ೩೨೩ ವ)

**ಮಱುದಿನ** – ಮಾರನೆಯ ದಿನ (ಮಱುದಿನಂ ಪೊತ್ತಪ್ಪಿನಂ ಅೞಿಕೆಯ ನೀರೂಟ ತಂಬುಲಂಗಳ ಮಾತಂ ತೊರೆದು: **ಧರ್ಮಾಮೃ,** ೧. ೧೦೮)

**ಮಱುದೆವಸ** – ಮಱುದಿನ (ಪಯಣಮಂ ಮಾಣ್ದು ಮಱುದೆವಸಂ ಯಾಮಿನೀವಿರಾಮವಪ್ಪುದುಂ ಪ್ರಯಾಣಭೇರಿಯಂ ಪೊಯ್ಸಿ ದಾಗಳದಂ ವಿಹಗೇಂದ್ರಂ ಕೇಳ್ದು: **ಪಂಚತಂತ್ರ,** ೧೯೭ ವ)

**ಮಱುಭವ** – ಪುನರ್ಜನ್ಮ (ಇಂದ್ರಿವರ್ಗದಿಚ್ಛೆಯಂ ಸಲಿಸಿ ಬಸಂತದೊಳ್ ಕಳಿಕೆಗರ್ಚಿದ ಕೋಗಿಲೆಯಂತೆ ಬಿಚ್ಚತಂ ನಲಿವುದು ಕಂಡರಾರ್ ಮಱುಭವಂಗಳಂ: **ಆದಿಪು** ೨. ೯)

**ಮಱುಮೆಯ್** – ಮಱುಭವ (ಈ ಭವದಿಂದಮಾದ ವಾಸನೆ ಮಱುಮೆಯ್ಗಮಕ್ಕುಂ ಅದೞಿಂದೆನಗಂ ಸಮಂತು ಮುನ್ನಿನ ಭವಮೀ ಭವಂ ಮಱುಭವಂ ಸಫಲಂ: **ಆದಿಪು,** ೪. ೫೨)

**ಮಱುವಕ್ಕ** – ಪ್ರತಿ ಪಕ್ಷ, ಶತ್ರು (ತಿಂಗಳ ಪಡಿ ಚಂದ್ರಂ ಕಮಲಂಗಳ ಮಱುವಕ್ಕಂ ಅಚ್ಚ ತಿಳಿಗೊಳಂ ಆ ಚೆಲ್ವಿಂಗಿದೆ ದಾಯಿಗಮೆನೆ ಲಲಿತಾಂಗಿಯ ನನೆಮೊಗದ ಪೋಲ್ವೆಗೆ ಎಣೆ ಪೆಱವೊಳವೇ: **ಗದಾಯು,** ೮. ೫೩)

**ಮಱುವಗಲ್** – ಮಱುದಿನ (ಆ ಪಗಲಂ ಕಳೆದು ಅಂದಿನ ಮಱುವಗಲಂ ನಡೆದೆತ್ತಿ ಬರುತುಮಿರ್ದಂ ಕಾವಂ: **ಕಬ್ಬಿಗಕಾ,** ೧೫೬)

**ಮಱುವರಸ** – ಶತ್ರು ರಾಜ (ಚಲದಿಂ ಮಲೆವ ಮಱುವರಸರ ಪೊಸನೆತ್ತರೊಳ್ ಪೊರೆದ ನಿನ್ನ ಬಾಳಂತೆ: **ಕಬ್ಬಿಗಕಾ,** ೭೦ ವ)

**ಮಱುವಾನಿಸ** – ಶತ್ರು ಪಕ್ಷದವನು (ಜಾಱದೆ ತನ್ನಾನೆಯಿಂ ಆ ಮಾಱಾನೆಯ ಕುಂಬತಳಕೆ ಪಾಯ್ದಳವಿಂ ಕೈದೋಱೆ ಮಱುವಾನಿಸಂ ಮೆಯ್ಯೇಱಿಂ ಕಂಡಗಿದು ಜೋಲೆ ಕೊಂದನದೊರ್ವಂ: **ಕಬ್ಬಿಗಕಾ,** ೨೨೧)

**ಮಱುವುಟ್ಟು** – ಪುನರ್ಜನ್ಮ (ಮಱುವುಟ್ಟಿನೊಳಂ ನಿನ್ನೊಡನೆ ಕೂಟವೆನಗೆಕ್ಕೆ: **ಕಾದಂಸಂ,** ೬. ೯)

**ಮಱುಸೂಟ್** – ಮತ್ತೊಂದು ಬಾರಿ (ಸೊರ್ಕ್ಕಾನೆಯಂ ಕಂಡು ಮೂರ್ಛೆವೋದಳೆಮದು ಪೇೞ್ದೊಡೆ ಆ ಮಾತನರಸಂ ಕೇಳ್ದು ಮಱುಸೂಟ್ ಆನೆಯಂ ಕಂಡಂಜದಂತಿರೆ: **ವಡ್ಡಾರಾ,** ಪು ೩೪, ಸಾ ೯)

**ಮಱೆ** – ಬಾಹ್ಯಜ್ಞಾನವಿಲ್ಲದಿರು (ಮೇಘರಥನೆಂ ಪಗೆವಂ ಎನ್ನಂ ಅಱಿಯಲೀಯದೆ ಬೆನ್ನನೆ ಬಂದು ಮಱೆದಿರೆ ಕಟ್ಟಿಪೋದಂ: **ಕರ್ಣನೇಮಿ,** ೧೦. ೫೩ ವ) ನೆನಪು ಹೋಗು (ಮಱೆದಪ್ಪೊಡಂ ತೊದಳನುಡಿನುಡಿಯಱೆಯಂ; **ಪುಷ್ಪದಂಪು,** ೧. ೮೨ ವ); ಹಿಂಬದಿ (ಆ ಮರಗಳ ಗಿಡುಗಳ ಪೊದಱುಗಳ ಮಱೆಗಳೊಳೀ ಪೊಟಿಲಂ ಕಂಡೆಂ: **ವಡ್ಡಾರಾ,** ಪು. ೮೯, ಸಾ. ೨೨); ಆಶ್ರಯ (ಅದಟಂ ಕೊಂಡಾಡದೆ ಬೇಡಿದರ್ಗೀಯದೆ ಮಱೆಗೆ ವಂದರಂ ಕಾಯದೆ ನೀಳ್ದೊದವಿದ ಜಸಮನುಪಾರ್ಜಿಸದ ಅಧಮನದೇತರ್ಕೆ ಬಾರ್ತೆ ಜೀವನ್ಮೃತಕಂ: **ಆದಿಪು,** ೧೨. ೯೭); ದೇಹಕ್ಕೆ ಮರೆ ಒದಗುಸುವುದು, ಕವಚ (ಎನಗೆ .. .. ಮಱೆಯಂ ಆಸೆವಡಲ್ ಎಂದು ಅದಟಂ ಅಣಂ ಕುಡನೆ ಕವಚಮಂ ರಾಧೇಯಂ: **ಪಂಪಭಾ,** ೧೨. ೧೦೯)

**ಮಱಿಗಳ್ಗುಡಿ** – ಕಳ್ಳತನದಲ್ಲಿ ಹೆಂಡ ಕುಡಿ (ಪರತ್ರೆಗಾಟಿಸಿ ಕೆಲರ್ ಮಱಿಗಳ್ಗುಡಿದು ಆತ್ಮಭಾವಮಮ್ಮೊಳೆ .. .. ನಿಂದುದು ಎಂಬ ಗಾವಿಲರ: **ಸಮಯಪ,** ೧೪. ೭೨)

**ಮಱಿಗೆ ವರ್** – ಆಶ್ರಯಕ್ಕೆ ಬರು (ಕುಲಿಶಾಸ್ತ್ರಭೀತಿಯಿಂ ಬರೆ ಜಲನಿಧಿ ಮುಂ ಮಱಿಗೆ ವಂದ ಕುಲಪರ್ವತ ಸಂಕುಲಮಂ ರಕ್ಷಿಸಿ ತಳೆದತ್ತು ಅಲಘುತರಶ್ರೀಯಂ ಅಸಮಗಂಭೀರತೆಯಂ: **ಪಂಚತಂತ್ರ,** ೧೭೩)

**ಮಱಿಗೇಳ್** – ಕದ್ದು ಕೇಳು (ಬಜ್ಜೆಗುಂಟಣಿ ಸೆಜ್ಜೆವನೆಯ ಬಾಗಿಲಂ ಪತ್ತಿ ಮಱಿಗೇಳುತ್ತಿರ್ದು: **ಚಂದ್ರಪ್ರ,** ೮. ೫೯ ವ)

**ಮಱಿಗೋಂಟೆ** – ಆಶ್ರಯಸ್ಥಾನ (ಅಱಿಯೊಡಲೆಂಬ ಮಣ್ಣ ಮಱಿಗೋಂಟೆಯೊಳ್ ಇಂದ್ರಿಯದುಷ್ಪರಿಗ್ರಹಗಳಂ ಒಳಕೊಂಡು ಜೀವನಿರಲಾರ್ತಪಂ: **ಸಮಯಪ,** ೧೫. ೯೪)

**ಮಱಿದೊರಗು** – [ಮಱಿದು+ಒರಗು] ಮೈಮರೆತು ನಿದ್ರಿಸು (ಪುರುಷಾಕಾರಚಿಹ್ನಂಗಳಂ ಕಳೆಯಲ್ ಮಱಿದು ಅರಸನ ಸಿರಿಮಂಚದೊಳ್ ಗಾಢಾಲಿಂಗನಂಗೈದು ಮಱಿದೊಱಗಿರ್ದರ್: **ಪಂಚತಂತ್ರ,** ೨೬೪ ವ)

**ಮಱಿಯಂ ಪುಗು** – ಮೊರೆವೋಗು, ಆಶ್ರಯ ಪಡೆ (ಕಪೋತಂ ಅಧಿಕ ಭಯದಿಂ ಅರಸನ ಮಱಿಯಂ ಪುಗುವುದುಂ: **ಚಾವುಂಪು,** ೩೦೮, ಸಾ. ೧)

**ಮಱಿವಡು** – [ಮಱಿ+ಪಡು] ಮೈಮರೆತು ನಿದ್ರಿಸು (ಎರೆಯನೆರೆಗೊಂಡು ಮಱವಟ್ಟಿರೆಯಿರೆ ಕಾಯ್ದುರಿವ ಸೂರ್ಯಕಾಂತದಿನೆಟ್ಟಿತ್ತಿರದೋಡಿದುದು ಅಜಗರ: **ಜಗನ್ನಾವಿ,** ೧೬. ೩೧)

**ಮಱಿವಾಟ್** – ಹಾದರ ಮಾಡು (ನಾಗಸೂರನೆಂಬೊಂ ಆತಂಗೆಣ್ಬರ್ ಪೆಂಡಿರ್ ತನ್ನ ಪೆಂಡಿರೊಳ್ ಸಂತೋಸಂಬಡೆಯದೆ ಮೋದಾಳಿಯೊಳ್ ಮಱಿವಾಟುತ್ತಿರ್ಕ್ಕುಂ: **ವಡ್ಡಾರಾ,** ಪು ೨೧ ಸಾ ೧೮); ವ್ಯಭಿಚಾರ (ಮಱಿವಾಟ್ ಒಲಿವ ಕುಲವಧುಗೆ ಬಯಸಿದೊಡೆ ಅಲಂಘ್ಯ ಪುರುಷವ್ರತಕ್ಕೆ ಬನ್ನಂ ಬರ್ಕುಂ: **ಜೀವಸಂ,** ೩. ೩೫)

**ಮಱಿವೆಱು** – ಆಶ್ರಯವನ್ನು ಹೊಂದು (ವಿಲೋಚನಮರೀಚಿಗಳಮ ಮಱಿವೆತ್ತು ಚಂದ್ರಿಕಾ ಚಯಮೆಳಸಿತ್ತು ವಾಸರಮುಮಂ: **ಚಂದ್ರಪ್ರಪು,** ೨. ೧೫)

**ಮಱಿವೊಗು** – ಶರಣಾಗತನಾಗು (ಪುಲ್ಲಂ ಕರ್ಚಿದನಂ ತಳ್ವಿಲ್ಲದೆ ಮಱಿವೊಕ್ಕನಂ ಮಹಾಬ್ರಾಹ್ಮಣನಂ ಕೊಲ್ಲರ್ ಪಾಪಕ್ಕಂಜುವರೆಲ್ಲಂ ಸ್ತ್ರೀಬಾಲವೃದ್ಧ ಜನಮಂ ಜಗದೊಳ್: **ಪಂಚತಂತ್ರ,** ೩೪೩)

**ಮಱಿಸನ್ನೆಗೆಯ್** – ರಹಸ್ಯವಾಗಿ ಸನ್ನೆ ಮಾಡು (ವಸಂತದೂತಿ ಮಱಿದುಂಬಿಗಳಿಂ ಮಱಿಸನ್ನೆಗೆಯ್ದು: **ಅನಂತಪು,** ೭. ೧೧)

**ಮಟಮಟಿಸು** – ಕಣ್ಣು ಮಸುಕಾಗು (ಬೆಳರ್ತ ದೋರೆವಾಯ್ ಮಟಮಟಿಸುತ್ತುಮಿರ್ಪ ನಗೆಗಣ್ ನಸುಜೋಲ್ದುಡೆ: **ಸೂಕ್ತಿಸುಧಾ,** ೯. ೬೧)

**ಮಟಿಗೆ** – [ಮಠಿಕಾ] ಅಂಗಡಿ (ಮಿಗೆ ಬೆಲೆಯೇಱಿದ ಪೂಲಿಯ ಮಗರಿಯ ದೋರಿಯದ ಪಟಿಯ ತಳಿರ್ವಟ್ಟೆಯ ಕಾಡಿಗೆ ನೀರಿನ ಬಟ್ಟೆಯ ಮಟಿಗೆಗಳಿಂ ಸೋಲಿಪುವು ಸೀರೆವರದರ ಪಸರಂ: **ಕಬ್ಬಿಗಕಾ,** ೩೪); ಶೇಖರಣೆಯ ಸ್ಥಳ (ಮಟಿಗೆಯ **ಮಾಳಿಗೆಯ ಮನಂಗೊಳಿಸುವ ನಾನಾ ಪ್ರಕಾರದಂಗಡಿಯುಂ; ಸುಕುಮಾಚ,** ೯. ೬೪)

**ಮಟ್ಗಿಸು** – ಅಡಗಿಸು, ತಗ್ಗಿಸು (ರಕ್ತಜಲದಿಂ ಕೋಪಾನಳನಂ ಮಟ್ಗಿಸದೆ ಇನ್ನುಂ ಗಳಗಳಿತ ಸಕೋಪನಿರ್ಪ ತೆಱದಿಂದಿರ್ದಯ್: **ಗದಾಯು,** ೧. ೫೭); ಕೊಲ್ಲು (ಇವರನಿಂ ಮಟ್ಗಿಸುವನ್ನರ್ ಸನ್ನುತರ್ಕಳಾಶರ್ ಭುವನದೊಳ್: **ಕರ್ಣನೇಮಿ,** ೧೦. ೧೫೬)

**ಮಟ್ಗು** – ಆರು, ಕುಗ್ಗಿಹೋಗು (ಇದನಾದಿಪ್ರಭವಂ ಭವಭ್ರಮಣದುಃಖೋಗ್ರಾಗ್ನಿಯೊಳ್ ಮಟ್ಗಿದಪ್ಪುದು ಜೀವಂಗಳಂ: **ಆದಿಪು,** ೧೫. ೧೯); ಸಾಯು (ವಿವಾದಿಸಿ ಕರಂ ಸೋಲ್ತಲ್ಲಿ ತದ್ಭಂಗಚಿತ್ತನವಂ ಮಟ್ಗಿ ಲುಲಾಯಮಾಗಿ ಜನಿಸಿರ್ದು: **ಶಾಂತೀಶ್ವಪು,** ೫. ೬೫)

**ಮಟ್ತಿ** – ಮತ್ತಿ ಮರ (ಫಲಿತ ರಸಾಲಂ ಒಪ್ಪುವ ಕಪಿತ್ಥ ಕರಂಜಕ ನೆಲ್ಲಿ ಮಟ್ತಿ ಪಾಟಳಿ: **ಉದ್ಭಟಕಾ,** ೬. ೧೯)

**ಮಾ** – ಬೇಡ (ಮುನಿದುಯ್ವ ಜವಂಗಂ ಮಾ ಎನಲ್ ಅಮ್ಮುವರಿಲ್ಲ ಬಗೆಯೆ ನಿನಗೆ ಇನ್ನು ಆರ್ಮಂ ಜಿನಧರ್ಮವೊಂದೆ: **ಅಜಿತಪು,** ೨. ೫೭)

**ಮಾಂಕರಿಸು** – ಧಿಕ್ಕರಿಸು (ಪಸುರ್ವೆಳಗಿಂ ಮಾಂಕರಿಸುವ ನಾಲ್ವೆರಲುದ್ದದ ಸರಸತೃಣಪ್ರಸರಂ ಎಸೆವುದದು ಅಸದಳಮದಱೊಳ್: **ಶಾಂತೀಶ್ವಪು,** ೬. ೮೪)

**ಮಾಂಗಳಿಕ** – ಮಂಗಳಗೀತೆ (ಮಂಗಳ ಆತೋದ್ಯವಾದ್ಯ ನಿರ್ಘೋಷಂ ಪುಣ್ಯಪಾಠಕರ ಮಾಂಗಳಿಕಪಠನ ಪಟುರವಂಬೆರಸು: **ಅನಂತಪು,** ೬. ೫೩ ವ)

**ಮಾಂಗಾಯ್** – ಮಾವಿನ ಕಾಯಿ (ಕೆಂಪಾದಸುಗೆಯ ತಳಿರಂ ಕಂಪುದೀವಿರ್ದ ಪೂವಂ ಮಾಂಗಾಯಂ .. .. ಒಲವಿಂ ತೋಂಟಿಗಂ ಕೊಟ್ಟನೂರ್ವಂ: **ಕಬ್ಬಿಗಕಾ,** ೭೦); ಮಾವಿನ ಕಾಯಿ ಆಕಾರದ ಆಭರಣ (ಮಾಂಗಾಯ್ಗೆ ಪಾಯ್ದು ಮಧುಮಾಸದೊಳ್ ಅಗ್ಗಲಿಸಿದ ನಲವಿಂ ತಳಿರುಯ್ಯಲಾಡಿದುವು: **ಲೀಲಾವತಿ,** ೯. ೧೦೨) ಚೆಂಬೊನ್ನ ಮಾಂಗಾಯ ಗೊಂಚಳ್ಗಳ ಪೊಂದಳಿರ ತೊಂಗಳ್ಗಳ ಸುತ್ತುಂಗೊಂಡ ಸರಿಗೆಯ ಮುತ್ತಿನ ಬುಂಭುಕಂಗಳ ನಡುವೆ: **ಆದಿಪು,** ೮. ೧೫ ವ)

**ಮಾಂಗೊನರ್** – ಮಾವಿನ ಚಿಗುರು (ಮಾಮಗೊನರ ರಸಮಂ ಅಸದಳಂ ಉಂಡ ಗಂಡುಗೋಗಿಲೆಯ ತಂಡದ ಯಚ್ಚಸ್ವರಮೆ ವಾದ್ಯಮಾಗೆ: **ಧರ್ಮಪ,** ೧. ೪೬ ವ)

**ಮಾಂತನ** – ಹಿರಿತನ (ಅವರಿರ್ವರ ಮಾಂತನದಳವನಳೆಯಲ್ ಅಜಂ ಅಱನೆನಿಸಿ ಕೌಂಡಿನ್ಯಗೋತ್ರಮಂಡನರಾದರ್: **ಅಜಿತಪು.** ೧. ೩೫)

**ಮಾಂದಿಸು** – ನಿವಾರಿಸು (ಜ್ಯೋತ್ಸ್ನಾಮೃತ ಅಚ್ಛಜಳಪರಿಷೇಕಂ ಮಾಂದಿಸುವಂತಾದುದು ನೃಪನಂದನೆಯೆರ್ದೆಯೊಳಗೆ ಬಳೆದ ಶೋಕಾನಳನಂ: **ಆದಿಪು,** ೩. ೪೯)

**ಮಾಂದು** – ನಿಲ್ಲಿಸು, ತಡೆಗಟ್ಟು (ಮಾಂದು–ಪ್ರತಿಷೇಧೇ: **ಶಬ್ದಮದ,** ಧಾ ೪೧೭); ಮುಗಿದುಹೋಗು (ಪೊಸಮಕರಂದದ ಮಾಂದದ ರಸಕ್ಕೆ ವಂದಲರೊಳೆಱಗಿದರಗಿಳಿ ರಚನೆಯ ಕರ್ಪಸೆವಂತೆ ಎಸೆವಿನಂ ಏಂ ಸೊಯಿಸಿದುದೊ ವನಯುವತಿ ವದನತಿಲಕಂ ತಿಲಕಂ: **ಶಾಂತಿಪು,** ೭. ೧೩೩)

**ಮಾಂಸಾಶನ** – ಮಾಂಸದ ಅಡುಗೆ (ಮಾಂಸಾಶನ ಮದ್ಯ ಮಧುಗಳಂ ಪರಿಹರಿಪಂ ತಾಂ ಸಚ್ಚರಿತ್ರನೆನಿಸುವವಂ: **ಸಮಯಪ,** ೬. ೬)

**ಮಾಂಸಾಶಿ –** ಮಾಂಸ ತಿನ್ನುವ ವ್ಯಕ್ತಿ (ಕೃತಕದವಳುಂ ಆ ಕಾಳಿ ಮಾಂಸಾಶಿಯಲ್ತೇ: **ಸಮಯಪ,** ೨. ೬೯)

**ಮಾಕಂದ –** ಮಾವು (ನೀನುಮಾಮುಮೊಡನಿರ್ದ ಇರವಂ ನೆನೆ ಬಾಳಚೂತಮೇ ಎಂದು ಮಾಕಂಮಹೀರುಹಮಂ ಅಪ್ಪುಕೆಯ್ದು: **ಆದಿಪು,** ೧೩೨–ವ)

**ಮಾಕ್ಷಿಕವಿದ್ಯೆ –** ಮಾಯಾವಿದ್ಯೆ (ಜಂಭರಾಜನಾಕ್ಷೇಪದಿಂ ಸ್ವಕೀಯ ಆ ಮಾಕ್ಷಿಕವಿದ್ಯೆಯಂ ಬೆಸಸುವುದುಂ: **ಕರ್ಣನೇಮಿ,** ೭. ೭೬ ವ)

**ಮಾಗ –** ಮಾಘಮಾಸ (ಒಗೆದು ಆಗಳ್ ಮಾಗದ ಉರ್ಕಂ ಮೊದಲೊಳೆ ತವೆ ತೂಳ್ದಿಕ್ಕಿ ದಾವಜ್ವಳಜ್ವಾಳೆಗಳಿಂದಂ.. ..ಬಂದತ್ತು.. .ವಿಮೇಘಂ ನಿದಾಘಂ: **ಶಾಂತೀಶ್ವಪು,** ೧೨. ೧೭)

**ಮಾಗಧ –** ರಾಜರ ಕೀರ್ತಿಯನ್ನು ಹೊಗಳುವವನು (ನಿರಂತರಂ ಕಡಿಕಡಿದಿತ್ತ ಪೊನ್ನೆ ಬುಧ ಮಾಗಧ ವಂದಿಜನಕ್ಕೆ ಕೊಟ್ಟ ಕೋಡೆ ಎಡಱದೆ ಬೇಡಿಂ ಓಡಿಂ ಇದು ಚಾಗದ ಬೀರದ ಮಾತು ಕರ್ಣನಾ: **ಪಂಪಭಾ,** ೧. ೯೯); ಮಗಧ ದೇಶದ ರಾಜ (ವಾಕ್ಸೌಂದರ್ಯದೆ ಪೋಲ್ತಂ ಪುರುನಂದನನನಂ ಪೊಗಟ್ವ ಮಾಗಧಂ ಮಾಗಧನಂ: **ಆದಿಪು,** ೧೨. ೧೦೫)

**ಮಾಗಧಿ –** ಸ್ತುತಿಪಾಠಕಿ (ಗೀತಸ್ವನಂಗಳುಮಂ ಮಾಗಧಿಯರ ಜಯಶಬ್ದಂಗಳುಮಂ ಪ್ರತೀಹಾರಿಯರ್ ನಿವಾರಿಸುತ್ತುಮಿರ್ದರ್: **ಕಾದಂಸಂ,** ೫. ೨೫ ವ)

**ಮಾಗಿ –** ಚಳಿಗಾಲ (ಪೆಸರ್ವೆತ್ತ ಧಾತ್ರಿಯಂ ನೀರಸಮಂ ಮಾಡಿತ್ತು ಮತ್ತೆ ಧಾತ್ರೀಫಳಮಂ ರಸಮಯಮಂ ಮಾಡಿತು ಮಾಗಿ: **ಶಾಂತೀಶ್ವಪು,** ೧೨. ೭೫ ಎ)

**ಮಾಗುಳಿವೇರ್ –** ಮಾಕಳಿ ಬೇರು (ಪಿಪ್ಪಲಿ ಚಲ್ಲಗಾಯ್ ಮೆಣಸು ಮಾಗುಳಿವೇರ್ .. .. ಆದಿಯಾದುಪ್ಪಿನಕಾಯ್ಗಳಮ ಮಗಮಗಿಪ್ಪುದು: ಲೀಲಾವತಿ, ೫. ೬೩)

**ಮಾಗೆ –** ಮಾಗಿಕಾಲ (ಬಿರಯಿಗಳಂಜಿ ತಾಱೆ ಪಗಲಾಣ್ಮನ ಮೆಯ್ ಬಿಸುಪೇಱೆ ಮಾಗೆ ಚೆಚ್ಚರದೊಳೆ ಪಾಱೆ: **ಕಬ್ಬಿಗಕಾ,** ೪೫)

**ಮಾಟ –** ಕೆಲಸ (ನುಡಿಯೊಂದು ಮಾಟವೊಂದು ಎನಿಸಿದ ಮಾನವಂಗೆನಗೆ ದೇವಿ ಪಸಾದಮನೇಕೆ ಮಾಡಿದಳ್: **ಕಾದಂಸಂ,** ೫. ೧೦೨); ನಿರ್ಮಿತಿ (ಲಲಿತೋನ್ನತಮಣಿಮಯ ಮೂಟದಂದಮದು ಪಲವುಂ ದೇಸೆಯ ಮಾಟದಂದಂ: **ಆದಿಪು,** ೪. ೩೦); ಕಣ್ಕಟ್ಟು (ಭವದೀಯ ಪ್ರಸಾದದಿಂ ಎನಗೆ ಬಲ್ಲಿಲಮಪ್ಪ ಬವರಮಿಲ್ಲದಾವನಾನುಮೊರ್ವಂ ಮಯಾವಿಯ ಮಾಟಮಕ್ಕುಂ: **ಪಂಪರಾ,** ೯. ೧೧೪ ವ); ಕೃತ್ರಿಮವಾದುದು (ಮಾಟದ ಮುಡಿಯಂತೆ ಕಟ್ಟಿದ ಪಲ್ಲಂತೆ ಪೀಲಿಯ ಕಣ್ಣಂತೆ ಬಟ್ಟೆಯ ಮುಲ್ಲಂತೆ: **ಧರ್ಮಾಮೃ,** ೮. ೫೭ ವ)

**ಮಾಟಕೂಟ –** ಸುಂದರವಾದ ಗೋಪುರ (ಮಾಟಕೂಟಂಗಳಿಂ ನವರತ್ನೋಪಲ ಕರ್ಮದಿಂ ಮಣಿವಿತಾಬಶ್ರೇಣಿಯಿಂ .. .. ಸ್ವಯಂವರಗೃಹಂ ಕಣ್ಗೇಂ ಬೆಡಂಗಾದುದೋ: **ಪಂಪರಾ,** ೫. ೩೫)

**ಮಾಡ –** ಉಪ್ಪರಿಗೆ, ಹರ್ಮ್ಯ (ಮಾಡಿಸಿದಲ್ ಉದ್ಯತ್ಕೇತನಾನೀಕ ಭಾಸ್ವದ ರತ್ನೋಜ್ವಲ ಚಿತ್ರಭಿತ್ತಿಪರಿಶೋಭಾನೀಡಮಂ ಮಾಡಮಂ: **ಸುಕುಮಾಚ,** ೧೦. ೪೩); ಗೋಡೆಯ ಗೂಡು (ಬನಮೆಂಬ ಮದನನೃಪನರಮನೆಯೊಳ್ ಪೊತ್ತಿಸಿದ ದೀಪಮಾಲೆಯ ಮಾಡಕ್ಕನುರೂಪವಾಗಿ ಪಣೆಯಂ ಕೊನೆವರೆಗಂ ಪೂತುವರರೆ ಚಂಪಕನಿಕರಂ: **ಚಂದ್ರಪ್ರಪು,** ೭. ೫೪)

**ಮಾಡಶಾಲೆ –** ಮೊಗಸಾಲೆ (ಆಶಾಕರೀಂದ್ರಂಗಳ್ಗೆಂದು ಸುಪ್ರತೀಕಪತಿ ಸಮೆಯಿಸಿದ ವಿಶಾಲಕ್ರೋಡಶಾಲೆಗಳೆನಿಸಿದ ಚೆಂಬೊನ್ನ ಕಲಶದ ಮಾಡಶಾಲೆಗಳುಮಂ ನೋಡಿ: **ಶಾಂತಿಪು,** ೩. ೧೯ ವ)

**ಮಾಡುವೆಟ್ಟು –** ಕೃತಕಶೈಲ (ಪೂತ ಲಸತ್ ಲತಾನಿಕರದಿಂ ಮಾಡುವೆಟ್ಟಿನಿಂ ಶೀತಳಮಂ ಪಳಂಚುವ ಎಳವಳ್ಳಿಯ ಮಂದಿರದಿಂ: **ಉದ್ಭಟಕಾ,** ೬. ೧೯)

**ಮಾಡುಹ –** ಮಾಡುವಿಕೆ (ನೋಡದೆಯಿರುಹವುಂ, ಪ್ರೀತಿಪೂರ್ವಕವಹಂತಹುದ ಕಿಡಿಸುವಹವುಂ, ವಿವಾದಮಂ ಮಾಡುಹವುಂ, ನುಡಿಯದಿರುಹವುಂ, ವಿಸ್ಮಯವಿಲ್ಲದಿರುಹವುಂ, ಇಂತಿಹವು ಸ್ನೇಹವಿಲ್ಲದ ಜನದ ಲಕ್ಷಣವೆಂದಱೆವುದು: **ಪಂಚತಂತ್ರ,** ೪೩೪, ಶ್ಲೋಕ ೨೦೬ ಟೀಕೆ)

**ಮಾಣ್ –** ಬಿಟ್ಟುಬಿಡು (ಅಂತು ಗುರುನಂದನಂ ಮರುನ್ನಂದನವಿರಚಿತ ನಿಶಾತ ವಿಶಿಖಪಂಜರಮನಱೆದು ಕಟಕುಟಂ ಮಾಡಿಯುಂ ಅನಿತಱೊಳ್ ಮಾಣದೆ: **ಪಂಪಭಾ,** ೧೨. ೬೮ ವ); ನಿಂತುಹೋಗು (ಮದನನ ಕಾಯ್ಪು ಮಾಣ್ಗೆ ಸರಸೀರುಹಜನ್ಮನ ಮೆಚ್ಚು ತೀರ್ಗೆ ಕೋಳ್ಗುದಿ ಮನದಿಂದಂ ಇಂದು ಪೊಱಮಾಱುಗೆ: **ಪಂಪಭಾ** ಪರಿಷತ್ತು, ೫. ೧೮); ಸುಮ್ಮನಿರು (ಕೋಟಿ ತೆಱದಿಂದಮೆಸವೀ ನಾಟಕಮಂ ತೋಱೆ ಮಾಣ್ದಳಿಲ್ಲಳ್ ಬಗೆಯೊಳ್ ನಾಟುವಿನಂ ಅಮರಿ ಸಂಸ್ಕೃತಿನಾಟಕಮುಮನೆನಗೆ ನೆಱೆಯೆ ತೋಱೆದಳೀಗಳ್: **ಆದಿಪು,** ೯. ೪೫); ಈಡೇರಿಸದಿರು (ಪೂಣ್ದ ಪೂಣ್ಕೆ ಮಾಣ್ದೊಡಮಿಱೆವಲ್ಲಿ ಮೆಯ್ದೆಗೆದರೆಂದೊಡಂ ಉಮ್ಮನೆ ನಣ್ಬುವಂ: **ಗದಾಯು,** ೧೦. ೬); ತಪ್ಪಿಸಿಕೊ (ಭದ್ರಂಗೆ ಕುಡಲ್ವೇಡಿರ್ದ ಕುಸಂ ಎನಗೆ ಮದುವೆಯಾಗೆಂಬುದುಂ ಭದ್ರನುಂ ನಂದಗೆಂದು ಬಳೆದ ಕೂಸೆನಗೆ ಮೊಱೆಯಲ್ಲಳೆಂದು ಇರ್ವರುಂ ಓರೋರ್ವರ ಮೇಲೆ ನೆವಮಿಟ್ಟು ಮಾಣ್ಬುದುಂ: **ಸುಕುಮಾಚ,** ೭. ೩೨ ವ)

**ಮಾಣವಕ –** ಇಪ್ಪತ್ತು ಎಳೆಗಳ ಮುತ್ತಿನ ಹಾರ (ಗುಚ್ಛನಲಕ್ಷತ್ರಮಾಳಾ ಅರ್ಧಗುಚ್ಛ ಮಾನವಕ ಅರ್ಧಮಾಣವಕಗಳೆಂಬ ಪನ್ನೊಂದು ನಾನಾರತ್ನದ ಸುವರ್ಣಪದಕವಿರಚನಾದಿಭೇದದಿಂ: **ಆದಿಪು,** ೮. ೫೪ ವ); [ಜೈನ] ನವನಿಧಿಗಳಲ್ಲಿ ಒಂದು (ಕಾಳ ಮಹಾಕಾಳ .. .. ಮಾಣವಕ ಪಿಂಗಳ .. .. ಎಂಬೊಂಬತ್ತು ನಿಧಿಗಳುಮಂ ನುಕ್ರಮದೊಳರ್ಚಿಸಿ: **ಚಂದ್ರಪ್ರಪು,** ೬. ೧೧೧ ವ)

**ಮಾಣಿ –** ಹುಡುಗ (ವಿದ್ಯಾಭ್ಯಾಸಮಂ ಗೆಯ್ದು ಬಂದಲ್ಲದೆ ನಿಮ್ಮ ಮೊಗಮಂ ನೋಡೆವೆಂದು ಪೊಡೆವಟ್ಟು ಪೋಪ ಮಾಣಿಗಳಂ: **ಸುಕುಮಾಚ,** ೨. ೩೭ ವ)

**ಮಾಣಿಕ –** ಪದ್ಮರಾಗ, ನವರತ್ನಗಳಲ್ಲಿ ಒಂದು (ಮುತ್ತಿನ ಪಚ್ಚೆ ಮಾಣಿಕದ ವಜ್ರದ ಕೇಱೆಯೊಳ್ ಒಂದಿ ಸಾಂದಿನೊಳ್ ಕತ್ತುರಿಯೊಂದು ಕೋಟ್ಗೆಸಱೊಳ್ ಓಕುಳಿ ಚಂದನ ಗಂಧವಾರಿಯೊಳ್ ಸುತ್ತಲುಂ ಅಟ್ಟೆಱಂ ಪಡೆವ ಗೇಯದ ಪೆಂಪಿನ ಅಲಂಪಂ ಅರ್ಗಂ ಆರ್ತಿತ್ತುದು ಪಟ್ಟಬಂಧ ಮಹೋತ್ಸವಂ ಆ ಪಡೆಮೆಚ್ಚೆ ಗಂಡನಾ: **ಪಂಪಭಾ,** ೧೪. ೨೦)

**ಮಾಣಿಕಂಗಾಣ್** – ಮುಟ್ಟಾಗು, ರಜಸ್ವಲೆಯಾಗು (ಮುಂದಾ ಸ್ತ್ರೀರತ್ನಮನೊಲವಿಂದಂ ಪಡೆದಪ್ಪೆನೆಂಬುದಂ ಸೂಚಿಸುವಂತೆ ಒಂದೆರಡು ದಿನದೊಳ್ ಅತ್ಯಾನಂದದೆ ಕಡುಜಾಣೆ ಮಾಣಿಕಂಗಡಿರ್ದಳ್: **ಗಿರಿಜಾಕ,** ೩. ೨೦)

**ಮಾಣಿಕಗೆಂಟು** – ರಜಸ್ವಲೆಯಾದ್ದರಿಂದ ದೂರವಿರಬೇಕಾದುದು (ಆ ಪೆಣ್ಮಾಣಿಕಂ ಮಾಣ ಮಾಣೆಗೆಂಟೆಂದೊಡೆ ಮಾಣ್ದಂ ಅರಸಂ: **ನೇಮಿನಾಪು,** ೨. ೧೨)

**ಮಾಣಿಕಚಟ್ಟ** – ರತ್ನಪರೀಕ್ಷಕ (ಮಾಣಿಕಚಟ್ಟಂ ನೀರಂಜಿಸಿ ದಳಿವಿಡಿದ ಮಹಾರತ್ನದ ದೊರೆಗೆ ವಂದುದು ಸ್ತ್ರೀರತ್ನಂ: **ಆದಿಪು,** ೪. ೪೨)

**ಮಾಣಿಕವರಿಗೆ–** ಕೆಂಪು ಹರಳು ಜೋಡಿಸಿರುವ ಗುರಾಣಿ (ಕುಱುಪಿನ ಮಾಣಿಕವರಿಗೆಯ ತೆಱಪುಗಳೊಳ್ ಪೊಳೆವ ಬಾಲ ಬೆಳ್ವಳಗಂದೇಂ ಮೆಱೆದುವೊ ಕೆಮ್ಮುಗಿಲೆಡೆಯೊಳ್ ಮಿಱುಗುವ ಮಿಂಚೆಂಬ ತೆಱದಿನೆರಡುಂ ಪಡೆಯೊಳ್: **ಕಬ್ಬಿಗಕಾ,** ೨೦೦)

**ಮಾಣಿಕ್ಯ** – ಪದ್ಮರಾಗ (ಭೂಪತಿಪ್ರಕರ ನಾನಾ ಮೌಳಿಮಾಣಿಕ್ಯ ಸಂಕುಳದೊಲ್ ಮಾರ್ಪೊಳೆವುತ್ತಂ ಒಯ್ಯನೆ ಬರುತಿರ್ದಳ್ ಪ್ರತೀಹಾರಿ ಭೂವಳಯಾಧೀಶ್ವರನಲ್ಲಿಗೆ: **ಕಾದಂಬ,** ೧. ೨೧)

**ಮಾಣಿಸು** – ನಿಲ್ಲಿಸು (ಅರಸರಂ ಅಡಗಂ ಮಾಣಿಸಲ್ ಅರಸಿಯರಂ ಮದ್ಯಸೇವೆಯಿಂ ಮಾಣಿಸಲುಂ ಭರವಸರೆನಿಪ್ಪ ಮುನಿಗಳ್ ಪರಸಮಯದೊಳಾರುಮಿಲ್ಲ: **ಸಮಯಪ,** ೧೪, ೧೦೨); ಅಡಗಿಸು (ಕೌರವಬಲದುರ್ಕಂ ಒಂದಿನಿಸುಂ ಮಾಣಿಸಿ ಪೋಪಂ ಇಳೇಶನಲ್ಲಿಗೆ: **ಪಂಪಭಾ,** ೧೨. ೧೨೧); ಸುಮ್ಮನಿರಿಸು (ಎನ್ನ ನಿಯಾಮಮಿಲ್ಲದೆತ್ತಲಜೆಯದಿದನೀಗಳೆ ಮಾಣಿಸುವೆನೆಂದು: **ಪಂಚತಂತ್ರ,** ೧೯೭ ವ)

**ಮಾತಂಗ** – ಆನೆ (ಕದನಪ್ರಾರಂಭಶೌಂಡಂ ರಿಪುನೃಪಬಲ ದಾವಾನಲಂ ವೈರಿಭೂಭೃತ್ ಮದವತ್ ಮಾತಂಗ ಕುಂಭಸ್ಥಳದಳ ನಖರೋಗ್ರಾಸಿ ಪಂಚಾಸ್ಯಧೈರ್ಯಂ: **ಪಂಪಭಾ,** ೬. ೭೭); ಬೇಡರವನು (ಅರಣ್ಯಂ .. .. ಮಾತಂಗಸಂಗಿಯಾಗಿಯುಂ ಸದ್ವಂಶವಿರಹಿತಮಲ್ತು: **ಪುಷ್ಪದಂಪು,** ೫. ೬೮ ವ); ಚಂಡಾಲ (ಮಾತಂಗನಾಗಿರ್ದುಂ ಏಂ ನಿಷ್ಠುರಮಲ್ತು ಆಕಾರಂ: **ಕಾದಂಸಂ,** ೧. ೧೪); ಮಾದಿಗ (ಮಾತಂಗರ್ ಆ ತೋಲಂ ಆರ್ದಿಸಿ ಪೋಟ್ಟು ಆಱಲಿಟ್ಟು .. .. ಸುದ್ದೈಸಿಸ ಸಮ್ಮಗಾಱವೆಸ: **ಸಮಯಪ,** ೬. ೧೭)

**ಮಾತಂಗಕುಲ** – ಆನೆಗಳ ಗುಂಪು, ಅಸ್ಪೃಶ್ಯಕುಲ (ಮಾತಂಗಕುಲದೂಷಿತೆಯುಂ ಅಮೂರ್ತೆಯಂತೆ ಸ್ಪರ್ಶವರ್ಜಿತೆಯುಂ: **ಕಾದಂಬ,** ೧. ೪೫ ವ)

**ಮಾತಂಗದಾನ** – ಮದಜಲ (ಮಾತಂಗದಾನವಿಭವಂ ಮಾತೇನೆನಿವಿರಿದಾದೊಡಂ ಚೇತಸ್ಸಂಪ್ರೀತಿಯಂ ಅತೀವಮಳಿನವಿಜಾತಿಗೆ ಮಧುಪವ್ರಜಕ್ಕೆ ಮಾಟ್ಟುದೆ ಸಹಜಂ: **ಪಾರ್ಶ್ವನಾಪು,** ೪. ೧೨೩)

**ಮಾತಂಗವರೋಧಿ** – ಆನೆಯ ಶತ್ರು, ಸಿಂಹ (ಏಂ ಗಾವಿಲನಯೊ ನಿನ್ನಂ ನುಂಗುವುದರ್ಕೆ ಇವರಂ ಎತ್ತವೇಟ್ಕುಮೇ ನೆರಮಂ ಸಂಗಳಿಸಲ್ವೇಟ್ಕುಮೇ ಮಾತಂಗ ವಿರೋಧಿಗೆ ಕುರಂಗಸಂಗರ ಧರೆಯೊಳ್: **ಪಂಪಭಾ,** ೩. ೧೭)

**ಮಾತಂಗಿ** – ಚಂಡಾಲರವಳು, ಬೇಡಿತಿ (ಕಮಲಭವಂ ಮೊದಲೊಳ್ ಮಾತಂಗಿಯೆಂದು ತಾಂ ಮುಟ್ಟದೆ ಮಾಡಿದಕ್ಕುಂ: **ಕಾದಂಬ,** ೧. ೪೭)

**ಮಾತಟ್ಟು** – ಸುದ್ದಿಯನ್ನು ಹೇಳಿ ಕಳಿಸು ಪಲದಿವಸದಿಂ ಸೂಟ್ಟಿಡೆಯದ ಕರೆವುದರ್ಕಾಸೆವಟ್ಟು ಮಾತಟ್ಟಿದ ಕೆಳೆಯನನೆಮ್ಮಬ್ಬೆಯನೊಡಂಬಡಿಸಲಣ್ಮೆನೆಂದು ಪೋಗಲ್ವೇಟ್ಟು: **ಶಾಂತಿಪು,** ೮. ೭೭ ವ)

**ಮಾತಡಕು** – ಸಂದೇಶ ತಲುಪಿಸು (ಒದವಿದ ಬೇಟವಪೊಡೆನಗತ್ತಳಗಂ ಬಗೆವೇಟ್ವೊಡೆನ್ನ ಮೇಳದ ಕೆಳೆಯರ್ಕಳಿಲ್ಲ .. .. ಓತು ಮಾತಡಕಲೊಂದಿದ ದೂದವರಿಲ್ಲ ನೆಟ್ಟನೆ: **ಪಂಪಭಾ,** ೪. ೭೯)

**ಮಾತರಿಶ್ವ** – ಗಾಳಿ (ಉದ್ದಾಮರಾಮಾರತಿ ಪರಿಮಳಭಾರಾನ್ವಿತಂ .. .. ಮರುನ್ಮಾರ್ಗಗಂ ಮಾತರಿಶ್ವಂ: **ಲೀಲಾವತಿ,** ೨. ೧೩೬)

**ಮಾತಜೆವಂ** – ಇತರರಿಗೆ ಅರ್ಥವಾಗುವಂತೆ ಹೇಳಬಲ್ಲವನು (ಕುಜೆತಂತು ಪೆಱರ ಬಗೆಯಂ ತೆಱೆದಿರೆ ಪೇಱಿರ್ಗಜೆಪಲಾರ್ಪವಂ ಮಾತಜೆವಂ: **ಕವಿರಾಮಾ,** ೧. ೧೫)

**ಮಾತಾಮಹ** – ತಾಯಿಯ ತಂದೆ (ತಂದೆಯ ತಂದೆ ಪಿತಾಮಹನೆಂದಜೆವುದು ತಾಯಿಯ ತಂದೆ ಮಾತಾಮಹಂ: **ಅಭಿಧಾವ,** ೧. ೧೧. ೨೧)

**ಮಾತಾಳಿ** – [ಮಾತಲಿ] ಇಂದ್ರನ ಸಾರಥಿ, ಹರಟೆಕೋರ (ನೀಱಂ ಜೂದಾಳಿ ಕರಂ ನೀಱಂ ಮಾತಾಳಿಕರೆಯೆ ಸಿಗ್ಗುಳಿಯಿವಳ್: **ಕಾವ್ಯಾವಲೋ,** ೩೫೩)

**ಮಾತುದೆಗೆ** – ಸಂಭಾಷಣೆಗೆ ತೊಡಗು (ಅನುಜ್ಞಯಂ ಕುಡಿಂ ಎಂಬ ನೆವದೆ ಮಾತಂದೆಗೆಯೆ: **ಜಗನ್ನಾವಿ,** ೧೩. ೫ ವ)

**ಮಾತುಳ** – ಸೋದರ ಮಾವ (ಎಮಗೆ ಸಂಪ್ರೀತಿಯಂ ಮಾಡು ತದ್ಭೂಪರತೀಶಂಗೆ ಈ ನೃಪಂ ಮಾತುಳಂ ಎನಿಸಿ: **ಕುಸುಮಾಕಾ,** ೧೫. ೮೦)

**ಮಾತುಲುಂಗ** – ಮಾದಲ ಹಣ್ಣು (ಸಿತದೂರ್ವಾಂಕುರ ಮಾತುಲುಂಗ ನಳಿನೀ ಭೃಂಗಾರ ಗೋರೋಚನಾಕ್ಷತ: **ಆದಿಪು,** ೧೬. ೧೦)

**ಮಾತುವಲ್ಲಹ** – ಮಾತಿನ ದೇವತೆಯಾದ ಸರಸ್ವತಿಯ ಗಂಡ, ಬ್ರಹ್ಮ (ಆಗಮಲೋಪಕ್ಕೆ: ಮಾತುವಲ್ಲಹಂ, ನೂಱಪತ್ತು, ತೆಂಕವಂಕಂ: **ಶಬ್ದಮದ,** ೧೭೪ ಪ್ರ ೧)

**ಮಾತುಳ** – ಸೋದರ ಮಾವ (ಮಾತುಳಂಗಂ ಮಾತುಳಾನಿಗಂ ತುಟಿಲ್ಗೆಯ್ವುದುಂ ಅವರ್ ಅನೇಕ ನಲ್ವರಕೆಗಳ್ವೆರಸು: **ಪುಷ್ಪದಂಪು,** ೮. ೪೯ ವ)

**ಮಾತುಳವಿವಾಹ** – ಸೋದರಮಾವನೊಡನೆ ಮಾಡುವ ಕನ್ಯೆಯ ಮದುವೆ (ಮಾತುಳವಿವಾಹಮಂ ಮುನ್ನಾ ತೆಱದಿಂ ವಿಷ್ಣು ಮಾಡೆ .. .. ಮೆಚ್ಚರ್: **ಸಮಯಪ,** ೧೧. ೭೦)

**ಮಾತುಳಾನಿ** – ಸೋದರತ್ತೆ (ಮಾತುಳಂಗಂ ಮಾತುಳಾನಿಗಂ ತುಟಿಲ್ಗೆಯ್ವುದುಂ ಅವರ್ ಅನೇಕ ನಲ್ವರಕೆಗಳ್ವೆರಸು: **ಪುಷ್ಪದಂಪು,** ೮. ೪೯ ವ)

**ಮಾತುಳುಂಗ** – ಮಾತುಲುಂಗ, ಮಾದಲ (ಫಳವ್ರಾತದಿಂ ನೆಲನಂ ಮೋದುವ ಮಾತುಳುಂಗಮೆಸೆಗುಂ ವಿದ್ಯಾಧರೋದ್ಯಾನದೊಳ್: **ಆದಿಪು,** ೧. ೬೭)

**ಮಾತೃಚರ** – ತಾಯಿಯ ಜನ್ಮ (ನೀಂ ಲಲಿತಾಂಗನೆಯಾದಂದು ಮಾತೃಚರನೆಂದಜೆದು ಉತ್ತುಂಗವಿಭವಂಗಳೆಸೆಯೆ ಮನಂಗೊಳೆ ಪೂಜಿಸಿದೆಂ: **ಆದಿಪು** ೩. ೫೯)

**ಮಾತ್ಸ್ಯನ್ಯಾಯ** – ಮತ್ಸ್ಯನ್ಯಾಯ, ಬಲಿಷ್ಠ ದುರ್ಬಲನ್ನು ಪೀಡಿಸುವುದು (ಅಂತಿರೆ ನೀನಾಚರಿಸಲ್ಲದಂದು ಧರೆ ಮಾತ್ಸ್ಯನ್ಯಾಯಮೇನಾಗದೇ: **ಪಂಪರಾ,** ೨. ೩೨)

**ಮಾದರ** – ಮಾದಿಗ (ತಾಯೊಂದಸುವೆರಸು ಬಿರ್ದುದಂ ಕರುಣಿಸಿ ಮತ್ತಂ ಮಾದರಂಗೆ ಸಲಹೆಂದಿತ್ತಂ: **ಯಶೋಧಚ,** ೩. ೫೬)

**ಮಾದಿಂಗ** – ಮಾದಿಗ (ನಿಮ್ಮ ಸುತೆಯಂ ಮಾದಿಂಗರಂ ನೋಡಿ ನೀಂ ಮುದದಿಂ ಕೊಟ್ಟಪಿರೆಂದು ಕೇಳ್ದು ನೃಪತೀ ಬಂದಿರ್ದೆವು: **ಕರ್ಣನೇಮಿ,** ೮. ೪೭)

**ಮಾದಿಂಗಿತ್ತಿ** – ಮಾದಿಗ ಹೆಂಗಸು (ಎನೆ ಮಾದಿಂಗಿತ್ತಿಯುಂ ಅ ನೂತ್ನರತ್ನಂಗಳಂ ಕೊಂಡು ಬಂದು: **ಕರ್ಣನೇಮಿ,** ೧೦. ೫೧ ವ)

**ಮಾದಿಗಿತ್ತಿ** – ಮಾದಿಗ ಹೆಂಗಸು (ಎರಡು ಸಾಗರೋಪಮಂ ತಿಟ್ಟನೆ ತಿಱಿದು ಚಂಪಕಾನಗರದೊಳ್ ಮಾದಿಗಿತ್ತಿಯಾಗಿ ಪುಟ್ಟಿ: **ಚಾವುಂಪು,** ಪು. ೪೩೦. ಸಾ. ೧೬)

**ಮಾದುಫಲ** – ಮಾದಲ ಹಣ್ಣು (ಭಾವಿಸಲ್ ಏನುಂಟೆ ಮೊರಡಿಯೊಳ್ ಮಾದುಫಲಂ: **ಸಮಯಪ,** ೧. ೧೨೩)

**ಮಾದುಪಳ** – ಮಾದಲ ಹಣ್ಣು (ಸುಖಮನಱಸುವ ಮನುಜಂ ಮೊರಡಿಯೊಳ್ ಮಾದುಪಳಮನಱಸುಸದಿರಂ: **ಯಶೋಧಚ,** ೧. ೫೧)

**ಮಾದುರ** – [ಮಹಾಧುರ] ದೊಡ್ಡ ಯುದ್ಧ (ಬಲಿದ ಬಯಕೆಯಂ ಮಾದುರದೊಳ್ ಕಳೆವಂತನ್ನೆಗಂ ಇವನೊಳ್ ಕಳೆವೆಂ ನಿನ್ನೊಂದು ಮುಳಿಸಂ: **ಪಂಪಭಾ,** ೮. ೭೨)

**ಮಾದೆಂಗ** – ಮಾದಿಗ (ಮಾದೆಂಗನಾಗಿ ಯೋಗದೊಳ್ ಆದಂ ನಿಂದಲ್ಲಿ ಪುತ್ತು ಪರ್ವಿದೊಡೆ: **ಸಮಯಪ,** ೧೦. ೪೪)

**ಮಾದೆಗ** – ಒಂದು ಪರಿಶಿಷ್ಟ ಜಾತಿ (ಇಂತು ನೀಳನೆಂಬ ಮಾದೆಗಂಗಂ ಕೌಶಂಬಿಯೆಂಬ ಮಾದೆಂಗಿಗಂ ಮಗಳಾಗಿ ಪುಟ್ಟಿ: **ಸುಕುಮಾಚ,** ೫. ೨೧ ವ)

**ಮಾದೆಂಗಿ** – ಮಾದಿಗ ಹೆಂಗಸು (ಇಂತು ನೀಳನೆಂಬ ಮಾದೆಗಂಗಂ ಕೌಶಂಬಿಯೆಂಬ ಮಾದೆಂಗಿಗಂ ಮಗಳಾಗಿ ಪುಟ್ಟಿ: **ಸುಕುಮಾಚ,** ೫. ೨೧ ವ)

**ಮಾದೇವ** – [ಮಹಾದೇವ] ಈಶ್ವರ (ಸಿರಿಯೆಱೆಯಂ ಮಾದೇವಂ ಸರಸತಿಯೆಱೆಯರ್ಕಳ ಅಡಿಗಳೆಂಬೀ ಕೆಂದಾವರೆಗಳ್ ಪೊರೆಗೆಮ್ಮಂ ಪೊಸಸಿರಿಗಂಪಿಂ ಪೞೆಮೆವಱೆಯಂ ಎಂತು ಅಂತೆ ಒಲವಿಂ: **ಕಬ್ಬಿಗಕಾ,** ೨)

**ಮಾದೇವಿ** – [ಮಹಾದೇವಿ] ಪಾರ್ವತಿ (ಗಡಣದೆ ಮಾದೇವಿಯ ಬಗೆಯೊಡೆಯನ ನೊಸಲೊಳ್ ಕದಂಪಿನೊಳ್ ಕೈಮೊಗದೊಳ್ ತೊಡೆಯೆಡೆಯೊಳ್ ತೋಳೆಡೆಯೊಳ್ ಬಿಡೆ ನಟ್ಟುವು ಕಾವನಂಬುಗಳ್ ತಾವೈದುಂ: **ಕಬ್ಬಿಗಕಾ,** ೨೪೧); ಮಹಾರಾಣಿ (ದುರ್ಯೋದನನ ಮಾದೇವಿಯರಪ್ಪ ಭನುಮತಿಯುಂ ಚಂದ್ರಮತಿಯರುಂ ಪ್ರಮುಖ ಸಾಮಂತಮಾಂಡಳಿಕ ಅಂತಃಪುರಕಾಂತೆಯರೊಂದಾಗಿ: **ಗದಾಯು,** ೧೦. ೧೨ ವ)

**ಮಾದ್ಯತ್** – ಮದಿಸಿದ (ಇಲ್ಲಿ ಮಾದ್ಯತ್ ರದನೀಂದ್ರಸ್ಥೂಳದಂತಾಹತಿವಿದಳಿತ ಗೋಶೀರ್ಷಸಾರ ದ್ರವಾಮೋದದಿನೆತ್ತಂ ಗಂಧವಾಹಂ ಮಗಮಗಿಸೆ ಬೆಡಂಗೀ ನಗೇಂದ್ರೋಪಕಂಠಂ: **ಆದಿಪು,** ೧೩. ೬೮)

**ಮಾದ್ಯದ್ಗಜ** – ಮದ್ದಾನೆ (ಮಾದ್ಯದ್ಗಜಗಮನೆಯರ್ ಆ ಕೊಂಡದೊಳ್ .. .. ಸತಿಯ ಮಿನ್ನೀರೊಳ್ ಇರ್ದಂತಿರ್ದರ್: **ಲೀಲಾವತಿ,** ೧೨. ೫೩)

**ಮಾಧವ** – ಮಧುಮಾಸ, ವಸಂತ (ಅವಿರಳರೋಮಾಂಚದೆ ಮಾಧವಸಮಯದೊಳಲರ್ದ ಚೂತಲತೆಯನೆ ಪೋಲ್ತಳ್: **ಆದಿಪು,** ೪. ೨೩); ವೈಶಾಖ (ಮಾಧವಂ ವೈಶಾಖಂ: **ಅಭಿಧಾವ,** ೩. ೧. ೯೮)

**ಮಾಧವೀ** – ವಾಸಂತಿ, ಮೊಲ್ಲೆ, ಇರುವಂತಿಗೆ (ಮತ್ತೊರ್ವಳ್ ಮಾಧವೀಲತಾಲಲಿತೆ: **ಆದಿಪು,** ೧೧. ೧೧೧ ವ)

**ಮಾಧ್ಯಮಿಕಮತ** – ಶೂನ್ಯವಾದ, ಬೌದ್ಧಮತದ ಒಂದು ಪಂಗಡ (ಲೋಕಾಯತಿಕ ಯೋಗಾಚಾರ ಮಾಧ್ಯಮಿಕ ಮತವಿತಥಾಭಿಧಾಯಿಗಳ್ ಜೀವಾಭಾವಮನೆ ಪಿಡಿಯಚ್ಚುವಿಡಿದು **ಆದಿಪು,** ೨. ೭ ವ)

**ಮಾಧ್ಯಸ್ಥವೃತ್ತಿ** – [ಜೈನ] ದುಷ್ಟರ ಬಗ್ಗೆ ವ್ರತಸ್ಥರು ಇರಿಸಿಕೊಳ್ಳಬೇಕಾದ ತಟಸ್ಥ ಭಾವನೆ (ಸಕಳಶರೀರಗುಣಾಧಿಕ ದುಃಖಾರ್ದಿತಾವಿನೀತರೊಳ್ ಮೈತ್ರಿಪ್ರಮೋದಕಾರುಣ್ಯ ಮಾಧ್ಯಸ್ಥವೃತ್ತಿಗಳಂ ಭಾವಿಸುತ್ತುಂ: **ಆದಿಪು,** ೯. ೧೩೦ ವ)

**ಮಾಧ್ವೀಕ** – ಮದ್ಯ (ಮಧು ಮಾಧ್ವೀಕಂ: **ಅಭಿಧಾವ,** ೩. ೧. ೯೬)

**ಮಾಧ್ವೀಕಗಂಧ** – ಮದ್ಯದ ವಾಸನೆಯಿಂದ ಕೂಡಿದ (ಕಮನೀಯ ಉದಾರ ಚಾಮೀಕರ ಚಷಕಚಯನ್ಯಸ್ತ ಮಾಧ್ವೀಕ ಗಂಧಾಂಧಮದಾಳಿವ್ರಾತ ಝಂಕಾರಿಯಂ ಅಧಿಕ ಮನೋಹಾರಿಯಂ .. .. ಅತಿಮುದದಿಂದೆಯ್ದಿದಂ: **ಪಂಚತಂತ್ರ,** ೧೨೮)

**ಮಾನ** – ಆತ್ಮಗೌರವ (ಮಾನಮದೇಂ ವಿಪುಳಮದೇಂ ದೀನಮದೇಂ ಸ್ತೋಕಮೇಂ ಅಧ್ರುವಮೋ: **ಶಾಂತಿಪು,** ೯. ೧೦೨); ಸ್ತ್ರೀಯ ಪ್ರಣಯಕೋಪ (ಮಾನಮೀ ಚೇತನೆ ತನುವಿನೊಳ್ ಇರ್ಪನ್ನಂ .. .. ಕೋಪಮಾಪತ್ತನೀಗುಂ: **ಲೀಲಾವತಿ,** ೧೪. ೪೮); ಅಹಂಕಾರ (ಪದೆದೊಪ್ಪಿದಂ ಉತ್ತಭಾವಂ ಉದ್ದಾನ ನವೀನನಾಮಚರಪುಂಗವಂ ಅಂಗಜಮಾನಮರ್ದನಂ: **ರಾಜಶೇವಿ,** ೧. ೫೯)

**ಮಾನಂದನ** – ಲಕ್ಷ್ಮಿಯ ಮಗ, ಮನ್ಮಥ (ಆನಂದನಮಂ .. .. ತೋಷಿತ ಮಾನಂದನಮಂ ನಿರೀಕ್ಷಿಸಲ್ ನಡೆ ನೃಪತೀ: **ರಾಜಶೇವಿ,** ೧೦. ೫)

**ಮಾನಕಷಾಯ** – [ಜೈನ] ನಾಲ್ಕು ಮಾನಸಿಕ ದೋಷಗಳಲ್ಲಿ ಒಂದು (ಅಂತಃಕರಣದೊಳಿನಿಸಾನುಂ ನಿಂದುದೊಂದು ಮಾನಕಷಾಯಂ ಮುನಿಪತಿಗೆ ಪೋಗೆ ಪುಟ್ಟಿದುದನಂತವಸ್ತುಪ್ರಕಾಶಿಕೇವಳಬೋಧಂ: **ಆದಿಪು,** ೧೪. ೧೪೫); ನೋಡಿ, 'ಕಷಾಯ'

**ಮಾನಗೆ** – [ಮಾನಕ] ಅಳತೆಯ ಸಾಧನ (ಅಂಗನೆಯರ ನಾಭಿಕೂಪದ ಶೃಂಗಾರಜಲಕ್ಕೆ ಬಾಎ ನೀರ್ವರಿ ವೃತ್ತೋತ್ತುಂಗಕುಚಂ ಮಾನಗೆ ಮದನಂ ಗಡ ಯೌವನವನಕ್ಕೆ ತೋಂಟಿಗನದಂ: **ಅಜಿತಪು,** ೨. ೩೧)

**ಮಾನತೆ** – ದುಃಖ (ಏನವ್ವ ಬಿಡದೆ ಚಿಂತಿಸಿ ಮಾನತೆವೆತ್ತಿರ್ಪೆ: **ಪುಣ್ಯಾಸ್ರ,** ೩. ೫೧)

**ಮಾನದಿ** – [ಮಹಾನದಿ] ದೊಡ್ಡ ನದಿ (ಬಾಲೆಗೆ ಗುಣಕಾಂತಿ ವಯೋಲೀಲೆಗೆ ವಿನಯಪ್ರಧಾನ ಗುಣಗಣಿಗೆಣೆ ಭೂಪಾಲಂ ನಿಗದಱಿಂದನುಕೂಲಂ ಬಿದಿ ಬಿಸುಗೆ ಸಿಂಧುವೊಲ್ ಮಾನದಿಯೊಳ್: **ಶಾಂತಿಪು,** ೨. ೧೫೫)

**ಮಾನಭಂಗ** – ಅವಮಾನ (ಭರತಂಗೆಱಗುವರೆಂಬಿದೆ ಪರಿಭವಂ ಎನಗಿಂತುಂ ಮಾನಭಂಗಂ: **ಆದಿಪು,** ೧೪. ೩೯)

**ಮಾನವಕೇಸರಿ** – ನರಸಿಂಹ (ಮೀನಾದಂ ಎಸಡಿಯಾದಂ ಮಾನವಕೇಸರಿಯುಮಾಗಿ ಪಂದಿಯುಮಾದಂ: **ಸಮಯಪ,** ೮. ೧೩೬)

**ಮಾನವಾಹಿತ** – (ಮಾನ+ವಾಹಿತ] ಮರ್ಯಾದೆವಂತ, {ಮಾನವ+ಅಹಿತ] ಮನುಷ್ಯರಿಗೆ ಅಹಿತನಾದವನು (ಆ ನೃಪಂ ಸಪ್ತಾಂಗಸಂಗಿಯಾಗಿಯುಂ ಸಪ್ತಾಂಗಸಂಗಿಯಲ್ತು .. .. ಮಾನವಾಹಿತನಾಗಿಯುಂ ಮಾನವಾಹಿತನಲ್ತು: **ಪುಷ್ಪದಂಪು,** ೯. ೩೯ ವ)

**ಮಾನಸ** – ಮಾನಸ ಸರೋವರ (ಮಾನಸದಿಂ ಸಿತಾಂಬುಜಶತಂ ತಳೆರ್ವಂತೆವೊಲೆಯ್ದೆ .. .. ಬಂದೆಱಗಿತ್ತು ಕೊಳಂಗಳೊಳ್ ತಟೀಫೇನವಿತಾನವಾತ್ಮರುಚಿಯೊಳ್ ತಡಮಾಗೆ ಮರಾಳಮಂಡಳಂ: **ಜಗನ್ನಾವಿ,** ೪. ೬೪); ಮನಸ್ಸು (ಸರಸ್ವತಿ ಹಂಸೀಭಾವದೆ ನೆಲೆಗೊಳ್ಗೆ ಕೂರ್ತು ಮತ್ ಮಾನಸದೊಳ್: **ಕವಿರಾಮಾ,** ೧. ೩); ಮನುಷ್ಯ (ಈ ಮೊಗಂಗುಡದ ಇರವು ಇಂತು ಕಣ್ಬುಡಿಗರಪ್ಪರೆ ಮಾನಸರಪ್ಪರ್: **ಪಂಪಭಾ,** ೮. ೭೬)

**ಮಾನಸಗೋಳ** – ಕುಸ್ತಿಯ ಒಂದು ವರಸೆ (ಮಿಕ್ಕುದು ವಜ್ರಪಾತಮುಮನೆಂಬಿನಂ ಉಬ್ಬಸಮಾದ ತೋರಹತ್ತಕ್ಕೆ ತಗುಳ್ದು ಪತ್ತಿಸುವ ಮಾನಸಗೋಳಮೆನಿಪ್ಪ ಡೊಕ್ಕರಕ್ಕಿಕ್ಕಿದ ವಜ್ರಲೇಪಮೆನೆ: **ಚಂದ್ರಪ್ರಪು,** ೫. ೮೦)

**ಮಾನಸವಾಟ್** – ಮನುಷ್ಯ ಜೀವನ (ಈತನಿಲ್ಲದೆ ಪೇಟ್ ಮಾನಸವಾಟಿ ಮೋಹಮೆನಗಿನ್ನೇಬಾರ್ತೆ: **ಆದಿಪು,** ૩. ೫೨)

**ಮಾನಸಸಂಭವ** – ಮನಸ್ಸಿನಲ್ಲಿ ಹುಟ್ಟಿದವನು, ಮಾನಸ ಸರೋವರದಲ್ಲಿ ಜನಿಸಿದವನು (ಹಂಸನವೊಲ್ ಮಾನಸಸಂಭವಂ ಎನಿಪ ಮದೀಯಾಭಿಮಾನಮಂ ಕಟ್ಟುಯ್ದೌ: **ಕಾದಂಬ,** ೫. ೭೮);

**ಮಾನಸಿ** – ಮಾನಸಿ ಎಂಬ ಯಕ್ಷಿಣಿ (ಕ್ಷಣರುಗ್ಮಾಲಾಮಯ ಅಬ್ದಕ್ಕೆಣೆಯೆನಿಸೆ ಚಳತ್ಕಾಂತಿಯುಕ್ತಾಂತರಂಗೋಲ್ಲಣೆ ನಕ್ರಾರೂಢೆ .. .. ಆ ಮಹಾಮನಸೀಯಕ್ಷಿಣಿಯೆಂದುಂ ಮಾಟ್ಕೆ ಶಾಂತೀಶ್ವರಚರಿತಕರತಿಶ್ರೀಗೆ ಸೌಭಾಗ್ಯದೊಳ್ಪಂ: **ಶಾಂತೀಶ್ವಪು,** ೧. ೧೦)

**ಮಾನಸಿ** – ಮಾನವ ಹೆಂಗಸು (ಕರಮೆಸೆವ ರೂಪು ಕಣ್ಗಚ್ಚರಿಯಂ ಪುಟ್ಟಿಸಿದುದು ಈಕೆಯಾವಳೋ ನೆಲದೊಳ್ ಪಿರಿದುಂ ಮಾನಸಿಯರ್ಗಿ ಪರಿ ಚೆಲ್ವಿನಿತುಂಟೆ ಸಗ್ಗದಾಕೆಯೆ ದಿಟಂ: **ಕಬ್ಬಿಗಕಾ,** ೯೧)

**ಮಾನಸಿಕೆ** – ಮಾನವತ್ವ (ಪಸವಿನೊಳ್ ಅನ್ನಮಂ ಸುಫಲದಲ್ಲಿ ಸುವರ್ಣಮಂ ಈವ ಯುದ್ಧದೊಳ್ ಕುಸಿಯದೆ ಸೂಱೆಗೊಳ್ಳದೆ ರಣಕ್ಕೆ ಶುಚಿತ್ವಮಂ ಅಪ್ಪುಕೆಯ್ವ ಮಾನಸಿಕೆಯ ನಾಲ್ವರುಂ ನಮಗೆ ವಂದ್ಯರ್: **ಗದಾಯು,** ೪. ೬೦)

**ಮಾನಸಿಕ್ಕೆ** – ಸ್ವಾಭಿಮಾನ (ನೆಗಟ್ತೆವೆತ್ತ ಪತಿಭಕ್ತಿಯ ಮೈಮೆಯ ಮಾನಸಿಕ್ಕೆಯಗ್ಗಲದ ಪೊಗಟ್ತೆ ತನ್ನದೆನೆ: **ಆದಿಪು,** ೧. ೭೨); ಮನುಷ್ಯತ್ವ (ಪುಸಿಯಂ ನುಡಿವವರ್ಗಳ ಮಾನಸಿಕ್ಕೆಯುಂ ಗುಣಮುಂ ಅೞಿಗುಂ: **ಸಮಯಪ,** ೫. ೨೯)

**ಮಾನಸೂತ್ರ** – ಅಳತೆಯ ದಾರ (ಕಮಳಜನಳೆಯಲ್ ಮಾಡಿರ್ದ ಮಾನವಸೂತ್ರಂಬೊಲ್ ಒಪ್ಪುಗುಂ ಕಟಿಸೂತ್ರಂ: **ಅಜಿತಪು,** ೨. ೨೯)

**ಮಾನಸ್ತಂಭ** – [ಜೈನ] ಸಮವಸರಣಮಂಟಪದ ನಡುವಣ ಕಂಬ (ರಾಜಚಿಹ್ನಂಗಳನಿರಿಸಿ ಧೂಳೀಶಾಳ ಮಾನಸ್ತಂಭಾಂಭಃ ಖಾತಿಕಾವಲ್ಲೀವನೋಪವನಪತಾಕಾವನಿ ಕಲ್ಪಭೂರುಹ: **ಆದಿಪು,** ೧೦. ೫೨ ವ)

**ಮಾನಾಮಿ** – ಮಾನವಮಿ (ಕನ್ನಡಕ್ಕೆ: .. .. ಮಾನಾಮಿಯ ಸಾಣೆಯಾಯ್ತು ತನು ಧವುಕನಾ: **ಶಬ್ದಮದ,** ೧೮೬ ಪ್ರ ೪); ಆಲಂಕಾರಿಕಾರ್ಥದಲ್ಲಿ ಶಿಕ್ಷೆ (ಓಪಳೆ ಕೂರ್ಮೆಗೆಟ್ಟೆನಗೆ ನೀನೇನಾನುಮೊಂದೇವಮಂ ಮನದೊಳ್ ಮಾಡಿದೊಡಂದೆ ದೀವಳಿಗೆಯಂ ಮನಾಮಿಯುಂ ಮಾಡೆನೆ: **ಪಂಪಭಾ,** ೪. ೯೩)

**ಮಾನಿತ** – ಪೂಜ್ಯವಾದ (ಮಾನಿತ ತತ್ವಾರ್ಥಶ್ರದ್ಧಾನದಿಂ ಆ ಸೂರ್ಯಮಿತ್ರಮುನಿಪತಿಗೆ ಅವಧಿಜ್ಞಾನಂ ತೊಟ್ಟನೆ ಪುಟ್ಟಿದುದು: **ಸುಕುಮಾಚ,** ೩. ೪೭); ಗೌರವಾನ್ವಿತ (ಮಾನಿತಮಪ್ಪ ಮಾನಸಿಕೆ ಮೆಯ್ಯೊಳೆ ಕೂಡಿರೆ ಧಾತ್ರನೆಂಬೆನಲ್ ತಾನೆಸೆದಿರ್ದ ಮಾನಿನಿಯರಂ: **ಕರ್ಣನೇಮಿ,** ೩. ೧೯೫)

**ಮಾನಿತೆ** – ಸಂಭಾವಿತಳು (ಮಾನಿತೆಯ ತನುವಿಕಾರೋರ್ಮಿಯಂ ತನ್ನ ಗಂಭೀರತೆ ಗಾಢೌತ್ಸುಕ್ಯಮಂ: **ಲೀಲಾವತಿ,** ೧೪. ೬)

**ಮಾನಿನಿ** – ಸ್ವಾಭಿಮಾನಿ ಹೆಣ್ಣು (ತೋರ್ಪರ್ ಸಲ್ಲಲಿತಾಂಗಗದ ಲತಾಂಗಿಯರ್ ಮಾನಿನಿಯರ್: **ಜಗನ್ನಾವಿ,** ೨. ೨೮)

**ಮಾನುಷಸಿದ್ಧಿ** – ಮಾನವಯತ್ನದಿಂದ ಪಡೆದುದು (ದೇವಸಿದ್ಧಿ ಮಾನುಷಸಿದ್ಧಿಯೆಂಬೆರಡುಂ ಸಿದ್ಧಿಯುಮಂ .. .. ನೆಱೆಯೆ ತೋಱೆ: **ಅಜಿತಪು,** ೫. ೩೦ ವ)

**ಮಾನುಷ್ಯ** – ಮನುಷ್ಯ ಜನ್ಮ (ಸಡಿಲ್ದೊಡೆ ಪಡೆಗುಂ ಮಾನುಷ್ಯಮನತಿದಾರುಣ ಮಾನಸ ಶಾರೀರ ದುಃಖಪೀಡಿತನಕ್ಕುಂ: **ಆದಿಪು,** ೯. ೪೮)

**ಮಾನ್ಯ** – ಗೌರವಾರ್ಹ; ದತ್ತಿ ಕೊಟ್ಟ ಭೂಮಿ (ಮಿಕ್ಕ ತನ್ನ ಮಾನ್ಯಂಗಳೆನಿತುಂಟು ಅನಿತುಮಂ ವಿಕ್ರಯಂ ಮಾಡಿ: **ತ್ರಿಷಷ್ಟಿಪು,** ೮. ೧೪ ವ)

**ಮಾಮರ** – ಮಾವಿನ ಮರ (ಸೊಗಯಿಸಿ ಬಂದ ಮಾಮರನೆ ತಳ್ತ ಎಲೆವಳ್ಳಿಯೆ ಪೂತ ಜಾತಿಸಂಪಗೆಯೆ ಕುಕಿಲ್ವ ಕೋಗಿಲೆಯೆ ಪಾಡುವ ತುಂಬಿಯೆ ನಲ್ಲರ ಒಳ್ಮೊಗಂ ನಗೆಮೊಗದೊಳ್ ಪಳಂಚಲೆಯೆ ಕೂಡುವ ನಲ್ಲರೆ ನೋಟ್ಪೊಡೆ: **ಪಂಪಭಾ,** ೪. ೨೮)

**ಮಾಮಸಕ** – ಸಡಗರ (ಪಳಂಚುವ ಮಣಿಮಯ ರೀಟ ಕರ್ಣಪೂರ ಕೇಯೂರಹಾರರಣಿತಂಗಳೊಳಂ ಎಡೆವರಿಯದೆ ಆಡಿಯಿಡುವ ಮಾಮಸಕಕಂಜಿ ಮಣಿಕುಟ್ಟಿಮತಳದ ಪೂವಲಿಯಂ ಬಿಟ್ಟು: **ಕಾದಂಬ,** ೧. ೫೮ ವ); ಅತಿ ರೋಷ (ಆ ಸಮಯದೊಳ್ ಸಂವರ್ತ ಸಮಯದ ಕೃತಾಂತನಂತೆ ಮಾಮಸಕಂ ಮಸಗಿ: **ಪಂಪರಾ,** ೧೦. ೨೫ ವ)

**ಮಾಮಸಕಂ ಮಸಗು** – ಕೋಪದಿಂದ ಕೆರಳು (ಆಗಳ್ ವಿಲಯಾಗ್ನಿ ಮೈವೆತ್ತಂತೆ ಮಾಮಸಕಂ ಮಸಗಿ: **ರಾಜಶೇವಿ,** ೫. ೧೨೧ ವ)

**ಮಾಮಸಮಸಗು** – ಕೋಪದಿಂದ ಕೆರಳು (ಮುನಿಸಿಂ ಮುಸುಂಕಿ ಮಾಮಸಮಸಗಿ .. .. ಪೋಪ ಕೆಳದಿಯ ಬೞಿಸಂದು ಕಳಾವತಿ ಕೆಯ್ಯಂ ಪಿಡಿಯೆ: **ಲೀಲಾವತಿ,** ೧೪. ೩೩ ವ)

**ಮಾಮಿಡಿ** – ಮಾವಿನ ಮಿಡಿ, ಕಸುಗಾಯಿ (ಮಾಮಿಡಿಗಳಂ ತೆಗೆದು ಪಚ್ಚೆಸಾರಮನಿಕ್ಕಿ ಪೂಮಿಡಿಗಳೊಳ್ ತಳಿರ ಲಂಬಣಮನೆೞಲಿಕ್ಕಿ: **ಲೀಲಾವತಿ,** ೬. ೧೧೫)

**ಮಾಯ್** – ಕ್ಷೀಣಿಸು (ಹಿಮವುಂಡು ಬಾಟ್ವಿ ಹಾಳಾಗು (ಈ ತಣ್ಮಡುವಿನ ಪೂವೆ ಸುಟ್ಟಪುದು ಮಾಯ್ದು ವಿಯೋಗಿಗಳೆಂತು

ಬರ್ದ[ಪರ್: **ನೇಮಿನಾಪು,** ೪. ೮೨); ಕುಮತಿಗಳ್ ಜಿನಮಾರ್ಗನಿಯುಕ್ತರಾಗೆ .. .. ಬಿಟ್ಟಪೆಂ ಇಲ್ಲದೊಡೆ ಇಲ್ಲಯೇ ಸತ್ತು ಮಾಯ್ವರ್: **ಕರ್ಣನೇಮಿ,** ೮. ೧೮); ಮರೆಯಾಗು (ಮಾಯ್ದ ಸಗ್ಗಮಂ ನರಕಮಂ ಈ ಶರೀರದೊಳೆ ಕಂಡೆಂ ಎಲೆ ಪ್ರಿಯ ನಿನ್ನ ದೂಸಱೆಂ: **ಲೀಲಾವತಿ,** ೧೪. ೬೧); ದುಷ್ಟತೆಯಿಂದ ಕೂಡಿರು (ಬಱಿಗೆಯ್ಯುತಿರ್ದಂ ಆ ಮಾಯ್ದಱುಗುಲಿ ಕರ್ವೇಡನಲ್ಲಿ ಮುದುಗಿಳಿಗಳುಮಂ: **ಕಾದಂಸಂ,** ೧. ೫೧); ನಿವಾರಣೆಗೊಳ್ಳು (ಕೆಲವು ದಿವಸಕ್ಕೆ ಪುಣ್ಣೆಲ್ಲಂ ಮಾಯ್ದು ಲೇಸಪ್ಪುದುಂ: **ಧರ್ಮಾಮೃ,** ೧೨. ೩೯ ವ)

**ಮಾಯಮಾಗು** – ನಾಶವಾಗು ( (ದನುಜನ ಮಾಯೆಯೊಂದಿನಿಸು ಬೇಗದಿನೊರ್ಮೆಯೆ ಮಾಯಮಾಗೆ ಚೇತನವಡೆದು: **ಚಂದ್ರಪ್ರಪು,** ೫. ೬)

**ಮಾಯಾನಿದ್ರೆ** – ಮಂತ್ರಹಾಕಿ ಬರಿಸುವ ನಿದ್ದೆ (ಮಾಯಾನಿದ್ರೆಯನಿಂದ್ರನ ಜಾಯೆ ಜಿನಾಂಬಿಕೆಗೆ ಪಡೆದು ತಡೆಯದೆ .. .. ಮಾಯಾಶಿಶುವೊಂದನಿರಿಸಿ: **ಕರ್ಣನೇಮಿ,** ೮. ೧೧೪)

**ಮಾಯಾಮಾರ್ಗ** – ಮಿಥ್ಯೆಯ ದಾರಿ (ತಾನವನ ಅತಿಭಕ್ತನಪ್ಪುದಱೆಂದವನೊಳಾದ ಮಾಯಾಮಾರ್ಗವಂ ಅಱಿಯದೆ ಜಿನಮಾರ್ಗದೊಳ್ ದೃಢನೆಂದು ಕಯ್ಯಂ ಮುಗಿದು: **ಧರ್ಮಾಮೃ,** ೩೯ ವ)

**ಮಾಯಾಯುದ್ಧ** – ಇಂದ್ರಜಾಲದಿಂದ ಕೂಡಿದ ಯುದ್ಧ (ಮಾಯಾಯುದ್ಧದೊಳಂ ದಿವ್ಯಾಯುಧಯುದ್ಧದೊಳಂ ಅಧಿಕಬಲರ್ ಉಭಯಬಲಂ: **ಪಂಪರಾ,** ೧೩. ೧೪೫)

**ಮಾಯಾರ್ಭಕ** – [ಜೈನ] ಜಿನಶಿಶು ಹುಟ್ಟಿದಾಗ ಅದಕ್ಕೆ ಜನ್ಮಾಭಿಷೇಕವನ್ನು ನೆರವೇರಿಸಲು ನಿಜವಾದ ಮಗುವನ್ನು ತೆಗೆದುಕೊಂಡು ಇಂದ್ರಾಣಿಯು ಜಿನಮಾತೆಯ ಬಳಿ ಇಡುವ ಕೃತಕ ಮಗು (ಐರಾದೇವಿಯ ಮುಂದೆ ಮಾಯಾರ್ಭಕನನಿರಿಸಿ ಜಿನಾರ್ಭಕನನೆತ್ತಿಕೊಂಡು ಬರೆ: **ಶಾಂತಿಪು,** ೧೦. ೯ ವ)

**ಮಾಯಾವಿ** – ಮೋಸಗಾರ (ಕಿತವಂ ಮಾಯಾವಿ ಧೂರ್ತಂ ವಿಕೃತಪರಂ: **ಅಭಿಧಾವ,** ೨. ೧. ೬)

**ಮಾಯಾಶಲ್ಯ** – [ಜೈನ] ವ್ರತಸ್ಥನಿಗೆ ಬರುವ ಮೂರು ಬಗೆಯ ಅಡ್ಡಿಗಳಲ್ಲಿ ಒಂದು (ಪೊಲ್ಲಮೆಯಂ ಮಾಡುವ ಮಿಥ್ಯಾಶಲ್ಯಂ ಮಾಯಾಶಲ್ಯಂ ನಿಧಾನಶಲ್ಯಮೆಂಬ ಮೂಱುಂ ಶಲ್ಯಂಗಳಂ ಪಿಂಗಿದಂ: **ಧರ್ಮಾಮೃ,** ೫. ೮೮ ವ)

**ಮಾಯೆ** – ಇಂದ್ರಜಾಲ (ಮಾಯೆಯೊಳೆ ಗೆಲ್ದ ದಾನವನಾಯಕನಂ ನಗುವ ಮದನಸುತನುಪಹಾಸಚ್ಛಯೆ ಬೆಡಂಗಾಯು: ಜಗನ್ನಾವಿ, ೧೭. ೧೩೨)

**ಮಾಯ್ದ** – ನೀಚ (ನಿನ್ನುಮಂ ಪರಲೋಕಕಕ್ಕಟ್ಟಿದನೆ ಕಾಯ್ದು ಮಾಯ್ದ ವಿಧಾತ್ರಂ: **ಗದಾಯು,** ೩. ೮೨)

**ಮಾರ** – ಕಾಮ (ಮಾರಂ ಮಾರಂಸವಂ ಮಾಡದಂ: **ಅನಂತಪು,** ೮. ೨೯)

**ಮಾರಣ** – ಕೊಲೆ, ಅಳಿವು (ವೀಶಸನ ಮಾರನ ವಿಶರಣ ನಿಶುಂಭನ ಕ್ಷನ ಸೂದನ ಪ್ರತಿಘಾತಂ ಪ್ರಶಮನ ವರ್ಜನ ಬರ್ಹಣ ವಿಶರಣ ಹಿಂಸಾರ್ಥಕಂ ವಧಂ ತಾನಕ್ಕುಂ: **ಅಭಿಧಾವ,** ೧. ೧೪. ೪)

**ಮಾರಣಮಂತ್ರ** – ಶತ್ರುವಿನ ವಿನಾಶಕ್ಕಾಗಿ ಪ್ರಯೋಗಿಸುವ ಮಂತ್ರ (ಮಾರಣಮಂತ್ರನಾದಮೆನಿಸಿತ್ತು ವಿರೋಧಿಗೆ ಶಾಂತಕ್ರಿಯಾಕಾರಣ ಮಂತ್ರನಾದಮೆನಿಸಿತ್ತು ಧರಿತ್ರಿಗೆ: **ಪಂಪರಾ,** ೪. ೭೭)

**ಮಾರರಾಗ ಶಿಶುಮಾರ** – ಕಾಮಾಸಕ್ತಿಯೆಂಬ ಮೀನು (ನುಣ್ಣಗೆ ನುಂಗುತ್ತಿರೆ ಮಾರರಾಗಶಿಶುಮಾರಂಗಳ್ ಮಹೋಗ್ರಂಗಳಿಂ ಇನ್ನೆಗಮೋರಂತೆ ತೊಟಿಲ್ದೆಂ ಇಂ ತಿರಿಯಲಾಱೆಂ ಭವಾಂಬೋಧಿಯೊಳ್: **ಆದಿಪು,** ೯. ೬೦)

**ಮಾರಣಹೋಮ** – ಶತ್ರುವಿನ ವಿನಾಶಕ್ಕಾಗಿ ಮಾಡುವ ಯಜ್ಞ (ಮಾರಂ ಬಿರಯಿಗೊಡರ್ಚಿದ ಮಾರಣಹೋಮಾಗ್ನಿಧೂಮ ಪಟಲಂಗಳವೋಲ್ ಕಾರಮುಗಿಲ್ ನೆಗೆದುವು ರತಿ ನೀರೆಱೆದೋವಿದ ತಮಾಲ ಷಂಡಂಗಳವೋಲ್: **ಪಂಪರಾ,** ೭. ೧೬೦)

**ಮಾರಾಮಾಜಾತ** – ಮನ್ಮಥ (ಚೆಲ್ವಾದುದು ಆಕಾಶಮಾರಾಮಾಜಾತ ಸಿತಾತಪತ್ರಂ ಅವಧಾತಂ ಬಿಂಬಮಬ್ಜಾರಿಯಾ: **ರಾಜಶೇಖ,** ೧೧. ೫೪)

**ಮಾರಿ** – ಮೃತ್ಯುದೇವತೆ (ಜಯಮಂ ಬಯಸುವೊಡಂ ಮಾರಿಯಂ ಆವರ್ತಿಸಿದರ್ ಎಂಬ ನಾಣ್ಣುಡಿಗಂ ಅಳುರ್ಚಿಯೆ ನಿನ್ನೊಳ್ ಎಡಱೆ ತನಗಱೆಕೆಯ ಮಿಟ್ಟುವಂ ಇಂತು ತಂದುಕೊಂಡರುಂ ಒಳರೇ: **ಶಾಂತಿಪು,** ೩. ೭೨); ವಿನಾಶ (ಒಂದು ದಿನಮಾಸಿಂಗಕ್ಕೆ ಮಾರಿ ಬರ್ಪಂತೆ ದೀರ್ಘಕರ್ಣನೆಂಬ ಮೊಲಕ್ಕೆ ಬಾರಿ ಬರ್ಪುದುಂ: **ಪಂಚತಂತ್ರ,** ೧೪೪ ವ); ಆಪತ್ತು (ಕಳ್ಳರಾಯಿಲಮಱೆಯೇಱು ಮಾಱಿ ಪಸವಿಟ್ಟ ಬಱಿಂ ಪೆಱವುಂ ಭಯಂಗಳಕುಲಿತೆಗಳಿಲ್ಲ: **ಆದಿಪು,** ೧. ೫೨); ಕ್ಷುದ್ರ ದೇವತೆ (ಬಳಾರಿಯ ಮನೆಯಂ ಪರಕೆಯ ಕುಱೆಯಂ ಪುಗಿಸುವಂತೆ ವಟವಿಟಪಿಕೋಟರ ಕುಟೀರಾಂತರಮಂ ಪುಗಿಸಿ: **ಪಂಚತಂತ್ರ,** ೨೪೧ ವ)

**ಮಾರಿಕಬ್ಬೆ** – ಮಾರಿ ಎಂಬ ದೇವತೆ (ನೆಲನೆಲ್ಲಂ ಕೊಂಡಾಡುವ ಎಕ್ಕಲವಿರಿಯುಂ ಬನದಬ್ಬೆಯುಂ ಮಹಾಲಕ್ಷ್ಮಿಯುಂ ಕಂಚಿಯ ಕಾಮಕೋಟಿಯುಂ ಕೊಳ್ಳಿಪಾಕಿಯ ಭೂತಕೋಟಿಯುಂ ಪಿಟ್ಟಾಪುರದ ಮಾರಿಕಬ್ಬೆ ಶಾಕಿನಿಯುಂ ಪೊಣಮರ್ಾಲೆಯ ಮಂಗಳಾದೇವಿಯುಂ; **ಧರ್ಮಾಮೃ,** ೯. ೬೭ ವ)

**ಮಾರಿಗುತ್ತ** – [ಮಾರಿ+ಕುತ್ತ] ಭಯಂಕರ ರೋಗ (ಎಮ್ಮ ಪುರಕ್ಕೆ ಮಾರಿಗುತ್ತಂ ಮೊದಲಾಗೆ ಪೆಱವುಂ ಆಗಂತುಕ ಪೀಡೆಗಳಪ್ಪುದುಂ: **ಪಂಪರಾ,** ೧೪. ೪೯ ವ)

**ಮಾರಿಗೆ** – ಮಾರಿದೇವತೆ (ವರಮೀಗುಮೆ ಮೈಲಾರಂ ಕೇತಂ ಕಾಟಂ ಮಾರಿಗೆ ಮಸಣಿಗೆಯೆನಿಪ್ಪ ಕೊಟೆದೆಯ್ವಂಗಳ್: **ಸಮಯಪ,** ೯. ೧೨೭)

**ಮಾರಿಯ ಮೂರಿ** – ಮಾರಿಯ ಮೃತ್ಯು ರೂಪದ ಬಾಯಿ (ಭೈರವನ ಜವನ ಮಾರಿಯ ಮೂರಿಯವೊಳ್ ನಿಂದ ಮಾರಿದತ್ತಂ ಲಲಿತಾಕಾರರ ಧೀರರ ಬಂದ ಕುಮಾರರ ರೂಪಿಂಗೆ ತಕ್ಕುಗೊಂಡಂತಿರ್ದಂ: **ಯಶೋಧಚ,** ೧. ೫೮)

**ಮಾರೀಚ** – ಒಬ್ಬ ರಾಕ್ಷಸ (ಮಾರೀಚಂ ಮೊದಲಾಗೆ ಮಹಾರಥರೊಡನೇಱೆ ಸಿಂಹರಥಮಂ ರಥಿಗಳ್ ನೀರದಗರ್ಜನಮಂ .. .. ಪೊಱಮಟ್ಟರ್: **ಪಂಪರಾ,** ೧೩. ೧೩)

**ಮಾರುಡು** – ಉಪ್ಪಿನಕಾಯಿಗೆ ಬಳಸುವ ಒಂದು ಕಾಯಿ (ಕುಡಿಬಿದಿರ ಕುಡಿಯ ಮಾವಿನ ಮಿಡಿಯ ಮಾರುಡಿನ

ಮೆಣಸುಗಡಲೆಯ ಪುಡಿಯೊಳಡಸಿದ ಅಲ್ಲದ ಅಲ್ಲಣಿಗೆಯ ಚಕ್ಕಣಂಗಳಂ ಸವಿಸವಿದು: **ಪಂಪಭಾ,** ೪. ೮೭ ವ)

**ಮಾರುತ** – ಗಾಳಿ (ಪವನಂ ಮಾರುತನಾಮಂ: **ಅಭಿಧಾವ,** ೩. ೧. ೩೫); ವಾಯು ದೇವತೆ (ತಾತ ಮಾರುತ ಕೇಳ್ ಮಾರುತಮಾರ್ಗ ಕೇಳ್ ಪಗೆವರಂ ಕೊಂದೆನ್ನ ಕೋಪಾಗ್ನಿಗಾಹುತಿ ಮಾಟ್ಪೆಂ: **ಗದಾಯು,** ೬. ೨೩)

**ಮಾರುತಪಥ** – ಆಕಾಶ (ಆಗಳೆ ಬರಿಸೆ ವಿದ್ಯೆಯಿಂ ನಾರದನಂ ಮಾರುತಪಥದಿಂದಾಗಳ್ ಭೋರೆನೆ ಬರೆ ಕಂಡು: **ಕರ್ಣನೇಮಿ,** ೭. ೧೮೭)

**ಮಾರುತಬಂಧು** – ಗಾಳಿಯ ಗೆಳೆಯ, ಬೆಂಕಿ, ಅಗ್ನಿ (ಮೇಷಮಂ ಮಾರುತಬಂಧು ಸೈರಿಭಮಂ ಅಂಬುಜಮಿತ್ರಂ .. .. ವೃಷಭನಂ ಹರನೇಜೆ ನಭಕ್ಕೆ ಸಲ್ವುದುಂ: **ಜಗನ್ನಾವಿ,** ೧. ೩೬)

**ಮಾರುತಬಾಣ** – ವಾಯವ್ಯಾಸ್ತ್ರ (ಕವಿದುವು ಸಪ್ತಸಾಗರಜಲಂಗಳೆ ಲೋಕಮಂ ಎಂಬಿನಂ ಕವಿದು ಮುಗಿಲ್ಗಳಲ್ಲಿ ಕಱೆಯುತ್ತಿರೆ ಪಾವಕಂ ಉರ್ಕುಗೆಟ್ಟು ಇದೆಂತುವೊ ತೊದಳಾಯ್ತು ದಾನಂ ಎನೆ ಮಾರುತಬಾಣದೆ ಮೇಘಮಾಲಿಕಾನಿವಹಮಂ ಎಚ್ಚು ಕೂಡೆ ಶರಪಂಜರಮಂ ಪಡೆದಂ ಗುಣಾರ್ಣವಂ: **ಪಂಪಭಾ,** ೫. ೯೬)

**ಮಾರುತಭುಕ್** – ಗಾಳಿಯನ್ನೇ ಆಹಾರವಾಗಿ ಸೇವಿಸುವುದು, ಹಾವು (ನಿಜಶ್ರುತಿಶೂನ್ಯನಾಗಿ ಮಾರುತಭುಗುಮಲ್ಲು ದಂಡಧರನಾಗಿ ದಿಟಂ ಜವನಲ್ತು: **ಪುಷ್ಪದಂಪು,** ೧೩. ೩೫)

**ಮಾರುತಮಾರ್ಗ** – ಮಾರುತಪಥ (ಚತುರಂತಕ್ಷಿತಿಕಾಂತೆ ಕೇಳ್ ಜಲಧಿ ಕೇಳ್ ಸಪ್ತಾರ್ಚಿ ಕೇಳ್ ತಾತ ಮಾರುತ ಕೇಳ್ ಮಾರುತಮಾರ್ಗ ಕೇಳ್: **ಗದಾಯು,** ೬. ೨೪)

**ಮಾರುತವೀಥಿ** – ಮಾರುತಮಾರ್ಗ (ಎಸೆವ ಕೇತುಗಳಿಂ ಮಾರುತವೀಥಿಯಂತೆ ನೃಪವೀಥಿ ತೋಱೆ ನರಲೋಕಚಂದ್ರನೆಯ್ದಿದಂ: **ಪುಷ್ಪದಂಪು,** ೮. ೨೭)

**ಮಾರುತಿ** – ಭೀಮ (ಮಾರುತಿ ನಿಜವೇಣೀಸಂಹಾರಂ ಮಾಡಿದೊಡೆ ಮಾಟ್ಪುದೆನಗಂ ನಿನಗಂ ಪೂರಣೆಗೆ ಜಠರಪಿಠರಪೂರಣೆಗೇಂ ಮಾಡದೆಂತು ಕರೆವೆಂ ನಿನ್ನಂ: **ಗದಾಯು,** ೨. ೧೧) ಹನುಮಂತ (ಮಾರುತಿ ಬುದ್ಧಿಪೇೞ್ದೊಡಮದಂ ಬಗೆಗೊಳ್ಳನೆ: **ಪಂಪರಾ,** ೧೧. ೧೭೬)

**ಮಾರ್ಕಂಡಿ** – ಕಾಡುಮೃಗಗಳ ಜಾಡು (ಮೃಗಮಂ ಗಾಳಿಯನಿರ್ಕೆಯಂ ಪಕ್ಕೆಯಂ ಗಣಿದಮಂ ಕಂಡಿಯಂ ಮಾರ್ಕಂಡಿಯಂ .. .. ನೀಂ ಬಲ್ಲೆ: **ಪಂಪಭಾ,** ೫. ೪೩)

**ಮಾರ್ಕಾಡು** – ಕಾಡುಮೃಗಗಳ ಆಶ್ರಯದ ಕಾಡು (ಆಡಲಾಡಿಸಲ್ ಪಾಟೆಯಂ ನಿಱಿಸಲುಂ ಪರಿಗೊಳಲ್ ತೊವಲಿಕ್ಕಲೊಳಗಂ ಬರಲ್ ಕಾಡ ಬೇಲಿಯಂ ಮಾರ್ಕಾಡನಱಿಯಲುಂ.. ..ಮಾಡಲ್ ಮಾಡಿಸಲ್ .. .. ನೀನೆ ಬಲ್ಲೆ: **ಪಂಪಭಾ,** ೫. ೪೧)

**ಮಾರ್ಕೊಳ್** – ಎದುರಿಸು (ಜಳಧಿದ್ವೀಪಾಂತರಾಳಂಗಳಮಿರದೆ ಪುಗಿಂ ಪೋಗಿಮುಗ್ರಾರಿಗಳ್ ಮಾರ್ಕೊಳಲಾಱಿರ್ ಚಕ್ರನಾಥಪ್ರಬಳಬಳಮಂ: **ಆದಿಪು,** ೧೩. ೪೪); ಆಕ್ಷೇಪಿಸು (ಎನ್ನ ಕೊಟ್ಟುದರ್ಕೆ ಮಾರ್ಕೊಳ್ಳದೆ ಕೊಳ್ಳಮೆಂದೊಡಮತೆ ಗೆಯ್ವೆಮೆಂದು ನಿಶ್ಚಯಿಸೆ: **ಪಂಪಭಾ,** ೬. ೩ ವ); ಪ್ರತಿ ನುಡಿ (ಬಟೆಕ್ಕೆ ವೇದಶಾಸ್ತ್ರ ಕಾವ್ಯನಾಟಕ ಪುರಾಣಂಗಳಂ ಓದಿಸುವಮೆಂದೊಡಾ ಮಹಾಸತಿ ನಿಜಪತಿಯಂ ಮಾರ್ಕೊಂಡಿಂತೆಂದಳ್ : **ಪಂಚತಂತ್ರ,** ೨೫೩ ವ)

**ಮಾರ್ಗ** – ದಾರಿ (ಅಯನಂ ಮಾರ್ಗಂ ಸೃತಿ ಸರಣಿ ಅಧ್ವಂ: **ಅಭಿಧಾವ,** ೧. ೧೦. ೨); ಭಾಷೆಯನ್ನು ಬಳಸುವ ವಿವಿಧ ಶೈಲಿ (ಸವಿವೊಡೆ ಮಧುರರಸಂಬೋಲ್ ಕಿವಿಗಿನಿದಾಗಿರ್ಪ ವಚನವಿರಚನೆ ಮಧುರಂ ಸವಿಳಾಸಾಳಾಪದಿಂ ಅವರ ವಿಶೇಷ ವಿಶ್ಲೇಯಂ ಇಂತು ಮಾರ್ಗದ್ವಯದೊಳ್: **ಕವಿರಾಮಾ.,** ೨. ೬೦); ಸಂಪ್ರದಾಯಬದ್ಧ ಕಾವ್ಯ ಆದಿಪುರಾಣ ವಸ್ತುಕೃತಿಯಂ ಪೇೞ್ದಂ ಬೆಡಂಗಪ್ಪ ಮಾರ್ಗದೊಳಂ ದೇಸೆಯೊಳಂ ಪೊದಳ್ದೆಸೆವಿನೆಗಂ: **ಆದಿಪು,** ೧೬. ೭೮): ಅಭಿಜಾತ ಕಾವ್ಯ (ಬಗೆ ಪೊಸತಪ್ಪುದಾಗಿ ಮೃದುಬಂಧದೊಳೊಂದುವುದು ಒಂದಿ ದೇಸಿಯೊಳ್ ಪುಗುವುದು: **ಪಂಪಭಾ,** ೧. ೮)

**ಮಾರ್ಗಣ** – ಬಾಣ (ವಿಶಿಖ ಪ್ರದರಾಶುಗ ಪತ್ರಿ ಶಿಳೀಮುಖ ಕಂಕಪತ್ರ ಮಾರ್ಗಣ ಖಗ ಬಾಣ: **ಅಭಿಧಾವ,** ೧. ೧೪. ೧೮), ಅಸ್ತ್ರ (ಗಣಬದ್ಧಾಮರಹೂಂಕೃತಂ ಜಯಕುಮಾರ ಉನ್ಮುಚ್ಯಮಾನೋಗ್ರಮಾರ್ಗಣಮಾ ವೀರನಿನಾದ ಸಿಂಹನಿನದಂ: **ಆದಿಪು,** ೧೩. ೬೭); [ಜೈನ] ಜೀವಿಗಳು ಹಾದುಹೋಗಬೇಕಾದ ಮಾರ್ಗ (ಮಕರಕೇತನ ಸುಮನೋಮಾರ್ಗಣಮೆನೆ ಸೋಲಿಸೆ ಸಭೆ ಮಾರ್ಗಣಮೆನೆ ಪೊಗೞ್ವುದೊಂದೆ ಕೊರಲಿಂದಾಗಳ್: **ಮಲ್ಲಿನಾಪು,** ೮. ೨೦); ಯಾಚನೆ (ಯಾಚಕವರ್ಗಕ್ಕಂ ನಾರಾಚಕ್ಕಮ ಮಾರ್ಗಣಾಂಕಂ: ಅಭಿಧಾವ, ೩. ೧. ೫೯)

**ಮಾರ್ಗಣಾನುರಕ್ತ** – ಧನುರ್ವಿದ್ಯಾಸಕ್ತ ಹಾಗೂ ಜೀವಿಗಳು ಹಾದುಹೋಗಬೇಕಾದ ಹಾದಿಯಲ್ಲಿ ಅನುರಕ್ತನದವನು (ಮಾರ್ಗಣಾನುರಕ್ತನಾಗಿಯುಂ ಮಾರ್ಗಣಾನುರಕ್ತನಲ್ತು: **ಪುಷ್ಪದಂಪು,** ೯. ೩೯ ವ)

**ಮಾರ್ಗಪ್ರಭಾವನೆ** – [ಜೈನ] ಜಿನಧರ್ಮವನ್ನು ಹೊಳಪುಗೊಳಿಸುವುದು (ಸನ್ಮಾರ್ಗಪ್ರಕಾಶನದಿಂ ಮಾರ್ಗಪ್ರಭವನೆಯಂ ಮಾಡಿ ಸಭಾಸದರಿಂ ಲಬ್ಧಪ್ರಶಂಸನಾಗಿ: **ಆದಿಪು,** ೨. ೨೨ ವ)

**ಮಾರ್ಗವಿದ** – ಸಂಪ್ರದಾಯವನ್ನು ತಿಳಿದವನು (ವರ್ಗದ್ವಿತೀಯ ವರ್ಣಂ ವರ್ಗಚತುರ್ಥಾಕ್ಷರಂ ಮಹಾಪ್ರಾಣಮಂ ಮಾರ್ಗವಿದ್ ಸಂಖ್ಯೆಯೊಳಂ ಭೋರ್ಗರೆವ ಅನುಕೃತಿಯೊಳಂ ಪ್ರಯೋಗಿಸುತಿರ್ಪರ್: **ಶಬ್ದಮದ,** ೨೪)

**ಮಾರ್ಗಶಿರ** – ಮಾರ್ಗಶೀರ್ಷ, ಚಾಂದ್ರಮಾನದ ಒಂಬತ್ತನೆಯ ತಿಂಗಳು (ತನ್ಮಹಾದೇವಿಯ ಪರಿಪೂರ್ಣಪ್ರಸವಸಮಯಂ ಮಾರ್ಗಶಿರ ಬಹುಳ ದಶಮಿಯಾಗೆ: **ಪುಷ್ಪದಂಪು,** ೧೦. ೧ ವ)

**ಮಾರ್ಗಶ್ರಮ** – ಪ್ರಯಾಣದ ದಣಿವು (ರಾಜಪುತ್ರರ ಮಾರ್ಗಶ್ರಮಾತಪಾಕ್ರಾಂತಮಪ್ಪ ಮನಮೆಂಬ ಲತೆಯರಂ ಅನೇಕ ಕುಶಲಾಲಾಪ ಪ್ರಶ್ನೆಯಿಂದಂ .. .. ಫಲಿತಮುಂ ಮಾಡಿ: **ಆದಿಪು,** ೧೩. ೩೨ ವ)

**ಮಾರ್ಗಾವಲಗ್ನನೇತ್ರೆ** – ದಾರಿಯಲ್ಲಿ ನೆಟ್ಟ ಕಣ್ಣುಳ್ಳವಳು (ವಿಷಣ್ಣಾನನೆಯಂ ಮಾರ್ಗಾವಲಗ್ನನೇತ್ರೆಯಂ ಉಚ್ಛ್ವಾಸನಿತಪ್ತ ಅಧರರುಚಿಯಂ ಮನುಜೇಂದ್ರಾಂಗನೆಯಂ ಎಯ್ದೆ ಕಂಡು: **ಯಶೋಧಚ,** ೨. ೩೫)

**ಮಾರ್ಜಾರ** – ಬೆಕ್ಕು (ವನಮೂಷಕ ಮಾರ್ಜಾರಂ ವನಾಶ್ವ ಮಹಿಷಂ ಸೂಕರಮನಿತುಂ ಮುನಿಸಂ ಪರಿಹರಿಸಿರ್ದುವು

ಮುನಿನಾಥಾಂತಿಕದೊಳುದಿತ ಶಾಂತರಸಂಗಳ್; **ಅಜಿತಪು,** ೭. ೭)

**ಮಾರ್ತಂಡ –** ಸೂರ್ಯ (ಪ್ರಚಂಡ ಮಾರ್ತಂಡ ಮರೀಚಿ ತೀವ್ರ ಜ್ವಳನ ಆಸ್ಫಾರ ಕರಾಳ ಕರವಾಳ ಭಾಮಂಡಳ ಪರೀತ ಉದ್ಯತ ದೋರ್ದಂಡ ಚಂಡಪ್ರಚಂಡ ಸುಭಟ: **ಪಂಪಭಾ,** ೧೩. ೫೧)

**ಮಾರ್ತಲೆ –** ಎದುರಾಳಿ, ಪ್ರತಿಪಕ್ಷ (ಕರ್ತಾರಂಗೆ ಎಱಗುವುದು ಅತಿವರ್ತಿತ್ವಂ ಪೊಲ್ಲದೆಂದು ಪುರುಸೂನುಗೆ ಮುಂ ಮಾರ್ತಲೆಯಾದ ಚಿಳಾತಾವರ್ತನರಂ ಅಂದು ಊಜಿ ಕಲ್ಪಿಪಂತಾಯ್ತು ನಗಂ: **ಶಾಂತಿಪು,** ೧೧. ೫೨)

**ಮಾರ್ತಾಂಡ –** ಸೂರ್ಯ (ಈಶಾನನಂತೆ ವಿಭೂತಿಭೂಷಣನುಂ ಮತ್ತ ಮಾರ್ತಾಂಡದಂತೆ ಸಮಸ್ತ ಭೂಭೃತ್ ಮಸ್ತಕನ್ಯಸ್ತಪಾದನುಂ: **ಉದ್ಭಟಕಾ,** ೧. ೮೩ ವ)

**ಮಾರ್ದಂಗಿಕ –** ಮೃದಂಗವಾದಕ (ವೈಣಿಕ ಪಾಣವಿಕ ವಾಂಶಿಕ ಮಾರ್ದಂಗಿಕ ಗಾಯಕ ನರ್ತನಾದಿ ಕುತಪಪ್ರತಿಯುಮಂ .. .. ಕುಳ್ಳಿರಿಸಿ: **ಚಂದ್ರಪ್ರಪು,** ೮. ೮೬ ವ)

**ಮಾರ್ದನಿ –** ಪ್ರತಿಧ್ವನಿ (ಮಾರ್ದನಿಯಿಡುವ ಪಡಿಯಱ ಕಳಕಳಂಗಳೊಳ್: **ಕಾದಂಬ,** ೧. ೫೮ ವ)

**ಮಾರ್ದನಿವಿಡು –** ಪ್ರತಿಧ್ವನಿಸು ದಿಗ್ನಿವಹ ಶ್ವಭ್ರಂಗಳೊಳ್ ಮಾರ್ದನಿವಿಡೆ ನಡೆಗೊಂಡತ್ತು ಗೀರ್ವಾಣಸೈನ್ಯಂ: **ಶಾಂತೀಶ್ವಪು,** ೧೪. ೬೮)

**ಮಾರ್ದವ –** ಮೃದುಸ್ವಭಾವ (ಮರ್ದವದೆ ಸಖಿಯ ರೊಡನೆ ಜನಾರ್ದನನಾಡುತ್ತುಮಿರ್ದ ಪದದೊಳ್: **ಜಗನ್ನಾವಿ,** ೫. ೩೪); [ಜೈನ] ಸನ್ಯಾಸಿ ಅನುಸರಿಸಬೇಕಾದ ಕ್ರಮಗಳಲ್ಲಿ ಒಂದು (ಕ್ಷಮೆ ಮೆಯ್ ಮಾರ್ದವಂ ಓಜೆ ಸಾಜಂ ಅಳವಟ್ಟಿರ್ದಾಜವಂ ಸೈಪು ಶೌಚಂ ಉದಾತ್ತಸ್ಥಿತಿ ಸತ್ಯಮೊಂದಿದಜಿತಂ: **ಸುಕುಮಾಚ,** ೧. ೨೬), ನೋಡಿ 'ದಶಕುಲಧರ್ಮ'

**ಮಾರ್ದಳಿಕ –** ಮದ್ದಳಿಗ (ಯೌವನಮದಮುದಿತ ಮಾರ್ದಳಿಕ ವಾಂಶಿಕ ಪ್ರಹನ್ಯಮಾನ ವಾದ್ಯಮಾನ ಮೃದಂಗವಂಶನಿನದ ಲಯಚ್ಛಂದ ಸುಂದರನಟತ್ಸುಂದರೀಸಂದೋಹಮಂ: **ಆದಿಪು,** ೭. ೩೭ ವ)

**ಮಾರ್ನುಡಿ –** ಉತ್ತರ ನೀಡು (ಇದರ್ಕೆ ನೀನೇನುಮಂ ನುಡಿಯದಿರೆಂದು ಲಕ್ಷ್ಮಣನಂ ಮಾರ್ನುಡಿಯದಂತು ಮಾಡಿ: **ಪಂಪರಾ,** ೧೬. ೭ ವ)

**ಮಾರ್ಪಡಿ –** ಸರಿಸಮಾನ (ಮಾರ್ಪಡಿ ಮೂಲೋಕದೊಳಿಲ್ಲ ಮೋಹಿಸುತುಮಿರ್ಪ ಈ ತನ್ನ ಚೆಲ್ವಿಂಗೆ ತಾಂ ಪಡಿ ಎಂಬವೊಳ್: **ಶಾಂತೀಶ್ವಪು,** ೪. ೬)

**ಮಾರ್ಪಡೆ –** ಶತ್ರುಸೈನ್ಯ (ವಿಳಯದ ಮುಂಗಡೆ ಸಿಡಿಲೇಳ್ಗೆಯೋ ಮರ್ಪಡೆಯೋ ಎಂದೆನೆ ಕಱುತ್ತು ತಾಗಿತ್ತಾಗಳ್: **ರಾಜಶೇವಿ,** ೬. ೮೨)

**ಮಾರ್ಪೊಳೆ –** ಪ್ರತಿಬಿಂಬಿಸು (ಜಳನಿಧಿಯಲ್ಲಿ ಮಾರ್ಪೊಳೆವ ತಾರೆಗಳಿಂ ಸಮೆದಂತೆ .. .. ಮೌಕ್ತಿಕಹಾರಮಂಡಳಂ: **ಕಾದಂಸಂ,** ೫. ೪೪)

**ಮಾರ್ಮನುಷ್ಯ –** ಬೇರೆಯೇ ವ್ಯಕ್ತಿ (ತನ್ನ ಮನೆಯೊಳ್ ಮಾರ್ಮನುಷ್ಯರಿಲ್ಲದ ಕಾರಣದಿಂ ತಾಂ ನಡಪಿದೊಂದು ನಕುಲನಂ ತೊಟಿಲ ಸಮೀಪದೊಳ್ .. ..ಕಟ್ಟಿ ಪೋದಂ: **ಪಂಚತಂತ್ರ,** ೨೫೭ ವ)

**ಮಾರ್ಮಲೆ –** ಉದ್ಧಟತನಾಗಿ ವರ್ತಿಸು (ಮಾರ್ಮಲೆದುರ್ಕಿ ಭಮನೊಳ್ ಸಮರದೆ ಗರ್ವದಿಂ ಪೊಣರಲ್ಬರೆ ಗಾವಿಲರ್: **ಪಂಪಭಾ,** ೮. ೭); ಪ್ರತಿಭಟಿಸು (ಸಾಮಂತಚೂಡಾಮಣಿಯ ಬೀರಮುಮಂ ಅತಿವರ್ತಿಯಾಗಿ ಮರ್ಮಲೆವ ಚಕ್ರವರ್ತಿಯಂ ಕಿಡಿಸಿ: **ಪಂಪಭಾ,** ೮. ೫೨ ವ)

**ಮಾಲಕ್ಕ –** ಒಂದು ಕ್ಷುದ್ರ ದೇವತೆಯ ಹೆಸರು (ಎಕ್ಕಲದೇವಿಗಂ ಆ ಮಾಲಕ್ಕನಿಗಂ ಬನದ ಬಳಿರಿಗಂ ಮೈಲಾರಂಗೆ ಅಳ್ಕದೆ ಜಾತ್ರೆಯ ಮಾಟ್ಪಂ .. .. ಆತಂ ಕೌಳಂ: **ಸಮಯಪ,** ೪. ೧೨೩)

**ಮಾಲಾಕಾರ –** ಮಾಲೆಗಾರ (ಸುಮನಃಸ್ಥಿತಿವಾಸನೆ ಬಡೆದಿರೆ ಸನ್ನುತ ಮಾಲೆಯನೆತ್ತುವಂತೆ ಮಾಲಾಕಾರಂ: **ಧರ್ಮಮಧು,** ೧. ೪೫)

**ಮಾಲಾಮಂತ್ರ –** ದುರ್ಮಂತ್ರ (ಅರಸುಗೆಯ್ವಾತಂ ಮಂತ್ರಮಂ ಮಾಲಾಮಂತ್ರಮಾಗದಂತು ನೆಗಟಿಲೆವೇಟ್ಕುಂ: **ಪಂಚತಂತ್ರ,** ೨೯೨ ವ)

**ಮಾಲಾವಲಿ –** ಸಾಲುಗಳು [ಚಮರೀ ಲೋಲ ಲಾಂಗೂಲ ಮಾಲಾವಲಿ ವಿಕ್ಷೇಪಂಗಳಿಂ ತತ್ ಚಮರರುಹ ಮಹಾಶೋಭೆ ಕೈಗಣ್ಮೆ: **ಪಂಪಭಾ,** ೪. ೧೪)

**ಮಾಲಿನ್ಯ –** ಕೊಳೆ (ಮಾಲಿನ್ಯಂ ವಿಮಲದೊಳಾಗದೆಂಬಂತಾ ಲೀಲಾವಿಮಲಸರೋವರಂ .. .. ತಳೆದುದು ಕಜ್ಜಳಾಳಿಯಂ: **ಲೀಲಾವತಿ.,** ೧೪. ೫)

**ಮಾಲಿಸು –** ಕಡೆಗಣ್ಣಿನಿಂದ ನೋಡು, ದೀರ್ಘಕಾಲ ನೋಡು (ಮಾಲಿಸು–ಕಟಾಕ್ಷ ದೀರ್ಘಾಲೋಕೇ ಚ: **ಶಬ್ದಮದ,** ಧಾ ೮೦೦)

**ಮಾಲೂರ –** ಬಿಲ್ವಪತ್ರೆ (ಬಿಲ್ವಂ ಮಾಲೂರಂ: ಅಭಿಧಾವ, ೧. ೮. ೧೧)

**ಮಾಲೆಗಾರ್ತಿ –** ಹೂವಾಡಗಿತ್ತಿ (ಚಲ್ಲವಾಡಿ ಪೂವೆತ್ತುವ ಮಾಲೆಗಾರ್ತಿಯರಂ ಅಂದು ಅರಿಕೇಸರಿ ನಿಂದು ನೋಡಿದಂ: **ಪಂಪಭಾ,** ೪. ೮೧)

**ಮಾಲೆಗಾಱ –** ಹೂವಾಡಿಗ (ಪರದರ ಪಾರ್ವರ ಗೋಟಾಯ್ಲರ ಜೋದರ ಮಾಲೆಗಾಱ ಮಣಿಗಾಱರ .. .. ಆಲಯಂಗಳ್ ಮೆಱೆಗುಂ: **ಜಗನ್ನಾವಿ,** ೨. ೨೨)

**ಮಾಲೆಗಾಱಗೇರಿ –** ಹೂವಾಡಿಗರ ಬೀದಿ (ದೇವಕೀನಂದನಂ ಮಾಲೆಗಾಱಗೇರಿಯೊಳ್ ವಿಹಾರಿಸುತ್ತುಂ ಬರ್ಪಲ್ಲಿ: **ಜಗನ್ನಾವಿ,** ೬. ೧೧ ವ)

**ಮಾಲೆಗುಂಡಿಗೆ –** ಜೋಡಿಸಿದ ಗಡಿಗೆಗಳು (ಮಾಲೆಗುಂಡಿಗೆಗಳಿಂ ಸಮೆದಾಡುವ ಱಾಟಳಂಗಳಂ .. ನೋಡುತ್ತುಂ ಪೋಗೆವೋಗೆ: **ಕಾದಂಬ,** ೭. ೨೧ ಮತ್ತು ೨೧ ವ)

**ಮಾಲ್ಯ –** ಹಾರ (ಅಪರಿಮಿತ ಧನಕನಕ ವಸನ ಮಾಲ್ಯ ಮಣೀಭೂಷಣಂಳಿಂ ಮಾಹೇಶ್ವರಾರಾಧನಂಗೆಯ್ದು: **ರಾಜಶೇವಿ,** ೪. ೫೮ ವ); [ಜೈನ] ಕಲ್ಪವೃಕ್ಷಗಳಲ್ಲಿ ಒಂದು, ನೋಡಿ, 'ದಶಕಲ್ಪಕುಜ'

**ಮಾವಂತ –** ಮಾವುತ (ಭೇರೀನಿನಾದಮಂ ಕೇಳ್ದು ಮಾವಂತರ್ ಪರಿದು ಗಂಧಸಿಂಧುರಂಗಳ್ಪಣ್ಣಿ ಕೈಗೆಯ್ಯಲ್: **ತ್ರಿಷಷ್ಟಿಪು,** ೨೪. ೨೪೮ ವ)

**ಮಾವಿನ ಕೋಡು –** ಮಾವಿನೆಲೆಗಳ ಕೊನೆ (ಅಭಿಷೇಕಂ ಮಾಡುವರೊಲ್ದುಂ ಮಾವಿನ ಕೋಡಿಂ ಪಂದೊವಲ ನೀರಿಂ ಜೇನೆಯ್ಯಿಂ: **ಸಮಯಪ,** ೧೪. ೨೮)

**ಮಾವುರಿಗ** – ಬೇಟೆಗಾರ (ಸಾಱೆ ಕೊಲ್ವ ಮಾವುರಿಗಂಗೆ ದೋಷಮಿಲ್ಲೆಂಬಂತೆ .. .. ಇಸುವ ವಿಷಮಶರನ ಶರಪ್ರಹಾರದಿಂ: **ಲೀಲಾವತಿ,** ೯. ೧೩೬ ವ)

**ಮಾಷ** – ಉದ್ದು (ಕುಲತ್ಥಂ ಉದ್ಗ ಮಾಷ ರಾಜಮಾಷ ಆಢಕೀ ನಿಷ್ಪಾವಚಣಕ .. .. ವಿವಿಧ ಧಾನ್ಯಭೇದಂಗಳುಂ: **ಆದಿಪು,** ೬. ೭೨ ವ)

**ಮಾಷಮುಖ** – ನೊಣ (ಸಭೆಯೊಳ್ ಮಾಷಮುಖದಂತೆ ದೋಷಗವೇಷಣಪರರಪ್ಪರೆಂದೊಡದು ತೆಗಟಲ್ತೇ: **ಆದಿಪು,** ೧. ೨೧)

**ಮಾಷೀಣ** – ಉದ್ದು ಬಿತ್ತಿರುವ ಹೊಲ (ಆ ನಾಡೂರ್ದಪ್ಪದೇಸೆವುವೋ ಕೌದ್ರವೀಣದ ಔಮೀನದ ತೈಳಿನದ ಮಾಷೀಣದ ಮೌದ್ಗೀನದ ಬಹುಸಾರಸಸ್ಯ ಸಕಳಫಲಂಗಳ್: **ಪುಷ್ಪದಂಪು,** ೨. ೧೨)

**ಮಾಸತಿ** – ಮಹಾಸತಿ (ಪುಣ್ಯಂ ಆನೊಂದೆ ಒಡವರ್ಕುಂ ಎಂದು ಅದನೆಂದುಂ ಪೆರ್ಚಿಸುವ ವನಿತೆ ಮಾಸತಿಯಕ್ಕುಂ: **ಸಮಯಪ,** ೫. ೧೩೦)

**ಮಾಸರ** – [ಮಹಾಸ್ವರ] ಅಂದ (ಮಾಸರಮೊಕ್ಕ ಕತ್ತುರಿಯ ಪಂಕಮನಲ್ಲದೆ ಪಂಕಮಂ ಕರಂ ಬೀಸುವ ಚಾರುಚಾಮರದ ಗಾಳಿಯಲ್ಲದೆ ಗಾಳಿಯಂ: **ಸುಕುಮಾಚ,** ೧೦. ೧೦೭); ಮಹಾಸ್ವರ (ದೇವರೊಳಾದತಿಭಕ್ತಿ ಹರ್ಷಮಂ ಮಾಸರಮನುಂಟುಮಾಡೆ; **ಪಂಪರಾ,** ೧೦. ೧೭೮)

**ಮಾಸರಂ** – ಅಂದವಾಗಿ (ಸಾಸಿರ ಪೊಂಗೆಯ್ದುಂ ಚೀಃ ಕಾಸಟಮೆಂದು ಒಂದು ಲಕ್ಕಗೆಯ್ವುದಿರ್ದರ್ಕಂ ಮಾಸರಂ ಉಡಲೆಂದು ಅಧಿಕ ವಿಳಾಸದಿಂದ ಉಡಲಿಕ್ಕಿ ನೆಱೆಯೆ ಬಿಯಮಂ ಮೆಱೆದಂ: **ಪಂಪಭಾ,** ೩. ೪೪);

**ಮಾಸರಿಕ್ಕೆ** – ಚೆಲುವು (ಬರಗಲೆಯುಂ ಕೊಪ್ಪುಂ ನೂಪುರಮುಂ ಲಂಬಳಮುಂ ಅಲ್ಲಿ ಮಲ್ಲಿಗೆಯ ಮುಗುಳ್ ಬಿರಿಮುಗುಳೆಂಬಿವು ತನಗಾಗಿರೆ ದೇಸೆಯ ಮಾಸರಿಕ್ಕೆಯಂ ಪೊಸಯಿಸಿದಳ್: **ಶಾಂತಿಪು,** ೮. ೨೨)

**ಮಾಸಲು** – ಕೊಳಕು (ಮಸೆವುದು ಮಾಸಲಿರ್ದ ಪಟಿವೇಟಮಂ ಇಚ್ಚೆಯ ಬಿಚ್ಚತಿಕ್ಕೆಯಂ ಪೊಸೆಯಿಪುದು ಒಳ್ಳಮಂ ನಡೆಪುತಿರ್ಪುದು ಧಾತುವಂ ಒಳ್ಪಿತೆಯ್ದೆ ಪಾಟಿಸುವುದು ಕೂಟದೊಳ್ ಕುಶಲನಪ್ಪುದು: **ಶಾಂತಿಪು,** ೮. ೯೧)

**ಮಾಸವಳ** – ಈಟಿ (ಮಾಸವಳದಂಕಂ ಬಾಸೆಯಂ ಸಾಜೆ ಬಿತ್ತರದಿಂದಿರ್ದುದು ಮೊತ್ತದಿಂದೆ ಭೃಗುವಿದ್ಯಾಮೂರ್ತಿ ಮಾರ್ತಟ್ಟಿವೊಲ್: **ಅನಂತಪು,** ೨. ೨೯)

**ಮಾಸಾದಿ** – [ಮಹಾಸಾದಿನ್] ರಾವುತ (ತಂತ್ರಪಾಳವೆಸರೊಳ್ ಮಾಸಾದಿಯಾಗಿರ್ದಂ: **ಪಂಪರಾ,** ೮. ೨೪ ವ)

**ಮಾಸಾಳ್** – ಪರಾಕ್ರಮಿ (ಒರ್ವ ಮಾಸಾಳ್ ಪಗಲ್ಕೈದೀವಿಗೆಯೊಳ್ ಅಱಸಿ ನೆಲನಂ ನೂಳ್ದು ತೂಜೆ ಕೇಜೆ: **ತ್ರಿಷಷ್ಟಿಪು,** ೨೩. ೧೦ ವ)

**ಮಾಸಿರಿವಂತ** – ದೊಡ್ಡ ಶ್ರೀಮಂತ (ಎಮ್ಮ ತಂದೆ ಮಾಸಿರಿವಂತನಾಗಿಯುಂ ಪೊನ್ನೆಂಬ ಪೆಸರ ಚಿನ್ನಮನಿರಿಸದೆ ದಾನಧರ್ಮಂಗೆಯ್ದು: **ಪಂಚತಂತ್ರ,** ೨೬೬ ವ)

**ಮಾಸಿಸು** – ಕಾಂತಿ ಕುಂದುವಂತೆ ಮಾಡು (ದೋಸಮೇನಾನುಂ ಸ್ವಲ್ಪಮಾದೊಡಂ ಮಾಸಿಸಿರ್ಕುಮಣಂ ಕೃತಿವಧುವಂ: **ಕವಿರಾಮಾ,** ೧. ೧೧೨); ಹೀಯಾಳಿಸು (ಚಿತ್ರದ ಪೆಣ್ಣ ರೂಪುಮಂ ಮಾಸಿಸೆ ನಾಡೆ ಮಾಸರಿಕೆಯಂ ಪಡೆದಪ್ಪುದು: **ಪಂಪಭಾ,** ೮. ೬೨); ಕೆಡಿಸು (ಕುಲಮಂ ಮಾಸಿಸಿ ಮೀಹಮಂ ತೊಱೆದು ಕಂಡರ್ ಪೇಸೆ ಮೆಯ್ಯೊಳ್ ಮಹಾಮಲಮಂ ತಾಳ್ದಿದ ಕಷ್ಟರಂ ಸವಣರಂ: **ಧರ್ಮಾಮೃ,** ೧. ೯೧)

**ಮಾಸು** – ಕೊಳೆಯಾಗು (ಸುಯೋಧನಂ ಎನಗೆ ಒಳ್ಳಿಕೆಯ್ದ ಕೃತಮಂ ಪೆಱಗಿಕ್ಕಿ ನೆಗಟ್ತೆ ಮಾಸೆ ನಣ್ಪಿನ ನೆವದಿಂದೆ ಪಾಂಡವರಂ ಆಂ ಒಳವೊಕ್ಕಡೆ ನೀಮೆ ಪೇಸಿರೇ: **ಪಂಪಭಾ,** ೯. ೬೮)

**ಮಾಸೋಪವಾಸ** – ಒಂದು ತಿಂಗಳ ಕಾಲ ಮಾಡುವ ಉಪವಾಸ ವ್ರತ (ಭುವನನುತಮಾಗೆ ಪಕ್ಷೋಪವಾಸ ಮಾಸೋಪವಾಸಮಂ ನಿಯಮದೆ ಮಾಡುವ ಜಿನಮುನಿ: **ಸಮಯಪ,** ೭. ೭)

**ಮಾಹತ್ತರ** – ಮುಖಂಡ (ಎಂದು ಬಂದ ಮಾಹತ್ತರಂಗೆ ಉತ್ತರಂಗೊಟ್ಟು ದಾನಸನ್ಮಾನಂಗಳಿಂ ಸಂತೋಷಂಬಡಿಸಿ: **ವರ್ಧಮಾಪು,** ೩. ೬೮ ವ)

**ಮಾಹೇಂದ್ರಕಲ್ಪ** – [ಜೈನ] ಹದಿನಾರು ಕಲ್ಪಗಳಲ್ಲಿ ನಾಲ್ಕನೆಯದು (ಸೌಧರ್ಮ ಈಶಾನ ಸನತ್ಕುಮಾರ ಮಾಹೇಂದ್ರ ಬ್ರಹ್ಮ ಬ್ರಹ್ಮೋತ್ತರ ಲಾಂತವ ಕಾಪಿಷ್ಠ ಶುಕ್ರ ಮಹಾಶುಕ್ರ ಶತಾರ ಸಹಸ್ರಾರ ಆನತ ಪ್ರಾಣತ ಅರಣ್ಯ ಅಚ್ಯುತಮೆಂಬ ಪದಿನಾಱುಂ ಕಲ್ಪಂಗಳೊಳಂ: **ವಡ್ಡಾರಾ,** ಪು ೯೭, ಸಾ ೨೬)

**ಮಾಹೇಶ್ವರ** – ವೀರಶೈವ (ಮಾಹೇಶ್ವರನುಂ ಲಿಂಗಿಯುಮಂ ಶಿವಭಕ್ತನುಮಂ ಗಹನಂಗೆಯ್ಯರ್ ಸಮಯಿಗಳೆನ್ನಂ: **ಸಮಯಪ,** ೪. ೭೮)

**ಮಾಳ** – ಬಯಲು (ಮರುಸ್ಥಳದ ಮಾಳದೊಳ್ ನಡುಪಗಲ್ವರಂ ಗ್ರೀಷ್ಮದೊಳ್ ಸುರುಳಿವಿನೆಗಂ ಬೇವವರ್ಗೆ ಜೊಂಪಮಿಮ್ಮಾವು ನಿರ್ಝರಾಂಬು ದೊರೆಕೊಳ್ವವೊಲ್: **ಆದಿಪು,** ೧೩. ೮೬)

**ಮಾಳಂಗೊಳ್** – ದಿಕ್ಕಾಪಾಲಾಗಿ ಓಡು (ಭಯಂಗೊಂಡು ಆಡು ಶ್ವಾನಮೆಂದು ಈಡಾಡಿ ಮಾಳಂಗೊಂಡು ಓಡಿದಂ: **ಪಂಚತಂತ್ರ,** ೨೧೩ ವ)

**ಮಾಳಚಿ** – ಒಬ್ಬ ಕ್ಷುದ್ರ ದೇವತೆ (ಮನೆವೆರ್ಗಡೆ ಚಟ್ಟಪನಿಂ ನಿನ್ನೆ ತಾನಾದ ಮೈಲನುಂ ಮಾಳಚಿಯುಂ ಜನಕಾಪ್ತರಾದರ್: **ಸಮಯಪ,** ೮. ೨೩೦)

**ಮಾಳಬೆ** – ಮಾರಿ (ಟಕ್ಕಿಪನಂ ತುಟಿ ಮೇಗುದೋರ್ಪನಂ ಮಾಳಬೆಗಿಕ್ಕು: **ಲೀಲಾವತಿ,** ೨. ೧೦೭)

**ಮಾಳಜಿಗೆ** – ಒಂದು ಆಯುಧ (ಅಗುರ್ವಿಸುವ ಆವುತಿ ಮೂಸಿದಂತಿರಿಟ್ಟಳಂ ಅಮರ್ದಿರ್ದ ಮಾಳಜಿಗೆ ಪಕ್ಕರೆಯಿಕ್ಕಿದ ಜಾಯಿಲಂ ಭಯಂಗೊಳಿಸೆ: **ಪಂಪಭಾ,** ೧೦. ೭೬)

**ಮಾಳತಿ** – ಜಾಜಿ ಹೂ (ಅಭಿನವವಿಳಸಿತ ಮಾಳತೀಮಾಳಾಪರಿಷ ತಮಕುಟನುಂ: **ಆದಿಪು,** ೧೧. ೧೦ ವ)

**ಮಾಳಿಗೆ** – ಉಪ್ಪರಿಗೆ ಮನೆ (ಮಳಿಗೆಯ ಮಾಳಗೆಯ ಮನಂಗೊಳಿಸುವ ನಾನಾಪ್ರಕಾರದಂಗಡಿಯುಂ ಬೆಡಂಗೊಳಕೊಂಡ ಸೂಳೆಗೇರಿಯ ವಿಳಾಸದಿಂದೆಂತು ನೋಟಿಟಪ್ಪೊಡಂ ರಮಣೀಯಂ: **ಸುಕುಮಾಚ,** ೯. ೬೪)

**ಮಾಳ್ಕೆ** – ರೀತಿ (ತದ್ವನಿತೆ ಮಂಗಳಲಕ್ಷ್ಮಿಯ ಮಾಳ್ಕೆಯಿಂದೆ .. .. ನಿಟ್ಟಿಸಿದಳ್: **ತ್ರಿಷಷ್ಟಿಪು,** ೨. ೧೩೨)

**ಮಾಳ್ಕುಕಿ** – ಗಂಡನನ್ನು ಬಿಡದವಳು (ಮಾಳ್ಕಿಕಿಯೆಂದು ಗಂಡನಂ ಪತ್ತಿ ಬಿಡದಾಕೆ: **ಶಬ್ದಮದ,** ಪ್ರಸಾ ೧೯೬)

**ಮಾಱಂಕ** – ಮತ್ತೊಂದು ಯುದ್ಧ (ಕಾದಲೆಂದು ಕಳದೊಳಂ ಮಾಱಂಕಮಂ ಬೇಡಿ ಬಂದುಲಿವರ್: **ಆಚವರ್ಧ,** ೭. ೫೪); ಪೈಪೋಟಿ (ಮದನನ ಮಾಱಂಕದ ಛಂದದ ಗಂಡನಂ .. .. ಇವಳೋವದೆ ಕೊಂಬಳ್: **ಯಶೋಧಚ,** ૩. ೭೩); ಪ್ರತಿಸ್ಪರ್ಧಿ (ಮಧು ತೆತ್ತಿಗಂ ವಿರಹಿ ಮಾಱಂಕಂ ನೃಪಂ ಚಿತ್ತಸಂಭವನಾಗಲ್ ಕಡುಕೆಯ್ದು ಕಾಯ್ದು ಕಳನಂ ಬಂದೇರಷುವಂತೆ: **ಸೂಕ್ತಿಸುಧಾ,** ೮. ೨೦೯)

**ಮಾಱಂಬು** – ಗುರಿಯಿಟ್ಟು ಬಿಟ್ಟ ಬಾಣ (ಭೋಂಕನೆ ಕಂಡು ಮಾಱಂಬಿಗೆ ಪಕ್ಕಾದ ಬೆಳ್ಮಿಗದಂತೆ: **ಕರ್ಣನೇಮಿ,** ೧೦. ೮೦ ವ)

**ಮಾಱಣಿ** – ಶತ್ರು ಸೈನ್ಯ (ಕಟ್ಟಿದಿರೊಳಾಂತರಂ ನೆಱೆ ನಿಟ್ಟಿಸಿ ನನೆವಿಲ್ಲ ಬಲ್ಲಹಂ ಮಾಱಣಿಯಂ ನೆಟ್ಟನೆ ತೋಳ್ವಲದಿಂದೆಟ್ಟಿಟ್ಟಿದಂ ಅವನಿದೊರೊಳಾವನುಂ ನಿಂದಪನೇ: **ಕಬ್ಬಿಗಕಾ,** ೨೨೪)

**ಮಾಱಾನ್** – ಪ್ರತಿಭಟಿಸು, ಎದುರಿಸು (ಭರತಂ ನಿನ್ನಗ್ರಜಂ ಸಾಹಸಂ ಮುಗಿಲಂ ಮುಟ್ಟೆ ನಿಜಪ್ರತಾಪದಳವಂ ತೋಱಲ್ಕೆ ಮಾಱಾಂಪ ಜೆಟ್ಟಿಗರಾರಪ್ಪೊಡಮಿಲ್ಲದಂದು: **ಆದಿಪು,** ೧೪. ೫೨)

**ಮಾಱು** – ವಿಕ್ರಯಿಸು (ಮಾಱು–ವಿಕ್ರಯೇ: **ಶಬ್ದಮದ** ಧಾ ೮೯೯); ಸ್ವಾಧೀನಪಡಿಸಿಕೋ (ಚೇಟಿಕೆ ಬೀಸುವ ಕುಂಚಂ ಎಯ್ದೆ ಮೆಯ್ದೋಱುವ ಗಾಡಿ ಕಾಂಚನದ ದಂಡದ ಸೀಗುರಿ ನೋಟಪ್ಪೊಡೆ ಆರುಮಂ ಮಾಱೆ ಮನೋಜನ ಒಡ್ಡು ಎನಿಸಿದರ್: **ಪಂಪಭಾ,** ೯. ೧೦೦);

**ಮಾಱುಗುಡು** – ವಿನಿಮಯ ಮಾಡಿಕೊ, ಒಪ್ಪಿಸು (ಶಿವಸುಖಮನಱಿಯದೀ ಮಾನವಸುಖದ ನಿಮಿತ್ತದಿಂ ತಪಂಗೆಯ್ವವರ್ ಮಾಣಿಕಮಂ ತೌಡಿಂಗೆ ಅವಯವದೆ ಮಾಱುಗುಡುವ ಮರುಳಂ ಪೋಲ್ಗಂ: **ಶಾಂತಿಪು,** ೧೧. ೯೨)

**ಮಾಱುಗೆಯ್** – ಬದಲಾಯಿಸು (ಅಂತು ಮಾಱುಗೆಯ್ದು ಋತುಗಳಂಪಡೆದ ಪೃಥ್ವಿಯಂತೆ ಋತುಮತಿಯಾಗಿ ದೇವಕಿ ಪೆತ್ತ ಮಕ್ಕಳನತ್ತ ನೈಗಮದೇವನೆತ್ತಿಕೊಂಡುಯ್ದಂ: **ನೇಮಿನಾಪು,** ೭. ೩೪ ವ)

**ಮಾಱುಗೊಳ್** – ಬೆಲೆಗೆ ಕೊಳ್ಳುವ (ಚಿತ್ರಕಥೆಗಳಂ ಪಟದೊಳ್ ತೋಱೆ ಪೇಳ್ದು ಲೋಗರಂ ಡಂಬಿಸಿ ಮಾಱುಗೊಳ್ವ ಬತ್ತಮಂ ಕಳ್ವೊಂ: **ವಡ್ಡಾರಾ,** ಪು ೧೪, ಸಾ ೧೯)

**ಮಾಱುಲಿ** – ಪ್ರತಿಧ್ವನಿಸು (ನಾನಾಪ್ರಕಾರದಿಂದಂ ಮಾಱುಲಿವ ದನಿಗಳಿಂದಂ ಅತಿರಮಣೀಯಮಪ್ಪ ಕೊಳನಂ ಕಂಡು: **ವಡ್ಡಾರಾ,** ಪು. ೫೪, ಸಾ. ೨೨)

**ಮಾಱುವಡೆ** – ಮಾರಾಟಗೊಳ್ಳು (ಏರ್ವಡೆದ ಪಂದೆಯಂತೆ ತಲ್ಲಣಿಸಿ ಮಾಱುವಡೆಯದ ಪರದನಂತೆ ಕಂದಿ: ಧರ್ಮಾಮೃ, ೧. ೧೨೯ ವ)

**ಮಾಱುವೋಗು** – ಮಾರಾಟಗೊಳ್ಳು (ಕೆಡುವ ಭಂಡದಂತೆ ಮಾಱುವೋಗದು: **ಧರ್ಮಾಮೃ,** ೪. ೧೦೬ ವ); ಆಕರ್ಷಣೆಗೊಳ್ಳು (ಈ ಮನವಪ್ಪೊಡೆ ತನಗೆ ಮಾಱುವೋದತ್ತೀಗಳ್: **ಕಾದಂಸಂ,** ೫. ೧೦೪); ವಶವಾಗು (ಶ್ರೋತ್ರಂಗಳ್ ಪರಮಾಗಮಕ್ಕೆ ಮತಿ ಸಮ್ಯಗ್ದರ್ಶನ ಜ್ಞಾನ ಚಾರಿತ್ರಂಗಳ್ಗೆ ದಯಾವಲೋಕನಕೆ ಕಣ್ಗಳ್ ಮಾಱುವೋದಂತೆ: **ನೇಮಿನಾಪು,** ೧. ೬)

**ಮಾಱುರಿ** – ಪ್ರತಿಯಾಗಿ ಉರಿ (ಸೂರ್ಯಕಾಂತಮೆನ್ನೀ ತೇಜಸ್ಸ್ಫುರಿತಕ್ಕೆ ಸೆಣಸಿನೊಳ್ ಮಾಱುರಿಗುಂ ಸೈರಿಸದು ತೇಜಮಾ ಭುಜಬಲಿಯಾ: **ಆದಿಪು,** ೧೪. ೪೨)

**ಮಾಱೆಸು** – ಗುರಿಯಿಟ್ಟು ಬಾಣ ಬಿಡು (ಏಱೆಸುವುದುಂ ಕೋದಂಡಮಂ ರಾಮನಶ್ರಮದಿಂ ಮನ್ಮಥನಾಗಳ್ ಏಱೆಸದೆ ಮಾಱೆಚ್ಚಂ ಪುರಸ್ತ್ರೀಯರಂ: **ಪಂಪರಾ,** ೫. ೯೦)

**ಮಾಱೊಡ್ಡು** – ಶತ್ರು ಸೈನ್ಯ (ಶೋಣಾಶ್ವಂಗಳ್ ರಜತರಥಮಂ ಪೂಡೆ ಕುಂಭಧ್ವಜಂ ಗೀರ್ವಾಣಾವಾಸಂಬರಂ ಅಡರೆ ಮಾಱೊಡ್ಡು ದಲ್ ಸಾಲದು ಎನ್ನೀ ಬಾಣಾವಾಸಕ್ಕೆ ಎನುತುಂ: **ಪಂಪಭಾ,** ೧೧. ೫೬)

**ಮಾಱೋಲೆ** – ಪ್ರತಿಯಾಗಿ ಬರೆದ ಓಲೆ (ಅಟ್ಟಿದ ವಿಭುಗೆ ಸಂತಸಂ ಮಾಡಿ ಬರೆದ ಮಱೋಲೆಯನೆಯ್ದಿಸಿದೊಡೆ: ಶಾಂತಿಪು, ೫. ೩೫)

**ಮಾಟಕ್ಕೆ** – ರೀತಿ (ಈ ಮಾಟಕ್ಕೆಯೊಳೆಸಗದರಂ ಹಾ ಮಾ ಧಿಕ್ಕಾರದಂಡದಿಂ ದಂಡಿಪುದು: **ಆದಿಪು,** ೮. ೭೪)

**ಮಿಂಚುಂಬುಟು** – ಮಿಣುಕು ಹುಳು (ಕಿಚ್ಚಲ್ಲ ಮಿಂಚುಂಬುಟು ನೀನಿದನೂದಿ ದೆಸೆಗೆಡವೇಡೆಂದು ಪಿರಿದುಂ ಪೊಟ್ಟು ಬಾರಿಸುತಿರ್ಪುದುಂ: **ಪಂಚತಂತ್ರ,** ૩೪೦ ವ)

**ಮಿಂಚುವಡೆ** – ಹೊಳಪನ್ನು ಹೊಂದು (ತನಿವಣ್ಣ ಗೊಂಚಲಿಂ ಮಿಂಚುವಡೆದ ಮೇಲರನನಡರ್ವ ಕೋಡಗಂಗಳ .. .. ನೋಡುತ್ತುಂ: **ಕಬ್ಬಿಗಕಾ,** ೧೮೧ ವ)

**ಮಿಂಚುವೋಗು** – ಹೊಳೆದು ಕಣ್ಮರೆಯಾಗು (ಪೊದಳ್ದ ಸಿರಿಯೆಂಬುದು ಇಂತೊಗೆದ ಮಿಂಚುವೋದಂಚೆಯೊಳ್ ಸದೃಕ್ಷಮೆನಲೊಲ್ವರೀ ಭವದೊಳುಂಡೊಡಂ ಕಂಡೊಡಂ: **ಅನಂತಪು,** ೯. ೧೯)

**ಮಿಂಟೆ** – ಹೆಂಟೆ (ಭೃಂಗಾವಳಿಯೆಂಬ ಮಿಂಟೆವಿಡಿದಂಟಿಸಿ ಗೆಂಟಿನೊಳಿಟ್ಟು ಪಾಱೆಪರ್ ತೀವಿದ ಕೀರಮಂಡಳಿಯಂ ಅಲ್ಲಿಯ ಪಾಮರಿಯರ್ ನಿರಂತರಂ: **ರಾಜಶೇವಿ,** ೨. ೧೭); ಗೋಲಿ, ಕಲ್ಲ ಹರಳು (ಮಿಡಿವಿಲ್ವಿಡಿದು ಪುಳಿಂದಿಯರ್ ಇಡೆ ಗಜಮೌಕ್ತಿಕದ ಮಿಂಟೆಯಂಬರದೆಡೆಯೊಳ್ ನಡೆದು ಪಗಲುಳ್ಕು ಬೀಳ್ವವೋಲ್: **ರಾಜಶೇವಿ,** ೫. ೮೦)

**ಮಿಂಡ** – ಪರಾಕ್ರಮಿ (ಕೋಟಿಕ ನಾಮಧೇಯಶಿಲೆ ಮುಂದಿರೆ ಭೋಂಕನೆ ಕಂಡು ಮಿಂಡರುತ್ಪಾಟಿಪೆಮೆಂದು ಪರ್ಣದಖಿಳಶಕ್ತಿಯಿನೆತ್ತುತುಂ ಅಳ್ಳೆವೊಯ್ಯೆ ನೀಪಾಟವರಾಗಿ ಪಿಂಗೆ: ಆಚವರ್ಧ, ૩. ೪೬); ಉಪಪತಿ (ನಿನ್ನ ಬೇಟದ ಮಿಂಡನಾವನವನಂ ಪೇೞೆಂದು ಬೆಸಗೊಳೆ: **ಪಂಚತಂತ್ರ,** ೧૩೦ ವ)

**ಮಿಂಡಾಟ** – ಹಾದರಿಕೆ (ಮಿಂಡಾಟಮಾಗಿ ಮೆಚ್ಚಿ ಱಂಡೆಯೊಳ್ ನೆರೆದು .. .. ಜ್ಞಾನಿಯೆಂ ಎಂಬನಂ ಉಂಡಿಂಗೊಳಗಾಗದಿಪ್ಪವಂ ಸತ್ಪುರುಷಂ: **ಸಮಯಪ,** ೧೪. ೬೮)

**ಮಿಂಡಿ** – ನವಯುವತಿ (ಶೃಂಗಾರಸುಯೋಗಿಯೆಂದು ಉಟಿದ ಮಿಂಡಿಯರ್ ಆವಗಮೊಲ್ದು ನೋಡಲ್: **ಉದ್ಭಟಕಾ,** ೧೨. ૩೮); ಉಪಪತ್ನಿ (ವಿನುತಂ ರತಿಯಿಲ್ಲ ಮಿಂಡಿಯೊಳ್: **ಸೂಕ್ತಿಸುಧಾ,** ೮. ೩೯)

**ಮಿಂಡು** – ಕಲಿತನ, ಪುಂಡತನ (ತಕ್ಕಿನ ಕರ್ಕ್ಕಡೆಗೊಂಡು ಮಿಂಡು ಮಾರ್ಮಲೆದಿದಿರಾಂತು ನಿಂದಡಸಿ ಸುತ್ತುವ ಬಾರಿಗೆ ಮೆಯ್ಯನೊಡ್ಡಿ ಕೋಟಲೆಗೊಳಗಾಗಿ ಪಂದಿ ನಮೆವಂದಂ ಅದಾರ್ಗಂ ಅಸೇವ್ಯವರ್ಣನಂ: **ಸುಕುಮಾಚ,** ೫. ೧೮)

**ಮಿಂಡುವಡೆ** – [ಮಿಂಡು+ಪಡೆ] ತುಂಟರ ಗುಂಪು (ದೇವ ಭವತ್ಸುತಂ ಕರಮೋವದೆ ಸಂಕಿಸದೆ ಮಿಂಡುವಡೆವೆರಸು ಅದಟಿಂದೋವೋವೆಂದೆಳಱೆ ಜನಂ ದಾವಾನಲನಂತೆ ಸುಡುವನಿರುಳುಂ ಪಗಲುಂ: **ಧರ್ಮಾಮೃ,** ೨. ೩೯)

**ಮಿಕ್ಕಱೆವು** – ಸಮ್ಯಕ್‌ಜ್ಞಾನ (ಮಿಕ್ಕಱೆವಿನ ಮಿಕ್ಕ ನಂಬುಗೆಯ ಮಿಕ್ಕ ನೆಗೞ್ತೆಯ ಕೂಟದಿಂದಂ ಆದ ಅಜೀವನಿತರ್ಕಂ ಆನೆಱಗಿ ಪೊರ್ದುವೆನಕ್ಕ ಅಪವರ್ಗಮಾರ್ಗಮಂ: **ಅಜಿತಪು,** ೧.೯

**ಮಿಕ್ಕ ನಂಬುಗೆ** – ಸಮ್ಯಗ್ದರ್ಶನ (ಮಿಕ್ಕಱೆವಿನ ಮಿಕ್ಕ ನಂಬುಗೆಯ ಮಿಕ್ಕ ನೆಗೞ್ತೆಯ ಕೂಟದಿಂದಂ ಆದ ಅಜೀವನಿತರ್ಕಂ ಆನೆಱಗಿ ಪೊರ್ದುವೆನಕ್ಕ ಅಪವರ್ಗಮಾರ್ಗಮಂ: **ಅಜಿತಪು,** ೧.೯

**ಮಿಕ್ಕ ನೆಗೞ್ತೆ** – ಸಮ್ಯಕ್ ಚಾರಿತ್ರ (ಮಿಕ್ಕಱೆವಿನ ಮಿಕ್ಕ ನಂಬುಗೆಯ ಮಿಕ್ಕ ನೆಗೞ್ತೆಯ ಕೂಟದಿಂದಂ ಆದ ಅಜೀವನಿತರ್ಕಂ ಆನೆಱಗಿ ಪೊರ್ದುವೆನಕ್ಕ ಅಪವರ್ಗಮಾರ್ಗಮಂ: **ಅಜಿತಪು,** ೧. ೯)

**ಮಿಗ** – ಕಾಡುಮೃಗ, ಜಿಂಕೆ (ಕಾಡೊಡೆಯರಂತೆ ಬಿರಯಿಗಳೆಂಬ ಮಿಗಂಗಳ ಬೇಂಟೆಯನಾಡಿಯುಂ: **ಕಬ್ಬಿಗಕಾ,** ೯೮ ವ)

**ಮಿಗವಕ್ಕೆಗ** – ಚಂದ್ರ (ಕಡುಗೊರ್ಬಿ ಪರ್ಬಿದ ಮರ್ಬು ಮಿಗವಕ್ಕೆಗನೊಳಾದ ಪಗೆತನಮಂ ಬಗೆಗೊಂಡು: **ರಾಜಶೇವಿ,** ೧. ೧೦೨ ವ)

**ಮಿಗದೇರ** – ವಾಯು (ಮಿಗದೇರನ ಮಿಗಮಲ್ಲಿಯ ಮಿಗವಗೆಯ ರವಕ್ಕೆ ಪೆಳರ್ದು ನೋೞ್ಪಂದಮದೇಂ ಸೊಗಯಿಸಿದುದೊ: **ಶಬರಶಂ,** ೧. ೩೯)

**ಮಿಗಬೇರ** – [ಮೃಗವೈರ] ಹುಲಿ; ವ್ಯಾಘ್ರಾಸುರ (ತುೞೀಲಳವಾಂತು ನಿಂದ ಮಿಗಬೇರನನಿಕ್ಕಿ ಪೊಣರ್ಕೆಗಾರ್ಪು ಸಂಗಳಿಸಿ ಇದಿರಾಂತ ಪಲ್ಲಮಱಿರಕ್ಕಸನಂ ಸದೆದಣ್ಮಿ: **ಶಬರಶಂ,** ೫. ೯)

**ಮಿಟ್ಟಿ** – ಒಂದು ಆಯುಧವಿಶೇಷ (ಪದವಿಲ್ ಮಿಡಿವಿಲ್ ಎಲೆಯಂಬು ಮಿಟ್ಟಿ ಪೇರಡಿ ಬಡಿಗೋಲ್ .. .. ಪಿಡಿದು ಬೇಂಟೆಗೆ ಸಂದ ಪುಳಿಂದರೆಯ್ದಿದರ್: **ರಾಜಶೇವಿ,** ೫. ೫೨)

**ಮಿಟ್ಟೆ** – ಮಣ್ಣಿನ ಹೆಂಟೆ (ಕಲ್ಲಂ ತಾಗಿದ ಮಿಟ್ಟೆಯಂತೆ ಬೆಟ್ಟಮಂ ಪಳಂಚಿದ ಭೈತ್ರದಂತೆ ಪೆಱಸಾರ್ದು: **ಧರ್ಮಪ,** ೧. ೮೫ ವ); ಕವಣೆಕಲ್ಲು (ಪ್ರಮಾಥಿಕುಮಾರ ರಥಮಂ ಮೂವಳಸಾಗೆ ಸುತ್ತಿಕೊಂಡು ಪೋಗದಡ್ಡಂಬಿನ ಕೂರಂಬಿನ ಕವಲಂಬಿನ ಪಾಱುಂಬಳೆಯ ಕಕ್ಕಡೆಯ ಮಿಟ್ಟೆಯ ಮೊಟ್ಟೆ ಸರಲ ಬಲ್ಸರಿಯಂ ಸುರಿಯೆ: **ಧರ್ಮಾಮೃ,** ೧೩. ೭೭ ವ)

**ಮಿಟ್ಟೆಕೊಂಡ ಚಿಟ್ಟೆ** – ಮಣ್ಣಿನ ಹೊಡೆತಕ್ಕೆ ಸಿಕ್ಕಿದ ಮಿಡತೆ (ತದ್ವಲಲಂ ನಿರ್ಭರಕೋಪಂ ಬಿದಿರ್ದೊದೆಯಲ್ ಧರೆಯೊಳವಂ ಮಿಟ್ಟೆ ಕೊಂಡ ಚಿಟ್ಟೆವೊಲಿರ್ದಂ: **ಕರ್ಣನೇಮಿ,** ೧೦. ೧೨೫)

**ಮಿಡಿ** – ಬೆರಳಿನಿಂದ ಹೊಡೆ, ಮೀಟು (ಮಿಡಿದನಿತು ಬೇಗದಿಂ ಅಱಿವ ಒಡಲನಿದಂ ಪೋಗೆ ನೂಂಕಿ ಚೆಲ್ವಪ್ಪೊಡಲಂ ಪಡೆದಪೆಯೀಗಲೆ ಬಲ್ವಿಡಿವಿಡಿದು ಶರಣ್ಬುಗು ಜಿನೇಂದ್ರಪದಮಂ: **ಆದಿಪು,** ೨. ೫೮); ಹಿಮ್ಮಡ (ಜಾಯಿಲಂಗಳಂ ಲೆಕ್ಕಿಸದೆ ಮಿಡಿಯಿಂ ಸಿರಂಬರಮೆತ್ತಿ ಸೀಳ್ದು ಸದೆವ ಸಮದ ಸೂಕರಂ: **ಶಬರಶಂ,** ೪. ೧೭ ವ); ಹೀಚು

**ಮಿಡಿವಟ್ಟು** – ಕವಣೆ ಕಲ್ಲು (ಮುಡಿ ಬಿಟ್ಟು ಕಾರ ಸೋಗೆಯ ಬೆಡಂಗನಭಿನಯಿಸೆ ಮುಡಿಯ ಸೊವಡಿಂಗಲರಂ ಬಿಡೆ ಮಧುಪಮಾಳೆ ಮಾವಿನ ಮಿಡಿಯಂ ಮಿಡಿವಟ್ಟಂ ಅತನುಗೆ ಆಯ್ದುವೊಲಾಯ್ದುಳ್: **ಮಲ್ಲಿನಾಪು,** ೬. ೪೬); ಹಿಮ್ಮಡಿ (ಮಿಡಿಯಿಂ ಬೆಂಬರಮೆಯ್ದೆ ಸೀೞ್ದ ಶಬಸಂಘಾತಂಗಳ್ .. .. ಮೃತಕವ್ಯೂಹಂ ಕರಂ ಭೀಕರಂ: **ಲೀಲಾವತಿ,** ೬. ೭)

**ಮಿಡಿವಿಲ್** – ಮಿಡಿಯುವ ಬಿಲ್ಲು, ಕವಣೆ (ತಱಗೆಲೆಯ ತುಱುಗಲಂ ಕಿಱುವಕ್ಕಿವಿಂಡೆಂದು ಕೊಱಂಡುಗಳಂ ಮಡು ಮಿಡಿವಿಲ್ಲೊಳ್ ಇಸಲೆಸಗಿ ಮಱುಗುವ ತುಱುಗಾವ ಕಿಱುಕುಳದ ಕೆಳೆಯರುಮಂ ನೋಡುತ್ತುಂ: **ಕಬ್ಬಿಗಕಾ,** ೧೮೧ ವ)

**ಮಿಡುಕಾಡು** – ಕಂಪಿಸು (ಎಟಿಲ್ವ ಪತತ್ರಂ ಎತ್ತಿ ನಸು ನೀಡಿದ ಗೋಣ್ ತೆಱೆದ ಉದ್ಧ ಚಂಚುಮಂಡಳಂ ಅರೆಮುಚ್ಚಿದ ಅಚ್ಚಿ ಮಿಡುಕಾಡುವ ತಾಳುಗೆ: **ಶಾಂತೀಶ್ವಪು,** ೧೨. ೪೬)

**ಮಿಡುಕಿಸು** – ತಳಮಳಗೊಳಿಸು (ನಲ್ಲರಂತೆ ಮಿಡುಕಿಸಲುಂ ಪಣಮುಡಿದರಂತೆ ಅಡ್ಡಂ ಮಾಡಲುಂ ಎಸೆದ ದೆಸಗಳ್ಗೋಡಿಸಲುಂ ಕುಮಾರಸ್ವಾಮಿಯ ನಿಮ್ಮಡಿಯ ಕೆಲದೊಳಾನೆ ಬಂದಪೆಂ; **ಪಂಪಭಾ,** ೫. ೪೩ ವ)

**ಮಿಡುಕು** – ವ್ಯಥೆಪಡು (ಸುಡುವುದರಾಗ್ನಿಯುಂ ಒಡಲಂ ಮಿಡುಕುವಿನಂ ಕಡಿವ ಕಟ್ಟಿಱುಂಪೆಗಳುಂ: **ಆದಿಪು,** ೫. ೧೩); ಸ್ಪಂದನ (ಬಾಧೆಯೊಳ್ ಮೆಯ್ಯನೊಡ್ಡಿಸಿ ಮೆಯ್ಯೊಳ್ ಮುಡುಕುಳ್ಳ ತಾಣಮಿಲ್ಲೆಂಬಂತು ನಿಷ್ಪಂದನಾಗಿ: **ಆದಿಪು,** ೬. ೩೪); ಅಲ್ಲಾಡು (ಅಹರ್ನಿಶಂ ಮಿಡುಕದೆ ಓಲಗಿಸುತ್ತಿರೆ ವಿಷ್ಣುಗುಪ್ತಂ ಈಶನ ಬರವೀವುದಂ ತಡೆದುದು: **ಸಮಯಪ,** ೯. ೭) ಧಾವಿಸು (ಕಾರ್ಮುಕಮಂ ಪಿಡಿದು ನಿಂದು ಪೇೞೆಂ ಕದನಕ್ಕೆ ಆರ್ ಮಿಡುಕುವರ್: **ಕರ್ಣನೇಮಿ,** ೧೨. ೪೮)

**ಮಿಡುಮಿಡುಕು** – ತುಂಬ ಚಡಪಡಿಸು (ಬಾಟೆವಾಟೆ ತಿದಿಯುಗಿವರುಂ ಮಿಡುಮಿಡುಕೆ ಬಡಿತಂಗಾಸುವರುಂ: **ಆದಿಪು,** ೫. ೮೫ ವ)

**ಮಿತವಚನ** – ಮಿತವಾಗಿ ಮಾತಾಡುವವನು (ಕ್ಷಿತಿಪತಿಯಂ ಬರಿಸಿ ಜಗನ್ನುತನಂ ಸಂತೈಸಿ ಕುಶಲವಾರ್ತಾಂತರಮಂ ಮಿತವಚನಂ ಬೆಸೆಗೊಂಡತಿವಿತೀರ್ಣಮುದನಾದಂ ಆತಂ: ಕವಿರಾಮಾ, ೨. ೮)

**ಮಿತವಾಕ್ಯ** – ಮಿತವಚನ (ಪರಹಿತಚರಿತೋದಾತ್ತಕೀರ್ತಿಪ್ರಭಾವಂ ಮಿತವಾಕ್ಯಂ ಸದ್ಗುಣೈಕ್ಯಂ ಪ್ರಕಟಿತ ವಿಜಯ ಶ್ರೀನಿವಾಸಂ .. .. ಮಂತ್ರಿಪ್ರಧಾನಂ: **ಸುಕುಮಾಚ,** ೨. ೫೧)

**ಮಿತ್ತು** – ಮೃತ್ಯು (ತನಗೆ ಕಡಂಗಿ ಮಿತ್ತು ಬರೆ .. .. ಬಳಾರಿಗೆ ಆರ್ಪನಿತನೆ ಕೊಟ್ಟು ಜೀವಿಸುವೆಂ ಎಂಬ ಅಟಿಮೋಹ: **ಸಮಯಪ,** ೫. ೨೦)

**ಮಿತ್ರ** – ಸೂರ್ಯ (ಕುಶಲಮೆ ನಿಮಗೆಂಬಂತಿರೆ ಕುಶೇಶಯಂಗಳ್ಗೆ ನೀಡೆ ಕರಮಮಂ ಮಿತ್ರಂ: **ಅಜಿತಪು,** ೬. ೬೭); ಗೆಳೆಯ (ಈ ಜಗದೊಳ್ ಮಿತ್ರವಿಪತ್ತಿಗೆ ಆರ ಬಗೆಯುಂ ದುಃಖಿಕ್ಕೆ ಪಕ್ಕಾಗದೇ: **ಪುಷ್ಪದಂಪು,** ೬. ೪೦); ರಾಜನ 'ಸಪ್ತಾಂಗ'ಗಳಲ್ಲಿ ಒಂದು

**ಮಿತ್ರಕಾರ್ಯ** – ಪಂಚತಂತ್ರಗಳಲ್ಲಿ ಒಂದು: ರಾಜನು ಮಿಕ್ಕ ರಾಜರನ್ನು ಗೆಳೆಯರನ್ನಾಗಿಸಿಕೊಳ್ಳುವ ತಂತ್ರ (ಅನ್ಯರೆಲ್ಲರುಮಂ ಅತಿಸ್ನೇಹದಿಂ ತನ್ನವರಂ ಮಾಡಿಕೊಳ್ವುದು ಮಿತ್ರಕಾರ್ಯಂ ಎಂಬುದು: **ಪಂಚತಂತ್ರ,** ೭೧ ವ)

**ಮಿತ್ರಗುಣ** – ಗೆಳೆಯನಲ್ಲಿರಬೇಕಾದ ಗುಣ (ಸ್ವಚ್ಛತನಂ, ತ್ಯಾಗಂ, ಶೌರ್ಯಂ, ಸಮಾನವಹ ಸುಖದುಃಖಂ, ಸ್ನೇಹಂ, ದಾಕ್ಷಿಣ್ಯಂ, ಸತ್ಯಂ, ಶೌಚಮೆಂಬಿವು ಮಿತ್ರಗುಣಂಗಳ್: **ಪಂಚತಂತ್ರ,** ೪೨೬ ಶ್ಲೋಕ ೧೯ ಟೀಕೆ)

**ಮಿತ್ರದ್ರೋಹ** – ಗೆಳೆಯನಿಗೆ ಮಾಡುವ ಮೋಸ (ಅದನಾಂ ಕೇಳ್ದುಸಿರದಿರ್ದೆನಪ್ಪೊಡೆ ವಿಶ್ವಾಸಘಾತುಕತ್ವಮುಂ ಮಿತ್ರದ್ರೋಹಮುಂ ಅಪ್ಪುದೆಂದದೆಪಲ್ಬಂದೆನೆಂಬುದುಂ: **ಪಂಚತಂತ್ರ,** ೨೦೫ ವ)

**ಮಿತ್ರಬಲ** – ಸ್ನೇಹಿತರಾದ ರಾಜರ ಬಲ (ಮಿತ್ರಗುಣ ಸಂಪನ್ನರಪ್ಪ ಪತತ್ರಿಸ್ತೋಮಂಗಳಿಲ್ಲವಪ್ಪುದಱಿಂ ಮಿತ್ರಬಲಮಿಲ್ಲ: **ಪಂಚತಂತ್ರ,** ೨೯೭ ವ)

**ಮಿತ್ರಭಾವ** – ಗೆಳೆತನ (ಮಿತ್ರಭಾವದೊಳ್ ನೆಗಟ್ವ ಸಂಧಿ ಸಂಗತಮೆಂಬುದಕ್ಕುಂ: **ಪಂಚತಂತ್ರ,** ೩೦೭ ವ)

**ಮಿತ್ರಮಂಡಳ** – ಸೂರ್ಯಮಂಡಲ, ಸ್ನೇಹಿತರ ಗುಂಪು (ಹಿಮಕರಮಂಡಳಮಿದು ಶತ್ರುಮಂಡಳಾಭಂ ನೃಪೇಂದ್ರ ಮಸುಟ್ಟುದು ಬೇಗಂ ನಿಮಿರಲ್ ಬಗೆದಪುದೀ ಮಿತ್ರಮಂಡಲಂ ಮಿತ್ರಮಂಡಳಾಭಂ ನಿನ್ನಾ: **ಆದಿಪು,** ೧೨. ೫೨)

**ಮಿತ್ರಮಂಡಳಿಕ** – ಗೆಳೆಯರ ಗುಂಪು (ಮಲೆ ತಲೆದೋಱದೆಂದುದನೆ ಕೊಟ್ಟುದು ಡಂಗಮಡಂಗಿ ಬದುದು ಒಕ್ಕಲಿಗವೆಸರ್ಗೆ ಪೂಣ್ದುದು ಕುಱುಂಬು ತಱುಂಬದೆ ಮಿಕ್ಕ ಶತ್ರುಮಂಡಳಿಕರೆ ಮಿತ್ರಮಂಡಳಿಕರಾದರ್: **ಪಂಪಭಾ,** ೨. ೯೦)

**ಮಿತ್ರಲಕ್ಷಣ** – ಸ್ನೇಹಿತನಲ್ಲಿರಬೇಕಾದ ಗುಣ (ಶೀಲಂ ಮಹಾಸ್ನೇಹಂ ಇವು ಮೊದಲಾದ ಮಿತ್ರಲಕ್ಷಣಂಗಳಾವನಲ್ಲಿಯುಂಟು ಆ ಮಿತ್ರನಲ್ಲಿ ತಾನಿಹುದು: **ಪಂಚತಂತ್ರ,** ೪೨೬ ಶ್ಲೋಕ ೨೦೦ ಟೀಕೆ)

**ಮಿತ್ರವಿಯೋಗ** – ಸೂರ್ಯನ ಅಗಲಿಕೆ (ಮಿತ್ರವಿಯೋಗದೊಳೀ ಶತಪತ್ರಂ ಕಡಗಂದು ಕುಂದುಗೊಂಡಿರ್ಪುದುಂ: **ಮಲ್ಲಿನಾಪು,** ೭. ೬); ಗೆಳೆಯನ ವಿಯೋಗ (ಚಿತ್ರಾಂಗನುಂ ಲಘುಪತನಕನುಂ ಹಿರಣ್ಯರೋಮನುಂ ಒಂದೆಡೆಗೆ ಬಂದು ಮಂಥರನಂ ವ್ಯಾಧನುಯ್ದುನೆಂದು ಮಿತ್ರವಿಯೋಗದಿಂ ಕಿಡೆದುಂ ಬೇಗಂ ದುಃಖಿತರಾಗಿರ್ದು: **ಪಂಚತಂತ್ರ,** ೪೩೮ ವ)

**ಮಿಥಸ್ಪರ್ಧೆ** – ಪರಸ್ಪರ ಪೈಪೋಟಿ (ಬಿಸಿಲುಂ ಬೆಳ್ದಿಂಗಳುಂ ಕಟ್ಟಿಲೆಯುಂ ಇವು ಮಿಥಸ್ಪರ್ಧೆಯಂ ಮಾಣ್ದು ಪೂಣ್ದು ಒಂದು ಸಖಿತ್ವಂ ಪೆರ್ಚಿ ನಿಚ್ಚಂ ನೆಲಸಿದುವು: **ಚಂದ್ರಪ್ರಪು,** ೧೦. ೪೦)

**ಮಿಥುನ** – ಗಂಡು ಹೆಣ್ಣು ಜೋಡಿ (ವಿವಿಧಸೌಧಂಗಳ ಕೊಂಡಾಟಮನೆ ಮೆಱೆದು ಮೆಚ್ಚಂ ಪಾಟಿಸುವುವು ಮಿಥುನತತಿಗೆ ಗೃಹಮಹೀಜಾತಂ: **ಆದಿಪು,** ೫. ೩೭)

**ಮಿಥ್ಯಾಕಂದರ** – ಸುಳ್ಳು ಎಂಬ ಗುಹೆ (ವಿಮೋಹಮೃಗಮಂ ಮಿಥ್ಯಾಕಂದರದೊಳ್ ಬೆದಱಟ್ಟುವ ದುಂದುಭಿರವದಂತಿರೆ ಒಗೆಯೆ ಗ<ಂಭೀರರವಂ: **ಯಶೋಧಚ,** ೪. ೨೨)

**ಮಿಥ್ಯಾಚತುಷ್ಟಯ** – ಇದು ಸುಳ್ಳು, ಇದರ ಪರಿಚಯ ಇಲ್ಲ, ಆಗ ಅಲ್ಲಿ ನಾನಿರಲಿಲ್ಲ, ಆ ಕಾಲಕ್ಕೆ ನಾನು ಹುಟ್ಟಿರಲಿಲ್ಲ ಎಂಬ ನಾಲ್ಕು ಬಗೆಯ ಸುಳ್ಳುಗಳು (ತದ್ವಾರಾವಸಾನದೊಳ್ ನಿಂದು ಮಿಥ್ಯಾಚತುಷ್ಟಯ ಅಲಂಕಾರಮಾಗಿರ್ದ ಚತುಃಪಥಸಭಾಮಂಟಪದೊಳಿರ್ದ ವಿಟಕೋಟಿಯಂ ಒಡು: **ಶಾಂತಿಪು,** ೮. ೯೦ ವ)

**ಮಿಥ್ಯಾಚರಣ** – ಕಪಟಾಚರಣೆ ಮಿಥ್ಯಾಜ್ಞಾನತೆಯಿಂ ಅಸತ್ ಮಿಥ್ಯಾಚರಣಕ್ಕೆ ಸಂದು .. .. ಕಿಡುವರ್ ಪಲರುಂ: **ಚಂದ್ರಪ್ರಪು,** ೧೦. ೧೨೩)

**ಮಿಥ್ಯಾಜ್ಞಾನಿ** – ಅಜ್ಞಾನಿ, ಜೈನತತ್ವದಲ್ಲಿ ನಂಬಿಕೆಯಿಲ್ಲದವನು (ಇರ್ವರುಂ ಮಿಥ್ಯಾಜ್ಞಾನಿಗಳ್ ಶೂನ್ಯವಾದಿಗಳ್: **ಚಾವುಂಪು,** ಪು. ೧೭೬, ಸಾ. ೧೦)

**ಮಿಥ್ಯಾತ್ವ** – [ಜೈನ] ನಿಜವಾದ ತತ್ವಜ್ಞಾನವನ್ನು ನಂಬದಿರುವುದು; ಇದರಲ್ಲಿ ವಿಪರೀತ, ಏಕಾಂತ, ವಿನಯ, ಸಂಶಯ, ಅಜ್ಞಾನ ಎಂಬ ಐದು ಬಗೆ (ಭವ ಭವದೊಳ್ ಪೆರ್ಚಿದ ಕೆರ್ಚುವಿರ್ದ ಮಿಥ್ಯಾತ್ವದವರ್ಗೆ ಜಿನಧರ್ಮಕಥಾಶ್ರವಣಂ ಪೈತ್ತಿಕಮಾಗಿರ್ದವರ್ಗೆ ಪಾಲ್ ಕೈಪೆಯಪ್ಪವೊಲ್ ಕೈಪೆವಲಂ: **ಅಜಿತಪು,** ೨. ೯೨)

**ಮಿಥ್ಯಾದೃಷ್ಟಿ** – [ಜೈನ] ಅಭವ್ಯನ ದೃಷ್ಟಿ (ಜನಾಪವಾದ ಭಯದಿಂದೆನ್ನಂ ಬಿಸುಟ್ಟಂತೆ ಮಿಥ್ಯಾದೃಷ್ಟಿಗಳ ನುಡಿಯಂ ಕೇಳ್ದು ಅರ್ಹತ್ವರಮೇಶ್ವರ ಶ್ರೀಧರ್ಮಮಂ ಬಿಸುಡದಿರ್ಪುದು: **ಪಂಪರಾ,** ೧೫. ೭೫ ವ)

**ಮಿಥ್ಯಾವಾದಿ** – ಒಂದು ಬೌದ್ಧ ಪಂಗಡ (ಈ ಸ್ವಸಂವಿತ್ಪರಂಪರೆ ಪೋಕುಂ ಪ್ರಳಯಕ್ಕೆ ತತ್ ಕ್ಷಣಿಕ ಮಿಥ್ಯಾವಾದಿ ವಾದೀಂದ್ರರಿಂ: **ಶಾಂತಿಪು,** ೮. ೧೩೫)

**ಮಿಥ್ಯಾವಿನಯ** – ಕಪಟ ವಿನಯ (ಚಾಟುವಚನಂಗಳಂ ಮೆಱೆದು ಮಿಥ್ಯಾವಿನಯವಿನೋದಪಗೂಹಿತಸ್ವಾಂತಚಿಂತಿತಚಿತ್ತನಾಗಿದಂ: **ಜಗನ್ನಾವಿ,** ೩. ೨೨ ವ)

**ಮಿಥ್ಯಾಶಲ್ಯ** – [ಜೈನ] ವ್ರತಸ್ಥನನ್ನು ಬಾಧಿಸುವ ಮೂರು ಬಾಧೆಗಳಲ್ಲಿ ಒಂದು; ಸರಿಯಲ್ಲದ ದೃಷ್ಟಿಯನ್ನು ಹೊಂದಿರುವುದು (ಪೊಲ್ಲಮೆಯಂ ಮಾಡುವ ಮಿಥ್ಯಾಶಲ್ಯಂ ಮಾಯಾಶಲ್ಯಂ ನಿಧಾನಶಲ್ಯಮೆಂಬ ಮೂಱುಂ ಶಲ್ಯಂಗಳಂ ಪಿಂಗಿದಂ: **ಧರ್ಮಾಮೃ,** ೫. ೮೮ ವ), ನೋಡಿ, 'ಶಲ್ಯತ್ರಯ'

**ಮಿದಿ** – ನಾದು (ಸೆಲೆಗಳ ಸಂದನೆತ್ತಿ ಮಿದಿದು ಆರ್ದು ಇರಿದುಣ್ಬುವ ನೆತ್ರಿಂದೆ: **ತ್ರಿಷಷ್ಟಿಪು,** ೪೭. ೧೨); ತುಳಿ (ಬಿರಯಿಯ ಮಿಟ್ಟುವಂ ಮಿದಿದೊಡಲ್ಲದಲ್ಲಣಂ ಮುಳಿಸಾಱದೆಂದು ಪಲ್ಮೊರೆದನಲ್ಲಿ **ಮನ್ಮಥಂ:** ಪಂಪಭಾ, ೨. ೧೩)

**ಮಿದಿಹ** – ತುಳಿತ (ಕುಸುಱೆಯಂತೆ ಕಟ್ಟಿಂಗೆವಂದು ಪುಲ್ಲಂತೆ ಸೂಡಿಂಗೆವಂದು ಕುಂಬಾರಾನ ಮಣ್ಣಂತೆ ಮಿದಿಹಕ್ಕೆವಂದು: **ಧರ್ಮಾಮೃ,** ೩. ೪೬ ವ)

**ಮಿದುಳ್** – ಮಸ್ತಿಷ್ಕ (ಮಿದುಳುಣ್ಮೆ ಪುಷ್ಪಕೃತಶೇಖರದಂತಿರೆ ಕೊಂಡುಪೋದರಚ್ಚರಸಿಯರ್ ಅಣ್ಮೆಸತ್ತ ಭಟರಂ ಕೊನೆಮೀಸೆಯ ಚೆನ್ನ ಗಂಡರಂ: **ಗದಾಯು,** ೪. ೨೨)

**ಮಿನುಕು** – ಪಿಸುಗುಡು ಹಾಗೂ ಪ್ರಕಾಶಿಸು (ಮಿನುಕು– ಅಂತರ್ಗತಸ್ವನೇ ಕಾಂತೌಚ: **ಶಬ್ದಮದ,** ಧಾ ೬೪); ಮಿನಕ್ ಮಿಣಕ್ ಎಂದು ಹೊಳೆ (ಎಸೆದುವು ಮಣಿಗಳ್ ಬೆಳ್ದಿಂಗಳ ಪೊರೆಪೊರೆಯೊಳ್ ದಡ್ಡಳಿಸದೆ ಮಿನುಕುತಿರ್ಪ ತಾರಾಳಿಯವೊಲ್: **ಅನಂತಪು,** ೫. ೭೩); ಹೊಳಪು (ಮುಸುಱಿದ ಮಿನುಕಿಂದೊಪ್ಪುವ ನಭೋಂಗಣ ಧೃತಭಗಣಂ: **ಕುಸುಮಾಕಾ,** ೧೦. ೧೫); ತಾಳಿ (ಕಟಿಸೂತ್ರಂ ಬ್ರಹ್ಮಸೂತ್ರಂ ಸರಿಗೆ ಮಿನುಕು ಉಂಗುರಂ ಕರ್ಣಪೂರಂ ಕಟಕಂ ಮಂಜೀರಕಂ ಮೂಕುತಿ ಚಳಕಿಗೆಪೂ ಪೊಂದಳಿರ್ ಪಾಯವಟ್ಟಂ ನಿಟಿಲಾಂತಂ ಲಂಬಳಂ ಪೊಂಬಳೆ ಬಳೆ ಪೆಱೆ ಕೇಯೂರಮೆಂಬನ್ನವಂ ಪ್ರಸ್ಫುಟ ರತ್ನೀಪಾಶ್ರಯಂ ರಂಜಿಸುವಮಲರಿಂ ಕಾಂತೆಯರ ಮಾಡಿ ತೊಟ್ಟರ್: **ಸೂಕ್ತಿಸುಧಾ,** ೧೧. ೪೯)

**ಮಿಶ್ರ –** ಬೆರೆತ (ಆ ಗಂಧಸ್ನಪನೋದಕಂ .. .. ಕಾಳಾಗರುಮಿಶ್ರಪಯಸ್ರೋತಸ್ಸಮುದಿತಂ ಸೌಮನಸಮನೆಯ್ದೆ: **ಶಾಂತಿಪು,** ೧೦. ೫೨ ವ); ನಾಲ್ಕು ಧ್ವನಿಭೇದಗಲಲ್ಲಿ ಒಂದು; ಮಿಕ್ಕ ಮೂರು: ಖಾವುಳ, ಬೊಂಬಳ, ತ್ರಿಶ್ರ (ದಿವಿಜನಾಯಕಗಾಯಕಂ .. .. ಖಾವುಳ ಬೊಂಬಳ ನಾರಾಟಮಿಶ್ರಮೆಂಬ ನಾಲ್ಕುಂ ಧ್ವನಿಯ ಭೆದಮನಱಿದು .. .. ಪಾಡುತ್ತಿರೆಯುಂ: **ಶಾಂತೀಶ್ವಪು,** ೧೬. ೬೭ ವ)

**ಮಿಷ –** ನೆವ (ಮೊರೆವಳಿನಿಯ ರಮವಿಷದಿಂದ ಅರವಿಂದಿನಿ ಪಾಡೆ ಮಚ್ಚಿ .. .. ಈವಂತಿರೆ ಜಲಕಣಮಾಲೆ ಮೇಲದೇಂ ರಂಜಿಸತೋ: **ರಾಜಶೇವಿ,** ೨. ೬೭)

**ಮಿಷ್ಟಾನ್ನ –** ಮೃಷ್ಟಾನ್ನ (ಉಂಡು ದಾನಿಯಂ ಬಣ್ಣಿಸುವರ್ ಮಿಷ್ಟಾನ್ನದಾತನೆನುತುಂ ಗೊರವರ್: **ಸಮಯಪ,** ೧೪. ೭)

**ಮಿಸಿಸು –** [ಮೀಯಿಸು] ಸ್ನಾನಮಾಡಿಸು (ಜಳನಿಧಿ ಪಯಃಪ್ಲವಂಗಳನೊಳಕೊಂಡಂ ಸುರರ ಮಿಸಿಸುವ ಅವಸರದಾಗಳ್: **ಆದಿಪು,** ೭. ೯೦)

**ಮಿಸು –** ಮಿನುಗು, ಹೊಳೆ (ಬಳಸಿದ ಬಳ್ಳಿಯ ಜೊಂಪಂಗಳ ಮಿಸುವೆಳೆದಳಿರ ಕಾವಣಂಗಳ ಮೊಸವೂಗಳನಾಂತ ಮಲ್ಲಿಗೆಯ ಮನೆಗಳ ಚೆಲ್ವಿಂ ಚೆಲ್ವನಾಂತುದಾ ಪೊಟಿಲ ಬನಂ: **ಕಬ್ಬಿಗಕಾ,** ೨೭)

**ಮಿಸುಕು –** ಅಲುಗಾಡು, ಕಂಪಿಸು (ಮಿಸುಕು–ಸ್ಪಂದನೇ **ಶಬ್ದಮದ,** ಧಾ ೬೫); ಚಲಿಸು (ಅಂತು ಮಾರುತಿಯ ರಥಮಂ ಮಿಸುಕಲೀಯದೆ ಇಸುವುದುಂ: **ಪಂಪರಾ,** ೧೩. ೧೨೩ ವ); ಪ್ರತಿಭಟಿಸು (ಮಿಸಕದೆ ನಿಮ್ಮ ನಿಮ್ಮ ನಿಜರಾಜಿತರಾಜ್ಯವಿಲಾಸದಲ್ಲಿ ಸಂತಸದೋಳೆಯಿರ್ಪುದು: **ಕುಸುಮಾಕಾ,** ೬. ೧೨೨); ಚಲಾವಣೆಯಲ್ಲಿರು (ಸಸಿಯಿರ್ದಪನಮವಾಸೆಯ ಬಸದಿಂ ಕಾಣಲ್ಕೆ ಬಾರದಂತಿರೆ ಜಿನರುಂ ವಸುಧೆಯಾಳಿರ್ದಪರರಿರ್ದುಂ ಮಿಸುಕವ ಕಲಿಗಾಲದೆಸಕಂ ತಲೆದೋಱಿರ್: **ಧರ್ಮಾಮೃ,** ೫. ೧೨೭)

**ಮಿಸುಗು –** ಹೊಳೆ, ಕಂಗೊಳಿಸು (ಪಲ್ಲವಪ್ರಸರದೊಳ್ ಎಯ್ದೆ ಕಣ್ಗೆ ಪಸರಂಬಡೆದೊಪ್ಪುವ ಕೆಂಪು ತುಂಬಿಯೊಳ್ ಮಿಸುಗುವ ಕರ್ಪು: **ಆದಿಪು,** ೧. ೬೬)

**ಮಿಸುನಿ –** ಚಿನ್ನ (ಮಿಸುನಿಗೆ ಕಂಪು ರತ್ನತತಿಗೆ ಇಂಪು .. .. ಜೀವನಕ್ಕೆ ಅಸಿಯಳ ಬೇಟವೊಂದು ದೊರೆಕೊಂಡೊಡೆ ಸಂಪದಮಾಗಿ ತೋಱುಗುಂ: **ಅನುಭವ,** ೬)

**ಮಿಸುಪು –** ಹೊಳಪು (ಮಿಸಿಯ ಮಿಸುಪಂ ಕಂಡು ಕೆಟ್ಟದಱಿಂ ಕೆಟ್ಟು ಕೆಳೆಯಂಗಿಡಲಾಱದಿವರಱಿಯರರೆಂದು ಪಱಿಯೆ ನುಡಿವುದು ಪುರುಷಾರ್ಥಮಲ್ಲ: **ಸುಕುಮಾಚ,** ೩. ೭ ವ); ಮನೋಹರತೆ

**ಮಿಸುಪ್ಪ –** ಹೊಳೆಯುತ್ತಿರುವ (ಪ್ರಯತ್ನದೆ ಬಿಗಿದಿರ್ದ ಎರಟಿಲ್ದೊಣೆ ಮಿಸುಪ್ಪ ಅಸಿ ಖೇಟಕಂ ಇಂತಿವು ಒಂದುಗುಂದದೆ ನಿಲೆ ನೋಟ್ಟಿ ನೋಟಕರ್ಗೆ ಸೌಮ್ಯಭಯಂಕರನಾದಂ ಅರ್ಜುನಂ: **ಪಂಪಭಾ,** ೭. ೭೯)

**ಮಿಸುರ್ –** ಮಿರುಗು, ತಳತಳಿಸು (ಅಳಿವೃತಮಪ್ಪ ಕೊಂಬಿಳಿಯೆ ಸೆಂಬುಳಿಗೋಲ್ ವಸನಂ ಮಿಸುರ್ಪ ಕೆಂದಳಿರ್ ಅತಿಪಕ್ವ ಬಂಧುರ ಫಲಂ: **ಶಾಂತಿಪು,** ೭. ೧೩೬)

**ಮಿಹಿರ –** ಸೂರ್ಯ (ಮಿಹಿರಪ್ರದ್ಯೋತಿ ಸಂಧ್ಯಾಸಮಯದೊಳ್ ಪದ್ಮಿನೀ ಷಂಡದೊಳ್ ಪೊದಳ್ದು: **ಸುಕುಮಾಚ,** ೩. ೧೫)

**ಮಿಹಿರಾಧ್ವ –** ಸೂರ್ಯನ ದಾರಿ, ಆಕಾಶ (ಬಹುಧೂಮ ಲೇಖೆ ನಿಮಿರ್ದುವು ಮಿಹಿರಾಧ್ವದೊಳ್ ಆಂಜನೇಯನೊಡರಿಸೆ ಲಂಕಾದಹನಮಂ ಅಸುರೇಂದ್ರ ವಿನಾಶ ಹೇತುಗಳ್ ಧೂಮಕೇತುಗಳ್ ನೆಗೆದುವೆನಲ್: **ಪಂಪರಾ,** ೧೧. ೧೪೫)

**ಮಿಳಿ –** ಹಗ್ಗ (ಕೌಸಂಬಿಯೆಂಬ ಪೊಟಿಲೊಳ್ ಮಿಳಿಯ ಬಿದಿರ ಮೇಗೇಱಿ ಆಕಾಶದೊಳಾಡುವ ವಿದ್ಯಾಧರಲಂಗಿಗರ ಮನೆಯೊಳ್ ಪೆಣ್ಗೂಸ್ತೆಯಾಗಿ ಪುಟ್ಟಿ: **ವಡ್ಡಾರಾ,** ಪು ೮, ೨೬); ತೊಗಲಿನ ಪಟ್ಟಿ (ಮಿಳಿಲತೆ ಗುಳಮೇ ಪತ್ರಂ ಘಳಿರಸಮೇ ಮದಾಂಬು: **ಗಿರಿಜಾಕ,** ೭. ೪೪)

**ಮಿಳಿಂದ –** ದುಂಬಿ (ಪುಳಿಂದಂ ಮಿಳಿಂದನಂತೆ ಪವನಾತೀತಕುಸುಮಗಂಧಮನಾರಯ್ದು ಎಡೆಮಾಡಿ ಬಂದು: **ಪುಷ್ಪದಂಪು,** ೫. ೧೦೪ ವ)

**ಮಿಳಿಮಿಳಿಗಣ್ –** ಪಿಳಿಪಿಳಿಸುವ ಕಣ್ಣು (ಗಿಡಗಿಡಿಜಂತ್ರಂ ಮಿಳಿಮಿಳಿಗಣ್ಗಳೆನಲ್ ನೋಂತಳಿಂತು ನೋನದೆ ಸುಖಕ್ಕೆ ಬಯಸಿದೊಡುಂಟೇ: **ಸುಕುಮಾಚ,** ೯. ೮)

**ಮಿಳಿಮಿಳಿನೇತ್ರ –** ಮಿಳಿಮಿಳಿಗಣ್ (ಗಿಡಿಗಿಡಿಜಂತ್ರಂ ಮಿಳಿಮಿಳಿನೇತ್ರಮಾಗಿ ಘೋರವೀರತಪಶ್ಚರಣದೊಳ್ ನೆಗಟುತ್ತಿರ್ದರ್: **ವಡ್ಡಾರಾ,** ಪು. ೧೩೪, ಸಾ. ೩)

**ಮಿಳಿಯಿಕ್ಕು –** ಹಗ್ಗದಿಂದ ಕಟ್ಟು (ಪೋರಿಗಳಾಗಿ ರಾಜಮಂದಿರದ ಸೀಯಬಾರದೊಳ್ ಪೊಣರ್ದುಮಿಳಿಯಿಕ್ಕಿ ತೆಗೆಯೆಯುಂ ಕರಮೊಳಸೋರದೆ .. .. ಪೋರ್ದು ಕೊಂದು: **ಶಾಂತಿಪು,** ೯. ೪೮)

**ಮಿಳಿರ್ –** ಚಲಿಸು (ನನೆಯೆಸಳಂದಮಾದ ಗುಟಿಮುಂ ಪೊಳೆಯುತ್ತಿರೆ ನೀಳ್ಪುವೆತ್ತ ಪೂವಿನ ಪೊಸ ಟೆಕ್ಕೆಯಂ ಮಿಳಿರೆ ಪಕ್ಕದ ಕೋಗಿಲೆಯೆಂಬ ಗಂಟೆಗಳ್ ದನಿಗುಡೆ: **ಕಬ್ಬಿಗಕಾ,** ೧೬೫); ತೂಗಾಡು (ಮಿಳಿರ್ದು ಇಸದೆ ಮಸಕದೆ ತೋಱಿದೆ ಮಾಣ್ದಪನೆ ತನ್ನ ಸೊಗನನಂಗಂ: **ಲೀಲಾವತಿ,** ೪. ೪೬); ನಿಮಿರು (ಮಿಳಿರ್ವನ್ನಂ ಕುಡಿವಾಲಂ ಅವ್ವಳಿಸುವನ್ನಂ ದಿಟ್ಟಿ .. .. ತಿಳಿನೀರೂಡಿ ಮುರಾರಿ ವತ್ಸಸಂಕುಲಮಂ ಕಾದಂ: **ಜಗನ್ನಾವಿ,** ೩. ೭೦); ಸಮೃದ್ಧಿ ಹೊಂದು ಹಾಗೂ ಹೊರಳಾಡು (ಮಿಳಿರ್–ಸಮೃದ್ಧೌ ಲುಠನೇ: **ಶಬ್ದಮದ,** ಧಾ ೫೯೮); ಕಂಗೊಳಿಸು (ದಿವಮಂ ಏಳಿಪಂತು ಮಿಳಿರ್ವ ವಿವಿಧಕೇತನಂಗಳಿಂ ಸದಾನಿಕೇತನಂಗಳಿಂ: **ಪಂಪಭಾ,** ೧. ೫೮); ಅಲುಗಾಡುವ (ಅವಳ್ದಿರ ಮಿಳಿರ್ವೊಳ್ಗುರುಳ್ಗಳನೆ ಲೀಲೆಯಿನಾಡಿಸಿ ಪುಷ್ಪಕೇಸರಂ ತೆರಳೆ ತೆರಳ್ಚಿ ಬೀಸಿದುದು ತಂಬೆಲರೆಂಬೆಲರಪ್ಪಿಕೊಳ್ವವೋಲ್: **ಆದಿಪು,** ೨. ೬೫): ಕಂಗೊಳಿಸು (ನಳನಳಿಸುವ ಕೆಂದಳಿರ ಕಾವಣಂಗಳುಮಂ ಮಿಳಿರ್ವ ಮಲ್ಲಿಕಾಮಂಟಪಂಗಳುಮಂ: **ನೇಮಿನಾಪು,** ೩. ೧೦ ವ)

**ಮಿಳಿರ್ದಾಡು –** ಅಲುಗಾಡು (ಗುಡಿಯ ದಾಂಗುಡಿಗಳ್ ಮಿಳಿರ್ದಾಡುವಂತೆ ಕಣ್ಗೆಸೆದುವು ತತ್ಪುರೋತ್ತಮನ ಪುಣ್ಯಮನೊಯ್ಯನೆ ಸೂಚಿಪಂತೆವೋಲ್: **ಸುಕುಮಾಚ,** ೯. ೨೦): ಹೊಯ್ದಾಡು (ಕನರ್ಗೊನರೆಲ್ಲಿಯಲ್ಲಿ ಮಿಳಿರ್ದಾಡುವ ನುಣ್ದಳಿರೆಲ್ಲ ಬಲ್ಲನೆಗಳವೆಲ್ಲಿಯಲ್ಲಿ ಪೊರೆದೋಱುವ .. .. ಬನಂ : **ಕಬ್ಬಿಗಕಾ,** ೨೯); ಹಾರಾಡು (ಎಳಗಿಳಿವಿಂಡಿನಂತೆ ಮಿಳಿರ್ದಾಡುವ ತುಂಬಿಯ ಬಂಬಲಂತೆ ಕೆಂದಳಿರ್ಗಳ ತೊಂಗಲಂತೆ .. .. ಸೋಲಿಸದೆ ಕಾವನ ಕಬ್ಬಮದಾರನಾದೊಡಂ: **ಕಬ್ಬಿಗಕಾ,** ೧೪)

**ಮಿಳ್ಮಿಳಿಸು** – ಕಣ್ಣು ಮಿಟುಕಿಸು (ಮೆಲ್ಲನೀಕ್ಷಿಸಲುಂ ಮಿಳ್ಮಿಳಿಸಿ ಕಣ್ದೆಱೆವ ತೆಱದೆ ಸಂಪಗೆಯ ಮಲ್ಲಿಗೆಯ ಮುಗುಳ್ಗಳುಳ್ಳಲರೆಯುಂ; **ಆಚವರ್ಧ**, ೭. ೨೩ ವ)

**ಮಿಳ್ಳಿಸು** – ಚಲಿಸು, ಅಲುಗಾಡಿಸು (ಸರಿ ಸುರಿಯೆ ಮಿಂಚು ಮಿಳ್ಳಿಸೆ ಸುರಚಾಪಂ ನೆಗೆಯೆ ಬೆಗಡುಗೊಂಡವರಂ ಸಂವರಿಸಿ .. .. ಕಳೆದನವರುಮ್ಮಳಮಂ: **ಪಂಪರಾ**, ೧. ೮೧); ನಿಮಿರಿಸು (ಪಸರಿಸೆ ಪೂವಲಿಗಳ್ ಬಾಜಿಸೆ ಬದ್ದವಣಂಗಳ್ ಒಡನೆ ಮಿಳ್ಳಿಸೆ ಗುಡಿಗಳ್: **ಪಂಪರಾ**, ೩. ೧೩೪); ಆವರಿಸು (ದಳ್ಳುರಿಗಳ್ ಕಣ್ಗೊನೆಯೊಳ್ ಮಿಳ್ಳಿಸೆ ಬಿಲ್ತೊಡವುತ ಅಸುರನಂದು ಇದಿರಾದಂ: **ಉದ್ಭಟಕಾ**, ೪. ೭೩); ಕಂಗೊಳಿಸು (ಮಿಳಿದು ಮಿಳ್ಳಿಸೆ ವಾನರಕೇತನಂ .. .. ಮಾರುತಿಯೇಱಿದೆ ತೇರದೆಂ ತಳರ್ದುದೊ ಧರೆ ಕಂಪಿಸುವನ್ನೆಗಂ: **ಪಂಪರಾ**, ೧೩. ೧೦೯)

**ಮಿಳ್ಳಿಱಿ** – ಅಲುಗಾಡು (ಕುಡಿವಾಲಂ ನೆತ್ತಿಯೊಳ್ ಮಿಳ್ಳಿಱಿಯೆ ಪೊಳೆಯೆ ಕೂರ್ದಾಡೆ ಕೆಂಗಣ್ಗಳಿಂ ಕೆಂಗಿಡಿ ಸುತ್ತಂ ಸೂಸೆ: **ಶಬರಶಂ**, ೩. ೬೨)

**ಮಿಳ್ಳೆಗಾಲ್** – ಸಣಕಲು ಕಾಲು (ತೆರಳ್ದ ಮೊಗಂ ಕರ್ಗಿದ ಬಾಯ್ ಪುರುಳಿಲ್ಲದ ಮಿಳ್ಳೆಗಾಲ್ ಬೆಡಂಗಿಲ್ಲದ ಮೈ ಕೆರಕಿಂ ತುಱಿಯಿಂ ತೀವಿದ ಕರಚರಣಂ ಬೋಟಿಮಂಡೆ ಕುಗ್ಗಿದ ದೇಹಂ: **ಧರ್ಮಾಮೃ**, ೭. ೧೫೦)

**ಮಿಱಿಪಿಗ** – ವಿಲಾಸಿಗ (ಈ ತೆಱಿ ಮೆಱೆವ ಮಿಱಿಪಿಗರ ಮುಱುಕಂ ಆ ದೊರೆಯ ಭರದ ಜವ್ವನಿಗೆಯಂ: **ಆಚವರ್ಧ**, ೯. ೪೩ ವ)

**ಮಿಱುಗು** – ಥಳಥಳಿಸು (ಮಿಱುಗು– ಚಕಚಕಾಯಮಾನೇ: **ಶಬ್ದಮದ**, ಧಾ ೧೪೬); ಕಂಗೊಳಿಸು (ಮಿಱುಗುವ ರತ್ನಭಿತ್ತಿಗಳ ದೀಪ್ತಿಗಳಂ ನಿಜದೇಹದೀಪ್ತಿಗಳ್ ಮಱಸೆ: **ಆದಿಪು**, ೨. ೬೨)

**ಮಿಱುಪು** – ಕಾಂತಿ (ಮುತ್ತಿನ ಮಿಱುಪನಣಂ ಮೆತ್ತಿದಂತೊಪ್ಪೆ ಮೆಯ್ಯೊಳ್ ಪರಮಾತ್ಮಧ್ಯಾನಂ ಉಜ್ವಳಿತತಚಳಿತರ್ ಜೈನಯೋಗೀಶ್ವರರ್: **ಲೀಲಾವತಿ**, ೯. ೨೬)

**ಮಿಟ್ಟು** – ಸಾವು (ಮಿಟ್ಟುವನೊತ್ತಿ ಸಿರ್ಕಿನಿಂಪಿಡಿವ ಕಡಂಗಿ ನಿಂದ ಜವನಂ ಮುಱಿದಿಕ್ಕುವ .. .. ತುಟಿಲಾಳ್ಗಳ: **ಕಬ್ಬಿಗಕಾ**, ೧೬೧)

**ಮಿಟ್ಟು ಪೊಟ್ಟು** – [ಮೃತ್ಯು] ಸಾವಿನ ಸಮಯ (ವನಿತೆ ಪರಸ್ತ್ರೀ ಪೆಱರ್ಗೆ ಇತ್ತನಿತಱೋಱಿದಱಿದುಂ ಅಳುಪಂ ಆದಂ ಅಶ್ವಗ್ರೀವನ ಮಿಟ್ಟು: ಪೊಟ್ಟುವು ಆರ್ದಪುದು **ಶಾಂತಿಪು**, ೫. ೫೦)

**ಮಿಟ್ಟುಗರೆ** – ಮೃತ್ಯುವನ್ನು ಬರಮಾಡಿಕೊ (ಆ ಪರವಶೆ ತನ್ನೊಲ್ಲದನಂ ಕರೆದಳ್ ಬೆಟ್ಟೇಱಿ ಮಿಟ್ಟುಗರೆವಂತೀಗಳ್: **ಶಾಂತಿಪು**, ೮. ೮೨)

**ಮಿಟ್ಟುಗೊಡ್ಡ** – ಸಾವಿನ ಹೆದರಿಕೆಯ ಮಾತು (ಆ ಪಾಣ್ಬರಂಕುಸಂ ಆ ಪಾಣ್ಬೆಯರ ಗೆಯ್ದ ಗೆಯ್ತಂಗಳುಮಂ ತೋರ್ಪ ಸನ್ನೆಗಳುಮಂ ಆಡುವ ಮಿಟ್ಟುಗೊಡ್ಡಂಗಳುಮಂ ಕಂಡು ಚೋದ್ಯಂಬಟ್ಟು: **ಪಂಪಭಾ**, ೪. ೮೩ ವ)

**ಮೀ** – ಸ್ನಾನಮಾಡು (ಈತಂಗೆ .. .. ಮೀಯಲ್ ಬೇಡಿದೊಡಮೆಱೆಯದಿರೆಂದು ಕಲ್ಪಿಸಿದೊಡೆ: **ವಡ್ಡಾರಾ**, ಪು.೭೭. ಸಾ. ೬)

**ಮೀಂಗುಡಿ** – ಮೀನಿನ ಚಿಹ್ನೆಯುಳ್ಳ ಮನ್ಮಥನ ಬಾವುಟ (ಪೂಗಣೆ ಕರ್ವುವಿಲ್ ಮಿಳಿರ್ವ ಮೀಂಗುಡಿ .. .. ಸುಗ್ಗಿಯೆನಿಪ್ಪವೆಲ್ಲಮೊಂದಾಗಿಯೆ ದರ್ಪಕಂಗೆ: **ಚಂದ್ರಪ್ರಪು**, ೬. ೬೩)

**ಮೀಂಗುಲಿ** – ಬೆಸ್ತ (ಕುಲಿಯೆಂಬಾದೇಶಕ್ಕೆ: ಮೀಂಗುಲಿ, ಅಱಗುಲಿ: **ಶಬ್ದಮದ**, ೧೯೭ ಪ್ರ)

**ಮೀಂಗುಲಿಗ** – ಬೆಸ್ತ (ಮೀಂಗುಲಿಗರ್ ಬಲೆಯಂ ತೆಗೆದು ನೋಡಿ ಮುನ್ನಮೆ ಸತ್ತಂತಿರ್ದ ಉತ್ಪನ್ನಮತಿಯಂ ಕಂಡು: **ಪಂಚತಂತ್ರ**, ೨೨೪ ವ)

**ಮೀಂಗುಲಿಗವಕ್ಕಿ** – ಕೊಕ್ಕರೆ, ಬಕಪಕ್ಷಿ (ಮೀಂಗುಲಿಗವಕ್ಕಿ ಕಕೊಳನೊಳ್ ಮೀಂಗೆಱಗುವ ತೆಱದಿನೆಱಗಿ ನೋಡು ಇಲ್ಲಿರ್ದಂ ಪಿಂಗಾಕ್ಷನೆಂದು ಪವನಸುತಂತಱಿಪುವ ತೆಱದಿನಂದೇಂ ಸೊಗಯಿಸಿತೋ: **ಗದಾಯು**, ೬. ೪೬)

**ಮೀಂಗುಲಿಗೆ** – ಬೆಸ್ತ ಹೆಂಗಸು (ವ್ಯಾಸನ ತಂದೆ ಮೀಂಗುಲೆಗೆಯೊಳ್ ತದ್ವ್ಯಾಸಂ ಆ ಱಂಡೆಯೊಳ್ ನೆರೆದರ್: **ಸಮಯಪ**, ೧೦. ೧೭೩)

**ಮೀಂಟು** – ಕಿತ್ತು ಹಾಕು, ಮೀಟುವ ಆಯುಧ (ಮೀಂಟು– ಉತ್ಪಾಟನೇ ಉತ್ಕರ್ಷದ್ರವ್ಯೇಚ: **ಶಬ್ದಮದ**, ಧಾ ೨೫೬); ಮೇಲಕ್ಕೆತ್ತು (ಮುಳಿಸಿಂದೆ ಮಂದಸಿನ ಮುಚ್ಚುಳಮನುಂಗುಟದಿಂದೆ ಮೀಂಟಿ ಪೋಗೊದೆದು: **ಜಗನ್ನಾವಿ**, ೬. ೩೧)

**ಮೀಂಟುಜವ್ವನ** – ಉಕ್ಕುವ ಪ್ರಾಯ (ನಿಜಕಾಂತನಾಟಮಂ ಕೂಟಮಂ ಮೀಂಟುಜವ್ವನದ ಬೇಟಗಾರ್ತಿ ಕೂರ್ತು ಬಗೆದು ಬಯಸಿ ಬಗೆಯೊಳ್ಪವಿಸುತಿರ್ದಳ್: **ರಾಜಶೇವಿ**, ೭. ೯೨ ವ)

**ಮೀಂಟೆ** – ಮಣ್ಣು ಹೆಂಟೆ (ಕಲ್ಲಂ ತಾಗಿದ ಮೀಂಟೆಯಂತೆ ಮುಟ್ಟುಗೆಟ್ಟು ಪೆಂಡಿರ ಪೊಲ್ಲಮೆಯಂ ಕಂಡ ಗಂಡನಂತೆ ಮನಂ ಮುಱಿದು: **ಧರ್ಮಾಮೃ**, ೧೦. ೯೬ ವ)

**ಮೀಂಬುಲಿಗ** – ಮೀನುಗಾರ, ಬೆಸ್ತ (ಆ ಶಿರಿಷ್ಟಗ್ರಾಮದೊಳ್ ಮೃಗಸೇನನೆಂಬ ಮೀಂಬುಲಿಗನಿರ್ಪಂ: **ಧರ್ಮಾಮೃ**, ೧೦. ೧೬೭ ವ)

**ಮೀಂಬುಟು** – ಮಿಣುಕು ಹುಳು (ಎಮ್ಮನ್ನರಪ್ಪ ನರಕೀಟಕಂಗಳ ತೇಜಂ ಆದಿತ್ಯನ ತೇಜದ ಪೊರೆಯ ಮೀಂಬುಟುವಿನ ತೇಜದಂತಕ್ಕುಂ: **ನೇಮಿನಾಪು**, ೬. ೨೨ ವ)

**ಮೀಂಬೋಣರ್** – ಮೀನಿನ ಜೋಡಿ (ಅಂಗಜ ಮಂತ್ರಸಿದ್ಧವಡೆದಂತಿರೆ ಮೀಂಬೋಣರಾಗಿ ಜಾಳ್ವ ಜಾಳಂಗಳ ಸಿಲ್ಕುಗಂಡು ಕುಮಾರಿಯ ಕಣ್: **ನೇಮಿನಾಪು**, ೨. ೩೬)

**ಮೀಂಬೊಲಸು** – ಮೀನಿನ ಮಾಂಸ (ಮೀಂಬೊಲಸು ನಾರ್ಪ ಮೆಯ್ಯಂ .. .. ಬಿಡದೆ ಕಾಗೆಯುಂ ಪರ್ದುಂ ಬಳಸುವವು: **ಸುಕುಮಾಚ**, ೪. ೫೯)

**ಮೀಟು** – ಶ್ರೇಷ್ಠ (ಮೀಟೆನಿಸುವ ಇರವಂತಿಗೆಯ ಲತಾಂತರದೊಳ್ ಉರುಳ್ದು: **ಉದ್ಭಟಕಾ**, ೧೦.೨೨೧)

**ಮೀನ್** – ನಕ್ಷತ್ರ, ಮೀನು ಬಾನಂತೆ ಮೀನ್ಗಳಂ ತಳೆದು ಮುನ್ನಿರೆನಿಸಂ ಮಾವಿನಂತೆ ಕೋಡುಗೈಯೊಂದಿಯುಂ ಸೊರ್ಕಾನೆಯೆನಿಸಂ: **ಕಬ್ಬಿಗಕಾ**, ೪೩ ವ); ಪ್ರಕಾಶ (ಜಿಮತಮಿಲ್ಲದ ಪದದೊಳ್ ಜನಿಯಿಪ ಕುಮತದೊಳೆ ಯುಕ್ತಿ ವಲಮೇನಾನುಂ ಮನಕೆಸೆವಂತೆಸೆದುವು ಪಲವಿನನಿಲ್ಲದ ಪದದೊಳೊಗೆದ ತಮದೊಳ್ ಮೀಂಗಳ್: **ಪುಷ್ಪದಂಪು**, ೧೩. ೨೩)

**ಮೀನ** – ಮೀನು, ನಕ್ಷತ್ರ (ಮರ್ಬುವೆಳಗಂ ತಳೆದೊಪ್ಪುವ ಬಾಂಗೆಱೆಯೊಳ್ ಮೀಂಗಳ್ ತವಕದೊಳೆ ಮುಳುಂಗುವಂತೆ ಅಡಂಗಿದವಾಗಳ್: **ರಾಜಶೇವಿ**, ೧೨. ೧೨)

**ಮೀನಂಬುಟು** – ಮಿಂಚುಹುಳು (ಮುಂಬಿಟ್ಟು ಪರೆವ ಕಟ್ಟಿಲೆಯಂ ಚೆದಱಿ ತೆರಳ್ದ ಬೆಳಪ ಬೆಳಗಿಂದೆಸೆದಿರ್ಪಂಬುಜ ಸಖನಂತಿರೆ ಮೀನಂಬುಟು ಬೆಳಗಿಪುದಖಿಳ ಗಗನಾಂತರಮಂ: **ಕಾವ್ಯಾವಲೋ,** ೬೮೨)

**ಮೀನಕೇತನ** – ಮೀನಿನ ಚಹ್ನೆಯ ಧ್ವಜ[ವುಳ್ಳವನು], ಮನ್ಮಥ (ಕಂಡಂ ಇಂದುಮಂಡಳಮುಖಿಯಂ ಮನೋರಮೆಯಂ ನೃಪರಪಿನ ಮೀನಕೇತನಂ: **ರಾಜಶೇಖಿ,** ೧೦. ೬)

**ಮೀನಕೇತು** – ಮೀನಕೇತನ (ಮೀನಕೇತುವೆತ್ತಿಸಿದ ಸಮುಲ್ಲಸಝುಷಪತಾಕೆಯೆನಿಪ್ಪವೊಲಾಂತಳಾಕೆಯ ಆ ಪಸದನದೊಳ್ ಜಗತ್ತಿತಯಚಿತ್ತವಿಮೋಹನಶಕ್ತಿಯೇಟ್ಗೆಯಂ: **ಚಂದ್ರಪ್ರಪು,** ೬. ೬೬)

**ಮೀನಧ್ವಜ** – ಕಾಮನ ಧ್ವಜ (ನನೆವಿಲ್ ನಿಸ್ಸಾರಮಾದತ್ತು ಸೀಕರಿವೋದತ್ತು ಮೃಣಾಳತಂತುರಚಿತಜ್ಯಾಲೇಖೆ ಮೀನಧ್ವಜಂ ಕೊರಗಿತ್ತು ಕಂತು ಸೀದ ಗಜೆಯಂತಾದಂ: **ಮಲ್ಲಿನಾಪು,** ೧. ೧೯)

**ಮೀನಧ್ವಜಪಿತ** – ವಿಷ್ಣು (ಮೀನಧ್ವಜಪಿತನತಿ ಸುಮ್ಮಾನದಿ ಪೊಗಳಲ್ಕೆ ಮೆಚ್ಚಿ ಗಣಪದಮಂ ಕೊಟ್ಟ ಏಣಾಧಿನಾಥನಂ: **ತ್ರಿಷಷ್ಟಿಪು,** ೨೩. ೩೫):

**ಮೀನಾಂಕ** – ಮನ್ಮಥ (ಮೀನಾಂಕ ಮತ್ತೇಭ ಚಾಮರಮೋ .. .. ಎಂಬಿನಂ ಪುಷ್ಪಮಂಜರಿಯಂ .. .. ಅತ್ಯಾಶ್ಚರ್ಯದಿಂ ನೋಡಿದೆಂ: **ಕಾದಂಬ,** ೫. ೨೯)

**ಮೀಲನ** – ಮುಚ್ಚುವುದು (ಪಕ್ಷ್ಮದ್ವಯಂ ಜೋಲೆ ಕಣ್ ಮೀಲನದೊಳ್ ಸಮ್ಮೇಳನಂಬೆತ್ತಿರೆ .. .. ಗಱಿಪಿದತ್ತು ಆಮ್ರದೊಳ್ ಆ ತಾಮ್ರತುಂಡಂ: **ಚಂದ್ರಪ್ರಪು,** ೭. ೯೭)

**ಮೀಸಲ್** – ಹರಕೆ (ಮೀಸಲ್ಗೆ ಸಲುಗೆಗೆಯ್ವರ್ ಭಕ್ತರ್: **ಸಮಯಪ,** ೧೪. ೧೦೧)

**ಮೀಸಿಸು** – ಸ್ನಾನಮಾಡಿಸು (ನೆಯ್ಯೇಱೆಸಿ ಸೇಸೆಯಿಟ್ಟು ಮೀಸಿಸಿ ದುಕೂಲಮನುಡಿಸಿ ಕಯ್ಗೆಯ್ಸಿದಾಗಳ್: **ಹರಿವಂಶ,** ೧೧. ೧೩ ವ)

**ಮೀಸೆವೊಱು** – ಮೀಸೆಯನ್ನು ಬಿಟ್ಟಿರು (ನಿನ್ನಂ ಅನಾಕುಳಂ ಎನ್ನ ಚಟ್ಟರಿಂ ತಳವೆಳಗಾಗೆ ಕಟ್ಟಿಸದೆ ಮಾಣ್ದೊಡೆ ಕೆಮ್ಮನೆ ಮೀಸೆವೊತ್ತೆನೇ **ಪಂಪಭಾ,** ೨. ೫೦)

**ಮೀಹ** – ಸ್ನಾನ (ಕುಲಮಂ ಮಾಸಿಸಿ ಮೀಹಮಂ ತೊಱೆದು ಕಡರ್ ಪೇಸೆ ಪೆಯ್ಯೊಳ್ ಮಹಾಮಲಮಂ ತಾಳ್ದಿದ ಕಷ್ಪರಂ ಸವಣರಂ: **ಧರ್ಮಾಮೃ,** ೧. ೯೧)

**ಮೀಱು** – ಉಲ್ಲಂಘನೆ (ಮೀಱು–ಅತಿಕ್ರಮಣೇ: **ಶಬ್ದಮದ,** ಧಾ ೯೦೦); ವಿರೋಧಿಸು (ಪರಮಂಡಲವ್ಯಸನಮನಾರಯ್ವ ಮಪ್ಪೊಡಿತ್ತುಂ ತೆತ್ತುಂ ಬಾಟ್ವ ಮಂಡಲಮಲ್ಲದೆ ಕೀಱೆಯುಂ ಮೀಱೆಯುಂ ನೆಗಟ್ಟ ಮಂಡಲಮಿಲ್ಲ: **ಪಂಪಭಾ,** ೬. ೬೭ ವ)

**ಮುಂಕಣಿಸು** – ಮುಂದುವರಿ, ಮುನ್ನುಗ್ಗು (ಹಿಂಗಟ್ಟಿನೊಳ್ ಮುಂಕಣಿಸಿ ನೆಗಪಿದ ಸಬಳಂಗಳ ಮೊನೆಯ ಮೊತ್ತಂ: **ಗಿರಿಜಾಕ,** ೬. ೫೫ ವ)

**ಮುಂಕೊಳ್** – ಮೀರು, ದಾಟು (ತಾನೆ ಮುಂಕೊಂಡು ಅನಿತುಂ ಮುನ್ನೀರ ನೀರೊರ್ವಟಿಗೆ ತೆಗೆದೊಡಂ: **ಸಮಯಪ,** ೧೫. ೮೨)

**ಮುಂಗಯ್ವಲ** – ಮುಂಗೈ ಬಲ, ತೋಳ್ಬಲ (ದೆಯ್ವಮಿದೆಂದಜೆಯದೆ ಮುಂಗಯ್ವಲದಿಂ ಜೈನರಲ್ಲದರ್ ಪಿಡಿದುದೆ ಪೇಟ್ ದೆಯ್ವಂ: **ಸಮಯಪ,** ೮. ೨೨೯)

**ಮುಂಗಾರ್** – ಮಳೆಗಾಲದ ಆರಂಭ (ಸೋರ್ದುವು ಘೋರನೊಂದಿ ಪನಿಗಳ್ ಮುಂಗಾರ ಮೇಘಂಗಳಿಂ: **ಕುಸುಮಾಕಾ,** ೬. ೧೯)

**ಮುಂಗಾರೆ** – ಒಂದು ಮರ (ಮತ್ತಿ ಮಧುಕಂ ಮುಂಗಾರೆ ಪಚ್ಚಾರಿದಿಂಡಲಂ ಆಲಂ .. .. ಬಕುಳಂ ಬೇವತ್ತಕಂ ಕಿಂಶುಕಂ: **ರಾಜಶೇಖಿ,** ೫. ೫೬)

**ಮುಂಗುಡಿ** – ಮುಂದಿನ ಭಾಗ (ನಾಲ್ಕುಂ ತೆಱದ ಪುಸಿವಡೆಯಂ ಬಿಜ್ಜೆಯಿಂ ಪುಟ್ಟಿಸಿ ಮುಂಗುಡಿಯೊಳ್ ನಡೆವಂತೆ ಬೆಸಸಿ: **ಕಬ್ಬಿಗಕಾ,** ೧೫೩ ವ); ಬಳ್ಳಿಯ ಮುಂಭಾಗದ ಚಿಗುರು (ಒಸಗೆಯ ಮುಂಗುಡಿ ಚೆಲ್ವಿನ ಪಸರಂ .. .. ಸಿರಿಯ ಮೆಯ್ಸಿರಿ ಪಸುರ್ವಂದರ್ ನೃಪನ ಕಣ್ಗದೇಂ ರಂಜಿಸಿತೋ: **ಆಚವರ್ಧ,** ೭. ೪)

**ಮುಂಗುರಿ** – ಮುಂಗುಸಿ (ಈ ಪುಲಿ ಪಂದಿ ಕೋಡಗಂ ಮುಗುರಿಯೆಂಬ ನಾಲ್ಕಱ ಭವಾವಳಿಯಂ ಬೆಸಸಿಂ ಮುನೀಶ್ವರಾ: **ಆದಿಪು,** ೫. ೧೪)

**ಮುಂಗುಲಿ** – ಮೊಲ (ಕೋಡಗಂಗಳ ಬಳ್ಳಿವಾಲಮನೆಳನಾಗರೆಂದು ಸೆಳೆದು ಕೆಡಪಿ ಕಡದೀಡಾಡುವ ಮುದಿ ಮುಂಗುಲಿಗಳುಮಂ: **ಕಬ್ಬಿಗಕಾ,** ೧೮೧ ವ)

**ಮುಂಗೂಳೆಯ** – ಮುಂಭಾಗದ [ವಲಸೆ] ಗುಂಪು (ಆರ್ತರೌದ್ರಧ್ಯಾನಮೆಂಬ ಮುಂಗೂಳೆಯದ ನಾಯಕರ್ವೆರಸು ದುರ್ಜನರ ಕೂಟಮೆಂಬ ಪಿಂಗೂಳೆಯದ ವೀರರ್ವೆರಸು: **ಧರ್ಮಾಮೃ:** ೧೦. ೬೫ ವ)

**ಮುಂಗೋಲ್** – ಮುಂಭಾಗ (ಜನಕ ಕನಕರಿರ್ವರ್ ವಿಜಯ ಗಜಮನೇಱೆ ಮುಂಗೋಲೊಳ್ ನಡೆಯೆ ನಾಡ ಗಡಿಯನೆಯ್ದಿ ಬರ್ಪ ಸಮಯದೊಳ್: **ಪಂಪರಾ,** ೪. ೫೩ ವ)

**ಮುಂಗೋಳ್** – [ಸೈನ್ಯದ] ಮುಂಭಾಗ (ವಿರಾಟಂ ಶ್ವೇತನುತ್ತರಂ ಶಂಖನೆಂಬ ಮೂವರ್ ಮಕ್ಕಳುಂ ಶತಾನೀಕ ಶತದ್ಯುಮ್ನ ಶತಚಂದ್ರಂ ಮೊದಲಾಗಿ ಪನ್ನೊರ್ವರ್ ತಮ್ಮಂದಿರುಂ ಬೆರಸು ನೆಲನದಿರೆ ಮುಂಗೋಳೊಳ್ ನಡೆಯೆ: **ಪಂಪಭಾ,** ೯. ೯೫ ವ)

**ಮುಂಚು** – ಮುಂದುವರಿ (ಮುಂಚುವುದೆರೆವವಂ ಈವಂ ಕಿಂಚಾನರ್ಘ್ಯಂ ಯದವಸರೇ ದತ್ತಂ ಎನುತ್ತುಂ ಚದಿಂ ಈವುದು: **ಲೀಲಾವತಿ,** ೬. ೫೮); ಮುಂದಾಗಿ ಹೋಗು (ಇಂಚೆಯ ಪಸವಿನ ಬಱಿದ ಕಳಂಚಿನ ಡಾವರದ ಬಾಧೆಯಿಲ್ಲದ ಪದದೊಳ್ ಮುಂಚದೆ ಪಿಂಚದೆ ಬಳೆದು ವಿರಿಂಚಿಯ ಕೆಯ್ಪಿಡಿವೊಲಾದುವಾ ನಾಡೂರ್ಗಳ್: **ಪಂಪಭಾ,** ೮. ೫೧); ಮೇಲುಗೈಯಾಗು (ಮುಂಚದೆ ಪಿಂಚದೆ ಬಳೆದು ವಿರಿಂಚಿಯ ಕಯ್ವಿಡಿದವೊಲಾದುವಾ ನಾಡೂರ್ಗಳ್: **ಪಂಪಭಾ,** ೮. ೫೧)

**ಮುಂಜಕೇಶಿ** – ವಿಷ್ಣು, ಕೃಷ್ಣ (ನೆಗಟ್ಟೆವಡೆದ ಗರ್ತಮುಮಂ ಮುಂಜಕೇಶಿ ಕಿಶೋರನ ಬಾಯಂ ಸೀಱೆ ಸುರಿದ ರುಧಿರಂ: **ನೇಮಿನಾಪು,** ೮. ೨೨ ವ)

**ಮುಂಜಮೇಖಲೆ** – ನೊದೆಹುಲ್ಲಿನ ಉಡಿದಾರ (ಮುಂಜಮೇಖಲೆಗಳಂ ಒಪ್ಪಮಾಡುವ ಸಮಿತ್ಕುಶಮಂ .. .. ಸಮೆವ ವ್ಯವಸಾಯಮೆತ್ತಲುಂ: **ಕಾದಂಬ,** ೧. ೧೮೭)

**ಮುಂಜಿ** – [ಮೌಂಜಿ] ನೊದೆಹುಲ್ಲಿನ ಉಡಿದಾರ (ಸರಿಗೆಯೊಳ್ ಸಮೆದ ಅಕ್ಷಮಾಲಿಕೆ ಪೊನ್ನ ಮುಂಜಿ ತೊಳಪ್ಪ ಕಪ್ಪುರದ ಭಸ್ಮರಜಃ ತ್ರಿಪುಂಡ್ರಕಂ ಒಪ್ಪೆ ಪಿಂಗಜಟಾಳಿ ತಾವರೆಯ

ಸೂತ್ರದೊಳಾದ ಜನ್ನವಿರಂ ದುಕೂಲದ ಕೋವಣಂ ಕರಂ ಒಡಂಬಡೆ ನೋಟಕರ್ಕಳಂ ಆ ತಪಸ್ವಿ ಮರುಳ್ಚಿದಂ: **ಪಂಪಭಾ,** ೬. ೮)

**ಮುಂಜಿಗಟ್ಟು** – ಹುಲ್ಲಿನ ಉಡಿದಾರ ಕಟ್ಟು, ಉಪನಯನ ಮಾಡು (ಆತನುಂ ಬಿದಿಗೆಯ ಚಂದ್ರನಂತೆ ಕ್ರಮಕ್ರಮದಿಂ ಸುಖದಿಂ ಬೆಳೆದು ಮುಂಜಿಗಟ್ಟುವ ಪ್ರಾಯಮಾದೊಡೆ: **ವಡ್ಡಾರಾ,** ಪು ೭೩, ಸಾ ೨೦)

**ಮುಂಜಿಬಂಧನಕ್ರಿಯೆ** – ಉಪನಯನ (ಪ್ರಶಸ್ತ ದಿವಸ ವಾರ ನಕ್ಷತ್ರ ಮುಹೂರ್ತದೊಳ್ ಮುಂಜಿಬಂಧನಕ್ರಿಯೆಯಂ ಮಾಡಿದ ಬಟಿಕ್ಕೆ: **ವಡ್ಡಾರಾ,** ಪು ೭೩, ಸಾ ೨೧)

**ಮುಂಜೂರ್** – ಸೂರಿನ ಮುಂಭಾಗ (ಜತ್ವಕ್ಕೆ; ಮುಂಜೆಱಂಗು ಮುಂಜೂರ್ ತಣ್ಣೊಡರ್: **ಶಬ್ದಮದ,** ೭೮ ಪ್ರ)

**ಮುಂಡ** – ತಲೆಯಿಲ್ಲದ ದೇಹ (ಒಂದೆರಡು ಮುಂಡದಂತರದಿಂದಂ .. .. ಪೋಣ್ಮಿದ ಕಲ್ಲಂ ಮಂದಮತಿಗಳ್ ಸ್ವಯಂಭುವೆಂದು ಊಳ್ವರ್: **ಸಮಯಪ,** ೮. ೨೭)

**ಮುಂಡಾಡು** – ಮುದ್ದಾಡು, ತಲೆ ನೇವರಿಸು (ನಿಜಪ್ರತಿಬಿಂಬದೊಳ್ ಮುಂಡಾಡುವಂತೆ ಮಣಿಪೀಠದೊಳ್ ಪೆಱನೊಸಲನಿಟ್ಟು ಪೊಡೆವಟ್ಟು: **ಲೀಲಾವತಿ,** ೧೦. ೨ ವ)

**ಮುಂಡಿ** – ನಾಪಿತ, ಕ್ಷೌರಿಕ (ಕ್ಷುರಿ ಮುಂಡಿ ನಾಪಿತಂ: **ಅಭಿಧಾವ,** ೧. ೧೧. ೮೪)

**ಮುಂಡಿಗೆ** – ಮರದ ಗೂಟ (ಮುಂಡಿಗೆಯಂ ಮುಱಿದಾಗಳೇಂ ಬಿಸಿಲ್ಗದುರೆಗಳಂದದಿಂ ಕುದುರೆಗಳ್ ಪಲವುಂ ದೆಸೆಬಿದ್ದಮಾದುವೋ: **ಪಂಪರಾ,** ೧೧. ೧೫೪)

**ಮುಂಡು** – ಹಟಮಾರಿತನ (ಜ್ಞಾನಿಯೆಂ ಎಂಬನ ಮುಂಡಿಂಗೊಳಗಾಗದಿಪ್ಪವಂ ಸತ್ಪುರುಷಂ: **ಸಮಯಪ,** ೧೪. ೬೮)

**ಮುಂಡುವೋಗು** – ಕತ್ತರಿಸಿ ಹೋಗು (ಕಡಿಕಂಡಮಾದ ಮೆಯ್ಯುಂ ಕುಣಿಲ್ವಾಱುವ ಮುಂಡಮುಂ ಮುಂಡುವೋದ ಕಯ್ಯುಂ ಕಂಡುವೋದ ತೊಡೆಯುಂ ಪಿಸುಟ್ಟಿ ಕಿಱಿಪ್ಪೊಡೆಯುಂ ಕಣೆವೋದ ಕಣಕಾಲುಂ ದೊಣೆವೋದ ಮೇಗಾಲುಂ: **ಪಂಪರಾ,** ೧೩. ೫೪ ವ)

**ಮುಂತಾಗು** – ಮಿಗಿಲಾಗು (ಆಚಾರಂ ಬಸದಾಗಿ ಸದ್ಗುಣಗಣಂ ಮುಂತಾಗಿ .. .. ಆಚಾರ್ಯರ್ ನಮಗೀವರಕ್ಕೆ ನಯನಿಕ್ಷೇಪ ಪ್ರಮಾಣಂಗಳಂ: **ನೇಮಿನಾಪು,** ೧. ೪)

**ಮುಂತಿಡು** – (ಸುನಂದೆಯೆಂಬೊಳ್ ಮಿತ್ರಸಂಬಂಧಿಗಳಪ್ಪ ಜನಂಗಳ್ ಮುಂತಿಟ್ಟು ಕುಡೆ ಕೊಳಲ್ ತಕ್ಕುದೆಂದು ನುಡಿದೊಡಂಬಡಿಸಿ: **ವಡ್ಡಾರಾ,** ಪು ೬೦, ಸಾ ೨೬)

**ಮುಂತು** – ಮುಂಭಾಗ (ದುಷ್ಟಾಶ್ವದ ಮುಂತುಂ ಪಿಂತುಂ .. .. ಬೆಸನಿಯ ನುಡಿಯುಂ ನಡೆಯುಂ ಪೊಲ್ಲ: **ಧರ್ಮಾಮೃ,** ೯. ೯೦ ವ); ಆರಂಬದಲ್ಲಿ (ಧರ್ಮೋಪದೇಶಜ್ಞರಂ ಮುಂತಾ ಗೌತಮರಂ .. .. ಶ್ರೇಣಿಮಂ ಸಂತೋಷಂ ಮಿಗೆ ಕೂರ್ತು ಕೇಳ್ದನರ್ಥಿಶ್ರೀಗಾರ್ಮಮಂ ಧರ್ಮಮಂ: **ಧರ್ಮಾಮೃ,** ೧. ೬೧)

**ಮುಂದಲೆ** – ತಲೆಯ ಮುಂಭಾಗ (ಶಾಂಕರಿಗೆಸೆದುದು ಮುಂದಲೆಯೊಳಗರಳೆಲೆ ಬಹುರತ್ನನೂತ್ನಕಾಂತಿಪ್ರಸರಂ: **ಗಿರಿಜಾಕ,** ೩. ೮೧); ಮುಂಗೂದಲು (ಕೃಷ್ಣೆಯ ಮುಂದಲೆಯಂ ಪಿಡಿದು ಎಳೆವಲ್ಲಿಯೆ ತಲೆವಿಡಿದರ್ ನಮ್ಮ ಬೀರಮಂ ಕೌರವರುಂ: **ಪಂಪಭಾ,** ೭. ೫೬)

**ಮುಂದಱಿ** – ಮುಂದಾಗುವುದನ್ನು ತಿಳಿ (ಅಂತೊಗೆದ ಅನೇಕೋತ್ಪಾತಂಗಳಂ ಕಂಡು ಮುಂದಱಿವ ವಿದುರನಿಂತೆಂಂ: **ಪಂಪಭಾ,** ೧. ೧೩೨ ವ); ದೂರದೃಷ್ಟಿಯನ್ನು ಹೊಂದು (ಮುಂದಱಿಯದ ಮುಗ್ಧೆಯೆಂದುದಕ್ಕೆ ನಗುತ್ತುಂ ನಡೆದು: **ಅನಂತಪು,** ೮. ೨೩ ವ)

**ಮುಂದಿಡು** – ಮುಂದುಗಡೆ ಇರಿಸು (ಇತ್ತಲ್ ಸೌಮಿತ್ರಿಯುಂ ತನ್ನ ಮನೆಗೆ ಬಂದು ಪೊನ್ನಪುಡಿಯನತ್ತೆವಿರ ಮುಂದಿಟ್ಟು ಪೊಡಮಟ್ಟೊಡತ್ತೆವಿರ್ ಸಂತೋಷಂಬಟ್ಟು: **ಪಂಚತಂತ್ರ,** ೨೨೧ ವ); ಮುಂದುವರಿ (ಕೊಂದು ಜಟಾಯುವಂ ಆತಂ ಮುಂದಿಟ್ಟಾ ಜನಕಸುತೆಯನೊಯ್ದಂ: **ಕವಿರಾಮಾ,** ೩. ೧೯೪); ಅರ್ಪಿಸು (ಬೆಸನಾವುದೆಮಗೆ ಬೆಸನಂ ಬೆಸಸೆನೆಯೇಬಾಳ್ತೆಯೆಂದು ಮುಂದಿಟ್ಟರ್ ಸ್ವಗ್ರಸನವಿಲೇಪನ ಭೂಷಾಪ್ರಸರಂಗಳನಲ್ಲಿ ಕೆಲರತಿ ಜಡಮತಿಗಳ್: **ಆದಿಪು,** ೯. ೧೨೫)

**ಮುಂದು** – ಮುಂಭಾಗದಲ್ಲಿ (ಸಿಂಹಾಸನದಿಂದಿೞಿದು ಮುಂದನೇೞಡಿಯಂ ನಡೆದು ಅವರಿದ್ ದೆಸೆಗೆ ಪೊಡೆವಟ್ಟು: **ಸುಕುಮಾಚ,** ೮. ೪೬ ವ)

**ಮುಂದುಱುವರಿ** – ಮುಂದೆ ಸಾಗು (ಅತಿರಭಸದಿಂ ಮುಂದುಱುವರಿದಂತೆ ನಖಮಯೂಖಂಗಳ್ ನಿಮಿರೆ: **ಕಾದಂಬ,** ೬. ೭೯ ವ)

**ಮುಂದುಱುವಾಯ್ತರ್** – ಮುಂದುವರಿದು ಬಾ (ಮುಂದುಱುವಾಯ್ತರ್ಪ ಎಳದಿಂಗಳ್ ತೊರೆದು ತೋರಂಬೆತ್ತ ಬಲ್ಗೆಚ್ಚಲೊಳ್ಪೊಱೆಯಂ ಪೆರ್ದೊಡೆಯಿಂದಿಱುಂಕಿ ಮೊಲೆಯಿಂ ಪಾಯ್ತರ್ಪ ಪಾಲಿಂದ ಪಾಲ್ದೊಱೆಯಂತಾ ತೊಱೆಯಪ್ಪುದು: **ಲೀಲಾವತಿ,** ೫. ೮೨)

**ಮುಂಬಗಲ್** – ಬೆಳಿಗ್ಗೆ (ಅಂತು ಮುಂಬಗಲ್ವರಂ ತುಮುೞಿ ಕಾದುವ ಸಮರಭರಂ ಮನೋರಾಗಮಂ ಮಾಡೆಯುಂ ಮಮ್ಮೞಿಸಿ ಪಾಂಡವಕೌರವಬಲದ ಕಲಿಕೆಯ ಪ್ರಧಾನನಾಯಕರ್ಕಳ್: **ಪಂಪಭಾ,** ೧೩. ೩೭ ವ)

**ಮುಂಬಟ್ಟೆ** – ಮುಂದಿನ ಹಾದಿ(ತಂತಮ್ಮ ಮೇರೆಯಂ ತಪ್ಪಿದೊಡೆ ದಂಡಮಂ ಕೊಳ್ವ ಭೂಪಾಲರ ನಾಡವರಮಾಟದಿಂದೆ ಮುಂಬಟ್ಟೆಗಳೂರಂ ಪೊರ್ದಿ ಪೋದಂತೆ: **ಧರ್ಮಾಮೃ,** ೯. ೪೧ ವ)

**ಮುಂಬದ** – ಸುರತದ್ರವ (ಬೆಂಡೇಟ್ಟು ಕಣ್ ಬೀಯದಟ್ಟುಱುಳಂ ಪಾಸಿಗೆ ನಾಂಬ ಮುಂಬದಮಳುಂಬಂ ಕೂಟದೊಳ್ ನಲ್ಲರಾ: **ಚಂದ್ರಪ್ರಪು,** ೮. ೬೮)

**ಮುಂಬನಿ** – ಮೊದಲ ಹನಿ, ಮೊದಲ ಮಳೆ (ಚಂದ್ರನನಂಭೋನಿಧಿ ಬಂದ ದೂವೆ ಮಲೆಯಂ ಕಾರ್ಗಾಲಮಂ ಸೋಗೆ ಮುಂಬನಿಯಂ ಚಾದಗೆವಕ್ಕಿ .. .. ನೆನವಂತೆ ನೆನೆವೆಂ ಸರೋಜಮುಖಿಯಂ: **ಆದಿಪು,** ೧೨. ೩೧)

**ಮುಂಬಯಣ** – ಮುಂಚಿತವಾದ ಪ್ರಯಾಣ [ನಂಬಿ ನೃಪನೆನಗೆ ಸೈಂಧವನಂ ಬಂದಪ್ಪೆಸೆ ಪೂಣ್ದೆಂ ಆದುದಂ ಆಗಲ್ಕೆ ಇಂಬು ಅೞಿದನುವರದೊಳ್ ಅವಂ ಮುಂಬಯಣಂಬೋದಂ ಎನಗೆ ಮಾಣ್ಬುದು ದೊರೆಯೇ: **ಪಂಪಭಾ,** ೧೨. ೨)

**ಮುಂಬರೆಯ** – ಹೊಸ ಯೌವನ (ಮಿಗೆ ಚೆಲ್ವಂ ರೂಪಿನೊಳ್ ಮತ್ತೆ ಮುಂಬರೆಯಂ ಚೆಲ್ವನಿತ್ತುಮೆಯ್ದೆ ಕಡುಚೆಲ್ವಂ ಬೇಟದಿಂ ಬೇಟಮೆಂಬರಸಂ ಮನ್ನಿಸದಂನಾಯಕಮುಂ: **ಅನಂತಪು,** ೮. ೫೭)

**ಮುಂಬಲ** – ಸೈನ್ಯದ ಮುಂಭಾಗ, ಮುಂಚೂಣಿ (ಮಲಯಮಾರುತನ ಬೆಂಬಲಮುಮಂ ಚೈತ್ರಮಿತ್ರನ ಮುಂಬಲಮುಮಂ ಮಕರಕೇತನನ ಪೆಂಪುಮಂ ರತಿಯ ಸೋಂಕಿನ ಸೊಂಪುಮಂ ದರ್ಪಕನ ದರ್ಪಂಬೆರಸು ಎಟಕುಳಿಗೊಂಡು : **ಅನಂತಪು,** ೬. ೨೨ ವ)

**ಮುಂಬಾಯ್** – [ಮುನ್+ಪಾಯ್] ಮುಂದಕ್ಕೆ ಹಬ್ಬು (ಚಂದ್ರಧ್ವಜಾವನಿಪಂ .. .. ಉದ್ಯೋಗಿಸಿದಂ ದ್ವಿಜದ್ಯುತಿನಿಕಾಯಂ ನೀಳ್ದು ಮುಂಬಾಯ್ವಿನಂ: **ಕುಸುಮಾಕಾ,** ೧೫. ೭೩); ಮುಂದೆ ಹರಿ (ಸೋರ್ವಾ ವಾರಿಧಾರಾವಳಿಯನಿರದೆ ಮುಂಬಾಯ್ವ ವಾರಿಪ್ರವಾಹಾವಳಿ: **ಕುಸುಮಾಕಾ,** ೬. ३೦)

**ಮುಂಬಿಡು** – ಎದ್ದು ತೋರು (ಆರ ಮತದೊಳ್ ಮುಂಬಿಟ್ಟಾರಯ್ಯೆ ಧರ್ಮಮುಂಟು ಅದೆ ಸಾರಂ ತಾನಲ್ತೆ ಭುವನದೊಳ್: **ಸಮಯಪ,** ३. ३೧) ಮುಂದಕ್ಕೆ ಬಿಡು (ಮುಂಬಿಟ್ಟು ಅವನಿಪರಂ ಕೂಡೆ ಆಡಬಾರದ ತೆಱದಿಂ .. .. ಎನಿಪವರಂ ಜೈನಕ್ಕೆ ತರಲೆಬಾರದು: **ಸಮಯಪ,** ೧೫. ೭೧)

**ಮುಂಬು** – ಮೊದಲು, ಆರಂಭ (ಸುರತದ ಸುಗ್ಗಿ ಕಾಮನ ಸರಲ್ಗಳ ಪೂವಿನ ಪೊಟ್ಟು .. .. ಸುರಾಗರಸಂಗಳ ಕಾರ ಮುಂಬು ತತ್ಪುರವರದಲ್ಲಿ ಸಾತ್ವಿಕದ ಮಥನಡುಕಂಗಳ ಮಾಗಿಯಾಗಳುಂ: **ನೇಮಿನಾಪು,** ೧. ೬೮); ಮುನ್ಸೂಚನೆ (ತಾಗಿದಂ ದಾನವ ರಾಜನಂ ಜವನ ಮುಂಬಿವನೆಂಬಿನೆಗಂ ಬಿಭೀಷಣಂ: **ಪಂಪರಾ,** ೧೪. ೧೦); ಮುಂದಾಳು (ಪಂಚಾನನದಂತೆ ಗರ್ಜಿಸಿ ದಶಾನನೆಯ್ತರೆ .. .. ತಾಗಿದಂ ದಾನವರಾಜನಂ ಜವನ ಮುಂಬಿವನೆಂಬಿನೆಗಂ ವಿಭೀಷಣಂ: **ಪಂಪರಾ,** ೧೪. ೧೦)

**ಮುಂಬುಗಳೆ** – [ಮುಂಬು+ಕಳೆ] ಮುಂದಾಗುವುದನ್ನು ಅಲಕ್ಷಿಸು (ಮುಂಬುಗಳೆದು ಕಾದಿವರರಿ ಬಿರುದರ್ ಕಾದುವಂತೆ ಕುರುಪಾಂಡುಸುತರ್: **ಗದಾಯು,** ೮. ೧೪)

**ಮುಂಬುಗೊಳ್** – [ಮುಂಬು+ಕೊಳ್] ಮುಂದೆ ಹಬ್ಬು (ಅದೆ ಘೂತ್ಕಾರೋಚ್ಚಳಚ್ಛೀಕರ ತಿಮಿತ ಚಮೂರೇಣು ದಿಗ್ಭಿತ್ತಿಯ ಮೆತ್ತಿದುದೆತ್ತಂ ಮುಂಬುಗೊಂಡು ಅಂಬರಮನಿತುಮಂ: **ಆಚವರ್ಧ,** ೮. ೯)

**ಮುಂಮೊನೆ** – ಒಂದು ಬಗೆಯ ಬಾಣ (ನೆಱೆದು ನಿರ್ವಾಯಂ ನರುವಾಯಂ ಮುಂಮೊನೆ ನೆರಕೆ ನಾರಾಚಂ ತಗರ್ತಲೆಯಂ: **ಪಂಪಭಾ,** ೧३. ३೯)

**ಮುಕುಂದ** – ಕೃಷ್ಣ (ಕಾವ್ಯಸಮಾಧಿಯಿಂ ಪರಂಜ್ಯೋತಿ ಮುಕುಂದನೆನ್ನ ಬಗೆಯೊಳ್ ನಿಲೆ: **ಜಗನ್ನಾವಿ,** ೧. ೧೭); ಮದ್ದಳೆ (ನೆಗಟ್ಟುದು ರಾಜ್ಯಸಮರ್ಪಣಯುಗಪತ್ತ್ರಿಹತ ಮುಕುಂದರವಂ ಒಂದೆಡೆಯೊಳ್: **ಆದಿಪು** ನರಸಿಂ, ೯. ೬೬)

**ಮುಕುರ** – ಕನ್ನಡಿ (ಜಿನವಚನವಿನಿರ್ಗತ ವಾಗ್ವನಿತೆಗೆ ಮಾಂಗಲ್ಯಕಾರಣಂ ಮಂಡನಮೀತನ ವಾಗ್ವಿಲಾಸಂ ಆದತ್ತು ಎನಿಸಿದೀತನೆ ಸರಸ್ವತೀಮುಖಮುಕುರಂ; **ಸುಕುಮಾಚ,** ೧. ೫೦)

**ಮುಕುಳ** – ಮೊಗ್ಗು (ನಸು ಬಿರಿದ ಕಮಲಮುಕುಳದ ನಸುಬಿರಿವುತ್ಪಲದ ಮುಗ್ಧಪರಿಮಳಗಂಧಂ ಪೊಸವೇಟದ ಪಟವೇಟದ ಸುಸಿಲಿನಿದಂ ಪಡೆದುದಳಿಗೆ ಬೆಳಗಪ್ಪಾಗಳ್: **ಅಜಿತಪು,** ೬. ೬೫)

**ಮುಕುಳಿತ** – ಮೊಗ್ಗಾಗಿರುವ, ಮೊಗ್ಗು ಬಿಟ್ಟ (ಚಾರುವಿಟಪಾವಳೀವೃತ ಕೋರಕಿತ ಅಂಕುರಿತ ಪಲ್ಲವಿತ ಮುಕುಳಿತ ವಿಸ್ತಾರಿತ ರಮ್ಯಾಶೋಕಮಹೀರುಹ: **ಆದಿಪು,** ೧೦. ४೧); ಬಾಡು, ಚಿಕ್ಕದಾಗು (ರತಿ ಮುಕುಳಿತಾನನೆ ನಿಂದು ಉಮ್ಮಳದಿಂದೆ ಮುಂದೆ ಮೆಯ್ಯಿಕ್ಕಿದಳ್: **ಗಿರಿಜಾಕ,** ೧೦. ೬)

**ಮುಕುಳಿತಕರ** – ಮುಗಿದ ಹಸ್ತ (ಅನಂತರಂ ವಿಶ್ವಸೇನಾವನೀನಾಥನುಂ ಐರಾ ಮಹಾದೇವಿಯುಂ ಕುರುಕುಳಾಗ್ರಗಣ್ಯರಪ್ಪ ಬಂಧುಗಳುಂ ಮುಕುಳಿತಕರಕಮಳರ್ ಬಳಸಿಯುಮಿರೆ: **ಶಾಂತಿಪು,** ೧೦. ೭೮ ವ)

**ಮುಕುಳಿತಾಂಜಲಿ** – ಮುಕುಳಿತಕರ (ಅಂತು ಬೆಸಗೊಳ್ವುದುಂ ಮುಕುಳಿತಾಂಜಲಿಪುಟನಾಗಿ ವಿಪುಲಮತಿ: **ಪಂಪರಾ,** ೧೦. ೬೫ ವ)

**ಮುಕುಳಿತಾಕ್ಷ** – ಮುಚ್ಚಿದ ಕಣ್ಣುಗಳವನು (ನೀನಿರ್ಪಿರವಿನ ಪರಿಯೇನೆಂದು ಆಂ ಸರೋಜಮುಖಿ ಮುಕುಳಿತಾಕ್ಷನಂ ಬೆಸಗೊಂಡೆಂ: **ಕಾದಂಸಂ.** ४. ೬೦)

**ಮುಕ್ಕಡಿ** – ಮೂರು ಭಾಗ (ದ್ವಿರದೇಂದ್ರಂ ಭರದಿಂ ಖಂಡಿಸೆ ಮುಕ್ಕಡಿನಿರತಂ ತಾನಾಯ್ತು ದುಸ್ತರಂ ಮಿಥ್ಯಾತ್ವಂ: **ಪಾರ್ಶ್ವನಾಪು,** ೫. ४२)

**ಮುಕ್ಕು** – ಗಬಗಬ ತಿನ್ನು (ಅಂಘ್ರಿಯುಗ್ಮದಿಂದೊರಸುವ ಕೈಗಳಿಂ ಪೊಸೆದು ಮುಕ್ಕುವ ಅಗುರ್ವಿನ ಕುಂಭಕರ್ಣಂ: **ಜಗನ್ನಾವಿ,** ೧. ೭೦); ನಾಶಮಾಡು (ಆನೆದಿಂಬಂಗಾಡುವರಿದೆಂಬವೋಲ್ ಪೊಸೆದು ಮುಕ್ಕಲ್ ಸಾಲನೇ ಶಾರ್ಙ್ಗಿ: **ಜಗನ್ನಾವಿ,** ೮. ೯೫)

**ಮುಕ್ಕುಪ್ಪೆ** – ಮೂರು ಕುಪ್ಪೆ, ರಾಶಿ (ಹ್ರಸ್ವದಿವತ್ವಂಗಳ್ಗೆ: ಮುಪ್ಪುರಿ ಮುಕ್ಕುಪ್ಪೆ ಮುಗ್ಗುಡ್ಡೆ: **ಶಬ್ದಮದ,** ೧೯೯ ಪ್ರ)

**ಮುಕ್ಕುವೋಗು** – ಮುರಿದು ಹೋಗು, ಊನವಾಗು (ಭಿಕ್ಷಾನ್ನಿಕ್ಕುವಲ್ಲಿ ಸತಿಯಂ ಬೇಡೆಂದು ಕಣ್ಕೆತ್ತುವಂದಿನ ಸೊರ್ಕ್ಕುಕ್ಕಟ ಮುಕ್ಕುವೋಗಿ ಕಡೆಯೊಳ್ ಭೈಕ್ಷಕ್ಕೆ ಪಕ್ಕಾದಿರೇ: **ಸುಕುಮಾಚ,** ४. ೨೬)

**ಮುಕ್ಕುಳ್** – ಬಾಯಲ್ಲಿ ತುಂಬಿಕೊಂಡ ದ್ರವ (ತತ್ಸಿಂಧುಬಂಧದ ನೀರೆಲ್ಲಮನೊಂದೆ ಮುಕ್ಕುಳೊಳೆ ತಂದಾ ವಹ್ನಿಯಂ ತೂಳ್ದಿದಂ: **ಜಗನ್ನಾವಿ,** ೧೮. ೫); ಮುಕ್ಕುಳಿಸು (ತುಳುಕುವೊಡೆಯ್ದದೊರ್ಕುಡಿತೆಗಂ ತೆಗೆದೀಂಟುವೊಡಾಗದೊಂದು ಮುಕ್ಕುಳಿಗೆನೆ ಸಾಲ್ದುದಿಲ್ಲ: **ಜಗನ್ನಾವಿ,** ೭. ೧೬)

**ಮುಕ್ಕುಳಿಸು** – ಬಾಯಲ್ಲಿ ತುಂಬಿಕೊಂಡು ಉಗುಳು (ಮುಕ್ಕಳಿಸಿಯುಗುಟ್ಟ ಮಧುವಿಂ ಮಿಕ್ಕೆಸೆವಾಮೋದಮಿದಱ ತಣ್ಗಂಪಿನೊಳ್ವೊಕ್ಕುದೆನೆ: **ಆದಿಪು,** ೧೧. ೧೨४); ಗುಟುಕು ಕೊಡು (ದೀಹದ ಚಕೋರಿಳ್ ಅಟ್ಟಿಱೆಂ ಮುಕ್ಕುಳಿಪ ಮುಂಡಾಡುವ ಕರ್ದುಂಕುವೊದೆವ ಚೆಲ್ಲಕೆ ಮೈಸಾರ್ಚಿಯುಂ: **ಚಂದ್ರಪ್ರಪು,** ೮. ४४ ವ)

**ಮುಕ್ಕುಱು** – ಮುತ್ತಿಗೆ ಹಾಕು (ಮುಕ್ಕುಱಿಂದು ಮುಸುರುಹಂ: **ಶಬ್ದಮದ,** ಪ್ರಸಾ ೨೦೦)

**ಮುಕ್ಕೊಡೆ** – [ಜೈನ] ಚಕ್ರವರ್ತಿ ಲಾಂಛನದ ಮೂರು ಕೊಡೆಗಳ ಸಾಲು (ಪಿರಿದೆತ್ತಿದ ಠಕ್ಕೆಯ ಝಲ್ಲರಿ ಮುಕ್ಕೊಡೆ ಕನಕಮಯದ ದಂಡಿಗೆ ವರ ಚಾಮರಮೆಸೆಯೆ ಪಲವು ಸವಣರ್ವೆರಸು ಪುತ್ತನಂದಿಗಳ್ ಪೊಱಮಟ್ಟರ್: **ತ್ರಿಷಷ್ಟಿಪು,** ३೨. ೬३)

**ಮುಕ್ತ** – ಪ್ರಯೋಗಿಸಿದ (ತಾಗಿದ ನೆಗಟ್ದೊಳ್ಗಂಡರ ಗಂಡೋಡುವಿನಂ ಕೊಂದುವು ಗಾಂಡೀವ ಮುಕ್ತ ಬಾಣಗಣಂಗಳ್: **ಪಂಪಭಾ,** ೫. ೮೮)

**ಮುಕ್ತಕ** – ಮುತ್ತುಗ (ಆ ವನಂ ಘನ ಕದಂಬ ಮುಕ್ತಕವಿಲಸಿತಮುಂ ವಸುದೇವಭವನದಂತೆ ಅನಿರುದ್ಧ ಬಲಕೃಷ್ಣಸಾರಸಮಂಚಿತಮಮುಂ: **ರಾಜಶೇವಿ,** ೫. ೭೪ ವ); ಪೂರ್ಣಾರ್ಥದ ಬಿಡಿಪದ್ಯ (ಆದರದಿಂ ಕಬ್ಬಿಗನಪ್ಪಂ ಪರಮನಂ ಓಲಗಿಪುದೊಂದು ಮುಕ್ತಕದಿಂದಂ: **ಸಮಯಪ,** ೬. ೫೬)

**ಮುಕ್ತಕ ಪದ** – ಬಿಡಿ ಮಾತು (ಕಾರಕಮಂ ಕ್ರಿಯೆಯುಮಂ ಅಱಿದು ಓರಂತಿರೆ ಮುಂ ತಗುಳ್ಚಿ ಮುಕ್ತಕ ಪದದೊಳ್: **ಕವಿರಾಮಾ,** ೨. ೮೭)

**ಮುಕ್ತಕೇಶಿ** – ಕೂದಲು ಬಿರಿ ಹುಯ್ದುಕೊಂಡ ವ್ಯಕ್ತಿ (ಎನಿತುಂ ಕುಕ್ತಕೇಶಿ ನಮೆವಳ್ ತದ್ದುಃಖಮಂ ಕಂಡು ಕಂಡನಿತುಂ ಸ್ಯೆರಿಪೆನಾನುಮೆನ್ನನುಜರುಂ: **ಗದಾಯು,** ೬. ೨೪)

**ಮುಕ್ತಾ** – ಮತ್ತು (ಮುಕ್ತಾನಾಮಂ ಮೌಕ್ತಿಕಂ: **ಅಭಿಧಾವ,** ೧. ೪. ೯)

**ಮುಕ್ತಾತತಿ** – ಮುತ್ತುಗಳ ಹಾರ (ಅಧರಸದ್ವಿದ್ರುಮಂ ದಂತ ಮುಕ್ತಾತತಿಯೊಳ್ .. .. ಇಂಬಾಗೆ .. .. ತಳ್ತಿರ್ದನ್ ... .. ಲೀಲಾವತೀದೇವಿಯ ಹೃದಯದೊಳ್: **ಲೀಲಾವತಿ,** ೧೪. ೯೮)

**ಮುಕ್ತಾತ್ಮ** – ಮುತ್ತುಗಳಿಂದ ರಚಿಸಿರುವ, ಜೀವನ್ಮುಕ್ತನಾದ (ಸ್ಮರಪರವಶಂಗಳಾದಂತಿರೆ ಮುಕ್ತಾತ್ಮಂಗಳೆನಿಸಿಯುಂ ಹಾರಂಗಳ್ .. .. ಸರಸಿಜಲೋಚನೆಯಂ ಆದಮಪ್ಪಿದುವಾಗಳ್: **ಕಾದಂಬ,** ೭. ೩೨)

**ಮುಕ್ತಾಪುಟೋದರ** – ಮುತ್ತಿನ ಚಿಪ್ಪಿನ ಒಳಭಾಗ (ಕರಿಮಕರಂಗಳ ಕಯ್ಯೇಱೆನೊಳ್ ಬಿಬ್ಬಿರಿಬಿಡಿದೊಡೆದ ಮುಕ್ತಾಪುಟೋದರಂಗಳ ಒಳಗಣಿಂದಮುಚ್ಚಳಿಸಿದ ತಾರಾತರಳಮುಕ್ತಾಫಲಂಗಳುಮಂ: **ಆದಿಪು,** ೧೨. ೭೯ ವ)

**ಮುಕ್ತಾಫಲ** – ಮುತ್ತು (ಚಳವಂಭೋಬಿಂದು ಮುಕ್ತಾಫಲಮೆನಿಸುವವೊಲ್ ಶುಕ್ತಿಕಾಸಂಗದಿಂ ನಿಶ್ಚಳಧೈರ್ಯಾಲಂಬಮಾಗಿರ್ದ ಅವನಿಪತಿಯ ಹೃತ್ಸಂಗದಿಂದಂ .. .. ಲಕ್ಷ್ಮೀಕಾಂತೆ .. .. ಅತಿಸ್ಥೈರ್ಯಮಂ ತಾಳ್ದಿದಳ್: **ಮಲ್ಲಿನಾಪು,** ೩. ೧೯)

**ಮುಕ್ತಾಭರಣ** – ಆಭರಣ ಕಳಚಿದ, ನಿರಾಭರಣ (ವಿರಹಿಯಂತೆ ಮುಕ್ತಾಭರಣನುಂ .. .. ಶಿಶಿರಸಮಯದಂತೆ ಆರೋಢತಪನುಮಾಗಲೊಡಂ: **ಚಂದ್ರಪ್ರಭ,** ೯. ೪೧ ವ); ಮುತ್ತಿನ ಒಡವೆ (ಧೃತ ಮುಕ್ತಾಭರಣಂ ಪಯಃಕಣಗಣಂ .. .. ಮಲ್ಲಿಕಾಸ್ಮಿತಾದಾಮಂ ತೆರೆಮಾಲೆಯಾಗೆ : **ಪುಷ್ಪದಂಪು,** ೯. ೯೪)

**ಮುಕ್ತಾಮಾಳಿಕೆ** – ಮುತ್ತಿನ ಸರ (ತೋರಣಗ್ರಥನ ಮುಕ್ತಾಮಾಳಿಕಾಳಂಬನ ವ್ಯಸನವ್ಯಗ್ರಕರಂ ಕರಂ ಸೊಗಯಿಸಿತ್ತಂತಲ್ಲಿ ಕಾಂತಾಜನಂ: **ಚಂದ್ರಪ್ರಭ,** ೬. ೫೫)

**ಮುಕ್ತಾವತಂಸ** – ಮುತ್ತಿನ ಆಭರಣ (ದಿಕ್ಕಾಂತೆಯರ್ಗೆ ಕುಡುವ ಮುಕ್ತಾವತಂಸಂಗಳೆಂಬನ್ನೆಗಂ ಅಂಭಃ ಶೀಕರಂಗಳ್ ಪಸರಿಸೆ: **ಮಲ್ಲಿನಾಪು,** ೨. ೭)

**ಮುಕ್ತಾವಳಿ** – ಮುತ್ತಿ ಸರ (ಸದಮಳ ಮುಕ್ತಾವಳಿಯಿಂ ಮೊದೆಯಿಸಿದನೊ ಚೈತ್ರನೆನೆ ತದೀಯಲತಾವಾಸದ ವಿಚಕಿಲಕುಟ್ಮಲ ವಿಸರದ ಪದಪು ಅದಂ ದೇವಿ ನಾಡೆ ನೋಡುತ್ತಿರ್ದಳ್: **ಶಾಂತೀಶ್ವಪು,** ೫. ೧೨೫)

**ಮುಕ್ತಾವಳಿತಪ** – ಮುಕ್ತಾವಳಿ ಎಂಬ ವ್ರತ (ಈ ಭವದೊಳ್ ತಪಂಬಟ್ಟು ಮುಕ್ತಾವಳೀ ತಪಸ್ತಪನತಾಪದಿಂ ಸಮಾಧಿಮರಣದಿಂದ ಈಶಾನಕಲ್ಪದೊಳ್ .. .. ಬಂದು: **ಶಾಂತಿಪು,** ೯. ೧೪ ವ)

**ಮುಕ್ತಾಸಾರ** – ಶ್ರೇಷ್ಠ ಮುತ್ತು (ಸಾರತರ ತಾಮ್ರಪರ್ಣಿಯ ವಾರಿಯೊಳಲೆಳದಳಸಿ ಬಳೆದ ಶುಕ್ತಿಯ ಮುಕ್ತಾಸಾರಮನೀವ ಪಯೋನಿಧಿ: **ಶಾಂತಿಪು,** ೧೧. ೧೩)

**ಮುಕ್ತಾಸ್ಫೋಟ** – ಮುತ್ತಿನ ಚಿಪ್ಪು (ಮುಕ್ತಾಸ್ಫೋಟಂ ಶುಕ್ತಿ: **ಅಭಿಧಾವ,** ೧. ೪. ೯)

**ಮುಕ್ತಿ** – ಬಿಡುಗಡೆ, ಮೋಕ್ಷ (ಅನಾದಿಬಂಧನಬಂಧ ವ್ಯಭಾವಕರ್ಮವಿಗಮದಿಂ ಅನಂತಜ್ಞಾನಾದಿ ನಿಜರೂಪಮಂ ಪಡೆವುದು ಮುಕ್ತಿ: **ಆದಿಪು,** ೧೦. ೬೩ ವ)

**ಮುಕ್ತಿಪದ** – ಮೋಕ್ಷ (ಅಪವರ್ಗಂ ನಿಶ್ರೇಯಸಂ ಅಪುನರ್ಭವಂ ಅಮೃತಂ ಅಕ್ಷರಂ ಮೋಕ್ಷಂ ಮುಕ್ತಿಪದಂ ಬ್ರಹ್ಮಂ ಕೈವಲ್ಯಪದವಿ ಶಿವಗತಿ ನಿರಾಮಯಂ ನಿರ್ವಾಣಂ: ಅಭಿಧವ, ೧. ೩. ೧೯)

**ಮುಕ್ತೋಷ್ಠ** – ಬಾಯಿತುಂಬ (ಎಂದು ನುಡಿದ ಚಿರಂಜೀವಿಯ ಮಾತಂ ರಕ್ತಾಕ್ಷಂ ಕೇಳ್ದು ಮುಕ್ತೋಷ್ಠನಾಗಿ ಮತ್ತಮಿಂತೆಂದಂ: **ಪಂಚತಂತ್ರ,** ૩೫೫ ವ)

**ಮುಖ** – ಬಾಯಿ (ತಂಬುಲದಿಂ ವಿಭು ಪೋಲ್ತನೋಲಗಂಗುಡುವೆಡೆಯೊಳ್ ಮುಖಾರ್ಷಿತಮದು .. .. ಕಳಂಬೆರಸಿದ ಅಮರೇಂದ್ರದಂತಿಯಂ: **ಶಾಂತಿಪು,** ೧೦. ೯೫); ಆರಂಭ (ಆದಿ ಮುಖಂ ಕಡೆ ಚರಮಂ: **ಅಭಿಧಾವ,** ೨. ೧. ೭೦); ವದನ (ವದನಂ ಆನನಂ ಆಸ್ಯಮ ಮುಖಂ ತುಂಡಂ ಲಪನಂ ವಕ್ತ್ರಂ ಮೊಗಕ್ಕೆ ನಾಮಂ: **ಅಭಿಧಾವ,** ೧. ೧೨. ೧೫)

**ಮುಖಮುದ್ರೆ** – ಮುಖಭಾವ (ತನ್ನ ಮುನ್ನಿನ ಜನಗಳಂ ಇಂತೆಂದು ಬರೆದು ತೋರ್ಪಂತೆ ನೆಲನಂ ಬರೆಯುತ್ತಮುಪಗತ ಮುಖಮುದ್ರೆಯಾಗಿ: **ಆದಿಪು,** ೩. ೩೨ ವ)

**ಮುಖರ** – ಸದ್ದು (ಮತ್ತ ಮಧುಕರ ಝಂಕಾರ ಮುಖರಮುಮಪ್ಪ ಪುರಮನರಮನೆಯುಮಂ ಅತಿ ವಿಭುತಿಯಿಂ ಪುಗಿಸಿ .. .. ಪರಿಚರ್ಯಚಾತುರ್ಯಮಂ ಮೆಱೆದು: **ಪಂಪರಾ,** ೮. ೪೫ ವ); ಮಾತಾಡು ಧ್ವನಿಮಾಡುವ (ನಿಷ್ಠುರಚೀರೀರವಮುಖರ ಪರುಷಕಾನನ ಪವಮಾನನ ಸೋಂಕನಾಸೆಗೆಯ್ಯಲ್ ಬಗೆದೈ: **ಪಂಪರಾ,** ೭. ೧೧); ವಾಚಾಳಿ (ಮುನಿಪತಿ ನಾರದಂ ಅಭಿನುತಮತಿ ಮುಖರನಾಗಿ ಹರಿಗಿಂತೆಂದಂ: **ಜಗನ್ನಾವಿ,** ೫. ೪೮); ಕೆಟ್ಟ ಮಾತನ್ನಾಡುವವನು (ದುರ್ಮುಖಂ ಮುಖರನವಂ: **ಅಭಿಧಾವ,** ೨. ೧. ೧೭)

**ಮುಖರತ** – ಚುಂಬನ, ಮುಖಮೈಥುನ (ರತದೊಳಗಗ್ಗಳಂ ಮುಖರತಂ ಸುರತೋತ್ಸವಕೆಂದು ಕಾಮಿನೀಪ್ರತತಿಗೆ ತೋರ್ಪಂತೆವೋಲ್: **ಆದಿಪು,** ೧೧. ೯೯)

**ಮುಖರತೆ** – ನಿಂದೆ (ದಶಮುಖನ ಮುಖರತೆಯುಮಂ ಉದ್ವೃತ್ತತೆಯುಮಂ ನೆಱೆಯೆ ಬಿನ್ನವಿಸಿ ಮಾಣ್ದುದುಂ: **ಪಂಪರಾ,** ೧೨. ೭೭ ವ)

**ಮುಖರಿಗಾಣ** – ದೇಶೀ ತಾಳಗಳನ್ನಳವಡಿಸಿ ಹಾಡುವವನು (ಆ ಸಮಯದೊಳ್ ಸಮಯಂಬಡೆದು ಮುಖರಿಗಾಣಂ ಆಸ್ಥಾನಮಧ್ಯರಂಗಮಂ ಸಂಗೀತ ಪ್ರಸಂಗಮಂ ಪುಟ್ಟಿಸಲೆಂದು ಅಳಂಕರಿಸೆ: **ಪಾರ್ಶ್ವನಾಪು,** ೧೨. ೧೬ ವ)

**ಮುಖರಿತ** – ಸದ್ದಿನಿಂದ ಕೂಡಿದ (ವನಸುರಭಿ ಮದಸಾರಾಸವಾಸಕ್ತ ಭೃಂಗೀನಿನದ ಮುಖರಿತಾಶಾಚಕ್ರ ಗಂಧೇಭಚಕ್ರಂ: **ಆದಿಪು,** ೧೧. ೩೦)

**ಮುಖರೋಮ** – ಮೀಸೆ (ಆಬಾಳಸಾರ್ಧೂಲ ಮುಖರೋಮ ಕರಾಲಸೃಕ್ವೋಪಾಂತಪ್ರರೂಢಶ್ಮಶ್ರುಜಾಲಂ: **ಆದಿಪು,** ೧೩. ೪೫ ವ)

**ಮುಖವಾರ್ತೆ** – ಸಮಾಚಾರ (ಓಲೆಯಾತಂ ಬಂದು ಏಕಾಂತದೊಳ್ ಓಲೆಯನಿಕ್ಕಿದೊಡೆ ಮುಖವಾರ್ತೆ ಏನೆಂದೊಡೆ: **ಹರಿವಂಶ,** ೧೦. ೩೮ ವ)

**ಮುಖಾಂಬುಜ** – ಮುಖಕಮಲ [ನಿಡುಸುಯ್ದು ನಲ್ಲಳ ಮುಖಾಂಬುಜಸೌರಭದೊಳ್ ಪೊದಳ್ದು ಅದೇಂ ಮಗಮಗಿಸಿತ್ತೊ ಕತ್ತುರಿಯ ಕಪ್ಪುರದೊಂದು ಕದಂಬದಂಬುಲಂ: **ಪಂಪಭಾ,** ೪. ೧೦೭)

**ಮುಖಾಬ್ಜಾಸವಸಂಬಂಧಿ** – ಮುಖಕಮಲದ ಮಧುವಿನ ಸಂಪರ್ಕವುಳ್ಳ (ಅಂತು ನೋಡಿ ಕಡೆಗಣ್ಣ ಚೆಲ್ಲಂಬೆರಸು ಸೂಸುವ ವಾಸವಸ್ತ್ರೀಯರ ಮುಖಾಬ್ಜಾಸವ ಸಂಬಂಧಿಗಳಪ್ಪ ಶೇಷಾಕ್ಷತಂಗಳಂ ಈಶ್ವರನಂ ಗೆಲ್ದ ಗೆಲ್ಲಕ್ಕೆ ಸೇಸೆಗೊಳ್ವಂತೆ ಸೇಸೆಗೊಳ್ಳುತ್ತುಂ: **ಪಂಪಭಾ,** ೮. ೨೭ ವ)

**ಮುಗಿ** – ಮುಚ್ಚಿಕೊ (ಕೆಂದಾವರೆಗಳ್ ಮಧುಕರವೃಂದಮಂ ಒಳಕೊಂಡು ಮುಗಿಯೆ: **ಕಾದಂಸಂ,** ೪. ೪೫); ಹೂವು ಸಂಕೋಚಗೊಳ್ಳು (ಮುಗಿದುವು ನಯನಸರೋಜಂ ಮಿಗೆಯಲರ್ದುದು ಚಿತ್ತಕೈರವಂ: **ಗಿರಿಜಾಕ,** ೩. ೧೨); [ಕೈ] ಜೋಡಿಸು (ಬಂದು ಮುಂದೆ ನಿಂದು ಕೈಗಳಂ ಮುಗಿದಿಂತೆಂದೆಂ: **ವಡ್ಡಾರಾ,** ಪು.ಸಾ. ೬)

**ಮುಗಿಲ್** – ಮೋಡ (ಇರ್ವರುಂ .. .. ಸಹಸ್ರಕೂಟಾಕಾರಮಪ್ಪ ಅದೊಂದು ಮುಗಿಲಂ ಕಂಡು: **ವಡ್ಡಾರಾ,** ಪು. ೧೯೯, ಸಾ. ೫); ಆಕಾಶ (ಆ ಬನಂ ಮುಗಿಲೆಡೆಯೊಳ್ ಎಡೆವಿಡದೆ ಎಡೆಯಾಡಿ ಬಟಿಲ್ದ ಬಿಜ್ಜೋದರಿಯರ್ಕಳ ಅಱವಟ್ಟಿಗೆದಾಣಮೆಂಬಂತೆ ಎಸೆವ ಎಳನೀರ್ಗಳಂ ಪೊತ್ತಾಗಸದೆಡೆಗಡರ್ವ ಚೆಂದೆಂಗಿನ ಮರಂಗಳೊಳಂ: **ಕಬ್ಬಿಗಕಾ,** ೨೭ ವ)

**ಮುಗಿಲಂ ಮುಟ್ಟು** – ಎತ್ತರಕ್ಕೆ ಬೆಳೆ ಏಳಿಗೆ ಹೊಂದು (ನೆಗೞ್ದಿಕ್ಷ್ವಾಕು ಕುಲಾಂಬರೇಂದು ಭರತಂ ನಿನ್ನಗ್ರಜಂ ಸಾಹಸಂ ಮುಗಿಲಂ ಮುಟ್ಟೆ .. .. ದಗ್ವಿಜಯಕ್ಕೆ ಪೋಱಮಟ್ಟಾ ಪೆಂಪು ಸಾಮಾನ್ಯಮೇ: **ಆದಿಪು,** ೧೪. ೫೨)

**ಮುಗಿಲ ದನಿ** – ಗುಡುಗು (ಮೂರರ್ಥಕ್ಕೆ: ಮೊಟಗೆಂದು ಮುಗಿಲದನಿಯುಂ ಒಂದು ಮರದ ಪೆಸರುಂ ವಾದನವಿಧಿಯುಮಕ್ಕುಂ: **ಶಬ್ದಮದ,** ೩೩ ವೃತ್ತಿ ೧೭೫)

**ಮುಗಿಲ ನೀರು** – ಮಳೆಯ ನೀರು (ಮುಗಿಲ ನೀರಂ ನಚ್ಚಿ ಡೊಣೆಯ ನೀರಂ ತುಳುಂಕಿದ ಕೋಡಗದಂದಂ ನಿನಗಕ್ಕುಂ: **ಪಂಚತಂತ್ರ,** ೧೨೦ ವ)

**ಮುಗಿಲ್ವಟ್ಟೆ** – ಮೋಡದ ದಾರಿ, ಆಕಾಶ (ವಿಭೀಷಣಂ ಮುಗಿಲ್ವಟ್ಟೆಯಿನಟಿ ತಿಂಬ ಜವನಂತಿರದಯೋಧ್ಯೆಗೆ ಬಂದು ಪೊಕ್ಕು: **ಪಂಪರಾ,** ೩. ೨೮)

**ಮುಗುಳ್** – ಮೊಗ್ಗು (ಮುತ್ತಿನ ಮುಗುಳ್ಗಳುಮನಿಟ್ಟು ಆ ಮುಗುಳನೆ ಬಿರಿಮುಗುಳ್ಗೆತ್ತೆಱಗಿದ ಮಱಿದುಂಬಿಯಂತೆ: **ಆದಿಪು,** ೪. ೪೧ ವ); ಮೂಡು; ಕಣ್ಣು ಮುಚ್ಚಿಕೊ (ಸೊಗಯಿಸುವ ಮುನ್ನಿನಿರ್ದ ಪರಿಜಿಂ ಕಡುಚೆಲ್ವು ಗಡಂ ಜಿನೇಂದ್ರನಂ ಬಗೆವ ಮನಂ ಗಡಂ ಮುಗುಳ್ದು ಜಾನಿಪ ಕಣ್: **ಆದಿಪು,** ೨. ೬೦)

**ಮುಗುಳ್ಚು** – ಸಂಕುಚಿಸು, ಮೊಗ್ಗಾಗಿಸು (ವಿಧುಬಿಂಬಂ ಇಂಬುಮಾಟ್ಟಿಂತೆ ಮುಗುಳ್ಚುಗುಂ ಕುಮುದಕಾನನಮಂ: **ಲೀಲಾವತಿ,** ೬. ೬೪); ಮೊಗ್ಗು[ಹೂ]ಬಿಡು (ಚಿತ್ತಜನೃಪಂಗೆ ಚೈತ್ರಂ ಮುತ್ತಿನ ಮಂಡವಿಗೆಯಂ ವಿಚಿತ್ರದೆ ಸಮೆದಂತೆತ್ತಿದನೆನೆ ಮಿಗೆ ತಳ್ತದಿರ್ಮುತ್ತೆ ಮುಗುಳ್ಚೆಸೆಯುತ್ತಿರ್ದುದು ಅತ್ತೊಂದೆಡೆಯೊಳ್: **ಶಾಂತೀಶ್ವಪು,** ೧೦. ೯೭)

**ಮುಗುಳ್ಸರಿಗೆ** – ಮೊಗ್ಗಿನ ಹಾರ (ಮೆಲ್ಲನೆ ವಕುಲ ಆಳವಾಳತಳದೊಳ್ ಸುರಿದ ಅಂಬುಜಸೂತ್ರದಿಂದೆ ಮತ್ತನಿತಱೊಳಂ ಮುಗುಳ್ಸರಿಗೆ ತೋಳ್ವಲೆ ಕಂಕಣ ವಾರಮೆಂದು ಬೇಟ್ಟನಿತನೆ ಮಾಡಿ: **ಪಂಪಭಾ,** ೨. ೧೬)

**ಮುಗ್ಗು** – ಬಾಗು, ನಮಸ್ಕರಿಸು (ಭವ್ಯವೃಂದೋತ್ಸವ ಪಂಕೇಜಾತದೊಳ್ ದೇವನ ಪದಯುಗದೊಳ್ ಮುಗ್ಗಿ .. .. ಸುರಪರಿಗಳ್ ತಮ್ಮ ತಾಣಕ್ಕೆ ಪೋದರ್: **ಅಜಿತಪು,** ೬. ೧೩೧)

**ಮುಗ್ಧ** – ಮೋಹಕ (ರಾಮಚಂದ್ರಂ ದಿವಸಕ್ರಮದಿಂ ಅಭಿವೃದ್ಧಿವೆತ್ತು ಆ ಕ್ರಮದಿಂ ಅತಿ ಮುಗ್ಧಭಾವಮಂ ಶೈಶವಮಂ: **ಪಂಪರಾ,** ೩. ೧೩೧)

**ಮುಗ್ಧಜಲ್ಪಿತ** – ಮುದ್ದು ಮಾತಾಡುವುದು (ಲಲಿತೋತ್ತಾನಶಯಿತ ದರಹಸಿತ ತರಂಗಿತ ಗತಿಸ್ಖಲಿತ ಮುಗ್ಧಜಲ್ಪಿತಾದಿ ಬಾಲ್ಯವಿಳಾಸಂಗಳಿಂದಂ: **ಆದಿಪು,** ೫೦ ವ)

**ಮುಚುಕುಂದ** – ಒಬ್ಬ ಋಷಿಯ ಹೆಸರು (ವರದಿಂ ನೆಱೆದಂ ಕೃತಯುಗದೊಳ್ ಸುರರೊಳಿಱಿದಪರಿಶ್ರಮದಿಂದೆ ರಾಜಮುನಿ ಮುಚುಕುಂದಂ: **ಜಗನ್ನಾವಿ,** ೯. ೪೫); ಸದಾಪುಷ್ಪ, ನಿಚ್ಚಮಲ್ಲಿಗೆ (ಕುಂದ ಮುಚುಕುಂದ ಮಂದಾರ ಇಂದೀವರ ನಂದ್ಯಾವರ್ತ ತ್ರಿಸಂಧ್ಯಾ ಬಂಧೂಕ ಕದಂಬ ಕನಕ ಕರವೀರ ಕರ್ಣಿಕಾರ ಕುಮುದವನವಕುಳ ಕುರವಕ ಕಮಲ ತಿಲಕ ಚಂಪಕ ಪಾಟಲಿ ಪಾರಿಜಾತ ಜಾತಿ ಪುನ್ನಾಗ ಮಲ್ಲಿಕಾದಿ ಅನೇಕ ಸುರಭಿಕುಸುಮಂಗಳಂ: **ಪಂಚತಂತ್ರ,** ೧೯೦ ವ)

**ಮುಚ್ಚಂಡಿ** – ಹಟಮಾರಿ (ಮುಚ್ಚಂಡಿಗಳಪ್ಪ ಭಂಡ ಸವಣರ್ ಅಗ್ನಿಸ್ತಂಭಮೆಂದು ಮುಳಿದು ಮತ್ತಮಿಂತೆಂದರ್: **ತ್ರಿಷಷ್ಟಿಪು,** ೩೩. ೫೯ ವ)

**ಮುಚ್ಚು** – ಹೊದೆಸು (ಮುಚ್ಚು–ಆಚ್ಛಾದನೇ: **ಶಬ್ದಮದ,** ಧಾ ೨೧೫); ಅಡಗಿಸು (ಲೀಲಾವತೀದೇವಿ ಕೊಲ್ವನಿತುಂ ಕಾಯ್ದು ಕನಲ್ವಳ್ ಓಪರೆಡೆಯೊಳ್ ಮುಚ್ಚು ಅಚ್ಚಿಗಂ ಮಾಡದೇ: **ಲೀಲಾವತಿ,** ೧೪. ೨೩)

**ಮುಚ್ಚುಮಱಿ** – ರಹಸ್ಯ (ಇದು ಮಟ್ಟಮೆಂದು ತಾಂ ಚಪ್ಪರಿಸಿದೊಡಾನಿರೆನೆ ಮುಚ್ಚುಮಱಿಯೇಕೆಯೋ: **ನೇಮಿನಾಪು,** ೫. ೯)

**ಮುಚ್ಚುಳ್** – ಮುಚ್ಚಳ (ಮಹಾತ್ಮರ ಬಾಯ್ಗೆ ಮುಚ್ಚುಳಪ್ಪರೆ ಚದುರರ್: **ಸಮಯಪ,** ೮. ೧೧೦)

**ಮುಚ್ಛೆ** – [ಮೂರ್ಛೆ] ಎಚ್ಚರ ತಪ್ಪುವುದು (ನನೆಯಂಬಿಂದ ಇಸೆ ನಿರ್ದಯಂ ಮನಸಿಜಂ ಕರ್ಣಾಂತ ವಿಶ್ರಾಂತ

ಲೋಚನಯುಗ್ಮಂ ನಸುಮುಚ್ಚೆ ಮುಚ್ಚೆಗೊಳಗಾಗಿರ್ದಂ ಪ್ರಭಾಮಂಡಲಂ: **ಪಂಪರಾ,** ೪. ೯೨)

**ಮುಚ್ಚೆಪಡು** – ಮುಚ್ಚಲ್ಪಡು (ದೇವರ್ಕಳ್ ಸುರಿದ ಪುಷ್ಪವೃಷ್ಟಿಯಿಂದಂ ಮುಚ್ಚೆಪಟ್ಟನಾಗಿ ಕಂಪಿಂಗೆಱಗಿದ ತುಂಬಿಯ ಸಮೂಹಮಂ ಮೇಗೆ ಸುೞಿವುದಂ ಕಂಡು: **ವಡ್ಡಾರಾ,** ಪು ೩೦, ಸಾ ೫)

**ಮುಜ್ಜುಟ** – ಕುಸ್ತಿಯ ಒಂದು ವರಸೆ (ಭುರವ ಭಟಂ ನಿಮಿರ್ದು ಕುತ್ತಿದೊಡೆ ಉರ್ಚಿದ ಚಂಡಶಾಸನಂ ಚಾರಣದಾಸೆಯಿಂ ನುಸುಳ್ದು ಮುಜ್ಜುಟದೊಳ್ ಮಗುೞ್ದುಕ್ಕಿವಟ್ಟಿ ಸೈಪಾರಿಸೆ: **ಅನಂತಪು,** ೧೧. ೬೧)

**ಮುಟ್ಟಲರ್** – ಮುಟ್ಟಾಗು, ಬಹಿಷ್ಠೆಯಾಗು (ಮುಟ್ಟಲರ್ದ ಎಳೆಯಳಂ ಏನರಣ್ಯ ಸಹಕಾರಲತಾಂಗನೆ ಪೋಲ್ತು ನಿಂತಳೋ: **ಶಾಂತಿಪು,** ೭. ೧೩೬)

**ಮುಟ್ಟಿ** – [ಮುಷ್ಟಿ] ಹಿಡಿ (ಪಸುಗೆ ನೆಲಂ ಜಲಂ ಹಯದೊಡಂಬಡು ವಂಚನೆ ಕೇಣಂ ಆಸನಂ ಕೊಸೆ ದೆಸೆ ದಿಟ್ಟಿ ಮುಟ್ಟಿ ಕೆಲಜಂಕೆ ನಿವರ್ತನೆ ಕಾಣ್ಕೆ ಪರ್ವಿದ ಏರ್ವೆಸನದೊಳಾದ ಬಲ್ಮೆಯೊಳ್ ಒಡಂಬಡೆ ತಳ್ತಿಱೆವಲ್ಲಿ ಮಿಂಚಿನೊಳ್ ಮುಸುಕಿದ ಮಾಟ್ಕೆಯಾಯ್ತು ಸಮರಾಂಗಣಂ ಉಳ್ಕುವ ಬಾಳ್ಗಳ ಉಳ್ಕದಿಂ: **ಪಂಪಭಾ,** ೧೦. ೭೮);

**ಮುಟ್ಟಿ ನುಡಿ** – ಮನವರಿಕೆಯಾಗುವಂತೆ ಮಾತಾಡು (ಪರಿಮಿತಹಿತವಚನಂಗಳಿಂ ಮುಟ್ಟಿ ನುಡಿದು ತನ್ನ ಕಂಡ ಕನಸುಗಳಂ ಅನುಕ್ರಮಂದಪ್ಪದಱಿಪಿದ ಮಂತ್ರಿಮುಖ್ಯನ ನುಡಿಯೊಳ್ ಅಪಗತಕಲುಷ ಹೃದಯನಾಗಿ: **ಆದಿಪು,** ೨. ೪೮ ವ)

**ಮುಟ್ಟಿಗೆ** – [ಮುಷ್ಟಿಕಾ] ಇಕ್ಕುಳ (ಮುಟ್ಟಿಗೆಯೊಳಿಟ್ಟು ತೆಗೆವುದುಂ ಕೊಂತಂಗಳಿಂದಂ ಇಟ್ಟಿಗಳಿಂದಂ ಕರುಳ್ಗಳಂ ಸೋರೆ ಕುತ್ತುವುದುಂ ಚಕ್ರಂಗಳಿಂ ತೆಗಲೆಯಂ ಮೊಕ್ಕನೆವೋಗಿಡುವುದುಂ: **ವಡ್ಡಾರಾ,** ಪು ೯೬, ಸಾ ೨೮)

**ಮುಟ್ಟು** – ಸ್ಪರ್ಶಿಸು (ಮುಟ್ಟು–ಸ್ಪರ್ಶನೇ: **ಶಬ್ದಮದ** ಧಾ ೨೫೭); ತಲುಪು (ಇಳೆಯಂ ಸಾಸಿರಯೋಜನಂಬರೆಗಂ ಆನುರ್ಚಿರ್ದೆನಿರ್ದುಂ ಮಹೀತಳಮಧ್ಯಸ್ಥನೆಂ ಅಲ್ಲದೆ ಇಂದ್ರಾವಾಸಮಂ ಮುಟ್ಟಿದೆಂ: **ಸುಕುಮಾಚ,** ೧. ೬೫); ಉಪಕರಣ (ಕುಡುಗೋಲಂ ಕೂಱೆಗೆಯಂ ಕೊಡಲಿ ಕುರುಂಜಿಗೆಯಂ ಉೞುವ ಪರಗುವ ಕಱುಪಿಂ ಬಿಡದೆಯುಗುೞ್ದಾ ಮುಟ್ಟಂ ಕುಡರ್ ಎರವಂ ಪೆಱರ್ಗೆ: **ಸಮಯಪ,** ೫. ೧೭); ತಿನ್ನು (ಆಡು ಮುಟ್ಟದ ಗಿಡುವಿಲ್ಲ: **ಧರ್ಮಾಮೃ,** ೩. ೨೨ ವ); ಯೋಗ್ಯವಾದುದು (ತನ್ನಗ್ರಪುತ್ರಂ ಕ್ರಮಂಬಿಡಿದಿರ್ದಂ ಜಯವರ್ಮನಿರ್ದೊಡಮವಂ ಮುಟ್ಟಲ್ಲಂ ಎಂದು ಒಳ್ಪಡುವನ್ನಂ ಕಿಱೆಯಾತನಂ ನಿಱೆಸಿದಂ ಶ್ರೀವರ್ಮನಂ ರಾಜ್ಯದೊಳ್: **ಅದಿಪು,** ೨. ೩೮)

**ಮುಟ್ಟುಗಿಡಿಸು** – ಅಸಹಾಯಕನಾಗಿ ಮಾಡು (ಕರ್ಮಕ್ಷಯಾರ್ಥಂ ತಪಂಬಟ್ಟಾತನಂ ಇಳಿಸಿ ಪರಿಭವಿಸಿ ಮುಟ್ಟುಗಿಡಿಸಿ ನುಡಿಯಲ್ವೇಡ: **ವಡ್ಡಾರಾ,** ಪು. ೪೬, ಸಾ. ೧೩)

**ಮುಟ್ಟುಗಿಡು** – ಅಸಹಾಯಕನನ್ನಾಗಿಸು, ದಿಗ್ಭ್ರಮೆಗೊಳಿಸು (ಜವಂ ಜವಜವಾಗಿ ಮುಟ್ಟುಗಿಡುವನ್ನಂ ಇನ್ನಾ ಜವಂ ಜವವ್ಯಸನಪುಂಜಮಂ ಕಿಡಿಪುದಾದಿತೀರ್ಥೇಶ್ವರಾ: **ಆದಿಪು,** ೧೩. ೮೮); ನಿಷ್ಠುರವಾಗು (ನೀಂ ಮಟ್ಟುಮಿರೆಂದಾ ಭಟ್ಟನಂ ಮುಟ್ಟುಗಿಡೆ ನುಡಿದುಂ: **ಪಂಚತಂತ್ರ,** ೬೯ ವ)

**ಮುಟ್ಟುಗೆಡು** – ಅಸಹಾಯಕನಾಗು (ತಿರಿದುಂಡು ಕಚ್ಚುಟಮನುಟ್ಟು ರಚ್ಚೆಯೊಳ್ಪಟ್ಟು ಮುಟ್ಟುಗೆಟ್ಟು ಉಬ್ಬೆಗಮುಬ್ಬರಿಸಿ ನಮೆದುದನದಂ ಮಱೆದಿರೆ ಮಾವಂ ದೇವನಾದೊನೇ ನಮಗೀಗಳ್: **ಸುಕುಮಾಚ,** ೪. ೩೦); ಅಸಹಾಯಕನಾಗು (ಮುಟ್ಟುಗೆಡೆ ತಾನೆ ತನ್ನಂ ಕಟ್ಟಿದುದಂ ಕಳೆಯಲಾರ್ಗಮೇಂ ಬಂದಪುದೇ: **ಪಂಚತಂತ್ರ,** ೧೩೦)

**ಮುಟ್ಟುಪಡ** – ಮುಟ್ಟಬಾರದ, ಸ್ವೀಕಾರಾರ್ಹವಲ್ಲದ (ಕಿಱುವೇಂಟೆಯ ನಾಯ್ಗಳಿಂದ ಮುಟ್ಟುಪಟ್ಟ ಪೆಣ್ಮೊಲನಂತೆ ಭಯಮಂ ಎಡೆಗಲಿಸಿ: **ಶಾಂತಿಪು,** ೭. ೯೧ ವ); ಏನೂ ಸಿಕ್ಕಿರದ, ಅಲಾಭವಾದ (ಪಡೆದುಣ್ಬ ಪೆಣ್ಣೊಳಿದಾಧಗಡಿನ ಒಪ್ಪಮೆ ಸಾಲ್ವುದು ಉೞಿದೊಳ್ಪನಱಸುವಂ ಏಂ ಕಡುಗಾಂಪನೊ ತಣ್ಣೂಟಿಂ ಪಡೆವಿನಿಳೆಲೆವಗಟ್ಟೆ ಮುಟ್ಟುಪಡೆದಱಸುವುದೇ: **ಲೀಲಾವತಿ,** ೨. ೧೧೫)

**ಮುಟ್ಟುಪಡಾಗು** – ಮುಟ್ಟಬಾರದ್ದಾಗು (ಭಕ್ತರಟ್ಟೆಯೊಳ್ ಉಣುತಿರ್ಪಾಗಳ್ ಕೇಳ್ದೊಡೆ ಮುಟ್ಟುಪಡಾಗದೊಡೆ ಅದೆ ಸಾಲ್ಗುಂ ಈಶ್ವರಸ್ತವನಂಗಳ್: **ಸಮಯಪ,** ೧೪. ೧೧೧)

**ಮುಟ್ಟೆವರ್** – ಸಮೀಪಿಸು (ಬೇಱೊಂದು ಮೊನೆಯೊಳ್ ಕಾದುತ್ತಿರ್ದ ಅಶ್ವತ್ಥಾಮಂ ಕಂಡು ಮುಟ್ಟೆವರ್ಪನ್ನೆಗಂ ಶೋಣಾಶ್ವೋಪಲಕ್ಷಿತ ನಿಜಪಿತೃಸೂತಕೇತನ ಕಥಿತಮಾಗಿರ್ದ ರಥಮಂ ಉಪಲಕ್ಷಿಸಿ: **ಪಂಪಭಾ,** ೧೨. ೩೦ ವ)

**ಮುಟ್ಟೈಸು** – ನಿಲ್ಲಿಸು, ನಿರ್ಬಂಧಿಸು (ಮನಮಂ ಮುಟ್ಟೈಸಿ ಮಧ್ಯಂದಿನದ ಬಿಸಿಲೆ ಬೆಳ್ದಿಂಗಳಂತಾಗೆ ತನ್ನಿಂ ತನುವಂ ಬೇರ್ಕೆಯ್ದು .. ..ಅಂತರ್ಮುಖಂ ಅಭಿಮುಖಂ ಆದಿತ್ಯಬಿಂಬಕ್ಕೆ: **ಪಂಪರಾ,** ೨. ೧೪)

**ಮುಡಿ** – ತಲೆಯಲ್ಲಿಟ್ಟುಕೊ (ಪುಟ್ಟೆಗೆಯನುಟ್ಟು ಮೆಯ್ಯಂ ಪೂಸಿ ಪೂವಂ ಮುಡಿದು: **ವಡ್ಡಾರಾ,** ಪು. ೧೨೩, ಸಾ. ೧); ತಲೆಗೂದಲ ಗಂಟು (ಮುಡಿಯಂ ಸೋಗೆಯೆ ಗೆತ್ತು ಸೋಗೆ ನಡೆಯಂ ಪೆಣ್ಣಂಚೆಗೆತ್ತು .. .. ಅಳಕಾನೀಕಂಗಳಂ ಸೊರ್ಕಿದ ಆಱಡಿಗೆತ್ತು ಆಱಡಿ ಸುತ್ತುತುಂ ಬರೆ: **ಪಂಪಭಾ,** ೭. ೮೬); ದೇವರ ಕಿರೀಟ (ಗುಡಿಯಿಂ ತೋರಣದಿಂ ಕನ್ನಡಿಯಿಂ ಕಳಶದಿಂ ಅನೇಕ ಚಾಮರದಿಂ ಬೆಳ್ಗೊಡೆಯಿಂ ಮುಡಿಯಿಂ ಮುತ್ತಿನ ಕಡೆಯಿಂದರ್ಚಿಸಿದಳ್ ಅರಸಿ ಚಂದ್ರಪ್ರಭನಂ: **ನೇಮಿನಾಪು,** ೨. ೬); ಧಾನ್ಯದ ಮೂಟೆ (ಇಂದುಧರಂ ಪರಮ ಕರುಣದಿಂದ ಅನೇಕ ಸಹಸ್ರ ನೆಲ್ಲ ಮುಡಿಗಳಂ ಕುಡಲ್: **ತ್ರಿಷಷ್ಟಿಪು,** ೩. ೩೦ ವ); ಇಲ್ಲವಾಗು (ಅಂತುಂ ತನ್ನ ಪಗೆಯುಂ ಬಗೆಯುಂ ಒಡನೊಡನೆ ಮುಡಿಯೆ: **ಪಂಪಭಾ,** ೧೨. ೧೫೫ ವ)

**ಮುಡಿಗ** – ಜಟಾಧಾರಿ, ಶಿವ (ಆಱಡಿಗಳ್ ಬೆಂಬತ್ತಿರ್ಪ ಈ ಮುಡಿಗನೊಳಂ ಕೆಳದಿ ಲೇಸನಱಸಿದರುಂಟೇ: **ತ್ರಿಷಷ್ಟಿಪು,** ೩. ೧೦೮)

**ಮುಡಿಗಟ್ಟು** – ತಲೆಯ ವಸ್ತ್ರ (ಬೆನ್ನ ಬತ್ತಳಿಕೆಯ ಸುತ್ತಿದ ಕೀಲಯ ಮುಡಿಗಟ್ಟಿನ ಪಟ್ಟೆಯ .. .. ಸಿಂಗರಂಬೆರಸಿ: **ಗಿರಿಜಾಕ,** ೬. ೫೫ ವ)

**ಮುಡಿಗವಿ** – ಕಿರೀಟವಿಡು (ಚೆಲ್ವಿಂಗೆ ಮುಡಿಗವಿದಂತೆ ತೋಱುವ ತೋರಮಲ್ಲಿಗೆಯ ಮುಡಿಯುಮೆಸೆಯೆ ಕೈಗೆಯ್ದಾಗಳ್: **ಆದಿಪು,** ೪. ೪೧ ವ)

**ಮುಡಿಗಿಕ್ಕು** – ಬಲಿ ನೀಡು (ವಿಜಯಂ ಅಶ್ವಗ್ರೀವನ ಮಗನಪ್ಪ ವಿಪುಳಕಂಠನಂ ತನ್ನವಾರ್ಯವೀರ್ಯಕ್ಕೆ ಮುಡಿಗಿಕ್ಕುವಂತಿಕ್ಕಿ

ಕೆಯ್ಮಿಕ್ಕು ಅಱಲೊಳ್ ಅನಿಬರುಂ ಒಂದಾಗಿ ಬಂದು ತಾಗೆ: **ಶಾಂತಿಪು,** ೫. ೫೫ ವ)

**ಮುಡಿಗೆಯಿಕ್ಕು –** ಸವಾಲು ಒಡ್ಡು (ಕಾಮನೊಡ್ಡೋಲಗದೊಳ್ ಮುಡಿಗೆಯಿಕ್ಕಿಯುಂ ಕೈಯನೆತ್ತಿ ಪೊಗಟ್ಟುಂ ತಣಿಯನೆ ಮದನನುಂ ಮಲ್ಲಿಗೆಯಂ: **ಆದಿಪು,** ೧೧. ೧೦೯); ಕಾಣಿಕೆ ನೀಡು (ಪ್ರಮದ ಪುರೋಹಿತ ವಚನಪ್ರಮಾಣದಿಂದ ಅಗ್ನಿಕುಂಡದೊಳ್ ಲಾಜೆಯುಮಂ ಕ್ರಮದಿಂದಂ ಇಕ್ಕಿದಳ್ ಪೆಣೆದ ಮನಃಪ್ರಣಯಕ್ಕೆ ಮುಡಿಗೆಯಿಕ್ಕುವ ತೆಱದಿಂ: **ಶಾಂತಿಪು,** ೬. ೧೭)

**ಮುಡಿಪು –** [ಜೈನ] ವ್ರತದ ಮೂಲಕ ಮರಣಿಸು (ಘೋರವೀರತಪದೊಳ್ ತನುವಂ ಬಡಮಾಡಿ ನೋಂಪಿಯೊಳ್ ಮುಡಿಪಿ ನಿರಾಕುಳಂ: **ಆದಿಪು,** ೫. ೪೮); ಮೂಟೆ (ರತ್ನಾಭರಣರಾಶಿಗಳ ಚಿಂತಾಮಣಿಯ ಮುಡಿಪುಗಳ ಪರುಷದ ಕಣಿಯ ತನತನಗೆ ಪಿಡಿದು: **ಗಿರಿಜಾಕ,** ೧೦. ೭೭)

**ಮುಡಿಬಿಡು –** ತಲೆಗೂದಲನ್ನು ಕಟ್ಟದೆ ಬಿಡು (ಕರಮೆಸೆದರಬಲೆಯರ್ ನೋಟಕರ ಮನಮೊಸೆಯೆ ಮುಡಿಬಿಟ್ಟು ಸೋಗೆ ನವಲಂತೆ ಸೊಗಯಿಸಿ ತೋಱೆ: **ಅಜಿಪು,** ೪. ೭)

**ಮುಡಿಯಿಕ್ಕು –** ತಲೆಗೂದಲನ್ನು ಅಲಂಕರಿಸು (ಮುಡಿಯಿಕ್ಕುವ ತಿಲಕವಿಡುವ ತೊಡಂದುಡಿಸುವ .. .. ನಿರಂತಮೋಲಗಿಸುತೊಪ್ಪುತ್ತಿರೆಯಿರೆ **ಕುಸುಮಾಕಾ,** ೬. ೬ ವ)

**ಮುಡಿವಾಳ –** ಬಾಳದ ಬೇರು (ಒಲವಿನೊಳಿಕ್ಕುತಿರ್ಪ ಮುಡಿವಾಳದ ಚಾಮರಜಾಳವೆತ್ತಿ ತೋರ್ಪಲರ್ಗೊಡೆಯೊಳ್ ವಿರಾಜಿಪಂತೆ: **ತ್ರಿಷಷ್ಟಿಪು,** ೨೪. ೧೦೫)

**ಮುಡುಪು –** ಹೆಗಲು (ಕೊಡಕೆಗೆ ಸಾರ್ಚಿ ಕೆನ್ನೆಯಳಕಂಗಳನೆತ್ತಿ ಕುಚೋರುಹಾರಮಂ ಮುಡುಪಿನ ಪಿಂದಣಕ್ಕಿಟಿಪಿ .. .. ತೊಡರಿಸಿದರ್ ತದೀಯ ಸವನಕ್ರಿಯೆಯಂ ಸಲೆ ದೇವಕಾಂತೆಯರ್: **ಶಾಂತೀಶ್ವಪು,** ೧೪. ೬); ಮುಡಿಪು, ಮರಣಿಸು (ಆ ಚಾಂಡಾಳಿ ನಿದಾನದಿಂ ಮುಡುಪಿ .. .. ಆ ಧನವತೀ: **ಧರ್ಮಪ,** ೧೦. ೭೨); ತಲೆಗಟ್ಟು (ಕಡಿವಡೆದ ತೋಳ್ಗಳಿಂದ ಉಡಿದ ನಡುಗಳಿಂ ಜರಿವ ಮುಡುಪಿಂ ಪಾಸಿಪಸರಿಸಿದಂತೆ ಬಿಳ್ದ ಪೆರ್ವೆಣಂಗಳಿಂದ ಅತಿ ಭಯಾವಹಮಾದ ಬಟ್ಟೆಯಿಂ: **ರಾಜಶೇವಿ,** ೫. ೧೨೦ ವ)

**ಮುತ್ತ –** ಮುದುಕ (ಕಿಱೆಯಂ ಮುತ್ತಂ ಧನದಂ ಬಱುವಂ ತೊಱೆದಂ ಗೃಹಸ್ಥನೆನ್ನದೆ ಮುಂಬಿಟ್ಟಱಿಸಿ ಕೊಲುತಿರ್ಪ ಜವನೆಂಬಱೆಕೆಯ ಪಗೆವಂಗೆ ಅದೆಂತು ಪಂಗಿಗನಪ್ಪೆಂ: **ಆದಿಪು,** ೪. ೭೭); ಮುತ್ತುಗದ ಗಿಡ (ಪುಲುಗಿಲುಂ ಉತ್ತರಣೆಯುಮಂ ಅಂತೆ ಲೊಕ್ಕಿಯುಂ ಮತ್ತೆ ಮುತ್ತಂ .. .. ಕುಲದೆಯ್ವಮಿದೆಂದು ಕೊಂಡುಕೊನೆವರ್ ಮೂಢರ್: **ಸಮಯಪ,** ೯. ೫೭)

**ಮುತ್ತಂಚೆ –** ಮುದಿ ಹಂಸ (ಎಯ್ದೆವರ್ಪ ಮುತ್ತಂಚೆಯಿದೆಂಬಿನಂ ಗಿಳಿಯ ಬೆನ್ನನೆ ಮೆಲ್ಲನೆ .. .. ಬಂದು ಕಂಡಂ .. .. ಮನಿಜೇಂದ್ರಚಂದ್ರನಂ: **ಕಾದಂಬ,** ೧. ೭೧)

**ಮುತ್ತಬ್ಬೆ –** ಮುತ್ತಜ್ಜಿ (ಪಡುವಲ್ ಕೀಟಲೊಳೆಮ್ಮ ತೊಟ್ಟು ಪಡುವಳ್ ಮುತ್ತಬ್ಬೆಯಾ ಕೋಣೆಯೊಳ್: **ಕಾವ್ಯಾವಲೋ,** ೬೦೬)

**ಮುತ್ತಾಣ್ಮ –** ಮುದುಕ ಗಂಡ (ಏಂ ನಿಷ್ಕರುಣಿಯೊ ಪಸುಮಗನೆನ್ನದೆ ಮುತ್ತಾಣ್ಮನೆನ್ನದೆ .. .. ಮುಂಬಿಟ್ಟು ಕೊಂದಪಂ ಯಮರಾಜಂ: **ಅಜಿತಪು,** ೧೦. ೨೫)

**ಮುತ್ತು –** ಆವರಿಸು (ಒಂದೆ ದೆಸೆಯೊಳ್ ಕುಂದದೆ ದಹನಾರ್ಚಿ ಸುತ್ತಿ ಮುತ್ತುವ ಪದದೊಳ್: **ಪಂಪಭಾ,** ೫. ೯೮); ದಾಳಿಮಾಡು (ಅನಿತುಂ ಬಲಮಂ ಮುತ್ತಿ ಬಳಾಆವರ್ತರ್ ಸುತ್ತಲುಮೇಸಾಡಿ ಪಿರಿದ ತಿಣಿಕಂ ತಂದರ್: **ಆದಿಪು,** ೧೪. ೭೦); ನವರತ್ನಗಳಲ್ಲಿ ಒಂದು (ಬೆರಲೊಳ್ ಬೀಣೆಯ ತಂತಿಗಳ್ ಒರಸಿದ ಕೆಂಗಲೆಗಳ್ ಅಕ್ಷಮಾಲೆಯೊಳ್ ಎಸೆದಂತಿರೆ ಪೊಸೆಯೆ ಮುತ್ತು ಪವಳಂ ಬೆರಸಿದವೊಲಾಯ್ತು ಚೆನ್ನ ತಪಸಿಯ ಕೆಯ್ಯೊಳ್: **ಪಂಪಭಾ,** ೬. ೧೦); ಆನೆಯ ಗಂಡಸ್ಥಳದ ರತ್ನ (ಮತ್ತಗಜಂಗಳ ಮಸ್ತಕಕ್ಕೆ ಪಾಯ್ದುಗಿಬಗಿ ಮಾಡುವಲ್ಲಿ .. .. ಕೂರುಗುರ್ಗಳೊಲೆಯ್ದೆ ತೆತ್ತಿಸಿದ ಮುತ್ತಿನ ಲೋಭದೆ ಕೊಲ್ವರ್: **ಕಾದಂಬ,** ೧. ೮೫)

**ಮುತ್ತುಂ ಮೆಟಿಸುಂ ಕೋ –** ಹೊಂದಾಣಿಕೆಯಾಗದುದನ್ನು ಕೇಳು (ಪಟಿಗಾಂಪರ ನುಡಿ ಮುತ್ತುಂ ಮೆಟಿಸುಂಗೋದುದಕ್ಕೆ ಭಾಷ್ಯಮಂ ಒರ್ವಂ ಕಟಿಯೋದಿದಾತನಲ್ಲದೆ ಬಟಿವಟಿಯಿಂ ಬಂದು ಬರೆಯಲಾಗದು ಅಗಣ್ಯಂ: **ಶಾಂತಿಪು,** ೧೦. ೧೮೧)

**ಮುತ್ತಿಕೊಳ್ –** ಆವರಿಸು, ದಾಳಿ ಮಾಡು (ಕರ್ಣನಂ ಸುತ್ತಿ ಮುತ್ತಿಕೊಂಡು: **ಪಂಪಭಾ,** ೧೨. ೧೦೮ ವ)

**ಮುತ್ತೆಮ್ಮೆ –** ಮುದಿ ಎಮ್ಮೆ (ಎತ್ತೀದುದು ಕೋಣನಂ ಆ ಮುತ್ತೆಮ್ಮೆಯೆ ಪೋರಿಯೀದುದು ಎಂಬೋದುಗಳಂ .. .. ಪುರಾಣಮೆನುತುಂ ಕೇಳ್ವರ್: **ಸಮಯಪ,** ೧೦. ೧೮೬)

**ಮುದ –** ಸಂತೋಷ (ಮನಕ್ಕಂತಿಲ್ಲದ ಮುದನುಂಟುಮಾಡಿದುದು ಬನಂ: **ಆದಿಪು,** ೧೧. ೮೩)

**ಮುದಶ್ರು –** ಆನಂದಬಾಷ್ಪ (ಸುರಿದ ಮುದಶ್ರುವೆ ಚಳೆಯಂ ಶರೀರದೊಳ್ ಮೊಳೆವ ಪುಳಕಮೇ ಗುಡಿ .. .. ಗದ್ಗದರುತಿ ವಾದ್ಯಮದಾಗೆ ಶಿವನಂ ಇದಿರ್ಗೊಂಡಂ: **ರಾಜಶೇವಿ,** ೧೩. ೫೦)

**ಮುದಿರ್ –** ಸೊರಗು (ಎಳೆವಿಸಿಲೀಗಲೀಗಲೆ ಮುದಿರ್ದುದು ಚೂತಕುಜಾತಮೀಗಳೀಗಳೆ ನನೆದೋಱೆತು ಇಂದೊಳದಿಂ ಉನ್ಮದಷಟ್ಪದವೃಂದಮೀಗಳೀಗಳೆ ಮೊರೆದತ್ತು: **ಆದಿಪು,** ೧೩. ೫)

**ಮುದುಗಣ್ –** ಪಟುತ್ವ ಕಳೆದುಕೊಂಡ ಕಣ್ಣು (ತಮ್ಮತ್ತೆಯರ ಮುದುಗಣ್ಗಳ ಗಂಡರ ಮಾತುಗಳಂ ಅವಕರ್ಣಿಸೆ ನಗರ ಜನಂಗಳ್ ವಿಷಣ್ಣರಾಗಿ: **ಚಾವುಂಪು,** ಪು. ೪೦೩. ಸಾ. ೨೮); ಹಿರಿಯ, ಮುದುಕ (ಓಲಗಿಪ ನಿಗ್ಘಳುಂ ಮುದುಗಣ್ಗಳುಂ ಮೊದಲ್ ಪಡಿಯಱರುಂ ಮಹಾಮರದೇಂ ಜಿನಚಂದ್ರಂ ಅಗಣ್ಯಪುಣ್ಯನೋ: **ಶಾಂತಿಪು,** ೭. ೭೪)

**ಮುದುಗಣ್ಗಗಳ್ –** ಮುದುಕರು (ಮುದುಗಣ್ಗಳುಚಿತಮಂ ನುಡಿವುದು: **ಶಾಂತಿಪು,** ೧೦. ೧೨೦)

**ಮುದುಗಣ್ತನ –** ಮುದಿತನ, ಹಿರಿತನ (ಪ್ರಸನ್ನಗಂಭೀರ ಚಿತ್ತದಿಂದಿದನವಧಾರಿಸುವುದು ಯುವರಾಜ ಮನಂಬಸದೊರ್ಮೆಗೆ ಸಲಿಪುದೆಮ್ಮ ಮುದುಗಣ್ತನಮಂ: **ಆದಿಪು,** ೧೪. ೧೦೪); ಯಜಮಾನಿಕೆ (ವಿನಯದಿನಾಮೀ ಭುವನೈಕನಾಥನಂ ಸಲ್ಗೆವೆರಸು ಬೇಡುತ್ತಿರೆ ಬಂದನುವಿಸುವ ನಿಮ್ಮ ಮುದುಗಣ್ತನದೊಳಿದೇನುಂತೆ ಬಟ್ಟೆವೋಪಡೆ ಪೋಗಿಂ: **ಆದಿಪು,** ೯. ೧೦೬)

**ಮುದುಗಲ್ಲೆ –** ಮುದುಕಿ (ಮುದ್ದುಗೆಯ್ತದಿಂ ಮುನಿವುದು ಮೇಗುದೋಱೆ ಧನಮಂ ನೆಱೆ ಕೊಳ್ವುದು ಕೆಯ್ತಮೆಂದು ನೆಟ್ಟನೆ ಮುದುಗಲ್ಲೆಗೂಂಟಿಣಿ ಮಗಳ್ಗುಪದೇಶಮನಿಂತು ಮಾಡಿದರ್ಳ: **ಶಾಂತೀಶ್ವಪು,** ೧೧. ೭೪)

**ಮುದುಪ** – ಮುದುಕ (ಪುರುಡಿಂ ಕೊಂಡವರಾರೊ ನಿನ್ನಣಲ ಪಲ್ಲಂ .. .. ಎಂದು ಅದೇಂ ಮುದುಪನಂ ವಕ್ರೋಕ್ತಿಯಿಂ ಮಾಣ್ದಳೋ: **ಲೀಲಾವತಿ,** ೨. ೬೧)

**ಮುದುಪಾಜೆ** – ಮುದಿ ಸೂಳೆ (ತನ್ನೊಳ್ ತಾನೇ ಜಿನುಂಗಿ ನುಡಿವ ಮುದುಪಾಜೆಯಂ ನೋಡುತುಂ ನಗುತುಂ ಬರೆ: **ಗಿರಿಜಾಕ,** ೪. ೧೫೬ ವ)

**ಮುದ್ಗ** – ಹೆಸರುಕಾಳು (ಕುಲತ್ಥ ಮುದ್ಗ ಮಾಷ ರಾಜಮಾಷ ಜೀರಕಾಧಾನ್ಯಕಾದಿ ವಿವಿಧಧಾನ್ಯಭೇದಂಗಳುಂ: **ಆದಿಪು,** ೬. ೭೨ ವ)

**ಮುದ್ಗಚ್ಛವಿ** – ಹೆಸರುಕಾಳಿನ ಬಣ್ಣ, ಹಸಿರು (ಗೋಮೂತ್ರ ಚ್ಛವಿಯಂ ಮುದ್ಗಚ್ಛವಿಯಂ ಕಪೋತಚ್ಛವಿಯುಮಪ್ಪ ಘನೋದಧಿಯಂ ಘನಾನಿಳನುಂ: **ಅಜಿತಪು,** ೧೧. ೫ ವ)

**ಮುದ್ಗರ** – ಒಂದು ಆಯುಧ (ಕಣೆಯ ಕಂಪಣ ಮುಸಲ ಮುಸುಂಡಿ ಭಿಂಡಿವಾಳ ತೋಮರ ಮುದ್ಗರ ಮಹಾ ವಿವಿಧಾಯುಧಂಗಳೊಳಿಟ್ಟುಂ ಇಱಿದುಂ ಅಗುರ್ವು ಅದ್ಭುತಮಾಗೆ ಕಾದುವಾಗಳ್: **ಪಂಪಭಾ,** ೧೨. ೧೧೮ ವ)

**ಮುದ್ದಿಗೆ** – [ಮೃದ್ವೀಕಾ] ದ್ರಾಕ್ಷಿ (ಋತ್ವಕ್ಕುತ್ವಂ: ಮೃದ್ವೀಕೆ–ಮುದ್ದಿಗೆ: **ಶಬ್ದಮದ,** ೨೮೨ ಪ್ರ)

**ಮುದ್ದುಗೆಯ್ತು** – ಸರಸ (ಮುದ್ದುಗೆಯ್ತದಿಂ ಮುನಿವುದು ಮೇಗುದೋಱೆ ಧನಮಂ ನೆಱೆ ಕೊಳ್ವುದು ಕೆಯ್ತುಮೆಂದು ನೆಟ್ಟನೆ ಮುದುಗಲ್ಲೆಗೂಂಟಣಿ ಮಗಳ್ಗುಪದೇಶಮನಿಂತು ಮಾಡಿದರ್ಳ: **ಶಾಂತೀಶ್ವಪು,** ೧೧. ೭೪)

**ಮುದ್ರಾಂಕಿತ** – ಮೊಹರು ಮಾಡಿದ (ಅರಸಂಗೆ ಮುದ್ರಾಂಕಿತಮಪ್ಪ ಉಪಾಯನದ ಮುದ್ರೆಯಂ ಕಳೆದು ಸುತ್ತನಱಿದು ತೋಱುವುದುಂ: **ಶಾಂತಿಪು,** ೨. ೨೨ ವ) ಗುರುತುಳ್ಳದ್ದು (ಅರಸಂಗೆ ಮನೆವೆರ್ಗಡೆ ಮುದ್ರಾಂಕಿತಮಪ್ಪುಪಾಯನದ ಮುದ್ರೆಯಂ ಕಳೆದು: **ಶಾಂತಿಪು,** ೨. ೨೨ ವ)

**ಮುದ್ರಿಕೆ** – ಉಂಗುರ (ಕೇವಣದೊಳ್ ತೊಡರ್ದ ಅಳಿನೀಲದ ಪರಲ್ ಎನೆ ಮೃಡರಿಪು ಮುದ್ರಿಕೆವೊಲಾಯ್ತು ಕನಕಾಂಬುರುಹಂ: **ಗದಾಯು,** ೬. ೪೩)

**ಮುದ್ರಿತ** – ಮೇರೆಯಾಗುಳ್ಳ (ಸಮಸ್ತಸಮುದ್ರಮುದ್ರಿತ ಮೇದಿನಿಯನಡಿಗೊಱುಗಿನೊಳ್ ಮಡಂಗಿರಿಸಲ್ಬಗೆದು: **ಪಂಚತಂತ್ರ,** ೯೮ ವ)

**ಮುದ್ರಿಸು** – ಮುಚ್ಚು (ಮದನಂ ಮುದ್ರಿಸಿದಂಬಿನ ಲಾಕ್ಷಾಮುದ್ರೆಯಿದೆಂಬಂತೆ ತೀವಿದಳಿನಿಕುರುಂಬಂ: **ಗಿರಿಜಾಕ,** ೨. ೬೫); ಒಪ್ಪಿಗೆ ನೀಡು (ಮುದ್ರಸು–ಅಂಗೀಕರಣೇ: **ಶಬ್ದಮದ,** ಧಾ ೭೪); ಹೊದಿಸು (ನೃಪತಿ ಪ್ರಭುಲೋಕಮಂ ನಿಜೋಜ್ವಳತರಕೀರ್ತಿಯಿಂ ನೆಱೆಯೆ ಮುದ್ರಿಸಿ: **ಕಾದಂಬ,** ೧. ೮)

**ಮುದ್ರೆ** – ಮೊಹರು (ವಾಗ್ದೇವಿಯ ಭಂಡಾರದ ಮುದ್ರೆಯನೊಡೆದಂ ಸಾರಸ್ವತಮೆನಿಪ ಕವಿತೆಯೊಳ್ ಕವಿರತ್ನಂ: **ಗದಾಯು,** ೧. ೩೮)

**ಮುಧಾ** – ವ್ಯರ್ಥವಾಗಿ (ಅದನಱಿಯದೆ ಅಬೋಧಬೋಧಿತ ತಪೋದಾನವಿಧಾನದಿಂ ಮುಧಾಕ್ಲೇಶಾಯಾಸನಿರತರಾಗಿ ನಮೆವರ್ **ಆದಿಪು,** ೨. ೯ ವ)

**ಮುನ್** – ಹಿಂದೆ, ಪೂರ್ವಕಾಲದಲ್ಲಿ (ತನ್ನೊಳಗಣ ಪನ್ನಗನಂ ಮುಂ ನೀಂ ಪಿಡಿದು ಒಗೆಯೆ ಕಾಯಲಾಱದೆ ಪಿರಿದುಂ ಬನ್ನದ ಕರ್ಪೆಸೆದುದು ತೊಱೆಗೆ ಇನ್ನುಂ ಹರಗಳ ತಮಾಳ ನೀಳಚ್ಛವಿಯಿಂ: **ಪಂಪಭಾ,** ೫. ೫೪); ಆನಂತರದಲ್ಲಿ (ಪರಮಕವೀಶ್ವರ ಚೇತೋಹರಮೆಂಬಿನಮೆಸೆವ ಮಾಳವೀಮಾಧವಮಂ ವಿರಚಿಸಿದ ಕನ್ನಮಯ್ಯಂ: **ಪಂಚತಂತ್ರ,** ೨೧)

**ಮುನಿ** – ಕೋಪಿಸಿಕೊ (ಮುನಿ–ಕ್ರೋಧೇ ತಪಸ್ವಿನಿ ಚ: **ಶಬ್ದಮದ,** ಧಾ ೪೪೫); ತಪಸ್ವಿ (ಮುನಿಗಣೇಶ್ವರರೊಡನೆ ದಾಳಿವೂಗೊಯ್ವೊಡನೆ ವರ್ಪ ಗೋಳಾಂಗೂಳಂಗಳುಮಂ ನೋಡಿ ತಪೋವನದ ತಪೋಧನರ ತಪಃಪ್ರಭಾವಕ್ಕೆ ಚೋದ್ಯಂಬಟ್ಟು: **ಪಂಪಭಾ,** ೧. ೧೧೫ ವ); ಸವಣ (ಬೆಟ್ಟದ ಮುನಿಯಂ ನೆನೆದೊಡೆ ಮುಟ್ಟವು ರಾಕ್ಷಸ ಪಿಶಾಚಿ ವಿಷಮಾಹಿಗಳುಂ: **ಕರ್ಣನೇಮಿ,** ೧. ೧೭): ಹೊಟ್ಟೆಕಿಚ್ಚುಪಡು (ಒಡೆಯರ ಸಿರಿಯಂ ಕಂಡೊಡೆ ಬಡವರ್ ಮುನಿವಂತೆ: **ಧರ್ಮಾಮೃ,** ೩೩)

**ಮುನಿನಿವೇದಕ** – ತಾಪಸಿಯ ಬರವನ್ನು ತಿಳಿಸುವವನು (ನಡೆದೇಟಬಡಿಯಂ ಜಿನನಿರ್ದೆಡೆಗೆಱಗಿ ಬಟೆಕ್ಕಂ ಮಚ್ಚುಗೊಟ್ಟಂ .. .. ಆ ಮುನಿನಿವೇದಕಂಗೆ ನೃಪೇಂದ್ರಂ: **ಶಾಂತಿಪು,** ೧. ೮೩)

**ಮುನಿಯ** – ಭಾರಧ್ವಾಜ ಪಕ್ಷಿ (ಪಾವಕನ ಮುನಿಯಧರ್ಮಜನ ಪಸತ್ತುರಗದ .. .. ಪೆಸರ ಖಗಕುಳಂ ಕರಮೆಸೆಗುಂ: **ರಾಜಶೇಖ,** ೫. ೬೦)

**ಮುನಿಯಿಸು** – ಕೋಪಗೊಳ್ಳುವಂತೆ ಮಾಡು (ಮುನಿಯಿಸಿದ ಅರಾತಿಯಂ ಕೊಲ್ವೆನೆಂದು ಪೂಣ್ದಂತೆ: **ಗದಾಯು,** ೧೦. ೮)

**ಮುನಿಸಂ ಮಾಡು** – ಕೋಪಿಸುವಂತೆ ಮಾಡು (ಆ ಮುನಿಗೆ ಮನಿಸಂ ಮಾಡಲೆಂದು ಇಂದ್ರಂ ಉಪಾಯದೊಳಟ್ಟಿದ ವಜ್ರಕೀಟಂಗಳ್ ಕರ್ಣನೆರಡುಂ ತೊಡೆಯುಮಂ .. .. ಉರ್ಚಿ ಪೋಗೆಯುಂ: **ಪಂಪಭಾ,** ೧. ೧೦೪ ವ)

**ಮುನಿಸು** – ಸಿಟ್ಟು ಬರಿಸು (ಮುನಿಯದ ಕೂರದ ಮುನಿಸದ ಮುನಿಪತಿ ಭಾವಿಪೊಡೆ ತಾನೆ ಜಿನಪತಿಯಲ್ತೆ: **ಸುಕುಮಾಚ,** ೪. ೩೭); ಸಿಟ್ಟು (ಕಡೆಗಣ್ಗಳ್ ಮುನಿಸನಂ ಅಭನಯಿಸಲ್ಕಮ್ಮನೆ ರಕ್ತಾಂಭೋಜರುಚಿಯಂ ಇಟ್ಟುಳಿಗೊಳ್ಗುಂ: **ಕವಿರಾಮಾ,** ೧. ೯೩); ವೈರ (ನೀನಿಂತಿರೆ ಆಂ ಅನ್ನೆಗಂ ಮುನಿಸಂ ತೀರ್ಚಿ ನರೇಂದ್ರವೈರಿತರುವಂ ನಿರ್ಮುಲನಂ ಮಾಡುವೆಂ: **ಗದಾಯು,** ೬. ೨೫)

**ಮುನ್ನೀರ್** – [ಮೂರು ನೀರು: ಧ್ರುವಜಲ, ನದೀಜಲ ಆಕಾಶಜಲ] ಸಮುದ್ರ (ಕೈ ನೀಡಿ ಮುನ್ನೀರ್ಗಳಂ ಕೆಲಬರ್ ಈರ್ದರೆ ಮಾಡುತುಂ ನಡೆದರೆತ್ತಂ ಬೀರರಾ ಪಾಡಿಯೊಳ್: **ಕಬ್ಬಿಗಕಾ,** ೧೯೫)

**ಮುನ್ನು** – ಮುಂಚೆ (ಮಕರಂದಂ ಅರಸನ ಕರುಣಕ್ಕೆ ಮುನ್ನು ಮಿಕ್ಕು ಮುಱಿದು .. .. ಅರಸನ ಸಂತೈಸಿ: **ಲೀಲಾವತಿ,** ೧೪. ೮೭ ವ)

**ಮುನ್ನುಱಿವು** – ಮುಂದಿನ ಬದುಕು (ತನ್ನ ಮುನ್ನುಱಿವು ಬೇಟದ ಲಲ್ಲೆಯ ಬಲ್ಮೆ ಪತ್ತಿ ಸುತ್ತಿಸೆ : **ಆದಿಪು,** ೧೨. ೧೭)

**ಮುನ್ನೇಸಱ್** – ಸೂರ್ಯ ಉದಯಿಸುವ ಮುಂಚಿನ ಕಾಲ, ಅರುಣೋದಯ (ಬಾಡಿದ ದೇವಿಯ ತನುಲತೆ ಬಾಡಿಸಿದುದು ಎನ್ನಯ ಮೊಗಮಂ .. .. ಬಾಡಿಸಿದ ಉತ್ಪಳಿನಿಯಂತೆ ಮುನ್ನೇಸಱೆನೊಳ್: **ನೇಮಿನಾಪು,** ೧. ೧೧೫)

**ಮುಪ್ಪು** – ವೃದ್ಧಾಪ್ಯ (ಸಿಂಗದ ಮುಪ್ಪುಂ ನೆಗಟ್ದೀಗಾಮಗೇಯರ ಮುಪ್ಪುಂ ಇಱಿಎವಡೆಗುಮೇ: **ಪಂಪಭಾ,** ೧೦. ೧೯)

**ಮುಪ್ಪುರಿ** – ಮೂರು ಎಳೆಗಳು, ಮೂರರ ಕೂಟ (ಪಿತೃ ವೃದ್ಧರಾಜ್ಯಸಂಪದದೊಳಮೊಪ್ಪಿದಂ ಸಿರಿಯ ಮುಪ್ಪುರಿವೊಲ್ ಭುವನೈಕಭೂಷಣಂ: **ಅನಂತಪು,** ೯. ೩)

**ಮುಪ್ಪುರಿಗೂಡು** – ಒಗ್ಗೂಡು (ಮೇಖಲೆಯ ಪಾರಿಹಾರ್ಯದ ಮಣಿನೂಪುರದ ಮಧುರಸ್ವನಂ ಮುಪ್ಪುರಿಗೂಡಿದ ಮದನಪಾಶಮೆನೆ ನಡೆತಂದಳ್: **ಪಂಪರಾ,** ೩. ೬೪)

**ಮುಪ್ಪುರಿಗೊಳ್** – ಹೊಸೆ, ಒಂದಾಗು (ತಿರುವಂ ಮುಪ್ಪುರಿಗೊಂಡು ಮಿಳ್ಳಿಸುವ ಮಿಂಚಂ ಮಾಡಿ: **ಕಾದಂಬ,** ೯. ೧೪)

**ಮುಮುಕ್ಷು** – ಮೋಕ್ಷಾಪೇಕ್ಷಿ (ಆ ಕ್ಷಣದೊಳ್ ಅಗ್ನಿಭೂತಿ ಮುಮುಕ್ಷುಗೆ ಮೂಱನೆಯ ದಿವ್ಯಸರ್ವಾವಧಿ ಪುಣ್ಯಕ್ಷೇತ್ರ ಶುಭಸ್ಥಾನ ಸಮಕ್ಷದೊಳಾದುದು: **ಸುಕುಮಾಚ,** ೮. ೪೬)

**ಮುಮುಕ್ಷುವೃತ್ತಿ** – ತಾಪಸ ಕ್ರಮ (ಕಾಮಸುಖೋಚಿತಮತಿಗಳ್ ನಾಮೆತ್ತ ಮುಮುಕ್ಷುವೃತ್ತಿಯಂ ತಾಳ್ದಿದವರ್ ತಾಮೆತ್ತ: **ಆದಿಪು** ೫. ೬೮)

**ಮುಮೂರ್ಷು** – ಸಾಯಲಿರುವವನು (ಅಜ್ಞಾನಿ ನಯಾನಯ ಚಿಂತೆಯನೇನುಮನಱಿಯದೆ ಮುಮೂರ್ಷು ತೆಱನನಱಿದಪನೇ: **ಚಂದ್ರಪ್ರಭು,** ೧೦. ೫೭)

**ಮುಮ್ಮಟೆ** – ಮಣ್ಮಟೆ, ಭಯಂಕರ ಸಾವು (ಎರಡುಂ ಬಲದ ಚಾತುರ್ದಂತಂ ಕ್ರಮಕ್ರಮದೊಳ್ ತಾಗಿ ಕಿಡಿಗುಟ್ಟಿದಂತೆ ಮುಮ್ಮಟೆಯಾದಿಂಬಟೆಯಿಂ: **ಹರಿವಂಶ,** ೭. ೮೦ ವ)

**ಮುಮ್ಮಾಡು** – ಮೊದಲು ಮಾಡು (ದೇಹಂಗಳೊಳ್ ಸಂತತಂ ನೆಲಸಿರ್ದೂಡುವನೆಯ್ದೆ ಕರ್ಮಮಹಿಪಂ ಮುಮ್ಮಾಡಿದೊಂದಂದದಿಂ: **ಸಮಯಪ,** ೧೩. ೧)

**ಮುಮ್ಮುರಿ** – ಕಾದ ಮರಳು (ಸೆರಗಿಲ್ಲದೆ ಮುಮ್ಮುರಿಯೊಳುಮಿಡೆಯುಂ ಕರಗಸದೊಳ್ ಬಿಡದರೆಯುತ್ತಿರೆಯುಂ: **ಹರಿವಂಶ,** ೧೦. ೧೦)

**ಮುಯ್** – ಉಡುಗೊರೆ (ಮುಯ್ಯೊರೆವ ವಿಟಭೋಗಿಗಳ ವಿಸ್ತರದಿಂ ಸೊಗಯಿಸುವುವು ಘಟ್ಟಿವಳರಂಗಡಿಗಳ್: **ಪುಷ್ಪದಂಪು,** ೨. ೯೩); ಪ್ರತೀಕಾರ (ಪೊಸದೇಸೆಯೊಳೊಂದಿದ ಮಾಗರ್ಹದೊಳ್ಪುವೆತ್ತೆಸೆದಿರೆ ಪೇಟ್ದು ಅಂಜಿಸದೆ ಕೆಮ್ಮನೆ ಬಲ್ಮೆಗೆ ಮುಯ್ಯನಾಂಪುದೇ: **ಸುಕುಮಾಚ,** ೧. ೪೪)

**ಮುಯ್ಪು** – ಹೆಗಲು (ನೀಮುಂ ಎಡದ ಕೈಯನೆಟಲಿಕ್ಕಿಯರ್ಧಗಪ್ಪಡಮಂ ಎಡದ ಮುಯ್ಪಿನ ಮೇಗಿಕ್ಕಿ .. .. ಬಲದ ಕೈಯೊಳ್ ಭೈಕ್ಷದ ಭಜನಮಂ ಪಿಡಿದು: ವಡ್ಡಾರಾ, ಪು. ೯೨, ಸಾ. ೧೭); ಹಕ್ಕಿಗಳ ರೆಕ್ಕೆಗಳ ಬುಡ (ಜೋಳ್ದಿಟೆಯಲ್ ಮುಯ್ಪುಗಳಾವಗೆವಟೆಯಲ್ ಬಲವಾಱಿದಂತು ಮುಪ್ಪಿಂ ಪಾಱಲ್: **ಕಾದಂಬ,** ೧. ೧೧೨)

**ಮುಯ್ಪಂ ನೋಡು** – ಸಾಮರ್ಥ್ಯ ಅರಿತುಕೊ (ಎನ್ನಂತು ಸಂದ ಕಳ್ಳರಿಲ್ಲೆಂದು ಮುಯ್ಪಂ ನೋಡಿ ಮತ್ತಂ ತನ್ನೊಳಿಂತೆಂದಾಲೋಚಿಸಿದಂ: **ಧರ್ಮಾಮೃ,** ೮. **೮೩ ವ**); ಹೆಮ್ಮೆಪಡು (ಮಣಿಮಾಲೆ ಮಹಾದೇವಿ ಕಂಡು ಮುಯ್ಪಂ ನೋಡಿ ರಾಗದಿಂ ವಿಳಾಸಿನಿಯರ್ಗಿಂತೆಂದಳ್: **ಧರ್ಮಾಮೃ,** ೮೩. ವ)

**ಮುಯ್ಯಡಿ** – ಮೂರು ಅಡಿ (ಮುಯ್ಯೆಂಬುದರ್ಕೆ: ಮುಯ್ಯೇಟುಸೂಟ್ ಮುಯ್ಯಡಿ ಮುಯ್ಯಿರಡಿ: **ಶಬ್ದಮದ,** ೧೯೯ ಪ್ರ ೬)

**ಮುಯ್ಯಾನ್** – ಪ್ರತೀಕಾರ ಮಾಡು (ಅನುಜನ ನೆತ್ತರನೀಂಟಿದವನ ನೆತ್ತರ ಜೀವಸಹಿತಂ ಈಂಟದೆ ದುರ್ಯೋಧನನೆಂಬ ಪೆಸರ್ಗೆ ಮುಯ್ಯಾಂಪೆನೇ: **ಗದಾಯು,** ೫. ೮); ಸ್ಪರ್ಧಿಸು (ಲಾವಣ್ಯಮೆನ್ನದೆ ಬೇಱೊಂದು ಪಲಾಲಮಂ ಗಟಿಪಿ ಚಾತುರ್ಯಕ್ಕೆ ಮುಯ್ಯಾಂಪುದೇ: **ಸುಕುಮಾಚ,** ೧೦. ೧೧೪)

**ಮುಯ್ಯೀರಡಿ** – ಮೂರೆರಡು ಅಂದರೆ ಆರು ಕಾಲುಗಳುಳ್ಳದ್ದು, ದುಂಬಿ (ಮುಯ್ಯೀರಡಿಯೆಂದು ತುಂಬಿ: **ಶಬ್ದಮದ,** ಪ್ರಸಾ ೨೦೩)

**ಮುಯ್ಯೇಟು** – ಮೂರು ಬಾರಿ ಏಳು, ಏಳು ಮೂರಲ, ಇಪ್ಪತ್ತೊಂದು (ಧರಾತಳಮಂ ಒಲ್ಲಣಿಗೆಯಂ ಪಿಟಿವಂತೆ ತಳಂ ಎಯ್ದೆ ಸುರುಳ್ದಿನಂ ಮುಯ್ಯೇಟು ಸೂಟ್ ಪಿಟಿದ ಸಾಹಸಮುಂ: **ಪಂಪಭಾ,** ೧೨. ೪೮ ವ)

**ಮುಯ್ವಂ ನೋಡು** – ಹೆಮ್ಮೆಪಡು (ಸುಂದರಿಯೆರಡುಂ ಮುತ್ತಂ ಪಡೆದಗ್ಗಳಿಕೆಗೆ ಮೆಯ್ವೆರ್ಚಿ ವಿಧಾತ್ರನಿರದೆ ಮುಯ್ವಂ ನೋಟ್ಟಂ: **ಕಾವ್ಯಾವಲೋ,** ೧೮೦)

**ಮುಯ್ವಂ ನೋಡಿಸು** – ಸಂತಸಪಡಿಸು (ಅಯ್ವರ ಬಾಲಕ್ರಿಯೆಯುಂ ಮುಯ್ವಂ ನೋಡಿಸಿತು ತಾಯುಮಂ ತಂದೆಯುಮಂ: **ಪಂಪಭಾ,** ೨. ೧೧)

**ಮುಯ್ವು** – ಹೆಗಲು (ಅಡಿ ತೊಡೆ ಪೊರ್ಕುಟುಂ ತೆಗಲೆ ಕೈ ಕಣೆಕಾಲ್ ಕೊರಲ್ ಎಂಬಿವುಂ ಬೆರಲ್ ನಡುವುರ ಬೆಂ ಬಸಿಱ್ ತೊಳಕು ಕರ್ಜಱ್ ಮುಯ್ವು .. .. ಎಂಬೆಡೆಯನೆ ನಟ್ಟುರ್ಚಿದುವು .. .. ಪಾರ್ಥನಂಬುಗಳ್: **ಪಂಪಭಾ,** ೧೧. ೧೩೬); ಮುಯ್ಯಿ, ಪ್ರತಿನಿರ್ಯಾತ (ಕ್ಷಿತಿತಳದೊಳ್ ನೆಗಟ್ದಿರ್ದಪ್ರತಿಮಲ್ಲನನಿಕ್ಕಿ ಮುಯ್ವಂ ಅಣಂ ಆನದೆ: **ಆದಿಪು,** ೧೪. ೧೩೪)

**ಮುರಜ** – ಮದ್ದಳೆ (ಮುರಜಧ್ವನಿಯಿಂದಮಾ ವಧೂವರರಂ ಪೋ ಬರವೇಟೆಂಬತಿರ್ದುದು ಸುರವಾರಸ್ತ್ರೀ ವಿಳಾಸಪರಿಣಯನಗೃಹಂ: **ಆದಿಪು,** ೮. ೧೯)

**ಮುರವು** – ಕಲಗಚ್ಚು (ಪಾಲ್ಗೆ ಮುರವೇಂ ಬೆಲೆಯೇ: **ಧರ್ಮಮಧು,** ೧ ೧೧೪)

**ಮುರಾಂತಕ** – ಕೃಷ್ಣ (ಒಡ್ಡಿಸೆ ಕಾದಂ ಆಗಳ್ ಅರ್ವಿಸೆ ತೆಗೆದೆಚ್ಚ ವೈಷ್ಣವಮಂ ಒಡ್ಡಿಸಿ ವೈಷ್ಣವದಿಂ ಮುರಾಂತಕಂ; **ಪಂಪಭಾ,** ೧೨. ೩೨)

**ಮುರಿ** – ಬಾಗು, ಹೊರಳು (ಪರಿದ ತಲೆ ಬಿಟ್ಟ ಬಾಯ್ ನಸು ಮುರಿದ ಕೊರಲ್ ಮುಗುಳ್ದ ಕಣ್: **ಗದಾಯು,** ೪. ೨೪); ಹೊಸೆ; ಹಿಂದಿರುಗು

**ಮುರಿಗೇಶ** – [ಮುರಿ+ಕೇಶ] ಗುಂಗುರು ಕೂದಲು (ಮುರಿಗೇಶದಿನೆಸೆವ ಶಬರರ ತಲೆಗಳೋಳಿಯಂತೆ .. .. ಕರ್ಬೊನ್ನ ಕನ್ನಡಿಯ ತೋರಣಂಗಳೊಳಂ: **ಕಾದಂಬ,** ೮. ೨ ವ)

**ಮುರಿಪು** – ತಿರಿಚು (ಮುರಿಪು–ಮುಷ್ಟಿ ಭ್ರಮಣೇ: **ಶಬ್ದಮದ,** ಧಾ ೪೬೯); ಬಗ್ಗಿಸು (ಮುರಿಪದ ಕಂಬಬಾಸಿಗದೆರಡುಂ ಕಡೆಯಂ ವಿಳಾಸವತಿ ಪಿಡಿದು ಎರಡುಂ ಕರದಿಂ ಅನುಕರಿಸಿದಳ್ ಸುರಕರಾಸನಶ್ರೀಯನಾಳ್ದ ಗಗನಶ್ರೀಯಂ: **ಚಂದ್ರಪ್ರಭು,** ೧೬. ೬೮); ಹಿಂಜರಿತ (ಮುರಿಪೆನೆ ಮರಳಿದ ಭವಂ: **ರನ್ನ ನಿಘಂಟು,** ೨)

**ಮುರಿವು** – ಕಿವಿಯ ಒಂದು ಆಭರಣ (ಕೆರಕುಂ ತುಱಿಯುಂ ತೊನ್ನುಂ .. .. ನಾಗರ ಮಾಟಮರಂದು ಕಿವಿಯೊಳ್ ಮುರಿವಿಟ್ಟುಂ ಪಲರರ್ಚಿಪರ್: **ಸಮಯಪ,** ೯. ೭೬)

**ಮುರುಂಟು** – ಮುರುಟಿಹೋಗು (ಮೇಗಣ ನಾಲ್ಕಱೊಳ್ಳೈದಱ ಮೇಗಣ ಭಾಗದೊಳಗುರ್ವು ಘರ್ಮಂ ಹಿಮದಿಂದಾಗಳೆ ಮುರುಂಟುವರ್ ಮಹಿಭಾಗದೊಳುಟಿದವಱೊಳಿನ್ನವೇಟುಂ ನರಕಂ: **ಆದಿಪು,** ೫. ೮೨); ಡೊಂಕಾಗು (ತಾಂ ತೊನ್ನನಾಇ ಮುರುಂಟಿದ ಕೈಯುಂ ಕಾಲುಂಬೆರಸು .. .. ಲೋಗರ ಮನೆಗಳೊಳ್ ಭೈಕ್ಷಮಂ ಬೇಡಿ: **ವಡ್ಡಾರಾ,** ಪು. ೧೨೨, ಸಾ. ೨೨); ಉರಿಯಿಸು (ಮುರುಂಟು–ದಹನಕರಣೇ: **ಶಬ್ದಮದ,** ಧಾ ೨೫೮); ಬಾಡಿಹೋಗು (ಕುಡಿ ಮುಱಿದಿರ್ದೊಡಂ ಕೊನೆ ಮುರುಂಟಿದೊಡಂ ನಱುಕಿರ್ದೊಡಂ ಬೆಳರ್ತೊಡಂ ಒಣಗಿರ್ದೊಡಂ ಸರುಜಮೀ ದ್ರುಮಮೆಂದಱಿದು .. .. ಕರಿಯ ಮಣ್ಣುಮನೊಟ್ಟಿಗೆ ಬಾಟ್ಟುಮಾ ಮರಂ: **ಲೋಕೋಪಕಾ,** ೬. ೧೩); ಸೀದು ಹೋಗು (ದೇಹದ ದಾಹದೇಳ್ಗೆಗೆ .. .. ಭೃಂಗೀಪಟಂಗಳ್ ಆ ಕ್ಷಣಮರಲ್ದುವೆಱಂಕೆ ಮುರುಂಟೆ ಧಾತ್ರಿಯೊಳ್: **ಕುಸುಮಾಕಾ,** ೧೩. ೪೯)

**ಮುರುಟು** – ಮುದುರಿಕೊ (ಸಿರಿ ಪೋಗೆ ತನ್ನ ರೂಪಂ ಕರಗಿಸಿದೊಡೆ ಮುಳಿಯದೇಕೆಯೋ ಮುರುಟಿರ್ಕುಂ: **ಸಮಯಪ,** ೯. ೧೦೨)

**ಮುರುಡ** – ಒರಟ (ಮುದುಗರಡಿಯ ಮುರುದೊವಲಂದದ ಕರಿಯಂ ತಾಳ ಕಾಯ ಮೋಳಿಗೆಯೊಂದಂದದ ಮುರುಡಂ ಅಷ್ಟವಂಕಂ: **ಯಶೋಧಚ,** ೨. ४೦)

**ಮುರುಡು** – ಡೊಂಕಾಗು (ಕರಿದಾದೊಡೆ ಕತ್ತುರಿಯಂ ಮುರುಡಾದೊಡೆ ಮಲಯಜಂಗಳಂ ಕೊಂಕಿದೊಡೇಂ ಸ್ಮರಚಾಮಂ ಇಳಿಕೆಯ್ವರೆ; **ಯಶೋಧಚ,** ೨. ४೨)

**ಮುರುದೊವಲ್** – ಸುಕ್ಕುಗಟ್ಟಿದ ಚರ್ಮ (ಮುದುಗರಡಿಯ ಮುರುದೊವಲಂದದ ಕರಿಯಂ ತಾಳ ಕಾಯ ಮೋಳಿಗೆಯೊಂದಂದದ ಮುರುಡಂ ಅಷ್ಟವಂಕಂ: **ಯಶೋಧಚ,** ೨. ४೦)

**ಮುರುವು** – ದನಗಳಿಗಿಡುವ ಮುಸುರೆ, ಕಲಗಚ್ಚು (ಆವಂ ತುಱಿಸು ತಳೆಯಿಕ್ಕು ತಡೆಯದೆ ಮುರುವಂ ಸುರಿ ಎಂಬ ಸರಮೆ ತುರುಗಾರ್ತಿಯರಾ: **ಲೀಲಾವತಿ,** ೫. ೧೦४)

**ಮುಷಿತ** – ಬಿಟ್ಟುಹೋದ (ಇಷುಪ್ರಾಯಂ ಗೇಯಂ ಮುಷಿತಕಿರಣಂ ಶಿತಕಿರಣಂ .. .. ವನಿಗವನಿಂ ಚಿತ್ತಭವನಿಂ: **ಲೀಲಾವತಿ,** ೭. ೮४)

**ಮುಷ್ಟಿ** – ಹಿಡಿ (ಅದೇಂ ತಿರವೋ ಪೂಣಿಸಿದ ಮುಷ್ಟಿ ಭೂರಿಶ್ರವನಾ: **ಪಂಪಭಾ,** ೧೧. ೧४೧)

**ಮುಸಲ** – ಒನಕೆ (ಮದದಂತಿದಂತ ಮುಸಲಪ್ರವಿಭಗ್ನ ಮಹಾಮಹೀರುಹಾಸ್ಪದಂ: **ಪಂಪಭಾ,** ೩. ೧೦); ಒಂದು ಆಯುಧ, ಗದೆ (ಕಣೆಯ ಕಂಪಣ ಮುಸಲ ಮುಸುಂಡಿ ಭಿಂಡಿವಾಳ ತೋಮರ ಮುದ್ಗರ ಮಹಾ ವಿವಿಧಾಯುಧಂಗಳೊಳಿಟ್ಟುಂ ಇಱಿದುಂ ಅಗುರ್ವು ಅದ್ಭುತಮಾಗೆ ಕಾದುವಾಗಳ್: **ಪಂಪಭಾ,** ೧೨. ೧೧೮ ವ)

**ಮುಸಲಪಾಣಿ** – ಬಲರಾಮ (ಕೌರವೇಂದ್ರನಂ ಮುಸಲಪಾಣಿ ಮನದೊಳ್ ಪೊಗಟ್ದಂ: **ಗದಾಯು,** ೭. ೬೦)

**ಮುಸಲಾಯುಧ** – ಬಲರಾಮ (ಹಲ ಮುಸಲಾಯುಧಂ ನಡೆವ ತಾರನಗೇಂದ್ರಮನೊಂದು ಕರ್ಮುಗಿಲ್ ಬಳಸಿದವೊಲ್ ವಿರಾಜಿಸೆ ವಿನೀಲಪಟಂ: **ಪಂಪರಾ,** ೬. ೭೬); ಒಬ್ಬ ರಾಕ್ಷಸ (ಹಳಂಭೂತ ಮುಸಲಾಯುಧ ಕಾಳನೀಳ ವಿದ್ಯುನ್ಮಾಲಿಗಳುಂ ಬಂದು ಕೂಡೆ: **ಪಂಪಭಾ,** ೧೦. ೨೭ ವ)

**ಮುಸಳ** – ಒರಳು (ಮುಸಳಂ ಅಯೋಗ್ರಂ ಒರಲ್ಗಂ ಪೆಸರಕ್ಕುಂ: **ಅಭಿಧಾವ,** ೧. ೧೦. ೩೨)

ಮುಸಳಿ – ಬಲರಾಮ (ಹಲಿ ಬಲಭದ್ರಂ ಮುಸಳಿ ಕಾಮಪಾಳಂ ರಾಮಂ: **ಅಭಿಧಾವ,** ೧. . ೨೫)

**ಮುಸು** – ಕಪ್ಪುಮುಖದ ಕೋತಿ, ಗೋಲಾಂಗೂಲ (ಮುಸು ಮುತ್ತಂತೆ ತೆರಳ್ದ ತನ್ನ ಮೊಗಮಂ ಕಂಡಳ್ಕನೋ: **ಆದಿಪು,** ೨. ४೫);

**ಮುಸುಂಕು** – ಹೊದೆಸು (ದೆಸೆ ಪಸುರೇಱೆ ಪಚ್ಚೆಯೊಳೆ ಮುಚ್ಚಿ ಮುದುಂಕಿದ ಮಾಟ್ಕೆಯಾದುದು .. .. ಮೇಘಕಾಲದೊಳ್: **ಪಂಪಭಾ,** ೭. ೨೨); ಆವರಿಸು (ನೊಟಗಳ್ಮುಸುಂಕಿ .. .. ಮುನಿಪತಿಯನಗಲದೆ ಸುಟಿವುವು: **ಧರ್ಮಾಮೃ,** ४. ४೮); ಹೊದಿಕೆ (ಪದೆದಾನೀಕ್ಷಿಸೆ ಪೋಪನೊಯ್ಯನೆ ಮುಸುಂಕಂ ಪೊಕ್ಕು ಮೆಯ್ವೆತ್ತುವಂ: **ಕುಸುಮಾಕಾ,** ೧೨. ೧೫೧)

**ಮುಸುಂಡಿ** – ಒಂದು ಬಗೆಯ ಆಯುಧ (ಕಣೆಯ ಕಂಪಣ ಮುಸಲ ಮುಸುಂಡಿ ಭಿಂಡಿವಾಳ ತೋಮರ ಮುದ್ಗರ ಮಹಾ ವಿವಿಧಾಯುಧಂಗಳೊಳಿಟ್ಟುಂ ಇಱಿದುಂ ಅಗುರ್ವು ಅದ್ಭುತಮಾಗೆ ಕಾದುವಾಗಳ್: **ಪಂಪಭಾ,** ೧೨. ೧೧೮ ವ)

**ಮುಸುಂಡು** – ಮುಸುಡು, ಮೂತಿ (ಬಿಸರುಹದೆಸಳ್ವೊರೆಯ ನಸುದೆಱಪಿನೊಳ್ ಮುಸುಂಡನಿಟ್ಟು ಬೀಸರವಾಗದ ಒಸಗೆಗಂಪನುಣ್ಬ: **ಲೀಲಾವತಿ,** ೩. ೨೦ ವ)

**ಮುಸುಂಬು** – ಮುಸುಡು, ಮೂತಿ (ಪೊಸತು ಅಲರ್ದ ಅಂಭೋರುಹದೊಳ್ ಮುಸುಂಬು ಮುಟುಗುವಿನಂ ಎಱೆಗೆ ಗಂಧಮಂ ಆಘ್ರಾಣಿಸುತುಂ ಅಳವಳಿಸುವ ಅಳಿಗಳ ಪಸವೋಡಿದುದಿಲ್ಲ ರಜನಿಸಮಯ ಅತ್ಯಯದೊಳ್: **ಅಜಿತಪು,** ೬. ೬೬)

**ಮುಸುಮೊಗ** – ಕೋತಿಯ ಮುಖ, ವಿಕಾರ ಮುಖ (ಮುಸುಮೊಗಮಾಯ್ತು ಮೊಗಂ ಕಾಲ ಸತ್ತುಗಂ ಪೋಯ್ತು ಪಲ್ಗಳಳ್ಳಾಡಿದುವೇಡೀಸುವಂತಿರ್ದಪಿರಿನ್ನುಮಂ ಇನ್ನುಂ ಬಿಸುಡಿರೆ ನೀವಜ್ಜ ನಿಮ್ಮ ನಿರ್ಲಜ್ಜಿಕೆಯಂ: **ಅಜಿತಪು,** ೨. ೧೦೦)

**ಮುಸುಱು** – ಮುಸುಕು, ಆವರಿಸು (ಅಂತು ಪೊಱಮಡುವ ಅರಾತಿ ಕಾಲಾನಲನಂ ಕಂಡು ಕಡ್ಡುವಂದ ದೊಡ್ಡರೆಲ್ಲಂ ಮುಸುಱೆ: **ಪಂಪಭಾ,** ೩. ೬೧ ವ); ಗುಂಪಾಗು (ಮುಸುಱು–ಸಂಭನ್ನೇ: **ಶಬ್ದಮದ,** ಧಾ ೦೦೨); ಗುಂಪಾಗು (ಬಡಿ ಕೋಲ್ ಕಟ್ಟಿಱಿ .. .. ಎಂದು ಮುಸುಱಿ ನಾರಕರಾಗಳ್ ಮತ್ತಂ ಕೊಂತಂಗಳಿಂದಂ .. .. ಕುತ್ತುವುದುಂ: **ವಡ್ಡಾರಾ,** ಪು ೧೨೭, ಸಾ. ೧೨)

**ಮುಸ್ತಾ** – ಕೊನ್ನಾರಿ ಗಡ್ಡೆ (ಪೋಗುತಿರ್ದತ್ತು ದೌಂಷ್ಟ್ರಾಂಕುರಘಾತವ್ಯಸ್ತ ಮುಸ್ತಾಕ್ಷತಿ ಸುರಭಿತರೋತ್ರ ಅವರೋಹಂ ವರಾಹಂ: **ನೇಮಿನಾಪು,** ೩. ೬४)

**ಮುಸ್ತಾಕಂದ** – ಕೊನ್ನಾರಿ ಗಡ್ಡೆ (ಪೆರ್ಬುಲಿಗಳ ಸುರ್ಬುವಜ್ಜೆಗಳುಮಂ ದಾಡೆಗಳಿಂದೀಡಿಱಿದಗುಟ್ಟು ತೋಡಿಕೊಂಡು ಮೆಲ್ವ ಮುಸ್ತಾಕಂದಂಗಳ ತಿರುಳ್ ಪಱಿದೊಕ್ಕು ಕಂಪಿಡುತ್ತಿರೆ: **ಕುಸುಮಾಕಾ,** ೧४. ೨೯ ವ)

**ಮುಹುಡ** – ಕುಸ್ತಿಯ ಒಂದು ಪಟ್ಟು (ಆಂ ಪಿಡಿದುದೆ .. .. ಹತ್ತೆ ಡೊಕ್ಕರಂ ಚಡಿಕೆ ತುಳಾಡಿ ಪೊಟ್ಟಮುಡುಹಂ ದಣುವಟ್ಟಿ ಪಟ್ಟಿಸೆ: **ಅನಂತಪು,** ೨. ೨೭)

**ಮುಹುಃ** – ಪುನಃ (ಮುಹುವಾಕ್ಯ್ಯಇಡೆಯನುಳಿದು ಕುಮಾರಚೂಡಾಮಣಿ ತಂದೆಯೆಂದುದರ್ಕ ಎರ್ದೆಗೊಂಡಂ: **ಚಂದ್ರಪ್ರಭು,** ೨. ೫೫)

**ಮುಹುರ್ಮುಹುರ್** – ಮತ್ತೆ ಮತ್ತೆ (ಅತ್ಯಂತವಿಸ್ಮಯ ಸ್ಮೇರಮುಖನುಂ ಅತಿರುಚಿರನ್ಯ ಸ್ವಹಸ್ತಪಲ್ಲವನುಂ ಮುಹುರ್ಮುಹುರ್ ಆಂದೋಳಿತ ಮಸ್ತಕನುಂ: **ಆದಿಪು,** ೧೦. ೫೨ ವ)

**ಮುಹೂರ್ತ** – ಶುಭಗಳಿಗೆ (ಒಳ್ಳಿತಪ್ಪ ಮುಹೂರ್ತದೊಳ್ ದೀಕ್ಷೆಯಂ ಕೊಟ್ಟು: **ವಡ್ಡಾರಾ,** ಪು. ೬. ಸಾ. ೨); ಎರಡು ಗಳಿಗೆಯ ಅವಧಿ (ಅದು ಸಮಯ ಆವಳಿಕಾ ಉಚ್ಛ್ವಾಸ ಸ್ತೋಕ ನಿಮೇಷ ನಾಳಿಕಾ ಮುಹೂರ್ತ ದಿವಸ ಪಕ್ಷ ಮಾಸ ಋತು ಅಯನ ಸಂವತ್ಸರಾದಿ ಗಣನಾಕ್ರಮದಿಂದಂ: **ಆದಿಪು,** ೬. ೪೮ ವ); ಹನ್ನೆರಡು ಗಲಿಗೆಗಳ ಅವಧಿ ದಿನದ ಮೂವತ್ತನೆಯ ಒಂದು ಭಾಗ (ಕ್ಷಣಮದಾಱು ಘಳಿಗೆಯೆನಿಕ್ಕುಂ ಅವಱೆರಡೆರಡಂ ಕೊಂಡೊಡೆ ಬವಱಿಸುವ ಮುಹೂರ್ತಮಂತದೊಂದಕ್ಕುಂ: **ಅಭಿಧಾವ,** ೨. ೨ ಮತ್ತು ೩)

**ಮುಳ್** – ಕಂಟಕ (ಪಾಟಿಸುವೆನೊಯ್ಯನೆ ಮುಳ್ಳೊಳೆ ಮುಳ್ಳಂ: **ಪಂಪಭಾ,** ೯. ೭೭)

**ಮುಳಿ** – ಕೋಪಗೊಳ್ಳು (ಮುಳಿ–ಕೋಪೇ: **ಶಬ್ದಮದ,** ೯೮೦)

**ಮುಳಿಕೆಯ್** – ಮುಳಿ (ಎನ್ನ ಮನಕ್ಕೊಡಂಬಡನೊಡಂಬಡುವೈ ಪಟಿಗೆಯ್ದುದೇವಮಂ ನೀನ್ನೆಗಟ್ಚಿದಳೆಂದು ಮುಳಿಕೆಯ್ದಿಗಿದೊಪ್ಪದು ಸಮ್ಮತಾವಸಾನನ್ನಳಿನಾನನೇ ಮುಳಿದದಂ ಬಿಸುಡ್ಕೆ: **ಶಾಂತಿಪು,** ೮. ೮೪)

**ಮುಳಿದರ್** – ಶತ್ರುಗಳು (ಮುಳಿದರಂ ಜಂಕಿಸಿದವು ಬಿಡದಾರ್ದು ಕಾವನೆಚ್ಚ ಅಲರ್ಗಣೆಗಳ್: **ಕಬ್ಬಿಗಕಾ,** ೨೩೫)

**ಮುಳಿಯಿಸು** – ಕೋಪಗೊಳಿಸು (ನಿಮ್ಮಂ ಮುಳಿಯಿಸಿದ ಸುರಾಸುರರುಮಂ ಒಳರೆನಿಸೆಂ ಕರ್ಣನೆಂಬನೆನಗೇವಿರಿಯಂ: **ಪಂಪಭಾ,** ೧೨. ೧೩೧)

**ಮುಳಿಸು** – ಕೋಪ (ಭರತನ ಮುಳಿಸು ಒಸಗೆಯನನುಕರಿಸಿದುದೇಂ ಚಕ್ರವರ್ತಿವೃತ್ತಮೊ ಶರದಂ: **ಆದಿಪು,** ೧೧. ೭)

**ಮುಳುಂಕು** – ಮುಳುಗು (ಪೊಳೆವ ಶರಚ್ಚಂದ್ರಿಕೆಯೊಳ್ ಮುಳುಂಕಿ ನಸುದೋರ್ಪ ತಾರೆಗಳ ತೆಱದಿಂ ಕಣ್ಗೊಳಿಸಿ ಮಗಮಗಿಪ ಮಣಿಸರವಳಿಗೆಯ ಪಾಯಸಮಂ ಅಸದಳಂ ಬಡ್ಡಿಸಿದರ್: **ಶಾಂತೀಶ್ವಪು,** ೧೫. ೫೭)

**ಮುಳ್ಗಿಡು** – ಮುಳ್ಳುಗಿಡ (ಮುಳ್ಗಿಡುಗಳೊಳ್ ತೊಡರ್ದು ಮೆಯ್ನವಿರ್ ಪಱಿಗುಮೆಂದು ಮಿಡುಕಲೊಲ್ಲದೆ ಅಲ್ಲಿಯೆ ನಿಂದು: **ಚಂದ್ರಪ್ರಭು,** ೫. ೬೫ ವ)

**ಮುಳ್ಪು** – ಕೆಂಪು ಬಣ್ಣ (ಕೊಸಗಿನ ತುಱುಂಬು ಮುಳ್ಪಿನ ವಸನಂ ಕುಂಕುಮನವಾಂಗರಾಗಂ ಪರಿರಂಜಿಸೆ: **ಶಾಂತಿಪು,** ೭. ೧೪೫); ಕೆಂಪು ಬಣ್ಣದ ಬಟ್ಟೆ (ಸಂಜೆಗೆಂಪಿನ ತಳ್ಪಮರ್ದಿರೆ ಪೊರೆಯನೆತ್ತಿ ಪೊಲಿಸಿದ ತೆಱದಿಂ ಮುಳ್ಪಿನ ಪೊಸಟೊಪ್ಪರಂ ಇನಕಳ್ಪಂಗಾ ಜೋಗಿಗಗೆಸೆದುದು ಅಸದಳಮಾಗಲ್: **ಲೀಲಾವತಿ,** ೪. ೭೩)

**ಮುಳ್ಮುಟ್ಟುಗ** – ಮುಳ್ಳುಗಳಿರುವ ಮುತ್ತುಗ (ನಿನ್ನ ಮುಲೀಸಿನ ಬೆಂಕಿಯಿಂ ಪೊತ್ತಿ ಪೊಗೆದುರಿವ ಪಗೆವರ ಬೀಡಿನಂತೆ ಸುತ್ತಲುಂ ಪುತ ಮುಳ್ಮುಟ್ಟುಗದ ಮರಂಗಳೊಳಂ .. ನೋಡಲ್ವೇಟ್ಟುದು: **ಕಬ್ಬಿಗಕಾ,** ೭೦ ವ)

**ಮುಱಿ** – ಕತ್ತರಿಸು (ಪಗೆವರ ನಿಟ್ಟೆಲ್ವಂ ಮುಱಿವೊಡೆನಗೆ ಪಟ್ಟಂಗಟ್ಟಾ: **ಪಂಪಭಾ,** ೧೦. ೧೭); ತುಂಡಾಗು (ಮೂಗುಂ ಮುಱಿವನ್ನಂ ಮುಂದೆ ಮುಗ್ಗುತ್ತೆಡಬಲದೊಳಗಂ ಬೀಟುತುಂ ಪಕ್ಕಗೂಡಾಗೊಱಗುತ್ತುಂ ಪೋಗೆ: **ಕಾದಂಬ,** ೧. ೧೫೯); ತುಂಡು (ಎಳವಿಸಲ ಮುಱಿಗಳಿಂ ಕಣ್ಗೊಳಿಸುವ ಕೈಲಾಸದಂತೆ .. .. ಕರಮೆಸೆದಂ: **ಕಾದಂಬ,** ೧ ೨೬)

**ಮುಱಿಗಣ್** – ಗಿಡದ ಗೆಣ್ಣು (ಅಡವಿಯಾನೆಗಳಡಿಗೊಂಬುಗೊಂಡ ತದುಕಿನ ಮುಱಿಗಣ್ಣೊಳೊಗೆದ ಪಗಿನೊಳಗ್ಗಿವೆಗಡಿಂ ಕಾಲ್ದೊಡರ್ದು ಮಿಡುಮಿಡುಕಿ ಕಳವಳಿಪ ಕಳಮಿಕಸಂಕುಳಂಗಳುಂ: **ಚಂದ್ರಪ್ರಭು,** ೫. ೬೫ ವ)

**ಮುಱಿವಡು** – ಬಾಗು (ನೀಡದೊಳಿಂಬುಗೊಂಡ ಮುಱಿವಟ್ಟ ವಿಹಂಗಮ ಮಾಲೆಗೆ ಎಟ್ಟಱಂ ಮಾಡುತುಂ: **ಕುಸುಮಾಕಾ,** ೧೪. ೨೦)

**ಮುಱುಕ** – ಒಯ್ಯಾರ (ಕಡುನೀಱೆಯರಂ .. .. ಮುಱುಕದಿಂದಂ ಮುಡಿ ಮೆಯ್ ಕಣ್ ಪುರ್ಬುಗೊಳ್ವೆನೆಂಬಂ ಪಾಣ್ಬಂ: **ಸಮಯಪ,** ೫. ೫೩); ಚೆಲುವು (ಕೆಮ್ಮುಗಿಲ ತೆಳ್ವೊರೆಯ ಮಱೆಯೊಳ್ ಮಿಱುಪ ಸಂಜೆವೆಱೆಯ ಮುಱುಕಮಂ : **ವರ್ಧಮಾಪು,** ೧೦. ೫ ವ)

**ಮುಱುಕು** – ಮುಖ ವಿಕಾರಮಾಡು, ಅಣಕಿಸು (ಮುಱುಕು– ಮುಖವಿಕಾರೇ: **ಶಬ್ದಮದ,** ಧಾ ೬೮)

**ಮುೞುಂಕು** – ಮುಳುಗು (ರಜನೀಸತಿ ಚಂದ್ರಮಯೂಖ ಮಹಾಹ್ರದದೊಳಗೆ ಮುೞುಂಕಿದಳ್: **ಚಂದ್ರಪ್ರಭು,** ೮. ૩೧)

**ಮುೞುಂಕಾಡಿಸು** – ಮುಳುಗಿಸು (ಸುಮನಶ್ಶೈಳವಂ ಆ ಜಿನಾಭಿಷವಣಕ್ಷೀರಾಂಬು ಧಾರಾಳಿಯಿಂದೆ ಮುೞುಂಕಾಡಿಸಿದಂದದಿಂ ಸಕಳ ಮರ್ತ್ಯಾಮರ್ತ್ಯರಂ ನೋಡೆ ನಾಡೆ ಮುೞುಂಕಾಡಿಸಿದಂ: **ಶಾಂತೀಶ್ವಪು,** ೧೪. ೧೭೫)

**ಮುೞುಂಗು** – ದ್ರವದಲ್ಲಿ ಅಡಗು (ನೆತ್ತರ ಕಡಲ್ಗಳೊಳ್ ಮಿಳಿರ್ವ ಪೞವಿಗೆಗಳ್ ತಲೆದೋಱೆ ಮುೞುಂಗಿದ ರಥಂಗಳುಂ: **ಪಂಪಭಾ,** ೧೦. ೧೧೬ ವ)

**ಮುೞುಗು** – ದ್ರವದಲ್ಲಿ ಅಡಗು (ನಿಜತೇಜದಿಂ ಆಂತ ದೈತ್ಯರಂ ತಳವೆಳಗಾಗೆ ಕಾದಿ ಚಳಿತು ಎಯ್ದಿ ಬೞಲ್ದು ಅಪರಾಂಬುರಾಶಿಯೊಳ್ ಮುೞುಗುವ ತೀವ್ರದೀಧಿತಿವೊಲ್ ಆ ಕೊಳದೊಳ್ ಫಣಿರಾಜಕೇತನಂ ಮುೞುಗಿದಂ: **ಪಂಪಭಾ,** ೧೩. ೭೪); ತಲ್ಲೀನಗೊಳ್ಳು (ಮುೞುಗು–ನಿಮಗ್ನೇ: **ಶಬ್ದಮದ,** ೧೫೦)

**ಮುೞುಗಿ ನೆಗೆ** – ಮುಳುಗಿ ಮೇಲೇಳು (ಪಾವುಗಳಂ ಕೊಳಿಸಿ ಮಹಾಗ್ರಾವಮಂ ಉಱದೆ ಅಡಸಿ ಕಟ್ಟಿ ಕೊರಲೊಳ್ ಗಂಗಾದೇವಿಯ ಮಡುವಿನೊಳ್ ಅಟ್ಟಿದರ್ ಏವಯಿಸದೆ ತಮ್ಮ ಕುಲಮಂ ಅಡಿಗಟ್ಟುವವೋಲ್: **ಪಂಪಭಾ,** ೨. ೩೨)

**ಮುೞ್ಕಾಡು** – ಮುಳುಗು (ವಿಷಯಸುಖಾರ್ಣವದೊಳ್ ಮೂಡಿ ಮುೞ್ಕಾಡುತ್ತುಂ ಇರ್ದು: **ಕಾದಂಸಂ,** ೨. ೬ ವ)

**ಮುೞ್ಗು** – ಬೀಳು (ಮುೞ್ಗು–ಪತನೇ: **ಶಬ್ದಮದ,** ಧಾ ೧೫೧); ನಮಸ್ಕರಿಸು (ವಿನಯದಿಂ ತನ್ನ ಪದಾಬ್ಜದ ಮೇಲೆ ಮುೞ್ಗಲ್ ಒದವಿದ ಪದಪಿಂ ತೆಗೆದೆತ್ತಿ ನೃಪಸುತಂ ಮನ್ನಿಸಿದಂ: **ಕಾದಂಬ,** ೬. ೧೨೦)

**ಮುಟ್ಟುಗ** – ಮುತ್ತುಗದ ಮರ (ಒಂದರ್ಥಕ್ಕೆ: ಮುಟ್ಟುಗಮೆಂದು ಒಂದು ಮರಂ: **ಶಬ್ದಮದ,** ೩೩ ವೃತ್ತಿ ೧೧೬)

**ಮೂಂಕಿಟೆ** – ವಾಸನೆ ನೋಡು (ದೆಸೆಗಳ್ಗೆ ಬೆರ್ಚಿ ಮೂಂಕಿಟೆವೆ ವನಮಹಿಷಿಗಳಿಂ ಮದಹಸ್ತಿಯಂತೆ ಮರವಾಯ್ವ ಪುಲಿಗಳಂ ಅತಿಭಯಂಕರಾಕಾರಮಪ್ಪ ದ್ವೈತವನಕ್ಕೆ ಬಂದು: **ಪಂಪಭಾ,** ೭. ೨೮ ವ)

**ಮೂಂಕು** – ಗಾಡಿಯ ಮೂಕಿ (ಮಿನುಗುವ ಕೊಂಬಿನಚ್ಚು ಕಿಱುಗೊಂಬಿನ ತಳ್ತರಗೀಲ್ ಕವಲ್ತ ಕೊಂಬಿನ ಮಡವಡ್ಡವಂದ ನಳಿಗೊಂಬಿನ ಪತ್ತುಗೆ ಜೋಲ್ವ ಬಳ್ಳಿಗೊಂಬಿನ ಬಲೆ ತೋರಗೊಂಬಿನ ನೊಗಂ ನಿಡುಗೊಂಬಿನ ಮೂಂಕು ಕಣ್ಗೆ ಚೆಲ್ವೆನೆ ನಡೆತಂದುವಂದು ಅಸುಗೆಯೆಂಬ ನೆಗೆಟ್ತಿಯ ತೇರ್ಗಳೆತ್ತಲುಂ: **ಕಬ್ಬಿಗಕಾ,** ೧೬೭)

**ಮೂಕ** – ಮಾತು ಬಾರದವನು (ಜಡಮತಿ ಕಿವುಡಂ ಪಂಗು ಮೂಕಂ: **ವಡ್ಡಾರಾ,** ಪು. ೧೦, ಸಾ. ೩೦)

**ಮೂಕೊಱೆಯ** – ಮೂಗು ಊನವಾದವನು (ಮೂಗಿಲ್ಲದ ಮೂಕೊಱೆಯನೆಂತು ಕಣ್ಣಿಲ್ಲದ ಕುರುಡನೆಂತು ಕಿವಿ ಕೆಟ್ಟ ಕಿವಿಡನೆಂತು ಕೈಯಿಲ್ಲದ ಮೋಟನೆಂತು: **ಧರ್ಮಾಮೃ.** ೯. ೨ ವ)

**ಮೂಗಯ್** – ಮೂರು ಕೈ [ಮೊಳ] ಅಳತೆ (ತೀವಿರ್ದತ್ತು ಮೊದಲ್ಮೊದಲ್ಗೆ ಪಣೆಯುಂ ಮೂಗಯ್ಯ ಮೂಗೆಯ್ಯನಿತ್ತಾವರ್ಕೆಯ್ದೆ ಕವಲ್ತುವು ಅಲ್ತು ಕೊಂಬಾದುದು: **ಆದಿಪು,** ೧೧. ೯೭)

**ಮೂಗರಿ** – ಮೂಗು ಕತ್ತರಿಸು (ಪೆಱರ್ಗೆ ತಾನೆಱಗೆ ಪೋಗಿ ಪೋಗಿ ಮೂಗರಿವಡೆದರತೆಱನಪ್ಪುದು: **ಲೀಲಾವತಿ,** ೨. ೩೬)

**ಮೂಗಟಿಕ್ಕಿ** – ಮೂಕ ರೋದನ (ಬಾಸುಟ್ಟಿಳ್ ತಗಡಂ ಪತ್ತಸಿದಂತಾಗೆ ಮಾಣದೆ ಒಳಗೊಳಗೆ ಮೂಗಟ್ಕೆಯಟ್ಟು ಮುಸುಡು ಮಡಕೆಯನಿಟ್ಟಂತಾಗೆ: **ನೇಮಿನಾಪು,** ೭. ೩೫ ವ)

**ಮೂಗಟಿಕ್ಮಿ** – ಮೂಗಟ್ಕೆ (ಕಣ್ಣಿಂಗಿಟ್ಟೊಡೆ ಕಾಯ್ ಬಿರ್ದುದೆಂಬ ನಾಣ್ಣುಡಿ ನುಡಿವರ ಮಾತೆನಗಾದುದೆಂದು ಮೂಗಟ್ಮೆಯಟ್ಟು ಧನಕೀರ್ತಿಯ ಮೇಲೆ ತೀವ್ರಮಪ್ಪ ಮುನಿಸಾಗಿ: **ಧರ್ಮಾಮೃ,** ೧೦. ೧೩೦ ವ)

**ಮೂಗಿಟ್ಟೇಱು** – ಅಂಕೆಯಲ್ಲಿರಿಸು (ಏಱೆದನೆ ಮರನಂ ಎನ್ನಂ ಮೀಱೆದನೆ .. .. ಮೂಗಿಟ್ಟೇಱೆದಂ ಎಂದಳ್ಕಿ ಬಾಳನಹಿಪತಿಯಿತ್ತಂ: **ಹರಿವಂಶ,** ೮. ೩೬)

**ಮೂಗುತಿ** – ಮೂಗುಬೊಟ್ಟು (ಇಕ್ಕಿದ ರನ್ನದೋಲೆ ಪೊಸಮುತ್ತಿನ ಮೂಗುತಿ ತೋಳಬಂದಿ ನೀಳ್ದೆಕ್ಕಸರಂ.. .. ಇಂಚರಮೀವ ನೇವುರಂ ಚೊಕ್ಕಳವಪ್ಪ ಚೆಲ್ವನೊಳಕೊಂಡಿರೆ: **ಕಬ್ಬಿಗಕಾ,** ೨೬೫)

**ಮೂಗುದುಱೆಸು** – [ಮೂಗು+ತುಱೆಸು] ಮೂಗನ್ನು ಕೆರೆ (ಒರ್ವರೊರ್ವರೊಳ್ ಮೂಗುದುಱೆಸಲಾಗದ ಕಡ್ಡಂ ಅವರ್ಗೆಂತುಂ ಒಡಂಬಡಾಗದು: **ಪಂಪಭಾ,** ೧೨. ೧೦೩ ವ)

**ಮೂಗುರ್ಚು** – ಮೂಗುದಾರ ತೆಗೆದುಬಿಡು, ಸ್ವಚ್ಛಂದವಾಗಿ ಇಡು (ಮೂಗುರ್ಚಿದೆಮ್ಮವೋರಿಯುಂ ಪೆಱಮೆಟ್ಟಿದ ತಗರುಂ ತಾಗುವಂತೆ ತಂತಮ್ಮೇಱೆದಾನೆಗಳಂ ನೂಂಕಿ: **ಶಾಂತಿಪು,** ೬. ೮೨ ವ)

**ಮೂಗುವಡು** – ಮೂಕವಾಗು, ಮಾತಿಲ್ಲದಾಗು (ಅಂಬುದಾಗಮದ ಕೋಗಿಲೆಯಂತಿರೆ ಮೂಗುವಟ್ಟು ನೀಮೆಂಬುದುದನೆನ್ನಿಂ ಎಂದುಸಿರದಿರ್ದ ತನೂಜೆಯ ಭಾವಂ ಮಹೀಶಂ ಬಗೆದು: **ಆದಿಪು,** ೩. ೨೬)

**ಮೂಡಗಡಲ್** – ಪೂರ್ವ ಸಮುದ್ರ (ಅಣೆಯರವಾಡಿ ಮೂಡಗಡಲೊಳ್ ತೆರೆಮಾಲೆಯನೆತ್ತಿ .. .. ಬಂದೆಸೆಗಿತ್ತು ಅತಿಶೈತ್ಯಕಾರಣಂ .. .. ಇಂದ್ರದಿಶಾಸಮೀರಣಂ: **ಜಗನ್ನಾವಿ,** ೧೪. ೪)

**ಮೂಡಣ್** – ಪೂರ್ವದಿಕ್ಕು (ಐರಾವತ ಕರಲೂನ ಸಲ್ಲಕೀ ಶಬಳಮುಂ ಅಪ್ಪ ಉದಯಗಿರಿಯಿಂ ಸೊಗಯಿಸುವ ಮೂಡಣ ದೆಸೆಗೆ ವಂದು: **ಪಂಪಭಾ,** ೪. ೧೮ ವ)

**ಮೂಡಮೊಗ** – ಪೂರ್ವದಿಕ್ಕು (ತಮ್ಮಯ್ವರುಂ ಪಾಂಚಾಳಿವೆರಸು ಪೋದ ದೆಸೆಯಂ ಆರುಂ ಅಱೆಯದಂತು ದ್ವೈತವನಮಂ ಪೊಱಮಟ್ಟು ಜಗುನೆಯಂ ಪಾಯ್ದು ಮೂಡಮೊಗದ ಪಯಣಂಬೋಗಿ: **ಪಂಪಭಾ,** ೮. ೫೦ ವ)

**ಮೂಡಿ** – ಉದಯ (ಮೂಡಿಯೆಂದುದಯಂ: **ಶಬ್ದಮದ,** ಪ್ರಸಾ ೨೦೫)

**ಮೂಡಿಗೆ** – ಬತ್ತಳಿಕೆ (ಮೂಡಿಗೆ ಕುಕ್ಕಂಬಂ ಸುಟಿಸಿ ಜೊಂಪಂ ಬೀಡುಬಿಡುವ ಇಂಬು ಕದಳಿ ತೆಂಗಿನ ತಾಣಂ ಜಾಣಿಂ ನೀರ್ದಾಣಮೆಂದು ಎಡೆಯಱೆದುಂ: **ಪಂಪಭಾ,** ೫. ೪೧)

**ಮೂಡಿ ಮುೞುಂಗಾಡು** – ಮಗ್ನವಾಗು (ಸೀಯನಪ್ಪ ಗೇಯರಸಾಬ್ಧಿಪೂರದೊಳ್ ಮೂಡಿ ಮುೞುಂಗಾಡುತ್ತುಂ: **ಶಾಂತಿಪು,** ೨. ೨೨ ವ)

**ಮೂಡಿ ಮುೞಿಕ್ಕಾಡು** – ಮಗ್ನವಾಗು (ವಿಷಯಸುಖಾರ್ಣವದೊಳ್ ಮೂಡಿ ಮುೞಿಕ್ಕಾಡುತ್ತುಂ ಇರ್ದು: **ಕಾದಂಸಂ,** ೨. ೬ ವ)

**ಮೂಡು** – ಹುಟ್ಟು (ನೇಸಱ್ ಮೂಡಿದುದು ಬಕಂಗೆ ಮಿಟ್ಟು ಮೂಡುವ ತೆಱದಿಂ: **ಪಂಪಭಾ,** ೩. ೨೭); ಕಾಣಿಸಿಕೊ (ಜತುಗೃಹಕವಾಟಪುಟಂಸಂಧಿಗಳೊಳ್ ಸುರಂಗಮಂ ಗಗಂಗೆಯೊಳ್ ಮೂಡುವಂತಾಗೆ ಸಮೆದು: **ಪಂಪಭಾ,** ೩. ೪ ವ)

**ಮೂಡೆ** – ಮೂಟೆ (ತಳಿರ ಮೂಡೆಯೊಳೆ ಮಲ್ಲಿಗೆಯ ಮುಗುಳ್ಗಳನೊಟ್ಟಿ ಮಿಕ್ಕ ಮುಗುಳಂ ಮೇಲುದಿಂ ಮೊಟ್ಟೆಯಂ ಕಟ್ಟಿ: **ಲೀಲಾವತಿ,** ೧೧. ೧೧)

**ಮೂಢತ್ರಯ** – [ಜೈನ] ಲೋಕಮೂಢ, ದೇವತಾಮೂಢ, ಪಾಷಂಡಿ ಎಂಬ ಮೂಢಭಾವನೆಗಳು (ಮತಿವಂತಂ ಸಲೆ ದೇವಮೂಢತೆಯುಮಂ ಪಾಷಂಡಿಮೂಢತ್ವಮಂ ಸತತಂ ಲೌಕಿಕಮಪ್ಪ ಮೂಢತೆಯುಮಂ ನಿರ್ವ್ಯಾಜದಿಂ ಬಿಟ್ಟು: **ಸಮಯಪ,** ೯. ೨)

**ಮೂದಲಿಸು** – ಹೀಯಾಳಿಸು (ಮೂರನೆಯ ದಿವಂ ನೆಲೆಯಾಗೆ ಮರಿದತ್ತಂ ಕಲಿಯಂ ಮೂದಲಿಸಿದಂತೆ ದೇವನೆಯಾದಂ: **ಯಶೋಧಚ,** ೪. ೭೭)

**ಮೂದಲೆ** – ಮೂರು ತಲೆ (ತಲೆ ಪಗೆವರ ಕೆಯ್ಯೊಳ್ ಸುರಲಲನೆಯ ತೋಳೊಳಗೆ ಪತಿಯ ಭಂಡಾರದೊಳು ನೆಲಸೆ ಸುಭಟರ್ಕಳೊಳ್ ಮೂದಲೆ ನೆಗಟ್ಟುದು ಪೊನ್ನನ್ನಂ ಆವನೊ ಮೊನೆಯೊಳ್: **ಅಜಿತಪು,** ೧. ೩೭); ಮೂದಲಿಕೆ (ಕೋಕಿಲಧ್ವನಿ ಮೂದಲೆಯುಲಿಯಾಗೆ ಬಂದುದಂದು ವಸಂತಂ: **ಯಶೋಧಚ,** ೧. ೩೬)

**ಮೂದಲೆಯುಲಿ** – ಚುಚ್ಚು ಮಾತು (ಕೋಕಿಲಧ್ವನಿ ಮೂದಲೆಯುಲಿಯಾಗೆ ಬಂದುದಂದು ಬಸಂತಂ: **ಯಶೋಧಚ,** ೧. ೩೬)

**ಮೂದಲ್ಮೆ** – ಮೂದಲೆ (ತಂತಮ್ಮ ಮನದ ಮಚ್ಚರದ ಮರ್ಚಿನ ಕಾದಲ್ಮೆ ಮೂದಲ್ಮೆಯಾಗಿ ಕೈಗೆಯ್ದು ಮೈಗೆಯ್ಯದೆ ಪರಿಚ್ಛೇದಿಸಿ: **ಅನಂತಪು,** ೧೨. ೧೨ ವ)

**ಮೂದೇವರ್** – ತ್ರಿಮೂರ್ತಿಗಳು, ಬ್ರಹ್ಮ, ವಿಷ್ಣು ಮಹೇಶ್ವರ (ಮೂದೇವರುಂ ಪರಸಿ ನಿಜನಿವಾಸಂಗಳ್ಗೆ ಪೋದರ್: **ಪಂಪಭಾ,** ೫. ೧೦೩ ವ)

**ಮೂಮೆ** – ಮೂರು ಬಾರಿ (ಶ್ರೀಮಜ್ಜಿನಭವನಮಂ ಅಖಿಳಾಮರನರಖಚರಚಕ್ರವರ್ತಿಸ್ತುತಮಂ ಮೂಮೆ ಬಲಗೊಂಡು: **ಆದಿಪು,** ೪. ೧)

**ಮೂರಿ** – ಮೂತಿ, ಬಾಯಿ (ಪ್ರಳಯದ ಮೂರಿಯುಂ ಆಕಾಶದ ಕವಿಯುಂ ನೆಲದ ಕಲ್ಲೆಯುಂ ಮುನ್ನಮೆ ಮೇರೆದಪ್ಪುವುದುಮಂ: **ಪಂಪಭಾ,** ೧೨. ೧೯ ವ)

**ಮೂರಿಗೊಳ್** – ಮೂತಿಯನ್ನು ಹಿಡಿದುಕೊ (ಬೋಟಿದಲೆಯಂ ಮುಂಗೆಯ್ಗಂ ಮೂರಿಗೊಂಡಿಡುವಂ ಕೂಂಕಿ ಕೊಡಂಕೆಯಂ ಮುಗ್ಗುವಂ: **ನೇಮಿನಾಪು,** ೭. ೮೪)

**ಮೂರಿವಿಡು** – ಬಿರಿ, ಬಾಯಿಬಿಡು (ಅಸದಳಮಾಗಿರೆ ಪೆರ್ವಡೆ ಮಸಗಿ ನೆಲಂ ಮೂರಿವಿಟ್ಟ ತೆಱದಿಂ: **ಹರಿವಂಶ,** ೧೧. ೪೧)

**ಮೂರ್ಛ್ಛನಾ[ನೆ]** – ಸಪ್ತಸ್ವರಗಳ ಆರೋಹಣ–ಅವರೋಹಣ (ಮಧುಕರತಂತ್ರೀಸಮಂಚಿತ ವಿಪಂಚೀ ಮಂದ್ರ ತಾರ ಮಧುರ ಮೂರ್ಛ್ಛನಾಸನಾಥಪ್ರಯೋಗಂಗಳುಮಂ: **ಆದಿಪು,** ೧೧. ೭೪ ವ)

**ಮೂರ್ಛಾಗತ** – ಮೂರ್ಛೆಗೊಳಗಾಗು (ಮೂರ್ಛಾಗತನಾಗಿರ್ದ ಕುರುಕುಳಚೂಡಾಮಣಿಯಂ ಏನುಂ ಮಾಣದೆ ಕಿಮ್ಮೀರವೈರಿ ಮುಟ್ಟೆವಂದಾಗಳ್: **ಪಂಪಭಾ,** ೧೩. ೯೭ ವ)

**ಮೂರ್ಛಿಸು** – ಮೂರ್ಛೆ ಹೋಗು (ಖೇದಾನಳನುರಿದೆರ್ದು .. .. ಹಾ ದೇವೀ ಎನುತುಂ ಅವನಿಪತಿ ಮೂರ್ಛಿಸಿದಂ: **ಶಾಂತೀಶ್ವಪು,** ೫. ೧೮೨)

**ಮೂರ್ಛೆ** – ಎಚ್ಚರ ತಪ್ಪಿದ ಸ್ಥಿತಿ (ಆ ಪಂಡಿತಂ .. .. ಮೂರ್ಛೆಯಿಂದೆರ್ಚತ್ತಂತೆ ಬೆಚ್ಚನೆ ಸುಯ್ದು: **ಸುಕುಮಾಚ,** ३. ೬ ವ)

**ಮೂರ್ಛೆದಿಳಿ** – ಮೂರ್ಛೆಯಿಂದ ಎಚ್ಚರಗೊಳ್ಳು (ಮುಗಿಯೆ ಕಣ್ಮಲರ಼್್ ನಸುಮುಚ್ಚೆವೋಗಿ ತಣ್ಣೆಲರಲೆಪಿಂದೆ ಮೂರ್ಛೆದಿಳಿದಳ್ ಮಗುಳುಂ ಪೊಱಮೊಣ್ಮೆ ಹಾರವಂ: **ಪಂಪರಾ,** ೯. ೧೧೧)

**ಮೂರ್ತಿಗೊಳ್** – ಆಕಾರವನ್ನು ಹೊಂದು (ತಾಯಿ ತಂದೆಯ ಚಿತ್ತಕ್ಕಮರ್ದಿನ ಮಟಿಯಂ ಕಱೆದರೆ ಕುಮಾರಕರ್ ಮೂರ್ತಿಗೊಂಡ ಪುರುಷಾರ್ಥದವೋರ್ಲ; **ಪಂಪರಾ,** ೩. ೧೪೪)

**ಮೂರ್ತಿಬಲ** – ದೇಹದ ಶಕ್ತಿ (ದಮಿತಾರಿಯ ಬಲಂ ಚಂದ್ರಬಲಮಿಲ್ಲದ ಅಂಕಕಾಱನಂತೆ ಸೋಲ್ತು ಮೂರ್ತಿಬಲಮಿಲ್ಲದ ಮಲ್ಲನಂತಿಕ್ಕು **ಶಾಂತಿಪು,** ೪. ३೦ ವ)

**ಮೂರ್ತಿಮತಿ** – ಆಕಾರವನ್ನು ತಳೆದ (ಆತನ ಕೀರ್ತಿಲಕ್ಷ್ಮಿಯೆ ಮೂರ್ತಿಮತಿಯಾದಂತೆ ಆತ್ಮೀಯ ಪ್ರಾಣೇಶ್ವರನ ಮನಕ್ಕೆ ವರೆ: **ಸುಕುಮಾಚ,** ೯. ೧೦೪ ವ)

**ಮೂರ್ಧ** – ತಲೆ, ನೆತ್ತಿ (ಬಿಡದಾಲಿಂಗಿಸಿ ಪುತ್ರನಂ ಪದೆದು ಮೂರ್ಧಘ್ರಾಣಮಂ ಮಾಡೆ: **ಕಾದಂಸಂ,** ೭. ೬೪)

**ಮುರ್ಧಾಭಿಷಿಕ್ತ** – ನೆತ್ತಿಯ ಮೇಲೆ ವಿಧಿವತ್ತಾಗಿ ಅಭಿಷೇಕಗೊಂಡ ರಾಜ (ವಿದಿತಂ ಮೂರ್ಧಾಭಿಷಿಕ್ತರ್ ಪಬರರಸುಗಳ್ ಪ್ರಾಜ್ಯಸಾಮ್ರಾಜ್ಯಲಕ್ಷ್ಮೀಪದಮಂ ಕೈಕೊಂಡುತಮ್ಮಂ ಮಱೆದು: **ಆದಿಪು,** ೯. ೫೮)

**ಮೂರ್ಧಾಭಿಷೇಕ** – ಪಟ್ಟಾಭಿಷೇಕ (ನಿಜಕೂಟಾಗ್ರದೊಳ್ ಪಾಯ್ವ ಗಂಗಾಜಲದಿಂ ಮೂರ್ಧಾಭಿಷೇಕೋನ್ನತಿ ನಿಲೆ .. .. ಚಕ್ರೇಶತ್ವಮಂ ತಾಳ್ದಿದಂ ಅಖಿಳಧರಾರಮ್ಯ ಹೈಮಾಚಳೇಂದ್ರಂ: **ಪಂಪಭಾ,** ೪. ೧೪)

**ಮೂಲ** – ಬೇರು (ಮೂಲ ಸಟಾಳಿಯಿಂದ ಮುರಗಾಲಯಂ ಬಹುಶಾಖೆಯಿಂದಮಿಂದ್ರಾಲಯಮಂ ಪಳಂಚಿ: **ಪಂಪರಾ,** ೭. ೧೨೭); ಮರದ ಬುಡ (ಪುದಿದೊಂದಿದ ಮೂಲಂ ತಾನದು ಪದಂ: **ಅಭಿಧಾವ,** ೧. ೭. ೫)

**ಮೂಲಂಬರಂ** – ಬೇರಿನವರೆಗೆ (ಅಂತು ಪಾತಾಳಮೂಲಂಬರಂ ಮುಟುಗಿ ದಿವಿಜದೀರ್ಘಿಕೆಯೊಳ್ ಮುಟುಗಿ ನೆಗೆದ ಅಭ್ರಮೂಪತಿಯಂತೆ ನೆಗೆಯಲೊಡಂ: **ಚಂದ್ರಪ್ರಪು,** ೫. ೪३ ವ)

**ಮೂಲಗುಣ** – [ಜೈನ] ಮುನಿಗಳಿಗೆ ಬೇಕಾದ ಆವಶ್ಯಕ ಗುಣಗಳು: ಪಂಚ ಮಹಾವ್ರತ, ಪಂಚ ಸಮಿತಿ, ಪಂಚೇಂದ್ರಿಯನಿಗ್ರಹ, ದಿಗಂಬರತ್ವ, ಕೇಶಲುಂಚನ ಪ್ರತಿಜ್ಞೆ, ಷಡಾವಶ್ಯಕಗಳಲ್ಲಿ ನಿರ್ಬಾಧಕತ್ವ, ಸ್ನಾನರಾಹಿತ್ಯ, ದಂತಧಾವನರಾಹಿತ್ಯ, ನಿಂತು ಮಾಡುವ ಊಟ, ಒಂದೇ ಹೊತ್ತಿನ ಊಟ (ಮತ್ತಮಿವು ಮೊದಲಾಗಿ ಇರ್ಪತ್ತೆಂಟು ಮೂಲಗುಣಂಗಳೊಳಂ ಉತ್ತರಗುಣಂಗಳೊಳಂ ಉತ್ತರೋತ್ತರಂ ನೆಗಟ್ಟು: **ಆದಿಪು,** ೬. ೨೮ ವ)

**ಮೂಲಬಲ** – ಸೈನ್ಯದ ಮುಖ್ಯ ಭಾಗ (ಈ ಸಂಜೀವಕನನಾಪ್ತನೆಂದು ಮಂತ್ರಿಯಂ ಮಾಡಿಕೊಂಡಾಡಿ ತೇಜವನಿತ್ತು ಮೂಲಬಲಮನೆಲ್ಲಮನವಜ್ಞೆಗೈದು ವಿರಕ್ತಪ್ರಕೃತಿಯುಮೇಕಾಕಿಯುಮಾದೆ: **ಪಂಚತಂತ್ರ,** ೧೬೫ ವ)

**ಮೂಲವ್ಯಸನ** – ರಾಜನ ಐದು ವ್ಯಸನಗಳು: ಸ್ವಭಾವ ಪ್ರದೋಷ ಪ್ರಸಂಗಗುಣ ಪ್ರತಿಲೋಮ ಪೀಡನ (ಸ್ವಾಮಿ ಅಮಾತ್ಯ ಜನಪದ ಸುಹೃತ್ ಕೋಶ ದಂಡಮೆಂಬ ಏೞಿಂಗದೊಳೇಕಾಗಂ ವಿಕಳಮಾದೊಡಂ ಸ್ವಭಾವಂ ಎಂಬುದಕ್ಕುಂ, ಬಾಹ್ಯಾಂತಃಪ್ರಕೃತಿಗಳೆರಡುಂ ಒರ್ಮೆಯೆ ಪ್ರಕೋಪಂಗೆಯ್ವುದು ಪ್ರದೋಷಂ ಎಂಬುದಕ್ಕುಂ, ಅಂಗನಾ ದ್ಯೂತ ಮೃಗಯಾ ಪಾನ ವಾಗ್ದಂಡ ಹರ್ಷಾರ್ಥ ದೂಷಣಗಳೆಂಬ ಏೞುಂ ಪ್ರಸಂಗಗುಣಂ ಎಂಬುದಕ್ಕುಂ, ಕಾಂತಾ ದ್ಯೂತ ಮೃಗಯಾ ಪಾನಂಗಳ್ ನಾಲ್ಕುಂ ಕಾಮಜಂಗಳ್, ಉೞಿದ ವಾಗ್ದಂಡ ಹರ್ಷಾರ್ಥ ದೂಷಣಂಗಳ್ ಮೂಱುಂ ಕ್ರೋಧಜಂಗಳಕ್ಕುಂ, ಸಂಧಿವಿಗ್ರಹಯಾನಾಸನ ದ್ವೈಧೀಭಾವಸಮಾಶ್ರಯಂಗಳೆಂಬ ಆಱುಂ ಗುಣಂಗಳೊಳಂ ಸಂಧಿಕಾರ್ಯದೆಡೆಯೊಳ್ ವಿಗ್ರಹಮನೆತ್ತಿಕೊಳ್ವುದುಂ, ವಿಗ್ರಹಮಪ್ಪೆಡೆಯೊಳ್ ಸಂಧಿಯಂ ಒಡರ್ಚುವುದುಂ ಉೞಿದ ಗುಣಂಗಳುಮಂ ಈಯಂದದೊಳ್ ಪ್ರತಿಲೋಮಂಗೆಯ್ವುದುಂ ಪ್ರತಿಲೋಮಮೆಂಬ ವ್ಯಸನಂ ಅಕ್ಕುಂ, ವೈರಾಗ್ಯ ಅಗ್ನಿ ಉದಕ ವ್ಯಾತಂಕ ಮಾರಿಗುತ್ತ ದುರ್ಭಿಕ್ಷ ಅತಿವೃಷ್ಟಿ ಅನಾವೃಷ್ಟಿಗಳೆಂಬ ಎಂಟುಂ ಪೀಡನಂ ಎಂಬುದಕ್ಕುಂ: **ಪಂಚತಂತ್ರ,** ೧३೭ ವ)

**ಮೂಲವ್ಯಾಧಿ** – ಗುದದ ಒಂದು ರೋಗ (ಪೆಡತಲೆ ಮಿಗೆ ನೋಗುಂ .. .. ಮೂಲವ್ಯಾಧಿಯುಂ ಅಡಸುಂ ಇಂತಿನಿತೆ ಜೂದಿನಿಂದಪ್ಪ ಫಲಂ: **ಸಮಯಪ,** ೬. ೫೦)

**ಮೂಲಸ್ತಂಭ** – ಆಧಾರಭೂತವಾದುದು (ಬಲದೇವ ವಾಸುದೇವರ್.. .. ಶೌರ್ಯಮೂಲಸ್ತಂಭದಂತೆಯುಂ ಸಾಹಸದ್ರವಿಣಸಾಧನದಂತೆಯುಂ .. ಸುಖಮಿರ್ಪನ್ನೆಗಂ: **ಶಾಂತಿಪು,** ೧. ೮೦ ವ)

**ಮೂಲಿಗ** – ಕಾರಣಭೂತನಾದ ವ್ಯಕ್ತಿ (ಅಲ್ಲಿಯ ಮೂಲಿಗನಪ್ಪ ಪಟ್ಟಸಾಲಿಗಂ ಕಂಡು ತನ್ನ ಮನೆಗೊಡಗೊಂಡು ಪೋಗಿ ಪರಮಭಕ್ತಿಯಿಂದಂ ಪಥಶ್ರಮಮಂ ಆಱಿಸಿ: **ಪಂಚತಂತ್ರ,** ೧೨೭ ವ)

**ಮೂಲೋಕ** – ಮೂರು ಲೋಕಗಳು, ಸ್ವರ್ಗ ಮರ್ತ್ಯ ಪಾತಾಳಗಳು (ಅಱಿವಿನೊಳ್ ಮೂಲೋಕಮಂ ಕಾಣ್ಬ ಮುಟ್ಟಿದವೊಲ್ ಕಣ್ಗಮರ್ದೊಪ್ಪಿ ತೋಱುವ ಅರುಹಂತಂ ನಲ್ಮೆಯಂ ಮಾಟ್ಕೆ: **ಕಬ್ಬಿಗಕಾ,** ೨೭೧)

**ಮೂಲೋತ್ತರಗುಣ** – [ಜೈನ] ಆಚಾರ್ಯರಿಗೆ ಇರಬೇಕಾದ ಮೂವತ್ತಾರು ಗುಣಗಳು: ದ್ವಾದಶ ತಪಸ್ಸು, ಷಡಾವಶ್ಯಗಳು, ಪಂಚಾಚಾರಗಳು, ದಶಧರ್ಮಗಳು, ತ್ರಿಗುಪ್ತಿಗಳು (ಮತ್ತಂ ಒಳಗಣ ಆಱುಂ ತಪದೊಳಗಂ.. .. ನಿಟ್ಟೆವಡಿಸಿ ಮೂಲೋತ್ತರಗುಣಂಗಳಂ ಉತ್ತರೋತ್ತರಂ ಪೆರ್ಚಿಸಿ: **ಶಾಂತಿಪು,** ೯. ೧೦೮ ವ)

**ಮೂಲ್ಯ** – ಬೆಲೆಬಾಳುವ; (ಮುಚುಕುಂದದ ಮೂಲ್ಯಂಗಳಿಂ ಪೊಂದಾವರೆಯ ಪಲಗೆಗಟ್ಟುಗಳಿಂ: **ಕುಸುಮಾಕಾ,** ೧೨. ೧೫೭ ವ)

**ಮೂವಡಿ** – ಮೂರು ಎಳೆ (ಮೂವಡಿ ಮಾಡಿದ ತತ್ಸೂತ್ರಾವಳಿಯಂ ಕೊರಲೊಳಿಕ್ಕಿ ಕೊಟ್ಟಂ ಬ್ರತಮಂ: **ಸಮಯಪ,** ೨. ೩೦); ಮೂರರಷ್ಟು, ಮೂರು ಪಟ್ಟು (ಆನಂದಾಶ್ರುವೊಗೆಯೆ ಬಗೆವೆರ್ಚುತ್ತಿರ್ಮಡಿ ಮೂವಡಿ ನಾಲ್ವಡಿ ಅಯ್ವಡಿ ಸಂತಸದಿಂದೆ ತಂದೆ ಮಗಳಂ ಕರೆದಂ: **ಗಿರಿಜಾಕ,** ೩. ೧೦೪)

**ಮೂವಣ್ಣಂಬರ್** – ಬಾಲ್ಯ, ಯೌವನ, ಮುಪ್ಪುಗಳನ್ನು ಹಾದು ಬರು (ಆವರಿಸೆ ಕೂಸುತನಮುಪ್ಪಾವಳಿಯುಂ ತನುಮನಧನಂಗಳಿಂದಿನ್ನೆವರಂ ಮೂವಣ್ಣಂಬರೆ ರೂಪಪರಾವರ್ತನ ವಿಧಿಯಿನವರ್ಗೆ ವಿಧಿ ವಿಧಿಯಿಸುಗುಂ; **ಅಜಿತಪು,** ೨. ೯೩); ಬ್ರಹ್ಮ, ವಿಷ್ಣು, ಮಹೇಶ್ವರರೆಂಬ ಮೂರು ರೂಪಗಳನ್ನು ಪಡೆ (ಏಕರೂಪರಾಗಿರ್ಪವರಂ ದೇವರಿವರೆಂದು ನಂಬದೆ ಮೂವಣ್ಣಂ ಬಂದ ದೇವರಂ ನಂಬುವುದೇ: **ಸಮಯಪ,** ೧. ೧೨೫)

**ಮೂವಣ್ಣಂಬರಿಸು** – ಮೂರು ಅವಸ್ಥೆಗಳನ್ನುಂಟುಮಾಡು (ಸಾವನ್ನೆವರಂ ಸೈತಿರದಾವನೊಳಂ ಶೈಶವಂ ಯುವತ್ವಂ ಮುಪ್ಪೆಂಬೀ ವಿಧಿವಡೆದಿರ್ದಲ್ಲಿಯೆ ಮೂವಣ್ಣಂಬರಿಪ ದೇಹದೊಳ್ ಮೋಹಿಪುದೇ: **ಧರ್ಮಮಧು,** ೫. ೯೬)

**ಮೂವತ್ತಿರ್ಛಾಸಿರ್ವರ್** – ಮೂವತ್ತೆರಡು ಸಾವಿರ ಜನ (ನಾಲ್ಕು ಕೋಟಿ ವೀರಭಟನಿಕರಮುಂ ಮೂವತ್ತಿರ್ಛಾಸಿರ ಮಕುಟಬದ್ಧರುಂ ಮೂವತ್ತಿರ್ಛಾಸಿರ್ವರ್ ಮೆಯ್ಗಾಪಿನ ಗಣಬದ್ಧದೇವರುಂ: **ಆದಿಪು,** ೧೫. ೩ ವ)

**ಮೂವತ್ತಾರು ಗುಣ** – ಆಚಾರ್ಯನಿಗೆ ಅಗತ್ಯವಾದ ಮೂಲೋತ್ತರಗುಣ (ಮೂವತ್ತಾಱುಗುಣಂಗಳ್ ತಮಗಮರ್ದಿರೆ ಸಂದ್ಯೆದುಮಾಚಾರದೊಳ್ ಸದ್ಭಾವಂ ಕಯಗಣ್ಮೆ .. .. ಓಸರಿಸೆ ಕಳೆಗೆ ಸಂಸಾರಕಾಂತಾರದಿಂದಂ: **ಆದಿಪು,** ೧. ೩)

**ಮೂವತ್ತಿರ್ವರ್** – ಮೂವತ್ತೆರಡು ಮಂದಿ (ಆ ಇರ್ವರ್ಗಂ ಮಕ್ಕಳ್ ಶ್ರೀವರ್ಧನಂ ವಿಜಯಂಧರಂ ವೀರಬಾಹು ಮೊದಲಾಗಿ ಮೂವತ್ತಿರ್ವರ್ ಕುಮಾರರುಂ: **ವಡ್ಡಾರಾ,** ಪು. ೯೫, ಸಾ. ೧೪)

**ಮೂವತ್ತುಮೂದೇವರ್** – ಮೂವತ್ತಮೂರು ಮಂದಿ ದೇವತೆಗಳು (ಏಕಾದಶರುದ್ರರುಂ ದ್ವಾದಶಾದಿತ್ಯರುಂ ಅಷ್ಟವಸುಗಳುಂ ಅಶ್ವಿನೀ ದೇವರುಂ ಮೊದಲಾಗೆ ಮೂವತ್ತುಮೂದೇವರುಂ: **ಪಂಪಭಾ,** ೧. ೧೪೭ ವ)

**ಮೂವತ್ತೆರಡಾಯುಧ** – ಬತ್ತೀಸಾಯುಧ; ಬಗೆಯ ವಿವಿಧ ಮೂವತ್ತೆರಡು ಅಸ್ತ್ರಗಳು (ಪರಶು ಬಿಲು ಕೊಂತಂ ಅಸಿ ತೋಮರ ಮುದ್ಗರ ಭಿಂಡಿವಾಳ ಚಕ್ರಂ ಶೂಲಂ ಸುರಗಿ ಮೊದಲಾಗೆ ಮೂವತ್ತೆರಡಾಯುಧಮಂ ಮಹೋತ್ಸವಂಬೆರಸಿನಿತಂ: **ಧರ್ಮಾಮೃ,** ೨. ೮೨)

**ಮೂವತ್ತೆರಡು ನಾಡು** – [ಜೈನ] ವಿದೇಹಕ್ಷೇತ್ರದ ನಾಡುಗಳು (ಪದನಂ ಕಾಣಿಸಿಕೊಳ್ವವಲ್ಲಿ ಮಟೆಗಳ್ ಷಡ್ಭಾಗಮಂ ಕೊಂಡು ತಪ್ಪದೆ ಭೂಪರ್ ಪ್ರತಿಪಾಳಿಪರ್ ಪ್ರಜೆಗಳಂ ಶ್ರೀಜೈನಧರ್ಮಂ ಪೊದಲ್ದೊದವುತ್ತಿರ್ಪುದು ಮತ್ತಿನ ಅನ್ಯಸಮಯಗಕ್ಕುತ್ಪತ್ತಿಯಿಲ್ಲ ಒಂದಱೊಳ್ ಪದಿನಾರಾಗಿ ನಿರಂತರಂ ಸೊಗಯಿಕುಂ ಮೂವತ್ತರೆಟ್ನಾಡುಗಳ್: **ಆದಿಪು,** ೧. ೫೧)

**ಮೂವಳಸು** – ಮೂರು ಬಳಸು (ಮೂವಳಸುವಳಸಿ ಸುತ್ತಿರ್ದುದು ಅಂಬೋಧಿಯೆಂಬಂತೆ ಗಭೀರಾರಾವದಿಂ ಪಲ್ಮೊರೆವವೊಲ್ ಎಸೆಗುಂ ಸುತ್ತಿ ಪಾನೀಯಖೇಯಂ: **ಸುಕುಮಾಚ,** ೯. ೫೭); ಮೂರು ಸುತ್ತು ಹಾಕು ಆವರಿಸು (ಮೂಱುಲೋಕಮಂ ಮೂವಳಸೆ ನಿಜಯಶಂ: **ಮಲ್ಲಿನಾಪು,** ೪. ೧೦೩)

**ಮೂವಿಟ್ಟಿ** – [<ವಿಷ್ಟಿ] ಯುದ್ಧಕಾಲದಲ್ಲಿ [ಅಥವಾ ಸೋತರಾಜನು] ಮಾಡಬೇಕಾಗಿದ್ದ ಶೋಧನ [ಶಿಬಿರ, ಮಾರ್ಗ, ಸೇತು, ಕೂಪ, ನೀರು – ಇವುಗಳನ್ನು ಶೋಧನೆ ಮಾಡಿ ನೇರ್ಪಡಿಸುವುದು], ವಹನ [ಆಯುಧಗಳು, ಯಂತ್ರಗಳು, ಆವರಣಗಳು ಉಪಕರಣಗಳು, ಆಹಾರ – ಇವನ್ನು ಸಾಗಿಸಿ ಕೊಡುವುದು] ಹಾಗೂ ಅಪನಯನ [ಯುದ್ಧದಲ್ಲಿ ಗಾಯಗೊಂಡವರು ಹಾಗೂ ಸತ್ತವರನ್ನು ಅವರ ಆಯುಧ ಕವಚಗಳ ಸಮೇತ ತರುವುದು] ಎಂಬ ಮೂರು ಬಗೆಯ ಬಿಟ್ಟಿಕೆಲಸಗಳು (ಮಲೆಪರ್ ಮಂಡಳಿಕರ್ ಕಱುಂಬರ್ ಅದಟರ್ ವೀರರ್ಕಳುಂ ತಮ್ಮ ಬಾಟ್ಟಿಲೆಯಂ ಬೇಡಿದ ವಸ್ತುವಾಹನಮುಮಂ ಮುಂದಿಟ್ಟು ಮೂವಿಟ್ಟಿಯ ಒಕ್ಕಲವೋಲ್ ಇಂ ಬೆಸಕಯ್ಯೆ ಸಂತಮಿರುತುಂ: **ಪಂಪಭಾ,** ೯. ೧೦), ನೋಡಿ, 'ಬಿಟ್ಟಿ'

**ಮೂವರ್** – ಮೂರು ಮಂದಿ (ತನ್ನ ತಮ್ಮಂ ವಿಚಿತ್ರವೀರ್ಯಂ ಮೂವರ್ ಕನ್ನೆಯರಂ ಪಾಣಿಗ್ರಹಣಂಗೆಯ್ದಾಗಳ್: **ಪಂಪಭಾ,** ೧. ೭೪ ವ)

**ಮೂಷಕ** – ಇಲಿ (ವನಮೂಷಕ ಮಾರ್ಜಾರಂ ವನಾಶ್ವ ಮಹಿಷಂ ಸೂಕರಮನಿತುಂ ಮುನಿಸಂ ಪರಿಹರಿಸಿರ್ದುವು ಮುನಿನಾಥಾಂತಿಕದೊಳುದಿತ ಶಾಂತರಸಂಗಳ್; **ಅಜಿತಪು,** ೭. ೭)

**ಮೂಷಿಕೆ** – ಹೆಣ್ಣು ಇಲಿ (ಸ್ನಾನಜಪಹೋಮನಿಯಮ ಧ್ಯಾನಾದಿಕ್ರಿಯೆಗಳೆಲ್ಲಮಂ ತೀರ್ಚಿ ನಿಜಸ್ಥಾನಕ್ಕುಯ್ದಂ

ಯೋಗನಿಧಾನಂ ಪಿರಿದುಂ ಪ್ರಯತ್ನದಿಂ ಮೂಷಿಕೆಯಂ: **ಪಂಚತಂತ್ರ,** ೩೫೮)

**ಮೂಷೆ –** ಮೂಸೆ, ಲೋಹ ಕರಗಿಸುವ ಬಟ್ಟಲು (ವಾಸವದಿಕ್ತಟಂ ಸಮೆದ ಮೂಷೆ ತಮಂ ಸುರಿದಿರ್ದಲಬ್ಜಸಂವಾಸಿ ಸಮೀರಂ ಏರಣಿಗೆನಾಗೆ: **ಅಜಿತಪು,** ೬. ೭೦)

**ಮೂಸೆ** – ಮೂಷೆ (ಬಳವೈರಿಯೆಂಬ ಸಾಧಕನಿಳೆಯಂ ಪೊಸಮೂಸೆ ಮಾಡೆ ಶಶಿಮಂಡಲಮಂ ಗುಳಿಗೆಯಿಡೆ ತಿಮಿರಕಾಳಿಕೆ ತಿಳಿದಂತೆ ಜಲಕ್ಕನಾಯ್ತು ಪೊಸವೆಳ್ದಿಂಗಳ್: **ಅನಂತಪು,** ೭. ೮೫)

**ಮೂಳೆ** – ಎಲುವು (ಮೂಳೆಯಂ ದಬ್ಬುಕದಿಂದೆ ನುಗ್ಗುನುಱೆಯಪ್ಪಿನೆಗಂ ಬಿಡೆ ಬೀಸಿ ಪೊಯ್ದು: **ಸುಕುಮಾಚ,** ೭. ೬)

**ಮೂಱಡಿ ಮಾಡು –** ಮೂರು ಹೆಜ್ಜೆಗಳಿಗೆ ಸರಿಹೊಂದಿಸು (ಮೂಱಡಿ ಮಾಡಿದಂದು ನೆಲನೆಲ್ಲನಂ ಆ ಬಲಿಗಾದ ರೂಪಮಂ ತೋಱಿದಂ: **ಪಂಪಭಾ,** ೯. ೬೦)

**ಮೂಱೆರವು –** ಪ್ರಾಣಿಗಳ ನೀರು ಕುಡಿಯುವ, ಶತ್ರುಗಳಿರುವ, ಮರಿ ಇರುವ ಜಾಗಗಳು (ಮೃಗದ ಮೂಱೆರವುಮನಾಱಾಯ್ಕೆಯುಂ ಗಾಳಿಯುಮಂ ಎಱಂಕೆಯುಮಂ ಬಲ್ಲನಾಗಿ: **ಪಂಪಭಾ,** ೫. ೪೩ ವ)

**ಮೂಱುಮೂಢಗಳು –** [ಜೈನ] ಲೋಕಮೂಢ, ದೇವತಾಮೂಢ, ಪಾಷಂಡಿ ಎಂಬ ಮೂಢಭಾವನೆಗಳು (ಶಂಕಾದಿ ಅಷ್ಟಮಲಂಗಳುಂ ಎಂಟುಮದಂಗಳುಂ ಮೂಱು ಮೂಢಮುಂ ಆಱು ಅನಾಯತನ ಸೇವೆಗಳುಂ ಎಂದಿಂತು ಇಪ್ಪತ್ತೈದು ದೋಷಂಗಳಿದಗಲ್ದ ಸಮ್ಯಕ್ತ್ವಮನೊಡೆಯನಾಗಿ: **ವಡ್ಡಾರಾ,** ಪು ೬, ಸಾ ೨೨)

**ಮೂಟೆ –** ಕಿವಿಯಿಲ್ಲದವಳು, ಕರಗದ ಸೊಂಡಿಲಾಕಾರದ ಗಿಂಡಿಯ ನಳಿಕೆ ಅಥವಾ ಜೂಳಿ (ಎರಡರ್ಥಕ್ಕೆ: ಮೂಟೆಯೆಂದು ಕಿವಿಯಿಲ್ಲದವಳುಂ ಕರಗದ ಜೂಳಿಯುಮಕ್ಕುಂ: **ಶಬ್ದಮದ,** ೩೩ ವೃತ್ತಿ ೧೬೧)

**ಮೃಗ –** ಕಾಡುಪ್ರಾಣಿ (ಸುಟೆಯದು ಗಾಳಿ ಮೃಗಂ ಕೆಯ್ವಟೆಗಳ ಮೇತದೊಳೆ ತಣಿದಪುವು ಪಂದಿಗಳುಂ ಪಟುವಿರ್ ಇಕ್ಕಿದುವು ಆದಂ ಪಟು ಪರಿದಾಡಲ್ ಕರಂ ಬೆಡಂಗವನಿಪತೀ: **ಪಂಪಭಾ,** ೫. ೩೮); ಜಿಂಕೆ (ಮೃಗಮಂ ಪವನಂ .. .. ವೃಷಭನಂ ಹರನೇಱೆ ನಭಕ್ಕೆ ಸಲ್ವುದುಂ: **ಜಗನ್ನಾವಿ,** ೧. ೩೬); ಕಸ್ತೂರಿ (ಮಗಮಗಿಸುವ ಸುಗಂಧ ವರತೈಲತೃಣದ ಮೇಪಿನ ಸೊಡರ್ವೆಕ್ಕುಗಳಿಂದೆ ಬೊಟ್ಟನಿಟ್ಟಳ್ ಮೊಗದೊಳ್ಕತ್ತುರಿಯ ತಿಲಕದಂತಿರೆ ಹರಿಯಾ: **ನೇಮಿನಾಪು,** ೭. ೫೬)

**ಮೃಗತೃಷ್ಣಿಕೆ –** ಬಿಸಿಲುಗುದುರೆ (ಮೃಗಕುಲಂ ಆಸೆಗೆಯ್ವ ಮೃಗತೃಷ್ಣಿಕೆಯಂ ಜಲಮೆಂದು ತೃಷ್ಣೆಯಿಂ ಪಗಲಿಟಿವನ್ನೆಗಂ ಪರಿದು ಗಂಟಲುರಂಬರಮಾಱೆ: **ಪಂಪರಾ,** ೭. ೯೩)

**ಮೃಗತೃಷ್ಣೆ –** ಮೃಗತೃಷ್ಣಿಕೆ (ಮೃಗತತಿ ಪೊದಲ್ದ ಮೃಗತೃಷ್ಣಿಕೆಗಳಂ ಜಲಮೆಂದು ಪಱಿದುಮೋರಂತೋಡಲ್ ನೆಗೆದ ಕಡುತಾಪದಿಂ ಪೊಗೆಮೊಗದಿಂ ಸೂಸಿರ್ದುದಾ ನಿದಾಘದೊಳೆತ್ತಂ: **ಕುಸುಮಾಕಾ,** ೮. ೧೨೫)

**ಮೃಗಧರ –** ಜಿಂಕೆಯ ಗುರುತುಳ್ಳ, ಚಂದ್ರ (ಮೃಗಧರಮಯೂಖಮಾಲೆಯಂ ಮದನಾಗ್ನಿಜ್ವಾಲೆಗೆತ್ತು ನೋಡಲಂಜಿ: **ಲೀಲಾವತಿ,** ೬. ೯೨ ವ)

**ಮೃಗಧೂರ್ತ –** 'ಪಂಚತಂತ್ರ'ದಲ್ಲಿನ ಆ ಹೆಸರಿನ ನರಿಯ ಪಾತ್ರ (ಕೆಲವಾನೊಂದು ದಿವಸಕ್ಕೆ ಕರ್ವು ನೆಱೆದು ಗಿಣ್ಣೇಱುವುದುಂ ಮೃಗಧೂರ್ತನೆಂಬುದೊಂದು ನರಿಯದಂ ಕಂಡು: **ಪಂಚತಂತ್ರ,** ೭೧ ವ)

**ಮೃಗನಯನೆ –** ಜಿಂಕೆಯಂತೆ ಚಂಚಲ ಕಣ್ಣುಗಳುಳ್ಳವಳು (ಕೋಟಿ ದೀನಾರಮನಾ ಮೃಗನಯನೆ ಕೊಟ್ಟು ಕೊಂಡಳ್ ನೆಗೞ್ತೆವೆತ್ತಿರ್ದ ರತ್ನಮಯಕಂಬಳಮಂ: **ಸುಕುಮಾಚ,** ೧೦. ೧೧೮)

**ಮೃಗನಾಭಿ –** ಕಸ್ತೂರಿ (ಮೃಗನಾಭಿಯಂ ಆನೆಯ ಕೊಂಬುಗಳಂ ಪೆರ್ವಿದಿರ ತೋರಮುತ್ತಂ ಕಣ್ಬೇಲಿಗಳಂ ಮುಂದಿಟ್ಟು ಒರ್ವಂ ಪುಗುತಂದಂ ರಾಜಭವನದೊಳಗಂ ಶಬರಂ: **ಪಂಪರಾ,** ೪. ೧೧೬)

**ಮೃಗಪೋತಕ –** ಜಿಂಕೆಮರಿ (ಬಿಡಿಂ ಈ ಮೃಗಪೋತಕಂಗಳಂ ಇವಂ ಕೊಂಡೊಯ್ದು ಕಾಂತಾರ್‌ದೊಳ್ ಬಿಡಿಂ: **ಅಜಿತಪು,** ೬. ೧೦೮)

**ಮೃಗಭೂ** – ಚೌರಿ (ಮೃಗಭೂ ಖುದ್ಧ ವಿಳಾಸಿನೀ ಕಬರಿಕಾಬಂಧಗಳಂ ಪೊತ್ತು ಮಲ್ಲಿಗೆಯೊಳ್ ಭಾವಿಸಿ ಧೂಪದೊಳ್ ಪೊರೆದು ತತ್ಕಾಂತಾ ರತಿಸ್ವೇದಬಿಂದುಗಳೊಳ್ ನಾಂದು ಕುರುಳ್ಗಳೊಳ್ ಸುಟೆದು ಮುಂದೊಂದಿರ್ದ ಸೌಭಾಗ್ಯಘಂಟೆಗಳೊಂದಿ ಇಂಚರದೊಳ್ ಪಳಂಚಿ ಸುಟೆದತ್ತು ಅಂದೊಂದು ಮಂದಾನಿಳಂ: **ಪಂಪಭಾ,** ೪. ೮೦)

**ಮೃಗಮದ** – ಕಸ್ತೂರಿ (ವಿಜಯಾಂಗನಾರ್ಚನೋಚಿತ ಮೃಗಮದಮುಂ ನಿಜಭುಜವಿಜಯಲಕ್ಷ್ಮೀಪರಿರಂಭಣ ಪ್ರಕಟನ ದಕ್ಷದಕ್ಷಿಣವಿಷಾಣವಿನ್ಯಸ್ತಹಸ್ತನುಂ: **ಆದಿಪು,** ೧೪. ೯೦ ವ)

**ಮೃಗಮದದಣ್ಪು –** ಕಸ್ತೂರಿ ಲೇಪನ (ಮೃಗಮದದಣ್ಪು ಜಾದಿಯ ಬಟಲ್ಮುಡಿ ನೆಯ್ದಿಲ ಕರ್ಣಪೂರಂ ಅತ್ತಲಗದ ಕಟ್ಟಿದೈಸರಂ: **ಆದಿಪು,** ೧೨. ೧೨)

**ಮೃಗಮದಾಮೋದ –** ಕಸ್ತೂರಿಯ ಪರಿಮಳ (ಕಳಹಂಸಾಲಸಯಾನೆಯಂ ಮೃಗಮದಾಮೋದಾಸ್ಯ ನಿಶ್ವಾಸೆಯಂ ತಳಿರೇ ತಾವರೆಯೇ .. .. ಕಂಡಿರೇ: **ಪಂಪರಾ,** ೯. ೧೧೮)

**ಮೃಗಯಾನರ್ಮಮನಂ –** ಬೇಟೆಯ ಒಲವುಳ್ಳವನು (ಒರ್ಮೆ ಯಶೋಮತಿ ಮೃಗಯಾನರ್ಮಮನಂ .. .. ಎರ್ಮೆಯ ಪೋರಿಯನಿಕ್ಕಿದಂ ಊರ್ಮಾರಿಗೆ ಮತ್ತಮದನೆ ಮಹಳಕಕಿತ್ತಂ: **ಯಶೋಧಚ,** ೩. ೫೭)

**ಮೃಗಯಾ –** ಬೇಟೆ (ಬಿಡದೀಗಳ್ ಮೃಗಯಾನಿಮಿತ್ತಂ ಎಸೆವ ಈ ಕಾಂತಾರದೊಳ್ ವ್ಯಾಧರಾಗಡೆ ಅತ್ಯಾಗ್ರಹದಿಂ ತೊಟಲ್ವರ್: **ಪಂಚತಂತ್ರ,** ೧೬೩)

**ಮೃಗಯಾವ್ಯಸನ –** ಬೇಟೆಯ ಗೀಳು (ಎತ್ತಾನುಂ ನಿಮಗೆ ಮೃಗಯಾವ್ಯಸನ ವ್ಯಾಪಾರಮಾದುದಕ್ಕುಮಲ್ಲದಾಗಳಿದು ನಿಮ್ಮ ದುಷ್ಕರ್ಮದ ಫಲಮೆಂದು ನುಡಿದು: **ಪಂಚತಂತ್ರ,** ೨೧೨ ವ)

**ಮೃಗಯು** – ಬೇಟೆಗಾರ (ಹಕ್ಕಿಗಳುಪಗಳೊಳಂ ಭೂಮಿಕಂಪಮಾಗೆ ಪರಿವ ಮೃಗಯುಗಳ ಚರಣಾಘಾತ ಶಬ್ದಂಗಳೊಳಂ: **ಕಾದಂಬ,** ೧. ೧೩೫ ವ)

**ಮೃಗರಾಜ –** ಸಿಂಹ (ಮೃಗರಾಜನ ಶಕ್ತಿತ್ರಯದ ಗುಣ್ಪುಮಂ ಬಾಹುಬಲದ ತಿಣ್ಪುಮನಱೆದೆಂ: **ಪಂಚತಂತ್ರ,** ೧೫೮)

**ಮೃಗರಾಜವಿಷ್ಟರ –** ಸಿಂಹಾಸನ (ಚತುರ್ನಿಕಾಯ ಅಮರೇಂದ್ರವೃಂದಸಂಕೀರ್ಣಮುಮಪ್ಪ ಶ್ರೀಮಂಟಪಮಂ

ವಿರಚಿಸಿ ಮೃಗರಾಜವಿಷ್ಟರದೊಳ್ ಬಾಳಕನಂ ಪೂರ್ವಾಭಿಮುಖನಿವಿಷ್ಟನಂ ಮಾಡುವುದುಂ: **ಆದಿಪು,** ೭. ೭೬ ವ)

**ಮೃಗರಿಪು** – ಜಿಂಕೆಯ ಶತ್ರು, ಸಿಂಹ (ಮೃಗರಿಪುವಂ ಮೃಗಾವತಿಯ ನಂದನನೊರ್ವನೆ ನಿಂದು ಕೊಂದು: **ಅಚವರ್ಧ,** ೩. ೪೬)

**ಮೃಗಲಕ್ಷ್ಮ** – ಚಂದ್ರ (ಸೂಕ್ಷ್ಮತರ ಮಧ್ಯದಿಂ ಮೃಗಲಕ್ಷ್ಮಾಸ್ಯದಿಂ ಆ ಇತಾಂಗಿ ಕುಸುಮಾಸ್ತ್ರನ ದೋಲಲ್ಲ್ಮಿಯವೋಲ್: **ತ್ರಿಷಷ್ಟಿಪು,** ೨. ೧೩೬)

**ಮೃಗಲಾಂಛನ** – ಮೃಗಲಕ್ಷ್ಮ (ಮೃಗಲಾಂಛನಮಂಡಳದೊಳ್ ಮೃಗತನು ಮಿಸುಪಂತೆ: **ಕಾದಂಬ,** ೨. ೫೯)

**ಮೃಗಲೋಚನೆ** – ಜಿಂಕೆಯಂತೆ ಚಂಚಲವಾದ ಕಣ್ಣುಗಳುಳ್ಳವಳು (ಮೃಗಲೋಚನೆಯೊರ್ವಳ್ ಸಂಪಗೆಯ ಒಳ್ಮುಗುಳಯ್ದು ಮಗುಟಿ: **ಲೀಲಾವತಿ,** ೧೩. ೭೮)

**ಮೃಗವಿರೋಧಿ** – ಸಿಂಹ (ಎರಲೆಗೆ ಪಾಡುವ ಗೋರಿಯನರಣ್ಯದೊಳ್ ಮೃಗವಿರೋಧಿಗಂ ಪಾಡುವುದೇ: **ಆದಿಪು,** ೧೪. ೮೦)

**ಮೃಗವ್ಯ** – ಬೇಟೆ (ಎಟ್ಟಂದಂ ಪುಳಿಂದಾಗ್ರಣಿ ವಿವಿಧ ಮೃಗವ್ಯಕ್ಷಮಂ ಪಿಂಗಳಾಕ್ಷಂ: **ಕುಸುಮಾಕಾ,** ೧೪. ೩೩)

**ಮೃಗವ್ಯಾಯಾಮಕಾರ್ತಿಕೇಯ** – ಮೃಗಗಳಿಗೆ ಕಸರತ್ತು ಮಾಡಿಸುವುದರಲ್ಲಿ ಕಾರ್ತಿಕೇಯನಂತಿರುವವನು, ಅರಿಕೇಸರಿ (ಎಂದು ಬಿನ್ನಪಂಗೆಯ್ದ ಬೇಂಟೆಯಾತಂಗೆ ಮೃಗವ್ಯಾಯಾಮ ಕಾರ್ತಿಕೇಯಂ ಮೆಚ್ಚಿ ಮೆಚ್ಚುಗೊಟ್ಟು ತೊವಲನಿಕ್ಕೆಂದು ಮುಂದೆ ಪೇಟ್ಟಿಟ್ಟಿ ನಾರಾಯಣನುಂ ತಾನುಂ .. .. ಬೇಂಟೆಗೆ ಪೋಜಿಮಟ್ಟು: **ಪಂಪಭಾ,** ೫. ೪೭ ವ)

**ಮೃಗಶಾಬಾಕ್ಷಿ** – ಜಿಂಕೆಯ ಮರಿಯಂತೆ ಚಟುಲ ಕಣ್ಣುಗಳುಳ್ಳವಳು (ಹಸ್ತತಳಮಂ ಸತ್ವಲ್ಲವಂಗಿತ್ತು ತತ್ ಮಂರಶಾಬಾಕ್ಷಿಯನಿಂತು ಮನ್ಮಥವನಶ್ರೀಗೆತ್ತು: **ಸುಕುಮಾಚ,** ೯. ೯೦)

**ಮೃಗಶಾಬೇಕ್ಷಣೆ** – [ಮೃಗಶಾಬ+ಈಕ್ಷಣೆ] ಜಿಂಕೆಯ ಮರಿಯಂತೆ ಚಂಚಲವಾದ ಕಣ್ಣುಳ್ಳವಳು (ಒಗುಮಿಗೆಯಿಂ ಮುದ್ದಿಸಿ ಮಿಗೆ ಮೃಗಶಾಬೇಕ್ಷಣೆ ಕುಮಾರನಂ ಬೆಸಗೊಮಡಳ್: **ರಾಜಶೇವಿ,** ೧೪. ೩೬)

**ಮೃಗಶಾಬೇಕ್ಷಾಕ್ಷಿ** – ಜಿಂಕೆಯ ಮರಿಯ ಕಣ್ಣಿನಂತೆ ಕಣ್ಣುಳ್ಳವಳು (ಎಮ್ಮಂ ನೆನೆದೆರ್ದೆಗಿಡದಂತಾಗೆ ಪಾಲಿಪ್ಪುದಿಂತೀ ಮೃಗಶಾಬೇಕ್ಷಾಕ್ಷಿಯಂ.. .. ವಜ್ರಜಂಘಾ: **ಆದಿಪು,** ೪. ೫೫)

**ಮೃಗಾಂಕ** – ಜಿಂಕೆಯ ಗುರುತುಳ್ಳುದು, ಚಂದ್ರ (ಶಾಂತಿನಾಥವಿನುತ ಪ್ರತಾಪಮುಂ ತದ್ವಸುಧೇಶನ ಕಾಂತಿಯುಮೆಂದು ಮೃಗಾಂಕನ ಕಾಂತಿಯುಮೇಂ ದಿಗಂತಮಂ ಪರ್ವಿದುದೋ: **ಶಾಂತಿಪು,** ೧೦. ೧೩೪)

**ಮೃಗಾಂಕಕರ** – ಬೆಳುದಿಂಗಳು (ಕೂಡಿದ ಕೂಟದಿಂದ ಒಲಿಸಿದ ಇರ್ವರುಮಂ ಸಮಪಾತವಾರಿಯಿಂ ಕೋಡೆ ಸರಾಗದೊಳ್ ಮುಟುಗಿ ಮೂಡೆ ಮೃಗಾಂಕಕರಂ ಪಯೋರಸಂ ತೀಡುವ ತಂಬೆಲರ್ ಮನದೊಳ್ ಉರ್ಕೆಗಳಂ ಸುರತಾವಸಾನದೊಳ್ ಮಾಡೆ ರತಕ್ಕೆ ಮತ್ತೆ ಬಗೆದಂದುದು ದಂಪತಿ ಸೌಧಕೂಟದೊಳ್: **ಶಾಂತಿಪು,** ೮. ೧೦೦)

**ಮೃಗಾಜಿನ** – ಜಿಂಕೆಯ ಚರ್ಮ (ಮೃಗಾಜಿನಮಂ ಪೋಲುತಿರ್ಪ ಮುಂಜಮೇಖಲೆಗಳ ಒಪ್ಪಮಾಡುವ .. .. ವ್ಯವಸಾಯಮೆತ್ತಲುಂ: **ಕಾದಂಬ,** ೧. ೧೮೭)

**ಮೃಗಿ** – ಹೆಣ್ಣು ಜಿಂಕೆ (ಬಾಣತೃಣಂಗಳೆಂದೆಳಸುಗುಂ ಪಸುರ್ಗಲ್ಗಳ ಕಾಂತಿಯಂ ಮೃಗೀಜಾಳಕಂ: **ಪಂಪರಾ,** . ೧೨೭)

**ಮೃಗೇಂದ್ರ** – ಸಿಂಹ (ಮೃಗೇಂದ್ರಂಗಮೆನಗಂ ವೈರಕಾರಣಮಾವುದದಂ ನೀನಜೆವೆಯಪ್ಪೊಡೆ ಪೇಟು: **ಪಂಚತಂತ್ರ,** ೨೦೬ ವ)

**ಮೃಗೇಂದ್ರವಿಷ್ಟರ** – ಸಿಂಹಾಸನ (ಪುರುದೇವಂ ಮೃಗವಿಷ್ಟರದೊಳಿರೆ ನಾಭಿರಾಜಂ ಬೆರಸು ಬಂಸು: **ಆದಿಪು,** ೮. ೭೧ ವ)

**ಮೃಗೋತ್ಥ** – ಮೃಗಮದ (ಪಂಚರತ್ನದ ಘನಸಾರವಾರಿಯ ಮೃಗೋತ್ಥ ಕುಳುತ್ಥದ ಬಾಯಿನಂಗಳಂ ಮುದದೊದವಿಂದಮಿತ್ತು ಮೆರೆದರ್: **ಚಂದ್ರಪ್ರಪು,** ೬. ೮೧)

**ಮೃಗೋದ್ಭವ** – ಮೃಗಮದ, ಕಸ್ತೂರಿ (ಪೊಸತಲ್ತು ನಿನಗೆ ಪೂವಿನ ಪೊಸಗಂಪು ಈ ಬನದೊಳ್ ಈ ಮೃಗೋದ್ಭವಗಂಧಂ ಪೊಸತು: **ಆದಿಪು,** ೧೧. ೧೩೭)

**ಮೃಚ್ಚಕ್ರದಂಡ** – ಕುಂಬಾರನ ತಿಗುರಿ ಮತ್ತು ಕೋಲು (ಮೃಚ್ಚಕ್ರ ದಂಡ ತೋಯದಿಂ ಅಚ್ಚಿಜೆಗುಂ ಕುಂಭಕಾರಂ ಮಡಕೆಗಳಂ: **ಸಮಯಪ,** ೧೦. ೨೨)

**ಮೃಡ** – ಈಶ್ವರ (ಮೃಡನ ತನೂಜನಪ್ಪ ವಿಘ್ನೇಶ್ವರಂಗೆ ವಾಹನಮಂ ಮಾಡಿ ಕುಡೆ ಮಹಾಮಹಿಮೆಯಿಂದ ಅಹಿಭೂಷಣಂಗಗ್ರಗಣ್ಯನಾಗಿರ್ಪಂ: **ಪಂಚತಂತ್ರ,** ೩೬೫ ವ)

**ಮೃಡರಿಪು** – ಶಿವನ ಶತ್ರು, ಕಾಮ (ಕೇವಣದೊಳ್ ತೊಡರ್ದ ಅಳಿನೀಲದ ಪರಲ್ ಎನೆ ಮೃಡರಿಪು ಮುದ್ರಿಕೆವೊಲಾಯ್ತು ಕನಕಾಂಬುರುಹಂ: **ಗದಾಯು,** ೬. ೪೩)

**ಮೃಡಾಣಿ** – ಪಾರ್ವತಿ (ವರಗಂಗಾಧರನಂ ಮೃಡಾಣಿವರನಂ ವ್ಯಾಲೋಲಬಾಲೇಂದುಶೇಖರನಂ ತಾಳ್ದಿದಂ ಆತ್ಮ ಹೃತ್ಕಮಲದೊಳ್: **ಪಂಚತಂತ್ರ,** ೧೨೬)

**ಮೃಡಾದ್ರಿ** – ಕೈಲಾಸಪರ್ವತ (ದನುಸುತಂ ಕಿಟಿ ತನ್ನನಾ ಮುಳಿಸಿಂ ಮೃಡಾದ್ರಿಯೆ ಸಿಂಹವಾಹಿನಿಯ ರೂಪಿನೊಳ್ ಆಗವಕ್ಕೆ ಸಹಾಯಮಾಯ್ತು ರಘೂದ್ವಹಂಗೆನಿಸಿ: **ಪಂಪರಾ,** ೧೪. ೫)

**ಮೃಣಾಣ** – ತಾವರೆಯ ದಂಟು (ಪೊಸವೆಳ್ದಿಂಗಳ್ ಚಂದನ ರಸದಣ್ಪು ಮೃಣಾಣನಾಳವಳಯಂ ಸುಮನಸಃ ಪ್ರಸವಾಸ್ತರಣಂ: **ವರ್ಧಮಾಪು,** ೮. ೯೦)

**ಮೃಣಾಳ** – ತಾವರೆಯ ದೇಟು (ಅವತಂಸ ಮೌಕ್ತಿಕದ್ಯುತಿನಿವಹಲಸತ್ಪರಿಧಿಯೆನಿಸಿ ಮೃಣಾಳ ವಿಳಾಸವಂ ಅಪ್ಪುಕೆಯ್ದು ಪಿರಿದುಂ ಯುವತಿಯ ತಶ್ರವಣಪಾಳಿಕಾ ಯುಗಮೆಸೆಗುಂ: **ಶಾಂತೀಶ್ವಪು,** ೧೩. ೨೦೦)

**ಮೃಣಾಳತಂತು** – ತಾವರೆದಂಟಿನ ನಾರು (ನನೆವಿಲ್ ನಿಸ್ಸಾರಮಾದತ್ತು ಸೀಕರಿವೋದತ್ತು ಮೃಣಾಳತಂತುರಚಿತ ಜ್ಯಾಲೇಖೆ ಮೀನಧ್ವಜಂ ಕೊರಗಿತ್ತು ಕಂತು ಸೀದ ಗಜೆಯಂತಾದಂ: **ಮಲ್ಲಿನಾಪು,** ೧. ೧೯)

**ಮೃಣಾಳನಾಳ** – ಮೃಣಾಳ (ಬಳವತ್ಕಾಮಾಗ್ನಿ ಹೋಮಾಗ್ನಿ ಚಂದನ ಕರ್ಪೂರ ಮೃಣಾಳನಾಳಮೆ ಪೊದಳ್ದ ಇಧ್ಮಂಗಳ್ ಇಂತಾಗೆ ತಾನಿನಿತುಂ ಕಾಮನ ಬೇಳ್ವೆಯೆಂದು ಸುಗಿದಳ್ ತನ್ವಂಗಿ ಬೆಳ್ದಿಂಗಳೊಳ್; **ಪಂಪಭಾ,** ೪. ೫೯)

**ಮೃತಕ** – ಹೆಣ (ಮುನಿವಚನಂ ಅಸತ್ಯಮೆಂದು ಆ ಮೃತಕಂಗಳಂ ಶಿಳಾತಳದೊಳ್ ತಾಟಿಸಿ ಪೋಗೆ; **ಚಾವುಂಪು,** ಪು. ೪೦೮. ಸಾ. ೧)

**ಮೃತಕತೂರ್ಯ** – ದುಃಖಸೂಚಕ ವಾದ್ಯ (ಇತ್ತ ನಿಷೇಕಮಾಗೆ ಗುರುಗೆ ಅತ್ತ ಅಭಿಷೇಕವಿಭೂತಿಗೊಂದುಗುಂ ತತ್ತನಯರ್ಕಳೊಳ್ ಮೃತಕತೂರ್ಯಮೆ ಮಂಗಳತೂರ್ಯಮಕ್ಕುಂ: **ಅಜಿತಪು,** ೨. ೧೦೫)

**ಮೃತಕಸೆಜ್ಜೆ** – [ಜೈನ] ಒಂದು ಬಗೆಯ ತಪಸ್ಸು (ಮೃತಕಸೆಜ್ಜೆಯೊಳಿರ್ದು ಸಂನ್ಯಸನಂಗೆಯ್ದು ಧರ್ಮಧ್ಯಾನ ಶುಕ್ಲಧ್ಯಾನಂಗಳಂ ಧ್ಯಾನಿಸುತ್ತಿರ್ಪನ್ನೆಗಂ: **ವಡ್ಡಾರಾ,** ಪು. ೨೯. ಸಾ. ೧)

**ಮೃತಪಟಹ** – ವ್ಯಕ್ತಿ ಸತ್ತಾಗ ಬಾರಿಸುವ ತಮಟೆ (ಮೃತಪಟಹಂ ಜಯಪಟಹಂ ಚಿತಾಗ್ನಿಭೂಮಿ ಜಯಧ್ವಜಂ ಜನಕರುಣಾರುತಿ ಜಯಮಂಗಳರುತಿಕೆಯೆನೆ ಕೃತಾಂತರಾಜಂಗೆ ರಾಜ್ಯಚಿಹ್ನಮಿದಲ್ತೇ: **ಅಜಿತಪು,** ೧೦. ೨೯)

**ಮೃತಿ** – ಸಾವು (ಮೃತಿ ಮೃತ್ಯು ಮರಣವೆನೆ ಪಂಚತ್ವಂ: **ಅಭಿಧಾವ,** ೧. ೧೧. ೪೫)

**ಮೃತ್ತಿಕಾ[ಕೆ]** – ಮಣ್ಣು (ಮೃತ್ತಿಕಾವಿರಚಿತಮಪ್ಪ ಚತುರಾಂತರದೊಳ್ .. .. ಗುಣಾರ್ಣವನನಾ ದ್ರುಪಜೆಯನೊಡನೆ ಕುಳ್ಳಿರಿಸಿ: **ಪಂಪಭಾ,** ೩. ೭೪ ವ)

**ಮೃತ್ಪಾತ್ರ** – ಮಣ್ಣಿನ ಗಡಿಗೆ (ತಪೋವನಕ್ಕೆ ಪೋಪ ಭಾರ್ಗವಂ ದ್ರವ್ಯಾರ್ಥಿಯಾಗಿ ಬಂದ ಕುಂಭಸಂಭವನಂ ಕಂಡು ಕನಕಪಾತ್ರಕ್ಕುಪಾಯಮಿಲ್ಲಪ್ಪುದಱಿಂ ಮೃತ್ಪಾತ್ರದೊಳ್ ಅರ್ಘ್ಯಮೆತ್ತಿ ಪೂಜಿಸಿ: **ಪಂಪಭಾ,** ೨. ೪೫ ವ)

**ಮೃತ್ಯು** – ಸಾವು (ಮೃತಿ ಮೃತ್ಯು ಮರಣವೆನೆ ಪಂಚತ್ವಂ: **ಅಭಿಧಾವ,** ೧. ೧೧. ೪೫)

**ಮೃತ್ಯುಂಜಯಮಂತ್ರ**– ಸಾವನ್ನು ಗೆಲ್ಲುವ ಮಂತ್ರ (ತಾನುಮರಸಿಯುಂ ತನ್ಮುನೀಶ್ವರ ದಿವ್ಯವಚನ ಮೃತ್ಯುಂಜಯಮಂತ್ರ ಸಾಮರ್ಥ್ಯಸಂಧಾರ್ಯಮಾಣ ಜೀವಿತರಾಗಿರ್ದರ್: **ಚಂದ್ರಪ್ರಪು,** ೫. ೩೬ ವ)

**ಮೃತ್ಯುಗರೆ** – ಸಾವನ್ನು ಆಹ್ವಾನಿಸು (ಬೇಂಟೆಗೆ ಪೋಱಮಡಿಂ ಎಂದು .. .. ಪಱಿಯಂ ಪೊಯ್ಯುತ್ತಿರ್ಪಂ ಪೆಱತೇಂ ಬೆಟ್ಟೇಱಿ ಮೃತ್ಯುಗರೆವಂತಕ್ಕುಂ: **ಸಮಯಪ,** ೧೪. ೮೦)

**ಮೃತ್ಸ್ನಾಘಟ** – ಮಣ್ಣಿನ ಮಡಕೆ (ಮುಕುಂದನಿಡೆ ವಿದ್ಯುದ್ಧೀಕರಂ ವೈರಿಕಂಧರಮಂ ಕೊಂಡು ತದುತ್ತಮಾಂಗದೊಡನುದ್ದಂ ಪಾಱೆ ಮೃತ್ಸ್ನಾಘಟಂಬೆರಸು ಉದ್ಯತ್ ಭುಜದಂಡವರ್ತನದೀ: **ಶಾಂತಿಪು,** ೪. ೫೪)

**ಮೃದ್ಭಾಜನ** – ಮಣ್ಣಿನ ಮಡಕೆ (ಒಲೆಯ ಕಿಚ್ಚಿನ ಮೃದ್ಭಾಜನದೆಸಱ ನೀರಬಾಣಸಿಗರ ಉರಿಪುವ ಗಾಳಿಯ ಸಂಯೋಗದೊಳ್ ಚೈತ್ಸ್ಯಮದೇಕೆ ಉಟ್ಟದು: **ಶಾಂತಿಪು,** ೮. ೧೩೭ ವ)

**ಮೃದ್ವೀಕಾ[ಕೆ]** – ದ್ರಾಕ್ಷಿ (ಮೃದ್ವೀಕಾಭಿಧಾನೆ ತಾಂ ದ್ರಾಕ್ಷಿ: ಅಭಿಧಾವ, ೧. ೮. ೨೨)

**ಮೃದ್ವೀಕಾಲತೆ** – ದ್ರಾಕ್ಷಿಯ ಬಳ್ಳಿ (ಮಲ್ಲಿಕಾಲತೆಯ ಮುಗುಳ್ಗುಡಿಗಳೊಳಂ ಚಂಪಕಲತೆಯಲರ್ಗುಡಿಗಳೊಳಂ ಪಿಣಿಲಿಱಿದು ಪೆಣೆದು .. .. ಬಳ್ವಳ ಬಳೆದ ಮೃದ್ವೀಕಾಲತೆಯ ಕಾಯಮಾನಂ: **ಅನಂತಪು,** ೭. ೧೧ ವ)

**ಮೃಷತತ್ತ್ವ** – ಮಿಥ್ಯಾತತ್ವ (ಕಿಲ್ಬಿಷವಿಷಂ ಪುದಿದಿರ್ಪ ಕುದೃಷ್ಟಿಗೆ ಆತ್ಮತತ್ತ್ವಮೆ ಮೃಷತತ್ತ್ವಮಾಗಿ .. .. ತೋರ್ಕುಂ: **ಸಮಯಪ,** ೧೧. ೧೫೪)

**ಮೃಷಾನಂದ** – [ಜೈನ] ಒಂದು ಬಗೆಯ ರೌದ್ರಧ್ಯಾನ; ಸುಳ್ಳಾಡುವ ಆನಂದ (ಬಂಚಿಸಲೆಂದು ನುಡಿವ ಮೃಷಾನಂದ ವಚನದೊಳಪ್ಪ ಸಂಕಲ್ಪಾಧ್ಯವಸಾನಂ ಮೃಷಾನಂದಂ ಎಂಬುದಕ್ಕುಂ: **ಅಜಿತಪು,** ೮. ೨೮ ವ)

**ಮೃಷಾಪಾತಕ** – ಅಸತ್ಯದ ದೋಷ (ಆ ಮೃಷಾಪಾತಕಂ ಪರಮೆಂಬೀ ನುಡಿಯಂ ನುಡಿಯಿಂ ಪೃಥಾಪ್ರಿಯಸುತಂ ಪಾಪಕ್ಕೆ ಪಕ್ಕಾಗನೇ: **ಗದಾಯು,** ३. ೨೩)

**ಮೃಷಾವಾದ** – ಸುಳ್ಳು (ವಿತಥಂ ಅಳಿಕಂ ಮಿಥ್ಯೋಕ್ತಿ ತಾಂ ಮೃಷಾವಾದಂ: **ಅಭಿಧಾವ,** ೧. ೧೩. ೩೩)

**ಮೆಚ್ಚವಣಿಗೆ** – ಮೆಚ್ಚಿಕೆಯನ್ನು ಹೊಂದಿರುವುದು (ಓಲಗವುರುಡಿಲ್ಲ ಮೆಚ್ಚವಣಿಗಿಲ್ಲ ಕರಂ ಮುಳಿಸಿಲ್ಲ ಕೆಮ್ಮಗೆ ಬಱಿಸಂದು ಕೊಂದಪನಕಾರಣದಿಂ ಮೊಱಿಯೋ ಮನೋಭವಾ: **ಆದಿಪು,** ೧೨. ೩೩)

**ಮೆಚ್ಚು** – ಬಹುಮಾನ (ಮುಂದಟ್ಟಿದ ದೂತಂಗೆ ಪ್ರೀತನಾಗಿ ಮೆಚ್ಚಿ ಮೆಚ್ಚಿತ್ತು: **ಆದಿಪು,** ೪. ೨೩ ವ); ಇಷ್ಟಪಡು (ಸ್ವಯಂಬರದೊಳ್ ಸುಮತಿಯೆಲ್ಲರಂ ನೋಡಿ ಯಾರುಮಂ ಮೆಚ್ಚದೆ ಸಿರಿದಿಣ್ಣಂಗೆ ಮಾಲೆ ಸೂಡಿದೊಡೆ: **ವಡ್ಡಾರಾ,** ಪು. ೧೦೮, ಸಾ. ೨೧); ಸಮ್ಮತಿಸು (ಮೆಚ್ಚು–ಅಭ್ಯುಪಗಮೇ: **ಶಬ್ದಮದ,** ಧಾ ೨೧೭)

**ಮೆಚ್ಚುಗೊಡು** – ಬಹುಮಾನ ನೀಡು (ಎಂದು ಬಿನ್ನಪಂಗೆಯ್ದ ಬೇಂಟೆಯಾತಂಗೆ ಮೃಗವ್ಯಾಯಾಮ ಕಾರ್ತಿಕೇಯಂ ಮೆಚ್ಚಿ ಮೆಚ್ಚುಗೊಟ್ಟು ತೊವಲನಿಕ್ಕೆಂದು ಮುಂದೆ ಪೇೞ್ದಟ್ಟಿ ನಾರಾಯಣನುಂ ತಾನುಂ .. .. ಬೇಂಟೆಗೆ ಪೊಱಮಟ್ಟು: **ಪಂಪಭಾ,** ೫. ೪೭ ವ)

**ಮೆಚ್ಚುಗೊಳ್** – ಬಹುಮಾನ ಸ್ವೀಕರಿಸು (ಗಣಿಕಾತಿಳಕಮಿವಳ್ ನರ್ತನರಸದೊಳೆ ನಿಚ್ಚಂ ಮೆಚ್ಚುಗೊಳ್ವಳಿಂದ್ರನ ಕೈಯೊಳ್: **ಆದಿಪು,** ೯. ೧೮)

**ಮೆಟ್ಟಿಗೆ** – ಮೆಟ್ಟಿಲು, ಸೋಪಾನ (ಕೋಮಲತರದ ಇಂದ್ರನೀಳಮಣಿಜಾಳದ ಮೆಟ್ಟಿಗೆ ನಿರ್ಮಳೋದಕಂ ನಳಿನಸಮೂಹಂ: **ತ್ರಿಷಷ್ಟಿಪು,** ೭. ೧೧)

**ಮೆಟ್ಟು** – ಹೆಜ್ಜೆಯಿಡು (ಲಸನ್ನೇತ್ರಂಗಳಂ ಕೂಡೆ ಬಂಚಿಸುತುಂ ಮೆಟ್ಟುವ ಮೆಟ್ಟಿನೊಳ್ಪು ಜನತಾನೇತ್ರಂಗಳಂ ನಾಡೆ ಚೆಲ್ವೆಸೆದತ್ತಿಂದ್ರನ ನೀಳ್ದ ತೋಳ್ದುಱುಗಲೊಳ್ ದೇವಾಂಗನಾನರ್ತನಂ: **ಆದಿಪು,** ೭. ೧೨೩); ಹೆಜ್ಜೆ ಹಾಕು, ನರ್ತಿಸು (ಮಹೋತ್ಸವದಿಂ ತಾಳಲಯಕ್ರಮಕೆ ವಿಚಿತ್ರಂ ಮೆಟ್ಟಿಸುತ್ತುಂ ಅಮರಗಜೇಂದ್ರಂ: **ಅಜಿತಪು,** ೫. ೩೬); ಪಾದರಕ್ಷೆ ಧರಿಸು (ದುಕೂಲಾಂಬರಮನುಟ್ಟು ಪೊಸವಾವುಗೆಯಂ ಮೆಟ್ಟಿ: **ಪಂಪಭಾ,** ೧೨. ೧೦೮ ವ);

**ಮೆಟ್ಟುವ ತಾಣ** – ಓಡಾಡುವ ಜಾಗ (ಬೊಂಗದ ನಾರಂಗದ ದೇವಾಂಗದ ಪಲತೆಱದ ಸಕಲ ವಟ್ಟೆಗಳಂ ಗೇಹಾಂಗಣದೊಳ್ ಮೆಟ್ಟುವ ತಾಣಂಗಳೊಳ್ ಓರಂತೆ ಪಾಸಿ: **ಸುಕುಮಾಚ,** ೧೦. ೯೦)

**ಮೆಡಱು** – ಹೆಣೆ (ಗಂಗಾಸುತನ ವಾಮಭಾಗದೊಳ್ ಅಂಬರಭಾಗಂ ಆ ತಟ್ಟಿ ಮೆಡಱಿದಂತಾಗಿ ತನ್ನ ರಥದೊಳೊಟ್ಟಿದ ಕೆಯ್ದುಗಳ ಬೆಳಗೆ ಬೆಳಗಾಗೆ: **ಪಂಪಭಾ,** ೧೦. ೫೬)

**ಮೆದೆಗೆಡೆ** – ಗುಂಪಾಗು, ಒಟ್ಟಾಗು (ಮುಂದೆಯ್ತಂದು ಒಟ್ಟೆಯೊಱಲಿ ಮೆದೆಗೆಡೆಯುತ್ತುಂ ಸಂದಣಿಸುತ್ತ ಉರವಣಿಸುತ್ತುಂ: **ಗಿರಿಜಾಕ,** ೬. ೮)

**ಮೆಯ್** – ಶರೀರ (ಓಡುಗೆ ನಿಮ್ಮ ಮೆಯ್ಯ ಪಸಿವು: **ಪಂಪಭಾ,** ೫. ೮೫)

**ಮೆಯ್ ಮೆಯ್ಗೆ** – ಪ್ರತಿಯೊಬ್ಬರಿಗೂ, ಪ್ರತ್ಯೇಕವಾಗಿ (ಎಮ್ಮ ಗಂಡವಾತುಂ ಅಳುಂಬಂ ಭೃತಮಕ್ಕುಮೆಂದು ಮೆಯ ಮೆಯ್ಗೆ ಬೆಸಸೆಂಬುದುಂ: **ಪಂಪಭಾ,** ೬. ೨೬ ವ)

**ಮೆಯ್ಕೊಳಿಸು** – ಧರಿಸು (ಪೊಳೆವೆಳೆವಾಟಿ ಚುಂಬಿಸೆ ಮುಟುಂಕಿರಲಂಜಿದಳೆಟ್ಟಿಮೆಯ್ದೆ ಮೆಯ್ಕೊಳಿಸಿದ ನಾಗವಟ್ಟಳಿಗೆ ನಾಂದು ಪಗಿಲ್ತಿರೆ: **ಅನಂತಪು,** ೭. ೩೭)

**ಮೆಯ್ಗಂಡ** – ದೇಹದ ಮಾಂಸ (ತತ್ತಳಗುದಿದು ಕೋಟ್ಟುದಿಗೊಳ್ವ ಮೆಯ್ಗಂಡಮಂ ತಾಳಿಸೆ ಸುರುಂಟಿ ಬಗಿದಾ ಮೆಯ್ಯಂ ಸುಡೆ ಬಿಸಿಲ ಬೆಣ್ಣೆಯಂತೆ ಕರಗಿ: **ಶಾಂತಿಪು,** ೭. ೯೫ ವ)

**ಮೆಯ್ಗಣ್ಣ** – ಇಂದ್ರ (ಸಸಿಯ ಮೆಯ್ವೆಳಗಿಂದೆ ಪೊನ್ನೊಡೆಯನಂ ಪೆಂಪಿಂದೆ ಮಾದೇವನಂ ಪೆಸರ್ವೆತ್ತಿಂಚರದಿಂದೆ ಸಂದ ಬಿದಿಯಂ ಜಾಣಿಂದೆ ಮೆಯ್ಗಣ್ಣನಂ ಪೊಸತಪ್ಪಗ್ಗದ ಗಾಡಿಯಿಂದೆ ಪಿರಿದುಂ ಬೆಳ್ಮಾಡಿ ಬೇಟ್ಪಿಂತುಟುಬ್ಬಸಮಂ ಮಾಡುವ ಬರ್ದೆಯರ್ ಪಲರುಂ ಕಣ್ಗೇಂ ಬೆಡಂಗಾದರೋ: **ಕಬ್ಬಿಗಕಾ,** ೧೦೬)

**ಮೆಯ್ಗರೆ** – ಕಣ್ಣಿಗೆ ಕಾಣದಾಗು, ಅಂತರ್ಧಾನವಾಗು (ಈ ದೇವಾಮ್ನಾಯಕ್ಕೆ ನೊಚ್ಚಿದನಾಗಿ ಮೆಯ್ಗರೆವೆಸಕದಿಂ ನಿಚ್ಚಂ ಬೆಂಬಿರ್ದು ಚಿಂತಿಸಿ ದುಃಖದೊಳ್ ಪಿರಿದುಮವರಿಂ ಕಣ್ಗೆಟ್ಟಂ ಭಟ್ಟಂ ನಿಕೃಷ್ಟರ ದೂಸಟಿಂ: **ಸುಕುಮಾಚ,** ೨. ೯)

**ಮೆಯ್ಗರ್ಚು** – ಮೈತೊಳೆ, ಸ್ನಾನಮಾಡು (ಮೇಣಿಲ್ಲಿ ದಿಙ್ನಾಗರಾಜಿಗೆ ಮೆಯ್ಗರ್ಚಕೊಳಲ್ಕಜಂ ಸಮೆದ ತೋಯೋದ್ದೇಶಮೋ: **ಗದಾಯು,** ೬. ೧೧)

**ಮೆಯ್ಗಲಿ** – ಪರಾಕ್ರಮಿ (ದೂರದೊಳ್ ಅಂಜದೆ ಈಕ್ಷಿಸುವ ಕಣ್ಗಲಿಗಳ್ ನೃಪರಾರುಮಿಲ್ಲೆನಲ್ ಸಾರೆವರಲ್ ಮನಂಗಿಡದ ಮೆಯ್ಗಲಿಯಾವನೊ: **ಪಂಪರಾ,** ೫. ೮೨)

**ಮೆಯ್ಗಾಪು** – ಮೈಗಾವಲು [ಕಳಭಾಷಿಣಿಗಮರಿಯರೆ ಬಳಸಿ ಮೆಯ್ಗಾಪಾದರ್: **ಆದಿಪು,** ೭. ೧೩)

**ಮೆಯ್ಗುಂದು** – ಹೆದರಿಕೊ (ಪಡಿಮೊಗಮಾಗಲೊಡಂ ಕನ್ನಡಿಯಂ ನೋಡುವರ ತೆಱದೆ ಮುಯ್ಗುಂದುವರುಗ್ಗಡದ ಅರಸುಮಕ್ಕಳೆನೆ ಬಾಳ್ವಿಡಿದರಾರ್ ಬಾಟ್ದುಪ್ಪರಾತನಿದಿರೊಳ್ ಪಗೆವರ್: **ಕಬ್ಬಿಗಕಾ,** ೪೨)

**ಮೆಯ್ಗಿಡು** – ಚರ್ಮರೋಗದಿಂದ ವಿಕಾರಗೊಳ್ಳು (ಈ ತೊನ್ನಂಗೆ ಈ ಕಷ್ಟಂಗೆ ಈ ತೊಡವಿದೇಕೆ ಬಗೆವೊಡೆ ಬಗೆವೊಡೆ ಮೆಯ್ಗೆಟ್ಟಾತಂಗೆ ಕೂಟನಾವಂ ಪ್ರೀತಿಯೊಳಿಕ್ಕಿದಂ: **ಧರ್ಮಾಮೃ,** ೪. ೪೯); ತಲ್ಲೀನಗೊಳ್ಳು (ಸಗ್ಗದ ಪೆಂಡಿರ ನುಣ್ಚರಕ್ಕೆ ಮೆಯ್ಗೆಟ್ಟ ಎಳವುಲ್ಲೆಗಳ್ ಪಲವುಮಾಲಿಸೆ: **ಕಬ್ಬಿಗಕಾ,** ೧೨)

**ಮೆಯ್ಗೊಳ್** – ಕಾಣಿಸಿಕೊ (ಮೆಯ್ಗೊಂಡೊಲವಿಂದಗಲ್ಕೆಗೆ ಅಣಂ ಆಱದೆ ಪಕ್ಕಿಗಳೆಲ್ಲಂ ಮರುಳ್ಗೊಂಡವೊಲ್ ಊಳ್ದು ಕೂಡೆ ಬೆಸಗೊಂಡು ಬಟಲ್ದುವು ಜಕ್ಕವಕ್ಕಿಗಳ್: **ಪಂಪಭಾ,** ೪. ೪೮)

**ಮೆಯ್ದೆಗೆ** – ಹಿಂಜರಿ (ವಲ್ಲಭೆಯ ವಚನಮಂ ಮನವಲ್ಲದ ಮನದೊಳ್ .. .. ಸಯರಿಸೆ ಮೆಲ್ಲ್ನೆ ಮೆಯ್ದೆಗೆದು: **ಶಾಂತಿಪು,** ೯. ೫೧)

**ಮೆಯ್ದೆಱಿ** – ಸುಕ್ಕು (ಪಾಮರಿಯರ ಜೋಲ್ವ ಮೆಯ್ದೆಱಿಗಳಂ ನೆಱಿಭಾವಿಸಿ ಬೀಡುವೆತ್ತು ಬಿತ್ತರಿಸುವ ದಾಡಿಮವ್ರಜಮಿದೆಂಬ ಅಭಿಶಂಕೆಯಂ ಅಪ್ಪುಕೆಯ್ದು: **ಕುಸುಮಾಕಾ,** ೨. ೪೩)

**ಮೆಯ್ದೊಡವು** – ಒಡವೆ (ಎಳೆವೆಂಡಿರುಟ್ಟ ದುಗುಲಮೆ ತಳೆವುದು ಕಡೆಗಣ್ಣ ಬೆಳಗು ಪೊಸ ಮೆಯ್ದೊಡವುಜ್ವಳಿಪ ಮೊಗಂ ಕನ್ನಡಿಯೆನೆ ಬಳೆದನಿದೇನೆಂಬ ಸೊಬಗಿನೇಟ್ಟಿರವವನಾ: **ಕಬ್ಬಿಗಕಾ,** ೧೨)

**ಮೆಯ್ದೋಱು** – ಕಾಣಿಸಿಕೊ (ವಯಲ್ಗೆ ಮೆಯ್ದೋಱುವೆವೆಂಬ ಪೂಣಿಗರ್ ಅಡಂಗಿ ಕುನುಂಗಿ ಸಿಡಿಲ್ದು ಜೋಲ್ದು ಕಾಯ್ಪಾಱಿ ನಭಕ್ಕೆ ಪಾಱಿದುದು: **ಪಂಪಭಾ,** ೧. ೧೦೯)

**ಮೆಯ್ನವಿರ್** – ಮೈಮೇಲಿನ ಕೂದಲು (ಬಾಷ್ಪಾಂಬು ಕೈಗಣ್ಮೆ ಕಣ್ಮಲರಿಂ ಮೆಯ್ನವಿರ್ಗಳ್ ಪೊದಳ್ದೊಗೆಯೆ: **ಪಂಪರಾ,** ೬. ೫೦)

**ಮೆಯ್ನಱಿ** – ಹುಡುಗಿ ಪ್ರಾಯಕ್ಕೆ ಬರು (ನಿಮ್ಮಡಿ ದೇವಕಿ ಮೆಯ್ನೆಱಿದಳ್: **ನೇಮಿನಾಪು,** ೭. ೬)

**ಮೆಯ್ಪಿಂಗಿಸು** – ಹಿಮ್ಮೆಟ್ಟಿಸು (ಯುಷ್ಮದೀಯ ವಿಲೋಕಂ ಯಮಲೋಕಮಂ ವೃಜಿನಮಂ ಮೆಯ್ಪಿಂಗಿಸಿತ್ತು: **ಜಗನ್ನಾವಿ,** ೧೦. ೧೫)

**ಮೆಯ್ಬಿಸುಪು** – ಮೈಯ ಕಾವು (ಓರೊರ್ಮೆ ಮೇಯ್ಬಿಸುಪಿನೆಸಕದಿಂ ಪೊಕ್ಕ ನೀರ್ಕದಡಿ ಕುದಿವಿನಂ ಕರತ್ರಿಮ ತರಂಗಿಣಿಯ ಪೊನಲೊಳ್ ಪೊರಳ್ದು: **ಆಚವರ್ಧ,** ೪. ೫೮ ವ)

**ಮೆಯ್ಮಱುಗು** – ದೇಹದ ತಾಪ (ನಿಷ್ಠುರರ್ ಮೆಯ್ಮಱುಗುವಿನಂ ಪಿಡಿದು ಬಡಿದು ಕಿಚ್ಚಿನೊಳಿಡುವರ್: **ಧರ್ಮಾಮೃ,** ೩. ೪೦)

**ಮೆಯ್ಮಱಿ** – ಪರವಶವಾಗು, ದೇಹದ ಅರಿವಿಲ್ಲದಾಗು (ಮೆಯ್ಮಱೆದು ಕರ್ಣನೊಳಾದ ಶೋಕಾನಲದೊಳ್ ಬಾಯಟಿದು ಧೃತರಾಷ್ಟ್ರನುಂ ಗಾಂಧರಿಯುಂ ಬರೆವರ: **ಪಂಪಭಾ,** ೧೩. ೬ ವ) ಮೂರ್ಛೆ ಹೋಗು (ಗದೆಯ ಗಾಳಿಯ ಕೋಟ್ ಎಟ್ಟಿಱಿಸಿದುದು ಭೀಮನಂ ಮೆಯ್ಮಱಿದವನಂ ತಂದೆ ಸುತರ್ಗೆ ಕೂರದರೊಳರೇ: **ಗದಾಯು,** ೮. ೩೨)

**ಮೆಯ್ಮೆ** – ಮಹಿಮೆ (ಶೃಂಗಾರಮಂ ಕಾವ್ಯಬಂಧನದೊಳ್ ತಾಂ ಸೆಱಿಗೆಯ್ದ ಮೆಯ್ಮೆಯೊಳಿವಂ ಶೃಂಗಾರಕಾರಾಗೃಹಂ: **ಲೀಲಾವತಿ,** ೧. ೮೧)

**ಮೆಯ್ಯನಿಕ್ಕು** – ನಮಸ್ಕರಿಸು (ಮಹಾಕಾಳದೊಳ್ ಸುಪ್ರಾಸುಕ ಪ್ರದೇಶಮಂ ಕಂಡು ಯೋಗಯೋಗ್ಯ ಪ್ರದೇಶಮಪ್ಪುದದೆಂದು ಏಕಾಗ್ರಚಿತ್ತದೊಳ್ ಏಕ ಪಾರ್ಶ್ವದೊಳ್ ಮೆಯ್ಯನಿಕ್ಕಿ: **ಸುಕುಮಾಚ,** ೧೨. ೧೮ ವ)

**ಮೆಯ್ಯಲಸು** – ದೈಹಿಕವಾಗಿ ದಣಿ (ಅಂಬುಜೋದರನಂ ಮೆಲ್ಲನೆ ನೋಡಿ ಮೆಯ್ಯಲಸಿದಂತೆ ಎಂತಾನುಂ ಎಟ್ದಿರ್ದು ಕೇಸರಿಪೀಠಾಗ್ರದಿನಪ್ಪಿಕೊಂಡು: **ಪಂಪಭಾ,** ೯. ೩೧)

**ಮೆಯ್ಯಱಿ** – ಎಚ್ಚರವಾಗಿರು (ಈಗಳ್ ಸಿವನೆಂಬ ದುಟ್ಟಗೊರವಂ ಮಂಜುವೆಟ್ಟಮಂ ಗೊಟ್ಟಂ ಮಾಡಿ ಕಿತ್ತಡಿಗಳಂ ಮರುಳ್ವಡೆಗಳಂ ಕೂಡಿಕೊಂಡು .. .. ಮೆಯ್ಯಱಿಯದಿರ್ಪಂ: **ಕಬ್ಬಿಗಕಾ,** ೧೧೪ ವ)

**ಮೆಯ್ಯಾನ್** – ಶರೀರವನ್ನು ಮುಂದೆ ಒಡ್ಡು (ವಿನತಾಪುತ್ರನ ವಜ್ರ ತುಂಡಹತಿಗಂ ಮೆಯ್ಯಾಂತು ಕಂಡಂಗಳುಳ್ಳಿನಂ ಅಂಗಂಗಳಂ ಒಡ್ಡಿ ಒಡ್ಡಿ ತನುವಂ ಕೊಟ್ಟಂತು: **ಪಂಪಭಾ,** ೪. ೨೬)

**ಮೆಯ್ಯಾಱು** – ಮೈ ತಣಿವಾಗು (ಕೆಯ್ಯಾರಲೆತ್ತಿ ಆಂ ಈ ಮೆಯ್ಯಾಱ್ವಿನಂ ಅಪ್ಪಿಕೊಂಡು: **ಧರ್ಮಮಧು,** ೧. ೧೨೧)

**ಮೆಯ್ಯಿಕ್ಕು** – ನಮಸ್ಕರಿಸು (ಅಂತು ಬಂದು ಮೊಗಸಾಲೆಯೊಳ್ ಮೆಯ್ಯಿಕ್ಕಿ ಮೊಗಸುತ್ತಿರೆ ದುಗುಲದ ಬಿನ್ನಪದ ಸೆಱಗಧರಪಲ್ಲವಕ್ಕೆ ತೆಗೆದು: **ಪಂಪರಾ,** ೨. ೨ ವ)

**ಮೆಯ್ಯೇಡು** – ದೇಹದ ಕೊಳೆ (ನಾಡಯುಂ ಅರ್ಚಿಸುವರ ಮೇಯ್ಯೇಡಂ ಅಣಂ ಕಾಯಲಾಱದೆಂತುಂ: **ಸಮಯಪ,** ೯. ೭೫)

**ಮೆಯ್ಯೇಱು** – ದೇಹದ ಮೇಲಾದ ಗಾಯ (ಜಾಱದೆ ತನ್ನಾನೆಯಿಂ ಆ ಮಾಱಾನೆಯ ಕುಂಬತಳಕೆ ಪಾಯ್ದಳವಿಂ ಕೈದೋಱಿ ಮಱುವಾನಿಸಂ ಮೆಯ್ಯೇಱಿಂ ಕಂಡಗಿದು ಜೋಲೆ ಕೊಂದನದೊರ್ವಂ: **ಕಬ್ಬಿಗಕಾ,** ೨೨೧)

**ಮೆಯ್ಯೊಡ್ಡು** – ದೇಹವನ್ನು ಒಪ್ಪಿಸು (ಕೌರವರ್ ದ್ರುಪದನಂಬೇಱೆಂಗೆ ಮೆಯ್ಯೊಡ್ಡದೆ ಒಡ್ಡು ಒಡೆದು ಓಡುತ್ತಿರೆ: **ಪಂಪಭಾ,** ೨. ೬೨)

**ಮೆಯ್ವಚ್ಚ** – ಮೈಯ ಅಲಂಕರಣ, ಒಡವೆ (ಪದಿನೆಂಟುಂ ಸ್ಥವಣ್ಣಮಿದರ್ಕೆ ಮೆಯ್ವಚ್ಚಮೆನಿಸಿ ಪೇೞ್ದಂ: **ಶಬ್ದಮದ,** ೨೦೩ ಪ್ರ ३)

**ಮೆಯ್ವಡೆ** – ದೇಹವನ್ನು ಧರಿಸು (ಆಱುಂ ದ್ರವ್ಯದಿಂ ಮೆಯ್ವಡೆದಖಿಲ ಜಗಂ ರಜ್ಜುವೀರೇಟಱುದ್ದಂಬಡೆದತ್ತು: **ಪಂಪರಾ,** ೧. ೪೨)

**ಮೆಯ್ವಣ್ಣ** – ದೇಹದ ಬಣ್ಣ, ಕಾಂತಿ (ಇಂತುಟಪ್ಪ ಮೆಯ್ವಣ್ಣಕ್ಕಿಂತೀ ಪೂವಿನೊಳೀ ತುಡುಗೆಯೊಳೀ ಪುಟ್ಟಿಗೆಯೊ ಬೆಡಂಗುವಡೆದೆಸೆದಿರ್ಕುಂ: **ಪಂಪಭಾ,** ३. ४೫)

**ಮೆಯ್ವಸ** – ಆಸೆ, ಇಷ್ಟ (ಕುಱಿವಿಂಡನೆಯ್ದಿ ಮೆಯ್ವಸಂ ಒಳಸೋರ್ವಿನಂ ಪಿಡಿದು ಗುಕ್ಕಿಸಲಾಱಳೆ: **ಸಮಯಪ,** ೯. ೧೧३)

**ಮೆಯ್ವಟಿ** – ಮೈಯ ಬಳಿ (ತರಳಿಕೆ ಮೆಯ್ವಟಿಯಿಂ ಪಿಡಿದು ಒಯ್ಯನೆತ್ತಿ ಮೆಲ್ಲನೆ ತಡಿಗಾಗಿಟಿತಂದು ಈ ಕೊಳದೊಳ್ ನೀರಿಟಿಯಿಸೆ: **ಕಾದಂಸಂ,** ४. ೧೧೨); ಅನುನಯ (ಮಗನಂ ಮೆಯ್ವಟಿಯಿಂದಮೆ ನುಡಿದನಂದು ತಾರಾಪೀಡಂ: **ಕಾದಂಬ,** ೮. ೧३४)

**ಮೆಯ್ವಿಡಿ** – ಸಾಕಾರಗೊಳ್ಳು, ರೂಪ ಪಡೆ (ಬಾಯಟಿದೆನಿತೆರೆದೊಡಮಾಹಾಯೆನ್ನಯ ಕರಮೆ ಮಱುಗಿ ಮೆಯ್ವಿಡಿದುರಿವೆಂ ಈ ಎರ್ದೆಯನಾಱಿಸಲ್ ನೀಂ ಬಾಯೊಳ್ದಂಬುಲಮನಪ್ಪೊಡಂ ದಯೆಗೆಯ್ವೋ: **ಪಂಪಭಾ,** ೮. ೬೯)

**ಮೆಯ್ವಿಡು** – ಕವಲೊಡೆ (ಮೆಯ್ವಿಟ್ಟು ಮೆಯ್ವಿಟ್ಟಶೋಕೆ ಕರಂ ಪೋಲ್ತುದು ಮಿಂದು ನಿಂದ ಮುಡಿಯಂ ಬಿಟ್ಟಾಱಿಸುತ್ತಿರ್ದ ಕಾಮುಕಿಯಂ: **ಶಾಂತಿಪು,** ೭. ೧३४); ತಂಗು, ನೆಲಸು (ಉಷ್ಣಾಂಶುವಿನ ಊರ್ಧ್ವಗಾಂಶುನಿವಹಂ ಮೆಯ್ವಿಟ್ಟು ಅಲರ್ಚುತ್ತುಂ ಇರ್ಪುದು: **ಪಂಪಭಾ,** ४. ೨೨); ಸಲುಗೆಯಿಂದಿರು (ಮೆಯ್ವಸದಿಂ ಕೆಯ್ವಸದಿಂ ಬಾಯ್ವಸದಿಂ ಮಂತ್ರತಂತ್ರದಿಂದೆ ಸುಖುಖಮಂ ಮೆಯ್ವಿಡೆ ವನಿತೆಗೆ ಪಡೆದಾ ಮೆಯ್ವೋಗಕ್ಕೆಳಸಿ ಸೋಲ್ವನೇಟ್ಟುವೊಜಗಂ: **ಕಾವ್ಯಾವಲೋ,** ೬೭);

**ಮೆಯ್ವೆಂಕೆ** – [ಮೆಯ್+ಬೆಂಕೆ] ದೇಹದ ತಾಪ (ಮತ್ತಂ ಒರ್ವ ಗಾಡಿಕಾರ್ತಿ ಸಂದಣಿಸಿ ಚೆಂದಂಬಡೆದ ಕೆಂದಳಿರ ಪಂದರಮಂ ಮೆಯ್ವೆಂಕೆಗಂಜಿ ಪತ್ತೆ ಸಾರ್ದಿಂತೆಮದಳ್: **ಕಬ್ಬಿಗಕಾ,** ३೭ ವ)

**ಮೆಯ್ವೆರಸು** – ಜೊತೆಗೂಡು (ಮೆಯ್ವೆರಸುವ ಕೊಂತಗಾಱರಣೆಯಾಗಿರೆ ಬಂದು ಬಸಂತನೊಲ್ದು ಸಂವರಣೆಯನೆಯ್ದು ತೋಱಿ ತಲೆದೂಗಿಸಿದಂ ನನೆವಿಲ್ಲಬೀರನಾ: **ಕಬ್ಬಿಗಕಾ,** ೧३೭)

**ಮೆಯ್ವೆರ್ಚಿಸು** – ಸಂತಸಪಡಿಸು (ಪ್ರಿಯಕುಬ್ಜವಾಮನ ಗಣಾಲಾಪಂಗಳತ್ಯಂತಸೌಂದರಶುದ್ಧಾಂತವಧೂಕದಂಬಕಮನೇಂ ಮೆಯ್ವೆರ್ಚಿಸಲ್ಕಾರ್ತುದೋ: **ಆದಿಪು,** ೧೧. ४೨)

**ಮೆಯ್ವೆರ್ಚು** – ಕೆಮ್ಮೆಯಿಂದ ಬೀಗು (ಪಲವುಂ ಶಾಸ್ತ್ರಮನೋದಿದ ಬಲದಿಂ ಮೆಯ್ವೆರ್ಚಿ ಗರ್ವದಿಂ: **ಧರ್ಮಾಮೃ,** ३. ३४); ಅಧಿಕವಾಗು (ನನೆಯಂಬನೆ ಕರ್ಚಿ ಪಾಱಿದಪುದೋ ಶೃಂಗಾರವಾರಾಶಿ ಭೋಂಕನೆ ಬೆಳ್ಳಂಗೆಡೆದತ್ತೊ ಕಾಮನ ಎಱೆ ಮೆಯ್ವೆರ್ಚಿತ್ತೊ ಪೇೞ್ ಈಕೆಗೆ ಎಂಬಿನಂ: **ಪಂಪಭಾ,** ४. ४೨); ಹಿಗ್ಗು (ಇಂದುಶಿಲೆಯ ಡೊಕ್ಕರಿಗಳಂ ಆಗಳೆ ಕೊಂಡು ತಾನುಮಾ ಮಾನಿನಿಯುಂ ಧರಣೀವಲ್ಲಭ ಚಕ್ರಿಗಿಂದು ಜಳಕೇಳೀಸ್ಥಾನಂ ಆನಾದೆನೆಂಬ ಉರು ಸಂತೋಷದೆ ತತ್ಸರೋವರಮದುಂ ಮೈವೆರ್ಚುತಿರ್ದತ್ತು; **ಶಾಂತೀಶ್ವಪು,** ೧೦. ೧೬೦ ಮತ್ತು ೧೬೧)

**ಮೆಯ್ವೆಸ** – ದೇಹದ ಚಟುವಟಿಕೆ (ತೆಱಿಂದಿರಿದಾಂತ ಮೆಯೆಸಂ ಸುತ್ತುವ ಬಲ್ಪು .. .. ತಮ್ಮೊಳೆಯ್ದೆ ಮೆಯ್ವೆತ್ತಿರೆ ಬಿಚ್ಚತಂ ಪೋರ್ದುವಂದೆರಡುಂ ಬಲದಂಕದಾನೆಗಳ್: **ಚಂದ್ರಪ್ರಪು,** ೧೦. ೮४)

**ಮೆಯ್ವೆಱು** – ಮೈದಾಳು, ಕಾಣಿಸಿಕೊ (ಸುರಸ್ತ್ರೀಜನೋದಾತ್ತ ಪ್ರಾರ್ಥಿತ ಯೌವನಂ ದಿವಿಜರಾಜತ್ವಂ ತರಾಸ್ಥಕ್ಕೆ ಮೆಯ್ವೆತ್ತತ್ತೀ: **ಶಾಂತಿಪು,** ३. ೧೧३); ಶೋಭಿಸು

**ಮೆಯ್ವೊಣರ್** – ಆವೇಶದಿಂದ ಕಾದು (ವಿಧುವ ಪಗೆಯಪ್ಪ ರಾಹುವಿನೊಳ್ ಪಡುಪಿನಿಂ ತೊಡರ್ದು ಮೆಯ್ವೊಣರ್ದಪ್ಪುದು: **ಚಂದ್ರಪ್ರಪು,** ೮. ४३ ವ)

**ಮೆಯ್ವೊರೆ** – ಸೇರಿಕೊ (ಅಂಭಃಕ್ರೀಡೆಯಿಂ ಮೆಯ್ವೊರೆವ ಮನದ ತೀನೋಡೆ ನೀಡುಂ ಮನಂ ಮೆಚ್ಚುವಿನಂ ಪೊಕ್ಕಾಡಿ ಕಾಡಾನೆಗಳಿರೆ: **ಆಚವರ್ಧ,** ೧೦ ೧३)

**ಮೆಯ್ವೊಳೆಪು** – ದೇಹಕಾಂತಿ (ಸುಲಿಪಲ್ಲ ಮಿಂಚಿನಿಂ ಪೊಳೆವಲರ್ಗಣ್ಣ ನುಣ್ಗದಿರ್ಗಳಿಂ ನೀಲಳ್ದ ಡಾಳದಿಂ ಬಳೆದೆಸೆದಿರ್ದ ಸೆಳ್ಳುಗುರ ಮೆಯ್ವೊಳಪಿಂಮಿಗೆ ಪೆರ್ಮೆವೆತ್ತು ಕಣ್ಗೊಳಿಸಿದಳಾಕೆ: **ಕಬ್ಬಿಗಕಾ,** ೬४)

**ಮೆಯ್ವೋಗ** – ಶರೀರಸುಖ (ಮೆಯ್ವೆಸದಿಂ ಕೆಯ್ವೆಸದಿಂ ಮೆಯ್ವೆಸದಿಂ .. .. ವನಿತೆಗೆ ಪಡೆದಾ ಮೆಯ್ವೋಗಕ್ಕೆಳಸಿ ಸೋಲ್ವನೆಟ್ಟುವೊಜಂಗಂ: **ಕಾವ್ಯಾವಲೋ,** ೬೭)

**ಮೆಲ್** – ತಿನ್ನು; ಮೃದುವಾದ (ವನಕರಿ ಮೆಲ್ಲದೆ ಲಲಿತವಲ್ಲಕೀಪಲ್ಲವಮಂ ಸ್ಮರವಶದಿಂದಿರ್ದುದು: **ಕವಿರಾಮಾ,** ३. ೮)

**ಮೆಲ್ಕಾಡು** – ಮೆಲುಕು ಹಾಕು (ಕಾಳಿಂದೀನದೀಕಚ್ಛದೊಳ್ ಆತ್ಮೇಚ್ಛೆಯಿಂ ನಲಿನಲಿದು ರುಚಿರಮರಕತಶ್ಯಾಮ ದೂರ್ವಾಂಕುರಗ್ರಾಸದೊಳಂ ಅತಿಸ್ವಚ್ಛಸ್ವಾದು ಸಲಿಲಪಾನದೊಳಂ .. .. ಮೆಲ್ಕಾಡಿ ಪಥಪರಿಶ್ರಮಮಂ ಆಱಿಸಿಕೊಂಡು: **ಪಂಚತಂತ್ರ,** ೭೭ ವ)

**ಮೆಲ್ಕಿಱೆ** – ಮೆಲ್ಕಾಡು (ನಡೆಗೊಳ್ವ ಘಾತದಿಂದಂ ಕದಡಾಗಿ ಮೆಲ್ಕಿಱಿವ ಮೆಲ್ನೊರೆಯಿಂ ನೊರೆಯೇಱೆ: **ಲೀಲಾವತಿ,** ೫. ೮೪)

**ಮೆಲ್ಕೊತ್ತು** – ಮೆಲ್ಕಾಡು (ಪೊಸ ಕಾರೊಳ್ ತಾಱಿಲೊಳ್ ಕಣ್ಣರೆ ಮುಗಿದಿರೆ ಸೃಕ್ವಂಗಳಿಂ ಸೂಸೆ ಫೇನಪ್ರಸರಂ ಮೆಲ್ಕೊತ್ತುತ್ತುಂ ನಿಂದುದು ವನಮಹಿಷೀವೃಂದಂ ಆನಂದದಿಂದಂ: **ಪಂಪರಾ,** ೭. ೧೫೭)

**ಮೆಲ್ಪು** – ಮೃದುತೆ (ಮೆಲ್ಪಿಂಗೆ ಮೆಚ್ಚಿತ್ತು ತನ್ನ ಸಮಸ್ತಂ ಪರಿವಾರಮೆಂಬ ಗುಣಸಂಘಾತಂಗಳಂ ತಾಳ್ದಿ: **ಆದಿಪು,** ೧. ೭೮); ಇಂಪು (ಮೆಲ್ಪಿಂಗೆ ಮೆಚ್ಚಿತ್ತು ತನ್ನ ಸಮಸ್ತಂ ಪರಿವಾರಂ ಎಂಬ ಗುಣಸಂಘಾತಂಗಳಂ ತಾಳ್ದಿ: **ಆದಿಪು,** ೧. ೭೮)

**ಮೆಲ್ಲಡಿ** – ಕೋಮಲ ಪಾದ (ಕಡಕುಂ ಪೆಟ್ಟೆಯುಂ ಒತ್ತೆ ಮೆಲ್ಲಡಿಗಳಂ ಬಳ್ಕುತ್ತುಂ ಅಳ್ಕುತ್ತುಂ ಓರಡಿಗೆ ಒರ್ಮೊರ್ಮೆ ಕುಳುತ್ತುಂ ಏಱುತಿರೆ: **ಪಂಪಭಾ,** ೩. ೯)

**ಮೆಲ್ಲಿದಳ್** – ಕೋಮಲ ಹೆಂಗಸು (ರಿಸಿಯರ್ ತಿಳಿಯೆ ಧರ್ಮಮಂ ಪೇೞ್ದೊಡೆ ಎರ್ದೆಯೊಳ್ ಮೆಲ್ಲಿದಳಾಗಿ ತನ್ನ ಭವಾಂತರಂಗಳಂ ಧರ್ಮಮುಮಂ ಕೇಟ್ಟಱಿದು: **ವಡ್ಡಾರಾ,** ಪು ೧೧, ಸಾ ೨೮)

**ಮೆಲ್ಲುಲಿ** – ಇನಿದನಿ (ಸೊಡರ್ಗುಡಿ ಒಯ್ಯನಾಗೆ ಪೊಸಮಲ್ಲಿಗೆ ಕಂಪುನಾಱೆ ತಣ್ಪಿಡಿದ ಎಲರ್ ಊದೆ ಗಾವರದ ಮೆಲ್ಲುಲಿ ತುಂಬಿಯ ಗಾವರಂಂಗಳ ಗೆಡೆಗೊಳೆ: **ಪಂಪಭಾ,** ४. ೧೧೦)

**ಮೆಳೆ** – ಪೊದರು (ವಿಸಟಂಬರಿದುವು ಹೊಳೆ ನಾಂದುವು ಶಿಳೆ ಧರಣಿಗೆ ಮೆಳೆ ಪಿಡಿದ ತಳೆಗಾದುವು ಮಳೆಯೊಳ್: **ಗಿರಿಜಾಕ,** ೯. ೫೬)

**ಮೆಳ್ಕು** – ಬೆದರು, ಗಾಬರಿಗೊಳ್ಳು (ಅತ್ಯಂತ ಪ್ರಣಯಸಂಬಂಧ ಸಂಬಂಧಿ ಬಾಂಧವಜನಮುಂ ಪ್ರಿಯಾನುಜಾತ್ಮಜಪ್ರಕರಮುಂ ಅಳ್ಕಿ ಮೆಳ್ಕಿದಂತಾಗೆ: **ವರ್ಧಮಾಪು,** ४. ೯೦ ವ)

**ಮೆಳ್ಪಡು** – ಮೋಸಹೋಗು, ಭ್ರಾಂತಿಗೊಳ್ಳು (ಅದಱಿಂದಂ ನೃಪನೀತಿಶಾಸ್ತ್ರನಿಪುಣಂ ತಾನಾರುಮಂ ನಂಬದಿರ್ಪುದು ಮತ್ತಂ ಮಿಗೆ ನಂಬಿ ಮೈಮಱೆದು ಮೆಳ್ಪಟ್ಟುಂ ಭಯಂಬಿಟ್ಟು .. .. ವಂಚಿಸಲ್ ಬಲ್ಲನಪ್ಪುದು: **ಪಂಚತಂತ್ರ,** ४೧೧); ಬೆರಗಾಗು (ವೀರಾಂಗನೆ ಕಡ್ಡೆ ತೋಳ್ಪಿಸುಗೆಯೊಳ್ ಮೆಳ್ಪಟ್ಟು ನಿಲ್ವನ್ನೆಗೇ: **ಪಂಪರಾ,** ೧೨. ೬೦)

**ಮೆಱೆ** – ಒಪ್ಪು (ತಮ್ಮೆಯ್ವರುಮೊಡನೆ ಮೆಱೆದು ಪರಮಾನುರಾಗದಿಂ ಬಂದು ಪೊಕ್ಕರಂದು ಅರಮನೆಯಂ: ಪಂಪಭಾ, ೫. ೨೩); ಪ್ರಖ್ಯಾತಿಗೊಳ್ಳು (ತಾನಿಱಿವಂ ಪೆಱರ್ಗಿಱಿವಂ ತನಗಿಱಿವಂ ಮೇಣ್ ಮೆಱೆವನೀವನಿಱಿವ ಬೆಡಂಗಂ: **ಗದಾಯು,** ೧. ೨೯); ಪ್ರಕಟಿಸು (ಅರಸಂ ತನ್ನ ಬಿನ್ನಣಮಂ ನೆರೆದ ನೆರವಿಗೆ ಮೆಱೆಯಲ್ವೇಡಿ ಗೆಂಟಱಿಂ ಚಕ್ರದಿಂ ನಾಲ್ಕುಕಾಲುಮನೊರ್ಮೊದಲೆ ಪಱಿಯಿಟ್ಟೊಡೆ: **ವಡ್ಡಾರಾ,** ಪು. ೧೨೦, ಸಾ. ೧೮); ಬೀಗು (ಪೆಱರಂ ನುಡಿವುದೆ ತನಗೊಂದಱಿತಮೆನಲ್ ತನ್ನ ಮೊಗದೊಳೊಂದಕ್ಕರಮಂ ಪೊಱಮಡಿಸಲ್ ಅಱಿತಮಂ ಅಱಿಕೆಯೊಳ್ ಮೆಱೆವ ಸಾಸಿಗಂಗೆ ಇದಿರುಂಟೆ: **ಮಲ್ಲಿನಾಪು,** ೧. ೩೩); ಎದ್ದು ತೋರು (ಕುಱಿತಂತೆ ಪೇಟ್ದಿ ಪದದೊಳ್ ಮೆಱೆಯದೊಡೆಲ್ಲಂ ವಿವಕ್ಷಿತಾರ್ಥಮಶೇಷಂ: **ಕವಿರಾಮಾ,** ೧. ೧೦೧)

**ಮೇಱಿಸು** – ಮೆಣಸು (ಮುತ್ತುಂ ಮೇಱಿಸುಂ ಕೋದಂತುಟೆ ನಿನ್ನ ತಪದ ಪಾಂಗೆಂತು ಗಡಾ: **ಪಂಪಭಾ,** ೭. ೯೨)

**ಮೆಟ್ಕು** – ಲೇಪಿಸು, ಬಳಿ (ಮಲಮಂ ಧರಿಯಿಸಿ ನಾಣಂ ತೊಲಗಿಸಿ ನಿರ್ಗ್ರಂಥಮಿರ್ದು ಸೊಂಬಿಂ ಪಲ್ಲಂ ಸುಲಿಯದೆ ಮೀಯದೆ ಮೆಟ್ಕದೆ ಕುಲದಿಂ ಕೆಟ್ಟವರನಣ್ಣ ನೀಂ ಮನ್ನಿಪುದೇ: **ಧರ್ಮಾಮೃ,** ೧. ೯೫)

**ಮೆಟ್ಟಿಡಿತು** – ಮೋಸ (ಭೀಮಸೇನಂ ಧರ್ಮಪುತ್ರಂಗೆಂದಂ ಉಪ್ಪಿಕ್ಕಿದೊಡೆ ತುಪ್ಪದ ಮೆಟ್ಟಿಡಿತೆಂಬಂತೆ ನಮ್ಮ ಕೆಮ್ಮನಿರ್ಪಿರಿದೇ ಕಾರಣಂ: **ಪಂಪಭಾ,** ೭. ೧೬ ವ)

**ಮೆಟ್ಟಿಡಿಸು** – ವಂಚಿಸು, ಮರುಳುಗೊಳಿಸು (ಒಡಮೆಯಂ ಈಯದೆ ಇತ್ತೆಂ ಎನಿಸಲ್ ಕಿಱಿದು ಪಿರಿದಾಗೆ ಕೊಟ್ಟು ಮೆಟ್ಟಿಡಿಸಲ್ ಒಡಂಬಡಂ ಬಿಸುಟು ಒಡಂಬಡಿಸಲ್ ಬಗೆದಪ್ಪುದು: **ಶಾಂತಿಪು,** ೮. ೮೦)

**ಮೆಟ್ಟಿಡು** – ಮೋಸಹೋಗು (ನೀನುಂ ಮೆಟ್ಟಿಟ್ಟು ವಿದುರನೆಂಬೀ ತೊಟ್ಟುಟ್ಟಿಯ ಮನೆಯ ಕೂೞಿ ನುಡಿಯಿಸೆ ನುಡಿದೈ: **ಪಂಪಭಾ,** ೯. ೫೮); ಅಪೇಕ್ಷೆ ಪಡು (ಮೆಟ್ಟಿಡದುದುಂ ಎಂತುಂ ಇಲ್ಲ ರಿಷಿಯರ ಮನದೊಳ್: **ಸಮಯಪ,** ೭. ೧೭); ಭ್ರಮೆ (ಪುತ್ರಕಳತ್ರಮೋಹದೆಳ್ ಇದೇಕಟ್ಟಿರ್ದಪ್ಪೈ ನಿನ್ನ ಮೆಟ್ಟಿಡು ಇದೇಕಾರಣಂ ಅಂತಕಂ ಕಡುಪಿನಿಂ ಕಂಠಗ್ರಹಂಗೆಯ್ವುದಿಂ ತಡೆಯಂ: **ಆದಿಪು,** ೧. ೭೯)

**ಮೆಟ್ಟಿಡೆ** – ಮರುಳುತನ, ಹುಚ್ಚು (ಮೆಟ್ಟಿಡೆಯೆಂದು ಮರುಳುತನಂ: **ಶಬ್ದಮದ,** ಪ್ರಸಾ ೨೦೭)

**ಮೇಕು** – ಲೇಪಿಸು, ಬಳಿ (ತಲೆವಱಿದುಟ್ಟುದಂ ಬಿಸುಟು ಮೀಯದೆ ಮೇಕದೆ ದಂತಪಂಕ್ತಿಯಂ ಸುಲಿಯದೆ ಸಂಯಮೋಪಕರಣಂಗಳನಿಂಬೆನೆ ತಾಳ್ದಿ ದೇಹದೊಳ್: **ಸುಕುಮಾಚ,** ೩. ೨೯)

**ಮೇಕುದೋಱು** – ಹೊರಗೆ ಸವಿಮಾತನ್ನಾಡುತ್ತ ವಂಚಿಸುವುದು (ಮೇಕುದೋಱಿ ಓರೊರ್ವರ ಗುಣಕ್ಕೆ ಮಚ್ಚರಿಸಿ ತೋಱುತ್ತಿರ್ಪರ್ ಈ ಕಾಲದ ಅರಸುಗಳ್: **ಪಂಚತಂತ್ರ,** ೧೦४ ವ)

**ಮೇಖಲೆ** – ಡಾಬು (ವಿಸ್ತೃತಾವನಿಗೆ ನೀಲಮೇಖಲೆಯಂತೊಪ್ಪುವ ಉದಾತ್ತ ಲೋಲಕಲ್ಲೋಲ ವಿವಿಧ ಸಲಿಲಚರಪೂರ ಪಾರಾವಾರಂ: **ಗಿರಿಜಾಕ,** ೧. ४೫)

**ಮೇಖಳಾಭಿತ್ತಿ** – ಪರ್ವತಾಗ್ರದ ಗೋಡೆ [ಆ ವೃಷಭಾದ್ರಿಯ ಮೇಖಳಾಭಿತ್ತಿಯೊಳ್ ಆತ್ಮೀಯವಿಶ್ವವಿಶ್ವಂಭರಾ ವಿಜಯಪ್ರಶಸ್ತಿಯನಟ್ಟಿಯೊಳ್ ಬರೆಯಿಸುವೆನೆಂದು ಪೋಗಿ ನೋಡುವನ್ನೆಗಂ: **ಆದಿಪು,** ೧೩. ೭೦ ವ)

**ಮೇಖಳೆ** – ಡಾಬು (ಸರಿಗೆಗಿವು ಲಂಬಣಕ್ಕಿವು ಬರಗಲೆಗಿವು ಮುಗುಳ್ಗಳೆಮ್ಮ ಮೇಖಳೆಗಿವು ನೂಪುರರಚನೆಗಿಂತಿವೆಂದು: **ಆದಿಪು,** ೭. ೬೯); ಬೆಟ್ಟದ ತಪ್ಪಲು (ಕಳಧೌತೋಜ್ಜ್ವಳ ಕುಂಭನಿರ್ಗತಪಯಃಪೂರಂ ಪೊದಲ್ದೆಯ್ದೆ ಮೇಖಳೆಗಳ್ ನಾಲ್ಕುಮನೀ ಈ ನಗಂ ಸುರನಗಂ ಮುನ್ನೀಗಳೆಂತೋ ಹಿಮಾಳಯಮಾಯ್ತು: **ಆದಿಪು,** ೭. ೧೦೦)

**ಮೇಗು** – ಉತ್ತಮ, ಮಿಗಿಲು (ಆ ನರಸಿಂಹನಿಂ ಅತ್ತ ನಾಲ್ವೆರಲ್ ಮೇಗು ಪೊದಲ್ದ ಚಾಗದೊಳಂ ಒಂದಿದ ಬೀರದೊಳಂ ಗುಣಾರ್ಣವಂ: **ಪಂಪಭಾ,** ೧. ೫೦)

**ಮೇಗುಗಾಣ್** – ಮುಂದಾಲೋಚನೆ (ಆ ದಯೆಗೆ ನಯಂಬಡೆದೆನೆಂದು ತಲೆಕೆಳಗಾಗಿ ಮೇಗುಗಾಣದೆ ಮತ್ತಂ ಪೆಱರ ಪಲವುಂ ಜೀವಧನಂಗಳಂ ಅರಸರ ಕಾಪಿನ

ಪೊಲನಂ ಪೊಕ್ಕುವೆಂದು ಉಂಡಿಗೆಯೊತ್ತಿಕೊಳುತ್ತ: **ಸುಕುಮಾಚ,** ೭. ೩೫ ವ)

**ಮೇಗುದೋಱು** – ಪೈಪೋಟಿ ಮಾಡು (ಮುದ್ದುಗೆಯ್ತದಿಂ ಮುನಿವುದು ಮೇಗುದೋಜೆ ಧನಮಂ ನೆಱೆ ಕೊಳ್ವುದು ಕೆಯ್ತುಮೆಂದು ನೆಟ್ಟನೆ ಮುದುಗಲ್ಲೆಗೂಂಟಣಿ ಮಗಳ್ಗುಪದೇಶಮನಿಂತು ಮಾಡಿದಳ್: **ಶಾಂತೀಶ್ವಪು,** ೧೧. ೭೪); ಮೋಸಮಾಡು (ಡಾಳನಂ ನೆಗಪು ಟಕ್ಕಿಪನಂ ತುಟಿ ಮೇಗುದೋರ್ಪನಂ ಮಾಲಬೆಗಿಕ್ಕು ಪೂಟ್ ಪುಸಿವನಂ: **ಲೀಲಾವತಿ,** ೨. ೧೦೭)

**ಮೇಗುವೇಟು** – ಮೋಸದ ನುಡಿಯನ್ನಾಡು (ಎನಗಂ ಮೇಗುವೇಟ್ಟಿಪ್ಪೆಯಿಲ್ಲಾರ್ಪೊಡೆ ನಿನ್ನಂ ಕಾವ ಗಂಧರ್ವರ ಬಿಡಿಸುಗೆ ಪೋಗು: **ಪಂಪಭಾ,** ೮. ೭೦)

**ಮೇಗುಸಿರ್ಗೊಳ್** – ಏದುಸಿರು ಬಿಡು (ಬೇಗಮುಸಿರ್ ಮುಟ್ಟಿಗೆವರೆ ಮೇಗುಸಿರ್ಗೊಂಡು ಒರ್ಮೆಗೊರ್ಮೆಗಗಿ ಮೊಟ್ಟಿದೆ ಬಂದಾಗಳೆಱಗಿರ್ದನಂದು ನಭೋಗತಿಯೊರ್ವಂ ನೃಪೇಂದ್ರಪದಸರಸಿಯೊಳ್: **ಶಾಂತಿಪು,** ೯. ೮೩)

**ಮೇಗುಸಿರ್ವಿಡು** – ಮೇಗುಸಿರ್ಗೊಳ್ (ಪಂದೆಯಂ ಪಾವಡರ್ದಂತೆ ಮೇಗುಸಿರ್ವಿಟ್ಟು ಹಮ್ಮದಂಬೋಗಿ ಮುಮ್ಮನೆ ಬೆಮರ್ತು ತನ್ನಿಂ ತಾಂ ಚೇತರಿಸಿ ಕಾತರತೆಯಂ ಮಾಣ್ದು ದವನಕಂಗೆ ಪಿಂಗಳಕನಿಂತೆಂದಂ: **ಪಂಚತಂತ್ರ,** ೯೮ ವ)

**ಮೇಗೆ** – ಮೇಲುಭಾಗದಲ್ಲಿ (ಯುಗಂಗಳಂ ನೆಗಪಿ ಕೇಡೆರಡುಂ ಮೇಗೆ ಪಾಜೆ ಪೋಪ ಭೇರುಂಡ: **ಲೀಲಾವತಿ,** ೮. ೨೭); ಆನಂತರ

**ಮೇಘಗರ್ಜನೆ** – ಗುಡುಗು (ಮೊಟಗುವ ಮೇಘಗರ್ಜನೆಗೆ ಪೊಯ್ವ ಸಿಡಿಲ್ಗೆ .. .. ಜೈನಯೋಗಿಯವೊಲೇಂ ನಿಲಲಾರ್ಪರೆ: **ಸಮಯಪ,** ೭. ೪)

**ಮೇಘಡಂಬರ** – ಛತ್ರಿ (ತಳ್ತಿರೆ ಮೇಘಡಂಬರಂ ಲಲನೆಯರಿಕ್ಕೆ ಚಾಮರಮಂ ಇರ್ಕೆಲದಾನೆಯ ಪುಷ್ಪಕಂಗಳೊಳ್ ನೆಲಸಿ .. .. ದಶರಥಂ: **ಪಂಪರಾ,** ೫. ೧೦೮)

**ಮೇಘನಾದ** – ಮೊಳಗೀ ವೃಕ್ಷ (ಮೇಘನಾದದಿಂದಿರೆಯ ಪಟೀರದೇಳ್ಗೆಯ ಕಪೋತದ ಬೊಟ್ಟಿನ .. .. ಭೂರುಹಮೊಪ್ಪುಗುಂ ಆ ವನಾಂತದೊಳ್: **ರಾಜಶೇವಿ,** ೫. ೫೭)

**ಮೇಘಶಿಖಾವಹ** – ಸಿಡಿಲು (ಫಾಲಶಿಖಿ ಮೇಘಶಿಖಾವಹನಾಗೆ ನರ್ತಿಪಂ ಗಜರಿಪುವೊಲ್ ಘನಾಗಮಮದೇಂ ಬಗೆಗೊಂಡುದೋ ನೋಟಕರ್ಕಳಾ: **ರಾಜಶೇವಿ,** ೮. ೧೦೭)

**ಮೇಘಾಧ್ವ** – ಆಕಾಶ (ಮೇಘಾಧ್ವದೆ ಪರಬಲಶಬಲೌಘದ ಭಟಕೋಟಿ ಕಱೆವ ಶಸ್ತ್ರಾಸ್ತ್ರಚಯಂ ಪವನವ್ಯಾಘಾತದೆ ಮಸುಳಲಸುರಹರನಿಸುತಿರ್ದಂ: **ಜಗನ್ನಾವಿ,** ೧೮. ೮೯)

**ಮೇಚಕ** – ಕಪ್ಪು, ಶ್ಯಾಮಲ (ಪಂಚರತ್ನಕೂಟಂಗಳ ತಳ್ತ ಮೇಚಕಮರೀಚಿಲತಾಳಿಯ ಪರ್ವಿನಿಂ ನಭೋರಂಗಮದೊಪ್ಪಿ ತೋಜೆದುದು: **ಲೀಲಾವತಿ,** ೮. ೬೭); ಮರಕತ (ವಿಚಾರಿಸಲಿಂತಿದು ನಡೆಗಲ್ತು ಸಂಚರಿಪಿ ಮೇಚಕಶೈಲಮೋ .. .. ಪೇಟೆನೆ ತೋರಿದುದಾ ವರಾಹಕಂ: **ಶಬರಶಂ,** ೪. ೩)

**ಮೇಚಕತೆ** – ಕಪ್ಪು ಬಣ್ಣ (ತದ್ವನಿತೆಯ ಹೃದಯದ ಕಾಳಿಕೆಯೆನೆ ಸೊಗಯಿಸಿದತ್ತು ಮೇಚಕತೆ ಚೂಚುಕದೊಳ್: **ಚಂದ್ರಪ್ರಪು,** ೩. ೮೬)

**ಮೇಚಕರುಚಿ** – ಶ್ಯಾಮಲ ವರ್ಣ (ತೊಳಗುವ ನಭದೊಳ್ ಪಿತ್ತಾವಿಳದೃಷ್ಟಿಗೆ ಅವಿದ್ಯಮಾನ ಮೇಚಕರುಚಿಯೊಂದೆಳಸಿ ಮಿಗೆ ತೋರ್ಪ ತೆಱದಿಂ: **ಪುಷ್ಪದಂಪು,** ೧. ೪೮)

**ಮೇಚಕಿತ** – ಆವರಿತವಾದ (ಉತ್ತುಂಗಮಣಿಭೂಷಣ ಮರೀಚಿಮೇಚಕಿತ ದೇವಾಂಗನಾನಿಕಾಯಸಮೇತಂ: **ಆದಿಪು,** ೨. ೬೯ ವ)

**ಮೇಡು** – ದಿಣ್ಣೆ (ಅಗ್ಗದ ನಿಡುಗೋಡು ಮೇಡುವಂ ಅಮರುತ್ತುಂ ಇಱುಂಕಿದ ಕೆಚ್ಚಲ್ ಎತ್ತಮೆತ್ತಿದ ಕುಡಿವಾಲಮಂದೆಸೆಯೆ ಕರ್ಬಸುಗಳ್ ಪರಿಗೊಂಡುವಾಜಿಯೊಳ್: **ಪಂಪಭಾ,** ೮. ೧೦೪)

**ಮೇತ** – ಮೇವು (ಹದನಂ ಹಸ್ತಾಗ್ರದಿಂ ಘ್ರಾಣಿಸಿ ವೆದೆವಿಡಿಯಂ ಮೆಚ್ಚಿ ಮೇತಕ್ಕೆ ಮೆಯ್ದಾಱದೆ .. .. ಇಭೇಂದ್ರಂ: **ಲೀಲಾವತಿ,** ೮. ೫); ಮೇಯುವಿಕೆ (ಸುಟೆಯದು ಗಾಳಿ ಮೃಗಂ ಕೆಯ್ವಟೆಗಳ ಮೇತದೊಳೆ ತಣಿದಪುವು ಪಂದಿಗಳುಂ ಪಟಿನವಿರ್ ಇಕ್ಕಿದುವು ಆದಂ ಪಟು ಪರಿದಾಡಲ್ ಕರಂ ಬೆಡಂಗವನಿಪತೀ: **ಪಂಪಭಾ,** ೫. ೩೮)

**ಮೇದ** – ಬಿದಿರ ಕೆಲಸದವನು (ಮೇದರೊಳ್ಳದೆ ವಂಶಚ್ಛೇಂ ಗಾರುಡರೊಳಲ್ಲ: **ಸೂಕ್ತಿಸುಧಾ,** ೪. ೧೯)

**ಮೇದಿನಿ** – ಭೂಮಿ (ಜೂದಾಡಿ ಸೋಲ್ತು ನನ್ನಿಗೆ ಮೇದಿನಿಯಂ ಕೊಟ್ಟು ಪಾಂಡುನಂದನರ್ ಈಗಳ್ ಪೋದೊಡಮೇಂ ತಿಱುಕಾಗದೆ ಪೋದಪುದೇ ನಮ್ಮ ನೃಪತಿಗವು ತವುದಲೆಯೊಳ್: **ಪಂಪಭಾ,** ೭. ೧೮)

**ಮೇದಿಸು** – ಲೇಪಿಸು (ಜಾದಿಯರಲ್ಗೆ ಜವಾದಿಯನೊಲವಿಂ ಮೇದಿಪರಲ್ಲದೆ ಕಾಟ್ ತುಱುಚೆಗದಂ ಮೇದಿಪರೇ: **ಅನುಭವ,** ೩೯)

**ಮೇದುರ** – ತೋರವಾದ (ನೆಲಸಿರೆ ಮೇದುರೋದುರದೊಳಂದು ಜಿನಾರ್ಭಕಂ ಅಂತರಂಗದೊಳ್ ನೆಲಸಿದುದೆಯ್ದೆ ಸಂತಸದ ಸಂತತಿ: **ಚಂದ್ರಪ್ರಪು,** ೧೨. ೨೨); ಅತಿಶಯವಾದ (ಮೇದುರ ನೀಲಾಶ್ಮಮಂ ಅಭೋದಭ್ರಾಂತಿಯೊಳೆ ನೋಡಿ ಕುಣಿದುವು ಶಿಖಿಗಳ್: **ಜಗನ್ನಾವಿ,** ೧೬. ೩೩)

**ಮೇನಾತ್ಮಜೆ** – ಪಾರ್ವತಿ (ಉಮೆ ಪಾರ್ವತಿ .. .. ಮೇನಾತ್ಮಜೆ ಗೌರಿ ಮೃಡಾಣಿ: **ಅಭಿಧಾವ,** ೧. ೧. ೧೬)

**ಮೇಪು** – ಮೇವು (ಕಟೆವುಂ ಉಟೆವುಂ ಕಾಪುಂ ಮೇಪುಂ ತೋಡುಂ ಬೀಡುಂ ದೆಸೆಯುಂ ಕೊಸೆಯುಂ: **ಪಂಪಭಾ,** ೫. ೪೩ ವ)

**ಮೇಪುಗಾಡು** – ಮೇಯುವ ಸ್ಥಳ (ಹುಲ್ಲೆಯ ಹಿಂಡು ಮಲ್ಲಣಿಸಿ ತಲ್ಲಣಗೊಂಡುವು ಬೊಬ್ಬಯುಬ್ಬರಕ್ಕೊಲ್ಲದೆ ಮೇಪುಗಾಡೊಳ್ ಇರದೋಡಿತು ಪೆರ್ಮರೆ: **ಸೂಕ್ತಿಸುಧಾ,** ೩. ೧೧೭)

**ಮೇಪುಗೊಳ್** – ಮೇಯು (ನಿಶ್ಚೇಷ್ಟೆಯಿಂ ಮೇಪುಗೊಳ್ಳದೆ ಕಣ್ಮುಚ್ಚಿ ಹಿಮಾನಿಯಿಂ ನಡುಗುತಿರ್ಪಾ ಪುಲ್ಲೆಯಂ ಕಂಡಿಸಲ್ ಪದನೆಂದೇಟಲೊಡರ್ಚಿಯುಂ .. .. ಪಟ್ಟಿರ್ದುದು ಕೂಡೆ ಬೇಡವಡೆ: **ಜಗನ್ನಾವಿ,** ೧೪. ೧೪)

**ಮೇರು** – ಚಿನ್ನದ ಪರ್ವತ (ಮೇರುವ ಪೊಂ ಕಲ್ಪಾಂಘ್ರಿಪದಾರವೆ ರಸದೊಱವು ಪರುಸವೇದಿಯ ಕಣಿ ಭಂಡಾರದೊಳುಂಟೆನೆ ಕುಡುವ ಅನಿವಾರಿತದಾನಕ್ಕೆ ಪೋಲ್ವರಾರ್ ಬದ್ದೆಗನಂ: **ಪಂಪಭಾ,** ೧. ೨೮)

**ಮೇರೆ** – ಎಲ್ಲೆ (ಎಮ್ಮಾರ್ಣವ ಷಟ್ಖಂಡಕಿಂತಿದಜೆಂದಿತ್ತೆಯೆ ಮೇರೆ ನೋಡಿಂ ಎಮಗೀ ಶೈಲೇಂದ್ರಮೆಂದೆಂದು ತೋಜೆದಂ .. .. ಹೈಮಾದ್ರಿಯಂ: **ಆದಿಪು,** ೧೩. ೬೯)

**ಮೇರದಪ್ಪು** – ಎಲ್ಲೆ ಮೀರು (ಈ ಟಿಟ್ಟಿಭನ ತತ್ತಿಗಳಂ ವಾರಿಧಿ ಮೇರೆದಪ್ಪಿ ಕೊಂಡೊಯ್ದೊಡೆ ಪುಯ್ಯಲಿಡಲ್ಬಂದೆವೆಂಬುದುಂ: **ಪಂಚತಂತ್ರ,** ೨೨೯ ವ)

**ಮೇಲ್** – ಮೇಲ್ಭಾಗ (ಕಾಲ್ಗಳಂ ನೀಡಿ ಬರಿಯಂ ಬೆರಂಟಿ ಬಿಸಿಲ್ಗಾಯ್ದು ಪಸಿವೆತ್ತಿ ಮೇಲಂ ನೋಡಿ: **ಗಿರಿಜಾಕ,** ೧. ೧೨೮ ವ); ಶ್ರೇಷ್ಠ (ಸೊಗಯಿಪ ಭೋಗಾವತಿಗಂ ಮಿಗಿಲ್ ಅಮರಾವತಿಗಂ ಮಿಗಿಲ್ ಇದುವೆ ಮೇಲೆನಿಸುವುದೀ ಜಗದೊಳ್ .. .. ಉಜ್ಜೇನಿಪುರಂ: **ಸುಕುಮಾಚ,** ೯. ೬೬); ದೇಹದ ಹೊರಭಾಗ (ಪಂದೆಯ ಮೇಲಾವಡರ್ದಂತೆ ದೇಹಂ ಮರವಡೆ: **ಧರ್ಮಾಮೃ,** ೧. ೧೧೫)

**ಮೇಲುದು** – ಮೇಲುಹೊದಿಕೆ, ಸೆರಗು (ನೊಸಲಂ ತೊಂಗಲ್ಗುರುಳ್ ಮೇಲುದನೊಗೆವ ಕುಚಂ ಬೆನ್ನನಾ ನೀಳಕೇಶಪ್ರಸರಂ: **ಆದಿಪು,** ೧೧. ೧೬)

**ಮೇಲೂರ್** – ಮೇಲಿನ ಊರು, ಸ್ವರ್ಗ (ಗರಗರಿಕೆವಡೆದ ಎಳವೆಂಡಿರ ತಂಡದಿಂ ನೆಗೞ್ತೆವಡೆದು ಮೇಲೂರ್ಗಳ ಮುಂಡಾಡುವಂತೆ ಆಗಸಕೆ ನೆಗೆದ ನೆಲವಾಡಂಗಳ: **ಕಬ್ಬಿಗಕಾ,** ೧೭ ವ)

**ಮೇಲೆತ್ತಿ ಬರ್** – ದಾಳಿಯಿಡು (ಇಂತು ಸಪ್ತಾಂಗದೊಳೇಕಾಂಗಮುೞಿಯೆ ಕಚದ್ರುಮನ ರಾಜ್ಯಂ ಕಳಕುಳಮಾಗಿರ್ದುದನಾತನ ದಾಯಾದಂ ಸಿಂಹಬಳನಱಿದು ಮೇಲೆತ್ತಿ ಬರೆ: **ಪಂಚತಂತ್ರ,** ೮೧ ವ)

**ಮೇಲ್ಕೊಳ್** – ಧರಿಸು (ಮುಡಿವ ನೆಪದಿಂದೆ ತನ್ನಯ ಮುಡಿಯಂ ಮೇಲ್ಕೊಳ್ವ ನೆವದೆ ಮೊಲೆಯಂ ಪೆಱರೊಳ್ ನುಡಿವ ನೆವದಿಂದೆ ಪಲ್ಗಳ ಬೆಡಂಗಂ ಒರ್ವಳ್ ವಿಲಾಸದಿಂದೆ ಮೆಱೆದಳ್: **ಸುಕುಮಾಚ,** ೧೧. ೮)

**ಮೇಲ್ನೆಲೆ** – ಮಹಡಿ (ಮೆಲ್ಲನೆ ನಡೆತಂದು ಪೊನ್ನ ಕರುಮಾಡದ ಮೇಲ್ನೆಲೆಯಲ್ಲಿ ಗಾಡಿಯಿಂಬೆನೆ ನೆರೆದೋಲಂಗಂ ನಲವು ಕೈಮಿಗೆ ತನ್ನನೆ ನೋಡುತಿರ್ಪಿನಂ: **ಕಬ್ಬಿಗಕಾ,** ೬೬)

**ಮೇಲ್ಪೊಟ್ಟು** – ಒಳ್ಳೆಯ ಮುಹೂರ್ತ (ಓಹೋ ಹರಿ ಗೆಲ್ದಂ ಗಜಮನೆಂದು ಇಂದ್ರಾದಿಗಳ್ ಕೀರ್ತಿಸುತ್ತಿರೆ ಮೇಲ್ಪೊಟ್ಟೆನೊಳಂದು ತೋಱಿ ಮೆಱೆದಂ ಕೃಷ್ಣಂ ಬಲಾಟೋಪಮಂ: **ಜಗನ್ನಾವಿ,** ೬. ೫೪)

**ಮೇಲ್ಮಲೆಗೆಯ್** – ತೋರಿಕೆ ಮಾಡು (ಮೇಲ್ಮಲೆಗೆಯ್ಯದೆ ಬಲ್ಮೊಗಂ ಮಾಡಿ ತನ್ನಳಿಯಂದಿರ ಮೊಗಮಂ ನೋಡಿ: **ಸುಕುಮಾಚ,** ೨. ೫೨ ವ)

**ಮೇಲ್ವಾಯ್** – ಮುನ್ನುಗ್ಗು (ಲಜ್ಜೆಗೆಟ್ಟ ಪೆಣ್ಗಳಂತೆ ಮೇಲ್ವಾಯ್ವ ಪೆರ್ಬುಲಿವಿಂಡಿಂ: **ಧರ್ಮಾಮೃ,** ೩. ೨೭ ವ); ಮೇಲೆ ಬೀಳು (ಅಡವಿಯೊಳ್ ಕಳ್ಳರ್ ಬಟ್ಟೆಗಟ್ಟೆ ಮೇಲ್ವಾಯ್ದಿಱಿದೊಡೆ: **ವಡ್ಡಾರಾ,** ಪು. ೭೬, ಸಾ. ೧೩)

**ಮೇವಳಿ** – ಮೇಯುವ ಸ್ಥಳ (ನೆಲನಂ ನಿಱುಗೆಯಂ ನಡೆವೊಂದು ಪದಮುಮಂ ಸೋವಳಿ ಮೇವಳಿ ಬಿಸುವಳಿಯಂ .. .. ನಿಱಿಸುವೆಂ ಪಂದಿಯಂ: **ಪಂಪಭಾ,** ೫. ೪೬)

**ಮೇಷ** – ಹೋತ (ಕರಿ ಮಹಿಷ ಮೇಷ ಮಲ್ಲಸ್ವರೂಪದಿಂ ತಮಗೆ ತಾವೆ ಪೋೞ್ ಸುರರ್ಕಳ್ ಪರಮನ ಮನಕ್ಕೆ ಅವೊಂದುಂ ಬರಲಾಱವೆ ವೀತರಾಗನಪ್ಪುದಱಿಂದಂ: **ಅಜಿತಪು,** ೫. ೮೧)

**ಮೇಹನ** – ಆನೆಯ ಜನನಾಂಗದ ಅಂಗಭಾಗ (ಪೀನಾಯತಾಮ್ರಪಲ್ಲವ ಕೋಶ ಸಂಕೋಶ ಮೇಹನನುಂ: ಆದಿಪು, ೧೫. ೫೬ ವ)

**ಮೇಳ** – ಸಲುಗೆ (ಇನಿವಿರಿದೊಂದು ಮೇಳಮುಂ ಒಡಂಬಡುವಟ್ಟುಱುಂ ಎನ್ನ ನಿನ್ನ ಮುನ್ನಿನ ಭವದೊಂದು ಕೂರ್ಮೆಯೊಳೆ ಕೂಡಿದುದು: **ಆದಿಪು,** ೪. ೫೨); ಜೊತೆ (ಚಾಮರದಡಪದ ಡವಕೆಯ ಕನ್ನಡಿಯ ಪರಿಚಾರಿಕೆಯರುಂ ಒಡನಾಡಿ ಬಳೆದ ಮೇಳದ ಕೆಳದಿಯರುಂ: **ಆದಿಪು,** ೩. ೨೩ ವ); ಕೂಟ (ತವದ ಮೇಳಮ್ ಅಮರಿಯರೊಳ್ ಅಲಂಪು ಅಮರಿಯರೊಳ್ ನಗೆ ಸಬ್ಬವಂ ಅಮರಿಯರೊಳ್ ನಡೆವುದು ಅಮರನೇಂ ಸುಖಮಯನೋ: **ಶಾಂತಿಪು,** ೭. ೭೬)

**ಮೇಳಂಬ** – ದುಂಬಿ (ಮೇಳಂಬಮೆಂದು ತುಂಬಿ: **ಶಬ್ದಮದ,** ಪ್ರಸಾ ೨೦೮)

**ಮೇಳಗಾಳೆಗ** – ಆಟಕ್ಕಾಗಿ ಆಡುವ ಯುದ್ಧ (ಕಾದುವ ಮಾೞ್ಕೆಯಲ್ಲಮಿದು ಕೆಮ್ಮನೆ ನಣ್ಪಿನ ಮೇಳಗಾಳೆಗಂಗಾದುವ ಮಾೞ್ಕೆ: **ಪಂಪಭಾ,** ೧೩. ೪೩)

**ಮೇಳಗಾಱ** – ಜೊತೆಗಾರ (ಗುರುವರ ಗೊಟ್ಟಿಗಾಱರ ನೆಗೞ್ತೆಯ ಮಿಂಡರ ಮೇಳಗಾಱರ ಅಕ್ಕರಿಗರ .. .. ಪೆಂಪು ಸೊಂಪನೊಳಕೊಂಡು ಎಸೆದಿರ್ಪುವು ಸೂಳೆಗೇಱಿಗಳ್: **ಕಬ್ಬಿಗಕಾ,** ೩೬)

**ಮೇಳದಾಕೆ** – ಸಖಿ, ಪರಿಚಾರಿಕೆ (ಪೊಸದಳಿಂಬದ ಮೇಗೆ ಕಿಱಿದು ಬೇಗಂ ವಿಶ್ರಮಿಸಿ ಮೇಳದಾಕೆಗಳ್ವೆರಸು ಬಂದು ಕಾವಣಮಂ ಪುಗಲೊಡನೆ: **ಆದಿಪು,** ೧೧. ೭೩ ವ)

**ಮೇಳಾಪ** – ಹೊಂದಾಣಿಕೆ (ಆಗಳದಱ ಚಾಪಚ್ಛದಚ್ಛಯಾನುಕಾರಿಯಪ್ಪ ಮಸೃಣವರ್ಣಪ್ರಸರ ಮೇಳಾಪ ವೈಚಿತ್ರ್ಯಮಂ ಚಿತ್ರಕಕಳಾವಿಶಾರದಂ ಪರಿಭಾವಿಸುತ್ತುಮಿರ್ಪನ್ನೆಗಂ: **ಚಂದ್ರಪ್ರಪು,** ೪. ೫೦ ವ)

**ಮೇಳಾಪಕ** – ಸಮಾಲೋಚನೆ (ನಾಲ್ವರ್ ಮಂತ್ರಿಗಳ್ವೆರಸು ಮಂತ್ರ ಮೇಳಾಪಕದೊಳಿರ್ದು ತತ್ಕಾರ್ಯಾಳೋಚನ ತಾತ್ಪರ್ಯಾರ್ಯಾವಸಾನದೊಳ್: **ಸುಕುಮಾಚ,** ೨ ವ); ಜೊತೆ (ವಹ್ನಿ ಮೇಳಾಪಕವಾದವೋಲ್ ಪ್ರತಿಭಯಂ ಪ್ರತಿವಾಸರಂ ಆ ಶಬಾಲಯಂ: **ನೇಮಿನಾಪು,** ೫. ೨೪)

**ಮೇಳಿಸು** – ಸೇರು, ಗುಂಪಾಗು (ಮಾಣಿಕದ ಕೆಂಬೊಳಪಂ ಬಿಸಿಲೆಂದು ನಟ್ಟಿರುಳ್ ಮೇಳಿಸುಗುಂ .. .. ಕಲಹಂಸ ಪೋತಕಂ: **ಪಂಪರಾ,** ೧. ೧೨೭); ಉಂಟಾಗು (ಎರೆವ ಮರಲ್ವ ಲಲ್ಲಯಿಪ ಕಾಲ್ವಿಡಿವೆಂಬುದನಿಂಬುಕೆಯ್ವ ಅಳಂಕರಣವಿಳಾಸದಿಂ ಮೆಱೆವ ಮೇಳವಿಸುವಂದಿನ ರೂಪು ಶಾಸನಂ ಬರೆದುದು: **ಆದಿಪು,** ೩. ೪೩); ಜೊತೆಯಾಗು (ನೆನೆಯಸಿದಳಬಳೆ ಮಧುಲಕ್ಷ್ಮಿ ಮೇಸಿರ್ದಳಲತೆಯಂ: **ಆಚವರ್ಧ,** ೫. ೪೫), ಸಮೀಪಿಸು (ತನ್ನ ಮನದನ್ನಳಪ್ಪುದಱಿಂ ಮೇಳಿಸಿ ಮನದೆಗೊಂಡು: **ಲೀಲಾವತಿ,** ೭. ೮೬ ವ)

**ಮೇಳಿಸಿಕೊಳ್** – ಪುಸಲಾಯಿಸು (ಅರಸನ ಮೂದಲೆ ಮನದೊಳಗಿರೆ ಮೇಳಿಸಕೊಂಡು ಬಂದು ಪಾತಕಿ ಕೊಂದಳ್ ಬೆರಗಿಂ ಗಂಡನಂ: **ಯಶೋಧಚ,** ೩. ೩೩)

**ಮೇಳಿಯ** – ಕೂಟ (ಜಳಖಾತಿಕಾವಳಯಮನಳುಂಬಮಾಗೆ ತಿಂಬಿಸಿಯುಂ ಅತಿಸ್ಥೂಳತರ ಜಾಳಂಗಳಿಂ ಮೇಳಿಯಮನೋಳಿಗೊಳಿಸಿಯುಂ : **ಪುಷ್ಪದಂಪು,** ೭. ೬೯ ವ)

**ಮೈಂದವಾಟಿ** – ಒಂದು ಬಗೆಯ ಬಾಳೆ, ಮಹೇಂದ್ರ ಬಾಳೆ (ಗೊಲೆಯೊಳ್ಪಣ್ತುದು ಮೈಂದವಾಟಿ ಪಥಿಕರ್ಬರ್ಕೆಂದು

ಭೃಂಗಂಗಳಿಂದುಲಿವಂತಿರ್ದುದು ಪಣ್ತ ಬಕ್ಕೆ ತನಿವಣ್ಣಾಗಿರ್ದುದು: **ಆದಿಪು,** ೧೧. ೬೮)

**ಮೈಗುಂದು** – ಬಡವಾಗು, ಕೃಶವಾಗು (ಎರಡರ್ಥಕ್ಕೆ: ಇಟಿದನೆಂದು ಮೈಗುಂದಿದನುಂ ಕೆಟಿಗಣ್ಗೆ ವಂದನುಮಕ್ಕುಂ: **ಶಬ್ದಮದ,** ೩೩ ವೃತ್ತಿ ೧೩೩)

**ಮೈತ್ರಿ** – ಮಿತ್ರಸಂಬಂಧವಾದ (ಸ್ನೇಹಮಜರ್ಯಂ ಸಖ್ಯಂ ಸೌಹಾರ್ದಂ ಪ್ರೀತಿ ಮೈತ್ರಿ: **ಅಭಿಧಾವ,** ೨. ೨. ೪)

**ಮೈಥುನ** – ಸಂಭೋಗ (ನಿಧುವನ ರತ ಯಾಭ ಗ್ರಾಮ್ಯಧರ್ಮನಾಮಂ ವ್ಯವಾಯಮದು ಮೈಥುನಮುಂ: **ಅಭಿಧಾವ,** ೧. ೧೧. ೧೨)

**ಮೈಮಱಿಸು** – ಮೈಮರವೆ, ಪರವಶತೆ (ಮೈಮಱಪಂ ಪುಟ್ಟುವ ಸೊರ್ಕು ಸೂಟ್ಟವಡದ ಕೂಟಂ .. .. ಅಳುಂಬಂ ಕೂಟದೊಳ್ ನಲ್ಲರಾ: **ಚಂದ್ರಪ್ರಪು,** ೮. ೬೮)

**ಮೈಮೆ** – [ಮಹಿಮೆ] ಮಯ್ಮೆ (ಸತಿ ಯಶಸ್ವತಿ ವಿಶ್ವಮಹೀತಳಂ ಗುಣಂಗೊಳೆ ಪಡೆದಳ್ ತದಗ್ರಮಹಿಷೀಪದದೊಳ್ ಪಿರಿದೊಂದು ಮೈಮೆಯಂ: **ಆದಿಪು,** ೮. ೪೫)

**ಮೈಯಿಕ್ಕು** – ನಮಸ್ಕರಿಸು (ಮಕುಟಬದ್ಧಾಧೀಶರಾಗಳ್ ವಸುಂಧರೆಯಂ ಪರ್ವಿರೆ ಮೈಯನಿಕ್ಕೆಯುಂ ಉದಾತ್ತೋತ್ಸಾಹದಿಂ ರಾಜಮಂದಿರಮಂ ಪೊಕ್ಕನುದಾರಸಾರವಿಭವಂ ಸಂಸಾರಸಾರೋದಯಂ: **ಆದಿಪು,** ೧೨. ೧೨೯)

**ಮೈಲ** – ಮೈಲಾರ ಎಂಬ ದೇವತೆ (ಮನೆವೆರ್ಗಡೆ ಚಟ್ಟಪನಿಂದೆ ತಾನಾದ ಮೈಲನುಂ ಮಾಳಚಿಯುಂ ಜನಕಾಪ್ತರಾದರ್: **ಸಮಯಪ,** ೮. ೨೩೦)

**ಮೈಲಾರ** – ಒಬ್ಬ ದೇವತೆ (ಎಕ್ಕಲದೇವಿಗಂ ಆ ಮಾಲಕ್ಕನಿಗಂ ಬನದ ಬಳರಿಗಂ ಮೈಲಾರಂಗೆ ಅಳ್ಕದೆ ಜಾತ್ರೆಯ ಮಾಟ್ಟಿಂ .. .. ಆತಂ ಕೌಳಂ: **ಸಮಯಪ,** ೪. ೧೨೩)

**ಮೈಲಗೆ** – ಮಲಿನವಾದ, ಕೊಳೆಬಟ್ಟೆ (ಆಗಲೊಳಗಿಕ್ಕಿದ ಉಳ್ಳುಣಿಸಮೇಧ್ಯಮುಂ ಎಂಜಲುಂ ಅಪ್ಪುದು ಉಟ್ಟ ಪುಟ್ಟಿಗೆಗಳುಮಂತೆ ಮೈಲಗೆಗಳಪ್ಪುವು: **ಅಜಿತಪು,** ೨. ೫೧)

**ಮೈಲೆ** – ನವಿಲು (ಮಚ್ಚರದಾಯಮಂ ಮಱೆದು ಕೈದುಗಳಂ ತೊಱೆದುಟ್ಟು ತೊಟ್ಟ ಪೆಣ್ಣಚ್ಚಮೊಡಂಬಡಂ ನಡೆಯೆ ಮೈಲೆಯ ನಚ್ಚನೆಯಂತೆ ಸೂಲಮಂ ಬಚ್ಚಿಸಿ ಪೊತ್ತುಗೂಡಿಡುವ ಗುಬ್ಬಿಗಳಂತಿರೆ: **ಅನಂತಪು,** ೧೩. ೪೮)

**ಮೈಹಿರ** – ಸೂರ್ಯ ; ಬಿಸಿಲು (ತಾಳ್ದತ್ತು ಮೈಹಿರವಂ ಕೇಳಿರಸಾರ್ಥವಿಶ್ರಮಿತ ನಾನಾದೈವತಣ ರೈವತಂ: **ಜಗನ್ನಾವಿ,** ೧೬. ೩೫)

**ಮೊಕ್ಕನೆ ಪೋಗಿಸು** – ತಟಕ್ಕನೆ ಕತ್ತರಿಸು (ಇನಬಿಂಬಕ್ಕೆ ಮಱೆಯಪ್ಪ ಮುಗಿಲಂ ಮೊಕ್ಕನೆ ಪೋಗಿಸದೆ ಪವನನೆನಗೇಂ ನಿನಗೇಂ: **ಲೀಲಾವತಿ,** ೧. ೨೯)

**ಮೊಕ್ಕನೆ ಪೋಗು** – ಮೊಕ್ಕೆಂದು ಕತ್ತರಿಸು (ಋಷಿಯೆರಡು ಕಯ್ಯುಂ ಕಾಲ್ಗಳುಮಂ ಮೊಕ್ಕನೆ ಪೋಗೆ ಕೋಮಡೊಡೆ: **ವಡ್ಡಾರಾ,** ಪು ೧೨೧, ಸಾ ೯)

**ಮೊಕ್ಕನೆವೋಗು** – ಮೊಕ್ಕೆಂದು ಕತ್ತರಿಸು (ಚಕ್ರಂಗಳಿಂ ತೆಗಲೆಯಂ ಮೊಕ್ಕನೆವೋಗೆ ಇಡುವುದುಂ: **ವಡ್ಡಾರಾ,** ಪು ೯೬, ಸಾ ೨೮)

**ಮೊಕ್ಕಳಂ** – ವಿಶೇಷವಾಗಿ (ತೆರಳ್ದ ಸುರಭೂರುಹಪ್ರಸವ ಧೂಳಿಯಂ ಮೊಕ್ಕಳಂ ಸುರುಳ್ದ ಸರಸೀಸರೋರುಹ ದಳಂಗಳಂ: **ಆದಿಪು,** ೭. ೬೭); ಯಥೇಚ್ಛವಾಗಿ (ಮೊಕ್ಕಳಂ ಒಡಮೆವಡೆದು ಪೊಟಿಲಂ ಪುಗುವಲ್ಲಿ ಸುಂಕಿಗಳ್ಗಳ್ಗಿ ಮಗುಟ್ದು ಬಂದು: **ಚಾವುಂಪು,** ಪು. ೪೦೦. ಸಾ. ೨೨)

**ಮೊಕ್ಕಳಿಗ** – ಸಾಮಾನ್ಯ ಮನುಷ್ಯ (ಜಾತ್ರೆಯ ಮಾಟ್ಟಿಂ ಮೊಕ್ಕಳಿಗಂ ಜೈನಲ್ಲಂ ಆತಂ ಕೌಳಂ: **ಸಮಯಪ,** ೪. ೧೨೩)

**ಮೊಖರಿಗಾಣ** – ಹಾಡುಗಾರ (ಆ ಸಮಯದೊಳ್ ಮುಖರಿಗಾಣನ ಎಡಬಲದ ತಾಳವಱಿದು ಪಿಡಿದು ಪೊಡವಟ್ಟು ಬಾಜಿಸುವುದುಂ: **ಧರ್ಮಪ,** ೨. ೧೮ ವ)

**ಮೊಗ** – ಮುಖ (ವದನಂ ಆನನಂ ಆಸ್ಯಂ ಮುಖಂ ತುಂಡಂ ಲಪನಂ ವಕ್ತ್ರಂ ಮೊಗಕ್ಕೆ ನಾಮಂ: **ಅಭಿಧಾವ,** ೧. ೧೨. ೧೫); ಎದುರು (ಆಗಳವರ್ ತಾಯ ಮೊಗಮಂ ಆವ ಮೊಗದೊಳು ನೋಡುವಮೆಂದು ನಾಣ್ಚಿ: **ಸುಕುಮಾಚ,** ೨. ೩೨ ವ); ಬಾಯಿ (ಮೊಗದೊಳ್ ವಾಗ್ವಧು ಸಂತತಮಗಲದೆ ನಿಲೆ ಕೀರ್ತಿವಧುಗೆ ಕೂರ್ತುಂ ಮತ್ತರ್ಥಿಗಳಮೃತವಧುಗೆ ತಪದುಜ್ಜುಗಮೆಂತುಟೊ ಮೇಘಚಂದ್ರ ಮುನಿಪುಂಗವರಾ: **ಸಮಯಪ,** ೧. ೨೦)

**ಮೊಗಂದಿಱಿ** – ಮುಖ ತಿರುಗಿಸು; ವಿಮುಖವಾಗು (ಅಂಬುಧಾರೆಗಳ್ .. .. ಕವಿದು ಆಸ್ಯಪಂಕೇಜದೊಳ್ ಮೊಗಂದಿಱಿದು ಬೀಱೆ ಬಾಳಕಿ: **ಲೀಲಾವತಿ,** ೧೩. ೧೩೯)

**ಮೊಗಂಮುರಿ** – ಮುಖ ಕಿವಿಚು (ಇಂತಪ್ಪವಮಾನಮಾದುದೆಂದು ಮೊಗಂ ಮುರಿಯೆಯುಂ: **ಜಗನ್ನಾವಿ,** ೧೩. ೭೭ ವ); ಮುಖ ತಿರುಗಿಸು (ಮದ್ರರಾಜನಳಿಯನ ಪರಾಕ್ರಮಕ್ಕೊಸೆದು ಮೊಗಂಮುರಿಯದೆ ಪೆಱತುಂ ರಥಮಂ ತರಿಸಿ ಕನಲ್ದಡರ್ದು ಕದನಕಾಗಳೆ ನೆಱೆದೆಂ: **ಪಂಪಭಾ,** ೧೦. ೧೦೭)

**ಮೊಗಪೆ** – ನೀರು ತುಂಬುವ ಪಾತ್ರೆ (ಖಳಸಂಸ್ಕೃತಿಯೆಂಬುದೊಂದು ಊಟಣದೊಳಗಮ್ಮ ನೀಂ ಮೊಗಪೆಯಾಗದೆ ತಾಳ್ದಪವರ್ಗಮಾರ್ಗಮಂ: **ಆದಿಪು,** ೩. ೭೧)

**ಮೊಗಮಿಕ್ಕು** – ಪ್ರತಿಭಟಿಸು (ಮುಂತೆ ಉಲಾಯಸಂತತಿಗಳಾಗಿ ಕರಂ ಪುಗೆ ಕೋಡುಗುಟ್ಟಿಯುಂ ದಂತಿಗಳಾಗಿ ಬಂದು ಮೊಗಮಿಕ್ಕಿಯುಂ ಅಂಕದ ಮಲ್ಲರಾಗಿ ಪೋರ್ದುಂ ತಗರಾಗಿ ತಾಗಿಯುಂ ಲಾವಗೆಯಾಗಿ ಕಾದಿಯುಂ ತಮತಮಗಿಂತು ಚಿತ್ತಮಱೆದು ಓಲಗಿಪರ್ ದಿವಿಜರ್ ಕುಮಾರನಂ: **ಮಲ್ಲಿನಾಪು,** ೧೩. ೫೦)

**ಮೊಗರಂಬ** – ಆನೆಕುದುರೆಗಳ ಮುಖಾಲಂಕಾರ ಸಾಧನ (ಒನ್ನ ಕಡಿವಾಣದ ರನ್ ಮೊಗರಂಬದ ಕಿವಿಯ ಚಾಮರದ ಸುತ್ತು ಝುಲ್ಲರಿಯ .. .. ತುರಂಗಸಂಘಾತದಿಂ: **ರಾಜಶೇವಿ,** ೬. ೧೧ ವ)

**ಮೊಗರಾಗ** – ಮುಖಕಾಂತಿ (ಬರವಿನೊಳಾದೊಂದು ಮೊಗರಾಗಮೆ ಸಂತಸವಾತನಂತನಕ್ಷರಂ ಅಱಿಪುತ್ತುಮಿರ್ಪಿನೆಗಂ: **ಆದಿಪು,** ೩. ೮೫)

**ಮೊಗವಡ** – ಮುಖವಾಡ (ಅಯ್ನೂರ್ವರ್ ಸುಭಟರಂ ಆಯ್ದುಕೊಂಡು ಪೊಟಿಲ್ಗೆ ವಂದು ಮೊಗವಡಂಗವಿದಿರ್ದ ಕೂಸಂ ಭಟ್ಟ ಮಿತ್ರಂಗೆ ಕುಡಿಂ ಎಂದು ಪೋದೊಡೆ: **ವಡ್ಡಾರಾ,** ಪು ೧೬೭, ಸಾ ೩); ಆನೆಗೆ ಹಾಕುವ ಪೆಟ್ಟುಗಳಿಂದ ರಕ್ಷಿಸುವ ಮುಖವಾಡ (ಮೊಗವಡಮಂ ನಿಷಾದಿ ಕಳೆದಂಕುಶದಿಂದಣೆದು ಆರ್ದು ನೂಂಕೆ: **ಪಂಪರಾ,** ೧೩. ೭೪)

**ಮೊಗಸಾಲೆ** – [ಮುಖಶಾಲಾ] ಮುಖಮಂಟಪ (ಮೊಗಸಾಲೆ ಚಂಪೆಯಂ ಚೌಕಿಗೆ ಮೆಱೆದಿರೆ ಹರಿಸದಿಂದೆ ಬೀಡಂ ಬಿಟ್ಟಾ

ಪಗಲಂ ಕಳೆದಂದಿನ ಮಱುವಗಲಂ ನಡೆದೆತ್ತಿ ಬರಿತುಮಿರ್ದಂ ಕಾವಂ: **ಕಬ್ಬಿಗಕಾ.** ೧೫೬)

**ಮೊಗಸು** – ಆವರಿಸು (ಸುಯ್ಯ ಪರಿಮಳದ ಪೊದಳ್ಕೆಗೆ ಸೋಲ್ತು ಸೂಟಿಸೂಟಿದೆ ಮೊಗಸಿದುವೆರಡೆಡೆಗಂ ಅಲಸದೆ ಅಳಿಗಳ ಬಳಗಂ: **ಆದಿಪು,** ೧೦. ೩೧); ಹಿಂದಿರುಗು (ಅಟ್ಟಿಜೆನೊಳ್ ಅಯೋಧ್ಯೆಗೆ ಮೊಗಸಿದನಜೆಕೆಯ ಪಜೆ ಪಲವುಮೆಸೆಯೆ ಭರತಮಹೀಶಂ: **ಆದಿಪು,** ೧೪. ೨); ತೊಡಗು, ಉಪಕ್ರಮಿಸು (ಮನೆಗೆಲಸಕ್ಕೆ ಸಯ್ತು ಮೊಗಸಲ್ ಅಣಂ ಆಱದೆ ನೋಡಿ ಪೂಂಕೃತಧ್ವನಿ ಮಿಗಲ್ .. .. ದೇವಿ ಕಾವುದೆಂದು ಇನಿತು ಭಯಂ ಮಿಗಲ್ಕೆ: **ಸಮಯಪ,** ೯. ೧೧೮); ಆಸೆಪಡು (ಮಗಮಗಿಸುವ ತನ್ನ ಬಾಯ ಕಂಪಿಂಗೆ ಅಳಿಗಳ್ ಮೊಗಸುತಿರೆ: **ಲೀಲಾವತಿ,** ೧೧. ೧೦)

**ಮೊಗಸೇಡುಗೊಳ್** – ಜರ್ಜರಿತಗೊಳ್ಳು (ಅಂತು ಸೇನೆ ನಾಡೆಯುಂ ಮೊಗಸೇಡುಗೊಳ್ವಂತೆ ಕೊಳ್ವ ಮಟೆಯುಮಂ ಪೊಡೆ ಸಿಡಿಲುಮಂ ದಂಡಡಾದಿಪಂ ಕಂಡು: **ಪಾರ್ಶ್ವನಾಪು,** ೧೧. ೮೩ ವ)

**ಮೊಗೆ** – ನೀರು ತುಂಬು (ನೀನೀ ರಸಮಂ ಮೊಗೆದು ಕೊಟ್ಟೊಡೆ ಅದಱೊಳ್ ಮಾಡಿದ ಪೊನ್ನುಂ ನಿನಗಂ ಎನಗಂ ಸಮಭಾಗಮಕ್ಕುಂ: **ವಡ್ಡಾರಾ,** ಪು ೧೮೭, ಸಾ ೧೧)

**ಮೊಗ್ಗರ** – ಸಮೂಹ (ಕಟ್ಟಲೆಯ ಮೊಗ್ಗರಂ ಮಗುಟ್ದು ಮೂದಲಸಿ ಕವಿವಂತೆ .. .. ಮುಸುಜೆ ಮುತ್ತುವ ಮತ್ತಮಧುಕರನಿಕರಮಂ: **ನೇಮಿನಾಪು,** ೪. ೫೦ ವ); ಸೈನ್ಯ (ಪೊಡವಿಯಂತಿರೆ ಕೈದುಗಳಿಂದೆ ಬಂದುವಂದು ಆನೆಗಳೊಡ್ಡು ತೇರ್ಗಳಣಿ ತೇಜಿಯ ತಟ್ಟು ಉಲಿವ ಆಳ ಮೊಗ್ಗರಂ: **ಕಬ್ಬಿಗಕಾ,** ೧೯೩)

**ಮೊಗ್ಗರಿಸು** – ಗುಂಪುಗೂಡು (ಬೊಬ್ಬಿರಿವ ಆರ್ವ ಪೋರ್ವ ಮೊಗ್ಗರಿಪ ತೊಡಂಕುವ ಅಗ್ಗಲಿಪ ಬಿನ್ನಣಮೊಪ್ಪೆ ಕಡಂಗಿ ಕಾದಿದರ್: **ರಾಜಶೇವಿ,** ೬. ೫೩)

**ಮೊಗ್ಗು** – ಸಾಧ್ಯ (ಗುಪ್ತಿಯೆ ತನಗಿಲ್ಲದೆ ಕರ್ಮರಿಪುಗೆ ಮುನಿವುದು ಮೊಗ್ಗೇ: **ಆದಿಪು,** ೬. ೨೯)

**ಮೊಗ್ಗೆ** – ಅರಳದ ಹೂ (ಜಳಜದ ಮೊಗ್ಗೆಯಂತೆ ಮುಗುಳಂತೆ ಎಳೆಯೆಕ್ಕೆಯ ಕಾಯ್ಗಳಂತೆ ಶಾಲ್ಮಲಿಕುಸುಮಂಗಳಂತೆ .. .. ಗೃಷಿವೊಯ್ವ ಕಂದೆರೆವ .. .. ಕೋಮಳ ಶಿಶುಶಾಬಕಪ್ರಕರಮಂ ತೆಗೆದಂ ದಯೆಗೆಟ್ಟು ಲುಬ್ಧಕಂ: **ಕಾದಂಬ,** ೧. ೧೪೮); ಸಾಧ್ಯವೇ? (ಗಾಳು ಗೊರವಂ ತಗುಳ್ಚಿ ಪಳಾಳಮಂ ಏನೊಂದನಪ್ಪೊಡಂ ಗಟಿಪಿದೊಡೆ ಆ ಬೇಳುನುಡಿ ಕೇಳ್ದು ಕೆಮ್ಮನೆ ಬೇಳಲ್ ನಿಮಗಂತು ರಾಜಸೂಯಂ ಮೊಗ್ಗೇ: **ಪಂಪಭಾ,** ೬. ೨೪)

**ಮೊಗ್ಗೆಗ** – ಶೂರ (ಮೂಜಗಕೆ ಕೇಡಂ ಮಾಡುವಾ ನೆತ್ತಿಗಣ್ಣವನೊಳ್ ಕಾದುವ ಬಲ್ಪ ಮೊಗ್ಗೆಗರನಿಂದಾಯ್ತು ಮೇಲೆತ್ತುವೆಂ: **ಕಬ್ಬಿಗಕಾ,** ೧೨೩)

**ಮೊಘೆ** – ಮಣ್ಣಿನ ಗಡಿಗೆ (ಮೊಘೆಗೆ ಚಂದ್ರಬಲಮುಳ್ಳೊಡಮೇಂ ಸಿಲೆಗಾನದವೋಲ್: **ಪಾರ್ಶ್ವನಾಪು,** ೧೧. ೯೦)

**ಮೊಚ್ಚೆ** – ಪಾದರಕ್ಷೆ (ಸಡಹುಡನಪ್ಪ ಕಟ್ಟೆ ಕೊಡೆ ಸಂತಸದಿಂ ಪೆಱಗೇಱೆ ಬರ್ಪ ಕನ್ನಡಿವಿಡಿದಾಕೆ ಚಿನ್ನದ ಸವಂಗಂ ಅಪೂರ್ವದ ಮೊಚ್ಚೆಯಂ ಪವಣ್ಗೆಡದ ಸುವರ್ಣಪಾರಿವದ ಕುಪ್ಪಸಮೊಪ್ಪೆ: **ಪಂಪಭಾ,** ೯. ೧೦೩)

**ಮೊಟ್ಟನಾಗು** – ಕಿರಿದಾಗು (ದೆಸೆಗಳ್ ಪೆರ್ಚದೆ ಮೊಟ್ಟನಾದುವಗಲಕ್ಕೆಂಬನ್ನೆಗಂ .. .. ಅದ್ರೀಂದ್ರಂಗಳಂ ತಂದು ಕೀಲಿಸಿದಂ ನಿಶ್ಚಳಮಪ್ಪಿನಂ: **ಆದಿಪು,** ೧೫. ೫೦)

**ಮೊಟ್ಟನೆ** – ಹಾಳು (ಒಟ್ಟೆಯಂ ಮೊಟ್ಟನೆ ಮಾಟ್ಟಿ ಕಜ್ಜಮಂ ಪೇಟಿಟ್ಟೊಡಂಬಡಿಸಿ: **ಪಂಚತಂತ್ರ,** ೨೧೦ ವ)

**ಮೊಟ್ಟಯಿಸು** – ಸ್ವಾಧೀನಕ್ಕೆ ತರು (ಕಪ್ಪಂಗೊಡದ ಮಂಡಳರ್ಕಳ ಮೇಗೆತ್ತಿ ಮೊಟ್ಟಯಿಸಿ ಇಱಿದು ಮಂಡಲಂಗಳುಂ ದುರ್ಗ ವಸ್ತುವಾಹನಂಗಳಂ ಸಮಸ್ತ ಕಪ್ಪಂಗೊಂಡು: **ವಡ್ಡಾರಾ,** ಪು ೧೪೬, ಆ ೪)

**ಮೊಟ್ಟೆ** – ಮೂಟೆ, ಗಂಟು (ತಳಿರ ಮೂಡೆಯೊಳೆ ಮಲ್ಲಿಗೆಯ ಮುಗುಳ್ಗಳನೊಟ್ಟಿ ಮಿಕ್ಕ ಮುಗುಳಂ ಮೇಲುದಿಂ ಮೊಟ್ಟೆಯಂ ಕಟ್ಟಿ: **ಲೀಲಾವತಿ,** ೧೧. ೧೧)

**ಮೊಟ್ಟೈಸು** – ಮೊಟ್ಟಯಿಸು (ಮೊಟ್ಟೈಸವು ಅನ್ಯಸಮಯಿಗಳ್ ಒಟ್ಟಜೆಯಿಂ ಮಾಡಿದ ಆಗಮಂಗಳ್: **ಸಮಯಪ,** ೩. ೬೭)

**ಮೊಡವಿ** – ಮೊಡವೆ, ಮುಖದ ಗುಳ್ಳೆ (ಮುಖಪದ್ಮದೊಳ್ ಮೊಡವಿ ಮೂಡಿದವೋಲಿರೆ .. .. ಮೂಡಿದುದು ಮೂಡಣ ದಿಕ್ಕಿನೊಳ್ ಇಂದುಮಂಡಲಂ: **ಲೀಲಾವತಿ,** ೨. ೨)

**ಮೊಡೆನಾರು** – ಕೆಟ್ಟ ವಾಸನೆ ಸೂಸು (ಆದಮಾನುಂ ಗುಂಡಿತಪ್ಪ ರಸದ ಬಾವಿಯಂ ಮೊಡೆನಾರ್ಪುದಂ ಕಂಡು ಮುಚ್ಚಿದ ಶಿಲೆಯಂ ಕಳೆದು: **ವಡ್ಡಾರಾ,** ಪು ೧೮೭, ಸಾ ೮)

**ಮೊತ್ತ** – ಸಮೂಹ (ತಂತಮ್ಮ ಬೇರ್ಗಳ ಮೊತ್ತಕ್ಕಮೃತಾಂಬು ಪೂರಮನೊಡರ್ಚುತಿರ್ಪವೆಂಬಂತೆ ಪಳ್ಳಳ ಸಾಲಿಂದೆನಸುಂ ಮೊದಲ್ ಗುಟಿಗಳೆಲ್ಲಂ ತೀವಿ: **ಕುಸುಮಾಕಾ,** ೧. ೯೫)

**ಮೊತ್ತಮೊದಲ್** – ಎಲ್ಲಕ್ಕಿಂತ ಮೊದಲು (ನಿರಂತರಂ ಸುಖವ್ಯಾಪ್ತಿಗೆ ನೀನೆ ಮೊತ್ತಮೊದಲಾಗರಿಕೇಸರಿ ಲೋಕಮುಳ್ಳಿನಂ: **ಪಂಪಭಾ,** ೧. ೧೪೯)

**ಮೊದಲ್** – ಆರಂಭ (ಬಲಸ್ಥನೊಳ್ ಬಲಮನೆ ಪೂಣ್ಬುದುಂ ಪರಿಭವಕ್ಕೆ ಮೊದಲ್ ಸುರಸೈನ್ಯನಾಯಕಾ: **ಆದಿಪು,** ೧೨. ೧೦೩); ನೆಲೆ (ಚದುರ ಪುಟ್ಟಿದನೆಲ್ಲಿದನೆಲ್ಲಿದಂ ವಿನೋದದ ಮೊದಲೆಲ್ಲಿದಂ ಸೊಬಗಿನಾಗರಮೆಲ್ಲಿದಂ: **ಆದಿಪು,** ೩. ೧೫); ಅಗ್ರಭಾಗ (ಅಂತು ಒರ್ವರೊರ್ವರ ಕಿಱುಕುಣಿಕೆಗಳಂ ಪಿಡಿದು ರತಿಯುಂ ಕಾಮದೇವನುಂ ಬರ್ಪಂತೆ ಬೇಳ್ವೆಯ ಕೊಂಡದ ಮೊದಲ್ಗೆ ವಂದು: **ಪಂಪಭಾ,** ೩. ೭೫ ವ); ಬಂಡವಾಳ (ಮೊದಲಿಂದೆ ಲಾಭಮಂ ಬಯಸುವವಂ ಪಡೆವುದು ರತ್ನತ್ರಯಮಂ: **ಸಮಯಪ,** ೬. ೬೫)

**ಮೊದಲಾಗು** – ಆರಂಭಗೊಳ್ಳು (ಪೆಂಡಿರೆಂಬರೊಳ್ ಕೂಡುವ ನಲ್ಲಿನಿಂದು ಮೊದಲಾಗಿರೆ ನಿಕ್ಕುವಂ: **ಪಂಪಭಾ,** ೧. ೭೩)

**ಮೊದಲಿಕ್ಕು** – ಆರಂಭಿಸು (ಬಿದಿ ಮತ್ತೇನನಿದಂ ತೋಜೆದಪನೊ ಪಾತಕಿಗೆನುತ್ತೆ ಭಯಂ ಚಿತ್ತಕ್ಕೊದವಿಸಿ ಬಲಗಣ್ ಕೆತ್ತಲ್ ಮೊದಲಿಕ್ಕಿತು ದುರ್ನಿಮಿತ್ತಸೂಚಕಮಾಗಳ್: **ಕಾದಂಬ,** ೫. ೧೪೩)

**ಮೊದಲಿಗೆ** – ಆರಂಭಿಸಿದವಳು (ದೇವಲೋಕದೊಳಿನಿತಾನುಂ ಕಾಲಮನನುಭವಿಸಿದನುಭವಕ್ಕೆ ಮೊದಲಿಗೆಯೆನಿಸಿದಾ ಸ್ವಯಂಪ್ರಭೆಯಂ ನೆನೆನೆನೆದು: **ಆದಿಪು,** ೩. ೧೧ ವ)

**ಮೊದಲಿಡು** – ಮೊದಲಿಕ್ಕು (ಮೊದಲಿಟ್ಟಂ ಕೊಲಲೆಂದು ಕೌರವರಂ . .. ಪರಿತಂದು ತಾಗಿ ತಗರ್ದಂ ಗಂಗಾಸುತಂ ಭೀಮನಂ: **ಪಂಪಭಾ,** ೧೦. ೧೦)

**ಮೊದಲ್ಗಿಡು** – ಮೂಲದಲ್ಲಿ ನಿಂತುಹೋಗು (ಘನಾಗಮಂ ಮೊದಲ್ಗಿಡೆ ಶರದಾಗಮಂ ನೆಱೆಯೆ ಪರ್ಬೆ ಸಮಸ್ತಮಹೀವಿಭಾಗಮಂ: **ಪಂಪಭಾ,** ೭. ೬೯)

**ಮೊನಸು** – ಮೊಳಕೆಯೊಡೆ, ಮೂಡು (ಮೊನಸಿದ ಮೆಯ್ಪುವಿರಿಂದ .. .. ಅದು ನಿಜನಾಥನ ಕೊರಲ ಮಾಲೆಯೆಂಬುದಂ ಅನಿಬರ್ಗಂ ಪೇೞ್ದಳ್: **ಲೀಲಾವತಿ,** ೧೦. ೮೧)

**ಮೊನೆ** – ತುದಿ (ಬೇೞೊಂದು ಮೊನೆಯೊಳ್ ಕಾದುತ್ತಿರ್ದ ಅಶ್ವತ್ಥಾಮಂ ಕಂಡು ಮುಟ್ಟೆವರ್ಪನ್ನೆಗಂ ಶೋಣಾಶ್ಮೋಪಲಕ್ಷಿತ ನಿಜಪಿತೃಸೂತಕೇತನ ಕಥಿತಮಾಗಿರ್ದ ರಥಮಂ ಉಪಲಕ್ಷಿಸಿ: **ಪಂಪಭಾ,** ೧೨. ೩೦ ವ); ಕಾಳಗ (ನೆಲದಱೆಕೆಯ ಬಿದಿಯಂ ಪೊಡೆಯಲರಂ ಇಂದಿರನಂ ಅದಟರಂ ತವಸಿಗಳಂ ನೆಲೆನಟ್ಟು ನೋಯಿಸಿದುದು ಇನ್ನಲರಂಬಿನ ಮೊನೆಗೆ ನಿಲ್ವನೇ ಬಡಗೊರವಂ: **ಕಬ್ಬಿಗಕಾ,** ೧೨೨); ಸೈನ್ಯ (ಸಮಗ್ರಸೇನೆವೆರಸು ಉಗ್ರಸೇನನ ಮೊನೆಯೊಳ್ ಆಂತು: **ಕರ್ಣನೇಮಿ,** ೧೨, ೬ ವ)

**ಮೊಮ್ಮ** – ಮೊಮ್ಮಗ (ನವನಿಧಿವಲ್ಲಭಂ ಆನತದಿವಿಜಗಣಂ ನೆಗೞ್ದ ನಾಭಿರಾಜನ ಮೊಮ್ಮಂ: **ಆದಿಪು,** ೧೩. ೭೩)

**ಮೊರಡಿ** – ಕಲ್ಲುತುಂಬಿದ ಗುಡ್ಡ (ಭಾವಿಸಲೇನುಂಟೆ ಮೊರಡಿಯೊಳ್ ಮಾದುಫಲಂ: **ಸಮಯಪ,** ೧. ೧೨೩)

**ಮೊರಡು** – ದಿನ್ನೆ (ದರಿಯುಮಂ ಕುಮ್ಮರಿಯುಮಂ ಮೊರಡುಮಂ ಕೊರಡುಮಂ .. .. ಕಳೆದು ಪೋಗಿ: **ಲೀಲಾವತಿ,** ೬. ೧೬ ವ)

**ಮೊರೆ** – ಝೇಂಕರಿಸು (ತೊಳಪೆಳವೆಱೆಯುಂ ಮೊರೆವಳಿಕುಳಂಗಳುಂ ಮೆಲ್ಲನೆಸೆವ ಮಳಯಾನಿಳನುಂ ಮುಳಿಸು ಕಟಿಲ್ಚಿ ಕಳೆದುವು: **ಕವಿರಾಮಾ,** ೨. ೭೦); ಸದ್ದುಮಾಡು (ಒಣಗಿದುದೊಂದು ಪೆರ್ವಿದಿರ ಪೆರ್ಪೊದಱೆಂ ಮೊರೆದು ಉರ್ವಿದ ಆಶುಶುಕ್ಷಿಣಿಯವೊಲ್ ಆಂತ ಖಟ್ಟಿನಿವಹಕ್ಕೆ ರಥಕ್ಕೆ ದಟಕ್ಕೆ ಮತ್ತವಾರಣನಿವಹಕ್ಕೆ ತಕ್ಕಿನ ಅಭಿಮನ್ಯುವ ಕೂರ್ಗಣೆ ಪಾಯ್ದು ನುಂಗಲುಂ ನೊಣೆಯಲುಂ ಉರ್ಚಿಮುಕ್ಕಲುಂ ಇದೇಂ ನೆಱೆ ಕಲ್ತುವೊ ಯುದ್ಧರಂಗದೊಳ್: **ಪಂಪಭಾ** ಪರಿಷತ್ತು, ೧೧. ೯೪)

**ಮೊರ್ಮರ** – ಚಟಪಟ, ಗರಿಗರಿ (ಮೊರ್ಮರಾಗಿ ಕರಿವುದುಂ ಚಿಮಿಚಿಮಿಸೆ ತಾಳಿಸುವುದುಂ ಇಕ್ಷುಯಂತ್ರಗಳಿಂ ಪಿೞಿವುದುಂ: **ಸುಕುಮಾಚ,** ೧೧. ೪೭ ವ)

**ಮೊಲಗಟ್ಟಲೆ** – ಭ್ರಮೆ, ಭ್ರಾಂತಿ (ನಿನ್ನ ಮೊಲಗಟ್ಟಲೆಗಾಂ ಬೆಱಗಾದೆನಿಂದು ಪೇೞ್ ಈಗಳೊ ಬಯ್ಗೆಯೊ ಪೊಗಸೊ ನಾಳೆಯೊ ನಾಡಿದೊ ನಿನ್ನ ಜೀವಿತಂ: **ಆದಿಪು,** ೩. ೬೩)

**ಮೊಲೆನಾಗ** – ಒಳ್ಳೆ (ಪೇಟಕ್ಕುಮೆ ಮೊಲೆನಾಗಂ ಕಿವಿಗಿವುಡುವೀೞ್ವಿನಂ ಗಱಪದುದೇ: **ಲೀಲಾವತಿ,** ೧. ೨೧)

**ಮೊಲೆವೆಱು** – ಹೆಣ್ಣನವನ್ನು ಹೊಂದು (ನಿನ್ನಂ ಪೆತ್ತಳ್ ಮೊಲೆವೆತ್ತೆ ವೀರಜನನಿವೆಸರಂ ಪೆತ್ತಳ್: **ಗದಾಯು,** ೪. ೫೫)

**ಮೊಲ್ಲೆ** – ಕುಂದಪುಷ್ಪ (ಬಿರಿಮುಗುಳಾದ ಜಾದಿಯೊಳ್ ಅಲುಂಬಿ ಮುಸುಂಬನರಲ್ದ ಮೊಲ್ಲೆಯಂ .. .. ಬಂಡನುಮಡು .. .. ಮದಭೃಂಗಮಾಳೆಗಳ್: **ಅನಂತಪು,** ೯. ೧೬)

**ಮೊಸರಣ್ಕೆ** – ಕಳಶಕ್ಕೆ ಮಾಡುವ ಮೊಸರ ಲೇಪನ (ರನ್ದ ಕನ್ನಡಿವೆರಸು ಸರ್ವಧಾನ್ಯದ ನಡುವಿರೆ ಮೊಸರಣ್ಕೆವೆರಸಿದ ಎಳದಳಿರ್ಗಳಸಂ: **ಆದಿಪು,** ೪. ೩೩)

**ಮೊಳೆ** – ಮೊಳಕೆ, ಮೊಳಕೆಯೊಡೆ (ತೇಜೋನಿಳಯಂ ಬೆಳಗಿದಂ ಅಱಿವಿನ ಬೆಳಗಿನ ಮೊಳೆ ಮೊಳೆತು ಬೆಳೆವುದೊಂದಚ್ಚರಿಯೇ: **ಆದಿಪು,** ೭. ೩೩)

**ಮೊಳೆನುಡಿ** – ಸಲಿಗೆ ಮಾತು (ಸ್ಮೇರಾಸ್ಯಂ ಮೊಳೆನುಡಿ ಗತಸೌರಂಭಂ ಸುರತಸಂಭ್ರಮಂ ಜಾರೆಯರಾ: **ಗಿರಿಜಾಕ,** ೪. ೮೪)

**ಮೊಳೆವುಲ್** – ಎಳೆ ಹುಲ್ಲು (ಕರಿಯ ಮುಗಿಲ್ಗಳಿಂ ಗಗನಮಂಡಳಮೊಪ್ಪಿರೆ ಸೋಗೆಯಿಂ ವನಾಂತರಂ ಎಸೆದು ಒಪ್ಪೆ ತೋರ್ಪ ಮೊಳೆವುಲ್ಗಳಿನೀ ಧರಣೀವಿಭಾಗಂ ಒಪ್ಪಿರೆ: **ಪಂಪಭಾ,** ೭. ೨೩)

**ಮೊಳೆವೋಗು** – ಮೊಳಕೆಯೊಡೆ (ಆ ದೇವಿಯ ಜಾತ್ರೆಗೆ ಮೊಳೆವೋದ ಎಳೆವೆಱೆ ಸಿರದ ಗಾಳಂ ಉರಿಯುಯ್ಯಲೆ ಕೈವೋದ ಅಸುಕೆ: **ಯಶೋಧಚ,** ೧. ೩೬)

**ಮೊಳ್ಗು** – ಮೊಕ್ಕು, ನಮಸ್ಕರಿಸು (ಸತ್ಯೇಂದ್ರಚೋಳೇಂದ್ರ ಸತ್ವದಪದ್ಮಕ್ಕೆ ಮರಂದಮಂ ಪಡೆದು ಮೌಲಿದ್ಯೋತಿಯಿಂ ಮೊಳ್ಗಿದಂ: **ರಾಜಶೇವಿ,** ೪. ೧೧೩)

**ಮೊಱ** – ನೀರ ತಾಣ (ಬಾವಿ ಪೊಕ್ಕರಣೆ ದೀರ್ಘಿಕೆ ಪೆರ್ಗೆಱೆ ದೊಣ್ಣೆ ಪೂಗೊಳಂ ಬಗರಗೆ ಬೆಂಚೆ ಪಳ್ಳ ಮೊಱವೆಂಬ ಜಲಾಶಯಮಿಂತು ಸುತ್ತಲುಂ: **ಪುಷ್ಪದಂಪು,** ೨. ೫೪)

**ಮೊಱಡು** – ದಿಣ್ಣೆ (ಮೞೆ ಕದಡಿ ಬರ್ಪ ತೊಱೆ ಬೆಟ್ಟು ತೆವರ್ ಮೊಱಡುಪಜಲಧಿಗಳೆನೆ ಜನಮಱೆಯಱೆಯೆ ದಲ್ ಉದ್ದಬಿದ್ದಮಾಯ್ತುವನಿತಳಂ: **ಆದಿಪು,** ೬. ೬೨)

**ಮೊಱೆ** – ಕ್ರಮ (ತಾಂ ಜಾತಿಯೊಳ್ ಪಶುವಪ್ಪುದಱೆಂ ಮೊಱೆಯಂ ಧರ್ಮಮುಮಂ ಅಱೆಯದೆ ಆ ಮೂಢಂ ನಿನ್ನ ರಾಜ್ಯಕ್ಕಾಸೆವಟ್ಟು ನಿನ್ನಂ ಕೊಂದಪೆನೆಂದು ಸಮಕಟ್ಟುತಿರ್ದಪಂ: **ಪಂಚತಂತ್ರ,** ೧೫೧ ವ); ಭೋರ್ಗರೆತ, ಗರ್ಜನೆ; ಝೇಂಕಾರ (ಸರಸಿಜದರಲ ಸರಸ ಪರಿಮಳಕೆ ಮೊಱೆದು ಎಱಗುವ ಪರಮೆವಱೆದುಱುಗಲಿಂ: **ರಾಜಶೇವಿ,** ೨. ೮ ವ); ಬಂಧು (ದುರ್ವ್ಯಸನಿಯ ಮಾಡಿದೋದೆ ನಿಮಗಾಗಮಮಾಗಿರೆ ಸತ್ಯಮಂ ಪೊಸಯಿಸಿ ಜೀವನಿಲ್ಲ ಮೊಱೆಯಿಲ್ಲ ಅಱನಿಲ್ಲ ಪರತ್ರೆಯಿಲ್ಲ: **ಆದಿಪು,** ೨. ೧೧); ರಕ್ತಸಂಬಂಧ, ವಾವೆ (ಮೊಱೆಗಿಡಿಸಿ ಕೂಡುವುದು ಕುಲದಱೆತಮಂ ಎಟ್ಟಿಟ್ಟಿ ನೆರಪುವುದು ಗುರುಜನಮಂ ಮಱೆಯಿಸುವುದು ಸೋದರರಂ ಪಱೆಪಡೆ ಕಾದಿಸುವುದಲ್ತೆ ಕಾಮನ ಕೆಯ್ತಂ: **ಶಾಂತೀಶ್ವಪು,** ೬. ೭೧); ಗೋಳಾಟ (ಕಾಯ್ದು ಕೆಮ್ಮಗೆ ಬಱೆಸಂದು ಕೊಂದನಪಕಾರಣದಿಂ ಮೊಱೆಯೋ ಮನೋಭವಾ: **ಆದಿಪು,** ೧೨. ೩೩); ಒಳ್ಳೆಯ ನಡತೆ, ಶೀಲ (ಮೊಱೆಯಱೆಯಂ ಆಗಳುಂ ಕಥಮಱೆಯಂ ಕಳ್ಗುಡಿದ ಪಾತಕಂ ತನ್ನಂ ತಾನಱೆಯಂ: **ಸಮಯಪ,** ೧೪. ೫೯)

**ಮೊಱೆಗೊಳ್** – ನಂಟಸ್ತಿಕೆ ಹೇಳಿಕೊ (ತಮ್ಮಣ್ಣನ ತಮ್ಮನ ಅಳಿಯನ ತಮ್ಮನ ಮೊಱೆಗೊಳ್ವರಾಗಿ ಮೊಱೆವಾದರಿಯರ್: **ಸಮಯಪ,** ೫. ೫೧)

**ಮೊಱೆಯವನ್** – ನಂಟ, ಬಂಧು (ಮೊಱೆಯವನಾಗೆ ಜಾಱೆಯರ್ ವಂಚಿಸುವರ್: **ಸಮಯಪ,** ೫. ೫೦)

**ಮೊಱೆಯಟಿ** – ನೀತಿಯನ್ನು ತೊರೆ, ಕ್ರಮತಪ್ಪು (ಅಗ್ನಿರಾಜನೆಂ ಅರಸಂ ತನ್ನ ಮಗಳಂ ತಾನೆ ಕೊಂಡು ಮೊಱೆಯಟಿದನಪ್ಪುದಱೆಂ: **ವಡ್ಡಾರಾ,** ಪು ೧೧೮, ಸಾ ೨೫)

**ಮೊಱೆಯಿಡು** – ಆಕ್ರಂದನ ಮಾಡು (ರೌದ್ರಶರದ ದೊಣೆಗೆ ಕೆಯ್ಯಂ ನೀಡಿದಾಗಳ್ .. .. ಸುರರ್ ಮೊಱೆಯಿಟ್ಟರ್: **ಪಂಪಭಾ,** ೧೩. ೧೯೨); ಬಿನ್ನವಿಸು (ಕಚ್ಚದಿರಿಮೆಂದು ಭಯದಿಂ ನಿಚ್ಚಂ ಮೊಱೆಯಿಟ್ಟು ಪುತ್ತನರ್ಚಿಸುತಿರೆಯುಂ ನಚ್ಚಿನ ನಾಗರದೆಂತುಂ ಕಚ್ಚದೆ ಮಾಣ್ದಪುವೆ: **ಸಮಯಪ,** ೭. ೭೯)

**ಮೊಱೆವಾದರಿ** – ಬಂಧುತ್ವದ ಜಾರೆ (ತಮ್ಮಣ್ಣನ ತಮ್ಮನ ಅಳಿಯನ ತಮ್ಮನ ಮೊಱೆಗೊಳ್ವರಾಗಿ ಮೊಱೆವಾದರಿಯರ್: **ಸಮಯಪ,** ೫. ೫೧)

**ಮೊಳ** – ಒಂದು ಅಳತೆ, ಬೆರಳತುದಿಯಿಂದ ಮೊಳಕೈವರೆಗೆ (ಪದಿನೆಂಟು ಸಾಗರೋಪಮಾಯುಷ್ಯನುಂ ನಾಲು ಮೊಳಥ ನಿಡಿಯನುಂ .. .. ಆಗಿ: **ಚಾವುಂಪು,** ೨೬೩, ೧೧)

**ಮೊಳಕಲಿಸು** – ಒಂದರೊಳಗೊಂದು ಸೇರು (ಅಂಬಂ ಅಂಬಟ್ಟುವವೊಲ್ ಪುಂಖಾನುಪುಂಖಂ ಮೊಳಕಲಿಸೆ ಮನೋಬೇಗದಿಂ ಬೇಗಮೆಚ್ಚಂ: **ನೇಮಿನಾಪು,** ೬. ೪೩)

**ಮೊಳಕಾಲ್** – ಮೊಣಕಾಲು (ಸಿರಿ ಬರೆ ಮೊಳಕಾಲನಾಂಪ ಗಾಂಪರುಮೊಳರೇ: **ಸಮಯಪ,** ೩. ೫೯)

**ಮೊಳಗು** – ಶಬ್ದಮಾಡು (ಆಗಳ್ ಕುಂಭಸಂಭವನುಲಿದ ಜನರ ಕಳಕಳರವಮುಮಂ ಮೊಳಗುವ ಪಱೆಗಳುಮಂ ಬಾರಿಸಿ: **ಪಂಪಭಾ,** ೨. ೭೪ ವ); ಗುಡುಗು (ಸಿಡಿಲಿಂ ಮಿಂಚಿ ಮೊಳಗಿಂ ಪಡೆಗುಳ್ಕಂ ಪಡೆವಹೀಂದ್ರರೆರ್ದೆಗಿಡುವಿನೆಗಂ: **ಆದಿಪು,** ೧೩. ೬೨); ವಾದ್ಯಘೋಷ (ಬದ್ದವಣದ ಪಱೆಗಳ್ ಕಿವಿ ಸದ್ದುಂಗಿಡೆ ಮೊಳಗೆ ದೇವದುಂದುಭಿರವಂ ಒಂದು ಉದ್ದಾನಿ ನೆಗಱೆ ಮುಗುಳ ಅಲರ ಒದ್ದೆ ಕರಂ ಸಿದ್ಧಮಾದುದು ಅಂಬರತಲದೊಳ್: **ಪಂಪಭಾ,** ೧೨. ೨೧೮)

**ಮೊಱೆಯಲ್ಲ** – ಹಸಿ ಶುಂಠಿ (ಮಱೆಗಾಲದೊಳ್ .. .. ಮೊಱೆಯಲ್ಲಮಂ ಉಪ್ಪುಂಗಾಯ್ಗಳನಾಗಲ್ ಸೇವಿಸಲ್ಕೆ ಭೀತಂ ಜೈನಂ: **ಸಮಯಪ,** ೬. ೯)

**ಮೊಟ್ಗು** – ಬಾಗು, ನಮಸ್ಕರಿಸು (ಸುರಕಾಯಸ್ಥಿತಿ ಸಮನಿಸುತಿರೆ ಪರಕಾಯಪ್ರವೇಶಂ ಏವುದು ಎಂಬಂತಿರೆ ಪಕ್ಷಿ ಶರೀರದಿನವತರಿಸಿ ಸುರಂ ತನಗೆ ಮೊಟ್ಗೆ ಪೊಡೆವಡೆ: **ಶಾಂತಿಪು,** ೯. ೯೨)

**ಮೋಕ್ಷ** – ಮುಕ್ತಿ (ಕ್ರಮದಿಂ ಪೂಜಿಸುವ ಶತಕ್ರತುವೆ .. .. ಪೂಜಾಲರ್ಘಯಮಕ್ಷೂಣಮೋಕ್ಷಮೆ: **ಪುಷ್ಪದಂಪು,** ೧೧. ೫೬); ಪುರುಷಾರ್ಥಗಳಲ್ಲಿ ನಾಲ್ಕನೆಯದು (ಅಪವರ್ಗಂ ನಿಶ್ರೇಯಸಂ ಅಪುನರ್ಭವಂ ಅಮೃತಂ ಅಕ್ಷರಂ ಮೋಕ್ಷಂ ಮುಕ್ತಿಪದಂ ಬ್ರಹ್ಮಂ ಕೈವಲ್ಯಪದವಿ ಶಿವಗತಿ ನಿರಾಮಯಂ ನಿರ್ವಾಣಂ: **ಅಭಿಧಾವ,** ೧. ೩. ೧೯); [ಜೈನ] 'ಸಪ್ತತತ್ವ'ಗಳಲ್ಲಿ ಒಂದು; ಎಲ್ಲದರಿಂದ ಬಿಡುಗಡೆ ಹೊಂದಿ ಆತ್ಮ ಪರಿಶುದ್ಧಗೊಳ್ಳುವುದು (ಜೀವಾಜೀವಾಸ್ರವ ಬಂಧ ಸಂವರನಿರ್ಜರಾಮೋಕ್ಷ ಭೇದದಿಂ ಸಪ್ತವಿಧಂ .. .. ಮೂಲೋತ್ತರಾದಿ ಭೇದಭಿನ್ನ ಕರ್ಮಪ್ರಕೃತಿಗಳ ನಿರ್ಮೂಳೋಚ್ಛಿತ್ತಿ ಮೋಕ್ಷಮುಂಬುದುಂ: **ಆದಿಪು,** ೧೦. ೬೩ ವ)

**ಮೋಕ್ಷಗತಿ** – ಮುಕ್ತಿ (ವೀತರಾಗತ್ವಂ ಅಂಬುರುಹಶ್ರೇಣಿಗುದಾತ್ತ ಮೋಕ್ಷಗತಿ ಪೌಷ್ಯಕ್ಕಾದುದು ಆವಂ ದಿಗಂಬರಸಾಂಗತ್ಯ ತಮಪ್ರಭಾವಮೆನಸುಂ ಮೆಯ್ವೆತ್ತೊಡೇನಾಗದೋ: **ಪುಷ್ಪದಂಪು,** ೬. ೫೫)

**ಮೋಕ್ಷಗಾಮಿ** – ಮುಕ್ತಿಯೆಡೆ ಸಾಗುವವನು (ಸಗರಸುತರೆಲ್ಲರುಂ ಮೋಕ್ಷಗಾಮಿಗಳ್: **ಅಜಿತಪು,** ೧೨. ೨೯)

**ಮೋಘ** – ವ್ಯರ್ಥ (ಪಿರಿದುಂ ಕಾಯ್ಪಿನೊಳ್ ಎಯ್ದೆ ಕಾಯ್ವ ಸಮಕಟ್ಟಂ ದೋಷಮಲ್ತು ಅಕ್ಕ ಮಚ್ಚರಮುಂ ಮೋಘಂ ಎಡಂಬಡುಂ ಕಲುಷಮುಂ ಮುನ್ನುಳ್ಳುದು.. ..ನಿಷ್ಕಾರಣಂ ಕಾಯ್ವರೇಂ: **ಪಂಪಭಾ,** ೭. ೩೫)

**ಮೋಚ** – ಬಾಳೆ (ತೊಂಡೆ ಪಡಲಂ ಮೋಚಂ ಕೂಗರಿ ಬದನೆ ಎನಿಪ ಮೇಲೋಗರಮಂ ಪಲವನಿಕ್ಕಿದರ್ ಶಶಿಮುಖಿಯರ್: **ತ್ರಿಷಷ್ಟಿಪು,** ೧೦. ೩೨)

**ಮೋಚು** – {ವೈಧವ್ಯಸೂಚಕವಾಗಿ] ಕೂದಲು ಬೋಳಿಸು (ಮೋಚು–ವೈಧವ್ಯೇ: **ಶಬ್ದಮದ,** ಧಾ ೨೧೮)

**ಮೋಡಿ** – ಮದ್ದಳೆಯನ್ನು ಬಾರಿಸಿ ಶಬ್ದ ಹೊರಡಿಸುವ ಒಂದು ಪರಿ (ಲಾಗು ಮೋಡಿ ಚಮತ್ಕಾರ ತುಡಿಕು ರಿಗ್ಘವಣೆ ಪಹರಣೆಗಳೆಂಬ ನಾನಾ ಶಬ್ದಂಗಳಂ ಬಾರಿಸಿ: **ಧರ್ಮಪ,** ೨. ೨೩ ವ)

**ಮೋದ** – ಪ್ರಸನ್ನನಾದ (ಶ್ರೀ ದರಹಾಸಂ ವದನದೀಧಿಯುಂ ಕರುಣವಲೋಕನಂ ಮೋದ .. .. ಸಮಂತು ಕೃತಿಸೌಖ್ಯಮನೆಯ್ದಿಸು: **ಅನುಭವ,** ೧); [ಜೈನ] ಐವತ್ತಮೂರು ಗರ್ಭಾನ್ವಯಕ್ರಿಯೆಗಳಲ್ಲಿ ಒಂದು (ಆದಾನ ಪ್ರೀತಿ ಸುಪ್ರೀತಿ ಧೃತಿ ಮೋದ .. .. ಎಂಬ ಅಯ್ವತ್ತಮೂಱು .. .. ಗರ್ಭಾನ್ವಯಕ್ರಿಯೆಗಳುಂ: **ಅದಿಪು,** ೧೫. ೧೫ ವ)

**ಮೋದಕ** – ಸಂತೋಷವುಂಟುಮಾಡುವ; ಕಡುಬು (ಅತ್ಯಂತಕೋಮಳತಾಳುತಳಸಂಘಟ್ಟಮಾತ್ರಕ್ಷೋದನೀಯ ಮೋದಕಮುಮಂ: **ಆದಿಪು,** ೧೧. ೨೬ ವ); ಕಡುಬು (ಶಾಕಾದಿಪಾಕದಿಂ ಎನ್ನ ಪಸಿವು ಪೋಗದೆನೆ ರುಕ್ಮಿಣಿ ಮೋದಕಂಗಳನಿಕ್ಕೆ ಸಂತುಷ್ಟನಾಗಿರ್ಪಿನಂ: **ಚಾವುಂಪು,** ಪು. ೪೨೦. ಸಾ. ೧೧)

**ಮೋದಗೆ** – ಕಡುಬು (ಆಕೆಗೆ ಗರ್ಭಮಾಗಿ ಮೋದಗೆಯ ಮೇಗೆ ಬಯಕೆಯಾದೊಡೆ ತಾಯ್ ಪಲವುಂ ತೆಱದ ಲಡ್ಡುಗೆಗಳ್ .. .. ಮೊದಲಾಗೊಡೆಯ ಪಲವುಂ ಭಕ್ಷ್ಯ ರೂಪಂಗಳುಮಂ ಕೊಂಡು: **ವಡ್ಡಾರಾ,** ಪು. ೧೮. ಸಾ. ೧೯)

**ಮೋದು** – ಅಪ್ಪಳಿಸು, ತುಳಿ (ಫಲವ್ರಾತದಿಂ ನೆಲನಂ ಮೋದುವ ಮಾತುಳುಂಗಮೆಸೆಗುಂ ವಿದ್ಯಾಧರೋದ್ಯಾನದೊಳ್: **ಆದಿಪು,** ೧. ೬೭)

**ಮೋದುವೆಱು** – ಪೆಟ್ಟು ತಿನ್ನು (ನೂಪುರರವವಿಳಸತ್ ವಾಮಪಾದಪ್ರಹಾರಕ್ಕಿದಱೊಳ್ ಪಕ್ಕಾಗಿ ಗೋತ್ರಸ್ಖಲನೆ ನೆಗಱೆ ಪೂಮಾಲೆಯಿಂ ಮೋದುವೆತ್ತೆಂ: **ಆದಿಪು,** ೪. ೯)

**ಮೋನ** – [ಮೌನ] ಮಾತಾಡದಿರುವುದು (ನಿಮ್ಮಡಿ ನೀಮೀ ಚಾತುರ್ಮಾಸಂ ಇಲ್ಲಿರ್ಪನ್ನೆಗಂ ಸ್ವಾಧ್ಯಾಯ ಅನುಷ್ಠಾನ ನಿಯಮದಿಂ ಮೋನಗೊಂಡಿರ್ಪುದು ಇದಂ ನಿಮ್ಮನಾಂ ಕಯ್ಯನೊಡ್ಡಿ ಬೇಡಿದೆನೆಂಬುದುಂ ಮುನೀಶ್ವರರ್ ಏಗೊಂಬುದುಂ: **ಸುಕುಮಾಚ,** ೧೧. ೩೮ ವ)

**ಮೋನಂಗೆಡು** – ಮೌನಭಂಗವಾಗು (ಮಡದಿಯ ಹಚ್ಚಡುಮಂ ಸುಲಿವೆಡೆಯೊಳ್ ಕೇಳಣ್ಣ ಕಿವಿಯ ಕೊಪ್ಪಂ ನೀಂ ಕೊಳ್ವೊಡೆ ನೋಯದಂತೆ ತೆಗೆಯೆಂದೊಡೆ ಮೋನಂಗೆಟ್ಟವಳಿವಳೆ ಸೋತವಳೆಂದು: **ಧರ್ಮಪ,** ೯. ೨೧)

**ಮೋನಂಗೊಳ್** – ಸುಮ್ಮಗಿರು (ಭಟ್ಟಾರರುಂ ಮೋನಂಗೊಂಡು ನುಡಿಯದೆ ಕೆಮ್ಮಗಿರ್ದೊಡೆ: **ವಡ್ಡಾರಾ,** ಪು. ೩೯, ಸಾ. ೧೦); ಮೌನವ್ರತ ತಾಳು (ನೀಮೀ

ಚಾತುರ್ಮಾಸಮಿಲ್ಲಿರ್ಪನ್ನೆಗಂ ಸ್ವಾಧ್ಯಾಯಾಧ್ಯಯನ ಅನುಷ್ಠಾನನಿಯಮದಿಂ ಮೋನಂಗೊಂಡಿರ್ಪುದು: **ಸುಕುಮಾಚ,** ೧೧. ೩೮ ವ)

**ಮೋನಿ –** ಮೌನಿ (ಆಂ ಪೇಟಿದಿರ್ದೊಡೆ ಮಹಾಕಷ್ಟಮಕ್ಕುಂ ಸೆಟ್ಟಿಯ ಭಕ್ತಿಯುಂ ಕಿಡುಗುಂ ಎಂಬ ನೆವದಿಂ ಮೋನಿಯಾಗಿ: **ಧರ್ಮಾಮೃ,** ೬. ೩೫ ವ)

**ಮೋಪಿನಾಕೆ –** ಬಯಕೆಯ ಹೆಂಗಸು, ಪ್ರಣಯಿನಿ (ಮತ್ತೊರ್ವ ಬೇಟಕಾರ್ತಿ ತಾಯ ಕಣ್ಣ ಬಂಚಿಸಿ ತನ್ನ ಮೋಪಿನಾಕೆಯ ಮನೆಗೆ ಪೋಪಬೇಟದಾಣ್ಮನಂ ಪಿಡಿದು: **ಪಂಪಭಾ,** ೪. ೯೮ ವ)

**ಮೋಪು –** ಈರ್ಷ್ಯೆ (ಅಂತು ಮುಳಿಸಿನ ಮೋಪಿನ ಗಂಡಮಚ್ಚರದ ಮೆಚ್ಚವಣಿಗೆಯ ಅಂಕಕಾಱರ್ ಎಕ್ಕತುಳಕ್ಕೆ ಎಕ್ಕೆಯಿಂ ಸೂಟೀಱಿಱಿವಂತೆ ಓರ್ವರ್ ಓರ್ವರೊಳ್ ಕಾದೆ: **ಪಂಪಭಾ,** ೧೨. ೭೬ ವ); ಪ್ರೀತಿ (ಮತ್ತೊರ್ವ ಬೇಟಕಾತಿ ತಾಯ ಕಣ್ಣಂ ಬಂಚಿಸಿ ತನ್ನ ಮೋಪಿನಾಕೆಯ ಮನೆಗೆ ಪೋಪ ಬೇಟದಾಣ್ಮನಂ ಪಿಡಿದು: **ಪಂಪಭಾ,** ೪. ೯೮ ವ)

**ಮೋಹ –** ಆಕರ್ಷಣೆ (ಭವದೀಯ ರೂಪಲಂಪಟ ವಿಟರಂ ಮರುಳ್ಗೊಳಿಇಸಿತು ಉತ್ಕಟ ಮೋಹತಮಃಪಟಂ ಪಟಂ: **ಆದಿಪು,** ೩. ೯೦); ಭ್ರಮೆ (ವೈದೇಹಿ ವೈದೇಹಿಯೆಂದು ಪುದಿದಿರೆ ಮನದಿಂ ಮೋಹತಮಂ ದೀಪಂ ವಾತಾಹತಿಯಿಂ ನಂದುವಂತೆ ಮೂರ್ಛೆಗೆ ಸಂದಂ: **ಪಂಪರಾ,** ೯. ೧೧೬); ಅರಿಷಡ್ವರ್ಗದಲ್ಲಿ ಒಂದು (ಮೋಹಾಂಧಕಾರೌಘ ಭಾಸ್ಕರಬಿಂಬಂ .. .. ಸುಖೋದಯಕರಂ ತಾನಿರ್ಕೆ ಮಚ್ಚಿತ್ತದೊಳ್: **ರಾಜಶೇವಿ,** ೧. ೩)

**ಮೋಹಧ್ವಾಂತ –** ಮೋಹವೆಂಬ ಕತ್ತಲೆ (ಭವವಿಷಾವೇಶ ವಿಧ್ವಂಸನಂಗೆಯ್ದುವೆ ಮೋಹಧ್ವಾಂತಮಂ ತೂಳ್ದಿದುವೆ ಬಗೆವೊಡೆ ಏ ಬಾರ್ತೆ ಪಾಷಾಣರೂಪಂ: **ಮಲ್ಲಿನಾಪು,** ೧. ೬)

**ಮೋಹನ –** ಆಕರ್ಷಿಸುವ (ತ್ರಿಭುವನಮೋಹನ ದೀಪಪ್ರಭೆ .. .. ಪುಟ್ಟಿದಳೆಸೆವ ಶಶಿಪ್ರಭೆ: **ಚಂದ್ರಪ್ರಪು,** ೬. ೧೨); ಆಕಕರ್ಷಣೆ (ವಿಳಾಸವತಿಯಂ ಅಗ್ರಭಾಗದೊಳ್ ಸಂಗಳಿಸಿತ್ತೊ ಮೋಹನಮಂ ಅಗ್ಗಳ ನಿನ್ನಯ ವಾಕ್ಪ್ರಗುಂಭನಂ: **ಚಂದ್ರಪ್ರಪು,** ೧. ೫೯)

**ಮೋಹನೀಯ –** [ಜೈನ] ಆತ್ಮನ ಬಂಧನಕ್ಕೆ ಕಾರಣವಾಗುವ 'ಮೂಲಕರ್ಮ'ಗಳಲ್ಲಿ ಒಂದು (ಮತ್ತರ್ಪತ್ತೆಂಟು ತೆಱದ ಮೋಹನೀಯವೆಂಬ ಕರ್ಮದ ಕೇಡಿನಿಂ ಅನಂತಸುಖಿಗಳಾದರ್: **ವಡ್ಡಾರಾ,** ಪು. ೧೫೪, ಸಾ. ೨೩)

**ಮೋಹರ –** ಸೈನ್ಯ (ಸಗರ್ವ ಗಂಧರ್ವ ವಾಹಕಸಮೂಹದ ಸಾಹಸದ ಆಹವದ ಮೋಹರಮಂ ಕಾಹುರದ ಮೋಡಿಯಿಂ ನೋಡಿ: **ರಾಜಶೇವಿ,** ೬. ೬೫ ವ); ಗುಂಪು (ಅರಗಿಳಿವಿಂಡು ವಾರುವದ ಮೋಹರ ಆಱಿಡಿವಿಂಡು ಬೀರರ ಪಡೆ ಕೊಂಚೆವಿಂಡು ಪಲವಡ್ಡಣದೊಡ್ಡು ಅಮಳ್ವಕ್ಕಿವಿಂಡು ಮೆಯ್ವೆರಸುವ ಕೊಂತಗಾಱರ್: **ಕಬ್ಬಿಗಕಾ,** ೧೫೭)

**ಮೋಹರಸ –** ಪ್ರೀತಿ (ಪೆಂಡಿರೊಳಂ ಭೀತಿರಸಂ ಮೋಹರಸಮಂ ಒತ್ತರಿಸುಗುಮೇ: **ಜಗನ್ನಾವಿ,** ೩. ೨೫)

**ಮೋಹರಿಸು –** ಅಧಿಕವಾಗು (ಲೀಲೆ ಮೋಹರಿಸೆ ಗಳಂ ಚಮತ್ಕರಿಸೆ ಗದ್ಗದಮಾಂತಿರೆ ಕಂಪನಂ ಕೊನರ್ತಿರೆ ಪುಳಕಂಗಳ್: **ಗಿರಿಜಾಕ,** ೩. ೨೮)

**ಮೋಹಿಡು –** ವ್ಯವಸ್ಥೆಗೆ ತರು, ಸುಸ್ಥಿತಿಯಲ್ಲಿರಿಸು (ಅದಾರೊ ತಮ್ಮ ತನುವಿಂ ಮೋಹಿಟ್ಟರ್ ಆ ಲೋಕಮಂ: **ಸಮಯಪ,** ೧೦. ೧೦೨)

**ಮೌಂಜಿ –** ಹುಲ್ಲಿನ ಹುರಿ, ಬ್ರಹ್ಮಚಾರಿಯು ಧರಿಸುವ ಮೌಂಜಿ ಹುಲ್ಲಿನ ಉಡಿದಾರ (ಜಿನರೂಪಮಂ ಬಿಸುಟ್ಟು ಮಂಜಿವಲ್ಕಲ ಕೌಪೀನದಂಡಧರನಾಗಿ ಪರಿವ್ರಾಜಕವೇಷಮಂ ಕೆಯ್ಕೊಂಡು: **ವರ್ಧಮಾಪು,** ೬. ೧೦ ವ)

**ಮೌಕುಳಿ –** ಕಾಗೆ (ಮೌಕುಳಿ ಕೃಷ್ಣಧ್ವಾಂಕ್ಷಂ ಕಾಕೋಳಂ ದ್ರೋಣಂ ಇನತನೂಜನೆನಿಕ್ಕುಂ: **ಅಭಿಧಾವ,** ೧. ೯. ೧೫)

**ಮೌಕ್ತಿಕ –** ನವರತ್ನಗಳಲ್ಲಿ ಒಂದು, ಮುತ್ತು (ಕನತ್ ಖಚಿತಮುಂ ಮೌಕ್ತಿಕಸ್ತಂಭಮುಮಪ್ಪ ಸರ್ವತೋಭದ್ರಂ ಎಂಬ ಸಿವಿಗೆಯನೇಱಿಸಿ: **ಪಂಪಭಾ,** ೩. ೪೮ ವ)

**ಮೌಖರ್ಯ –** [ಜೈನ] ಅನವಶ್ಯಕ ಮಾತನ್ನಾಡಿ ಹಿಂಸಿಸುವುದು (ಪುದಿದ ಸಮೀಕ್ಷಾದಿ ಕರಣಮ ಉದಯಿಪ ಕಂದರ್ಪಂ ಅಂತೆ ಕೌತ್ಕುಚ್ಚಂ ಪೆರ್ಚಿದ ಮೌಖಯ ಅನರ್ಥಕ್ಯದೊಳ್ ವ್ಯತಿಕ್ರಮಮತಿಪ್ರಸಾಧನಸಹಿತಂ: **ಸುಕುಮಾಚ,** ೬. ೨೦); ಒಂದು 'ಅನರ್ಥದಂಡ ವಿರತಿ'

**ಮೌನಾಧ್ಯಯನವೃತ್ತಿ –** [ಜೈನ] ಗರ್ಭಾನ್ವಯಕ್ರಿಯೆಗಳಲ್ಲಿ ಒಂದು; ಮೌನ ಶಾಸ್ತ್ರಾಭ್ಯಾಸ (ಮೌನಾಧ್ಯನವೃತ್ತತ್ವ .. .. ಇಂದ್ರಾಭಿಷೇಕ ಗುರುಪೂಜೋಪಲಂಭನ ಯೌವರಾಜ್ಯ .. .. ಎಂಬ ಅಯ್ವತ್ತಮೂಱು ಗರ್ಭಾದಿನಿರ್ವಾಣಪರ್ಯಂತಂಗಳಪ್ಪ ಗರ್ಭಾನ್ವಯಕ್ರಿಯೆಗಳಂ: **ಆದಿಪು,** ೧೫. ೧೫ ವ)

**ಮೌರವಪಾಶ –** ಕಬ್ಬಿಣದ ಸರಪಳಿ (ದೇವಾಸುರರ್ಗಮ ಅರಿದೆನಿಸಿ ನರಕನ ಪುರಮಂ ಬಳಸಿರ್ದುದೊಂದು ಮೌರವಪಾಶಂ: **ಜಗನ್ನಾವಿ,** ೧೨. ೫)

**ಮೌರ್ವೀ –** ಬಿಲ್ಲಿನ ಹೆದೆ (ಸಮುದ್ಯತ್ ರಜತಗಿರಿ ತಟ ಸ್ಪಷ್ಟ ಸಂಶ್ಲಿಷ್ಟ ಮೌರ್ವೀನಿನದಂ ಪರ್ವಿತ್ತು ಅಕಾಂಡಪ್ರಳಯ ಘನಘಟಾಟೋಪ ಗಂಭೀರನಾದಂ: **ಪಂಪಭಾ,** ೧೨. ೧೩೭)

**ಮೌಲ –** ರಾಜನ ಸೇವೆಯಲ್ಲಿರುವವನು (ಮೌಲ ಭೃತ್ಯ ಸುಹೃತ್ ಶ್ರೇಣಿ ಮಿತ್ರ ಅಟವಿಕ ತಂತ್ರಂಗಳ್ ಪಣ್ಣಿದಜಂತ್ರಂಗಳಂತೆ ಕಟಕುಟಮಾದುವು: **ಪಂಪಭಾ,** ೧೩. ೨೦ ವ)

**ಮೌಲಿ –** ತುದಿ; ತಲೆ (ಸತ್ಯೇಂದ್ರಚೋಳೇಂದ್ರ ಸತ್ಪದಪದ್ಮಕ್ಕೆ ಮರಂದಮಂ ಪಡೆದು ಮೌಲಿದ್ಯೋತಿಯಿಂ ಮೊಳ್ಗಿದಂ: **ರಾಜಶೇವಿ,** ೪. ೧೧೩)

**ಮೌವರಿ –** ಮೌರಿ, ಒಂದು ಊದುವಾದ್ಯ (ಕೊಂಬು ಮೌವರಿ ಕೊಳಲಿಂ ಬಿಡದೂದುವ ಸಿಳ್ಳಿಕ್ಕುವ ಕಡುರಭಸದ ಪೆರ್ಚಿಗೆ: **ತ್ರಿಷಷ್ಟಿಪು,** ೧೫. ೬)

**ಮೌಹೂರ್ತಿಕ –** ಜೋಯಿಸ (ಆತ್ಮೀಯ ಪುತ್ರೀ ವಿವಾಹೋತ್ಸವಕ್ಕೆ ಮೌಹೂರ್ತಿಕರಂ ಕರೆದು ದಿವಸಮಂ ಬೆಸಗೊಳ್ವುದುಂ: **ಆದಿಪು,** ೪. ೩೦ ವ)

**ಮೌಳಿ –** ಕಿರೀಟ (ಮಕುಟಂ ಕೋಟೀರಂ ಮೌಳಿ ಕಿರೀಟಂ ತಾನೆನಿಕ್ಕುಂ: ಅಭಿಧಾವ, ೧. ೧೩. ೨೦

**ಮ್ಲಾನ –** ಕಳೆಗುಂದಿದುದು (ವಿರಹಪರವಶಾಂಗಂ ತ್ಯಕ್ತ ಜಾಯಾನುಷಂಗಂ .. .. ದರಚಳಿದಪಾಂಗಂ ಮ್ಲಾನಮಾಯ್ತಾ ರಥಾಂಗಂ: **ಚಂದ್ರಪ್ರಪು,** ೮. ೫)

**ಮ್ಲಾನತೆ –** ಕಳಾಹೀನತೆ (ಮಾನವಕನ್ಯೆಯಂ ಬಯಸಿ ನಂದನ ನಿನ್ ಮನಕ್ಕೆ ಚಿಂತೆಯಂ ಮ್ಲಾನತೆಯಂ ಮುಖಕ್ಕೆ ತರವೇಟ್ಟುದೆ: **ಪಂಪರಾ**. ೪. ೯೮); ದುಃಖ (ಪಿರಿದುಂ ಬಿದಿ

ನಿಜನ್ನಾಕರಮೆನಿಸಿದ ಪದ್ಮಜಾತಿಗಂ ಮ್ಲಾನತೆಯಂ ದೊರಕಿಸಿಕೊಳಿಸಿದನೆನೆ ಮತ್ತಿತರೊಳಾದಂ ಮಾಪ್ಟಿ ಕೃಪೆ ಖಪುಷ್ಪಮದಲ್ತೇ: **ಚಂದ್ರಪ್ರಪು,** ೮. ೧೪)

**ಮ್ಲೇಚ್ಛಖಂಡ** – ಅನಾರ್ಯರ ನಾಡು, ಐವತ್ತಾರು ದೇಶಗಳಲ್ಲಿ ಒಂದು (ಮುನ್ನಿನಂದದಿಂ ಪೃತನಾಪತಿ ತದೀಯ ಗುಹಾದ್ವಾರಮಂ ತೆಱೆದು ಮ್ಲೇಚ್ಛಖಂಡಮಂ ಉಂಡಿಗೆಸಾಧ್ಯಂ ಮಾಡಿ: **ಶಾಂತೀಶ್ವಪು,** ೧೨. ೮೮ ವ)

**ಮ್ಲೇಚ್ಛರಾಜ** – ಅನಾರ್ಯರ ದೊರೆ (ವಸ್ತುವಾಹನಪುರಸ್ಸರಂ ಮ್ಲೇಚ್ಛರಾಜರಂ ಲಲಾಟಘೃಷ್ಟಭೂತಳರಂ ಮಾಡಿ: **ಆದಿಪು,** ೧೩. ೪೦ ವ)

# ಯ

**ಯಂತ್ರಮುಕ್ತ** – ಯಂತ್ರದ ಮೂಲಕ ಪ್ರಯೋಗಿಸಬೇಕಾದ ಆಯುಧ (ಅಸಿ ಮುಸಲ ಕಣಯ ಕಂಪಣ ಗದಾದಂಡ ತೋಮರ ಆದಿ ಆಮುಕ್ತಾಮುಕ್ತ ಪಾಣಿಮುಕ್ತ ಯಂತ್ರಮುಕ್ತಂಗಳಪ್ಪ ನಿಜನಿಶಿತ ನಿಖಿಳಾಯುಧಂಗಳಂ: **ಪುಷ್ಪದಂಪು,** ೮. ೨೮ ವ)

**ಯಃ ಪಲಾಯಃ ಸ ಜೀವತಿ** – ಯಾವನು ಪಲಾಯನ ಮಾಡುತ್ತಾನೋ ಅವನು ಬದುಕುತ್ತಾನೆ (ಯಃ ಪಲಾಯಃ ಸ ಜೀವತಿ ಎಂದೋಡುವ ತನ್ನ ಮೆಯ್ಯುನೆನಿಪ್ಪಾ ರುಕ್ಮಿಗಂ .. .. ಶ್ರುತಿಪೂರಮಾಯ್ತು ಜಯಭೇರಿನಾದವಾ ಕೃಷ್ಣನಾ: **ಜಗನ್ನಾವಿ,** ೧೭. ೫೭)

**ಯಕ್ಷ** – ಒಂದು ದೇವಯೋನಿ (ಖೇಚರ ಕಿನ್ನರ ಯಕ್ಷ ಪಿಶಾಚರ್ ಗಂಧರ್ವರ್ ಅಪ್ಸರಪ್ರಕರಂ ದೊಷಾಚರರ್ ಎಂದು ಅದ್ಭುತಗುಣಗೋಚರರವರ್ ಎಯ್ದೆ ದೇವಯೋನಿಗಳೆನಿಪರ್: **ಅಭಿಧಾವ,** ೧. ೧. ೫೪) ಯಕ್ಷಮುಖ್ಯ ಕುಬೇರ (ಧನಪತಿ ಯಕ್ಷಂ ಶ್ರೀದಂ .. .. ಧನದಂ ಕುಬೇರಂ ಅಳಕಾಧಿನಾಯಕಂ: **ಅಭಿಧಾವ,** ೧. ೧. ೪೬); [ಜೈನ] ವ್ಯಂತರ ದೇವತೆಗಳ ಒಂದು ವರ್ಗ (ಆನೀ ವಟವೃಕ್ಷ ನಿವಾಸಿಯೆಂ ಮನೋಹರನೆಂಬ ಯಕ್ಷನೆಂ: **ವಡ್ಡಾರಾ,** ಪು. ೫೬, ಸಾ. ೧೬)

**ಯಕ್ಷಕರ್ದಮ** – ಪರಿಮಳ, ಲೇಪನ ದ್ರವ್ಯ (ಕಾಳಾಗರುಕಾಶ್ಮೀರ ಕಸ್ತೂರಿ ಕರ್ಪೂರ ಯಕ್ಷಕರ್ದಮಕ್ಷೋದದೊಳಂ ನದೀತರಂಗಘಗಳಂ ವಿಚಿತ್ರವರ್ಣಂ ಮಾಡಿ: **ಆದಿಪು,** ೧೧. ೧೩೯ ವ)

**ಯಕ್ಷಿ** – [ಜೈನ] ಪ್ರತಿಯೊಬ್ಬ ತೀರ್ಥಂಕರನ ಬಳಿ ಇರುವ ಶಾಸನ ದೇವತೆ (ಯಕ್ಷಿ ಬರೆ ಕಂಡು ತಾಂ ಪ್ರತ್ಯಕ್ಷಂ ಕರೆದೆನ್ನಂ ಇತ್ತಳೀ ಪುತ್ರನಂ: **ಕರ್ಣನೇಮಿ,** ೬. ೪೦)

**ಯಕ್ಷೇಂದ್ರ** – ಯಕ್ಷರ ಒಡೆಯ, ಕುಬೇರ (ಕುಂದದ ಶರನಿಧಿ ಯಕ್ಷೇಂದ್ರನಿಧಿಯಿದೆನೆ ಸೊಗಯಿಸುಗುಂ: **ರಾಜಶೇವಿ,** ೬. ೧೧೩)

**ಯಜನ** – ಯಾಗ ಮಾಡುವಿಕೆ (ಅಂತು ಭವಿಷ್ಯದ್ ದ್ವಿಜವರ್ಣಕೆ ಅಧ್ಯಯನ ಅಧ್ಯಾಪನ ದಾನ ಪ್ರತಿಗ್ರಹ ಯಜನ ಯಾಜನವಿಶಿಷ್ಟವೃತ್ತಿಯುಮಂ: **ಆದಿಪು,** ೮. ೭೩ ವ)

**ಯಜಮಾನ** – ಯಾಗಕರ್ತ (ಧರ್ಮಪುತ್ರಂ ಸಪತ್ನಿ ಯಜಮಾನನಾಗಿರ್ದಾಗಳ್: **ಪಂಪಭಾ,** ೬. ೩೩ ವ)

**ಯಜ್ಞ** – ಯಾಗ ಕ್ರತು ಯಾಗಂ ಅಧ್ವರಮ ಸಪ್ತತಂತು ಸತ್ರಂ ಮಖಂ ಸವಂ ಯಜ್ಞಂ: **ಅಭಿಧಾವ,** ೧. ೧೧. ೪೧)

**ಯಜ್ಞದ್ರವ್ಯ** – ಯಜ್ಞ ಮಾಡಲು ಬೇಕಾದ ಸಾಮಗ್ರಿ (ಬ್ರಹ್ಮಋಷಿಯರುಮಂ ಅರಸುಮಕ್ಕಳಂ ಎಡೆಯೆಡೆದಿರಿಸಿ ಯಜ್ಞದ್ರವ್ಯಂಗಳೆಲ್ಲಮಂ ನೆರಪಿ: **ಪಂಪಭಾ,** ೬. ३३ ವ)

**ಯಜ್ಞವಿದ್ಯಾ[ದ್ಯೆ]** – ಯಜ್ಞದ ಬಗೆಗಿನ ತಿಳಿವಳಿಕೆ (ಚಾರುತರ ಯಜ್ಞವಿದ್ಯಾಪಾರಗರ ರವಂಗಳಿಂ .. .. ನೆಗೞ್ದುದು ಆಹುತಿಧೂಮಂ: **ಪಂಪಭಾ,** ೬. ३४)

**ಯಜ್ಞವೇದೀಸಂಭವೆ** – ಯಜ್ಞದ ವೇದಿಕೆಯಲ್ಲಿ ಹುಟ್ಟಿದವಳು, ದ್ರೌಪದಿ (ಯಜ್ಞವೇದೀಸಂಭವೆಯುಂ ಯಾಜ್ಞಸೇನಿಯುಂ ಪಾಂಚಾಲರಾಜತನೂಜೆ ಪವಮಾನತನೂಜನಲ್ಲಿಗೆ ಬಂದು: **ಗದಾಯು,** ೧. ೫೫ ವ)

**ಯಜ್ಞಸದ್ಮ** – ಯಾಗಮಂಟಪ (ವಿಸ್ತೀರ್ಣ ವಿತಾನೋಪೇತದಿದ ಒಪ್ಪಿದುದು ಉಚಿತ ಯೋಗ್ಯೇಧ್ಮಂ ಆ ಯಜ್ಞಸದ್ಮಂ: **ಕುಸುಮಾಕಾ,** ४. ೧೧೭)

**ಯಜ್ಞೋಪವೀತ** – ದ್ವಿಜರು ಧರಿಸುವ ಜನಿವಾರ (ಅವರವರ ನೆಲೆಗಳೊಳ್ ಬ್ರಹ್ಮಸೂತ್ರಾಭಿಧಾನ ಯಜ್ಞೋಪವೀತದಿಂ ಪವಿತ್ರಗಾತ್ರರ್ಮಾಡಿ: **ಆದಿಪು,** ೧೫. ೧೧ ವ)

**ಯತಯಾತಪ್ರೌಢಿ** – ಅಂಕುಶದಿಂದ ಆನೆಯನ್ನು ನಿಯಂತ್ರಿಸುವ ಕೌಶಲ (ಯತಯಾತಪ್ರೌಢಿಯಿಂ ಮಿಂಚಿನ ಮೊಗವಡಮಂ ಬೀಸೆ: **ಅನಂತಪು,** ३. ३೫)

**ಯತಿ** – ಮುನಿ (ಅನಂತಚತುಷ್ಟಯವಿಳಾಸಿ ಕೈವಲ್ಯಲಕ್ಷ್ಮಿಯಂ ಯತಿ ಪಡೆದಂ: **ಆದಿಪು,** ೧೦. ೧೫); ಪದ್ಯವನ್ನು ಓದುವಾಗ ನಿಲ್ಲಿಸುವ ವಿಶ್ರಾಮಸ್ಥಾನ (ಯತಿ ಎಂಬುದು ಉಸಿರ್ವ ತಾಣಂ: **ಕವಿರಾಮಾ,** ೧. ೭೧)

**ಯತಿಗಣ** – ಮುನಿಸಂದೋಹ (ಛಂದೋನಿಬಂಧನದಂತೆ ಯತಿಗಣಮಂ .. .. ಯಾಮ್ಯದಿಶೆಯಂತೆ ಧರ್ಮಪ್ರಭವವಿಭಾವಮುಂ ಎಂಬ ಮಹನೀಯಮಹಿಮೆಯಂ ತಳೆದು .. .. ಇರ್ಪುದಾ ಪುರಂ: **ಪುಷ್ಪದಂಪು,** ೯. ३೦ ವ)

**ಯತಿರಾಜ** – ಮುನಿಶ್ರೇಷ್ಠ (ಯತಿರಾಜ ಆಸ್ಯಪಯೋಜದಿಂದೊಗೆದ ಭಾಸ್ವದ್ದಿವ್ಯ ಮಂತ್ರಾವಳೀರುತಿಗಂ ದಕ್ಷಿಣದಿಂದೆ ಮಾರುತಸಖಂ ಪ್ರತ್ಯಕ್ಷಮಾಕಾರಮಾಂತು .. .. ಸರ್ಪಿರ್ಮ್ಯಾಹುತಿಯಂ ಕೈಕೊಳುತಿರ್ದಂ: **ಕುಸುಮಾಕಾ,** ४. ೧३३)

**ಯತ್ಪರಾರ್ಥಂ ಶರೀರಂ** – ಈ ಶರೀರವು ಇತರರ ಉಪಕಾರಕ್ಕೇ ಇರುವುದು (ಎಂತುಂ ಯತ್ಪರಾರ್ಥಂ ಶರೀರಂ ಎಂಬ ಸುಭಾಷಿತಂ ಪೇೞಿದಂತೆ ಈ ಪುರುಷನಂ ತೆಗೆಯದಂದು ಕಾಪುರುಷನಪ್ಪೆಂ: **ಪಂಚತಂತ್ರ,** ೧೮೦ ವ)

**ಯಥಾಕ್ರಮ** – ಸಮರ್ಪಕವಾದ ರೀತಿ (ದಮಿತಾರಿಯ ಭುಜಬಲ ವಿಕ್ರಮದ ಅಳವಿಗೆ ಮೆಚ್ಚಿ ಮಚ್ಚುಗುಡಿಸುವವೊಲ್ ಅನುಕ್ರಮದಿಂ ನೀರ್ಗುಡಿಸಿ ಯಥಾಕ್ರಮದಿಂ ಪದವಡಿಸಿ ಪಾರಲೌಕಿಕವಿಧಿಯಂ: **ಶಾಂತಿಪು,** ४. ೫೮)

**ಯಥಾಖ್ಯಾತಚಾರಿತ್ರ** – [ಜೈನ] ಮೋಹನೀಯ ಕರ್ಮಗಳನ್ನೆಲ್ಲ ಕಳೆದುಕೊಂಡ ಆತ್ಮನ ಸ್ಥಿತಿ, ಸಪ್ತಸಂಯಮಗಳಲ್ಲಿ ಒಂದು (ವೀತರಾಗದ್ವೇಷ ಭಾವನಾಭಾವಿತ ಯಥಾಖ್ಯಾತಚಾರಿತ್ರಕ್ಷೀಣ ಕಷಾಯ ವೀತರಾಗಛದ್ಮಸ್ಥ: **ಆದಿಪು,** ೧೦. ೧४ ವ)

**ಯಥಾಗಮ** – ಆಗಮಕ್ಕನುಗುಣವಾಗಿ (ಅಂತಾ ಯತಿತಿಲಕಂ ಭೀತಿಯೊಳ್ ಪ್ರಾಯೋಪಗಮನಂಗೆಯ್ವುದುಂ ಯಥಾಗಮ ಅರ್ಥದ್ರವ್ಯಂಗಳಂ ಅನುಕ್ರಮದಿಂದಜೀವ ಆಜ್ಞಾನಿಚಯನಿಮುಮಂ .. .. ಬೇಱೆವೇಱೆ ಹೃದ್ಗತಂಮಾಡಿ ಧರ್ಮಧ್ಯಾನಮಯನಾದಂ: **ಶಾಂತಿಪು,** ೯. ೧೧೮ ವ)

**ಯಥಾಯಥಂ** – ಯದ್ವಾತದ್ವ (ಕಳ್ಳರ್ ಈ ಅಡವಿಯೊಳ್ ಆಱಡಿಗೊಂಡೊಡೆ ಎಮ್ಮವರೆಲ್ಲಂ ಸತ್ತು ಕೆಟ್ಟು ಯಥಾಯಥಂ ಆದೊಡಂ: **ಜೀವಸಂ,** ೧೦. ೩೦ ವ)

**ಯಥಾ ರಾಜಾ ತಥಾ ಪ್ರಜಾ** – ರಾಜನಂತೆ ಪ್ರಜೆ (ಶ್ರೀಜಿನದೀಕ್ಷೆಗೆ ತನುವಂ ಯೊಜಿಸೆ ಕಲ್ಯಾಣಮಿತ್ರನೆಮಬರಸು ಯಥಾ ರಾಜಾ ತಥಾ ಪ್ರಜಾ ಎಂಬೋಜೆಯಿನಂದರಸುಗಳ್ ಪಲರ್ ತಜಿಸಂದರ್: **ಯಶೋಧಚ,** ೪. ೬೫)

**ಯಥೇಷ್ಟಚರಿತ್ರ** – ಇಷ್ಟ ಬಂದ ನಡವಳಿಕೆ (ದಯೆಯಿಲ್ಲದ ಅನ್ಯಸಮಯಿಗಳ ಯಥೇಷ್ಟಚರಿತ್ರದಿಂದೆ ಜೈನಚರಿತ್ರಂ ಪ್ರಿಯಮಾದುದು: **ಸಮಯಪ,** ೫. ೨೬)

**ಯದುವಂಶ** – ಯದುವಿನ ವಂಶ (ಯದುವಂಶಶ್ರೀಲಲಾಮಂ ರಿಪುಗಿರಿಕುಳಿಶಂ .. .. ಅರಮನೆಯಂ ತೋರಣದ್ಯುದ್ಧ ಶೋಭಾಸ್ಪದಮಂ ಪೊಕ್ಕಂ ನೃಪೇಂದ್ರಂ: **ಕರ್ಣನೇಮಿ,** ೭. ೨೦೫); ಯದುವಂಶದವನು (ಪಗೆಗೆ ವಧಮಂ ಯದುವಂಶಂ ಪೆಱತುಪಾಯದಿಂ ಚಿಂತಿಸಿದಂ: **ಜಗನ್ನಾವಿ,** ೯. ೪೦)

**ಯದೃಚ್ಛೆ** – ಆಕಸ್ಮಿಕ ಘಟನೆ (ನಿರ್ಹೇತುಕಮಕ್ಕುಂ ಯದೃಚ್ಛೆ: **ಅಭಿಧಾವ,** ೨. ೨. ೨೭)

**ಯಮ** – ಇಂದ್ರಿಯನಿಗ್ರಹ (ಇದು ಧರ್ಮಶಾಸ್ತ್ರಸಂಜನಿತ ರಹಸ್ಯಮೋ ಯಮಮೊ ಪೇೞ್ ಪೆರತೇಂ ಅಪವರ್ಗಮಾರ್ಗಮೋ: **ಕಾದಂಬ,** ೫. ೧೧೩), ಯೋಗಮಾರ್ಗ (ಇದು ಧರ್ಮಶಾಸ್ತ್ರಸಂಜನಿತ ರಹಸ್ಯಮೊ ಯಮಮೊ ಪೇೞ್: **ಕಾದಂಬ,** ೫. ೧೧೩); ಮೃತ್ಯುದೇವತೆ (ಯಮಂ ಅರ್ಕಸುತಂ ಧರ್ಮಂ ಯಮುನಾಸಹಜಂ ಪರೇತವಿಭು ದಂಡಧರಂ ಶಮನಂ ಪಿತೃಪತಿ ಕಾಲಂ ಸಮವರ್ತಿ ಕೃತಾಂತಂ ಅಂತಕಂ ಕೀನಾಶಂ: **ಅಭಿಧಾವ,** ೧. ೧. ೪೧); ನಿತ್ಯ ಮಾಡಬೇಕಾದ ಧಾರ್ಮಿಕವಿಧಿ (ನಿತ್ಯಕರ್ಮಮದು ಯಮಮಕ್ಕುಂ: **ಅಭಿಧಾವ,** ೧. ೧೧. ೩೬);

**ಯಮಜ** – ಯಮನ ಮಗ, ಯುಧಿಷ್ಠಿರ (ಸೊಕಮಿರ್ಕೆ ಅಕ್ಕಟ ದರ್ಭಪಾಣಿ ಯಮಜಂ ದರ್ವೀಕರಂ ವಾಯುಪುತ್ರಕನುಂ ಜರ್ಜರಹಸ್ತಂ ಇಂದ್ರತನಯಂ ದಸ್ರಾತ್ಮಜರ್ ದಂಡಮುಷ್ಟಿಕರರ್ ಶಸ್ತ್ರವಿಡಂಬಂ ಏವುದವರ್ಗಂ ಪಾಂಚಾಲಿಯುಂ ಗಂಧದಾಯಕಿಯಾಗಿರ್ಪಿನಂ ಅಂದು ಮತ್ಸ್ಯಗೃಹದಿಂದ ಈ ನಿಗ್ರಹಂ ಪೊಲ್ಲದೇ: **ಗದಾಯು,** ೩. ೩೪)

**ಯಮಳ** – ಅವಳಿ ಜವಳಿ, ನಕುಲ, ಸಹದೇವರು (ಅಡವಿಯ ಕಾಯಂ ಪಣ್ಣುಮಂ ಉದಿರ್ಪಿ ತಿಂದಗಲದೆ ನಿಂದೀ ಯಮಳರಾದ ತೆಱದಿಂ ನೋಯಿಸರಯ್ ನಿನ್ನ ನನ್ನಿಕಾಱನ ಮನಮಂ: **ಪಂಪಭಾ,** ೭. ೪೮)

**ಯಮಸಮಾಧಿ** – ಇಂದ್ರಿಯನಿಗ್ರಹದಿಂದ ಸಾಧಿಸಿದ ಸಮಾಧಿಯೋಗ (ಯಮಸಮಭಿಕರಂ ಯಮಸಮಾಧಿಯಿಂ ಈಶ್ವರನಿಂ ವರಂ ವರಂ ಸಮನಿಪ ಬಾಣನೀ ಸುರರ್ಗೆ ಹೃದ್ಗತಬಾಣನೆ ಬಲ್ಲೆಂ: **ಜಗನ್ನಾವಿ,** ೧. ೭೨)

**ಯಮಿ** – ಸಂಯಮಿ, ಸನ್ಯಾಸಿ (ಯಮಿವೃಷಭ ನಿಮ್ಮ ಬೆಸಸಿದ ಕಮಲಾಕರದೊಳ್ ಸರೋಜಕುಟ್ಮಲದೊಳ್ ಸಂಕ್ರಮಿಸಿ ವಿರಾಜಿಸಿ ಬೆಳಗುತ್ತುಮಿರ್ದುದು ನೋಡಿ ಕಂಡೆಣಾನುಂಗುರಮಂ: **ಸುಕುಮಾಚ,** ೩. ೨೪); ತಪಸ್ವಿ (ಅಪಾಯಚಯದಿಂ ಸೊಪ್ಪಾಗೆಯುಂ ದೇಹಂ ಆ ಯಮಿ ನಿಷ್ಕಂಪದಿಂ: **ಕರ್ಣನೇಮಿ,** ೨. ೬೫)

**ಯವನಿಕಾ** – ತೆರೆ, ಪರದೆ (ನವಮೇಘಧ್ವನಿ ಪುಷ್ಕರಧ್ವನಿ ತರತ್ತರಾಳಿ ಪುಷ್ಪೋಪಹಾರವಿಳಾಸಂ ರುಚಿರಾಂಬುದಂ ಯವನಿಕಾವಿನ್ಯಾಸಮಾದಲ್ಲಿ: **ಆದಿಪು,** ೬. ೭೨)

**ಯವಸ** – ಹುಲ್ಲು (ಅಭಿರಾಮ ಜಲಾಶಂಗಳುಮಂ ಪ್ರಭೂತ ಯವಸ ಉದಕಂಗಳುಮಂ ಸಮಸ್ತಸಸ್ಯಸಂಪತ್ಸಂಪನ್ನ ಸುಕ್ಷೇತ್ರಂಗಳುಮಂ: **ಆದಿಪು,** ೮. ೬೩ ವ)

**ಯವೆ** – ಒಂದು ಜಾತಿಯ ಗೋಧಿ (ಯವೆ ಗೋರೋಚನ ಮುದ್ವದೀಪನಿವಹಂ ದೂರ್ವಾಂಕುರಂ .. .. ಎಸೆದತ್ತು ಉದ್ವಾಹಗೇಹಾಂತದೊಳ್: **ತ್ರಿಷಷ್ಟಿಪು,** ೧೮. ೩೯)

**ಯಶಃಪಟಹ** – ಜಯಭೇರಿ (ಮದನ ಯಶಃಪಟಹಧ್ವನಿ ಪುದಿಯೆ ವಿಯಚ್ಚರನ ಕರ್ಣಮಂ ಹೃದಯಕ್ಕೆಯ್ದಿದುದಿಲ್ಲ ದಿವ್ಯವಚನಂ: **ಪಂಪರಾ,** ೯. ೯೪)

**ಯಶಃಪತಿ** – (ತತ್ಪುರಪತಿ ವರವಿಭವ ಮರುತ್ಪತಿ ತೇಜೋವಿರಾಜಿತ ಅಹಃಪತಿ ಚಂಚತ್ಪರಮಯ ಯಶಃಪತಿ ವಿದ್ವತ್ಪೂಜ್ಯಂ ಜ್ವಲನಜಟಿಮಹಾಖಚರೇಜ್ಯಂ: **ಶಾಂತೀಶ್ವಪು,** ೧. ೧೪೬)

**ಯಶಃಪಿಂಡ** – ಜಯಗಳ ಸಾಲು (ವಿಪುಯಶಃಪಿಂಡಂ ಪುಣ್ಯಪುಂಜಂ ಆ ಕ್ಷತ್ರಧಾಮಂ ತಾನಾ ನೃಪಸುತಂ: **ಆದಿಪು,** ೮. ೪೪)

**ಯಶಸ್ಕೀರ್ತಿ** – [ಜೈನ] ನಾಮಪ್ರಕೃತಿಗಳಲ್ಲಿ ಒಂದು, ಜೀವನಿಗೆ ಕೀರ್ತಿ ಬರುವಂತೆ ಮಾಡುವಂಥದು (ಯಶಸ್ಕೀರ್ತಿ ಅಯಶಸ್ಕೀರ್ತಿ ನಿರ್ಮಾಣ ನೀಚೈರ್ಗೋತ್ರಂಗಳೆಂಬ ಎಪ್ಪತ್ತೆರಡುಂ ಪ್ರಕೃತಿಗಳಂ ದೂರೀಕೃತಂ ಮಾಡಿ: **ಪಂಪರಾ,** ೧೬. ೮೦ ವ)

**ಯಶಃಸ್ತಂಭ** – ಗೆಲುವಿನ ಸ್ಮಾರಕವಾದ ಕಂಬ (ಇಲ್ಲಿಯೆ ಬೀಡುವಿಟ್ಟು ನಿಜೆಸಲ್ವೇಟ್ಟುಂ ಯಶಸ್ತಂಭಮಂ: **ಪುಷ್ಪದಂಪು,** ೬. ೧೬)

**ಯಶೋದುಂದುಭಿ** – ಗೆಲವನ್ನು ಸಾರುವ ದುಂದುಭಿಧ್ವನಿ (ಪ್ರಕಟ ಯಶೋದುಂದುಭಿ ಸಿಂಹಾಸನ ಸುರದುಂದುಭಿ ಪತಿಚರಣಕ್ಕಮಳಭೃಂಗಂ ಪಂಪಂ: **ಆದಿಪು,** ೧. ೩೩)

**ಯಶೋಧನಿ** – ಕೀರ್ತಿಯನ್ನೇ ಧನವಾಗುಳ್ಳವನು (ದಿವ್ಯಚಾಪಮಂ ನೀವಿ ಯಶೋಧನಿ ಜೇವೊಡೆಯಲ್: **ಕರ್ಣನೇಮಿ,** ೧೨. ೨೩೬)

**ಯಶೋಲತಿಕೆ** – ಕೀರ್ತಿಯೆಂಬ ಬಳ್ಳಿ (ವಿಶದಯಶೋಲತಿಕಾವೃತ ದಶದಿಗ್ವಲಯಂ ಬುಧಾಶ್ರಯಂ.. .. ಅಮರಶಕ್ತಿಯೆಂಬಂ ಪೆಸರಿಂ: **ಪಂಚತಂತ್ರ,** ೬೫)

**ಯಷ್ಟಿ** – ಕೋಲು (ಶರೀರಯಷ್ಟಿ ತೊಟ್ಟಗೆ ಕಡುಗಂದಿ ಕುಂದೆ ಬಡವಾದುದು ಯೋಗನಿಯೋಗಭಾವದೊಳ್ ಬಗೆ ಬಡವಾದುದಿಲ್ಲ ನೆಗೞ್ದಾ ಸುಕುಮಾರಮಹಾಮುನೀಂದ್ರನಾ: **ಸುಕುಮಾಚ,** ೧೨. ೪೦); ಗದೆ (ಕುಮಾರನಂ ಯಷ್ಟಿ ಮುಷ್ಟಿ ಪ್ರಹಾರಾದಿಗಳಿಂ ಗೆಲ್ದಿರ್ದೋನನೆತ್ತಿಕೊಂಡು: **ವಡ್ಡಾರಾ,** ಪು. ೫೬, ಸಾ. ೨೬); ಹಾರ (ಚಾತಕಂ ಜಲಕಣಯಷ್ಟಿಯೊಳ್ ಕಳಿಕೆಗರ್ಚಿ ಕರಂ ಸೊನೆ ಸೋರ್ವ ಭಂಗಿಯಿಂ ಬಲವರೆ: **ನೇಮಿನಾಪು,** ೭. ೪೨)

**ಯಾಚಕ** – ಬೇಡುವವನು, ತಿರುಪೆಗಾರ (ಕೀಚಕಂ ಕಾಮದೇವಂ ಮಾಡಿದ ಯಾಚಕನಂತೆ ಕರಮೆ ನಾಣ್ಗೆಟ್ಟು ಮನಂಗಾಪು ಅೞಿದು ಅಳಿಪಿ ನೋಡಿ: **ಪಂಪಭಾ,** ೮. ೫೯ ವ)

**ಯಾಗ** – ಯಜ್ಞ (ಕರಂಗಳಡಂಗಿ ಕಿಲುಂಬುಗೊಂಡ ಕನ್ನಡಿಗೆಣೆಯಾಯ್ತು ಭಾನುವಳಯಂ ದಿವಿಜಾಪಗೆ ನೋಡೆ ನೋಡೆ ಕರ್ಪಡರ್ದೆಣೆಯಾದುದು ಆ ಯಮುನೆಗೆ ಅಗ್ಗದ ಯಾಗದ ಧೂಮದ ಏಟ್ಗೆಯೊಳ್: **ಪಂಪಭಾ,** ೬. ೩೬)

**ಯಾಜನ** – ಯಜ್ಞ ಮಾಡಿಸುವುದು, ಬ್ರಾಹ್ಮಣನ ಷಟ್ಕರ್ಮಗಳಲ್ಲಿ ಒಂದು (ಅಂತು ಭವಿಷ್ಯದ್ ದ್ವಿಜವರ್ಣಕೆ ಅಧ್ಯಯನ ಅಧ್ಯಾಪನ ದಾನ ಪ್ರತಿಗ್ರಹ ಯಜನ ಯಾಜನವಿಶಿಷ್ಟವೃತ್ತಿಯುಮಂ: **ಆದಿಪು,** ೮. ೭೩ ವ)

**ಯಾಜಿಸು** – ಯಜ್ಞಮಾಡು (ಅಲಸದೆ ಯಾಜಿಪುದರ್ಕಂ .. .. ಪಲಬರ ಪಾಪಮನೆಂತುಂ ಬೆಲೆಯಿಟ್ಟುಂ ಕೊಳ್ವುದರ್ಕಂ ಅರ್ಹರ್ ಪಾರ್ವರ್: **ಸಮಯಪ,** ೧೧. ೮೩)

**ಯಾಜ್ಞಸೇನಿ** – ಯಾಜ್ಞಸೇನ[ದ್ರುಪದ]ನ ಮಗಳು, ದ್ರೌಪದಿ (ಯಜ್ಞವೇದೀಸಂಭವೆಯುಂ ಯಾಜ್ಞಸೇನಿಯುಂ ಪಾಂಚಾಲರಾಜತನೂಜೆ ಪವಮಾನತನೂಜನಲ್ಲಿಗೆ ಬಂದು: **ಗದಾಯು,** ೧. ೫೫ ವ)

**ಯಾತವ್ಯ** – ಶತ್ರು (ಆತಂ ಇನ್ನೆವರೆಗಂ ವ್ಯಾನರು ಯಾತವ್ಯರುಂ ಆಜ್ಞಾವಿಧಾನರುಂ ಅಪ್ಪ ನಮ್ಮೊಳಾದುದು ನಯೋಪಾಯಂ: **ಶಾಂತಿಪು,** ೨. ೩೫ ವ)

**ಯಾತುಧಾನ** – ರಾಕ್ಷಸ (ಆ ಬಾಳನಂ ವಿಶಾಳಪುಣ್ಯಾದಾನನಂ ಯಾತುಧಾನಪ್ರಧಾನಂ ಕೊಂಡೊಯ್ಯೆ: **ಕರ್ಣನೇಮಿ,** ೭. ೧೧೨ ವ)

**ಯಾಥಾತ್ಮ್ಯ** – ಸ್ವಭಾವ (ಸಂಶಯವಿಪರ್ಯಯ ಸಾವದ್ಯಾನವವ್ಯವಸಾಯ ಸ್ವಭಾವರಹಿತಮಾಗಿ ಜೀವಾದಿ ಪದಾರ್ಥಯಾಥಾತ್ಮ್ಯಾವಗಂ ಸಮ್ಯಗ್‌ಜ್ಞಾನಂ: **ಆದಿಪು,** ೧೦. ೬೩ ವ)

**ಯಾದಃಪತಿ** – ವರುಣ, ಪಶ್ಚಿಮ ದಿಕ್ಕಿನ ಅಧಿಪತಿ (ದಂತವಕ್ರಂ .. .. ವನಮಾಲಾಸ್ಪದನೆಂದು ಯಾದಃಪತಿಯನದಿರ್ಪಿಯುಂ ಅದ್ರಿಧರನೆಂದು ಪವಮಾನನಂ ಅವಮಾನಿಸಿಯುಂ: **ಜಗನ್ನಾವಿ,** ೯. ೫೩ ವ)

**ಯಾದವೋದ** – ಮೊಸಳೆ (ಕರಿಯಂ ಸಂಕ್ರಂದನಂ .. .. ಕೋಣನಂ ಕಾಳಂ .. .. ಯಾದವೋದಂ ವರುಣಂ .. .. ಏಱೆಯುಂ ಒದವಿದಪರ್: **ನೇಮಿನಾಪು,** ೬. ೫೭)

**ಯಾದೋಯುಗಳ** – ಜೋಡಿ ಮೀನು (ಯಾದೋಯುಗಳದಂತಿರೆ ರಸಕ್ರೀಡಾಚಕೋರಂಗಳಂತಿರೆ ಭೂಕಾಂತನ ಕಣ್ಗಳೇಂ ನಲಿವುವೋ ನಂದಮಹಾದೇವಿಯೊಳ್: **ಅನಂತಪು,** ೧೧. ೧೯)

**ಯಾನ** – ಚಲನೆ (ಭೃಂಗಂ ಕುಂತಲಕ್ಕೆ ಅಂಚೆಗಳ್ ಮೃದುಯಾನಕ್ಕೆ ಪಿಕಂ ರವಕ್ಕೆ ಎಳಸೆ ತಂತಮ್ಮ ಸ್ವಜಾತೀಯ ಸಂಮದದಿಂ ಪಾಮರಿಯರ್ ಜಿತಾಮರಿಯರ್ ಇರ್ಪರ್: **ಮಲ್ಲಿನಾಪು,** ೨. ೧೫); ಪ್ರಯಾಣ (ಯಾನಶ್ರಮಮಾಗೆನಿತಾನುಂ ವಿಜಯಾರ್ಧಶೈಲ ಸುಮಸ್ಥಳದೊಳ್ ತಾನಿರ್ದಂ ವಜ್ರಾಯುಧಭೂನಾಥಂ ಸೇನೆವೆರಸು ಕೆಲವಾನುಂ ದಿನಂ: **ಶಾಂತೀಶ್ವಪು,** ೧೨. ೧೬); ನಡಿಗೆ (ಕಳರವಮಂ ಪಿಕಾಂಗನೆಗೆ .. .. ನವೀನ ಯಾನಮಂ ಅನೂನ ಮರಾಳಿಗೆ ಶಿಕ್ಷಿಗೆಯ್ಯಲ್ .. .. ನಡೆ ನಂದನಕ್ಕೆ: **ರಾಜಶೇವಿ,** ೧೦. ೧೦); ರಾಜನ ಷಡ್ಗುಣಗಳಲ್ಲಿ ಒಂದು (ಶಕ್ತಿತ್ರಯಸಂಪನ್ನರಪ್ಪ ವಿಜಿಗೀಷುಗಳಿರ್ಬರುಂ ಮೇಲೆತ್ತಿ ಬರ್ಪುದು ಯಾನಮೆಂಬುದಕ್ಕುಂ: **ಪಂಚತಂತ್ರ,** ೩೦೭ ವ); ಯುದ್ಧಕ್ಕೆ ಹೊರಡುವುದು (ಸಮದಂ ಯಾನಮೆ ಮಂದಮಂದಗಮನಂ ಕಸ್ತೂರಿಕಾ ಪಂಕಪಟ್ಟಮೆ ಧಾರಾಮದವಟ್ಟಮಾಯ್ತೆನಿಪಿನಂ: **ಆದಿಪು,** ೧೧. ೨೧)

**ಯಾನನಾಗ** – ಸವಾರಿಯ ಆನೆ (ದಿಗ್ವಿಜಯಕ್ಕೆ ಜಿನೇಂದ್ರಚಂದ್ರದೇವಂ ಪೊಱಮಟ್ಟಂ ಏಱೆ ಜಯಮಂ ಜಯಪರ್ವತಯಾನನಾಗಮಂ: **ಶಾಂತಿಪು,** ೧೦. ೧೪೪)

**ಯಾನಪಾತ್ರ** – ಹಡಗು (ದ್ರೋಣಿಯಾನಪಾತ್ರಾದಿಗಳೊಳ್ ಜಲದುರ್ಗೋತ್ತರನಮನುಪದೇಶಂಗೆಯ್ದು: **ಆದಿಪು,** ೬. ೬೨ ವ]

**ಯಾನಹಸ್ತಿ** – ಯಾನನಾಗ (ವಿಜಯಾರ್ಧಪರ್ವತಮೆಂಬ ಯಾನಹಸ್ತಿಯುಂ ಪವನಂಜಯಮೆಂಬ ತುರಗರತ್ನಮುಂ: **ಆದಿಪು,** ೧೫. ३ ವ)

**ಯಾನೆ** – ಹೋಗುವವಳು (ವರಪುತ್ರೀಸ್ಥಿರಭವಕಾಮ್ಯ ವಿಲಸತ್ ಸನ್ಮಾನ್ಯೆಯಂ ಯಾನೆಯಂ: **ಗಿರಿಜಾಕ,** ३. ೧೦)

**ಯಾಪ್ಯಯಾನ** – ಮೇನೆ, ಪಲ್ಲಕ್ಕಿ (ರತ್ನಪ್ರಭಾಸಮಾನ ಮಾನಾನೂನಮಂ ಚಂದ್ರಪ್ರಭಾಭಿಧಾನನುಂ ಯಾಪ್ಯಯಾನಮಂ ಅಟವಟಿಯಿಸಿದಾಗಳ್: **ವರ್ಧಮಾಪು,** ೧೩. ೯ ವ)

**ಯಾ ಮತಿಸ್ಸಾಗತಿಃ** – ಎಂತಹ ಬುದ್ಧಿಯೋ ಅಂತಹ ಗತಿ[ಯುಂಟಾಗುತ್ತದೆ] (ಯಾ ಮತಿಃ ಸಾಗತಿಃ ಎಂಬ ಪುರಾಣವಾಕ್ಯಮೇಂ ತಪ್ಪುಗುಮೇ: **ಪಂಚತಂತ್ರ,** ೩೬೯)

**ಯಾಮತೂರ್ಯ** – ಜಾವಕ್ಕೊಮ್ಮೆ ಮಾಡುವ ವಾದ್ಯಧ್ವನಿ (ರವಜಿತ ಯಾಮತೂರ್ಯರವಂ ಈಶನಂ ಅಬ್ಧಿಯೆ ನಿದ್ರೆಯತ್ತಲುಪ್ಪವಡಿಸುವಂತು ಮಾಟ್ಟುದು: **ಶಾಂತಿಪು,** ೫. ೧೩೫)

**ಯಾಮತ್ರಯ** – ಮೂರು ಜಾವಗಳು (ಒಂದು ದಿವಸಂ ಯಾಮತ್ರಯ ವಿರಾಮಸಮಯದೊಳ್ ತಾಂಬೂಲಕರಂಕ ವಾಹಿಕಾದ್ವಿತೀಯಂ ಉತ್ತುಂಗಸೌಧ ಶಿಖರನಿರ್ಯೂಹ ಪರ್ಯಂಕದೊಳ್ ಕುಳ್ಳಿರ್ದು: **ಚಂದ್ರಪ್ರಪು,** ೨. ೨೬ ವ)

**ಯಾಮಿಕ** – ಜಾವದ ಪಹರೆಯವನು (ಯಾಮಿಕನಂತೆ ಆರೋಪಿತಚಾಪನಾಗಿ .. .. ಸಮಯೋಚಿತ ನಿಯಮಮಂ ನಿರ್ವರ್ತಿಸಿ: **ಕಾದಂಬ,** ३. ೫೧ ವ)

**ಯಾಮಿಕವೃತ್ತಿ** – ಪಹರೆಯ ಕೆಲಸ (ಸುರಭಿದ್ಯೋತಕನೊಳ್ ಪ್ರದೀಪಕರಣಂ ತಾನೇವುದುದ್ಬೋದತಾಸ್ಪದನೊಳ್ ಯಾಮಿಕವೃತ್ತಿಯೇವುದು ವಿಶುದ್ಧಾಕಾರನೊಳ್ ಸ್ನಾನಮೇವುದು: **ಚಂದ್ರಪ್ರಪು,** ೧೨. ೦೫)

**ಯಾಮಿನಿ** – ರಾತ್ರಿ (ವಸುಧಾಂತರ್ವರ್ತಿಯಾಗಿರ್ದ ಅರಾತಿನಿಕಾಯಕ್ಕಿದು ಯಾಮಿನೀಸಮುದಿತಂ ದೇವೇಂದ್ರಚಾಪಂ ದಲೆಂಬಿನೆಗಂ.. ಬಾಹುಬಲೀಶಂ ಏಱೆಸಿದನಾ .. .. ಚಾಪಮಂ: **ಆದಿಪು,** ೧೪. ೯೧)

**ಯಾಮಿನೀವಿರಾಮ** – ರಾತ್ರಿಯ ಕೊನೆ, ಬೆಳಗು (ಅಂದಿನ ಪಯಣಮಂ ಮಾಣ್ದು ಮಱುದೆವಸಂ ಯಾಮಿನೀವಿರಾಮವಪ್ಪುದುಂ ಪ್ರಯಾಣಭೇರಿಯಂ ಪೊಯ್ಸಿದಾಗಳ್ ಅದಂ ವಿಹಗೇಂದ್ರಂ ಕೇಳ್ದು: **ಪಂಚತಂತ್ರ,** ೧೯೭ ವ)

**ಯಾಮ್ಯದಿಶೆ** – ಯಮನ ದಿಕ್ಕು, ದಕ್ಷಿಣ (ತಳರ್ದು ಬಂದೀ ದ್ವಿತೀಯದ್ವೀಪದ ಯಾಮ್ಯದಿಶೆಯೊಳ್ ಎಸೆವ ಇಷುಕಾಧಾರಿಣೀಧರದ ಮೂಡಣಭರತದೊಳ್: **ಚಂದ್ರಪ್ರಪು,** ४. ೭೯ ವ)

**ಯಾವಕ** – ಅರಗು, ಅಲತಿಗೆ (ಅಲತಗೆ ಜತು ಲಾಕ್ಷಾದ್ರವಂ ಅಲಕ್ತಕಂ ಯಾವಂ ಇವು ಸಮಾನಾರ್ಥಂ: **ಅಭಿಧಾವ,** ೧. ೧೩. ೧೩)

**ಯಾವಕರಸ** – ಅರಗಿನ ರಸ (ದಿನಲಕ್ಷ್ಮಿ ಸಮರ್ಪಿಸಿದಪಳೆನಿಸಿದಳ್ ಅಡಿಯೊಡುವಮರಿ ಯಾವಕರಸದಿಂ: **ಪುಷ್ಪದಂಪು,** ೯. ೭೪)

**ಯಾವನಾಳ** – ಜೋಳ (ತಿಳ ಅತಸೀ ಕುಸುಂಭಾದಿದೀಪ್ರೌಷಧಿಗಳುಂ ಯಾವನಾಳ ಕಂಗು ಕೋದ್ರವಾದಿಸರ್ವೌಷಧಿಗಳುಂ: **ಆದಿಪು,** ೮. ೬೧)

**ಯುಗ** – ಜೋಡಿ (ಮನೆಯಿಂದಂ ಮನೆಗೆಂದು ಪೋಪ ತೆಱದಿಂ .. .. ಯುಗಂ ತಳರ್ದು .. .. ಇಂತು ಬಂದು ನೆಲೆಸಿತ್ತೀಶಾನಕಲ್ಪಾಗ್ರದೊಳ್: **ಆದಿಪು,** ೫. ೭೦); ನೊಗ (ನೊಗನೆಂಬುದು ಯುಗ: **ಅಭಿಧಾವ,** ೧. ೧೪. ೨೯); ಒಂದು ಮಾರು (ಯುಗಮಾತ್ರಕ್ಷೇತ್ರಮಂ ಕಣ್ವರಿಕಿಸೆ ನೆಡೆದೀರ್ಯಾವಿಶುದ್ಧಿಕ್ರಮಂ ಕೈಮಿಗೆ .. .. ಗೃಹದ್ವಾರದೇಶಕ್ಕೆ ವಂದಂ: **ಮಲ್ಲಿನಾಪು,** ೧೩. ೧೪೮); ಚತುರ್ಯುಗಗಳಲ್ಲಿ (ಒಂದು ಕೃತ .. .. ತ್ರೇತೆ .. .. ದ್ವಾಪರಂ .. .. ಕಲಿ ಯುಗಕ್ಕಮಿವೆ ನಾಮಂ: **ಅಭಿಧಾವ,** ೩. ೧. ೧೨೬)

**ಯುಗನಾಯಕ** – ಒಂದು ಕಾಲಮಾನದ ಮುಂದಾಳು (ಯುಗನಾಯಕರೆನೆ ನಿಜಪದಯುಗಂ ಅಮಿತಸುರೇಂದ್ರನೆನೆ ಯುಗಭರಣದೇವಂ ನೆಗೞ್ದನೀಗಳ್: **ಆದಿಪು,** ೩. ೮೦)

**ಯುಗಪತ್** – ಏಕಕಾಲದಲ್ಲಿ (ಭಗವತ್ ಪರಿನಿಷ್ಕ್ರಮಣ ಪ್ರಗುಣೀಕೃತ ಸುರಮೃದಂಗರವಮೊಂದೆಡೆಯೊಳ್ ನೆಗೞ್ದುದು ರಾಜ್ಯಸಮರ್ಪಣ ಯುಗಪತ್ ಪ್ರತಿಹತ ಮುಕುಂದರವಂ ಒಂದೆಡೆಯೊಳ್: **ಆದಿಪು** ನರಸಿಂ, ೯. ೬೬)

**ಯುಗಳ** – ಜೋಡಿ (ಸುರುಚಿರ ಮಧುಕರಕಿಶೋರ ಯುಗ್ಮಮದೆಂಬಂತಿರೆ ಕರ್ಣಂಗಳೊಳ್ ಎಸೆದುವು .. .. ಕುಂಡಲಯುಗಳಂ: **ತ್ರಿಷಷ್ಟಿಪು,** ೧೮. ೪೪)

**ಯುಗಾಂತ** – ಯುಗದ ಕೊನೆ, ಪ್ರಳಯ (ಲಯಸಮಯಮ ಸಮಸಂಸಪ್ತಿ ಯುಗಾಂತಂ ವಿಳಯಂ ಅಂತಕಾಲಂ ಕಲ್ಪಕ್ಷಯಂ ಉಪಸಂಸ್ಮೃತಿ ಸಗಾತ್ಯಯಂ ಮಹಾಪ್ರಳಯಂ ಎಂಬುದದು ಸಂವರ್ತಂ: **ಅಭಿಧಾವ,** ೧. ೨. ೧೭

**ಯುಗಾವಸಾನ** – ಯುಗಾಂತ (ಯುಗಾವಸಾನ ಮಹಾಂಭೋಧಿ ವೇಲಾಕಲ್ಲೋಲವಿಲಾಸಮುಲ್ಲಾಸಪ್ರತಿಭಾಸಮುಮಂ ಕಿಟ್ಟಿಡಿಸಿದ ವಿದ್ಯಾಧರರಾಜನ: **ಶಾಂತಿಪು,** ೪. ೬೬ ವ)

**ಯುಗ್ಮ** – ಜೋಡಿ, ದಂಪತಿ (ಸುರುಚಿರ ಮಧುಕರಕಿಶೋರಯುಗ್ಮಮದೆಂಬಂತಿರೆ ಕರ್ಣಂಗಳೊಳ್ ಎಸೆದುವು .. .. ಕುಂಡಲಯುಗಳಂ: **ತ್ರಿಷಷ್ಟಿಪು,** ೧೮. ೪೪)

**ಯುದ್ಧಸನ್ನದ್ಧ** – ಯುದ್ಧಮಾಡಲು ಸಿದ್ಧನಾದವನು (ಚಕ್ರವರ್ತಿ ಯುದ್ಧಸನ್ನದ್ಧನಾಗಿ ಸಮಸ್ತಸಾಮಗ್ರೀಸಹಿತಂ ಶಿಬಿರದಿಂ ಪೊಱಮಟ್ಟು: ಶಾಂತಿಪು, ೫. ೫೦ ವ)

**ಯುಯು** – ಕುದುರೆ, ಅಶ್ವಮೇಧದ ಕುದುರೆ (ಯುಯುವೆಂಬುದು ಅಶ್ವಮೇಧದ ಹಯಮುಂ ಸಾಮಾನ್ಯ ಹಯಮುಂ ಅಕ್ಕುಂ: **ಅಭಿಧಾವ,** ೩. ೧. ೧೩೧)

**ಯುವ** – ಕಿರುವರೆಯದ (ರಾಜಹಂಸಂ ಪೊಱಗಾದ ಯುವ ರಾಜಹಂಸಪ್ರಕಾರದಿಂದಂ ಬಂದು: **ಶಾಂತಿಪು,** ೧. ೯೩ ವ); ತರುಣ (ನವವಯಸಂ ಯುವಂ: **ಅಭಿಧಾವ,** ೧. ೧೧ ೨೭)

**ಯುವತಿ** – ತರುಣಿ (ಒಪ್ಪುವ ಪತಿಯ ಹಾನಿವೃದ್ಧಿಯೆ ಯುವತಿಯರೊಳಮಕ್ಕುಮೆಂಬುದದು ತಕ್ಕುದೆ ದಲ್: **ಪಾರ್ಶ್ವನಾಪು,** ೮. ೧೦೮)

**ಯುವರಾಜ** – ರಾಜನ ಬಳಿಕ ಪಟ್ಟಕ್ಕೆ ಬರುವವನು (ಯುವರಾಜಕಂಠಿಕೆವೊಲಾಯ್ತು ಎಡೆಗೊಟ್ಟು ನಿಂದ ಷಟ್ಪದಗುಣಮುಂ ಪ್ರಸೂನಭರಮುಂ ಮಕರಂದ ಗುಣಾಭಿಶೋಭಿತಂ: **ಅಜಿತಪು,** ೬. ೩೫)

**ಯುವಾಧಿಪ** – ಯುವರಾಜ (ಬಿಲ್ಲ ಬಿನ್ನಣಮನಾ ರಣದೊಳ್ ಮೆಱೆದಂ ಯುವಾಧಿಪಂ: **ಚಂದ್ರಪ್ರಪು,** ೬. ೩೬)

**ಯುವಾನ** – ಯುವಕ (ಬಂದಂ ಅದೊರ್ವಂ ಒಂದು ಬಿಲ್ವಿಡಿದು ಯುವಾನಂ ಅಲ್ಲಿಗೆ: **ನೇಮಿನಾಪು,** ೬. ೫೦)

**ಯುಷ್ಮತ್** – ನಿಮ್ಮ (ಚಟ್ಟನಾಗಲ್ ನಿನಗೆ ಬಗೆದೆ ಯುಷ್ಮತ್ ವಿಷ್ವಧ್ವಂಸನೆಂ ಕಂಸನೆಂ: **ನೇಮಿನಾಪು,** ೬. ೫೧)

**ಯೂಥ** – ಗುಂಪು, ಹಿಂಡು (ತನ್ನಳಿಯನನೆಯ್ದೆ ಪಾಲಿಸುಗೆ ಬಂದಿದನೀಗಳನಾಥಯೂಥಮಂ: **ಆದಿಪು,** ೪. ೮೪)

**ಯೂಥಪತಿ** – ಗುಂಪಿನ ನಾಯಕ (ಪಿಱಿದು ಪೊೞ್ತಂ ವನಪ್ರಚಾರದೊಳ್ ಅಲಸಿದ ನದೀಚರನಪ್ಪ ಯೂಥಪತಿಯಂತೆ ವನವಿಹಾರದೊಳ್ ಅಲಸಿ ಬಂದು ಕಾವಣಂ ಪುಗೆ: **ಶಾಂತಿಪು,** ೮. ೨೩ ವ)

**ಯೂಥಿಕಾ[ಕೆ]** – ಕಾಡಮಲ್ಲಿಗೆ (ಮತ್ತಂ ಜತಿ ಯೂಥಿಕಾ ಮಲ್ಲಿಕಾ ಮಾಲತೀ ಲತಾಮಂಟಪಂಗಳೊಳ್ ನೆರೆದು: **ರಾಜಶೇವಿ,** ೨. ೭೬ ವ)

**ಯೂಧ** – ಯೂಥ (ಆತಪತ್ರಪಾಂಡುರಮಯಂ ಅಂತರಿಕ್ಷಂ ಇಭಯೂಧಮಯಂ ದೆಸೆ: **ಕಾದಂಸಂ,** ೨, ೫೯)

**ಯೂಧಪತಿ** – ಸಲಗ (ಕಳಭಂ ವನಪಥಮಂ ಯೂಧಪತಿಗೆ ತೋರ್ಪಂತಕ್ಕುಂ: **ಆದಿಪು,** ೮. ೧೨

**ಯೂಪ** – ಬಲಿಗಂಬ, ಯಜ್ಞಪಶುವನ್ನು ಕಟ್ಟುವ ಕಂಬ (ಮನಂ ಆರಾಧಿತ ಹೋಮಭೂಮಿ ಪಶುಗಳ್ ಕಾಮಾತುರರ್ ಬಂದ ಮಾವನಿತುಂ ಸ್ಥಾಪಿತ ಯೂಪಕೋಟಿ ಬಳವತ್ಕಾಮಾಗ್ನಿ ಹೋಮಾಗ್ನಿ ಚಂದನ ಕರ್ಪೂರ ಮೃಣಾಳನಾಳಮೆ ಪೊದಲ್ದ ಇದ್ಮಂಗಳ್ ಇಂತಾಗೆ ತಾನಿನಿತುಂ ಕಾಮನ ಬೇಳ್ವೆಯೆಂದು ಸುಗಿದಲ್ ತನ್ವಂಗಿ ಬೆಳ್ದಿಂಗಳೊಳ್; **ಪಂಪಭಾ,** ೪. ೫೯)

**ಯೂಪಸ್ತಂಭ** – ಯೂಪ (ಬೇಳ್ವುದಂ ಕಂಡು ಶಾಲೆಗಳಂ ಕೆಡಪಿ ಯೂಪಸ್ತಂಭಗಳಂ ಕಡಿದು: **ಪಂಪರಾ,** ೧೦. ೧೮೩ ವ)

**ಯೋಗ** – ಧ್ಯಾನ, ಜೊತೆ (ಯೋಗಂ ಧ್ಯಾನೋಪಯೋಗಮುಂ ಸಂಗತಿಯುಂ: **ಅಭಿಧಾವ,** ೩. ೧. ೫೧)

**ಯೋಗಂಗೊಳ್** – ಧ್ಯಾನದಲ್ಲಿ ತೊಡಗು (ಯಶೋಧರಸ್ವಾಮಿಗಳೆಂಬ ಪರಮಾವಧಿಜ್ಞಾನಿಗಳ್ .. .. ಯೋಗಗೊಂಡಿರ್ಪುದುಂ: **ಸುಕುಮಾಚ,** ೧೧. ೩೭ ವ)

**ಯೋಗಕ್ಷೇಮ** – ಸಂಪಾದನೆ ಮತ್ತು ಅದರ ರಕ್ಷಣೆ (ಯೋಗಕ್ಷೇಮಾಧೀನಮಪ್ಪ ನೀತಿಶಾಸ್ತ್ರಮುಮಂ .. .. ಪೆಱವುಂ ವಿದ್ಯಾಕಳಾಪಮಮುಂ ತ್ರಿದಶವರ್ಗ ನೀತಿಶಾಸ್ತ್ರಮುಮಂ .. .. ಉಪದೇಶಂಗೆಯ್ಯುತುಂ: **ಶಾಂತಿಪು,** ೧೦. ೯೦ ವ)

**ಯೋಗತ್ಯಾಗಾಗ್ರನಿವೃತ್ತಿ** – [ಜೈನ] ಒಂದು ಗರ್ಭಾನ್ವಯ ಕ್ರಿಯೆ, ಸಮವಸರಣವನ್ನು ವಿಸರ್ಜಿಸಿ ವಿಹಾರಾದಿಗಳನ್ನು ಮಾಡುವುದು (ಪ್ರೀತಿ ಸುಪ್ರೀತಿ ಧೃತಿ ಮೋದ .. .. ಅರ್ಹಂತ್ಯವಿಹಾರಯೋಗತ್ಯಾಗಾಗ್ರನಿವೃತ್ತಿಯೆಂಬ .. ..

ಅಯ್ವತ್ತುಮೂಱು .. .. ಗರ್ಭಾನ್ವಯಕ್ರಿಯೆಗಳಂ: **ಆದಿಪು,** ೧೫. ೧೫ ವ)

**ಯೋಗತ್ರಯ** – [ಜೈನ] ಮನ, ವಚನ, ಕಾಯ ಎಂಬ ಮೂರು ಪ್ರವೃತ್ತಿಗಳು (ಗತಗೌರವತ್ರಯಂ ನಿರ್ಜಿತದಂಡತ್ರಯಂ ಅಪೇತಶಲ್ಯತ್ರಯಂ ಅಪ್ರತಿಹತಯೋಗತ್ರಯಂ: **ಪುಷ್ಪದಂಪು,** ೧೪. ೧೫)

**ಯೋಗನಿಯೋಗ** – ಯೋಗದಲ್ಲಿ ತೊಡಗುವುದು (ಶರೀರಯಷ್ಟಿ ತೊಟ್ಟಗೆ ಕಡುಗಂದಿ ಕುಂದೆ ಬಡವಾದುದು ಯೋಗನಿಯೋಗಭಾವದೊಳ್ ಬಗೆ ಬಡವಾದುದಿಲ್ಲ ನೆಗೞ್ದಾ ಸುಕುಮಾರಮಹಾಮುನೀಂದ್ರನಾ: **ಸುಕುಮಾಚ,** ೧೨. ೪೦)

**ಯೋಗನಿರೋಧ** – [ಜೈನ] ಮನೋವಾಕ್ಕಾಯಗಳ ಚಂಚಲತೆಯನ್ನು ನಿಗ್ರಹಿಸುವುದು (ವೃಷಭನಾಥಂ .. .. ಯೋಗಪಲ್ಯಂಕಾಸನದಿಂದಂ ಯೋಗನಿರೋಧದೊಳ್ ಪೂರ್ವಾಭಿಮುಖನಾಗಿರ್ದಂ: **ಆದಿಪು,** ೧೬. ೪೦ ವ)

**ಯೋಗನಿರ್ವಾಣಸಂಪ್ರಾಪ್ತಿ** – [ಜೈನ] ಒಂದು ಗರ್ಭಾನ್ವಯ ಕ್ರಿಯೆ (ಯೋಗನಿರ್ವಾಣಸಂಪ್ರಾಪ್ತಿ ಯೋಗ ನಿರ್ವಾಣಸಾಧನ .. .. ಅರ್ಹಂತ್ಯವಿಹಾರಯೋಗತ್ಯಾಗಾಗ್ರನಿವೃತ್ತಿಯೆಂಬ ಅಯ್ವತ್ತುಮೂಱು .. .. ಗರ್ಭಾನ್ವಯಕ್ರಿಯೆಗಳಂ: **ಆದಿಪು,** ೧೫. ೧೫ ವ)

**ಯೋಗನಿರ್ವಾಣಸಾಧನ** – [ಜೈನ] ಒಂದು ಗರ್ಭಾನ್ವಯ ಕ್ರಿಯೆ (ಯೋಗನಿರ್ವಾಣಸಂಪ್ರಾಪ್ತಿ ಯೋಗ ನಿರ್ವಾಣಸಾಧನ .. .. ಅರ್ಹಂತ್ಯವಿಹಾರಯೋಗತ್ಯಾಗಾಗ್ರನಿವೃತ್ತಿಯೆಂಬ ಅಯ್ವತ್ತುಮೂಱು .. .. ಗರ್ಭಾನ್ವಯಕ್ರಿಯೆಗಳಂ: **ಆದಿಪು,** ೧೫. ೧೫ ವ)

**ಯೋಗವಟ್ಟಿಗೆ** – [ಯೋಗಪಟ್ಟಿಕಾ] ಋಷಿಯ ಯೋಗದಂಡ (ಕರದೊಳ್ ತಾಳ್ದಿದ ಲಾಕುಳಂ ಉರುತರದಿಂದಾಂತ ಯೋಗವಟ್ಟಿಗೆ ಕಾಶಾಂಬರಮೆಸೆಯಲ್: **ತ್ರಿಷಷ್ಟಿಪು,** ೨೧. ೩)

**ಯೋಗವರ್ತನ** – [ಜೈನ] ತಪಸ್ಸಿನಲ್ಲಿ ತೊಡಗುವುದು; [ಜೈನ] ಮನೋವಾಕ್ಕಾಯಗಳ ಸಂಬಂಧ (ನಿರಂಜನರಾಗಿರ್ದುಂ ಅಶೇಷಲೋಕನಿಹಿತಾರ್ಥಗ್ರಾಹಿಗಳ್ ಯೋಗವರ್ತನಮೊಂದುಂ ತಮಗೆಂದುಂ ಇಲ್ಲೆನಿಸಿಯುಂ ಸಿದ್ಧರ್ಕಳ್: **ಪುಷ್ಪದಂಪು,** ೧. ೨)

**ಯೋಗವಿಡಿಸು** – [ಜೈನ] ಕರ್ಮಗಳ ಆಸ್ರವ ಸಂಬಂಧವನ್ನು ನಿಲ್ಲಿಸು (ಸುಕುಮಾರನ ಮೋಹಬಂಧದ ಬಳ್ಳವಳ್ಳಿಯ ತೊಡರ್ಪಂ ಪಱಿಪಡೆ ಬಿಡಿಸುವಂತೆ ಯೋಗವಿಡಿಸಿ .. .. ತ್ರಿಲೋಕಪ್ರಜ್ಞಪ್ತಿಯಿಂ ಪರಿವಡಿಗೆಯ್ವಾಗಳ್: **ಸುಕುಮಾಚ,** ೧೧. ೩೮ ವ)

**ಯೋಗಶಾಸ್ತ್ರ** – ಪಾತಂಜಲ ಯೋಗ (ಭರತಸುತಂ ಮರೀಚಿಪರಿಗೃಹೀತ ಪರಿವ್ರಾಜಕವೇಷಂ .. .. ಕಾಪಿಲಸಿದ್ಧಾಂತಮುಮಂ ಯೋಗಶಾಸ್ತ್ರಮುಮಂತೋಱಿ ಲೋಕಮಂ ಸಮ್ಯಗ್ಜ್ಞಾನಪರಾಙ್ಮುಖಂ ಮಾಡಿದಂ: **ಆದಿಪು,** ೯. ೯೩ ವ)

**ಯೋಗಸಮ್ಮಹ** – [ಜೈನ] ಒಂದು ಗರ್ಭಾನ್ವಯ ಕ್ರಿಯೆ; ಕೇವಲಜ್ಞಾನ ಪಡೆದನಂತರ ಹೊಂದುವ ಪೂಜೆ (ಯೋಗಸಮ್ಮಹಾ ಅರ್ಹಂತ್ಯವಿಹಾರಯೋಗತ್ಯಾಗಾಗ್ರನಿವೃತ್ತಿ ಎಂಬ ಅಯ್ವತ್ತುಮೂಱು .. .. ಗರ್ಭಾನ್ವಯಕ್ರಿಯೆಗಳಂ: **ಆದಿಪು,** ೧೫. ೧೫ ವ)

**ಯೋಗಾಕ್ಷಿ** – ಯೌಗಿಕತೆಯಿಂದ ದೊರೆಯುವ ದೃಷ್ಟಿ, ಒಳನೋಟ (ಯೋಗಾಕ್ಷಿಯಿಂದೆ ಕಂಡು ಮನೋಗೃಹದೊಳ್ ನಿಲಿಸಿ ಭಾವಕುಸುಮೋತ್ಕರದಿಂ ಯೋಗಿಗಳರ್ಚಿಪ ನಿನ್ನನದೇಗಾಣ್ಬೆವು ಅಬಲೆಯರಾವು ಅದೆಂತರ್ಚಿಪೆವೋ: **ಜಗನ್ನಾವಿ,** ೩. ೧೦೯)

**ಯೋಗಾಚಾರ** – ಬೌದ್ಧಮತ (ಮಹಾಮತಿ ಸಂಭಿನ್ನಮತಿ ಶತಮತಿಗಳ್ ಲೋಕಾಯತಿಕ ಯೋಗಾಚಾರ ಮಾಧ್ಯಮಿಕಮತ ನಿತಥಾಭಿಧಾಯಿಗಳ್ .. .. ಆತ್ಮನಿರಾಕರಣಮನೆ ನುಡಿದು ಮಾಣೆ: **ಆದಿಪು,** ೨. ೭ ವ)

**ಯೋಗಿ** – ತಪಸ್ವಿ (ಯತಿ ಸಂಯಮಿ ಋಷಿ ಮುನಿ ಸುಶ್ರುತನಾಥಂ ಸಾದು ಯೋಗಿ ತಾಪಸನಾತಂ: **ಅಭಿಧಾವ,** ೧. ೧೧. ೩೩)

**ಯೋಗಿನಿ** – ಚೌಷಷ್ಠಿ ಉಗ್ರ ದೇವತೆಗಳು (ರಕ್ತಜಳಾಸವಮತ್ತಯೋಗಿನೀವ್ರಾತಪರೀತ ಭೂತಸದನಂ ಕದನಂ ಕದನತ್ರಿಣೇತ್ರನಾ: **ಪಂಪಭಾ,** ೧೪. ೩)

**ಯೋಜಕ** – ಹೊಂದಿಸುವಂತಹುದು (ಸಕಲಮಹೀಚರ ಖೇಚರನಿಕಾಯ ಸೇವ್ಯತೆಗೆ ವೃದ್ಧಸೇವಿತ್ವಮೆ ಯೋಜಕವಾದುದು: **ಶಾಂತಿಪು,** ೨. ೩೯)

**ಯೋಜನ** – ಎರಡು ಗಾವುದ ದೂರ (ಸದೀಯ ಭೂಷಣದ ಬೆಳಗಿನೊಳ್ ಅಂದು ಯೋಜನಮಂ ಬಂದಿರ್ದಸೆಯಂ ನೋಳ್ಪಾಗಳ್: **ತ್ರಿಷಷ್ಟಿಪು,** ೨೬. ೧೩ ವ)

**ಯೋಜನಗಂಧಿತ್ವ** – ಒಂದು ಯೋಜನ ದೂರ ದೇಹದ ಪರಮಳವನ್ನು ಸೂಸುವುದು (ಮುನೀಂದ್ರಂ ಆಕೆಯೊಡಲ ಈ ದುರ್ಗಂಧವ್ರೋಪಂತೆ ಯೋಜನಗಂಧಿತ್ವಮನಿತ್ತು .. .. ಕೂಡುವೆಡೆಯೊಳ್ ಜ್ಞಾನಸ್ವರೂಪಂ ಮಹಾಮುನಿಪಂ ಪುಟ್ಟಿದಂ: **ಪಂಪಭಾ,** ೧. ೬೯)

**ಯೋಜಿಸು** – ತೊಡಗಿಸು (ಶ್ರೀಜಿನದೀಕ್ಷೆಗೆ ತನುವಂ ಯೋಜಿಸೆ ಕಲ್ಯಾಣಮಿತ್ರನಂಬೆರಸು .. .. ಪಲರ್ ತಱಿಸಂದರ್: **ಯಶೋಧಚ,** ೪. ೬೫); ಅಳವಡಿಸು (ಲೋಕಮಂ ಧರ್ಮಪಥಪ್ರಸ್ಥಾನದೊಳ್ ಯೋಜಿಸಿ: **ಪಂಪರಾ,** ೧. ೨೮): ಧರಣಮಾಡಿಸು (ಜನನಾಥಂ .. .. ರಾಜ್ಯಮಂ ನಂದನನೊಳ್ ಶ್ರೀಕಾಂತನೊಳ್ ಯೋಜಿಸಿ ತಳರ್ದು ತಪೋಲಕ್ಷ್ಮಿಯಂ ತಾಳ್ದಿದಂ: **ಚಂದ್ರಪ್ರಪು,** ೪. ೬೦); ಉಪಯೋಗಿಸು (ಮುನೀಂದ್ರೋತ್ತಮರ್ ಪೇಟ್ದ ನೀತಿಕ್ರಮದಿಂ ಷಾಡ್ಗುಣ್ಯಮಂ ಯೋಜಿಸುವುದೆ ಸುನಯಂ ಪ್ರಾಪ್ತಕಾಲಾನುರೂಪಂ: ಪಂಚತಂತ್ರ, ೩೦೭); ಒಪ್ಪಿಗೆ ನೀಡು (ಯೋಜಿಸು–ಅನುಮತೇ: **ಶಬ್ದಮದ,** ಧಾ ೭೪೨)

**ಯೋನಿ** – ಜನ್ಮಸ್ಥಾನ (ನಾನಾಯೋನಿಗಳೊಳ್ ಸುೞಿದೇನಾನುಂ ದುಷ್ಕೃತಂ ಸಡಿಲ್ದೊಡೆ ಪಡೆಗುಂ ಮಾನುಷ್ಯಮಂ: **ಆದಿಪು,** ೯. ೪೮); ಸ್ತ್ರೀಯ ಜನನಾಂಗ (ಸ್ಮರಸದನಂ ಉಪಸ್ಥಂ ಭಗಂ ಯೋನಿ ನಾಮಂ: **ಅಭಿಧಾವ,** ೧. ೧೨. ೪)

**ಯೋಷಾ[ಷೆ]** – ಹೆಂಗಸು (ಎನಗಾತ್ಮೇಶ್ವರಂ ಈ ದಿನೇಶ್ವರಂ .. .. ತಾಂ ಪೋಗಿ .. .. ಇದಂ ವರುಣದಿಕ್ ಯೋಷಾಂಗಮಂ ನೋಡಲಾಱಂ: **ರಾಜಶೇವಿ,** ೧೩. ೩೪)

**ಯೋಷಿತ್** – ಯೋಷಾ, ಹೆಂಗಸು (ತ್ರಿಜಗತ್ ಸಾಶ್ಚರ್ಯದಂಡ ಸ್ಥಪತಿ ಗೃಹಪತಿ ಛತ್ರ ಯೋಷಿತ್ ಪುರೋಧ ಗಜ ನಿಸ್ತ್ರಿಂಶ ಅಶ್ವ ಕಾಕಿಣಿ ಅಜಿನ ಮಣಿ ಚಮೂನಾಥ ಚಕ್ರಾಧಿನಾಥಂಗೆ: **ಆದಿಪು,** ೧೨. ೮)

**ಯೋಷಿಜ್ಜನ** – [ಯೋಷಿತ್+ಜನ] ಸ್ತ್ರೀಸಮುದಾಯ (ಜಗಜ್ಜನೈಕವಿಭುವಂ ಯೋಷಿಜ್ಜನಂ ಮಜ್ಜನಂಬಿಗಿಸಿತ್ತು: **ಜಗನ್ನಾವಿ,** ೧೦. ೧೦೦)

**ಯೌವತವರ್ಗ** – ಯುವತಿಯರ ಸಮೂಹ (ಅಲ್ಲೊಕ್ಕುವು ನಿರ್ಮಳವಾಃಕಂವ್ಯೂಹಂ .. .. ಮುಖೇಂದುಭ್ರಾಜಿತ ಯೌವತವರ್ಗದಾ: **ಲೀಲಾವತಿ,** ೧೪. ೮)

**ಯೌವನ** – ತಾರುಣ್ಯ (ಆ ಕನ್ನೆಗೆ ಯೌನಂ ನೆಱೆದಂದು ಮದುವೆಯಾದೊಡೆ: **ವಡ್ಡಾರಾ,** ಪು. ೧೫, ಸಾ. ೨೭)

**ಯೌವನೋದಯ** – ತಾರುಣ್ಯದ ಆರಂಭ (ಆ ವಧು ಯೌನೋದಯ ರಸಾಯನಸಿದ್ಧಿ ಮನೋವಿಮೋಹ ಸಂಭಾವನವಿದ್ಯೆ .. .. ಎನಿಪ್ಪಳೇಂ ಸುರೂಪೆಯೋ: **ಚಂದ್ರಪ್ರಭ,** ೩. ೨೬)

**ಯೌವರಾಜ್ಯ** – ಯುವರಾಜ ಪದವಿ (ಅನಂತವೀರ್ಯನಪಾರಬಲಂ ಯೌವರಾಜ್ಯಪದದೊಳ್ ನಿಂದಂ: ಶಾಂತಿಪು, ೨. ೧); [ಜೈನ] ಒಂದು ಗರ್ಭಾನ್ವಯ ಕ್ರಿಯೆ (ಗುರುಪೂಜೋಪಲಂಭನ ಯೌವರಜ್ಯ ಸ್ವರಾಜ್ಯ .. .. ಅರ್ಹಂತ್ಯವಿಹಾರಯೋಗತ್ಯಾಗಾಗ್ರನಿವೃತ್ತಿಯೆಂಬ ಅಯ್ವತ್ತುಮೂಱು .. .. ಗರ್ಭಾನ್ವಯಕ್ರಿಯೆಗಳಂ: **ಆದಿಪು,** ೧೫. ೧೫ ವ)

**ಯೌವರಾಜ್ಯಾಭಿಷೇಕ** – ಯುವರಾಜನಾಗಿ ಪಟ್ಟಗಟ್ಟುವ ವಿಧಿ (ಶುಭದಿನದೊಳ್ ಇಳಾಧೀಶ್ವರಂ ಮಾಡೆ ತುರ್ಯಾಸ್ವರದೊಳ್ ತಳ್ವೊಯ್ದುದೇಂ ಶೋಭಿಸಿದುದೊ ಪಿರಿದುಂ ಯೌವರಾಜ್ಯಾಭಿಷೇಕಂ: **ಚಂದ್ರಪ್ರಭ,** ೨. ೬೮)

# ರ

**ರಂಕು** – ಮಚ್ಚೆಗಳಿರುವ ಜಿಂಕೆ (ಪರಿಣತ ರಂಕು ರೋಮತತಿ ಪಾಂಡುರಂ ಅಂದು ಶಶಾಂಕಮಂಡಲಂ: **ಕಾದಂಬ,** ೧. ೧೧೪)

**ರಂಗ** – ಬಣ್ಣದ ಹಸೆ, ರಂಗವಲ್ಲಿ (ನಡುಬೀದಿಯೊಳ್ ಪಶುಗಳ್ಪಡುವೆಡೆಯೊಳಂ ಊರ ಪಿರಿಯ ಚೌವಟ್ಟದೊಳಂ ತೊಡೆದು ಬರೆದಲ್ಲಿ ರಂಗಮನುಡಿಗೆಗಳಂ ಸುರಿದು ಸೂಸಿ ಕೆಡುವವರ್ಮೂಢರ್: **ಸಮಯಪ,** ೯. ೧೨೯); ವೇದಿಕೆ (ಧರೆ ರಂಗಂ ಗಗನಂ ಮನೋಹರತರಂ ನಾಟ್ಯಾಲಯಂ ನರ್ತಕಂ ಸುರರಾಜಂ: **ಆದಿಪು,** ೭. ೧೨೭)

**ರಂಗಂಬೊಗು** – ಪ್ರದರ್ಶನ ನೀಡಲು ವೇದಿಕೆಯನ್ನು ಪ್ರವೇಶಿಸು (ನಾಟ್ಯವಿದಯಾಚಾರ್ಯನಂ ಪೋಲ್ತು ರಂಗಂಬೊಕ್ಕು ಲೋಕಾಕಾರಮಂ ಅಭಿನಯಿಪಾಕಾರಂ ನೆಗೞ್: **ಆದಿಪು,** ೭. ೧೧೫ ವ)

**ರಂಗಕಾಱ** – ಅಗಸ (ಬಿಡು ಬಿಡೆಂದು ರಣ ರಂಗಾರ್ಥಿಯಾಗಿ ರಂಗಕಾಱನ ಕೆಯ್ಯ ಸೀರೆಯಂ ಸೆಳೆಯಲನುಗೆಯ್ಯಲೊಡನೆ: **ನೇಮಿನಾಪು,** ೮. ೭೭ ವ)

**ರಂಗಬಲಿ** – ರಂಗೋಲಿ (ಅಂಗಣರಚಿತಮೌಕ್ತಿಕ ರಂಗಬಲಿಯಿಂ ಬಲಿಕುಸುಮ ನಿಪತದಳಿಕುಳಾಬ್ಜ ಗೀತಮುಂ: **ಆದಿಪು,** ೪. ೫೮ ವ)

**ರಂಗಭೂಮಿ** – ರಂಗಸ್ಥಳ (ಪಾಂಡುಕಶಿಳಾತಳಮೆ ರಂಗಭೂಮಿಯಾಗೆ .. .. ನಿಳಿಂಪಭಾರತಿಕರೆ ನಟ್ಟುವರಾಗೆ: **ಶಾಂತಿಪು,** ೧೦. ೬೦ ವ); ವೇದಿಕೆ (ರತನದಿಂ ಬೆರಸಿದ ಬಣ್ಣದೊಳ್ ಮೆಱೆಯೆ ಕಟ್ಟಿಸಿ ಘಟ್ಟಿಸಿ ರಂಗಭೂಮಿಯಂ: **ಪಂಪಭಾ,** ૩. ೪೦)

**ರಂಗವಲಿ** – ರಂಗೋಲಿ (ಕತ್ತುರಿಯ ಸಗಣನೀರ್ ಬಿಡುಮುತ್ತಿನ ರಂಗವಲಿಮಿಳಿರ್ವ ದೇಗುಲದ ಗುಡಿ .. .. ಮನೆಗಳೊಳೆಲ್ಲಂ: **ಪಂಪಭಾ,** ૩. ೨)

**ರಂಗವಲ್ಲಿ** – ರಂಗೋಲಿ (ಅರಸರಾ ಬರ್ಪ ಬಟ್ಟೆಯೊಳೆಲ್ಲಂ ಪಂಚರತ್ನಂಗಳಿಂ ರಂಗವಲ್ಲಿಯನಿಕ್ಕಿ ನೇತ್ರವಟ್ಟು ದುಕೂಲ ಚೀನಾದಿ ದಿವ್ಯವಸ್ತ್ರಂಗಳಂ ಪಾಸಿ: **ವಡ್ಡಾರಾ,** ಪು. ೨೬. ಸಾ. ೨)

**ರಂಜಣಿಗೆ** – (ಚಂದನವಾರಿಪೂರಮಪ್ಪ ರಜತದ ರಂಜಣಿಗೆಗಳಿಂ ಮುತ್ತಿನ ಮಾಣಿಕದ ಪಳುಕಿನ .. .. ಜಲಯಂತ್ರದ ಜಾಲದಿಂ: **ಕುಸುಮಾಕಾ,** ೫. ೧೨೭ ವ)

**ರಂಜಿಸು** – ಪ್ರಕಾಶಿಸು (ಚಿಂತಾಮಣಿಯಂ ನಿರುತಂ ರಂಜಿಸಿದಂತಿರೆಕರಮೆಸೆದಂ ಯೌವನೋದಯಂ ತನಮೆಸೆಯಲ್: **ಕರ್ಣನೇಮಿ,** ೯. ೬); ಶೋಭಿಸು, ಬಣ್ಣ ಹಾಕು (ಋಂಜಿಸು–ಶೋಭಾಯಾಂ ರಾಗೇ ಚ: ಶಬ್ದಮದ, ಧಾ ೭೪೫); ಉದ್ರೇಕಗೊಳಿಸು (ಒಸಗೆಗಂ ಉತ್ಸಾಹಕ್ಕಂ ಸಸಿಯುದಯಂ ರಂಜಿಪಂತೆ ಕಳ್ಳಂಗಂ .. .. ಆ ತೆಱದಿಂ ರಂಜಿಸಲಕ್ಕುಮೆ: **ಧರ್ಮಾಮೃ,** ೪. ೧೮); ಸಂತಸಪಡಿಸು (ಸಕಲಸುಖಕ್ಕಂ ನೆಲೆಯಾದ ಸದ್ದೃಷ್ಟಿಗೆ ರಂಜಿಸುವ ಸದ್ಧರ್ಮಂ ಬಹುವಿಧಮಾಗಿರ್ಪ ನರಕದುಃಖಂಗಳಂ ಅನುಭವಿಸಲ್ವೇಡಿರ್ಪ ಕುದೃಷ್ಟಿಗೆಂತಾನುಂ ರಂಜಿಸಲಾಱದು: **ಧರ್ಮಾಮೃ,** ೪. ೧೮ ವ)

**ರಂಡೆ** – ವಿಧವೆ (ಜೋಯಿಸನ ಮಗಳ್ ಪಸೆಯೊಳ್ ರಂಡೆಯಾದಳ್ ಎಂಬ: **ಧರ್ಮಾಮೃ,** ೧೨. ೨೭ ವ)

**ರಂಡೆತನ** – ವೈಧವ್ಯ (ಬಾಯಟೆದಟ್ಟ ಮೆಟ್ಟಡಿಪ ಡಂಬಿಪ ರಂಡೆತನಕ್ಕೆ ಪೂಣ್ದಭಿಪ್ರಾಯಮೆ ಸಿಂಹನಂದೆಗಂನಿಂದಿತೆಗಂ: **ಶಾಂತಿಪು,** ೬. ೪೪)

**ರಂಭಾ** – ಬಾಳೆಯ ಗಿಡ (ಜಳಮಂ ರಂಭಾದಿಗಳ್ ಸೇವಿಸುತ್ತಿರೆ .. .. ನಿರ್ಜರಗಂಗಾನದಿ ತಾನಿದೆಂಬ ತೆಱದಿಂ ಕಾವೇರಿ ಕಣ್ಗೊಪ್ಪುಗುಂ: **ರಾಜಶೇಖ,** ೨. ೪)

**ರಂಭಾಮೃದುಸ್ತಂಭ** – ಬಾಳೆಗಿಡದ ಮೃದುವಾದ ಕಾಂಡ (ಮೊಗಂ ಉತ್ಫುಲ್ಲಸರೋಜಹಾಸಿ ನಯನಂ ನೀಲಾಂಬುಜಸ್ಪರ್ಧಿ ಬಾಹುಗಳಾಜಾನುವಿಳಂಬಿಗಳ್ ತೊಡೆಗಳುಂ ರಂಭಾ ಮೃದುಸ್ತಂಭಶೋಭೆಗಳಂ ಗೆಲ್ದುವು: **ಆದಿಪು,** ೧. ೭೪)

**ರಂಭಾಸ್ತಂಭ** – ಬಾಳೆಗಿಡದ ಕಾಂಡ (ರಂಭಾಸ್ತಂಭೋಪಮಾನ ಊರು ಯುಗಳೆಯರ್ ಶಾತಕುಂಭರಂಭಾವನಂಗಳುಮಂ: ೧೧. ೯೫ ವ)

**ರಂಭೆ** – ಬಾಳೆ ಗಿಡ (ರಾಜಕೀರಂ ರಾಜಜಂಬೂ ರಂಭಾಸ್ವಾದಿ ಸ್ವಾದುಫಲಂಗಳಂ ತಂದೀಯೆ: **ಪಂಚತಂತ್ರ,** ೧೯೧ ವ); ಒಬ್ಬ ಅಪ್ಸರೆ (ಶಶಿಲೇಖೆ ಮಯೂಖನಿಕರಮಂ ಕೆದಱುವವೋಲ್ ಕೆದಱೆ ನವರಸಭಾವಮಂ ಕೆದಱೆದಳೆನೆ ಕುಣಿದು ರಂಭೆ ರಂಗಂಬೊಕ್ಕಳ್: **ಲೀಲಾವತಿ,** ೪. ೧೦೭)

**ರಂಭೋರು** – ಬಾಳೆಯ ದಿಂಡಿನಂತಹ ತೊಡೆ[ಯುಳ್ಳವಳು] (ರಂಭೋರು ಜಗದ್ವಿಜಯಾರಂಭಿ ಮನೋಭವಕರೇಣುವಂತೆ ಒರ್ವಳ್ ಕಿಟ್ಟಿಂಭೋಜದಲರ್ಗಳಂ ಕುಚಕುಂಭಂಗಳೊಳ್ ಒಟ್ಟಿಕೊಳ್ವಳೇನೊಪ್ಪಿದಳೋ: **ಲೀಲಾವತಿ,** ೧೩. ೧೨೭)

**ರಕ್ಕಸಪಾರ್ವ** – ಬ್ರಹ್ಮರಾಕ್ಷಸ (ಪಿಶಾಚಾನಿವಹಮನಡಗುಣಿಮೆಂದು ನವವೇದಮಂ ಪೇೞ್ವರಲ್ಲಿರಕ್ಕಸಪಾರ್ವರ್: **ಗದಾಯು,** ೪. ೪೦)

**ರಕ್ಕಸವಡೆ** – [ರಕ್ಕಸ + ಪಡೆ] ರಾಕ್ಷಸ ಸೈನ್ಯ (ಮೂಱುಂ ಯೋಜನದಳವಿಯ ಸಭಾಮಂಟಪಮನೊಂದು ಲಕ್ಕ ರಕ್ಕಸವಡೆಯಿಂ ಪೊತ್ತು ತರಿ: **ಪಂಪಭಾ,** ೬. ೨ ವ)

**ರಕ್ಕಸಿ** – ರಾಕ್ಷಸಿ (ರಕ್ಕಸಿಯರ ಕಂಡು ಕುಂಬಳದ ಮಾರ್ಬಿಕೆವೊಲಾಗಿರೆ ಮಾಡದಿರ್ಪಿರೇ: **ಪಂಪಭಾ,** ೯. ೪೮)

**ರಕ್ಕೆ** – [ರಕ್ಷೆ] ಭಯನಿವಾರಣೆಯ ಯಂತ್ರ (ವಿಭೂತಿಗೊಂಡು .. .. ರಾಜ್ಯದ ವಿಭೂತಿಗೆ ನೆಟ್ಟನೆ ರಕ್ಕೆಗಟ್ಟುವಂತಿರೆ ಫಣೆಯಲ್ಲಿ ಪೂಸಿ: **ತ್ರಿಷಷ್ಟಿಪು,** ೧೭. ೧೭೯)

**ರಕ್ಕೆವಣಿ** – [ರಕ್ಷಾಮಣಿ] ಕ್ಷೇಮಕ್ಕಾಗಿ ಕಟ್ಟುವ ಮಣಿ (ರಂಜಿಪ ನೂಲ ರಕ್ಕೆವಣಿಗಳ್ ಚೆಲ್ವಾಗೆ .. .. ವಕ್ತ್ರೆಂದುವಂ ಅಂಜನಾಂಕಿತಮಂ ನಾನಿನ್ನೆಂದು ಪೇೞ್ ಕಾಣ್ಬೆನೋ: **ಕಾದಂಬ**. ೨. ೫೬)

**ರಕ್ಕೆವೊಟ್ಟು** – ದೃಷ್ಟಿಬೊಟ್ಟು (ಲೋಕಲೋಚನಪರಿಪಾತದೋಷ ಕಾರಣದಿಂದ ಅವಳಿಟ್ಟ ರಕ್ಕೆವೊಟ್ಟೆನೆ ನಸುಗರ್ಪು ಕಣ್ಗೊಳಿಸಿದತ್ತು ಕುಚಚೂಚುಕಂಗಳೊಳ್: **ಶಾಂತೀಶ್ವಪು,** ೪. ೨೬)

**ರಕ್ತ** – ಕೆಂಪು ಬಣ್ಣ (ಅರುಣಂ ಶೋಣಂ ಕೋಕನದ ರುಚಿ ರಕ್ತಂ ದು ಲೋಹಿತಂ ಸಂಧ್ಯಾಭಂ: ಅಭಿಧಾವ, ೨. ೧. ೬೪); ನೆತ್ತರು (ಕ್ಷತಜಂ ರುದಿರಂ ಅಸೃಕ್ ಲೋಹಿತಂ ಅಸ್ರಂ ಶೋಣಿತಾಖ್ಯಮೆಂಬುದು ರಕ್ತಂ: **ಅಭಿಧಾವ,** ೧. ೧೨. ೨೭); ಅನುರಾಗವುಳ್ಳವನು (ಕೆಂಪೇಱೆ ನೃಪಾಂಶುರಕ್ತಂ ಣಗಣಂ ತತ್ಸೀಕರಂಬೊಲ್ ಮೆಱೆಯೆ: **ರಾಜಶೇವಿ,** ೬. ೨೮)

**ರಕ್ತಕಂಠೀಜನ** – ಇನಿದನಿಯ ಸ್ತ್ರೀಯರು (ಗೀತಾರಾವದಿಂದಂ ನೆಱೆಯೆ ನೆಱಗೊಳಲ್ ರಕ್ತಕಂಠೀಜನಂ ಬಂದಿರೆ ವಂದಿವ್ರಾತಮೆತ್ತಂ ಬಗೆಗೊಳಲಿರೆ ಚೆಲ್ವಾದುದಾಸ್ಥಾನರಂಗಂ: **ಆದಿಪು,** ೨. ೩)

**ರಕ್ತಪಂಕರುಹ** – ಕೆಂದಾವರೆಯ ಕೊಳ (ರಕ್ತಪಂಕರುಹದೊಳಿರ್ಪ ಸದ್ವರಟೆಯಂತೆ .. .. ತತ್ ಕಮಲಾಕ್ಷಿಯೊಪ್ಪಿದಳ್: **ಉದ್ಭಟಕಾ,** ೫. ೫೬)

**ರಕ್ತಾಶೋಕ** – ಕೆಂಪು ಅಶೋಕವೃಕ್ಷ (ಆ ಕಾಂತೆಯ ಮೃದುಪದತಳ ಕೋಕನದಂ ತನ್ನ ರುಚಿಯಿಂ ಒದವಿಸೆ ರಾಗೋದ್ರೇಕಂ ಅದೆಂತು ರಕ್ತಾಶೋಕದ ತಳಿರೊಳ್ ವಿರಾಗಮಂ ಪುಟ್ಟಿಸುಗುಂ: **ಮಲ್ಲಿನಾಪು,** ೩. ೪೨);

**ರಕ್ಷಾಮಣಿ** – ಕಾಪಾಡುವ ವ್ಯಕ್ತಿ (ಶ್ರೀಜೈನಧರ್ಮೋನ್ನತಿಯ ಮಹಿಮೆಯಂ ಭಕ್ತಿಯಂ ಕಾವ ರಕ್ಷಾಮಣಿಯುಂ .. .. ಶ್ರೀ ದಾನಚಿಂತಾಮಣಿಯೆ: **ಅಜಿತಪು,** ೧೨. ೧೪)

**ರಕ್ಷಾಮರಿ** – [ರಕ್ಷಾ+ಅಮರಿ] ರಕ್ಷಿಸುವ ದೇವತೆ (ಎಳೆಮಿಂಚುಂ ಸಿಡಿಲುಂ ಬಂದೆಳಸಿದ ಘನಮಾಳೆ ರಂಜಿಪಂಜಿಪ ತೆಱನಂಲಲಿತಮಂ ರಕ್ಷಾಮರಿಯರಂ ತಳೆದರ್ ಭುಷಣದ ಬಾಳ ಪೊಳೆಪುಗಳಿಂದಂ: **ಪುಷ್ಪದಂಪು,** ೯. ೬೯)

**ರಕ್ಷಿತವಿವರ್ಧನ** – ಕಾಪಾಡಿಕೊಂಡದ್ದನ್ನು ವೃದ್ಧಿಪಡಿಸಿಕೊಳ್ಳುವುದು (ಅಲಬ್ಧಲಾಭಂ ಲಬ್ಧಪರಿರಕ್ಷಣಂ ರಕ್ಷಿತವಿವರ್ಧನಂ ವರ್ಧಿತತೀರ್ಥಪ್ರತಿಪಾದನಂ ಎಂಬ ಚತುರ್ವಿಧ ಪುರುಷಾರ್ಥವೃತ್ತಿಯಾಗಿರ್ಪುದು: **ಪಂಚತಂತ್ರ,** ೭೫ ವ)

**ರಗಣ** – ಎರಡು ಗುರುಗಳ ನಡುವಣ ಲಘುವಿನಂತೆ ನಡು ಸಣ್ಣಗಿರುವ (ರಗಣಮನೆ ಪೋಲ್ತು ಪಿರಿದುಂ ಸೊಗಯಿಪ ದೇವಿಯ ತದೀಯ ತನ್ಮಧ್ಯಂ: **ಕುಸುಮಾಕಾ,** ೭. ೬)

**ರಚನೆ** – (ಪೊಸಮಕರಂದದ ಮಾಂದದ ರಸಕ್ಕೆ ವಂದಲರೊಳೆಱಗಿದರಗಿಳಿ ರಚನೆಯ ಕರ್ಪೆಸೆವಂತೆ ಎಸೆವಿನಂ ಏಂ ಸೊಯಿಸಿದುದೊ ವನಯುವತಿ ವದನತಿಲಕಂ ತಿಲಕಂ: **ಶಾಂತಿಪು,** ೭. ೧೩೩)

**ರಚ್ಚೆ** – ರಂಪಾಟ (ಈಕೆ ತನ್ನ ಮರುಳಂ ಮುಚ್ಚಿ ನುಡಿದೊಡಂ ರಚ್ಚೆಗೆ ಬಿರ್ದುದು ಎಂದು ಅರಸಂ ಅನುಕೂಳದಿಗಳೊಳ್ ನುಡಿಯುತ್ತುಂ: **ಅನಂತಪು,** ೮. ೧೧ ವ)

**ರಚ್ಚೆಯ** – ಏಳು ಬಗೆಯ ತಾಳಕ್ರಮಗಳಲ್ಲಿ ಒಂದು (ಧ್ರುವ ಮಟ್ಠೆಯಂ ಪಡಿಮಟ್ಠೆಯಂ ಅಟ್ಟತಾಳ ಎಕ್ಕತಾಳ ರೂಪಕಂ ರಚ್ಚೆಯ ಎಂಬ ಏೞುಂ ತೆಱದ ತಾಳಕಮದಿಂದ: **ಧರ್ಮಪ,** ೨. ೨೦ ವ)

**ರಚ್ಚೆಯೊಳ್ಪಡು** – ಕಷ್ಟದಲ್ಲಿ ಸಿಲುಕು (ತಿರಿದುಂಡು ಕಚ್ಚುಟಮನುಟ್ಟು ರಚ್ಚೆಯೊಳ್ಪಟ್ಟು ಮುಟ್ಟುಗೆಟ್ಟು ಉಬ್ಬೆಗಮುಬ್ಬರಿಸಿ ನಮೆದುದನದಂ ಮಱೆದಿರೆ ಮಾವಂ ದೇವನಾದೊನೇ ನಮಗೀಗಳ್: **ಸುಕುಮಾಚ,** ೪. ೩೦)

**ರಜ** – ಧೂಳು (ರಸರಸದ ಬಾವಿ ಮನೆಮನೆಗೆ ಬೇಱೆ ಕಿಸುಗಲ್ಗಳ ರಜದ ಕಣಿವೆರಸು ತೋಱೆ: **ಪಂಪಭಾ,** ೪. ೧೦); ಹೂವಿನ ಪರಾಗ (ನೀರಜದ ರಜದ ಪೊರೆಪು ಆ ನೀರೇಜದ ನೀರ ಪೊರೆಪು ಪೊರೆವೊರೆ ನೀಂ ಸಂಸಾರಕ್ಕೆ ನಿನಗಂ ಈ ಸಂಸಾರಂ ಪೊರೆಪೊರೆ ಪರಾತ್ಮಹಿತಿನುತಚರಿತಾ: ಶಾತಿಪು, ೧೧. ೯೬); ರಜೋ ಗುಣ (ಘನಸತ್ತ್ವನಲ್ತೆ ಸಂಭವಿಪ ನೃಪಾತ್ಮಜಂ ಆತನೀ ಧರಿತ್ರಿಗೆ ಪತಿಯಪ್ಪನೆನುತುಂ ಅಡಗಿತು ರಜ ಎಂದೆನಲ್: **ಕುಸುಮಾಕಾ,** ೬. ೫೮); ಹೆಣ್ಣಿನ ರಜಸ್ಸು (ಆರ್ತವಮದು ರಜಮೆಂದುಂ ಪುಷ್ಪವೆಂದುಂ ಅವಿಭೇದದಿಂದೆ ಪೇೞಲ್ಪಡೆಗುಂ: **ಅಭಿಧಾವ,** ೧. ೧೧. ೧೩೦

**ರಜಂಬೊರೆ** – ಧೂಳಿನಿಂದ ಕೂಡಿರು (ಪರಿಜನಮನಿತುಂ ತುರಿಪದೆ ಪರಿತಂದಿನ್ನೇವೆವೆಂದು ಕಪ್ಪುರದ ರಜಂಬೊರೆದ ಕರಕಾಂಬುವಂ ತಳಿದು: **ಆದಿಪು,** ೪. ೧೩೭); ಪರಾಗವನ್ನು ಹೊಂದಿರು (ಪರಮಜಿನಜನನಿಗೊರ್ವಳ್ ಸುರವಧು ಕೊಡೆವಿಡಿದು ನಳಿನಿಯೊಡವೆಳೆದು ರಜಂಬೊರೆಯೆ ಕೊಡೆಯೆಲೆಯ ಕೆಱಗಿರ್ದ ರಾಜಹಂಸಿಯ ವಿಳಾಸಮಂ ನೆನೆಯಿಸಿದಳ್: **ಶಾಂತಿಪು,** ೯. ೧೭೮); ರಜೋಗುಣವನ್ನು ಉಂಟುಮಾಡು (ಇರದೊಯ್ದುದು ತನ್ನಿಚ್ಛೆಗೆ ವರಯವ್ವನದಂದು ಪುರುಷನಂ ಪ್ರಕೃತಿ ರಜಂಬೊರೆದು ತಿರುಪುತ್ತೆ ತಱಗೆಲೆಯನುಯ್ವ ತೆಱದಿಂದೆತ್ತಂ: **ಕಾದಂಬ,** ೩. ೬೯)

**ರಜಕ** – ಅಗಸ (ನೀನೊಲ್ಲದೊಡೆ ಒಂದು ದೊಡ್ಡ ಪೊಱೆ ಪುಳ್ಳುನೀವೆಂ ಅದರ್ಕೆ ನೀನಿದಂ .. .. ಈವುದು ಎನೆ ಆ ರಜಕಂ ಕುಡೆ: **ಧರ್ಮಪ,** ೯. ೯)

**ರಜತ** – ಬೆಳ್ಳಿ (ಲಕ್ಷ್ಮೀಮತಿ ಮೊದಲಾಗಿರೆ ತನ್ನಿರ್ಕೆಲದೊಳ್ ಅಬ್ಜದ ಎಳೆಯೆಲೆಗಳ ಬಿತ್ತರಿಗೆಗಳೊಳ್ ಅರಸಿಯರ್ ನೆಮ್ಮಿ ರಾಗದಿಂ ಕನಕ ರಜತ ಸಿಕತೆಳತಳದೊಳ್: **ಶಾಂತಿಪು,** ೮. ೫)

**ರಜತಗಿರಿ** – ಬೆಳ್ಳಿಯ ಬೆಟ್ಟ (ಸಮುದ್ಯತ್ ರಜತಗಿರಿ ತಟ ಸ್ಫಷ್ಟ ಸಂಶ್ಲಿಷ್ಟ ಮೌರ್ವಿನಿನದಂ ಪರ್ವಿತ್ತು ಅಕಾಂಡಪ್ರಳಯ ಘನಘಟಾಟೋಪ ಗಂಭೀರನಾದಂ: **ಪಂಪಭಾ,** ೧೨. ೧೩೭)

**ರಜತಾದ್ರಿ** – ಬೆಳ್ಳಿಯ ಬೆಟ್ಟ (ರಜತಾದ್ರಿಯೆನೆ ನೃಪನಂದನ ಧವಳಾತಪತ್ರಂ ಎಸೆದತ್ತಾಗಳ್: **ಕಾದಂಬ,** ೩. ೧೧೪)

**ರಜನಿ** – ರಾತ್ರಿ (ತನಗಿದಿರ್ವಂದು ನಿಂದ ರಜನೀವಧುವಂ ನಸುಸೋಂಕಿದಾಕ್ಷಣಂ ಘನತಿಮಿರಾಸಿತ ಅಂಬರಂ ಅದೊಯ್ಯನೆ ಜಾಱೆ: **ರಾಜಶೇವಿ,** ೪. ೧೫); ಅರಿಸಿನ (ಪೊಂಬರದನ ಅಲರ್ಪೊನ್ನಂ ಪರ್ಣಕರ್ಷೋಪಲದೊಳ್ ಒರೆಯೆ ಸುರಿದು ಪರಿದ ಪೊಂಬುಡಿ ಎಂಬಂತಿರೆ ಇಂಬುವೆತ್ತ ರಜನೀರಜಃ ಪಿಂಜರರಜೋಗುಣದಿಂ: **ಶಬರಶಂ,** ೨. ೪೨ ವ)

**ರಜನೀಕರ** – ಚಂದ್ರ (ರಜನೀಕರಕುಲತಿಲಕಂ ತ್ರಿಜಗತ್ಪತಿ ಪೂರ್ಣಕೀರ್ತಿ ಉದ್ಭಟದೇವಂ: **ಉದ್ಭಟಕಾ,** ೧. ೮೫)

**ರಜನೀರಜ** – ಅರಿಸಿನ ಪುಡಿ (ಪೆರ್ದೊಱೆಗಳೊಳ್ .. .. ನೀರಾಟಮನಾಡಿ ಪೋದ ವಾರನಾರಿಯರ ಪೊಂಜೆಳೆಮೆಯ್ಯೊಳ್ ರಂಜಿಸಿರ್ದ ರಜನೀಕರಜಂಗಳಿಂ ಕದಡಳ್ದು ಪರಿದಪುದು: **ರಾಜಶೇವಿ,** ೧೨. ೩೯ ವ)

**ರಜಸ್ವರ** – ಪರಾಗ (ಸಮೀರನುದಾರಕನೆಂಬ ಕೇತಕೀಪ್ರಸರ ರಜಸ್ವರಪ್ರಕಟಪಾಂಸುಳಮಾದುದು ಮೇಘಕಾಲದೊಳ್: **ಪಂಪಭಾ,** ೭. ೨೨)

**ರಜಸ್ವಲೆ** – ಮುಟ್ಟಾದ ಹೆಂಗಸು (ರಜಸ್ವಲೆಯಾಗಿರ್ದೆಂ .. .. ಮುಟ್ಟಲಾಗದು ಎನೆಯುಂ .. .. ಮುಡಿಯಂ ಪಿಡಿದು: **ಪಂಪಭಾ,** ೭. ೪ ವ)

**ರಜ್ಜು** – ಹಗ್ಗ (ಇಂದ್ರಿಯತತಿಯಂ ತೆಗೆದೊಳಗೆ ಪಿಡಿದು ಕಟ್ಟಿದ ರಜ್ಜುಪ್ರತತಿಯೆಂಬಿನೆಗಂ ಯತಿಪತಿಗೆಸೆದುವು .. .. ಸೆರೆಗಳ ತುಱುಗಲ್: **ಕಾದಂಬ,** ೧. ೧೯೮); [ಜೈನ] ಒಂದು ಉದ್ದಳತೆ, ಎಂಟು ಹಸ್ತಗಳು (ಏಕತಜ್ಜುಪ್ರಮಾಣಂ ತಿರ್ಯಗಲೋಕಂ: **ಆದಿಪು,** ೧. ೪೮)

**ರಟತ್** – ಧ್ವನಿ ಮಾಡುವ (ಘಟೆಯ ದಟಿದ ಉಲಿವು ಲಯಘನಘಟೆಗಳ ಮೊಟಗೆನಿಸೆ ಪೊಟ್ಟಗೆ ಒಡೆದತ್ತು ರಟತ್ ಪಟು ಪಟಹ ಶಂಖ ಭೇರಿಯ ಚಟುಳಿತದಿಂದ ಅತಳಪಟಂ ಅಂಬರಪಟಳಂ: **ಪಂಪಭಾ,** ೧೦. ೬೭)

**ರಟನ** – ಧ್ವನಿ, ಅಬ್ಬರ (ಗಿಜ್ಜೆಂಬ ಗಿಜುಗಟೆಯ ನಿಬಿಡತರ ಪಟು ರಟನದೊಡನೆ ಘುಡುಘುಡಿಪ ಸುಭಟಪಟಕಳಕಳಂ: **ರಾಜಶೇವಿ,** ೬. ೧೧ ವ); ಧ್ವನಿಮಾಡುವ (ಸಿಂಜಿನಿಯಂ ಸೆಳೆದಾರ್ದು ಸಾರ್ದು .. .. ಎಚ್ಚೊಡೆ ಅರಿಸಿಂಹಳನೈದುವ ಲೋಕಭೀಕರ ರಟನಾಸ್ತ್ರಮಂ ತಟಿದು: **ರಾಜಶೇವಿ,** ೬. ೮೭)

**ರಣ** – ಯುದ್ಧ (ಸಮರಂ ಸಂಗ್ರಾಮಂ ಯುದ್ಧಂ ಆಜಿ ಆಯೋಜನಂ ಸಮೀಕಂ ಕದನಂ ಸಮಿತಿ ರಣಂ ಜನ್ಯಂ ಆಹವಂ ಸಂತುಗಂ ಪ್ರಘಾತಂ ಕಲಹಂ: **ಅಭಿಧಾವ,** ೧. ೧೪. ೧)

**ರಣಕಬಳ** – ರಣಗೂಳು (ಮೇಘಾಡಂಬರದ ರಣಕಬಳರಕ್ಕೆ ಮರ್ದುಗಳ್ಪುದಿದ ಭರಣಿಗಳ ಪೊಸಸವಗ ಸೀಸಕಂಗಳ ಚಕ್ರಚೀತ್ಕೃತಿಗೆ ಜತಿಗುಡುವ: **ರಾಜಶೇವಿ,** ೬. ೧೧ ವ)

**ರಣಧೌತ** – ಯುದ್ಧದಲ್ಲಿ ಪಾವನವಾದುದು (ಅಸಿಲತೆ ರಣಧೌತಂ ಈ ಮಸಿಮುಸುಡನ ಜೀವಕಪ್ಪಿನಿಂ ಕಂದಿದೊಡೆ .. .. ಕಯ್ವೆಸೊರೆಯ ಕುಡಿಯವೊಲಕ್ಕುಂ: **ಯಶೋಧಚ,** ೨. ೫೫)

**ರಣಮಾರ** – ರಣಭಯಂಕರ (ಗುಣಮಂ ಕೆಯ್ಕೊಂಡು ತಳ್ತಿರ್ದೊಡೆ ಆತನೆ ವೀರಂ ರಣಮಾರಂ ಅತನೆ ಜಯೋದಾರಂ ಮನುಷ್ಯರ್ಕಳೊಳ್; **ಹರಿವಂಶ,** ೧೧. ೯೪)

**ರಣರಣಕ** – ಉದ್ವೇಗ, ವಿರಹವ್ಯಥೆ (ಕಾದಂಬರಿಯಂ ರಣರಣಕ ವಿಕಲಹೃದಯದಿಂ ಓರಂತೆ ಚಿಂತಿಸುತ್ತಿರ್ದು: **ಕಾದಂಸಂ,** ೫. ೭೫)

**ರಣಸ್ಥಾನ** – ಯುದ್ಧರಂಗ (ಹರಿಯೆಂದಂದಮದಂತೆ ಪಾಂಡುತನಯರ್ ನಿರ್ದೋಷಿಗಳ್ ತಥ್ಯಂ ಇಂತು ರಣಸ್ಥಾನದೊಳ್ ಇನ್ನೆರಟ್ಟುಡಿವೆನೇ: **ಪಂಪಭಾ,** ೧೩. ೯೦)

**ರಣಾಂಗಣ** – ರಣಸ್ಥಾನ (ನಾಳೆಯ ರಣಾಂಗಣದೊಳ್ ನಡೆ ನೋಎಬುವಿರ್ ಮರುಳ್ವಡೆಯೊಡಗೂಡೆ ತಾಂಡವಮಾಡುವ ರಾವಣನ ಅಟಟ್ಟೆಯಾಟಮಂ: **ಪಂಪರಾ,** ೧೦. ೨೩೩)

**ರಣಾಗ್ರ** – ಮುಂಚೂಣಿ (ಸೌಮಿತ್ರಿಯಂ ರಾಮನಂ ವಿರಥರ್ಮಾಡಿ ರಣಾಗ್ರೊಳ್ ಪಿಡಿದು ತಂದಾಂ ಕೊಟ್ಟಪೆಂ ಸೀತೆಯಂ: **ಪಂಪರಾ,** ೧೪. ೧೧೯)

**ರಣಾಗ್ರಹಪ್ರಣಯ** – ಯುದ್ಧಾಪೇಕ್ಷೆಯ ಪ್ರೀತಿ (ಕೆಳರ್ದು ಅಂದುಗ್ರರಣಾಗ್ರಹಪ್ರಣಯದಿಂದಾಗಳ್ ಕುರುಕ್ಷೇತ್ರಮಂ ಕಳವೇಟ್ಟು ಇರ್ವರುಂ ಐಂದ್ರ ವಾರುಣದೆ ವಾಯವ್ಯಾದಿ ದಿವ್ಯಾಸ್ತ್ರಸಂಕುಳದಿಂದ ಒರ್ವರಂ ಒರ್ವರ್ ಎಚ್ಚು: **ಪಂಪಭಾ,** ೧. ೭೯)

**ರಣಾಜಿರ** – ರಣಸ್ಥಾನ (ಗುರು ಪಣ್ಣಿದ ಚಕ್ರವ್ಯೂಹರಚನೆ ಪೆಱರ್ಗರಿದು ಪುಗಲ್ ಇದಂ ಪೊಕ್ಕು ರಣಾಜಿರದೊಳ್ ಅರಿನೃಪರಂ ಇಕ್ಕಿದ ನರಸುತ ನಿನ್ನೊರೆಗೆ ದೊರೆಗೆ ಗಂಡರುಮೊಳರೇ: **ಗದಾಯು,** ೪. ೫೫)

**ರಣಿತ** – ಸದ್ದು (ಮಣಿಪಾದುಕಾಪದವಿನ್ಯಾಸ ರಣಿತ ಮಣಿಕುಟ್ಟಿಮಮಂ: **ಲೀಲಾವತಿ,** ೩. ೭೮ ವ); ಸದ್ದುಮಾಡುವ (ಮೃದುಪದಂಗಳೊಳ್ ಕಳರವರನಿತ ಮಣಿನೂಪುರಂಗಳಿಂ ತುಡಿಸಿ: **ಆದಿಪು,** ೭. ೧೦೬ ವ)

**ರಣೋದ್ಯತ** – ಯುದ್ಧಸಿದ್ಧ (ನಿನ್ನ ಒರಂಟುತನಂ ಕೈಗಟಿವಾಯ್ತು ಅದಪ್ಪೊಡೆ ಮಹಾಭಾರಾವತಾರಂ ರಣೋದ್ಯತನಾಗು ಎಂಬುದಂ ಎಮ್ಮಂ ಅನ್ಯರವೊಲೇಂ ನೀಂ ಪ್ರಾರ್ಥಿಸಲ್ವೇಟ್ಟುದೇ: **ಪಂಪಭಾ,** ೧೦. ೧೦)

**ರತ** – ಮಗ್ನ, ತತ್ಪರ (ದ್ವಿಟ್ಪುರಧ್ವಂಸರತಕ್ರೋಧಂ .. .. ರಕ್ಷಿಸುಗೆ ವಸುಧೆಯಂ ಯುದ್ಧರಂಗತ್ರಿಣೇತ್ರಂ: **ಜಗನ್ನಾವಿ,** ೧. ೩)

**ರತಕೇಳಿ** – ಸಂಭೋಗ (ರತಕೇಳಿರಾಗವನಿಶಂ ಸ್ತ್ರೀಪುಂವ್ರಜಕ್ಕೆಲ್ಲಂ: **ಜಗನ್ನಾವಿ,** ೨. ೩)

**ರತಕ್ರೀಡೆ** – ಸಂಭೋಗ (ತವದುತ್ಕಂಠತೆ .. .. ಮೆಯ್ದಾರದೊಳ್ಪೆಂಬಿವಂ ದಿವಿಜಂ ಶ್ರೀಪ್ರಭೆಗಿತ್ತಂ ಆಕೆ ದಿವಿಜಂಗಿತ್ತಳ್ ರತಕ್ರೀಡೆಯೊಳ್: **ಶಾಂತಿಪು,** ೭. ૩೭)

**ರತಖಿನ್ನ** – ಸಂಭೋಗದಿಂದಾಗಿ ಆಯಾಸಗೊಂಡ (ರತಖಿನ್ನ ಕಿನ್ನರೀಸನ್ನತೆಯಂ ತಣ್ಮಲೆದು ಕಳೆದು ಸುಯ್ಯಿಂ ಸುರಭೀಕೃತಮಾಗುತ್ತುಂ ಪ್ರತ್ಯುಪಕೃತಿವಡೆವುದು ತದುಪವನದ ಪಾವನವದನಂ: **ಚಂದ್ರಪ್ರಪು,** ೧೦. ೪೨)

**ರತದೀಪಿಕೆ** – ರತಿಕಾಲದ ದೀಪ (ಒಗೆದುವು ನೋಡಿ ನಾಣ್ಚಿ ತಲೆಯಂ ತೆಗೆವಂತಿರೆ ಪಾತ್ರಮಧ್ಯದೊಳ್ ತೆಗೆದುಡುಗಿರ್ದುವೊಳ್ಗುಡಿಗಳಂ ರತದೀಪಕೆಗಳ್ ನಿತಾಂತದೊಳ್: **ಲೀಲಾವತಿ,** ૩. ೧೮)

**ರತಿ** – ಆಸಕ್ತಿ (ಸದಾಚರಿತದೊಳ್ ರತಿ ಧರ್ಮದೊಳ್ ಅಟ್ತೆ .. .. ನಿಜಮಾಗಿ ವರ್ತಿಸುವ ಭವ್ಯರೆ ಭಾವಿಸೆ ದೇವರಲ್ಲರೇ: **ಸಮಯಪ,** ೬. ೧೧೯)

**ರತಿಕ್ರೀಡೆ** – ಸಂಭೋಗ (ತದ್ವನಮಾಲೆ ರತಿಕ್ರೀಡೆಗೆ ಮನೋಜ್ಞಮನುಕೂಲಮುಚಿತಂ: **ಪುಷ್ಪದಂಪು,** ೩. ೫೯)

**ರತಿಸ್ವೇದ** – ಸಂಭೋಗದಿಂದ ಉಂಟಾಗುವ ಆಯಾಸದ ಬೆವರು [ಮೃಗಭೂ ಋದ್ಧ ವಿಳಾಸಿನೀ ಕಬರಿಕಾಬಂಧಗಳಂ ಪೊತ್ತು ಮಲ್ಲಿಗೆಯೊಳ್ ಭಾವಿಸಿ ಧೂಪದೊಳ್ ಪೊರೆದು ತತ್ಕಾಂತಾ ರತಿಸ್ವೇದಬಿಂದುಗಳೊಳ್ ನಾಂದು ಕುರುಳ್ಗಳೊಳ್ ಸುೞಿದು ಮುಂದೊಂದಿರ್ದ ಸೌಭಾಗ್ಯಘಂಟೆಗಳೊಂದಿ ಇಂಚರದೊಳ್ ಪಳಂಚಿ ಸುೞಿದತ್ತು ಅಂದೊಂದು ಮಂದಾನಿಳಂ: **ಪಂಪಭಾ,** ೪. ೮೦)

**ರತೀಶ** – ಮನ್ಮಥ (ಭಾಳವಿಲೋಚನಪ್ರಭವಭಸ್ವತ್ ಜಾತವೇದಶ್ಶಿಖಾನಿವಹಪ್ಲುಷ್ಟ ರತೀಶಂ ಇಷ್ಟಸುಖಮಂ ದುರ್ಗಂಗೆ ದೀರ್ಘಾಯುಮಂ: **ಪಂಚತಂತ್ರ,** ೨)

**ರತುನ** – [ರತ್ನ] ಬೆಲೆಬಾಳುವ ಹರಳು (ಪಂಚರತುನದೊಳೆ ನೆಱೆದ ಪಸರದಿಂ ತೋರಣಂಗಳೊಳ್ ತೊಡರ್ದ ತಿಸರದಿಂ: **ಪಂಪಭಾ,** ೩. ೨೨)

**ರತೋತ್ಕಂಠೆ** – ಸಂಭೋಗಾತುರೆ (ಕೋಮಲೆಯಂ ಕೋಟಿಚಟೂಕ್ತಿಯಿಂದೊಸೆಯಿಸುತ್ತಿರ್ದಂ ರತೋತ್ಕಂಠೆಯಂ: **ಚಂದ್ರಪ್ರಪು,** ೮. ೫೩)

**ರತೋತ್ಸವ** – [ರತ+ಉತ್ಸವ] ಸಂಭೋಗದ ಸಂಭ್ರಮ (ಮಿಕ್ಕಮಂಡನಂ ಯುವತಿಜನಕ್ಕದೇವುದೊ ರತೋತ್ಸವಚಿಹ್ನಮೆ ದಿವ್ಯಮಂಡನಂ: **ಜಗನ್ನಾವಿ,** ೧೪. ೧೧೦)

**ರತ್ನಕಂಬಲ** – ಅಮೂಲ್ಯವಾದ ಕಂಬಳಿ (ತನ್ನ ಬೆಳಗೆ ಬೆಳಗಾಗಿರ್ದ ರತ್ನಕಂಬಲಮನಾ ಧರಿತ್ರೀವಲ್ಲಭಂ ಮುಹುರ್ಮುಹುರ್ ಆಲೋಕನಂಕುತೂಹಳಚಿತ್ತನಾಗಿ ವಿಸ್ಮಯಂಬಟ್ಟು: **ಸುಕುಮಾಚ,** ೧೦. ೧೦೫ ವ)

**ರತ್ನಕುಂಡಲ** – ರತ್ನಗಳಿಂದ ಮಾಡಿದ ಕಿವಿಯ ಆಭರಣ (ಇವು ರತ್ನಕುಂಡಲಂ ಜಿತರವಿಮಂಡಲಂ ಇವು ತುಡಲ್ಕೆ ಯೋಗ್ಯಮೆ ನಿನಗೆ: **ಆದಿಪು,** ೧೨. ೧೦೭)

**ರತ್ನಗರ್ಭೆ** – ಭೂಮಿ (ರತ್ನಗರ್ಭೆಯಂ ಕಾದು ಸುವರ್ಣಯುಕ್ತೆಯೆನೆ ತನ್ನ ಕರಕ್ಕೆ .. .. ಮಣಿಮುದ್ರಿಕೆಯಾಗೆ ಮಾಡಿದಂ: **ನೇಮಿನಾಪು,** ೪. ೧೩೦)

**ರತ್ನತ್ರಯ** – [ಜೈನ] ಮೋಕ್ಷಸಾಧನಗಳಾದ ಸಮ್ಯಕ್‌ದರ್ಶನ, ಸಮ್ಯಕ್‌ಜ್ಞಾನ, ಸಮ್ಯಕ್‌ಚಾರಿತ್ರಗಳು (ಇವಱಿಂ ಸಮ್ಯಗ್ದರ್ಶನಮುಜ್ಜ್ವಳಿಕಂ ಅದುವೆ ಸಮ್ಯಜ್ಞಾನಕ್ಕೆ ಅವಕಾಶಮಕ್ಕುಂ ಅಂತದು ಕವಲ್ತು ಸಮ್ಯಕ್ಚರಿತ್ರಮಂ ಪ್ರಕಟಿಸುಗುಂ: **ಆದಿಪು,** ೫. ೫೯); ಪಂಪ ಪೊನ್ನ ರನ್ನ ಎಂಬ ಮೂವರು ಜೈನ ಕನ್ನಡ ಕವಿಗಳು (ಕವಿಜನದೊಳ್ ರತ್ನತ್ರಯಪವಿತ್ರಮೆನೆ ನೆಗೞ್ದ ಪಂಪನುಂ ಪೊನ್ನಿಗನುಂ ಕವಿರತ್ನನುಂ ಈ ಮೂವರ್ ಕವಿಗಳ್ ಜಿನಸಮಯದೀಪಕರ್ ಪೆಱರೊಳರೇ: **ಅಜಿತಪು,** ೧೨. ೩೮)

**ರತ್ನಪರೀಕ್ಷಕ** – ರತ್ನಗಳ ಮೌಲ್ಯನಿರ್ಧಾರಕ (ರತ್ನಪರೀಕ್ಷಕ ನಾಂ ಕೃತಿರತ್ನಪರೀಕ್ಷಕನೆಂದು ಫಣಿಪತಿಯ ಫಣಾರತ್ನಮಂ ರನ್ನನ ಕೃತಿರತ್ನಮುಮಂ ಪೇೞ್ ಪರೀಕ್ಷಿಪಂಗೆಂಟೆರ್ದೆಯೇ: **ಗದಾಯು,** ೧. ೪೪)

**ರತ್ನಪರೀಕ್ಷೆ** – ರತ್ನಗಳ ಮೌಲ್ಯಮಾಪನ, ಚೌಷಷ್ಟಿಕಲೆಗಳಲ್ಲಿ ಒಂದು (ಬಾಹುಬಲಿಗೆ ಕಾಮತಂತ್ರ ಸಾಮುದ್ರಿಕ ಆಯುರ್ವೇದ .. .. ರತ್ನಪರೀಕ್ಷೆಗಳುಮಂ .. .. ಉಪದೇಶಂಗೆಯ್ದಂ: **ಆದಿಪು,** ೮. ೬೦ ವ)

**ರತ್ನಪ್ರಭೆ** – [ಜೈನ] ಒಂದು ನರಕ (ನೀಂ ನಿಜಾಯುರವಸಾನದೊಳ್ ರತ್ನಪ್ರಭೆಯೆಂಬ ಮೊದಲ ನರಕದ ಪದಿಮೂಱುಮಿಂದ್ರಕಂಗಳೊಳಗೆ .. .. ಪುಟ್ಟಿದೈ: **ಶಾಂತಿಪು,** ೭. ೮೩ ವ)

**ರತ್ನಮುದ್ರಿಕೆ** – ರತ್ನಖಚಿತವಾದ ಉಂಗುರ (ಬೆರಲ್ಗಳ ರತ್ನಮುದ್ರಿಕೆಯೊಳ್ ಊರ್ಜಿತಕಾಂತಿ ನಿಜಾನನೇಂದುವಿಂಗೆ ಉರು ಪರಿವೇಷಮಾಗಿ: **ತ್ರಿಷಷ್ಟಿಪು,** ೨೪. ೩೫೨)

**ರತ್ನವಿಸ್ಫುರಿತ** – ರತ್ನದಿಂದ ಹೊಳೆಯುತ್ತಿರುವ (ತನ್ನ ರತ್ನವಿಸ್ಫುರಿತ ಕಿರೀಟಮಂ ಕವಿದು ತಾನೆ ನರಂಗೆ ಕಿರೀಟಿನಾಮಮಂ ಸರಸದಿಂ ಆಗಳುಚ್ಚರಿಸಿ ಸಾಹಸಮಂ ಪೊಗೞ್ದಿಂ ಸುರಾಧಿಪಂ: **ಪಂಪಭಾ,** ೫. ೧೦೩)

**ರತ್ನಾಂಗುಳೀಯ** – ರತ್ನಮುದ್ರಿಕೆ (ಸುಬಳಮಹೀನಾಥನ ಕಯ್ಯ ಬೆರಲ ರತ್ನಾಂಗುಳಿಯಮಂ ಮಱವೆಯೊಳಿತ್ತ ಬಿಸುಟ್ಟು: **ಸುಕುಮಾಚ,** ೩. ೧೨)

**ರತ್ನಾಂಶು** – ರತ್ನದ ಕಾಂತಿ (ಏಂ ಬಗೆಗೆ ವಂದುದೋ ರವಿಬಿಂಬಮನೊಳಕೊಂಡು ಪೊಳೆವ ಪರಿವೇಷದವೊಲ್ ಜಂಬೂದ್ವೀಪಮನ್ ಒಳಕೊಂಡಂಬುಧಿ ರತ್ನಾಂಶುಲೋಲ ಲಹರೀಜಾಲಂ: **ಮಲ್ಲಿನಾಪು,** ೧. ೬೦)

**ರತ್ನಾಕರ** – ಸಮುದ್ರ (ಸಮಸ್ತ ರತ್ನರಾಶಿಗಳಿಂದಂ ನೀರೋಡಿದ ರತ್ನಾಕರದೋರನ್ನಮದಾಯ್ತು ರನ್ನವಸರಂ ಪುರದೊಳ್: **ಗಿರಿಜಾಕ,** ೨. ೯೩)

**ರತ್ನಾಭೋಗ** – ರತ್ನದ ಆಭರಣ (ರತ್ನಾಭೋಗ ರೋಚಿರ್ಜಟಿಲತತನು ಬಂದತ್ತು ಅನಂತ ಅಶ್ವಜಾಲಂ: **ಕಾದಂಬ,** ೮. ೧೦೧)

**ರತ್ನಾವಳಿ** – [ಜೈನ] ಒಂದು ವ್ರತ (ಅವರ ಪಕ್ಕದೆ ಮಿಕ್ಕಿ ರತ್ನಾವಳಿಯೆಂಬ ನೋಂಪಿಯಂ ನೋಂತು: **ಕರ್ಣನೇಮಿ,** ೧೪. ೧೯ ವ)

**ರತ್ನಿ** – ಒಂದು ಅಳತೆ (ಅಲ್ಲಿಯ ದಿವಿಜರೆಲ್ಲಂ ಪಂಚರತ್ನಿಪ್ರಮಾಣರುಂ .. .. ಅಪ್ಪರ್: **ಸುಕುಮಾಚ,** ೧೧. ೬೩ ವ)

**ರಥ** – ತೇರು (ರಥ ವರದಂ ಸ್ಯಂದನಂ ವರೂಥಕ್ಕೆ ಪೆಸರ್: **ಅಭಿಧಾವ,** ೧. ೧೪. ೨೬); ಚತುರಂಗಸೈನ್ಯದಲ್ಲಿ ಒಂದು (ರಥಮಿಲ್ಲದೆಯುಂ ಜಂಘಾರಥದಿಂದೆ .. .. ಪೃಥಿವೀಪತಿ ತಾನೆ ಕಾದಲುದ್ಯತನಾದಂ: **ಗದಾಯು,** ೭. ೬೬)

**ರಥಂತರ** – ವೇದದಲ್ಲಿನ ಶಿವಸ್ತವನ ಮಂತ್ರ (ರುದ್ರಸೂಕ್ತ ರಥಂತರಾದಿ ಮಂತ್ರಮನಂ ಓದುವ ಅಬ್ಜಭವನಿಂ: **ಶಬರಶಂ,** ೧. ೭೯ ವ)

**ರಥಕಲ್ಪ** – ರಥಚಾಲನಾ ಕೌಶಲ; ರಥದ ಬಗೆಗಿನ ಶಾಸ್ತ್ರ (ಅನುಕೂಲ ಶೂರ ರಥಕಲ್ಪಪರಿಣತ ರಥಚೋದಕ ಪರಿಭ್ರಾಜಿತಮುಂ ಆಗಿ: **ಆದಿಪು,** ೧೧. ೧೨ ವ)

**ರಥಚರಣ** – ಚಕ್ರವಾಕ (ಸುರಪತಿಯ ಬೆಳ್ಗೊಡೆಯ ರಥಚರಣದ ಪಾವಕನ .. .. ಪೆಸರ ಖಗಕುಳಂ ಕರಮೆಸೆಗುಂ: **ರಾಜಶೇವಿ,** ೫. ೬೦)

**ರಥಚರಣಪಾಣಿ** – ಚಕ್ರ ಹಿಡಿದವನು, ಕೃಷ್ಣ (ರಥಚರಣಪಾಣಿ ಬಲಮಂ ಮಥಿಯಿಸೆ ಜಂಭಾರಿಗಾಯ್ತು ಗೀರ್ವಾಣಹತಿವ್ಯಥೆ: **ಜಗನ್ನಾವಿ,** ೧೩. ೮೧)

**ರಥಚೋದಕ** – ಸಾರಥಿ (ಕುದುರೆಯ ಬಣ್ಣದಿಂ ರಥದ ತೋರ್ಕೆಯಿಂ ಎತ್ತಿದ ಚಿತ್ರಕೇತುವೃಂದದ ಕುಱುಪಿಂದ ಉದಗ್ರ

ರಥಚೋದಕಚಿಹ್ನದಿಂ ಈತನೆಂಬುದಂ ಅಱಿದು: **ಪಂಪಭಾ,** ೧೦. ೮೭)

**ರಥದ್ರುಮ** – ನೇಮಿ ಎಂಬ ಮರ (ನೇಮಿ ತಾಂ ರಥದ್ರುಮಮಕ್ಕುಂ: **ಅಭಿಧಾವ,** ೧. ೮. ೧೫)

**ರಥವಾಜಿ** – ರಥಕ್ಕೆ ಕಟ್ಟುವ ಕುದುರೆ (ರಥವಾಜಿಗಳೊಂದೆಸೆಯೊಳ್ ರಥಂಗಳೊಂದೆಸೆಯೊಳ್ ಉರುಳ್ದು ಕೆಡೆದುವು: **ಗದಾಯು,** ೩. ೬)

**ರಥಹಯ** – ರಥವಾಜಿ (ರಥಹಯಮಂ ನಾಲ್ಕುಂಬಿಂ ರಥಮಂ ಮೂಱಸ್ತ್ರದಿಂದೆರಟ್ಟಕಣೆಯಿಂ ಸಾರಥಿಯಂ ಕೆಡೆಯಲ್ಕೆಚ್ಚಂ: **ಜಗನ್ನಾವಿ,** ೭. ೯೦)

**ರಥಾಂಗ** – ಚಕ್ರವಾಕ (ಕಾಶ್ಮೀರರಾಗಾರುಣಿತಕುಚ ರಥಾಂಗಾಭಿಧನೋಜ್ವಳಂ ನೀಹಾರಪ್ರಸ್ಪರ್ಧಿ ಚಂಚಚ್ಚಮರಜಕಳಹಂಸಾಸ್ಪದಂ: **ಆದಿಪು,** ೧೦. ೧೯); ಬಂಡಿಯ ಗಾಲಿ (ರಥಾಂಗಂ ಚಕ್ರಂ: **ಅಭಿಧಾವ,** ೧. ೧೪. ೨೮)

**ರಥಾಂಗಧರ** – ಚಕ್ರವನ್ನು ಧರಿಸಿದವನು, ವಿಷ್ಣು, ಕೃಷ್ಣ (ನಿಜರಥಮಂ ರಥಾಂಗಧರಂ ಮುನ್ನಮೇಱಲ್ವೇಟ್ಟು; [ಜೈನ] ಮೂಱುಸೂಟ್ ಬಲವಂದು ಪೊಡಮಟ್ಟು ರಥಮನೇಱೆ: **ಪಂಪಭಾ,** ೧೦. ೧೩೨ ವ); ವಾಸುದೇವ (ಅಜಿತಸೇನ ರಥಾಂಗಧರಂ ಸಮಸ್ತಭೂಜನದ ಮನಕ್ಕೆ ತನ್ನೊಳನುರಾಗಮನಾವಗಮುಂಟುಮಾಡುವಂ: **ಚಂದ್ರಪ್ರಪು,** ೭. ೩೬)

**ರಥಾಂಗಯುಗ** – ಚಕ್ರವಾಕ ದಂಪತಿ (ವಿಯೋಗದಿಂ ಆದೊಂದು ಕಿಚ್ಚಿಂದ ಅಳುರಲಕೆ ಅಗಲ್ದುವು ರಥಾಂಗಯುಗಂಗಳ್ ಅನಂಗತಾಪದಿಂ: **ಕಾದಂಬ,** ೫. ೮೬)

**ರಥಾರೋಹಣ** – ರಥಕಲ್ಪ {ಚೌಷ್ಟಿಕಲೆಗಳಲ್ಲಿ ಒಂದು] ಶಕುನಜ್ಞಾನಂ ರಥಾರೋಹಣಂ ಸ್ಮರಮಂತ್ರಂ .. .. ಎಂಬಿನಿತಱೊಳಂ ಬಲ್ಲರೆಲ್ಲರುಂ ಮೆಚ್ಚೆ ಪಡೆದನತಿಕೌಶಲಮಂ: **ಪುಷ್ಪದಂಪು,** ೪. ೫೯)

**ರಥಾವರ್ತ** – [ಜೈನ] ವಿದ್ಯಾಧರರ ಜಿನಪೂಜೆ (ವಿದ್ಯಾಧರರ್ ಮಾಳ್ಪರಥವರ್ತಮೆಂಬ ಪೂಜೆಯುಂ ಮಹಾಮಂಡಳೇಶ್ವರರ್ ಮಾಳ್ಪ ಇಂದ್ರಕೇತುವೆಂಬ ಪೂಜೆಯುಂ: **ಸುಕುಮಾಚ,** ೬. ೨೫ ವ)

**ರಥಿ** – ರಥವನ್ನೇರಿದವನು, ರಥದಲ್ಲಿದ್ದು ಯುದ್ಧಮಾಡುವವನು (ಪರಶುಶರನಿಕರದಿಂ ಕುಮ್ಮರಿಗಡಿದವೊಲ್ ಒಡನೆ ಕಡಿಯೆ ರಥಿಗಳ್ ರಥದಿಂ ಧರೆಗಿೞಿದು: **ಪಂಪಭಾ,** ೧೦. ೮೮)

**ರಥಿನೀ** – ರಥಸಮೂಹ (ಬಂದುದು ರಥ್ಯಂ ಆತ್ಮರಥಿನೀನೈಪಥ್ಯಶೋಭಾವಹಂ: **ಚಂದ್ರಪ್ರಪು,** ೧೦. ೨೧)

**ರಥಿನೀಪತಿ** – ಸೇನಾಪತಿ (ಎನೆ ರಥಿನೀಪತಿ ಚಕ್ರೇಶನ ಬೆಸನಂ ಪೂಣ್ದು ರಾಗದಿಂದೇೞೆ: **ಆದಿಪು,** ೧೩. ೩೪)

**ರಥ್ಯಾ** – ರಾಜಬೀದಿ (ಮಣಿಪ್ರಭಾಪ್ರೇಂಖಿತ ರಥ್ಯಾಮಂಡನಮಂ ಕಂಡಂ ಶ್ರೀಮಂಟಪಮಂ: **ಕಾದಂಬ,** ೬. ೩೦)

**ರದ** – ದಂತ, ಹಲ್ಲು (ಫಣಿಯ ಫಣಾಮಣಿಯುಂ ವಾರಣರದಮುಂ ವ್ಯಾಘ್ರಚರ್ಮಮುಂ: **ಲೀಲಾವತಿ,** ೧. ೪೯)

**ರದಚ್ಛದ** – ತುಟಿ (ದಡದಡಿಸಿತ್ತು ನುಣ್ಪೊಡೆ ರದಚ್ಛದಂ ಇರ್ಪುಡುಗಿತ್ತು .. .. ಮೆಲ್ಲನಡಿಯಿಟ್ಟಿದು ಮೂರ್ಛೆ ಮರಗಾಯತಾಕ್ಷಿಯಾ: **ರಾಜಶೇವಿ,** ೭. ೭೨)

**ರದನ** – ಹಲ್ಲು (ನಯನಂ ನೀಳಸರೋಜಭಾಸಿ ರದನಂ ಮುಕ್ತಾಫಳಸ್ಪರ್ಧಿ ಬಾಹುಯುಗಂ ಮನ್ಮಥಪಾಶಹಾಸಿ .. .. ಸುರೂಪಂ ಆಶ್ಚರ್ಯಮಾ ಕನ್ನೆಯಾ: **ಸುಕುಮಾಚ,** ೫. ೫೩); ಆನೆಯ ದಂತ (ರದನದ ಕಾಂತಿ .. .. ನೀರದಮೆನೆ ಮಂದರಂಬೊಲೆಸೆವ ಆನೆಮೊಗಂ ಮಿಗೆ ಮಾಳ್ಕವಿಘ್ನಮಂ: **ರಾಜಶೇವಿ,** ೧. ೭)

**ರದನಿ** – ದಂತಗಳುಳ್ಳುದು, ಆನೆ (ಪ್ರತಿ ರದನಿ ರದನಹತಿವಿಗಳಿತ ತಕ್ಷತಜಜಳಮನುಗುತರ್ಪ ಮದೋದ್ಧತಹಸ್ತಿರುಧಿರವೃಷ್ಟಿಯಂ: **ರಾಜಶೇವಿ,** ೬. ೭೩)

**ರನ್ನವಚ್ಚ** – ರತ್ನಾಭರಣ (ಪಜ್ವಳಿಸುವ ರನ್ನವಚ್ಚಂ ಅಳಿಕಾಗ್ರದ ಕತ್ತುರಿಬೊಟ್ಟು .. .. ತನಗೊಪ್ಪಿರೆ ಬಂದಳಳದೊಂದು ಲೀಲೆಯಿಂ: **ರಾಜಶೇವಿ,** ೧೨. ೬೨)

**ರನ್ನವಟ್ಟೆ** – ರನ್ನವಟ್ಟಿಗೆ (ವೀರಘಂಟೆಯ ಹೊನ್ನ ಗುಬ್ಬಿಯ ರನ್ನವಟ್ಟೆಯ ಬೆನ್ನ ಚಮ್ಮಟಿಗೆಯ ಬೆಳಿಯ ಚವರದ .. .. ಪರಿವೀಥಿಯೊಳಂ: **ಗಿರಿಜಾಕ,** ೬. ೫೫ ವ)

**ರನ್ನವಸರ** – ರತ್ನಗಳ ಅಂಗಡಿ (ಪುದಿದ ತನಿವಣ್ಣಬಿರಿಕಿಂದುದಿರ್ದತ್ತಂ ರಾಸಿಯಾದ ಬಿಟ್ಟುಗಳಿಂ ಪೆಂಪೊದವಿದ ಪಲವುಂ ದಾಳಿಂಬದ ಮರಗಳ್ ರನ್ನವಸರದಂತೆಸೆದಿರ್ಕುಂ: **ಕಬ್ಬಿಗಕಾ,** ೮೩)

**ರಪಣ** – [ರೈ+ಪಣ=ರೈಪಣ>ರವಣ] ಆಸ್ತಿ (ಕೆಱೆಯಂ ಕಂಡು ಕಳವೆಯಂ ಬಿತ್ತುವಂತೆ ರಪಣಮಂ ಕಂಡು ಕಡಂಗುಡಡುವಂತೆ ಮದವಣಿಗೆಯಂ ಕಂಡು ಮದುವೆಗೊಡರ್ಚುವಂತೆ: **ಧರ್ಮಾಮೃ,** ೧೪. ೧೧೦ ವ); ಜೂಜಿನ ಒತ್ತೆಯ ಹಣ (ರಪಣಮಂ ತೋಱೆಯುಂ ಒತ್ತೆಯಂ ಉಗ್ಗಡಿಸಿಯುಂ ಆಡಿಂ ಎನೆ ಪೞಿತೇನುಪಾಯಮಿಲ್ಲದೆ ಎಮ್ಮಾಳ್ವ ನೆಲನೊತ್ತೆಯೆಂದೊಡೆ: **ಪಂಪಭಾ,** ೭. ೩ ವ)

**ರಭಸೋದ್ಯೋಗ** – ಆತುರದ ಕೆಲಸ (ಮಹಿಪತಿ ರಭಸೋದ್ಯೋಗಮಂ ಉೞಿದು ಪರೀಕ್ಷಕನಾಗಲ್ವೇಟ್ಟುದು ಸಮಸ್ತಕಾರ್ಯಂಗಳೊಳಂ: **ಪಂಚತಂತ್ರ,** ೨೪೯)

**ರಮ** – ಪ್ರಿಯಕರ (ಅಜಾಂಡಮಂ ಪುದಿದು ಬರ್ಪ ದಶಾಸ್ಯನ ವಹ್ನಿಬಾಣಮಂ ಜಯರಮಣೀರಮಂ ತವಿಸಿದಂ ಗರಿವಾರುಣದಿವ್ಯಬಾಣದಿಂ: **ಪಂಪರಾ,** ೧೪. ೧೬೦)

**ರಮಣೀಜನ** – ಸುಂದರಿಯರು (ರಮಣೀಯ ರಮಣೀಜನಂ ಬೆರಸು ಪಂಚರತ್ನಂಗಳಿಂ ಕೆದಱಿಸಿ ಸಾಂದಿನ ಸೌಸವದ ಕುಂಕುಮದ ಕತ್ತುರಿಯ ಕದಡಂ ಕದಡಿ: **ಪಂಪಭಾ,** ೫. ೬೦ ವ)

**ರಮಣೀಯ** – ಸಂತಸವುಂಟುಮಾಡುವ (ರಮಣೀಯ ರಮಣೀಜನಂ ಬೆರಸು ಪಂಚರತ್ನಂಗಳಿಂ ಕೆದಱಿಸಿ ಸಾಂದಿನ ಸೌಸವದ ಕುಂಕುಮದ ಕತ್ತುರಿಯ ಕದಡಂ ಕದಡಿ: **ಪಂಪಭಾ,** ೫. ೬೦ ವ)

**ರಮಿಯಿಸು** – ಕ್ರೀಡಿಸು (ಸಮುದಿತ ಸಮಸ್ತಲೋಕಂ ರಮಿಯಿಸುವ ವನಾಂತ್ರಂತದು ಉದ್ಯಾನವನಂ: **ಅಭಿಧಾವ,** ೧. ೭. ೧೩)

**ರಯ** – ವೇಗ (ಪವನಂಜಯಾಶ್ವಂ ಅಂತಿರದೆ ಬಿಗುರ್ತು ತನ್ನಯ ರಯೋತ್ಕಟದಿಂದಮೆ ಬಂದು ಪೊಕ್ಕುದು .. .. ಈ ವನಮಂ: **ಕುಸುಮಾಕಾ,** ೧೪. ೯೧); ಪ್ರವಾಹ (ರಯಂ ಪ್ರವಾಹಂ ಸ್ರೋತಂ: **ಅಭಿಧಾವ,** ೧. ೪. ೧೨)

**ರಯಪತಿ** – ಗಾಳಿಯ ಅಧಿದೇವತೆ, ವಾಯು (ರಯಪತಿಯುಂ ಧನಪತಿಯುಂ ಪಶುಪತಿಯುಂ ಎನಿಸಿದಾಶಾಪತಿಗಳ್ .. .. ಇರ್ದರ್: **ಪುಷ್ಪದಂಪು,** ೧೦. ೮೧)

**ರಯ್ಯ** – [ರಮ್ಯ] ಮನೋಹರ (ಚೆಲ್ವಾವೆಡೆಯುಮೆಸೆವಿನಂ ರಯ್ಯಮಾಯ್ತಿಂದ್ರಸೈನ್ಯಂ: **ಆದಿಪು,** ೭. ೫೮)

**ರಯ್ಯನೆ** – ರಭಸದಿಂದ (ಕಾನನಕರಿಯಂತೆ ಬಂದುದೆಲರೊಯ್ಯನೆ ರಯ್ಯನೆವಾರಿದೇಶದಿಂ: **ನೇಮಿನಾಪು,** ೫. ೯೮)

**ರಲ್ಲಕ** – ಕಂಬಳಿ (ಒಂದೆಡೆ ರಲ್ಲಕಾಭಂ ಅಂತೊದೆಡೆ ಊರ್ಣತಂತು .. .. ಒಗೆದತ್ತು ಅನೇಕವಿಧವಣ್ ಧರಾತಲರೇಣುಸಂಚಯಂ: **ಕಾದಂಬ,** ೩. ೧೨೧)

**ರವ** – ಶಬ್ದ (ಭೃಂಗಂ ಕುಂತಲಕ್ಕೆ ಅಂಚೆಗಳ್ ಮೃದುಯಾನಕ್ಕೆ ಪಿಕಂ ರವಕ್ಕೆ ಎಳಸೆತಂತಮ್ಮ ಸ್ವಜಾತೀಯ ಸಂಮದದಿಂ ಪಾಮರಿಯರ್ ಜಿತಾಮರಿಯರ್ ಇರ್ಪರ್: **ಮಲ್ಲಿನಾಪು,** ೨. ೧೫)

**ರವಣ** – ಐಶ್ವರ್ಯ (ಕವಡಿಕೆ ಬಂದುದೋಪಳುಟಿದಟ್ಟಿದಳಾಳ್ದನ ನಂಟರತ್ತಣಿಂದವಳದಮಾಯ್ತು ಪೋಯ್ತು ರವಣಂ ಪೊಲೆವಾವುಗೆನಂಬನಾದಂ ಇನ್ನವಧರಿಸಲ್ಕಮಾಱ: **ಕಾವ್ಯಾವಲೋ,** ೧೧೮); ಸೂಳೆಗೆ ಕೊಡುವ ಒತ್ತೆಯ ಹಣ (ನವರೇಖೆಗಳ್ ಬರೆದ ಗೆಲ್ಲದ ರೇಖೆಗಳಂತೆ ತೋಱ ಮೂಡುವ ಮೊಲೆಯಾಡುವಳ್ಳೆರ್ದೆಗಳೊಳ್ ಸೆಱಸಾರಿದವೊಲಾಗೆ ನಾಡೆ ನೋಡುವ ಕಡೆಗಣ್ಣ ಡಾಳದೊಳೆ ಹಾಸಗೆವಾಯೆ ಮನಂ ವಿಟರ್ಗೆ ಹೋದುವು ರವಣಂ ಗುಣಕ್ಕವಳ ಜವ್ವನವೆರತ್ತದೊಳರೊ ಸೋಲದರ್: **ಸೂಕ್ತಿಸುಧಾ,** ೮. ೪೪೧)

**ರವನ** – ಘೋಷಣೆ (ನಿಜನಾಮಾಂಕಮಾಳಿಕಾಪ್ರಪಂಚ ರವನಾಪುರಸ್ಸರಂ ಷಟ್ಖಂಡ ಪೃಥ್ವೀಮಂಡಳ ವಿಜಯೋಪಲಬ್ಧ ಯಶಃಪ್ರಶಸ್ತಿಯಂ ಬರೆಯಿಸಿ: **ವರ್ಧಮಾಪು,** ೯. ೬೬ ವ)

**ರವಳಿ** – ವಾದ್ಯವಿಶೇಷ (ಬಾರಿಪ ಜಿಂಕರದ ಜಿಂಕರಮುಂ ರವಳಿಯಂ ನೆರಪೆ: **ನೇಮಿನಾಪು,** ೮. ೭೫ ವ); ಕೂಗು (ಸುಭಟಾಲಾಪಮನಾಲಿಸುವ ರವಳಿ ಘೋಷಿಸುವ ದಂದುಗದಿಂ ಅಂದಿನಿರುಳಂ ಕಳೆಯೆ: **ಪಂಪರಾ,** ೧೩. ೧೧ ವ)

**ರವಳಿಘೋಷಿಸು** – ವಾದ್ಯದ ಧ್ವನಿಮಾಡಿ ಯುದ್ಧಾರಂಭಕ್ಕೆ ಸೂಚಿಸು (ಆಗಳ್ ಎರಡುಂ ಬೀಡುಂಗಳೊಳಂ ಭೋರೆಂದಾರ್ದು ರವಳಿಘೋಷಿಸಿ ಕೊಳ್ಳಿವೀಸಲ್: ಪಂಪಭಾ, ೧೦. ೩೫ ವ)

**ರವಿಕಾಂತ** – ಸೂರ್ಯಕಾಂತಶಿಲೆ, ಬಿಸಿಲಿಗೆ ಕಿಡಿಸೂಸುವ ಶಿಲೆ (ಸೂರ್ಯಾಂಶುಸ್ಪರ್ಶ ತೀವ್ರಾನಳಕರ ರವಿಕಾಂತ ಆತಪೋದ್ಯತ್ ನಿದಾಘಂ: **ಗಿರಿಜಾಕ,** ೧. ೪೯)

**ರವಿಸುತ** – ಕರ್ಣ (ಮುಳಿದಿರ್ಪೆಯೊ ಮೇಣ್ ಮಱುವಾತುಗುಡದೆ ರವಿಸುತ ಮಱಸುಂದಿರ್ದಪೆಯೊ: **ಗದಾಯು,** ೫. ೧೫)

**ರವಿಸುತಾ[ತೆ]** – ಯಮುನೆ (ವರದಾ ಸಿಂಧು ಸರಸ್ವತೀ ರವಿಸುತಾ ಗೋದಾವರೀ .. .. ವರಗಂಗಾಸಲಿಲಂಗಳಂ .. .. ತಂದರ್ ಆದರದಿಂ: **ಪಂಚತಂತ್ರ,** ೩೧೬)

**ರವಿಸೂನು** – ಕಾಗೆ (ನೀಂ ಎನ್ನಾಳ್ದನನೀ ರವಿಸೂನುವ ಕಾರಣದೆ ಕೊಂದೆಯದಱಂ ನೋಡು ಆನುಂ ಇದಂ ಕೊಂದಪೆಂ: **ಪಂಚತಂತ್ರ,** ೪೨೯)

**ರಶನಾ** – ಡಾಬು (ವಿದ್ಯಾಧರೀರಮ್ಯನರ್ತನ ರಾಗೋತ್ಥಿತ ಪಾರಿಹಾರ್ಯ ರಶನಾ ಮಂಜೀರಕೋದ್ದಾಮ ನಿಸ್ವನದೊಳ್: **ಆದಿಪು,** ೧. ೭೦)

**ರಶ್ಮಿ** – ಕಾಂತಿ, ಕಿರಣ (ಚಂಚತ್ ರಶ್ಮಿವಿಸ್ಮೇರದೃಷ್ಟಿಕಲಾಪೇಕ್ಷಣಂ ಅಬ್ಜಮಂ ಪಳಿಯೆ ಸೌಂದರ್ಯಾಂಗಂ: **ರಾಜಶೇವಿ,** ೩. ೩)

**ರಶ್ಮಿಕಲಾಪ** – ಐವತ್ತನಾಲ್ಕು ಎಳೆಗಳ ಮುತ್ತಿನ ಹಾರ (ವಿಜಯಚ್ಛಂದಹಾರ ದೇವಚ್ಛಂದಾರ್ಧಹಾರ ರಶ್ಮಿಕಳಾಪ ಗುಚ್ಛನಕ್ಷತ್ರಮಾಳಾ ಅರ್ಧಗುಚ್ಛ ಮಾಣವಕ ಅರ್ಧಮಾಣವಕಂಗಳೆಂಬ ಪನ್ನೊಂದು ನಾನಾರತ್ನದ ಸುವರ್ಣಪದಕವಿರಚನಾಭೇದದಿಂ: **ಆದಿಪು,** ೮. ೫೪ ವ)

**ರಸ** – ಪ್ರೀತಿ (ರಸಂ ರಾಗಂ: **ಅಭಿಧಾವ,** ೩. ೧. ೨೫); ದ್ರವ (ರಸಂ ರಾಗಂ ತಾಂ ದ್ರವಂ: **ಅಭಿಧಾವ,** ೩. ೧. ೨೫); ಪಾದರಸ (ಅನ್ನೆಗಂ ಇತ್ತ ಸಂಸಪ್ತಕ ನಿಕುರುಂಬದೊಳಗೆ ಒರ್ವರುಮಂ ಕಿಱುವೀಟಲೀಯದೆ ರಸಮಂ ಕೊಲ್ವಂತೆ ಎಂತಾನುಂ ಕೊಂದು: **ಪಂಪಭಾ,** ೧೨. ೧೨೦ ವ); ಷಡ್ರಸಗಳು, ಆರು ಬಗೆಯ ರುಚಿ (ತುವರಂ ತಿಕ್ತಂ ಮಧುರಂ ಲವಣಂ ಕಟು ಕಾರಮೆಂದು ರಸಮಾಱು ತೆಱಂ; **ಅಭಿಧಾವ,** ೧. ೧೬. ೧೫)

**ರಸಋದ್ಧಿ** – [ಜೈನ] ತಪಸ್ಸಿನಿಂದ ಪಡೆಯುವ ಒಂದು ಬಗೆಯ ಸಿದ್ಧಿ (ಅನೇಕಪ್ರಕಾರಷಟ್ಪ್ರಕಾರಮಾದ ರಸ್ಯದ್ಧಿಯೊಳಂ .. .. ನೆಱೆದು: **ಚಂದ್ರಪ್ರಪು,** ೧೪. ೩೦ ವ)

**ರಸಂಬೋಗು** – ಒಣಗಿಹೋಗು (ರಸಂಬೋದ ಕಬ್ಬಿನಂತೆ ಪೇಡಿಯಪ್ಪ ಅರಸಿನ ಮಾತಿನಂತೆ: **ಧರ್ಮಾಮೃ,** ೯. ೧೩ ವ)

**ರಸಗೇಯ** – ರಸಗೀತ (ರಸಗೇಯಂ ಭಾವನೃತ್ಯಂ ಪಡೆಯಲೆಸೆವ ವಾದ್ಯಂ: **ಪಾರ್ಶ್ವನಾಪು,** ೫. ೧೧೨)

**ರಸಚಿತ್ರ** – ಸಸ್ಯಗಳ ರಸದಿಂದ ಬಣ್ಣ ಹಾಕಿದ ಚಿತ್ರ (ರಸಚಿತ್ರ ಧೂಳೀಚಿತ್ರದ ಓಜೆಯುಮಂ .. .. ಪರಿಭಾವಿಸಿ ನೋಡಿ: **ಮಲ್ಲಿನಾಪು,** ೫. ೩೬ ವ)

**ರಸಜ್ಞ** – ರಸಿಕ (ಭೋಗಂಗಳ್ .. .. ಮನೋರಾಗಮನೊದವಿಸದವು ಹೃದ್ರೋಗಮನೊದವಿಸೆ ರಸಜ್ಞನನುಭವಿಸುಗುಮೇ: **ಆದಿಪು,** ೩. ೭೦)

**ರಸಜ್ಞಾನಿ** – ಕೀಳುಲೋಹಗಳನ್ನು ಚಿನ್ನ ಮಾಡಬಲ್ಲವನು (ಇನನುತ್ತರಾಯಣದೊಳನುದಿನಂ ರಸಜ್ಞಾನಿ ನೀರನೊಸೆದಂತೆಸೆದಂ: **ಶಾಂತಿಪು,** ೧೦. ೨೫)

**ರಸಜ್ಞೆ** – ನಾಲಗೆ (ನಾಲಗೆ ರಸನೆ ರಸಜ್ಞೆ ಜಿಹ್ವೆ: **ಅಭಿಧಾವ,** ೧. ೧೨. ೧೫)

**ರಸದ ಬಾವಿ** – ಮುಟ್ಟಿದ್ದನ್ನೆಲ್ಲ ಚಿನ್ನವಾಗಿಸುವ ಸಿದ್ಧರಸವುಳ್ಳ ಬಾವಿ (ಪರ್ವತದ ತಟ್ಟಿಲೊಳ್ ಆದಮಾನುಂ ಗುಂಡಿತಪ್ಪ ರಸದ ಬಾವಿಯಂ ಮೊಡೆನಾರ್ಪುದಂ ಕಂಡು: **ವಡ್ಡಾರಾ,** ಪು ೧೮೭, ಸಾ ೭)

**ರಸದಾನ** – ವಿಷ ಪ್ರಯೋಗ (ರಸದಾನಾದಿಗಳೊಳ್ ಛಿದ್ರಿಸುವಮಪ್ಪೊಡೆ ಅವರ್ ಆಪ್ತವಂತರುಂ ಬುದ್ಧಿವಂತರುಂ ಆಗಿ ನೆಗಟ್ದರ್ ಇನ್ನಾವ ಮಾಟ್ಕೆಯೊಳ್ ಪಗೆಯಂ ಕೆಯ್ಗೆ ಮಾಡುವುದು ಪೇೞಿಂ: **ಪಂಪಭಾ,** ೬. ೬೭ ವ)

**ರಸನೆ** – ನಾಲಗೆ (ಅಸಮಾಕ್ಷ ನಾಮವಿಲ್ಲದ ರಸನೆ ವಿರಾಜಿಪುದೆ: **ತ್ರಿಷಷ್ಟಿಪು,** ೧. ೨೬)

**ರಸನಾಲಂಪಟ** – ನಾಲಗೆಯ ಚಾಪಲ್ಯವಿರುವವನು (ರಸನಾ ಲಂಪಟಂ ಆಜ್ಯವಾಂಛಿತಂ ಅಸಂತುಷ್ಟಂ ಸದಾಸರ್ವಭಕ್ಷ ಸಮಸ್ತಾಟವಿಭುಂಜಿತೋಗ್ರನೆನಿಪೀ ದಾವಾಗ್ನಿಯಂ ಕಾಲ್ಗಳಿಂ ಪೆಸೆವೆಂ: **ಸೂಕ್ತಿಸುಧಾ,** ೧೦. ೧೬೫)

**ರಸನೇಂದ್ರ –** ಸರ್ಪರಾಜ (ಉರಗಿನೀನಿಕರಪರಿವೃತನಾಗಿ ರಸೆಯಿಂ ರಸನೇಂದ್ರಂ ಎಟ್ಟಿರ್ಪನೆನಿಸಿ: **ಕರ್ಣನೇಮಿ,** ೧೩. ೩೪ ವ)

**ರಸಪಂಚಕ –** [ಜೈನ] ಸಿಹಿ, ಹುಳಿ, ಕಟು, ಕಷಾಯ, ತಿಕ್ತ ಎಂಬ ಐದು ರುಚಿಗಳು (ಪೂರ್ವಶರೀರಬಂಧನಸಂಘಾತವರ್ಣ ರಸಪಂಚಕ ಸಂಸ್ಥಾನ ಸಂಹನನ ಪಂಚಷಟ್ಕಾಂಗೋಪಾಂಗದ್ವಿಕಂ: **ಆದಿಪು,** ೧೬. ೪೯ ವ)

**ರಸಪರಿತ್ಯಾಗ –** [ಜೈನ] ಬಾಹ್ಯತಪಗಳಲ್ಲಿ ಒಂದು, ರುಚಿಕರವಾದುದನ್ನು ಸೇವಿಸದಿರುವುದು (ಕರಮೆ ಮುನಿ ದುಗ್ಧದಧ್ಯಾದಿ ರಸಂಗಳನೆಯ್ದೆ ತೊಱೆದು .. .. ನಾಲ್ಕನೆಯ ರಸಪರಿತ್ಯಾಗವೆಂಬ ತಪಮಂ ತಳೆದಂ: **ಚಂದ್ರಪ್ರಭು,** ೧೧. ೧೧)

**ರಸಪಿಶುನ –** ಸಂತಸಾಭಿವ್ಯಕ್ತಿ (ಶ್ರೀಮಜ್ಜಿನಪತಿಯಂ ಸಕಳಾಮರಪತಿ ಪರಮಭಕ್ತಿಯಿಂ ಸ್ತುತಿಯಿಸಿದಂ ಪ್ರೇಮೋತ್ಕಟ ರಸಪಿಶುನಂ ರೋಮಾಂಚಂ ಪುದಿಯೆ ತನುವನಭಿನವಪಂಪಂ: **ಮಲ್ಲಿನಾಪು,** ೧೩. ೧)

**ರಸಭಸ್ಮ –** ಪಾದರಸದ ಭಸ್ಮ (ದೇವನೇಂ ನರುಷ್ಕರ ಗುಡಮೋ ವಿಶುದ್ಧ ರಸಭಸ್ಮಮೊ ಪರ್ಮ ಕಟುತ್ರಿಕಾದಿಯೋ: **ಸಮಯಪ,** ೯. ೪೮)

**ರಸಭಾವ –** ತೇವವಾಗಿರುವುದು , ಸಂತಸದಾಯಕ ಚಿತ್ತವೃತ್ತಿ (ರಸಭಾವವಿಳಾಸದಿಂ .. .. ಒಂದಿ .. .. ಸರಸ್ವತಿದಯೆಗೆಯ್ಗೆ: **ಕಾದಂಸಂ,** ೧. ೨)

**ರಸಮಾರ್ಗ –** ನವರಸಗಳನ್ನು ನಿರೂಪಿಸುವ ಕ್ರಮ (ವೀರಾದ್ಭುತ ಕರುಣಾ ಶೃಂಗಾರ ಭಯಾನಕ ಸರೌದ್ರ ಬೀಭತ್ಸ ಮಹಾಸಾರತರ ಹಾಸ್ಯಶಾಂತಾಧಾರ ನವವಿಧವಿಕಲ್ಪಮಾ ರಸಮಾರ್ಗಂ: **ಕವಿರಾಮಾ,** ೩. ೧೮೮)

**ರಸ ರಸಾಯನ –** ರುಚಿಕರವಾದ ಆಹಾರ (ನಾಗಕನ್ನೆಯರುಂ ತಾನುಂ ಮನಂಬುಗಿಸುವಂತೆ ಮಜ್ಜನಂಬುಗಿಸಿ ರಸರಸಾಯನಂಗಳಂ ಊಡುವಂತೆ ದಿವ್ಯಾಹಾರಂಗಳಂ ಮಾಡಿ: **ಪಂಪಭಾ,** ೪. ೧೬ ವ)

**ರಸವದ್ಗೇಯ –** ಸಂತಸದಾಯಕವಾದ ಸಂಗೀತ (ಲಲಿತಾಲಂಕಾರಣಪ್ರಸನ್ನ ರಸವದ್ಗೇಯಂಗಳೊಳ್ ಮೂಡುತುಂ ಮುಬುಗುತ್ತುಂ: **ಆದಿಪು,** ೧. ೮೪)

**ರಸವರ್ಗ –** ದ್ರವಪದಾರ್ಥ (ಚಮ್ಮಗಾಜವೆಸದೊಳ್ .. .. ತೀವಿದಾ ರಸವರ್ಗಂಗಳಂ ಉಣ್ಬೆವೆಂಬ ಜಡರಂ ಕೈಗೊಳ್ವರೇ ಶ್ರಾವಕರ್: **ಸಮಯಪ,** ೬. ೧೭)

**ರಸವಾದಕ –** ರಸಜ್ಞಾನಿ (ಒರ್ವ ರಸವಾದಕನೆಂಬ ಬಿಜ್ಜುವಂ ಈ ಬಾವಿಯೊಳಗಿೞಿದು ನೀನೀ ರಸಮಂ ಮೊಗೆದು ಕೊಟ್ಟೊಡೆ ಅದಱೊಳ್ ಮಾಡಿದ ಪೊನ್ನುಂ ನಿನಗಂ ಎನಗಂ ಸಮಭಾಗಮಕ್ಕುಂ: **ವಡ್ಡಾರಾ,** ಪು ೧೮೭, ಸಾ ೧೧)

**ರಸವಾದಿ –** ರಸಜ್ಞಾನಿ (ದುರ್ಯೋಧನಂ ಬಂದಿಕಾಱನಂತೆ ಸೆಱೆಗೆಯ್ದುಂ ವ್ರಣವೈದ್ಯನಂತೆ ಕೊಡಸಾರಿಯಂ ಪಿಡಿದುಂ ಸೂಳೆಯಂತೆ ಕಟಿವು ಉಟಿವನಜೆದುಂ ರಸವಾದಿಯಂತೆ ಕಟ್ಟಿಯುಂ ಪೆಱ್ಜೋೞಡೆಯಂತೆ ನುಣ್ಣಿತಂ ವೇೞ್ದು: **ಪಂಪಭಾ,** ೬. ೭೨ ವ)

**ರಸವೃತ್ತಿ –** ನವರಸಗಳಿಂದ ಕೂಡಿದುದು (ನೆಱೆದೆಂಟುಂ ಅರ್ಚನೆಗಳಿಂ ರಸವೃತ್ತಿಯ ನೃತ್ತಮಂ ಪ್ರವರ್ತಿಸಿ: **ಚಂದ್ರಪ್ರಭು,** ೪. ೬೯)

**ರಸಾತಳ –** ಪಾತಾಳ (ನೀಂ ಇನಿಸು ಕಾಲ ಇರ್ದೆಯಪ್ಪೊಡೆ ಏಂ ತೊದಳೊ ಸರೋವರಾಂಬುವನಿತಂ ತವೆ ತುಳ್ಕಿ ರಸಾತಳಂಬರಂ ಬೆದಕಿಯುಂ ಎಂತುಂ ಅಪ್ಪಳಿಸಿ ಕೊಂದಪೆಂ: **ಪಂಪಭಾ,** ೧೩. ೮೦)

**ರಸಾಯ –** ಸಿಹಿನೀರನ್ನುಳ್ಳ (ಮಣಿಯಿಲ್ಲದ ಕಲ್ ಜ್ಯೋತಿಸ್ತೃಣಮಲ್ಲದ ಪುಲ್ ರಸಾಯಮಲ್ಲದ ಮಡು .. .. ಇಲ್ಲ ತತ್ಪರಿಸರದೊಳ್: **ಚಂದ್ರಪ್ರಭು,** ೧೦. ೪೧)

**ರಸಾರುಹ –** ಮರ (ಸಾಕ್ಷಾತ್ ಕೃಷ್ಣನಂತೆ ಕಣ್ಗೆವಂದ ರಸಾಲ ರಸಾರುಹಮುಂ: **ಶಬರಶಂ,** ೨. ೪೨ ವ)

**ರಸಾಲ –** ಮಾವು (ಸಾಕ್ಷಾತ್ ಕೃಷ್ಣನಂತೆ ಕಣ್ಗೆವಂದ ರಸಾಲರಸಾರುಹಮುಂ: **ಶಬರಶಂ,** ೨. ೪೨ ವ)

**ರಸಾಶ್ರಯ –** ನೀರಿನ ಆಶ್ರಯತಾಣ, ರಸಜ್ಞ (ಕ್ಷಿತಿತಳದಂತೆ ರಸಾಶ್ರಯಂ ಅತರ್ಕ್ಯಸುಕವೀಂದ್ರಬೃಂದದಂತೆ ವಿಶೇಷಾನ್ವಿತಂ ಅಂಬರದಂತೆ ಸದಾಪ್ರತಂ ಅಂಬುಧಿಯಂತೆ ಪರಮ ಗಂಭೀರಗುಣಂ: **ಸುಕುಮಾಚ,** ೯. ೮೨)

**ರಸಾಳ –** ಮಾವಿನ ಮರ (ಚೈತ್ರದ ರಸಾಳದ ಗಾಳಿಯ ಕೋಕಿಲಪ್ರಣಾದದ ನೆಱೆದಿಂಗಳಿಂಗದಿರ ಸೊಂಪತಿನೂತನಮಿಂಪುವೀಱದೇ: **ಪುಷ್ಪದಂಪು,** ೧. ೪೦); ರಸಿಕ (ಪಿರಿದುಂ ರಸಾಳನೆನಿಸುವ ಪುರಾಣಿಕಂ ಭರದಿನಮೃತಮಥನದ ಕಥೆಯಂ .. .. ಪೇಳಲುದ್ಯತನಾದಂ: **ತ್ರಿಷಷ್ಟಿಪು,** ೧೬. ೧೩)

**ರಸಿಕ –** ರಸಾನುಭವ ಹೊಂದಬಲ್ಲವನು (ರಸಿಕರ್ ಬಣ್ಣಿಸೆ ಭಾವಕರ್ ಪೊಗೞೆ .. .. ನಾಟ್ಯಮಂ: **ಪುಷ್ಪದಂಪು,** ೧೨. ೫೧)

**ರಸಿಕತೆ –** ರಸಾನುಭವ ಹೊಂದಬಲ್ಲ ಸ್ವಭಾವ (ಪೊಸಬಗೆ ಬಗೆ ರಂಜಿಪ ರಸಿಕತೆ ರಸಿಕತೆ ಕುಸಿವ ಪಸರಿಸುವ ರೀತಿ ರೀತಿ ಎನೆ ಮೆಚ್ಚದರಾರ್: **ಸುಕುಮಾಚ,** ೧. ೪೩)

**ರಸಿಗೆ –** ಗಾಯದ ದ್ರವ (ಬಸಿದಪುದು ಮೆಯ್ಯ ಕೀವುಂ ರಸಿಗೆಯುಂ .. .. ಈ ಕಿಸುಗುಳಿಯಂ ಜವನುಮುಯ್ಯಲೇಂ ಪೇಸಿದನೋ: **ಯಶೋಧಚ,** ೩. ೭೨)

**ರಸಿತ –** ಧ್ವನಿ (ಪರಿಪತಣ ನಟನ ಮೃದುಕೂಜಿತ ರಸಿತ ದರಹಸಿತ ಕ್ರೇಂಕಾರಾರೋಹಣಾಯೋಧನಾದಿ ನಾನಾ ವಿನೋದಂಗಳೊಳ್: **ಆದಿಪು,** ೮. ೩ ವ)

**ರಸೆ –** ಭೂಮಿ (ರಸೆಯೊಳ್ ಕಾಲಾಗ್ನಿರುದ್ರಂ ಜಲಶಯನದೊಳ್ ಅಂಭೋಜನಾಭಂ ಪೊದಳ್ದು ಆಗಸದಿಂ ಸುತ್ತಿರ್ದ ಅಜಾಂಡೋದರದೊಳ್ ಅಜಂ ಅಡಂಗಿರ್ಪವೋಲ್; **ಪಂಪಭಾ,** ೮. ೮೬); ಪಾತಾಳ (ರಸೆ ಪತ್ತಿತ್ತೆತ್ತಂ ಆಕಾಶದೊಳ್ ಅನಿಲಪಥಂ ಧಾರಿಣೀಚಕ್ರದೊಳ್ ಕಾಳಸೆಗೊಂಡಿತ್ತೆಂಬಿನಂ ಮಂದಯಿಸಿ: **ಆದಿಪು,** ೧೪. ೯೫)

**ರಹಟ –** ನೀರೆತ್ತುವ ರಾಟೆ (ಐದನೆಯದು ದುಷ್ಷಮಮೆನೆಪ್ಪ ಕಾಲಂ ಬಟಿಕ ಆಱನೆಯದು ಅತಿದುಷ್ಷಮಂ ವರ್ತನಮಿಂತೀ ತೆಱನೆ ರಹಟಘಟಿಕಾನ್ಯಾಯಂ: **ಪಂಪರಾ,** ೧. ೫೭)

**ರಹಟಘಟಿಕಾನ್ಯಾಯ –** ಒಂದು ಲೌಕಿಕನ್ಯಾಯ, ರಾಟೆ ಗಡಿಗೆಗಳು ಒಂದನ್ನೊಂದು ಹಿಂಬಾಲಿಸುವ ಕ್ರಮ (ಐದನೆಯದು ದುಷ್ಷಮಮೆನೆಪ್ಪ ಕಾಲಂ ಬಟಿಕ ಆಱನೆಯದು ಅತಿದುಷ್ಷಮಂ ವರ್ತನಮಿಂತೀ ತೆಱನೆ ರಹಟಘಟಿಕಾನ್ಯಾಯಂ: **ಪಂಪರಾ,** ೧. ೫೭

**ರಹಟಘಟೀಯಂತ್ರ –** ರಹಟ (ರಹಟಘಟೀಯಂತ್ರಂಗಳ್ ಬಹುವಿಧವಿಭ್ರಮದಿಂ ಎಸೆವುವು ಉಪಶಲ್ಯಕದೊಳ್: **ಪುಷ್ಪದಂಪು,** ೨. ೫೧)

**ರಹರಹ** – ಏಕಾಂತ (ಚತುರ್ಜ್ಞಾನನೇತ್ರರಂ ಭೋಂಕೆನೆ ಕಂಡು ರಹರಹಪರಿಣಾಮಪರಿಣತನಾಗಿ ಸಮುದಾಯಮಂ ಬಂದಿಸಿ ಸಮುಚಿತೋದ್ದೇಶದಾಸನದೊಳ್ ಕುಳ್ಳಿರ್ದು: **ಸುಕುಮಾಚ,** ೮. ೪೮ ವ)

**ರಹೋವ್ಯಾಖ್ಯಾನ** – [ಜೈನ] ಸತ್ಯಾಣುವ್ರತದ ಒಂದು ಅತಿಚಾರ, ಗಂಡಹೆಂಡಿರ ಗುಟ್ಟು ಬಯಲುಮಾಡುವುದು (ನಾನಾ ಮಿಥ್ಯೋಪದೇಶಂ ಪುದಿದೊದವಿದ ಸಾಕಾರಮಂತ್ರಂ ರಹೋವ್ಯಾವ್ಯಾಖ್ಯಾನ ನ್ಯಾಸಾಪಹಾರಕ್ರಮಂ ಅನುಗತಿಯಿಂ: **ಸುಕುಮಾಚ,** ೬. ೧೪)

**ರಾಕಾ** – ಪೂರ್ಣ (ಪೂರ್ಣರಾಕ ಅಬ್ಜವಕ್ತ್ರೇ ನೀನಲ್ಲದನ್ಯತ್ರದೊಳ್ ಸೌಖ್ಯಮುಂಟೇ: **ಅನುಭವ,** ३೭)

**ರಾಕಾಸುಧಾಕರ** – ಪೂರ್ಣಚಂದ್ರ (ಉತ್ತಮ ಜನಾನಂದಾಬ್ಧಿ ರಾಕಾಸುಧಾಕರಂ .. .. ವಡಕ್ಷರಿದೇವಂ ಸರಸಪ್ರಬಂಧ ಸುಭಗಾಂಭೋಜಪ್ರಭಾವಲ್ಲಭಂ: **ರಾಜಶೇಖರ,** ೧. ೬೮)

**ರಾಕೆ** – ಪೂರ್ಣವಾದ (ಉರುತರ ರಾಕೆಯ ಸುಧಾಂಶುವಂ ಶಿಶು ಪೋಲ್ತಂ: **ಕುಸುಮಾಕಾ,** ೬. ೯೫)

**ರಾಕೇಂದು** – ಪೂರ್ಣಚಂದ್ರ, ಹುಣ್ಣಿಮೆಯ ಚಂದ್ರ (ಆ ಜಿನಾರ್ಭಕನಂ .. .. ಓಲಗಿಸಲ್ ಸಾರ್ದಿರ್ದ ರಾಕೇಂದುವೆಂಬಂತೆ ರಾಜಿಸುವ ಧವಳಾತಪತ್ರಂಬಿಡಿದು ಈಶಾನೇಂದ್ರಂ: **ಶಾಂತೀಶ್ವಪು,** ೧೪. ೬೭ ವ)

**ರಾಗ** – ಕೆಂಪುಬಣ್ಣ (ಆ ಕಾಂತೆಯ ಮೃದುಪದತಳ ಕೋಕನದಂ ತನ್ನ ರುಚಿಯಿಂ ಒದವಿಸೆ ರಾಗೋದ್ರೇಕಂ ಅದೆಂತು ರಕ್ತಾಶೋಕದ ತಳಿರೊಳ್ ವಿರಾಗಮಂ ಪುಟ್ಟಿಸುಗುಂ: **ಮಲ್ಲಿನಾಪು,** ३. ४೨); ಪ್ರೀತಿ (ಭರತಂ ಷಟ್ಖಂಡಭೂವಲ್ಲಭನೆನೆ ಸಿರಿಯಂ ಗೆಂಟಣೊಳ್ ಕೇಳ್ದು ರಾಗಂ ಬೆರೆಸಿರ್ಪಿ ನಣ್ಪೆ ಸಾಲ್ಗುಂ: **ಆದಿಪು,** ೧೪. ೭೭); ಸಂತೋಷ (ಮದನಾಸ್ತ್ರಂ ಖರಸಾಣೆಗಾಣಿಸಿದುದು ಎಂಬಂತಾಗೆ ನಿನ್ನೊಂದು ಕಂದಿದ ಮೆಯ್ ಎನ್ನಯ ತೋಳೊಳೊಂದೆ ಸಿರಿಯಂ ನೀನುಯ್ದು ತೊಟ್ಟಾಳ್ದು ರಾಗದಿಂ ಎನ್ನೊಳ್ ಸುಕಮಿರ್ಪುದು: **ಪಂಪಭಾ,** ೮. ೬೬)

**ರಾಗಂಗಿಡು** – ಪ್ರೀತಿಯನ್ನು ಕಳೆದುಕೊ (ಕೊಡುವ ಬಾಡಕ್ಕಂ ಜೀವಧನಂಗಳ್ಗಂ ಬಿಡುವೆಣ್ಣಂ ಲೆಕ್ಕಮಿಲ್ಲೆನಿಸಿ ರಾಗಂಗಿಡದೆ ಕೊಂಡಾಡಿದಂ ಬಲ್ಲಹನಜೆಯೆ ಗುಣಾರ್ಣವಂ ಕವಿತಾಗುಣಾರ್ಣವನಂ: **ಪಂಪಭಾ,** ೧೪. ೫೫)

**ರಾಗಂಬೊರೆ** – ಬಣ್ಣದಿಂದ ಕೂಡು (ರಾಜಕಂ ಬೇಗಮೆಱಗೆ ತನ್ಮಣಿಮಕುಟಸ್ಫುರಣೆಗಳಿಂ ಧರೆ ರಾಗಂಬೊರೆದಂತೆಸೆದತ್ತು ಆ ರಾಜಭವನಾಂಗಣದೊಳ್: **ಶಾಂತಿಪು,** ३. ೧೧३)

**ರಾಗರಸ** – ಪ್ರಣಯ (ಸುರತಸುಖಕಾಂಕ್ಷೆಯಿಂ ರಾಗರಸಾಂಧಂ ರಾಸಭಂ ಮಹಾದ್ರಿಗುಹ್ಯಾಭ್ಯಂತರಮಂ ಪೊಕ್ಕುದು: **ಪಂಚತಂತ್ರ,** ४೧೯)

**ರಾಗಾಂಧತೆ**– ಮೋಹದಿಂದ ಕುರುಡಾಗುವುದು (ಸಾಮಸಾರಿಕವಿಳಾಸಂ .. .. ಶಾಶ್ವತಮೆಂದೆ ಬಗೆದು ರಾಗಾಂಧತೆಯಿಂ ಗತಿಗಿಡುವರೇಂ ವಿಚಿತ್ರಮೊ ಕರ್ಮಂ: **ಚಂದ್ರಪ್ರಪು,** ४. ೫೨)

**ರಾಗಾಧರೆ** – ಕೆಂಪಾದ ತುಟಿಯುಳ್ಳವಳು (ಪಾಡುವ ರಾಗಾಧರೆಯರ ರಾಗರಸಪೂರಂ ಮೇರೆದಪ್ಪಿ ಮೇಲ್ವರಿಯೆ: **ರಾಜಶೇಖರ,** ೧३. ४೫ ವ)

**ರಾಗಾವಿಳ** – ಮೋಹಕ್ಕೊಳಗಾದವನು (ಸತತಂ ರಾಗಾವಿಳಂ ಪೀಡಿತಕುವಲಯಂ ಉನ್ಮಾರ್ಗಸಂಸಕ್ತಂ ಉನ್ಮೀಲಿತಾರ್ಥತ್ವಂ ಸದುರ್ದರ್ಶನರುಚಿ ಖರದಂಡಪ್ರಿಯಂ ತಾನೆನಿಪಾ ಕ್ಷಿತಿಪಂಗೆ: **ಚಂದ್ರಪ್ರಪು,** ೨. ४೫)

**ರಾಗಿ** – ಅನುರಾಗವುಳ್ಳ ವ್ಯಕ್ತಿ (ನೋಟ್ಟುದು ಮುದದಿಂ .. .. ಅಂಗನೆಯರ್ ಪಾಡೆ ಗುಣೋತ್ತುಂಗನಂ ಓಲಗಿಸಿ ರಾಗಿ ರಾಗದೆ ಮೆಯ್ಯೊಳ್: **ಸಮಯಪ,** ೬. ೬೧)

**ರಾಗಿಸು** – ಪ್ರೀತಿಸು, ಸಂತೋಷಿಸು [ಇದಱೊಳ್ ನೀಂ ರಾಗಿಸಲ್ ತಕ್ಕುದೇ ಕೊಳ ಕೊಳ್ವೆ ಜಡರಂತೆ ಶೋಕರಸಮಂ ಷಟ್ಖಂಡಧಾತ್ರೀಶ್ವರಾ: **ಆದಿಪು,** ೧೬. ೫೫)

**ರಾಘೆ** – ಕುದುರೆಯ ಮೇಲೆ ಹತ್ತಲು ಹಾಕಿರುವ ರಿಕಾಪು (ರಾಘೆಯಂ ಪರಿಕಿಸಿ ವಾಘೆಯಂ ಪೊಳಸುತಂ ನಡೆದರ್ ಬಲವಂತ ರಾವುತರ್: **ತ್ರಿಷಷ್ಟಿಪು,** ೨४. ೨೬४)

**ರಾಜ** – ದೊರೆ, ಚಂದ್ರ (ಪ್ರತಿಪಕ್ಷೋದ್ಧತ ರಾಜತೇಜಮುಡುಗಲ್ಕೆ ಆಶಾಕುಳೇಳತಳಾನ್ವಿತ: **ಕರ್ಣನೇಮಿ,** ೧. ೨೬)

**ರಾಜಕಂಠೀರವ** – ರಾಜಸಿಂಹ (ಆ ಕಾಮಕಾರ್ಮುಕ ಯಷ್ಟಿಮುಷ್ಟಿಸಮಾಯತಮಧ್ಯೆಯರೊಳ್ ಆ ರಾಜಕಂಠೀರವ ಮಧ್ಯಂ: **ಆದಿಪು,** ೮. ೨३ ವ)

**ರಾಜಕ** – ರಾಜರ ಗುಂಪು (ಕರಕಳಿತಾರ್ಘ್ಯಪಾದ್ಯನನವದ್ಯಗುಣಂಗೆ ಸಮಸ್ತ ರಾಜಕಂ ಬೆರಸಿದಿರೆಟ್ಟು ರಾಜಗೃಹದಿಂ ಪೊಱಮಟ್ಟು: **ಆದಿಪು,** ೯. ೧३೧)

**ರಾಜಕಪೋತ** – ಶ್ರೇಷ್ಠ ಜಾತಿಯ ಪಾರಿವಾಳ (ಮೇಘರಥಧರಾಧೀಶ್ವರನ ಮುಂದೆ ಬಂದು ಬಿಟ್ಟಿರ್ದ ರಾಜಕಪೋತ: **ಶಾಂತಿಪು,** ೯. ೮೮ ವ)

**ರಾಜಕರ** – ರಾಜನಿಗೆ ಕೊಡಬೇಕಾದ ತೆರಿಗೆ, ಚಂದ್ರಕಿರಣ (ರಾಜಕರಪಾತಭೀತಿ ಸರೋಜದೊಳ್ .. .. ಸಮನಿಕುಂ ಆ ಜನಪದಜನದೊಳೆಂತುಮೇಂ ಸಮನಿಕುಮೇ: **ಚಂದ್ರಪ್ರಪು,** ೧೦. ४೫)

**ರಾಜಕೀರ** – ಅರಗಿಳಿ (ಉರಿಯಿಂ ಕರಿಮುರಿಕನಾದುವು ಉನ್ಮದ ಪರಭೃತ ಷಟ್ಚರಣ ರಾಜಕೀರಕುಲಂಗಳ್: **ಪಂಪಭಾ,** ೫. ೯೦)

**ರಾಜಕುಮಾರಕ** – ರಾಜನ ಮಗ, ರಾಜಕುಮಾರಸಮೂಹ (ರಾಜಕುಮಾರಕಮುಂ ಗಣಿಕಾಜನಮುಂ ಚತುರಬುಧ ಕದಂಬಕಮುಂ ರಾರಾಜಿಸೆ ಸಭೆಯೊಳ್ ರಾಜಮನೋಜಂ ಬಿಜ್ಜೋದರರ ಓಲಂಗಂಗೊಟ್ಟಿರ್ದಂ: **ಮಲ್ಲಿನಾಪು,** ೮. ೧३)

**ರಾಜಕೇತನ** – ಅರಮನೆ (ನಿಜನಾಥಪುರಮನೆಯ್ದಿ ರಾಜಕೇತನನಿವಿಷ್ಟನೊಡ್ಡೋಲಗಂಗೊಟ್ಟಿರ್ದ ಗಗನಚರೇಂದ್ರನಂ .. .. ಕಂಡು (**ಶಾಂತಿಪು,** ೫. ३೬ ವ)

**ರಾಜಗಿರಿ** – ದಂಟಿನ ಸೊಪ್ಪು (ಸುರುಚಿರ ಚಕ್ಕವತಂ ಚಿರಿಕೆ ರಾಜಗಿರಿ ಕೆಸವು ಕೀರೆ ದೊಗ್ಗಳೆಯೆಲೆ ವಾದುರವಂ ಬಡಿಸಿದರ್: **ಧರ್ಮಪ,** ೨. ೫೮)

**ರಾಜಗೇಹ** – ರಾಜಕೇತನ (ಗೊಟ್ಟಿಗಾಣರಂತಿರೆ ಮಱಿದುಂಬಿ ಮೇಳದವರಂತಿರೆ ಸಾರಿಕೆ ರಾಜಗೇಹದಂತಿರೆ ಕೊಳಂ ಅಲ್ಲಿ ತಾಂ ಅರಸರಂತಿರೆ ತಾಮರಸಂಗಳೊಪ್ಪುಗುಂ: **ಪಂಪಭಾ,** ೫. ೫೮)

**ರಾಜಚಿಹ್ನ** – ಅರಸನ ಅಧಿಕಾರಲಾಂಛನ (ನಿಜರಾಜಚಿಹ್ನನಿವಹಂ ಪರಿರಾಜಿಸೆ: **ಜಗನ್ನಾಪಿ,** ೧. ४೧)

**ರಾಜಜಂಬೂ** – ಶ್ರೇಷ್ಠವಾದ ನೇರಿಳೆ (ವಾರಾಕದಂಬ ಸುರಭಿಸಮೀರಂ ಪರಿಪಕ್ವ ರಾಜಜಂಬೂದ್ರುಮವಿಸ್ತಾರಂ: **ಆದಿಪು,** ೧೧. ೮೮)

**ರಾಜತ್** – ಪ್ರಕಾಶಿಸುವ (ರಾಜ ರಾಜತ್ ಗೃಹಾಂಗಣಸ್ಥಿತಜನಕ್ಕೆ ವಿಸ್ಮಯಮನಾಗಿಸುತ್ತುಂ: **ಕಾದಂಬಂ,** ೮. ೪೬)

**ರಾಜತ** – ಬೆಳ್ಳಿಯಿಂದ ಮಾಡಿದ (ಆ ರಾಜತಶೈಲೇಂದ್ರದೊಳೆ ಮಹಾಜಿನೇಂದ್ರಂ ಪ್ರಶಸ್ತಿಯಂ ಬರೆಯಿಸಿದಂ; **ಶಾಂತಿಪು,** ೪. ೫೯)

**ರಾಜತಾಚಳ** – ಬೆಳ್ಳಿ ಬೆಟ್ಟ (ರಮ್ಯರಾಜತಾಚಳ ತಿಳಕೋಪಮಾನಮೆನೆ ಸಂದಳಕಾಪುರಂ ಒಪ್ಪಿ ತೋಱುಗುಂ: **ಆದಿಪು,** ೧. ೭೧)

**ರಾಜತಾದ್ರಿ** – ಬೆಳ್ಳಿ ಬೆಟ್ಟ (ರಾಜತಾದ್ರೀಂದ್ರಶೋಭಾವಿಭವಕ್ಕೆ ಅಟ್ಟಿಕ್ಕುರ್ಚಿ ತತ್ಪರ್ವತನಿಕಟವನೋಪಾಂತದೊಳ್ ಬೀಡುವಿಟ್ಟಂ: **ಆದಿಪು,** ೧೩. ೭೮)

**ರಾಜದಾರಕ** – ರಾಜಪುತ್ರ (ಸಹಪಾಂಸುಕ್ರೀಡಾನೇಕ ವಿಭ್ರಮ ಕ್ರೀಡಾರಸೋದಾರ ರಾಜದಾರಕಪರಿವೃತನಾಗಿ: **ಆದಿಪು,** ೮. ೪೧ ವ)

**ರಾಜಧರ್ಮ** – ಅರಸನ ಕರ್ತವ್ಯ (ವಸುಧೆಯಂ ಏಕಾಯತಮಾನನಱಿವಿಂ ನೆಱೆದು ರಾಜಧರ್ಮದಿಂ ಅಭಿರಕ್ಷಿಸೆ ಪೋಯ್ತು ಕಾಲಂ: **ಶಾಂತಿಪು,** ೬. ೬೯)

**ರಾಜಧಾನಿ** – ದೇಶದ ಆಡಳಿತಕೇಂದ್ರ (ರಾಜಧಾನಿಯಪ್ಪ ಅಂಜನಗಿರಿಯ ತಪ್ಪಲ ರಾಜಜಂಬೂವಟ ವಿಟಪಿ ಪ್ರದೇಶಂಗಳೊಳ್: **ಪಂಚತಂತ್ರ,** ೩೭೦ ವ)

**ರಾಜನ್ಯಕ** – ಕ್ಷತ್ರಿಯ (ಪುಳಕಂ ಕೈಗಣ್ಮೆ ಹಷಾಸ್ರು ಮೆಯ್ಮಱೆದಳ್ ಜಾನಕಿ ಕೇಳ್ದು ಕೇಳ್ದು ತಲೆಯಂ ತೂಗಿತ್ತು ರಾಜನ್ಯಕಂ: **ಪಂಪರಾ,** ೬. ೩೮); ರಾಜಸಮೂಹ (ದೂತನ ಪೋಗಲ್ವೇೞ್ದಾಗಳ್ ಅನೇಕ ರಾಜನ್ಯಕಮಕುಟಸಂಘಟ್ಟ ಉಚ್ಚಳತ್ ಮಣಿಮರೀಚಿಗಳ್ ವಿಳಯಾನಿಳ ವಿಸ್ಫುಲಿಂಗಂಗಳಂತೆ ದೆಸೆದೆಸೆಗೆ ಕೆದಱೆ: **ಆದಿಪು,** ೧೪. ೮೨ ವ)

**ರಾಜನ್ಯವೃತ್ತಿ** – ರಾಜಕಾರ್ಯ (ಶ್ರೀಯಂ ವಿತರಣದೊಳ್ ವಾಕ್‌ಶ್ರೀಯಂ ರಾಜನ್ಯವೃತ್ತಿಯೊಳ್ ವಿಮಲ ಯಶಶ್ರೀಯಂ ಜಿನಪ್ರವಚನಶ್ರೇಯದೊಳ್ ಅತಿಶಯಿಸಿ ನೆಗೞ್ದಂ ಅಭಿನವಪಂಪಂ: **ಪಂಪರಾ,** ೨. ೧)

**ರಾಜನ್ವತಿ** – ಒಳ್ಳೆಯ ರಾಜನಿರುವ ನಾಡು (ರಾಜವತಿಯಕ್ಕುಮಲ್ಲದೆ ರಾಜನ್ವತಿಯಾಗದಲ್ತೆ ಧರೆ ಮತ್ತೊರ್ವಂ ತೇಜಸ್ವಿ ಪೊಡರ್ವೊಡೆ ಅದಱಿಂ ರಾಜನ್ವತಿ ಮಾಡು ಧರಣಿಯಂ ಧರಣಿಪತಿ: **ಆದಿಪು,** ೧೪. ೨೦)

**ರಾಜಪ್ರಕೃತಿಗಳು** – ರಾಜನ ಏಳು ಮೂಲಭೂತ ಆಧಾರಗಳು (ಸ್ವಾಮಿ ಅಮಾತ್ಯ ಜನಪದ ದುರ್ಗ ದಂಡ ಕೋಶ ಮಿತ್ರರೆಂಬ ರಾಜಪ್ರಕೃತಿಗಳೇೞುಮಂ: **ಹರಿವಂಶ,** ೭. ೧)

**ರಾಜಮಂಡಳ** – ಚಂದ್ರಮಂಡಲ, ರಾಜರ ಸಮೂಹ (ರಿಪುರಾಜಮಂಡಳಂ ಕುಂದಿ ಪದ್ಮತೇಜದಿನದೋರ್ಮೆಯುಂ ಪೆರ್ಚದು ಭಾವಿಪೊಡೆಯ್ದಿಮಿತ್ರಮಂಡಳಮುಪಚಯಮಂ ತಾಳ್ವುದಂತದುಚಿತಂ ಚಿತ್ರಂ: **ಪುಷ್ಪದಂಪು,** ೩. ೮)

**ರಾಜಮಹಿಷಿ** – ಪಟ್ಟದ ರಾಣಿ (ರಾಜಮಹಿಷೀಸಭೆಯೊಳ್ ಕಡುಜಾಣೆಯುಂ ಪ್ರವೀಣೆಯುಂ ಎನೆ ವೀಣೆಯಂ ಮಿಡಿದಳ್: **ಶಾಂತಿಪು,** ೯. ೧೮೭)

**ರಾಜಮಾಷ** – ಅಲಸಂದೆ (ಅಲಸಂದೆ ರಾಜಮಾಷಂ: **ಅಭಿಧಾವ,** ೧. ೧೬. ೧೮)

**ರಾಜಯಕ್ಷ್ಮ** – ಕ್ಷಯರೋಗ (ಅಳಿಯಂ ಪೂಗಣ್ಣಂ ಎನ್ನೀ ಮಗಳೆ ಚಪಳೆ ಪುತ್ರಂ ಕರಂ ರಾಜಯಕ್ಷ್ಮಾಕುಳಂ ಎನ್ನೈಶ್ವರ್ಯಮಂ ನಿರ್ಜರರೆ ಕವರ್ದರ್: **ರಾಜಶೇವಿ,** ೧. ೧೦೨)

**ರಾಜವತಿ** – ನಾಮಮಾತ್ರ ರಾಜನಿರುವ ನಾಡು (ರಾಜವತಿಯಕ್ಕುಮಲ್ಲದೆ ರಾಜನ್ವತಿಯಾಗದಲ್ತೆ ಧರೆ ಮತ್ತೊರ್ವಂ ತೇಜಸ್ವಿ ಪೊಡರ್ವೊಡೆ ಅದಱಿಂ ರಾಜನ್ವತಿ ಮಾಡು ಧರಣಿಯಂ ಧರಣಿಪತಿ: **ಆದಿಪು,** ೧೪. ೨೦)

**ರಾಜವೃತ್ತ** – ರಾಜನ ನಡವಳಿಕೆ (ನ್ಯಾಯಾರ್ಜಿತವಿತ್ತಂ ಧರ್ಮಾಯತ್ತಮೆನಿಪ್ಪ ರಾಜವೃತ್ತಂ ತನಗೇಕಾಯತ್ತಮಾಗೆ ಧರೆಯಂ ಜೀಯೆನಿಸಿದಂ ಇಂತುದಾತ್ತಚರಿತರುಮೊಳರೇ: **ಪಂಪರಾ,** ೨. ೭೦)

**ರಾಜವೇಶ್ಮ** – ಅರಮನೆ (ಆಗಳ್ ಸುರೇಂದ್ರಾದೇಶದಿಂ ಸಮುದ್ರವಿಜಯಮಹಾಮಹೀಶ ರಾಜವೇಶ್ಮಾಂಗಣದೊಳ್: **ಕರ್ಣನೇಮಿ,** ೮. ೯೨ ವ)

**ರಾಜಶೇಖರ** – ಚಂದ್ರನನ್ನು ಧರಿಸಿದವನು, ಶಿವ (ಆ ಸಮಯದೊಳಾ ರಾಜಶೇಖರಂ ರಾಜಶೇಖರಪೂಜೆಗೆಯ್ದು: **ರಾಜಶೇವಿ,** ೬. ೩೦ ವ)

**ರಾಜಶ್ರೇಷ್ಠಿ** – ವರ್ತಕಶ್ರೇಣಿಯ ಮುಖಂಡ (ವಿಷಯ ಗೃಹಾಮಾತ್ಯ ದಂಡಾಧಿನಾಥಾವಳಿ ಧರ್ಮಾಧ್ಯಕ್ಷ ಕೋಶಾಧಿಪ ತಳವರ ಹಾಸ್ಯಾದಿ ತಂತ್ರಾಳಿಪಾಳಾವಳಿ ರಾಜಶ್ರೇಷ್ಠಿ ಸೇನಾಪರಿಕರಣ ಪುರೋಧೋಧಿಕಾರ ಅಂಗರಕ್ಷಾವಳಿ ಮುಖ್ಯಂಬೆತ್ತ ಬಾಹತ್ತರದೆಸಕದ ನಾನಾ ನಿಯೋಗಿಪ್ರತಾನಂ: **ಶಾಂತೀಶ್ವಪು,** ೧೫. ೯೦)

**ರಾಜಸೂಯ** – ಚಕ್ರವರ್ತಿ ಮಾಡುವ ಒಂದು ಯಾಗ (ಗಾಳು ಗೊರವಂ ತಗುಳ್ಚಿ ಪಳಾಳಮಂ ಏನೊಂದನಪ್ಪೊಡಂ ಗೞಪಿದೊಡೆ ಆ ಬೇಳುನುಡಿ ಕೇಳ್ದು ಕೆಮ್ಮನೆ ಬೇಳಲ್ ನಿಮಗಂತು ರಾಜಸೂಯಂ ಮೊಗ್ಗೇ: **ಪಂಪಭಾ,** ೬. ೨೪)

**ರಾಜಸ್ವ** – ರಾಜನ ಆಸ್ತಿ (ವಿಶ್ವಜನಾಳಿಗೆ ಭವದೀಯಸ್ವಂ ಕರತಳಿತಗತಸ್ವಂ ಅನ್ಯಸ್ವಂ ಬ್ರಹ್ಮಸ್ವಂ ರಾಜಸ್ವಂ ದೇವಸ್ವಂ ಕೀರ್ತಿಸ್ವ ದುರ್ಗ ವಿಶ್ವಾವನಿಯೊಳ್: **ಪಂಚತಂತ್ರ,** ೪೪೫)

**ರಾಜಹಂಸ** – ಶ್ರೇಷ್ಠ ಹಂಸ (ರಾಜಹಂಸ ಪಾರಾವತ ಮಿಥುನಂಗಳ್ ಉತ್ತುಂಗ ಪ್ರಾಸಾದಶಿಖರ ಮಣಿಗವಾಕ್ಷ ಅಂತರಾಳ ವಿವಿಧ ಗೃಹಾಂತರಗತಂಗಳಾದುವು: **ಪಂಪಭಾ** ಪರಿಷತ್ತು, ೪. ೪೯ ವ); ರಾಜಶ್ರೇಷ್ಠ (ಹಂಸನನಿಳಿಪದನಾ ರಾಜಹಂಸಂ ಅಬಳಾಳಿಯುತಂ: **ಚಂದ್ರಪ್ರಪು,** ೭. ೧೪೭)

**ರಾಜಾಂಗಣ** – ಅರಮನೆಯ ಅಂಗಳ (ವಿವಿಧಫಲಪ್ರಸೂನ ಪಲ್ಲವತತಿಯಿಂ ತೀವಿದ ರಾಜಾಂಗಣಮಂ ಇಳಾವಂದ್ಯರ್ ಮೆಟ್ಟಲೊಲ್ಲದೆ ಅಲ್ಲಿಯೆ ನಿಂದರ್: **ಆದಿಪು,** ೧೫. ೯)

**ರಾಜಾಧಿರಾಜ** – ಚಕ್ರವರ್ತಿ (ರಾಜಾಧಿರಾಜ ಅಳಿಯನ ಮೊಗಮಂ ನೋಡಿ: **ಆದಿಪು,** ೪. ೫೪ ವ)

**ರಾಜಾನ್ನ** – ಶ್ರೇಷ್ಠವಾದ ಬತ್ತ (ಮುಂದೆ ಮಂದೈಸಿ ತಲೆಯುದ್ದಾಗಿ ತುಱುಗಿ ಬೆಳೆದೊಱಗಿ ರಂಜಿಸುವ ರಾಜಾನ್ನದ ಕುಸುಂಕಱೊಳಗೆ: **ಲೀಲಾವತಿ,** ೫. ೭೨ ವ)

**ರಾಜಾಲಯ** – ಅರಮನೆ (ಜನನಿಯುಮಂ ಜನ್ಮಭೂಮಿಯುಮಂ ಕಂಡಾಗಿನಿವಿರಿದು ರಾಗೋದಯಂ ಅದೇವಿರಿದೆನುತುಂ ಬಂದು ರಾಜಾಲಯಮಂ ನೋಡಿ: **ಶಾಂತಿಪು,** ೩. ೧೧ ವ)

**ರಾಜಾವರ್ತ** – ನೀಲ ರತ್ನ (ದ್ರುಪದಂ ಪಚ್ಚೆಯ ನೆಲಗಟ್ಟಿನೊಳಂ ರಾಜಾವರ್ತದ ಕಂಬದೊಳಂ .. .. ವಿವಾಹಗೇಹಮಂ ಸಮೆಯಿಸಿ: **ಪಂಪಭಾ,** ೩. ೭೪ ವ)

**ರಾಜಿ** – ಗುಂಪು, ಸಾಲು (ಎಸೆವ ದಾಡಿಮೀ ಬೀಜರಾಜಿಯಂ ತೆಗೆದು ರಸವನಾಸ್ವಾದಿಸಿದೆಂ: **ಕಾದಂಸಂ,** ೧. ೩೨)

**ರಾಜಿಕೆ** – ಸಾಸಿವೆ (ಸಾಸಿವೆ ರಾಜಿಕೆ ಸರ್ಷಪ: **ಅಭಿಧಾವ,** ೧. ೧೬. ೧೯)

**ರಾಜೀವ** – ತಾವರೆ (ಅರವಿಂದಂ ರಾಜೀವಂ ಸರಸಿರುಹಂ ಸಾರಸಂ ಮಹಹೋತ್ಪಳಂ ಅಬ್ಜಂ ಖರದಂಡಂ ಕಮಳಮ ತಾಮರಸಂ ನಳಿನಂ ಕುಶೇಶಯಂ ಶತಪತ್ರಂ: **ಅಭಿಧಾವ,** ೧. ೪. ೧೯)

**ರಾಜ್ಞಿ** – ರಾಣಿ (ರಾಜ್ಞೀಗರ್ಭದೊಳಿರ್ದುಂ ತ್ರಿಜ್ಞಾನಸಮೇತನೆಂದು ಪೇಳ್ವೆಡೆಗಿವೆ ದಲ್ ಅಭಿಜ್ಞಾನರೇಖೆಗಳೆನಿಸಿ ಮನೋಜ್ಞತೆಯಂ ತ್ರಿವಳಿರೇಖೆ ತಳೆದೆಸೆದಿರ್ಕುಂ: **ಚಂದ್ರಪ್ರಪು,** ೧೨. ೨೫)

**ರಾಜ್ಞೀನಿವಾಸ** – ಅಂತಃಪುರ (ಅಂತಃಪುರಮೆನಿಕುಂ ಶುದ್ಧಾಂತಂ ರಾಜ್ಞೀನಿವಾಸಂ: **ಅಭಿಧಾವ,** ೧. ೧೦. ೧೮)

**ರಾಜ್ಯ** – ಒಂದು ಆಡಳಿತಕ್ಕೆ ಒಳಪಟ್ಟ ಭೂಪ್ರದೇಶ (ತಾಮಿಲ್ಲದೆ ರಾಜ್ಯಮಂ ಪರಿಪಾಲಿಸುವುವೊರಾರುಮಿಲ್ಲ: **ವಡ್ಡಾರಾ,** ಪು.೧೩೦, ಸಾ. ೨೫); ರಾಜನ ಸಪ್ತಾಂಗಗಳಲ್ಲಿ ಒಂದು (ಸಮಸ್ತವಸ್ತುವಾಹನಂಗಳಂ ತನ್ನೊಡನಾಡಿಗಳಪ್ಪ ಭಂಡಮಂಡಲಿಗೆ ಸೂಱೆಗೊಟ್ಟು, ಇಂತು ಸಪ್ತಾಂಗದೊಳೇಕಾಂಗಮುೞಿಯೆ; ಕಚದ್ರುಮನ ರಾಜ್ಯಂ ಕಳಕುಳಮಾಗಿರ್ದುದನಾತನ ದಾಯಾದಂ ಸಿಂಹ–ಬಳ–ನಱಿದು ಮೇಲೆತ್ತಿ ಬರೆ: **ಪಂಚತಂತ್ರ,** ೮೧ ವ)

**ರಾಜ್ಯಂಗೆಯ್** – ಆಳ್ವಿಕೆ ಮಾಡು (ದೇವರ್ ಮುನ್ನಿನ ಭವದೊಳ್ ಮಾಯಾಪುರಮೆಂಬ ಪಟ್ಟಣದೊಳ್ ಸಿಂಹವರ್ಮನೆಂಬ ಅರಸಾಗಿ ರಾಜ್ಯಂಗೆಯ್ಯುತ್ತುಂ ಪಲವು ಕಾಲದಿಂ ಮೇಲೆ ಸಂಸಾರ ಸುಖಕ್ಕಲಿಸಿ ತಪೋವನದೊಳ್ ನೆಲಸಿ: **ಪಂಚತಂತ್ರ,** ೧೧೬ ವ)

**ರಾಜ್ಯಕಾಲ** – ಆಳ್ವಿಕೆಯ ಅವಧಿ (ಸಾರವಸ್ತುಗಳೊಳ್ ನಿಸರ್ಗದಿಂದೆ ತಾಂ ನಿರಾದರನಾಗಿ ಶುಭಭಾವನೆಯೊಳ್ ರಾಜ್ಯಕಾಲಮಂ ಸಲಿಸುತ್ತುಮಿರೆ: **ಶಾಂತಿಪು,** ೭. ೧೧೬ ವ)

**ರಾಜ್ಯನೀತಿ** – ಆಡಳಿತ ನೀತಿ (ರಾಜ್ಯಪಟ್ಟಂಗಟ್ಟಿ ಸಂಕ್ಷೇಪದಿಂ ರಾಜ್ಯನೀತಿಯಯಮಿಂತೆಂದು ಕಲ್ಪಿಸಿದಂ: **ವಡ್ಡಾರಾ,** ೧೪೪, ಸಾ. ೨೩)

**ರಾಜ್ಯಪಟ್ಟ** – ಅಧಿಕಾರಸೂಚಕ ಹಣೆಪಟ್ಟಿ (ರಾಜ್ಯಪಟ್ಟಂಗಟ್ಟಿ ಸಂಕ್ಷೇಪದಿಂ ರಾಜ್ಯನೀತಿಯಯಮಿಂತೆಂದು ಕಲ್ಪಿಸಿದಂ: **ವಡ್ಡಾರಾ,** ೧೪೪, ಸಾ. ೨೩)

**ರಾಜ್ಯಭಾರ** – ಆಳ್ವಿಕೆ (ಅರಸಂ ತನ್ನ ಮಗನಲ್ಲಿಯಾದೊಡಂ ತನ್ನ ಕುಲದಲ್ಲಿಯಾದೊಡಂ ಅವನೊರ್ವನ ಮೇಲೆ ರಾಜ್ಯಭಾರಮಂ ಹೊಱಸಿಯಿಹಂ, ತಾನವನೈಶ್ವರ್ಯವಂ ಅಪಹರಿಸಬೇಕಾಗಿ ಮಾಡಿದವಂ: **ಪಂಚತಂತ್ರ,** ೧೬೫, ಶ್ಲೋಕ ೬೨ ಟೀಕೆ)

**ರಾಜ್ಯಶ್ರೀಕ** – ರಾಜ್ಯವೆಂಬ ಸಂಪತ್ತು ಇರುವವನು (ಅತುಳ ತಪಶ್ರೀಕರನಂ ಉನ್ನತರಾಜ್ಯಶ್ರೀಕಂ ಅವಧಿದರ್ಶನನಂ .. .. ನೃಪತಿ ಭಕ್ತಿಯಿಂ ವಂದಿಸಿದಂ: **ಚಂದ್ರಪ್ರಪು,** ೩. ೭೦)

**ರಾಜ್ಯಾಂಗ** – ಆಳ್ವಿಕೆಯ ಏಳು ವಿಭಾಗಗಳು (ಗಟಿಗಟಿ ಸುರಿದುವು ಕಣ್ಬನಿ ಪಟಿಲೆಪ್ಪದ ರೂಪುಗಳ್ಗೆ ರಾಜ್ಯಾಂಗಂಗಳ್ ಕಟಕುಟಿಮಾಗಿರ್ದುವು ತತ್ತಟಿಗುದಿವ ಭವನ ದೀರ್ಘಿಕಾಚ್ಛಜಲಂಗಳ್: **ಶಾಂತಿಪು,** ೩. ೧೦೬), ನೋಡಿ 'ಸಪ್ತಾಂಗ'

**ರಾಜ್ಯಾನುಷ್ಠಾನ** – ಆಳ್ವಿಕೆ (ಅಂತು ವಿಷಾದವಿಮುಖನುಂ ರಾಜ್ಯಾನುಷ್ಠಾನಾಭಿಮುಖನುಂ ಆಗಿ: **ಚಂದ್ರಪ್ರಪು,** ೨. ೬೦)

**ರಾಜ್ಯಾಭಿಷವಣ** – ರಾಜ್ಯಾಭಿಷೇಕ (ರಾಜ್ಯಾಭಿಷವಣಭವನದಂತೆ ಪೂರ್ಣಕುಂಭೋಫಶೋಭಿತಮುಂ .. .. ಭದ್ರಲಕ್ಷಣಲಕ್ಷಿತಮುಮಪ್ಪ ಪಟ್ಟವರ್ಧನಮನೇಱೆ: **ಮಲ್ಲಿನಾಪು,** ೫. ೫೦ ವ)

**ರಾಣಿವಾಸ** – ಪೆಂಡವಾಸ, ಅಂತಃಪುರ (ಬಾಣಸಿನ ಮಜ್ಜನದ ರಾಣಿವಾಸಮಂ ಮನೆಗಳುಮಂ: **ಪಂಪಭಾ,** ೫. ೪೭ ವ)

**ರಾತ್ರಿಂಚರ** – ರಾಕ್ಷಸ (ರಾಮಲಕ್ಷ್ಮಣರ್ .. .. ರಾತ್ರಿಂಚರ ರಾಜನಂ ರಣದೊಳ್ ಆಂತಿಱಿದಿಕ್ಕಿದರ್: **ಧರ್ಮಾಪ,** ೮. ೨೪); ಪಿಶಾಚಿ

**ರಾತ್ರಿಂಚರಪತಿ** – ರಾಕ್ಷಸ ಮುಖಂಡ, ನೈಋತಿ (ಅಮರೇಭೇಂದ್ರಪ್ರಕಾಶಂ .. .. ರಾತ್ರಿಂಚರಪತಿ ಸಿತದಂಷ್ಟ್ರಾಂಕುರಂ .. .. ಬಳಸಿದಂತಾಯ್ತು ಬೆಳ್ದಿಂಗಳೆತ್ತಂ: **ರಾಜಶೇವಿ,** ೧೩. ೪೨)

**ರಾತ್ರಿಭುಕ್ತಿವ್ರತಿಕ** – [ಜೈನ] ರಾತ್ರಿ ಊಟ ಮಾಡದ ವ್ರತ ತೊಟ್ಟವನು (ದಿವದೊಳ್ ಸುರತವ್ಯಾಪಾರವಿನೋದಮಂ ಅನ್ನಪಾನಮಂ ರಾತ್ರಿಯೊಳಾಸೆವಡುವುದುನುೞಿದು ಎಸಗುವ ವಿವೇಕಿಯಾಜಿನೆಯ ರಾತ್ರಿಭುಕ್ತಿವ್ರತಿಕಂ: **ಸುಕುಮಾಚ,** ೬. ೩೧)

**ರಾತ್ರ್ಯಂಧ** – [ರಾತ್ರಿ+ಅಂಧ] ರಾತ್ರಿ ಕುರುಡ (ಅದಱಿಂ ಕೌಶಿಕಂಗಳ್ಗಂ ನಮಗಂ ದುರ್ಧರಮಪ್ಪ ವೈರಮುಂಟಾಗಿಯುಂ ನಾವೆಲ್ಲರುಂ ರಾತ್ರ್ಯಂಧರುಂ ಅವರೆಲ್ಲರುಂ ದಿವಾಂಧರುಂ ಅಪ್ಪುದಱಿಂ ಸಂಧಾನಮೆಂತುಂ ಆಗಲಱಿಯದು: **ಪಂಚತಂತ್ರ,** ೨೧೦ ವ)

**ರಾಧೆ** – ಅನೂರಾಧಾ ನಕ್ಷತ್ರ (ರಾಧೆಯಂತೆ ಸಂದಿಸಿ ಮುಡಿ ಮೇಲೆ ಕೊಂಕಿದುದು ಚಂದ್ರನಂತೆ ಸುಪಕ್ಷದಿಂದ ರಂಜಿಸಿದುದು: **ಯಶೋಧಚ,** ೩. ೭೮)

**ರಾದ್ಧಾಂತ** – ಜೈನಸಿದ್ಧಾಂತ (ಸಿದ್ಧಾಂತಂ ಆಗಮಂ ಶ್ರುತಿ ರಾದ್ಧಾಂತಂ ಪ್ರವಚನಂ ಜಿನೋದಿತಮಕ್ಕುಂ: **ಅಭಿಧಾವ,** ೧. ೧. ೯)

**ರಾಧೇಯ** – ಕರ್ಣ (ಕೊಳ್ ಎಂದು ಅರಿದು ಈಡಾಡಿದಂ ಇಂದ್ರಂಗೆ ಕವಚಮಂ ರಾಧೇಯಂ: **ಪಂಪಭಾ,** ೧. ೧೧೧)

**ರಾಭಸಿಕ** – ದುಡುಕಿನ ಸ್ವಭಾವದವನು (ಕಾಲೋಚಿತ ಸಂಧಿವಿಗ್ರಹದೊಳೊಂದು ಕಾರ್ಯಮಂ ಪ್ರಾಪ್ತಮಪ್ಪುದನಾಪ್ತೋಕ್ತಮನುಂತೆ ರಾಭಸಿಕವಾಕ್ಪಾತಕ್ಕೆ ಮೆಯ್ದರ್ಪುದೇ: **ಶಾಂತಿಪು,** ೩. ೭೩)

**ರಾಮಾಂಗೆ** – ಆಕರ್ಷಕ ದೇಹದವಳು (ವಿಕಚೇಂದೀವರವಕ್ತ್ರೆ ಸನ್ಮರಕತಚ್ಛಾಯಾಂಗಿ ರಾಮಾಂಗೆ: **ಸುಕುಮಾಚ,** ೧. ೮)

**ರಾಮಾ[ಮೆ]** – ಹೆಂಗಸು, ಸುಂದರಿ (ಮುಕ್ತಿರಾಮಾರಮಣನೆನಿಸಿದಂ ಚರಸ್ವರೂಪನೆಸೆದಂ ನಿಗಮಾಗಮಶಾಸ್ತಪಾರಗಂ: **ರಾಜಶೇವಿ,** ೧. ೫೭)

**ರಾಮೋತ್ಕಂಠೆ** – ರಾಮನ ಬಗ್ಗೆ ಉತ್ಕಂಠಿತಳಾದವಳು, ವರುಣನಲ್ಲಿ ಉತ್ಕಂಠಿತಳಾದವಳು (ಕುಲಭೂಭೃದ್ಭವೆ ಲಕ್ಷ್ಮಣಾಭಿನುತೆ ರಾಮೋತ್ಕಂಠೆ ವೈದೇಹಿ ರಮಣಿಯೆ .. ..

ಕಣ್ಗೊಳಿಕುಂ ವಾಹಿನಿ ಸೀತೆ ಪೋಲ್ತು ಭುವನಪ್ರಖ್ಯಾತೆಯಂ ಸೀತೆಯಂ: **ಪುಷ್ಪದಂಪು,** ೨. ೮)

**ರಾಯ** – ರಾಜ (ಕಡುಗಲಿ ನನೆಯಂಬನ ಬೆಳ್ಗೊಡೆಯೆತ್ತಿದ ಬಟೆಯಂ ಉಟಿದ ರಾಯರ ಕೊಡೆಗಳ್ ಗಡಣದೊಳೆ ತಲೆದಣಂಬೆಯ ಕೊಡೆವೋಲ್ ಬೆಳ್ಗೊಡೆಗಳಾದುವು ಅದನೇವೊಗಟ್ವೆಂ: **ಕಬ್ಬಿಗಕಾ,** ೪೩)

**ರಾಯಂಚೆ** – ರಾಜಹಂಸ (ಕಯ್ಯ ಗಿಳಿಗೆ ಒಲ್ದೈತಂದ ರಾಯಂಚೆಗೆ ಒಳ್ದೆಯಂ ಮೆಲ್ಲಡಿ ಬೀಱೆ ಬಂದು ಪೆಱಳಿರ್ವಳ್ ಭೂಪನಂ ನೋಡಿದಳ್: **ರಾಜಶೇವಿ,** ೭. ೧೨)

**ರಾಯದಟಿಸೂಱೆಕಾರ** – ರಾಜಪಡೆಯನ್ನು ಚೆಲ್ಲಾಪಿಲ್ಲಿ ಮಾಡುವವನು (ತಲ್ಲಣದಿಂ ಪೆಱದೆಗೆವ ಬಿದಿವೆಡಂಗನೆಂಬ ಬಿಂಜಮಾಣಿಕನೆಂಬ ಹರಿರಾಯನೆಂಬ ತೋರಹತ್ತನೆಂಬ ಚೌವಟಮಲ್ಲನೆಂಬ ಮುಱಿವ ರಕ್ಕಸನೆಂಬ ರಾಯದಟಿಸೂಱೆಕಾರನೆಂಬ ತನ್ನೊಡ್ಡಿನ ಪೇರಾನೆಗಳಂ ಕಂಡು: **ಕಬ್ಬಿಗಕಾ,** ೨೨೩ ವ)

**ರಾಯಭಾರಿ** – ರಾಜನ ಪ್ರತಿನಿಧಿ (ಜಯವರ್ಮಂ ಆದರದಿಂದಟ್ಟಿದ ರಾಯಭಾರಿ ದಮನಂ ಬಂದಿರ್ದಪಂ: **ಪುಷ್ಪದಂಪು,** ೭. ೩೭)

**ರಾಯಸ** – ರಾಜಾಜ್ಞೆ, ನಿರೂಪ (ಬಲಾರಿಗೆ ದಿವಿಜಾರಿ ರಾಯಸಂ ಬರೆಯಿಸುವಂ: **ಅನಂತಪು,** ೧೩. ೮)

**ರಾರಟತ್** – ಶಬ್ದಮಾಡುವ (ಚಂಚತ್ ಕ್ರೌಂಚದೊಳಂ ರಾರಟತ್ ಕಾರಂಡದೊಳಂ .. .. ಅಕ್ರೂರಂ ವರೂಥಮಂ ನಿಲಿಸಿ: **ಜಗನ್ನಾವಿ,** ೫. ೧೦೨ ವ)

**ರಾವ** – ಶಬ್ದ (ಆ ವಿವಿಧ ಕಳಕಳಿಕ್ಕೆ ವನಾವಳಿಯಿಂ ಪಾಱೆ ಮೊಱೆವ ಮಧುಪಶ್ರೇಣೀರಾವದ ಘೋಷಣೆ ಕಳೆದುದು ಇಳಾವಲ್ಲಭಸುತನ ಪಡೆಯ ಮಥನಶ್ರೀಯಂ: **ಶಾಂತಿಪು,** ೮. ೬)

**ರಾವಣಹಸ್ತ** – ಒಂದು ವಾದ್ಯವಿಶೇಷ, ತೆಂಗಿನ ಚಿಪ್ಪನ್ನುಳ್ಳ ಚಿಕ್ಕ ವೀಣೆ (ಬಾಜಿಸಿದಂ ಲಯತ್ರಯಂ ಸುಲಲಿತಮಾಗೆ ವಸ್ತು ಗುಣ ಜಿನಸ್ತವನಾಂಕ ಮಾಲೆಯಂ ಪಲತೆಱದಿಂ ರಸಂಬಡೆಯೆ ರಾವಣ ಹಸ್ತದಿನಂದು ರಾವಣಂ: **ಪಂಪರಾ,** ೧೦. ೧೭೭)

**ರಾವಾಕುಳ** – ಶಬ್ದದ ಮೊರೆತ (ಕಾಚಮೇಚಕ ಚಯಚ್ಛಾಯಾಂಬುವಿಂ ಗುಣ್ಪಿನಿಂ ಪುದಿದಿರ್ದತ್ತು ಸರೋವರಂ ಬಕಬಲಾಕಾನೀಕ ರಾವಾಕುಳಂ: **ಪಂಪಭಾ,** ೧೩. ೭೨)

**ರಾಸಭ** – ಕತ್ತೆ (ಸುರತಸುಖಕಾಂಕ್ಷೆಯಿಂ ರಾಗರಸಾಂಧಂ ರಾಸಭಂ ಮಹಾದ್ರಿಗುಹ್ಯಾಭ್ಯಂತರಮಂ ಪೊಕ್ಕುದು: **ಪಂಚತಂತ್ರ,** ೪೦೯)

**ರಾಸಭಿ** – ಹೆಣ್ಣು ಕತ್ತೆ (ನಿಶ್ಚಿಂತರಾಗಿರ್ದ ರಾಸಭೀವಿಲಾಸಿನಿಯರ್ ತಮಗೊರ್ವ ಪುರುಷನಂ ತರವೇಟ್ಕುಂ ಎಂದು ಎನ್ನಂ ತುತಿಸುತ್ತಿರ್ಪರ್: **ಪಂಚತಂತ್ರ,** ೪೦೭ ವ)

**ರಿಂಗಣ** – ನೃತ್ಯ (ಪೊಂಗುವ ಸುತ್ತಿ ಬರ್ಪ ರಿಂಗಣಗುಣಿವ ಆರ್ದು ಸಾರ್ದು ನಲವೆರ್ಚುವ: **ಶಬರಶಂ,** ೫. ೩೭)

**ರಿಂಗಣಗುಣಿ** – ನರ್ತನಮಾಡು (ಪೂಗೊಳಂಗಳೊಳ್ ಎಯ್ದೆ ರಿಂಗಣಗುಣಿದು ಉರ್ಕಿ: **ಉದ್ಭಟಕಾ,** ೧೦. ೨೩)

**ರಿಕ್ಕಟ** – ಮೌನ (ರಿಕ್ಕಟದ ಶಕ್ತಿಯಂ ಮುಂದಿಕ್ಕಿಯುಂ ಆತ್ಮಾಂತರಂಗದೊಳ್ ಮುಳಿಸಂ ಪಿಂದಿಕ್ಕಿಯುಂ .. .. ಇಕ್ಕೆಮಗೆ ಪುರುಷಭಿಕ್ಷಮನರಸಾ: **ಜಗನ್ನಾವಿ,** ೩. ೧೧೨)

**ರಿಗ್ಗವಣೆ** – ಮೃದಂಗವಾದನದ ಒಂದು ಪರಿ (ಲಾಗು ಮೋಡಿ ಚಮತ್ಕಾರ ತುಡಿಕು ರಿಗ್ಗವಣೆ ಪಹರಣೆಗಳೆಂಬ ನಾನಾ ಶಬ್ದಂಗಳಂ ಬಾರಿಸಿ: **ಧರ್ಮಪ,** ೨. ೨೩ ವ)

**ರಿಚೆ** – **ಆಶೀರ್ವಾದ** ಮಂತ್ರ (ಮುದದೆಸೆದಿರ್ಪ ಬದ್ದವಣಂ ಉದ್ದವಣಂ ರಿಚೆ ಪಾಟವಟವು ಎತ್ತಿದ ಗುಡಿ ತೋರಣಂ: **ನೇಮಿನಾಪು,** ೨. ೩೯)

**ರಿಚೆವೇಟ್** – ಆಶೀರ್ವಾದ ಮಂತ್ರ ಹೇಳು ಅಂತು ಪೊಕ್ಕಾ ನೃಪಂಗೆ ರಿಚೆವೇಟ್ಟುಅಕ್ಷತಂಗಳ್ ಕೊಟ್ಟು: **ಕರ್ಣನೇಮಿ,** ೧೦. ೧೨೨ ವ)

**ರಿಣ** – ಋಣ (ಮನೆಯೊಳ್ ನೀನಿರ್ದೆಯೆಂಬಾಸೆ ಉಳ್ಳೊಡೆ ಸಾಲ್ಗುಂ ಬಟಿಕ ಅಪ್ಪುದಕ್ಕೆ ರಿಣದಿಂದ ಅಂಭೋಜಪತ್ರೇಕ್ಷಣೇ: **ಅನಂತಪು,** ೧೧. ೯೫)

**ರಿತು ವಿಮಾನ** – ಋತು ವಿಮಾನ, ಸೌಧರ್ಮೇಂದ್ರನ ವಿಮಾನ (ಇದು ರಿತುವಿಮಾನಮಂ ತನ್ನುದಗ್ರಚೂಳಿಕೆಯೊಳ್ ಅಂತುಕೊಂಡಿರೆ ಸಗ್ಗಕ್ಕಿದು ನಿಚ್ಚಣಿಗೆಪ್ಪವೊಲಿರ್ದುದಲ್ತೆ: **ಆದಿಪು,** ೨. ೩೧)

**ರಿಪು** – ಶತ್ರು (ಇದಱ ಪೆಸರ್ ದೇವದತ್ತಮೆಂಬುದು ನಿನಗೆ ಅಭ್ಯುದಯಕರಂ ಶಂಖಂ ರಿಪುಹೃದಯ ಕವಾಟಪುಟ ವಿಘಟನಂ ನೋಡರಿಗಾ: **ಪಂಪಭಾ,** ೬. ೪)

**ರಿಷಿಪಳ್ಳಿ** – ಋಷಿಗಳ ಹಳ್ಳಿ (ಶಿವನಾ ರಿಷಿಪಳ್ಳಿಗೆ ಬಂದೊಡೆ ಆ ಮುನೀಶ್ವರರ ವಧೂಜನಂ ಮುದದೆ ನೋಡಿ ಮರುಳ್ಗೊಳೆ: **ಸಮಯಪ,** ೮. ೮)

**ರಿಸಿ** – [ಋಷಿ] ತಪಸ್ವಿ (ಮಾನಕಷಾಯಂ ಕಾರಣಮಾಗಿ ಸತ್ತು ಬೆಳ್ಗತ್ತೆಯುಂ ಪೇಪಂದಿಯುಂ ನಾಯುಂ ಪೊಲೆಯರ ಕೂಸುಂ ಆಗಿ ರಿಸಿಯರ ಪ್ರಬೋಧನೆಯಿಂದಂ ಬ್ರತಂಗಳಂ ಕೈಕೊಂಡು: **ವಡ್ಡಾರಾ,** ಪು ೨೪, ಸಾ ೫)

**ರುಂಜೆ** – ಒಂದು ರಣವಾದ್ಯ (ರುಂಜೆಯ ದನಿ ದಿಕ್ಪಾಲರನಂಜಿಸೆ ತಳ್ತೊಗೆವ ಕೋಡ ಕಾಳೆಯ ದನಿ ದಿಕ್ಕುಂಜರಮಂ ಬೆದಱಿಸೆ ನಭಮಂ ಜೇವೊಡೆಯುಲಿಪು ಸುತ್ತುಮುತ್ತಿತ್ತಾಗಳ್: **ಪಂಪರಾ,** ೪. ೫೬)

**ರುಂದ್ರ** – ವಿಸ್ತಾರವಾದ (ಸಕಳ ಸುರಾಸುರೇಂದ್ರಮುನೀಂದ್ರ ರುಂದ್ರಸಭೆಯ ನಡುವೆ ಸಿಂಹಾಸನಮಸ್ತಕದೊಳಿರ್ದ: **ಆದಿಪು,** ೧೩. ೮೨ ವ); ದಟ್ಟವಾದ (ದಶದಿಙ್ಮುಖಂಗಳುಂ ಭರಿತಮೆನಿಪ್ಪಿನಂ ನೆರೆದುದಾ ಧ್ವನಿಗೆ ಇಂದ್ರನ ರುಂದ್ರ ಸೈನಿಕಂ: **ಪಂಪರಾ,** ೧೦. ೧೯)

**ರುಕ್** – [ರುಚ್] ಕಾಂತಿ (ರಂಜಿಸುವಂ ಸುರಚಾಪ ರುಙ್ಮನೋಹಾರಿ ಕುಬೇರಯಕ್ಷನೊಸೆದೀ ಕೃತಿಗೀಗೆ ಗುಣ ಪ್ರತಿಷ್ಠೆಯಂ: **ಮಲ್ಲಿನಾಪು,** ೧. ೮)

**ರುಕ್ಕು** – ವೇದಮಂತ್ರ (ವೇದರುಕ್ಕಂ ಪೇಟ್ದುಕತೆಯಂ ಈವುದುಂ: **ಧರ್ಮಾಮೃ,** ೧. ೮೨ ವ)

**ರುಕ್ಚಕ್ರ** – ಕಿರಣಸಮೂಹ (ಈತನೆ ಶಕ್ರನೆನಲ್ ಪಿಂಗದಂಗದಂವಜ್ರದ ರುಕ್ಚಕ್ರಂ ದೆಸೆಯಂ ದಳ್ಳಿಸೆ ಚಕ್ರಮನಾಕ್ರಮಿಸಲೆಂದು ತಱಿಸಂದಿರ್ದಂ: **ಪಂಪರಾ,** ೧೪. ೧೮೧)

**ರುಕ್ಮ** – ಚಿನ್ನ (ತನ್ನಂಗಪ್ರಭೆ ತಪ್ತರುಕ್ಮರುಚಿಯಂ ಕೀೞ್ಮಾಡೆ .. .. ಧರಾಮರಂ ನೃಪತಿಗಾಶೀರ್ವಾದಮಂ ಮಾಡಿದಂ: **ಶಾಂತೀಶ್ವಪು,** ೨. ೪೯)

**ರುಕ್ಷ** – ಕರಡಿ (ಅರಣ್ಯದಲ್ಲಿ ಸಂಗಡಿಸಿದ ರುಕ್ಷರೋಮತತಿ ಬೆಂದುದು ಬೇಸಗೆಯುಗ್ರಮೆಂತುಟೋ: **ರಾಜಶೇಖರ**, ೫. ೪೬); ನಕ್ಷತ್ರ (ಮರುನ್ಮಾರ್ಗದಂತಿರೆ ಚಂಚತ್ ಖಗರಾಜ ರುಕ್ಷಯುತಂ .. .. ಗಹನಮಂದೊಪ್ಪಿತ್ತದೇಂ ಬಣ್ಣಿಪೆಂ: **ರಾಜಶೇಖರ**, ೫. ೫೨)

**ರುಚಕ** – ಒಂದು ಪರ್ವತ (ಮತ್ತು ರುಚಕದ ದಕ್ಷಿಣಭಿತ್ತಿಯಧಿಕರಿಸಿ .. .. ಎಣ್ಬರುಂ ಇರ್ಪರ್ ಎಂಟು ಕೂಟಂಗಳೊಳಂ: **ಅನಂತಪು**, ೪. ೭೬)

**ರುಚಿ** – ಕಾಂತಿ (ಚಂದ್ರಾತಪರುಚಿಯಂ ಗೆಲೆವಂದೀ ಧವಳಿಮಕ್ಕೆ ಕಾರಣವೀ ನಿರ್ಮಳ ತಾರಹಾರಂ: **ಕಾದಂಸಂ**, ೫. ೪೫); ಸ್ವಾದ

**ರುಚಿಗೆಡು** – ಕಾಂತಿಗುಂದು (ಭವದಾನನಕ್ಕೆ ಸೋಲ್ತು ಆತ್ಮವಿಲಾಸಮಂ ಉಟಿದ ತೆಱದೆ ರುಚಿಗೆಟ್ಟು ದಿಗಂತ ವಿಲಂಬಿಬಿಂಬಂ ಅಂಬುರುಹವೈರದಿಂದ ಉಡುಪಂ ಉಡುಪನಾದಂತಾದಂ: **ಶಾಂತಿಪು**, ೫. ೮೮)

**ರುಚಿರ** – ಹೊಳೆಯುವ (ಯತಿತತಿಚಕ್ರವರ್ತಿ ರುಚಿರ ಅಮಳಮೂರ್ತಿ ವಿಶಾಲಕೀರ್ತಿ .. .. ಚಿಕವೀರದೇಶಿಕಶಿಖಾಮಣೀ: **ರಾಜಶೇಖರ**, ೧. ೬); ಸವಿಯಾದ (ಉದಯಗಿರಿ ಕಟಕ ಕುಹರ ಪರಿಕರ ನಿಶಾಕರಂ ಹರಿದಳಿತ ನಿಜಹರಿಣ ರುಚಿರನಿಚಯ ನಿಚಿತಮಾದಂತೆ ಲೋಹಿತಾಂಗನಾಗೆ: **ಪಂಪಭಾ**, ೪. ೪೯ ವ)

**ರುಜು** – ಋಜು, ನಿರ್ಮಲ (ತನು ಮೃದು ಕುಚಂ ಸ್ತಬ್ಧಂ ಶೀಲಂ ಕರಂ ರುಜು ಪುಷ್ಪಕೇತನನಿಭಕಚೋದ್ಬಂಧಂ .. .. ಎಂಬ ಪೆಂಪಿನ ತನೂಜೆಯಂ ಕೊಟ್ಟಂ ಶಾಂತೀಶ್ವರಂಗೆ ನಭಶ್ಚರಂ: **ಶಾಂತಿಪು**, ೧೧. ೬೯)

**ರುಜೆ** – ರೋಗ (ಇದು ದುಃಖವೊ ರುಜೆಯ ಕಳವಳಮೊ .. .. ಎಂಬುದಂ ಬಗೆಯಲಾರ್ತನಿಲ್ಲ: **ಕಾದಂಸಂ**, ೪. ೨೮)

**ರುಟ್** – ರೋಗ (ಗಣನಾಥಂ ಅಘೌಘವೇದನಾ ರುಟ್‌ಪಟಲಪ್ರಣಾಶದಹನಂ .. .. ನಮಗೀಗೆ ಮನೋರಥಂಗಳಂ: **ಪಂಚತಂತ್ರ**, ೩೯೨)

**ರುತಿ** – ಶಬ್ದ (ಕಲಕಲಿಸಿ ನಗುವವೋಲ್ ಅಳಿಗಳ ರುತಿವೆರಸಿರ್ದುವು ಅಲರ್ದ ಪೊಸಮಲ್ಲಿಗೆಗಳ್: **ಲೀಲಾವತಿ**, ೯. ೧೦೭)

**ರುತುವಿಮಾನ** – ಅರುವತ್ತುಮೂರು ಇಂದ್ರಕಗಳಲ್ಲಿ ಮೊದಲನೆಯದು (ತುತ್ತತುದಿ ರುತುವಿಮಾನಮನೊತ್ತಿದುದು ನಗದ ಪೆಂಪನದೇನೇವೊಗಟ್ವೆಂ: **ಅಜಿತಪು**, ೧೧. ೭)

**ರುದಿತ** – ರೋದನ (ಅರಣ್ಯರುದಿತಂ ವೃತ್ತಾರತಮಂ ವಲವೆನ್ನೊಲವಿಂದುವಕ್ತ್ರೆಯಾ: **ಪಂಪಭಾ**, ೪. ೮೯)

**ರುದ್ರಾಟ್ಟಹಾಸ** – ರುದ್ರನ ನಗು (ಎಲೆ ತಾರಾಗಂ ಹರಂ ಕಣ್ಣೆಡೆ ಕರಗಿದುದು ಅಂತಲ್ತು ರುದ್ರಾಟ್ಟಹಾಸಂ ಜಲಮಾದತ್ತು: **ಕಾದಂಸಂ**, ೩. ೧೨)

**ರುದ್ರಾಣಿ** – ಪಾರ್ವತಿ (ಉಮೆ ಪಾರ್ವತಿ ಕಾತ್ಯಾಯನಿ ಹಿಮವತ್ಸುತೆ ಚಂಡಿ ದುರ್ಗೆ ಮೇನಾತ್ಮಜೆ ಗೌರಿ ಮೃಡಾಣಿ ಗಿರಿಜೆ ರುದ್ರಾಣಿ ಮಹೇಶ್ವರಿ ಕಾಳಯೆಂಬಿವು ಅಂಬಿಕೆಯ ಪೆಸರ್: **ಅಭಿಧಾವ**, ೧. ೧. ೧೬)

**ರುದ್ರಾವತಾರ** – ರುದ್ರನ ಅಂಶಸಂಭೂತ (ಆ ರುದ್ರಾವತಾರನ ಕೆಲದೊಳ್ ಕಿಕ್ಕಿಱಿಗಿಱಿದ ತಟ್ಟುಬುಗಲ ನಡುವೆ ಪೊನ್ನ ರಥಮನೇಱಿ ನಿಂದಂ: **ಪಂಪಭಾ**, ೧೦. ೫೭ ವ)

**ರುಧಿರ** –; ರಕ್ತ (ಇಭಶೈಲಂಗಳನೇಱಿಯೇಱಿ ರುಧಿರ ಸ್ರೋತಂಗಳಂ ದಾಂಟಿ ದಾಂಟಿ .. .. ಭರಂಗೆಯ್ದುಱಿದೆಯ್ದಿ: **ಗದಾಯು**, ೪. ೪೮)

**ರುರು** – ಮಚ್ಚೆಗಳಿರುವ ಜಿಂಕೆ (ವೃಕ ಭಲ್ಲೂಕ ಸುಗಂಡ ಚಂಡಹರಿಣಶ್ರೇಣೀ ರುರು ಉರು ಉಗ್ರ ಶಲ್ಯಕ ಸಾರಂಗ ಶಶಾವಳೀ ಶರಭ ಗೋಲಾಂಗೂಲಮಾಲಾ ಹರಿಪ್ರಕರ ಆಭೀಳ ಸೃಗಾಳಜಾಳಂ ಮದವತ್ ಶುಂಡಾಲ ಶಾರ್ದೂಲ ಕಾಕಕುಳ ವ್ಯಾಳ ಕರಾಳ ವಿಸ್ಫುರತ್ ಅರಣ್ಯಾನೀ ಮಹೀದೇಶದೊಳ್: **ಪಂಚತಂತ್ರ**, ೧೪೨); ಒಬ್ಬ ಋಷಿಯ ಹೆಸರು (ಶುಕ ಭಾರದ್ವಾಜ ಶಾಂಡಿಲ್ಯ ರುರು ಕಪಿಲ ಸತ್ಕೌಶಿಕ ಅಗಸ್ತ್ಯಯುಕ್ತಂ: **ಶಬರಶಂ**, ३. ೨೯)

**ರುವತ್** – ಧ್ವನಿಮಾಡುವ (ಅಱಲೆ ಫಣಿ ಕಳಲೆ ಕೇಸರವೆಱಲೆ ರುವತ್ ಮಧುಪಾಳಿ ಹರಿ .. .. ಸೊಗಯಿಸುವ ಕಮಳದಲರಂ ಕೊಯ್ದಂ: **ನೇಮಿನಾಪು**, ೮. ೪೫)

**ರುಸಿವಳ್ಳಿ** – ಋಷಿಗಳು ವಾಸಿಸುವ ಹಳ್ಳಿ (ರುಸಿವಳ್ಳಿಯೊಳ್ ಆಂ ಅವಿಚಾರದೆ ಋಷಿಸುತನೊರ್ವನಂ ಕೊಂದೊಡೆ: **ಪಂಚತಂತ್ರ**, ३೮೪)

**ರೂಕ್ಷ** – ಕ್ರೂರ (ಎಂತತಿರೂಕ್ಷರಾದೊಡಂ ಸ್ನೇಹಿತರಂ ಕಾಯಲ್ಕೆ ಬರ್ಪುದೇ ಧಾರಿಣಿಯೊಳ್: **ಗಿರಿಜಾಕ**, ೨. ೬೪)

**ರೂಕ್ಷಾನಿಲ** – ಬಿರುಗಾಳಿ (ರೂಕ್ಷಾನಿಲಪಾತದಿಂ ತಪನತಾಪದಿಂ ಅಂಬಿಕೆಗಗ್ಗಳಂ ಪರಿಮ್ಲಾನತೆಯಕ್ಕುಂ: **ಪಂಪರಾ**, ೧೧. ೧೨೮)

**ರೂಢಿವಡೆ** – ಪ್ರಸಿದ್ಧನಾಗು (ವೀರದೊಳುಕ್ಕಿ ಮಚ್ಚರಿಸಿ ಕೋಪದೆ ಜೈನನೆ ಕಾದಿ ಸತ್ತು ಮೈಲಾರನೆನಲ್ಕೆ ರೂಢಿವಡೆದಂ: ಸಮಯಪ, ೨. ೭೧)

**ರೂಢಿವೆಱು** – ಪ್ರಸಿದ್ಧಿಯನ್ನು ಪಡೆ (ಆ ದೇವಿ ಅಣ್ಣಿಗೇಱಿಯೊಳ್ ಶ್ರಾವಕಿಯೆನೆ ರೂಢಿವೆತ್ತು ದೇವತೆಯಾದಳ್: **ಸಮಯಪ**, ೨. ೭೦)

**ರೂಪಕ** – ಹೋಲಿಕೆ (ಗಿಳಿ ಪಾಯಿಸದತ್ತು ಅಂಗನೆಯ ರೂಪಕಕ್ಕೆ ಬೆಡಂಗಂ ಗಿಳಿಯೋದಿಪಂಗನಾ ರೂಪಕದಾ: **ಲೀಲಾವತಿ**, ೧೧. ೬೭); ಒಂದು ಅಲಂಕಾರ (ರೂಪಕಮೆಂಬುದು ಪೆಱವರ ರೂಪಾದಿಗುಣಂಗಳಂ ಅಭೇದೋಕ್ತಿಗಳಿಂ ರೂಪಿಸುವುದು: **ಕವಿರಾಮಾ**, ३. ೧೨); ಏಳು ಬಗೆಯ ತಾಳಕ್ರಮಗಳಲ್ಲಿ ಒಂದು (ಧ್ರುವ ಮಟ್ಟೆಯಂ ಪಡಿಮಟ್ಟೆಯಂ ಅಟ್ಟತಾಳ ಎಕ್ಕತಾಳ ರೂಪಕಂ ರಚ್ಚೆಯ ಎಂಬ ಏೞುಂ ತೆಱದ ತಾಳಕ್ರದಿಂದ: **ಧರ್ಮಪ**, ೨. ೨೦ ವ)

**ರೂಪಧಾರಿ** – ರೂಪವನ್ನು ಧರಿಸಿದವನು (ಲಾವುಕ ಸಿಂಹ ವಾನರ ರೂಪಧಾರಿ ಸುರಕೋಟಿ ವಿನೋದದ ತೋಟಿಯೊಳ್ ಚರಾಚರಗುರುವಿಗೆ ಪೊಟ್ಟುಗಳೆಯುತ್ತಿರೆ: ಶಾಂತಿಪು, ೧೦. ೯೦)

**ರೂಪನಿದಾನ** – ಚೆಲುವಿನ ನಿಧಿ (ನೀರೊಳಗಳ್ಕಿದ ನೆವದಿಂದಾ ರೂಪನಿದಾನನಂ ಮೃಗಾಕ್ಷಿಯರಪ್ಪರ್ ಸಾರೆ ಬಿಡುತಂದು ಕೂಡಲ್: **ಶಾಂತಿಪು**, ೮. ೪೭)

**ರೂಪಪರಾವರ್ತನ** – ರೂಪ ಬದಲಾಯಿಸುವಿಕೆ, ಹಾಗೆ ಮಾಡುವ ವಿದ್ಯೆ (ರೂಪಪರಾವರ್ತನಂ ಎಂಬ ವಿದ್ಯೆಯಿಂ ಅಭಿಪ್ರಾಯಂ ವಿಯದ್ಗಾಮಿ ಭೂಮಿಪನೊಳ್ ತೊಟ್ಟುದಂ: **ಶಾಂತಿಪು**, ೨. ೬೬)

**ರೂಪಮದ** – ತನ್ನ ಚೆಲುವಿನ ಬಗೆಗಿನ ಅಹಂಕಾರ, ಅಷ್ಟಮದಗಳಲ್ಲಿ ಒಂದು (ಬಲಮದಮದೊಂದು

ರೂಪಮದಮದೊಂದು .. .. ಅಲ್ಲದೆ ಬೇಱ ರಾಗಮುಗ್ಗಲಿಸಿದ ದೋಷದೃಷ್ಟಿ ವಿಷಯಾತುರರೇಂ ಗಡ ಮುಂದುಗಾಣ್ಬರೇ: **ಪಂಪರಾ,** ೬. ೧೪)

**ರೂಪಟೆ** – ವಿರೂಪಗೊಳ್ಳು (ಇನರಥಹತಿಯಿಂ ನೆಗೆದ ಗಗನಧಾತುಸ್ಥಳಿರಜಂಗಳಿಂ ರೂಪಟೆದತ್ತೆನೆ ಸಂಜೆ ಕೆಂಪನುಟೆದಿರೆ: **ಆದಿಪು,** ೧೬. ೯೬)

**ರೂಪಾಂತರ** – ಆಕಾರ ಬದಲಾವಣೆ (ರೂಪಾಂತರಕ್ಕೊಯ್ದು ಭಸುರದಿಂ ತತ್ಸುರರಾಜನಂದು ಪಿರಿದೊಂದುತ್ಸಾಹಮಂ ಮಾಡಿದಂ: **ಆದಿಪು,** ೧೬. ೫೨)

**ರೂಪಾನುಪಾತ** – [ಜೈನ] ದೇಶವ್ರತಾತಿಚಾರಗಳಲ್ಲಿ ಒಂದು, ತನ್ನ ರೂಪವನ್ನು ಬೇರೆಯವರಿಗೆ ತೋರಿಸುವುದು (ಕಪಟದೊಳೇಂ ಪ್ರೇಷಣ ಶಬ್ದ ಪುದ್ಗಲ ಕ್ಷೇಪಸಮುದಿತನಯನಂ ತಾವಪಚಾರಂಗಳ್ ರೂಪಾನುಪಾತಮಂ ಪ್ರಮಿತದೇಶನಿಯಮವ್ರತದೊಳ್: **ಸುಕುಮಾಚ,** ೬. ೧೯)

**ರೂಪಿಡು** – ಕೋಪವನ್ನು ತೋರಿಸು (ರೂಪಿಡು– ಕ್ರೋಧನಿರ್ದೇಶೇ: **ಶಬ್ದಮದ,** ಧಾ ೩೫೩)

**ರೂಪು** – ಆಕಾರ (ಒಲಿಸುವ ರೂಪು ಗಾಡಿಯೊಳೊಡಂಬಡೆ ಗಾಡಿ ವಿಳಾಸದೇಟ್ಗೆಯೊಳ್ ನೆಲಸೆ ವಿಳಾಸಂ: **ಆದಿಪು,** ೧. ೭೨)

**ರೂಪುಗರೆ** – ರೂಪನ್ನು ಮರೆಮಾಚು, ಬೇರೆ ವೇಷ ಹಾಕಿಕೊ (ನುಡಿದು ತಪ್ಪಿದೊಡೆ ನುಂಗಲಱೆಯದೊನಲ್ಲೆನೆಂದು ರೂಪುಗರೆದು ಪೆಱಪೆಱಗನೆ ಬರುತಿರ್ದಂ: **ಸುಕುಮಾಚ,** ೭. ೧೭ ವ)

**ರೂಪೋಪಜೀವಿ** – ಸೂಳೆ (ರೂಪೋಪಜೀವಿಗೆಱಗಿಪ್ಪಾ ಪುರುಷಂ ಗ್ರಾಮಸಿಂಹಮಂ ನೆನೆಯಿಸುಗುಂ: **ಸಮಯಪ,** ೬. ೪೨)

**ರೂಪ್ಯ** – ಬೆಳ್ಳಿ (ಕಾಂಚನ ರೂಪ್ಯಂಗಳಂ ಕುಂಭದಿಂ ಮೊಗೆದು ಜೈಜೈ ಎಂಬಿನಂ ಪಾಕಶಾಸನ ಹಸ್ತಾಗ್ರದೊಳೆತ್ತಿ ತಂದು ಕುಡೆ: **ಸುಕುಮಾಚ,** ೧. ೬೬)

**ರೂಪ್ಯಾಚಲ** – ಬೆಳ್ಳಿ ಬೆಟ್ಟ (ಇನ್ನಿಲ್ಲಿ ರೂಪ್ಯಾಚಲಮಂ ಪಾಯ್ವುತ್ತರಾರ್ಧಕ್ಕೆಮಗೆ ನಡೆವ ಸಾಮಗ್ರಿಯಂ ಮಾಡಲೀಗಳ್ ನೆಲೆ: **ಆದಿಪು,** ೧೩. ೨೦)

**ರೂಪ್ಯಾಚಳ** – ರೂಪ್ಯಾಚಲ (ವಿಚಾರಿಸದೆ ಈ ದಿಗ್ವಿಜಯ ಪ್ರಘಟ್ಟಕದೊಳ್ ಉರ್ವೀಭೃತ್ಸಮಾಜಕ್ಕೆ ನೋಯಿಸಿದಂ ನಿರ್ನೆರಮೆನ್ನೆಂದು ಮೊರೆಯಿಟ್ಟಂತಾಯ್ತು ರೂಪ್ಯಾಚಳಂ: **ಶಾಂತಿಪು,** ೧೧. ೪೦)

**ರೂವಾರ** – ಶಿಲ್ಪ (ತಳದಿಂ ಕಳಶಂಬರಂ ಒಂದಳವಿಯ ರೂವಾರಮೆನಿಸಿ ಬಹುರೂಪಿಣಿಯೊಳ್ವೊಳಗೆಗಳಿಂ ಜ್ಯೋತಿರ್ಮಂಡಳದವೋಲ್ ಒಪ್ಪುವುವು ನಾಡೆಯುಂ ಕರುಮಾಡಂ: **ಅಜಿತಪು,** ೨. ೨೦)

**ರೂವು** – ಆಕಾರ (ಧರೆಯಂ ಪೊತ್ತಾನೆಯ ಕೈಗೊರೆಯೆನೆ ಕಡುವೆಟ್ಟಿತಾದ ನಾಲ್ಕುಂ ತೋಳುಂ ಕರಮೆಸೆದಿರೆ ಕುಳ್ಳಿರ್ದಂ ಸಿರಿಯರಸಂ ಕಾರ ಮುಗಿಲ ರೂವೆಂಬಿನೆಗಂ: **ಕಬ್ಬಿಗಕಾ,** ೧೨೯)

**ರೆಂಚೆಯ** – ಆನೆಕುದುರೆಗಳ ಜೂಲು (ಇಂದುಶಿಲಾ ವಿನಿರ್ಮಿತದ ರೆಂಚೆಯಂ ಅಂಚಿತಮಾಗೆ ಚೀನದಿಂದಂ ದೊರೆವೆತ್ತು ತೋರ್ಪ್ಪಗುಟಿಂ ಇಂತಭಿರಾಜಿಸೆ: **ಕುಸುಮಾಕಾ,** ೫. ೭೧)

**ರೇಖಿಕೆ** – ರೇಖೆ, ಗೆರೆ (ಮಳಯರೇಣುಜಾಳ ಪರಿಪಾಂಡುರಮಾಯ್ತು ಕುಚದ್ವಯಂ ವಿಕಜ್ಜಳಕೃತರೇಖಿಕಾ ರಚನಮಾದಂದು ಲೋಚನ ಯುಗ್ಮಂ: **ಚಂದ್ರಪ್ರಪು,** ೮. ೭೬)

**ರೇಚಕ** – ಉಸಿರು ಬಿಡುವ ಒಂದು ವಿಧಾನ (ತಾರಕಾಸಂಕುಳಂ ತೋಳ್ಗಳದೊಂದಳ್ಳೇಜೆನೊಳ್ ಪೂವಲಿವೊಲುದುರ್ವಿನಂ ವಾರ್ಧಿಗಳ್ ರೇಚಕೋತ್ಥಾನಳತೀವ್ರಾಘಾತದಿಂದುಚ್ಚಲಿನಂ: **ಆದಿಪು,** ೧೩. ೧೨೧); ನೃತ್ಯದಲ್ಲಿ ಕೈಚಾಚುವುದು (ಕರಣಂ ರೇಚಕಂ ಅಗಹಾರಂ ಇನಿತೆಂದೋದುತ್ತುಮಿರ್ಪುದದು ಅತ್ತಿರಲಿ: **ಆದಿಪು,** ೭. ೧೨೦)

**ರೇಚಿಸು** – ಹೊರಚೆಲ್ಲು, ಹೊರಚಾಚು (ಕರಮಿವು ಸಾಸೊರಮೆನೆ ರೇಚಿಸಿದಳ್ ಆಕೆ ಎಡಕಂ ಬಲಕಂ: **ಲೀಲಾವತಿ,** ೪. ೧೨೮)

**ರೇಣು** – ಧೂಳು (ಕಂಗೊಳಿಸಿತು ಸುಟ್ಟುರೆ ಸರೇಣು ಪಸರಿಸೆ ನಭದೊಳ್: **ರಾಜಶೇವಿ,** ೫. ೪೫); ಹೂವಿನ ಪರಾಗ (ಪುದಿದಿರೆ ಪುಷ್ಪಪಾಂಸುಪಟಲಂ ಕಡುಮೆಲ್ವಳವಟ್ಟು ಲ್ಪುಣ್ಮಟಿಲ್ ಕೆದಱದ ಕೇತಕೀಕುಸುಮರೇಣುವಿನಂತಿರೆ .. .. ನಿತಂಬಿನಿ ನೆಲಂ ತವದಂತಿರೆ ಗುಜ್ಜುಮೆಟ್ಟಿದಳ್: **ಮಲ್ಲಿನಾಪು,** ೫. ೭೮)

**ರೇಣುಸ್ಥಲಿ** – ಧೂಳು ತುಂಬಿದ ಜಾಗ (ಗ್ರಾವಸ್ಥಲಂ ಲೋಹವಾದುವು ರೇಣುಸ್ಥಲಿ ಕಾಜುವಿಟ್ಟುವು ನಿಧಾನದ್ರಾಘಿಮೋದ್ರೇಕದೊಳ್: **ಪಂಪರಾ,** ೭. ೯೭)

**ರೇಣುಕಾನಂದನ** – ಪರಶುರಾಮ (ನಿಜಭುಜಶಕ್ತಿಯಂ ಪ್ರಕಟಂ ಮಾಡಲೆಂದು ರೇಣುಕಾನಂದನನಲ್ಲಿಗೆ ಪೋಗಿ: **ಪಂಪಭಾ,** ೧. ೧೦೩ ವ)

**ರೇತ** – ವೀರ್ಯ (ನಾಚಿಕೆಯಿಂ ಪೋಗೆ ಗಿರಿಜಾತೆ ಮುನಿಸಿಂದಾ ರೇತಮನಿಟ್ಟಂ ಅಗ್ನಿಮುಖದೊಳ್ ರುದ್ರಂ: **ಸಮಯಪ,** ೧೦. ೭೫)

**ರೇವಂತ** – ಪ್ರಕಾಶಿಸುವ (ತಲೆಚವರಂ ನೇವಳಂ ಉಜ್ವಳಿಸುವ ರೇವಂತಮಾಲೆ ಪೊಂಗಂಟೆ ಪೊದಳ್ದುಲಿವ ಕಿಱುಗೆಜ್ಜೆ: **ತ್ರಿಷಷ್ಟಿಪು,** ೨೪. ೨೯೫)

**ರೇವತಿ** – ಬಲರಾಮನ ಹೆಂಡತಿ (ಆ ರೇವತಿಯೊಳ್ ಬಲದೇವಂ ವೈವಾಹೋತ್ಸವದೆ ನೆರೆದು ದುಃಖದಿಂದಿರ್ದಂ: **ಜಗನ್ನಾವಿ,** ೧೦. ೨); ಒಂದು ನಕ್ಷತ್ರ

**ರೇಶ** – ಕುಬೇರ (ಧರ್ಮಪರಿಪಾಲ ಕಪಾಲಕರೇಶ ರೇಶಸಂಗತ ಗತಕಾಮ ಕಾಮಕಲಾಪ: **ಶಬರಶಂ,** ೫. ೨೭)

**ರೈ** – ಸಿರಿ, ಚಿನ್ನ (ಧನಕನಕವಾಚಕಂ ರೈ ಶಬ್ದಂ: **ಅಭಿಧಾವ,** ೩. ೧. ೪೨)

**ರೈಧಾರೆ** – ಚಿನ್ನದ ಮಳೆ (ಸುರತೂರ್ಯಧ್ವಾನಮೆಯ್ತರ್ಪಲರ ಸರಿ ಪೊದಳ್ದಿರ್ದ ರೈಧಾರೆ ದೇವೇಂದ್ರಹೋದಾನಪ್ರಸಿದ್ಧಧ್ವನಿ: **ಆದಿಪು,** ೪. ೯೮)

**ರೈವೃಷ್ಟಿ** – ಕನಕವೃಷ್ಟಿ, ಚಿನ್ನದ ಮಳೆ (ಧನದಂ ಕಾಂಚನಪಂಚರತ್ನಮಯಮಂ ರೈವೃಷ್ಟಿಯಂ ಮಾಡುವಲ್ಲಿ: **ಆದಿಪು,** ೭. ೨೪)

**ರೊಂಕಿಡು** – ಗರ್ಜಿಸು (ಅದಿರದೆ ಇದಿರಾಂತು ರೊಂಕಿಟ್ಟು ಒದಱುತ್ತುಂ ಬರ್ಪ ಕಾಡ ಕೋಣ: **ಶಬರಶಂ,** ೩. ೫೬)

**ರೋಚನಾ** – ಗೋರೋಚನ (ತಳವೆಳಗಾದಂ ವನಿತಾತಿಳಕದ ನೊಸಲ ರೋಚನಾ ತಿಲಕದ ಚೆಲ್ವು ಎಟೆಕುಳಿಗೊಳೆ ಸಮ್ಮೋಹನತಿಳಕದವೋಲ್ ಮನಮನವನಿಪಾಲಕ ತಿಲಕಂ: **ಪಂಪರಾ,** ೫. ೬೧)

**ರೋಚರ್ಜಳ** – ಕಾಂತಿಯೆಂಬ ನೀರು (ಕನಕಪ್ರಾಕಾರ ರೋಚರ್ಜಳದ ಪರಪಿನೊಳ್ .. .. ಚೆಲ್ವನಾಯ್ತಿಂದ್ರ ಕೂಟಂ: **ಲೀಲಾವತಿ,** ೮. ೬೬)

**ರೋಚಿ** – ಕಾಂತಿ, ಕಿರಣ (ಸಲಿಲಾಂತರ್ಭಾಗದೊಳಿರ್ದು ಪದ್ಮಿನೀಮುಕುಲಾಲಂಕೃತಮಾಗಿ ಬಾಳರವಿರೋಚಿ ಸ್ಪರ್ಧಿಯಾಗಿರ್ಕುಂ: **ಸುಕುಮಾಚ,** ೩. ೧೪)

**ರೋಚಿರ್ಮಾಳೆ** – ಕಿರಣಗಳ ಹಾರ (ರೋಚಿರ್ಮಾಳೆಗಳಂತೆ ತಳ್ತೆಸೆಯೆ ಷಟ್ತ್ರಿಂಶದ್ಗುಣಂ: **ಅನಂತಪು,** ೧. ೩)

**ರೋಚಿಷ್ಣು** – ಕಾಂತಿ (ಕಾಂಚನರೋಚಿಷ್ಣುಗಳೆ ಮಿಕ್ಕ ಕುಲಧರರೆಲ್ಲಂ: **ಪಂಪರಾ,** ೧. ೮೭)

**ರೋದನ** – ಗೋಳಾಟ (ರೋದನದಿಂ ಸುತನ ಶಿರಚ್ಛೇದನದಟಲಾಱದು ಆಱುಗುಂ ರಿಪುರುಧಿರದಾಸ್ವಾದದಿಂ: **ಪಂಪರಾ,** ೯. ೩೩)

**ರೋದಸ್** – ಭೂಮಿ–ಆಕಾಶಗಳು (ಭೇರೀನಿನಾದಂ ರೋದಸ್ ಅಂತರ್ಭಾಗಮಂ ಜಕ್ಕುಲಿಸೆ ನೃಪತಿ ಸಾಕೇತಮಂ ಬಂದು ಪೊಕ್ಕಂ: **ಪಂಪರಾ,** ೬. ೪೨)

**ರೋದೋಂಗಣ** – ಆಕಾಶಪ್ರದೇಶ (ಪಾಱುವ ಕೀರಮಾಲೆ ರೋದೋಂಗಣಮೆಂಬ ಪಟ್ಟಣದೊಳೊಪ್ಪುವ ಬೆಳ್ಮುಗಿಲೆಂಬ ಬಳ್ಳಿಮಾಡಂಗಳ ಪೊನ್ನ ಮಾಣಿಕದ ಪಚ್ಚೆಯ ತೋರಣದಂತೆ ರಂಜಿಕುಂ: **ಜಗನ್ನಾವಿ,** ೪. ೬೬)

**ರೋದೋಂತ** – ದಿಗಂತ (ರೋದೋಂತಂ ಕೂಡೆ ರತ್ನೋಜ್ಜ್ವಳಗಿರಿಕುಳದಿಂ ತೂಂತನಿಟ್ಟಂತೆ ನೀಲಾಂಭೋದಂಗಳ್ ಕೂಡೆ: **ಆದಿಪು,** ೧೪. ೯೭)

**ರೋದೋಭಾಗ** – ಕ್ಷಿತಿಜ (ದೆಸೆಯಂ ನುಂಗಿ ದಿನೇಶನಂ ನೊಣೆದು ರೋದೋಭಾಗಮಂ ಪೀರ್ದು ಸಂದಿಸಿ ಮಂದೈಸಿ ಧನುರ್ಬಲಂಗಳಿಸೆ: **ಪಂಪರಾ,** ೧೩. ೪೫)

**ರೋದೋ ವಿವರ** – ಆಕಾಶದ ಬಿಲ, ಭೂಮಿ ಆಕಾಶಗಳ ನಡುವಣ ಪ್ರದೇಶ (ಪ್ರಚಂಡಪ್ರಳಯ ಘನಘಟಾ ರಾವದಿಂದಾರ್ದು ಬಾಣಾವಲಿಯಿಂದಂ ಪೊಱಿ ರೋದೋವಿವರಮನೊದವಿತ್ತೊಂದು ಘೋರಾಂಧಕಾರಂ: **ಪಂಪಭಾ,** ೧೧. ೧೪೮)

**ರೋಧ** – ದಂಡೆ, ತೀರ (ತೀರಂ ರೋಧಂ ತಟಂ ಪ್ರಪಾತಂ ಕೂಲಂ ಪಾರಂ: **ಅಭಿಧಾವ,** ೧. ೪. ೧೩)

**ರೋಧಸ್ವಿನಿ** – ನದಿ, ಹೊಳೆ (ದುರಿತವ್ರಾತಲತಾಕೃಪಾಣಿ ವಿಸರುದ್ದುರ್ಬೋಧರೋಧಸ್ವಿನೀತರಣದ್ರೋಣಿ .. .. ವಾಣಿ: **ಚಂದ್ರಪ್ರಪು,** ೧. ೧೨)

**ರೋಧಿ** – ನದಿ (ಸರಸಿ ಕರಂ ತೀವಿ ರೋಧಿವಜೆದುದು ಬನದೊಳ್: **ಕುಸುಮಾಕಾ,** ೯. ೪೨)

**ರೋಪ** – ಬಾಣ (ನಿಜಧನು ದನುಜಾರಾತಿಜಾತಾಧಿವಾಸಂ ನಿಜರೋಪಂ ವಿಶ್ವರೂಪಂ: **ರಾಜಶೇವಿ,** ೧. ೨)

**ರೋಪಿತ** – ಲೇಪಿಸಿಕೊಂಡ (ವಾರನಾರೀ ತನೂ ರೋಪಿತ ದಿವ್ಯಾಮೋದ ದಿವ್ಯಾಗರುಪರಿಮಿಳಿತಂ .. .. ಪಣವನಿತಾಗಾರಚಾರಂ ಸಮಿರಂ: **ಶಾಂತೀಶ್ವಪು,** ೧೧. ೫೩)

**ರೋಮಂಥ** – ಮೆಲುಕು ಹಾಕುವುದು (ಹರಿಣೀ ರೋಮಂಥ ಬಂಧುರಂ ಲವಲೀ ಮರ್ಮರ ಮುಖರಂ ಕರಿ ಕರ ಶೀಕರ ಶೀತಳಮೆಸಗಿದತ್ತರಣ್ಯ ಸಮೀರಂ: **ಪಂಪರಾ,** ೭. ೧೧೩)

**ರೋಮಕೂಪ** – ಮೈಕೂದಲ ಕುಳಿ (ಇಡಿದಿರೆ ರೋಮಕೂಪದೊಳಗೆ ಉರ್ಚಿದ ಸಾಲ ಸರಲ್ಗಳುಂ ತೆಱಂಬಿಡಿದಿರೆ ಬೆಟ್ಟು ಒರ್ಗುಡಿಸಿದಂತೆ ನೆಱಿಲ್ದಿರೆ .. .. ಬಿಟ್ಟಿಂ ಏನೆಸೆದನೋ ಶರಶಯ್ಯೆಯೊಳ್ ಅಂದು ಸಿಂಧುಜಂ: **ಪಂಪಭಾ,** ೧೩, ೬೨)

**ರೋಮಶ** – ಬಹಳ ಕೂದಲುಳ್ಳ (ರೋಮಶಗಣಾವೃತನಲ್ಲಿ ವಿರಾಜಿಪಂ ವಧೂವಿಳಸಿತವೀರಭದ್ರವಿಭು ಖಡ್ಗ ಧನುಃ ಶರಖೇಟಕಾನ್ವಿತಂ: **ಶಬರಶಂ,** ೧. ೬೬)

**ರೋಮಹರ್ಷ** – ಸಂತಸದಿಂದ ಮೈಕೂದಲು ನಿಮಿರುವುದು (ವಿಸ್ಮಯಂಬಡನೆ ಮಯಂ ಬೆರಲ್ಮಿಡಿಯನೇ ಸುರವರ್ಧಕಿ ರೋಮಹರ್ಷದೊಳ್ ತೊಡರನೆ ಚೀರಘಟ್ಟಿ: **ಚಂದ್ರಪ್ರಪು,** ೧. ೧೪೪)

**ರೋಮಾಂಚತೆ** – ಪುಳಕ (ಅಲರ್ದು ಕಡವಿನ ಮರಗಳ್ ಪರಿಗತರೋಮಾಂಚತೆಯಿಂ ದೊರೆಮಾಡಿದುದೆನ್ನ ತನುವುಮಂ ನೆಱಿ ತನ್ನೊಳ್: **ಚಂದ್ರಪ್ರಪು,** ೨. ೯೯)

**ರೋಮೋದ್ಗಮ** – ರೋಮಾಂಚ (ರೋಮೋದ್ಗಮಂ ಕೂಡೆ ಪೊಣ್ಮುತ್ತಿರೆ .. .. ಬರತೆಗೆದು ತರ್ಱೈಸೆ: **ಕಾದಂಸಂ,** ೨. ೪೩)

**ರೋಲಂಬ** – ದುಂಬಿ (ರೋಲಂಬ ಸಿತಾಂಬುದಪ್ರಭ ಗರಾಂಕಿತಕಂಧರ ಶಾಂಭವೀಧವಾ: **ಶಬರಶಂ,** ೨. ೫)

**ರೋಲಂಬಕ** – ದುಂಬಿ (ಅಂಬುಜಪತ್ರನೇತ್ರದ ಸುಧಾಕರವಕ್ತ್ರದ ಚಾರುಬಾಲ ರೋಲಂಬಕಕುಂತಳದ ತುಂಗಕುಚಗಳ ತನ್ವಿ: **ಉದ್ಭಟಕಾ,** ೫. ೧೦೨)

**ರೋಷಿ** – ಕೋಪಗೊಂಡ[ವನು] (ಸೋದರನ ಧನುರ್ಗುಣಮಂ ಛೇದಿಸಿದಂ ರೋಷಿ ರಾವಣಂ: **ಪಂಪರಾ,** ೧೪. ೧೫)

**ರೋಸ** – [ರೋಷ] ಕೋಪ (ಚಕ್ಕಟಿದ ಮೊಲೆಗಳುಂ .. .. ಇನಿಯನ ರೋಸಕ್ಕೆಡೆಯಾಯ್ತು: **ಲೀಲಾವತಿ,** ೧೩. ೯೨)

**ರೋಹಣಾಚಲ** – ಒಂದು ಪರ್ವತ (ದೇವಿಯರ ವಂಶಮೆಂಬುದು ಯೌವನರತ್ನಕ್ಕೆ ರೋಹಣಾಚಲಂ: **ಅನಂತಪು,** ೬. ೩೧)

**ರೋಹಿಣಿ** – ಬಲರಾಮನ ತಾಯಿ (ಮಾಯಾದೇವಿ .. .. ದೇವಿಯ ಗರ್ಭದರ್ಭಕನನತ್ತಲ್ ಗೋಕುಲ್ಲುಯ್ದು .. .. ಯೋಜಿಸಿದಳಿಂತ ರೋಹಿಣೀಗರ್ಭದೊಳ್: **ಜಗನ್ನಾವಿ,** ೨.. ೬೧); ಒಂದು ನಕ್ಷತ್ರ (ಅನಿಮಿಷಗುರು ಮೂಱುತ್ತರೆ ಧನಿಷ್ಠೆ ಹಸ್ತಾದಿಪಂಚಕಂ ರೇವತಿಯಶ್ವಿನಿ ರೋಹಿಣಿಯದಿತಿಯೆನಿಸಿಪ್ಪ ಇನಿತುಂ ನಕ್ಷತ್ರಮುತ್ತಮಂ ಪೊಸತನುಡಲ್: **ಲೋಕೋಪಕಾ,** ೧. ೧೨)

**ರೋಹಿತ** – ರಕ್ತ (ಅಸ್ಥಿಯಿಂ ಸುರಿವ ರೋಹಿತದಿಂ ಕಡಿವೋದ ಕಾಲ್ಗಳಿಂ .. .. ವಿಲಯದ ಮೃತ್ಯುವಂತೆ ಕೊಂದುದು: **ರಾಜಶೇವಿ,** ೫. ೧೧೯) ; ಕೆಂಪಾದ

**ರೌದ್ರ** – ಭಯಂಕರನಾದವನು (ಏಕಾದಶರುದ್ರರೊಳಗೆ ತುತ್ತತುದಿಯ ರುದ್ರನುಂ ರೌದ್ರನುಂ ಅಪ್ಪ ಅಶ್ವತ್ಥಾಮಂ ಏವದೊಳ್ ಕಣ್ಗಾಣದೆ ಮಾರ್ಕೊಂಡು ವಿಕ್ರಮಾರ್ಜುನನಂ: **ಪಂಪಭಾ,** ೧೩. ೩೯ ವ)

**ರೌದ್ರಧ್ಯಾನ** – [ಜೈನ] ಕೆಟ್ಟುದರಲ್ಲಿ ಕಾಣುವ ಸಂತೋಷ; ಹಿಂಸಾನಂದ, ಮೃಷಾನಂದ, ಸ್ತೇಯಾನಂದ, ಪರಿಗ್ರಹಾನಂದ ಎಂಬ ನಾಲ್ಕು ಬಗೆ (ಬಹ್ವಾರಂಭ ಸುರಂಭ ರೌದ್ರಧ್ಯಾನಪರಿಣತಂ: **ಆದಿಪು,** ೨. ೧೧ ವ)

**ರೌದ್ರಾವಹ** – ಭಯವನ್ನುಂಟುಮಾಡುವ (ದೇವ ಮದೇಭಕೃತಿಯನಾಂತು ಕೃತಾಂತನೆ ಬಂದನೆಂಬ

ರೌದ್ರಾವಹಮಪ್ಪುದೊಂದು ಗಜಮೆತ್ತಣಿನಕ್ಕೆ ಮರಕ್ಕೆ ಬಂದು: **ಚಂದ್ರಪ್ರಮ,** ೯. ೮೬)

**ರೌದ್ರಾಹವ** – ಭಯಂಕರ ಯುದ್ಧ (ಗದಾಯುದ್ಧಂ ಪರಿಚ್ಛನ್ನಮಿಂತು ದಿನಂಗಳ್ ಪದಿನೆಂಟಱಿಂ ಸಮೆದುದು ಆ ರೌದ್ರಾವಹಂ ಭರತಂ: **ಗದಾಯು,** ೯. ೩೬)

**ರೌಪ್ಯ** – ಬೆಳ್ಳಿ (ಶ್ರೀಚಂದ್ರಬಿಂಬಮೆಂದೆಂಬ ಆಚಾರ್ವ ಮೃತಪರಿಪೂರ್ಣ ರೌಪ್ಯಕಳಶಮಂ: **ಉದ್ಭಟಕಾ,** ೧೦. ೩೨)

**ರೌಪ್ಯಾದ್ರಿ** – ಬೆಳ್ಳಿಯ ಬೆಟ್ಟ (ನಗಂ ಚಂಚತ್ ಚಂದ್ರರೋಚಿರ್ಧವಳಮೆನಿಸಿ ರೌಪ್ಯಾದ್ರಿಯಂತಿರ್ದುದು: **ಅಜಿತಪು,** ೪. ೬೮)

**ರೌರವ** – ಒಂದು ನರಕ (ಬಹುವಿಧ ದೇಹಗಳ್ವೆರಸು ರೌರವಮಂ ಪೊಕ್ಕಂ: **ಚಾವುಂಪು,** ಪು. ೩೭೦. ಸಾ. ೧೧)

**ರೌಹಿಣೇಯ** – ಬಲರಾಮ (ಪುಂಡರೀಕಾಕ್ಷಂ ರೌಹಿಣೇಯಂ ಬೆರಸು ವಿಜಯವರೂಥಾರೂಢನಾಗಿ ಅಗುೞಿಯನುರ್ಚಿ ಪೊೞಮಡುವಾಗಳ್: **ಜಗನ್ನಾವಿ,** ೭. ೪೬ ವ)

# ಲ

**ಲಂಗಿಗ** – [ಲಂಖಿಕ] ದೊಂಬರವನು (ಲಂಗಿಗರ ಮನೆಯೊಳ್ ಪೆಣ್ಗತ್ತೆಯಾಗಿ ಪಿರಿಯ ಪೊಱೆಗಳಂ ಪೊತ್ತು ಪೋಗಿ ಬೆನ್ನೊಳ್ ಕಱುಮೆಯಾಗಿ ನಾಳಿ ಬಿರ್ದು: **ವಡ್ಡಾರಾ,** ಪು ೧೩, ಸಾ ೪)

**ಲಂಘನ** – ಉಪವಾಸ ಹಾಗೂ ನೆಗೆಯುವಿಕೆ (ಗಜಮಸ್ತಕ ಮಸ್ತಿಷ್ಕದಿಂ ಅಜೀರ್ಣಮಾಯ್ತೆಂದು ಲಂಘನಂಗೆಯ್ವವೊಲೇಂ ಗಜರಿಪು ಲಂಘಿಸಿದುದೊ ಪವನಜವದೆ ಶಿಖರಕ್ಕೆ ಶಿಖರದಿಂ ಖಗನಗದಾ: **ಅಜಿತಪು,** ೯. ೨೭)

**ಲಂಘನೀಯ** – ತಿರಸ್ಕಾರಾರ್ಹ (ಉಚಿತಮಂ ಬಗೆಯದೆ ನುಡಿದೊಡಮೆಮಗೆ ಲಂಘನೀಯಮುಪೇಯಂ: **ಶಾಂತಿಪು,** ೧೦. ೧೨೦)

**ಲಂಘಿಸು** – ಹಾರು (ಗಜಮಸ್ತಕಮಸ್ತಿಷ್ಕದಿಂ ಅಜೀರ್ಣಮಾಯ್ತೆಂದು ಲಂಘನಂಗೆಯ್ವವೊಲೇಂ ಗಜರಿಪು ಲಂಘಿಸಿದುದೊ ಪವನಜವದೆ ಶಿಖರಕ್ಕೆ ಶಿಖರದಿಂ ಖಗನಗದಾ: **ಅಜಿತಪು,** ೯. ೨೭)

**ಲಂಚಂಗುಳಿ** – ಲಂಚಕ್ಕೆ ಆಸೆಪಡುವವನು (ಗುಳಿ ಪ್ರತ್ಯಯಕ್ಕೆ: ಆಡುಂಗುಳಿ ಸಾಲಂಗುಳಿ ಲಂಚಂಗುಳಿ ಕತ್ತಂಗುಳಿ: **ಶಬ್ದಮದ,** ೩೧೩, ಪ್ರ)

**ಲಂಚಗಾಱ** – ಲಂಚಗುಳಿ (ಲಂಚಗಾಱನಂತೆ ನುಡಿಗೆಡಿಸದೆ ಏಕಚಿತ್ತದಿಂದ ಕೇಳ್ವಿರಪ್ಪೊಡೆ ಪೇಳ್ದಪೆಂ: **ಧರ್ಮಾಮೃ,** ೧. ೧೩೮ ವ)

**ಲಂಚವಣಿಗ** – ಲಂಚಗುಳಿ (ಮತ್ತೆ ಕೆಲವಱೊಳುಂಟು: ಲಂಚವಣಿಗಂ ಸಾಲವಣಿಗಂ ಗಂಧವಣಿಗಂ: **ಶಬ್ದಮದ,** ೨೧೭, ಪ್ರ)

**ಲಂಚವೊಗು** – ಲಂಚಕ್ಕೊಳಗಾಗು (ಲಂಚವೊಕ್ಕಿರ್ದ ಪ್ರಧಾನನಂತೆ ಪಗೆ ನಿರ್ಮೂಲಮಾದ ಪಂದೆಯಂತೆ: **ಧರ್ಮಾಮೃ,** ೯. ೨ ವ)

**ಲಂಜಿಕೆ** – ಸೂಳೆ (ರಂಜಿಸುವ ಹಂಸರವಮುಂ ರಂಜಿಸದಿನ್ನಿದಱ ಕೆಲದೊಳೆಂಬಿನೆಗಂ ಅದೇಂ ಲಂಜಿಕೆಯರ ಗುಂಜನ್ಮಣಿ ಮಂಜೀರಕ ಮಂಜುಸಿಂಜಿತಂ ರಂಜಿಸಿತೋ: **ಅಜಿತಪು,** ೫. ೪೨)

**ಲಂದಣಿಗ** – ಅಡುಗೆಯವನು, ಬಾಣಸಿಗ (ತತ್ಪುರದೊಳಿರ್ದ ವಿಶಾಖನಂದಿ ಪಸಿವಂ ನಂದಿಸಲೆಂದು ಪಂದಣಿಗರ ಮಂದಿರಕ್ಕೆ ಪೋಪವಂ ಮುಂದೆ ಸಂದಣಿಸಿ ನಿಂದ ನೆರವಿಯಂ ಭೋಂಕನೆ ಕಂಡು: **ಆಚವರ್ಧ,** ೩. ೧೨ ವ)

**ಲಂಪಟ** – ಆಸಕ್ತ, ಕಾಮುಕ (ವಿಷಯಸುಖಾಸ್ವಾದನದೊಳ್ ಲಂಪಟರಿದೇಕೆಯೋ ನರಪಶುಗಳ್: **ಆದಿಪು,** ೧೪. ೧೨೫); [ಲಂಪಳರಪ್ಪೆಮ್ಮಂದಿಗರಂ ಬಗೆವಂದದೆ ಕೊಂದಿಕ್ಕವೆ ಸಕಳವಿಯವಿಷಮವಿಷಂಗಳ್: **ಆದಿಪು,** ೪. ೭೩)

**ಲಂಪಟತೆ** – ಕಾಮುಕತನ (ದಿಟದಿಂದೊಲ್ದವರಂ ಲಂಪಟತೆಯಿನಮರ್ದಪ್ಪಿ ನೆರೆವ ನೆರೆವನಿತು ಸುಖಂ ಘಟಿಯಿಸದು ತಮ್ಮೊಳ್: **ಚಂದ್ರಪ್ರಮ,** ೪. ೭೩)

**ಲಂಪಣ** – ಲಂಪಟ, ಕಾಮುಕ (ಲಂಪಣನವೊಲ್ ಏನಾನುಂ ಅಲಂಪಿನ ನಗೆನುಡಿಯ ನೆವದೆ ನೆಯ್ದಿಲ ಪೂವಿಂದಂ ಪೊಯ್ಯೆ: **ಯಶೋಧಚ,** ೨. ೬೭)

**ಲಂಪಳ** – ಲಂಪಟ (ಲಂಪಳನೆ ವಸ್ತುಗಳಂ ನೆಱೆ ನೀನೆ ಭೋಗಿಪಾ: **ಸಮಯಪ,** ೫. ೭೯)

**ಲಂಪಳತೆ** – ಅತ್ಯಾಸೆ, ಲಾಂಪಟ್ಯ (ವಸಂತತಿಳಕೆ ನಿಜಾಂಬಿಕೆಯ ಮನದ ಧನದ ಲಂಪಳತೆಯನಳುಂಬಮಂ ಕಂಡು: **ಕರ್ಣನೇಮಿ,** ೪. ೬೧ ವ)

**ಲಂಪಳಿ** – ಲಂಪಟತೆ (ಆಂ ಎನ್ನ ಸಾಹಸದ ಲಂಪಳಿಯೊಳ್ ಇಂತಪ್ಪದನರಯ್ಯದೆ ನೆಗಟ್ದೆಂ ಇದೆಲ್ಲಂ ಎನ್ನ ದೋಷಂ: **ಹರಿವಂಶ,** ೪. ೩೬ ವ)

**ಲಂಪಳಿಕೆ** – ಲಂಪಟತೆ (ಬಿಸುಡಂ ಮುನ್ನಿನ ತನ್ನ ಲಂಪಳಿಕೆಯಂ ಮತ್ತಂ ಜರಾಜರ್ಜರಂ: **ಆದಿಪು,** ೨. ೪೫)

**ಲಂಬ** – ಜೋಲುಬಿದ್ದಿರುವ (ಉತ್ತುಂಗ ಪೀನನಿಜಾಂಸಾರ್ಪಿತ ಲಂಬಹಾರನವನಾ ಪಾಂಡ್ಯಂ: **ಪಂಪಭಾ,** ೩. ೫೪)

**ಲಂಬಣ** – ಕುಚ್ಚು (ಸರಿಗೆಗಿವು ಲಂಬಣಕ್ಕಿವು ಬರಗಲೆಗಿವು ಮುಗುಳ್ಗಳೆಮ್ಮ ಮೇಖಳೆಗಿವು ನೂಪುರರಚನೆಗಿಂತೆವೆಂದು ಅದರದಿಂದಂ ಕೊಯ್ದರಾಯ್ದು ದಿವಿಜಾಂಗನೆಯರ್: **ಆದಿಪು,** ೭. ೬೯); ಹಾರ (ಬಳಸಿ ತೊನೆವ ಪಸುರ್ವರಲ ಲಂಬಣಮಾಲೆಯ .. .. ಕುಸುಮಮಾಲಿಕೆಯ: **ರಾಜಶೇವಿ,** ೧೩. ೪೫ ವ)

**ಲಂಬಣಿಗೆ** – ಲಂಬಣ (ಮಣಿಮುಕುಟಂ ಶಿಖರಂ ಲಂಬಣಿಗೆಯ ಪೊಸಮುತ್ತು ನಿರ್ಝರಂ ಮಣಿಕಟಕಂ ಮಣಿಕಟಕಮಾಗೆ ತದ್ಗಿರಿಗೆಣೆಯಾದಂ ತನ್ನ ಪೆಸರೊಳಂ ವಿಜಯಾರ್ಧಂ: **ಆದಿಪು,** ೧೩. ೧೩)

**ಲಂಬಳಿಗೆ** – ಮುತ್ತಿನ ಸರ (ಆಳಂಬಮಾನ ಮುಕ್ತಾಜಾಳದ ಲಂಬಳಿಗೆಯಿಂ ಬೆಡಂಗಾಗಿಕ್ಕುಂ: **ವರ್ಧಮಾಪು,** ೩. ೮೯)

**ಲಂಬಿಸು** – ಜೋತಾಡು (ಸೋರ್ಮುಡಿ ಲಂಬಿಸೆ ಕರ್ಣಪೂರಿತ ಉತ್ಪಳಂ ಒಲೆದಾಡೆ ಗಟ್ಟಿಗಳನಂದು ಮುಗುಳ್ಚಿದರ್ ಇಂದುವಕ್ತ್ರೆಯರ್: **ಗಿರಿಜಾಕ,** ೨. ೯೦)

**ಲಂಬೂಷ** – ಏಳು ಎಳೆಗಳ ಹಾರ (ಮುಕ್ತಾಫಳಲಂಬೂಷಂಗಳಂ ಬಿತ್ತರಿಸನವರತಂ ರಂಗದೊಳ್ .. ... ರಯ್ಯಮಾಯ್ತತ್ತಮಿತ್ತಂ: **ಆದಿಪು,** ೧೦. ೪೭)

**ಲಂಬೋದರ** – ಡೊಳ್ಳುಹೊಟ್ಟೆಯವನು )ಲಂಬೋದರಂ ಲಂಬಕೂರ್ಚಕಲಾಪಂ ಸಿತಕಂಚುಕಂ ತ್ವರಿತದಿಂ ಬಂದಂ ಪ್ರತೀಹಾರಕಂ: **ಪಂಪರಾ,** ೨. ೨)

**ಲಂಭೂಷ** – ಲಂಬೂಷ, ಒಂದು ಆಭರಣ. ಸರ (ಮಣಿಕಿಂಕಿಣೀ ಮಣಿವಿತಾನ ಲಂಭೂಷ ಭೂಷಣಮಂ ರತ್ನವಿಮಾನಮಂ ಭರತನುಂ ಶತ್ರುಘ್ನನುಂ ರಾಮಲಕ್ಷ್ಮಣರುಂ ತನ್ನೊಡನೇಜೆ ಬರೆ: **ಪಂಪರಾ,** ೬. ೪೩)

**ಲಕುಚ** – ಕಂಚಿ ಗಿಡ (ಲಕುಚ ಅಶೋಕ ತಮಾಳ ಶಾಲ ಕದಳೀ ಸಪ್ತಚ್ಛದ ಆಕ್ಷೋಟ ಚಂಪಕ .. .. ಪಾದಪಂ ಕಣ್ಗೊಪ್ಪುಗುಂ ಸುತ್ತಲುಂ: **ವರ್ಧಮಾಪು,** ೧. ೫೧)

**ಲಕುಟ** – ದೊಣ್ಣೆ (ಅವರ ಶಿರಂಗಳಂ ಕಿರಾಟಂ ಲಕುಟದಿಂ ಬಿರಿಯೆ ಪೊಯ್ಯಲ್: **ಪಂಚತಂತ್ರ,** ೨೬೧ ವ)

**ಲಕುಟಯಷ್ಟಿ** – ದೊಣ್ಣೆಕೋಲು (ಪಾಪಸತ್ವಂಗಳ್ ಕಾಡೆ ಲಕುಟಯಷ್ಟ್ಯಾದಿವಿಧಿಯನುಪದೇಶಂಗೆಯ್ದಾತಂ ಕ್ಷೇಮಂಧರನೆಂಬ ಪೆಸರಂ ಪಡೆದಂ: **ಆದಿಪು,** ೬. ೫೬ ವ)

**ಲಕ್ಕ** – ಲಕ್ಷ ಎಂಬ ಸಂಖ್ಯೆ (ಪಟ್ಟಂಗಟ್ಟಿದ ಇಳಾಧಿನಾಥರೆ ಪಯಿಂಛಾಸಿರ್ವರ್ ಒಳ್ಳಾನೆಗಳ್ ಪಟ್ಟಂಗಟ್ಟಿದುವು ಒಂದು ಲಕ್ಕ ತುರಗಂ ಪತ್ತೆಂಟು ಲಕ್ಕಂ: **ಪಂಪಭಾ,** ೧೦. ೧೧೭)

**ಲಕ್ಕಂಬಡೆ** – ನೂರು ಸಾವಿರ [ಒಂದು ಲಕ್ಷ] ಬೆಲೆಬಾಳು (ತೊಡವೆನಗಪ್ಪೊಡೆ ಲಕ್ಕಂಬಡೆದುವು ಪಲವೊಳವು ನಂಬೆಯಪ್ಪೊಡೆ ನೋಡೀಗಡೆ: **ಧರ್ಮಾಮೃ,** ೨. ೭೭)

**ಲಕ್ಕಚಣ** – ಒಂದು ಆಯುಧ (ಸುಲಿಪಲ್ಲಂ ಮೆಱೆವ್ವೆ ಪರಲಲನೆಯರ್ಗಂದಿಕ್ಕುಟ್ಟಿಂದೆ ಕೀಟ್ವರ್ ಪಲ್ಲಂ ಸಲೆ ಕಣ್ಣಂ ಕೆತ್ತುವೆಯೆಂದು ಲಕ್ಕಚಣದಿಂದೆ ಮೀಂಟಿ ಕಳೆವರ್ ಕಣ್ಣಂ: ಪಾರ್ಶ್ವನಾಪು, ೬. ೯೦)

**ಲಕ್ಕಣ** – ಲಕ್ಷಣ (ಬೂದಿ ಜೆಡೆ ಲಕ್ಕಣಂ ತಪಕೆ ಆದುವು ಎರಟಿರ್ದೊಣೆ ಶರಾಸನಂ ಕವಚಂ ಇದೆಂತಾದುವೋ ಮುತ್ತುಂ ಮೆಟಸುಂ ಕೋದಂತುಟೆ ನಿನ್ನ ತಪದ ಪಾಂಗೆಂತು ಗಡಾ: **ಪಂಪಭಾ,** ೭. ೯೨); ದುರ್ಯೋಧನನ ಮಗನ ಹೆಸರು (ಲಕ್ಕಣಂ ಮೊದಲಾಗೆ ನೂರ್ವರ್ ಮಕ್ಕಳುಂ ಸಿತ್ತಿಜೆದು ಬಳಸಿ ಬರೆ: **ಪಂಪಭಾ,** ೧೦. ೨೭ ವ)

**ಲಕ್ಕೆ** – ಲಕ್ಷ ಸಂಖ್ಯೆ (ತುಱುಗಿದ ನಾಲ್ಕುಂ ಲಕ್ಕೆಯುಂ ಅಱುವತ್ತು ಸಾಸಿರಂಗಳಿಂ ಮೇಲಯ್ನೂರಱುವತ್ತುಪದ್ವಜಂ ಕೈನಿಜೆದವು ಭಾರತಿಕನಾಗೆ ಮಂದಸಮೀರಂ: **ಮಲ್ಲಿನಾಪು,** ೧೪. ೧೧೬)

**ಲಕ್ಷ** – ನೂರು ಸಾವಿರ (ಪೆಣ್ಗೆ ಗಂಡರೇಂ ಪಸನೆ ಸುಡಾತನಂ ನುಡಿಯವೇಡ ಅವನೇವನೊ ಲಕ್ಕವೀವೊಡಂ: **ಲೀಲಾವತಿ,** ೨. ೭೪)

**ಲಕ್ಷಣ** – ಗುರುತು (ಅಂಕಂ ಲಕ್ಷನಂ ಅದುವೆ ಕಳಂಕ ಅಭಿಜ್ಞಾನ ಚಿಹ್ನ ಲಾಂಛನ: **ಅಭಿಧಾವ,** ೧. ೧. ೬೯); ಸೂತ್ರ, ವ್ಯಾಖ್ಯೆ (ನೆಲಸಿದ ಕಾವ್ಯಂ ಕಾವ್ಯಕ್ಕೆ ಲಕ್ಷಣಂ ಸತತಂ: **ಕವಿರಾಮಾ,** ೧. ೪೮); ದುರ್ಯೋಧನನ ಮಗ ತನ್ನ ಮಗನಪ್ಪ ಲಕ್ಷಣಕುಮಾರನಂ ಕಂಡು: **ಗದಾಯು,** ೪. ೫೯ ವ)

**ಲಗ್ಗೆ** – ಮುತಿಗೆ, ದಾಳಿ (ಮೆಯ್ವತ್ತಿ ಲಗ್ಗೆಯಂ ಮುಟ್ಟಾಳ್ಗಳಂ ದುರ್ಗದವರ್ಗಳ್ ನುರ್ಗುಮಾಡೆ ನಾಡೆಯುಂ ಸಿಗ್ಗಾಗಿ: **ಪಾರ್ಶ್ವನಾಪು,** ೩. ೧೪೧ ವ)

**ಲಘು** – ಅಲ್ಪವಾದ (ಅತೀವ ಜಘನ್ಯಶರೀರಮಂ ಕೈಕೊಂಡು ಪುಟ್ಟಿ ಮತ್ತಮಾಯೆಡೆಯೊಳ್ ಪಲವುಂ ಸೂಟ್ ಲಘುಜನ್ಮಾವಗಾಹದಿಂ ಪುಟ್ಟಿ ಸತ್ತು: **ಸುಕುಮಾಚ,** ೬. ೬ ವ); ಕ್ಷುಲ್ಲಕವಾದ (ಅಧಿಕ ಸತ್ವಗುಣೈಕಾಗ್ರಣಿಗೆ ನೃಪಂಗೆ ಮನದೊಳ್ ತೃಣವತ್ ಲಘುವಾದುದಾವಗಂ ಸ್ತ್ರೈಣಸುಖಂ: **ಕಾದಂಬ,** ೧. ೧೭)

**ಲಜ್ಜಾಶೀಲ** – ನಾಚಿಕೆಯ ಸ್ವಭಾವದ (ಲಜ್ಜಾಶೀಲಂ ಲಜ್ಜಾಲು: **ಅಭಿಧಾವ,** ೧. ೧೧. ೭೬)

**ಲಟ್ಟೆ** – ಎಳೆಯ ಬಿದಿರು (ಎಳೆಮಾವಿನ ಮಿಡಿ ಮಾಗುಳಿ ಮೆಟಸಿನ ಕರೆ ಬೆತ್ತ ಲಟ್ಟೆಯ ಈಳೆಯ ಗೊಲೆಯಿಂದಳವಟ್ಟಿರೆ ಲಾವಣಕಂಗಳನಿಕ್ಕಿದರಾಗಳ್ ಅಟ್ಟೆಯಿಂದಂಗನೆಯರ್: **ಸುಕುಮಾಚ,** ೧೦. ೩೦)

**ಲಡ್ಡುಕಾ** – ಲಾಡು (ಮುನಿಗೆ ತಮಗೆಂದು ತಂದ ಲಡ್ಡುಕಾ ರೂಪಾದಿಗಳಂ ಚರಿಗೆ ಮಾಡಿಸಿ: **ಚಾವುಂಪು,** ಪು. ೪೫೪. ಸಾ. ೧೫)

**ಲಡ್ಡುಗೆ** – ಒಂದು ಸಿಹಿ ಭಕ್ಷ್ಯ (ಪೂರಿಗೆ ಇಡ್ಡಲಿಗೆ ಸೋದಿಗೆ ಲಾವಣಿಗೆ ಘೃತಪೂರಂ ಲಡ್ಡುಗೆ ಮಂಡಗೆ ಮೊದಲಾಗೊಡೆಯ ಪದಿನೆಂಟುಂ ತೆಱದ ಭಕ್ಷ್ಯರೂಪಂಗಳುಮಂ: **ವಡ್ಡಾರಾ,** ಪು ೭೮ ಸಾ ೧೬)

**ಲತಾಂಗ** – (ಸ್ಮರಶರಕಾಂತೆ ಕತ್ತಲೆಯ ಜೊನ್ನದ ಪೊರ್ಕುಳಿಯಂ ನಿವಾರಿಸಲ್ಕಿರದೆ ಎಡೆವೊಕ್ಕಳೆಂದೆನೆ ಲತಾಂಗದ ಸೌರಭದೊಂದಲಂಪು ಮಿಕ್ಕಿರೆ: **ಶಾಂತೀಶ್ವಪು,** ೨. ೧೭)

**ಲತಾಂತ** – ಹೂ (ಅಮರಗಣಿಕೆಯರ ಮನಂ ವಿರುವತ್ ಅಳಿನಿಕರದೊಡನಿರದೆ ಎಱಗಿದುವು ಅಮರತರು ಲತಾಂತಾವಳಿಯೊಳ್: **ಆದಿಪು,** ೭. ೬೮)

**ಲತಾಂತಶರ** – ಮನ್ಮಥ (ವಿಳಾಸವಿಭ್ರಮಂ ಮನಮಂ ನಿರ್ಬಂಧದಿನಲೆಯೆ ಲತಾಂತಶರಂ ಧೃತಿಯಂ ತೂಳ್ದೆತಾಳ್ದಿದಂ ವಿಕಳತೆಯಂ: **ಪಾರ್ಶ್ವನಾಪು,** ೩. ೭೮)

**ಲತಾಗೃಹ** – ಬಳ್ಳಿಮಾಡ (ವನಲತಾಗೃಹಂಗಳೊಳ್ ವಿಶ್ರಮಿಸುತ್ತೆ: **ಪುಷ್ಪದಂಪು,** ೮. ೮೮ ವ)

**ಲತಾವಾಸ** – ಲತಾಗೃಹ (ಸದಮಳ ಮುಕ್ತಾವಳಿಯಿಂ ಪೊದೆಯಿಸಿದನೊ ಚೈತ್ರನೆನೆ ತದೀಯಲತಾವಾಸದ ವಿಚಕಿಲಕುಟ್ಮಲ ವಿಸರದ ಪದಪು ಅದಂ ದೇವಿ ನಾಡೆ ನೋಡುತ್ತಿರ್ದಳ್: **ಶಾಂತೀಶ್ವಪು,** ೫. ೧೨೫)

**ಲತಿಕಾಗೃಹ** – ಲತಾಗೃಹ (ಓರೊರ್ಮೆ ಸುರಭಿಪರಿಮಳೋದ್ಗಾರಿ ಸ್ಮೇರಕುಸುಮಮಂಜರೀನಿಕರಭರವಿನ ಲತಿಕಾಗೃಹಂಗಳೊಳ್ ಭ್ರಮರಮಿಥುನದಂತೆ ಪುಷ್ಪಾಪಚಯದಿಂ ಭ್ರಮಿಸಿಯುಂ; **ಚಂದ್ರಪ್ರಪು,** ೩. ೨೮ ವ)

**ಲತಿಗ** – ಒಂದು ಬಗೆಯ ಮೀನು (ಗಜೆಮೀನ್ ಸೀಗುಡಿ .. .. ಕುಚ್ಚ ಲತಿಗಂ ಕಾಗೆಂಡೆ .. .. ಬಣ್ಣಮೀನ್ ಎನಿಪ್ಪಲ್ಲಂ ಬೀಳ್ವುವಾ ತಾಣದೊಳ್: **ರಾಜಶೇವಿ,** ೫. ೧೧೫)

**ಲತೆ** – ಬಳ್ಳಿ (ಲತೆಗಳ್ ಜಂಗಮರೂಪದಿಂದೆ ನೆರದುವೋ ದಿವ್ಯಾಪ್ಸರೋವೃಂದಂ ಈ ಕ್ಷಿತಿಗೇಂ ಇಂದ್ರನ ಶಾಪದಿಂದ ಇಟಿದುವೋ ಪೇಟೆಂಬ ಶಂಕಾಂತರಂ ಮತಿಗಂ ಪುಟ್ಟುವಿನೆಗಂ: **ಪಂಪಭಾ,** ೪. ೩೯)

**ಲತೆವನೆ** – ಲತಾಗೃಹ (ಲತೆವನೆಯೊಳಗಣ ತಣ್ಬುಟಿಲ ತಾಣದೊಳ್ ಕುಸುಮದೆಸಟ ಪಸೆಯಂ ಸೀತಾಪತಿಗೆ ಸಮೆದಂ ಸುಮಿತ್ರಾಸುತಂ: **ಪಂಪರಾ,** ೮. ೩)

**ಲಪನ** – ಮುಖಸೌಂದರ್ಯ (ನಗರಲಲನೆಯ ಲಪನಕ್ಕೆ ಕೇಳೀಲೀಲಾಲಲಾಮಲಕ್ಷ್ಮಿಯಂ ತಾಳ್ದಿ: **ಆದಿಪು,** ೬. ೧೦೬ ವ)

**ಲಪನಗಂಧ** – ಬಾಯವಾಸನೆ (ಲಪನಗಂಧಮನಳಿಗೆ ಚಪಲತೆಯನರಗಿಳಿಗೆ ಸೋಗೆಗಾಟಮನಿತ್ತು: **ಲೀಲಾವತಿ,** ೬. ೧೧೫)

**ಲಬ್ಧ** – ಸಿಕ್ಕಿದ (ಸ್ವಪಕ್ಷ ಸ್ಥಾಪನಂಗೆಯ್ದು ಸನ್ಮಾರ್ಗ ಪ್ರಕಾಶದಿಂ ಮಾರ್ಗಪ್ರಭಾವನೆಯಂ ಮಾಡಿ ಸಭಾಸದರಿಂ ಲಬ್ಧಪ್ರಶಂಸನಾಗಿ: **ಆದಿಪು,** ೨. ೨೨ ವ)

**ಲಬ್ಧಪರಿರಕ್ಷಣ** – ಪಡೆದುದನ್ನು ಕಾಪಾಡಿಕೊಳ್ಳುವುದು (ಅಲಬ್ಧಲಾಭಂ ಲಬ್ಧಪರಿರಕ್ಷಣಂ ರಕ್ಷಿತವಿವರ್ಧನಂ ವರ್ಧಿತತೀರ್ಥಪ್ರತಿಪಾದನಂ ಎಂಬ ಚತುರ್ವಿಧ ಪುರುಷಾರ್ಥವೃತ್ತಿಯಾಗಿರ್ಪುದು: **ಪಂಚತಂತ್ರ,** ೭೫ ವ)

**ಲಬ್ಧಿ** – [ಜೈನ] ಮೋಕ್ಷಪೂರ್ವಜ್ಞಾನ (ಲಬ್ಧಿ ಕೂಡೆ ಸನ್ಮಾರ್ಗಮಂ ಆದಂ ಸೂಕ್ತದತ್ತಣಜೆವಿಂದಂ ಸಮ್ಯಕ್ ದೃಷ್ಟಿಯಾಗಿ ತಪಮಂ ಕೊಂಡಂ: **ಸಮಯಪ,** ೮. ೧೯೪)

**ಲಬ್ಧಿಗ್ರಹಣ** – ಸಮ್ಯಕ್ತ್ವ ಪಡೆಯುವುದು (ಜಿನದೀಕ್ಷಾಗ್ರಹಮಂ ಪಡೆದಳ್ ಲಬ್ಧಿಗ್ರಹಣದಿನೊಳ್ಪುವಡೆವುದೊಂದಚ್ಚರಿಯೇ: **ಪಂಪರಾ,** ೨. ೨೫)

**ಲಬ್ಧಿತ್ರಯ** – [ಜೈನ] ಕಾಯ, ಕರಣ, ಉಪಶಮ ಎಂಬ ಮೂರು ಲಬ್ಧಿಗಳು (ಅಂತು ತನಗೆ ಕಾಲಲಬ್ಧಿಯುಂ ಕರಣಲಬ್ಧಿಯುಂ ಉಪಶಮಲಬ್ಧಿಯುಂ ಎಂಬ ಲಬ್ಧಿತ್ರಯಂ ದೊರೆಕೊಳೆ: **ಆದಿಪು,** ೩. ೧ ವ)

**ಲಬ್ಧಿಬುದ್ಧ** – [ಜೈನ] ಸಮ್ಯಕ್‌ಜ್ಞಾನಿ (ಅನುಕೂಲಕನುವಂ ಆಲಸ್ಯನುಂ ಅವಕಾರ್ಯನುಂ ಲಬ್ಧಿಬುದ್ಧಸದೃಶನುಂ: **ಅಜಿತಪು,** ೧೧. ೩ ವ)

**ಲಬ್ಧಿವಿಹೀನ** – ಕಾಲಲಬ್ಧಿ ಇಲ್ಲದವನು (ಕುದೃಷ್ಟಿಯಂ ಕಂಡಿನಿಸುಂ ಮುಟೆಯಂ ಲಬ್ಧಿವಿಹೀನಂ .. .. ದರ್ಶನಶುದ್ಧಂ: **ಸಮಯಪ,** ೧೩. ೫೬)

**ಲಬ್ಧೋಪದೇಶ** – ಉಪದೇಶ ಪಡೆದವನು (ನೀಂ ಪೋಗಿ ಕಾಲ್ಗೆಱಗಲೊಡಂ ಕೇವಲಜ್ಞಾನಮಕ್ಕುಂ ಎಂದು ಬೆಸಸಿದೊಡೆ ಲಬ್ಧೋಪದೇಸನಾಗಿ .. .. ಬಂದೆಱಗಿ: **ಆದಿಪು,** ೧೪. ೧೪೩ ವ)

**ಲಯ** – ನಾಶ (ಆದಿತ್ಯಂ ಮಸುಳ್ವನ್ನೆಗಂ ಧ್ವಜಘಟಾಟೋಪಂಗಳಿಂದಂ ಲಯ ಅಂಭೋದಂಗಳ್ ಕವಿವಂತೆವೋಲ್ ಕವಿವುದುಂ ಕಾಲ್ಗಾಪು ಕಾಲ್ಗಾಪಿನೊಳ್ ಜೋದರ್ ಜೋದರೊಳ್ .. .. ಅಗುರ್ವಪ್ಪನ್ನೆಗಂ: **ಪಂಪಭಾ,** ೧೦. ೯೩); ತಾಳಗತಿ (ವಾದಿತದೊಳ್ ತಾಳದ ಸಮನಾದುದು ಲಯಮೆಂಬುದೊಂದು ಪೆರ್ವಡೆಗು: **ಅಭಿಧಾವ,** ೧. ೧೩. ೨೪)

**ಲಯಕಾಲ** – ವಿನಾಶಕಾಲ, ಪ್ರಳಯ (ನಿನ್ನಂ ಹಡಿಂಬಾಂತಕಂ ಲಯಕಾಲ ಅಂತಕನಂತೆ ಕೊಲ್ಲದಿರಂ: **ಗದಾಯು,** ೪. ೬೬)

**ಲಯಘನಘಟೆ** – ಪ್ರಳಯಕಾಲದ ಮೋಡಸಮೂಹ [ಘಟೆಯ ದಟಿದ ಉಲಿವು ಲಯಘನಘಟೆಗಳ ಮೊಟಗೆನಿಸೆ ಪೊಟ್ಟಗೆ ಒಡೆದತ್ತು ರಟತ್ ಪಟು ಪಟಹ ಶಂಖ ಭೇರಿಯ ಚಟುಳಿತದಿಂದ ಅತಳಪಟಂ ಅಂಬರಪಟಳಂ: **ಪಂಪಭಾ,** ೧೦. ೬೭)

**ಲಯತ್ರಯ** – ದ್ರುತ, ಮಧ್ಯಮ, ವಿಲಂಬಿತ ಎಂಬ ಮೂರು ಲಯಗಳು (ಹೃದ್ಯವಾದ್ಯವಿಶೇಷಂಗಳೊಳ್ .. .. ದ್ರುತವಿಲಂಬಿತಮಧ್ಯಮಮೆಂಬ ಲಯತ್ರಯದೊಳಂ .. .. ನೆಱೆದು: **ಅಜಿತಪು,** ೫. ೩೨ ವ)

**ಲಯಸಮಯ** – ಲಯಕಾಲ (ಲಯಸಮಯಂ ಸಮಸಂಸುಪ್ತಿ ಯುಗಾಂತಂ ವಿಳಯಂ ಅಂತಕಾಲಂ: **ಅಭಿಧಾವ,** ೧. ೨. ೧೭)

**ಲಯಾಂತಕ** – ಪ್ರಳಯಕಾಲದಂತೆ ವಿನಾಶಕಾರಕವಾದ (ಲಯಾಂತಕಘೋಷಭೀಷಣಂ ಪುರದೊಳಗುಣ್ಮಿದತ್ತು ಭಯವಿಹ್ವಲಪೌರಕೃತಂ ಮಹಾರುತಂ: **ಚಂದ್ರಪ್ರಪು,** ೯. ೯೫); ಪ್ರಳಯಕಾಲದ ಯಮ (ಪೊದಳ್ದ ಲಯಾಂತಕ ತ್ರಿಶೂಲೋಪಮ ಭೀಷಣಭ್ರುಕುಟಿ ಮುನ್ನಮೆ ರೌದ್ರ ಗದಾಯುಧಡಂಬರಂ ಪೋಪ ಭುಜಾರ್ಗಳಂ ರಿಪುಗಳ ಗ್ರಹಮಾದುದು ಭೀಮಸೇನನಾ: **ಪಂಪಭಾ,** ೭. ೬)

**ಲಯಾಗ್ನಿ** – ಪ್ರಳಯಕಾಲದ ಬೆಂಕಿ (ಕಾನನದುರ್ಗಕ್ಕೆ ಮಹಾದವಾಗ್ನಿ ಜಲದುರ್ಗಕ್ಕೆ ಉರ್ವಿದೌರ್ವಾಗ್ನಿ ಧಾನ್ವದುರ್ಗಕ್ಕೆ ಬೃಹತ್ ಲಯಾಗ್ನಿ ಎನೆ .. .. ನೃಪಸುತಂ ವಿಕ್ರಾಂತಮಂ ತೋಱಿದಂ: **ಪುಷ್ಪದಂಪು,** ೫. ೫೧)

**ಲಲನಾ[ನೆ]** – ಹೆಂಗಸು (ಪ್ರಮದೆ ನಿತಂಬಿನಿ ಭಾಮಿನಿ ರಮಣಿ ವರಾರೋಹೆ ರಾಮೆ ವಾಮಾಕ್ಷಿ ಮನೋರಮೆ ಲಲನೆ ಕಾಂತೆ ಎಂದಿಂತು ಮತ್ತಂ ಅಬಲಾವಿಶೇಷಮುಂ ತಾಮಕ್ಕುಂ: **ಅಭಿಧಾವ,** ೧. ೧೧. ೨)

**ಲಲಾಟ** – ಹಣೆ (ವಿಲಾಸದಿಂದ ಎಡದ ಉಂಗುಟಮಂ ಲಲಾಟದಿಂ ಮುಟ್ಟೆ ಪೊಡೆಮಟ್ಟು ನಿಂದು: **ಗಿರಿಜಾಕ,** ೫. ೪೨ ವ)

**ಲಲಾಟನೇತ್ರ** – ಹಣೆಯ ಕಣ್ಣು (ಮುಳಿಸು ಲಲಾಟನೇತ್ರಶಿಖಿ ಮೆಚ್ಚೆ ವಿನೂತ ರಸಪ್ರಸಾದಂ ಉಜ್ವಳಜಸಂ ಅಗಸಂಗತ ಲಸತ್ ಭಸಿತಂ ಪ್ರಭುಶಕ್ತಿ ಶಕ್ತಿ ನಿರ್ಮಳಮಣಿಭೂಷಣಂ ಫಣಿಭೂಷಣಂ ಆಗೆ ನೆಗಟ್ತೆಯಂ ಪುದುಂಗೊಳಿಸಿದಂ ಈಶ್ವರಂ ನೆಗಟ್ದ ಉದಾರಮಹೇಶ್ವರಂ ಈಗೆ ಭೋಗಮಂ: **ಪಂಪಭಾ,** ೧. ೨); ಶಿವ

**ಲಲಾಟಪಟ್ಟ** – ಹಣೆ (ಜ್ವಲನಜಟಿ ಮಹಾರಾಜಂ ಮಹೀತಲಾಲಿಂಗಿತಲಲಾಟಪಟ್ಟನಾಗಿ ವಿನಯದಿಂ ಕಾರ್ಯಮಂ ಬಿನ್ನವಿಕ್ಕಿ: **ಶಾಂತೀಶ್ವಪು,** ೨. ೧೦೧ ವ)

**ಲಲಾಟಿಕಾ[ಕೆ]** – ಹಣೆಯ ಬೊಟ್ಟು, ತಿಲಕ (ತಿಳಕಂ ತಮಾಲಪತ್ರಂ ಲಲಾಟಿಕಾಖ್ಯಂ: **ಅಭಿಧಾವ,** ೧. ೧೩. ೯)

**ಲಲಾಮ** – ತಿಲಕ, ಬೈತಲೆ ಮಣಿ (ಆ ವತ್ಸವಿಷಯಂ .. .. ಭೂಲಲನಾವದನ ಲಲಾಮಮೆಂಬಿನಂ ಸೊಗಯಿಸುಗುಂ: **ಸುಕುಮಾಚ,** ೧. ೭೦); ಶ್ರೇಷ್ಠ (ಲಲಾಮದೊಳ್ ಕುರುಳ್ ಸಲೆ ನಿಮಿರ್ದಾಡೆ ಬೆನ್ನ ದೆಸೆಯೊಳ್ ಕಬರಂ ತೊನೆದಾಡೆ: **ತ್ರಿಷಷ್ಟಿಪು,** ೨೪. ೧೮೩)

**ಲುಲಾಯ** – ಕೋಣ (ಮಗ್ಗುಲಿಕ್ಕಿರ್ದುದು ಮುನ್ನೀರಂ ನೀಲಾಚಲದಿಂ ಸಾರಂಗಟ್ಟಿದವೊಲಿರೆ ಬಟಲ್ದು ಲುಲಾಯಂ: **ಯಶೋಧಚ,** ೩. ೬೬)

**ಲಲಿತ** – ಸುಂದರವಾದ, ಕೋಮಲವಾದ (ಅತಿಸುಭಗೆಗೆ ಸಂದ ಸರಸ್ವತಿಗೀತನ ಲಲಿತ ವಾಗ್ವಿಳಾಸಮೆ ದಲ್ ಅಲಂಕೃತಿಯವೊಲೆಸೆದಪುದು: **ಆದಿಪು,** ೧. ೨೮), ಒಂದು ಅಕ್ಷರವೃತ್ತ ಹೆಸರು (ಹರಿಣೀ ಮತ್ತೇಭವಿಕ್ರೀಡಿತಂ ಲಲಿತ ಮಯೂರಾನ್ವಿತಂ .. .. ನಭಮಂ ಪೋಲ್ತು ಚೆಲವಾಯ್ತರಣ್ಯಂ: **ರಾಜಶೇವಿ,** ೫. ೭೫)

**ಲಲಿತಾಕಾರ** – ಸುಂದರ ದೇಹ (ಮಾರಿದತ್ತಂ ಲಲಿತಾಕಾರರ ಧೀರರ ಬಂದ ಕುಮಾರರ ರೂಪಿಂಗೆ ಠಕ್ಕುಗೊಂಡಂತಿರ್ದಂ: **ಯಶೋಧಚ,** ೧. ೫೮)

**ಲಲ್ಲಯಿಸು** – ರಮಿಸು (ನುಡಿದದು ಕಾತರಿಂದೆ ಕೂಡೆ ಲಲ್ಲೆಯಿಸದೆ .. .. ಬದ್ದೆಯನೊಲಿಪನಾವಂ: **ಸುಕುಮಾಚ,** ೭. ೧೩)

**ಲಲ್ಲೆ** – ಪ್ರೇಮ, ಸರಸ (ಎಂದು ಎನಿತಾನುಂ ತೆಱದೊಳ್ ಅಳಿಪಿನ ಲಲ್ಲೆಯ ಚೆಲ್ಲದ ಪುರುಡಿನ ಮುಳಿಸಿನ ನೆವದ ಪಡೆಮಾತುಗಳಂ ನುಡಿದುಂ ಕಾಲ್ವಿಡಿದುಂ ಅಚಳಿತಧೈರ್ಯನ ಮನಮಂ ಚಲಿಯಿಸಲಾಱದೆ: **ಪಂಪಭಾ,** ೭. ೯೪ ವ)

**ಲಲ್ಲೆಗೆಯ್** – ಲಲ್ಲಯಿಸು (ಪಕ್ಕಮಂ ಬಿರ್ಚಿ ಲಲ್ಲೆಗೆಯ್ದುತ್ತು ಪಾರಿವಂ ಪಾರಿವದೊಳ್: **ಗಿರಿಜಾಕ,** ೨. ೫೨)

**ಲಲ್ಲೈಸು** – ಮೆಚ್ಚಿಕೆಯ ಮಾತಾಡು (ಕುಡದಿರ್ ಪುರಿಗಣೆಯಂ ಎನಿತು ಲಲ್ಲೈಸಿದೊಡಂ: **ಪಂಪಭಾ,** ೯. ೭೮)

**ಲವ** – ಸ್ವಲ್ಪ (ಲವಧೃತಿಯಿಲ್ಲದೆ ಒರ್ಮೆಯುಂ ಅರಾತಿಭಯಕ್ಕೆ ಬಿಗುರ್ತು ಡಕ್ಕೆವಾಱುವ ನೃಪಯೂಧವಕ್ಷದೊಳಿರಲ್ಕೆ ಅಣಂ ಒಲ್ಲದೆ .. .. ಅತುಳಲಕ್ಷ್ಮಿ: **ಶಾಂತೀಶ್ವಪು,** ೪. ೭೯); ತುಂತುರು, ಹನಿ (ನೇಸಱೆಂದೊಳಗೆ ಆಂ ದಿನಕರಸುತನಂ ಇಕ್ಕಿ ಬಂದಲ್ಲದೆ ಕಾಣೆಂ ದಲ್ ಭವತ್ ಪದಾಬ್ಜಮಂ ಎಂದು ಎಟ್ಟಿಂ ಉದಶ್ರುಜಳ ಲವ ಆರ್ದ್ರ ಕಪೋಳಂ: **ಪಂಪಭಾ,** ೧೨. ೧೩೪)

**ಲವಣ** – ಉಪ್ಪು, ಒಂದು ರುಚಿ (ತುವರಂ ತಿಕ್ತಂ ಮಧುರಂ ಲವಣಂ ಕಟು ಕಾರಮೆಂದು ರಸಮಾಱು ತೆಱಂ; **ಅಭಿಧಾವ,** ೧. ೧೬. ೧೫)

**ಲವಣಜಳಧಿ** – ಉಪ್ಪುನೀರಿನ ಸಮುದ್ರ (ಲವಣಜಳಧಿ ಬಳಸಿದಂತೆ ಬಳಸಿದ ಅಗಟಿ ನೀಳದಿಂದ ಉದಗ್ರ ಕನಕಶಾಳದಿಂ: **ಪಂಪಭಾ,** ೧. ೫೮)

**ಲವಣಾಂಬುರಾಶಿ** – ಉಪ್ಪುನೀರಿನ ಸಮುದ್ರ (ಸುಟೆಯೊಳಗಿರ್ದು ಬೆಟ್ಟು ಪೊಱಪೊಣ್ಮುವಿನಂ ಲವಣಾಂಬುರಾಶಿ ಕುಕ್ಕುಟಿಗುದಿವಲ್ಲಿ ಕೂಟ್ಟುಗಿಯೆ ಮೇಗೆ ಸಿಡಿಲ್ದುಗುಳಂತೆ ಕೂಡೆ: **ಪಂಪಭಾ,** ೧೧. ೧೫೩)

**ಲವಣಿ** – ತಾಳ (ನೇರು ಲಾಗು ಲವಣಿ ಅಡಪು ತಿರುಪು ಕೈಮಱಿ ಕಳಾಸ ಕೂಟಮಾನಂಗಳಂ ಸಂಗಳಿಸಿ .. .. ತೋರ್ಪ ನರ್ತಕಿಯಿಂ: **ರಾಜಶೇವಿ,** ೫. ೧೯ ವ)

**ಲವಣೋದಧಿ** – ಉಪ್ಪುನೀರಿನ ಸಮುದ್ರ (ದ್ವಾದಶರಾಜಕಮೆಂಬುದಂ ಓದುಗಳೊಳ್ ಕೇಳಲಾದುದಲ್ಲದೆ ಕಾಣಲ್ಕಾದುದೆ ಲವಣೋದಧಿವೃತೆ ಮೇದಿನಿಯೊಳ್ ದೇವ ನಿನ್ನ ಪೆಸರೆಸೆವೆಡೆಯೊಳ್: **ಆದಿಪು,** ೧೪. ೧೪)

**ಲವಲಿಕೆ** – ಲವಲವಿಕೆ (ಪುಲಿ ನೀರುಣುತಿರೆ ಪಾತ್ತೆಕ್ಕಲವಂದಿ ತದೀಯ ವಿಪುಳಗಲವಿಗಳದಸ್ಯಗ್ಜಲದಿಂ ಬಗರಗೆ ತೀವಿದೊಡೆ ಲವಲಿಕೆಯಿನೂಡಿ ಪೋದುದೆಂದಱೆದರಸಂ: **ಲೀಲಾವತಿ,** ೬. ೪೬)

**ಲವಲೀ** – ಅರನೆಲ್ಲಿ (ಸರಳ ಲತಾ ಲಾಸ್ಯ ನಟಂ ಹರಿಣೀ ರೋಮಂಥ ಬಂಧುರಂ ಲವಲೀ ಮರ್ಮರ ಮುಖರಂ ಕರಿ ಕರ ಶೀಕರ ಶೀತಳಮೆಸಗಿದತ್ತರಣ್ಯ ಸಮೀರಂ: **ಪಂಪರಾ,** ೭. ೧೧೩)

**ಲವಳೀ** – ಅರನೆಲ್ಲಿ ಮರ (ತೀರಸ್ಥ ಲವಂಗ ಚೂತ ಲವಳೀ ಪುಷ್ಪಾಸವಾಸ್ವಾದಿತ ಉದಯುತೋನ್ಮಾದೆಯ: **ಆದಿಪು,** ೧. ೫೪)

**ಲವೋದ್ಗಮ** – ತುಂತುರುಹನಿ (ಸುಖಾಂಬು ಲವೋದ್ಗಮದೊಳ್ ವಿಚಾರಿಸಲ್ ಗಣಿದಮಿದೊಂದುಮಿಲ್ಲ: **ಆದಿಪು,** ३. ೭೧)

**ಲಸತ್** – ಹೊಳೆಯುವ (ಮುಳಿಸು ಲಲಾಟನೇತ್ರಶಿಖಿ ಮೆಚ್ಚೆ ವಿನೂತ ರಸಪ್ರಸಾದಂ ಉಜ್ವಳಜಸಂ ಅಗಸಂಗತ ಲಸತ್ ಭಸಿತಂ ಪ್ರಭುಶಕ್ತಿ ಶಕ್ತಿ ನಿರ್ಮಳಮಣಿಭೂಷಣಂ ಫಣಿಭೂಷಣಂ ಆಗೆ ನೆಗೆಟ್ಟೆಯಂ ಪುದುಂಗೊಳಿಸಿದಂ ಈಶ್ವರಂ ನೆಗಟ್ದ ಉದಾರಮಹೇಶ್ವರಂ ಈಗೆ ಭೋಗಮಂ: **ಪಂಪಭಾ,** ೧. ೨)

**ಲಸಿತ** – ಹೊಳೆಯುವ (ಸುಮನಸ್ಸಮೂಹ ಲಸಿತಂ ಕಲ್ಪದ್ರುಮಂ ಎಂಬಂತೆ .. .. ಎಸೆದಂ .. .. ಸ್ಯಾದ್ವಾದವಿದ್ಯಾಧಿಪಂ: **ಧರ್ಮಪ,** ೧. ೨೦)

**ಲಹರಿ** – ಅಲೆ (ಪೀಯೂಷಪಯೋಧಿ ಪೂರಲಹರೀಸಂತಾನದಿಂ ಚೆಲ್ವುವೆತ್ತುದೊ: **ಕಾದಂಸಂ,** ೪. ೨೯)

**ಲಹರಿಕೆ** – ಲಹರಿ (ಕುಪಿತ ಮರುತ್ಸುತರವಕೆ ಅಳ್ಕಿ ಪಯಶ್ಚರ ನಿಕರಸಂಭ್ರಮೋಲ್ಲಹರಿಕೆ ಭಾವಿಪೊಡೆ ಪಾಱುವಂತಾಯ್ತು ಕಮಲಜಾಂಡಂಬರಂ: **ಗದಾಯು,** ೭. ೨೦)

**ಲಹರೀಜಾಲ** – ಅಲೆಗಳ ಸಾಲು (ಏಂ ಬಗೆವಂದುದೋ ರವಿಬಿಂಬಮನೊಳಕೊಂಡು ಪೊಳೆವ ಪರಿವೇಷದವೋಲ್ ಜಂಬೂದ್ವೀಪಮನೊಳಕೊಂಡ ಅಂಬುಧಿ ರತ್ನಾಂಶುಲೋಲ ಲಹರೀಜಾಲಂ: **ಮಲ್ಲಿನಾಪು,** ೧. ೬೦)

**ಲಳಿ** – ಕೌಶಲ (ಲಳಿ ಲುಳಿ ಧಾತು ರೀತಿ ಗತಿಯೋಜೆ ಬಜಾವಣೆ ಠಾಯ ಸುಟ್ಟಿ ಕೋಮಳ ವಳಿ ಲಾಗು .. .. ಸಂಗಳಿಸೆ ಸುಕಂಠೆ ಪಾಡಿ ಪುದಿದಳ್ ಮುದಮಂ ನರನಾಥ ಚಿತ್ತದೊಳ್: **ಕುಸುಮಾಕಾ,** ೧. ३೭);ಅಲೆ (ಭಂಗಂ ಲಹರಿಕೆ ವೀಚಿ ತರಂಗಂ ಲಳಿಯೆಂಬಿವು ಊರ್ಮಿ ಪರ್ಯಾಯಂಗಳ್: **ಅಭಿಧಾವ,** ೧. ೪. ३)

**ಲಳಿತ** – ಲಾಸ್ಯ, ಒಂದು ಬಗೆಯ ನೃತ್ಯ (ಅಳಿನಿನದದ ಮದಕೋಲಿಳ ಕಳನಿನದದ ಜತಿಯೊಳಬೀನಯಮಂ ನೆಗೆಟ್ವೆನೆಗಂ ಲಳಿತಮನೇಡಾಡಿಸಿದನೊ ಮಳಯಾನಿಳ ನರ್ತಕಂ ಲತಾನರ್ತಕಿಯಾ: **ಆದಿಪು,** ೧೧. ೯३)

**ಲಾಂಗಲ** – ನೇಗಿಲು (ಇರೆ ವಾಮಹಸ್ತದೊಳ್ ಬಿಲ್ ತಿರುವಂ ಗೊಲೆಗೊತ್ತಿ ಚಕ್ರಮಂ ಚೆಲ್ಲಿಸುವೆಂ ಬರಲೀಯೆಂದು ಲಾಂಗಲ ಶರಂಗಳಂ ಪಿಡಿದು ಪವನನಂದನನಿರ್ದಂ: **ಪಂಪರಾ,** ೧೪. ೧೮೦)

**ಲಾಂಗಲಪಾಣಿ** – ಬಲರಾಮ (ಲಾಂಗಲಪಾಣಿಯೊ ದಂಡಪಾಣಿಯೊ ತಾಳಪತಾಕನೋ ಪ್ರಳಯಧೂಮ ಪತಾಕನೋ ತಾನೆನಲ್ .. .. ತೋಱೆದಂ: **ಜಗನ್ನಾವಿ,** ೮. ३೮)

**ಲಾಂಗಲಿ** – ಲಾಂಗಲಹಸ್ತ, ಬಲರಾಮ (ಅರುಣಾಧರ ಪಾಂಡುರದಶನರುಚಿರಗಳಂ ಆನನದಿನೊಗೆಯೆ ಲಾಮಗಲಿ ನುಡಿದಂ: **ಜಗನ್ನಾವಿ,** ೧೫. ೫೦)

**ಲಾಂಗೂಲ** – ಬಾಲ (ಚಮರೀ ಲೋಲ ಲಾಂಗೂಲ ಮಾಲಾವಲಿ ವಿಕ್ಷೇಪಂಗಳಿಂ ತತ್ ಚಮರರುಹ ಮಹಾಶೋಭೆ ಕೈಗಣ್ಮೆ: **ಪಂಪಭಾ,** ೪. ೧೪)

**ಲಾಂಛನ** – ಚಿಹ್ನೆ (ಅಂಕಂ ಲಕ್ಷಣಂ ಅದುವೆ ಕಳಂಕಾಭಿಜ್ಞಾನ ಚಿಹ್ನ ಲಾಂಛನಲಕ್ಷ್ಮಾಖ್ಯಂ ಕುಱೆಪದೆನಿಸುಗುಂ: **ಅಭಿಧಾವ,** ೧. ೧. ೬೯); ಗುರುತು (ಅನ್ನೆಗಮಿತ್ತ ಲಾಂಛನಚ್ಛಲದಿಂ ಶೋಕಾನಲದಗ್ಧಮಪ್ಪ ಮಹಾಶ್ವೇತಾಹೃದಯಮಂ ವಿಡಂಬಿಸುವಂತೆ: **ಕಾದಂಸಂ,** ೫. ೭ ವ)

**ಲಾಂತ** – ಸ್ವರ್ಗ (ಚಿಲಾವರ್ತರಂ ಲಾಂತಮಂ ಪಿಡಿದರ್ಪಂತಿರೆ ಮಾಟ್ಪೆಂ: **ಪಾರ್ಶ್ವನಾಪು,** ೧೧. ೮೪)

**ಲಾಂತವ** – [ಜೈನ] ಒಂದು ಕಲ್ಪ (ಸೌಧರ್ಮ ಈಶಾನ ಸನತ್ಕುಮಾರ ಮಾಹೇಂದ್ರ ಬ್ರಹ್ಮ ಬ್ರಹ್ಮೋತ್ತರ ಲಾಂತವ ಕಾಪಿಷ್ಠ ಶುಕ್ರ ಮಹಾಶುಕ್ರ ಶತಾರ ಸಹಸ್ರಾರ ಆನತ ಪ್ರಾಣತ ಅರಣ್ಯ ಅಚ್ಯುತಮೆಂಬ ಪದಿನಾಱುಂ ಕಲ್ಪಂಗಳೊಳಂ: **ವಡ್ಡಾರಾ,** ಪು ೯೭, ಸಾ ೨೬)

**ಲಾಕುಳ** – ಯೋಗದಂಡ (ವಲ್ಕಲಮನಾಂತು ಕಮಂಡಲಮಂ ಕರಾಗ್ರದೊಳ್ ಧರಿಯಿಸಿ ಬಲ್ಪಿನಿಂ ಪಿಡಿದು ಲಾಕುಳಮಂ: **ತ್ರಿಷಷ್ಟಿಪು,** ೫. ೧೫)

**ಲಾಕ್ಷಾ** – ಅರಗು (ನವ ಲಾಕ್ಷಾಮುದ್ರೆಯನೊಡೆದು ಅವಧರಿಪುದುಂ ಆಗಳ್ ಅರ್ಕನುದಯಂಗೆಯ್ದಂತೆವೋಲ್ ಆಯ್ತು ತನ್ನೃಪೇಶ್ವರಭವನದೊಳ್ ಆಶ್ಚರ್ಯಂ ಆದಂ ಅಪ್ಪನ್ನೆವರಂ: **ಸುಕುಮಾಚ,** ೧೦. ೧೧೫)

**ಲಾಕ್ಷಾಗೃಹ** – ಅರಗಿನ ಮನೆ (ಆ ಲಾಕ್ಷಾಗೃಹದಾಹಮೊಂದೆ ವಿಷಸಂಯುಕ್ತಾನ್ನಂ ಅಂತೊಂದೆ ಪಾಂಚಾಲೀನಿಗ್ರಹಂ ಒಂದೆ ಟಕ್ಕುವಗೆಯಿಂ ಗೆಲ್ದಿರ್ದ ಜೂದೊಂದೆ: **ಪಂಪಭಾ,** ೯. ೨೨)

**ಲಾಕ್ಷಾರಸ** – ಅರಗಿನ ರಸ (ಚತುರಂತಕ್ಷಿತಿ ಗರ್ಭಸ್ಥಿತನದು ಗಡಿಮೆಂದು ಮುದ್ರಿಪಂತಾಯ್ತು ಯಶಸ್ವತಿಯ ಪದನ್ಯಾಸಂ ವಿಳಸಿತ ಲಾಕ್ಷಾರಸಪೂರ್ವ ಮಣಿಕುಟ್ಟಿಮದೊಳ್: **ಆದಿಪು,** ೮. ೩೨)

**ಲಾಗ** – ಜಿಗಿತ (ಲಾಗದಿಂ ನಡೆದನದ್ಭುತ ಸಂಭ್ರಮದಿಂ ಮಹೀಶ್ವರಂ: **ತ್ರಿಷಷ್ಟಿಪು,** ೨೪. ೨೬೮)

**ಲಾಗು** – ಮದ್ದಳೆಯನ್ನು ಬಾರಿಸಿ ಶಬ್ದ ಹೊರಡಿಸುವ ಒಂದು ಪರಿ (ಲಾಗು ಮೋಡಿ ಚಮತ್ಕಾರ ತುಡಿಕು ರಿಗ್ಗವಣೆ ಪಹರಣೆಗಳೆಂಬ ನಾನಾ ಶಬ್ದಂಗಳಂ ಬಾರಿಸಿ: **ಧರ್ಮಪ,** ೨. ೨೩ ವ)

**ಲಾಗುಳ** – ಯೋಗದಂಡ (ಉಡುವ ಪುಲಿದೊವಲೊ ಕೈಯೊಳ್ ಪಿಡಿದಾ ಲಾಗುಳದ ಕೋಲೊ ಬಗರಿಗೆಯೊ ಕೆಂಜೆಡೆಯೊ ಪೂಸುವ ಬೂದಿಯೊ ಬಡಗೊರವಂಗೇಕೆ ತನಗೆ ಕಾದುವ ಬೆಸನಂ: **ಕಬ್ಬಿಗಕಾ,** ೧೪೮)

**ಲಾಘವ** – ಕ್ಷುಲ್ಲಕ (ಕೈಕೆ ಬೇಡೆ ಧರೆಯಂ ತೃಣದಿಂ ಲಾಘವಮೆನೆ ಬಗೆದೀಗುಂ ರಾಘವನೌದಾರ್ಯತುಂಗನೀಯದುದುಂಟೇ: **ಪಂಪರಾ,** ೬. ೧೦೯); ಹಗುರವಾದ (ಲಾಘವಮದು ಲಘುತೆ: **ಅಭಿಧಾವ,** ೨. ೨. ೨೯)

**ಲಾಜ** – ಬತ್ತದ ಅರಳು (ದಿಗ್ವಿಜಯದೊಳ್ ಸೂಸುವ ಮಂಗಳ ಲಾಜವರ್ಷದಂತೆ .. .. ಒಗುವ ಮೌಕ್ತಿಕನಿಕಾಯದ ನಡುವೆ: **ಕಾದಂಬ,** ೩. ೧೧೨ ವ)

**ಲಾಜಕ** – ಬತ್ತದ ಅರಳು (ಸೂಸುವ ಸಿತಸರ್ಷಪಂ ತಳೆವ ಲಾಜಕಂ ಎತ್ತುವ ಪುಷ್ಪಮಾಲೆ ನೀಡುವ ನವಮಾತುಳಂಗಫಲಂ ಎಂಬಿವಂ ಅಚ್ಯುತನೊಲ್ದು ತಾಳ್ದಿದಂ: **ಜಗನ್ನಾವಿ,** ೮. ೨)

**ಲಾಜಾಂಜಲಿ** – ಅರಳು ತುಂಬಿದ ಬೊಗಸೆ (ಶೀಕರನಿಕರಂಗಳಂತೆ ಸೊಗಯಿಸುವ ಧವಳಾಕ್ಷತ ಸಿತಕುಸುಮ ಮಂಗಳ ಲಾಜಾಂಜಲಿಗಳುಮನುರಾಗದಿಂ: **ಆದಿಪು,** ೧೧. ೨೩ ವ)

**ಲಾಜೆ** – ಲಾಜ (ಪ್ರಮದ ಪುರೋಹಿತ ವಚನಪ್ರಮಾಣದಿಂದ ಅಗ್ನಿಕುಂಡದೊಳ್ ಲಾಜೆಯುಮಂ ಕ್ರಮದಿಂದಂ ಇಕ್ಕಿದಳ್ ಪೆಣೆದ ಮನಃಪ್ರಣಯಕ್ಕೆ ಮುಡಿಗೆಯಿಕ್ಕುವ ತೆಱದಿಂ: **ಶಾಂತಿಪು,** ೬. ೧೭)

**ಲಾಭ** – ಗಳಿಕೆ (ಅಲಬ್ಧಲಾಭಂ ಲಬ್ಧಪರಿರಕ್ಷಣಂ ರಕ್ಷಿತವಿವರ್ಧನಂ ವರ್ಧಿತತೀರ್ಥಪ್ರತಿಪಾದನಂ ಎಂಬ ಚತುರ್ವಿಧ ಪುರುಷಾರ್ಥವೃತ್ತಿಯಾಗಿರ್ಪುದು: **ಪಂಚತಂತ್ರ,** ೭೫ ವ)

**ಲಾಭಂಬೆಱು** – ಲಾಭವನ್ನು ಪಡೆ (ಮಂದರದಂತೆ ಧೈರ್ಯಂಬೆರಸು ಲಾಭಂಬೆತ್ತ ಪರದನಂತೆ ಉತ್ಸಾಹಂಬೆರಸು: **ಧರ್ಮಾಮೃ,** ೧. ೧೦೮ ವ)

**ಲಾಮಂಚ** – ಲಾಳದ ಬೇರು (ಲಾಮಂಚದ ಮುಚ್ಚುಳಮಂ ನೆಮ್ಮಿ ನಿಂದಿರ್ದ ಪಡಿಯಱಗೋಗಿಲೆಗಳಿಂ: **ಗಿರಿಜಾಕ,** ೭. ೧೧ ವ)

**ಲಾಲಂಗಿ** – ಆಲಾಪನೆಯ ಒಂದು ವಿಧ (ತಿರುಪು ತೊಮ್ಮೆವಡೆಯೆ ಗತಿ ಸಂಗತಿವಡೆಯೆ ಗಮಕಂ ಗಾರವಂಬಡೆಯೆ ಗಹಗಹಿಕೆಗೊಡಂಗೂಡಿ ಚಡಂಬಾಹಟಂ ಲಾಲಂಗಿ ತನ್ನೆವಣೆ ನಿಸ್ಸರಡೆ ರಂಗಕ್ಕೆತ್ತೇಗವಣಿತು ತರಹರಂ : **ಶಾಂತೀಶ್ವಪು,** ೧೬. ೬೭ ವ)

**ಲಾಲಸ** – ಬಯಕೆ (ಬಾಹುಗಳ್ ಆಲಿಂಗನಲಾಲಸಂಗಳೆನೆ ಧೈರ್ಯಂಗೆಟ್ಟು ಮೇಲ್ವಾಯ್ವ ಚೇಷ್ಟೆಗೆ: **ಪಂಪರಾ,** ೯. ೧೪೮)

**ಲಾಲಸಕ** – ಲಂಪಟ (ಲೋಲುಪಂ ಅಭಿಲಾಷುಕಂ ಅತಿಲಾಲಸಕಂ ಗೃಧ್ನು ಲಂಪಟಂ ಲುಬ್ಧನವಂ; **ಅಭಿಧಾವ,** ೨. ೧. ೭)

**ಲಾಲಾಂಬು** – ಜೊಲ್ಲಿನ ರಸ (ಕರಿಶೀಕರಕರಮದಜಳ ತುರಂಗಲಾಲಾಂಬುಸೇಕದಿಂದಚೆದುಚೆದಿರ್ದ ರಜಂ ನರೇಂದ್ರಚಾಮರಮರುದಭಿಹತಿಯಿಂ ತೆರಳ್ದು ತೂಳ್ದತ್ತಾಗಳ್: **ಆದಿಪು,** ೧೧. ೩೮)

**ಲಾವಕ** – ಒಂದು ಹಕ್ಕಿ, ಲಾವಗೆ (ಕ್ರಕರ ಕಪಿಂಜಳ ತಿತ್ತಿರಿ ಚಕೋರ ಹಾರೀತ ಕುರವ ಕಾರಂಡವ ಲಾವಕ ಜೀವಂಜೀವಕ ಶಾರಿಕಾದಿಗಳ್ ವಿಹಗಜಾತಿಯಕ್ಕುಂ ಪಲವುಂ: **ಅಭಿಧಾವ,** ೧. ೯. ೨೧)

**ಲಾವಗೆ** – ಒಂದು ಹಕ್ಕಿ, ಪತಂಜಲ (ತಗರಾಗಿ ತಾಗಿಯುಂ ಲಾವಗೆಯಾಗಿ ಕಾದಿಯುಂ ತಮತಮಗಿಂತು ಚಿತ್ತಮಜೆದು ಓಲಗಿಪರ್ ದಿವಿಜರ್ ಕುಮಾರನಂ: **ಮಲ್ಲಿನಾಪು,** ೧೩. ೫೦)

**ಲಾವಣಕ** – ಉಪ್ಪಿನಕಾಯಿ (ಎಳೆಮಾವಿನ ಮಿಡಿ ಮಾಗುಳಿ ಮೆಟಬಿಸಿನ ಕರೆ ಬೆತ್ತ ಲಟ್ಟೆಯ ಈಳೆಯ ಗೊಲೆಯಿಂದಳವಟ್ಟಿರೆ ಲಾವಣಕಂಗಳನಿಕ್ಕಿದರಾಗಳ್ ಅಟ್ಟೆಯಿಂದಂಗನೆಯರ್: **ಸುಕುಮಾಚ,** ೧೦. ೩೦)

**ಲಾವಣಿಗೆ** – ಉಪ್ಪಿನಕಾಯಿ (ಪೂರಿಗೆ ಇಡ್ಡಲಿಗೆ ಸೋದಿಗೆ ಲಾವಣಿಗೆ ಘೃತಪೂರಂ ಲಡ್ಡುಗೆ ಮಂಡಗೆ ಮೊದಲಾಗೊಡೆಯ ಪದಿನೆಂಟುಂ ತೆಱದ ಭಕ್ಷ್ಯರೂಪಂಗಳುಮಂ: **ವಡ್ಡಾರಾ,** ಪು ೭೮ ಸಾ ೧೬)

**ಲಾವುಕ** – ಲಾವಗೆ ಹಕ್ಕಿ (ಇದೆ ಚಕಿತ ಲಾವುಕಸ್ವನಂ ಇದೆ ಹರಿನಖಭಿನ್ನಕುಂಬ ಕುಂಜರರವಂ ಇಂತಿರೆ ಕುರರಕುಲಸ್ವನಂ ಇಂತಿದೆ ಕುಕ್ಕುಟರಭಸಂ ಇದೆ ಕಪಿಂಜಲನಿನದಂ; **ಕಾದಂಬ,** ೧. ೧೩೨)

**ಲಾಸಕಿ** – ನರ್ತಕಿ (ಅಂಗಜಲಾಸ್ಯಲೀಲೆಯಂ ಕ್ಷಿತಿಪನ ಚಿತ್ತವೃತ್ತಿಗುಪದೇಶಿಪ ಲಾಸಕಿಯಂತೆ ತೋಜೆದಳ್: ಚಂದ್ರಪ್ರಪು, ೩. ೮೩)

**ಲಾಸಿಕಾ** – ಲಾಸಕಿ (ಮದಮಯೂರೀಲಾಸಿಕಾರಂಗಮಂ .. .. ಶೀತಕೋಶ ಗುಹೆಯಂ ಪೊಕ್ಕಂ ಮಹೀವಲ್ಲಭಂ: **ಲೀಲಾವತಿ,** ೪. ೧೬)

**ಲಾಸಿಕೆ** – ಲಾಸಕಿ (ಕಣ್ಗೊಳಿಸಿದಳ್ ಇಂದುಕಾಂತೆ ಮಣಿಮಂಗಳ ರಂಗದೊಳ್ ಅಬ್ಜನಾಳಮಂ ಸೆಳೆವಿಡಿದ ಅಂಗಜನ್ಮ

ಜಯಲಕ್ಷ್ಮಿಯ ಲಾಸಿಕೆಯೀಕೆಯೆಂಬಿನಂ: **ಮಲ್ಲಿನಾಪು,** ೪. ೩೯)

**ಲಾಸ್ಯ** – ಲಲಿತನರ್ತನ (ಕವಿತಾರಸವಂ ಮೂಢಂ ತವೆ ಲಾಸ್ಯದ ಚೆಲ್ವಂ ಎಸೆವನಂಥಂ .. .. ಬಲ್ಲನೆ: **ತ್ರಿಷಷ್ಟಿಪು,** ೧. ೨೭)

**ಲಾಳವಿಂಡಿಗೆ** – ಅಗುಳಿ (ದಿಶಾಧಿಪರ್ ದಿಗಿಭಸಂಹತಿಯಂ ಮನಮೊಲ್ದು ಪಾಜೆಸಲ್ಕಿಕ್ಕಿದ ಲಾಲವಿಂಡಿಗೆಯ ಮಾಟ್ಕೆಯೊಳಿರ್ದುದು ವಿಂಧ್ಯಪರ್ವತಂ: **ವರ್ಧಮಾಪು,** ೧೬. ೫)

**ಲಾಳಾಜಳ** – ಜೊಲ್ಲು (ತುರಂಗಮ ಲಾಳಾಜಳದ ಪೊನಲ್ ತೆಮಳ್ಚಿ ತೊಳೆವುದು ತದೀಯ ಗೇಹಾಂಗಣದೊಳ್: **ನೇಮಿನಾಪು,** ೩. ೮೭)

**ಲಾಳೆ** – ಲಾಲಾಂಬು (ಕೊರೆವೊಡೆ ಬೆಟ್ಟುಗಳ್ ಬಿರಿವುವು ಉಣ್ಮುವ ಲಾಳೆಯ ಲೋಳೆಗಳ್ ಪೊನಲ್ವರಿವುವು ಕೆಮ್ಮಿ ಕುಮ್ಮಿದೊಡೆ ತೋಳೊಳೆ ಜೀವವಿಯೋಗಮಪ್ಪುದು: **ಪಂಪಭಾ,** ೪. ೧೦೦)

**ಲಿಂಗಜ** – ಇಂದ್ರಿಯಜನ್ಯಜ್ಞಾನ (ಶ್ರುತಭೇದಂ ತದ್ಭೇದ್ವಿತಯಂ ಲಿಂಗಜಮುಮಾವಗಂ ಶಬ್ದಜಮುಂ ಅಲ್ಲಿ ಲಿಂಗಮನೇಕಭೇದಮನಂಗೀಕರಿಸಿರ್ಕುಮಾವಗಂ: **ಚಂದ್ರಪ್ರಪು,** ೧೪. ೪೩)

**ಲಿಂಗವಿಚ್ಛಿತ್ತಿ** – ಮರ್ಮಾಂಗವನ್ನು ಕತ್ತರಿಸುವುದು (ಗುರುತಳ್ಪಗತಂಗೆ ಆಯುಧದಿಂದಕಟ ಲಿಂಗವಿಚ್ಛಿತ್ತಿ ಗಡ: **ಸಮಯಪ,** ೧೧. ೭೩)

**ಲಿಕುಚ** – ಗಜನಿಂಬೆ, ಹೇರಿಳೆ (ವಕುಳ ಪಾಟಳ ಅಶ್ವತ್ಥಬ್ರಾತಂ ಲಿಕುಚ ನಾಳಿಕೇರದ್ರುಮಜಾತಂ: **ಸುಕುಮಾಚ,** ೧೦. ೫೬)

**ಲಿಪಿ** – ಬರೆಯುವ ಅಕ್ಷರ (ಲಿಪಿಯುಂ ಲಿಖಿತಾಕ್ಷರಾಳಿನ್ಯಾಸಂ: **ಅಭಿಧಾವ,** ೧. ೧೧. ೫೯)

**ಲಿಪಿವಿಧಾನ** – ಬರೆಯುವ ಕ್ರಮ (ಸೇವಾಧರ್ಮೋಚಿತಮೆನಿಸುವ ಕರ್ಮಮುಮಂ ಅನೇಕ ಲಿಪಿವಿಧಾನಾಧೀನಮಪ್ಪ ಮಷಿಯುಮಂ .. .. ಪಡೆದು: **ಆದಿಪು,** ೮. ೬೪ ವ)

**ಲಿಪಿಸಂಖ್ಯಾನಸಂಗ್ರಹ** – [ಜೈನ] ಒಂದು ಗರ್ಭಾನ್ವ ಕ್ರಿಯೆ (ಲಿಪಿಸಂಖ್ಯಾನಸಂಗ್ರಹ ಉಪನಯನಬ್ರತಚರ್ಯ .. .. ಯೋಗತ್ಯಾಗಾಗ್ರನಿರ್ವೃತಿಯೆಂಬ ಅಯ್ವತ್ತುಮೂಱು ಗರ್ಭಾದಿರ್ವಾಣಪರ್ಯಂತಂಗಳಪ್ಪ ಗರ್ಭಾನ್ವಯಕ್ರಿಯೆಗಳಂ: **ಆದಿಪು,** ೧೫. ೧೫ ವ)

**ಲೀಲಾಂದೋಳ** – ಉಯ್ಯಾಲೆ (ಲೀಲಾಂದೋಳಂ ಪ್ರಖ್ಯಾತಂ ಚಾಂಡಾಳ ವಲ್ಲಕೀಪಯಾಯಂ: **ಅಭಿಧಾವ,** ೧. ೧೦. ೩೮)

**ಲೀಲಾಕಿಳಕಿಂಚಿತ ಲಲಿತ ವಿಹ್ವದ್ ವಿಳಾಸ ವಿಚ್ಛಿತ್ತಿ ವಿಭ್ರಮಾದಿ ಗುಣಂಗಳ್** – ಸ್ತ್ರೀಯರ ಹತ್ತು ಶೃಂಗಾರಭಾವಗಳು (ಜಳಕೇಳಿಯೊಳ್ ಅಧಿಪನೆರ್ದೆಗೊಳಿಸಿದುವು ಅಂತಃಪುರೀ ಜನಂಗಳ ಲೀಲಾಕಿಳಕಿಂಚಿತ ಲಲಿತ ವಿಹ್ವದ್ ವಿಳಾಸ ವಿಚ್ಛಿತ್ತಿ ವಿಭ್ರಮಾದಿ ಗುಣಂಗಳ್: **ಆದಿಪು,** ೧೧. ೧೪೨)

**ಲೀಲಾಜಲಾಶಯ** – ಆಟಕ್ಕಾಗಿ ನಿರ್ಮಿಸಿದ ಕೊಳ (ನಾನಾಭವನವಿನ್ಯಾಸ ಉದ್ಯಾನ ಲೀಲಾಜಲಾಶಯಂಗಳುಮಂ .. .. ಮಾಡಿ: **ಆದಿಪು,** ೮. ೬೩ ವ)

**ಲೀಲಾಸರ** – ಲೀಲಾಜಲಾಶಯ (ಇನ್ನದಲ್ತೆ ನೆರೆದಿರ್ಬರಿರ್ದ ಕೃತಕಾಚಳಂ ಚೆಲ್ವನಪ್ಪಿದೇ ಕನಕಪದ್ಮಿನೀನಿಳಯಮೆನ್ನ ಲೀಲಾಸರಂ: **ಆದಿಪು,** ೪. ೮)

**ಲೀಲೆ** – ಸಂತೋಷ (ಲೀಲೆಯಿಂದುಡಿಸಿ ದಿವ್ಯವಸ್ತ್ರಮಂ ಸೋಲೆ ಕತ್ತುರಿಯ ಬೊಟ್ಟನಿಟ್ಟು: **ಧರ್ಮಾಮೃ,** ೩. ೫); ಆಟ (ಲೀಳೆಯೊಳೆ ಮಳಲ ಜಗಲಿಯ ಮೇಲೆ ಸರೋಜಾತಸಖಿಗೆ ಮಿಗಿಲೆನಿಸುವ .. .. ಬಾಲಕನಂ ನಲಿಯುತಿರ್ದನಂ ಕಂಡಾಗಳ್: **ಧರ್ಮಾಮೃ,** ೧೦. ೧೦೪)

**ಲೀಲೋತ್ತಾರಿತ** – ಸುಲಭವಾಗಿ ಗೆದ್ದ (ಲೀಲೋತ್ತಾರಿತ ರಿಪುನೃಪಾಲ ಸಾಮಂತ ಸೀಮಂತಿನೀ ಸೀಮಂತರಪ್ಪ ಮಹಾಸಾಮಂತರಿಂದಮವಧಾರಿತ.. .. ವಾರಣಂಗಳಿಂದಂ: **ಆದಿಪು,** ೧೪. ೪೩ ವ)

**ಲೀಳೆ** – ಸಂತಸ (ಲೀಳೆಯನಪ್ಪುಕೆಯ್ದು ನಯನೋತ್ಸವಮಂ ದಯೆಗೆಯ್ವ ಗಾಡಿಯಿಂದೇಳಿಸಿ ಕಾಮಕಲ್ಪಲತೆಯಂ ಪರಿಪೂರ್ಣಕಳಾವಿಳಾಸದಿಂದೇಳಿಸಿ ಚಾರುಚಂದ್ರಕಲೆಯಂ ನೆರಲೆವೆರ್ಚಿಸಿದಳ್: **ಪಂಪರಾ,** ೪. ೩೨)

**ಲುಂಗ** – ಮಾದಲ (ಕಕುಭ ಅಶೋಕ ಕದಂಬ ಲುಂಗ ಲವಲೀ ಭೂರ್ಜ ಆರ್ಜುನ ಅನೋಕಹ ಪ್ರಕರಂ: **ಪಂಪಭಾ,** ೫. ೮೦);

**ಲುಂಟಾಕ** – [ಲುಂಠಾಕ] ಕಳ್ಳ (ಘನಬಾಹಾಬಲವರ್ಗಮುರ್ವಿದ ಜಗತ್ ಲುಂಠಾಕನಪ್ಪ ಅಶ್ವಕಂಠನ ಶೀರ್ಷಾಂಬುಜಮಂ.. ..ಮೆರ್ಚೆ ಜಯಮಂ ಕೈಕೊಂಡೆ: **ಶಾಂತೀಶ್ವಪು,** ೫. ೩೦)

**ಲುಂಟಿತ** – ಅಪಹರಿಸಿದ (ಪ್ರಭಾಲುಂಟಿತ ಶೂರ ಸಾರಗುಣನಾರ್ಳವಂ ಅದಂ ಕಲಿ ಶೂರಸೇನಂ: **ನೇಮಿನಾಪು,** ೪. ೬೯)

**ಲುಂಠನ** – ಅಪಹರಣ (ಭಾರ್ಗವಂಗೆ ತಾನೆ ಭಾರ್ಗವನಾಗಿ ಯುವರಾಜಕಂಠಿಕಾಪರಿಕಲಿತ ಕಂಠಲುಂಠನಂ ಆಗಿ: **ಪಂಪಭಾ,** ೧. ೬೮ ವ)

**ಲುಂದು** – ಮಲಗು, ನಿದ್ರಿಸು (ಇರುಳ್ ಕಳ್ಳರ್ ವಂದು ಆಕೆಯ ಲುಂದಿದ ಮನೆಯೊಳ್ ಕನ್ನಮಿಕ್ಕೊದೊಡೆ: **ವಡ್ಡಾರಾ,** ಪು ೧೯, ಸಾ ೨): ಸಂಭೋಗಿಸು (ಬಳಸುವ ಬೇಟದೊಳ್ ಮೊಳೆತ ಗೊಟ್ಟಿಯೊಳ್ ಇರದೆಲೆವೋದ ಲುಂದಿನೊಳ್ ಬಳೆದ ವಿಯೋಗದೊಳ್: **ಆದಿಪು,** ೧೨. ೨೦); ಸಂಭೋಗ [ಅಮರ್ದಿನ ಧಾರೆಯಂತೆ ನುಡಿಯಿಂಪು ಅಮರ್ದಂ ತಳಿದಂತೆ ಸೋಂಕಿನಿಂಪು ಅಮರ್ದಿನ ಪೂರದಂತೆ ಪದದಿಂಪು ಅಮರ್ದಂ ಕುಡಿದಂತೆ ಲುಂದಿನಿಂಪು: **ಆದಿಪು,** ೧೨. ೨೭)

**ಲುಂದುವೋವರಿಗೆ** – ಮಲಗುವ ಮನೆ (ವಾಮರಥಂ ಕರುಮಾಡದೇಟನೆಯ ನೆಲೆಯೊಳ್ ತನ್ನ ಲುಂದುವೋವರಿಗೆಯ ಮಡಿಕೆಯೊಳ್ ಇಟ್ಟು ಎಲ್ಲಾ ಕಾಲಮುಂ .. .. ಅರ್ಚಿಸುತ್ತಂ ಪೊಡೆಮಡುತ್ತಂ ಇರ್ಕ್ಕುಂ: **ವಡ್ಡಾರಾ,** ಪು ೧೨೩, ಸಾ ೮);

**ಲುಬ್ಧ** – ಲೋಭಗೊಂಡ[ವನು], ಲೋಭಿ (ನೃಪರತ್ನಂ ದಾನದಿಂ ಲುಬ್ಧರಂ ಅನುನಯದಿಂ ಕ್ರುದ್ಧರಂ ಯುದ್ಧದೊಳ್ ಮುನ್ನಪಮಾನಬೆತ್ತರಂ .. .. ತನಗೆ ವಶಂಮಾಡಿ: **ಮಲ್ಲಿನಾಪು,** ೩. ೧೦)

**ಲುಬ್ಧಕ** – ಆರ್ದ್ರಾ ನಕ್ಷತ್ರ (ನೆಗಟ್ಟಾರ್ದ್ರೆಗೆ ಲುಬ್ಧಕಾಹ್ವಯಂ ವರ್ತಿಸುಗುಂ: **ಅಭಿಧಾವ,** ೧. ೧. ೮೦); ಬೇಡ (ವಿಷಯವಿಷದ್ರುಮಕಂದಳಿಯುಂ ಇಂದ್ರಿಯಲುಬ್ಧಕ ಸ್ವಚ್ಛಂದ ವಿಹಾರಗಹನಭೂಮಿಯುಂ: **ಆದಿಪು,** ೧೪. ೧೨೨ ವ)

**ಲುಬ್ಧಕಿ** – ಬೇಡಿತಿ (ಸನ್ನುತತರ ಮುಗ್ಧ ಲುಬ್ಧಕಿನಿಜೇಕ್ಷಣದಿಂ ಬೆಳಗಾಗಿ ತೋಱಿ: **ತ್ರಿಷಷ್ಟಿಪು,** ೨೭. ೪೦)

**ಲುಲಾಯ** – ಕೋಣ, ಮಹಿಷ (ವಿವಾದಿಸಿ ಕರಂ ಸೋಲ್ತಲ್ಲಿ ತದ್ಭಂಗಚಿತ್ತನವಂ ಮಟ್ಗೆ ಲುಲಾಯಮಾಗಿ ಜನಿಸಿರ್ದು: **ಶಾಂತೀಶ್ವಪು,** ೫. ೬೫)

**ಉಲಾಯಚ್ಛವಿಕ** – ಕೋಣದ ಬಣ್ಣವುಳ್ಳ, ಕಪ್ಪು (ಯಮೋಚ್ಚೈರ್ಉಲಾಯಚ್ಛವಿಕಂ .. .. ದೆಸೆದೆಸೆಯಂ ಮರ್ಬು ಪರ್ಬಿತ್ತುರ್ಬಿಂ: **ಲೀಲಾವತಿ,** ೧೦. ೨೭)

**ಉಲಿತ** — ಅಲುಗಾಟ (ತಳಿರ್ಗಳ ಚಾಳೆಯಂ ಎಳಲತೆಗಳ ಉಳಿ ತಿಳಿಗೊಳದ ತೆರೆಯ ತಾಳಂ ಪೊಸ ಪೂಗಳ ನೋಟಮಾಗೆ: **ಯಶೋಧಚ,** ೪. ೩)

**ಉಳಿತ** – ಉಲಿತ (ನೋಡಿ ನಾಡೆ ಮನಂಗೊಂಡನಿಳೇಶ್ವರಂ ಉಳಿತಮತ್ಸ್ಯಾಪಾಮಗೆಯಂ ಗಂಗೆಯಂ: **ಆದಿಪು,** ೧೧. ೫೭); ಸಿಂಪಡಿಸು (ಮಲಯಜ ರಸಉಳಿತ ಕದಳೀದಳವ್ಯಜನ ಮಂದಮಾರುತಾಂದೋಳನದಿಂ ಎಂತಾನುಂ ಮೂರ್ಛೆಯಿಂದೆೞ್ಚೆಸಿ: **ಆದಿಪು,** ೩. ೨೩ ವ); ಕೊಂಕಾದ (ಬಳಸಿರ್ದ ಮದಾಳಿಸಂಕುಲಂ ವಿಷಯಾಂಗನಾಉಳಿತ ಕುಂತಳದಂತೆವೊಲ್ ಒಪ್ಪಿ ತೋಱುಗುಂ: **ಪಂಪಭಾ,** ೧. ೫೩); ಮೇಲೆದ್ದ, ಕೆದರಿದ (ಆಗಳ್ ಚಿತ್ರರಥನಂದನೆ ತುರಗಖುರಉಳಿತ ಉಳಿತಧೂಳೀ ಧೂಸರಮಪ್ಪ ಭವದ್ಗಮನಮಾರ್ಗಮಂ ನೋಡುತ್ತುಮಿರ್ದು; **ಕಾದಂಸಂ,** ೫. ೮೪ ವ)

**ಉಳಿತಾಳಕಿ** – ಉಲಿತಕುಂತಲೆ (ತಾಳದ ಲಯಮಂ ನಿಜೆ ನೀಳಾಳಕಮಾರದ ಪೊದಳ್ದ ಮುತ್ತೆಂಬಿವು ಮುಂಮೇಳಿಸಿ ಕೈಕೊಂಡುವು ಉಳಿತಾಳಕಿ ಕೈಕೊಂಡಳೆಂಬುದೇನಚ್ಚರಿಯೇ: **ಆದಿಪು,** ೯. ೨೪)

**ಊನ** – ಮುರಿಯಲ್ಪಟ್ಟ (ತದೇಕತ್ವಗ್ರಾಹಕಪ್ರತ್ಯಭಿಜಾನಮುಂ ಊನ ಪುನರ್ಜಾತ ನಖ ಕೇಶಾದಿಗಳೊಳ್ ಪೂರ್ವಾಪರ್ಯೈಕತ್ವಮಿಲ್ಲದಲ್ಲಿಯುಂ ಕಾಣಲಕ್ಕುಂ: **ಆದಿಪು,** ೨. ೯ ವ)

**ಲೆಂಕ** – ನಿಷ್ಠಾವಂತ ಸೇವಕ, ಭೃತ್ಯ (ನಿಂದ ತುಟಿಲಾಳ್ಗಳನಾಂ ತಱಿದು ಒಕ್ಕಲಿಕ್ಕದಿರ್ದೊಡೆ .. .. ನಚ್ಚಿನ ನಿನ್ನ ಲೆಂಕನೇ: **ಕಬ್ಬಿಗಕಾ,** ೧೮೭)

**ಲೆಂಕಿ** – ಸೇವಕಿ (ಪ್ರಧಾನರುಂ ಪರಿಚಾರಕರುಂ ಪೆರ್ಗಡೆಗಳುಂ ಲೆಂಕದಂಡರುಂ ಸಾಮಂತರುಂ .. .. ಪೆರ್ಚಿ ಮೇಗುಮೆಯ್ಯಱಿಯದಂತೆ ರಾಗಿಸಿ ತಮ್ಮೊಳಿಂತೆಮದರ್: **ಧರ್ಮಾಮೃ,** ೮. ೧೨೪ ವ)

**ಲೆಕ್ಕ** – ಎಣಿಕೆ (ನುಡಿಯಲಕ್ಕುಮೆ ಪೂಗಳ ಲೆಕ್ಕಮಂ: **ಆದಿಪು,** ೧೦. ೧೦೫); ಪರಿಗಣನೆ (ತಾಮೆ ತಮ್ಮ ಮನದೊಳ್ ಸರ್ವಜ್ಞರೆಂದಿರ್ಪ ಕಬ್ಬಿಗರುಂ ಕಬ್ಬಿಗರೆಂಬ ಲೆಕ್ಕದೊಳಗೇಂ ಭೂಭೃತ್ಸಭಾಭೂಷಣಂ: **ನೇಮಿನಾಪು,** ೧. ೩೫)

**ಲೆಕ್ಕಂಗೊಳ್** – ಎಣಿಕೆಮಾಡು (ಶಾರ್ದೂಲಾಭೀಲವನಂಗಳೊಳ್ ತಿರಿಪಿದೀಯುರ್ಕೊಂದೆ ಲೆಕ್ಕಂಗೊಳಲ್ ಕಾಲಂ ಸಾಲವೆ: **ಪಂಪಭಾ,** ೯. ೨೨)

**ಲೆಕ್ಕಣಿಕೆ** – [ಲೇಖನೀ, ಲೇಖನಿಕಾ] ಬರೆಯುವ ಸಾಧನ (ತರಳಾಪಾಂಗವಿಳಾಸಸ್ಫುರಿತಮೆ ಲೆಕ್ಕಣಿಕೆಯಾಗೆ ನಲ್ಲಳ್ ಮುನ್ನಂ ಬರೆದತನುಚರಿತಮೀಗಳ್ ಬರೆದಂತಿರ್ಪುದು ಮನ್ಮನಃಪುಸ್ತಕದೊಳ್: **ಆದಿಪು,** ೪. ೧೪)

**ಲೆಕ್ಕವಣಿಗೆ** – ಲೆಕ್ಕದ ವಿವರ (ನವಕಳಿಕಾಂಕುರಪ್ರಕರಮಂ ನವಕೋಕಿಲಕುಟ್ಮಲಂಗಳಂ .. ..ಅಂಗಜಂಗೆ ಲೆಕ್ಕವಣಿಗೆದೋಱುವಂತೆಸೆದು ತೋಱಿದುವಂದಿನ ಬಂದ ಮಾವುಗಳ್: **ಅಜಿತಪು,** ೬. ೨೪)

**ಲೆಕ್ಕವಲಗೆ** – ಲೆಕ್ಕ ಬರೆಯುವ ಹಲಗೆ (ಬರೆಯಲ್ಕಾರ್ಪರೆ ಜೀವವನೆಲ್ಲಂ ಲೆಕ್ಕವಲಗೆ ತಾನನಿತುಂಟೇ: **ಸಮಯಪ,** ೧೦. ೧೨೭)

**ಲೆಕ್ಕಿಗ** – ಕರಣಿಕ (ಅಜಿತದಲ್ಲಿ: ಜೋಯಿಸಿಗಂ ಲೆಕ್ಕಿಗಂ ಪೊಲಂಬಿಗಂ: **ಶಬ್ದಮದ,** ೨೦೮ ಪ್ರ); ವಿದ್ವಾಂಸ (ಎಱಗುವನರುಹಂಗೆ ಉಟಿದರ್ಗೆಱಗಂ ಕನಸಿನೊಳಂ ಓದನಲ್ಲದೆ ಮೆಚ್ಚಂ ಮಱೆದುಂ ಪೆಱವೆಣ್ಣೊಳ್ ನೆರೆದಱಿಯಂ ಲೆಕ್ಕಿಗರ ಪಿರಿಯನೆನಿಪ ಆಂಡಯ್ಯಂ: **ಕಬ್ಬಿಗಕಾ,** ೯)

**ಲೆಕ್ಕಿಗರ ಪಿರಿಯ** – ಕರಣಿಕರ ಮುಖ್ಯಸ್ಥ (ಪೆಱವೆಣ್ಣೊಳ್ ನೆರೆದಱಿಯಂ ಲೆಕ್ಕಿಗರ ಪಿರಿಯಂ ಎನಿಪ ಆಂಡಯ್ಯಂ: **ಕಬ್ಬಿಗಕಾ,** ೯)

**ಲೆಕ್ಕಿಗರರಸ** – ಲೆಕ್ಕಿಗರ ಪಿರಿಯ (ಗರುವಿಕೆಯನಾಂತ ಸಾವಂತಂಗಂ ಚೆಲ್ವುವರಿವ ಬಲ್ಲವ್ವೆಗಂ ಒಪ್ಪುವ ಲೆಕ್ಕಿಗರರಸನೊಗೆದಂ ಆಂಡಯ್ಯಂ: **ಕಬ್ಬಿಗಕಾ,** ೧೧)

**ಲೆಪ್ಪ** – [ಲೇಪ್ಯ] ಎರಕದ ಬೊಂಬೆ (ಹರಿನೀಳಭೂಮಿಯೊಳ್ ಕಪ್ಪುರವಳುಕಿನ ಲೆಪ್ಪದಂತೆ .. .. ಜಗುನೆಯೊಳ್ ಸಂಚರಿಸುವ ಹಂಸಂಬೊಲೆಸೆದಂ ಅಮರೋತ್ತಂಸಂ: **ಮಲ್ಲಿನಾಪು,** ೧೧. ೪೩)

**ಲೇಖಪತ್ರ** – ಬರೆದ ಓಲೆ (ಕರಂಡಕದೊಳಿರ್ದ ಲೇಖಪತ್ರಮಂ ತೋಱೆ ತಲೆಯೊಳಿಟ್ಟುಕೊಂಡು ಓಲೆಯಂ ಬಾಜಿಸಿ: **ಚಾವುಂಪು,** ಪು. ೩೮೨. ಸಾ. ೪)

**ಲೇಖಪ್ರಾನ** – ದೇವತಾ ಸಮೂಹ (ವಿದ್ಯಾಧರ ಉವೀಶ್ವರಚಯಂ ಅವರಿಂ ಮೇಲೆ ಲೇಖಪ್ರತಾನಂ ಬರೆ: **ಕರ್ಣನೇಮಿ,** ೧೨. ೨೮೫)

**ಲೇಖವಾರ್ತೆ** – ಪತ್ರದಲ್ಲಿ ಬರೆದಿರುವ ವಿಷಯ (ಲೇಖವಾರ್ತಾಕರ್ಣನದೊಳ್ ಅತಿಕುಪಿತನುಂ ಸಮರಸನ್ನದ್ಧನುಮಾಗಿ ಬಂದು ದೂತರಂ ಕಳಿಪೆ ಭರತೇಶ್ವರಂ ಮುಳಿದು: **ಚಾವುಂಪು,** ಪು. ೧೯. ಸಾ. ೧೭)

**ಲೇಖವಾಹಕ** – ಓಲೆ ಒಯ್ಯುವವನು (ತದ್ಗಾಂಗೇಯಾಮಾತ್ಯಂ ಔತ್ಸುಕ್ಯದಿಂ ಲೇಖವಾಹಕಪುರಸ್ಸರಂ .. .. ಪೋಗಿ: **ತ್ರಿಷಷ್ಟಿಪು,** ೧೮. ೨೩ ವ)

**ಲೇಖವಾಹಕವೃತ್ತಿ** – ದೌತ್ಯ, ಸಂದೇಶವಾಹನ (ನಾಡುಂ ಬೀಡುಮಂ ಸೋಲ್ತು ಸೆಱೆಗೆವಂದು ಲೇಖವಾಹಕವೃತ್ತಿಯಂ ಪೂಣ್ದು ಬಿಡಿಸಿಕೊಂಡು ನಡೆಯುತ್ತಂ: **ವರ್ಧಮಾಪು,** ೨. ೪೪ ವ)

**ಲೇಖೆ** – ಗೆರೆ (ಬಹುಧೂಮಲೇಖೆ ನಿಮಿರ್ದುವು ಮಿಹಿರಾಧ್ವದೊಳಾಂಜನೇಯನೊಡರಿಸೆ ಲಂಕಾದಹನಂ: **ಪಂಪರಾ** ೧೦. ೧೪೫)

**ಲೇಲಿಹಾನ** – ಹಾವು (ತಂದುದೊ ಕೋಪಾಟೋಪದಿಂ ವಾಸುಗಿಗೆ ವಿಷಶಃಶೊಪಮಂ ಲೇಲಿಹಾನಂ: **ನೇಮಿನಾಪು,** ೮. ೩೩)

**ಲೇವಣ** – ಪದಕ, ಸರ (ಪದೆದಳವಟ್ಟ ಚಿನ್ನದುಡಿಯಂ ಪೊಸ ಲೇವಣದಿಂ ಪೊದಳ್ದು: **ತ್ರಿಷಷ್ಟಿಪು,** ೨೪. ೨೫೨)

**ಲೇಶ್ಯಾಶುದ್ಧಿ** – [ಜೈನ] ಕರ್ಮಸಂಬಂಧೀ ಬಣ್ಣಗಳ ನಾಶ (ಅಂತು ಪೊಱಗಣ ಒಳಗಣ ಎರಡುಂ ಲೇಶ್ಯಾಶುದ್ಧಿಯಂ ತಾಳ್ದಿ ತಟತಟಿಸಿ ಶೀತಳತಳದೊಳಗೆ ಬಳ್ವಳ ಬಳೆದು: **ಶಾಂತಿಪು,** ೯. ೩೩ ವ)

**ಲೇಶ್ಯಾ[ಶ್ಯೆ]** – [ಜೈನ] ಕರ್ಮಸಂಬಂಧವಾದ ಬಣ್ಣಗಳು ಆರು: ಕೃಷ್ಣ, ನೀಲ, ಕಪೋತ, ಪೀತ, ಪದ್ಮ, ಶುಕ್ಲ; ಇವು ಕ್ರಮವಾಗಿ

ಆಲಸ್ಯ, ಬುದ್ಧಿಹೀನತೆ, ಅವಿವೇಕ, ವಿಷಯಲಂಪಟತೆ, ಅಭಿಮಾನ, ಕಾಪಟ್ಯ, ಅತಿನಿದ್ರೆ ಇವುಗಳಿಗೆ ಕಾರಣ (ಅಂತವಿಶ್ರಾಂತ ಚತುಃಪ್ರಕಾರಧರ್ಮಚಿಂತಾಪರಂ ವಿಶುದ್ಧ ಲೇಶ್ಯಾಪರಿಣಾಮಪರಿಪೂರ್ಣಂ ಅಪ್ರಮತ್ತಗುಣಸ್ಥಾನದೊಳ್ ನಿಂದು .. .. ನಾಲ್ಕುಂ ದರ್ಶನಘಾತಿಗಳುಮಂ ಪರಿವಿಡಿಯಿಂ ಕಿಡಿಸಿ: **ಮಲ್ಲಿನಾಪು,** ೧೪. ೫೭ ವ)

**ಲೇಸು** – ಶ್ರೇಯಸ್ಕರ ನಿಮ್ಮಡಿ ಕೊಲೆ ಸಾವುದು ಲೇಸಲ್ತೆ: **ಪಂಪಭಾ,** ೧೧. ೩೧)

**ಲೇಸುಗೆಯ್** – ಒಳ್ಳೆಯದನ್ನು ಮಾಡು (ಆ ಸುರೋತ್ತಮಂ ಸಂತಸದಿಂದೆ ಭಕ್ತಿವೆರಸಾಗಳೆ ಪೂಜಿಸಿ ಲೇಸುಗೆಯ್ದನಿನ್ನಂತುಟೆ ತನ್ಮನೀಂದ್ರಕೃತಮಂ ಮಱೆದಂದು ಕೃತಘ್ನನಾಗನೇ: **ಸುಕುಮಾಚ,** ೯. ೩೧)

**ಲೊಕ್ಕಿ** – ಒಂದು ಗಿಡ (ಪುಲುಗಿಲುಂ ಉತ್ತರಣೆಯುಮಂ ಅಂತೆ ಲೊಕ್ಕಿಯುಂ ಮತ್ತೆ ಮುತ್ತಂ ಆ ಎಕ್ಕೆಯುಮಂ ಕೋಲೆಯುಂ ಬನ್ನಿಯ ಮರನಂ ಕುಲದೆಯ್ವಮಿದೆಂದು ಕೊಂಡುಕೊನೆವರ್ ಮೂಢರ್: **ಸಮಯಪ,** ೯. ೫೭)

**ಲೊವೆ** – ಲೋವೆ, ಇಳಿಜಾರಾದ ಸೂರು (ತಳಿರ ನೆಲಗಟ್ಟು ಪೊಸದಳಿರ್ಗಳ ಕಂಬಂ ತಳಿರ ಭಿತ್ತಿ ತಳಿರ್ಗಳ ಲೊವೆ: **ಪಾರ್ಶ್ವನಾಪು,** ೯. ೨೯)

**ಲೋಕ** – ಜನ, ಜಗ (ಲೋಕಂ ಜನಮುಂ ಜಗಮುಂ: **ಅಭಿಧಾವ,** ೩. ೧. ೨೦)

**ಲೋಕಜ್ಞ** – ಲೋಕದ ರೀತಿನೀತಿಗಳನ್ನು ಬಲ್ಲವನು (ನಿಮ್ಮಡಿಯಂ ಕಾಣಲ್ ಬಂದು ಲೋಕಜ್ಞರುಂ ಸೇವಾವಿಚಕ್ಷಣರುಂ ಅಪ್ಪುದಱಿಂದಂ .. .. ಅದೃಶ್ಯರಾಗಿ ನೋಡುತ್ತುಮಿರ್ದರ್: **ಶಾಂತಿಪು,** ೯. ೫೫ ವ)

**ಲೋಕನೇತ್ರ** – ಸೂರ್ಯ, ಚಂದ್ರ (ನಿಜನೇತ್ರಂ ಲೋಕನೇತ್ರಂ ನಿಜಭರಣಂ ಇಳಾಚಕ್ರಭರಾವಹಂ .. .. ಸುಪ್ರಮೋದಂ ಕುಡುಗೆ ಎಮಗೆ ಅತುಳಶ್ರೇಯಮಂ ಶೈಲಜೇಶಂ: **ರಾಜಶೇವಿ,** ೧. ೨)

**ಲೋಕಪೂರಣಕ್ರಿಯಾ** – [ಜೈನ] ಕೇವಲಿಗಳ ಆತ್ಮವು ಭೂಮಂಡಲದ ವಾಯುತ್ರಯದೊಡನೆ ಬೆರೆಯುವುದು (ವ್ಯಾಪ್ತಸಪ್ತಘನರಜ್ಜುಪ್ರಮಾಣಾಶೇಷ ಜಗತ್ಪ್ರದೇಶ ಲೋಕಪೂರಣ ಕ್ರಿಯಾಪರಿಸಮಾಪ್ತಿಯಂ ಮಾಡಿ: **ಆದಿಪು,** ೧೬. ೪೯ ವ)

**ಲೋಕಪ್ರತೀತ** – ಜಗತ್ಪ್ರಸಿದ್ಧ (ಲೋಕಪ್ರತೀತ ಸುಭಗವಿವೇಕಾಳಾಪಂ ಪ್ರಸನ್ನಮದುಮಿಂತಕ್ಕುಂ: **ಕವಿರಾಮಾ,** ೨. ೭೫)

**ಲೋಕಮೂಢತ್ವ** – ಮೂಢತ್ರಯಗಳಲ್ಲಿ ಒಂದು, ಅಕೃತ್ರಿಮ ಲೋಕಸ್ವರೂಪವನ್ನು ತಿಳಿಯದಿರುವುದು (ಮತಿವಂತಂ ಸಲೆ ದೇವಮೂಢತೆಯುಮಂ ಪಾಷಂಡಿಮೂಢತ್ವಮಂ ಸತತಂ ಲೌಕಿಕಮಪ್ಪ ಮೂಢತೆಯುಮಂ ನಿರ್ವ್ಯಾಜದಿಂ ಬಿಟ್ಟು: **ಸಮಯಪ,** ೯. ೨)

**ಲೋಕಲುಂಟಾಕ** – ಲೋಕಕ್ಕೆ ಪೀಡೆಯಾದವನು (ರಣಮೇರು ಲೋಕಲುಂಟಾಕ ನಿದಾಘತಾಪಪಹರವರ್ಷಣ ಮೇಘಂ ಉದಾತ್ತರಾಘವಂ: **ಪಂಪರಾ,** ೫. ೭೨)

**ಲೋಕಾಂತರಿತ** – ಬೇರೆ ಲೋಕಕ್ಕೆ ಹೋದವನು, ಸತ್ತವನು (ಎನ್ನ ಮಗನ ಮೇಲೆ ದೋಷಂ ಆವುದುಂ ಇಲ್ಲ ಎಂದು ಲೋಕಾಂತರಿತನಾದಂ: **ಪಂಚತಂತ್ರ,** ೨೪೨ ವ)

**ಲೋಕಾಂತಿಕದೇವ** – [ಜೈನ] ಸಾರಸ್ವತ, ಆದಿತ್ಯ, ವಹ್ನಿ, ಅರುಣ, ಗರ್ದತೋಯ. ತುಷಿತ, ಅವ್ಯಾಬಾಧ, ಅರಿಷ್ಟ ಎಂಬ ಎಂಟು ಮಂದಿ (ಪರಿನಿಷ್ಕ್ರಮಣ ಕಲ್ಯಾಣಮನನಾಗಿ ನಿಶ್ಚಯಿಸಲೊಡಂ ಲೋಕಾಂತಿಕದೇವರ್ ಬಂದು ಎಱಗಿ: **ಶಾಂತಿಪು,** ೯. ೬೦ ವ)

**ಲೋಕಾಕಾರ** – [ಜೈನ] ಅಧೋ, ಮಧ್ಯ, ಊರ್ಧ್ವಲೋಕಗಳು (ಮುನಿಮಾರ್ಗೋಕ್ತ ಪುರಣಪದ್ಧತಿಗೆ ಲೋಕಾಕಾರಮುಂ ತೀರ್ಥವರ್ತನಮುಂ: **ಅನಂತಪು,** ೧. ೬೭)

**ಲೋಕಾಕಾಶ** – [ಜೈನ] 'ಷಡ್ದ್ರವ್ಯ'ಗಳನ್ನು ಹೊಂದಿರುವ ಆಕಾಶಪ್ರದೇಶ (ಲೋಕಾಕಾಶಪ್ರದೇಶಪ್ರಮಾಣಪರಿಮಾಣಮುಂ ಅಸ್ಮದಾದ್ಯನುಮೇಯಮುಂ ಸರ್ವಜ್ಞಪ್ರತ್ಯಕ್ಷಗೋಚರಮಪ್ಪುದು ಮುಖ್ಯಕಾಲಂ: **ಆದಿಪು,** ೬. ೪೮)

**ಲೋಕಾಯತ** – ನಾಸ್ತಿಕ (ಎಂದು ತಥಾಗತಮತಮಂ ತಿರಸ್ಕರಿಸಿ ತನ್ನೊಳ್ ಅಶಕ್ಯಾನುಷ್ಠಾನಕ್ಕೆ ಪೊಣರ್ದ ಲೋಕಾಯತ ಶಾಕ್ಯಮತಾವಲಂಬಿಯಂ ಅನವಲಂಬಿತಂ ಗೆಲ್ದು: **ಶಾಂತಿಪು,** ೮. ೧೪೭ ವ)

**ಲೋಕಾಯತಿಕ** – ನಾಸ್ತಿಕತೆ (ಮಹಾಮತಿ ಸಂಭಿನ್ನಮತಿ ಶತಮತಿಗಳ್ ಲೋಕಾಯತಿಕ ಯೋಗಾಚಾರ ಮಾಧ್ಯಮಿಕ ಮತವಿತಥಾಭಿಧಾಯಿಗಳ್ ಜೀವಾಭಾವಮನೆ ಪಿಡಿಯಲಚ್ಚುವಿಡಿದು: **ಆದಿಪು,** ೨. ೭ ವ)

**ಲೋಕೈಕಮಿತ್ರ** – ಸೂರ್ಯ (ಲೋಕೈಕಮಿತ್ರನಿರೆ ಪೆಱರ್ಗೆಕೆಯೊ ಪೃಥುತೇಜಂ ಎಂದು ಸೈರಿಸದವೊಲ್: **ಪುಷ್ಪದಂಪು,** ೫. ೪೧)

**ಲೋಕೋತ್ತರ** – ಅಸಾಧಾರಣ[ವಾದ] (ಭೂಪತಿಯಂ ಬೆಸವೇಟ್ಟುಗುರ್ವು ಲೋಕೋತ್ತರಮಾಗೆ ವೀರಭಟರನೇಂ ಪೂಣ್ದನೋ: **ಶಾಂತಿಪು,** ೩. ೬೮)

**ಲೋಗ** – ಸಾಮಾನ್ಯ ವ್ಯಕ್ತಿ (ಚಿತ್ರಕಥೆಗಳಂ ಪಟದೊಳ್ ತೋಱಿ ಪೇಟ್ದು ಲೋಗರಂ ಡಂಬಿಸಿ ಮಾಱುಗೊಳ್ವ ಬತ್ತಮಂ ಕಳ್ವೊಂ: **ವಡ್ಡಾರಾ,** ಪು ೧೪, ಸಾ ೧೯)

**ಲೋಗೇಶ್ವರ** – ಲೋಳಿಸರ (ಎರಡುಂ ದೆಸೆಗೆ ಎಸುತುಂ ಅಂತೆ ಪರಿಯಿಸಿ ಲೋಗೇಶ್ವರದೊಳಗೆ ಬಂಡಿವರಿಂತಿರೆ ಚಕ್ರವ್ಯೂಹದೊಳಗೆ ಪರಿದತ್ತು ರಥಂ: **ಹರಿವಂಶ,** ೧. ೧೨)

**ಲೋಚನ** – ಕಣ್ಣು (ಕಳಕಂಠಲೋಚನಚ್ಛವಿವಿಳಾಸಮಂ ತಳೆದ ನೀಲ ಪಾಟಳ ಜಂಬೂಫಳ ಮಧುರರಸಮನೀಂಟಿದೆಂ ಇಳೇಸ ಪಿರಿದಟ್ಟಿಯಿಂ ಮನಂ ತಣಿವಿನೆಗಗಂ: **ಕಾದಂಬ,** ೧. ೭೩); ಕಣ್ಣು

**ಲೋಚನಾಂಶು** – ಕಣ್ಣಿನ ಹೊಳಪು (ನಡು ನಡೆಪಿತ್ತು ತನ್ನನೆನೆ ಮೆಯ್ ಬಡವಾದುದು ಲೋಚನಾಂಶುಗಳ್ ಬಿಡೆ ತೊಡರ್ದಂತೆ ಗಂಡಯುಗಳಂ ಬಿಳಿದಾದುದು: **ಚಂದ್ರಪ್ರಪು,** ೫. ೧೨೪)

**ಲೋಚು** – [ಜೈನ] ಮುನಿಗಳು ತಮ್ಮ ತಲೆಗೂದಲನ್ನು ತಾವೇ ಕಿತ್ತುಕೊಳ್ಳುವುದು (ಉನ್ಮೀಲಿತ ಲೋಚನೆ ಲೋಚಂ ಮಾಡಲೆಂದು .. .. ಕೋಮಲಾಂಗುಲಿಗಳ್ .. .. ಕುಂತಳ ಕಮಳವನದೊಳಗೆ ಪುಗುವಾಗಳ್: **ನೇಮಿನಾಪು,** ೩. ೨೮ ವ)

**ಲೋಚುಗೆಯ್** – [ಜೈನ] ಜಿನದೀಕ್ಷೆ ಪಡೆದವರ ಕೂದಲು ಕೀಳು (ಲೋಚುಗೆಯ್ದು ಅಂಕಕಾಱಂಗೆ ಪಂಚರಾಯಿತದ ತೊಗಲನೇಱಿಸುವಂತೆ ಪಂಚಮಹಾವ್ರತಂಗಳನೇಱಿಸಿ: **ಹರಿವಂಶ,** ೧೦. ೩೦ ವ)

**ಲೋಧ್ರ** – ಲೊದ್ದಗೆ ಗಿಡ, ಸಾಂಬ್ರಾಣಿ ಗಿಡ (ಪ್ರಬುದ್ಧ ಲೋಧ್ರಂಗಳಿಂ ರಾಗಮಂ ಬೀಱುವಂತೆ ಮುಗುಳ್ನಗೆ ನಗುವಂತೆ: **ಆದಿಪು,** ೭. ೩೬ ವ)

**ಲೋಧ್ರಿ** – ಲೋಧ್ರ (ಮೂದಲಿಸಿ ಲೋಧ್ರಿಗೆ ಮೊಲ್ಲೆಗೆ ಸಿಂಧುವಾರ ಮಲ್ಲಿಗೆ ಕುಸಿಗಣ್ಚಿ ಮೆಟ್ಟಿ ಜಡಿದು ಊಳ್ದುವು ಕೋಗಿಲೆ: **ಅನಂತಪು,** ೬. ೮೩)

**ಲೋಭ** – ದುರಾಸೆ (ಅನ್ಯತಂ ಲೋಭಂ ಭಯಮೆಂಬಿನಿತುಂ ನೀನಿಧ್ ನಡೊಳ್ಕುರ್ಮೇ: ಗದಾಯು, ೫. ೧೭)

**ಲೋಭಕ** – ಜಿಪುಣತನದಿಂದ ಕೂಡಿದ (ಮಮ್ಮಲಮಱುಗುತ್ತಮೀವ ಕಡುಲೋಭಕದಾನಗುಣಂಗಳಂ ಪಳಂಚೆ: **ಅಜಿತಪು,** ೧೨. ೧೭)

**ಲೋಮಂಥ** – ರೋಮಂಥ, ಮೆಲುಕು ಹಾಕುವುದು (ಲೋಮಂಥಫೇನದಿಂ ಮೆಲ್ನಡೆಯಿಂ ಬಿಗಿವ ಘಟೋಧ್ನಿಗಳಿಂ ಮಹಿಷಿಗಳ್ ಅಗ್ರಭಾಗದೊಳ್ ಎಸೆದುವಾ ಕಾನನದೊಳ್: **ತ್ರಿಷಷ್ಟಿಪು,** ೮. ೩೮)

**ಲೋಯಿಸರ** – ಲೋಳಿಸರ (ಆ ಪ್ರಾಯದೊಳ್ ಮತ್ತಮೊರ್ವ ದೇವತೆ ಲೋಯಿಸರದ ಮೇಲೆ ಭಂಡಿ ಪರಿದಂತು ಮಾಟ್ಟಿಂ ಎಂದು: **ನೇಮಿನಾಪು,** ೭. ೭೬ ವ)

**ಲೋಲ** – ಚಪಲ (ಚಲ ಲೋಲಂ ಚಪಲಂ ಚಂಚಲ: **ಅಭಿಧಾವ,** ೨. ೧. ೬೦); ಚಲಿಸುತ್ತಿರುವ (ಏಂ ಬಗೆವಂದುದೋ ರವಿಬಿಂಬಮನೊಳಕೊಂಡು ಪೊಳೆವ ಪರಿವೇಷದವೋಲ್ ಜಂಬೂದ್ವೀಪಮನೊಳಕೊಂಡ ಅಂಬುಧಿ ರತ್ನಾಂಶುಲೋಲಲಹರೀಜಾಲಂ: **ಮಲ್ಲಿನಾಪು,** ೧. ೬೦); ಚಂಚಲ (ಸಾಲಪ್ರಾಂಶು ವಿಶಾಲ ಲೋಲನಯನಂ ಪ್ರೋದ್ಯತ್ ವೃಷಸ್ಕಂಧಂ ಉನ್ಮೀಲತ್ ಪಂಕಜವಕ್ತ್ರಂ ಆಯತ ಸಮಗ್ರ ಉರಸ್ಸ್ಥಳಂ: **ಪಂಪಭಾ,** ೧. ೬೮)

**ಲೋಲಂಬಕದಂಬ** – ದುಂಬಿಗಳ ಹಿಂಡು (ವಿಲಿಪ್ತ ಯಕ್ಷಕರ್ದಮಾಮೋದಕೃಷ್ಟ ವನಕುಸುಮಾಲೋಲ ಲೋಲಂಬಕದಂಬಮುಂ: **ಚಂದ್ರಪ್ರಪು,** ೭. ೮೪ ವ)

**ಲೋಲತೆ** – ಆಸೆ (ಲೋಲತೆಯಿಂದೀಕ್ಷಿಪ ಗಣಿಕಾಲಿಯಪಾಂಗ ತ್ರಿವರ್ಣರುಚಿಗಳ್ ನೀಳ್ದೇಂ ಲೀಲೆಯನಾಂತುವೋ: ಮುತ್ತಿನ ನೀಲದ ಮಾಣಿಕದ ತೋರಣಂಗಳ ತೆಱದಿಂ: **ಚಂದ್ರಪ್ರಪು,** ೧೦. ೪)

**ಲೋಲಾಪಾಂಗೆ** – ಚಂಚಲವಾದ ನೋಟವುಳ್ಳವಳು (ಯಜ್ಞನ ಯ್ದಿದನುತ್ತುಂಗತರಂಗೆಯಂ ಶಫರಲೋಲಾಪಾಂಗೆಯಂ ಗಂಗೆಯಂ: **ಪಂಚತಂತ್ರ,** ೩೫೭)

**ಲೋಲುಪ** – ಲಂಪಟ, ಆಸೆಬುರುಕ (ವಿಹಗಾಮಿಷ ಲಾಭಲೋಲುಪಂ ನೀಡಿದನಾ .. .. ಮರನಂ ಮಹೀಪತೀ: **ಕಾದಂಬ,** ೧. ೧೪೭)

**ಲೋಲುಪ್ತಿ** – ಲಾಂಪಟ್ಯ (ಪರಸ್ಪರಸ್ಪರ್ಶನಲೋಲುಪ್ತಿಯಿಂ ಮನಮೆ ತನುವಾದುದನಜೆಪುವಂತೆ: ಲೀಲಾವತಿ, ೧೦. ೪೫ ವ); ತೀವ್ರ ಆಸೆ (ಪರಸ್ಪರ ಸ್ಪರ್ಶನ ಲೋಲುಪ್ತಿಯಿಂ ಮನಮೆ ತನುವಾದುದಂ ಅಱೆಪವಂತೆ: **ಲೀಲಾವತಿ,** ೧೦. ೪೫ ವ)

**ಲೋಲೇಕ್ಷಣ** – ಚಂಚಲನೇತ್ರ (ಲೋಲೇಕ್ಷಣಂ ಸಂಚಲತ್ ಕುಂತಳಂ ಭ್ರೂವಿಭ್ರಮಂ ಶೋಭಿಸೆ ತಿಳಿಗೊಳನಂ ಫುಲ್ಲ ಪಂಕೇಜಮಂ ನಿರ್ಮಳ ತಾರಾಧೀಶನಂ ಪೋಲ್ತೆಸೆಯೆ: **ಅಜಿತಪು,** ೨. ೪೦)

**ಲೋವಿಸರ** – ಲೋಳಿಸರ (ಪರಿಯೆ ರಥಂ ನೀರಾವಳಿ ಮುಮ್ಮೞಿಯಾದುದು ಲೋವಿಸರದ ಮೇಲೆ ಭಂಡಿ ಪರಿದಂತಾಗಳ್: **ಪಾರ್ಶ್ವನಾಪು,** ೩. ೧೨೨)

**ಲೋವೆ** – ಸೂರಿನ ಮುಂಭಾಗ, ಇಳಿ ಸೂರು (ಮಣಿಮಾಡದ ಮುಂದಣ ಪಚ್ಚೆಯ ಮೊಗಸಾಲೆಯ ಲೋವೆಯೊಳ್ ಪಂಚರತ್ನದಿಂದಿಕ್ಕಿದ ರಂಗವಲ್ಲಿಯ ನಡುವಣ ಮಣಿಮಯ ಸಿಂಹಾಸನದ ಮೇಲೆ: **ಸುಕುಮಾಚ,** ೧೦. ೧೨೨ ವ)

**ಲೋಹಖುರವಾಹ** – ಲಾಳ ಕಟ್ಟಿದ ಕುದುರೆ (ಚಾಮರಮಂ ಚನ್ನೆಯರಿಕ್ಕೆ ಲೋಹಖುರವಾಹಂ ಸುತ್ತಿ ಕಾಲ್ಗಾಪಿನೊಳ್ ಬರೆ ಬಂದಂ .. .. ವಜ್ರಬಾಹುಮಹಿಪಂ ವಜ್ರಾಯುಧಂ: **ಪಂಪರಾ,** ೨. ೧೧)

**ಲೋಹಜಬಂಧ** – ಕಬ್ಬಿಣದ ಸರಪಳಿ (ತ್ರಿಜಗದ್ಭೂಷಣವಾರಣಂ ಮುಱಿಯೆ ಪಾಯ್ದಾಲಾನಮಂ ತ್ವಗಜಲೋಹಜಬಂಧಂಗಳಂ ಎಲ್ಲಮಂ ಪಱಿವಿನಂ .. .. ಬಂದು: **ಪಂಪರಾ,** ೧೫. ೩೦)

**ಲೋಹಪಿಂಡ** – ಕಬ್ಬಿಣದ ಗುಂಡು (ಕಾಯ್ದು ಪಜ್ಜಳಿಸುವ ಲೋಹಪಿಂಡಮನೆ ಭೋಂಕೆನೆ ನೀರೊಳಗರ್ದಿದಂತೆವೋಲ್: **ಆದಿಪು,** ೭. ೯೮)

**ಲೋಹಬಂಧ** – ಸಂಕೋಲೆ (ಮದದಿಂದಗುರ್ವುವೆತ್ತ ಮುಳಿಸಿಂ ಕೊಲೆಯಿಂದಫಲೋಹಬಂಧಮಾದುದು: **ಸಮಯಪ,** ೧೫. ೯೯)

**ಲೋಹವಕ್ಕರಿಕೆ** – ಯುದ್ಧ ಪ್ರಾಣಿಗಳಿಗೆ ಹಾಕುವ ಲೋಹದ ಕವಚ (ಇಕ್ಕಿದ ಲೋಹವಕ್ಕರಿಕೆಯುಂ ಎತ್ತಿದ ಕರಂ ಬೆರಸು ಗಾಳಿಯನೆಡಗಲಿಸಿ: **ಕರ್ಣನೇಮಿ,** ೧೧. ೧೭೨ ವ)

**ಲೋಹವಕ್ಕರೆ** – ಯುದ್ಧದ ಆನೆಕುದುರೆಗಳಿಗೆ ಹಾಕಿರುವ ಕಬ್ಬಿಣದ ಪಕ್ಷರಕ್ಷೆ (ಒದವಿದ ಲೋಹವಕ್ಕರೆಯ ವಾಹಕರಿಕ್ಕಿದ ಸೀಸಂಕಂಗಳ್ ಎತ್ತಿದ ಕರವಾಳವಜ್ರಕವಚಂಗಳ ಕಾಂತಿ ದಿಗಂತರಾಳಮಂ ಪುದಿವಿನೆಗಂ: **ಪಂಪರಾ,** ೧೩. ೬೦)

**ಲೋಹಿತ** – ರಕ್ತ (ವೈರಿಬಲಲೋಹಿತ ಬಂಧುರದಂಡಮೀ ಭುಜಾದಂಡಂ: **ಗದಾಯು,** ೧. ೭೩); ಕೆಂಪು ಬಣ್ಣದ (ಅರುಣಂ ಶೋಣಂ ಕೋಕನದರೋಚಿ ರಕ್ತಂ ಅದು ಲೋಹಿತಂ: **ಅಭಿಧಾವ,** ೨. ೧. ೬೪)

**ಲೋಹಿತಮತ್ಸ್ಯ** – ಕೆಂಪು ಮೀನು (ಶ್ರಾದ್ಧಕ್ಕೆ ಅತ್ಯುತ್ತಮ ಲೋಹಿತಮತ್ಸ್ಯಮಂ ಉತ್ತಮಮೆಂದೊಂದು ಕಡಿಯನಡಿಸಿದಂ ಅರಸಂ: **ಯಶೋಧಚ,** ೩. ೫೦)

**ಲೋಹಿತಲೋಚನ** – ಕೆಂಗಣ್ಣು[ಗಳುಳ್ಳವನು] (ಅಕಾಲಸಂಧ್ಯಾಪ್ರದಾನ ಪ್ರವೀಣ ಲೋಹಿತಲೋಚನನುಂ ಚಂಡಿಕಾರುಧಿರಧಾರಾವಿನಿಹಿತಶಸ್ತ್ರೋಲ್ಲೇಖನ ವಿಷಮಿತ ಭುಜಯುಗಳನುಂ: **ಕಾದಂಬ,** ೧. ೧೩೯ ವ)

**ಲೊಹಿತಾಂಗ** – ಕೆಂಪೇರಿದ ದೇಹ (ಉದಯಗಿರಿ ಕಟಕ ಕುಹರ ಪರಿಕರ ನಿಶಾಕರಂ ಹರಿದಳಿತ ನಿಜಹರಿಣ ರುಧಿರನಿಚಯ ನಿಚಿತಮಾದಂತೆ ಲೋಹಿತಾಂಗನಾಗೆ: **ಪಂಪಭಾ,** ೪. ೪೯ ವ); ಅಂಗಾರಕ (ಕ್ಷಿತಿತನಯಂ ವಕ್ರಂ ಲೋಹಿತಾಂಗಂ ಅಂಗಾರಕಂ ಕುಜಂ: **ಅಭಿಧಾವ,** ೧. ೧. ೭೨)

**ಲೋಹಿತಾಶ್ವ** – ಅಗ್ನಿ (ಮಸಗಿರ್ದ ಲೋಹಿತಾಶ್ವರಪ್ರಸರಂ ಕಾಳ್ಗರಡಮೆಲ್ಲಮಂ ಮೇಯೆ: **ಜಗನ್ನಾವಿ,** ೧೭. ೬೫)

**ಲೋಳೆ** – ಜೊಲ್ಲು (ಕೊರೆವೊಡೆ ಬೆಟ್ಟುಗಳ್ ಬಿರಿವುವು ಉಣ್ಮುವ ಲಾಳೆಯ ಲೋಳೆಗಳ್ ಪೊನಲ್ವರಿವುವು ಕೆಮ್ಮಿ ಕುಮ್ಮಿದೊಡೆ ತೋಳೊಳೆ ಜೀವವಿಯೋಗಮಪ್ಪುದು: **ಪಂಪಭಾ,** ೪. ೧೦೦)

**ಲೋಳೆವಾಯ್** – ಜೊಲ್ಲು ಸುರಿಯುವ ಬಾಯಿ (ಕಲಮಣಿನೂಪುರಂ ತನಗೊಡಂಬಡೆ ಗುಡಿಗೆ ಲೋಳೆವಾಯ್ ಮನಂಗೊಳೆ: **ಅಜಿತಪು,** ೫. ೬೨)

**ಲೌಡಿ** – ಒಂದು ಆಯುಧ (ಪಾಶದ ಅಂಕುಶದ ವಂಕಿಯ ಲೌಡಿಯ ಜವದಾಡೆಯ .. .. ಮೆಱೆದು ನೆರೆದ ಪದಾತಿವ್ಯೂಹದಿಂ: **ರಾಜಶೇವಿ,** ೬. ೧೧ ವ)

**ಲೌಡಿಗೆ** – ಒಂದು ಆಯುಧ (ಆರ್ಪಿನಿಂದಿಡುವ ಮಹೋಗ್ರ ಚಕ್ರಕುಱಿ ಮಾಡುವ ಲೌಡಿಗೆ .. .. ಬಿಡದಾಂತು ತಳ್ತಱೆವುತಿರ್ದುದು: **ತ್ರಿಷಷ್ಟಿಪು,** ೨೪. ೩೨೫)

**ಲೌಲ್ಯ** – ಚಂಚಲತೆ (ಪಲರೇಂ ಲೌಲ್ಯರೊ ಭಾವಿಸಲ್ ಅದಮಾಂಗಲ್ಯಂ ಪೆಸರ್ಗೊಂಡ ಬಟೆಯುಂ ಉಣ್ಬರೆ ಜೈನರ್: **ಸಮಯಪ,** ೬. ೧೧)

**ಲೌಹಿತ್ಯ** – ಬ್ರಹ್ಮಪುತ್ರಾ ನದಿ (ಲೌಹಿತ್ಯಮಂ ಅಂಬುಧಿ ಪರಿವಾಹಂ ಅವನೀಶನೇಱೆ ತತ್ತಟನೃಒಸಂದೋಹಮೆಱೆಗಿದುದು ಅಧೀಶಗಜಾಹತ ಕಾಲಾಗರುದ್ರುಮಂಬೆರಸಾಗಳ್: **ಶಾಂತಿಪು,** ೧೦. ೭೮)

# ವ

**ವಂಕ** – ವಕ್ರ (ಕಲಿಗಳ ಕಾಪಿನ ವಂಕದ ಪುಲಿಮೊಗದತಿ ಲಸಿತ ವಾಕವಾಟಂಗಳ: **ತ್ರಿಷಷ್ಟಿಪು,** ೧೭. ೨೧)

**ವಂಕದರ** – ಕೋಟೆಯ ಪಕ್ಕದ ಚಿಕ್ಕ ಬಾಗಿಲು, ವಕ್ರದ್ವಾರ (ಕೋಟೆಗಾವಗಂ ಕೆಡಪುವ ಗಗ್ಗೆ ವಂಕದರದಿಂ ಪೊಱಮಟ್ಟುಬೆವ ಆಳ್ಗಂ: **ಚಂದ್ರಪ್ರಪು,** ೫. ೧೦೬)

**ವಂಕದಾರ** – ಕೋಟೆಯ ಪಕ್ಕದ ಚಿಕ್ಕ ಬಾಗಿಲು (ಆ ಕುಮಾರನ ಲಕ್ಷ್ಮೀಮಂದಿರಕ್ಕೆ ವಂದು ವಂಕದಾರದೊಳ್ ನಿಂದು: **ಸುಕುಮಾಚ,** ೧೦. ೧೧೭ ವ)

**ವಂಕಿ** – ಚಂದ್ರಾಯುಧ (ಪಾಶದ ಅಂಕುಶದ ವಂಕಿಯ ಲೌಡಿಯ ಜವದಾಡೆಯ .. .. ಮೆಱೆದು ನೆರೆದ ಪದಾತಿವ್ಯೂಹದಿಂ: **ರಾಜಶೇವಿ,** ೬. ೧೧ ವ)

**ವಂಗಡ** – ಗುಂಪು, ಸಾಲು (ಜಕ್ಕವಕ್ಕಿಗಳ ವಂಗಡಂ ಇಂಬಱೆದಿರ್ಪ ಗಂಡುಗೋಗಿಲೆಗಳ ತಂಡಮೊಪ್ಪೆ ಬಗೆಗೋಲಗಮೊಪ್ಪಿದುದಂದು ಕಾವನಾ: **ಕಬ್ಬಿಗಕಾ,** ೧೦೧)

**ವಂಚನೆ** – ಮೋಸ (ಪಸುಗೆ ನೆಲಂ ಜಲಂ ಹಯದೊಡಂಬಡು ವಂಚನೆ ಕೇಣಂ ಆಸನಂ ಕೊಸೆ ದೆಸೆ ದಿಟ್ಟಿ ಮುಟ್ಟಿ ಕೆಲಜಂಕೆ ನಿವರ್ತನೆ ಕಾಣ್ಕೆ ಪರ್ವಿದ ಏರ್ವೆಸನದೊಳಾದ ಬಲ್ಮೆಯೊಳ್ ಒಡಂಬಡೆ ತಳ್ತಿಱೆವಲ್ಲಿ ಮಿಂಚಿನೊಳ್ ಮುಸುಕಿದ ಮಾಟ್ಕೆಯಾಯ್ತು ಸಮರಾಂಗಣಂ ಉಳ್ಕುವ ಬಾಳ್ಗಳ ಉಳ್ಕದಿಂ: **ಪಂಪಭಾ,** ೧೦. ೭೮); ಪಂಚತಂತ್ರಗಳಲ್ಲಿ ಒಂದು: ಇತರರ ಮನಸ್ಸನ್ನರಿತು ಸಂಧಾನ ಮಾಡಿ ವಂಚಿಸುವುದು (ಪೆಱರ ಬಗೆಯಱೆದು ಸಂಧಾನಂಗೆಯ್ದು ವಂಚಿಸುವುದು ವಂಚನೆ ಎಂಬುದು: **ಪಂಚತಂತ್ರ,** ೭೧ ವ)

**ವಂಚಿಸು** – ಮೋಸಮಾಡು; ಮುಚ್ಚಿಡು, ತಪ್ಪಿಸು (ಎನ್ನಂ ವಂಚಿಸಿ ಬಂದುದಱೆಂ ನಿನಗಿನಿತಾಯ್ತು ಅವಸ್ಥೆ ಕುರುರಾಜಾ: **ಗದಾಯು,** ೯. ೨೪)

**ವಂದನಮಾಳಾ** – ತೋರಣ (ಸಂಛನ್ನ ವಂದನಮಾಳಾ ಲಲಿತಾಂಸುಕಧ್ವಜವಿಳಾಸಾಕೀರ್ಣಮಂ ಮೆಚ್ಚಿ ಪೊಕ್ಕಂ ಅಯೋಧ್ಯಾಪುರಮಂ: **ಆದಿಪು,** ೧೪. ೧೪೯)

**ವಂದನಮಾಳೆ** – ತೋರಣ (ವಂದನಮಾಳೆಗಳಿಂದ ಸ್ಪಂದಿತಕೇತುಗಳಿನೆಸೆವ ನಿಜಮಂದಿರದೊಳ್ ತಂದು ಕುಮಾರನಂ ಇರಿಸಿದನಂದು: **ಕರ್ಣನೇಮಿ,** ೫, ೩೮)

**ವಂದನಾಭಕ್ತಿ** – [ಜೈನ] ೧. ಪ್ರಕೀರ್ಣಕಗಳಲ್ಲೊಂದು ಅರ್ಹದಾದಿಗಳ ವಂದನೆಯ ಲಕ್ಷಣ, ೨. ಭಾವಪೂಜಾಭೇದ (ಶ್ರೀ ಜಿನಚಂದ್ರಂ ವಿಬುಧಸಮಾಜಂಬೆರಸು ಅಂದು ವಂದನಾಭಕ್ತಿಯೊಳೇಂ ರಾಜಿಸಿದನೊ: **ಶಾಂತಿಪು,** ೫.೧)

**ವಂದಾರು** – ಸ್ತುತಿಕಾರ, ಹೊಗಳುವವನು (ವಂದಾರು ಮುನೀಂದ್ರ ವೃಂದಾರಕವೃಂದಸೌಂದರಮುಂ ಆಸನ್ನಭವ್ಯ ವ್ಯೋಮಚರ ಭೂಚರನಿಚಯನಿಚಿತಮುಂ ಆಗಿ: **ಆದಿಪು,** ೩. ೪೫ ವ)

**ವಂದಾಲಿ** – ಸೇವಕ (ಅಂತಾ ಸಮಯದೊಳ್ ವಂದಾಲಿಗಳ್ ಭರದಿಂ ತಂದು ಮುಂದಿರಿಸಿದ ದಿವ್ಯವಸ್ತ್ರಂಗಳಂ: **ತ್ರಿಷಷ್ಟಿಪು,** ೨೪. ೧೦೩ ವ)

**ವಂದಿ** – ಹೊಗಳು ಭಟ್ಟ (ಸೂತ ನಟ ವಂದಿಮಾಗಧ ವೈತಾಳಿಕ ಕಥಕ ಪುಣ್ಯಪಾಠಕ ವಿಪ್ರ ಉದ್ಭೂತರವಂ ಎಸೆಯೆ: **ಪಂಪಭಾ,** ೧೨. ೧೦೬)

**ವಂದಿಜನ** – ಹೊಗಳುಭಟ್ಟರ ಗುಂಪು (ನಿರಂತರಂ ಕಡಿಕಡಿದಿತ್ತ ಪೊನ್ನೆ ಬುಧ ಮಾಗಧ ವಂದಿಜನಕ್ಕೆ ಕೊಟ್ಟ ಕೋಡೆ ಎಡೆಱದೆ ಬೇಡಿಂ ಓಡಿಂ ಇದು ಚಾಗದ ಬೀರದ ಮಾತು ಕರ್ಣನಾ: **ಪಂಪಭಾ,** ೧. ೯೯);

**ವಂದಿಸು** – ನಮಸ್ಕರಿಸು (ಕ್ರಿಯಾಪೂರ್ವಕಂ ವಂದಿಸಿ ಭಟ್ಟಾರರ್ಗೆ ಗುರುಭಕ್ತಿಗೆಯ್ದು: **ವಡ್ಡಾರಾ,** ಪು. ೭೯, ಸಾ.೧೫); ಸ್ತುತಿಸು (ತದ್ವಿಷ್ಟಪನಾಥನಂ ನಮಿಸಿ ಪೂಜಿಸಿ ವಂದಿಸಿ ದೇವ ಮಾಟ್ಪುದೆನ್ನಿಷ್ಟಮನೆಂದು ಬೇಟ್ಪಪದದೊಳ್: **ಪುಷ್ಪದಂಪು,** ೫. ೧೦೩)

**ವಂದ್ಯ** – ಪೂಜ್ಯ (ಪಸವಿನೊಳ್ ಅನ್ನಮಂ ಸುಫಲದಲ್ಲಿ ಸುವರ್ಣಮಂ ಈವ ಯುದ್ಧದೊಳ್ ಕುಸಿಯದೆ ಸೂಱೆಗೊಳ್ಳದೆ ರಣಕ್ಕೆ ಶುಚಿತ್ವಮಂ ಅಪ್ಪುಕೆಯ್ವ ಮಾನಸಿಕೆಯ ನಾಲ್ವರುಂ ನಮಗೆ ವಂದ್ಯರ್: **ಗದಾಯು,** ೪. ೬೦)

**ವಂಧ್ಯಾಂಗನೆ** – ಬಂಜೆ ಹೆಂಗಸು (ಪಿರಿದುಂ ವಂಧ್ಯಾಂಗನೆಯಂತಿರೆ ತಾನಪ್ರಸವಮಾಗಿಯುಂ ಮೂಲಾಗ್ರಂ ಬರಮೆಯ್ದೆ ಕಾತು ಮಿಗೆ ಬಿತ್ತರಿಸಿರ್ದುದು ಪನಸಕುಜಂ ಅದೇನಚ್ಚರಿಯೋ: **ಶಾಂತೀಶ್ವಪು,** ೧೦. ೯೪)

**ವಂಧ್ಯಾಸತಿ** – ಬಂಜೆ ಹೆಂಗಸು (ವಂಧ್ಯಾಸತಿಯಾಗಿ ಎಯ್ದೆ ಪಿರಿದುಂ ದುಃಖಕ್ಕಿದೇಂ ನೋಂತೆನೋ; **ಸುಕುಮಾಚ,** ೯. ೧೦೩)

**ವಂಧ್ಯಾಸ್ತನಂಧಯ** – ಬಂಜೆಯ ಮಗು, ಅಸಂಭವ (ಅದಱೆಂದಮೆನ್ನ ಬಯಸಿದ ಬಯಕೆಯಪ್ಪುದು ವಂಧ್ಯಾಸ್ತನಂಧಯ ಸಮಾಗಮಸಮಾನಂ: **ಆದಿಪು,** ೩. ೪೩ ವ)

**ವಂಶ** – ಕುಲ (ಆತನಿಂದವ್ಯವಚ್ಛಿನ್ನಮಾಗಿ ಬಂದ ವಂಶಂ ಸೂರ್ಯವಂಶಮೆಂಬುದಾಯ್ತು: **ಪಂಪಭಾ,** ೧. ೬೦ ವ); ಬಿದಿರು (ಸ್ರೋತಸ್ಸುರುಚಿರಪುಷ್ಕರಂ ಆತತ ಋಕ್ಷಂ ಗುಹಾನ್ವಿತಂ ಪ್ರಿಯವಂಶ ಉಪೇತಂ ತುಂಗ ಉತ್ಸಂಗಮೇತಂ ಕರಿರಾಜನೆನಿಸುಗುಂ ಗಿರಿರಾಜಂ: **ಅಜಿತಪು,** ೯. ೨೯); ಕೊಳಲು (ಪಟುಪಟಹ ತುಣವ ಭಂಭಾ ಮರ್ದಳೆ ಝಲ್ಲರಿ

ಮುಕುಂದ ತಾಳ ಕಾಹಳ ಶಂಖ ವಂಶ ವೀಣಾಸ್ವರಂಗಳೆಸೆಯೆ: **ವಡ್ಡಾರಾ,** ಪು ೮೫, ಸಾ ೧); ಆನೆಯ ಹೆಗಲಿನ ಬೆನ್ನುಮೂಳೆ (ಅನುಪೂರ್ವ ಧನುರಾಕಾರವಂಶನುಂ ಋಜುಪರಿಪೂರ್ಣ ಹ್ರಸ್ವಗ್ರೀವನುಂ .. .. ಅಪ್ಪ ವಿಜಯಪರ್ವತ ಗಜೇಂದ್ರಂ: **ಆದಿಪು,** ೧೨ ೫೬ ವ)

**ವಂಶಚ್ಛೇದ –** ವಂಶವನ್ನು ನಾಶಮಾಡುವುದು, ಬಿದಿರನ್ನು ಸೀಳುವುದು (ವಂಶಚ್ಛೇದಂ ಮೇದಱೊಳ್ .. .. ಪಂಕ್ತಿಭೇದಂ ಲಿಪಿಗಳೊಳ್ ಅಕ್ಕುಮಲ್ಲದೆ ಜನಪದದ ಜನಂಗಳೊಳಿಲ್ಲ: **ಜಗನ್ನಾವಿ,** ೨. ೧ ವ)

**ವಂಶಸ್ಥಲ –** ಬಿದಿರು ಮೆಳೆ (ಸ್ಥಲ ರಕ್ತ ಕಮಲಮಂ ಕೋಮಲ ಪದತಳ ಪದ್ಮರಾಗರುಚಿಯಿಂ ವಂಶಸ್ಥಲ ತನುಪ್ರಭಾವಮಂಡಲದಿಂ ಎಂಟನೆಯ ಕೇಶವಂ ದ್ವಿಗುಣಿಸಿದಂ: **ಪಂಪರಾ,** ೯. ೨೦)

**ವಂಶಸ್ವನ –** ಕೊಳಲ ದನಿ (ತನ್ವಂಗಿ ನಿನ್ನ ಸಭಾಸದ್ಮದೊಳೇಕೆ ದಳ್ಳಿಸಿದುದಿಲ್ಲ ಉತ್ತಾನ ವಂಶಸ್ವನಂ: **ಮಲ್ಲಿನಾಪು,** ೪. ೭)

**ವಂಶಾವತಾರ –** ಕುಲದ ಆರಂಭ (ಸಮಸ್ತವಸ್ತುವಿಸ್ತಾರಮಾಗಿರ್ದ ಹಸ್ತಿನಪುರವೆ ನಿಜವಂಶಾವಳಂಬಮಾಗೆ ನೆಗಟ್ಟಿ ಭರತಕುಲತಿಲಕರ ವಂಶಾವತರಮೇಮತಾದುದೆಂದೊಡೆ: **ಪಂಪಭಾ,** ೧. ೫೮ ವ)

**ವಂಶಾವಳಿ –** ಕುಲಾನುಕ್ರಮ (ಇಂತೀ ಮೂವರುಂ ಬಂದ ವಂಶಾವಳಿಯುಮಂ ನಿಜಾವಳಿಯುಂಂ ಒಳ್ಳಿತ್ತಾಗಿ ಪೇಟ್ದೀ ನಿನ್ನ ಚೆನ್ನಭಾಷಿತಮದೊಳ್ಳಿತ್ತಾದುದು: **ಗದಾಯು,** ೨. ೮ ವ)

**ವಂಶಾವಳೀವನ –** ಬಿದಿರು ಮೆಳೆ (ವಂಶಾವಳೀವನಮಧ್ಯಸ್ಥನಾಗಿ .. .. ಅನುಪ್ರೇಕ್ಷೆಯಂ ಮನದೊಳ್ ಭಾವಿಸಿ ಪೇಟ್ದ ಸೈರಣೆಯ ಮಾನುಷ್ಯರ್: **ಸಮಯಪ,** ೧. ೫)

**ವಕಾರತ್ರಯ –** ವೈದಿಕರ ದೇವಕಾರ್ಯ, ಪಿತೃಕಾರ್ಯ ಮತ್ತು ಮಾನುಷಕಾರ್ಯಗಳಲ್ಲಿ ಕ್ರಮವಾಗಿ ಬಳಸುವ ಸ್ವಾಹಾಕಾರ, ಸ್ವಧಾಕಾರ ಮತ್ತು ವಷಟ್ಕಾರಗಳಲ್ಲಿನ ಮೂರು ವಕಾರಗಳು (ಕ್ರಿಯೆಯಿಂ ನೆಗಟ್ಟಿ ವಕಾರತ್ರಯಮಂ ನೆಱ ಬಲ್ಲೆನೆಂಬ .. .. ಮಾಯಾವಿಯ ಮಾತಂ ನಂಬಲಾಗದು: **ಸಮಯಪ,** ೧೨. ೩೪)

**ವಕುಳ –** ನಾಗಕೇಸರ, ಪಗಡೆ ಗಿಡ (ಮತ್ತೊರ್ವಳ್ ವಕುಳ ಲುಕುಳಾಸವವದನಪರಿಮಳೆ: **ಆದಿಪು,** ೧೧. ೧೨೩ ವ)

**ವಕ್ಖಾಣಿಸು –** [ವ್ಯಾಖ್ಯಾನಿಸು] ವಿವರಿಸು (ಮಾಯಾತಪಸ್ವಿ ಜೋಯಿಸಮಂ ವಕ್ಖಾಣಿಸಿಂ ಎಂದು ಕಯ್ಗಳಂ ಮುಗಿದು ಮುಂದೆ ಕುಳ್ಳಿರ್ದುಂ: **ಸುಕುಮಾಚ,** ३. ३೫ ವ)

**ವಕ್ತ್ರ –** ಬಾಯಿ, ಮುಖ (ಪವನಜನ ಆಸ್ಯಮಲ್ತಿದು ಅವನ ಆನನಮಪ್ಪೊಡೆ ಮಟ್ಟಮಿರ್ದು ನೋಡುವುದೆ ಮದೀಯವಕ್ತ್ರಮನೆ ಕೆಮ್ಮನೆ: **ಗದಾಯು,** ೯. ३३)

**ವಕ್ತ್ರಪದ್ಮ –** ಮುಖಕಮಲ (ಅರಸಿಯ ವಕ್ತ್ರಪದ್ಮಮಿದೇಕೆಯೊ ಮಾಗಿಯ ಪದ್ಮದಂದದಿಂ ಕೊರಗಿದುದು: **ನೇಮಿನಾಪು,** ೧. ೧೧೪)

**ವಕ್ತ್ರಮಂಡನ –** ಮುಖಾಲಂಕಾರ (ಜಲಲವಮಂಜರಿಯಂ ಉಟುಮಾಡಿದುವು ದಿಶಾಲಲನೆಯರ ವಕ್ತ್ರಮಂಡನ ವಿಲಾಸದೊಳ್ ನೆಗಟ್ವಿ ಕರ್ಣಪೂರಶ್ರೀಯಂ: **ಆದಿಪು,** ೭. ೯೫)

**ವಕ್ರಗತಿ –** ಅಂಕುಡೊಂಕು ಚಲನೆ, ಕೆಟ್ಟ ನಡತೆ (ವಕ್ರಗತಿ ಫಣಿಯೊಳ್ .. .. ಪದವಿರ್ಪುದಲ್ಲದಿಲ್ಲಾ ನಾಡೊಳ್: ಕುಸುಮಾಕಾ, ೨. ३೮)

**ವಕ್ರಗ್ರೀವ –** , ಬಾಗಿದ ಕೊರಳುಳ್ಳವನು, ಒಂಟೆ (ಅಪಸ್ಮಾರಗ್ರಹಗೃಹೀತರಂತೆ ವಕ್ರಗ್ರೀವರಾಗಿಯುಂ, ಉಗ್ರಗ್ರಹಂ ಸೋಂಕಿದಂತೆ ಮರುಳಾಗಿಯುಂ ನೆಱೆಗಿವುಡರಂತೆ ಕಿವುಂಡಗೇಳ್ದುಂ: **ಪಂಚತಂತ್ರ,** ೭೦ ವ)

**ವಕ್ರಭಣಿತಿ –** ವ್ಯಂಗ್ಯವಾದ ಮಾತು (ಮುಳಿವ ತಿಳಿವೆಡೆಯುಣ ಮೇಣೊಳಗಾಗಳ್ ವಕ್ರಭಣಿತಿಗಳ್ಗೆ ಅವನಿಪತೀ: **ಕಾದಂಬ,** ೬. ೯೧)

**ವಕ್ರಾಕ್ಷ –** ಕಾಗೆ (ವಕ್ರಾಕ್ಷನಿಂತೆಂದಂ: ನೀನೆಂದಂತೆ ನಾಂ ಕಾಕಕುಲಪ್ರಸೂತನಾಗಿಯುಂ ಅಜ್ಞಾನಕರ್ಮದೊಳ್ ನಡೆವನಲ್ಲಂ: **ಪಂಚತಂತ್ರ,** ४೨೭ ವ)

**ವಕ್ರಿ –** ಶತ್ರು (ವಕ್ರಿಗಳೆಲ್ಲಂ ಮಡಿದುದು ಇನ್ನಾವ ಭಯಮಿಲ್ಲಂ ಸಮಾಧಾನದಿಂ ಬಿಜಯಂಗೆಯ್ವುದು: **ತ್ರಿಷಷ್ಟಿಪು,** ೧೧. ४೮ ವ)

**ವಕ್ರಿಮ –** ಬಳಸು, ಸುತ್ತು (ವಕ್ರಿಮಂ ಸುಚರಿತದೊಳ್ ವಿಚಾರಿಸುವೊಡಿಲ್ಲ ಅಳಕಾಳಿಯೊಳಲ್ಲದೆ ಎಲ್ಲಿಯುಂ: **ಚಂದ್ರಪ್ರಪು,** ೧೧. ೧೦೯); ಬಳಸಾದ, (ಆ ದಿವ್ಯವಚನ ವಕ್ರಿಮಕ್ರಮಮೆ ತಮಗನುಗ್ರಹಪಕ್ಷಮಾಗೆ ಕೃಷ್ಣನಂ ಪರಮಾತ್ಮಸ್ವರೂಪನೆಂದರಿದು: **ಜಗನ್ನಾವಿ,** ४. ೧೧೦ ವ)

**ವಕ್ರಿಸು –** ವಕ್ರವಾಗಿ {ನಿಮ್ಮೀ ಕ್ರಮಕಮಲಕ್ಕೆ ಎಱಗದೆ ವಕ್ರಿಸಿ ಭೂಚಕ್ರದೊಳಗೆ ಬಾಟ್ವರುಂ ಒಳರೇ: **ಪಂಪಭಾ,** ೧೧. ३೦)

**ವಕ್ಷ –** ಎದೆ (ತುಱುಗಿ ಕರಂಗಳಂ ಕೆದಱೆ ವಕ್ಷದೊಳುಜ್ವಳತಾರಹಾರಮೇಂಮೆಱೆದನೋ ಭೂಪಂ:: **ಪುಷ್ಪದಂಪು,** ४. ೬४)

**ವಕ್ಷೋಜ –** ಮೊಲೆ (ವಿಜಯಲಕ್ಷ್ಮೀಲಲನಾವಕ್ಷೋಜ ಸ್ಪರ್ಶನಮಂ ಅನಕ್ಷರಮಱಿಪಿದುದು ಪತಿಗಮಂದಸ್ಪಂದಂ; **ಆದಿಪು,** ೧೧. ೧೧)

**ವಕ್ಷೋರುಹ –** ಮೊಲೆ (ಬಿಣ್ಗೊಂಚಲ್ ಉನ್ನತ ವಕ್ಷೋರುಹವಾಯ್ತು .. .. ತಲ್ಲತೆ ಲೀಲಾವತಿಯಾಯ್ತು: **ಲೀಲಾವತಿ,** ೧४. ೯೫)

**ವಖ್ಖಾಣಿಸು –** ವ್ಯಾಖ್ಯಾನಿಸು (ಎಂದಿವು ಮೊದಲಾಗೊಡೆಯವನೋದಿ ಅವಱರ್ಥಮಂ ವಖ್ಖಾಣಿಸಿ ಪೇಟ್ದು: **ವಡ್ಡಾರಾ,** ಪು ೧३३, ಸಾ ೬)

**ವಚನಪ್ರೌಢಿ –** ನುಡಿನಿಪುಣತೆ (ವಚನಪ್ರೌಢಿಯಂ ಅರ್ಥಪ್ರಚುರತೆಯಂ ದೋಷದೃಷ್ಟಿಪರನಲ್ಲದವಂ ಶುಚಿಮತಿ ಪೊಗೞ್ದುಂ: **ಮಲ್ಲಿನಾಪು,** ೧. ೨೭)

**ವಚಶ್ರೀವರ –** ಸರಸ್ವತಿಯ ಪತಿ, ಬ್ರಹ್ಮ (ಆವನ ನಾಭಿಸರೋಜದೊಳ್ ವಚಶ್ರೀವರಂ ಉತ್ಸವಂಬೆರಸು ಪುಟ್ಟಿದಂ: **ಪಂಚತಂತ್ರ,** ೧)

**ವಚೋವಲ್ಲಭ –** ಸರಸ್ವತಿಯ ಪತಿ, ಬ್ರಹ್ಮ (ಕಾಲನೇಮಿಯೆಕಂಸಾಸುರನಾಗಿ ಪುಟ್ಟಿರುದ ನಾಂ ಬಲ್ಲೆ ವಚೋವಲ್ಲಭಾ: **ಜಗನ್ನಾವಿ,** ೧. ೬೮)

**ವಚೋವಿಸ್ತರ –** ಮಾತಿನ ವಿವರಣೆ (ಸಂಬೋಧಿಸಿದ ಗುರುಗಳ ಮಚೋವಿಸ್ತರಮಂ ಸುಕುಮಾರ ಮುನೀಶ್ವರನವಧಾರಿಸಿ: **ಸುಕುಮಾಚ,** ೧೨. ೧३ ವ)

**ವಜ್ಜರಿಗಟ್ಟಿ** – ಹೇಸರಗತ್ತೆ [ಕರಿಯ ಪಿರಿಯ ಮೆಯ್ಯ ನಿಡಿಯ ಕಿವಿಯ ಕುಣಿದು ಮೆಟ್ಟುವ ವಜ್ಜರಿಗಟ್ಟಿಗಳುಮಂ ವ್ಯೂಗದೊಳ್ ನಿಟ್ಟೆವಟ್ಟು: **ಆದಿಪು,** ೪. ೫೪ ವ); [ಪಾಠಾಂತರ: ಬಜ್ಜರಿಗತ್ತೆ – **ಆದಿಪು,** ನರಸಿಂ]

**ವಜ್ರ** – ನವರತ್ನಗಳಲ್ಲಿ ಒಂದು [ಮುತ್ತಿನ ಪಚ್ಚೆ ಮಾಣಿಕದ ವಜ್ರದ ಕೇಟಿಯೊಳ್ ಒಂದಿ ಸಾಂದಿನೊಳ್ ಕತ್ತುರಿಯೊಂದು ಕೋಟ್ಟೆಸಱೊಳ್ ಓಕುಳಿ ಚಂದನ ಗಂಧವಾರಿಯೊಳ್ ಸುತ್ತಲುಂ ಅಟ್ಟೞಿಂ ಪಡೆವ ಗೇಯದ ಪೆಂಪಿನ ಅಲಂಪಂ ಆರ್ಗಂ ಆರ್ತಿತ್ತುದು ಪಟ್ಟಬಂಧ ಮಹೋತ್ಸವಂ ಆ ಪಡೆಮೆಚ್ಚೆ ಗಂಡನಾ: **ಪಂಪಭಾ,** ೧೪. ೨೦); ಇಂದ್ರನ ಆಯುಧ, ಸಿಡಿಲು (ಇಳಾತಳದೊಳ್ ಕೆಡೆದತ್ತು ವಜ್ರದಿಂ ಸುರಪತಿ ಪೊಯ್ಯೆ ಬೆಟ್ಟು ಕೆಡೆದಂತೆ ಜಟಾಯು ನಭೋವಿಭಾಗದಿಂ: **ಪಂಪರಾ,** ೯. ೧೦೪)

**ವಜ್ರಕವಾಟ** – ತೆಗೆಯಲಾಗದ ಬಾಗಿಲು (ಒಡೆವುದೆ ವಜ್ರಕವಾಟಮಂ ಅಡರ್ವುದೆ ವಿಜಯಾರ್ಧಗಿರಿಯಂ .. .. ಎಮ್ಮನೆ ಬೆಸಸಾ: **ಆದಿಪು,** ೧೩. ೨೧)

**ವಜ್ರಕಾಂಡ** – [ಜೈನ] ಚಕ್ರವರ್ತಿಗೆ ಲಭಿಸುವ ಬಿಲ್ಲು (ವಜ್ರಕಾಂಡಮೆಂಬ ಚಾಪದಿಂದಂ ಸಿಂಹಾಟಕಮೆಂಬ ಕೊಂತದಿಂದಂ: **ಶಾಂತಿಪು,** ೧೧. ೮೪ ವ)

**ವಜ್ರಕೀಟ** – ಅಲರ್ಕ ಎಂಬ ಹುಳು (ಪರಶುರಾಮಂ ಮಱೆದು ಒರಗಿದಾ ಪ್ರಸ್ತಾವದೊಳ್ ಆ ಮುನಿಗೆ ಮುನಿಸಂ ಮಾಡಲೆಂದು ಇಂದ್ರಂ ಉಪಾಯದೊಳ್ ಅಟ್ಟಿದ ವಜ್ರಕೀಟಂಗಳ್: **ಪಂಪಭಾ,** ೧. ೧೦೪ ವ)

**ವಜ್ರತುಂಡ** – ಗಟ್ಟಿಯಾದ ಕೊಕ್ಕು (ವಿನತಾಪುತ್ರನ ವಜ್ರತುಂಡಹತಿಗಂ ಮೇಯ್ಯಾಂತು .. .. ನಾಗಾನಂದಮಂ ಮಾಡಿದಂ; ಪಂಪಭಾ, ೪. ೨೬); [ಜೈನ] ಚಕ್ರವರ್ತಿಯ ಶಕ್ತ್ಯಾಯುಧ (ವಜ್ರತುಂಡವೆಂಬ ಶಕ್ತಿಯಿಂದಂ ಮನೋವೇಗವೆಂಬ ಕಣೆಯಿಂದಂ .. .. ನೆಱೆದೈಶ್ವರ್ಯದ ಮೇಗೆ ವಜ್ರಿಬೆಸದಾಳಂತಾಗಿಯುಂ: **ಶಾಂತಿಪು,** ೧೧. ೮೪ ವ)

**ವಜ್ರದಾಳಿ** – [ವಜ್ರ+ತಾಳಿ] ವಜ್ರಖಚಿತ ಮಾಂಗಲ್ಯ (ತಿಸರಮಿದಾವುದಕ್ಕೆ ಧರಣೇಂದ್ರನ ಕೊಟ್ಟುದು ವಜ್ರದಾಳಿ ಕಣ್ಗೆಸೆವುವುದಿದಾವುದು: **ಪಂಪಭಾ,** ೪. ೮೬)

**ವಜ್ರಧರ** – ಇಂದ್ರ (ಗಾಂಡಿವಧರಂ ಗಂಗಾಧರಂ ತುಂಗಶಕ್ತಿಧರಂ ವಜ್ರಧರಂ ಧರಾಧರಧರಂ ಶ್ರೀಕೀರ್ತಿವಿದ್ಯಾಧರಂ: **ಪಂಚತಂತ್ರ,** ೩೭)

**ವಜ್ರಪಾತ** – ಸಿಡಿಲ ಹೊಡೆತ (ವಿಗತ ಪುರುಷಾಕಾರಂ ಭಾಗ್ಯಾನರ್ಘ ವಜ್ರಪಾತಸಂತಪ್ಯಮಾನಮಾನಸನುಂ .. .. ಆಗಿ: **ಚಂದ್ರಪ್ರಪು,** ೫. ೯ ವ)

**ವಜ್ರಲೋಭಿ** – ಮಹಾಜಿಪುಣ (ಪಾಪಿಂಗಂ ಬಲಿಯಿಕ್ಕದ ವಜ್ರಲೋಭಿಯುಂ ಶ್ರಾವಕನಾಗಲೊಡಂ ನಿಜಸಮಯಿಗೆ .. .. ವೆಚ್ಚಿಸುಗುಂ: **ಸಮಯಪ,** ೪. ೭೪)

**ವಜ್ರಹಸ್ತ** – ಇಂದ್ರ (ವಜ್ರಹಸ್ತಾದಿ ದೇವೋತ್ಕರಮೆಲ್ಲಂ ಕೂಡೆ ಕಾಯ್ದೆದ್ದು ಅರಿಬಲತತಿಯಂ ಪೊಯ್ದು: **ತ್ರಿಷಷ್ಟಿಪು,** ೩೦. ೩೨)

**ವಜ್ರಿ** – ಇಂದ್ರ (ಇದಿರೊಳ್ ನಿಂದೊಡೆ ವಜ್ರಿ ಸೈರಿಸಂ ಇರಲ್ವೇಡ ಎಮ್ಮೊಳೊಳ್ವೊಕ್ಕು ನಿಲ್ವುದು ನೀಂ ಎಂದು ಕಡಂಗಿ ಕಾಲ್ವಿಡಿವವೋಲ್ ತನ್ನೂರ್ಮಿಗಳ್ ಬಂದುವು: **ಪಂಪಭಾ,** ೪. ೨೪); [ಜೈನ] ಹದಿನಾರನೆಯ ತೀರ್ಥಂಕರನಾದ ಶಾಂತಿನಾಥ (ನೆಱೆದೈಶ್ವರ್ಯದ ಮೇಗೆ ವಜ್ರಿ ಬೆಸದಾಳಂತಾಗಿಯುಂ ಕಲ್ಪಮಂ ನೆಱೆಯಭ್ಯಂತರಸಿದ್ಧಿಯಂ ಪಡೆಯಂ: **ಶಾಂತಿಪು,** ೧೧. ೮೫ ವ)

**ವಟವಿಟಪಿ** – ಆಲದ ಮರ (ಪುರಿಮತಾಳಪುರ ಬಹಿರ್ಭಾಗನಿಕಟ ಶಕಟೋದ್ಯಾನವಟವಿಟಪಿಯ ಕೆೞಗೆ ವಿಶಾಳ ನಿರಾಳ ಕುಳನಿರ್ಜಂತುಕ ನಿರ್ಮಲ ಶಿಲಾಪಟ್ಟದ ಮೇಲೆ: **ಆದಿಪು,** ೧೦. ೧೩ ವ)

**ವಟು** – ಬ್ರಹ್ಮಚಾರಿ, ಹುಡುಗ (ವಟು ಮಾಣವಕ ಅರ್ಭಕ ಬಾಳಂ: **ಅಭಿಧಾವ,** ೧. ೧೧. ೧೫)

**ವಟ್ಟಂದೆಱು** – ತೂಕ ಸಮನಿಲ್ಲದಾಗ ಸಮತೋಲನಕ್ಕಾಗಿ ಕೊಡು (ವಟ್ಟಂದೆತ್ತುದು ಬೆಳ್ಳಿಯ ಬೆಟ್ಟಂ ಬಿಣ್ಪಿಂಗೆ ಎನಿಪ್ಪ ಕೋಟಿಕಶಿಲೆಯಂ ಬಟ್ಟಾಡಿದ ಬಾಹಾಬಲಂ ಇಟ್ಟಳವು ಎಂಟನೆಯ ಕೇಶವಂಗಿದಿರುಂಟೇ: **ಪಂಪರಾ,** ೧೨. ೬೮)

**ವಟ್ಟೆ** – ವಸ್ತ್ರ (ಬೊಂಗದ ನಾರಂಗದ ದೇವಾಂಗದ ಪಲತೆಱದ ಸಕಲ ವಟ್ಟೆಗಳಂ ಗೇಹಾಂಗಣದೊಳ್ ಮೆಟ್ಟುವ ತಾಣಂಗಳೊಳ್ ಓರಂತೆ ಪಾಸಿ: **ಸುಕುಮಾಚ,** ೧೦. ೯೦)

**ವಡಬಶಿಖಿ** – ಬಾಡಬಾಗ್ನಿ (ಅಳ್ಳಿಱಿವ ತೆರೆ ವಡಬಶಿಖಿಯಿನಿತುಱಿ ತನ್ನೊಳ್ ಮೆಱೆಯಲೊಪ್ಪಿದತ್ತು ಸಮುದ್ರಂ: **ತ್ರಿಷಷ್ಟಿಪು,** ೨. ೧೮)

**ವಡ್ಡವಾರ** – ಶನಿವಾರ (ಕಳಶಜನನಿಂತು ಕೊಲಿಸಿದ ಖಳನೆ ಗಡಂ ಧರ್ಮನಂದನಂ ಕ್ರೂರ ದಿನಂ ಗಳ ಪೆಸರಂ ಮಱೆಯಿಸಿ ಮಂಗಳವಾರಂ ವಡ್ಡವಾರಮೆಂಬಂತೆ ವಲಂ: **ಗದಾಯು,** ३. ೨೬)

**ವಡ್ಡಾಗರ** – ನೆಲೆವೀಡು (ಕರಿಗಳ ಕಣಿ ಶಬರರ ನಿಧಿ ಮರಗಳ ವಡ್ಡಾಗರಂ ದವಾಗ್ನಿಯ ಸತ್ರಂ ಹರಿಣಂಗಳ ಹರವರಿ: **ಚಂದ್ರಪ್ರಪು,** ೫. ೪೭)

**ವಣಿಕ್ಪತಿ** – ಪ್ರಮುಖ ವ್ಯಾಪಾರಿ (ಅಗಲದೆ ರೇಖಾತ್ರಯದಿಂದಗಲದೆ ಪೊಗರ್ವಟ್ಟ ಬಂಧುರಚ್ಚವಿಯಿಂ ಕಂಬುಗಳಂ ನಗುವಂತಿರೆ ಕಂಬುಗಳಂ ಕರಮೆಸೆಗುಂ ಆ ವಣಿಕ್ಪತಿಸತಿಯಾ: **ಸುಕುಮಾಚ,** ೯. ೮೯)

**ವಣಿಗ್ವಾಟ** – ಅಂಗಡಿಸಾಲು (ಪುರವರದ ವಣಿಗ್ವಾಟ ಹರ್ಮ್ಯಂಗಳೊಳ್ ಮುನ್ನಿನ ಸಂಚಾರಸ್ವಭಾವಂ ಪಱಿಪಡೆ ಪದೆಪಿಂ ಲಕ್ಷ್ಮಿ ನಿಶ್ಚಿಂತಮಿರ್ಪಳ್: **ಪಂಪರಾ,** ೧. ೧೨೨)

**ವಣಿಗ್ವಿದ್ಯೆ** – [ವಣಿಕ್+ವಿದ್ಯೆ] ವ್ಯಾಪಾರೀವಿದ್ಯೆ (ವಾರ್ತೆಯೆಂಬುದಸಿಮಷಿವಣಿಗ್ವಿದ್ಯಾದಿ ಕರ್ಮಂಗಳೊಳ್ ವಿಶುದ್ಧಿವೃತ್ತಿಯನರ್ಥೋಪಾರ್ಜನಂಗೆಯ್ವುದಕ್ಕುಂ: **ಅಜಿತಪು,** ೧೨. ೧ ವ)

**ವಣಿಜ** – ವ್ಯಾಪಾರಿ (ಒರ್ವಂನಡುವಿರುಳ್ವೋಗಿ ವಣಿಜರನೊಟ್ಟಯ್ಸಿ ವಂಚಿಸಿ ಕುಱಿದಂದೆನೆಂದಂ: **ಸುಕುಮಾಚ,** ೭. ೧೫)

**ವಣ್ಣಂ** – ಬಣ್ಣ (ಎನ್ನ ಸೂಳೆಗೆ ಬಿಯಮಾದುದುೞಿದುವೆಲ್ಲಂ ವಣ್ಣಂ ಚಳಿಯದೆ ಇರ್ದುದು: **ವಡ್ಡಾರಾ,** ಪು ೧೨೫, ಸಾ ೨೫)

**ವತಂಸ** – ಕಿವಿಯ ಆಭರಣ (ಕನನ್ಮಣಿವತಂಸಾಸ್ಫಾಲಿತಾಂಸಂ ಲಸದ್ದೋರಾಂದೋಳನ ಜಾತಕಂಕಣಝಣತ್ಕಾರಂ ಪುರಸ್ತ್ರೀಜನಂ: **ಚಂದ್ರಪ್ರಪು,** ೧೦. ೩)

**ವತ್ಸ** – ಕರು (ಕರು ಎಳೆಗಱು ವತ್ಸ ಶಕೃತ್ಕರಿ ನಾಮಂ; **ಅಭಿಧಾವ,** ೧. ೧೫. ೩); ಎದೆ (ಉರಂ ವತ್ಸಂ ವಕ್ಷಂ ಹೃದಯಂ ಎದೆ: **ಅಭಿಧಾವ,** ೧. ೧೨. ೭)

**ವತ್ಸರ** – ವರ್ಷ (ಮೂವತ್ತು ದಿವಾರಾತ್ರಂ ತೀವಿದೊಡದು ಮಾಸಂ ಎರಡು ಮಾಸಂ ಋತುವಂತಾವವು ಮತ್ತಾರಾಗೆ ಕಳವೇದಿಗಳಂತದೊಂದು ವತ್ಸರಮೆಂಬರ್: **ಅಭಿಧಾವ,** ೧. ೨. ೧೦)

**ವತ್ಸಲತೆ** – ಪ್ರೀತಿ, ವಾತ್ಸಲ್ಯ (ಜಿನಮತದೊಳ್ ವತ್ಸಲತೆಯನುಂಟುಮಾಡಿ ಕುಮತದೊಳಂ ಅವರ್ ಕುತ್ಸಿತಯೋನಿಗಳೊಳ್ .. .. ತಿರಿತರುತಿರ್ದರ್: **ಪಂಪರಾ,** ೧೫. ೪೧)

**ವದ** – ಮಾತು (ವದನದೊಳ್ ದಂತಾಂಕುರಂ ರೂಪುದೋಱಿದುವು ಅವ್ಯಕ್ತ ವದ ಸ್ವಭಾವಮಧುರಂ: **ಅಜಿತಪು,** ೫. ೬೪)

**ವದನ** – ಮುಖ (ವದನಕ್ಕಂ ಕುಸುಮಕ್ಕಂ ಪದೆದೆಱಗುವ ಮಧುಕರಂಗಳಂ ಸೋವುತ್ತುಂ: **ಗಿರಿಜಾಕ,** ೫. ೭೧)

**ವದನರಸ** – ಜೊಲ್ಲು (ವದನರಸಂ ಮದನರಸಂ ಪೊದಳ್ದುದೆನಿಸುವಿನಮರಿ ನರ್ತಿಸೆ: **ಆದಿಪು,** ೭. ೧೯)

**ವದಾನ್ಯ** – ಉದಾರಿ (ತೆಗೆದು ಕೊಟ್ಟಪರಲ್ತೆ ವದಾನ್ಯವಲ್ಲಭರ್: **ಲೀಲಾವತಿ,** ೧. ೫೮); ನಯವಾಗಿ ಮಾತಾಡುವವನು (ಮಾನ್ಯಂ ಪ್ರಕೃಷ್ಟನಱಿಗೆ ವದಾನ್ಯಂ ಪ್ರಿಯವಾದಿ: **ಅಭಿಧಾವ,** ೨. ೧. ೧೪)

**ವದಾನ್ಯತಾ** – ಔದಾರ್ಯ (ಅಂತು ನಿಜ ವದಾನ್ಯತಾ ಗುಣ ವಿಶುದ್ಧ ಸಿದ್ಧರಸ ಪ್ರವಾಹಕ್ಕೆ ಸೇತುಗಟ್ಟುವಂತೆ ಪಟ್ಟಮಂ ಕಟ್ಟಿ: **ಪಂಪರಾ,** ೭. ೨೨ ವ)

**ವಧು** – ಹೆಂಗಸು, ಸೊಸೆ (ವಧು ಸೊಸೆ ವಧು ಸೀಮಂತಿನಿ: **ಅಭಿಧಾವ,** ೩. ೧. ೭)

**ವಧೂಟಿ** – ಯುವತಿ (ವಧೂಟೀಜನ ನೇತ್ರಾಕರ್ಷಣಾಲೇಪನಕ ಜಯಮಂ ಮಾನಿನೀಚಿತ್ತ ಸಂಮೋಹನರೂಪಕ್ಕೆ ಎಗ್ಗನುತ್ಪಾದಿಸುವುದು ನೃಪರೂಪಂ ಜನಾಶ್ಚರ್ಯರೂಪಂ: **ಮಲ್ಲಿನಾಪು,** ೩. ೨೮)

**ವಧೂವಿಲೋಕನ** – ಸೊಸೆಯನ್ನು ನೋಡುವುದು (ಪದೆಯುತ್ತಿರ್ದ ವಧೂವಿಲೋಕನಸುಖಕ್ಕೆಂದುಂ ವಿವಾಹಕ್ಕಿದೆ ನೋಡಾಗ್ರಹಮಂ .. .. ಮಾಡಿದಪ್ಪುದು: **ಕಾದಂಬ,** ೮. ೯೪)

**ವಧೆ** – ಕೊಲೆ (ಹಿಡಿಂಬವಧೆ ಬಕಾಸುರವಧೆ .. .. ಪೆಱವುಮುಪಾಖ್ಯಾನಕಥೆಗಳೊಳಮೊಂದುಂ ಕುಂದಲೀಯದೆ ಪೇೞ್ವೆಂ: **ಪಂಪಭಾ,** ೧೪. ೫೨ ವ)

**ವಧ್ಯಶಿಲೆ** – ಮರಣದಂಡನೆಗಾಗಿ ಕತ್ತು ಕತ್ತರಿಸಲು ಇರುವ ಕಲ್ಲು (ಅಸುರಂ ಕನ್ನೆಯನುಯ್ದು ವಧ್ಯಶಿಲೆಯೊಳ್ ಪೊಯ್ವಲ್ಲಿ ಕೈಯಿಂ ಸಿಡಿಲ್ದು ಸಿಡಿಲ್ ಪೋಪವೊಲಂಬರಕ್ಕೆ ನೆಗೆದೆಂದಳ್: **ಜಗನ್ನಾವಿ,** ೩. ೧೪)

**ವನ** – ಕಾಡು, ನೀರು (ವನಂ ಅರಣ್ಯಾಖ್ಯಂ ವನಂ ಜೀವನಂ: **ಅಭಿಧಾವ,** ೩. ೧. ೨೫)

**ವನಕೇಳಿ** – ವನವಿಹಾರ (ಭೂವರಶಿಖಾಮಣಿ ನೆಟ್ಟನೆ ಪಟ್ಟವರ್ಧನ ದ್ವಿರದನಿಯಿಂದೆ ಮುಂದಿಟೆದು ತದ್ವನಕೇಳಿಗೆ .. .. ಪುಗುತಂದಂ: **ಶಾಂತೀಶ್ವಪು,** ೧೦. ೭೩)

**ವನಕ್ರೀಡೆ** – ವನಕೇಳಿ (ಅಂತು ಬಂದ ಬಸಂತದೊಳ್ ಮದ್ರಿ ತಾಂ ಗರ್ವವ್ಯಾಲೆಯುಂ ಕ್ರೀಡಾನುಶೀಲೆಯುಂ ಅಪ್ಪುದಱಿಂ ವನಕ್ರೀಡಾನಿಮಿತ್ತದಿಂ ಪೋಗಿ: **ಪಂಪಭಾ,** ೨. ೧೫ ವ)

**ವನಜಜ** – ಬ್ರಹ್ಮ (ಅನಘಶಿವಂ ಪೊಱಮಟ್ಟಂ ವನಜಜ ವನಜಾಕ್ಷರೋತು ಕೈಗುಡಲಾಗಳ್: **ತ್ರಿಷಷ್ಟಿಪು,** ೬. ೧೧)

**ವನಜವನ** – ತಾವರೆಗಳ ಸಮೂಹ (ವಿನೇಯಜನ ವನಜವನ ದಿವಾಕರಂ ಅಣತು ಆ ಮುನಿಪನುಪವಾಸಮಂ ಪರ್ವ ನಿಮಿತ್ತಂ ತಳೆದು: **ಯಶೋಧಚ,** ೧. ೪೬)

**ವನಜಾತಪ್ರಿಯಬಂಧು** – ಕಮಲಬಂಧು, ಸೂರ್ಯ (ವನಜಾತಪ್ರಿಯಬಂಧುಗೆ ಅಂಗಪತಿಯಂ ಧರ್ಮಂಗೆ ನಿನ್ನಂ ಹುತಾಶನಮಿತ್ರಂಗೆ ಬಕಾರಿಯಂ ಕುಲಿಶಿಗಂ ಗಾಂಡೀವಿಯಂ ಪೆತ್ತೆಂ: **ಗದಾಯು,** ೧೦. ೨೧)

**ವನಜಾತಾನನೆ** – ಕಮಲವದನೆ (ವನಜಾತಾನನೆ ಕೇಳ್ ನಿಜೇಶನಗಲಲ್ಕೆ ಎಂತಾತ್ಮನೇನಪ್ಪುದೇ: **ಅನುಭವ,** ೯೫)

**ವನಜಾರಾತಿ** – ಕಮಲದ ಶತ್ರು, ಚಂದ್ರ (ವನಜಾರಾತಿತನೂಜ ವಾಸರದೊಳ್ ಆದತ್ತು ಅಲ್ಲಂಮಗರ್ಪಿತಂ: **ಉದ್ಭಟಕಾ,** ೧೨. ೧೪೬)

**ವನದಹನ** – ಕಾಡುಗಿಚ್ಚು (ವನದಹನಂ ವನಾಂತರಮಂ ಒರ್ಬಳಸಾಗಿರೆ ಮುತ್ತಿ ಸುತ್ತಿ ನಡುವಿರ್ದುಂ ಆ ಮರನನಟ್ಟೆದುದು: **ಆದಿಪು,** ೯. ೫೯)

**ವನದುರ್ಗ** – ಕಾಡಿನ ಮಧ್ಯದಲ್ಲಿರುವ ಕೋಟೆ [ಆ ಮಾಧವೀಮಂಟಪಮಂ ಕಾಮನ ಡಾಮರಕ್ಕೆ ಅಳ್ಕಿ ವನದುರ್ಗಂಬುಗುವಂತೆ ಪೊಕ್ಕು: **ಪಂಪಭಾ,** ೫. ೬ ವ)

**ವನಧಿ** – ಸಮುದ್ರ (ವನಧಿಪರೀತಭೂತಳದೊಳಿತನೆ ಸೋಲದ ಗಂಡಂ: **ಪಂಪಭಾ,** ೧. ೨೬)

**ವನನಾಗಾರಿ** – [ವನನಾಗ+ಅರಿ] ಕಾಡಾನೆಯ ಶತ್ರು, ಸಿಂಹ (ಅಶ್ವಗ್ರೀವಂ ಆ ತ್ರಿಪೃಷ್ಟಂಗಿದಿರ್ಚಿ ವನನಾಗಾರಿಯಂತೆ ದಂತಿಶಿಶುವೋಲ್ .. .. ನೀಡಿಲ್ಲಳ್ಕಾಡುಗುಂ: **ಶಾಂತಿಪು,** ೫. ೨೭)

**ವನನಿಧಿ** – ಸಮುದ್ರ (ಎನಗೆ ಪೊಸಂತಿಲೀ ನೆಗಟ್ದ ವಜ್ರದ ವೇದಿಕೆ ಗೋಷ್ಪದಂ ದಲೀ ವನನಿಧಿ: **ಆದಿಪು,** ೧೨. ೭೧)

**ವನಪ್ರಚಾರ** – ವನಸಂಚಾರ (ಪಿಱಿದು ಪೊೞ್ತಂ ವನಪ್ರಚಾರದೊಳ್ ಅಲಸಿದ ನದೀಚರನಪ್ಪ ಯೂಥಪತಿಯಂತೆ ವನವಿಹಾರದೊಳ್ ಅಲಸಿ ಬಂದು ಕಾವಣಂ ಪುಗೆ: **ಶಾಂತಿಪು,** ೮. ೨೩ ವ)

**ವನಪಾಲಕ** – ಉದ್ಯಾನದ ಮೇಲ್ವಿಚಾರಕ (ಕಾವ ನಾರಾಯಣನ ಸುದರ್ಶನಮೆಂಬ ಚಕ್ರದ ಕೋಳುಮಂ ವಿಕ್ರಮಾರ್ಜುನನ ದಿವ್ಯಾಸ್ತ್ರಂಗಳ ಕೋಳುಮಂ ಅಗ್ನಿದೇವನ ಶಿಖಾಕಳಾಪದ ಕೋಳುಮಂ ಎಂತಾನುಂ ಬಂಚಿಸಿ ಬಲೆಪಱಿದ ಕೋಕನಂತೆ ಒರ್ವ ವನಪಾಲಕಂ ಪೋಗಿ ದೇವೇಂದ್ರನಂ ಕಂಡು: **ಪಂಪಭಾ,** ೫. ೯೩ ವ)

**ವನಮಹತ್ತರ** – ವನಪಾಲಕ (ಪಸದನಂಗೊಂಡು ಪರಮಹರುಷದಿಂದ ಇನಿಸಾನುಂ ಬೇಗಮಿರ್ದು ವನಮಹತ್ತರನಂ ಕರೆದು: **ರಾಜಶೇವಿ,** ೧೦. ೧೦೭ ವ)

**ವನಮಹಿಷ** – ಕಾಡುಕೋಣ (ಸುಭದ್ರನೆಂಬುದೊಂದು ವನಮಹಿಷನ ಸಾರೆವಂದು: **ಪಂಚತಂತ್ರ,** ೮೫ ವ)

**ವನಮಾಲಾಧರ** – ವಿಷ್ಣು (ಶ್ರೀಧರನೆನೆ ಸಕಳ ಧರಿತ್ರೀಧರನೆನೆ ಸಂದದೊಂದು ಸೊಬಗಿಂ ವನಮಾಲಾಧರನಾದಂ: **ಪುಷ್ಪದಂಪು,** ೩. ೨೨)

**ವನಮಾಲಿ** – ವನಮಾಲಾಧರ (ವನಮಾಲಿ ಪೊಗಳುತಿರಲ್ ಅಂದು ಅನುನಯದೆ ನಮಃಶಿವಾಯ ಮುರುಗರ್ಗಂ .. .. ಗಣಪದಮನಿತ್ತು: **ತ್ರಿಷಷ್ಟಿಪು**೧೩. ೨೬)

**ವನಮೃಗ** – ಕಾಡುಪ್ರಾಣಿ (ಮುನಿ ತಳರದೆ ಮೇರುವೊಲಿರೆ ವನಮೃಗದವೋಲ್ ಕರ್ಚುನುಱಿದು ಸುಱಿದುವು ನಾಯ್ಗಳ್: **ಯಶೋಧಚ,** ೪. ೪೩)

**ವನಯಾತ್ರಾ** – ಜಲಪರ್ಯಟನ (ಸುಮುಖಂ ಕಾಲಂ ಸಲುತ್ತಿರ್ಪಿನಂ ವನಯಾತ್ರಾಪರನಾಗಿ ಪೋಗಿ ಧನಮಂ ಕೋಟ್ಟಿಟ್ಟು: **ಕರ್ಣನೇಮಿ,** ೨. ೭)

**ವನರಾಜಿಕ್ರೀಡೆ** – ವನವಿಹಾರ (ವನರಾಜಿಕ್ರೀಡೆಯಮ ಯೌವನವನದೊಳೆ ತೋಱಲ್: **ಆದಿಪು,** ೧. ೮೩)

**ವನರುಹ** – ತಾವರೆ (ವನರುಹ ನಾಳಂ ದಂಡಂ ವನರುಹವನಪತ್ರಂವೊಂದೆ ಪೊಸಸೊರೆ ಮತ್ತಾ ವನರುಹ ಸೂತ್ರಂ ತಂತ್ರಿಗಳ್: **ಗಿರಿಜಾಕ,** ೩. ೯೮)

**ವನರುಹನಾಭ** – ವನಜನಾಭ (ವನರುಹನಾಭಂಗೆ ಚಂದ್ರನೇಂ ಕಿಱುಕುಳನೇ: **ಕಾದಂಬ,** ೯. ೯೦)

**ವನಸಿಂಹನ್ಯಾಯ** – ಒಂದು ಲೌಕಿಕನ್ಯಾಯ; ವನ–ಸಿಂಹಗಳ ಪರಸ್ಪರ ರಕ್ಷಣೆ (ಧರಣಿಗುಹಾಸಿಂಹರ್ ನೀಮುಮೀಗಳ್ ವನಸಿಂಹನ್ಯಾಯಮಂ ದುರ್ಗದೊಳೆ ಬಲಿದು ನಿಂದಲ್ಲಿ ಬಂದೊತ್ತಿ ಚಕ್ರೇಶನ ತಂತ್ರಂ ನಿಲ್ಕುಂ: **ಆದಿಪು,** ೧೩. ೫೮)

**ವನಸ್ಪತಿ** – ಮರಗಿಡ (ವನಸ್ಪತಿ ಮರಂ: **ಅಭಿಧಾವ,** ೧. ೭. ೧); ಹೂಗಳಿಲ್ಲದೆ ಹಣ್ಣಾಗುವಂಥ ಗಿಡಮರ (ಪುಷ್ಪಚಯಮಿಲ್ಲದೆಯುಂ ಫಳಮಪ್ಪುದದು ವನಸ್ಪತಿ: **ಅಭಿಧಾವ,** ೧. ೭. ೨); ಮರಗಿ (ಅಂತು ನೇಸಱ್ ಮೂಡಲೊಡನೆ ಗೂಡುಗಳಿಂ ಗಿಳಿಗಳೆಲ್ಲಂ ಕುಟುಂಕುಗೊಳಲೆಂದು ಪೋಗೆ ಶಾಬಕನಿಕರ ಸನಾಥನಾಗಿಯುಂ ನಿಶ್ಶಬ್ದತೆಯಿಂ ಶೂನ್ಯದಂತಿರ್ದ ಶಾಲಮಲಿ ವನಸ್ಪತಿಯೊಳ್: **ಕಾದಂಬ,** ೧. ೧೨೬ ವ)

**ವನಾಂತರ** – ಕಾಡಿನ ಒಳಭಾಗ (ಕರಿಯ ಮುಗಿಲ್ಗಳಿಂ ಗಗನಮಂಡಳಮೊಪ್ಪಿರೆ ಸೋಗೆಯಿಂ ವನಾಂತರಂ ಎಸೆದು ಒಪ್ಪೆ ತೋರ್ಪ ಮೊಳೆವುಲ್ಗಳಿನೀ ಧರಣೀವಿಭಾಗಂ ಒಪ್ಪಿರೆ: **ಪಂಪಭಾ,** ೭. ೨೩)

**ವನಾಂತರಾಳ** – ವನಾಂತರ (ಜಲಜಲನೆ ಒಱ್ಕುತಿರ್ಪ ಪರಿಕಾಲ್ ಪರಿಕಾಲೊಳ್ ಅಳುರ್ಕೆಗೊಂಡ ನೈದಿಲ ಪೂ.. .ಸಿರಿ ನೋಡುಗುಮಾ ವನಾಂತರಾಳದೊಳ್: **ಪಂಪಭಾ,** ೧. ೫೨)

**ವನಾವಸಥ** – ಕಾಡಿನಲ್ಲಿನ ಮನೆ (ನಿರುತಂ ಭಾವನರುಂ ವನಾವಸಥರುಂ ಜ್ಯೋತಿಷ್ಕರುಂ ಕಲ್ಪವಾಸರುಂ ಆಗಿರ್ದ ಚತುರ್ವಿಧಾಮರರ್ ಉದಾರರ್: **ಪುಷ್ಪದಂಪು,** ೧೦. ೧೩)

**ವನಿತಾಸಕ್ತಿ** – [ವನಿತಾ+ಸಕ್ತಿ] [ವನಿತಾ+ಅಸಕ್ತಿ] ಹೆಣ್ಣಿನ ಬಗೆಗಿನ ಆಸಕ್ತಿ ಅಥವಾ ಅನಾಸಕ್ತಿ (ಮುಕ್ತಿಶ್ರೀಯಾಳ್ ತನಗಾಸಕ್ತಿಯೊಳಿರದೊಸೆದು ನೆರೆದನಜರಂ ವನಿತಾಸಕ್ತಿಯ ವರಂಗೆ ನೆರೆವನುರಕ್ತಿಯನೊದವಿಸುವ ಮೆಚ್ಚದೇನಚ್ಚರಿಯೋ: **ಶಾಂತಿಪು,** ೧೨. ೩೪)

**ವನಿಗ** – ತೋಟಗಾರ, ವನಪಾಲಕ (ಜನಿತ ನೃಪಾನಂದಂ ನಂದನವನಿಗಂ ಬಂದು ಬಿನ್ನಪಂಗೆಯ್ಯೆ ಮನೋಜನೊಳ್ ಎಕ್ಕತುಳಕೆ ಬರ್ಪಂತೆ ಅನಂತರಂ ನಂದನಕ್ಕೆ ವಿಭು ಜಿನಚಂದ್ರಂ ಬಂದು: **ಶಾಂತಿಪು,** ೮. ೨ ಮತ್ತು ೨ ವ)

**ವನೀಪಕ** – ಯಾಚಕ (ಎಡೞು ಅಱಿದು ಈವ ಕಲ್ಪತರುವೆಂದು ವನೀಪಕಕೋಟಿ ಸಂತಸಂಬಡೆ ಪೊಡೆವ ಒಂದಕಾಳವಿಳಯಾಶನಿ ಎಂದು ವಿರೋಧಿಗಳ್ ಮನಂಗಿಡೆ: **ಪಂಪಭಾ,** ೨. ೯೮)

**ವನೇಚರ** – ಬೇಡರವನು[ಳು] (ಇಳಾತನೂಜೆ ಎನುತ ಅಂತದಂ ಈಕ್ಷಿಸುವರ್ ವನೇಚರರ್: **ಕಾದಂಬ,** ೧. ೯೭)

**ವನೇಚರಾಧಿಪ** – ಬೇಟೆಗಾರರ ಮುಖಂಡ (ಅಲ್ಲಿ ಕೋಳ್ಮಿಗದ ವನೇಚರಾಧಿಪರ ದಾಯಿಗರತ್ತಣಿಂ ಅಪ್ಪ ಅಪಾಯಕೋಟಿಗೆ ಪವಣಿಲ್ಲ: **ಪಂಪಭಾ,** ೭. ೨೧)

**ವನೇರುಹ** – ತಾವರೆ (ಅವಧರಿಪುದು .. .. ನವರವಿರುಚಿರಾಂಘ್ರಿ ವನೇರುಹಯುಗಳ ದೇವ ದೇವಿಯರಿರವಂ: **ರಾಜಶೇವಿ,** ೩. ೬೬)

**ವನೋತ್ಥ** – ಕಾಡನಲ್ಲಿ ಜನಿಸಿದ (ನೀಳಮೇಘೋತ್ಕರಂ ಎಂಬತಿರ್ದುದು .. .. ಹಸ್ತಿಯೂಥಂ ವನೋತ್ಥಂ: **ಚಂದ್ರಪ್ರಪು,** ೫. ೬೨)

**ವನೋದ್ದೇಶ** – ಕಾಡುಪ್ರದೇಶ (ಸುಧಮಾಚಾರ್ಯರಂ ಆ ವನೋದ್ದೇಶದೊಳ್ ಕಾಣದೆ: **ಸುಕುಮಾಚ,** ೩. ೨೩ ವ)

**ವನ್ಯ** – ಕಾಡಿನ (ಕೇಸರಿಣೀಸ್ತನ್ಯಮಂ ಅನ್ಯ ವನ್ಯಗಜಪೋತಾನೀಕಮುಂಡಾಡೆ: **ಆದಿಪು,** ೯. ೯೭)

**ವನ್ಯಲುಲಾಯ** – ಕಾಡು ನಾಯಿ (ತನ್ನಯ ನೆಟಿಲಂ ಕಡುಗಪ್ಪಲೆಂದು ಪೊರಳಲ್ಕೊಡರಿಸಿ ಮೆಯ್ಯಿಕ್ಕಲಿರ್ದ ವನ್ಯಲುಲಾಯಂ: **ಪುಷ್ಪದಂಪು,** ೮. ೭೭)

**ವಪು** – ದೇಹ (ದೆವಸ ದೆವಸಂಗಳಿಂ ಕುಂದುವುದಲ್ಲದೆ ಬಳಮುಂ ಆಯುವುಂ ವಪುವುಂ ಪೆರ್ಚುವುವಲ್ಲವು: **ಅಜಿತಪು,** ೨. ೭೯)

**ವಪುಷ್ಮ** – ಚೆಲುವಾದುದು (ಕನತ್ಕನಕಮಂಡನಮಂಡಿತಮಂ ವಪುಷ್ಮಮಂ ಸಂಪದುಪೇತಮಂ ತರಿಸಿ ದಿಗ್ವಿಜಯಕ್ಕೆ ಜಿನೇಂದ್ರಚಂದ್ರದೇವಂ ಪೊಱಮಟ್ಟಂ; **ಶಾಂತಿಪು,** ೧೦. ೧೪೪ ವ)

**ವಪ್ರ** – ಗೋಡೆ, ಪ್ರಾಕಾರ (ಸುರಶರಾಸನಭಸುರಮೊಪ್ಪಿ ತೋಱುಗುಂ ಪಂಚರತ್ನಪಾಂಶೂಚ್ಚದೀಪ್ತಿದೀಪ್ರಂ ವಪ್ರಂ: **ಆದಿಪು,** ೬. ೧೦೩); ಬೆಟ್ಟದ ತಪ್ಪಲು (ಕನಕಕ್ಷ್ಮಾಧರ ವಪ್ರದೊಳ್ ನೆಗಟ್ಟು ವಪ್ರಕ್ರೀಡೆಯಂ ನೀಳ್ಕಿ ನಾಕನದೀವಾರಿಯನೀಂಟಿ: **ಶಬರಶಂ,** ೧. ೭)

**ವಪ್ರಕ್ರೀಡೆ** – ಪ್ರಾಣಿಗಳು ತಲೆ ಗುದ್ದುವ ಆಟ (ಕನಕಕ್ಷ್ಮಾಧರ ವಪ್ರದೊಳ್ ನೆಗಟ್ಟು ವಪ್ರಕ್ರೀಡೆಯಂ ನೀಳ್ಕಿ ನಾಕನದೀ ವಾರಿಯನೀಂಟಿ: **ಶಬರಶಂ,** ೧. ೭)

**ವಪ್ರಭೆ** – ಚಿನ್ನದ ಕಾಂತಿ (ವಿದಿತಂ ವಪ್ರಭೆ ವಜ್ರವೇದಿಕೆ ವಧೂಲಾವಣ್ಯಪುಣ್ಯಾಂಬು: **ಪಾರ್ಶ್ವನಾಪು,** ೭. ೪೦)

**ವಯಃಪರಿಣತಿ** – ಮುಪ್ಪು, ಪ್ರೌಢತೆ (ವಯಃಪರಿಣತಿವೆತ್ತುಂ ಏನುದಯಕಾಲದ ರಾಗಮಂ ಅಸ್ತಕಾಲದೊಳ್ ಪರಿಹರಿಸಲ್ಕಣಂ ನೆಱೆದನಿಲ್ಲ ದಿನಾಧಿಪನಂತೆ ದಲ್: **ಮಲ್ಲಿನಾಪು,** ೭. ೧೦)

**ವಯಲ್** – ಬಯಲು (ವಯಲ್ಗೆ ಮೆಯ್ದೋಱುವೆವೆಂಬ ಪೂಣಿಗರ್ ಅಡಂಗಿ ಕುನುಂಗಿ ಸಿಡಿಲ್ದು ಜೋಲ್ದು ಕಾಯ್ಪಾಱಿ ನಭಕ್ಕೆ ಪಾಱಿದುದು: **ಪಂಪಭಾ,** ೧. ೧೭೯)

**ವಯಸ** – ಕುದುರೆಯ ನಡಿಗೆಯ ಒಂದು ಬಗೆ (ಮತ್ತಂ ಅಡಿಯಿಟ್ಟೋಡುವ ವಯಸದೊಳ್ ತಾಳವೃತ್ತಾಕಾರದಿಂ ತನ್ನ ಮೇಲೆ ಫಳಂಗಳಂ ಸುರಿವ ದೇವತೆಯುಮಂ: **ಚಾವುಂಪು,** ಪು. ೪೯೯. ಸಾ. ೧); ಪ್ರಾಯ, ಹರೆಯ (ವಯಸಮನೀ ಶೀಲಮನೀ ವಿನಯಮನೆಯ್ದೆ ವಿದ್ಯೆಯಿಂ ಪುದಿದೊಡೆ ಮತ್ತೇವೇಟ್ಟುದೊ ನೀಮೆ ಜಗತ್ಪಾವನರಯರಿರಕ್ಕ ನಿಮಗಮುಗಗ್ಗಳರೊಳರೇ: **ಆದಿಪು,** ೮. ೫೮)

**ವಯಸ್ಯ** – ಗೆಳೆಯ (ಮದೀಯ ವಯಸ್ಯನಂ ಅಱಸುತ್ತುಂ ಮಗುೞೆ ಮನದೊಳಾಂ ಚಿಂತಿಸಿದೆಂ: **ಕಾದಂಸಂ,** ೪. ೫೪)

**ವಯಸ್ಯೆ** – ಗೆಳತಿ (ಕಡೆಗಣ್ಣಿಂದೆ ನೋಡಿದಳ್ ವಯಸ್ಯೆಯ ಮೊಗಮಂ: **ಪುಷ್ಪದಂಪು,** ೩. ೭೩)

**ವಯೋಧಿಕ** – ಹೆಚ್ಚು ವಯಸ್ಸಾದವನು, ಹಿರಿಯ (ವಯೋಧಿಕರ್ ಈಗಳುಂ ಆಗಳುಂ ಅಜಿವರಾದೊಡಂ ಇನಿಸು ಎಡೆಯಾಗಿರ್ದ ಸಂಬಂಧಮಂ ನೀನಿರ್ದು ಪೊಸಯಿಸುವುದು: **ಶಾಂತಿಪು,** ೨. ೭೭ ವ)

**ವರ** – ಪ್ರಮುಖನದವನು (ವರಂ ವರೇಣ್ಯಂ ಪ್ರಮುಖಂ ಪ್ರಬರ್ಹಂ: **ಅಭಿಧಾವ,** ೨. ೧. ೨); ಇಷ್ಟವಾಉದು, ಉತ್ತಮವಾದದು (ವರಂ ಇಷ್ಟಂ ವರಂ ಉತ್ತಮಂ: **ಅಭಿಧಾವ,** ೩. ೧. ೨೫); ಗಂಡ (ಸುರುಚಿರ ದರ್ಪಿಯೊಳ್ ನವಶರಾವೆಯೊಳ್ ಉಗ್ರನ ಚಾರುಹಸ್ತದೊಳ್ ವರನಗಲೊಳ್: **ತ್ರಿಷಷ್ಟಿಪು,** ೧೦. ೭೬)

**ವರಂ** – ವರೆವಿಗೂ (ಮನ್ಮಥನ ಮೋಹನಯಂತ್ರಮಿದಪ್ಪುದಲ್ಲದೆ ಅಂದಿನಿತುವರಂ ಮನಂಗೊಳಿಸದು: **ಆದಿಪು,** ೪. ೪೧)

**ವರಟಾ** – ಹೆಣ್ಣು ಹಂಸ (ಬಳಸಿ ವಿಳಾಸಿನಿಯರ್ ಬರೆ ಜಲಕೇಳಿಗೆ ನಡೆವ ನೃಪಸುರೇಂದ್ರಂ ವರಟಾವಲಿವೆರಸು ಕೊಳಕ್ಕೆಯ್ದುವ ವಿಲಸತ್ ಹಂಸಮಿಥುನಮಂ ನೆನೆಯಿಸಿದಂ: **ಶಾಂತೀಶ್ವಪು,** ೧೦. ೧೫೧)

**ವರಣ** – ಪೂಜ್ಯ (ಪೆತ್ತ ತಾಯ್ ವಿನಯಾಳಂಕೃತೆ ವೀರಕಬ್ಬೆ ವರಣಂ ಶ್ರೀವೀರಭಟ್ಟಾರಕಂ ತನಯಂ: **ವರ್ಧಮಾಪು,** ೧. ೨೩)

**ವರತ್ರೆ** – ಚರ್ಮದ ಪಟ್ಟಿ (ಅಂಗಜಗಜೇಂದ್ರಂ ಕಟ್ಟುವ ಕಲ್ಹಾರವರತ್ರೆಯಿದೆನೆ ಮಣಿಹಾರಂ .. .. ಸೊಗಯಿಸುಗುಂ: **ಲೀಲಾವತಿ,** ೧೨. ೭೨)

**ವರದ** – ವರವನ್ನೀಯುವ (ವರದ ಫಲಾಸಿ ಖೇಟಕ ಚತುರ್ಭುಜೆ ತನ್ನ ಶರೀರ ಕಾಂತಿಯಿಂ .. .. ಅಪರಾಜಿತೆ ಮಾಟ್ಕೆ ಮತಿಪ್ರಕಾಶಮಂ: **ಮಲ್ಲಿನಾಪು,** ೧. ೯)

**ವರಯೋಗ್ಯೆ** – ವಿವಾಹಯೋಗ್ಯೆ (ಅಂತು ವರಯೋಗ್ಯೆಯಾದ ಪತಿಂವರೆಯನಱೆದು ಅಪರಾಜಿತಂ .. .. ತದನುತೂಪ ವರನ್ವೇಷಣಪರಾಯಣನಾಗಿ: **ಶಾಂತಿಪು,** ೪. ೮೮ ವ)

**ವರಶಾಲಿ** – ಶ್ರೇಷ್ಠ ಬತ್ತ (ಕೂಲಿಯಿಂದಂ ದೊರಕಿದ ವರಶಾಲಿಯಕ್ಕಿಯಂ ಕೊಂಡಾಗಳ್: **ತ್ರಿಷಷ್ಟಿಪು,** ೧೪. ೨೦)

**ವರಾಂಗಿ** – ಸುಂದರ (ವರಾಂಗಿ ಬೆದರ್ದೀಕ್ಷಿಸೆ .. .. ಒಡನದು ಗಜೆಗೆದರ್ದು ನಲಿದು ನರ್ತಿಸಿತಾಗಳ್: **ರಾಜಶೇವಿ,** ೧೦. ೪೦)

**ವರಾಕ** – ದೀನ (ಸ್ಮರ ರಾಗಂ ಮನದೊಳ್ ಬೇರ್ವರಿವಿನೆಗಂ ಬ್ರಹ್ಮಚರ್ಯ ನಿಷ್ಠಾಗರಿಮಂ ಕರಗುವಿನಂ ಎಳಸೆ ಕಣ್ಗಳ್ ವರಾಕ ಭಿಕ್ಷಾಕಂ ಆಕೆಗಂದು ಇಂತೆಂದಂ: **ಪಂಪರಾ,** ೮. ೬೧)

**ವರಾಟಕ** – ಕವಡೆ (ಉತ್ತಾನವಿನಿಹಿತ ವರಾಟಕಪ್ರಕರಂಗಳುಂ ವಿವಿಧ ವರ್ಣರಾಗ ರುಚಿರ ಕಾರ್ಪಾಸಕುಸುಮ ಲಾಂಛಿತಂಗಳುಂ: **ಕಾದಂಬ,** ೨. ೧೦೩ ವ)

**ವರಾರೋಹೆ** – ಸುಂದರಿ (ಮಾಣಿಕ್ಯಕಾಂಚೀರುಚಿರುಚಿರ ವರಾರೋಹೆಯರ್: **ಆದಿಪು,** ೮. ೫೬)

**ವರಾಹ** – ಹಂದಿ (ಹರಿಣನ ಬೇಂಟೆ ಪೆರ್ಬುಲಿಯ ಬೇಂಟೆ ವರಾಹನ ವೀರಬೇಂಟೆ: **ಗಿರಿಜಾಕ,** ೧. ೮೧)

**ವರಾಹಕ** – ವರಾಹ (ವಿಚಾರಿಸಲಿಂತಿದು ನಡೆಗಲ್ತು ಸಂಚರಿಪಿ ಮೇಚಕಶೈಲಮೋ .. .. ಪೇೞೆನೆ ತೋರಿದುದಾ ವರಾಹಕಂ: **ಶಬರಶಂ,** ೪. ೩)

**ವರಿಗೆ** – ಗುರಾಣಿ (ಗೊಂದಣದಿಂದೊಪ್ಪುವ ಪೊಸ ನಂದಿಯ ವರಿಗೆಗಳ ವೀರವರ್ಗಂ: **ತ್ರಿಷಷ್ಟಿಪು,** ೫. ೮)

**ವರಿಸು** – ಬರಮಾಡು (ಸೋಮಶರ್ಮನ ಮಕ್ಕಳಪ್ಪ ಅಗ್ನಿಭೂತಿಯಂ ವಾಯುಭೂತಿಯುಮಂ ತನ್ನಲ್ಲಿಗೆ ವರಿಸಿ: **ಸುಕುಮಾಚ,** ೨. ೧೩ ವ)

**ವರುಡು** – ಉಜ್ಜು (ಪಣೆ ವರುಡಲ್ಕೆ ಪರ್ವಿದೆರ್ದೆಯೊಳ್ ಪೊರೆವಳ್ಗೆಸರಂ ವೃಷಂಗಳೊಳ್ ಪೊಣೆದಿಱಿಯಲಕೆ: **ನೇಮಿನಾಪು,** ೪. ೧೨೨)

**ವರುಣನ ಕುಂತ** – ಈಟೀಮರ (ವರುಣನಕುಂತದುತ್ಕರದ ಕೆತುವ ಕೇಕಿವಿಳಾಸದ ಅರ್ಭಕೋದರೆಯ .. .. ಅಭಿದಾನಮಂ ತಳೆದ ಭೂರುಹಮೊಪ್ಪುಗುಂ ಆ ವನಾಂತರದೊಳ್: **ರಾಜಶೇವಿ,** ೫. ೫೭)

**ವರುಣವಾಹನ** – ಮೊಸಳೆ (ಬಂದೊಳಪುಗಲಾಱದೆ ಆ ವರುಣವಾಹನಮೀಕ್ಷಿಸಲೇಱೆ ನಿಂದುದುದ್ದೊಳೆನೆ ರಂಜಿಕುಂ ಮಕರತೋರಣಮೀಕ್ಷಣ ಸೌಖ್ಯಕಾರಣಂ: **ಪುಷ್ಪದಂಪು,** ೨. ೯೧)

**ವರುಣಾನಿ** – ವರುಣನ ಹೆಂಡತಿ, ಋದ್ಧಿ (ಚಂಡಕಿರಣಂ ವರುಣಾನಿಯ ಕೈಯ ಕೆಂಬರಲಗನ್ನಡಿಯಂತೆ ದಿಟ್ಟಿಗಳ್ ಅಳವಟ್ಟಿರೆ: **ಪಂಪರಾ,** ೮. ೨)

**ವರುಣಾಶಾ[ಶೆ]** – ಪಶ್ಚಿಮ ದಿಕ್ಕು (ವರುಣಾಶಾ ಕುಕ್ಷೀಲ ಉದಾಸಿತ ವನನವಕುಂದೌಘಸದ್ಗಂಧದೊಳ್: **ತ್ರಿಷಷ್ಟಿಪು,** ೮. ೧೮)

**ವರೂಥ** – ರಥ (ತೆರೆಯಿಲ್ಲದೆಡೆಯೊಳ್ ವರೂಥಮವಯವದೆ ತಡಿಯನೆಯ್ದಿದುದಾಗಳ್: **ಆದಿಪು,** ೧೨. ೧೨೭)

**ವರೂಥಿನಿ** – ಸೈನ್ಯ (ಪುರನಿಧಿಶಯ್ಯಾಸನ ರಾಜ್ಯ ರತ್ನ ವಾಹನ ವರೂಥಿನೀ ನಾಟ್ಯ ಸಭಾಪರಿಕರಸಹಿತಂ ಭರತೇಶ್ವರಂಗೆ ಸಮಸಂದುದೀ ದಶಾಂಗಂ ಭೋಗಂ: **ಆದಿಪು,** ೧೫. ೫)

**ವರೂಥಿನೀಪತಿ** – ಸೇನಾಪತಿ (ಪ್ರಪಾತಗುಹಾಸಮೀಪದೊಳ್ ಬೀಡಂ ಬಿಟ್ಟು ಮುನ್ನಿನ ಮಾಟ್ಕೆಯೊಳೆ ವರೂಥಿನೀಪತಿಯಂ ಬೆಸಸಿದೊಡೆ: **ಆದಿಪು,** ೧೩. ೭೮ ವ)

**ವರೇಣ್ಯ** – ಪ್ರಮುಖ, ಶ್ರೇಷ್ಠ (ಅಖಿಳಕಳಾನ್ವೈಪುಣ್ಯಜನವರೇಣ್ಯನುಂ ಎನಿಸಿ ಪೊಗಳ್ತೆವಡೆದು ರಂಜಿಪ ಅಮಿತವಚನನೊಡನೆ: **ರಾಜಶೇವಿ,** ೪. ೮೨ ವ)

**ವರ್ಜನ** – ಹತ್ಯೆ (ಪ್ರಶಮನ ವರ್ಜನ ಬರ್ಹಣ ವಿಶರಣ ಹಿಂಸಾರ್ಥಕಂ ವಧರ ತಾನಕ್ಕುಂ: **ಅಭಿಧಾವ,** ೧. ೧೪. ೪)

**ವರ್ಜ್ಯ** – ತೊರೆಯಬೇಕಾದ (ವನಿತಾಪಶುಷಂಡಕ ವರ್ಜ್ಯನಿವಾಸೋದ್ದೇಸದೆಡೆಗಳೊಳ್ ಚರಿಯಿಸುತುಂ ಮುನಿಪತಿ: **ಸುಕುಮಾಚ,** ೪. ೮)

**ವರ್ಣ** – ಬಣ್ಣ (ವಿಕಚಕರ್ಣಿಕಾರ ವರ್ಣಮುಂ .. . ದೀರ್ಘಾಯುಷ್ಯಮುಂ ತನಗನುಸಂಗತಮಾಗೆ: **ಶಾಂತಿಪು,** ೧೦. ೯೪ ವ); ಸಾಮಾಜಿಕ ಪಂಗಡ (ಕ್ಷಿತಿಯೊಳ್ ವರ್ತಿಸುಗುಂ ಕ್ರಮಗತಿಯಿಂದಂ ಬ್ರಾಹ್ಮಣಾದಿ ವರ್ಣಂ: **ಅಭಿಧಾವ,** ೧. ೧೧. ೩೦); ಆನೆಯ ಮೇಲೆ ಹಾಸುವ ಚಿತ್ರದ ಕಂಬಳಿ (ವರ್ಣಂ ಕುಥಂ ಆಸ್ತರಣಂ ಪ್ರವೇಣಿ ಸಮಾನಂ: **ಅಭಿಧಾವ,** ೧. ೧೪. ೩೬)

**ವರ್ಣಕ** – ವರ್ಣನಾಪ್ರಧಾನ ಕಾವ್ಯ, ದೇಸಿ ಛಂದಸ್ಸಿನ ಕಾವ್ಯ (ವರ್ಣಕಂ ಕತೆಯೊಳೊಡಂಬಡೆಯೆ ಪೆಟ್ಗೊಡೆ ಪಂಪನೆ ಪೇೞ್ಗುಂ: **ಪಂಪಭಾ,** ೧. ೧೧)

**ವರ್ಣಕವಿತ್ವ** – ದೇಸೀಶೈಲಿಯ ಕಾವ್ಯ (ಬೇಟಮನೆ ವಸ್ತುಮಾಡಿಯೆ ಕವಿತ್ವ ವಸ್ತುಕವಿತ್ವ ಕಾಮತತ್ತ್ವವಿದನೆನಿಸಿದ ಅತಿವಿದಗ್ಧನೊರ್ವಂ ಇಂತೆಂದಂ: **ಆದಿಪು,** ೧೨. ೨೨ ವ)

**ವರ್ಣಕ್ರಮಂಗೆಯ್** – ಬಣ್ಣ ಹಾಕು (ಸೊಗಯಿಸುವ ಸಾಮಂತಚೂಡಾಮಣಿಯ ಮೆಯ್ಯ ಬಣ್ಣಂ ವಿಧಾತ್ರನೆಂಬ ಚಿತ್ತಾರಿಯ ವರ್ಣಕ್ರಮಂಗೆಯ್ದ ಕದಳೀಗರ್ಭಶ್ಯಾಮಮೆಂಬ ಬಣ್ಣದಂತಾದುದು: **ಪಂಪಭಾ,** ೨. ೩೯ ವ)

**ವರ್ಣಚತುಷ್ಕ** – ನಾಲ್ಕು ವರ್ಣಗಳು: ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ (ವದನಂ ತೋಳ್ ತೊಡೆ ಪಾದಮೆಂಬಿವನಿವಂ ಶುಶ್ರೂಷೆಗೆಯ್ಯಲ್ಕೆ ಲಾಭದಲಂಪಿಂ ನಡೆಯಲ್ಕೆ ಕೈದುವಿಡಿಯಲ್ಕೆ ಅಲ್ಲಜಂ ಬೇಱೆ ತೋಱಿದೊಡಾ ವರ್ಣಚತುಷ್ಕಮಂ ಕುಮತಿಗಳ್ ತತ್‌ಸ್ಥಾನದೊಳ್ ಮುನ್ನ ಪುಟ್ಟಿದುವೆಂಬರ್: **ಆದಿಪು,** ೮. ೭೩)

**ವರ್ಣತ್ರಯ** – ವರ್ಣಚತುಷ್ಕದಲ್ಲಿ ಮೊದಲ ಮೂರು ದ್ವಿಜವರ್ಣಗಳು (ದುರ್ಗಾಧಿನಾಥನಿಯತ ನಿಸರ್ಗಪ್ರೀತಿಯಿಂ ಅಭೀಪ್ಸಮಂ ಸಕಲಸುಹೃದ್ವರ್ಗಂಬೆರಸು ಅನುಭವಿಸುಗೆ ದುರ್ಗಂ ವರ್ಗತ್ರಯಪ್ರಕೃಷ್ಟೋದಯಮಂ: **ಪಂಚತಂತ್ರ,** ೪೪೬)

**ವರ್ಣಪೂರ** – ಬಣ್ಣದಿಂದ ತುಂಬಿದುದು (ಮಂಗಳಕರ ವರ್ಣಪೂರ ಪರಿಮಂಡಳಮಾಯ್ತು ಸುರಮ್ಯಮಂಡಳಂ: **ಅನಂತಪು,** ೧೧. ೬)

**ವರ್ಣಲಾಭ** – ಗರ್ಭಾನ್ವಯಕ್ರಿಯೆಗಳಲ್ಲಿ ಒಂದು, ಬ್ರಾಹ್ಮಣತ್ವವನ್ನು ಪಡೆಯುವುದು (ವಿವಾಹ ವರ್ಣಲಾಬ ಕುಲಚರ್ಯಾ ಗೃಹೀಶಿತ್ವ .. .. ವಿಹಾರಯೋಗ್ಯತಾನಿರ್ವೃತಿಯೆಂಬ ಅಯ್ವತ್ತುಮೂಱು ಗರ್ಭಾಧಿನಿರ್ವಾಣಪರ್ಯಂತಗಳಪ್ಪ ಗರ್ಭಾನ್ವಯಕ್ರಿಯೆಗಳಂ: **ಆದಿಪು,** ೧೫. ೧೫ ವ)

**ವರ್ಣಸಂಕರ** – ಮದುವೆಯ ಮೂಲಕ ಜಾತಿಗಳು ಬೆರಕೆಯಾಗುವುದು (ಪ್ರಜಾಪತಿಯುಂ .. .. ಯಥಾಯೋಗ್ಯಮುಪದೇಶಂಗೆಯ್ದು ವರ್ಣಸಂಕರಮಗಲೀಯದೆ ತಂತಮ್ಮ ಜಾತಿಗಳೊಳ್ ನಣ್ಪುಮಂ ಕೋಳ್ಕೊಡೆಯುಮಂ ನಿಯೋಜಿಸಿ: **ಆದಿಪು,** ೮. ೬೪ ವ); ಬೇರೆ ಬೇರೆ ಬಣ್ಣಗಳನ್ನು ಬೆರೆಸುವುದು (ವರ್ಣಸಂಕರಂ ಚಿತ್ರದೊಳ್ .. .. ಅಕ್ಕುಮಲ್ಲದೆ ಜನಪದದ ಜನಂಗಳೊಳಿಲ್ಲ: **ಜಗನ್ನಾವಿ,** ೨. ೧ ವ); ಕ್ರಮಬದ್ಧವಲ್ಲದ ಅಕ್ಷರ ಅಥವಾ ಪದಸಂಯೋಜನೆ (ಗುರುಲಘುಗಣನಂ ಕೆಟ್ಟುದು ಪಿರಿದಾದುದು ವರ್ಣಸಂಕರಂ ದನವನಿಂದೊರೆಯಾದುದು ಭೂವಲಯ ಪರಿಣತನಲ್ಲದನ ಕವಿತೆಗಂ ಚಿತ್ತಕ್ಕಂ: **ಅನಂತಪು,** ೧೩. ೩೧)

**ವರ್ಣಿ** – ಬ್ರಹ್ಮಚಾರಿ (ಮನೋಹರ ಪುಷ್ಕರಣಿಗಳಿಂ ವರ್ಣಿಗಳ ಪರ್ಣಶಾಲೆಗಳಿಂ ನವೀನೋದ್ಯಾನಂಗಳಿಂ: **ಉದ್ಭಟಕಾ,** ೩. ೩೫ ವ)

**ವರ್ಣೋತ್ತಮ** – ಬ್ರಾಹ್ಮಣ (ನಾಮಪ್ಪೊಡೆ ವರ್ಣೋತ್ತಮರ್ ನಮಗತ್ತಲಾರುಮಿಲ್ಲ: **ಸುಕುಮಾಚ,** ೮. ೧ ವ)

**ವರ್ತನ** – ನಡತೆ (ಮುನ್ನಿಲ್ಲದ ತನ್ನ ವರ್ತನಮಿದೊಂದಾಶ್ಚರ್ಯಮಂ ತೋಱಿದಪ್ಪುದು: **ಸುಕುಮಾಚ,** ೨. ೫೩); ಪುನರಾವೃತ್ತಿ (ವರ್ತನಮಿಂತೀ ತೆಱನೆ ರಹಟಘಟಿಕಾನ್ಯಾಯಂ: **ಪಂಪರಾ,** ೧. ೫೭):

**ವರ್ತಿ** – ದೀಪದ ಬತ್ತಿ (ಎಱಗಿದನಾತಂ ಗೌರವಮಱೆಯದೆಯುಂ ದೀಪವರ್ತಿ ನಿಧಿಗಾಣ್ಬುದುಂ ಒಲ್ದೆಱಗುವ ತೆಱದಿಂ: **ಯಶೋಧಚ,** ೪. ೧೪); ಬಟ್ಟೆಯ ಅಂಚು (ವಸನಾಂತಂ ಅಂಚಳಂ ವರ್ತಿ ಸಿಚಂ ದಶೆ ಅಂಚು ವಸ್ತಿಯಕ್ಕುಂ ಕರೆಗಳ್: **ಅಭಿಧಾವ,** ೧೧೩. ೧೬)

**ವರ್ತಿಸು** – ಇರು, ಬದುಕು (ಮುನಿಗಳ್ ನಿಜಜೀವನಕ್ಕೆ ಯೋಗಾಯತಸೌಖ್ಯಮೆಂಬ ಅಮೃತ ಸೇವೆಯೇ ಕಾರಣಮಾಗೆ ವರ್ತಿಪರ್: **ಜಗನ್ನಾವಿ,** ೧೬. ೫೮); ನಡೆದುಕೊ (ಕಾಪುರುಷರ್ ತಾವಾರ್ತಪರೆ ಶಾಂತರೂಪಿಂ ವರ್ತಿಸಿ ನಿನರಾಜನಂತು ಮುಕ್ತಿಯನೀಯಲ್; **ಸಮಯಪ,** ೧. ೧೨೪)

**ವರ್ತ್ಮ** – ಹಾದಿ, ಕಣ್ಣುರೆಪ್ಪೆ (ಮಾರ್ಗ ಅಕ್ಷಿಪಕ್ಷ್ಮ ಅಭಿಧಾನಕ್ಕುಂ ವರ್ತ್ಮಂ: **ಅಭಿಧಾವ,** ೩. ೧. ೪೨)

**ವರ್ಧಕಿ** – ಬಡಗಿ (ಸಮಸ್ತ ಕುಶಲ ವರ್ಧಕಿಗಳಂ ಕರೆಯಿಸಿ ಬಟಿಕ ಅವರ್ಗಳ ಎಣಿಕೆಗಸದಳಮಾದ ಪಸದನಮನಿತ್ತು: **ಉದ್ಭಟಕಾ,** ೪. ೧೯ ವ)

**ವರ್ಧಮಾನ** – ಔಡಲ (ಈ ವರ್ಧಮಾನಂ ನಯನಾನಂದ ವರ್ಧಮಾನಮಾದುದು: **ಮಲ್ಲಿನಾಪು,** ೫. ೩೬ ವ); ಹೆಚ್ಚುತ್ತಿರುವ (ಈ ವರ್ಧಮಾನಂ ನಯನಾನಂದ ವರ್ಧಮಾನಮಾದುದು: **ಮಲ್ಲಿನಾಪು,** ೫. ೩೬ ವ); ಒಗಟು (ಶುದ್ಧಪ್ರಸಿದ್ಧಪ್ರಬಂಧದಂತೆ ವರ್ಧಮಾನಮಾನಿತಮುಂ .. .. ಎನಿಪುದು: **ಚಂದ್ರಪ್ರಪು,** ೧೧. ೬೯ ವ); [ಜೈನ] ಇಪ್ಪತ್ತನಾಲ್ಕನೆಯ ತೀರ್ಥಂಕರ (ಮಾಟ್ಕೆ ಎಮಗಟ್ಟಿಜೆಂದೆ ಶುಭಮಂ ಶರ್ರಿವರ್ಧಮಾನಂ ಜಿನಂ: **ಆಚವರ್ಧ,** ೧. ೧)

**ವರ್ಧಿತತೀರ್ಥಪ್ರತಿಪಾದನ** – ವೃದ್ಧಿಯಾದುದನ್ನು ಯೋಗ್ಯರೀತಿಯಲ್ಲಿ ವಿನಿಯೋಗಿಸುವುದು (ಅಲಬ್ಧಲಾಭಂ ಲಬ್ಧಪರಿರಕ್ಷಣಂ ರಕ್ಷಿತವಿವರ್ಧನಂ ವರ್ಧಿತತೀರ್ಥ ಪ್ರತಿಪಾದನಂ ಎಂಬ ಚತುರ್ವಿಧ ಪುರುಷಾರ್ಥ ವೃತ್ತಿಯಾಗಿರ್ಪುದು: **ಪಂಚತಂತ್ರ,** ೭೫ ವ)

**ವರ್ಮ** – ಅಂಗರಕ್ಷಣೆಯ ಕವಚ (ಭೂತಳನಾಥಾನೀಕ ವರ್ಮೋತ್ಕರಖಚಿತ ಮಣಿಶ್ರೇಣಿರತ್ನಪ್ರದೀಪಾವಳಿದೀಪ್ತಿ ವ್ರಾತದಿಂದಂ: **ಆದಿಪು,** ೧೪. ೯೬); ತೊಗಟೆ (ದೇವನೇಂ ನರುಷ್ಕರ ಗುಡಮೋ ವಿಶುದ್ಧರಸಭಸ್ಮಮೊ ವರ್ಮ ಕಟುತ್ರಿಕಾದಿಯೋ: **ಸಮಯಪ,** ೯. ೪೮)

**ವರ್ಮಹರ** – ಪ್ರಾಪ್ತವಯಸ್ಕ (ಜಯವರ್ಮಂ ವರ್ಮಹರನಾದ ನಿಜತನೂಜನಜಿತಂಜಯಂಗೆ ಜಯಜಯನಿನಾದಪೂರ್ವಕಂ ಉರ್ವೀಭಾರಮಂ ಕೊಟ್ಟು: **ಆದಿಪು,** ೩. ೬೫ ವ)

**ವರ್ಯಜನ** – ಉತ್ತಮ ಜನ (ಅಪ್ರತಿಕಂಗೆಱಗದ ವೀರವ್ರತಮಂ ಕೇಳ್ದು ಹರ್ಷಮಂ ತಾಳ್ದದ ನಿನ್ನಬ್ರಹ್ಮಣ್ಯಂ ವರ್ಯಜನವ್ರೀಡಾಕರಂ: **ಪಂಪರಾ,** ೭. ೫೧)

**ವರ್ಷ** – ಮಳೆ (ಸರಿಗಳ ಘೂರ್ಣಿತದಿಂದಂ ಶರನಿಧಿ ಕವಿದಂತೆ ಕಱೆದುದಿಳೆಯೊಳ್ ವರ್ಷಂ: **ಗಿರಿಜಾಕ,** ೯. ೫೧)

**ವರ್ಷಜಧನು** – ಕಾಮನ ಬಿಲ್ಲು (ಹರಿ ವರ್ಷಜಧನುವಂ ಸಂಹರಿಸಲೊಡಂ ಚೈತ್ರಚಾಪಮಂ ಜಿನಚಂದ್ರಂ ಧರಿಯಿಸಿದಂ: **ಶಾಂತಿಪು,** ೧೦. ೧೩೫)

**ವರ್ಷಧರ** – ನಪುಂಸಕ, ಅಂತಃಪುರದ ಸೇವಕ (ಅಂತಃಪುರ ಪರಿಜನ ನಿರ್ದಯಸಂಮರ್ದನಪತಿತ ಕುಬ್ಜ ವಾಮನ ವರ್ಷಧರನಿಕುರುಂಬಮಂ: **ಆದಿಪು,** ೮. ೩೫ ವ)

**ವರ್ಷಧರ ಮಹೀಧರ** – ಮೋಡಗಳಿಂದ ಕೂಡಿದ ಬೆಟ್ಟಗಳು (ಆರು ಕುಲಶೈಲಗಳು ಹಿಮವನ್, ಮಹಾಹಿಮವನ್, ನಿಷಧ, ನೀಳ, ರುಗ್ಮಿ, ಶಿಖರಿಗಳೆಂಬ ವರ್ಷಧರ ಮಹೀಧರಂಗಳಿಂದಂ: **ಆದಿಪು,** ೧. ೪೮ ವ)

**ವರ್ಷಲವ** – ಮಳೆಯ ಹನಿ (ವರ್ಷಲವಂಗೂಡಿ ಪಳಂಚಿ ಪರ್ಚಿ ಸುಟಿದತ್ತು ಅಂದೊಂದು ಜಂಝಾನಿಲಂ: **ಉದ್ಭಟಕಾ,** ೭. ೮೨)

**ವರ್ಷವರ** – ಅಂತಃಪುರ ಕಾಯುವ ನಪುಂಸಕ (ವರ್ಷವರಂ ನಪುಂಸಕಂ ಪೇಡಿ ಷಂಡಂಕಂ ತಾಂ ಷಂಡಂ: **ಅಭಿಧಾನ** ೧. ೧೧. ೨೬)

**ವರ್ಷವರ್ಧನದಿನ** – ಹುಟ್ಟಿದ ಹಬ್ಬ (ತನ್ನ ವರ್ಷವರ್ಧನದಿನದೊಳ್ ಆಸ್ಥಾನಮಂಡಪದೊಳ್.. .. ಒಡ್ಡೋಲಗಂಗೊಟ್ಟಿರೆ: **ಆದಿಪು,** ೨. ೨ ಮತ್ತು ೨ ವ)

**ವರ್ಷಾವಾಸ** – ಮಳೆಗಾಲದಲ್ಲಿ ವಾಸಿಸುವ ಮನೆ (ಮಹಾಘರ್ಮಾಂತಮೆಂಬ ಧಾರಾಗೃಹಮುಂ ಗೃಹಕೂಟಮೆಂಬ ವರ್ಷಾವಾಸಮುಂ: **ಆದಿಪು,** ೧೫. ३ ವ)

**ವಲಂ** – ನಿಜವಾಗಿ (ವಾಗ್ಜಾತಚಾತುರ್ಯಗೀರ್ವಾಣಂ ತಾನೆನೆ ಸಂದ ಬಾಣನೆ ವಲಂ ವಂದ್ಯಂ: **ಕಾದಂಸಂ,** ೧. ೩); ಅಲ್ಲವೇ (ಭವದಗ್ರಜದಿಗ್ವಿಜಯೋತ್ಸವಂ ಅಧಿಕಮಹೋತ್ಸವಂ ವಲಂ ನಿನಗಾದಂ ಶ್ರವಣಸುಖಮೆಂದೆ ದಿಜ್ಞಾತ್ರವರ್ಣನಂಗೆಯ್ವಂ: **ಆದಿಪು,** ೧೪. ೫೧)

**ವಲಭಿ** – ಚಂದ್ರಶಾಲೆ (ಪಸರಸುವ ದಂತವಲಭಿಪ್ರಸರಂಗಳಿಂ ಎಸೆದು ನಗರಿ ಸೊಗಯಿಸಿ ತೋರ್ಕುಂ: **ಕಾದಂಬ,** ೨. ೧೦)

**ವಲಯ** – ಕಾಲ್ಕಡಗ (ಸರೋರುಹ ಕರ್ಣಪೂರಂ ಉತ್ಪಲ ಕಟಕಂ ಮೃಣಾಲ ವಲಯಂ ಸುರಹೊನ್ನೆಯ ಹಾರಂ: **ರಾಜಶೇವಿ,** ೪. ೪೩)

**ವಲಲ** – ಬಾಣಸಿಗ, ಅಡುಗೆಯವನು (ಮತ್ಸ್ಯಕನಲ್ಲಿ ವಲಲನಯ್ ಸೂದಕರ್ಮಿ ನಿನಗಿಂತು ಗಂಡಗೌನುಮಾಯ್ತೇ: **ಗದಾಯು,** ೭. ೩೬)

**ವಲಿತ** – ಕೊಂಕಿದ (ಸ್ಖಲಿತಗತಿ ಲುಲಿತಕುಂತಲೆ ವಲಿತ ನಿಜಗ್ರೀವೆ ಮಗಿಟ್ಟು ನೋಡಿದಳೊರ್ವಲ್: **ಅಜಿತಪು,** ೯. ೩೮)

**ವಲಿಮುಖ** – ಕೋತಿ (ವಲಿಮುಖ ನೀತಿಬಹಿರ್ಮುಖ ಮಲಿನಾತ್ಮಂ ಎನ್ನ ಮಾತುಗೇಳದೆ ನೀನೀ ಖಲನಂ ಒಡಗೊಂಡೊಡೆ ಎಲೆ ಕಂಬಲಕಂ ಶಿವಭೂತಿಗಾದ ಕಥೆಯಂತಕ್ಕುಂ: **ಪಂಚತಂತ್ರ,** ೧೭೮)

**ವಲಿಮುಖಕೇತನ** – ಶ್ರೇಷ್ಠ ಕಪಿ, ಸುಗ್ರೀವ (ವಲಿಮುಖಕೇತನನಂ ಚಕಿತ ಲೋಚನಂ ರತ್ನಜಟಿ ನಿಜಪ್ರಾಣ ಭಯಾಕುಲಚಿತ್ತಂ .. .. ಈಕ್ಷಿಸಿದಂ: **ಪಂಪರಾ,** ೧೦. ೫೧)

**ವಲೀಮುಖ** – ಕೋತಿ (ಜಾಂಬವ ಅಂಗದ ಸುಷೇಣ ಪ್ರಮುಖ ನಿಖಿಲ ವಲೀಮುಖ ಧ್ವಜಪ್ರಧಾನರ್ ರಣರಸಿಕರಾಗಿ ನಡೆದರ್: **ಪಂಪರಾ,** ೧೩. ೨೬ ವ)

**ವಲ್ಕ** – ಲವಂಗ (ಲವಂಗಂ ವಲ್ಕಂ: **ಅಭಿಧಾವ,** ೧. ೮. ೭)

**ವಲ್ಕಲ** – ಮರದ ತೊಗಟೆ (ಪರಿವೃತ ಪಲ್ಲವಾಂತರದೊಳ್ ಉದ್ಗತ ವಲ್ಕಲಮಧ್ಯದೊಳ್ .. .. ಪಲವುಮಿರ್ಪವು ನಿರಾಕುಳಂ: **ಕಾದಂಬ,** ೧. ೧೦೫); ನಾರು ಬಟ್ಟೆ (ಬಟಲೆ ಪೆಗಲಿಂ ಚಂಚತ್ ವಲ್ಕಲಾಂಚಲಂ .. .. ಆಕಾಶಮಾರ್ಗದಿಂ ಬಂದು: **ಕಾದಂಸಂ,** ೮. ೧೩); (ಅಂತು ವಲ್ಕಲಾವೃತ ಕಟಿತಟನುಮಾಗಿರ್ದ ಜಟಾಕಲಾಪನುಂ ಆಗಿ ತಪೋವನಕ್ಕೆ ಪೋಪ ಭಾರ್ಗವಂ: **ಪಂಪಭಾ,** ೨. ೪೫ ವ)

**ವಲ್ಕಲವಸನ** – ನಾರುಮಡಿ (ವಲ್ಕಲವಸನರುಂ ಕೌಪೀನಧಾರಿಗಳುಂ ಭಸ್ಮೋದ್ಧೂಳಿತಾಂಗರುಂ ಆಗಿ ತಮಗೆ ತಾವೇ ವನಪ್ರವೇಶಮಂ ಮಾಡಿ: **ಆದಿಪು,** ೯. ೯೩ ವ)

**ವಲ್ಕಾಂಚಲ** – ವಲ್ಕಲವಸನ (ಪೆಗಲಿಂ ಚಂಚತ್ ವಲ್ಕಾಂಚಲಂ ಪೆಗಲಿಂಗೆ ಬಂದೆಟಲೆ: **ಕಾದಂಬ,** ೧೦. ೧೯)

**ವಲ್ಗತ್ತುರಗ** – [ವಲ್ಗತ್+ತುರಗ] ಬಿರುಗುದುರೆ (ಕುಂಕುಮಾಂಭಸ್ಫುರಿತ ಅಂಗೋತ್ತುಂಗ ವಲ್ಗತ್ತುರಗಬಲಮದೋದ್ದಾಮಮಂ: **ಆದಿಪು,** ೧೧. ೨೪)

**ವಲ್ಗನ** – ಕುದುರೆಯ ಓಟ (ಕರಿಕಳಭಕೇಳೀವಿಲೋಕನದೊಳಂ ವಿಷಮವಾಹನ ವಲ್ಗನಶಿಕ್ಷಾವಸರದೊಳಂ .. .. ತನಗೆ ನಿರಂತರೋತ್ಸವಮಂ ಒದವಿಸುತ್ತಿರೆ: **ಮಲ್ಲಿನಾಪು,** ೩. ೨೩ ವ)

**ವಲ್ಮೀಕ** – ಹುತ್ತ (ಮಹೋಗ್ರನಾಗಮಯಮಾಗಿಯುಂ ವಲ್ಮೀಕಮಲ್ತು: **ತ್ರಿಷಷ್ಟಿಪು,** ೨. ೨೫ ವ)

**ವಲ್ಲಕಿ** – ವೀಣೆ (ಶ್ರುತಿಸೌಖ್ಯಾವಹ ವಲ್ಲಕೀಕ್ವಣಿತದೊಳ್ ಕರ್ಪೂರಪಾಳೀವಿಮಿಶ್ರಿತ ತಾಂಬೂಲರಸೋತ್ಕಟ ಪ್ರಮದದೊಳ್: **ಆದಿಪು,** ೯. ೧೧೮)

**ವಲ್ಲಣ** – ಥಡಿ (ಮಿಸುನಿಯ ಪಕ್ಕರಕ್ಕೆ ಪೊಸಮಾಣಿಕ ವಲ್ಲಣಂ ಅಚ್ಚಮುತ್ತುತಳ್ತೆಸೆವ ಮುಖಪ್ರಸಾಧನಂ .. .. ಒಪ್ಪೆ ಬಂದುವು ಅದು ಅಸದೃಶವಾಜಿಗಳ್: **ರಾಜಶೇವಿ,** ೧೩. ೬೨)

**ವಲ್ಲಭ** – ಪ್ರಿಯನಾದವನು (ಕರುಣಿಸಿ ಬಿಡು ವಲ್ಲಭಜನನಿರೀಕ್ಷಣೋತ್ಸುಕನೆಂ: **ಕಾದಂಸಂ,** ೮. ೩೦); ಗಂಡ (ವಲ್ಲಭಂ ಭರ್ತ್ರ ಪತಿ ಪ್ರಿಯನೆನಿಪುದು: **ಅಭಿಧಾವ,** ೧. ೧೧. ೧೧)

**ವಲ್ಲಬಿಕಾ[ಕೆ]** – ಹೆಂಡತಿ (ತ್ರಿಷಷ್ಟಿಸಂಖ್ಯಾತ ವಲ್ಲಭಿಕಾ ವಿಭ್ರಮಭ್ರೂಲತಾತ್ರಿಭಾಗಭಜನನುಮಾಗಿ: **ಆದಿಪು,** ೬. ೧೩ ವ)

**ವಲ್ಲಭೆ** – ಪ್ರೇಯಸಿ ೯ಪ್ರಿತಮೆ ಸುಭಗೆ ವಿಳಾಸಿನಿ ದಯಿತೆ ಮನಃಪ್ರೀತೆ ರುಚಿರೆ ವಲ್ಲಭೆ ತಾಮಹೃತ್ರಿಯೆಯಕ್ಕುಂ: **ಅಭಿಧಾವ,** ೧. ೧೧. ೫)

**ವಲ್ಲರಿ** – ಬಳ್ಳಿ (ಧರೆ ತಾಳ್ದೆ ತನ್ನ ವಿಶದ ಯಶೋವಲ್ಲರಿಯಂ ವಿದ್ವದ್ಗೋಷ್ಠೀನಿರತಂ ಸುಖಸಂಕಥಾವಿನೋದದೊಳಿರ್ದಂ: **ಮಲ್ಲಿನಾಪು,** ೩. ೨೩); ಗೊಂಡೆ, ತುರುಗಲು (ತಲೆಯೊಳ್ ಸೀರೆಯನಿಕ್ಕಿ ಕೆಮ್ಮನಿತಂ ಪೂಣ್ದಿರ್ಪಮುಗ್ರಾರಿ ವಂಸಲತಾವಲ್ಲರಿಗಳ್ಗೆ ದಾವಶಿಖಿವೊಲ್ ಮೆಯ್ದೋಱಿ: **ಪಂಪಭಾ,** ೩. ೩೩೦

**ವಲ್ಲವ** – ಗೊಲ್ಲ ಹಾಗೂ ಅಡಿಗೆಯವನು (ಸಲೆ ವಲ್ಲಭ ನಾಮಂ ಗೋಕುಲಪಾಲನುಂ ಅಂತೆ ಸೂದನುಂ: **ಅಭಿಧಾವ,** ೩. ೧. ೬೧)

**ವಲ್ಲೀ** – ಬಳ್ಳಿ (ತಳಿರೊಳ್ ವಲ್ಲೀಚಯಂ ಚೆಲ್ಲುವ ಕುಸುಮರಜೋರಾಜಿ ಪಿಷ್ಟಾತಕಂ: **ಲೀಲಾವತಿ,** ೧೦. ೯೮)

**ವಲ್ಲೀಗೃಹ** – ಬಳ್ಳಿವನೆ, ಬಳ್ಳಿಯ ಚಪ್ಪರ (ದಂಪತಿಯುತಂ ವಲ್ಲೀಗೃಹಂ ಪುಷ್ಪಪೇಶಳಗಂಧಂ ಪವನಂ: **ಜಗನ್ನಾವಿ,** ೧೭. ೯೪)

**ವಲ್ಲೂರ** – ಉಪ್ಪುಹಾಕಿದ ಮಾಂಸ (ಕಬಳಿತ ವಲ್ಲೂರಂ ಗಿಳಿತ ಬುಕ್ಕಂ ಆ ಪೀತರಕ್ತಮೇಂ ತಿಂದುದೊ: **ನೇಮಿನಾಪು,** ೫. ೪೧)

**ವಶ** – ಗಂಡಾನೆಗಳನ್ನು ಹೆಣ್ಣಾನೆಗಳ ಸಹಾಯದಿಂದ ಹಿಡಿಯುವ ಕ್ರಮ (ಕೆಲವು ದಿವಸಕ್ಕಾ ಗಜಂ ವಶಕ್ಕೆ ಕಂಭಕ್ಕೊಳಗಾಗಿ ಕಟ್ಟುವಟ್ಟು: **ಪಂಚತಂತ್ರ,** ೪೨೮ ವ)

**ವಶಂಮಾಡು** – ಸ್ವಾಧೀನಪಡಿಸಿಕೊ (ವಿವಿಧಾಲಂಕಾರದಿಂ ರಂಜಿಸೆ ತಮಗೆ ವಶಂಮಾಡಿ ಶಬ್ದಂಗಳಂ ತಮ್ಮ ಕರ್ಣಾಮೃತಮೆನೆ ರಸಭವಂಗಳಂ ತೋಱೆ; **ಮಲ್ಲಿನಾಪು,** ೧. ೨೩)

**ವಶೀಕರಣಸಾಯಕ** – ವಶಮಾಡಿಕೊಳ್ಳುವ ಅಸ್ತ್ರ (ವಶೀಕರಣಸಾಯಕದಿಂ ಭುವನತ್ರಯಂಗಳಂ ಸೋಲಿಸಲಾರೊ ನೀಂ ಪುಗೆ ಯಮಾನನಮಂ ರತಿಜೀವಿತೇಶ್ವರಾ: **ಮಲ್ಲಿನಾಪು,** ೧೪. ೩೩)

**ವಶೀಕರಣಾಂಜನ** – ವಶಮಾಡಿಕೊಳ್ಳಲು ಹಚ್ಚಿಕೊಳ್ಳುವ ಎಣ್ಣೆ, ಅಂಜನ (ಮನಸಿಜನ ವಶೀಕರಣಾಂಜನಪುಂಜದ ಪುತ್ರಿಕಾಳಿಯೆನೆ ಕಾಳಿಮಮಂ ತನಿಗೆದಱುವ ತನುರುಚಿ ಮೋಹನಮಯಮಾಗಿರ್ದರ್ ಎಸೆವ ಶಬರಾಂಗನೆಯರ್: **ಶಾಂತಿಪು,** ೩. ೭೯)

**ವಶ್ಯಮೂಳಿಕೆ** – ವಶೀಕರಣ ಶಕ್ತಿಯುಳ್ಳ ಬೇರು (ಚಿತ್ತೋದ್ಭವವರ್ಶಯಮೂಳಿಕೆ ಜಿನೇಶೇಂದೂದಯಾದ್ರೀಂದ್ರ ಚೂಳಿಕೆಯೆಂಬೆಂ ಪೊಗೞಲ್ಕೆ ಮತ್ತಜೆಯೆ ನಾನಾ ಲಕ್ಷ್ಮಣಾದೇವಿಯಂ: **ಚಂದ್ರಪ್ರಪು,** ೧೧. ೧೧೧)

**ವಶ್ಯಾಕ್ಷರ** – ವಶೀಕರಿಸಿಕೊಳ್ಳುವ ಮಂತ್ರ (ಇಂಪುವೆತ್ತ ನುಡಿಯಂ ವಶ್ಯಾಕ್ಷರಂ ಸುಯ್ಯೊಳುಣ್ಮಿದ ಕಂಪಂ ಮೃಗನಾಭಿ ಸೋಂಕಿದನೊದವಂ ಮಂದಾನಿಳಂ ಕೊಟ್ಟವೊಲ್ವದೆದು ಓರೋರ್ವರೊಳೋರ್ವರಂದು ಪಡೆದರ್ ಪಂಚೇಂದ್ರಿಯ ಪ್ರೀತಿಯಂ: **ಮಲ್ಲಿನಾಪು,** ೩. ೭೪)

**ವಷಟ್ಕಾರ** – ಹವಿಸ್ಸಿನ ಅರ್ಪಣೆಯ ಕಾಲದಲ್ಲಿ ಹೇಳುವ ಮಂತ್ರ (ಚಾರುತರಯಜ್ಞವಿದ್ಯಾಪಾರಗರ ರವಂಗಳಿಂ ಸ್ವಧಾಕಾರ ವಷಟ್ಕಾರ ಸ್ವಾಹಾಕಾರೋಂಕಾರಧ್ವನಿ ನೆಗೞೆ ನೆಗೞ್ದುದಾಹುತಿಧೂಮಂ: **ಪಂಪಭಾ,** ೬. ೩೪)

**ವಸ** – ವಶ (ಬಸನದ ವಸದಿಂದಂ ಪುಟ್ಟಿಸಿದಂ ಜನಕನೆ ನರೇಂದ್ರ ದೇವೇಂದ್ರ ಜಿನೇಂದ್ರಸುಖಮಂ: **ಸಮಯಪ,** ೪. ೯೨)

**ವಸಂತ** – ಷಡೃತುಗಳಲ್ಲಿ ಮೊದಲನೆಯದು, ಚೈತ್ರ–ವೈಶಾಖ ಮಾಸಗಳು (ಇಂತು ಸಮನಿಕ್ಕುಂ ವಸಂತಾದಿ ನಾಮಂಗಳ್: **ಅಭಿಧಾವ,** ೧. ೨. ೧೨); ಮನ್ಮಥನ ಗೆಳೆಯ (ಸ್ಮರನಂ ಪೂಜಿಪ ರತಿಯಂ ಪಿರಿದರ್ಚಿಸುವ ಪರಕೆಯಂ ವಸಂತಂಗೆತ್ತುವ ನೆರೆದಿಂದುವನೊಲಿಸುವ ವಾರಿರುಹದಳಾಕ್ಷಿಯರ ಕಳಕಳಂ ಮನೆಮನೆಯೊಳ್: ಜಗನ್ನಾವಿ, ೨. ೩೧); ಉಲ್ಲಾಸ (ಎಸೆವ ವಸಂತಮಾಸದ ಮಸಂತಮನಾಂತ ಕುಜಾತಪಲ್ಲವಪಲ್ಲವಪ್ರಸವದಿಂ ಆ ವಸಂತಸಮಯಂ ಕುಸುಮಮಾಳಿಯಿಂದೆ .. .. ವಿಜೃಂಭಿಸಿದುದು: **ಕಾದಂಬ,** ೫. ೧೦)

**ವಸಂತಕ** – ಮನ್ಮಥನ ಗೆಳೆಯ (ಓಪನನುಟಿದು ಒತ್ತೆಗಿರ್ದೆಡೆಯೊಳಿಂದೆನಗಿತ್ತಪುದೋ ವಸಂತಕಂ ಮನಸಿಜಮಾರ್ಗಣಕ್ಕೆ ಗುಱಿಯೊಡ್ಡಿದನೆಂಬ ಮನಃಪ್ರವೃತ್ತಿಯಂ: **ಶಾಂತಿಪು,** ೮. ೮೧)

**ವಸಂತದೂತಿ** – ಇರುವಂತಿಗೆ, ಅದಿರ್ಮುತ್ತೆ (ನಿನಗೆ ವಸಂತದೂತಿವೆರ್ ಒಪ್ಪುವುದು ಮುಂತೆ ಬಂದು ನೀನೆನಗೆ ವಸಂತನಾಗಮನಮಂ ನೆಱೆ ಸೂಚಿಸಿ ಕೊಟ್ಟೆ: **ಚಂದ್ರಪ್ರಪು,** ೭. ೪೧)

**ವಸನ** – ಬಟ್ಟೆ (ನಿಜೋತ್ತರೀಯ ವಲ್ಕಲ ವಸನೈಕದೇಶಮನೆ ಸೀಳ್ದು: **ಕಾದಂಸಂ,** ೪. ೩೫)

**ವಸನಾಂಗಕುಜ** – [ಜೈನ] ಬೇಕಾದ ಬಟ್ಟೆ ನಿಡುವ ಕಲ್ಪಕುಜ (ಪಟೆ ಚಿತ್ರವಟೆ ಜೋಗಂ ಪಟೆಯಂ ದೇವಾಂಗಮೆಂಬ ಬಸನಂಗಳನೇಂ ಫಳಿಯಿಸುವುವೋ .. .. ವಸನಾಂಗಕುಜಂ: **ಆದಿಪು,** ೫. ೩೪)

**ವಸಿಗ** – ಇಂದ್ರಿಯಳಿಗೆ ವಶವಾದವನು (ವಸಿಗಳೊಳಗೆ ಅಗ್ಗಳ ವಸಿಗಂ .. .. ಪುಸಿವರ್ಗೆ ದಿಟಂ ಪುಸಿದವನೆನಪವನಂ ನಿಯಮಿಸಿ ಧರ್ಮಪಥಕ್ಕೆ ತಂದು ನಿಲಿಪರ್ ಜೈನರ್: **ಸಮಯಪ,** ೭. ೩೪)

**ವಸಿಯಿಸು** – ವಾಸಮಾಡು (ಇದಱೊಳ್ ಮಧ್ಯಮಕೂಟದೊಳ್ ವಸಿಯಿಪೆಂ ನಿನ್ನಾಜ್ಞೆ ಪೂಮಾಲೆಯಂದದೆ ನಿಂದಿರ್ಪುದು ಮತ್ಕಿರೀಟತಟದೊಳ್: **ಆದಿಪು,** ೧೩. ೧೬)

**ವಸು** – ಸಿರಿ (ಬಿಸದಿಂ ಸೂದಸೆ ಕರ್ಬುನದಿಂ ವಸು ಬಲ್ಬಿಸಿಲಿಂ ನೆರಳ್ .. .. ಅಂತೆಸಕಂಬಡೆರದಂ ಜಡಜಜಭವನಂ ರಸವೃತ್ತಿಕರಂ ಕಮಲಾನನೆಯಿಂ: **ಅನುಭವ,** ೫); ರತ್ನ (ನಿನ್ನಂತು ಮಹಾತ್ಮಂ ಆವನುಮಿಲ್ಲ ಎಂದು ವಸುಧಾರೆಯಂ ಕಱೆದು: **ಕರ್ಣನೇಮಿ,** ೪. ೮೨ ವ); ಬೆಂಕಿ (ವಸುಧಾಧಿಪಂಗೆ ಮುಳಿದಾ ವಸುದೇವಕುಮಾರಂ ಇಂದು ಸತ್ತಂ ಪೊಕ್ಕು ಅರ್ವ್ವಿಸುವ ವಸುಮುಖದೊಳ್: **ಕರ್ಣನೇಮಿ,** ೩. ೧೭೦); 'ಅಷ್ಟವಸು'ಗಳಿಂದಾಗಿ ಎಂಟು ಎಂಬ ಸಂಖ್ಯೆ (ಮೂಡಣ ಮ್ಲೇಚ್ಛಖಂಡಮಂ ದಂಡಸಾಧ್ಯಂ ಮಾಡಿ ವಸುಮಿತಸಹಸ್ರ ವರ್ಷಂಗಳ್ಗೆ ಚಕ್ರಧರಂ ಸಿದ್ಧ ದಿಗ್ವಿಜಯನಾಗಿ ಮಗುಳ್ದು: **ಶಾಂತೀಶ್ವಪು,** ೧೫. ೧೨೮ ವ)

**ವಸುಂಧರೆ** – ರತ್ನಕಾಂತಿಯನ್ನು ಪಡೆದವಳು ಭೂಮಿ (ವಸುಂಧರೆಗೆ ಅನ್ವರ್ಥಾಭಿಧಾನಮಂ ಸಮರ್ಥಿಸಿ ರಶ್ಮಿವಾಗಾಭಿಧಾನಮಂ ಪಡೆದು ಬಳೆಯುತ್ತುಮಿರೆ: **ಪಾರ್ಶ್ವನಾಪು,** ೬. ೨೫ ವ)

**ವಸುಧಾಚಕ್ರ** – ಭೂಮಂಡಲ (ವಸುಧಾಚಕ್ರಂ ಪದಾಕ್ರಾಂಯಿಯಿನದಿರೆ ಭುಜಾಖ್ರಾಂತಿಯಿಂ ದಿಗ್ಗಜಂಗಳ್ ದೆಸೆಯಿಂ ಪಿಮ್ಮೆಟ್ಟೆ .. .. ಯುದ್ಧಂ ದಂತವಕ್ರಾಚ್ಯುತಜನಿತಮಗುರ್ವಾದುದು: **ಜಗನ್ನಾವಿ,** ೯. ೭೭)

**ವಸುಧಾಧಿಪತಿ** – ರಾಜ (ವಸುಧಾಧಿಪತಿಯ ಕಟಕದೊಳೊಸೆದೊಪ್ಪೆ ಸುವರ್ಣರಚನೆ ಕೇವಣದೊಳ್ ಸೇರಿಸಿದುದೞೆಂದೀಗಳ್ ರಂಜಿಸಿದ ಮಹಾರತ್ನಮೆನಿಸಿದಂ ಕವಿರತನಂ: **ಗದಾಯು,** ೧. ೪೧)

**ವಸುಧಾಮರ** – ಬ್ರಾಹ್ಮಣ (ನೀನೀ ಬಾವಿಯೊಳ್ ಬಿೞ್ದ ಕಾರಣಮಾವುದೆಂದು ವಸುಧಾಮರಂ ಬೆಸಗೊಳೆ: **ಪಂಚತಂತ್ರ,** ೧೭೯ ವ)

**ವಸುಧಾರೆ** – [ಜೈನ] ಪಂಚಾಶ್ಚರ್ಯಗಳಲ್ಲಿ ಒಂದು (ಬೆಸಸಿದೊಡೆ ಮೂಱುಪೊೞ್ತುಂ ವಸುಧಾರೆಯನೊಸೆದು ಮೂಱುಕೋಟಿಯುಮರೆಯರಂ ವಸುಪತಿ ಕರೆದು ರಾಜಾವಸ್ಥದೊಳೇಂ ಪಿರಿದೊ ಜಿನನ ಪುಣ್ಯಾತಿಶಯಂ: **ಅಜಿತಪು,** ೩. ೫); ಚಿನ್ನದ ಮಳೆ (ವಸುಧಾರೆ ನಾಡೆಯುಂ ಕಣ್ಗೆಸದಳಮಾಯ್ತು ಅಮರಕರಪರಿಚ್ಯುತಮೆತ್ತಂ: **ಆದಿಪು,** ೧೦. ೨)

**ವಸುಧಾವಳಯ** – ವಸುಧಾಚಕ್ರ (ನಾಡದಾ ಕನ್ನಡದೊಳ್ ಭಾವಿಸಿದ ಜನಪದಂ ವಸುಧಾವಳಯವಿಲೀನ ವಿಶದವಿಷಯವಿಶೇಷಂ: **ಕವಿರಾಮಾ,** ೧. ૩೬)

**ವಸುಧಾಸುದತಿ** – ಭೂದೇವಿ (ಅದಱಿಂ ಸಮಸ್ತ ವಸುಧಾಸುದತೀಶಂ ಮಂತ್ರಮುಖ್ಯನಾದಂದು .. .. ನಿಜಪದಾಂಬುಜಕ್ಕೆಱಗಿಸುವಂ: **ಪಂಚತಂತ್ರ,** ೨೮೫)

**ವಸುಧೆ** – ಭೂಮಿ [ಅಗುೞ್ದಿರಲ್ ಆ ಕುೞಿಯೊಳ್ ತೊಟ್ಟಗೆ ನಿಧಿಗಂಡಂತೆ ವಸುಧೆಗೆ ಅಸದಳಮಾಯ್ತು ಆ ಮಗನ ಅಂದಂ: **ಪಂಪಭಾ,** ೧. ೯೭)

**ವಸುಧೈಕಕುಟುಂಬಕ** – ಜಗತ್ತನ್ನೆಲ್ಲ ಒಂದೆ ಕುಟುಂಬವೆಂದು ಭಾವಿಸುವವನು(ಮುನಿಸಹಸ್ರಭೋಜನಕರಂ .. .. ಕವಿ ವಾದಿ ವಾಗ್ಮಿ ಗಮಕಂ ವಸುಧೀಕಕುಟುಂಬಕಂ ಸಭಾಜನಸುಜನೈಕ ಭಾಜನಮುಖಂ ಜಿನಚಂದ್ರಮುನೀಂದ್ರನುರ್ವಿಯೊಳ್: **ಶಾಂತಿಪು,** ೧. ೨೬)

**ವಸುಪತಿ** – ಕುಬೇರ (ಬೆಸಸಿದೊಡೆ ಮೂಱುಪೊೞ್ತುಂ ವಸುಧಾರೆಯನೊಸೆದು ಮೂಱುಕೋಟಿಯುಮರೆಯಂ ವಸುಪತಿ ಕರೆದು ರಾಜಾವಸ್ಥದೊಳೇಂ ಪಿರಿದೊ ಜಿನನ ಪುಣ್ಯಾತಿಶಯಂ: **ಅಜಿತಪು,** ೩. ೫)

**ವಸುಮತಿ** – ವಸುಂಧರೆ (ರಸೆಗಿೞಿದನೊ ಮೇಣ್ ನಾಲ್ಕುಂ ದೆಸೆಗಳ ಕೋಣೆಗಳೊಳ್ ಉೞಿದನೋ ಖಳಂ ಇಲ್ಲಿ ಈ ವಸುಮತಿಯೊಳ್ ಗಾಂಧಾರಿಯ ಬಸಿಱಂ ಮೇಣ್ ಮಗುೞ್ ಪೋಗಿ ಪೊಕ್ಕಿರ್ದಪನೋ: **ಗದಾಯು,** ೬. ೨೧)

**ವಸುಮದ** – ಐಶ್ವರ್ಯದ ಸೊಕ್ಕು (ಮೃಗಗಣಮೆ ಸುಖಂ ಬಾೞ್ಗುಂ ಸೊಗಯಿಸುವ ವನಾಂತರಾಳದೊಳ್ ಬಹುತೃಣದೊಳ್ ಬಗೆದಳಿಪಿ ಸುೞಿದು ನೋಡದೆ ಮೊಗಮಂ ವಸುಮದವಿರಾಮ ಕಲುಷಾಯಿತರಾ: **ಕವಿರಾಮಾ,** ૩. ೧೩೯)

**ವಸುವಿರಹಿತ** – ಸಿರಿಯನ್ನು ತೊರೆದವನು, ಕಿರಣವಿರಹಿತನಾದವನು (ವಸುವಿರಹಿತನಂಬರವಂ ಬಿಸುಟೆಯ್ದಿದನಾತ್ಮ ಬಂಧುಚಕ್ರದೊಳ್ ಅೞಲರ್ವಿಸೆ ಅಸ್ತಸಮಯರವಿಯಂತೆ ಸಚಿವನಾ ನಗಮನಪರ ಶೋಭಾಪರಮಂ: **ಪಾರ್ಶ್ವನಾಪು,** ೪. ೪೯)

**ವಸುಹೀನ** – ಹಣವಿಲ್ಲದವನು, ಬಡವ (ವಸುಹೀನಂ ದುಶ್ಶಿಕ್ಷಂ .. .. ಅನ್ಯಾಯಿಯೆನಿಪ ನರಪನೊಳೆಂದುಂ ವಿಜಿಗೀಷುಗಳಪ್ಪ ಮಹೀಭುಜರ್ ಎಂದುಂ ಸಂಧಿಮಾಡರ್: **ಪಂಚತಂತ್ರ,** ૩೧೯ ಮತ್ತು ૩೧೧)

**ವಸ್ತಿ** – ಕಿಬ್ಬೊಟ್ಟೆ (ಕಿಬ್ಬಸಿಱಿದು ವಸ್ತಿ: **ಅಭಿಧಾವ,** ೧. ೧೨. ೬); ಬಟ್ಟೆಯ ಅಂಚು (ವಸನಾಂತಂ ಅಂಚಳಂ ವರ್ತಿ ಸಿಚಂ ದಶೆ ಅಂಚು ವಸ್ತಿಯಕ್ಕುಂ ಕರೆಗಳ್: **ಅಭಿಧಾವ,** ೧೧૩. ೧೬)

**ವಸ್ತುಕ** – ಚಂಪೂ (ಪದಿನಯ್ದನೆಯದೆನಿಸುವ ಮದನಾರಿಯ ಶಬರಲೀಲೆಯಂ ವಸ್ತುಕಮಾರ್ಗದೊಳ್ ಒರೆದೆಂ: **ಶಬರಶಂ,** ೫. ೫೯)

**ವಸ್ತುಕವಿತ್ವ** – ವಸ್ತುಕಕಾವ್ಯ, ಮಾರ್ಗಕಾವ್ಯ, ಚಂಪೂ (ಎಂದು ಬೇಟಮನೆ ವಸ್ತುಮಾಡಿಯೆ ವಸ್ತುಕವಿತ್ವ ವರ್ಣಕವಿತ್ವ ಕಾಮತತ್ತ್ವವಿದನೆನಿಸಿದ ಅತಿವಿದಗ್ಧಂ ಒರ್ವನಿಂತೆಂದಂ: **ಆದಿಪು,** ೧೨. ೨೨ ವ)

**ವಸ್ತುಕೃತಿ** – ವಸ್ತುಕವಿತ್ವ (ಸ್ವರ್ಗಾಪವರ್ಗಕ್ಕಮಾಸ್ಪದಮಪ್ಪ **ಆದಿಪು**ರಾಣವಸ್ತುಕೃತಿಯಂ ಪೇೞ್ದಂ ಬೆಡಂಗಪ್ಪ ಮಾರ್ಗದೊಳಂ ದೇಸಿಯೊಳಂ ಪೊದಳ್ದೆಸೆವಿನಂ ಸಂಸಾರಸಾರೋದಯಂ: **ಆದಿಪು,** ೧೬. ೭೯)

**ವಸ್ತುತತ್ವಸ್ಥಿತಿ** – ಸಹಜವಾದುದು (ವಾಸ್ತವಮೆಂದಱೆಗೆ ವಸ್ತುತತ್ವಸ್ಥಿತಿಯಂ: **ಅಭಿಧಾವ,** ೨. ೨. ೨೬)

**ವಸ್ತುಪುರುಷ** – ನಿಪುಣ (ರತ್ನಕಂಬಲಮಂ ನಿರ್ಮಿರ್ಚಿ ತೋರ್ಪುದುಂ ಅಪೂರ್ವವಸ್ತುವಪ್ಪುದನಱಿದು ವಸ್ತುಪುರುಷರಿಂ ಬೆಲೆಯಿಡಿಸಿ: **ಸುಕುಮಾಚ,** ೧೦. ೧೧೭ ವ)

**ವಸ್ತುಬಂಧ** – ವಸ್ತುಕೃತಿ, ಕಥಾಪ್ರಧಾನ ಕಾವ್ಯ (ವಿದಿತಶ್ರೀಕವಿ ನಾಗವರ್ಮನ ವಚಸ್ಸಂದೋಹದಿಂ ದೋಷಮೊಂದದ ಅಲಂಕಾರದ ವಸ್ತುಬಂಧಮಿದು ತಾನೇಂ ಮಾಡದೇಂಗೆಯ್ವುದೋ: **ಕಾದಂಬ,** ೧೦. ೯೮)

**ವಸ್ತುಮಾಡು** – ಕಾವ್ಯದ ವಿಷಯವಾಗಿಸಿಕೊ (ಬೇಟಮನೆ ವಸ್ತುಮಾಡಿಯೆ ಕವಿತ್ವ ವರ್ಣಕವಿತ್ವ ಕಾಯತತ್ತ್ವವಿದನೆನಿಸಿದ ಅತಿವಿದಗ್ಧನೊರ್ವನಿಂತೆಂದಂ: **ಆದಿಪು,** ೧೨. ೨೨ ವ)

**ವಸ್ತುವಿದ** – ತತ್ವವಿದ [ಮೋಹಿಸಿದಪ್ಪೈ ನಿರ್ವಾಣಸಕ್ತಂಗೆ ವಸ್ತುವಿದರ್ ನಿನ್ನವೊಲಾರ್ ಪೆಱರ್ಭುವನದೊಳ್: **ಆದಿಪು,** ೧೬. ೫೯)

**ವಸ್ತುಹೀನ** – ವಸ್ತುವೇ ಇಲ್ಲದಿರುವುದು (ವಸ್ತುಹೀನಂ ಭಿಧಾವಮುಂಟಕ್ಕುಂ ಅಪ್ಪೊಡೆ ಶಬ್ದಾರ್ಥಸಂಬಂಧಂ ಪಾರಿಪ್ಲವ ಪರಿಪ್ಲವಮಕ್ಕು: **ಶಾಂತಿಪು,** ೮. ೧૩೮ ವ)

**ವಸ್ತುಸ್ತವ** – ಮಹಾಪುರುಷನ ಗುಣಸ್ತವ (ಗುಣಸ್ತವಮುದಾತ್ತವೃತ್ತ ಭವದೀಯ ವಸ್ತುಸ್ತವಂ: **ಆದಿಪು,** ೧૩. ೯೦)

**ವಸ್ತ್ರಮೃಗ** – ಕೂರೆ (ಡುಂಡುಕನೆಂಬ ತಿಗುಣೆ ಮಾಡಿದ ದೋಷದಿಂ ಮಂದವಿಸರ್ಪಣೆಯೆಂಬ ವಸ್ತ್ರಮೃಗಂ ಕೆಟ್ಟುದು: **ಪಂಚತಂತ್ರ,** ೯૩, ಶ್ಲೋಕ ೭૩ ಟಿಕೆ)

**ವಸ್ತ್ರಾಂಗ** – [ಜೈನ] ಕಲ್ಪಕುಜಗಳಲ್ಲಿ ಒಂದು, ಬೇಕಾದ ಬಟ್ಟೆಯನ್ನು ನೀಡುವಂಥದು (ವಸ್ತ್ರಾಂಗದ ಭೂಷಣಾಂಗದಳವಂ ಚಕ್ರರ್ಶವರಂ ತಾಳ್ದಿದಂ: **ಆದಿಪು,** ೪. ૩೫)

**ವಹಣಿ** – ಬೆಡಗು, ಒಯ್ಯಾರ (ನವಣಿ ಬಹುವಿಕೆವಡೆಯೆ ಬಹುವಿಧಧ ವಹಣಿಯ ಮಾರಚಿತ್ರದ ಗತಿಗಳೊಳ್ ಮೆಱೆದು: **ಅನಂತಪು,** ೨. ೨೮ ವ)

**ವಹಿತ್ರ** – ಬಹಿತ್ರ, ಹಡಗು, ತೆಪ್ಪ (ಭವವಾರಾಶಿವಹಿತ್ರಮಲ್ತೆ ಭವದೀಯಂ ದಿವ್ಯನಾಮಂ: **ಶಬರಶಂ,** ೫. ૩೨)

**ವಹಿಲ** – ತ್ವರೆ (ಕವಿವರಂ ವಹಿಲದೊಳ್ ನಿಲ್ತು ಉದ್ದಾಮ ವಿಕಲತೆಯನಾಂತು ಮನೋಮುದವಟಿದಿರೆ: **ಉದ್ಭಟಕಾ,** ೧೨. ೫೬)

**ವಹ್ನಿ** – ಬೆಂಕಿ (ಈ ವಧೂವರರ್ ಇಂದೀ ಮಖವಹ್ನಿಯಂ ಬಲದೆಗೊಳ್ವ ಐಶ್ವರ್ಯಂ ಎಂದು ಒರ್ವರೊರ್ವರ

ವಕ್ತ್ರಾಬ್ಜಮಂ .. .. ನೋಡಿದರ್: **ಅನಂತಪು,** ೬. ೬೧); [ಜೈನ] ಒಬ್ಬ ಲೋಕಾಂತಿಕದೇವ (ಎಣ್ಬರುಂ ಲೋಕಾಂತಿಕದೇವರ್ ಅಜಿತದೇವಾಂತಿಕಕ್ಕೆ ಬಂದು: **ಅಜಿತಪು,** ೬. ೭೦ ವ)

**ವಹ್ನಿಸಖ** – ವಾಯು (ವಹ್ನಿಸಖನಾನೆಂಬಂದಹಮಕಾರಮಂ ತಳೆದಾ ಮಾರುತಂ ಕರಂ ಪಿಡಿದು ತನ್ನಯಕಿಲ್ಗಳಂ ನಾಂದಿ .. .. ಏಂ ಪರ್ವಿತ್ತೊ ಹೈಮಾಗಮಂ: **ರಾಜಶೇಖಿ,** ೯. ೭)

**ವಳಕ್ಷ** – ಬಿಳಿಯ, ಶುಭ್ರ (ಉಕ್ಷಪತಿ ಮುಂದೆ ಬಂದು ವಳಕ್ಷಂ ನಿಜತುಂಗಶೃಂಗಯುಗದಗ್ರಿಮದೊಳ್ .. .. ಮುಂದೆ ನಡೆಯೆ: **ಕರ್ಣನೇಮಿ,** ೬. ೭೨)

**ವಳಕ್ಷಕೇಶ** – ನರೆತ ಕೂದಲು (ವಳಕ್ಷಕೇಶಮಂ ಪಜ್ಜಳಿಪ ಉದ್ಧ ನೀಲಪಟದಿಂದಂ ಅಡಂಗಿಸಿ ವೃದ್ಧವಾರಯೋಷಿತ್ ಜನಂ: **ಉದ್ಭಟಕಾ,** ೧೦. ೭೧)

**ವಳಕ್ಷಾಂಗ** – ಬಿಳಿಯ ಮೈಯವನು (ದಕ್ಷನಳಿಯಂ ಶಿಖಂಡಿ ವಳಕ್ಷಾಂಗಂ ಪಶುವನೇಱುವಂ .. .. ಲೋಕಕ್ಷಯಕಾರಣನೆಂದು ಅಂದು ಅಕ್ಷಯನಂ ಪೊಗೞಲಾಗದು: **ಸಮಯಪ,** ೮. ೫೭)

**ವಳಭಿಚ್ಛಂದ** – ಇಳಿಜಾರು ಚಾವಣಿ, ಉಪ್ಪರಿಗೆಗಳುಳ್ಳ ವಾಸ್ತುವಿನ್ಯಾಸ (ಛಂದೋವಿದ್ಯೆಯಂತೆ ನಾನಾಚ್ಛಂದಮಪ್ಪ ವಳಭಿಚ್ಛಂದಂಗಳೊಳಂ: **ಅದಿಪು,** ೬. ೧೦೬ ವ)

**ವಳಯ** – ಮಂಡಲ (ವಳಯಾಕೃತಿಯಿಂದಿದನೇಂ ಬಳಸಿದುದೊ ಸುರೇಂದ್ರಚಾಪಮಂಡಳಮೆನೆ: **ಆದಿಪು,** ೧೦. ೨೩); ಕಡಗ, ಬಳೆ (ಕಂಕಣಂ ಆವಾಪಂ ವಳಯಂ ಕಟಕಂ ಪಾರಿಹಾರ್ಯ ನಾಮಂ ಹಸ್ತಾಳಂಕೃತಿ: **ಅಭಿಧಾವ,** ೧. ೧೩. ೬)

**ವಳಿ** – ತೆರೆ, ತರಂಗ (ಕಳಕಳಮಂ ಮಾಣ್ದು ನಿರಾಕುಳಚಿತ್ತದೆ ತನ್ಮುಹೂರ್ತಿಕಾಶೀರ್ವಾದಂಗಳಂ ಆಲಿಸುತಿರ್ದುದು ವಳಿಗಳಡಂಗಿದ ಕಡಲ ತೆಱದಿನಾ ಜನಮನಿತುಂ: **ಶಾಂತೀಶ್ವಪು,** ೨. ೧೪೧); ಹೊಕ್ಕಳ ಮೇಲಿನ ಗೆರೆ (ನಡುವಂ ಪಿಡಿದಾತನ ಬೆರಲ ಪಜ್ಜೆ ಪತ್ತಿದುವೆನೆ ವಳಿಗಳ್ ಕಣ್ಗೆವಂದುವಾ ಕೋಮಳೆಯಾ: **ಲೀಲಾವತಿ,** ೩. ೩೩)

**ವಳಿಗೆ** – ತುತ್ತು (ಭ್ರಮೆಗೊಂಡು ಕಾಮುಕಂ ವಳಿಗೆಯನೆತ್ತಿ ಬೊಟ್ಟಿಡಲೊಡರ್ಚೆ ಬಟಿಕ್ಕೆ ಪೊಗೞ್ತೆಗಿಕ್ಕಿದಂ: **ಅನಂತಪು,** ೧೧. ೨೮)

**ವಳಿತ** – ಸುತ್ತುವರಿಯುವ (ಲುಳಿತವಳಿತ ಮುಗ್ಧಸ್ನಿಗ್ಧ ಲೋಲಾಕ್ಷಿನೀಲೋತ್ಪಳದ ಪೊಳೆಪು: **ಅಜಿತಪು,** ೫. ೪೩)

**ವಳಿತ್ರಯ** – ಹೊಟ್ಟೆಯ ಮೇಲಿನ ಚರ್ಮದ ಮಡಿಕೆ (ಆಕೆಯ ವಳಿತ್ರಯಂಗಳುಂ ಪಗೆವರ ಶಕ್ತಿತ್ರಯಂಗಳುಂ ಒಡನೊಡನೆ ಕೆಟ್ಟುವು: **ಪಂಪಭಾ,** ೧. ೧೪೧ ವ)

**ವಳಿಭಂಗ** – ವಳಿರೇಖೆ ಕಾಣದಂತಾಗುವುದು (ಒದವಿದ ಕರ್ಪನೆಯ್ದೆ ಪರಿವೃತ್ತಪಯೋಧರಚೂಚುಕಕ್ಕೆ ಮಾಡದೆ ವಳಿಭಂಗಮಂ ಕಟಿಯೆ ತೋರ್ಪುದನಂತೆ ತನೂದರಕ್ಕೆ ಮಾಡದೆ: **ಆದಿಪು,** ೮. ೪೭)

**ವಳಿರೇಖೆ** – ವಳಿತ್ರಯ (ತನು ವಳಿರೇಖೆಗಳ್ ಕಿಡೆಯುಂ ಎಟ್ಟಿ ಬೆಡಂಗಿನದೊಂದು ರೇಖೆಯಂ ತನಗೆಡೆಮಾಡಿ ಪೊಂಗೆ: **ಆದಿಪು,** ೮. ೪೬)

**ವಳಿವೀಚಿ** – ವಳಿ ಎಂಬ ಅಲೆ (ಸುದತಿಯ ತನುರುಚಿರದೊಳ್ ವದನಾಂಬುಜರೇಣುವುದಿರ್ದು ವಳಿವೀಚಿವಿಘತದೆ ನೊರೆಗಟಿತ್ತೆನೆ ಪೊಳೆದುದು ಕಾಂಚನಕಾಂಚಿ: **ಲೀಲಾವತಿ,** ೩. ೩೦)

**ವಾಂಛಾ** – ಬಯಕೆ (ವನಿತೆಯರಿರೆ ಬೇಱದುಂಟೆ ವಾಂಛಾವಿಷಯಂ: **ಅನುಭವ,** ೮)

**ವಾಂಛಿತ** – ಬಯಕೆ (ದುಷ್ಪ್ರತಾತ್ಮೆಗಪ್ಪುದೆ ವಾಂಛಿತಮೆಂದು ಸುಯ್ದು ಶುಂಭಲ್ಲಲಿತಾಂಗಿ ಪಲುಂಬಿ: **ಕುಸುಮಾಕಾ,** ೧೩. ೬೧)

**ವಾಂಶ** – ಕೊಳಲು (ಒಪ್ಪುವ ವಾಂಶ ವೈಣ ಗೇಯಾದಿಗಳಿಮಪು ಪೊಂಪುಟಿ ಸುರೇಶ್ವರಗಾಯಕವಾದನೋದಿತಂ: **ಶಾಂತಿಪು,** ೧೨. ೨೨)

**ವಾಂಶಿಕ** – ಕೊಳಲು ವಾದಕ (ಯೌವನಮದಮುದಿತ ಮಾರ್ದಂಗಿಕ ವಾಂಶಿಕ ಪ್ರಹನ್ಯಮಾನ ವಾದ್ಯಮಾನ ಮೃದಂಗ ವಂಶನಿನದ ಲಯಚ್ಛಂದ ಸುಂದರ ನಟತ್ಸುಂದರೀ ಸಂದೋಹಮುಂ: **ಆದಿಪು,** ೭. ೩೭ ವ)

**ವಾಃಕಣ** – ನೀರಿನ ಹನಿ (ವಾಃಕಣಜಾಲಮನಾಂತು .. .. ಮಾರುತಂ ಒಯ್ಯನೆ ಬಂದು ತೀಡಿದತ್ತು: **ಕಾದಂಸಂ,** ೩. ೧೧)

**ವಾಃಕಣಿಕಾ[ಕೆ]** – ವಾಃಕಣ (ಅನಿಮಿಷ ಚಾಪದಂತೆ ಸಿರಿ ಶಾರದನೀರದಕಾಂತಿಯಂತೆ ಯೌವನದೆಸಕಂ ತೃಣಾಗ್ರಗತ ವಾಃಕಣಿಕಾಗಣದಂತೆ ಸಂದ ಜೀವನಂ: **ಪಂಚತಂತ್ರ,** ೧೧೬)

**ವಾಃಕೇಳಿ** – ನೀರಾಟ, ಜಲಕ್ರೀಡೆ (ಮನೋಜಂ ಸ್ವಚ್ಛವಾಃಕೇಳಿಸಮ್ಮದಕೆಂದೋವಿದ ಪದ್ಮಷಂಡಮೆಸೆಗುಂ ತನ್ನಂದನೋಪಾಂತದೊಳ್: **ಚಂದ್ರಪ್ರಪು,** ೧. ೧೦೪)

**ವಾಕವಾಟ** – ಬಾಗಿಲ ಕದ (ಅತಿ ಲಸಿತ ವಾಕವಾಟಂಗಳ ಕೋಮಳ ಮಾಣಿಕ್ಯದ ಪೆರ್ಬಾಗಿಲ ಚೆಲ್ವಿಂದೆಸೆದುದು ಇಂದುಕಾಂತದ ದುರ್ಗಂ: **ತ್ರಿಷಷ್ಟಿಪು,** ೧೭. ೨೧)

**ವಾಕ್** – ಮಾತು; ಸರಸ್ವತಿ (ಶ್ರುತದೇವಿ ವಾಣಿ ವಾಕ್ ಭಾರತಿ ವಚನಂ ಭಾಷೆ ಗೀರ್ ಬ್ರಾಹ್ಮಿ ಸರಸ್ವತಿ ವರದೆಯಾಗಿ ಪದಪದ್ಧತಿಯನೊಡಂಬಡೆ ನಿಮಿರ್ಚೆ ತಿರ್ದುಗೆ ದಯೆಯಿಂ: **ಅಭಿಧಾವ,** ೧. ೧. ೭)

**ವಾಕ್ಶ್ರೀ** – ಸರಸ್ವತಿ (ಶ್ರೀವಕ್ಷದೊಳ್ ವಾಕ್ಶ್ರೀವಕ್ತ್ರದೊಳ್ ಅತುಳಭುಜದೊಳ್ ಊರ್ಜಿತವಿಜಯಶ್ರೀ ವಿಸ್ತಾರಿಸೆ ನೆಗೞ್ದಂ ಶ್ರೀವರ್ಮಂ: **ಚಂದ್ರಪ್ರಪು,** ೪. ೧೦)

**ವಾಕ್ಶ್ರೀಯುತ** – ಪಂಡಿತ (ಶ್ರೀಯುತನೊಳುದಾರತೆ ವಾಕ್ಶ್ರೀಯುತನೊಳ್ ಅಮತ್ಸರತ್ವಂ ಆಗದೆ ಉದಾರಂ ಶ್ರೀಯುತಂ ಅಮತ್ಸರಂ ವಾಕ್ಶ್ರೀಯುತಂ ಆದೊಡೆ ಕೃತಾರ್ಥರಾಗರೆ ಕವಿಗಳ್: **ಗದಾಯು,** ೧. ೪೯)

**ವಾಕ್ಪತಿ** – ಬೃಹಸ್ಪತಿ (ಅಂಗೀರಸಂ ವಾಕ್ಪತಿ ಜೀವಂ ಗುರುವೆಂಬಿನಿತುಂ ಇವು ಬೃಹಸ್ಪತಿನಾಮಂ: **ಅಭಿಧಾವ,** ೧. ೧. ೭೩); ಬ್ರಹ್ಮ (ನೆಱೆಯೆ ಪೊಗೞಲ್ಕೆ ವಾಕ್ಪತಿ ನೆಱೆಯಂ ಸುರಪತಿಯ ನೃತ್ಯಮಂ: **ಅಜಿತಪು,** ೫. ೫೧)

**ವಾಕ್ಪರಿಣತ** – ಮಾತಿನ ಚತುರ (ವಾಕ್ಪರಿಣತರಿಂ ಸಿದ್ಧಮಾಯ್ತು ಪೆಂಪೆಂಬ ಪದಂ; **ಶಬ್ದಮದ,** ೨೨೩)

**ವಾಕ್ಪಾಟವ** – ಮಾತಿನ ಚಾತುರ್ಯ (ರಾಜಕೀರಕವಾಕ್ಪಾಟವಂ ಅಲ್ಲದಿಲ್ಲ ಪೆಱತುಂ ವಾಕ್ಪಾಟವಂ ಸುತ್ತಲುಂ: **ಶಾಂತಿಪು,** ೯. ೨೪)

**ವಾಕ್ಯಾರ್ಥ** – ತಾತ್ಪರ್ಯ; ಚರ್ಚೆ (ಆಯು ತವೆ ಪಾರದರಿಗಂ ಅಪಾಯಮಂ ಎತ್ತಱೆವಂ ಉಚಿತ ವಾಕ್ಯಾರ್ಥಂ ಕೊಳ್ಳೀಯೆ

ಪರದಾರಗಮನಮಂ ಆಯುಷ್ಯಾಂತಮೆನಲ್ ಮನಂದಂದಪನೇ: **ಶಾಂತಿಪು,** ೫. ೫೧)

**ವಾಕ್ಸಾರ** – ಹರಟೆಗಾರ (ಆರಯೆ ನೃಪರಾರುಂ ವಾಕ್ಸಾರರ್ ಕರ್ತವ್ಯಸಾರರಲ್ಲರ್ : **ಗದಾಯು,** ೨. ೭)

**ವಾಗಂಗನೆ** – ಸರಸ್ವತಿ (ನಾಗಾಬಲೆಯರ್ ಗೋಮಿನಿ ವಾಗಂಗನೆಯರ್ ವಿರಾಜಿಸಿದರ್ ಆ ಸಭೆಯೊಳ್: **ಉದ್ಭಟಕಾ,** ೧೨. ೧೩೧)

**ವಾಗಧಿಪ** – ಮಾತಿನ ಪ್ರಭುತ್ವವುಳ್ಳವನು (ವಿಧುರಗತಿ ವಿಲೋಢ್ಯಂ ತಳ್ತು ನಿಲ್ತಪ್ಪುದು ಆ ವಾಗಧಿಪ ವಚನಮಾಲಾ ಪಾವನೀಯಂ ಗಭೀರಂ: **ಕವಿರಾಮಾ,** ೨. ೧೫೪)

**ವಾಗಮಳರ್** – ನಿರ್ಮಲವಾಕ್ಕುಳ್ಳವರು (ಕಮಲೋದ್ಭವನ ಅಮಳಿನ ಹೃತ್ಕಮಲದೊಳ್ ಒಗೆದರ್ ಸುರೇಂದ್ರಧಾರಕರ್ ಆ ವಾಗಮಳರ್ ನೆಗಟ್ಟಿರ್ದರ್ ಪುಲಹ ಮರೀಚಿ ಅತ್ರಿ ಅಂಗಿರಸ್ ಪುಳಸ್ತ್ಯ ಕ್ರತುಗಳ್: **ಪಂಪಭಾ,** ೧. ೬೦)

**ವಾಗಾಡಂಬರ** – ಮಾತಿನ ಡೌಲು (ಕದನಕರ್ಕಶಕ್ಷತ್ರಿಯಂಗೆ .. .. ನಿಷ್ಕಾರಣ ಕಾಯಕಂನಮುಂ ನಿರಾಲಂಬನ ವಾಗಾಡಂಬರಮುಂ ತಕ್ಕುದಲ್ತು: **ಆದಿಪು,** ೧೪. ೮೧ ವ)

**ವಾಗುರಿ** – ಬಲೆ (ದೃಕ್‌ಶಫರೀ ವಾಗುರಿ ಪೆಸರೊಳಾಕೆ ವಾಗುರೆಯೆಂಬಳ್: **ನೇಮಿನಾಪು,** ೩. ೫೬)

**ವಾಗುರಿಕ** – ಬೇಟೆಗಾರ, ಬೆಸ್ತ (ಬಟಿಕಾ ಮೀನನೆ ವಾಗುರಿಕರ್ ಪಿಡಿದು ಅಟೆಯುತ್ತ ಆ ಶರಮಂ ಕಂಡು: **ಕರ್ಣನೇಮಿ,** ೧೪. ೯೧)

**ವಾಗ್ಗುಂಫ** – ನುಡಿಜೋಡಣೆ (ನೃಪಸಭಾಮಧ್ಯದೊಳ್ ಪೆರ್ಚಿ ವಾಗ್ಗುಂಫದೊಳಾಗಳ್ ಬೆಟ್ಟಿನಲ್ವಿಟ್ಟೆನಲ್ ಎಡೆಗುಡದೆ ಆಶ್ಚರ್ಯಮಂ ತಾಳ್ದಿ ನಿಂದಂ: **ಸುಕುಮಾಚ,** ೨. ೧೫)

**ವಾಗ್ಗೇಯಕಾರ** – [ವಾಕ್+ಗೇಯಕಾರ] ಗಮಕಿ (ಭಾರತಿಕವೃಂದ ಭರಿತಮುಂ ವಾಗ್ಗೇಯಕಾರ ವಿಳಸಿತಮುಂ .. .. ಅಪ್ಪ ಮಣಿಮಯ ನೃತ್ಯಮಂಟಪಕ್ಕೆ .. .. ಬರಿಸಿ: **ನೇಮಿನಾಪು,** ೩. ೯೮ ವ)

**ವಾಗ್ದೇವತೆ** – ಸರಸ್ವತಿ (ವಾಗ್ದೇವತೆ ಮಾಟ್ಕೆ ಮತ್ಕೃತಿಗೆ ಲೋಕಾಶ್ಚರ್ಯಚಾತುರ್ಯಮಂ: **ಮಲ್ಲಿನಾಪು,** ೧. ೭)

**ವಾಗ್ದೇವಿ** – ಸರಸ್ವತಿ (ನವರಸವಿಭವಂ ಪುಣ್ಯಪುಂಜಂ ಶುಭಂ ವಾಗ್ದೇವಿ ಆವಾಸಂ ವಿವೇಕೋನ್ನತ ಜನನಿಧಿ: **ಗಿರಿಜಾಕ,** ೧. ೧೬)

**ವಾಗ್ಮಿ** – ಚಮತ್ಕಾರವಾಗಿ ಮಾತಾಡುವವನು (ಕವಿ ಗಮಕಿ ವಾದಿ ವಾಗ್ಮಿ ಪ್ರವರರ ಪಂಡಿತರ ನೆಗಟ್ದಿ ಸಬ್ಬವದವರೊಡನೆ ಅಂತು ಒಸೆದ ಅನ್ನವಾಸದೊಳ್ ಇರ್ದನಾಗಳ್ ಹರಿಗಂ: **ಪಂಪಭಾ,** ೩. ೮೦)

**ವಾಗ್ಮಿತ್ವ** – ಮಾತುಗಾರಿಕೆ (ನಿನ್ನ ವಾಗ್ಮಿತ್ವಾದಿಗಳ್ಗಂ ಮೆಚ್ಚಿ ನಿನಗೆ ತನ್ನ ಮಗಳಂ ಕುಡುವುದುಂ: **ಚಾವುಂಪು,** ಪು. ೪೪೭. ಸಾ. ೩೧)

**ವಾಗ್ವಧು** – ನುಡಿದೇವಿ, ಸರಸ್ವತಿ (ಶ್ರೀ ವಾಗ್ವಧೂಸಂತತಸ್ತುತೆಯಂ .. .. ಪಾರ್ವತಿಯಂ ಕೃಪಾವತಿಯಂ ಆಗಳ್ ಬಣ್ಣಿಪೆಂ ಭಕ್ತಿಯಿಂ: **ರಾಜಶೇವಿ,** ೧. ೪)

**ವಾಗ್ವನಿತೆ** – ವಾಗ್ವಧು (ಜಿನೇಂದ್ರ ವಾಗ್ವನಿತೆ ನಿಲ್ಕೆ ಅಸ್ಮತ್ ಮುಖಾಂಭೋಜದೊಳ್: **ಅನಂತಪು,** ೧. ೮)

**ವಾಗ್ವರ** – ಬ್ರಹ್ಮ (ವಾಗ್ವರನಂ ಪರಿಭವಿಸಿದನೆನೆ ಧರೆಯೊಳ್ ದುರ್ಜನರ ದೆಸೆಯೊಳಾವಂ ಬಾಳ್ವಂ: **ತ್ರಿಷಷ್ಟಿಪು,** ೧. ೨೩)

**ವಾಘೆಯ** – ಕಡಿವಾಣ (ಕಡುಪಿಂ ಪೊಯ್ಯೆ ಶಿರೋಜ ಮೆಯ್ಯ ಹಯಣಂ ದುಪ್ಪೋಡಿಯಾಗಲ್ ಜವಂಗಿಡದೆ ಆ ವಾಘೆಯ ಗಾಢದಿಂ ಹಯಮಂ ಅಂತ್ರಾನೀಕದಿಂ ಸುತ್ತಿ: **ಶಾಂತೀಶ್ವಪು,** ೮. ೮೨)

**ವಾಙ್ಮಲ** – ಮಾತಿನ ದೋಷ (ಕವಿಪರಮೇಷ್ಠಿಗಳ ಗುಣಸ್ತವನಂಗಳ್ ಪೂಜ್ಯಪಾದಯತಿಗಪತಿಯ ಗುಣಸ್ತವನಂಗಳ್ ಒರ್ಮೆ ನಾಲಗೆಗೆ ವಂದ ಮಾನವನ ವಾಙ್ಮಲಂ ನಿಂದಪುದೇ: **ಮಲ್ಲಿನಾಪು,** ೧. ೧೪)

**ವಾಚಂಯಮ** – ಮೌನ (ಆದುದೆನಗೀ ವಾಚಂಯಮಂ ಸಂಯಮಂ: **ಆದಿಪು,** ೩. ೪೧)

**ವಾಚಂಯಮತೆ** – ವಾಚಂಯಮ (ಎಡೆಗೊಳೆ ವಾಚಂಯಮತೆಯೊಳ್ ಒಡಂಬಡಂ ಪಡೆದು ನಿಂದನಾದಿಬ್ರಹ್ಮಂ: **ಆದಿಪು,** ೯. ೮೪)

**ವಾಚನೆ** – ಓದು, ಅಧ್ಯಯನ (ಮುನಿಪತಿ ವಾಚನೆಯಿಂ ಪೃಚ್ಛನೆಯಿಂ ಅನುಪ್ರೇಕ್ಷೆಯಿಂ ತದಾಮ್ನಾಯದಿಂ ಒಯ್ಯನೆ ಧರ್ಮಕಥನದಿಂದಂ ವಿನುತಸ್ವಾಧ್ಯಾಯಮೆಂಬ ತಪಮಮಂ ತಳೆದಂ: **ಸುಕುಮಾಚ,** ೪. ೧೮)

**ವಾಚಸ್ಪತಿ** – ಬೃಹಸ್ಪತಿ (ವೈಮಾನಿಕನಾಯಕಂಗೆ ವಾಚಸ್ಪತಿಯೆನೆ .. .. ಮಂತ್ರಿಯೆನಿಸಿದಂ ಶುಕನಾಸಂ: **ಕಾದಂಬ,** ೨. ೨೪)

**ವಾಚಾಳ** – ಮಾತುಗಾರ, ಹರಟೆಕೋರ (ವಾಚಾಳಂ ಜಲ್ಪಾಕಂ: **ಅಭಿಧಾವ,** ೨. ೧. ೧೩); ಶಬ್ದಮಾಡುವ (ಮದ ಕುಂಭೀರಕುಳಪ್ರಚಾರವಿಚಳತ್ ವಾಚಾಳವೀಚೀ ಚಯಾಸ್ಪದಮಂ .. .. ನಿಂದು ನೋಡಿದಂ: **ಅಜಿತಪು,** ೯. ೧೯)

**ವಾಚಿಕ** – ನಾಲ್ಕು ಬಗೆಯ ಅಭಿನಯಗಳಲ್ಲಿ ಒಂದು, ಮಾತಿನ ಮೂಲಕ ಭಾವನೆಯ ಪ್ರಕಟಣೆ (ಅಂಗೋಪಾಂಗಂಗಳೊಳ್ ಎಸೆವ ಆಂಗಿಕಮಂ ಗಾನಪಾಠ್ಯದೊಳ್ ವಾಚಿಕಮಂ; **ಆದಿಪು,** ೯. ೨೮]

**ವಾಜವಶ್ಯವಯಸ್ತಂಭ** – ವಾಜೀಕರಣ [ಕಾಮೋದ್ದೀಪನ], ವಶೀಕರಣ [ವಶಮಾಡಿಕೊಳ್ಳುವುದು], ವಯಸ್ತಂಭನ [ತಾರುಣ್ಯ ಹೋಗದಂತೆ ತಡೆಯುವುದು] (ತಮತಮಗೆ ಡಂಬಕರ್ ಬಲ್ಲೆವೆಂದು ಛಿದ್ರಿಸಲೆ ವಾಜವಶ್ಯವಯಸ್ತಂಭಮಂ: **ಸಮಯಪ,** ೧೨. ೪೦)

**ವಾಜಿ** – ಕುದುರೆ (ಮಚ್ಚರದಿಂ ಒರ್ವರನೊರ್ವರಂ ಉಚ್ಚಳಿಸಿ ತಗುಳ್ದು ಗೋವರ್ ಆರ್ದು ಇಸೆ ಕೀಟಿಂ ಕರ್ಚಿ ಪುಡಿಯೊಳ್ ಪೊರಳ್ದುವು ನಚ್ಚಿನ ಕಾಂಭೋಜ ವಾಜಿಗಳ್ ಕೆಲವಾಗಳ್: **ಪಂಪಭಾ,** ೮. ೯೪)

**ವಾಡವ** – ಬಾಡಬಾಗ್ನಿ (ಪಡುವಣ ವಾರ್ಧಿ ವಾಡವದ ಕಾಂತಿಯೊ .. .. ಎಯ್ದೆ ಪರ್ವಿತೆನೆ ಪರ್ವಿತು ಸಮಜೆಯ ಕೆಂಪು ಲೋಕಮಂ: **ಧರ್ಮಪ,** ೨. ೭)

**ವಾಡಿವ** – ಪಾಡ್ಯ (ರುಚಿರವಚೋಮೃತದಿಂ ವಿಶದ ಚಾರು ಸಿತ ಕೀರ್ತಿಮೂರ್ತಿಯಿಂ ಸಹಜ ಕಲಾಪ್ರಚುರತೆಯಿಂ ಏೞ್ಗೆ ವಾಡಿವದ ಚಂದ್ರನಂತೆ ಉತ್ತರೋತ್ತರಂ ಶಿಶು ಬಳೆದಂ: **ಸುಕುಮಾಚ,** ೧೦. ೪೧)

**ವಾಣಿ** – ನುಡಿ, ಸರಸ್ವತಿ (ಶ್ರುತದೇವಿ ವಾಣಿ ವಾಕ್ ಭಾರತಿ ವಚನಂ ಭಾಷೆ ಗೀರ್ ಬ್ರಾಹ್ಮಿ ಸರಸ್ವತಿ ವರದೆಯಾಗಿ ಪದಪದ್ಧತಿಯಿನೊಡಂಬಡೆ ನಿರ್ಮಿರ್ಚಿ ತಿರ್ದುಗೆ ದಯೆಯಿಂ: **ಅಭಿಧಾವ,** ೧. ೧. ೭)

**ವಾತ** – ಗಾಳಿ (ಅಮರೇಂದ್ರಪುತ್ರನಂ ಕರೆವವೊಲಾದುದು ಪುರದ ವಾತವಿಧೂತವಿನೂತಕೇತುಗಳ್: **ಪಂಪಭಾ,** ೪. ೩೪)

**ವಾತಪೂರಣ** – ಬಾವುಟ (ದೆಸೆಗೆ ಬೆಸೆದು ಬಿಜ್ಜಣೆ ಬೀಗುವ ಪೊಸ ಸಿರಿವಂತನಂತೆ ವಾತಪೂರಣಂಗಳೊಳಂ ಪರಭಾಗಂಬಡೆದು: **ಶಾಂತಿಪು,** ೧೦. ೨೧ ವ)

**ವಾತಾಯನ** – ಗವಾಕ್ಷಿ (ಕನಕಕವಾಟ ವಾತಾಯನಂಗಳಪ್ಪ ಮಹಾಪ್ರಾಸಾದಂಗಳೊಳ್ ಸುಟಿದುಂ .. .. ಇರ್ದಂ: **ಕಾದಂಬ,** ೨. ೩೦ ವ)

**ವಾತಾಶನ** – ಗಾಳಿಯನ್ನೇ ಆಹಾರವಾಗಿ ಉಳ್ಳದ್ದು, ಹಾವು (ಸ್ರೋತಸ್ವಿನೀ ಕೈರವಬಂಧು ಪಾವಕಂ ವಾತಾಶನಂ ಭಸ್ಮಂ .. .. ಭೂತೇಶನೊಪ್ಪಿರ್ದಂ: **ತ್ರಿಷಷ್ಟಿಪು,** ೪೬. ೯)

**ವಾತೂಲಿಕಾ[ಕೆ]** – ಸುಂಟರಗಾಳಿ (ಭೂರಜಸ್ಥಲಮಂ ಕೂಡೆ ತೆರಳ್ಚಿಕೊಂಡು ಕೆಲವುರ್ವೀಜಂಗಳಂ ಕಿಟ್ಟುಕೊಂಡು ಉಲಿಯುತ್ತೆಟ್ಟು ನಭಂಬರಂ ನಿಮಿರ್ದು ಆ ವಾತೂಲಿಕಾಡಂಬರಂ: **ಶಾಂತೀಶ್ವಪು,** ೪. ೧೬೮)

**ವಾತ್ಯೆ** – ಬಿರುಗಾಳಿ (ಝಂಝಾವಾತಂ ಸಮಷ್ಟಿವಾತಮ ವಾತೂಳಂ ವಾತ್ಯೆ: **ಅಭಿಧಾವ,** ೧. ೧. ೪೫)

**ವಾತ್ಸಲ್ಯ** – ಕಿರಿಯರ ಬಗೆಗಿನ ಪ್ರೀತಿ (ಅಳಿಯನಂ ಕಂಡ ಮಾವನಂತೆ ವಾತ್ಸಲ್ಯದೊಳಂ ನೆರೆದಿರ್ಪುದುಂ: **ಧರ್ಮಾಮೃ,** ೫. ೮೩ ವ); [ಜೈನ] ಸಮ್ಯಕ್‌ದರ್ಶನದ ಒಂದು ಅಂಗ (ನಿರ್ವೃತಿಶ್ರೀಯ ಭಂಡಾರದಮೂಲ್ಯ ವಸ್ತುವೆನಿಪ ವಾತ್ಸಲ್ಯದ ಕಥೆಯಂ ಇಂತೆಂದು ಪೇೞ್ದರ್: **ಧರ್ಮಾಮೃ,** ೮. ೩ ವ)

**ವಾತ್ಸ್ಯಾಯನ** – ವಾತ್ಸ್ಯಾಯನನ ಕಾಮಶಾಸ್ತ್ರ (ತರ್ಕ ವ್ಯಾಕರಣ ವಾತ್ಸ್ಯಾಯನನಾದಿ ಅಶೇಷ ವಿದ್ಯಾಪ್ರಕರಣನುಂ .. .. ದುರ್ಗಸಿಂಹ: **ಪಂಚತಂತ್ರ,** ೪೧ ವ)

**ವಾದಿ** – ತಾರ್ಕಿಕ (ಕವಿ ಗಮಕಿ ವಾದಿ ವಾಗ್ಮಿ ಪ್ರವರರ ಪಂಡಿತರ ನೆಗೞ್ದ ಸಬ್ಬವದವರೊಡನೆ ಅಂತು ಒಸೆದ ಅನ್ನವಾಸದೊಳ್ ಇರ್ದನಾಗಳ್ ಹರಿಗಂ: **ಪಂಪಭಾ,** ೩. ೮೦)

**ವಾದಿತ** – ವಾದ್ಯವಾದನ (ಗೀತವಾದಿತರವಮೇೞ್ವುದೊ ಸಭೆಯಂ ರಸದೊಳ್ ಪೂೞ್ವವೊಲೆಸೆದತ್ತು: **ಆದಿಪು,** ೯. ೧೪)

**ವಾದಿತ್ರ** – ವಾದ್ಯ (ಕಣ್ಗೊಪ್ಪುವ ಜಯಗಜಮಂ ಲೀಲೆಯಿಂದೇಱಿ ವಾದಿತ್ರಾರಾವಂ ವಂದಿವೃಂದಧ್ವನಿ ಜಯಜಯಕೋಲಾಹಲಂ ಮಂಗಲಾಲಂಕಾರಂ ಯಾತ್ರೋತ್ಸವಪ್ರಸ್ತುತಮೆನೆ ತಳರ್ದಂ ರಾಗದಿಂ ರಾಜರಾಜಂ: **ಆದಿಪು,** ೧೩. ೪೩), ವಾದ್ಯವಾದನ (ದಿವಿಜವಾದಕಕರಹತಶತತವಿತತ ಘನಸಿಷಿರ ಅವನದ್ಧ ವಾದಿತ್ರಂ ಸಂಗೀತತೂರ್ಯಮಾಗೆ: **ಶಾಂತಿಪು,** ೦. ೬೦ ವ)

**ವಾದುಗೆಯ್** – ವಾದ ಮಾಡು (ಸ್ಕಂದಕುಮಾರಂ ಋಷಿಯೊಡನೆ ವಾದುಗೆಯ್ದು ಸೋಲ್ತೊಡೆ: **ವಡ್ಡಾರಾ,** ೧೭೬, ಸಾ. ೧೨)

**ವಾದುರ** – ಒಂದು ಸೊಪ್ಪು (ಸುರುಚಿರ ಚಕ್ಕವತಂ ಚಿರಿಕೆ ರಾಜಗಿರಿ ಕೆಸವು ಕೀರೆ ದೊಗ್ಗಳೆಯೆಲೆ ವಾದುರವಂ ಬಡಿಸಿದರ್: **ಧರ್ಮಪ,** ೨. ೫೮)

**ವಾದ್ಯ** – ಡಿಂಡಿಮ ಎಂಬ ಹಕ್ಕಿ (ಗಜಗಂಡದ ಭಾಸುರ ವಾದ್ಯದ ಪೆಸರ ಖಗಕುಳಂ ಕರಮೆಸೆಗುಂ: **ರಾಜಶೇವಿ,** ೫. ೬೦)

**ವಾನರ** – ಕೋತಿ (ಪರಿಗಳಿತ ಪೂತಿಗಂಧರ್ ಖರ ಕಾಕ ಸೃಗಾಲ ಕರಭ ಕೌಶಿಕ ವೃಕ ವಾನರ ವಿಷದಂಷ್ಟ್ರೋತ್ಕರ ಕುರ್ಕುರ ಕೀಟಕ ಭಲ್ಲನಿಕರ ನಿಷ್ಠುರನಿನದರ್: **ಶಾಂತೀಶ್ವಪು,** ೯. ೧೦೬)

**ವಾನರಚಿಹ್ನ** – [ಜೈನ] ಸುಗ್ರೀವ (ವಾನರಚಿಹ್ನಂ ತನ್ನಭಿಮಾನಂ ನಿಂದತ್ತು ಪೂಣ್ಕೆ ಸಂದತ್ತೆನಗೆಂದೇನೆಸೆದನೋ: **ಪಂಪರಾ,** ೧೦. ೫೨)

**ವಾನವ್ಯಂತರ** – [ಜೈನ] ನಾಲ್ಕು ಬಗೆಯ ದೇವತಾವರ್ಗಗಳಲ್ಲಿ ಒಂದು (ದೇವಗತಿ ನಾಲ್ಕಕ್ಕುಂ ಎಂತೆನೆ ಭವನವಾಸಿಗೆ ವಾನವ್ಯಂತರ ಜ್ಯೋತಿಷ್ಯ ಕಲ್ಪವಾಸಿ ಭೇದಭಿನ್ನತ್ವದಿಂ: **ಶಾಂತಿಪು,** ೧೨. ೬)

**ವಾನೇಯ** – ಕಾಡಿನ (ವಾನೇಯ ಮತ್ತವಾರಣಪೀನಂಗಳ್ ಶೃಂಗಕುಲಿಶದಲಿತ ನಗಂಗಳ್: **ನೇಮಿನಾಪು,** ೪. ೧೬)

**ವಾನೇಯನಾಗ** – ಕಾಡಾನೆ (ವಾನೇಯನಾಗಸ್ಫುಟಿತ ಕಟಮದಾಮೋದಭಾರಂ ಸಮೀರಂ: **ನೇಮಿನಾಪು,** ೫. ೯೬)

**ವಾಪಿ** – ಬಾವಿ (ವಾಪಿ ತಟಾಕಂ ದೀರ್ಘಿಕೆ ಕೂಪಂ ನಿಮ್ನಗೆ ಮಹಾಹ್ರದಂಗಳ್: **ತ್ರಿಷಷ್ಟಿಪು,** ೨. ೨೯)

**ವಾಮಜಾನು** – ಎಡ ಮೊಳಕಾಲು (ನಿತಂಬಿನಿ ವಾಮಜಾನುವಂ ಕರತಳದಿಂದಂ ಊಱಿ .. .. ಏೞೆ: **ಕಾದಂಬ,** ೨. ೯೧)

**ವಾಮನ** – ಕುಳ್ಳಾದ (ಪ್ರವೃತ್ತ ಖಂಜ ಮೂಕ ಕುಬ್ಜ ವಾಮನ ಕಿರಾತಜನಪುರಸ್ಸರಮುಂ .. .. ಬರೆವರೆ: **ಕಾದಂಬ,** ೨. ೧೧೫ ವ); ವಿಷ್ಣುವಿನ ವಟುವಿನ ಅವತಾರ (ವಾಮನ ಪದಹತಿವಿದಳಿತ ಜೀಮೂತವಿಮುಕ್ತ ಬಹಳಧಾರೆಗಳಿಂದಂ ತಾ ಮುನಿಜನಾಪಕಾರಕ ಧೂಮಧ್ವಜಂಗೆಯ್ದೆ ನಂದಿಪೋದತ್ತಾಗಳ್: **ನೇಮಿನಾಪು,** ೬. ೩೫)

**ವಾಮನಕ್ರಮ** – ವಾಮನನ ಪಾದ (ವಾಮನಕ್ರಮಂ ಮುಟ್ಟುಗೆ ಮುಟ್ಟದಿರ್ಕೆ ಮುಗಿಲಂ .. .. ಕವಿಗಳ್ ಕೃತಿಬಂಧದೊಳಲ್ತೆ .. .. ಮುಟ್ಟಿದರ್: **ಲೀಲಾವತಿ,** ೧. ೧೧)

**ವಾಮಭಾಗ** – ಎಡಭಾಗ (ಗಂಗಾಸುತನ ವಾಮಭಾಗದೊಳ್ ಅಂಬರಭಾಗಂ ಆ ತಟ್ಟೆ ಮೆಡಱಿದಂತಾಗಿ ತನ್ನ ರಥದೊಳೊಟ್ಟಿದ ಕೆಯ್ದುಗಳ ಬೆಳಗೆ ಬೆಳಗಾಗೆ: **ಪಂಪಭಾ,** ೧೦. ೫೬)

**ವಾಮಸುಖ** – ಕೀಳು ಅಭಿರುಚಿಯ ಸುಖ (ಎಸಗುವ ವಾಮಸುಖಂಗಳ ದೆಸೆಗೆಸಗದೆ ಮಸಗದೆ ಎಸಗದಿರ್ದೆಡೆಯಿಂದಿರ್ದ ಸದೃಶದಿವಿಜಸುಖಾಮೃತ ರಸದಿಂ ತನ್ನಿಂದೆ ತಾನೆ ತಣ್ಣನೆ ತಣಿದಂ: **ಸುಕುಮಾಚ,** ೧೨. ೪೮)

**ವಾಮಿ** – ಹೆಣ್ಣು ಕುದುರೆ (ತುರಂಗಮೆನೆ ಕುದಿರೆ ಬಡಬೆ ವಾಮಿಯೆನಿಕ್ಕುಂ:: **ಅಭಿಧಾವ,** ೧. ೧೪. ೨೨)

**ವಾಮೆ** – ಸ್ತ್ರೀ (ಆನಱಿಯೆನೆ ವಾಮೆಯರ್ಕಳ ಉಕ್ಕೆವಮಂ ನೀನೇನುಂ ಎನ್ನದಿರ್ ಎಂದು ಅಪಮಾನಿಸಿ: **ಪಂಚತಂತ್ರ,** ೨೨೨)

**ವಾಮೇತರ** – ಬಲಬದಿ (ಸಮೀಪಕ್ಕೆ ಬಂದು ವಾಮದೇವ ವಾಮೇತರಭಾಗದೊಳ್ ಪ್ರೇಮದಿಂ ಪದ್ಮಾಸನಮನಳಂಕರಿಸಿ: **ತ್ರಿಷಷ್ಟಿಪು,** ೭. ೫೬ ವ)

**ವಾಯವ್ಯ** – ವಾಯವ್ಯಾಸ್ತ್ರ (ಕೆಳರ್ದು ಅಂದುಗ್ರರಣಾಗ್ರಹ ಪ್ರಣಯದಿಂದಾಗಳ್ ಕುರುಕ್ಷೇತ್ರಮಂ ಕಳವೇೞ್ದು ಇರ್ವರುಂ ಐಂದ್ರ ವಾರುಣದೆ ವಾಯವ್ಯಾದಿ ದಿವ್ಯಾಸ್ತ್ರಸಂಕುಳದಿಂದ ಒರ್ವರಂ ಒರ್ವರ್ ಎಚ್ಚು: **ಪಂಪಭಾ,** ೧. ೭೯)

**ವಾಯಸ** – ಕಾಗೆ (ತನಗೆ ಸಹಾಯಮಪ್ಪುದೊಂದು ವಾಯಸನಿರ್ದಲ್ಲಿಗೆ ಬರ್ಪುದುಂ ಆ ವಾಯಸಂ ಇದಿರ್ವಂದು: **ಪಂಚತಂತ್ರ,** ೯೩ ವ)

**ವಾಯಸದಂತೆ ನೋಡು** – ಜಾಣ್ಮೆಯನ್ನು ತೋರು ೯(ವಾಯಸದಂತಿರೆ ನೋಡು ಬಕದಂತಿರೆ ಮೆಲ್ಲನೆ ಮೆಟ್ಟು ಕಚ್ಚಪೋಪಾಯವಡಂಗಿ ನಿಲ್: **ಕಾವ್ಯಾವಲೋ,** ೪೦೨)

**ವಾಯುತ್ರಯ** – [ಜೈನ] ಭೂಲೋಕವನ್ನು ಆವರಿಸಿರುವ ಘನೋದಧಿ, ಘನವಾತ, ತನುವಾತಗಳೆಂಬ ಮೂರು ವಾಯುಗಳು (ಅದು ವಾಯುತ್ರಯವೇಷ್ಟಿತಂ ನೆಗೆದುದು ಅಂತೀರೇಟು ರಜ್ಜುಪ್ರಮಾಣದಿಂ: **ಕರ್ಣನೇಮಿ,** ೧. ೪೪)

**ವಾಯು ಪಥ** – ಆಕಾಶ (ವಾಯುಪಥದೊಳ್ ಶಿತಾಸ್ತ್ರಂಗಳ್ ಪೊಂಕಂಗಿಡಿಸೆ ಸುಗಿದಂ ಭಾರ್ಗವನಿದೇಂ ಪ್ರತಿಜ್ಞಾಗಾಂಗೇಯಂಗೆ ಅದಿರದೆ ಇದಿರ್ವಿಲ್ಲನ್ನರೊಳರೇ: ಪಂಪಭಾ, ೧. ೮೦)

**ವಾಯುಪುತ್ರಕ** – ವಾಯುವಿನ ಮಗ, ಭೀಮ (ಸೊಕಮಿರ್ಕೆ ಅಕ್ಕಟ ದರ್ಭಪಾಣಿ ಯಮಜಂ ದರ್ವೀಕರಂ ವಾಯುಪುತ್ರಕನುಂ ಜರ್ಜರಹಸ್ತಂ ಇಂದ್ರತನಯಂ ದಸ್ರಾತ್ಮಜರ್ ದಂಡಮುಷ್ಟಿಕರರ್ ಶಸ್ತ್ರವಿಡಂಬಂ ಏವುದವರ್ಗಂ ಪಾಂಚಾಲಿಯುಂ ಗಂಧದಾಯಕಿಯಾಗಿರ್ಪಿನಂ ಅಂದು ಮತ್ಸ್ಯಗೃಹದಿಂದ ಈ ನಿಗ್ರಹಂ ಪೊಲ್ಲದೇ: **ಗದಾಯು,** ೩. ३೪)

**ವಾಯುಸ್ಪೃಹ** – ಭೀಮ (ವಾಯುಸ್ಪೃಹ ಭೀಮ ಉದ್ದಾಮ ಬಾಹಾಬಲದಳಿತ ಕುಭೃದ್ವರ್ಗಶೂನ್ಯಂ ವಿಷಾದಾಹವಮಕ್ಕುಂ: **ಗದಾಯು,** ೩. ೭೨)

**ವಾರ** – ಸಮೂಹ, ಸಮುದಾಯ (ಸುರಾಹಿತಭೀಕರ ಧೀರವಾರಸಾಗರ ವಿಲಸತ್ಸುಧಾಕರ: **ಶಬರಶಂ,** ೫. ೨೦)

**ವಾರಕ** – ಸಮನಾದವನು (ಆರ್ ಎಮಗಿಲ್ಲ ವಾರಕರ್ ಎನುತ್ತುಮೆಮಾರ್ಜಡಿವಂದದಿಂ ಪ್ರತೀಹಾರಿಯರಂ ಪೊದಳ್ದುವು ಎಳವೆಂಡಿರ ನೂಪುರದಿಂಚರಂ: **ಪುಷ್ಪದಂಪು,** ೭. ೩೫)

**ವಾರಣ** – ಆನೆ (ಚಕ್ರಮೇವುದೊ ವಾರಣಘಟೆ ದಂಡರತ್ನಮೇಗೆಯ್ದಪುದೋ: **ಆದಿಪು,** ೧೪. ೨೬)

**ವಾರಣಮುಖ** – ಗಣಪತಿ (ಸಮದವಾರಣಮುಖಂ ನವಮಯೂರಪತಿವಾಹಂ ಸೇರಿ ನೆರೆದೊಪ್ಪಿರೆ .. .. ಉಜ್ವಳ ಪುರಾರಿ ಮೆಱೆದಿರ್ಕುಂ: **ರಾಜಶೇವಿ,** ೧೪. ೮೮)

**ವಾರಣವಾಹನ** – ಕುಬೇರ (ವಾರಣವಾಹನಂ ಪ್ರಥುತರಾಷ್ಟ್ರಭುಜಂ ವಿಜಯಾಂಗನಾ ಗೃಹದ್ವಾರದನೇಕ ಶಾಖೆಯೆನೆ .. .. ಕುಬೇರ ಯಕ್ಷನೊಸೆದೀ ಕೃತಿಗೀಗೆ ಗುಣಪ್ರತಿಷ್ಠೆಯಂ: **ಮಲ್ಲಿನಾಪು,** ೧. ೮)

**ವಾರಣಸೈನ್ಯ** – ಆನೆಯ ದಂಡು (ವಾರಣಸೈನ್ಯಶಿರಸ್ಸಿಂದೂರಂ ಪ್ರತಿಕೂಲಮಾರುತಾಹತಿಯಿದುತ್ಸಾರಿತವಾಗಿರ್ದಪುದೆನೆ ದಾರುಣಮಾದತ್ತು ಸುತ್ತಲುಂ ದಿಗ್ದಾಹಂ: **ಜಗನ್ನಾವಿ,** ೧೯. ೪೭)

**ವಾರಣಾವತ** – ಹಸ್ತಿನಾವತಿ (ವಿದುರಂ .. .. ಧೃತರಾಷ್ಟ್ರನ ಬೆಸದೊಳ್ ವಾರಣಾವತಕ್ಕೆ ಪೋಗಿ ತದರ್ಧ ದಗ್ಧ ಕಳೇವರಂಗಳಂ ಸಂಸ್ಕರಿಸಿ ಜಳದಾನಾದಿ ಕ್ರಿಯೆಗಳಂ ಮಾಡಿ ಮಗುಟೆ ವಂದಂ: **ಪಂಪಭಾ,** ೩. ೮ ವ)

**ವಾರನಾರಿ** – ವೇಶ್ಯೆ (ವಾರನಾರೀ ಸಂಗೀತ ನೃತ್ಯ ಚಟುಳತರರವಭರಿತ ಪುರವಳಯ: **ಗಿರಿಜಾಕ,** ೪. ೭೦ ವ)

**ವಾರವನಿತೆ** – ವಾರಕಾಂತೆ (ಚತುರ್ದಶ ಮಹಾನದಿಗಳ ನೀರುಮಂ ತಟತಟ ತೊಳಗುವ ಕಳಧೌತಕಳಶಂಗಳೊಳ್ ತೆಕ್ಕನೆ ತೀವಿ ತಂದ ವಾರವನಿತಾಜನಕ್ಕಂ: **ಪಂಪಭಾ,** ೧೪. ೧೭ ವ)

**ವಾರವಾಣ** – ಕಂಚುಕ (ಪ್ರಕಟಶ್ರೀ ಹಿಮವಾರವಾಣವಿಶದಂ ಗಂಗಾಂಶುಕನ್ಯಸ್ತಮಸ್ತಕಂ .. .. ಭರತಾವನೀಪತಿ.. . .ಹೈಮಾದ್ರಿಯಂ ನೋಡಿದಂ: **ಶಾಂತಿಪು,** ೧೧. ೬೦)

**ವಾರವಿಲಾಸಿನಿ** – ವಾರಕಾಂತೆ (ಮನಂಗೊಂಡಳ್ ಅನಂಗನಂ ರತಿಯೆನಲ್ ಚದುರೆತ್ತಣದಾಕೆಗೆ ಎಂದು ಕಣ್ಗೊಂಡ ವಿಲಾಸದಿಂ ನಗುವುದಲ್ಲಿಯ ವಾರವಿಲಾಸಿನೀಜನಂ: **ಮಲ್ಲಿನಾಪು,** ೨. ४३)

**ವಾರಾಕದಂಬ** – ಸಾಲಾದ ಈಚಲುಮರ (ವಾರಾಕದಂಬ ಸುರಭಿಸಮೀರಂ ಪರಿಪಕ್ವ ರಾಜಜಂಬೂದ್ರುಮ ವಿಸ್ತಾರಂ: **ಆದಿಪು,** ೧೧. ೮೮)

**ವಾರಾನ್ನಿಧಿ** – ಸಮುದ್ರ (ಸಿಂಧುನದಿಯ ವಾರಾನ್ನಿಧಿಯ ಸಂಗಮದೊಳ್ನಿಂದು ಚಕ್ರಧರಂ ತತ್ತ್ವಮದಿಂ ಪ್ರಭಾಸಾಮರನಂ ಸಾಧಿಸಿ: **ಶಾಂತೀಶ್ವಪು,** ೧೫. ೧೧೮ ವ)

**ವಾರಾಶಿ** – ಸಮುದ್ರ (ನಲ್ ದಯೆಯ ನೇತ್ರೋನ್ಮೀಲನಂ ಗೆಯ್ದ ಸಚ್ಚರಿತರ್ ಸಾಧುಗಳ್ ಎಮ್ಮನುದ್ಧರಿಸುಗೆ ಈ ಸಂಸಾರವಾರಾಶಿಯಿಂ: **ಮಲ್ಲಿನಾಪು,** ೧. ೫)

**ವಾರಿ** – ನೀರು; ನಿಷ್ಠೆ; [ಬಾರಿ] ಸರದಿ (ವಾರಿಯ ಬೀರರ್ ಪಾಟಿಯೊಳೆಸೆದರ್ ಪಾಪದ ಜೋಳದ ಬೆಳಸಿಂಗೆ ಬೆರ್ಚುಗಟ್ಟಿದ ತೆಱದಿಂ: **ಯಶೋಧಚ,** ೧. ೫೫)

**ವಾರಿಜ** – ತಾವರೆ (ಈ ವಧು ವಾರಿಜದಂದದಿನೊಪ್ಪಿ ತೋಱುಗುಂ: **ತ್ರಿಷಷ್ಟಿಪು,** ೩. ३६)

**ವಾರಿಜಮಿತ್ರ** – ಕಮಲದ ಗೆಳೆಯ, ಸೂರ್ಯ (ಸರೋಜವಕ್ತ್ರೆಯರ್ ವಾರಿಜಮಿತ್ರನೆಂದು ಕಿಸಲಾಧರೆಯರ್ ನವಚೈತ್ರನೆಂದು .. .. ಒಲ್ದು ನೋಡಲ್ .. .. ರಂಜಿಸುವಂ ಕವಿಮಲ್ಲಣಂ: **ಉದ್ಭಟಕಾ,** ೧೨. ३८)

**ವಾರಿಜನಾಭ** – ಕಮಲನಾಭ, ವಿಷ್ಣು, ಶ್ರೀಕೃಷ್ಣ (ವಿಜಿಗೀಷುತ್ವದೊಳ್ ಒಂದಿ ಗೋವುಳಿಗನಪ್ಪಂ ಮತ್ಸ್ಯನಾಳಾಗಿ ವಾರಿಜನಾಭಂ ಹರಿಯೆಂಬ ದೊಡ್ಡೆವೆಸರಂ ಪೊತ್ತಿರ್ದ ನೀಂ ಮಂತ್ರಿಯಾಗೆ .. .. ರಣದೊಳ್ ಭೂಭಾಗಮಂ ನೆಟ್ಟನೆ ಒಟ್ಟಜೆಯಿಂದ ಅಂಜಿಸಿ ಕೊಳ್ಳದಿರ್ಪರೆ: **ಪಂಪಭಾ** ಪರಿಷತ್ತು, ೯. ೪೭)

**ವಾರಿಜಭವ** – ಬ್ರಹ್ಮ (ವಾರಿಜಭವನಂ ನಿಷ್ಠಯಿನಾರಾಧಿಸಿ ಸಾಯದಂತು ವರಮಂ ಪಡೆದ ಆ ತಾರಕನಂ ಶಂಕರನ ಕುಮಾರನಟೆದಂ: **ಸಮಯಪ,** ೧೦. ೬೫)

**ವಾರಿಧರ** – ಮೋಡ (ಆ ವಾಹಿನೀವ್ಯೂಹಂ .. .. ವರ್ಷಾಗಮ ಸಮಯದಂತೆ ಬಹಳತರವಾರಿಧರಪರೀತಮುಂ .. .. ದೆಸೆ ಬೆಸಲಾದಂತೆಯುಂ ಕತಿಪಯಪ್ರಯಾಣಂಗಳ ನಡೆಯೆ ನಡೆಯೆ: **ಚಂದ್ರಪ್ರಪು,** ೧೦. ३೦ ವ)

**ವಾರಿಧರಧ್ವನಿ** – ಮೋಡದ ಧ್ವನಿ, ಗುಡುಗು (ದುಂಬಿಯಿಂಚರಮ ವಾರಿಧರಧ್ವನಿ ಮಿಂಚು ಚಂಪಕಪ್ರಸರದ ಗೊಂಚೆ: **ಉದ್ಭಟಕಾ,** ೯. ३೦)

**ವಾರಿಧಿ** – ಸಮುದ್ರ (ವೈರಿಗಳನೆ ಕೊಂದು ವಾರಿಧಿಪರೀತ ಮಹೀತಳಮಂ ನಿಮಿರ್ಚಿ ಜೆಟ್ಟಿಗರಂ ಅಯೋನಿಸಂಭವರಂ ಆಳ್ದು ಅರಿವರ್ಗದೊಳಾಂತು ಕಾದೆಯುಂ: **ಪಂಪಭಾ,** ೧३. ೧೦३)

**ವಾರಿಯಂತ್ರ** – ಪಿಚಕಾರಿ (ನೃಪಕರ ವಾರಿಯಂತ್ರ ಮುಖಮುಕ್ತ ಮೃಗೋದ್ಭವ ಮಿಶ್ರಧಾರೆಗಳ್ .. .. ಮಳೆಯಂತಿರೆ: **ರಾಜಶೇವಿ,** ೧೦. ೭೫)

**ವಾರಿವಾಹ** – ಇಂದ್ರ (ನೀರದಂಗಳ ವಾರದಿನಾ ನೀರದಂಗಳೊಳ್ ವಾರಿವಾಹವಾಹನೊಳ್ ಒದವಿದ ವೈರದಿಂ ವಾರಿಧಿಯೊಳ್ ಪೊಕ್ಕ ಭೂರಿ ಭೂಧರಂಗಳ್: **ರಾಜಶೇವಿ,** ೧. ೧೦೨ ವ) ***ಸರಿನೋಡು***

**ವಾರಿಸು** – ನಿವಾರಿಸು, ತಡೆಗಟ್ಟು (ಕೈದುಗಳತ್ತ ಕೈಯಂ ನೀಡಲ್ ಬಗೆವನ್ನೆಗಂ ಭಟ್ಟಾರರ್ ವಾರಿಸಿದರ್: **ವಡ್ಡಾರಾ,** ಪು ೯೯, ಸಾ ೧೮)

**ವಾರುಣ** – ವರುಣಾಸ್ತ್ರ (ಕೆಳರ್ದು ಅಂದುಗ್ರರಣಾಗ್ರಹ ಪ್ರಣಯದಿಂದಾಗಳ್ ಕುರುಕ್ಷೇತ್ರಮಂ ಕಳವೇಟ್ಟು ಇರ್ವರುಂ ಐಂದ್ರ ವಾರುಣದೆ ವಾಯವ್ಯಾದಿ ದಿವ್ಯಾಸ್ತ್ರಸಂಕುಳದಿಂದ ಒರ್ವರಂ ಒರ್ವರ್ ಎಚ್ಚು: **ಪಂಪಭಾ,** ೧. ೭೯)

**ವಾರುಣದಿಕ್** – ಪಶ್ಚಿಮ ದಿಕ್ಕು (ಕ್ಷಾರಮಿದೆಂದು ಅರ್ಣವಮಂ ವಾರುಣದಿಕ್ಪಾಲನುಟಿದು ದೇವೀಸಹಿತ ಸ್ವೈರದೆ ಬರ್ಪಂತೆ ಅರಸಂ ವಾರಸ್ತ್ರೀವೆರಸು ಪೂಗೊಳಕ್ಕೆಟ್ಟಿಂದಂ: **ಮಲ್ಲಿನಾಪು,** ೬. ೬೪)

**ವಾರುಣಿ** – ಪಶ್ಚಿಮ ದಿಕ್ಕು (ದಿನಲಕ್ಷ್ಮೀಕಾಂತೆ ಮೆಯ್ವಿಟ್ಟಿಟಿದು ಗಗನರಂಗಾಗ್ರದಿಂ ವಾರುಣೀ ಸೇವನೆಗೆಯ್ತರ್ಪಲ್ಲಿ: **ಕಾದಂಸಂ,** ೨. ೪೯); ಮದ್ಯ (ಚಂಡಪ್ರಭಂ ವಾರುಣಿಯಂ ಅನುದಿನಂ ಸೇವಿಸುತ್ತಿರ್ದ ರಾಗಕ್ಕೆಡೆಗೊಟ್ಟು ಉನ್ಮಾರ್ಗದೊಳ್ ವರ್ತಿಸುವ ಕುವಲಯದ್ರೋಹಂ: **ಪಂಪರಾ,** ೭. ೯೦)

**ವಾರುವ** – ಕುದುರೆ (ಅರಗಿಳಿವಿಂಡು ವಾರುವದ ಮೋಹರ ಆಱಡಿವಿಂಡು ಬೀರರ ಪಡೆ ಕೊಂಚೆವಿಂಡು ಪಲವಡ್ಡಣದೊಡ್ಡು ಅಮಳ್ವಕ್ಕಿವಿಂಡು ಮೆಯ್ವೆರಸುವ ಕೊಂತಗಾಱರ್: **ಕಬ್ಬಿಗಕಾ,** ೧೫೭)

**ವಾರ್ತಾಹರ** – ಬೇಹುಗಾರ, ಸುದ್ದಿ ತರುವವನು (ಖಿನ್ನವದನರಾದ ವಾರ್ತಾಹರರಂ ನೀಡುಂ ನೋಡಿ ಕಾದಂಬರಿಯಿಂತೆಂದಳ್: **ಕಾದಂಸಂ,** ೭. ೫೪ ವ)

**ವಾರ್ಧರ** – ನೀರನ್ನು ಹೊಂದಿರುವುದು, ಮೋಡ (ವಾರ್ಧರೋತ್ಕರಂ ಅಳಿರಾಜಿಯಂತೆಸೆಯೆ ಪೂತಲರ್ದೊಪ್ಪುವ ಕರ್ಣಿಕಶರಭಾಸುರನಗಡಂತೆ ಕಣ್ಗೆನಿದನಾಳ್ದುದು ಭೂರಿಸುವರ್ಣಭೂಧರಂ: **ಶಬರಶಂ,** ೧. ೩೫)

**ವಾರ್ಧಿ** – ಸಮುದ್ರ (ವ್ಯಾಸಮುನೀಂದ್ರ ರುಂದ್ರ ವಚನಾಮೃತ ವಾರ್ಧಿಯಂ ಈಸುವೆಂ ಕವಿವ್ಯಾಸನೆಂ ಎಂಬ ಗರ್ವಮೆನಗಿಲ್ಲ: **ಪಂಪಭಾ,** ೧. ೧೩)

**ವಾರ್ಧಿಸುತ** – ಚಂದ್ರ (ಸುತತಂ ಅಪೂರ್ವ ವಾರ್ಧಿಸುತನಂ ವಿಳಸತ್ಪಚರೇಂದ್ರನಂ ಈ ಮಹಾಸತಿ ಪಡೆದಳ್: **ಶಾಂತೀಶ್ವಪು,** ೪. ೬೪)

**ವಾರ್ನಾಳ** – ಕಮಲದ ದಂಟು (ಜಲಧಾರಾರೇಖೆಯಿಂ ಕೀರ್ತಿಶೇಖರರಾಜಂ ಪಡೆದಂ ಜಿನೇಂದ್ರಪದಪಂಕೇಜಕ್ಕೆ ವಾರ್ನಾಳಮಂ: **ಅನಂತಪು,** ೬. ೫೭)

**ವಾರ್ಬಿಂದು** – ನೀರಿನ ಹನಿ (ಶೈತ್ಯ ವಾರ್ಬಿಂದುಗಳನುಗುಳ್ವ ಸಿಂಧೂದಕಂ ಸೋಂಕಿ ಪೊಗುತ್ತಿರೆ ಶುದ್ಧಧ್ಯಾನದಿಂದಂ ನಿಲ್ವರ್: **ಸಮಯಪ,** ೭. ೫)

**ವಾರ್ಮಾನುಷಿ** – ಜಲದೇವತೆ (ಭುಜೋತ್ಪಾತಾಸಿ ಧಾರಾಂಬುವಿಂದಿತ್ತಂ ಶ್ರೀವಧುಗಂ ಜಯಪ್ರಮದೆಗಂ ವಾರ್ಮಾನುಷೀ ಜನ್ಮಮಂ; **ಪಂಪರಾ,** ೧೦. ೭೩)

**ವಾರ್ವಾಂಥೆ** – ಬಾಯಾರಿಕೆ (ಉಗ್ರಗ್ರೀಷ್ಮದೊಳ್ ಸಾಮಜವಿತತಿ ತೊಟಲ್ದತ್ತು ವಾರ್ವಾಂಛೆಯಿಂದಂ: **ಚಂದ್ರಪ್ರಪು,** ೯. ೬೯)

**ವಾಲ** – ಬಾಲ (ವಂಶಲೇಖೆ ವಿಚಳತ್ ವಾಲಂ ನಖಂ ಪಾದಮೊಪ್ಪಿರಲ್ ಏಳ್ತಂದುದು: **ತ್ರಿಷಷ್ಟಿಪು,** ೧೪. ೨೪೯)

**ವಾಲುಕಪ್ರಭೆ** – [ಜೈನ] ಏಳು ನರಕಗಳಲ್ಲಿ ಒಂದು (ಅಲ್ಲಿಂದತ್ತಲ್ ಏಕರಜ್ಜುಪ್ರಮಾಣಾಂತರದೊಳ್ ಮೇಘೆಯೆಂಬ ಪೆಸರ ವಾಲುಕಪ್ರಭೆಯೆಂಬ ಮೂಱನೆಯ ನರಕಮಿರ್ದುದು: **ಅಜಿತಪು,** ೧೧. ೬ ವ)

**ವಾವದೂಕ** – ವಾಚಾಳಿ (ಮತ್ತಂ ಅನೇಕ ಉಪಪತ್ತಿಗಳಿಂ ಚಾರ್ವಾಕ ಕಾರುಣಿಕ ವಾವದೂಕನಂ ಕರುಣರಸಾಸ್ಪದಂ ಮಾಡಿ: **ಶಾಂತಿಪು,** ೮ ೧೪೭ ವ); ವಾಗ್ಮಿ (ಉದ್ಯತ್ ವಾವದೂಕಾವಳಿ ಭರತಕಳಾವಿತ್ಕುಳಂ ವೇದವಿದ್ರಾಜಿ ರಸಜ್ಞಶ್ರೇಣಿ ವಂದಿವ್ರಜಂ: **ರಾಜಶೇವಿ,** ೧೨. ४३)

**ವಾಶ್ಚರ** – ಮೀನು (ಪದ್ಮಪರಾಗವಾಸೆ ವಾಶ್ಚರಚಪಲಾಕ್ಷಿ ಪೊಸವೆಣ್ ಸಲೆ ಸಿಂಗರವಾಂತು ತೋಱಿದಳ್: **ರಾಜಶೇವಿ,** ೨. ೬)

**ವಾಷ್ಕಣ** – [ವಾಃ+ಕಣ] ನೀರ ಹನಿ (ಮತ್ತಹಸ್ತಿ ಪಿಡಿಯಿರ್ಪ ಎಡೆಗೆಯ್ದಿ ಭುಜಂಗಲೀಲೆಯಂ ತಳೆದೆಳಮುತ್ತನೊಗೆವಂತಿರೆ ಸೂಸಿತು ವಾಷ್ಕಣೌಘಮಂ: **ರಾಜಶೇವಿ,** ೫. ೬೫)

**ವಾಸ** – [ಪಾಶ] ಹಗ್ಗ (ಅನ್ಯಳ ಸಂಗಕ್ಕೊಳಗಾಗಿ ಬಂದನೆನುತಂ ಕಾಯ್ಪೇಱಿ ತೋಳ್ವಾಸದಿಂದೆಳೆದಾ ಕೋಮಳೆಯೊರ್ವಳ್ ಒತ್ತಿ ಬಿಗಿದಳ್: **ರಾಜಶೇವಿ,** ೯. ३२); ಕೊಳಲು (ತನ್ನ ಓಷ್ಠದೊಳ್ ಸೈಪಿಂದಂ ತತ್ ವಾಸವಂ ಪೂಂಕರಿಸಿದಂ: **ತ್ರಿಷಷ್ಟಿಪು,** ೫. ३४); ಬಟ್ಟೆ, ವಸ್ತ್ರ (ಧವಳವಾಸೋನ್ವಿತಂ ಮತ್ತಮೊರ್ವಂ ಬರುತಿರ್ದಂ: **ಕಾದಂಸಂ,** ೧. ೧೪)

**ವಾಸಂತಿ** – ಒಂದು ಹೂ (ಸುರಹೊನ್ನೆಯ ವಾಸಂತಿಯ ಸುರಗಿಯ ಚಂಪಕದ .. .. ನಸುಬಿರಿದರಲಿಂದ ಅರ್ಚಿಸಿದನವನಿಪತಿ ಜಿನಪತಿಯಂ: **ಪಂಪರಾ,** ೧೨. ೪)

**ವಾಸರ** – ಹಗಲು (ಮೂದೆಱನಾಯ್ತು ವಾಸರದೊಳ್ ಆ ರವಿತೇಜಂ ಆಶ್ರಯಾಶಂ ಆಯ್ತು ಆದಮುಮಪ್ರಚಂಡತರ ತೇಜಂ ಅದು ಆಸ್ಪದಮಾವ ವಾರ್ಧಿಲೀಲೋದಕ ಶೋಷಣೀಯಕೃತಮಾಯ್ತು: **ಶಾಂತೀಶ್ವಪು,** ೧. ೧೪೯); ದಿನ (ಇಂದಿನ ವಾಸರಮೆ ಶೋಭನವಿಧೇಯವಾಸರಂ ಇಂದಿನ ದಿವಸಮೆ ಶುಭದಿವಸಾಗ್ರೇಸರಂ: **ಆದಿಪು,** ४. ३೦ ವ)

**ವಾಸರಕರ** – ಸೂರ್ಯ (ಆ ಸೇನಾರಜದಿಂ ಧೂಸರಮಾದುರು ನಿಜಾಂಗಮಂತೊಳೆಯಲ್ಕೆಂದು .. .. ವಾಸರಕರಂ ಅಪರವಾರಿನಿಧಿಯೊಳ್ ಪೊಕ್ಕಂ: **ರಾಜಶೇವಿ,** ೬. ೨೭)

**ವಾಸರಮಣಿ** – ಸೂರ್ಯ (ಗಿರಿ ಶಿಖರ ಸೌಧ ಶಿವಮಂದಿರ ಭೂರುಹಮೆಂಬಿವಕ್ಕೆ ಮೆಯ್ದೊಡವಂ ವಾಸರಮಣಿ ಮಾಡಿಸಿಕೊಟ್ಟಂತಿರೆ: **ತ್ರಿಷಷ್ಟಿಪು,** ೨೪. ೨೨೮)

**ವಾಸವ** – ಇಂದ್ರ (ಶೂರ್ಪಕವೈರಿ ಕಾಲುಗುರ್ಗೆ ವರ್ಪನೊ ಶೀತಮರೀಚಿ ಕಾಂತಿಗೇಂ ವರ್ಪನೊ ವಾಸವಂ ಸಿರಿಗೆ ವರ್ಪನೊ ವೃತ್ರಹಮಂತ್ರಿ ಜಾಣ್ಗೆ ಮೇಣ್ ವರ್ಪನೊ: **ಶಾಂತಿಪು,** ೭. ೧೧೮)

**ವಾಸವಗಜ** – ಇಂದ್ರನ ಆನೆ, ಐರಾವತ (ಆದೇಂ ಗೆಲೆವಂದುದೊ ವಾಸವಗಜವಿಲಾಸಮಂ: **ಅಜಿತಪು,** ೫. ೬೬)

**ವಾಸವಚಾಪ** – ಕಾಮನ ಬಿಲ್ಲು (ವಾಸವಚಾಪಮೆಂಬ ಮಣಿಮಂಟಪದೊಳ್ ಮೊಟಗೆಂಬ ವಾದ್ಯಮಂ ಗೋಸನೆಮೇಘಮೆಂಬ ತೆರೆಯಿಂದೆ ತಟಿನ್ನಟಿ ಬಂದು ನಾಟ್ಯವಿನ್ಯಾಸದೆ ಕೊಂಕಿ ನಿಂದು: **ಅನಂತಪು,** ೯. ೧೨)

**ವಾಸವದಿಕ್** – ಇಂದ್ರದಿಕ್ಕು, ಪೂರ್ವದಿಕ್ಕು (ಪೂರ್ಣಚಂದ್ರನನೊಳಕೊಂಡು ಬೆಳ್ಪೆಸೆವ ವಾಸವದಿಗ್ವನಿತಾ ಆನನಂಬೊಲ್ ಆನನರುಚಿ ಚೆಲ್ವನೇಂ ನೆಱಿಯೆ ತಾಳ್ದಿದುದೋ: **ಆದಿಪು,** ೮. ೪೭)

**ವಾಸವಧನು** – ಇಂದ್ರಧನುಸ್, ಕಾಮನಬಿಲ್ಲು (ಕನಸಿನ ಪೊನ್ನಂ ವಾಸವಧನುವಂ ಪರ್ಬಿದ ಮರೀಚಿಕಾಜಾಲಮಂ .. .. ನಂಬಿ ಕೆಟ್ಟೆಂ: **ತ್ರಿಷಷ್ಟಿಪು,** ೩೩. ೯೯)

**ವಾಸವಪುರ** – ಇಂದ್ರನಗರಿ, ಅಮರಾವತಿ (ವಾಸವಪುರಂ ಇದಱೀ ವಿನ್ಯಾಸಮಂ .. .. ವಿಲಾಸಮಂ ಇದಱೀ ಬೆಡಂಗಂ ಅವಗಯಿಸುಗುಮೇ: **ಶಾಂತಿಪು,** ೩. ೮)

**ವಾಸವಸ್ತ್ರೀ** – ಇಂದ್ರನ ವನಿತೆ (ಅಂತು ನೋಡಿ ಕಡೆಗಣ್ಣ ಚೆಲ್ಲಂಬೆರಸು ಸೂಸುವ ವಾಸವಸ್ತ್ರೀಯರ ಮುಖಾಬ್ಜಾಸವ ಸಂಬಂಧಿಗಳಪ್ಪ ಶೇಷಾಕ್ಷತಂಗಳಂ ಈಶ್ವರನಂ ಗೆಲ್ದ ಗೆಲ್ಲಕ್ಕೆ ಸೇಸೆಗೊಳ್ವಂತೆ ಸೇಸೆಗೊಳ್ಳುತ್ತುಂ: **ಪಂಪಭಾ,** ೮. ೨೭ ವ); ಶಚೀದೇವಿ

**ವಾಸವಾಶೆ** – ಇಂದ್ರನ ದಿಕ್ಕು, ಪೂರ್ವ (ಬಾಳದಿವಾಕರಗರ್ಭ ವಾಸವಾಶೆಗೆ ಕಳಹಂಸಗರ್ಭ ಕಳಹಂಸಿಗೆ ಸಿಂಹಕಿಶೋರಗರ್ಭಂ ಸಿಂಹಿಗೆ ದೊರೆಯಾಗಿ: **ಆದಿಪು,** ೮. ೩೦)

**ವಾಸಿ** – ಪಂತ, ಹುರುಡು (ಎನ್ನ ವಾಸಿಯ ತೆಱನಂ ಕಡೆಗಣ್ಚಿ ಪಿಂಗಿ ಪೆಱಸಾರ್ದಪನೇ: **ಶಬರಶಂ,** ೪. ೩೬)

**ವಾಸಿತ** – ತುಂಬಿದ (ರತ್ನಕಂಠನುಂ ರತ್ನಾಯುಧನುಂ ತಾವನುಬಂಧಕ್ರೋಧವಾಸನಾವಾಸಿತರ್ ಅನೇಕ ಭವ ಪರಿಭ್ರಮಣದಿಂದ .. .. ಪುಟ್ಟಿದರ್: **ಶಾಂತೀಶ್ವಪು,** ೧೨. ೧೦೬ ವ)

**ವಾಸಿಸು** – ವಾಸನೆ ನೋಡು, ಮೂಸಿ ನೋಡು (ವಾಸಿಸು– ಆಘ್ರಾಣೇ: **ಶಬ್ದಮದ,** ಧಾ ೭೫೦)

**ವಾಸುಗಿ** – ಆದಿಶೇಷ (ದೋಸಮಿನಿತೆಂದು ಬಗೆದುದ್ಭಾಸಿಸಿ ತಱಿಸಂದು ಕನ್ನಡಂಗಳೊಳೆಂದುಂ ವಾಸುಗಿಯುಂ ಅಱಿಯಲಾಱದೆ ಬೇಸಱುಗುಂ ದೇಶಿ ಬೇಱಿವೇಱಪ್ಪುದಱಿ: **ಕವಿರಾಮಾ,** ೧. ೪೬)

**ವಾಸುದೇವ** – ಕೃಷ್ಣ (ಆತಂ ಗೀತಾನಕಧ್ವಾನಮುಣ್ಮುತ್ತಿರೆ ಪೊಕ್ಕಂ ವಾಸವಾವಾಸವನಿಟಿಪ ನಿಜಾವಾಸವಂ ವಾಸುದೇವಂ: **ಜಗನ್ನಾವಿ,** ೯. ೧೩೪); [ಜೈನ] ಒಬ್ಬ ಅರ್ಧಚಕ್ರವರ್ತಿ (ಸುಖದುಃಖಾದಿಗಳುಮಂ ತೀರ್ಥಕರ ಚಕ್ರಧರ ಬಲದೇವ ವಾಸುದೇವ ಪ್ರತಿವಾಸುದೇವ ಕಥಾಸಂಬಂಧಮುಮಂ ನಿರ್ಣಯಮಾಡಿದಾಗಳ್: **ಆದಿಪು,** ೧೦. ೬೩ ವ)

**ವಾಸ್ತು** – ಮನೆಕಟ್ಟುವ ಭೂಮಿ (ಗೃಹಭೂಮಿ ವಾಸ್ತುಸಂಜ್ಞಂ: **ಅಭಿಧಾವ,** ೧. ೧೦. ೧೦)

**ವಾಸ್ತುವಿದ್ಯೆ** – ಕಟ್ಟಡ ಕಟ್ಟುವ ಶಾಸ್ತ್ರ (ಅನಂತವಿಜಯಂಗೆ ವಿಚಿತ್ರಕಲೆಯುಮಂ ವಾಸ್ತುವಿದ್ಯೆಯುಮನುಪದೇಶಂಗೆಯ್ದು: **ಆದಿಪು,** ೮. ೬೦)

**ವಾಸ್ತವ್ಯ** – ನೆಲಸುವವನು (ಅವರನಲ್ಲಿಗೆ ವಾಸ್ತವ್ಯರ್ಮಾಡಿ ದಕ್ಷಿಣೋತ್ತರಶ್ರೇಣಿಗಳೊಳಿರ್ಪ ವಿದ್ಯಾಧರಾಧೀಶ್ವರರಂ ಬರಿಸಿ: **ಆದಿಪು,** ೯. ೧೨೧ ವ)

**ವಾಹ** – ಕುದುರೆ (ನೀಂ ನಿನ್ನೊಂದು ವಿದ್ಯಾತಪೋಬಲದಿಂ ದಾಂಟಿದೆ ವಾಹದಂತೆ: **ಕಾದಂಸಂ,** ೭. ೪೬)

**ವಾಹಕ** – ರಾವುತ (ಜಳಧಿತರಂಗಸನ್ನಿಭ ತುರಂಗಬಲಂ ಮುಳಿದೇಱೆ ವಾಹಕಾವಳಿಯ ನಿಶಾತಖಡ್ಗದ ಣಿಲ್ ಖಣಿಲ್ಲ ಎಂಬ ಮಹಾರವಂ: **ಗಿರಿಜಾಕ,** ೬. ೭೦)

**ವಾಹಕತ್ವ** – ಸವಾರಿ (ಮುದಮೊಂದಿರೆ ಕಲ್ತರ್ ಅನೂನವಿದ್ಯೆಯಂ ಘನತರಶಸ್ತ್ರಶಾಸ್ತ್ರ ಹಯಹಸ್ತಿವಿಶೇಷಕ ವಾಹಕತ್ವಮಂ: **ರಾಜಶೇವಿ,** ೪. ೭೬)

**ವಾಹತ್ವ** – ಕುದುರೆಯ ರೂಪು (ದಾಂಟಿದೆ ವಾಹದಂತೆ ಇಱಿದೆ ಅದಱಿಂ ವಾಹತ್ವಮಂ ತಾಳ್ದಿ ಭೂತಲದೊಳ್ ಪೋ ನೆಲಸು: **ಕಾದಂಸಂ,** ೭. ೪೬)

**ವಾಹಳಿ** – ಕುದುರೆ ಸವಾರಿ (ಹರಿದಶ್ವಂ ಬಂದಪಂ ವಾಹಳಿಗೆ ಎನುತಂ .. .. ಪೊಣ್ಮಿತ್ತು ಉದಯಸಮಯದೊಳ್ ಶೋಣ ಸೂರ್ಯಾಂಶುಜಾಲಂ: **ಕಾದಂಬ,** ೧. ೧೧೭)

**ವಾಹಳಿತನ** – ಕುದುರೆ ಸವಾರಿಯ ಕೌಶಲ (ಅಲುಂಗದೆ ಪಂಚಧಾರೆಯೊಳ್ ಪರಿಣತಿದೋರ್ಪ ವಾಹಳಿತನಂ ಬಗೆಗೊಂಡುದು ಮಂತ್ರಿಪುತ್ರನಾ: **ರಾಜಶೇವಿ,** ೧೩. ೮೨)

**ವಾಹಳೀಭೂಮಿ** – ಕುದುರೆ ಸವಾರಿ ಮಾಡುವ ಮೈದಾನ (ನಿಜವೈಹಾಳೀ ವಿನೋದವ್ಯತಿಕರಮನಂ ವಾಹಳೀ ಭೂಮಿಯೊಳ್ ಸಾಮಜದಿಂ ಬಂದು: **ಅನಂತಪು,** ೧೧. ೨೧)

**ವಾಹಿನಿ** – ನದಿ, ಸೈನ್ಯದ ತುಕಡಿ (ಬಳವತ್ ಪ್ರತ್ಯಂತಭೂಪಾಳಕನಿಕರ ಮಹಾವಾಹಿನೀವಾಹಿನೀ ಸಂಕುಳಂ ಅತ್ಯುತ್ಸಾಹದಿಂ ಪುಗೆ ದೆಸೆದೆಸೆಯಂ: **ಆದಿಪು,** ೧೩. ೪೫)

**ವಾಹಿನೀಕ** – ಸೈನ್ಯ, ಪ್ರವಾಹ (ಮತ್ತಮಾ ಘನಸಮಯಂ .. .. ವಿಪಕ್ಷಗತಿವಿರೋಧಕಮಾಗಿಯುಂ ಪರಿಗತಭಂಗ ವಾಹಿನೀಕಮುಂ ಎನಿಸಿರ್ದುದು: **ರಾಜಶೇವಿ,** ೮. ೧೧೮ ವ)

**ವಾಹಿನೀಪತಿ** – ಸಮುದ್ರ (ಆ ಮೂರ್ಧಾಭಿಷಿಕ್ತಮುಖ್ಯಂ .. .. ಅನೂನವಾಹಿನೀಪತಿಯಾಗಿಯುಂ ಅಭಂಗಾನುಷಂಗನುಂ ವಿನೀತವಿನತಾನಂದನನಾಗಿಯುಂ ಅಪಕ್ಷಪಾತಪ್ರಚಾರನುಂ .. .. ಎನಿಪಂ: **ಚಂದ್ರಪ್ರಪು,** ೨. ೭ ವ)

**ವಾಳ** – ಬಾಲ (ದೀರ್ಘ ನೀಲೋತ್ಪಳನಾಳಾಲೋಲವಾಳಂ ವಿಪುಳ ಶಫಪರಿಸ್ಥೂಲಮಾಭೀಳಶೀಳಂ: **ನೇಮಿನಾಪು,** ೪. ೧೨೧)

**ವಾಳತಿ** – ಬಾಣಂತಿ (ಈ ತಮಾಳದ ತಳದೊಳಾಡುವ ಮಱಿಯಂಚೆಯ ಮುದ್ದುಗೆಯ್ತುಮುಮಂ ಅಂಚೆವಾಳತಿಯ ಆ ಮಱಿಯೊಳಾದ ಎಱಕಮುಮಂ ಕಂಡು: **ಮಲ್ಲಿನಾಪು,** ೪. ೧೬ ವ)

**ವಾಳಧಿ** – ಬಾಲ (ಅನುಪೂರ್ವದೀರ್ಘವಾಳಧಿಯುಂ ಮಾನುಷದುಗ್ಧಾವಿಳಸನೋಪೇತಪೇಚಕನುಂ: **ಆದಿಪು,** ೧೨. ೫೬ ವ)

**ವಾಳವಾಯಜ** – ನವರತ್ನಗಳಲ್ಲಿ ಒಂದು, ವೈಡೂರ್ಯ (ಗಜಮೊಂರ್ದುದು .. .. ವಾಳವಾಯಜಮಿರ್ಪಂತಿರೆ ಕಣ್ಣ ಪೆರ್ಮಳೆಯೊಳಂ ಮೇಲ್ವಾಯ್ವ ಅಪಾಂಗಾಂಶುವಿಂ: **ನೇಮಿನಾಪು,** ೫. ೯೧)

**ವಾಳು** – ವಾಳುಕ, ಮರಳು (ಆ ತಂಡೇಶಂ .. .. ವಾಳುವ್ರಾತದ ಲಿಂಗಮನೆ ಮಾಡಿ ಪೂಜಿಸುತಿರ್ಪರ್: **ತ್ರಿಷಷ್ಟಿಪು,** ೪೪. ೪)

**ವಾಳುಕಪ್ರಕರ** – ಮರಳ ರಾಶಿ (ಅಮಿತಾಂಭೋನಿಧಿ ವಾಳುಕಪ್ರಕರಮಂ ಪುಂಜೀಕೃತಂ ಮಾಡಿ ಚೋದ್ಯಮದಾಗಲ್ ಮಟಲೊಂದನಲ್ಲಿ ಕುಜೆಪಂ ಮಾಡಿಟ್ಟು: **ಸುಕುಮಾಚ,** ೫. ೩೩)

**ವಾಟಿಸು** – ಬಾಣಲಿಯಲ್ಲಿ ಹುರಿ (ಸೀರ್ನಾಯ್ಗಳಿಂ ದಂಡಿಸಿಯುಂ ಪೆರ್ನೊಣಂಗಳಿಂ ತಗುಳ್ದುರಿಸಿಯುಂ ಕಾವಲಿಯೊಳಿಕ್ಕಿ ವಾಟಿಸಿಯುಂ ಇಂತನೇಹ ವಿಧ ದಂಡನೆಗಳಿಂ: **ಧರ್ಮಾಮೃ,** ೩. ೪೩ ವ)

**ವಾಟ್ತಿಗೊಳ್** – ಸುದ್ದಿಯನ್ನು ಕೇಳು (ಕಾಟಾದ ವಾಟ್ತೆಗೊಂಡೊಡೆ ಪಾಟಾದುದು ಮನಮುಂ ಎರ್ದೆಯುಂ ಏನಂ ಪೇಟ್ವೆಂ: **ಪಂಪಭಾ,** ೪. ೬೭)

**ವಿ** – ಪಕ್ಷಿ (ಶಕುನಿ ನಗೌಕಂ ಪತಗಂ ಶಕುನ್ತಿ ಖಗ ಅಂಡಜಂ ಪತತ್ರಿ ಪತಂಗಂ ವಿಕಿರಂ ಪಕ್ಷಿ ಶಕುಂತಂ ಶಕುನಂ ವಿಹಗಂ ವಿ ವಿಷ್ಕಿರಂ ಪತ್ರರಥಂ: **ಅಭಿಧಾವ,** ೧. ೯. ೯)

**ವಿಂದೆ** – [ಬೃಂದ] ಗುಂಪು (ಸ್ಥಗಿತ ತಟಾಂಶುವಿಂದಂ ಅದು ಮಾಟ್ಪುದು ಅಕೃತ್ಯವಿಚಿತ್ರಶೋಭೆಯಂ: **ಪುಷ್ಪದಂಪು,** ೨. ೯೫)

**ವಿಂಧ್ಯ** – ಕುಲಪರ್ವತಗಳಲ್ಲಿ ಒಂದು (ಬಳೆಯಲ್ಕಣ್ಮೆದುದಿಲ್ಲ ವಿಂಧ್ಯಗಿರಿಯುಂ ತನ್ನಾಜ್ಞೆಯಿಂದೆ: **ಪಂಪಭಾ,** ೪. ೨೦)

**ವಿಂಶತಿ** – ಇಪ್ಪತ್ತು (ವಿಂಶತಿಸಹಸ್ರವರ್ಷಪರ್ಯಂತ ಸ್ಮೃತಾಹಾರಮಂ ವಿಂಶತಿಸಮುದ್ರೋಪಮ ಆಯುಷ್ಯಮಂ .. .. ಆಗಿ ಮಣಿಚೂಳಾಮರೇಶ್ವರನಿರೆ: **ಶಾಂತಿಪು,** ೭. ೭೭ ವ)

**ವಿಕಚ** – ಅರಳಿದ, ಹರಡಿದ (ವಿಕಚ ಇಂದೀವರವಕ್ತ್ರೆ ಸನ್ನರಕತಚ್ಛಾಯಾಂಗಿ ವೃತ್ತಕುಚದ್ವಂದ್ವೆ .. .. ಕೂಷ್ಮಾಂಡಿಯಂಬಿಕೆ .. .. ಕೂರ್ತು ರಕ್ಷಿಸುಗೆ: **ಸುಕುಮಾಚ,** ೧. ೮)

**ವಿಕಟ** – ದೊಡ್ಡದಾದ (ಅತಿ ವಿಕಟ ಶಲ್ಮಲಿವಿಟಪಿಯೊಳಿದಿರುಂ ಬಟಿಯುಂ ಉರ್ಚುವುದುಂ: **ಸುಕುಮಾಚ,** ೧೧. ೪೭ ವ); ವಿಕಾರವಾದ (ವಿಕಟಾಂಗೋಪಾಂಗೆ ಜಾತ್ಯಂಧಕಿಯೆನಿಸಿದ ಮಾತಂಗಿ ತಾನೆತ್ತಲಾತ್ಯಂತಿಕ ಸದ್ಧರ್ಮಓಫದೇಶಮಂ ಸಮನಿಸುವುದೆತ್ತ: **ಸುಕುಮಾಚ,** ೫. ೪೮); ಕ್ರೂರ (ವಿಕಟಮಪ್ಪುದೊಂದು ಕಥೆಯ ಪೇಟ್ದು ಮತ್ಸ್ಯಂಗಳಂ ನಂಬಿಸಿ ತಿಂಬೆಂ ಎಂದು ಇಂತೆಂದುದು: **ಪಂಚತಂತ್ರ,** ೧೩೮ ವ)

**ವಿಕಟಗಾತ್ರ** – ಭಾರಿ ದೇಹವುಳ್ಳ (ಮೃದುಕಳಶವೃತ್ತ ಪುಷ್ಕರಗೋತ್ರನಂ ಸುಸಂವೃತಪ್ರೋಹಪಳಿಹಸ್ತ ವಿಕಟಗಾತ್ರನಂ .. .. ಸಂಪದುಪೇತಮಂ ತರಿಸಿ: **ಶಾಂತಿಪು,** ೧೦. ೧೪೩ ವ)

**ವಿಕಚ** – ಅರಳಿದ (ಮಧುಕರಮದು ಭೋಂಕೆನೆ ಪಾಯ್ದು ಎಱಂಕೆ ನಾಂದೊಡೆ ನೆಲಸಿದುದು ವಿಕಚಕನಾಕಾಬ್ಜಿನಿಯೊಳ್: **ಆದಿಪು,** ೧೧. ೬೨)

**ವಿಕಟಾಟ್ಟಹಾಸ** – ಭಯಂಕರ ನಗು (ಆಗಳ್ ಕುರುಧ್ವಜಿನಿಯುಂ ಅನೇಕ ಶಂಖ ಕಾಹಳ ಭೇರೀ ಪಣವ ಝಲ್ಲರೀ ಮೃದಂಗ ತೂರ್ಯಂಗಳ್ ಅಂತ ಕಾಲಾಂತಕ ವಿಕಟಾಟ್ಟಹಾಸಂಗಳ್ ಎಂಬಂತೆ ಮೊಟಗೆ: **ಪಂಪಭಾ,** ೧೧. ೩೩ ವ)

**ವಿಕಥೆ** – [ಜೈನ] ಪಾಪಕಾರ್ಯಕ್ಕೆ ಕಾರಣವಾಗುವ ಕತೆ (ವಿಕಥಾವರ್ಣನಂ ಅಲ್ಪಸಂಸ್ತವನಂ ಎಂಬೀ ದೋಷಮಲ್ತು ಎಂಬಿನಂ ಸಕಲತ್ಯಾಗಿ ಸಮಸ್ತವೇದಿ ಭುವನಾರಾಧ್ಯಂ ಜಿನಂ ಸತ್ಯವಾದಿ ಕಥಾನಾಯಕನಾಗೆ: **ಮಲ್ಲಿನಾಪು,** ೧. ೪೮)

**ವಿಕರಣ** – ವಿವಿಧ ರೂಪಗಳನ್ನು ತಾಳುವ ಶಕ್ತಿ (ವಿಕರಣಸಂಭವ ದೇವೀಪ್ರಕರಂ ಸಕಳೋಪಕರಣನಿಕರಾತ್ತಕರಂ ಬಂದಿದಿರೊಳ್ ನಿಂದುದು ನಲವಿಂದಂ: **ಚಂದ್ರಪ್ರಪು,** ೪. ೬೩)

**ವಿಕರಾಳೋಕ** – ಭಯಂಕರ ಕಣ್ಣು[ಗಳುಳ್ಳವನು] (ವಿಕರಾಳಾಳೋಕ ನೀಷಜ್ಜ್ವಳಗತನಳಿನೀಶ್ಯಾಮಂ .. .. ಒಪ್ಪಿದಂ ದ್ವೀಪಿಲಾಂಗೂಲಕೃತೋಷ್ಣೀಷಂ ಶಿರೋಳಂಕೃತ ವರವಿಕಸತ್ಕಿಂಕಿರಾತಂ ಕಿರಾತಂ: **ಚಂದ್ರಪ್ರಪು,** ೫. ೫೭)

**ವಿಕರಿ** – ಚಂಚಲ, ತುಂಟ (ಏಂ ಕರಂ ವಿಕರಿಯೋ ಕೂಸಾಟದೊಳ್ ಕೇಶವಂ: **ನೇಮಿನಾಪು,** ೭. ೮೫)

**ವಿಕರ್ಣ** – ಒಂದು ಬಾಣ, ಕರ್ಣನ ಮಗ (ಕೊಂದನಂಕದ ವಿಕರ್ಣನಂ ಒಂದೆ ವಿಕರ್ಣದಿಂ ನರಂ: **ಪಂಪಭಾ,** ೮. ೧೦೭);

**ವಿಕರ್ತನ** – ಸೂರ್ಯ (ಅಂತಾದ ವಿಕರ್ತನೋದಯದೊಳ್ ಏರ್ವೆಸನೆ ಕರ್ತವ್ಯಮಾಗಲ್: **ಕರ್ಣನೇಮಿ,** ೧೨. ೨೧೯ ವ)

**ವಿಕಲ** – ದೋಷಯುಕ್ತ (ಅನ್ಯವರ್ಣನರತಿಯಿಂ ವಿವೇಕವಿಕಲರ್ ಕಿಡುವರ್ ಅರ್ಥದೊಳಾದಮಾದ ಮೋಹದಿಂ ಅದೇಕೆ ಮಾಱುವರೊ ಪುಣ್ಯನಿಬಂಧನಮಂ ಕವೀಶ್ವರರ್; **ಮಲ್ಲಿನಾಪು,** ೧. ೪೭)

**ವಿಕಲ್ಪ** – ಭೇದ (ಅದು ದಿವಿಜಲೋಕಂ ಇದು ಮನ್ಮಥರೂಪದ ಮನುಷ್ಯಲೋಕಂ ಎಂಬಿದುವೆ ವಿಕಲ್ಪಂ: **ಆದಿಪು,** ೪. ೧೯); ಎರಡು ಯುಗಗಳ ನಡುವಣ ಕಾಲಾವಧಿ (ಭುವನಜನಜೀವನೋಪಾಯವೃತ್ತಿಯಂ ತೋಱೆ ಕೊಟ್ಟು ಕೃತಕೃಷಿಕರ್ಮ ವ್ಯವಹೃತಿಯಿಂ ಕೃತಯುಗಮೆಂಬ ವಿಕಲ್ಪಮನಾದಿಕಾಲದೊಳ್ ಪುಟ್ಟಿಸಿದಂ; **ಪಂಪರಾ,** ೧. ೯೩)

**ವಿಕಸನ** – ಅರಳುವಿಕೆ (ವದನಮಿದಲ್ತು ಅಂಬುತುಹಂ ಮುದಲೋಲವಿಲೋಚನಂಗಳಲ್ಲಮಿವು ಅವಳಿಗಳ್ ಮುದಮಲ್ಲಿದು ವಿಕಸನಂ: **ಕವಿರಾಮಾ,** ೩. ೨೪)

**ವಿಕಸಿತ** – ಅರಳಿದ (ಪಾಂಡವರಂ ಇಕ್ಕಿದ ಒಸಗೆವಾತುಗಳಂ ಈಗಳೆ ಕೇಳಿಸುವೆಂ ಎಂದು ಸರೋಜನಿಳಯೆ ಎನ್ನ ಬರ್ಪನ್ನಂ ಅರಸನಂ ಅಗಲದೆ ವಿಕಸಿತ ಶತಪತ್ರಾತಪತ್ರದ ತಣ್ಣೆಟಲುಮಂ ಕುಂದಲೀಯದಿರು ಎಂದು ನಿಯಮಿಸಿ: **ಪಂಪಭಾ,** ೧೩. ೧೦೫ ವ); ಏಳಿಗೆವಡೆದ

**ವಿಕಳೇಂದ್ರಿಯ** – [ಜೈನ] ತ್ರಸಕಾಯಗಳಲ್ಲಿ ಒಂದು; ದ್ವೀಂದ್ರಿಯ, ತ್ರೀಂದ್ರಿಯ, ಚತುರಿಂದ್ರಿಯಗಳ ಜೀವ (ಸೂಕ್ಷ್ಮವನಸ್ಪತಿ ಕಾಯಂಗಳ್ .. .. ಪುಟ್ಟುತ್ತುಂ ಸಾವುತ್ತುಂ ಇರ್ಕುಂ ಅವಱೊಳೇಕೇಂದ್ರಿಯಂಗಳಲ್ಲದೆ ವಿಕಳೇಂದ್ರಿಯಂಗಳುಂ ಸಕಳೇಂದ್ರಿಯಂಗಳುಂ ಪುಟ್ಟುವುವಲ್ಲವು: **ಸುಕುಮಾಚ,** ೧೧. ೫೦ ವ)

**ವಿಕಳೇಂದ್ರಿಯಜಾತಿ** – [ಜೈನ] ಹದಿನಾರು ಕರ್ಮಪ್ರಕೃತಿಗಳಲ್ಲಿ ಒಂದು (ಏಕೇಂದ್ರಿಯ ವಿಕಳೇಂದ್ರಿಯಜಾತಿ ಆತಪಮೋದ್ಯತ ಸ್ಥಾವರ ಸಾಧಾರಣಸೂಕ್ಷ್ಮಂಗಳೆಂಬ ಷೋಡಶ ಕರ್ಮಪ್ರಕೃತಿಗೆ ವಿಳಯಂ ಮಾಡಿ: **ಶಾಂತಿಪು,** ೧೧. ೧೧೧ ವ)

**ವಿಕಾರ** – ಬದಲಾವಣೆ (ಅನ್ಯಗರ್ಭಿಣೀಜನದ ವಿಕಾರಂ ಆಸತಿಯೊಳಾಗದೆ ತಾಂ ನೆಲಸಿರ್ಪ ಠಾಣದೊಳ್ ಜಿನವಿಕಾರಿ ಜಾಡ್ಯದ ವಿಕಾರಮನೇಕಿರಲೀವನೆಂಬಿನಂ: **ಪುಷ್ಪದಂಪು,** ೯. ೧೧೭)

**ವಿಕಾರ್ಯ** – ರೂಪಾಂತರ (ವಿಕಾರ್ಯಮೆಂದು ರೂಪಾಂತರಮನೆಯ್ದುವುದು: **ಶಬ್ದಮದ,** ೧೩೮ ವೃತ್ತಿ)

**ವಿಕಿರ** – ಪಕ್ಷಿ (ವಿಕಿರನಿಕರಮಂ ನೆರಪುವಂದಮಲ್ಲದೆ ಇದು ನೆರೆವಂದಮಲ್ಲದು ಎಂದು ನುಡಿಯುತ್ತುಂ: **ಲೀಲಾವತಿ,** ೫. ೭೬ ವ)

**ವಿಕಿರತ್** – ಹಾರಾಡುವ (ವಿಕಿರತ್ ನಾನಾ ಪತಾಕಾಪಟಳ ಪಟುಪಟೀಪಕ್ಷ ವಿಕ್ಷೇಪದಿಂ: **ನೇಮಿನಾಪು,** ೮. ೬೩)

**ವಿಕೀರ್ಣ** – ಚೆದುರಿದ, ಹರಡಿದ (ಒಗೆತಂದಂ ಉದ್ಗತ ವಿಕೀರ್ಣಕರಪ್ರಕರಂ ಸುಧಾಕರಂ: **ಲೀಲಾವತಿ,** ೬. ೯೨)

**ವಿಕೀರ್ಯಮಾಣ** – ಎರಚಲ್ಪಟ್ಟ (ಅನವರತ ವಿತರಣನಿರತ ರಾಜಕುಮಾರಮುಷ್ಟಿ ವಿಕೀರ್ಯಮಾಣ ಸಂತರ್ಪಣ ಚೂರ್ಣ ಸಂಕೀರ್ಣಕರ್ಪೂರರಜಮುಂ: **ಆದಿಪು,** ೧೧. ೩೫ ವ)

**ವಿಕುರ್ವಣೆ** – ವಿಕಾರವೇಷ (ವಿದ್ಯಾಸಾಧನೆಗೆ ವಿಘ್ನಹೇತುಗಳಪ್ಪ ಅನೇಕ ವಿಧ ವಿಕುರ್ವಣೆಯಂ ವಿಗುರ್ವಿಸೆಯುಂ: **ಪಂಪರಾ,** ೧೦. ೧೪೭ ವ)

**ವಿಕೃತ** – ಕೆಟ್ಟ (ಇದೇನಘಟಮಾನಮೊ ವಿಕೃತಘೋರ ಸಂಸಾರಂ: **ಸುಕುಮಾಚ,** ೪. ೬೧); ಅಸಹ್ಯ (ವಿಕೃತಕ್ಕೆ ಸಂದ ನಾಗ್ನ್ಯಮುಂ ಅಪಹಿಂಸೆಯೆಂಬ ಜನವಾದಮುಮಲ್ಲದೆ ಪೇಟಿ ಜೀವತತ್ವಮುಮಂ ಅಜೀವತತ್ವಮುಮಂ ಎತ್ತಜೆವರ್ ಜಿನತತ್ವತಾತ್ವಿಕರ್: **ಶಾಂತಿಪು,** ೮. ೧೩೨); ವಿಚಿತ್ರವಾದ (ಜಂಭಾರಿ ವಿಕೃತಮಾಡುವ ರಂಭಾನಟಿಯಂತೆ ಲಾಸ್ಯದೊಳ್ ತಾಂಡವಮುಜ್ಜ್ರಂಭಿಸೆ ಗಣಿಕೆಯರೊಡನಾರಂಭಿಸಿದರಪೂರ್ವ ನರ್ತನಾರಂಭಣಮಂ: **ಶಾಂತಿಪು,** ೧೦. ೬೪)

**ವಿಕೃತಾಂಗ** – ವಿಕಾರಗೊಂಡ ದೇಹದವನು (ವಿಕೃತಾಂಗರ್ ವಿಕೃತಾಯುಧರ್ ವಿಕೃತವೇಷರ್ ಪೂಣ್ಕೆಯಿಂ ದಾನವಾಮತಕನೊಳ್ ತಳ್ತಿಜಿದು .. .. ದೆಸೆಬಿಟ್ಟುಂ ಪಾಜಿದರ್ ಬೇಗದಿಂ: **ಜಗನ್ನಾವಿ,** ೧೮. ೧೨); ವಿಚಿತ್ರ ದೇಹಭಂಗಿ (ವಿಕೃತಾಂಗವೇಷಭಾಷಾಪ್ರಕಾರಕೃತಹಾಸಹೇತುಕಂ ಹಾಸ್ಯಂ: **ಕಾವ್ಯಾವಲೋ,** ೮೮೯)

**ವಿಕ್ಕ** – ಇನ್ನೂ ತಾಯ ಹಾಲು ಕುಡಿಯುವ ಆನೆಯ ಮರಿ (ಕದುಪಿನ ವಿಕ್ಕ ಪೋತ ಪರಿಣೀಗಣಮಂ ನವಪಲ್ಲವಂಗಳಂ ಮುದದೊಳ್ ಮುನ್ನೆ ಮೇಯಿಸಿ: **ಪಾರ್ಶ್ವನಾಪು,** ೪. ೧೧೩)

**ವಿಕ್ಕಿರ** – ಹಕ್ಕಿ (ಮೇಗಣ ಷಕಾರಂ ಕಕಾರಮಾದುದರ್ಕೆ: ವಿಷ್ಕಿರಂ–ವಿಕ್ಕಿರಂ, ವಿಕ್ಕಿರಮೆಂದು ಪಕ್ಕಿ: **ಶಬ್ದಮದ,** ೨೭೯ ಪ್ರ)

**ವಿಕ್ರಮ** – ಪಾದ ಅವನಿಚಕ್ರಮಂ ವಿಕ್ರಮಕ್ಕೆಯ್ದಿದಾ ಬಲಿಯುಂ .. .. ಮೆಟ್ಟೆ ರಸಾತಳಕ್ಕಿಟಿಪಿದೈ ನೀಂ ವಾಮನಾಕಾರದಿಂ: **ಜಗನ್ನಾವಿ,** ೧. ೫೯); ಪರಾಕ್ರಮ (ಅನುಪಮ ವಿಕ್ರಮಕ್ರಮಂ ಉದಾರಗುಣಂ ಋತವಾಕ್ಯಂ ಎಂಬ ಪೆಂಪೆನಲಿವು ಮೂಱು ನಾಲ್ಕೆ ಗುಣಂ: **ಪಂಪಭಾ,** ೧೨. ೯೩); ಕುದುರೆಯ ಗತಿಗಳಲ್ಲಿ ಒಂದು (ಬಿಂಕಂಬಡೆದುದು ವಿಕ್ರಮಂ ಅಂಕಿತಂ ಉಪಕಂಠಂ ಉಪಜವಂ ಎಂಬ ಅಯ್ದುಂ ಕಣ್ಗೊಳಿಸುವ ಧಾರೆಗಳಿಂ ಕುದುರೆಯ ಕಾಲ್ಗೆ ಕೋಡಗಜಿಯೊಳವಕ್ಕುಂ: **ಮಲ್ಲಿನಾಪು,** ೯. ೨೩)

**ವಿಕ್ರಾಂತ** – ಪರಾಕ್ರಮ (ನೀಳ್ದ ಸುಯ್ವಿಸಿಲಂ ತನ್ಮುಖ ಚಂದ್ರಬಿಂಬದೊಳ್ ವಿಕ್ರಾಂತದಿಂ ನೋಡಿ ಒಉಟ್ಟಿಸುವಂ ತನ್ನೃಪನಂದನಂ: **ಲೀಲಾವತಿ,** ೧. ೯೮)

**ವಿಕ್ರಿಯರ್ಧಿ** – [ಜೈನ] ತಪಸ್ಸಿನ ಫಲವಾದ ಎಂಟು ಬಗೆಯ ಸಿದ್ಧಿಗಳಲ್ಲಿ ಒಂದು (ಪತ್ತುಸಾಸಿರ್ವರ್ ವಿಕ್ರಿಯರ್ಧಿಪ್ರಾಪ್ತರುಂ ಅಯ್ಸಾಸಿರದ ನಾನೂರ್ವರ್ ಅವಧಿಜ್ಞಾನಿಗಳುಂ: **ಚಾವುಂಪು,** ೨೬೦, ಸಾ.೧೦)

**ವಿಕ್ರಿಯಾಬಲ** – ಮಾಯಾಶಕ್ತಿ (ಅಂತು ವಿಕ್ರಿಯಾಬಲದೆ ಗೀರ್ವಾಣವಾರಣಂ ವಿಗುರ್ವಿಸೆ: **ಅಜಿತಪು,** ೪. ೨೩ ವ)

**ವಿಕ್ರಿಯೆ** – ಮಾಯೆ, ಇಂದ್ರಜಾಲ (ಪರಿಸಂಖ್ಯಾತೀತಮೆನಲ್ ಸುರಪತಿ ವಿಕ್ರಿಯೆಯಿಂ ಆದ ಭುಜಕೋಟಿಗಳಿಂ: **ಕರ್ಣನೇಮಿ,** ೮. ೧೪೦) [ಜೈನ] ಶರೀರವನ್ನು ಜಡ–ಸೂಕ್ಷ್ಮ ಮೊದಲಾಗಿ ಮಾಡಲು ಸಾಧ್ಯವಾದ ಶಕ್ತಿ (ಅಧಿಪಂ ಸುಮುಖದಿಂ ಬೆಸಸಿದೊಡಲ್ಲದೊಲ್ಲೆವೆನೆ ವಿಕ್ರಿಯೆಯಿಂದಂ ಬೆಸಸುವಂತೆ ಮಾಡಿ: **ಆದಿಪು,** ೯. ೧೧೨)

**ವಿಕ್ಲಬ** – ವಿಷಾದ (ವಿಕ್ಲಬದಿಂ ತಾಂ ಬರವೇೞ್ವುದುಂ ಪರಮಹಂಸಂ ಬಂದು ಕುಳ್ಳಿರ್ದೊಡೆ ಇತ್ತು ಬಟಿಕ್ಕರ್ಘ್ಯಮಂ ಎಯ್ದೆ ನೀಮೆಮಗೆ ಪೇಟಿಂ ಸವೇಚ್ಛೆಯಿಂ ಪೃಚ್ಛೆಯಂ ಎಂಬುದುಂ: **ಸುಕುಮಾಚ,** ೩. ೬ ಮತ್ತು ೬ ವ)

**ವಿಕ್ಷೇಪ** – ಬೀಸುವಿಕೆ, ಅಲ್ಲಾಡುವಿಕೆ (ಚಮರೀ ಲೋಲ ಲಾಂಗೂಲ ಮಾಲಾವಲಿ ವಿಕ್ಷೇಪಂಗಳಿಂ ತತ್ ಚಮರರುಹ ಮಹಾಶೋಭೆ ಕೈಗಣ್ಮೆ: **ಪಂಪಭಾ,** ೪. ೧೪); ಚೆಲ್ಲುವಿಕೆ (ಪುಷ್ಪಾಂಜಳಿವಿಕ್ಷೇಪಂಗೆಯ್ದು ಎಱಗಿ ಪೊಡೆವಟ್ಟು: **ಶಾಂತಿಪು,** ೧೦. ೬೧ ವ)

**ವಿಕ್ಷೇಪಣ** – ಒಲೆದಾಡುವಿಕೆ (ದಂಡನಾಥಮುಖಮಂಡಲಮಂ ನಡೆನೋಳ್ಪುದುಂ ತದ್‌ಭ್ರೂವಿಕ್ಷೇಪಣಪ್ರೇರಿತಂ ಮೇಘನಾದಂ ಆದರದಿಂ ಬಂದು: **ರಾಜಶೇವಿ,** ೬. ೩೦ ವ)

**ವಿಕ್ಷೇಪಣಿ** – [ಜೈನ] ನಾಲ್ಕು ಬಗೆಯ ಧರ್ಮಕಥೆಗಳಲ್ಲಿ ಒಂದು; ಮಿಥ್ಯಾವಾದವನ್ನು ಖಂಡಿಸುವ ಕತೆ (ಧರ್ಮಕಥೆಯೆಂಬುದು ಆಕ್ಷೇಪಣೀಯುಂ ವಿಕ್ಷೇಪಣೀಯುಂ ಸಂವೇದಿನಿಯುಂ ನಿರ್ವೇದಿನಿಯುಂ ಎಂದು ಚತುರ್ವಿಧಮಕ್ಕುಂ: **ಚಾವುಂಪು,** ಪು. ೪೫. ಸಾ. ೧೩–೧೮), ನೋಡಿ **'ಧರ್ಮಕಥೆ'**

**ವಿಕ್ಷೋಭ** – ಆನೆಯ ಎದೆಯ ಬದಿಯ ಭಾಗ (ಪೀನೋಪಚಿತ ಮಾಂಸವಿಕ್ಷೋಭನುಂ ನಾಭಿ ಕಪೋಲೋರೋಮಣಿಯುಂ: **ಆದಿಪು,** ೧೨. ೫೬ ವ)

**ವಿಖ್ಯಾತದಾನ** – ಶ್ರೇಷ್ಠ ರೀತಿಯ ದಾನ (ಆ ಮೂರ್ಧಾಭಿಷಿಕ್ತಮುಖ್ಯಂ ವಿಖ್ಯಾತದಾನನಾಗಿಯುಂ ಅನದವೃತ್ತಿವರ್ತನನುಂ .. .. ಎನಿಪಂ: **ಚಂದ್ರಪ್ರಪು,** ೨. ೮)

**ವಿಗತಕೃಪ** – ದಯೆಯಿಲ್ಲದವನು (ಇದಱೊಳಗಾನಿನನಿಕ್ಕಿ ಕೋಪಮನಾಱಿಪಪುದೆ ಪಂಥಮೆಂದು ಬಂದಂ ತದಗ್ರದೇಶಕ್ಕೆ ಕೋಣಪಂ ವಿಗತಕೃಪಂ: **ಚಂದ್ರಪ್ರಪು,** ೫. ೪೨)

**ವಿಗತಚಿತ್ತ** – ಮೈಮರೆವು (ಇನ್ನಿಂತಿರೆ ನಿನ್ನಂತೆ ವಿಗತಚಿತ್ತರುಂ ಒಳರೇ: **ಕಾದಂಬ,** ೫. ೬೦)

**ವಿಗತಜೀವಿತ** – ಪ್ರಾಣ ಹೋದವನು, ಸತ್ತವನು (ಕ್ರೂರತರವಿಷವಿಭೇದ್ಯಂ ಧಾರಿಣಿಯೊಳ್ ಬಿರ್ದು ವಿಗತಜೀವಿತನಾದಂ: **ಪಂಚತಂತ್ರ,** ೩೮೪)

**ವಿಗತನಿಮೇಷ** – ರೆಪ್ಪೆ ಬಡಿಯದವನು (ಉತ್ಸೃಷ್ಟ ಸಕಲ ವ್ಯಾಪಾರನುಂ ವಿಗತನಿಮೇಷನುಂ ಎನಿಸಿ ಬರೆದನಂತೆಯುಂ ಕಂಡರಿಸಿದನಂತೆಯುಂ ಮರವಟ್ಟನಂತೆಯುಂ .. .. ಇರ್ದಂ: **ಕಾದಂಸಂ,** ೫. ೫೬ ವ)

**ವಿಗಮ** – ವಿಯೋಗ, ಅಗಲಿಕೆ (ಪತಿವಿಗಮದೊಳ್ ಅಸಿಧಾರಾವ್ರತಂಗಳಂ ತಾಳ್ದಿ ಧರ್ಮಮಂ ಮಾಡುವ ಸಂತತಿಯಂ ಕಾಯುತೆ ಕಾಯಸ್ಥಿತಿಯಂ ತಾನತ್ತಿಮಬ್ಬೆ ಮಾಣ್ಬಳೆ ಮಾಣಳ್: **ಅಜಿತಪು,** ೧. ೫೦)

**ವಿಗಳತ್** – ಸುರಿಯುತ್ತಿರುವ (ವಿಗಳತ್ ಸ್ವೇದಾರ್ದ್ರಂಗಳಪ್ಪ ಕರಕಮಲಂಗಳಿಂ ಪ್ರಿಯತಮನಂ ತೊಡೆಯ ಮೇಗಣ್ಗೆ ತೆಗೆದು: **ಕಾದಂಸಂ,** ೭. ३೬ ವ)

**ವಿಗಳನ** – ಸೋರುವುದು (ಗಿಡುವಿನ ವಿಗಳನದಿಂದೊಕ್ಕುಡುಗದ ಸರಸೀಸರಿತ್ಸರಪ್ರಸರಂ ಕಾಲ್ವಿಡಿದು ಪರಿತಂದು ನೆರೆವುದು ಬಿಡದೆ ವನಾಂತರದೊಳೆಸೆವ ನವವಿಟಪಿಗಳೊಳ್: **ವರ್ಧಮಾಪು,** ೧. ೪೨)

**ವಿಗಳಿತ** – ಬಿದ್ದ, ಕುಸಿದ (ವಿಗತಾಲೋಕಂ ಶಿವಪದವಿಗಳಿತಮೆನಿಸಿದ ಜನಕ್ಕೆ .. .. ನೀನದೆ ನಾಥ ಕಣ್ಣೂಂ ಗತಿಯುಂ: **ಚಂದ್ರಪ್ರಪು,** ३. ೬), ಸೋರಿಹೋದ (ವಿಗಳಿತಕಳಂಕ ಜಿನಪದಯುಗಸರಸಿಜಮಧುಕರಂ ವಿನೇಯ ನಿಧಾನಂ: **ಸುಕುಮಾಚ,** ೯. ೭೮)

**ವಿಗುರ್ವಣೆ** – ರೂಪಾಂತರ, ಮಾಯೆ (ಅಂತು ಚಿಲಾವರ್ತರುಂ ನಾಗರಾಜರುಂ ನಿರ್ಬಂಧದಿಂ ಸರ್ವಶಕ್ತಿಯಿಂ ಮಾಟ್ಟಿ ವಿಗುರ್ವಣೆಗಳಂ ಗಣಿಯಿಸದೆ: **ಪಾರ್ಶ್ವನಾಪು,** ೧೧. ೮೭ ವ); ಹೆಚ್ಚಳ, ಅಧಿಕಗೊಳಿಸುವುದು (ಅಣಿಮಾದಿ ಗುಣೋತ್ಕರಂ ಉಳ್ಳವಂಗೆ ಭುಜವಿಗುರ್ವಣೆ ಪಿರಿದೇ: **ಶಾಂತಿಪು,** ೧೦. ೪೧); ಪರಾಕ್ರಮ (ಇನಿಸಱಿಂ ಕಂಸಂ ಗಂಡಗರ್ವದೊಡನೆ ವಿಗುರ್ವಣೆಯನೆ ತಾನೆ ಕಾರ್ಮುಗಿಲಂತೆ ಕರಗಿ ಪೋಗಿ: **ನೇಮಿನಾಪು,** ೮. ೮೮ ವ)

**ವಿಗುರ್ವಿಸು** – ಮಾಯಾಶಕ್ತಿಯಿಂದ ಸೃಷ್ಟಿಮಾಡು (ದೇವತೆ ಮುಳಿದು ಪೊಱಸುಗಳಣ ಇವಿರಿಯವು ದಂಸ ಮಸಕಂಗಳಂ ವಿಗುರ್ವಿಸೆ ಮೆಯ್ಯಲ್ಲಮನಿರುಳ್ ನಾಲ್ಕು ಜಾವಮುಂ ತಿನೆ: **ವಡ್ಡಾರಾ,** ಪು ೧३೪, ಸಾ ೧೯); ಭಯಪಡಿಸು (ವಿದ್ಯಾಸಾಧನೆಗೆ ವಿಘ್ನಹೇತುಗಳಪ್ಪ ಅನೇಕ ವಿಧ ವಿಕುರ್ವಣೆಯಂ ವಿಗುರ್ವಿಸೆಯುಂ: **ಪಂಪರಾ,** ೧೦. ೧೪೭ ವ)

**ವಿಗುರ್ವು** – ಅಚ್ಚರಿ (ಪೆರ್ಮರನಂ ಶರೀರದಿಂ ಮತ್ತಗಜಂ ಮನಂಗೊಳಿಸುತ ಉನ್ನತವಾದ ವಿಗುರ್ವನೀವುತುಂ: **ಉದ್ಭಟಕಾ,** ೨. ३४)

**ವಿಗ್ರಹ** – ಯುದ್ಧ (ನಿಮ್ಮ ಸಾರಮಪ್ಪ ದ್ರವ್ಯಮಂ ಆರುಂ ಅಱಿಯದಲ್ಲಿ ಮಡಗಿ ನಾಮುಚ್ಚ ವಿಗ್ರಹದೊಳ್ ನಿಂದು ಕಾದುವಂ: **ವಡ್ಡಾರಾ,** ಪು ೧೮೦, ಸಾ ೨೦); ರಾಜನ ಷಾಡ್ಗುಣ್ಯಗಳಲ್ಲಿ ಒಂದು, ಜಯಾಪೇಕ್ಷಿಗಳಿಬ್ಬರ ಸಮಾನ ಯುದ್ಧ (ವಿಜಿಗೀಷುಗಳಿರ್ವರುಂ ಪರಸ್ಪರ ಅಹಂಕಾರಗೆಯ್ವುದುಂ ವಿಗ್ರಹಮೆನಿಕ್ಕುಂ: **ಪಂಚತಂತ್ರ,** ३೦೭ ವ); ಆಕಾರ (ಮಕರಧ್ವಜನಂತೆ ಸದಾಸನ್ನ ವಿಗ್ರಹನುಂ ದಶರಥನಂತೆ ಸುಮಿತ್ರೋಪದೇಶನುಂ .. .. ಎನಿಸಿದ ಮಹಾನುಭಾವಂ: **ಕಾದಂಬ,** ೨. ೧೬ ವ)

**ವಿಗ್ರಹಾಸಕ್ತ** – ಯುದ್ಧಲಾಲಸೆಯವನು (ವ್ಯಸನಿ ಯುದ್ಧಾಸಕ್ತಂ ಅನಿಶ್ಚಯಬುದ್ಧಿ ವಿರಕ್ತಪ್ರಕೃತಿಯೆನಿಪ್ಪ ಅರಿನೃಪನೊಳ್ ಇಱಿವುದುಱಿವುದು ನಯಮಂ: **ಪಂಚತಂತ್ರ,** ೨೮೧)

**ವಿಘಟನ** – ಒಡೆಯುವಿಕೆ, ವಿನಾಶ (ಇದಱ ಪೆಸರ್ ದೇವದತ್ತಮೆಂಬುದು ನಿನಗೆ ಅಭ್ಯುದಯಕರಂ ಶಂಖಂ ರಿಪುಹೃದಯ ಕವಾಟಪುಟವಿಘಟನಂ ನೋಡರಿಗಾ: **ಪಂಪಭಾ,** ೬. ४)

**ವಿಘಟಿಸು** – ಬೇರೆಯಾಗು (ಆ ಮಹಾತ್ಮನ ಆತ್ಮೀಯಸಾಂಸಾರಿಕ ಮನೋರಥಂಗಲೊಡನೆ ರಥಾಂಗಂಗಳ್ ವಿಘಟಿಸೆಯುಂ; **ಚಂದ್ರಪ್ರಪು,** ೨. ४೬ ವ); ಒಡೆದುಹೋಗು (ಜಟಮಟಿಸಿಕೊಂಡು ನಿಮ್ಮೀ ಘಟಿಯಿಸುವ ಈ ಸಂಧಿ ಕೌರವರ್ಕಳೊಳ್ ಎನ್ನಿಂ ಘಟಿತ ಜರಾಸಂಧ ಉರಸ್ತಟ ಸಂಧಿವೊಲ್ ಒಂದೆ ಪೊಟ್ಟಿಱೊಳ್ ವಿಘಟಿಸದೇ: **ಪಂಪಭಾ,** ೯. ೨३);

**ವಿಘೂರ್ಣನ** – ತೊಳಲಾಟ (ಮುಳಿಸು ವಿಘೂರ್ಣನಂ ತಿಳಿವುದಂಬು .. .. ಅಕ್ಷಿಕಾಂತಿ ಮೀಂಬೊಳಪೆನೆ ಮೇರೆದಪ್ಪಿದ ರತಾಮೃತವಾರ್ಧಿಯನೀಸಿ ಮೂಡುತುಂ ಮುಱುಗುತುಂ ಇರ್ಪರ್: **ಶಾಂತಿಪು,** ೬. ೧೨೦)

**ವಿಘ್ನ** – ಅಡ್ಡಿ, ತೊಂದರೆ (ವಿಘ್ನಂ ತಾಂ ಪ್ರತ್ಯೂಹಂ: **ಅಭಿಧಾವ,** ೨. ೧. ೨೧)

**ವಿಚಕಿಲ** – ಮಲ್ಲಿಗೆ (ಸದಮಳ ಮುಕ್ತಾವಳಿಯಿಂ ಪೊದೆಯಿಸಿದನೊ ಚೈತ್ರನೆನೆ ತದೀಯಲತಾವಾಸದ ವಿಚಕಿಲಕುಟ್ಮಲ ವಿಸರದ ಪದಪು ಅದಂ ದೇವಿ ನಾಡೆ ನೋಡುತ್ತಿರ್ದಳ್: **ಶಾಂತೀಶ್ವಪು,** ೫. ೧೨೫); ಅರಳಿದ (ಭಗಣವಿಚಕಿಲಸುಮದಿಂದ ಇರದರ್ಚಿಸಿ ಬೆಳಗುವ ಬಂಧುರದೀಪದ ತೆಱದೆ ಹಿಮಕರಂ ಬಲವರ್ಪಂ: **ರಾಜಶೇವಿ,** ೧. ೧೦೯)

**ವಿಚಕಿಳ** – ಮಲ್ಲಿಗೆ (ಮಾಕರಂದಾರ್ದ್ರ ಧಾರಾತನು ಬಂಧೂಕ ಇಂದ್ರಗೋಪಂ ವಿಚಕಿಳಕುಳ ಮೇಘೋಪಳಾಸಾರಸಾರಂ: **ನೇಮಿನಾಪು,** ೮. ೧೨೦)

**ವಿಚಕ್ಷಣ** – ಕುಶಲ, ಪರಿಣತ (ಸಕ್ಷಮ ದಕ್ಷಶಿಕ್ಷಣವಿಚಕ್ಷಣ .. .. ರಕ್ಷಿಪುದು ಅಧೋಕ್ಷಜಕ್ಷ ಶಿವಾಕ್ಷಿಸಂಭವಾ: **ರಾಜಶೇವಿ,** ೧. ೧೦)

**ವಿಚಯನ** – ಹುಡುಕುವುದು (ಆ ವಜ್ರಮಾಳಿ ಮಣಿಮುದ್ರಾವಿಚಯನ ಚಳಿತ ನಯನಾಕರ ಕಳಾಕೋವಿದಂ: **ನೇಮಿನಾಪು,** ४. ೮೫)

**ವಿಚಾರಿಸು** – ಆಲೋಚಿಸು (ಅಱಿಯದೆಯುಂ ವಿಚಾರಿಸದೆಯುಂ ನೃಪ ನೀಂ ನೆಗೞ್ವನ್ನನಲ್ಲಯ್ ಆನಱಿವೆಂ ಅದಂತೆ ಕರ್ಣನ ಎಣೆಗಂ ತೊಣೆಗಂ ನೃಪರಾರುಮಿಲ್ಲ: **ಪಂಪಭಾ,** ೧೨. ೧೦೦); ಪ್ರಶ್ನಿಸು

**ವಿಚಿಂತಾಂತರ** – ಚಿಂತೆಯಿಲ್ಲದಿರುವಿಕೆ ಮನೋಜ್ಞ ಪ್ರತತಿಕುಳದೊಳ್ ಆದ ಒಂದವಸ್ಥಾವಿಚಿತಾಂತರದೊಳ್ ಕೈಕೊಂಡು ಪರ್ಯಷ್ಟಿಯಂ .. .. ತಪದೊಳೆಸಗಿದಂ: ಸುಕುಮಾಚ, ४. ೧೭)

**ವಿಚಿಕಿತ್ಸನ** – ಸಂಶಯ (ಭೋಗಾಕಾಂಕ್ಷೆಯೊಳ್ ವಿಮುಖತೆಯುಂ ಮುನಿಜನತನುಮಳ ವಿಚಿಕಿತ್ಸನವರ್ಜನಮುಂ ತ್ರಿಮೂಢತಾ ನಿರಸನಮುಂ: **ಆದಿಪು,** ೫. ೫೭)

**ವಿಚಿಕಿತ್ಸೆ** – ಚರ್ಚೆ (ಭಯಮುಖಿಲಕಾಂಕ್ಷೆ ವಿಚಿಕಿತ್ಸೆ ಅನ್ಯದೃಷ್ಟಿಪ್ರಶಂಸೆ ಸಂಸ್ತವನಂ ಎಂಬೀ ಕ್ರಿಯೆ ಸಮ್ಯಗ್ದಷ್ಟಿಗೆ ನೋಡೆ ಯಥಾಕ್ರಮದಿಂ ವ್ಯತಿಕ್ರಮಂ ತಾನಕ್ಕುಂ: **ಸುಕುಮಾಚ,** ೬. ४೫)

**ವಿಚಿತಿ** – ಪದ್ಯವನ್ನೋದುವಾಗಿನ ಯತಿ, ಉಸಿರ್ದಾಣ (ವಿಚಿತಿಯೊಳ್ ನೀಂ ಅಗ್ನಿಮೀಳೇ ಪುರೋಹಿತಂ ಎಂದು ಓದಿದುದಿಲ್ಲ ಶಿಕ್ಷೆಯೆಡೆಯೊಳ್ ಕೈಕೊಂಡಿರಿಲ್ಲೊಂದುಮಂ: **ಸುಕುಮಾಚ,** ೨. ३೬)

**ವಿಚಿತ್ರ** – ಬಣ್ಣ ಬಣ್ಣದ (ನಿರ್ಭರರತೋದೀರ್ಣಾರ್ಣವಂ ಘೂರ್ಣಿಸಲ್ ಮಸಗಿತ್ತಂದು ವಿಚಿತ್ರಚಿತ್ರಿತ ಸುಧಾಶ್ರೀರಮ್ಯಹರ್ಮ್ಯಂಗಳೊಳ್: **ಶಾಂತಿಪು,** ೮. ೧೦೨);

ಅಚ್ಚರಿ ಹುಟ್ಟಿಸುವ ಗೊರವ ನಿನ್ನಯ ಶೌರ್ಯಮದಿರ್ಕೆ ಖಡ್ಗಮೀ ಧನುಶರಮೆತ್ತ ನಿನ್ನ ತಪಮೆತ್ತ ವಿಚಿತ್ರಮಿದಲ್ತೆ ಧಾತ್ರಿಯೊಳ್: **ಶಬಶಂವಿ,** ೪. ೩೦); ಸುಂದರವಾದ ಲಳಿತವಿಚಿತ್ರ ಪತ್ರಫಲಪುಷ್ಪಯುತಾಟವಿ ಸೊರ್ಕಿದಾನೆಯಂ ಬೆಳೆವುದು: **ಪಂಪಭಾ,** ೧. ೫೪)

**ವಿಚಿತ್ರಾಂಗಿ** – ಸುಂದರಿ (ಸರೋಜಾತಾದಿ ನಿಸ್ಸಾರವಸ್ತುಗಳೊಳ್ ಪೋಲಿಸುವಂತುಟೇಮ್ಮರುಳನೇ ರೂಪಂ ವಿಚಿತ್ರಾಂಗಿಯಾ: **ಆದಿಪು,** ೬. ೮೫)

**ವಿಚ್ಛಾಯತೆ** – ಕಾಂತಿಹೀನತೆ (ಜೀವಂ ತನುವಿಂ ತಳರಲೊಡಂ ವಿಚ್ಛಾಯತೆಗೊಳಗಾದುವು ತೊಳಗುವವರ ಸೌಂದರತನುಗಳ್: **ಆದಿಪು,** ೫. ೨೭)

**ವಿಚ್ಛಯಮಾಗು** – ಕಾಂತಿಹೀನವಾಗು, ಶಕ್ತಿಹೀನವಾಗು (ಮೈ ಶೀತೋಷ್ಣಾದಿ ಬಾಧೆಯಿಂ ವಿಚ್ಛಾಯಮಾದುದಱಿಂದೋಲಗಂ ಪೊಱಮಡವೇಡೆನೆ: **ಚಾವುಂಪು,** ಪು. ೪೦೩. ಸಾ. ೨೭)

**ವಿಚ್ಛಳಾಕಾರ** – ಕಾಂತಿಯುಕ್ತವಾದ ರೂಪ (ಬಂದು ಸ್ವಚ್ಛ ವಿಚ್ಛಳಾಕಾರಮಪ್ಪ ಮಡುವಂ ಪೊಕ್ಕು ಮನೋಹಾರಿಗಳಪ್ಪ ಕರಿಣೀಗಣದೊಡನೆ ಕ್ರೀಡಿಸುವುದುಂ: **ವಡ್ಡಾರಾ,** ಪು ೩೬, ಸಾ ೨೧)

**ವಿಚ್ಛಿತ್ತಿ** – ವಿನಾಶ (ಮಂಗಳಕಾರಣಪ್ರಭೆಯೊಳ್ ಅಂತರ್ಧ್ವಾಂತ ವಿಚ್ಛಿತ್ತಿಗಂಗುತ್ಸುಕನೆಂ .. .. ಬೆಳಗುವೆಂ ಬೋಧಾಮಳ ಜ್ಯೋತಿಯಂ: **ನೇಮಿನಾಪು,** ೧. ೧೧)

**ವಿಚ್ಛಿದುರ** – ಒಡೆದುಹೊದ (ಅಂತು ವಿದುರಂ ವಿಚ್ಛಿದುರ ಮನನಾಗಿ ಬಿಲ್ಲನುಡಿವುದುಂ: **ಪಂಪಭಾ,** ೯. ೫೯ ವ)

**ವಿಚ್ಛಿನ್ನ** – ವಿಭಿನ್ನತೆ (ನಿನಗಂ ಎನಗಂ ಏತಱೊಳಂ ವಿಕಲ್ಪಮುಂ ವಿಚ್ಛಿನ್ನಮುಂ ಇಲ್ಲೆಂದು ನುಡಿಯುತ್ತಿರ್ಪನ್ನೆಗಂ: **ಪಂಪಭಾ,** ೪. ೪೫ ವ); ಹರಿದು ಹೋದ (ಇಂತು ನಿರುತ್ತರನಾಗಿ ಪ್ರತಿವಾದೀಂದ್ರಂ ವನಪ್ರವಿಷ್ಟಕರೀಂದ್ರ ವಿಚ್ಛಿನ್ನಮದಸಲಿಲ ಪ್ರವಾಹನಾಗಿರ್ದೊಡಂಬಟ್ಟು ಕುಡಿಸೆ: **ಶಾಂತಿಪು,** ೮. ೧೪೯ ವ)

**ವಿಜಯ** – ಗೆಲವು (ಜೈನಶಾಸನದೇವಿಕುಳಮುಂ ಸಮಂತು ಸಮಸಂದಿಷ್ಟಾರ್ಥಮಂ ಮಾೞ್ಕೆ ಕಾಂತವ್ಯಲೋಕಸ್ತುತ ನಿನ್ನೊಳಿಂದು ವಿಜಯಂ ಭದ್ರಂ ಶುಭಂ ಮಂಗಳಂ: **ಪುಷ್ಪದಂಪು,** ೬. ೬೪); ಅರ್ಜುನನ ಒಂದು ಹೆಸರು (ಶ್ರೀಶೈಲಾದ್ರಿಪ್ರಸಿದ್ಧಂ ಸುರುಚಿರ ವಿಜಯಸ್ತುತ್ಯಂ ಉದ್ರಿಕ್ತಸತ್ವಾವೇಶಂ .. .. ಶ್ರೀಶೈವಶ್ರೇಯಮಂ ಮಾಳ್ಕೆಮಗೆ ಅನವರತಂ ನಂದಿಕೇಶಂಮಹೇಶಂ: **ರಾಜಶೇವಿ,** ೧. ೧)

**ವಿಜಯಚ್ಛಂದ** – ಐನೂರನಾಲ್ಕು ಎಳೆಗಳ ರತ್ನಹಾರ (ಸಾಸಿರದೆಂಟು ತೋರಮುತ್ತಿನ ಸರದಿಂದ್ರಚ್ಛಂದಂ ಮೊದಲಾಗೆ ವಿಜಯಚ್ಛಂದಹಾರ .. .. ಎಂಬ ಪನ್ನೊಂದು ನಾನಾರತ್ನದ ಸುವರ್ಣಪದಕವಿರಚನಾದಿ ಭೆದದಿಂ: **ಆದಿಪು,** ೮. ೫೪ ವ)

**ವಿಜಯಪತಾಕೆ** – ಗೆಲುವಿನ ಬಾವುಟ (ವಿಜಯಪತಾಕೆಯದಕ್ಕುಂ ಧ್ವಜ ಕೇತನ ಕೇತು ವೈಜಯಂತೀ ನಾಮಂ: **ಅಭಿಧಾವ,** ೧. ೧೪. ೬)

**ವಿಜಯಪ್ರಶಸ್ತಿ** – ಗೆಲವಿನ ಪತ್ರಿಕೆ (ಆ ವೃಷಭಾದ್ರಿಯ ಮೇಖಳಾಭಿತ್ತಿಯೊಳ್ ಆತ್ಮೀಯ ವಿಶ್ವವಿಶ್ವಂಭರಾ ವಿಜಯಪ್ರಶಸ್ತಿಯಂ ಅೞ್ತಿಯೊಳ್ ಬರೆಯಿಸುವೆವೆಂದು ಪೋಗಿ: **ಆದಿಪು,** ೧೩. ೭೦ ವ)

**ವಿಜಯಪ್ರಸ್ಥಾನ** – ದಿಗ್ವಿಜಯಯಾತ್ರೆ (ವ್ಯೋಮಭಾಗಮಂ ಎಯ್ದಿರ್ದುದು ಚಕ್ರವರ್ತಿ ವಿಜಯಪ್ರಸ್ಥಾನ ಭೇರೀರವಂ; **ಆದಿಪು,** ೧೧. ೧೦)

**ವಿಜಯವೈಜಯಂತಿ** – ವಿಜಯಪತಾಕೆ (ಸಮುಲ್ಲಸದಶೋಕ ಪಲ್ಲವಂಗಳನನೇಕ ವಿಜಯವೈಜಯಂತಿಗಳೆಂದೇ ಮಾಡಿಸಿಕೊಂಡೆತ್ತಿಯುಂ: **ಆದಿಪು,** ೮. ೪೧ ವ)

**ವಿಜಯಾನಕ** – ಜಯಭೇರಿ (ಸಕಲ ಜಗಜ್ಜನಂ ಮಕರಕೇತು ಗೆಲೆ ಮದನನೃಪನ ನಾಟಕವಿಜಯಾನಕರವದಂತೆಸೆಗುಂ ಕ್ಷೀಬಕೀರ ಮತ್ತಾಳಿ ಪರಭೃತಪ್ರಭವರಂ: **ಅಜಿತಪು,** ೬. ೧೦)

**ವಿಜಯಾರ್ಧ** – [ಜೈನ] ಪೂರ್ವಪಶ್ಚಿಮಾಗಿ ಹಬ್ಬಿರುವ ಒಂದು ಪರ್ವತ (ಇದು ವಿಜಯಾರ್ಧಂ ಎನ್ನ ಪೆಸರುಂ ವಿಜಯಾರ್ಧಂ ಅಲಂಘ್ಯಮೆಂದುಮಿಂತಿದು ಪೆಱರ್ಗಾನುಮಿನ್ನೆಗಂ ಅಲಂಘ್ಯನೆಂ: **ಆದಿಪು,** ೧೩. ೧೫)

**ವಿಜಿಗೀಷು** – ಜಯಾಪೇಕ್ಷಿ (ಈ ಬನಮಪ್ಪೊಡೆ ಮನೋಜರಾಜಂ ಎಱೆವಟ್ಟು ಈ ಬನಮಂ ಅಂಜದೆ ಪೊಕ್ಕು ವಿಜುಗೀಷುವೃತ್ತಿಯಂ ಏಕಾಂಗದೊಳ್ ಮೆಱೆದು: **ಮಲ್ಲಿನಾಪು,** ೧೪. ೧೫ ವ)

**ವಿಜಿಗೀಷುತ್ವ** – ಗೆಲ್ಲುವ ಬಯಕೆ (ವಿಜಿಗೀಷುತ್ವದೊಳ್ ಒಂದಿ ಗೋವುಳಿಗನಪ್ಪಂ ಮತ್ಸ್ಯನಾಳಾಗಿ ವಾರಿಜನಾಭಂ ಹರಿಯೆಂಬ ದೊಡ್ಡಿವೆಸರಂ ಪೊತ್ತಿರ್ದ ನೀಂ ಮಂತ್ರಿಯಾಗೆ .. .. ರಣದೊಳ್ ಭೂಭಾಗಮಂ ನೆಟ್ಟನೆ ಒಟ್ಟಜೆಯಿಂದ ಅಂಜಿಸಿ ಕೊಳ್ಳದಿರ್ಪರೆ: **ಪಂಪಭಾ** ಪರಿಷತ್ತು, ೯. ೪೭)

**ವಿಜೃಂಭಣ** –ಉದ್ಧಟತನ (ನೋತೆನಾಂ ನೋನೆನೆ ನೋಡೆ ಕಂಸನ ವಿಜೃಂಭಣಮುಂಜಯಿಸಲ್ ಸಮರ್ಥನಂ ಭೂನುತನಂ ಯಶೋವೊದಿತನಂ ಸುತನಂ ಪಡೆವೊಂದು ನೋಪಂಪಿಯಂ: **ಜಗನ್ನಾವಿ,** ೨. ೬೮); ಅರಚಾಟ, ಆರ್ಭಟ (ರಾಸಭವಿಜೃಂಭಣಕ್ಕೇನೋಸರಿಪುದೆ ಪೋಗಿ ತಾಟಿ ಪಣ್ಗಳನೊಲವಿಂ ಲೇಸಪ್ಪುವನಾಸ್ವಾದಿಸಿ ಗೋಸಮಿತಿಯಲಗಲಿ ಮೆಲ್ಲನಾಡಿಸಿ ಬರ್ಪಂ: **ಜಗನ್ನಾವಿ,** ೪. ೪೦) ಆಕಳಿಕೆ (ಪಲ್ಯೋಪಮತ್ರಯ ಆಯುಷ್ಯಾವಸಾನದೊಳ್ ಓಷಧಿಗಳಂತೆ ಫಳಾಪಾಕಾಂತದೊಳ್ ಕ್ಷುತ ವಿಜೃಂಭಣ ವ್ಯಾಜದಿಂ ಲೋಕಾಂತರಿತರಾಗಿ: **ಆದಿಪು,** ೫. ೬೯ ವ)

**ವಿಜೃಂಭಿತ** – ಉಬ್ಬರ (ಜಳಧಿಗಂಬುವಿಜೃಂಭಿತಮಂ ಕ್ಷುಧಾನಳಂ ಮಿಳಿರ್ವ ಚಕೋರಕೋಟಿಗಳ ಪಾರಣೆಗೆ ಓಗರಂ ಆಗುತುಂ: **ಶಾಂತೀಶ್ವಪು,** ೧೫. ೧೦೫); ಆಟ, ಕಾರ್ಯ (ಮನೋವಿಜೃಂಭಿತಂಗಳಂ ಮನದೊಳ್ ಭಾವಿಸುತ್ತುಂ ವಿಸ್ಮಯಾಕ್ಷಿಪ್ತಚಿತ್ತಂ ಇಂತೆಂದಂ: **ಕಾದಂಸಂ,** ೪. ೧೨೪ ವ)

**ವಿಜೃಂಭಿಸು** – ಆಕಳಿಸು (ಬೊಕ್ಕಣದ ಬೂದಿಯನುಃಪೆನಲೂದಿ ಮೂಗಿನೊಳ್ ಪೊಕ್ಕೊಡೆ ಸೀಂತು ಮಾಣ್ದಿರದೆ ಪಾಯ್ದು ವಿಜೃಂಭೀಸಿ ಕೊಂಬನೇಱೆಪುರ್ದಿಕ್ಕಿ ಕುಮಾರತಾಪಸರಂ ಏಡಿಸುತಿರ್ದುದದೊಂದು ಕೋಡಗಂ: **ಸೂಕ್ತಿಸುಧಾ,** ೩. ೧೯೪); ಶೋಭಿಸು (ಅಪಾಂಗಮಾಳಿಕೆ ವಿಜೃಂಭಿಸಿ ನಿಲ್ವಿನೆಗಂ .. .. ಒತ್ತೆಗೆ ನಿಂದೆಳವೆಂಡಿರೊಪ್ಪಿದರ್: **ಜಗನ್ನಾವಿ,** ೧೬. ೧೧೧); ಅರಳು (ಮಿಸುಪ ಅಳಿಮಾಲೆಯಿಂ ಕುಸುಮಮಂಜರಿ ರಂಜಿಸುವಂತಿರಲ್ ವಿಜೃಂಭೀಸಿದುದು ಯವ್ವನೋದಯವಿಲಾಸಂ ಅನುಕ್ರಮದಿಂ ಮದಂಗದೊಳ್: **ಕಾದಂಬ,** ೫. ೧೦); ಸಡಗರಿಸು (ಇತ್ತ ವಸಂತಂ ಇತ್ತ ಮಲಯಾನಿಲಂ ಅತ್ತ ಮಧುವ್ರತಾಳಿ ಮತ್ತಿತ್ತ ಮದೋತ್ಕ

ಕೋಕಿಲಕದಂಬಕವೆಯ್ದೆ ವಿಜೃಂಭಿಸಿತ್ತು: **ಕಾದಂಬ,** ೫. ೧೩೮)

**ವಿಜ್ಞಾಪನ –** ಬಿನ್ನಹ (ಏಳ್ತಂದಂ ಪ್ರತೀಹಾರಂ ಅಂದು ಒಲವಿಂದ ಉರ್ವಿಪನೋಲಗಕ್ಕೆ ಪಿರಿದುಂ ವಿಜ್ಞಾಪನೋತ್ಕಂಠೆಯಿಂ: **ತ್ರಿಷಷ್ಟಿಪು,** ೨೪. ೨೩೩)

**ವಿಟ –** ಕಾಮುಕ (ವಿಟಜನಕ್ಕೆ ತೊಡರ್ವ ಚಾರಿಯೆನಿಪ ಸೂಳೆಗೇರಿಯಿಂ ವಿದಗ್ಧಹೃದಯಹಾರಿಯಿಂ: **ಪಂಪಭಾ,** ೧. ೫೮); ಕಾವ್ಯನಾಯಕನಿಗೆ ಆಪ್ತನಾದ ಒಬ್ಬ (ತನ್ನಂ ಕಾಣಲೊಡಂ ಅಜಿದು ನುಡಿಯಿಸಿ ಮೆಚ್ಚಿ ಮೇಳದ ನಾಗರಿಕ ವಿಟ ವಿದೂಷಕ ಪೀಠಮರ್ದಕರ್ ಕಳ್ವೆರಸು ಕಾಮದೇವನೋಲಗಕ್ಕೆ ಬರ್ಪಂತೆ ಸೂಳೆಗೇರಿಯೊಳಗನೆ ಬರ್ಪುದುಂ: **ಪಂಪಭಾ,** ೪. ೭೯ ವ)

**ವಿಟಂಕ –** ತುದಿ (ದಿಗ್ಧಾರ್ಣವಕ್ಷೀರಸಾರದಿಂದಂ ಮಿಸಿಸೆ ಭವಧವಜ್ವಾಳನಂ ಬಾಳನಂ ಕೂಟ ವಿಟಂಕಸ್ಥಾನದೊಳ್: **ಅಜಿತಪು,** ೪. ೫೪); ಗೂಡು, ನೆಲೆ (ಧವಳಾಗಾರ ತರತ್ತರಂಗಬಹುಳಂ ಮತ್ತದ್ವಿಪಗ್ರಾಹಕೋಟಿ ವಿಟಂಕಂ .. .. ಸಾಕೇತಮೇಂ ಸಾಲ್ವುದೋ: **ಅನಂತಪು,** ೧. ೮೮)

**ವಿಟತತ್ವ –** ಸೂಳೆಗಾರಿಕೆ, ಹಾದರ (ಆ ಪರಾರ್ಥ್ಯಾರ್ಥೇಂದು ಲಲಾಟೆಯರ್ ಆ ಪೂರ್ಣಲಲಾಟನಂ ತಮ್ಮ ಲಲಾಟತಟರಂಜನೆಯಿಂ ವಿಟತತ್ವಾಭಿಮುಖಂ ಮಾಡಿ ರಂಜಿಸಿಯುಂ; **ಸುಕುಮಾಚ,** ೧೦. ೧೦೧ ವ)

**ವಿಟಪ –** ಮರದ ಕೊಂಬೆ (ಕುಸುಮಂ ಸ್ಮಿತಂ ಅಳಿ ನಯನಂ ಕಿಸಲಯಂ ಅಧರಂ ಭುಜದ್ವಯಂ ವಿಟಪಂ ಮತ್ತಸುವಲ್ಲಭೆ ಲತೆ: **ಕವಿರಾಮಾ,** ೩. ೧೪)

**ವಿಟಪಿ –** ಮರ (ಅತಿಪ್ರೇಮದೆ ನಡಪಿದ ವಿಟಪಿಸ್ತೋಮದಿಂ ಆಶ್ರಮಪದಂ ಮನಂಗೊಳಿಸಿರ್ಕುಂ: **ಕಾದಂಬ,** ೧. ೮೮)

**ವಿಟಪಿಪ್ರರೋಹ –** ಮರಕ್ಕೆ ಸುತ್ತಿದ ಬಳ್ಳಿ [ಮಹಾಹಂಕಾರ ಕಾಳಕೂಟ ವಿಟಪಿಪ್ರರೋಹಶಂಕಾವಹ ನಾಭಿಕೂಪಾವಲಂಬಿ ಕೂರ್ಚಕಳಾಪಂ: **ಆದಿಪು,** ೧೩. ೪೫ ವ)

**ವಿಟವೃತ್ತ –** ಕಾಮುಕತನ (ಕಲ್ವುದಲ್ತೆ ವಿಟರಿಂ ವಿಟವೃತ್ತಮಂ ಎಮ್ಮೊಳಲ್ಲಿಗಾಮೊವಜರೆಮೆಂಬವೋಲ್ ಮೊರೆವ ಮೆಲ್ಲೆಸೆಯುತ್ತಿರೆ ಸೂಟಿಸೂಟಿದೇಂ ಸವಿದುವೊ ಬಣ್ಣವಣ್ಣಿಗೆಯ ಪೂಗಳ ಸೌರಭಮಂ ಮದಾಳಿಗಳ್: **ಆದಿಪು,** ೧೧. ೧೨೬)

**ವಿಟೀಜನ –** ಗಣಿಕೆಯರು (ಮಲುಹಣನುಂ ಆ ಶರೀರಂ ಬೆರಸು .. .. ವೃಂದನ ವಿಟೀಜನಂ ಕೊಂಡು ಪಾಱೆ ಪಾಱೆದರೆಂಬರ್: **ಸಮಯಪ,** ೯. ೧೯)

**ವಿಡಂಬ –** ತೋರಿಕೆ (ಸಿತದೂರ್ವಾಂಕುರ ಮಾತುಲುಂಗ ನಳಿನೀ ಭೃಂಗಾರ ಗೋರೋಚನಾ ಅಕ್ಷತ ದಧ್ಯಾಧಿ ವಿಡಂಬಮಂಗಳದೊಳೇಂ ಸಂಸಾರಮಂ ದಾಂಟುವ ಊರ್ಜಿತಪುಣ್ಯಂಗೆ: **ಆದಿಪು,** ೧೬. ೧೦); ತೊಂದರೆ (ಪಂಚವಿಧಸಮಿತಿಯುಕ್ತಂ ಪಂಚಭವಂಗಳವಿಡಂಬಮಂ ಸ್ತಂಭಿಸಿದಂ: **ಆಚವರ್ಧ,** ೧೫. ೨೯)

**ವಿಡಂಬಡಂಬರ –** ಕೋಲಾಹಲ (ಬೀರವರ್ತಿನಿಕರಂಗಳ ಬಾಟ್ಮೊದಲಾದ ಚಾಗದೋಲಗದ ವಿಡಂಬಡಂಬರಕೆ ಕಣ್ಣೆಲೆಯಾದ ವಿಲಾಸಮೊಪ್ಪೆ: ೨. ೨೮)

**ವಿಡಂಬನ –** ಪರಿಹಾಸ್ಯ (ಭೂಪತಿಗಳ ಭೂಷಣಮೆನಿಸುಗುಂ ಇತರರ್ಗೆ ಆ ವಿಷಯತತಿ ವಿಡಂಬನಮಲ್ತೇ: **ಕಾದಂಬ,** ೨. ೩೧)

**ವಿಡಂಬನಂಗೆಯ್ –** ಮೂದಲಿಸು (ಲಕ್ಷ್ಮಿಯಂ ವಿಡಂಬನಂಗೆಯ್ದು ಅನಿತಱೊಳಂ ಮಾಣದೆ: **ಗದಾಯು,** ೯. ೧೨ ವ)

**ವಿಡಂಬಿಸು –** ಅನುಕರಿಸು (ಶೋಕಾನಲದಗ್ಧಮಪ್ಪ ಮಹಾಶ್ವೇತಾ ಹೃದಯಮಂ ವಿಡಂಬಿಸುವಂತೆಯುಂ ಮುನಿಕುಮಾರವಧ ಮಹಾಪಾತಕಮಂ ತಾಳ್ದಿದಂತೆಯುಂ ಆಗಿ: **ಕಾದಂಬ,** ೬. ೮ ವ); ಪರಿಹಾಸ್ಯಮಾಡು (ನಾಣ್ಗಿಡುವಿನಂ ಈ ತೆಱದಿಂದಂ ಎನ್ನಂ ಬಿಡಂಬಿಸಲ್ಕೊಡರಿಕುಮೇ: **ಕಾದಂಸಂ,** ೫. ೩೬); ಮೋಸಗೊಳಿಸು (ಬೆಸನಂಗಳ್ ತನುವಿಚ್ಚೆಗೊಯ್ವುವು ಅದಱಿಂ ಲಕ್ಷ್ಮೀವಿಡಂಬಂ ವಿಡಂಬಿಸದಂತಾಗಿರೆ ಮಾನ್ಯರೆಲ್ಲ ತೆಱದಿಂದ ಪೊಕ್ಕು ನಿನ್ನಂ ಚಟೂರಿಸದಂತಾಗಿರೆ ಕಾಮಿನೀಸಂತತಿ ವಿಲಾಸಾಪಾಂಗದಿಂದಂ ಪ್ರತಾರಿಸದಂತಾಗಿರಲ್ ಆತ್ಮವಂತನೆನಿಸು ಎಂದುಂ ರಾಜವಿದ್ಯಾಧರಾ: **ಕಾದಂಬ,** ೩. ೧೦೪)

**ವಿಡಾಯ –** ಠೀವಿ (ಮುದ್ದುಮೊಗದೊಳ್ ಮಂದಸ್ಮಿತಂ ನೋಡದಂತಿರೆ ನೋಳ್ಪೊಂದು ವಿಡಾಯಂ .. .. ನಿಜಾಂಗದೊಳ್ ಮೆಱೆಯೆ ಕಣ್ಗೆಂಬಾದರ್ ಅಬ್ಜಾಸ್ಯೆಯರ್: **ರಾಜಶೇವಿ,** ೧೧. ೮೨)

**ವಿತಂದ್ರತ್ವ –** ಎಚ್ಚರ, ಜಾಗರೂಕತೆ (ಪರಿರುಂದ್ರಂ ಭೂತಿಸಾಂದ್ರಂ ಕುಡುಗೆಮಗೆ ವಿತಂದ್ರತ್ವಮಂ ಶ್ರೀವೃಷೇಂದ್ರಂ: **ರಾಜಶೇವಿ,** ೧. ೯)

**ವಿತತ –** ವಿಸ್ತಾರ (ಸ್ವಸ್ತಿಲೋಕಸ್ತೋಮ ಭ್ರಾಜಿಷ್ಣುವೆಮ್ಮಂ ಪೊರೆಗೆ ವಿತತಭಾಸ್ವತ್ ಪ್ರಕಾಶಂ ಗಿರೀಶಂ: **ಶಬರಶಂ,** ೧. ೧); ವೀಣೆ (ವಿತತಾದಿವಾದ್ಯನಿಪುಣಂ ಇಂತಿದು ಚಿತ್ರಕಥಾಭಿರೂಪಂ ಈ ಶುಕಂ: **ಕಾದಂಸಂ,** ೧. ೧೮)

**ವಿತತ್ವ –** ತತ್ವವಿರೋಧಿಯಾದುದು, ಕೆಟ್ಟ ತತ್ವ (ತತ್ವವಿತತ್ವಸಂಸೇವ್ಯ ನಿಕುರುಂಬಾಶಯಕರ್ದಮಂ ಆತ್ಮವಚನ ಬೋಧೋದಾರಕ್ಷಾಳಿತಂ ಆಗೆ: **ಶಾಂತಿಪು,** ೧೨. ೩ ವ)

**ವಿತಥ –** ನಿಜವಲ್ಲದ (ಆರಯ್ಯಲ್ ಜೀವಹಿಂಸಾವಿರತಿವಿತಥವಾಕ್ಯಂ .. .. ಬಹ್ವಾರಂಭಕಾಂಕ್ಷೆಯೆಂದಿಂತಿವು ಜಿನಗದಿತಾಣುಬ್ರತಂಗಳ್: **ಸುಕುಮಾಚ,** ೬. ೯)

**ವಿತಥಾಭಿಧಾಯಿ –** ಅಯಥಾರ್ಥವಾದಿಗಳು [ಮಹಾಮತಿ ಸಂಭಿನ್ನಮತಿ ಶತಮತಿಗಳ್ ಲೋಕಾಯತಿಕ ಯೋಗಾಚಾರ ಮಾಧ್ಯಮಿಕಮತ ವಿತಥಾಭಿಧಾಯಿಗಳ್ ಜೀವಾಭಾವಮನೆ ಪಿಡಿಯಚ್ಚುವಿಡಿದು: **ಆದಿಪು,** ೨. ೭ ವ)

**ವಿತರಣ –** ದಾನ (ಸುಜನಸುಭಾಷಿತ ಆಕರ್ಣನದೊಳಂ ಅಪರಿಮಿತ ವಿತರಣ ವಿಲಾಸದೊಳಂ .. .. ನಿರಂತರೋತ್ಸವಮ ಒದವಿಸುತ್ತಿರೆ: **ಮಲ್ಲಿನಾಪು,** ೩. ೨೩ ವ); ಔದಾರ್ಯ (ಶ್ರೀಯಂ ವಿತರಣದೊಳ್ ವಾಕ್‌ಶ್ರೀಯಂ ರಾಜನ್ಯವೃತ್ತಿಯೊಳ್ ವಿಮಲ ಯಶಶ್ರೀಯಂ ಜಿನಪ್ರವಚನಶ್ರೇಯದೊಳ್ ಅತಿಶಯಿಸಿ ನೆಗಟ್ದಿಂ ಅಭಿನವಪಂಪಂ: **ಪಂಪರಾ,** ೨. ೧)

**ವಿತರಣಪ್ರಥಿತ –** ದಾನ ಕೊಡುವುದಕ್ಕೆ ಹೆಸರಾದವನು (ಅತನುಗುಣೋನ್ನತಂ .. .. ವಿತರಣಪ್ರಥಿತಂ .. .. ಎಂದದೇಂ ಸ್ತುತಿಯಿಸಿದತ್ತೊ ಸಂತಸದೆ ಪೌರಜನಂ ಪ್ರಭುವಂಶಮೇರುವಂ: **ಪುಷ್ಪದಂಪು,** ೩. ೧೩೨)

**ವಿತರ್ಕ –** ಸಂಶಯ (ಬಗೆದು ಮಾರ್ಗದ್ವಿತಯಗತಿಗಳಂ ಪ್ರಗುಣಗುಣಗಣೋದಯರ್ಕಳ್ ವಿತರ್ಕದಿಂ

ಸೊಗಯಿಸುವಂತು ವಚನರಚನೆಯಿಂ ನೆಗಟ್ದಿರೆ ಪೇೞ್ಗೆ ರಸವಿಶೇಷದೊಳ್: **ಕವಿರಾಮಾ,** ೨. ೯೮); ಊಹೆ (ಷಟ್ತರ್ಕವಿತರ್ಕಭೇತ್ತೃತೆ .. .. ಏಂ ಚೋದ್ಯಮೆ ವರ್ಧಮಾನಮುನಿಯೊಳ್ ವಿದ್ಯಾತ್ರಯಾಧೀಶನೊಳ್: **ಚಂದ್ರಪ್ರಪು,** ೧. ೩೧)

**ವಿತರ್ದಿ** – ವೇದಿಕೆ (ವಿತರ್ದಿ ಮೌಕ್ತಿಕಲಸತ್ ಕಲಶಂ ಪರಿಶೋಭೆವೆತ್ತು ಬಜ್ಜರದ ಕವಾಟಮೊಂದೆ ಕರಮೊಪ್ಪಿದುದು: **ಶಬರಶಂ,** ೧. ೭೦)

**ವಿತರ್ದಿಕೆ** – ವೇದಿಕೆ, ಪೀಠ (ಋತುಮತಿ ದೇವಿ ರನ್ನದ ವಿತರ್ದಿಕೆಯೊಳ್ ನೆಲಸಿರ್ದು ಮಾಧವೀಲತೆಯ ಬೆಡಂಗುವೆತ್ತ ಸೆಳೆಯಂ ಪಿಡಿದು: **ಪಂಪರಾ,** ೩. ೭೦)

**ವಿತಸ್ತಿ** – ಗೇಣು (ಮಲ್ಲಿಕಾಮುಕುಳಾಕಾರ ವಿತಸ್ತಿಮಾತ್ರ ಅಸಿಧೇನುಕೋಶಮುಂ: **ಆದಿಪು,** ೧೩. ೪೫ ವ)

**ವಿತಾನ** – ಸಮೂಹ (ಆ ಸತಿಗೆ ಪುಟ್ಟೆ ಹರ್ಷವಿಲಾಸಂ ಮಧುಬಿಂಬಮಾಳೆ ನೀಲೋತ್ಪಲದಿಂ ಸೂಸುವವೋಲ್ ನಗೆಗಣ್ಣಿಂ ಸೂಸಿದುವು ಆನಂದಬಾಷ್ಪಬಿಂದುವಿತಾನಂ: **ಮಲ್ಲಿನಾಪು,** ೪. ೨೨); ಮೇಲ್ಕಟ್ಟು (ಪನ್ನಗಪತಿಯ ಫಣಾರತ್ನದೀಪಂ ವಿತಾನಾವಳಿಯೊಳ್ ದಿವ್ಯಂ ವಿತಾನಂ ತುಱುಗಿದವು: **ಆದಿಪು,** ೧೬. ೨)

**ವಿತ್ತ** – ಹಣ, ಸಂಪತ್ತು (ಅಜ್ಞಾನಿಯ ಪಡೆದಾ ವಿತ್ತಂ ಅಪಾತ್ರದಾನದಲ್ಲಿಗೆ ಯೋಗ್ಯಂ: **ಸಮಯಪ,** ೬. ೮೦)

**ವಿತೃಷ್ಣ** – ಆಶಾರಹಿತ (ಅಂತು ಪರಿತ್ಯಕ್ತ ಸಕಳಸಾಮ್ರಾಜ್ಯನುಂ ದೃಷ್ಟಾನುಭೂತಶ್ರಾವಕವಿಷಯತೃಷ್ಣನುಮಾಗಿ: **ಆದಿಪು,** ೩. ೭೮ ವ)

**ವಿತ್ತಪ** – ಐಶ್ವರ್ಯಾಧಿಪತಿ, ಕುಬೇರ (ಪಿರಿದೆಸೆದಿರ್ಪ ತತ್ಪುರದೊಳ್ ಊರ್ಜಿತ ವಿತ್ತಪನಂತೆ ವಸ್ತುವಿಂ .. .. ಅಮರನೀತಿ .. .. ಒಪ್ಪುವಂ: **ತ್ರಿಷಷ್ಟಿಪು,** ೯. ೫)

**ವಿತ್ತೇಶ** – ವಿತ್ತಪ, ಕುಬೇರ (ಧವಳಕಮಳದಿಂ ಪದ್ಮಜಂ ಹೇಮಪದ್ಮೋತ್ಕರದಿಂ ವಿತ್ತೇಶಂ ಉದ್ಯತ್ ಕನಕಕುಸುಮದಿಂ ಮಾರುತಂ .. .. ಅರ್ಚಿಸೆ ನಿಜಪದಮಂ ಭರ್ಗನೊಪ್ಪಿರ್ದನಾಗಳ್: **ರಾಜಶೇವಿ,** ೧೪. ೧೬೫)

**ವಿತ್ರಸ್ತ** – ಹೆದರಿದ (ವಿತ್ರಸ್ತಕರ್ಮರಿಪು ಜಗತ್ತ್ರಯದೀಪಕನ ಕಾಣ್ಕೆಗೊಳಗಾದುದು ಲೋಕತ್ರಯಮದನುಕ್ರಮದೊಳ್ ವೇತ್ರಾಸನಝಲ್ಲರೀಮೃದಂಗಸಮಾನಂ: **ಆದಿಪು,** ೧. ೪೭)

**ವಿತ್ರಸ್ತಾರಿ** – [ವಿತ್ರಸ್ತ+ಅರಿ=ಷಡ್ವರ್ಗ] ಶತ್ರುವನ್ನು ಹೆದರಿಸಿದವನು, ಜಿನೇಶ್ವರ (ವಿತ್ರಸ್ತಾರಿ ಜಿನೇಶ್ವರಂ ಪರಮದೈವಂ: **ಅನಂತಪು,** ೧. ೭)

**ವಿತ್ರಾಸನ** – ಬೆದರಿಸುವ (ಘನಮಾರ್ಗವ್ಯಾಪಿ ಚೈತ್ರಧ್ವಜ ವಿಜಯಗಜಾರೂಢಂ ಉಗ್ರಾರಿ ವಿತ್ರಾಸನ ಸಂಗ್ರಾಮಾನಕೌಘನಿಬಧಿರಿತದಿಕ್ಚಕ್ರಂ: **ಆದಿಪು,** ೧೪. ೯೮)

**ವಿದಗ್ಧ** – ಸುಡಲ್ಪಟ್ಟ (ವಿಟಜನಕ್ಕೆ ತೊಡರ್ವ ಚಾರಿಯೆನಿಪ ಸೂಳೆಗೇರಿಯಿಂ ವಿದಗ್ಧಹೃದಯಹಾರಿಯಿಂ: **ಪಂಪಭಾ,** ೧. ೫೮); ಪಂಡಿತ, ಪರಿಣತ (ವಿದಗ್ಧ ವಾದಕ ವಿದ್ಯಾಪರೀಕ್ಷೆಯೊಳಂ ರಸಾಭಿನಯ ಸುಭಗ ನರ್ತನ ಕೀರ್ತನ ನಿರೀಕ್ಷಣದೊಳಂ .. .. ನಿರಂತರೋತ್ಸವಮಂ ಒದವಿಸುತ್ತಿರೆ: **ಮಲ್ಲಿನಾಪು,** ೩. ೨೩ ವ)

**ವಿದಗ್ಧವೃತ್ತಿ** – ಜಾಣತನ (ಒದವಿದ ದಾಕ್ಷಿಣ್ಯಕ್ಕಂ ವಿದಗ್ಧವೃತ್ತಿಗಂ .. .. ಮೊದಲಾದ ಸಕಲಗುಣಾಸ್ಪದರಂ ಜಗದೊಳಗೆ ಪಡೆವುದು ಅಸದಳಮಲ್ತೇ: **ಕಾದಂಬ,** ೬. ೬೮); ಪ್ರೌಢಿಮೆ (ವಿಭುವೆಂದಂ ಅಂದು ಮತ್ತನುಜೆಯರ ಉದ್ಧ ನರ್ತನದ ಗೀತದೊಳಾದ ವಿದಗ್ಧವೃತ್ತಿಯಿಂ: **ಕರ್ಣನೇಮಿ,** ೩. ೧೭೪)

**ವಿದಗ್ಧೆ** – ಜಾಣೆ (ಕತ್ತುರಿಯಂ ತೊಡೆದೆರ್ ವಿದಗ್ಧೆಯರ್ ಕೆಳದಿಯರ್ ಒರ್ಮೆಯುಮ್ಮಳಿಸಲೆಂದು ಕುಮಾರಿಯ ಗರ್ಭಚಿಹ್ನಮಂ: **ನೇಮಿನಾಪು,** ೪. ೯೪); ತಾಪಕ್ಕೊಳಗಾದವಳು (ಮುಗ್ಧೆ ಭವದ್ವಿರಹದೊಳೆ ವಿದಗ್ಧೆಯೆ ತಾನಾದಳ್: **ರಾಜಶೇವಿ,** ೧೧. ೧೦೨)

**ವಿದಳ** – ಬೇಳೆಕಾಳು (ವಿದಳಂ ಪರ್ಪ್ಪಾಖ್ಯಂ: **ಅಭಿಧಾವ,** ೧. ೧೬. ೨೧)

**ವಿದಲಿತ** – ಅರಳಿದ (ವಿದಲಿತನಲಿನೀಸುಖದಂ ನದನಿಕಟಂ ವಿವಿಧವರ್ಣಮಣಿಗಣಶೋಭಾಸದನಂ: **ಮಲ್ಲಿನಾಪು,** ೨. ೧೦)

**ವಿದಳಿತ** – ಅರಳಿದ (ವಿದಳಿತ ಕಮಳಕೋಶ ಪರಿಮಳ ಮಜ್ಜನಾಮೋದಿತ ಮುಗ್ಧವಮಯೂಖಾಗ್ರನಪ್ಪ ದಿವಸಕರಂ: **ಲೀಲಾವತಿ,** ೪. ೬೬ ವ)

**ವಿದಾರಕ** – ಸೀಳುವವನು (ಭೂರಿಕಳಾವಿಬೋಧಿತ ಸುಧಾಕರರ್ ಐರ್ಜಿತಸಾಧುಸಂಗನಿಸ್ತಾರಕರ್ ಅಂಗಜಾತವಿದಾರಕರ್: **ಸುಕುಮಾಚ,** ೧. ೨೨)

**ವಿದಾರಣ** – ಕೊಲ್ಲುವಿಕೆ (ಮದವತ್ ಕರಿಗಳ ಬಿದುವಂ ವಿದಾರಂಗೆಯ್ದು ಕೊಲ್ವ ಕಂಠೀರವಕಂ: **ಗದಾಯು,** ೩. ೪೮)

**ವಿದಾರಿತ** – ಸೀಳಲ್ಪಟ್ಟ (ಸಂಗ್ರಾಮಭೂಮಿಯ ನಡುವೆ ಧೃಷ್ಟದ್ಯುಮ್ನ ಕಚಗ್ರಹವಿಲುಳಿತಮೌಳಿಯುಂ ತದೀಯ ಕೌಕ್ಷೇಯಕಧಾರಾವಿದಾರಿತಶರೀರನುಂ ಆಗಿ ಬಿಟ್ಟಿರ್ದ ಶರಾಚಾರ್ಯರಂ ಕಂಡು: **ಪಂಪಭಾ,** ೧೩. ೫೫ ವ)

**ವಿದಾರಿಸು** – ಸೀಳು (ಕ್ಷಮಾಂಗನಾಲಿಂಗಿತನಪ್ಪ ಮಹಾಮುನಿಯಂ ಮಲರ್ಚಿ ಪಟ್ಟರಿಸಿಯುರಃಸ್ಥಲಮಂ ನಾಭಿವರೆಗಂ ವಿದಾರಿಸಿ ಪಂದೊವಲ್ ಪೊರೆತಾಪಿನೆಗಂ .. .. ಕಾಯ್ದು ಕರ್ಬೊನ್ನ ಕೀಲ್ಗಳಂ .. .. ಇಱಿದೊಡೆ: **ವಡ್ಡಾರಾ,** ಪು ೫೧ ಸಾ ೨೯)

**ವಿದಾಹ** – ವಿಶೇಷ ತಾಪ (ನಿನ್ನತುಳ ನಾಮಜಪಕ್ರಿಯೆಯಲ್ಲಿ ನಿಟ್ಟೆವಟ್ಟನತಿಶಯಾಂಗಿ ಸಾಧಿಸಿದಪಳ್ ನಿಜದೇಹವಿದಾಹ ಮುಕ್ತಿಯಂ: **ಚಂದ್ರಪ್ರಪು,** ೮. ೮೩)

**ವಿದಿತ** – ತಿಳಿದಿರುವ, ಪ್ರಸಿದ್ಧವಾದ (ಅದಱೊಳಗಂ ಕಿಸುವೊಙಲ್ ಆ ವಿದಿತ ಮಹಾ ಕೊಪಣನಗರದಾ ಪುಲಿಗೆಱೆಯಾ ಅದಭಿಸುತ್ತಮಪ್ಪ ಒಂಕುಂದದ ನಡುವಣ ನಾಡೆ ನಡೆ ಕನ್ನಡದ ತಿರುಳ್: **ಕವಿರಾಮಾ,** ೧. ೩೭)

**ವಿದೀರ್ಣಹೃದಯೆ** – ಭಗ್ನಹೃದಯೆ, ದುಃಖಿತೆ (ನೀಂ ಉಜ್ಜಯಿನಿಗೆ ಎಯ್ದಿದರೆಂಬುದಂ .. .. ಅಱಿದು ವಿದೀರ್ಣಹೃದಯೆಯಾಗಿ .. .. ವಂದಿರ್ದೆಂ: **ಕಾದಂಸಂ,** ೭. ೧೦)

**ವಿದು** – ಆನೆಯ ಕುಂಭಸ್ಥಳದ ಮಧ್ಯಭಾಗ (ನಿರ್ಯಾಣೋನ್ನತ ಅವಗ್ರಾಹ ವಿಭಕ್ತ ವಿದುವಿಧಾನಶರೀರನುಂ .. .. ವಿಜಯಪರ್ವತಗಜೇಂದ್ರಂ ಬಂದು: **ಆದಿಪು,** ೧೨. ೫೬ ವ)

**ವಿದೇಹ** – ದೇಹತ್ಯಾಗ ಮಾಡಿದವನು (ಉತ್ತಮತಪಂಗಳಿಂದತ್ಯುತ್ತಮದೇಹರ್ ವಿದೇಹರಪ್ಪುದಱಿಂ ಮೆಯ್ವೆತ್ತನ್ವರ್ಥತೆಯಂ ತಾಳಿದಿತ್ತು ವಿದೇಹಂ ವಿದೇಹಮೆಂಬೀ ಪೆಸರಂ: **ಆದಿಪು,** ೧. ೫೩); [ಜೈನ] ಜಂಬೂದ್ವೀಪದ ಏಳು ವಿಭಾಗಗಳಲ್ಲಿ ಒಂದು (ಕುರುಧರೆಗಳ್ ಪಿರಿದುಂ

ಮಂದರಾಗಮಂ ಪೊರ್ದಿ ಮತ್ತೆ ಗಜದಂತ ಯುಗಾಂತರಿತಂಗಳಾದುವೆನೆ ಪೇೞ್ ದೊರೆಯೆ ವಿದೇಹಕ್ಕೆ ಸೌಖ್ಯಸೌಸ್ಥ್ಯೋನ್ನತಿಯಿಂ: ಚಂದ್ರಪ್ರಮು, **ಚಂದ್ರಪ್ರಮು,** ೧. ೭೮)

**ವಿದ್ದ** – ಏಟು (ಸಂಚಳತ್ ತಾರಹಾರಮ ತಳದೊತ್ತುವೊಂದು ನೆವದಿಂದ ಅನಂಗಾಸ್ತ್ರವಿದ್ಧಮಂ ಪಡೆದು: **ಆದಿಪು,** ೧೧. ೨೦); ತೂತು ಮಾಡಿದ (ಮುದ್ರಸಹಜಾತವಿದ್ಧಚ್ಚಿದ್ರಾನ್ವಿತ ಕರ್ಣಯುಗಳಪಾಳಿಗಳೊಳ್ ಸಂವಿದ್ರುತರಜಂಗೆ ಹರಿವಿಲಸದ್ರುಚಿ ಮದ್ವಜ್ರಕುಂಡಳಂಗಳನಿಟ್ಟಂ: **ಶಾಂತಿಪು,** ೧೦. ೫೯); ಪ್ರತಿಕೃತಿ (ಇನಿಯನ ರೂಪ ವಿದ್ದಮಂ ಅದಂ ಬರೆದೀಕ್ಷಿಪ ಕಾಂಕ್ಷೆವೆತ್ತು ಭೋಂಕೆನೆ ಬಳಪಕ್ಕೆ ನೀಡೆ ಕರಪಂಕರುಹಂ: **ಶಾಂತೀಶ್ವಪು,** ೫. ೧೧೮)

**ವಿದ್ದಿ** – ವೃದ್ಧಿ, ಏಳಿಗೆ (ಪದಮಟೆ ಕೊಳ್ವ ವಿದ್ದಿ ಮಱೆದುಂ ತಲೆದೋಱವು ವಿಶ್ವಧಾತ್ರಿ ತಪ್ಪದ ಮಹಾಮರಕತಮನ್ಯತ ಬಯಂ ಪಸಮೆಂಬ ಮಾತು: **ವರ್ಧಮಾಪು,** ೬. ೫೭)

**ವಿದ್ದಂಬರೆ** – ಅಕೃತಿಯನ್ನು ರಚಿಸು (ಭರತಮನೋದುವ ಸಪ್ತಸ್ವರಮಂ ಗುಣಿಯಿಸುವ ಬೀಣೆವಾಜಿಪ ವಿದ್ಧಂಬರೆವ ಪರಚಕ್ರಮಿಕ್ಕುವ ಪರಿಹಾಸದೊಳಿರ್ಪ ಬಿನದಮವರ್ಗಳ ಬಿನದಂ: **ಅಜಿತಪು,** ೩. ೮)

**ವಿದ್ಧ** – ಚಿತ್ರ, ಆಕೃತಿ (ಅನಂಗಾಸ್ತ್ರವಿದ್ಧಮಂ ಪಡೆದು ಗೂಡುವಾಯ್ದೆರ್ದೆಯನೊತ್ತಿ ನಿಷ್ಕಂಪಕ್ಷ್ಮಮಾಂತು ತರಳಾಕ್ಷಿ ವಿಸ್ಮಯದೆ ಚಕ್ರಿಯಂ ನೋಡಿದಳ್: **ಆದಿಪು,** ೧೧. ೨೦); ಸಮಾನ (ರುಗ್ಮಿಣಿಯನೊಡಂಬಡಿಸಿ ದಿವ್ಯವಿದ್ಧಮಾಗೆ ಕೆಯ್ಗೆಯಿಸಿ ಬನದೊಳಗಣ ಅಶೋಕವೃಕ್ಷದ ಮೊದಲೊಳ್ ಸ್ಫಟಿಕದ ಜಗಲಿಯ ಮೇಲಿರಿಸಿ: **ಹರಿವಂಶ,** ೭. ೭೧ ವ)

**ವಿದ್ಧಪದ್ಧತಿ** – ಚಿತ್ರ ಬರೆಯುವ ವಿವಿಧ ಪದ್ಧತಿಗಳು (ಶ್ರುತಿವಿದ್ಧಂ ಆತ್ಮವಿದ್ಧಂ ಪರವಿದ್ಧಂ ಎಂಬ ವಿದ್ಧಪದ್ಧತಿಯುಮಂ .. .. ಪರಿಭಾವಿಸಿ ನೋಡಿ: **ಮಲ್ಲಿನಾಪು,** ೫. ೩೬ ವ)

**ವಿದ್ಯಾಖ್ಯಾನ** – ವಿದ್ಯೆಯನ್ನು ಹೇಳಿಕೊಡು (ಅಭಿಮತ ವಿದ್ಯಾಖ್ಯಾನಂ ಗೆಯ್ಯುತ್ತುಮ ಉಪಾಧ್ಯಾಯಪದದೊಳ್ ನಿಂದು: **ಚಾವುಂಪು,** ಪು. ೪೫೪. ಸಾ. ೨೫)

**ವಿದ್ಯಾತ್ರಯಾಧೀಶ** – [ಜೈನ] ಷಟ್ಖಂಡಾಗಮದ ಮೊದಲ ಮೂರು ಖಂಡಗಳನ್ನು ತಿಳಿದವನು (ಶಾಬ್ದನೇತ್ರೃತೆ .. .. ಏಂ ಚೋದ್ಯಮೆ ವರ್ಧಮಾನಮುನಿಯೊಳ್ ವಿದ್ಯಾತ್ರಯಾಧೀಶನೊಳ್: **ಚಂದ್ರಪ್ರಮು,** ೧. ೩೧)

**ವಿದ್ಯಾತ್ರಿತಯ** – ವಿದ್ಯಾತ್ರಯಾಧೀಶ (ಬೋಧನಿಧಿ ಸಕಲಚಂದ್ರತಪೋಧನರ್ ಅಧಿಗತ ವಿನೂತ ವಿದ್ಯಾತ್ರಿತಯರ್: **ಅನಂತಪು,** ೧. ೨೯)

**ವಿದ್ಯಾದಯಿತ** – ವಿದ್ಯೆಯ ಒಡೆಯ (ನಯದಿಂದಮೀ ಸರೋರುಹನಯನೆಯಂ ಅಳವಡಿಸಲಾರ್ತೆನಿಲ್ಲ ಅಳವಡಿಪೆಂ ಭಯದಿಂದಮೆಂದು ವಿದ್ಯಾದಯಿತಂ ಪಡೆದಂ ವಿಕುರ್ವಣಾವೈಭವಮಂ: **ಪಂಪರಾ,** ೯. ೧೮೭)

**ವಿದ್ಯಾಧರ** – ದೇವತೆ (ಸುರ ದನುಜ ಭುಜಗ ವಿದ್ಯಾಧರ ನರ ಸಂಕುಲದೊಳ್ ಆರನಾದೊಡಂ ಏನೋ ಗರಮುಟ್ಟೆ ಕೊಲ್ಲುಂ ಇದು ನಿಜವಿರೋಧಿಯಂ ಧುರದೊಳ್ ಎಂದು ಶಕ್ತಿಯನಿತ್ತಂ: **ಪಂಪಭಾ,** ೧. ೧೦೩); [ಜೈನ] ಭೋಗಭೂಮಿಯಲ್ಲಿನ ಒಂದು ಜನವರ್ಗ (ಚಿಂತಾಗತಿಯೆಂಬ ವಿದ್ಯಾದರಂ ಆಕೆಯ ರೂಪಲಾವಣ್ಯಸೌಭಾಗ್ಯಕಾಂತಿತ್ವಮಂ ಕಂಡಾಟಿಸಿ: **ವಡ್ಡಾರಾ,** ಪು. ೧೫೭, ಸಾ. ೨೭)

**ವಿದ್ಯಾಧರಕರಣ** – ಆಕಾಶಕ್ಕೆ ನೆಗೆಯಲು ಅವಲಂಬಿಸುತ್ತಿದ್ದ ಕರಣ, ಎಂದರೆ ವಿಶೇಷ ರೀತಿಯ ಹಸ್ತಪಾದಚಲನೆ (ಕುರುರಾಜಂ ವಿದ್ಯಾಧರಕರಣದೆ ನೆಗೆದು ಅಂಬರಕ್ಕೆ ಗದೆಯಂ ಕ್ರಮದಿಂ ತಿರುಪೆ ಧರಾಚಕ್ರಂ ಕೋವರಚಕ್ರಂ ತಿರಿವ ತೆಱದೆ ತಿರಿದತ್ತು ಎನಸುಂ: **ಗದಾಯು,** ೮. ೨೪)

**ವಿದ್ಯಾಪ್ರತ್ಯಯ** – ವಿದ್ಯೆಯ ಸಾಮರ್ಥ್ಯ (ಒರ್ವ ನಿರ್ಬುದ್ಧಿ ಗಾರುಡಿಗಂ ಗಾರುಡಮಂ ಕಲ್ತು ವಿದ್ಯಾಪ್ರತ್ಯಯಮಂ ನೋಡಲೆಂದು ಸರ್ಪದಷ್ಟನಂ ಅಱಸುತ್ತುಂ: **ಪಂಚತಂತ್ರ,** ೩೪೯ ವ)

**ವಿದ್ಯಾಮದ** – ತನ್ನ ಜ್ಞಾನದ ಬಗೆಗಿನ ಅಹಂಕಾರ (ವಿದ್ಯಾಮದಮುಳ್ಳಂ ಗೂಗೆಯಾಗಿಯುಂ ತಪೋಮದಮುಳ್ಳಂ ನಯಾಗಿಯುಉಂ .. .. ಪುಟ್ಟಿ: **ಧರ್ಮಾಮೃ,** ೬. ೧೩೨ ವ)

**ವಿದ್ಯಾವಿಡಂಬನ** – ಮಾಯಾವೇಷ (ಮಹಾಭಾಗನ ತೋಲ್‌ತೊಡರಲೊಳಂ ಅವಳ ವಿದ್ಯಾವಿಡಂಬನಂ ಬಿಟ್ಟು ಪಾಱೆ ಪೋದತ್ತಾಗಳ್: **ಲೀಲಾವತಿ,** ೧೪. ೯೪)

**ವಿದ್ಯುತ್** – ಮಿಂಚು (ಜಲಬುದ್ಬುದ ಚಲ ವಿದ್ಯುತ್ ವಿಲಸನ ಬಳರಿಪುಶರಾಸನಂಗಳ್ ನಿರುತಂ ಬಲ ವಿಭವ ರೂಪ ಯೌವನ ವಿಲಾಸವಿಲಯಕ್ಕಿವಲ್ತೆ ದೃಷ್ಟಾಂತಂಗಳ್: **ಅಜಿತಪು,** ೨. ೧೦೮)

**ವಿದ್ಯುತ್‌ಪ್ರಭ** – [ಜೈನ] ಒಂದು ವಿಮಾನದ ಹೆಸರು (ಧೀವರನುಂ ವಿದ್ಯುತ್‌ಪಭವಿಮಾನದೊಳ್ ಶ್ರುತಪ್ರಭಾಕರನೆಂಬ ದೇವನಾದಂ: **ನೇಮಿನಾಪು,** ೪. ೮ ವ)

**ವಿದ್ಯುದ್ವಳಯ** – ಮಿಂಚಿನ ವರ್ತುಲ (ರೋದೋಂತಂ ಕೂಡೆ ರತ್ನೋಜ್ಜ್ವಳ ಗಿರಿಕುಳದಿಂ ತೂಂತನಿಟ್ಟಂತೆ ನೀಲಾಂಭೋದಂಗಳ್ ಕೂಡೆ ವಿದ್ಯುದ್ವಳಯಮಂ ಒಳಕೊಂಡಂತೆ ಚೆಲ್ವಾಯ್ತು ಚಕ್ರಿದ್ವಿಪಘಟೆ: **ಆದಿಪು,** ೧೪. ೯೭)

**ವಿದ್ಯುಲ್ಲತೆ** – [ವಿದ್ಯುತ್+ಲತೆ] ಮಿಂಚಿನ ಬಳ್ಳಿ (ಜವನಿಕೆಯ ಮಱೆಯೊಳ್ ಪೋಲ್ತಳವಳ್ ಮುಗಿಲ ಮಱೆಯ ವಿದ್ಯುಲ್ಲತೆಯಂ: **ಆದಿಪು,** ೯. ೨೦)

**ವಿದ್ಯುಲ್ಲೇಖೆ** – [ವಿದ್ಯುತ್+ಲೇಖೆ] ಮಿಂಚಿನ ಗೆರೆ (ವನಚರಿ ಬರೆ ವಿದ್ಯುಲ್ಲೇಖೆ ಬರ್ಪಂತೆ: **ಅಜಿತಪು,** ೯. ೩೨)

**ವಿದ್ಯೆಯುರ್ಕು** – ವಿದ್ಯೆಯ ಗರ್ವ [ಕಡುಗಲಿತನಮುಂ ಚಾಗದ ಪಡೆಮಾತುಂ ವಿದ್ಯೆಯುರ್ಕುಂ ಒರ್ವನೊಳೆಂತುಂ ನಡೆಯವು: **ಆದಿಪು,** ೧೨. ೧೦೪)

**ವಿದ್ಯೋತ** – ಹೊತ್ತಿ ಉರಿಯುವ, ಪ್ರಕಾಶ (ಶಸ್ತ್ರಜಾಳಾಂಶು ವಿದ್ಯುತ್ತುಳವಿದ್ಯೋತಂಗಳಿಂದಂ .. .. ದಿಟಮುಭಯಬಲಂ ಕಂಡುದೊಂದೊಂದನಾಗಳ್: **ಆದಿಪು,** ೧೪. ೯೬); ದೀಪ್ತಿ ; ಶೋಭೆ ತನ್ನ ನಾಲ್ವರ್ ತಮ್ಮಂದಿರೊಡನೆ ಮಂಗಳವಸದನಂಗೊಂಡು ಮಂಗಳಪ್ರಧಾನೋಚಿತ ವಿಜಯಗಜಮನೇಱೆ ವಿದ್ಯೋತಮಾಗಿ ದಕ್ಷಿಣಾವರ್ತಮಪ್ಪ ಹೋಮಾಗ್ನಿಯಂ ಬಲಂಗೊಂಡು: **ಪಂಪಭಾ,** ೯. ೯೫ ವ); ಪ್ರಖ್ಯಾತಿ (ಇವು ಕಾಳಿಂಗಾಭಿಧೇಯಪ್ರವಿತಂ ಇವು ಕಾಂಭೋಜ ಬಾಹ್ಲೀಕ ದೇಶೋದ್ಭವಮಶ್ವಂ ರಾಶಿಯಾಗಿರ್ದಪುವು ನಿಜನಾಮಾಂಕವಿದ್ಯೋತಮಾಗಲ್ಕಿವು ನಾನಾ ಶಾಸನಂ ಸತ್ಕೃತಿವನಿತೆಗೌಚಿತ್ಯಮೆಂದಿತ್ತಂ ಅತ್ಯುತ್ಸವದಿಂ ವಿದ್ವತ್ಸಭಾಮಂಡಲಿ ತಣಿವಿನೆಗಂ ಭೋಜರಾಜಕ್ಷಿತೀಶಂ: **ಕಾದಂಬ,** ೧೯. ೯೬)

**ವಿದ್ರಾವಣ** – ಓಡಿಸುವವನು, ನಾಶಪಡಿಸುವವನು (ಆ ವಲ್ಲಭನಂ ಪಡೆದ ಮಹೀವಲ್ಲಭೆ ನೋಂತಳೆನಿಸಿದ ಅರಿನೃಪಮದ ವಿದ್ರಾವಣವಿಜಯಭುಜಂ ವಸುಧಾವಿಶ್ರುತ ನೃಪಗುಣಾಶ್ರಯಂ ವೈಶ್ರವಣಂ: **ಮಲ್ಲಿನಾಪು,** ೩. ೨)

**ವಿದ್ರುತ** – ಚೆದುರಿದ (ವಿದ್ರುತಪಶುಪದಹತಿ ಪತಿತಾದ್ರಿ ಪ್ರಭಗೋಮಯೋಚ್ಚಯಂ ಸಮವೃಷೋಪದ್ರವದರಿದ್ರ ಬಾಲವಟ ದ್ರುಮಮೆಸೆದಿರ್ದುದದಱ ಬಾಹಿರದೇಶಂ: **ಲೀಲಾವತಿ,** ೫. ೯೭)

**ವಿದ್ರುಮ** – ಹವಳ (ವಿದ್ರುಮಾರಕ್ತದಂತಚ್ಛದಂ ಉತ್ತುಂಗೋಚಿತ ಉರಸ್ಥಳಂಅನುಪ ಬಾಹುದ್ವಯಂ .. .. ಕುಮಾರಂ: **ಸುಕುಮಾಚ,** ೧೦. ೬೪)

**ವಿದ್ರುಮದ್ಯುತಿ** – ಹವಳದ ಕಾಂತಿ (ಪಡುಗಡಲ ವಿದ್ರುಮದ್ಯುತಿಯಡರ್ದುದೊ ಮಾಣಿಕದ ತೇಜಮೊದವಿಪ ತೆಱದಿಂ ಪಡುವಣ .. .. ಸಂಜೆಗೆಂಪು ರಂಜಿಸುತಿರ್ಕುಂ: **ತ್ರಿಷಷ್ಟಿಪು,** ೨೪. ೧೧೧)

**ವಿದ್ರುಮಲತಾ[ತೆ]** – ಹವಳದ ಬಳ್ಳಿ (ರಾಜಭಾಸ್ಕರಶಿಖಿನೇತ್ರ ವಿದ್ರುಮಲತಾಭ ಜಟಾಧರ .. .. ಶರಣಾಗು: **ಶಬರಶಂ,** ೫. ೨೯)

**ವಿದ್ವದಾಸ್ಥಾಯಿಕೆ** – ವಿದ್ವಾಂಸರ ಸಭೆ (ಕಪಟವಟು ಪಟುಮನೋಗವ್ವರ್ತಂ ನುಗ್ಗಿ ನುಚುನೂಱಾದುದು ಭೂಮಿಪ ವಜ್ರಾಯುಧ ವಾಗ್ವಜ್ರಪಾತದಿಂ ನೆರೆದವಿದ್ವದಾಸ್ಥಾಯಿಕೆಯೊಳ್: **ಶಾಂತಿಪು,** ೮. ೧೪೮)

**ವಿದ್ವಿಟ್** – ಶತ್ರು (ರಿಪುಕುಮುದಂ ಕಿಡೆ ವಿದ್ವಿಟ್ ತಮಂ ಪಿಂಗೆ ರಥಾಂಗಂ ಲೀಲೆಯೊಳ್ ಕೂಡಿರೆ: **ಜಗನ್ನಾವಿ,** ೧೬. ೧೪೦)

**ವಿದ್ವಿಡ್ಭಯ** – [ವಿದ್ವಿಟ್+ಭಯ] ಶತ್ರುಭಯ (ಇರದೂರೂರ ಪೊಲಂಗಳೊಳ್ ಸುಟಿವರಂ ಸೀಟ್ದಿಕ್ಕುತುಂ ಬಟ್ಟೆವೋಪರಂ ಎಬ್ಬಟ್ಟಿ ಕೊಲುತ್ತುಂ ಆಂತ ಭಟರಂ ತುತ್ತೆತ್ತುತಂತಿರ್ದ ಸಿಂಧುರವಿದ್ವಿಡ್ಭಯದಿಂದ ಸಿಂಧುವಿಷಯಂ ಪಾಟಿಸಾಗೆಯುಂ: **ಶಾಂತೀಶ್ವಪು,** ೩. ೭)

**ವಿದ್ವಿಷ** – ಶತ್ರು (ಅರಿ ತ್ರು ಶಾತ್ರವಂ ವೈರಿ ರಿಪು ಅಪತ್ನಂ ವಿರೋಧಿ ದಸ್ಯು ವಿಪಕ್ಷಂ ಪರಂ ಅಹಿತಂ ಅನ್ಯಂ ಅಸುಹೃದಂ ಅರಾತಿ ಪರಿಪಂಥಿ ವಿದವಿಷಂ ವಿದ್ವಿಷ್ಟಂ: **ಅಭಿಧಾವ,** ೨. ೧. ೧೦)

**ವಿದ್ವಿಷ್ಟ** – ದ್ವೇಷವುಳ್ಳ, ಶತ್ರು (ಸಮದಾರಾತಿ ಮರಾಳನೀರದರವಂ ಸಂಕ್ರುದ್ಧ ವೈವಸ್ವತೋಪಮ ವಿದ್ವಿಷ್ಟಫಣೀಂದ್ರಚಂದ್ರಕಿರವಂ: **ಆದಿಪು,** ೧೧. ೧೦)

**ವಿದ್ವೇಷಕ** – ವೈರ (ವಿದ್ವೇಷಕಮೊರ್ಮೆಯ್ಯಾಗೆ ಮತ್ತಂ ಹರಿಗೆ ಮುನಿದು ಬರ್ಪಂತೆ ಬಂದಿತ್ತಿಭೇಂದ್ರಂ: **ನೇಮಿನಾಪು,** ೮. ೮೨)

**ವಿಧವತೆ** – ವೈಧವ್ಯ (ರತಿವನಿತೆಗೆ ವಿಧವತೆಯಂ ಶ್ರುತದೇವಿಗೆ ಚತುರವೃತ್ತಿಯಂ ಮಾಟ್ಟಿ ತಪಶ್ರುತಮೆರಡು ನಿರುಪಮಂ ಆ ಕ್ಷಿತಿಯೊಳ್ ಶ್ರುತಕೀರ್ತಿದೇವಭಟ್ಟಾರಕರಾ: **ಚಂದ್ರಪ್ರಪು,** ೧. ೩೫)

**ವಿಧಾತ್ರ** – ಬ್ರಹ್ಮ (ನೆಗೆದ ಪಯೋಧರದೊಳ್ .. .. ಆಕೆಯ ಗರ್ಭದ ರಾಜಪುತ್ರಂ ಅರೋಗಿಸುವ ಪಾಲ್ಗಳಂ ಮಡಗಿ ಮುದ್ರಿಸಿದಂತೆ ವಿಧಾತ್ರಂ: **ನೇಮಿನಾಪು,** ೨. ೨೪)

**ವಿಧಾತೃಯೋಗ** – ಬ್ರಹ್ಮ ಸಂಘಟನೆ, ದೈವಯೋಗ (ವಿಧಾತೃಯೋಗದಿಂ ಕಣ್ಕುರುಡಾದೊಡೇನೊ ಕುರುಡಾಗವೇಟ್ಟುದೆ ನಿಮ್ಮ ಬುದ್ಧಿಯುಂ: **ಪಂಪಭಾ,** ೨. ೯೧)

**ವಿಧಾತೃವಶ** – ಅದೃಷ್ಟ (ಭಂಡಣದೊಳಿಟಿದು ಪೆಂಡಿರ್ಭಂಡಾರಂ ಪೋದಡದು ವಿಧಾತೃವಶಂ: **ಅನಂತಪು,** ೧೧. ೭೦)

**ವಿಧಿ** – ವೇದ, ಶಾಸ್ತ್ರಕರ್ಮ (ವಿಧಿ ವೇದಂ ವಿಧಿ ವಿಧಾನಮಕ್ಕುಂ ಪೆಸರಿಂ: **ಅಭಿಧಾವ,** ೩. ೧. ೧೪); ಕ್ರಮ (ಉಪಚಿತ ವಿಧಿದಾತೃದ್ರವ್ಯಪಾತ್ರ ಫಲಭೇದದಿಂದಮಯ್ದು ತೆಱಂ ಭಾವಿಪೊಡೆ ಅನ್ನದಾನಮದಱೊಳ್ ಪ್ರಪಂಚಿಪೊಡೆ ವಿಧಿಯದೊಂದೆ ನವವಿಧಮಕ್ಕುಂ: **ಚಂದ್ರಪ್ರಪು,** ೩. ೨೯); ಅದೃಷ್ಟ (ಇದು ವಿಧಿ ವಿಷ್ಣುಗಳ ವಾದಮಂ ಮಾಣಿಸಿದಗ್ಗದ ಪರಬೊಮ್ಮಂ: **ರಾಜಶೇವಿ,** ೧೩. ೪೯); ಬ್ರಹ್ಮ (ಇದು ಮುನಿಗಳ ಮನದೊಳಬೆಳಗು ಇದು ವಿಧಿವಿಷ್ಣುಗಳ ವಾದಮಂ ಮಾಣಿಸಿದ ಅಗ್ಗದ ಪರಬೊಮ್ಮಂ: **ರಾಜಶೇವಿ,** ೧೩. ೪೯)

**ವಿಧಿದಾನ** – [ಜೈನ] ಒಂದು ಗರ್ಭಾನ್ವಯ ಕ್ರಿಯೆ, ತನ್ನನ್ನು ಪೂಜಿಸಿದ ದೇವತೆಗಳನ್ನು ಸನ್ಮಾನಿಸುವುದು (ವಿಧಿದಾನ ಸುಖೋದಯ ಇಂದ್ರತ್ಯಾಗಾವತಾರ .. .. ಯೋಗತ್ಯಾಗಾಗ್ರನಿರ್ವೃತಿಯೆಂಬ ಅಯ್ವತ್ತುಮೂಱು ಗರ್ಭಾದಿನಿರ್ವಾಣಪರ್ಯಂತಗಳಪ್ಪ ಗರ್ಭಾನ್ವಯಕ್ರಿಯೆಗಳಂ: **ಆದಿಪು,** ೧೫. ೧೫ ವ)

**ವಿಧಿಪುತ್ರ** – ಬ್ರಹ್ಮನ ಮಗ, ನಾರದ (ಸಿತಗಾತ್ರಂ ವಿಧಿಪುತ್ರಂ ನುತ ಮಹಿಮೋದ್ದಾಮಂ .. .. ನಾರದಂ ಅಭವನೋಲಗಕೆ ತಾಂ ಬಂದಂ: **ತ್ರಿಷಷ್ಟಿಪು,** ೩೨. ೬)

**ವಿಧಿವಾಹನ** – ಹಂಸ (ಆ ವನಂ .. .. ವಿರಹಿಯಂತೆ ವಿಧಿವಾಹನದಂತೆ ವಿಕಳಧ್ವನಿವಿಳಸಿತಮುಂ .. .. ಎನಿಸಿದುದು: **ರಾಜಶೇವಿ,** ೨. ೭೮ ವ)

**ವಿಧು** – ಚಂದ್ರ (ನುಣ್ಗಱೆಯಿಲ್ಲದ ವಿಧುವಿಂ ತಣ್ಗದಿರ್ ಒಗೆದಂತೆ ವಿಮಳಮುಖಮಂಡಳದಿಂ ಕಣ್ಗೊಳಿಸೆ ದಂತಕಾಂತಿ ಪವಣ್ಗಳಿದುಳ್ಕಲೆ ಖಚರವರಂ ಇಂತೆಂದಂ: **ಶಾಂತೀಶ್ವಪು,** ೨. ೫೩); ಬ್ರಹ್ಮ (ವಿಧು ಸುಧಾಸಂಭವನುಂ: **ಅಭಿಧಾವ,** ೩. ೧. ೧೪); ರಾಕ್ಷಸ (ವಿಧು ದನುಜಾರಾತಿ: **ಅಭಿಧಾವ,** ೩. ೧. ೧೪); ಪಚ್ಚಕರ್ಪೂರ (ಅದು ಪರಿಶೋಭಿಸಿತ್ತು ಮಧುವಿಂ ವಿಧುವಿಂ ವಧುವಿಂ .. .. ಶೈವವಿಪ್ರತತಿಯಿಂ ಶ್ರುತಿಯಿಂ ಕ್ರತುವಿಂದೆ ಮಂಟಪಂ: **ರಾಜಶೇವಿ,** ೮. ೬); ವಿಷ್ಣು (ಅನಂತಾಶ್ರಯಂಗೆ ಜಗದ್ವಿಶ್ರುತಮಾಗದೇ ವಿಧುಸಮಾಖ್ಯನಂ: **ರಾಜಶೇವಿ,** ೧೧. ೭೪)

**ವಿಧುಂತುದ** – ಚಂದ್ರಪೀಡಕ, ರಾಹು (ಜರದಜಗರಮಂ ಕರದಿಂ ಕರಿ ಪಿಡಿದಿಡೆ ನಭದೊಳದು ವಿಧುಂತುದನೆಂತು ಅಂತಿರೆ ಪಾಯ್ದುದು: **ಶಬರಶಂ,** ೩. ೩೯)

**ವಿಧುಕರ** – ಚಂದ್ರಕಿರಣ, ಬೆಳುದಿಂಗಳು (ಅಮೃತಾಂಬುಧಿಯುಂ ಮಳಯಜರಸಮುಂ ವಿಧುಕರಮುಂ ತಣ್ಪಾನೀಯಲೇನಾರ್ತಪುವೇ: **ಸಮಯಪ,** ೫. ೩೮)

**ವಿಧುಬಿಂಬ** – ಚಂದ್ರಬಿಂಬ (ಅಲತಗೆಯ ಪಡಲದಂತೆವೊಲಲೆದುದು ಪರಿಪಕ್ವಬಿಂಬಂ ವಿಧುಬಿಂಬಂ: **ಲೀಲಾವತಿ,** ೨. ೭)

**ವಿಧುಮುಖಿ** – ಚಂದ್ರಮುಖಿ (ನೋಡಿದಂ .. .. ಯುಗಭರ ವಿಧುರೆಯಂ ಧರಾಧಿಪತಿ ವಿಧುಮುಖಿಯಂ: **ಕವಿರಾಮಾ,** ೨. ೫೮)

**ವಿಧುರ** – ವಿರಹಿ (ಖೇದಮನೇಕೆ ಮಾಡುಗುಂ ಜನಕಸುತಾವಿಯೋಗ ವಿಧುರಂಗೆ ರಘುಪ್ರವರಂಗೆ ರಾಗಮಂ: **ಪಂಪರಾ,** ೧೦. ೪೧); ಅಗಲಿಕೆ (ವಿಯೋಗ ವಿಧುರಾಖ್ಯಂ: **ಅಭಿಧಾವ,** ೨. ೨. ೧೮)

**ವಿಧುರಗತಿ** – ಚಂಚಲವಾದ ಚಲನೆ (ವಿಧುರಗತಿ ವಿಲೋಢ್ಯಂ ತಳ್ತು ನಿಲ್ತಪ್ಪುದು ಆ ವಾಗಧಿಪ ವಚನಮಾಲಾ ಪಾವನೀಯಂ ಗಭೀರಂ: **ಕವಿರಾಮಾ,** ೨. ೧೫೪)

**ವಿಧುರಿತ** – ಬೇರೆಯಾದ (ಅಧಮಕೃತಿ ವೇಣುವಿದಳನ ವಿಧುರಿತಂ: **ಲೀಲಾವತಿ,** ೧. ೧೬)

**ವಿಧುರೆ** – ದುಃಖಕ್ಕೀಡಾದವಳು (ವಿರಹ ವಿಧುರೆಯಾಗಿಯುಂ ಲಾವಣ್ಯರಸ ತರಂಗಿಣೀ ತರಂಗ ಲೇಖೆಯಂ ಅನುಕರಿಸಿ ತಳಿರ್ತಶೋಕ ತರು ತಳಮನಲಂಕರಿಸಿ: **ಪಂಪರಾ,** ೧೧. ೮೨ ವ)

**ವಿಧೂತ** – ಅಲ್ಲಾಡಿಸಲ್ಪಡುವ (ಅಮರೇಂದ್ರಪುತ್ರನಂ ಕರೆವವೊಲಾದುದು ಪುರದ ವಾತ ವಿಧೂತವಿನೂತಕೇತುಗಳ್: **ಪಂಪಭಾ,** ೪. ೩೪)

**ವಿಧೂಯಮಾನ** – ಬೀಸಲ್ಪಡುತ್ತಿರುವ (ಅಮರಕುಮಾರ ಕರಪಲ್ಲವವಿಧೂಯಮಾನ ಚಾರುಚಾಮರಜನಿತ ಮಂದಮಾರಿತಾಂದೋಳಿತ ಸೂಕ್ಷ್ಮಕ್ಷೌಮಾಂಬರ ಪಲ್ಲವಂ: **ಆದಿಪು,** ೮. ೫೫ ವ)

**ವಿಧೃತ** – ಪಡೆದ (ಅತಿವಿಳಾಸವಿಧೃತದುಕೂಲಂ ಧೃತರತ್ನಾರ್ಘ್ಯಂ ಬಂದಂ ಪತಿಗಿದಿರಂ ಶಂಖನಿಧಿಯೆ ಬರ್ಪಂತಾಗಳ್: **ಆದಿಪು,** ೧೩. ೧೨

**ವಿನತ** – ಬಾಗಿದ (ವಿನತ ನವಗಂಧಶಾಲಿಯ ತೆನೆಗಳನೊಳಕೊಂಡು ಮುಗಿದ ಕುಮುದಂಗಳ್ ನೋಡನುಕರಿಸಿದುವು ತೀವಿದ ತನಿಗಂಪಂ ಪೀರ್ವ ತೆಜಿನನುನ್ನತನಿಳಯಾ: **ಲೀಲಾವತಿ,** ೫. ೪೯) ನಮಸ್ಕರಿಸಿದ (ಅಪರಿಮಿತಭಕ್ತಿಯಿಂ ತನ್ನ ಪದಾಂಭೋಜಕ್ಕೆ ವಿನತನಾಗಲೊಡಂ ಕಾಶ್ಯಪಿ ಸಂತಸದಿಂ ತಟ್ಟೈಸಿ ಪರಸಿದಳ್: **ಸುಕುಮಾಚ,** ೨. ೭೩)

**ವಿನತಾನಂದನ** – ಗರುಡ (ವಿನತಾನಂದನಂ ಎಂದುಂ ಇಂದುಧವಳಶ್ರೀಮತ್ಪಯೋವಾರ್ಧಿಯೊಳ್ ವಿನತಾನಂದನನಂ ಮುಕುಂದನಂ.. ..ಸೇವಿಸುತಿರ್ಪಂ: **ಪಂಚತಂತ್ರ,** ೩೧೪)

**ವಿನತಾಪುತ್ರ** – ವಿನತಾನಂದನ (ವಿನತಾಪುತ್ರನ ವಜ್ರ ತುಂಡ ಹತಿಗಂ ಮೆಯ್ಯಾಂತು ಕಂಡಂಗಳುಳ್ಳಿನಂ ಅಂಗಂಗಳಂ ಒಡ್ಡಿ ಒಡ್ಡಿ ತನುವಂ ಕೊಟ್ಟಂತು: **ಪಂಪಭಾ,** ೪. ೨೬)

**ವಿನಮ್ರ** – ಬಾಗಿದ (ಯುವತಿಘನ ಕಾಂಚೀರತ್ನಂ ಸ್ತನಭರ ವಿನಮ್ರಗಣಿಕಾಸ್ತನತಟಹಾರಂ ಸರಸ್ವತೀಮಣಿಹಾರಂ: **ಆದಿಪು,** ೧. ೬೧); ಪೂಜ್ಯ ಹತವೈರಿಕ್ಷತ್ರಚಕ್ರಂ ಭಯಚಕಿತ ಜಗದ್ವೀರಚಕ್ರಂ ವಿನಮ್ರಕ್ಷಿತಿಚಕ್ರಂ .. .. ಇರ್ದತ್ತೊಳಪುಗದೆ ಪುರೋಪಾಂತದೊಳ್ ಚಕ್ರಿಚಕ್ರಂ: **ಆದಿಪು,** ೧೪. ೩)

**ವಿನಯಂಗೆಯ್** – ವಿನಯವನ್ನು ತೋರಿಸು (ಎನಗೆ ವಿನಯಂಗೆಯ್ಯನೆ ಉಸಿರದಿರ್ದನೆಂದು ಕುಮಾರಂಗೆ ಮುಳಿದು: **ಚಾವುಂಪು,** ಪು. ೪೩೫. ಸಾ. ೩೩)

**ವಿನಯವತ್ತಳೆ** – ಬಿನ್ನವತ್ತಳೆ (ಸುತ್ತಾಱುಂ ಸುತ್ತಿಲ್ಲದೆ ಸುತ್ತಟಿದದಿರ್ದೊಂದು ವಿನಯವತ್ತಳೆಯಂ ವಿಪ್ರೋತ್ತಮಂ .. .. ತನ್ನೊಳನುವಾಚಿಸಿದಂ: **ಸುಕುಮಾಚ,** ೨. ೪೯)

**ವಿನಾಯಕ** – ಗಣೇಶ (ತನಗೆ ವಿನಾಯಕಂ ದಯೆಯಿನಿತ್ತ ಜಯಾಸ್ತ್ರಮಂ ಉರ್ಚಿಕೊಂಡು ಭೋಂಕೆನೆ ಶರಾಸನದೊಳಾಂತು ಅದನಾಗಡೆ ಪೂಡಿ .. .. ಎಚ್ಚೊಡೆ: **ಪಂಪಭಾ,** ೧೨. ೧೬೮)

**ವಿನಿರ್ಜಿತ** – ಗೆಲ್ಲಲ್ಪಟ್ಟ (ಮೀನಯುಗ್ಮದಿಂ ವಿನಿರ್ಜಿತ ಮೀನಕೇತನನುಂ .. .. ಶೀಲರತ್ನರಾಶಿಯುಂ .. .. ರಾಜಕುಂಜರಂ ನಿನಗೆ ತನಯನಾದಪಂ: **ಅಜಿತಪು,** ३. ೧೪ ವ)

**ವಿನಿರ್ದಳಿತ** – ಸೀಳಲ್ಪಟ್ಟ (ನಿಜವಿಜಯಗಜಕರ ಉನ್ಮುಕ್ತಂಗಳಪ್ಪ ಮುಕ್ತಾಮುಕ್ತವಿನಿರ್ದಳಿತ ವೀರಯೋಧ ರುಧಿರವಾರಾಶಿ ಶೀಕರಂಗಳಿಂ: **ಆದಿಪು,** ೧೪. ೧೦೩ ವ)

**ವಿನಿರ್ಧೂತ** – ಶುಭ್ರಗೊಂಡ (ವರುಣಾಶಾಬ್ಧಿಪಯಃಪ್ರವಾಹ ವಿತತಸ್ನಾನಂ ವಿನಿರ್ಧೂತ ಧಾತ್ರೀರಜಃಪ್ರೋತ್ಥಿಹಿತಾಂಗಂ .. .. ಪಳಂಚಿ ಪೊಯ್ದುದು ರಟತ್ ಜಂಝಾಮರುತ್ಕುಂಜರಂ: **ರಾಜಶೇವಿ,** ೮. ೧೦೬)

**ವಿನಿದ್ರ** – ಅರಳಿದ (ವಿನಿದ್ರ ಕುಮುದಾಯತೋಜ್ವಳಂಗಳ್ .. .. ನೆನೆಯಿಪುವು ಸಹಸ್ರನೇತ್ರನಯನೋತ್ಕರಮಂ: **ಕಾದಂಬ,** ೨. ೯)

**ವಿನಿವರ್ತನ** – ವಾಪಸಾಗುವಿಕೆ (ಮುನಿವೃಷಭಂ ಭೂಪನ ಮನದೊಳ್ ಮಾಣದೆ ಪೊದಳ್ದ ವೈರಾಗ್ಯದ ಪೆಂಪನೆ ಪರಿಕಿಸಲೆಮದಾಗ್ರಹ ವಿನಿವರ್ತನಸೂಚಕೋಕ್ತಿಗಳನಿಂತೆಂದಂ: **ಚಂದ್ರಪ್ರಪು,** ೯. ೩೯)

**ವಿನಿವೃತ್ತ** – ತ್ಯಜಿಸಿದ (ಧನಧಾನ್ಯಾದಿ ಪರಿಗ್ರಹಮನಾವಗಂ ತೊಱೆದು ನೆಗಳ್ದುಪಾಸಕಂ ಒಂಬತ್ತನೆಯ ಪರಿಮಿತಪರಿಗ್ರಹ ವಿನಿವೃತ್ತಂ ಉದಾತ್ತಧರ್ಮನಿರ್ಮಲಚಿತ್ತಂ: **ಸುಕುಮಾಚ,** ೬. ೩೪)

**ವಿನಿಷ್ಕಾಮಪ್ರವೇಶ** – (ಸಾಮಾನಿಕ ಜನತತಿ ಚೇತೋಮಂ ಪ್ರಾಸಾದಿಕ ಅಂತರ ಆಕ್ಷೇಪಕ ವಿನಿಷ್ಕಾಮಪ್ರವೇಶ ಗಾನರಸಾಮೃತಮೆಸೆಗುಂ ಧ್ರುವಪ್ರಯೋಗಾನುಗತಂ: **ಅಜಿತಪು,** ೫. ೧೦)

**ವಿನಿಹತ** – ನಿವಾರಿಸಿದ (ವಿನಿಹತಕಲ್ಮಷಂ ಜಿನನನಂತ ಚತುಷ್ಟಯಭಾಗಿ ಭವ್ಯನಂದನಂ: **ಶಾಂತಿಪು,** ೬. ೪೦)

**ವಿನಿಹಿತ[ನೀರಾಜನ]** – [ಆರತಿ] ಎತ್ತಿಸಿಕೊಂಡವನು (ಅಂತು ನಿಷ್ಪನ್ನಮಜ್ಜನನುಂ ವಿನಿಹಿತನೀರಾಜನನುಂ ಆಗಿ.. ..ಪುರುದೇವಂ: **ಆದಿಪು,** ೮. ೭೧ ವ)

**ವಿನುತಂಬೆಱು** – ಪ್ರಸಿದ್ಧವಾಗು (ವಿನುತಂಬೆತ್ತುದು ನಮ್ಮ ಪುರದೈಂದ್ರೀಭಾಗದಿಂದೀರೆಂಟು ಯೋಜನ ಮಾತ್ರಾವನಿಯೊಳ್ ಸಿವಂಕರವನಂ: **ಸುಕುಮಾವ,** ೪. ೮೮)

**ವಿನೂತ** – ಶ್ರೇಷ್ಠವಾದ (ಅಮರೇಂದ್ರಪುತ್ರನಂ ಕರೆವವೊಲಾದುದು ಪುರದ ವಾತವಿಧೂತ ವಿನೂತಕೇತುಗಳ್: **ಪಂಪಭಾ,** ೪. ೩೪)

**ವಿನೇಯ** – ಸಜ್ಜನ (ಇವು ಸುಜ್ಞಾನದ ಸಲ್ವ ಬಟ್ಟೆಗಳ್ ಇವಜ್ಞಾನಾಂಧಕಾರಕೂಪಂಗಳೆಂದು ವಿಶುದ್ಧೋದಿತ ಬುದ್ಧಿಯಿಂದಱಿಪಿ ಲಾಭ ಖ್ಯಾತಿ ಪೂಜಾ ಅನಪೇಕ್ಷೆ ವಿನೇಯರ್ಕಳೊಳಾಗೆ: **ಅಜಿತಪು,** ೧. ೪); ಶಿಷ್ಯ (ಪಾತ್ರೀಭೂತ ವಿನೇಯ ಸಂತತಿಗೆ ಸಮ್ಯಗ್ದರ್ಶನ ಜ್ಞಾನ ಚಾರಿತ್ರಂಗಳ್ ನಿಜಮಪ್ಪ ಅನಂತ ಸುಖಮಂ .. .. ಪೇಟ್ದುವರ್ ಸೂತ್ರಪ್ರಾಯರ್: **ಪಂಪರಾ,** ೧. ೪); [ಜೈನ] ಧರ್ಮದಲ್ಲಿ ಶ್ರದ್ಧೆಯುಳ್ಳವನು (ಪ್ರಾಣಿಹಿತಮಂ ವಿನೇಯಪ್ರೀಣನಕರಂ

ಜಗತ್ತ್ರಯ ಪ್ರಕಟಿತಕಲ್ಯಾಣಮನೀ ನೆಗಟ್ದಾದಿಪುರಾಣಮಂ ಅಪರಿಮಿತಭಕ್ತಿಯಿಂ ವಿರಚಿಸುವೆಂ: **ಆದಿಪು,** ೧. ೪೨)

**ವಿನೋದ್ಯಮಾನೆ** – ಸಂತೋಷಗೊಂಡವಳು (ವಿಲಾಸಿನೀ ವಿನೋದ್ಯಮಾನೆಯಂ ಆಭರಣಪ್ರಭಾ ಪರಿಭೂತಪ್ರಭೂತ ಜ್ಯೋತಿಃಪ್ರಭೆಯಂ ಜ್ಯೋತಿಃಪ್ರಭೆಯಂ ಪ್ರತೀಹಾರಂ ಮಗಧಾಧಿರಾಜಾಭಿಮುಖಂ ಮಾಡಿ: **ಶಾಂತಿಪು,** ೫. ೧೦೫ ವ)

**ವಿನ್ನಾಣ** – [ವಿಜ್ಞಾನ] ನೆನಪು (ಎಂದು ರಘುವೀರಂ ಅಣುವಂಗೆ ಜಾನಕಿಯ ತನ್ನ ಕುಱುಪಿನ ವಿನ್ನಾಣಂಗಳನಱೆಪಿ; **ಪಂಪರಾ,** ೧೧. ೪೬ ವ)

**ವಿನ್ನಾಣಿ** – [ವಿಜ್ಞಾನಿ] ಚೆನ್ನಾಗಿ ತಿಳಿದವನು (ವಾಸ್ತುವಿದ್ಯಾ ನಿಪುಣರೆನಿಪ ವಿನ್ನಾಣಿಗಳ್ವೆರಸು ಸುಮುಹೂರ್ತದೊಳ್ ನೆಲನಂ ಶೋಧಿಸಿ: **ತ್ರಿಷಷ್ಟಿಪು,** ೨೧. ೫ ವ)

**ವಿನ್ಯಸ್ತ** – ಇರಿಸಿದ (ಸ್ವಸ್ತಿ ಸಮಸ್ತನರೇಶ್ವರ ಮಸ್ತಕವಿನ್ಯಸ್ತಪ್ರಕಾಶನಂ .. .. ಆದಿದೇವನಗ್ರತನೂಜಂ ನೋಡಿ: **ಆದಿಪು,** ೧೩. ೭೨); ಕೆತ್ತಿದ (ಸುಯೋಧನೋರುಮಕುಟೋದ್ಘಟ್ಟಪ್ರತಿಜ್ಞಾಕ್ಷರಾವಳಿ ವಿನ್ಯಸ್ತವಿಶಾಲನಿಶ್ಚಳಶಿಲಾಸ್ತಂಭಂ: **ಗದಾಯು,** ೧. ೫೫)

**ವಿನ್ಯಾಸ** – ಜೋಡಣೆ, ರಚನೆ (ವಾಸವಪುರಂ ಇದಱೀ ವಿನ್ಯಾಸಮಂ .. .. ವಿಲಾಸಮಂ ಇದಱೀ ಬೆಡಂಗಂ ಅವಗಯಿಸುಗುಮೇ: **ಶಾಂತಿಪು,** ೩. ೮)

**ವಿಪಂಚಿಕಾ** – ವೀಣೆ (ಮೃದುಪಂಚಮಾಂಚಿತ ವಿಪಂಚಿಕಾ ನಾದದಿಂದ: **ಕಾದಂಸಂ,** ೧. ೧೦)

**ವಿಪಂಚೀ** – ವೀಣೆ (ಧ್ವನಿಯೆನಿಸಿದಳಂಕಾರಧ್ವನಿಯೆಸೆವಿನಂ ಎಸೆವುದಲ್ಲಿ ಮಧುರವಿಪಂಚೀಧ್ವನಿಯೊಡನೆ ಅನೇಕರಾಗಧ್ವನಿ: **ಆದಿಪು,** ೯. ೧೧೯); ಜಗುಲಿ

**ವಿಪಕ್ಷ** – ವಿರೋಧ ಪಕ್ಷ, ಶತ್ರು (ಅದಲ್ಲದೆಯುಂ ಉದಾರವೀರ ಚರಿತನಿರತ ಕದನಕರ್ಕಶಕ್ಷತ್ರಿಯಂಗೆ ವಿಪಕ್ಷಪರಾಕ್ರಮಾಕರ್ಣನ ಉದೀರ್ಣಕ್ರೋಧದೊಳ್: **ಆದಿಪು,** ೧೪. ೮೧ ವ)

**ವಿಪಕ್ಷಪಾರ್ಥಿವ** – ಶತ್ರುರಾಜ (ವನದುರ್ಗಭಂಗಮುಂ ವಿಪಕ್ಷಪಾರ್ಥಿವ ಮನೋರಥಭಂಗಮುಂ ಸಿದ್ಧವಾಗೆಯುಂ: **ಆದಿಪು,** ೧೩. ೭೭ ವ)

**ವಿಪಕ್ಷಿ** – ವಿಶೇಷ ಬಗೆಯ ಪಕ್ಷಿ (ಹಂಸ ಚಕ್ರವಾಕ ಬಳಾಕ ವಿಪಕ್ಷಿಗಣಂಗಳ್ ನೀರೊಳಗಾಡುತ್ತುಂ ಮುಱುಗುತ್ತುಂ: **ವಡ್ಡಾರಾ,** ಪು. ೫೪, ಸಾ. ೨೧)

**ವಿಪಣಿ** – ಮಾರುವ ಸ್ಥಳ, ಅಂಗಡಿ ಬೀದಿ (ಆ ವಿಲಾಸಿನೀನಿವಾಸಕ್ಕೆ ಆಸನ್ನಮೆನಿಪ ವಿಪಣಿಮಾರ್ಗದೊಳ್: **ಮಲ್ಲಿನಾಪು,** ೨. ೪೫ ವ)

**ವಿಪಣಿಪಥ** – ಅಂಗಡಿಬೀದಿ (ಮಣಿಮಯ ತೋರಣಕುಳ ಎಸೆದುವು ವಿಪಣಿಪಥದ ಗೃಹಸಮಿತಿಗಳೊಳ್: ೭. ೨೩)

**ವಿಪಣಿವೀಥಿ** – ಅಂಗಡಿ ಬೀದಿ (ಅತಿಮನೋಹಾರಿಯಪ್ಪ ಸೂಳೆಗೇರಿಗೆ ಆಸನ್ನಮಾದ ವಿಪಣಿವೀಥಿಯೊಳ್: **ಪುಷ್ಪದಂಪು,** ೨. ೭೭ ವ)

**ವಿಪತ್ತಿ** – ಕೇಡು, ಸಾವು (ಅತಿಬಲನೆಂಬ ಕೇಶವನ ವಿಪತ್ತಿಯೊಳ್ ಮಹಾಬಲಂ ಸಮಾಧಿಗುಪ್ತರ ಪಕ್ಕದೆ ಮಹಾವ್ರತಮನಾಂತು: **ಚಾವುಂಪು,** ಪು. ೧೭೬, ಸಾ. ೨೧)

**ವಿಪನ್ನ** – ವಿಪತ್ತಿಗೆ ಸಿಲುಕಿದ (ಅದೃಢಾಗಾರ ವಿಪನ್ನಖಿನ್ನಗೃಹಿಣೀನಿಶ್ವಾಸದಿಂ ಕೂಡೆ ತೋಱೆದುವಾವಾಸ ಪರಿಕ್ರಿಯಾಕುಲವಧೂ ವಕ್ಷೋಜದೊಳ್ ಬಿಟ್ಟು ಸೇರಿದುವು .. .. ವಾರ್ಬಿಂದುಗಳ್: **ಚಂದ್ರಪ್ರಪು,** ೪. ೪೦)

**ವಿಪನ್ನತೆ** – ಕಷ್ಟ (ರನ್ನದ ಮಱೆಯಿಂ ವಿಪನ್ನತೆ ಗರ್ಭಾವತಾರದಿಂದಱುದಿಂಗಳ್ ಮುನ್ನಮೆನೆ ಪೋಯ್ತು: **ಚಂದ್ರಪ್ರಪು,** ೧೧. ೧೨೦); ಶೂನ್ಯತೆ (ಇನ್ನೆವರಂ ಸುತಜನ್ಮವಿಪನ್ನತೆ ಭವದೀಯ ಸತಿಯೊಳಯ್ತು ಉದಯಿಸಿದಪ್ಪಂ ನಿಜಕುಲದೀಪಕಂ: **ಚಂದ್ರಪ್ರಪು,** ೩. ೭೯)

**ವಿಪರೀತಕ** – ವಿರುದ್ಧವಾದ (ವಿಪುಳತರ ಕಟಕನುದ್ಯದ್ ದ್ವಿಪಹರಿಮಹಿಷೀನಿಷೇವ್ಯನುನ್ನತಪಾದಂ ವೃಪನೀತಶ್ರೀಫಲದಂ ವಿಪರೀತಕನಪ್ಪನಂತು ಭೂಭೃನ್ನಾಥಂ: **ಕವಿರಾಮಾ,** ೩. ೧೧೦)

**ವಿಪರೀತಗ್ರಹಣ** – ತಪ್ಪು ತಿಳಿಯುವುದು (ನೀವಿಂತು ವಿಪರೀತಗ್ರಹಣಂಗೆಯ್ದು ಶೂನ್ಯವಾದಿಗಳಾಗಿರಲಾಗದು: **ಪಂಚತಂತ್ರ,** ೨೯೩ ವ)

**ವಿಪರೀತರತ** – ಪುರುಷನಂತೆ ಸ್ತ್ರೀ ಸಂಭೋಗಿಸುವ ರತಿ (ಲಲಿತಲತಾಂಗಿ ನೂತವಿಪರೀತರತಕ್ಕಡಿಯಿಟ್ಟಳ್ ಕಣ್ಗಳ ಪಸವೋಡೆ ನೋಡಲ್ ಅಣಮೀಯದೆ ನೀಳ್ದ ಕುರುಳ್ ಮದೀಯ ಕೋಮಳೆಯ ಮುಖೇಂದುವಂ ಮಱಿಸಿದಂದಿನದೊಂದಱಲಿಂದಂ: **ಆದಿಪು,** ೧೨. ೩೦)

**ವಿಪರ್ಯಯ** – ಬದಲಾವಣೆ, ವ್ಯತ್ಯಾಸ (ಜನಕಂಗೆ ಜಲಾಂಜಲಿಯಂ ತನೂಭವಂ ಕುಡುವುದು ಉಚಿತಂ ಅದುಗೆಟ್ಟೀಗಳ್ ನಿನಗಾಂ ಕುಡುವಂತಾದುದೆ ತನೂಜ ನೀಂ ಕ್ರಮವಿಪರ್ಯಯಂ ಮಾಡುವುದೇ: **ಗದಾಯು,** ೪. ೬೨)

**ವಿಪಶ್ಚಿಜ್ಜನ** – ವಿದ್ವಾಂಸಸಮೂಹ, ವಿದ್ವಜ್ಜನ (ಮತ್ಸರಪ್ರೇರಿತನೆಮ್ಮಂ ಸೋಲಿಸಲ್ ಬಂದು ತಾನೆ ಸೋಲ್ತು ಪೋದನೆನೆ ವಿಪಶ್ಚಿಜ್ಜನಮೊಂದೆ ಕೊರಲೊಳ್ .. .. ಪೊಗಟೆ: **ಶಾಂತಿಪು,** ೮. ೧೫೧ ವ ಹಾಗೂ ೧೫೨ ವ))

**ವಿಪಶ್ಚಿತ್** – ವಿದ್ವಾಂಸ (ಧಾರಿಣಿ ಬಣ್ಣಿಕುಂ ನಿಜಯಶೋವಲ್ಲೀ ವೃತಾಂಭೋದಮಾರ್ಗನಂ ಆರಾಧಿತಭರ್ಗನಂ ಭೃತ ವಿಪಶ್ವಿತ್ ವರ್ಗನಂ ದುರ್ಗನಂ: **ಪಂಚತಂತ್ರ,** ೫೪)

**ವಿಪಶ್ಚಿನ್ನಿಧಿ** – [ವಿಪಶ್ಚಿತ್+ನಿಧಿ] ವಿದ್ವಾಂಸರ ನಿಧಿ (ನಿಶ್ಚಿತಮನರಲ್ಲದರಂ ದುಶ್ಚರಿತರಂ ಎಯ್ದೆ ಪಡೆದ ದೋಷಕ್ಕಂ ಪ್ರಾಯಶ್ಚಿತ್ತಮೆಂದು ಸಕಲ ವಿಪಶ್ಚಿನ್ನಿಧಿಯೆನಿಪ ದುರ್ಗನಂ ಬಿದಿ ಪಡೆದಂ: **ಪಂಚತಂತ್ರ,** ೫೩)

**ವಿಪಾಕ** – ದುಷ್ಪರಿಣಾಮ (ಪುಸಿನುಡಿಯ ವಿಷ ವಿಪಾಕದ ಮಸಕದೆ ಮುಖರೋಗಮಾದವೋಲ್: **ಕಾದಂಬ,** ೩. ೯೫)

**ವಿಪಾಕವಿಚಯ** – [ಜೈನ] ಒಂದು ಬಗೆಯ ಧರ್ಮಧ್ಯಾನ, ಕರ್ಮಫಲದ ಚಿಂತನೆ (ಆಜ್ಞಾವಿಚಯಂ ಅಪಾಯವಿಚಯ ವಿಪಾಕವಿಚಯ ಸಂಸ್ಥಾನವಿಚಯಮೆಂಬ ನಾಲ್ಕುಂ ಧರ್ಮಧ್ಯಾನಮಂ ಧ್ಯಾನಿಸುತ್ತುಂ: **ಆದಿಪು,** ೧೦ ೧೪ ವ)

**ವಿಪಿನ** – ಕಾಡು (ಕಾಂತಾರ ವಿಪಿನ ಗಹನ ಪ್ರಾಂತರ ಕಾನನ ವನ ಅಟವೀ ಕಕ್ಷ ಸಮಾಖ್ಯಂ ತಾನರಣ್ಯಂ: **ಅಭಿಧಾವ,** ೧. ೭. ೧೫)

**ವಿಪಿನಭವ** – ಕಾಡುಪ್ರಾಣಿ (ಬಹಳ ರೋಮಂಥಫೇನಾವಳೀ ಪಾಂಡುರವಕ್ತ್ರಂ ಮಾಹಿಷೀಸಂತತಿ ವಿಪಿನಭವಂ ಕಣ್ಗುರ್ವಾಯ್ತು ಕಾಡೊಳ್: **ಚಂದ್ರಪ್ರಪು,** ೪. ೪೮)

**ವಿಪುಲ** – ಶ್ರೇಷ್ಠವಾದ (ವಿಪುಲ ಕವಿತಾಗುಣಾಪಾಸ್ತ ಪುರಾಣಕವೀಂದ್ರನೆನಿಪ ಮಹಿಮೆಯನಿಂದ್ರ

ದ್ವಿಪದುಗ್ಧವಾರ್ಧಿ ಡಿಂಡೀರಪಿಂಡಪಾಂಡುರಯಶಕ್ಕೆ ದಂಡಿಯೆ ನೋಂತಂ: **ಪಂಚತಂತ್ರ,** ೧೯)

**ವಿಪುಲಮತಿ –** [ಜೈನ] ಮನಃಪರ್ಯಯ ಜ್ಞಾನದ ಒಂದು ಬಗೆ, ಇತರರ ಮನಸ್ಸನ್ನು ಅರಿಯುವುದು (ವಿಪುಲಮತಿ ಸಕಲವಿದ್ಯಾನಿಪುಣಂ ಗಣಧರನಿರೂಪಿತ ಕ್ರಮದಿಂ ದೈತ್ಯಪ್ರತಿ ಪ್ರಪಂಚಮಂ ಶ್ರವಣಪಥಾತಿಥಿ ಮಾಡಲಾಗಳುದ್ಯತನಾದಂ: **ಪಂಪರಾ,** ೧೦. ೬೬)

**ವಿಪುಲಾದ್ರಿ –** [ಜೈನ] ಮಹಾವೀರನ ಉಪದೇಶದ ಸ್ಥಳ, ಮೇರು (ಶ್ರೀಮದಘಾರಿ ವೀರಜಿನಸನ್ನಿಧಿಯೊಳ್ ವಿಪುಲಾದ್ರಿಯೊಳ್ ಜಿನಸ್ವಾಮಿ ಮತೋಕ್ತಿಯಿಂ ಮಗಧನಾಯಕನಂ ತಿಳಿವಂತು .. .. ತಿಳಿಯೆ ಪೇೞ್ದನೂರ್ಜಿತಮಾಗೆ ಪೇೞ್ವೆಂ: **ಸುಕುಮಾಚ,** ೧. ೬೪))

**ವಿಪುಳ –** ವಿಸ್ತಾರವಾದ (ಮಹಾವೈಘೋರಸ್ಕನುಂ ವಿಪುಳೋಪಚತಾಂಸನುಂ ಋಜುಪರಿಪೂರ್ಣಹ್ರಸ್ವಗ್ರೀವನುಂ: .. .. ವಿಜಯಪರ್ವತಗಜೇಂದ್ರಂ: **ಆದಿಪು,** ೧೨. ೫೬ ವ)

**ವಿಪುಳಾಂತರ –** ಭೂಮಿ (ಸುರಿದುವು ನಿರಂತರಂ ಬೆಳ್ಸರಿಗಳ್ ಸಂಗಳಿಸಿ ವಿಪುಳ ವಿಪುಳಾಂತರದೊಳ್: **ಕುಸುಮಾಕಾ,** ೬. ೫೨)

**ವಿಪುಳಾಸನ –** [ಆನೆಯ] ವಿಶಾಲವಾದ ಹೆಗಲು (ವಿಪುಳಾಸನನುಂ ಆನುಪೂರ್ವ ಧನುರಾಕಾರ ವಂಶನುಂ .. .. ಅಪವಪ ವಿಜಯಪರ್ವತಗಜೇಂದ್ರಂ ಬಂದು: **ಆದಿಪು,** ೧೨. ೫೬ ವ)

**ವಿಪ್ರೋಷಧಿ –** [ಜೈನ] ಸಾಧುವಿನ ಸ್ಪರ್ಶ ಮಲಮೂತ್ರಗಳಿಗೆ ರೋಗನಿವಾರಕ ಸಾಮರ್ಥ್ಯವುಂಟಾಗುವ ಒಂದು ಔಷಧರ್ಧಿ (ಉಗ್ರೋಗ್ರ ತಪದಿಂ ದೀಪ್ತತಪಂ ಮಹಾತಪಂ ಘೋರತಪಂ ಎಂದಿವು ಮೊದಲಾಗೊಡೆಯ ತಪಂಗಳಂ ಗೆಯ್ಯೆ ತಪದ ಮಾಹಾತ್ಮ್ಯದಿಂದಂ ಆಮೋಷಧಿ ಖೇಳೋಷಧಿ ಜವೋಷಧಿ ವಿಪ್ರೋಷಧಿ ಸರ್ವೋಷಧಿಯೆಂದಿವು ಮೊದಲಾಗೊಡೆಯ ಋದ್ಧಿಗಳ್ ಪುಟ್ಟಿದೊಡಂ: **ವಡ್ಡಾರಾ,** ಪು ೬೯, ಸಾ ೩)

**ವಿಪ್ರ –** ಬ್ರಾಹ್ಮಣ (ದ್ವಿಜ ವಿಪ್ರ ಭೂಮಿದೇವ ಅಗ್ರಜನ್ಮ ಬಾಡವ ಸಮಾಹ್ವಯಂ ಬ್ರಾಹ್ಮಣಂ: **ಅಭಿಧಾವ,** ೧. ೧೧. ೩೭); ಪುರೋಹಿತ (ಸೂತ ನಟ ವಂದಿಮಾಗಧ ವೈತಾಳಿಕ ಕಥಕ ಪುಣ್ಯಪಾಠಕ ವಿಪ್ರ ಉದ್ಘೂತರವಂ ಎಸೆಯೆ: **ಪಂಪಭಾ,** ೧೨. ೧೦೬)

**ವಿಪ್ರಕರ್ಷ –** ಅಂತರ (ಮದಕೋಳಾಹಳಮೆಯ್ದಿದತ್ತದುವೆ ತಾನುಲ್ಲಾಸಿ ದಿಗ್ದೇವತಾ ವದನೋತ್ಸರ್ಪಣ ವಿಪಕರ್ಷ ವಿರಳಂ ಪಂಕೇಜಿನೀಸೌರಭಂ: **ಕಾದಂಬ,** ೧. ೧೯೪)

**ವಿಪ್ರತಿಪತ್ತಿ –** ವ್ಯತ್ಯಾಸ, ವಿರೋಧ (ಅಂಜನಾಸುತಂ ಜನಪ್ರವಾದದೊಳಂ ಇವರ ವಿಪ್ರತಿಪತ್ತಿಯಂ ಕೇಳ್ದೆವು ಅದಲ್ಲದೆಯುಂ ವಿಭೀಷಣಂ ಗುಣಾಧಿಕನೆಂಬುದು ಜಗತ್ಪ್ರಸಿದ್ಧಂ: **ಪಂಪರಾ,** ೧೨. ೭೯ ವ)

**ವಿಪ್ರಲಂಭ –** ಅಗಲಿಕೆ (ಬಂದಿತ್ತು ಎತ್ತಣಿಂದ ಎಂದಱಿಯೆಂ ಮತ್ಪಾಪದಿಂ ವಿಪ್ರಲಂಭಂ: **ಕಾದಂಸಂ,** ೫. ೩೫)

**ವಿಪ್ರಲಬ್ಧಬುದ್ಧಿ –** ಭ್ರಾಂತಿಗೊಂಡ ಮನಸ್ಸು (ಸದೃಶಾಪರಾಪರೋತ್ಪತ್ತಿಯೆಂಬಿವಱಿಂ ವಿಪ್ರಲಬ್ಧಬುದ್ಧಿಗೆ ಸಂತಾನರೂಪದಿಂ ಪುಟ್ಟುತಿರ್ದ ವಿಜ್ಞಾನಲಕ್ಷಣಂಗಳ್: **ಆದಿಪು,** ೨. ೯ ವ)

**ವಿಪ್ರಲಾಪ –** ವ್ಯರ್ಥ ಮಾತು (ಸ್ಮರದೀಪಂ ಪೆಣ್ಣ ರೂಪಂ ತಳೆದುದೆನಿಪ ವೇಷಂ ಪ್ರಭಾವೇಶರೂಪಂ ಪರಿತಾಪಂ ತೋಱಲಾ ಪೆಣ್ಣೊಲವು ಅತಿ ಲಲಿತಾಪಾಪವಾ ವಿಪ್ರಲಾಪಂ: **ಜಗನ್ನಾವಿ,** ೧೬. ೧೩೯); ಗೋಳಾಟ (ತತ್ತಿಗಳಂ ಕಾಣದೆ ಬೆಕ್ಕಸಂಬಟ್ಟು ಮಱುಗಿ ಮಧುರಾಲಾಪೆ ವಿಪ್ರಲಾಪಂಗೆಯ್ಯೆ: **ಪಂಚತಂತ್ರ,** ೨೨೫ ವ)

**ವಿಪ್ರಲಾಪಂಗೆಯ್ –** ಶೋಕದಿಂದ ಮಾತಾಡು (ಪೇೞೆಮಿಗರಸ ಮಾನಸವಾೞೆ ಎಂದು ವಿಪ್ರಲಾಪಂಗೆಯ್ಯೆ: **ಅಜಿತಪು,** ೧೦. ೪೨ ವ)

**ವಿಫಲ –** ನಿರರ್ಥಕ (ಆ ಗುಣವತಿ ಫಲವತಿ ತಾನಾಗೆಯುಮಿದು ವಿಫಲಮೆಂದು ಪತಿಗುತ್ಸವಮಂತಾಗದು ಸಂಸ್ಕೃತಿ ಫಲವತಿಯಾಗಿರೆಯುಂ ಯೋಗಿಗುತ್ಸವಂ ಪುಟ್ಟದವೋಲ್: **ಜಗನ್ನಾವಿ,** ೨. ೫೩)

**ವಿಬುಧ –** ವಿದ್ವಾಂಸ (ತಳಿರ್ಗಳವೋಲ್ ಮೆಲ್ಲಿದುವೀ ತಳಂಗಳ್ .. .. ಎಂಬುದನಾಕುಳಮಿಲ್ಲದೆ ವಿಬುಧರಱಿಗೆ ಧರ್ಮೋಪಮೆಯಂ: **ಕವಿರಾಮಾ,** ೩. ೬೧); ದೇವತೆ (ಅಕೃತ್ರಿಮ ಪ್ರಣಯರಸವಿಸರವಶಗತ ವಿಬುಧಮಿಥುನಶತರ್ ಅತಶರಭಸ ಬಧಿರೀಕೃತಕೃತಕಗಿರಿಗಳೊಳಂ: **ಆದಿಪು,** ೬. ೧೦೧ ವ)

**ವಿಬುಧಪತಿ –** ದೇವೇಂದ್ರ (ವಿಬುಧಪತಿ ನಿವಹವಂದಿತ ನಿಬಿಡಪದಾಂಬುರುಹಂ .. .. ಜಿನನಂ .. .. ವಂದಿಸಿದರ್ಕ್ಕ **ಸುಕುಮಾಚ,** ೮. ೬೮)

**ವಿಬುಧವರಾಶ್ವ –** ಉಚ್ಚೈಶ್ರವಸ್ಸು (ಆ ಜಳಧಿಯೊಳ್ ವಿಬುಧವರಾಶ್ವಮೊಗೆದಗಲ್ದಿರ್ಪುದಂ: **ರಾಜಶೇವಿ,** ೧೨. ೧೦೫)

**ವಿಭಂಗ –** ಭಗ್ನಗೊಂಡ (ಆಗಸಮೆ ಮೇಲೆ ಕೆಡೆವಂತೆ ನೆಲಂ ಪೆಡಂ ಮಗುಟ್ದು ಕವಿದಿಕ್ಕಿದಂತೆ ತೊಟ್ಟನೆ ಪುಟ್ಟಿದತಿಭರದಿಂ ವಿಭಂಗಮನರಾಗೆ: **ಸುಕುಮಾಚ,** ೧೧. ೪೨ ವ)

**ವಿಭಂಗಜ್ಞಾನ –** [ಜೈನ] ಮಿಥ್ಯಾಜ್ಞಾನ, ಇದರಲ್ಲಿ ಮೂರು ವಿಧ: ಕುಮತಿ, ಕುಶ್ರುತ ಕುಅವಧಿ (ಅರವಿಂದಂ ಕುರುವಿಂದನಂ ಕರೆದು ಉತ್ಪನ್ನವಿಭಂಗಜ್ಞಾನದಿಂ ಮೃಗಂಗಳಿರ್ದೆಡೆಯನಱಿದು: **ಆದಿಪು,** ೨. ೧೪ ವ)

**ವಿಭವ –** ಸಂಪತ್ತು (ಮತ್ಕಾವ್ಯಮಂ ಮೆಚ್ಚಿ ಕೇಳ್ವ ಗುಣಂಗೊಳ್ವ ಜನಕ್ಕಮಕ್ಕೆ ವಿಭವಂ ಭದ್ರಂ ಶುಭಂ ಮಂಗಳಂ: **ಅಜಿತಪು,** ೧೨. ೨೭); ವೈಭವ (ತನ್ನ ವಿಭವಮುಮಂ ವಿಳಾಸಮುಮಂ ಪಾಂಡವರ್ಗೆ ಮೆಱೆದು ಕಂದುಕಕ್ರೀಡಾದಿ ನಾನಾ ವಿನೋದಂಗಳಿಂ ಕೆಲವು ದಿವಸಮನಿರ್ದು: **ಪಂಪಭಾ,** ೬. ೬೯ ವ)

**ವಿಭವೋದಯ –** ಹಣವಂತ (ಸಕಲಜನವಿನುತಂ ಶತಮಖಸದೃಶವಿಶಾಲವಿವಿಧವಿಬುಧೋದಯನುಂ .. .. ಕಂಡನಣುವನಾ ರಾಘವನಂ: **ಕವಿರಾಮಾ,** ೨. ೩೮)

**ವಿಭಾತ –** ಬೆಳಗಿನ ಹೊತ್ತು (ಆಗಳ್ ವಿಭಾತಸಮಯ ನಿಯೋಗಮನನವರತ ಪರಮಕಲ್ಯಾಣಶ್ರೀಭಾಗಿನಿ ತೀರ್ಚೆ ಮನಕ್ಕನುರಾಗಂ ಕೈಗಣ್ಮೆ ಸಂತಸಂಬೆರಸಿರ್ದಂ: **ವರ್ಧಮಾಪು,** ೧೧. ೫೯)

**ವಿಭಾವ –** ಭಾವಸ್ಫುರಣೆಯ ಕಾರಣ (ಭಾವದ ಅನುಭವದ ಎಸೆವ ವಿಭಾವದ ಪಸುಗೆಗಳೊಳೊಸರ್ವ ರಸದಭಿನಯಮಂ ಭವಿಸುವೊಡೆ ಆದಿದೇವನ ದೇವೇಂದ್ರನ ಬಗೆಗಮಸದಳಂ ನರ್ತಕಿಯಾ: **ಆದಿಪು,** ೯. ೨೭)

**ವಿಭಾವರಿ** – ರಾತ್ರಿ (ಲೋಕಾವಳೋಕನಾನಂದನಂ ವಿಭಾವರೀವದನಮಳಯರೂಪ ತಿಳಕನುಂ ಎನಿಪ ತಾರಕಾವಲ್ಲಭಂ: **ಆಚವರ್ಧ,** ೬. ೪೩ ವ)

**ವಿಭಾವಿಸು** – ನಿಶ್ಚೈಸು (ನಟ್ಟಪಾಂಗದ ಪಾಂಗಿಂದಮೆ ಕನ್ನೆ ಕನ್ನಡಿಸಿದಳ್ ತನ್ನೊಂದಭಿಪ್ರಾಯಮಂ ಎಂದು ಅರವಿಂದಲೋಚನಂ ಮನದೊಳ್ ವಿಭಾವಿಸುತ್ತಿರ್ಪನ್ನೆಗಂ: **ಜಗನ್ನಾವಿ,** ೧೦. ೮೧ ವ)

**ವಿಭಾಸ** – ದೀಪ್ತಿ (ಇವು ದೃಷ್ಟಿವಿಷಾಹಿಯ ಗರಳವಹ್ನಿಜಿಹ್ವಾ ವಿಭಾಸಮೆನೆ ಕಣ್ಗಳ ಕೆಂಪವರೊರ್ವರೊರ್ವರಂ ಪ್ರಾಣವಾಯುವಂ ನುಂಗುವಂತೆ ನೋಡಿದರಾಗಳ್: **ಪಂಪರಾ,** ೧೪. ೧೪೭)

**ವಿಭಾಸಿ** – ಕಾಂತಿಯುಕ್ತವಾದ (ನಿಗಮಾಂಗವಿಭಾಸಿ ಮಾತೃಕಾಸ್ಪದಮಿದು ಮಂತ್ರಿಪುತ್ರವದನಂ ಮೆಱೆದಪ್ಪುದು ಉದಾತ್ತವೃತ್ತಿಯಿಂ: **ರಾಜಶೇವಿ,** ೧೪. ೮೪)

**ವಿಭಿನ್ನ** – ಬೇರೆ ಬಗೆಯ (ದ್ವಾವಿಂಶತಿ ಜಲಧಿವರೆಗಂ ಇಂದ್ರಪ್ರತೀಂದ್ರರಿದು ಕೆಳೆ ವಿಭಿನ್ನತರರುಚಿ ಕೆಳೆಯೇ: **ಶಾಂತಿಪು,** ೭. ೧೧೧)

**ವಿಭೀಷಣ** – ತುಂಬ ಹೆದರಿಕೆ ಉಂಟು ಮಾಡುವ (ಶಾತಶರಾಗ್ನಿ ಭಗ್ನಭಟಕೋಟಿವಿಭೀಷಣಂ .. .. ಭೂತಸದನಂ ಕದನಂ ಕದನತ್ರಿಣೇತ್ರನಾ: **ಪಂಪಭಾ,** ೧೪. ೩); ರಾವಣನ ತಮ್ಮ (ವಿಭೀಷಣಂಬೆರಸು ಸುಗ್ರೀವಾದಿಗಳ್ ರಾಘವಂಗೆ .. .. ಪ್ರೋತ್ಸಾಹಮಂ ಮಾಡಿದರ್: **ಪಂಪರಾ,** ೧೫. ೧೧)

**ವಿಭು** – ಒಡೆಯ (ಕೃಶರಾಗಂ ವಿಗತಮನಃಪ್ರಶರತೆಯಿಂ ಕಣ್ಣ ನೀರ್ಗಳಂ ತೀವಿನಿರಂಕುಶ ಶೋಕ ವಶಂ ಚಿತ್ರಶೇಷ ನಿಜಜನಕನಿಳಯಮಂ ವಿಭು ಪೊಕ್ಕಂ: **ಶಾಂತಿಪು,** ೧. ೯೪); ಸರ್ವವ್ಯಾಪಿಯಾದ (ಅವಱೊಳ್ ಲೋಕಂ ಅದೆಂತುಟೆಂದೊಡೆ ಸಮಂತಾವಗಮೆತ್ತೆತ್ತ ನೋಡುವೊಡಂ ನೋಡಲನಂತಮಪ್ಪ ವಿಭುವಪ್ಪ ಆಕಾಶಪದ್ಮಕ್ಕೆ ತಾನೆ ವಲಂ ಕರ್ಣಿಕೆಯಂದಮಾಯ್ತು: **ಆದಿಪು,** ೧. ೪೩)

**ವಿಭೂತಿ** – ವೈಭವ (ಪಿರಿದುಂ ವಿಭೂತಿಯಿಂದಂ ಸುರರಾಜನ ಬೆಸದೊಳ್ ಅಮರನಾಯಕರೆಲ್ಲಂ ನೆರೆದು ವಿವಾಹಮನಾಕೆಗೆ ದೊರೆಕೊಳಿಸಿದರ್: **ಆದಿಪು,** ೬. ೮೬); ಐಶ್ವರ್ಯ (ಅನಿತ್ಯಮೀ ನರರ ವಿಭೂತಿಯೆಂಬ ಬಗೆ ಬಂದಿರೆ: **ಆದಿಪು,** ೨. ೫೧)

**ವಿಭೂಷಣ** – ಆಭರಣ (ಮಣಿಕನಕಂ ವಸ್ತುವಿಭೂಷಣಂಗಳಂ ಕೊಟ್ಟು ಪೆಂಡಿರೊಲ್ವರೆ ಗಂಡರ್ ಗುಣಮನೆ ಮೆಱೆವುದು: **ಗದಾಯು,** ೨. ೫)

**ವಿಭೂಷಣಗೃಹ** – ಅಲಂಕಾರಗೃಹ (ಒಪ್ಪುವುವಲ್ಲಿ ಶಸ್ತ್ರಕುಟಿ ಕೋಶಾಗಾರಂ ಏಕಾಂತಮಂದಿರಂ ಅಭ್ಯಾಸನಿಕೇತನಂ ಪಚನಧಾಮಂ ಸ್ನಾನಸದ್ಮಂ ಮನೋಹರ ಶಯ್ಯಾವಸಥಂ ವಿಭೂಷಣಗೃಹಂ ದೇವಾರ್ಚನಾವಾಸಂ ಅಂಬರವೇಶ್ಮಂ ವರ ಭೋಜನೌಕಂ ಅವರೋಧಸ್ತ್ರೀನಿವಾಸಾಸ್ಪದಂ: **ಶಾಂತೀಶ್ವಪು,** ೧. ೧೩೭)

**ವಿಭೂಷಣಾಂಗ** – [ಜೈನ] ದಶಕಲ್ಪಕುಜಗಳಲ್ಲಿ ಒಂದು, ಬೇಕಾದ ಆಭರಣಗಳನ್ನು ನೀಡುವಂಥದು (ಗೀರ್ವಾಣವ್ರಜಂ ತಂದು ನೀಡಿದ ವಸ್ತ್ರಾಂಗ ವಿಭೂಷಣಾಂಗ .. .. ಪೂಮಾಲೆಯಿಂದಂಗರಾಗದಿಂ ಉದ್ದಾಭ್ರಿಜಿಸುವಂತು ಪೂಜಿಸಿದನಿಂದ್ರಂ ತತಪಿತೃದ್ವಂದ್ವಮಂ **ಪುಷ್ಪದಂಪು,** ೧೨. ೧೩)

**ವಿಭೇದ** – ಭಿನ್ನತೆ (ಪಿರಿಯಣ್ಣಂ ಗುರು ತಂದೆಯೆಂದೆಱಗುವಂ ಮುನ್ನೆಲ್ಲಂ ಇನ್ನೀಗಳ್ ಆಳರಸು ಎಂಬೊಂದು ವಿಭೇದಮಾದೊಡೆ ಎಱಕಂ ಚೀ ಕಷ್ಟಮಲ್ತೆ: **ಆದಿಪು,** ೧೪. ೩೨)

**ವಿಭ್ರಂಶ** – ವಿನಾಶ (ವಿಭ್ರಮವತಿಯರ ಮಿಸುಗುವದಭ್ರವಿಳಾಸಂ ನವೀನಯೌವನದೊದವೀ ಶುಭ್ರಾಭ್ರವಿಭ್ರಮದವೋಲ್ ವಿಭ್ರಂಶಮನೆಯ್ದದೇಂ ಕ್ಷಣಂ ನಿಂದಪುದೇ: **ಪಾರ್ಶ್ವನಾಪು,** ೪. ೬೯)

**ವಿಭ್ರಮ** – ಸುತ್ತುವಿಕೆ, ಅಲೆದಾಟ (ನೆಲಸುಗೆ ನಿನ್ನ ವಕ್ಷದೊಳೆ ನಿಶ್ಚಳಮೀ ಭಟಖಡ್ಗಮಂಡಲೋತ್ಪನವನ ವಿಭ್ರಮ ಭ್ರಮರಿಯಪ್ಪ ಮನೋಹರಿ ರಾಜ್ಯಲಕ್ಷ್ಮಿ: **ಆದಿಪು,** ೧೪. ೧೩೦); ವಿಲಾಸ (ಏನೆಂದಾಂ ಬಣ್ಣಿಸುವೆನೊ ಸುರಸೌಂದರಿಯ ವಿಳಾಸವಿಭ್ರಮ ಭ್ರೂಲತೆಯಂ: **ಆದಿಪು,** ೯. ೩೩); ಭ್ರಾಂತಿ, ತಪ್ಪು ತಿಳಿವಳಿಕೆ (ಕೆಟ್ಟೆಂ ಏನಿರದಿಂತುಟು ವಿಭ್ರಮದಿಂದೊಡರ್ಚಿದೆಂ: **ಕಾದಂಸಂ,** ೫. ೩೨)

**ವಿಭ್ರಾಂತಿ** – ಭ್ರಮೆ (ಗದ್ಗದಕಂಠಸ್ಥಿತೆಯಾಗಿ ತನ್ನ ಮನದೊಳ್ ವಿಭ್ರಾಂತಿಯಂ ತಾಳ್ದಿದಳ್: **ಸುಕುಮಾಚ,** ೨. ೩೧ ವ)

**ವಿಭ್ರಾಜಕ** – ಕಾಂತಿಯುಕ್ತವಾದ (ವಿಭವಮಂ ಪಂಚಾಂಗಮಂತ್ರಂ ಚತುರ್ಬಲಮಂ ಪ್ರಾಭವಂ ಎಯ್ದೆ ಮಾಡೆ ಪಡೆದಂ ನ್ಯಾಯಾನ್ವಿತಂ ತೊಟ್ಟನಾ ಬಲೆಯೊರ್ವಂ ತೆಗೆದಂತೆ ಬಂದದು ವಯೋವಿಭ್ರಾಜಕಂ ರಾಜಕಂ: **ಶಾಂತಿಪು,** ೫. ೭೫)

**ವಿಭ್ರಾಜಿಸು** – ಪ್ರಕಾಶಿಸು (ದೀಕ್ಷೆಗೊಂಡನಿಳೇಶಂ ಬೀಜಂಗೊಳ್ವಂತಿರೆ ವಿಭ್ರಾಜಿಸುವಾರ್ಹಂತ್ಯ ವಿಪುಳಫಳಮಂ ಪಡೆಯಲ್: **ನೇಮಿನಾಪು,** ೪. ೫೮)

**ವಿಮರ್ದ** – ಸುಗಂಧವನ್ನು ತೇಯುವುದು (ಪರಿಮಳಂ ವಿಮರ್ದಂ ಕ್ಷೋದಂ: **ಅಭಿಧಾವ,** ೨. ೨. ೧೭)

**ವಿಮಲ** – ಕಳಂಕರಹಿತ (ವಿಮಲತರ ಸ್ಫಟಿಕಮರೀಚಿಮಯಂ .. .. ಸಮಚತುರಸ್ರದ ಸಂಸ್ಥಾನಮನೋಹರಮೂರ್ತಿ ಸಹಜಮಣಿಗಣಭೂಷಂ: **ಶಾಂತೀಶ್ವಪು,** ೯. ೫೩); ಅಪ್ಪಟ (ವಿಮಲ ಸ್ವರ್ಣಮಯಂ ಕನನ್ಮಣಿಮಯಂ ಶೋಭಾಮಯಂ ತಾನೆನಲ್ಕೆ ಮಯಂ ವಿಸ್ಮಯಮಾಗೆ ಮಾಡಿದ ಸಭಾವಿಸ್ತಾರಮಂ: **ಜಗನ್ನಾವಿ,** ೧೭. ೭)

**ವಿಮಾಂಸ** – ಮಾಂಸಭರಿತವಾದ (ವಿಮಾಂಸಾಂಘ್ರಿ ಗಂಭೀರಮಹಾನಾದಂ ಸುನಾಸಾಪುಟಂ ಅಮರ್ದ ತುರಂಗಂಗಳಂ ಕಾಣ್ಕೆಗೈದಂ: **ರಾಜಶೇವಿ,** ೧೨. ೧೦೧)

**ವಿಮಾನ** – ಅರಮನೆ; ದೇವತೆಗಳ ವಾಹನ (ವ್ಯಾಳಸುರಸೌಂದರೀ ಜನಿತಬಹುಮಾನಮಂ ಸ್ಥೂಳಮಣಿಖಚಿತ ಸುರಪರಿವೃಢ ವಿಮಾನಮಮಂ: **ಆದಿಪು,** ೭. ೨೭ ರಗಳೆ); [ಜೈನ] ಮೇಲುಲೋಕದ ಒಂದು ವಾಸಸ್ಥಾನ (ಪಂಚದಶಾಧಿಕತ್ರಿಶತ ವಿಮಾನಸ್ವಾಮಿಯುಂ : **ಕರ್ಣನೇಮಿ,** ೨. ೩೨ ವ)

**ವಿಮುಕುಳ** – ಚೆನ್ನಾಗಿ ಅರಳಿದ (ಆ ವಿಕಚಮೇಚಕೋತ್ಪಳ ಲೋಚನೆಯರೊಳ್ ಆ ವಿಮುಕುಳಕಮಳದಳ ವಿಲೋಲಲೋಚನಂ .. .. ನೆರೆದಿರೆ: **ಆದಿಪು,** ೮. ೨೩ ವ)

**ವಿಮುಕ್ತ** – ತೊರೆದ (ಆ ಕುತ್ಕೀಲಂ ಸೊಗಯಿಪುದು ಕಾಳೋರಗವಿಮುಕ್ತ ನಿರ್ಮಳತರನಿರ್ಮೋಕಂ ತಾನೆನೆ: **ಚಂದ್ರಪ್ರಪು,** ೬. ೩); ಬಿಡುಗಡೆಗೊಂಡ ಪಂಜರವಿಮುಕ್ತ

ಕುಂಜರರಾಶಿಯಂತೆ ನೃಪನಿವಾಸಕ್ಕೆ ಬಂದು: **ಪುಷ್ಪದಂಪು,** ೪. ೭೦ ವ)

**ವಿಮುಕ್ತಾಹಾರ** – [ವಿಮುಕ್ತ+ಆಹಾರ] ಆಹಾರವನ್ನು ತೊರೆಯುವುದು, ಉಪವಾಸ, [ವಿಮುಕ್ತಾ+ಹಾರ] ಹಾರವನ್ನು ಪಡೆಯದಿರುವುದು (ವೀರರ ವೀರ ವಿಮುಕ್ತಾಹಾರಂ ಭವದರಿವಧೂಸ್ತನದ್ವಿತಯಂ ಕಣ್ಣೀರಿಂ ಮಿಂದು ಎರ್ದೆಗಿರ್ಚಿಂದೋರಂತಿರೆ ಬೆಂದು ಚರಿಸುತಿರ್ಪುದು ತಪಮಂ: **ಕಾದಂಬ,** ೧. ೫೪)

**ವಿಮುಖವೃತ್ತಿ** – ಉದಾಸೀನತೆ, ವೈರಾಗ್ಯ (ಸ್ಮಿತಮಧುರಂ ಮುಖಂ ವಿಮುಖವೃತ್ತಿಯನಾರ್ಗೆ ಕಟಲ್ಚದು .. .. ತದಂಗಜರಾಜ್ಯಲಕ್ಷ್ಮಿಯಾ: **ಚಂದ್ರಪ್ರಪು,** ೧೦. ೯೩)

**ವಿಮೇಘ** – ಮೋಡವಿಲ್ಲದ (ಕರಂ ಕಾಯ್ಪಿನಿಂ ಕಯ್ಮಿಗುತುಂ ಬಂದತ್ತು ಅದೊಂದು ಅದ್ಭುತಮೊದವಿದ ಅಮೋಘಂ ವಿಮೇಘಂ ನಿದಾಘಂ: **ಶಾಂತೀಶ್ವಪು,** ೧೨. ೧೭)

**ವಿಮೋಹ** – ವಿಶೇಷ ಮೋಹ (ಮುಪ್ಪಿನಿಸಾಡೊಡಂ ಸ್ಮರೋನ್ಮಾದದೊಳೀ ವಿಮೋಹದೊಳೇಕೆ ಗಡಂ ಬಗೆಯಂ ತಗುಳ್ಚಿ ಬೆಳ್ಳಾದಪನಕ್ಕಟಾ: **ಆದಿಪು,** ೨. ૩೫); ಭ್ರಾಂತಿ ಇಂದ್ರಜಾಲದ ವಿಮೋಹಮೊ ಮೇಣಿದು ಮೂರ್ಛೆಯೊಂದು ಸಂಜನನಮೊ: **ಚಂದ್ರಪ್ರಪು,** ೫. ೭)

**ವಿಮೋಹಮೃಗ** – ಮೋಹವೆಂಬ ಪ್ರಾಣಿ (ವಿಮೋಹಮೃಗಮಂ ಮಿಥ್ಯಾಕಂದರದೊಳ್ ಬೆದಱಟ್ಟುವ ದುಂದುಭಿರವದಂತಿರೆ ಒಗೆಯೆ ಗಂಭೀರರವಂ: **ಯಶೋಧಚ,** ೪. ೨೨)

**ವಿಮೋಹನವಿದ್ಯೆ** – ಸಮ್ಮೋಹಿನಿ (ಕುದುಕುಳಿ ದಾನವಂ ನಿಜವಿಮೋಹನವಿದ್ಯದಭೇದ್ಯಶಕ್ತಿಯಿಂದೊದವಿಸೆ ಮೋಹಮಂ ಹೃದಯದೊಳ್ ಸಭೆಗೆ: **ಚಂದ್ರಪ್ರಪು,** ೫. ೫)

**ವಿಯಚ್ಚಕ್ರ** – [ವಿಯತ್+ಚಕ್ರ] ಆಕಾಶ ಮಂಡಲ (ಪ್ರತಾಪಕ್ಕೆ ಅಗುರ್ವಿಸೆ ಗೋಟುಂಡೆಗೊಳುತ್ತುಂ ಇರ್ದುದು ದಿಶಾಚಕ್ರಂ ಪೊದಳ್ದ ಆಜ್ಞೆಗಂ ಪೆಸರ್ಗಂ ಮುನ್ನಮೆ ರೂಪುವೋದುದು ವಿಯಚ್ಚಕ್ರಂ: **ಪಂಪಭಾ,** ೧. ೧೧೦)

**ವಿಯಚ್ಚರ** – ಗಗನಸಂಚಾರಿ, ಖೇಚರ (ಪಗಲಿನ ಸೂಟ್ ಸಿರಿಗಾಗಲೆವೇಟ್ಟುದು ತಡದಿರದುಪ್ಪವಡಿಸು ವಿಯಚ್ಚರಾಂಬರ ಭಾನೂ: **ಶಾಂತಿಪು,** ೫. ೮೬);

**ವಿಯಚ್ಚಿಕುರ** – ಆಕಾಶಗಂಗೆಯನ್ನು ತಲೆಯಲ್ಲಿ ಧರಿಸಿದವನು, ಶಿವ (ಜಯಜಯ ಜಗದ್ಭರಿತ ಜಯ ಜಯ ಹರಿಪ್ರಣುತ ಜಯ ಜಯ ವಿಯಚ್ಚಿಕುರ ಜಯ ಜಯ ಚಿದಾತ್ಮ: **ಉದ್ಭಟಕಾ,** ೨. ૩೫)

**ವಿಯತ್** – ಆಕಾಶ (ವಿಯತ್ ಅಂಗಂ ಸಾಂದ್ರಸಂಧ್ಯಾ ರುಚಿಮಯಂ ಅಚಳಶ್ರೇಣಿ ಮಾಣಿಕ್ಯರೋಚಿರ್ಮಯಂ: **ಶಾಂತೀಶ್ವಪು,** ೧೫. ೧૩૩)

**ವಿಯತ್ತಟಿನೀ** – ಆಕಾಶಗಂಗೆ (ಲೋಳ ತರಂಗ ರಾಜಿತ ವಿಯತ್ತಟಿನೀ ತಟ ಚಾರು ಕಲ್ಪಭೂಜಾಳಿಯ ಬೀಟಲೆಂದೆನೆ: **ಕುಸುಮಾಕಾ,** ೨. ೯೯)

**ವಿಯತ್ತಳ** – ಆಕಾಶ (ಉನ್ನತ ಧವಳಚ್ಛತ್ರಚ್ಛನ್ನ ವಿಯತ್ತಳನಂ ಇಂದುಕುಳತಿಳಕನಂ ಇಂತು ಅನ್ನೆಯದಿಂದ ಈ ಪಟುವಿನೊಳ್ ಎನ್ನರಸನಂ ಇಂತು ಬಿದಿಯೆ ತಂದಿಕ್ಕುವುದೇ: **ಪಂಪಭಾ,** ೨. ೨೨)

**ವಿಯತ್ಪಥ** – ಗಗನಪಥ, ಆಕಾಶಮಾರ್ಗ (ನೋಟಕ್ಕಿಂಬಾದುದು ಮೇಘರಥವಿಯತ್ತಳಗಮನಂ: **ಶಾಂತಿಪು,** ೯. ೭૩)

**ವಿಯದ್ಗಾಮಿ** – ವಿಯಚ್ಚರ[ರಿ] (ರೂಪಪರಾವರ್ತನಂ ಎಂಬ ವಿದ್ಯೆಯಿಂ ಅಭಿಪ್ರಾಯಂ ವಿಯದ್ಗಾಮಿ ಭೂಮಿಪನೊಳ್ ತೊಟ್ಟುದಂ: **ಶಾಂತಿಪು,** ೨. ೬೬)

**ವಿಯದ್ವಾಹಿನಿ** – ಆಕಾಶಗಂಗೆ (ಹಿಮಶೈಲಪ್ರಮುಖಂಗಳಾಱು ಕುಲಶೈಲಂಗಳ್ ವಿಯದ್ವಾಹಿನೀಪ್ರಮುಖಂಗಳ್ ಪದಿನಾಲ್ಕು ಗೋತ್ರನದಿಗಳ್: **ಮಲ್ಲಿನಾಪು,** ೧. ೬૩)

**ವಿಯನ್ನಂದನ** – ಇಂದ್ರವನ (ದುಂದುಭಿನಾದಮಾವರಿಸೆ ದಿಶಟಮಂ ಚಲಕೇತನಂ ವಿಯನ್ನಂದನಶಂಕೆಯಂ ಪಡೆಯೆ .. .. ಕಣ್ಗೆವಂದದೇಂ ಬಂದುದೊ ರಾಮಕೇವಲಿಯ ಕೇವಲಪೂಜೆಎ ದೇವಸಂಕುಲಂ: **ಪಂಪರಾ,** ೧೬. ೬೯)

**ವಿಯನ್ನದಿ** – ದೇವಗಂಗೆ (ಬಂದು ಉರ್ವರೆಯಂ ವಿಯನ್ನದಿಯೆ ಸಾರ್ದಿರ್ಪಂದಮಾಯ್ತು: **ಕುಸುಮಾಕಾ,** ೧. ೭೭)

**ವಿಯನ್ಮಹೀರುಹ** – ಕಲ್ಪವೃಕ್ಷ (ವಿಯನ್ಮಹೀರುಹದ ಪೂಗುಡಿಯೊಳ್ ಗುಡಿಗಳ್ ಪೊದಳ್ದು ಚೆಲ್ವಾಗೆ: **ಚಂದ್ರಪ್ರಪು,** ૩. ೯೬)

**ವಿಯೋಗಿ** – ವಿರಹಿ (ಮಾವಿನ ಬಂದ ಕೋಡೆ ಕೋಡಾಗಿರೆ ಕೋಡುಗೊಂಡು ಪರಿದತ್ತು ವಸಂತಗಜಂ ವಿಯೋಗಿಯಂ: **ಪಂಪಭಾ,** ೨. ೧೫)

**ವಿರಕ್ತಪ್ರಕೃತಿ** – ಯಾವುದರಲ್ಲೂ ಆಸಕ್ತಿಯಿಲ್ಲದ ಸ್ವಭಾವ (ವ್ಯಸನಿ ಯುದ್ಧಾಸಕ್ತಂ ಅನಿಶ್ಚಯಬುದ್ಧಿ ವಿರಕ್ತಪ್ರಕೃತಿಯೆನಿಪ್ಪ ಅರಿನೃಪನೊಳ್ ಇಱಿವುದುಱಿವುದು ನಯಮಂ: **ಪಂಚತಂತ್ರ,** ೨೮೧)

**ವಿರಕ್ತಿ** – ವೈರಾಗ್ಯ (ಜಿನೇಶ್ವರಂ ಬೆಸಸೆ ಕೇಳ್ದಜಿತಂಜಯ ಭೂಮಿಪಾಲಕಂ ಸಂದು ವಿರಕ್ತಿಗಾಗಳೆ ತದೀಯ ಸಮಕ್ಷದೆ ದೀಕ್ಷೆಗಂ ಮನಂದಂದಂ: **ಚಂದ್ರಪ್ರಪು,** ೭. ೨೭)

**ವಿರಚಿಸು** – ನಿರ್ಮಿಸು (ನಿಜರಾಜಧಾನಿಯೊಳೊಸಗೆಯಂ ಮಾಡಿ ವಿವಾಹಮಂಟಪಮಂ ಸ್ಥಪತಿರತ್ನಕ್ಕೆ ವಿರಚಿಸೆಂದು ಬೆಸಸಿದಾಗಳ್: **ಆದಿಪು,** ೪. ૩೦ ವ); ಕೃತಿರಚನೆ ಮಾಡು (ಕೃತಿಯಂ ವಿರಚಿಸಿದಂ ಅಲಂಕೃತಿಯಂ ಕವಿರತ್ನನೆಂದೊಡೇವಣ್ಣಿಪುದೋ: **ಗದಾಯು,** ೧. ૩೨); ಸಿದ್ಧಪಡಿಸು (ವಿರಚಿಸಿದಂ ವಿಚಿತ್ರತರಮಪ್ಪಲರ್ವಚ್ಚಮಂ: **ಜಗನ್ನಾವಿ,** ೬. ೧೫)

**ವಿರತಿ** – ಮುಕ್ತಾಯ (ಜ್ವಳನಜಟಿ ನಿಜಪುರೋಪವನಳೀಳೆ ಮಧುಮಾಸವಿರತಿಯೊಳ್ ಮಸುಳ್ದಿರೆ ಕಂಟಳಿಸಿದ ಮೆಯ್ವೆರಸಿನಿನಾಕುಳನಾದೊಂ: **ಶಾಂತಿಪು,** ೫. ೬೫); ವಿರಕ್ತೆ (ಅತಿರೂಪವತಿಯರುಂ ನವವಯಸ್ಸುಪೇತೆಯರ್ ವಿರತಿಯರ್ ಬರೆ: **ಕರ್ಣನೇಮಿ,** ೧೪. ೧૩೦ ವ)

**ವಿರಥ** – ನಿರಾಶೆ (ಚಕೋರಮುಖಂ ವಿಕಸಿತಮಾದುದು ಮನ್ಮಥಂ ನನೆಗಣೆಯಂ ಹೂಡಿದಂ ವಿರಹಿಗಳ್ ವಿರಥರಾದರ್: **ಗಿರಿಜಾಕ,** ೪. ೧೦೨ ವ)

**ವಿರಮಣ** – ಕೊನೆ, ನಿಲುಗಡೆ (ಜಿನಚಂದ್ರಮುನೀಂದ್ರನೆ ಶಾಂತಿನಾಥನಾಥನಾದೊಂ ಭವಾವಳೀವಿರಮಣದೊಳ್ : **ಶಾಂತಿಪು,** ೧೨. ೬೦)

**ವಿರಲ** – ಅಪರೂಪವಾದ (ವಿರಲ ಫಲಂಗಳಾದುವು ಅಖಿಲೌಷಧಿಗಳ್: **ಆದಿಪು,** ೮. ೬೨)

**ವಿರಹ** – ಅಗಲಿಕೆ (ವಿರಹ ವಿಧುರೆಯಾಗಿಯುಂ ಲಾವಣ್ಯರಸ ತರಂಗಿಣೀ ತರಂಗ ಲೇಖೆಯಂ ಅನುಕರಿಸಿ ತಳಿರ್ತಶೋಕ ತರು ತಳಮನಲಂಕರಿಸಿ: **ಪಂಪರಾ,** ೧೧. ೮೨ ವ)

**ವಿರಹವಿಧುರೆ** – ಅಗಲಿಕೆಯ ದುಃಖದಿಂದ ಕೂಡಿದ[ವಳು] (ದಿನಲಕ್ಷ್ಮಿಯಂ ಬಳಸಿದ ದೀಪಮಾಲೆಯಂತೆ ಕಾಂತಿಗೆಟ್ಟಿರೆ ವಿರಹವಿಧುರೆಯಾಗಿಯುಂ: **ಪಂಪರಾ,** ೧೧. ೮೨ ವ)

**ವಿರಾಜಿತ** – ಹೊಳೆಯುವ (ಮುತ್ತಿನ ತೋರಣಂ ಕನಕವೇದಿಕೆ ಪಚ್ಚೆಯ ಕುಟ್ಟಿಮಸ್ಥಳಂ .. .. ವಿರಾಜಿತಮಾಯ್ತು ವಿವಾಹಗೇಹದೊಳ್: **ರಾಜಶೇವಿ,** ೮. ೨); ತೇಜಸ್ವಿ ವ್ಯಕ್ತಿ (ಧೀರತೆಗಿಡದೆ .. .. ತಮೋವೈರಿವಿಜಯಕ್ಕೆ ಮಸೆದ ಅಸಿಧಾರೆವೊಲಪರಾಜಿತಂ ವಿರಾಜಿತನಾದಂ: **ಶಾಂತಿಪು,** ೪. ೧೦೯)

**ವಿರಾಮ** – ವಿಶ್ರಾಂತಿ (ಕಳೆದ ಭವದೊಳ್ ವಿರಾಮಂಗಳೊಳ್ ಒದವಿದ ಮೋಹದಿಂ ವಿಚಾರಕ್ಕೆ ಪವಣ್ಗಳೆದ ಗುಣದಿಂ ಕರಂ ಪಳುಗಳಿದುದು ದಯೆ ತಮ್ಮನೊಳ್ ಜಗತ್ತ್ರಯಪತಿಯಾ: **ಶಾಂತಿಪು,** ೧೦. ೯೯)

**ವಿರಿಂಚ** – ಬ್ರಹ್ಮ (ವಿರಿಂಚನ ಕೈಚಳಕದಳವ ನಾನಜೆಯದುದೇ: **ಧರ್ಮಮಧು,** ೩. ೯೮)

**ವಿರಿಂಚಾಭಾಂಡ** – ಬ್ರಹ್ಮಾಂಡ (ತೆಗೆದೀಂಟಲ್ ವಾರ್ಧಿ ನುಂಗಲ್ ದಿಗಿಭಸಮಿತಿ ತುತ್ತಲ್ ವಿರಿಂಚಾಭಾಂಡಂ ಮಿಗಿಲಲ್ತು: **ಜಗನ್ನಾವಿ,** ೬. ೭೫)

**ವಿರಿಂಚಿ** – ಬ್ರಹ್ಮ (ಇಂಚೆಯ ಪಸವಿನ ಬಜಿದ ಕಳಂಚಿನ ಡಾವರದ ಬಾಧೆಯಿಲ್ಲದ ಪದದೊಳ್ ಮುಂಚದೆ ಪಿಂಚದೆ ಬಳೆದು ವಿರಿಂಚಿಯ ಕೆಯ್ಪಿಡಿವೊಲಾದುವಾ ನಾಡ ಊರ್ಗಳ್: **ಪಂಪಭಾ,** ೮. ೫೧)

**ವಿರುತ** – ಧ್ವನಿ (ಸ್ಮಿತಮಂ ಪೂವಿಂಗೆ ರೂಪಂ ಲತೆಗೆ ವಿರುತಮಂ ಕೋಕಿಲಶ್ರೇಣಿಗೆ .. .. ಕೊಟ್ಟು: **ಲೀಲಾವತಿ,** ೧೪. ೭೧)

**ವಿರುತಿ** – ಶಬ್ದ (ದಿನನಾಥನ ಸುಯ್ಯಂ ಪಟಹ ನಿನಾದಂ ಸಾಂಧ್ಯಮೇಘನಿರುತಿ ತಮೋರಾಜನ ಜಯದುಂದುಭಿಸ್ವನಂ ಎನಿಸಿದುದು ಚತುಃಪ್ರಕಾರಭೇರೀನಿನದಂ: **ಮಲ್ಲಿನಾಪು,** ೭. ೧೪)

**ವಿರುದ್ಧವೃತ್ತ** – ವಿರುದ್ಧವಾದ ನಡತೆಯವನು (ಅಪ್ರಮತ್ತತೆಯೊಳ್ ಅನ್ಯಪ್ರೀತಿಶೀಲಕ್ಕೆ ಕೇಡೊಗೆದತ್ತೆಂಬ ವಿರುದ್ಧವೃತ್ತರ್ ಎಮಗೊಳ್ಪಂ ಮಾಟ್ಕೆ ಸಾಧೂತ್ತಮರ್: **ಪುಷ್ಪದಂಪು,** ೧. ೫)

**ವಿರುದ್ಧಾತ್ಮಕ** – ವಿರೋಧದಿಂದ ಕೂಡಿದ (ಸಕಲವ್ಯಾಪಿ ವಿಶೇಷಪ್ರಕಾಶಂ ಯುಕ್ತಕಾರಿ ಯುಕ್ತಾಯುಕ್ತಂ ಪ್ರಕಟಶ್ಲೇಷ ವಿರುದ್ಧಾತ್ಮಕಂ ವಿರುದ್ಧಂ ವಿಪರ್ಯಯಂ ಯುಕ್ತಾರ್ಥಂ: **ಕವಿರಾಮಾ,** ೩. ೨೯)

**ವಿರುವತ್** – ಶಬ್ದಮಾಡುವ (ಅಮರಗಣಿಕೆಯರ ಮನಂ ವಿರುವತ್ ಅಳಿನಿಕರದೊಡನಿರದೆ ಎಜಗಿದುವು ಅಮರತರುಲತಾಂತಾವಳಿಯೊಳ್: **ಆದಿಪು,** ೭. ೬೮)

**ವಿರೂಕ್ಷ** – ಭಯಂಕರವಾದ (ಮತ್ತಮಾ ನಾರಕರೆಲ್ಲಂ ಹುಂಡಮುಂಡಸಂಸ್ಥಾನರುಂ ಅತಿವಿರೂಕ್ಷ ಕೃಷ್ಣವರ್ಣರುಂ ಅತಿದುರ್ಗಂಧರುಂ: **ಸುಕುಮಾಚ,** ೧೧. ೪೮ ವ)

**ವಿರೂಪೆ** – ಕುರೂಪಿ (ಆತನ ದಾದಿ ವಿನಯವತಿಯೆಂಬೊಳ್ ಗುಜ್ಜೆ ವಿರಳದಂತೆ ಆದಮಾನುಂ ವಿರೂಪೆ: **ವಡ್ಡಾರಾ,** ಪು. ೧೦೬, ಸಾ. ೨೨)

**ವಿರೋಚನ** – ಸೂರ್ಯಚಂದ್ರರು (ಅವನಿಗಧಿಪನಂ ಆ ಮಹಿತ ವಿರೋಚನರ್ಕಳಿಂ ನುತಸುತನಂ: **ಕರ್ಣನೇಮಿ,** ೧. ೧೩೪)

**ವಿರೋಚನಾಸ್ತಮಯ** – (ವಿರೋಚನ+ಅಸ್ತಮಯ] ಸೂರ್ಯನ ಮುಳುಗುವಿಕೆ (ಉಭಯಲೋಕವಿವೇಕ ವಿರೋಚನಾಸ್ತಮಯ ವೇಳೆಯುಂ: **ಆದಿಪು.** ೧೪. ೧೨೨ ವ)

**ವಿರೋಧಿ** – ಹಗೆ (ತಾಜವಜಾಗೆ ಜಯಂ ಜೊಮ್ಮೇಜುವ ಟೆಂಟಣಿಸುವ ಅರಸನರಸನ ವಿರಸಂಬೇಜೆ ನಯಮಿರೆ ವಿರೋಧಿಗೆ ಮಾರಾಂಪಂ ತನ್ನ ಮೇಲೆ ತಾಂ ಮರಗಡಿವೊಂ: **ಶಾಂತಿಪು,** ೨. ೪೧); ಪ್ರತಿಭಟಿಸುವವನು (ವಿನುತವಿರೋಧಿ ಮಂಡಳಿಕಮೌಳಿವಿಘಟ್ಟಿತ ಪಾದಪೀಠಕಾಂಚನ ಕಮಲಾಯಮಾನಮಿವು ನಿಮ್ಮಯ ಮೆಲ್ಲಡಿ: **ಗದಾಯು,** ೪. ೧೮)

**ವಿರ್ದಾಡು** – ಔತಣ ಮಾಡು (ತೋಡುವೆಂ ಒರ್ವನ ಒಳ್ಗರುಳಂ ಉರ್ವಿಗೆ ನೆತ್ತರನೆತ್ತಿ ಪೀರ್ದು ವಿರ್ದಾಡುವೆಂ ಒರ್ವನ ಊರುಗಳಂ ಎನ್ನ ಗದಾಶನಿಘಾತದಿಂದೆ ನುರ್ಗಾಡುವೆಂ: **ಪಂಪಭಾ,** ೯. ೨೪)

**ವಿಲಂಘಿಸು** – ಹಾರು, ದಾಟು (ಪಡಿನೆಳಲಂ ಮೃಗೇಂದ್ರನುಜಿ ಚಂದ್ರಶಿಲಾತಳದಲ್ಲಿ ಕಂಡು .. .. ವಿಲಂಘಿಸಿ ಪಾಯ್ದು ಪೊಯ್ದು ತಾಂ ಮಡಿದುದು: **ರಾಜಶೇವಿ,** ೫. ೭೭)

**ವಿಲಕ್ಷ್ಯ** – ಅಚ್ಚರಿ (ಬಳ್ಳಿಮಿಂಚಿನಿಸಂ ನಿಶ್ಚಲಮಾಗಿ ನಿಲ್ಕುಮೆ ವಿಲಕ್ಷ್ಯಂ ತಾನಿದೆಂಬನ್ನಮೋಹನಮಂ ಪುಟ್ಟಿಸಿ ತನ್ನ ದಿಟ್ಟಿವೆಳಗಿಂ: **ಮಲ್ಲಿನಾಪು,** ೮. ೯೧)

**ವಿಲಗ** – ತೊಡಕು, ತೊಂದರೆ (ಶಿವನಮರನೀತಿಯಂ ವಿಲಗಮನಿಕ್ಕಿ ಕಡಂಗಿ ಕಾಡಿ ಬೇಡಿ ಪರಿಕಿಪುದಂ: **ತ್ರಿಷಷ್ಟಿಪು,** ೯. ೫೬)

**ವಿಲಯ** – ಪ್ರಳಯ (ವಿಲಯಂ ನಾಶ ಯುಗಾಂತದೊಳ್ **ಅಭಿಧಾವ,** ೩. ೧. ೩೪)

**ವಿಲಯಾನಲ** – ಪ್ರಳಯಕಾಲದ ಬೆಂಕಿ (ಬಲದೇವಮಖಿಳ ರಿಪುಕುಲ ವಿಲಯಾನಲಂ ಆತ್ಮಕುಲ ಸಮುಜ್ವಲ ಗಗನಸ್ಥಲ ಖರಕರಂ: **ಶಾಂತಿಪು,** ೨. ೧೦)

**ವಿಲಸತ್** – ಹೊಳೆಯುವ (ಶರದಭ್ರಂ ಪರಿವಿಷ್ಟಮಪ್ಪ ವಿಲಸತ್ ನೀಲಾದ್ರಿಯೆಂಬಂತೆ ಬಿತ್ತರಿಸುತ್ತಿರ್ಪ ದುಕೂಲ ಚೇಲನಗಳಿಂ ಚೆಲ್ವಾಗಿ ತೋರ್ಪ ಆ ಮದೋದ್ಧುರ ಮಾತಂಗಮಂ ಏಜೆ: **ಶಾಂತೀಶ್ವಪು,** ೩. ೧೨೫); ಶ್ರೇಷ್ಠವಾದ (ವಿಲಸತ್ ಗುಣಾವಗುಣವಿವರ್ತಿ ಗುರೂಪದೇಶಾಮಲಿನ ಅವಬೋಧ ವಿದಿತಾಖಿಳ ಚೋದ್ಯವೃಂದಂ: **ಕವಿರಾಮಾ,** ೩. ೨೨೬)

**ವಿಲಾಸ** – ಸೊಬಗು, ಬೆಡಗು (ವಾಸವಪುರಂ ಇದಜೇ ವಿನ್ಯಾಸಮಂ .. .. ವಿಲಾಸಮಂ ಇದಜೇ ಬೆಡಂಗಂ ಅವಗಯಿಸುಗುಮೇ: **ಶಾಂತಿಪು,** ೩. ೮)

**ವಿಲಿಖಿತ** – ಬರೆಯಲ್ಪಟ್ಟ, ಚಿತ್ರಿತವಾದ (ಮೃಗಮದ ವಿಲಿಖಿತ ವಿಚಿತ್ರಪತ್ರಭಂಗ ಭಾಸುರಭುಜಶಿಖರನುಂ: **ಆದಿಪು,** ೩. ೯೦ ವ)

**ವಿಲಿಪ್ತ** – ಬಳಿದ, ಲೇಪಿಸಿದ (ಪಾರ್ವತೀಪಯೋಧರಲೇಪಿತ ಮೃಗಮದವಿಲಿಪ್ತ ವಕ್ಷಸ್ಥಳಂ: **ರಾಜಶೇವಿ,** ೨. ೧)

**ವಿಲೀನ** – ಸೇರಿರುವ (ನಾಡದಾ ಕನ್ನಡದೊಳ್ ಭಾವಿಸಿದ ಜನಪದಂ ವಸುಧಾವಲಯವಿಲೀನ ವಿಶದವಿಷಯ ವಿಶೇಷಂ: **ಕವಿರಾಮಾ,** ೧. ೩೬)

**ವಿಲುಠತ್** – ಹೊಯ್ದಾಡುವ (ವಿಲುಠತ್ ಕಾಂಚನಘಂಟಿಕಾವಳಿ ಲಸತ್ ಕೂರ್ಪಾಸಯುಕ್ತೋರು .. .. ಧೃತವೇತ್ರದಂಡಂ: **ತ್ರಿಷಷ್ಟಿಪು,** ೨೪. ೨೩೩)

**ವಿಲುಪ್ತ** – ನಾಶಗೊಂಡ (ಚಪಳ ಕಪಿಬಳವಿಲುಪ್ರತ ವಿಗಳಿತ ಲತಾಭವನಮುಂ: **ಪಂಪಭಾ,** ೪. ೧೮ ವ)

**ವಿಲುಳಿತ** – ಒದರಿದ, ಬಿದ್ದುಹೋದ (ಸಂಗ್ರಾಮಭೂಮಿಯ ನಡುವೆ ಧೃಷ್ಟದ್ಯುಮ್ನ ಕಚಗ್ರಹವಿಲುಳಿತಮೌಳಿಯುಂ ತದೀಯ ಕೌಕ್ಷೇಯಕಧಾರಾವಿದಾರಿತಶರೀರನುಂ ಆಗಿ ಬೀಟ್ದಿರ್ದ ಶರಾಚಾರ್ಯರಂ ಕಂಡು: **ಪಂಪಭಾ,** ೧೩. ೫೫ ವ); ಅಲುಗಾಡುವ (ಪೋದಂ ಮುಂದಾ ಕೇಯೂರಕ ಸುವಿಲುಳಿತಹಾರಂ: **ಕಾದಂಸಂ,** ೫. ೧೨)

**ವಿಲೂನ** – ಕಳೆದುಕೊಂಡ (ಕೋಟಲೆಗೊಂಡು ವಿಶಾಖನಂದಿ ವಿಲೂನವೈಶಾಖ ಕಂದಲಿಯಂದದಿಂದಂ ಕರಮೆ ಕೊರಗಿ: **ಆಚವರ್ಧ,** ೨. ೩೭ ವ)

**ವಿಲೂನನಾಸಿ** – ಮೂಕೊರತೆ ಮರ (ವಿಲೂನನಾಸಿಯ ಸುರೂಪೆಯ ಪಾಣ್ಬೆಯ .. .. ಅಭಿಧಾವಮಂ ತಳೆದ ಭೂರುಹಂ ಒಪ್ಪುಗುಂ ಆ ವನಾಂತದೊಳ್: **ರಾಜಶೇವಿ,** ೫. ೫೭)

**ವಿಲೇಪನ** – ಬಳಿಯುವಿಕೆ (ಗುರೂಪರೋಧವಶದಿಂ ಸ್ನಾನ ಅನ್ನಪಾನಂ ವಿಲೇಪನ ಮಾಲ್ಯಾದಿಗೆ ತಾನೊಡಂಬಡುವನೇಂ ದೇವಂ ನಿರಾಪೇಕ್ಷನೋ: **ಆದಿಪು,** ೫. ೮೬)

**ವಿಲೋಕನ** – ನೋಟ (ಮನಸಿಜನ ವಿಲೋಕನಾಕರ್ಷಣ ಸ್ಥಾನದಂತೆ ಪಂಚಾಂಡಕಪರಿಣತಿಯಂ .. .. ಅತಿಶಯಮಾದ ಚಿತ್ರಶಾಲೆಯಿಂ ಮನಂಗೊಳಿಸಿ: **ಮಲ್ಲಿನಾಪು,** ೨. ೫೮ ವ)

**ವಿಲೋಕನಂಗೆಯ್** – ನೋಡು (ತನ್ನ ಮನೆಗೆ ವಂದು ನಿಜಾಂಗನಾಮುಖ ವಿಲೋಕನಂಗೆಯ್ದು: **ಸುಕುಮಾಚ,** ೩. ೧೫ ವ)

**ವಿಲೋಚನ** – ಕಣ್ಣು (ಮದೀಯ ಮನೋಗತ ಕಾಮಸಾಗರದ ಒದವಿಂಗೆ ನಲ್ಲಳ ವಿಲೋಚನಚಂದ್ರಿಕೆಯೊಂದೆ ಸಾಲದೇ: **ಪಂಪಭಾ,** ೫. ೧೧)

**ವಿಲೋಚನಾಂಬು** – ವಿಲೋಚನವಾರಿ (ಉಣ್ಮಿಪೊಣ್ಮಿ ಕಣ್ಮಲರ್ಗಳಿಂ ಎಚ್ಚುಪಾಯ್ದುವು ಅರಲಂಬುಗಳಂತೆ ವಿಲೋಚನಾಂಬುಗಳ್: **ಪಂಪಭಾ,** ೪. ೧೦೮)

**ವಿಲೋಢ್ಯ** – ಕಲಕಿದ (ವಿಧುರಗತಿ ವಿಲೋಢ್ಯಂ ತಳ್ತು ನಿಲ್ತಪ್ಪುದು ಆ ವಾಗಧಿಪ ವಚನಮಾಲಾ ಪಾವನೀಯಂ ಗಭೀರಂ: **ಕವಿರಾಮಾ,** ೨. ೧೫೪)

**ವಿಲೋಪ** – [ಜೈನ] ಅಸ್ತೇಯ ವಿರೋಧಿಕ್ರಿಯೆ, ಅನ್ಯ ಸ್ವತ್ತನ್ನು ಹಾಳುಮಾಡುವುದು (ಹೀನಾಧಿಕ ವಿನಿಮಾನಸ್ತೇನಾಹೃತದಾನ ಸದೃಶ ಮಿಶ್ರ ವಿಲೋಪ ಸ್ತೇನ ಪ್ರಯೋಗಮೆಂದಿವು ತಾನಸ್ತೇಯವ್ರತಕೃತ್ರಿಮಮಕ್ಕುಂ: **ಸುಕುಮಾಚ,** ೬. ೧೫)

**ವಿಲೋಹಿತವಿಲೋಚನರುಚಿ** – ಕೆಂಪಾದ ಕಣ್ಣಿನ ಕಾಂತಿ (ಅಪಾರ್ಥ ವಿಲೋಹಿತವಿಲೋಚನರುಚಿಯುಂ ನಿರರ್ಥಕ ನಿಷ್ಠುರೋಷ್ಠಪುಟಸಂದಂಶಮುಂ: **ಆದಿಪು,** ೧೪. ೮೧ ವ)

**ವಿಲೋಲ** – ಚಂಚಲ (ಆ ಕುಮಾರಂ .. .. ಜಲಕೇಳೀವಿಲೋಲನುಂ ವನಕೇಳೀವಸಂತನುಂ: **ಲೀಲಾವತಿ,** ೧. ೧೦೬ ವ)

**ವಿವಕ್ಷಿತ** – ಅಂದುಕೊಂಡ, ಬಯಸಿದ (ಕುಜೆತಂತೆ ಪೇೞ್ದ ಪದದೊಳ್ ಮೆಱೆಯದೊಡೆಲ್ಲಂ ವಿವಕ್ಷಿತಾರ್ಥಮಶೇಷಂ ಪೆಱತೊಂದಲ್ಲಿಲ್ಲದುಮಂ ಅಱಿವವರಿಟ್ಟರಱೆಯೆ ಪೇೞ್ದೊಡದು ನೇಯಾರ್ಥಂ: **ಕವಿರಾಮಾ,** ೧. ೧೦೧)

**ವಿವಕ್ಷಿಸು** – ಬಯಸು (ಸ್ತ್ರೀಪುತ್ರದಾಯಾದ್ಯರತ್ತಣಿಂದ ಆತ್ಮರಕ್ಷಣೆಯಂ ವಿವಕ್ಷಿಸಿಯುಂ: **ಚಂದ್ರಪ್ರಪು,** ೨. ೬೦ ವ)

**ವಿವಕ್ಷೆ** – ಆಸೆ (ಅಲ್ಲಿ ವರ್ತಿಸುವ ಉತ್ಸರ್ಪಣ ಅವಸರ್ಪಣ ಯುಗಸ್ವರೂಪಣವಿವಕ್ಷೆಯಿಂ ಮುಖ್ಯ ವ್ಯವಹಾರನಯದೊಳ್ ಉಭಯಾತ್ಮಕವೆನಿಪ್ಪ ಕಾಲಸ್ವರೂಪಮೆಂತೆನೆ: **ಪಂಪರಾ,** ೧. ೪೫ ವ)

**ವಿವಕ್ಷೆಗೆಯ್** – ಆಲೋಚಿಸು (ಮುನಿಯದ ಕೂರದ ಮುನಿಸದ ಮುನಿಪತಿ ಭಾವಿಪೊಡೆ ತಾನೆ ಜಿನಪತಿಯಲ್ತೆ ಎಂದು ವಿಶುದ್ಧಾಂತರಂಗದಿಂ ವಿವಕ್ಷೆಗೆಯ್ಯುತ್ತುಂ: **ಸುಕುಮಾಚ,** ೪. ೩೭ ವ)

**ವಿವರ** – ಬಿರುಕು (ಭೂವಿವರದಿನೊಗೆತಂದ ಪಾವೆಸೆದುದು ಸಪ್ತಫಣಮಣಿಪ್ರಭೆಯಿಂ: **ನೇಮಿನಾಪು,** ೮. ೨೮); ಬಿಲ (ಮೂರ್ಛೆವೋಗಿ ಪಾತಾಳತಲವಿವರಮಂ ಪೊಕ್ಕಂತೆ ಮಹಾಂಧಕಾರಂ ಕವಿಯೆ: **ಕಾದಂಸಂ,** ೪. ೯೯ ವ) ತೂತು (ತನ್ನ ಮಯ್ಯುನನಾಭೀಳ ಕೃತಾಂತದಂತ ವಿವರೋಪಾಂತಮಂ ಪೊರ್ದಿದಂ: **ಸುಕುಮಾಚ,** ೨. ೫೨)

**ವಿವಶಿಸು** – ವಶಮಾಡಿಕೊ (ಕಿವಿವರಮೆಯ್ದೆ ನೀಳ್ದ ಕಡೆಗಣ್ ಕರಮಕ್ಕಱೆನೀಯೆ ರಾಗಮಂ ವಿವಶಿಸೆ ಪುರ್ವಿನುರ್ವು ಸುಳಿಪಲ್ ಮನಮಂ ಸೆರೆಗೆಯ್ಯೆ: **ಧರ್ಮಾಮೃ,** ೫. ೨೮)

**ವಿವಸ್ವತ್** – ಸೂರ್ಯ (ಹರಿಣಧರ ವಿವಸ್ವತ್ ಮನಕುಂಭದ್ವಯಬ್ಜಾಕರ ಜಲಧಿಗಜದ್ವಿಟ್ಪೀಠ ಚಕ್ರಾಹಿಗೇಹ ಸ್ಫುರಿತ ಮಣಿಸಮೂಹಜ್ವಾಳೆಯಂ ಕಾಂತೆ ಕಂಡಳ್: **ಅಜಿತಪು,** ೩. ೧೨)

**ವಿವಾಹ** – ಮದುವೆ (ಉಪಯಾಮ ವಿವಾಹ ಉದ್ವಾಹ ಪರಿಣಯಂ: **ಅಭಿಧಾವ,** ೧. ೧೧. ೧೧); [ಜೈನ] ಒಂದು ಗರ್ಭಾನ್ವಯಕ್ರಿಯೆ (ವಿವಾಹ ವರ್ಣಲಾಭ ಕುಲಚರ್ಯಾ .. .. ಯೋಗತ್ಯಾಗಾಗ್ರನಿರ್ವೃತಿಯೆಂಬ ಅಯ್ವತ್ತುಮೂಱು ಗರ್ಭಾದಿನಿರ್ವಾಣಪರ್ಯಂತಮಪ್ಪ ಗರ್ಭಾನ್ವಯಕ್ರಿಯೆಗಳಳಂ: **ಆದಿಪು,** ೧೫. ೧೫ ವ)

**ವಿವಾಹಗೇಹ** – ಮದುವೆಯ ಮನೆ (ವಿವಾಹಗೇಹಮಂ ಸಮೆಯಿಸಿ ಅದಱ ನಡುವಣ ಆರ್ದ್ರಮೃತ್ತಿಕಾವಿರಚಿತಮಪ್ಪ ಚತುರಾಂತರದೊಳ್: **ಪಂಪಭಾ,** ೩. ೭೪ ವ)

**ವಿವಿಕ್ತ** – ಪರಿಶುದ್ಧವಾದ (ಅವಿವೇಕಿಗಳ ಮನಂಗಳಂ ಅವಿರಳಬಹಳ .. .. ವಿವಿಕ್ತ ವಿಶದಮನದೆಂತುಮಾಱದೆ ಪೊರ್ದಲ್: **ಅಜಿತಪು,** ೧೦. ೫೦)

**ವಿವಿಕ್ತಾವಾಸ** – [ಜೈನ] ಜೈನಮುನಿಯ ಏಕಾಂತವಾಸ (ಉಜ್ಜುಗಯ್ದನೆಯ ತಪಂ ಸಾಧುಗುಣಾಗ್ರಣಿಗೆಸೆದುದು ಆ ವಿವಿಕ್ತಾವಾಸಂ: **ಚಂದ್ರಪ್ರಪು,** ೧೧. ೧೨)

**ವಿವಿಧ** – ನಾನಾ ಬಗೆಯ (ವಿವಿಧಾರ್ಚನೆಗಳಿನರ್ಚಿಸಿ ವಿವಿಧಸ್ತುತಿಸಹಸ್ರದಿಂ ಸ್ತುತಿಯಿಸಿ: **ಆದಿಪು,** ೫. ೨೭)

**ವಿವೇಕವಿಕಳ** – ವಿವೇಕವಿಲ್ಲದವನು (ಪರಮಜ್ಞಾನಿಯೆ ವಿವೇಕವಿಕಳರವೋಲ್ ಬಾಲರ ತಲೆಯನರಿದು ತಂದೆಯೊ: **ಗದಾಯು,** ೯. ೩೪)

**ವಿವೇಕಶೂನ್ಯ** – ವಿವೇಕವಿಕಳ (ತರುಗಳುಂ ಮಾರ್ದವಮಂ ಕೆಯ್ಕೊಳ್ಳುಗುಂ ಅಲ್ಲದಂದು ಒಣಗುಗುಂ ಈ ಭವವಾರ್ಧಿಯೊಳ್ ಮುಱುಗಿದ ವಿವೇಕಶೂನ್ಯಂಗಸಾರಮಿಂತಿದೆ ಸಾರಂ: **ಶಾಂತಿಪು,** ೫. ೬೬)

**ವಿವೇಕಿ** – ವಿವೇಕವುಳ್ಳವನು (ಪರಮದೀಕ್ಷೆಗಪೇಕ್ಷಿಸಿದಂ ವಿವೇಕಿಯೇ: **ಪುಷ್ಪದಂಪು,** ೧೩. ೩೪)

**ವಿಶಂಕಟ** – ದೊಡ್ಡದಾದ, ಅಗಲವಾದ (ನಮುಚಿಸೂದನ ಪ್ರಚೋದಿತ ವಜ್ರಾಕರ್ಷಣ ವಿಸಂಕಟವ್ಯೂಢವಕ್ಷಸ್ಥಲರುಂ: **ಜಗನ್ನಾವಿ,** ೨. ೩೯ ವ)

**ವಿಶಂಕೆ** – ಸಂದೇಹ (ನಯನಿಯೋಗಕಲ್ಪನೆಯೊಳ್ ವಿಶಂಕೆಯೆ ವಿಶೇಷಗುಣಕ್ಕುಪಲಕ್ಷಣಂ; **ಕವಿರಾಮಾ,** ೧. ೧೩೮)

**ವಿಶದ** – ಬೆಳ್ಳಗಿರುವ (ಪಾಕಕುಶಕಾಶವಿಶದಂ .. .. ತತ್ ನದೀತಟಂ ಕಡುರಯ್ಯಂ: **ಲೀಲಾವತಿ,** ೫. ೮೦); ಸ್ಪಷ್ಟವಾದ (ಅಶಿಥಿಲಪದಚಯ ರಚನಾತಿಶಯಂ ಸಂಶ್ಲಿಷ್ಟಮೆಂಬುದಕ್ಕುಮನೇಯಂ ವಿಶದಾರ್ಥಂ ಶಬ್ದಾನ್ವಯವಶಮರ್ಥವ್ಯಕ್ತಿ: **ಕಾವ್ಯಾವಲೋ,** ೫೦೫)

**ವಿಶದಂ ಮಾಡು** – ಪ್ರಕಾಗೊಳಿಸು (ಅದಂ ನೀಂ ವಿಶದಂ ಮಾಳ್ಪುದು ಜಗದ್ವಿಶೇಷಕಚರಿತಾ: **ಆದಿಪು,** ೯. ೬೩)

**ವಿಶದೆ** – ಪರಿಶುದ್ಧೆ (ಅನುದಿನಂ ಅಮೃತಶ್ರೀ ತನ್ನನೆ ಭಾವಿಸಿ ವಿಶದೆಯಾದಳೆನೆ ಬೆಳಗುವ .. .. ಮನಮಂ ಬೆಳಗಿದುದು ಮೂರ್ತಿ ಚಂದ್ರಪ್ರಭನಾ: **ಲೀಲಾವತಿ,** ೮. ೮೮)

**ವಿಶದೋದಕ** – [ವಿಶದ+ಉದಕ] ತಿಳಿನೀರು (ಭರದಿಂ ನೀರಂ ಮೊಗೆದುಂಪರಿತಂದರ್ ಕನಕಕಳಶವಿಶದೋದಕಮಂ: **ಶಾಂತಿಪು,** ೧೦. ೩೯)

**ವಿಶರಾರು** – ನಶ್ವರವಾದುದು (ಪ್ರತಿಕ್ಷಣಂ ವಿಶರಾರುಗಳ್ ಚಿತ್ತಕ್ಷಣಂಗಳ್ ಪೂರ್ವಾಪೂರ್ವ ಚಿತ್ತವಿಶೇಷಪ್ರಭವಂಗಳ್: **ಶಾಂತಿಪು,** ೯. ೧೪೨ ವ)

**ವಿಶಸನ** – ಕೊಲೆ (ನಕ್ತಂಚರನಂ ನುಂಗಿತ್ತು ಭೂತಂ ಬಹು ವಿಶಸನಮೇಕಾರ್ಥ ಲೋಲಾತಿರೇಕಂ: **ನೇಮಿನಾಪು,** ೫. ೪೦)

**ವಿಶಸನರಂಗ** – ಯುದ್ಧರಂಗ (ಎನ್ನ ತೊಟ್ಟುವೆಸನನೀ ವಿಶಸನರಂಗದೊಳ್ ತೋರ್ಪೆಂ: **ಪಂಪಭಾ,** ೧೨. ೬ ವ)

**ವಿಶಾಪೆ** – ಶಾಪಮುಕ್ತಳಾಗಿಸು (ವರ್ಧಮಾನನೆಂಬ ಋಷಿಯ ಶಾಪದೊಳ್ ಉಗ್ರ ಗ್ರಾಹಸ್ವರೂಪದೊಳಿರ್ದ ಅಚ್ಚರಸೆಯರುಮಂ ವಿಶಾಪೆಯರ್ ಮಾಡಿ: **ಪಂಪಭಾ,** ೪. ೨೦ ವ)

**ವಿಶಾಲ** – ವಿಸ್ತಾರವಾದ (ಸಾಲಪ್ರಾಂಶುವಿಶಾಲಲೋಲನಯನಂ ಜಯಶ್ರೀಲೋಲಂ ಜಮದಗ್ನಿರಾಮಮುನಿಯೊಳ್ ಕಲ್ತಂ ಧನಿರ್ವಿದ್ಯೆಯಂ: **ಪಂಪಭಾ,** ೧. ೬೮)

**ವಿಶಾಳ** – ವಿಶಾರದ (ಆ ಸಹದೇವನುಂ ಬಾಳೋರ್ಲ ವಿಶಾಳನಾದಂ: **ಕರ್ಣನೇಮಿ,** ೯. ೨೭ ವ)

**ವಿಶಿಖ** – ಬಾಣ (ಅಂತು ಗುರುನಂದನಂ ಮರುನ್ನಂದನವಿರಚಿತ ನಿಶಾತ ವಿಶಿಖಪಂಜರಮನಟಿದು ಕಟಕುಟಿಂ ಮಾಡಿಯುಂ ಅನಿತಱೊಳ್ ಮಾಣದೆ: **ಪಂಪಭಾ,** ೧೨. ೬೮ ವ)

**ವಿಶಿಖಾಸನ** – ಬಿಲ್ಲು (ಆತನಿಂ ಬಟಿಯಂ ಅಸಂಖ್ಯೇಯಸಂವತ್ಸರ ಪ್ರಮಿತಮನ್ವಂತರಾಸಾನದೊಳ್ ಅಷ್ಟಶತ ವಿಶಿಖಾಸನ ಉತ್ಸೇಧನುಂ ಅಸಂಖ್ಯೇಯ ಆಯುಷ್ಯನುಮಾಗಿ: **ಆದಿಪು,** ೬. ೫೫ ವ)

**ವಿಶೀರ್ಣ** – ಭಗ್ನವಾದ, ಒಡೆದ (ಖುರೋಚ್ಚಳದುರುರೇಣು ದೂಸರಿತಂ ಅಗ್ರವಿಶೀರ್ಣವಿಷಾಣಂ ಆತ್ತಮಾಂಸಳತನು ಬಂದುದಂದು ಮುಹುರುತ್ಥಬೃಹದ್ರವನೊಂದು ಪುಂಗವಂ: **ಚಂದ್ರಪ್ರಪು,** ೨. ೨೮)

**ವಿಶುದ್ಧಬುದ್ಧಿ** – ನಿರ್ಮಲವಾದ ಬುದ್ಧಿ (ಅಂಬಿಕೆ ಸರಸ್ವತಿ ಮತ್ ಮುಖಪದ್ಮರಂಗದ ಏಟ್ಟೆಯಂ ಎಡೆಗೊಂಡು ಕೊಂಡುಕೊನೆದು ಈಗೆ ಅರಿಗಂಗೆ ವಿಶುದ್ಧಬುದ್ಧಿಯಂ: **ಪಂಪಭಾ,** ೧. ೫)

**ವಿಶೇಷಕ** – ಮುಖ್ಯನಾದವನು (ಆರೂಢಮದಗಜರ್ ಉಪಾರೂಢವಿಶೇಷಕರುಮಾಗಿ .. .. ಸಂಗ್ರಾಮರಂಗಕ್ಕವರಿಸೆ: **ಪಂಪಭಾ,** ೧೩. ೩೩ ವ)

**ವಿಶೇಷಭಾಷಿತ** – ವಿಶಿಷ್ಟ ನುಡಿ, ಉಕ್ತಿವೈಚಿತ್ರ್ಯ (ಮನೋನಯನೆ ವಲ್ಲಭನೊಳ್ ಮನದೊಂದಲಂಪಿನಿಂ ನೆರೆವೆನಮೋಘಂ ಎಂಬುದಿದು ದಕ್ಷಿಣಮಾರ್ಗ ವಿಶೇಷಭಾಷಿತಂ: **ಕವಿರಾಮಾ,** ೨. ೧೦೪)

**ವಿಶೋಧಿ** – ನೈರ್ಮಲ್ಯ (ಅರಲ್ದ ಮುಖಪದ್ಮಮುಂ ನಿಬಿಡಬದ್ಧಪರ್ಯಂಕದೊಳ್ ಮರಲ್ದ ಕರಪಲ್ಲವದ್ವಿತಯಮುಂ ಬೆಡಂಗಪ್ಪಿನಂ ನಿರಂತರವಿಶೋಧಿ ಕೂಡಿರೆ: **ಸುಕುಮಾಚ,** ೯. ೧೫)

**ವಿಶ್ರಮಣ** – ವಿಶ್ರಾಂತಿ (ವಿಪುಲಪುಲಿನತಲಂಗಳೇ ವಶ್ರಮಣಭೂಮಿಗಳಾಗೆಯುಂ: **ಆದಿಪು,** ೪. ೫೨ ವ)

**ವಿಶ್ರಾಂತಿಪದ** – ನೆಲೆ, ವಾಸಸ್ಥಳ (ಸಮಸ್ತಸಾಮಂತಕಿರೀಟ ಕೋಟಿಗಳೊಳ್ ಆತಪವಾರಣ ಶೂನ್ಯ ದೈನ್ಯ ವಿಶ್ರಾಂತಿಪದಂಗಳೊಳ್ ನೆಲಸೆ ಸೈನುರಜೋರುಣಕಾಂತಿ ರಾಜಿಗಳ್: **ಶಾಂತಿಪು,** ೧೧. ೮೧)

**ವಿಶ್ರಾಣನವಿನೋದ** – ದಾನಸಂತೋಷ (ಅಂತು ಸಕಲಜನಪ್ರೀಣಂ ಅಪ್ರಮದಂ ವಿಶ್ರಾನವಿನೋದಮಂ ತೀರ್ಚಿ .. .. ಪುರಮಂ ಪುಗುವಲ್ಲಿ: **ಚಂದ್ರಪ್ರಪು,** ೭. ೧೫೩ ವ)

**ವಿಶ್ರುತ** – ಕೀರ್ತಿ ಪಡೆದವನು (ಆ ವಲ್ಲಭನಂ ಪಡೆದ ಮಹೀವಲ್ಲಭೆ ನೋಂತಳೆನಿಸಿದ ಅರಿನೃಪಮದವಿದ್ರಾವಣ ವಿಜಯಭುಜಂ ವಸುಧಾವಿಶ್ರುತ ನೃಪಗುಣಾಶ್ರಯಂ ವೈಶ್ರವಣಂ: **ಮಲ್ಲಿನಾಪು,** ೩. ೨)

**ವಿಶ್ಲಥ** – ಸಡಿಲಿಹೋದ (ಐರಾವತಗಜಕುಂಭಸ್ತಾರಣ ವಿಶ್ಲಥವಿಕಾಸಿಕೇಯುರಂ ಕೇಯೂರದೊಳೋರಸೆ: **ಶಾಂತಿಪು,** ೫. ೧೫೩)

**ವಿಶ್ಲೇಷ** – ಅಗಲಿಕೆ, ಬೇರೆಯಾಗುವುದು (ಶ್ರೀವಿಜಯನುಮಂ ಭಂಗಿಸಿ ವೀಶ್ಲೇಷೋಪತಾಪಾಂತಸ್ತಪ್ಯಮಾನ ಹೃದಯನಪ್ಪ ಅಕಲಂಕಾಚಾರಸಾರನುಮಂ ಲೋಕಜ್ಞತಾದಿ ಮೃದುವಚನ ರಚನೆಗಳಿಂದಮಾಱ ನುಡಿದು: **ಶಾಂತಿಪು,** ೬. ೩೬ ವ)

**ವಿಶ್ವ** – ಜಗತ್ತು (ವಿಶ್ವವಿನುತ ಪಾದಂ .. .. ಆಗಿರೆಪೆಂಪಚ್ಚರಿಯಾದ ದೇವಗಣಪಂ ರಕ್ಷಿಕ್ಕೆ ಭೂಚಕ್ರಮಂ: **ಜಗನ್ನಾವಿ,** ೧. ೫)

**ವಿಶ್ವಂಭರೆ** – ಭೂಮಿ (ಚಕ್ರನಿಧೀಶಂ ಆದಿಭೂಭುಜನೆನೆ ನೆಗಟ್ದಂ ಭರತಚಕ್ರಿ ವಿಶ್ವಂಭರೆಯೊಳ್: **ಆದಿಪು,** ೧೫. ೩)

**ವಿಶ್ವಕದ್ರು** – ಬೇಟೆನಾಯಿ (ಪಂದಿಯ ಪೆಡದಲೆಯೊಳ್ ಸಿಲ್ಕಿ ಪಲ್ಗಳೆಡಮೊಗದೊಳ್ ಕಪ್ಪಡದಂತೆ ಕೂಡಿ ಜೋಡಂ ಪಡೆದುಟಿದುವು ವಿಶ್ವಕದ್ರುಗಳ್: **ಲೀಲಾವತಿ,** ೬. ೧೩)

**ವಿಶ್ವಕರ್ಮ** – ಸೃಷ್ಟಿಕರ್ತ, ವಾಸ್ತುಶಿಲ್ಪಿ (ಅಂತು ಆ ವನಗಹನಮೆಲ್ಲಂ ದಹನಮಯಮಾದ ಪ್ರಸ್ತಾವದೊಳ್ ವಿಸ್ಮಯಮಾಗೆ ಮಯನೆಂಬ ದಾನವವಿಶ್ವಕರ್ಮಂ ನೆಗೆದುರಿವ ಉರಿಮಾಲೆಗಳಂ ಗದೆಯೊಳ್ ಬೀಸುತ್ತುಂ ಪೊಱಮಡೆ: **ಪಂಪಭಾ,** ೫. ೯೭ ವ)

**ವಿಶ್ವಲೋಚನ** – ವಿಶ್ವದ ಕಣ್ಣು, ಜಿನ (ವಿಶ್ವಲೋಚನಂ ಅಘವೈರಿಗಲ್ಲದೆ ಉಟಿದಂ ಗೆಲಲಾರ್ಕುಮೆ ಮೃತ್ಯುರಾಜನಂ: **ಆದಿಪು,** ೩. ೮)

**ವಿಶ್ವವಿದ್ಯೇಶ್ವರ** – ಸಕಲವಿದ್ಯಾವಿಶಾರದ (ಮಹೋತ್ಪನ್ನಮತಿ ಶ್ರುತಾವಧಿಬೋಧನಪ್ಪುದಜೆಂ ವಿಶ್ವವಿದ್ಯೇಶ್ವರನುಂ ಅಪಗತಾನೇಕಲೋಕವ್ಯಾಪಾರಕನುಂ .. .. ಅಪ್ಪುದಜೆಂದಂ: **ಆದಿಪು,** ೮. ೩ ವ)

**ವಿಶ್ವವಿಶ್ವಂಭರೆ** – ಸಕಲ ಭೂಮಂಡಲ (ಮನೋಜರಾಜವಿಕ್ರಾಂತ ವನಾಸಿತಾರ್ತಿಯೆನೆ ವಿಶ್ವವಿಶ್ವಂಭರೆ ಮಾಘಣಂದಿ ಸೈದ್ಧಾಂತಿಕಚಕ್ರವರ್ತಿ ನೆಗಟ್ದಿಂ: **ಚಂದ್ರಪ್ರಭು,** ೧. ೨೨)

**ವಿಶ್ವಾಧಾರ** – ಚಕ್ರವರ್ತಿ (ಸಹಾಯರುಚಿ ವಿಶ್ವಾಧಾರಂ ಉತ್ತುಂಗ ಭೂಭೃದಪರಾಮಬುಧಿ ವಸ್ತುಗಳ್ ಬಗೆವೊಡೀ ಲೋಕಕ್ಕಸಾಧಾರಣಂ: **ಶಾಂತಿಪು,** ೨. ೭೮)

**ವಿಶ್ವಾಸ** – ಪಂಚತಂತ್ರಗಳಲ್ಲಿ ಒಂದು, ನಂಬಲಾರದ್ದನ್ನು ನಂಬುವಂತೆ ಮಾಡುವುದು (ನಂಬದಂ ನಂಬುವಂತೆ ನುಡಿದು ಪಡಂಬಡಿಸಿಯೊಳಪೊಕ್ಕು ನೆಗಟ್ವುದು ವಿಶ್ವಾಸಂ ಎಂಬುದು: **ಪಂಚತಂತ್ರ,** ೭೧ ವ)

**ವಿಶ್ವಾಸಂಗೆಯ್** – ನಂಬು (ನಮ್ಮಂತಾಪ್ತರಂ ಹಿತರಂ ಬುದ್ಧಿವಂತರುಮಂ ಅನವಿಶ್ವಾಸಂಗೆಯ್ದು, ಅನಾಪ್ತರುಮಂ ಅಹಿತರುಮನವಿನೀತರುಮಂ ವಿಶ್ವಾಸಂಗೆಯ್ದು ಪ್ರಧಾನರಂ ಮಾಡಿ ನಡಪಿದ ಮೂಢಸಿಂಹಕ್ಕೆ ಏಗೆಯ್ದುಂ ಕಾರ್ಯಹಾನಿಯಾಗದೆ ಪೋಗದು: **ಪಂಚತಂತ್ರ,** ೮೧ ವ)

**ವಿಶ್ವೇಕ್ಷಣ** – ಎಲ್ಲವನ್ನೂ ನೋಡುವವನು (ವಿಶ್ವೇಕ್ಷಣಂ ವೃದ್ಧಗೋಚರಸೇವಾನುತ ದೂರತತ್ವವಿನಯಂ ಶಾಂತೀಶ್ವರಂ: **ಶಾಂತಿಪು,** ೧೦. ೧೦೯)

**ವಿಷ** – ನೀರು, ನಂಜು (ವಿಷದ ಲಡ್ಡುಗೆಯನಿಕ್ಕಿಯುಂ ಎನಿತಾನುಂ ಉಪದ್ರವಂಗಳೊಳ್ ತೊಡರಿಕ್ಕಿಯುಂ ಗೆಲಲಾಜದೆ: **ಪಂಪಭಾ,** ೨. ೬೨ ವ)

**ವಿಷಜ** – ಮದ್ದುಗುಣಿಕೆ (ವಿರಹದೊಳೀಕೆಗೆ ಅಕ್ಕ ಬಿಸಜಂ ವಿಷಜಂ ಹಿಮರೋಚಿ ಸೂಚಿ ಪಾದರಿ ದರಿ: **ಗಿರಿಜಾಕ,** ೪. ೧೪೧)

**ವಿಷಣ್ಣ** – ವ್ಯಸನವುಳ್ಳವನು (ಎನೆ ವಿಭೀಷಣಂ ವಿಷಣ್ಣನಾಗಿ ... .. ಜನಕನಂ ದಶರಥನಂ ಮಾರಣಮಂ ಪೊರ್ದಿಸುವೆಂ .. .. ಎಂದು ತಜೆಸಂದು: **ಪಂಪರಾ,** ೩. ೨೩ ವ ಮತ್ತು ೨೪ ಹಾಗೂ ೨೪ ವ)

**ವಿಷಣ್ಣಾನನೆ** – ದುಃಖಪೂರಿತ ಮುಖದವಳು (ವಿಷಣ್ಣಾನನೆಯಂ ಮಾರ್ಗಾವಲಗ್ನನೇತ್ರೆಯಂ .. .. ಕಂಡಿಂತೆಂದಳ್: **ಯಶೋಧಚ,** ೨. ೩೫)

**ವಿಷದಂಷ್ಟ್ರ** – ವಿಷದ ಹಲ್ಲು (ಪರಿಗಳಿತ ಪೂತಿಗಂಧರ್ ಖರ ಕಾಕ ಸೃಗಾಲ ಕರಭ ಕೌಶಿಕ ವೃಕ ವಾನರ ವಿಷದಂಷ್ಟ್ರೋತ್ಕರ ಕುರ್ಕುರ ಕೀಟಕ ಭಲ್ಲನಿಕರ ನಿಷ್ಠುರನಿನದರ್: **ಶಾಂತೀಶ್ವಪು,** ೯. ೧೦೬)

**ವಿಷದೃಷ್ಟಿ** – ವಿಷಸೂಸುವ ನೋಟ (ವಿಷದೃಷ್ಟ ವಿಷೋರಗಸ್ವರೂಪದಿಂ ಸಗರಂ ಅಱುವತ್ತುಸಾಸಿರ್ವರ್ ಮಕ್ಕಳುಮಂ ಒಡನೆಕೃತಕದಿಂ ಭಸ್ಮಾವಲೇಪನಮಾಗಿ ಮಾಡಿ: **ಅಜಿತಪು,** ೧೦. ೧೦ ವ)

**ವಿಷಧರ** – ಸರ್ಪ (ವಿಷಧರನಾಗದೆ ಬೇಗಂ ವಿಷಯಾಮಿಷ ವಿಷಮನುಗುಟ್ದು ನಿರ್ವಿಷನಾಗು: **ಆದಿಪು,** ೨. ೧೭); ಮೋಡ (ಪರೆಯಿಕ್ಕಿ ಪೋದುವಚಿರಾಂಶು ವಸನಘನಕಾಲ ವಿಷಧರಂಗಳ್ .. .. ಪಸರಿಸಿದುದಂದು ಬಿಳಿಯ ಮುಗಿಲ್ಗಳ್: **ಪಂಪರಾ,** ೭. ೧೬೪)

**ವಿಷಧರವಲ್ಲಭಭೂಷಣ** – ಸರ್ಪಭೂಷಣ, ಶಿವ (ವಿಷಧರವಲ್ಲಭಭೂಷಣ ವೃಷಭನುಮಂ ದೇವ ನಿಮ್ಮನೇಂ ಬಗೆದಪನೇ: **ಪಂಚತಂತ್ರ,** ೧೫೯)

**ವಿಷಧಿ** – ಸಮುದ್ರ (ವಿಷಧಿಗಳ್ ಅತಿರೋಷದಿಂ ಪರಸ್ಪರಂ ಅದಜೆಂ ವಿಷಧಿಯನೀಂಟುವವೋಲ್ ಸ್ಥಿತಿವಿಷಧಿಗಳಂ ನಾರಕರೀಂಟುವರಲ್ತೇ: **ಪಾರ್ಶ್ವನಾಪು,** ೧೩. ೭೫)

**ವಿಷನಾಗ** – ವಿಷಸರ್ಪ (ಅನಿಮಿಷ ಕುಲಾಕೀರ್ಣಮುಂ ಪಾತಾಳಭುವನದಂತೆ ಬಹಳ ವಿಷನಾಗಮಯಮಾಗಿಯುಂ: **ಶಾಂತೀಶ್ವಪು,** ೧. ೬೯ ವ)

**ವಿಷಮ** – ಸಮವಲ್ಲದ (ಅದೇಂ ಸುರಲಂಜಿಯರ್ ವಿಷಮಮಂ ಸಮಂ ಮಾಡಿದರೋ: **ಶಾಂತಿಪು,** ೭. ೩೩) ಅಸಾಧಾರಣ (ಅನ್ನೆಗಂ ಅವ್ಯಕ್ತಕಾಲದೊಳ್ ಓದಿ ಮಱೆದ ವಿಷಮಶಾಶ್ತ್ರದ ಮೂಲಗ್ರಂಥಕ್ಕೆ ವಿವರಣೆ ಬರ್ಪವೊಲ್: **ಶಾಂತಿಪು,** ೭. ೧೮ ವ ಮತ್ತು ೧೯)

**ವಿಷಮಬಾಣ** – ಮನ್ಮಥ (ಧೃತವಿಷಮಬಾಣನಂ ಜಿನಪತಿ ಗೆಲ್ದವೊಲಾತನಂ .. .. ಗೆಲ್ದು: **ಶಾಂತಿಪು,** ೫. ೫೭)

**ವಿಷಮಮತಿ** – ನೀಚಬುದ್ಧಿ (ಮಾತ್ಸರ್ಯ ಮಹಾವಿಷಮಮತಿಯಿಂದೆ ದೋಷಾಮಿಷಮನೆ ಪೊರ್ದಿಪುವಲ್ತೆ ಕುಕವಿಬಕಂಗಳ್: **ಆದಿಪು,** ೧. ೨೨)

**ವಿಷಮರ್ತು** – [ವಿಷಮ+ಋತು] ಅನುಕೂಲಕರವಲ್ಲದ ಕಾಲ (ಹಿಮಮುಂ ಗ್ರೀಷ್ಮಮುಂ ಎಂಬಿವಾ ರಿತುಗಳುಂ ಶೀತಕ್ಕಂ ಉಷ್ಣಕ್ಕಂ ಅಗ್ರಿಮಧಾಮಂಗಳಸೌಖ್ಯಂಗಳ್ ಅದಜೆಂದಂ .. .. ನಿಂದಂತೆ ಕಾರುಂ ಬಸಂಥಮೆ ನಾಡೊಳ್ ವಿಷಮರ್ತುಗಳ್ ಪುಗುಗುಮೇ ಪುಣ್ಯಪ್ರಜಾವಾಸದೊಳ್: **ಶಾಂತಿಪು,** ೯. ೧೩೫)

**ವಿಷಮಲೋಚನ** – ಶಿವ (ಸಂದ ಪುರತ್ರಯಂ ವಿಷಯಮಲೋಚನ ಲೋಚನವಹ್ನಿಯಿಂ ಮರುನ್ನಂದನನಿಂ .. .. ಬೆಂದ ಮಾಟ್ಕೆಯಿಂ: **ಪಂಚತಂತ್ರ,** ೩೭೭)

**ವಿಷಮೇಷು** – ಮನ್ಮಥ (ಇತ್ತಲ್ ವಿಷಮೇಷು ಕೊಂದಪಂ .. .. ಮಿತ್ರನಸುವಂ ಕಾಯಲ್ಕೆವೇಟ್ಕುಂ ದೃಢಂ: **ಕಾದಂಬ,** ೫. ೧೨೩)

**ವಿಷಮೋರಗ** – ಮಹಾವಿಷವುಳ್ಳ ಹಾವು (ಆಶೀ ವಿಷವಿಷಮೋರಗರಾಶಿಯನೊಳಕೆಯ್ದು ವಿಪುಳಪಾತಾಳ ಆಶಂಕೆಯನೀವುದು .. .. ಜಯನಶಾಲಿಕೆ: **ಚಂದ್ರಪ್ರಭು,** ೧. ೧೩೮)

**ವಿಷಯ** – ದೇಶ, ರಾಜ್ಯ (ಬಳಸಿರ್ದ ಮದಾಳಿಸಂಕುಲಂ ವಿಷಯಾಂಗನಾಲುಳಿತ ಕುಂತಳದಂತೆವೊಲ್ ಒಪ್ಪಿ ತೋಱುಗುಂ: **ಪಂಪಭಾ,** ೧. ೫೩); ಇಂದ್ರಿಯ ಸುಖ (ಇಷ್ಟವಿಷಯ ಕಾಮಭೋಗಂಗಳನನುಭವಿಸುತ್ತುಂ, ನ್ಯಾಯೋಪಾರ್ಜಿತವಿತ್ತನುಂ, ಧರ್ಮಾಪಾದಿತ ಚಿತ್ತನುಮಾಗಿ, ಕೆಲವು ಕಾಲಂ ಸುಖಸಂಕಥಾವಿನೋದದಿನಿರ್ದೊಂದು ದಿವಸಂ: **ಪಂಚತಂತ್ರ,** ೭೪ ವ)

**ವಿಷಯಕಾಂಕ್ಷೆ** – ಭೋಗಾಕಾಂಕ್ಷೆ (ಪ್ರಿಯವಿಷಯಕಾಂಕ್ಷೆಯಿಂದ ಇಂದ್ರಿಯಂಗಳಂತೆಯ್ದೆ ಮನಮನಾಶ್ರಯಿಸುಗುಂ: **ಪಂಪಭಾ,** ೯. ೧೩); ರಾಜ್ಯಾಭಿಲಾಷೆ ಅಯನಯ ಪರರಯ್ವರುಮಾಶ್ರಯಿಸಿರ್ದರ್ ವಿಷಯಕಾಂಕ್ಷೆಯಿಂ ಮುರರಿಪುವಂ: **ಪಂಪಭಾ,** ೯. ೧೩)

**ವಿಷಯಲೋಭ** – ವಿಷಯಕಾಂಕ್ಷೆ (ವಿಷಯಲೋಭದಿಂ ಏನಸತಾನಂ ಎನ್ನನೇನಟಲಿಸದೇ: **ಪಂಪರಾ,** ೨. ೧೮)

**ವಿಷಯವಿರತಿ** – ಇಂದ್ರಿಯಾಭಿಲಾಷೆಯಲ್ಲಿ ಆಸಕ್ತಿಯಿಲ್ಲದಿರುವುದು (ಪ್ರತಿಭೆಗೆ ಫಲಂ ಅಜೀವಿನ ಗತಿ ಗತಿಗೆಫಲಂ ವಿಷಯವಿರತಿ ವಿರತಿಗೆ ಫಲಂ ಆರ್ಹತಪರಮದೀಕ್ಷೆ: **ಪುಷ್ಪದಂಪು,** ೧೩. ೫೪)

**ವಿಷಯಸಂಧಿ** – ದೇಶದ ಎಲ್ಲೆ, ಗಡಿ (ಪಾಂಡ್ಯವಿಷಯದ ವಿಷತಸಂಧಿಯೊಳ್ಬೀಡುವಿಟ್ಟು: **ಶಾಂತಿಪು,** ೧೧. ೪)

**ವಿಷಸಂಯುಕ್ತಾನ್ನ** – ವಿಷ ಬೆರೆಸಿದ ಅನ್ನ (ಆ ಲಾಕ್ಷಾಗೃಹದಾಹಮೊಂದೆ ವಿಷಸಂಯುಕ್ತಾನ್ನಂ ಅಂತೊಂದೆ ಪಾಂಚಾಲೀನಿಗ್ರಹಂ ಒಂದೆ ಟಕ್ಕುವಗೆಯಿಂ ಗೆಲ್ದಿರ್ದ ಜೂದೊಂದೆ: **ಪಂಪಭಾ,** ೯. ೨೨)

**ವಿಷಯಸುಖ** – ಇಂದ್ರಿಯಸುಖ (ಅರಿಗೆ .. .. ಸುರಾಂಗನಾಸುರತ ವಿಷಯಸುಖಮಂ ಕೊಟ್ಟಂ: **ಕವಿರಾಮಾ,** ೩. ೧೫೯)

**ವಿಷಯಾಂತರಾಳ** – ನಾಡಿನ ಮಧ್ಯಪ್ರದೇಶ (ಕೆಯ್ವೊಲಗಳಿನೊಪ್ಪಿ ತೋಱೆ ಸಿರಿ ನೋಡುಗುಂ ಆ ವಿಷಯಾಂತರಾಳದೊಳ್: **ಪಂಪಭಾ,** ೧. ೫೨)

**ವಿಷಯಾಮಿಷ** – ವಿಷಯಸುಖ (ವಿಷಮ ವಿಷಸದೃಶ ವಿಷಯಾಮಿಷಕಾಂಕ್ಷೆಯೆ ತಿಣ್ಣಮಾಗೆ ಮತಿಗೆಟ್ಟು ಮಳೀಮಸನಾದಂ: **ಸುಕುಮಾಚ,** ೮. ೩೭)

**ವಿಷಯಾಂಗನಾ** – ದೇಶವೆಂಬ ಹೆಣ್ಣು (ನಂದನಾವಳಿಗಳಂ ಬಳಸಿರ್ದ ಮದಾಳಿಸಂಕುಲಂಗಳೆ ವಿಷಯಾಂಗನಾ ಲುಳಿತಕುಂತಳದಂತೆವೊಲ್ ಒಪ್ಪಿ ತೋಱುಗುಂ: **ಪಂಪಭಾ,** ೧. ೫೩)

**ವಿಷಯಾರ್ಥಿ** – ಇಂದ್ರಿಯಸುಖಾಪೇಕ್ಷಿ (ದೂರಂ ಯುಕ್ತಾಯುಕ್ತವಿಚಾರಂ ವಿಷಯಾರ್ಥಿಗೆಂಬುದಂ ಮಾಡುವಿರೇ: **ಆದಿಪು,** ೯. ೧೦೨)

**ವಿಷವಕ್ತ್ರ** – ವಿಷದ ಮುಖವುಳ್ಳದ್ದು, ಹಾವು (ಆ ಕಮಠಂ ವಿಷವಕ್ತ್ರನಾಗಿ ನಾಮಗೆಯೆರಡಾದ ವಾಸುಗಿಕರಂ ತಲೆವಾಗಿಸಿಯುಂ: **ಪುಷ್ಪದಂಪು,** ೩. ೪)

**ವಿಷಾಣ** – ಕೊಂಬು (ಸ್ಫುರತ್ ಅಕ್ಷೂಣ ವಿಷಾಣ ಕೋಟಿದಳಿತಪ್ರೋತ್ತುಂಗವಲ್ಮೀಕಂ ಉದ್ಧುರಗಂಭೀರ ಪಯೋದನಾದಂ ಅತಿಪುಷ್ಟಾಂಗಂ .. .. ಸಂಜೀವಕಂ: **ಪಂಚತಂತ್ರ,** ೭೮); ದಂತ (ಉದ್ವೃತ್ತ ಮತ್ತ ವಾರಣೇಂದ್ರ ವಿಷಾಣ ಕುಶದಂಡಹತಿಯಿಂ ವನದುರ್ಗಭಂಗಮುಂ ವಿಪಕ್ಷಪಾರ್ಥಿವಮನೋರಥಭಮಗಮುಂ ಸಿದ್ಧಮಾಗೆಯುಂ: **ಆದಿಪು,** ೧೩. ೭೭ ವ)

**ವಿಷಾದ** – ದುಃಖ (ದುಃಖದೊದವಿಂ ಬಾಯ್ವಿಟ್ಟು ಗೋಳಿಟ್ಟು ಪೇಂಕುಳಿಗೊಂಡು ಆದ ವಿಷಾದದಿಂ ಪುಟಿತು ಸತ್ತು ಇತ್ತ ಅಂತೆ ಕಾಲಾಂತರದೊಳ್: **ಸುಕುಮಾಚ,** ೫. ೨೦)

**ವಿಷಾದಗರ್ಭ** – ದುಃಖಮಯವಾದ (ಆವ ಜನ್ಮದೊಳಂ ಮತ್ತೆನಗೆ ನವವಯಸದೊಳ್ ತಾಂ ಜನಿಯಿಸದಿಕೆಮ ವಿಷಾದಗರ್ಭಂ: **ಚಂದ್ರಪ್ರಪು,** ೩. ೭೭)

**ವಿಷಾಪಹಾರ** – ವಿಷವನ್ನು ಹೋಗಲಾಡಿಸು (ನಾಳೆ ನೇಸರ್ಮೂಡದ ಮುನ್ನಮೆ ವಿಷಾಪಹಾರಂ ಮಾಡಿದಪ್ಪೆಂ: **ಸುಕುಮಾಚ,** ೭. ೮ ವ)

**ವಿಷಾವಿಲದಂಷ್ಟ್ರ** – ವಿಷದ ಹಲ್ಲುಗಳಿಂದ ಕೂಡಿದ (ದಂಡಕನೃಪಂ ಲೋಭಾಭೀಭೂತಂ ವಿಷಾವಿಲದಂಷ್ಟ್ರಂ ಶ್ವಯುವಾಗಿ ಪುಟ್ಟಿಸುಟಿಗುಂ ಮುಂ ಬಯ್ತ ಭಂಡಾರದೊಳ್: **ಆದಿಪು,** ೨. ೧೫)

**ವಿಷೋದ್ಗಾರಿ** – [ವಿಷ+ಉದ್ಗಾರಿ] ವಿಷವುಗುಳುವ, ನೀರನ್ನು ಸೂಸುವ (ಅಹಿಯಂತೆ ವಿಷೋದ್ಗಾರಿಗಳ್ ಅಹರ್ನಿಶ ಪ್ರಕರದಂತೆ ಘಟಿಕಾತ್ಮಂಗಳ್ ರಹಟಘಟ ಯಂತ್ರಂಗಳ್ ಬಹುವಿಧವಿಭ್ರಮದಿನೆಸೆವುವು ಉಪಶಲ್ಯದೊಳ್: **ಪುಷ್ಪದಂಪು,** ೨. ೫೧)

**ವಿಷ್ಕಂಭ** – ಸುತ್ತಳತೆ (ಅಂತು ಬಂದು ಪಾಂಡುಕವನದ ಪೂರ್ವೋತ್ತರಾಶಾಮುಖನಿವಾಸಿಯಾಗಿ ಶತಯೋಜನ ವಿಷ್ಕಂಭದೊಳಂ ಪಂಚಷಡ್ಯೋಜನವಿಸ್ತಾರದೊಳಂ: **ಆದಿಪು,** ೭. ೭೩ ವ)

**ವಿಷ್ಕರ** – ಎಕ್ಕೆ ಗಿಡ (ವನತರು ವಲ್ಲರೀವ್ರಜದ ಪೀತದ ವಿಷ್ಕರಪತ್ರದಲ್ಲಿ ಮೆಲ್ಲನೆ ನುಸುಳ್ದು .. .. ತಣ್ಣೆಲರ್ ಒಪ್ಪಿತು ಸುಪ್ರಭಾತದೊಳ್: **ತ್ರಿಷಷ್ಟಿಪು,** ೨೪. ೨೧೪)

**ವಿಷ್ಕಿರ** – ಹಕ್ಕಿ (ಹೈಮಂ ವನಂ ಕೋಕಿಳಾಕುಳಂ ಅಬ್ಜಾಕರಂ ಅಂಬುವಿಷ್ಕಿರರಚಿತಂ ನೀಚೋಚ್ಚನೀರೋಪಮಂ: **ಶಾಂತಿಪು,** ೬. ೧೦೨)

**ವಿಷ್ಟಪ** – ಪ್ರಪಂಚ (ಸಮಸ್ತವಿಷ್ಟಪಾಧೀಶ್ವರ ಪುರುಪರಮೇಶ್ವರಚರಣಸರಸಿಜ ರಜೋರಂಜಿತ ಮಣಿಕಿರೀಟ ಮಕರಿಕಾಚಕ್ರಂ: **ಆದಿಪು,** ೧೪. ೪೬ ವ)

**ವಿಷ್ಟಪಜನ** – ಮಾನವರು (ವನಬರ್ಹಿಗಳಂ ಮೇಘಧ್ವನಿ ತಣಿಪುವ ತೆಱದೆ ದೇವ ನಿನ್ನ ದಿವ್ಯಧ್ವನಿ ತಣಿಪಿದಪುದು ವಿಷ್ಟಪಜನಮಂ: **ಅಜಿತಪು,** ೮. ೧೧)

**ವಿಷ್ಟರ** – ಆಸನ (ಆಗಳ್ ದೊರೆಕೊಂಡಿರೆ ದೇವಾಗಮಂ ಏಕಾತಪತ್ರಮೆಸೆದಿರೆ ಕರಮಿಂಬಾಗಿರೆ ಚಾಮರಯುಗ್ಮಂ ಅದಾಗಳೆ ನಿಲೆ ದಿವ್ಯವಿಷ್ಟರಂ ಮಣಿಖಚಿತಂ: **ಆದಿಪು,** ೧೪. ೧೪೬)

**ವಿಷ್ಣುಪದ** – ಆಕಾಶ (ವಿಮಾನಮಂ ಪವಮಾನಸೂನುವುಂ ತಾನುಂ ಏಱೆ ವಿಷ್ಣುಪದದಿಂ ಆ ವಿಷ್ಣುಪುರಕ್ಕೆ ಪೋಗಿ: **ಕರ್ಣನೇಮಿ,** ೧೦. ೯೫ ವ)

**ವಿಸ** – [ವಂಶ] ಕೊಳಲು (ಮುಹರದ ಮಧುರತೆಯುಂ ಬೀಣೆಯ ಬಹುಲಿಕೆಯುಂ ವಿಸದ ಕುಸರಿಯುಂ ಕೆಳೆಗೆ ಕೆಳೆಗೊಳಿಸಿತವಣಿಗಿಡದೆ: **ಆಚವರ್ಧ,** ೯. ೪೪ ವ)

**ವಿಸಂಯೋಜಿಸು** – ಬಿಟ್ಟುಬಿಡು, ತ್ಯಜಿಸು (ಅನಂತಾನುಬಂಧಿ ಕ್ರೋಧಮಾನ ಮಾಯಾಲೋಭಂಗಳಂ ವಿಸಂಯೋಜಿಸಿ: **ಆದಿಪು,** ೧೦. ೧೪ ವ)

**ವಿಸಂವಾದ** – ಚರ್ಚೆ, ಪಕ್ಷಿಕೂಜನ (ನೆರೆದ ವಿಸಂವಾದಂ ಪಂಜರಶುಕತತಿಯೊಳ್ ನೆಗೞ್ಗುಂ: **ಕವಿರಾಮಾ,** ೩. ೧೧೨)

**ವಿಸಟಂಬರಿ** – ಅಲೆದಾಡು (ದೆಸೆದೆಸೆಗೆ ವಿಸಟಂಬರಿದು ಮನ್ನಣೆಯ ಮಾವಂತರುಮಂ ಆರೆಕಾಱರುಮಂ ಮೀಱಿ ಗೆಂಟರೊಳ್ ನಿಂದು ನೋಡುವ: **ಕಬ್ಬಿಗಕಾ,** ೩೭ ವ); ಯಥೇಚ್ಛವಾಗಿ ಆಚರಿಸು (ಕಂತು ದಂತಿ ವಿಸಟಂಬರಿಯದ ಏಲಾವನ ವಿಧಿಗಳಿಲ್ಲ: **ಪಂಪರಾ,** ೧. ೧೦೭ ವ)

**ವಿಸಟಂಬಾಯ್** – ವಿಸಟಂಬರಿ (ಜಯಕೇಶಿಕ್ಷಿತಿಪಾಲನಾನೆ ವಿಸಟಂಬಾಯ್ವಂದು: **ಅನಂತಪು,** ೧. ೨೧)

**ವಿಸರ** – ಸಮೂಹ (ಸರಸೀ ಸ್ವಚ್ಛಾಂಬು ಶುಂಭತ್ ಕುಶಲವ ವಿಸರಸ್ಪರ್ಶನಾರ್ದ್ರಂ .. .. ತೀಡಿತ್ತು ಜ್ಯೋತಿರ್ವಣ ಜನಿತವಾಮೋದಸಾರಂ ಸಮೀರಂ: **ಶಾಂತೀಶ್ವಪು,** ೫. ೯೦)

**ವಿಸರುಹ** – ತಾವರೆ (ವಿಸರುಹದಂತೆ ಕೇಸರಮನಾಂತುದು ಮೆಯ್ಗಲಿಯಂತಿರಾರೆ ಕೂರ್ಪಸೆದುದು: **ಯಶೋಧಚ,** ೩. ೭೮)

**ವಿಸರುಹಭವ** – ಬ್ರಹ್ಮ (ಆತ್ಮಜಾತೆಯೊಳಿರಲಾಟಿಸಿದಂ ಶಾಪಂಬೆತ್ತಂ ವಿಸರುಹಭವನಂ ಆಪ್ತನೆನಲೇವೇಡ ಅಜೀವಾತಂ: **ಸಮಯಪ,** ೮. ೧೩೦)

**ವಿಸರುಹಮಿತ್ರ** – ಸೂರ್ಯ (ವಿಸರುಹಮಿತ್ರಂ ಅಂದುದಯಪರ್ವತಮಂ ಭರದಿಂದಮೇಱಿದಂ: **ಧರ್ಮಪ,** ೩. ೧೨೨)

**ವಿಸರ್ಜಿಸು** – ಕಳಿಸಿಕೊಡು, ಬೀಳ್ಕೊಡು (ಸುರಲೋಕಮಂ ಸಾಧಿಸುವೆನೆಂದು ಅಶ್ವತ್ಥಾಮಾದಿಗಳಂ ವಿಸರ್ಜಿಸಿ: **ಗದಾಯು,** ೯. ೩೪ ವ)

**ವಿಸರ್ಪಣ** – ಹರಡುವಿಕೆ (ಸಂಹರಣ ವಿಸರ್ಪಣಸ್ವರೂಪನುಂ .. .. ಅಪ್ಪ ಜೀವನುಂಟೆಂದು: **ಆದಿಪು,** ೨. ೧೦)

**ವಿಸಸನ** – ಯುದ್ಧ (ಪುಸಿಯೆನೆ ರಥಮಂ ಹರಿ ಚೋದಿಸುವಂತೆವೊಲಿರ್ದು ಅದೆಂತು ನರನಂ ಗೆಲಿಪಂ ವಿಸಸನದೊಳ್ ಅಂತೆ ನೀಮುಂ ಪೆಸರಂ ಕರ್ಣಂಗೆ ಮಾಡಿ ಗೆಲ್ಲಂಗೊಳ್ಳಿಂ: **ಪಂಪಭಾ,** ೧೨. ೯೧)

**ವಿಸಾರ** – ವೈಶಾಲ್ಯ (ದಕ್ಷಿಣಾವೃತ್ತ ವೃತ್ತ ತ್ರಿತಯಾಂತರ್ವರ್ತಿ ನಾನೆಂಬಿನಂ ಅನುಗತತತೌಘದೊಳ್ ತತ್ತ್ವದಿಂದನ್ವಿತಮಂ ವಿಸಾರಂ ಅತ್ಯಪ್ರಕಟಿತ ಮನದಿಂ ಮೆಚ್ಚಿದಂ ದೇವರಾಜಂ: **ಅಜಿತಪು,** ೫. ೧೨)

**ವಿಸಾರಿ** – ಪ್ರವಾಹ (ಆ ರಮಣಿಯ ದೇಹಚ್ಯುತಿವಾರಿಯಿಂ ಅವಿರಳ ವಿಸಾರಿಯಿಂ ತೊಳೆದಂತಾಚಾರಮೆನಿತ್ತನಿತುಂ ವಿಸ್ತಾರಿಸಿದುದು: **ಚಂದ್ರಪ್ರಪು,** ೨. ೧೪)

**ವಿಸೃಮರ** – ಹರಿಯುವ (ವಿಧುಸಂಜಾತಾಂಶುಶಿತಂ ವಿಸೃಮರ ಶಿಶಿರಂ ವ್ಯೋಮಗಂಗಾತುಷಾರಂ: **ಉದ್ಭಟಕಾ,** ೧. ೨)

**ವಿಸ್ತರಿಗೆ** – ಹಾಸಿಗೆ (ತಂದೆಯ ಪಾದಾರವಿಂದಕ್ಕೆಱಗಿ ಕೆಲದ ಅಲಘು ವಿಸ್ತರಿಗೆಗಳೊಳಿರ್ದು: **ಕರ್ಣನೇಮಿ,** ೩. ೧೭೫ ವ)

**ವಿಸ್ತಾರ** – ಹರಹು (ದಶಯೋಜನೋಪರಿಮತ ಲಸಮಾನ ವಿಸ್ತಾರದೊಳಂ .. .. ನೆಱೆದು: **ಆದಿಪು,** ೧. ೬೨ ವ); ಮರದ ಕೊಂಬೆ

**ವಿಸ್ತಾರಕ** – ವೃದ್ಧಿಗೊಳಿಸುವುದು (ಸಕಲಜಗದ್ವಿಸ್ತಾರಿತಯಶಂ ಅನ್ವಯವಿಸ್ತಾರಕನಾದಿದೇವನ ಅಗ್ರತನೂಜಂ: **ಆದಿಪು,** ೧೩. ೭೨)

**ವಿಸ್ತಾರಿಸು** – ಬೆಳೆಸು, ವೃದ್ಧಿಸು (ವೃತ್ತಿಯೊಳ್ ರಸಮಂ ಸಂಚಾರಿಸುವ ಭಾವಮಂ ವಿಸ್ತಾರಿಸುವ ಬೆಡಂಗು ಬೇಱೆ ನೀಲಾಂಜನೆಯಾ: **ಆದಿಪು,** ೯. ೨೬); ವರ್ಣಿಸು (ಪ್ರಸ್ತುತಮಲ್ಲದುದನೆ ನೆಱೆದು ವಿಸ್ತಾರಿಸಿ ನೆಗೞೆ ಪೇೞ್ದೊಡದಕ್ಕುಂ ಮತ್ತಪ್ರಸ್ತುತಮೆಂಬುದಳಂಕೃತಿ: **ಕವಿರಾಮಾ,** ೩. ೧೩೮)

**ವಿಸ್ತೀರ್ಣ** – ವಿಸ್ತಾರ (ಒರ್ವ ಪಾರ್ವಂ ವಿಸ್ತೀರ್ಣ ಜೀರ್ಣ ಕರ್ಪಟಾವೃತ ಕಟಿತಟನುಂ ಆಗಿ ಬಂದು ಕಣ್ಮುಚ್ಚಲ್ ಎಡೆವೇಡೆ ತನಗವರ್ ಪಾಸಲ್ಕೊಟ್ಟ ಕೃಷ್ಣಾಜಿನಮಂ ಪಾಸಿ ಪಟ್ಟಿರ್ದನಂ: **ಪಂಪಭಾ,** ೩. ೩೧ ವ)

**ವಿಸ್ಫಾರ** – ಅತಿಶಯವಾದ (ವಿಸ್ಫಾರವಿದ್ಯುತ್ ಸಂಭಿನ್ನಾಂಭೋಭೃದುದ್ಯತ್ತಟಚಟುಳಚಳತ್ ಮೀನಫೇನ ಪ್ರತಾನಂ .. .. ರಂಜಿಸಿದುದು: **ರಾಜಶೇವಿ,** ೧. ೯೦); ಸುರಿಸುವ, ಹೊಮ್ಮಿಸುವ (ವಜ್ರಾವಳೀಕಂಕಣ ವಿಸ್ಫಾರಾಂಶು ವಿಭ್ರಾಜಿಸೆ ಕನಕಲಸತ್ ಪೀಠದೊಳ್ ಭೂಪನಿರ್ದಂ: **ರಾಜಶೇವಿ,** ೫. ೧೭)

**ವಿಸ್ಫುರತ್** – ಹೊಳೆಯುವ (ವಿಸ್ಫುರತ್ ದಿನಕರನಂ ಚಿತ್ರಾಂಗದಾವನೀಶಂ ಕಂಡಂ: **ಆದಿಪು,** ೧೬. ೪೮); ಬೆಳೆಯುವ ತವದ ಪುರಾತನ ಭವಬಂಧ ವಿಸ್ಫುರತ್ಪ್ರೇಮಮಂತೆ ಬಂದವರ್ಗೆ ಪುರ್ನನವಮಾದುದು: **ಶಾಂತಿಪು,** ೬. ೧೨೫)

**ವಿಸ್ಫುರಿತ** – ವೃದ್ಧಿಗೊಂಡ (ತನ್ನ ರತ್ನವಿಸ್ಫುರಿತ ಕಿರೀಟಮಂ ಕವಿದು ತಾನೆ ನರಂಗೆ ಕಿರೀಟನಾಮಮಂ ಸರಸದಿಂ ಆಗಳುಚ್ಚರಿಸಿ ಸಾಹಸಮಂ ಪೊಗೞ್ದಂ ಸುರಾಧಿಪಂ: **ಪಂಪಭಾ,** ೫. ೧೦೩)

**ವಿಸ್ಫುಲಿಂಗ** – ಬೆಂಕಿಯ ಕಿಡಿ, ಕೆಂಡ (ಅನೇಕ ರಾಜನ್ಯಕಮಕುಟ ಸಂಘಟ್ಟನೋಚ್ಚಳನ್ಮಣಿಮರೀಚಿಗಳ್ ವಿಳಯಾನಿಳ ವಿಸ್ಫುಲಿಂಗಂಗಳಂತೆ ದೆಸೆದೆಸೆಗೆ ಕೆದಱೆ: **ಆದಿಪು,** ೧೪. ೮೨ ವ)

**ವಿಸ್ಮಯ** – ಆಶ್ಚರ್ಯ, ಬೆರಗು (ಅಂತು ಆ ವನಗಹನಮೆಲ್ಲಂ ದಹನಮಯಮಾದ ಪ್ರಸ್ತಾವದೊಳ್ ವಿಸ್ಮಯಮಾಗೆ ಮಯನೆಂಬ ದಾನವವಿಶ್ವಕರ್ಮಂ ನೆಗೆದುರಿವ ಉರಿಮಾಲೆಗಳಂ ಗದೆಯೊಳ್ ಬೀಸುತ್ತುಂ ಪೊಱಮಡೆ: **ಪಂಪಭಾ,** ೫. ೯೭ ವ)

**ವಿಸ್ಮರಣ** – ಮರೆವು (ಅತಿಶಯಕರಮೆನಿಪ ಗುಣವ್ರತದೊಳ್ ದಿಗ್ವಿರತಿಗಕ್ಕುಂ .. .. ತಿರ್ಯಗ್ವ್ಯತಿಕ್ರಮಕ್ಷೇತ್ರವೃದ್ಧಿವಿಸ್ಮರಣಂಗಳ್: **ಸುಕುಮಾಚ,** ೬. ೧೮)

**ವಿಸ್ಮಾಪಕ** – ಆಶ್ಚರ್ಯಕರ (ಏಪೊಟ್ಟುಮುಱಿಗುಮೋ ವಿಸ್ಮಾಪಕಮೋ ಕಾವ್ಯರಸವಿಶೇಷಕದೊಳ್ ದುಷ್ಪಾಪಶದರ್ ಸುಕವಿಯಶೋದೀಪಾಂಕುರದಗ್ಧ ಕರ್ಣಕೋಟರಕುಟಿಗಳ್: **ಲೀಲಾವತಿ,** ೧. ೨೭)

**ವಿಸ್ಮೃತಿ** – ವಿಸ್ಮರಣ, ಮೂರ್ಛೆ (ದೇವಿಗಿನ್ನಿದೇವಿನಿವಿರಿದೊಂದು ವಿಸ್ಮೃತಿಯನೆಯ್ದುವ ಕಾರಣಮಾವುದು: **ಕುಸುಮಾಕಾ,** ೧೨. ೧೩೪)

**ವಿಸ್ಮೃತಿತ್ವ** – ಮರೆವು, ಮೂರ್ಛೆ (ಅಲ್ಲದೊಡೆ ಪೇೞ್ ಮುದಿದಿರ್ಪನೆ ವಿಸ್ಮೃತಿತ್ವಮಂ: **ಕುಸುಮಾಕಾ,** ೧೨. ೧೪೮)

**ವಿಸ್ರ** – ಗಾಯದ ಕೀವು (ಕ್ಷತಮೀರ್ವಂ ವ್ರಣಮರು ತದ್ಗತವಾದುದು ಪೊಲಸುನಾರ್ಪ ಗಂಧಂ ವಿಸ್ರಂ: **ಅಭಿಧಾವ,** ೧. ೧೨. ೨೭)

**ವಿಸ್ರಂಭ** – ನಂಬಿಕೆ (ದರಹಸಿತಾಳಾಪಂ ಅಪರಿಹಾಸ ವಿಸ್ರಂಭಾಳಾಪಂಗಳಿಂಸಂತಸಂಬಡಿಸುತ್ತುಂ: **ಆದಿಪು,** ೧೧. ೨೫ ವ)

**ವಿಸ್ರಂಭದೋಷ** – ನಂಬಿಕೆ ದ್ರೋಹ (ವಿಟಜನಚತುಷ್ಪಥದೊಳ್ ಪಾಲುಂ ನೀರುಂ ಬೆರಸಿದಂತಪ್ಪ ಕೆಳೆಯರಿರ್ದು ವಿಸ್ರಂಭದ್ರೋಷಪ್ರಸಕ್ತರಾದೆಡೆಯೊಳ್ ಒರ್ವನೊರ್ವಂಗೆ ಕೋಳ್ಗಗ್ಗಳಮಾದ ಮನೆಗಂ ತೋಳ್ಗಗ್ಗಳಮಾದ ಬದ್ದೆಗಂ ಬೇಸತ್ತು: **ಶಾಂತಿಪು,** ೮. ೭೮ ವ)

**ವಿಸ್ರಸ್ತ** – ನೀಗಿದ (ವಿಸ್ರಸ್ತಬಹಳದೋಷತಮಿಸ್ರರಂ ಅಖಿಳರ್ಧಿಗುಣವಿಭೂಷಣರಂ ಪುಣ್ಯಾಸ್ರಂವಕಾರಣರಂ ಪಿಹಿತಾಸ್ರವಮುನಿಪತಿಗಳಂ ಮನಂ ಬಿಡೆ ಕಂಡೆಂ **ಆದಿಪು,** ೩. ೩೬); ಜೋತುಬಿದ್ದ (ನಾಭಿವಿಲಂಬಮಾನ ಲಂಬಸ್ತನವಿಸ್ರಸ್ತ ಅಂತರೀಯೋತ್ತರೀಯ ವೃದ್ಧಧಾತ್ರೀ ನರ್ತನನಿರೀಕ್ಷಣ ಜನತಾಜನಿತಹಾಸನಿವಾಸಮುಂ: **ಆದಿಪು,** ೮. ೩೫ ವ)

**ವಿಹಂಗ** – ಹಕ್ಕಿ (ಆ ಮಾತಂಗಂ ವಿಹಂಗಸಂಗತಪಂಜರಮಂ ಪಿಡಿದು: **ಕಾದಂಸಂ,** ೧. ೧೭ ವ); ಮೋಡ (ತಿಳಿದಿರ್ದ ಕೊಳದ ಜಲದೊಳ್ ಪಳಚ್ಚನೆಸೆದಿರ್ದ ತನ್ನ ನೆೞಲಂ ತನ್ನೋಪಳೆ ಗೆತ್ತು ಮುೞುಂಗಿ ಕಾಣದೆ ತಳವೆಳಗಾದುದುರ್ವು ಇರುಳ ವಿರಹವಿಹಂಗಂ: **ಅಜಿತಪು,** ೬. ೬೨)

**ವಿಹಂಗಮ** – ವಿಹಂಗ (ವಿಹಂಗಮಂಗಳ್ .. .. ಪಾಱೆದುವು ಎಣ್ದೆಸೆಗಂ ಪ್ರಭಾತಕಾಲದೊಳ್: **ಶಾಂತೀಶ್ವಪು,** ೧೧. ೯೭)

**ವಿಹಂಗಾಧಿಪ** – ಪಕ್ಷಿರಾಜ, ಗರುಡ (ವಿಶ್ವಗತ್ ಕ್ಷೋಭಕರ ಸ್ವಭಾವಗತಿಯಿಂ ಬಂದು ವಿಹಂಗಾಧಿಪಂ: **ಜಗನ್ನಾವಿ,** ೧೩. ೩೭)

**ವಿಹಗ** – ಹಕ್ಕಿ (ಶುಕಶಾರಿಕಾವಿಹಗಪ್ರಕರಂ ಮುಂ ಕೇಳ್ದ ವಚನಮಂ ನುಡಿವುದು: **ಕಾದಂಸಂ,** ೧. ೨೫)

**ವಿಹರಣ** – ವಿಹಾರ ಮಾಡುವುದು (ರಾಜಪುತ್ರನ ವಿಹರಣಮಂ ನೋಡಲೆಳಸಿ ರಾಜವೀಥಿಗೆ ಬಂದನೆಂದು ಬಗೆದು: **ರಾಜಶೇವಿ,** ೧೩. ೧೦೨ ವ); [ಜೈನ] ಒಂದು ಗರ್ಭಾನ್ವಯಕ್ರಿಯೆ, ಧರ್ಮಚಕ್ರವನ್ನು ಹಿಂಬಾಲಿಸುತ್ತ ವಿಹರಿಸುವುದು (ಜಿನೇಂದ್ರನ ವಿಹರಣಪೂರ್ವರಂಗಮೇಂ ಒಪ್ಪಿದುದೋ: ಶಾಂತಿಪು, ೧೨. ೧೭){ಇದಕ್ಕೆ **'ವಿಹಾರ'** ಎಂದೂ ಹೇಳುತ್ತಾರೆ, ನೋಡಿ, (ವೃಷ್ಟಿ ಕೇಶಾವಾಪ ಲಿಪಿಸಂಖ್ಯಾನ .. .. ವಿಹಾರ ಯೋಗತ್ಯಾಗಗ್ರನಿರ್ವೃತಿಯೆಂಬ ಅಯ್ವತ್ತುಮೂಱು ಗರ್ಭಾದಿನಿರ್ವಾಣಪರ್ಯಂತಂಗಳಪ್ಪ ಗರ್ಭಾನ್ವಯಕ್ರಿಯೆಗಳಂ: **ಆದಿಪು,** ೧೫. ೧೫ ವ)

**ವಿಹರಣಕ್ರಮ** – [ಜೈನ] ಧರ್ಮೋಪದೇಶಕ್ಕಾಗಿ ವಿಹಾರ ಕೈಗೊಳ್ಳುವುದು (ಗ್ರಾಮ ನಗರ .. .. ಸಂವಾಹಗಳೊಳ್ ವಿಹಾರಿಸುತ್ತುಂ ವಿಹರಣಕ್ರಮದಿಂ ವತ್ಸವಿಷಯದ ಕೌಶಂಬೀ ನಗರಕ್ಕೆ ವಂದು: **ಸುಕುಮಾಚ,** ೪. ೨೦ ವ)

**ವಿಹಾಯಸ** – ಆಕಾಶ (ಲೋಕಮಂ ಧರಿಯಿಸಿ ನಿಂದ ವಾಯುಚಯಮೆಯ್ದೆ ವಿಹಾಯಸಮೆಯ್ದೆ: **ನೇಮಿನಾಪು,** ೮. ೫೭); ಪಕ್ಷಿ

**ವಿಹಾಯಸ್ಸರಿದಂಬು** – ಆಕಾಶಗಂಗೆಯ ನೀರು (ಅವತಂಸೀಕೃತ ಬಾಲಕೈತಕಶಿಖಾ ಸಂದಿಗ್ಧ ಮುಗ್ಧಾಮೃತಾಂಶು ವಿಹಾಯಸ್ಸರಿದಂಬುಚುಂಬಿತ ಜಟಾಜೂಟಾಂತರಂ: **ಪಂಚತಂತ್ರ,** ೨)

**ವಿಹಾಯೋಗತಿ** – [ಜೈನ] ಆಕಾಶಗಮನ ಸಾಮರ್ಥ್ಯ (ಅಗುರು ಲಘುಚತುಷ್ಕ ವಿಹಾಯೋಗತಿ ದ್ವಿಕಸ್ಥಿರಾಸ್ಥಿರ .. .. ನೀಚೈರ್ಗೋತ್ರಗಳೆಂಬ ದ್ವಿಸಪ್ತತಿ ಪ್ರಕೃತಿಗಳಂ ನಿರವಶೇಷಂ ಕಿಡಿಸಿ: **ಆದಿಪು,** ೧೬. ೪೯ ವ)

**ವಿಹೃತದೋಷ** – ದೋಷರಹಿತ (ವಿಹೃತದೋಷಂ ಅನಾರತಂ ಎನ್ನ ಹೃತ್ಸರೋರುಹಕೆ ತಾರಕಾರಿ ಮಿಗೆ ಮಾಡುಗೆ ಭವ್ಯತರಪ್ರಮೋದಮಂ: **ರಾಜಶೇವಿ,** ೧. ೮)

**ವಿಹೃತಿ** – ವಿಹಾರ, ಆಟ (ಲಾವಣ್ಯರೂಪವಿಭ್ರಮ .. .. ಕಿಲಕಿಂಚಿತ ಲೀಲಾವಿಹೃತಿಗಳಿಂದಾ ಲೀಲಾವತಿಗಂ ನಾಲ್ವರಲ್ಗೆ ತಾಂ ಮಿಗಿಲೆನಿಪಳ್: **ಲೀಲಾವತಿ,** ೧೪. ೧೦೫)

**ವಿಹ್ವಲ** – ದಿಗ್ಭ್ರಮೆಗೊಂಡವನು (ಮುಂದುಗಾಣದೆ ವಿಹ್ವಲನಾಗಿ ತೊೞಲುತ್ತುಂ ಕಟಕದ ನಡುವಂ ಎಯ್ದೆವರ್ಪನ್ನೆಗಂ: **ಕಾದಂಬ,** ೮. ೧೦೭ ವ)

**ವಿಹ್ವಲಿತ** – ದುಃಖಿತನಾದ (ವೈಶಂಪಾಯನ ವಿಯೋಗದಿಂ ವಿಹ್ವಲಿತರಾದ ಮನೋರಮೆಯುಮಂ ಶುಕನಾಸನುಮಂ ನಾವೀಗಳ್ ಆವ ತೆಱದಿಂ ಸಂತೈಸವೇೞ್ಪುದು: **ಕಾದಂಸಂ,** ೭. ೬೫ ವ)

**ವಿಹ್ವಳ** – ವಿಹ್ವಲ (ಸಕಳ ಪ್ರಕ್ಷೋಭದೊಳ್ ವಿಹ್ವಳರಾಗಿರ್ದ ನಿರಯಜರಂ ಎಯ್ದಿ ಸುತ್ತಿಮುತ್ತಿ ಪಿಡಿದು ಉಗಿಬಗಿ ಮಾಡಿ: **ಶಾಂತಿಪು,** ೭. ೯೪ ವ)

**ವಿಳಂಬಿತ** – ನಿಧಾನ (ಬನದಿಂ ಚರ್ಯೆಗೆ ಪೋಱಮಟ್ಟಂ ಮುನಿ ತನ್ನಗವನಮಂ ದ್ರುತವಿಳಂಬಿತಂ ಪೊರ್ದದೆನಲ್: **ಮಲ್ಲಿನಾಪು,** ೧೩. ೧೪೭)

**ವಿಳಂಬಿಸು** – ಇಳಿ, ಬೀಳು (ಅನಂತರಂ ಇನಂ ಅಪರಾಬ್ಧಿಗೆ ವಿಳಂಬಿಸಲ್ಕೆ: **ತ್ರಿಷಷ್ಟಿಪು,** ೨. ೧೧೪ ವ)

**ವಿಳಯಜಳಧಿ** – ಪ್ರಳಯಕಾಲದ ಸಮುದ್ರ (ರಣಪಟಹ ಪಟುನಿನದಮೊದವೆ ವಿಳಯಜಳಧಿಯಂತೆ ನೆಲೆಯಿಂ ತಳರ್ದ ರಾಜಕುಲಮಂ ಕಂಡು: **ಪಂಪರಾ,** ೩. ೪೮ ವ)

**ವಿಳಯಜ್ವಾಲೆ** – ಪ್ರಳಯಕಾಲದ ಬೆಂಕಿ (ಕುರುಕುಲ ವಿಳಯಜ್ವಾಲೆ ಸುಯೋಧನಪ್ರಳಯಕಾಲೆ ಪಾಂಚಾಲಿಯ ವದನಮಂ ನೋಡಿ: **ಗದಾಯು,** ೧. ೬೨ ವ)

**ವಿಳಯಾನಳ** – ಪ್ರಳಯಕಾಲದ ಬೆಂಕಿ (ವಿಳಯಾನಳವಿಳಸನ ವಿಸ್ಫುಲಿಂಗಸಂಘಾತದಿಂ ತಗುಳ್ದಡೆ: **ಪಂಪಭಾ,** ೧೨. ೮೫)

**ವಿಳಯಾನಿಳ** – ಪ್ರಳಯಕಾಲ ಗಾಳಿ (ದಮಿತಾರಿ ಕೈವೀಸೆ ವಿಳಯಾನಿಳಂ ಬೀಸೆ: **ಶಾಂತಿಪು,** ೪. ೭ ವ)

**ವಿಳಯಾಶನಿ** – ವಿನಾಶಕಾರಕ ಸಿಡಿಲು (ಎಡೞ ಅಱೆದು ಈವ ಕಲ್ಪತರುವೆಂದು ವನೀಪಕಕೋಟಿ ಸಂತಸಂಬಡೆ ಪೊಡೆವ ಒಂದಕಾಳ ವಿಳಯಾಶನಿ ಎಂದು ವಿರೋಧಿಗಳ್ ಮನಂಗಿಡೆ: **ಪಂಪಭಾ,** ೨. ೯೮)

**ವಿಳಯೋಳ್ಕ** – ಪ್ರಳಯಕಾಲದ ಉಲ್ಕೆ (ಕೊಳ್ ಕೊಳ್ಳೆಂದು ಎೞ್ಚೞಡೆ ವಿಳಯೋಳ್ಕದ ತೆಱದಿಂದೆ ಮುಸುಱೆ ದಿವ್ಯಾಸ್ತ್ರಚಯಂಗಳ್ ಕೊಳೆ ಗಾಂಧರ್ವಬಲಂಗಳ್ ಕೆಡೆದುವು ನಿಟ್ಟೆಗೊಂಡ ಚಿಟ್ಟೆಯ ತೆಱದಿಂ: **ಪಂಪಭಾ,** ೭. ೩೮)

**ವಿಳಸನ** – ಹೊಳಪು, ಕಾಂತಿ (ಆತನ ಅಗ್ರಮಹಿಷಿ ಜಯಶ್ರೀಯಾಳ್ವಳ್ ತನ್ನನಮಂ ಕಣ್ಗೊಳ್ವ ನಿಜಾಕಾರಸಾರ ವಿಳಸನದಿಂದಂ: **ಚಂದ್ರಪ್ರಪು,** ೫. ೯೫)

**ವಿಳಾಸ** – ಹಾವಭಾವ (ವಿಳಾಸಂ ಅಂಬರಚರ ಅಮರಕಾಂತೆಯರೆಲ್ಲರಂ ಪಳಂಚಲೆಯೆ: **ಆದಿಪು,** ೧. ೭೨)

**ವಿಳಾಸಂಗೆಡು** – ಉತ್ಸಾಹ ಕಳೆದುಕೊ (ವಿಳಾಸಿನಿಯರ್ ವಿಳಾಸಂಗೆಟ್ಟರಂತೆ ಕುಂದೆ ನಾರಿಯರ್ ವಾರಿಸಲ್ಕಾಱದ ಅಕ್ಕರಿಗರಂತೆ ಮಿನುಕೆ: **ಧರ್ಮಾಮೃ,** ೪. ೯೭ ವ)

**ವಿಳಾಸಿನಿ** – ರಸಿಕ ಹೆಂಗಸು (ಮೃಗಭೂ ಱುದ್ಧ ವಿಳಾಸಿನೀ ಕಬರಿಕಾಬಂಧಗಳಂ ಪೊತ್ತು ಮಲ್ಲಿಗೆಯೊಳ್ ಭಾವಿಸಿ ಧೂಪದೊಳ್ ಮೊರೆದು ತತ್ಕಾಂತಾ ರತಿಸ್ವೇದಬಿಂದುಗಳೊಳ್ ನಾಂದು ಕುರುಳ್ಗಳೊಳ್ ಸುೞಿದು ಮುಂದೊಂದಿರ್ದ ಸೌಭಾಗ್ಯಘಂಟೆಗಳೊಂದಿ ಇಂಚರದೊಳ್ ಪಳಂಚಿ ಸುೞಿದತ್ತು ಅಂದೊಂದು ಮಂದಾನಿಳಂ: **ಪಂಪಭಾ,** ೪. ೮೦)

**ವಿಳಾಸಿನೀವಾಟ** – ಸೂಳೆಗೇರಿ (ವಜ್ರಾಯುಧಂ ನಾಗರಕಾದಿಗಳ್ವೆರಸು ಪೆಱತೊಂದು ವಿಳಾಸಿನೀವಾಟದೊಳಗನೆ ಬರೆವರೆ: **ಶಾಂತಿಪು,** ೮. ೯೯ ವ)

**ವಿಳಾಸೋಲ್ಲಾಸಿ** – ವಿನೋದಪ್ರಿಯ, ರಸಿಕ (ನಾನಾ ಮಂತ್ರ ದೂತ ಪ್ರಯಾಣಾಕ್ಷಯಸಮಯ ವಿಳಾಸೋಲ್ಲಾಸಿ ಸಂಗ್ರಾಮಿತಾಮಗಂ: **ಕವಿರಾಮಾ,** ೩. ೨೧೩)

**ವಿಳುಳಿತ** – ಚೆನ್ನಾಗಿ ಸಿಂಪಡಿಸಿದ (ನೃಪೇಶ್ವರನ ಘರ್ಮಜಳ ಕಣಗಣಮಂ ಕಳೆದುದು ಚಂದನಹಿಮಕರ ವಿಳುಳಿತಜಳ ಪರಿಚಿತಂ ಜಳಾರ್ದ್ರಸಮೀರಂ: **ಆದಿಪು,** ೧೧. ೭೪)

**ವೀಚಿ** – ತೆರೆ, ಅಲೆ (ಚೆಲ್ವುವೆತ್ತೊಗೆದತ್ತು ಅರ್ಣವವೀಚಿ ನರ್ತನನಟಂ ಬಿಂಬಂ ಸುಧಾಸೂತಿಯಾ: **ಅಜಿತಪು,** ೬. ೪೨)

**ವೀಚಿಮರಣ** – ಸಂತತವಾದ ಮರಣ, ಸತತವಾಗಿ ಮನುಷ್ಯನ ಆಯುಸ್ಸು, ತೇಜಸ್ಸುಗಳು ಕುಂದುತ್ತಿರುವುದು (ಮಾನಸರ ಆಯುಷ್ಯಮುಂ ತೇಜಮುಂ ಲಾವಣ್ಯಮುಂ ಯೌವನಮುಂ ಪ್ರತಿಸಮಯಂ ಕುಂದುತಿರ್ಕುಂ ಆ ವೀಚಿಮರಣಂ ನಿಮಗಱಿಯಲಾಗದು: **ವಡ್ಡಾರಾ,** ಪು ೬೮, ಸಾ ೧೦)

**ವೀಜನ** – ಬೀಸಣಿಗೆ (ಬೀಸುವ ಪುಷ್ಪವೀಜನವಮರ್ಚುವ ಕಪ್ಪುರದಚ್ಚವಾಗಳುಂ ಪೂಸುವ ಚಂದನಂ ಬಿಸುಪಂ ಆಱಿಸಲಾರ್ತವು ಸತ್ಯಭಾಮೆಯಾ: **ಜಗನ್ನಾವಿ,** ೧೧. ೨೦)

**ವೀಜ್ಯಮಾನ** – ಬೀಸಣಿಗೆಯ ಗಾಳಿ (ಅಲಂಕೃತಶರೀರೆಯುಂ ಅಮರಾಂಗನಾಜನ ವೀಜ್ಯಮಾನ ಧವಳ ಚಾಮರಕಳಾಪೆಯುಂ .. .. ತನ್ನ ಕಸನುಗಳೆಲ್ಲಮಂ ಅನುಕ್ರಮದಿಂದ ಅಱಿಪೆ: **ಅಜಿತಪು,** ೩. ೧೩ ವ)

**ವೀಟಿಕಾ** – ವೀಳೆಯ (ಹಿಮಾಂಕನಿಯುತ ವೀಟಿಕಾವಿತತಿಯಿಂ ನೃಪನರ್ಚಿಸಿದಂ ಕಪರ್ದಿಯಂ: **ರಾಜಶೇವಿ,** ೩. ೩೩)

**ವೀಟಿಕೆ** – ವೀಳೆಯ, ತಾಂಬೂಲ (ವೀಟಿಕೆಯಂ ನೀಡುವ ತಾಂಬೂಲಕರಂಕವಾಹಿನಿಯರ .. .. ಸಂಭ್ರಮದ ಸಂದಣಿಯೊಳ್: **ತ್ರಿಷಷ್ಟಿಪು,** ೧೭. ೯೧ ವ)

**ವೀತ** – ದೂರವಾದ (ಎಮ್ಮ ಕುಲಕ್ಕೆ ವೀತವೃಜಿನಂ ಜಿನರಾಜನೆದೈವಂ: **ನೇಮಿನಾಪು,** ೧. ೧೦೭)

**ವೀತರಾಗ** – ರಾಗದ್ವೇಷರಹಿತನಾದವನು, ವಿರಕ್ತ (ಕರಿ ಮಹಿಷ ಮೇಷ ಮಲ್ಲಸ್ವರೂಪದಿಂ ತಮಗೆ ತಾವೆ ಪೋಱಿ ಸುರರ್ಕಳ್ ಪರಮನ ಮನಕ್ಕೆ ಅವೊಂದುಂ ಬರಲಾಱವೆ ವೀತರಾಗನಪ್ಪುದಱಿಂದಂ: **ಅಜಿತಪು,** ೫. ೮೧)

**ವೀತಾಂಕುಶ** – ನಿರಂಕುಶ ವ್ಯಕ್ತಿ (ಮನದುಮ್ಮಳದಿಂ ಕನಲ್ದು ವೀತಾಂಕುಶನೆತ್ತಿದಂ ಮುಳಿದು ಲಂಕೆಗನೂನ ಬಲಂ ದಶಾನನಂ: **ಪಂಪರಾ,** ೧೦. ೧೫೩)

**ವೀತಿಹೋತ್ರ** – ಅಗ್ನಿ (ನಿಗಮಸ್ತೋತ್ರಪಾತ್ರಂಗೆ ಶತಪತ್ರಮಿತ್ರಾರಿ ವೀತಿಹೋತ್ರನೇತ್ರತ್ರಯಂಗೆ: **ಉದ್ಭಟಕಾ,** ೧೧. ೮೯ ವ)

**ವೀಥಿ** – ದಾರಿ (ಘನಚಂದನವೀಥಿಯೊಳ್ .. .. ತೊಟಲ್ದು ಅಱಿಸಿ ಕಾಣದೆ ನೋಡಿದೆಂ: **ಕಾದಂಸಂ,** ೪. ೫೬)

**ವೀಪ್ಸೆ** – ಬಯಕೆ (ಜಿನರಾಜನ ಮೆಯ್ವೆಳಗಿನ ಸುರಭಿಯ ಪಾಲಿಂ ಪುಳಕಿತತನು ಪುತ್ರವೀಪ್ಸೆಯಿಂದಂ ಮಿಂದಳ್: **ನೇಮಿನಾಪು,** ೨. ೮)

**ವೀರಗೋಷ್ಠಿ** – ಶೂರರ ಗುಂಪು (ಬಾಹುಬಲಿಕುಮಾರನ ವಿಜಯ ಸೈನ್ಯದೊಳ್ ಮಸೆಯಿಪ ಶಸ್ತ್ರಕೋಟಿ ಸಮಕಟ್ಟುವ ಸನ್ನಣಂ .. .. ಎಸೆವ ಉಗ್ರಕಾನಕ ರೌದ್ರಘೋಷಂ ಏರ್ವ್ಯಸನಮನುಂಟುಮಾಡಿದುದು ಪಂದೆಗಮಂದಿನ ವೀರಗೋಷ್ಠಿಯೊಳ್: **ಆದಿಪು,** ೧೪. ೯೦)

**ವೀರಚರಿತ** – ಶೌರ್ಯದ ನಡವಳಿಕೆಯುಳ್ಳವನು ೯(ಉದಾರ ವೀರಚರಿತನಿರತಕದನಕರ್ಕಶಕ್ಷತ್ರಿಯಂಗೆ .. .. ನಿಷ್ಕಾರಣ ಕಂಪನಮುಂ ನಿರಾಲಂಬನ ವಾಗಾಡಂಬರಮುಂ ತಕ್ಕುದಲ್ತು: **ಆದಿಪು,** ೧೪. ೮೧ ವ)

**ವೀರಪಟ್ಟ** – ಸೇನಾಧಿಪತ್ಯ ಸೂಚಕ ಹಣೆಪಟ್ಟಿ (ಇವರಿನ್ನುಂ ಅಂತಿಜೀವರೆಂದು ವಿಮೋಹಿಸಿ ವೀರಪಟ್ಟಮಂ ಬಗೆರಯದೆ ಕಟ್ಟಿದೈ: **ಪಂಪಭಾ,** ೧೦. ೧೬)

**ವೀರಭೋಜ್ಯ** – ವೀರರು ಅನುಭವಿಸಲು ಯೋಗ್ಯವಾದ (ಅರಿಯುವತಿ ಬಾಷ್ಪಬಿಂದೂತ್ಕರಂಗಳಪಸೂತ್ರಹಾರಮಂ ಸ್ತನದೊಳ್ ಪೋಲ್ತಿರೆ ತವಿಸೆ ಪಗೆವರಂ ಸಕಳರಾಜ್ಯಮಂ ವೀರಭೋಜ್ಯವೆನಿಸಿದನೀತಂ: **ಶಾಂತಿಪು,** ೫. ೧೧೪)

**ವೀರಭೋಜ್ಯಾ ವಸುಂಧರಾ** – ಭೂಮಿಯು ವೀರರಿಂದ ಅನುಭವಿಸಲ್ಪಡತಕ್ಕದ್ದು (ದೇವ ವೀರಭೋಜ್ಯಾ ವಸುಂಧರಾ ಎಂದು ನುಡಿದನಾ ವೃಷಭೇಂದ್ರಂ: **ಪಂಚತಂತ್ರ,** ೧೫೭)

**ವೀರರಸ** – ಶೌರ್ಯದ ಭಾವನೆ (ವೀರರಸದ ತಿಱಿಯುಂ ನೆತ್ತರ ತೊಱಿಯುಂ ಒಡನೊಡನೆ ಬೆಳಗೆಡೆದು ಪರಿಯೆ ಚತುರ್ಬಲಂಗಳ್ ಕಾದಿ ಬಸವಱಿದು ಪೆಱಪಿಂಗಿ ನಿಂದಾಗಳ್: **ಪಂಪಭಾ,** ೧೨. ೧೭ ವ); ನವರಸಗಳಲ್ಲಿ ಒಂದು (ವೀರರಸಂ ಸ್ಫುಟೋಕ್ತಿಯಿನುದಾರತಮಂ ಕರುಣಾರಸಂ ಮೃದೂಚ್ಚಾರಣೆಯಿಂದಂ .. .. ಪ್ರಕಟಂ: **ಕವಿರಾಮಾ,** ೨. ೯೯)

**ವೀರವಾಕ್ಯ** – ಪರಾಕ್ರಮದ ನುಡಿ (ಅವರೊಳ್ ಪರೀಕ್ಷಾಕ್ಷೋದಾರ ವೀರವಾಕ್ಯಂಗಳಂ ನುಡಿಯುತ್ತುಂ ರಥಮಂ ಮಗುಟಿಲ್ವೇಟ್ಟು: **ಶಾಂತಿಪು,** ೪. ೧೦೨ ವ)

**ವೀರಶಯ್ಯಾ[ಯ್ಯೆ]** – [ಜೈನ] ಸಲ್ಲೇಖನ ವ್ರತಧಾರಿಗಳು ಮಲಗುವ ಜಾಗ (ಬಲ್ವಿಡಿವಿಡಿದು ಶರಣ್ಬುಗು ಜಿನೇಂದ್ರಪದಸರಸಿಜಮಂ ಎಂದದಾ ಮಹಾನುಭಾವನ ಪೇಟ್ದ ಮಾಟ್ಕೆಯೊಳಿರ್ಪತ್ತೆರಡು ದಿವಸಂಬರಂ ವೀರಶಯ್ಯಾತಳಗತನಾಗಿರೆ: **ಆದಿಪು,** ೨. ೫೮ ವ)

**ವೀರಸಂಸ್ತರಾರೂಢ** – [ಜೈನ] ಸಲ್ಲೇಖನ ವ್ರತಧಾರಿಯಾಗಿ ಮಲಗಿದವನು (ಜಿನೇಂದ್ರಾರ್ಚನಾಪುರಸ್ಸರಂ ವಾಚನಾಗ್ರಹಣ ಸಮೇತಂ ಆರಾಧನೆಯಿನರ್ಚಿಸಿ ವೀರಸಂಸ್ತರ ಆರೂಢನಾದಾಗಳ್: **ಆದಿಪು** ನರಸಿಂ, ೨. ೫೦ ವ) [ಇದು ನಾವು ಸ್ವೀಕರಿಸಿದ **'ಗ'** ಪ್ರತಿಯ ಪಾಠ; ಪುಸ್ತಕದಲ್ಲಿ ಸ್ವೀಕರಿಸಿರುವ ಪಾಠ: **'ವೀರಸಂಸ್ಥಾನಾರೂಢ'** ಎಂಬುದು – ಸಂಪಾದಕರ ಟಿಪ್ಪಣಿ]

**ವೀರುಧ** – ಪೊದೆ, ಹಬ್ಬಿದ ಬಳ್ಳಿ (ವೃಕ್ಷ ಕ್ಷುಪವೀರುಧ ಔಷಧಪರೀತಸಮುನ್ನತ ಕೂಟಕೋಟಿರೌದ್ರಕ್ಷಿತಿಭೃದ್ಗುಹಾ ಗಹನಮಂ ಕಳಿದು ಆ ಮೃಗಧೂರ್ತಂ ಎಯ್ದಿದಂ: **ಪಂಚತಂತ್ರ,** ೯೭)

**ವೀರ್ಯ** – ಪರಾಕ್ರಮ (ಭಯವಿರಹಿತ ವೀರ್ಯ ಔದಾರ್ಯ ಗಂಭೀರ ಕಾರ್ಯಾರ್ಥಶ್ರಯವಿಶದಗುಣ ಶ್ರೀನಾಯಕೋತ್ಕರ್ಷ ವೇದ್ಯಂ: **ಕವಿರಾಮಾ,** ೩. ೨೧೩); [ಜೈನ] 'ಅಷ್ಟಗುಣ'ಗಳಲ್ಲಿ ಒಂದು, ಸಿದ್ಧಿ (ಬಟಿಯಂ ಕ್ಷಾಯಿಕ ಸಮ್ಯಕ್ತ್ವಾನಂತಜ್ಞಾನ ದರ್ಶನವೀರ್ಯ ಸೂಕ್ಷ್ಮಾವಗಾಹ ಅಗುರುಲಘುತಾ ವ್ಯಾಬಾಧಂಗಳೆಂಬ ಗುಣಮೆಂಟು ಬಂದು ತನ್ನೊಳ್ ಪೆಣೆದಿರೆ: **ಆದಿಪು,** ೧೬. ೪೯ ವ)

**ವೀರ್ಯಕ್ಷರಣ** – ವೀರ್ಯಸ್ಖಲನೆ (ಗಿರಿಜೆಯ ಮೈಸೋಂಕೆ ಹರುಷದಿಂದೆ ವೀರ್ಯಕ್ಷರಣಂ ದೊರೆಕೊಳೆ ಸಿಗ್ಗಿಂದೊರಸಿದನಂ ಆಪ್ತನೆನಲಾಗದು ಅಱಿವುಳ್ಳಾತಂ: **ಸಮಯಪ,** ೮. ೧೩೨)

**ವೀರ್ಯಾಂತರಾಯ** – [ಜೈನ] ಅಂತರಾಯ ಕರ್ಮಗಳಲ್ಲಿ ಒಂದು, ಒಂದು ವಿಘ್ನ (ಚಕ್ಷುರಕ್ಷುರವಧಿ

ಕೇವಲದರ್ಶನಾವರಣ ಚತುಷ್ಕಮುಮಂ ದಾನಲಾಭ ಭೋಗೋಪಭೋಗ ವೀರ್ಯಾಂತರಾಯಪಂಚಕಮುಮಂ ಒರ್ಮೊದಲೆ ಕಿಡಿಸಿ: **ಆದಿಪು,** ೧೦. ೧೪ ವ)

**ವೀಸ** – ನಾಲ್ಕು ಕಾಣಿಗಳ ಬೆಲೆಯ ಒಂದು ನಾಣ್ಯ (ಶಾಸನದೇವತೆಗೆಂದೊಡೆ ವೀಸದ ಪುಷ್ಪಮನೀಯರ್ ಅಱುಗುಲಿವೆಂಡಿರ್: **ಸಮಯಪ,** ೫. ೯೯)

**ವೀಳಿಗೆ** – ವೀಳೆಯದೆಲೆ (ಪೇಟಿಕೆ–ಪೇಳಿಗೆ ವೀಟಿಕೆ–ವೀಳಿಗೆ ಘುಟಿಕೆ–ಗುಳಿಗೆ .. .. ಇವು ಅಪಭ್ರಂಶದೊಳ್ ಟಕಾರಕ್ಕೆ ಪುಟ್ಟಿಯುಂ ಕುಳನಾದುವು: **ಶಬ್ದಮದ,** ೩೨ ವೃತ್ತಿ); ತಾಂಬೂಲ ಪೆಗಳ ತಟ್ಟೈಸಿ ತೋಳಿಂ ತೊಡೆಗೆ ಗುರುನಿತಂಬಾಗ್ರಮಂ ಸಾರ್ಚಿ ಮುಂ ವೀಳಿಗೆಯಂ ಬಾಯ್ಗಿತ್ತು: **ಲೀಲಾವತಿ,** ೧೩. ೩೨)

**ವೀಳೆಯಂಗೊಡು** – ತಾಂಬೂಲ ನೀಡು (ಅರಿಮಥನ ಮಹಾರಾಜಂ ಕಿಱಿಯರ್ಪಿರಿಯರೆನ್ನದೆ ಮನ್ನಣೆಯಿಂ ಕರ್ಪುರಸಹಿತಂ ವೀಳೆಯಂಗೊಟ್ಟು ಪೋಗಲ್ವೇಟ್ಟು: **ಧರ್ಮಾಮೃ,** ೨. ೪೪ ವ)

**ವೀಳೆಯಮೀ** – ವೀಳೆಯವನ್ನು ಕೊಡು (ಸಂತೋಷಂಬಟ್ಟು ಉಡಲ್ಕೊಟ್ಟು ವೀಳೆಯಮನಿತ್ತು ಸಂತುಷ್ಟಿಪಡಿಸಿ ಪೋಗುತ್ತಿರೆ ವಸುಭಾಗಭಟ್ಟಂ: **ಪಂಚತಂತ್ರ,** ౭೦ ವ)

**ವೃಂತ** – ಬೀಸಣಿಗೆ (ಚೆಂದಳಿರಾಲ ವೃಂತಂಬಿಡಿದು ಪದೆಪಿನಿಂ ಬೀಸೆ ಕಲ್ಯಾಣಿ ತಾಂ ಕಣ್ಗೊಳಿಸಿರ್ದಂ ನೋಡುತುಂ: **ಶಬರಶಂ,** ೩. ೬೪)

**ವೃಂದ** – ಸಮೂಹ, ಸಂಸಾರದ ಜನ (ಬಸುಱುಮಂ ವೃಂದಮುಮಂ ಪೊರೆಯಲ್ಕೆ ಮಱುಗುವಾತಂ ನರಕಕ್ಕಿಕ್ಕಿಟೆವಂದು ಅದಾರ್ಗೆ ಕೈಯೆಡೆಗುಡುವಂ: **ಸಮಯಪ,** ೫. ೧೪೮)

**ವೃಂದಂ ನರೇಂದ್ರಾಯತೇ** – ಗುಂಪು ರಾಜನ್ನಾಗಿಸುತ್ತದೆ (ವೃಂದಂ ನರೇಂದ್ರಾಯತೇ ಎಂಬ ನೀತಿಯಂತೆ ಪೞಿಯರ ಮಕ್ಕಳಿನೆಂತುಂ ಪೊರೆಯಲೆವೇಟ್ಟುಂ: **ಪಂಚತಂತ್ರ,** ೮೭ ವ)

**ವೃಂದಾರಕ** – ಸಮೂಹ; ಶ್ರೇಷ್ಠ (ಸುರವೃಂದಾರಕರಿಂದಂ ಪರಿವೃತನಾದಂ ಚಿದಾತ್ಮನತ್ತೊಂದೆಡೆಯೊಳ್: **ಆದಿಪು,** ೯. ೭೦); ದೇವತೆ (ವೃಂದಾರಕರೆಲ್ಲಂ ಹಸ್ತಚತುಷ್ಟಯೋತ್ಸೇಧರುಂ ಅಷ್ಟಾದಶರತ್ನಾಕರೋಪಮ ಆಯುಷ್ಯರುಂ ಶಬ್ದಪ್ರವೀಚಾರರುಂ ಅಪ್ಪರ್: **ಸುಕುಮಾಚ,** ೧೧. ೬೬ ವ)

**ವೃಂದಾರಕದಾರಕ** – ಸುಂದರ ಬಾಲಕ (ಓರಗೆಗಳಪ್ಪ ಬಹುವೃಂದಾರಕದಾರಕರನಂದು ಸಹಪಾಂಸುಕ್ರೀಡಾರಸದೊಳ್ ಮದಭೃಂಗೀಗೀತಗೀತಂ ನೆಱೆದು ನೆಗೞೆ ನಿರವಿಸಿ: **ಪುಷ್ಪದಂಪು,** ೧೨. ೫೫)

**ವೃಕ** – ತೋಳ (ಪರಿಗಳಿತ ಪೂತಿಗಂಧರ್ ಖರ ಕಾಕ ಸೃಗಾಲ ಕರಭ ಕೌಶಿಕ ವೃಕ ವಾನರ ವಿಷದಂಷ್ಟ್ರೋತ್ಕರ ಕುರ್ಕುರ ಕೀಟಕ ಭಲ್ಲನಿಕರ ನಿಷ್ಠುರನಿನದರ್: **ಶಾಂತೀಶ್ವಪು,** ೯. ೧೦೬)

**ವೃಕೋದರ** – ತೋಳದಂತೆ ಹೊಟ್ಟೆಯುಳ್ಳವನು, ಭೀಮಸೇನ (ಕಾದಿದೊಡಲ್ಲದೆ ಈಯೆಂ ಅಱೆದಿರ್ಕೆ.. ..ಎಂಬುದುಂ ವೃಕೋದರಂ ಮುಳಿದು ಆಸ್ಫೋಟಿಸಿ: **ಪಂಪಭಾ,** ೯. ೯೦ ಮತ್ತು ೯೦ ವ)

**ವೃಕ್ಷಭಂಜನ** – ಮರಗಳನ್ನು ಕತ್ತರಿಸುವಿಕೆ (ಸುಂದರನೆಂಬಾನೆ ಸಾರಲೀಯದುದಱೆಂ ತದ್ವಿರಹಪರಿತಪ್ತಮನದಿಂದಂ ಸಲ್ವುದಂ ನವಯೌವನಮನೆಯ್ದಿ ಆತ್ಮಬಲಮನದಱ ಬಲದೊಳ್ ವೃಕ್ಷಭಂಜನಸಾಮರ್ಥ್ಯದಿಂ ಪರೀಕ್ಷಿಸಿ: **ವಡ್ಡಾರಾ,** ಪು. ೩೭, ಸಾ. ೧೮)

**ವೃಜಿನ** – ಪಾತಕ (ಕ್ಷಯವೃಜಿನಂ ಜಿನಸಮಯಂ ಸ್ಮಯರಹಿತಂ ಹಿತವಚಃಪ್ರಿಯಂ ಪ್ರಿಯಧರ್ಮಂ ಪ್ರಯತಯುತಂ ಸದ್ವಿನಯಂ ನಯವಾಕ್ತ್ರಸರಂ ಸರಸ್ವತೀಮುಖಮುಕುರಂ: **ಸುಕುಮಾಚ,** ೧. ೫೧)

**ವೃಜಿನಬಂಧ** – ಪಾಪದ ಬಿಗಿತ (ಇದೇಂ ವೃಜಿನಬಂಧಮೋ ಕುಸೃತಿಬಂಧಸಂಬಂಧಮೋ ಎಂದದೇಂ ತಳೆದನೋ ಮುನಿಪ್ರವರನಾಗಳ್ ಉದ್ವೇಗಮಂ: **ಸುಕುಮಾಚ,** ೪. ೬೧)

**ವೃಜಿನಾರಿ** – ಪಾಪರಹಿತ (ಆ ರಾಜಕುಳದೊಳಖಿಳ ಜಿನಾರಾಧ್ಯಮ ಸುಖದಿನಿರ್ಪಂ ಉನ್ಮಥಿತ ಸಮಸ್ತಾರಿ ಮಹಾಸೇನಂ ವೃಜಿನಾರಿ ಮಹಾಸೇನನೆಂಬಂ ಅವನೀನಾಥಂ: **ಚಂದ್ರಪ್ರಪು,** ೧೧. ೫೮)

**ವೃತ** – ಆವರಿಸಲ್ಪಟ್ಟ (ಕೋರಕಾಗ್ರ ಗ್ರಸನೋತ್ಕಂಠ ಅನ್ಯಪುಷ್ಪೋತ್ಕಕರ ವೃತವಿಟಪಂ ಚೂತಂ: **ಚಂದ್ರಪ್ರಪು,** ೧೧. ೪೩); ಸುತ್ತುವರಿದ (ವರ್ಣಂಗಳ ಪಾಠಕ್ರಮಮ ಅರ್ಣವವೃತಧಾತ್ರಿಯೊಳ್ ಪ್ರಸಿದ್ಧಂ ನಿಜದಿಂ ವರ್ಣಂಗಳ್ ಅಕಾರಾದ್ಯಾಪೂರ್ಣತೆಯಂ ಪಡೆವುವು ಆ ಳಕಾರಂಬರೆಗಂ: **ಶಬ್ದಮದ,** ೧೪)

**ವೃತಿ** – ಗುಂಡಗಿರುವುದು ಆ ನೃಪೋತ್ತಮನೊಳ್ ರಾಗೋತ್ಕಂಠಮೆಂಬುದು ತಳಂಗಳೊಳ್ ವೃತಿಯೆಂಬುದು ಊರುಸ್ತಂಭದೊಳ್ .. .. ಅಲ್ಲದೆ ಪೆಱವುಟೆಯಱೆದು ಮತ್ತವಿಲ್ಲಾ: **ವರ್ಧಮಾಪು,** ೮. ೨೪ ವ); ಬೇಲಿ, ಆವರಣ (ದಯೆ ವೃಕ್ಷಮೂಲಮೆನಿಕುಂ ನಿಯಮಂ ವೃತಿ ಶೀಲಮಾಳವಾಳಂ ಎನಲ್ಕೇಟ್ಗೆಯನಾಳ್ದ ಸುಖದ ಫಲಪ್ರಾಪ್ತಿಯನಾಗಿಪ ಕಲ್ಪವೃಕ್ಷಮಲ್ಲದೆ ಧರ್ಮಂ: **ಪುಷ್ಪದಂಪು,** ೧೩. ೫೫)

**ವೃತಿವೀರು** – ಬೇಲಿಯ ಮುಳ್ಳು (ಅತಿಪೀಡಿಸುಗುಂ .. .. ವೃತಿವೀರುತ್ ಪತಿತಂ ಪಥಿಕರ ಪದತಳಹತಿಯಂ ಹತಕಂಟಕಾಂಕುರಂ ಮಾಡುವವೋಲ್: **ಲೀಲಾವತಿ,** ೧. ೩೬)

**ವೃತ್ತ** – ವರ್ತುಲ (ಕುಂದದ ಕೋಮಲಾಂಗರುಚಿಯಿಂ ಚೆಲುವಿಂಗೆಣೆಯಾಗಿ ವೃತ್ತದೊಂದಂದದೊಳಿರ್ದ ಪೆಮೊಲ್ಲೆಯಿಂ .. .. ಕಡುಗಾಡಿವೆತ್ತ ವಾಕ್ಸುಂದರಿ: **ಧರ್ಮಾಮೃ,** ೧. ೮); ನಡವಳಿಕೆ (ವೃತ್ತಮುಂ ಅಖಿಳಕಳಾಸಂಪತ್ತಿಯುಂ ಅತಿವಿಶದಮೆನಿಕುಂ: **ಪಾರ್ಶ್ವನಾಪು,** ೧೦. ೨೪); ಘಟಿಸಿದುದು (ವೃತ್ತಂ ಭೂತಂ ಕ್ರಿಯೆಗುಪಪತ್ತಿಯೊಳೊಡಸಲ್ವುದು: **ಅಭಿಧಾವ,** ೧, ೨. ೧೮)

**ವೃತ್ತಕ** – ಸುದ್ದಿ (ಇದು ಖೇದಪ್ರದಮಲ್ತು ವೃತ್ತಕಂ ಇದು ಆಶ್ಚರ್ಯಪ್ರದಂ: **ಕಾದಂಸಂ,** ೭. ೫೫); ಚರಿತ್ರೆ (ಇದು ನಿನ್ನ ವೃತ್ತಕಂ ತಪ್ಪದು ಕೂಡಿದುದೆನ್ನ ಬಯಕೆ .. .. ಮದನಂ ಕೃತಕೃತ್ಯನದನಿಂದು ನರೇಂದ್ರಾ: **ಲೀಲಾವತಿ.** ೭. ೯೭); ವೃತ್ತಾಂತ (ನಿನ್ನಡಿಗಳಂ ನಯದಿಂದಮೆ ಪೂಸುತಿರ್ದಪಳ್ .. .. ಇದು ಈಕೆಯ ವೃತ್ತಕಂ: **ನೇಮಿನಾಪು,** ೫. ೬೭)

**ವೃತ್ತಪಾಠಕ** – ಮಂಗಳಶ್ಲೋಕ ಪಾಠಕ, ಹೊಗಳು ಭಟ್ಟ (ಮೆಚ್ಚಿಸಿದ ಗಾಯಕಸತ್ತ್ರಹಾರವೃತ್ತಪಾಠಕತತಿಗಿತ್ತಂ ಅಗ್ಗಳದ .. .. ಜೀವಿತಮಂ ಮದನಂ ಬಸಂತದೊಳ್: **ಶಾಂತಿಪು,** ೭. ೧೨೯)

**ವೃತ್ತಿ** – ಸಂಪಾದನೆಯ ಮಾರ್ಗ (ಯಥೋಚಿತ ವೃತ್ತಿಗಳನಱೆಪಲೆಂದು .. .. ಅಱಂ ಬೇಱೆ ತೋಱೆದೊಡೆ:

**ಆದಿಪು,** ೮. ೭೨ ವ); ಕೈಶಿಕಾದಿ ವೃತ್ತಿ (ರಸಾದಿಗುಣವಾದ ಪದಜೋಡಣೆ] (ಭಾರತಿ ಸಾತ್ವತಿ ಕೈಶಿಕಿ ಆರಭಟಿಯುಮೆಂಬ ವೃತ್ತಿಯೊಳ್ ಸಂಚಾರಿಸುವ ಭಾವಮಂ ವಿಸ್ತಾರಿಸುವ ಬೆಡಂಗು ಬೇಱ್ ನೀಲಾಂಜನೆಯಾ: **ಆದಿಪು,** ೯. ೨೬); ನಡತೆ (ಸೂತ್ರಿಸಿದ ಸೂತ್ರದ ವೃತ್ತಿ ನಿಜಾತ್ಮವೃತ್ತಿವೊಲ್ ಪರಿಣಮಿಸಿತ್ತು: **ಪಂಪಭಾ,** ೨. ೩೪); ವಿವರಣೆ (ಅವಱವಱ ಬಟೆಯೊಳ್ ವೃತ್ತಿಯ ವಿಸ್ತರಂ ವ್ಯಾಕುಲಮಾದಪ್ಪುದೆಂದು ಸೂತ್ರಕ್ಕೆ ತಾತ್ಪರ್ಯಾರ್ಥಂ ಪ್ರವರ್ತಿಸುತ್ತುಮಿರೆ ಪೇೞ್ದಿಂ: **ಶಬ್ದಮದ,** ೬ ವೃತ್ತಿ)

**ವೃತ್ತಿಪರಿಸಂಖ್ಯಾನ** – [ಜೈನ] ಆರು ಬಗೆಯ ಬಾಹ್ಯತಪಸ್ಸುಗಳಲ್ಲಿ ಒಂದು, ಸಿಕ್ಕಿದರೆ ಮಾತ್ರ ಆಹಾರ ಸೇವಿಸುವುದು (ವೃತ್ತಿಪರಿಸಂಖ್ಯಾನಂ ಸೊಗಯಿಪ ರಸವರ್ಗಂ ಮಾಣ್ಬ ರಸಪರಿತ್ಯಾಂಗಂ .. .. ಎಂಬ ಅಯ್ದುಂ ತಪಮಂ ಆ ಮುನಿ ತಾಳ್ದಿದಂ: **ಅನಂತಪು,** ೪. ೧೬)

**ವೃತ್ತಿಲೋಪ** – ಕರ್ತವ್ಯಲೋಪ (ಅನ್ಯಾಯದೊಳ್ ನಡೆದಂದು ನಿಮಗೆ ವೃತ್ತಿಲೋಪಮಕ್ಕುಂ: **ಚಾವುಂಪು,** ಪು. ೩೧೬. ಸಾ. ೩೦)

**ವೃತ್ತಿವರ್ತನೆ** – ಉದ್ಯೋಗ (ವೃತ್ತಿವರ್ತನೆಗಳ್ ನೆಟ್ಟನೆ ತೀರೆ ಧೀರತನದಿಂ ಮನಮನನಿತಂ ತೀರದಿರ್ದಂ: **ತ್ರಿಷಷ್ಟಿಪು,** ೨೦. ೭)

**ವೃತ್ರಹ** – ವೃತ್ರಾಸುರ ಸಂಹಾರಕ, ಇಂದ್ರ (ಅಂತು ನೆಱೆಯೆ ಜನ್ಮಾಭಿಷೇಕಮಂ ವೃತ್ರಹಂ ನಿರ್ವರ್ತಿಸಿ: **ಶಾಂತಿಪು,** ೧೦. ೫೪ ವ)

**ವೃತ್ರಹಮಂತ್ರಿ** – ಇಂದ್ರನ ಮಂತ್ರಿ, ಬೃಹಸ್ಪತಿ (ಶೂರ್ಪಕವೈರಿ ಕಾಲುಗುರ್ಗೆ ವರ್ಪನೊ ಶೀತಮರೀಚಿ ಕಾಂತಿಗೇಂ ವರ್ಪನೊ ವಾಸವಂ ಸಿರಿಗೆ ವರ್ಪನೊ ವೃತ್ರಹಮಂತ್ರಿ ಜಾಣ್ಗೆ ಮೇಣ್ ವರ್ಪನೋ: **ಶಾಂತಿಪು,** ೭. ೧೧೮)

**ವೃಥೆ** – ವ್ಯರ್ಥ (ಸಗ್ಗಂ ನರಕಮದೆಲ್ಲಿತ್ತು ಏಂ ಪುಣ್ಯಪಾಪಮುಂ ವೃಥೆಯಲ್ತೇ: **ಸಮಯಪ,** ೧೧. ೧೨೦)

**ವೃಥೋಕ್ತಿ** – ನಿರರ್ಥಕ ನುಡಿ (ಮಗನಗರಾಜ ಧೈರ್ಯನಿಭರಾಜಮನಂ ಮೃಗರಾಜಸತ್ವನರ್ಥಿಗೆ ಭಯಮಿಲ್ಲ ಬಾೞ್ತೆಗೆ ವೃಥೋಕ್ತಿಗಳಿಲ್ಲ ನೆಗೞ್ತೆಗಂ ಪೊಗೞ್ತೆಗಂ ಎಣೆಯಿಲ್ಲ: **ಶಾಂತಿಪು,** ೮. ೧೧೬)

**ವೃದ್ಧಕದಂಬ** – ಹಿರಿಯರ ಗುಂಪು (ಹೃದಯಪ್ರಮೋದ ಮದಿರಾಮದದಿಂ ಮೆಯ್ಮಱೆದು ಮೇಲುದಂ ಮಱೆದಿರ್ದಾಡಿದುದು ಪಱೆ ಮಾಣ್ದೊಡಂ ಮಾಣದೆ ಮೆಚ್ಚಿದ ತೆಱದಿಂ ಆ ವೃದ್ಧಕದಂಬಂ: **ಪುಷ್ಪದಂಪು,** ೪. ೩೬)

**ವೃದ್ಧಧಾತ್ರಿ** – ಮುದಿ ದಾದಿ (ನಾಭಿವಿಲಂಬಮಾನ ಲಂಬಸ್ತನವಿಸ್ರಸ್ತ ಅಂತರೀಯೋತ್ತರೀಯ ವೃದ್ಧಧಾತ್ರೀ ನರ್ತನನಿರೀಕ್ಷಣ ಜನತಾಜನಿತಹಾಸನಿವಾಸಮುಂ: **ಆದಿಪು,** ೮. ೩೫ ವ)

**ವೃದ್ಧರಾಜ್ಯ** – ವೃದ್ಧಿಪಡೆದ ರಾಜ್ಯ (ಓಳ್ನೆಗೞ್ತೆಯೊಳ್ ತೊಡರ್ದಿರೆ ವೃದ್ಧರಾಜ್ಯಮುಮದೇನೆಸೆದತ್ತೊ ನಭಶ್ಚಂದ್ರನಾ: **ಆದಿಪು,** ೨. ೨೪)

**ವೃದ್ಧಶ್ರವ** – ಇಂದ್ರ (ಕರಿ ಬೆಳ್ಳುಗಿಲ್ ಒಡ್ಡಿನ ಕರಿ ಸುರಥಂ ವೃದ್ಧಶ್ರವನ ಸುರಥ ಕುದುರೆ ಮಹಾಸುರದ ಬಿಸಿಲ್ಗುದುರೆ: **ತ್ರಿಷಷ್ಟಿಪು,** ೨೪. ೩೪೦)

**ವೃದ್ಧಿ** – ಬೆಳೆಯುವುದು, ವಿಕಾಸ (ನೀನೆನಗಿತಾಗ್ರಹಂಗೆಯ್ದು ಬುದ್ಧಿವೇೞ್ವುದೆಲ್ಲಮೆನ್ನ ಹಾನಿವೃದ್ಧಿಗಳ್ ನಿನ್ನವಪ್ಪ ಕಾರಣದಿಂದ ಪೇೞ್ದೆ: **ಪಂಚತಂತ್ರ,** ೨೦೦ ವ)

**ವೃದ್ಧೋಕ್ಷ** – ಮುದಿ ಎತ್ತು [ಚತುರಂಗಬಲಂಬೆರಸು ಅಬಳಾಬಾಳವೃದ್ಧ ವೃದ್ಧೋಕ್ಷಶಕಟಸಂಕಟಮಪ್ಪ ಕಟಕಮಂ ಮೆಲ್ಲಮೆಲ್ಲನೊಡಗೊಡು ಬರ್ಪಂತು: **ಆದಿಪು,** ೪. ೯೧ ವ)

**ವೃಷ** – ಇಂದ್ರ (ವೃಷಕೃತ ಜಿನೇಂದ್ರ ಜನ್ಮಾಭಿಷವಂ ನಂದೀಶ್ವರತ್ರಯಂಗಳೊಳ್ ಅಮಾನುಷಮಾಗಿರೆ ಮಾಟ್ಟಿ ಮಹಾಭಿಷೇಕದಂತಾಯ್ತು ದಾನಚಿಂತಾಮಣಿಯಾ: **ಅಜಿತಪು,** ೪. ೭೬); ನೀತಿ; ಪುಣ್ಯ (ಮೂವತ್ತಾಱು ಗುಣದಿಂ ಭಾವಜನಂ ಕಟ್ಟಿ ಪೆಟ್ಟವೆಳದರ್ ವೃಷದಿಂ ಭಾವಿಪೊಡೆ ಮೇಘಚಂದ್ರತ್ರೈವಿದ್ಯರ್: **ಮಲ್ಲಿನಾಪು,** ೧. ೨೧)

**ವೃಷದ್ವಿಪ** – ಇಂದ್ರನ ಆನೆ, ಐರಾವತ (ಕೂಡೆ ಸಮಸ್ತವಸ್ತುಶತಸಾರ ಸಮೃದ್ಧಿಯನೊಪ್ಪುತಿರ್ಪುದು ಆ ನಾಡು ದಿವಕ್ಕೆ ತೋಡು ಕುಸುಮೇಷುಗೆ ಬೀಡು ವೃಷದ್ವಿಪಕ್ಕೆ ತಾಯ್ಗಾಡು .. .. ನಯನಕ್ಕೆ ಎಳದಿಂಗಳ ಕಾಡಿದೆಂಬಿನಂ: **ಪುಷ್ಪದಂಪು,** ೯. ೧೮)

**ವೃಷಧ್ವಜ** – ಈಶ್ವರ (ಯುದ್ಧದೊಳ್ ವೃಷಧ್ವಜನುಮನಿಕ್ಕಿ ಗೆಲ್ದ ಅರಿಗನೊಳ್ ತಲೆವಟ್ಟಿದಿರಾಗಿ ನಿಂದು ಸೂತಜನಿಜೀವಂ ಗಡಂ: ಪಂಪಭಾ, ೧೨. ೪೦); [ಜೈನ] ಆದಿ ತೀರ್ಥಂಕರ (ಪಾಪಹರಂ ಪ್ರಕಾಶಿತವೃಷಂ ವೃಷಭಂ ವೃಷಧ್ವಜಂ .. .. ಸಮಸ್ತ ವಿದ್ಯಾಪತಿ ನಾಭಿನಂದನನಂ ಉಪಾಶ್ರಿತ ಭವ್ಯಜನಾಭಿನಂದನಂ: **ಆದಿಪು,** ೧. ೪೦)

**ವೃಷಭ** – ಎತ್ತು (ಇದು ಶಾಪೋಪಹತಮಾದ ಮಾನವನಾಗಲೆವೇೞ್ಕುಂ ಕೇವಲ ವೃಷಭನಾಗಲಾಱೆಯದು: **ಪಂಚತಂತ್ರ,** ೧೦೭ ವ)

**ವೃಷಭನಾಥ** – [ಜೈನ] ಆದಿ ತೀರ್ಥಂಕರ (ಪಾಪಹರಂ ಪ್ರಕಾಶಿತವೃಷಂ ವೃಷಭಂ ವೃಷಧ್ವಜಂ .. .. ಸಮಸ್ತ ವಿದ್ಯಾಪತಿ ನಾಭಿನಂದನನಂ ಉಪಾಶ್ರಿತ ಭವ್ಯಜನಾಭಿನಂದನಂ: **ಆದಿಪು,** ೧. ೪೦)

**ವೃಷಭಲಕ್ಷಣ** – ಅಶ್ವತ್ಥಾಮ (ತನ್ನ ಬಿನ್ನನಿರ್ದ ಮೊಗದಿಂ ತವಿಲ್ದಿರೆ ವಿಲಾಸಮುಂ ಮುಂದೆ ಕಂಡನಲ್ಲಿ ಕಮಳಾಕ್ಷಿಯಂ ವೃಷಭಲಕ್ಷಣಂ ಲಕ್ಷ್ಮಿಯಂ: **ಗದಾಯು,** ೯. ೩);

**ವೃಷಭಾಚಲ** – [ಜೈನ] ಚಕ್ರವರ್ತಿಗಳು ತಮ್ಮ ವಿಜಯಪ್ರಶಸ್ತಿಯನ್ನು ಕೆತ್ತಿಸುವ ಪರ್ವತ (ಇತ್ತ ಉತ್ತರಭರತಮನಾಳುತ್ತಿರ್ದರ್ ಅನೇಕಚಕ್ರವರ್ತಿಗಳ್ ಪೆಸರ್ ಸುತ್ತಿ ಬರೆದಿರೆ ನಿಬಂಧದ ಹೊತ್ತಗೆಯೆಂಬಂತಿರಿರ್ದ ವೃಷಭಾಚಲಮಂ ಕಂಡು: **ಶಾಂತಿಪು,** ೧೧. ೬೧ ಮತ್ತು ೬೧ ವ)

**ವೃಷಮಾರ್ಗ** – ಧರ್ಮಮಾರ್ಗ (ದುರ್ವಾರಸಂಸಾರವಿಚ್ಛೇದ ಉಪಾಯನಿಯುಕ್ತ ಸೂಕ್ತಿವೃಷಮಾರ್ಗಾಗ್ರೇಸರಂ .. .. ದಯೆಗೆಯ್ವನಕ್ಕೆಮಗೆ ಮುಕ್ತಿಶ್ರೀಸುಖಾವಾಪ್ತಿಯಂ: **ಆದಿಪು,** ೧. ೧)

**ವೃಷಮುಖ** – [ಜೈನ] ಒಬ್ಬ ಯಕ್ಷ (ಮನೋಹರವೃಷಲಾಂಛನಂ ವೃಷಮುಖಂ ವೃಷವಾಹನಂ ಇಂದುಕುಂದಸುಂದರತರ ವರ್ಣಂ ಈ ವೃಷಭವಾಹನಕಥಾರಚನೋಕ್ತಿಯಲ್ಲಿ ಮಾಟ್ಕಿರದೆ ಎಮಗಾಗಳುಂ ವೃಷಭಯಕ್ಷವನವಿಘ್ನಮನಃಪ್ರವೃತ್ತಿಯಂ: **ಆದಿಪು,** ೧. ೮)

**ವೃಷವಾಹನ** – ವೃಷಭವಾಹನ (ಮನೋಹರವೃಷಲಾಂಛನಂ ವೃಷಮುಖಂ ವೃಷವಾಹನಂ ಇಂದುಕುಂದಸುಂದರತರ ವರ್ಣಂ ಈ ವೃಷಭವಾಹನಕಥಾರಚನೋಕ್ತಿಯಲ್ಲಿ ಮಾಟ್ಕೆರದೆ ಎಮಗಾಗಳುಂ ವೃಷಭಯಕ್ಷನವಿಘ್ನಮನಃಪ್ರವೃತ್ತಿಯಂ: **ಆದಿಪು,** ೧. ೮)

**ವೃಷಸ್ಕಂಧ** – ಎತ್ತಿನ ಹೆಗಲು, ವಿಶಾಲ ಭುಜ (ಸಾಲಪ್ರಾಂಶು ವಿಶಾಲ ಲೋಲನಯನಂ ಪ್ರೋದ್ಯತ್ ವೃಷಸ್ಕಂಧಂ ಉನ್ಮೀಲತ್ ಪಂಕಜವಕ್ತ್ರಂ ಆಯತ ಸಮಗ್ರ ಉರಸ್ಥಳಂ: **ಪಂಪಭಾ,** ೧. ೬೮)

**ವೃಷಾಂಕ** – ಶಿವ (ಸ್ಥಾಣು ವಿರೂಪಾಕ್ಷಂ ಮೃಡಂ ಧೂರ್ಜಟಿ ಫಣಿಕಟಕಂ ವಾಮದೇವಂ ವೃಷಾಂಕಂ: **ಅಭಿಧಾವ,** ೧. ೧. ೧೩)

**ವೃಷ್ಟಿ** – ಸುರಿಯುವಿಕೆ, ಮಳೆ (ಕವಿತಾವಲ್ಲೀ ಸುಧಾವೃಷ್ಟಿ ಸರ್ವರಸೋತ್ಪಾದನವೀನಸೃಷ್ಟಿ ಬುಧಹರ್ಷಾಕೃಷ್ಟಿ ಸರ್ವಾಂಗಸುಂದರಿ ವಿದ್ಯಾನಟಿ ನಾಟಕಂ ನಲಿಗೆ ಮತ್ಕಾವ್ಯಸ್ಥಲೀರಂಗದೊಳ್: **ಪಂಪರಾ,** ೧. ೬)

**ವೃಷ್ಣಿ** – ಮೇಕೆ (ಅವಿ ಮೇಷ ಉರಭ್ರಂ ಮೇಂಡವದೇಳಕ ವೃಷ್ಣಿ ಉರಣಕಂ ಏಕಾರ್ಥಂ: **ಅಭಿಧಾವ,** ೧. ೧೫. ೧೧)

**ವೃಷ್ಯ** – ಕಾಮೋದ್ದೀಪಕ (ಪರಿಹರಿಸಿದೆ ನಾಂ ವೃಷ್ಯಷ್ವರಸಂಗಳನೆಂದು ನಿರ್ಮಳಾಚಾರಪುರಸ್ಸರಂ ಆ ಮುನೀಂದ್ರನಾರ್ತೆಸಗಿ ರಸಪರಿತ್ಯಾಗಮೆಂಬ ತಪಮಂ ತಳೆದಂ: **ಸುಕುಮಾಚ,** ೪. ೭)

**ವೆಚ್ಚಿಸು** – ವ್ಯಯಮಾಡು (ಪಾವಿಂಗಂ ಬಲಿಯಿಕ್ಕದ ವಜ್ರಲೋಭಿಯುಂ ಶ್ರಾವಕನಾಗಲೊಡಂ ನಿಜಸಮಯಿಗೆ .. .. ವೆಚ್ಚಿಸುಗುಂ: **ಸಮಯಪ,** ೪. ೭೪)

**ವೆಜ್ಜ** – ತೂತು, ರಂಧ್ರ (ಕಣಿಯೊಳಪೊಕ್ಕು ತಾರದೆ ಪರೀಕ್ಷೆಗೆ ಪಾರದೆ ತೂಗಿ ಕೊಂಡು ಕೇವಣಿಸದೆ ವೆಜ್ಜಮಂ ಕಳೆದು ಕೋಯದೆ .. .. ಸದ್ಗುಣಮಣಿಯೆಂಬ ಭೂಷಣದಿಂ: **ಲೀಲಾವತಿ,** ೧. ೬೦)

**ವೆೞಂ** – ಖಂಡಿತವಾಗಿ (ಏಗಂ ವಲಂ ವೆೞಂ ದಲ್ ತಾಗುಗುಂ ಅತಿನಿಶ್ಚಯಾರ್ಥಮಂ: **ಶಬ್ದಮದ,** ೩೨೧)

**ವೇಗಾಯ್ಲ** – ಆಗಸದಲ್ಲಿ ಚಲಿಸುವವನು (ಅಟಲಿಗರುಂ ವೇಗಾಯ್ಲರುಂ ಅಪ್ಪ ಅನ್ವಯಾಗತ ನಭೋಗತಿಗಳ್ ಬಿಲ್ಗಂ ಸರಳ್ಗಂ ಅಣ್ಮುಗೆಟ್ಟುಂ ಇಟ್ಟೆಡೆಯಾಗಿ ತೊಟ್ಟನೆ ನೆರೆದುರುಳೆ ನೂಂಕುವುದುಂ: **ಶಾಂತಿಪು,** ೪. ೩೩ ವ)

**ವೇಢಿಮ** – ಹೂಮಾಲೆ ಕಟ್ಟುವ ಒಂದು ಬಗೆ (ಗ್ರಂಥಿಮ ವೇಢಿಮ ವೇಧಿಮ ಸಂಪೂರಿಮ ಸಂಘಾಯಿಮಮೆಂಬ ಅಯ್ದುಂ ತೆಱದ ಪುಷ್ಪಮಾಲೆಗಳಂ ಸಮೆದು: **ಹರಿವಂಶ,** ೨. ೨೯ ವ)

**ವೇಢೆಯ** – ಸುತ್ತುವರಿಯುವಿಕೆ (ವರ್ಗ ಚತುರ್ಥಕ್ಕೆ: ಆಢಾಣಂ ವೇಢೆಯಂ ಢಗೆ: **ಶಬ್ದಮದ,** ೨೫ ವೃತ್ತಿ)

**ವೇಣೀಭರ** – ಕೇಶಪಾಶ (ಮೌಕ್ತಿಕಕರ್ಣಪತ್ರಂ ಒಲೆಯಲ್ ವೇಣೀಭರಂ ತೂಗೆ ಕೋಮಲೆ ಪಾಲಂ ಪೊಸೆದಳ್: **ತ್ರಿಷಷ್ಟಿಪು,** ೧೫. ೩೦)

**ವೇಣೀಸಂಹಾರ** – ಬಿಚ್ಚಿದ ಕೂದಲನ್ನು ಜಡೆಯಾಗಿ ಹೆಣೆಯುವುದು (ಏಉರುಗಳನುಡಿವೆಂ ಒದೆವೆಂ ಕೌರವ್ಯಪರಿಬೃಢನ ಮಕುಟಮಂ ವೇಣೀಸಂಹಾರಮಂ ಮಾಡುವೆಂ: **ಗದಾಯು,** ೧. ೭೦)

**ವೇಣೀಸ್ರಕ್** – ಮುಡಿದ ಹೂ (ಭ್ರಾಜಿ ವೇಣೀಸ್ರಕ್ ಮಗ್ನ ಅಳಿವ್ರಜಂ ಪೀಲಿಯ ಪೊಸದಳೆಯಂ ಪೋಲೆ: **ಲೀಲಾವತಿ,** ೬. ೫೦)

**ವೇಣು** – ಬಿದಿರು (ಘನಸಂಜಾತವನದ್ವೀಪೇಂದ್ರ ಜಲವಾಹೋದ್ಭೂತ ವೇಣೂದ್ಭವ ಅಭಿನುತ ಜ್ಯೋತಿಗಳಪ್ಪ ಮುತ್ತುಗಳಂ .. .. ಚಕ್ರಿಗೆ ತಂದುಕೊಟ್ಟೆರಗಿದರ್: **ಶಾಂತೀಶ್ವಪು,** ೧೫. ೧೧೦); ಕೊಳಲು (ಗೋಪಾಲಮೂರ್ತಿಯಂತೆ ವೇಣುವಿಲಸಿತಮುಂ: **ತ್ರಿಷಷ್ಟಿಪು,** ೧. ೪೭ ವ)

**ವೇಣುಬೀಜ** – ಬಿದಿರಕ್ಕಿ (ವೇಣುಬೀಜಮಂ ವನಚರಿ ಕುಟ್ಟುತ್ತುಂ ಪದೆದು ಪಾಡಿದಳ್: **ಪುಷ್ಪದಂಪು,** ೫. ೯೩)

**ವೇತಂಡ** – ಆನೆ (ಆ ಕಲಿ ನಚ್ಚುವಂ ಪ್ರಬಳಬಾಹಾದಂಡಮಂ .. .. ವಿಶಾಸ್ಕರಧ ವೇತಂಡಮಂ: **ಜಗನ್ನಾವಿ,** ೯. ೯)

**ವೇತಧರ** – (ಚಚ್ಚರದಿಂದೆ ವೇತಧರರ್ ಅಂದಿರದೆ ಎಯ್ದಿದರಲ್ತೆ ದೇವಿಯರಮನೆಗಾಗಳ್: **ಕುಸುಮಾಕಾ,**೪. ೧೨೩)

**ವೇತ್ರ** – ಬೆತ್ತ (ಕರಧೃತವೇತ್ರಂ ಸಮ್ಮುಖನಿರೂಪಿತ ಆತ್ಮೀಯಗಾತ್ರಂ ಅನಿಮಿಷನೇತ್ರಂ .. .. ಪಡಿಯಱನೊರ್ವಂ: **ಆಚವರ್ಧ,** ೩. ೫೧)

**ವೇತ್ರಖೇಟಕ** – ಬೆತ್ತದ ಗುರಾಣಿ (ವ್ಯಾಕೀರ್ಣ ತ್ರಿಶೂಲಕರಾಳವಿಶಾಲವೇತ್ರಖೇಟಕಂ: **ಆದಿಪು,** ೧೩. ೪೫ ವ]

**ವೇತ್ರವಿಶಿಖ** – ಬೆತ್ತದ ಬಾಣ (ಅನೇಕರುಚಿವಿಚಿತ್ರವೇತ್ರವಿಶಿಖ ಅತಿ ರುಚಿರಪ್ರಾಂತಕುಂತಮನುತ್ತರೀಯ ಕಂಚುಕಂ ಅತಿಸುಭಟ ಮದೋತ್ಕಟಮಿದು ಕರ್ಣಾಟಬಲಂ: **ಆದಿಪು,** ೧೩. ೪೫ ವ)

**ವೇತ್ರಾಸನ** – ಬೆತ್ತದ ಪೀಠ (ಬಾಂಧವವೃದ್ಧರಂ ವೇತ್ರಾಸನಾದಿ ದಾನದಿಂ ಸನ್ಮಾನಿಸುತ್ತುಂ ಇರ್ದ ಮಹಾಶ್ವೇತೆಯ ಪೆಱಗೆ: **ಕಾದಂಬ,** ೬. ೧೬೬ ವ)

**ವೇತ್ರ** – ಬೆತ್ತ (ಸನ್ನಿಧಿಕೃತ ವೇತ್ರಾಸನರಾಗಿರ್ದ ಗುರುಗಳಂ ಎಂದಂ: **ಕಾದಂಸಂ,** ೧. ೮೪ ವ)

**ವೇತ್ರದಂಡಧರ** – ಕೋಲು ಹಿಡಿದ ದ್ವಾರಪಾಲಕ (ನೃಪತಿ ನುಡಿಯೆ ನುಡಿಯಿಂ ನೀಮಿರ್ಪೆಡೆಯೊಳಿರಿಂ ನೀಮಱಿವಿರ್ ಮಿಡುಕಿದೊಡನೆ ಚಿತ್ರವೇತ್ರದಂಡಧರರ್ಕಳ್: **ಆದಿಪು,** ೯. ೬)

**ವೇತ್ರವಿಷ್ಟರ** – ಬೆತ್ತದ ಆಸನ(ಸಂಹರಪ ದಮದುಗಮಂ ಪೊಱಗಿಕ್ಕಿತೆಂಬ ಮೆಯ್ಸಿರಿ ಸಹಜಾತಮಾಗ ತಳೆದಿರ್ಪುದನುಕ್ರಮದಿಂದೆ ವೇತ್ರವಿಷ್ಟರನಿಭ ಝಲ್ಲರೀನಿಭ ಮೃಗನಿಭ ಆಕೃತಿಯಿಂ ಜಗತ್ರಯಂ: **ಪುಷ್ಪದಂಪು,** ೧. ೮೯)

**ವೇತ್ರಾಸನ** – ವೇತ್ರವಿಷ್ಟರ (ಮೊದಲೊಳ್ ವೇತ್ರಾಸನದೊಂದಂದಮಂ ನಡುವೆ ಝಲ್ಲರೀವಿಭ್ರಮವಂ ತುದಿಯೊಳ್ ಮೃದಂಗಮಂ ಪೋಲ್ತುದು ಲೋಕಮಿದಲ್ತೆ ಲೋಕದೊಂದಾಕಾರಂ: **ಅಜಿತಪು,** ೧೧. ೪)

**ವೇದ** – ಜ್ಞಾನ; ಋಕ್, ಯಜುರ್, ಸಾಮ ಮತ್ತು ಅಥರ್ವ ಎಂಬ ನಾಲ್ಕು ವೇದಗಳು (ನಾಲ್ಕು ವೇದಂಗಳೊಳ್ ನಾಲ್ಕುಂ ಋಚಂಗಳಂ ಪೇೞ್ದು ಸಿತ ದೂರ್ವಾಂಕುರವಿಮಿಶ್ರಂಗಳಪ್ಪ ಶೇಷಾಕ್ಷತೆಗಳಂ ಕೊಟ್ಟು ಮುಂದೆ ನಿಂದನಂ ನಿಮಗೆ ಬಾೞ್ತೆಯಪ್ಪುದಂ ಬೇಡಿಕೊಳ್ಳಿಂ ಎನೆ: **ಪಂಪಭಾ,** ೫. ೭೦ ವ)

**ವೇದಂಡ** – ಆನೆ (ಅಡವಿಯ ವೇದಂಡದ ನೆತ್ತಿಯಲ್ಲಿ ಮುತ್ತುಗಳೊಳವೇ: **ನೇಮಿನಾಪು,** ೫. ೧೧೦)

**ವೇದಕ** – [ಜೈನ] ಸಮ್ಯಕ್ತ್ವದ ಒಂದು ಪ್ರಭೇದ (ಮೊದಲೊಳ್ ಉದಯಿಸಿದುದು ಉಪಶಮಂ ಬಟಿಕಾದುದಲ್ತೆ ವೇದಕಂ: **ಪಾರ್ಶ್ವನಾಪು,** ೫. ೪೭)

**ವೇದನ** – ತಿಳಿವಳಿಕೆ (ಪ್ರತಿಭಾನಂ ಶಕ್ತಿ ಲೋಕಾಗಮ ಸಕಲಕಲಾವೇದನಂ ವಿದ್ಯೆ: **ಕಾವ್ಯಾವಲೋ,** ೪೨೪)

**ವೇದನಾ[ನೆ]** – ನೋವು (ಭೈಷಜ್ಯಜ್ಞಾನಮೆ ಮಾಡುಗುಮೆ ವೇದನಾನಿಗ್ರಹಮಂ: **ಚಂದ್ರಪ್ರಭು,** ೭. ೨೬)

**ವೇದನಿ** – ತಿಳಿಯುವಂಥದು (ವೇದ್ಯಂ ವೇದನಿ ಎನಿಕುಂ; **ಅಭಿಧಾವ,** ೨. ೨. ೨೫)

**ವೇದನೀಯ** – [ಜೈನ] ಸುಖದುಃಖಕಾರಕ ಕರ್ಮ (ನಿಜದ್ವಿಚರಸಮಯದೊಳ್ ಅನ್ಯತರವೇದನೀಯ ದೇವಗತಿ .. .. ನೀಚೈರ್ಗೋತ್ರಗಳೆಂಬ ದ್ವಿಸಪ್ತತಿಪ್ರಕೃತಿಗಳಂ ನಿರವಶೇಷದಿಂ ಕಿಡಿಸಿ: **ಆದಿಪು,** ೧೬. ೪೯ ವ)

**ವೇದಪಾರಗರವ** – ವೇದ ಪಂಡಿತರ ಉದ್ಘೋಷ (ಪಸುರ್ವಂದರ್ ಪಸೆ ವೇದಪಾರಗರವಂ ಕಣ್ಬೇಟದ ಉದ್ದಾನಿಯಂ ಪಸರಂಗೆಯ್ದುವೊಲಪ್ಪ: **ಪಂಪಭಾ,** ೫. ೨೫)

**ವೇದರಹಸ್ಯ** – ವೇದಗಳ ಗೂಢಾರ್ಥ (ಅದಿರದಿದಿರ್ಚಿ ತಳ್ತಿಱಿಯಲ್ ಈ ಮಲೆದೊಡ್ಡಿದ ಚಾತುರಂಗಬಲಮೆಂಬುದು ನಿನಗೊಡ್ಡಿ ನಿಂದುದು ಇದಂ ಓವದೆ ಕೊಲ್ವೊಡೆ ನೀನುಂ ಎನ್ನ ಕಜ್ಜದೊಳೆಸೆಗು ಎಂದು ಸೈತು ಅಜಿತಂ ಆದಿಯ ವೇದರಹಸ್ಯದೊಳ್ .. .. ನೆಱೆಯೆ: **ಪಂಪಭಾ,** ೧೦. ೬೪)

**ವೇದವಿದ** – ವೇದಗಳನ್ನು ತಿಳಿದವನು (ವೇದವಿದಂ ಸಕಳಕಳಾವೇದಿಸಮಸ್ತಾಧಿಕಾರಪರಿಚಿತಂ ಆಶೀರ್ವಾದಪ್ರಿಯಂ ಪರಿಮೃತನಾದನೆ ವಿಶ್ರುತ ಬಹುಶ್ರುತೋದಾತ್ತಯಶಂ: **ಸುಕುಮಾಚ,** ೨. ೧೨)

**ವೇದಾಂಗ** – ವೇದದ ಅಭ್ಯಾಸಕ್ಕೆ ಬೇಕಾದ ಶಿಕ್ಷಾ, ಛಂದಸ್ಸು, ವ್ಯಾಕರಣ, ನಿರುಕ್ತ, ಜ್ಯೋತಿಷ, ಕಲ್ಪ ಎಂಬ ಆರು ಭಾಗಗಳು (ವೇದಾಂಗಷಟ್ಕಯಂ ಶಿಕ್ಷಾದಿಗಳ್: **ಅಭಿಧಾವ,** ೧. ೧. ೧೨)

**ವೇದಾಂತ** – ಉಪನಿಷತ್ತು (ಉಪನಿಷದಮೆಂಬಿಬುದದು ವೇದಾನ್ತಂ: **ಅಭಿಧಾವ,** ೧. ೧. ೧೨)

**ವೇದಿಕೆ** – ಜಗಲಿ (ಮಂದರಪ್ರಾಸಾದದ ಕೆಟಿಗಣ ಸೌಧತಳ ವೇದಿಕೆಯೊಳ್ ಮಹಾಶ್ವೇತೆವೆರಸಿರ್ಪಳ್: **ಕಾದಂಸಂ,** ೫. ೬೫ ವ)

**ವೇದ್ಯಾರೋಹಣ** – ವೇದಿಕೆಯೇರುವುದು (ವೇದ್ಯಾರೋಹಣಂ ತನಗೆ ವಿವಾಹವೇದ್ಯಾ ಆರೋಹಣಮನೆ ಪೋಲೆ: **ಆದಿಪು,** ೧೨. ೭೪ ವ)

**ವೇಧಸ್ಸಂಕಲ್ಪ** – ವಿಧಿನಿಯಮ (ವೇಧಸ್ಸಂಕಲ್ಪಂ ದುರ್ಬೋಧಮಿವಂ ನಿಚ್ಚೆಯಿಂ ವಿರೋಧಿಸಿ ತನುವಂ ಸಾಧಿಸಿದೊಡೀ ಕೃಪಾಣಮೆ ಬಾಧಕರಮಾಯ್ತು ಅಜಾಕೃಪಾಣೀಯದವೋಲ್; **ಪಂಪರಾ,** ೯. ೨೫)

**ವೇಧಿಮ** – ಹೂಮಾಲೆ ಕಟ್ಟುವ ಒಂದು ಬಗೆ (ಗ್ರಂಥಿಮ ವೇಢಿಮ ವೇಧಿಮ ಸಂಪೂರಿಮ ಸಂಘಾಯಿಮಮೆಂಬ ಅಯ್ದುಂ ತೆಱದ ಪುಷ್ಪಮಾಲೆಗಳಂ ಸಮೆದು: **ಹರಿವಂಶ,** ೨. ೨೯ ವ)

**ವೇಪಥು** – ನಡುಕ (ವೇಪನಂ ತಾನದಱೆಗೆ ವೇಪಥುವೆನಿಕುಂ: **ಅಭಿಧಾವ,** ೧. ೧೨. ೩೪)

**ವೇಪನ** – ನಡುಕ (ವೇಪನಂ ತಾನದಱೆಗೆ ವೇಪಥುವೆನಿಕುಂ: **ಅಭಿಧಾವ,** ೧. ೧೨. ೩೪)

**ವೇಲಾ[ಲೆ]** – ದಡ (ಪತಿಚರಿತಾನುಕೂಲೆ ಘನರಾರಸಾರ್ಣವವೇಲೆ .. .. ಗುಣಮಾಲೆಯೆನಲ್ ವನಮಾಲೆ ರಂಜಿಪಳ್: **ಪುಷ್ಪದಂಪು,** ೩. ೬೦)

**ವೇಲಾವನ** – ಕರಾವಳಿಯ ಕಾಡು (ಏಲಾಲವಂಗಲವಲೀ ವೇಲಾವನಭೂಮಿಯೊಳ್ ನಿಧೀಶ್ವರಸೈನ್ಯವ್ಯಾಲಗಜಂಗಳ್ ವನಗಜಲೀಲೆಯಂ ಅನುಕರಿಸಿ ಕಣ್ಗೆ ವಂದುವು ಪಲವುಂ: **ಆದಿಪು,** ೧೩. ೨); ಮೇರೆ (ನಿದ್ರಾತುರನಾಗಿ ಪಟ್ಟಿ ಸಾರ್ವಂತಿರೆ ಸಾರ್ದಂ ಚಂದ್ರಂ ಅಪರವೇಲಾವನಮಂ: **ಕಾದಂಸಂ,** ೫. ೬೪)

**ವೇಲೆ** – ಕಡಲ ತೀರ (ನೆಲೆಯಿಲ್ಲದೆಯುಂ ನೆಲನಂ ಬಲವಂದುಂ ವೇಲೆಗೊಂಡು ಮೆಯ್ಯಿಕ್ಕಿಯುಂ ಆ ಜಲನಿಧಿ ತರಂಗ ಭಂಗಾಕುಲಿತಂ ನೆನಯಿಸಿದುದು ಅನ್ಯ ರಾಜನ್ಯಕಮಂ: **ಪಂಪರಾ,** ೧೨. ೮೯); ಅಲೆ, ಉಬ್ಬರ, ಪ್ರವಾಹ (ವಿಮಲಯಶೋವಿಶುದ್ಧಮಣಿಯಂ ಪಡೆಯಲ್ಕೆ ಪಯೋಧಿವೇಲೆಯಂ ಕ್ರಮದೊಳೆ ದಾಂಟಿ .. .. ನಿರ್ವಹಿಸುವ ಎನ್ನ ಕವಿತ್ವ ಬಹಿತ್ರಯಾತ್ರೆಗೆ: **ಮಲ್ಲಿನಾಪು,** ೧. ೩೮)

**ವೇಲ್ಲದ್ವನ** – ವೇಲಾ[ಳಾ]ವನ (ಕರ್ಮವೇಲ್ಲದ್ವನದಾಹೋತ್ಸಾಹವೃತ್ತಿ ಪ್ರಗುಣಂ ಅಜಿತತೀರ್ಥೇಶನೊಳ್ ತೀರ್ಥಕ್ಕನ್ಮಂಡನನೊಳ್ ಪುಟ್ಟಿತ್ತು: **ಅಜಿತಪು,** ೭. ೧೩)

**ವೇಲ್ಲಿತ** – ವಕ್ರಾಕೃತಿ (ವೇಲ್ಲಿತಂ ಆಭುಗ್ನಂ ವಕ್ರಾಕೃತಿಯಕ್ಕುಂ: **ಅಭಿಧಾವ,** ೨. ೧. ೩೮); ಕಂಪಿಸುವ ಸುರಶರಾಸೋಪಮಾನ ನಾನಾನೂನಕಲ್ಪವಲ್ಲೀ ವೇಲ್ಲಿ .. .. ನೀಳಾಭ್ರವಿಭ್ರಮ ಕುಟ್ಟಿಮದೊಳಂ: **ಸುಕುಮಾಚ,** ೧೨. ೪೨ ವ); ಸುತ್ತುವರಿದುದು (ಆ ಮಹಾರ್ಣವಂ .. .. ಅರಣ್ಯದಂತಗಣ್ಯವಿದ್ರುಮವಲ್ಲರೀವೇಲ್ಲಿತಮುಂ: **ಜಗನ್ನಾವಿ,** ೧. ೪೪ ವ)

**ವೇಶ** – ಬೀಡು (ನಾಡೆಯುಂ ಕಣ್ಗೆಡಱಾದುದು ನೃಪನ ವಿಜಯಶಿಬಿರಂ ವೇಶಂ: **ವರ್ಧಮಾಪು,** ೮. ೫೭)

**ವೇಶಂತ** – ಚಿಕ್ಕ ಹೊಂಡ, ಕುಂಟೆ (ಪಲ್ವಲಂ ವೇಶಂತಂ: **ಅಭಿಧಾವ,** ೧. ೪. ೧೬)

**ವೇಶ್ಮ** – ಮನೆ, ನಿಲಯ (ಕಣ್ಗೆಸೆದಿರ್ಕುಂ ಕುಟ್ಟಿವೀಭೂತವರಮರಕತಾಶ್ಮಂ ಸುಶಯ್ಯ ಉಚ್ಚ ವೇಶ್ಮಂ: **ಉದ್ಭಟಕಾ,** ೮. ೮೯)

**ವೇಶ್ಯಾವಾಟ** – ಸೂಳೆಗೇರಿ (ಮಕರಂದನುಂಬೆರಸು ಅರಮನೆಯಂ ಪೊಱಮಟ್ಟು ವೇಶ್ಯಾವಾಟಮಂ ಮುಟ್ಟವರೆ: **ಲೀಲಾವತಿ,** ೨. ೨೪ ವ)

**ವೇಶ್ಯೆ** – ಸೂಳೆ (ದಾರಿಕೆ ಲಂಜಿಕೆ ಪಣವಧು ವಾರಾಂಗನೆ ಗಣಿಕೆ ವೇಶ್ಯೆಯೆನೆ ಬೆಲೆವೆಣ್: **ಅಭಿಧಾವ,** ೧. ೧೧. ೭)

**ವೇಷಭೂಷಣ** – ಉಡುಗೆತೊಡುಗೆ (ಕುಶಲವಿರಚಿತಾರೂಪ ವೇಷಭೂಷಣನಾಗಿ ರಾಜಸಮಾಜವಿರಾಜಮಾನಮಂ ಸ್ವಯಂವರಪ್ರದೇಸಮನೆಯ್ದೆವಂದು: **ಶಾಂತಿಪು,** ೫. ೯೨ ವ)

**ವೇಷ್ಟನ** – ಬೇಲಿ (ಮತ್ತಮಲ್ಲಿ ಕಂಟಕವೇಷ್ಟನಂ ತೋಂಟಂಗಳೊಳ್ ಬಹುವಿರೋಧಾಮಳಂ ಪೆರ್ಗಱಗಳೊಳ್ .. .. ಅಲ್ಲದೆ ಪೆಱವೆಡೆಯೊಳಿಲ್ಲ: **ವರ್ಧಮಾಪು,** ೧. ೪೫ ವ)

**ವೇಷ್ಟಿಸು** – ಸುತ್ತುಗಟ್ಟು (ಹುತವಹತತಿಯಿಂ ವೇಷ್ಟಿಸಿರ್ದ ಅಧ್ವರಂ: **ಕಾದಂಸಂ,** ೧. ೭೪)

**ವೇಸರಿ** – ಹೇಸರಗತ್ತೆ (ತುರಗವ್ರಾತಂಗಳಂ ವೇಸರಿಗಳ ಉಚಿತಾನರ್ಘ್ಯರತ್ನಂಗಳಂ ಕುಂಜರಸಂಘಾತಂಗಳಂ .. ..

ಕೊಟ್ಟಂ ಉತ್ಸಾಹದಿಂ ಅತಿಬಳಭೂರಾಜಂ ಆದಿತ್ಯತೇಜಂ: **ಸುಕುಮಾಚ,** ೩. ೨)

**ವೇಸರಿಗಟ್ಟಿ** – ವೇಸರ (ಅಯ್ನೂರ್ವರ್ ಅರಸಿಯರ್ಕಳುಂ ಪೆಂಡವಾದ ಅಗ್ಗಳದ ಸೂಳೆಯರ್ಕಳುಂ ಬೆರಸು ವೇಸರಿಗಟ್ಟಿಗಳುಂ ಪಿಡಿಗಳುಂ ಸಿಬಿಗೆಗಳುಮಂ ಏಱೆ: **ವಡ್ಡಾರಾ,** ಪು ೮೦, ಸಾ ೧೦)

**ವೇಹಾರ** – ವ್ಯವಹಾರ (ಬಾವಾ, ನೀನಿಂದು ಆಹಾರಚಿಂತೆಯಂ ಮಾಣ್ದು ವೇಹಾರಂಗೆಯ್ವರಂತೆ ಕಣ್ಣಂ ತಿಣ್ಣಂ ಮುಚ್ಚಿಕೊಂಡಿರ್ಪ ಕಾರಣಮಾವುದು: **ಪಂಚತಂತ್ರ,** ೨೩೮ ವ)

**ವೇಳಿಗೆ** – ಅಲೆ (ಗಗನಾಭೋಗದೊಳೊಪ್ಪಿ ಬರ್ಪ ಪಲವುಂ ಯಾನಂಗಳಂ ತೋರ್ಪ ವೇಳಿಗೆಗಳ್ಗೆತ್ತು: **ಆದಿಪು,** ೭. ೧೧೯)

**ವೇಳಾವನ** – ಅಲೆಗಳ ಸಮೂಹ (ಭುಜಂಗವೇಷ್ಟಿತ ಚಂದನ ಮಾರ್ಗದೊಳ್ ಇಭಂಗಳ್ ಒಳ್ಳಾನೆಗಳಂತೊಂದು ತ್ರಿಪದಿಚ್ಛೆದದೊಳಂ ದಲ್ ತಳರವೆ ಪಯೋಧಿ ವೇಳಾವನದೊಳ್: **ಶಾಂತಿಪು,** ೧೧. ೫)

**ವೇಳೆ** – ಅಲೆ (ಪೂರ್ವಾನುಯೋಗಾಬ್ಧಿಯಿಂ ಪೊಱಪೊಣ್ಮಿತ್ತದು ವೇಳೆಯಂತೆ ಕಥೆ ಲಂಬೋದ್ದಾಮವೀಚೀಚಯಂ: **ಆದಿಪು,** ೧. ೩೯)

**ವೇಳೆಗಾಯ್** – ಸಮಯಕ್ಕಾಗಿ ಕಾಯಿ (ನಿನಗೆಂದುಂ ತಲೆವಾಗದ ನಿರ್ಗರ್ಳಕದ ನಿನ್ನ ವೇಳೆಗಾಯದ ಪಿರಿದುಂ ನಿನಗೆ ಬೆಸಕೆಯ್ದು ಬಾೞದ ನಿನಗೋಡದ ಪಗೆವರೆಂಬರಿಲ್ಲಿಮದುವರಂ: **ಕಬ್ಬಿಗಕಾ,** ೧೧೪)

**ವೇಳೆಗೊಳ್** – ಸಮಯಪ್ರತಿಜ್ಞೆ ಮಾಡು (ಮಲ್ಲಿಗೆಗಳ್ ವಸಂತದೊಳ್ ಬಿರಿದೊಡೆ ನಲ್ಲರಂ ನೆನೆದ ನಲ್ಲರ ಮೆಲ್ಲೆರ್ದೆಗಳ್ ನಿರಂತರಂ ಬಿರಿದುವು ಅದೆಂತೊ ಮಲ್ಲಿಗೆಗೆ ನಲ್ಲರ ಮೆಲ್ಲೆರ್ದೆ ವೇಳೆಗೊಂಡುದೋ: **ಆದಿಪು,** ೧೧. ೧೧೦); ವೇಳೆವಾಳಿಯಾಗು (ಗುರ್ದುಂ ಪೊರ್ದಿದ ಚಾತುರಂಗ ಬಲಮುಂ ಮೆಯ್ಗಾಪುಂ ಆ ವೇಳೆಗೊಂಡಿರ್ದ ಅತ್ಯುಗ್ರ ಭಟರ್ಕಳುಂ; **ವಡ್ಡಾರಾ,** ಪು ೧೪೩, ಸಾ ೧೫)

**ವೇಳೆತನ** – ಸೇವಕವೃತ್ತಿ (ಆ ವಸತಿಯ ಸಿರಿಯಂ ಜಿನದೇವಂಗಾಳಾಗಿ ವೇಳೆತನಮಂ ತೋಱಲ್ ಕಾವನೆ ಋತುಪತಿಸಹಿತಂ ಕಾವಂ ಕೆಯ್ಯಿಂದಿಟೆಪನಂಬಂ ಬಿಲ್ಲಂ: **ಲೀಲಾವತಿ,** ೮. ೭೯)

**ವೇಳೆತನಂಗೊಳ್** – ಒಡೆಯ ಸತ್ತರೆ ತಾನೂ ಸಾಯುವ ಪ್ರತಿಜ್ಞೆ ಸ್ವೀಕರಿಸು (ವೇಳೆತನಂಗೊಂಡುಂ ಕೌಂತೇಯರಿಂ ಆ ಬಲಮಂ ಕೊಲಿಸಿದಂ ಆಪ್ತನೆನಲಾಗದು ಅಜೀವಂ: **ಸಮಯಪ,** ೮. ೧೪೨)

**ವೇಳಳೆವಡಿಚ** – ವೇಳೆವಾಟಿ, ಸೇವಕ (ಉರಿವ ಕೊಮಡಕ್ಕೆ ವಂದ ವೇಳೆವಡಿಚಂಗಂ ಮನುಷ್ಯಭವಕ್ಕೆ ವಂದ ಜೀವಕ್ಕಂ .. .. ಮೋಹದೊಳ್ ನೆಗೞಲೆಡೆಯಿಲ್ಲಂ: **ಜೀವಸಂ,** ೧. ೨೪ ವ)

**ವೇಳೆವಾಟಿ** – ಯಜಮಾನ ಸತ್ತಾಗ ಸಾಯುವ ಪ್ರತಿಜ್ಞೆಯುಳ್ಳ ಲೆಂಕ ಜೋಳವಾಟಿಗೆ ಕೆಯ್ವಾಂಪನ ವೇಳೆವಾಟಿಗೆನಸುಂ ಮುಯ್ವಾಂಪ ಸಾಮಂತರಂ ನಗುವಂತಿರ್ದುದು ಸಿಂಹಚೂಡನ ಶಿರೋಬ್ಜಂ ದಂತುರತ್ಕೇಸರಂ; **ಅನಂತಪು,** ೧೧. ೭೬)

**ವೇಟ್ಕುಂ** – [√ಬೇಡು] ಬೇಕು (ಸಂತತಿ ವೇಟ್ಕುಮೆಂದು ಸಚಿವರ್ ಸಲೆ ಪೇೞೆಯುಂ: **ಕಾದಂಸಂ,** ೧. ೯)

**ವೈಕಕ್ಷ** – ಹಾರ (ಇದಿರ್ಗೊಂಡು ವೈಕಕ್ಷಮಂ ಕುಂಡಲದ್ವಯಮಂ ಕುಡೆ ಕೊಂಡು: **ಚಾವುಂಪು,** ಪು. ೧೯೫, ಸಾ. ೧)

**ವೈಕಕ್ಷಮಾಲೆ** – ಕಂಠದಿಂದ ಎದೆಯ ಮೇಲೆ ಎಡದಿಂದ ಬಲಕ್ಕೆ ಅಡ್ಡಲಾಗಿ ಹಾಕಿಕೊಂಡಿರುವ ಹಾರ (ನಾಟ್ಯಮಾಳಾಮರಂ ಇದಿರ್ಗೊಂಡು ಕುಂಡಳದ್ವಯ ವೈಕಕ್ಷಮಾಲೆಗಳಂ ಕುಡೆ: **ಅಜಿತಪು,** ೩೪ ವ)

**ವೈಕರ್ತನ** – ಸೂರ್ಯನ ಮಗ, ಕರ್ಣ [ತನ್ನ ಕರ್ಣಕುಂಡಲಗಳನ್ನೂ ಕವಚವನ್ನೂ ಕತ್ತರಿಸಿಕೊಟ್ಟಿದ್ದರಿಂದ ಕರ್ಣನಿಗೆ ವೈಕರ್ತನ ಎಂಬ ಹೆಸರಾಯಿತು] (ಕೂರಿಸೆ ಗುರುಶುಶ್ರೂಷೆಯೊಳಾ ರಾಮನನುಗ್ರಹಪರಶುಪಾಟಿತ ರಿಪುವಂಶಾರಾಮನಂ ಇಷುವಿದ್ಯಾಪಾರಗನೆನಿಸಿದುದು ಬಲ್ಮೆ ವೈಕರ್ತನನಾ: **ಪಂಪಭಾ,** ೧. ೧೦೪)

**ವೈಕುಂಠ** – ಕೃಷ್ಣ, ವಾಸುದೇವ (ವೈಕುಂಠನ ಪಡೆಯೊಳ್ ಏಕ ಅಕ್ಷೌಹಿಣಿ ಬಲಂ ಮಡಿಯೆ: **ಕರ್ಣನೇಮಿ,** ೧೧. ೧೮೫ ವ)

**ವೈಕುರ್ವಣ** – ಬದಲಾಗುವ, ವಿಕಾರವಾದ (ಲಕ್ಷ್ಮಣಂ ಬರೆ ಚಾಪಂ ವೈಕುರ್ವಣ ವಿಷಮ ಫಣೀಂದ್ರಾಕೃತಿಯಂ ಬಿಟ್ಟು ಮಟ್ಟಮಿರ್ದತ್ತಾಗಳ್: **ಪಂಪರಾ,** ೫. ೯೮); [ಜೈನ] ರೂಪಾಂತರ ವಿದ್ಯೆ (ಪೆಂಡವಾಸಂ .. .. ರೋದೋನ್ನಾದದಿಂದಂ ಮಾಟ್ಪಿಂತು ವೈಕುರ್ವಣ ಪರಿಣತಿಯಂ ಬೀಱಿದಂ: **ಪಂಪರಾ,** ೧೬. ೪೮)

**ವೈಕೃತ** – ವಿಕಾರಗೊಂಡ (ಭಾವಿಸಲ್ ಬಗೆದವಂ ಮಿಗೆ ಜಾಣಂ ಅಶೇಷಭಾಷಾವಿಶೇಷ ವಿಷಯಾತಿಶಯ ಅಮಳಕೌಶಳಂ ದೇವತಾಗುರು ಗುಣೋದಯವೃದ್ಧಜನೋಪ ಸಂಸೇವನಾ ಪರನ್ಯಪಾಕೃತ ವೈಕೃತಚಾಪಳಂ: **ಕವಿರಾಮಾ,** ೩. ೨೨೦)

**ವೈಕ್ರಿಯಕ** – [ಜೈನ] ಜೀವರುಗಳ ಒಂದು ಶರೀರಭೇದ, ಸ್ಥೂಲಶರೀರದಲ್ಲಿ ಬದಲಾವಣೆ ಮಾಡುವ ಸೂಕ್ಷ್ಮಶರೀರ (ತತ್ ಭೋಗಾವನೀಭಾಗದೊಳ್ ತನುಗಳ್ ವೈಕ್ರಿಯಕಗಳಂತೆ ಕರಗುತ್ತಿರ್ಪನ್ನೆಗಂ ಪುಣ್ಯಸಂಜನಿತೈಶ್ವರ್ಯದಿನಿಂತು ಬಂದು ನೆಲಸಿತ್ತು ಈಶಾನಕಲ್ಪಾಗ್ರದೊಳ್: **ಆದಿಪು** ನರಸಿಂ. ೫. ೭೦)

**ವೈಖಾನಸ** – ವಾನಪ್ರಸ್ಥದಲ್ಲಿರುವವನು (ವಾನಪ್ರಸ್ಥನವಂ ವೈಖಾನಸಂ: **ಅಭಿಧಾವ,** ೧. ೧೧. ೩೪); ಒಬ್ಬ ಋಷಿ (ಕಾನನದಾಶ್ರಮದೊಳ್ ವೈಖಾನಸಕುಲಪತಿ ಮಹಾಜಟಂ ತಂದೆ ಜಯಮಾನಿನಿತಾಯ್ ತನ್ಮಿಥುನದ ಸೂನುತೆಗೆ ವಿಶಾಖನಂದಿ ಭಾಜನನಾದೊಂ: **ಶಾಂತಿಪು,** ೭. ೬೩)

**ವೈಜನನ** – ಹೆರಿಗೆಯ ತಿಂಗಳು (ನವದಿವಸದಂತೆ ನವಮಾಸಂ ನೆಱೆಯೆ ವೈಜನನಮೆಂಬ ಪೆಸರಿಂ ಮಿಸುಪ ಮಾಸದೊಳ್: **ಲೀಲಾವತಿ,** ೭. ೬೫)

**ವೈಜಯಂತಿ** – ಧ್ವಜ (ಪಲ್ಲವದೊಡನೆ ಮನೋಜವಿಜಯ ವೈಜಯಂತಿ ಮಿಳಿರ್ದು ಮಿಳ್ಳಿಸೆಯುಂ .. .. ಮಧುರಗೀತಮನಾಲಿಸುತ್ತಿರ್ಪಿನಂ; **ಮಲ್ಲಿನಾಪು,** ೫. ೨೬ ವ)

**ವೈಜಯಂತೀದ್ವಾರ** – [ಜೈನ] ವಿಜಯಾರ್ಧ ಪರ್ವತದ ದಕ್ಷಿಣ ದ್ವಾರ (ಮುಂಗುಡಿಯ ಬಂದ ಚಕ್ರವರ್ತಿ ವೈಜಯಂತೀದ್ವಾರಾಭಿಮುಖನಾಗೆ ಬೀಡಂ ಬಿಟ್ಟು ಓಲಂಗಂಗೊಟ್ಟಿರೆ: **ಶಾಂತಿಪು,** ೧೧. ೬ ವ)

**ವೈಜಯಂತೀವಿಮಾನ** – [ಜೈನ] ಲೋಕಾಕಾಶದ ತುದಿಯ ಪುಣ್ಯವಂತರ ವಾಸಸ್ಥಾನ (ಷೋಡಶಭವಿಷ್ಯತ್ತೀರ್ಥಕರ ನಾಮಕರ್ಮಮಂ ಕಟ್ಟಿ ವೈಜಯಂತೀವಿಮಾನದೊಳ್ ಪುಟ್ಟಿ: **ಪಂಪರಾ,** ೧೬. ೭೩ ವ)

**ವೈಡೂರ್ಯ** – ನವರತ್ನಗಳಲ್ಲಿ ಒಂದು (ಅರುಣಾಶ್ಮಂ ಕಿಸುಗಲ್ ಪದ್ಮರಾಗಮಣಿ ವಾಳವಾಯಜಂ ವೈಡೂರ್ಯಂ: **ಅಭಿಧಾವ,** ೧. ೬. ೧೦); [ಜೈನ] ಒಂದು ಪರ್ವತದ ಹೆಸರು (ತದವನೀಧರ ವಿದಿಕ್ಷೈಲಯಂಗಳಪ್ಪ ವೈಡೂರ್ಯ ರುಚಕ ಮಣಿಪ್ರಭ ರುಚಿಕೋತ್ತರಂಗಳೆಂಬ ವಿಕಟಕೂಟಾಧೀಶೆಯರೆ .. .. ಮಹತ್ತರಿಯರಾಗಲುಂ: **ಆದಿಪು,** ೭. ೩ ವ)

**ವೈಣವ** – ಬಿದಿರಕ್ಕಿ (ಚಳಿಸಿದ ವೈಣವಮಂ ಚೆಂದಳದಿಂ ಪಿಡಿದೊಯ್ದು ನೋಡಿ ಕೆಂಪಾಗಿರೆ: **ಉದ್ಭಟಕಾ,** ೨. ೯೧)

**ವೈತಂಡಿಕ** – ಜಗಳಗಂಟ, ಯಕ್ಷಿಣಿಗಾರ (ವೈತಂಡಿಕನಜಿ ಕುಹಕತೆಯಂ ಕೊಂಡಾಡುವಂ ಇಂದ್ರಜಾಲಿಕಂ ತಾನಕ್ಕುಂ: **ಅಭಿಧಾವ,** ೧. ೧೧. ೮೬)

**ವೈತಸವೃತ್ತಿ** – ವಿನಮ್ರ ನಡವಳಿಕೆ (ಭೂಜಾಂಗವೃತ್ತಿಗೊಂದಿ ಪರಾಜಿತಮಂ ಕಾಣಲಾಗ ವೈತಸವೃತ್ತಿ ವ್ಯಾಜಮನಿತಲ್ಲದಾರ್ಗಪರಾಜಿತ ದಮಿತಾರಿಯೊಳ್ ಮಹೀಮಂಡಳದೊಳ್: **ಶಾಂತಿಪು,** ೨. ೫೧)

**ವೈತಾಳಿ** – ಮಾಯಾವಿದ್ಯೆ, ಅದರ ಅಧಿದೇವತೆ (ಗಗನಚರಂ ಕರಾಳಿ ವೈತಾಳಿಯಂ ಆಭೋಗಿ ಬರಿಸಲ್ಕೆ ಬಂದಿರ್ದು ಏ ಗೆಯ್ವುದು ಎನಲ್ಕೆ: **ಕರ್ಣನೇಮಿ,** ೫. ೩೭)

**ವೈತಾಳಿಕ** – ಹಾಡುವವನು (ಸೂತ ನಟ ವಂದಿಮಾಗಧ ವೈತಾಳಿಕ ಕಥಕ ಪುಣ್ಯಪಾಠಕ ವಿಪ್ರ ಉದ್ಘೂಟರವಂ ಎಸೆಯೆ: **ಪಂಪಭಾ,** ೧೨. ೧೦೬)

**ವೈದ** – ವಿದ್ವಾಂಸ (ಇರ್ಕಲದೊಳ್ ಎಸೆದುದು ಆ ಕುವರರ್ಕಳ ಮಂಡಳಿದಂಡನಾಥರ್ಕಳ ವೈದರ್ಕಳ ಸಚಿವರ್ಕಳ ವಿಬುಧರ್ಕಳ ಮಿತ್ರಾನ್ವಯಾಗತರ್ಕಳ ತಂಡಂ: **ಶಾಂತೀಶ್ವಪು,** ೧೫. ೫೩)

**ವೈದಗ್ಧ್ಯಜನ** – ವಿದ್ವಾಂಸಸಮೂಹ (ದರ್ಶನಪ್ರಸ್ತಾನ ಘಟನಾವಸರಪ್ರಾಪ್ತ ವೈದಗ್ಧ್ಯಜನ ಸಂಭಾಷಣ ಗೋಷ್ಠೀನಿರ್ದೇಶ .. .. ಸಮಾನೋದಿತಕಾಲದೊಳ್: **ಶಾಂತಿಪು,** ೯. ೮೯೨)

**ವೈನತೇಯ** – ಗರುಡ[ಪಕ್ಷಿ] (ವಿನಿಹಿತ ಕಾದ್ರವೇಯನಂ ಅಜೇಯನಂ ಊರ್ಜಿತ ವೈನತೇಯನಂ ಅಂತು ಕಂಡು: **ಪಂಚತಂತ್ರ,** ೨೨೮ ಮತ್ತು ೨೨೮ ವ)

**ವೈಪಥ** – ಕೆಟ್ಟ ಹಾದಿ (ವಿವಿಧ ವೈಪಥ ಪಾಂಸುಗಳಿಂದೆ ನಾಡೆ .. .. ಮಲಿನಮಾದ ಪಟಚ್ಚರಮುಂ ನೆಗೞ್ಚಿಲ್: **ಕಾದಂಬ,** ೯. ೮೧)

**ವೈಭಾತಿಕ** – ಬೆಳಗುಜಾವ (ತೀಡಿತ್ತು ಎಸಗಿ ಸುರಭಿ ವೈಭಾತಿಕಂ ಮಾತರಿಶ್ವಂ: **ಕಾದಂಬ,** ೧. ೧೨೨)

**ವೈಭಾವ** – ವೈರತ್ವ (ಕರಿಣಿಯ ಕಾರಣದಿಂ ಮದಕರಿಗಳ್ ವೈಭಾವದಿಂದೆ ತಮ್ಮೊಳಗೆ ಅತ್ಯಾಸುರಮಾಗೆ ಪೋರ್ದು ಸತ್ತು: **ಶಾಂತಿಪು,** ೯. ೪೭)

**ವೈಮಾನಿಕ** – ವಿಮಾನದಲ್ಲಿ ಸಂಚರಿಸುವ[ವನು] (ಮಾರ್ಗದೊಳ್ ಅನೇಕ ವೈಮಾನಿಕಜನ ಪ್ರಣಮ್ಯಮಾನನುಂ .. .. ಆಗಿ ಪೋಗುತ್ತುಂ: **ಕಾದಂಸಂ,** ೭. ೪೨ ವ); [ಜೈನ] ಒಂದು ದೇವತಾವರ್ಗ (ವೃಷಾಂಕನಂಬು ತನುವಂ ಪಚ್ಚಂತೆ ಕೊಂಡತ್ತು ವೈಮಾನಿಕಕೋಟಿಗಂದು ಪಿರಿದೊಂದುತ್ಸಾಹಮಪ್ಪನ್ನೆಗಂ: **ಪಂಪಭಾ,** ೮. ೧೬)

**ವೈಯಾಕರಣ** – ವ್ಯಾಕರಣಪಂಡಿತ (ವೈಯಾಕರಣನಂತೆ ಶಬ್ದಮನಾಲಿಸಿಯುಂ ಬೇಂಟೆಕಾಱನಂತೆ ಅಡಿವಜ್ಜೆಯಂ ಅಱಿಸಿಯುಂ: **ಗದಾಯು,** ೬. ೨೮ ವ)

**ವೈಯಾಪೃತ್ಯ** – [ಜೈನ] ಶಿಕ್ಷಾವ್ರತ: ಜಿನಮುನಿಗೆ ಆಹಾರ ನೀಡುವುದು, ಮುನಿಸೇವೆ ಮತ್ತು ರೋಗಿಮುನಿಗಳ ಸೇವೆ (ಪ್ರಾಯಶ್ಚಿತ್ತ ವಿನಯ ವೈಯಾಪೃತ್ಯ ಸ್ವಾಧ್ಯಾಯ ಧ್ಯಾನ ಕಾಯೋತ್ಸರ್ಗಂಗಳಂ ನಿಟ್ಟೆವಡಿಸಿ: **ಶಾಂತಿಪು,** ೯. ೧೦೮ ವ)

**ವೈಯಾಪೃತ್ಯಂಗೆಯ್** – ಉಪಚಾರಮಾಡು, ಶುಶ್ರೂಷಿಸು (ವ್ಯಾಧಿಯ ಪ್ರಬಲತ್ವಮಂ ಕಂಡು ವೈಯಾಪತ್ಯಂಗೆಯ್ವುದರ್ಕೆ ಆದಮಾನುಂ ಅೞ್ತಿಯೊಡೆಯನಾಗಿ ಪೊಡೆವಟ್ಟು: **ವಡ್ಡಾರಾ,** ಪು. ೧೭೧, ಸಾ. ೧೭)

**ವೈರಣಿ** – ಹೊರಗೆ ಉಪ್ಪಾದ ಕುಡಿಯಲುಬಾರದ ನೀರಿನಿಂದ ತುಂಬಿರುವ ಭೂಪ್ರದೇಶ (ಪೊಱಗೆ ಕರಮುಪ್ಪುಂ ಅಪೇಯಮುಂ ಅಲ್ಪಜಲಮುಳ್ಳುದು ವೈರಣಿಯೆಂಬುದಕ್ಕುಂ: **ಪಂಚತಂತ್ರ,** ೨೯೭ ವ)

**ವೈರಮೈದು ತೆಱಂ** – ಐದು ಬಗೆಯ ವೈರ (ಇರ್ವರ್ ಪೆಂಡಿರ ದೆಸೆಯಿಂದಾದುದು, ವಸ್ತುವಿನ ದೆಸೆಯಿಂದಾದುದು, ಸ್ತ್ರೀಯರ ದೆಸೆಯಿಂದಾದುದು, ವಾಗ್ದೋಷದಿಂದಾದುದು, ಅಪರಾಧದಿಂದಾದುದು ಎಂದಿಂತು ವೈರಂ ಐದು ತೆಱನಾದುದು: **ಪಂಚಂತ್ರ,** ಶ್ಲೋಕ ೧೫೫ ಅರ್ಥ)

**ವೈರೋಚನ** – ಬಲಿಚಕ್ರವರ್ತಿ (ಭೂಚಕ್ರದಾನಮಂ ವೈರೋಚನನೊಳ್ ಬೇಡುವಂದು ನಿನ್ನೊಳ್ ತನು ಸಂಕೋಚಂ ಸಮನಿಸಿತು: **ಜಗನ್ನಾವಿ,** ೧೭. ೩೮)

**ವೈಲಾಸ** – ವಿಲಾಸಸಂಬಧೀ (ಸಮಸ್ತ ರಸಾಸ್ಪದ ಭವಚಿತ್ರ ಕೌಶಲಂ ಒದವಿದ ವೈಲಾಸಂ ಅಂಗಜಂಗೆ ಅಂಬುಜಾಕ್ಷೀ: **ಅನುಭವ,** ೩೬)

**ವೈವಧಿಕ** – ಸರಕನ್ನು ಹೊತ್ತು ಮಾರುವವನು (ಸಿವಿಗೆಯಂ ಭುವನತ್ರಯನಾಥನೇಱಿದಂ .. .. ಉರಗವೃಂದಾರಕರುಂ ಸುರವೃಂದಾಆರಕರುಂ ತರತರದಿಂ ವೈವಧಿಕರುಯ್ವ ತೆಱದಿಂದುಯ್ದರ್: **ಮಲ್ಲಿನಾಪು,** ೧೩. ೧೩೪)

**ವೈವಸ್ವತ** – ಸೂರ್ಯನ ಮಗ, ಯಮ (ಸಮದಾರಾತಿ ಮರಾಳನೀರದರವಂ ಸಂಕ್ರುದ್ಧವೈವಸ್ವತೋಪಮ ವಿದ್ವಿಷ್ಟಫಣೀಂದ್ರಚಂದ್ರಕಿರವಂ .. .. ಎಂಬಿನಂ ವ್ಯೋಮಭಾಗಮನೆಯ್ದಿರ್ದುದು ಚಕ್ರವರ್ತಿ ವಿಜಯಪ್ರಸ್ಥಾನ ಭೇರೀರವಂ: **ಆದಿಪು,** ೧೧. ೧೦): ವೈದಿಕ ಸಂಪ್ರದಾಯದಲ ಹದಿನಾಲ್ಕು ಜನ ಮನುಗಳಲ್ಲಿ ಏಳನೆಯವನು, ನೋಡಿ, **'ಚತುರ್ದಶಮನು'**

**ವೈಶಂಪಾಯನ** – ಒಂದು ಸರೋವರದ ಹೆಸರು (ಆಪ್ಯಾಯನಕಾರಿಯಪ್ಪ ವೈಶಂಪಾಯನ ಸರೋವರಕ್ಕೆ ನೀರ್ಗುಡಯಲೆಮದು ಪೋಗಿ: **ಗದಾಯು,** ೬. ೩೭ ವ)

**ವೈಶಾಖಸ್ಥಾನ** – ಯುದ್ಧದಲ್ಲಿ ನಿಲ್ಲುವ ಒಂದು ಭಂಗಿ; ನಾಟ್ಯದ ಒಂದು ಭಂಗಿ (ಸ್ಫುಟವೈಶಾಖಸ್ಥಾನಂ ಕಟಿತಟವಿನ್ಯಸ್ತ ಹಸ್ತಯುಗನಾಗಿ ಮಹಾಲಟಹಂಬೆರಸಿರ್ದೊಪ್ಪುವ ನಟನಾಕೃತಿ ತಾನೆ ಲೋಕದೊಂದಾಕಾರಂ: **ಆದಿಪು,** ೧. ೪೫)

**ವೈಶಿಕ** – ವೇಶ್ಯಾಸಂಬಂಧಿ, ಸೂಳೆಗೆ ಸಂಬಂಧಿಸಿದ (ಒರ್ವ ವೃದ್ಧಾಂಗನೆ ತನ್ನ ಮಗಳಂ ಕರೆದು ವೈಶಿಕಬುದ್ಧಿಯಂ ಉಪದೇಶಗಮ್ಯಮಾಗಿ ಬೆಸಸುತ್ತಿರ್ದಳ್: **ಉದ್ಭಟಕಾ,** ೧೦. ೬೦ ವ); ಬಿನ್ನಾಣ, ಬೆಡಗು (ಒಲವಿನೆಡೆ ವೈಶಿಕದ ಪೆರ್ಬಲೆ ಮುರುಕದ ಪಕ್ಕೆ ಸುಖದ ಮನೆ .. .. ವೇಶ್ಯಾವಾಟಂ: **ತ್ರಿಷಷ್ಟಿಪು,** ೨೮. ೩೦)

**ವೈಶ್ರವಣ** – ಕುಬೇರ (ಆ ದೇವರ ದೇವಂ .. .. ಉದಯಿಸಲಿರ್ದುದಂ ಸೌಧರ್ಮೇಂದ್ರಂ ಅವಧಿಬೋಧದಿಂದ

ಅಱಿದು .. .. ವೈಶ್ರವಣಂ ರತ್ನವೃಷ್ಟಿಯಂ ಕಱೆಯುತ್ತಿರೆಂದು ನೇಮಿಸಿದಾಗಳ್: **ಶಾಂತೀಶ್ವಪು,** ೧೩. ೨೦೪ ವ)

**ವೈಶ್ವಾನರ** – ಬೆಂಕಿ, ಅಗ್ನಿ (ಹರಿ ಹರ ದಿನಕರ ವೈಶ್ವಾನರರೆಂಬರ್: **ಸಮಯಪ,** ೯. ೪)

**ವೈಷಮ್ಯ** – ವ್ಯತ್ಯಾಸ (ಅಂತುಭಯ ನದಿಯ ವೈಷಮ್ಯಮುಮನಾಶ್ಚರ್ಯಂಬಟ್ಟು ನೋಡಿ: **ಆದಿಪು,** ೧೩. ೫೧ ವ)

**ವೈಷ್ಣವ** – ವಿಷ್ಣುಶಕ್ತಿ (ನಿಜವೈಷ್ಣವಪ್ರಭಾವಮಂ ತಳೆದು ಕೈಟಭಾಂತಕಂ ಗೋಮಂತಕೂಟಸ್ಥಲದೊಳಿರ್ಪನ್ನೆಗಂ: **ಜಗನ್ನಾವಿ,** ೮. ೨೯ ವ); ವೈಷ್ಣವಾಸ್ತ್ರ (ಒಡ್ಡಿಸೆ ಕಾದಂ ಆಗಳ್ ಅರ್ವಿಸೆ ತೆಗೆದೆಚ್ಚ ವೈಷ್ಣವಮಂ ಒಡ್ಡಿಸಿ ವೈಷ್ಣವದಿಂ ಮುರಾಂತಕಂ; **ಪಂಪಭಾ,** ೧೨. ೩೨)

**ವೈಷ್ಣವಾಸ್ತ್ರ** – ನಾರಾಯಣಾಸ್ತ್ರ (ವೈಷ್ಣವಾಸ್ತ್ರಮತಿನಿರ್ಭರದಿಂ ಚತುರ್ವಲದೊಳ್ ಕಾದುತ್ತುಮಿರೆ: **ಜಗನ್ನಾವಿ,** ೧೨. ೩೪ ವ)

**ವೈಹಾಯಸ** – ಆಕಾಶ (ವೈಹಾಯಸಗತಿತುರಂ ವೈಹಾಯಸ ಪಥದಿನೈದಿದಂ ಸುರಪುರಮಂ: **ಜಗನ್ನಾವಿ,** ೧೨. ೫೪)

**ವೈಹಾಳಿ** – ಕುದುರೆ ಸವಾರಿ (ನಿಜವೈಹಾಳೀ ವಿನೋದ ವ್ಯತಿಕರಮನಂ ವಾಹಳೀಭೂಮಿಯೊಳ್ ಸಾಮಜದಿಂ ಬಂದು: **ಅನಂತಪು,** ೧೧. ೨೧)

**ವ್ಯಂಜನ** – ನಂಜಿಕೊಳ್ಳುವ ಪದಾರ್ಥ; [ಜೈನ] ಅರ್ಹತನ ೯೦೦ ಲಕ್ಷಣ ಗಳು (ತಿಳ ಮಸೂರಿಕಾ ಪ್ರಮುಖನವಶತ ವ್ಯಂಜನಪುಂಜರಂಜಿತನುಂ: **ಕರ್ಣನೇಮಿ,** ೯. ೬ ವ)

**ವ್ಯಂತರ** – ಕ್ಷುದ್ರ ದೇವತೆ (ಆಡುವ ಮರುಳ್ಗಳಂ ನಡೆನೋಡಿದುದಱೆನಿಂತು ಕನಸಿನೊಳ್ ಮಕ್ಕಳ್ಗಂ ಕೂಡೆ ಪೆಸರಿಟ್ಟು ಸಲೆ ಕೊಂಡಾಡಿದಪರ್ ವ್ಯಂತರ್ಕಳಂ ಜಡಮತಿಗಳ್: **ಆದಿಪು,** ೧೫. ೩೯); [ಜೈನ] ದೇವತೆಗಳ ಒಂದು ಗುಂಪು: ಜ್ಯೋತಿಷಿ, ವಿಮಾನವಾಸೀ, ಭವನಪತಿ ಮತ್ತು ವ್ಯಂತರ ಎಂಬ ನಾಲ್ಕು ಬಗೆಯ ದೇವತಾವರ್ಗಗಳಲ್ಲಿ ಒಂದು (ಮತ್ತಮಲ್ಲಿ ಸರ್ವರತ್ನಮಯಪ್ರಾಸಾದಂಗಳಿಂ ಅಸಂಖ್ಯಾತಯೋಜನ ವಿಸ್ತೀರ್ಣಂಗಳಗಿ ವ್ಯಂತರ ದೇವಪುರಂಗಳಿರ್ಕ್ಕುಂ: **ಸುಕುಮಾಚ,** ೧೧. ೫೪ ವ)

**ವ್ಯಂತರದೇವ** – [ಜೈನ] ಕಿನ್ನರ, ಕಿಂಪುರುಷ, ಮಹೋರಗ, ಗಂಧರ್ವ, ಯಕ್ಷ, ರಾಕ್ಷಸ, ಭೂತ ಮತ್ತು ಪಿಶಾಚ ಎಂಬ ಬೇರೆ ಬೇರೆ ದೇಶಗಳಲ್ಲಿರುವ ದೇವತೆಗಳು (ರಾಜ್ಯಪರಿಭ್ರಷ್ಟನಾಗಿ ತಾಪಸ ತಪಮಂ ಕೈಕೊಂಡು ನೆಗೞ್ದು ಪ್ರತಿಸೂರ್ಯನೆಂಬ ವ್ಯಂತರದೇವನಾಗಿ ಪುಟ್ಟಿದೊಂ: **ವಡ್ಡಾರಾ,** ಪು ೪೧, ಸಾ ೧೩)

**ವ್ಯಗ್ರ** – ಕಳವಳಗೊಂಡ (ಮುನ್ನಿನೆಡೆಗೆ ಬಂದು ಕಾಣದೆ ವ್ಯಗ್ರಮನನಾಗಿ **ಕಾದಂಸಂ,** ೪. ೫೨ ವ); ವಿಶೇಷಾಸಕ್ತಿ (ಆನುಂ ಆ ಕರ್ಮದೊಳೆ ವ್ಯಗ್ರನಾಗಿರ್ದಪೆಂ: **ಕಾದಂಸಂ,** ೮. ೨೫ ವ)

**ವ್ಯಗ್ರತೆ** – ಕಳವಳ (ವ್ಯಗ್ರತೆಯಂ ಉಳಿದು ಸಂದಿಗ್ಧಕಾರ್ಯಂಗಳಂ ಮೆಲ್ಲನೆ ಮಾಳ್ಪೊಂದಂಗಂ ಎನ್ನೀ ಬಗೆಗೆ ಅಭಿಮತಮಾಗಿರ್ಪುದೈ: **ರಾಜಶೇವಿ,** ೧೩. ೮)

**ವ್ಯಗ್ರಚಿತ್ತ** – ದುಡುಕು ಸ್ವಭಾವದವನು (ದ್ರುಪದಂ ರಾಜ್ಯಮದಿರಾಗಮದೋನ್ಮತ್ತನುಂ ಗರ್ವಗ್ರಹವ್ಯಗ್ರಚಿತ್ತನುಂ ಆಗಿ: **ಪಂಪಭಾ,** ೨. ೪೬ ವ)

**ವ್ಯಜನ** – ಬೀಸಣಿಗೆ (ಶ್ರವದಂಭೋಧಾರ ಧಾರಾಗೃಹಂ ಗನಾಸಾರನಾಸೀರ ಝುಂಝಾಪವನವ್ಯಾಧೂತ ಭೂಜವ್ಯಜನಂ: **ನೇಮಿನಾಪು,** ೫. ೭೪)

**ವ್ಯತಿಕರ** – ಸಂಬಂಧ, ಸಂದರ್ಭ (ಬಾಹುಬಲಿಕುಮಾರನಲ್ಲಿಗೆ ಮನ್ತ್ರಿಗಳ್ ಬಂದು ಪೂರ್ವೋಕ್ತಕ್ರಮದೊಳೆ ಧರ್ಮಯುದ್ಧ ವ್ಯತಿಕರಮಂ ಬಿನ್ನಪಂಗೆಯ್ದಾಗಳ್: **ಆದಿಪು,** ೧೪. ೧೦೨ ವ); ತೊಂದರೆ (ಅನ್ನೆಗಮಿತ್ತ ಸುಗ್ರೌಂ ಮಾಯಾಸುಗ್ರೀವನ ವ್ಯತಿಕರದೊಳ್ ಶರಣಾಗತಶರಣ್ಯನಪ್ಪ ರಾಮನಂಕಂಡು ತನ್ನ ವೃತ್ತಾಮತಮಂ ಬಿನ್ನವಿಸೆ: **ಪಂಪರಾ,** ೧೧. ೧೦೦ ವ)

**ವ್ಯತಿಕರಸ್ಥಿತಿ** – ನಿರ್ವಾಣ, ಜೀವಿತಾಂತ್ಯ (ಆ ಪ್ರಸ್ತಾವದೊಳ್ ಆದಿಭಟ್ಟಾರಕ ವ್ಯತಿಕರಸ್ಥಿತಿಯನಾನಂದನೆಂಬ ಧರ್ಮಕಾರ್ಯ ನಿಮಿತ್ತಂ ಬಂದಱೆಪಿದೊಡೆ: **ಆದಿಪು,** ೧೬. ೪೯ ವ)

**ವ್ಯತಿಕ್ರಮ** – ಉಲ್ಲಂಘನೆ (ಮತಿಗೆಟ್ಟ ಮಗಳೆ ಸಂಸ್ಕೃತಿಲತೆಯೊಳ್ ತೊಡರಲ್ಕೆ ನೀನಿದಂ ನೆಗೞ್ದೈ ದುರ್ಗತಿಹೇತುಪೂಜ್ಯ ಪೂಜಾವ್ಯತಿಕ್ರಮಂ ಕಿಱೆದು ದುಃಖಮಂ ಮಾಡುಗುಮೇ: **ಆದಿಪು,** ೩. ೩೯)

**ವ್ಯತಿಭಾವಂ** – ಅನ್ಯೋನ್ಯತೆ (ಅನ್ಯೋನ್ಯಂ ಪರಸ್ಪರಂ ವ್ಯತಿಭಾವಂ: **ಅಭಿಧಾವ,** ೨. ೨. ೧೧)

**ವ್ಯತಿಹಾರ** – ವಿನಿಮಯ, ಅದಲುಬದಲು ಮಾಡಿಕೊಳ್ಳುವುದು (ಶ್ರೀಮತಿ ವಜ್ರಜಂಘರ ಜನ್ಮಾಂತರಸ್ನೇಹರಸಾಮೃತ ಪಾತ್ರಚಿತ್ರಪಟ ವ್ಯತಿಹಾರಮಂ ವಜ್ರಜಂಘಾನುಚರರಿಂದಂ ಅಱೆದು: **ಆದಿಪು.** ೪. ೨೩ ವ)

**ವ್ಯಪಗತ** – ನಿವಾರಿಸಿದ (ವ್ಯಪಗತ ಇಂದ್ರಿಯಪಂಚಕಂಗಳಂ ಏಕದೇಶವಿಲಾಸದಿಂದ ಅಪಹರಿಪ್ಪ ವಿಲಾಸಿನೀಜನ: **ಅನುಭವ,** ೨೪)

**ವ್ಯಪದೇಶ** – ನಿಮಿತ್ತ (ಆ ಮಾಯಾವಿಯಂ ಧನುರ್ಮಹೋತ್ಸವಾಮಂತ್ರಣ ವ್ಯಪದೇಶದಿಂ ವಿನಾಶಮನೆಯ್ದಿಸುವೆಂ: **ಜಗನ್ನಾವಿ,** ೫. ೧೧ ವ)

**ವ್ಯಪಾಕೃತ** – ಬಿಡುಗಡೆಗೊಂಡ (ಸರ್ವಾಂಗಮಲಧರಂ ಪರಿನಿರ್ವೃತಿ ಸೌಖ್ಯೋನ್ಮುಖಂ ವ್ಯಪಾಕೃತಮೋದಂ .. .. ಒರ್ವಂ ಋಷಿಯಿರ್ದಂ: **ಚಂದ್ರಪ್ರಪು,** ೯. ೨೦)

**ವ್ಯಪಾಯ** – ಇಲ್ಲದಾಗುವುದು, ಮರಣ (ಲಕ್ಷ್ಮೀಮತಿ ಮಹಾದೇವಿಯುಂ ಅನುಂದರಿವೆರಸು ಚಕ್ರವಲ್ಲಭ ವ್ಯಪಾಯದೊಳ್ ಪುಂಡರೀಕನಂ ಕೈಕೊಂಡಿರೆ: **ಆದಿಪು,** ೪. ೮೧ ವ)

**ವ್ಯಪೇಕ್ಷೆಗೆಯ್** – ಆಸೆಪಡು ಸ್ವಪೂರ್ವ ವಾಸನೆಯ ಬಲದಿಂ ಅಂತಾತಂ ವೇದಪುರಾಣವೇದಿಯಾದಂವ್ಯಪೇಕಷೆಗೆಯ್ಗುಮೆ ವಿಶುದ್ಧಮಣಿ ಸಂಸ್ಕೃತಿಯಂ: **ವರ್ಧಮಾಪು,** ೬. ೧೮)

**ವ್ಯಪೇತ** – ಅಗಲಿದ, ದೂರಾದ (ಅನ್ನೆಗಂ ಆದಿಮುನೀಶ್ವರನುಂ .. .. ಅತಿದ್ರುತವಿಲಂಬಿತಗತಿ ವ್ಯಪೇತನಾಗಿ ಸೋಮಪ್ರಭರಾಜಮಂದಿರಾಭಿಮುಖನಾಗಿ ಬರ್ಪನ್ನೆಗಂ: **ಆದಿಪು,** ೯. ೧೩೦ ವ)

**ವ್ಯಭಿಚರಿಸು** – ಅಡ್ಡದಾರಿ ಹಿಡಿ (ಪ್ರತ್ಯಕ್ಷಪರಿಚ್ಛೇದ್ಯಂ ವಸ್ತುತತ್ವಮನಮಾನದಿಂ ವ್ಯಭಿಚರಿಸುಗುಂ ಎಂದು ನುಡಿದು: **ಶಾಂತಿಪು,** ೮. ೧೨೮ ವ)

**ವ್ಯಭಿಚಾರವಿಭ್ರಮ** – ತಲ್ಲಣ, ಉದ್ವೇಗ (ಕಿಱೆದನುರಾಗಮಂ ಕಿಱೆದು ದುಮ್ಮನಮಂ ಕಿಱೆದೊಂದು ಹಾಸಮಂ ಕಿಱೆದಟೆಯಟ್ಟೆಯಂ ಕಿಱೆದು ಸಂತಸಮಂ ಕಿಱೆದೊಂದು ಖೇದಮಂ ಸೆಱೆವಿಡಿದೆನ್ನ ವಲ್ಲಭೆಯ ಮುದ್ದುಮೊಗಂ

ವ್ಯಭಿಚಾರವಿಭ್ರಮಮಂ ಮೆಱೆದಪುದೋ ದಿನಾಗಮನದ ರಾತ್ರಿವಿರಾಮದ ಪದ್ಮದಂದದಿಂ: **ನೇಮಿನಾಪು,** ೧ ೧೧೧)

**ವ್ಯವಧಾನ** – ಅಡ್ಡಿ (ಮೌಕ್ತಿಕಭವಂ ವ್ಯವಧಾನಮನಾಳ್ದ ಶುಕ್ತಿಯಾನೊರ್ವಳೆ ಕಾಲದೊಳ್ಬಲಕೆ ಬಾರದ ವಲ್ಲರಿಯಾದೆನೋ: **ನೇಮಿನಾಪು,** ೧. ೯೬)

**ವ್ಯವಹರಣ** – ರೂಢಿ, ಬಳಕೆ (ವ್ಯಹರಣ ತದಾಚರಣ ಪ್ರವಣನೊಳಕ್ಕುಂ ಸಮಂತು ಗ ಪ್ರತ್ಯಯಂ: **ಶಬ್ದಮದ,** ೨೧೫)

**ವ್ಯವಹಾರಕಾಲ** – [ಜೈನ] ಕಾಲದ ಒಂದು ಬಗೆ (ವ್ಯವಹಾರಕಾಲಮೆಂಬುದು ಮುಖ್ಯಕಾಲನಿರ್ವರ್ತಿತ ಕ್ರಿಯಾರೂಪಂ: **ಆದಿಪು,** ೬. ೪೮ ವ)

**ವ್ಯವಹಿತ** – ಮರೆಮಾಡಿದ (ಮೇದಿನಿಯಂ ಕ್ರಮಕ್ರಮದೆ ಪರ್ವಿದುದಾತ್ತನಭೋವಿಭಾಗ ಆಚ್ಛಾದಿತದಿಙ್ಮುಖಂ ವ್ಯವಹಿತಾಖಿಲದೃಷ್ಟಿ ಪಥಂ: **ಪಂಚತಂತ್ರ,** ೨೪೧)

**ವ್ಯವಹೃತಿ** – ವ್ಯಾಪಾರ (ಕೃಷಿಕರ್ಮವ್ಯವಹೃತಿಯಿಂ ಕೃತಯುಗಮೆಂಬ ವಿಕಲ್ಪಮನಾದಿಕಾಲದೊಳ್ ಪುಟ್ಟಿಸಿದಂ; **ಪಂಪರಾ,** ೧. ೯೩)

**ವ್ಯವಾಯ** – ಸಂಭೋಗ (ನಿಧುವನ ರತ ಯಾಭ ಗ್ರಾಮ್ಯಧರ್ಮನಾಮಂ ವ್ಯವಾಯಮದು ಮೈಥುನಮುಂ: **ಅಭಿಧಾವ,** ೧. ೧. ೧೨)

**ವ್ಯಸನ** – ಆಸಕ್ತಿ (ದೇವರ್ ದಿಗ್ವಿಜಯ ವ್ಯಸನಾವಷ್ಟಂಭದೊಳೆ ನಡೆಯದಾಟವಿಕರೊಳ್ ಆದೀ ವಿಗ್ರಹಕ್ಕೆ ನಡೆವುದಿದಾವುದೊ ಜಸಂ ಇಱುಪೆಗಾನೆ ಮೊಗವಿಕ್ಕುವುದೇ: **ಪಂಪರಾ,** ೪. ೪೭)

**ವ್ಯಸನಿ** – ದುಶ್ಚಟಕ್ಕೊಳಗಾದವನು (ನಯವಿದನಲ್ಲಂ ಶಕ್ತಿ ತ್ರಯರಹಿತಂ ವ್ಯಸನಿ ವಿಗ್ರಹಾಸಕ್ತನನಿಶ್ಚಯಬುದ್ಧಿ ವಿರಕ್ತಪ್ರಕೃತಿಯೆನಿಪ್ಪ ಅರಿನೃಪನೊಳಿಱಿವುದುಱಿವುದು ನಯಮಂ: **ಪಂಚತಂತ್ರ,** ೨೮೧)

**ವ್ಯಸ್ತ** – ಚದುರಿದ (ವ್ಯಸ್ತರಜಸ್ತತಿಯಾಯ್ತು ಇಳವಳಯಂ: **ಚಂದ್ರಪ್ರಪು,** ೩. ೯೪); ಕಳಚಿಕೊಂಡ (ಗಳಿತಾಶ್ರುಪ್ರವಿಲೋಚನಂ ಕುಚತಟವ್ಯಸ್ತಾಂಬರಂ ಸ್ರಸ್ತಕುಂತಳಕೇಶಂ: **ಗದಾಯು,** ೧೦. ೧೩)

ವ್ಯಾಕೀರ್ಣ – ಚೆಲ್ಲಾಪಿಲ್ಲಿಯಾದ, ಹರಡಿಕೊಂಡ (ಸಿಂಹಸಂಘಾತರವೈಕಾಭೀಳಮಂ ಭೀಕರಕುಧರಗುಹಾರೌದ್ರಮಂ ಘೋರಮಾದ್ಯದ್ದ್ವಿರದವ್ಯಾಕೀರ್ಣಮಂ ನಿರ್ಜನವನಮನಿದಂ ಬಂದು ನೀನೆಂತು ಪೊಕ್ಕೈ: **ಪಂಚತಂತ್ರ,** ೧೧೧

**ವ್ಯಾಖ್ಯಾನಶಾಲಾ[ಲೆ]** – ಉಪನ್ಯಾಸಮಂದಿರ (ಶಾಸ್ತ್ರಸಮಿತಿ ವ್ಯಖ್ಯಣಶಾಲಾಪರಂಪರೆ ಸುತ್ತಿರ್ಪಿನೆಗಂ ನೃಪಂ ನಿಜಸುತಂಗಾನಂದದಿಂದಂ ಮಾಡಿಸಲ್ ಕರಮೊಪ್ಪಿತ್ತು ಸಲೀಲಕೇಳಿವನದೊಳ್ ವಿದ್ಯಾಮಹಾಮಂಡಪಂ: **ಪುಷ್ಪದಂಪು,** ೪. ೫೪)

**ವ್ಯಾಘಾತ** – ಪೆಟ್ಟು, ಅಡ್ಡಿ (ಎಂದು ತಮ್ಮ ಭೋಗಾಕಾಂಕ್ಷೆಯನೆ ಬಗೆದು ಪರಮಯೋಗಿಗೆ ಯೋಗವ್ಯಾಘಾತಮಂ ಮಾಡುವುದುಂ: **ಆದಿಪು,** ೯. ೯೯ ವ)

**ವ್ಯಾಘ್ರ** – ಹುಲಿ (ಶರಭ ವ್ಯಾಘ್ರ ಉಗ್ರಖಡ್ಗಿ ಪ್ರಕರಖರಭಯಾಕ್ರಾಂತಮಂ .. .. ನೀನೆಂತು ಪೊಕ್ಕೈ: **ಪಂಚತಂತ್ರ,** ೧೧೧)

**ವ್ಯಾಘ್ರಕೇತನ** – ಹುಲಿಯ ಚಿಹ್ನೆಯ ಬಾವುಟವುಳ್ಳವನು, ಶಲ್ಯ (ರುದ್ರವಿಷಯಾಧಿಪತಿಯುಂ ವ್ಯಾಘ್ರಕೇತನನುಂ ಶಸ್ತ್ರನಿರ್ಭರನಿಪುಣನುಂ ಸಮದೇಭಶಲ್ಯನುಂ ಎನಿಸಿದ .. .. ಶಲ್ಯನೆ ಸಂಹರಣದೊಳಂ: **ಗದಾಯು,** ೩. ೧೦ ವ)

**ವ್ಯಾಜ** – ನೆವ, ಕಾರಣ (ಓಷಧಿಗಳಂತೆ ಫಳಪಾಕಾಂತದೊಳ್ ಕ್ಷುತವಿಜೃಂಭಣವ್ಯಾಜದಿಂ ಲೋಕಾಂತರಿತರಾಗಿ: **ಆದಿಪು,** ೫. ೬೯ ವ); ಕಪಟ (ಕಪಟಂ ಕೂಟಂ ವ್ಯಾಜಂ ವ್ಯಪದೇಶಂ ಕೈತವಂ: **ಅಭಿಧಾವ,** ೨. ೨. ೬)

**ವ್ಯಾಜಿಸು** – ವಂಚಿಸು (ವೇದಜಡಾತ್ಮರ್ ಈ ಜಗತ್ ಜನಕ್ಕೀ ಅಂದದಿಂ ವ್ಯಾಜಿಪರ್: **ಸಮಯಪ,** ೧೨. ೧೨)

**ವ್ಯಾಜೋಕ್ತಿ** – ಕಪಟದ ಮಾತು (ಕರ್ಣೋತ್ಪಲಮಂ ತೊಡರ್ಚುವುಗುರಂ ನೋಟ್ಟಂದದಿಂ ಪಾಣಿಪಲ್ಲವಮಂ ಕೆಂದಲದಿಂದಮರ್ಚುವಳಿಪಂ ವ್ಯಾಜೋಕ್ತಿಯಿಂ ನಿಮಿರ್ಚುವತಿಪ್ರೌಢೆಯ ಪೊರ್ದುವಾಸೆಗೆ ನೃಪಂ ರೋಮಾಂಚಮಂ ತಾಳ್ದಿದಂ: **ಮಲ್ಲಿನಾಪು,** ೩. ೩೪)

**ವ್ಯಾತಂಕ** – ವೈರಾಗ್ಯ ಅಗ್ನಿ ಉದಕ ವ್ಯಾತಂಕ ಮಾರಿಗುತ್ತ ದುರ್ಭಿಕ್ಷ ಅತಿವೃಷ್ಟಿ ಅನಾವೃಷ್ಟಿಗಳೆಂಬ ಎಂಟುಂ ಪೀಡನಂ ಎಂಬುದಕ್ಕುಂ: **ಪಂಚತಂತ್ರ,** ೧೩೭ ವ)

**ವ್ಯಾತ್ಯುಕ್ಷಿ** – ಜಲಕ್ರೀಡೆ (ಅನಿಬರುಂ ಅವರ್ ವ್ಯಾತ್ಯುಕ್ಷೀಸಕ್ತರ್ ಕುಳಿಯಾಡಿದರ್: **ವರ್ಧಮಾಪು,** ೧೨. ೪೦)

**ವ್ಯಾದಾನ** – ವಿಸ್ತಾರವಾದ (ವಿಶಾಳ ದೀರ್ಘದಶನಂ ವ್ಯಾದಾನವಕ್ತ್ರಂ ಮಳಿಮಸ ವರ್ಣಂ .. .. ಗರ್ಧಭಂ: **ನೇಮಿನಾಪು,** ೭. ೯೦)

**ವ್ಯಾಧನಿವಾಸ** – ಬೇಡರ ಹಟ್ಟಿ (ಮಹೇಂದ್ರಸಿಇಂಹನೊರ್ವನೆ ನಾನಾವಿಧ ಗಿರಿಗಹನ ವಿಷಯ ವಿಷಮಪ್ರದೇಶಂಗಳುಮಂ ವ್ಯಾಧನಿವಾಸಗಳುಮಂ ಯಥಾಕ್ರಮದಿಂದಂ ಕಱೆದು ಪೋಗಿ: **ವಡ್ಡಾರಾ,** ಪು. ೫೪, ಸಾ. ೯)

**ವ್ಯಾಧಿನಿರ್ಹರಣ** – ರೋಗನಿವಾರಣೆ (ರಾಸಭಮಂ ವ್ಯಾಧಿನಿರ್ಹರಣಾರ್ಥಂ ದಿವ್ಯೌಷಧಮೆಂದು ಬಗೆದು ಆರೋಗಿಸಿಂ: **ಪಂಚತಂತ್ರ,** ೪೦೯ ವ)

**ವ್ಯಾಧೂತ** – ಬೀಸಲ್ಪಟ್ಟ (ಝುಂಝಾಪವನವ್ಯಾಧೂತ ಭೂಜವ್ಯಜನಮತುಳತಾಪಿಚ್ಛಪಿಂಛಾತಪತ್ರಂ: **ನೇಮಿನಾಪು,** ೫. ೭೪) ಹ್ರಾದಂ

**ವ್ಯಾಪಾದಿಸು** – ಹಿಂಸಿಸು (ಕೈದುಗಳಿಂ ಎಂತು ಪ್ರಾಣಿಗಳಂ ವ್ಯಾಪಾದಿಸಿದೊಡೆ ಎಂತು ಅಶುಭಪಾಪಂ ಕಟ್ಟುಗುಂ ಅಂತೆ: **ಚಾವುಂಪು,** ಪು. ೩೭೧. ಸಾ. ೨೦)

**ವ್ಯಾಪಾರ** – ಚಟುವಟಿಕೆ, ಕಾರ್ಯ (ವಿದ್ಯಾರ್ಥಿಗಳಾಗಿ ಗುರುಶುಶ್ರೂಷಾದಿ ವ್ಯಾಪಾರದಿಂ ಭರವಸಂಗೆಯ್ದು: **ಸುಕುಮಾಚ,** ೨. ೫೫ ವ)

**ವ್ಯಾಪೃತಿ** – ವ್ಯಾಪಾರ, ನಿರತವಾಗಿರುವುದು (ದಿನಾದಿಸತ್ಕ್ರಿಯಾ ವ್ಯಾಪೃತಿಯೆಲ್ಲಮಂ ನೆಱೆಯನುಷ್ಠಿಸಿ ಪೋಗಿ: **ಶಾಂತಿಪು,** ೮. ೨೦೯)

**ವ್ಯಾಬದ್ಧ** – ಕಟ್ಟಿದ (ಉದ್ಬಾಷ್ಪ ಪರ್ಯಾಕುಲ ವ್ಯಾಬದ್ಧಲಕ್ಷ್ಯದೃಷ್ಟಿಯಪ್ಪ ಮಹಾಶ್ವೇತೆಯೆಯ್ದೆವಂದು: **ಕಾದಂಸಂ,** ೭. ೪೦ ವ)

**ವ್ಯಾಬಾಧೆ** – ಕಾಯಿಲೆ (ಜರಾಮಯವ್ಯಾಬಾಧಾದಾದಿತ್ವಮುಂ ಗಂಭೀರಮೃದುಮಧುರವಾದಿತೆಯುಂ .. .. ತನಗನುಸಂಗತಮಾಗೆ: **ಶಾಂತಿಪು,** ೧೦. ೯೪ ವ); ಕಾಟ (ದಿತಿಸುತವ್ಯಾಬಾಧೆಗಳ್ ದೇವರ್ಗಿಲ್ಲವಲಾ: **ಪಂಪಭಾ,** ೬. ೧೫)

**ವ್ಯಾಭಾಸಿ** – ಹೊಳಪು ಸಸ್ಪೃಹ ಸಾನಂದ ಸಲೀಲ ಸಸ್ಮಿತಮುಖವ್ಯಾಭಾಸಿ ನೋಡಿಂತು ಸನ್ನಿಹಿತಂ ಸೌಂದರರೂಪಮಿನ್ನುಮೆರ್ದೆಯೊಳ್ ಮಜ್ಜಿವಿತಾಧೀಶನಾ: **ಆದಿಪು,** ೩. ೪೨)

**ವ್ಯಾಮೋಹ** – ಗಾಢ ಮೋಹ (ಬೆಸಸಿಮಿದನೆನ್ನ ಮನದೊಂದು ಸಂಶಯಂ ಪತ್ತುವಿಡುವಿಡುವಿನಂ ವ್ಯಾಮೋಹಂ ಪ್ರಶಮಿಸುವಿನಂ: **ಸುಕುಮಾಚ,** ೫. ೭); ಒಂದು ಕಾಮಾವಸ್ಥೆ (ಮನೋವೈಕಲ್ಯ ರೋಮಾಂಚಕ ಸ್ತಂಭ ಕಂಪ ಸ್ವೇದ ವೈವರ್ಣ್ಯ ಸಂತಾಪನ ಆಹಾರ ವ್ಯಾಮೋಹ ಗದ್ಗದ ಅಶ್ರುಮೋಕ್ಷ ಮೂರ್ಛಾದಿ ನಾನಾ ವಿಕಾರಂಗಳಂ ಒಡನೊಡನೆ ತೋಱುವುದುಂ: **ಪಂಪಭಾ,** ೪. ೫೯ ವ)

**ವ್ಯಾಯಾಮ** – ಸಾಧನೆ (ವ್ಯಾಯಾಮದಿಂ ಮೈ ಸಡಿಲದೆಸೆಯೆ ಮಾತಂಗನಾಗಿರ್ದುಂ: **ಕಾದಂಬ,** ೧. ೩೩)

**ವ್ಯಾಲಂಬಿವಾಲ** – ಅಲ್ಲಾಡುವ ಬಾಲ (ಬದ್ಧೋದರಂ ದಕ್ಷಿಣೋಚ್ಚರದಂ ಕ್ರೋಡನಿತಂಬನಂಬುದರವಂ ವ್ಯಾಲಂಬಿವಾಲಂ .. .. ಸಿಂಧುರಂ: **ಚಂದ್ರಪ್ರಭು,** ೯. ೯೯)

**ವ್ಯಾಲಗಜ** – ತುಂಟ ಆನೆ (ನಿಧೀಶ್ವರಸೈನ್ಯ ವ್ಯಾಲಗಜಂಗಳ್ ವನಗಜಲೀಲೆಯನನುಕರಿಸಿ ಕಣ್ಗೆವಂದುವು ಪಲವುಂ: **ಆದಿಪು,** ೧೩. ೨)

**ವ್ಯಾಲಗ್ನ** – ಬಲವಾಗಿ ಅಂಟಿಕೊಂಡ (ರಕ್ತನೇತ್ರಾಂಚಲಂ ಬಾಷ್ಪಸರಿತ್ ವ್ಯಾಲಗ್ನಕೀರ್ಣ ಭ್ರಮರಕಂ ಅಮೃತಾಪಾಂಡು ಗಂಡಸ್ಥಲಂ .. .. ವಿರಹಾಕ್ರಾಮತೆ ತತ್ಕಾಂತೆಯಿರ್ದಳ್: **ರಾಜಶೇವಿ,** ೭. ೭೬)

**ವ್ಯಾಲೋಲ** – ಚಲಿಸುತ್ತಿರುವ (ಮಾಲಿನ್ಯಂ ವಿಮಲದೊಳಾಗದೆಂಬಂತೆ ಆ ಲೀಲಾವಿಮಲ ಸರೋವರಂ ತರಂಗವ್ಯಾಲೋಲಂ: **ಲೀಲಾವತಿ,** ೧೪. ೫)

**ವ್ಯಾವರ್ಣನೆ** – ವಿಶೇಷ ವರ್ಣನೆ (ಸ್ವರ್ಗಲೋಕದ ವ್ಯಾವರ್ಣನೆಯಂ ಮಾಡುವಲ್ಲಿ ಪನ್ನೆರಡನೆಯ ಸಹಸ್ರಾರಕಲ್ಪಮಂ ನೋಡುತ್ತುಮಿರ್ಪುದುಂ: **ಧರ್ಮಾಮೃ,** ೮. ೨೦ ವ)

**ವ್ಯಾವರ್ಣಿಸು** – ವಿಶೇಷವಾಗಿ ಬಣ್ಣಿಸು (ಚಿತ್ರಕೃತಿಯಂ ವ್ಯಾವರ್ಣಿಸುತ್ತುಂ ಕವಿಪ್ರಕರಂ ಶ್ರೀವಿಜಯಪ್ರಭೂತಮಂ ಇದಂ ಕೈಗೊಳ್ವುದು: **ಕವಿರಾಮಾ,** ೧. ೧೫೦)

**ವ್ಯಾವೃತ** – ಮರೆಮಾಡಿದ, ಮುಚ್ಚಿಹಾಕಿದ (ವ್ಯಾವೃತ ಖಡ್ಗಿಗಳಿಂ ಲೀಲಾವಹ ಮಹಿಷೀವಿತಾನದಿಂ ನೃಪಕುಟಿಯವೊಲ್ ಆವಗಮೆಸೆದತ್ತು ಚಿತ್ರಕೂಟನಗೇಂದ್ರಂ: **ಕುಸುಮಾಕಾ,** ೧. ೭೦)

**ವ್ಯಾವೃತ್ತಿ** – ಪ್ರತ್ಯೇಕಗೊಳಿಸುವುದು; ವಿವರಣೆ (ಸಕಳಾಳಾಪ ಕಲಾಕಳಾಪಕಥಿತ ವ್ಯಾವೃತ್ತಿಯೊಳ್ ಕೂಡಿ: **ಕವಿರಾಮಾ,** ೧. ೧೫೦)

**ವ್ಯಾಹಾರ** – ಶಬ್ದ (ನಾದಂ ಶಬ್ದಂ ಧ್ವಾನಂ ಹ್ರಾದಮಸ್ವಾನಂ ರವಂ ಸ್ವರಂ ಘೋಷಂತದ್ಭೇದಂ ವಚನಂ ವ್ಯಾಹಾರರೋದೀರಣ ಕಥನ ಭಾಷಣಾದಿಕಮಕ್ಕುಂ: **ಅಭಿಧಾವ,** ೧. ೧೩. ೨೭); ಉಚ್ಚಾರಣೆ (ಶುಕಪಿಕವ್ಯಾಹಾರ ಸಂಪಾದಿತ ಪ್ರತಿನಾದೋದಯಮಂ .. .. ಶೀತಕೋಶ ಗುಹೆಯಂ ಪೊಕ್ಕಂ ಮಹೀವಲ್ಲಭಂ: **ಲೀಲಾವತಿ,** ೪. ೧೬)

**ವ್ಯಾಳ** – ದುಷ್ಟ ಮೃಗ (ನಾನಾ ವ್ಯಾಳ ಕೋಳಾಹಳಾಸ್ಪದಮುಂ ನಿರ್ಮನುಜಪ್ರದೇಶಮುಂ ಎನಿಪ್ಪ ಆ ಘೋರಕಾಂತಾರದ ಮಧ್ಯದೊಳ್: **ಕಾದಂಬ,** ೮. ೧೨೯)

**ವ್ಯಾಳಂಗಳಪ್ಪ** – ಕ್ರೂರವಾದ (ಸುಕೇಶಿನಿಯ ಮಾಡದ ಕೇರ್ಗ್ಗಳೆಲ್ಲಾ ಎಡೆಗಳೊಳಂ ವ್ಯಾಳಂಗಳಪ್ಪಾನೆಗಳಂ ತನ್ನ ಚಿತ್ತಾರಿಗರಿಂದಂ ಬರೆಯಿಸಿದಂ: **ವಡ್ಡಾರಾ,** ಪು ೩೪, ಸಾ ೧೧)

**ವ್ಯಾಳಗಜ** – ತುಂಟ ಆನೆ (ಈ ವ್ಯಾಳಗಜಂಗಳ್ ಪೋಗಲ್ಕೆ ಆಳಾಪದೋಳೇನೊ ಬಟಿಕೆ ಪೋಗಿಂ ಮುದದಿಂ: **ಕರ್ಣನೇಮಿ,** ೪. ೫೦)

**ವ್ಯಾಳತೆ** – ವೈರ (ವ್ಯಾಳತೆ ಷಟ್ಖಂಡ ಮಹೀಪಾಳನೊಳ್ ಎನಗಾದುದೆಂದು ಕಾಂಭೋಜನೃಪರ್ ವ್ಯಾಳಗಜಾಳಾನ ಚಳಕ್ವಾಳತಿಯೊಡನೆ ತಡೆಯದೆಱಗಿದರಾಗಳ್: **ಶಾಂತಿಪು:** ೧೧. ೨೭)

**ವ್ಯಾಳಿಕಾ** – ನಾಟಕದ ಒಂದು ಭಾಗ (ನಾಂದೀ ಪ್ರರೋಚನಾ ಪ್ರಸ್ತಾವನಾ ಇತಿವೃತ್ತ ಸಂಧಿ ಪ್ರವೇಶ ವಿಷ್ಕಂಭ ಕಪೋತಿಕಾ ವ್ಯಾಳಿಕಾದಿ ಲಕ್ಷಣೋಪೇತಂಗಳಪ್ಪ ನಾಟಕಂಗಳೊಳಂ: **ಪಂಪಭಾ,** ೨. ೩೪ ವ)

**ವ್ಯುಚ್ಛಿತ್ತಿ** – ವಿನಾಶ (ಘೋರಸಂಸಾರ ನಾನಾವ್ಯಸನ ವ್ಯುಚ್ಛಿತ್ತಿಯೊಳ್ ಧಾರ್ಮಿಕಜನಜನಿತಾನಂದಸಂದೋಹ ವಿದ್ಯಾರಸದೊಳ್ .. .. ವಾಗ್ವಧೂಮುದ್ರೆಯೊಳ್ ಮುದ್ರಿಸಿ ನಿಂದತ್ತು ಆದಿತೀರ್ಥೇಶ್ವರನ ಚರಿತದೊಳ್ ವಾಕ್ಯಮಾಣಿಕ್ಯಕೋಶಂ: **ಆದಿಪು,** ೧೬. ೮೦)

**ವ್ಯುತ್ಸರ್ಗ** – ಸುತ್ತಿ ಬರುವುದು (ವ್ಯುತ್ಸರ್ಗಂ ಪರಿಸರ್ಪಣಂ: **ಅಭಿಧಾವ,** ೨. ೨. ೯); [ಜೈನ] ಒಂದು ಬಗೆಯ ತಪ, ಶರೀರದ ಮೇಲೆ ಮಮತೆಯಿಲ್ಲದಿರುವುದು (ವ್ಯುತ್ಸರ್ಗೋತ್ತರತಪದೊಳ್ ಅತಿವಿಶುದ್ಧಾಂತರಂಗನೆನಿಸಿದಂ: **ಸುಕುಮಾಚ,** ೪. ೧೯)

**ವ್ಯುಷ್ಟಿ** – [ಜೈನ] ಒಂದು ಗರ್ಭಾನ್ವಯಕ್ರಿಯೆ, ಮೊದಲ ವರ್ಷದ ಹುಟ್ಟುಹಬ್ಬ (ವ್ಯುಷ್ಟಿ ಕೇಶಾವಾಪ ಲಿಪಿಸಂಖ್ಯಾನ .. .. ವಿಹಾರಯೋಗತ್ಯಾಗಾಗ್ರನಿರ್ವೃತಿಯೆಂಬ ಅಯ್ವತ್ತುಮೂಱು ಗರ್ಭಾದಿನಿರ್ವಾಣಪರ್ಯಂತಂಗಳಪ್ಪ ಗರ್ಭಾನ್ವಯಕ್ರಿಯೆಗಳಂ: **ಆದಿಪು,** ೧೫. ೧೫ ವ)

**ವ್ಯೂಢ** – ಹರಹಾದ (ದಳಿತಾಂಬೋಜಾಸ್ಯಂ ಇಂದೀವರದಳನಯನಂ ಪಕ್ವಬಿಂಬಾಧರಂ ಕೋಮಳ ವಂಶಶ್ಯಾಮಂ ಅಂಭೋಧರರವಂ ಅಳಿನೀಕುಂತಲಂ ವ್ಯೂಢವಕ್ಷಸ್ಸ್ಥಳಂ: **ಆದಿಪು,** ೮. ೫೧)

**ವ್ಯೂಹ** – ಸೈನ್ಯ (ಪರವ್ಯೂಹಭಯಂಕರಂ ನೆಗೆದು ಪಾರ್ದಾರ್ದು ಎಚ್ಚೊಡೆ: **ಪಂಪಭಾ,** ೧೧. ೧೭); ಸೇನಾ ರಚನೆ (ಇದು ಚಕ್ರವ್ಯೂಹಂ ಈ ವ್ಯೂಹಮನೊಡೆವದಟಂ ಪಾರ್ಥಂ ಅಂತಾತನುಂ ಗೆಂಟಿದಂ ಎಮ್ಮೀ ನಾಲ್ವರುಂ ಭೇದಿಸಲಚೆಯೆವು: **ಪಂಪಭಾ,** ೧೧. ೮೭)

**ವ್ಯೋಕಾರ** – ಕಮ್ಮಾರ (ಪಸರಿಸಿದುದು ಕಟ್ಟಿಲೆ ದೆಸೆದೆಸೆಗಂ ವ್ಯೋಕಾರನಂತೆ ಕಾಲಂ ಕಡಲೊಳ್ ಬಿಸುಪಡರ್ದ ತಪನ ತಪ್ತಾಯಸಪಿಂಡಮನರ್ದೆ ನೆಗೆದ ಮೊಗೆಯೆಂಬಿನೆಗಂ: **ನೇಮಿನಾಪು,** ೫. ೧೭)

**ವ್ಯೋಮ** – ಆಕಾಶ (ಬಿಸಿಲಂ ಪೊಂಗಳಸಂಗಳಚ್ಚವೆಳಗಿಂ ತಳ್ಕೈಸುತುಂ ತಟ್ಟು ಚುಂಬಿಸುತುಂ ವ್ಯೋಮಮಂ: **ಲೀಲಾವತಿ,** ೭. ೬)

**ವ್ಯೋಮಚರ** – ದೇವತೆ (ಅನಂತಕಾಂತ ವ್ಯೋಮಚರಕಾಂತ ಕಟಾಕ್ಷೈಕಲಕ್ಷ್ಯಂ ದಮಿತಾರಿ ಮಹಾರಾಜಂ

ಮೃಗರಾಜಾಸೀನಾಸನಂ ಒಡ್ಡೋಲಗಂಗೊಟ್ಟಿರೆ: **ಶಾಂತಿಪು,** ೨. ೨೧ ವ)

**ವ್ರಜ** – ಸಮೂಹ (ಪ್ರಜೆಯೆಲ್ಲಂ ಜಲಗಂಧ ಸ್ರಜ ತಂಡುಲ ಧೂಪ ದೀಪ ಚರು ತಾಂಬೂಲವ್ರಜದಿಂ ಪೂಜಿಸುವುದು: **ಯಶೋಧಚ**, ೪. ೭೩); ಗೊಲ್ಲರ ಹಟ್ಟಿ (ಆ ಸುತರುಂ ಗೋಪಾಲವ್ಯಾಸಂಗದೆ ಕೆಲವು ಕಲಮಿರ್ಕುಂ ವ್ರಜದೊಳ್: **ಜಗನ್ನಾವಿ,** ೧. ೭೬)

**ವ್ರಣ** – ಗಾಯ, ಹುಣ್ಣು (ನರೇಂದ್ರಸುತ ನಿನಗೀ ಕೂರ್ಗಣೆಯಿತ್ತಪುದು ನವವ್ರಣಮಣಿಯಂ ಕೊಳ್ ಎಂದು ಸಿಂಹಳಂ ಪದೆದೆಚ್ಚಂ: **ರಾಜಶೇವಿ,** ೬. ೯೮)

**ವ್ರಣವೈದ್ಯ** – ಹುಣ್ಣು ಚಿಕಿತ್ಸೆಮಾಡುವ ವೈದ್ಯ (ದುರ್ಯೋಧನಂ ಬಂದಿಕಾಱನಂತೆ ಸೆಱೆಗೆಯ್ದುಂ ವ್ರಣವೈದ್ಯನಂತೆ ಕೊಡಸಾರಿಯಂ ಪಿಡಿದುಂ ಸೂಳೆಯಂತೆ ಕಟಿವು ಉೞಿವನಱಿದುಂ ರಸವಾದಿಯಂತೆ ಕಟ್ಟಿಯುಂ ಪೆರ್ಜೋಡೆಯಂತೆ ನುಣ್ಣಿತಂ ಪೇೞ್ದು: **ಪಂಪಭಾ,** ೬. ೭೨ ವ)

**ವ್ರತ** – ಆಚರಣೆ (ಎನಿತಾನುಂ ತೆಱದ ಕಥೆಗಳುಮಂ ದೃಷ್ಟಾಂತಂಗಳುಮಂ ತೋಱಿ ನುಡಿದುಂ ವ್ರತಕ್ಕೆ ತರಲಾಱದೆ: **ಧರ್ಮಾಮೃ,** ೧೧. ೧೧೭ ವ)

**ವ್ರತತಿ** – ಬಳ್ಳಿ (ಆ ವ್ರತ ಶಿತಾಸಿ ಸಂಸಾರವ್ರತತಿಚ್ಛೇದಮಕ್ಕುಂ ಆ ಸಂಸಾರಂ ತೀವತರ ದುಃಖದಂ ನಾಳೀವ್ರಣಸದೃಶಂ ಶರೀರಿಗದ ಕಿಡೆ ನೆಗೞಿಂ: **ಶಾಂತಿಪು,** ೭. ೭)

**ವ್ರತಚರ್ಯೆ** – [ಜೈನ] ಒಂದು ಗರ್ಭಾನ್ವಯಕ್ರಿಯೆ, ಹಿಂಸಾಚಾರ ವರ್ಜಿಸಿ ಅಧ್ಯಯನ ಕೈಗೊಳ್ಳುವುದು (ಲಿಪಿಸಂಖ್ಯಾನ ಸಂಗ್ರಹೋಪನಯನ ಬ್ರಹ್ಮಚರ್ಯವ್ರತಾವರಣ .. .. ವಿಹಾರಯೋಗತ್ಯಾಗಾಗ್ರನಿರ್ವೃತಿಯೆಂಬ ಅಯ್ವತ್ತುಮೂಱು ಗರ್ಭಾದಿನಿರ್ವಾಣಪರ್ಯಂತಂಗಳಪ್ಪ ಗರ್ಭಾನ್ವಯಕ್ರಿಯೆಗಳಂ: **ಆದಿಪು,** ೧೫. ೧೫ ವ)

**ವ್ರತತಿ** – ಬಳ್ಳಿ (ವ್ರತತಿ ಲತಾವೀರುತ್ತಾ ಪ್ರತಾನಿನೀನಾಮಮಱಿಗೆ ವಲ್ಲರಿ: **ಅಭಿಧಾವ,** ೧. ೭. ೮)

**ವ್ರತಾವರಣ** – [ಜೈನ] ಒಂದು ಗರ್ಭಾನ್ವಯಕ್ರಿಯೆ, ಬ್ರಹ್ಮಚರ್ಯವ್ರತತ್ಯಾಗ (ಲಿಪಿಸಂಖ್ಯಾನ ಸಂಗ್ರಹೋಪನಯನ ಬ್ರಹ್ಮಚರ್ಯವ್ರತಾವರಣ .. .. ವಿಹಾರಯೋಗತ್ಯಾಗಾಗ್ರನಿರ್ವೃತಿಯೆಂಬ ಅಯ್ವತ್ತುಮೂಱು ಗರ್ಭಾದಿನಿರ್ವಾಣಪರ್ಯಂತಂಗಳಪ್ಪ ಗರ್ಭಾನ್ವಯಕ್ರಿಯೆಗಳಂ: **ಆದಿಪು,** ೧೫. ೧೫ ವ)

**ವ್ರಾಜಿತ** – ಪ್ರಕಶಮಾನವಾದ (ಈ ಜಡರಂ ಅತರ್ಕಿತಬುಧರಾಜ ಸಭಾಸದರೊಳೊರಿಸಿ ರಿಪುನೃಪಮಕುಟವ್ರಾಜಿತಪದಾಬ್ಜ ವಿಬುಧಸಮಾಜದೊಳ್ ಆದತ್ತು ಹಾಸ್ಯರಸಂ ಅಪ್ರತಿಮಂ; **ಸುಕುಮಾಚ.** ೨. ೨೫)

**ವ್ರಾತ** – ಸಮೂಹ (ನವರತ್ನವ್ರಾತ ಸರ್ವೌಷಧಿಫಲಮಿಳಿತ ಅಂಭೋಧಿತೀರ್ಥ ಆಪಗಾವಾರಿ: **ಕಾದಂಸಂ,** ೨. ೫೭)

**ವ್ರೀಡೆ** – ಲಜ್ಜೆ (ಇತ್ತ ಕೃತಕಾಕ್ರಂದ ಕಂದಳಿತ ಶುಷ್ಕ ಶೋಕಾಕ್ರಾಂತ ಜೀವದ್ಯಶಾವ್ರೀಡಾವಿಷಾದರ್: **ನೇಮಿನಾಪು,** ೭. ೩೪ ವ)

**ವ್ರೀಹಿ** – ಬತ್ತ (ವ್ರೀಹಿ ಮಹಾಶಾಲಿಯೆನಿಕ್ಕುಂ: ಅಭಿಧಾವ, ೧. ೧೬. ೧೬)

**ವ್ರೈಹೇಯ** – ಬತ್ತದ ಗದ್ದೆ (ಲೀಲೆಯಿಂ ಅದಱ ನೆಲಂ ಪರಿಪಾಲಿಸಿದುವು ಕಣ್ಗೆ ನಾಡೆ ಮೌದ್ಗಲಂ ಮಾಷ್ಯಂ ಶಾಲೇಯಂ ವೈಹ್ರೇಯಂ: **ಚಂದ್ರಪ್ರಪು,** ೧. ೯೧)

# ಶ

**ಶಂಕರ** – ಶುಭಕರ (ಪ್ರೀತಿಂಕರ ಶಂಕರ ವಿದ್ಯಾತಿಶಯನಿಧಾನ ನಿನ್ನ ದಯೆವೆರಸಿದತಿಪ್ರೀತಿಯೊಳ್ ಆಂ ಅತ್ಯುತ್ತಮ ಜಾತಿಗಳೊಳ್ ಪುಟ್ಟಿ ಸುಖಮನುಣುತುಂ ಬಂದೆಂ: **ಆದಿಪು,** ೫. ೭೩)

**ಶಂಕಾಂತರ** – ಸಂದೇಹ (ಲತೆಗಳ್ ಜಂಗಮರೂಪದಿಂದೆ ನೆರದುವೋ ದಿವ್ಯಾಪ್ಸರೋವೃಂದಂ ಈ ಕ್ಷಿತಿಗೇಂ ಇಂದ್ರನ ಶಾಪದಿಂದ ಇೞಿದುವೋ ಪೇೞೆಂಬ ಶಂಕಾಂತರಂ ಮತಿಗಂ ಪುಟ್ಟುವಿನೆಗಂ: **ಪಂಪಭಾ,** ೪. ೩೯)

**ಶಂಕಾಕುಳಿತ** – ಸಂಶಯದಿಂದ ಪೀಡಿತವಾದ (ಆ ಶಿಶುವಿನಟ್ಟೆ ತೆಕ್ಕನೆ ತೀವಿತ್ತನಿತುಂ ದಿಕ್ತಟಮಂ ಭೋರೆನೆ ಶಂಕಾಕುಳಿತಮಪ್ಪಿನಂ ಭುವನಜನಂ: **ಜಗನ್ನಾವಿ,** ೩. ೧೨)

**ಶಂಕಾವಹ** – ಸಂದೇಹವುಂಟುಮಾಡುವ (ಆಹವ ಮಹಾಹುಂಕಾರ ಕಾಳಕೂಟವಿಟಪಿಪ್ರರೋಹ ಶಂಕಾವಹ ನಾಭಿಕೂಪಾವಲಂಬಿತ ಕೂರ್ಚಕಳಾಪಂ: **ಆದಿಪು,** ೧೩. ೪೫ ವ)

**ಶಂಕು** – ಕೊರಡು (ಶಂಕ್ವಾಖ್ಯಂ ತಾಂ ಕೊಱಡು: **ಅಭಿಧಾವ,** ೧. ೭. ೭)

**ಶಂಖ** – ಪಂಚಮಹಾವಾದ್ಯಗಳಲ್ಲಿ ಒಂದು (ಪಟುಪಟಹತುಣೌಭಂಭಾಮರ್ದಳೆ ಝಲ್ಲರಿ ಮುಕುಂದತಾಳ ಕಹಳ ಶಂಖವಂಶವೀಣಾಸ್ವರಂಗಳೆಸೆಯೆ: **ವಡ್ಡಾರಾ,** ಪು. ೮೪, ಸಾ. ೧)

**ಶಂಖಧವಳ** – ಶಂಖುವಿನಂತೆ ಹೊಳೆಯುವ (ಕಣ್ಗೊಪ್ಪಿ ತೋರ್ಪುದಿದು ಉತ್ತ್ರಂಖತ್ ಅಸಂಖ್ಯ ಶಂಖಧವಳಂ ಗಂಭೀರನೀರಾಕರಂ: **ಪಂಪಭಾ,** ೪. ೨೪)

**ಶಂಖನಿಧಿ** – ಕುಬೇರನ ನವನಿಧಿಗಲ್ಲಿ ಒಂದು (ಧೃತರತ್ನಾರ್ಘ್ಯಂ ಬಂದಂ ಪತಿಗಿದಿರಂ ಶಂಖನಿಧಿಯೆ ಬರ್ಪಂತಾಗಳ್: **ಆದಿಪು,** ೧೩. ೧೨)

**ಶಂಪಾ** – ಮಿಂಚು (ರಸನಾ ಶಂಪಾ ಶತಂ ಸಂಚಳಿಸೆ ಪುದಿಯೆ ಫೂತ್ಕಾರಂ ಆಶಾಂತಮಂ ದಳ್ಳಿಸೆ ವಹ್ನಿಜ್ವಾಲೆ ದೀರ್ಘಾನನ ಕುಹರ ಸಹಸ್ರಂಗಳಿಂ .. .. ವಜ್ರಾವರ್ತ ಚಾಪಂ ಪಡೆದುದು ಭಯಮಂ ಕಾಳ ಕಾಳಾಹಿ ರೂಪಂ: **ಪಂಪರಾ,** ೫. ೭೪)

**ಶಂಫಳಿ** – ಕುಂಟಣಿ (ಪಳಿತಂ ಬರೆ ಪಟಿ ತನ್ನಂ ಬಳಸುಗುಂ ಎಳಸಿದೊಡೆ ವಿಷಯತತಿಗೆ ಅದಱಿಂ ಶಂಫಳಿ ತನ್ನುಕ್ತಿಗೆ: **ಪಾರ್ಶ್ವನಾಪು,** ೧೩. ೫೪)

**ಶಂಬ** – ವಜ್ರಾಯುಧ (ಕಣ್ಗೆ ಚೆಲ್ವಾದುದು ಚಂಚತ್ ದೃಕ್ಕದಂಬಂ ತಿಮಿರಕುಧರ ಶಂಬಂ ದಿನಾಧೀಶಬಿಂಬಂ: **ರಾಜಶೇವಿ,** ೧೨. ೩೪); ಸಿಡಿಲು (ದಿಕ್ತಟಂ ನಸುಗೆಂಪಿಂಗೆಡೆಯಾಯ್ತು ತಡೆಯದೆ ಉದಯಿಸಲೊಡರಿಸೆ ತಿಮಿರಾದ್ರಿಶಂಬಂ ಆ ಶಶಿಬಿಂಬಂ: **ಶಾಂತೀಶ್ವಪು,** ೧೧. ೩೧)

**ಶಂಬಧರ** – ಇಂದ್ರ (ಎಂಬುದುಂ ಶಂಬಧರವಿನುತಂ ಇನಿಸಾನುಂ ನಕ್ಕು: **ಕರ್ಣನೇಮಿ,** ೧೩. ೭ ವ)

**ಶಂಬಾಕೃತ** – ಎರಡು ಬಾರಿ ಉಳುಮೆ ಮಾಡಿದುದು (ಶಂಬಾಕೃತಂ ದ್ವಿಸೀತ್ಯಮೆನಿಕ್ಕುಂ: **ಅಭಿಧಾವ,** ೧. ೧೧. ೭೦)

**ಶಂಬರ** – ನೀರು (ಶಂಬರ ಭಸ್ವತ್ ಪುಂಡರೀಕಸ್ಫುರಿತ .. .. ಅಂಚಿತಮದು ನಭಮಂ ಪೋಲ್ತು ಚೆಲ್ವಾಯ್ತರಣ್ಯಂ: **ರಾಜಶೇವಿ,** ೫. ೭೫)

**ಶಂಬರಜಾತ** – ತಾವರೆ (ಮನ್ಮಥಾರಿರೂಪನ ಚಿಕವೀರರಾಜನ ಚಿದಂಬರಶಂಬರಜಾತಮಿತ್ರನಾ: **ರಾಜಶೇವಿ,** ೧. ೬೮)

**ಶಂಬರದರ್ಪಧ್ವಂಸಿ** – ಮನ್ಮಥ (ಶಂಬರದರ್ಪಧ್ವಂಸಿ ತಾನುಂ ಗಿಳಿಯನಡರ್ದಪನೇ .. .. ಕಾಳ್ಕಿಗದೆ ಗಮಿಪನೇ ಸಂತತಂ ಗಂಧವಾಹಂ: **ರಾಜಶೇವಿ,** ೧೨. ೧೦೬)

**ಶಂಬರಧಿ** – ಸಮುದ್ರ (ಇದು ತಮಮೆಂಬ ಶಂಬರಧಿಯಂ ಸಲೆ ಪೀರ್ವ ಮಹೌರ್ವಹ್ನಿಯೋ: **ರಾಜಶೇವಿ,** ೧೧. ೪೫)

**ಶಂಬರರಿಪು** – ಕಾಮ (ಶಂಬರರಿಪುದೂರ ನಿತ್ಯಸುಖಪೂರ ಘನಶ್ರುತಿತತ್ವಸಾರ ಶಂಕರ: **ತ್ರಿಷಷ್ಟಿಪು,** ೧೭. ೧೦೨)

**ಶಂಬರವಿಪಕ್ಷ** – ಶಂಬರಾರಿ, ಮನ್ಮಥ (ಅಂಬರಕೇಶ ಶಂಬರವಿಪಕ್ಷ ಮದಾಂಬುಜಕುಂಭಿ ಮುಕ್ತಿಭಾಮಿನಿಯ ಮನೋಜ್ಞಮೂರ್ತಿ: **ಶಬರಶಂ,** ೨. ೫)

**ಶಂಬರಸಂಹೃತ್** – ಕಾಮ (ಶಂಬರಸಂಹೃತ್ ಕೀರ್ತಿಯಂ ಮುಂದಿಡೆ ರತಿಪಲಸತ್ತೇಜಮಂ ಬೀಱೆ ಬಿಂಬಾಧರರಾಗಂ, **ರಾಜಶೇವಿ,** ೧೧. ೭೮)

**ಶಂಬರಸೂದನ** – ಪ್ರದ್ಯುಮ್ನ (ಆ ವ್ಯತಿರೇಕದೊಳ್ ಅತಿಕುಪಿತನಾಗಿ ಶಂಬರಸೂದನಂಬೆರಸು ನಡೆತಂದು: **ಜಗನ್ನಾವಿ,** ೧೫. ೪ ವ)

**ಶಂಬಾಯುಧ** – ಇಂದ್ರ (ದಿಗಿಭವ್ರಾತದೊಳ್ ಇಂದ್ರದಂತಿ ಸುರರೊಳ್ ಶಂಬಾಯುಧಂ ಚಕ್ರವರ್ತಿಗಳೊಳ್ ಶ್ರೀಜಗದೇಕಮಲ್ಲಮಹಿಪಂ: **ಪಂಚತಂತ್ರ,** ೩೨)

**ಶಂಬೂಕ** – ಕಪ್ಪೆಚಿಪ್ಪು (ಶಂಬೂಕಂ ಊರ್ಮಿಪ್ರಘಟನಜನಿತಾಂಭಃಕಣಂ ಸ್ವಚ್ಛಮುಕ್ತಾಪ್ರಕರಂ ಡಿಂಡೀರಪಿಂಡಂ: **ಉದ್ಭಟಕಾ,** ೧. ೩೭)

**ಶಕಟ** – ಬಂಡಿ, ರಥ (ಅನೇಕಶರಭರಿತ ಶಕಟಸಹಸ್ರಮನೊಂದು ಮಾಡಿ ಗಾಂಗೇಯನ ಪೆಱಗೆ ನಿಲಿಸಿದಾಗಳ್: **ಪಂಪಭಾ,** ೧೧. ೧೬ ವ); ಒಬ್ಬ ರಾಕ್ಷಸ (ತದಂಘ್ರಿತಳಂ ಮುಟ್ಟೆ ಸಿಡಿಲ್ ಪೊಡೆದ ತೆಱದೆಕೆಡೆದಂ ಸಕಟಂ: **ಜಗನ್ನಾವಿ,** ೩. ೨೮)

**ಶಕಟಪ್ರಸಂಹಾರ** – ಶಕಟನನ್ನು ಕೊಂದವನು, ಶ್ರೀಕೃಷ್ಣ (ಶಕಟಪ್ರಸಂಹಾರನಾಡಿದಂ ಯಮಳಾರ್ಜುನ ದ್ರುಮಘಾತಿಯೆಂಬೀ ರವಂ ನೆಗೞ್ಕೆ .. .. ಮುರಾರಿ ಕೈಪಱೆಗಾಡಿದಂ: **ಜಗನ್ನಾವಿ,** ೩. ೫೫)

**ಶಕಟವ್ಯೂಹ** – ರಥದ ಆಕಾರದಲ್ಲಿ ಸೇನೆಯನ್ನು ನಿಲ್ಲಿಸುವ ಒಂದು ರಚನೆ (ಶಕಟವ್ಯೂಹದ ಪೆಱಗೆ .. .. ಅಧಿಕಬಲರಪ್ಪ ಸೌಬಲ ದುಶ್ಶಾಸನಾದಿ ಪ್ರಧಾನ ವೀರಭಟಕೋಟಿಯ ನಡುವೆ ಸಿಂದುರಾಜನಂ ನಿರಿಸಿ: **ಪಂಪಭಾ,** ೧೧. ೧೩೨ ವ)

**ಶಕಲ** – ಚೂರು, ತುಂಡು (ಇಭಕುಂಭೋನ್ಮುಕ್ತ ಮುಕ್ತಾಶಕಲ ಸಿಕತಿಲಾಶ್ರಾಂತ ಮಜ್ಜತ್ ಪುಳಿಂದೀ ಸುಭಗ ಆಸ್ಯಾಂಭೋಜಭೂಷಂ: **ಲೀಲಾವತಿ,** ೭. ೧೦೩); ತಲೆಯ ಚಿಪ್ಪು (ಅರುಣೋಜ್ಜೃಂಭಿತ ಚರ್ಮ ಅಸ್ತಿ ಶಕಲಂ ವಾಲಂ ವಿಷಾಣ: **ತ್ರಿಷಷ್ಟಿಪು,** ೨೭. ೩೩)

**ಶಕಳ** – ಚೂರು, ತುಂಡು (ಅನೇಕ ನೃಪ ಶಿರಃ ಕಪಾಳ ಶಕಳ ಜರ್ಜರಿತಮುಂ ಪರಸ್ಪರ ಸಮರ ರಭಸಸಮುತ್ಸಾರಿತಮುಂ: **ಪಂಪಭಾ,** ೧೩. ೫೧ ವ)

**ಶಕುಂತ** – ಶಕುನದ ಹಕ್ಕಿ (ಕಾಲವಿಭಕ್ತ ವಯೋಭಾರನುಮಾಗಿ ಪಂಜರದಿಂದರೆನುಸುಳ್ದ ಶಕುಂತನಂತೆ ಭೂಕಾಂತನಿರ್ಪಿನಂ: **ನೇಮಿನಾಪು,** ೨. ೪೧ ವ)

**ಶಕುಂತಿ** – ಪಕ್ಷಿ (ದಿಶಾಂತದೊಳೆ ಶಕುಂತಿಗಳ ಸರಂ ಜನಿಯಿಸಿದವು: **ಕರ್ಣನೇಮಿ,** ೧೧. ೮೭)

**ಶಕುಂತಿಕಾ** – ಶಕುಂತ (ನಿಜಗಂಧಲೋಭದಿಂ ಸಂಧ್ಯಾಕುಟ್ಮಳಿತಸರೋಜಂ ತಳೆದುದು ಜಳದೇವತೆಯರ ಶಕುಂತಿಕಾವಿಳಸನಮಂ: **ಮಲ್ಲಿನಾಪು,** ೭. ೭)

**ಶಕುನ** – ಹಕ್ಕಿ (ಪಕ್ಷಿ ಶಕುಂತಂ ಶಕುನಂ ವಿಹಗಂ ವಿ ವಿಷ್ಕಿರಂ ಪತ್ರರಥಂ: **ಅಭಿಧಾವ,** ೧. ೯. ೯); ನಿಮಿತ್ತ (ಶಕುನಂ ನಿಮಿತ್ತಂ ಅಂಬರನಿಕಾಯಮುಂ: **ಅಭಿಧಾವ,** ೩. ೧. ೪೮)

**ಶಕುನಿ** – ಪಕ್ಷಿ (ಸಕಲ ಶಕುನಿಪ್ರಧಾನರೆಲ್ಲರ್ ನೆರೆದು ತಮ್ಮೊಳಿಂತೆಂದರ್: **ಪಂಚತಂತ್ರ,** ೩೧೩ ವ); ಶಕುಂತ, ಹಾಲಕ್ಕಿ (ಚರಣಾಯುಧಂ ಶಕುನಿ ಕಂಕಂ ತೊಂಡಿಗಂ .. .. ಕಾಕಂ ಚಿಲಕೂಲಿ ರತ್ನಖಗಮಿರ್ಕುಂ ತದ್ವನಾಗೌಘದೊಳ್: **ರಾಜಶೇವಿ,** ೫. ೫೯)

**ಶಕುಲ** – ಮೀನು (ಎಳಮೀಂಗಳ್ ಶಕುಲಂಗಳ್: **ಅಭಿಧಾವ,** ೧. ೪. ೬)

**ಶಕ್ತಿ** – ಒಂದು ಆಯುಧ, ಶಕ್ತ್ಯಾಯುಧ (ಸುರ ದನುಜ ಭುಜಗ ವಿದ್ಯಾಧರ ನರ ಸಂಕುಲದೊಳ್ ಆರನಾದೊಡಂ ಏನೋ ಗರಮುಟ್ಟೆ ಕೊಲ್ಗುಂ ಇದು ನಿಜವಿರೋಧಿಯಂ ಧುರದೊಳ್ ಎಂದು ಶಕ್ತಿಯನಿತ್ತಂ: **ಪಂಪಭಾ,** ೧. ೧೦೩)

**ಶಕ್ತಿತ್ರಯ** – ಪ್ರಭು, ಮಂತ್ರ, ಉತ್ಸಾಹ ಎಂಬ ರಾಜನ ಮೂರು ಬಗೆಯ ಶಕ್ತಿಗಳು (ಆತನ ಪುರುಷಾರ್ಥದ ಪುರುಳುಂ ಶಕ್ತಿಯಳವುಂ ಕಲಿತನದ ಗುಬ್ಬುಂ ಪರಾಕ್ರಮದ ಬಿಣ್ಪುಂ ಕರತಳಾಮಳಕಮಾಗಿರ್ದಪ್ಪುದು: **ಪಂಚತಂತ್ರ,** ೧೫೬ ವ)

**ಶಕ್ತಿಧರ** – ಕುಮಾರಸ್ವಾಮಿ (ಗಾಂಡಿವಧರಂ ಗಂಗಾಧರಂ ತುಂಗಶಕ್ತಿಧರಂ ವಜ್ರಧರಂ ಧರಾಧರಧರಂ ಶ್ರೀಕೀರ್ತಿವಿದ್ಯಾಧರಂ: **ಪಂಚತಂತ್ರ,** ೩೭)

**ಶಕ್ಯ** – ಸಾಧ್ಯವಾದ (ಶಕ್ಯಂ ತಾನಲ್ತಣಂ ಬಣ್ಣಿಪ ಫಣಿಪತಿ ವಾಕ್ಯಕ್ಕಮೆಂಬಂತು ಶೋಭಾಧಿಕ್ಯಂಬೆತ್ತು .. .. ತ್ರೈಲೋಕಾಧೀಶಾಭಿಷೇಕೋಚಿತಮಮರಕೃತಂ ಕಾಯಮಾನಂ ನವೀನಂ: **ಚಂದ್ರಪ್ರಪು,** ೧೨. ೧೦೭)

**ಶಕ್ಯಾನುಷ್ಠಾನ** – ಅರ್ಥವನ್ನು ತಿಳಿಯುವ ಪ್ರಯತ್ನ (ಶಕ್ಯಾನುಷ್ಠಾನಮೆಂದು ಆ ಪದಾರ್ಥಮಂ ಸಾಧಿಸುವುದ್ಯೋಗಂ ಇಷ್ಟಸಿದ್ಧಿಯೆಂದದಱ ಫಲಂ:: **ಶಬ್ದಮದ,** ೭ ವೃತ್ತಿ))

**ಶಕ್ರ** – ಇಂದ್ರ (ಭಾವಿಸದ ಮುನ್ನಮೆ ಪಾಂಡುಕಮೇಖಳಾವನಕ್ಕೆ ಅಡರ್ದುದು ಇದೇಂ ಮನಃಪವನವೇಗಿಯೋ ಶಕ್ರನ ವಿಕ್ರಿಯಾಗಜಂ: **ಮಲ್ಲಿನಾಪು,** ೧೨. ೬೬)

**ಶಕ್ರಕಾರ್ಮುಕ** – ಕಾಮನ ಬಿಲ್ಲು (ಪೊನಲ್ಗಳ ಕೆಂಪು ಪಸುರ್ಪು ಕರ್ಪು ಬೆಳ್ಪು ಒಳಕೊಳೆ ಶಕ್ರಕಾರ್ಮುಕವಿಳಾಸಮಂ ಏನೆರ್ದೆಗೊಂಡು ಬೇಟದತ್ತಳಗಮಂ ಉಂಟುಮಾಡಿದುದೋ ಕಾಮನ ಕಾರ್ಮುಕದಂತೆ ಕಾರ್ಮುಕಂ: **ಪಂಪಭಾ,** ೭. ೨೫)

**ಶಕ್ರಚಾಪ** – ಕಾಮನ ಬಿಲ್ಲು (ರನ್ನದ ಪೊರಜೆ ನವಾಂಭೋದ ಮಾದ್ಯತ್ ಗಜಕ್ಕಿಕ್ಕಿದುದೋ ಪೇೞೆಂಬಿನಂ ಕಣ್ಗೆಸೆದುದು ಶಬಲಚ್ಛಾಯೆಯಿಂ ಶಕ್ರಚಾಪಂ: **ಪಂಪರಾ,** ೭. ೧೪೫)

**ಶಕ್ರಚೂಡಾಮಣಿ** – ಇಂದ್ರನ ತಲೆಯ ಮಣಿ (ಮಂಥಾವಳಪವಿಯೆನಿಸುತ್ತೊಪ್ಪಿದಂ ಶಕ್ರಚೂಡಾಮಣಿ ತಾನೆಂಬಂತೆ ಅಭಂಗಂ .. .. ಪತಂಗಂ: **ತ್ರಿಷಷ್ಟಿಪು,** ೨೪. ೨೨೭)

**ಶಕ್ರಧನು** – ಶಕ್ರಚಾಪ (ಮುಗಿಲ್ಗೆ ಶಕ್ರಧನುವೋಲ್ .. .. ರಾಜಸೂನುಗೆಸೆದತ್ತು ಎನಸುಂ ನವಯೌವನೋದಯಂ: **ಕಾದಂಸಂ,** ೨. ೩೪)

**ಶತಧಾರ** – ಸಿಡಿಲು (ಕುನಯಾಚಳಶತ ಶತಧಾರನ ಧೀರನ ಕೃತಪರೋಪಕಾರನ .. .. ಪದಪಯೋಜಣ ಎಮಗೀಗೆ ಒಳ್ಪಂ: **ಆಚವರ್ಧ,** ೧. ೧೪)

**ಶಕ್ರನೃತ್ಯ** – [ಜೈನ] ಜಿನ ಜನ್ಮಾಭಿಷೇಕಕಾಲದಲ್ಲಿ ಸೌಧರ್ಮೇಂದ್ರನು ಮಾಡುವ ಆನಂದನೃತ್ಯ (ಶಕ್ರನೃತ್ಯದೊಳೊಡಂಬಡೆ ನರ್ತಿಸುವಲ್ಲಿ ಜತ್ತವಟ್ಟದ ಮಣಿಯಂತದೇಂ ಪದುಳಮಾದುದೊ ದಿವ್ಯವಧೂಕದಂಬಕಂ: **ಆದಿಪು,** ೭. ೧೨೫)

**ಶಕ್ರಶರಾಸನ** – ಇಂದ್ರಧನುಸ್, ಕಾಮನಬಿಲ್ಲು (ಅಸಿರುಚಿ ಮಿಂಚು ಮೇಲ್ಕೊಗೆದ ರಕ್ತಮೆ ಶಕ್ರಶರಾಸನಂ ಗಜಪ್ರಸರದ ಪರ್ಕು ನೀರದಂ: **ತ್ರಿಷಷ್ಟಿಪು,** ೨೪. ೩೩೫)

**ಶಕ್ರಾಂಗನೆ** – ಶಚೀದೇವಿ (ಮಂಗಳನಿಳಯನ ಪದಪದ್ಮಂಗಳನರ್ಚಿಸಿದರ್ ಅಷ್ಟವಿಧದರ್ಚನೆಯಿಂ ಮಂಗಳಧಾರಿಣಿಯರ್ ಶಕ್ರಾಂಗನೆಯುಂ ನೆಗಟ್ದ ನಾಗದೇವಾಂಗನೆಯುಂ: **ಅಜಿತಪು,** ೪. ೭೯)

**ಶಕ್ರಾಸ್ತ್ರ** – ಇಂದ್ರನ ಆಯುಧ, ವಜ್ರ, ಸಿಡಿಲು (ಮುಗಿಲೊಡ್ಡಂ ಕುಡುಮಿಂಚನಬ್ಬರವಮಂ ಶಕ್ರಾಸ್ತ್ರಮಂ ತಂದಲ ಗಭಿದ್ಗೋಪಕಳಾಪಮಂ .. .. ಕಾರ್ಗಾಲಮಂ: **ಪುಷ್ಪದಂಪು,** ೪. ೪೭)

**ಶಕ್ವರ** – ಗೂಳಿ (ಕೆಲವು ದಿವಸಕ್ಕೆ ಬಾಲೇಂದುಶೇಖರ ಶಕ್ವರಾಕಾರಮಂ ತಾಳ್ದಿ: **ಪಂಚತಂತ್ರ,** ೭೭ ವ)

**ಶಚಿ** – ಇಂದ್ರನ ಪಟ್ಟದರಸಿ (ಸತಿ ನೆಗಟ್ದಿಂದ್ರಾಣಿ ಪುಲೋಮತನೂಭವೆ ಶಚಿ: **ಅಭಿಧಾವ,** ೧. ೧. ೩೫)

**ಶಚೀಪ್ರೇಯಸಂ** – ಶಚಿಯ ಮನದನ್ನ, ಇಂದ್ರ (ಆಗಳ್ ಶಚೀಪ್ರೆಯಸಂ ಜನ್ಮಾಭಿಷೇಕ ಮಂಗಳೋಪಕರಣನಾಗಿ: **ಅಜಿತಪು,** ೪. ೪೩ ವ)

**ಶಠ** – ನಾಯಕನ ಒಂದು ಪ್ರಭೇದ (ಸೌಭಾಗ್ಯನಾಯಕನಾದಂ ಶಠದೃಷ್ಟ ದಕ್ಷಿಣಗುಣಂ ಶೃಂಗಾರಕಾರಾಗೃಹಂ: **ನೇಮಿನಾಪು,** ೪. ೧೫೪)

**ಶಠಕ** – ಹಟವಾದಿ (ಕಠಿಣಾತ್ಮಕರಂ ಮೆಚ್ಚಂ ಶಠಕರ ಮೆಚ್ಚಂ ಶಿವಾರ್ಚನೆಗಳಿಲ್ಲದ ಕರ್ಮಠರಂ ಮೆಚ್ಚಂ: **ತ್ರಿಷಷ್ಟಿಪು,** ೫. ೪)

**ಶಠಪ್ರಕೃತಿ** – ಹಟಮಾರಿತನ[ವುಳ್ಳ] (ಶಠಪ್ರಕೃತಿ ನಿರ್ಗುಣಂ ಸಕಲಧರ್ಮಭೂಜಾವಳೀಕುಠಾರಂ ಇರದೆ ಎಯ್ದಿದಂ: **ಪಂಚತಂತ್ರ,** ೧೫೦)

**ಶಣ** – ಸಣಬು (ಪ್ರಣವಂ ಶೃಂಖಲೆ ಸಾರಮೇಯಂ ಅಮರ್ದು ಆಮ್ನಾಯಂ ಪುರಾಣವ್ರಜಂ ಶಣಸೂತ್ರಂ ಸ್ಮೃತಿ: **ಶಬರಶಂ,** ೩. ೨೫)

**ಶತಕ್ರತು** – ನೂರು ಯಜ್ಞ [ಮಾಡಿದವನು], ಇಂದ್ರ (ಅಚಿಂತ್ಯಬಳಪರಾಕ್ರಮನುಂ ಆನತ ಶತಕ್ರತುವೆತ್ತಾನುಂ ಈ ರಾಜ್ಯಕ್ಕಾಠಿಸಿದೊಡೆ ಏಗೆಯ್ವೆಂ ಎನೆ: **ಕರ್ಣನೇಮಿ,** ೧೩. ೪೬ ವ)

**ಶತಧಾಕೃತ** – ನೂರಾರು ಚೂರಾಗುವುದು (ಗೋಪಿ ಬಂದು ಶಕಟಂ ಶತಧಾಕೃತಮಾದುದು ಎಂತಿದೆಂದು ಇರದೆ ಬಟಿಕ್ಕೆ ಕೇಳಿ ಶುಕಜಲ್ಪಿತದಿಂ ಬಗೆವೋಗಿ: **ಜಗನ್ನಾವಿ,** ೩. ೩೨)

**ಶತಧಾರ** – ನೂರು ಅಲಗುಗಳನ್ನುಳ್ಳದು, ವಜ್ರಾಯುಧ (ಶತಧಾರಾದಂಡಪಾತದಿಂ ಶತಚೂರ್ಣಮಾದ ರೋಹಣ ನಗೋತ್ತುಂಗಶೃಂಗದಂತೆ: **ಕರ್ಣನೇಮಿ,** ೬. ೧೨೮ ವ)

**ಶತಧೃತಿಪೌತ್ರ** – ಬ್ರಹ್ಮನ ಮೊಮ್ಮಗ, ರಾವಣ (ಶತಧೃತಿಪೌತ್ರನುಂ ಜಿತಜಗತ್ತ್ರಯವೀರನುಂ ಆಗಿ ನೀಂ ಮಮಹಾಸತಿಗೆ ಅವನಿಜೆಗಾಟಿಸೆ: **ಪಂಚತಂತ್ರ,** ೨೩೦)

**ಶತಪತ್ರ** – ಕಮಲ (ಸರೋಜನಿಳಯೆ ಎನ್ನ ಬರ್ಪನ್ನಂ ಅರಸನಂ ಅಗಲದೆ ವಿಕಸಿತಶತಪತ್ರ ಆತಪತ್ರದ ತಣ್ಣೆಟಿಲುಮಂ ಕುಂದಲೀಯದಿರು: **ಪಂಪಭಾ,** ೧೩. ೧೦೫ ವ)

**ಶತಪತ್ರಮಿತ್ರ** – ಕಮಲಸಖ, ಸೂರ್ಯ (ಸಕಲಜಗತ್ಪವಿತ್ರನುಂ ಶತಪತ್ರಮಿತ್ರನುಂ ಅಧಿಕಪ್ರತಾಪನುಮಪ್ಪ ಆದಿತ್ಯನಾಗಲೆವೇಟ್ಕುಂ: **ಪಂಚತಂತ್ರ,** ೩೬೦ ವ)

**ಶತಪತ್ರಷಂಡ** – ಕಮಲ ಸರೋವರ (ಮದಕೀರ ಕಳಭ ಖಂಡಿತಫಳ ಕೋಕಿಳ ಕಬಳಿತ ಕಳಿಕಾರಸ ಕಲುಷಿತ ಶತಪತ್ರಷಂಡಂ: **ಲೀಲಾವತಿ,** ೬. ೧೨೬)

**ಶತಪತ್ರಿಕಾ** – ಸೇವಂತಿಗೆ [ಮತ್ತೊರ್ವಳ್ ಶತಪತ್ರಿಕಾ ಕುಬ್ಜಕುಸುಮಮಾಳಾಕೋಮಳೆ: **ಆದಿಪು** ನರಸಿಂ, ೧೧. ೧೨೨ ವ)

**ಶತಮಖ** – ಶತಕ್ರತು, ಇಂದ್ರ (ಶತಮಖನರಸಿಗೆ ಕರ್ಣಾವತಂಸಮಾಗಲ್ಕೆ ನೋಂತ ಪಲ್ಲವಮಷ್ಪ ಪ್ರತತಿಯನೆ ಮೆಚ್ಚಿದು ಚೆಲ್ವೆಡೆಗೆ ಅತಿಶಯಮೆನಿಸಿದುದು ಪಾರಿಜಾತಕುಜಾತಂ: **ಆದಿಪು,** ೬. ೯೯)

**ಶತಮಖದಿಕ್** – ಪೂರ್ವದಿಕ್ಕು (ರವಿ ಶತಮಖದಿಕ್ ಮುಖಶಿಖರಿಶೇಖರನಾದಂ: **ಪುಷ್ಪದಂಪು,** ೯. ೧೦೬)

**ಶತಮನ್ಯು** – ಶತಕ್ರತು (ಶತಮನ್ಯು ಲೋಭಿ ಕಡೆಯಿಲ್ಲದ ವಸ್ತುಗಳೀಶನಪ್ಪ ಕಿನ್ನರಪತಿ ದೀನಂ: **ತ್ರಿಷಷ್ಟಿಪು,** ೧೮. ೭೦)

**ಶತಸಪ್ತತಂತು** – ಶತಕ್ರತು (ಶತಸಪ್ತತಂತುಗೆ ಅಮರಾವತಿಯಂ ಫಣಿಪತಿಗೆ ನೆಗಟ್ದ ಭೋಗಾವತಿಯಂ ಮತಿಗೆಟ್ಟು ಜಡರ್ ಬಣ್ಣಿಸುವ ತೆಱದಿ ಬಣ್ಣಿಪೆಮೆ ನಿನಗೆ ಮುಕ್ತಿಯ ಸುಖಮಂ: **ಅಜಿತಪು,** ೬. ೮೦)

**ಶತಸಹಸ್ರ** – ಒಂದು ಲಕ್ಷ (ಆಯುಧಶಾಲೆಯೊಳ್ ಶತಸಹಸ್ರರವಿಪ್ರಭಾಸಿದೇವ ಚಕ್ರಾಯುಧಮಿಂದು ಬಂದು ನೆಲಸಿದುದು: **ಶಾಂತಿಪು,** ೮. ೧೫೩)

**ಶತಹ್ರದ** – ಮಿಂಚು (ಸ್ತನಿತ ಧನುರ್ಗುಣ ಧ್ವನಿ ಶತಹ್ರದ ಶಸ್ತ್ರಮರೀಚಿ ನಾಡೆ ಕರ್ಗನೆ ಕನಿವೊಡ್ಡು ಕಾರಮುಗಿಲಂತಿರೆ ಭೋರೆನೆ ಕೊಂಡುದಾಗಳ್ ಅಂಬಿನ ಮಟೆ: **ಪಂಪರಾ,** ೧೩. ೪೯)

**ಶತಾಂಬಕಸುತ** – ಇಂದ್ರ (ಜಯ ಶಂಬರಹರಾಹಿತ ಶತಾಂಬಕಸುತಸ್ತುತ ಚಿದಂಬರದಿನೇಶಾ: **ರಾಜಶೇವಿ,** ೧೩. ೫೪)

**ಶತಾಧ್ವರಿ** – ಶತಕ್ರತು (ಆ ಧ್ವನಿಗಳ್ ನಿಜಕರ್ಣಾಧ್ವಗಮೆನೆ ಜೈನಪೂಜೆಗಿತರೇಂದ್ರರ್ ನಾನಾಧ್ವಜನಿವೆರಸು ನೆರೆದು ಶತಾರ್ಧವರಿ ಸೌಧರ್ಮನಲ್ಲಿಗೆ ಅಂದು ಏಟ್ಟಿಂದರ್: **ಮಲ್ಲಿನಾಪು,** ೧೪. ೮೦)

**ಶತಾರ** – [ಜೈನ] ಹದಿನಾರು ಕಲ್ಪಗಳಲ್ಲಿ ಒಂದು (ಸೌಧರ್ಮ ಈಶಾನ ಸನತ್ಕುಮಾರ ಮಾಹೇಂದ್ರ ಬ್ರಹ್ಮ ಬ್ರಹ್ಮೋತ್ತರ ಲಾಂತವ ಕಾಪಿಷ್ಠ ಶುಕ್ರ ಮಹಾಶುಕ್ರ ಶತಾರ ಸಹಸ್ರಾರ ಆನತ ಪ್ರಾಣತ ಅರಣ್ಯ ಅಚ್ಯುತಮೆಂಬ ಪದಿನಾಱುಂ ಕಲ್ಪಂಗಳೊಳಂ: **ವಡ್ಡಾರಾ,** ಮ ೯೭, ಸಾ ೨೬); ಅರವತ್ತಮೂರು ಇಂದ್ರಕ[ವಿಮಾನ]ಗಳಲ್ಲಿ ಒಂದು (ದಿನಮೆಂತಂತೆ ಶತಾರಮಗ್ರಿಮ ಸಹಸ್ರಾರಂ ಸಹಸ್ರಾಮಪ್ರವಿಲಕ್ಷ್ಯಂ

ದಿನಪೋಪಮನವಳಯಂ ಜಾಜ್ವಲ್ಯಮಾನಂ: **ಶಾಂತಿಪು,** ೧೦. ೧೧೫)

**ಶತ್ರುಂತಪ** – ಶತ್ರುಗಳಿಗೆ ತಾಪವುಂಟು ಮಾಡುವವನು (ಶತ್ರುಗಳಾಱುಮನದಿರ್ಪಿ ಗೆಲ್ದುದಱಿಂದಂ ಶತ್ರುಂತಪನೆನಿಸಿದ ಜಿತಶತ್ರುಗೆ ಜಿತಶತ್ರುನಾಮಂ ಆಯ್ತು ಅನ್ವರ್ಥಂ: **ಅಜಿತಪು.** ೨. ೪೯)

**ಶತ್ರುಂದಮ** – ಶತ್ರುಗಳನ್ನು ದಮನ ಮಾಡುವವನು (ಇಂದಗಿ ಸಾಧಾರಣ ಶರಸಂದೋಹದಿನೆಚ್ಚು ಕಾದಲಣಮಾಱದೆ ಶತ್ರುಂದಮನೊಳ್ ಲಕ್ಷ್ಮಣನೊಳ್ ತಂದಂ ದಿವ್ಯಾಸ್ತ್ರಗರ್ಭಶರಧಿಗೆ ಕೈಯಂ: **ಪಂಪರಾ,** ೧೪. ೧೯)

**ಶತ್ರುಮಂಡಳಿಕ** – ಶತ್ರುಗಳ ಸಮೂಹ (ಮಲೆ ತಲೆದೋಱದೆಂದುದನೆ ಕೊಟ್ಟುದು ಡಂಗಮಡಂಗಿ ಬದುದು ಒಕ್ಕಲಿಗವೆಸರ್ಗೆ ಪೂಣ್ದುದು ಕುಱುಂಬು ತಱುಂಬದೆ ಮಿಕ್ಕ ಶತ್ರುಮಂಡಳಿಕರೆ ಮಿತ್ರಮಂಡಳಿಕರಾದರ್: **ಪಂಪಭಾ,** ೨. ೯೦)

**ಶಪನಶತ** – ನೂರು ಬೈಗುಳು (ತೀವಿದುದು ಶಪನಶತಂ ಇಂ ತೀ ವಿದುದುಅದಱಿಂದೊಡನೆ ಚೈದ್ಯ ನಿನ್ನಾಯುಷ್ಯಂ: **ಜಗನ್ನಾವಿ,** ೧೭. ೫೦)

**ಶಫ** – ಗೊರಸು (ರಾಸಭರಾಕ್ಷಸ .. .. ಪಾತಾಳತಳದ ಮುಚ್ಚುಳನೊಡೆದು ಕಳೆದಪುದೆಂಬಂತೆ ಭೂತಳಮನಪ್ಪಳಿಸಿ ಪೊಯ್ವ ನಿಷ್ಠುರಶಫಟಂಕಮಂ ಭಯಂಕರಮಪ್ಪಿನಂ ಬಂದು: **ಜಗನ್ನಾವಿ,** ೪. ೪೦ ವ)

**ಶಫರ** – ಮೀನು (ತರಳತರಂಗತುರಂಗಂ ಕರಿಮಕರಕರೀಂದ್ರಂ ಅಖಿಳಶಫರಪದಾತತ್ಯುತ್ಕರಂ ಉಗ್ರಗ್ರಾಹರಥಂ ಭರತಂಗಿತ್ತುದು ಪಯೋಧಿಬಲ ವಿಳಸನಮಂ: **ಆದಿಪು,** ೧೨. ೭೮)

**ಶಫರೇಕ್ಷಣ** – ಮೀನಿನಂತಹ ಕಣ್ಣು (ಶೈವಲೀಲಾವಿಲಾಸಿನಿ ಕರಂ ಮೆಱೆದಳ್ ಶಫರೇಕ್ಷಣಂಗಳಂ: **ಲೀಲಾವತಿ,** ೫. ೭೭)

**ಶಫಳ** – ಶಫರ, ಮೀನು (ಯುವತಿಜನದಾಮಿಷದೊಳ್ ರತನಾಗಿ ಬಡಿಶಪಲಕಬಳ ತೃಷ್ಣೆಯಿಂ ಪರಿವ ಶಫಳಮಂ ನೆನೆಯಿಪುದೇ: **ಆಚವರ್ಧ,** ೭. ೪೦)

**ಶಬ** – [ಶವ] ಹೆಣ (ಪಟ್ಟಿರ್ದ ಋಷಿರೂಪಕಮಂ ಕಂಡು ಶಬಮೆಂದೆ ಸಾರ್ದು ತಾನೊಂದು ಕಾಲಂ ತನ್ನೆರಡು ಮಱಿಗೆಳೊಂದು ಕಾಲಂ ಕೂಡೆ ತೋಡಿ ಸೀಳ್ದು ತಿಂದಾಗಳ್: **ಸುಕುಮಾಚ,** ೧೨. ೨೪ ವ)

**ಶಬರ** – ಬೇಡರವನು (ವನಚರ ಕಿರಾತ ಧಾನುಷ್ಕ ನಿಷಾದ ಪುಲಿಂದ ಶಬರ ಭಿಲ್ಲಾಖ್ಯಂ ಬೆಡನವಂ ತಾನಕ್ಕುಂ: **ಅಭಿಧಾವ,** ೧. ೧೧. ೮೮)

**ಶಬರಶಿಬಿರ** – ಬೇಡನ ಗುಡಿಸಲು (ಪೋಗಿ ಒಂದು ಶಬರಶಿಬಿರಮಂ ಎಯ್ದುವುದುಂ ಅದಂ ಕಂಡು ಅಲ್ಲಿ ನಿಲಲ್ವಗೆದು: **ಪಂಚತಂತ್ರ,** ೧೮೮)

**ಶಬರಾಂಗನೆ** – ಬೇಡರ ಹೆಣ್ಣು (ಮನಸಿಜನ ವಶೀಕರಣ ಅಂಜನಪುಂಜದ ಪುತ್ರಿಕಾಳಿಯೆನೆ ಕಾಳಿಮಮಂ ತನಿಗೆದಱುವ ತನುರುಚಿ ಮೋಹನಮಯಮಾಗಿರ್ದರ್ ಎಸೆವ ಶಬರಾಂಗನೆಯರ್: **ಶಾಂತಿಪು,** ೩. ೭೯)

**ಶಬರಿ** – ಬೇಡ ಹೆಂಗಸು (ಇದಿರೊಳ್ ಗರ್ಜಿಸಿ ಪುಲಿ ನಿಲೆ ಬೆದಱಿಕರಂ ಶಬರಿ ಬರಿಯನಪ್ಪಲೊಡಂ: ಚಂದ್ರಪ್ರಭು, ೫. ೫೯)

**ಶಬಲ** – ಚಿತ್ರವರ್ಣ, ಬಣ್ಣ ಬಣ್ಣದ (ಶಿಬಿಕಾಂದೋಳ ವರೂಥ ದಂತಿ ಹಯಮಂ ನೇಪಥ್ಯ ರತ್ನಾವಳೀ ಶಬಲಚ್ಛಯೆ ಮುಸುಂಕೆ: **ಅನಂತಪು,** ೪. ೩)

**ಶಬಾಲಯ** – ಶ್ಮಶಾನ (ಪ್ರತಿಭಯಂ ಪ್ರತಿವಾಸರಂ ಶಬಾಲಯಂ: **ನೇಮಿನಾಪು,** ೫. ೨೪)

**ಶಬಾವಳಿ** – ಹೆಣಗಳ ಸಾಲು (ಕಾಮಶರಾಗ್ನಿಯೊಳ್ ಪೊರಳ್ವ ಅಲಸ ವಿಯೋಗಿಯುಂ ಪೊಡರ್ದು ಬೇವ ಶಬಾವಳಿ: **ನೇಮಿನಾಪು,** ೫. ೨೨)

**ಶಬ್ದತತ್ತ್ವ** – ಶಬ್ದಪ್ರಯೋಗ ಕುರಿತ ಶಾಸ್ತ್ರ (ಬುಧಗುಣ ಗಣನಾತೀತಾಂತರಂ ಶಬ್ದತತ್ತ್ವ ಅಂಬುಧಿವಿವಿಧಾನ ಅಲಂಕ್ರಿಯಾವೀಚಿಮಾಲಾ: **ಕವಿರಾಮಾ,** ೨. ೧೫೪)

**ಶಬ್ದದ್ರವ್ಯ** – ಧ್ವನಿಯ ಮೂಲದ್ರವ್ಯ (ಅನುಕೂಲಪವನನಿಂ ಜೀವನಿಷ್ಠದಿಂ ನಾಭಿಮೂಲದೊಳ್ ಕಹಳೆಯ ಪಾಂಗಿನವೊಲ್ ಶಬ್ದದ್ರವ್ಯಂ ಜನಿಯಿಸುಗುಂ ಶ್ವೇತಮದಱ ಕಾರ್ಯಂ ಶಬ್ದಂ: **ಶಬ್ದಮದ,** ೯)

**ಶಬ್ದಪ್ರವೀಚಾರ** – [ಜೈನ] ಕೇಳುವಿಕೆಯಿಂದಲೇ ಇಂದ್ರಿಯಸುಖವನ್ನು ಹೊಂದುವುದು (ವೃಂದಾರಕರೆಲ್ಲಂ ಹಸ್ತಚತುಷ್ಟಯೋತ್ಸೇಧರುಂ ಅಷ್ಟಾದಶರತ್ನಾಕರೋಪಮ ಆಯುಷ್ಯರುಂ ಶಬ್ದಪ್ರವೀಚಾರರುಂ ಅಪ್ಪರ್: **ಸುಕುಮಾಚ,** ೧೧. ೬೭ ವ)

**ಶಬ್ದವಿದ್ಯೆ** – ವ್ಯಾಕರಣ (ನಯವಿದ್ಯಾವಿದರಿಂ ಕವಿಪ್ರಕರದಿಂ ತರ್ಕಜ್ಞರಿಂ ಶಬ್ದವಿದ್ಯೆಯೊಳಬ್ಜಾಸನಕಲ್ಪರಪ್ಪ ವಿಳಸದ್ಭೂದೇವರಿಂ ದೇವತಾಲಯದಿಂದೊಪ್ಪುವ ಗುಪ್ತವಂಶ ವಸುಧಾಧೀಶಾವಳೀ ರಾಜಧಾನಿಯನುಜ್ಜೈನಿಯನೆಯ್ದಿ ಬಂದನಜಿತಂ ಶುಂಭದ್ಗುಣಭ್ರಾಜಿತಂ: **ಪಂಚತಂತ್ರ,** ೨೬೩)

**ಶಬ್ದವೇದಿ** – ಶಬ್ದವನ್ನು ಕೇಳಿ ಬಾಣ ಬಿಡುವವನು (ಇನ್ನಿದರ್ಕೆ ತಕ್ಕುದನಾನೆ ಬಲ್ಲೆನೆಂದು ಧನುರ್ವೇದಿಯುಂ ಶಬ್ದವೇದಿಯುಮಪ್ಪ ಬಿಲ್ಲ ಬಿನ್ನಣಿಯನೊರ್ವನಂ ಕರೆದು: **ಪಂಚತಂತ್ರ,** ೧೯೭ ವ)

**ಶಬ್ದಶಾಸ್ತ್ರ** – ಶಬ್ದವಿದ್ಯೆ (ಕರ್ಣಾಟಕ ಲಕ್ಷಣ ಶಬ್ದಶಾಸ್ತ್ರಮಂ ಲಾಕ್ಷಣಿಕರ್ ಪೇಎಂದು ಬೆಸಸೆ ಬಗೆವುಗೆ ಪೇಟ್ವೆಂ: **ಶಬ್ದಮದ,** ೩)

**ಶಬ್ದಸಂದೇಹ** – ಪದ ಮತ್ತು ಅರ್ಥಗಳ ಬಗೆಗಿನ ಅನುಮಾನ (ಇದು .. .. ಶಬ್ದಸಂದೇಹ ಶಲ್ಯಚಾರುಚುಂಬಕಾಯಮಾನ ಅನೂನ ಕರ್ಣಾಟಕ ಲಕ್ಷಣಶಿಕ್ಷಾಚಾರ್ಯನಪ್ಪ ಸುಕವಿ ಕೇಶಿರಾಜ ವಿರಚಿತಮಪ್ಪ ಶಬ್ದಮಣಿದರ್ಪಣದೊಳ್: **ಶಬ್ದಮದ,** ಸಂಧ್ಯಾಂತ್ಯ ಗದ್ಯ)

**ಶಮನ** – ಪರಿಹಾರ; ಯಮ (ಸುರಪ ಶಿಖಿ ಶಯನ ನೈಋತಿ ವರುಣ ಅನಿಲ ಧನಪತಿ ಈಶರ್ ಒಲವಿಂ ಕೆದರ್ದಂತಿರೆ: **ರಾಜಶೇವಿ,** ೧೧. ೪೨)

**ಶಮಿ** – ಬನ್ನಿಯ ಗಿಡ (ಪಾಲಾಶ ಅಶ್ವತ್ಥ ಅರ್ಕ ಔದುಂಬರ ನ್ಯಗ್ರೋಧ ಶಮಿ ಅಪಾಮಾರ್ಗ ಖದಿರ ಆದಿ ಶುಷ್ಕಸಮಿತ್ತುಗಳುಮಂ ಕುಶ ಅಶ್ವಲಾಯನ ವಿಶ್ವಾಮಿತ್ರಾದಿ ದೂರ್ವಾಂಕುರಪವಿತ್ರವಸ್ತುಗಳುಮಂ ಕೊಂಡು: **ಪಂಚತಂತ್ರ,** ೧೯೦ ವ)

**ಶಮ್ಯಾಕ** – ಕಕ್ಕೆ ಗಿಡ (ಬಿಲ್ವ ತಿಲ್ವಕ ಶಮೀ ಶಮ್ಯಾಕ ಜಂಬಾಳಡಂಬದಿಂ ಒಂದೊಂದೆಡೆ ಸಹಕಾರ ಅಶೋಕ ಪುನ್ನಾಗ ಪಾಟದಿಂ: **ವರ್ಧಮಾಪು,** ೫. ೪೮)

**ಶಯನ** – ನಿದ್ದೆ (ಶಯನಕ್ಲೇಶದೊಳ್ ನ್ನಪಾನಗಮನಾಯಸಂಗಳೊಳ್ ನಿನ್ನ ಸೇದೆಯುಮಂ ನೋಡದೆ: **ಪಂಪರಾ,** ೬. ೧೭೬); ಹಾಸಿಗೆ (ಶಯನೀಯಂ ಪರ್ಯಂಕಂ ಶಯನಂ ಶಯ್ಯಾಖ್ಯೆ: **ಅಭಿಧಾವ,** ೧. ೧೦. ೨೨)

**ಶಯನಸದನ** – ಮಲಗುವ ಮನೆ (ಜಿನನಿರ್ದ ಶಯನಸದನ ಮಂ ಅನಿಮಿಷವಧು ಮೂಮೆ ಭಕ್ತಿಯಿಂ ಬಲಗೊಳುತುಂ: **ಪುಷ್ಪದಂಪು,** ೧೦. ೧೭)

**ಶಯು** – ಮಹಾಸರ್ಪ (ಮಹಾರಾಹುಬಿಂಬದ ಪಾಂಗಂ ಶಯಶಯ್ಯು ಪೋಲ್ತಿರೆ ನಭಂ ಬಿಟ್ಟಿತ್ತು: **ಕರ್ಣನೇಮಿ,** ೬. ೧೨೧)

**ಶಯ್ಯಾಗ್ರ** – ಹಾಸಿಗೆ (ಸೂಸಿರ್ದಳಕಂ .. .. ಕಣ್ಗೊಳಿಪನ್ನಂ ಲೀಲೆಯಿಂದಪ್ಪವಡಿಸಿದಳ್ ಹೃದ್ಯಾಂಗಿ ಶಯ್ಯಾಗ್ರದಿಂದಂ: **ಜಗನ್ನಾವಿ,** ೨. ೭೮)

**ಶಯ್ಯಾತಳ** – ಶಯ್ಯಾಗ್ರ (ಕೆಟ್ಟುದು ಪುಳಿ ಮುಟ್ಟಿದ ದುಗ್ಧದಂತೆ ನೀರ್ಮುಟ್ಟಿದ ಜೇನೆಯ್ಯಂತೆ ಪತಿಗೆ ಶಯ್ಯಾತಳದೊಳ್: **ಯಶೋಧಚ,** ೨. ೫೯)

**ಶಯ್ಯಾವಸಥ** – ಮಲಗುವ ಮನೆ (ಒಪ್ಪುವುವಲ್ಲಿ ಶಸ್ತ್ರಕುಟಿ ಕೋಶಾಗಾರಂ ಏಕಾಂತಮಂದಿರಂ ಅಭ್ಯಾಸನಿಕೇತನಂ ಪಚನಧಾಮಂ ಸ್ನಾನಸದ್ಮಂ ಮನೋಹರ ಶಯ್ಯಾವಸಥಂ ವಿಭೂಷಣಗೃಹಂ ದೇವಾರ್ಚನಾವಾಸಂ ಅಂಬರವೇಶ್ಮಂ ವರ ಭೋಜನೌಕಂ ಅವರೋಧಸ್ತ್ರೀ ನಿವಾಸಾಸ್ಪದಂ: **ಶಾಂತೀಶ್ವಪು,** ೧. ೧೩೭)

**ಶರ** – ಬಾಣ (ನಿನ್ನ ಪೆಡೆಗೆಯ್ಗಟ್ಟಂ ಶರದಿಂ ಬಿಡಿಸಿದನಲ್ಲನೆ ಸರಿತ್ಸುತಂ ಬನ್ನವಿನ್ನವು ಎಂಬುವುಮೊಳವೇ: **ಪಂಪಭಾ,** ೮. ೫೩); ನೀರು (ಜಿನಮತಶರ ಶರಧಿಯ ಶಿಖರಕ್ಕೆ ನೋಡೆ ಬೇಚಿಲ್ಲೆಂತುಂ: **ಸಮಯಪ,** ೩. ೭೦); ಹುಲ್ಲು (ಶರಮದು ಮುಂಜಂ ದೂರ್ವಾ ಹರಿತಾಳೀ ನಾಮಕಂ ಕಱುಂಕೆಯೆನಿಕ್ಕುಂ: **ಆಭಿಧಾವ,** ೧. ೮. ೩೮)

**ಶರಚ್ಚಂದ್ರಿಕೆ** – ಶರತ್ಕಾಲದ ಬೆಳುದಿಂಗಳು )ಶರಚ್ಚಂದ್ರಿಕೆಯ ಬಳಸಿನೊಳಗಣ ಚಂದ್ರಮನಂತಿದ್ದ ಅನುಪಮಂ ಜಿನಚಂದ್ರಂ: **ಪುಷ್ಪದಂಪು,** ೧೧. ೩೦)

**ಶರಜಾಲ** – ಬಾಣಗಳ ಬಲೆ [ಗುಂಪು] (ಸಂಜಯಶಿರಃಸ್ಕಂಧಾವಲಂಬಂ ಕುರುಪ್ರಭು ಕಂಡಂ ಶರಜಾಲಜರ್ಜರಿತ ಗಾತ್ರತ್ರಾಣನಂ ದ್ರೋಣನಂ: **ಗದಾಯು,** ೪. ೪೮)

**ಶರಜ್ಜ್ಯೋತ್ಸ್ನಾ** – ಶರತ್ಕಾಲದ ಬೆಳುದಿಂಗಳು (ಉತ್ತಮಾಂಗಂ ಶರಜ್ಜ್ಯೋತ್ಸ್ನಾಪಾಂಡುಚ್ಛತ್ರರತ್ನಂಗಳಿಂ ಅಜಿಪೆ ನಿಜೈಶ್ವರ್ಯಮಂ .. .. ಕುಡುಗೆಮಗೆ ಸುಖಾವಾಪ್ತಿಯಂ ಮಲ್ಲಿನಾಥಂ: **ಮಲ್ಲಿನಾಪು,** ೧. ೧)

**ಶರಣ** – ಆಶ್ರಯ (ದರಹಾಸದ್ಯುತಿಲಕ್ಷ್ಮೀ ಶರಣಂ ತಾನೆಂದೊಡೆ ಆನ್ ಅದೇವಣ್ಣಿಪೆಂ ಆ ತರುಣಿಯ ಮುಖಮಂಡಲವಂ: **ಶಾಂತೀಶ್ವಪು,** ೧೩. ೧೯೪)

**ಶರಣಾಗತ** – ರಕ್ಷಣೆ ಬಯಸಿ ಬಂದವನು (ಎನಗೆ ಶರಣಾಗತನಾದ ವಿಜಯಾದಿತ್ಯನಂ ಕಾಧ ಬಲ್ಲಾಳ್ತನದೊಳ್: **ಪಂಪಭಾ,** ೧೪. ೩೭ ವ)

**ಶರಣಾಗತವಜ್ರಪಂಜರ** – ಆಶ್ರಯ ಬೇಡಿ ಬಂದವರನ್ನು ಭದ್ರವಾದ ಕಾಪಿನಲ್ಲಿಡುವವನು (ಆತ್ಯುದಾತ್ತಮಹಿಮಂ ಶರಣಾಗತವಜ್ರಪಂಜರಂ: **ಪಂಪರಾ,** ೧೦. ೨೩೬)

**ಶರಣಾಗತರಕ್ಷಣ** – ಆಶ್ರಯ ಬಯಸಿ ಬಂದವನನ್ನು ಕಾಪಾಡುವವನು (ಶರಣಾಗತರಕ್ಷಣಮೆ ನರಪಂಗೆ ವಿಶೇಷಲಕ್ಷಣಂ ನಿಶ್ಚಯಮೆಂದು ಅರಿಮರ್ದನನಂತಾಗಳ್ ಚಿರಂಜೀವಿಯನೆತ್ತಿಮೆಂದು ತೊಟ್ಟನೆ ನುಡಿದಂ: **ಪಂಚತಂತ್ರ,** ૩೪೭)

**ಶರಣಾಗತವಜ್ರಪಂಜರ** – ಆಶ್ರಯ ಬಯಸಿ ಬಂದವನನ್ನು ಬಿಗಿಯಾದ ಪಂಜರದಲ್ಲಿಟ್ಟಂತೆ ಜೋಪಾನವಾಗಿ ಕಾಪಾಡುವವನು (ಅತಯುದಾತ್ತಮಹಿಮಂ ಶರಣಾಗತವಜ್ರಪಂಜರಂ: **ಪಂಪರಾ,** ೧೦. ೨೩೬)

**ಶರಣ್ಯ** – ಆಶ್ರಯದಾತ (ಶರಣಾಯತಶರಣ್ಯಂ ಅಪ್ರತಿರಥಂ ರಾಜಾನ್ವಯಾಯೈಕವಿಸ್ತರಣಂ ಮಾಗಧಕಲ್ಪಶಾಖಿ ಮಗಧಾಧೀಶಂ: **ಶಾಂತಿಪು,** ೫, ೧೦೬)

**ಶರತ್ಪ್ರವೇಶ** – ಶರತ್ಕಾಲದ ಆರಂಭ (ಗಿರಿಮಲ್ಲಿಗೆ ಬೀತು ಬಿನ್ನನಾಗೆಯುಂ ಕಡವು ಮೊಗರಾಗಂಗಿಡೆಯುಂ .. ಅತಿಪ್ರಕಾಶಮಾದ ಶರತ್ ಪ್ರವೇಶದೊಳ್: **ಪಂಪರಾ,** ೭. ೧೬೩ ವ)

**ಶರತ್ಸಮಯ** – ಶರತ್ಕಾಲ (ಅಮೃತಮಯೋಕ್ತಿ ಶರತ್ಸಮಯ ಸುಧಾಂಶುವಿಶದಕೀರ್ತಿವಿತಾನಂ: **ಆದಿಪು,** ೧. ೩೦)

**ಶರದ** – ಶರದೃತು, ವರ್ಷ (ಶರದಾಖ್ಯಂ ಋತುವುಂ ವತ್ಸರಮುಂ: **ಅಭಿಧಾವ,** ೩. ೧. ೨೬)

**ಶರದಭ್ರ** – ಶರತ್ಕಾಲದ ಮೋಡ (ಶರದಭ್ರಂ ಪರಿವಿಷ್ಟಮಪ್ಪ ವಿಲಸತ್ ನೀಲಾದ್ರಿಯೆಂಬಂತೆ ಬಿತ್ತರಿಸುತ್ತಿರ್ಪ ದುಕೂಲ ಚೇಲನಗಳಿಂ ಚೆಲ್ವಾಗಿ ತೋರ್ಪ ಆ ಮದೋದ್ಧುರ ಮಾತಂಗಮಂ ಏಱೆ: **ಶಾಂತೀಶ್ವಪು,** ೩. ೨೨೫)

**ಶರದಾಗಮ** – ಶರತ್ಕಾಲದ ಆರಂಭ [ಘನಾಗಮಂ ಮೊದಲ್ಗಿಡೆ ಶರದಾಗಮಂ ನೆಱೆಯೆ ಪರ್ಬೆ ಸಮಸ್ತಮಹೀವಿಭಾಗಮಂ: : **ಪಂಪಭಾ,** ೭. ೬೯)

**ಶರದಾತಪ** – ಶರತ್ಕಾಲದ ಬಿಸಿಲು, ಮಾಗಿಯ ಬಿಸಿಲು (ಪೊಳೆವಲರ ಪಸೆಯೊಳಿರ್ದುಂ ಪುಳಿನದ ಲೋಹಾಸನಂಗಳೊಳ್ ನೆಮ್ಮಿರ್ದುಂ ಚಳದಳಕೆಯರ್ ಅರೆಬರ್ ಅದೇಂ ಕಳೆದರೊ ಶರದಾತಪಪ್ರಭೂತ ಶ್ರಮಮಂ: **ಆದಿಪು,** ೧೧. ೭೬)

**ಶರದ್ಘನ** – ಶರತ್ಕಾಲದ ಮೋಡ, ಬೆಳ್ಮುಗಿಲು (ಆನ್ನೋಡೆ ನೋಡೆ ನೋಡ ಮನನ್ನೋಡುವವೊಲ್ ಶರದ್ಘನಂ ಕರಗಿದುದು: **ಆದಿಪು,** ೪. ೬೬)

**ಶರಧರ** – ಮೋಡ (ಎಱಪ ಶರಧರದ ತುಱುಗಲ್ ಕಱೆವ ಘನೋಪಳಕದಂಬಂ ಉಡುಗಣಮನೆ .. .. ನುಂಗಿ: **ರಾಜಶೇವಿ,** ೧. ೧೨೦)

**ಶರಧಿ** – ಸಮುದ್ರ (ಶರಧಿಯ ನೀರಂ ನದಿಗಳ್ ಧರಿಯಿಸಲಾರ್ತಪುವೇ: **ಧರ್ಮಾಮೃ,** ೬. ೮೭); ಬತ್ತಳಿಕೆ (ತಳಂ ಅರುಣಪಲ್ಲವಂ ಸ್ಮರಶರಧಿ ಜಂಘೆಗಳ್ ಪೊಳೆವ ತೊಡೆ ಬಾಳೆಗಳ್: **ಅನುಭವ,** ೪೯)

**ಶರಧಿಪತಿ** – ವರುಣ (ಅದಱ ವಿಶಾಳತೆವೆತ್ತಿರ್ಪ ತತ್ಪ್ರಥಮಶಾಳದೊಳಗ್ರ ಸುರಪತಿ ಪಿತೃಪತಿ ಶರಧಿಪತಿ ಧನದಪತಿಗಳ ಕೇಳೀವಿಲಾಸಶೋಭಿತಂಗಳಪ್ಪ ನಾಲ್ಕುಂ ದೆಸೆಗಳ ಮಣಿರತ್ನಹರ್ಮ್ಯಂಗಳುಮಂ: **ಶಾಂತೀಶ್ವಪು,** ೧೬. ೩೧ ವ)

**ಶರನಿಧಿ** – ಶರಧಿ (ಶರನಿಧಿ ತನ್ನಯ ರತ್ನಾಕರನಾಮಮನಿಲ್ಲಿ ಸಾರ್ಥಕಂಮಾಡಲ್ ಬಂದಿರುತಿರ್ದಪುದುಉ: **ಕುಸುಮಾಕಾ,** ೫. ೩೮)

**ಶರನಿಧಿಪತಿ** – ವರುಣ (ವರುಣಂ ಪಶ್ಚಿಮದಿಕ್ಪತಿ ಶರನಿಧಿಪತಿ: **ಅಭಿಧಾವ,** ೧. ೧. ೪೩)

**ಶರಪಂಜರ** – ಬಾಣಗಳಿಂದ ಮಾಡಿದ ಪಂಜರ (ಅಂತು ಶರಪಂಜರದೊಳ್ ಒಱಗಿಯುಂ ಒಡಲಿಂ ಪತ್ತುವಿಟ್ಟು ಪೋಪ ಜೀವಮಂ ಪೋಗಲೀಯದೆ ಸ್ವಚ್ಛಂದಮಿಟ್ಟು ಅಪ್ಪುದಱಿಂ ಉತ್ತರಾಯಣಂ ಬರ್ಪನ್ನಂ ಇರಿಸಿದಂ: **ಪಂಪಭಾ,** ೧೧. ೪೭ ವ)

**ಶರಪಾತ** – ಬಾಣಗಳ ಮಳೆ (ಶರಪಾತಮೆ ದೂತನವೊಲ್ ತರೆ ಮಾಗಧವರತನುಪ್ರಭಾಸಾಮರರಂ ಕರುಣಿಸಿ ಬಿಟ್ಟಂ ಕುಲಧನಪರಿಕರಮಂ ಕಯ್ಗೆಮಾಡಿ ಮನುಕುಲತಿಲಕಂ: **ಆದಿಪು,** ೧೪. ೫೫)

**ಶರಭ** – ಸಿಂಹಕ್ಕಿಂತ ಬಲಿಷ್ಠವಾದ ಎಂಟುಕಾಲುಗಳ ಒಂದು ಕಲ್ಪಕ ಪ್ರಾಣಿ (ಉರಿ ಕೊಳೆ ದೆಸೆಗಾಣದೆ ದೆಸೆವರಿವರಿದು ಕುಜಂಗಳಂ ಪಡಲ್ವಡಿಸಿ ಭಯಂಬೆರಸು ಒಳಱೆ ನೆಗೆದುದಾ ವನ ಕರಿ ಶರಭ ಕಿಶೋರಕಕಂಠಗರ್ಜನೆ ಬನದೊಳ್: **ಪಂಪಭಾ,** ೫. ೯೧)

**ಶರಭಂಗ** – ಬಾಣದ ತುಂಡು, ನೀರಿನ ತೆರೆ (ಶರಭಂಗಾನ್ವಿತಂ ಇರದೆ ಅನುಕರಿಸಿದುದು ಆ ಬನದ ತಿಳಿಗೊಳಂ ಕೊಳುಗುಳಮಂ: **ಶಬರಶಂ,** ೨. ೫೨)

**ಶರರುಹ** – ತಾವರೆ (ಕೈಯಂ ಸ್ಮರನೊಡ್ಡಿ ಕಾಸಿ ಬಿಲ್ಲಂ ತಿರುವೊಯ್ದು ಇಸುತಿರ್ಪಂ ಅಸಿತ ಶರರುಹಶರದಿಂ: **ರಾಜಶೇವಿ, ರಾಜಶೇವಿ,** ೯. ೨೧)

**ಶರವೃಷ್ಟಿ** – ಮಳೆ, ಬಾಣಗಳ ಮಳೆ (ಕಱೆವಂ ಶರವೃಷ್ಟಿಯಂ ಆತ್ಮಜನಕಂ ಇಂದ್ರಂ ಎನುತ್ತುಂ ಪುರುಡಿಸಿ ಶರವೃಷ್ಟಿಯಂ ಆ ಗಿರಿಶಾಗ್ರದೊಳೆಯ್ದಿ ಕಱೆದಂ ಅರ್ಜುನಂ ಅದಟಿಂ: **ಶಬರಶಂ,** ೪. ೪೧)

**ಶರಶಯ್ಯೆ** – ಬಾಣಗಳ ಹಾಸಿಗೆ (ಇಡಿದಿರೆ ರೋಮಕೂಪದೊಳಗೆ ಉರ್ಚಿದ ಸಾಲ ಸರಲ್ಗಳುಂ ತೆಱಂಬಿಡಿದಿರೆ ಬೆಟ್ಟು ಒರ್ಗುಡಿಸಿದಂತೆ ನೆಱಿಲ್ದಿರೆ .. .. ಬಿಟ್ಟಂ ಏನೆಸೆದನೋ ಶರಶಯ್ಯೆಯೊಳ್ ಅಂದು ಸಿಂಧುಜಂ: **ಪಂಪಭಾ,** ೧೩, ೭೨)

**ಶರಶಲ್ಯ** – ಬಾಣದ ಮೊನೆ (ಶರಶಲ್ಯಮಿನಿತು ಸಿಲ್ಕಿಯುಂ ಅರಿದಸುವಂ ಪಿಡಿಯಲೆರ್ದೆಯನಲ್ಲದೆ ನಡೆ ವಿಸ್ಮರಶರತತಿ ಕಿಟಿಲರಿಯವ ವಿರಹಿಯ ನೋವಿಂಗೆ ಸಾಯಲಿಲ್ಲದಱಿಂದಂ; **ನೇಮಿನಾಪು,** ೪. ೧೪)

**ಶರಶಾಳಿ** – ನಿಪುಣ ಬಿಲ್ಗಾರ (ಶರಶಾಳಿಯೆಂ ಎಂಬುದಂ ಈ ಶರದಿಂದಮೆಗಱಿಪಲ್ಕೆಚ್ಚು ಕುಲಧನಚಯಮಂ ತರಿಸಿ ಕೊಳಲ್ಬಗೆದು: **ಆದಿಪು,** ೧೨. ೯೯)

**ಶರಸಂಧಾನ** – ಬಿಲ್ಲಿಗೆ ಬಾಣವನ್ನು ಹೂಡುವುದು (ಶರಸಂಧಾನದ ಬೇಗಂ ಅಂಬುಗಳಂ ಅಂಬು ಈಂಬಂತೆ ಮೇಣಂಬಿನಾಗರಮೆಂಬೆತೆನೆ ಪಾಯ್ದು ಅರಾತಿಶರ ಸಂಘಾತಂಗಳಂ ನುರ್ಗಿ: **ಪಂಪಭಾ,** ೧೧. ೪೦)

**ಶರಸ್ತಂಬ** – ಲಾಳದ ಕಡ್ಡಿ, ಜೊಂಡು (ಒಗೆದ ಶರಸ್ತಂಬದೊಳ್ ಇರ್ಬಗಿಯಾಗಿ ಮನೋಜರಾಗರಸಂ ಉಗುತರೆ ತೊಟ್ಟಗೆ ಬಿಸುಟು ಬಿಲ್ಲಂ ಅಂಬುಮಂ ಅಗಲ್ದಂ ಆಶ್ರಮದಿಂ ಉದಿತಲಜ್ಜಾವಶಂ: **ಪಂಪಭಾ,** ೨. ೩೩)

**ಶರಾಚಾರ್ಯ** – ಬಿಲ್ಲ ಗುರು, ದ್ರೋಣ (ಸಂಗ್ರಾಮಭೂಮಿಯ ನಡುವೆ ಧೃಷ್ಟದ್ಯುಮ್ನ ಕಚಗ್ರಹವಿಲುಳಿತಮೌಳಿಯುಂ ತದೀಯ ಕೌಕ್ಷೇಯಕಧಾರಾವಿದಾರಿತಶರೀರನುಂ ಆಗಿ ಬಿಟ್ಟಿರ್ದ ಶರಾಚಾರ್ಯರಂ ಕಂಡು: **ಪಂಪಭಾ,** ೧೩. ೫೫ ವ)

**ಶರಾರು** – ದುಷ್ಟ (ಶರಾರು ಘಾತುಕಂ: **ಅಭಿಧಾವ,** ೨. ೧. ೧೮)

**ಶರಾವ** – ಮುಚ್ಚಳ, ಉಗುಳುವ ಪಾತ್ರೆ (ಕೀಳ್ವಾನಿಸರ್ ಆಶ್ರಾಂತಂ ಉಗುಳ್ವ ಶರಾವಂಬೊಲಮರ್ದ ವೇಶ್ಯಾಧರಮಂ ಚುಂಬಿಸಿ ನರಕದೊಳ್ ಆಟ್ಟುದೇಂ ನೀತಿಯೇ: **ಉದ್ಭಟಕಾ,** ೧೦. ೮೦)

**ಶರಾವೆ** – ಪಾತ್ರೆ (ಸುರುಚಿರ ದರ್ವಿಯೊಳ್ ನವಶರಾವೆಯೊಳ್ ಉಗ್ರನ ಚಾರುಹಸ್ತದೊಳ್: **ತ್ರಿಷಷ್ಟಿಪು,** ೧೦. ೭೬)

**ಶರಾಸನ** – ಬಿಲ್ಲು (ಬೂದಿ ಜೆಡೆ ಲಕ್ಕಣಂ ತಪಕೆ ಆದುವು ಎರಟಿಟ್ಟೊಣೆ ಶರಾಸನಂ ಕವಚಂ ಇದೆಂತಾದುವೋ ಮುತ್ತುಂ ಮೆಟಿಸುಂ ಕೋದಂತುಟೆ ನಿನ್ನ ತಪದ ಪಾಂಗೆಂತು ಗಡಾ: **ಪಂಪಭಾ,** ೭. ೯೨)

**ಶರಾಸನಗುಣಘಾತಜಾತಕಾಳಿಕೆ** – ಬಿಲ್ಲಿನ ಹೆದೆಯ ಹೊಡೆತದಿಂದ ಆದ ಕಲೆ (ವಿಜಯ ಶರಾಸನಗುಣಘಾತ ಜಾತಕಾಳಿಕೆಯನೆತ್ತಮಗ್ಗಳಿಸಿದುದು ಆ ಭುಜಬಲಿಯ ಭುಜದ್ವಯದೊಳ್ ಭುಜಂಗನಿಶ್ವಾಸ ಧೂಮವೇಣೀನಿಕರಂ: **ಆದಿಪು,** ೧೪. ೧೪೧)

**ಶರಾಸನಾಗಮ** – ಧನುರ್ವಿದ್ಯೆ (ಎಚ್ಚಂ ವಿಹಗೇಶ್ವರನೆನಿಪ ಹಂಸನಂ ವರ ಶರಾಸನಾಗಮವಿಶಾರದಂ ತತ್ ಕ್ಷಣದಿಂ: **ಪಂಚತಂತ್ರ,** ೧೯೮)

**ಶರೀರ** – ದೇಹ (ತನು ಗಾತ್ರಂ ವಿಗ್ರಹಂ ಅಪಘನಂ ಶರೀರಂ ಕಳೇಬರಂ ಕಾಯಂ ಸಂಹನನಂ ದೇಹ< ವಪು ಎಂದಿನಿತುಂ ಭಾವಿಸುವೊಡೆ ಅಂಗಪರ್ಯಾಯಂಗಳ್: **ಅಭಿಧಾವ,** ೧. ೧೨. ೧)

**ಶರೀರಪೂಜಾ[ಜೆ]** – ಸತ್ತವರ ದೇಹಕ್ಕೆ ಮಾಡುವ ಪೂಜೆ (ಖದಿ ಸತ್ತ ನೆಗಟ್ತೆಯ ಖೇಚರರರ್ಗೆಲ್ಲಂ ಶರೀರಪೂಜಾಪೂರ್ವಕಂ ಸಂಸ್ಕಾರವಿಧಿಯಂ ನಿರ್ವರ್ತಿಸಿ: **ಶಾಂತಿಪು,** ೫. ೬೪ ವ)

**ಶರೀರಪ್ರತ್ಯಾಖ್ಯಾನ** – [ಜೈನ] ದೇಹದ ಬಗೆಗಿನ ತಿರಸ್ಕಾರ (ಜಾತಿಸ್ಮರರುಮಾಗಿ ಪರಸ್ಪರವೈರಮಂ ಬಿಸುಟ್ಟು ಆಹಾರಶರೀರಪ್ರತ್ಯಾಖ್ಯಾನಪೂರ್ವಕಂ ಸನ್ಯಸನವಿಧಿಯಿಂದಂ ಅಸುವಂ ವಿಸರ್ಜಿಸಿ: **ಶಾಂತಿಪು.,** ೯. ೭೧ ವ)

**ಶರೀರಪ್ರವಾಹ** – ನದಿಯ ಪ್ರವಾಹ (ಆದಿತ್ಯನೆಂಬರಸಂ ಶರೀರಪ್ರವಾಹದೊಳ್ ಪೋಪ ಮಂದಸಂ ತರಿಸಿ ತದಂತರ್ಗತ ಬಾಲಕನಂ ರಾಧೆಯೆಂಬ ತನ್ನರಸಿಗೆ ಕೊಟ್ಟೊಡೆ: **ಚಾವುಂಪು,** ಪು. ೪೦೦. ಸಾ. ೫)

**ಶರೀರಮಾದ್ಯಂ ಖಲುಧರ್ಮಸಾಧನಂ** – ಧರ್ಮಸಾಧನೆಗೆ ಶರೀರವೇ ಮೊದಲ ಸಾಧನವಲ್ಲವೇ (ಶರೀರಮಾದ್ಯಂ ಖಲುಧರ್ಮಸಾಧನಂ ಎಂಬ ಪುರಾಣವಾಕ್ಯಮುಂಟು: **ಪಂಚತಂತ್ರ,** ೧೮೮ ವ)

**ಶರೀರಶೋಭೆ** – ಶವಕ್ಕೆ ಮಾಡುವ ಅಲಂಕಾರ (ಹಾಹಾಕ್ರಂದನಧ್ವನಿಗಳ್ ಅಂತಃಪುರಕ್ಕಂ ಪುರಕ್ಕಂ ನೆಗಟಿ ಮತಿವರಾದಿಗಳ್ ತದ್ದಂಪತಿಗಳ್ಗೆ ಶರೀರಶೋಭೆಯಂ ಮಾಡಿ: **ಆದಿಪು,** ೫. ೨೭ ವ)

**ಶರೀರೋಪಾದನ** – ಹುಟ್ಟು (ಜೀವಂಗಳ್ ಶುಭಾಶುಭಕರ್ಮಶೈಲೂಷಪ್ರೇರಿತಂಗಳಾಗಿ .. .. ನಾನಾಕಾರಶರೀರೋಪಾದಾನ ಪರಿತ್ಯಜನಪುರಸ್ಸರಂ ಪರಿಭ್ರಮಿಸುಗುಂ: **ಆದಿಪು,** ೧೬. ೫೭ ವ)

**ಶರ್ಕರಾ[ರೆ]** – ಸಕ್ಕರೆ ಪುದಿದ ಪರಿಣಾಮದೊಳೊದವಿದ ದುರಿತಾನುಗತಮದನುಭಾಗಮೆನಿಪ್ಪುದು ಶರ್ಕರಾದಿ ಕಿಂಪಾಕ ದುರ್ವಿಪಾಕ ಪ್ರಭಾವಶಕ್ತಿಪ್ರತಿಮಂ: **ಸುಕುಮಾಚ,** ೮. ೩೦)

**ಶರ್ಕರಾಪ್ರಭೆ** – [ಜೈನ] ಒಂದು ನರಕ (ಆಡಿದ ಕಾಡೊಳ್ ಜವನೆಚ್ಚಾಡಿದನೆನೆ ಕೊಂದು ತಿಂದು ಕೈಯುಂ ಕಾಲುಂ ಮೂಡಿದುವು ಪಾತಕಕ್ಕೆನೆ ಕಾಡೊಡೆಯಂ ಕಟಿದು ಶರ್ಕರಾಪ್ರಭೆಗಿೞಿದಂ: **ಪಂಪರಾ,** ೬. ೬೪)

**ಶರ್ಮ** – ಸಂತೋಷ (ಅಂತೆಸೆವ ನಿರ್ಮಿತ ಶರ್ಮಭರ್ಮಹರ್ಮ್ಯದೊಳ್ ಕೂರ್ಮೆಯಿಂ ಪೆರ್ಮೆವೆತ್ತು: **ರಾಜಶೇಖ,** ೨. ೧೨೦ ವ)

**ಶರ್ವರಿ** – ರಾತ್ರಿ (ಉದ್ಗಮರುಚಿ ಶರ್ವರೀ ವಿರಹಸಂಪದಂ ಆ ನರಲೋಕಚಂದ್ರಮಂ: **ಲೀಲಾವತಿ,** ೧. ೯೦)

**ಶರ್ವಾಣಿ** – ಪಾರ್ವತಿ (ಶರ್ವಾಣಿಯ ಸೌಂದರ್ಯಮನೊರ್ವಂ ಬಣ್ಣಿಸುವೆನೆಂಬಂ ಗಾಂಪಂ: **ಗಿರಿಜಾಕ,** ೪. ೧೦)

**ಶಲಭ** – ಪತಂಗ (ಶಲಭಂ ಪತಂಗಂ ಎಂದೞೆಗೆ: **ಅಭಿಧಾವ,** ೧. ೯. ೨೩);

**ಶಲಲಿ** – ಮುಳ್ಳುಹಂದಿ (ಶಲಲಿ ಶಲ್ಯಕಂ ತಾನಕ್ಕುಂ: **ಅಭಿದಾವ,** ೧. ೯. ೨)

**ಶಲಾಕಾಪುರುಷ** – [ಜೈನ] ಅರವತ್ತು ಮೂವರು ಶ್ರೇಷ್ಠಪುರುಷರು: ಇಪ್ಪತ್ತನಾಲ್ಕು ಮಂದಿ ತೀರ್ಥಂಕರರು, ಹನ್ನೆರಡು ಮಂದಿ ಚಕ್ರವರ್ತಿಗಳು, ಒಂಬತ್ತು ಮಂದಿ ಬಲದೇವರು, ಒಂಬತ್ತು ಮಂದಿ ವಾಸುದೇವರು, ಒಂಬತ್ತು ಮಂದಿ ಪ್ರತಿವಾಸುದೇವರು (ಅಭ್ಯುದಯನಿಶ್ರೇಯಸಸುಖನಿಮಿತ್ತಂಗಳುಂ ಉದಿತೋದಿತನುಂ ಶಲಾಕಾಪುರುಷನುಂ ಚಕ್ರವರ್ತಿಯುಂ ಮ್ಮಥನುಂ ತೀರ್ಥಂಕರಪರಮದೇವನುಂ ಅಪ್ಪ: **ಶಾಂತಿಪು,** ೯. ೨೦೮ ವ); ನೋಡಿ, 'ತ್ರಿಷಷ್ಠಿಶಲಾಕಾಪುರುಷರು'

**ಶಲಾಕೆ** – ಈಟಿ, ಸಲಾಕಿ (ವನಿತೆಗೆ ವಶ್ಯಮಿದೆಂದು ಅಂಜನಮಂ ಕಾಂಚನಶಲಾಕೆಯಿಂ ನೀಡಲ್ ಅದೇನನುಕರಿಸಿರ್ದುದೊ ಮನ್ಮಥನ ನನೆಯ ಮೊನೆಯಂಬಿದೆಂಬ ಮಾತಮರ್ವಿನೆಗಂ; **ಸುಕುಮಾಚ,** ೧೦. ೨೧)

**ಶಲಾಟ** – ಮಿಡಿಗಾಯಿ (ಪಾತ್ರಂಗಳೊಳ್ ತೀವಿರ್ದ ಶಲಾಟ ಪರಿಪಕ್ವ ರಸಾಳ ಬೀಜಪೂರ ಜಂಬೀರ .. .. ಮೊದಲಾದ ನಾನಾ ಫಳಪ್ರಕರಂಗಳಿಂ: **ತ್ರಿಷಷ್ಟಿಪು,** ೧೮. ೪೦ ವ)

**ಶಲಾಟು** – ಮಿಡಿಗಾಯಿ (ಅನ್ಯಪಕ್ಷಿಯುಣ್ಣದ ಶಲಾಟುಸಂಕುಳಮನಾಯ್ದು ಮೆಲುವಂ ಶಬರಂ: **ನೇಮಿನಾಪು,** ೩. ೭೮)

**ಶಲ್ಕ** – ಚೂರು, ತುಂಡು (ಕಾಮಿನೀಜನಂ ಅಂತು ಪೊಕ್ಕು ಶತಪತ್ರಸೂತ್ರಂಗಳೊಳಂ ರಂಭಾವಲ್ಕಲ ಶಲ್ಕಂಗಳೊಳಂ ಶೀರ್ಣನಾಳಿಕೇರಪರ್ಣಂಗಳೊಳಂ ಅಮರ್ಕೆಯುಂ ಪೋಲ್ಕೆಯುಂ ಒಲ್ವುಂ ಚೆಲ್ವುಮಾಗೆ: **ಚಂದ್ರಪ್ರಪು,** ೭. ೧೧೫ ವ)

**ಶಲ್ಯ** – ಮೂಳೆ (ಎನಿತು ಕಾಲದ ಅಸ್ಥಿಸಮೂಹಂಗಳಿರ್ದೊಡಂ ಇವಿಂತಪ್ಪ ಪ್ರಾಣಿಗಳ ಶಲ್ಯವೆಂದು ಸಹದೇವನಂತೆ ಪೇೞಲ್ ಬಲ್ಲೆಂ: **ಪಂಚತಂತ್ರ,** ೩೪೮ ವ); [ಜೈನ] ಮುಳ್ಳಿನಂತೆ ಚುಚ್ಚುವ ಮೋಹ (ಮಿಥ್ಯಾಶಲ್ಯಂ ಮಾಯಾಶಲ್ಯಂ ನಿದಾನಶಲ್ಯಮೆಂಬ ಮೂಱುಂ ಶಲ್ಯಂಗಳಂ ಪಿಂಗಿದಂ: **ಧರ್ಮಾಮೃ,** ೫. ೮೮ ವ)

**ಶಲ್ಯಕ** – ಮುಳ್ಳುಹಂದಿ (ವೃಕ ಭಲ್ಲೂಕ ಸುಗಂಡ ಚಂಡಹರಿಣಶ್ರೇಣೀ ರುರು ಉರು ಉಗ್ರ ಶಲ್ಯಕ ಸಾರಂಗ ಶಶಾವಳೀ ಶರಭ ಗೋಲಾಂಗೂಲಮಾಲಾ ಹರಿಪ್ರಕರ ಆಭೀಳ ಸೃಗಾಳಜಾಳಂ ಮದವತ್ ಶುಂಡಾಲ ಶಾರ್ದೂಲ ಕಾಕಕುಳ ವ್ಯಾಳ ಕರಾಳ ವಿಸ್ಫುರತ್ ಅರಣ್ಯಾನೀ ಮಹೀದೇಶದೊಳ್: **ಪಂಚತಂತ್ರ,** ೧೪೨)

**ಶಲ್ಯತ್ರಯ** – [ಜೈನ] ವ್ರತಸ್ಥನನ್ನು ಬಾಧಿಸುವ ಮಾಯಾ, ಮಿಥ್ಯಾ, ನಿದಾನ ಎಂಬ ಮೂರು ಬಗೆಯ ತೊಂದರೆಗಳು (ಶಲ್ಯತ್ರಯತ್ರಿಗಾರವರಹಿತನುಂ .. .. ದಶಧರ್ಮ ಸಂಯುತನುಂ: **ಕರ್ಣನೇಮಿ,** ೨. ೬೧ ವ)

**ಶಲ್ಯಧರ** – ಮೂಳೆ ಧರಿಸಿದವನು, ಶಿವ (ಗೌರೀಪತಿ ಶಲ್ಯಧರಂ ಭೈರವಂ .. .. ಸದಾಶಿವನಲ್ಲ ವಿಚಾರಿಸೆ ಬೇಱೊರ್ವನೆಂಬರ್ ಎಲದ್ದಿದನಾತಂ: **ಸಮಯಪ,** ೮. ೧೦೨)

**ಶಲ್ಯಮಂಡನಕಾರಿ** – ಮೂಳೆಯ ಅಲಂಕಾರದವನು, ಶಿವ (ಊರಿಂಗೆ ಶಲ್ಯಮಂಡನಕಾರಿಯಮಾಮಗಲ್ಯನಿರಲೆ ಸಲ್ಲೆಂಬವೋಲ್ .. .. ಪೊಱಗೆ ಮಾಡುವರ್ ದೇಗುಲಮಂ: **ಸಮಯಪ,** ೮. ೩೮)

**ಶಲ್ಯವಿದೂರ** – [ಜೈನ] ಶಲ್ಯತ್ರಯಗಳನ್ನು ನಿವಾರಿಸಿಕೊಂಡವನು (ಶಲ್ಯವಿದೂರ ಬಂಕರಸನಂಕದ ಮಾಚೆಯತಂದೆ .. .. ಬರೆದಪಂ ಬುಧಮಾಧವನೀ ಪ್ರಬಂಧಮಂ: **ಪುಷ್ಪದಂಪು,** ೧೪. ೫೭)

**ಶಶ** – ಮೊಲ (ವೃಕ ಭಲ್ಲೂಕ ಸುಗಂಡ ಚಂಡಹರಿಣಶ್ರೇಣೀ ರುರು ಉರು ಉಗ್ರ ಶಲ್ಯಕ ಸಾರಂಗ ಶಶ ಆವಳೀ ಶರಭ ಗೋಲಾಂಗೂಲಮಾಲಾ ಹರಿಪ್ರಕರ ಆಭೀಳ ಸೃಗಾಳಜಾಳಂ ಮದವತ್ ಶುಂಡಾಲ ಶಾರ್ದೂಲ ಕಾಕಕುಳ ವ್ಯಾಳ ಕರಾಳ ವಿಸ್ಫುರತ್ ಅರಣ್ಯಾನೀ ಮಹೀದೇಶದೊಳ್: **ಪಂಚತಂತ್ರ,** ೧೪೨)

**ಶಶಕ** – ಮೊಲ (ಉತ್ಸಾಹದಿಂದ ಉಪಾಯನಿಪುಣನಪ್ಪ ಶಶಕಂ ಆ ಸಿಂಹಮಂ ಇಲ್ಲಿ ತಂದು ಕೊಲ್ವೆಂ .. .. ಭಯಮೇಕೆನಗಿಲ್ಲಿ: **ಪಂಚತಂತ್ರ,** ೧೪೪ ವ)

**ಶಶಧರ** – ಚಂದ್ರ (ಅರಮನೆಯೊಳ್ ಅರಸನಂಬರತಳದೊಳ್ ವರತಾರಾಪರಿಗತ ಶಶಧರನಂತೊಪ್ಪಿರೆ: **ಕವಿರಾಮಾ,** ೨. ೧೦)

**ಶಶಾಂಕ** – ಚಂದ್ರ (ಧವಳಹಯಂ ಧವಳರಥಂ ಧವಳ ಉಷ್ಣೀಷಂ ಶಶಾಂಕಸಂಕಾಶ ಯಶೋಧವಳಿತ ಭುವನಂ ತಾಗಿದಂ ಅವಯವದಿಂ ಬಂದು ಧರ್ಮತನಯನ ಬಲದೊಳ್: **ಪಂಪಭಾ,** ೧೧. ೩೯)

**ಶಶಿಖಂಡ** – ಬಾಲಚಂದ್ರ (ದಕ್ಷಿಣದಿಙ್ಮುಖದೊಳೆಸೆದು ಶಶಿಖಂಡದವೋಲ್ ಈಕ್ಷಣಸುಖಮಯಮಿರ್ಪುದು ದಕ್ಷಿಣಭರತ ತ್ರಿಖಂಡದಾರ್ಯಾಖಂಡಂ: **ಪಂಪರಾ,** ೧. ೪೫)

**ಶಶಿಮಣಿ** – ಚಂದ್ರಕಾಂತಶಿಲೆ (ಅಂತು ಚಂದ್ರೋದಯದೊಳ್ ಬಿಂದುವಿಡುವ ಶಶಿಮಣಿಶಲಾಕೆಯಂತಿರ್ದ ಆಕೆಯಂ ಕಂಡು ಮನಂಗೊಂಡು: **ನೇಮಿನಾಪು,** ೪. ೯೨ ವ)

**ಶಸ್ತ್ರಕರ್ಮ** – ಶಸ್ತ್ರಗಳನ್ನು ಪ್ರಯೋಗಿಸುವುದು (ನಿಖಿಲಕ್ಷತ್ರಿಯಸಮೂಹಕ್ಕೆ ಶಸ್ತ್ರಕರ್ಮಮುಮಂ .. .. ಯಥಾಯೋಗ್ಯಮುಪದೇಶಂಗೆಯ್ದು: **ಆದಿಪು,** ೮. ೬೪ ವ); ಶಸ್ತ್ರಚಿಕಿತ್ಸೆ (ಜನಿಯಿಸಿದ ಶೋಫಮದು ಲೇಪನದಿಂ

ಪೋಗದೊಡೆ ಶಸ್ತ್ರಕರ್ಮವನೆಸೆಪಂತೆ: **ಪಾರ್ಶ್ವನಾಪು,** ೨. ೪೩)

**ಶಸ್ತ್ರವಿಡಂಬ –** ಆಯುಧಗಳ ಅಟಾಟೋಪ (ಸೊಕಮಿರ್ಕೆ ಅಕ್ಕಟ ದರ್ಭಪಾಣಿ ಯಮಜಂ ದರ್ವೀಕರಂ ವಾಯುಪುತ್ರಕನುಂ ಜರ್ಜರಹಸ್ತಂ ಇಂದ್ರತನಯಂ ದಸ್ರಾತ್ಮಜರ್ ದಂಡಮುಷ್ಟಿಕರರ್ ಶಸ್ತ್ರವಿಡಂಬಂ ಏವುದವರ್ಗಂ ಪಾಂಚಾಲಿಯುಂ ಗಂಧದಾಯಕಿಯಾಗಿರ್ಪಿನಂ ಅಂದು ಮತ್ಸ್ಯಗೃಹದಿಂದ ಈ ನಿಗ್ರಹಂ ಪೊಲ್ಲದೇ: **ಗದಾಯು,** ೩. ೩೪)

**ಶಸ್ತ್ರಾಶಸ್ತ್ರಿ –** ಆಯುಧ ಹಿಡಿದು ಮಾಡುವ ಯುದ್ಧ (ಜಟ್ಟಿಗರೊಳ್ ಶಸ್ತ್ರಾಶಸ್ತ್ರಿಯುಂ ಖಡ್ಗಾಖಡ್ಗಿಯುಂ ದಂಡಾದಂಡಿಯುಂ ಕಚಾಕಚಿಯುಮಾಗಿ: **ಅನಂತಪು,** ೧೧. ೮೩ ವ)

**ಶಳ –** ಮುಳ್ಳು ಹಂದಿ (ಶಳಸೂಚೀಭಿನ್ನವಕ್ಷಂ ಕಿಟಿರದ ಲಿಖಿತಗ್ರೀವನಾಪೂತಿ .. .. ಏಂ ಬಂದುದೋ ಬೇಡರ ಬಟೆವಟೆಯಂ ಶ್ವಾನನೇಣವಸಾನಂ: **ನೇಮಿನಾಪು,** ೩. ೬೩)

**ಶಾಂಡಿಲ್ಯಕ –** ಬಿಲ್ವಪತ್ರೆ ಮರ (ಬಂಧುರ ಭಾರದ್ವಾಜ ಶಾಂಡಿಲ್ಯಕ .. .. ತಾಪಸಪ್ರೋತ್ಕರಮಂ ಸೋಮಾರ್ಕರುಕ್ಕಾಂಚಿತಮದು ನಭಮಂ ಪೋಲ್ತು ಚೆಲ್ವಾಯ್ತರಣ್ಯಂ: **ರಾಜಶೇವಿ,** ೫. ೭೫)

**ಶಾಂತಾಂತರಂಗ –** ಶಾಂತವಾದ ಮನಸ್ಸು (ಹಿಮಚೂಳಂ ಕುರುಳ್ವರಿಯೋಡಿದನಿತ್ತ ಶಾಂತಾಂತರಂಗಂಗೆ ಕನಕಶಾಂತಿ ಮುನಿಮುಖ್ಯಂಗೆ ಪೊಡೆವಟ್ಟು ಧೃಣೀಂದ್ರಂ ಪೋಗೆ: **ಶಾಂತಿಪು,** ೯. ೨೧ ವ)

**ಶಾಂತಿಕಪೌಷ್ಟಿಕಕ್ರಿಯೆ –** ಅನಿಷ್ಟನಿವಾರಣೆಯ ಒಂದು ಕರ್ಮ (ಪಂಚಪರಮೇಷ್ಠಿಗಳ್ಗೆ ಪೂಜೆಯಂ ಪುರೋಹಿತಂ ಮಾಡಿ ಶಾಂತಿಕಪೌಷ್ಟಿಕ್ರಿಯೆಯಂ ನಿರ್ವರ್ತಿಸಿ: **ಆದಿಪು,** ೧೨. ೭೪ ವ)

**ಶಾಂತಿಮಿಚ್ಛಂತಿ ಸಾಧವಾ –** ಸಾಧುಗಳು ಶಾಂತಿಯನ್ನು ಅಪೇಕ್ಷಿಸುವವರು (ಕಷಾಯಭಟರಂ ಬೆನ್ನಟ್ಟಲೊಪ್ಪಿ ಮಹಾವ್ಯವಸಾಯಂ ತಮಗಾಗೆ ಭವ್ಯಕಜನಕೆಲ್ಲಂ ಶಾಂತಿಮಿಚ್ಛಂತಿ ಸಾಧವ ಎಂಬುತ್ತಮ ಸಾಧುವರ್ಗಮೆನೆರಂ ಸ್ವರ್ಗಾಪವರ್ಗಂಬರಂ: **ಅಜಿತಪು,** ೧. ೫)

**ಶಾಂತ್ಯಭಿಷೇಕ –** ಅನಿಷ್ಟನಿವಾರಣೆಗಾಗಿ ದೇವರಿಗೆ ಮಾಡುವ ಅಭಿಷೇಕ (ಇರೆಂದಿರಿಸೆ ಶಾಂತ್ಯಭಿಷೇಕಪುರಸ್ಸರಂ ಪೂಜಾವಿಧಾನಮಂ ಸಪ್ತವಾಸರಾವಸಾನಂಬರಂ ಮಾಡಲ್ತಗುಳ್ವುದುಂ ಪರಿಪೂರ್ಣಾವಧಿದಿವಸಸಾಯಂತನ ಸಮಯದೊಳ್: **ಶಾಂತಿಪು,** ೬. ೨೮ ವ)

**ಶಾಕಟಿಕ –** ಸರಕು ಬಂಡಿ (ಶಾಕಟಿಕಕ್ಕೆ ರಥಮಂ ಪ್ರತಿಮಾಡಿದನೊರ್ವ ಜೀಯಂ ಎಂದೇಕೆಯೊ ಮೂಢರ್ ಊಳ್ವರ್: **ಸಮಯಪ,** ೧೦. ೧೧೯)

**ಶಾಕವರ್ತಿಗೆ –** ತರಕಾರಿಯ ಒಂದು ಭಕ್ಷ್ಯ (ಮೃದುಲಲಿತ ಕೋಮಲತಲಸಂಗಮಾತ್ರದ್ರಾವಣೆಯಪ್ಪ ಶಾಕವರ್ತಿಗೆಗಳುಮಂ .. .. ಮಂಡಕಂಗಳುಮಂ .. .. ಬಡ್ಡಿಸಿದಾಗಳ್: **ಸುಕುಮಾಚ,** ೧೧. ೨೯ ವ)

**ಶಾಕಿನಿ –** ಪಿಶಾಚಿ (ಸಹಜ ಶಾಕಿನಿಯಂ ವಿಷಕನ್ಯಕಾ ಸಹೋದರಿಯಂ .. .. ಎನ್ನಂ ಅಣ್ಣ ಬೆಸಗೊಳ್ವುದೆ: **ಕಾದಂಬ,** ೪. ೭೩)

**ಶಾಕ್ಯಮತ –** ಶಾಕ್ಯಮುನಿಪ್ರಣೀತ ಮತ (ಎಂದು ತಥಾಗತಮತಮಂ ತಿರಸ್ಕರಿಸಿ ತನ್ನೊಳ್ ಅಶಕ್ಯಾನುಷ್ಠಾನಕ್ಕೆ ಪೊಣರ್ದ ಲೋಕಾಯತ ಶಾಕ್ಯಮತಾವಲಂಬಿಯಂ ಅನವಲಂಬಿತಂ ಗೆಲ್ದು: **ಶಾಂತಿಪು,** ೮. ೧೪೭ ವ)

**ಶಾಕ್ವರ –** ಎತ್ತು (ನೆರೆದೊಂದಿ ನಿಂದ ಶಾಕ್ವರವರ ಯೂಥಮಂ ಅವನಿನಾಥ ಕಂಡುದಜೆಂದೊರ್ವರೆ ವಿಹರಿಪುದಂ ಬಿಸುಟಂಬಂರಾಂಬರರ್ ತಮ್ಮ ಸಮುದಯಂ ಬೆರಸಿರ್ಪರ್: **ಆದಿಪು,** ೧೫. ೩೨)

**ಶಾಖಾಚರ –** ಕೊಂಬೆಯ ಮೇಲೆ ಓಡಾಡುವುದು, ಕೋತಿ (ಎಲೆ ಶಾಖಾಚರ ನೀನೀ ವನೇಚರನಂ ತೆಗೆದು ಎನಗೆ ಎಯ್ದಲ್ಬಾರದಂತು ದೂರಂ ಮಾಡಲ್ವೇಡ: **ಪಂಚತಂತ್ರ,** ೧೭೭ ವ)

**ಶಾಖಾಗ್ರ –** ಕೊಂಬೆಯ ತುದಿ (ಮುಂದೊಂದು ಮಾಕಂದಮಹೀಜದ ತುಱುಂಗಿದ ಶಾಖಾಗ್ರದೆ ಮೆಱೆವ ಹಿಂದೋಳದೊಳ್: **ಶಾಂತೀಶ್ವಪು,** ೫. ೧೧೪ ವ)

**ಶಾಖಾಮೃಗ –** ಕೋತಿ (ಶಾಖಾಚರಮೃಗಂಲರ ಮಾಲೆಗೇಟಿಲ್ ಬಲ್ಲುದು ಅದಲ್ಲದೆ ಅಂತಿರೇಂ ರಚಿಯಿಕುಮೇ: **ಶಬರಶಂ,** ೧. ೧೫)

**ಶಾಖಿ –** ಮರ (ವಿಸ್ಮಯಸ್ಮೇರ ಮುಖಾಬ್ಜೆಯಾಗಿ ನೋಡುತುಮಿರ್ದಳಶೋಕ ಶಾಖಿಯಂ: **ಕುಸುಮಾಕಾ,** ೧೨. ೭೫)

**ಶಾಠ್ಯ –** ಹಟ, ಮೋಸ (ಶಾಠ್ಯಂ ಡಂಭಂ ಗಹನಂ ಕಷ್ಟಂ: **ಅಭಿಧಾವ,** ೨. ೨. ೧೪)

**ಶಾಡ್ವಲ –** ಗರಿಕೆ, ಹುಲ್ಲು ಹಾಸಲೆ (ಶಾಡ್ವಲತೃಣತತಿಯಂ ಖಡ್ಗದಿಂ ಇಳಾಧಿಪಂ ಕೊಯ್ದು ಮುಂದೆ ಸಾರ್ಚಿದನಾಗಳ್: **ಕಾದಂಸಂ,** ೩. ೧೫)

**ಶಾಣ –** ಸಾಣೆಕಲ್ಲು, ಒರೆಗಲ್ಲು (ಎಸೆವ ಅಮೃತಾಂಶುಬಿಂಬ ಶಾಣದೊಳ್ ಇಂತು ಬಸಂತಗಮ್ಮಱಂ [ಬಸಂತ+ಕಮ್ಮಱಂ] ಮಸೆದು ಪಳಚ್ಚನಾಗಿ ತಳಪತ್ತಿದ ಕಾಮನ ಖಡ್ಗದಂತೆ ಮೋಹಿಸಿತು: **ಶಾಂತೀಶ್ವಪು,** ೨. ೨೧)

**ಶಾಣಕ –** ಸಾಣೆಕಲ್ಲು (ಕನಕಂ ಶೋಧಿಸೆ ದರ್ಪಣಂ ಬೆಳಗೆ ರತ್ನಂ ಶಾಣಕೋಲ್ಲೀಢಮಾಗೆ ನಿತಾಂತಂ ವಿಮಲತ್ವಮಂ ತಳೆವವೋಲ್: **ಜಗನ್ನಾವಿ,** ೧೭. ೧೩)

**ಶಾಣೋಪಲ –** ಸಾಣೆಕಲ್ಲು (ದಿನಮಣಿಮಣಿಶಾಣೋಪಲ ವಿನಿಹಿತ ಘೃಷ್ಟಾರ್ಕಕಿರಣಖರಖಡ್ಗಲತಾಜನಿತ ಸ್ಫುಲಿಂಗಸಂಗಂ ಇದೆನೆ ತದ್ವಿಸ್ಫುರಿತ ವಹ್ನಿಕಂತತಿಯೆಸೆಗುಂ: **ರಾಜಶೇವಿ,** ೫. ೩೫):

**ಶಾತ –** ಹರಿತವಾದ (ಶಾತಶಸ್ತ್ರನಿವಹ ಉದಗ್ರ ಪ್ರಹಾರಾತಿ ಭೀಕರಮುಂ .. .. ತಾನೆನಿಸಿರ್ದ ವಿಷ್ಣು: **ಕಾದಂಬ,** ೨. ೨೫)

**ಶಾತಕುಂಭ –** ಚಿನ್ನ (ರಂಭಾಸ್ತಂಭೋಪಮಾನ ಊರುಯುಗಳೆಯರ್ ಶಾತಕುಂಭ ರಂಭಾವನಂಗಳುಮಂ: **ಆದಿಪು,** ೧೧. ೯೫ ವ)

**ಶಾತಶರ –** ಹರಿತವಾದ ಬಾಣ (ಭ್ರೂಚಾಪದಿಂದೆಯ್ದೆ ಪೊಯ್ಯದೊಡಂ ತೀಕ್ಷ್ಣ ಕಟಾಕ್ಷ ಶಾತಶರದಿಂ ಪಾದಾಗ್ರದೊಳ್ ಬೀಟೆ ಕುತ್ತದೊಡಂ: **ಲೀಲಾವತಿ,** ೧೧. ೮೦)

**ಶಾತಾಸ್ತ್ರ –** ಶಾತಶರ (ಶಾತಾಸ್ತ್ರಮಂ ಕಾಯ್ದಾಕರ್ಣಾಂತಂ ಮಲರೆ ತೆಗೆದು ಆಕ್ರೋಡನಂ ಕೋಡದೆಚ್ಚಂ: **ಲೀಲಾವತಿ,** ೬. ೧೬)

**ಶಾತ್ರವ –** ಶತ್ರು (ಕಾರಣಪುರುಷರಿರ ಅವನೀಭಾರಧುರಂಧರತೆಗೆ ಉಗ್ರ ಶಾತ್ರವಕುಲಸಂಹಾರಕ್ಕೆ ನೀಮೆ: **ಅನಂತಪು,** ೧೩. ೩೪)

**ಶಾತ್ರವಮಂತ್ರಪಂಚಕ** – ರಾಜನು ಶತ್ರುನಿನೊಡನೆ ವ್ಯವಹರಿಸುವಾಗ ಕೈಗೊಳ್ಳಬಹುದಾದ ಕರ್ಮಾರಂಭ, ಪುರುಷದ್ರವ್ಯಸಂಪತ್ತು, ದೇಶಕಾಲವಿಭಾಗ, ವಿನಿಪಾತಪ್ರತೀಕಾರ, ಕಾರ್ಯಸಿದ್ಧಿ ಎಂಬ ಐದು ಉಪಾಯಗಳು (ಅವಯವದಿಂದಟೆಗುಂ ಪಂಚವಿಧಾಹಿತದುರ್ಗಪಂಚಕಮಂ ಶಾತ್ರವಪಂಚಕಮನೊಪ್ಪುವ ತತ್ತ್ರಭುಮಂತ್ರಶಕ್ತಿಗಳ್ ತೀವ್ರಂಗಳ್: **ಶಾಂತಿಪು,** ೨. ೪೭)

**ಶಾಪಿಸು** – ಶಾಪ ಕೊಡು (ಗೊರವರ್ ಶಾಪಿಸೆ ದುಃಖದೆ ಪೊರಳುತ್ತಿರ್ದಂ ಗಡ ಅಕ್ಕಟಾ ದುರಿತಹರಂ: **ಸಮಯಪ,** ೮. ೧೨೫)

**ಶಾಪೋಪಹತ** – ಶಾಪಕ್ಕೆ ಒಳಗಾದ (ಇದು ಶಾಪೋಪಹತಮಾದ ಮಾನವನಾಗಲೆವೇಟ್ಟುಂ ಕೇವಲ ವೃಷಭನಾಗಲಾಜೆಯದು: **ಪಂಚತಂತ್ರ,** ೧೦೭ ವ)

**ಶಾಬ** – ಮರಿ (ಏಣಶಾಬತತಿ ನೀರುಣೆ ಕಣ್ಗೊಳಿಪ ಆಳವಾಳಮಂಡಳದಿಂ: **ಕಾದಂಸಂ,** ೧. ೭೩)

**ಶಾಬಕ** – ಮರಿ (ಶುಕಶಾಬಕಪ್ರಕರಮಂ ತೆಗೆದಂ ದಯೆಗೆಟ್ಟು ಲುಬ್ಧಕಂ: **ಕಾದಂಸಂ,** ೧. ೫೦)

**ಶಾಬ್ದಿಕ** – ಶಬ್ದಸಂಬಂಧಿಯಾದ; ಶಬ್ದ; ವ್ಯಾಕರಣಪಂಡಿತ (ಪೂಜ್ಯ ಪೂಜ್ಯಪಾದನೆ ಪದವಾಕ್ಯಕೋವಿದರೊಳ್ ಅತ್ಯಭಿನೂತನರ್ .. .. ಮತ್ತಿನ ... .. ಶಾಬ್ದಿಕರೊಳ್ ಆರ್ಗನಿತುಳ್ಳೊಡಂ ಅಟ್ಟಜುಳ್ಳೊಡಂ: **ಲೀಲಾವತಿ,** ೧. ೭)

**ಶಾರದ** – ಶರತ್ಕಾಲ (ಶಾರದ ಶಶಾಂಕಶಂಕಾಜನನ ಮನೋಹರ ಹಾರಂ ಅಂಘ್ರೀನಖಕಿರಣಾಚ್ಛಾರಣ ಸಂಕಾಶ ಮೌಕ್ತಿಕ ಪದಬಂಧಂ ಆ ದೇವಂ ಶ್ರೀದೇವನಾಮಮಂ ತಾಳ್ದಿ: **ಶಾಂತಿಪು,** ೭. ೧೩ ವ); ಬಿಳಿಯ ತಾವರೆ (ಮಾರ್ಪೊಳೆವ ತಾರೆಗಳಿಂ ಸಮೆದಂತೆ ಶಾರದಂಗಳ ಜಸದೇಟ್ಗೆ: **ಕಾದಂಸಂ,** ೫. ೪೪)

**ಶಾರದನೀರದ** – ಶರತ್ಕಾಲದ ಮೋಡ (ಶಾರದನೀರದಾಕಾರ ಸುಧಾಧವಳಿತ ಉತ್ತುಂಗಪ್ರಾಸಾದಕೂಟಕೋಟಿ ಸಂಕೀರ್ಣಮುಂ: **ಆದಿಪು,** ೧. ೭೦ ವ)

**ಶಾರದಾಭ್ರ** – ಶಾರದನೀರದ (ಸುಂದರ ತುಹಿನಾಚಳ ಸಂಕ್ರಂದನಗಜ ಶಾರದಾಭ್ರ ತಾರಾದ್ರಿ .. .. ಎಂದುಮನಂಗೊಂಡು ಕೊಂಡುಕಿನೆದು ಆದರದಿಂ: **ಸುಕುಮಾಚ,** ೧. ೫೬)

**ಶಾರದೇಂದು** – ಶರತ್ಕಾಲದ ಚಂದ್ರ (ಘನಸಾರ ಸಾರೀಭೂತ ಶಾರದೇಂದು ನಯನಾನಂದನ ಚಂದನಚರ್ಚೆಗಳಿಂದಂ: **ಪಾರ್ಶ್ವನಾಪು,** ೩. ೩೨ ವ)

**ಶಾರಿಕೆ** – ಮೈನಾ, ಹೆಣ್ಣು ಗಿಳಿ (ಆಕೆಯ ಕಳರವದೊಡನೆ ಮಚ್ಚರಿಸಿ ಸೆಜೆಗೆ ವಂದಂತಿರ್ದ ಪಂಜರ ಶುಕಶಾರಿಕೆಗಳುಂ .. .. ರಮಣೀಯಮಾಗೆ: **ಮಲ್ಲಿನಾಪು,** ೧೧. ೭೨ ವ); ಆನೆಯ ಮೇಲಣ ಜೀನು (ವಿಜಯವಾರಣ ಮಣಿ ಶಾರಿಕೆಯೊಳ್ ಸಹಸ್ರಲೋಚನನುಂ ಉತ್ಪಲನೇತ್ರೆಯುಂ ಉಭಯ ಪಾರ್ಶ್ವಮನಳಂಕರಿಸಿರೆ: **ಪಂಪರಾ,** ೧೦. ೮೭ ವ)

**ಶಾರ್ಙ್ಗ** – ವಿಷ್ಣುವಿನ ಬಿಲ್ಲಿನ ಹೆಸರು (ಸಮಮಲ್ಲಗ್ಗದ ಶಾರ್ಙ್ಗಂ ಅಗ್ಗದ ಪಿನಾಕಂ ಬಲ್ಪಿನಿಂದ ಎಂಬ ಚಾಪಮಮಂ ಈ ಬಾಲಕನೆಂತು .. .. ಖಂಡಿಸಿದಂ: **ಜಗನ್ನಾವಿ,** ೬. ೩೪)

**ಶಾರ್ಙ್ಗಚಾಪ** – ಕೊಂಬಿನಿಂದ ಮಾಡಿದ ಬಿಲ್ಲು (ಜಿನಚಂದ್ರಂ .. .. ಒಂದಂಬಿನಿಂದೆಚ್ಚನಾ ದಮಿತಾರಿ ದ್ರುಮ ಶಾರ್ಙ್ಗಚಾಪ ಜಯವಜ್ಜ್ರಾಪಾಶವಂ ಕೇಶವಂ: **ಶಾಂತಿಪು,** ೪. ೪೮); [ಜೈನ] ಮಧುರಾನಗರದ ಚೈತ್ಯಾಲಯದಲ್ಲಿ ಹುಟ್ಟಿದ ಧನುಸ್ಸು, ಕೃಷ್ಣ ಇದನ್ನು ವಪಡಿಸಿಕೊಳ್ಳುತ್ತಾನೆ (ಹರಿಯದೊಂದು ಪುಣ್ಯೋದಯದಿಂ ಶುಚಿ ನಾಗಶಯ್ಯೆಯುಂ ಶಾರ್ಙ್ಗಚಾಪಮುಂ ಪಾಂಚಜನ್ಯಮುಂ ಪುಟ್ಟುವುದುಂ: **ನೇಮಿನಾಪು,** ೮. ೨೬)

**ಶಾರ್ಙ್ಗಧರ** – [ಜೈನ] ವಾಸುದೇವ (ಅಂತು ಅಶ್ವಗ್ರೀವಂ .. .. ಚಕ್ರಮಂ ಕೊಂಡಿಡೆ ಶಾರ್ಙ್ಗಧರಂ ಕಡೆಗೊಂಡೊಂ ಕುಡುವಂತೆ ಮಗುಟ್ದದಂ ತಚ್ಚಂಡಾರಿಶಿವಂ ಸಿಂಧುರದುಂಡಿಗೆ ಧರೆಗೆನಿಸಿ ಮುಂದೆ ಬಿಟ್ಟುದು ಹರಿಯಾ: **ಶಾಂತಿಪು,** ೫. ೬೩)

**ಶಾರ್ಙ್ಗಿ** – ವಿಷ್ಣು (ಮಗಧಾದ್ಯನೇಕನೃಪರನಿರ್ಮೆಯೆ ತಾಗಿದರಂದು ಶಾರ್ಙ್ಗಿಯಂ: **ಜಗನ್ನಾವಿ,** ೮. ೬೧)

**ಶಾರ್ದೂಲ** – ಹುಲಿ (ಭೀಕರಶಾರ್ದೂಲಕುಳಂ ಕುರಂಗ ಕುಲದೊಳ್ ತಳ್ವೊಯ್ದು ಬಂದಾಡೆ: **ಆದಿಪು,** ೯. ೯೭)

**ಶಾರ್ದೂಲನಖಾಂಕುರ** – ಹುಲಿಯುಗುರು (ಕೊರಲೊಳ್ ಶಾರ್ದೂಲ ನಖಾಂಕುರಂಗಳುಂ ಹರಿ ನಖಾಂಕುರಂಗಳುಮಂ ಅಂದೇಂ ಕರಮೆಸೆದಿರ್ದುವೊ ಶೌರ್ಯಾಂಕುರಗಳೆಂಬಿನಂ ಆದಿದೇವಾತ್ಮಜನಾ: **ಆದಿಪು,** ೮. ೪೦)

**ಶಾರ್ವರ** – ಕಷ್ಟ (ಶಾರ್ವರದೆ ನೆರೆದು ಬರ್ಪ ವಿಬುಧವಂದಿವೃಂದದ ಮನೋಮುದಮಂ ಒದವಿಸುತ್ತುಂ: **ಆಚವರ್ಧ,** ೨. ೩೩ ವ)

**ಶಾರ್ವರಿ** – ರಾತ್ರಿ (ಉರ್ವರೆ ಮಣಿಪರ್ವತಮಂ ಶಾರ್ವರಿ ಪರಿಪೂರ್ಣಚಂದ್ರನಂ ಪಡೆವಂತೆ ಅಂತರ್ವತ್ನಿ ಸರ್ವಲಕ್ಷಣ ಸರ್ವಗುಣಾನ್ವಿತನೆನಿಪ್ಪ ಸುತನಂ ಪಡೆದಳ್: **ಪಂಪರಾ,** ೩. ೧೦೯)

**ಶಾಲ** – ಕೋಟೆಯ ಗೋಡೆ (ತೋಳಗಿದುದು ಇಂತು ರಂಜಿಪ ಕನತ್ ಕನಕಾಚಲವಗ್ರದೊಳ್ ಮಹೋಜ್ವಳ ಮಣಿಶಾಲಂ: **ಶಬರಶಂ,** ೧. ೫೪)

**ಶಾಲಗ್ರಾಮ** – ಸಾಲಿಗ್ರಾಮ (ಆ ಮಾಧವನಂ ಶಾಲಗ್ರಾಮಮೆಂಬ .. .. ಕಿಱುಗಲ್ಲಗಳೊಳಂ ಪ್ರೇಮದಿನೇಂ ಜಾನಿಸುವುದೊ; **ಸಮಯಪ,** ೮. ೧೪೭)

**ಶಾಲದ್ರುಮ** – ಸಾಲವೃಕ್ಷ (ಉದ್ಯಾನಮಧ್ಯಪ್ರದೇಶದ ಶಾಲದ್ರುಮಾಧಃಸ್ಥಳನಿವಾಸಿಗಳಾಗಿರ್ದ ಸುಧರ್ಮಮುನಿ ಮುಖ್ಯರಂ ಕಂಡು: **ಸುಕುಮಾಚ,** ೩. ೨೩ ವ)

**ಶಾಲಿ** – ಬತ್ತ (ಮರಕತಕಾಂತಿವೆತ್ತು ಬೆಳೆದೊಪ್ಪುವ ಶಾಲಿಯ ಕೆಯ್ವೊಲಂಗಳಿಂ .. .. ಎಸೆವುತ್ತೆ: **ತ್ರಿಷಷ್ಟಿಪು,** ೨. ೨೩)

**ಶಾಲಿಕೆ** – ಮನೆ (ಹರಿಚಂದನವಂದನಮಾಲಿಕೆಗಳ್ ಪರಿವೇಷ್ಟಿಸೆ ಮೆಱೆದುವು ಶಾಲಿಕೆಗಳ್: **ಚಂದ್ರಪ್ರಪು,** ೪. ೬೩)

**ಶಾಲಿವನ** – ಬತ್ತದ ಗದ್ದೆ (ತೊಱೆ ಶಾಲಿವನಾಳಿಯ ಪೆಂಪಿನಿಂಪಿನಾವರಿಸೆ ಪೊಲಂ: **ಕಾದಂಬ,** ೯. ೭೯)

**ಶಾಲಿಹೋತ್ರ** – ಅಶ್ವಶಾಸ್ತ್ರವನ್ನು ಬರೆದ ಋಷಿ (ಜಾತ್ಯಶ್ವಂಗಳಂತಿರ್ದುತಿರ್ಪವರ್ಗೇಂ ಸಾರ್ದುವೊ ಶಾಲಿಹೋತ್ರ ರವಿಪುತ್ರಾರೋಹಣಪ್ರೌಢಿಗಳ್: **ಪುಷ್ಪದಂಪು,** ೨. ೫೮)

**ಶಾಲೀನತೆ** – ವಿನಯ, ಲಜ್ಜೆ (ಕಾದಂಬರೀದೇವಿ ಶಾಲೀನತೆಯನವಲಂಬಿಸಿ ನುಡಿಯಲಜೆಯದೆ: **ಕಾದಂಸಂ,** ೫. ೯೩ ವ)

**ಶಾಲೂಕ** – ಕಮಲದ ಗಡ್ಡೆ (ಕೊಳದಿಂದಂ ತೆಗೆದೊಟ್ಟಿಕೊಂಡ ಕುಮುದಾಂಭೋಜಾತ ಕಲ್ಹಾರ ಕುಟ್ಮಲ ಶಾಲೂಕ ಮೃಣಾಳಜಾಲಮಂ ಇಡುತ್ತ ಈಡಾಡುತಂ: **ಕಾದಂಬ,** ೪. ೧೩)

**ಶಾಲೂರ** – ಕಪ್ಪೆ (ಸಾರ್ದ್ರ ವೇಳಾಸುರಂಗ ನಿವೇಶಸ್ಥಿತಸಂಕಟಾಂಗಮಯ ಶಾಲೂರೋತ್ಕರಂ.. ..ಆ ಗ್ರೀಷ್ಮದೊಳ್: **ಶಾಂತೀಶ್ವಪು,** ೧೨. ೭೯)

**ಶಾಲೆ** – ವಸ್ತ್ರ, ಬತ್ತ (ಪಚ್ಚೆಯ ಶಾಲೆಯಂ ಧರಾಲಲನೆ ವಿಳಾಸದಿಂ ತಳೆದಳೆಂದೆನೆ ಶಾಲೆಯ ಗರ್ದೆ ತೋಱುಗುಂ: **ರಾಜಶೇವಿ,** ೨. ೧೦)

**ಶಾಲೇಯ** – ಬತ್ತದ ಗದ್ದೆ (ಲೀಲೆಯಿಂ ಅದಱ ನೆಲಂ ಪರಿಪಾಲಿಸಿದುವು ಕಣ್ಗೆ ನಾಡೆ ಮೌದ್ಗಂ ಮಾಷ್ಯಂ ಶಾಲೇಐಂ ವ್ರೈಹೇಯಂ: **ಚಂದ್ರಪ್ರಪು,** ೧. ೯೨)

**ಶಾಲ್ಮಲಿ** – ಬೂರುಗ (ಇದು ಶಾಲ್ಮಲಿಪಾದಪಂ ಇಂತಿದು ಜಂಬೂವೃಕ್ಷಂ: **ಆದಿಪು,** ೨. ೨೬)

**ಶಾಲ್ಯಕ್ಷತ** – ಮಂತ್ರಾಕ್ಷತೆ ಶಾಲ್ಯಕ್ಷತ ಧೂಪದೀಪ ಚರುಸಂದೋಹಂಗಳಿಂ ಸರ್ವಮಂಗಳಸಂಪೂರ್ಣಮೆನಿಪ್ಪ ಜೈನಗೃಹಮಂ ಪೊಕ್ಕಂ: **ಪಂಪರಾ,** ೪. ೧೩೧)

**ಶಾಶ್ವತಾಸ್ಪದ** – ಮೋಕ್ಷ (ನಿಂದಂ ಕೊಳಲ್ ಶಾಶ್ವತಾಸ್ಪದಮಂ ಯೋಗನಿಯೋಗನಿಶ್ಚಳಮನಂ ಸಂದಾಧಿಭಟ್ಟಾರಕಂ: **ಆದಿಪು,** ೯. ೧೨೩)

**ಶಾಸನ** – ಅಪ್ಪಣೆ, ನಿಗ್ರಹ (ಜಯಜಯ ದೇವದೇವ ಪುರಶಾಸನ ಶಾಸನೈಕಚಿನ್ಮಯ: **ರಾಜಶೇವಿ,** ೧೩. ೫೨); ಸ್ಮಾರಕ ಶಿಲೆ (ಚಾಗದ ಕಂಬಮಂ ನಿಱಿಸಿ ಬೀರದ ಶಾಸನಮಂ ನೆಗಟ್ಟಿ ಕೋಳ್ಪೋಗದ ಮಂಡಲಂಗಳನೆ ಕೊಂಡು ಜಗತ್ತ್ರಿತಯಂಗಳೊಳ್ ಜಸಕ್ಕೆ ಆಗರಮಾದ ಬದ್ದೆಗನಿಂ ಆ ನರಸಿಂಹನಿಂ ಅತ್ತ ನಾಲ್ವರಲ್ ಮೇಗು ಪೊದಳ್ದ ಚಾಗದೊಳಂ ಒಂದಿದ ಬೀರದೊಳಂ ಗುಣಾರ್ಣವಂ: **ಪಂಪಭಾ,** ೧. ೫೦)

**ಶಾಸನದೀಪಕ** – [ಜೈನ] ಧರ್ಮವನ್ನು ಬೆಳಗುವವನು (ಆಸನ್ನಭವ್ಯರ್ ಅರ್ಹಚ್ಛಾಸನದೊಳ್ ಭಕ್ತರೆಂದೊಡಿಂ ಪ್ರತ್ಯಕ್ಷೋದ್ಭಾಸಿಯನೀಕ್ಷಿಸಿ ಜಿನನಂ ಶಾಸನದೀಪಕನ ಬಕ್ತಿ ಕಿಱಿದಾದಪುದೇ: **ಶಾಂತಿಪು,** ೧೨, ೩೯)

**ಶಾಸನದೇವತೆ** – ಜೈನ ದೇವತೆ (ಶಾಸನದೇವತೆಗೆಂದೊಡೆ ವೀಸದ ಪುಷ್ಪಮನೀಯರ್ ಅಱುಗುಲಿವೆಂಡಿರ್: **ಸಮಯಪ,** ೫. ೯೯)

**ಶಾಸನದೇವಿ** – ತೀರ್ಥಂಕರನ ಯಕ್ಷಿ (ಜಿನವೃಂದಾರಕರಿಪ್ಪತ್ತು ನಾಲ್ವರ್ ಆ ತೀರ್ಥನಾಥಸಮುದಾಯದ ಶಾಸನದೇವಿಯರ್ಕಳ್ ಇರ್ಪತ್ತುನಾಲ್ವರೀಗೆ ಯಕ್ಷರ್ ಅಕ್ಷಯಸುಖಮಂ: **ಅಜಿತಪು,** ೧. ೫)

**ಶಾಸನಹರ** – ಓಲೆಕಾರ (ಬಗೆಯೊಳಗೆ ಬಳೆದ ಭೀತಿಯೆ ಮಿಗೆ ಭವದಾಸ್ಥಾನಭೂಮಿಯಂ ಪುಗುಗೆ ವನಂಬುಗುಗೆ ಅಲ್ಲದಂದು ಪೆಱತೆಡೆ ಪುಗುವೊಡೆಯಿಲ್ಲವರ್ಗೆ ಬೆಸಸು ಶಾಸನಹರರಂ: **ಆದಿಪು,** ೧೪. ೨೨)

**ಶಾಸನೋಪಹತ** – (ಶಾಸನ+ಉಪಹತ] ಆಜ್ಞಾಧೀನ (ಅಂತು ಅವರಂ ಶಾಸನೋಪಹತರ್ಮಾಡಿ ಕಾವೇರಿಸ್ರವಂತಿಸಮುತ್ತರಂ ಆನಂತರಂ ಬರೆವರೆ: **ಶಾಂತಿಪು,** ೧೧. ೩ ವ)

**ಶಾಸಿಸು** – ಶಿಕ್ಷಿಸು (ಶಾಸಿಸು–ಶಿಕ್ಷಾಯಾಂ: **ಶಬ್ದಮದ,** ಧಾ. ೭೫೧); ನಿಯಮಿಸು (ಶಾಸಿಸುವರ್ ನೂಱರ್ಕಂ ಸಾಸಿರಕಂ ಪ್ರಾಂತಲೋಪಮಂ ಕೆಲವೆಡೆಯೊಳ್: **ಕಾವ್ಯಾವಲೋ,** ೨೭೮)

**ಶಾಸ್ತಿ** – ದಂಡನೆ (ಭೀಷ್ಮಕನಂ ಈಗಳ್ ಶಾಸ್ತಿಯಂ ಮಡೆನುತ್ತವೆ ಚಂದ್ರಧ್ವಜ ಭೂಭೂಜಂ ನುಡಿದತ್ಯಾಕ್ಷೇಪದಿಂ ಕೋಪದಿಂ; **ಕುಸುಮಾಕಾ,** ೧೫. ೨೭)

**ಶಾಸ್ತಿಗೆಯ್** – ಶಿಕ್ಷೆ ವಿಧಿಸು (ಕಪಿಳನಂ ಪಿಡಿದು ಪೊಡೆಯಿಸಿ ಶಾಸ್ತಿಗೆಯ್ದದೆ ಕರುಣಿಸಿ ನಾಡ ಗಡಿಯಿಂ ಪೊಱಮಡಿಸಿ ಕಳೆಯೆ: **ಶಾಂತೀಶ್ವಪು,** ೬. ೩೮ ವ)

**ಶಾಸ್ತ್ರದಾನ** – [ಜೈನ] ನಾಲ್ಕು ಬಗೆಯ ದಾನಗಳಲ್ಲಿ ಒಂದು, ಜೈನಗ್ರಂಥಗಳನ್ನು ಶ್ರಾವಕರಿಗೆ ನೀಡುವುದು (ಈ ಪೊಟಲೊಳ್ ತಪಮುಂ ಉಭಯದಾನಮುಂ ಶಾಸ್ತ್ರದಾನಮುಂ ಮುನ್ನಂ ಆದಿದೇವನಿಮ ಪ್ರವರ್ತಿತಮಾಗೆ: **ಚಾವುಂಪು,** ಪು. ೪೩೪. ಸಾ. ೨೦)

**ಶಾಸ್ತ್ರಪಾರಗ** – ಶಾಸ್ತ್ರಗಳಲ್ಲಿ ಪಂಡಿತನಾದವನು (ಕರಣಾನುಯೋಗ ದ್ರವ್ಯಾನುಯೋಗಂಗಳಂ ಕಲ್ತು ಶಾಸ್ತ್ರಪಾರಗರಾಗಿ ಭಟಾರರ ಬೆಸಗೊಡು: **ವಡ್ಡಾರಾ,** ಪು. ೧೦೩, ಸಾ. ೧೬)

**ಶಾಸ್ತ್ರೋಕ್ತ** – ಶಾಸ್ತ್ರಗಳಲ್ಲಿ ಹೇಳಿರುವ ರೀತಿ (ಯತಿಯೆಂಬುದುಸಿರ್ವ ತಾಣಂ ಕೃತಾಸ್ಪದಂ ವೃತ್ತಜಾತಿಪದಪದ್ಧತಿಯೊಳ್ ಸತತಂ ಛಂದೋವಿದಿತಪ್ರತೀತ ಶಾಸ್ತ್ರೋಕ್ತಮಾರ್ಗದಿಂದಱಿವುದಿದಂ: **ಕವಿರಾಮಾ,** ೧. ೭೧)

**ಶಾಳ** – ಮನೆ (ಅದಱ ವಿಶಾಳತೆವೆತ್ತಿರ್ಪ ತತ್ಪ್ರಥಮಶಾಳದೊಳಗ್ರ ಸುರಪತಿ ಪಿತೃಪತಿ ಶರಧಿಪತಿ ಧನದಪತಿಗಳ ಕೇಳೀವಿಲಾಸಶೋಭಿತಂಗಳಪ್ಪ ನಾಲ್ಕುಂ ದೆಸೆಗಳ ಮಣಿರತ್ನಹರ್ಮ್ಯಂಗಳುಮಂ: **ಶಾಂತೀಶ್ವಪು,** ೧೬. ೩೧ ವ); ಸರ್ಜವೃಕ್ಷ, ಸಾಲವೃಕ್ಷ (ವೇಳಾವನಸ್ಥೂಳಶಾಳಂಗಳೊಳ್ ಆದಿಬ್ರಹ್ಮಪುತ್ರಂ ನಿಜವಿಜಯಗಜೇಂದ್ರಂಗಳಂ ಕಟ್ಟೆ: **ಆದಿಪು,** ೧೪. ೫೩); ಸಾಲ, ಕೋಟೆಯ ಗೋಡೆ (ಲವಣಜಳಧಿ ಬಳಸಿದಂತೆ ಬಳಸಿದ ಅಗಟ ನೀಳದಿಂದ ಉದಗ್ರ ಕನಕ ಶಾಳದಿಂ: **ಪಂಪಭಾ,** ೧. ೫೮)

**ಶಾಳಭಂಜಿಕೆ** – ಶಾಲವೃಕ್ಷದ ಮರದಿಂದ ಮಾಡಿದ ಬೊಂಬೆ (ಪಾಂಥರ ಕಣ್ಗೆ .. .. ಮನಂಗೊಳಿಸಿರ್ಪರ್ ಅನಂಗರಾಜಧಾರಾಗೃಹ ಶಾಳಭಂಜಿಕೆಗಳಂತೆ ಅಱವಟ್ಟಿಗೆಯೊಳ್ ಲತಾಂಗಿಯರ್: **ಪುಷ್ಪದಂಪು,** ೨. ೨೧)

**ಶಾಳಿಗೋಪಿ** – ಗದ್ದೆ ಕಾಯುವವಳು (ಕಾಕಳಿಯೊಳ್ ಚಕ್ರವರ್ತಿಯಂ ಪಾಡಿ ಶಾಳಿಗೋಪಿಯರೆಸೆದರ್: **ಶಾಂತಿಪು,** ೧೦. ೧೩೮)

**ಶಾಳಿವನ** – ಬತ್ತದ ಗದ್ದೆ (ತುಂಗಮತಂಗಜೇಂದ್ರವನದಿಂ ಫಲಭಾರವಿನಮ್ರ ನಾಳಿಕೇರಗಳಿಂ ಅದ್ರಿಕಾನನದಿಂ ಉತ್ತಮ ಶಾಳಿವನಂಗಳಿಂ.. ..ಆವ ಮಂಡಲಮುಮಂ ಗೆಲೆವಂದುದು ವೆಂಗಿಮಂಡಲಂ: **ಅಜಿತಪು,** ೧. ೨೧)

**ಶಾಳಿಹೋತ್ರ** – ಶಾಲಿಹೋತ್ರ ಋಷಿ ಬರೆದ ಅಶ್ವಶಾಸ್ತ್ರ (ಸಾಮುದ್ರಿಕಂ ಶಾಳಿಹೋತ್ರಂ .. .. ಶುಶ್ರುತಮಂ ಎಂದಿವು ಮೊದಲಾದ ನರವೈದ್ಯಮುಮಂ: **ವಡ್ಡಾರಾ,** ಪು. ೨೩, ಸಾ. ೧೫)

**ಶಿಂಜಿತ** – ಧ್ವನಿ ಮಾಡುವ (ಖಂಡಾಯಮಾನ ಭ್ರೂಲತಾವಿಭ್ರಮಭ್ರಾಜಿತೆಯರುಂ ಮಣಿಮಯಮಂಜೀರ ಮಂಜುಶಿಂಜಿತ ವಾಚಾಳಚಾರುಚರಣೆಯರುಂ ಮದಮದಿರಾಮದೋನ್ಮತ್ತೆಯರುಂ: **ಪಂಚತಂತ್ರ,** ೧೯೯ ವ);

ಧ್ವನಿ (ಅಳಿನೀಜ್ಯಾಮೃದುಮಂಜ ಶಿಂಜಿತಸಮಂ ಸಣ್ಣಿಂಚರಂ: **ಲೀಲಾವತಿ,** ೩. ೬೧)

**ಶಿಂಶುಪಾವೃಕ್ಷ** – (ಅಣುವಂ ಶಿಂಶುಪಾವೃಕ್ಷದ ತಳಿರೊಳಗುಟಿದು ನೋಡುತ್ತಿರೆ: **ಚಾವುಂಪು,** ಪು. ೩೮೩. ಸಾ. ೨೨)

**ಶಿಂಶುಮಾರ** – ಮೊಸಳೆ (ಶಿಂಶುಮಾರಂ ಮಾರುತವೇಗದಿಂ ಭೋರೆನೆ ಬಂದು ಅತ್ತಿಯ ಮರದ ಸಮೀಪಕ್ಕೆ ಸಾರಲೊಡಂ: **ಪಂಚತಂತ್ರ,** ೪೦೪ ವ)

**ಶಿಕ್ಷಾವಚನ** – ಉಪದೇಶದ ಮಾತು (ಗುರುಶಿಕ್ಷಾವಚನಂಗಳಂ ಹೃದಯದೊಳ್ ಮಾಂಗಲ್ಯಗೀತಾಮೃತಸ್ವರಮಂ ಕರ್ಣದೊಳ್ ಆಂತು: **ಚಂದ್ರಪ್ರಪು,** ೪. ೨೫)

**ಶಿಕ್ಷಾವ್ರತ** – [ಜೈನ] ಶ್ರಾವಕರು ಪಾಲಿಸಬೇಕಾದ ಸಾಮಯಿಕ, ಪ್ರೋಷಧ, ಅತಿಥಿಸಂಗ್ರಹ, ಸಲ್ಲೇಖನ ಎಂಬ ನಾಲ್ಕು ವ್ರತಗಳು (ಭಟಾರರ ಪಕ್ಕದೆ ಆಂ ಅಣುವ್ರತ ಗುಣವ್ರತ ಶಿಕ್ಷಾವ್ರತಮೆಂದಿಂತು ದ್ವಾದಶ ವಿಧಮಪ್ಪ ಶ್ರಾವಕ ಧರ್ಮಮುಮಂ: **ವಡ್ಡಾರಾ,** ಪು ೧೨೭, ಸಾ ೨೨)

**ಶಿಕ್ಷಾಸೂತ್ರ** – ಉಚ್ಚಾರಣೆಯ ಕ್ರಮ (ಈಕ್ಷಿಸಿ ಶಿಕ್ಷಾಸೂತ್ರದ ಲಕ್ಷಣಮಂ ಲೋಕರೂಢಿ ಕಿಡದವೊಲವರ್ ಲಕ್ಷಿಪುದು ನುಡಿಗಳೊಳ್ ಬಹುಲಾಕ್ಷೇಪಣಮಿಲ್ಲದಿರೆಯುಂ ಅಜೆವುದು ಕೆಲವಂ: **ಶಬ್ದಮದ,** ೨೬೬)

**ಶಿಕ್ಷಿಸು** – ನಿಯಮಿಸು (ಕಸದೊಡನೆ ಕೂಡಿ ಪೆರ್ಚಿದ ಸಸಿಯುಂ ಶಿಕ್ಷಿಸದ ಮಕ್ಕಳುಂ .. .. ಒಪ್ಪಲಾರ್ಕುಮೆ ಕಡೆಯೊಳ್: **ಧರ್ಮಾಮೃ,** ೨. ೫೧); ಬೋಧಿಸು (ವಿದ್ಯೋಪವಿದ್ಯೆಗಳಂ ಅತಿ ಹೃದ್ಯಂಗಳಮ ಆತ್ಮಜಂಗೆ ಶಿಕ್ಷಿಸುವಂತೆ ಆತೋದ್ಯರವಮುಣ್ಮೆ: **ಚಂದ್ರಪ್ರಪು,** ೪. ೪); ವಿದ್ಯೆ ಕಲಿಸು (ಇವರ್ ನಮ್ಮನತ್ಯಾಗ್ರಹದಿಂ ಶಿಕ್ಷಿಸಿ ಸಾಕ್ಷರಿಕರಂ ಮಾಟ್ಪೊಡೆ ನಮ್ಮೊಲ್ಲದುದು ಆವುದು: **ಸುಕುಮಾಚ,** ೨. ೫೫ ವ)

**ಶಿಕ್ಷೆಗೊಳಿಸು** – ತಿಳಿಯ ಹೇಳು (ಧರ್ಮಧುರಂಧರನಾಗಿರಲ್ ಶಿಕ್ಷೆಗೊಳಿಪರೆಂತುಂ ಋಷಿಯರ್: **ಸಮಯಪ,** ೭. ೪೩)

**ಶಿಖಂಡ** – ಚೆಂಡಿಕೆ (ಸಕಲರಾಜ ಶಿಖಂಡಶೇಖರ ಚರಣಾರವಿಂದನುಂ .. .. ಅಪ್ಪ ಯುವರಾಜಂ: **ಕಾದಂಸಂ,** ೫. ೯೯ ವ); ನವಿಲಿನ ಕೊಟ್ಟು, ನವಿಲುಗರಿ (ಶಿಖಿ ನವಿಲಕ್ಕುಂ .. .. ಶಿಖಂಡಮದಱ ಕಳಾಪಂ: **ಅಭಿಧಾವ,** ೧. ೯. ೧೨)

**ಶಿಖಂಡಕ** – ಚೆಂಡಿಕೆ (ತಳಿರ್ಗಳೆ ದಟ್ಟಿಯಾಗೆ ಕೊನರೆಂಬ ಬೆರಲ್ಗದು ವಜ್ರಮುಷ್ಟಿಯಂತೆ ಅಳವಡೆ ತೋಱಿ ಮಾಮಿಡಿ ಶಿಖಂಡಕದಂತಿರೆ .. .. ಮಾಮರಮದೊಪ್ಪಿತು ಮಾರನ ಮಲ್ಲನಂತೆವೋಲ್: **ರಾಜಶೇವಿ,** ೯. ೫೭)

**ಶಿಖಂಡಮಂಡನ** – ತಲೆಯಲ್ಲಿ ಧರಿಸುವ ಆಭರಣ (ಎಂದು ಮನುನರೇಂದ್ರವೃಂದಾರಕಶಿಖಂಡಮಂಡನಮಣಿಯೆನಿಸಿದ ಬಾಹುಬಲಿಕುಮಾರಂ: **ಆದಿಪು,** ೧೪. ೮೨ ವ)

**ಶಿಖಂಡಮಣಿ** – ಶಿಖಂಡಮಂಡನ (ಆತ್ಮೀಯ ಶಿಖಂಡಮಣಿ ಮರೀಚಿಗಳಿಂ ನಿಜಪದಕಮಲದೊಡನೆ ವಸುಂಧರೆಯುಮಂ ಅಳಂಕರಿಸಿದ ವಸುಂಧರೆಯುಮಂ: **ಆದಿಪು,** ೪. ೨೪ ವ)

**ಶಿಖಂಡಶೇಖರ** – ಶಿಖಂಡಮಂಡನ (ಸಕಲರಾಜ ಶಿಖಂಡಶೇಖರಾರ್ಚಿತ ಚರಣಾರವಿಂದನುಂ .. .. ಎನಿಸಿದ ಶ್ರೀಮತ್ ತಾರಾಪೀಡದೇವಂ: **ಕಾದಂಬ,** ೭. ೫೦ ವ)

**ಶಿಖಂಡಿ** – ನವಿಲು (ಶುಕ ಶಿಖಂಡಿ ಹಂಸ ಸಾರಸ ಕ್ರೌಂಚ ಕರಿ ಕಳಭ ಮಲ್ಲಾದ್ಯನೇಕ ಆಕಾರವಿಕೃತಾಮರಕುಮಾರ ಪರಿಪತನನಟನ ಮೃದುಕೂಜಿತ .. .. ಆದಿ ನಾನಾ ವಿನೋದಂಗಳೊಳಂ: **ಆದಿಪು,** ೮. ೩ ವ); ಅರ್ಧನಾರೀಶ್ವರ, ಶಿವ (ದಕ್ಷನಳಿಯಂ ಶಿಖಂಡಿ ವಳಕ್ವಾಂಗಂ .. .. ಎಂದು .. .. ಮೊಗಟಲಾಗದು: **ಸಮಯಪ,** ೮. ೫೭)

**ಶಿಖಂಡಿತಾಂಡವ** – ನವಿಲ ಕುಣಿತ (ಪರಿಪಕ್ವ ರಾಜಜಂಬೂ ದ್ರುಮವಿಸ್ತಾರಂ ಶಿಖಂಡಿತಾಂಡವಸಾರಂ ನವಜಳದಸಮಯಮೇನೆಸೆದಪುದೋ: **ಆದಿಪು,** ೧೧. ೮೮)

**ಶಿಖರಿ** – ಶಿಖರವುಳ್ಳುದು, ಬೆಟ್ಟ (ಪಶ್ಚಿಮಶಿಖರಿ ಶಿರೋಭಾಗದೊಳ್ ಬಿಬ್ದುದೆಂಬಂತೆ ಇನಬಿಮಬಂ ರಂಜಿಸತ್ತು: **ಕಾದಂಸಂ,** ೨. ೪೯); ಒಂದು ಪ್ರಾಣಿ (ಮರೆ ಮುಸು ಕೋಡಗಂ ಶಿಖರಿ ಪೇರುಡು ಮುಂಗುಲಿ .. .. ಅನೇಕ ಮೃಗಮಿರ್ಪುವು: **ತ್ರಿಷಷ್ಟಿಪು,** ೨೭. ೨೩)

**ಶಿಖರಿಣಿ** – ಒಂದು ಭಕ್ಷ್ಯ, ಸೀಕರಣೆ (ಏಕೀಭೂತ ಸಕಳಭುವನ ಶಿಶಿರದ್ರವ್ಯಸಂಬಾರದ್ರವ್ಯಶಂಕಾಕರ ಶಿಖರಿಣೀ ರಮಣೀಯಮುಮಂ: **ಆದಿಪು,** ೧೧. ೨೬ ವ)

**ಶಿಖರಿಶಿಖರ** – ಬೆಟ್ಟದ ತುದಿ (ಆ ಶಿಖರಿಶಿಖರಮೆ ಕಳನಾಗಿಯುಂ ವನದೇವತಾಪೇಟಕಮೆ ನೋಟಕರಾಗಿಯುಂ: **ಚಂದ್ರಪ್ರಪು,** ೫. ೭೭ ವ)

**ಶಿಖಾ** – ನವಿಲು (ಪೊಳೆವಿನಕಿರಣಂ ಮೆಯ್ಗಳನಳುರೆ ಕನಲ್ದಗಿದು ಸೋಗೆಯಂ ಪರಪಿ ನೆಟಿಲ್ಗಳನಾಸೆವಡೆ ಶಿಖಾವಳಕುಳತಾಂಡವಮೆಸೆದುದಾ ಶರತ್ಸಮಯದೊಳಂ: **ಆದಿಪು,** ೧೧. ೫೧)

**ಶಿಖಾಕಳಾಪ** – ಬೆಂಕಿಯ ನಾಲಗೆಗಳ ಸಮೂಹ (ಅಗ್ನಿದೇವನ ಶಿಖಾಕಳಾಪದ ಕೋಳುಮಂ ಎಂತಾನುಂ ಬಂಚಿಸಿ ಬಲೆಪಜೆದ ಕೋಕನಂತೆ ಒರ್ವ ವನಪಾಲಕಂ ಪೋಗಿ ದೇವೇಂದ್ರನಂ ಕಂಡು: **ಪಂಪಭಾ,** ೫. ೯೩ ವ)

**ಶಿಖಾಮಣಿ** – ತಲೆಯ ಆಭರಣ (ಉಷ್ಣೀಷಪಟ್ಟಂ ಶಿಖಾಮಣಿಯಿಂ ಕಂಧರಮಾರದಿಂ ನೊಸಲು ದಾರಾಶ್ವತ್ಥಪತ್ರಾಂಕದಿಂ ಅಲಂಕೃತನಾಗಿಯುಂ: **ಶಾಂತಿಪು,** ೧೦. ೫೮ ಮತ್ತು ೫೮ ವ)

**ಶಿಖಾವಹ** – ಬೆಂಕಿ (ವನವನಧಿಯ ಬಡಬಶಿಖಾವಹನೆನೆ ಮನೋಜ್ಞಮಾಗಿ ಪೂತೊಱಗುವ ಕಿಂಶುಕಸಮುದಯಮುಂ: **ಶಬರಶಂ,** ೨. ೪೨ ವ)

**ಶಿಖಾಸ್ರಜ** – ಜಟಾಮಾಲೆ (ಸುರುಚಿರಕುಂದಬೃಂದದ ಶಿಖಾಸ್ರಜಮೆಂಬಿವಂ ಅಬ್ಜಸೂತ್ರದಿಂ ವಿರಚಿಪ ಮಾಲೆಗಾರ್ತಿಯರ ಮಂತಣಮೊಪ್ಪುಗುಂ: **ರಾಜಶೇವಿ,** ೨. ೧೦೪)

**ಶಿಖಿ** – ಬೆಂಕಿ (ಕ್ರಂದತ್ ಸ್ಯಂದನ ಜಾತ ನಿರ್ಗತ ಶಿಖಿಜ್ವಾಳಾಸಹಸ್ರಂಗಳ್ ಆಟಂದೆತ್ತಂ ಕವಿದೆಟ್ಟಿ ಬೇವ ಶವಸಂಘಾತಂಗಳಂ: **ಪಂಪಭಾ,** ೧೩. ೭೧); ನವಿಲು (ಭವ್ಯನೃಪನಿಕರಮದೇನೆಂಬುತ್ಸಾಹದೆ ನಲಿದುದೊ ಸಾಂಬುಪಯೋಧರಕೆ ನಲಿವ ಶಿಖಿನಿಕರದವೊಲ್: **ಆದಿಪು,** ೧೦. ೧೨)

**ಶಿಖಿವಿಷ್ಟ** – ಶಿವ (ಆ ನಾಯನಾರರ ಪರಮಭಕ್ತಿಯ ನಿಷ್ಠೆಯಿಂ ಶಿಖಿವಿಷ್ಟಂ ಕೊಂಡಾಡುತ್ತಾಗಳ್: **ತ್ರಿಷಷ್ಟಿಪು,** ೧೫. ೪೫ ವ)

**ಶಿಖಿಶಿಖೆ** – ಬೆಂಕಿಯ ಜ್ವಾಲೆ (ಶಿಖಿಶಿಖೆಯಂ ಪುಗಲಿರ್ದ ಸೊಸೆವಿರೆಲ್ಲರ ಮೊಗಂಗಳಂ ದೇವ ನೋಡಿ ಕರುಣಿಸವೇಡಾ: **ಅಜಿತಪು,** ೧೦. ೪೧)

**ಶಿತ** – ಹರಿತವಾದ (ತಣಿವಂತಿರೆ ರಸದಿಂ ಬುಧರಣಿಯರಮೆಸಗುವುದು ಸುಕವಿ ಸತ್ಕೃತಿಯನಣಂ

ಗುಣವರ್ಮನಾಗಿ ಶಿತಮಾರ್ಗಣದಂತು ಉಚ್ಚಳಿಪದಿರ್ಪಿನಂ: ಪುಷ್ಪದಂಪು, ೧. ೬೦)

**ಶಿತಾಸಿ** – ಹರಿತವಾದ ಕತ್ತಿ (ಆ ವ್ರತ ಶಿತಾಸಿ ಸಂಸಾರವ್ರತತಿಚ್ಛೇದಮಕ್ಕುಂ ಆ ಸಂಸಾರಂ ತೀವ್ರತರ ದುಃಖದಂ ನಾಳೀವ್ರಣಸದೃಶಂ ಶರೀರಿಗದ ಕಿಡೆ ನೆಗಟೆಂ: **ಶಾಂತಿಪು,** ೭. ೭)

**ಶಿತಾಸ್ತ್ರ** – ಚೂಪಾದ ಬಾಣ [ಆಯುಧ] (ಇಸೆ ಮಸಗಿ ಭೀಮಂ ಈರಯ್ದು ಶಿತಾಸ್ತ್ರದಿಂ ಉರುಳೆ ಸೂತಂ ಉಡಿಯೆ ರಥಂ ಕೀಲಿಸೆ ಕುದುರೆ ಮುಜಿಯೆ ಪಟಿವಿಗೆ ಮಸಕದಿಂ ಎಚ್ಚೆಚ್ಚಂ ಒಂದೆ ಸರಲೊಳ್ ನೊಸಲಂ: **ಪಂಪಭಾ,** ೧೦. ೯೯)

**ಶಿತಿ** – ಕಪ್ಪು ಬಣ್ಣ (ಶ್ಯಾಮಳಂ ಅಸಿತಂ ಕೃಷ್ಣಂ ಶ್ಯಾಮಂ ಕಾಲಂ ಶಿತಿಯೆ: **ಅಭಿಧಾವ,** ೨. ೧. ೬೩)

**ಶಿತಿಕಂಠ** – ಈಶ್ವರ (ಅರ್ಚಿತಶಿತಿಕಂಠನುಂ ಆಹುತಿಹುತಾಗ್ನಿಹೋತ್ರನುಂ ಪೂಜಿತಧರಾಮರನುಂ ನೀರಾಜಿತರಥತುರಗನುಮಾಗಿ ರಜತರಥಮನೇಜೆ: **ಪಂಪಭಾ,** ೧೧, ೧೩೨ ವ)

**ಶಿಥಿಲ** – ಸಡಿಲ (ಉತ್ಸವದಿಂದೆ ಹಾಸ್ಯರಸಮಾ ಮಧುರೋಕ್ತಿಗಳಿಂದಮಲ್ತೆ ಬೀಭತ್ಸರಸಾಂತರಂ ಶಿಥಿಲಬಂಧನದಿಂ: **ಕವಿರಾಮಾ,** ೨. ೧೧೧)

**ಶಿಬಿಕಾ** – ಪಲ್ಲಕ್ಕಿ (ಸುರಶಿಲ್ಪಿಗಳಿಂ ಶಿಬಿಕಾವಿರಚನೆ ದೆಸೆಗೆಸೆಯುತ್ತಿರ್ದುದತ್ತೊಂದೆಡೆಯೊಳ್ ನರಶಿಲ್ಪಿಗಳಿಂ ಮಂಡಪವಿರಚನೆ ನೆಗಟುತ್ತುಮಿರ್ದುದಿತ್ತೊಂದೆಡೆಯೊಳ್: **ಆದಿಪು,** ೯. ೬೮)

**ಶಿಬಿಕೆ** – ಪಲ್ಲಕ್ಕಿ (ಕಂಕಣಾಳಿಗಳಿಂದುಣ್ಮೆ ಝಣತ್ಕೃತಂ ಶಿಬಿಕೆಯಖ ಸಂರಂಭದಿಂದೇಜೆ: **ಕುಸುಮಾಕಾ,** ೪. ೧೨೮)

**ಶಿಬಿರ** – ಸೈನ್ಯದ ಬೀಡು (ಶಿಬಿರರಕ್ಷಕರ ಗರ್ಭಮುಂ ಶಿಬಿರನಿತಂಬಿನಿಯರ ಗರ್ಭಮುಂ ಒಡನೊಡನೆ ಗಟಿಯಿಸೆ ಸಿಂಹಗರ್ಜನೆಯಿಂ ಗರ್ಜಿಸಿ .. .. ಬಂದಾಗಳ್: **ಗದಾಯು,** ೬. ૩೧ ವ)

**ಶಿರ** – ತಲೆ (ಅನೇಕ ನೃಪ ಶಿರಃ ಕಪಾಳ ಶಕಳ ಜರ್ಜರಿತಮುಂ ಪರಸ್ಪರ ಸಮರ ರಭಸಸಮುತ್ಸಾರಿತಮುಂ: **ಪಂಪಭಾ,** ೧೩. ೫೧ ವ)

**ಶಿರಃಕಂಪ** – ತಲೆದೂಗುವಿಕೆ (ನಮಗಿಂತಿರೆ ಮುನ್ನೆ ನೋಂತರಾರ್ ಎಂದು ಪರಮಾಶ್ಚರ್ಯಪರ್ಯಾತೀತ ಶಿರಃಕಂಪಂಬೆರಸು: **ಶಾಂತಿಪು,** ೧೦. ೭೫ ಮತ್ತು ೭೫ ವ)

**ಶಿರಸ್ತೋದ** – ತಲೆನೋವು (ದುಷ್ಕೃತಿಯಂ ವಿಸ್ತಾರಿಸಿ ಸಲೆ ಸುಜನ ಶಿರಸ್ತೋದಮಂ ಏಕೆ ಮಸಗಿ ಮಾಟ್ಟಿರೊ ಕೆಲಬರ್: **ಲೀಲಾವತಿ,** ೧. ೨೨)

**ಶಿರಸ್ತ್ರಾಣ** – ತಲೆಯ ಕವಚ (ದಂಡನಾಯಕಂಗೆ ಶರಣಾಗತನಾಗಿ ನಿಜಶಿರಸ್ತ್ರಾಣಪರಾಯಣರಾದರ್: **ಶಾಂತಿಪು,** ೧೧. ೨೪ ವ)

**ಶಿರೀಷಕುಸುಮ** – ಬಾಗೆ [ಹೂ] (ಆ ಶಿರೀಷಕುಸುಮದಾಮ ಸುಕುಮಾರ ಬಾಹುಲತೆಯರೊಳ್ ಆ ಪರಿಘಪರಿವೃತ್ತ ದೀರ್ಘಬಾಹುಯುಗಳಂ: **ಆದಿಪು,** ೮. ೨೩ ವ)

**ಶಿರೀಷಕೋಮಲೆ** – ಬಾಗೆ ಹೂವಿನಂತೆ ಕೋಮಲೆಯಾದವಳು (ಮಲೆಮಲೆದುರ್ಕಿ ಸೊರ್ಕಿ ಸಭೆಯೊಳ್ ಕುಲಪಾಂಸುಲಂ ಈ ಶಿರೀಷಕೋಮಲೆಯ ವಿಲೋಲ ನೀಲ ಕಬರೀಭರಮಂ ತೆಗೆವಾಗಳ್: **ಪಂಪಭಾ,** ೭. ೫೭)

**ಶಿರೋಜ** – ತಲೆಗೂದಲು (ಕರವಾಳಂ ಘರವಟ್ಟಿಸಿ ಶಿರೋಜಮಂ ಪಿಡಿದು ತೆಗೆದು ಗುರುವಂ ಪಚ್ಚಂತಿರೆ ಪಿರಿದು ಪೊಯ್ದಂ ಎಂತಪ್ಪರೊಳಂ ಮುಳಿಸು ಅಜೀವಂ ಆಗಲೇನಿತ್ತಮುದೇ: **ಪಂಪಭಾ,** ೧೨. ३೦)

**ಶಿರೋದಳನ** – ತಲೆಯನ್ನು ಕತ್ತರಿಸುವಿಕೆ (ಅರಿಕೇಸರಿಗಾತ್ಮಜರ್ ಅರಿನರಪ ಶಿರೋದಳನಪರಿಣತ ಉಗ್ರಾಸಿಭಯಂಕರರ್: **ಪಂಪಭಾ,** ೧. ೨೨)

**ಶಿರೋಧಿ** – ಕೊರಳು, ಕತ್ತು (ರಕ್ತಧಾರಾಳಮಿಕ್ಕಿ ಮೆಟ್ಟಿದುದು ಮತ್ ತುರಗಂ ಖುರದಿಂ ಶಿರೋಧಿಯಂ: **ರಾಜಶೇವಿ,** ೧೪. ೧૩)

**ಶಿರೋಮಂಡನ** – ತಲೆಯ ಆಭರಣ (ಮಂಗಳಾಳಂಕರಣಾಭಿರಾಮ ರಾಜಭವನ ಲಕ್ಷ್ಮೀಶಿರೋಮಂಡನೋಪಮಾನ ಮೌಕ್ತಿಕಮಣಿಮಯ ಮಂಡಪದೊಳ್ .. .. ಅಪೂರ್ವಮಾಗೆ ಹರಿ ಪೌರೋಹಿತ್ಯಮಂ ತಾಳೆ: **ಶಾಂತಿಪು,** ೧೦. ೭೭ ವ)

**ಶಿರೋರುಹ** – ಶಿರೋಜ [ಕದಳೀಗರ್ಭಶ್ಯಾಮಂ ಮೃದುಕುಟಿಲ ಶಿರೋರುಹಂ ಸರೋರುಹವದನಂ ಮೃದುಮಧ್ಯಮತನು ಹಿತಮಿತಮೃದುವಚನಂ ಲಲಿತಮಧುರಸುಂದರವೇಷಂ: **ಆದಿಪು,** ೧. ೨೯)

**ಶಿರೋವೇಷ್ಟನ** – ತಲೆಗೆ ಸುತ್ತುವ ವಸ್ತ್ರ (ಮಹೀತಳಾಶ್ಲಿಷ್ಟ ಜಾನು ಲಲಾಟಪಟ್ಟರ್ ಪ್ರಣಾಮಾರ್ಪಣಪುರಸ್ಸರಂ ಶಿರೋವೇಷ್ಟನ ಪ್ರಲಂಬಚೇಳಾಂಚಳಪಿಹಿತವದನರಾಗಿ: **ಆದಿಪು,** ೧೦. ೪೮ ವ)

**ಶಿರೋವ್ಯೂಢ** – ತಲೆಯವರೆಗೆ, ಆಳುದ್ದ (ಶಿರೋವ್ಯೂಢ ಧಾನ್ಯಸಂಚಯೋಪಭೋಗಿ ಜನನಿವಾಸಿಗಳಪ್ಪ ಸಂವಾಹಂಗಳುಮಂ: **ಆದಿಪು,** ೮. ೬૩ ವ)

**ಶಿಲಾಕರ್ಮ** – ಕಲ್ಲಿನ ಕೆತ್ತನೆ (ಇಂದ್ರಜಾಲಕಂ ಎಱಕಂ ಶಿಲಾಕರ್ಮಂ ಉತ್ತರಣಂ ಚಿತ್ರವಿವಕ್ಷೆ ವಾಸ್ತು ಶಕುನಜ್ಞಾನಂ .. .. ಎಂಬನಿಱೊಳಂ ಬಲ್ಲವರೆಲ್ಲರುಂ ಮೆಚ್ಚೆ ಪಡೆದಂ ಅತಿಕೌಶಲಮಂ: **ಪುಷ್ಪದಂಪು,** ೪. ೫೯)

**ಶಿಲಾತಳ** – ಬಂಡೆಯ ಮೇಲ್ಭಾಗ (ಆತನ ಪೂಣ್ದ ಪೂಣ್ಕೆ ಶಿಲಾತಳಾಕ್ಷರಮೆನಿಸಿರ್ಪ ಜನೋಕ್ತಿಯಂ ಪುಸಿ ಮಾಟ್ಟನೇ: **ಗದಾಯು,** ೧. ೭೧)

**ಶಿಲಾಪಟ್ಟ** – ಕಲ್ಲಿನ ಪೀಠ (ನಿರ್ಮಲ ಶಿಲಾಪಟ್ಟೊಳ್ ನಿಬಿಡಬದ್ಧಪಲ್ಯಂಕಾಸನನುಂ ಪೂರ್ವಾಭಿಮುಖನುಂ ಆಗಿರ್ದಾಗಳ್: **ಆದಿಪು,** ೧೦. ೧૩ ವ)

**ಶಿಲಾಸ್ತಂಭ** – ಕಲ್ಲಿನ ಕಂಬ(ಮುನಿದೆಮ್ಮಂ ಕೊಲಲೊಡ್ಡಿದಂದಿನ ಶಿಲಾಸ್ತಂಭಕ್ಕೆ ಕೆಯ್ನೀಡಿದಮದಿನ .. .. ನಿನ್ನ ಗರ್ಜನೆಯುಂ ಬೀರಮುಂ ಈಗಳಿಂತು ಪುಡಿಯೊಳ್ ಚೀಃ ಸೀ ಪೊರಳ್ದಿರ್ದುದೇ: **ಶಾಂತಿಪು,** ೭. ೬೦)

**ಶಿಲೀಂಧ್ರ** – ಅಣಬೆ (ಪುಟ್ಟಿದುವಲ್ಲಿಗಲ್ಲಿಗೆ ಶಿಲೀಂಧ್ರಚಯಂ ಕರುಮಾಡದಲ್ಲಿ ಜೇನಿಟ್ಟುದು: **ಜಗನ್ನಾವಿ,** ೧೨. ೪)

**ಶಿಲೀಮುಖ** – ಬಾಣ (ಶಿಲೀಮುಖಕುಂತಳೆ ಮದನ ಶಿಲೀಮುಖದಂತೆ ಭುವನಮಂ ಸೋಲಿಸಿದಳ್: **ಪಂಪರಾ,** ೪. ३೦); ದುಂಬಿ (ಬನದಿಂ ಬನಕ್ಕೆ ನನೆಯಿಂ ನನೆಗೆ ಅಲರಿದ ಅಲರ್ಗೆ ಮೊರೆದು ಬಿರಯಗಳೆರ್ದೆ ಪೌವನೆ ಪಾಱೆ ಪಾಱುಗುಂ ಕಾಮಿನೀಕಾಮಶಿಲೀಮುಖಂ ಶಿಲೀಮುಖ ನಿವಹಂ: **ಮಲ್ಲಿನಾಪು,** ೨. ३೨)

**ಶಿಲೋಚ್ಚಯ** – ಪರ್ವತ (ಕಳಾಧರಕಳಾಧರೆ ಸುಲೋಚನೆ ಕಲೋಜ್ವಳೆ ಶಿಲೋಚ್ಚಯಸುತೇ ಜಯಜಯಾ: **ರಾಜಶೇವಿ,** ೧೦. ೧೧೧)

**ಶಿಲ್ಪಕರ್ಮ** – ಕುಶಲಕಲೆ (ಅಸಿ ಮಸಿ ಕೃಷಿ ವಣಿಕ್ಸ್ವಿದ್ಯಾ ಶಿಲ್ಪಕರ್ಮಂಗಳಂ ಶುದ್ಧವೃತ್ತಿಯಿಂದ ಅರ್ಥೋಪಾರ್ಜನಂ ಗೆಯ್ವ ವಾರ್ತೆಯುಂ: **ಆದಿಪು,** ೧೫. ೧೩ ವ)

**ಶಿವ** – ಶುಭ (ಶಿವದ ಶಾಶ್ವತಮಪ್ಪ ಸೌಖ್ಯಮನೀಯಲಾರ್ಪ ಜಿನೇಶ್ವರಪ್ರವರ ಪಾದದೊಳ್: **ಧರ್ಮಾಮೃ,** ೨. ೧೪೩); ತ್ರಿಮೂರ್ತಿಗಳಲ್ಲಿ ಒಬ್ಬನಾದ ಈಶ್ವರ (ಶಿವನಂ ಮರುಳ್ಗೊಂಡು ಭವಾನಿಯಿರೆ ಕಂಡು: **ಗಿರಿಜಾಕ,** ೩. ೯೮ ವ)

**ಶಿವಗತಿ** – ಮೋಕ್ಷ (ಶಿವಗತಿಗೆ ಭಾಗ್ಯವಿಲ್ಲೆನಿಪವರಂ ಜೈನಕ್ಕೆ ತರಲೆಬಾರದದೆಂತುಂ: **ಸಮಯಪ,** ೧೫. ೭೧)

**ಶಿವಗೋಪುರ** – ಶಿವ ದೇವಾಲಯದ ದ್ವಾರ (ಶಿವಗೋಪುರದೊಳಗಂ ಕೆರ್ಪುವೆರಸಿ ಪುಗಲಾಗದು: **ಸಮಯಪ,** ೮. ೭೮)

**ಶಿವಪದ** – ಮುಕ್ತಿಸ್ಥಾನ (ಶಿವಪದಪರ್ಯಂತಂಬರಂ ಅಮೋಘಮುದ್ಧರಿಸುಗೆ ತಾತ್ಪರ್ಯದಿಂ ಅರ್ಹಂ ಸಿದ್ಧ ಆಚಾರ್ಯ ಉಪಾಧ್ಯಾಯ ಸರ್ವಸಾಧುಗಳೆಮ್ಮಂ: **ಆದಿಪು,** ೧. ೬)

**ಶಿವಸಮಯ** – ಶೈವಧರ್ಮ (ನಾರಾಯಣಂ ಕಾಸನೆ ಕಡಿದೊಡೆ ಲಿಂಗಂ ಬೀಟ್ .. .. ಶಿವಸಮಯದವರ್ ತಮ್ಮೊಳೆಂತಾಗವೇಡಾ: **ಸಮಯಪ,** ೧೦. ೫೮)

**ಶಿವಸುಖ** – ಮೋಕ್ಷಸುಖ (ಶಿವಸುಖಮನಜೆಯದೀ ಮಾನವಸುಖದ ನಿಮಿತ್ತದಿಂ ತಪಂಗೆಯ್ವವರ್ ಮಾಣಿಕಮಂ ತೌಡಿಂಗೆ ಅವಯವದೆ ಮಾಜುಗುಡುವ ಮರುಳಂ ಪೋಲ್ಗಂ: **ಶಾಂತಿಪು,** ೧೧. ೯೨)

**ಶಿವಸೌಖ್ಯ** – ಶಿವಸುಖ (ಆವನ ವಚನಂ ಶಿವಸೌಖ್ಯಾವಹಂ ಅವಿರುದ್ಧಂ ಅಮಳಂ ಅಖಿಳಜನಕ್ಕಂ .. .. ತಾನೆಂತು ಪೇಟ್ದಂ ಅದು ಸಿದ್ಧಾಂತಂ: **ಸಮಯಪ,** ೩. ೨)

**ಶಿವಾಕ್ಷಿ** – ರುದ್ರಾಕ್ಷಿ (ಪಂಚಾಕ್ಷರಂ ವಕ್ತ್ರದೊಳೆ ಕೊರಲೊಳ್ ತಳ್ತ ಶಿವಾಕ್ಷಿಮಾಲೆ .. .. ನೀನಾತನಧೀನನಲ್ತೆ ಸತತಂ ಶ್ರೀಶಯಲಜಾವಲ್ಲಭಾ: **ರಾಜಶೇಖ,** ೩. ೪೪)

**ಶಿವಿಗೆ** – ಪಲ್ಲಕ್ಕಿ (ಶಿವಿಗೆಯಂ ಶ್ರೀನಾಥನೊಲ್ದೇಜಿದಂ: **ಅನಂತಪು,** ೯. ೬೧)

**ಶಿವೆ** – ನರಿ (ಶಿವೆ ಮೃಗಧೂರ್ತಂ ಗೋಮಾಯ ವಂಚಕಂ ಜಂಬುಕಂ ಸೃಗಾಲಂ ನರಿ: **ಅಭಿಧಾವ,** ೧. ೯. ೩); ಅಳಲೆ ಗಿಡ (ಛೆತಕಿ ಶಿವೆ ಹೈಮವತಿ ಹರೀತಕೀ: **ಅಭಿಧಾವ,** ೧. ೮. ೧೨); ಗೌರಿ (ಶಿವೆ ಗೌರಿ: **ಅಭಿಧಾವ,** ೩. ೧. ೩)

**ಶಿಶಿರ** – ತಂಪಾದ (ಶಿಶಿರಪಯಃಕಣವೆಳಸದ ಕುಶೇಶಯಚ್ಛದಮನಕ್ಷಿಗಳ್ ಬಾಷ್ಪಜಲಪ್ರಶಮಿತರುಚಿಗಳ್ ಪೋಲ್ತಿರೆ: **ಜಗನ್ನಾವಿ,** ೩. ೮೭); ಷಡೃತುಗಳಲ್ಲಿ ಒಂದು, ಮಾಘ–ಫಾಲ್ಗುಣ ಮಾಸಗಳು (ವಸಂತಂ ಗ್ರೀಷ್ಮ ಪ್ರಾವೃಟ್ ಶರತ್ಸಮಯಂ ಹೇಮಂತಂ ಶಿಶಿರಮೆಂಬಂತವು ತಾವಕ್ಕುಂ ಋತುಗಳ್ ಮತ್ತಾಜುಂ: **ಅಭಿಧಾವ,** ೧. ೨. ೧೨)

**ಶಿಶಿರಕರ** – ತಂಪುಕಿರಣ[ವುಳ್ಳವನು], ಚಂದ್ರ (ಬಾಳಕಳಹಂಸೆ ಬಾಳಮೃಣಾಳಂಗಳ ನಡುವೆ ಶಿಶಿರಕರ ಕರಶತದಾಂದೋಳಿರ್ಪಂತಿರ್ದುದು ಲೀಲೆಯಿಂ: **ಆದಿಪು,** ೧೧. ೪೯)

**ಶಿಶಿರಾಂಶು** – ಶಿಶಿರಕರ (ಸ್ಮರಶರಮೇವುವೆಂಬ ಶಿಶಿರಾಶುವ ತಣ್ಣದಿರೇವುವೆಂಬ ತೆಂಬೆರಲರಲೇವುವೆಂಬ ಕಳಕಂಠಿಯ ಬಗ್ಗಣೆಯೇವುವೆಂಬ .. .. ಬದ್ದರಂ ಅಜೆಯಟ್ಟಿ ಸಂತಮಿರಲೀಯದೆ ಬಾಳಬಸಂತವಾರಣಂ: **ಅಜಿತಪು,** ೬. ೨೬)

**ಶಿಶಿರಾಗಮ** – ಚಳಿಗಾಲ (ಬೆರಲ್ಗಳ್ ಮುರುಂಟೆ ತುಟಿಯೊಡೆದು .. .. ಇರುತಿರ್ಪರ್ ಮುಡುಗಿಕೊಡು ಶಿಶಿರಾಗಮದೊಳ್: **ತ್ರಿಷಷ್ಟಿಪು,** ೯. ೩೫)

**ಶಿಶಿರೋಪಚಾರ** – ಶೀತಲೋಪಚಾರ (ಶಿಶಿರೋಪಚಾರಂಗಳಿಂ ಉಪಚರಿಸಲ್ ಅಜಿದೆಂ ಎಂತಾನುಂ ಮೂರ್ಛೆಯಿಂದೆಟ್ಟೆತ್ತು: **ಕಾದಂಸಂ,** ೪. ೭೯ ವ)

**ಶಿಶುಮಾರ** – ಮೊಸಳೆ (ಬೆನ್ನಟ್ಟೆ ದುರ್ಮೋಹಮತ್ಸ್ಯಗಣಂಗಳ್ ಕಡಿದಿಕ್ಕೆ ಲೋಭಮಕರಾನೀಕಂಗಳ್ ಆಟಂದು ನುಣ್ಣಗೆ ನುಂಗುತ್ತಿರೆ ಮಾರರಾಗಶಿಶುಮಾರಂಗಳ್ ಮಹೋಗ್ರಂಗಳ್ ಇನ್ನೆಗಂ ಓರಂತೆ ತೊಟಲ್ದೆಂ: **ಆದಿಪು,** ೯. ೬೦)

**ಶಿಷ್ಟಜನ** – ಯೋಗ್ಯರಾದವರು (ಶಿಷ್ಟಜನೋಚ್ಚಿಷ್ಟಂ ಬಹುಕಷ್ಟಂ ಬಹುದುಷ್ಟಂ ಅಷ್ಟಕರ್ಮಗ್ನಿಪರಿಪುಷ್ಟಂ .. .. ಸಂಸಾರಂ: **ಅಜಿತಪು,** ೨. ೭೪)

**ಶಿಲಾಪಟ್ಟಕ** – ಕಲ್ಲಿನ ಚಪ್ಪಡಿ, ಪೀಠ (ತತ್ತಟಾಕಿನೀ ಕುಂಜರಶ್ಶಿಲಾಪಟ್ಟಕಂಗಳಂ ಇರ್ಬಗಿಮಾಡಲ್ಪಡದೆಯುಂ: ಅದಿಪು, ೧೪. ೧೦೩ ವ)

**ಶಿಲೀಂಧ್ರ** – ನಾಯಿಕೊಡೆ (ಬೆಳ್ಗೊಡೆಗಳ್ ತಾವೆಂಬಂತಿರೆ ಬಿಡದೆಸೆದುವು ಪರಿಕಿಸಲ್ ಶಿಲೀಂಧ್ರವ್ರಾತಂ: **ತ್ರಿಷಷ್ಟಿಪು,** ೮. ೩೦)

**ಶಿಲೀಮುಖ** – ಬಾಣ (ಸ್ಫುರಿತ ಶಿಲೀಮುಖಂ ಉತ್ಪಳ ಸರಕ್ತಕಂಜಾತಯುತಂ ಉಪಾತ್ತಕಬಂಧಂ: **ಶಬರಶಂ,** ೨. ೫೨)

**ಶಿಲೀಮುಖಾಸನ** – ಬಿಲ್ಲು (ಅನೇಕವರ್ಷಕೋಟ್ಯಂತರದೊಳ್ ಸಪ್ತಶಿಲೀಮುಖಾಸನ ಉನ್ನತ ಅಪಘನನುಂ: **ಆದಿಪು,** ೬. ೫೭ ವ)

**ಶೀಕರ** – ತುಂತುರು (ತಡಿಯ ಶೀಕರನಿಕರಂಗಳಂತೆ ಸೊಗಯಿಸುವ ಧವಳಾಕ್ಷತ ಸಿತಕುಸುಮ ಮಂಗಳಾಂಜಲಿಗಳುಮಂ: **ಆದಿಪು,** ೧೧. ೨೩ ವ)

**ಶೀಘ್ರಸಂಧಾನ** – ಬಿಲ್ಲಿಗೆ ಬೇಗ ಬಾಣ ಹೂಡುವುದು (ಕಡುಗೆಯ್ಯನಾಗಿ ಶೀಘ್ರಸಂಧಾನಮಿಸುವ ಅಶ್ವಗ್ರೀವನ ತಕ್ಕುಂ ಬೇಗಯ್ಯೆಯುಂ ಕಿಡೆ: **ಶಾಂತಿಪು,** ೫. ೬೦ ವ)

**ಶೀತಕರ** – ಚಂದ್ರ (ನೀರದಮುಕ್ತ ಶೀತಕರನಂ ನವಚಂದ್ರಿಕೆ ಮೊರ್ದುವಂತೆ ಕೂಪಾರಮಂ ಇಂದ್ರಸಿಂಧು ಪುಗುವಂತೆ: **ಶಾಂತಿಪು,** ೬. ೨)

**ಶೀತಕೃತ್ಕರ** – ಚಂದ್ರ (ಚೂತಮನಪ್ಪಿ ಪುಷ್ಪವತಿಯಾದುದು ಮಲ್ಲಿಗೆ ಶೀತಕೃತ್ಕರವ್ರಾತಮನಪ್ಪಿಯೊಪ್ಪೆಕರಗಿತ್ತು ಹಿಮೋಪಲಂ: **ಗಿರಿಜಾಕ,** ೪. ೧೧೨)

**ಶೀತದ್ಯುತಿ** – ಚಂದ್ರ (ಶೀತದ್ಯುತಿನಿಚ್ಚಂ ಕಂದುತಂ ಕುಂದುತುಂ ಉದಯಿಪನೆಂಬುಕ್ತಿಗಾ ಕಾಂತೆ ಪೋತಳ್: **ಸುಕುಮಾಚ,** ೯. ೯೧)

**ಶೀತಪ್ರಭ** – ಶೀತದ್ಯುತಿ (ಎಲೆ ಶೀತಪ್ರಭ ನಿನ್ನ ಜನ್ಮನಿಳಯಂ ತಾನಪ್ಪ ಮದ್ಗರ್ಭಮಂ ಸಲೆ ಕಾಯ್ಪಿಂ ಬಿಡದಿಂತು ಶೋಷಿಸುವ ಕೀಳ ಆಭೀಳನಂ ಬಾಡವಾನಲನಂ ಬಾರಿಸು ನೀಂ ಎನುತ್ತುಂ ಎನಿತಾನುಂ ಪೇಟಲೆಟ್ಟಿಂದುದು ಉಜ್ವಲ ದುಗ್ಧಾಂಬುಧಿಯೆಂಬಿನಂ ಭುವನಮಂ ಪರ್ವಿತ್ತು ಚಂದ್ರಾತಪಂ: **ಶಾಂತೀಶ್ವಪು,** ೧೧. ೪೪)

**ಶೀತಮಯೂಖ** – ಶೀತದ್ಯುತಿ (ಇಲ್ಲದೊಡೆ ಹಾ! ಸ್ಮರಶೀತ ಮಯೂಖದಿಂದೆ ಹತನಾದಪ್ಪೆಂ: **ಕಾದಂಬ,** ೯. ೪೦)

**ಶೀತಮರೀಚಿ** – ಚಂದ್ರ (ಶೂರ್ಪಕವೈರಿ ಕಾಲುಗುರ್ಗೆ ವರ್ಪನೊ ಶೀತಮರೀಚಿ ಕಾಂತಿಗೇಂ ವರ್ಪನೊ ವಾಸವಂ ಸಿರಿಗೆ ವರ್ಪನೊ ವೃತ್ರಹಮಂತ್ರಿ ಜಾಣ್ಗೆ ಮೇಣ್ ವರ್ಪನೊ: **ಶಾಂತಿಪು,** ೭. ೧೧೮)

**ಶೀತರುಚಿ** – ತಂಪಾದ ಕಾಂತಿ (ಹಿಮಕರಂ ಆತ್ಮ ಶೀತರುಚಿಯಂ ದಿನನಾಯಕಂ ಉಷ್ಣದೀಧಿತಿಯಕ್ರಮಮಂ ಅಗಾಧವಾರಿಧಿಯೆ ಗುಣ್ಪಂ ಇಳಾವಧು ತನ್ನ ತಿಣ್ಪಂ ಬಿಸುಟಿಪ್ಪೊಡಂ; **ಪಂಪಭಾ,** ೧. ೮೩)

**ಶೀತರೋಚಿ** – ಶೀತಮರೀಚಿ (ಜ್ಯೋತ್ಸ್ನಾಪ್ರವಾಹಂ ಕವಿದುದು ವಿಧುಶಕ್ರೇಕ್ಷಿತಂ ಶಿತರೋಚಿಃ: **ಲೀಲಾವತಿ,** ೨. ೧೧)

**ಶೀತಳಿಕೆ** – ತಾವರೆ (ಅರೆಗರಿಂಕುವೋದ ಚಮರಿಗಳನನುಕರಿಸಿ ಕೊರಗಿ ಪರಿದ ಶೀತಳಿಕೆಗಳ ಬಳಗಮುಮಂ: **ಆಚವರ್ಧ,** ೫. ೬೩ ವ)

**ಶೀತಾಂಶು** – ಚಂದ್ರ (ರತಿಯೊಳ್ ಪದನ್ಯಸನಮಂ ಕಲ್ತಂಚೆ ಶೀತಾಂಶು ತೀವಿದ ನೆಯ್ದಿಲ್ ಕೊಳಂ ಅಲ್ಲದೆ ಇಲ್ಲೆನೆ ಬನಂ ಚಿತ್ರೋತ್ಸವಾಲಂಬನಂ: **ಮಲ್ಲಿನಾಪು,** ೨. ೨೮)

**ಶೀತಾನಿಳ** – ತಣ್ಣನೆಯ ಗಾಳಿ (ಪನಿಮಲ್ಲಂಬುಕಣಂಗಳಂ ಕೆದಱುತುಂ ಕೋಕಂಗಳೊಳ್ ರಾಗಮಂ ನನೆವೊಯ್ದು ಉಣ್ಮಿಸುತುಂ ಪತತ್ರಿಗಳೊಳಗಿರ್ಪಾ ತೂಂಕಡಂ ನೂಂಕುತುಂ ತಣ್ಣನೆ ತೀಡಿತ್ತೆನಸುಂ ಪ್ರಭಾತಮಯ ಪ್ರೋದ್ಭೂತ ಶೀತಾನಿಳಂ: **ಶಾಂತೀಶ್ವಪು,** ೧೧. ೯೪)

**ಶೀತಾಶ್ಮ** – ಹಿಮದ ಗಡ್ಡೆ (ತಪ್ತಾಶ್ಮಂ ಶೀತಾಶ್ಮದಂತಿರೆ ಕೋಡುಗುಂ: **ಶಾಂತಿಪು.** ೭. ೮೫)

**ಶೀತೋಷ್ಣಭವನ** – ಧಾರಾಗೃಹ, ಹಿಮಗೃಹ (ಶೀತೋಷ್ಣಭವನಂ ಅದು ಮನೆಯಂತೆ ನಿರ್ವೃತ್ತಮಹೋತ್ಸವ ಆಗಿರ್ಪುದುಂ: **ಕಾದಂಸಂ,** ೫. ೭೯ ವ)

**ಶೀರ್ಣ** – ಬತ್ತಿಹೋದ; ಹರಿದ; ಕೃಶವಾದ (ಮಣ್ಬೆತ್ತಣಿಗೆಜಿಗೆ ನೊಣಂ ಶೀಣ್ ಶೃಂಗಾಗ್ರದಿಂ ಮಾದೊಡೆಯುತ್ತುಂ ಪಾಯ್ದು: **ನೇಮಿನಾಪು,** ೮. ೧೮)

**ಶೀರ್ಯಮಾಣ** – ಒಡೆದ (ಉಸಿರ್ದಂ ಲಜ್ಜೆಯಿಂ ಎಂತಾನುಂ ಶೀರ್ಯಮಾಣ ವಿರಳಾಕ್ಷದಿಂ: **ಕಾದಂಸಂ,** ೪. ೬೨)

**ಶೀರ್ಷಕ** – ತಲೆಯ ಆಭರಣ (ಪ್ರತ್ಯೇಕ ಶಿರ್ಷ್ಕಕ ಅವಘಾಟಕ ಪ್ರಕಾಂಡ ತರಳತರ ಬಂಧ ಉಪಪದಪಂಚಕ ಸಮೇತಂಗಳಾಗಿ: **ಆದಿಪು,** ೮. ೫೪ ವ)

**ಶೀರ್ಷಾಭರಣ** – ತಲೆಯ ಒಡವೆ (ಶೀರ್ಷಾಭರಣಂ ಧರೆಗೆ ಉತ್ಕರ್ಷ ವಿಳಾಸನದ ಭೂಮಿ ಸಕಳ ಜನಕ್ಕಂ: **ಯಶೋಧಚ,** ೧. ೨೭)

**ಶೀಲ** – ಒಳ್ಳೆಯ ನಡತೆ ಹಾಗೂ ಸ್ವಭಾವ (ಶೀಲಂ ಸುಚರಿತ್ರಮುಂ ಸ್ವಭಾವಮುಂ ಅಕ್ಕುಂ: **ಅಭಿಧಾವ,** ೩. ೧. ೩೩); [ಜೈನ] ದಿಗ್‌ವ್ರತ, ದೇಶವ್ರತ ಮತ್ತು ಸಾಮಯಿಕ ಪ್ರೋಷಧೋಪಚಾರಗಳೆಂಬ ವ್ರತ (ನಿಯಮಂ ವೃತಿ ಶೀಲಮಾಳವಳಮೆನಲ್ಕೇಟ್ಗೆಯನಾಳ್ದು ಸುಖದ ಫಲಪ್ರಾಪ್ತಿಯನಾಗಿಪ ಕಲ್ಪವೃಕ್ಷಮಲ್ಲದೆ ಧರ್ಮಂ: **ಪುಷ್ಪದಂಪು,** ೧೩. ೫೫)

**ಶೀಲವ್ರತ** – [ಜೈನ] ಮುನಿಗಳ ವ್ರತಾಚರಣೆ (ದರ್ಶನವಿಶುದ್ಧನಾಗಿಯುಂ ಶಿಲವ್ರತಭಾವನಾರಹಿತಂ ಅಸಂಯುತಂ ಜಘನ್ಯಪಾತ್ರಂ: **ಆದಿಪು,** ೧೦. ೯ ವ)

**ಶೀಳಸಂಪನ್ನ** – [ಜೈನ] ಶೀಲವ್ರತವನ್ನಾಚರಿಸುವವನು (ವಿಶದಯಶೋನಿಳಯಂ ವಿಮಳಶೀಳಸಂಪನ್ನಂ ಉಚಿತ ಭೈಕ್ಷಾನೀಕಂ ನಿಶಿತಮತಿಯುಕ್ತಂ ಏಕಾದಶಸ್ಥಂ ಉದ್ದಿಷ್ಟವದೇಶವಿರತಂ ಪೆಸರಿಂ: **ಸುಕುಮಾಚ,** ೬. ೩೭)

**ಶೀಲಸಪ್ತಕ** – ಮೂರು ಗುಣವ್ರತಗಳು [ದಿಗ್ವ್ರತ, ದೇಶವ್ರತ, ದಂಡವಿರತಿವ್ರತ] ಹಾಗೂ ನಾಲ್ಕು ಶಿಕ್ಷಾವ್ರತಗಳು [ಸಾಮಾಯಿಕ, ಪ್ರೋಷಧೋಪವಾಸ, ಉಪಭೋಗ ಪರಿಭೋಗಾತಿಥಿಸಂಗ್ರಹ, ಪಶ್ಚಿಮ ಸಲ್ಲೇಖನ] (ಪಂಚಾಣುವ್ರತಂಗಳ ಕೂಟಮನುಳ್ಳ ದುಃಖಭಾಜನಮಲ್ಲದ ಶೀಲಸಪ್ತಕದೊಳ್ಕೂಡಿದಂ: **ಧರ್ಮಾಮೃ,** ೫. ೮೮ ವ)

**ಶುಂಡ** – ಆನೆಯ ಸೊಂಡಿಲು (ಕಂಜಲತೆಯೆಂಬಾ ಶುಂಡಮಂ ತೂಗುತಂ .. .. ಸುಳಿದಂ ಸಲ್ಲೀಲೆಯಿಂ ಮಾರುತಂ: **ತ್ರಿಷಷ್ಟಿಪು,** ೨೪. ೭೭)

**ಶುಂಡಾದಂಡ** – ಶುಂಡ (ಘನ ಶುಂಡಾದಂಡಪಾತಚ್ಯುತ ಖರಕರಬಿಂಬಂಬಲ್ ಇಂಬಾಗೆ .. .. ಕಣ್ಗೊಪ್ಪಿ ಬಂದತ್ತಿಭೇಂದ್ರಂ: **ರಾಜಶೇವಿ,** ೬. ೮೧)

**ಶುಂಡಾಪ್ರಪಾನ** – ಪಾನಗೋಷ್ಠಿ (ಪಾನಂ ಗೋಷ್ಠಿಕೆಯದಾಪಾನಂ ಶುಂಡಾಪ್ರಪಾನಂ ಕಳ್ಗುಡಿಹ ಕಡುಸೊರ್ಕು: **ಅಭಿಧಾವ,** ೧. ೧೬. ೬)

**ಶುಂಡಾಲ** – ಆನೆ (ವೃಕ ಭಲ್ಲೂಕ ಸುಗಂಡ ಚಂಡಹರಿಣಶ್ರೇಣೀ ರುರು ಉರು ಉಗ್ರ ಶಲ್ಯಕ ಸಾರಂಗ ಶಶಾವಳೀ ಶರಭ ಗೋಲಾಂಗೂಲಮಾಲಾ ಹರಿಪ್ರಕರ ಆಭೀಳ ಸೃಗಾಳಜಾಳಂ ಮದವತ್ ಶುಂಡಾಲ ಶಾರ್ದೂಲ ಕಾಕಕುಳ ವ್ಯಾಳ ಕರಾಳ ವಿಸ್ಫುರತ್ ಅರಣ್ಯಾನೀ ಮಹೀದೇಶದೊಳ್: **ಪಂಚತಂತ್ರ,** ೧೪೨)

**ಶುಂಡಾಳ** – ಸೊಂಡಿಲು (ಕ್ರೀಡಾವಖಂಡಿತ ಉಚ್ಚಂಡ ಶುಂಡಾಳ ಗಾತ್ರ ಅಪರ ಪತಿಬಾಳ ಕದಳಿಕಾ ಕಾಂಡ ಲೀಲಾಚ್ಛಿನ್ನ: **ಆದಿಪು,** ೧೩. ೪೫ ವ); ಸೊಂಡಿಲುಳ್ಳದ್ದು, ಆನೆ (ಸ್ಥೂಳಾಂಗದೊಳ್ ಮೊದಲ್ ಶುಂಡಾಳಂ ತನುತನುಗಳಲ್ಲಿ ಕಂಥುವೆ ಕಡೆ ಜೀವಾಳಿಯೊಳ್: **ಪಾರ್ಶ್ವನಾಪು,** ೬. ೭೦)

**ಶುಂಭತ್** – ಹೊಳೆಯುತ್ತಿರುವ (ಸರಸೀ ಸ್ವಚ್ಛಾಂಬು ಶುಂಭತ್ ಕುಶಲವ ವಿಸರಸ್ಪರ್ಶನಾರ್ದ್ರಂ .. .. ತೀಡಿತ್ತು ಜ್ಯೋತಿರ್ವಣಜನಿತವಾಮೋದಸಾರಂ ಸಮೀರಂ: **ಶಾಂತೀಶ್ವಪು,** ೫. ೯೦)

**ಶುಕ** – ಗಿಳಿ (ಬೆಳೆದೆಱಗಿರ್ದ ಶಾಳಿಗೆಱಗಿರ್ದ ಶುಕಾಳಿ ನಭಕ್ಕೆ ಪಾಱೆ ಮಂಡಳಿಸೆ: **ಮಲ್ಲಿನಾಪು,** ೨. ೧೪); ಬೂರುಗದ ಮರ (ಭಾರದ್ವಾಜ ಶಾಂಡಿಲ್ಯಕ ಶುಕವಿಮದಾಗಸ್ತ್ಯಕಂ ತಾಪಸಪ್ರೋತ್ಕರಮಂ ಸೋಮಾರ್ಕರುಕ್ಷಾಂಚಿತಮದು ನಭಮಂ ಪೋಲ್ತು ಚೆಲ್ವಾಯ್ತರಣ್ಯಂ: **ರಾಜಶೇವಿ,** ೫. ೭೫)

**ಶುಕಜಲ್ಪಿತ** – ಗೀಳಿಮಾತು (ಗೋಪಿ ಬಂದು ಶಕಟಂ ಶತಧಾಕೃತಮಾದುದು ಎಂತಿದೆಂದು ಇರದೆ ಬಟಿಕ್ಕೆ ಕೇಳಿ ಶುಕಜಲ್ಪಿತದಿಂ ಬಗೆವೋಗಿ: **ಜಗನ್ನಾವಿ,** ೩. ३೨)

**ಶುಕಕಾಮಿನಿ** – ಹೆಣ್ಣುಗಿಳಿ (ಆಮ್ರಭೂಷಿತಮನಾಮ್ರಪಕ್ವಫಳದೊಳ್ ಶುಕಕಾಮಿನಿ ಚೆಲ್ವುದೋಱಿದಳ್: **ಆದಿಪು,** ೧೧. ೯೭ಪ)

**ಶುಕ್ತಿ** – [ಮುತ್ತಿನ] ಚಿಪ್ಪು (ಕಾಳಾಯಸ ಶುಕ್ತಿಯಿಂ ಸಮೆದ ಸೀಸಕದಿಂ ಬಹು ರಾಹು ಮಂಡಲ ಪ್ರಾಯಮೆನಿಪ್ಪ ದಾನವರ ಪಂದಲೆಗಳ್ .. .. ಪಾಳಿಸಿದತ್ತು ಪರಾಗಲೀಲೆಯಂ: **ಪಂಪರಾ,** ೧೩. ೬೨)

**ಶುಕ್ತಿಕಾ** – ಶುಕ್ತಿ (ಚಳವಂಭೋಬಿಂದು ಮುಕ್ತಾಫಳಂ ಎನಿಸುವವೊಲ್ ಶುಕ್ತಿಕಾಸಂಗದಿಂ .. .. ಲಕ್ಷ್ಮೀಕಾಂತೆ .. .. ಸ್ಥೈರ್ಯಮಂ ತಾಳ್ದಿದಳ್: **ಮಲ್ಲಿನಾಪು,** ೩. ೧೯)

**ಶುಕ್ತಿಕೆ** – ಮುತ್ತಿನ ಚಿಪ್ಪು (ವರ ಕುಲಮಣಿದೀಪಿಕೆ ಬಂಧುರಗುಣಮೌಕ್ತಜನಿತ ಶುಕ್ತಿಕೆ .. .. ಒಪ್ಪುವಳಲ್ಲಿ ಚಾರು ಕನ್ನಿಕೆ ಜಸದೊಳ್: **ತ್ರಿಷಷ್ಟಿಪು,** ೧೮. ೧೫)

**ಶುಕ್ತಿಜ** – ಚಿಪ್ಪಿನಲ್ಲಿ ಹುಟ್ಟಿದುದು, ಮುತ್ತು (ನವೀನ ವಿದ್ರುಮೋತ್ಕರದ ಪೊದಳ್ಕೆ ಶುಕ್ತಿಜದ ಅಳುರ್ಕೆ ಸರೋಜದ ಗುಣ್ಪು: **ಶಬರಶಂ,** ೧. ೩೪)

**ಶುಕ್ತಿಪುಟ** – ಮುತ್ತಿನ ಚಿಪ್ಪು, ಕಪ್ಪೆಚಿಪ್ಪು (ಶುಕ್ತಿಪುಟಂ ಗಿಳಿಲೆನೆ ಸಿಡಿದೊಡೆ ಅದಜೆಂದುಚ್ಚಳಿಸಿದ ಅಚ್ಚಮುತ್ತೆಂದು ತುಡುಂಕಲ್: **ರಾಜಶೇವಿ,** ೧. ೧೦೨ ವ)

**ಶುಕ್ತಿಪುಟೋದರ** – ಮುತ್ತಿನ ಚಿಪ್ಪಿನ ಒಳಭಾಗ (ಯಶಸ್ವತಿ ಮಹಾದೇವಿಯ ಗರ್ಭಾವಾಸದೊಳ್ ಶುಕ್ತಿಪುಟೋದರ ವರ್ತಿಯಪ್ಪ ನಿರ್ಮಳೋದಕಬಿಂದುವಿನಂತೆ ಸಂಕ್ರಮಿಸೆ: **ಆದಿಪು,** ೮. ೨೯ ವ)

**ಶುಕ್ರ** – [ಜೈನ] ಒಂದು ಕಲ್ಪ (ಸೌಧರ್ಮ ಈಶಾನ ಸನತ್ಕುಮಾರ ಮಾಹೇಂದ್ರ ಬ್ರಹ್ಮ ಬ್ರಹ್ಮೋತ್ತರ ಲಾಂತವ ಕಾಪಿಷ್ಠ ಶುಕ್ರ ಮಹಾಶುಕ್ರ ಶತಾರ ಸಹಸ್ರಾರ ಆನತ ಪ್ರಾಣತ ಅರಣ್ಯ ಅಚ್ಯುತಮೆಂಬ ಪದಿನಾಱುಂ ಕಲ್ಪಂಗಳೊಳಂ: **ವಡ್ಡಾರಾ,** ಪು ೯೭, ಸಾ ೨೬)

**ಶುಕ್ಲ** – ಬಿಳಿಯ (ಅವದಾತಂ ಶುಭ್ರಂ ಶ್ವೇತವರ್ಜುನಂ ಪಾಂಡು ಪಾಂಡುರಂ ಶುಚಿ ಶುಕ್ಲಂ ಧವಳಂ ವಳಕ್ಷಮೆನೆ ಗೌರವರ್ಣ: **ಅಭಿಧಾವ,** ೨. ೧. ೬೨); ರೇತಸ್ಸು (ಉತ್ತಮ ಪಾತ್ರದಾನಾನುಮೋದಫಲದಿಂದಲ್ಲಿ ಪುಟ್ಟುವ ಜೀವಂಗಳ್ ನಾರಿಪುರುಷಸಂಯೋಗನಿಯೋಜಿತ ಶುಕ್ಲಾರ್ತವಂಗಳೊಳ್ ಜೀವಯುಗಳಂಗಳಾಗಿ ನೆಲಸಿ: **ಆದಿಪು,** ೫. ೪೧ ವ); ಅಂಬಲಿ (ಧಾನ್ಯಾಮ್ಲ ಆರನಾಳಂ: **ಅಭಿಧಾವ,** ೧. ೧೬. ೧೦); [ಜೈನ] ಪರಿಶುದ್ಧ ಆತ್ಮಜ್ಞಾನ (ಶುಕ್ಲಧ್ಯಾನಮುಂ ಶುಕ್ಲ ಪರಮಶುಕ್ಲಂ ಎಂದೆರಡು ತೆಱನಕ್ಕುಂ: **ಅಜಿತಪು,** ೮. ೨೮ ವ)

**ಶುಕ್ಲಧ್ಯಾನ** – [ಜೈನ] ಪರಿಶುದ್ಧ ಆತ್ಮಜ್ಞಾನ (ಧರ್ಮಧ್ಯಾನ ಶುಕ್ಲಧ್ಯಾನಂಗಳಂ ಜಾನಿಸಿ ಸಕಳ ಕರ್ಮಂಗಳಂ ಕಿಡಿಸಿ ಅಂತರ್ಗತ ಕೇವಲಿಯಾಗಿ ಮೋಕ್ಷಕ್ಕೆ ವೋದರ್: **ವಡ್ಡಾರಾ,** ಪು ೭೨, ಸಾ ೧೯)

**ಶುಕ್ಲಪಕ್ಷ** – ಚಂದ್ರನ ಬೆಳವಣಿಗೆಯ ಕಾಲ (ಆಷಾಢಮಾಸದ ಶುಕ್ಲಪಕ್ಷದ ಚತುರ್ದಶಿಯೊಳ್ ಅಪರಾಹ್ನವೇಳೆಯೊಳ್ ಸುಕುಮಾರಸ್ವಾಮಿಗೆ: **ಸುಕುಮಾಚ,** ೧೧. ೩೭ ವ)

**ಶುಕ್ಲಲೇಶ್ಯಾ** – [ಜೈನ] ಕರ್ಮಸಂಬಂಧವಾದ ಬಣ್ಣಗಳಲ್ಲಿ ಒಂದು; ಅತಿನಿದ್ದೆಯ ಸಂಕೇತವಾದ ಬಿಳಿ; ಆರು ಲೇಶ್ಯೆಗಳಲ್ಲಿ ಒಂದು, ಶುಭಭಾವ (ಶುಭಭಾವಶುಕ್ಲಲೇಶ್ಯಾನುಭಾವದಿಂ ಧವಳಪುಂಡರೀಕ ನಿಕಾಶಪ್ರಭೆ ದೊರೆಕೊಂಡುದು ಪರಿಣಾಮಭೇದಮೇಂ ಚಿತ್ರವಿಧಮೊ ತನುಭೃದ್ಗಣದಾ: **ಆದಿಪು,** ೬. ೪೨)

**ಶುಚಿಃ ಅಜರಜಸಿ ಭವೇತ್ ಮಾಸ್ ಪಚನೇಶ್ವಸ್ಪೃಷ್ಟ ದೋಷ** – ಮಾಂಸ ಪಚನ ಮಾಡುವಲ್ಲಿ ನಾಯಿ ಮುಟ್ಟಿದ ದೋಷ ಆಡಿನ ರಜಸ್ಸಿನಿಂದ ಶುದ್ಧಿಯಾಗುತ್ತದೆ (ಶುಚಿಃ ಅಜರಜಸಿ ಭವೇತ್ ಮಾಸ್ ಪಚನೇಶ್ವಸ್ಪೃಷ್ಟ ದೋಷಂ ಎಂಬುದು ವೇದಪ್ರಚುರಮೆನೆ ಕೇಳ್ದು ನೃಪನಾ ವಚನಮುಮಂ ನಂಬಿ ನೆಱೆದ ಪೊಲೆಯರ ಪೋಂತಂ: **ಯಶೋಧಚ,** ೩. ೫೯)

**ಶುಚಿತ್ವ** – ಪಾವಿತ್ರ್ಯ (ಪಸವಿನೊಳ್ ಅನ್ನಮಂ ಸುಫಲದಲ್ಲಿ ಸುವರ್ಣಮಂ ಈವ ಯುದ್ಧದೊಳ್ ಕುಸಿಯದೆ ಸೂಱೆಗೊಳ್ಳದೆ ರಣಕ್ಕೆ ಶುಚಿತ್ವಮಂ ಅಪ್ಪುಕೆಯ್ವ ಮಾನಸಿಕೆಯ ನಾಲ್ವರುಂ ನಮಗೆ ವಂದ್ಯರ್: **ಗದಾಯು,** ೪. ೬೦)

**ಶುಚಿಸ್ವಾಂತೆ** – ಪರಿಶುದ್ಧ ಮನಸ್ಸಿನವಳು (ಚಿಂತಿತಫಳದಾಯಕಮಂ ಚಿಂತಾಮನೀಯಂ ಕುಳಾಧಿದೇವತೆ ತಂದೀವಂತೆ ಶುಚಿಸ್ವಾಂತೆ ಶಚೀಕಾಂತೆ ಜಿನಾರ್ಭಕನಂ ಇತ್ತಳಿಂದ್ರನ ಕೈಯೊಳ್: **ಮಲ್ಲಿನಾಪು,** ೧೨. ೩೪)

**ಶುದ್ಧಗೆ** – [ಶುದ್ಧಕ] ಸುದ್ದಗೆ, ಅಕ್ಷರ[ಮಾಲೆ] (ಪಿತೃವೋದಿಸುವಂದು ಶುದ್ಧಗೆಯೊಳಾ ಸಿದ್ಧಂ ನಮೋ ಎಂಬ ವಿಶ್ರುತವರ್ಣಂಗಳನಾದೊಡಂ ಬರೆದಿರಿಲ್ಲ: **ಸುಕುಮಾಚ,** ೨. ೩೬)

**ಶುದ್ಧಪಾರ್ಷ್ಣಿ** – ಹಿಂಚೂಣಿ ಸೈನ್ಯ (ಅಂತಪರಿಮಿತ ಶುದ್ಧಪಾರ್ಷ್ಣಿಯುಂ ಗುಪ್ತಮೂಲಪ್ರತ್ಯಂತನುಂ .. .. ವಿಜಯಪ್ರಸ್ಥಾನೋದ್ಯುಕ್ತಂಮಂಗಳವಸದನಂಗೊಂಡು: **ಶಾಂತಿಪು,** ೧೦. ೧೪೨ ವ)

**ಶುದ್ಧವೃತ್ತ** – ಒಳ್ಳೆಯ ನಡತೆ (ಭೂಂಇಪಾಲಕಂ ಸಂದು ವಿರಕ್ತಿಗಾಗಳೆ ತದೀಯ ಸಮಕ್ಷದೆ ದೀಕ್ಷೆಗಂ ಮನಂದಂದನಂತೆ .. .. ಎಡೆಯೊಳ್ ನಿಲಲೀಗುಮೆ ಶುದ್ಧವೃತ್ತರಂ: **ಚಂದ್ರಪ್ರಪು,** ೭. ೨೭)

**ಶುದ್ಧಾಂತ** – ಅಂತಃಪುರ (ಅತ್ಯಂತ ಸೌಂದರ ಶುದ್ಧಾಂತ ವಧೂಕದಂಬಕಮನೇಂ ಮೆಯ್ವೆರ್ಚಿಸಲ್ಕಾರ್ತುದೋ: **ಆದಿಪು,** ೧೧. ೪೨)

**ಶುದ್ಧಾಕ್ಷರ** – ವರ್ಣಮಾಲೆಯ ಅಕ್ಷರ (ಅಂತಕಾರಾದಿ ಹಕಾರಾಂತಸ್ವರವ್ಯಂಜನಭೇದಭಿನ್ನ ಶುದ್ಧಾಕ್ಷರಂಗಳುಮಂ ಆಯೋಗವಾಹಕಚತುಷ್ಕಮುಮಂ ಸಂಯೋಗಾಕ್ಷರಂಗಳುಮಂ ಬ್ರಹ್ಮಿಗೆ ದಕ್ಷಿಣಹಸ್ತದೊಳ್ ಉಪದೇಶಂಗೆಯ್ದು: **ಆದಿಪು,** ೮. ೫೯ ವ)

**ಶುದ್ಧಿ** – ಸುದ್ದಿ (ಜಾನಕಿಯ ಶುದ್ಧಿಯಂ ಪವಮಾನಜ ತರ್ಪ ಎಸಕಮಂ ಇಲ್ಲೋಸರಿಸಿರ್ದರ್: **ಪಂಪರಾ,** ೧೧. ೪೨)

**ಶುದ್ಧ್ಯಷ್ಟಕ** – [ಜೈನ] ಮುನಿಗಳು ಸಾಧಿಸ ಬೇಕಾದ ಎಂಟು ಬಗೆಯ ಶುದ್ಧಿಗಳು (ಭಾವಶುದ್ಧಿಯುಂ ಕಾಯಶುದ್ಧಿಯುಂ ವಿನಯಶುದ್ಧಿಯುಂ ಈರ್ಯಾಶುದ್ಧಿಯುಂ ಭಿಕ್ಷಾಶುದ್ಧಿಯುಂ ಪ್ರತಿಷ್ಠಾಪನಾಶುದ್ಧಿಯುಂ ಶಯನಾಶನಶುದ್ಧಿಯುಂ ವಾಕ್ಯಶುದ್ಧಿಯುಂ ಎಂಬ ಶುದ್ಧ್ಯಷ್ಟಕದೊಳಂ: **ಅಜಿತಪು,** ೭. ೮ ವ)

**ಶುನಿ** – ನಾಯಿ (ತೋಳ ಚಿಕ್ಕೊತ್ತೆಗೆ ಪೊಕ್ಕೆ ಇಂತು ಶುನಿಯಂತಿರೆ ನಿಲ್ವರೆ: **ಲೀಲಾವತಿ,** ೨. ೧೨೧)

**ಶುಭ** – ಮಂಗಳ (ಉತ್ತರಮಕ್ಕುಂ ಧೃತಿ ತುಷ್ಟಿ ಪುಷ್ಟಿ ಸೌಭಾಗ್ಯಂ ಇಷ್ಟಾಂಗನಾಸುರತಂ ಕಾಂತಿ ಅಗುಂತಿ ಶಾಂತಿ ವಿಭವಂ ಭದ್ರಂ ಶುಭಂ ಮಂಗಳಂ: **ಪಂಪಭಾ,** ೧೪. ೬೫)

**ಶುಭಂಕರಕತ್ತಿಗೆ** – ಒಂದು ಬಗೆಯ ಕತ್ತಿ (ಕಾಳರಕ್ಕಸಿ ಶುಭಂಕರಕತ್ತಿಗೆಯಿಂದೆ ಗಂಟಲಂ ಕೊಯ್ದು: **ನೇಮಿನಾಪು,** ೫. ೩೯)

**ಶುಭಚರಿತ** – ಪರಿಶುದ್ಧ ನಡತೆ (ಮುನ್ನ ನಿಮ್ಮಜ್ಜಪಜ್ಜರ್ ಶುಭಚರಿತ ತದೀಯಾಅನೂನ ವಂಶಾಧಿಪತ್ಯ ಪ್ರಭಾವನೆಯದಜೆಂದೀ ದುರ್ಯಶಕ್ಕೆಂತು ನೋಂತೈ: **ಶಾಂತಿಪು,** ೩. ೭೬)

**ಶುಭತಿಥಿ** – ಶುಭಕರವಾದ ದಿನ (ಶುಭತಿಥಿ ಶುಭನಕ್ಷತ್ರ ಶುಭವಾರ ಶುಭಮುಹೂರ್ತಮೆನೆ ಗಣಕನಿಳಾಪ್ರಭುವೊಗೆದಂ: **ಪಂಪಭಾ,** ೧. ೧೨೭)

**ಶುಭದ** – ಮಂಗಳಕರವಾದ (ಅತಿಶುಭದಂ ಪದ್ಮಜನ ಧವಳಮಂಗಳವೇಷಂ: **ಪುಷ್ಪದಂಪು,** ೪. ೮೨)

**ಶುಭಧ್ಯಾನ** – ಮಂಗಳಕರವಾದ ಆಲೋಚನೆ (ಚತುರ್ಮುಖ ಪ್ರತಿಮಾಯೋಗದೊಳ್ ನಿಂದು ಶುಭಧ್ಯಾನಮನಪ್ಪುಕೆಯ್ದು ಮಹರ್ಷಿಯರಂ ಕಂಡೆಯ್ದೆವರ್ಪುದುಂ: **ಪಂಪರಾ,** ೮. ೪೬ ವ)

**ಶುಭಯೋಗ** – ಶುಭಧ್ಯಾನ (ಶುಭಯೋಗಭಾಗಿ ಯೋಗಪ್ರಭು ವಧೆಯಿಂದಾದ ಪಾಪದಿಂ ದುಃಖದಪ್ರಭವಾಟಪಿಯೆನಿಪ ತಮಃಪ್ರಭೆಯೊಳ್ ಜನಿಯಿಸಿ: **ಪಾರ್ಶ್ವನಾಪು,** ೧೩. ೭೬)

**ಶುಭಲಕ್ಷಣ** – ಒಳ್ಳೆಯ ಲಕ್ಷಣ (ಶುಭಲಕ್ಷಣಾಶ್ಮಯುಕ್ತಮಂ .. .. ಪ್ರಭಾವಿರಾಜಿತಮಮಂ ಏಜೆದಮ ಪೊಂದೇರಂ: ಜಗನ್ನಾವಿ, ೫. ೬೬)

**ಶುಭೇತರ** – ಅಶುಭ, ಕೇಡು (ನಿನ್ನಸಿಮುಖದಿಂ ದಾವಣಿಗುಜಿಯಂ ತಜಿದೊಡೆ ದೇವಿ ಶುಭೇತರವಿನಾಶಮಂ ದಯೆಗೆಯ್ಗುಂ: **ಯಶೋಧಚ,** ೩. ೧೩)

**ಶುಭ್ರವೃತ್ತ** – ಒಳ್ಳೆಯ ನಡತೆ (ಧರ್ಮಚಿತ್ತನೆಂಬುದು ಶುಭವೃತ್ತನೆಂಬುದು ಮಹೋದಯನೆಂಬುದು .. .. ಜಗದ್ವಳಯಂ ಪಡೆವಳ್ಳ ತೈಲನಂ: **ಅಜಿತಪು,** ೧೨. ೨೫)

**ಶುಭ್ರಾತಪತ್ರ** – ಬೆಳ್ಗೊಡೆ (ಸ್ಮರನೃಪವರ ಶುಭ್ರಾತಪತ್ರಂ ವಿಯನ್ನೀರಜನಿ ಮಧ್ಯೋಲಸತ್ಪಾಂಡುರತರ ಶತಪತ್ರಂ ಬೆಡಂಗಾಯ್ತು: **ಚಂದ್ರಪ್ರಪು,** ೮. ೩೪)

**ಶುಲಿ** – ಬೇನೆ, ಗಾಯ (ಸವಣರ್ ಘುಡುಘುಡಿಸುತ್ತ ಏಳ್ತಂದರ್ ಕಡುಪಿಂ ಶುಲಿವಡೆದ ಮಲ್ಲರಂದದಿನಾಗಳ್: **ತ್ರಿಷಷ್ಟಿಪು,** ೩೩. ೧೬)

**ಶುಶ್ರೂಷ[ಷೆ]** – ಪರಿಚರ್ಯೆ (ಮುನಿಮಂಡಲೀಪದಪಯೋಜ ಶುಶ್ರೂಷೆಯಿಂ ವಿದಗ್ಧಜನವಲ್ಲಭಂ ಕಳೆವನಿಂತೀ ಪೊಟ್ಟಿಂ ನೃಪಂ: **ಕಾದಂಬ,** ೧. ೨೦)

**ಶುಷ್ಕ** – ಒಣಗಿದ (ಪಾಲಾಶ ಅಶ್ವತ್ಥ ಅರ್ಕ ಔದುಂಬರ ನ್ಯಗ್ರೋಧ ಶಮಿ ಅಪಾಮಾರ್ಗ ಖದಿರ ಆದಿ ಶುಷ್ಕಸಮಿತ್ತುಗಳುಮಂ ಕುಶ ಅಶ್ವಲಾಯನ ವಿಶ್ವಾಮಿತ್ರಾದಿ ದೂರ್ವಾಂಕುರ ಪವಿತ್ರವಸ್ತುಗಳುಮಂ ಕೊಂಡು: **ಪಂಚತಂತ್ರ,** ೧೯೦ ವ)

**ಶುಷ್ಕತಾರ್ಕಿಕ** – ಒಣಕಲು ಚರ್ಚೆ ಮಾಡುವವನು (ಇರು ಮರುಳೆ ಶುಷ್ಕವೈಯಾಕರಣಂಗಂ ಶುಷ್ಕತಾರ್ಕಿಕಂಗಂ ಬೆಳ್ಳಕ್ಕರಿಗಮಗಮ ವಿಇಷಯಮೆ ಕಾವ್ಯರತ್ನಂ ಅತಿಚತುರಕವಿಕದಂಬಕವಿಷಯಂ: **ಆದಿಪು,** ೧. ೨೪)

**ಶುಷ್ಕೇಂಧನ** – ಒಣಗಿದ ಸೌದೆ (ಸಮುಚ್ಛಿನ್ನ ಕ್ರಿಯಾನಿವೃತ್ತಿಧ್ಯಾನಪರಿಣತೆಯಿಂ ಅಘಾತಿಚತುಷ್ಕ ಶುಷ್ಕೇಂಧನಪಾವಕನಾಗಲೊಡಂ: **ಸುಕುಮಾಚ,** ೯. ೧ ವ)

**ಶೂಕ** – ಧಾನ್ಯದ ಊಬು (ಕಿಂಶಾರು ಶೂಕಂ: **ಅಭಿಧಾವ,** ೧. ೧೬. ೨೨)

**ಶೂಕಲಾಶ್ವ** – ಬಿರುಗುದುರೆ (ಪೊಜಕಾಲೊಳ್ ನಡೆವ ಶೂಕಲಾಶ್ವಮಂ ಬಢಗದಿಂ ಬೆಂಗೆವಾಯ್ದು ರಾಘೆಯೊಳೌಂಕಿ ವಾಘೆಯೊಳ್ ನಿಲಿಸಿ .. .. ನಡೆತಂದು: **ಗಿರಿಜಾಕ,** ೨. ೧೦೫ ವ)

**ಶೂನ್ಯ** – ಇಲ್ಲವಾದುದು, ಬರಿದು (ಅಲಕಂ ಮಂದಾರಶೂನ್ಯಂ ಮನಮಿಂದು ಶೂನ್ಯಂ ಮನೆ ಶೂನ್ಯಂ ಬೀಡು ಶುನ್ಯಂಮಾದುದು ಸಕಲಾವನಿ ಶೂನ್ಯಮಾಯು ದೂಶ್ಶಾಸನನಿಲ್ಲದೆ ಕರ್ಣನಿಲ್ಲದೆ: **ಗದಾಯು,** ೩. ೬೯)

**ಶೂನ್ಯವಾದಿ** – ನಾಸ್ತಿಕವಾದದ ಪ್ರತಿಪಾದಕ (ಇರ್ವರುಂ ಮಿಥ್ಯಾಜ್ಞಾನಿಗಳ್ ಶೂನ್ಯವಾದಿಗಳ್: **ಚಾವುಂಪು,** ಪು. ೧೭೬, ಸಾ. ೧೦)

**ಶೂನ್ಯಾಧ್ವ** – ಆಕಾಶಮಾರ್ಗ ಹಾಗೂ ಮಾಟದ ವಸ್ತುಗಳನ್ನಿರಿಸಿದ ದಾರಿ (ಕುಮಂತ್ರಜಪಮಂ ತದ್ವೇಷದಿಂ ಮಾಡೆ ಕೋಮಳೆ ಶೂನ್ಯಾಧ್ವಮನೈದೆ ದಾಂಟೆ ನಿಜಪಾದಂ ಪೋಗೆ ಮೈಗಂದಿ ಬಿಳ್ದಳಿದಂ: .. .. ಭಾಸ್ಕರಂ: **ರಾಜಶೇವಿ,** ೧೩. ೩೨)

**ಶೂರ್ಪಕ** – ಧಾನ್ಯ ಕೇರುವ ಮೊರ (ಶೂರ್ಪಕಂ ಪ್ರಸ್ಫೋಟಂ: **ಅಭಿಧಾವ,** ೧. ೧೦. ೨೭)

**ಶೂರ್ಪಕವೈರಿ** – ಮನ್ಮಥ (ಶೂರ್ಪಕವೈರಿ ಕಾಲುಗುರ್ಗೆ ವರ್ಪನೊ ಶೀತಮರೀಚಿ ಕಾಂತಿಗೇಂ ವರ್ಪನೊ ವಾಸವಂ ಸಿರಿಗೆ ವರ್ಪನೊ ವೃತ್ರಹಮಂತ್ರಿ ಜಾಣ್ಗೆ ಮೇಣ್ ವರ್ಪನೊ: **ಶಾಂತಿಪು,** ೭. ೧೧೮)

**ಶೂರ್ಪಶ್ರವ** – ಮೊರಗಿವಿಯುಳ್ಳುದು, ಆನೆ (ಕಿಸಲಯ ಜಾಲಾನುಸಂಸಪಿ ಶೂರ್ಪಶ್ರವಸಂಭ್ರಸ್ಯತ್ ಪತಂಗಾಶಯ ಶಯಗಳಿತಾಪತ್ತಿ ತತ್ಕೀರ್ಣಪರ್ಣಂ: **ನೇಮಿನಾಪು,** ೩. ೩೭)

**ಶೃಂಖಲೆ** – ಸಂಕೋಲೆ, ಸರಪಳಿ (ಲಲಿತನಿಕನಕಮಯ ಶೃಂಖಲೆಯಿಂ ಹರಿಚರಣಯುಗಳಮಂ ನಿಯಮಿಸಿ: **ಕಾದಂಸಂ,** ೩. ೧೫)

**ಶೃಂಗ** – ಶಿಖರ (ಗಿರಿಶೃಂಗೋತ್ತುಂಗ ಚಂಚತ್ ಚಟುಲಖರರುಚಿಗ್ರಾವದಗ್ರಂಗಳೊಳ್ ನಿಂದು .. .. ಮುನೀಂದ್ರರ್: **ರಾಜಶೇವಿ,** ೫. ೫೦), ಕೊಂಬು (ಕಜು ಸತ್ತ ಅಟಲಂ ಚೋಳಂಗಜುಪಲ್ ತದ್ಗೋಮತಲ್ಲಿ ಮುಂಬಾಗಿಲೊಳ್ ಅಂದು ಉಜು ಅಪರಂಜಿಘಂಟೆಯಂ ಇಜಿದುದು ಶೃಂಗಾಗ್ರದಿಂ: **ಉದ್ಭಟಕಾ,** ೧೨. ೭೮)

**ಶೃಂಗಕ** – ಬೆಟ್ಟದ ತುದಿ; ಕೊಂಬು, ಪಿಚಕಾರಿ (ಸರಸಿಜ ನೀಲೋತ್ಪಲ ಕರಿಕರ ಹಂಸೀ ವದನರೂಪದಿಂ ನೆರೆದು ಅಂತಃಪುರ ಕಾಂತಾಕರತಳದೊಳ್ ಕರಮೆಸೆದುವು ಕನಕಶೃಂಗಕಂಗಳ್ ಪಲವುಂ: **ಆದಿಪು,** ೧೧. ೧೪೩)

**ಶೃಂಗಾಟಕ** – ನಾಲ್ಕು ದಾರಿ ಸೇರುವ ಜಾಗ (ಮದಮತಂಗಜಾಂಘ್ರಿತಳಮನಳಜಿಸುವ ಶೃಂಗಾಟಕಂಗಳಂ ಸಂಗಳಿಸಿಯುಂ **ಪುಷ್ಪದಂಪು,** ೭. ೬೯); ಹುಬ್ಬುಗಳ ನಡುವಣ ಬಿಂದು (ಸ್ವಸ್ಥತುರಿಯಾತೀತ ಅವಸ್ಥೆಯನೊಳಕೊಂಡು ತೊಳಪ ಶೃಂಗಾಟಕಪದ್ಮಸ್ಥಿತನೊಳ್ ಅಘನೊಳ್: **ಶಬರಶಂ,** ೨. ೧೦೩)

**ಶೃಂಗಾಟಕವ್ಯೂಹ** – ಒಂದು ಸೇನಾರಚನೆ (ಸಮಭೂಮಿಯೊಳ್ ಚತುರ್ಬಲಂಗಳನೊಂದು ಮಾಡಿ ಶೃಂಗಾಟಕವ್ಯೂಹಮನೊಡ್ಡಿ ನಿಂದಾಗಳ್: **ಪಂಪಭಾ,** ೧೨. ೧೬ ವ)

**ಶೃಂಗಾರಂಗೆಯ್** – ಅಲಂಕರಿಸಿಕೊ (ಮುಂದಿಟೆಪಿದ ಸುಗಂಧಾನುಲೇಪನ ಕುಸುಮವಸನಭೂಷಣಂಗಳಿನರಸಿಯುಂ ತಾನುಂ ಶೃಂಗಾರಗೆಯ್ದು: **ಚಂದ್ರಪ್ರಪು,** ೭. ೧೫೦ ವ)

**ಶೃಂಗಾರವಾರಾಶಿ** – ಸಿಂಗಾರವೆಂಬ ಸಮುದ್ರ (ನನೆಯಂಬನೆ ಕರ್ಚಿ ಪಾಜಿದಪುದೋ ಶೃಂಗಾರವಾರಾಶಿ ಭೋಂಕನೆ ಬೆಳ್ಳಂಗೆಡೆದತ್ತೋ ಕಾಮನ ಎಚ್ ಮೆಯ್ವೆರ್ಚಿತ್ತೋ ಪೇಟ್ ಈಕೆಗೆ ಎಂಬಿನಂ: **ಪಂಪಭಾ,** ೪. ೪೨)

**ಶೃಗಾಲ** – ನರಿ (ಅಸ್ಥಿಜಾಲಮಂ ಕೌರ್ವ ಶೃಗಾಲವಾಸುರದಿಂ ಆ ರಣರಂಗದೊಳೊಪ್ಪಿ ತೋಱುಗುಂ: **ತ್ರಿಷಷ್ಟಿಪು,** ೨೪. ೩೬೩)

**ಶೇಖರ** – ಶಿರೋಭೂಷಣ (ತನು ಕಿಱಿದಾದೊಡಂ ಉದ್ಯತ್ ತನುಪ್ರಭಾಪ್ರಸರಮೆಸೆದು ಪಸರಿಸಿ ಸಿಂಹಾಸನಮಂ ಪುದಿದಿರೆ ದೇವಂ ಕನಕಕನಚ್ಚಿಖರಿಶಿಖರಶೇಖರನಾದಂ: **ಆದಿಪು,** ೭. ೭೭)

**ಶೇಮುಷಿ** – ಬುದ್ಧಿ, ಜ್ಞಾನ (ಸಭಾಮಂಡಿತಾಂತತದೊಳ್ ಇಂದ್ರನಂತಿವಿಕಾಶಾತಿಶಯಿಶೇಮುಷಿಕಬ್ಬೆವೊತ್ತರ ಮಹತ್ತರಾಮರಮುಂ: **ವರ್ಧಮಾಪು,** ೬. ೪೦ ವ)

**ಶೇಷ** – ಉಳಿದುದು (ಶೇಷಕ್ಕೆ– ಬಳ್ಳದಟೆ ಅದಱ ಮ್ಯಾಇ: **ಶಬ್ದಮದ** ೧೪೩ ಪ್ರ); ಆದಿಶೇಷ (ಸಮಸ್ತ ಉರ್ವೀಧರ ಅಶೇಷ ಶೇಷ ಮಹಾನಾಗಫಣಾಮಣಿದ್ಯುತಿಯನೇಂ ಖದ್ಯೋತದೊಳ್ ಕಾಣ್ಬರೇ: **ಪಂಪಭಾ,** ೫. ೭೬)

**ಶೇಷಾಕ್ಷತೆ** – ಆಶೀರ್ವಾದಪೂರ್ವಕ ಹಾಕುವ ಅಕ್ಷತೆ (ನಾಲ್ಕು ವೇದಂಗಳೊಳ್ ನಾಲ್ಕುಂ ಋಚಂಗಳಂ ಪೇೞ್ದು ಸಿತ ದೂರ್ವಾಂಕುರವಿಮಿಶ್ರಂಗಳಪ್ಪ ಶೇಷಾಕ್ಷತೆಗಳಂ ಕೊಟ್ಟು ಮುಂದೆ ನಿಂದನಂ ನಿಮಗೆ ಬಾೞ್ತೆಯಪ್ಪುದಂ ಬೇಡಿಕೊಳ್ಳಿಂ ಎನೆ: **ಪಂಪಭಾ,** ೫. ೭೦ ವ)

**ಶೈಕ್ಷ್ಯ** – ಪ್ರಾವೀಣ್ಯ (ಗುರು ಶೈಕ್ಷ್ಯಗ್ಲಾನ ಸಂಘ ಪ್ರವಣಗಣತಪೋನಿಷ್ಠಿತಾನೀತಸಾಧೂತ್ಕರದೊಳ್: ೪. ೧೭)

**ಶೈಲ** – ಬೆಟ್ಟ (ಇಭಶೈಲಂಗಳನೇಱೆಯೇಱೆ ರುಧಿರ ಸ್ರೋತಂಗಳಂ ದಾಂಟಿ ದಾಂಟಿ .. .. ಭರಂಗೆಯ್ದುಱಿದೆಯ್ದಿ: **ಗದಾಯು,** ೪. ೪೮)

**ಶೈಲಚಾಪ** – ಬೆಟ್ಟವನ್ನೇ ಬಾಣವಾಗುಳ್ಳವನು, ಶಿವ (ಶೈಲಚಾಪನಾತ್ತದಯ ಜಿತತ್ರಿತಾಪ ಬಸವೇಶ್ವರಂ ಈಗೆ ಎಮಗೆ ಈಶಭಕ್ತಿಯಂ: **ರಾಜಶೇವಿ,** ೧. ೧೧)

**ಶೈಲರಾಜ** – ಬೆಟ್ಟಗಳ ರಾಜ, ಶ್ರೇಷ್ಠ ಬೆಟ್ಟ, ಹಿಮಾಲಯ (ಕನಕಕಳಶದ ನೀರ್ಗಳ್ ಸುರಿದುವು ವಿಭುಶಿರದೊಳ್ ಶೈಲರಾಜಮಸ್ತಕದೊಳ್ ಎಱಗಿದಂ ಅಬ್ಜಜಲಂಬೋಲ್; **ಶಾಂತಿಪು,** ೧೦. ೧೦೩)

**ಶೈಲಾದಿ** – ನಂದಿ (ಕೈಲಾಸದ ಮಣಿವಾಗಿಲೊಳ್ ಶೈಲಾದಿಯಂ ಕಂಡು ದಂಡಪ್ರಣಾಮಂಗೆಯ್ದು: **ಶಬರಶಂ,** ೨. ೨ ವ)

**ಶೈಲೂಷ** – ನರ್ತಕ, ನಟ (ಜೀವಂಗಳ್ ಶುಭಾಶುಭಕರ್ಮ ಶೈಲೂಷಪ್ರೇರಿತಂಗಳಾಗಿ ಚತುರ್ಗತಿ ಸಂಸಾರಗಳೊಳ್ .. .. ಪರಿಭ್ರಮಿಸುಗುಂ: **ಆದಿಪು,** ೧೬. ೫೭ ವ)

**ಶೈವಲ** – ನಾರುಬಟ್ಟೆ (ಶೈವಲ ಕೌಪೀನಂ ತಾಂ ದೈವಿಕವಿದು ನಿರುತಮೆನುತುಂ: **ತ್ರಿಷಷ್ಟಿಪು,** ೯. ೭೩); ಪಾಚಿ (ನವಶೈವಲದೊಳ್ ನಡೆದಾಡಿ ತನ್ಮುಖಾಂಬುರುಹ ರಸಪ್ರವಾಹದೆ ಮುಳುಂಗಿದುವು ಅಕ್ಷಿಝಷಂಗಳತನಾ: **ರಾಜಶೇವಿ,** ೭. ೬೫)

**ಶೈವಾಳ** – ಪಾಚಿ (ಮಯೂಖಶೈವಾಳಮಂ ಮರಾಳನಿಕರಂ ಕರ್ದುಂಕುವವೊಲ್ ಆದುವಾಗಳ್ ವಧೂ ಕರಾಂಬುರುಹ ಸಂಚಳದ್ಧವಳಚಾಮರಶ್ರೇಣಿಗಳ್: **ಮಲ್ಲಿನಾಪು,** ೮. ೧೨)

**ಶೈಶವ** – ಮಗುವಿನ ಹಂತ (ಶೈಶವಮಂ ಸ್ಮಿತಬಂಧು ಕುಶೇಶಯನಿನನಂತಿರಿಂತು ಕಳೆದುರು ತೇಜೋರಾಶಿ ವಿರಾಜಿಪಂ .. .. ತೀರ್ಥಂಕರಂ: **ಪಾರ್ಶ್ವನಾಪು,** ೧೫. ೩)

**ಶೈಳಪ** – ಬೆಟ್ಟಗಳ ರಾಜ, ಶ್ರೇಷ್ಠ ಬೆಟ್ಟ, ಹಿಮಾಲಯ (ಬಾರೆನ್ನಾಳ್ದಳೆನುತ್ತುಮೊಲ್ದು ಕರೆದಂ ಶರ್ವಾಣಿಯಂ ಶೈಳಪಂ: **ಗಿರಿಜಾಕ,** ೩. ೧೦೫)

**ಶೈಳೇಂದ್ರ** – ಹಿಮಾಲಯ (ಷಟ್ಖಂಡಕಂತಿದಱೆಂದಿತ್ತೆಯೆ ಮೇರೆ ನೋಡಿಇಮೆಮಗೀ ಶೈಳೇಂದ್ರಮೆಂದಂದು ತೋಱಿದನಾ ತನ್ನೊಡವಪ್ ಭೂಪನಿಕರಕ್ಕೆ ಉತ್ತುಂಗ ಹೈಮಾದ್ರಿಯಂ: **ಆದಿಪು,** ೧೩. ೬೯)

**ಶೈಲೋದಕ** – ಬೆಟ್ಟದಿಂದ ಹರಿದುಬರುವ ನೀರು (ದೇಹಸಂಬಂಧದಿಂದಂ ಜಡನಾದಂ ಶೈಲೋದಕವನೆಳಸಿ ಕಲ್ಲಪ್ಪವೊಲ್ ಕಾಷ್ಠಮೆಲ್ಲಂ: ಮಲ್ಲಿನಾಪು, ೧೩. ೭೪)

**ಶೋಕ** – ದುಃಖ (ಬಿಡದೆ ಅೞಲ್ವ ಬಂಧುಜನದ ಒಟ್ಟುಡಿಯದ ಕಣ್ಣೀರ ಪೂರಂ ಆ ಪ್ರೇತಮಂ ಓಗಡಿಸದೆ ಸುಡುವುದು ಗಡಂ ಇನ್ನುಡುಗುವುದೀ ಶೋಕಮಂ ಸರೋಜದಳಾಯತಾಕ್ಷೀ: **ಪಂಪಭಾ,** ೨. ೨೮)

**ಶೋಚ್ಯ** – ದುಃಖಿಸಬೇಕಾದ (ಅದರ್ಕಾನಂದಮಂ ತಾಳ್ದಿದಾಕುಲಮಂ ತಾಳ್ದುವುದೇ ಮದಗ್ರಜನೊಳಾದೀ ಪೌರುಷಂ ಶೋಚ್ಯಮೇ: **ಪಂಪರಾ,** ೬. ೧೭೧)

**ಶೋಣ** – ಕೆಂಪು ಬಣ್ಣ (ಲೀಲಾಕಮಲಾಕರಾನೀಕ ರಕ್ತಕಮಳಂಗಳಂ ಆಸ್ಯಾನುಶೋಣಿತ ಶೋಣ ರಿಪುನೃಪ ಶಿರಗಳೆಂದು ತುೞಿಯಿಸಿಯುಂ: **ಆದಿಪು,** ೮. ೪೧ ವ)

**ಶೋಣತೆ** – ಕೆಂಪು ಛಾಯೆ (ಶೋಣತೆವೆತ್ತು ಉದಯಿಸಿದುದು ಅತನುರಾಗಪ್ರದ ಲಲಿತಸ್ತಂಬಂ ಆ ಸುಧಾಕರಬಿಂಬಂ: **ಶಾಂತೀಶ್ವಪು,** ೧೧. ೩೨)

**ಶೋಣಮಣಿ** – ಮಾಣಿಕ್ಯ (ಭವ್ಯಹೃತ್ಕಮಳಕ್ಕಂ ಮುದಮಂ ಜಪಾಪ್ರಸವ ರಕ್ತಾಶೋಕ ಬಂಧೂಕ ಶೋಣಮಣಿ ಜ್ಯೋತಿಗಳೆಕ್ಕೆಯಿಂ ಕುಡೆ: **ಆದಿಪು,** ೧೬. ೩)

**ಶೋಣಾಶ್ವ** – ಕೆಂಪು ಕುದುರೆ (ಶೋಣಾಶ್ವಂಗಳ್ ರಜತರಥಮಂ ಪೂಡೆ ಕುಂಭಧ್ವಜಂ ಗೀರ್ವಾಣಾವಾಸಂಬರಂ ಅಡರೆ ಮಾಱೊಡ್ಡು ದಲ್ ಸಾಲದು ಎನ್ನೀ ಬಾಣಾವಾಸಕ್ಕೆ ಎನುತುಂ: **ಪಂಪಭಾ,** ೧೧. ೫೬)

**ಶೋಣಿತ** – ರಕ್ತ (ಲೀಲಾಕಮಲಾಕರಾನೀಕ ರಕ್ತಕಮಳಂಗಳಂ ಆಸ್ಯಾನುಶೋಣಿತ ಶೋಣರಿಪುನೃಪಶಿರಗಳೆಂದು ತುೞಿಯಿಸಿಯುಂ: **ಆದಿಪು,** ೮. ೪೧ ವ)

**ಶೋಣಿತವಾರಿ** – ರಕ್ತವೆಂಬ ನೀರು (ಭೂತಾಂಗನಾನಿಕರಂ ಶೋಣಿತವಾರಿಯಂ ಕುಡಿದು ಅಗುರ್ವಪ್ಪನ್ನೆಗಂ ಸೂಸೆ ನೋಡ ಕವಿಲ್ತಿರ್ದುದು ಕೂಡೆ ಸಂಜೆಗವಿದಂತಾ ದ್ರೋಣನಿಂ ಕೊಳ್ಗುಳಂ; **ಪಂಪಭಾ,** ೧೨. ೨೫)

**ಶೋಫ** – ಊತ, ಬಾವು (ಜನಿಯಿಸಿದ ಶೋಫಮದು ಲೇಪನದಿಂ ಪೋಗದೊಡೆ ಶಸ್ತ್ರಕರ್ಮವನೆಸೆಪಂತೆ: **ಪಾರ್ಶ್ವನಾಪು,** ೨. ೪೩)

**ಶೋಷಣ** – ಒಣಗಿಸುವುದು (ಶೋಷಣ ದಹನ ಪ್ಲಾವನಂಗಳಿಂ ತನುಶುದ್ಧಿಯಂ ಮಾಡಿ: **ತ್ರಿಷಷ್ಟಿಪು,** ೧೩. ೧೫ ವ)

**ಶೌಂಡ** – ಆಸಕ್ತಿಯುಳ್ಳ (ಆಹವಶೌಂಡರ್ ಪಾಂಡವರ್ ಆ ಹರಿಯಂ ಸಾರ್ದು: **ಕರ್ಣನೇಮಿ,** ೧೧, ೪೫)

**ಶೌಂಡಿಕ** – ಹೆಂಡ ತಯಾರಿಸುವವನು, ಮಾರುವವನು (ಜಗಲಿಸುತ್ತುಮಿರ್ದ ಕಾಂಚನರತ್ನ ಸಂಚಯಮಂ ಕಂಡು ಕೊಂಡು ಶೌಂಡಿಕಂ ಧನಶೌಂಡನಾಗಿ ಪೋದಂ: **ನೇಮಿನಾಪು,** ೪. ೧೧೪ ವ)

**ಶೌಚ** – ಪರಿಶುದ್ಧ ನಡತೆ (ಸುಕುಮಾರಸ್ವಾಮಿಯ ರೂಪಮಂ .. .. ಶುಚಿತ್ವಮಂ ಶೌಚಮಂ ಶ್ರೀಯಂ .. .. ನೆನೆದು: **ವಡ್ಡಾರಾ,** ಪು. ೩೦, ಸಾ. ೧೦); ಬ್ರಹ್ಮಚರ್ಯ [ಜೈನ] ಒಂದು ಕುಲಧರ್ಮ, ಲೋಭವನ್ನು ಬಿಡುವುದು (ಉತ್ತಮಕ್ಷಮವಂ ಆರ್ದವ ಅರ್ಜವ ಸತ್ಯ ಶೌಚಸಂಯುತ ತಪಸ್ ತ್ಯಾಗ ಆಕಿಂಚನ್ಯ ಬ್ರಹ್ಮಚರ್ಯಾಭಿಧಾನ ದಶಕುಲಧರ್ಮ ನಿರ್ಮಳರೆನಿಸಿದ ಸುಧರ್ಮಾಚಾರ್ಯರ್: **ಸುಕುಮಾಚ,** ೩. ೪೪), ನೋಡಿ 'ದಶಕುಲಧರ್ಮ'

**ಶೌಚಾಚಾರ** – ಶುದ್ಧಿಕ್ರಿಯೆ (ತ್ರಿದಶರ್ ಪೂಜಿಸೆ ಮಾನವರ್ ಪೊಗಟೆ ಶೌಚಾಚಾರಮಂ ದಿವ್ಯದಿಂ ವಿದಿತಂ ಮಾಡಿದರಾರ್ ಮಹಾಸತಿಯರಾರ್ ನಿಮ್ಮಂದದಿಂ: **ಪಂಪರಾ,** ೧೩. ೩೬)

**ಶೌಚಿ** – ಪರಿಶುದ್ಧ ನಡತೆ (ಶೌಚದೇಟ್ಗೆ ಪಟಿಯೊಳ್ ಕೆಳೆಗೊಳ್ಳದು .. .. ಎನೆ ಬಣ್ಣಿಸಲಾರ್ ಗಳ ಭವ್ಯಕೋಟಿಯಂ: **ಸಮಯಪ,** ೬. ೨)

**ಶೌರಿ** – ಶೂರಸೇನನ ವಂಶದವನು, ಶ್ರೀ ಕೃಷ್ಣ (ಯಶೋದೆಗೆ ಸಂಭವಿಸಿರ್ದ ಕನ್ನೆಯೊಳೆ ಶೌರಿಯನಂದು ಪಲ್ಲಟಿಸಿ ಚೆಚ್ಚರಂ ಆಕೆಯನೆತ್ತಿಕೊಂಡು .. .. ಪರಿದೈದಿನಂ ಆತ್ಮಗೇಹಮಂ: **ಜಗನ್ನಾವಿ,** ೩. ೧೧)

**ಶೌರ್ಯ** – ಪ್ರತಾಪ (ದೇವರಂ ಅಡಿಗಡಿಗೆ ಎಱಗಿಸಿ ಸಕಳ ಅವನಿತಳದ ಅದಟರಂ ಪಡಲ್ವಡಿಸಿದ ಶೌರ್ಯ ಅವಷ್ಟಂಭದೊಳ್ ಆನಿರೆ ಗೋವಳಿಗಂಗೆ ಅಗ್ರಪೂಜೆಯಂ ನೀಂ ಕುಡುವಾ: **ಪಂಪಭಾ,** ೬. ೫೭)

**ಶೌರ್ಯಮದ** – ಅಷ್ಟಮದಗಳಲ್ಲಿ ಒಂದು (ಅಂತು ಶೌರ್ಯಮದಜ್ವರಂ ಮಂತ್ರಿವರ್ಗವೈದ್ಯವಚನೌಷಧಿಗಳಂ ಪತ್ತುವಿಡೆ: **ಆದಿಪು,** ೧೨. ೧೮೯ ವ)

**ಶೌರ್ಯಸಖ** – ಪರಾಕ್ರಮದ ಕೆಲಸಗಳಲ್ಲಿನ ಸ್ನೇಹಿತ (ಕಾರ್ಯಸಖಂ ಶಕುನಿ ಗಡಾ ಶೌರ್ಯಸಖಂ ಸೂತಜಂ ಗಡಾ: **ಗದಾಯು,** ೨. ೨೭)

**ಶ್ಮಶ್ರು** – ಮೀಸೆ (ಅಭಿನವೋದ್ಭಿದ್ಯಮಾನ ಮೃದುಕುಟಿಲ ಶ್ಮಶ್ರು ಮಧುಕರಪಟಳಪರಿವೃತಮುಗ್ಧಮುಖಸರಸಿಜನುಂ: **ಆದಿಪು,** ೩. ೯೦ ವ)

**ಶ್ಯಾಮ** – ಕಪ್ಪು, ಕಡುನೀಲ (ಶ್ಯಾಮಳಂ ಅಸಿತಂ ಕೃಷ್ಣಂ ಶ್ಯಾಮಂ ಕಾಲಂ ಶಿತಿಯೆ ನೀಳಂ ತಾನುಂ: **ಅಭಿಧಾವ,** ೨. ೧. ೬೩); ಪ್ರಿಯಂಗು ಬಳ್ಳಿಯ ಹಣ್ಣು (ಫಳಿನಿ ಶ್ಯಾಮಂ ಪ್ರಿಯಂಗು ನಾಮಂ ನೆಗಟ್ಟುಂ: **ಅಭಿಧಾವ,** ೧. ೮. ೪)

**ಶ್ಯಾಮಳ** – ಕಪ್ಪು, ಕಡುನೀಲಿ (ಪದಧೂಳೀಕ್ಷೋಭದಿಂ ದಿಗ್ಯುವತಿ ವದನಮಂ ಶ್ಯಾಮಳಂ ಮಾಡಿ: **ಆದಿಪು,** ೧೪. ೮೮)

**ಶ್ಯಾಮಾಂಗಿ** – ಕಪ್ಪು ದೇಹ[ದವಳು] (ಬನಮಂ ಕೋಗಿಲೆ ಜಕ್ಕವಕ್ಕಿ ಪಗಲಂ .. .. ನೆನೆವಂತೆ ಆಂ ನೆನೆವೆಂ ಸರೋಜಮುಖಿಯಂ ಶ್ಯಾಮಾಂಗಿಯಂ ನಲ್ಲಳಂ: **ಆದಿಪು,** ೧೨. ೩೧)

**ಶ್ಯೇನ** – ಗಿಡುಗ (ಮೊಲಗಿಡಿಗಂ ಶ್ಯೇನಂ: **ಅಭಿಧಾವ,** ೧. ೯. ೧೬)

**ಶ್ರಮಕುಟಿ** – ಗರಡಿಯ ಮನೆ (ಬೆಳ್ಮಟಲ್ ಕಣ್ಗೆಸೆದುದಸದಳಂ ಶ್ರಮಕುಟಿಯೊಳ್: **ಕುಸುಮಾಕಾ,** ೭. ೬೦)

**ಶ್ರಮಾಂಬುಲವ** – ಬೆವರ ಕಣ (ದುಗ್ಧಸಿಂಧುಪ್ಲವಂ ಶ್ರಮಾಂಬುಲವಮೊಂದುಮಂ ನಿನಗೆ ಪುಟ್ಟಿಸಲ್ಕಾರ್ತುದಿಲ್ಲ: **ಆದಿಪು,** ೧೩. ೮೩)

**ಶ್ರಮಾಂಭಃಕಣ** – ಬೆವರ ಹನಿ (ಚಮರರುಹ ಪವನ ಪರಂಪರೆಯೊಳಂ ಆಱದೆ ನೃಪಸೌಂದರೀಶ್ರಮಾಂಭಃ ಕಣಂಗಳುಣ್ಮಿದವಾಗಳ್: **ಆದಿಪು,** ೧೧. ೫೨)

**ಶ್ರಯಣೀಯ** – ಆಶ್ರಯಿಸಿದವನು, ಸೇರಿದವನು (ನಯಶಾಲಿ ವತ್ಸಗೋತ್ರ ಶ್ರಯಣೀಯಂ ಅನೇಕ ಸಕಳಶಾಸ್ತ್ರಾರ್ಥ ವಿನಿಶ್ಚಯಂ ಅತಿಕೃತಿ ಮಾಧವಸೋಮಯಾಜಿ ಸಲೆ ನೆಗಟ್ದಂ: **ಪಂಪಭಾ,** ೧೪. ೪೨)

**ಶ್ರವಣ** – ಕೇಳುವಿಕೆ (ಅಂತು ನಿಜತನೂಜನ ಮರಣಶ್ರವಣಾಶಘಾತನಿಘಾತದಿಂ ಕುಳಶೈಲಂ ಕೆಡೆವಂತೆ ಕೆಡೆದು: **ಪಂಪಭಾ,** ೧೧. ೧೦೬ ವ); ಕಿವಿ (ಶ್ರವಣಂ ಕರ್ಣಂ ಶ್ರೋತ್ರಂ ಕಿವಿ: **ಅಭಿಧಾವ,** ೧. ೧೨. ೧೮)

**ಶ್ರವಣವಿವರ** – ಕಿವಿಯ ತೂತು (ಶ್ರವಣವಿವರದೊಳ್ ತಪ್ತಾಯಸಮಂ ಪೊಯ್ದಂತೆ ದಾರಕವಿದಾರಣಮುಂ ದಾನವಪರಾಭವಮುಂ ತನಗಟಲನೆರ್ದೆವಟುಮಂ ಒದವಿಸೆ: **ಪಂಪರಾ,** ೯. ೪೬ ವ)

**ಶ್ರವಣಶೂಲ** – ಕಿವಿ ನೋವು (ಪರಸುವ ಪೌರರಪರಕೆಯ ಸರಂ ಶ್ರವಣಶೂಲಮಾಗಿ ಕಿವಿಯೊಳ್ ಪುಗುವಂತಿರೆ ಕಿವಿಯಂ ಪುಗೆ: **ಶಾಂತಿಪು,** ೭. ೩)

**ಶ್ರವಣಸುಖ** – ಕೇಳಲು ಹಿತಕರವಾದುದು (ಭವದಗ್ರಜ ದಿಗ್ವಿಜಯೋತ್ಸವಂ ಅಧಿಕಮಹೋತ್ಸವಂ ವಲಂ ನಿನಗಾದುದು ಶ್ರವಣಸುಖಮೆಂದೆ ದಿಜಾತ್ರ ವರ್ಣನಣಗೆಯ್ವೆಂ ಉಂತದೇನೆನ್ನಳವೇ: **ಆದಿಪು,** ೧೪. ೫೧)

**ಶ್ರವಣಾಭರಣ** – ಕಿವಿಗಿಟ್ಟುಕೊಳ್ಳುವ ಒಡವೆ, ಶವ್ರವಣನಕ್ಷತ್ರದಿಂದ ಕೂಡಿದುದು (ನಕ್ಷತ್ರಮಾಲೆಯಂತೆ ಚಿತ್ರಾಶ್ಲೇಷ ಶ್ರವಣಾಭರಣಭೂಷಿತೆಯುಂ ಲಕ್ಷ್ಮಿಯಂತೆ ಹಸ್ತಸ್ಥಿತಕಮಲ ಶೋಭಿತೆಯುಂ: **ಕಾದಂಬ,** ೧. ೬೫ ವ)

**ಶ್ರವ್ಯ** – ಕೇಳಲು ಯೋಗ್ಯವಾದ (ವಿಚಾರಕ್ಷಮಂ ಉಚಿತಪದಂ ಶ್ರವ್ಯಂ ಅವ್ಯಾಕುಲಂ ವ್ಯಾಪ್ತದಿಗಂತಂ ಕಾವ್ಯಮೆಂದು ಅನ್ವಿತಸುಕವಿಜನಂ ಮೆಚ್ಚೆ ನಿಚ್ಚಂ: **ಆದಿಪು,** ೧. ೨೬)

**ಶ್ರಾಂತ** – ಬಳಲಿದ (ವಿದಿತ ಪ್ರತ್ಯಕ್ಷನಾಶಾಕರಿನಿಕಟತಟ ಶ್ರಾಂತದಾನಂ ಭರಂಗೆಯ್ದಿದಿರೊಳ್ ವಿಕ್ರಾಂತತುಂಗಂ ಹರಿಗನಿರೆ: **ಪಂಪಭಾ,** ೬. ೭೭)

**ಶ್ರಾಂತಿ** – ಆಯಾಸ (ಶ್ರಾಂತಿಯುಂ ಘನಮಾದತ್ತು ತುರಂಗಮಕ್ಕೆ: **ಕಾದಂಸಂ,** ೩. ೧೦)

**ಶ್ರಾವಕ** – ಕೇಳುವವನು (ಗಾಯಕಗಣಕಕಂಠರವಂ ಶ್ರಾವಕಮಧುರಸ್ನಿಗ್ಧಮೆಸೆದುದು ಆಸ್ಥಯಿಕೆಯೊಳ್: **ಅಜಿತಪು,** ೫. ೧೧); ಜೈನ ಗೃಹಸ್ಥ (ಶ್ರಾವಕನಲ್ಲದೊಡಂ ಪುಣ್ಯಾವಹಮೆಂದೊಂದು ಪರ್ವದೊಳ್ ಮಿಂದುಣ್ಬಂ: **ಸಮಯಪ,** ೬. ೮೯)

**ಶ್ರಾವಕತನ** – [ಜೈನ] ಐದು ಅಣುವ್ರತಗಳು, ಮೂರು ಗುಣವ್ರತಗಳು ಮತ್ತು ನಾಲ್ಕು ಶಿಕ್ಷಾವ್ರತಗಳನ್ನು ಪಾಲಿಸುವಿಕೆ (ಶ್ರಾವಕತನದಿಂದಂ ಇಂತುತಾಗಲೆವೇಟ್ಟುಂ: **ಸಮಯಪ,** ೧೩. ೧೧)

**ಶ್ರಾವಕಧರ್ಮ** – ಜೈನಧರ್ಮ (ವ್ರತಂದಾಳ್ದಿ ಸಮ್ಮದದಿಂದಂ ಶ್ರಾವಕಧರ್ಮಮಂ ಗುಣಮಹಾರತ್ನಾಪಣಂ ಗೋಪಣಂ: **ಕರ್ಣನೇಮಿ,** ೧. ೩೬)

**ಶ್ರಾವಕವ್ರತ** – [ಜೈನ] ಶ್ರಾವಕತನ (ಸಮ್ಯಗ್ದರ್ಶನಸಮೇತಂ ಸಕಳ ಶ್ರಾವಕವ್ರತಂಗಳಂ ಕೆಯ್ಕೊಂಡು ಮನೆಗೆ ವಂದು: **ಶಾಂತಿಪು,** ೯. ೮೩ ವ)

**ಶ್ರಾವಕಾಚಾರ** – ಶ್ರಾವಕತನ (ಇಂತೀ ಸಮೀಚೀನ ಶ್ರಾವಕಾಚಾರಂಗಳಂ ನಿರತಿಚಾರಮಾಗೆ ತಾಳ್ದಿದ ದೇಶವಿರತಂಗೆ ಇಜ್ಯೆ ವಾರ್ತೆ ದತ್ತಿ ಸ್ವಾಧ್ಯಾಯ ಸಂಯಮ ತಪಂ ಎಂದು ಆರ್ಯಕರ್ಮಂ ಆಱು ತೆಱನಕ್ಕುಂ: **ಸುಕುಮಾಚ,** ೬. ೨೫ ವ)

**ಶ್ರಾವಕಿ** – ಜೈನ ಗೃಹಸ್ಥೆ (ಶ್ರಾವಕಧರ್ಮದೊಳ್ ದೊರೆಯೆನಲ್ ಪೆಱರಿಲ್ಲೆನೆ ಸಂದ ರೇವತೀ ಶ್ರಾವಕಿ ತಾನೆ ಸಜ್ಜನಿಕೆಯೊಳ್ ಜನಕಾತ್ಮಜೆ ತಾನೆ ಶೀಲದೊಳ್ ದೇವಕಿ ತಾನೆ: **ಅಜಿತಪು,** ೧. ೫೩)

**ಶ್ರಾವ್ಯ** – ಕೇಳಬಹುದಾದ, ಇಂಪಾದ (ಕೆಲರಾ ಕಂಗೆ ದ್ವಿರ್ಭಾವಮಂ ಪೇೞ್ವರದಂಶ್ರಾವ್ಯಮಾದೆಡೆಯೊಳ್ ಪೇೞ್ವುದು ಕಿವಿಗೆ ಸೊಗಯಿಸದೆಡೆಯೊಳ್ ಮಾಣ್ಬುದು: **ಶಬ್ದಮದ,** ೨೩೯ ವೃತ್ತಿ)

**ಶ್ರೀ** – ಐಶ್ವರ್ಯ (ಶ್ರೀಗೆ ನೆಗೞ್ತೆಗೆ ವೀರಶ್ರೀಗಾಗರಂ: **ಪಂಪಭಾ,** ೯. ೧); ಲಕ್ಷ್ಮಿ (ಶ್ರೀಗಂ ಪರಮಾತ್ಮಪದಶ್ರೀಗಂ ನೆಲೆ ಧರ್ಮಂ: **ಮಲ್ಲಿನಾಪು,** ೧೦. ೧); ಶುಭದಾಯಕ (ಶುಭಾವಹಂ ಶ್ರೀ: **ಅಭಿಧಾವ,** ೨. ೧. ೮೩)

**ಶ್ರೀಕ** – ಹಣವುಳ್ಳವನು (ಗತಶ್ರೀಕನಪ್ಪನಂ ಸೇವಿಪರಾರ್: **ರಾಜಶೇವಿ,** ೯. ೬೫)

**ಶ್ರೀಕರ** – ವೈಭವೋಪೇತ (ಶ್ರೀಕರಮೆನಿಸುವ ಚೀನಪತಾಕಾವಳಿ ತೋರಣಾವಳೀವೃತಪುರಮಂ ವೈಕುಂಠನೊಸೆದು ನೋಡುತ್ತೆ: ಜಗನ್ನಾವಿ, ೧೨. ೧)

**ಶ್ರೀಕರಣ** – ಲೆಕ್ಕಪತ್ರಾಧಿಕಾರಿ (ಧರಾಧೀಶ್ವರಂ ಆಸ್ಥಾನ ಭೂಮಿಯೊಳ್ ಅನಂತಸಾಮಂತಮಂತ್ರಿಪುರೋಹಿತ ಅಂತರ್ವಾಂಶಿಕ ಶ್ರೀಕರಣ ಸೇನಾನಾಯಕ ಸಂಧಿವಿಗ್ರಹಿ ಪ್ರಮುಖ ನಿಖಿಲ ಪರಿವಾರಪರಿವೃತನಾಗಿ: **ಪಂಚತಂತ್ರ,** ೬೬ ವ)

**ಶ್ರೀಕಾಂತೆ** – ಲಕ್ಷ್ಮಿ (ಸೂಕ್ತಿಸತಿಯುಂ ಶ್ರೀಕಾಂತೆಯುಂ ಜೈನಶಾಸನದೇವೀಕುಳಮುಂ ಸಮಂತು ಸಮಸಂದಿಷ್ಟಾರ್ಥಮಂ ಮಾೞ್ಕೆ: **ಪುಷ್ಪದಂಪು,** ೮. ೬೪)

**ಶ್ರೀಖಂಡಷಂಡ** – ಶ್ರೀಗಂಧದ ಮರದ ತೋಪು (ಸಿದ್ಧದಂಪತಿಗಳ್ ಕ್ರೀಡಿಸುತ್ತಿರ್ಪರೀ ನಗತಟ ಶ್ರೀಖಂಡಷಂಡಂಗಳೊಳ್: **ಆದಿಪು,** ೯. ೧೧೮)

**ಶ್ರೀತಾಳಿಕ** – ತಾಳೆಮರ (ಮನಸಿಜ ವಿಜಯಪ್ರಶಸ್ತಿ ಲೇಖನೋಚಿತಚ್ಛದ ಶ್ರೀತಾಳಿಕಮುಮಪ್ಪ ವೇಳಾವನದೊಳ್ ಆವಾಸಿತವಿಜಯಕಟಕನಾಗಿ: **ಆದಿಪು,** ೧೩. ೩ ವ)

**ಶ್ರೀದ** – ಸಂಪತ್ತನ್ನು ಕೊಡುವವನು, ಕುಬೇರ (ಶ್ರೀದಸಖಂ ಪುರರಿಪು ಬಿಲ್ವೋದಕಪತಿನಾಮನಲ್ಲಿ ಸನ್ನಿದನಾಗಿರ್ದು .. .. ಆ ಉಪೇಂದ್ರಂಗೆಂದಂ, **ಜಗನ್ನಾವಿ,** ೧೪. ೧)

**ಶ್ರೀದಯಿತ** – ಭರತಚಕ್ರವರ್ತಿ (ಶ್ರೀದಯಿತಂ ಮನುಕುಲಗಗನಾದಿತ್ಯಂ ಹಿಮಮನೆಯ್ದೆ ಷಟ್ಖಂಡಮುಮಂ ಸಾಧಿಸಿ ಜಿತದಿಙ್ಮಂಡಲನಾದ ಮಹಾತ್ಮಂ ಸರಸ್ವತೀಮಣಿಹಾರಂ: **ಆದಿಪು,** ೧೫. ೧)

**ಶ್ರೀದಯಿತೆ** – ಲಕ್ಷ್ಮಿ (ಶ್ರೀದಯಿತೆಗೆ ನಿರ್ವಾಣಶ್ರೀದಯಿತೆಗೆ ದರ್ಶನಾಂಗಮೆಂಟುಂ ಚಿತ್ತಾಹ್ಲಾದಕರಂ ಎಂದು ನಂಬಿದನಾದರದಿಂ ಸುಕವಿನಿಕರಪಿಕಮಾಕಂದಂ: **ಧರ್ಮಾಮೃ,** ೧೦. ೧)

**ಶ್ರೀನಾರೀಪತಿ** – ಸಾರ್ವಭೌಮ (ಶ್ರೀನಾರೀಪತಿ ಬಂದಿದಿ ಮಾನಿತಗಣಧರಯತೀಂದ್ರನಂ .. .. ಸಮವಸರಣಮಂ: **ಶಾಂತಿಪು,** ೯. ೧)

**ಶ್ರೀನಿಕೇತನ** – ಸಂಪತ್ತಿನ ಮನೆ, ಭಂಡಾರ (ಶ್ರೀನಿಕೇತನಸಂಜಾತ ಕಾಳಮಹಾಕಾಳನೈಸರ್ಪ ಪಾಂಡುಕಪದ್ಮಪಿಂಗಳಮಾಣವಕ ಶಂಖಸರ್ವರತ್ನಂಗಳೇಂಬ ಒಂಬತ್ತು ನಿಧಿಗಳಿಂದಂ: **ಶಾಂತಿಪು,** ೧೧. ೮೪ ವ)

**ಶ್ರೀನಿಳಯ** – [ಜೈನ] ಸೌಧರ್ಮಕಲ್ಪದ ಒಂದು ವಿಮಾನ (ಸೌಧರ್ಮಕಲ್ಪದ ಶ್ರೀನಿಳಯವಿಮಾನದೊಳ್ ಶ್ರೀಧರದೇವನೆಂಬ ದೇವನಾದಂ: **ನೇಮಿನಾಪು,** ೪. ೮ ವ)

**ಶ್ರೀನೀಡ** – ಸಂಪತ್ತಿನ ಆಗರ, ಕೃಷ್ಣ (ಶ್ರೀನೀಡನುಂ ನೀಡಿರದೆ ದಿಕ್ಕರಿಕರಾನುಕಾರಿಗಳಪ್ಪ ಬಾಹುದಂಡಂಗಳಂ ಎೞ್ಬಿ ಪಿಡಿದು: **ಕರ್ಣನೇಮಿ**೧೩. ೮ ವ)

**ಶ್ರೀಪಂಚಮಿ** – [ಜೈನ] ಒಂದು ವ್ರತ (ಯೌವನಂ ನೆಱೆವಿನಂ ಒಂದು ದೆವಸಂ ಶ್ರೀಪಂಚಮಿಯೊಳ್ ಉಪವಾಸನಿರತೆಯಾಗಿ: **ಶಾಂತಿಪು,** ೫. ೧೮ ವ)

**ಶ್ರೀಪದ** – ಮೋಕ್ಷ (ಜಿನಂ ಸತ್ಯವಾದಿ ಕಥಾನಾಯಕನಾಗೆ ತಚ್ಚರಿತಮಂ ಪೇೞ್ದಂಗೆ ಕೈಸಾರ್ಗುಂ ಐಹಿಕಂ ಆಮುಷ್ಮಿಕಂ ಆನುಷಂಗಿಕಂ ಎನಲ್ ನಿಶ್ರೇಯಸಶ್ರೀಪದಂ: **ಮಲ್ಲಿನಾಪು,** ೧. ೪೮)

**ಶ್ರೀಫಳ** – ಬಿಲ್ವಪತ್ರೆ ಕಾಯಿ (ಆ ಮಹಾತ್ಮಂ ಆತ್ಮವಿದ್ಯಾಧರ ವಿಭವಸಂಭವ ವಿಷಯಸುಖಶ್ರೀಫಳಮಂ ಶ್ರೀಫಳಮಂ ಈಡಾಡುವಂತೆ ಈಡಾಡಿ: **ಪಾರ್ಶ್ವನಾಪು,** ೬. ೫೯ ವ)

**ಶ್ರೀರೋಹಣಗಿರಿ** – ಮೇರುಪರ್ವತ (ಆರಾರ್ ಏಱಿರ್ ಶಾಸ್ತ್ರಶ್ರೀರೋಹಣಗಿರಿಯಂ: **ರಾಜಶೇವಿ,** ೧. ೨೯)

**ಶ್ರೀವತ್ಸ** – ಕಪ್ಪು ಮಚ್ಚೆಯುಳ್ಳ ವಿಷ್ಣು (ಭವದೀಯ ಮನೋಹರ ಬಾಲ್ಯವಿನೋದಾಮೃತದೊಳೆಯ್ದೆ ತೀವಿದ ಮತ್ಸ್ವಾಂತವನಿಂತೀ ವಿಷದಿಂ ತೀವುವುದೇ ಶ್ರೀವತ್ಸವತ್ಸವತ್ಸವತ್ಸಾ: **ಜಗನ್ನಾವಿ,** ೩. ೯೨)

**ಶ್ರೀವಧು** – ಲಕ್ಷ್ಮಿ (ತವೆ ಮಾಱಾಂತ ಬಲಂ ಕಱುತ್ತಿಱಿದು ತನ್ನಾಳ್ದಂ ಕರಂ ಮೆಚ್ಚೆ ಗೆಲ್ದವನಂ ಶ್ರೀವಧು ಪತ್ತುಗುಂ: **ಪಂಪಭಾ,** ೧೦. ೪೪)

**ಶ್ರುತ** – ಪ್ರಸಿದ್ಧ (ಸಮಸ್ತಸಾಹಿತ್ಯಕಲಾಸತಿರಮಣಂ ವೈಶ್ರವಣಂ ಶ್ರುತನಾದಂ ಭೂಪರ್ ಇನ್ನಾರ್ ಎಂಬಿನಂ: **ಮಲ್ಲಿನಾಪು,** ೩. ೬); ಶಾಸ್ತ್ರ (ಉಭಯಭವಕ್ಕಂ ಶ್ರುತದಿಂದೆ ಹಿತಕರಂ ಪೆಱತುಂಟೇ: **ಅಜಿತಪು,** ೧. ೧೨); ಪಾಂಡಿತ್ಯ (ಶ್ರುತದೊಳ್ ಭಾವಿಸಿ ನೋಳ್ಪೊಡೆ .. .. ಕೃತಪರಿಚಯಬಲನಪ್ಪನಂ ಅತಿಶಯಧವಳನ ಸಭಾಸದರ್ ಮನ್ನಿಸುವರ್: **ಕವಿರಾಮಾ,** ೧. ೫)

**ಶ್ರುತದೇವಿ** – ಶಾರದೆ (ಭುವನವಂದ್ಯ ವರವಿದ್ಯಾತೀರ್ಥಕರತ್ವ ಮಣ್ಯಲಕ್ಷ್ಮಿಗೆ ಸಕಲಶ್ರೂತದೇವಿ ಯಕ್ಷಿ ಯಕ್ಷಂ ಬ್ರಹ್ಮಂ: **ನೇಮಿನಾಪು,** ೧. ೧೬)

**ಶ್ರುತದುಷ್ಟ** – ಕೇಳಲು ಕಠಿಣವೆನಿಸುವ, ಒಂದು ಕಾವ್ಯ ದೋಷ (ಶ್ರುತಿದುಷ್ಟಂ ಅರ್ಥದುಷ್ಟಂ ಶ್ರುತಿಕಷ್ಟಂ ಕಲ್ಪನೋಕ್ತಿಕಷ್ಟಂ

ಎಂದೀ .. .. ನಾಲ್ಕುಮಿಲ್ಲಿ ಕೃತಿದೋಷಂಗಳ್: **ಕವಿರಾಮಾ,** ೧. ೬೨)

**ಶ್ರುತಪಾರಗ** – ವೇದಪಾರಂಗತ (ಒಡಮೆಯನರ್ಥಿಗಿತ್ತೆಂ .. .. ಈಗಳೊಂದಕ್ಕೆಡೆಯಿಲ್ಲ ಕೈಯೊಳೆರೆದಂ ಶ್ರುತಪರಗನೆಂತು ಸಂತಸಂಬಡಿಸುವೆಂ .. .. ಕುಂಭಸಂಭವಾ: **ಪಂಪಭಾ,** ೨. ೪೬)

**ಶ್ರುತವಿದ್ಧ** – ಮತ್ತೊಬ್ಬರಿಂದ ಕೇಳಿ ಮಾಡಿದ ಚಿತ್ರಣ (ಶ್ರುತವಿದ್ಧತ್ವವಿದ್ಧಪರವಿದ್ಧಮೆಂಬ ವಿದ್ಧಪದ್ಧತಿಯೊಳಂ .. .. ಅಪೂರ್ವಭಿತ್ತಿಯಂ ತಳೆದು: **ಚಂದ್ರಪ್ರಭು,** ೧೫. ೬೯ ವ)

**ಶ್ರುತವಿಳಾಸ** – ಶಾಸ್ತ್ರಜ್ಞಾನದಿಂದ ಶೋಭಿಸುವವನು (ವಸುಧೆಯೊಳ್ ಒಳ್ಪುವೆತ್ತ ನರರೇಮಜೆವನ್ನರೆ .. .. ಗುಣವ್ಯಸನರೆ ನೀಂಬರಂ ಶ್ರುತವಿಳಾಸರೆ ನೀಂಬರವೇನುದಾತ್ತರೇ: **ಪುಷ್ಪದಂಪು,** ೧. ೭೬)

**ಶ್ರುತಸ್ಕಂದ** – [ಜೈನ] ಗಣಧರರು ಬರೆದ ದ್ವಾದಶಾಂಗದ ಸೂತ್ರ (ಅನುಯೋಗಕುಸುಮಪಾದಪಂ ಅನೇಕನಯಲತಿಕ ಮಂಗಳಫಲಮಹೀಜಂ ಸದ್ವನಜವನಮೆಮಗೆ ವಿಶ್ರಮವನಮಕೃತಿವಿಶ್ರುತ ಶ್ರುತಸ್ಕಂಧವನಂ: **ಆದಿಪು,** ೧. ೧೦)

**ಶ್ರುತವಿಹೀನ** – ಶಾಸ್ತ್ರಜ್ಞಾನವಿಲ್ಲದವನು (ಸಕಲವಸುಂಧರಾ ವಳಯಮಂ ರಕ್ಷಿಸುವಂತು ಮಾಟ್ಪೊಡಿವರ್ ಶ್ರುತವಿಹೀನರ್, ಇವರಂ ಶ್ರುತವಿನಯಸಂಪನ್ನರಪ್ಪಂತು ಮಾಟ್ಪೆನೆಂಬವಂ ಉಳ್ಳೊಡೆ ಆತನೇನಂ ಬೇಡಿದೊಡಂ ಕುಡುವೆಂ: **ಪಂಚತಂತ್ರ,** ೬೭ ವ)

**ಶ್ರುತಿ** – ಕಿವಿ (ಶ್ರುತಿಯಂ ಭೇರೀರವಶ್ರುತಪೂರ್ವಂ ತಾಗೆ ಜಾನಪದಜನಮನಿತುಂ ಪ್ರತಿಹತಮಾದತ್ತು: **ಪಾರ್ಶ್ವನಾಪು,** ೧೧. ೬೯); ವೇದ (ಇವಂ ಕಪಿಲನೆಂಬೊಂ ಏಕಸಂಧಿಯಪ್ಪುದಜೆಂ ನಾನುಂ ಮತ್ತಿನ ಮತ್ತನಯರ್ಕಳಂ ಓದಿಸೆ ಮತ್ತಿವಂ ಅಕ್ಲೇಶದಿಂ ಶ್ರುತಿ ಸ್ಮೃತಿ ಶಾಸ್ತ್ರೋಪಾತ್ರಮುಖನಾಗೆ: **ಶಾಂತಿಪು,** ೬. ೬೨ ವ ಮತ್ತು ೬೩)

**ಶ್ರುತಿಕಷ್ಟ** – ಕರ್ಕಶವಾದುದು, ಒಂದು ಕಾವ್ಯ ದೋಷ (ಶ್ರುತಿದುಷ್ಟಂ ಅರ್ಥದುಷ್ಟಂ ಶ್ರುತಿಕಷ್ಟಂ ಕಲ್ಪನೋಕ್ತಿಕಷ್ಟಂ ಎಂದೀ .. .. ನಾಲ್ಕುಮಿಲ್ಲಿ ಕೃತಿದೋಷಂಗಳ್: **ಕವಿರಾಮಾ,** ೧. ೬೨)

**ಶ್ರುತಿದುಷ್ಟ** – ಕೇಳಲು ಕಷ್ಟಕರವಾದುದು, ಒಂದು ಕಾವ್ಯ ದೋಷ (ಶ್ರುತಿದುಷ್ಟಂ ಅರ್ಥದುಷ್ಟಂ ಶ್ರುತಿಕಷ್ಟಂ ಕಲ್ಪನೋಕ್ತಿಕಷ್ಟಂ ಎಂದೀ .. .. ನಾಲ್ಕುಮಿಲ್ಲಿ ಕೃತಿದೋಷಂಗಳ್: **ಕವಿರಾಮಾ,** ೧. ೬೨)

**ಶ್ರುತಿಪಥ** – ಕಿವಿ (ಮಣಿಮೇಖಲಾರವಂ ಶ್ರುತಿಪಥಮಂ ಪಳಂಚೆ: **ಪಂಪರಾ,** ೩. ೫೧)

**ಶ್ರುತಿಪುರುಷ** – ವೇದಪುರುಷ, ಬ್ರಹ್ಮ (ಶ್ರುತಿಪತಿ ಗೋಪತಿ ಲಕ್ಷ್ಮೀಪತಿ .. .. ಆದಿಪುರುಷಂ ಶ್ರುತಿಪುರುಷನಿರಲ್ಕೆ ಮಿಕ್ಕ ಪುರುಷರಪೂಜ್ಯರ್: **ಜಗನ್ನಾವಿ,** ೧೭. ೧೭)

**ಶ್ರುತಿಪೂರ** – ಕರ್ಣಾಭರಣ (ಸ್ತುತಿಗೆಯ್ವೆಂ ಕೃತಪಂಚಮ ಶ್ರುತಿ ಪುರಾಣವ್ಯಾಸನಂ ವ್ಯಾಸನಂ ಕೃತಿಲೋಕಶ್ರುತಿಪೂರ ಕಲ್ಪಕವಿತಾಗೀರ್ವಾಣನಂ ಬಾಣನಂ: **ಜಗನ್ನಾವಿ,** ೧. ೮)

**ಶ್ರುತಿಶೂನ್ಯ** – ಹಾವು (ನಿಜಶ್ರುತಿಶೂನ್ಯಾಗಿ ಮಾರುತಭುಗುವಲ್ತು ದಂಡಧರನಾಗಿ ದಿಟಂ ಜವನಲ್ತು .. .. ಎನೆ ವೃದ್ಧನಿದೇಂ ವಿರುದ್ಧನೋ: **ಪುಷ್ಪದಂಪು,** ೧೩. ೩೫)

**ಶ್ರುತಿಸುಭಗ** – ಇಂಪಾದುದು (ಅತಿನಿಪುಣರಜೆಗೆ ತೋರ್ಪೆಂ ಶ್ರುತಿಸುಭಗಮೆನಿಪ್ಪ ರೂಪಕಾಲಂಕೃತಿಯಂ: **ಕವಿರಾಮಾ,** ೩. ೧೧)

**ಶ್ರುತ್ಯಾರೂಢ** – ವೇದಪ್ರತಿಪಾದಿತವಾದುದು, ದೇವರು (ನಿತ್ಯಾನಂದಂ .. .. ಶ್ರುತ್ಯಾರೂಢಂ ಶುಭಗುಣಯುತಂ ಶುದ್ಧಸಿದ್ಧಾಂತಸಾರಂ ಭೃತ್ಯಾಧಾರಂ ಭುವನಶರಣಂ ತ್ವಾಮ ಶರಣ್ಯಂ ಪ್ರಪದ್ಯೇ: **ರಾಜಶೇವಿ,** ೧೩. ೫೮)

**ಶ್ರೇಢಿ** – [ಜೈನ] (ವಿಜಯಾರ್ಧದ ದಕ್ಷಿಣ ಶ್ರೇಢಿಯ ಗಾಂಧಾರ ವಿಷಯದ ಸುಸೀಮಾನಗರಮನಾಳ್ವ: **ಚಾವುಂಪು,** ಪು. ೨೧೩, ಸಾ. ೬)

**ಶ್ರೇಣಿ** – ಗುಂಪು (ಪ್ರಕರಂ ಸಂಕುಲಂ ಉತ್ಕರಂ ತತಿ ಗಣಂ ಶ್ರೇಣಿ ಪ್ರವರ್ಗಂ ಕದಂಬಕಂ: **ಅಭಿಧಾವ,** ೨. ೧. ೨೭); ಸಾಲು (ಬಾಳೆಯ ತೋಲೆಯಿಂ ಅಳಿಸ್ಫಾರಕಲ್ಹಾರಪುಷ್ಪಂಗಳ ಘಂಟಾಶ್ರೇಣಿಯಿಂ .. .. ಕಣ್ಗೊಳಿಕುಂ .. .. ಪ್ರಪಾಮಂಟಪಂಗಳ್: **ರಾಜಶೇವಿ,** ೨. ೨೧)

**ಶ್ರೇಣಕಾ[ಕೆ]** – ಗುಂಪು (ಬುಧಜನಪ್ರೀಣನಾಗ್ರೇಸರ ಗ್ರಾಮಣಿಯಾದಮ ದಾನಚಿಂತಾಮಣಿ ಗುಣಮಣಿ ಶ್ರೇಣಿಕಾಶ್ರೇಣಿಯಿಂದಂ: **ಆದಿಪು,** ೧೨. ೧೫); ಗುಡಾರ

**ಶ್ರೇಯ** – ಉತ್ಕೃಷ್ಟವಾದ (ಶ್ರೇಯಂ ಪ್ರೇಯಂ ದ್ವಿಷದವಸಾಯಕ ಸಾಯಕಪರಂಪರಂ ಲಲಿತಯುವ ತ್ಯಾಯತನತ್ಯಾಯುತನಂ ಗೇಯೋದ್ಗಾಯತ್ಸಕಳಕಳಂ ಸಕಳಕಳಂ: **ಕಾವ್ಯಾವಲೋ,** ೫೪೯); ಮಂಗಳ (ಸ್ವಸ್ತ್ಯಾದಿಗೆ: ಸಮನಿಸುಗೆ ಜಗಕ್ಕೆಲ್ಲಿಯುಂ ಆಯುಂ ಪ್ರಮೋದಮುಂ ಕ್ಷೇಮವೃತ್ತಿ ಕುಶಲಂ ಭದ್ರಂ ಭವಿಕಂ ಭವ್ಯಂ ಶ್ರೇಯಂ ಶಿವಂ ಶುಭಂ ಸ್ವಸ್ತಿ ಕಲ್ಯಾಣಂ ಮಂಗಳಂ: **ಶಬ್ದಮದ,** ೧೪೧, ಪ್ರ ೨)

**ಶ್ರೇಯಾಂಸ** – [ಜೈನ] ಹನ್ನೊಂದನೆಯ ತೀರ್ಥಂಕರ (ವರದಾನೋತ್ತಮನಾದಂ ಆದಿಯುಗದೊಳ್ ಶ್ರೇಯಾಂಸಂ ಈ ಕಾಲದೊಳ್ ನೀನೆ ದಾನಿಯೆ ವಲಂ ಶ್ರೀದಾನಚಿಂತಾಮಣೀ: **ಅಜಿತಪು,** ೧೨. ೭)

**ಶ್ರೇಯೋಮಾರ್ಗ** – ಮೋಕ್ಷದ ದಾರಿ (ಶ್ರೇಯೋಮಾರ್ಗದೊಳ್ ಒಂದಿದ ಆರ್ಯರೊಡನೆ ಒಲ್ದು ಆಳೋಚನಂ ಮಾಡಿಯುಂ ಪ್ರಾಯಶ್ಚಿತ್ತಮನೊಲ್ಲದಿರ್ಪ ಮುನಿಪಂ: **ಮಲ್ಲಿನಾಪು,** ೧೧. ೨೨)

**ಶ್ರೇಯೋ ಮೂರ್ಖಸ್ಯ ನ ಬ್ರೂಯಾತ್** – ಮೂರ್ಖನಿಗೆ ಶ್ರೇಯಸ್ಸನ್ನು ಹೇಳಬಾರದು (ಶ್ರೇಯೋ ಮೂರ್ಖಸ್ಯ ನ ಬ್ರೂಯಾತ್ ಎಂಬ ಕಥೆಗೆ ಆಂ ಉದಾಹರಣಮಾದೆಂ ಎಂದೊಡೆ: **ಪಂಚತಂತ್ರ,** ೩೪೦ ವ)

**ಶ್ರೋಣಿ** – ನಿತಂಬ (ಬಗೆಯಂ ಬಲ್ಸೆಳೆಗೈದುದೀಗಳಿವಳೀ ಮಾಧುರ್ಯವು .. .. ಈಪೃಥುಳವೃತ್ತಶ್ರೋಣಿಯೀ ಬೇಟದುಜ್ಜುಗವೀ ವಿಭ್ರಮ: **ರಾಜಶೇವಿ,** ೭. ೭೦)

**ಶ್ರೋತೃ** – ಕೇಳುವವನು (ದಾಕ್ಷಿಣ್ಯವಂತಂ .. .. ಮಧ್ಯಸ್ಥನುಂ ಎಂಬ ದಶವಿಧಶುದ್ಧಗುಣಂಗಳಂ ನೆರೆದಂ ಶ್ರೋತೃವೆಂಬೊನಕ್ಕುಂ: **ಅಜಿತಪು,** ೧೧. ೨ ವ)

**ಶ್ರೋತ್ರ** – ಕಿವಿ (ಶ್ರವಣಂ ಕರ್ಣಂ ಶ್ರೋತ್ರಂ ಕಿವಿ: **ಅಭಿಧಾವ,** ೧. ೧೨. ೧೮)

**ಶ್ರೋತ್ರಿಯ** – ವೈದಿಕ, ವೇದವಿದ (ಅಂತಪ್ಪೊಡೆ ಶ್ರೋತ್ರಿಯರುಂ ಕ್ಷತ್ರಿಯರುಂ ಪಱಿಗುಟ್ಟಿ ಪಶುಯಾಗಂಗೆಯ್ದು ಈ ಲೋಕದೊಳ್ ಪಾತ್ರೀಭೂತರುಂ ಪವಿತ್ರಗೋತ್ರರುಂ ಆಗಿ: **ಪಂಚತಂತ್ರ,** ೧೧೭ ವ)

**ಶ್ರೌತ** – ಶ್ರಾವ್ಯ (ಶ್ರೌತಮಿದು ತನಗೆ ಗಂಗಾಸ್ರೋತದವೊಲ್ ಅಳುಂಬಮಾಗಿ ಗೆಡೆಗೊಳ್ಳದೆ ವಿಖ್ಯಾತಕವಿವೃಷಭ ವಂಶೋದ್ಭೂತಮೆನಲ್ ಬರಿಸದೊಳ್ ಸಮೆವಿನೆಗಂ: **ಪಂಪಭಾ,** ೧೪. ೫೨); ಉಪದೇಶ (ವಿಮಲ ಶ್ರೌತಂ ಕೈವಲ್ಯಮೆಂಬ ಸಂಕಲ್ಪಮಿನಿತೆ ನೇರ್ಗಿಡೆಯಂ ವಿಶ್ವಮನಜೆವ ಮಹಿಮೆಯಿಂ ವರ್ಧಮಾನ ಜಿನಪತಿಗೆ ವರ್ಧಮಾನ ಮುನೀಂಧ್ರಂ: **ಪಂಪರಾ,** ೧. ೧೫)

**ಶ್ಯೇನ** – ಗಿಡುಗ (ಬಕ ಕಾಕ ಕೋಕಿಲ ಶುಕ ಚಕ್ರವಾಕ ಚಕೋರ ಕರ್ಕರ ಶ್ಯೇನ ಕಪೋತ ಹಂಸ ಕಾರಂಡ ಭೇರುಂಡಾದಿ ಸಮಸ್ತ ವಿಹಂಗಮಜಾತಿಗಳೆಲ್ಲಮಂ ನೆರಪಿ: **ಪಂಚತಂತ್ರ,** ೨೨೭ ವ)

**ಶ್ರೋಣಿ** – ನಿತಂಬ (ಅಪ್ಪುವಳ್ ಅಂದು ತತ್ ಘನಶ್ರೋಣಿ ಕರಂ ತೊಳಪ್ಪ ಪುರುಷಾಯಿತದಿಂ ತದನಂಗಕೇಳಿಯೊಳ್: **ಉದ್ಭಟಕಾ,** ೮. ೧೨೫)

**ಶ್ಲಾಘಿ** – ಹೊಗಳಿಕೆಗೆ ಅರ್ಹವಾದ (ಮೃಗರಾಜಾಸನದಿಂದಮೆರ್ದು ಮುದದಿಂದಂ ದ್ರಾಘಿಮಶ್ಲಾಘಿಬಾಹುಗಳಿಂದಂ ತೆಗೆದಪ್ಪಿಕೊಂಡನರಸಂ ಶ್ರೀರೂಪಕಂದರ್ಪನಂ: **ಸುಕುಮಾಚ,** ೧೧. ೨)

**ಶ್ಲಥ** – ಸಡಿಲವಾದುದು (ಸ್ಮಿತವದನವನೇಜಂ ನಿವರ್ತಶ್ಲಥಂ .. .. ಸುಂದರಮಾದತ್ತು ಆ ಕುಮಾರಂ ಪರವಶನಿರೆ ನಿದ್ರಾಂಗನಾಸಂಗದಿಂ: **ಲೀಲಾವತಿ,** ೩. ೨೧)

**ಶ್ಲಿಷ್ಟ** – ಹತ್ತಿದ (ಶ್ಲಿಷ್ಟಂ ಅಕ್ಲಿಷ್ಟಂ ಅದ್ವಂ ಸುಗಮಂ ಭಾವಂ ಪ್ರಸನ್ನಂ .. .. ಎಂದೀ ಜಗಮೆಲ್ಲಂ ಮೆಚ್ಚೆ: **ಮಲ್ಲಿನಾಪು,** ೧. ೪೩)

**ಶ್ಲೋಕ** – ಪದ್ಯಜಾತಿ, ಯಶಸ್ಸು (ಶ್ಲೋಕಂ ಯಶಮುಂ ಪದ್ಯಮುಂ: **ಅಭಿಧಾವ,** ೩. ೧. ೨೦)

**ಶ್ವಗಣ** – ನಾಯಿಗಳ ಗುಂಪು (ಶ್ವಗಣಮೃಗಮಯಂ ಮುಗ್ಧಪೈಶಾಚ ಕೇತಪ್ರಚಯಂ .. .. ಪಿತೃವನಮಾಯ್ತು ಊಪ್ಯಂ ಅತ್ಯಂತ ಭಿಷ್ಮಂ: **ನೇಮಿನಾಪು,** ೫. ೨೦)

**ಶ್ವದಂಷ್ಟ್ರ** – ನಾಯಿಯ ಹಲ್ಲು (ತಾಳಪತ್ರಶೃಂಗಾಟಕ ನಿಚಿತಂಗಳುಂ ಶ್ವದಂಷ್ಟ್ರಾರ್ಗಲೋಪರಿಮಸಂಭನ್ನಂಗಳುಂ ಅಪ್ಪ ಯಂತ್ರಾಯುಧಾವರಣೋಪಕರಣಪರಿಣತಂಗಳಾ ಗಿರ್ದ ದುರ್ಗಂಗಳೊಳ್: **ಆದಿಪು,** ೧೩. ೫೭ ವ)

**ಶ್ವಪಚ** – ಚಂಡಾಲ (ಶ್ವಪಚಂ ಮೊದಲಾಗಿರೆ ಮಿಕ್ಕ ಪಾಪದೊಳ್ ಪೊರೆಯದ ಆವ ಧರ್ಮದೊಳೆಸೆಗಿರ್ದು ಪವಿತ್ರಮೆನಿಕುಂ: **ಸಮಯಪ,** ೧೫. ೫)

**ಶ್ವಪಾಕ** – ನಾಯಿ ಮಾಂಸ ತಿನ್ನುವವನು (ಭೂವರನೆ ಶ್ವಪಾಕಂ ಅವನಂದದೆ ಪೇಸದೆ ಮಾಡುವಾ ನೃಪಂ: **ಸಮಯಪ,** ೧೪. ೧೦೦)

**ಶ್ವಭ್ರ** – ಬಿಲ (ಸಮುತ್ತಾನಯಾನಸ್ವನಂ ದಿಗ್ನಿವಹ ಶ್ವಭ್ರಂಗಳೊಳ್ ಮಾರ್ದನಿವಿಡೆ ನಡೆಗೊಂಡತ್ತು ಗೀರ್ವಾಣಸೈನ್ಯಂ: **ಶಾಂತೀಶ್ವಪು,** ೧೪. ೬೮); ನರಕ (ಧರ್ಮಕೃತಿದ್ರೋಹನುಂ ಖಳನುಂ ಕಳ್ಳುಣಿಯುಂ ಘುಳುಮ್ಮನಿಟೆಗುಂ ಶ್ವಭ್ರಾಂತಮಂ ತಾಪಿನಂ: **ಆದಿಪು,** ೫. ೮೧)

**ಶ್ವಯು** – ಹೆಬ್ಬಾವು (ಶ್ವಯುವಾಗಿ ಪುಟ್ಟಿ ಸುಟೆಗುಂ ಮುಂ ಬಯ್ತು ಭಂಡಾರದೊಳ್: **ಆದಿಪು,** ೨. ೧೫)

**ಶ್ವಸನ** – ಗಾಳಿ (ಪವಮಾನಂ ಶ್ವಸನಂ ಗಂಧವಹಂ ಸತತಗತಿ .. .. ವಾಯು ವಾತಂ ಅನಿಲಂ: **ಅಭಿಧಾವ,** ೧. ೧. ೪೪)

**ಶ್ವಸನಪಥ** – ಗಾಳಿಯ ಮಾರ್ಗ, ಆಕಾಶ (ಶ್ವಸನಪಥಂ ಅಮಳಮಾಯ್ತು ಇಂದು ಒಸಗೆಗಳಂ ಬೀಱುವಂತೆ ಶರದಾಮಗಮದೊಳ್: **ಕವಿರಾಮಾ,** ೨. ೬೧)

**ಶ್ವಸಿತಗತಿ** – ಉಸಿರಾಟ (ಶ್ವಸಿತಗತಿ ನಿಂದು ಕಡುತಣ್ಣಸನೆಯ್ದಿದ ಗಾತ್ರಮಂ ಸ್ವಯಂಪ್ರಭೆ ತಾನೀಕ್ಷಿಸಿ ಪತಿಯಿರಮನೆರೆ ಭಾವಿಸಿದಳ್ ಕರತಲಮನೊಡ್ಡಿ ನಾಸಾಗ್ರಿಮದೊಳ್: **ಶಾಂತೀಶ್ವಪು,** ೫. ೨೩)

**ಶ್ವಾಪದ** – ಕಾಡುಪ್ರಾಣಿ (ಮೃಗಾಧಿರಾಜಂ ಶ್ವಾಪದಯೂಥಮಂ ಪೋಗಲ್ವೇಟ್ಟುದುಂ: **ಪಂಚತಂತ್ರ,** ೮೭ ವ)

**ಶ್ವೇತಕೃಷ್ಣಕಾರಕ** – ಬಿಳಿದನ್ನು ಕಪ್ಪಾಗಿಸುವವನು, ವಂಚಕ (ಅಮಳಿನ ಜಿನಧರ್ಮಂ ಪೊಲ್ಲ ಮಲಿನಮಪ್ಪ ಅನ್ಯಧರ್ಮಂ ಒಳ್ಳಿತ್ತು ಎಂದು .. .. ನುಡಿವ ಮನುಷ್ಯಂ ಶ್ವಥೆಕೃಷ್ಣಕಾರಕನಲ್ಲಾ: **ಸಮಯಪ,** ೧೩. ೩೦)

**ಶ್ವೇತಕಪೋತ** – ಬಿಳಿ ಪಾರಿವಾಳ (ಕಚದ್ರುಮಂ ನಿರ್ಬುದ್ಧಿಯೊರ್ವನೆ ಕರುಮಾಡದೊಳ್ ಶ್ವೇತಕಪೋತನಂತಿರ್ದು ಶತ್ರುಸಂಗ್ರಹಣಕ್ಕೊಳಗಾದಂ: **ಪಂಚತಂತ್ರ,** ೮೧ ವ)

**ಶ್ವೇತಪಟ** – [ಜೈನ] ಜೈನಮುನಿಗಳ ಒಂದು ಬಣ (ಕಂಬಳತೀರ್ಥವೆಂಬುದಾದುದು ಅವರುಂ ಶ್ವೇತಪಟರೆಂಬೊರಾದರ್: **ವಡ್ಡಾರಾ,** ಪು. ೯೩, ಸಾ. ೧೯)

**ಶ್ವೇತಾತಪತ್ರ** – [ಶ್ವೇತ+ಆತಪತ್ರ] ಬೆಳ್ಗೊಡೆ (ಇದಱೊಳ್ ಶ್ವೇತಾತಪತ್ರಸ್ಥಗಿತ ದಶದಿಶಾಮಂಡಲಂ ರಾಜಚಕ್ರಂ ಪುದಿದಟ್ಟಾಡಿತ್ತು: **ಪಂಪಭಾ,** ೧೨. ೧೫೬)

## ಷ

**ಷಂಡ** – ಗುಂಪು (ಪಲವುಂ ಭಂಗಿಯಿಂ ಕೂಡೆ ನೀಲೋತ್ಪಲಷಂಡಂ ಪದ್ಮಷಂಡಂ ಲಲಿತವನಲತಾ ಷಂಡಮುಂ ತಂಡತಂಡಂಗಳಿನೀ ಬಂದಪ್ಪುದೆಂಬಂತೆ ಎಸೆದುದು ಭರತಾಂತಃಪುರಸ್ತ್ರೀಸಮೂಹಂ: **ಆದಿಪು,** ೧೧. ೧೩೯); ನಪುಂಸಕ (ತುಱುಗೋಳೊಳ್ ಪೆಣ್ಬುಯ್ಯಲೊಳ್ ಎಱೆವೆಸದೊಳ್ ನಂಟನ ಎಡಱೊಳ್ ಊರಟುವಿನೊಳಂ ತಱಿಸಂದು ಗಂಡುತನಮನೆ ನೆಱುಪದವಂ ಗಂಡನಲ್ಲಂ ಎಂತುಂ ಷಂಡಂ: **ಗದಾಯು,** ೨. ೨೪)

**ಷಂಡಕವೇದ** – [ಜೈನ] ಒಂದು ಬಗೆಯ ನೋಕಷಾಯ (ದೇವರೊಳಾಗಿರ್ಕುಂ ಪುಂಸ್ತ್ರೀವೇದಂ ನಿರಯಜನಿತ ಸಮ್ಮೂರ್ಛಿತರೊಳ್ ಭಾವಿಸೆ ಷಂಡಕವೇದಂ ತಾವುಟಿದವರೊಳ್ ತ್ರಿವೇದಮಂ ಪರಿಭವಿಕುಂ: **ಸುಕುಮಾಚ,** ೮. ೧೩)

**ಷಟ್ಕರ್ಮ** – ಬ್ರಾಹ್ಮಣನ ಆರು ಕೆಲಸಗಳು: ಅಧ್ಯಯನ, ಅಧ್ಯಾಪನ, ಯಜನ, ಯಾಜನ, ದಾನ, ಪ್ರತಿಗ್ರಹ; (ಭವಿಷ್ಯದ್ವಿಜನ್ಮವರ್ಣಕ್ಕೆ ಅಧ್ಯಯನ ಅಧ್ಯಾಪನ ದಾನ ಪ್ರತಿಗ್ರಹ ಯಜನ ಯಾಜನ ವಿಶಿಷ್ಟವೃತ್ತಿಯುಮಂ: **ಆದಿಪು,** ೪. ೭೬ ವ); [ಜೈನ] ಶ್ರಾವಕನ ಆರು ಕರ್ತವ್ಯಗಳು: ಇಜ್ಯೆ, ವಾರ್ತೆ, ದತ್ತಿ, ಸ್ವಾಧ್ಯಾಯ, ಸಂಯಮ, ತಪ (ದೇವಾರ್ಚನಮುಂ ಷಟ್ಕರ್ಮಮುಂ ಉಳ್ಳನವದ್ಯಂ ಶ್ರಾವಕರ್ಕಳೊಳ್ ಸಾಮಯಿಕಂ: **ಅನಂತಪು,** ೩. ೬೧)

**ಷಟ್ಕಷಾಯ** – [ಜೈನ] ಹಾಸ್ಯ, ರತಿ, ಶೋಕ, ಭಯ, ಅರತಿ, ಜುಗುಪ್ಸೆ ಎಂಬ ಆರು ದೋಷಗಳು (ಚಿರಂತನ ಷಟ್ಕರ್ಮಂಬೆರಸು ಹಾಸ್ಯ ರತಿ ಶೋಕ ಭಯ ಜುಗುಪ್ಸಾ ಅಭಿಧಾನ ಷಟ್ಕಷಾಯಮುಮಂ ಕಿಡಿಸಿ: **ಶಾಂತಿಪು,** ೧೧. ೧೧೧ ವ)

**ಷಟ್ಖಂಡ** – [ಜೈನ] ವಿಜಯಾರ್ಧಪರ್ವತದ ಉತ್ತರದಲ್ಲಿ ಗಂಗೆ–ಸಿಂಧುಗಳಿಂದ ಬೇರ್ಪಡಿಸಲ್ಪಟ್ಟ ಮೂರು, ಅದಕ್ಕೆ ದಕ್ಷಿಣದಲ್ಲಿರುವ ಮೂರು – ಹೀಗೆ ಒಟ್ಟು ಆರು ಭೂಭಾಗಗಳು (ಮಹಿಭರತಂ ಷಟ್ಖಂಡಾವಹಂ : **ಸುಕುಮಾಚ,** ೧. ೬೮)

**ಷಟ್ಚಕ್ರ** – ಯೋಗದಲ್ಲಿನ ಆಧಾರ, ಸ್ವಾಧಿಷ್ಠಾನ, ಮಣಿಪೂರಕ, ಅನಾಹತ, ವಿಶುದ್ಧ, ಆಜ್ಞಾ ಎಂಬ ಆರು ಚಕ್ರಗಳು (ತೊಳಗುವ ಷಟ್ಚಕ್ರಾಬ್ಜಂಗಳ ಒಡೆದು ಉಱ್ ನಿಮಿರ್ದ ಬಳ್ಳಿಮಿಂಚಿನ ತೆಱದಿಂ ಒಪ್ಪಿದುದು ಮೂರ್ತಿ ಪಂಪಾಂಬಿಕೆಯಾ: **ಉದ್ಭಟಕಾ,** ೩. ೩೮)

**ಷಟ್ಚರಣ** – ದುಂಬಿ (ದಾನಪ್ರಮೋದ ವಾಚಾಳಷಟ್ಚರಣ ಚಾರಣ ಗಣೋಚ್ಚಾರ ಝುಂಕಾರಜಯಾಶೀರ್ಘೋಷ ಮುಮಪ್ಪ ವಿಜಯಗಜದ ಬೆಂಗೆ ವಂದು: **ಆದಿಪು,** ೧೪. ೯೦ ವ)

**ಷಟ್ತರ್ಕ** – ನ್ಯಾಯ, ವೈಶೇಷಿಕ, ಸಾಂಖ್ಯ, ಯೋಗ, ವೇದಾಂತ, ಪೂರ್ವ ಮೀಮಾಂಸೆ ಎಂಬ ಆರು ದರ್ಶನಗಳು (ಅಹಿಂಸಾಲಕ್ಷಣೋ ಧರ್ಮಃ ಎಂಬ ವೈಶೇಷಿಕ ನೈಯಾಯಿಕ ಸಾಂಖ್ಯ ಮೀಮಾಂಸ ಷಟ್ತರ್ಕಸಿದ್ಧಾಂತವಾದಿಗಳುಂ: **ಪಂಚತಂತ್ರ,** ೧೧೭ ವ)

**ಷಟ್ತ್ರಿಂಶದ್ಗುಣ** – [ಜೈನ] ಮುನಿಗಳಲ್ಲಿರಬೇಕಾದ ಮೂವತ್ತಾರು ಮೂಲೋತ್ತರಗುಣಗಳು, ದ್ವಾದಶ ತಪಸ್ಸುಗಳು, ದಶಧರ್ಮಗಳು, ಪಂಚಾಚಾರಗಳು, ತ್ರಿಗುಪ್ತಿಗಳು; ಅವುಗಳನ್ನು ಪಡೆದವನು (ನುತ ಷಟ್ತ್ರಿಂಶಸದ್ಗುಣಂಗಳ್ ನೆಱೆಯೆ ನಿರುತಂ .. .. ನಿಜೆಸುಗೆ ಸದ್ಧರ್ಮದೊಳ್: **ಕರ್ಣನೇಮಿ,** ೧. ೩)

**ಷಟ್ಪದ** – ದುಂಬಿ (ತಾನಿದು ಮುನ್ನಿನ ಆರ್ಯರ ಅಗ್ಗದ ನಿಧಿ ನೋಲ್ಪೊಡಿಂತಿದು ಮಹಾಮುನಿಚಿತ್ತಸರೋಜಷಟ್ಪದಂ: **ರಾಜಶೇವಿ,** ೪. ೮೪)

**ಷಡಕ್ಷರ ಮಂತ್ರ** – ಓಂ ನಮಃಶಿವಾಯ ಎಂಬ ಮಂತ್ರ (ಷಡಕ್ಷರ ಮಂತ್ರಘೋಷಮಾಳಾನಕ ಮಂಗಳಧ್ವನಿಗಳುಣ್ಮೆ ಕರಂ ಸ್ಥಿರಮಪ್ಪಿನಂ: **ಕುಸುಮಾಕಾ,** ೧. ೧೨೨)

**ಷಡಗ್ನಿ** – ಯಾಗಕಾಲದ ಆರು ಬಗೆಯ ಅಗ್ನಿಗಳು: ಪವನ, ಪಾವನ, ತ್ರೇತಾ, ಗಾರ್ಹಪತ್ಯ, ಆಹವನೀಯ ಮತ್ತು ಔಪಾಸನ (ಸಪ್ತರಾತ್ರವಿಧಾನಾಂತರದೊಳ್ ಷಡಗ್ನಿ ಪರಿತೋಷಂಬೆತ್ತು ಶಾಸ್ತ್ರಾಗಮೋಕ್ತವಿದಾದತ್ತು ಎನೆ ರಾಜಸೂಯಂ ಬೇಳ್ದಂ ಮಹೀಪಾಲಂ: **ಜಗನ್ನಾವಿ,** ೧೭. ೧೨)

**ಷಡಯನ** – ದುಂಬಿ (ಕೋಮಳೆಯಂ ಷಡಯನ ಕುಳಕುಂತಳೆಯಂಬಿಡೆ ತಾನುಂ ಕಂಡು ಮನದೆ ಕೊಂಡಂತಾಗಳ್: **ಕರ್ಣನೇಮಿ,** ೮. ೫೦)

**ಷಡಾಯತನ** – ಪಂಚೇಂದ್ರಿಯಗಳು ಮತ್ತು ಮನಸ್ಸು (ಆ ಷಡಾಯತನಮಂ ಸೇವಿಪ್ಪುದಂ ಬಿಟ್ಟು .. .. ಅಪವರ್ಗೋಚಿತಮಾರ್ಗದೊಳ್ ನಡೆವವಂ ಸಮ್ಯಕ್ತ್ವರತ್ನಾಕರಂ: **ಸಮಯಪ,** ೪. ೧೧೯)

**ಷಡ್ದ್ರವ್ಯ** – [ಜೈನ] ಜೀವ, ಪುದ್ಗಲ, ಧರ್ಮ, ಅಧರ್ಮ, ಆಕಾಶ ಮತ್ತು ಕಾಲ ಎಂಬ ಆರು ದ್ರವ್ಯಗಳು (ಪಂಚಾಸ್ತಿಕಾಯಂಗಳುಮಮ ಈ ಅಯ್ದುಂ ಕಾಲದ್ರವ್ಯಂಗಲ್ಬೆಱಸಾದ ಷಡ್ದ್ರವ್ಯಂಗಳುಮಂ: **ಅನಂತಪು,** ೧೦. ೫೧ ವ)

**ಷಟ್ಪದ** – ದುಂಬಿ (ಯುವರಾಜಕಂಠಿಕೆವೊಲಾಯ್ತು ಎಡೆಗೊಟ್ಟು ನಿಂದ ಷಟ್ಪದಗುಣಮುಂ ಪ್ರಸೂನಭರಮುಂ ಮಕರಂದಗುಣಾಭಿಶೋಭಿತಂ: **ಅಜಿತಪು,** ೬. ೩೫)

**ಷಡಂಗಬಲ** – ರಥ, ಆನೆ, ತುರಗ, ಪದಾತಿ, ದಿವಿಜ, ಖೇಚರ ಎಂಬ ಆರು ಬಗೆಯ ಸೇನೆಗಳು (ಭುವನತಳಂ ನಡೆವ ಚತುರ್ಬಲಕೆ ದಿವಿಜಖೇಚರಸೈನ್ಯಕ್ಕೆಡೆ ನೆಱೆಯದು ಗಗನಮುಮೆನೆ ಷಡಂಗಬಲಮಿಂತು ತಳರೆ ತಳರ್ದಂ ಭರತಂ: **ಆದಿಪು,** ೧೧. ೩೪)

**ಷಡಂಗಸೇನಾ[ನೆ]** – ಷಡಂಗ[ಬಲ] (ಷಡಂಗಸೇನಾ ವಿರಾಜಮಾನನುಂ ಸಪ್ತಾಂಗಸಂಪತ್ಸಮೇತನುಂ: .. .. ಆಗಿ: **ಚಂದ್ರಪ್ರಪು,** ೭. ೩೫ ವ)

**ಷಡಂತರಂಗತಪ** – [ಜೈನ] ಪ್ರಾಯಶ್ಚಿತ್ತ, ವಿನಯ, ವೈಯಾಪೃತ್ಯ, ಸ್ವಾಧ್ಯಾಯ, ವ್ಯುತ್ಸರ್ಗ, ಧ್ಯಾನಗಳೆಂಬ ಆರು ಅಂತರಂಗದ ತಪಸ್ಸುಗಳು (ಅನಶನ ಅವಮೋದರ್ಯಾದಿ ಷಡ್ವಿಧಬಾಹ್ಯತಪಮುಂ ಪ್ರಾಯಶ್ಚಿತ್ತವಿನಯಾದಿ ಷಡಂತರಂಗತಪಮುಂ .. .. ತಮ್ಮೊಳುಂ ಸಚ್ಛನ್ನಮಾಗಿ: **ಪುಷ್ಪದಂಪು,** ೧೪. ೧೬ ವ)

**ಷಡಭಿಜ್ಞ** – [ಷಟ್+ಅಭಿಜ್ಞ] ದಿವ್ಯದೃಷ್ಟಿ, ದಿವ್ಯಶ್ರುತಿ, ಪೂರ್ವಾನುಸ್ಮೃತಿ, ಪರೇಂಗಿತಜ್ಞಾನ, ಪರೋಕ್ಷವಿಷಯಜ್ಞಾನ, ಗಗನಗಮನಾದಿ ವಿದ್ಯಾಬುದ್ಧಿ – ಈ ಆರು ಶಾಸ್ತ್ರಗಳನ್ನು ಬಲ್ಲವನು, ಬುದ್ಧ (ಬುದ್ಧಂ ಸಮಂತಭದ್ರಂ ಸಿದ್ಧಾರ್ಥಂ ಮುನಿ ತಥಾಗತಂ ಷಡಭಿಜ್ಞಂ ಶೌದ್ಧೋದನಿ: **ಅಭಿಧಾವ,** ೧. ೧. ೧೦); ಬೌದ್ಧಮತೀಯ (ಷಡಭಿಜ್ಞಂ ಕ್ಷಣಿಕಂ ಜಡಾತ್ಮನೆನಿಪಂ ನೈಯಾಯಿಕಂ .. .. ನಡೆವಂ ಕಾಪಿಳವೃತ್ತಿಯಂ ಬಿಡದೆ ಸಾಂಖ್ಯಂ ನೋಟ್ಪೊಡೆಂದೊಲ್ಲದೊಳ್ಪಡರ್ವನ್ನಂ ಶ್ರುತಕೀರ್ತಿದೇವರೊಳ್ ನಿಂದಳ್ ವಾಣಿ: **ಚಂದ್ರಪ್ರಪು,** ೧. ೨೫)

**ಷಡಯನ** – ದುಂಬಿ (ಒಡವೆಳೆದು ಸುರರೊಳಿದಱೊಳ್ ನುಡಿವುದು ಶುಕಸಮಿತಿ ದೇವಭಾಷೆಯನೆ ತೊದಳ್ಗೆಡೆಗುಡದೆ ಪಾಡುವುದು ಸಲೆ ಷಡಯನತತಿ ದೇವಗಾನಮನೆ ನುಣ್ದನಿಯಿಂ: **ಚಂದ್ರಪ್ರಪು,** ೧೨. ೯೭)

**ಷಡಾನನ** – ಷಣ್ಮುಖ (ಪಾಡುವ ಆಡುವ ಷಡಾನನಂ ಈ ಕೃತಿಗೆ ಈಗೆ ರಾಗಮಂ: **ಗಿರಿಜಾಕ,** ೧.೬)

**ಷಡಾವಶ್ಯತೆ** – [ಜೈನ] ಮುನಿಗಳು ಪ್ರತಿದಿನ ಆಚರಿಸಬೇಕಾದ ಸಾಮಯಿಕ, ತೀರ್ಥಂಕರಸ್ತವ, ಪಂಚಪರಮೇಷ್ಠಿ ವಂದನ, ಪ್ರತಿಕ್ರಮಣ, ಪ್ರತ್ಯಾಖ್ಯಾನ, ಕಾಯೋತ್ಸರ್ಗ ಎಂಬ ಆರು ಕ್ರಿಯೆಗಳು (ಹಿತಸಾಧುಸಮಾಧಿ ವ್ಯಾವೃತಿ ಗುರುವಂದಿತ ಜಿನಪ್ರವಚನ ಷಡಾವಶ್ಯತೆಯೆನಿಸಿ ನೆಗಟ್ಟು: **ಶಾಂತಿಪು,** ೯. ೧೧೬)

**ಷಡ್ಜ** – ಸಪ್ತಸ್ವರಗಳಲ್ಲಿ ಮೊದಲನೆಯದು (ಷಡ್ಜ ವೃಷಭ ಗಾಂಧಾರ ಮಧ್ಯಮ ಪಂಚಮ ಧೈವತ ನಿಷಾದಂಗಳೆಂಬ ಸಪ್ತಸ್ವರಮುಮಂ .. .. ಭರತದ ಸಾರಸರ್ವಸ್ವಮುಮಂ ನಾಟ್ಯಧರ್ಮದೊಳ್ ಸೌಧರ್ಮಕಲ್ಪೇಶ್ವರಂ ಪ್ರತ್ಯಕ್ಷಂ ಮಾಡಿದಾಗಳ್: **ಅಜಿತಪು,** ೫. ೩೦ ವ)

**ಷಡ್ಜೀವ** – [ಜೈನ] ಏಕೇಂದ್ರಿಯ, ದ್ವೀಂದ್ರಿಯ, ತ್ರೀಂದ್ರಿಯ, ಚತುರಿಂದ್ರಿಯ, ಪಂಚೇಂದ್ರಿಯ ಅಸೈನೀ, ಪಂಚೇಂದ್ರಿಯ ಸೈನೀ ಎಂಬ ಆರು ಬಗೆಯ ಜೀವಿಗಳು (ಷಡ್ಜೀವನಿಕಾಯ ಜೀವಿದಯೆಯುಂ .. .. ಪಂಚೇಂದ್ರಿಯ ವಿಷಯವಿಚ್ಛಿತ್ತಿಯುಂ ತನ್ನೊಳುಂ ಸಚ್ಛನ್ನಮಾಗಿ: **ಪುಷ್ಪದಂಪು,** ೧೪. ೧೬ ವ)

**ಷಡ್ಬಲ** – ಷಡಂಗ, ಆರು ಬಗೆಯ ಸೈನ್ಯಗಳು: ಮೌಲ, ಭೃತಕ, ಶ್ರೇಣಿ, ಮಿತ್ರ, ಅಮಿತ್ರ, ಅಟವಿಕ (ಸಾಧಿತ ಶತ್ರುಷಡ್ಬಲರನುಕ್ರಮದಿಂ ಚರರಂ ದ್ವಿಷನ್ನೃಪಾಷ್ಟಾದಶ ತೀರ್ಥದೊಳ್ ನಡೆಯಿಸಲ್ ನೆಱೆವರ್: **ಶಾಂತಿಪು,** ೨. ೪೨)

**ಷಡ್ಭಾಗ** – ರಾಜನಿಗೆ ಸಲ್ಲಬೇಕಾದ ಆದಾಯದ ಆರನೇ ಒಂದು ಭಾಗ (ಷಡ್ಭಾಗಮಂ ಕೊಂಡು ತಪ್ಪದೆ ಭೂಪರ್ ಪ್ರತಿಪಾಳಿಪರ್ ಪ್ರಜೆಗಳಂ: **ಆದಿಪು,** ೧. ೫೧)

**ಷಡ್ದ್ರವ್ಯ** – [ಜೈನ] ಭೌತಿಕ ಜಗತ್ತಿನ ನಿರ್ಮಾಣಕ್ಕೆ ಕಾರಣವಾದ ಆರು ದ್ರವ್ಯಗಳು; ಜೀವ, ಪುದ್ಗಲ, ಧರ್ಮ, ಅಧರ್ಮ, ಆಕಾಶ, ಕಾಲ ಎಂಬಿವು (ನವಪದಾರ್ಥಂಗಳುಂ ಪಂಚಾಸ್ತಿಕಾಯ ಷಡ್ದ್ರವ್ಯಂಗಳುಂ ಎಂಬಿವಱೊಳ್ ಆದಮಾನುಂ ಅಱಿತಮುಂ ಕುಶಲಿಕೆಯುಂ ನಂಬುಗೆಯುಂ ಆಗಿ: **ವಡ್ಡಾರಾ,** ಪು ೬, ಸಾ ೧೯)

**ಷಡ್ರಸ** – ಆರು ಬಗೆಯ ರುಚಿಗಳು (ತುವರಂ ತಿಕ್ತಂ ಮಧುರಂ ಲವಣಂ ಕಟು ಕಾರಂ ಎಂದು ರಸಂ ಆಱು: **ಅಭಿಧಾವ,** ೧. ೧೬. ೧೫)

**ಷಣ್ಣವತಿ** – ತೊಂಬತ್ತಾರು (ಚೆಲ್ವೆಸೆದುದು ಷಣ್ಣವತಿಸಹಸ್ರ ಅಂತಃಪುರಮವಯವದೊಳೆ ಭರತಚಕ್ರವರ್ತಿಯ ಕೆಲದೊಳ್: **ಆದಿಪು,** ೧೧. ೩೯)

**ಷಷ್ಟಿಕಾವ್ರೀಹಿ** – ಅರವತ್ತು ದಿನಗಳಲ್ಲಿ ಕಟಾವಿಗೆ ಬರುವ ಒಂದು ಬಗೆಯ ಬತ್ತ (ಕಳಮ ಷಷ್ಟಿಕಾವ್ರೀಹಿ ಯವ ಯಾವನಾಳ .. .. ಧಾನ್ಯಕಾದಿ ವಿವಿಧಧಾನ್ಯಭೇದಂಗಳುಂ: **ಆದಿಪು,** ೬. ೭೨ ವ)

**ಷಷ್ಠೋಪವಾಸಿ** – ಆರು ದಿನಗಳ ಉಪವಾಸವ್ರತ ತೊಟ್ಟವನು (ಆ ಮುನೀಶ್ವರಂ ಷಷ್ಠೋಪವಾಸಿ ನಿಯಮ ನಿಯಮಿತನಾಗಿರ್ಪುದುಂ: **ಮಲ್ಲಿನಾಪು,** ೧೩. ೧೪೪ ವ)

**ಷಾಡ್ಗುಣ್ಯ** – ರಾಜನ ಆರು ಗುಣಗಳಾದ ಸಂಧಿ, ವಿಗ್ರಹ, ಯಾನ, ಆಸನ, ಸಂಶ್ರಯ ಮತ್ತು ದ್ವೈಧೀಭಾವ (ಉಪಾಯಚತುಷ್ಟಯ ಪ್ರಯೋಗಪ್ರವೀಣನುಂ ವಿನಿರ್ಜಿತ ಪಂಚೇಂದ್ರಿಯ ಪ್ರಭಾವಕನುಂ ಅನುಗತ ಷಾಡ್ಗುಣ್ಯನಯನನುಂ .. .. ವಸುಂಧರಾವಳಯಮಂ .. .. ನಿಜಭುಜಾಗ್ರದೊಳ್ ತಾಳ್ದು: **ಪಂಚತಂತ್ರ,** ೬೫ ವ)

**ಷಿಡ್ಗ** – ವಿಟ, ಕಾಮುಕ (ಗುಣಮಂ ಬಿಡದೇಱಿಸಿ ಪೊಚ್ಚಱಿಸುತ್ತಮಿರ್ಪ ಷಿಡ್ಗರ್ಗೆ ಎಱಗುವರ್ ಅಱಿವಿಲ್ಲದ ಅವನಿಪಾಲರ್: **ಕಾದಂಬ,** ೨. ೧೦೨)

**ಷೋಡಶಕಲ್ಪ** – [ಜೈನ] ಸೌಧರ್ಮ, ಈಶಾನ, ಸನತ್ಕುಮಾರ, ಮಾಹೇಂದ್ರ, ಬ್ರಹ್ಮ, ಬ್ರಹ್ಮೋತ್ತರ, ಲಾಂತವ, ಕಾಪಿಷ್ಠ, ಶುಕ್ರ, ಮಹಾಶುಕ್ರ, ಶತಾರ, ಸಹಸ್ರಾರ, ಆನತ, ಪ್ರಾಣತ, ಆರಣ, ಅಚ್ಯುತ ಎಂಬ ಹದಿನಾರು ಸ್ವರ್ಗಗಳು (ಷೋಡಶಕಲ್ಪದೊಳ್ .. .. ಇಂದ್ರನಾದನಾ ಯೋಗೀಂದ್ರಂ: **ಅಚವರ್ಧ,** ೧೩. ೨೭)

**ಷೋಡಶಕಳೆ** – ಚಂದ್ರನ ಹದಿನಾರು ಕಲೆಗಳು [ಮಂತ್ರಶಾಸ್ತ್ರದಲ್ಲಿ – ಅಮೃತಾ, ಮಾನದಾ, ಪೂಷಾ, ಪುಷ್ಟಿ, ತುಷ್ಟಿ, ರತಿ, ಧೃತಿ, ಶಶಿನೀ, ಚಂದ್ರಿಕಾ, ಕಾಂತಿ, ಜ್ಯೋತ್ಸ್ನಾ, ಶ್ರೀ, ಪ್ರೀತಿ, ಅಂಗದಾ, ಪೂರ್ಣ, ಪೂರ್ಣಾಮೃತಾ; ಹದಿನಾರು ಕಾಮಕಲೆಗಳು – ಪೂಷಾ, ಯಶಾ, ಸುಮನಸಾ, ರತಿ, ಪ್ರಾಪ್ತಿ, ಧೃತಿ, ಋದ್ಧಿ, ಸೌಮ್ಯ, ಮರೀಚಿ, ಅಂಶುಮಾಲಿನೀ, ಅಂಗಿರಾ, ಶಶಿನೀ, ಛಾಯಾ, ಸಂಪೂರ್ಣಮಂಡಲಾ, ತುಷ್ಟಿ, ಅಮೃತಾ] (ತೊಳತೊಳತೊಳಗುವ ಷೋಡಶಕಳೆಯಿಂ ಕಣ್ಗೊಳಿಪ ಚಂದ್ರನಂದದಿಂ: **ಕಾದಂಬ,** ೨. ೧೭೯)

**ಷೋಡಶಭಾವನೆ** – [ಜೈನ] ತೀರ್ಥಂಕರನಾಗಲು ಕಾರಣವಾಗುವ ದರ್ಶನವಿಶುದ್ಧಿ, ವಿನಯಸಂಪನ್ನತೆ, ಅನತಿಚಾರ, ಅಭೀಕ್ಷ್ಣಜ್ಞಾನೋಪಯೋಗ, ಸಂವೇಗ, ಶಕ್ತಿತಸ್ತ್ಯಾಗ, ಶಕ್ತಿತಸ್ತಪ, ಸಾಧುಸಮಾಧಿ, ವೈಯಾವೃತ್ಯ, ಅರ್ಹದ್ಭಕ್ತಿ, ಆಚಾರ್ಯಭಕ್ತಿ, ಉಪಾಧ್ಯಾಯಭಕ್ತಿ, ಪ್ರವಚನಭಕ್ತಿ, ಅವಶ್ಯಕಾಪರಿಹಾರಿಣಿ, ಮಾರ್ಗಪ್ರಭಾವನೆ, ಪ್ರವಚನವತ್ಸಲತ್ವ – ಎಂಬ ಹದಿನಾರು ಮನೋವೃತ್ತಿಗಳು (ತ್ರೈಲೋಕ್ಯಕ್ಷೋಭಕಾರಣ ತೀರ್ಥಕರಪುಣ್ಯಹೇತುಗಳಪ್ಪ ಷೋಡಶಭಾವನೆಗಳಂ ಭಾವಿಸಿ: **ಆದಿಪು,** ೬. ೩೩ ವ)

**ಷೋಡಶಸಂಧಿ** – ರಾಜನು ಕೈಗೊಳ್ಳಬಹುದಾದ ಹದಿನಾರು ಬಗೆಯ ಸಂಧಿಗಳು (ಆ ಸಂಧಿಯಾವುದೆಂದೊಡೆ – ಸಂಪ್ರದಾನ, ಕಪಾಲ, ಉಪಹಾಸನ, ಸಂತಾನ, ಸಂಗತ, ಉಪನ್ಯಾಸ, ಪ್ರತೀಕಾರ, ಸಂಯೋಗ, ಪುರುಷಾಂತರ, ಅದೃಷ್ಟಪುರುಷ, ಅದುಷ್ಟ, ಆತ್ಮಾಮಿಷ, ಉಪಗ್ರಹ, ಪರಿಕ್ರಮ, ಅರಿಪರದೂಷಣ, ಸ್ಕಂಧೋಪನಯಮೆಂದು ಷೋಡಶವಿಧಮಕ್ಕುಂ: **ಪಂಚತಂತ್ರ,** ೩೦೭ ವ)

**ಷೋಡಶಸಂಸ್ಕಾರ** – ಗರ್ಭಾದಾನ, ಪುಂಸವನ, ಸೀಮಂತ, ಜಾತಕರ್ಮ, ನಾಮಕರಣ, ಅನ್ನಪ್ರಾಶನ, ಚೌಲ, ಉಪನಯನ, ಪ್ರಾಜಾಪತ್ಯ, ಸಾಮ್ಯ, ಆಗ್ನೇಯ, ವೈಶ್ವದೇವ, ಗೋದಾನ, ಸಮಾವರ್ತನ, ವಿವಾಹ, ಅಂತ್ಯೇಷ್ಟಿ

**ಷೋಡಶಸ್ವಪ್ನ** – [ಜೈನ] ಗರ್ಭಧಾರಣೆಯ ಕಾಲದಲ್ಲಿ ಜಿನಮಾತೆಯು ಕಾಣುವ ಐರಾವತ, ಬಿಳಿಯ ಹೋರಿ, ಸಿಂಹ, ಲಕ್ಷ್ಮಿ, ಹೂಹಾರ, ಚಂದ್ರ, ಬಾಲಸೂರ್ಯ, ಎರಡೆಳೆಯ ಮೀನು, ಜೋಡಿ ರತ್ನಕುಂಭ, ತಾವರೆಕೊಳ, ಸಮುದ್ರ, ಸಿಂಹಾಸನ, ದೇವವಿಮಾನ, ರತ್ನಸಮೂಹ, ಉಜ್ವಲಜ್ವಾಲೆ ಎಂಬ ಕನಸುಗಳು (ಬೆಳಗಪ್ಪ ಜಾವದಾಗಳ್ ಉದ್ದಾಮ ಸಾಮಜವೃಷಾದಿ ಷೋಡಶ ಶುಭಸ್ವಪ್ನಂಗಳಂ ಕಂಡು: **ಕರ್ಣನೇಮಿ,** ೮. ೯೯ ವ)

**ಷೋಡಶೋಪಚಾರ** – ದೇವರಿಗೆ ಅಥವಾ ಅತಿಥಿಗೆ ಮಾಡುವ ಹದಿನಾರು ಬಗೆಯ ಉಪಚಾರಗಳು – ಆಸನ, ಸ್ವಾಗತ, ಪಾದ್ಯ, ಅರ್ಘ್ಯ, ಆಚಮನೀಯ, ಮಧುಪರ್ಕ, ಆಚಮನ, ಸ್ನಾನ, ವಸನ, ಆಭರಣ, ಗಂಧ, ಪುಷ್ಪ, ಧೂಪ, ದೀಪ, ನೈವೇದ್ಯ, ವಂದನೆ (ಷೋಡಶೋಪಚಾರದಿಂದೆ ಪೂಜೆಗೈದು ಶೀತರುಕ್ ಚೂಡ ನೀಲಕಂಠದೇವನಂ: **ಉದ್ಭಟಕಾ,** ೧೨. ೧೦೬)

# ಸ

**ಸಂಕಂಪಿತ** – ಚಂಚಲವಾದ, ನಡುಗುವ (ಶಂಕಂಪಿತಂ ಮಿದಿಱೊಳ್ ಮಧ್ಯಮಂ ಮಂದ್ರಮೆಂಬೀ ಪಾಂಗಿಂ .. .. ಪ್ರೌಢೇ ಪಾಡುತ್ತುಮಿರ್ದಳ್: **ಲೀಲಾವತಿ,** ೨. ೩೦)

**ಸಂಕಟ** – ಇಕ್ಕಟ್ಟಾದ, ದುರ್ಗಮವಾದ (ಜಾನುಭಂಜನೀ ಶೂಲಪ್ರಕರ ಪರಿವೃತಂಗಳುಂ ಕೂಪಕೂಟಾವಪಾತ ಲೋಹಕಂಟಕಸಂಕಟಂಗಳುಂ .. .. ಅಪ್ಪ ದುರ್ಗಂಗಳೊಳ್: **ಆದಿಪು,** ೧೩. ೫೭ ವ); ವ್ಯಥೆ (ನಲ್ಲರಗಲ್ಕೆಗೆ ಕಣ್ಣ ನೀರ್ಗಳಮ ಮಿಡಿವ ಬಹುಪ್ರಕಾಸಂಕಟಮೊಪ್ಪಿದುದಾ ಪ್ರಯಾಣದೊಳ್: **ಆದಿಪು,** ೪. ೫೭)

**ಸಂಕಡಿ** – ಇಕ್ಕಟ್ಟು; ದುಃಖ; ರಿಕಾಮು (ಪತಿಗಲ್ಲದೆ ಪೆಱರ್ಗೆಡೆಗುಡದ ತೆಱದೆ ನಡೆವಿಡಿದ ಬೆನ್ನ ಸಂಕಡಿ: **ಕುಸುಮಾಕಾ,** ೮. ೫೩); ಗೊಂಚಲು (ಚಂದನದ ವಂದನಮಾಲೆಗಳಿಂ ಗೊಜ್ಜೆಯ ಸಂಕಡಿಗಳಿಂ: **ಕುಸುಮಾಕಾ,** ೧೨. ೧೫೭ ವ)

**ಸಂಕಡಿಗೊಳ್** – ದುಃಖಪಡು (ಮಾನಹಾನಿಯಿಂದಾದ ಬರ್ದುಂಕದೇವುದೆನುತುಂ ಸಲೆ ಸಂಕಡಿಗೊಂಡರಾ ನೃಪರ್: **ಶಾಂತೀಶ್ವಪು,** ೭. ೧೩೧)

**ಸಂಕರ** – ಮನೆಯ ಕಸ (ಸಂಕರಾಖ್ಯಮದು ಮನೆಯ ಕಸಂ: **ಅಭಿಧಾವ,** ೧. ೧೦. ೨೧)

**ಸಂಕರ್ಷಣ** – ಬಲರಾಮ (ಹರಿಯುಂ ಸಂಕರ್ಷಣನುಂ ಪರಮಾನಂದಪರರ್: **ಕರ್ಣನೇಮಿ,** ೬. ೧೩೪)

**ಸಂಕಲೆ** – ಬೇಡಿ (ಮನ್ನಣೆಯ ಮಾವಂತರುಮಂ ಆರೆಕಾಱರುಮಂ ಮೀಱಿ ಗೆಂಟಱೊಳ್ ನಿಂದು ನೋಡುವ ನುಡಿಗೆ ಗಿಜ್ಜಿನೆಯ್ದುವ ಸೊರ್ಕಾನೆಗಳ ಕಾಲ ಸಂಕಲೆಯ ಗೋಸದೊಳಂ: **ಕಬ್ಬಿಗಕಾ,** ೩೭ ವ)

**ಸಂಕಲ್ಪನವಧೆ** – ಮಾನಸಿಕ ಕೊಲೆ, ಹಿಂಸೆ (ಭಾಪು ಸಂಕಲ್ಪನವಧೆಗೆ ಇನಿತಾಯ್ತು ದಿಟದಿಂ ಏನೇನಾಗರ್: **ಯಶೋಧಚ,** ೪. ೬೨)

**ಸಂಕಲ್ಪಹಿಂಸೆ** – ಹಿಂಸೆಗೆ ಮಾನಸಿಕ ಒಪ್ಪಿಗೆ (ಸಂಕಲ್ಪಹಿಂಸೆಯೊಂದಱೊಳಾಂ ಕಂಡೆಂ ಭವದ ದುಃಮುಂಡೆಂ: **ಯಶೋಧಚ,** ೪. ೭೦)

**ಸಂಕಾಶ** – ಹೋಲಿಕೆಯಿರುವ (ಮತ್ತಮದೊಂದಿನಿಸು ಬೇಗದಿಂ ಮೃದುಮೃಣಾಳ ಸಂಕಾಶಮಾಯ್ತು: **ಆದಿಪು,** ೧೨. ೭); ಸಮಾನವಾದ (ಧವಳಹಯಂ ಧವಳರಥಂ ಧವಳ ಉಷ್ಣೀಷಂ ಶಶಾಂಕಸಂಕಾಶ ಯಶೋಧವಳಿತ ಭುವನಂ ತಾಗಿದಂ ಅವಯವದಿಂ ಬಂದು ಧರ್ಮತನಯನ ಬಲದೊಳ್: **ಪಂಪಭಾ,** ೧೧. ೩೯)

**ಸಂಕಿಸು** – ಶಂಕೆಪಡು (ಪಶುವಿನ ತೊವಲೊಳ್ ತೀವಿದ .. .. ತಿಪ್ಪಮಂ ನೀರಂ ಸಂಕಿಸದೆ ಉಮಡು ದಾನಿಯಂ ಬಣ್ಣಿಸುವರ್: **ಸಮಯಪ,** ೧೪. ೭)

**ಸಂಕೀರ್ಣ**– ಬೆರೆತುಕೊಂಡಿರುವ (ನೀರದಾಕಾರ ಸುಧಾಧವಲಿತ ಉತ್ತುಂಗಪ್ರಾಸಾದ ಕೂಟಕೋಟಿಸಂಕೀರ್ಣಮುಂ: **ಆದಿಪು,** ೧. ೭೦ ವ); ಜಟಿಲವಾದ (ಗೂಗೆಗಳ್ ದಿವಸಾಂಧಂಗಳಾಗಿಯುಂ ನಮ್ಮೊಳ್ ಪಗೆಯುಂಟಾಗಿಯುಂ ಘೋರಾಂಧಕಾರದಿಂದತಿಸಂಕೀರ್ಣಮಪ್ಪ ಗುಹಾ ಗಹ್ವರಂಗಳೊಳ್ ಪೊಕ್ಕಿರ್ಪುವು: **ಪಂಚತಂತ್ರ,** ೨೯೮ ವ)

**ಸಂಕು** – [ಶಂಕು] ಕಠಾರಿ [ನಡುವ ಸರಲ್ಗೆ ಮೆಯ್ಯೊಳ್ ಅಡಂಗುವ ಸಂಕುಗೆ ದಿಂಕುಗೊಳ್ವ ಕಕ್ಕಡೆಗೆ ಇದಿರ್ ಉರ್ಚುವ ಇಟ್ಟಿಗೆ .. .. **ಪಂಪಭಾ,** ೧೦. ೯೪)

**ಸಂಕುಲ** – ಸಮೂಹ (ನಿಕುರುಂಬಂ ನಿವಹಂ ವ್ರಂ ಸಮುದಯಂ ಬೃಂದಂ ನಿಕಾಯಂ ಚಯಂ ನಿಕರಂ ಸಂಹತಿ ಸಂಚಯಂ ಸಮಿತಿ ಸಂದೋಹಂ ಸಮಾಜಂ ಕುಲಂ ಪ್ರಕರಂ ಸಂಕುಲಂ ಉತ್ಕರಂ ತತಿ ಗಣಂ ಶ್ರೇಣಿ ಪ್ರವರ್ಗಂ ಕದಂಬಕಂ ಓಘಂ ತತಿ ವಾರಂ ಆವಳಿ ಸಮೂಹಂ ವ್ರಾತಂ ಏಕಾರ್ಥಂ: **ಅಭಿಧಾವ,** ೨. ೧. ೨೭)

**ಸಂಕೆ** – [ಶಂಕೆ] ಸಂದೇಹ (ಇವು ಚಂದ್ರಾದಿತ್ಯ ವಿಮಾನಂಗಳ್ .. .. ಇವರ್ಕೆ ಬೆರ್ಚದಿರಿಂ ಎಂದವರ ಮನದ ಸಂಕೆಯಂ ಕಳೆದಂ: **ಪಂಪರಾ,** ೧. ೭೦ ವ); ಅಂಜಿಕೆ (ಪದ್ಮರಾಗದ ಪೊಸಗೆಂಪಂ ಮಾಂಸಮೆಂದು ಮುಂ ಕರ್ದುಕಲ್ಕಾಟಸಿಯುಂ ಬಟಿಕದನುರಿಯೆಂಬ ಸಂಕೆಯಿಂ ಪೊರ್ದದಿರ್ದುವೀ ಮತ್ಸ್ಯಂಗಳ್: **ಆದಿಪು,** ೧೨. ೧೨೨)

**ಸಂಕೆವೆಱು** – ಸಂದೇಹಪಡು (ಸಮಭೂತಳಮಂ ಅಂತು ಕಂಡಾ ಮಹಾಪುರುಷಶಿಖಂಡಮಣಿಮಂಡನಮ ಮಗುಳ್ದು ಬರಿತ್ತಿದಿರೊಳ್ ಬರ್ಪ ರುದ್ರದತ್ತಾದಿಗಳಂ ಭೋಂಕೆನೆ ಕಂಡು ಸಂಕೆವೆತ್ತು ನಿಲ್ವುದುಂ: **ಕರ್ಣನೇಮಿ,** ೪. ೧೦೦ ವ)

**ಸಂಕೇತ** – ಸೂಚನೆ (ದುರ್ಯೋಧನನ ಸಂಕೇತದೊಳ್ ಮುನ್ನಮೆ ಸಮೆದಿರ್ದ ಪುರೋಚನಂ: **ಪಂಪಭಾ,** ೩. ೨ ವ)

**ಸಂಕೇತಂಗೊಳಿಸು** – ಸಂಕೇತಸ್ಥಳವನ್ನು ಗೊತ್ತುಮಾಡು (ಪಾದರಿಗೆಯ ದೂದವಿಯಂತೆ ಪೆಱರಂ ಸಂಕೇತಂಗೊಳಿಸದೆ: **ಧರ್ಮಾಮೃ,** ೫. ೬೪ ವ)

**ಸಂಕೇತನ** – ಸಂಕೇತಸ್ಥಳ (ಅಭಿಸಾರಿಕೆ ಸಂಕೇತನಕ್ಕೆ ಪೋಪವಳಕ್ಕುಂ: **ಅಭಿಧಾವ,** ೧. ೧೧. ೭)

**ಸಂಕೇತನಿಕೇತನ** – ಗೊತ್ತುಮಾಡಿಕೊಂಡ ಮನೆ (ತನ್ನ ಮನೋರಥಮಂ ತೀರ್ಚುವೆನೆಂದು ದೂತಿಯಂ ಕರೆದು ತನ್ನಾತನಂ ಸಂಕೇತನಿಕೇತನಕ್ಕೆ ಒಡಗೊಂಡು ಬರ್ಪುದೆಂದು ಪೇಲ್ದಟ್ಟೆ: **ಪಂಚತಂತ್ರ,** ೧೨೮ ವ)

**ಸಂಕೋಚಿಸು** – ಕುಗ್ಗಿಸು (ಕಾಲುಮಂ ಬಾಲಮುಮನುಡುಗಿ ಅಡಂಗಿಸಿ ಕಿವಿಯಂ ಕತ್ತರಿಸಿ ಶರೀರಮಂ ಸಂಕೋಚಿಸಿ ನಟ್ಟದಿಟ್ಟಗಳ್ವೆರಸು ನಿನ್ನನೆ ನೋಡುತ್ತುಮಿರ್ಕುಂ: **ಪಂಚತಂತ್ರ,** ೨೩೧ ವ)

**ಸಂಕ್ರಂದನ** – ಇಂದ್ರ (ಸಮಂತು ಅಲಂಕರಿಸಿದಂ ಶಾಂತೀಶನಂ ದಿವ್ಯಗಂಧ ದರಸ್ಮೇರ ನಮೇರು ಚಾರು ಕುಸುಮ ಕ್ಷೌಮಾಂಶುಕ ಅನರ್ಘ್ಯ ಭಾಸ್ವದನೇಕೋತ್ತಮ ಭೂಷಣಾವಳಿಗಳಿಂ ಸಂಕ್ರಂದನಾನಂದದಿಂದಂ: **ಶಾಂತೀಶ್ವಪು,** ೧೬. ೩)

**ಸಂಕ್ರಂದನಗಜ** – ಐರಾವತ (ಸುಂದರ ತುಹಿನಾಚಳ ಸಂಕ್ರಂದನಗಜ ಶಾರದಾಭ್ರ ತಾರಾದ್ರಿ ಪಯಃಕುಂದೇಂದು: **ಸುಕುಮಾಚ,** ೧. ೫೬)

**ಸಂಕ್ರಂದನದಿಗ್ವಧೂಮಣಿ** – ಪೂರ್ವದಿಕ್ಕು ಎಂಬ ಹೆಣ್ಣು (ಸಂಕ್ರಂದನದಿಗ್ವಧೂಮಣಿಯ ಭಾಳದ ಮುತ್ತಿನ ಬೊಟ್ಟಿನಂತೆ: **ಉದ್ಭಟಕಾ,** ೧೦. ೨೫)

**ಸಂಕ್ರಂದನನಂದನ** – ಇಂದ್ರನ ತೋಟ, ಖಾಂಡವವನ (ಸಂಕ್ರಂದನನಂದನಂ ನಿಮಿಷಮಾತ್ರದಿನೊರ್ಮೆಯೆ ಬೆಂದ ಮಾಟ್ಕೆಯಿಂ: **ಪಂಚತಂತ್ರ,** ೩೭೭); ಇಂದ್ರನ ಮಗ, ಅರ್ಜುನ (ಸಂಕ್ರಂದನನಂದನನ ನಿರರ್ಗಲ ನಿಸ್ಸಹಾಯಪರಾಕ್ರಮೋಕ್ತಿಗೇಳ್ದು: **ಶಬಶಂವಿ,** ೪. ೬೫ ವ)

**ಸಂಕ್ರಂದನನಂದನತನಯ** – ಅರ್ಜುನನ ಮಗ, ಅಭಿಮನ್ಯು (ಒಂದೆ ಸರಲಿಂದಮವನೆರ್ದೆಯಂ ದೊಕ್ಕನೆ ತಿಣ್ಣಮೆಚ್ಚು ಕೊಲಲೊಲ್ಲನೆ ಸಂಕ್ರಂದನನಂದನತನಯಂ ತಂದೆಯ ಪೂಣ್ಕೆಯನೆ ನೆನೆದು ದುಶ್ಶಾಸನನಂ: **ಪಂಪಭಾ,** ೧೧. ೯೬)

**ಸಂಕ್ರಂದನವೈರಿ** – ಇಂದ್ರನ ವೈರಿ, ರಾಕ್ಷಸ (ಮದವತ್ ತರಕ್ಷು ಸಂಕ್ರಂದನವೈರಿಯಿಂ ಬಲದೊಳ್ ಉಗ್ರತರಾಕೃತಿಯೊಳ್ ಪೊದಳ್ದ: **ಶಬರಶಂ,** ೨. ೨೦)

**ಸಂಕ್ರಮಣ** – ಒಟ್ಟಿಗೇ ಸೇರುವುದು (ಪೂರ್ವಾಪರವಿಷಯವಿವಿಕ್ತಾರ್ಥವ್ಯಂಜನಯೋಗ ಸಂಕ್ರಮಣ ಲಕ್ಷಣಲಕ್ಷಿತಮಪ್ಪ ಪೃತಕ್ತ್ವವಿತರ್ಕವಿಚಾರಮೆಂಬ ಮೊದಲ ಶುಕ್ಲಧ್ಯಾನದೊಳ್: **ಆದಿಪು,** ೬. ೩೪ ವ); ಸೂರ್ಯನು ಮಕರರಾಶಿಯಿಂದ ಮತ್ತೊಂದಕ್ಕೆ ದಾಟುವ ಕಾಲ (ಗ್ರಹಣ ಸಂಕ್ರಮನ ಪುಣ್ಯತಿಥಿಗಳೊಳಂ ಮೊದಲಾಗಿಯುಂ .. .. ತೈಲಮುಮನಿಕ್ಕುವುದುಂ ಎಱೆವುದುಂ: **ಸುಕುಮಾಚ,** ೨. ೬೯ ವ)

**ಸಂಕ್ರಮಿಸು** – ಸೇರು (ಯಶಸ್ವತಿ ಮಹಾದೇವಿಯ ಗರ್ಭಾವಾಸದೊಳ್ ಶುಕ್ತಿಪುಟೋದರವರ್ತಿಯಪ್ಪ ನಿರ್ಮಳೋದಕಬಿಂದುವಿನಂತೆ ಸಂಕ್ರಮಿಸೆ: **ಆದಿಪು,** ೮. ೨೯ ವ); ಸೇರಿಸು (ಕುಂತಿಯ ದಿವ್ಯಗರ್ಭೋದರಮೆಂಬ ಶುಕ್ತಿಪಟೋದರದೊಳ್ ತನ್ನ ದಿವ್ಯಾಂಶಮೆಂಬ ಮುಕ್ತಾಫಲೋದಬಿಂದುವಂ ಇಂದ್ರಂ ಸಂಕ್ರಮಿಸಿ ನಿಜನಿವಾಸಕ್ಕೆ ಪೋದಂ: **ಪಂಪಭಾ,** ೧. ೧೩೯ ವ)

**ಸಂಕ್ಲಿಷ್ಟಾಸುರೋದೀರಿತ** – [ಜೈನ] ಐದು ಬಗೆಯ ದುಃಖಗಳಲ್ಲಿ ಒಂದು, ರಾಕ್ಷಸರಿಂದ ಉಂಟಾಗುವ ಭಯ (ಶಾರೀರಂ ಮಾನಸಂ ಕ್ಷೇತ್ರಜಂ ಪರಸ್ಪರೋದೀರಿತಂ ಸಂಕ್ಲಿಷ್ಟಾಸುರೋದೀರಿತಗಳೆಮಬ ಪಂಚಪ್ರಕಾರ ದುಃಖಂಗಳಂ: **ಸುಕುಮಾಚ,** ೧೧. ೪೭ ವ)

**ಸಂಕ್ಲೇಶ** – ಕಷ್ಟ, ದುಃಖ (ಈಶಾಸುರನರರಾಜಾದೇಶಂ ನವಿಕಲ್ಪಯೆಂದೆನುತ್ತಿರ್ಪುಚಿತಕ್ಲೇಶಮಿದಱಿಂದೀ ಸಂಕ್ಲೇಶಂ ಕರಮೊಳ್ಳಿತಿವರನಾಂ ಕೆಯ್ಕೊಂಡೆಂ: **ಶಾಂತಿಪು,** ೩. ೫೮)

**ಸಂಕ್ಷೋಭಿತ** – ಕಲಕಿಹೋದ, ಗೊಂದಲಗೊಂಡ (ಪತ್ತಿ ಪ್ರಮಾದಫಲಕಮಂ ಅತ್ಯುಗ್ರಗ್ರಾಹನಿವಹ ಸಂಕ್ಷೋಭಿತದೊಳ್ ಮತ್ತೀ ರತ್ನಾಕರದೊಳ್ ಪುತ್ರಿಕೆಯನೆ ಬಟ್ಟಳಿಂತು ಬಾಬ್ದುದೆ ಚೋದ್ಯಂ: **ಕವಿರಾಮಾ,** ೨. ೩೬)

**ಸಂಖ್ಯಾತ** – ಎಣಿಕೆ ಮಾಡಿದುದು (ಸಂಖ್ಯಾತ ತಿರ್ಯಗಾದಿಯಸಂಖ್ಯಾತಂ ದೇವದೇವಿಯರ ಕೋಷ್ಠದೊಳೆಲ್ಲಂ ಖ್ಯಾತಂ: **ಅನಂತಪು,** ೧೪. ೪೬): [ಜೈನ] ಒಂದು ಕಾಲಪ್ರಮಾಣ (ಸಮಯ ಸಮೂಹಂ ಅಸಂಖ್ಯಾತಮಾದೊಡಾವಳಿಯೆನಿಕ್ಕುಂ ಆವಳಿ ಸಂಖ್ಯಾತಮೆನಿಪ್ಪುದಾದೊಡೆ ಉಚ್ಛ್ವಾಸಮೆನಿಕ್ಕುಂ ಸ್ತೋಕಮಕ್ಕುಂ ಏಱುಚ್ಛ್ವಾಸಂ: **ಪಂಪರಾ,** ೧. ೪೯)

**ಸಂಖ್ಯಾತೀತ** – ಎಣಿಸಲಾಗದ (ಅಲ್ಲಿ ಮೊದಲ್ಗೊಂಡು ಸ್ಥಳಯಾತ್ರೆಗೆ ಪೋಗಿ ಸಂಖ್ಯಾತೀತ ಸಾರಧನಮಂ ಪಡೆದು: **ಶಾಂತಿಪು,** ೯. ೯೦ ವ)

**ಸಂಖ್ಯಾನ** – ಸಂಖ್ಯಾವಾಚಿ ನಾಮಪದ (ನೀನಱೆ ಸಂಖ್ಯೇಯದ ಸಂಖ್ಯಾನದ ದೊರೆವೆತ್ತ ಭಾವದೇಕತೆ ಬಹುತಾಧೀನಂ ವಿಶೇಷಣಂ ಬಹುತಾನಕಮೆ ವಿಶೇಷ್ಯಮೇಕವಚನಮೆಯಕ್ಕುಂ: **ಶಬ್ದಮದ,** ೧೫೦)

**ಸಂಖ್ಯೆ** – ಅಂಕಿ (ಗಣಿತಂ ಸಂಖ್ಯಾತಂ ಬಹುಗಣ ಶಬ್ದಂ ಭೇದದಲ್ಲಿ ಸಂಕ್ಯೆಯದಕ್ಕುಂ: **ಅಭಿಧಾವ,** ೨. . ೩೪)

**ಸಂಗಡ** – ಸಹವಾಸ (ಎಮ್ಮೊಳಾದೀ ಸಂಗಡಮಂ ನೀಮೆ ಮನಂಗೊಂಡು ಎಮ್ಮ ಕಿಸುರ್ ಪಿಂಗುಗೆ ಅಗಲ್ವೆಡೆಯೊಳ್: **ಆದಿಪು,** ೧೧. ೧೩೩)

**ಸಂಗಡಂಗೊಳ್** – ಜೊತೆಗೂಡು (ಪಚ್ಚೆಯ ಪಸಲೆಯ ಪಸುರನಸಕಳಿದು ನಿಮಿರ್ದ ನೆಲವಡಲಗೆಯ ಜಾಗಂಗಳುಮವನೆ ಸಂಗಡಂಗೊಂಡಿರ್ದ ಸತ್ತಿಸಂಗಡಂಗಳುಂ: **ಆದಿಪು,** ೮. ೧೫ ವ)

**ಸಂಗಡಮಿಟ್ಟು** – ಕೂಡಿ ಸಾಯುವುದು (ಪಡಲಿಟ್ಟಂತೆವೊಲಾಯ್ತು ಕೀಚಕಬಲಂ ಗಂಧರ್ವರಿಂದಿಂದಿರುಳ್ಗಡಿದೇಂ ಸಂಗಡಮಿಟ್ಟುವಾಯ್ತೆ: **ಪಂಪಭಾ,** ೮. ೮೧)

**ಸಂಗಡವೆಕ್ಕಣ** – ಗುಂಪಾಗು ಕುಣಿಯುವುದು (ಪಕಾರಕ್ಕೆ ವತ್ವಂ: ಸಂಘಾತಪ್ರೇಕ್ಷಣಂ–ಸಂಗಡವೆಕ್ಕಣಂ ರಾಕ್ಷಸಪ್ರಕರಣಂ– ರಕ್ಕಸವಗರಣಂ: **ಶಬ್ದಮದ,** ೩೦೭ ಪ್ರ)

**ಸಂಗಡಿ** – ಜೊತೆಗಾರ (ಅಮೇಧ್ಯದಿಂ ಬಟಿಕದು ತುಂಬಿ ಸಂಗಡಿವೊಲಾದ ಒಡಲಲ್ಲಿ ಮಹಾತ್ಮ .. .. ಪೊರ್ದು ನಿರಂತಸೌಖ್ಯಕೋಟಿಯಂ: **ಸಮಯಪ,** ೧೫. ೯೬)

**ಸಂಗಡಿಸು** – ಒದಗು, ಉಂಟಾಗು (ಬಲವದು ದೈವದಿಂ ಸಮನೆ ಸಂಗಡಿಸಲ್ ಪುರುಡಲ್ಲಿ ಪುಟ್ಟಿ ಕೋಟಲೆಗೊಳಿಸುತ್ತುಂ ಇರ್ಪುದು: **ಶಾಂತೀಶ್ವಪು,** ೧೧. ೮೨)

**ಸಂಗಣಿಸು** – ಉಂಟಾಗು (ಶ್ರೀನದಿಯ ತೊಱೆಯ ಪೊರೆಯೊಳ್ ಎತ್ತುಗಳ ಕಾರಣದಿಂ ಕಲಹಮಾಗಿ ಕಾದಿ ಸತ್ತು ಸಂಗಣಿಸಿದ ಆರ್ತದಿಂ .. .. ದುಷ್ಟಗಜಂಗಳಾಗಿ ಪುಟ್ಟಿ: **ಶಾಂತೀಶ್ವಪು,** ೧೨. ೧೧೭ ವ)

**ಸಂಗಡಿಗ** – ಜೊತೆಗಾರ (ಮರುಳ ಪಯಣಕ್ಕೆ ತಱಗೆಲೆಯೆ ಸಂಗಡಿಗನೆಂಬಂತೆ ಪಾಪಿಯಪ್ಪಂಗೆ ಕುತ್ಸಿತಧರ್ಮಮೆ ಸದ್ಧರ್ಮಮಾಗಿ ತೋರ್ಕುಂ: **ಧರ್ಮಾಮೃ,** ೧೧೪೭ ವ)

**ಸಂಗತ** – ಕೂಡಿದ; ಯೋಗ್ಯವಾದ; ರಾಜನ ಹದಿನಾರು ಬಗೆಯ ಒಪ್ಪಂದಗಳಲ್ಲಿ ಒಂದು, ಮಿತ್ರತ್ವ (ಮಿತ್ರಭಾವದೊಳ್ ನೆಗಟ್ದ ಸಂಧಿ ಸಂಗತಮೆಂಬುದಕ್ಕುಂ: **ಪಂಚತಂತ್ರ,** ೩೦೭ ವ)

**ಸಂಗತಿ** – ಕೂಡುವಿಕೆ (ನಿನ್ನಿರವಂ ತಳೆದೊಪ್ಪುತಿರ್ಪ ತತ್ಸರಸಿಗೆ ಮಾಡಲಿಂದು ನವಸಂಗತಿಯಂ ನಡೆ ಮನ್ಮನೋರಮೇ: **ರಾಜಶೇವಿ,** ೧೦. ೬೧); ಸಹವಾಸ (ಆ ಜಡಧಿಸಂಗತಿಯಿಂ ಜಡಬುದ್ಧಿ ಬುದ್ಧಿಯಂ ತೊಲಗಿಸಿತಕ್ಕುಂ ಅಲ್ಲದೊಡೆ ನೀನಿನಿತಂ ನುಡಿವೈ ಪಳಾಳಮಂ: **ಪಂಪಭಾ,** ೯. ೪೪)

**ಸಂಗತ್ವ** – ರಾಜನ್ಯ (ಸ್ವಾಧೀನಸಂಗತ್ವಸಂತಾನಂ ಪುತ್ರ ಕಳತ್ರ ಮಿತ್ರಸಹಿತಂ ಸಾಕೇತಸಿಂಹಾಸನಾಸೀನಂ ಪಾಲಿಸಿದಂ ಮಹೀವಳಯಮಂ: **ಆದಿಪು,** ೮. ೭೭)

**ಸಂಗರ** – ಯುದ್ಧ (ಆಜಿಗೆ ಬಂದೊಡ್ಡಲ್ಕೆ ಪೇೞ್ ಸಂಗರನಿಕಷದೊಳ್ ಎಮ್ಮಂದಮಂ ನೀನೆ ಕಾಣ್ಬೈ: **ಆದಿಪು,** ೧೪. ೮೨)

**ಸಂಗರಪಿಶುನ** – ಯುದ್ಧಸೂಚನೆ (ನೋಡಿದಂ ತಿರ್ಯಗಾಲೋಕನಂ ಉದ್ಯತ್ ಚಕ್ರಮಂ ಸಂಗರಪಿಶುನವಿದೆಂಬನ್ನೆಗಂ ವಾರಿಜಾಕ್ಷಂ: **ಜಗನ್ನಾವಿ,** ೧೭. ೧೩೬)

**ಸಂಗರರಂಗ** – ರಣಭೂಮಿ (ಅಂಗರರಂಗದೊಳಿಱಿವ ಬೆಡಂಗವೆಸರ್ಗಱಿ ನೆಗಟ್ದುಸಂಗರಮಂ ತೋರ್ಪಂ: **ಗದಾಯು,** ೧. ೧೫)

**ಸಂಗರಾಜಿರ** – ಸಂಗರರಂಗ (ಸಂಗರಾಜಿರದೊಳ್ ಕೌರವರೆಂಬಕಾಕಕುಳಕೆ ಎನ್ನ ಒಂದೆ ಬಿಲ್ ಸಾಲದೇ: **ಪಂಪಭಾ,** ೧೨. ೧೩೫)

**ಸಂಗಳಿಸು** – ಒಟ್ಟಾಗು (ಸಂಗಳಿಸುಗೆ ನಿಮಗಂ ಎಮಗಂ ಇಂ ಲತೆಗಳಿರಾ: **ಆದಿಪು,** ೧೧. ೧೩೩); ಉಂಟುಮಾಡು (ನಿನ್ನಂ ನುಂಗುವುದರ್ಕೆ ಇವರಂ ಎತ್ತವೇಟ್ಟುಮೇ ನೆರಮಂ ಸಂಗಳಿಸಲ್ವೇಟ್ಟುಮೇ ಮಾತಂಗವಿರೋಧಿಗೆ ಕುರಂಗಸಂಗರ ಧರೆಯೊಳ್: **ಪಂಪಭಾ,** ೩. ೧೭); ಸೇರು (ಭಾವದೊಳ್ ರಸಂ ರಸಪ್ರಸರದೊಳ್ ಸವಿ ಸಂಗಳಿಪಂತೆ: **ಶಾಂತೀಶ್ವಪು,** ೧. ೫೬)

**ಸಂಗಾಣಿ** – [ಜೈನ] ಸಪ್ತಪದಾರ್ಥಗಳ ಸ್ವರೂಪ ನಿರೂಪಣ ಗ್ರಂಥ (ಪ್ರತ್ಯಕ್ಷಂ ಅನುಮಾನಂ ಆಗಮಂ ಎಂಬ ಮೂಱು ತೆಱದೊಳ್ ಆಗಮಸಿದ್ಧಮಪ್ಪ ಸಂಗಾಣಿವಿಭಾಗಂಗಳ್ ಪ್ರತ್ಯಕ್ಷಮಾದೊಡೆ: **ಹರಿವಂಶ,** ೨. ೫೪ ವ)

**ಸಂಗಿ** – ಕೂಡಿದುದು (ದಿಶಾಯುವತಿಕೇಳಿಕೀರ್ಣ ಪಟವಾಸಚೂರ್ಣಂ .. .. ವಿಶಾಲತರತುಂಗಸೌಧತಳಸಂಗಿ ಪೌರಾಂಗನಾ ವಶೀಕರಣಚೂರ್ಣಮಾದುದು ಬಳೌಘ ಧೂಳೀಚಯಂ: **ಆದಿಪು,** ೧೧. ೧೫)

**ಸಂಗೀತಕ** – ಹಾಡುವಿಕೆ (ನುತಸುರವೃಂದಂ ಸಗೀತಕಕ್ಕೊಡರ್ಚಲೆವೇಟ್ಟಿಂ: **ಆದಿಪು,** ೯. ೧೩)

**ಸಂಗುಡಿ** – ಬಾವುಟ (ಗುಡಿ ನೇಣ್ ಕಾಂಡಪಟಂ ಮೊಱಂ ಗಳಿಗೆಯುಂ ತೊತ್ತೆತ್ತವುಂ ಬಂಡಿ ಸಂಗುಡಿ ನೇಣ್ಕಂಟಣೆ ಗೋಣಿ ದಂಡಿಗೆ .. .. ಇಂಬಿವಿನಿತುಂ ದಂಡಿಂಗೆ ಸಾಮಗ್ರಿಗಳ್: **ಸೂಕ್ತಿಸುಧಾ,** ೧೮. ೨೩)

**ಸಂಗುಣ** – ಜಟ್ಟಿ ಕಾಳಗದ ಒಂದು ವರಸೆ (ಎಸೆವ ಮುಹಗ್ಗಳಂ ಠಡಕಿ ಕಕ್ಕವಡಂ ಮುಹಡಂ ತುಳಾಢಿ ಸಂದಸುವಿಡಿವಟ್ಟಿ ಸಂಗುಣವಳಯಂಗೆಪಾಸಗೆ ವನ್ನಿಮುಟ್ಟಿ .. .. ಎನಿಪಪ ಜೆಟಿಗನ ನಚ್ಚಿನ ಬಿನ್ನಣಮೊಪ್ಪೆ ಕಾದಿದರ್: **ಚಂದ್ರಪ್ರಪು,** ೫. ೭೮)

**ಸಂಗುಣಿತ** – ಗುಣಿತವಾದ (ನವಸಂಗುಣಿತ ದ್ವಿಸಹಸ್ರತ್ರಾಂತ ಸ್ಮೃತಾಮೃತಾವ್ಯವಹರಣಂ: **ವರ್ಧಮಾಪು,** ೧೦. ೧೧)

**ಸಂಗ್ರಹಾಕರ** – ಹತ್ತು ಗ್ರಾಮಗಳ ಗುಂಪಿನ ನಡುವಣ ದೊಡ್ಡ ಊರು (ಘೋಷಾಕರ ಸಂಗ್ರಹಾಕರ ಗೋವ್ರಜಂಗಳುಮಂ: **ಆದಿಪು,** ೮. ೬೩ ವ)

**ಸಂಗ್ರಾಮ** – ಯುದ್ಧ (ಸಮರಂ ಸಂಗ್ರಾಮಂ ಯುದ್ಧಂ ಆಜಿ ಯಾಯೋಧನಂ ಸಮೀಕಂ ಕದನಂ ಸಮಿತಿ ರಣಂ ಪಥನಂ ಜನ್ನಂ ಆಹವಂ ಸಂಯುಗಂ ಪ್ರಘಾತಂ ಕಲಹಂ: **ಅಭಿಧಾವ,** ೧. ೧೪. ೧)

**ಸಂಗ್ರಾಮಲಂಪಟ** – ಯುದ್ಧದಲ್ಲಿ ಅತ್ಯಾಸಕ್ತನದವನು, ಕಲಹಪ್ರಿಯ (ಖಚರಕುಮಾರರ್ ದೋರ್ವಲದೃಪ್ತರ್ ಪುರಮಂ ನೂರ್ವರ್ ಸಂಗ್ರಾಮಲಂಪಟರ್ ಪೊಱಮಟ್ಟರ್: **ಪಂಪರಾ,** ೧೦. ೨೧೬)

**ಸಂಗ್ರಾಮಾವನಿ** – ಸಂಗರರಂಗ (ಈ ವಜ್ರಾವರ್ತ ಚಾಪಮಂ ಮೀಱುವನಿನ್ನಾವನೆನುತ್ತುಂ ಸಂಗ್ರಾಮಾವನಿಗನುಜನ ಕೆಲಕ್ಕೆ ರಾಮಂ ಬಂದಂ: **ಪಂಪರಾ,** ೯. ೧೧೪)

**ಸಂಘ** – ಸಮೂಹ (ಸೇವ್ಯಮಲ್ಲಲ್ಲಿ .. .. ನಾರಂಗಸಂಘಂ ಕದಳೀಸಮುದಯಂ: **ಪುಷ್ಪದಂಪು,** ೯. ೧೫)

**ಸಂಘಟ್ಟ** – ಗಟ್ಟಿಸಲ್ಪಟ್ಟ (ಸಂಜೀವಕಂಗೆ ಒಲ್ದು ನೀಡಿದಂ ಉದ್ಭಿನ್ನ ಮದಾಂಧಸಿಂಧುರ ಘಟಾ ಸಂಘಟ್ಟ ಕುಂಭಾಗ್ರನಿರ್ಯತ್ ಅಸೃಕ್ ಕುಂಕುಮ ಪಂಕಪಂಕಿಳಸಟಾಜಾಳಂ ಮೃಗಾಧೀಶ್ವರಂ: **ಪಂಚತಂತ್ರ,** ೧೧೦)

**ಸಂಘಟ್ಟನ** – ತಾಗುವಿಕೆ, ಘರ್ಷಣೆ (ಎಱವ ನೃಪಾಳರ ಮೌಳಿಮಾಳೆಕುಟ್ಟಿಮಸಂಘಟ್ಟನ ದಿಂ ಅತಿಮುಖರಮಾಗೆ: **ಪುಷ್ಪದಂಪು,** ೪. ೭೧)

**ಸಂಘಾತ** – ಗುಂಪು (ಮಹೋಗ್ರಮೃಗ ಸಂಘಾತಂಗಳೊಳ್ ಅದೊಂದನಿಂತಿರೆ ಕಂಡೋಡುವು ವಲ್ಲವಿಂತಿವು: **ಆದಿಪು,** ೧೩. ೮೨); ಹೊಂದಾಣಿಕೆ (ನಿಮ್ಮ ಜನನಿಯರಪ್ಪ ನಾಲ್ವರುಂ ಬಂದು ಪೂರ್ವಸ್ವರೂಪದಿಂ ನಿನಗೆ ಸಂಘಾತಮಾಗಿರೆ ಧರ್ಮದಿಂ ಪೇಟ್ಟು: **ಧರ್ಮಾಮೃ,** ೧೪. ೪೫ ವ)

**ಸಂಚಕರ** – ಮುಂಗಡ (ಹರ್ಷಮಂ ಧರಿಯಿಸಿದಂ ಜಯಕ್ಕಿದುವೆ ಸಂಚಕರಂ ತನಗಾದುದೆಂಬಿನಂ: **ಪಾರ್ಶ್ವನಾಪು,** ೩. ೩೩)

**ಸಂಚಕರಂಗೊಳ್** – ಮುಂಗಡವನ್ನು ಪಡೆದುಕೊ (ಮಾರಮಥನನಂ ಸ್ತುತಿಯಿಸಿ ತತ್ಪ್ರಕಟಫಲಪ್ರಾಪ್ತಿಗೆ ಸಂಚಕರಂಗೊಳ್ವಂತೆ ಸಿದ್ಧಶೇಷೆಯನಾಗಳ್ ಕೊಂಡು: **ಆದಿಪು,** ೪. ೨)

**ಸಂಚಯ** – ಸಮೂಹ, ಗುಂಪು (ನಿಕುರುಂಬಂ ನಿವಹಂ ವ್ರಂ ಸಮುದಯಂ ಬೃದಂದಮ ನಿಕಾಯಂ ಚಯಂ ನಿಕರಂ ಸಂಹತಿ ಸಂಚಯಂ ಸಮಿತಿ ಸಂದೋಹಂ ಸಮಾಜಂ ಕುಲಂ ಪ್ರಕರಂ ಸಂಕುಲಂ ಉತ್ಕರಂ ಗಣಂ ಶ್ರೇಣಿ ಪ್ರವರ್ಗಮ ಕದಂಬಕಂ ಓಘಂ ತತಿವಾರಂ ಆವಳಿ ಸಮೂಹಂ ವ್ರಾತಮೇಕಾರ್ಥಂ: **ಅಭಿಧಾವ,** ೨. ೧. ೨೭)

**ಸಂಚರಣ** – ತಿರುಗಾಟ (ಪಾವನತಪೋವನಸಂಚರಣಕ್ಕೆ ತಾನೆ ಮತ್ತೆಱಕಮನಾಂತುದೀಗಳ್ ಅನಿವಾರಣಮೆನ್ನಯ ಚಿತ್ರವಾರಣಂ: **ಚಂದ್ರಪ್ರಪು,** ೪. ೧೫)

**ಸಂಚಳ** – ಚಂಚಲ (ತಟೀಪಾದಪ ವೀಥಿ ಪಂತಿಗುರುಳಂತಿರೆ ಸಂಚಳ ಮೀನಸಂಚಯಂ .. .. ತೋರ್ಪವೊಲ್ ಒಪ್ಪಿರೆ: **ನೇಮಿನಾಪು,** ೧. ೬೧)

**ಸಂಚಳಿಸು** – ಕಂಪಿಸು; ಅಲುಗು (ಸಂಚಳಿಸಿ ಪೊಳೆವ ಮಿಚಿನ ಗೊಂಚಲ್ ಬರ್ಪಂತೆ ಬಂದರಮರಾಂಗನೆಯರ್: **ಸುಕುಮಾಚ,** ೮. ೬೫)

**ಸಂಚಾರಿಕೆ** – ದೂತಿ (ಸಂಚಾರಿಕೆ ತಾಂ **ದೂದವಿ:** ಅಭಿಧಾವ, ೧. ೧೧. ೭)

**ಸಂಚಿತ** – ಕೂಡಿಟ್ಟ (ನಾಟ್ಯಮಾಲಾಮರಂ ಮಂಗಳೋಪಕರಣಂಗಳಿಂದಂ ಇದಿರ್ಗೊಂಡು ಎಱಗಿ ಪೊಡವಟ್ಟು ನಿಜಸಂಚಿತಾಂಚಿತವಸ್ತುಗಳಂ ತಂದು ಮುಂದಿಡೆ: **ಶಾಂತಿಪು,** ೧೧. ೭೦ ವ)

**ಸಂಚಿತಸುಕೃತ** – ಹಿಂದೆ ಗಳಿಸಿದ ಪುಣ್ಯ (ಪೂರ್ವಜನ್ಮ ಸಂಚಿತಸುಕೃತದಿಂ ದಿವ್ಯಾಯುಧ ವಸ್ತುವಾಹನಂಗಳುಮಂ ದಿವ್ಯಸ್ತ್ರೀಯರುಮಂ ಸ್ವೀಕರಿಸಿ: **ಪಂಪರಾ,** ೧೫. ೧೧ ವ)

**ಸಂಚಿತಾರ್ಥ** – ಕೂಡಿಟ್ಟ ಧನ (ಮುನ್ನ ತಂದ ಮಾಂಸಮಂ ಸಂಚಿತಾರ್ಥಂ ಎಂದು ಮಡಗಿ ಮತ್ತಂ ಬೇಟೆಗೆ ಪೋಪುದುಂ: **ಪಂಚತಂತ್ರ,** ೯೨ ವ)

**ಸಂಚಿವಾರ** – ಹಣದ ಸಂಗ್ರಹ (ಬೇಡಿದೊಡಿಯದೆಮದೆಮಗೆ ಪಾಗುಡಮಟ್ಟಿ ಮನಕ್ಕೆ ವಂದುದಂ ಬೇಡಿದನೋ ಸಮರ್ಥನದೇವನೊ ದೈನ್ಯದ ಸಂಚಿವಾರಮಂ ನೋಡಿರೆ ನಾಲ್ಕುಪಾಯಮಿರೆ ಗರ್ವದಿನಿಕಕ್ಕುಮೆ ಸಿದ್ಧಿ: **ಶಾಂತಿಪು,** ೨. ೩೨೦)

**ಸಂಚಿಸು** – ಸಂಗ್ರಹಿಸು (ಸಂಚಿಸು–ಸಂಗ್ರಹೇ: **ಶಬ್ದಮದ,** ಧಾ ೭೫೩)

**ಸಂಚುವೆಱು** – ಸುಂದರವಾಗಿರು (ಪರಿಸರದೊಳ್ ಸಂಚುವೆತ್ತಿಂಚರದಿಂ ತನ್ನ ಚೆನ್ನಕಿನ್ನರಿಯೊಳ್ ಶ್ರುತಿಗೂಡಿ: **ಶಬರಶಂ,** ೩. ೩೫ ವ)

**ಸಂಚೂರ್ಣಿತ** – ಚೂರುಚೂರಾದ (ಭುಜಾಬಲಸಂಚೂರ್ಣಿತ ವೀರಕೌರವಶತಂ ದುಶ್ಶಾಸನೋರಸ್ಸ್ಥಳೋಚ್ಚಲದ ಉಷ್ಣಾಂಬು ನಿಮಗ್ನಪೂರ್ಣಜಠರಂ: **ಗದಾಯು,** ೨. ೪೮)

**ಸಂಚೂರ್ಣಿತಮತಿ** – ಘಾತಕ ಬುದ್ಧಿ[ಯವನು] (ಆ ವಾಕ್ಯಮುಂ ವಿಜ್ಞಾನಮೆಂಬೆಯಪ್ಪೊಡೆ ಪೂರ್ವೋಕ್ತದೋಷಪಷಾಣ ಸಂಚೂಣೀತಮತಿಯೇ ಏನನೇತಱೊಳ್ ನಿಶ್ಚಯಿಸುವಯ್: **ಆದಿಪು,** ೨. ೧೦ ವ)

**ಸಂಚೂಳಿಕಾ[ಕೆ]** – ಬೆಟ್ಟದ ತುದಿ (ಮಣಿಮಯಕಿರೀಟ ಉದಗ್ರವಿಸ್ಫುರಿತ ಸಂಚೂಳಿಕಾ ಕನಕಾಚಳಮನೆ ಪೋಲ್ತು: **ಆದಿಪು,** ೧೪. ೧೦೮ ವ)

**ಸಂಛನ್ನ** – ಚೆನ್ನಾಗಿ ಮುಚ್ಚಿದ (ಸಂಛನ್ನ ಶಾಖಾಕುಲದಿಂ ಚೆಲ್ವಾದ ಋಷ್ಯಾಶ್ರಮದ ರಚನೆಯಂ ನೋಡುತಂ ಪೋದಂ: **ಕಾದಂಸಂ,** ೧. ೭೦); ಇಡಿಕಿರಿದ (ವಾದ್ಯವಾದನ ವಾಚಾಳಮುಂ ಗಾಯಿಕಾಸಂಛನ್ನಮುಂ ವಾಂಶಿಕ ಸಂಕುಳ ಸಂಕೀರ್ಣಮುಂ: **ನೇಮಿನಾಪು,** ೩. ೯೮ ವ); ಗುಂಪು (ಸೂಸುತುಂ ಗಣನಾತೀತಮೆನಲ್ಕೆ ಮಾರ್ಗಣ ಪಾಯ್ದುತ್ತು ಸಂಛನ್ನದಿಂ: **ಕುಸುಮಾಕಾ,** ೧೧. ೭೩)

**ಸಂಛಾದನ** – ಆವರಿಸುವುದು (ವಿನಯಾಮೃತಮರೀಚಿ ಸಂಛಾದನ ಅಂಬೋಧಸಂತತಿಯುಭಯಲೋಕವಿವೇಕ ವಿಲೋಚಣಾಸ್ತಮಯವೇಲೆಯುಂ: **ಆದಿಪು,** ೧೪. ೧೨೨ ವ)

**ಸಂಜನಿತ** – ಹುಟ್ಟಿದ, ಮೂಡಿದ (ಸಮರತಸಂಜನಿತ ಪರಿಶ್ರಮಮಂ ದಂಪತಿಗೆ ಕಳೆದು ಮಗುಟ್ಟುಂ ರತಿರಾಗಮನನೋಲಗಿಸುವುದು ನವೋದ್ಗಮಪರಿಮಳ ವಿಷಯಮೆನಿಸಿ ವಿಷಯಸಮೀರಂ: **ಮಲ್ಲಿನಾಪು,** ೨. ೧೮)

**ಸಂಜನಿತೋತ್ಸವ** – ಹುಟ್ಟಿದ ಹಬ್ಬ (ಮಿಸುಗುವ ರತ್ನಮಾಲೆಗಳ ವಂದನಮಾಲೆ ಮನಕ್ಕೆ ವಂದದೇನೆದುದೋ ಬೀದಿವೀದಿಗಳೊಳ್ ಅರ್ಭಕಸಂಜನಿತೋತ್ಸವಾನಕಂ: **ಸುಕುಮಾಚ,** ೧೦. ೨೭)

**ಸಂಜಯ** – ಕುರುಕ್ಷೇತ್ರದಲ್ಲಿ ನಡೆಯುವುದನ್ನು ಧೃತರಾಷ್ಟ್ರನಿಗೆ ವಿವರಿಸಿದ ಅವನ ಆಪ್ತ (ಸಂಜಯನ ನುಡಿಗೆ ದುರ್ಯೋಧನನಿಂತೆಂದಂ:: **ಗದಾಯು,** ೩. ೫೯ ವ)

**ಸಂಜೆಗವಿ** – ಸಾಯಂಕಾಲ ಆವರಿಸು (ಭೂತಾಂಗನಾನಿಕರಂ ಶೋಣಿತವಾರಿಯಂ ಕುಡಿದು ಅಗುರ್ವಪ್ಪನ್ನೆಗಂ ಸೂಸೆ ನೋಡ ಕವಿಲ್ತಿರ್ದುದು ಕೂಡೆ ಸಂಜೆಗವಿದಂತಾ ದ್ರೋಣನಿಂ ಕೊಳ್ಗುಳಂ; **ಪಂಪಭಾ,** ೧೨. ೨೫)

**ಸಂಜೆಮಂತ್ರ** – ಸಂಧ್ಯಾವಂದನೆ (ಅಱಿನಂ ಬಿಟ್ಟೊಳ್ವ ಸಂಜೆಮಂತ್ರದಮುಟ್ಟಿದ ಮನೆ ಪೊಲ್ಲ ವೇದವದಱಿಂದೊಲ್ಲಂ: **ಸಮಯಪ,** ೧೩. ೨೪)

**ಸಂಜೆಮೀಹ** – ಸಾಯಂಕಾಲದ ಸ್ನಾನ, ಸಂಧ್ಯಾವಂದನೆ (ಸಂಜೆಮೀಹಮೆಂಬಿವನೆಲ್ಲಮಂ ಬಿಟ್ಟು ಸವಣರನೆ ಕೂಡಿಯೆ ಕೆಟ್ಟಂ ಕುಲದಿಂದೆ ಕೆಟ್ಟನೆಂಬರ್ ಪಾರ್ವರ್: **ಸಮಯಪ,** ೧೩. ೨೫)

**ಸಂಜೆಮುಗಿಲ್** – ಸಾಯಂಕಾಲದ ಕೆಂಪು ಮೋಡ (ರುಧಿರಂ ದಿಗಂತಮಂ ಮೇಳಿಸಿ ಕೊರ್ವಿ ಕಲ್ಪದವಸಾನದ ಸಂಜೆಮುಗಿಲ್ಗಳಂದಮಂ ಪಾಳಿಸೆ .. .. ಭಯಂಕರಮಾಯ್ತು ತುರಂಗಸಂಗರಂ: **ಪಂಪರಾ,** ೧೩. ೬೩)

**ಸಂಜೆವಾರಿಸು** – ಸಾಯಂಸಂಧ್ಯಾವಂದನೆ ಮಾಡು (ಒಂದು ದಿವಸಂ ಸಂಜೆವಾರಿಸಲೆಂದು ಪೋದಲ್ಲಿ ಆದಿತ್ಯಂಗಿದಿರಂ ನೀರಂ ಸೂಸುವಾಗರ್ಳ: **ವಡ್ಡಾರಾ,** ಪು ೫, ಸಾ ೩)

**ಸಂಜೆವಾಸ** – ಸಂಜೆಮಂತ್ರ, ಸಂದ್ಯಾವಂದನೆ (ಬೆರಲೊಳ್ ಪುಲ್ಲಿಲ್ಲದೆ ದೇವರನರ್ಚಿಸೆ ಸಂಜೆವಾಸ: **ಸಮಯಪ,** ೧೧. ೮೯)

**ಸಂಜೆವಾಸು** – ಸಂಧ್ಯಾವಂದನೆ ಮಾಡು (ಸವಳದೆ ಸಂಜೆವಾಸಿದಪೆಂ ಎಂದು ನಿಬಂಧಧದೆ ಕರ್ಚಿ ಕಾಲ್ಗಳಂ ದಿವಸಕರಂಗೆ ನೀರ್ದುಳುಕಿ: **ಸಮಯಪ,** ೧೪. ೨೫)

**ಸಂಜೆವೊಟ್ಟು** – [ಸಂಜೆ+ಪೊಟ್ಟು] ಸಂಜೆ ಸಮಯ (ಹರಕಂಠನುರಃಕಮಳಾಲಯದಿಂ ಸಿರಿ ಸಂಜೆವೊಟ್ಟುಬರೆ ಮುಷಿತಸುಖೋದಯಮಾಗಿ ಪುಗಿಸಿ ತದ್ಭೀತಿಯಿಂದೆ ಮುಚ್ಚುವವೊಲಾಯ್ತು ನಳಿನನಿಕೋಚಂ: **ಆಚವರ್ಧ,** ೮. ೨೪)

**ಸಂಜ್ಞಾತ್ವ** – [ಜೈನ] ಏಳು ಬಗೆಯ ಅನ್ವಯಕ್ರಿಯೆಗಳಲ್ಲಿ ಒಂದು (ನಾಲ್ವತ್ತೆಂಟು ದೀಕ್ಷಾನ್ವಯಕ್ರಿಯೆಗಳುಮಂ ಸಂಜ್ಞಾತ್ವಂ ಮೊದಲಾಗೇಟನ್ವಯ ಕ್ರಿಯೆಗಳುಮನಱೆಪಿ: **ಅಜಿತಪು,** ೧೨. ೧ ವ)

**ಸಂಜ್ಞಾನಪಂಚಕ** – [ಜೈನ] ಮತಿ, ಶ್ರುತ, ಅವಧಿ, ಮನಃಪರ್ಯಯ, ಕೇವಲ ಎಂಬ ಐದು ಬಗೆಯ ಜ್ಞಾನಗಳು (ಅಭಿನಿಬೋಧಕಜ್ಞಾನಮುಂ .. .. ಕೇಲಜ್ಞಾನಮುಂ ಎಂಬೀಸಂಜ್ಞಾಪಂಚಕಮುಂ: **ಸುಕುಮಾಚ,** ೮. ೪ ವ)

**ಸಂಜ್ಞಿ** – ಆಹಾರ, ಭಯ, ಮೈಥುನ, ನಿದ್ರೆ ಎಂಬ ಸಂಜ್ಞೆ[ಬಯಕೆ]ಗಳಿರುವ ಜೀವಿ, ಮನುಷ್ಯ (ಆ ಪಂಚೇಂದ್ರಿಯಮುಂ ಸಂಜ್ಞಿಯಸಂಜ್ಞಿಯೆಂಬ ಭೇದದಿಂದಿತ್ತೆಱನಕ್ಕುಂ: **ಸುಕುಮಾಚ,** ೮. ೬ ವ)

**ಸಂಜ್ವಲನ** – ತೀವ್ರವಾದ ಶಾಖ; [ಜೈನ] ಚಾರಿತ್ರ್ಯದ ಪರಿಪೂರ್ಣತೆಗೆ ಪೂರಕವಾದ ಕರ್ಮ (ತನ್ನ ಪರಿಣಾಮವಿಶೇಷದಿಂ ಚತುಃ ಸಂಜ್ವಲನ ನವನೋಕಷಾಯಂಗಳೆಂಬ ಪದಿಮೂಱು ಪ್ರಕೃತಿಗಳುಮಂ ಅಂತಃಕರಣಂ ಮಾಡಿ: **ಆದಿಪು,** ೧೦. ೧೪ ವ)

**ಸಂತಂ** – ನೆಮ್ಮದಿ (ಲೋಕದೊಳಂ ನಿನ್ನಿರ್ಕೆಯ ಲೋಕಾಗ್ರಮೆ ಸಂತಂ ಅದನೆ ಮಾಡೆನಗರ್ಹಾ: **ಆದಿಪು,** ೧೦. ೫೭); ಯಾವಾಗಲೂ (ಸುಯೋಧನನಾಳುತ್ತಿರೆ ಸಂದ ಹಸ್ತಿನಪುರಂ ಸಂತಂ ಬಸಂತಂ: **ಪಂಪಭಾ,** ೩. ೩೨)

**ಸಂತತಂ** – ಯಾವಾಗಲೂ (ಸಂತತಮೋದಿ ನಿಂದ ತಪದೊಳ್ ಶ್ರುತದೊಳ್ ಗುಣದೊಳ್ ವಿಶೇಷದಿಂದಿಂತಿವರೆಲ್ಲರಂ ಪಿರಿಯರ್: **ಸುಕುಮಾಚ,** ೧. ೩೦)

**ಸಂತತಿ** – ಪೀಳಿಗೆ, ವಂಶ (ಸಂತತಿ ವಂಶಂ ಗೋತ್ರಂ ಸಂತಾನಂ ಜನನಂ ಅನ್ವವಾಯಂ ಕುಲಂ: **ಅಭಿಧಾವ,** ೧. ೧೧. ೨೯); ಗುಂಪು (ಸಕಲಸುಹೃತ್ಸಂತತಿ ಪರಸೆ ನಂದನಿರ್ದಂ ಸುಖದಿಂ: **ಜಗನ್ನಾವಿ,** ೩. ೨೬)

**ಸಂತತಿಗೆಡು** – ವಂಶ ನಾಶವಾಗು (ಜಂತಿಗರ್ ಸಂತತಿಗೆಟ್ಟರಂತಟಲೆ ತಂಬುಲಿಗರ್ ನಂಬುಗೆಗೆಟ್ಟರಂತೆ ಪೆಱಸಾರೆ: **ಧರ್ಮಾಮೃ,** ೨. ೪೧ ವ)

**ಸಂತತಿಚ್ಛೇದ** – ವಂಶನಾಶ (ಮಗಳಂ ಈವೆನಪ್ಪೊಡೆ ಕೊಡಗೂಸೆಂಬುದು ಪೆಱರೊಡವೆ ಮಗನಂ ಈವೆನಪ್ಪೊಡೆ

ಸಂತತಿಚ್ಛೇದಮುಂ ಪಿಂಡಚ್ಛೇದಮುಂ ಅಕ್ಕುಂ ಅದಜೆಂದ ಎನ್ನನೆ ಕುಡಲ್ವೇಟ್ಕುಂ: **ಪಂಪಭಾ,** ೩. ೨೫ ವ)

**ಸಂತರ್ಜಿತ –** ಭಯಗೊಂಡ (ವಿಧುಂತುದನಂತೆ ಸಂತರ್ಜಿತ ರಾಜಹಂಸಮಂಡಳಮುಂ: **ರಾಜಶೇವಿ,** ೮. ೧೧೮ ವ)

**ಸಂತರ್ಪಣಕರ –** ಸಂತೋಷಕರ (ಕಂದರ್ಪಸುಖನಿಲಯಮೆನೆ ಸಂತರ್ಪಣಕರಮಖಿಲಭೋಗಭೂಮಿ ವಿಭಾಗಂ: **ಆದಿಪು,** ೫. ೨೮)

**ಸಂತಸ –** ಸಂತೋಷ (ಮನದೊಳ್ ತ್ರೈಭುವನಮಂ ಆಳ್ದನಿತುವರಂ ತನಗೆ ಸಂತಸಂ ಪೆರ್ಚಿಯುಂ ಅಂದು ಇನಿಸು ಅಂಧನೃಪಂ ತನ್ನಯ ಜನದೊಳ್ ಕೆಲನಜೆಯೆ ಕೃತಕಶೋಕಂಗೆಯ್ದಂ: **ಪಂಪಭಾ,** ೩. ೮)

**ಸಂತಸವಾತು –** ಸಂತೋಷದ ನುಡಿ, ವಾರ್ತೆ (ಬರವಿನೊಳಾದದೊಂದು ಮೊಗರಾಗಮೆ ಸಂತಸವಾತಂ ಅಂತು ಅನಕ್ಷರಮಜೆಪುತ್ತುಂ ಇರ್ಪನೆಗಂ: **ಆದಿಪು,** ೩. ೮೫)

**ಸಂತಸಿಕೆ –** ನಲಿವು (ಒಸಗೆಯ ಮೇಲೆ ಮತ್ತೊಸಗೆ ಪೊಕ್ಕುಬ ಪೆರ್ಚಿನ ಮೇಲೆ ಪೆರ್ಚುಸಂತಸಿಕೆಯ ಮೇಲೆ ಸಂತಸಿಕೆ .. .. ಪಸರಿಸುವಂತಿರೆ: **ಅನಂತಪು,** ೧೨. ೮೧)

**ಸಂತಾನ –** ಸಮೂಹ, ಸಾಲು (ಕೇಳ್ದೆ ದಲ್ ಮೊದಲಿಂ .. .. ಭವತ್ ವೃತ್ತಾಂತಸಂತಾನಮಮಂ: **ಕಾದಂಸಂ,** ೮. ೪೫); ವಂಶಾನುಗತವಾದುದು; ಇಂದ್ರನ ವನದ ಒಂದು ಗಿಡ (ಸಂತಾನದ ಪೂವಿನ ಸರಮಂ ಸ್ನಾನಂಗೆಯ್ಯುತ್ತುಮಿರ್ಪ ಸಿರಿಯಂ ಕಂಡಳ್: **ನೇಮಿನಾಪು,** ೨. ೯); ರಾಜನು ಮಾಡಿಕೊಳ್ಳಬಹುದಾದ ಹದಿನಾರು ಬಗೆಯ ಸಂಧಿಗಳಲ್ಲಿ ಒಂದು, ಮಗಳನ್ನು ಮದುವೆ ಮಾಡಿಕೊಟ್ಟು ಸಂಧಿ ಮಾಡಿಕೊಳ್ಳುವುದು (ಕನ್ಯಾದಾನಪೂರ್ವಕಮಪ್ಪ ಸಂಧಿ ಸಂತಾನಮೆಂಬುದಕ್ಕುಂ: **ಪಂಚತಂತ್ರ,** ೩೦೭ ವ)

**ಸಂತಾನಕ –** ಸಮೂಹ (ನೀರದಸ್ಥಾನದೊಳಿರ್ದ ಬೆಳ್ಮುಗಿಲ ಮಕ್ಕಳವೊಲ್ ನಿಜಪಾಂಡುದೇಹಸಂತಾನಕವಭ್ರೊಳ್ ಮಿಱುಗೆ ಬಂದೆಱಗಿತ್ತು ಕೊಳಂಗಳೊಳ್ಗ: **ಜಗನ್ನಾವಿ,** ೪. ೭೪); ದೇವಲೋಕದ ಒಂದು ಮರ (ನಮೇರು ಮಂದಾರ ಸಂತಾನಕ ಪಾರಿಜಾತಂಗಳೆಂಬ ಪೂಗಳಂ ಸುರಿಯುತ್ತಂ: **ವಡ್ಡಾರಾ,** ಪು. ೮೪, ಸಾ. ೮)

**ಸಂತಾನರೂಪ –** [ಜೈನ] ಅನುಭವಕ್ಕೆ ಬಾರದ ಕ್ಷಣಗಳ ಸಮೂಹ (ವಿಪ್ರಲ್ಧವುದ್ಧಿಗೆ ಸಂತಾನರೂಪದಿಂ ಪುಟ್ಟುತ್ತಿರ್ದ ವಿಜ್ಞಾನಲಕ್ಷಣಂಗಳ್ ಆತ್ಮಾಭಿಧಾನಮಂ ಪುಟ್ಟಿಸುಗುಂ: **ಆದಿಪು,** ೨. ೯ ವ)

**ಸಂತಾನಸ್ರುಕ್ –** ಸಂತಾನವೃಕ್ಷದ ಪುಷ್ಪಮಾಲೆ (ದಿವ್ಯ ಸಂತಾನಸ್ರುಕ್ ಮಣಿಭೂಷಣಾಂಬರಧರಂ ಸ್ವಾಧೀನ ಸಂಗತ್ವಸಂತಾನಂ .. .. ಪಾಲಿಸಿದಂ ಮಹೀತಳಮಂ: **ಆದಿಪು,** ೮. ೭೭)

**ಸಂತಾಪ –** ಶಾಖ (ಕಾಯ್ದ ಲೋಹಕ್ಕಿದು ಮೇಲೆಂಬಂದಮಾದತ್ತು ಅಹಿಮಕಿರಣಸಂತಾಪದಿಂದೆಂಬ ವೈಶಾಖದೊಳ್ ಆ ಯೋಗೀಶ್ವರಂ ಕಲ್ಲೆಲೆ ನೆಲಸಿ: **ಸುಕುಮಾಚ,** ೪. ೧೩); ಸಂಕಟ (ಸಂತಾಪನಂ ವಿರೋಧಿಗೆ ಸಂತಾಪಮನುಂಟುಮಾಟ್ಟಿ ಬಲ್ಲಾಳಂ .. .. ಕೊಂದಂ ತಲ್ಲಣಿಪಂತು ಮಾರ್ಬಲಂ ಮರೀಚಂ: **ಪಂಪರಾ,** ೧೩. ೯೮)

**ಸಂತಾಪನ –** ಮನ್ಮಥನ ಐದು ಬಾಣಗಳಲ್ಲಿ ಒಂದು (ಮನೋಮಥನ ಮದನ ಮೋಹನ ಸಂತಾಪನ ವಶೀಕರಣಂಗಳೆಂಬ ಕಾಮದೇವನ ಅಯ್ದರಲಂಬಿನ ಶಕ್ತಿಗಳುಮನೊಂದುಮಾಡಿ: **ಪಂಪಭಾ,** ೪. ೭೫ ವ)

**ಸಂತಾರ –** ಸಮಾಧಿ ಮರಣ (ಬಿರುದಂಕಂ ಎಂತು ಕಳನಂ ಬಂದೇಱುವಂತೆ ಏಜೆದಂ ಸ್ಥಾನಾತ್ಯುತ್ತಮಸಾರಮೆಂಬುದ ನುತಶ್ರೀ ವೀರಸಂತಾರಮಂ: **ಹರಿವಂಶ,** ೧೦. ೩೧)

**ಸಂತುಷ್ಟ –** ಸಂತೋಷಗೊಂಡ[ವನು] (ಚಿಂತೈಕಸುಖಕ್ರಾಂತರ್ ಸಂತುಷ್ಟೈಕಾಗ್ರಚಿತ್ತರಾದರ್ ತಮ್ಮೊಳ್: **ಕವಿರಾಮಾ,** ೨. ೫೯)

**ಸಂತೆ –** [ಸಂಸ್ಥಾ] ಗುಂಪು, ವಸ್ತುಗಳನ್ನು ಮರಾಟ ಮಾಡಲು ಸೇರುವ ನಿಗದಿತ ಜಾಗ (ಆಗಳ್ ಆಱುಂ ಋತುಗಳ ಪೂಗಳಂ ಒಂದುಮಾಡಿ ಪೂವಿನಂಬುಗಳಂ ಪಣ್ಣಲೆಂದು ಕಾಮದೇವಂ ಮಾಡಿದ ಓಜನ ಸಾಲೆಯಿರ್ಪಂತಿರ್ಪ ಪೂವಿನ ಸಂತೆಯೊಳ್: **ಪಂಪಭಾ,** ೪. ೮೦ ವ)

**ಸಂತ್ರಾಸಕರ –** ಭಯಂಕರ (ಸಂತ್ರಾಸಕರಂ ಪೊಣ್ಮಿತ್ತು ವಿಂಧ್ಯಂ ನಡುಗೆ ಘನರವಸ್ಪರ್ಧಿ ಕೈರಾತಘೋಷಂ: **ಕಾದಂಸಂ,** ೧. ೪೪)

**ಸಂತ್ರಾಸಿ –** ಭಯಗೊಳಿಸುವವನು (ನಮ್ರಶಿರೋಧರೆ ಸೀತೆ ಲೋಕಸಂತ್ರಾಸಿಯ ರೂಪು ಪಾದನಖದರ್ಪಣದೊಳ್ ಪಲವಾಗಿ ತೋಜೆ: **ಪಂಪರಾ,** ೯. ೧೧೨)

**ಸಂದ –** ಪ್ರಸಿದ್ಧವಾದ (ಸಂದ ಸಿಂಹಶೂದ್ರಿಕನೆನೆ ಶೂರವೀರ ಮಣಿವೃತ್ತಿ ಸುವರ್ಣಮಯಂ: **ಲೀಲಾವತಿ,** ೧. ೯೧)

**ಸಂದಂಶ –** ಇಕ್ಕುಳ (ಎರಡರ್ಥಕ್ಕೆ; ಇಕ್ಕುಟೆಂದು ವ್ಯಾಧಿವಿಕಾರಮುಂ ಸಂದಂಶಮುಂ ಅಕ್ಕುಂ: **ಶಬ್ದಮದ,** ೩೩ ವೃತ್ತಿ ೧೩೨); ಔಡು ಕಚ್ಚುವುದು (ಉದಾರವೀರಚರಿತನಿರತ ಕದನಕರ್ಕಶಕ್ಷತ್ರಿಯಂಗೆ .. .. ನಿರರ್ಥಕನಿಷ್ಠುರೋಷ್ಠಪುಟ ಸಂದಂಶಮುಂ .. .. ತಕ್ಕುದಲ್ತು: **ಆದಿಪು,** ೧೪. ೮೧ ವ)

**ಸಂದಣಿ –** ಗುಂಪು (ದಂದುಗದ ಸಂದಣಿಯಿಂದಮೆ ಮತ್ ಪ್ರಾಗ್ಜನ್ಮ ಕಥಾವಳಿಯೆಲ್ಲಮಂ ಬಗೆದು ನೋವಾದುದು: **ಆದಿಪು,** ೩. ೩೩)

**ಸಂದಣಿಸು –** ಗುಂಪಾಗು (ಸರಳ ಪೊದಲ್ದ ಬಲ್ಸರಿಯ ಕೋಳ್ಗಿರಲಾಱದೆ ತೆರಳ್ದು ದುರ್ಧರ ಹಯಂ ಅಟ್ಟಿ ಸಂದಣಿಸಿ ಸಂದಣಿ ಕೋಳ್ಗುದಿಗೊಂಡು: **ಪಂಪಭಾ** ಪರಿಷತ್ತು, ೩. ೭೦)

**ಸಂದರ್ಶನ –** ನೋಡುವುದು (ಇನಮುಖ ಸಂದರ್ಶನಂ ನಿತ್ಯದಾನಾದಿ ಮತಾನೇಕಪ್ರಭಾತಕ್ರಿಯೆಗಳನಿತುಮಂ ಮಾಡಿದಂ: **ಕುಸುಮಾಕಾ,** ೪. ೮೧); ಕಾಣಿಸಿಕೊಳ್ಳುವಿಕೆ (ಅಜಿತಂಜಯ ಮಹಾರಾಜಂ .. .. ಸಚಿವಸಂದೋಹ ಸಂದರ್ಶನಾರ್ಥಂ ಸರ್ವಾವಸರ ಸಭಾಮಂಡಪದೊಳ್: **ಚಂದ್ರಪ್ರಪು,** ೫. ೨ ವ)

**ಸಂದರ್ಶನೀಯ –** ಸುಂದರವಾದ (ಧೃತನನಾವರ್ಣಪಟಚ್ಛವಿ ಸಮುದಯಸಂದರ್ಶನೀಯಂ: **ಚಂದ್ರಪ್ರಪು,** ೧. ೧೧೨)

**ಸಂದಷ್ಟ –** ಕಚ್ಚಲ್ಪಟ್ಟ (ಕರತಸದ್ಯಃಕಾಮಕೇಳೀಭರಮವಿರಮಣಮಂ .. .. ಸಂದಷ್ಟ ಅಧರಂ ಸೂಚಿಸೆ ನೃಪಸುತನಂ ನೋಡಲೆಯ್ತಂದಳೊರ್ವಳ್: **ಪುಷ್ಪದಂಪು,** ೫. ೨೮)

**ಸಂದಿ –** ಕೀಲು (ಕಟಿ ಮುಮ್ಮಡಂ ಪರಡು ಸಂದಿ ನೊಸಲ್ ಪಣೆ ಕಣ್ ಕದಂಪಿನೆಡೆಯನೆ ನಟ್ಟುವುರ್ಚಿದುವುನೇರ್ದುವು ಸೀಳ್ದುವು ಪಾರ್ಥನಂಬುಗಳ್: **ಪಂಪಭಾ,** ೧೧. ೧೩೭);

**ಸಂದಿಕ್ಕು –** ಜೋಡಿಸು (ಜರೆಯೆನಿಸುವವಳ್ ಕಂಡು ಕೊಂಡುಯ್ದು ಸಂದಿಕ್ಕಿದೊಡೆ ಅಂತಾ ಸಂದು ಸಮದಿಲ್ಲೆನಿಪ ತೆಱದಿ ಪತ್ತಿತ್ತು: **ಧರ್ಮಾಪ,** ೯. ೫೭)

**ಸಂದಿಗ್ಧ** – ಸಂದೇಹಾಸ್ಪದ (ವ್ಯಗ್ರತೆಯನುಳಿದು ಸಂದಿಗ್ಧ ಕಾರ್ಯಂಗಳಂ ಮೆಲ್ಲನೆ ಮಾಳ್ಪೊಂದಂಗಮೆನ್ನೀ ಬಗೆಗೆ ಅಭಿಮತಮಾಗಿರ್ಪುದೈ: **ರಾಜಶೇವಿ,** ೧೩. ೮); ಮುಚ್ಚಲ್ಪಟ್ಟ (ಅವತಂಸೀಕೃತ ಬಾಲಕೈತಕಶಿಖಾ ಸಂದಿಗ್ಧ ಮುಗ್ಧಾಮೃತಾಂಶು ವಿಹಾಯಸ್ಸರಿದಂಬುಚುಂಬಿತ ಜಟಾಜೂಟಾಂತರಂ: **ಪಂಚತಂತ್ರ,** ೨)

**ಸಂದಿಸಂದಿ** – ಕೀಲು (ಪೊಱಗೀ ಖಳನಂ ಕಂಡೊಡೆ ಪೆಱದೆಗೆಯದೆ ಸಂದುಸಂದಿಯಂ ಪರಸಿಂದಂ ತಱಿಯೆನೆ ಗರಗಸದಿಂದಂ ಕೊಱೆಯೆನೆ: **ಧರ್ಮಾಮೃ,** ೬. ೭೪)

**ಸಂದಿಸು** – ಗುಂಪುಗೂಡು (ಎಡೆಮಡಗದೆ ಸಂದಿಸಿ ಮೀವುಡುವ ತುಱುಂಬುವ ಜಲಾಂಬರಸ್ರಕ್ಕೃತಿಯಿಂ ನಡೆದರ್ ಮಜ್ಜನವಳ್ಳರ ಮಡಿವಳ್ಳರ ಮಾಲೆಗಾಱರಂದದೆ ದಿವಿಜರ್: **ಅಜಿತಪು,** ೫. ೯೧); ಹಿಂಬಾಲಿಸು (ಮುಂದಣ ಮಿಗಮಂ ಕಟಿಪದೆ ಸಂದಿಸಿ ಬಟಿಗೊಳ್ವ ಮಿಗಮುಮಂ ಕಟಿಪದೆ ತಾನೊಂದಳವಿಳಿದಪ್ಪದೆಚ್ಚು ಬಲಿಂದಮನಿಂ ಬಿಲ್ಲ ಬಲ್ಮೆಯಂ ಪೊಗಟಿಸಿದಂ: **ಪಂಪಭಾ,** ೫. ೪೮); ಕೂಡು, ಸೇರು (ಚಂದ್ರಿಕಾನಂದನನಾಗಳಂತೆ ತಱಿಸಂದು ಮನೋವಚನಾಂಗ ಶುದ್ಧಿಯಿಂ ಸಂದಿಸಿ ಶಲ್ಯದಂಡಮನಡಂಗಿಸಿ .. .. ಕೊಂಡನಖಂಡಿತ ಜೈನದೀಕ್ಷೆಯಂ: **ಸುಕುಮಾಚ,** ೮. ೩೮)

**ಸಂದೀಪಿತಚಿತ್ತ** – ಕೆರಳಿದ ಮನಸ್ಸು[ಳ್ಳವನು] (ಕೋಪವಹ್ನಿ ಸಂದೀಪಿತಚಿತ್ತಂ ಎಯ್ದಿ ಕಡುಪಿಂ ಕಡುಕೆಯ್ದಿಱಿದು: **ವರ್ಧಮಾಪು,** ೪. ೮೫)

**ಸಂದು** – ಸೇರುವಿಕೆ (ಇತ್ವಕುತ್ವಂ: ಗ್ರಂಥಿ–ಗಂಟು ಸಂಧಿ–ಸಂದು: **ಶಬ್ದಮದ,** ೨೯೩ ಪ್ರ); ಮೂಲೆ (ದೆಸೆಗಳ ಸಂದಂ ಪಱಿದಾಗಸದಿಂದಂ ಪತ್ತುವಿಡಿಸುವಂತೆ: **ಆದಿಪು,** ೧೨. ೫೪); ಸೀಳು, ಬಿರುಕು (ಒಂದದ ಪಗಲಿರುಡೆರಡರ ಸಂದುಗಳಂ ವರುಣಶಿಲ್ಪಿ ರಕ್ತಾಂಬರದಿಂ ಸಂದಿಸಿಪೊಲ್ದವೊಲೆಸೆದುದು ಮಂದೈಸಿದ ಸಂಜೆಗೆಂಪು: **ಜಗನ್ನಾವಿ,** ೧೬. ೯೫); ಗಿಡಮರಗಳ ಗೆಣ್ಣು ಕೊನೆಯೊಳ್ ಕೊನೆಗೊಂಬಿನ ಸಂದಿನೊಳ್ ಎಲೆ ಪಣ್ತುದಿರ್ದು ಪೋದ ನೆಲೆಯೊಳ್ ಕೊನರ್ಗಳ್ ಕೊನೆದೋಱಿ ಮದನನಲಗಿನ ಮೊನೆದೋಱಿದನೊಡನೆ ಬಿರಯಿಗಳೆಳಮಾವುಗಳೊಳ್: **ಮಲ್ಲಿನಾಪು,** ೫. ೧೦)

**ಸಂದೃಪ್ತ** – ಮತ್ತ (ಆರ್ಪಿಂ ಬರ್ಪ ಸಂದೃಪ್ತಸಿಂಧುರಮಂ ಪಾಯ್ದು ಪಳಂಚಿ ಪೊಯ್ದಂ ಅಸಿಯಿಂ ಧೀರೋತ್ತಮಂ ಧೀವರಂ: **ಶಬರಶಂ,** ೩. ೫೭)

**ಸಂದೆಗ** – ಸಂದೇಹ (ಸಂದೆಗಮೇಂ ಅಜ್ಞಾನಮಾರ್ಗಾಚರಣ ನಿರತರೇಂ ಬೇಯರೇ: **ಸಮಯಪ,** ೧೧. ೧೫೯)

**ಸಂದೆಯ** – ಸಂದೇಹ (ನೀನುಂ ಸಂದೆಯಗುಣಮಿಲ್ಲದೆ ಇದನೆ ನಂಬಿ ಇನಿತಂ ನೀನೊಂದಿದ ನಾರೀರೂಪದ ದಂದುಗದೊಳ್ ತೊಡರ್ದು ಬಿಡದೆ ನವೆಯುತ್ತಿರ್ಪೈ: **ಆದಿಪು,** ೫. ೬೨

**ಸಂದೇಶ** – ಅಪ್ಪಣೆ, ಆದೇಶ (ಮುನ್ನಂ ನಿಮಗೆ ಪುಟ್ಟಿದುವಾಱುಂ ಮಕ್ಕಳೆಂಬಿವು ಪಾತಾಳದೊಳಿರ್ದ ಹಿರಣ್ಯಕಸಿಪುವಿನ ಮಕ್ಕಳೆ ಮದೀಯ ಸಂದೇಶದಿಂ ಪುಟ್ಟಿ ಪೂದುವು: **ಜಗನ್ನಾವಿ,** ೩. ೫ ವ)

**ಸಂದೋಹ** – ಸಮೂಹ, ರಾಶಿ (ಬಹುದುಃಖಾವರ್ತ ಸಂದೋಹದೊಳ್ ಸುೞಿಗುಂ ಮಾಣದೆ ಮಾಯ್ದು ಕರ್ಮವಶದಿಂ ಜೀವಂ ಭವಾಂಬೋಧಿಯೊಳ್: **ಸುಕುಮಾಚ,** ೬. ೭)

**ಸಂಧಾನ** – ಬಿಲ್ಲಿನ ಹೆದೆಗೆ ಬಾಣ ಹೂಡುವಿಕೆ (ಅವಯವದೆರ್ದೆಗೊಳ್ವುದಿದಾರುನೆಂದೊಡೆ ಬಾಣಕೃತಿ ಪುಳಿಂದನ ಸಂಧಾನವನೆಯ್ದಿದತ್ತು ಮತ್ತಿನ ಕವಿಕುಳದ ಎರ್ದೆಗೊಳ್ವುದೆಂಬುದೊಂದಚ್ಚರಿಯೇ: **ಕಾದಂಬ,** ೧. ೪); ಸಂಧಿ, ರಾಜಿ (ಹರಿ ಸಂಧಾನಕ್ಕೆ ವಂದಂದು ಅವಗಡಿಸಿದ ಅಹಂಕಾರಮೇನಾಯ್ತೊ: **ಗದಾಯು,** ೭. ೧೪); ಸಂಧಿ, ರಾಜನ ಷಾಡ್ಗುಣ್ಯಗಳಲ್ಲಿ ಒಂದು, ಬಲಿಷ್ಠ ಹಗೆಯನ್ನು ಉಡುಗೊರೆಯಿತ್ತು ಸಂತೈಸುವುದು (ಬಲವಂತನಪ್ಪ ಪಗೆವಂ ಮೇಲೆತ್ತಿ ಬರೆ ವಸ್ತುವಾಹನಂಗಳನಿತ್ತು ಆತನಂ ಸಂತೈಸುವುದು ಸಂಧಾನಮೆಂಬುದಕ್ಕುಂ: **ಪಂಚತಂತ್ರ,** ೩೦೭ ವ)

**ಸಂಧಾನಂಗೆಯ್** – ತಯಾರಿಸು (ಮೂಱುಂ ಕೊಂಡಂಗಳೊಳ್ ಉತ್ತರವೇದಿಕೆಯೊಳ್ ಅಗ್ನಿ ಸಂಧಾನಂಗೆಯ್ದು: **ಪಂಪಭಾ,** ೬. ೩೩ ವ); ಉಪಾಯ ಮಾಡು (ಪೆಱರ ಬಗೆಯಱಿದು ಸಂಧಾನಂಗೆಯ್ದು ವಂಚಿಸುವುದು ವಂಚನೆಯೆಂಬುದು: **ಪಂಚತಂತ್ರ,** ೭೧ ವ);

**ಸಂಧಾರಿತ** – ತೊಡಿಸಿದ, ತೊಟ್ಟ (ಆರೋಪಿತಚಾಪಂ ಸಂಧಾರಿತಕವಚಂ ಧೃತೋಗ್ರಶರಧಿಯುಗಂ ತಾಂ: **ಪಂಪಭಾ,** ೮. ೧೨)

**ಸಂಧಿ** – ನಾಟಕದ ಒಂದು ಭಾಗ (ನಾಂದೀ ಪ್ರರೋಚನಾ ಪ್ರಸ್ತಾವನಾ ಇತಿವೃತ್ತ ಸಂಧಿ ಪ್ರವೇಶ ವಿಷ್ಕಂಭ ಕಪೋತಿಕಾ ವ್ಯಾಳಿಕಾದಿ ಲಕ್ಷಣೋಪೇತಂಗಳಪ್ಪ ನಾಟಕಂಗಳೊಳಂ: **ಪಂಪಭಾ,** ೨. ೩೪ ವ); ಸೇರಿಕೆ (ಜಟಮಟಿಸಿಕೊಂಡು ನಿಮ್ಮೀ ಘಟಿಯಿಸುವ ಈ ಸಂಧಿ ಕೌರವರ್ಕಳೊಳ್ ಎನ್ನಿಂ ಘಟಿತ ಜರಾಸಂಧ ಉರಸ್ತಟ ಸಂಧಿವೊಲ್ ಒಂದೆ ಪೊಟ್ಟಱೊಳ್ ವಿಘಟಿಸದೇ: **ಪಂಪಭಾ,** ೯. ೨೩); ಒಡಂಬಡಿಕೆ, ಹದಿನಾರು ಬಗೆಯ ಸಂಧಿಗಳು: (ಸಂಧಿ ವಿಗ್ರಹಯಾನಾಸನಸಂಶ್ರಯದ್ವೈಧೀಭಾವಷಾಡ್ಗುಣ್ಯಂಗಳೆಂಬ ನಯಂಗಳೊಳಂ; **ಪಂಚತಂತ್ರ,** ೧೦೦ ವ): ನೋಡಿ, 'ಷೋಡಶಸಂಧಿ'

**ಸಂಧಿವಿಗ್ರಹ** – ರಾಜಿ ಮತ್ತು ಯುದ್ಧ (ಕಾಲೋಚಿತ ಸಂಧಿವಿಗ್ರಹದೊಳೊಂದಂ ಕಾರ್ಯಮಂ ಪ್ರಾಪ್ತಮಪ್ಪುದಂ ಆಪ್ತೋಕ್ತಮನುಂತೆ ರಾಭಸವಾಕ್ಪಾತಕ್ಕೆ ಮೆಯ್ದುರ್ಪುದೇ: **ಶಾಂತಿಪು,** ೩. ೭೩)

**ಸಂಧಿವಿಗ್ರಹಿ** – ರಾಜಿ–ಯುದ್ಧಗಳ ಬಗೆಗಿನ ಮಂತ್ರಿ (ಧರಾಧೀಶ್ವರಂ ಆಸ್ಥಾನಭೂಮಿಯೊಳ್ ಅನಂತ ಸಾಮಂತ ಮಂತ್ರಿ ಪುರೋಹಿತ ಅಂತರ್ವಾಂಶಿಕ ಶ್ರೀಕರಣ ಸೇನಾನಾಯಕ ಸಂಧಿವಿಗ್ರಹಿ ಪ್ರಮುಖ ನಿಖಿಲ ಪರಿವಾರಪರಿವೃತನಾಗಿ: **ಪಂಚತಂತ್ರ,** ೬೬ ವ)

**ಸಂಧಿಸು** – ಸೇರಿಸು, ಸಂಧಾನ ಮಾಡು (ಸಂದಿಸು–ಸಂಧಾನೇ: **ಶಬ್ದಮದ,** ಧಾ ೮೦೪)

**ಸಂಧುಕ್ಷ್ಯಮಾಣ** – ಹೆಚ್ಚು ಕಾಂತಿಯುಕ್ತವಾದ (ಅನ್ನೆಗಂ ಅನವರತ ಸಂಧುಕ್ಷ್ಯಮಾಣ ಕಾಲಾಗರುಧೂಪಧೂಮ್ರಸುರಭಿಪರಿಮಳ ಮಿಳದಳಿಕುಳಾಕುಳೀಕೃತ ಕನ್ಯಾಪರಿವಾರವಿಲಾಸ ವಿಲಾಸಿನೀ ವಿನೋದ್ಯಮಾನೆಯಂ .. .. ಪ್ರತೀಹಾರಂ ಮಗಧರಾಜಾಭಿಮುಖಂ ಮಾಡಿ: **ಶಾಂತಿಪು,** ೫. ೧೦೫ ವ)

**ಸಂಧೇಯ** – ಸ್ನೇಹಯೋಗ್ಯ (ಪರಹಿತಪಂಡಿತಂ ಉಚಿತಜ್ಞಂ ತಜ್ಞೋನ್ನತಾವೃತಂ ತನ್ನಪಾತ್ಮಜಂ ಸಂಧೇಯಂ: **ರಾಜಶೇವಿ,** ೬. ೧೨೦)

**ಸಂಧ್ಯಾನಕ** – ಸಂಜೆ ಬಾರಿಸುವ ನಗಾರಿ (ನಿನದತ್ ಸಂಧ್ಯಾನಕಂ ನಿಗ್ವಣೆಯ ಪಱ ಪೂರ್ವಾಚಲಂ ತುಂಗರಂಗಂ ತನಗಾದತ್ತೆಂಬಿನಂ ನೀಲಿಯ ಜವನಿಕೆವೋಲ್ ಪಿಂಗೆ ಸಂಧ್ಯಾತಮಂ: : **ಚಂದ್ರಪ್ರಪು,** ೮. ೩೦)

**ಸಂಧ್ಯಾಭ್ರ** – ಸಂಜೆಯ ನಸುಗೆಂಪು ಮೋಡ (ಅಮರಾನೀಕದ ಸುತ್ತು ಪೋಲೆ ದಿನನಾಥವಂದ್ಯ ಸಂಧ್ಯಾವಿಭ್ರಮಮಂ: **ಶಾಂತಿಪು,** ೪. ೧೧೬)

**ಸಂಧ್ಯಾರಾಗ** – ಸಂಜೆಗೆಂಪು ಬಣ್ಣ (ಜಳಜಭವಾಂಡಂ ಜಂಬೂಫಳರಸದಿಂ ತೀವಿತೆಂಬಿನಂ .. .. ಕಣ್ಗೊಳಿಸಿರೆ ಪರ್ವಿದುದು ಸಾಂದ್ರ ಸಂಧ್ಯಾರಾಗಂ: **ಕಾದಂಬ,** ೫. ೨೦೮)

**ಸಂನ್ಯಸನವಿಧಿ** – [ಜೈನ] ಉಪವಾಸವಿದ್ದು ಮಾಡುವ ಒಂದು ವ್ರತ (ವಸುಂದರೀಕಂತಿಯರುಂ ಸಮಾಧಿಗೂಡೆ ಸಂನ್ಯಸನವಿಧಿಯಿಂ ಅಸುವಂ ವಿಸರ್ಜಿಸಿ: **ಕರ್ಣನೇಮಿ,** ೧೪. ೧೫ ವ)

**ಸಂಪನ್ನ** – ತುಂಬಿದ, ಪರಿಪೂರ್ಣವಾದ (ಧರೆಯೊಳಗಿಂತೀ ನಗರದ ಪರದರೆ ಸಂಪನ್ನರೆಂದು ದುಂದುಮೆಗೇಳ್ದೆಂ: **ಸುಕುಮಾಚ,** ೧೦. ೧೧೭)

**ಸಂಪಾತನ** – ಬೀಳುವಿಕೆ (ಶತ್ರುಕಲಭಸಂಪಾತನ ವಿಸ್ಫುರಿತ ಪ್ರದೀಪನಾ ಕುರುಧರೆಯೊಳ್ ಕುರುಪತಿಯನಱಸಿದಂ ಪವನಸುತಂ: **ಗದಾಯು,** ೬. ೨೭)

**ಸಂಪುಟ** – ಭರಣಿ (ತಂದೆಯಿರಿಸಿದ ಪಕ್ಷ ಸಂಪುಟದೊಳಗಣಿಂ ಪೊಱಮಟ್ಟು: **ಕಾದಂಸಂ,** ೧. ೪೮ ವ)

**ಸಂಪೂರಿಮ** – ಹೂಮಾಲೆ ಕಟ್ಟುವ ಒಂದು ಬಗೆ (ಗ್ರಂಥಿಮ ವೇಷ್ಠಿಮ ವೇಧಿಮ ಸಂಪೂರಿಮ ಸಂಘಾಯಿಮಮೆಂಬ ಅಯ್ದುಂ ತೆಱದ ಪುಷ್ಪಮಾಲೆಗಳಂ ಸಮೆದು: **ಹರಿವಂಶ,** ೨. ೨೯ ವ)

**ಸಂಪೂರ್ಣೇಂದು** – ಹುಣ್ಣಿಮೆಯ ಚಂದ್ರ (ಪ್ರಜಾಪತಿ ಮಹಾರಾಜಂ ಪಾಗುಡಂಗಟ್ಟಿ ಸಂಪೂರ್ಣೇಂದುಮುಖಿಯಂ ಇಂದು ನಾಳೆನ್ನದೆ ಬಂದ ಪೊಟ್ಟೆ ಪೊಟ್ಟಾಗೆ ರಥನೂಪುರಚಕ್ರವಾಳಕ್ಕೆ ಬೇಗಮಟ್ಟುವುದುಂ:: **ಶಾಂತಿಪು,** ೫. ೩೬ ವ)

**ಸಂಪ್ರಣಿಧಾನ** – ತತ್ವಚಿಂತನೆ (ಸಮಾಧಿ ಸಂಪ್ರಣಿಧಾನಂ ತತ್ವಾದಿಚಿಂತನಂ ತಾಂ ಧ್ಯಾನಂ: **ಅಭಿಧಾವ,** ೧. ೩. ೧೮); ಯೋಗ್ಯ ನಡತೆಯವನು (ಅದಱಿಂ ಸಂಪ್ರಣಿಧಾನನಂ ಪ್ರಣೀಧಿಯಂ ನೀಂ ದೇವ ಮುನ್ನಟ್ಟಿ ನೋಟ್ಟುದು ತಚಚೇತನೆಯೊಳ್ ಪೊದಳ್ದ ನಯಮಂ ಮತ್ತಿತ್ತದೋಜಾಗೆ ಮಾಟ್ಟುದು ಕಾಲೋಚಿತ ಸಂಧಿವಿಗ್ರಹದೊಳೊಂದಂ ಕಾರ್ಯಮಂ: **ಶಾಂತಿಪು,** ೩. ೭೩)

**ಸಂಪ್ರತಿ** – ವರ್ತಮಾನ, ಈಗಿನ ಕಾಲ (ಕ್ಷಿತಿಪೂಜ್ಯಂ ಜಿತದುರಿತಂ ನುತ ಸಂಪ್ರತಿಭುತಭಾವಿ ಪರಿಣತತತ್ವಂ: **ಶಾಂತಿಪು,** ೧. ೧೮)

**ಸಂಪ್ರದಾನ** – ಕೊಡುವುದು, 'ಷೋಡಶಸಂಧಿ'ಗಳಲ್ಲಿ ಒಂದು, ಉಡುಗೊರೆ ಕೊಡುವ ಮೂಲಕ ಮಾಡಿಕೊಳ್ಳುವ ಸಂಧಿ (ದ್ರವ್ಯವಾಹನಮಂ ಕೊಟ್ಟು ಮನ್ನಿಪುದು ಸಂಪ್ರದಾನಮೆಂಬುದಕ್ಕುಂ: **ಪಂಚತಂತ್ರ,** ೩೦೭ ವ)

**ಸಂಪ್ರಯೋಗ** – ಸೇರುವಿಕೆ, ಸಂಭೋಗ (ಮೆಯ್ನವಿರುರ್ಚೆ ಪೊದಳ್ದ ಲಜ್ಜೆಮೆಯ್ಯಂ ಬಿಗಿದಪ್ಪಿ ಬಾಲೆಯ ಭಯಂಗಳೆದಂ ನವಸಂಪ್ರಯೋಗದೊಳ್: **ಲೀಲಾವತಿ,** ೧೩. ೧೬)

**ಸಂಬರ** – ಸಾಂಭಾರ ಸಾಮಗ್ರಿ (ಪರಿಮಳದ ಸಂಬರದಿಂ ಉಱ ಪೊರೆದಾತ್ಮಕನಡಗನಿಕ್ಕಿ ವಡೆ ಪೂರಿಗೆಯೆಂಬುರುತರ ಭಕ್ಷ್ಯಂಗಳಂ: **ತ್ರಿಷಷ್ಟಿಪು,** ೧೦. ೬೪)

**ಸಂಬಳ** – ಬುತ್ತಿ (ಪಪ್ಪಲದಲರ್ಗಳ್ ಸಂಬಳಮಪ್ಪಿನಂ ಉಪವನಕೆ ನಿಚ್ಚವಯಣಂ ಬರುತುಂ ಪಪ್ಪಕಮಾಗಿರೆ ಪಱಮೆಗಳುಪ್ಪವಯಣಂಗೆಯ್ದುವಂದು ಪೊಸಮಲ್ಲಿಗೆಯೊಳ್: **ಅಜಿತಪು,** ೬. ೨೧)

**ಸಂಬಳಂಗೊಳ್** – ಬುತ್ತಿಯನ್ನು ಕಟ್ಟಿಕೊ (ಅಟ್ಟಿಱಿಂ ಈಯೆ ಸಂಬಳಂಗೊಳ್ವವೋಲ್ ಆ ತಳೋದರಿಯ ಚಿತ್ತಮಂ ಇಟ್ಟುಱಿಗೊಂಡಂ ಅರ್ಜುನಂ: **ಪಂಪಭಾ,** ೭. ೬೮)

**ಸಂಬಳಂಬಡೆ** – ಜೀವಿತವನ್ನು ಪಡೆ (ಮಂಡಲಿಕ ಸಾಮಂತಾದಿ ಮೇದಿನೀಪ್ರಭುಗಲ ಸಭೆಗೆ ಲೀಲೆಯಿನೋಲೆಯನಡಿಕಿ ಸಂಬಂಳಂಬಡೆದು ಜಗಂ ತೆಗಱ ಜೀವಿಸುತ್ತುಂ: **ಆಚವರ್ಧ,** ೩. ೧೨ ವ)

**ಸಂಬಳದ ದಾಯ** – ಕಾಣಿಕೆಯ ಸಲ್ಲಿಕೆ (ಕಬ್ಬಿಲಂಗೆಳಸಿ ಸ್ವಯಂಭು ಸಂಬಳದ ದಾಯಮಂ ಅಟ್ಟೆಯೊಳಿತ್ತನೆಂಬರ್: **ಸಮಯಪ,** ೧೦. ೭೯)

**ಸಂಬಳಿಗೆ** – [ಸಂಪುಟಕ] (ಕೆಂಬರಲ ಸಂಬಳಿಗೆಗಳೊಳಮ ಗರುಡೋದ್ಗಾರದ ಪಚ್ಚೆಯ ಕರಡಿಗೆಗಳೊಳಂ ತೀವಿದೆನಿತಾನುಮ ತೆಱದ ಬಂಧುರ ಸುಗಂಧವಸ್ತುಸಂದೋಹಮಂ ಮಡಗಿ: **ಜಗನ್ನಾವಿ,** ೭. ೧೮ ವ); ಹೋಳು, ಭಾಗ (ಕಱುತ್ತುದಗ್ರತರೌಅರಿಯಿಂ ಅಂದು ಅರಸಾಸವಾರಿ ಪೊಯ್ದೊಡೆ ತರಾರಿ ಸೀಸಕ ಸಿರಂ ಸಮವಾಗಿಸಲಂತೆ ಮತ್ತ ಮೆಯ್ ನಿಡುಪಿನೊಳೆಯ್ದೆ ಸಂಬಳಿಗೆಯಾಗಿರೆ: **ಕರ್ಣನೇಮಿ,** ೧೧. ೧೬೩)

**ಸಂಬಳಿಗೋಲ್**– [ಅಸ್ಪೃಶ್ಯರು ಕೈಯಲ್ಲಿ ಹಿಡಿಯುತ್ತಿದ್ದ] ದೊಣ್ಣೆ (ಸಂಬಳಿಗೋಲಿಂದಿರದೆ ಪಳಂಚಿಸಿದಳ್ ಜರ್ಝರರವಂ ಒಗೆಯಲ್ಕೆ ನೃಪಸಭಾಕುಟ್ಟಿಮಮಂ: **ಕಾದಂಬ,** ೧. ೩೧)

**ಸಂಬೋಧನೆ** – ಉಪದೇಶ (ಗುರುಸಂಬೋಧನೆಯಿಂ ನಿನ್ನಂ ಪ್ರತಿಬೋಧಿಸಲಾಂ ಬಂದೆಂ: **ಸುಕುಮಾಚ,** ೫. ೨೬); ಎದುರು ನಿಂತು ಕರೆಯುವುದು (ಸಂಬೋಧನೆಯೆಂಬುದು ಅಭಿಮುಖೀಕರಣಮಂ ಪೇೞ್ವುದು: **ಶಬ್ದಮದ,** ೧೩೭ ವೃತ್ತಿ)

**ಸಂಬೋಧಿಸು** – ತಿಳಿವಳಿಕೆ ಹೇಳು (ಮುನ್ನ ಮಹಾಬಳನಾದಂದು ಎನ್ನಂ ಪ್ರಿಯಸಚಿವನಾಗಿ ಸಂಬೋಧಿಸಿ ಮಾನೋನ್ನತರೀಗಳ್ ಅಟ್ಟಿಱಿಕೊಳೆನ್ನಂ ಸಮಱಲ್ಕೆ ಬಂದರಿಂತುಱಿ: **ಆದಿಪು,** ೫. ೬೭); ಉದ್ದೇಶಿಸಿ ಮಾತಾಡು (ಉರಗಧ್ವಜಂ ಗರುಡಧ್ವಜನಂ ಸಂಬೋಧಿಸಿ ನುಡಿಯೆ: **ಗದಾಯು,** ೭. ೪೧ ವ)

**ಸಂಭವ** – ಹುಟ್ಟುವ (ಜಳಧಿಯೊಳೆ ತಿಮಿಂಗಿಳಗಳ ಮಕರಪ್ರಕರಶಂಖಸಂಭವಮಕ್ಕುಂ: **ಕಾವ್ಯಾವಲೋ,** ೮೮೩)

**ಸಂಭವಿಸು** – ಉಂಟಾಗು (ಸಾಕ್ಷಿಯಾಗಿ ತಪ್ಪಿ ನುಡಿವರ್ಗೆ ವಾಪಮೆ ಸಂಭವಿಸುವುದು: **ಪಂಚತಂತ್ರ,** ೨೪೨ ವ); ಸಾಧ್ಯವಾಗು (ಅವಚಱದೊಂದೆ ಪದ್ಮದೊಳೆ ನೇಲ್ದೊಳಗಾದಳಿಗೆಮ್ಮ ವೃತ್ತಿ ಸಂಭವಿಸದು: **ಆದಿಪು,** ೧೧. ೧೨೬)

**ಸಂಭಾವನೆ** – ಚಿಂತನೆ (ಮನದೊಳ್ ನಿರ್ವೇದಮಾದಂ ದೊರೆಕೊಳೆ ಭವಸಂಬಂಧದೊಳ್ ತೊಟ್ಟ ಸಂಭಾವನೆ ಚಿತ್ರಂಬೊಕ್ಕು ಹಸ್ತಾಮಳಕದ ತೆಱದಿಂ ತೋಱ: **ಶಾಂತಿಪು,** ೯. ೧೦೩); ಮನ್ನಣೆ (ಕಿಱದಾನುಂ ಬೇಗದಿಂ ಯಥೋಚಿತ

ಸಂಭಾವನೆಯಿಂ ತಲೆಬಾಗುವೆನೆಂಬ ರಾಜನ್ಯಕಮಂ ಬೀಡಿಇಂಗೆ ವಿಸರ್ಜಿಸಿ: **ಶಾಂತಿಪು,** ೧೧. ೮೩ ವ)

**ಸಂಭಾಷಣ –** ಮಾತುಕತೆ (ಸ್ವಾಗತವಚನಪುರಸ್ಸರಂ ಸಂಭಾಷಣ ಪ್ರಸ್ತಾವದೊಳ್ ವಸ್ತುವಿಚಾರಂ ಪುಟ್ಟೆ: **ಶಾಂತಿಪು,** ೮. ೧೨೬ ವ)

**ಸಂಭಾಷಣಂಗೆಯ್ –** ಮಾತನಾಡು (ಪರಸ್ಪರಮಿತ್ರ ಪ್ರತಿಪತ್ತಿಯೆಲ್ಲಮಂ ನೆಱೆಯೆ ಮಾಡಿ ಪಿರಿದು ಪೊಟ್ಟು ಸಂಭಾಷಣಂಗೆಯ್ದು: **ಪಂಚತಂತ್ರ,** ೪೨೮ ವ)

**ಸಂಭಾಷಿಸು –** ಸಂಭಾಷಣಂಗೆಯ್ (ದಂದಶೂಕಪ್ರಮಾಥಿಯಿಂ ಯಥೋಚಿತಸ್ನಿಗ್ಧಮಧುರಾಳಾಪದಿಂ ಸಂಭಾಷಿಸಿ: **ಜಗನ್ನಾವಿ,** ೮. ೮೦ ವ)

**ಸಂಭಿನ್ನಮದಮರ್ಯಾದೆ –** ಆನೆಯ ಮದಾವಸ್ಥೆಗಳಲ್ಲಿ ಏಳನೆಯದು (ಸಂಭಿನ್ನಮದಮರ್ಯಾದೆಯೊಳ್ ಮರ್ಯಾದೆಯಂ ಮೀಱೆಸ್ವಾತಂತ್ರ್ಯಮದಾಕ್ರಾಂತ ಸ್ವಾಂತನುಂ: **ಪಾರ್ಶ್ವನಾಪು,** ೪. ೧೩೧ ವ)

**ಸಂಭಿನ್ನವಿದ್ಯೆ –** [ಜೈನ] ಒಂದು ಬಗೆಯ ವಿದ್ಯೆ (ಪವಮಾನಸುತಂ ಸಂಭಿನ್ನವಿದ್ಯೆಯಿಂ ಮಾಡಿ ಪೊಟಲಂ ಆಗಸದೊಳ್ ತನ್ನ ವರೂಥಿನಿಯೆಲ್ಲಮನಿರಿಸಿ: **ಪಂಪರಾ,** ೧೧. ೭೩)

**ಸಂಭೂತ –** ಒಡಗೊಂಡ (ಭೂತಚತುಷ್ಟಯಸಂಭೂತ ಚೈತನ್ಯಂ ಪಿಷ್ಟೋದಕಗುಡಧಾತಕ್ಯಾದಿಯತ್ತಣಿಂ ಮದಶಕ್ತಿ ಪುಟ್ಟುವಂತೆ ಪುಟ್ಟುಗುಂ; **ಶಾಂತಿಪು,** ೮. ೧೨೩ ವ)

**ಸಂಭೃತ –** ಸೇರಿದ (ಕುಚಯುಗಕುಂಭ ಸಂಭೃತ ಕುಂಕುಮಪಂಕಾಂಕಿತೆಯುಂ .. .. ಎನಿಸಿ: **ಸುಕುಮಾಚ,** ೧೧. ೧೫ ವ); ಸಜ್ಜುಗೊಳಿಸಿದ (ಮಣಿಮಯ ಸ್ತಂಭ ಸಂಭೃತದೊಳ್ ಅತಿ ಸುರುಚಿರಪ್ರವಾಳ ಜಾಳಾಂತರ ವಿರಾಜಮಾನದೊಳ್: **ಸುಕುಮಾಚ,** ೯. ೧೭ ವ)

**ಸಂಭೇದ –** ಕೂಡುವಿಕೆ (ಹರಿವಂಶಮುಂ ಕುರುವಂಶಮುಂ ಸಿಂಧುಯುಗಳ ಸಂಭೇದದಂತೆ ಭೇದಿಸಲ್ಬಾರದಂತು ಕೂಡಿ ಕೊರ್ಪ್ಪುವಡೆದು: **ನೇಮಿನಾಪು,** ೪. ೧೦೭ ವ)

**ಸಂಭೋಗ –** ಕಾಮ ಕೂಟ (ಸ್ವರ್ಗಲಕ್ಷ್ಮಿಯ ಮೇಲಟ್ಟಜಿಳೊಳ್ ನಲಿದನೋ ಸಂಭೋಗಸಮ್ಮರ್ದ ನಿರ್ದಯ ನಿಷ್ಪೀಡಿತ ದೇವವಾರವನಿತಾಬಿಂಬಾಧರಂ ಶ್ರೀಧರಂ: **ಆದಿಪು,** ೫. ೭೧); ಶೃಂಗಾರದ ಒಂದು ಬಗೆ, ಇನ್ನೊಂದು ವಿಪ್ರಲಂಭ (ಸ್ತ್ರೀಪುಂಸರತಿಸಮುತ್ಥವ್ಯಾಪಾರಂ ತಾನದಲ್ತೆ ಶೃಂಗಾರಮ ಮೇಳಾಪದಿನಗಲ್ಕೆಯಿಂ ಸುನಿರೂಪಿತ ಸಂಭೋಗ ವಿಪ್ರಲಂಭ ಸಮಾಖ್ಯಂ: **ಕಾವ್ಯಾವಲೋ,** ೭೯೯)

**ಸಂಭೋಗ್ಯ –** ಅನುಭವಿಸಲು ತಕ್ಕುನಾದ (ಮಿಥುನಂಗಳ್ಗೆ ಸಂಭೋಗ್ಯಮಾಗಿ ಸಲೆ ಜಘನ್ಯಭೋಗಭೂಮಿಯ ಕಡೆಯ ಪಳಿತೋಪಮದೆಂಟನೆಯ ಭಾಗಂ ಅಟಿದುದೆಂಬನ್ನೆಗಂ: **ಆದಿಪು,** ೬. ೪೮ ವ)

**ಸಂಭ್ರಮ –** ಸಡಗರ, ತ್ವರೆ, ಆದರ (ತ್ವರಿತಂ ವಿಭೂತಿ ಪರಮಾದರಂ ಎಂಬಿವು ಸಂಭ್ರಮಾಭಿಧಯಕಮಕ್ಕುಂ: **ಅಭಿಧಾವ,** ೩. ೧. ೮೫); ಹೆದರಿಕೆ (ಅತ್ಯಾದರಃ ಸಂಭ್ರಮಂ ಉತ್ಪಾದಯತಿಯೆಂಬುದು : **ಪಂಪಭಾ,** ೩. ೪ ವ)

**ಸಂಮದ –** ಸಂತೋಷ, ಉತ್ಸಾಹ (ಪುಣ್ಯದ ಉದಯದಿನಿದಿರ್ವಂದ ಈ ಕಾರ್ಯಂ ಎಂತುಂ ನಿವಾರ್ಯಂ ಸಂಮದದ ಎಸೆಪಿದು ಎಂದೊಡೆ: **ಕರ್ಣನೇಮಿ,** ೧೧. ೮೧)

**ಸಂಮಾರ್ಜಿನಿ –** ಕಸಪೊರಕೆ (ವಿಪ್ರವರ್ಗಾಸ್ಪದ ದರ್ಭಾನೀಕ ಸಂಮಾರ್ಜಿನಿ ತಳೆದುದೆನಲ್ ದುಷ್ಪರಪ್ಪರ್ ನೃಪಾಲರ್: **ಕಾದಂಬ,** ೩. ೮೭)

**ಸಂಯತ –** ಸೇರಿಸಿದ (ಕಿರೀಟಮುಂ ಸಂಯತ ಕೇಶಾಳಿಯುಂ ಅಂತವು ಮೌಳಿ: **ಅಭಿಧಾವ,** ೩. ೧. ೪೭); [ಜೈನ] ಜಿತೇಂದ್ರಿಯತ್ವದಿಂದ ಪರಿಪೂರ್ಣನಾದ ಶ್ರಮಣ (ಸಮಸ್ತಾಗಮ ಪದಾರ್ಥಾವಧಾರಣ ಗುಣಸಮೇತನುಂ ಅಪ್ಪ ಅಗ್ನಿಭೂತಿಸಂಯತಂಗೆ ಸಮರ್ಪಣಂಗೆಯ್ದು: **ಸುಕುಮಾಚ,** ೮. ೫೮ ವ)

**ಸಂಯಮ –** ಇಂದ್ರಿಯ ನಿಗ್ರಹ (ಸಮಯಮಂ ಆಹಿತಸರ್ವೇಂದಿಯಪ್ರವೃತ್ತಿನಿರೋಧಂ: **ಅಭಿಧಾವ,** ೧. ೩. ೧೭); [ಜೈನ] ಶ್ರಮಣನು ಆಚರಿಸಬೇಕಾದ 'ದಶಕುಲಧರ್ಮ'ಗಳಲ್ಲಿ ಒಂದು, ಐದು ಮಹಾವ್ರತಗಳು ಹಾಗೂ ಐದು ಸಮಿತಿಗಳ ಪಾಲನೆ (ಬಲಗೈಯಂ ಪೆಗಲಿಕ್ಕಿ ಸಂಯಮನಿಮಿತ್ತಂ ಕುಂಚಮಂ ವಾಮದೊಳ್ ತಳೆದು: **ಧರ್ಮಾಪ,** ೧. ೮೫)

**ಸಂಯಮನೀಪುರ –** ಯಮನ ಊರು (ಅಂತು ಶಂಖಮಂ ಪೂರಿಸಿ ಯಮನ ಸಂಯಮನೀಪುರಕ್ಕೆ ಪರಿಯಿಟ್ಟು: **ಜಗನ್ನಾವಿ,** ೭. ೨೪ ವ)

**ಸಂಯಮಿ –** ಜಿತೇಂದ್ರಿಯನಾದವನು, ಯತಿ (ಯತಿ ಸಂಯಮಿ ಋಷಿ ಮುನಿ ಸುಶ್ರುತನಥಂ ಸಾಧು ಯೋಗಿ ತಾಪಸಂ ಆತಂ ವ್ರತಿಯಕ್ಕುಂ: **ಅಭಿಧಾವ,** ೧. ೧೧. ೩೩)

**ಸಂಯಾನ –** ಯುದ್ಧ (ಮಹಾ ಸಂಯಾನದಂತೆ ರಕ್ತಮಯಮುಂ: **ತ್ರಿಷಷ್ಟಿಪು,** ೨೮. ೨೭ ವ)

**ಸಂಯುಗ –** ಯುದ್ಧ (ಸಂಯುಗಾವನಿತಳದೊಳ್ ವಿಧಾತ್ರವಶದಿಂ ನಿಮಗಂ ನಡೆವಂತುಟಾದುದೇ: **ಗದಾಯು,** ೪. ೧೮)

**ಸಂಯುತ –** ಹಸ್ತಾಭಿನಯದ ಒಂದು ರೀತಿ (ಸಂಯುತ ಅಸಮಯುತಮೇಂಬ ಅಱುವತ್ತುನಾಲ್ಕು ಹಸ್ತದ ತೆಱನೊಳ್ ತೆಱನಱಿದು ಮೆಱೆದಳವಳ್ ಅಭಿನಯಮಂ; **ಮಲ್ಲಿನಾಪು,** ೮. ೩೫)

**ಸಂಯೋಗ –** ರಾಜನು ಕೈಗೊಳ್ಳಬಹುದಾದ ಹದಿನಾರು ಬಗೆಯ ಸಂಧಿಗಳು, ಒಂದು ಉದ್ದೇಶಕ್ಕಾಗಿ ಇಬ್ಬರು ರಾಜರಲ್ಲಿ ಏರ್ಪಡುವ ಒಪ್ಪಂದ (ಅರಿವಿಜಿಗೀಷುಗಳೇಕಾರ್ಥಸಿದ್ಧಿಯಂ ಕುಱಿತು ನಡೆವ ಸಂಧಿ ಸಂಯೋಗಮೆಂಬುದಕ್ಕುಂ: **ಪಂಚತಂತ್ರ,** ೩೦೭ ವ)

**ಸಂರಂಭ –** ಉತ್ಸಾಹ, ಸಡಗರ (ಆಗಳವರ ಸಂರಂಭಮಂ ಕಂಡು ರೋಷಾವೇಶಮಂ ಕೆಯ್ಕೊಂಡು ದಾಡೆಗಡಿದು: **ಶಬರಶಂ,** ೪. ೧೫ ವ)

**ಸಂರುದ್ಧ –** ಸುತ್ತುವರಿದ (ಗಿರಿಸರಿತ್ ಸಂರುದ್ಧಂಗಳಪ್ಪ ಖೇಡಂಗಳುಮಂ: **ಆದಿಪು,** ೮. ೬೩ ವ)

**ಸಂವರಣೆ –** ಸಿದ್ಧತೆ (ಬಸಂತನೊಲ್ದು ಸಂವರಣೆಯಂ ಎಯ್ದೆ ತೋಱೆ ತಲೆದೂಗಿಸಿದಂ ನನೆವಿಲ್ಲಬೀರನಾ: **ಕಬ್ಬಿಗಕಾ.** ೧೫೭)

**ಸಂವರಿಸು –** ಸನ್ನಾಹಿಸು (ಪರಲೊತ್ತೆ ಸೈರಿಸುತ್ತುಂ ಗುರು ಜಘನ ಭರಂಗಳಿಂ ತಡಮ್ಮೆಟ್ಟುತ್ತುಂ ಚರಣ ಕಮಲಂಗಳಂ ಸಂವರಿಸುತ್ತುಂ ಸೀತೆ ಸೆಡೆದು ಮೆಲ್ಲನೆ ನಡೆದಳ್: **ಪಂಪರಾ,** ೭. ೨೭); ಒಟ್ಟುಗೂಡಿಸು (ಕಟಕಮಂ ಸಂವರಿಸಿಕೊಂಡು ಬರ್ಪುದೆಂದು ಒಪ್ಪಿಸಿ ನಿಜಪುರಾಭಿಮುಖನಾಗಿ ತಳರ್ದಂ: **ಕಾದಂಸಂ,** ೫. ೧೦೪ ವ); ತಹಬಂದಿಗೆ ತರು (ನಿರ್ಮಳ

ಧರ್ಮಾಮೃತಮನೀಂಟಿ ನಿಷ್ಠುರ ಸಮಸಾರ ಪರಿತಾಪತೃಷ್ಣೆಯಂ ತೂಳ್ದಿ ಸಂವೇಗನಮಂ ಸಂವರಿಸಿ: **ನೇಮಿನಾಪು,** ೪. ೧೦೭ ವ)

**ಸಂವರ್ತ –** ಪ್ರಕ್ಷುಬ್ಧ (ಮೇರೆಯನೊತ್ತಿ ವರ್ತಿಸುವ ಸಂವರ್ತ ಅಬ್ಧಿಯೇ ಬಂದುದೇ ಕಲಿ: **ರಾಜಶೇವಿ,** ೧೧. ೧೬೯); ಪ್ರಳಯ (ಆ ಸಮಯದೊಳ್ ಸಂವರ್ತ ಸಮಯದ ಕೃತಾಂತನಂತೆ ಮಾಮಸಕಂ ಮಸಗಿ: **ಪಂಪರಾ,** ೧೦. ೨೫ ವ)

**ಸಂವರ್ತಕ** – ಆನೆಯ ಬಾಲದ ಒಂದು ಭಾಗ (ಅಪೂರ್ವಲಾಂಗೂಲನಂ ಕಾಚಕಿಲ್ಯ ಸಂವರ್ತಕನಂ ಪ್ರಶಸ್ತ ವಾಳಧಿಯಂ: **ಶಾಂತಿಪು,** ೧೦. ೧೪೨ ವ); ಪ್ರಳಯಕಾಲದ ಮೋಡಗಳಲ್ಲಿ ಪಂದು (ದ್ರೋಣ ಮಹಾದ್ರೋಣ ಪುಷ್ಕಳಾವರ್ತ ಸಂವರ್ತಕಂಗಳೆಂಬ ಮುಗಿಲ್ಗಳಂ ಬೆಸಸಿದಾಗಳ್: **ಪಂಪಭಾ,** ೫. ೯೫ ವ)

**ಸಂವಾಹ –** ಹಳ್ಳಿ (ಶಿರೋವ್ಯೂಢ ಧಾನ್ಯಸಂಚಯೋಪಭೋಗಿ ಜನ ನಿವಾಸಿಗಳಪ್ಪ ಸಂವಾಹಂಗಳುಮಂ: **ಆದಿಪು,** ೮. ೬೩ ವ)

**ಸಂವಾಹನ** – ಮೈಕೈ ಹಿಸುಕುವುದು (ಅವನಿಪ ಚರಣಾರಕ್ತಾಂಬುಜ ಸಂವಾಹನಸಕ್ತಂ ಸುಖದಿಬಿರ್ದಂ: **ಲೀಲಾವತಿ,** ೫. ೬೫)

**ಸಂವಿತ್ –** ಜ್ಞಾನ (ಶುಭ ಸಂವಿತ್ ವಹ್ನಿಯಿಂದಂ ನಿಖಿಲ ಕರಣಕಾಷ್ಠಂಗಳಂ ಸುಟ್ಟು: **ತ್ರಿಷಷ್ಟಿಪು,** ೨. ೬)

**ಸಂವೀತ –** ಕೂಡುವುದು (ಪರಾಗದೊಳ್ ಪೊರೆದಳಿ ಕೃಷ್ಣಂ ವಿಳಸಿತ ಪೀತಾಂಬರಸಂವೀತಂ ಸರಿಯ ಸೂಟ್ಗೆವಂದವೊಲ್: **ಲೀಲಾವತಿ,** ೧೪. ೧೦೨)

**ಸಂವೃತಿ** – ಮರೆಮಾಚು (ದಿವ್ಯನೇನೆಂಬಂ ಏಕೆ ನಿಜಾಕೃತಿಸಂವೃತಿಯಿಂ ಬಂದು ನಿಮ್ಮೊಳ್ ನುಡಿದು ಸೋಲ್ತು ಪೋದಂ ಎಂದು ತನ್ನಂ ಬೆಸಗೊಳ್: **ಶಾಂತಿಪು,** ೮. ೧೫೧ ವ)

**ಸಂವೇಗ –** ದೃಢಸಂಕಲ್ಪ (ಶ್ರೀಗಂ ವಾಕ್ಶ್ರೀಗಂ ಇಂತೀಕೆಯೆ ಮಿಗಿಲೆನಿಪ ಐಶ್ವರ್ಯಸಂಪನ್ನೆಯಂ ಸಂವೇಗವ್ಯುತ್ಪನ್ನೆಯಂ ದುರ್ಧರಕುಮತನಗ ಉದ್ಭಿನ್ನೆಯಂ: **ಸುಕುಮಾಚ,** ೭. ೪೮); ಉದ್ವೇಗ (ನಿರ್ಮಳ ಧರ್ಮಾಮೃತಮನೀಂಟಿ ನಿಷ್ಠುರ ಸಮಸಾರ ಪರಿತಾಪತೃಷ್ಣೆಯಂ ತೂಳ್ದಿ ಸಂವೇಗನಮಂ ಸಂವರಿಸಿ: **ನೇಮಿನಾಪು,** ೪. ೧೦೭ ವ)

**ಸಂವೇದಿ –** ಚೆನ್ನಾಗಿ ತಿಳಿದವನು (ಸಕಲವ್ಯಾಕರಣಾರ್ಥ ನಿಶ್ಚಿತಮನಂ ಸಾಹಿತ್ಯವಿದ್ಯಾಬ್ಧಿ ವೈದಿಕ ಸಂವೇದಿ ಮಹಾನುಭಾವಂ; **ಸುಕುಮಾಚ,** ೨. ೩೮)

**ಸಂವ್ಯಾನ –** ಉತ್ತರೀಯ (ಉತ್ತರೀಯಮೆನೆ ಮೇಲುದು ಅದುವೆ ಸಂವ್ಯಾನಂ: ಅಭಿಧಾವ, **ಅಭಿಧಾವ,** ೧೩. ೨೦); ಸೆರಗು (ಕುಟ್ಮಲವ್ರಾತ ಕನತ್ ಗ್ರೈವೇಯಕಂ ರಾಜಿಸೆ ಕಿಸಲಯ ಸಂವ್ಯಾನಂ ಇಂಬಾಗೆ .. .. ವನ ವನಿತೆ: **ಕುಸುಮಾಕಾ,** ೫. ೨೬)

**ಸಂಶ್ರಯ –** ಆಶ್ರಯ (ಜಯಾಶ್ರಯಸಂಶ್ರಯ ನಿಜಫಾಲನೇತ್ರ ಜಯ ನಿರ್ಜರಪೂಜ್ಯ: **ಶಬರಶಂ,** ೫. ೧೬); ರಾಜನ ಷಾಡ್ಗುಣ್ಯಗಳಲ್ಲಿ ಒಂದು, ಸ್ವಂತ ಬಲವಿಲ್ಲದೆ ಶತ್ರುವನ್ನು ಗೆಲ್ಲಬಹುದಾದವರನ್ನು ಆಶ್ರಯಿಸುವುದು (ನಿಜಬಲಮಿಲ್ಲದೆ ಶತ್ರುವಿಜಿಗೀಷುವಾದೊಡೆ ಆಶ್ರಯಿಸುವುದು ಸಂಶ್ರಯಮೆಂಬುದಕ್ಕುಂ: **ಪಂಚತಂತ್ರ,** ೩೦೭ ವ)

**ಸಂಶ್ರಯಣ –** ಆಶ್ರಯ (ಉಪಾಶ್ರಯಂ ಸಂಶ್ರಯಣಂ: **ಅಭಿಧಾವ,** ೨. ೨. ೨೪)

**ಸಂಶ್ಲಿಷ್ಟ –** ಹತ್ತಿಕೊಂಡಿರುವ, ಚೆನ್ನಾಗಿ ಸೇರಿಸಿದ (ಸಮುದ್ಧೃತ್ ರಜತಗಿರಿ ತಟ ಸ್ಪಷ್ಟ ಸಂಶ್ಲಿಷ್ಟ ಮೌರ್ವೀನಿನದಂ ಪರ್ವಿತ್ತು ಅಕಾಂಡಪ್ರಳಯ ಘನಘಟಾಟೋಪ ಗಂಭೀರನಾದಂ: **ಪಂಪಭಾ,** ೧೨. ೧೩೭)

**ಸಂಶ್ಲೇಷ –** ರಕ್ಷಣೆ, ಆಲಿಂಗನ (ಸಂಶ್ಲೇಷಮದು ಉಪಗೂಹನಂ ಪರಿಷ್ವಂಗಾರ್ಥಂ: **ಅಭಿಧಾವ,** ೨. ೨. ೧೮)

**ಸಂಸಕ್ತ –** ಕೂಡಿದ (ವಿಮಳಪ್ರನಾಳಿನಾಳಂ ಸುಖಮಯ ಮಕರಂದಾಕರಂ ಮುಕ್ತಪಪಭ್ರಮರಂ ಸಂಸಕ್ತ ಸೂಕ್ಷೋಜ್ಜ್ವಳಗುಣಂ: **ನೇಮಿನಾಪು,** ೧. ೩)

**ಸಂಸಪ್ತಕ –** ಶಪಥಮಾಡಿ ಯುದ್ಧಮಾಡುವ ಸುಶರ್ಮ, ಸತ್ಯೇಷು, ಸತ್ಯಕರ್ಮ, ಸತ್ಯದೇವ, ಸತ್ಯರಥ ಎಂಬ ತ್ರಿಗರ್ತರಾಜನ ಐವರು ಮಕ್ಕಳು, ಇವರನ್ನು ಸೂರ್ಯಾಸ್ತಕ್ಕೆ ಮುನ್ನ ಕೊಲ್ಲಲು ಅರ್ಜುನನು ಶಪಥಮಾಡುತ್ತಾನೆ (ದೇವದತ್ತ ಶಂಖಮಂ ಪೂರಿಸಿ ಸಮಸಪ್ತಕರೊಡ್ಡಣದತ್ತ ರಥಾಂಗಧರನಂ ರಥಮಂ ಚೋದಿಸಲ್ವೇಟ್ಟಾಗಳ್: **ಪಂಪಭಾ,** ೧೦. ೬೪ ವ); ಸಮರಭೂಮಿಯಿಂದ ಹೋಗುವುದಿಲ್ಲವೆಂದು ಪಣತೊಟ್ಟವರು (ಸಮರಾಂಗಣದಿಂ ತೊಲಗದ ಸಮಯರ್ ಸಂಸಪ್ತಕರ್: **ಅಭಿಧಾವ,** ೧. ೧೪. ೩)

**ಸಂಸರಣ** – ಸಂಸಾರ (ದಾರುಣ ಸಂಸರಣ ವಿಷೋರ್ವೀರುಹಮಂ ಕೀಟ್ವಿ ಬವಸೆಯಿಂದಿರ್ದಪಂ ಈ ಧೀರಂ: **ಪಂಪರಾ,** ೨. ೧೬)

**ಸಂಸರಣಾಂಭೋರಾಶಿ –** ಸಂಸಾರ ಸಾಗರ (ಪಿರಿದುಂ ದಯೆಯಿಂದಂ ಸಂಸರಾಂಭೋರಾಶಿಯಿಂದೆ ಪೊಱಮಡಿಸಲ್ .. .. ಎನಲ್ .. .. ನಗುತಿರ್ಪರ್: **ಸಮಯಪ,** ೧೫. ೫೪)

**ಸಂಸರ್ಪತ್ –** ಹರಡಿದ, ಹಬ್ಬಿದ (ದ್ವಾದಶಯೋಜನ ಸಂಸರ್ಪತ್ ಗಂಭೀರಧೀರಾರಾವಂಗಳಪ್ಪ ಆನಂದಿಗಳೆಂಬ ಪನ್ನೆರಡು ಭೇರಿಗಳುಂ: **ಆದಿಪು,** ೧೧. ೨೮ ವ)

**ಸಂಸಾರ –** [ಜೈನ] ದ್ರವ್ಯ, ಕ್ಷೇತ್ರ, ಕಾಲ, ಭವ, ಭಾವ ಎಂಬ ಬಗೆಗಳು (ಆ ರೌದ್ರಹತಿಗೆ ತವೆ ಸಂಸಾರಂ ತತ್ಪುರದ ಪೊಱಗೆ ಪುಟ್ಟಿದುವು: **ಯಶೋಧಚ,** ೩. ೭೬)

**ಸಂಸಾರಕ್ಷಪಕ** – ಸಂಸಾರವನ್ನು ಪರಿತ್ಯಜಿಸಿದವನು (ಆಯುರವಸಾನದೊಳೆ ಸಂಸಾರಕ್ಷಪಕನಾಗಿ ಸಮಾಧಾನ ಪುರಸ್ಸರಂ ಸನ್ಯಸನವಿಧಾನದಿಂ ಪರಿತ್ಯಕ್ತಜೀವಿತಂ: **ಆದಿಪು,** ೨. ೧೯ ವ)

**ಸಂಸೃತಿ –** ಸಂಸಾರ (ಸಂಸೃತಿಯೊಳ್ಮತ್ತೆ ಗಡಂ ಕಡಂಗಿ ತೊಡರ್ದಾಂ ಮಾಣ್ದಿರ್ಪನೆಂದಣ್ಮಿ ಘೋರತಪೋವೃತ್ತಿ ಯನಾಂತ ಪೆಂಪತಿಬಳಂಗಕ್ಕುಂ: **ಆದಿಪು,** ೧. ೮೧)

**ಸಂಸ್ಕರಿಸು –** [ಶವ] ಸಂಸ್ಕಾರ ಮಾಡು (ಧೃತರಾಷ್ಟ್ರನ ಬೆಸದೊಳ್ ವಾರಣಾವತಕ್ಕೆ ಪೋಗಿ ತದರ್ಧದಗ್ಧ ಕಳೇವರಂಗಳಂ ಸಂಸ್ಕರಿಸಿ ಜಳದಾನಾದಿ ಕ್ರಿಯೆಗಳಂ ಮಾಡಿ: **ಪಂಪಭಾ,** ೩. ೮ ವ)

**ಸಂಸ್ಕಾರ –** ಪರಿಶುದ್ಧವಾಗಿ ಮಾಡುವುದು (ಸವನಂ ಮಜ್ಜನ ಸವಂ ಆ ಪ್ಲವನಂ ಸ್ನಾನಮುಮದಂತರ್ಧಾಂತರಂ ಅಂಗವಿಲೇಪನಂ ಸಮಾಲಂಭ ವಿಷ್ಟಗಂಧಾಧಿವಾಸಮದು ಸಂಸ್ಕಾರಂ: **ಅಭಿಧಾವ,** ೧. ೧೩. ೮); ವ್ಯಕ್ತಿಗೆ ಸಂಬಂಧಿಸಿದಂತೆ ಬದುಕಿನ ವಿವಿಧ ಸನ್ನಿವೇಶಗಳಲ್ಲಿ

ಮಾಡುವ ಶ್ರುತಿಗಳಲ್ಲಿ ಹೇಳಿರುವ ಧಾರ್ಮಿಕ ವಿಧಿಗಳು, ನೋಡಿ, 'ಷೋಡಶಸಂಸ್ಕಾರ'

**ಸಂಸ್ಕಾರ ಶತೇನಾಪಿ ನಗೂಥಃ ಕುಂಕುಮಾಯತೇ** – ನೂರು ಸಂಸ್ಕಾರಗಳಿಗೆ ಒಳಪಡಿಸಿದರೂ ಅಮೇಧ್ಯವು ಕುಂಕುಮಕೇಸರಿಯಾಗುವುದಿಲ್ಲ (ಪಾಪಿ ಧರ್ಮದತ್ತೆಸಗಂ ಅದೆಂತೆನೆ ಸಂಸ್ಕಾರ ಶತೇನಾಪಿ ನಗೂಥಃ ಕುಂಕುಮಾಯತೇ ಎಂಬುದಱಿಂ: **ಸುಕುಮಾಚ,** ೨. ೭೧

**ಸಂಸ್ತವನ** – ಪರಿಚಯ (ಪರಿಚಯಮದು ಸಂಸ್ತವನಂ: **ಅಭಿಧಾವ,** ೨. ೨. ೯); ಹೊಗಳಿಕೆ (ನುತಿ ಸಂಸ್ತವನಂ ಸ್ತೋತ್ರಂ ಸ್ತುತಿವಂದನಂ ಈಡೆ ಕೀರ್ತನಂ ಗುಣಕಥನಂ: **ಅಭಿಧಾವ,** ೧. ೧೩. ೩೫)

**ಸಂಸ್ಥಾನನಾಮ** – ದೇಹದ ಸ್ವರೂಪಕ್ಕನುಗುಣವಾದ ವಿವಿದ ಹೆಸರುಗಳು (ಚತುರಸ್ರಮುಂ ನ್ಯಗ್ರೋಧಪರಿಮಂಡಲಮುಂ ಸ್ವಾತಿಯುಂ ವಾಮನನುಂ ಕುಬ್ಜಮುಂ ಹುಂಡಮುಂ ಎಂದು ಸಂಸ್ಥಾನನಾಮಂ ಷಡ್ವಿಧಮಕ್ಕುಂ: **ಅಜಿತಪು,** ೧೧. ೩ ವ)

**ಸಂಸ್ಥಾನವಿಚಯ** – [ಜೈನ] ಧರ್ಮಧ್ಯಾನಗಳಲ್ಲಿ ಒಂದು (ಆಜ್ಞಾವಿಚಯಂ ಅಪಾಯವಿಚಯ ವಿಪಾಕವಿಚಯ ಸಂಸ್ಥಾನವಿಚಯಮೆಂಬ ನಾಲ್ಕುಂ ಧರ್ಮ್ಯಧ್ಯಾನಮಂ ಧ್ಯಾನಿಸುತ್ತುಂ: **ಆದಿಪು,** ೧೦ ೧೪ ವ)

**ಸಂಸ್ತೂಯ** – ಸೇರುವಿಕೆ (ಸಂಘಾತಮೊಂದಿದ ಸನ್ನಿವೇಶಮದು ಸಂಸ್ತೂಯಂ: **ಅಭಿಧಾವ,** ೩. ೧. ೪೬)

**ಸಂಸ್ತೂಯಮಾನ** – ಹೊಗಳಲ್ಪಡುವ (ಅನೇಕ ದಿವಿಜವಂದಿವೃಂದ ಸಂಸ್ತೂಯಮಾನ .. .. ದರಹಸಿತವದನ ಸರಸೀರುಹಂ: **ಆದಿಪು,** ೮. ೫೫ ವ)

**ಸಂಹತ** – ಕೂಟ, ಒಟ್ಟುಗೂಡಿದ್ದು (ಸಂಹತಮಂ ಸಾವಗಿಸಿದ ಮೈಯೊಳ್ ಶೋಭವತಿ ಸಮಪಾದಚಾರಿಯಂ ಕೈಕೊಂಡಳ್: **ಲೀಲಾವತಿ,** ೪. ೧೨೪)

**ಸಂಹತಿ** – ಸಮೂಹ (ಸಿಂಹಗಳನಂತಬಳನ ಪಾದಾಂತಿಕದೊಳ್ ಸಂಹತಿಗೊಂಡಿರ್ದಪುವೆನೆ ಸಿಂಹಾಸನಮೆಸೆದುದು ಅಮಳಮಣಿಖಚಿತಂಗಳ್: **ಲೀಲಾವತಿ,** ೮. ೯೬)

**ಸಂಹನನ** – ದೇಹ (ತನು ಗಶಾತ್ರಂ ವಿಗ್ರಹಂ ಅಪಘನಂ ಶರೀರಂ ಕಳೇಬರಂ ಕಾಯಂ ಸಂಹನನಂ ದೇಹಂ ವಪು ಎಂಬಿನಿತುಂ ಭಾವಿಸುವೊಡೆ ಅಂಗಪರ್ಯಾಯಂಗಳ್: **ಅಭಿಧಾವ,** ೧. ೧೨. ೧); ದೇಹ[ವುಳ್ಳವನು] (ಕನಕಚ್ಛಾಯಂ ಅಜೇಯಸಂಹನನಂ ಅನೂನಸ್ವಾಪದೇಯಾದಿನಾಥಂ ಅಭೀರಸ್ವಗಿತಂ .. .. ಈಗೆ .. .. ಅಭಿವೃದ್ಧಿಯಂ ಕೃತಿಗೆ: **ಸುಕುಮಾಚ,** ೧. ೯)

**ಸಂಹರಣ** – ಪರಿಹಾರ (ಇನಕರಪಾತಭೀತ ಪಥಿಕಶ್ರಮ ಸಂಹರಣಾರ್ಥಂ ಅಂಬುಜಾಸನಂ ಒಸೆದಿಟ್ಟ ತಣ್ಣೆಲ ಸೋಲದ ಸಾಲೆಯೆನಲ್: **ಶಾಂತೀಶ್ವಪು,** ೧೩. ೧೩೦)

**ಸಕಲ** – ಸಮಗ್ರ (ದೋಷಂಗಳಿಂತು ಮಿಗೆ ಸಂಶ್ಲೇಷದೊಳಾದಂದು ಸಕಲವಿದ್ವತ್‌ಸಭೆಯೊಳ್ ದೂಷಿಸುಗುಂ ಕೃತಿವಧುವಂ: **ಕವಿರಾಮಾ,** ೧. ೧೦೦)

**ಸಕಲಂಕತೆ** – ಕಲೆಗಳನ್ನು ಹೊಂದಿರುವುದು, ದೋಷಪೂರ್ಣತೆ (ಸಕಲಂಕತೆ ಚಂದ್ರಮನೊಳ್ ವಿಕಲಧ್ವನಿ ವಿಹಗದಲ್ಲಿ ಭಂಗಂ ನದಿಯೊಳ್ .. .. ಅಲ್ಲದಿಲ್ಲಾ ನಾಡೊಳ್: **ಗಿರಿಜಾಕ,** ೨. ೬)

**ಸಕಲಕಲಾಧರ** – ಹದಿನಾರು ಕಳೆಗಳುಳ್ಳವನು, ಹುಣ್ಣಿಮೆ ಚಂದ್ರ (ಸಕಲಕಲಾಧರನಂ ರಾಹು ಕೊಳ್ವ ತೆಱದಿಂ ವಿಷಾತಿಭೀಕರದಂಷ್ಟ್ರಾನಿಕರಂ ಕೊಂಡುದು ನರಪಾಲಕಸುತನಂ: **ಪಂಚತಂತ್ರ,** ೧೮೫)

**ಸಕಲಕಲಾಧರೆ** – ಎಲ್ಲ ಕಲೆಗಳನ್ನು ಬಲ್ಲವಳು (ಸಕಲಕಲಾಧರೆ ಮಣಿದೀಪಿಕೆಯಿಂ ಬೆಳಗಿದಪೆಂ ಅಮಲನಿಜಗೃಹಮಂ: **ಲೀಲಾವತಿ,** ೭. ४३)

**ಸಕಲಜ್ಞ** – ಸರ್ವಜ್ಞ (ಸಕಲಜ್ಞರ್ ತಿಳಿವಂತು ಪೇೞ್ ತಳೆದಂ ಸೀತೇಂದ್ರನುತ್ಸಾಹಮಂ: **ಪಂಪರಾ,** ೧೬. ೭೪)

**ಸಕಲರ್ತು** – ಎಲ್ಲ ಋತುಗಳು, ಸರ್ವಋತು (ಇದು ಸಮವಸರಣ ಸಂಸಂಗದಿನಲ್ಲದೊಡೆ ಅಮಲಬೋಧ ಮುನಿಜನ ಸಾಮರ್ಥ್ಯದಿನಕ್ಕುಮಲ್ಲದೆ ಅಂದಾಗದು ಸಕಲರ್ತು ಪ್ರಭಿನ್ನಗುಣಸಮವಾಯಂ: **ಚಂದ್ರಪ್ರಪು,** ೨. ೭೯)

**ಸಕಲವ್ಯಾಪಿನಿ** – ಎಲ್ಲೆಡೆ ಹಬ್ಬಿರುವ (ಸಕಲವ್ಯಾಪಿನಿಯುಂ ಭವ್ಯಕಮಲನಿಕರಪ್ರಮೋದಾಯಿನಿಯುಂ ತಿಗ್ಮಕರಂ ಪ್ರಭೆಯಂತಳೆವಂತಕಳಂಕಂ ಶ್ರೀಧರಾಖ್ಯೆಯಂ ಮುನಿ ತಳೆದಂ: **ಚಂದ್ರಪ್ರಪು,** ೨. ೮೪)

**ಸಕಳಕ್ಷಮಾಪತಿತ್ವ** – ಭೂಮಿಯೆಲ್ಲಕ್ಕೂ ಒಡೆತನ, ಚಕ್ರವರ್ತಿತ್ವ (ಮತ್ಸರ ಮಹೋರಗಕ್ಕಂ ಆಗ್ರಹಮಹಾಗ್ರಹಕ್ಕಂ ಕೋಪಮಮದಾನೇಕಪಕ್ಕಂ ಪಕ್ಕಾಗೆ ತನ್ನನೊಪ್ಪಿಸುವುದು ಮತಿವಂತಂಗೆ ಪುರುಷಾರ್ಥಮಲ್ತು ಸಕಳಕ್ಷಮಾತಿತ್ವಮೆ ಸಕಳಕ್ಷಮಾಪತಿತ್ವಮಂ ಮಾಡುಗುಂ: **ಶಾಂತಿಪು,** ೩. ೭೨ ವ)

**ಸಕಳಕ್ಷ್ಮಾಪಾಳ** – ಭೂಮಿಯನ್ನೆಲ್ಲ ಆಳುವವನು, ಚಕ್ರವರ್ತಿ (ಸಕಳಕ್ಷ್ಮಾಪಾಳ ಕೇಳ್ ಯಾದವರ್ಗಿನಿತುಂ ನೀಂ ಮುಳಿದೆತ್ತಲ್ .. .. ವಾರಿಧಿಪ್ರಾಂತದೊಳ್ ಇರ್ದರೆನೆ: **ಕರ್ಣನೇಮಿ,** ೧೧. ೩೮)

**ಸಕಳದತ್ತಿ** – [ಜೈನ] ವಂಶದ ಎಲ್ಲವನ್ನೂ ಮಗನಿಗೆ ಕೊಡುವುದು (ನಿಜಾನ್ವಯೋದ್ಧರಣಸಮರ್ಥನಪ್ಪ ಅಗ್ರತನೂಭವಂಗೆ ಆತ್ಮೀಯ ಧರ್ಮ ಧನ ಬಂಧುಗಳಂ ಸಮರ್ಪಿಸಿ ಸಕಳದತ್ತಿಯುಂಬೆರಸು: **ಆದಿಪು,** ೧೫. ೧೩ ವ)

**ಸಕಳವಟ್ಟೆ** – ತುಂಡು ಬಟ್ಟೆಯ ಪಟ್ಟಿಗಳು (ಸಕಳವಟ್ಟೆಗಳುಮಂ ಮೆಟ್ಟುವೆಡೆಗಳೊಳೆಲ್ಲಂ ಪಾಸಿ: **ಆದಿಪು,** ४. ३४ ವ)

**ಸಕಳಿ** – [ಶಕಲಾ] ಮಡಕೆಯ ಚೂರು (ಒಸೆದು ಸಕಳಿಯನಿಟ್ಟು ಸೋರೆಯ ಗುಂಡಿಗೆಯಂ ಬೆನ್ನೊಳ್ ಕಟ್ಟಿ ಕೈಮುಟ್ಟೆ ಈ ರಸಮಂ ತೀವಿಕೊಳ್ಳುವುದು ಎಂದೊಡೆ: **ಹರಿವಂಶ,** ४. ೨೬ ವ)

**ಸಕಿಂಚನ** – ಪರಮಾವಧಿಯಾಗಿ ಹೊಂದಿದವನು (ಅಂತು ಕಂತುವಿನಂತೆ ಬಂದ ಸೌಭಾಗ್ಯಸಕಿಂಚನನಂ ಕಾಂಚನಪೀಠದೊಳ್ ಕುಳ್ಳಿರಿಸಿ: **ನೇಮಿನಾಪು,** ३. ೯೯ ವ)

**ಸಕೃತ್** – ಒಮ್ಮೆ (ಸಕೃತ್ ಆಯತ ಅರ್ಧನಿದ್ರಂ ಕ್ಷಣಮುಕುಳಿನೇತ್ರೋತ್ಪಳಂ .. .. ತರಣೀಚೇಷ್ಟಿತಂ ಮೋಹಮುಗ್ಧಂ: **ಲೀಲಾವತಿ,** ೯. ೧೨೯)

**ಸಕ್ಕ** – ಕಟವಾಯಿ, ಬಾಯಿಯ ಕೊನೆ (ಭಾರ್ಗವರ್ ಸುರಿಗಿಱಿವಂತಿಱಿಯೆ ಸೂಸುವ ಕೆನ್ನೆತ್ತರ್ ಕಟಲ್ದುದಿರ್ವ ಸಕ್ಕದ ಸಿಪ್ಪುಗಳು .. .. ಅಗುರ್ವಂ ಪಡೆಯೆ: **ಪಂಪಭಾ,** ೧೦. ೯೩ ವ)

**ಸಕ್ಕದ** – ಸಂಸ್ಕೃತ ಭಾಷೆ (ಸಕ್ಕದಮಱಿವರ್ ಬಿತ್ತರದಿಂ ಮದನವಿಜಯಮೆಂದು ಒಲವೆರ್ದೆಯಂ ಪತ್ತಿರೆ ಪೆರಿಟ್ಟರ್: **ಕಬ್ಬಿಗಕಾ,** ೨೭೦)

**ಸಕ್ಕಿ** – ಸಾಕ್ಷಿ (ಮದೀಯಾಯಾತಿಯ ದೊರೆಗೆ ನೀಂ ಸಕ್ಕಿಯೆಂಬಂತಿರೆ ನೀಳ್ದಿಂ ಪರ್ವಿ ಪೂರ್ವಾಪರಜಳಧಿಗಳಂ ಮುಟ್ಟಿ ನಿಂದತ್ತಗೇಂದ್ರಂ: **ಆದಿಪು,** ೯. ೧೧೫)

**ಸಕ್ಕಿಮಾಡು** – ಸಾಟಿಮಾಡು (ನೀಮೆ ಗಂಭೀರರಿರ್ ಅಂತಸ್ಸಾರರಿರ್ ನೀಮಿರೆ ಪೆಱರೊಳರೇ ಸಕ್ಕಿಮಾಡಲ್ಕೆ ವಿಶ್ವಂಭರೆಯೊಳ್: **ಆದಿಪು,** ೯. ೧೧೫)

**ಸಕ್ತ** – ತಲ್ಲೀನ (ಸಾರಹಂಸಕೋಕಿಳಕುಳಧ್ಯಾನೋತ್ಕರಂ ಚೆಲ್ವನಾಯ್ತು ಕರಂ ಸಕ್ತನಿಳಿಂಪದಂಪತಿಗಳಿಂದಾ ನಂದನಂ ನಂದನಂ: **ಪಂಪಭಾ,** ೫. ೮೦)

**ಸಕ್ಷಮ** – ಶಾಂತಿಯಿಂದಿರುವ (ಸಕ್ಷಮ ದಕ್ಷಶಿಕ್ಷಣವಿಚಕ್ಷಣ .. .. ರಕ್ಷಿಪುದು ಅಧೋಕ್ಷಜಪಕ್ಷ ಶಿವಾಕ್ಷಿಸಂಭವಾ: **ರಾಜಶೇವಿ,** ೧. ೧೦)

**ಸಖಾಯ** – ಗೆಳೆಯ (ಸಖಾಯನೆಂದು ಬಗೆದು ಕಂಡಟ್ಟಿರ್ಪು .. .. ಪದೆಪಿಂ ತಳ್ಕೈಸಿದಂ ಮಾನದಂ: **ಲೀಲಾವತಿ,** ೧೪. ೮೭)

**ಸಗಣ** – [ಶಕೃತ್] ಸಗಣಿ (ಪುಱುಗಳೆಂತುಂ ಪೊರೆದುಂ ಫಲಮುಂಟೆ ದಗಣದೊಳಗೆ: **ಸಮಯಪ,** ೫. ೯೧)

**ಸಗರ್ಭಗೆಡೆ** – ರಹಸ್ಯವಾಗಿ ಏನೋ ಹೇಳು (ಸಗರ್ಭಗೆಡೆಯುತ್ತುಮಿರ್ಪರ್ ಅಱಿವಿಲ್ಲದವರ್: **ಸಮಯಪ,** ೧೦. ೪೩)

**ಸಗರ್ಭಾಂಗನೆ** – ಬಸುರಿ ಹೆಂಗಸು (ಉಪಕಾಂತ ರಜೋವಿಕೃತಿಯಿಂ ಉಪಾತ್ತಕಾಳಮಪಯೋಧರಾಸ್ಯತೆಯಿಂ ಮತ್ತುಪಚಿತ ಜಡವೃತ್ತಿಯನೆಯ್ದಿ ಪೋಲ್ತುದಭ್ರಾಗಮಂ ಸಗರ್ಭಾಂಗನೆಯಂ: **ಚಂದ್ರಪ್ರಪು,** ೪. ೪೩)

**ಸಗರ್ಭ್ಯ** – ಸೋದರ (ಸೋದರ್ಯಂ ಭ್ರಾತೃ ಸಮಾನೋದರ್ಯಂ ಸೊದರಂ ಸಗರ್ಭ್ಯಂ: **ಅಭಿಧಾವ,** ೧. ೧೨. ೧೮)

**ಸಗಾಟಿಸು** – ಗೆಳೆತನ ಮಾಡು (ಆಸೆದೋಱೆ ಬಗೆದೋಱಿದೊಡಂ ನೆರೆದಿರ್ದೊಡಂ ಸಗಾಟಿಸದೊಡಂ .. .. ಪೇಸದವಳ್ಗೆ ಮತ್ತಮಾಟಿಸುವುದೇ: **ಪಂಪಭಾ,** ೪. ೯೨)

**ಸಗುಣ** – ತ್ರಿಗುಣಯುಕ್ತನಾದ (ಪರನಪರಂ .. .. ಸಗುಣಗುಣಂ: ಜಗನ್ನಾವಿ, ೩. ೯೮)

**ಸಗ್ಗ** – [ಸ್ವರ್ಗ] ದೇವತೆಗಳ ವಾಸಸ್ಥಳ (ಕಡುತಪದಿಂದೆ ನಿನ್ನ ಪಡೆಪಾವುದೊ ಗಾವಿಲ ಸಗ್ಗಮಲ್ತೆ ಪೋ ನುಡಿಯವೊ ಮೂರ್ಖ ಸಗ್ಗದ ಫಲಂ ಸುಖಮಲ್ತೆ: **ಪಂಪಭಾ,** ೭. ೯೩)

**ಸಗ್ಗದ ಜತಿ** – ಸ್ವರ್ಗದ ಋಷಿ (ಹರಿಸದೆ ಸಗ್ಗದ ಜತಿಗಳ್ ಬೆರೆದಂತೆ ಎರಡುಂ ಕೆಲಂಗಳೊಳ್ ತರದಿಂ ಕುಳ್ಳಿರೆ: **ಕಬ್ಬಿಗಕಾ,** ೧೩೧)

**ಸಗ್ಗದ ಪೆಂಡಿರ್** – ದೇವತಾಸ್ತ್ರೀಯರು (ಸೊಗಯಿಪ ಪೊಂಕು ಲಾಲಿಸುವ ಲಲ್ಲೆ .. .. ಈ ವಿಭಾವಚೇಷ್ಟೆಗಳಿಂ ಅದೇನಲಂಪನೆರ್ದೆಗಿತ್ತರೋ ಸಗ್ಗದ ಪೆಂಡಿರಾತನಾ: **ಚಂದ್ರಪ್ರಪು,** ೪. ೭೧)

**ಸಗ್ಗದವರ್ಗಳ್** – ದೇವಲೋಕದವರು (ಮುಗಿಲೊಡ್ಡಿನ ಕೆಲದೊಳ್ ಸಗ್ಗದವರ್ಗಳೆಲ್ಲರ್ ನಿಂದರ್: **ಕಬ್ಬಿಗಕಾ,** ೨೨೫)

**ಸಗ್ಗದಾಕೆ** – ಅಪ್ಸರೆ (ಕರಮೆಸೆವ ರೂಪು ಕಣ್ಗಚ್ಚರಿಯಂ ಪುಟ್ಟಿಸಿದುದು ಈಕೆಯಾವಳೋ ನೆಲದೊಳ್ ಪಿರಿದುಂ ಮಾನಸಿಯರ್ಗೆ ಈ ಪರಿ ಚೆಲ್ವಿನಿತುಂಟೆ ಸಗ್ಗದಾಕೆಯೆ ದಿಟದಿಂ; **ಕಬ್ಬಿಗಕಾ,** ೯೧)

**ಸಗ್ಗಳೆ** – ಕುಡಿಯುವ ನೀರಿನ ಚರ್ಮದ ಚೀಲ (ಗಳೆಯೆಂಟು ಸೆಂಡು ಕಾಲ್ ಸಗ್ಗಳೆ ಗುಗ್ಗುರಿ ಮರ್ದು ಮಡ್ಡಿ: **ತ್ರಿಷಷ್ಟಿಪು,** ೨೭. ೪೬)

**ಸಚಿತ್ತವಿರತ** – [ಜೈನ] ಹಸಿರು ತರಕಾರಿ ಹೂಗಳನ್ನು ತಿನ್ನದ ವ್ರತ (ಕುಸುಮ ಫಳ ಕಂದ ಮೂಲಪ್ರಸರಂಗಳಂ ಅಗ್ನಿಪಕ್ವಫಲಮಲ್ಲದುವಂ ಅಪೇಕ್ಷಿಸಿ ಕೊಳ್ಳದಂ ಅಯ್ದನೆಯ ಪೆಸರಿಂದಾತಂ ಸಚಿತ್ತನಿರತನೆನಿಕ್ಕುಂ: **ಸುಕುಮಾಚ,** ೬. ೩೦)

**ಸಚಿವ** – ಮಂತ್ರಿ (ಸಚಿವರೊಳ್ ಸಮಾಲೋಚನಂಗೆಯ್ದು: **ಜಗನ್ನಾವಿ,** ೩. ೨೦ ವ)

**ಸಚೇತನ** – ಜೀವಂತವಾದ (ಅಂತಾಶ್ಚರ್ಯ ಭೂತೋಚ್ಚಾವಚೋಪಚಿತ ಸಚೇತನೇತರ ವಸ್ತುವಿಸ್ತಾರಪರಂ ಪರೋದಾರಮಪ್ಪ ಇದಱುಭಯಶ್ರೇಣಿಗಳೊಳಂ: **ಶಾಂತಿಪು,** ೨. ೧೧೫ ವ)

**ಸಚೇತನೆ** – ಎಚ್ಚರಗೊಂಡವಳು (ಮಱುದಿವಸಂ ಗರುಡನಾಭಿ ಬಂದು ಕನ್ನೆಯಂ ಸಚೇತನೆ ಮಾಡಿ ಮದುವೆ ನಿಲ್ವುದುಂ: **ಸುಕುಮಾಚ,** ೭. ೮ ವ)

**ಸಜಳತೆ** – ತೇವವಾಗಿರುವಿಕೆ (ದಿನದೊಳ್ ಸಜಳತೆಯಿಂ ಮತ್ಸ್ಯನಳಿನಮಂ ಮತ್ತಮಿರುಳೊಳುನ್ನಿದ್ರತೆಯಿಂದ ಎನಸುಂ ಚಕೋರಕುಮುದಮಂ ಅನುಕರಿಸಿದುದಾ ವಿಯೋಗ ವಿಧುರೆಯ ಕಣ್ಗಳ್: **ಚಂದ್ರಪ್ರಪು,** ೫. ೧೨೫)

**ಸಜೀವಚಿತ್ರ** – ಜೀವಂತಿಕೆಯಿಂದ ಕೂಡಿದ ಚಿತ್ರ (ವಿಲೋಚನೆಯಿಟ್ಟ ಸಜೀವಚಿತ್ರಮೊಪೊಸನನೆದೊಟ್ಟ ಪದ್ಮಿನಿಯೊ ಕೈಗೆಯೆ ಕಣ್ಗೆಸೆದಿರ್ದ ಕಾಂತೆಯೋ: **ಲೀಲಾವತಿ,** ೧೦. ೩೭)

**ಸಜ್ಜಕ** – ರವೆ (ಸಜ್ಜಕಮಂ ತುಱುಂಬಿ ಮೊಲೆಗಳ್ಗೆ ಕರಂಟಮನಿಕ್ಕಿ ಕಟ್ಟಿ ಸತ್ಕಜ್ಜಳಮಂ ವಿಲೋಚನಯುಗಕ್ಕಿರದೂಡಿ .. .. ವೃದ್ಧ ವಾರಯೋಷಿತ್‌ಜನಂ ಒಪ್ಪಿತಲ್ಲಿ ವಿಟರಂ ಕರೆಯುತ್ತೆ: **ಉದ್ಭಟಕಾ,** ೧೦. ೭೧)

**ಸಜ್ಜನ** – ಕುಲಸ್ತ್ರೀ, ಧರ್ಮಪತ್ನಿ (ತೆಱಂಬೊಳೆವ ಬಾಳೆಗಳಂತಿರೆ ನಾಟ್ಯವಿಳಾಸದೊಳ್ ಪೊರೆದಿರೆ ಬಂದುದಂದೊಡನೆ ಸಜ್ಜನವೆಂಡಿರ ತಂಡಮೋಳಿಯೊಳ್: **ಆದಿಪು,** ೧೧. ೪೬)

**ಸಜ್ಜನವೆಂಡತಿ** – ಸತ್ಕುಲಸ್ಥೆಯಾದ ಹೆಣ್ಣು (ಸಜ್ಜನವೆಂಡತಿಯನೊಲ್ಲದೆ ಗಾಳುವಪ್ಪ ಸೂಳೆಯಂ ಮೆಚ್ಚುವಂತೆ: **ಧರ್ಮಾಮೃ,** ೪೮ ವ)

**ಸಜ್ಜನಿಕೆ** – ಪಾತಿವ್ರತ್ಯ (ಚಿತಾಗ್ನಿಯೊಳಣ್ಮಿ ಸತ್ತ ಸಜ್ಜನಿಕೆಯ ಪೆಂಪು: **ಅಜಿತಪು,** ೧. ೪೭)

**ಸಜ್ಜಾತಿ** – [ಜೈನ] ಸತ್ಕುಲದಲ್ಲಿ ಹುಟ್ಟುವ ಪರಿಶುದ್ಧ ಜನ್ಮ (ಸಜ್ಜಾತಿ ಸದ್ಗೃಹತ್ವ ಪಾರಿವ್ರಾಜ್ಯಪದ ಸುರೇಂದ್ರತ್ವ ಸಾಮ್ರಾಜ್ಯ ಪರಮಾರ್ಹಂತ್ಯ ಪರಿನಿರ್ವಾಣಮೆಂಬ ಏೞುಂ ಪರಮಸ್ಥಾನನಾಮ: **ಆದಿಪು,** ೧೫. ೧೬ ವ)

**ಸಜ್ಜೀಕೃತ** – ಸಿದ್ಧಮಾಡಿದ (ಸಜ್ಜನ ಸಜ್ಜೀಕೃತಾನೇಕ ಪೂಜಾಪರಿಕರಮಂ ವನಮಹತ್ತರ ಪುರಸ್ಸರನುಮಾಗಿ: **ಚಂದ್ರಪ್ರಪು,** ೨. ೧೧೫)

**ಸಜ್ಜು** – ಸಿದ್ಧತೆ (ಸುಗ್ಗಿಯುಂ ಆ ತೆಂಗಾಳಿಯುಂ ಇರ್ವರುಂ ಸಜ್ಜುವಂ ಪಡೆದು ಚೌವಂದದ ದಟಕಂ ಸೆಲವಿತ್ತು ಒಡಗೊಂಡು ಬರೆ: **ಕಬ್ಬಿಗಕಾ,** ೧೫೩ ವ)

**ಸಜ್ಜುಕ** – ಮೊಗ್ಗು (ಕರವೀರಕರ್ಣಿಕಾ ಕುಮುದವಕುಳ ಕುರವಕಕಮಲತಿಲಕಚಂಪಕಪಾಟಲಿಪಾರಿಜಾತಜಾತಿಪುನ್ನಾಗ

ಮಲ್ಲಿಕಾದ್ಯನೇಕಸುರಭಿಕುಸುಮಂಗಳಂ ಸಜ್ಜುಕಮಪ್ಪುದಂ ಪುಟ್ಟಿಯೊಳ್ ತೀವಿಕೊಂಡು: **ಪಂಚತಂತ್ರ,** ೧೯೦ ವ)

**ಸಜ್ಜೈವಾತೃಕ** – ಬೆಳುದಿಂಗಳು, ಚಂದ್ರ (ನಿರ್ಜಿತ ಸಜ್ಜೈವಾತೃಕಪ್ರದ್ಯುತಿಯೆನಿಸಿ ನಿಜಾಪಾಂಗದಿಂದಂ .. .. ಗೆಲ್ವುದು ಆಶ್ಚರ್ಯಮೇ ದಲ್: **ರಾಜಶೇವಿ,** ೭. ೬೨)

**ಸಜ್ಞಾನಚಕ್ಷು** – ಜ್ಞಾನದೃಷ್ಟಿಯಿರುವವನು (ಎನಗೆ ಶರಣ್ ಧರ್ಮದಿಂದತ್ತ ಮತ್ತಿಲ್ಲ ಪುನರ್ದೀಕ್ಷಾಪ್ರಸಾದಂ ಸದಮಳನಿಖಿಳಾನೂನ ಸಜ್ಞಾನಚಕ್ಷೂ: **ಸುಕುಮಾಚ,** ೩. ೪೫)

**ಸಟ** – ಜಡೆ (ಪರದುರಿಗೇಸಮವ್ವಳಿಪ ನಾಲಗೆ ಮಿಂಚುವ ದಾಡೆ ಬಿಟ್ಟ ಕಣ್ ತಿರುಪಿದ ಮೀಸೆ ಕೊಂಕಿದ ಸಟಂ: **ಪಂಪಭಾ,** ೧೨. ೭); ಬಿಳಲು (ಮೂಲ ಸಟಾಳಿಯಿಂದಂ ಉರಗಾಲಯಮಂ ಬಹುಶಾಖೆಯಿಂದಂದ್ರಾಲಯಮಂ ಪಳಂಚಿ .. .. ಮರುತ್ತರಂಗಿಣೀ ಕೂಲಮನೆಯ್ದಿದರ್: **ಪಂಪರಾ,** ೭. ೧೨೭)

**ಸಟಾಜಾಳ** – ಕೂದಲ ರಾಶಿ (ಸಂಜೀವಕಂಗೆ ಒಲ್ದು ನೀಡಿದಂ ಉದ್ಭಿನ್ನ ಮದಾಂಧಸಿಂಧುರ ಘಟಾಸಂಘಟ್ಟ ಕುಂಭಾಗ್ರನಿರ್ಯತ್ ಅಸೃಕ್ ಕುಂಕುಮ ಪಂಕಪಂಕಿಳ ಸಟಾಜಾಳಂ ಮೃಗಾಧೀಶ್ವರಂ: **ಪಂಚತಂತ್ರ,** ೧೧೦)

**ಸಟಾಟವಿ** – ಸಿಂಹದ ಕೇಸರರಾಶಿ (ಸಟಾಟವಿ ಪೆರ್ಚೆ .. .. ಕನಲ್ದುಗಿಬಗಿ ಮಾಡುತಿರ್ದಪುದು ಕೇಸರಿ ಕುಂಜರಕುಂಭದೇಶದೊಳ್: **ಲೀಲಾವತಿ,** ೮. ೨೨)

**ಸಟಾಳಿ** – ಸಿಂಹದ ಕೇಸರಗಳು (ಪರೆದ ಉರಿಗೇಸಂ ಅವ್ವಳಿಪ ನಾಲಗೆ ಮಿಂಚುವ ದಾಡೆ ಬಿಟ್ಟ ಕಣ್ ತಿರುಪಿದ ಮೀಸೆ ಕೊಂಕಿದ ಸಟಂ ಕಡು ನೆಕ್ಕ ಕದಂಪು ನೀಳ್ದ ತಾಳ್ಮರದವೊಲಪ್ಪ ಒಡಲ್ ಕಹಕಹಧ್ವನಿ ಕೌಳಿಕನಾದಂ ಆದುದು ಆಸುರತರಮಾಗೆ ಬಂದು ಕವಿದತ್ತು ಘಟೋತ್ಕಚ ರೌದ್ರಸಾಧನಂ: **ಪಂಪಭಾ,** ೧೨. ೭

**ಸಟ್ಟುಗ** – ಸೌಟು (ಸಟ್ಟುಗಮಂ ತೀವಿ ಭೈಕ್ಷಮಂ ಪಿಡಿಯೆಂದು ನೀಡಿದ ಕೈನಿತನೆ ಕಂಡು: **ವಡ್ಡಾರಾ,** ಪು. ೮೯, ಸಾ. ೮)

**ಸಡಪುಡಂಗೆಯ್** – ಲವಲವಿಕೆಯಿಂದಿರು (ನೆಗೞ್ದಿತ್ತುದ್ಧ ತಪೋಗ್ನಿಯಿಂ ಸುಡದಿರಂ ದೇವಂ ಬೞಿಕೆನ್ನಂ ಅನ್ನೆಗಂ ತನ್ನಿಯರೊತ್ತಿನೊಳ್ ಸಡಪುಡಂಗೆಯ್ದಿರ್ಪೆಂ: **ಅಜಿತಪು,** ೬. ೩೪)

**ಸಡಪುಡನೆ** – ಕೂಡಲೇ (ಎಡೆಯಾಡುತಿರ್ಪ ವೇಣುವೆ ಕೆಡೆವಂತಿರೆತಂತು ತೀರ್ವುದುಂ ಹತಕಾಯಂ ಕೆಡೆವುದು ಕಾಣಲ್ಕಲ್ಲದೆ ಸಡಪುವಜೀವನ್ನನಾವನಾಯುವ ತವಿಲಂ: **ನೇಮಿನಾಪು,** ೪. ೧೧)

**ಸಡಹುಡ** – ಚುರುಕುತನ, ಲವಲವಿಕೆ, ಸಂಭ್ರಮ (ಸಡಹುಡನಪ್ಪ ಕಟ್ಟಿ ಕೊಡೆ ಸಂತಸದಿಂ ಪೆಱಗೇಱಿ ಬರ್ಪ ಕನ್ನಡಿವಿಡಿದಾಕೆ ಚೆನ್ನದ ಸವಂಗಂ ಅಪೂರ್ವದ ಮೊಚ್ಚೆಯಂ ಪವಣ್ಗೆಡದ ಸುವರ್ಣಪಾರಿವದ ಕುಪ್ಪಸಮೊಪ್ಪೆ: **ಪಂಪಭಾ,** ೯. ೧೦೩)

**ಸಡಿಲ್** – [ಶಿಥಿಲ] ಅಳ್ಳಕಗೊಳ್ಳು (ಬಿದಿದಮರ್ದಿರ್ದ ತೋಳ್ ಸಡಿಲೆ: **ಪಂಪಭಾ,** ೨. ೧೯)

**ಸಡಿಲಿಸು** – ಅಳ್ಳಕಗೊಳಿಸು (ಬಿಡದೆ ಪೊಗೆ ಸುತ್ತೆ ತೋಳಂ ಅಡಿಲಿಸದಾ ಪ್ರಾಣವಲ್ಲಭರ್ ಪ್ರಾಣಮನಂದೊಡಗಳೆದರ್: **ಆದಿಪು,** ೫. ೨೪)

**ಸಡಿಲ್ಚು** – ಸಡಿಲಿಸು (ಪೊರೆಯೊಳ್ ಪೊಂಗಿರೆ ತಂಬೆಲೆಪೊರೆಯಂ ಸಡಿಲ್ಚೆ ನಡು ಪೊಂಗಿರೆ ಮಲ್ಲಿಗೆಗಳೊಳ್ ವಸಂತದೊಳ್ ಬಿರಿದೊಡೆ: **ಆದಿಪು,** ೧೧. ೧೦೬); ಬಿಚ್ಚು, ಕಳಚಿಹಾಕು (ಸರ್ಪೋಪವೀತಮಂ ಸಡಿಲ್ಚಿ ಯಜ್ಞಾಪವೀತಮಂ ಅಮರ್ಚಿ: **ಗಿರಿಜಾಕ,** ೧೦. ೬೧ ವ)

**ಸಣಂಗಿ** – ಷಡಂಗಿ, ವೇದದ ಆರು ಅಂಗಗಳನ್ನೂ [ಶಿಕ್ಷೆ, ಕಲ್ಪ, ವ್ಯಾಕರಣ, ನಿರುಕ್ತ, ಛಂದಸ್ಸು, ಜ್ಯೋತಿಷ] ಬಲ್ಲವನು (ಬಾಸಿ ಬಱಿಕೊಯ್ದು ಅದನೋವದೆ ತೀವಿ ತಂದು ಬಿತ್ತರದೆ ಸಣಂಗಿ .. .. ಲಿಂಗದೇವರನರ್ಚಿಪರ್: **ಸಮಯಪ,** ೧೪. ೨೭)

**ಸಣಂಬು** – ಸಣಬು ಎಂಬ ಗಿಡ (ಪಾಲ್ಮರದ ಪಣ್ಗಳುಂ ಆಳಂಬೆಯುಂ ಸಣಂಬಿನ ಪೂವುಮಂಎಂದಿವಂ ಸೇವಿಸುವರುಂ .. .. ಪಂಚಮಹಾಪಾತಕಂಗಳ್ ಗೆಯ್ದರ್: **ವಡ್ಡಾರಾ,** ಪು. ೧೨೬, ಸಾ. ೧೮)

**ಸಣ್ಣಿಗೆ** – ಒರಳು–ರುಬ್ಬುಗುಂಡು (ಮೆಯ್ ಸಣ್ಣಿಗೆಯೊಳ್ ಮಗುಟ್ಚಿದೊಡಮೇಂ ದುಃಖಕ್ಕವರ್ ನೋಂತರೋ: **ಆದಿಪು,** ೫. ೯೩); ಸಾಣೆಕಲ್ಲು (ಅಧಿಕದುಃಖಮಂ ಸಣ್ಣಿಗೆಯಿಂದವರಂ ಸಣ್ಣಿಸುವೊಡಂ ಇಂತವರಸುಗಳ್ ಪೋಗವಣಮೆ ಕರಗವು ತನುಗಳ್: **ಅಜಿತಪು,** ೧೧. ೧೨)

**ಸಣ್ಣಿಸು** – ಪುಡಿಮಾಡು (ತರಂತರದೊಳೆ ಪಾಯ್ದು ಕೂರ್ಗಣೆಗಳಂ ತಱಿದೊಟ್ಟಿ ತೆರಳ್ಚಿ ತೂಳ್ದಿಕೊಂಡು ಎರೆದು ಮಗುಟ್ಚಿ ಸಣ್ಣಿಸಿದಂ ಆಂತ ಚತುರ್ವಲಮಂ ಗುಣಾರ್ಣವಂ: **ಪಂಪಭಾ,** ೧೧. ೧೪೭); ನಯಗೊಳಿಸು (ಸಣ್ಣಿಗೆಯೊಳ್ ಸಣ್ಣಮಾಗರೆದು ಸಣ್ಣಿಸಿದೊಡೆ: **ಸುಕುಮಾಚ,** ೧೧. ೪೭ ವ)

**ಸತ** – ಶಾಶ್ವತವಾದುದು (ಸತವಱಿಯನೆನಿಪ್ಪಂ ಜಿನಮತಮಂ ಕೇಳ್ವಾಗಳ್ ಅನಘನಕ್ಕುಂ ಅಭವ್ಯಂ: **ಸಮಯಪ,** ೩. ೫೪)

**ಸತತಂ** – ಯಾವಾಗಲೂ (ಶತತಂ ಛಂದೋವಿದಿತ ಪ್ರತೀತ ಶಾಸ್ತ್ರೋಕ್ತಮಾರ್ಗದಿಂದಱಿವುದದಂ: **ಕವಿರಾಮಾ,** ೧. ೭೧)

**ಸತತಗತಿ** – ಸದಾ ಚಲಿಸುವುದು, ಗಾಳಿ (ಸಿಂಧುವನವೇದಿಕೆಯಿಂ ಸತತಗತಿವೇಗದಿಂದೂರ್ಜಿತ ಭುಜಬಳನೆಯ್ದಿ ನಗದ ವನವೇದಿಕೆಯಂ: **ಆದಿಪು,** ೧೩. ೩೫)

**ಸತತಗತಿತನೂಜ** – ವಾಯುಪುತ್ರ, ಹನುಮಂತ (ಯತಿಪತಿಗಳ ಪಾದಾಂಭೋಜನುಂ ಭಕ್ತಿಯಿಂದಂ ಸತತಗತಿತನೂಜಂ ಪೂಜಿಸುತಿರ್ದಂ: **ಪಂಪರಾ,** ೧೧. ೬೦)

**ಸತನು** – ಶರೀರಸಹಿತನಾದವನು (ಅತನು ಸತನುವಾದಂ ಕಾಮಸಾಮ್ರಾಜ್ಯಲಕ್ಷ್ಮೀಲತೆಯ ಲಲಿತಾಲಾಸ್ಯಪ್ರೌಢಿ ಚೆಲ್ವಾದುದೀಗಳ್: **ಮಲ್ಲಿನಾಪು,** ೭. ೩೮)

**ಸತೃಣಾಭ್ಯವಹಾರಿ** – ಹುಲ್ಲು ತಿನ್ನುವವನು, ದಡ್ಡ (ಬಗೆಯದೆ ಸತೃಣಾಭ್ಯವಹಾರಿಗಳುಸಿರ್ವರ್ ಗದ್ಯಕಾವ್ಯದೊಳ್ ನಿರ್ಬಂಧಂ ಪುಗದು ಎಂದು ಅರೋಚಿಗಳದಂ ತೆಗೞೆಂದಾ ಗದ್ಯಪದ್ಯದೊಳಿಕ್ಕರ್: **ಶಬ್ದಮದ,** ೭೦)

**ಸತ್ತಿಗೆ** – [ಛತ್ರಿಕಾ] ಕೊಡೆ (ತುರಗಮುಮೊಂದು ಸತ್ತಿಗೆಯೊಂದಿರೆ ಕಾಪಿನ ಬಂಟು ಸುತ್ತಲುಂ ಬರೆ: **ಆದಿಪು,** ೧೧. ೪೬)

**ಸತ್ತುಗ** – ಹುರಿಟ್ಟು (ಪಲವುದಿನಕ್ಕೊಂದು ಕೊಡಂ ತೀವಿದ ಸತ್ತುಗದ ಪುಡಿಯಂ ಪಡೆದು ಆ ಕೊಡನಂ ತನ್ನ ಪಟ್ಟಿರ್ಪ ಎಡೆಯೊಳ್ ಕಟ್ಟಿ ನೇಲ್ದಿಟ್ಟು: **ಪಂಚತಂತ್ರ,** ೨೫೩ ವ); ಶಕ್ತಿ, ಸತ್ವ (ಮುಸುಮೊಗಮಾಯ್ತು ಮೊಗಂ ಕಾಲ ಸತ್ತುಗಂ ಪೋಯ್ತು: **ಅಜಿತಪು,** ೨. ೧೦೦)

**ಸತ್ಪಥ** – ಒಳ್ಳೆಯ ನಡತೆ (ಚಾರಣ ಮುನೀಂದ್ರರ್ ಬೆಸಸಿ ಸತ್ಪಥೋನ್ನತಿಯಂ ನನ್ನಿಮಾಡುವಂತೆ ಸತ್ಪಥಾತಿಥಿಗಳಾದರ್; **ಆದಿಪು,** ೫. ೨೦ ವ); ಆಕಾಶ (ವಿಯಚ್ಚರಾವಳಿಯತೆ ಸತ್ಪಥಪ್ರವರ್ತಿತಮುಂ ಕುಮಾರ್ಗವರ್ಜಿತಮುಂ: **ಶಾಂತೀಶ್ವಪು,** ೧. ೧೦೨ ವ)

**ಸತ್ವಥಾತಿಥಿ** – ಆಕಾಶಗಾಮಿ (ಚಾರಣ ಮುನೀಂದ್ರರ್ ಬೆಸಸಿ ಸತ್ವಥೋನ್ನತಿಯಂ ನನ್ನಿಮಾಡುವಂತೆ ಸತ್ವಥಾತಿಥಿಗಳಾದರ್; **ಆದಿಪು,** ೫. ೨೦ ವ)

**ಸತ್ಫಲ** – ಉತ್ತಮ ಫಲಿತಾಂಶ (ತ್ರಿದಶಾನಕಲಯದಿಂ ನೀರದಪಥದೊಳ್ ನಾರದಂಗೆ ತಾಂಡವದ ತಗುಳ್ವೊದವಿದುದು ತನ್ನ ಮಾಡಿದ ಕದನದ ಸತ್ಫಲಮನಾಗಳನುಭವಿಸುವವೋಲ್: **ಶಾಂತಿಪು,** ೪. ೫೭)

**ಸತ್ರನಿಳಯ** – ಧರ್ಮಛತ್ರ (ಆಶ್ರಿತಜನಕ್ಕೆ ಅಶೋಕನಿಳಯಮೆನಿಸಿದ ಸತ್ರನಿಳಯಂಗಳುಂ: **ಪುಷ್ಪದಂಪು,** ೯. ೨೨ ವ)

**ಸತ್ರಶಾಲೆ** – ಛತ್ರ (ಮತ್ತದೊಂದು ಪವಿತ್ರ ಸತ್ರಶಾಲೆಯಲ್ಲಿ: **ರಾಜಶೇಖ,** ೧, ೧೨೭ ವ)

**ಸತ್ವ** – ಹಿಟ್ಟು (ಯಷ್ಟಿಯಂ ಕೊಂಡು ಎನಸುಂ ಪೊಯ್ದಂ ಕಡಂಗಿ ಸತ್ವದ ಕೊಡನಂ: **ಪಂಚತಂತ್ರ,** ೨೫೫); ಶಕ್ತಿ; ಸತ್ವಗುಣ; ಪ್ರಾಣಿ (ಕ್ರೂರ ಸತ್ವಪ್ರಜನಿತ ಪ್ರಜೋಪದ್ರವೋದ್ರೇಕಮಂ ಆಕರ್ಣಿಸಿ ಮೊದಲೊಳ್ ಸದಯ ಹೃದಯನಾಗಿ: **ಆಚವರ್ಧ,** ೩. ೩೮ ವ)

**ಸತ್ವಬಾಧೆ** – [ಜೈನ] ಜೀವಿಗಳಿಗೆ ಒದಗುವ ನೋವು (ಅಪಮೃತ್ಯುವಿನ ಸತ್ವಬಾಧೆಯ ಗಂಧಾಗಂಧಮುಂ ಇಲ್ಲ ಇನ್ನಾ ಭೋಗಭೂಮಿಗಳ್ .. .. ತ್ರಿವಿಧಮಕ್ಕುಂ: **ಶಾಂತಿಪು,** ೬. ೧೦೨ ವ)

**ಸತ್ವಾಢ್ಯ** – ಬಲಿಷ್ಠ (ಕುಲಜಂ ಸತ್ವಾಢ್ಯಂ ನಿಶ್ಚಲವಚನಭಿಮಾನಿ ಗುಣಿ ತಿತಿಕ್ಷಾನ್ವಿತ ನಿರ್ಮಲಚರಿತಂ ಎರಡನಜೆಯಂ ಬಲಯುತನಜೆವುಳ್ಳನೆನಿಪನಪ್ಪುದು ಕೆಳೆಯಂ: **ಪಂಚತಂತ್ರ,** ೪೨೭)

**ಸತ್ತ್ವ** – ಸತ್ವಗುಣ[ವುಳ್ಳವನು], (ಘನಸತ್ತ್ವನಲ್ತೆ ಸಂಭವಿಪ ನೃಪಾತ್ಮಜಂ ಆತನೀ ಧರಿತ್ರಿಗೆ ಪತಿಯಪ್ಪನೆನುತುಂ ಅಡಗಿತು ರಜಂ ಎಂದೆನಲ್: **ಕುಸುಮಾಕಾ,** ೬. ೫೮); ಜೀವ (ಆ ಸಮುದ್ರಂ ಸರೋಜಗರ್ಭನಂತೆ ಸರಸ್ವತೀಪತಿಯಾಗಿಯುಂ ಸತ್ತ್ವಶೋಭಿತಮುಂ: **ಶಾಂತೀಶ್ವಪು,** ೧. ೬೯ ವ)

**ಸದಮಲಬೋಧ** – ನಿರ್ಮಲ ಉಪದೇಶ ಮಾಡುವವನು (ಸದಮಲಬೋಧನಾ ಶಿಲೆಯನೇಱಿದೊಡೆ ಅಂಗಜನಂಜಿ ಪುತ್ತನೇಱಿದಂ: **ಪುಷ್ಪದಂಪು,** ೧೩. ೧೦೭)

**ಸದರ** – ಸುಲಭ (ಈಶ್ವರನೊಡನೆ ಸದರಮಪ್ಪುದೆ ಸಮರಂ: **ಶಬರಶಂ,** ೪. ೬೧)

**ಸದರ್ಥವಾದಿತ್ವ** – ಸರಿಯಾದ ವಾದಮಂಡನೆ (ಸದರ್ಥವಾದಿತ್ವಮಂ ಇಂದ್ರನಂದಿಮುನಿಯಿಂ ಪಡೆದೊಂ: **ಶಾಂತಿಪು,** ೧೨. ೮೦)

**ಸದಸನ್ಮತಿ** – ಒಳ್ಳೆಯ ಮತ್ತು ಕೆಟ್ಟ ಮನಸ್ಸುಳ್ಳವನು (ಸದಸನ್ಮತಿಗಳ್ ಪಿಡಿವಂದದಿಂ ಅನೇಕಾನೇಕ ಪದಮುಮಮಂ ಸಿರಿ ಮೈಸೋಂಕಿದರಂ ಪಿಡಿವುವು ಮುಂ ಮಿಡುಕದಂತು ತಡನಡೆವ ವಜ್ರಲೇಪದ ಶಿಲೆಗಳ್: **ಜಗನ್ನಾವಿ,** ೧೬. ೪೨)

**ಸದಸುಜನ** – ಒಳ್ಳೆಯದನ್ನೇ ಪ್ರಾಣವಾಗುಳ್ಳ ಜನ (ಸುಜನವರನತಪದನ ಸದಸುಜನವರದಂ .. .. ನಿರುಪಮ ನಿಜಗುಣಯೋಗಿಯ ಪದಾಬ್ಜಕೆ ಆನತನಪ್ಪೆಂ: **ರಾಜಶೇಖ,** ೧. ೧೬)

**ಸದಾನಿಕೇತನ** – ದಾನಿಗಳಿರುವ ಮನೆ (ಸದಾನಿಕೇತನಂಗಳಿಂ ಧನದಭವನಮೆನಿಪ ಸಿರಿಯ ಬಚ್ಚರಾಪಣಂಗಳಿಂ: **ಪಂಪಭಾ** ೧. ೫೮)

**ಸದುಂಬು** – ಜೌಗು ಭೂಮಿ (ನೀರ್ವನಿಗಳಿಂ ತೀರಂ ಸದುಂಬಾಗೆ ಪೊಯ್ದಳಿಜಾಳಂಗಳಿನಿಂದ್ರನೀಲಮಣಿಯಂ ಕಟ್ಟಿರ್ದವೋಲ್ ಒಪ್ಪುಗುಮೇ: **ಲೀಲಾವತಿ,** ೬. ೭೬)

**ಸದುಬೀಟ್** – ತೇವಗೊಳ್ಳು (ಮಿಡಿಯಂ ಶುಕಾನನಂ ತಾಗೆ ತಗುಳ್ದು ಸೋರ್ವಸೋನೆಯಿಂ ಸದುಬೀಟೆ ಮನೋಜರಾಜ ಧಾರಾಗೃಹದಂತದೇನೆಸೆದುದೋ ಮಧುಮಾಸದೊಳ್ ಆಮ್ರಭೂರುಹಂ: **ಲೀಲಾವತಿ,** ೧೩. ೪೦)

**ಸದೃಶವೃತ್ತಿ** – ಒಂದೇ ಬಗೆಯ ನಡತೆ (ಪ್ರವಿದಿತಹೇತುಗಳೊಳ್ ಸಂದವನತಿಯೊಳ್ .. .. ಸದೃಶವೃತ್ತಿಯೊಳ್ ಪ್ರತಿನಿಧಾನದೊಳಂ ಇಷ್ಟದೊಳಂ: **ಶಬ್ದಮದ,** ೧೪೧)

**ಸದೆ** – ಬಡಿ, ಚೆಚ್ಚು (ತುಱುವಂ ಮಗುಟ್ಚಿ ಮಗುಟದೆ ತನಗಿದಿರೊಡ್ಡಿ ನಿಂದ ಅರಿನೃಪಬಲಮಂ ಅರೆದು ಸದೆದು: **ಪಂಪಭಾ,** ೮. ೧೦೪ ವ)

**ಸದೆಬಡಿ** – ಬಲವಾಗಿ ಚೆಚ್ಚು (ತನ್ನ ಪೆಂಡತಿ ಜೋಡೆಯೆಂದು ಸಂದೇಹಂಬಡುವಾತನವಳ ವಿಪರೀತವೇಷಂ ತನಗೆ ರೋಷಮನೀಯೆ ಸಾಯೆ ಸದೆಬಡಿದು: **ಪಂಚತಂತ್ರ,** ೧೨೯ ವ)

**ಸದೇಹ** – ಶರೀರಸಮೇತ (ವಿಕ್ರಮೈಕರಸನನಂ ಅಪರಾಜಿತಂ ಸದೇಹಮಾದ ತನ್ನ ಪರಾಕ್ರಮಮನೆ ಕಾಣ್ಬಂತೆ ಕಂಡು: **ಶಾಂತಿಪು,** ೪. ೩೨ ವ)

**ಸದೈವ** – ಅದೃಷ್ಟವಂತ (ಮಗನೆ ಸದೈವರಂ ಕಿಡಿಸಲಾರ್ಪರೆ ಕಾಯ್ದು ಕಡಂಗಿಯುಂ ಸುರೋರಗ ಖಗರಾದೊಡಂ: **ಕರ್ಣನೇಮಿ,** ೯. ೧೧೫)

**ಸದ್ಗುಣೈಕ್ಯ** – ಸದ್ಗುಣಗಳಿಂದ ಕೂಡಿದವನು (ಪರಹಿತಚರಿತೋದಾತ್ತ ಕೀರ್ತಿಪ್ರಭಾವಂ ಮಿತವಾಕ್ಯಂ ಸದ್ಗುಣೈಕ್ಯಂ: **ಸುಕುಮಾಚ,** ೨. ೫೧)

**ಸದ್ಗೃಹತ್ವ** – [ಜೈನ] ಏಳರಲ್ಲಿ ಒಂದು ಬಗೆಯ ಪರಮಸ್ಥಾನ, ಇಷ್ಟವಾದುದನ್ನು ತೊರೆದು ಆತ್ಮಶುದ್ಧಿಮಾಡಿಕೊಳ್ಳುವುದು (ಸಜ್ಜಾತಿ ಸದ್ಗೃಹತ್ವ ಪಾರಿವ್ರಾಜ್ಯಪದ ಸುರೇಂದ್ರತ್ವ ಸಾಮ್ರಾಜ್ಯ ಪರಮಾರ್ಹಂತ್ಯ ಪರಿನಿರ್ವಾಣಮೆಂಬ ಏೞುಂ ಪರಮಸ್ಥಾನನಾಮಂ: **ಆದಿಪು,** ೧೫. ೧೬ ವ)

**ಸದ್ದ** – [ಶಬ್ದ] ಸದ್ದು (ಬದ್ದವಣದ ಪಱೆಗಳ್ ಕಿವಿ ಸದ್ದಂಗಿಡೆಮೊೞಗೆ ದೇವದುಂದುಭಿರವಂ ಒಂದು ಉದ್ದಾನಿ ನೆಗೞೆ ಮುಗುಳ ಅಲರ ಒದ್ದೆ ಕರಂ ಸಿದ್ಧಮಾದುದು ಅಂಬರತಲದೊಳ್: **ಪಂಪಭಾ,** ೧೨. ೨೧೮)

**ಸದ್ಧರ್ಮ** – ಶ್ರೇಷ್ಠ ಧರ್ಮ (ದೋಷಪ್ರಕರರಹಿತನೆನಿಪಂ ಆಪ್ತಂ ತತ್ ಆನನ ಪ್ರೋದ್ಭೂತಂ ಸಿದ್ಧಾಂತಮಾರ್ಗಂ ತದುವಿರಚನೆ ಸದ್ಧರ್ಮಂ; **ಸುಕುಮಾಚ,** ೫. ೩೯)

**ಸದ್ಬೋಧ** – ಒಳ್ಳೆಯ ಜ್ಞಾನ (ಇವರಾರೆಂದಿರ್ದಪೆ ನೀಂ ಭುವನತ್ರಯ ತಿಳಕರ್ ಅಮಳ ಸದ್ಬೋಧ ಸುಧಾರ್ಣವ ಪೂರ್ಣಚಂದ್ರರ್: **ಯಶೋಧಚ,** ೪. ೪೮)

**ಸದ್ಭವ್ಯ** – [ಜೈನ] ಒಳ್ಳೆಯ ಧಾರ್ಮಿಕ ವ್ಯಕ್ತಿ (ಭಾಸುರ ಸುರನರ ಸದ್ಭವ್ಯಸೇವ್ಯಂ .. .. ರಕ್ಷಿಸೈ ಶಾಂತೀಶನೆಮ್ಮಂ: **ಶಾಂತಿಪು,** ೧. ೧)

**ಸದ್ಭಾವ** – ಒಳ್ಳೆಯ ಭಾವನೆ, ಅಭಿಪ್ರಾಯ (ಸದ್ಭಾವದಿಂ ಎನ್ನನಾಳ್ದನ ಮಗಳ್ ಪದಪಿಂದಮೆ ತಂದಳ್: **ಕಾದಂಸಂ.** ೧. ೨೦)

**ಸದ್ಭ್ರಾಂತ** – ಜೋರಾಗಿ ಬೀಸುತ್ತಿರುವ (ಸದ್ಭ್ರಾಂತಸಮೀರಣೋತ್ಥಿತ ವಿಶಾಳವಿಳೋಳತರಂಗರೇಖೆ: **ಪಂಪಭಾ,** ೩. ೫೭)

**ಸದ್ಮ** – ಮನೆ (ಮೆಲ್ಲನೆ ಸುೞಿದತ್ತು ಸದ್ಮಸರಸೀಶರ ಶೀಕರಮಂದಮಾರುತಂ: **ಮಲ್ಲಿನಾಪು,** ೭. ೩೯)

**ಸದ್ರತಿ** – ಶುದ್ಧವಾದ ಅನುರಾಗ (ಸಲೆ ಸದ್ರತಿಯೊಳ್ ನೆರೆದಿಂತು ನೂತನಂ ಮನಸಿಜನೆಂಬವೋಲ್: **ಚಂದ್ರಪ್ರಪು,** ೭. ೩೬)

**ಸದ್ವನಜವನ** – ಸುಂದರ ತಾವರೆಗಳ ಕೊಳ (ಅನುಯೋಗ ಕುಸುಮಪಾದಪಂ ಅನೇಕ ಲತಿಕ ಮಂಗಫಳಮಹಿಜಂ ಸದ್ವನಜವನಂ: **ಆದಿಪು,** ೧. ೧೦)

**ಸದ್ವಿಜಕುಳೋಪಶೋಭಿ** – ಒಳ್ಳೆಯ ಹಲ್ಲುಗಳಿಂದ ಶೋಭಿಸುವ (ಮುಖಕಮಳದಂತೆ ಸದ್ವಿಜಕುಳೋಪಶೋಭಿಯುಂ .. .. ಯಾಮ್ಯದಿಶೆಯಂತೆ ಧರ್ಮಪ್ರಭಾವವಿಭಾವಿತಮುಂ ಎಂಬ ಮಹನೀಯಮಹಿಮೆಯಂ ತಳೆದು: **ಪುಷ್ಪದಂಪು,** ೯. ೩೦ ವ)

**ಸದ್ವೃತ್ತ** – ಒಳ್ಳೆ ನಡತೆ[ಯುಳ್ಳ] (ಸದ್ವೃತ್ತಶೋಭಾವಹಂ ವನಮಂ ಮಾಧವನಂ .. .. ಪೋಲ್ತು ಪೆಂಪಿನಲೆಸೆಗುಂ ಪ್ರಬಂಧಂ: **ಶಬರಶಂ,** ೧. ೨೮)

**ಸದ್ವೇದ್ಯ** – [ಜೈನ] ಇಂದ್ರಿಯ ಸುಖವನ್ನು ಉಂಟುಮಾಡುವುದು (ಕ್ಷಮೆಯುಂ .. .. ಸದ್ವೇದ್ಯದಾಸ್ರವಂ ತಾನಕ್ಕುಂ: **ಸುಕುಮಾಚ,** ೮. ೧೭)

**ಸದ್ಯಸ್ತನ** – ಆಗತಾನೇ ಅರಳಿದ (ನೂತನಪ್ರಸ್ತುತ ಸುರಭಿಸುಧಾಕ್ಷೀರಧಾರಾಭಿಷೇಕಾರ್ಚನೆಯಂ ಸದ್ಯಸ್ತನ ಅಖಂಡ ವನಸುಮ ಮನೋಮಾಲಿಕಾಲಂಬ ಲೀಲಾರ್ಚನೆಯಂ: **ಆದಿಪು,** ೧೪. ೧೧೬)

**ಸದ್ಯಸ್ಸಂತಾಪಿತಲೋಹಪುತ್ರಿಕಾ[ಕೆ]** – ಆಗ ತಾನೇ ಕಾಯಿಸಿ ಕಬ್ಬಿಣದ ಹೆಣ್ಣು ಗೊಂಬೆ (ಅಂತು ಸದ್ಯಸ್ಸಂತಾಪಿತ ಲೋಹಪುತ್ರಿಕಾಪರಿರಂಭ ಸಂಭೃತ ಪ್ಲೋಷಚಲಜ್ಜಾಂಗಳ ಗಳತ್ ರುಧಿರ ವಿಚಳದಳದಸ್ಥಿ: **ಆದಿಪು,** ೫. ೮೭ ವ)

**ಸನತ್ಕುಮಾರ** – [ಜೈನ] ಹದಿನಾರು ಸ್ವರ್ಗಗಳಲ್ಲಿ ಈ ಹೆಸರಿನದು ಒಂದು (ಸೌಧರ್ಮ ಈಶಾನ ಸನತ್ಕುಮಾರ ಮಾಹೇಂದ್ರ ಬ್ರಹ್ಮ ಬ್ರಹ್ಮೋತ್ತರ ಲಾಂತವ ಕಾಪಿಷ್ಠ ಶುಕ್ರ ಮಹಾಶುಕ್ರ ಶತಾರ ಸಹಸ್ರಾರ ಆನತ ಪ್ರಾಣತ ಅರಣ್ಯ ಅಚ್ಯುತಮೆಂಬ ಪದಿನಾಱುಂ ಕಲ್ಪಂಗಳೊಳಂ: **ವಡ್ಡಾರಾ,** ಮ ೯೭, ಸಾ ೨೬), ನೋಡಿ, 'ಸ್ವರ್ಗ'

**ಸನಾಭಿ** – ದಾಯಾದಿ (ವಿನಯಮುಂ ಎಱಕಮುಂ ಅಪ್ಪುದು ಸನಾಭಿಗಳ್ ಸಂಗತಗಳಪ್ಪೊಡೆ ಪೆಸರ್ಗೊಂಡನಿತಱೊಳ್ ಎನ್ನಂ ಸೈರಿಸನೆನೆ ಭರತಂಗೆಱಗಿ ಲೋಕದಿಂ ನಗಿಸುವೆಣೇ: **ಆದಿಪು,** ೧೪. ೭೬)

**ಸನಿ** – ಶನಿ, ಒಂದು ಗ್ರಹ (ಪೋಱಗೆ ಭುಜಂಗರಿರ್ದಪರ್ ಇದೇಂ ಸನಿ ಹತ್ತಿತೆ ನಿನ್ನಂ: **ತ್ರಿಷಷ್ಟಿಪು,** ೨೪. ೧೯೦)

**ಸನಿಗೊಳ್** – ಶನಿ ಹಿಡಿ (ಮುನಿಯದಿರು ನಲ್ಲ ನೀನಿಂತೆನಗೆಲೆ ಸಲೆ ಗಂಡನಪ್ಪ ಷಂಡಂ ನಿಚ್ಚಂ ಮನೆಸನಿಗೊಂಡಿರೆ ಬರಿಸ ಲ್ಕೆನಗಿಂಬಿಲ್ಲಾಗಿ ನಿನ್ನನಾಂ ನೆನೆದಿನಿಸುಂ: **ಪಂಚತಂತ್ರ,** ೩೮೯)

**ಸನಿಯ** – ಹತ್ತಿರ (ಸ್ವಾಂತದಿಂ ಬಂದೆಱಗಿ ಸನಿಯದೊಳ್ ನಿಂದು: **ಕುಸುಮಾಕಾ,** ೧೧. ೧೮೭)

**ಸನ್ನಣ** – [ಸನ್ನಾಹ] ಯೋಧರ ಯುದ್ಧ ಕವಚ (ಮಸೆಯಿಪ ಶಸ್ತ್ರಕೋಟಿ ಸಮಕಟ್ಟಿನ ಸನ್ನಣಂ ಅಟ್ಟೆಯಿಂದಂ ಅರ್ಚಿಸುವ ತುರಂಗದಂತಿರಥಸಂಕುಳಂ: **ಆದಿಪು,** ೧೪. ೯೦)

**ಸನ್ನಣಂದುಡು** – ಕವಚವನ್ನು ಧರಿಸು (ಸನ್ನಣಂದುಡುವ ಪಣ್ಣುವ ಬಾಟ್ಟೆಯವಂದಿರಂ ಮರುಳ್ಗೊಂಡವೋಲ್ ಊಳ್ವ: **ಪಂಪಭಾ,** ೧೦. ೪೯)

**ಸನ್ನಣಂಬೊಗು** – ಸಿದ್ಧಗೊಳ್ಳು (ಪಕ್ಕರೆಯಿಕ್ಕಿದಶ್ವತತಿ ಪಣ್ಣಿದ ದಂತಿಘಟಾಳಿ ಸನ್ನಣಂಬೊಕ್ಕ ಪದಾತಿ ಹೇತಿ ರಥ ರಥ ಸೂತ ಹಯಾನ್ವಿತಮಾದ ತೇರ್ಗಳ್: **ಜಗನ್ನಾವಿ,** ೯. ೩೧)

**ಸನ್ನತ** – ಬಾಗುವಿಕೆ (ಸನ್ನತದಿಂ ರತಕ್ಕೆಳಸಿ ನಲ್ಲಲೊಳ್ ಓತು ಒಡಗೂಡಿದೆನ್ನಂ ಇಂತೆನ್ನಯಮೆಚ್ಚುದರ್ಕೆ ಪೆಱತಿಲ್ಲ ಅದು ದಂಡಂ; **ಪಂಪಭಾ,** ೧. ೧೧೨)

**ಸನ್ನಹಿತ** – ಅಲಂಕಾರಗೊಂಡ (ಸಹಜದ ಚೆಲ್ವಿನೊಳ್ ರತಿಯ ಸೋಲದ ಕೇಳಿಕೆಯೊಳ್ ಪೊದಳ್ದು ಸನ್ನಿಹಿತವೆನಿಪ್ಪಪೂರ್ವ ಶುಭಲಕ್ಷಣ ದೇಹದೊಳೊಳ್ಪನಾಳ್ದು: **ಪಂಪಭಾ,** ೧. ೪)

**ಸನ್ನಾಹ** – ಸನ್ನಣ (ಕವಚಂ ಜಗರಂ ಸನ್ನಾಹಂ ಉರಚ್ಛದಂ ಅಂಗರಕ್ಷೆ ಕಂಕಟಕಂ ವರ್ಮವಿನಿತ್ತುಂ ಕವಚಾಖ್ಯಂ: **ಅಭಿಧಾವ,** ೧. ೧೪. ೧೨); ಯುದ್ಧಸಿದ್ಧತೆ (ಸನ್ನಾಗಮಂ ತಾಳ್ದಿ ಸೈನ್ಯಪ್ರಕರಂ ಬರ್ಕೆ: **ಜಗನ್ನಾವಿ,** ೩. ೧೩)

**ಸನ್ನಾಹಭೇರಿ** – ಯುದ್ಧಸಿದ್ಧತೆಗಾಗಿ ಹೊಡೆಯುವ ಭೇರಿ (ಅವಂದಿರೆನಗೆ ಕಾಳಗದೊಳ್ ನಿಲ್ವ ಗಂಡರಲ್ಲರ್ ಅದರ್ಕೆ ನೀನಂಜದಿರೆಂದು ನುಡಿದು ಸನ್ನಾಹಭೇರಿಯಂ ಪೊಯಿಸುವುದುಂ: **ಪಂಪರಾ,** ೧೪. ೧೨೪ ವ)

**ಸನ್ನಿಕಾಶ** – ಸಮಾನ (ಪ್ರಕಂಪಿತಮೃಗಪತಿಶಿಶುಸನ್ನಿಕಾಶರ್ ಅತಿವಿಕಟಭೀಷಣಭ್ರೂಭಮಗರ್: **ಪಂಪಭಾ,** ೭. ೮)

**ಸನ್ನಿದ** – [ಸನ್ನಿಹಿತ] ಸಮೀಪ (ಆ ಸಮಯದೊಳ್ ಅಸಮಶರನ ವಶೀಕರಣಮಂತ್ರಾಧಿದೇವತೆಯರೆ ಸನ್ನಿದಮಾದಂತೆ: **ಮಲ್ಲಿನಾಪು,** ೮. ೧೦ ವ)

**ಸನ್ನಿಧಾನ** – ಸಮೀಪ (ಅಂತು ಮರಣಪ್ರಾಪ್ತನಾದ ಕುಮಾರನಂ ಸನ್ನಿಧಾನಸ್ಥಿತನಾಗಿರ್ದನ್ನುಮನಾತನ ತಂದೆ ಕಂಡು: **ಪಂಚತಂತ್ರ,** ೩೮೪ ವ)

**ಸನ್ನಿಧಿ** – ಸನ್ನಿಧಾನ (ಶ್ರೀಧರ ತಪೋನಿಧಿಯ ಸನ್ನಿಧಿಯೊಳ್ ಪರಿಹರಿಸಿ ಜಾತರೂಪೋತ್ಕರಂ ಮತ್ತೊಂದು ಜಾತರೂಪಮಂ ಅರಸಂ ಧರಿಯಿಸಿದಂ: **ಚಂದ್ರಪ್ರಪು,** ೨. ೫೭ ವ)

**ಸನ್ನಿಪಾತ** – ಸೇರಿಕೊಳ್ಳು (ವನದಹನಧೂಮ ನಿರ್ಜರ ವನಪರ್ವತವಾತ ಸನ್ನಿಪಾತಪ್ರಭವಂ: **ಅಜಿತಪು,** ೯. ೨೫); ಸನ್ನಿ ಜ್ವರ (ಇದೇನೆಂದು ಬೆಸಗೊಂಡೊಡೆ ಅವಳ್ ಸನ್ನಿಪಾತಂ ಎಡೆಗೊಂಡರವೋಲ್ ಏನುಮಂ ಎನಲಱೆಯದಿರೆಯುಂ: **ಪಂಚತಂತ್ರ,** ೧೨೯ ವ)

**ಸನ್ನಿಭ** – ಸಮಾನ (ಅಮರಸನ್ನಿಭ ಮಣಿಕುಟ್ಟಿಮ ಮಪ್ಪ ಬಾವಿಯಂ ಪೊಕ್ಕು: **ವಡ್ಡಾರಾ,** ಮ. ೨೬, ಸಾ. ೧೮)

**ಸನ್ನಿಹಿತ** – ಸಮೀಪದಲ್ಲಿನ (ಈಗಳೇನುಂ ತಡವಿಲ್ಲ ಸನ್ನಿಹಿತನಾದಪನಲ್ತೆ ಭವತ್ತನೂಭವಂ: **ಕಾದಂಸಂ,** ೭. ೬೦)

**ಸನ್ನೆ** – ಸಂಕೇತ (ಕಾಣ್ಬರಂಕುಸನಾ ಪಾಣ್ಬೆಯರ ಗೆಯ್ವ ಗೆಯ್ತಂಗಳುಮಂ ತೋರ್ಪ ಸನ್ನೆಗಳುಮಂ ಆಡುವ ಮಿಟ್ಟುಗೊಡ್ಡಂಗಳುಮಂ ಕಂಡು: **ಪಂಪಭಾ,** ೪. ೮೩ ವ)

**ಸನ್ನೆಗಾಳೆ** – ಆಗಮನ, ಮುಹೂರ್ತ ಮುಂತಾದವುಗಳನ್ನು ಸೂಚಿಸುವ ಕಹಳೆ (ಒತ್ತುವ ಸನ್ನೆಗಾಳೆಗಳುಂ ಪೂರಿಸುವ ಶಂಖಂಗಳುಂ .. .. ಎಸೆಯೆ: **ಕಾದಂಬ,** ೩. ೨೨ ವ)

**ಸನ್ಮಹಿತ** – ಗೌರವಸ್ಥ (ಸನ್ಮಹಿತ ಮಹಿಮೆರೆನಿಸಿದ ತನ್ಮುನಿಪನ ಪಾರ್ಶ್ವದಲಿಜಿನದೀಕ್ಷೆಯಂ ಉದ್ಯನ್ಮುದದಿಂ ತಳೆದಂ: **ಶಾಂತೀಶ್ವಪು,** ೭. ೮೮)

**ಸನ್ಮಾನ** – ಗೌರವ (ಸನ್ಮಾನದಾನಾದಿಗಳೊಳ್ ಸಂತಸಂಬಡಿಸಿ: **ಆದಿಪು,** ೧೩. ೪೧ ವ)

**ಸನ್ಮಾರ್ಗಸಾರ** – ಸರಿದಾರಿಯನ್ನು ಅರಿತವನು (ವಿವಿಧದೇಶಂಗಳೊಳ್ ಕೂಡೆ ವಿಭ್ರಾಜಿಸಿದಂ ಸನ್ಮಾರ್ಗಸಾರಂ ಪರಮಜಿನಮತಾಂಭೋಜಿನೀ ರಾಜಹಂಸಂ: **ಸುಕುಮಾಚ,** ೮. ೭೧)

**ಸನ್ಯಂಗ** – ಕದ್ದ ಒಡವೆ (ಮುನ್ನ ತನ್ನ ಪೊಟಿಲೊಳ್ ಪೋದ ಪಲವು ವಸ್ತುಗಳಂ ಸನ್ಯಂಗವೆರಸಿ ಕಂಡು ಆ ತಸ್ಕರ ತಪಸ್ವಿಗೆ ತಕ್ಕುದಂ ಮಾಡಿ: **ಪಂಚತಂತ್ರ,** ೩೨೬ ವ)

**ಸನ್ಯಸನ** – [ಜೈನ] ಸಲ್ಲೇಖನ ವ್ರತ, ಆಹಾರ–ಪಾನೀಯಗಳನ್ನು ತೊರೆಯುವ ವ್ರತ (ನಾಮಲ್ಲಿ ಧೈರ್ಯಮನೆ ಮನದೊಳವಲಂಬಿಸಿ ಚತುರ್ವಿಧಾಹಾರ ಶರೀರ ಪ್ರತ್ಯಾಖ್ಯಾನಪೂರ್ವಕಂ ಸನ್ಯಸನದಿಂ ಮುಡಿಪಿ: **ಶಾಂತಿಪು,** ೪. ೯೭ ವ)

**ಸನ್ಯಸನವಿಧಿ** – ಸನ್ಯಸನದ ಮೂಲಕ ಪ್ರಾಣತ್ಯಾಗ ಮಾಡುವುದು (ಚಂದ್ರಸೇನಾಚಾರ್ಯರ ಶ್ರೀಪಾದಪದ್ಮಪಾರ್ಶ್ವದೊಳ್ ಸನ್ಯಸನವಿಧಿಯೊಳ್ ಪರಿತ್ಯಕ್ತಾಹಾರಶರೀರನೆಂ ಸಮಾಧಿವಡೆದು: **ಆದಿಪು,** ೩. ೫೦ ವ)

**ಸನ್ಯಾಸವ್ರಜನ** – [ಜೈನ] ಒಂದು ಶಿಕ್ಷಾವ್ರತ, ಸನ್ಯಾಸದೀಕ್ಷೆಯನ್ನು ಪಡೆಯುವುದು (ಶೀವ್ರೋಪವಾಸಮುಂ ದಾನವ್ರತಮುಂ ನಿಖಿಲಸಮತೆಯುಂ ಸನ್ಯಾಸವ್ರಜನಮುಂ ಎಂಬಿವು ಶಿಕ್ಷಾವ್ರತಂ ಇದು ನಾಲ್ಕು ತೆಱಂ ಅನೂನಾಗಮದೊಳ್: **ಶಾಂತಿಪು,** ೧. ೯೦)

**ಸಪತ್ನ** – ಶತ್ರು (ಅಂತು ರತ್ನಜಟಿಯ ಸಪತ್ನರಂ ಪೋಱಮಡಿಸಿ ಕಳೆದು ದೇವೋಪನೀತಪುರಕ್ಕರಸುಮಾಡಿ ಕಿಷ್ಕಿಂಧಪುರಕ್ಕೆ ಬಂದು: **ಪಂಪರಾ,** ೧೦. ೬೦ ವ)

**ಸಪತ್ನಿ** – ಸವತಿ (ತಜ್ಜನನೀಸಪತ್ನಿ ತಾಂ ತಳೆದಳೊ ತತ್ಸಮ ಆತ್ಮಭವನಂ ಪುರುಡಿಂದೆನೆ ಕಣ್ಗೆ ರಂಜಿಕುಂ: **ರಾಜಶೇವಿ,** ೪. ೭೨)

**ಸಪರ್ಯಾ[ರ್ಯೆ]** – ಪೂಜಾ ಸಾಮಗ್ರಿ (ಮತ್ತೊಂದು ಪುಣ್ಯದಿನದೊಳ್ ಸ್ವಯಂಬುದ್ಧಂ ಅಗಣ್ಯ ಪುಣ್ಯೋಪಾರ್ಜನಕರ ಸಪರ್ಯಾಸಮೇತಂ ಅಪರಿಮಿತ ಭಕ್ತಿಯಿಂ ಪರಿಮಿತಪರಿಜನಪರಿವೃತನಾಗಿ: **ಆದಿಪು,** ೨. ೨೪ ವ)

**ಸಪುರ** – ಸೀರೆ, ಬಟ್ಟೆ (ಬಿಳಿಯ ಸಪುರಮನುಟ್ಟು ಪೊಳೆವಂದುಗೆಯನಿಟ್ಟು ಮುಂಚುತಂ ಸಡಗರಿಸಿ: **ರಾಜಶೇವಿ,** ೨. ೧೧೭ ರಗಳೆ)

**ಸಪ್ತಕಕ್ಷಾ** – ಏಳು ಅಂಕಣ (ಶ್ರೀಸಪ್ತಕಕ್ಷಾ ಸಮನ್ವಿತ ಆಲೋಲದುಕೂಲಕೇತನಕುಳಂ . .. ಚೆಲ್ವಾಯ್ತು ರಾಜಾಲಯಂ: **ಆದಿಪು,** ೬. ೧೦೭)

**ಸಪ್ತಗುಣ** – [ಜೈನ] ಶ್ರದ್ಧೆ, ಶಕ್ತಿ, ಭಕ್ತಿ, ವಿಜ್ಞಾನ ಅಲುಬ್ಧಿತ, ಕ್ಷಮೆ, ತ್ಯಾಗಗಳೆಂಬ ಏಳು ಗುಣಗಳು (ಶ್ರದ್ಧಾದಿ ಸಪ್ತಗುಣಸಂಪನ್ನನುಂ ಪ್ರತಿಗ್ರಹಾದಿ ನವವಿಧಪುಣ್ಯ ಪುರಸ್ಸರನುಮಾಗಿ: **ಆದಿಪು,** ೧೦. ೧ ವ)

**ಸಪ್ತಗುಪ್ತಿ** – ಏಳು ಸುತ್ತಿನ ಕೋಟೆ (ಸೌಮಿತ್ರಿಯ ಸುತ್ತಣ ರಣಭೂಮಿಯನಿಂಬಾಗೆ ಸಮಚಿ ಕಪಿಕೇತು ಕುಲಗ್ರಾಮಣಿ ಸುಗ್ರೀವಂ ವಿದ್ಯಾಮಯಮಂ ಸಪ್ತಗುಪ್ತಿಯಂ ನಿರ್ಮಿಸಿದಂ: **ಪಂಪರಾ,** ೧೪. ೭೫)

**ಸಪ್ತಚ್ಛದ** – ಪಚ್ಚಕರ್ಪೂರದ ಗಿಡ, ಏಳು ಸುತ್ತಿನ ಬಾಳೆ ಗಿಡ (ಅಶೋಕ ಸಪ್ತಚ್ಛದ ಚಂಪಕ ಚೂತ ಪಾದಪ ಉಪಶೋಭಿತಮುಂ ಏಕಯೋಜನಪ್ರಮಾಣ ವಿಸ್ತಾರಮುಂ: **ಆದಿಪು** ೧೦. ೩೧ ವ)

**ಸಪ್ತತಂತು** – ಯಾಗ (ಅನೇಕ ಸಪ್ತತಂತು ಪೂತ ಮೂರ್ತಿಯುಂ .. .. ತಾರಾಪೀಡನಿರ್ಪಂ: **ಕಾದಂಸಂ,** ೨. ೨ ವ)

**ಸಪ್ತತತ್ವ** – [ಜೈನ] ಜೀವ, ಅಜೀವ, ಬಂಧ, ಅಸ್ರವ, ಸಂವರ, ನಿರ್ಜರ, ಮೋಕ್ಷಗಳೆಂಬ ಏಳು ತತ್ವಗಳು (ಎಂಬ ಸಪ್ತತತ್ವಂಗಳುಮಂ ಈ ಏೞುಂ ತತ್ತ್ವಂ ಪುಣ್ಯಪಾಪಂಗಳೆಂಬ ಎರಡುಂ ಪದಾರ್ಥಂಗಳ್ವೆರಸು: **ಅನಂತಪು,** ೧೦. ೫೧ ವ)

**ಸಪ್ತತಳ** – ಏಳು ಉಪ್ಪರಿಗೆಗಳುಳ್ಳ (ಅಪ್ತತಳ ಪ್ರಾಸಾದದೊಳ್ ಆಪ್ತಜನಪರಿವೃತನಿರೆ: **ಕರ್ಣನೇಮಿ,** ೨. ೫೧)

**ಸಪ್ತಧಾತು** – ಶರೀರದಲ್ಲಿನ ರಸ, ರಕ್ತ, ಮಾಂಸ, ಮೇದಸ್ಸು, ಮಜ್ಜೆ, ಅಸ್ಥಿ, ಶುಕ್ರಗಳೆಂಬ ಏಳು ಧಾತುಗಳು (ಆರಯೆ ಪುರೀಷಾಗಾರಂ ಸಂಪ್ರಾಪ್ತಸಪ್ತಧಾತುವಿಕಾರಂ: (**ಆದಿಪು,** ೨. ೫೦)

**ಸಪ್ತನಯ** – [ಜೈನ] ನೈಗಮ, ಸಂಗ್ರಹ, ವ್ಯವಹಾರ, ಋಜುಸೂತ್ರ, ಶಬ್ದ, ಸಮಭಿರೂಢ, ಏವಂಭೂತ ಎಂಬ ಏಳು ನಯಗಳು (ನೈಗಮ ಸಂಗ್ರಹಾದಿ ಸಪ್ತನಯಭಾವನೆಯುಂ .. .. ತನ್ನೊಳುಂ ಸಚ್ಚಿನ್ನಮಾಗಿ: **ಪುಷ್ಪದಂಪು,** ೧೪. ೧೬ ವ)

**ಸಪ್ತಪರಮಸ್ಥಾನ** – [ಜೈನ] ಸಜ್ಜಾತಿತ್ವ, ಸದ್ಗೃಹತ್ವ, ಪಾರಿವ್ರಾಜ್ಯ, ಸುರೇಂದ್ರತ್ವ, ಸಾಮ್ರಾಜ್ಯ, ಅರ್ಹಂತ್ಯ, ನಿರ್ವಾಣ ಎಂಬ ಮೋಕ್ಷಪದವಿಯ ಏಳು ಹಂತಗಳು (ಸಜ್ಜಾತಿ ಸದ್ಗೃಹತ್ವ ಪಾರಿವ್ರಾಜ್ಯಪದ ಸುರೇಂದ್ರತ್ವ ಸಾಮ್ರಾಜ್ಯ ಪರಮಾರ್ಹಂತ್ಯ ಪರಿನಿರ್ವಾಣಮೆಂಬ ಏೞುಂ ಪರಮಸ್ಥಾನನಾಮ: **ಆದಿಪು,** ೧೫. ೧೬ ವ)

**ಸಪ್ತಪರ್ಣಪಾದಪ** – ಸಪ್ತಚ್ಛದ (ಆಸವರಸ ವಾಸನೆಯಿಂ ಇತರ ವನಂಗಳುಂ ಅನುಕರಿಪುವು ಸಪ್ತವರ್ಣಪಾದಪವನಮಂ: **ಅಜಿತಪು,** ೯. ೩೧)

**ಸಪ್ತಪ್ರಕೃತಿ** – [ಜೈನ] ಕಷಾಯಚತುಷ್ಕ ಮತ್ತು ತ್ರಿವಿಧ ದರ್ಶನಗಳು (ತ್ರಿಕರಣ ದ್ರವ್ಯಾಂಜನದಿಂ ಸಕಳ ಪ್ರತ್ಯಕ್ಷಹೇತು ಸಮನಿಸೆ ಸಪ್ತಪ್ರಕೃತಿಪಟಳ ಕ್ಷಯಂ ಕ್ಷಾಯಿಕ ಸಮ್ಯಗ್ದೃಷ್ಟಿವಿಭವಮಂ ವಿಭು ತಳೆದಂ: **ಮಲ್ಲಿನಾಪು,** ೧೪. ೫೮)

**ಸಪ್ತಭಂಗಿ** – [ಜೈನ] ಯಾವುದರಲ್ಲೇ ಆಗಲಿ ಇರುವ ಪರಸ್ಪರ ವಿರೋಧವನ್ನು ವಿವರಿಸುವ ಏಳುಬಗೆಯ ತರ್ಕಕ್ರಮ (ಅಪಹಿಂಸಂ ಅಪ್ತಭಂಗ್ಯನ್ವಿತಂ ಅಪವನರೋದೋದ್ಗತಂ:: **ಚಂದ್ರಪ್ರಪು,** ೧. ೧೧)

**ಸಪ್ತಭಯ** – [ಜೈನ] ಇಹಲೋಕ, ಪರಲೋಕ, ಮೃತ್ಯು, ವೇದನೆ, ಅಗುಪ್ತಿ, ಅರಕ್ಷೆ, ಅಕಸ್ಮಾತ್‌ಗಳ ಬಗೆಗಿನ ಭಯ (ಇಹಲೋಕದ ಪರಲೋಕದ ಮರಣದ ಕುತ್ತದ ಪರಱಿನಗಿಲ್ಲೆಂಬ ಮೆಯ್ಗೆ ಮಱೆಯಿಲ್ಲೆಂಬ ತೊಟ್ಟನಡಸುವ ಸಪ್ತಭಯಂಗಳ್ಗೆ ನಡುಗದುದಂ: **ಧರ್ಮಾಮೃ,** ೫. ೮೩ ವ)

**ಸಪ್ತಭೂಮಿಕ** – ಏಳು ಉಪ್ಪರಿಗೆಗಳುಳ್ಳದ್ದು (ಮಾಣಿಕ್ಯಹರ್ಮ್ಯ ಆವಳೀವೃತಂ ಉದ್ಯೋತಿ ಸಪ್ತಭೂಮಿಕಂ ಅನೇಕ ಉದಗ್ರಕೂಟಂ .. .. ಚೆಲ್ವಾಯ್ತು ರಾಜಾಲಯಂ: **ಆದಿಪು,** ೬. ೧೦೭)

**ಸಪ್ತಮದಾವಸ್ಥೆ** – ಕಟಪೂರ್ಣಾ, ಆರ್ದ್ರಕಪೋಲಿತಾ, ಭೂರಿದಾನ, ಗಂಧಚರಾ, ಕ್ರೋಧನೀ, ಅತಿಕ್ರಾಂತಾ, ಹ್ರಸನಾ ಎಂಭ ಆನೆಯ ಮದದ ಸ್ಥಿತಿಯ ಏಳನೆಯ ಹಂತ (ಆ ಮಹಾಮದೇಭಂ .. .. ಒಂದು ದಿವಸಂ ಕ್ರೋಧಿನಿಯೆಂಬ ಸಪ್ತಮದಾವಸ್ಥೆಯಿಂದಾದ ಮನದ ಮಸಕದಿಂ ಅಸವಸದೆ ನೆಲದ ನಾಲಗೆಯಂ ಕೀೞ್ವಂತೆ ಬಾೞ್ಗಂಬಮಂ ಕಿೞ್ತು: **ಚಂದ್ರಪ್ರಭ**, ೯. ೧೧೧ ವ)

**ಸಪ್ತಮಾತೃಕೆ** – ಶಕ್ತಿದೇವತೆಯ ಏಳು ರೂಪಗಳು (ಚಾಮುಂಡಿ ಕರ್ಣಮೋಟಿ ಮಹಾಮಾಯಾಮೂರ್ತಿ ಚರ್ಚಿಯುಂ ಭೈರವಿಯಾನಾಮುಮಿವಕ್ಕುಂ ಬ್ರಹ್ಮಾಣೀಮುಖ್ಯರೆನಿಪ್ಪೇೞ್ವರುಂ ಮಾತೃಕೆಯರ್: **ಅಭಿಧಾವ**, ೧. ೧. ೧೯)

**ಸಪ್ತರಿಪುವರ್ಗ** – ಅಂತರಂಗದ ಏಳು ಶತ್ರುಗಳು (ಮದ ಮಾನ ಮಾಯ ಭಯ ಲೋಭ ವಿಷಾದ ಹರ್ಷ ಅಭ್ಯದಿತ ಅಂತರಂಗ ರಿಪುವರ್ಗ ಜಯಾವತಾರಂ: **ಕವಿರಾಮಾ**, ೩. ೨೨೭)

**ಸಪ್ತರ್ಧಿ** – [ಜೈನ] ಬುದ್ಧಿ, ತಪಸ್ಸು, ವಿಕ್ರಿಯೆ, ಔಷಧಿ, ಬಲ, ರಸ, ಅಕ್ಷೀಣ ಎಂಬ ಏಳು ಋದ್ಧಿಗಳು (ಆ ತನು ಸಪ್ತರ್ಧಿ ಸಮನ್ವೀತಂ ವ್ರತನಿಯಮಯುಕ್ತ್ವಗಸ್ಥೀಭೂತಂ: **ಶಾಂತಿಪು**, ೯. ೧೧೨)

**ಸಪ್ತರ್ಷಿಸಮಾಜ** – ಮರೀಚಿ, ಅತ್ರಿ, ಅಂಗೀರಸ, ಪುಲಸ್ತ್ಯ, ಪುಲಹ, ಕ್ರತು, ವಸಿಷ್ಠ ಎಂಬ ಋಷಿಗಳಿಂದ ಕೂಡಿ ಸಪ್ತರ್ಷಿಮಂಡಲ ಎಂಬ ಹೆಸರಿನ ನಕ್ಷತ್ರಪುಂಜ (ಮಿಳಿರ್ದು ಪೊಎವ ಸಪ್ತರ್ಷಿಸಮಾಜದಂತೆ ಸಂಚರಿಸಿ ಮಿಂಚುವಲಗುಗಂ: **ಪುಷ್ಪದಂಪು**, ೫. ೧೩ ವ)

**ಸಪ್ತವಾಸರ** – ಅಮೃತ, ಬಾಷ್ಪ, ವಹ್ನಿ, ದೇವ, ಅಂಡ, ಗರ್ಭ, ಸಾಮ್ನಾ ಎಂಬ ಏಳು ಮೂಲದ ಕುದುರೆಗಳನ್ನುಳ್ಳವನು, ಸೂರ್ಯ (ಶಾಂತ್ಯಭಿಷೇಕಪುರಸ್ಸರಮ ಪೂಜಾವಿಧಾನಮಂ ಸಪ್ತವಾಸರಾವಸಾನಂಬರಂ ಮಾಡಲ್ಗುಳ್ವುದುಂ: **ಶಾಂತಿಪು**, ೬. ೨೮ ವ)

**ಸಪ್ತವ್ಯಸನ** – ಸ್ತ್ರೀ, ದ್ಯೂತ, ಬೇಟೆ, ಮದ್ಯಪಾನ, ವಾಕ್ಪಾರುಷ್ಯ, ದಂಡಪಾರುಷ್ಯ, ಅರ್ಥದೂಷಣ ಎಂಬ ಏಳು ವ್ಯಸನಗಳು (ದೂರೀಕೃತ ಸಪ್ತವ್ಯಸನನುಂ ಮನುಚರಿತಾಷ್ಟಕ ವರ್ಗವಿಧಾನನುಂ ನವನಿಧಿಸಂಪೂರ್ಣನುಂ ಪಾಲಿತದಶದಿಶಾ ಚಕ್ರನುಂ ಏಕಾದಶರುದ್ರಾವತಾರನುಂ ದ್ವಾದಶರಾಜಾರ್ಕ ಪ್ರಯುಕ್ತಗುಪ್ತಚರನುಂ .. .. ವಸುಂಧರಾವಳಯಮಂ .. .. ನಿಜಭುಜಾಗ್ರದೊಳ್ ತಾಳ್ದು: **ಪಂಚತಂತ್ರ**, ೬೫ ವ); [ಜೈನ] ದ್ಯೂತ, ವೇಶ್ಯಾಸೇವನೆ, ಪರಸ್ತ್ರೀಗಮನ, ಚೌರ್ಯಕರ್ಮ, ಮಾಂಸಭಕ್ಷಣೆ, ಮದ್ಯಪಾನ, ಬೇಟೆ (ಮಕ್ಕಳ್ ಸಪ್ತವ್ಯಸನಾಭಿಭೂತರಾಗಿ ಬಾೞಿಂ ಕೆಟ್ಟುದುಮಂ ಶಾಸ್ತ್ರಜ್ಞರುಂ ಬುದ್ಧಿಯೊಡೆಯರುಂ ಯೋಗ್ಯರುಂ ಅಪ್ಪಂತು ಮಾಡಿಂ ಎಂದು ಮಕ್ಕಳಂ ತನಗೊಪ್ಪಿಸಿಯಟ್ಟಿದುಮಂ .. .. ಬಾಜಿಸಿ ನೋಡಿ: **ವಡ್ಡಾರಾ**, ೩, ಸಾ ೧೩)

**ಸಪ್ತಸಪ್ತಿ** – ಸಪ್ತವಾಸರ, ಸೂರ್ಯ (ಚೈತ್ಯಾಲಯಂ ಮತ್ತಮಿತ್ತುದು ಸಪ್ತಾಶ್ವನ ಸಪ್ತಸಪ್ತಿಗೆ ಸಮಗ್ರ ಪ್ರಗ್ರಹಾಶಂಕೆಯಂ: **ಪಂಪರಾ**, ೪. ೧೨೯)

**ಸಪ್ತಸ್ವರ** – ಸಂಗೀತದಲ್ಲಿನ ಷಡ್ಜ, ವೃಷಭ, ಗಾಂಧಾರ, ಮಧ್ಯ, ಪಂಚಮ, ಧೈವತ, ನಿಷಾದ ಎಂಬ ಏಳು ಸ್ವರಗಳು (ಭರತಮನೋದುವ ಸಪ್ತಸ್ವರಮಂ ಗುಣಿಯಿಸುವ ಬೀಣೆವಾಜಿಪ ವಿದ್ದಂಬರೆವ ಪರಚಕ್ರಮಿಕ್ಕುವ ಪರಿಹಾಸದೊಳಿರ್ಪ ಬಿನದಮವರ್ಗಳ ಬಿನದಂ: **ಅಜಿತಪು**, ೩. ೮)

**ಸಪ್ತಾಂಗ** – ಸ್ವಾಮಿ, ಅಮಾತ್ಯ, ಸುಹೃತ್, ಕೋಶ, ರಾಷ್ಟ್ರ, ದುರ್ಗ, ಬಲ – ಎಂಬ ರಾಜ್ಯಾಂಗಗಳು (ನಿನಗೆ ಶತ್ರುಸಂಕಟಮೆಂಬ ಶಂಕೆಯಿಲ್ಲದೆ ಸಪ್ತಾಂಗದೊಳ್ ಏಕಾಂಗಮಪ್ಪುದುಂ ವಿಕಳಮಾದುದಿಲ್ಲ: **ಪಂಚತಂತ್ರ**, ೯೨ ವ); ಮತ್ತೊಂದು ಪಟ್ಟಿ (ಅರಸಂ ಪೆರ್ಗಡೆ ಜನಪದವು ಅರಿದೆನಿಸುವ ಕೋಟೆ ಕೋಶಂ ಆಯತ್ತಂ ಬಂಧುರವೃತ್ತಮಿತ್ರಂ ಎಂದಿಂತು ರಾಜ್ಯಮಕ್ಕುಂ ವಿಚಾರಿಸಲ್ ಸಪ್ತಾಂಗಂ: **ಅಭಿಧಾವ**, ೧. ೧೧. ೪೮)

**ಸಪ್ತಾನೀಕ** – [ಜೈನ] ಸೌಧರ್ಮೇಂದ್ರನ ಏಳು ಸೇನಾಂಗಗಳು: ವೃಷಭ, ರಥ, ತುರಗ, ಮದಗಜ, ಪದಾತಿ, ನರ್ತಕ[ಕಿ], ಗಂಧರ್ವ (ಗಜರಥಾಶ್ವ ವೃಷಭ ಗಾಂಧರ್ವ ನರ್ತಕೀ ಪದಾತಿ ಲಕ್ಷಣಮಪ್ಪ ಸಪ್ತಾನೀಕಂ ಬೆರಸು ಬರೆ: **ಚಾವುಂಪು**, ಪು. ೧೯೭, ಸಾ. ೬–೭)

**ಸಪ್ತಾರ್ಚಿ** – ಕಾಳಿ, ಕರಾಳಿ, ಮನೋಜವೆ, ಸುಧೂಮ್ರವರ್ಣೆ, ಸುಲೋಹಿತೆ, ಉಗ್ರೆ, ಪ್ರದೀಪ್ತೆ ಎಂಬ ಏಳು ನಾಲಗೆಗಳಿಂದ ಕೂಡಿದುದು, ಬೆಂಕಿ, ಅಗ್ನಿ (ಚತುರಂತಕ್ಷಿತಿಕಾಂತೆ ಕೇಳ್ ಜಲಧಿ ಕೇಳ್ ಸಪ್ತಾರ್ಚಿ ಕೇಳ್ ತಾತ ಮಾರುತ ಕೇಳ್ ಮಾರುತಮಾರ್ಗ ಕೇಳ್: **ಗದಾಯು**, ೬. ೨೪)

**ಸಪ್ತಾಶ್ವ** – ಸೂರ್ಯ (ಚೈತ್ಯಾಲಯಂ ಮತ್ತಮಿತ್ತುದು ಸಪ್ತಾಶ್ವನ ಸಪ್ತಸಪ್ತಿಗೆ ಸಮಗ್ರ ಪ್ರಗ್ರಹಾಶಂಕೆಯಂ: **ಪಂಪರಾ**, ೪. ೧೨೯)

**ಸಪ್ತಿ** – ಕುದುರೆ (ಚೈತ್ಯಾಲಯಂ ಮತ್ತಮಿತ್ತುದು ಸಪ್ತಾಶ್ವನ ಸಪ್ತ ಸಪ್ತಿಗೆ ಸಮಗ್ರ ಪ್ರಗ್ರಹಾಶಂಕೆಯಂ: **ಪಂಪರಾ**, ೪. ೧೨೯)

**ಸಪ್ತೋರ್ವಿ** – ಭೂಲೋಕ, ಭುವರ್ಲೋಕ, ಸ್ವರ್ಗಲೋಕ, ಮಹರ್ಲೋಕ, ಜನಲೋಕ, ತಪೋಲೋಕ, ಸತ್ಯಲೋಕಗಳೆಂಬ ಸಪ್ತಲೋಕಗಳು (ಬಿಲ್ಲುಂ ಮೂಱುಂ ಮೊಳಂ ಅರೆಗೇಣ್ ಸಪ್ತೋರ್ವೀವಳಯಂಬರಂ: **ಶಾಂತಿಪು**, ೭. ೮೮)

**ಸಪ್ಪದ** – [ಷಟ್ಪದ] ದುಂಬಿ (ಸಿಪ್ಪಿಟ್ಟು ಕರೆದುಕೊಂಡುವು ಸಪ್ಪದಮುಪ್ಪಳದಿನೊಱೆವ ನಱಿವಂಡುಗಳಂ: **ಲೀಲಾವತಿ**, ೯. ೮೬)

**ಸಪ್ಪಸಿರ** – ಮುಷ್ಟಿ (ಮುಕುಂದಂ ಮುಗುಳ್ನಗೆ ನಗುತ್ತುಂ ಅಟ್ಟಿ ತಿಂಬ ದೆಯ್ವಕ್ಕೆ ಪಾಟಿಂಬಟ್ಟೆಯೆಂದೆೞೆದುಕೊಂಡು ಸಪ್ಪಸಿರದಿಂದ ಅಪ್ಪಳಿಸಲ್: **ನೇಮಿನಾಪು**, ೮. ೯೦ ವ)

**ಸಪ್ಪಳ** – [ಸತ್ಫಲ] ಒಳ್ಳೆಯ ಫಲ (ಸಪ್ಪಳಮಾದುದು ಕೆಳೆ ಎಂದು ಉಪ್ಪಳಮಂ ಚಂದ್ರನಬ್ಜಮಂ ರವಿಬಿಂಬಂ ಒಪ್ಪಿರೆ: **ಲೀಲಾವತಿ**, ೭. ೧೦೮)

**ಸಪ್ಪುಳ್** – ದನಿ, ಶಬ್ದ (ನಸುಮುಚ್ಚಿದ ವಿಲೋಚನಿಳಿದು ಪೆರ್ಮೊಲೆಯ ಕೆಲದೊಳ್ತನಿವ ಕಣ್ಬನಿಯ ಸಪ್ಪುಳ್ಗೆ ಪೆರ್ವಲಿಸಿ ಬೞಿದೆ ಕಂಪಿಸುವಳ್: **ಆಚವರ್ಧ**, ೪. ೫೮ ವ)

**ಸಪ್ರಪಂಚಂ** – ವಿವರವಾಗಿ, ಸವಿಸ್ತಾರವಾಗಿ (ತತ್ ಪ್ರಪಂಚಮಂ ಸಪ್ರಪಂಚಂ ಅಪರಾಜಿತಂ ಇಂತೆಂದು ಪೇೞಲ್ತಗುಳ್ದಂ: **ಶಾಂತಿಪು**, ೨. ೨೫ ವ)

**ಸಪ್ರಸಾದವಚನ** – ಅನುಗ್ರಹದ ಮಾತು (ನಿನ್ನಂತಪ್ಪಾಪ್ತಮಂತ್ರಿಪುತ್ರನಿಂದೆಮಗೆ ಮನೋರಥ ಸಿದ್ಧಿಯಾದುದೆಂದು ದವನಕನಂ ಸಪ್ರಸಾದವಚನಂಗಳಿಂ ಸಂತಸಂಬಡೆ ನುಡಿದು: **ಪಂಚತಂತ್ರ**, ೧೧೨ ವ)

**ಸಫಲೀಕೃತ** – ಸಾರ್ಥಕಗೊಳಿಸಿದ (ಅವನತರಿಪುಸಮಾಜನುಂ ಸಫಲೀಕೃತಾರ್ಥಿನಿಚಯಾಶನುಂ ವಿಶದಯಶಃಕಬಳಿತ ಅಶನನುಂ ಎನಿಸಿ: **ಚಂದ್ರಪ್ರಪು,** ೨. ೬೫)

**ಸಬ** – [ಶವ] ಹೆಣ (ಅದಟರ ಚೆನ್ನಪೊಂಗರ ಸಬಂಗಳ ತೊಟ್ಟುಟಿಯೊಳ್ ತೊಡಂಕಿ ನಿಲ್ಲದೆ ಪೊಱಮಟ್ಟ ತಮ್ಮ ಮನದೊಳ್ ಮಿಗೆ ಬೆಚ್ಚಿಸಿದಂತೆ ತೋಱುವ: **ಪಂಪಭಾ,** ೮. ೧೦೪)

**ಸಬರಿ** – [ಶಬರೀ] ಬೇಡಿತಿ (ತುಂಬಿಗಳ ಬಟೆವಿಡಿದು ಬನದೊಳೆಡೆಯಾಡುವ ಸಬರಿಯರ ನಡೆಯಂ ಏಡಿಸುವಂತೆ ಮೆಲ್ಲಡಿಯಿಡುವ ಪೆಣ್ಣಂಚೆಗಳ: **ಕಬ್ಬಿಗಕಾ,** ೧೭ ವ)

**ಸಬಳ** – ಕೊಂತ, ಭರ್ಜಿ (ಕೆಕ್ಕಡೆ ಸಬಳಂ ರಥಾಂಗಂ ಉರುಪಾಶಂ ಎನಿಪ್ಪವಱಿಂದಂ ಆಗಳ್ ಆರ್ದು ಅಡರ್ವರ್ ವೀರರ್: **ತ್ರಿಷಷ್ಟಿಪು,** ೫. ೯)

**ಸಬಳಿ** – ಸಬಳ ಹಿಡಿಯುವವನು (ಸದಂ ಕಂಡು ಸಬಳಿಗಳ್ ಕವಿಯೆ: **ತ್ರಿಷಷ್ಟಿಪು,** ೨೪. ३೭೯ ವ)

**ಸಬ್ಬವ** – ಮೇಳ (ಕವಿ ಗಮಕಿ ವಾದಿ ವಾಗ್ಮಿ ಪ್ರವರರ ಪಂಡಿತರ ನೆಗಟ್ದ ಸಬ್ಬವದವರೊಡನೆ ಅಂತು ಒಸೆದ ಅನ್ನವಾಸದೊಳ್ ಇರ್ದನಾಗಳ್ ಹರಿಗಂ: **ಪಂಪಭಾ,** ३. ೮೦); ಪ್ರೇಮಸಂಬಂಧೀ ಸಲ್ಲಾಪ (ನಗೆ ಸಬ್ಬವಂ ಬಿನದಂ ಎಂಬಿವಱಿಂ ಲಲಿತಾಂಗನಂ ಮನಂಗೊಳಿಸುವರ್ ಇಚ್ಚೆಕಾರ್ತನದ ಲಲ್ಲೆಯ ಸಗ್ಗದ ದೇಸೆಕಾರ್ತಿಯರ್: **ಆದಿಪು,** ೨. ೭೧); ನಗೆಗಾರ (ಬಳಸಿರ್ದ ಸಬ್ಬವರ್ ನುಡಿವ ಅರಸಾಳುಂ ಓಲಗಿಪ ನಿಗ್ರಗಳುಂ .. .. ಮಹಾಮರರ್: **ಶಾಂತಿಪು,** ೭. ೭೪); ಪರಿಹಾಸ (ಅಲಂಪು ಅಮರಿಯರಳ್ ನಗೆ ಸಬ್ಬವಂ ಅಮರಿಯರೊಳ್ ನಡೆವುದು ಅಮರನೇಂ ಸುಖಮಯನೋ: **ಶಾಂತಿಪು,** ೭. ೭೬)

**ಸಬ್ಬವಕಾಱ** – ನಕಲಿ, ಮೇಳಗಾರ (ದೇವನ ಬೇಂಟೆಯುಜ್ಜುಗದ ಸಬ್ಬವಕಾಱರ ಡಿಂಡಿಮಾರವಂ ತೀವಿದುದು ಆ ಮಹಾಕಟಕದೊಳ್: **ಶಬರಶಂ,** ३. ೨)

**ಸಬ್ಬವದಾಕೆ** – ಮೇಳದ ಕೆಳದಿ (ಮತ್ತಂ ಒಂದೆಡೆಯೊಳ್ ಕುಂಟಣಿಯ ಉಪರೋಧಕ್ಕೆ ಪಿರಿದೀವ ಮುದುಪನಂ ಉಟೆಯಲಂಜಿ ತನ್ನ ಬೇಸಱಂ ತನ್ನ ಸಬ್ಬವದಾಕೆಗೆ ಇಂತೆಂದಳ್: **ಪಂಪಭಾ,** ४. ೯೯ ವ)

**ಸಭಾಗೃಹ** – ಸಭೆ ನಡೆಯುವ ಸ್ಥಳ (ಖಗೇಂದ್ರ ಕನ್ನಿಕೆ ನೃಪೇಶ್ವರನಿದ್ದಸಭಾಗೃಹಂಬರಂ ಬಂದು: **ಶಾಂತಿಪು,** ४. ೮೦)

**ಸಭಾಜನ** – ಸಭೆಯಲ್ಲಿನ ಸದಸ್ಯರು (ಚತುರವಚನರಚನಾ ಪ್ರಪಂಚಕಂಚುಕಿತ ರೋಮಾಂಚಚುಂಚು ಸಭಾಶರೀರನುಮಪ್ಪ ದೂತಮುಖ್ಯನನಟ್ಟಿ: **ಶಾಂತಿಪು,** ೨. ೫೧ ವ)

**ಸಭಾಸದನ** – ಸಭಾಗೃಹ (ವಿವಿಧ ನರ್ತನವಿಧಾನದಾನೆಯಾಗಿ ನರ್ತಿಸೆ ಸಭಾಸದನರ್ ಪೊಗಟೆ ತತ್ಸಮಯದೊಳ್: **ಕರ್ಣನೇಮಿ,** ३. ೧೭೭ ವ)

**ಸಮಂಚಿತ** – ಕೂಡಿದ (ತಂತ್ರೀಸಮಂಚಿತ ವಿಪಂಚೀ ಮಂದ್ರ ತಾರಮಧುರಮೂರ್ಛನಾಸನಾಥ ಪ್ರಯೋಗಂಗಳುಮಂ: **ಆದಿಪು,** ೧೧. ೭೪ ವ)

**ಸಮಂಜಸ** – ಯೋಗ್ಯ ಪುರುಷ (ಸಂಜೀವಕನಂ ಸಾಧುಸಮಂಜಸನಂ ಮಾಡಿ ದುಷ್ಪನೆಂದೀಗಳೆ ಎನ್ನಂ ಜಡಿದು ನುಡಿರೆ ಕೆಮ್ಮನೆ ಕುಂಜರಮದಹರಣ ನಿನಗೆ ಮತ್ತಂ ಪೇಟ್ವೆಂ: **ಪಂಚತಂತ್ರ,** ೧೯३)

**ಸಮಂತಾಗಿಸು** – ಚೆಂದವಾಗಿಸು (ಎಲ್ಲವೊಂದಾಗಿಯೆ ದರ್ಪಕಂಗೆ ಸಮನಿಪ್ಪ ಜಗಜ್ಜಯದರ್ಪಮಂ ಸಂಂತಾಗಿಸಲೊಂದೆ ಸಾಲ್ಗುಂ: **ಚಂದ್ರಪ್ರಪು,** ೬. ೬३)

**ಸಮಂತು** – ಚೆಂದವಾಗಿ (ಪುದಿದೀ ಶ್ವೇತಾತಪತ್ರೋತ್ಕರದ ನಡುವಣಂ ವಜ್ರದಂತಂ ಸಮಂತು ಎತ್ತಿದ ಪಿಂಛಚ್ಛತ್ರಷಂಡಂಗಳ ನಡುವೆಸೆವಂ ವಜ್ರಬಾಹುಕ್ಷಿತೀಶಂ: **ಆದಿಪು,** ४. ೨೫)

**ಸಮಂದರ್** – [ಸಮಂ+ತರ್] ಸರಿದೂಗಿಸು (ನೋಡಿದರ್ ಘಟಕುಚೆಯರ್ ಸಮಂದರತುಮಾಕೆಯ ಭೂಷ್ಯಭೂಷಣಂಗಳಂ: **ಚಂದ್ರಪ್ರಪು,** ೬. ೬೭)

**ಸಮಂಬಡೆ** – ಹೋಲಿಕೆಯನ್ನು ಪಡೆ (ಚಕಿತಸರಂಗ ಸಂಘತತಿಯಿಂ ಪೊಱಪೊಣ್ಮುವ ಮುತ್ತು ದಿಗ್ವಧೂನಿಕರದ ತೊಟ್ಟ ಮುತ್ತಿನೊಳೊಡಂಬಡೆ ಸೂಸುವ ಶೀಕರಾಳಿ ತಾರಕಗಣದೊಳ್ ಸಮಂಬಡೆಯೆ: **ಜಗನ್ನಾವಿ,** ೧. ४४)

**ಸಮಕಟ್ಟು** – ಉದ್ದೇಶ (ನಿಮಗೆ ಪೊಡೆಮಟ್ಟು ಪೋಪೀ ಸಮಕಟ್ಟಂ ಬಂದೆಂ ಅಹಿತರೊಳ್ ಸಂಧಿಯನೇಂ ಸಮಕೊಳಿಸಲೆಂದು ಬಂದೆನೆ: **ಗದಾಯು,** ೫. ४೫); ವ್ಯವಸ್ಥೆಮಾಡು (ಜನಪದಂಗಳನೆಯ್ದೆ ಮಾಡಿ ಪುರಂಗಳಂ ಸಮಕಟ್ಟಿ: **ಆದಿಪು,** ೮. ೬೫); ಹೋಲಿಕೆ, ಒಂದೇ ರೀತಿಯ (ಸಾಸಿರ ದೀನಾರದ ಸಮಕಟ್ಟಿನ ನಾಲ್ಕು ಪೊಟ್ಟಳಿಗೆಯನೊಂದೆ ಮಾಡಿ ನಾಲ್ವರ ನಡುವಿರಿಸಿ: **ಸುಕುಮಾಚ,** ೫. ೮ ವ); ಹೊಂಚುಹಾಕು (ತಾಂ ಜಾತಿಯೊಳ್ ಪಶುವಪ್ಪುದಱಿಂ ಮೊಱೆಯಂ ಧರ್ಮಮುಮಂ ಅಱಿಯದೆ ಆ ಮೂಢಂ ನಿನ್ನ ರಾಜ್ಯಕ್ಕಾಸೆವಟ್ಟು ನಿನ್ನಂ ಕೊಂದಪೆನೆಂದು ಸಮಕಟ್ಟುತಿರ್ದಪಂ: **ಪಂಚತಂತ್ರ,** ೧೫೧ ವ); ನಿಶ್ಚಯ (ವಿವಾಹಮನಲ್ಲಿಯೆ ಮಾಟ್ಪ ಸಮಕಟ್ಟಿಂದಟ್ಟಿದಂ ನಿರ್ವರ್ತಿಪ ಮುಹೂರ್ತಮೆ ವಿವಾಹಮಂಗಳ ಮುಹೂರ್ತಂ: **ಆಚವರ್ಧ,** ೬. ೫೬ ವ)

**ಸಮಕಟ್ಟುಗೆಡು** – ಕ್ರಮ ತಪ್ಪಿಹೋಗು (ಚಾತುರ್ವಲಂಗಳ್ ಮೊದಲ ಸಮಕಟ್ಟುಗೆಟ್ಟು ತಡವರಿಸಿ ತಟ್ಟುಪೊಟ್ಟೆಂದು ಎಚ್ಚು ಮಿಟ್ಟುಂ ಇಱಿದು ತಱಿದು ಘಟ್ಟಿಸೆಯುಂ: **ಪಂಪಭಾ,** ೧೦. ೭೦ ವ)

**ಸಮಕೊಳಿಸು** – ಸರಿಮಾಡು (ಸಮಕೊಳಿಸಲಾರ್ತುದಿಲ್ಲ ದಲಮರೇಂದ್ರನದೊಂದು ಮುಖಪರಿಮ್ಲಾನತೆಯಂ: **ಆದಿಪು,** ೬. ೧೯); ಏರ್ಪಡಿಸು (ನಿಮಗೆ ಪೊಡೆಮಟ್ಟು ಪೋಪೀ ಸಮಕಟ್ಟಂ ಬಂದೆಂ ಅಹಿತರೊಳ್ ಸಂಧಿಯನೇಂ ಸಮಕೊಳಿಸಲೆಂದು ಬಂದೆನೆ: **ಗದಾಯು,** ೫. ४೫)

**ಸಮಕ್ಷ** – ಎದುರು (ಹುತವಹಸಮಕ್ಷದೊಳ್ ಕೆಯ್ನೀರೆಱೆದು ಪಾಣಿಗ್ರಹಣಂಗೆಯ್ದು: **ಪಂಪಭಾ,** ३. ೭४ ವ)

**ಸಮಗ್ರನ್** – ಪರಿಪೂರ್ಣ (ಮಹಾಕಥೆಗಳಂ ಪ್ರಥಿತಂಗಳನೊಂದೆ ಕಾವ್ಯದೊಳ್ ಬರೆದಂ ಇದೇಂ ಸಮಗ್ರನೋ ಕವೀಶ್ವರರೊಳ್ ಕವಿರಾಜಕುಂಜರಂ: **ನೇಮಿನಾಪು,** ೧. ३೯)

**ಸಮಚತುರಸ್ರ** – ಚಚ್ಚೌಕ (ದಿಶಾಭಾಗದೊಳ್ ಸಮಚತುರಸ್ರಮಾಗೆ ನೆಲನನಳೆದು: **ಪಂಪಭಾ,** ೨. ೬೫ ವ)

**ಸಮಚತುರಸ್ರ ಸಂಸ್ಥಾನ** – ಪ್ರಮಾಣಬದ್ಧ ಶರೀರವುಳ್ಳವನು (ಅಹಮಿಂದ್ರನಾಗಿ ಪುಟ್ಟಿ ಸಮಚತುರಸ್ರಸಂಸ್ಥಾನನುಂ .. .. ಸುಖಾನುಭವನಿರತನುಂ ಆಗಿ: **ಅಜಿತಪು,** ३. ೨ ವ)

**ಸಮಚಿತ್ತ** – ಸಮಾಧಾನಕರ ಮನಸ್ಸು (ತಮಗೆನಿತುಂ ಸಮಚಿತ್ತಮಿಲ್ಲದಿರ್ದೊಡಂ ಸಮ್ಮುಖಕ್ಕೆ ಬಂದ ಪ್ರಾಣಿಮಾತ್ರಕ್ಕೆ ಪರಾಙ್ಮುಖರಾಗಲಾಗದು: **ಪಂಚತಂತ್ರ,** ೮೫ ವ)

**ಸಮಚ್ಛಿದುರ** – ಸಮಾನ ಭಾಗವಾಗಿರುವ (ಮೃದುತಾಂಬೂಲ ಲತಾಪಿನದ್ಧವಿಲಸತ್ ಪೂಗದ್ರುಮೌಘಂ ಸಮಚ್ಛದುರ ಏಲಾವ್ರತತಿಪರೀತ ವಿಪುಲ ಶ್ರೀಖಂಡಭೂಜಂ .. .. ಮಳಯಕ್ರೀಡಾಚಳಂ: **ಶಾಂತಿಪು,** ೫. ೧೪೨)

**ಸಮಜ** – ಸಮೂಹ (ವಿಜಯಕಟಕಸಮದಗಜಸಮಜಂಗಳ ಕರ್ಪುಗಳೆಲ್ಲಮಂ ನೆರಂಬಡೆದು: **ಆದಿಪು,** ೧೨. ೪ ವ)

**ಸಮತ್ವೀಭಾವ** – ಸಮತಾಭಾವನೆ (ಅನುಪ್ರೇಕ್ಷೆಗೆಯ್ಯುತ್ತುಂ ಆರ್ತು ಅಣಮಿ ಸಮತ್ವೀಭಾವದಿಂದಂ ಬಿಡುವುದೊಡಲನವ್ಯಾಕುಲಂ ಭವ್ಯಜೀವಂ: **ಸುಕುಮಾಚ,** ೬. ૩೮)

**ಸಮತ್ಸರತ್ವ** – ಹೊಟ್ಟೆಕಿಚ್ಚಿನಿಂದ ಕೂಡಿರುವುದು (ಕ್ರಮದೆ ಪರವ್ಯಪದೇಶಂ ಸಮತ್ಸರತ್ವಂ .. .. ಅತಿಕ್ರಮಮಕ್ಕುಂ ಪಾತ್ರದಾನಮಂ ಕುಡುವೆಡೆಯೊಳ್: **ಸುಕುಮಾಚ,** ೬. ೨೨)

**ಸಮದ** – [ಸ+ಮದ] ಮದದಿಂದ ಕೂಡಿದ (ಸಮದಗಜಗಮನೆಯರ್ .. .. ನಡೆಯಲಾಱದೆ ಸುಟೆದರ್: **ಪಂಪಭಾ,** ೭. ೮೪); [ಸಮ+ದ] ಸಮಾನವಾಗಿ ದಾನಮಾಡುವವನು (ಆ ನೃಪಂ .. .. ಸಮದನಾಗಿಯುಂ ಸಮದನಲ್ತು: **ಪುಷ್ಪದಂಪು,** ೯. ೩೯ ವ)

**ಸಮದಂಡಿ** – ಸಮಜೋಡಿ (ಕಡಂಗಿ ಕಾದಿದಂ ಇವಂ ಸಮದಂಡಿಯೊಳ್ ಎನ್ನೊಳ್ ಅರ್ಜುನಂ: **ಶಬರಶಂ,** ೪. ೬೬)

**ಸಮದತ್ತಿ** – [ಜೈನ] ಸಮಾನಸ್ಕಂಧನಿಗೆ ಕೊಡುವ ದಾನ (ತನ್ನ ಸಮಾನಮಪ್ಪ ಕುಲಶೀಲಂಗಳ ವ್ರತಸಂಪನ್ನರ್ಗೆ ಕರಿತುರಗಮಣೀಭೂಷಣಹಿರಣ್ಯಭೂಮಿಕನ್ಯಾದಿವಸ್ತುಗಳಂ ಕುಡುವ ಸಮದತ್ತಿಯುಂ: **ಸುಕುಮಾಚ,** ೬.೨೫ ವ)

**ಸಮಧಿಕೃತ** – ಅಧಿಕಾರವನ್ನು ಪಡೆದ[ವನು] (ತೂರ್ಯ ತ್ರಯಸಮಧಿಕೃತಂ ತಾನೆ ನಾನಾ ಪ್ರಕಾರ ಸ್ತುತಿಕಾರಂ ತಾನೆ: **ಚಂದ್ರಪ್ರಪು,** ೧೫. ೧೨೨)

**ಸಮನಂತರಂ** – ಆನಂತರ (ಅಂತು ಶ್ರುತವಿಶ್ರುತಶ್ವಣ ಶ್ರೀಸಮಾಶ್ರಯಣನಾಗಿ ಸಮನಂತರಂ: **ಚಂದ್ರಪ್ರಪು,** ೧೧. ೨ ವ)

**ಸಮನಿಸು** – ಉಂಟಾಗು (ದೊರೆಕೊಂಡ ಮಾಘಮಾಸಂ ಬರೆ ಕೃಷ್ಣಚತುರ್ದಶೀ ದಿನಂ ಸಮನಿಸೆ ಇತ್ತುರುದೇವಂ ಮುಕ್ತಿವಧೂವರತೆಯಂ ಅಭಿಜಿನ್ಮುಹೂರ್ತದೊಳ್ ಕೈಕೊಂಡಂ: **ಆದಿಪು,** ೧೬. ೫೧); ಕೂಡಿಕೊ, ಸೇರು (ಸಾನಂದದಿಂ ಸ್ತುತಿಗೆಯ್ದು ಸೌಧರ್ಮೇಂದ್ರಂ ಶಚೀದೇವಿ ಸದ್ಭಕ್ತಿರಸಂ ಸಮನಿಸುವ ಸುರಸರಿತ್ ಸಲಿಲಾದಿವಿಶಿಷ್ಟ ಅಷ್ಟವಿಧಾರ್ಚನೆಗಳಿಂ ಜಗತ್ರಯಾರ್ಚಿತನಂ ಅರ್ಚಿಸಿ: **ಶಾಂತೀಶ್ವಪು,** ೧೬. ೯೮ ವ)

**ಸಮನ್ವಿತ** – ಬೆರೆತುಕೊಂಡ[ದ್ದು] (ಒಂದು ದಿವಸಂ ಅವನಿಪತಿ ದಿವಪ್ರಥಮಯಾಮದೊಳ್ ನರ್ಮಸಚಿವಸಮನ್ವಿತಂ ವಿದ್ವಜ್ಜನಪರಿವೃತಂ ಮಂಗಳಗಾಯಿನೀ ಮಧುರಗೀತಮಂ ಆಲಿಸುತ್ತಿರ್ಪನಂ: **ಮಲ್ಲಿನಾಪು,** ೫. ೨೬ ವ)

**ಸಮನ್ವೀತಮನ** – ಏಕಾಗ್ರಚಿತ್ತವುಳ್ಳವನು (ನಿಷ್ಪಂದನಾಗಿ ಸಮನ್ವೀತಮನಂ ಗುಣಂಗೊಳಿಸಿದಂ ಯೋಗೀಂದ್ರ ವೃಂದಂಗಳಂ: **ಆದಿಪು,** ೬. ૩೪)

**ಸಮಪಾದ** – ಸಮನಾಗಿಟ್ಟ ಕಾಲು (ಗೋಪಾಲಕರೊಡನೆ ಗೆಡೆಯಾಗಿ ಲಘುಕ್ರಮದೆ ಸಮಪಾದದಿಂ ಲಂಘಿಸಿ ಗೆಲ್ಲಂಗೊಂಡು: **ಜಗನ್ನಾವಿ,** ೪. ೫೨ ವ); ಯುದ್ಧದಲ್ಲಿ ನಿಲ್ಲುವ ಒಂದು ಭಂಗಿ, ಮಧ್ಯದಿಂದ ಸಮಾನ ಅಂತರದಲ್ಲಿ ಕಾಲುಗಳನ್ನಿಟ್ಟು ನಿಲ್ಲುವುದು (ಅಳೀಢ ಪ್ರತ್ಯಾಲೀಢ ಸಮಪಾದ ವೈಷ್ಣವ ಮಂಡಲಾಗ್ರಮೆಂಬ ಪಂಚವಿಧಸ್ಥನಕೃತಂಗಳೊಳಂ .. .. ನಿಂದು: **ಗದಾಯು,** ೮. ೧ ವ)

**ಸಮಪಾರ್ಶ್ವ** – ಎಲ್ಲ ಕಡೆ ಪ್ರಮಾಣಬದ್ಧವಾಗಿ ಬೆಳೆದ ಆನೆ (ಸಮಪಾರ್ಶ್ವನು ಅಜಕುಕ್ಷಿಯುಂ ಗೋಧೂತ್ರಿಷ್ಟನುಂ ಮೋಹಜಘನಾಪರನುಂ .. .. ಅಪ್ಪ ವಿಜಪರ್ವತ ಗಜೇಂದ್ರಂ: **ಆದಿಪು,** ೧೨. ೫೬ ವ)

**ಸಮಯ** – ಮತಧರ್ಮ (ಸಮಯವಿಚಾರಮೆಂಬುದು ಮಹಾಗಹನಂ: **ಶಾಂತಿಪು,** ೮. ೧૩೨ ವ); ತತ್ವ, ಸಿದ್ಧಾಂತ (ಅಭಿಧಾನ ಲಿಂಗಾಂಗೀಕೃತಮಪ್ಪ ನಿಘಂಟುಸಮಯಮುಮಂ .. .. ಉಪದೇಶಂಗೆಯ್ಯುತ್ತುಂ: **ಶಾಂತಿಪು,** ೧೦. ೯೦ ವ)

**ಸಮಯಬಾಹ್ಯ** – [ಮತದಿಂದ] ಬಹಿಷ್ಕೃತ (ಇದಂ ಮಹಾಜನಂಗಳ್ ಕಂಡರಪ್ಪೊಡೆ ಸಭಾಜನಕ್ಕಂ ಸಹಪಙ್ತಿಗಂ ಪೊಱಗೆಂದು ಸಮಯಬಾಹ್ಯನಂ ಮಾಟ್ಪರ್: **ಪಂಚತಂತ್ರ,** ೨೧૩ ವ)

**ಸಮಯಿ** – ಧರ್ಮಾನುಯಾಯಿ (ಸಮಯಿಗಳುಂ ಚಾತುರ್ವರ್ಣಮುಂ ಉಚಿತಚರಿತ್ರಮಂ ಬಿಸುಟ್ಟು ಆದಂ ಪೊಲ್ಲಮೆಯೊಳ್ ಸಲೆ ನಡೆವರ್ ದುಷ್ಷಮಮೆಂಬ ಅಯ್ದನೆಯ ಕಾಲದೊಳ್: **ಆದಿಪು,** ೧೫. ૩೬)

**ಸಮರ** – ಯುದ್ಧ (ಅನೇಕ ನೃಪ ಶಿರಃ ಕಪಾಳ ಶಕಳ ಜರ್ಜರಿತಮುಂ ಪರಸ್ಪರ ಸಮರ ರಭಸಸಮುತ್ಸಾರಿತಮುಂ: **ಪಂಪಭಾ,** ೧૩. ೫೧ ವ)

**ಸಮರತ** – ಸಮಾನ ಕಾಮವಾಂಛೆಯುಳ್ಳ (ಚೆಲ್ವುವೆತ್ತೊಪ್ಪುವ ಶಯ್ಯೋದ್ದೇಶದೊಳ್ ಪೆರ್ಚಿದ ಸಮರತಲೀಲಾ ವಿನೋದಂಗಳಿಂದುತ್ಸವಮಂ ತಾಳ್ದುತ್ತುಂ: **ಚಂದ್ರಪ್ರಪು,** ૩. ૩೭)

**ಸಮರಥ** – ಎದುರಾಳಿಯೊಡನೆ ಸಮಾನವಾಗಿ ಹೋರಾಡುವ ರಥಿಕ (ಮಡಿದರಂದು ಅತಿರಥ ಸಮರಥರ್ ಆ ಮಹಾರಥರ್ ಅರ್ಧರಥರ್ಕಳ್: **ಶಾಂತಿಪು,** ೪. ೧೨)

**ಸಮರಾನಕ** – ಯುದ್ಧ ಭೇರಿ (ಎಸೆವ ಸಮರಾನಕಂ ಸೊಗಯಿಸುವ ಉತ್ಸವತೂರ್ಯಮೊಗೆಯೆ: **ಶಾಂತಿಪು,** ೪. ೭૩)

**ಸಮವಕಾರ** – ದಶರೂಪಕಗಳಲ್ಲಿ ಒಂದು ಪ್ರಭೇದ, ದೇವಾಸುರ ಯುದ್ಧವಸ್ತುವಿನ ಮೂರಂಕ ಉಳ್ಳದ್ದು (ಭಗವಜ್ಜನ್ಮಾಭಿಷೇಕಸಂಬಂಧಿಯಾಗೆ ತನ್ನ ಪೊಸತೆ ಸಮೆದ ಸಮವಕಾರರೂಪಕಮುಮಂ .. .. ಸುರಾಸುರಸಭೆಗಂ ಮೆಱೆಯಲೆಂದು: **ಆದಿಪು,** ೭. ೧೧೫ ವ)

**ಸಮವತೀರ್ಣ** – ಕಾಣಿಸಿಕೊಂಡ (ಆ ತ್ರಿಲೋಕತಿಲಕನ ಜನ್ಮೋತ್ಸವದೊಳ್ ಏಕಸಮಯಸಮವತೀರ್ಣ ಸರ್ವರ್ತುಕ ನಂದನ ವಿಕಸನದ ಅಶೋಕ .. . ವಿಕಸಿತ ಸಿಂದುವಾರ ಪ್ರಬುದ್ಧ ಲೋಧ್ರಂಗಳಿಂ: **ಆದಿಪು,** ೭. ૩೬ ವ)

**ಸಮವಯಸ** – ಒಂದೇ ಓರಗೆಯವನು (ಸಮವಯಸರ್ ಕೆಲದೊಳ್ ಮುನಿಕುಮಾರರಿರ್ವರ್ ಬರುತುಮಿರೆ ಬಹುವಿದ್ಯಂ ಕಮಳಾಕರಮಂ ಮೀಯಲ್ ಕುಮಾರಂ ಬಂದಂ ಸನತ್ಕುಮಾರನ ದೊರೆಯಂ: **ಕಾದಂಬ,** ೧. ೧೬೮)

**ಸಮವರ್ತಿ** – ಎಲ್ಲರ ಜೊತೆಯೂ ಸಮಾನ ರೀತಿಯಲ್ಲಿ ನಡೆದುಕೊಳ್ಳುವವನು, ಯಮ (ಯಮಂ ಅರ್ಕಸುತಂ ಧರ್ಮಂ ಯಮುನಾಸಹಜಂ ಪರೇತವಿಭು ದಂಡಧಾರಂ ಶಮನಂ ಪಿತೃಪತಿ ಕಾಲಂ ಸಮವರ್ತಿ ಕೃತಾಂತಂ ಅಂತಕಂ ಕೀನಾಶಂ: **ಅಭಿಧಾವ,** ೧. ೧. ೪೧)

**ಸಮವರ್ತಿಪುತ್ರ** – ಯಮನ ಮಗ, ಧರ್ಮರಾಯ (ಶಿವಭಕ್ತಿಯಿಂ ಆ ಸಮವರ್ತಿಪುತ್ರನಂತೆ ಉರುತರ ಧರ್ಮದಿಂದ ಅಮರನೀತಿ: **ತ್ರಿಷಷ್ಟಿಪು,** ೯. ೫)

**ಸಮವಸರಣ** – [ಜೈನ] ಕೇವಲಜ್ಞಾನವನ್ನು ಪಡೆದ ಮೇಲೆ ತೀರ್ಥಂಕರನು ಉಪದೇಶ ಮಾಡಲು ಇಂದ್ರನ ಆಣತಿಯಂತೆ ಕುಬೇರನು ರಚಿಸುವ ಮಂಟಪ (ಭೂನಾಥಂ ಪೊಕ್ಕಂ ಭವ್ಯಾನಂದನ ಸಮವಸರಣಭೂಮಂಡಳಮಂ: **ಶಾಂತಿಪು,** ೮. ೧೫೬)

**ಸಮವಸರಣಮಂಡಲ** – ಸಮವಸರಣ ಇರುವ ಜಾಗ (ಶಚಿಗಮರೇಂದ್ರಂ ಸಮವಸರಣಮಂಡಲಮಂ ಅನುಕ್ರಮದಿಂದೆ ತೋಱಿಯಿಂ: **ಅನಂತಪು,** ೧೦. ೧೯)

**ಸಮವಸೃತಿ** – ಸಮವಸರಣ (ಕೈಳಾಸಗಿರೀಂದ್ರಸ್ಥಿತ ಸಮವಸೃತಿಯಂ ಸಂಸೃತಿಲತಾವಿಚ್ಛೇದಿಯಂ ಪೊಕ್ಕು: **ಆದಿಪು,** ೧೫. ೨೧ ವ)

**ಸಮವಾಯ** – ಬೇರ್ಪಡಿಸಲಾರದಂತೆ ಕೂಡಿಕೊಂಡಿರುವುದು (ಸಮವಾಯಮಪ್ಪುದಲ್ತೆಂದು ಮನಂ ಬಸಮಾಡಿ ದೋಷವಿರಹಿತಂ ಆಪ್ತಂ ಕ್ರಮದೆ ಆಪ್ತನೆ ಪೇೞ್ದುದೆ ಆಗಮಂ: **ಆದಿಪು,** ೫. ೫೪); ಸಂತತ (ಸಮವಾಯಂ ಧರೆಯೆಯ್ದೆ ಯೌಮಯಂ ನೀರೈದೆ .. .. ಘನವೇಣೀ ನೀಲರೋಚಿರ್ಮಯಂ: **ಲೀಲಾವತಿ,** ೧೨. ೭); ಸಂಧಿ, ಒಪ್ಪಂದ (ಸಮವಾಯಂ ಅಹಿತರೊಳ್ ಸಂಧಿಮಾಡಿ ಯಮಸೂನು ಪೇೞ್ ವನವಾಸವೆ ದಲ್ ನಿಮಗೆ: **ಗದಾಯು,** ೧. ೫೮); ಸೇರಿರುವುದು (ಸಮವಾಯಂ ಮನುಜತ್ವಮಾದೊಡಂ ಅಘವ್ಯಾಪಾರದಿಂ ನೀಚಗೋತ್ರಮುಂ ಆಕ್ರಂದನಮುಂ .. .. ಸಮನಿಕುಂ ಸಂಸಾರಿಗವ್ಯಾಕುಲಂ: **ಸುಕುಮಾಚ,** ೫. ೩೫)

**ಸಮವೃತ್ತಿ** – ಸಮಚಿತ್ತತೆ (ಗುಣಮಿದು ದೋಷಮಿದೆಂಬೀ ಗಣಿದಮನೆತ್ತಱಿಗುಂ ಅಶ್ರುತಪ್ರಕೃತಿಜನಂ ತೃಣಸಸ್ಯಘಾಸ ವಿಷಯಪ್ರಣಯಂ ಸಮವೃತ್ತಿಯಪ್ಪವೋಲ್ ಮೃಗಗಣದೊಳ್: **ಕವಿರಾಮಾ,** ೧. ೮)

**ಸಮಶೀಲ ವ್ಯಸನೇಷು ಸಖ್ಯಂ** – ಸಮಾನ ದುಃಖಿಗಳಾದವರಲ್ಲಿ ಸ್ನೇಹ (ಎಂದು ಸಮಶೀಲ ವ್ಯಸನೇಷು ಸಖ್ಯಂ ಎಂದವರ ದೀನಾನನಂಗಳಂ ನೋಡಲಾಱದೆ ಮನಮಂ ಬಲಿದು ನಿಲೆ: **ಅಜಿತಪು,** ೧೦. ೫೨ ವ)

**ಸಮಸಮಾಯೋಗ** – ಹೊಂದಾಣಿಕೆ (ಸದೃಶಾಕಾರರ್ ಇವರಂ ಕೂಡಿ ಪಯೋರುಹಜಂಗೆ ಅಕ್ಕೆ ಸಮಸಮಾಯೋಗಯಶಂ: **ಆದಿಪು,** ೪. ೨೯)

**ಸಮಸಲ್** – ಸಮಾನವಾಗಿ ಕೂಡಿಕೊ, ಉಂಟಾಗು (ಸಮಸಂದುದಾ ಪರಮಯೋಗಿಗೆ ಯೋಗನಿಯೋಗ ಭಾವನಂ: **ಆದಿಪು,** ೧೦. ೧೪)

**ಸಮಸ್ಕಂಧ** – ಸರಿಸಮನಾದವನು (ಅವರ್ಗಳೇಂ ಬಿಲ್ಲೊಳ್ ಸಮಸ್ಕಂಧರೋ: **ಕರ್ಣನೇಮಿ,** ೧೨. ೨೩೮)

**ಸಮಸ್ತಭಾರತ** – ಇಡೀ ಭಾರತ ಕಾವ್ಯ, ಸಮಕಾಲ ಪ್ರಸ್ತುತ ಭಾರತ (ಕತೆಯ ಮೆಯ್ಗಿಡಲೀಯದೆ ಮುಂ ಸಮಸ್ತಭಾರತಮಂ ಅಪೂರ್ವಮಾಗೆ ಸಲೆ ಪೇೞ್ದ ಕವೀಶ್ವರರಿಲ್ಲ: **ಪಂಪಭಾ,** ೧. ೧೧)

**ಸಮಸ್ತವೇದಿ** – ಸರ್ವಜ್ಞ (ಸಕಲತ್ಯಾಗಿ ಸಮಸ್ತವೇದಿ ಭುವನಾರಾಧ್ಯಂ ಜಿನಂ ಕಥಾನಾಯಕನಾಗೆ ತನ್ನಚರಿತಮಂ ಪೇೞ್ವೆಗೆ ಕೈಸಾರ್ಗುಂ .. .. ನಿಶ್ರೇಯಸಶ್ರೀಪದಂ: ೧. ೪೮)

**ಸಮಱಿಕೊಳ್** – ನಯಗೊಳ್ಳು, ಲೆಕ್ಕಾಚಾರ ಹಾಕು [ಮುನ್ನ ಸಾಮಮನೆಮ್ಮ ಮನನ್ನೋಡಲ್ ನುಡಿದು ಭೇದಮಂ ದಂಡಮುಮಂ ನಿನ್ನಱಿವನಿತಂ ನುಡಿದೆ ಇದೇನ್ನುಡಿಗಳೊ ಸಮಱಿಕೊಂಡ ನುಡಿಗಳ್ ನಿನ್ನಾ: **ಆದಿಪು,** ೧೪. ೬೪)

**ಸಮಱು** – ನಯಗೊಳಿಸು (ಶ್ರುತಸ್ಕಂಧಮಾದಱಿವಿಂ ಗಣನಾಯಕರ್ ಸಮಱೆ ಭವ್ಯಶ್ರೇಣಿಗೆ ಅವ್ಯಾಜದಿಂದಱಿಯಲ್ಕೆ: **ಆದಿಪು,** ೧. ೩೯); ಮಟ್ಟ ಮಾಡು, ತಿದ್ದು (ಮಾನೋನ್ನತರ್ ಈಗಳುಂ ಅಟ್ಟಿಱಿಕೊಳ್ ಎನ್ನಂ ಸಮಱಲ್ಕೆ ಬಂದರ್: **ಆದಿಪು,** ೫. ೬೭); ಶುಚಿಮಾಡು (ಸಮಱೆ ಕಸಗಳೆದ ತೆಱದಿಂದಮೆ ಸತ್ತರ್ ಮತ್ತೆ ತಂದೆಯುಂ ತಾಯುಮನಾಯಮರಕ್ಷಂ ನುಂಗಿದನೆನೆ: **ಕರ್ಣನೇಮಿ,** ೧೪. ೧೨೭); ಕತ್ತರಿಸು (ಭುಜಾದಂಡ ಕೃಪಾಣದಿಂ ಸಮಱೆ ಕಂಟಕಮಂ: **ಪಂಪರಾ,** ೩. ೧೪); ತಿದ್ದು (ಅಭವ್ಯರುಂ ತಮ್ಮನೆನಿತು ಸಮಱಿದೊಡಂ ನಡೆದೊಡಂ ಪ್ರಸಿದ್ಧರಾದೊಡಂ ನಿರಂತರ ಸುಖಪ್ರಾಪ್ತರಲ್ಲ ಎಂಬುದಂ ತನ್ನೊಳ್ ಬಗೆಯುತ್ತುಂ: **ಧರ್ಮಾಮೃ,** ೫. ೧೧೨ ವ); ನಾಶಮಾಡು (ನಿನಗರಸ ಬಹಿರ್ಮಂಡಲಮನೆ ಸಮಱಲ್ಕಿನಿತು ಬರಿಸಮುಂ ಪೋದುವು: **ಆದಿಪು,** ೧೪. ೧೫)

**ಸಮಱುಗೆ** – ಅಲಂಕಾರ (ಸಮಱುಗೆಯಿಲ್ಲದ ಮುಱುಕಮುಂ ಅಮರ್ದಿರೆ ಕೆಯ್ಗೆಯ್ಯದೊಪ್ಪುವಂದಮುಂ ಅವಳಾ ನೆವಮಿಲ್ಲದ ದರಹಸಮುಂ ಸಮದಾಲಸಲಲಿತಗಮನಮುಂ ಸೊಗಯಿಸುಗುಂ: **ಕವಿರಾಮಾ,** ೩. ೧೬೯)

**ಸಮಾಕರ್ಣಿತ** – ಚೆನ್ನಾಗಿ ಕೇಳಿಸಿಕೊಂಡ (ಭರತೇಶ್ವರಂ ತಾನುಂ ಮುನ್ನೆ ಭಟ್ಟಾರಕರ ಸಮಕ್ಷದೊಳ್ ಸಮಾಕರ್ಣಿತ ಉಪಾಸಕ ಅಧ್ಯನನಪ್ಪುದಱಿಂದಂ: **ಆದಿಪು,** ೧೫. ೧೩ ವ)

**ಸಮಾಖ್ಯೆ** – ಹೆಸರು (ಮನ್ಮಥಂ ಸ್ತುತಿಯಿಸಿ ಮಾಮರಕ್ಕೆ ಕುಜರಾಜ ಸಮಾಖ್ಯೆಯನಿತ್ತಂ ಅಟ್ಟೆಯಿಂ: **ಚಂದ್ರಪ್ರಪು,** ೭. ೪೬)

**ಸಮಾಗಮ** – ಸೇರುವಿಕೆ (ಕಾದಂಬರೀ ಸಮಾಗಮ ಔತ್ಸುಕ್ಯದೊಳಂ ಎಲ್ಲಯುಂ ತಡೆಯದೆ: **ಕಾದಂಸಂ,** ೭. ೬ ವ)

**ಸಮಾಜ** – ಗುಂಪು, ರಾಶಿ (ನಿಕುರುಂಬಂ ನಿವಹಂ ವ್ರಂ ಸಮುದಯಂ ಬೃಂದಂ ನಿಕಾಯಂ ಚಯಂ ನಿಕರಂ ಸಂಹತಿ ಸಂಚಯಮ ಸಮಿತಿ ಸಂದೋಹಮ ಸಮಾಜಂ ಕುಲಂ ಪ್ರಕರಂ ಸಂಕುಲಂ ಉತ್ಕರಂ ತತಿ ಗಣಂ ಪ್ರವರ್ಗಂ ಕದಂಬಕಂ ಓಘಂ ತತಿ ವಾರಂ ಆವಳಿ ಸಮೂಹಂ ವ್ರಾತಮೇಕಾರ್ಥಂ: **ಅಭಿಧಾವ,** ೨. ೧. ೨೭)

**ಸಮಾಧಿ** – ಯೋಗದ ಎಂಟನೆಯ ಅವಸ್ಥೆ, ದೇವರಲ್ಲಿ ಲೀನಗೊಳ್ಳುವುದು (ಸಮುಪಾತ್ತ ಸತ್ತಪೋವಿಘ್ನ ಸಂಬೋಧಿಯಪ್ಪ ಸಮಾಧಿಯುಂ; **ಚಂದ್ರಪ್ರಪು,** ೧೧. ೨೨ ವ); ಧ್ಯಾನ (ಸಮಾಧಿ ಸಂಪ್ರಣಿಧಾನಂ ತತ್ವಾದಿಚಿಂತನಂ ತಾಂ ಧ್ಯಾನಂ: **ಅಭಿಧಾವ,** ೧. ೩. ೧೮) [

**ಸಮಾಧಿಮರಣ** – [ಜೈನ] ಮನಶ್ಶಾಂತಿಯಿಂದ ಮರಣವನ್ನೈದುವುದು (ಈ ಭವದೊಳ್ ತಪಂಬಟ್ಟು

ಮುಕ್ತಾವಳೀ ತಪಸ್ತಪನತಾಪದಿಂ ಸಮಾಧಿಮರಣದಿಂದ ಈಶಾನಕಲ್ಪದೊಳ್ .. .. ದೇವನಾಗಿ ಬಂದು: **ಶಾಂತಿಪು,** ೯. ೧೪ ವ)

**ಸಮಾಧಿವಿಧಿ –** ಸಮಾಧಿಮರಣ (ಪಂಚಪದಂಗಳನೋದುತಿರ್ಪ ನಾಲಗೆ ಗಡಮೇಂ ಸಮಾಧಿವಿಧಿಯಂ ನೆಱೆ ತಾಳ್ದಿದನೋ ಮಹಾಬಳಂ: **ಆದಿಪು,** ೨. ೬೦)

**ಸಮಾನ –** ಒಂದೇ ಬಗೆಯದು, ಹೋಲಿಕೆಯುಳ್ಳುದು (ಸದೃಶಂ ಸಮಂ ಸಮಾನಂ ಸದೃಕ್ಷದೃಕ್ಷಂ ನಿಭಂ ಪ್ರತಿಂ ತದನುವಿಧಾಯಿ ತದಾಭಂ ತದುಪಮಂ ಎಂದಱಿದುಕೊಳ್ಗೆ ತುಲ್ಯಾರ್ಥಂಗಳ್; **ಅಭಿಧಾವ,** ೨. ೧. ೩೬)

**ಸಮಾರೋಪಿತ –** ಮೇಲೇರಿಸಿದ (ಆ ಪೊಟಲನಾಳ್ದಂ ಅಖಿಳಮಹೀಪತಿಮದದಂತಿದಂತಖಂಡನೆಗೆ ಸಮಾರೋಪಿತ ಕೃಪಾಣಧಾರಾವ್ಯಾಪಾರಂ ಸ್ತಿಮಿತಸಾಗರಂ ಮಂಡಲಿಕಂ: **ಶಾಂತಿಪು,** ೧. ೬೭)

**ಸಮಾಲಿಂಗಿತ –** ಚೆನ್ನಾಗಿ ಬೆರೆತ (ಸುಮಿತ್ರಂ ನಿಶ್ಚಿಂತಂ ನಿರ್ವೃತಿಸ್ವಾಂತಂ ರಾಜ್ಯಲಕ್ಷ್ಮೀಸಮಾಲಿಂಗಿತವ್ಯಾಹತದಕ್ಷಲಕ್ಷಣ ಶಕ್ತಿತ್ರಯ ಪ್ರಭವನಾಗಿ: **ವರ್ಧಮಾಪು,** ೮. ೧ ವ)

**ಸಮಾಲೋಕ –** ನೋಟ (ಬಿಸುಸುಯ್ಯಿಂದ ಇರ್ಪುಗೆಟ್ಟಿರ್ದ ಅಧರಕಿಸಲಯಂ .. .. ಶೂನ್ಯಸಮಾಲೋಕಂ .. .. ನೆಗೆಟ್ಟಿರೆ ವಿರಹಾಕ್ರಾಂತೆ ತತ್ಕಾಂತೆಯಿರ್ದಳ್: **ರಾಜಶೇವಿ,** ೭. ೭೬)

**ಸಮಾವಸ್ಥೆ –** ಸ್ಥಿತಿ (ಇಲ್ಲಿ ಆಸನ್ನವಿನಿಪಾತಮಾಗಲಿರ್ದ ಕಾರ್ಯದ ಸಮಾವಸ್ಥೆಯಂ ನೀನಱಿಯದಿರ್ದೆ: **ಪಂಚತಂತ್ರ,** ೨೦೬ ವ)

**ಸಮಾವಾಸ –** ಬಿಡಾರ (ಆ ವಿಜಿಗೀಷುವ ಸೈನ್ಯಸಮಾವಾಸದಿಂ ಅಧಿಕಮೊಪ್ಪಿ ತೋಱಿದುದು .. .. ಮಲಯಪರ್ವತಕಟಕಂ: **ಶಾಂತಿಪು,** ೧೧. ೧೧)

**ಸಮಾಶ್ವಾಸಿಸು –** ಸಮಾಧಾನಗೊಳಿಸು (ಮಹಾಶ್ವೇತೆಯಂ ಸಮಾಶ್ವಾಸಿಸಿದ ಕಪಿಂಜಲನಂ ವಿಷಣ್ಣದೀನಮುಖಿಯಾಗಿ ಕಾದಂಬರಿಯಿಂತೆಂದಳ್: **ಕಾದಂಸಂ,** ೭. ೫೧ ವ)

**ಸಮಾಸಂಗಿ –** ಆಸಕ್ತ (ಅಜಿತಜಿನಪದಪಯೋರುಹ ರಜಸ್ಸಮಾಸಂಗಿ ಭೃಂಗಿ ಗುಣಶೀಲದಯಾದ್ವಜೆ ಎಂದು ನಾಡೆ ಸುವಿನೇಯಜನಂ ಬಣ್ಣಿಪುದು ದಾನಚಿಂತಾಮಣಿಯಂ: **ಅಜಿತಪು,** ೧. ೧೯)

**ಸಮಾಹಿತಚಿತ್ತ –** ಸಮಾಧಾನದ ಮನಸ್ಸುಳ್ಳವನು (ದುಶ್ಚರತಪಶ್ಚರಣಪರಾಯಣಂ ಜೀವಿತಾಂತ್ಯದೊಳ್ ಸಮಾಹಿತಚಿತ್ತನಾಗಿ: **ಆದಿಪು,** ೫. ೯೬ ವ)

**ಸಮಾಹೃತಿ –** ಸೇರುವಿಕೆ (ಆ ವ್ರತಪತಿ ಶಶಿಸೂರ್ಯ ಸಮಾಹೃತಿಯಿಂ ನಿಷ್ಪನ್ನನಾದ ತೆಱದಿಂದಿರ್ದಂ: **ಚಂದ್ರಪ್ರಪು,** ೨. ೧೩)

**ಸಮಾಹ್ವಯ –** ಹೆಸರು (ಸಂತಸದಿ ಕಳೆಚೆಂಗುಪೆರುಮಾಳೆ ಸಮಾಹ್ವಯದಿಂದಂ ಇರ್ದನಾ ಕರಿಯೂರೊಳ್: **ತ್ರಿಷಷ್ಟಿಪು,** ೨೬. ೮)

**ಸಮಿತಿ –** ಸಮೂಹ (ಅದನಣಮಱಿಯಲ್ಕೆ ಸುರಾಸುರಸಮಿತಿಗಾದುದಿಲ್ಲಾ ಕ್ಷಣದೊಳ್: **ಆದಿಪು,** ೯. ೪೨)

**ಸಮಿತ್ತು –** ಸೌದೆ, ಕಟ್ಟಿಗೆ (ಪಾಲಾಶ ಅಶ್ವತ್ಥ ಅರ್ಕ ಔದುಂಬರ ನ್ಯಗ್ರೋಧ ಶಮಿ ಅಪಾಮಾರ್ಗ ಖದಿರ ಆದಿ ಶುಷ್ಕಸಮಿತ್ತುಗಳುಮಂ ಕುಶ ಅಶ್ವಲಾಯನ ವಿಶ್ವಾಮಿತ್ರಾದಿ ದೂರ್ವಾಂಕುರಪವಿತ್ರವಸ್ತುಗಳುಮಂ ಕೊಂಡು: **ಪಂಚತಂತ್ರ,** ೧೯೦ ವ)

**ಸಮಿಧೆ –** ಸಮಿತ್ತು (ಸಮಿಧೆಯೊಳಗಣ ಪೋಟಲೊಳಗೆ ಸೀಳ್ದು ನೋಡೆ ಮಿಡಮಿಡಮಿಡುಕುತ್ತಂ ಮಿಟ್ಟ ಪಾವಿನ ಮಱಿಗಳಂ ಕಂಡು: **ಹರಿವಂಶ,** ೫. ೩೩ ವ)

**ಸಮೀಕ –** ಯುದ್ಧ (ಸಮರಂ ಸಂಗ್ರಾಮಂ ಯುದ್ಧಂ ಆಜಿ ಆಯೋಧನಂ ಸಮೀಕಂ ಕದನಂ ಸಮಿತಿ ರಣಮ ಪಥನಂ ಜನ್ಯಂ ಆಹವಂ ಸಂಯುಗಂ ಪ್ರಘಾತಂ ಕಲಹಂ: **ಅಭಿಧಾವ,** ೧. ೧೪. ೧)

**ಸಮೀಕರಿಸು –** ಜೊತೆಗೂಡಿಸು (ಅರಿಷಡ್ವರ್ಗಮದರ್ಪಯುಂ ತ್ರಿವರ್ಗಮೆ ಸಮೀಕರಿಸಿಯುಂ: **ಚಂದ್ರಪ್ರಪು,** ೨. ೬೧)

**ಸಮೀಕೃತ –** ಸಮಮಾಡಿದ (ಸಮೀಕೃತತ್ರಿವರ್ಗನುಂ ದೃಢೀಕೃತತಳವರ್ಗನುಂ .. .. ಆಗಿ .. .. ಅರಸುಗೆಯ್ಯುತ್ತುಮಿರೆ: **ಚಂದ್ರಪ್ರಪು,** ೪. ೨೮ ವ)

**ಸಮೀಚೀನ –** ಯೋಗ್ಯ (ಕಲ್ಪಾಮರಪೂಜಿತಂ ಅಜಿತಸ್ವಾಮಿ ಸಮೀಚೀನಚರಿತಂ ಅಪಗತದುರಿತಂ: **ಅಜಿತಪು,** ೭. ೧)

**ಸಮೀರ –** ಗಾಳಿ (ವಾರನಾರೀ ತನೂರೋಪಿತ ದಿವ್ಯಾಮೋದ ನವ್ಯಾಗರುಪರಿಮಿಳಿತಂ ತೀಡಿದತ್ತೊಯ್ಯನೆ ಪಣ್ಯವನಿತಾಗಾರ ಚಾರಂ ಸಮೀರಂ: **ಶಾಂತೀಶ್ವಪು,** ೧೧. ೫೩)

**ಸಮೀರಣ –** ಗಾಳಿ (ಸಮೀರಣಸಂಚಲನಮೆಲ್ಲಂ ಮದಗಂಧಮಯಮುಂ ಸೃಷ್ಟಿಯೆಲ್ಲಂ ಅವನಿಪಾಳಮಯಂ: **ಆದಿಪು,** ೧೧. ೩೫ ವ)

**ಸಮೀರಭುಗ್ವರ –** ಮಹಾಸರ್ಪ, ಆದಿಶೇಷ (ಸಮೀರಭುಗ್ವರ ಉತ್ ಗೌರಯಶಂ ವಿರಾಜಿಸಿದುದು ಎಣ್ದೆಸೆಯೊಳ್ ಚಿಕವೀರದೇವನಾ: **ರಾಜಶೇವಿ,** ೧. ೬೬)

**ಸಮೀಹಿತ –** ಬಯಕೆ (ಮದೀಯ ಸಮೀಹಿತಮುಂ ಕಾದಂಬರಿಯ ಮನಃಪ್ರಿಯಸಮಾಗಮನ ನಿರ್ವೃತಿಯುಂ ಸಮನಿಸಿತಿಲ್ಲ ಎಂದು ಮನಂ ನೊಂದು: **ಕಾದಂಸಂ,** ೭. ೧೦ ವ)

**ಸಮುಚಿತ –** ಸೂಕ್ತವಾದ (ಜಾತಕರ್ಮ ನಾಮಕರನ ಅನ್ನಪ್ರಾಶನ ಚೌಲೋಪನಯಾದಿ ಸಮುಚಿತಕ್ರಿಯೆಗಳಿಂ ಕ್ರಿಯೆವಡೆದು: **ಸುಕುಮಾಚ,** ೫. ೫೦ ವ)

**ಸಮುಚ್ಚಯವಚನ –** ಕರ್ಮ–ಜ್ಞಾನಗಳು ಕೂಡಿ ಮೋಕ್ಷಸಾಧನವೆಂಬ ಸಿದ್ಧಾಂತ (ಮುಕ್ತಜೀವನವಪ್ಪೊಡೆ ಏಕಪ್ರಕಾರಮಂ .. .. ಅಪುನರ್ಜಾತಮುಕ್ತನುಂ ಅಕ್ಕುಮೆಂದು ಜೀವತತ್ವಮಂ ಸಮುಚ್ಚಯವಚನದಿಂ ಸವಿಸ್ತರಂ ಬೆಸಸಿ: **ಸುಕುಮಾವ,** ೮. ೧೪ ವ)

**ಸಮುಚ್ಛಳಿತ –** ಮೇಲೆ ಹಾರುವ (ಅನಂತಸಂತೋಷ ಪೀಯೂಷಾಂಬರಶಿಲೆಯೊಳಾ ಸಮುಚ್ಛಳಿತೋದಾರ ಮೂರಪ್ಲವಮಾನಮಾನಸನಾಗಿ .. .. ಅರ್ಚಿಸಿದಂ: **ವರ್ಧಮಾಪು,** ೬. ೪೩ ಮತ್ತು ೪೪)

**ಸಮುಚ್ಛಿನ್ನ –** ಪೂರ್ತಿ ನಾಶವಾದ (ಸಮುಚ್ಛಿನ್ನ ಪ್ರಾಣಾಪಾನಪ್ರಚಾರಂ ಸಮುಚ್ಛಿನ್ನಕ್ರಿಯಾಕ್ರಿಯಾವೃತ್ತಿಧ್ಯಾನ ಪ್ರವರ್ತನಾಪರನಾಗಿ: **ಪಂಪರಾ,** ೧೬. ೭೯ ವ)

**ಸಮುಜ್ವಲ –** ಜಾಜ್ವಲ್ಯಮಾನವಾದ, ಶ್ರೇಷ್ಠವಾದ (ಅಕ್ಕುಂ ನಿಷ್ಠುರವಾಕ್ಪಾಷಾಣಪರಿಸ್ಫುರಿತಂ ಕೃತಿರತ್ನದೊಳ್ ಸಮುಜ್ವಲಭಾವಂ: **ಚಂದ್ರಪ್ರಪು,** ೧. ೮೪)

**ಸಮುತ್ತಾರಣ –** ದಾಟುವಿಕೆ (ಭವಜಳಧಿನಿಮಗ್ನ ಮಾನವನಿವಹ ಸಮುತ್ತಾರಣೈಕಕಾರಣಮಂ .. .. ಕೇಳ್ವುದು .. .. ಜಿನಮತಮಂ: **ಸಮಯಪ,** ೩. ೪೭)

**ಸಮುತ್ತುಂಗ** – ಎತ್ತರವಾದ (ಸೊಗಯಿಸುವುದು ಪೌದನಪುರಂ ಅವಿರತ ಸಮುತ್ತುಂಗರಮ್ಯಹರ್ಮ್ಯಪ್ರಕರಂ: **ವರ್ಧಮಾಪು,** ೩. ೨)

**ಸಮುತ್ಥಾಂಶು** – ಹೊಮ್ಮಿದ ಕಾಂತಿ (ಶಿರದೊಳ್ ರತ್ನಾವಳೀಶೇಖರಶಿಖರಸಮಯತ್ಥಾಂಶುಗಳ್ ಮೊತ್ತಮಂ ಬಿತ್ತರಿಪನ್ನಂ: **ಚಂದ್ರಪ್ರಪು,** ೬. ೭೦)

**ಸಮುತ್ಥಾಪಿತ** – ಎತ್ತರದಲ್ಲಿ ನೆಲೆಗೊಂಡ (ಆಗಳ್ ನಿರಂತರ ಸಮುತ್ಥಾಪಿತಂಗಳುಂ .. .. ಅಪ್ಪ ತೋರಣಂಗಳನೆ ನುಗುಳುತ್ತುಂ: **ಆದಿಪು,** ೪. ೫೮ ವ)

**ಸಮುತ್ಪನ್ನ** – ಹುಟ್ಟಿದ (ದಶಾನನಂ .. .. ತನ್ನಂ ತಾನೆ ಪಱಿದುಱಿದು ಕರ್ಮಾಧೀನಸಮುತ್ಪನ್ನದುರಘದುಷ್ಪರಿಣತಿಯಂ: **ಪಂಪರಾ,** ೧೪. ೧೧೧)

**ಸಮುತ್ಪಾಟನ** – ಬುಡಸಹಿತ ಕೀಳುವುದು (ಆತಂ .. .. ವಿದ್ವಿಷದಿಭರದನಸ್ತಂಭ ಲೀಲಾಸಮುತ್ಪಾಟನಕಾಂಕ್ಷಾ ದುರ್ಮದಂ: **ಆದಿಪು,** ೧೪. ೧೯)

**ಸಮುತ್ಪ್ಲುತ** – ನೆಗೆತ (ಒದವಿದ ಬೆಟ್ಟಬೇಸಗೆಯ ಕೂರ್ವಿಸಿಲರ್ವಿಸೆ ಬೆರ್ಚಿ ವಾಯುವೇಗದ ಹರಿಣಂ ಸಮುತ್ಪ್ಲುತದಿನಿಂದುವ ಬಿಂಬವ ನೋಡಿ ಪೊಕ್ಕು .. .. ನೆಲಸಿರ್ದಂ: **ಚಂದ್ರಪ್ರಪು,** ೯. ೭೮)

**ಸಮುತ್ಫುಲ್ಲ** – ಚೆನ್ನಾಗಿ ಅರಳಿದ (ಮಲ್ಲಪಯ್ಯಂ ಉದಗ್ರಬೋಧಸಮಗ್ರನಗ್ರಜನುಂ ಸಮುತ್ಫುಲ್ಲ ಪಂಕಜಲೋಚನಂ ಗುಣಿ: **ಶಾಂತಿಪು,** ೧. ೪೦)

**ಸಮುತ್ಸಾರಿತ** – ಹೊರಡಿಸಲ್ಪಟ್ಟ (ಅನೇಕ ನೃಪ ಶಿರಃ ಕಪಾಳ ಶಕಳ ಜರ್ಜರಿತಮುಂ ಪರಸ್ಪರ ಸಮರ ರಭಸಸಮುತ್ಸಾರಿತಮುಂ: **ಪಂಪಭಾ,** ೧೩. ೫೧ ವ)

**ಸಮುದಯ** – ಮೊತ್ತ, ಸಮೂಹ (ಪ್ರಮಥಸಮುದಯ ಕ್ಷೀರವಾರಾಶಿ ತಾರೇಶ್ವರ ಭಕ್ತವ್ರಾತಕಲ್ಪದ್ರುಮ: **ತ್ರಿಷಷ್ಟಿಪು,** ೩. ೩೯)

**ಸಮುದ್ಭಟ** – ಶ್ರೇಷ್ಠವಾದ (ನಿಸ್ಥಾಯಸಾಹಸೋತ್ತೀರ್ಣ ಮಹಾಹವಾರ್ಣವಪ್ರವೀರಪ್ರಾರಬ್ಧ ಆರಭಟೀ ಸಮುದ್ಭಟ ಕಥೆಗಳನೆ ಕೇಳಲುಂ: **ಆದಿಪು,** ೮. ೩೨ ವ)

**ಸಮುದ್ಯತ್** – ಮೇಲಕ್ಕೇಳುತ್ತಿರುವ; ಅತಿ ಎತ್ತರವಾದ (ಸಮುದ್ಯತ್ ರಜತಗಿರಿ ತಟ ಸ್ಪಷ್ಟ ಸಂಶ್ಲಿಷ್ಟ ಮೌರ್ವೀನಿನದಂ ಪರ್ವಿತ್ತು ಅಕಾಂಡಪ್ರಳಯ ಘನಘಟಾಟೋಪ ಗಂಭೀರನಾದಂ: **ಪಂಪಭಾ,** ೧೨. ೧೩೭)

**ಸಮುದ್ರ** – ಕಡಲು (ಸರಿದಧಿನಾಥಂ ರತ್ನಾಕರಂ ಅಬ್ಧಿ ಸಮುದ್ರಂ ಅರ್ಣವಂ ಜಲನಿಧಿ ಸಾಗರಂ ಅಂಬುರಾಶಿ ಪನ್ನಗಶರಣಂ ಅಕೂಪಾರಂ ಉದಧಿ ಪಾರಾವಾರಂ: **ಅಭಿಧಾವ,** ೧. ೪. ೨)

**ಸಮುದ್ರಸತಿ** – ನದಿ (ಹ್ರದಿನಿ ತರಂಗಿಣಿ ನಿಮ್ನಗೆ ನದಿಸರಿತ್ ಆಪಗೆ ಸಮುದ್ರಸತಿ ಧುನಿ: **ಅಭಿಧಾವ,** ೧. ೪. ೧೧)

**ಸಮುಪಜಾತ** – ಹುಟ್ಟಿದ (ಸಮುಪಜಾತ ಪ್ರತ್ಯಾಶೆಯಾಗಿರ್ದ ವಿಲಾಸವತೀ ಮಹಾದೇವಿಗಿಂತೆಂದಂ: **ಕಾದಂಸಂ,** ೭. ೬೦ ವ)

**ಸಮುಲ್ಬಣಾಂಬು** – ಕದಡಿದ ನೀರು (ಒಕ್ಕಮಳ ಮಳಯಾಂಬುವನಕ್ಕಟ ಪಲ್ವಲ ಪಸಮುಲ್ಬಣಾಂಬುವಂ ಈಂಟಲ್ಕಕ್ಕುಮೆ: **ಚಂದ್ರಪ್ರಪು,** ೪. ೫೫)

**ಸಮೆ** – ಮಾಡು, ನಿರ್ಮಿಸು (ಉಜ್ಜ್ವಳ ಪಂಚರತ್ನಭಾಸ್ವಸದನಂಗಳಿಂ ನೆಱೆದುದಂ ಸಮೆದಂ ಪುರಮಂ ಪುರಂದರಂ: **ಆದಿಪು,** ೬. ೮೯); ಮುಗಿದುಹೋಗು (ಮತ್ಸ್ಯಂಗಳನೀ ತೆಱದೊಳ್ ತಿನುತಿರ್ದು, ಮತ್ಸ್ಯಮಾಂಸಂ ಸಮೆದತ್ತು: **ಪಂಚತಂತ್ರ,** ೧೩೮ ವ); ನಾಶವಾಗು (ಸಮೆ– .. .. ನಿಶ್ಶೇಷೇ ಚ: **ಶಬ್ದಮದ,** ಧಾ ೫೧೧)

**ಸಮೆತರ್** – ಮುಗಿದುಹೋಗು (ಸಮೆತಂದಪುದು ಸಮುದ್ರೋಪಮೆನೆ ಮಂದಾರಮಾಳಿಕಾಮ್ಲಾನತೆಯುಂ ಸಮಕೊಳಿಸಲಾರ್ತುದಿಲ್ಲ ದಲ್ ಅಮರೇಂದ್ರನದೊಂದು ಮುಖಪರಿಮ್ಲಾನತೆಯಂ: **ಆದಿಪು,** ೬. ೧೯)

**ಸಮೆಯಿಸು** – ಕಟ್ಟಿಸು, ಸಿದ್ಧಗೊಳಿಸು (ಎರಡುಂ ದೆಸೆಯೊಳಿರ್ದ ದೇವೇಂದ್ರಶಿಲ್ಪಿಗಳ್ ಸಮೆಯಿಸಿದ ಪಚರತ್ನಮಯ ವಿವಾಹಮಂಟಪದೊಳ್: **ಆದಿಪು,** ೮. ೧೫ ವ); ಮುಗಿಸು (ಮಹಾಮಹಿಮೆಯಭಿಷೇಕಮುಮಂ ಮಾಡಿ ಸಮೆಯಿಸಿದ ಬಳಿಕ್ಕೆ: **ವಡ್ಡಾರಾ,** ಪು. ೧೦೭, ಸಾ. ೮)

**ಸಮ್ಮ** – ಚರ್ಮ (ತಕ್ಕಿನಿಂ ಮಿಕ್ಕು ಪೋರ್ದಾನೆರಕ್ಕಸನ ಸಮ್ಮದ ಮೇಲ್ವೊದಿಕೆಯೊಳಂ ಚೆಲ್ವನಾಂತು: **ಕಬ್ಬಿಗಕಾ,** ೧೩೦ ವ)

**ಸಮ್ಮಗಾಱ** – [ಚರ್ಮಕಾರ] ಚಮ್ಮಾರ (ಸಮ್ಮಗಾಱಂಗಂ ಮತ್ತೇವಯ್ಸದೆ ಸೇವಿಸುವಂಗೆ ಆವುದು ಫಲವೆಂದು ತಿಳಿಗೆ ಭಕ್ತರ ಮತದೊಳ್: **ಸಮಯಪ,** ೯. ೬೪)

**ಸಮ್ಮಗಾಱವೆಸ** – ಚಮ್ಮಾರನ ಕೆಲಸ (ಸುದ್ದೈಸಿದ ಸಮ್ಮಗಾಱವೆಸದೊಳ್ ಚೆಲ್ವಾದವಂ ತೀವಿದಾ ರಸವರ್ಗಂಗಳಂ ಉಣ್ಬೆವೆಂಬ ಜಡರಂ ಕೈಕೊಳ್ವರೇ ಶ್ರಾವಕರ್: **ಸಮಯಪ,** ೬. ೧೭)

**ಸಮ್ಮತ** – ಒಪ್ಪಿಗೆಯಾದ (ಪ್ರಕಟತರಂ ಶಬ್ದಂ ಶಾಬ್ದಿಕಸಮ್ಮತಂ ಅರ್ಥಂ: **ಚಂದ್ರಪ್ರಪು,** ೧. ೫೮); ವಿಚಾರ (ನಿಮ್ಮ ದಯೆಯೆಂದಮನುಪಮ ಸಮ್ಮತಮಂ ಹಿತಮಂ ಅಖಿಳಶಾಸ್ತ್ರಾಗಮಮಂ ನಿಮ್ಮಿಂದಮಱಿದೆವು: **ಸುಕುಮಾಚ,** ೨. ೫೮)

**ಸಮ್ಮದ** – ಸಂಬಂಧ (ಎನಗಂ ಈ ಲೋಕಕ್ಕಂ ಏಂ ಸಮ್ಮದಂ: **ಆದಿಪು,** ೨. ೬೭); ಸಂತೋಷ (ಉತ್ತಮ ಪಾತ್ರದಾನದೊಳ್ ಸಮ್ಮದಶೀಲನಪ್ಪ ಜಿನಶಾಸನ ದೀಪಕನಪ್ಪ ಲಕ್ಷ್ಮಿಯೊಳ್ ಸಮ್ಮತನಪ್ಪ ಪುತ್ರನೆನಗಾಗದ ಕಾರಣಮೇಂ: **ನೇಮಿನಾಪು,** ೧. ೧೦೭); ಉತ್ಸಾಹ (ಅಚ್ಯುತಂ ಯುದ್ಧಸಮ್ಮದದಿಂ ಪೂರಿಸೆ ಪಾಂಚಜನ್ಯಮಂ: **ಜಗನ್ನಾವಿ,** ೧೮. ೭)

**ಸಮ್ಮನ** – [ಸನ್ಮಾನ] ಗೌರವ (ಸಮ್ಮನದಿಂದ ಇತ್ತು ಸುಹೃಜ್ಜನಂ ಪರಿಜನಂ ವಿದ್ವಜ್ಜನಂ ಜೀಯೆನಲ್ ತನಯರ .. .. ಜಾತಕರ್ಮಮುಮಂ .. .. ಮಾಡಿದಂ: **ಪಂಪರಾ,** ೩. ೧೩೭)

**ಸಮ್ಮನಿಸು** – ಗೌರವಿಸು (ತನ್ನ ನೆಟಿಲ್ಗಂ ಸಮ್ಮನಿಸಳೆ ಕೂರ್ತು ಕಣ್ಣ ಕಾಣ್ಬವರೊಳರೇ: **ಲೀಲಾವತಿ,** ೧೪. ೩೧); ಸಹಿಸು (ತಾಮ್ಮುನ್ನಮೆ ಮುಗ್ಧೆಯದಱ ಮೇಗುದಯಿಸೆ ಕೋಪಂ ಮಿಗೆ ತನ್ನ ನೆಟಿಲ್ಗಂ ಸಮ್ಮನಿಸಳೆ ಕೂರ್ತು ಕಣ್ಣ ಕಾಣ್ಬವರೊಳರೇ: **ಲೀಲಾವತಿ,** ೧೪. ೩೧)

**ಸಮ್ಮರ್ದನ** – ಒತ್ತುವುದು (ಅತಿಮೃದು ರಸನಾ ಸಮ್ಮರ್ದನಮಾತ್ರ ದ್ರಾವಣೀಯ ಘೃತಪೂರಮುಮಂ: **ಆದಿಪು,** ೧೧. ೨೬ ವ)

**ಸಮ್ಮವಾವುಗೆ** – [ಚರ್ಮಪಾದುಕೆ] ಪಾದರಕ್ಷೆ (ದೇವರ ಸಮ್ಮವಾವುಗೆಗಳಂ ಪಿಡಿದು ಎಂಬುದಂ ಎಂಬುಕೆಯ್ವ ಸದ್ಭಾವಮೆ ಸಾಲ್ಗುಂ: **ಪಂಪರಾ,** ೭. ೬೮)

**ಸಮ್ಮಾರ್ಜ** – ಕಸಪೊರಕೆ (ಸಮ್ಮಾರ್ಜಮಂ ತಂದು ಅದನುಡುಗಿ ಗೋಮಯದಿ ಸಾರಿಸಿ: **ತ್ರಿಷಷ್ಟಿಪು,** ೨೭. ೧೩೧ ವ)

**ಸಮ್ಮಾರ್ಜನ** – ಸಾರಣೆ (ಉಡುಗುತ್ತಲಿರ್ಪುದು ಉದ್ಯತ್ ಚಮರಿ ರಜಮಂ ಆ ತಾಣದೊಳ್ ಹಸ್ತಿ ಕೈನೀರಿಡುತಂ ಸಮ್ಮಾರ್ಜನಂಗೈವುದು: **ರಾಜಶೇಖ,** ೧. ೧೨೬)

**ಸಮ್ಮಾರ್ಜಿತ** – ಗುಡಿಸಿದ (ಮರುತ್ಕುಮಾರ ಸಮ್ಮಾರ್ಜಿತ ಯೋಜನಾಂತರಿತ ರಮ್ಯಭೂಮಿಭಾಗನುಂ .. .. ಆಗಿ: **ಆದಿಪು,** ೧೦. ೬೭ ವ)

**ಸಮ್ಮಾರ್ಜಿನಿ** – ಕಸಪೊರಕೆ (ಕಸಕಿಲೆನಲ್ ಸಮ್ಮಾರ್ಜನಿ: **ಅಭಿಧಾವ,** ೧. ೧೦. ೩೨)

**ಸಮ್ಮಿಶ್ರ** – ಚೆನ್ನಾಗಿ ಬೆರೆತ (ಸಮ್ಮಿಶ್ರ ತಾಂಬೂಲರಸರಾಗ ರಕ್ತಾಧರಪ್ರವಾಲ ಪ್ರಭಾಪ್ರಕಟಪೂರ್ವಸಂಧ್ಯಾರಾಗನುಂ: **ಆದಿಪು,** ೩. ೯೦ ವ)

**ಸಮ್ಮುಖ** – ಎದುರು (ತಮಗೆನಿತುಂ ಸಮಚಿತ್ತಮಿಲ್ಲದಿರ್ದೊಡಂ ಸಮ್ಮುಖಕ್ಕೆ ಬಂದ ಪ್ರಾಣಿಮಾತ್ರಕ್ಕೆ ಪರಾಙ್ಮುಖರಾಗಲಾಗದು: **ಪಂಚತಂತ್ರ,** ೮೫ ವ)

**ಸಮ್ಮೂರ್ಚ್ಛನೆ** – [ಜೈನ] ಶರೀರಕ್ಕೆ ತಕ್ಕ ಪುದ್ಗಲಗಳನ್ನು ತೆಗೆದುಕೊಳ್ಳುವುದು (ಶೀತೋಷ್ಣ ವಿವೃತಸಂವೃತ ಚೇತಾಚೇತ ಪ್ರಮಿಶ್ರಭೇದದೆ ನವಸಂಖ್ಯಾತಂ ತದ್ಯೋನಿಸಮುದ್ಭುತಂ ಗರ್ಭೋಪಪಾದಸಮ್ಮೂರ್ಚ್ಛನೆಗಳ್: **ಸುಕುಮಾಚ,** ೮. ೮)

**ಸಮ್ಮೋಹನ** – ಮೈಮರೆವು (ಇದಱ ಮಾತಂ ಕೇಳ್ದೆನಗಂ ಮೊದಲಾಗಿ ಮನದೊಳ್ ಸಮ್ಮೋಹನವಾದಪುದು: **ಪಂಚತಂತ್ರ,** ೧೦೭ ವ)

**ಸಮ್ಮೋಹನಾಸ್ತ್ರ** – ಮೂರ್ಛೆಗೊಳಿಸುವ ಬಾಣ (ಇನಸುತ ಗಾಂಡಿವಿ ಸಮ್ಮೋಹನಾಸ್ತ್ರದಿಂದೆಚ್ಚು ನಿದ್ರೆಯಂ ಮಾಡಿದನಂದಿನ ಗೋಗ್ರಹಣದೊಳ್: **ಗದಾಯು,** ೫. ೨೧)

**ಸಮ್ಮೇದತಪ** – ಸಮ್ಮೇದ ಪರ್ವತದಲ್ಲಿ ಮಾಡುವ ತಪಸ್ಸು (ಅಂತುತ್ತರಮುಂ ಉತ್ತರೋತ್ತರಮುಂ ಆಗೆ ಸಮ್ಮೇತಪಃಪ್ರಾಸಾದಕ್ಕೆ ಕಳಶಮಿಡುವಂತೆ ಆ ಮುನೀಂದ್ರಂ: **ಶಾಂತಿಪು,** ೯. ೧೧೪ ವ)

**ಸಮ್ಯಕ್ಚರಿತ್ರ** – [ಜೈನ] ರತ್ನತ್ರಯಗಳಲ್ಲಿ ಒಂದು, ಒಳ್ಳೆಯ ನಡತೆ (ಅದುವೆ ಸಮ್ಯಗ್ಜ್ಞಾನಕ್ಕವಕಾಶಮಕ್ಕಂ ಅಂತದು ಕವಲ್ತು ಸಮ್ಯಕ್ಚರಿತ್ರಮಂ ಪ್ರಕಟಿಸುಗುಂ: **ಆದಿಪು,** ೫. ೫೯)

**ಸಮ್ಯಕ್ತ್ವಶೀಲತೆ** – ಸಮ್ಯಕ್ಚರಿತ್ರ (ಸಮ್ಯಕ್ತ್ವಶುದ್ಧಿವಿನಯತೆ ಸಮ್ಯಕ್ತ್ವಶೀಲತೆ: **ಶಾಂತಿಪು,** ೯. ೧೧೫)

**ಸಮ್ಯಕ್ತ್ವ** – [ಜೈನ] ಧರ್ಮದ ಬಗೆಗಿನ ಅಚಲ ನಂಬಿಕೆ, ಆರು ದ್ರವ್ಯ, ಪಂಚಾಸ್ತಿಕಾಯ ಮತ್ತು ನವಪದಾರ್ಥಗಳ ಬಗ್ಗೆ ಜಿನೇಂದ್ರನ ಉಪದೇಶದಂತೆ ತಿಳಿಯುವುದು (ನಿನಗೆ ಜಯವರ್ಮನಾದಂದಿನ ಭವದಿಂದಿತ್ತ ಭೋಗಕಾಂಕ್ಷೆಯೆ ತಿಣ್ಣಂ ಸಮ್ಯಕ್ತ್ವದ ದೆಸೆಯಿನಿತಿಲ್ಲ: **ಆದಿಪು,** ೫. ೫೧)

**ಸಮ್ಯಕ್ತ್ವಪ್ರಕೃತಿ** – [ಜೈನ] ದರ್ಶನ ಮೋಹನೀಯ ಕರ್ಮದ ಮೂರು ಪ್ರಭೇದಗಳಲ್ಲಿ ಒಂದು (ಮಿಥ್ಯಾತ್ವ ಸಮ್ಯಙ್ಮಿಥ್ಯಾತ್ವ ಸಮ್ಯಕ್ತ್ವಪ್ರಕೃತಿಯೆಂಬ ದರ್ಶನಮೋಹನೀಯತ್ರಿಕದ ನಿರ್ಮೂಲನದಿಂ ಕ್ಷಾಯಿಕಸಮ್ಯಗ್ದೃಷ್ಟಿಯಾಗಿ: **ಆದಿಪು,** ೧೦. ೧೪ ವ)

**ಸಮ್ಯಕ್ತ್ವಶುದ್ಧಿ** – [ಜೈನ] ಸಮ್ಯಕ್ತ್ವಸಾಧನೆಗೆ ಆವಶ್ಯಕವಾದ ತ್ರಿಕರಣಶುದ್ಧಿ (ಸಮ್ಯಕ್ತ್ವಶುದ್ಧಿ ವಿನಯತೆ ಸಮ್ಯಕ್ತ್ವಶೀಲತೆ ನಿರಂತರಾಧ್ಯಾಯಮನಃಸಮೃದ್ಧಿಗಮ್ಯತೆ ಪತಿಗತಗಮ್ಯವಜೇಯತ್ವಂ ಅಮಲ ಜಿನಪತಿಮತದೊಳ್: **ಶಾಂತಿಪು,** ೯. ೧೧೫)

**ಸಮ್ಯಗ್ದರ್ಶನ** – [ಜೈನ] ರತ್ನತ್ರಯಗಳಲ್ಲಿ ಒಂದು, ಧರ್ಮದಲ್ಲಿನ ನಂಬಿಕೆ–ಶ್ರದ್ಧೆಗಳು, ಮೋಕ್ಷ ಪಡೆಯಲು ಸಾಧನವಾದ ದೃಢನಂಬಿಕೆ (ನಿಯತಂ ತತ್ತ್ವಾರ್ಥಶ್ರದ್ಧೆಯ ಸಮ್ಯಗ್ದರ್ಶನಂ ವಿಚಾರಿಸಿ ಮೊದಲೊಳ್ ಪ್ರಿಯದಿಂ ತತ್ತ್ವಂಗಳ ನಿರ್ಣಯಮಱಿವುದು ಭಾವಿಸಲ್ಕೆ ಸಮ್ಯಜ್ಞಾನಂ: **ಧರ್ಮಪ,** ೧೦. ४೦)

**ಸಮ್ಯಗ್ದೃಷ್ಟಿ** – ಸಮ್ಯಗ್ದರ್ಶನ (ಮಂತ್ರಿಮುಖ್ಯಂ ಆ ಶ್ರೀಪಾಲಂ ವರಸಮ್ಯಗ್ದೃಷ್ಟಿ ಜಿನೇಶ್ವರಮತಹಿತಂ: **ಧರ್ಮಪ,** ೧೦. ೬೪)

**ಸಮ್ಯಗ್ಭವನ** – ಒಳ್ಳೆಯ ಮನೆ (ನ್ಯಗ್ರೂಭತಸುರಪುರಂ ಸುವ ಣಿಗ್ಭಾಸಿ ಸಮಸ್ತವಸ್ತು ಪರಿಪೂರ್ಣಂ ಸಮ್ಯಗ್ಭವನರುಚಿರಂ ಉತ್ತರದಿಗ್ಭಾಗದೊಳುಂಟು ಮಧುರೆಯೆಂಬುದು ನಗರಂ: **ಪಂಚತಂತ್ರ,** ೨೩೬)

**ಸಮ್ಯಙ್ಮಂತ್ರ** – ಒಳ್ಳೆಯ ಮಂತ್ರ (ನಿಯತಂ ಸಮ್ಯಙ್ಮಂತ್ರ ಪ್ರಯೋಗಪಟುವೆನಿಪ ಭೂತಳಾಧೀಶ್ವರನ ಪ್ರಿಯರಂ ಮರ್ದಿಸಿ: **ಪಂಚತಂತ್ರ,** ೨೯೧)

**ಸಮ್ಯಙ್ಮಿಥ್ಯಾತ್ವ** – [ಜೈನ] ದರ್ಶನಮೋಹನೀಯಗಳಲ್ಲಿ ಒಂದು, ರತ್ನತ್ರಯಗಳ ಸಾಧನೆಗೆ ಒದಗುವ ಅಡ್ಡಿ (ಮಿಥ್ಯಾತ್ವ ಸಮ್ಯಕ್ಪ್ರಕೃತಿ ಸಮ್ಯಙ್ಮಿಥ್ಯಾತ್ವಮೆಂದು ತ್ರಿವಿಧಮಪ್ಪ ದರ್ಶನಮೋಹನೀಯಮಂ ನಿರ್ಮೂಲಿಸಿ: **ಶಾಂತಿಪು,** ೧೧. ೧೧೧ ವ)

**ಸಮ್ಯಜ್ಞಾನ** – [ಜೈನ] ರತ್ನತ್ರಯಗಳಲ್ಲಿ ಒಂದು, ಒಳ್ಳೆಯ ತಿಳಿವಳಿಕೆ (ಪ್ರಿಯದಿಂ ತತ್ತ್ವಂಗಳ ನಿರ್ಣಯಮಱಿವುದು ಭಾವಿಸಲ್ಕೆ ಸಮ್ಯಜ್ಞಾನಂ: **ಧರ್ಮಪ,** ೧೦. ४೦)

**ಸಯ್** – ಮರಣಹೊಂದು (ಪಾಪಕರ್ಮ ನಿನಗೋಸುಂ ಆಂ ಸಯೆ ದೋಷಮಲ್ಲದೇ: **ಲೀಲಾವತಿ,** ೧೪. ೧೧೨)

**ಸಯಂಬರ** – ಸ್ವಯಂವರ (ನಾಳೆ ಸಯಂಬರಮೆನೆ ಪಾಂಚಾಳ ಮಹೀಪಾಳಂ ಅಖಿಳ ಭೂಭೃತ್ ನಿಕರಕ್ಕೆ ಓಳಿಯೆ ಸಾಱಿದೊಡೆ ಅವನೀಪಾಲರ್ ಕೆಯ್ಗ‌ಯ್ಯಲೆಂದು ಪೞಿಮೞಿಯಾದರ್: **ಪಂಪಭಾ,** ೩. ४೨)

**ಸಯ್ತಿಡು** – ಒಪ್ಪವಾಗಿರಿಸು (ಪೀನಪಯೋಧರೆಯರ್ ಶೈಳಜತನೂಜೆಗೆ ವರರತ್ನದ ದಂಡೆದೊಂಡಿಲಂ ಸಯ್ತಿಟ್ಟರ್: **ಗಿರಿಜಾಕ,** ೧೦. ४४)

**ಸಯ್ತಿರ್** – ಸೈತಿರ್, ಸುಮ್ಮನಿರು ಇವನೆನ್ನಾಸೆಯನೊಲ್ಲದೀಗಳ್ .. .. ಎನ್ನ ಪಕ್ಕದೊಳಗಿರ್ದುಂ ಸಯ್ತಿರಂ: **ಪುಷ್ಪದಂಪು,** ೮. ೯೯)

**ಸಯ್ತಿರಿಸು** – ಸಂತೋಷಗೊಳಿಸು (ಬರಿಸಿ ಕ್ಷಿತಿಪತಿಯಂ ಸಯ್ತಿರಿಸಿ ಪ್ರಿಯಕುಶಲ ವಾರ್ತೆಯಂ ಬೆಸಗೊಂಡು: **ಕವಿರಾಮಾ,** ೨. ೭)

**ಸಯ್ತು** – ಸುಮ್ಮನೆ (ಆನನಾಂಬುಜಮನೊಯ್ಯನೆ ಬಾಗಿರೆ ಕಾದಲಂಗೆ ಸಯ್ತಂತಿರು ನಾಣ್ಚದೆ ಎಂದು ಅಣುಗೆಯರ್ ಪಿಡಿದು ಅಟ್ಟಿಱಿಳ್ ಎತ್ತಿ ಬುದ್ಧಿವೇೞ್ವಂತೆ: **ಪಂಪಭಾ,** ೩. ೭೮); ಸರಿಯಾಗಿ (ಮನೆಗೆಲಸಕ್ಕೆ ಸಯ್ತು ಮೊಗಸಲ್ಕೆ ಅಣಂ ಆಱದೆ .. .. ಭಯಂ ಮಿಗಲ್ಕೆ ಎರವಿಗೊಳ್ವರದೇಕೆ ಮರುಳ್ಗಳೋ: **ಸಮಯಪ,** ೯. ೧೧೮) ನೇರವಾಗಿ (ತದ್ಗಿರೀಂದ್ರ ಮಧ್ಯಮಕೂಟದಿಂದಂ ಸಯ್ತು ತೆಂಕಮೊಗದೆ ಬಂದು ವೃಷಭಾಚಳಮಂ ಕಂಡಂ: **ಆದಿಪು,** ೧೩. ೬೯ ವ); ಸತ್ಯ (ಸಯ್ತಾಯ್ತು ಅಜ್ಜನ ಮಾತು: **ಪಂಪಭಾ,** ೧೧. ೫೨)

**ಸಯ್ತುಮಾಡು** – ಸರಿಪಡಿಸು (ಗಾಳಿಯಲೆಪಿನೊಳ್ ಅಲುಗುವ ಬಂಬಲ್ಗುರುಳ್ಗಳ ಬಂಬಲಿಂದಂ ತಳರ್ವ ಚಿನ್ನಪೂಗಳ್

ಅವಯವದೊಳೆ ಸಯ್ತುಮಾಡುವ ಕೆಯ್ತುಮುಮಂ: **ಆದಿಪು,** ೪. ೯ ವ)

**ಸಯ್ದನ್** – ಸನ್ನಡತೆಯವನು, ಪ್ರಾಮಾಣಿಕ (ಏಂ ಸಯ್ದನೋ ಸತ್ಯದೊಳ್ ಶರದೊಳ್ ಆ ಪಾಪೇಭಕಂಠೀರವಂ: **ಶಾಂತಿಪು,** ೪. ೨೧)

**ಸಯ್ಪು** – ಸೈಪು, ಪುಣ್ಯ (ಎನ್ನ ಸಯ್ಪಿನಿಂ ಭವತ್ಸೇವೆ ದೊರೆಕೊಂಡುದೆನಗೆ ಇನ್ನಾವುದುಂ ಅರಿದುಂಟೆ: **ಪಂಪರಾ,** ೭. ೭೮); ಅನುಕೂಲಕರ (ಚಕ್ರಿಯುಂ ಕೇಶವಾದಿಗಳೊಳ್ವೆಟ್ಟನೆ ಕೋಪದಿಂ ತಳರ್ದಪಂ ಸಯ್ಪಾದುದೀ ಕಾರ್ಯ: **ಕರ್ಣನೇಮಿ,** ೧೧. ೬೩)

**ಸರ** – [ಸ್ವರ] ದನಿ (ಅಂತು ಬೆಳರ್ತ ಅಧರಂ ಕಣ್ಣಿಂ ತುಳ್ಕುವ ಕೆಂಪು ಸರದ ನಡುಕಂ ಮಿಗೆ ತನ್ನಂತಃಪುರಲಲನರಯರ್ಗೆ ರತಾಂತದ ವಿಭವಮನೆ ಮಾಡಿ ತಾಂ ಪೊಱಮಟ್ಟಂ: **ಆದಿಪು,** ೧೧. ೧೫೧); [ಶರ] ಬಾಣ (ನೆರೆದಿನಿವರುಮೀ ಲಕ್ಷ್ಯಮನಿರದಕ್ಕಟ ಸರದೆ ತೆಗೆಯಲಾರ್ತರುಮಿಲ್ಲಾ: **ಪಂಪಭಾ,** ೨. ೫೨)

**ಸರಂಗೆಯ್** – ಶಬ್ದಮಾಡು (ಅಸುವಿಯೋಗ ಸಂಕಟದಿಂ ಸರಂಗೆಯ್ವ ಜಟಾಯುವಂ ಕಂಡು: **ಪಂಪರಾ,** ೯. ೧೧೭ ವ)

**ಸರಂದೋಱು** – ಸರಂಗೆಯ್ (ನೀನಿನಿತುಕಾಲಂ ನಾಂ ಬರ್ಪಾಗಳಿದಿರ್ವಂದು, ಸೇವೆಯಂ ಮಾಡುತಿರ್ದೆ, ಈಗಳದುಗೆಟ್ಟು ಕರೆದೊಡಂ ಮೊದಲಾಗಿ ಸರಂದೋಱಿದಪೆಯಿಲ್ಲ: **ಪಂಚತಂತ್ರ,** ೯೨ ವ)

**ಸರಕ್ತಲೋಚನ** – ಕೆಂಪು ಕಣ್ಣು[ಳ್ಳವನು] (ಕ್ರೀಡಾಸಕ್ತಂ ಸರಕ್ತಲೋಚನಂ .. .. ಚಕ್ರಮನಿಟ್ಟಂ: **ಪಂಪರಾ,** ೧೬. ೧೫)

**ಸರಘ** – ಜೇನು ನೊಣ (ನೃಪಸೇನಾಪತಿ ಸರಘಾಳಿಪರೀತಕ್ಷೌದ್ರಪಟಳದಿಂದ ಎಳೆಯಂ ಪಾಳಿಪವೊಲ್ ಭಲ್ಲಚ್ಛೆನ್ನಾದಿಪಂ ಮೂರ್ಧಾಳಿಯಿಂದ ಆಚ್ಛಾದಿಸಿದಂ: **ಶಾಂತಿಪು,** ೧೧. ೨೪)

**ಸರಟ** – ಓತಿಕೇತ (ನರಿ ಶಶಕಂ ವೃಕಂ ಸರಟಂ ಎಯ್ಯಮಿಗಂ ಮರೆವಿಂಡು .. .. ಸಿಂಹದಿಂ ಒಪ್ಪುವುದಲ್ಲಿ ಕಾನನಂ: **ಗಿರಿಜಾಕ,** ೧. ೭೩)

**ಸರತ್** – ಹೊಮ್ಮುವ (ದರದಳತ್ ಅರವಿಂದಬೃಂದಗಂಧಾದರ ಸರತ್ ಉನ್ಮದಭೃಂಗನಾದಗೀತಂ .. .. ಸರಸಿ ಸುವಾಸಿನಿಯಂತೆ ಕಣ್ಗೆ ತೋರ್ಕುಂ: **ರಾಜಶೇವಿ,** ೧೦. ೬೫)

**ಸರದ** – [ಶರತ್] ಕಾಲ (ಪರಾಗಶ್ರೀ ನೆಯ್ದಿಲ್ಗೊದವಿ ಬರೆ ಬಂದತ್ತು ಸರದಂ: **ಲೀಲಾವತಿ,** ೧೨. ೨೦)

**ಸರದಿ** – [ಶರಧಿ] ಸಮುದ್ರ (ಸುರೇಂದ್ರನ ಬೆಸದಿಂ ಸರದಿಯ ನೀರ್ದಂದು ಸುರಿದುವಂಬುದವೆಂಬರ್: **ಸಮಯಪ,** ೧೦. ೮೪)

**ಸರಬ** – [ಶರಭ] ಒಂದು ಬಲಿಷ್ಠ ಕಾಲ್ಪನಿಕ ಪ್ರಾಣಿ (ಸಿಂಗದ ಜಂಗುಳಿ ಸರಬದ ಸಂಗಡಂ ಆ ನೃಪನ ತೇಜಮಂ ಮಱೆವೊಕ್ಕಂತೇಂ ಗಡಣಿಸಿ ಮೆಱೆವುವೊಚೆಂಬೊಂಗಳ ಮಂದಿರದ ತೇಜವಾಜಿಸಮಾಜಂ: **ಅನಂತಪು,** ೧. ೧೧೯)

**ಸರಲ್** – ಬಾಣ (ನಡುವ ಸರಲ್ಗೆ ಮೆಯ್ಯೊಳ್ ಅಡಂಗುವ ಸಂಕುಗೆ ದಿಂಕುಗೊಳ್ವ ಕಕ್ಕಡೆಗೆ ಇದಿರ್ ಉರ್ಚುವ ಇಟ್ಟಿಗೆ .. .. **ಪಂಪಭಾ,** ೧೦. ೯೪)

**ಸರವಟ್ಟಿ** – ಬಾಣದ ಕೋಲು (ಆ ಸುಕೋಮಳಾಂಗಮೆ ಸರವಟ್ಟಿ ತೊಟ್ಟಲರ ಪಚ್ಚಮೆ ಬೆಳ್ಗಱೆಯಾಗೆ ಕಾಮಿನೀಸಮಿತಿ ವಿರಾಜಿಸುರ್ದುದು .. .. ಮೋಹನಬಾಣದ ಮೊತ್ತಮೆಂಬಿನಂ: **ಶಾಂತೀಶ್ವಪು,** ೧೦. ೧೪೯)

**ಸರವರ** – [ಸರೋವರ] ಕೊಳ (ಶರದಂಬರಮುಂ ಮತ್ತೀ ಸರವರಮುಂ ವಿಳಸದತನುಧವಳಚ್ಛವಿಗಳ್: **ಕವಿರಾಮಾ,** ೩. ೪೬)

**ಸರವಳಿಗೆ** – ಶ್ಯಾವಿಗೆ (ಸರವಳಿಗೆಗಳಿನಿತುಂ ಪಾಲುರುಳಿವೊಲಿರೆ ಪಾಲೊಳೊಂದಿ ಮಗಮಗಿಸುವುದಂ ಸರವಳಿಗೆಯ ಪಾಯಸಮಂ: **ಪಾರ್ಶ್ವನಾಪು,** ೮. ೫೦)

**ಸರವಿ** – ಹಗ್ಗ (ತಿಂದುದು ಮೇವಂತಿರೆ ಪುಲ್ಲ ಸರವಿಯಂ ಪುಲಿಗೋಣಂ: **ಯಶೋಧಚ,** ೩. ೪೫)

**ಸರವೇಱಿಸು** – ಮಾಲೆಯಾಗಿ ಕಟ್ಟು, ಒಂದರ ನಂತರ ಮತ್ತೊಂದನ್ನಿರಿಸುತ್ತ ಹೋಗು (ಚರಿತ ಪುರಾಣದೊಳ್ ಮಣಿಗಳಂ ಸರವೇಱಿಪವೋಲ್ ಭವಾವಳೀ ಸ್ಮರಣಕಥಾಭವಂಗಳಂ .. .. ಬರೆದಂ: **ನೇಮಿನಾಪು,** ೧. ೩೯)

**ಸರಸ** – ರಸವತ್ತಾದ (ತಾಮರೆಯರಲೊಳ್ ಸರಸಿಜಾಮೋದದೊಳೊಂದಿ ನಲಿದು .. .. ಸುಟಿವುದಳಿ ಕೆಲಕೆಲದೊಳ್: ಕವಿರಾಮಾ, ೩. ೧೨೭); ರುಚಿಕರವಾದ (ಸರಸಾನ್ನಪಾನ .. .. ಅತುಳಪಾತ್ರಮೀವುವು ನಿರಂತರಂ ದಶವಿಧಂಗಳಮರಕುಜಂಗಳ್: **ಶಾಂತೀಶ್ವಪು,** ೬. ೮೬); ಪ್ರೀತಿಯ ಚಟುವಟಿಕೆ (ತನ್ನ ರತ್ನವಿಸ್ಫುರಿತ ಕಿರೀಟಮಂ ಕವಿದು ತಾನೆ ನರಂಗೆ ಕಿರೀಟಿನಾಮಮಂ ಸರಸದಿಂ ಆಗಳುಚ್ಚರಿಸಿ ಸಾಹಸಮಂ ಪೊಗಟ್ಟಂ ಸುರಾಧಿಪಂ: **ಪಂಪಭಾ,** ೫. ೧೦೩)

**ಸರಸತಿ** – [ಸರಸ್ವತಿ] ವಿದ್ಯಾಧಿದೇವತೆ (ಸರಸತಿ ಸಿರಿ ತನ್ನಾನನದೊಳ್ ಉರದೊಳ್ ಇರೆ ಚತುರಾನನನುಂ ಕೃಷ್ಣನೆನಿಪಂ ಇಱಿವಬೆಡಂಗಂ: **ಗದಾಯು,** ೨. ೪೫)

**ಸರಸತಿಯೆಱೆಯ** – ಸರಸ್ವತಿಯ ಗಂಡ, ಬ್ರಹ್ಮ (ಸಿರಿಯೆಱೆಯಂ ಮಾದೇವಂ ಸರಸತಿಯೆಱೆಯರ್ಕಳ ಅಡಿಗಳೆಂಬೀ ಕೆಂದಾವರೆಗಳ್ ಪೊರೆಗೆಮ್ಮಂ ಪೊಸಸಿರಿಗಂಪಿಂ ಪೞೆಮೆವೞೆಯಂ ಎಂತು ಅಂತೆ ಒಲವಿಂ: **ಕಬ್ಬಿಗಕಾ,** ೨)

**ಸರಸತಿವರ** – ಸರಸ್ವತಿಯ ಗಂಡ, ಬ್ರಹ್ಮ (ನಾಲ್ಕು ಮೊಗಮುಂ ಪೊರೆಯೇೞಿರೆ ಬಂದಿರ್ದಂ ಸರಸತಿವರಂ ಅಂಚೆಯೇಱಿ ನಲವಿಂ ಬೊಮ್ಮಂ: **ಕಬ್ಬಿಗಕಾ,** ೨೨೯)

**ಸರಸಿಜಮಿತ್ರ** – ಸರಸಿಜಬಾಂಧವ (ಸರಸಿಜಭವಂಗೆ ವಿಷ್ಣುಗೆ ಸರಸಿಜಮಿತ್ರಂಗೆ ಶಿಖಿಗೆ ಚಂಡಿಕೆಗೆ ಈತಂ ಗುರು ದಯ್ವಮೆಂಬರ್: **ಸಮಯಪ,** ೮. ೧೦೯)

**ಸರಸಿಜವಿರೋಧಿ** – ತಾವರೆಯ ವೈರಿ, ಚಂದ್ರ (ಸರಸಿಜ ವಿರೋಧಿ ಕಾಂತ್ಯಾಕರಂ ಅಮೃತಮಯಂ .. .. ಶಶಿ: **ಕವಿರಾಮಾ,** ೩. ೧೦೨)

**ಸರಸಿರುಹ** – ತಾವರೆ (ಅಘಧ್ವಾಂತಮಧುಪಮಾಲಿಕೆಯಂ ತೊಲಗಿಸೆ ಮಗಿದುದು ಅವನ ಕರ ಸರಸಿರುಹಂ: **ಯಶೋಧಚ,** ೧. ೬೭)

**ಸರಸಿರುಹಭವ** – ಬ್ರಹ್ಮ (ಸರಸಿರುಹಭವಂ ಬ್ರಹ್ಮಂ ಹಿರಣ್ಯಗರ್ಭಂ: **ಅಭಿಧಾವ,** ೧. ೧. ೧೧)

**ಸರಸೀರತ** – ಜಲಕೇಳೀಪ್ರಿಯ (ಈ ರಾಜಹಂಸನಂ ಸರಸೀರುಹಲಂಪಟನಂ ಅಸುರನೊರ್ವಂ ಗಡ ಕೊಲ್ಗಾರವೊಲ್ ಉದ್ಯತನಾದಂ ಅಪಾರಬಲ ತಗುಳೆ ತಗುಣೆಗಾಟಂಗಾಡಲ್: **ಶಾಂತಿಪು,** ೮. ೬೮)

**ಸರಸೀರುಹಜನ್ಮ** – ಬ್ರಹ್ಮ (ಮದನನ ಕಾಯ್ಪು ಮಾಣ್ಗೆ ಸರಸೀರುಹಜನ್ಮನ ಮೆಚ್ಚು ತೀರ್ಗೆ ಕೋಳ್ಗುದಿ ಮನದಿಂದಂ ಇಂದು ಪೊಱಮಾಱುಗೆ: **ಪಂಪಭಾ** ಪರಿಷತ್ತು, ೫. ೧೮)

**ಸರಸೋಕ್ತಿ** – ರಸದಿಂದ ಕೂಡಿದ ನುಡಿ (ಸರಸೋಕ್ತಿ ಪ್ರೌಢಿಯಿಂದಂ ನಿಲಿಸಿ ಪಡಿಯಱಂ ಬಂದು .. .. ಉಘೇ ಬಿನ್ನಪಂ ದೇವ ದೇವೇಶ್ವರನೆಟ್ಟಂದಿರ್ದಪಂ ಬಾಗಿಲೊಳ್ ಎನೆ: **ಜಗನ್ನಾವಿ,** ೧೧. ೬೮)

**ಸರಸ್ವತಿ** – ವಿದ್ಯಾಧಿದೇವತೆ (ಪರಮಜಿನೇಂದ್ರವಾಣಿಯೆ ಸರಸ್ವತಿ ಬೇಱದು ಪೆಣ್ಣ ರೂಪಮಂ ಧರಿಯಿಸಿ ನಿಂದುದಲ್ತು: **ಆದಿಪು,** ೧. ೯)

**ಸರಸ್ವತೀದ್ರೋಹ** – ವಿದ್ಯಾದ್ರೋಹಿ (ಸರಸತಿಯನಬಲೆಯಂ ಗೋಣ್ಮುರಿಗೊಂಡು ಅರ್ಥಕ್ಕೆ ಕುದಿದು ನೋಯಿಸುವಂ ಅಕ್ಕರಿಗನೆ ಪಾತಕನಾತನೆ ಸರಸ್ವತೀದ್ರೋಹಂ: **ಅಜಿತಪು,** ೧. ೮೯)

**ಸರಳ** – ಧೂಪದ ಮರ (ಸರಳಸಾರಾಮೋದಂ ಉದ್ದಾಮಭೃಂಗರವಂ ಚಕ್ರಿಯನಾಱೆಸಿತ್ತು ವಿಜಯಾರ್ಧೋಪಾಂತ ಮಂದಾನಿಳಂ: **ಆದಿಪು,** ೧೩. ೯); ನೇರವಾದುದು (ಸರಳಂ ವಕ್ರಂ ತರಳಂ ಸ್ಥಿರಂ ಉಚ್ಚಂ ನೀಚಂ ಈಕ್ಷಣಕ್ಕೊದವೆ ತಮಂ ಸರಿಯಾದುವು: **ಚಂದ್ರಪ್ರಪು,** ೮. ೨೧)

**ಸರಳಿಸು** – ಹಾರು (ಸರಳಿಸುವ ಏಣಂ ಓಡುವ ಮೊಲಂ ಬಗೆಗುಂದುವ ಖಡ್ಗಿ ನಿಲ್ವ ಸೂಕರಂ: **ಶಬರಶಂ,** ೩. ೪೮); ನೇರವಾಗು (ತೊಱೆಗಳ್ ಪರಿಗೆಟ್ಟುವು ಬೆಳ್ವಯಲೊಳ್ ಸರಳಿಸಿದುವು ಮರುಮರೀಚಿಕಾ ವಾಹಂಗಳ್: **ಪಂಪರಾ,** ೭. ೮೬)

**ಸರಿ** – ಓಡಿಹೋಗು (ಸರಿ–ಪಲಾಯನೇ: **ಶಬ್ದಮದ,** ಧಾ ೬೦೧); ಮಳೆ (ಸಿಡಿಲಿಂ ಮಿಂಚಿಂ ಘನಧ್ವಾನದಿಂದಿಳೆ ಕಂಪಂಗೊಳೆ ಸೋನೆಯಿಂ ಸರಿಯಿಂ ತಂದಲ್ಗಳಿಂದಂದು ಭೂತಳಮೇಕಾರ್ಣವಮಾಗೆ ಚಕ್ರಿಯ ಬಲಕ್ಕಾತಂಕಮಂ ಮಾಡಿದರ್: **ಆದಿಪು,** ೧೩. ೫೯); ಪ್ರವಾಹ (ಆತ ಸರಿಯೊಳಾದೊಡಂ ಅಂಚೆಯೆಂಬುದಂ ಕೆಱೆಯೊಳಾದೊಡಂ ಬಾಟೆಯೆಂಬುದಂ .. .. ಸೈರಿಸಂ: **ಕಬ್ಬಿಗಕಾ,** ೧೧೬ ವ)

**ಸರಿಗಾಣ್** – ಸಮಾನವೆಂದು ಎಣಿಸು (ಮಱುವಕ್ಕದ ನಾಯಕರನಾಜಿಯೊಳ್ಕಂಡು .. .. ಬೆಳ್ವಕ್ಕಿಯ ಪಿಂಡಿಂಗವಂದಿರಂ ಸರಿಗಂಡಂ: **ಪಂಪರಾ,** ೯. ೫೮)

**ಸರಿಗೆ** – [ಚಿನ್ನದ] ನೂಲು (ಸರಿಗೆಯೊಳ್ ಸಮೆದ ಅಕ್ಷಮಾಲಿಕೆ ಪೊನ್ನ ಮುಂಜಿ ತೊಳಪ್ಪ ಕಪ್ಪುರದ ಭಸ್ಮರಜಃ ತ್ರಿಪುಂಡ್ರಕಂ ಒಪ್ಪೆ ಪಿಂಗಜಟಾಳಿ ತಾವರೆಯ ಸೂತ್ರದೊಳಾದ ಜನ್ನವಿರಂ ದುಕೂಲದ ಕೋವಣಂ ಕರಂ ಒಡಂಬಡೆ ನೋಟಕರ್ಕಳಂ ಆ ತಪಸ್ವಿ ಮರುಳ್ಚಿದಂ: **ಪಂಪಭಾ,** ೬. ೮); ಒಂದು ಆಭರಣ (ಪೂತ ಸುರಯಿಯ ಮುಗುಳಂ ಪಸವಟ್ಟಂತೊರ್ವಳ್ ತನಗೆ ಸರಿಗೆಗಂ ಲಂಬಣಕ್ಕಂ ಅಟ್ಟೆಯೆ ಕೊಯ್ದಳ್: **ಆದಿಪು,** ೧೧. ೧೦೩)

**ಸರಿಗೆಕಂಕಣ** – ತಂತಿಯಿಂದ ಮಾಡಿದ ಬಳೆ (ಮೃಣಾಳನಾಳದೊಳ್ ಸಮೆದ ಸರಿಗೆಕಂಕಣಳುಮಂ: **ಪಂಪಭಾ,** ೫. ೬ ವ)

**ಸರಿಣಿ** – ನದಿ (ಸುರ ಸರಿಣಿ ತರುಣ ಸಸಿ ಶಿಖಿಯುರಗಂ ಗರಳಂ ವಿಭೂತಿ ಗಜಕೃತ್ತಿ: **ತ್ರಿಷಷ್ಟಿಪು,** ೧೪. ೨೭)

**ಸರಿತ್** – ನದಿ (ಸುರ ಸರಿತ್ ಕಲ್ಲೋಲಮಂ ಯಾಮುನಾ ಜಲಮಂ ಪೊಕ್ಕು ಅಘಮರ್ಷಣಂ ಮುಳುಗಿದಂತಿರ್ದಂ: **ಪಂಪರಾ,** ೭. ೧೧೭)

**ಸರಿತ್ತನಯ** – ಗಂಗಾಪುತ್ರ, ಭೀಷ್ಮ (ಗಾಂಡೀವಿ ತರ್ಪಾಗಳ್ ಈ ಕೃಪಂ ಈ ಸೈಂಧವಂ ಈ ಸರಿತ್ತನಯಂ ಈ ರಾಧೇಯಂ ಈ ಮದ್ರಭೂಮಿಪಂ ಈ ಕುಂಭಜಂ ಈ ಕುರುಪ್ರವರರಂದೇಂ ಹಮ್ಮದಂಬೋದರೇ: **ಗದಾಯು,** ೨. ೩೪)

**ಸರಿತ್ಪತಿ** – ನದಿಗಳ ಒಡೆಯ, ಸಮುದ್ರ (ಆಯತ್ತ ಸರಿತ್ಪತಿ ಮಹಿಮೆಗಂ ಏಕೀಕೃತ ಧರಾಧಿಪಾಭಿರಾಮತೆಗಂ .. .. ತಾನೊರ್ವನೆ ನಿರುಪಮ ಜನ್ಮಭೂಮಿಯಾಗಿ: **ಶಾಂತಿಪು,** ೩. ೪೯ ವ)

**ಸರಿತ್ಸುತ** – ಗಂಗಾನದಿಯ ಮಗ, ಭೀಷ್ಮ (ನಿನ್ನ ಪೆಡಗೆಯ್ಗಟ್ಟಂ ಶರದಿಂ ಬಿಡಿಸಿದನಲ್ಲನೆ ಸರಿತ್ಸುತಂ ಬನ್ನವಿನ್ನವು ಎಂಬುವುಮೊಳವೇ: **ಪಂಪಭಾ,** ೮. ೫೩)

**ಸರಿದಧಿಪತಿ** – ಸರಿತ್ಪತಿ (ಸರಿದಧಿಪತಿಯಂ ದೋಷಾಕರಂ ಅಂತರ್ಲೀನನಾಗಿಯುಂ ಪೆರ್ಚಿಸುಗುಂ: **ಕವಿರಾಮಾ,** ೩. ೩೫)

**ಸರಿದೊರೆ** – ಸಮಾನ (ಭೂವಳಯದೊಳದಟರೊಳರೇ ಸರಿದೊರೆಗೆ ವರಲ್: **ಕರ್ಣನೇಮಿ,** ೧೧. ೧೧೯)

**ಸರಿನ್ನಾಥ** – [ಸರಿತ್+ನಾಥ] ಸರಿತ್ಪತಿ (ಅಕೃತ್ರಿಮ ಚೈತ್ಯಾಲಯಂಗಳಂ ಅಖಿಲಜಗತ್ಪಾವನ ಸರಸ್ಸರಸೀಸರಿನ್ನಾಥ ತೀರ್ಥಜಲಂಗಳಿಂದಂ .. . ಅರ್ಚಿಸಿ: **ಆದಿಪು,** ೨. ೩೨ ವ)

**ಸರಿವರ್** – ಸಮಾನವಾಗು (ಯುವರಾಜಂ ಕಣ್ಗೊಳಿಸಿದಂ ಇಂದ್ರನೊಳುಪೇಂದ್ರನೊಳ್ ಸರಿವರುತುಂ: **ಚಂದ್ರಪ್ರಪು,** ೪. ೮೧)

**ಸರಿವರೆಯ** – ಓರಗೆ, ಒಂದೇ ವಯಸ್ಸು (ಸರಿವರೆಯರ್ ಸಮರೂಪರ್ ಸಿರಿವಂತರ್ .. .. ಖಚರರ್: **ಶಾಂತೀಶ್ವಪು,** ೨. ೨೯)

**ಸರಿವಟಿ** – ಜಡಿಮಳೆ (ಜಂಝಾಮಾರುತರುತಿಯಿಂ ಭುವನಂದೋರಂತಿರೆ ಕಿವುಡುವಟ್ಟುದಾ ಸರಿವಟಿಯೊಳ್: **ಕುಸುಮಾಕಾ,** ೬. ೨೯)

**ಸರೀಸೃಪ** – ಹಾವು (ಆ ಸರೀಸೃಪಮುಂ ವಿಹಗಮುಂ .. .. ಪುರುಷನುಂ ಉದಯಿಸುಗುಂ ಏೞುನರಕಂಗಳೊಳಂ: **ಸುಕುಮಾಚ,** ೧೧. ೫೦)

**ಸರುಗ** – [ಚರುಕ] ಅನ್ನ, ಚರು (ಅನರ್ಘ್ಯಮಣಿವಿಷ್ಟರದೊಳ್ ಕುಳ್ಳಿರ್ದು ಸರುಗನುಣೆ ಕಂಡುದಱಿಂ: **ಆದಿಪು,** ೧೫. ೪೨); ಭೂಮಿಗಿಡುವ ನೈವೇದ್ಯ (ಸರುಗಂ ಪೂಸಿದೊಡಂ ಮನೆದಯ್ವಕ್ಕಿಕ್ಕಿದೊಡಂ ಘನಮಾಗದು ಬೆಳಸು ನಿಯತಂ ಎಂಬರುಮೊಳರೇ: **ಸಮಯಪ,** ೯. ೪೦)

**ಸರುಗವಾಡು** – ಮೇಯುವುದು (ಇನ್ನಂತೆ ಸಲೆ ಸರುಗವಾಡುವುದು ಅಂತದಱಿಂ ಮುಖಂ ಅಮೇಧ್ಯಮೆಂಬರ್ ಅದುಚಿತಂ: **ಸಮಯಪ,** ೯. ೭೨)

**ಸರುಗಾಡು** – ಮೇಯಲು ಸುಳಿದಾಡು (ಕವಿಲೆಗಳ ಪೆರಶಗೆ ಪರಿಪರಿದು ಅವು ಸರುಗಾಡುತ್ತುಮಿರ್ದೊಡೆ ಅಂತಿರೆ ಬಲಗೊಂಡು ಇವು ದೆಯ್ವಮೆಂದು ಪೊಡೆವಡುವರ್: **ಸಮಯಪ,** ೯. ೬೮)

**ಸರುಜ** – ರೋಗಿ (ಬಳಂ ಸರುಜನ ಬಳವೆನಿಸಿ ನೋಳ್ಪೊಡಳಿದುದು ರಣದೊಳ್: **ತ್ರಿಷಷ್ಟಿಪು,** ೨೪. ೩೪೦)

**ಸರುಸಪ** – [ಸರ್ಷಪ] ಸಾಸಿವೆ (ಉತ್ತಕ್ಕೆ: ಸರ್ಷಪಂ–ಸರುಸಪಂ, ಸರ್ಷಪಮೆಂದು ಸಾಸವೆ: **ಶಬ್ದಮದ,** ೨೬೮ ಪ್ರ)

**ಸರೋಂಬು** – ಕೊಳದ ನೀರು (ಬಿರಯಿಗಳನೆಚ್ಚು ರಕ್ತಂಬೊರೆದರಲಂಬಂ ಸರೋಂಬುವೊಳ್ತೊಳೆಯಲ್ಕೆಂದು ಅರಲಂಬಂ ಇಳಿಪಿದಂತಿರೆ ತರುಣಿಯರ ಸರಕ್ತಕೇಕರಂ ಮಾರ್ಪೊಳೆಗುಂ: **ರಾಜಶೇವಿ,** ೧೦. ೬೭) ೦

**ಸರೋಜದಳಾಯತಾಕ್ಷೀ** – ತಾವರೆಯ ದಳದಂತೆ ವಿಶಾಲವಾದ ಕಣ್ಣುಳ್ಳವಳು (ಬಿಡದೆ ಅಟಲ್ವ ಬಂಧುಜನದ ಒಟ್ಟುಡಿಯದ ಕಣ್ಣೀರ ಪೂರಂ ಆ ಪ್ರೇತಮಂ ಓಗಡಿಸದೆ ಸುಡುವುದು ಗಡಂ ಇನ್ನುಡುಗುವುದೀ ಶೋಕಮಂ ಸರೋಜದಳಾಯತಾಕ್ಷೀ: **ಪಂಪಭಾ,** ೨. ೨೮)

**ಸರೋಜಷಂಡ** – ತಾವರೆಯ ಸಮೂಹ, ಕೊಳ (ಕಾಣ್ಬಿರಾ ಬಳಯುತನಂ ಪುರೋಪವನ ಷಂಡ ಸಮೀಪ ಸರೋಜಷಂಡದೊಳ್: **ಪಂಪರಾ,** ೭. ೧೧೦)

**ಸರೋಧಿ** – ಸಮುದ್ರ (ಎರಡುಂ ಸೈನ್ಯಸರೋಧೀಯಿಂ ಕವಿತರುತ್ತಿರ್ದತ್ತು ನಾನಾಂಶುವಿಸ್ತರ ಕೂರ್ಮಾವಳಿಯೆಂಬಿನಂ; **ಶಾಂತೀಶ್ವಪು,** ೮. ೭೧)

**ಸರೋಭವ** – ಕಮಲ (ಪೂಜಿಸಿದಂ ಉದ್ಯತ್ ಸೌರಭಾಂಭಃ ಸರೋಭವಮುಖ್ಯಪ್ರಸವಾತಿ ಶೋಭಿತ ಸುಗಂಧ .. .. ವಾದ್ಯರವದಿಂ ಭೂಭಾಮಿನೀಭೂಷಣಂ: **ರಾಜಶೇವಿ,** ೧೦. ೫೮)

**ಸರೋಮಾಳಿ** – ರೋಮರಾಜಿ (ಆ ವನಿತೆಯ ಗರ್ಭದ ಬಾಳಂಗೆತ್ತಿದನಂ ಎನಿಸಿದುದು ಸರೋಮಾಳಿ ಕುಚಯುಗಂ ಕೃಷ್ಣಮುಖಂ: **ನೇಮಿನಾಪು,** ೨. ೨೫)

**ಸರೋರುಹ** – ಸರೋಭವ (ಉಳಿತವಿಳಾಸಂ ಅಗ್ಗಿ ದಿನನಾಥವಿಯೋಗದೊಳ್ ಆದ ಅವಸ್ಥೆ ಅಗ್ಗಳಿಸಿರೆ ಕಂಡು ತಾಂ ನಲವಿನಿಂ ನಗುತಂ ನೆಲೆವೆರ್ಚೆ ರಂಜಿಪುತ್ಪಳಿನಿಗೆ ಕೋಪದಿಂ ಮುದಿದು ಪಲ್ಮೊಱೆವಂದಮಾಯ್ತು ಕುಟ್ಮಳಿತ ಸರೋರುಹೋದರಗತ ಉನ್ಮದ ಭೃಂಗಝುಣತ್ಕೃತಸ್ವನಂ: **ಶಾಂತೀಶ್ವಪು,** ೧೧. ೧೦)

**ಸರ್ಗ** – ಸೃಷ್ಟಿ (ಇದು ಸರ್ಗಕ್ಕೆಂದು ಪದ್ಮೋದ್ಭವಂ ಸುದತೀರತ್ನ ಸಮೂಹಮಂ ಮದಪಿನಿಂ ಬಯ್ಚಿಟ್ಟ ಭಂಡಾರಂ: **ಕಾದಂಸಂ,** ೫. ೧೬)

**ಸರ್ಪದಷ್ಟ** – ಹಾವಿನಿಂದ ಕಚ್ಚಲ್ಪಟ್ಟವನು (ಒರ್ವ ನಿರ್ಬುದ್ಧಿ ಗಾರುಡಿಗಂ ಗಾರುಡಮಂ ಕಲ್ತು ವಿದ್ಯಾಪ್ರತ್ಯಯಮಂ ನೋಡಲೆಂದು ಸರ್ಪದಷ್ಟನಂ ಅಱಸುತ್ತುಂ: **ಪಂಚತಂತ್ರ,** ೩೪೯ ವ); ಹಾವಿನ ಕಚ್ಚುವಿಕೆ (ವಸುಮಿತ್ರನೆಂಬೊಂಗೆ ಸರ್ಪದಷ್ಟಮಾದೊಡೆ: **ವಡ್ಡಾರಾ,** ಪು. ೧೪, ಸಾ. ೨೨)

**ಸರ್ಪಾಗ್ನಿ** – (ಪೂಗೊಯ್ಯಲ್ ಪೋಗಿ ಸರ್ಪಾಗ್ನಿ ನಿಮಿತ್ತದಿಂ ಸತ್ತು: **ಚಾವುಂಪು,** ಪು. ೨೧೬. ಸಾ. ೪)

**ಸರ್ಪಿ** – ತುಪ್ಪ (ಸದ್ಯಃ ತಪ್ತ ಸರ್ಪಿಃ ಸುಗಂಧೋಪೇತಂ ಸುಟೆಯಲ್ .. .. ಪೊಕ್ಕಂ ಅಕ್ರೂರಂ: **ಜಗನ್ನಾವಿ,** ೫. ೭೭)

**ಸರ್ವಗ** – ಎಲ್ಲೆಡೆಯಲ್ಲಿಯೂ ಸಂಚರಿಸುವವನು, ದೇವರು (ನೀಲಗ್ರೀವ ಚಿನ್ಮೂರ್ತಿ ಸರ್ವಗ ನಿರ್ಲೇಪ ನಿರೀಹ ನಿಷ್ಕಲ: **ಉದ್ಭಟಕಾ,** ೧೧. ೬೦)

**ಸರ್ವಗ್ರಾಸಂಗೊಳ್** – ಪೂರ್ತಿ ನುಂಗು (ಕಂಡೆಂ ಗ್ರಹಣಮನದನಾಖಂಡಲ ದಿಙ್ಮುಖದೆ ಬಂದು ಸರ್ವಗ್ರಾಸಂಗೊಂಡತ್ತಪರಾದಿತ್ಯನ ಮಂಡಲಮಂ ಬಾಹುರಾಹು ಸತ್ಯಾಶ್ರಯನಾ: **ಗದಾಯು,** ೧. ೨೬)

**ಸರ್ವತೋಭದ್ರ** – ಚೌಕಾಕಾರವಾದ ಅರಮನೆ ಅಥವಾ ದೇವಾಲಯ (ಸುತ್ರಾಮನೆ ಸೂತ್ರಧಾರನಾಗಿಯುಂ ಕಲ್ಪಜರೆ ಶಿಲ್ಪಿಗಳಾಗಿಯುಂ ಸಮೆದ ಚೆಲ್ವಿಂಗೆ ಸರ್ವತೋಭದ್ರಮೆನಿಸಿದ ಸರ್ವತೋಭದ್ರಂಗಳೊಳಂ: **ಆದಿಪು,** ೬. ೧೦೬ ವ); ಬೇವು (ಈ ವರ್ಧಮಾನಂ ನಯನಾನಂದವರ್ಧಮಾನಮಾದುದು ಈ ಸರ್ವತೋಭದ್ರಂ ಸರ್ವತೋಭದ್ರಮೆಂಬ ವಾಕ್ಯಾರ್ಥಮಂ ಅನ್ವರ್ಥಂ ಮಾಡಿದುದು: **ಮಲ್ಲಿನಾಪು,** ೫. ೩೬ ವ); [ಜೈನ] ರಾಜರು ಮಾಡುವ ಮಹಾ ಜಿನಪೂಜೆ (ಸಮಸ್ತ ಧಾರ್ಮಿಕಜನಂಗಳಂ ಬರಿಸಿ ಸರ್ವತೋಭದ್ರಮೆಂಬ ಮಹಾಮಹಿಮೆಯಂ ಮಹೋತ್ಸವದಿಂದ ಎಂಟು ದಿವಸಂಬರಂ ಮಾಡಿ: **ಆದಿಪು,** ೧೬. ೬೨ ವ)

**ಸರ್ವನಮಸ್ಯ** – ತೆರಿಗೆ ಮುಕ್ತವಾದುದು (ಪುರಂಗಳುಮಂ ಭೂಸುರಪುರವರ್ಯಂಗಳಪ್ಪ ಸರ್ವನಮಸ್ಯಂಗಳುಮಂ .. .. ನೋಡುತ್ತುಂ: **ಲೀಲಾವತಿ,** ೫. ೧೯)

**ಸರ್ವನಿವೇದಕ** – ಒಂದು ಯಜ್ಞ (ಸರ್ವನಿವೇದಕಮೆಂಬ ಯಜ್ಞದೊಳ್ ಕ್ಷಿತಿ ಪೊಗಟ್ವೆನಿಮಿತ್ತು: **ಪಂಪಭಾ,** ೨. ೪೫)

**ಸರ್ವಭಾಷಾಸಾಮಾನ್ಯ** – ಎಲ್ಲರಿಗೂ ಅವರದೇ ಭಾಷೆಯಲ್ಲಿ ತಿಳಿಯುವುದು (ಶ್ರೀಮತ್ತೀರ್ಥಾಧಿಪನ ವದನಾಂಭೋಜದಿಂ ಸರ್ವಭಾಷಾಸಾಮಾನ್ಯ ಶ್ರೀವಚನಮೊಗೆದತ್ತು: **ಯಶೋಧಚ,** ೧. ೭೧)

**ಸರ್ವರತ್ನ** – [ಜೈನ] ನವನಿಧಿಗಳಲ್ಲಿ ಒಂದು (ಶ್ರೀಗೃಹದೊಳ್ ಪುಟ್ಟಿದ ಕಾಳ ಮಹಾಕಾಳ ನೈಸರ್ಪ ಪಾಂಡುಕ ಪದ್ಮ ಪಿಂಗಳ ಮಾಣವಕ ಶಂಖ ಸರ್ವರತ್ನಂಗಳೆಂಬ ನವನಿಧಿಗಳುಂ: **ಆದಿಪು,** ೧೫. ೬ ವ)

**ಸರ್ವರ್ತುಕ** – ಎಲ್ಲ ಋತುಗಳಲ್ಲಿಯೂ ಚಿಗುರು, ಹೂ, ಕಾಯಿ, ಹಣ್ಣುಗಳನ್ನು ಬಿಡುವ (ಸರ್ವರ್ತುಕಮೆ ಬನಂ ನೆಲನುರ್ವರೆಯೆ ಕೊಳಂ ಸಮಂತು ಪೂಗೊಳನೆ ಬಟೆಕ್ಕೊರ್ವಿಂದ್ರಂ ರೋಹಣಮೆ ಗಡಾರ್ವಣಿಸಲಜೆವರಣ್ಣ ತಜ್ಜನಪದಮಂ: **ಚಂದ್ರಪ್ರಪು,** ೩. ೧೦)

**ಸರ್ವರ್ತುಕೋದ್ಯಾನ** – ಸರ್ವರ್ತುಕನಂದನ (ಸರ್ವರ್ತುಕೋದ್ಯಾನ ನಂದನದಿಂ ಸೌಂದರಸೌಂದರೀ ನಿವಹದಿಂದಂಭೋಜಪಂಡಂಗಳಿಂ ತನಗನ್ವರ್ಥಂ ಎನಿಪ್ಪುದಾ ಪುರವರಂ ಶೋಭಾವತೀನಾಮದಿಂ: **ಪಂಚತಂತ್ರ,** ೨೫೨)

**ಸರ್ವತ್ರಾತಿಶಯಂ ತ್ಯಜೇತ್** – ಎಲ್ಲೆಡೆಯೂ ಅತಿರೇಕವನ್ನು ಬಿಡತಕ್ಕದ್ದು (ಮನಮಿಕ್ಕದಿರ್ ಸೊವಡನೆಂದುಂ ಮಾಡದಿರ್ .. .. ಸರ್ವತ್ರಾತಿಶಯಂ ತ್ಯಜೇತ್ ಎನಿಪುದಂ ನೀಂ ಮೀಱದಿರ್ ಮಾನಿನೀ: **ರಾಜಶೇವಿ,** ೧೧. ೧೯)

**ಸರ್ವಾಂಗೀಣ** – ಎಲ್ಲ ಕಡೆ ಆವರಿಸಿದ (ಅನಂತವೀರ್ಯ ಕುಮಾರಂಗೆ ಚಕ್ರವರ್ತಿಸುತಾ ಪರಂಪರೆಯೊಳ್ ಒರ್ವಳ್ ಅಪೂರ್ವಸರ್ವಾಂಗೀಣ ವಸ್ತುತ್ವಭಾಜನೆಯಂ ಕುಡಿಸುವುದುಂ: **ಶಾಂತಿಪು,** ೨. ೭೭ ವ)

**ಸರ್ವಾರ್ಥಸಿದ್ಧಿ** – [ಜೈನ] ಪಂಚಾಣೂತ್ತರ ವಿಮಾನಗಳಲ್ಲಿ ತುತ್ತತುದಿಯದು (ಮೊದಲ ಶುಕ್ಲಧ್ಯಾನದೊಳ್ ಸಮಾಹಿತಂ ಉಪಶಾಂತ ಗುಣಸ್ಥಾನದೊಳ್ ಪ್ರಾಣಪರಿತ್ಯಾಗಂಗೆಯ್ದು ಸರ್ವಾರ್ಥಸಿದ್ಧಿಯೊಳ್ ಅಹಮಿಂದ್ರನಾದಂ: **ಆದಿಪು,** ೬. ೩೪ ವ)

**ಸರ್ವಾವಧಿಜ್ಞಾನ** – ಕೇವಲಜ್ಞಾನ (ದೇಶವಧಿಜ್ಞಾನಿಯಪ್ಪ ಸೂರ್ಯಮಿತ್ರಮುನಿನಾಥಂ ಅತಿವಿಶುದ್ಧ ಪರಿಣಾಮದಿಂ ಸರ್ವಾವಧಿಜ್ಞಾನಲೋಚನನಣಾಗಿ: **ಸುಕುಮಾಚ,** ೩. ೪೮)

**ಸರ್ವಾಶೆ** – ಎಲ್ಲ ದಿಕ್ಕುಗಳೂ (ಶರ್ವಾಶೆಯಣ ಭೂವಿನುತಂ ಶೀವಿ ನಿಂದಂತೆ ಜಾತಾಭ್ಯುದಯನೆಸೆದಪಂ ಪದ್ಮಿನೀಜೀವಿತೇಶಂ: **ಲೀಲಾವತಿ,** ೩. ೭೭)

**ಸರ್ವೋರ್ವರೆ** – ಸಮಸ್ತ ಭೂಮಿ (ಸ್ವಾಮಿಹಿತೌಘನಿರ್ಮಲ ಮಹಾ ರತ್ನಾಕರಂ ನೀತಿಶಾಸ್ತ್ರದ ಮಂತ್ರಕ್ಕಧಿದೈವತಂ.. ..ಎಂಬುದು ಸರ್ವೋರ್ವರೆ ಧರ್ಮನಿರ್ಮಲ ಯಶಸ್ಸದ್ವರ್ಗನಂ ದುರ್ಗನಂ: **ಪಂಚತಂತ್ರ,** ೨೪೮)

**ಸರ್ವೋಷಧಿ** – [ಜೈನ] ಒಂದು ಔಷಧರ್ಧಿ, ಸಾಧುವಿನ ಸ್ಪರ್ಶ, ಉಸಿರು, ಮಲಮೂತ್ರಗಳೆಲ್ಲ ರೋಗನಿವಾರಕವಾಗುವುದು (ಉಗ್ರೋಗ್ರ ತಪದಿಂ ದೀಪ್ತತಪಂ ಮಹಾತಪಂ ಘೋರತಪಂ ಎಂದಿವು ಮೊದಲಾಗೊಡೆಯ ತಪಂಗಳಂ ಗೆಯ್ಯೆ ತಪದ ಮಾಹಾತ್ಮ್ಯದಿಂದಂ ಆಮೋಷಧಿ ಖೇಳೋಷಧಿ ಜಲ್ಲೋಷಧಿ ವಿಪ್ರೋಷಧಿ ಸರ್ವೋಷಧಿಯೆಂದಿವು ಮೊದಲಾಗೊಡೆಯ ಋದ್ಧಿಗಳ್ ಪುಟ್ಟಿದೊಡಂ: **ವಡ್ಡಾರಾ,** ಪು ೬೯, ಸಾ ೩)

**ಸರ್ಷಪ** – ಸಾಸಿವೆ (ಗಂಗಾದಿ ಪುಣ್ಯಸರಿತ್ ಸರೋವರಾನ್ವಿತ ಪೂತಶೀತಜಲಂಗಳಿಂ .. .. ಸಕಲ ಸರ್ಷಪ ಗಣತರ್ಪಣಂಗೆಯ್ದುಂ: **ಅಜಿತಪು,** ೪. ೫೦ ವ)

**ಸಲ್** – ಸೇರು (ಪೋಂತಂ ಕೊಂದು ದಿವಕ್ಕಂ ಅದು ಮುಂತಾಗಿಯೆ ಸಲ್ವುದು ಎಂಬರ್ ಇದನೇನೆನ್ನರ್: **ಯಶೋಧಚ,** ೩. ೬೨); ಪ್ರಸಿದ್ಧಿ ಪಡೆ (ಎನ್ನ ನನ್ನಿಯ ಪೆಂಪು ನಿನ್ನ ಮಹತ್ತ್ವದಿಂದಮೆ ಸಂದುದು: **ಪಂಪಭಾ,** ೯. ೧೭); ಸರಿದು ಹೋಗು (ಇಂತು ದಿವಸಂಗಳ್ ಸಲೆ: **ವಡ್ಡಾರಾ,** ಪು. ೭೭, ಸಾ. ೯)

**ಸಲಗೆ** – [ಶಲಾಕಾ] ಸಲಾಕೆ (ಕುಸುಮಶರಂ ಕೆಯ್ವೊಲದಾಂಕೆಗೊಟ್ಟ ನೀಲದ ಸಲಗೆಯೆನೆ ರೋಮರಾಜಿ ರಾಜಿಸಿ ತೋರ್ಕುಂ: **ನೇಮಿನಾಪು,** ೧. ೭೦)

**ಸಲಪು** – ಕಾಪಾಡು (ಸಲಪು–ರಕ್ಷಣೇ: **ಶಬ್ದಮದ,** ಧಾ ೪೭೧)

**ಸಲವು** – ಪ್ರವೇಶ (ಉಪವಾಸವ್ರತಪ್ರಚುರತೆಯಿಂ ವಪು ಗಿಡಿಗಿಡಿಜಂತ್ರಮಾದುದೆಂಬನ್ನೆವರಂ ಕ್ಷಪಿಯಿಸಿ ಮುನೀಂದ್ರಂ ಅನಶನತಪದೊಳ್ ತಱಿಸಂದ ಸಲವು ಅದೊಂದಾಶ್ಚರ್ಯಂ: **ಸುಕುಮಾಚ,** ೩. ೪)

**ಸಲಿಲ** – ನೀರು (ಪರಿಮಳ ಸಲಿಲಮನಾಗಳ್ ಸುರಿದುದು ಭಕ್ತಂಗೆ ವರ ವಧೂನಿಕುರುಂಬಂ: **ತ್ರಿಷಷ್ಟಿಪು,** ೭. ೬೮)

**ಸಲಿಲಾಸ್ತ್ರ** – ನೀರು ಸುರಿಸುವ ಅಸ್ತ್ರ (ಸಲಿಲಾಸ್ತ್ರಂ ಜ್ವಲನಾಸ್ತ್ರಂ ಗೆಲೆ .. .. ಗೆಲ್ವಾಸೆಯಿನಂದು ಕೇಶವ ನಿಕುಂಭರ್ ತಮ್ಮೊಳ್ಚಾಡಿದರ್: **ಜಗನ್ನಾವಿ,** ೧೫. ೩೦)

**ಸಲಿಸು** – ಒಳಹೊಗಿಸು (ಅತಿನಿಶಿತ ದರ್ಭಸೂಚೀಹತಿಗಳಿಕ್ಕಿದ ತೆಱದಿಂ ಉಗ್ರಕರಂ ಅತುಳ ವನಸ್ಪತಿಸಂಕೀರ್ಣವೆನಿಪ್ಪೀ ವಿತತಾಟವಿಯಲ್ಲಿ ಸಲಿಸನೆಂದುಂ ಕರಮಂ: **ಚಂದ್ರಪ್ರಪು,** ೫. ೫೧); ನಡೆಸು (ಕ್ಷತ್ರಿಯರ್ಗೆ ಪೂರ್ವಕ್ರಮಾಗತಂ ಕಿಡಿಸದೆ ಸಲಿಪುದೆ ಧರ್ಮಂ: **ವಡ್ಡಾರಾ,** ಪು. ೧೮೫, ಸಾ. ೨೩); ಅನುಭವಿಸು (ದೊರೆವೆತ್ತನ್ಯೋನ್ಯಸಂಪ್ರೀತಿಯುಂ ರತಿಯುಂ ಕಾಮನುಮೆಂಬಿನಂ ಸಲಿಸಿದರೆ ನಾನಾವಿನೋದಂಗಳಂ: **ಮಲ್ಲಿನಾಪು,** ೩. ೬೩)

**ಸಲುಗೆಗೆಯ್** – ಮೀಸಲು ಒಪ್ಪಿಸು (ಮದ್ಯಮಂ .. .. ಕಡು ಚೋದ್ಯಮೋ ಮೀಸಲ್ಗೆ ಸಲುಗೆಗೆಯ್ವರ್ ಭಕ್ತರ್: **ಸಮಯಪ,** ೧೪. ೧೦೧)

**ಸಲೆ** – ಸದಾಕಾಲ (ಸಲೆಯೆಂಬುದು ನಿತ್ಯಾರ್ಥಾವಲಂಬಿ: **ಶಬ್ದಮದ,** ೩೨೮); ಒಂದೇ ಸಮನೆ (ಸುಟಿಪುಳಿದೆಳಸೆ ಭಯಂ ಬಟಿವಟಿಯನಣಂ ಬಿಡದೆ ಯೂಥಮಂ ಸಲೆ ಕಾದುಂ ಕಟಿಪುಯುಂ ಇಭರಿಪುವಂ ತಕ್ಕಟಿವಿನೆಗಂ ನೊಂದು ನಿಂದು ಕೊಂದುದಿಭೇಂದ್ರಂ: **ಶಾಂತಿಪು,** ೨. ೧೦೬); ಅತಿಶಯವಾಗಿ; ಸಂಪೂರ್ಣವಾಗಿ (ಸೌಗತಸಾಂಖ್ಯ ಶಿವಾಗಮಂಗಳಂ ನ್ಯಾಯ ನಯ ಪ್ರಮಾಣಸುವಚಃಕ್ರಮದಿಂ ಸಲೆ ಸೋಲೆ ಗೆಲ್ವ ಉಪಾಧ್ಯಾಯರ್ ಅಜೇಯರ್: **ಶಾಂತಿಪು,** ೧. ೪)

**ಸಲ್ಗೆ** – ಸಲಿಗೆ (ಕನಲ್ಕೆಯಂ ಕೊನರಲೀಯದೆ ಸಲ್ಗೆಯಂ ಸೊಪ್ಪಾಗಲೀಯದೆ: **ಲೀಲಾವತಿ,** ೧೪. ೯೭ ವ)

**ಸಲ್ಲಕೀ** – ಆನೆಬೇಲ (ಸಕಟೋದ್ಧೃಷ್ಟ ವನೇಭತುಂಗಜರಠ ಸ್ಥೂಳಾರ್ಗಳಕಾರಮಾರ್ಗಕುಜಂ ವಾಜಿಖುರಾಹುತಿ ಸ್ಥಪುಟಿತಗ್ರಾವಸ್ಥಳಂ ಸೈನ್ಯದಂತಿಕರೋಚ್ಚಾಟಿತ ಸಲ್ಲಕೀ ಕಿಸಲಯಂ: **ಆದಿಪು,** ೧೩. ೫೫)

**ಸಲ್ಲಕ್ಷಣ** – ಒಳ್ಳೆಯ ಚಿಹ್ನೆ (ಸಲ್ಲಕ್ಷಣ ಗುಣನಿಧಿಗಳ್ ಪಲ್ಲಣಂಗಟ್ಟಿ ಬಂದಿರ್ದುವು: **ಪುಷ್ಪದಂಪು,** ೫. ೧೦)

**ಸಲ್ಲಲಿತ** – [ಸತ್+ಲಲಿತ] ಸೊಗಸಾದ (ಎಲ್ಲಿತ್ತೊ ಗೀತವಾದ್ಯ ಸಲ್ಲಲಿತವಧೂಜನ ಪ್ರವೃತ್ತಂ ನೃತ್ತಂ: **ಗದಾಯು,** ೫. ೪೩)

**ಸಲ್ಲಲಿತಾಂಗ** – ಸುಂದರವಾದ ಅವಯವ (ಮಲ್ಲಿಗೆಯಂ ನಗೆಯಿಂ .. .. ತೋರ್ಪರ್ ಸಲ್ಲಿತಾಂಗದ ಲನಾಂಗಿಯರ್ ಮಾನಿನಿಯರ್: **ಜಗನ್ನಾವಿ,** ೨. ೨೮)

**ಸಲ್ಲೇಖನ** – [ಜೈನ] ಉಪವಾಸವ್ರತ (ಪಾಂಡುರಾಜನ ಸಲ್ಲೇಖನಕಾಲದೊಳುಂ ಆಹಾರಮಂ ಪ್ರಯೋಗಿಸಿಂ ಎಂದು ನಾಲ್ವರಂ ಸಮರ್ಪಿಸಿದರ್: **ಹರಿವಂಶ,** ೧೦. ೩೦ ವ)

**ಸಲ್ಲೆಹ** – ಒಂದು ಆಯುಧ (ಸಬಳ ಸಲ್ಲೆಹ ಸೂಲಿಗೆ ಚಕ್ರಚಾಪ ಬಲ್ಲೆಹ ಕತ್ತಿಗೆ ಕಠಾರಿಯಾದ .. .. ಕೈದುಗಳಿಂದ: **ಧರ್ಮಪ,** ೧. ೮೬ ವ)

**ಸವ** – [ಸಮ] ಜೊತೆ (ತನಗೆ ಸವನಪ್ಪವಂ ಪೊಣರ್ದನೆ ಕಾದುದುದು ಅಜ್ಜನಪ್ಪವಂಗೆಱಗುವುದು ಎನ್ನೊಳಗುಂ ವಲಮರಸುಗಾದೆಗಳನುವಂ ನೀನಱಿದು ಬಿಲ್ಗೆ ಕೈ ನೀಡುವರೇ: **ಕಬ್ಬಿಗಕಾ,** ೧೭೮)

**ಸವಂಗ** – ತೊಡುವ ಅಂಗಿ, ಕವಚ (ಅವಯವದಿಂ ಕುಪ್ಪಸಮಂ ಸವಂಗಮಂ ಕಳೆದು ಕಳೆದರಲ್ಲಿಂದವರಂ: **ಆದಿಪು,** ೧೧. ೭೫)

**ಸವಗ** – ಕವಚ (ಅವನುಡಿಯಲ್ಲಿ ಕಟ್ಟಿದ ಕಠಾರಿ ಅಡಾಯುಧಂ ಆಂತ ಸೀಸಕಂ ಸವಗಂ ಅಡರ್ಪುವೆತ್ತ ಧನು: **ಶಬರಶಂ,** ೨. ೧೦೮)

**ಸವಡಿ** – ಜೋಡಿ (ಅವಯವದೆ ಕುಣಿದು ಮೆಟ್ಟುವ ಸವಡಿಯ ವಜ್ಜರಿಗೆ ಪಿಡಿದ ಸತ್ತಿಗೆಯ ವಿಳಸವಮರ್ದ ಲೀಲೆಯಿಂ ಪೆಂಡವಾದೊಳ್ ಪೆಂಡಿರೊಯ್ಯನೊಯ್ಯನೆ ನಡೆದರ್: **ಆದಿಪು,** ೧೧. ೪೧)

**ಸವಡಿಗೊಡೆ** – [ಸವಡಿ+ಕೊಡೆ] ಜೋಡಿ ಕೊಡೆ (ಬಿದಿ ಪಚ್ಚೆಯ ಕಾವಿನ ನೀಲದ ಕಳಸದ ಸವಡಿ ಕೊಡೆಯಂ ಆ ವನಿತೆಯ ಗಬ್ಬ ಬಾಳಂಗೆತ್ತಿದಂ: **ನೇಮಿನಾಪು,** ೨. ೨೫)

**ಸವಡಿಸು** – ಇಮ್ಮಡಿಯಾಗು (ಪಾಶ್ಚಾತ್ಯದಿಂ ಸವಡಿಸಿತ್ತೆಂಬಂತಿರೆ ರುದ್ರಗ್ರೀವದಿಂ ಪರ್ವುಗೆವೆತ್ತಂತೆ .. .. ಬಂದುದು ಇಂದ್ರಾಯುಧಾಶ್ವಂ: **ಕಾದಂಬ,** ೩. ೯)

**ಸವಣ** – [ಶ್ರಮಣ] ಜೈನ ಮುನಿ (ಮಱೆದು ಕೈಕೊಂಡುದು ಅದುವೇಂ ದೋಸಂ ಅದೇಂ ಬನ್ನಂ ಬಿಸುಡು ಸವಣನ ಪೇೞ್ದ ಜೈನಮತಮಂ ಬ್ರತಮಂ: **ಸುಕುಮಾಚ,** ೬. ೪೯)

**ಸವಣ್ಮನೆ** – ಬಸದಿ (ವಸ್ತುಕೃತಿಯಂ ಸಲೆ ಪೇೞ್ವುದು ಕಲ್ತು ಪೇೞಿದಂದದ ಮನೆಗಲ್ತು ಸವಣ್ಮನೆಗಲ್ತು ಕೂಡೆ ಬಲ್ಲರ ಬಗೆಗಲ್ತು ಆವೆಡೆಯುಮಲ್ತು ಅದು ಕಲ್ಪಿ ವಲಂ ಕವೀಂದ್ರರಾ: **ಕಾವ್ಯಾವಲೋ,** ೨೦೫)

**ಸವತಿ** – [ಸಪತ್ನಿ] ಗಂಡನ ಮತ್ತೊಬ್ಬ ಹೆಂಡತಿ (ಶ್ರೀಯುವತಿಯಂ ಆ ವೀರಶ್ರೀಯುವತಿಗೆ ಸವತಿ ಮಾೞ್ಪೆನೆಂದು ಅರಿನೃಪರಂ ಉಳ್ಳಾಯವೆರಸು ಎೞೆದುಕೊಂಡು ಧರಾಯುವತಿಗೆ ನೆಗೞ್ದ ಹರಿಗನೊರ್ವನೆ ಗಂಡಂ: **ಪಂಪಭಾ,** ೧೧. ೧)

**ಸವತ್ಸ** – ಕರುವಿನಿಂದ ಕೂಡಿದ (ಫಳಲತಿಕೆ ಕಲ್ಪಲತಿಕೆಯನಿೞಿಸಿ ಸವತ್ಸ ಅಮರೇಂದ್ರಧೇನುವ ಗುಣಮಂ ತಳೆದು ನೆಗೞ್ದುದು .. .. ಅತ್ತಿಮಬ್ಬೆಯ ದಾನಂ: **ಅಜಿತಪು,** ೧. ೬೩)

**ಸವನ** – ಯಜ್ಞ (ಅಂಗಜಮರ್ದನ ಅರ್ಚನ ಉತ್ಸವ ಸವನ ಪ್ರದೀಕ್ಷಿತನಂ ಮುವರನ ಈಗಳೆನನ ಬಗೆಯುಂ ಬಯಸಿರ್ದಪುದು: **ರಾಜಶೇಖ,** ೩. ೭೧); [ಸ್ನಪನ] ಸ್ನಾನ, ಅಭಿಷೇಕ (ಘೃತ ಕ್ಷೀರ ದಧಿ ನಾಳಿಕೇರ ತೋಯ ಆಮ್ರರಸ ಇಕ್ಷುರಸ ಗಂಧೋದಕಾದಿಗಳಿಂ ಮಾಡುವ ಸವನಮುಂ: **ಆದಿಪು,** ೧೫. ೧೩ ವ)

**ಸವನಸ್ಥಾನ** – [ಜೈನ] ತೀರ್ಥಂಕರ ಜನ್ಮಕಲ್ಯಾಣದ ಜಾಗ (ಭಾರತಾಪರವಿದೇಹರಾವತಪ್ರಗ್ವಿದೇಹಲಸದ್ಭೂತ ಜಿನವ್ರಜಕ್ಕೆ ಅಅಸವನದಸ್ಥಾನಂಗಳೀ ಶೈಳದೊಳ್: **ಪುಷ್ಪದಂಪು,** ೧೦. ೫೮)

**ಸವನೋತ್ಸವ** – [ಜೈನ] ತೀರ್ಥಂಕರ ಶಿಶುವಿನ ಜನ್ಮಕಲ್ಯಾಣ ಮಹೋತ್ಸವ ಪಾಲ್ಗಡಲ ನೀರ ಪರಿವ ಪೊನಲ್ಗಳ್ .. .. ಎಱಗಿದುವಾ ಜಿನೇಂದ್ರಸವನೋತ್ಸವದೊಳ್: **ಶಾಂತಿಪು,** ೧೦. ೫೧); ಶುಭಕಾಲದ ಮಂಗಳಸ್ನಾನ (ಮೃಗನೇತ್ರೆ ಮನಂಗೊಂಡಳ್ ಮಲಯಜ ಹಿಮಕರ್ದಮಕಲಿತ ಸಲಿಲಸವನೋತ್ಸವದೊಳ್: **ಪಂಪರಾ,** ೫. ೪೦)

**ಸವನಾಗು** – ಸಮನಾಗು (ಸಂಪಗೆಯಂ ಮುಡಿಯೆ ಸೊಗಯಿಸದ ಅದಿರ್ಮುತ್ತೆಯಲರಂ ಮಸಿಯೊಳೆ ಸವನಾದ ಗೊಜ್ಜಗೆಯಂ ನುಡಿಯಲಕ್ಕುಮೆ ಪೂಗಳ ಲೆಕ್ಕಮಂ: **ಆದಿಪು,** ೧೧. ೧೯)

**ಸವವಯಸ** – ಸಮಾನ ವಯಸ್ಕ (ಸವವಯಸ ದಿವಿಜಖೇಟಕ ನವಖೇಟಕನಿಕರಮಗಲದಿರಲಬ್ಧಿಯ ಮೇರುವ ಕೆಲದ ಗಿರಿಕದಂಬದವಜ್ಞೆಯಂ ಪೋಲ್ತುದಾ ಕುಮಾರನ ಕೆಲದೊಳ್: **ಶಾಂತಿಪು,** ೧೦. ೯೧)

**ಸವಸಲ್** – ಉಂಟಾಗು (ನಿಮಗೆ ಎನ್ನಂತಪ್ಪ ಪುತ್ರಂ ಸಮನಿಸೆ ಸವಸಂದತ್ತು ದೌಸ್ಥಿತ್ಯಂ: **ಕರ್ಣನೇಮಿ,** ೪. ೬೫)

**ಸವಳ** – ಬೆಳಗಿನ ಹೊತ್ತು (ಸವಳದೆ ಗುರುಜನದಲ್ಲಿಗೆ ಯುವರಾಜನುಂ ಅಂಗರಾಜನುಂ ಬೆರಸು ರಣೋತ್ಸವದಿಂ ಪೋಗಲ್: **ಗದಾಯು,** ೩. ೭೧)

**ಸವಳದೆ ಬೇಳ್** – ಬೆಳಗಿನ ಅಗ್ನಿಕಾರ್ಯ ಮಾಡು (ಸವಳದೆ ಬೇಳ್ವವಂಗೆ .. .. ವೇದತತ್ತ್ವವ ನೆರೆ ಬಲ್ಲವಂಗೆ .. .. ಮಾದವಂ ಅತಿಭಕ್ತಿಯಿಂದೆಱಗುವಂ: **ಸಮಯಪ,** ೮. ೧೫೨)

**ಸವಾರಿಗಳ್** – ಸವಾರರು (ಅಧಿರಜ ಸನ್ನಿಧಿಯೊಳ್ ಒಪ್ಪದರ್ ಅಂದರಸಾ ಸವಾರಿಗಳ್: **ಪಾರ್ಶ್ವನಾಪು,** ೩. ೩೮)

**ಸವಿ** – ರುಚಿ (ಪಗೆ ಪೊಲ್ಲ ಪಾಂಡುನಂದನರೊಳಹೀಂದ್ರಕೇತನನ ಜೂದಿನ ಗೆಲ್ಲಂ ಅದೆಂತುಟೆನ್ನ ನಂಜಿನ ಸವಿಯೆಂತುಟೆಂದೊಡೆ ಇನಿಸಂತದೊಳ್ ಅಂತಕನಲ್ಲಗಟ್ಟುಗುಂ: **ಪಂಪಭಾ,** ೬. ೭೫೦; ರುಚಿ ನೋಡು (ಸವಿ–ಖಾದನ ಪರೀಕ್ಷಾಯಾಂ: **ಶಬ್ದಮದ,** ಧಾ ೭೬೪)

**ಸವಿತಾರ** – ಸೂರ್ಯ (ರವಿ ಮಾರ್ತಂಡಂ ಪತಂಗಂ ತಪಿ ತಪಂ ಇನಂ ಭಾನು ಪೂಷಂ ಸಹಸ್ರಾಂಶು ವಿಪಸ್ವಂತಂ ಖಗಂ ಭಾಸ್ಕರಂ ಅಹಿಮಕರಂ ಸೂರ್ಯಂ ಅಂಭೋಜಮಿತ್ರಂ ದಿವಸೇಂದ್ರಂ ಬ್ರಧ್ನನಂಶು ಗ್ರಹಪತಿ ಹರಿದಶ್ವಂ ತಮೋವೈರಿ ಹಂಸಂ ಸವಿತಾರಂ ಸೂರಂ ಅರ್ಕಂ ದ್ಯುಮಣಿ ತರಣಿ ಸಪ್ತಾಶ್ವಂ ಆದಿತ್ಯನಕ್ಕುಂ: **ಅಭಿಧಾವ,** ೧. ೧. ೬೪)

**ಸವಿತೃಮಂಡಲ** – ಸೂರ್ಯಮಂಡಲ (ಆ ಸಮಯದೊಳ್ ಸವಿತೃಮಂಡಲಂ ಉದಯಾಚಲ ಶಿಖಂಡಮಾಣಿಕ್ಯಮಂಡನಂ ಎನಿಸೆ: **ಪಂಪರಾ,** ೯. ೧೯೦ ವ)

**ಸವಿತ್ರಿ** – ತಾಯಿ (ನಿಜ ಸವಿತ್ರಿಗೆ ಮೋಕ್ಷಮನಿತ್ತು .. .. ತನ್ನ ತಂದೆಗೆ ಅಜೀವಂ ದಯೆಗೆಯ್ದು ಕುಮಾರ ಭಾವದೆ .. .. ಬೆಳಗುತ್ತ: **ತ್ರಿಷಷ್ಟಿಪು,** ೩೨. ೨೨)

**ಸವಿದುಟಿ** – ಮಾಧುರ್ಯ ತುಂಬಿದ ತುಟಿ (ಬಿರಿದೊಳ್ದಾವರೆಗಂಪಂ ಕೊರಲುದ್ದಂ ಪೀರ್ವ ತುಂಬಿಯೆನೆ ನೀಱಿನ ಚೆಲ್ವೊರೆದ ಸವಿದುಟಿಯನೊಲವಿಂ ಬರೆ ಪೀರ್ದುವು ಪೊಳೆವ ಇಚ್ಚೆಗಾರ್ತಿಯ ಕಣ್ಗಳ್; **ಕಬ್ಬಿಗಕಾ,** ೨೫೬)

**ಸವಿದೆ** – ಸಮಿಧೆ, ಸೌದೆ, ಕಟ್ಟಿಗೆ (ದಿವಿಜಪತಿ ಮರಮಳೆಯಂ ಕಱೆವುತ್ತಿರೆ ತತ್ಪುರದೊಳ್ ನೆಱೆ ಸವಿದೆಗಳಿಲ್ಲದಂತುಟು ಆಯಿತ್ತಾಗಳ್: **ತ್ರಿಷಷ್ಟಿಪು,** ೧೦. ೨೭)

**ಸವಿಧ** – ಹತ್ತಿರ (ಸವಿಧಂ ದೂರಂ ಪ್ರತ್ಯಂತಮಿದೆನ್ನದೆ .. .. ನೆಗೞ್ದತ್ತಗಾಧಬೋಧಂ ಜಿನನೊಳ್: **ಪುಷ್ಪದಂಪು,** ೧೪. ೪೦)

**ಸವಿಪಾಕ** – [ಜೈನ] ಎರಡು ಬಗೆಯ ನಿರ್ಜರೆಗಳಲ್ಲಿ ಒಂದು, ಕರ್ಮದ ಫಲವು ಕಡಿಮೆಯಾಗುವ ಕಾಲ (ಯಥಾಕಾಲಾನುಭವನ ಸವಿಪಾಕವಿಪಾಕರೂಪದಿಂ ಪೂರ್ವಾರ್ಜಿತನಿರ್ಜರಣಂ ನಿರ್ಜರೆಯೆಂಬುದು: **ಆದಿಪು,** ೧೦. ೬೩ ವ)

**ಸವಿರಾಗ** – [ಸ+ವಿರಾಗ] ವೈರಾಗ್ಯಯುಕ್ತ, [ಸವಿ+ರಾಗ] ಮಧುರ ಪ್ರೀತಿ (ಸವಿರಾಗಂ ವೈಭವಂ ಸನಿರ್ಮಳದಿಗಂಬರಂ ಸಫಳಭವಂ ಭುವನೋತ್ತಮಂ ವಸಂತೋತ್ಸವಸದೃಶಂ ಪ್ರೋಷ್ಠಿಲಂ ಮುನೀಂದ್ರಶ್ರೇಷ್ಠಂ: **ಆಚವರ್ಧ,** ೧೩. ೧೧)

**ಸವಿವಕ್ಷಿತ** – ಹೇಳಲು ಇಚ್ಛಿಸುವ (ಸ್ತುತಿನಿಂದೆಗಳಿಂ ಸವಿವಕ್ಷಿತಗುಣದೊಳ್ ಸದೃಶಮಾಗಿ ಪೇೞ್ವುದು: **ಕವಿರಾಮಾ,** ೩. ೯೫)

**ಸವಿಸ್ತರ** – ವಿಸ್ತಾರವಾದ (ಸವಿಸ್ತರದೊಳೆ ವರ್ಧಮಾನ ಜಿನಸನ್ನಿಧಿಯೊಳ್ ವಿಪುಳಾದ್ರಿಯೊಳ್ ನಿಜಾದರದೊಳ್ ಗೌತಮರ್ ಮಗಧನಾಯಕನಂ ತಿಳಿವಂತು ಪೇೞ್ವುದಂ .. .. ವಿರಚಿಸುವೆಂ: **ಆದಿಪು,** ೧. ೪೧)

**ಸವ್ಯ** – ದೇಹದ ಎಡಗಡೆ (ಸವ್ಯಂ ವಾಮಶರೀರಂ: **ಅಭಿಧಾವ,** ೨. ೨. ೧೫)

**ಸವ್ಯಸಾಚಿ** – ಎರಡೂ ಕೈಗಳಲ್ಲಿ ಬಾಣಪ್ರಯೋಗ ಮಾಡಬಲ್ಲವನು, ಅರ್ಜುನ (ತಾವಾ ಸವ್ಯಸಾಚಿಯೊಳ್ ತೊಡರ್ದಿಱಿಯರ್: **ಶಬ್ದಮದ,** ೨೫೫ ಪ್ರ ೨)

**ಸವ್ಯಾಪಸವ್ಯ** – ಎಡ ಮತ್ತು ಬಲಭಾಗ (ಆಗಳ್ ಸವ್ಯಾಪಸವ್ಯ ಭ್ರಾಂತೋದ್ಭ್ರಾಂತಂಗಳೆಂಬ ರಥಕಲ್ಪ ವಿಶೇಷವಿನ್ಯಾಸಂಗಳಂ

ಅಱೆದು ಸಾರಥಿಗಳ್ ಚೋದಿಸುವಾಗಳ್: **ಪಂಪಭಾ,** ೧೨. ೭೫ ವ)

**ಸಸಂಭ್ರಮಂ –** ಸಡಗರದಿಂದ ಕೂಡಿ (ಅಂತೆಸೆದು ಬಂದಾ ಸಗರ್ವಂ ಸಸಂಬ್ರಮಂ ನಿರೀಕ್ಷಿಸಿ ಸಂತಸಂಬಟ್ಟು: **ರಾಜಶೇವಿ,** ೧೩. ೮೪ ವ)

**ಸಸಿ –** ಕಳೆ ಕೀಳುವುದು ಹಾಗೂ ಸಸ್ಯ (ಸಸಿ–ಸಸ್ಯಾದ್ಯುಚ್ಚಾಟನೇ ಸಸ್ಯೇ ಚ: **ಶಬ್ದಮದ,** ಧಾ ೭೧೪); ಹಿಂಜು (ಸಸಿದರ್ ಅದೊಂದೆಡೆಯೊಳಗೊಟ್ಟಿರ್ದರಳೆಯಂ: **ಪಂಪಭಾ,** ೩. ೫); [ಶಶಿ] ಚಂದ್ರ (ಕುವಳಯಸಮಾಜದ ಸಂತಸಮಂ ಸಸಿ ಸಮರ್ಥಿಪಂತೆ .. .. ಭವ್ಯಸಮಾಜದ ಸಂತಸವೆಸೆವಂತು ನೆಗೞ್ದೊಡಾತಂ ಜೈನಂ: **ಸಮಯಪ,** ೪. ೬೦); ಎಳೆಯ ಗಿಡ (ಶರೀರದೊಳು ಅಱೆವಂ ಸಸಿಯೊಳ್ ಬೆಳಸಂ ಕೊಳ್ವವೊಲಸಾರದೊಳ್ ಸಾರಮಂ ಮಹೀಪತಿ ಕೊಂಡಂ: **ಶಾಂತಿಪು,** ೮. ೧೨೫)

**ಸಸಿಗಲ್ –** ಚಂದ್ರಕಾಂತಶಿಲೆ (ಸಸಿಗಲ್ಲ ನೆಲಗಟ್ಟಿನ ಪೊಸಬಜ್ಜರದ ವೇದಿಕೆಯ ನವನೀಲದ ಭಿತ್ತಿಯ .. .. ಗಾಡಿವಡೆದ ಮಂಟಪದ ಮಧ್ಯದಲ್ಲಿ: **ರಾಜಶೇವಿ,** ೮. ೫ ವ)

**ಸಸಿತಪಕ್ಷ –** [ಸ+ಸಿತಪಕ್ಷ] ಬಿಳಿಯ ರೆಕ್ಕೆಗಳಿಂದ ಕೂಡಿದುದು, ಹಂಸ ಹಾಗೂ ಶುಕ್ಲಪಕ್ಷದಿಂದ ಕೂಡಿದುದು, ಚಂದ್ರ (ದ್ವಿಜರಾಜಾಭಿಧೇಯಮೊಪ್ಪದೇ ಸಸಿತಪಕ್ಷಂಗೆ: **ರಾಜಶೇವಿ,** ೧೧. ೭೪)

**ಸಸಿನ –** ನೇರವಾಗಿ (ಪೆಗಲೊಳ್ ದಕ್ಷಿಣಹಸ್ತಮೊಪ್ಪೆ ಸಸಿನಂ ವಾಮಂ ಕರಂ ತಾಂಗೆ ಗುಂಡಿಗೆಯಂ .. .. ಬಂದಂ ಮುನೀಂದ್ರೋತ್ತಮಂ: **ನೇಮಿನಾಪು,** ೧. ೮೧)

**ಸಸಿನೆಗೆಯ್ –** ಕಾಪಾಡು (ಅವರ್ಗಳ ಕೈಗಳಿಂದಮೀ ವರ ಶಿವಲಿಂಗಮಂ ಸಸಿನೆಗೆಯ್ಯುವೆಂ ಎಂದೆನುತಿರ್ದನಾ ನೃಪಂ: **ತ್ರಿಷಷ್ಟಿಪು,** ೨೦. ೧೩)

**ಸಸಿನೆವರಿ –** ಎದುರಿಗೆ ನೇರವಾಗಿ ಹೋಗು (ಕೆನ್ನೆತ್ತರೊಳ್ ಒರ್ವರೊರ್ವರಂ ತಳ್ಕಿಱೆದುಂ ಬೊಬ್ಬಿಱೆದುಂ ತ್ರಿಪುಂಡ್ರಮಿಟ್ಟುಂ ಕೂಕಿಱೆದುಂ ತೇಗಿಯುಂ ಸಸಿನೆವರಿದುಂ [ಡಿಎಲ್‌ಎನ್ ಒಪ್ಪಿದ ಪಾಠ] ಬವಳಿವರಿದುಂ ಬಾನಂಗುಳಿಗೆವರಿದುಂ ಸೂೞ್ವರಿದುಂ ಆಡುವಾಗಳ್ ಉಭಯಬಲಂಗಳ್: **ಪಂಪಭಾ,** ೧೨. ೧೫೮ ವ)

**ಸಸಿಯಂ ಸೂಡಿದಂ –** ಚಂದ್ರಧರ, ಶಿವ (ಇಸೆ ಬಂದು ವಶೀಕರಣಂ ಸಸಿಯಂ ಸೂಡಿದನ ಕಮಲವಿಮಲ ಜ್ಞಾನಾವಸಥಪರಂಜ್ಯೋತಿಯ ಕಾಲ್ದೆಸೆಯಂ ಕಾಣದೆ ಮರಳ್ದು ಬರೆ ಬೆಱಗಾದಂ: **ಗಿರಿಜಾಕ,** ೮. ೩೪)

**ಸಸ್ಪೃಹ –** ಬಯಕೆಯಿಂದ ಕೂಡಿದ (ಸಸ್ಪೃಹ ಸಾನಂದ ಸಲೀಲ ಸಸ್ಮಿತಮುಖವ್ಯಾಭಾಸಿ ನೋಡಿಂತು ಸನ್ನಿಹಿತಂ ಸೌಂದರರೂಪಮಿನ್ನುಮೆರ್ದೆಯೊಳ್ ಮಜ್ಜೀವಿತಾಧೀಶನಾ: **ಆದಿಪು,** ೩. ೪೨)

**ಸಸ್ಮಿತ –** ಮುಗುಳುನಗೆಯಿಂದ ಕೂಡಿದ (ಸಸ್ಮಿತಮುಖವ್ಯಾಭಾಸಿ ನೋಡಿಂತು ಸನ್ನಿಹಿತಂ ಸೌಂದರರೂಪಮಿನ್ನುಮೆರ್ದೆಯೊಳ್ ಮಜ್ಜೀವಿತಾಧೀಶನಾ: **ಆದಿಪು,** ೩. ೪೨)

**ಸಸ್ಯ –** ಗಿಡಮರಗಳು (ಆ ನಾಡೂರ್ದಪ್ಪದೆದದೇನೆಸೆವುವೊ ಕೌದ್ರವೀಣದ .. .. ಮೌದ್ಗೀನದ ಬಹುಸಾರಸಸ್ಯ ಸಕಳಫಳಂಗಳ್: **ಪುಷ್ಪದಂಪು,** ೨. ೧೨); ಶ್ರೇಷ್ಠ ರತ್ನ (ಪುಷ್ಯರಾಗ ಸಸ್ಯ ಕರ್ಕೇತನ ಇಂದ್ರನೀಲಂ ಮೊದಲಾಗೊಡೆಯ ಅನರ್ಘ್ಯಮಪ್ಪ ಮಾಣಿಕದಿಂ ಸಮೆದ ಪಲವುಂ ನಾನಾಪ್ರಕಾರದ ಕಂಕಣಗಳುಮಂ ತೊಟ್ಟ ಮುಂಗಯ್ಯುಂ: **ವಡ್ಡಾರಾ,** ಪು. ೧೪೮, ಸಾ. ೧೪)

**ಸಸ್ಸ –** ಧಾನ್ಯ, ಕಾಳು (ತೃಣ ಸಸ್ಸ ಘಾಸ ವಿಷಯಪ್ರಣಯಂ ಸಮವೃತ್ತಿಯಪ್ಪವೋಲ್ ಮೃಗಗಣದೊಳ್: **ಕವಿರಾಮಾ,** ೧. ೮)

**ಸಹಕಾರ –** ಮಾವು (ಇದಂ ಪುಗಲಿಂ ಗಡಿಂ ಎಂದು ಬೇಟಕಾಱರಂ ಇರದೆ ಊಱೆ ಸಾಱೆ ಜಡಿವಂತೆ ಎಸೆಗುಂ ಸಹಕಾರಕೋಮಳ ಅಂಕುರಪರಿತುಷ್ಟ ಪರಪುಷ್ಟಗಳ ಧ್ವನಿ ನಂದನಂಗಳೊಳ್: **ಪಂಪಭಾ,** ೨. ೧೩)

**ಸಹಕಾರನಂದನ –** ಮಾವಿನ ತೋಪು (ಸೋರ್ವ ಸಹಕಾರದೆ ತೀವಿದ ಬಾವಿ ಕಾಮದೇವನ ರಸಕೂಪದಂತೆ .. .. ಎಸೆಯೆ ಕಣ್ಗೆಸೆಗುಂ ಸಹಕಾರನಂದನಂ: **ಅಜಿತಪು,** ೨. ೧೩)

**ಸಹಗಮನ –** ಪ್ರಭುವಿನೊಡನೆ ಪ್ರಾಣ ಬಿಡುವುದು (ಪೊಡೆವ ವೀವಱೆಯ ಪಿಡಿವ ಬಿರುದಿನ ಕಾಳೆಯ ಸುತ್ತಿಱೆದ ಮುತ್ತಿನ ತಳೆಯ ತಲೆಗೆ ಮುಂದಲೆಯಾಗಿ ಲೆಂಕರ್ಕೂಡುವ ಸಿಡಿದಲೆಯ ಸಹಗಮನ ಸಮುತ್ಸುಕತೆಯಿಂ ಕೈವಿಡಿಸೆ: **ಅನಂತಪು,** ೧೧. ೭೪ ವ)

**ಸಹಗಾಣ –** ಜೊತೆಯ ಹಾಡುಗಾರರು (ಗಾಂಧರ್ವಸರ್ವಜ್ಞರೆಂಬ ಗಾಯಕಂ ನಾಯಕಂ ಸಹಗಾಣರಂ ಕೂಡಿಕೊಂಡು ಎತ್ತಿದ ಶ್ರುತಿಯಂ ಇಳುಹಲೀಯದೆ .. .. ಪಾಡುವಾ ಸಮಯದೊಳ್: **ಧರ್ಮಪ,** ೨. ೨೦ ವ)

**ಸಹಚರಿ –** ಒಡನಾಡಿ (ಶಿವನಂ ಮರುಳ್ಗೊಂಡು ಭವಾನಿಯಿರೆ ಕಂಡು ಕೌತುಕಂಗೊಂಡು ಸಹಚರಿಯರ್: **ಗಿರಿಜಾಕ,** ೩. ೯೮ ವ)

**ಸಹಜ –** ನೈಜವಾದ (ಚೂತನೊಲ್ದು ಪೊರೆಗುಂ ಗಿಳಿಯಂ ಮುಖರಾಗಿಯಂ ಮಧುವ್ಯಸನಿ ಮದಾಳಿಯಂ ಸಹಜವಕ್ರವಚಸ್ವಿಯನನ್ಯಪುಷ್ಟನಂ: **ಮಲ್ಲಿನಾಪು,** ೬. ೧೭)

**ಸಹಜಕವಿ –** ಪ್ರತಿಭಾವಂತ ಕವಿ (ಸಹಜಕವಿ ಚತುರಕವಿ .. .. ನುತಮಹಾಕವೀಂದ್ರಂ ಸರಸ್ವತೀಮುಖಮುಕುರಂ: **ಸುಕುಮಾಚ,** ೧. ೫೨)

**ಸಹಜನ್ಮ –** ಸಹೋದರ (ಸಹಜನ್ಮನುತ್ತರಂಗೇಳ್ದು ಹಸ್ತಿನಾಪಾದ ಯುದ್ಧಮದು ಬಳವತ್ ವಿಗ್ರಹಮೆಂಬವೊಲ್ ಅಸಮರಣಾಗ್ರಹಣಕೆ ಬೆಱಗಾದ ತಾತನಂ ಬಗೆಗೊಳಿಸಲ್: **ಅನಂತಪು,** ೧೩. ೫೪)

**ಸಹಜಪ್ರಜ್ಞ –** ಸಹಜಜ್ಞಾನಿ (ಸಹಜಪ್ರಜ್ಞಂ .. .. ಉದ್ಯದ್ಗುಣರತ್ನಸಂಗ್ರಹನೆನಿಪ್ಪಂಗೆ ಆ ಮಹಾಸಂಧಿವಿಗ್ರಹಿಗೆ ಆಳೋಚಿಸಿದಂದದಿಂದೆಸೆಗು ನೀನೆಂದಂ ಧರಾಧೀಶ್ವರಂ: **ಪಾರ್ಶ್ವನಾಪು,** ೨. ೪೭)

**ಸಹಜಮನೋಜ –** ಮನ್ಮಥನಂತಹ ಚೆಲುವ (ಸಹಜಮನೋಜನೋಜನೆಮಗೀಗೆ ವಿಚಿತ್ರರತೋತ್ಸವಂಗಳಂ: **ಪಂಪಭಾ,** ೧. ೪)

**ಸಹಜವಿಭೂಷಣ –** ನಿಸರ್ಗದತ್ತ ಅಲಂಕಾರ (ಸಹಜವಿಭೂಷಣಾಂಬರ ವಿಲೇಪನ ಕೇಸರದಾಮಗಂಧ ಸಸ್ಪೃಹಮಧುಪಾಳಿ ಮಂಡಳಿಸಿ ಸೀಗುರಿಯಂತಿರೆ ಚಾಮರಂಗಳಂ ಬಹುವಿಧಮಿಕ್ಕುವರ್ ದಿವಿಜನೋಲಗದೊಳ್ ವಾರನಾರಿಯರ್: **ಅನಂತಪು,** ೪. ೫೧)

**ಸಹಜಾತ –** ಹುಟ್ಟಿನೊಡನೆ ಬಂದ (ಸಹಜಾತಾಂಬರ ದಿವ್ಯಭೂಷಣದಲನ್ಮಂದಾರಮಾಲಾವಿಲಾಸಿ: **ಆದಿಪು,** ೩. ೪೨)

**ಸಹಜಾತೆ** – ಸೋದರಿ (ಪೆಣ್ಣೊಸಾದಂದು ಸ್ವಸೃ ಸಹೋದರಿ ಸಹಜಾತೆ ಭಗಿನಿಯೆನೆ ಪೆಸರಕ್ಕುಂ: **ಅಭಿಧಾವ,** ೧. ೧೧. ೧೮)

**ಸಹಣಿ** – ಕುದುರೆ ಪಳಗಿಸುವವನು (ಮೊದಲೊಳ್ ಅಭಿನವತುರಂಗಮಂ ಒದವಿರೆ ಸಹಣಿಗೆಳಿನ್ನೆದೆ ತಿರ್ದಿಸಿ ಬಸಮಾದುದಂ ಅಱಿದು ಏಱುವುದು: **ರಾಜಶೇವಿ,** ೧೩. ೫)

**ಸಹಪಾಂಸುಕ್ರೀಡಾ[ಡೆ]** – ಮಕ್ಕಳಾಡುವ ದೂಳಾಟ ಸಹಪಾಂಸುಕ್ರೀಡಾನೇಕ ವಿಭ್ರಮ ಕ್ರೀಡಾರಸೋದಾರ ರಾಜದಾರಕಪರಿವೃತನಾಗಿ: **ಆದಿಪು,** ೮. ೪೧ ವ)

**ಸಹಪಾಂಸುಕ್ರೀಡಿತ** – ಬಾಲ್ಯದ ಗೆಳೆಯ, ಒಟ್ಟಿಗೇ ದೂಳಾಟವಾಡಿದವ (ಪಾಲುಂ ಮೊಸರುಂ ಬೆಣ್ಣೆಯುಮಂ ಸೂಱೆಗೊಂಡು ಸಹಪಾಂಶುಕ್ರೀಡಿತರಪ್ಪ ಗೋಪಕುಮಾರಕರ್ಗೆ ದಕ್ಷಿಣೆ ಕುಡುವಂತೆ ಕೊಟ್ಟು: **ನೇಮಿನಾಪು,** ೭. ೭೮ ವ)

**ಸಹಸ್ರ** – ಒಂದು ಸಾವಿರ (ಸಹಸ್ರಂ ದಶಶತ: **ಅಭಿಧಾವ,** ೨. ೧. ೩೩); ಅನೇಕ (ಅತಿರಥಸಹಸ್ರಮಿರಲ್ ಅಪ್ರತಿರಥನೊರ್ವನೆ ಮುಕುಂದನಿಸೆ: **ಜಗನ್ನಾವಿ,** ೧೨. ೨೨)

**ಸಹಸ್ರಕಿರಣ** – ಸೂರ್ಯ (ಪಿತೃತರ್ಪಣಮಭಿವಂದಿತ ಸಹಸ್ರಕಿರಣನುಂ ಅಭ್ಯರ್ಚಿತ ಭಗವದ್ಭವಾನೀವಲ್ಲಭ ಚರಣಕಮಳನುಂ ಉಪಚರಿತ ಲೇಪನಾಳಂಕಾರನುಂ .. .. ಆಗಿ: **ಕಾದಂಬ,** ೧. ೬೮ ವ)

**ಸಹಸ್ರವಿಲೋಚನ** – ಸಾವಿರ ಕಣ್ಣುಗಳುಳ್ಳವನು, ಇಂದ್ರ (ಸುರೇಭಕಂಧರದೊಳಿರ್ದ ಸಹಸ್ರವಿಲೋಚನಂ ಮನಂಗೊಳಿಸಿದಂ: **ಜಗನ್ನಾವಿ,** ೧. ೩೯)

**ಸಹಸ್ರಫಣ** – ಸಾವಿರ ಹೆಡೆಗಳುಳ್ಳವನು, ವಾಸುಕಿ (ನಡೆಗಲ್ವಂದುಂ ಬಿಣ್ಪಿಂ ಕೊಡೆ ನೆಗೆದಪುದುರ್ವಿಯೆಂದು ವಾಸುಗಿ ಪಲವುಂಪೆಡೆಯಂ ಶಿಶು ನಡೆವೆಡೆಯೊಳ್ ಪಡೆದಾಂತು ಸಹಸ್ರಫಣನೆನಲ್: **ಪಂಪರಾ,** ೩. ೧೨೯)

**ಸಹಸ್ರಾಂಬಕ** – ಇಂದ್ರ (ಯುದ್ಧಾಪಜಯಕ್ಕೆ ಪಕ್ಕುಗುಡುವಂತಿರ್ದಂ ಸಹಸ್ರಾಂಬಕಂ: **ಜಗನ್ನಾವಿ,** ೧೩. ೬೦)

**ಸಹಸ್ರಾಕ್ಷ** – ಇಂದ್ರ (ಆಗಳ್ ಸಹಸ್ರಾಕ್ಷಂ .. .. ದುಗ್ಧಾರ್ಣವಸಾರಕ್ಷೀರದಿಂದಂ ಮಿಸಿಸೆ ಭವದವಜ್ವಾಳನಂ ಬಾಳನಂ: **ಅಜಿತಪು,** ೪. ೫೩ ವ ಮತ್ತು ೪. ೫೪))

**ಸಹಸ್ರಾರ** – ಸಾವಿರ ಮೊನೆಗಳನ್ನು ಹೊಂದಿದ (ಸಹಸ್ರದಿನಕರಸ್ಪರ್ಧಿ ಸಹಸ್ರಾರಧರ್ಮಚಕ್ರರತ್ನಪುರಸ್ಸರಮಾಗಿ: **ಆದಿಪು,** ೧೦. ೬೭ ವ); [ಜೈನ] ಷೋಡಶಕಲ್ಪಗಳಲ್ಲಿ ಒಂದು (ಸೌಧರ್ಮ ಈಶಾನ ಸನತ್ಕುಮಾರ ಮಾಹೇಂದ್ರ ಬ್ರಹ್ಮ ಬ್ರಹ್ಮೋತ್ತರ ಲಾಂತವ ಕಾಪಿಷ್ಠ ಶುಕ್ರ ಮಹಾಶುಕ್ರ ಶತಾರ ಸಹಸ್ರಾರ ಆನತ ಪ್ರಾಣತ ಅರಣ್ಯ ಅಚ್ಯುತಮೆಂಬ ಪದಿನಾಱುಂ ಕಲ್ಪಂಗಳೊಳಂ: **ವಡ್ಡಾರಾ,** ಪು ೯೭, ಸಾ ೨೬)

**ಸಹಸ್ರಾರಕಲ್ಪ** – [ಜೈನ] ಷೋಡಶಕಲ್ಪಗಳಲ್ಲಿ ಒಂದು (ತಪದೊಳ್ ಉಪಮಾತೀತಂ ನೆಗಱ್ದುಸಹಸ್ರಾರಕಲ್ಪದ ಇಂದ್ರನಾದಂ: **ಕರ್ಣನೇಮಿ,** ೧೪. ೩೩ ವ)

**ಸಹಸ್ರೋಸ್ರ** – ಸಹಸ್ರಕಿರಣ, ಸೂರ್ಯ (ಆಗಸದಿಂದುಗ್ರತ್ವಮಂ ಬಿಟ್ಟವನಿಪತಿಯನಾಶ್ವಾಸಿಸಲ್ ಬಂದಪಂ ತಾನೆ ಸಹಸ್ರೋಸ್ರಂ: **ಚಂದ್ರಪ್ರಪು,** ೫. ೨೦)

**ಸಹಾಯ** – ಜೊತೆಗಾರ, ಗೆಳೆಯ (ಕೆಳೆಯಂ ಮಿತ್ರಂ ವಯಸ್ಯಂ ಸುಹೃದನೆನೆ ಸಹಾಯಂಗೆ ಪರ್ಯಾಯನಾಮಂ: **ಅಭಿಧಾವ,** ೨. ೧. ೧೧)

**ಸಹಾಯಾತ್ ಮಂತ್ರನಿಶ್ಚಯಃ** – [ಇತರರ] ಸಹಾಯದಿಂದ ಮಂತ್ರಾಲೋಚನೆಯನ್ನು ಮಾಡಬೇಕು (ಸಹಾಯಾನ್ಮಂತ್ರನಿಶ್ಚಯಃ ಎಂಬ ವಾಕ್ಯಾರ್ಥಮುಂಟು ಈತನುಂ ಸಹಾಯಗುಣಸಂಪನ್ನಂ ಭೃತ್ಯಗುಣ ಸಂಪೂರ್ಣನುಂ ಅಪ್ಪುದಱಿಂ: **ಪಂಚತಂತ್ರ,** ೮೮ ವ)

**ಸಹಿಷ್ಣು** – ಸಹನೆಯುಳ್ಳವನು (ನಿಮ್ಮಡಿ ನೀವುಂ ಸಹಿಷ್ಣುವಾಗಿ ಪಗೆಯಂ ಬಗೆಯೊಳೆ ಕಾದಿ ಕೊಲ್ವುದೆಂದು ಬಿನ್ನಪಂಗೆಯ್ವುದುಂ: **ಪಂಚತಂತ್ರ,** ೨೮೨ ವ)

**ಸಹೋತ್ಪನ್ನ** – ಸಹೋದರ (ತನ್ನಿಱಿದು ಗೆಲ್ದ ಕೊಳುಗುಳವನ್ನೋಡಲ್ ಚಕ್ರಪಾಣಿಯುಂ ತನ್ನ ಸಹೋತ್ಪನ್ನರುಮನೊಡವರೆ: **ಪಂಪಭಾ,** ೧೪. ೨)

**ಸಱಸಱಿಸು** – ಆತುರದಿಂದ ಬಾ (ದಿಙ್ಮೂಢರಾಗಿ ನಿಲಲುಂ ಸಱಸಱಿಸಿ ಪೋಗಲುಮಱಿಯದೆ ಕುಱುಕುಱು ಮೆಟ್ಟುತುಮಿರ್ಪಿನಂ: **ನೇಮಿನಾಪು,** ೭. ೪೪ ವ)

**ಸಱಿ** – ಬೆಟ್ಟದಿಂದ ಇಳಿಯುವ ನದಿ, ಧಾರೆ (ಮೇಲೆ ಸೂಸುವ ಲಾಜೆಗಳೊಳ್ ಸಱಿಯಾಗೆ ಬಂದು ಕಾರೊಡತಿಯರಲ್ಲಿ ನಿಂದರೆನೆ ಸೌಧನಗಾಗ್ರದೆ ಪೆಣ್ಗಳೊಪ್ಪಿದರ್: **ರಾಜಶೇವಿ,** ೧೩. ೯೪); ಕಂದರ (ಗಿರಿಯ ಮಱಿಗೆ ಪೋಗಿ ಅದೊಂದೆ ಸಱಿಯಪುದ್ದಱಿಂ ಪಶುಶಿಶುಪ್ರವೇಶಕ್ಕಂ ತಕ್ಕ ಗುಹೆಯಂ ಕಾಣದೆ: **ನೇಮಿನಾಪು,** ೮. ೧೦ ವ); ಬಂಡೆಗಲ್ಲು (ವಿಕಸಿತ ಸರಸಿಜಮಂ ಸಱಿಯೊಳಱಿಸುವಂತಾಗಿರ್ಕುಂ: **ಆದಿಪು,** ೯. ೧೦೩)

**ಸಱಿಗಲ್** – ಬಂಡೆಗಲ್ಲು (ಸಱಿಗಲ್ಲಂ ದಬ್ಬುಕದಿಂದಿಱಿದೊಡೆ ಕಿಡಿ ಪಾಱುವಂತೆ: **ನೇಮಿನಾಪು,** ೩. ೧೮)

**ಸಱಿಮಿಂಡಿ** – ಏರುಂಜವ್ವನೆ (ಬಿಂಕದಿಂ ನೆಗಱ್ದಾವಗಮೋಲಗಿಪ್ಪ ಸಱಿಮಿಂಡಿಯರೊಪಿದರೆತ್ತ ನೋಟ್ಪೊಡಂ: **ಕಬ್ಬಿಗಕಾ,** ೧೦೫)

**ಸಱಿಮೊಲೆ** – ಗಡುಸು ಮೊಲೆ (ತೆಳ್ವಸಿಱಾಗೆ ಪಾಟ್ವಸಿಱ್ ಸಱಿಮೊಲೆಯಾಗೆ ಬಿಟ್ಟ ಮೊಲೆ ಪೂತನಿ ಗೋಪಿವೊಲಾಗೆ ಬೇಗದಿಂ: **ನೇಮಿನಾಪು,** ೭. ೭೦)

**ಸಱಿಸೈತುವೋಗು** – ವ್ಯರ್ಥವಾಗಿ ಹೋಗು (ಕಿವಿಯಿಂ ಬಗೆವುಗುವೊಡೆ ಕೊಂಕುವೆತ್ತ ಪೊಸನುಡಿಯೆ ಪುಗುಗುಂ ಉಳಿದುದುಸಱಿಸೈತವಚಱನೆ ಮಾಡಿ ಸಱಿಸೈತುವೋಕುಮೇಂ ಬಗೆಯೆ ಬಟ್ಟೆಯಂ ಮುಟ್ಟುಗುಮೇ: **ಆದಿಪು,** ೧. ೧೮)

**ಸಱುಸೈತು** – ಕಂದರದ ಹೊಳೆ, ವ್ಯರ್ಥವಾಗಿ ಹೋಗು (ಕಿವಿಯಿಂ ಬಗೆವುಗುವೊಡೆ ಕೊಂಕುವೆತ್ತ ಪೊಸನುಡಿಯೆ ಪುಗುಗುಂ ಉೞಿದುದು ಸಱುಸೈತವಚಱನೆ ಮಾಡಿ ಸಱುಸೈತುವೋಕುಂ: **ಆದಿಪು,** ೧. ೧೮)

**ಸಾಂಖ್ಯ** – ಷಡ್ದರ್ಶನಗಳಲ್ಲಿ ಒಂದಾದ ಸಾಂಖ್ಯದರ್ಶನದಲ್ಲಿ ನಂಬಿಕೆಯುಳ್ಳವನು (ಷಡಭಿಜ್ಞಂ ಕ್ಷಣಿಕಂ .. .. ನಡೆವಂ ಕಾಪಿಳ ವೃತ್ತಿಯಂ ಬಿಡದೆ ಸಾಂಖ್ಯಂ: **ಚಂದ್ರಪ್ರಪು,** ೧. ೨೫)

**ಸಾಂಖ್ಯಾಗಮ** – ಸಾಂಖ್ಯ (ಮಿಥ್ಯಾತಮತಿರಸ್ಕರಿಣೀ ತಿರಸ್ಕೃತಮನಸ್ಕಂ ತತ್ತ್ವಾಭಾಸಮಂ ಸಾಂಕ್ಯಾಗಮಮಂ ಮಾಡಿ ಕಪಿಳಾಗಮಮಂ ಮಾಡಿ ಕಪಿಳಾದಿಗಳಪ್ಪ ಶಿಷ್ಯವರ್ಗಕ್ಕೆ ತಿಳಿಪುತ್ತಂ: **ವರ್ಧಮಾಪು,** ೬. ೧೨ ವ)

**ಸಾಂತಕರ** – [ಜೈನ] ಒಂದು ವಿಮಾನದ ಹೆಸರು (ಇಪತ್ತೆರಡು ಸಾಗರೋಪಮಯುಷ್ಯಮಂ ಪಡೆದು ಚ್ಯುತ ಕಲ್ಪದ ಸಾಂತಕರ ವಿಮಾನದೊಳ್ ಅಚ್ಯುತೇಂದ್ರನಾಗಿ: **ನೇಮಿನಾಪು,** ೪. ೧೬ ವ)

**ಸಾಂತಪನ** – ಒಂದು ಬಗೆಯ ತಪಸ್ಸು (ಕೃಚ್ಛ್ರ ಅತಿಕೃಚ್ಛ್ರ ಚಾಂದ್ರಾಯಣ ಸಾಂತಪನಾದಿ ಮಹಾತಪಂಗಳಿಂ: **ಪಂಚತಂತ್ರ,** ೧೯೦ ವ)

**ಸಾಂತ್ವವಚನ** – ಸಂತೈಕೆಯ ಮಾತು (ಬಹುಪ್ರಕಾರ ಸಂತ್ವವಚನದೊಲಂ ಎಂತಾನುಂ ಅರಸನಂ ಸಂತೈಸಿ: **ಕಾದಂಸಂ,** ೪. ೧೨೩ ವ)

**ಸಾಂದೀಪನಿ** – ಕೃಷ್ಣನ ಗುರು, ಅವನಿಂದ ಕಲಿತ ಧನುರ್ವಿದ್ಯೆ (ಸಾಂದೀಪನಿಯ ಸುವಿದ್ಯೆ ಮುಕುಂದನ ಸಂಗತಿಯೊಳ್ ಅತಿವಿಕಾಸಮನೊಳಕೊಂಡು: **ಜಗನ್ನಾವಿ,** ೭. ೯)

**ಸಾಂದು** – ಸುಗಂಧದ್ರವ್ಯ, ಪುನುಗು (ರಮಣೀಯ ರಮಣೀಜನಂ ಬೆರಸು ಪಂಚರತ್ನಂಗಳಿಂ ಕೆದಱಿಸಿ ಸಾಂದಿನ ಸೌಸವದ ಕುಂಕುಮದ ಕತ್ತುರಿಯ ಕದಡಂ ಕದಡಿ: **ಪಂಪಭಾ,** ೫. ೬೦ ವ)

**ಸಾಂದ್ರ** – ಒತ್ತಾಗಿರುವ (ಬಿಸಭ್ರಾಂತಿಯಿಂದಂ ಕರ್ದುಕಲ್ಕೆತರ್ಯ್ಯೊಳ್ ಆರ್ಯೆದಪುದು ಇಭಕಳಂ ಸಾಂದ್ರ ಚಂದ್ರಾಂಶುವಂ: **ಲೀಲಾವತಿ,** ೨. ೨೧)

**ಸಾಂಪದ** – ಸಲಕರಣೆ (ಪ್ರಣತಿಪೂರ್ವಕಂ ಸಾಂಪದಮಂ ನೋಡಿ ಪದ್ಮಾದಿ ಸರೋವರಪ್ರಯಾತ ಪುರಾಂಬುವಿಂದ ಈಕ್ಷಣಂಗೆಯ್ದು ಭೂಮಿಶೋಧನಂ ಮಾಡಿ: **ವರ್ಧಮಾಪು,** ೧೨. ೨೩ ವ)

**ಸಾಂಪರಾಯ** – ಯುದ್ಧ (ಈ ಸಾಂಪರಾಯದಿಂ ಪಲಾಯನಮೆ ಲೇಸೆಂದು ವಾಸವನತಿಜವಾಶ್ರವಮೆನಿಸಿದ ಉಚ್ಚೈಶ್ರವಮಂ ಏಱೆ ಮನೋವೇಗದಿಂ ಪೊಗೆ: **ಜಗನ್ನಾವಿ,** ೪. ೩೯ ವ); [ಜೈನ] ಗೃಹಸ್ಥ ಜೀವನ (ಅಲ್ಲಿ ಸಾಂಪರಾಯಕಾಯಮುಂ ವೀರ್ಯಪ್ರವೃತ್ತಿಯುಂ ಇಂದ್ರಿಯಕಷಾಯಯೋಗಮುಂ .. .. ಅಕ್ಕುಂ: **ಶಾಂತಿಪು,** ೧೨. ೫ ವ)

**ಸಾಂಪರಾಯಿಕ** – ಯುದ್ಧಕ್ಕೆ ಸಂಬಂಧಿಸಿದ (ಆಯುಧಜಾಲಮಂ ತಳೆದು ಲಸತ್ ಸಾಂಪರಾಯಿಕಮಂ ನೆಗೞ್ಚಿದರಂದು ಸಂಪದ ಪರಾಕ್ರಮರ್: **ಉದ್ಭಟಕಾ,** ೪. ೧೦೬); [ಜೈನ] ಸಂಸಾರಕ್ಕೆ ಕಾರಣವಾಗುವ ಕರ್ಮಾಸ್ರವ (ಸಕಾಯ ಅಕಾಯರಪ್ಪ ಪ್ರಾಣಿಗಳ್ಗೆ ಸಾಮಾನ್ಯದಿಂ ಸಾಂಪರಾಯಿಕೇರ್ಯಾಪಥ ಕರ್ಮಾಸ್ರವಂಗಳಕ್ಕುಮೆಂದು ನಿಶ್ಚಯಿಸುವುದು: **ವರ್ಧಮಾಪು,** ೧೪. ೪೩ ವ)

**ಸಾಂಪ್ರಯೋಗ** – ಸಮಾಗಮ (ಮನೋಮೃಗಮಂ ನವಸಾಂಪ್ರಯೋಗ ಶೃಂಗಾರಮನಾಳ್ವವಂ ಮದನರಾಜನ ರಾಜ್ಯಮನಾಳ್ವನಲ್ಲನೇ: **ನೇಮಿನಾಪು,** ೪. ೮೭)

**ಸಾಂಬುಪಯೋಧರ** – ನೀರಿನಿಂದ ತುಂಬಿದ ಮೋಡ (ಭವ್ಯನೃಪನಿಕರಂ ಅದೇನೆಂಬುತ್ಸಾಹದೆ ನಲಿದುದೊ ಸಾಂಬುಪಯೋಧರಕೆ ನಲಿವ ಶಿಖಿನಿರದವೊಲ್: **ಆದಿಪು,** ೧೦. ೧೨)

**ಸಾಂಯಾತ್ರಿಕ** – ಸಮುದ್ರ ವ್ಯಾಪಾರಿ (ವಾರಾಶಿಯ ಮಣಿಗಣಮಂ ಕ್ರೂರ ಕುಳೀರಕ್ಕೆ ಸುಗಿದು ಸಾಂಯಾತ್ರಿಕನೇಂ ತಾರನೆ ಕೃತಿವೇಟಲ್ ಬಗೆದಾರನೆ ಸತ್ಕವಿ ನಿಸರ್ಗ ದುರ್ಜನ ಭಯದಿಂ: **ಪಂಪರಾ,** ೧. ೪೦)

**ಸಾಂಯುಗೀನ** – ಯುದ್ಧಚತುರ (ಇವು ಸಲ್ಲವು ಎಂದು ಉದ್ಯೋಗಿಸುವಂತೆ ಆಗ ನಾಗಂಗಳೊಳಂ ಸಾಂಯುಗೀನ ಗಜಂಗಳೊಳಂ ಕಾಲ್ಗೋಡದ ಮೋಹಮಂ ಧರ್ಮ ಧವಳ ದ್ವಿರದಮನೇಱಿಸಿ: **ನೇಮಿನಾಪು,** ೪. ೧೩ ವ)

**ಸಾಂಸಾರಿಕ** – ಕುಟುಂಬಸಂಬಂಧಿತವಾದ (ಆನಂತರಮಾ ಮಹಾತ್ಮನಾತ್ಮೀಯಸಾಂಸಾರಿಕ ಮನೋರಥಂಗಳೊಡನೆ ರಥಾಂಗಂಗಳ್ ವಿಘಟನೆಯುಂ: **ಚಂದ್ರಪ್ರಪು,** ೨. ೪೭ ವ)

**ಸಾಕ** – ತೇಗದ ಮರ (ತೇಗಿನ ಮರನದೆ ಸಾಕಂ: **ಅಭಿಧಾವ,** ೧. ೮. ೧೬)

**ಸಾಕು** – ರಕ್ಷಿಸು, ಕಾಪಾಡು (ಸಾಕು–ರಕ್ಷಣೇ: **ಶಬ್ದಮದ,** ಧಾ ೭೩)

**ಸಾಕೇತ** – ಅಯೋಧ್ಯೆ (ಅಂತು ಸಮೆದ ಪುರವರಕ್ಕರಾತಿನಿಕರಕ್ಕೆ ಅಯೋಧ್ಯೆಯಪ್ಪುದಱಿಂದ ಅಯೋಧ್ಯೆಯುಂ ಅನೇಕ ನಿಕೇತನಸಮನ್ವಿತಮಪ್ಪುದಱಿಂ ಸಾಕೇತಮುಂ .. .. ಎಂಬ ಪೆರ್ಗಳನಿಟ್ಟು: **ಆದಿಪು,** ೬. ೧೦೭)

**ಸಾಕ್ಷರಜನ** – ವಿದ್ವಾಂಸರು (ಸಮಸ್ತಾಕ್ಷರಜನಕಂ ಜಗಜ್ಜನಕನೊಲ್ದುದಂ ಇತ್ತರಭಿರಕ್ಷಿಪಟ್ಟೆಯಿಂ .. .. ಜಗಜ್ಜನಕನೆಂಬುದು ಮೇದಿನಿ ಶಾಂತಿವರ್ಮನಂ: **ಪುಷ್ಪದಂಪು,** ೧. ೭೫)

**ಸಾಕ್ಷರಜನಕ** – ಪಂಡಿತರನ್ನು ಪೋಷಿಸುವವನು (ಸಮಸ್ತ ಸಾಕ್ಷರಜನಕಂ ಜಗಜ್ಜನಕನೊಲ್ದುದಂ ಇತ್ತರಭಿರಕ್ಷಿಪಟ್ಟೆಯಿಂ .. .. ಜಗಜ್ಜನಕನೆಂಬುದು ಮೇದಿನಿ ಶಾಂತಿವರ್ಮನಂ: **ಪುಷ್ಪದಂಪು,** ೧. ೭೫)

**ಸಾಕ್ಷರಿಕ** – ಪಂಡಿತ, ಉಪದೇಶವನ್ನು ಪಡೆದವನು (ಋಷಿಯರಂ ಸಾರ್ದು ಸಾಕ್ಷರಿಕನಾಗಿ ಮಗುಟ್ದು ಬಂದು ಮಾತಾಪಿತೃಗಳೊಳ್ ಕೂಡಿ ಸಂತೋಷದಿನಿರ್ದು: **ಪಂಪರಾ,** ೧೫. ೪೭ ವ)

**ಸಾಗರ** – ಸಮುದ್ರ (ಸರಿದಧಿನಾಥಂ ರತ್ನಾಕರಂ ಅಬ್ಧಿ ಸಮುದ್ರಮ ಅರ್ಣವಂ ಜಲನಿಧಿ ಸಾಗರಂ ಅಂಬುರಾಶಿ ಪನ್ನಗಶರಣಂ ಅಕೂಪಾರಂ ಉದಧಿ ಪಾರಾವಾರಂ: **ಅಭಿಧಾವ,** ೧. ೪. ೨); [ಜೈನ] ಒಂದು ಅತ್ಯಂತ ದೀರ್ಘ ಕಾಲಾವಧಿ (ನರಕದೊಳ್ ಮೂಱು ಸಾಗರೋಪಮಾಯುಷ್ಯಮನೊಡೆಯ ನಾರಕನಾಗಿ ಪುಟ್ಟಿ ಸತ್ತು ಬಂದು ಇಲ್ಲಿ ಕೊಂಕನಾಗಿ ಪುಟ್ಟಿ: **ವಡ್ಡಾರಾ,** ಪು ೧೭೮, ಸಾ ೨೭)

**ಸಾಗರನಾಥ** – ಸಮುದ್ರದ ಒಡೆಯ, ವರುಣ (ಗೋಸಂಬಂಧವ ತೋಟಿಯೊಳಾ ಸಾಗರನಾಥನಿತ್ತ ಶಾಪದಿನವರ್ಗಾದುದು ಸುತರುಂ ಗೋಪಾಲವ್ಯಾಸಂಗರ್ ಕೆಲವುಕಾಲಮಿರ್ಕುಂ ವ್ರಜದೊಳ್: **ಜಗನ್ನಾವಿ,** ೧. ೭೬)

**ಸಾಗರಾಂತ** – ಸಮುದ್ರವನ್ನು ಮೇರೆಯನ್ನಾಗುಳ್ಳ (ಸುವಿಧ ನರಾಧಿಪನಚ್ಯುತೇಂದ್ರಂ ಸಾಗರಾಂತಂ ನೆಲನನಿತುಮಂ ಚಕ್ರದಿಂ ಬೆಸಕ್ಕೆಸಿದ ವಜ್ರನಾಭಿಯಾಗಿ ಸರ್ವಾಥಸಿದ್ಧಿಯೊಳೆ ಪುಟ್ಟಿ ಬಂದಿಲ್ಲಿ ತಾನಾದಿದೇವನಾದಂ: **ಆದಿಪು,** ೧೬. ೫೮); [ಜೈನ] ಸಾಗರ ಅವಧಿಯ ಕೊನೆ (ಸವಿ ನೋಟ್ಪಂ ಸಾಗರಾಂತಕ್ಕಸುರರ ನೆರಗೊಳ್ವಂ ತ್ರಿಪಲ್ಯಕ್ಕೆ .. .. ಇದೇಂ ನಿರ್ದಯನೋ ಸಾರ್ಧೈಕಪಲ್ಯಕ್ಕುಟೆದಱುವರುಮಂ ನಂದೆವೊಯ್ವಂ ಕೃತಾಂತಂ: **ಮಲ್ಲಿನಾಪು,** ೧೩. ೭೮)

**ಸಾಗರೋಪಮ** – [ಜೈನ] ಸಾಗರ ಅವಧಿಯನ್ನುಳ್ಳ (ನರಕದೊಳ್ ಪದಿನೇೞು ಸಾಗರೋಪಮಂಬರಂ .. .. ದುಃಖಮನುಂಡು: **ಕರ್ಣನೇಮಿ,** ೧೪. ೧೨೫ ವ)

**ಸಾಗಾರಧರ್ಮ** – [ಜೈನ] ಗೃಹಸ್ಥನ ಕರ್ತವ್ಯಗಳು (ನುತಕೌಶಾಂಬೀಶನಪ್ಪಾ ರಘು ಸುಮುಖಸಖಂ ಸಾರ ಸಾಗಾರವ್ರತದಿಂದಂ ಪೆತ್ತು ದೇವತ್ವಮಂ: **ಕರ್ಣನೇಮಿ,** ೨. ೮೮)

**ಸಾಗಾರವ್ರತ** – [ಜೈನ] ಸಾಗಾರಧರ್ಮ (ದಾನಕ್ಕುತ್ತಮ ಪಾತ್ರಸಂತತಿ ಮಹಾಪೂಜಾವಿಧಾನಕ್ಕೆ ಚೈತ್ಯಾನೀಕಂ ನಿಜಶೀಲವರ್ತನೆಗೆ ಸಾಗಾರವ್ರತವ್ರಾತಂ .. .. ತಾನೆದಿತ್ತಣಮಿಲ್ಲದೇಂ ನಿರತರೋ ಭೂಕಾಂತನುಂ ಕಾಂತೆಯುಂ: **ಚಂದ್ರಪ್ರಭ**, ೩. ೮೨)

**ಸಾಗಿಸು** – ರಕ್ಷಿಸು (ಕರಿ ಕರದಿಂ ತಂದುಂಬೋತ್ಕರದಿಂ ಪೂಗಿಡುವಂ ಓತು ಸಾಗಿಸುವವು ಭಾಸುರದೆಲರಿಂ ಚಮರೀಮೃಗಂ: **ತ್ರಿಷಷ್ಟಿಪು**, ೧. ೬೩)

**ಸಾಗುಂ** – ಸಾಯುವವನು (ಲಕ್ಷ್ಮಣನುಮಂತೆ ರಾಮಂಗತಿಸ್ನೇಹಿತಂ ಆತನಗಲ್ದಾಗಳೆ ಸಾಗುಂ: **ಪಂಪರಾ**, ೧೬. ೪೭ ವ)

**ಸಾಗುದುರೆ** – ಸಾಯುವ ಸ್ಥಿತಿಯಲ್ಲಿರುವ ಕುದುರೆ (ಸಾಗುದುರೆಗೆ ಪುಲ್ಲನಡಕಿ ಕಿಡುವನೆ ಚದುರಂ: **ಯಶೋಧಚ**, ೩. ೧೫)

**ಸಾಚಿ** – ಓರೆ (ಗಿಳಿ ಋಜ್ವಾಗತದಿಂದಂ ಅರ್ಧಋಜುವಿಂದಂ ಕೋಕಿಳಂ ಸಾಚಿಯಿಂ ಕಳಹಂಸೀಕಳಭಂ .. .. ಕಣ್ಗೊಳೆ: **ಮಲ್ಲಿನಾಪು**, ೫. ೩೬); ಮಗ್ಗುಲ ನೋಟ (ಕೆಲರಾಗಳ್ ಋಜುವಿಂದಂ ಅರ್ಧಋಜುವಿಂದಂ ಸಾಚಿಯಿಂದಂ ಕೆಲರ್ ಪಲವು ಭಂಗಿಯಿನಿರ್ದು ಜಾನಕಿಯ ರೂಪಾಶ್ಚರ್ಯಮಂ ನೋಡಿ .. .. ನಿಷ್ಪಂದರಾಗಿರ್ಪುದುಂ: **ಪಂಪರಾ**, ೫. ೬೫)

**ಸಾಚಿವ್ಯ** – ಸ್ನೇಹ (ಜಿನರಾಜಪ್ರಾಜ್ಯಸಾಮ್ರಾಜ್ಯದೊಳ್ ಸಾಚಿವ್ಯೋಚಿತ ಭಾಗ್ಯಲಕ್ಷ್ಮಿ ತಮಗೇಕಚ್ಛತ್ರಮಾಯ್ತೆಂದುಂ ಎಂಬ ಆಚಾರ್ಯರ್: **ನೇಮಿನಾಪು**, ೧. ೪)

**ಸಾಚೀಕೃತ** – ಪಕ್ಕಕ್ಕೆ ತಿರುಗಿದ (ಸಾಚೀಕೃತವದನೆ ವಿಮುಖವಿಧಿಯಂ ತೋರ್ಪಂತೆ ಆ ಚಿತ್ರದ ಪತಿಗಂ ಮುಳಿದು: **ಲೀಲಾವತಿ**, ೭. ೯೪)

**ಸಾಜ** – ಸಹಜವಾದುದು, ಸತ್ಯ (ಕರ್ಕ ಮೇಷಮೆಂಬಿನಿತರ ಸಾಜಮಂ ಪಿಡಿದೆಯೆಂದು ಬೆಡಂಗಿನೊಳಬ್ಬೆ ದೂಱಿದಳ್: **ತ್ರಿಷಷ್ಟಿಪು**, ೨೪. ೧೯೯)

**ಸಾಜಂ** – ಸಹಜವಾಗಿ (ಸಮವೃತ್ತಸಂಧಿಲಕ್ಷಣಸಮನ್ವಿತಂ ಜಾತ್ಯಲಂಕೃತಿಭ್ರಾಜಿತಂ ಉತ್ತಮಕಾವ್ಯಬಂಧದದಂತಾ ದಮಿತಾರಿಗೆ ಸಾಜಮೊಪ್ಪುಗುಂ ಕಿಱುದೊಡೆಗಳ್: **ಶಾಂತಿಪು**, ೩. ೪೬)

**ಸಾಟಿ** – ಸಮಾನ (ಗಣಿದದೊಳೇಂ ಕರುಮಾಡಂ ಪೊಣರ್ಚುವೊಡೆ ನೆಗಟ್ದಿ ದಿವಿಜರಾಜವಿಮಾನಕ್ಕೆಣೆವೋಲ್ವೆ ಸಮಂ ಸದೃಶಂ ತೊಣೆ ತೋಡ ಅನುಸಾರಿ ಸಾಟಿ ಪಾಸಟಿಯೆನಿಕುಂ **ಸುಕುಮಾಚ**, ೧೦. ೫೧)

**ಸಾಣೆ** – ಹರಿತಗೊಳಿಸುವ ಸಾಧನ, ಉಜ್ಜುಗಲ್ಲು (ಕಡೆವ ಕಡೆಗೋಲಂತೆ ಮಸೆವ ಸಾಣೆಯಂತೆ ವೈಹಾಳಿಯ ಕುದುರೆಯಂತೆ: **ಧರ್ಮಾಮೃ**, ೯. ೧೩ ವ)

**ಸಾಣೆಗಟ್ಟು** – [ಆಯುಧಗಳನ್ನು] ಹರಿತಗೊಳಿಸು (ಅಂತಪೂರ್ವಂಗಳಾಗಿ ತೊಳಗುವ ಕಿಱುದೊಡೆಗಳ್ ಉಡುವಡರ್ದನ್ನಂ ಆರೂಢಸರ್ವಜ್ಞನ ದೂಡ್ಡ ಮರ್ಗಂಗಳೆಳವಾೞಿಯ ದಿಂಡಿನೊಳ್ ಸಾಣೆಗಟ್ಟಿದಂತಾದುವು: **ಪಂಪಭಾ**, ೨. ೩೯ ವ)

**ಸಾಣೆಯ ಬಾರ್** – ಚಾಕು ಮುಂತಾದುವನ್ನು ಹರಿತಗೊಳಿಸಲು ಬಳಸುವ ಚರ್ಮದ ಪಟ್ಟಿ (ಗೀರ್ವಾಣ ಮುನಿ ಪೊಱಮಡುತ್ತುಂ ಸಾಣೆಯ ಬಾರಂತೆ ಪೋದ ಕೆಯ್ಯೊಳೆ ಮಗುಟ್ದಿಂ: **ಅನಂತಪು**, ೧೩. ೨೩)

**ಸಾಣೆಯಿಕ್ಕು** – ನಯಗೊಳಿಸು, ಹೊಳಪುಗೊಳಿಸು (ಮುನ್ನಿನ ಪ್ರತಿಮಾಗೃಹದಲ್ಲಿಯ ಕಲ್ಲ ಗಂಟಂ ಕಂಡು ಇದಱಿಂದೀ ಪ್ರತಿಮೆಯ ಚೆಲುವದುಮೊಪ್ಪಂಗೆಟ್ಟುದೆಂದುಕಲುಗುಟಿನ ತಂದದದ ಸಾಣೆಯಿಕ್ಕಬೇಕೆನೆ: **ಪುಣ್ಯಾಸ್ರ**, ೨. ೬೭)

**ಸಾತಾವೇದನೀಯ** – [ಜೈನ] ಸಾತವೇದನೀಯ, ಇಂದ್ರಿಯಜನ್ಯವಾದ ಸುಖವನ್ನುಂಟು ಮಾಡುವ ಕರ್ಮ (ವೇದನೀಯಮುಂ ಸಾತಾವೇದನೀಯಮುಂ ಅಸಾತಾವೇದನೀಯಮುಂ ಎಂದಿರ್ತೆಱನಕ್ಕುಂ: **ಶಾಂತಿಪು**, ೧೨. ೧೧ ವ)

**ಸಾತಿಶಯಾರ್ಥ** – ಅತಿಶಯ ಅರ್ಥ (ಸಾತಿಶಯಾರ್ಥಮುಮಂ ನಲ್ವಾತುಂ ಒಪ್ಪಿಸಿದರೊಸೆದು ತಮಗಿಲ್ಲದುದಂ ಖ್ಯಾತಂಗೆ ಸುವಿನೇಮಿಗೆ ಭೂತಭವದ್ಭಾವಿಕಗಳೇನೊಳ್ಳಿದರೋ: **ಲೀಲಾವತಿ**, ೧. ೭೮)

**ಸಾತ್ವಕಿತ** – ಸತ್ವವುಳ್ಳವನು (ಸಾತ್ವಕಿತನ ಆತ್ಮಪ್ರೇಮಪೀಯೂಷದಿಂ ಪಿರಿದುಂ ನಾಂದಿಸುವಂತೆ .. .. ಪೊಯ್ದಳ್ .. .. ಕರ್ಪೂರಪೂರಾಂಬುವಂ: **ಕುಸುಮಾಕಾ**, ೫. ೧೪೬)

**ಸಾತ್ವಿಕ** – ನಾಲ್ಕು ಬಗೆಯ ಅಭಿನಯಗಳಲ್ಲಿ ಒಂದು (ಅಂಗೋಪಾಂಗಂಗಳೊಳೆಸೆವ ಆಂಗಿಕಮಂ ಗಾನಪಾಠ್ಯದೊಳ್ ವಾಚಿಕಮಂ ತುಂಗಕುಚೆ ಮೆಱೆದಳಾ ದಿವಿಜಾಂಗನೆಗೆ ಆಹಾರ್ಯಸಾತ್ತ್ವಿಕಂ ನಿಜಮೆ ವಲಂ: **ಆದಿಪು**, ೯. ೨೮); ರೋಮಾಂಚ (ಮನಂ ಮೇಳೀಸಿ ನಿಂದುದಕ್ಕೆ ಕುಱುಪಲ್ತೆ .. .. ಮುಂಚುವ ಇಂದ್ರಿಯಮುಂ ಅಂಗದೊಳುರ್ಬಿದ ಸಾತ್ವಿಕಂಗಳುಂ: **ರಾಜಶೇವಿ**, ೧೧. ೧೫೭)

**ಸಾದಿ** – ಕುದುರೆ ಸವಾರ, ಸಾರಥಿ (ವಾರ್ತೆಯಂ ಆರಯ್ಯಲ್ ಆಪ್ತರೆನಿಸಿದ ಸಾದಿಗಳಂ .. .. ಅಟ್ಟಿದಂ: **ಕಾದಂಬ**, ೯. ೯೯ ವ); ವಾಯು

**ಸಾದು** – ಸುಗಂಧದ್ರವ್ಯ (ಜವಾದಿ ಸಾದು ಮೃಗನಾಭಿ ಹಿಮಂ ಹರಿಚಂದನದ್ರವಂ: **ತ್ರಿಷಷ್ಟಿಪು**, ೨೮. ೨೭)

**ಸಾಧನ** – ಸೈನ್ಯ (ಶ್ರೀಯಂ ಅರಾತಿ ಸಾಧನ ಪಯೋನಿಧಿಯೊಳ್ ಪಡೆದುಂ .. .. ಉದಾತ್ತನಾರಾಯಣನಾದ ದೇವನೆಮಗೀಗೆ ಅರಿಕೇಸರಿ ಸೌಖ್ಯಕೋಟಿಯಂ: **ಪಂಪಭಾ**, ೧. ೧); ಸಲಕರಣೆ (ಸಾಧನಮೆನೆ ಸಿದ್ಧಸಾಧನಂ ತಾಂ ಕರಣಂ: **ಅಭಿಧಾವ**, ೩. ೧. ೯೮)

**ಸಾಧನ ಸಾಧ್ಯೋ ಧರ್ಮಃ** – ಧರ್ಮವು ಸಾಧನಗಳಿಂದ ಸಾಧ್ಯವಾಗುತ್ತದೆ (ಸಾಧನ ಸಾಧ್ಯೋ ಧರ್ಮ ಎನುತ್ತುಂ ಸಲೆ ದುಷ್ಕರ್ಮಂಗಳ್ಗೆಱಗಿ ಪಾರ್ವರ್ ಅಸುಗತಿಗಿಟಿವರ್: **ಸಮಯಪ**, ೧೧. ೨೧)

**ಸಾಧನ ಸೇವನೆ** – ಸಂಭೋಗ (ಅನುದಿನಂ ಆತ್ಮೇಶನ ಸಾಧನ ಸೇವನೆಯಿಂದೆ ಬಂಜೆಗಾಗದ ಬಸಿಱ್ ಒಂದಿನಿಸಂ ಜನ್ನದೊಳಗಾದ ಆಡಿನ ಮೂತ್ರಮನೊರ್ಮೆ ಸವಿದೊಡೇನಾದಪುದೇ: **ಸಮಯಪ**, ೧೨. ೩೭)

**ಸಾಧಾರಣ** – ಭೂಮಿಯ ಮೂರು ಬಗೆಗಳಲ್ಲಿ ಒಂದು, ಜವುಗುಪ್ರದೇಶ (ದೇವಮಾತೃಕ ಸಾಧಾರಣ ಅನೂಪಜಾಂಗಲ ಭೇದಂಗಳುಮಂ: **ಆದಿಪು**, ೮. ೬೩ ವ); [ಜೈನ] ಹದಿನಾರು ಬಗೆಯ ಕರ್ಮಪ್ರಕೃತಿಗಳಲ್ಲಿ ಒಂದು (ಪೂರ್ವೋಕ್ತವಿಧಾನದಿಂ ಅನಂತರ್ಮುಹೂರ್ತದಿಂ ನಿದ್ರಾನಿದ್ರಾಪ್ರಚಲಾಪ್ರಚಲಾ .. .. ಸ್ಥವರ ಸಾಧಾರಣ ಸೂಕ್ಷ್ಮಂಗಳೆಂಬ ಪದಿನಾಱುಮ ಕರ್ಮಪ್ರಕೃತಿಗಳಂ ನಿಶ್ಶೇಷಂ ಕಿಡಿಸಿ): **ಆದಿಪು**, ೧೦. ೧೪ ವ)

**ಸಾಧಿತ** – ಸಿದ್ಧಿಯನ್ನು ಹೊಂದಿದ (ಸಾಧಿತಸಮ್ಯಗ್ದರ್ಶನ ಬೋಧ ಚರಿತ್ರಂಗಳೆಂಬ ಧರ್ಮವಿದವ್ಯಾಬಾಧಂ: **ಶಾಂತಿಪು,** ೭. ೪೫); ಸ್ವಾಧೀನ ಪಡಿಸಿಕೊಂಡ (ಸೌಜನ್ಯಕಂದಾಂಕುರಂ ಶ್ರೀವಿಜಯಂಗೆ .. .. ವಿದ್ಯೆಗಳಳ ಕೊಟ್ಟು ಮತ್ತಂ ಸಾಧಿತಮಹಾವಿದ್ಯಂ ಮಾಡಿ: **ಶಾಂತಿಪು,** ೬. ೩೭ ವ)

**ಸಾಧಿಸು** – ಗೆಲ್ಲು (ಪರಪೃಥ್ವೀಪಾಳರಂ ಸಾಧಿಸಿ ಪಡೆದ ಸಮಸ್ತ ಪ್ರಶಸ್ತಾರ್ಥ ವಾಹೋತ್ಕರಮಂ ಮುಂದಿಟ್ಟು: **ಆಚವರ್ಧ,** ೨. ೪೪); ಹೊಂದು (ಗೋವರ್ಧನಭಟಾರರ್ ಸಮಾಧಿಮರಣದಿಂದಂ ರತ್ನತ್ರಯಮಂ ಸಾಧಿಸಿ ಮುಡಿಪಿ ದೇವಲೋಕಕ್ಕೆ ಪೋದರ್: **ವಡ್ಡಾರಾ,** ಪು. ೭೪, ಸಾ. ೨೮)

**ಸಾಧು** – ಸನ್ಯಾಸಿ (ಯತಿ ಸಂಯಮಿ ಋಷಿ ಮುನಿ ಸುಶ್ರುತಂ ಆತಂ ಸಾಧು ಯೋಗಿ ತಾಪಸಂ: **ಅಭಿಧಾವ,** ೧. ೧೧. ೩೩); ಒಳ್ಳೆವ ವ್ಯಕ್ತಿ (ಸುಜನಂ ಅಭಿಜನಂ ಸಧು ಸದ್ವೃತ್ತನಪ್ಪಂ: **ಅಭಿಧಾವ,** ೨. ೧. ೧೧)

**ಸಾಧುಜನ** – [ಜೈನ] ಶ್ರವಣಸಮೂಹ (ವಿದ್ಯೋಪಶಮ ಗಂಭೀರ ಸ್ಥಿರವದಾನ್ಯತ್ವ ಸಾಧುಜನ ಸಹಾಯತಾದಿ ಗುಣನಿಧಾನನಂ ನಿನ್ನನ್ನನಂ ಮತ್ತೊರ್ವನನೆಲ್ಲಿಯುಂ ಕಂಡುಂ ಕೇಳ್ದುಮಱಿಯೆವು: **ಶಾಂತಿಪು,** ೩. ೭೫ ವ)

**ಸಾಧ್ವಸ** – ಗಾಬರಿ (ಅಭಿನವಸಂಗಸಮುತ್ಪನ್ನ ಸಾಧ್ವಸ ರಸರಮಣೀಯಕರ ಮುಗ್ಧವಧೂವದನವಿಲೋಕನ ಸುಖಮನನುಭವಿಸಿ: **ಆದಿಪು,** ೪. ೫೧ ವ); ಸಡಗರ (ನೀವಿಯನೆಡಗೈಯಿಂದಮೆ ಸಾವಗಿಸುತ್ತ ಅತುಳ ಸಾಧ್ವಸಂಬೆರಸು ಎಟ್ಟಿ ಆ ದೇವಿಯಂ ಏಟದಿರೆನುತುಂ: **ಕುಸುಮಾಕಾ,** ೫. ೫೯); ಭಯ (ಶಂಕೆ ಭಯಂ ಸಾಧ್ವಸಂ ಆಶಂಕಂ ತ್ರಾಸಂ ದರಂ ವಿಭೀತಿ ಸಮಾನಾರ್ಥಂ: **ಅಭಿಧಾವ,** ೨. ೨. ೫)

**ಸಾನು** – ಬೆಟ್ಟದ ತಪ್ಪಲು (ನಿಜಸಾನೂದ್ಯಾನಸಂತಾನದಿಂ ದಿವಿಜಾಧೀಶನ ಮೆಚ್ಚುತಿರ್ದ ವಿಭವಂ: **ಮಲ್ಲಿನಾಪು,** ೧. ೬೪)

**ಸಾನೂದ್ಯಾನ** – ಬೆಟ್ಟದ ತಪ್ಪಲಿನ ಉದ್ಯಾನವನ (ಸಾನೂದ್ಯಾನಪ್ರತಾನಂ .. .. ನಾನಾರತ್ನ ಪ್ರಕೂಟಪ್ರಕರದಿಂ ಎಸೆದಿರ್ಪ ಊರ್ಜಯಂತಕ್ಕೆ ಬಂದು: **ಕರ್ಣನೇಮಿ,** ೭. ೧೩)

**ಸಾನ್ನಾಯ್ಯ** – ಹವಿಸ್ಸು (ಹವಿ ಸಾನ್ನಾಯ್ಯಂ ಚರು: **ಅಭಿಧಾವ,** ೧. ೧೧. ೪೨)

**ಸಾಪಂದಳೆ** – ಶಾಪವನ್ನು ಹೊಂದು (ಅನ್ನೆಗಮಿತ್ತಲಾ ಬಾಂದೊಱೆದಲೆಯನ ಸಾಪಂದಳೆದು ಬಂದು ನೀನೀ ಪೂವಿನ ಪೊಟಲೊಳ್ ನನೆಯೆಂಬರಸನಾದೆ: **ಕಬ್ಬಿಗಕಾ,** ೨೪೯ ವ)

**ಸಾಪತ್ನ** – ಮಲಸೋದರ (ಎಮ್ಮ ಸಾಪತ್ನನ ಭುಜಬಲಮಂ ನೋೞ್ಪಮೆಂದು ಆಗಳಾಸ್ಥಾನದಿನೆರ್ದಂ ಚಕ್ರಿ ರಾಜನ್ಯಕ ಮಕುಟಮಣಿ ಪ್ರೋಜ್ಜ್ವಳದ್ವ್ಯೋಮಚಕ್ರಂ: **ಆದಿಪು,** ೧೪. ೮೫); ದಾಯಾದ (ಭರತಾನ್ವಾಯದೊಳ್ ಅಂದಿನಿಂದುವರೆಗಂ ಸಾಪತ್ನರೊಳ್ ಬದ್ಧಮತ್ಸರಮಿಲ್ಲ: **ಗದಾಯು,** ೭. ೯)

**ಸಾಭಿಜ್ಞಾನ** – [ಸ+ಅಭಿಜ್ಞಾನ] ಗುರುತು (ಎಮಗಿರ್ಪತ್ತೊಂದು ದಿವಸಮಾಯುಷ್ಯಂ ಎಂಬುದರ್ಕೆ ಸಾಭಿಜ್ಞಾನಮೇನೆಂದು ಬೆಸಗೊಂಡೊಡೆ ಭಟಾರರೆಂದರ್: **ವಡ್ಡಾರಾ,** ಪು. ೧೦೦. ಪು. ೬)

**ಸಾಭಿಜ್ಞಾನಪಟ** – ನೆನಪನ್ನುಂಟುಮಾಡುವ ಚಿತ್ರಪಟ (ಮನಃಪ್ರಿಯತಮನ ಬರೆದ ಸಾಭಿಜ್ಞಾನಪಟಮನೀವುದುಂ ಆಕೆಯುಂ ಅದಂ ನಿಮಿರ್ಚಿ ನೋಡಿ: **ಆದಿಪು,** ೪. ೨೨ ವ)

**ಸಾಭ್ಯುಪಗಮ** – ಅಂಗೀಕಾರದಿಂದ ಕೂಡಿರುವ (ಎಂಬಿವು ಮೊದಲಾಗಿ .. .. ಸಾಭ್ಯುಪಗಮ ಸಸಂಭ್ರಮ .. .. ಅಪ್ಪ ಕಾದಂಬರೀಸಂಬಂಧ ವಚನಂಗಳಂ .. .. ಬಿನ್ನವಿಸುತ್ತಿರೆ: **ಕಾದಂಬ,** ೮. ೫೧ ವ)

**ಸಾಮ** – ತ್ರೈವೇದಗಳಲ್ಲಿ ಒಂದು (ವೇದಂ ಛಂದಂ ಶ್ರುತಿ ತದ್ಭೇದಂ ಸಾಮ ಋಗ್ ಯಜುಸ್ತ್ರಯಂ ತ್ರಯಿಯೆನಿಕುಂ: **ಅಭಿಧಾವ,** ೧. ೧. ೧೨); ಸಮಾಧಾನ ಹೇಳುವ ಮಾತು (ಸಾಮಪೂರ್ವಕಂ ಅಕ್ರಮಣಾವಸಾನಾನಂದಿತ ಗಂಭೀರೋದಾರ ಸಾರಭಿನ್ನಮಯ ಸಂತತಿಸಮನ್ವಿತಂ ಅಱಿಯೆ ತೆಱಿಯೆ ನೆಱಿಯೆ ನುಡಿದು: **ಶಾಂತಿಪು,** ೩. ೮೯ ವ); ಚತುರೋಪಾಯಗಳಲ್ಲಿ ಒಂದು (ಸಾಮಂ ಪ್ರಯಜನಪ್ರಯೋಜ್ಯಂ ಅಲ್ಲದೆಡೆಯೊಳುನ್ಮತ್ತವಿಳಸಿತಂ ದಾನಂ ದುರ್ಬಲ ಲುಬ್ಧಪ್ರಸ್ತುತಂ ಭೇದಂ ಕೃತ್ಯಪೇಕ್ಷೋಪೆತ ಭೂಪಾಲ ಪ್ರಾಪ್ತಂ ದಂಡಂ ಪೌರುಷಾತ್ಯಯೋಚಿತಂ: **ಶಾಂತಿಪು,** ೩. ೯೩ ವ);

**ಸಾಮಂತ** – ಮಾಂಡಲಿಕ (ಅಂತಪ್ಪ ಪೊಚ್ಚಱ ಸಾಮಂತರೆ ಪೋಗಿಮೆಂದು ಪಲರಂ ಪೇೞ್ದಾಗಳ್: **ಪಂಪಭಾ,** ೫. ೨೧)

**ಸಾಮಂತಚಕ್ರ** – ಮಾಂಡಲಿಕಸಮೂಹ (ನಿಜವಿಜಯಶ್ರೀಪತಿಂ ವರಾಪರಿಣಯಣೋತ್ಸವನ ಆಲೋಕನ ಕುತೂಹಲಪ್ರಚಲಿತ ಸಮಸ್ತಸಾಂತಚಕ್ರನುಂ: **ಆದಿಪು,** ೧೪. ೯೧ ವ)

**ಸಾಮಂತಚೂಡಾಮಣಿ** – ಮಾಂಡಲಿಕಶ್ರೇಷ್ಠ ಅನ್ನೆಗಮಿತ್ತ ಬಲದೇವಂ ಸುಭದ್ರೆಯಂ ಸಾಮಂತಚೂಡಾಮಣಿ ಉಯ್ದನೆಂಬುದಂ ಕೇಳ್ದು: **ಪಂಪಭಾ,** ೫. ೨೦ ವ)

**ಸಾಮಜ** – ಆನೆ (ಪರುಷವಾತಾಹತಿ ಪ್ರೋಚ್ಚಳತ್ ಸಾಮಜಸೇನಾಕುಭಸಿಂದೂರಮುಮೊದವಿರೆ ದಿಗ್ದಾಹಮುಂ ಕೂಡೆ: **ಆದಿಪು,** ೧೪. ೮೯)

**ಸಾಮಜಪದಾಭಿರಾಮ** – ಸಾಮವೇದದ ಪದಗಳಿಂದ ಅಥವಾ ಸಾಲುಗಳಿಂದ ರಮ್ಯವಾದುದ, ಆನೆಗಳಿಗೆ ಇಂಬಾದ ನಿವಾಸಸ್ಥಾನವಾದ ಹೆಗ್ಗಾಡು (ಆ ಮಹಾವನಂ .. .. ಪಿತಾಮಹಾನನದಂತೆ ಸಾಮಜಪದಾಭಿರಾಮಮುಂ ಸ್ಥಾಣುನಿವಸನಮಾಗಿಯುಂ ಅಪರ್ಣಾನ್ವಿತಮಲ್ತು: **ಚಂದ್ರಪ್ರಪು,** ೫. ೫೨ ವ)

**ಸಾಮಜರಿಪುವಿಷ್ಟರ** – [ಸಾಮಜರಿಪು=ಆನೆಯ ವೈರಿಯಾದ ಸಿಂಹ] ಸಿಂಹಾಸನ (ಶ್ರೀಮದಶೋಕಪ್ರಾಸಾದಾಮರತರು ಚೈತ್ರ ವೃಕ್ಷಸಿದ್ಧಾರ್ಥ ಮಹಾ ಸಾಮಜರಿಪುವಿಷ್ಟರ ಲಕ್ಷ್ಮೀಮಂಟಪ ಗಂಧಕುಟಿಯದೇನೊಪ್ಪಿದುದೋ: **ಅಜಿತಪು,** ೭. ೨೦)

**ಸಾಮವಾರ್ವ** – ಸಾಮವೇದಿ ಬ್ರಾಹ್ಮಣ (ಅಡಗಿರು ಮದ್ರೇಶ್ವರ ಸಾಮವಾರ್ವ ಕೃಪ ನೀಂ ಏಗೆಯ್ವೆ ಎಂದು ಆ ದುರೋದರರಂ ಜರ್ಪಿ: **ಕರ್ಣನೇಮಿ,** ೧೦. ೭೦)

**ಸಾಮಾನಿಕದೇವ** – [ಜೈನ] ಒಂದು ದೇವತಾವರ್ಗ, ಆ ವರ್ಗದ ದೇವತೆ (ಎಂದು ಧೈರ್ಯಮಂ ಪತ್ತುವಿಟ್ಟು ಅತಿಪ್ರಲಾಪಂಗೆಯ್ವ ಲಲಿತಾಂಗದೇವನಂ ಸಾಮಾನಿಕದೇವರ್ಕ್ಕೈದೆವಂದು: **ಆದಿಪು,** ೩. ೫ ವ)

**ಸಾಮಾಯಿಕ** – [ಜೈನ] ಸಮ್ಯಕ್‌ಜ್ಞಾನ ಸಾಧನೆಗೆ ಪೂರಕವಾದ ನಡವಳಿಕೆ (ಅಂತು ಸರ್ವಸಾವದ್ಯವಿರತಿಯೊಳ್ ಸಾಮಾಯಿಕವ್ರತಸಮಿತಿ

ಗುಪ್ತಿಸಮನ್ವಿತಮನವಲಂಬಿಸಿ ನಿಲ್ವುದುಂ: **ಅಜಿತಪು,** ೬ ೧೨೬ ವ), ನೋಡಿ, 'ಪಂಚವಿಧಚಾರಿತ್ರ'

**ಸಾಮಾಭಾಸ –** ಸಾಮೋಪಾಯದ ತೋರಿಕೆ (ಸಾಮಾಭಾಸದಿಂ ದಂಡೋಕ್ತಿಯನೆ ನುಡಿಯಲೊಡಂ: **ಚಂದ್ರಪ್ರಪು,** ೬. ೨೨ ವ)

**ಸಾಮಾಯಿಕವ್ರತ –** [ಜೈನ] ನಾಲ್ಕು ಬಗೆಗಳಲ್ಲಿನ ಒಂದು ಶಿಕ್ಷಾವ್ರತ (ಪರಿಕಿಪೊಡಸ್ಮರಣಮನಾದರಂ ಮನೋವಾಕ್ಯಶರೀರ ದುಷ್ಪ್ರಣಿಧಾನಂ ನಿರುಪಮಶಿಕ್ಷಾವ್ರತದೊಳ್ ನಿರುದ್ಧ ಸಾಮಾಯಿಕಕೃತಿಚಾರಂ: **ಸುಕುಮಾಚ,** ೬. ೨೧)

**ಸಾಮಿಪಕ್ವ –** ಅರ್ಧ ಹಣ್ಣಾದ (ಮಣಿಕನಕರಜತಪಾತ್ರಂಗಳೊಳ್ ಪರಿಪಕ್ವ ಸಾಮಿಪಕ್ವ ಶಲಾಟುಭೇದ ಭಿನ್ನಂಗಳಪ್ಪ ಮಾಕಂದ .. .. ದ್ರಾಕ್ಷಚೋಚಮೋಚಾದಿ ಫಳಕುಳಂಗಳಿಂ ಸೊಗಯಿಪುವು: **ಚಂದ್ರಪ್ರಪು,** ೬. ೫೪ ವ)

**ಸಾಮುದ್ರಿಕ –** ಅಂಗೈಯ ಗೆರೆಗಳ ಆಧಾರದ ಮೇಲೆ ಭವಿಷ್ಯ ನುಡಿಯುವ ಶಾಸ್ತ್ರ (ಬಾಹುಬಲಿಗೆ ಕಾಮತಂತ್ರ ಸಾಮುದ್ರಿಕ ಆಯುರ್ವೇದ ಧನರ್ವೇದ ಹಸ್ತ್ಯಶ್ವತಂತ್ರ ರತ್ನಪರೀಕ್ಷೆಗಳುಮಂ .. .. ಉಪದೇಶಂಗೆಯ್ದಂ: **ಆದಿಪು,** ೮. ೬೦)

**ಸಾಮೋದ –** ಪರಿಮಳಭರಿತ (ಸಾಮೋದ ನಾನಾವಿಧ ಕುಸುಮರಸಾಪಾನಸಾನಂದಭೃಂಗೌಘರವಂ ತಾನಾಗೆ: **ಆದಿಪು,** ೧೩. ೭)

**ಸಾಮೋದ ಶೇಷಾಕ್ಷತಂ –** ಪರಿಮಳಭರಿತ ಮಂತ್ರಾಕ್ಷತೆ (ನಿಡುನನೆ ಸಾಮೋದಶೇಷಾಕ್ಷತಂ ಮಂಗಳಗೀತಂ ಭೃಂಗನಾದಂ ತನಗೆನೆ ನಡೆದಂ ರೂಪಕಂದರ್ಪದೇವಂ: **ಲೀಲಾವತಿ,** ೧೦. ೯೮)

**ಸಾಮ್ರಾಜ್ಯ –** ಪರಮಾಧಿಕಾರದ ನಾಡು (ಹೇಯಂ ಸಾಮ್ರಾಜ್ಯಂ ಉಪಾದೇಯಂ ಪ್ರವ್ರಜ್ಯಂ ಎಂದು ಮಾಣದೆ ರಾಜ್ಯಶ್ರೀಯಂ ಕೊಟ್ಟಂ ಮುಕ್ತಿಶ್ರೀಯಂ ಬಗೆದರ್ಕಕೀರ್ತಿಗಾ ಭರತಂ: **ಆದಿಪು,** ೧೬. ೬೨); [ಜೈನ] ಮೋಕ್ಷಕ್ಕೆ ಸಂಬಂಧಿಸಿದ ಏಳು ಉತ್ತಮಸ್ಥಾನಗಳಲ್ಲಿ ಒಂದು (ಸಜ್ಜಾತಿ ಸದ್ಗೃಹತ್ವ ಪಾರಿವ್ರಾಜ್ಯಪದ ಸುರೇಂದ್ರತ್ವ ಸಾಮ್ರಾಜ್ಯ ಪರಮಾರ್ಹಂತ್ಯ ಪರಿನಿರ್ವಾಣಮೆಂಬ ಏೞುಂ ಪರಮಸ್ಥಾನನಾಮ: **ಆದಿಪು,** ೧೫. ೧೬ ವ); [ಜೈನ] ಒಂದು ಗರ್ಭಾನ್ವಯಕ್ರಿಯೆ (ಆಧಾನ ಪ್ರೀತಿ ಸುಪ್ರೀತಿ ಧೃತಿ ಮೋದ ಪ್ರಿಯೋದ್ಭವ ನಾಮಕರ್ಮ .. .. ಚಕ್ರಾಭಿಷೇಕ ಸಾಮ್ರಾಜ್ಯ ಪರಿನಿಷ್ಕ್ರಮಣ .. .. ನಿರ್ವೃತಿಯೆಂಬ ಅಯ್ವತ್ತುಮೂಱು ಗರ್ಭಾದಿ ನಿರ್ವಾಣಪರ್ಯಂತಂಗಳಪ್ಪ ಗರ್ಭಾನ್ವಯಕ್ರಿಯೆಗಳುಂ: **ಆದಿಪು,** ೧೫. ೧೫ ವ)

**ಸಾಯಂತನ –** ಸಂಜೆ (ಆಗಳ್ ಸಾಯಂತನದ ನಿಯೋಗಮಂ ಓಳಿಯೊಳೆ ತೀರ್ಚಿ: **ವರ್ಧಮಾಪು,** ೪. ೩೩)

**ಸಾಯಂತನ ಮಜ್ಜನ –** ಸಾಯಂಕಾಲದ ಸ್ನಾನ (ವಾಸವದತ್ತೆ ಸಾಯಂತನ ಮಜ್ಜನಕ್ಕೆ ಪೋದ ಪೞಿಗೆ ಮಲ್ಲಿಕಾಮಂಡಪದಿಂ ಪೊಱಮಟ್ಟು: **ಲೀಲಾವತಿ,** ೧೪. ೧೦೫ ವ)

**ಸಾಯಕ –** ಬಾಣ (ಪ್ರವಿಮಲಸದ್ಗೀರ್ವಾಣದಾತವ್ಯ ಸಾಯಕ ಸಂಪೂರ್ಣ ಕಳಾಪ್ರವೀಣನಂ ಇಳಾಭಾರಕ್ಷಮಾಕ್ಷೂಣನಂ .. .. ಸರ್ವಲಕ್ಷಣಸಂಪೂರ್ಣಂ ಅಪ್ಪ ಮಗನಂ ಅಮೋಘಂ ಪಡೆವೆಂ: **ಪಂಪಭಾ,** ೧. ೧೩೪ ಮತ್ತು ೧೩೪ ವ)

**ಸಾಯಬಡಿ –** ಬಹಳ ಹೊಡೆ (ಪಸಿದ ಕೋಪದಿಂ ತನ್ನ ಭಾರ್ಯೆಯುಂ ಸಾಯಬಡಿವುದುಂ: **ಧರ್ಮಾಮೃ** ೧೪. ೯೨ ವ)

**ಸಾಯಸ –** ಕಷ್ಟ (ಸತ್ಯವತೀನಂದನಂ ತನ್ನ ಮಕ್ಕಳ ಸಾಯಸಂಗಳ್ಗೆ ಮನ್ಯುಮಿಕ್ಕು ಕಣ್ಣ ನೀರಂ ನೆಗಪೆ: **ಪಂಪಭಾ,** ೭.. ೫೯ ವ)

**ಸಾಯಿರ –** ಸಾವಿರ (ಪಲಗೆಗೆ ಪತ್ತು ಸಾಯಿರಮೆ ಗದ್ಯಣಂ ಎಂದಿರದೆ ಒಡ್ಡಿ ತಾಮ್ ಎರಟ್ವಲಗೆಯಂ ಆಡಿ ಸೋಲ್ತೊಡೆ: **ಪಂಪಭಾ,** ೬. ೭೨)

**ಸಾಯುಜ್ಯ –** ಐಕ್ಯ (ನೋಯಿಸಿ ಸವಿಯಂ ಪುಟ್ಟಿಪೊಡೆ ಆಯಸಮಾಗಿರೆಯುಂ .. .. ತನುವಟೆದೊಂದುವ ಸಾಯುಜ್ಯಂ ಜಗದೊಳುಂಟೆ ಕಮಲದಳಾಕ್ಷೀ: **ಅನುಭವ,** ೧೦೬)

**ಸಾಯೆಪೊಯ್ –** ಸಾಯಬಡಿ (ವಿಭು ಸಾಯೆ ಪೊಯ್ದು ಕಿವಿಯಂ ಪಿಡಿದೊಡಲೊಡರ್ಚಿ ಬಂದನೇ: **ಸುಕುಮಾಚ,** ೨. ೬೨)

**ಸಾಯೆ ಸರಸಂ ನುಡಿ –** ಕ್ರೂರವಾಗಿ ಗೇಲಿ ಮಾಡು (ಎಮ್ಮಂ ಪಿಡುದೆೞೆವಂದಿನ ನಿಮ್ಮದಟುಗಳ್ ಈಗಳೆತ್ತವೋದುವೊ .. .. ನಿಮಗಂ ಈಗಳೀಯೆಡರಾಯಿತ್ತೇ ಎಂದು ಸಾಯೆ ಸರಸಂ ನುಡಿದು: **ಪಂಪಭಾ,** ೭. ೩೯ ವ)

**ಸಾರ್ –** ಸಮೀಪಿಸು, ತಲುಪು (ಗುರೂಪದೇಶಮಾವರಿಸೆ ಜಿನೇಂದ್ರಭಕ್ತಿ ಪೊಱಪೊಣ್ಮೆ ದಯಾರಸಂ ಇಂತು ನಾಡೆಯುಂ ಪರಿಕರದಿಂ ಮನಕ್ಕೞೆವು ಸಾರೆ); ಸರಿದುಕೊ; ಸಾನ್ನಿಧ್ಯ

**ಸಾರ –** ಶ್ರೇಷ್ಠವಾದ, ಬೆಲೆ ಬಾಳುವ (ನಿಮ್ಮ ಸಾರಮಪ್ಪ ದ್ರವ್ಯಮಂ ಆರುಂ ಅಱಿಯದಲ್ಲಿ ಮಡಗಿ ನಾಮುಚ್ಚ ವಿಗ್ರಹದೊಳ್ ನಿಂದು ಕಾದುವಂ: **ವಡ್ಡಾರಾ,** ಪು ೧೮೦, ಸಾ ೨೦); ಸತ್ವ, ತಿರುಳು (ಸಾರಂ ಮಜ್ಜಂ: **ಅಭಿಧಾವ,** ೧. ೭. ೬); ಹಣ (ದ್ರವಿಣಂ ದ್ರವ್ಯಂ ವಸು ಅರ್ಥ ವಿತ್ತ ರಯ ರಿಕ್ಥ ಸಾರ ಧನ ಏಕಾರ್ಥಂ: **ಅಭಿಧಾವ,** ೧. ೬. ೧೨)

**ಸಾರಂಗ –** ಒಂದು ಬಗೆಯ ಜಿಂಕೆ (ವೃಕ ಭಲ್ಲೂಕ ಸುಗಂಡ ಚಂಡಹರಿಣಶ್ರೇಣೀ ರುರು ಉರು ಉಗ್ರ ಶಲ್ಯಕ ಸಾರಂಗ .. .. ವಿಸ್ಫುರತ್ ಅರಣ್ಯಾನೀ ಮಹೀದೇಶದೊಳ್: **ಪಂಚತಂತ್ರ,** ೧೪೨); ಜಾತಕ (ಸಾರಂಗಂ ಏಣಮುಂ ಜಾತಕಮುಂ: **ಅಭಿಧಾವ,** ೩. ೧. ೨೬)

**ಸಾರಂಗಟ್ಟು –** ಅಡ್ಡಗಟ್ಟೆ ಕಟ್ಟು (ಮುನ್ನೀರಂ ನೀಲಾಚಲದಿಂ ಸಾರಂಗಟ್ಟಿದವೊಲಿರೆ ಬಟಲ್ದು ಉಲಾಯಂ: **ಯಶೋಧಚ,** ೩. ೬೬)

**ಸಾರಂಗಿಡು –** ಸತ್ವಗುಂದು (ಸಾರಂಗಿಡೆ ಪಾರ್ಥಿವಪರಿವಾರಂ ದೆಸೆಗೆಟ್ಟು ಪೋಪವೋಲ್ ಪೋದುವು ನಿಸ್ಸಾರ ಸರೋಜಾಕರದಿಂ ಸಾರಸಕಳಸಹಸ್ರಚಕ್ರವಾಕಕುಟುಂಬಂ: **ಪಂಪರಾ,** ೭. ೮೭)

**ಸಾರಕಾ –** ಜೇನುತುಪ್ಪ (ಕುಸುಮರಸ ಮಾಕ್ಷಿಕಂ ಕ್ಷೌದ್ರ ಸಾರಕಾಖ್ಯಾತಿ ಮಧುವಿನೊಳ್ ವರ್ತಿಸುಗುಂ: **ಅಭಿಧಾವ,** ೧. ೧೬. ೧೩)

**ಸಾರಣ್ –** ಸಮೀಪ (ತನಗೆ ಕರುಣಾರಸಂ ಸಂಜನಿಯಿಸೆ ಸಾರಣ್ಗೆ ಕರೆದು ಕುಳ್ಳಿರಿಸಿ ಲತಾತನು ಕಣ್ಬನಿಯಂ ತೊಡೆದಳ್ ಜನಕಾತ್ಮಜೆ: **ಪಂಪರಾ,** ೯. ೩೮)

**ಸಾರಣೆ –** ಜರಡಿ (ಸಾರಣೆಯಂತಿರೆ ಕಸಮಂ ಪಿಡಿವರ್ ಕೆಲರ್ ಮಹಾಪುರುಷರ್ಕಳ್: **ಅಜಿತಪು,** ೧. ೯೧); ಸುಗಂಧಲೇಪನ ಮಕರಕೇತನನ ಕೇತಕಿಯಲಗಂ ಪರಾಗದ ಸಾರಣೆಯೊಳ್ ಪರಿಮಳದ ಹೊಗರೆತ್ತುವ ಅಳಿಕುಂತಳೆಯರಿಂ: **ಗಿರಿಜಾಕ,** ೭. ೧೧ ವ)

**ಸಾರತ –** ಶ್ರೇಷ್ಠ ಬಗೆಯ ರತಿ (ಬಲ್ಮೊಲೆ ಬಾಹುಯುಗಂ ಪದೆದಲುಗಲ್ ತಾಂ ಪುರುಷಾಯಿತದಿಂದ ಒದವೆ ರತಂ ಸಾರತಮಂದು ಅಬಲೇ: **ಅನುಭವ,** ೬೪)

**ಸಾರದಾರು –** ಮರದ ದಿಮ್ಮಿ (ನಟ್ಟ ಕಂಭಂಗಳ ಮೇಗೆ ಸಾರದಾರುಗಳನೆಡೆಗಿಱಿದಿರೆ ಪಾಸಿ ಪಸರಿಸಿ ಪಡೆಗೆ ನಡೆಯಲಪ್ಪಂತೆ ಮಾಡಿದಾಗಳ್: **ಆದಿಪು,** ೧೩. ೫೨ ವ)

**ಸಾರಧನ –** ಸಾರಭೂತವಾದ ದ್ರವ್ಯ (ತಂದಿತ್ತು ಕೆಯ್ಸೆಱೆಯಂ ಕೊಟ್ಟಳವಟ್ಟು ಸಾರಧನಮಂ ಮೂವಿಟ್ಟಿಗಂ ಪೂಣ್ದು ಕಾಲ್ಗೆ ಎಱಗಿತ್ತು ಅಂತು ಅರಿಗಂಗೆ ಬೆರ್ಚಿ ಭಯದಿಂ ಗ್ರಾಮಂ ಕುಳಂ ರಾಜಕಂ: **ಪಂಪಭಾ,** ೬. ೩೯೦)

**ಸಾರಭಾಂಡ –** ವಸ್ತುಗಳ ಸಮೂಹ (ಮಧುರಾಪುರಕ್ಕೆ ಅಪೂರ್ವಮಪ್ಪ ಸಾರಭಾಂಡಂಗಳಂ ತೀವಿಕೊಂಡು ಯಾತ್ರೋದ್ಯುಕ್ತನಾಗಿ: **ಪಂಚತಂತ್ರ,** ೭೫ ವ)

**ಸಾರಮಣಿ –** ಶ್ರೇಷ್ಠ ರತ್ನ (ಸಾರಮಣಿ ಪ್ರಸಾನುವಿಜಯಾರ್ಧ ಮಹೀಧರ ಗೋಮಿನೀಮುಖಾಕಾರಮಂ .. .. ಗುಹಾದ್ವಾರಮನೆಯ್ದಿದತ್ತು ಪಡೆ: **ಪಾರ್ಶ್ವನಾಪು,** ೧೧. ೫೫)

**ಸಾರಮಾರಿ –** ಸಾರ ಎಂಬ ಸಾಧನವನ್ನು ನಾಶಮಾಡುವಂತಹ ವಸ್ತು (ಕಣೆಯ ಕಲ್ಗೊರಲೆ ಡೆಂಕಣಿಯಾಗೆಯುಂ ಸಾರಮಾರಿಯ ಪೊಯ್ಗಳೊಳೋರಣಿಕೆಗೆಡೆಯುಂ: **ಅನಂತಪು,** ೧೧. ೮೪ ವ)

**ಸಾರಮೇಯ –** ನಾಯಿ (ಅವರೋದುವಾವಾಸದೊಳ್ ಸಂಕ್ಲೇಶಮಾಗೆ ಸಾರಮೇಯ ಪೂತಿಕಳೇವರಮಂ ಇಕ್ಕಿದೊಡವರ್ ನಿನ್ನ ಪಾಪೋಪಚಯಕಾರಣ ದುರಾಚರಿತಮಂ ನೋಡಿ: **ಆದಿಪು,** ೩. ೩೮ ವ)

**ಸಾರವಣೆ –** ಸಾರಿಸುವುದು (ಯಕ್ಷಕರ್ದಮದ ಸಾರವಣೆಯಿಂ ಬಿಡುಮುತ್ತಿನ ರಂಗವಲಿಯಿಂ ಸುರತರುಕುಸುಮದ ಪೂವಲಿಯಿಂ ಱೊಬ್ಬಿನ ಸೊಡರ್ಗುಡಿಯಿಂ: **ಅಜಿತಪು,** ೩. ೧೧ ವ)

**ಸಾರಸ –** ನೀರ ಹಕ್ಕಿ, ಕೊಕ್ಕರೆ (ಶುಕ ಕಾರಂಡ ಚಕೋರ ಸಾರಸ ಮಯೂರಾಕಾರದಿಂ ವ್ಯಾಘ್ರ ಸಿಂಹ ಕುರಂಗಾಂಬುಜ ವಕ್ರ ಮತ್ಸ್ಯ ಮಕರೇಭಾಕಾರದಿಂ ಚೆಲ್ವುವೆತ್ತು: **ಸುಕುಮಾಚ,** ೧೦. ೫೩); ತಾವರೆ (ಅರವಿಂದಂ ರಾಜೀವಂ ಸರಸಿರುಹಂ ಸಾರಸಂ ಮಹೋತ್ಪಳಮದು ಅಬ್ಜಂ: **ಅಭಿಧಾವ,** ೧. ೪. ೧೯)

**ಸಾರಸನ –** ಡಾಬು (ಹಾರಂ ಸಾರಸನಂ ಕೇಯೂರಂ ಕರ್ಣಿಕೆ ವಿಚಿತ್ರಮಣಿಕಟಕಂ ಮಂಜೀರವಮೆನೆ: **ವರ್ಧಮಾಪು,** ೧೧. ೪೫)

**ಸಾರಸಸಖ –** ಕಮಲಮಿತ್ರ, ಸೂರ್ಯ (ಸಾರಸಸಖನಾ ನಗಕಾಸಾರಸಮುತ್ಪನ್ನ ಕಮಳಮಂ ಕೇಳ್ತಾಂತಂ: **ರಾಜಶೇವಿ,** ೧. ೧೧೧)

**ಸಾರಸಾರಸ –** ಕಮಲ (ಸಮಸ್ತಮಸ್ತಕಸ್ಥಿತಪದಸಾರಸಾರಸ .. .. ವಾಗ್ವರವಂದ್ಯ ಶಂಕರಾ: **ಶಬರಶಂ,** ೫. ೨೭)

**ಸಾರಸಾರಿ –** [ಸಾರಸ+ಅರಿ] ಕಮಲದ ವೈರಿ, ಚಂದ್ರ (ಸರೋರುಹ ಸಾರಸಾರಿಬೃಂದಾರಕ .. .. ಸಮೀರಭುಗ್ವರೋದ್ಗಾರಯುತಂ ವಿರಾಜಿಸಿದುದೆಣ್ದೆಸೆಯೊಳ್: **ರಾಜಶೇವಿ,** ೧. ೬೬)

**ಸಾರಸ್ವತ –** ವಿದ್ವಾಂಸ (ಸಾರಸ್ವತನಾದೆ ಚೋದ್ಯಮೆನಗಂತಿದೆ ರಾಜಸಮಾಜಪೂಜಿತಾ:: **ಶಾಂತಿಪು,** ೨. ೫೪); ಪಾಂಡಿತ್ಯ (ಭುವನೈಕದಾನಿ ಧೀರೋದಾತ್ತಂ ಸಾರಸ್ವತಪಾರಂ ಶೃಂಗಾರಾಮೃತಸೇತು ಸುಕವಿಕಂಠಾಭರಣಂ: **ನೇಮಿನಾಪು,** ೨. ೧); [ಜೈನ] ಎಂಟು ಬಗೆಯ ಲೋಕಾಂತಿಕ ದೇವರಲ್ಲಿ ಒಂದು ವರ್ಗ (ಬ್ರಹ್ಮಕಲ್ಪಾಂತವಾಸಿಗಳುಮಪ್ಪ ಸಾರಸ್ವತ ಆದಿತ್ಯ ವಹ್ನಿ ಅರುಣ ಗರ್ದತೋಯ ತುಷಿತ ಅವ್ಯಾಬಾಧಿತ ಅರಿಷ್ಟರೆಂಬೆಣ್ಬರುಂ ಲೋಕಾಂತಿಕದೇವರ್ ಬಂದು: **ಆದಿಪು,** ೯. ೬೦ ವ)

**ಸಾರಸ್ವತಗುಣ –** ವಿದ್ವತ್ತು (ಶ್ರುತಿಯುವತಿ ಕೃತ್ಯೋಪಚಾರ ಸಾರಸ್ವತಗುಣದಿಂ ಕೃತಕೃತ್ಯಮೆಲ್ಲಮಕ್ಕುಂ: **ಕವಿರಾಮಾ,** ೧. ೧೪೮)

**ಸಾರಾಯ –** ಸತ್ವಭರಿತವಾದ (ನೀರೆಱೆದುಪಕಾರಕ್ಕೆಳನೀರಂ ರುಚಿವೆರಸು ತೀವಿ ವನಪಾಲಕರಂ ಪಾರುತ್ತಿಪ್ಪಂತಿರ್ಪುವು ಸಾರಾಯ ಫಲಾಳಿ ನಾಳಿಕೇರ ಬನದೊಳ್: **ಗಿರಿಜಾಕ,** ೨. ೪೭)

**ಸಾರಿ –** ಅಂಬಾರಿ (ಕರಿಸೇನಾ ಸಾರಿನದ್ಧೋತ್ತರಳ ಕದಳಿಕಾ ಕಾನನೋಚ್ಚುಂಬ್ಯಮಾನಾಂಬರಚಕ್ರಂ: **ಆದಿಪು,** ೪. ೨೪)

**ಸಾರಿಕೆ –** [ಶಾರಿಕಾ] ಹೆಣ್ಣು ಗಿಳಿ (ಗೊಟ್ಟಿಗಾಣರಂತಿರೆ ಮಱಿದುಂಬಿ ಮೇಳದವರಂತಿರೆ ಸಾರಿಕೆ ರಾಜಗೇಹದಂತಿರೆ ಕೊಳಂ ಅಲ್ಲಿ ತಾಂ ಅರಸರಂತಿರೆ ತಾಮರಸಂಗಳೊಪ್ಪುಗುಂ: **ಪಂಪಭಾ,** ೫. ೫೮)

**ಸಾರೆ –** ಸಮೀಪ (ಎಳೆಯೊಳ್ ತೋಱಿದ ರೂಪನಾಗಳೆ ನಭೋಭಾಗಾಗ್ರದೊಳ್ ತೋರ್ಪಂ ಆಗಳೆ ಗೆಂಟು ಆಗಳೆ ಸಾರೆಯಾಗಿ ಪೊಳೆದು: **ಆದಿಪು,** ೭. ೧೨೨); ಜೊತೆಗೆ ಪುದಿದ ಸುತಮೋಹದಿಂದೋದಿದೊಡಂಮುನಿಜನದ ಸಾರೆ ಬಸದಿಯೊಳಿರ್ದಾಡಿದೊಡಂ ಇವನಲಸುಗೆಂದಾನಿದನಱಿಯದೆ ದುಷ್ಟಕ್ಷಟರೊಡನಾಡಿಸಿದೆಂ: **ಧರ್ಮಾಮೃ,** ೨. ೪೯)

**ಸಾರ್ಕೆ –** ಸಮೀಪ (ಸುರ್ಕಟೆದುರುಳಿಗುರುಳ್ ನಸುಸುರ್ಕಿದ ಕುಚಚೂಚುಕಂ ಬೆಳರ್ತಧರಂ ನೀರ್ ಪೋರ್ಕುಳಿಯೊಳ್ ಜೋಲ್ದುಳ್ಳುಡೆ ಸಾರ್ಕೆಯೊಳೇಂ ನೃಪನ ಮನಮನಳವಡಿಸಿದುದೋ: **ಆದಿಪು,** ೧೧. ೧೪೯); ಪ್ರಾಪ್ತಿ (ಸಿರಿಯ ಸಾರ್ಕೆಗಂ ಆಯತಿಕೆಯಿರ್ಕೆಗಂ ಪೆಱರ್ ಮೇಗೆನಲಿಲ್ಲದಂತು ನೆಗಟ್ಟುದಱಿಂ: **ಶಾಂತಿಪು,** ೧. ೬೮)

**ಸಾರ್ಗೆ –** ಹತ್ತಿರಕ್ಕೆ (ಪದೆಪಿಂ ಸಾರ್ಗೆ ವಂದ ಸುತೆಯೊಂದಾಶ್ಚರ್ಯಸೌಂದರ್ಯಸಂಪದಮಂ .. .. ಕಂಡು: **ಶಾಂತೀಶ್ವಪು,** ೧. ೨೦)

**ಸಾರ್ಚು –** ಹತ್ತಿರ ತರು (ಕೇಯೂರಕಂ ಸಾರ್ಚಿದ ಇಂದ್ರಾಯುಧಮನೇಱಿ .. .. ಪೊಱಮಟ್ಟು ಪೋಗುತ್ತುಂ: **ಕಾದಂಸಂ,** ೫. ೭೩ ವ); ಇರಿಸು (ಭವನಿಗಳದ ತೊಡರಂ ಕಳೆ ಭವಜಳಧಿಯ ತಡಿಗೆ ಸಾರ್ಚು ಭವಗಹನದುಪದ್ರವಮಂ ಕಿಡಿಸು ಭವಾಂತಕ: **ಆದಿಪು,** ೧೦. ೫೮); ಸರಿಪಡಿಸಿಕೊ (ಎಡಗೆಯ್ಯಿಂ ನೀವಿಯಂ ಸಾರ್ಚುತುಂ ಉರಸಿಜದ ಒತ್ತಂಬದಿಂ ಬಳ್ಕುತುಂ .. .. ಅಸತಿಯರ್ ಪೋದರ್ ಇಂತು ಅತ್ತಂ ಇತ್ತಂ: **ಶಾಂತೀಶ್ವಪು,** ೧೧. ೨೩)

**ಸಾರ್ಚುಂದೊಲೆ –** ಕೋಟೆಗೆ ಆನಿಸಿ ಮೇಲೆ ಹತ್ತಲು ಬಳಸುತ್ತಿದ್ದ ಮರದ ದಿಮ್ಮಿ (ದುರ್ಗಕ್ಕೆ ನಿಚ್ಚಣಿ ಸಾರ್ಚುಂದೊಲೆ ವೀರಸೇತು .. .. ಪಡಿಗೋಂಟೆಯೆಂಬ ಬಹುಕೋಟಾ ಯಂತ್ರಸಾಮಗ್ರಿ ತಿಂತಿಣಿಗೊಂಡಾಂತಿರೆ ಲಗ್ಗೆಗಾರ್ದು ವಸುಷೇಣಂ ಸಾದು ಸೂಟ್ಯೈಸಿದಂ: **ಅನಂತಪು,** ೧೧. ೮೩)

**ಸಾರ್ತರ್ –** ಸಮೀಪಿಸು (ಸಾರ್ತರ್–ಸಮೀಪಾಗಮನೇ: **ಶಬ್ದಮದ,** ಧಾ ೬೦೨); ಉಂಟಾಗು (ನುಡಿಗಳ್

ಮೊಱೆಯಂ ಮಱೆಯಿಪ್ಪುದೊಂದು ಕಳ್ಗುಡಿದವರಂದಮಿಂತು ಸಿರಿ ಸಾರ್ತರೆ ಸಾರ್ವುದು: **ಪಂಪಭಾ,** ೩. ೧೯)

**ಸಾರ್ಥ** – ಸಮೂಹ, ಸಮುದಾಯ (ಬಾಹುಬಲಿಕೇವಳಿಯುಂ ನಾನಾದೇಶವಿಹಾರದೊಳ್ ವಿಶ್ವಜನಮಂ ನಿಜವಚೋಮೃತದಿಂ ಭವ್ಯಜನ ಸಾರ್ಥಮಂ ತಣಿಪಲೆಂದು ಬಂದು: **ಆದಿಪು,** ೧೪. ೧೪೭ ವ); ವ್ಯಾಪಾರಿಗಳ ಗುಂಪು (ಸರ್ವದಯಿತೆಯೊಳ್ ನೆರೆದು .. .. ಇರುಳೆ ಸಾರ್ಥಮಂ ಕೂಡೆ ಪೋದಂ: **ಚಾವುಂಪು,** ೨೨೬, ೧೦)

**ಸಾರ್ಥಪತಿ** – ವ್ಯಾಪಾರಿಗಳ ಗುಂಪಿನ ಮುಂದಾಳು (ಅಂತಾ ಸಾರ್ಥಪತಿಗಳುಂ ಯತಿಪತಿಗಳುಂ ಇರ್ದ ಸಾರ್ಥಮನೆಯ್ದೆವಂದು: **ಪಾರ್ಶ್ವನಾಪು,** ೪. ೧೩೫ ವ)

**ಸಾರ್ಥವಾಹಕ** – ವ್ಯಾಪಾರಿ (ಧರ್ಮಸ್ವಾಮಿ ಜಿನೇಶ್ವರ ಧರ್ಮರತಂ ಸಾರ್ಥವಾಹಕಂ ಬಂಧುಬಳರ್ ಮರ್ಮರಪತ್ರಾಕುಳದಳ್ ಪೆರ್ಮರದಿಟ್ಟೆಡೆಯೊಳಲ್ಲಿ ಬೀಡಂ ಬಿಟ್ಟಂ: **ವರ್ಧಮಾಪು,** ೬. ೭)

**ಸಾರ್ಥಾಧಿಪತಿ** – ಸಾರ್ಥವಾಹಕ (ಆ ಶಾಂತಾತ್ಮರಂ ಸಾರ್ಥಾಧಿಪತಿಗಳತಿಶಯತೀರ್ಥಮೆ ತಮ್ಮಿರ್ದೆ ವಂದುದೆಂದನುಪಮ ಪುಣ್ಯಾರ್ಥಿಗಳಮಳಚರಿತ ಕೃತಾರ್ಥರನೊಲವಿಂದೆ ಬಂದು ಬಂದಿಸಿದರವರ್: **ಪಾರ್ಶ್ವನಾಪು,** ೪. ೧೦೫)

**ಸಾರ್ಥ ಷೋಡಶಮಾಸ** – ಹದಿನಾರೂವರೆ ತಿಂಗಳು (ಶುಕ್ಲ ಲೇಶ್ಯಾ ಪರಿಣಾಮನುಂ ಸಾರ್ಥಷೋಡಶಮಾಸ ನಿಶ್ವಾಸನುಂ .. .. ದಿವ್ಯಸುಖಮನಸ್ವಾದಿಸುತ್ತುಂ: **ನೇಮಿನಾಪು,** ೪. ೬೫ ವ)

**ಸಾರ್ವಭೌಮ** – ಚಕ್ರವರ್ತಿ (ಇರ್ಪತ್ತೊಂದನಿತ್ತಂ ಕರಿಗಳಂ ಅಪರಾದಿತ್ಯಂ ಅಂತೀಯದಂದು ಆತಪನಿರ್ಪತ್ತೊಂದು ವಂಶಂ ಕಿಡೆ ಮುಳಿದನೊ ಸತ್ಯಾಶ್ರಯಂ ಸಾರ್ವಭೌಮಂ: **ಗದಾಯು,** ೧. ೨೮); ಈಶಾನ್ಯ ದಿಗ್ಗಜದ ಹೆಸರು (ಬಲ್ಪಿಂ ಸದೃಶಂ ತಾಂ ಸಾರ್ವಭೌಮಕ್ಕೆ .. .. ಇಭೇಂದ್ರಂ: **ತ್ರಿಷಷ್ಟಿಪು,** ೨. ೫೫); ಕುಬೇರನ ಆನೆ (ಅತಿವಿಹ್ವಲಮಾದುದು ಸಾರ್ವಭೌಮಮಂದದಿರ್ದುದು ಸುಪ್ರತೀಕಮಿರದಾಲಿಸಿ ತತ್ಪಟಹಪ್ರಣಾದಮಂ: **ಪುಷ್ಪದಂಪು,** ೫. ೮)

**ಸಾರ್ವರ್ತುಕ** – ಸರ್ವ ಋತುಗಳಲ್ಲಿಯೂ (ಆ ಸಾರ್ವರ್ತುಕಮೆನಿಸಿದ ಉದ್ಯಾನದಲ್ಲಿ: **ಗಿರಿಜಾಕ,** ೨. ೩೨ ವ)

**ಸಾರ್ವರ್ತುಕವನ** – ಎಲ್ಲ ಕಾಲಗಳಲ್ಲಿಯೂ ಚಿಗುರು, ಹೂ, ಹಣ್ಣುಗಳನ್ನು ಬಿಡುವ ಮರಗಳಿರುವ ಉದ್ಯಾನವನ (ಸಾರ್ವರ್ತುಕವನಶೋಭಿತ ಗೀರ್ವಾಣಾಚಳದೊಳಿಂದ್ರಂ ಅಮರಸಮೇತಮ ನಿರ್ವರ್ತಿತ ಜಿನಸವನಂ ನೇರ್ವಡೆವಡೆ ವಾರಣಾಸಿಗಭಿಮುಖನಾದಂ: **ಪಾರ್ಶ್ವನಾಪು,** ೧೪. ೧೧೦)

**ಸಾಲ್** – ಸಮರ್ಥನಾಗಿರು (ಪೆಱಗಂ ತಗುಳ್ವ ಯಾದವಬಲಮುಂಟಪ್ಪೊಡದನಂಬುಗಾಣಿಸಲ್ ನೀನೆ ಸಾಲ್ವೆ ಉಟಿದುದಂ ಮಾಣಿಸಲ್ ಆನೆ ಸಾಲ್ವೆಂ: **ಪಂಪಭಾ,** ೫. ೨೦ ವ); ಸಾಲಮಾಡು (ಸಾಲ್ವ ಸಾಲಿಗರ್ಗೆ ನಿಗ್ಗವಮಲ್ಲದೆ ಪೋಪುದೇ ಋಣಂ: **ಸಮಯಪ,** ೧೨. ೨೫); ಸಾಲುವಷ್ಟು (ಅಧೀಶ್ವರನಾ ದಯೆ ಸಾಲ್ಗುಂ: **ಕವಿರಾಮಾ,** ೧. ೧೧೫); ಪಂಕ್ತಿ (ಬಳ್ವಳ ಬಳೆದ ಎಳಗೌಂಗಿನ ಸಸಿಯ ಸಾಲ್ಗಳುಂ: **ಚಂದ್ರಪ್ರಪು,** ೧. ೧೦೬)

**ಸಾಲ** – ಕಡ (ಐದು ದಿನಕಾದೊಡಮಾಱುದಿನಕಾದೊಡಂ ತನ್ನ ಮನೆಯಲ್ಲಿ ಮಾದುರಮನಾದೊಡಮಟ್ಟು ಸಾಲಮಿಲ್ಲದೆ ಪರರಾಳಲ್ಲದುಂಡಿಹುದುಚಿತಮೆಲೆ ರಾತ್ರಿಂಚರ.: **ಪಂಚತಂತ್ರ,** ೧೧೭, ಶ್ಲೋಕ ೩೪ ಟೀಕೆ) ಪ್ರಾಕಾರ, ಸುತ್ತುಗೋಡೆ (ಸಾಲಂ ಪ್ರಾಕಾರ: **ಅಭಿಧಾವ,** ೩. ೧. ೭೫); ಮತ್ತಿಯ ಮರ (ಸಾಲ ಪ್ರಾಂಶು ವಿಶಾಲ ಲೋಲನಯನಂ ಪ್ರೋದ್ಯತ್ ವೃಷಸ್ಕಂಧಂ ಉನ್ಮೀಲತ್ ಪಂಕಜವಕ್ತ್ರಂ ಆಯತ ಸಮಗ್ರ ಉರಸ್ಸ್ಥಳಂ: **ಪಂಪಭಾ,** ೧. ೬೮)

**ಸಾಲಂಗೊಳ್** – ಕಡ ತೆಗೆದುಕೊ (ಪುರುಷಂ ತೀರಮೆಯಿಮದಮ ಪರದೇಸದೊಳಿರ್ದರಿತ್ತಲುತ್ತಮಪತ್ರಂ ಬರೆ ಸಾಲಂಗೊಂಡುಂ ಬಿತ್ತರದಿಂದಿಕ್ಕುವಡೆ ಧರ್ಮಪತ್ನಿಯೆನಿಕ್ಕುಂ: **ಸಮಯಪ,** ೫. ೧೨೯)

**ಸಾಲಭಂಜಿಕೆ** – [ಮರದ] ಬೊಂಬೆ (ಸಾಲಭಂಜಿಕೆಯ ಕುಚಂಗಳೊಳ್ ಕುಂಕುಮರಸದಿಂ ಪತ್ರಭಂಗಂಗಳಂ ಚಿತ್ರಿಸಲುಂ: **ಕಾದಂಬ,** ೨೫ ವ)

**ಸಾಲವಿದ್ಯೆ** – ಕೋಟೆಯನ್ನು ನಿರ್ಮಿಸುವ ವಿದ್ಯೆ (ಆಕೆಯ ಕೈಯೊಳಾ ವಿದ್ಯೆಂ ಕೊಂಡು ಕಟಿಪಿ ಮಱುದಿವಸಂ ಸಾಲವಿದ್ಯೆಯಂ ಪ್ರತಿವಿದ್ಯೆಯಿಂ ಕಿಡಿಸಿ ದುರ್ಲಂಘ್ಯಪುರಮಂ ರಾವಣಂ ಮುತ್ತುವುದುಂ: **ಪಂಪರಾ,** ೧೦. ೧೯೩ ವ)

**ಸಾಲವಿದ್ಯಾಭೇದಿನಿ** – ಸಾಲವಿದ್ಯೆಗೆ ಪ್ರತಿಯಾದ ವಿದ್ಯೆ (ಸಾಲವಿದ್ಯಾಭೇದಿನಿಯಂ ಪ್ರತಿವಿದ್ಯೆಯಂ ಆಕೆ ಕುಲಕ್ಷತಿಯಂ .. .. ಬಗೆಯದೆ ದುರ್ಮತಿ ಕೊಟ್ಟಳ್: **ಪಂಪರಾ,** ೧೦. ೧೯೨ ವ ಮತ್ತು ೧೯೩)

**ಸಾಲಸರಲ್** – ಸಾಲವೃಕ್ಷದ ಮರದಿಂದ ಮಾಡಿದ ಬಾಣ (ಇಡಿದಿರೆ ರೋಮಕೂಪದೊಳಗೆ ಉರ್ಚಿದ ಸಾಲ ಸರಲ್ಗಳುಂ ತೆಱಂಬಿಡಿದಿರೆ ಬೆಟ್ಟು ಒರ್ಗುಡಿಸಿದಂತೆ ನೆಱಿಲ್ದಿರೆ.. .. ಬಿದ್ದಂ ಏನೆಸೆದನೋ ಶರಶಯ್ಯೆಯೊಳ್ ಅಂದು ಸಿಂಧುಜಂ: **ಪಂಪಭಾ,** ೧೩, ೬೨)

**ಸಾಲಿಗ** – ನೇಕಾರ (ಪಾಟಳೀಪುತ್ರಮಂ ಪೊಕ್ಕು ಪಸಿದು ಸಾಲಿಗರ ಮನೆಯಂ ಪೊಕ್ಕು ಸಾಲಿಗರ ಬಿರ್ದಿಯಂ ಉಣಲ್ವೇಡಿದೊಡೆ: **ವಡ್ಡಾರಾ,** ಪು ೧೮೮, ಸಾ ೧೬); ಸಾಲ ಪಡೆಯುವವನು (ಸಾಲ್ವ ಸಾಲಿಗರ್ಗೆ ನಿಗ್ಗವಮಲ್ಲದೆ ಪೋಪುದೇ ಋಣಂ: **ಸಮಯಪ,** ೧೨. ೨೫)

**ಸಾಲಿಡು** – ಪಂಕ್ತಿಗಟ್ಟು (ತಮ್ಮ ಬಸದಿಗಳೊಳ್ ಕಸವರಮನೊಟ್ಟಿಟ್ಟು ಸಾಲಿಟ್ಟಂತಿರೆ: **ವಡ್ಡಾರಾ,** ಪು. ೧೧೭, ಸಾ. ೧೦); ಹೊರಸೂಸು (ನಗೆಮೊಗದಿಂ ಮುಗುಳ್ನಗೆ ತುಳುಂಕೆ ಬಳಲ್ಮುಡಿಯಿಂದ ಅರಲ್ಗಳಲ್ಲುಗೆ ನಿಡುಗಣ್ಗಳಿಂ ಪೊಳೆಪು ಸಾಲಿಡೆ .. .. ಜತಿಮೆಟ್ಟುತಾಡಿದಳ್: **ಜಗನ್ನಾವಿ,** ೫. ೧೫); ಒದಗಿಸು (ಕಂಕಣಝುಣಝುಣತ್ಕಾರಂ ಸಭೆಯ ಕಿವಿಗೆ ಸವಿಗಳಂ ಸಾಲಿಡೆ: **ಗಿರಿಜಾಕ,** ೨. ೧೦೫ ವ)

**ಸಾಲಿಸು** – ಸಾಲವನ್ನು ನೀಡು (ಪುಟ್ಟಿದ ಕೂಸಿಂಗೆ ಪೆಸರಿಡುವೆನೆಂಬ ಸಾಲಿಸದೆ ಬಡ್ಡಿವೇಳ್ಕೆಂಬ: **ಧರ್ಮಾಮೃ,** ೧೨. ೧೪ ವ); ಸಾಕುಮಾಡು (ಪೆಱಱಂ ಅಱಸುವುದಂ ಸಾಲಿಸಿದಂ ಎನ್ನುಮಂ ಸೋಲಿಸಿದಂ ಎಂದು ರಥದಿಂದಮಿಟಿದು ಮಾಲೆಯಂ ಆತನ ಕೊರಲೊಳ್ ಇಕ್ಕಿದಾಗಳ್: **ಹರಿವಂಶ,** ೫, ೧೪ ವ)

**ಸಾಲೆ** – [ಶಾಲಾ] ಸಭಾಂಗಣ (ಪಾಡುವ ತುಂಬಿ ಗಾಣರೆಂದೆನೆ ನನೆಯಂಬನೋಲಗದ ಸಾಲೆವೊಲಿರ್ದುದುಬಂದ ಮಾವುಗಳ್: **ಕಬ್ಬಿಗಕಾ,** ೫೨); ಆವರಣ (ಇನಕರಪಾತಭೀತ ಪಥಿಕಶ್ರಮ ಸಂಹರಣಾರ್ಥಂ ಅಂಬುಜಾಸನಂ ಒಸೆದಿಟ್ಟ

ತಣ್ಣೆಲರ ಸೋಲದ ಸಾಲೆಯೆನಲ್: **ಶಾಂತೀಶ್ವಪು,** ೧೩. ೧೩೦)

**ಸಾಲ್ಗುಂ** – ಸಾಕು (ಮದುವೆಯ ಕಾರ್ಯಂ ನಮಗೆ ಸಾಲ್ಗುಂ ಎಂದವಂ ಪೇಳಿ ಪೋಗಲ್: **ತ್ರಿಷಷ್ಟಿಪು,** ೨. ೯೪ ವ)

**ಸಾಲ್ಸರಿ** – ಜಡಿ ಮಳೆ (ಮೆಲ್ಸರಿ ಸೂಳ್ಸರಿ .. .. ಬಲ್ಸರಿ ಕಾಲ್ಸರಿ ಸಾಲ್ಸರಿ ಸಲೆ ಸುರಿದು ಕಱೆದುವಿರುಳೂಂ ಪಗಲುಂ: **ರಾಜಶೇವಿ,** ೮. ೧೧೨)

**ಸಾವಗಿಸು** – ಕ್ರಮಗೊಳಿಸು (ನೀವಿಯನೆಡಗೈಯಿಂದಮೆ ಸಾವಗಿಸುತ್ತ ಅತುಳ ಸಾಧ್ವಸಂಬೆರಸು ಎಟ್ಟಿ ಆ ದೇವಿಯಂ ಏಱದಿರೆನುತುಂ: **ಕುಸುಮಾಕಾ,** ೫. ೫೯); ಸಾಂತ್ವನಗೊಳಿಸು (ತನ್ನಿಂದಂ ಪೆಱರಿಂದಂ ತನ್ನಂ ಸಾವಗಿಸುವಾಸೆಯಿಲ್ಲದೆ ದೇಹೋತ್ಪನ್ನಪರೀಷಹಸಂಹತಿ ತನ್ನೊಡಲಂ ನೆಱೆಯೆ ತವಿಸುತ್ತಿರ್ಪುದುಂ: **ಆದಿಪು,** ೨. ೫೨)

**ಸಾವದ್ಯ** – ಕಳಂಕ, ಪಾಪ (ಇತ್ತ ವೃಷಭಯೋಗೀಂದ್ರನುಂ ಸಕಳಸಾವದ್ಯಾತಿದೂರಮಪ್ಪ ಜಿನಕಲ್ಪಿತಂ ಎಂಬ ಆಚರಣಮಂ ಕೈಕೊಂಡು: **ಆದಿಪು,** ೧೦. ೧೩ ವ)

**ಸಾವದ್ಯಭೀರು** – ಪಾಪಕ್ಕೆಹೆದರುವವನು (ಸಾವದ್ಯಭೀರುಗಳ್ ಕೆಲರ್ ಆ ವಿವಿಧಫಲಪ್ರಸೂನಪಲ್ಲವತತಿಯಿಂ ತೀವಿದ ರಾಜಾಂಗಣಮಂ ಇಳವಂದ್ಯರ್ ಮೆಟ್ಟಲೊಲ್ಲದಲ್ಲಿಯೆ ನಿಂದರ್: **ಆದಿಪು,** ೧೫. ೯)

**ಸಾವಭೃತ** – ಸಾಮಾನ್ಯ (ಸಾವಭೃತಂ ಸಾಮಾನ್ಯಂ ಕೇವಳಮೆಂಬುದದೆನಿಕ್ಕುಂ: **ಅಭಿಧಾವ,** ೩. ೧. ೪೯)

**ಸಾವಷ್ಟಂಭ** – ಗರ್ವದಿಂದ ಕೂಡಿರುವ (ಎಂಬಿವು ಮೊದಲಾಗಿ .. .. ಸಾವಷ್ಟಂಬ ಸಾಭ್ಯುಪಗಮ ಸಸಂಭ್ರಮ .. .. ಅಪ್ಪ ಕಾದಂಬರೀಸಂಬಂಧ ವಚನಂಗಳಂ .. .. ಬಿನ್ನವಿಸುತ್ತಿರೆ: **ಕಾದಂಬ,** ೮. ೫೧ ವ)

**ಸಾವಾಸಿ** – ಕಂಚುಕಿ (ಬಱಿಯಟ್ಟಿ ಬಂದು ಮುನ್ನಂ ಪುಱುವಗೆಗೊಳಗಾದಳೆಂದು ಸಾವಾಸಿಗಳಂ ಕಱಿಪಿದೆನಲ್ಲಂ ತಲೆಯಂ ಬಱಿಯಟ್ಟಿದನೆಂದು ಪೋದುದಸು ಶಶಿಮುಖಿಯಾ: **ಅನಂತಪು,** ೧೨. ೫)

**ಸಾವು** – ಮರಣ (ಘಟೋತ್ಕಚನಿಳವಂತನ ಸಾವಂ ಕಂಡು ಸೈರಿಸದಳಂಭೂಷವನೆಟ್ಟಿಟ್ಟುವುದುಂ: **ಪಂಪಭಾ,** ೧೧. ೭ ವ)

**ಸಾವೆ** – [ಶ್ಯಾಮ] ಒಂದು ಧಾನ್ಯ (ತೆಂಗಿನ ಮರನಂ ಕಡಿದು ಸಾವೆಗೆ ಬೇಲಿಯನಿಕ್ಕುವಂತೆ: **ಧರ್ಮಾಮೃ,** ೧೩. ೮೯ ವ)

**ಸಾಷಾಢ** – ಪೂರ್ವಾಷಾಢ ಉತ್ತರಾಷಾಢ ನಕ್ಷತ್ರಗಳಿಂದ ಕೂಡಿದ್ದು, ಋಷಿಗಳು ಹಿಡಿಯತಕ್ಕ ಮುತ್ತುಗದ ದಂಡ (ಸಾಷಾಢ ಸಪ್ತರ್ಷಿಸಂಕುಳ ಸಂಪೂತ ಆರುಂಧತೀಸ್ಥಿತಿನುತಂ .. .. ಆಶ್ರಮಂ: **ಕಾದಂಸಂ,** ೧. ೮೩)

**ಸಾಷ್ಟಾಂಗಪ್ರಣತ** – ಎಂಟು ಅಂಗಗಳ ಸಹಿತ [ಎದೆ, ಹಣೆ, ಎರಡು ಕೈಗಳು, ಎರಡು ಮಂಡಿಗಳು, ಎರಡು ಪಾದಗಳು] ನಮಸ್ಕರಿಸಿದವನು (ಆತನಂ ರಾಮಸ್ವಾಮಿಯಲ್ಲಿಗುಯ್ವುದುಂ ಆತಂ ಸಾಷ್ಟಾಂಗಪ್ರಣತನಾಗಿ: **ಪಂರಾಮಾ,** ೧೪. ೪೬ ವ)

**ಸಾಷ್ಟಾಂಗಮೆಱಗು** – ಸಾಷ್ಟಾಂಗಗಳನ್ನು ನೆಲ ತಾಗಿಸಿ ನಮಸ್ಕಾರಮಾಡು (ಮೃಗಾಧಿರಾಜನಂ ಎಯ್ದೆವಂದು ಸಾಷ್ಟಾಂಗಮೆಱಗಿ ಪೊಡೆವಟ್ಟೊಡೆ ಇತ್ತ ಬಾ ಎಂಬುದುಂ:: **ಪಂಚತಂತ್ರ,** ೮೫ ವ)

**ಸಾಸವೆಗುಡಿ** – ಸಾಸಿವೆಯನ್ನು ಅರೆದು ಕುಡಿದಂತೆ ಸಂಕಟ ಅನುಭವಿಸು (ಬಿಡದೌಡುಗರ್ಚಿ ನೋವಿಮದಡಿಗಡಿಗೆ ಅಹಹಾಯೆನುತ್ತುಂಎಡಗೆಯ್ಯಿಂದಮ ತಡವರಿಸುತ್ತುಂ ಸಾಸವೆಗುಡಿದರಂತಿರೆ ಕರಮೆ ಮಱುಗಿ ತಳವೆಳಗಾದಂ: **ಧರ್ಮಾಮೃ,** ೧. ೧೧೬)

**ಸಾಸಿಗ** – ಸಾಹಸಿಗ, ಪರಾಕ್ರಮಿ (ಪದಿನೆಣ್ಬಾಸಿರ್ವರ್ ಅರಸುಗಳ್ ವೆರಸು ಸಾಸಿಗಂ ಉಚಿತದೀಕ್ಷೆಯಂ ಕೈಕೊಂಡಂ: **ಆದಿಪು,** ೬. ೫); ದುಸ್ಸಾಹಸಿ

**ಸಾಸಿರಕಣ್ಣ** – ಬಹುಗಣ್ಣ, ಇಂದ್ರ (ಸೌಧರ್ಮೇಂದ್ರಂ ಸಾಸಿರಕಣ್ಣಂ ಅತೀಂದ್ರಿಯದರ್ಶನಂ ಇದೇಂ ಜಿನಂ ಸುಂದರನೋ: **ಶಾಂತಿಪು,** ೧೨. ೧೬)

**ಸಾಸಿರ್ಮಡಿ** – ಸಾವಿರಪಟ್ಟು (ನೆಯ್ದಿಲ ಕಡುಗಂಪುಮನಿವಱ ಕಂಪು ಗೆಲ್ದುವು ಸಾಸಿರ್ಮಡಿಯೆನೆ ಪೊಂಬಣ್ಣದ ಕಂಪಿಡಿದಿರೆ ಸೊಗಯಿಸುವುವು ಗಂಧಶಾಲಿವನಂಗಳ್: **ಆದಿಪು,** ೧. ೬೦)

**ಸಾಸಿಸು** – ಶಾಸನ ಮಾಡು, ವಿಧಿಸು (ಪಿರಿದುಂ ದೋಸಂ ಬಿಡೆಂದು ಗೊರವಂ ಸಾಸಿಸೆ ಮಾನಿಪನೆ ಮಾಂಸಮಂ: **ಸಮಯಪ,** ೧೪. ೧೦೬)

**ಸಾಸ್ನ** – ಗಂಗೆದೊಗಲು (ಪ್ರಣವರವತಣತ್ಕಾರಾನಂದ ಸ್ವಾಸ್ನಾಸ್ವಾದನಾಮ್ನಾಯಂ .. .. ತೊಳಗಿದಂ ಅಭವಾಂಭೋಧಿ ಚಂದ್ರಂ ವೃಷೇಂದ್ರಂ: **ರಾಜಶೇವಿ,** ೧೪. ೧೫೧)

**ಸಾಸ್ನಾಪಟ** – ಹಸುಗಳ ಗಂಗೆದೊಗಲು (ತತ್ ವೃಷಭಯುಗಳಂ ಆಲಂಬಿ ಸಾಸ್ನಾಪಟಂ ಪಾಟಳನೇತ್ರಂ ವೃದ್ಧವಂಶಾಕುರ ವಿಷಮವಿಷಾಣದ್ವಯಂ .. .. ಆಭೀಳಶೀಳಂ: **ನೇಮಿನಾಪು,** ೪. ೧೨೧)

**ಸಾಸ್ನೆ** – ಹಸುಗಳ ಗಂಗೆದೊಗಲು (ಕೆಲೆವುತ್ತಂ ಸಾಸ್ನೆ ತೂಗಲ್ ನೆರೆಯನಿಱೆವುತಂ ಬಾಲಮಂ .. .. ಒಪ್ಪಿತ್ತು .. .. ಮಹೋಕ್ಷಂ: **ತ್ರಿಷಷ್ಟಿಪು,** ೧೫. ೨೨)

**ಸಾಹಣ** – ಆನೆಕುದುರೆಗಳನ್ನು ಪಳಗಿಸುವಿಕೆ (ನಿರುಜಂ ತ್ರಿಜಗದ್ಭೂಷಣ ಕರಿ ಕವಳಂಗೊಳ್ವುದೆಂದು ಸಾಹಣದ ಮಹತ್ತರರ್ ಅಱಿಪೆ; **ಪಂಪರಾ,** ೧೫. ೩೨)

**ಸಾಹಣವೆಗ್ಗಡೆ** – (ತಕ್ಕ ಪಲ್ಲಣದ ಬಿಸುಗೆಯ ಮೊಗವಡದ ಅಗುಱದ ಅಳವಡಿಕೆಯಂ ತೋರ್ಪ ಸಾಹಣವೆಗ್ಗಡೆಗಳ ಸಂಸರ್ಗದೊಳಂ: **ಪುಷ್ಪದಂಪು,** ೮. ೨೮ ವ)

**ಸಾಹಣಿ** – ಆನೆಕುದುರೆಗಳನ್ನು ಪಳಗಿಸುವವನು (ರಾವುತರ್ವೆರಸು ಸನ್ನದ್ಧರಾದ ಸಾಹಣಿಗಳುಮಂ ಸೂಱೆಂ ಸಾಲೆಗೆ ನಡೆಯದಿರ್ದೆಡೆಯೊಳೆ ಬಲಿದು: **ಆಚವರ್ಧ,** ೯. ೫೬ ವ)

**ಸಾಹಿಯಾಣ** – ಕಸೂತಿ ಕೆಲಸ; ವಸ್ತ್ರವಿಶೇಷ (ಸಾಹಿಯಾಣದ ಚೀನದ ಧವಳವಟ್ಟದ ಭರ್ಮದ ಜೊಂಗದ ದೇವಾಂಗದ ಸಕಳವಟ್ಟೆಗಳುಮಂ ಮೆಟ್ಟುವೆಡೆಯೊಳೆಲ್ಲಂ ಪಾಸಿ: **ಆದಿಪು,** ೪. ೩೪ ವ)

**ಸಾಳ** – ಕೋಟೆ (ಅಗಱ್ ಅಂಭೋರಾಶಿ ಸಾಳಂ ಬಳಸಿ ಬಳೆದ ವೇಳಾಚಳಂ .. .. ಒದವಿರ್ದಾ ಪುರಂ: **ಲೀಲಾವತಿ,** ೭. ೨೦)

**ಸಾಳಗ** – ಒಂದು ರಾಗ (ಪಾಡುವ ಸಾಳಗಂ ಲಳಿಯೊಳೊಳಡುವ ನಚ್ಚಣಿ ಮೆಯ್ವಸಂಗಳಿಂ ತೀಡುವ ತೆಂಬೆಲರ್: **ಅನಂತಪು,** ೧೪. ೭೮)

**ಸಾಳುವ** – ಗಿಡುಗ (ಕೊಂಡುದಂತದುವೆ ಸಾಳುವನಲ್ಲದು ತಪ್ಪಿತತ್ತಲಾಕೊಂಡುದು ಜಾಯಿಲಂ: **ಸೂಕ್ತಿಸುಧಾ,** ೩. ೧೨೧)

**ಸಾಳ್ವ** – ಗಿಡುಗ (ಕುಪ್ಪಿಗೆಯಂ ಕಳಲ್ಚಿ ಬಿಡು ಸಾಳ್ವನಂ ಏಳಿಸಿ ಪಕ್ಷಿಜಾಳಮಂ ಕುಪ್ಪುವ ಪುಲ್ಲೆಗುರುಳ್ಗಳಂ: **ಉದ್ಭಟಕಾ,** ೨. ೫೧)

**ಸಾಜೆಸು** – ಪ್ರಕಟಗೊಳಿಸು (ರಾಜ್ಯಾರ್ಹರಲ್ಲದವರ್ ಬರವೇಡ ಸಿಂಹಾಸನಸ್ಥರೆ ಬರ್ಪುದೆಂದು ಸಾಜೆಸಿ: **ಜಗನ್ನಾವಿ,** ೮. ೭೮ ವ)

**ಸಾಱು** – ಕೂಗಿ ಹೇಳು, ಬೇಳೆಯ ಸಾರು (ಸಾಱು– ಘೋಷಣೇ ರಸಾರ್ಥೇ ಚ: **ಶಬ್ದಮದ,** ೯೦೫)

**ಸಾಟಿಗೆ** – ಉಡುಗೆ (ದುಕೂಲದ ಚೆಲ್ವನಪ್ಪ ಸಾಟಿಗೆಗೆ ಪಯೋಜಸೂತ್ರ ನವಮುಂಜಿಗೆ: **ಶಾಂತಿಪು,** ೮. ೯೦)

**ಸಿಂಗಬಲ** – [ಸಿಂಹಬಲ] ಸಿಂಹದ ಶಕ್ತಿ (ಸಿಂಗಬಲನೆಂಬಗುರ್ವಿನ ಸಿಂಹಮಸಿಥೇನು ಕಿರಣ ಕೇಸರಮಾಲಾಸಂಗತಮನಡಸಿ ನುಂಗಲ್: **ಪಂಪಭಾ,** ೮. ೭೪)

**ಸಿಂಗವೇಂಟೆ** – ಸಿಂಹವನ್ನು ಹಿಡಿಯುವ ಬೇಟೆ (ಅಪಭ್ರಂಶಕ್ಕಮ ದೇಶೀಯಪದಕ್ಕಮ ಸಮಾಸಂ: ಸೆಜ್ಜೆವನೆ ರಾಯಗೋಂಟೆ ಸಿಂಗವೇಂಟೆ: **ಶಬ್ದಮದ,** ೩೧೪ ಪ್ರ)

**ಸಿಂಗಾಡಿ** – ಬಿಲ್ಲಿನ ಹೆದೆ (ಕಡುಪಿಂ ಕಾಯ್ಪೇಜೆ ಸಿಂಗಾಡಿಯನೆ ಸೆಳೆದು ಮೈಯುರ್ವಿ ಕೈಯಿಕ್ಕಿ ತೋಡುತ್ತೆ ಒಡನೆ ಅಂಬಂ: **ರಾಜಶೇವಿ,** ೬. ೧೦೧)

**ಸಿಂಘಣೀ** – ಮೂಗು (ಮೂಗು ನಾಸಿಕಾ ಘ್ರಾಣ ಸಿಂಘಣೀ ಘೋಣಾಖ್ಯಂ: **ಅಭಿಧಾವ.** ೧. ೧೨. ೧೭)

**ಸಿಂಜಾನ** – ಗೆಜ್ಜೆಯ ಧ್ವನಿ (ಸಿಂಜಾನ ಸಮದಷಟ್ಚರಣಂ ಜೇವೊಡೆಯೆನಿಸೆ: **ಲೀಲಾವತಿ,** ೫. ೩೧)

**ಸಿಂಜಿತ** – ಧ್ವನಿ (ರತ್ನರಂಜಿತ ಮಂಜೀರಕಾಪುಂಜ ಮಂಜುಳ ಸಿಂಜಿತಂ ಉದ್ಭವಿಸಲ್ .. .. ಕೂಜನಂಗೆಯ್ವ ಪಾರಾವತ ಕ್ರೀಡೆಗಳಂ: **ತ್ರಿಷಷ್ಟಿಪು,** ೭. ೬ ವ)

**ಸಿಂಜಿನಿ** – ಬಿಲ್ಲಿನ ಹೆದೆ (ಬಿಸತಂತು ಸಿಂಜಿನಿಯಂ ತಂತಿ ಮಡಿ ಇಕ್ಷುಚಾಪದಂಡಮಂ ದಂಡಿಗೆ ಮಾಡಿ ಪಂಚಸರಂಗಳಂ ಸಪ್ತಸ್ವರಗಳಂ ಮಾಡಿ; **ನೇಮಿನಾಪು,** ೬. ೧೭ ವ)

**ಸಿಂಜಿನೀವಳಯ** – ಕಾಲ್ಗಡಗ (ಮಂಜುಘೋಷಮಂ ಬೀಱುವ ಸಿಂಜಿನೀವಳಯ ಕಾಂಚಿಗಳೆಂಬಿವಱೆಂದೊಂದು ಚೆಲ್ವೇಱೆರೆ ಭೋಗಿಭೂಮಿನಿಯರಾ ಮಡುವಿಂ ಪೊಱಮಟ್ಟರ್: **ಜಗನ್ನಾವಿ,** ೬. ೧೦೨)

**ಸಿಂಟ** – ಕೊಳಕ (ಒಂದು ಮೃಗಂ ಬೀೞದು ನೋಡಿಂದಿನ ಬೇಂಟೆಯೊಳೆ ಸಿಂಟನಂ ಕಂಡುದಱೆಂದ: **ಯಶೋಧಚ,** ೪. ೫೦)

**ಸಿಂದ** – ಒಂದು ಬಗೆಯ ಬಾವುಟ (ಮಿಳಿರ್ದು ಮಿಳಿಸುವ ಪೆಸರ ಕುಱೆಪಿನ ಪಟಿಯಿಗೆಗಳುಂ ಪಂದಣಿಸಿ ಮುಂದೆ ನಿಂದ ಪಲವುಂ ಸಿಂದಂಗಳೂಂ ಕಣ್ಬೊಲಕ್ಕೆ ಬರೆ: **ಪಂಪರಾ,** ೧೩. ೩೪ ವ)

**ಸಿಂದುರ** – ಒಂದು ಬಗೆಯ ಹೂ, ಸಿಂದುವಾರ (ಅಲರ್ದ ಪೊಸಸಿಂದುರಂಗಳಂ ಅಲೆವ ಅಳಿಕುಳಮಂ ತಳರ್ಚಿ ತಣ್ಮಲೆವ ಎಲರ್ ಎಮ್ಮಂತಃಪುರ ಲಲನೆಯರಂ ಕೋಡುಸೇಡುಗೊಳ್ವಿನಮೀಗಳ್: **ಆದಿಪು,** ೧೧. ೯೦)

**ಸಿಂದುವಾರ** – ಸಿಂದುರ, ಒಂದು ಬಗೆಯ ಹೂ (ಸಿಂದುವಾರದ ಚಾಮರಂಗಳಿಂ ತರುಣ ಕದಳೀದಳದ ಮೇಲ್ಕಟ್ಟುಗಳಿಂ: **ತ್ರಿಷಷ್ಟಿಪು,** ೨೪. ೫೦ ವ)

**ಸಿಂದೂರ** – ಕೇಸರಿಬಣ್ಣದ ಪುಡಿ (ಸಿಂದೂರ ಪಾಂಸೂತ್ಕರದಿಂ ಸೀಮಂತಸಿಂದೂರದ ವಿರಚನೆಯಂ ಕೂಡೆ ಮಾಡುತ್ತುಂ: **ಆದಿಪು,** ೧೧. ೧೫೫)

**ಸಿಂದೂರವಸನ** – ಕೇಸರಿಬಣ್ಣದ ಬಟ್ಟೆ (ಸಿಂದೂರವಸನಮಂ ಕಳೆದೊಂದು ಸಿತಾಂಬರಮನುಟ್ಟು: **ಜಗನ್ನಾವಿ,** ೧೨. ೮೯)

**ಸಿಂಧ** – ಧ್ವಜ (ನಭದೊಳ್ ಮಿಳ್ಳಿಱೆದಾಡೆ ಸಿಂಗರದ ಸಿಂಧಂ ಡಿಂಡಿಮಧ್ವಾನಂ ಉಣ್ಮೆ .. .. ಸಮರಕ್ರೀಡಾಮಹೋತ್ಸಾಹದಿಂ: **ರಾಜಶೇವಿ,** ೬. ೭೦)

**ಸಿಂಧು** – ಸಮುದ್ರ (ಶ್ರೀ ವರ್ಧಮಾನಮುನಿಪ್ರವ ಮುನಿಜನಾನಂದ ಸಂಸ್ತುತ್ಯ ಸಿಂಧು ಸ್ತೋಮಾಳಂಕಾರಿತಾಂಭೋನಿಧಿ ನಿರುಪಮ ಬೋಧಕರಂ: **ಸುಕುಮಾವ,** ೧. ೧); ನದಿ (ಸುರಸಿಂಧುವ ಶೀಕರಂಗಳಿಂ .. .. ಸಮೆದಂತೆ ಶಾರದಂಗಳ ಜಸದೇೞ್ಗೆ: **ಕಾದಂಸಂ,** ೫. ೪೪)

**ಸಿಂಧುಜ** – ಭೀಷ್ಮ (ಇಡಿದಿರೆ ರೋಮಕೂಪದೊಳಗೆ ಉರ್ಚಿದ ಸಾಲ ಸರಲ್ಗಳುಂ ತೆಱಂಬಿಡಿದಿರೆ ಬೆಟ್ಟು ಒರ್ಗುಡಿಸಿದಂತೆ ನೆಱಲ್ದಿರೆ.. .. ಬಿಟ್ಟಂ ಏನೆಸೆದನೋ ಶರಶಯ್ಯೆಯೊಳ್ ಅಂದು ಸಿಂಧುಜಂ: **ಪಂಪಭಾ,** ೧೩. ೬೨)

**ಸಿಂಧುತೋಯ** – ಸಮುದ್ರದ ನೀರು (ಚಿರವಿಕ್ಷೋಭಿತ ಸಿಂಧುತೋಯಶಿಶಿರಂ .. .. ಚಕ್ರಿಯನಾಜೆಸಿತ್ತು ವಿಜಯಾರ್ಧೋಪಾಂತ ಮಂದಾನಿಳಂ: **ಆದಿಪು,** ೧೩. ೯)

**ಸಿಂಧುಪತಿ** – ನದಿಗಳ ಒಡೆಯ, ಸಮುದ್ರ (ಸ್ಕಂಧಾವಾರೇಭಮದ್ಗೋಧಾವಿಲೆಯಂ ಕವೇರಕನ್ನಿಕೆಯಂ ತತ್ಸಿಂಧುಪತಿಗಿಂಬಿನಿಂದತಿಸಂಧಿಸಿದಂ ನೃಪತಿ ಬಿಟ್ಟು ತದುಭಯತಟದೊಳ್: **ಶಾಂತಿಪು,** ೧೧. ೨)

**ಸಿಂಧುಪುತ್ರ** – ಭೀಷ್ಮ (ರಾಜ್ಯಂ ನಷ್ಟರಾಜಮಾದುದರ್ಕೆ ಮಮ್ಮಲಮಱುಗಿ ಯೋಜನಗಂಧಿ ಸಿಂಧುಪುತ್ರನನಿಂತೆಂದಳ್: **ಪಂಪಭಾ,** ೧. ೮೦ ವ)

**ಸಿಂಧುರ** – ಆನೆ (ಜಿನೇಂದ್ರಪದಪದ್ಮಾರಾಧಕಂ ಸಿಂಧುರ ಆಸನಂ ಅಬ್ಜಾಯತನೇತ್ರಂ ಈಗೆ ಅಭಿಮತಂ ಸರ್ವಾಹ್ಣಯಕ್ಷಂ ವಿನೇಯನಿಕಾಯಕ್ಕೆ ಅಭಿವೃದ್ಧಿಯಂ: **ಸುಕುಮಾಚ,** ೧. ೯)

**ಸಿಂಧುರವದನ** – ಗಣಪತಿ, ಗಣದ ಒಡೆಯ (ಗಂಧರ್ವರ್ ಪೊಗಳಲ್ ಸುರಸಿಂಧು ಕಣಂಬುಲ್ಲ ನಂಬಿ ಮಾಹೇಶಂಗಂ ಸಿಂಧುವದನನ ಪದವಿತ್ತು: **ತ್ರಿಷಷ್ಟಿಪು,** ೪೮. ೧೫)

**ಸಿಂಧುರಸ್ಕಂಧಪೀಠ** – ಆನೆಯ ಮೇಲಿನ ಅಂಬಾರಿ (ರಾಜ್ಯಲಕ್ಷ್ಮೀಲೀಲಾಲಂಬನಮೆನಿಸಿದ ಬಿಸುಗೆಯ ಮತ್ತಾಲಂಬನಮನವಳಂಬಿಸಿ ಸಿಂಧುರಸ್ಕಂಧಪೀಠದೊಳ್ ಸುಖಾಸೀನನಾಗಿರ್ದನಾಗಳ್: **ಆದಿಪು,** ೧೪. ೧೦೨ ವ)

**ಸಿಂಧುರಾರಾತಿ** – ಸಿಂಹ (ನೆಲಸಿರ್ದ ವಜ್ರಪಂಜರಂ ಅಲಱುವಿನಂ ಪಾಯ್ದ ಸಿಂಧುರಾರಾತಿಯಂ ಉಜ್ಜ್ವಲತನುವಂ ಅಭ್ರಪಥದತ್ತ ಲಂಘಿಸಲ್ಕಿರ್ದುದಂ ಚಮೂಪತಿ ಕಂಡಂ: **ಆದಿಪು,** ೧೬. ೪೫)

**ಸಿಂಧುವಾರ** – ಒಂದು ಮರ, ಲೊಕ್ಕಿ ಗಿಡ (ಮತ್ತೊರ್ವಳ್ ಸಿಂಧುವಾರಸುರಭಿನಿಶ್ವಾಸೆ: **ಆದಿಪು,** ೧೧. ೧೨೧ ವ)

**ಸಿಂಧುಬ್ರಾತ** – ನದೀಸಮೂಹ (ಗೋತ್ರನಗಂಗಳ್ ಶಿಖರಂಗಳೊಳ್ ನಿಱೆಸಿ ಸಿಂಧುಬ್ರಾತಮಂ ಪೆಂಪಿನುರ್ಬಿನೊಳಂ ಬೀಗುವುದಾನವಂ ಚರಣದೊಳ್ ತಾಳ್ದಿರ್ದಂ: **ಆದಿಪು,** ೯. ೧೧೪)

**ಸಿಂಪಿಣೆ** – ಚಿಮುಕಿಸುವುದು (ಸಿಂಪಿಣೆಯಂ ಕಾಂತಾರದೊಳಾಡಿದುವು ಕರಿಗಳುಂ ಕರಿಣಿಗಳುಂ: **ಪಂಪರಾ,**

೭. ೧೫೯); ಓಕುಳಿಯಾಟ (ನಿನ್ನಾಳ್ದಂಗೆ ಆಸ್ರವಾರಿಗಳಿಂ ಸಿಂಪಿಣಿಯಾಡಿಪೆಂ ತಣಿವಿನಂ ಭೇತಾಳಭೂತಂಗಳಂ: **ಶಾಂತೀಶ್ವಪು,** ೮. ೪೧)

**ಸಿಂಪಿಸು** – ಸಿಂಪಿಣಿಯಾಡು (ಪೊಂಪುಳಿವೋಗೆ ರಾಗವೆರಡುಂ ಕೆಲದೊಳ್ ಮದನಾನುರಾಗಮಂ ಸಿಂಪಿಸುವಂತೆ ಬಾಜಿಸುವ ಬಂಚದ ನುಣ್ಚರದೊಳ್: **ಮಲ್ಲಿನಾಪು,** ೧೧. ೭೬)

**ಸಿಂಪು** – ಹೀಚುಗಾಯಿ (ನಸುಮಿಡಿ ಸಿಂಪು ಪೂಮಿಡಿ ಬಟಲ್ಮಿಡಿಕಾಯ್ ಪೊದಳ್ದ ಕಾಯ್ ನಸುಪರೆದೋರೆ ದೋರೆಯರೆಣ್ ತನಿವಣ್ಣೆಸೆದತ್ತು ಮಾಮರಂ: **ಸೂಕ್ತಿಸುಧಾ,** ೧೦. ೩೯); ಮುತ್ತಿನ ಚಿಪ್ಪು (ನಸುದೆಱೆಯುತ್ತುಮಿರ್ದ ಪೊಸಮುತ್ತಿನ ಸಿಂಪಿನ ಸಂಪುಟಂಗಳಿಂ ನುಸುಳ್ದು ಸುಪಾಣಿಯಾಗಿ ಪೊಱಪೊಣ್ಮುವ ಮುತ್ತಿನ ಮಾಲೆಯಂದದಿಂ: **ಕಾದಂಬ,** ೨. ೩೫)

**ಸಿಂಪೋಹತ** – (ಎನಿತು ಮದವಾರಣಂ ಕ್ರೋಧಿನಿ ಪೊಕ್ಕುಂ ಸಿಂಪೋಹತಮಂ ಗೆಲ್ಗುಮೆ ಮಾತಿನೊಳೇನೊ ಕೆಯ್ದುಗೆಯ್ ಬಱುವನಂ ಆಜಿಶ್ರಾಂತನಂ ಯಶೋಧನಂ ಇಱಿಯಂ: **ಶಾಂತಿಪು,** ೪. ೫೧)

**ಸಿಂಬಿ** – ಸುರುಳಿ (ಶೇಷಂ ಫಣಂ ಬಳ್ಳಿಸುರ್ಕಿದಪಂ ಸೀರೆಯ ಸಿಂಬಿವೊಲ್ ಖಳನೃಪಾಲಾಕ್ಷೌಹಿಣೀ ಭರದಿಂ: **ಜಗನ್ನಾವಿ,** ೧. ೩೦)

**ಸಿಂಬೆಗೊಳ್** – ಸುರುಳಿಯಾಗು (ಆ ವಾರಣದ ತೋರಹತ್ತಮಾನುಪೂರ್ವಿಸ್ಥೂಳಮುಂ ಆಭೀಳಮುಂ ಅಅತಿಪ್ರಲಂಭಮುಮಾಗೆ ಸಿಂಬೆಗೊಂಡು ನಖಮುಖದೊಳ್ ಕುಪ್ಪಳಿಸಿ ರೌದ್ರರಸಮಂ ಕಱೆವ ಕಾರಮುಗಿಲೊಡ್ಡು ಕಾಲೂಱಿದಂತಿರ್ತುದು: **ಅನಂತಪು,** ೧೩. ೨೧ ವ)

**ಸಿಂಹಘಂಟಿಕಾ[ಕೆ]** – ಗರ್ಜನೆಯಂತಹ ಧ್ವನಿ ಮಾಡುವ ಗಂಟೆ (ಪ್ರೀತಿ ಮಿಗೆ ಶಂಖಪಟಹ ವಿನೂತೋದ್ಧುರ ಸಿಂಕಘಂಟಿಕಾನಿಸ್ವನಸಂಕೇತದೆ ಭವನ ಭೌಮಜ್ಯೋತಿಷ ವೈಆನಿಕಮರ್ರೆರತಂದರ್: **ಸುಕುಮಾಚ.** ೮. ೬೪)

**ಸಿಂಹನಿಷ್ಕ್ರೀಡಿತ** – [ಜೈನ] ಎಂಬತ್ತು ದಿನಗಳಲ್ಲಿ ಅರುವತ್ತು ಉಪವಾಸ ಮತ್ತು ಇಪ್ಪತ್ತು ಪಾರಣೆಗಳನ್ನು ಮಾಡುವ ವ್ರತ (ತಕ್ಕ ಪ್ರಾಯಶ್ಚಿತ್ತಮಂ ಕೊಂಡು ಸಿಂಹನಿಷ್ಕ್ರೀಡಿತಮೆಂಬ ನೋಂಪಿಯಂ ನೋಂತು ವಿಹಾರಿಸುತ್ತುಂ: **ವಡ್ಡಾರಾ,** ಪು ೧೭೨, ಸಾ ೧೨)

**ಸಿಂಹವರ್ಣ** – ಸಿಂಹದ ಸ್ವಭಾವದವನು (ತಮ್ಮ ಬಲಮಟ್ಟಾಡುವುದುಮಂ .. .. ಕಂಡು ತಾಂ ಸಿಂಹವರ್ಣನುಂ ಸಿಂಹಾನೀಕನುಂ ವಾಘೆಭಕಂಠೀರವನುಂ ಅಪ್ಪುದಱಿಂದಮೆಯ್ದೆ ಮುಳಿದು: **ಶಾಂತಿಪು,** ೪. ೧೭ ವ)

**ಸಿಂಹವಾಹಿನಿ** – [ಜೈನ] ಭರತ ಚಕ್ರವರ್ತಿಯ ಹಾಸಿಗೆಯ ಹೆಸರು (ಸಿಂಹವಿಧೃತಮಪ್ಪ ನಿಂಹವಾಹಿನಿಯೆಂಬ ಮೃದುಶಯ್ಯೆಯುಂ ಅನುತ್ತರೆಯೆಂಬ ಸಿಂಹಾಸನಮುಂ: **ಆದಿಪು,** ೧೫. ೩ ವ)

**ಸಿಂಹವಿಕ್ರೀಡಿತ** – [ಜೈನ] ಒಂದು ಉಪವಾಸ ವ್ರತ (ಸರ್ವತೋಭದ್ರ ಸಿಂಹವಿಕ್ರೀಡಿತಗೆಂಬ ತಪದೊಳ್ ನೆಗಟ್ಟುದ: **ಆದಿಪು,** ೩. ೫೭ ವ)

**ಸಿಂಹವಿಷ್ಟರ** – ಸಿಂಹಾಸನ (ಸಿಂಹವಿಷ್ಟರಾರೋಹಣೋಚಿತ ಕಟಿತಟಂಗೆ ಕಟಿತಟದೊಳ್ ಮಾಣಿಕ್ಯಮಣಿಕಿಂಕಿಣೀ ದಾಮಮಂ ತಗುಳ್ಚಿ: **ಆದಿಪು,** ೭. ೧೦೬ ವ)

**ಸಿಂಹಾವಲೋಕನಕ್ರಮ** – ತಾನು ಬೇಟೆಯಾಡಿದ ಪ್ರದೇಶವನ್ನು ಸಿಂಹವು ನೋಡುವ ರೀತಿ, ಹಿಂದೆ ನಡೆದುದನ್ನು ಸಂಕ್ಷಿಪ್ತ ವಾಗಿಯೂ ಸಮಗ್ರವಾಗಿಯೂ ಪರಿಶೀಲಿಸುವ ಬಗೆ (ಒಳಪೊಕ್ಕು ನೋಡೆ ಭಾರತದೊಳಗಣ ಕಥೇಯೆಲ್ಲಮೀ ಗದಾಯುದ್ಧದೊಳಂತೊಳಕೊಂಡತ್ತೆನೆ ಸಿಂಹಾವಲೋಕನಕ್ರಮದಿಂ ಅಱಿಪಿದಂ ಕವಿರನ್ನಂ: **ಗದಾಯು,** ೧. ೪೫)

**ಸಿಂಹಾಸಂದಿ** – ಸಿಂಹಾಸನ (ಜನಂ ಮನಂಗೊಳೆ ಮಾಡಿಟ್ಟ ವಿಚಿತ್ರಮಂಟಪದ ಸಿಂಹಾಸಂದಿಯೊಳ್ ಬಾಲನಂ ಕುಳಿಶಾಸ್ತ್ರಂ ಪಿರಿದುಂ ವಿಭೂತಿವೆರಸಿಟ್ಟು: **ಆದಿಪು,** ೭. ೧೧೦)

**ಸಿಂಹಾಸನ** – ಚಕ್ರವರ್ತಿಯ ಆಸನ (ಸಿಂಹವಿಧೃತಮಪ್ಪ ನಿಂಹವಾಹಿನಿಯೆಂಬ ಮೃದುಶಯ್ಯೆಯುಂ ಅನುತ್ತರೆಯೆಂಬ ಸಿಂಹಾಸನಮುಂ: **ಆದಿಪು,** ೧೫. ೩ ವ);

**ಸಿಂಹಾಸನಸುರದುಂದುಭಿಪತಿ** – ಅಷ್ಟ ಮಹಾ ಪ್ರಾತಿಹಾರ್ಯಗಳಲ್ಲಿ ಸೇರುವ ಸ್ವರ್ಣಸಿಂಹಾಸನ ಮತ್ತು ದೇವದುಂದುಭಿಗಳಿಗೆ ಸ್ವಾಮಿ, ಅರ್ಹಂತ (ಸಿಂಹಾಸನ ಸುರದುಂದುಭಿ ಪತಿಚರಣಕಮಳಭೃಂಗಂ ಪಂಪಂ: **ಆದಿಪು,** ೧. ೩೩)

**ಸಿಂಹೀಮಧ್ಯೆ** – ಸಿಂಹದ ನಡುವಿನಂತಹ ನಡುವುಳ್ಳವಳು (ಭೂಭೃನ್ನಿತಂಬೋಜ್ಜೆ ಸಿಂಹೀಮಧ್ಯೆ ಬಿಂಬಾಧರೆ ಶುಕವಿಲಸದ್ವಾಣಿ ತಾನಾದ ಪಾಂಗಿಂದೆ ಲತಾತನ್ವಂಗಿ ಕಲ್ಪದ್ರುಮಸಮನೃಪನೊಳ್ಕೂಡಿ ಬಾಳುತ್ತಮಿರ್ದಳ್: **ರಾಜಶೇವಿ,** ೩. ೨೦)

**ಸಿಕತ** – ಮರಳು (ಕಲನೊಂದಂ ತೀವಿ ನೀರಂ ಪೊಸೆದು ಸಿಕತದೊಳ್ ಗಾಣಮಂ ಪೊಯ್ದುಂ .. .. ನಿಷ್ಫಲೋದ್ಯೋಗಂ: **ಪಂಪರಾ,** ೧೬. ೫೫)

**ಸಿಕತಿಳತಲಳ** – ಮರಳಿನಿಂದ ಕೂಡಿದ ಭೂಮಿ (ಲಕ್ಷ್ಮೀಮತಿ ಮೊದಲಾಗಿರೆ ತನ್ನಿರ್ಕೆಲದೊಳ್ ಅಬ್ಜದ ಎಳೆಯೆಲೆಗಳ ಬಿತ್ತರಿಗೆಗಳೊಳ್ ಅರಸಿಯರ್ ನೆಮ್ಮಿ ರಾಗದಿಂ ಕನಕ ರಜತ ಸಿಕತಿಳತಳದೊಳ್: **ಶಾಂತಿಪು,** ೮. ೫)

**ಸಿಕ್ತ** – ಒದ್ದೆಯಾದ, ಸಿಂಪಡಿಸಿದ (ಹರಿದಳಿತ ಮದಗಜಕುಂಭ ಸಿಕ್ತಾರ್ದ್ರ ಮೌಕ್ತಿಕ ಪ್ರಕರದವೋಲ್ ಕರಮೆಸೆವ ದಾಡಿಮೀಬೀಜಂ: **ಕಾದಂಸಂ,** ೧. ೩೨)

**ಸಿಗ್ಗಾಳಿ** – ನಾಚಿಕೆಯ ಸ್ವಭಾವದವನು[ಳು] (ನೀಱಂ ಜೂದಾಳಿ ಕರಂ ನೀಱಂ ಮಾತಾಳಿ ಕರೆಯೆ ಸಿಗ್ಗಾಲಿಯವಳ್: **ಕಾವ್ಯಾವಲೋ,** ೩೫೩)

**ಸಿಗ್ಗು** – ನಾಚಿಕೆ (ಯುಧಿಷ್ಠಿರಂ ತಲೆಗವಿವನಲ್ಲದೆಯುಂ ಏವದೊಳ್ ತಲೆಗವಿದು ಸಿಗ್ಗಂ ಕೊಂಡಾಡಿ ನೆತ್ತಮನಾಡಿ: **ಪಂಪಭಾ,** ೭. ೨ ವ); ಅವಮಾನ (ದ್ರೌಪದಿ ತನ್ನ ಕೇಶಪಾಶಮಂ ದುಶ್ಶಾಸನಂ ಪಿಡಿದು ತೆಗೆದನೆಂಬ ಸಿಗ್ಗಿಂ ಪೆರ್ಚಿ ಸಭೆಯೊಳಿಂತೆಂದಳ್: **ಪಂಪಭಾ,** ೭. ೯ ವ)

**ಸಿಗ್ಗಾಗು** – ನಾಚಿಕೆಗೊಳ್ಳು, ಅವಮಾನ ಅನುಭವಿಸು (ಅಂತು ಗಳಿತಗರ್ವನಾಗಿ ಸಿಗ್ಗಾಗಿ ಪೂರ್ವಾವನಿಪಾಳ ಪ್ರಶಸ್ತಿಯೋಳ್ ಒಂದಂ ದಂಡರತ್ನದಿಂ ಸೀಂಟಿ ಕಳೆದು ನಿಜಪ್ರಶಸ್ತಿಗೆಡೆಮಾಡಿ: **ಆದಿಪು,** ೧೩. ೭೧ ವ)

**ಸಿಚಯ** – ಮೇಲುಹೊದಿಕೆ, ಸೆರಗು (ತೊಲಗುತ್ತಿದೆ ಘನಕುಚಯುಗಳದಿಂದೆ ನೋಡಿದೆ ಸಿಚಯಂ ನಿನ್ನಯ ಮುಂದೆ: **ಕಾದಂಬ,** ೩. ೨೯)

**ಸಿಚಯಕ** – ರವಿಕೆ (ವಸುಧಾಂಗನೆ ಮೇಲ್ಗೊಂಡಳೊ ಪೊಸ ಪಸುರ್ವಟ್ಟೆಯ ವಿಳಾಸದಿಂದೆಸೆವ ದುಕೂಲಸಿಚಯಕಮನೆನೆ ತನ್ನದಿಯೆಸೆದುದು: **ಜಗನ್ನಾವಿ,** ೮. ೯)

**ಸಿಟ್ಟು** – ಕೋಪ (ಮುನಿಸಂಕುಳಮುಂ ಆನಾನುರ್ಕಿಂದಂ ಪಳಿದೊಡೆ ಮುನಿದೆನ್ನ ಸಿಟ್ಟನೆನ್ನೊಳ್ ಕಳೆದಂ: **ಧರ್ಮಾಮೃ,** ೧. ೧೩೫)

**ಸಿಡಿ** – ಚಿಮ್ಮು (ಲವಣಾಂಬುರಾಶಿ ಕುಕ್ಕುಟಗುದಿವಲ್ಲಿ ಕೂಟ್ಟುದಿಯೆ ಮೇಗೆ ಸಿಡಿಲ್ದಗುಳಂತೆ ಕೂಡೆ ತತ್ಕಗುದಿಯಿತ್ತುಮಿರ್ಪ ಕುದಿಯೊಳ್ ಸಿಡಿದಲ್ಲಿಯ ಮುತ್ತುಗಳ್: **ಪಂಪಭಾ,** ೧೧. ೧೫೩); ಚೆಲ್ಲಾಪಿಲ್ಲಿಯಾಗು (ಸಿಡಿ–ವಿಕೀರ್ಣೇ: **ಶಬ್ದಮದ,** ಧಾ ೩೫೫)

**ಸಿಡಿದಲೆ** – ಮುಂಡದಿಂದ ಬೇರ್ಪಟ್ಟ ರುಂಡ; ಲೆಂಕರು ತಮ್ಮ ಯಜಮಾನನಿಗೆ ತಮ್ಮ ತಲೆಯನ್ನು ಕಡಿದು ಅರ್ಪಿಸುವ ವಿಧಿ (ತಲೆಬೋಳಿಸಿ ಹೋಂತಂ ಸಿಡಿದಲೆಗುಡುವರ್ .. .. ಸುರಗಿಗಳಂ ಕುತ್ತಿ ನಡೆದು ಪರಕೆಯನೀವರ್: **ಸಮಯಪ,** ೯. ೧೨೦)

**ಸಿಡಿಮಿಡಿಗೊಳ್** – ಚಡಪಡಿಸು, ಅಸಹನೆಯಿಂದ ಕುದಿ (ದಾಡಿಮದ ಬೀಡೆಯೊಳ್ ಚಂಚುಪುಟಂ ತೊಡರ್ದೊಡೆ ಕೀರ್ ಕೀರೆನುತುಂ ಸಿಡಿಮಿಡಿಗೊಳುತಿರ್ದುದು ಒಂದು ಕೀರಕಿಶೋರಂ: **ಶಾಂತೀಶ್ವಪು,** ೧೦. ೮೦)

**ಸಿಡಿಲ್** – ಚಿಮ್ಮು (ಪಾಱುವ ಪಾಱುಂಬಳೆ ಕೊಳೆ ಜೀಱುಟ್ಟಿಂಬರಕೆ ತಲೆ ಸಿಡಿಲ್ದೊಡಂ ಆ ಕಾಯ್ಪಾಱದೆ ಹರಣಂಗೆಯ್ದುವು ಜಾಱಲ್ಲದೆ ಜೋದರ ಅಟ್ಟೆಗಳ್ ಕೆಲವಾಗಳ್: **ಪಂಪಭಾ,** ೧೦. ೯೫); ಗರ್ಜಿಸು (ನಭಂ ಮುಟ್ಟೆ ಸಿಡಿಲ್ದು ಎಡೆಗಿಡುವಿನಂ ಒಟ್ಟಿದ ಕೈದುಗಳ ಏಲೆ ಬಿರ್ದನಂ: **ಆದಿಪು,** ೫. ೮೪); ಮೋಡದ ಘಟ್ಟನೆಯಿಂದಾಗುವ ಬೆಂಕಿ (ಸಿಡಿಲ ಪೊಡರ್ವಾಕ್ಷಣದೊಳೆ ಕಿಡುವುದು .. .. ಎನಲೇಂ ಕಿಡಿವಿಡಿವೋದನೊ ಕೋಪತಾಪದಿಂ ಪವನಸುತಂ: **ಪಂಪರಾ,** ೧೧. ೧೪೧)

**ಸಿಡಿಲ್ಸಿಡಿ** – ಸಿಡಿಲು ಚಿಮ್ಮು (ಮಹಾವೈಷ್ಣವಾಸ್ತ್ರಮಂ ಗಾಮಗೇಯಂ ತೊಟ್ಟಿಸುವುದುಂ ಎರಡುಂ ಕಿಡಿಗುಟ್ಟಿ ಸಿಡಿಲ್ಸಿಡಿಯೆ ಪೋರ್ದುವಂಬರತಳದೊಳ್: **ಪಂಪಭಾ,** ೧೧. ೨೨)

**ಸಿಡುಂಬು** – ಬಿದಿರ ಮೆಳೆ, ಪೊದೆ (ಬಿದಿರ ಸಿಡುಂಬಿನೊಳ್ ಗಜಜೆ ಗರ್ಜಿಸಿ ಪೆರ್ವುಲಿ ಪಾಯೆ ಜವಂಗೆ ಬಿರ್ದನಿಕ್ಕಿದಂ .. .. ಶಬರಂ ಮಹಾಬಳಂ: **ಮಲ್ಲಿನಾಪು,** ೧೦. ೪೯); ಮುಳ್ಳು (ಮಡು ಗಿಡು ಸರು ದರಿ ಪಳ್ಳಂ ಸಿಡುಂಬು ಮೆಳೆ ಬಳ್ಳಿ ಪುಲ್ ಪೊದಱ್: **ಶಬರಶಂ,** ೪. ೨೩)

**ಸಿತ** – ಬಿಳುಪಾದ (ಸಿತ ದೂರ್ವಾಂಕುರ ಮಾತುಲುಂಗ ನಳಿನೀ ಭೃಂಗಾರ ಗೋರೋಚನ ಅಕ್ಷತ ದಧಿ ಆದಿ ವಿಡಂಬಮಂಗಳದೊಳ್: **ಆದಿಪು,** ೧೬. ೧೦); ಶುಕ್ಲಪಕ್ಷ; ಶುಕ್ರ (ಅಮರಾಧೀಶನಿಪ್ಪ ತಾಣಂ ದೂರಂ ಸಿತನಿರ್ದೆಡೆಗೆ: **ಸಮಯಪ,** ೧೦. ೧೦೬); ಸಕ್ಕರೆ (ಎಸೆವ ನವಸಿತಸಮಾಜಂ ಅಸದಳಮೆನೆ ಬೆಳ್ಳಿಬಟ್ಟಲೊಳ್ ತೀವಿಟ್ಟರ್: **ಶಾಂತೀಶ್ವಪು,** ೧೫. ೫೯); ಚಂದನ (ಸುರಕುಜಸಮರಜಃಪರಿಕರಮಂ ಪರಿಭವಿಪ ವಿಮಳತರ ಸಿತಚೂರ್ಣೋತ್ಕರಮಂ ಜಿನಶಿಶುಶಿರದೊಳ್ ಸುರಿದರ್ ಸುರಪರಿಗಳ್ ಒಸೆದು ಸುರರ್ ಆ ಎನೆಯುಂ: **ಶಾಂತೀಶ್ವಪು,** ೧೪. ೧೧೮)

**ಸಿತಕರ** – ಚಂದ್ರ (ಸಿತಕರ ಹುತವಹ ತರಣಿನಯನನಂ ನತಜನತತಿ ಪದಸರಸಿಜನಂ: **ಉದ್ಭಟಕಾ,** ೪. ೮)

**ಸಿತಕರ್ಷಪ** – ಬಿಳಿಯ ಸಾಸಿವೆ (ಜನಾಪವಾದಂಗಳಂ ಕೇಳ್ದು ಬುದ್ಧಿಸಾಗರಂ ಸಗರನ ಮೇಲೆ ಸಿತಕರ್ಷಪಂಗಳನಿಟಿಯೆ ಸುರಿವುದುಂ: **ಅಜಿತಪು,** ೧೦. ೫೩ ವ)

**ಸಿತಗ** – ಜಾರ (ನಿನ್ನ ಸಿತಗತನದಿಂ ಶತವಾರಂ ಹುತವಹನಂ ಪ್ರವೇಶಂಗೆಯ್ದೊಡಂ ಸಿತಗನೆಯಾಗಿ ಪುಟ್ಟುವೆ: **ಪಂಚತಂತ್ರ,** ೩೬೮ ವ); ವಂಚಕ (ಅತಿಕಾಮಾತುರನೆನಿಪಂ ಸಿತಗಂ ಕಳವಳಿಗ .. .. ಜಿನಮತಮಂ ಕೇಳ್ವಾಗಲ್ ಅನಘನಕ್ಕುಂ ಅಭವ್ಯಂ: **ಸಮಯಪ,** ೩. ೫೪); ತುಂಟ (ಮಕ್ಕಳಟಿಟ್ಟೊಡೆ ಬಾಯ್ವಾಯನೆ ಪೊಯ್ವಂ ಏಂ ಸಿತಗನೋ ಕಾಳಾಹಿ ಕೋಳಾಹಳಂ: **ನೇಮಿನಾಪು,** ೭. ೮೪); ಉದ್ಧತ (ಸಿತಗ ಶಿತಿಕಂಠಂ ಅಲ್ಪವ್ರತಕ್ಕೆ ತನುತರತಪಕ್ಕಂ ಏನೊಲ್ದಪನೇ: **ಶಬರಶಂ,** ೨. ೮೬)

**ಸಿತಗತನ** – ಹಾದರ (ನಿನ್ನ ಸಿತಗತನದಿಂ ಶತವಾರಂ ಹುತವಹನಂ ಪ್ರವೇಶಂಗೆಯ್ದೊಡಂ ಸಿತಗನೆಯಾಗಿ ಪುಟ್ಟುವೆ: **ಪಂಚತಂತ್ರ,** ೩೬೮ ವ)

**ಸಿತಗೆ** – ಜಾರಿಣಿ (ಏನೀ ಪೊತ್ತೆತ್ತೆವೋಪಯ ಸಿತಗೆ ಮಗುಟೆ ಮಗುಟೆ: **ಸುಕುಮಾಚ,** ೭. ೨೧)

**ಸಿತಚ್ಛವಿ** – ಬಿಳಿಯ ಕಾಂತಿ (ಸಿತಚ್ಛವಿಯಿಯುಂ ಒಪ್ಪುವ ದಂಡಿಗೆಯುಂ ನಿಕಾಮನಿರ್ಮಳದಶನಂಗಳುಂ ಸೆಣಸೆ: **ಶಾಂತಿಪು,** ೩. ೧೬)

**ಸಿತತ್ವ** – ಬಿಳಿಪು, ಶುಭ್ರತೆ (ಹರನಭಿಷೇಕದ ಪಾಲೊಳ್ ಪರವಶದಿಂ ಪೊರಳಿ ತನು ಸಿತತ್ವಮನೆಯ್ದಲ್: **ತ್ರಿಷಷ್ಟಿಪು,** ೩೬. ೧೬)

**ಸಿತಪಕ್ಷ** – ಶುಕ್ಲಪಕ್ಷ (ಪ್ರಜಾಪತಿ ಸಂವತ್ಸರ ಚೈತ್ರಮಾಸ ಸಿತಪಕ್ಷ ದ್ವಾದಶೀ ತಾರಕಾಪತಿವಾರಂ ಬರೆ ಪಂಚತಂತ್ರಮೆಸೆದತ್ತು ಈ ಧಾತ್ರಿಯೊಳ್: **ಪಂಚತಂತ್ರ,** ೪೪೮)

**ಸಿತಪುಂಡ್ರ** – ನೈದಿಲೆ (ಸಿತಪುಂಡ್ರ ಅಂಭೋಜ ಪಂಡ ಉನ್ಮೀಷಿತ ಕಾಸಾರವಾರಪ್ರಸೂನಾಂಚಿತ .. .. ದ್ರುಮಸಮಿತಿಮಯ ಉದ್ಯಾನ ಶೋಭಾಯಮಾನಂ: **ಶಾಂತೀಶ್ವಪು,** ೬. ೮೧)

**ಸಿತರುಕ್** – ಸಿತದ್ಯುತಿ (ಜಿನಮಾರ್ಗವಾರ್ಧಿ ಸಿತರುಕ್‌ಪ್ರಭೆ ಎಂದೆನೆ ಶೋಭಿಪಾ ಸ್ವಯಂಪ್ರಭೆ; **ಶಾಂತೀಶ್ವಪು,** ೨. ೧೩)

**ಸಿತವನರುಹ** – ಬೆಳ್ದಾವರೆ (ಜಿನಸವನಾಂಬುವಿನೊಳ್ ಭೋಂಕೆನೆ ಚಂದ್ರಂ ತೇಂಕಿ ಹಂಸವೃದ್ಧನಂ ಇನಿಸಂ ನೆನೆಯಿಸಿ ಕೊಳದೊಳಗಣ ಸಿತವನರುಹಲಕ್ಷ್ಮಿಯುಮಂ ಇನಿಸುಂ ತನಗೊಳಕೊಂಡಂ: **ಆದಿಪು,** ೭. ೯೧)

**ಸಿತಸರ್ಷಪ** – ಬಿಳಿಯ ಸಾಸಿವೆ (ಅತಿಸಿತಸರ್ಷಪಶೇಷಾಕ್ಷತಂಗಳಂ ಮಂಗಳಾರ್ಥದಿಂ ಪೆರ್ವಮಡಿರ್ ಸತತೋತ್ಸವದಿಂದಂ ಪರಸಿ ತಳಿದರ್ ಆನಂದಪಟಹಮೊಡನೆಸೆವಿನೆಗಂ: **ಸುಕುಮಾಚ,** ೧೧. ೬)

**ಸಿತಾತಪತ್ರ** – ಬೆಳ್ಗೊಡೆ, ಶ್ವೇತಚ್ಛತ್ರ (ಭೂಭೃತ್ತಿಲಕನ ಸಿತಾತಪತ್ರದ ಕೆಲದೊಳ್ ನರ್ತಿಸಿತು ಧವಳಚಾಮರಯುಗಳಂ: **ಕಾದಂಬ,** ೩. ೨೧)

**ಸಿತಾಶ್ವ** – ಅರ್ಜುನ (ಜವನ ಮಗನಿರ್ಕೆ ಸುಭಟರ ಜವನಿರ್ಕೆ ಸಿತಾಶ್ವನಿರ್ಕೆ ನಕುಲನುಂ ಇರ್ಕೆ: **ಗದಾಯು,** ೭. ೫)

**ಸಿತಿಗಳ** – ನೀಲಕಂಠ (ಇವನೊಳ್ ಸಿತಿಗಳ ಬಾಯ್ಮಿಡುಕದಿರ್ಪುದು ಎನಗಿದು ಚಿತ್ರಂ: **ತ್ರಿಷಷ್ಟಿಪು,** ೨೭. ೧೪೩)

**ಸಿತೇಕ್ಷು** – ಬಿಳಿಯ ಕಬ್ಬು (ಕಂತು ಚಾಪಕ್ಕೆ ಚಿತ್ತದೊಳಾಳ್ದಿರ್ಪ ಸಿತೇಕ್ಷುಮಾಲೆ ವಿಷಮಾತ್ರಂ ಪಂಚಬಾಣಕ್ಕೆ ಮಾಣದೆ ಕಣ್ಣಾಗಿರಿಸಿಟ್ಟ ಮಲ್ಲಿಗೆ .. .. ಎಸೆಗುಂ: **ಚಂದ್ರಪ್ರಪು,** ೧. ೧೦೪)

**ಸಿತೇಕ್ಷುವಾಟಿ** – ಕಬ್ಬಿನ ಗದ್ದೆ (ಕಾಮನುನ್ನತಿಗೆ ಸಹಾಯಮಪ್ಪ ಎನಗದಾರ್ ದೊರೆ ಎಂದು .. .. ಪಿರಿದೊಪ್ಪುವುವಲ್ಲಿ ಸಿತೇಕ್ಷುವಾಟಿಗಳ್: **ತ್ರಿಷಷ್ಟಿಪು,** ೭. ೬)

**ಸಿತೇತರಗತಿ** – [ಸಿತ+ಇತರ+ಗತಿ] ಬಿಳಿಯಲ್ಲದ ನಡವಳಿಕೆ, ದುರ್ನಡತೆ (ಪರಿಕಿಪೊಡವಿಚಾರಿ ಸಿತೇತರಗತಿಯಾದಂ ಪ್ರಭಂಜನಪ್ರಿಯಂ ಅತಿನಿಷ್ಠುರಜಿಹ್ವಂ ಉಷರ್ಬುಧನಂತಿರೆ ದುರ್ಬುಧನಾರೊಳೊಂದಿ ಪಡೆಯಂ ಓವಂ: **ಚಂದ್ರಪ್ರಪು,** ೧. ೪೨)

**ಸಿದಿಗೆ** – ಚಿತೆ (ಸ್ಮರನಿಟ್ಟ ಸಿದಿಗೆಯಂತಿರೆ ಸಿರಿಮಂಚಂ: **ಲೀಲಾವತಿ,** ೧೦. ೬೫)

**ಸಿದುಗು** – ತಡಕಾಡು (ಸಿದುಗು–ಹಸ್ತಾನ್ವೇಷಣೇ: **ಶಬ್ದಮದ,** ೧೫೫)

**ಸಿದ್ದಿಗೆ** – ಚರ್ಮದ ಬುದ್ದಲಿ (ನೀನಪ್ಪೊಡೆ ಬಹುಭಾಷಿ ತುಂಬಿದ ಸಿದ್ದಿಗೆಯಂತೆ ರಥದ ಗಾಲಿಯಂತೆ ಬೆಟ್ಟಿತ್ತಾಗಿರ್ಪೆ: **ಪಂಚತಂತ್ರ,** ೨೧೬ ವ)

**ಸಿದ್ಧ** – ಸಾಬೀತಾದುದು; ಸಿದ್ಧಿ ಪಡೆದವನು; [ಜೈನ] ಪಂಚಪರಮೇಷ್ಠಿಗಳಲ್ಲಿ ಒಬ್ಬ (ಉದ್ಧೂತಲೇಪರ್ ಪ್ರಣುತರ್ ನಿತ್ಯರ್ ಜಗನ್ಮಂಗಳನಿಳಯರ್ ಅನಂತರ್ ತ್ರಿಲೋಕ ಚೂಡಾಮಣಿಗಳ್ ಸಿದ್ಧರ್: **ಆದಿಪು,** ೧. ೨)

**ಸಿದ್ಧಕ್ಷೇತ್ರ** – ಸಿದ್ಧರು ನೆಲೆಸಿರುವ ಸ್ಥಳ (ಕೌಶಂಬಿಗೆ ವಂದು ಉದಯಾವತ ಪರ್ವತದೊಳ್ ಸಿದ್ಧಕ್ಷೇತ್ರಂಗಳೆಲ್ಲಮಂ ಬಂದಿಸಿ ತೀರ್ಥೋಪವಾಸಂಗೆಯ್ದು: **ವಡ್ಡಾರಾ,** ಪು ೭. ಸಾ ೪)

**ಸಿದ್ಧಗುಣ** – [ಜೈನ] ಮುಕ್ತ ಜೀವರಿಗಿರುವ ಎಂಟು ಗುಣಗಳು: ಸಮ್ಯಕ್ತ್ವ, ಅನಂತದರ್ಶನ, ಅನಂತಜ್ಞಾನ, ಅನಂತವೀರ್ಯ, ಸೂಕ್ಷ್ಮತ್ವ, ಅವಗಾಹಿತ್ವ, ಅವ್ಯಾಬಾಧತ್ವ ಮತ್ತು ಅಗುರುಲಘುತ್ವ (ಅರ್ಹದ್ಭಟ್ಟಾರಕರ ಸಿದ್ಧಸ್ವರೂಪಮಂ ಗುಣಂಗಳುಮಂ ಅಱಿದು: **ವಡ್ಡಾರಾ,** ಪು. ೬. ಸಾ. ೨೧)

**ಸಿದ್ಧನಿಲಯ** – ಸಿದ್ಧಕ್ಷೇತ್ರ (ಮೂಱುಲೋಕದಿಂ ಮೇಲೆ ಬೆಳ್ಗೊಡೆಯಿರ್ಪಂತೆವೊಲಿರ್ದ ಸಿದ್ಧನಿಲಯಕ್ಕಾನಂದದಿಂ ಪೋಗಿ: **ಪಂಪರಾ,** ೧೬. ೮೨)

**ಸಿದ್ಧಪದ** – ಮೋಕ್ಷ (ಸಿದ್ಧಪದಮಂ ಕೈಕೊಳ್ವುದಕಡ್ಡಂ ಒಡ್ಡಣಮೊಡ್ಡಿರ್ದಘಸೈನ್ಯಮಂ ತುಳಿಯಿಸಲ್; **ಶಾಂತಿಪು,** ೧. ೭)

**ಸಿದ್ಧಪರಮೇಷ್ಠಿ** – [ಜೈನ] ಪಂಚಪರಮೇಷ್ಠಿಗಳಲ್ಲಿ ಒಬ್ಬ (ವಿದ್ಯೆಗಳಂ ಸಾಧಿಸಿ ಸಿದ್ಧಪರಮೇಷ್ಠಿಗಳಷ್ಟಗುಣಂಗಳಂ ನೆನೆಯುತ್ತಂ: **ಆದಿಪು,** ೧೦. ೧೪ ವ)

**ಸಿದ್ಧರಸ** – ಕೀಳು ಲೋಹಗಳನ್ನು ಚಿನ್ನವನ್ನಾಗಿಸುವ ರಸ (ದೇಹಲೋಹಮೆಂಬೆರಡುಮಂ ಸಿದ್ಧರಸವಿದ್ಯೆಯಿಂ ಸುವರ್ಣಚ್ಛಾಯಂ ಮಾಡಲುಂ ಅಕೂಪಾರಮಂ ಪಾಯಲುಂ ಇಂತಪ್ಪುಪಾಯಂಗಳಂ ಪಲವಂ ಮಾಡಿದರ್: **ಪಂಚತಂತ್ರ,** ೧೦೦ ವ)

**ಸಿದ್ಧಶಿಲೆ** – [ಜೈನ] ಸಿದ್ಧರು ನೆಲಸುವ ಬೆಟ್ಟ (ಸಾವಮ ರಾವಣನೆಂದರ್ ಕೇವಲಿಗಳ್ ಸಿದ್ಧಶಿಲೆಯನುದ್ಧರಿಸಿದ ಶೌರ್ಯಾವಷ್ಟಂಭದಿನದು ಪುಸಿಸಾವಾದುದು ನಿನಗೆ ವೈರಿಶಸ್ತ್ರಾಹತಿಯಿಂ: **ಪಂಪರಾ,** ೧೪. ೪೫)

**ಸಿದ್ಧಶೇಷೆ** – [ಜೈನ] ನಿರ್ಮಾಲ್ಯ ಮುಂತಾದ ಪೂಜಿಸಿದ ವಸ್ತುಗಳು (ಮಾರಮಥನನಂ ಸ್ತುತಿಯಿಸಿ ತ್ರಿಪ್ರಕಟಫಲಪ್ರಾಪ್ತಿಗೆ ಸಂಚಕರಂಗೊಳ್ವಂತೆ ಸಿದ್ಧಶೇಷೆಯನಾಗಳ್ ಕೊಂಡು: **ಆದಿಪು,** ೪. ೨)

**ಸಿದ್ಧಶೈಲ** – ಸಿದ್ಧಶಿಲೆ (ನಿನಗೆ ಸಿದ್ಧಶೈಲಮನೆತ್ತಿದನ ಕೈಯೊಳ್ ಮರಣಮಕ್ಕುಂ: **ಪಂಪರಾ,** ೧೧. ೭ ವ)

**ಸಿದ್ಧಸೇಸೆ** – ಸಿದ್ಧಶೇಷೆ (ಶ್ರೀಜಿನಪತಿಪದಕಮಳವಿರಾಜಿತಮಂ ಸಿದ್ಧಸೇಸೆಯಂ ತಳೆದನಿಳಾಪೂಜಿತಚರಿತಂ ಸಕಳಕಳಾ ಜನ್ಮಾವಾಸನೆನಿಸಿದನಭಿನವಪಂಪಂ: **ಮಲ್ಲಿನಾಪು,** ೧೧. ೧)

**ಸಿದ್ಧಸ್ವರೂಪ** – [ಜೈನ] ಆತ್ಮವು ಎಂಟು ಕರ್ಮಗಳನ್ನು ನಾಶಪಡಿಸಿ ಎಂಟು ಗುಣಗಳನ್ನು ಪ್ರಕಟಪಡಿಸುವುದು (ಅರ್ಹದ್ಭಟ್ಟಾರಕರ ಸಿದ್ಧಸ್ವರೂಪಮಂ ಗುಣಂಗಳುಮಂ ಅಱಿದು: **ವಡ್ಡಾರಾ,** ಪು. ೬. ಸಾ. ೨೧)

**ಸಿದ್ಧಾಂಜನ** – ಸಿದ್ಧರು ತಯಾರಿಸಿದ ಅತಿಮಾನುಷ ಶಕ್ತಿಯುಳ್ಳ ಅಂಜನ (ಬಿಡದೆ ಪೊಡವಡೆ ದಡ್ಡುಗಟ್ಟಿದ ನೊಸಲ್ಗಳಿಂ ಕುಮತಿ ಸಿದ್ಧಾಂಜನದಿನೊಡೆದೊಂದು ಕಣ್ಗಳಿಂ: **ಕಾದಂಬ,** ೮. ೪)

**ಸಿದ್ಧಾಂತ** – ನಿರ್ಣೀತವಾದ ತತ್ವ (ಉಪಪತ್ತಿಯುಕ್ತಂ ಇದನಿಂ ಕಯ್ಕೊಳ್ ನಿನ್ನ ತಂದೆಯೆಂದುದನೆನೆ ಭೂಮಿಪನೆಂದಂ ನಿಮ್ಮಯ ಪೂರ್ವಪಕ್ಷಮೆಮಗಾದುದೇ ವಲಂ ಸಿದ್ಧಾಂತಂ: **ಗದಾಯು,** ೪. ೮)

**ಸಿದ್ಧಾಂತಮಾರ್ಗ** – ಶಾಸ್ತ್ರಗ್ರಂಥ (ತತ್ ಆನನ ಪ್ರೋದ್ಭೂತಂ ಸಿದ್ಧಾಂತಮಾರ್ಗಂ: **ಸುಕುಮಾಚ,** ೫. ೩೯)

**ಸಿದ್ಧಾಂತಿ** – ತತ್ವಪ್ರತಿಪಾದಕ (ನೆಗಟ್ದಿರ್ಹಣಂದಿ ಸಿದ್ಧಾಂಥಿಗಳ ಅಧಿಗತ ಸಕಳ ತತ್ವರಾಯತ ಲವಣಾಬ್ಧಿ ಗಭೀರ ಭೂರಿ ವಾರಿಧಿನಿಗೂಢ ಮಹರುದ್ರ ಸತ್ವಸಿದ್ಧಿ ಸಮೇತರ್: **ಶಾಂತಿಪು,** ೧. ೨೧)

**ಸಿದ್ಧಾಯ** – ನಿಗದಿಯಾದ ಕಂದಾಯ (ಕರಮೆಂಬುದು ಸಿದ್ಧಾಯಂ: **ಅಭಿಧಾವ,** ೩. ೧. ೧೦೨)

**ಸಿದ್ಧಾಯತನ** – ಸಿದ್ಧಕ್ಷೇತ್ರ, ಜಿನಗೃಹ (ಪಣಮಂ .. .. ಕುಡುವುದು ಸಿದ್ಧಾಯತನಕ್ಕೆ ಭವ್ಯಸಮಿತಿಗೆ ಚದುರಂ: **ಸಮಯಪ,** ೭. ೬೭)

**ಸಿದ್ಧಾಯನಿ** – (ಇಕ್ಷುಚಾಪವೆಡಗೈಯೊಳ್ ತೋಱೆ .. .. ಸಿದ್ಧಯನಿ ತಾರ್ಕ್ಷ್ಯಪುತ್ರಿ ನಮಗೀಗೆ ಇಷ್ಟಾರ್ಥಸಂಸಿದ್ಧಿಯಂ: **ಧರ್ಮಪ,** ೧. ೭)

**ಸಿದ್ಧಾರ್ಥ** – ಬಿಳಿಯ ಸಾಸಿವೆ (ಮುನ್ನಮೆ ಸಮೆದಿರ್ದ ಪುರೋಚನಂ ಗೋರೋಚನಂ ಸಿದ್ಧಾರ್ಥ ದೂರ್ವಾಂಕುರ ಮಾತುಳುಂಗ ಶೃಂಗಾರದರ್ಪಣ ಪೂರ್ಣಕಳಶ ಕಳಮಾವೃತಕರ ಪಲ್ಲವೆಯರಪ್ಪ ಪುರಂಧ್ರಿಯರಂ: **ಪಂಪಭಾ,** ೩. ೨ ವ); ಬುದ್ಧ (ಬುದ್ಧಂ ಸಮಂತಭದ್ರಂ ಸಿದ್ಧಾರ್ಥಂ ಮುನಿ ತಥಾಗತಂ ಷಡಭಿಜ್ಞಂ ಶೌದ್ಧೋದನಿ ದಶಬಳಂ ಅತ್ಯುದ್ಧತಮದಮದನವಿಜಯಿ ಶಾಕ್ಯಂ ಸುಗತಂ: **ಅಭಿಧಾವ,** ೧. ೧. ೧೦)

**ಸಿದ್ಧಾರ್ಥವೃಕ್ಷ** – ಕಲ್ಪವೃಕ್ಷ (ಸಿದ್ಧಾರ್ಥವೃಕ್ಷ ಪರಿಭ್ರಾಜಿತಮಪ್ಪ ಮಧ್ಯಪ್ರದೇಶಮಂ ಏಕಯೋಜನವಿಷ್ಕಂಭಮುಮಾಗಿ: **ಆದಿಪು,** ೧೦. ೩೩ ವ)

**ಸಿದ್ಧಿತ್ರಯ** – ಮೂರು ಸಿದ್ಧಿಗಳು (ಅಧಿಗತಸಿದ್ಧಿತ್ರಯನುಂ ಉಪಾಯಚತುಷ್ಟಯಪ್ರಯೋಗಪ್ರವೀಣನುಂ ವಿನಿರ್ಜಿತ ಪಂಚೇಂದ್ರಿಯಪ್ರಭಾವಕನುಂ ಅನುಗತ ಷಾಡ್ಗುಣ್ಯನಯನನುಂ .. .. ವಸುಂಧರಾವಳಯಮಂ .. .. ನಿಜಭುಜಾಗ್ರದೊಳ್ ತಾಳ್ದು: **ಪಂಚತಂತ್ರ,** ೬೫ ವ)

**ಸಿದ್ಧಿಸು** – ನೆರವೇರು (ಸಾಮಂ ಸಿದ್ಧಿಸಿದೊಡೆ ವಿಜಯವಹುದು ಸೋಲವನ್ನೆದನು: **ಪಂಚತಂತ್ರ,** ೨೩೪, ಶ್ಲೋಕ ೧೧೬ ಟೀಕೆ)

**ಸಿಪ್ಪಡಸು** – ಚಿಪ್ಪು ಆವರಿಸು (ಒಡನೆ ದಿಗಂತದಂತಿಗಳ ಕೋಡ ಮೊದಲ್ಗಳೊಳೆಯ್ದೆ ಪೊಕ್ಕು ಸಿಪ್ಪಡಸಿದ ಮಾಟ್ಕೆಯಾದುವು: **ಪಂಪಭಾ,** ೬. ೩೬

**ಸಿಪ್ಪಿಗ** – ಬಟ್ಟೆ ಹೊಲಿಯುವವನು, ದರ್ಜಿ (ಸಿಪ್ಪಿಗನಂತೆ ಪೊಲಿವರ್ ಕಮ್ಮಾಱನಂತೆ ಕಾಸಿಬಡಿವರ್ ಮೇದನಂತೆ ಸೀಳ್ವರ್: **ಧರ್ಮಾಮೃ,** ೩. ೪೩ ವ)

**ಸಿಪ್ಪಿಡು** – ಚೀಪು (ಸೊಪ್ಪುಸವಡಾಗದೆಳೆಸಟ್ಟಿಪ್ಪದೆ ಮೊಗಮಿರಿದು ಕಾರ್ದು ಚಪ್ಪಲರ್ವಿನೆಗಂ ಸಿಪ್ಪಿಟ್ಟು ಕರೆದು ಕೊಂಡುವು ಸಪ್ಪದಮುಪ್ಪಳದಿನೊಱೆವ ನಱುವಂಡುಗಳಂ: **ಲೀಲಾವತಿ,** ೯. ೮೬)

**ಸಿಪ್ಪು** – ಚಿಪ್ಪು (ಚಂದನಾನುಲೇಪಂ ತೀವಿದ ಸಿಪ್ಪಂ ಪಿಡಿದು ಕಯ್ಯೊಟ್ಟು ನಡೆವ ಪಡಿಯಱತಿಯುಂ: **ಕಾದಂಸಂ,** ೫. ೪೩ ವ); ಭರಣಿ (ಪೊನ್ನ ಬೆಳ್ಳಿಯ ಪದ್ಮರಾಗದ ಪಚ್ಚೆಯ ಗಿಳಿಯ ಕೋಗಿಲೆಯ ಕೊಂಚೆಯ ಅಂಚೆಯ ಕುಂತಳಿಕೆಯ ಮಾಟ್ಕೆಯ ಸಿಪ್ಪುಗಳೊಳ್ ತೀವಿ: **ಪಂಪಭಾ,** ೪. ೮೭ ವ); ತಲೆಬುರುಡೆ (ಪಳವದ ತಿವಳಯ ಜುಂಕದ ಮೊಳಸಿನ ಜೇಕಿರದ ಸಿವಿಱ ಸಿಪ್ಪಿನ ಲಯದಿಂದ ಎಳಲದೆ ಕುಣಿದರ್: **ಅಜಿತಪು,** ೫. ೩೨)

**ಸಿಬಿಗೆ** – ಪಲ್ಲಕ್ಕಿ (ಅಯ್ನೂರ್ವರ್ ಅರಸಿಯರ್ಕಳುಂ ಪೆಂಡವಾದ ಅಗ್ಗಳದ ಸೂಳೆಯರ್ಕಳುಂ ಬೆರಸು ವೇಸರಿಗಟ್ಟಿಗಳುಂ ಪಿಡಿಗಳುಂ ಸಿಬಿಗೆಗಳುಮಂ ಏಱೆ: **ವಡ್ಡಾರಾ,** ಪು ೮೦, ಸಾ. ೧೦)

**ಸಿಬ್ಬ** – ಆನೆಯ ಮೈಮೇಲಿನ ಮಚ್ಚೆ (ನಭಮೆಂಬ ಮದಸ್ತಂಭೇರಮಮಂ ಆಗಳ್ ಸಿಬ್ಬಂಬೊಯ್ದವೊಲ್ ಅಡರೆ ತಿಱುಗಿದುವು ತಾರಗೆಗಳ್: **ಪಂಪರಾ,** ೧೧. ೧೮೩)

**ಸಿರಣವಟ್ಟೆ** – ಕುಸ್ತಿಯ ಒಂದು ಪಟ್ಟು (ಎಸೆವ ಮುಹಗ್ಗಳಂ .. .. ಚಟ್ಟುಸಿರಣವಟ್ಟೆ ಬಾಹುದಣೆ ಖಮ್ಮರಿ ಕತ್ತರಿ ಖೋಡವಂಕುಶಂ ಸಸಿಕುವೆನಿಪ್ಪ ಜೆಟ್ಟಿಗಳ ನಚ್ಚಿನ ಬಿನ್ನಣಮೊಪ್ಪೆ ಕಾದಿದರ್: **ಚಂದ್ರಪ್ರಪು,** ೫. ೭೮)

**ಸಿರಿ** – [ಶ್ರೀ] ಸಂಪತ್ತು (ಅನಿಮಿಷ ಚಾಪದಂತೆ ಸಿರಿ ಶಾರದನೀರದಕಾಂತಿಯಂತೆ ಯೌವನದೆಸಕಂ ತೃಣಾಗ್ರಗತ ವಾಃಕಣಿಕಾಗಣದಂತೆ ಸಂದ ಜೀವನಂ: **ಪಂಚತಂತ್ರ,** ೧೧೬); ಲಕ್ಷ್ಮಿ (ಸಿರಿ ಸಾರ್ತರೆ ಸಾರ್ವುದು ಅದರ್ಕೆ ಸಂದೆಯಂಬಡದೆ ಜಲಕ್ಕನೆ ಈಗಳ್ ಅಱೆದೆಂ ಸಿರಿ ಕಳ್ಳೊಡವುಟ್ಟಿತೆಂಬುದಂ: **ಪಂಪಭಾ,** ೨. ೪೯); ಚೆಲುವು [ಜಲಜಲನೆ ಒಟ್ಟುತಿರ್ಪ ಪರಿಕಾಲ್ ಪರಿಕಾಲೊಳ್ ಅಳುರ್ಕೆಗೊಂಡ ನೈದಿಲ ಪೂ.. .ಸಿರಿ ನೋಡುಗುಮಾ ವನಾಂತರಾಳದೊಳ್: **ಪಂಪಭಾ,** ೧. ೫೨)

**ಸಿರಿಕಂಡ** – [ಶ್ರೀಖಂಡ] ಶ್ರೀಗಂಧ (ಸುತ್ತಿದ ಸಿರಿಕಂಡದ ಉರುಳಿಯಂ ಪತ್ತಿಸಿದ ಮೃಣಾಳನಾಳವಲಯದಿಂ: **ಕಾದಂಸಂ,** ೫. ೭೮ ವ)

**ಸಿರಿಕಂಡವೆಟ್ಟು** – ಮಲಯ ಪರ್ವತ (ಕೆಲಬಲದ ಕಿಱುವೆಟ್ಟಿನೊಳ್ ಪುಟ್ಟಿದ ಬೇವು ಬೊಬ್ಬುಲಿಗಳಂತನ್ನಂತೆ ಮಾಟ್ಟಿ ಸಿರಿಕಂಡವೆಟ್ಟಿನೊಳ್ ಪುಟ್ಟಿಯುಂ: **ಕಬ್ಬಿಗಕಾ,** ೪೫ ವ)

**ಸಿರಿಖಂಡ** – [ಶ್ರೀಖಂಡ] ಶ್ರೀಗಂಧ (ಕೊರಳೊಳ್ ಕಟ್ಟಿದ ಮಾಲೆಯ ಸಿರಿಖಂಡದ ತಳ್ಕುವೆರಸು .. .. ಕುಳ್ಳಿರ್ದು ಸರುಗನುಣಿ ಕಂಡುದಱಿಂ: **ಆದಿಪು,** ೧೫. ೪೨)

**ಸಿರಿಗಂಧ** – ಸಿರಿಕಂಡ (ಕತ್ತುರಿ ಸಿರಿಗಂಧಗಳಣ್ಪು ರಾಮಕೃಷ್ಣರೊಳೆಸೆಗುಂ: **ಜಗನ್ನಾವಿ,** ೬. ೨೨)

**ಸಿರಿಗನ್ನಡಿ** – ಶ್ರೇಷ್ಠವಾದ ಕನ್ನಡಿ (ಸಿರಿಗನ್ನಡಿ ಕನ್ನಡಿಪುದಾದುದಿಂದು ಶ್ರೀಯಂ: **ಆದಿಪು,** ೭. ೧೦)

**ಸಿರಿಗುವರ** – ಮನ್ಮಥ (ಸ್ಮರಂ ಅತನು ದರ್ಪಕಂ ಶಂಬರ ಶೂರ್ಪಕವೈರಿ ಕುಸುಮಚಾಪಂ ಶೃಂಗಾರರಸೈಕಯೋನಿ ಕಾಮಂ ಸಿರಿಗುವರಂ ರತಿಮನೋಹರಂ ಮಧುಮಿತ್ರಂ: **ಅಭಿಧಾವ,** ೧. ೧. ೨೮)

**ಸಿರಿತಾಳೆ** – [ಶ್ರೀತಾಲ] ಒಂದು ಬಗೆಯ ತಾಳೆಯ ಮರ (ಕಮ್ಮರದಾರ ಕೇರ ನೇಳಲ ಸಿತಿತಾಳೆಯಿಂದುಗುಳದ ನೆಲ್ಲಿಯನೀವದ ಸೋಲೆಯಾಲದಿಂ .. .. ಕಟ್ಟಿಲಿಸುತಿರ್ದುದು ಕಾನನವೆತ್ತ ನೋಟಪ್ಪೊಡಂ: **ಲೀಲಾವತಿ,** ೬. ೨೧)

**ಸಿರಿಪರ್ವತ** – ಶ್ರೀಶೈಲ (ಪರಿತಂದು ಸಯ್ತು ಪೆರ್ದೊಱೆ ಸಿರಿಪರ್ವತದಲ್ಲಿ ತೊಲಗಿದೊಡೆ ಕಂಡು ಮಹೇಶ್ವರಂ .. .. ಪೀರ್ದು ಪರಿದುದೆಂಬರ್ ಮೂಢರ್: **ಸಮಯಪ,** ೧೨. ೧೫)

**ಸಿರಿಯರಸ** – ವಿಷ್ಣು (ದರೆಯಂ ಪೊತ್ತಾನೆಯ ಕೈಗೊರೆಯೆನೆ ಕಡುವೆಟ್ಟಿತಾದ ನಾಲ್ಕುಂ ತೋಳುಂ ಕರಮೆಸೆದಿರೆ ಕುಳ್ಳಿರ್ದಂ ಸಿರಿಯರಸಂ ಕಾರ ಮುಗಿಲ ರೂವೆಂಬಿನೆಗಂ: **ಕಬ್ಬಿಗಕಾ,** ೧೨೯)

**ಸಿರಿಯೆಱೆಯ** – ಸಿರಿಯರಸ (ಸಿರಿಯೆಱೆಯಂ ಮಾದೇವಂ ಸರಸತಿಯೆಱೆಯರ್ಕಳ ಅಡಿಗಳೆಂಬೀ ಕೆಂದಾವರೆಗಳ್ ಪೊರೆಗೆಮ್ಮಂ ಪೊಸಸಿರಿಗಂಪಿಂ ಪೞೆಮೆವೞೆಯಂ ಎಂತು ಅಂತೆ ಒಲವಿಂ: **ಕಬ್ಬಿಗಕಾ,** ೨)

**ಸಿರಿವಂತ** – ಹಣವಂತ (ಏಂತು ಪೊಲ್ಲದರುಮೊಳ್ಳಿದರುಂ ಒಳರ್ ಅಂತು ತಿರಿಕರುಂ ಸಿರಿವಂತರುಂ ಒಳರ್: **ಧರ್ಮಾಮೃ,** ೯. ೪೧ ವ)

**ಸಿರಿವಂತಿಕೆ** – ಹಣವಂತಿಕೆ (ಸಿರಿಯಂ ಪರಿಭವಿಸಿ ತಂದು ಪೊಸಯಿಪ ಸಿರಿವಂತಿಕೆಯಿಂದ ಕಾಲೊಳೊದೆದಪರೆನಿತುಂ: **ಶಾಂತಿಪು,** ೧೦. ೧೭)

**ಸಿರಿವಂತಿಗೆ** – ಹುರಿಯೋಡು, ಬಾಣಲಿ (ಆ ಸಿರಿವಂತಿಗೆಯಂ ತೊಱೆವಂತಿರೆ ಖಚರಶ್ರೀಯನುಗುಳಿದನಾ ಜಿನಚಂದ್ರಂ: **ಶಾಂತಿಪು,** ೭. ೬೯)

**ಸಿರಿವೆಣ್** – ಲಕ್ಷ್ಮಿ (ಸಿರಿವೆಣ್ಣಂ ದೂವೆಯೊಟ್ಟಿಂಗೆಣೆಯೆನೆ ಬಗೆದಂ: **ಚಂದ್ರಪ್ರಪು,** ೧೦. ೧೨೮)

**ಸಿರಿವೆಣ್ಣರಸ** – ಲಕ್ಷ್ಮಿಯ ಒಡೆಯ, ವಿಷ್ಣು (ತೊಳಗುವ ಸಂಕುಂ ಪಾಱುಂಬಳೆ ನೇರ್ಪಡೆ ಮರ್ದನೇಱೆ ಬಂದೊಲವಿಂ ಪಜ್ಜಳಿಪ ಮುಗಿಲೆಡೆಯೊಳಿರ್ದಂ ತೊಡವನಾಂತ ಸಿರಿವೆಣ್ಣರಸಂ: **ಕಬ್ಬಿಗಕಾ,** ೨೨೮)

**ಸಿರಿಸ** – ಶಿರೀಷಪುಷ್ಪ, ಬಾಗೇ ಹೂ (ಸಿರಿದಾಮಕೋಮಲೆಯರ ಭುಜಲತೆಗಳೊಳ್ ಪಸರಿಸಿಯುಂ ಘನಸ್ತನಂಗಳೊಳ್ ಎಡಪಿಯುಂ .. .. ನಾಟ್ಯರಸಮೆ ತೀವಿ ತುಳುಂಕುವಲ್ಲಿ: **ಆದಿಪು,** ೭. ೧೨೬ ವ)

**ಸಿರಾ[ರೆ]** – ನರ (ಸಿರಾಪ್ರಚಯಂ ವಸೆ: **ಅಭಿಧಾವ**. ೧. ೧೨. ೨೮)

**ಸಿರುಂಬುಳಾಡು** – ಚೆಲ್ಲಾಟವಾಡು (ಗಂಧ ಸಿಂಧುರಮಂ ಸೀಳ್ದು ಸಿರುಂಬುಳಾಡಿ ನಲಿವುತ್ತಿರ್ದತ್ತು ಕಂಠೀರವಂ: **ತ್ರಿಷಷ್ಟಿಪು**, ೨೭. ೩೨)

**ಸಿರೆ** – ಹಣ್ಣಿನ ನಾರು (ಬಿರಿಯಲ್ ಪೊಂಗಿದ ಪಣ್ಗಳ ಸಿರೆಯಱದಲ್ಲಿರಿಸಿ ಚಂಚುಪುಟದಿಂ ಸವಿಯಂ ಬರತೆಗೆದು .. .. ಮೆಱೆದುವಾದ್ರುಮದೊಳ್ ಶುಕನಿಕರಂ: **ಗಿರಿಜಾಕ**, ೨. ೩೮); ಮೆಣಸಿನ ಬಳ್ಳಿ (ತಳ್ತಡರ್ದ ಲತೆಗಳುಂ ಕೈವಿಟ್ಟ ಸಿರೆಗಳುಂ ಸೋರ್ವಸೋನೆಗಳುಂ ಒಱೆದುಗುವ ಪನಿಗಳುಂ .. .. ಎಸೆಯೆ: **ಲೀಲಾವತಿ**, ೬. ೬೦ ವ)

**ಸಿರ್ಕು** – ಅಡ್ಡಿಯುಂಟುಮಾಡು (ನಳಿನೀಸಂಪತ್ತಿಸೂತಂ ಪೆಱರುಡುಗೆ ಹಯಂ ಜಾಱೆ ತೋಳ್ವಾಱೆ ತೇರ್ ವ್ಯಾಕುಳ ಚಕ್ರಮ ಸಿರ್ಕೆ ಶೃಂಗಾಗ್ರದಿನಿೞಿವೆಡೆಯೊಳ್ ಪದ್ಮಿನೀಕೋಶದೇಶಾವಳಿಯಂ ಕೈಕೊಂಡು ಬೆಂಬತ್ತಿಸೆ: **ಅನಂತಪು**, ೭. ೬೨); ಸೆರೆಯಾಗು (ಸಿರ್ಕು, ಸಿಲ್ಕು–ಪ್ರತಿಬಂಧೇ: **ಶಬ್ದಮದ**, ಧಾ ೭೪)

**ಸಿರ್ಪು** – ಚಿಪ್ಪು (ಇದು ಬಾಟಿಸ್ಸೊಸರ್ ಇದು ಕಟಿಲ್ ಇಂತಿದು ರುಚಿವೆತ್ತಿರ್ದ ಪಾನಂ ಇದು ಮಜ್ಜಿಗೆ ತಾನಿದು ಶಿಖರಿಣಿ ಎನುತುಂ ತಿಂಬಿದಿಂಬಿ ತಂದೆಱದರಬಲೆಯರ್ ಸಿರ್ಪುಗಳಿಂ: **ಸುಕುಮಾಚ**, ೧೧. ೩೧)

**ಸಿಲ್ಕಿಸು** – ಸಿಕ್ಕಿಬೀಳುವಂತೆ ಮಾಡು (ಮಿಳಿರ್ವ ಬಂಬಲ್ಗುರುಳೆಂಬ ತೊಡಂಕುವಲೆ ಬಸಂತನ ಕೆಳೆಯನೆಂಬೆರಲೆಯಮ ಸಿಲ್ಕಿಸೆಯುಂ: **ಕಬ್ಬಿಗಕಾ**, ೯೭ ವ)

**ಸಿಲ್ಕು** – ಸಿಕ್ಕಿಹಾಕಿಕೊ (ಸಿರ್ಕು, ಸಿಲ್ಕು–ಪ್ರತಿಬಂಧೇ: **ಶಬ್ದಮದ**, ಧಾ ೭೪)

**ಸಿವ** – ಶಿವ (ಈಗಳ್ ಸಿವನೆಂಬ ದುಟ್ಟಗೊರವಂ ಮಂಜುವೆಟ್ಟಮಂ ಗೊಟ್ಟಂ ಮಾಡಿ ಕಿತ್ತಡಿಗಳಂ ಮರುಳ್ವಡೆಗಳಂ ಕೂಡಿಕೊಂಡು .. .. ಮೆಯ್ಯಱಯದಿರ್ಪಂ: **ಕಬ್ಬಿಗಕಾ**, ೧೧೪ ವ)

**ಸಿವಡಿ** – ಲೆಕ್ಕದ ಪುಸ್ತಕ (ಕೌಂಕುಟಿ ಸಿವಡಿಯ ಕೆಲದಡಪದ ಪಿಡಿದ ಕೊಡೆಯಂ ಪಟಾಟೋಪದಾಡಂಬರಂ ಅಗುರ್ವುವಡೆಯೆ: **ಲೀಲಾವತಿ**, ೯. ೫೪ ವ)

**ಸಿವನ್ನಿ** – ಸಿವಹೊನ್ನಿ ಮರ, ತೇಗದ ಮರ (ಅರರೊಳಿ ತಳಿಸಿನ ಸರಿಸದ ಬೇಳದುರಿಯ ಬಿಳಿಲ ಸಿವನ್ನಿಯ ಕೋಳ್ಮರದಾರ ತಱಯ ಬಸುರಿಯ ದುರಿಕ್ಷ ಕಕ್ಷಾಂತರಾಳದಿಂ ಪುದಿದಿರ್ಕುಂ: **ವರ್ಧಮಾಪು**, ೫.೫೦)

**ಸಿವಿಗೆ** – [ಶಿಬಿಕಾ] ಪಲ್ಲಕ್ಕಿ (ಸಿವಿಗೆ ತೞದುಱುಗಲೊಡನಿಕ್ಕುವ ಕುಂಚಂ ಲೀಲೆವಡೆಯೆ ಚೆಲ್ವೆಸೆದುದು ಷಣ್ಣವತಿ ಸಹಸ್ರಾಂತಃಪುರಂ: **ಆದಿಪು**, ೧೧. ೩೯)

**ಸಿವುಱು** – ಕೆರೆ (ದಕ್ಷಿಣಕಟಮನೆ ಸಿವುಱುವ ದಕ್ಷಿಣರದನದೊಳೆ ಹಸ್ತಮಂ ಪೇಱುವ ಚೆಲ್ವು ಈಕ್ಷಣಹರಂ: **ಆದಿಪು**, ೧೨. ೫೯); ಸಿಬಿರು (ತೆಂಗಿನ ತಿರುಳೆಲೆಯ ಸುಲಿಕೆಯೊಳಂ ಕೇದಗೆಯ ಬೆಳ್ಸುೞಯ ಸಿವುಱೊಳಂ ಬೇಱವೇಱ ಸುತ್ತಿ ಸೊವಡಿಂಗೆಱಗಿದ ಮಱದುಂಬಿಯ ಮುದ್ರೆಯಾಗೆ: **ಮಲ್ಲಿನಾಪು**, ೫. ೪೦ ವ)

**ಸಿವುಱಿಸೀೞ್** – ಸಿಬಿರು ಉಂಟಾಗು (ಅವನೀಭರ್ತಾರನ ಚಿತ್ತವಜ್ರಮಂ ತಾಗಿ ತಾಗಿ ತರಳಾಪಾಂಗಂ ಸಿವುಱದ್ದಂತೆವೊಲೆಸೆದುವು ಯುವತಿಯ ನವಕರ್ಣಪೂರ ಕುವಲಯದಲರ್ಗಳ್: **ನೇಮಿನಾಪು**, ೩. ೨೬)

**ಸಿಸಿರ** – ಶಿಶಿರ (ಸಿಸಿರಮನೆ ಪಿಡಿದು ಪರಕೆಗೆ ಬಸಂತಂ .. .. ಕುಸುರಿದಱದ ಅಡಗಿನಂತೆವೊಳ್ ಎಸೆದುವು .. .. ಮುತ್ತದ ಮುಗುಳ್ಗಳ್: **ಯಶೋಧಚ**, ೧. ೩೭)

**ಸಿಸು** – [ಶಿಶು] ಮಗು (ಸಿಸುವಂ ತಾಯೊಕ್ಕಲಿಗಂ ಸಸಿಯಂ ನೆಲನಂ ಮಹೀಭುಜಂ ಕಡುಲೋಭಂ ಕಸವರಮಂ ಭೀತಂ ತನ್ನಸುವಂ .. .. ರಕ್ಷಿಸುವಂದದಿ: **ಧರ್ಮಾಮೃ**, ೩. ಮತ್ತು ೩ ವ)

**ಸಿೞುಂಬುಳಾಡು** – ಚೆದುರಿಸು, ಚೆಲ್ಲಾಪಿಲ್ಲಿ ಮಾಡುರ್ನಖಚಂಚುವಿಂ ಕಡಿದು ಖಂಡಿಸಿ ಸೀೞ್ದು ಸಿೞುಂಬುಳಾಡೆ: **ಕರ್ಣನೇಮಿ**, ೧೨. ೨೪೬)

**ಸೀ** – ಸೀದುಹೋಗು, ಹೆಚ್ಚು ಉರಿಯಿಂದ ಕರಿಕಾಗುವುದು (ಅಗ್ಗದ ಕಂತು ಸೀದ ಗಱಯಂತಾದಂ ತಪೋರಾಜ್ಯ ತರತ್ತರಯೋಗೀಶ್ವರ ಬಾಲಚಂದ್ರಮುನಿನಾಥ ಜ್ಞಾನನೇತ್ರಾಗ್ನಿಯಿಂ: **ಮಲ್ಲಿನಾಪು**, ೧. ೧೯)

**ಸೀಂಟಿ ಕಳೆ** – ಒರೆಸಿ ಹಾಕು, ತೊಡೆದು ಹಾಕು (ಪೂರ್ವಾವನೀಪಾಲಪ್ರಶಸ್ತಿಗಳೊಳದೊಂದುಮಂ ದಂಡರತುನದಿಂ ಸೀಂಟಿ ಕಳೆದು: **ಆದಿಪು**, ೧೩. ೭೧ ವ)

**ಸೀಂಟು** – ತೊಳೆ, ಒರಸು (ನುಡಿವಾಗಳ್ ಉಗುಟಿ ಸೀಕರಂಗಳ್ ತಮ್ಮ ಮುಂಗೆಯ್ಯ ಮೇಗೆ ಬಿಱ್ದೊಡೆ ಬೆರಲಿಂ ಸೀಂಟಿ: **ವಡ್ಡಾರಾ**, ಪು ೬೯, ಸಾ ೨೫); ನಾಶಮಾಡು (ಇಂದ್ರಾದ್ಯರಂ ಸೀಂಟುವ ಯಕ್ಷಾಧೀಸನಂ ಕಟ್ಟುವ .. .. ಅಗುರ್ವಂ ತೋಱದಪ್ಪೆಂ: **ಜಗನ್ನಾವಿ**, ೧೩. ೩೮)

**ಸೀಕರ** – ತುಂತುರು, ಹನಿ (ನುಡಿವಾಗಳ್ ಉಗುಟಿ ಸೀಕರಂಗಳ್ ತಮ್ಮ ಮುಂಗೆಯ್ಯ ಮೇಗೆ ಬಿಱ್ದೊಡೆ ಬೆರಲಿಂ ಸೀಂಟಿ: **ವಡ್ಡಾರಾ**, ಪು ೬೯, ಸಾ ೨೫)

**ಸೀಕರಿವೋಗು** – ಸೀದುಹೋಗು (ನೋಡಿದ ಮಾಮರಂ ಕೊರಗಿ ಸೀಕರಿವೋದುದು ಪೊಕ್ಕ ಪೂಗೊಳಂ ಪಾಡಱದ್ಧೆದೆ ಕಾಯ್ದು ಕುದಿಗೊಂಡುದು .. .. ನೀಱಯ ಮೈಯ ಬೆಂಕಿಯಿಂ: **ಕಬ್ಬಿಗಕಾ**, ೨೪೬)

**ಸೀಗುರಿ** – ಕೊಡೆ (ಚೇಟಿಕೆ ಬೀಸುವ ಕುಂಚಂ ಎಯ್ದೆ ಮೆಯ್ದೋಱುವ ಗಾಡಿ ಕಾಂಚನದ ದಂಡದ ಸೀಗುರಿ ನೋಟಿಪ್ಪೊಡೆ ಆರುಮಂ ಮಾಱ ಮನೋಜನ ಒಡ್ಡು ಎನಿಸಿದರ್: **ಪಂಪಭಾ**, ೯. ೧೦೦); ಚಾಮರ (ಕೊಡೆ ತಱ ತಳ್ತ ಸೀಗುರಿ ಕರೀಂದ್ರಘಟಾಳಿ ತುರಂಗಸೈನ್ಯಂ ಉರ್ಕುಡುಗದೆ ಬರ್ಪ ನಾಯಕಬಲಂ: **ಆದಿಪು**, ೪. ೯೨); ಒಂದು ಬಗೆಯ ಮರ (ಸೀಗುರಿಯೊಡವಾರು ಬನ್ನಿ ಕಲುವಾದರಿ ಪಾದರಿಯಾದಿಯಾದ ಪೆರ್ಮರಗಳ ಕಾಡೊಳೈತರುಮಿರ್ದರು ವೈದ್ಯತನೂಜರಿರ್ವರುಂ: **ಪುಣ್ಯಾಸ್ರ**, ೩. ೭೩)

**ಸೀತ** – ಚಳಿ (ಮಾಗಿಯ ದಿವಸಂ ರಿಸಿಯರ್ಕಳ್ ಸೀತದೊಳ್ ಸೆಡೆಗುಂ: **ವಡ್ಡಾರಾ**, ಪು. ೧೯೧, ಸಾ. ೨೬)

**ಸೀತೆ** – ಸೀತಾದೇವಿ, [ಉತ್ತ] ಭೂಮಿ (ಸೀತೆಯ ದೂಸಱಂದಟಿದ ರಾಣನಂತಿರೆ ನೀನುಂ ಈಗಳೀ ಸೀತೆಯ ದೂಸಱಂದಟಿಯಲಾಟಿಸಿದ್ಯೆ: **ಪಂಪಭಾ**, ೯. ೪೯)

**ಸೀತ್ಕರಿಸು** – ಸಂತೋಷದಿಂದ ಉದ್ಗರಿಸು (ಸೀತ್ಕರಿಸಿ ಕರತಲದಿನೊರಸೆ ಮೊಲೆಗಳನಂದು: **ಲೀಲಾವತಿ**, ೧೧. ೧೧)

**ಸೀತ್ಕಾರ** – ಭಾವಾಭಿವ್ಯಕ್ತಿಯ ಧ್ವನಿ (ರತಿಯಿನಿದಂ ಕಿವಿಗೀವುದೆ ಬಧಿರಂಗೆ ಸುಂದರೀಸೀತ್ಕಾರಂ: **ಮಲ್ಲಿನಾಪು**, ೧. ೩೬)

**ಸೀಧು** – ಮದ್ಯ (ಮಧು ಸೀಧು ಕಟು ಸೀಧು ಪೋ ಪುಳಿತ ಕಳ್ಳಲ್ತುಂ ಕರಂ ಕಯ್ದುಬರ್ಪುದು: **ಪಂಪಭಾ,** ೪. ೮೮, **'ಮಧು ಸೀಧು'** ಡಿಎಲ್ಎನ್ ಒಪ್ಪಿದ ಪಾಠ)

**ಸೀನ್** – ಮೂಗಿನಿಂದ ರಭಸವಾಗಿ ಉಸಿರು ಬರು (ಪುಟ್ಟಿದಾಗಳೆ ಮಾತಾಪಿತೃಯುಗಲಂಗಳ್ ಸೀಂತುಂ ಆಗುಳಿಸಿಯುಂ ಪರಾಸುಗಳಾಗೆ: **ಆದಿಪು,** ೫. ೪೧ ವ); ಮೂಗಿನಿಂದ ರಭಸವಾಗಿ ಬರುವ ಉಸಿರು (ಸೀನಕ್ಕುಂ ಕ್ಷುತ್ಕ್ಷವಂ: **ಅಭಿಧಾವ,** ೧. ೧೨. ೩೫)

**ಸೀಪು** – ಸಿಹಿತನ (ವಿಷದ ಕಯ್ಪೆಯುಂ ಸೀಪುಂ ಮೂರ್ಖನ ನಗೆಯುಂ ಮುನಿಸುಂ ಪೊಲ್ ಎಂತು ಅಂತೆ ಮಿರ್ಥ್ಯಾದೃಷ್ಟಿಯ ನೆಗಟ್ಟೆಯುಂ ಒಂದು ಪೊಲ್: **ಧರ್ಮಾಮೃ,** ೯. ೯೦ ವ)

**ಸೀಮಂತ** – ಬೈತಲೆ (ಸಿಂದೂರಪಾಂಸೂತ್ಕರದಿಂ ಸೀಮಂತಸಿಂದೂರದ ವಿರಚನೆಯಂ ಕೂಡೆ ಮಾಡುತ್ತುಂ: **ಆದಿಪು,** ೧೧. ೧೫೫)

**ಸೀಮಂತಿನಿ** – ಹೆಂಗಸು (ವಧು ನಾರಿ ಸೀಮಂತಿನಿ ಯೋಷಿದ್ವಾಮೆ ಕೇವಳಂ ಸ್ತ್ರೀನಾಮಂ: **ಅಭಿಧಾವ,** ೧. ೧೧. ೧)

**ಸೀಮಂತೋನ್ನಯನ** – ಬಸಿರಿಗೆ ಬೈತಲೆ ತೆಗೆಯುವ ಶಾಸ್ತ್ರ, ಷೋಡಶ ಸಂಸ್ಕಾರಗಳಲ್ಲಿ ಒಂದು (ನಿಜನಾಥಕಲ್ಪಿತ ಪುಂಸವನದ ಸೀಮಂತೋನ್ನಯನಾದಿ ಮಂಗಳಂಗಳನೊಳಕೆಯ್ದು: **ಚಂದ್ರಪ್ರಪು,** ३. ೯೨ ವ)

**ಸೀಮಾವಿವಾದ** – ಗಡಿಕಲಹ (ಸೀಮಾವಿವಾದದಿಂ ತದ್ಭೂಮಿಜರೋರ್ರೋರ್ವರಂ ಪಳಂಚಲೆವೆಡೆಯೊಳ್ ಸೀಮೆಗಳ ತೊಡರಿಸಿ ಸೀಮಂಕರನೆಂಬೊಂದು ಪೆಸರಂ ಪಡೆದಂ: **ಆದಿಪು,** ೬. ೫೭)

**ಸೀಮಾವು** – ಇಮ್ಮಾವು (ಪುಂಖಾನುಪುಂಖಮೆಂಬ ಸೀಮಾವಿನ ದೋರೆಗಾಯ್ಗಳಂ ಗೊಲೆವೆರಸು ನೆಲಕ್ಕೆ ಬೀಟಿಲೀಯದೆ .. .. ಮನೋಹರಿಗೆ ಕುಡತಿರ್ಪುದುಂ: **ಧರ್ಮಾಮೃ,** ೧३. ೧೮ ವ)

**ಸೀಮೆ** – ಎಲ್ಲೆ (ಅವಧಿ ಸೀಮೆ ಸೀಮಾಘಾಟಂ: **ಅಭಿಧಾವ,** ೧. ೧೦. ೧)

**ಸೀಯನೆ** – ಸಿಹಿಯಾಗಿ (ಸೀಯನಪ್ಪ ರಸಗೇಯಂ ಚಿತ್ತಮಂ ತಾಗೆ: **ಲೀಲಾವತಿ,** ३. ೬೧)

**ಸೀಯಬಾರ** – ಹೆಬ್ಬಾಗಿಲು (ತವಂಗದ ಅಂಕದ ಕಳಂ ಓವರಿ ಸೀಯಬಾರ ಅಂತಃಪುರಮುಯ್ಯಲ್ ಕೃತಕಶಿಖರಿ ಉದ್ಯಾನವನಂ: **ಪುಷ್ಪದಂಪು,** ೬. ೨३)

**ಸೀರ್** – ಹೇನಿನ ಮೊಟ್ಟೆ (ಚಾರಿತ್ರದಲ್ಲಿ ತಪಗಳೊಳಾರಿಂದಂ ಪಿರಿಯನೆನಿಪ ಪರಲಿಂಗಿಯುಮಂ ಸೀರಿಂದೆ ಕಷ್ಟಂ: **ಸಮಯಪ,** ೪. ೧३೫)

**ಸೀರ** – ನೇಗಿಲು (ಹಳ ಸೀರಾಭಿಖ್ಯಂ: **ಅಭಿಧಾವ,** ೧. ೧೧. ೬೮)

**ಸೀರಧರ** – ನೇಗಿಲನ್ನು ಹಿಡಿದವನು, ಬಲರಾಮ (ಆ ಸಭೆಯಂ ಸೀರಧರನುಂ ಶ್ರೀಧರನುಂ ನಂದಸಮೇತವಾನಂದದಿಂ ಪೊಕ್ಕು: **ಕರ್ಣನೇಮಿ,** ೬. ೧३೭ ವ)

**ಸೀರಪಾಣಿ** – ಸೀರಧರ (ಸಾರವಸ್ತುಗಳಿಂ ನೆಱೆದ ಅಂಭೋರಾಶಿಯೆ ಕಾದಿಗೆ ಕಾವನುಂ ಸೀರಪಾಣಿ ವಿಳಾಸದಿನಾಳ್ದಂ ಚಕ್ರಧರಂ: **ಪಂಪಭಾ,** ೪. ३೨)

**ಸೀರಿ** – ನೇಗಿಲಿನ ಆಯುಧ (ಸೀರಿ ಕೃತಕಾರ್ಯವಿಪರ್ಯಯಮಾದುದೆ ಎಂದು ಸುಸ್ಥಿರನಂತೆ ವಂಚಿಸುವ ಬುದ್ಧಿಯಿಂ: **ಕರ್ಣನೇಮಿ,** ೬. ೧೧೦)

**ಸೀರಿಪ್ರಿಯೆ** – ಕಳ್ಳು, ಹೆಂಡ (ಮೈರೇಯಮಾಸವಂ ಮಧು ವಾರಂ ಮದ್ಯಂ ಪ್ರಸನ್ನೆ ಹಾಲಂ ಕಲ್ಯಂ ।ವಾರುಣಿ ಕಾದಂಬರಿಯದು ಸೀರಿಪ್ರಿಯೆ ಸೀಧು ಮದಿರೆ ಸುರೆ ಜಗಳಂ ಕಳ್: **ಅಭಿಧಾವ,** ೧. ೧೬. ೫)

**ಸೀರುಡು** – ಜೀರುಂಡೆ (ಆರಯ್ಯದೆ ರಸಭಾಭಾವಮನಾರಯ್ಯದೆ ಪದಪದಾರ್ಥಮಂ ದೆಸೆಬಿರ್ದಂ ಸೀರುಡುವಿನಡವಿಯಂತಿರೆ ನೀರಸಮೆನೆ ಕೇಳ್ದರಲಸೆ ಪೇಟ್ವಂ ಕವಿಯೇ: **ಮಲ್ಲಿನಾಪು,** ೧. ३೦)

**ಸೀರೆ** – [ಚೀರ] ಬಟ್ಟೆ (ಪೊಸದ ಸೌರಭಂ ತವದ ಮೆಯ್ಸಿರಿ ಬಾಡದ ದಾಮಂ ಉಟ್ಟೊಪಂ ಮಾಸದ ಸೀರೆ .. .. ಇವಂ ಅಪ್ಪುಕೆಯ್ದಂ .. .. ಕಡೆವರಂ ದಿವಿಜಂ: **ಮಲ್ಲಿನಾಪು,** ೧೧. ೪೬)

**ಸೀರೆವರದ** – ಸೀರೆಯ ವ್ಯಾಪಾರಿ (ಮಿಗೆ ಬೆಲೆಯೇಱಿದ ಪೂಲಿಯ ಮಗರಿಯ ದೋರಿಯದ ಪಟೆಯ ತಳಿರ್ವಟ್ಟೆಯ ಕಾಡಿಗೆ ನೀರಿನ ಬಟ್ಟೆಯ ಮಟೆಗೆಗಳಿಂ ಸೋಲಿಪುವು ಸೀರೆವರದರ ಪಸರಂ: **ಕಬ್ಬಿಗಕಾ,** ३೪)

**ಸೀರ್ಕರಡಿ** – ಭಯಂಕರವಾದ ಕರಡಿ (ತರುಣಿಯರೆಂಬ ಪೆರ್ಬುಲಿಗಳಂ ಹರಿಣಾಕ್ಷಿಯರೆಂಬ ಕ್ರೂರ ಸೀರ್ಕರಡಿಗಳಂ .. .. ಸ್ಮರಶರದಿಂದೆ ಮೆಯ್ಯಱಿಯದೊಯ್ಯನೆ ಪೊರ್ದಿದರಪ್ಪೊಡೆ: **ಧರ್ಮಾಮೃ,** ೭. ೯೪)

**ಸೀರ್ನಾಯಿ** – ಉಗ್ರವಾದ ನಾಯಿ (ಪಾಪಂಗಳಂಗೆಯ್ದವರ್ ಆನೆಯುಂ ಸಿಂಹಮುಂ ಪುಲಿಯುಂ ಕರಡಿಯುಂ ಪುಲ್ಲೆಯುಂ ಮೊಲನುಂ ಪಂದಿಯುಂ ತೋಳನುಂ ಸೀರ್ನಾಯುಂ .. .. ಮೊದಲಾಗೊಡೆಯ ಸ್ಥಲಚರಂಗಳುಂ: **ವಡ್ಡಾರಾ,** ಪು ೯೭, ಸಾ ೪)

**ಸೀರ್ಪಡಿಸು** – ತಳಮಳಿಸು, ಒದ್ದಾಡು (ಇಡೆ ಕಾಲಂ ಬಲಿ ಸಿಲ್ಕಿ ಪಲ್ಕಿಱಿದು ಕಣ್ಪೋತಂದು ಸುಯ್ಗೆಟ್ಟು ಸೀರ್ಪಡಿಸುತ್ತಿರ್ದ: **ಕರ್ಣನೇಮಿ,** ೫. ೨೪)

**ಸೀರ್ಪನಿ** – ತುಂತುರು (ನೀರ್ವಕ್ಕಿಗಳಿಂದೆಯ್ದುಣ್ಬುವ ಸೀರ್ಪನಿಯೊಳ್ ತೊಯ್ದು ಒಯ್ಯನೆ ಗಾಳಿ ಕೂಡೆ ತೀಡುತ್ತಿರ್ಕುಂ: **ಕಬ್ಬಿಗಕಾ,** ೨३)

**ಸೀರ್ವನಿವಡಪ[ಹ]** – ತುಂತುರು ಮಳೆ (ಜನವನಿತಂ .. .. ಮರವಟ್ಟಿರಲ್ಕೆ ಸೀರ್ಪನಿವಡಪಂ ಪೊದಳ್ದು ಮಸಗಿತ್ತು ತುಷಾರದ ತುಂತುಱಿಂಬಿನಂ: **ಕುಸುಮಾಕಾ,** ೬. ३೭)

**ಸೀರ್ಪುಲ್** – ಸಣ್ಣ ಹುಲ್ಲುಕಡ್ಡಿ (ಯವ್ವನಚತುರತರ ಅಪಾಂಗದಿಂದ ಒಂದು ಸೀರ್ಪುಲ್ಗೆಸೆವಂದಂ ಮಾಡುತಂಗಪ್ರಭೆಯೊಳ್: **ಕಾದಂಬ,** ೯. ೨೪)

**ಸೀವನ್ನಿ** – ತೇಗದ ಮರ (ಸೀವನ್ನಿ ಕಾಶ್ಮರಿಯಂ: **ಅಭಿಧಾವ,** ೧. ೮. ೧)

**ಸೀವರ** – ತುಂತುರು (ವಿಳಾಸವಾರ್ಧಿಯೊಳ್ ಸೀವರಮೆತ್ತುವಂತೆ ತೆರೆಗಳ್ .. .. ಮೂಡಿದುವು ಮಂಜರಿಗಳ್ ನವಘರ್ಮಬಿಂದುವಾ: **ಲೀಲಾವತಿ,** ೯. ೭३)

**ಸೀವಳಿಗೆ** – ಸಿಡುಬು (ಅಂಬುಳುವಾದೊಡೆ ಷಣ್ಮುಖನೆಂಬರ್ ಸಿವಳಿಗೆಯಾಗೆ ಸಲೆ ಮಾರಿಯ ಹುಣ್ಣೆಂಬರ್: **ಸಮಯಪ,** ೯. ೨೫)

**ಸೀವು** – ಅಲಂಕರಿಸಿಕೊ (ಸೀವು–ಭೂಷಣೇ: **ಶಬ್ದಮದ,** ಧಾ ೬೭೫)

**ಸೀಸಕ** – [ಶೀರ್ಷಕ] ಕುಸ್ತಿಯ ಒಂದು ಪಟ್ಟು; ತಲೆಯ ಕವಚ (ಇಕ್ಕಿದ ಸೀಸಕಂ ಪಚಿದು ನೆತ್ತಿ ಸಿಡಿಲ್ದೊಡೆದೊಂದೆ ಗಾಯದಿಂ ಚಕ್ಕನೆ ಭೋಂಕನೆಟ್ಟು ಮಿಗೆ ಬೆನ್ನೊಳಮರ್ಚಿದ ಪಲ್ಲಣಂ: **ಕಬ್ಬಿಗಕಾ,** ೨೧೮)

**ಸೀಳ್** – ಹೋಳುಮಾಡು (ರಾವಣನಂ ಕೋವಣಮಂ ಸೀಳ್ವಂತೆ ಸೀಳ್ದು ಕುಂಭಕರ್ಣನಂ ಕಂಬಂ ಮುಚಿದ ಮಾಳಿಗೆಯಂತೆ ಮಾಡಿ: **ಧರ್ಮಾಮೃ,** ೭. ೫೪ ವ); ಬಿರುಕು ಬಿಡು (ನೀರೇಜಿದ ನಾಳಿಪುಣ್ಗೊಡೆದು ಸೌಳನೆ ಸೀಳ್ದುದು ದೋಣಿವೋಪಿನಂ: **ಸುಕುಮಾಚ,** ೫. ೧೬)

**ಸೀಳಿಸು** – ಸೀಳುವಂತೆ ಮಾಡು (ಕಟದೆಲ್ವು ಸೀಳೆಸೀಳಿಸಿ ಕಟವಾಯ್ಗಳಂ: **ಅನಂತಪು,** ೯. ೩೬)

**ಸೀಳ್ನಾಯ್** – ಉಗ್ರ ಜಾತಿಯ ನಾಯಿ (ಬರಿಯ ಬಳಸಿಂಗಂ ಬಂದು ಕಾಡುವ ಬಳ್ಳುಗಳುಮಂ ನರವನುಗಿವ ನರಿಗಳುಮಂ ಸೆರೆಯಂ ತೆಗೆವ ಸೀಳ್ನಾಯ್ಗಳುಮಂ: **ಗದಾಯು,** ೫. ೩ ವ)

**ಸೀೞು** – ದುಷ್ಕಲಹ, ಕೆಟ್ಟ ಜಗಳ; ಕೆದರು (ಸೀೞಿದ ತಲೆಯುಂ ಕರಂ ಮಲಿನಮಾದ ಪಟಚ್ಚರಮುಂ ನೆಗೞ್ಚಿಲ್: **ಕಾದಂಬ,** ೯. ೮೧)

**ಸೀೞುಂಬುೞಾಡು** – ಚೆಲ್ಲಾಪಿಲ್ಲಿಯಾಗಿ ಚೆಲ್ಲು (ಆ ನರಿಗಳ್ ಸೀಳ್ದು ಸೀೞುಂಬುೞಾಡಿ ತಿನೆ ಮತ್ತಾ ಧೈರ್ಯಂ ಆ ಶೌರ್ಯಂ ಆ ಇರವು ಆ ಯೋಗನಿಯೋಗಂ .. .. ಪೆೞಂಗಕ್ಕುಮೇ: **ಸುಕುಮಾಚ,** ೧೨. ೩೯)

**ಸೀೞುಡು** – ಜೀರುಂಡೆ (ಕರೆದುವು ಸೂೞುಡುಗಳ್ ಪೆರ್ಮರಂಗಳೆಲೆಯಿಕ್ಕಿ ಕಟಲೆ ಬಿಟ್ಟುವು: **ಪಂಪರಾ,** ೭. ೮೬)

**ಸುಂಕ** – [ಶುಲ್ಕ] ತೆರಿಗೆ (ಮಹಾರಾಜನ ಬಿಂಕಮಂ ಸುಂಕಂ ಕೊಂಡು ವೀರಮಂ ದೂರಂ ಮಾಡಿ: **ಧರ್ಮಾಮೃ,** ೪. ೧೪೭ ವ); ಕಾಣಿಕೆ (ನಿಡುಹುರ್ಬಿಂಗಂ ಕರ್ವಿಲ್ಲ ಬಿಂಕಮಂ ಸುಂಕಮಿಕ್ಕಿದಂತೆ: **ಪುಣ್ಯಾಸ್ರ,** ೨. ೩೨ ವ)

**ಸುಂಕಿ** – ಸುಂಕ ವಸೂಲಿಗಾರ (ಮೊಕ್ಕಳಂ ಒಡಮೆವಡೆದು ಪೊಟಲಂ ಪುಗುವಲ್ಲಿ ಸುಂಕಿಗಳ್ಗಳ್ಕಿ ಮಗುಟ್ದು ಬಂದು: **ಚಾವುಂಪು,** ಪು. ೪೦೦. ಸಾ. ೨೨)

**ಸುಂಕಿಡು** – ಸುತ್ತು (ಜಡೆಯಂ ಸುಂಕಿಡುವ ಅಕ್ಷಮಾಲೆಗಳಂ ಒಳ್ಪಿಂ ಕೋವ ಯೋಗಾಂಗಮಂ ಬಿಡದೆ ಅಭ್ಯಾಸಿಪ: **ಶಬರಶಂ,** ೨. ೬೮)

**ಸುಂಕುಬುಲ್ಲು** – [ಸುಂಕು+ಪುಲ್ಲು] ಮುಟ್ಟಿದರೆ ಮೈಗೆ ಅಂಟಿಕೊಳ್ಳುವ ಹುಲ್ಲು (ಪಕ್ಕಿಗಳೆಲ್ಲಂ ಪರ್ದು ಕಾಗೆಗಳೆ ಪುಲ್ಲೆಲ್ಲಂ ಸುಂಕುಬುಲ್ಲೆ ಗಾಳಿಯೆಲ್ಲಂ ಸುಟ್ಟುರೆಗಾಳಿಯೆ: **ಹರಿವಂಶ,** ೮. ೧೩ ವ)

**ಸುಂಟಿ** – ಶುಂಠಿ (ಸುಂಟಿ ತಿಂದ ಬಾಯೊಳ್ ಬಿಸಿನೀರಂ ಕುಡಿದರಂತೆ: **ಧರ್ಮಾಮೃ,** ೧೦. ೧೨೮ ವ)

**ಸುಂಟಿಗೆ** – ಹಸಿಮಾಂಸ (ಕೌಳರ್ ಮತ್ತತ್ತಲ್ ಹೋಮಂ ಮಾಡುವರ್ ಇತ್ತಲ್ ಸುಂಟಿಗೆಯನೊಯ್ದು ಕಾಸುವರ್: **ಸಮಯಪ,** ೧೪. ೮೯)

**ಸುಂಟಿಗೆಗೋಲು** – ಮಾಂಸ ಚುಚ್ಚುವ ಕೋಲು (ಕಾಸಲ್ವೇಡಿ ಪೊಸ ಸುಂಟಿಗೆಗೋಲನೊಂದಂ ಕೀಸಿ ಪೊಸಕಿಚ್ಚಂ ಪೊಸೆದು: **ತ್ರಿಷಷ್ಟಿಪು,** ೨೭. ೧೨೨ ವ)

**ಸುಂದು** – ಸಂಭೋಗಿಸು ಹಾಗೂ ಮಲಗು (ಸುಂದು–ಮೈಥುನೇ ಶಯನೇ ಚ: **ಶಬ್ದಮದ,** ಧಾ ೪೨೪)

**ಸುಕ** – ಸುಖ (ಸುಕದ ಕಣಿಯೆನಿಸಿಯಾ ಪುಬ್ಬಕೋಟಿ ಪರಮಾಯು ನಾಭಿನಾಮಮುಮಾಯ್ತು: **ಆದಿಪು,** ೬. ೬೭)

**ಸುಕೃತ** – ಪುಣ್ಯ (ತತ್ವಾಯವೆಂದೆಂಬುರು ಬಹುಳತರಕ್ಷೇತ್ರಂ ಅಂತಲ್ಲಿಯುಂ ಸತ್ಕರಣಂ ತಾವೆತ್ತು ಬೀಜಂ ಸುಕೃತತಿ: **ತ್ರಿಷಷ್ಟಿಪು,** ೮. ೬)

**ಸುಖವಸತಿ** – ಕಷ್ಟಪಡದೆ ಮಾಡುವ ನೆಮ್ಮದಿಯ ಜೀವನ (ವಸತಿ ಸುಖವಸತಿ ಮಾರ್ಗಂ ಪ್ರಸಿದ್ಧ ಸೌಖ್ಯಕ್ಕೆ ಮಾರ್ಗಂ ಆಗಮಸತ್ಯಂ: **ಸಮಯಪ,** ೧೫. ೭೯)

**ಸುಖಸಾದ್ಭೂತ** – ಸುಖಸ್ವರೂಪ (ಗುಣಮೆಂಟುಂಬ ಬಂದು ತನ್ನೊಳ್ ಪೆಣೆದಿರೆ ಸುಖಸಾದ್ಭೂತನುಂ ಲೋಕಚೂಡಾಮಣಿಯುಂ .. .. ತಾನಾಗಿ: **ಆದಿಪು** ನರಸಿಂ, ೧೬. ೫೦)

**ಸುಖಾಶ್ರು** – ಆನಂದದ ಕಣ್ಣೀರು(ತನು ಪುಳಕಂಗಳಂ ತಳೆಯೆ ನೇತ್ರದೊಳುಕ್ಕೆ ಸುಖಾಶ್ರು: **ರಾಜಶೇವಿ,** ೮. ೭೪)

**ಸುಖೋದಯ** – ಆನಂದದ ಪ್ರಾರಂಭ (ಮನದಟೀವಂ ಕಳಲ್ಚುವರತಾಂತಸುಖೋದಯದಿಂದೆ ನಿದ್ರೆಯಂ ನೆನೆಯದೆ: **ಚಂದ್ರಪ್ರಪು,** ೬. ೮೫)

**ಸುಖೋದ್ದೀಪನ** – ಸುಖವನ್ನು ಉಂಟುಮಾಡುವುದು (ಅನೇಕ ಜೀವಹತಿ ತನಗೆ ಸುಖೋದ್ದೀಪನಂ ಎನಿಸುವ ಪಾಪಕಳಾಪಂಡಿತೆ ಚಂಡಮಾರಿ ದೇವತೆಯಿರ್ಪಳ್: **ಯಶೋಧಚ,** ೧. ೩೪)

**ಸುಗಂಡ** – ತುಂಬ ಬಲಿಷ್ಠವಾದ (ವೃಕ ಭಲ್ಲೂಕ ಸುಗಂಡ ಚಂಡಹರಿಣಶ್ರೇಣೀ ರುರು ಉರು ಉಗ್ರ ಶಲ್ಯಕ ಸಾರಂಗ ಶಶಾವಳೀ ಶರಭ ಗೋಲಾಂಗೂಲಮಾಲಾ ಹರಿಪ್ರಕರ ಆಭೀಳ ಸೃಗಾಳಜಾಳಂ ಮದವತ್ ಶುಂಡಾಲ ಶಾರ್ದೂಲ ಕಾಕಕುಳ ವ್ಯಾಳ ಕರಾಳ ವಿಸ್ಫುರತ್ ಅರಣ್ಯಾನೀ ಮಹೀದೇಶದೊಳ್: **ಪಂಚತಂತ್ರ,** ೧೪೨)

**ಸುಗಂಧಭಂಡಾರಿಗ** – ಪರಿಮಳಗಳ ಶೇಖರಣೆಯ ಮೇಲ್ವಿಚಾರಕ (ಸುಗಂಧಭಂಡಾರಿಗರ್ ವಿರಚಿಸಿ ತಂದು ಮುಂದಿಟ್ಟ ಘನಸಾರ .. .. ಕಸ್ತೂರಿಕಾಸಾರ ವಿವಿಧಲೇಪನಂಗಳಿಂ ಮೆಯ್ಯಂ ತಿಮಿರ್ದು: **ಸುಕುಮಾಚ,** ೧೧. ೩೨ ವ)

**ಸುಗತ** – ಸರಿಯಾದ ನೆಲೆ ಮುಟ್ಟಿದವನು, ಬುದ್ಧ (ಇನಿತಿಲ್ಲದಾತಂ ಸುಗತನೆ ತಾನಾತ್ಮವಧೆಯೊಳೊಂದಿದ ಪುರುಷಂ: **ಸಮಯಪ,** ೮. ೧೮೨)

**ಸುಗತಮತ** – ಬೌದ್ಧಮತ (ಸುಗತಮತಕ್ಕೆಣೆಯೆನೆ ಶೌಚಗುಣಂ ಕ್ಷಣಿಕಂ ಸಗರ್ವಚಾರ್ವಾಕಮತಕ್ಕೆ ಗಡೆಣೆಯೆಂದೆನೆ ಪೆಂಡಿರ ನೆಗೞ್ತೆ ಪರಲೋಕಸೌಖ್ಯಘತುಕಮಲ್ತೇ: **ಪಾರ್ಶ್ವನಾಪು,** ೩. ೧೦೮(

**ಸುಗತಿ** – ಮೋಕ್ಷ (ಸುಗತಿಗೆ ಭಕ್ತಿ ದುರ್ಗತಿಗೆ ನಿನ್ನ ಪದಪ್ರತಿಕೂಳವೃತ್ತಿ: **ಮಲ್ಲಿನಾಪು,** ೧೨. ೧೨೫)

**ಸುಗಿ** – ಹೆದರು (ಮಂದೈಸಿದ ಕಟ್ಟಿಲೆಗೆ ಅಗಿದು ಸುಗಿವ ಪೆರ್ಬಡೆಯಂ ಕಂಡು ಇದು ನಡೆಯದೆ ಸೆಡೆದೇಕಿರ್ದುದೆಂದು ಬೆಸಸಿದೊಡೆ: **ಆದಿಪು,** ೧೩. ೪೭); ಸಂಕೋಚಗೊಳ್ಳು (ಸುಗಿದಿವೆ ಕಮಳಂ ಕುಮುದಂ ನಗುತಿವೆ .. .. ಬಗೆವೆರ್ಚುತ್ತಿವೆ ಸರಾಗಪೂರಿತ ಚಕೋರಂ: **ಗಿರಿಜಾಕ,** ೪. ೧೧೧); ಕತ್ತರಿಸು (ನಾಡೆ ಪೊಳೆದ ಇಂದ್ರನೀಲದ

ಕೋಡಂಗಲ್ಲೊಂದು ರಶ್ಮಿಯೊಳ್ ಸುಗಿದು ಒಗೆದು ಅಟ್ಟಾಡುವ ಲತೆಯಂತಿರೆ: **ಹರಿವಂಶ,** ೫. ೧೧)

**ಸುಗ್ಗಿ –** ವಸಂತಕಾಲ (ಎಳಮಾವು ಕೆಂದಳಿರ ಪೂವಿನ ಬಿಣ್ಪೊಜೆಯಿಂ ಬಟಿಲ್ದು ತುಂಬಿಗಳಿನೆ ತುಂಬಿ ಕೋಗಿಲೆಯೆ ಬಗ್ಗಿಸೆ ಸುಗ್ಗಿಯೊಳೋಪ್ಪುವಂತೆವೋಲ್; **ಪಂಪಭಾ,** ೧. ೮)

**ಸುಜಾತ –** ಚೆನ್ನಾಗಿ ವಿಕಸಿತಗೊಂಡ (ಅಭಿನವ ಸುಜಾತಪಾರಿಜಾತ ಸುಮನಶ್ಶೇಖರಂ: **ಶಾಂತಿಪು,** ೭. ೧೩ ವ)

**ಸುಟ್ಟಿತೋಱು –** ಬೆರಳಿನಿಂದ ತೋರಿಸು (ಚಂದ್ರನವಂ ಅವಂ ಇನಂ ಅವಂ ಧರಣೇಂದ್ರಂ ಅವಂ ಸಕಲ ಲೋಕಪಾಲರ್ ಅವರ್ ದೈತ್ಯೇಂದ್ರರ್ ಅವರ್ ಎಂದು ಸಭೆಗೆ ನರೇಂದ್ರರ್ಕಳ್ ಸುಟ್ಟಿ ತೋಱಿದರ್ ಪೆಸರ್ವೆಸರೊಳ್: **ಅಜಿತಪು,** ೫. ೩೯)

**ಸುಟ್ಟಿನುಡಿ –** ಬೆರಳಿನಿಂದ ತೋರಿಸಿ ಹೇಳು (ಇದುವೇ ಪೌರುಷಮೆಂದು ಸುಟ್ಟಿ ನುಡಿವಂತಿರ್ದಪ್ಪುದು: **ಹರಿವಂಶ,** ೩. ೧೨)

**ಸುಟ್ಟಿಪ ಬೊಟ್ಟು –** ತೋರು ಬೆರಳು (ಒಟ್ಟಜೆಯಿಂದಮೆ ಸುಟ್ಟಿಪ ಬೊಟ್ಟಿಂದಮೆ ಮೂಗನೂಱಿ ಬಿಟ್ಟಂ ಕೃಷ್ಣಂ: **ನೇಮಿನಾಪು,** ೮. ೨೦)

**ಸುಟ್ಟುಂಬೆ –** ತೋರುಬೆರಳು (ಕೊರಲೊಳ್ ಸೊಗಯಿಪ ಹಾರಮಂ ಎರಡುಂ ಸುಟ್ಟುಂಬೆಯಿಂದಡಿಗಡಿಗಾಗಳ್ ತಿರುಪುತ್ತಂ: **ಕಾದಂಬ,** ೬. ೧೩೯)

**ಸುಟ್ಟುಂಬೆಯ ನೆಟಿಲ್ –** ಮಾರ್ಗದರ್ಶನದ ನೆರಳು (ದಮಿತಾರಿಗೆ ಪುಟ್ಟಿ ಸುಟ್ಟುಂಬೆಯ ನೆಟಿಲೊಳ್ಪಂದು ಮುಗುಳಿನೊಳ್ಪುಟ್ಟುಂ ಭೂಲತಾಪ್ರತಾನದೊಳ್ ಕಟ್ಟುಂ ಕಿಟ್ಟುಟ್ಟುಮಿರ್ಪುದುಚಿತಮಲ್ತು: **ಶಾಂತಿಪು,** ೪. ೮೨ ವ)

**ಸುಟ್ಟುಂಬೆರಲ್ –** ಸುಟ್ಟುಂಬೆ (ಕರುಳ ಸುರ್ವಿಂ ಪುರ್ದುಂಗಿಟಿವ ಬೆಮರ ಬಿರಿವೊನಲಂ ಸುಟ್ಟುಂಬೆರಲಿಂ ತೊಡೆದೀಡಾಡುತ್ತುಂ: **ಲೀಲಾವತಿ,** ೬. ೧೭ ವ)

**ಸುಟ್ಟುರೆ –** ಸುಂಟರ ಗಾಳಿ (ಪಳಂಚಿ ಮಿಂಚುವ ಆಭರಣದ ಮಿಂಚು ಕಪ್ಪುರದ ಪಾಱುವ ಸುಟ್ಟುರೆ ಪೂವಿನುರ್ಬು ಕತ್ತುರಿಯ ತಗುಳ್ದು ಪೊಯ್ವ ಸೊವಡು .. .. ಕಣ್ಗೆಸೆದತ್ತು ಖಗೇಂದ್ರನೋಲಗಂ: **ಆದಿಪು,** ೨. ೫); ಪ್ರವಾಹ (ಕರಿ ಕರಿಯೊಳ್ ತೇರ್ ತೇರೊಳ್ ಹರಿ ಹರಿಯೊಳ್ ಪತ್ತಿ ಪತ್ತಿಯೊಳ್ ನೆತ್ತರ ಸುಟ್ಟುರೆ ಪುಟ್ಟೆ: **ಪಾರ್ಶ್ವನಾಪು,** ೩. ೧೨೬)

**ಸುಟ್ಟುರೆಮಸಗು –** ಸುಂಟರಗಾಳಿ ಹರಡು (ಮುಂದನಾರಯ್ವುದೆ ಪಿಂದಂ ಪಾರದೆ ಮುಂದೆ ನಿಂದ ನಿಜಸ್ಯಂದನಮನೇಱಿ ಸುಟ್ಟುರೆಮಸಗಿ ನಿಟ್ಟುರಿಗೊಂಡಂ: **ಅನಂತಪು, ೧೧.** ೭೨ ವ)

**ಸುಟ್ಟುರೆವಿಡು –** ಸುಂಟರಗಾಳಿಯಂತೆ ಬೇಗ ಹರಡು (ಯಕ್ಷಕರ್ದಮದಗುರುವ ಕಪ್ಪುರದ ಕಮಘು ಸುಟ್ಟುರೆವಿಡುತುಂ ಮಗಮಗಿಸೆ: **ಸುಕುಮಾಚ,** ೧೦. ೧೨೪)

**ಸುಡು –** ದಹಿಸು [ಬಿಡದೆ ಅಟಲ್ವ ಬಂಧುಜನದ ಒಟ್ಟುಡಿಯದ ಕಣ್ಣೀರ ಪೂರಂ ಆ ಪ್ರೇತಮಂ ಓಗಡಿಸದೆ ಸುಡುವುದು ಗಡಂ ಇನ್ನುಡುಗುವುದೀ ಶೋಕಮಂ ಸರೋಜದಳಾಯತಾಕ್ಷೀ: **ಪಂಪಭಾ,** ೨. ೨೮)

**ಸುಡುನುಡಿ –** ತೀಕ್ಷ್ಣವಾದ ಮಾತು (ಛಾಂದಸ ಬಿಡುವೊಡಿನಿತು ಸುಡುನುಡಿಯೇಕೆ: **ಅನಂತಪು,** ೮. ೧೭ ವ)

**ಸುಡುಪುಡು –** ಬಿಸಿಬಿಸಿ (ಸುಡುಪುಡು ನಾಳಿಯರ್ ತಳಿದ ನೀರ್ವನಿಗಳ್ ಬಿಸುಸುಯ್ಯ ಗಾಳಿಯಿಂದೆಡೆಯೊಳ್ ಬತ್ತೆ: **ಲೀಲಾವತಿ,** ೧೧. ೩೬)

**ಸುಡುಮಿಡು –** ಚಡಪಡಿಸು (ನಿಲಲೆಡೆಯಿಲ್ಲದೆ ಅಡಹಡಿಸಿ ಸುಡುಮಿಡುವಂದು ನಡನಡನಡುಗಿ: **ಅಜಿತಪು,** ೧೧. ೧೦ ವ)

**ಸುಡುವುಣ್ –** ಉರಿಯುವ ಹುಣ್ಣು (ಸುಡುವುಣ್ಣಾದಪುದಿಂದು ನಿನ್ನಧರಮಪ್ಪಿಂಗೆಯ್ದಂತಾಗಿ ಮೆಯ್ ಬಡವಾಯ್ತು ಅಕ್ಕಟದಾರೊಳಾಯ್ತು ವಿರಹಂ: **ಲೀಲಾವತಿ,** ೨. ೬೮)

**ಸುತ –** ಮಗ (ಸುತ ಪುತ್ರ ತನೂಭವ ಸೂನು ನಾಮಕಂ: **ಅಭಿಧಾವ,** ೧. ೧೧. ೧೭)

**ಸುತದೋಹಳ –** ಮಗನ್ನು ಪಡೆಯಬೇಕೆಂಬ ಹಂಬಲ (ಸುತದೋಹಳಧೃತೆ ಮಿಜಯಾವತಿಸತಿಯೀಕ್ಷಿಸೆ ಕಟಾಕ್ಷಸಂಜ್ಞೆಯೊಳ್ ಅರಸಂಗತಿ ಮುದದೆ ಬಿನ್ನವಿಸಲುದ್ಯತೆಯಾದಳ್ ನೆಗಟ್ದಿ ಹರ್ಷವರ್ಧನೆಯಾಗಳ್: **ಕುಸುಮಾಕಾ,** ೩. ೫೨)

**ಸುತಪ –** ಶ್ರೇಷ್ಠ ತಪಸ್ಸು (ದೀಕ್ಷೆಗೆ ಸುತಪಂಫಲಮೆನೆ ನೆಗಟ್ದುದದೆ ಬೋಧಿ ವಲಂ: ಪುಷ್ಪದಂಪು, ೧೩. ೫೪)

**ಸುತಲ[ಳ] –** ಕೆಳಗಿನ ಏಳುಲೋಕಗಳಲ್ಲಿ ಒಂದು (ಸುತಳ ಅತಲ ವಿತಳಾದಿ ಸಪ್ತಲೋಕಸಂಬಂಧಂ: **ಅಭಿಧಾವ,** ೧. ೩. ೫)

**ಸುತಲಾಭ –** ಮಗನನ್ನು ಪಡೆಯುವ ಸಂತೋಷ (ಅಪ್ರತಿಹತ ಸುತಲಾಭ ನಿವೇದಕವಾರ್ತೆ ತೀವೆ ಪುಳಕಮನಾಂತಳ್: **ಜಗನ್ನಾವಿ,** ೨. ೮೬)

**ಸುತಲಾಭಾರ್ಥಿ –** ಮಗನ್ನು ಪಡೆಯುವ ಸಂತಸಕ್ಕಾಗಿ ಹಂಬಲಿಸುವವನು (ಸುತಲಾಭಾರ್ಥಿ ವಿಶೇಷತೀರ್ಥಜಲದಿಂ ಶ್ರೀಖಂಡದಿಂ ಅಕ್ಷತಾಕ್ಷತದಿಂ .. .. ಜಿನಪಾದಾಭ್ಯರ್ಚನಂ ಮಾಡಿದಳ್: **ಮಲ್ಲಿನಾಪು,** ೪. ೨೬)

**ಸುತಿ –** [ಶ್ರುತಿ] ಸಂಗೀತದ ಶ್ರುತಿ (ಪದಕೊರಲ್ ಇಂಪಂ ಅಪ್ಪುಕೆಯೆ ಕೊಂಕು ನಯಂ ಗಮಕಂಗಳಿಂ ಪೊಡರ್ ಕೊದಳ್ ಎಟೆದಿಕ್ಕಿದಂತೆ ಸುತಿಯೊಳ್ ಸಮವಾಗಿರೆ .. .. ಮೇನಕೆ ಸರಸ್ವತಿ ಬಾಯ್ದೆಱೆದಂತೆ ಪಾಡಿದಳ್: **ಪಂಪಭಾ,** ೭. ೮೮)

**ಸುತಿಗೂಡು –** ಹಾಡುವಾಗ ಆಧಾರಸ್ಥಾಯಿಗೆ ಹೊಂದಿಕೊಳ್ಳುವುದು (ಒಸೆದು ನೃಪಾಳನಾಡಿಸಿದ ಸೋಗೆಗಳಂತಿವು ಚಕ್ರಿ ಬೀಣೆ ಬಾಜಿಸೆ ಸುತಿಗೂಡಿ ತಾರಯಿಪ ತುಂಬಿಗಳಂತಿವು: **ಆಚವರ್ಧ,** ೫. ೬೧)

**ಸುತೆ –** ಮಗಳು (ಸುತೆಯುಂ ನುತೆಯುಂ ಜಿತಸುರಸತತಿಯಂ ರಾಜಮತಿಯಂ ಅತ್ಯೂರ್ಜಿತಭೂಪತಿಸುತೆಯರಂದು ಪಂಚಕಶತಮಿತೆಯರ್ವೆರಸು ತರಿಸಿದಂ ಹರಿ ಭರದಿಂ: **ಕರ್ಣನೇಮಿ,** ೧೩. ೫೦)

**ಸುತ್ತಟೆ –** ಸಡಿಲಗೊಳ್ಳು (ಜಳಕೇಳಿಯೊಳಗಳ್ ಸುತ್ತಟಿದ ಬಳಲ್ಮುಡಿಯ ಪೊಳೆಪನಸಿತೋರಗನೀ ಸ್ಥಳದೊಳಿದೆಯೆಂದು ಭಯದಿಂ ಕೆಳದಿಯ ಕಂದರಮನಪ್ಪಿದಳ್ ಬೇಱೋರ್ವಳ್: **ಕುಸುಮಾಕಾ,** ೫. ೧೪೯)

**ಸುತ್ತಿ –** [ಶುಕ್ತಿ] ಮುತ್ತಿನ ಚಿಪ್ಪು, ಓಡು (ಮಹಾವ್ರತಿಗಳೆವೆಂದು ತೀವೆ ತೊಟ್ಟು ಸುತ್ತಿಯೊಳಮುಂಡಪರ್ ತತ್ವಥದಿಂ: **ಸಮಯಪ,** ೪೯)

**ಸುತ್ತಿಱಿ –** ಸುತ್ತಿಕೋ (ನೀಳಾಚಳಸಂಘಾತಂಗಳಿಂ ಸುತ್ತಿಱಿದವೊಲ್ ಎಸೆದತ್ತು ಆ ಸಮುದ್ರೋಪಕಂಠಂ: **ಆದಿಪು,** ೧೪. ೫೩)

**ಸುತ್ತು –** ಉಡುವ ಬಟ್ಟೆ (ಪಲ್ಲಿಯಂತೆ ಕೇರಂ ಪತ್ತುತ್ತುಂ ಎಲೆವಳ್ಳಿಯಂತೆ ಕಂಬಮಂ ಸುತ್ತುತ್ತುಂ: **ಧರ್ಮಾಮೃ,** ೧.

೧೨೪ ವ); ಬಳಸಿ ಬಾ (ಮರಗಟ್ಟೆಂಬಂತೆ ಸುತ್ತುಂ ಮೊದಲೊಳಜಗರಂ ಸುತ್ತೆ: **ಕಾದಂಬ,** ೧. ೧೦೦

**ಸುತ್ತುಂಗುರುಳ್** – ಗುಂಗುರು ಕೂದಲು (ನಿನ್ನನಾ ಕನ್ನೆಯ ತುಱುಗೆಮೆಗಳ್ ಸುತ್ತಲುಂ ನಿನ್ನನಾ ಕೋಮಳೆಯ ಅಂದಂಬೆತ್ತ ಸುತ್ತುಂಗುರುಳ್ ಅಳವಡಿಸಲ್ .. .. ತೊಡರ್ಪಾದುದು: **ಆದಿಪು,** ೪. ೨೧)

**ಸುತ್ತುಂಗೊಳ್** – ಆವರಿಸು (ಚೆಂಬೊನ್ನ ಮಾಂಗಾಯ ಗೊಂಚಲ್ಗಳ ಪೊಂದಳಿರ ತೊಮಗಲ್ಗಳ ಸುತ್ತುಂಗೊಂಡ ಸರಿಗೆಯ ಮುತ್ತಿನ ಬುಂಭುಕಂಗಳ ನಡುವೆ: **ಆದಿಪು,** ೮. ೧೫ ವ)

**ಸುತ್ತುಗತ್ತರಿಗೆ** – ಬೇಲಿ, ಗಡಿ (ನಿರ್ಗಮಕ್ಷಪಣೆಗಳನಳವಡಿಸಿ ಸುತ್ತುಗತ್ತರಿಗೆವರೆಗೆ ಒಯ್ದು: **ಆಚವರ್ಧ,** ೭. ३ ವ)

**ಸುತ್ಥಣೆ** – ಕಾಲಾಳು ಸೈನ್ಯ (ವರ್ಗದ್ವಿತೀಯಕ್ಕೆ: ಥಟ್ಟು ಥಾಪಣರ ಸುತ್ಥಣೆಯಂ ಮತ್ಥವಟ್ಟಿಗೆ: **ಶಬ್ದಮದ,** ೨೫ ವೃತ್ತಿ)

**ಸುತ್ರಾಮ** – ಇಂದ್ರ (ಸುತ್ರಾಮನಂದಿಂತು ತಾಂಡವಲಾಸ್ಯಂಗಳ ಚೆಲ್ವನೊರ್ಮೆಯೆ ತದೀಯಾಸ್ಥಾನದೊಳ್ ತೋಱಿದಂ: **ಆದಿಪು,** ೭. ೧೨೬)

**ಸುದತಿ** – ಚೆನ್ನಾದ ಹಲ್ಲುಗಳುಳ್ಳವಳು, ಸುಂದರಿ (ಬಳೆದ ನಿತಂಬದೆ ಕಾಂಚೀಕಳಾಪಮಂ ಕಟ್ಟಲಣಮೆ ನೆಱೆಯದು ಎಂದಗ್ಗಳಿಸಿ ಕುಳಿಕೆಗಳಿನೇಂ ಕಣ್ಗೊಳಿಸಿದುದೋ ಸುಭಗೆಯಾದ ಸುದತಿಯ ಗರ್ಭಂ: **ಪಂಪಭಾ,** ೧. ೧೪೩)

**ಸುದರ್ಶನ** – ಶ್ರೀಕೃಷ್ಣನ ಚಕ್ರದ ಹೆಸರು (ಕಾವ ನಾರಾಯಣನ ಸುದರ್ಶನಮೆಂಬ ಚಕ್ರದ ಕೋಳುಮಂ ವಿಕ್ರಮಾರ್ಜುನನ ದಿವ್ಯಾಸ್ತ್ರಂಗಳ ಕೋಳುಮಂ ಅಗ್ನಿದೇವನ ಶಿಖಾಕಳಾಪದ ಕೋಳುಮಂ ಎಂತಾನುಂ ಬಂಚಿಸಿ ಬಲೆಪಱಿದ ಕೋಕನಂತೆ ಒರ್ವ ವನಪಾಲಕಂ ಪೋಗಿ ದೇವೇಂದ್ರನಂ ಕಂಡು: **ಪಂಪಭಾ,** ೫. ೯३ ವ)

**ಸುದೇಶಿಕ** – ಶ್ರೇಷ್ಠ ಆಚಾರ್ಯ (ಸಕಲಲೋಕತತ್ತ್ವ ಸುದೇಶಿಕನುಂ ಲೋಕಾಗ್ರಗತ ಅಷ್ಟಕರ್ಮ ನಿರ್ಮುಕ್ತಶುದ್ಧನುಂ ತಾನಾಪ್ತಂ: **ಸಮಯಪ,** ೧. ೬೮)

**ಸುದ್ದ** – ಶುದ್ಧ (ಪುಸಿನುಡಿದೊಡಂ ಉಗುಟಿಲ್ದೊಡಂ .. .. ಮುಟ್ಟೆ ಸುದ್ದಮೆಂದೂಳ್ವರ್ ಅಱಿಯದರ್ ಬಲಗಿವಿಯಂ: **ಸಮಯಪ,** ೧೧. ೬೧)

**ಸುದ್ದಗನ್ನಡ** – ಅಚ್ಚಗನ್ನಡ (ಸಕ್ಕದಮಂ ಪೇಟಿಲ್ವೊಡೆ ನೆಱೆ ಸಕ್ಕದಮಂ ಪೇಟ್ಗೆ ಸುದ್ದಗನ್ನಡದೊಳ್ ತಂದಿಕ್ಕುವುದೆ ಸಕ್ಕದಮಂ ತಕ್ಕುದೆ ಬೆರಸಲ್ಕೆ ಘೃತಮುಮಂ ತೈಲಮುಮಂ: **ಧರ್ಮಾಮೃ,** ೧. ४೨)

**ಸುದ್ದಗೆ** – [ಶುದ್ಧಕ] ಅಕ್ಷರ, ಶುದ್ಧಗೆ (ವರಗುರು ತನ್ನಂ ಸುದ್ದಗೆವರೆಯಿಸೆ ಮೂಱನೆಯ ತಾಣದೆರಡಕ್ಕರಮಂ ಸ್ವರದೊಳಂ ಅಂತಸ್ಥೆಯೊಳಂ ಬರೆಯೆನೆ: **ಪುಷ್ಪದಂಪು,** ೪. ೫೬)

**ಸುದ್ಧೈಸು** – ಶುದ್ಧಗೊಳಿಸು (ಸೋದಿಸಿ ಸುದ್ಧೈಸಿದ ಸಮ್ಮಗಾಱವೆಸದೊಳ್ ಚೆಲ್ವಾದವಂ ತೀವಿದಾ ರಸವರ್ಗಂಗಳಂ ಉಣ್ಬೆವೆಂಬ ಜಡರಂ ಕೈಕೊಳ್ವರೇ ಶ್ರಾವಕರ್: **ಸಮಯಪ,** ೬. ೧೭)

**ಸುಧಾ** – ಅಮೃತ (ಸುಧಾಮೋದಮಂ ತಳೆದಂಗಂ ಬೆಳರ್ಗಂಪನಾಳ್ದಿರೆ: **ಕಾದಂಸಂ,** ೮. ೫೫); ಸುಣ್ಣ

**ಸುಧಾಂಶುಬಿಂಬ** – ಚಂದ್ರಮಂಡಲ (ಸುಲಿಪಲ್ಲ ಪಂಕ್ತಿಯೊಪ್ಪಿದುದು ಸುಧಾಂಶುಬಿಂಬಂ ಎಳಮುತ್ತನೆ ಮುಕ್ಕುಳಿಸಿರ್ದುದೆಂಬಿನಂ: **ನೇಮಿನಾಪು,** ೨. ೧೬)

**ಸುಧಾಂಶುಲೇಖೆ** – ಚಂದ್ರನಲ್ಲಿನ ಕಲೆ (ಹಾರಮರೀಚಿಮಂಜರಿ ಸುಧಾರಸಧಾರೆ ಸುಧಾಂಶುಲೇಖೆ ಕರ್ಪೂರಶಲಾಕೆ ನೇತ್ರಸುಖದಾಯಕಂ: **ಪಂಪರಾ,** ೯. ೧೮೨)

**ಸುಧಾಂಶುವಲ್ಲಭ** – ಬಿಳಿ ಕಿರಣಗಳಿಗೆ ಒಡೆಯ, ಚಂದ್ರ (ಸುಧಾಂಶುವಲ್ಲಭಂ ಮನದೊಲವಿಂದೆ ತನ್ನ ವಿತತಾಂಶುಕಮಂ ಪೊದಿಸುತ್ತೆ: **ರಾಜಶೇವಿ,** ४. ೧४)

**ಸುಧಾಕರ** – ಚಂದ್ರ (ಒಗೆತಂದಂ ಉದ್ಗತವಿಕೀರ್ಣಕ್ರಪ್ರಕರಂ ಸುಧಾಕರಂ: **ಲೀಲಾವತಿ,** ೬. ೯೨)

**ಸುಧಾಗೃಹ** – ಸುಣ್ಣ ಬಳಿದ ಮನೆ (ಆತನನಾಗಳ್ ನೋಡುವ ಕೌತೂಹಳದಿಂ ಸುಧಾಗೃಹಾಗ್ರಂಗಳೊಳಿರ್ದಾ ತರಳೇಕ್ಷಣೆಯರ್ಕಳ್ ವಾತಗವಾಕ್ಷಂಗಳೆಡೆಗೆ ತಡಯದೆ ನಡೆದರ್: **ಶಾಂತಿಪು,** ೬. ೫)

**ಸುಧಾಧವಳಿತ** – ಸುಣ್ಣ ಬಳಿದು ಬೆಳ್ಳಗಾದ (ಶಾರದನೀರದಾಕಾರ ಸುಧಾಧವಳಿತ ಉತ್ತುಂಗಪ್ರಾಸಾದಕೂಟ ಕೋಟಿಸಂಕೀರ್ಣಮುಂ: **ಆದಿಪು,** ೧. ೭೦ ವ)

**ಸುಧಾಬಿಂದು** – ಅಮೃತದ ಹನಿ (ಅಧರಕ್ಕೆ ಸುಧಾಬಿಂದುಗಳಮ ತಳಿಯೆ ದಂತಕಾಂತಿಪ್ರಸರಂ: **ಯಶೋಧಚ,** ३. ೮)

**ಸುಧಾಬ್ಧಿ** – ಹಾಲ್ಗಡಲು (ಪುಟ್ಟಿದಂ .. .. ಸುಧಾಬ್ಧಿಗೆ ಮಹಾಹಾಳಾಹಳಂ ಕಾನನಕ್ಕೆ ದವೋಗ್ರಾಗ್ನಿ ಕಡಂಗಿ ಪುಟ್ಟಿದವೊಲಂತಾ ಕಂಸದೈತ್ಯಂ: **ಜಗನ್ನಾವಿ,** ೨. ३೮)

**ಸುಧಾಮ** – ಬೆಳಕು (ನೇಮೀಶ್ವರ ದುರಘತಮೋದ್ದಾಮ ತಮಸ್ತಮಸುಧಾಮ .. .. ಈ ಮಹಿಮೆಯಂ ಎನಗೆ ಮಾಡು: **ಕರ್ಣನೇಮಿ,** ೧३. ೧೦೦)

**ಸುಧಾಮಹೀರುಹ** – ಕಲ್ಪವೃಕ್ಷ (ಬಗೆಯಲ್ವೇಡ ಸುಧಾಮಹೀರುಹದೊಳೌದಾರ್ಯಮಂ ವೀರ್ಯಂ ಈ ಯುಗಳದೊಳ್ ತತ್ತರುಗಿಲ್ಲ: **ಆದಿಪು,** ೬. ೭೭)

**ಸುಧಾರ್ಣವ** – ಸುಧಾಬ್ಧಿ (ಇವರಾರೆಂದಿರ್ದಪೆ ನೀಂ ಭುವನತ್ರಯತಿಳಕರ್ ಅಮಳ ಸದ್ಬೋಧ ಸುಧಾರ್ಣವ ಪೂರ್ಣಚಂದ್ರರ್: **ಯಶೋಧಚ,** ४. ४೮)

**ಸುಧಾವರ್ಷ** – ಅಮೃತಧಾರೆ (ತನ್ನ ಚಾರುಚರಿತ್ರ ಸುಧಾವರ್ಷದೊಳ್ ಅಗಣ್ಯಪುಣ್ಯ ಪ್ರವಾಹಂ ಉದಿತೋದಿತಮಾಗೆಯುಂ: **ಮಲ್ಲಿನಾಪು,** ३, ೨೦ ವ)

**ಸುಧಾಶ** – ಅಮೃತ ಕುಡಿದವನು, ದೇವತೆ (ಉರ್ವೀಶನ ಯೋಷೆ ಸಂದಜಿತಸೇನೆ ಬಟಿಕ್ಕವರ್ಗಾ ಸುಧಾಸನಿರ್ದೇಶಿ ವೇಶ್ಮನ ಪ್ರವಜಿತಸೇನ ಸಮಾಹ್ವಯನಾದನಾತ್ಮಜಂ: **ಚಂದ್ರಪ್ರಪು,** ४. ೮೦)

**ಸುಧಾಸೂತಿ** – ಸುಧಾಜಾತ, ಚಂದ್ರ (ಅದೊಂದಿನಿಸು ಬೇಗದಿಂ .. .. ಮೃದುಮೃಣಾಳಸಂಕಾಶಮಾಯ್ತು ಅದೇಂ ಬಟಿಕೆ ಬಿಂಬದುಜ್ಜಳಿಕೆಯೋ ಸುಧಾಸೂತಿಯಾ: **ಆದಿಪು,** ೧೨. ೭)

**ಸುಧಾಸ್ಯಂದಿ** – ಅಮೃತವನ್ನು ಸುರಿಸುವ (ನಿರ್ಮಳಾಂಭಸ್ಸ್ವಯಂಭೂರಮಣಾಕೂಪಾರದೊಳ್ ಲೋಚನ ಹೃದಯ ಸುಧಾಸ್ಯಂದಿ ನಂದೀಶ್ವರದ್ವೀಪ ಮಹಾಚೈತ್ಯಾಳಿಯೊಳ್: **ಚಂದ್ರಪ್ರಪು,** ४. ೭೬)

**ಸುಧೆ** – ಸುಣ್ಣ (ಸುಧೆ ಸಿರಿಗಂಪು ಕುಂಕುಲರಸಂ ಕಳಮಾಕ್ಷತೆ ರತ್ನದರ್ಪಣಂ ವಿಧುಮಣಿ ಪೂರ್ಣಗುಂಭಮೆಸೆದತ್ತು: **ರಾಜಶೇವಿ,** ೮. ೧೧)

**ಸುನಾಕನಗ** – ದೇವಲೋಕದ ಬೆಟ್ಟ, ಮೇರು (ಮಂದರಂ ಮಱೆಗೆವಂದ ಸುನಾಕನಗಂಬೊಲೊಪ್ಪೆ ತೀವಿದುದು ಜಿನಾಭಿಷೇಕಸಲಿಲಂ ದೆಸೆಯಿಂ ನಭಮಂ ಧರಿತ್ರಿಯಂ: **ಮಲ್ಲಿನಾಪು,** ೧೨. ೧೦೬)

**ಸುನಾಸೀರ** – ದೇವತೆಗಳ ಒಡೆಯ, ಇಂದ್ರ (ಪಂಚರತ್ನಚೂರ್ಣವಿರಚಿತರಂಗವಲ್ಲೀ ವಿಳಾಸವಿರಾಜಿತ ಸುನಾಸೀರಶರಾಸನದೊಳ್: **ಆದಿಪು,** ೮. ೬೭ ವ)

**ಸುನಾಸೀರಶರಾಸನ** – ಇಂದ್ರನ ಬಿಲ್ಲು, ಕಾಮನ ಬಿಲ್ಲು (ಪಂಚರತ್ನಚೂರ್ಣವಿರಚಿತರಂಗವಲ್ಲೀ ವಿಳಾಸವಿರಾಜಿತ ಸುನಾಸೀರಶರಾಸನದೊಳ್: **ಆದಿಪು,** ೮. ೬೭ ವ)

**ಸುಪಕ್ಷ** – ಶುಕ್ಲಪಕ್ಷ (ಚಂದ್ರಮನಂತೆ ಸುಪಕ್ಷದಿಂದೆ ರಂಜಿಸಿದುದು: **ಯಶೋಧಚ,** ೩. ೭೮)

**ಸುಪರ್ಣ** – ಗರುಡ (ನಭದಂತೆ ಕುಜಯುತಂ ಹರಿಸಭೆಯಂತೆ ಸುಪರ್ಣರಮ್ಯಂ: ೧೭. ೫)

**ಸುಪರ್ಣೆ** – ಪಾರ್ವತಿ (ಜನಕಂ ತಾಂ ಸ್ಥಾಣು ಗಡಂ ಜನನಿಯೆ ಸುಪರ್ಣೆ ಗಡ: **ಸಮಯಪ,** ೮. ೧೮೮)

**ಸುಪರ್ಣಕೇತು** – ಗರುಡಧ್ವಜ, ವಿಷ್ಣು (ಅಂತು .. .. ಸುಪರ್ಣಕೇತು ಜೀಮೂತಪಥದಿಂದತಿವೇಗದಿಂ ಪೋಗೆ: **ಜಗನ್ನಾವಿ,** ೧೨. ೪ ವ)

**ಸುಪರ್ಣಧ್ವಜ** – ವಿಷ್ಣು, (ಶ್ರೀವತ್ಸಂ ನರಕಾರಿ ಅಧೋಕ್ಷಜಂ ಪೀತಾಂಬರಂ ಚಕ್ರಭೃತ್ ಗೋವಿಂದಂ ಹರಿ ಶೌರಿ ಮುಂಜವೃಹಿನಂ ಕಂಸಾರಿ ವಿಶ್ವಂಭರಂ ಮಾವತ್ಸಂ ಸ್ವಭವಂ ತ್ರಿವಿಕ್ರಮಂ ದಾಮೋದರಂ ಕೃಷ್ಣಂ ಅಬ್ಜವಾಸಾಪತಿ ವಿಷ್ವರಶ್ರವ ಹೃಷಿಕೇಶಂ ಸುಪರ್ಣಧ್ವಜಂ: **ಅಭಿಧಾವ,** ೧. ೧. ೨೨)

**ಸುಪರ್ವ** – ದೇವತೆ (ಅಗುರ್ವು ಪರ್ವೆ ಸುಪರ್ವರ್ ಪೊಗಟಲ್ಕೆ ಮೆಱೆದರ್ ಇಷುವಿದ್ಯೆಗಳಂ: **ಕರ್ಣನೇಮಿ,** ೧೨. ೧೬೩)

**ಸುಪರ್ವನದಿ** – ದೇವಗಂಗೆ (ಪುರಹರ ಚಂದ್ರಶೇಖರ ಸುಪರ್ವನದೀಭರ .. .. ಶಂಕರ: **ತ್ರಿಷಷ್ಟಿಪು,** ೩೫. ೨೬)

**ಸುಪಾಣಿ** – ಒಳ್ಳೆಯ ಮುತ್ತು (ಅಖಿಳಾಧಾರ ಕ್ಷೋಣಿಗಳ್ ಆಹಾ ಸುಪಾಣಿಗಳ್ ಶಂಕರನಾ: **ಗಿರಿಜಾಕ,** ೧೦. ೫೬)

**ಸುಪುತ್ರಃ ಕುಲದೀಪಕಃ** – ಒಳ್ಳೆಯ ಮಗನು ಕುಲವನ್ನು ಬೆಳಗುವವನು (ಅಲಘುತರ ಪ್ರಗುಣ ದಶಾಕಲಿತಂ ಜ್ಯೋತಿರ್ವಿಶೇಷದಿಂ ಪರಹಿತಮಂ ವಿಲಸತ್ಕಾಂತಿ ಸುಪುತ್ರಃ ಕುಲದೀಪಕಃ ಎನಿಸಿ ದುರ್ಗಸಿಂಹಂ ನೆಗಟ್ದಂ: **ಪಂಚತಂತ್ರ,** ೪೮)

**ಸುಪುಷ್ಪಪಟ್ಟ** – ರಾಜರೂ, ದೇವತೆಗಳೂ ಧರಿಸುವ ನಾನಾ ಬಗೆಯ ಕಿರೀಟಗಳಲ್ಲಿ ಒಂದು (ಆತ್ಮೀಯ ಸುಪುಷ್ಪಪಟ್ಟಮನೊಡಂಬಡೆ ತಾಳ್ದಿಯುಂ ಇಂತುದಾತ್ತನರಾಯಣನಾದ ದೇವನೆಮಗೀಗೆ ಅರಿಕೇಸರಿ ಸೌಖ್ಯಕೋಟಿಯಂ: **ಪಂಪಭಾ,** ೧. ೧) [ಡಿಎಲ್ಎನ್ ಅಂಗೀಕರಿಸಿರುವ ಪಾಠ]

**ಸುಪ್ತ** – ಮಲಗಿದ (ಪಂಪಾ ಸರಸ್ತೀರ ಸುಪ್ತೋತ್ಥ ವಿಹಂಗಧ್ವಾನವೀ ಪೊಣ್ಮುವುದು: **ಕಾದಂಸಂ,** ೮. ೬)

**ಸುಪ್ತಪ್ರಲಾಪ** – ಕನವರಿಕೆ (ಧೂರ್ತವರ್ಗದ ಮದಪ್ರಲಾಪ ಸುಪ್ತಪ್ರಲಾಪಿತಂಗಳಿಂದಂ .. .. ಮಂತ್ರಂ ಭೇದಕ್ಕೆ ಸಲ್ಗುಂ: **ಪಂಚತಂತ್ರ,** ೨೯೨ ವ)

**ಸುಪ್ತಿ** – ನಿದ್ದೆ (ಸುಪ್ತಿಯೊಳ್ ಕನವರಿಸುತುಮಿರ್ಪ ಹರಿ ಗೋಪಿಗೆ ವಿಸ್ಮಯಮಂ ನೆಗಟ್ಚಿದಂ: **ಜಗನ್ನಾವಿ,** ೩. ೫೯)

**ಸುಪ್ಪಲ್** – ಒಂದು ಬಗೆಯ ಭಕ್ಷ್ಯ, ಚಾಕಣ (ಅರಾತಿನಾಥರಡಗಂ ಸುಪ್ಪಲ್ಗೆ ಕೆನ್ನೆತ್ತರಂ ಕೆನೆಗೊಂಡಾಜಿದ ಪಳ್ಗೆ ದೊಂಡೆಗರುಳಂ ಕರ್ಬಿಂಗೆ ಲೆಕ್ಕಕ್ಕೆ ತಂದು: **ಪಂಪಭಾ,** ೧೨. ೧೬೦)

**ಸುಪ್ರತಿಷ್ಠ** – [ಜೈನ] ಅರವತ್ತುಮೂರು ಇಂದ್ರಕ[ವಿಮಾನ]ಗಳಲ್ಲಿ ಒಂದು (ಚಂದ್ರ ಸುಪ್ರತಿಷ್ಠಮೆಂಬ ಕೂಟಾಷ್ಟಕಂಗಳೊಳ್ ರಮಿಯಿಸುವ .. .. ಎಣ್ಬರುಂ ದಿಗಂಗನೆಯರಂ ನಾಭಿರಾಜಾಂಗನೆಗೆ ಮಣಿದರ್ಪಣಮಂ ಪಿಡಿಯಲುಂ: **ಆದಿಪು,** ೭. ೩ ವ)

**ಸುಪ್ರತಿಷ್ಠಕ** – [ಜೈನ] ಮಂಗಳದ್ರವ್ಯಗಳ ಪಾತ್ರೆ (ಅದು ಅನಾದ್ಯನಿಧನಗುಣಯುತಂ ಅದು ಅಕೃತ್ರಿಮಂ ಅದು ಮರುತ್ತಿಕಾವೇಷ್ಟಿತಂ ಅಂತದು ಸುಪ್ರತಿಷ್ಠಕೋಪಮಂ ಅದು ಜಿನಮತದೊಳ್ ದ್ವಿಸಪ್ತರಜ್ಜೂತ್ಸೇಧಂ: **ಆದಿಪು,** ೧. ೪೪)

**ಸುಪ್ರತೀಕ** – ದಿಗ್ಗಜ (ಸುಪ್ರತೀಕಂ ಉಜ್ಜ್ವಲತರ ಪುಷ್ಪದಂತಂ ಅಮರೇಭಗತಂ: **ಅಜಿತಪು,** ೬. ೬೪); ಈಶಾನ್ಯ ದಿಗ್ಗಜದ ಹೆಸರು (ಬಲ್ಪಿಂ ಸದೃಶಂ ತಾಂ ಸಾರ್ವಭೌಮಕ್ಕೆ ಎಣೆ ಕಲಿತನದಿಂ ಸುಪ್ರತೀಕಕ್ಕೆ ಇಭೇಂದ್ರಂ: **ತ್ರಿಷಷ್ಟಿಪು,** ೨. ೫೫)

**ಸುಪ್ರತೀಕಪತಿ**– [ಜೈನ] ಈಶಾನಕಲ್ಪದ ಒಡೆಯ (ಸಮೆಯಿಸಿದ ವಿಶಾಲಕ್ರೋಡಶಾಲೆಗಳೆನಿಸಿದ ಚೆಂಬೊನ್ನ ಕಲಶದ ಮಾಡಶಾಲೆಗಳುಮಂ ನೋಡಿ ಪೊಗಟ್ದು: **ಶಾಂತಿಪು,** ೩. ೧೯ ವ)

**ಸುಪ್ರಬುದ್ಧ** – ಜೈನ] ಅರವತ್ತುಮೂರು ಇಂದ್ರಕ[ವಿಮಾನ]ಗಳಲ್ಲಿ ಒಂದು (ಸುಪ್ರಬುದ್ಧ ರುಂದ್ರವಿಮಳ ರುಚಿ ರುಚಿಕೋತ್ತರ ಚಂದ್ರ ಸುಪ್ರತಿಷ್ಠಮೆಂಬ ಕೂಟಾಷ್ಟಕಂಗಳೊಳ್ ರಮಿಯಿಸುವ .. .. ಎಣ್ಬರುಂ ದಿಗಂಗನೆಯರಂ ನಾಭಿರಾಜಾಂಗನೆಗೆ ಮಣಿದರ್ಪಣಮಂ ಪಿಡಿಯಲುಂ: **ಆದಿಪು,** ೭. ೩ ವ)

**ಸುಪ್ರಭ** – [ಜೈನ] ಒಂದು ವಿಮಾನದ ಹೆಸರು (ಕಮಳಪ್ರಭೆಯುಂ ಸುಪ್ರಭವಿಮಾನದೊಳ್ ವಿಮಲಪ್ರಭನೆಂಬ ದೇವನಾದಳ್: **ನೇಮಿನಾಪು,** ೪. ೮ ವ)

**ಸುಪ್ರಭೆ** – ಒಳ್ಳೆಯ ಕಾಂತಿ (ಸುಪ್ರಭೆಯಿನೆಸೆವ ಮಣಿರಚನಾಪ್ರಥಿತಮನುದ್ವಜೈನಗೇಹಮನಾ ವೈಶ್ಯಪ್ರಭು ಬಲವರೆ ಕಂಡಂ: **ಕರ್ಣನೇಮಿ,** ೪. ೭೮)

**ಸುಪ್ರಾಸುಕ** – [ಜೈನ] ಜೀವಜಂತುಗಳಿಲ್ಲದೆ ಶುದ್ಧವಾಗಿರುವ (ಮಹಾಕಾಳದೊಳ್ ಸುಪ್ರಾಸುಕ ಪ್ರದೇಶಮಂ ಕಂಡು ಯೋಗಯೋಗ್ಯಪ್ರದೇಶಮಪ್ಪುದದೆಂದು ಏಕಾಗ್ರಚಿತ್ತದೊಳ್ ಏಕ ಪಾರ್ಶ್ವದೊಳ್ ಮೆಯ್ಯನಿಕ್ಕಿ: **ಸುಕುಮಾಚ,** ೧೨. ೧೮ ವ)

**ಸುಪ್ರೀತಿ** – [ಜೈನ] ಗರ್ಭಾನ್ವಯಕ್ರಿಯೆಗಳಲ್ಲಿ ಒಂದು, ಗರ್ಭಿಣಿಗೆ ಐದನೆಯ ತಿಂಗಳಲ್ಲಿ ಮಾಡುವ ಒಂದು ಸಂಸ್ಕಾರ (ಪ್ರೀತಿ ಸುಪ್ರೀತಿ ಧೃತಿ .. .. ಲಿಪಿಸಂಖ್ಯಾನಸಂಗ್ರಹ ಉಪನಯನಬ್ರತಚರ್ಯ .. .. ಯೋಗತ್ಯಾಗಾಗ್ರನಿರ್ವೃತಿಯೆಂಬ ಅಯ್ವತ್ತುಮೂಱು ಗರ್ಭಾದಿರ್ವಾಣಪರ್ಯಂತಂಗಳಪ್ಪ ಗರ್ಭಾನ್ವಯಕ್ರಿಯೆಗಳಂ: **ಆದಿಪು,** ೧೫. ೧೫ ವ)

**ಸುಫಲ** – ಸಮೃದ್ಧಿ (ಪಸವಿನೊಳ್ ಅನ್ನಮಂ ಸುಫಲದಲ್ಲಿ ಸುವರ್ಣಮಂ ಈವ ಯುದ್ಧದೊಳ್ ಕುಸಿಯದೆ

ಸೂಳೆಗೊಳ್ಳದೆ ರಣಕ್ಕೆ ಶುಚಿತ್ವಮಂ ಅಪ್ಪುಕೆಯ್ವ ಮಾನಸಿಕೆಯ ನಾಲ್ವರುಂ ನಮಗೆ ವಂದ್ಯರ್: **ಗದಾಯು,** ೪. ೬೦)

**ಸುಬ್ಬರಸೂಳಿ** – ಎಲ್ಲವನ್ನೂ ದೋಚುವುದು (ಮುಜೆದಿಕ್ಕಿ ಸುಬ್ಬರಸೂಳೆಯಾಗೆ ಮಡಿವರ್ಗಮಂ ಗೋವರ್ಕಳ್ಗೆ ಸೂಳೆಗೊಟ್ಟಸಗವೊಟೆಯಂ ಪುಯ್ಯಲಿಡಿಸೆ: **ನೇಮಿನಾಪು,** ೧೦. ೮೦ ವ)

**ಸುಭಗ** – ಸುಂದರವಾದ (ಪುಟ್ಟಿದಂ .. .. ಶೃಂಗಾರಕಾರಾಗೃಹಂ ಅತಿಸುಭಗಂ ರೂಪಕಂದರ್ಪದೇವಂ: **ಲೀಲಾವತಿ,** ೧. ೯೩); ಶ್ರೇಷ್ಠ; ಚೆಲುವ; ಪುಣ್ಯವಂತ (ಬರ್ದೆಯರ್ ಒಲವಿಂ ಬಯಸಿ ಬಂದೊಡಂ ಬಗೆಯದ ಸುಭಗನ್ಯೆ ನೀಂ: **ಲೀಲಾವತಿ,** ೪. ೩೮)

**ಸುಭಗೆ** – ಸೌಭಾಗ್ಯವತಿ (ಬಳೆದ ನಿತಂಬದೆ ಕಾಂಚೀಕಳಾಪಮಂ ಕಟ್ಟಲಣಮೆ ನೆಱೆಯದು ಎಂದಗ್ಗಳಿಸಿ ಕುಳಿಕೆಗಳಿನೇಂ ಕಣ್ಗೊಳಿಸಿದುದೋ ಸುಭಗೆಯಾದ ಸುದತಿಯ ಗರ್ಭಂ: **ಪಂಪಭಾ,** ೧. ೧೪೩)

**ಸುಮನಸ್** – ಹೂ (ಸುಮನಃಸ್ಥಿತಿ ವಾಸನೆಬಡೆದಿರೆ ಸನ್ನುತ ಮಾಲೆಯನೆತ್ತುವಂತೆ ಮಾಲಾಕಾರಂ: **ಧರ್ಮಮಧು,** ೧. ೪೫), ದೇವತೆ (ಸಮನಿಸಿದ ಅವಧಿಜ್ಞಾನದಿಂ ಅಮರ್ತ್ಯಪದವೀಶನಾದ ತೆಱನಜೆದು ಅರ್ಹತ್ತ್ರಮ ಕಮಳಮನರ್ಚಿಸಿ ಸುರಸುಮನಃಕುಲದಿಂದೆ ಸುಮನನಾದಂ ಸುಮನಂ: **ಶಾಂತೀಶ್ವಪು,** ೭. ೬೧)

**ಸುಮನಶ್ಚಾಪ** – [ಸುಮನಸ್+ಚಾಪ] ಮನ್ಮಥ (ಜನಿಯಿಸಿದಂ ರೂಪವಿಲಾಸದೆ ಸುಮನಶ್ಚಾಪಂ ತಾನೆನಿಸಿ ವಿಜಯಭದ್ರಕುಮಾರಂ: **ಶಾಂತೀಶ್ವಪು,** ೨. ೪೨)

**ಸುಮನೋದಾಮ** – ಹೂಹಾರ (ಜಳ ಗಂಧಾಕ್ಷತ ಪಾರಿಜಾತ ಸುಮನೋದಾಮಂಗಳಿಂ ರಾಮಕೇವಳಿಯಂ ಪೂಜಿಸಿ: **ಪಂಪರಾ,** ೧೬. ೭೫)

**ಸುಮನೋಬಾಣ** – ಹೂಬಾಣ, ಮನ್ಮಥ (ಪುಳಿಂದಂ ಸುಮನೋಬಾಣಂ ತದ್ಭೂರಮಣನಂ ಒಲಿದಂತೆ ಗೋರಿಗೊಳಿಸುತ್ತಿರ್ಕುಂ: **ಯಶೋಧಚ,** ೨. ೯)

**ಸುಮನೋಬಾಣಕ್ರೀಡೆ** – ಕಾಮಕೇಳಿ (ಸುಮನೋಬಾಣಕ್ರೀಡೆಗೆ ಸುಮನೋಮಿಥುನಂಗಳೆಳಸಿ ರಮಿಯಿಪ ನಾನಾ ಸುಮನೋಲತಾಗೃಹಂಗಲ ಸುಮನಶಯ್ಯೆಗಳೊಪ್ಪುಗುಂ ಸೌಮನಸಂ: **ಮಲ್ಲಿನಾಪು,** ೧೨. ೬೧)

**ಸುಮನೋಮಂಜರಿ** – ಹೂಗೊಂಚಲು (ಭ್ರಮರಹಿತಂ ಹೃದ್ಯಂಸ್ಮೇರಮುಖಂ ಲೋಕೈಕಹಿತಕರಂ ಸುಕುಮಾರಂ ಸಮನಿಸುಗೆ ಎಂದರ್ಚಿಸಿದಳ್ ಸುಮನೋಮಂಜರಿಯಿಂ ಆಕೆ ಸುಮನಸ್ಸುತನಂ: **ಮಲ್ಲಿನಾಪು,** ೪. ೨೮)

**ಸುಮನೋಮಾಲಿಕೆ** – ಸುಮನೋದಾಮ (ಸದ್ವಸ್ತನಾಖಂಡಳವನ ಸುಮನೋಮಾಲಿಕಾಲಂಬ ಲೀಲಾರ್ಚನೆಯಂ .. .. ಸರ್ವಜ್ಞಬಿಂಬಾವಳಿಗೆ ಪರಸಿದರ್ ಮಸ್ತಕನ್ಯಸ್ತಕಸ್ತರ್: **ಆದಿಪು,** ೧೪. ೧೧೬)

**ಸುಮನೋವರ್ಷ** – ಹೂಮಳೆ (ಕ್ಷಣದೊಳ್ ಸುಮನೋವರ್ಷಂ ಸುರಿದುದು ನಮೇರು ಮಂದಾರ ಪಾರಿಜಾತಪ್ರಭವಂ: **ಪಾರ್ಶ್ವನಾಪು,** ೫. ೮೮)

**ಸುಮನೋವಿಶಿಖ** – ಸುಮನೋಬಾಣ (ಸುಮನೋವಿಶಿಖ ವಿಜಯನಂ ಸುಮನದಿಂದರ್ಚಿಸುವ ಭಕ್ತಿ ಮೆಯ್ವೆರ್ಚೆ ಕರಂ ಸುಮನಸ್ಸಮಿತಿಯಂ ಆಯ್ವರ್ ಸುಮನಸ್ತಿಯರ್ ತದೀಯ ವಲ್ಲೀವನದೊಳ್: **ಶಾಂತೀಶ್ವಪು,** ೧೬. ೪೬)

**ಸುಮೇರುಮೇಖಳೆ** – ಮೇರುಪರ್ವತದ ತಪ್ಪಲು (ನಮೇರುಭೂಜಮಂ ತಳೆದ ಸುಮೇರುಮೇಖಳೆ ಸುಧಾರಸಮಂ ತಳೆದೋಷಧೀಶನಿರ್ಮಳಕಳೆ .. .. ಎಂಬ ಲೀಲೆಯಿಂ ತಳೆದಳಿಳಾಧಿರಾಣ್ಮಹಿಳೆಯಂದು ಜಿನಾರ್ಭಕನಂ ಸ್ವಗರ್ಭದೊಳ್: **ಚಂದ್ರಪ್ರಪು,** ೧೨. ೨೮)

**ಸುಮೇಷು** – [ಸುಮ+ಇಷು] ಹೂಬಾಣ (ಸುಮೇಷುಸೂತ್ರಧಾರಂ ತಳೆದಾಡಿಮೊಂದು ಪೊಸಸೂತ್ರದ ಪುತ್ರಿಕೆಯಂತಿರಾಡಿದರ್: **ರಾಜಶೇವಿ,** ೧೨. ೯೫)

**ಸುಮ್ಮಗೆ** – ಮಾತಿಲ್ಲದೆ (ಅನೆಯ ನಕಾರಕ್ಕೆ ವಿಕಲ್ಪದಿಂ ಗಕಾರಂ: ನೆಟ್ಟನೆ–ನೆಟ್ಟಗೆ ಸುಮ್ಮನೆ–ಸುಮ್ಮಗೆ ಕಮ್ಮನೆ–ಕಮ್ಮಗೆ ಬಿನ್ನನೆ–ಬಿನ್ನಗೆ: **ಶಬ್ದಮದ,** ೩೧೫ ಪ್ರ)

**ಸುಮ್ಮಾನೆ** – ಸಂತೋಷಭರಿತೆ (ಅರಳೆಲೆಯ ತರಳೆಗೆ ಸೂಸಕದ ಸುಮ್ಮಾನೆಗೆ ಮಾಗಾಯ್ಗಳ ಮುಗ್ಧೆಗೆ: **ಗಿರಿಜಾಕ,** ೩. ೯೧ ವ)

**ಸುಯ್** – ಉಸಿರು (ಸುಯ್ ಕಂದಿಸಿದ ಅಧರಕ್ಕೆ ಸುಧಾಬಿಂದುಗಳಂ ತಳಿಯೆ ದಂತಕಾಂತಿ ಪ್ರಸರಂ: **ಯಶೋಧಚ,** ೩. ೮); ನಿಟ್ಟುಸಿರುಬಿಡು (ಕೂರದದನಿಂ ಒಡ್ಡಿದಂ ಪಗೆಗೆ ಸಂತಸಮಾಗಿರೆ ಮರಿ ಸುಯ್ಯುಗಮೇ: **ಪಂಪಭಾ,** ೩. ೪)

**ಸುಯಿಧಾನ** – ಎಡೆ, ಮೀಸಲು (ಲಿಂಗಕ್ಕೆ ಸುಯಿಧಾನವಪ್ಪ ಅಗ್ಘವಣಿಯಾಗಲ್ವೇಳ್ಕೆಂದು: **ತ್ರಿಷಷ್ಟಿಪು,** ೩೧. ೪ ವ)

**ಸುಯ್ಯಾನ** – ಕಾವಲು (ಆಂ ನೆರೆಯೂರ್ಗೆ ಪೋಗಿ ಬಂದಪೆಂ ನೀಂ ಮನೆಯಂ ಸುಯ್ಯಾನಂ ಮಾಡಿಕೊಂಡಿರು: **ಪಂಚತಂತ್ರ,** ೨೧೯ ವ)

**ಸುಯ್ಯತಾಣ** – ಕಸೂತಿ ಮಾಡಿದ ಬಟ್ಟೆ (ಬಳಿದೋರಣಮಾಯ್ತು ಹಾರದ ಪಚ್ಚೆಸಾರದ ಮಾಲೆ ಸೌಧಾಳಿಯೊಳ್ಗುಡಿಯಾಯ್ತು ಚೀನದ ಸುಯ್ಯತಾಣದ ಪಟ್ಟೆ ಹರ್ಮ್ಯಾಳಿದಪ್ಪದೆ ರಯ್ಯಮಾಯ್ತೆಸೆವ ಆಟಪಾಟದ ಗೀತಿ .. .. ತತ್ಪುರಮಧ್ಯದೊಳ್: **ಪಂಪಭಾ,** ೪. ೧೫)

**ಸುಯ್ಯಾಣ** – ಸುಯ್ಯತಾಣ (ಕಂಬಂಗಳೊಳೆಲ್ಲಂ ಸುಯ್ಯಾಣದ ಚಿನ್ನದ ಪಟೆಯ ಸಕಳವಟ್ಟೆಗಳಂ ಸುತ್ತಿಸಿ: **ಪಂಪಭಾ,** ೩. ೪೦ ವ)

**ಸುಯ್ವೆಂಕೆ** – ನಿಟ್ಟುಸಿರಿನ ಬಿಸಿಮ (ವಿರಹಾವರ್ಸತೆಯನಪ್ಪುಕೆಯ್ದು ಪಿರಿದುಂ ಸುಯ್ವೆಂಕೆಯಿಂ ಪಂಕಜೋತ್ಕರಮಂ ಕಂದಿಸುತುಂ: **ಕುಸುಮಾಕಾ,** ೧೦. ೪)

**ಸುರ** – ದೇವತೆ (ಸುರ ದನುಜ ಭುಜಗ ವಿದ್ಯಾಧರ ನರ ಸಂಕುಲದೊಳ್ ಆರನಾದೊಡಂ ಏನೋ ಗರಮುಟ್ಟೆ ಕೊಲ್ಗುಂ ಇದು ನಿಜವಿರೋಧಿಯಂ ಧುರದೊಳ್ ಎಂದು ಶಕ್ತಿಯನಿತ್ತಂ: **ಪಂಪಭಾ,** ೧. ೧೦೩)

**ಸುರಕರಿ** – ಐರಾವತ (ಸುರಕರಿ ನೀರಾಟದೊಳ್ ಅಂಬರಗಂಗೆಯೊಳ್ ಒಕ್ಕಲಿಕ್ಕಿ ಕಿತ್ತೀಡಾಡಲ್: **ತ್ರಿಷಷ್ಟಿಪು,** ೯. ೨೧)

**ಸುರಕಾಯಸ್ಥಿತಿ** – ದೇವತೆಯ ದೇಹವನ್ನು ಪಡೆದ ಸ್ಥಿತಿ (ಸುರಕಾಯಸ್ಥಿತಿ ಸಮನಿಸುತಿರೆ ಪರಕಾಯಪ್ರವೇಶಂ ಏವುದು ಎಂಬಂತಿರೆ ಪಕ್ಷಿ ಶರೀರದಿನವತರಿಸಿ ಸುರಂ ತನಗೆ ಮೊಟ್ಟೆ ಮೊಡೆವಡೆ: **ಶಾಂತಿಪು,** ೯. ೯೨)

**ಸುರಖ** – ಕಳ್ಳತನವನ್ನು ಪತ್ತೆಮಾಡುವ ಕಲೆ (ಕಳ್ಳರನಾರಯ್ವ ತೆಱನಂ ಪೇಟ್ವ ಸುರಖಮೆಂಬ ಓದಂ ಕಲ್ತೊಂ ಆನುಂ

ಕಳ್ವುಪಾಯಮಂ ಪೇೞ್ವ ಕರಪಟಶಾಸ್ತ್ರಮಂ ಕಲ್ತೆಂ: **ವಡ್ಡಾರಾ,** ಪು ೧೨೮, ಸಾ ೨೫)

**ಸುರಗಿ –** [ಸುರಿಕಾ] ಸಣ್ಣ ಕತ್ತಿ (ತೊಟ್ಟ ಎಕ್ಕವಡಂ ಮರವಿಲ್ ಕಟ್ಟಿದ ಪಣೆಕಟ್ಟು ಬೇಂಟೆವೞಿ ದೊರೆಯೊಳ್ ಒಡಂಬಟ್ಟ ಅಸಿಯ ಸುರಗಿ ದಳಿವದ ತೊಟ್ಟ ಅಂಗಿಗೆ ತನ್ನೊಳ್ ಅಮರೆ ಬೇಂಟೆಯನೊರ್ವಂ; **ಪಂಪಭಾ,** ೫. ೩೬); ಒಂದು ಹೂ (ಸುರಗಿ ಮಲ್ಲಿಗೆ ಜಾಜಿ ಸಂಪಿಗೆ ಮೊಲ್ಲೆ ಕೇದಗೆ ಸಂದ ಪಾದರಿಯ ಪೂಗಳನಾವಗಮ ನೆಱೆಸೂಱೆಗೊಂಡು: **ಧರ್ಮಾಮೃ,** ೨. ೧೬)

**ಸುರಗೆವೆಕ್ಕಣ –** ಪೆಕ್ಕಣ ಎಂಬ ನೃತ್ಯದ ಒಂದು ಪ್ರಭೇದ (ಪೊಸತೆನಿಪ ಸುರಗೆವೆಕ್ಕಣಂ ಎಸೆದಿರೆ ಕಡುವೊಸತು ಬಣ್ಣರಸಂ ಎಸೆದಿರೆ ನಿಪ್ಪೊಸತೆನಿಪ ದೇಸೆ ಮಾಸಱಂ ಎಸೆದಿರೆ ಸಭೆ ಮೆಚ್ಚೆ ಪೊಚ್ಚಪೊಸತಾಯ್ತು ರಸಂ: **ಅಜಿತಪು,** ೫. ೩೩)

**ಸುರಗೋಪ –** ಮಿಂಚುಹುಳು (ಸ್ಫುರಿತ ತಟಿತ್ ಪ್ರಭಾಪ್ರತತಿ ಕಟ್ಟಿಲೆಯಂ ಸುರಗೋಪಕಾಂತಿ ಪಾಂಡುರತೆಯಂ .. ... ವಿರಹಿಜನಕ್ಕೆ ಮಾಡಿದುದು: **ಕಾದಂಬ,** ೯. ೯೭)

**ಸುರಚಾಪ –** ಕಾಮನ ಬಿಲ್ಲು (ಕರ್ಬುರಘನಕಾಂತಿಕಾಂತ ಕಬರೀಭರೆ ಮಾರುತಯಾನಯಾನೆ ಭಾಸುರ ಸುರಚಾಪ ಚಿತ್ರವಸನಾವೃತೆ ನೀರದಲಕ್ಷ್ಮಿ ರಾಜಿಪಳ್: **ಶಾಂತೀಶ್ವಪು,** ೧೨. ೫೧)

**ಸುರಜ್ಯೇಷ್ಠ –** ದೇವತೆಗಳ ಹಿರಿಯ, ಬ್ರಹ್ಮ (ಶ್ರೀ ಜಗನ್ನಾಥವಿಜಯ ಮಹಾಪ್ರಬಂಧದೊಳ್ ಸುರಜ್ಯೇಷ್ಠವಿಜ್ಞಾಪನಾಕರ್ಣನ .. .. ವರ್ಣನಂ: **ಜಗನ್ನಾವಿ,** ೧. ೮೦ ಆಶ್ವಾಸಾಂತ್ಯ ಗದ್ಯ)

**ಸುರತ –** ರತಿಸುಖ (ಅಂತಾ ಬಾಲೆ ಕಾಯ್ದ ಪುಡಿಯೊಳಗೆ ಬಿಸುಟ್ಟ ಎಳವಾಳೆಯಂತೆ ಸುರತ ಮಕರಧ್ವಜನೊಳಾದ ಬೇಟದೊಳ್ ಮಮ್ಮಲ ಮಱುಗುತಿರ್ದಳ್: **ಪಂಪಭಾ,** ೫. ೧೦ ವ)

**ಸುರತನಿಧಾನಿ –** ರತಿಸುಖಕ್ಕೆ ನಿಧಿಯಾದವಳು (ಸ್ನಾನಾರ್ಥಂ ಒಂದು ಕಳಶಮಂ ನಿಯಮನಿಧಾನಂ ಎಟಲೆ ಪಿಡಿದು ಅಮಳಿನ ಗಂಗಾನದಿಗೆ ವಂದು ಸುರತನಿಧಾನಿ ಅಮರೇಂದ್ರಗಣಿಕೆಯಂ ಮುನಿ ಕಂಡಂ: **ಪಂಪಭಾ,** ೨. ೪೧)

**ಸುರತರಂಗಿಣಿ –** ದೇವನದಿ (ಸುರತರಂಗಿಣಿ ಎಂಬಂತಿರೆ ಜಿನಶಿಶುಸವನದ ಪಾಲ್ವರಿ ಎಸೆದುದು ಸುತ್ತಿ ಸುರಿದ ಸರಭಸದಿಂದಂ: **ಶಾಂತೀಶ್ವಪು,** ೧೪. ೧೩೬)

**ಸುರತರಸ –** ವೀರ್ಯ, ಮದನಜಲ (ರಥಾಂಗಮೊಂದಿತಾ ಸುರತರಸ ಬಿಂದುದ್ವಯಂ ಪಳಂಚಿದ ತೆಱದಿಂ: **ಕುಸುಮಾಕಾ,** ೬. ೪೩)

**ಸುರತರು –** ಸುರಕುಜ (ಪರಿಣತ ಸುರತರುವಂ ಪೋಲ್ತು ಸೊಗಯಿಸಿರ್ದಂ ಮುನಿಪಂ: **ಕಾದಂಬ,** ೧. ೨೦೧)

**ಸುರತಸುಖ –** ಸಂಭೋಗಸುಖ (ಇತ್ತಲ್ ತಂತುವಯಿಕೆ ಜಾರನೊಳ್ ನೆರೆದು ಸುರತಸುಖಮಂ ಅನುಭವಿಸುತ್ತಿರ್ಪನ್ನೆಗಂ: **ಪಂಚತಂತ್ರ,** ೧೩೧ ವ)

**ಸುರತಾಲಯ –** ಸಂಭೋಗದ ಸ್ಥಳ, ಮಲಗುವ ಮನೆ (ಎಸೆವ ಪವಡಿಸುವ ಮನೆ ಚಿತ್ರಸಾಲೆ ಸುರತಾಲಯ ಮಹೀಗೃಹಂ ಆರೋಗಿಸುವ ಮನೆ ಮಂಡಪಂ ಗುಣಣಸಾಲೆ ಎಂಬಿನಿತುಮಂ ಗೃಹಾಂಗಂ ಕುಡುಗುಂ: **ಶಾಂತಿಪು,** ೬. ೧೧೬)

**ಸುರತಾವಸಾನ –** ರತಿಕ್ರೀಡೆಯ ಕೊನೆ (ಕೂಡಿದ ಕೂಟದಿಂದ ಒಲಿಸಿದ ಇರ್ವರುಮಂ ಸಮಪಾತವಾರಿಯಿಂ ಕೋಡೆ ಸರಾಗದೊಳ್ ಮುಱುಗಿ ಮೂಡೆ ಮೃಗಾಂಕಕರಂ ಪಯೋರಸಂ ತೀಡುವ ತಂಬೆಲರ್ ಮನದೊಳ್ ಉರ್ಕೆಗಳಂ ಸುರತಾವಸಾನದೊಳ್ ಮಾಡೆ ರತಕ್ಕೆ ಮತ್ತೆ ಬಗೆದಂದುದು ದಂಪತಿ ಸೌಧಕೂಟದೊಳ್: **ಶಾಂತಿಪು,** ೮. ೧೦೦)

**ಸುರತಾಸಕ್ತ –** ಸಂಭೋಗದಲ್ಲಿ ತೊಡಗಿರುವವನು (ಸುರತಾಸಕ್ತನಂ ಅನ್ಯಕಾರ್ಯಪರನಂ ನಿದ್ರಾಳುವಂ .. .. ಕುಕ್ಕುಟ ಮಲ್ಲ ಮೇಷ ಮಹಿಷೇಭದ್ವಂದ್ವಯುದ್ಧಕ್ರಿಯಾ ಪರನಂ ಭೂಪನಂ ಎಯ್ದಿ ಬಿನ್ನವಿಸಬೇಡ: **ಪಂಚತಂತ್ರ,** ೮೩)

**ಸುರತೂರ್ಯ –** ದೇವದುಂದುಭಿ (ಸುರತೂರ್ಯಂ ತೂರ್ಯಂ ಸುರತರು ಕುಸುಮಾಸಾರಂ ಅರ್ಘ್ಯಂ: **ಪಾರ್ಶ್ವನಾಪು,** ೧೬. ೮೦)

**ಸುರತ್ವ –** ದೇವತೆಯ ಸ್ಥಿತಿ (ಇರುಳುಂ ಪಗಲುಂ ಜಾನಿಸಿ ಸುರತ್ವಮಂ ಕೊಟ್ಟು: **ಶಾಂತಿಪು,** ೪. ೬೯)

**ಸುರದಾರಕ –** ದೇವಬಾಲಕ (ಶ್ರೀಪತಿ ಸುರದಾರಕರೊಡನೆ ಆಪೊತ್ತುಂ ನೆರೆದು ರತ್ನಧೂಳೀಪಟಲವ್ಯಾಪಿತತನು ಮೃದುಮುಗ್ಧಾಳಾಪಂ ಬಳೆದಂ ಸರಸ್ವತೀಮಣಿಹಾರಂ: **ಆದಿಪು,** ೮. ೧)

**ಸುರದಿಕ್ಕಾಮಿನಿ –** ಪೂರ್ವದಿಕ್ಕು ಎಂಬ ಹೆಣ್ಣು (ಸುರದಿಕ್ಕಾಮಿನಿ ಪೊಯ್ಯೆ ಮೇಗೊಗೆದ ಶೋಣಂ ಕಂದುಕಂ ತಾನಿದೆಂಬರ ಮಾತಿರ್ಕೆ: **ಚಂದ್ರಪ್ರಪು,** ೮. ೧೦೪)

**ಸುರದೀರ್ಘಿಕೆ –** ದೇವನದಿ (ಸುರದೀರ್ಘಿಕೆ ಮಂದಾಕಿನಿ ಸುರನದಿ ವಿಷ್ಣುಪದಿ ಗಂಗೆ ಜಾಹ್ನವಿಯಕ್ಕುಂ: **ಅಭಿಧಾವ,** ೧. ೧. ೫೬)

**ಸುರದುಂದುಭಿ –** [ಜೈನ] ಅಷ್ಟಮಹಾಪ್ರತಿಹಾರ್ಯಗಳಲ್ಲಿ ಒಂದು, ದೇವದುಂದುಭಿ (ಪ್ರಕಟಯಶೋದುಂದುಭಿ ಸಿಂಹಾಸನ ಸುರದುಂದುಭಿಪತಿಚರಣ ಕಮಲಭೃಂಗಂ ಪಂಪಂ: ಆದಿಪು, ೧. ೩೩)

**ಸುರಪತಿ –** ದೇವತೆಗಳ ಒಡೆಯ, ಇಂದ್ರ (ಅದಱ ವಿಶಾಳತೆವೆತ್ತಿರ್ಪ ತತ್ಪ್ರಥಮಶಾಳದೊಳಗ್ರ ಸುರಪತಿ ಪಿತೃಪತಿ ಶರಧಿಪತಿ ಧನದಪತಿಗಳ ಕೇಳೀವಿಲಾಸ ಶೋಭಿತಂಗಳಪ್ಪ ನಾಲ್ಕುಂ ದೆಸೆಗಳ ಮಣಿರತ್ನ ಹರ್ಮ್ಯಂಗಳುಮಂ: **ಶಾಂತೀಶ್ವಪು,** ೧೬. ೩೧ ವ); ರತ್ನಪಕ್ಷಿ (ಸುರಪತಿಯ ಬೆಳ್ಗಡಿಯ ರಥಚರಣದ ಪಾವಕನ .. .. ಪೆಸರ ಖಗಕುಳಂ ಕರಮೆಸೆಗುಂ: **ರಾಜಶೇವಿ,** ೫. ೬೦)

**ಸುರಭಿ –** ಕಾಮಧೇನು (ದಿವಿಜತತಿ ಬಯ್ತ ಕೈದುವಂ ಅವಸರದೊಳ್ ಬೇಡೆ ಸುರಭಿಯಿಂ ನಕ್ಕಿಸೆ .. .. ಕಯ್ದುವಾದುವಾ ಗೊರವನೆಲ್ವು: **ಸಮಯಪ,** ೧೦. ೧೪೨); ಹಸು (ಸುರಭಿಗಳ ಮೊಲೆಗಳನುಣ್ಬ ಅವಱ ಮಱೆಗಳಂ ಪೋಗೆ ನೂಂಕಿ ಕೂಂಕಿ ಮೊಲೆಗಳನುಣ್ಬ ಕಿಶೋರಕೇಸರಿಗಳುಮಂ: **ಪಂಪಭಾ,** ೧. ೧೧೫ ವ); ಸುವಾಸನೆ (ಜಳರುಹನಾಭನ ನಾಭಿಯ ಜಳಬುದ್ಬುದದೊಳಗೆ ಸುರಭಿಪರಿಮಳಮಿಳಿತ ಉಲ್ಲುಳಿತ ಅಳಿ ಜಲಜಮಾಯ್ತು ಆ ಜಳಜದೊಳಗೆ ಒಗೆದಂ ಹಿರಣ್ಯಗರ್ಭಂ: **ಪಂಪಭಾ,** ೧. ೫೯); ವಸಂತ (ಸುರಭಿ ವಸಂತಕ್ಕಾಖ್ಯಾಂತರಂ: **ಅಭಿಧಾವ,** ೧. ೨. ೧೩)

**ಸುರಭಿಪಯ** – ಅಮೃತ (ಆಗಳಾ ರಾಜಶೇಖರಂ .. .. ಕಲ್ಪತರುಸಸ್ಯದಂತೆ ಸುರಭಿಪಯದೊಳ್ ಮುಳುಂಗಿ .. .. ಶಿವಪ್ರಭವಮಂ ಪಡೆದು: **ರಾಜಶೇವಿ,** ೧೦. ೫೭ ವ)

**ಸುರಭಿಲಾಲೆ** – ಗಂಧೋದಕದ ಧಾರೆ (ಸುರಿವ ಮಧುದ್ರವಂ ಸುರಭಿಲಾಲೆಗಳಂತೆ .. .. ಇರೆ .. .. ಲತೆಯಂ ಲಲಿತಾಂಗಿ ನೋಡಿದಳ್: **ಲೀಲಾವತಿ,** ೭. ೩೫)

**ಸುರಭಿಶರ** – ಮನ್ಮಥ (ಅವರ್ಗಳ ಬೇಂಟಮಂ ಇರುಳ್ ಇಂದು ಪಗಲ್ ವಸಂತಂ ಇರುಳುಂ ಪಗಲುಂ ಸುರಭಿಶರಂ ... .. ಬಿಡದೋಲಗಿಪರ್: **ಯಶೋಧಚ,** ೨. ೪)

**ಸುರಭಿಸಮಯ** – ವಸಂತಕಾಲ (ಸುರಭಿಸಮಯೋಚಿತ ಕುಸುಮಾಪಚಯಪ್ರಕಾರಮಲ್ತು .. .. ಎಂದು ಮಕರಂದಂ ಭಾವಿಸುತ್ತುಂ: **ಲೀಲಾವತಿ,** ೧೧. ೫ ವ)

**ಸುರಭೂಜ** – ಕಲ್ಪವೃಕ್ಷ (ಅದು ಸುರಭೂಜವಲ್ಕಲವಸನದ್ವಯಂ ಅಂತದು ದಂಡಂ .. .. ಎಂದು .. .. ನೋಡಿದಂ: **ಕಾದಂಬ,** ೪. ೬೫)

**ಸುರಭೂಧರ** – ಮೇರುಪರ್ವತ (ಸುರಭೂಧರಮಂ ಬೆಳ್ಳಿಯ ಗಿರಿಗಳ್ ಬಳಸಿರ್ದುವೆನಿಸಿ ಚೆಂಬೊನ್ನ ರಥೋತ್ಕರಮಂ ಸುತ್ತಿರ್ದುವು ಕರಮೊಪ್ಪಿರೆ ಖಚರರಾಜರೆಸೆವ ವಿಮಾನಂ: **ಧರ್ಮಾಮೃ,** ೮. ೧೩೮)

**ಸುರಭೂರುಹ** – ಕಲ್ಪವೃಕ್ಷ (ಸುರಭೂರುಹದ ಅಗೆಯನಿಡಲ್ ಪರಿಜನದಭಿಜನದ ಗೇಹದೊಳ್ ಬಯಸಿದಳ್ ಆ ಸರಸಿಜವಾಣಿ ಗರ್ಭಸ್ಥನ ಪರಮೌದಾರ್ಯ ಪ್ರಭಾವಮಂ ಪ್ರಕಟಿಪವೊಳ್: **ಮಲ್ಲಿನಾಪು,** ೪. ೬೯)

**ಸುರಮಂತ್ರಿ** – ದೇವತೆಗಳ ಮಂತ್ರಿ (ಪಡೆದ ಧನಕ್ಕೆ ಲೆಕ್ಕಮಿಡಲ್ ಇಂದ್ರನಗಂ ಬಳಪಂ ಧರಾತಳಂ ಕಡಿತಂ ಅಹೀಶ್ವರಂ ತಗುಳೆ ಬಾಚಿಸುವೊಂ ಸುರಮಂತ್ರಿ ಕೂಡುವೊಂ: **ಶಾಂತಿಪು,** ೯. ೧೪೭)

**ಸುರಮಾರ್ಗ** – ದೇವತೆಗಳ ದಾರಿ, ಆಕಾಶ (ಸುರನದಿಯಲ್ಲಿ ಮಿಂದು ಸುರಮಾರ್ಗಕಚೌಘಮನೆಯ್ದೆ ಬಿರ್ಚಿ .. .. ಧರಣಿಪಕೀರ್ತಿಕಾಂತೆ .. .. ನೆಱೆನಿಂದು ನಿಟ್ಟಿಪಳ್: **ರಾಜಶೇವಿ,** ೩. ೫)

**ಸುರಮಿಥುನ** – ದೇವದಂಪತಿ (ಸುರಮಿಥುನಂ ಸುರದ್ರುಮದ ತಣ್ಣೆಟಲೊಳ್ ಖಚರದ್ವಯಂ ಮನೋಹರಮಣಿಕೂಟದೊಳ್ .. .. ನಲಿದು: **ಮಲ್ಲಿನಾಪು,** ೧೦. ೭೨)

**ಸುರಯಿ** – ಪುನ್ನಾಗ, ಸುರಗಿ ಗಿಡ (ಸುರಯಿಯೊಳ್ಗಿಳಿ ಮಗುಟ್ವರಗಿಳಿ ಬಿರಯಿಗೆ ಮೊರೆವಂತೆ: **ಆದಿಪು,** ೮. ೧೦೦)

**ಸುರಯೋಷಿತ್** – ದೇವಸ್ತ್ರೀ (ಭೀಷಣರಮಣೀಯತೆ ಸುರಯೋಷಿತ್ ನಿಕರಕ್ಕೆ ಕಿಟ್ಟಿ ಬಾಳಿಂ ಭೂಷಾವೇಷದಿನಮರ್ದತ್ತೆನೆ: **ಆದಿಪು,** ೭. ೧೩)

**ಸುರವಕ್ತ್ರ** – ಅಗ್ನಿ (ಸುರವಕ್ತ್ರಪಾವನ ಸದಾಚಾರಂ .. .. ಮದನಂ ಪುಟ್ಟಿದಂ: **ಪುಷ್ಪದಂಪು,** ೧೩. ೧೦)

**ಸುರವಟುಕ** – ದೇವತಾಪುರುಷ (ಆ ದಿವಿಜಾಧಿಪನೆ ಬೆಸಸೆ ಪೂವಂ ದೇವಂಗೆ ಆದರದಿಂ ಅಡಕಿ ತಲೆ ತರಟಾದುವು ಶತಧಾರಿಯಾಗೆ ಬರೆ ಸುರವಟುಕರ್: **ಅಜಿತಪು,** ೫. ೭೫)

**ಸುರವಧು** – ಅಪ್ಸರೆ (ಸುರವಧುವೊರ್ವಳ್ ದೇವಿಯ ಚರಣಕ್ಕೋಲಗಿಸೆ: **ಶಾಂತೀಶ್ವಪು,** ೧೩. ೨೧೪)

**ಸುರವಧುವರ** – ಇಂದ್ರ (ಎಮೆಯಿಕ್ಕದ ಸುರವಧುವರಂ ಎಮೆಯಿಕ್ಕದೆ ನೋಡಿ ತಮಗಮನಿತುಂ ಭಾವಂ ಸಮನಿಸಿದಂತಿರ್ದುದು: **ಅಜಿತಪು,** ೫. ೩೭)

**ಸುರವಲ್ಲರಿ** – ದೇವಲೋಕದ ಬಳ್ಳಿ, ಕಲ್ಪಲತೆ (ಸುರವಲ್ಲರಿಗಳ್ ಮುಗುಳಿಂ ಸುರಿತರ್ಪುವು ರಜತಶಿಖರಿಶಿಖರದೊಳೆನೆ ಖೇಚರಿಯರ್ ಮುತ್ತಿನ ಸೇಸೆಯನರಸಂಗಿಕ್ಕಿದರ್ ಅಪಾಂಗಮಾಲಾಸಹಿತಂ: **ಪಂಪರಾ,** ೧೨. ೨೧)

**ಸುರವಾಚಿಕೆ** – ದೇವಲೋಕದಲ್ಲ ವಾಚನ ಮಾಡುವವಳು (ಸರಸಕವಿಕಾವ್ಯ ಮಧುಮತ್ತರಾಗದೊಳ್ ಪೊರೆದು ಪೊಂಗೆ ತನಿಗಂಪೊಗೆದಂತಿರೆ ನುಣ್ದನಿಯಿಂದೋದುವ ಸುರವಾಚಿಕೆ ಸತಿಗೆ ಪುಳಕಮಂ ಪುಟ್ಟಿಸಿದಳ್: **ಚಂದ್ರಪ್ರಪು,** ೧೧. ೧೪೫)

**ಸುರವಾಹಿನಿ** – ದೇವನದಿ, ದೇವತಾಸಮೂಹ (ಕರಮೆಸೆದುದು ಸುರವಾಹಿನಿ ಸುರವಾಹಿನಿಯಂತೆ ಬರುತುಂ ಅಂಬರತಲದೊಳ್: **ಅಜಿತಪು,** ೪. ೧೦)

**ಸುರವಿಧ್ವಂಸಿ** – ದೇವತೆಗಳ ಶತ್ರು (ಸುರವಿಧ್ವಂಸಿಯಬಿಲ್ಲನೊಂದ ಶರದಿಂ ಗಾತ್ರತ್ರಮಂ ಕೃಷ್ಣನಾರ್ದೆರಡಂಬಿನಿಂ ತಜಿದಿಕ್ಕಿ .. .. ತೆತ್ತಿಸಿದಂ ಅತ್ಯಾಭೀಳಬಾಣಂಗಳಂ: **ಜಗನ್ನಾವಿ,** ೧೮. ೧೦೩)

**ಸುರವಿಳಾಸಿನಿ** – ಅಪ್ಸರೆ (ಸುರವಿಳಾಸಿಯರ್ ಮನೋಹರ ರೂಪೆಯರ್ ಗಜಯಾನೆಯರ್ .. .. ನೆರೆದು ಕುಳ್ಳಿರೆ: **ಧರ್ಮಾಮೃ,** ೪. ೧೦)

**ಸುರವೈದ್ಯ** – ದೇವತೆಗಳ ವೈದ್ಯ, ಧನ್ವಂತರಿ (ಸುರವೈದ್ಯನಪ್ಪ ಧನ್ವಂತರಿ ತರಿಸುವಲ್ಲಿ ತನಗೆ ದೊರಕದ ತಂತ್ರೋತ್ಕರಮಂ: **ಸುಕುಮಾಚ,** ೨. ೧೦೫)

**ಸುರಹೊನ್ನೆ** – ಪುನ್ನಾಗದ ಮರ (ಪನಸಾಳಿ ಶಾಳಿ ಭಾಸುರ ಸುರಹೊನ್ನೆ ಜಂಬೂಘನನಿಂಬಕುಳಂ ಬಕುಳಂ: **ಗಿರಿಜಾಕ,** ೨. ೩೦)

**ಸುರಶರಾಸನ** – ಕಾಮನಬಿಲ್ಲು (ಸುರಶರಾಸನಂಗಳ ನೆಟಲಿಕ್ಕಿದಂತೆ ನಿಮಿರ್ದ ನಿರ್ಝರಂಗಳುಮಂ ಅಪ್ಪುಕೆಯ್ದು: **ಕಾದಂಬ,** ೯. ೧೧ ವ)

**ಸುರಶಿಖರಿ** – ಮೇರುಪರ್ವತ (ಸುರಶಿಖರಿ ಭಾಸ್ಕರಜ್ಯೋತಿರಂಗಮಂ ಜಳಧಿವಿಮಳಮಣಿಯಂ .. .. ತಳೆದು: **ಚಂದ್ರಪ್ರಪು,** ೧೪. ೮೦)

**ಸುರಸದ್ಮ** – ಸ್ವರ್ಗ, ದೇವಾಲಯ (ಮಹನೀಯಂ ಸುರಸದ್ಮ ಪದ್ಮವನಷಂಡಂ .. .. ಕರಂ ಸೊಗಯಿಸುಗುಂ ಸೌರೂಪ್ಯಮೆಂಬಾಪುರಂ: **ಪಂಚತಂತ್ರ,** ೬೦)

**ಸುರಸಮಿತಿ** – ದೇವತೆಗಳ ಸಮೂಹ (ಇದೆ ಸಾರಂ ಸ್ವರ್ಗಲೋಕಕ್ಕಿದೆ ಸುರಸಮಿತಿ ಪ್ರಾರ್ಥಿತಂ ಯೌವರಾಜ್ಯಾಸ್ಪದಂ: **ಶಾಂತಿಪು,** ೭. ೨೪)

**ಸುರಸರಣಿ** – ದೇವಮಾರ್ಗ, ಆಕಾಶ (ಸೌಂದರಿ .. .. ಪರಿಶೋಕಿಸೆ ಹಾಹಾರವಂ ಮುರು ಸುರಸರಣಿಯೊಳೆ ಕೂಡೆ ಪರಿದತ್ತೆತ್ತಂ: **ಕರ್ಣನೇಮಿ,** ೧೦. ೮೫)

**ಸುರಸರಣಿ** – ದೇವಮಾರ್ಗ, ಆಕಾಶ (ಸುರಸರಣಿ ವಿಷ್ಣುಪದಂ ಅಂಬರಂ ವಿಯತ್ ಖಂ ವಿಹಾಯಸಂ ಗಗನಂ ಪುಷ್ಕರಂ ಆಕಾಶಂ ನಭಂ ಅಂತರಿಕ್ಷಂ ಅಂಬೋಧಮಾರ್ಗಂ ಅಭ್ರಂ ವ್ಯೋಮಂ: **ಅಭಿಧಾವ,** ೧. ೧. ೫೭)

**ಸುರಸರಿತ್** – ದೇವನದಿ (ಯುವತಿಜನಶಂಕೆಯುಂ ಮುನ್ನವಯವದೊಳೆ ಪೊಕ್ಕು ಕಳೆದು ಸುರಸರಿತ್

ಅಂಭಃಪ್ಲವದೊಳೆ ಚಕ್ರಧರಂ ದುಗ್ಧವಾರ್ಧಿಯೊಳ್ ನಿಂದ ಕನಕಗಿರಿಯನೆ ಪೋಲ್ತಂ: **ಆದಿಪು,** ೧೧. ೧೪೦)

**ಸುರಸಿಂಧು** – ಸುರಸರಿತ್ (ಸುರಸಿಂಧುವಾಗಿ ಬರುತಿರೆ ಶಿರದೊಳ್ ತಾಂ ತಳೆದನಾಪ್ತನಿನಲಾಗದಜೀವಂ: **ಸಮಯಪ,** ೮. ೫೫)

**ಸುರಸಿಂಧುಜ** – ಭೀಷ್ಮ (ಸುರಸಿಂದುಜ ಕುಂಬಜ ದುಭ್ರಭುಜ ಗುರುತನುಜ: **ಕರ್ಣನೇಮಿ,** ೧೧. ೧೩೩)

**ಸುರಾಂಗ** – [ಜೈನ] ದಶಕಲ್ಪಕುಜಗಳಲ್ಲಿ ಒಂದು, ಮಾದಕ ಪಾನೀಯಗಳನ್ನು ನೀಡುವಂಥದು (ವಸನಾಂಗ ಆತೋದ್ಯಾಂಗ ಪ್ರಸವಾಂಗ ಜ್ಯೋತಿರಂಗ ದೀಪಾಂಗ ಅನ್ನಾಂಗ ಸುರಾಂಗ ಭಾಜನಾಂಗ ಅವಸಥಾಂಗ ವಿಭೂಷಣಾಂಗ ದಶಕಲ್ಪಕುಜಂ ಸೊಗಯಿಸುವುವು: **ಚಂದ್ರಪ್ರಪು,** ३. ३४)

**ಸುರಾಧಿಪ** – ದೇವೇಂದ್ರ [ತನ್ನ ರತ್ನವಿಸ್ಫುರಿತ ಕಿರೀಟಮಂ ಕವಿದು ತಾನೆ ನರಂಗೆ ಕಿರೀಟಿನಾಮಮಂ ಸರಸದಿಂ ಆಗಳುಚ್ಚರಿಸಿ ಸಾಹಸಮಂ ಪೊಗೞ್ದಿಂ ಸುರಾಧಿಪಂ: **ಪಂಪಭಾ,** ೫. ೧೦೩)

**ಸುರಾಧಿಪದಿಶೆ** – ಇಂದ್ರದಿಕ್ಕು, ಪೂರ್ವ (ಉದ್ವಹಿಮೋಗ್ರಖಡ್ಗಮಂ ಚಾಳಿಸುತುಂ ಸುರಾಧಿಪದಿಶಾನಿಳವಾಹಮನೇಱಿ ಬಂದುದು ಆಭೀಳತೆವೆತ್ತು ಮಾಗಿ: **ಶಾಂತೀಶ್ವಪು,** ೧೨. ೭೩)

**ಸುರಾಧ್ವ** – ದೇವತೆಗಳ ದಾರಿ, ಆಕಾಶ (ನಿರ್ಭರದ ಗತಿಪ್ರಪಂಚಮಂ ಒಡರ್ಚುವರ್ ಅಚ್ಚರಿಯರ್ ಸುರಾಧ್ವದೊಳ್: **ಶಬರಶಂ,** ೨. ३೮)

**ಸುರಾನಕ** – ದೇವದುಂದುಭಿ (ಅದೊಂದೆಡೆ ಸುರಾನಕ ಪ್ರಕಟಘೋಷದಿಂ ಚೆಲ್ವುವೆತ್ತು ಅದೊಂದೆಡೆ ಸುರಾಂಗನಾ ಮಧುರಗೀತಿಯಿಂದೊಳ್ಪುವೆತ್ತು: **ಆದಿಪು,** ೭. ೫೯)

**ಸುರಾಪಗೆ** – ಸುರಸರಿತ್, ದೇವನದಿ (ಸಂತತಂ ಆ ಸುರಾಪಗೆಯ ಬೆಳ್ವೊನಲ ಪದೆಪಿಂದುಗುಳ್ದ ಹೇಮಂತ ನಗೇಂದ್ರಮಂ ನೆನೆಯಿಸುತ್ತುಂ: **ಕುಸುಮಾಕಾ,** ೧೫. ೨೦)

**ಸುರಿಗಿಱಿ** – ಸುರಗಿಯಿಂದ ಇರಿ(ಮಣಿಯದೆ ಕಿೞ್ತಿೞ್ಚನಂತರಂ ಸುರಗಿಱಿದಂ: **ಕರ್ಣನೇಮಿ,** ೧೧. ೧೫೬)

**ಸುರಿಗೆ** – ಕಿರುಗತ್ತಿ (ಜಾಱಿವರಿದು ಕೆಡದುರದೊಳ್ ನಟ್ಟ ಸುರಿಗೆ ಬೆನ್ನೊಳ್ಮೂಡೆ ಗತಜೀವಿತನಾಗಿ: **ಆದಿಪು,** ೨. ೧೪ ವ)

**ಸುರಿಗೆಗಾಳಗ** – ಕಿರುಗತ್ತಿಗಳನ್ನು ಹಿಡಿದು ಮಾಡುವ ಯುದ್ಧ (ಎನ್ನ ಕಾಳಗಮಂ ಸುರಿಗೆಗಾಳಗಮಂ ನೋೞ್ಪಂತೆ: **ಪಂಪಭಾ,** ೧೨. ೧೧೬ ವ)

**ಸುರಿತರ್** – ಹರಿದು ಬಾ (ಸುರಿತರ್ಪ ಕಮ್ಮಲರೆ ಪೆರ್ಮಳೆಯಾಗಿರೆ ಕಾರಲಕ್ಷ್ಮಿಯಂತೊಡನಡರ್ದಂಬರಕ್ಕೆ ನೆಗೆವಚ್ಚರಿಯಚ್ಚರಿಯಂ ನಿಮಿರ್ಚಿದರ್: **ಶಬಶಂವಿ,** ೧. ४५)

**ಸುರುಂಟು** – ಮುರುಟಿಕೊ, ಸಂಕೋಚಗೊಳ್ಳು (ಸುರುಂಟು–ಸಂಕೋಚನೇ: **ಶಬ್ದಮದ,** ಧಾ ೨೬३)

**ಸುರುಳ್** – ಸಂಕೋಚಗೊಳ್ಳು, ಬಾಡು (ಗ್ರೀಷ್ಮದೊಳ್ ಸುರುಳ್ವಿನೆಗಂ ಅೞ್ಪೆ ಬೇವವರ್ಗೆ ಜೊಂಪಮಿಮ್ಮಾವು ನಿರ್ಝರಾಮಬು ದೊರೆಕೊಳ್ವವೊಲ್: **ಆದಿಪು,** ೧३. ೮೬); ಸಂಶಯಗೊಳ್ಳು (ಶಿವಘೋ ಶಿವಘೋ ಎನುತಂ ಸುರುಳ್ದು ಸೂಗರಿಸಿ: **ಗಿರಿಜಾಕ,** ೬. ೬)

**ಸುರುಳ್ಚು** – ಸಂಕೋಚಗೊಳಿಸು (ಸುರುಳ್ಚು–ಸಂಕೋಚನೇ: **ಶಬ್ದಮದ,** ಧಾ ೨೨೧)

**ಸುರುಳ್ತರ್** – ಕುಸಿದುಹೋಗು (ಕರಿಪದಾಘಾತದಿಂದರೆ ಸುರುಳ್ತರೆ ವಾಜಿಖುರಪ್ರಘಾತದಿಂ ಗಿರಿ ನೆಱೆ ನುಚ್ಚಿ: **ಕುಸುಮಾಕಾ,** ४. ೯३)

**ಸುರೂಪವೃತ್ತಿ** – ಸೌಂದರ್ಯ (ಪುಷ್ಪಸಾಯಂಕಗೆ ಇಂದ್ರೊಳಸೋರ್ದುದೇಸುವೆಸನಿಂದು ಸನಾಭಿಜನಕ್ಕೆ ಒಡರ್ಚಿತಾನಂದ .. .. ಸುರೂಪವೃತ್ತಿ ದೊರೆವೆತ್ತುದು ನಾಡೆಯುಮೆಂದು ನೋಡಿದರ್: **ಚಂದ್ರಪ್ರಪು,** ೬. ೭೯)

**ಸುರೂಪೆ** – ಚನ್ನಂಗೀಮರ (ಸುರೂಪೆಯ ಪಾಣ್ಬೆಯ ಮೇಘನಾದದ ಇಂದಿರೆಯ .. .. ಕಕ್ಕೆ ಬಿಕ್ಕೆ ಬಕುಲಂ ಬೇವತ್ತಕಂ ಕಿಂಶುಕಂ: **ರಾಜಶೇವಿ,** ೫. ೫೭)

**ಸುರೆ** – ಮದ್ಯ (ಮೈರೇಯಂ ಆಸವಂ ಮಧು ಹಾರಹುರಂ ತಾಂ ಪ್ರಸನ್ನೆ ವಾನಂ ಕಲ್ಯಂ ವಾರುಣಿ ಕಾದಂಬರಿಯದು ಸೀಅಿಪ್ರಿಯಸೀಧು ಮದಿರೆ ಸುರೆಯಿರೆ ಕಳ್ಳೂಂ: **ಅಭಿಧಾವ,** ೧. ೧೬ ೫)

**ಸುರೇಂದ್ರತ್ವ** – [ಜೈನ] ಸಪ್ತ ಪರಮಸ್ಥಾನಗಳಲ್ಲಿ ಒಂದು, ಇಂದ್ರಪದವಿ (ಸಜ್ಜಾತಿ ಸದ್ಗೃಹತ್ವ ಪಾರಿವ್ರಾಜ್ಯಪದ ಸುರೇಂದ್ರತ್ವ ಸಾಮ್ರಾಜ್ಯ ಪರಮಾರ್ಹಂತ್ಯ ಪರಿನಿರ್ವಾಣಮೆಂಬ ಏೞುಂ ಪರಮಸ್ಥಾನನಾಮ: **ಆದಿಪು,** ೧೫. ೧೬ ವ)

**ಸುರೇಂದ್ರಧನು** – ಕಾಮನಬಿಲ್ಲು (ನವರತ್ನೋತ್ಕರದಿಂ ಸುರೇಂದ್ರಧನುವಂ .. .. ಮಿಗುವ ಜಾತ್ಯಶೃಂಗಳಂ: **ಪುಷ್ಪದಂಪು,** ೨. ೫೮)

**ಸುರೇಂದ್ರಧಾರಕ** – ಶ್ರೇಷ್ಠವಾದ ನೀರಿನ ಕಮಂಡಲು ಹಿಡಿದ[ವನು] (ಕಮಲೋದ್ಭವನ ಅಮಳಿನ ಹೃತ್ಕಮಲದೊಳ್ ಒಗೆದರ್ ಸುರೇಂದ್ರಧಾರಕರ್ ಆ ವಾಗಮಳರ್ ನೆಗೞ್ದಿರ್ದರ್ ಪುಲಹ ಮರೀಚಿ ಅತ್ರಿ ಅಂಗಿರಸ್ ಪುಳಸ್ತ್ಯ ಕ್ರತುಗಳ್: **ಪಂಪಭಾ,** ೧. ೬೦)

**ಸುರೇಂದ್ರಧೇನು** – ಕಾಮಧೇನು (ಕವಿತಾಶಕ್ತಿ ಸುರೇಂಧ್ರಧೇನು ಅದು ಪುಣ್ಯಾಯತ್ತಂ: **ಅನಂತಪು,** ೧. ೬೦)

**ಸುರೇಂದ್ರಾಶಾದಂತಿ** – ಪೂರ್ವದಿಕ್ಕಿನ ದಿಕ್ಕರಿ (ಸಭೆಯನೆೞ್ದಂ ತುಂಗವಂಶ ಸುರೇಂದ್ರಾಶಾದಂತಿಬಲಂ ಜಿತಾಹಿತಬಲಂ ದುರ್ವಾರ ಬಾಹಾಬಲಂ: **ಪಂಪರಾ,** ೫. ೮३)

**ಸುರೇಂದ್ರಾಶೆ** – ಇಂದ್ರನ ದಿಕ್ಕು, ಪೂರ್ವ (ಪುಟ್ಟೆ ಸುರೇಂದ್ರಾಶೆಗೆ ರಾಗಂ: **ಪುಷ್ಪದಂಪು,** ೮. ೨३)

**ಸುರೇಜ್ಯ** – ದೇವಗುರು, ಬೃಹಸ್ಪತಿ (ಅಂಗಿರಸ ಸುರೇಜ್ಯಂ ದಿಷಣಂ ಗೀಃಪತಿ ದ್ವಿಜಮಂತ್ರಿ ವಾಚಸ್ಪತಿ ಮತ್ತಾಂಗಿರಸಂ ವಾಕ್ಪತಿ ಜೀವಂ ಗುರುವೆಂಬಿನಿತುಮಿವು ಬೃಹಸ್ಪತಿನಾಮಂ: **ಅಭಿಧಾವ,** ೧. ೧. ೭३)

**ಸುರೇಭ** – [ಸುರ+ಇಭ] ಐರಾವತ (ಸುರೇಭಕಂಧರದೊಳಿರ್ದ ಸಹಸ್ರವಿಳೋಚನಂ ಮನಂಗೊಳಿಸಿದಂ: **ಜಗನ್ನಾವಿ,** ೧. ३೯)

**ಸುರೇಶ್ವರ** – ದೇವೇಂದ್ರ (ನಿನ್ನಂತೆ ಸುರೇಶ್ವರಂ ಉತ್ಪನ್ನಮಹೈಶ್ವರ್ಯನೆಂಬುದುಂ: **ಕವಿರಾಮಾ,** ३. ೮೭)

**ಸುರೋರ್ವಿಜ** – ಕಲ್ಪವೃಕ್ಷ (ತ್ರಿದಶಜನವರ್ಗದೀವುದರ್ಥಮೆನ್ನದೆ ಸುರೋರ್ವಿಜಂ ಸಮಂತಿದು ಬಿಡದೊಂದೆ ಕಾವ್ಯನವಕಲ್ಪಕುಜಂ: **ರಾಜಶೇವಿ,** ೧४. ೧೭४)

**ಸುರ್ಕು** – ಕುಗ್ಗು (ಸುರ್ಕು–ಸಂಕೋಚೇ: **ಶಬ್ದಮದ,** ಧಾ ೭೫); ಹೆದರು (ಹುತವಹಶಿಖಾವಳಿಗೆ ಸುಗಿದು ಸುರ್ಕುವಂತಿರೆ: **ಆಚವರ್ಧ,** ೬. ೨३ ವ); ನಿರುತ್ಸಾಹಗೊಳ್ಳು ಸಾಯಕಂ ನಡೆ ನೊಂದೆಯ್ದೆ ಸುರುಳ್ದುರುಳ್ದ ತುರಗಂ ಸುರ್ಕಿರ್ದ ಸೂತಂ:

**ಪಂಪಭಾ,** ೧೦. ೯೧); ಸುಕ್ಕು (ಸುರ್ಕಟೆದ ಉರುಳಿಗುರುಳ್ ನಸಸುರ್ಕಿದ ಕುಚಚೂಚುಕಂ ಬೆಳರ್ತಧರಂ: **ಆದಿಪು,** ೧೧. ೧೪೯)

**ಸುರ್ಕುಂಗುರುಳ್** – ಗುಂಗುರು ಕೂದಲು (ಭೃಂಗಾವಳಿ ಸುಯ್ಗೆ ಸಾರ್ವ ತೆಱದಿಂ ಸುರ್ಕುಂಗುರುಳ್ಮಾಲೆ ನೀಳ್ದುವು: **ಮಲ್ಲಿನಾಪು,** ೪. ೬೫)

**ಸುರ್ಕುಸಿರ್** – ಕುಗ್ಗಿದ ಉಸಿರು (ಕಲಶಕುಚಂ ಕದಕ್ಕದಿಸೆ ಸುರ್ಕುಸಿರಿಂ ನಡುಗಿತ್ತು ಚಿತ್ತಂ: **ಪಂಪರಾ,** ೧೧. ೮೮)

**ಸುರ್ಬಡರ್** – ಒತ್ತೊತ್ತಾಗು (ತದಕಿನ ತಾಳ .. .. ಮರಂಗಳ ಕೊಂಬುಗಳಂಬರಂಬರಂ ಪುದಿದು ಪೊದಟ್ದು ಸುರ್ಬಡರೆ ಪರ್ವಿರೆ ಕಾರಿರುಳೋಳಿ ಕೊಂಬುಗೊಂಡುದೆನೆ ಕಱಂಗಿ ಕಟ್ಟಿಲಿಸುತಿರ್ದುದು ಕಾನನವೆತ್ತ ನೋಟ್ಪೊಡಂ: **ಲೀಲಾವತಿ,** ೬. ೨೨)

**ಸುರ್ಬುಗೊಳ್** – ಹುಲುಸಾಗಿ ಬೆಳೆ (ಕವಲ್ತ ಕಿಱುಗೊಂಬುಗಳ ಪರ್ಬಿಂ ಸುರ್ಬುಗೊಂಡು ಶೋಭೆಗೆ ಪಿರಿದಾದ .. .. ಪೊದಱ ಸುತ್ತಿಂ: **ಲೀಲಾವತಿ,** ೫. ೫೯ ವ)

**ಸುರ್ಬುವಜ್ಜೆ** – ಆಳವಾದ ಹೆಜ್ಜೆ (ಪೆರ್ಬುಲಿಗಳ ಸುರ್ಬುವಜ್ಜೆಗಳುಮಂ ದಾಡೆಗಳಿಂದೀಡಿಱಿದಗುಟ್ದು ತೋಡಿಕೊಂಡು ಮೆಲ್ವ ಮುಸ್ತಾಕಂದಂಗಳ ತಿರುಳ್ ಪಱಿದೊಕ್ಕು ಕಂಪಿಡುತ್ತಿರೆ: **ಕುಸುಮಾಕಾ,** ೧೪. ೨೯ ವ)

**ಸುರ್ವು** – ನಿಬಿಡತೆ (ಪರ್ವದಿಂ ತನಿರಸಮೆಚ್ಚು ಪಾಯೆ ಬಗೆಗೊಳ್ವುದು ಕರ್ವಿನ ಸುರ್ವು ತೋಂಟದೊಳ್: **ಪುಷ್ಪದಂಪು,** ೨. ೪೮); ರಾಶಿ (ಮದಾಳಿಯ ಕರ್ಮು ಕೂಡೆ ಕಣ್ಗೆಸೆವೆಲೆವಳ್ಳಿಯಾಗರದಗುರ್ವು ತಮಾಳದ ಸುರ್ವು ಸುತ್ತಲುಂ: **ಸುಕುಮಾಚ,** ೯. ೪೮)

**ಸುಲಿ** – ಹೊರಪದರವನ್ನು ತೆಗೆ (ಸುಲಿ–ಆವರಣಾಪನೋದನೇ: **ಶಬ್ದಮದ,** ಧಾ ೬೫೮); ಬಿರುಕುಬಿಡು (ತಲೆಗಳ್ ಪಱಿಯೆ ಬರಿಗಳ್ ಮುಱಿಯೆ ತೊಡೆಗಳುಡಿಯೆ ಪುಣ್ಗಳ್ ಸುಲಿಯೆ: **ಪಂಪಭಾ,** ೧೧. ೫೭ ವ); ಶುಭ್ರಗೊಳಿಸಲು ತಿಕ್ಕು (ವಿಕ್ರಮಾರ್ಜುನಂ ಅನಂತನುಂ ತಾನುಂ ಜಲಕ್ಕನಿರೆ ಪಲ್ಲಂ ಸುಲಿದು ಅಗಣ್ಯಪುಣ್ಯ ತೀರ್ಥೋದಕಂಗಳಂ ಮಿಂದು: **ಪಂಪಭಾ,** ೧೦. ೪೬ ವ); ಕಿತ್ತುಕೊ (ಚಾರುದತ್ತನುಟ್ಟ ವಸ್ತ್ರಮಂ ತೊಟ್ಟ ತೊಡಿಗೆಯಂ ಸುಲಿದುಕೊಂಡು: **ಪುಣ್ಯಾಸ್ರ,** ೪. ೨೦ ವ)

**ಸುಲಿಕೆ** – ನಾರು, ಸಿಪ್ಪೆ (ನೆಯ್ದಿಲ ಸಣ್ಣಕಾವಿನೊಳಂ .. .. ಬೇಱೆವೇಱೆ ಬಿಸತಂತುವಿನೊಳಂ ಕರ್ಬಾಳದ ಬಳ್ಳಿಯೊಳಂ ತೆಂಗಿನ ತಿರುಳೆಲೆಯ ಸುಲಿಕೆಯೊಳಂ .. .. ಬೇಱೆವೇಱೆ ಸುತ್ತಿ: **ಮಲ್ಲಿನಾಪು,** ೫. ೪೦ ವ)

**ಸುಲಿಪಲ್** – ಶುಭ್ರಗೊಳಿಸಿದ ಹಲ್ಲು (ಸುಲಿಪಲ್ಲ ಪೊಳಪೆಂಬ ತನ್ನ ಬಾಳ ಪೊಳಪನೆ ಮೆಱೆದು ನೆಱೆದು ಸಮಱಿದ ಮದನನೊಡ್ಡಣದಂತೆ: **ಆದಿಪು,** ೪. ೪೧ ವ)

**ಸುಲ್ವ[ಲ್ವು]** – ತಾಮ್ರ (ಅತ್ವಕ್ಕಮುತ್ವಂ: ಸುಲ್ವಂ–ಸುಲು, ಸುಲುವೆಂದು ಕಿಸುವೊನ್: **ಶಬ್ದಮದ,** ೨೯೨ ಪ್ರ); ಮಂಗಳಸಾಮಗ್ರಿ (ಚಂದನಂ ಸ್ವಸ್ತಿಕಂ ಸುಲ್ವಮೆಂಬೀ ಮಂಗಳದ್ರವ್ಯದ ರಚನೆಯಿಂ: **ಸುಕುಮಾಚ,** ೫. ೭೧)

**ಸುವರ್ಣ** – ಒಳ್ಳೆಯ ಬಣ್ಣ (ಸಡಹುಡನಪ್ಪ ಕಟ್ಟೆ ಕೂಡೆ ಸಂತಸದಿಂ ಪೆಱಗೇಱೆ ಬರ್ಪ ಕನ್ನಡಿವಿಡಿದಾಕೆ ಚಿನ್ನದ ಸವಂಗಂ ಅಪೂರ್ವದ ಮೊಚ್ಚೆಯಂ ಪವಣ್ಗೆಡದ ಸುವರ್ಣಪಾರಿವದ ಕುಪ್ಪಸಮೊಪ್ಪೆ: **ಪಂಪಭಾ,** ೯. ೧೦೩); ಚಿನ್ನ (ಗಿರಿಜೋತ್ತಮ ಕಾಂಚನ ಜಾತರೂಪ ತಪನೀಯ ಭರ್ಮ ಹಾಟಕ ಚಾಮೀಕರ ಶಾತಕುಂಭ ಕಾರ್ತಸ್ವರ ಕನಕ ಸುವರ್ಣ ರುಕ್ಮನಾಮಂ ಹೇಮಂ: **ಅಭಿಧಾವ,** ೧. ೫. ೬)

**ಸುವರ್ಣಚ್ಛಾಯ** – ಚಿನ್ನದಂತಹ ಬಣ್ಣ (ದೇಹಲೋಹಮೆಂಬೆರಡುಮಂ ಸಿದ್ಧರಸವಿದ್ಯೆಯಿಂ ಸುವರ್ಣಚ್ಛಾಯಂ ಮಾಡಲುಂ ಅಕೂಪಾರಮಂ ಪಾಯಲುಂ ಇಂತಪ್ಪುಪಾಯಂಗಳಂ ಪಲವಂ ಮಾಡಿದರ್: **ಪಂಚತಂತ್ರ,** ೧೦೦ ವ)

**ಸುವರ್ಣವರ್ಣ** – ಚಿನ್ನದ ಬಣ್ಣ, ಹಳದಿ (ಪಕ್ವಶಾಳಿ ಕಣೀಶಾಳೀನಮ್ರಮೊಪ್ಪಿರ್ದದೇಂ ಗೆಲೆವಂದತ್ತೊ ಸುವರ್ಣವರ್ಣದಿನಿಳಾಶ್ರಿಯುಟ್ಟ ಪೊಂಬಟ್ಟೆವೋಲ್: **ಜಗನ್ನಾವಿ,** ೨. ೫)

**ಸುವರ್ಣಾಂಬರ** – ಜರತಾರಿ ಬಟ್ಟೆ (ಬಿಗಿದುಟ್ಟ ಸುವರ್ಣಾಂಬರದ ಸೆಱಂಗು ನಿಶಿತಮೆನೆ ಕೊಂಕಿದ ನಿಜಕಂಟಕದೊಳ್ ತೊಡರ್ದು: **ಶಬಶಂವಿ,** ೩. ೩೫ ವ)

**ಸುವರ್ಣಾಂಬುಜ** – ಹೊಂಬಣ್ಣದ ತಾವರೆ (ಅಂಬರಮದಮರೆ ನಾಂದು ನಿರಂಬರೆಯಂತಿರ್ದ ಯುವತಿಗಿತ್ತಪಳೆನೆ ಪೀತಾಂಬರಮಂ ಸರಸಿ ಸುವರ್ಣಾಂಬುಜರಜಂ ಎಲರ ಪೊಯ್ಗಳಂ ನೆಗೆದೆಸೆಗುಂ: **ರಾಜಶೇವಿ,** ೧೦. ೧೦೩)

**ಸುವಾಸಿನಿ** – ಮುತ್ತೈದೆ (ಗಾಯಿನಿಯರಾಯಿತಿಯಿಂ ಸುವಾಸಿನಿಯರ್ಕಳ ಸೊಬಗಿಂ ಮನಂಗೊಳಿಪತತ್ ವಿವಾಹಮಂಟಪು: **ಉದ್ಭಟಕಾ,** ೮. ೯ ವ)

**ಸುವಿಚಾರಿತ** – ಚೆನ್ನಾಗಿ ಪರಿಶೀಲನೆಗೊಳಗಾದ (ಇಲ್ಲಿ ದುಷ್ಕರಕಾವ್ಯಂಗಳ್ ಸವಿಶೇಷವರ್ತಿಗಳ್ ಸುವಿಚಾರಿತಮೀ ತೋರ್ಪನಿವಱ ಲಕ್ಷ್ಯಭೇದಮಂ: **ಕವಿರಾಮಾ,** ೨. ೧೧೩)

**ಸುವಿಧಾನ** – ಅಚ್ಚುಕಟ್ಟು (ನಾಳೆ ನೇಸರ್ಮೂಡದಮುನ್ನಮೆ ವಿಷಾಪಹಾರಂ ಮಾಡಿದಪ್ಪೆಂ ಇಂದಿನೊಂದು ರಾತ್ರಿಯುಮಂ ಪರೇತವನಸ್ಥಾನದಿಂ ತೊಲಗಲೀಯದೆ ಕಾಪಂ ಸುವಿಧಾನಮಾಗೆ ಮಾಡಿಂ: **ಸುಕುಮಾಚ,** ೭. ೮ ವ)

**ಸುವೃಷ್ಟಿ** – ಸಮೃದ್ಧವಾದ ಮಳೆ (ಸುವೃಷ್ಟಿ ಸೊಂಪಚ್ಚರಿಯಾಗೆ: **ಪುಷ್ಪದಂಪು,** ೧. ೫೦)

**ಸುವ್ರತ** – [ಜೈನ] ಇಪ್ಪತ್ತನೆಯ ತೀರ್ಥಂಕರನ ಹೆಸರು (ದೇವರ ದೇವಂ ಕುಡುಗೆ ಸುವ್ರತಂ ಸುವ್ರತಮಂ: **ಯಶೋಧಚ,** ೧. ೧)

**ಸುವ್ವಿ** – ಹಾಡಿನ ಸೊಲ್ಲು (ಒನಕೆಯನೆತ್ತಿ ನುಣ್ದನಿಯ ಸುವ್ವಿಯ ಗಾವರದೊಳ್ ತೊಡರ್ಚಿದೋಪನಿಗೆ ಪುಳಿಂದಿ ಪಾಡಿದಳೊಱಲ್ದು ಗುಣಪ್ರಿಯನಂಕಮಾಲೆಯಂ: **ಲೀಲಾವತಿ,** ೮. ೩೦)

**ಸುಶ್ಲಕ್ಷ್ಣ** – ಹೊಳಪುಗೊಂಡ (ಅಸಾದೃಶ್ಯಮುಂ ದಶ್ಯಮುಮಾದ ಸುಶ್ಲಕ್ಷ್ಣ ಸುಧಾಭಿತ್ತಿಭಾಗಂಗಳಿಂದಮಪೂರ್ವಭಿತ್ತಿಯಂ ತಳೆದು: **ಚಂದ್ರಪ್ರಪು,** ೧೫. ೭೦ ವ)

**ಸುಶ್ಲಿಷ್ಟ** – ಮುಚ್ಚಿಕೊಂಡ (ಸುಶ್ಲಿಷ್ಟೋತ್ತಮ ದಶನಚ್ಛದಂ ಆನನಮುಮಿರ್ದುದು ಯೋಗಪ್ರಯೋಗದೊಳ್ ಮುನಿಪತಿಯಾ: **ಆದಿಪು,** ೯. ೮೭)

**ಸುಷಮ** – [ಜೈನ] ಅವಸರ್ಪಿಣಿಯ ಒಂದು ಹಂತ, ಸಮೃದ್ಧಿಯ ಕಾಲ (ಮಧ್ಯಮಭೋಗಭೂಮಿಸ್ಥಿತಿಯೊಳ್ ಮೂಱು ಕೋಟಾಕೋಟಿ ಸಾಗರೋಪಮಪ್ರಮಾಣಂ ಸುಷಮಮೆಂಬ ಕಾಲಮುಂ: **ಆದಿಪು,** ೬. ೪೮ ವ)

**ಸುಷಮದುಷ್ಷಮ** – [ಜೈನ] ಅವಸರ್ಪಿಣಿಯ ಒಂದು ಹಂತ, ಕಡಿಮೆ ದುಃಖದ ಕಾಲ (ಜಘನಭೋಗಭೂಮಿಸ್ಥಿತಿಯೊಳು ಎರಡು ಕೋಟಾಕೋಟಿ ಸಾಗರೋಪಮಪ್ರಮಾಣಂ ಸುಷಮದುಷ್ಷಮಮೆಂಬ ಕಾಲಮುಂ: **ಆದಿಪು,** ೬. ೪೮ ವ)

**ಸುಷಮಸುಷಮ** – [ಜೈನ] ಅವಸರ್ಪಿಣಿಯ ಒಂದು ಹಂತ, ತುಂಬ ಸುಖದ ಕಾಲ (ಉತ್ತಮಭೋಗಭೂಮಿಯೊಳ್ ನಾಲ್ಕುಕೋಟಿಕೋಟಿ ಸಾಗರೋಪಮಪ್ರಮಾಣಂ ಸುಷಮಸುಷಮಮೆಂಬ ಕಾಲಮುಂ: **ಆದಿಪು,** ೬. ೪೮ ವ)

**ಸುಷಿರ** – ಕೊಳಲು ಮುಂತಾದ ಊದುವ ವಾದ್ಯ (ತತಮೆಂಬುದು ತಂತ್ರಿಯೊಳ್ ಅನ್ವಿತಮಾದುದು ಸುಷಿರಮೆಂಬುದದು ವಂಶಾದ್ಯಂ ವಿತತಮ ಅವನದ್ಧ ಚರ್ಮಾವೃತಮ ಘನಂ ಕಾಂಸ್ಯವಿನಿತೆ ವಾದ್ಯವಿಭೇದಂ: **ಅಭಿಧಾವ,** ೧. ೧೩. ೨೫)

**ಸುಷುಮ್ನೆ** – ಚಂದ್ರನಿಗೆ ಶಾಖವುಂಟುಮಾಡುವ ಏಳು ಸೂರ್ಯ ಕಿರಣಗಳಲ್ಲಿ ಒಂದು (ಸುಷುಮ್ನೆಯೆಂಬ ಕರದಿಂ ಗಡ ಚಂದ್ರಕಲಾಕಲಾಪಮಂ ಕಾಲದೊಳ್ ಅಂಶುಮಾಲಿ ತೆಗೆದೀಂಟುವವಂ: **ಕಾದಂಬ,** ೫. ೩೨)

**ಸುಷ್ಠು** – ಸಮರ್ಥ (ಸುಷ್ಠೀತಂ ಕಾವೊಡೆ ಕರ್ಣನಕ್ಕುಂ ಅದಱಿಂ ನಾಮೆಲ್ಲಮಾತಂಗೆ ನಿರ್ವ್ಯೆತಂ ಬೀರದ ಬೀರವಟ್ಟಮನಿದಂ ನಿರ್ವ್ಯಾಜದಿಂ ಕಟ್ಟುವಂ: **ಪಂಪಭಾ,** ೧೦. ೫೨)

**ಸುಸರಂ** – [ಸುಸ್ವರ] ಒಳ್ಳೆಯ ಮಾತು (ಆಂ ಇವಂದಿರಂ ಆದರಿಸಿ ಪಸರಂಗೊಟ್ಟೊಡೆ ಎನಗೆ ಸುಸರಮಾಗಿ ಬೆಸಕಯ್ಯಲ್ ಅಱೆಯರ್: **ಸುಕುಮಾಚ,** ೨. ೫೨ ವ)

**ಸುಸರತನ** – ಇಂಪು (ವೀಣೆಯ ಕೆಳೆಯ ಕೆಳೆಯೊಳ್ದಳವೇಱೆ ಲುಳಿಯಿಸಿ ಪಿರಯ ದನಿಯೊಳ್ತಿಸರಿಯ ಸುಸರತನಮುಂ ಮುಹರಿಯ ಮಧುರತೆಯುಂ ಬೀಣೆಯ ಬಹುಲಿಕೆಯುಂ ಎಸೆಯೆ: **ಆಚವರ್ಧ,** ೯. ೩೪)

**ಸುಸರಿಕೆ** – ಇಂಪಾದ ಧ್ವನಿಯನ್ನು ಹೊಂದಿರುವುದು (ವಾಹಕರ ಪಾಣಿಪಲ್ಲವದಿಂ ನೇತ್ರವಟ್ಟೆಯ ನೇಣನೊಯ್ಯನಿಪ್ಪೆ ತೆಗೆದು ಝುಂಕಾರದ ಸುಸರಿಕೆಯಂ ನೋಡಿ: **ಶಾಂತೀಶ್ವಪು** ೭. ೯೩ ವ)

**ಸುಸಿರ** – ತೂತು (ಸಸಿಯ ಬೆಸದಿನಸಿಯೇಱೆಂಗೆ ಬಂದ ಸುಟ್ಟುಂಬೆಸಕಾಱನಂತಸಿದನೆ ಸುಸಿರದಿಂ ಪೊಕ್ಕು: **ಚಂದ್ರಪ್ರಪು,** ೮. ೪೩ ವ)

**ಸುಸಿಲ್** – ರತಿ, ಸಂಭೋಗ (ಪಸರಿಸಿ ಪೊಸಯಿಸಿದ ಪೊಸ ಸುಸಿಲ ಮಸಕದ ಬಸದೊಳೆ ಬಸದಾಗಿಯುಂ ಅಸಿಯಳೆನಗಸವಸದೊಳೆ ಬೆಸೆದು ಪೋಗಿ ಮಱಿಗೊಳೆ: **ಆದಿಪು,** ೪. ೧೨ ವ ಮತ್ತು ೧೩); ಬೆಳಗಿನ ಹೊತ್ತು (ನಸು ಬಿರಿದ ಕಮಲಮುಕುಳದ ನಸುಬಿರಿವುತ್ಪಲದ ಮುಗ್ಧಪರಿಮಳ ಗಂಧಂ ಪೊಸವೇಟದ ಪಟಿವೇಟದ ಸುಸಿಲಿನಿದಂ ಪಡೆದುದಳಿಗೆ ಬೆಳಗಪ್ಪಾಗಳ್: **ಅಜಿತಪು,** ೬. ೬೫)

**ಸುಸಿಲಾಸೆ** – ಕಾಮೇಚ್ಛೆ (ಸುಸಿಲಾಸೆಯ ನಲ್ಲಳ ನೋಟದಂತೆ ಚಿತ್ತಂಗೊಳಲ್ ಆರ್ಪುದೀ ಕೃತಿ ಷಡಕ್ಷರದೇವಕೃತಂ ರಸಜ್ಞರಾ: **ಶಬರಶಂ,** ೧. ೨೭)

**ಸುಸ್ತನಿತ** – ಮೇಘಧ್ವನಿ, ಗುಡುಗು (ಜಲನಿಧಿ ಜಂಭವೈರಿಗಿರಿಯಂ ನಿಱೆಯಂ ಬಿಡು ಬೇಗಮೆಂದು ಬಂದು ಉಲಿವವೊಪ್ಪೆ ಸುಸ್ತನಿತಂ: **ರಾಜಶೇವಿ,** ೧. ೯೯)

**ಸುಸ್ಥ** – ಗಟ್ಟಿಯಾಗಿ ನೆಲೆಗೊಂಡ (ನಿತ್ಯನಿಯಮದಿಂ ನಿರವಿಸಿ ಸುಸ್ಥಮಿರಿಸಿಯುಂ: **ಪುಷ್ಪದಂಪು,** ೪. ೧೮ ವ)

**ಸುಸ್ಥತೆ** – ನೆಲೆಗೊಂಡ ಸ್ಥಿತಿ (ನಿವೃತ್ತಿಪರಿಣತಿಯೊಳ್ ಪರಿಣಮಿಸಿರ್ದ ಸುಸ್ಥತೆಯಂ ವ್ಯರ್ಥಂ ಮಾಡದೆ: **ಚಂದ್ರಪ್ರಪು,** ೪. ೧೮ ವ)

**ಸುಹೃಜ್ಜನ** – [ಸುಹೃತ್+ಜನ] ಮಿತ್ರವರ್ಗ (ಇನಿತೇಕಾದುದು ನೋವು ಇದೆಮ್ಮ ದೆಸೆಯಿಂ ಮೇಣಾದುದೋ .. ..ಮತ್ ಸುಹೃಜ್ಜನದಿಂ ಮೇಣ್ ತೊಡರ್ದತ್ತೊ: **ಆದಿಪು,** ೩. ೨೪)

**ಸುಹೃತ್** – ಸ್ನೇಹಿತ (ದುರ್ಗಾಧಿನಾಥನಿಯತ ನಿಸರ್ಗಪ್ರೀತಿಯಿಂ ಅಭೀಷ್ಟಮಂ ಸಕಲಸುಹೃತ್ ವರ್ಗಂಬೆರಸು ಅನುಭವಿಸುಗೆ ದುರ್ಗಂ ವರ್ಗತ್ರಯಪ್ರಕೃಷ್ಟೋದಯಮಂ: **ಪಂಚತಂತ್ರ,** ೪೪೬)

**ಸುಹೃತ್ವ** – ಗೆಳೆತನ (ಅರುಣಾಬ್ಜಪತ್ರದೆ ತದಕ್ಷಿ ಸುಹೃತ್ವಮನಾಂತುದಂತದುಂ ಲುಸುಮಕಳಂಬನಂಬು ಬಗೆಗುಂದಿಸಿದತ್ತದುಮಬ್ಜಗಂಧಿಯಾ: **ರಾಜಶೇವಿ,** ೧೧. ೧೩೯)

**ಸುಹೃದ** – ಗೆಳೆಯ (ಕೆಳೆಯಂ ಮಿತ್ರಂ ವಯಸ್ಯಂ ಸುಹೃದನೆನೆ ಸಹಾಯಂಗೆ ಪರ್ಯಾಯನಾಮಂ: **ಅಭಿಧಾವ,** ೨. ೧. ೧೧)

**ಸುಹೃದ್ಬಲ** – [ಸುಹೃತ್+ಬಲ] – ಸ್ನೇಹಿತರ ಸೈನ್ಯ (ಸಂಧಿಯಂ ಮಾಡಲೊಲ್ಲದೆ ಸುಹೃದ್ಬಲಮೆಲ್ಲಮನಿಕ್ಕಿ ಯುದ್ಧಮಂ ಮಾಡಿದ ಜಾತಿಬೆಳ್ ನಿನಗೆ ಅದೇವಿರಿದು ಈ ಎಡಱ್ ಎಂದು ಮುಂದೆ ಬಂದು ಏಡಿಸುವಂತಿರೆ ಆಡಿದುದೊಂದು ಮರುಳ್ ಫಣಿರಾಜಕೇತುವಂ: **ಪಂಪಭಾ,** ೧೩. ೫೪)

**ಸುಳಿಯಳಗ** – ಮದ್ದಳೆ ಬಾರಿಸುವ ಒಂದು ರೀತಿ (ಅಳಗಂ ಸುಳಿಯಳಗಂ ಬೊಟ್ಟಳಂ ಕತ್ತರಮುಂ ಎಸೆವ ಪೊಱಕತ್ತರವಗ್ಗಳಿಸಿರೆ ನಾನಾ ಭೇದಂಗಳ ಪಹರಣಿ ತುಡುಕುಮೋಡಿಯಂ ಬಾಜಿಸಿದಂ: **ಧರ್ಮಪ,** ೨. ೨೩)

**ಸುಱುಕಲ್ದನಿ** – ಹೀರುವಾಗಿನ ಶಬ್ದ (ಬಾಯ್ದೆಱೆಯೊಳ್ ರಸಾಗ್ರಪಲ್ಲವಮಂ ಮಲೆದು ಮರಲ್ದು ಸುತ್ತಿ ಸುಱುಕಲ್ದನಿ ಪೆರ್ಚಿರೆ ನೃಪನೊಲ್ದು ನೋಡಿದಂ: **ಲೀಲಾವತಿ,** ೫. ೧೦೧)

**ಸುಱುಕಿಡು** – ಹೀರುವಾಗ ಶಬ್ದಮಾಡು (ಮೂಗಲರುತ್ತುಂ ಸುಱುಕಿಟ್ಟು ಸೂಸೆ ನೊರೆ ಬಾಯಿಂ .. .. ಪಾಯ್ದುದಿದಿರೊಳ್ ಶೈಲಪ್ರಭಂ ಸೈರಿಭಂ: **ಶಬಶಂವಿ,** ೩. ೫೫)

**ಸುಟಿ** – ತಿರುಗು (ಸುಟಿ–ಭ್ರಮಣೇ: **ಶಬ್ದಮದ,** ಧಾ ೯೩೯); ಕಾಣಿಸಿಕೊ (ಮೃಗಭೂ ಖುದ್ದ ವಿಳಾಸಿನೀ ಕಬರಿಕಾಬಂಧಗಳಂ ಪೊತ್ತು ಮಲ್ಲಿಗೆಯೊಳ್ ಭಾವಿಸಿ ಧೂಪದೊಳ್ ಮೊರೆದು ತತ್ಕಾಂತಾ ರತಿಸ್ವೇದಬಿಂದುಗಳೊಳ್ ನಾಂದು ಕುರುಳ್ಗಳೊಳ್ ಸುಟಿದು ಮುಂದೊಂದಿರ್ದ ಸೌಭಾಗ್ಯಘಂಟೆಗಳೊಂದಿ ಇಂಚರದೊಳ್ ಪಳಂಚಿ ಸುಟಿದತ್ತು ಅಂದೊಂದು ಮಂದಾನಿಳಂ: **ಪಂಪಭಾ,** ೪. ೮೦); ತಿರುಗಣಿ (ಸುಟಿಯೊಳಗಿರ್ದು ಬೆಟ್ಟು ಪೊಱಪೊಣ್ಮುವಿನಂ ಲವಣಾಂಬುರಾಶಿ ಕುಕ್ಕುಟಗುದಿವಲ್ಲಿ ಕೂಟ್ಟುದಿಯೆ ಮೇಗೆ ಸಿಡಿಲ್ದಗುಳಂತೆ ಕೂಡೆ: **ಪಂಪಭಾ,** ೧೧. ೧೫೩); ಕೆಲಸಗಳ್ಳ ಗಿಡದ ಕುಡಿ ಹಾಗೂ ಸುತ್ತಾಡು ಎಂಬ ಮೂರು ಅರ್ಥಗಳು (ಮೂರರ್ಥಕ್ಕೆ: ಸುಟಿಯೆಂದು ಕೆಲಸಗಳ್ಳನುಂ ಸಸಿಯ ಸುಟಿಯುಂ ಸುಟುವ ಭಾವಮುಂ ಅಕ್ಕು: **ಶಬ್ದಮದ,** ವೃತ್ತಿ, ೧೭೬)

**ಸುಟಿಗಾಳಿ** – ಸುಂಟರಗಾಳಿ, ಸುಳಿಯುವ ಗಾಳಿ (ಪುಣ್ಯ ದೇವತಾ ದೂತನವೋಲ್ ಸುಟಿಗಾಳಿಯೊಡನೆ ಹರ್ಷದ ಮಱ ಬರೆ ಬಂದತ್ತು ಅದೊಂದು ದಿವ್ಯಾಮೋದಂ: **ಪಂಪರಾ,** ೯. ೧೭)

**ಸುಟಿಗುರುಳ್** – ಗುಂಗುರು ಕೂದಲು (ಮೆಱೆವರ್ ಸುರ್ಕುಂಗುರುಳ ಸುಟಿಗುರುಳ ನಿಡುಗುರುಳುರುಳಿಗುರುಳ ತುಂಬಿಗುರುಳ ಗೋಪಸ್ತ್ರೀಯರ್: **ಜಗನ್ನಾವಿ,** ೪. ೧೨೫)

**ಸುಟಿಗೊಳ್** – ತಿರುಗು (ಭೀತಿಯಿಂ ಮಱುಗಿ ತೆರಳ್ದು ತೂಳ್ದಿ ಸುಟಿಗೊಂಡುದು ಪಾಂಡವಸೈನ್ಯಸಾಗರಂ: **ಪಂಪಭಾ,** ೧೨. ೧೩); ಗುಂಡಗೆ ಆಗು (ಸುಟ್ಟುಱಿಗಾಲಿಯೊಳ್ ಸುಟಿಗೊಂಡು ತಱಗೆಲೆಗಳ್ ಪಾಱುವಂತೆ ದೆಸೆದೆಸೆಗೆ ಪಾಱುವ ಘನಾಘನಚಕ್ರದಿಂದುಳ್ಕುಲ್ಕಾಕಾರಮಾಗೆ: **ಗದಾಯು,** ೮. ೨೦ ವ)

**ಸುಟಿದಳಿರ್** – ಎಲೆಯ ಚಿಗುರು (ಸುಟಿದಳಿರಾಯ್ತು ಪೂಗಣೆಗೆ ಕೆಂಗಱೆ ಕೈಪೊಡೆಯಾಯ್ತು .. .. ಅಶೋಕೆಯ ಕೆಂದಳಿರ್: **ಮಲ್ಲಿನಾಪು,** ೫. ೧೯)

**ಸೂಕರ** – ಹಂದಿ (ವನಮೂಷಕ ಮಾರ್ಜಾರಂ ವನಾಶ್ವ ಮಹಿಷಂ ಸೂಕರಮನಿತುಂ ಮುನಿಸಂ ಪರಿಹರಿಸಿರ್ದುವು ಮುನಿನಾಥಾಂತಿಕದೊಳುದಿತ ಶಾಂತರಸಂಗಳ್: **ಅಜಿತಪು,** ೭. ೭); ವರಾಹಾವತಾರ (ಅನಿಮಿಷ ಕೂರ್ಮ ಸೂಕರ ನೃಕೇಸರಿ ವಾಮನ ರಾಮ .. .. ಎಂಬಿವು ಪತ್ತಿಸುತ್ತಿರಲ್ ವನರುಹನಾಭನಂ: **ಸಮಯಪ,** ೮. ೧೩೭)

**ಸೂಕರಿ** – ಹೆಣ್ಣು ಹಂದಿ (ಈ ಕರಿ ಸೂಕರಿಯಲ್ತೆ ಪತ್ತಿ ಗಂಟಲನೊಡೆಯೆತ್ತಿ ಕೊಂದಪೆಂ: **ಪಂಪಭಾ,** ೧೧. ೭೩)

**ಸೂಕಳ** – ಬಿರುಗುದುರೆ, ಕಾಡುಕುದುರೆ (ಸೂಕಳಮಲ್ತಿದು ಸಕಲ ಗುಣಾಕರಮೆನೆ ಜನಕ ಮುಖ ವಿಲೋಕನದಿಂದ ಉದ್ರೇಕಮನುಟಿದಿರೆ ವಾಹಕರ್ ಆ ಕುಟಿಲಾಶ್ವಕ್ಕೆ ಖರಖಲೀನಮನಿಟ್ಟರ್: **ಪಂಪರಾ,** ೪. ೧೧೪)

**ಸೂಕಳತುರಂಗ** – ಸೂಕಳ (ಅಂತಾ ಸೂಕಳತುರಂಗಂ ಅತಿ ವಿಷಮಗಹನಮಂ ಪುಗುವುದುಂ: **ಪಂಪರಾ,** ೧೬. ೬೫ ವ)

**ಸೂಕಳತ್ವ** – ತುಂಟತನ, ಬಿರುಸು (ಕಟ್ಟಿರ್ದ ದುಷ್ಟವಾಜಿಯಂ ಕಂಡು .. .. ದೇವ ನಿಮ್ಮಡಿಗಳ್ವಿಚಾರಿಸುವೊಡೆ ಲೋಕದ ಸೂಕಳತ್ವಮಂ ಮೂಷೆಯೊಳಿಟ್ಟೆಱೆದಂತೆ ದುಷ್ಟತನದ ಪಟ್ಟಮನಾಂತಿಪ್ಪುದು: **ಪುಣ್ಯಾಸ್ರ,** ೭. ೫೧ ವ)

**ಸೂಕಳಾಶ್ವ** – ಸೂಕಳ (ಪದ್ಮಾವತಿಯೆಂಬಳ್ ಆ ಸೂಕಳಾಶ್ವದ ಪಜ್ಜೆವಿಡಿದು ಬಂದು ತನ್ನರಸನಂ ಕಂಡು: **ಪಂಪರಾ,** ೧೬. ೬೫ ವ)

**ಸೂಕ್ತಿಸತಿ** – ಸರಸ್ವತಿ (ಸೂಕ್ತಿಸತಿಯುಂ ಶ್ರೀಕಾಂತೆಯುಂ ಜೈನಶಾಸನದೇವೀಕುಳಮುಂ ಸಮಂತು ಸಮಸಂದಿಷ್ಟಾರ್ಥಮಂ ಮಾಟ್ಕೆ: **ಪುಷ್ಪದಂಪು,** ೮. ೬೪)

**ಸೂಕ್ಷ್ಮಕಾಯಯೋಗ** – [ಜೈನ] ಪಾಪವಿಹ ರಣಾತ್ಮಕ ಕ್ರಿಯೆಯಿಲ್ಲದೆ ಪದ್ಮಾಸನ ದಿಂದಲೇ ಗಮನಕ್ರಿಯೆಯ ಸಾಗುವಿಕೆ (ಯತಿ ವೃಷಭಸಹಿತಂ ಪ್ರತಿಮಾಯೋಗದೊಳ್ ನಿಂದು ಸೂಕ್ಷ್ಮಕಾಯಯೋಗದಿಂ .. .. ಲೋಕಪೂರಣಕ್ರಿಯೆಗಳೊಳನಂತರ ಪ್ರತಿಸಮಯಂಗಳಂ ಮಾಡಿ: **ವರ್ಧಮಾಪು,** ೧೬. ೧೬ ವ)

**ಸೂಕ್ಷ್ಮಕ್ರಿಯೆ** – ಗುಟ್ಟು (ಎಲ್ಲಿಯುಮಱಿಸಿಯುಂ ದುರ್ಯೋಧನನಂ ರೂಪುಗಾಣದಿದೇನಾನುಮೊಂದು ಕಾರಣಮಾಗಲ್ವೇಳ್ಕುಮೆಂದು ಸೂಕ್ಷ್ಮಕ್ರಿಯೆಯಂ ಅಂತಕತನಯ ಗರುಡಧ್ವಜನೊಳಾಲೋಚಿಸುವುದುಂ: **ಗದಾಯು,** ೬. ೧೫ ವ)

**ಸೂಗುರಿಸು** – ಗಾಬರಿಗೊಳ್ಳು (ಶಿವಧೋ ಶಿವಧೋ ಎನುತಂ ಸುರುಳ್ದು ಸೂಗರಿಸಿ: **ಗಿರಿಜಾಕ,** ೬. ೬)

**ಸೂಚ** – ಹುಲ್ಲಿನ ಊಬು (ಸೂಚಮನುರ್ಚಿ ಪುಲ್ಲೆಗಾಟಿಸಿ ಮಲೆತರ್ಪರಲೆಯ ಸೋಲಮಂ ಅತ್ತಿಯೊಳ್ ಅರಿಕೇಸರಿ ನಿಂದು ನೋಟ್ಪುದೊಂದರಸಲ್ತೇ: **ಪಂಪಭಾ,** ೫. ೪೪)

**ಸೂಚಕ** – ಚಾಡಿಕೋರ (ನೀಚಂ ಕ್ಷುದ್ರಂ ಪಿಶುನಂ ಸೂಚಕನೆಂದಱಿದುಕೊಳ್ವುದು ಕರ್ಣೇಜಪನಂ: **ಅಭಿಧಾವ,** ೨. ೧. ೧೩)

**ಸೂಚಿ** – ಸೂಜಿ (ಉಜ್ವಳಿಸುವ ಲೋಹ ಸೂಚಿಗಳವೋಲ್ ತನುರೋಮಂ .. .. ಬರುತಿರ್ದುದು ಭೀಕರನೊಂದು ಸೂಕರಂ: **ತ್ರಿಷಷ್ಟಿಪು,** ೨೭. ೬೦)

**ಸೂಚಿಶಕ್ತಿ** – ವ್ಯೂಹರಚನಾ ಸಾಮರ್ಥ್ಯ (ಸಮರಾಗ್ರದೊಳ್ .. .. ಸೂಚಿಶಕ್ತಿಗೆ ನೃಪರಾನೆ ಬಾರದವೊಲಾದುವು ರಾಜಕುಮಾರರಾನೆಗಳ್: **ಗದಾಯು,** ೧. ೧೬)

**ಸೂಚೀನಾಟ್ಯ** – ಒಂದು ಬಗೆಯ ನಾಟ್ಯ, ರಂಗಸ್ಥಳದಲ್ಲಿ ಸೂಜಿಗಳನ್ನು ಹಾಕಿ ಅದನ್ನು ಮೆಟ್ಟದ ರೀತಿಯಲ್ಲಿ ಮಾಡುವ ಕುಶಲ ನರ್ತನ (ಮತ್ತಂ ಕೆಲರ್ ನೋಡಿ ಸೂಚೀನಾಟ್ಯಂಗಳನಾಡಿದರ್ ಖರನಖಪ್ರಾಂತಂಗಳೊಳ್ ಶಕ್ರನಾ: **ಆದಿಪು,** ೭. ೧೨೪)

**ಸೂಚೀಮುಖ** – ಸೂಜಿಯ ಮೊನೆಯಂತಹ ಚೂಪಾದ ತುದಿ[ಯುಳ್ಳುದು] (ಅಂತಾದಿತ್ಯೋದಯಮಾಗಲೊಡಂ ಮೇಘವರ್ಣನೆರ್ದು ಕಾಕಬಲರುಧಿರಾರುಣೀ ಭೂತಮಾಗಿರ್ದ ಸಮರಾಂಗಣಮುಮಂ ಉಲೂಕನಿಕರಸೂಚೀಮುಖ ಚಂಚು ಚರಣ ಪಕ್ಷಘಾತಕ್ಕದಿರದಿದಿರಾಂತು ಕಾದಿ: **ಪಂಚತಂತ್ರ,** ೨೭೮ ವ)

**ಸೂಚೀಯಾನ** – ಕಸೂತಿ ಹಾಕುವ ಕಲೆ (ಒಂದೆ ತೆಱನಾಯಾಸಕ್ರಮಂ ಕಾವ್ಯಮಂ ಸಮೆವಂಗಂ ಉಜ್ವಳಿಪ ಸೂಚೀಯಾನಮಂ ಚೀನಮಂ; **ಅನಂತಪು,** ೧. ೩೭)

**ಸೂಚೀಯಾನೆ** – ಸೈನ್ಯದ ಮುಂಭಾಗದಲ್ಲಿರುವ ಆನೆ (ತನ್ನಯ ಸೂಚೀಯಾನೆ ತೊಟ್ಟಗೆ ಸಮರಾಗ್ರದೊಳ್ತರಿಯೆ ಪಿಂತನೆ ಸಂದುವು ರಾಜಪುತ್ರರಾನೆಗಳ್: **ಗದಾಯು,** ೧. ೧೬)

**ಸೂಚೀಹಸ್ತ** – ನಾಟ್ಯದ ಒಂದು ಹಸ್ತಮುದ್ರೆ (ದರ್ಪಕನ ದರ್ಪಂ ಬೆಂಗೆಯಿತ್ತಲಭಿವ್ಯಂಜಕಮಾದಪ್ಪುದೆಂದು ಸೂಚೀಹಸ್ತದಿಂ ಸೂಚಿಸಿ ತೋಱೆ; **ಅನಂತಪು,** ೭. ೯ ವ)

**ಸೂಜಿ** – ಕೈಯಿಂದ ಹೊಲಿಯುವ ಲೋಹದ ಸಾಧನ (ಕಾಯ್ದು ಕರ್ಬೊನ್ನ ಸೂಜಿಗಳಂ ಬೆರಲ್ಗಳೊಳ್ ಬೆಟ್ಟುವರುಂ: **ಆದಿಪು,** ೫. ೮೫ ವ)

**ಸೂಜಿಗೊಂಬು** – ಚೂಪಾದ ಕೊಂಬು (ಬಸಿದಸಿಯ ದಸಿಯನನುಕರಿಪ ಸೂಜಿಗೊಂಬುರ್ಚಿ ಸೀಟ್ದು ಬಸುಱಿಂ ನಿಸದಂ ಬಿಸುನೆತ್ತರ ಪೊನಲಂ ಕರುಳ ಸೋಗೆಯುಂ ಕವಿದುವವನಿಗಾ ಯತಿಪತಿಯಾ: **ಆಚವರ್ಧ,** ೩. ೭)

**ಸೂಜಿಗೊಳ್** – ಸೂಜಿಯಿಂದ ಚುಚ್ಚಲ್ಪಡು (ಸೂಜಿಗಂಡ ಪುಣ್ಣಿನಂತೆ ಕಣ್ಣ ಶೂಲೆಯಂತೆ ನಾಲಗೆಯ ಪುಗುಳಂತೆ: **ಧರ್ಮಾಮೃ,** ೯. ೧೩ ವ)

**ಸೂಜಿಯ ಪಿನ್ನೆ** – ಸೂಜಿಯ ರಂಧ್ರ (ಸೂಜಿಯ ಪಿನ್ನೆಯೊಳಂ ಮಣಿಯ ದ್ವಾರದೊಳಂ ನುಸುಟೆರ್ವರಿರ್ದೆಡೆಯೊಳ್ ಒರ್ವನಂ ಕತಪ್ಪ ಕಳ್ಳರ ಕಳ್ಳಂ: **ಧರ್ಮಾಮೃ,** ೬. ೧೦ ವ)

**ಸೂಟಿ** – ಚುರುಕು, ವೇಗ (ಕಟ್ಟಿದ ಗೆಜ್ಜೆಯ ಸೂಟಿಯ ರವದ ಪೊರ್ಕುಳ ಗಂಟೆಯ .. .. ಚಾರುತರ ಭೂಷಣಂ

ಭೀಷಣಮಾಗೆ .. .. ಗಗನಮನರರ್ವ ಜಾತ್ಯಶ್ವಂಗಳ ವಳಯಮಂ: **ಗಿರಿಜಾಕ,** ೬. ೫೫ ವ)

**ಸೂಡಿ –** ಪಂಜು (ಗುರುದತ್ತ ಮುನೀಶ್ವರನಂ ಕರಮಲ್ಲದೆ ಮುನಿದು ಸೂಡಿ ಪೊತ್ತಿಸಿ ಸುಟ್ಟಂ ಭರದಿಂ ಮಳಮುಖನೆಂದೊಡೆ ಕರಮುಗ್ರರ್ಮುಳಿಸು ಬಂದರೇನಂ ಮಾಡರ್: **ಧರ್ಮಾಮೃ,** ೮. ೫೫)

**ಸೂಡಿಸು –** ತೊಡಿಸು (ತನಗೊಲ್ದು ಮಾಲೆಯಂ ಸೂಡಿಸಿದಾತನೀತಂ: **ಪಂಪರಾ** ೩. ೬೧)

**ಸೂಡು –** ಧರಿಸು (ಸೂಡಿದ ಪಾರಿಜಾತದ ನಮೇರುವ ಬಾಸಸಿಗಮೊಯ್ಯನೊಯ್ಯನೆ ಇರ್ಪೋಡಿದುದು: **ಆದಿಪು,** ೩. ೩); ತೊಡಿಸು, ಹಾಕು (ತೋಳ್ಗಳ್ ಆಸೆಯೊಳ್ ತೊಡರ್ದಿರೆ ಪೊಣ್ಮೆ ಘರ್ಮಜಲಂ ಉಣ್ಮೆ ಭಯಂ ಕಿಡೆ ನಾಣ್ .. .. ಗುಣಾರ್ಣವನಂ ಸತಿ ಮಾಲೆ ಸೂಡಿದಳ್: **ಪಂಪಭಾ,** ೩. ೬೪); ಸುಡುವಿಕೆ (ಸೀತೆ .. .. ಅಟ್ಟೊಡೆ ಅಟ್ಟುವು ಬೆಮರ್ತೊಡೆ ಕೂಡೆ ಬೆಮರ್ತುವು ಆಗಳ್ ಆ ಲಂಕೆಯ ಸೂಡಂ ಉನ್ನತಿಯ ಕೇಡಂ ಅವಂಗೆ ನಿವೇದಿಪಂತೆವೋಲ್: **ಪಂಪರಾ,** ೯. ೧೦೯); ಹೊರೆ (ನಕುಳಸಹದೇವರುಮಂ ಶಲ್ಯಂ ವಿರಥರ್ಮಾಡಿ ಪಿಡಿದುಕೊಂಡು ಪುಲ್ಲ ಸೂಡನೀಡಾಡುವಂತೆ ತನ್ನಳಿಯಂದಿರಿರ್ವರುಮಂ ಈಡಾಡಿ: **ಪಂಪಭಾ,** ೧೩. ೪೧); ಕಾವು, ಬೆಂಕಿ (ಸೂಡಲೊಡನೆ ರಾಜಕುಮಾರನ ಮನದೊಳ್ ಸೂಡೆರ್ದಂತಾಗೆ: **ನೇಮಿನಾಪು,** ೬. ೪೨ ವ)

**ಸೂಡುಶಯ್ಯೆ –** ಬೆಚ್ಚನೆಯ ಹಾಸಿಗೆ (ಅಗರುವ ಮೆಚ್ಚು ಅಚ್ಚ ಸಿರಿಕಂಡದೊಳ್ ಅಗ್ಗಲಿಸಿತ್ತು ಸೂಡುಶಯ್ಯೆಗಳ ಬಯಕ್ಕೆ ಜೊಂಪಲರ್ದವು ಪಾಸುಗಳೊಳ್ ನೆಲಸಿತ್ತು ಪೂತ ಗೊಜ್ಜಗೆಗಳ ಸಿಂದುರಂಗಳೊಳಗೆ ಓಗರಗಂಪನೆ ಬೀಱುತ; **ಪಂಪಭಾ,** ೫. ೩೦)

**ಸೂತ –**ಬೆಸ್ತ (ಗಂಗೆಗೆ ಕೆಯ್ಯೆಡೆಯೆಂದುತ್ತುಂಗಸ್ತನಿ ಕೊಟ್ಟು ಪೋಗೆ ಸೂತಂ ಕಂಡಾತ್ಮಾಂಗನೆಗೆ ರಾಧೆಗಿತ್ತು: **ಪಂಪಭಾ,** ೯. ೬೫); ಸಾರಥಿ (ಇಸೆ ಮಸಗಿ ಭೀಮಂ ಈರಯ್ದು ಶಿತಾಸ್ತ್ರದಿಂ ಉರುಳೆ ಸೂತಂ ಉಡಿಯೆ ರಥಂ ಕೀಲಿಸೆ ಕುದುರೆ ಮುಱಿಯೆ ಪಱಿವಿಗೆ ಮಸಕದಿಂ ಎಚ್ಚೆಚ್ಚಂ ಒಂದೆ ಸರಲೊಳ್ ನೊಸಲಂ: **ಪಂಪಭಾ,** ೧೦. ೯೯); ಹೊಗಳುಭಟ್ಟ (ಸೂತ ನಟ ವಂದಿಮಾಗಧ ವೈತಾಳಿಕ ಕಥಕ ಪುಣ್ಯಪಾಠಕ ವಿಪ್ರ ಉದ್ಘೂತರವಂ ಎಸೆಯೆ: **ಪಂಪಭಾ,** ೧೨. ೧೦೬)

**ಸೂತಕ –** ಜನನ (ಮನೆಗೆ ತಂದು ರಾಧೆಯೆಂಬ ತನ್ನ ನಲ್ಲಳ ಸೋಂಕಿನೊಳ್ ಕೂಸನಿಟ್ಟೊಡೆ ರಾಗಿಸಿ ಸುತನ ಸೂತಕಮಂ ಕೊಂಡಾಡೆ: **ಪಂಪಭಾ,** ೧. ೯೬ ವ); ಪಾದರಸ (ರಸ ಪಾರದ ಸೂತಕ ಚಲಸಂಜ್ಞಿತಂ ಗಿರಿಶವೀರ್ಯಮದು ಪಾದರಸಂ: **ಅಭಿಧಾವ,** ೧. ೧೬. ೧೩)

**ಸೂತಜ –** ಸೂತಕುಲದಲ್ಲಿ ಹುಟ್ಟಿದವನು (ಗಂಗೆಗೆ ಕೆಯ್ಯೆಡೆಯೆಂದುತ್ತುಂಗಸ್ತನಿ ಕೊಟ್ಟು ಪೋಗೆ ಸೂತಂ ಕಂಡಾತ್ಮಾಂಗನೆಗೆ ರಾಧೆಗಿತ್ತು ಮನಂಗೊಳೆ ರಾಧೇಯನೆನಿಸಿ ಸೂತಜನಾದೈ: **ಪಂಪಭಾ,** ೯. ೬೫)

**ಸೂತಸುತ –** ಸೂತನ ಮಗ, ಕರ್ಣ (ಬೀರವಟ್ಟಮಂ ಆನಿರೆ ನೀಂ ಈ ಸೂತಸುತಂಗೆ ಎಡೆಗೊಂಡು ಕೈವಾರದಿಂದ ಒಸೆದು ಇತ್ತೊಡಂ ಏನಾಯ್ತು: **ಪಂಪಭಾ,** ೧೨. ೪೩)

**ಸೂತಿಕಾಗಾರ –** ಬಾಣಂತಿಮನೆ (ಮಂಗಳಾಸ್ಪದಮಾಗಿರ್ದ ಸೂತಿಕಾಗಾರ ದ್ವಾರಕ್ಕೆ ಬಂದು ತದ್ಬಹಿರ್ಭಾಗದೊಳ್ ಭೂವರಂ: **ಕುಸುಮಾಕಾ,** ೬. ೮೨ ವ)

**ಸೂತಿಕಾಸದನ –** ಬಾಣಂತಿಮನೆ (ಅಂತು ಸೂತಿಕಾಸದನಮಂ ಪೊಕ್ಕು ದೇವಕಿಯ ಮುಂದೆ ಪಟ್ಟಿರ್ದ ಶಿಶುವಿನ ಪಿಂಗಾಲಂ ಪಿಡಿದುಕೊಂಡು: **ಜಗನ್ನಾವಿ,** ೩. ೧೩ ವ)

**ಸೂತಿಕಾಸದ್ಮ –** ಸೂತಿಕಾಗೃಹ (ನಲವಿಂ ನರ್ತಿಪ ವೃದ್ಧಕಾಂತೆಯರುಮಂ ಬದ್ಧೋರ್ವಿಯೊಳ್ ಕೂಡೆ ಪೂವಲಿಯಂ .. .. ನೋಡುತ್ತುಂ.. ..ಖಚರೇಂದ್ರನಿಂತು ಪುಗುತಂದಂ ಸೂತಿಕಾಸದ್ಮಮಂ: **ಶಾಂತೀಶ್ವಪು,** ೪. ೪೭)

**ಸೂತೀಜನ –** ಸೂಲಗಿತ್ತಿಯರು (ವನಿತೆಯ ತನುರಕ್ಷೆಗೆ ತಕ್ಕನುಚರಜನ .. .. ಸೂತೀಜನ ಸಖಿಜನಮೆನಿತನಿತುಮಂ ಅವನಿಪತಿ ನಿಯೋಜಿಸಿ ತಳರ್ದಂ: **ಪುಷ್ಪದಂಪು,** ೪. ೧೪)

**ಸೂತ್ತುಂಗ –** ಚೆನ್ನಾಗಿ ಉಬ್ಬಿರುವ (ದೀರ್ಘಂ ಬಾಹು ಸೂತ್ತುಂಗಮಗಿಪ್ಪುರದೊಡನೆ ವಿಶಾಳಂಬೆತ್ತುಮಾರಕ್ತ ಭಾಸ್ವತ್ಕರಜದೊಡನೆ ಸುಸ್ನಿಗ್ಧಂ ಕನತ್ಕಾಂತಿದಂತಂ: **ವರ್ಧಮಾಪು,** ೬. ೬೫)

**ಸೂತ್ರ –** ದಾರ (ತಂತುಗುಣಂ ಸೂತ್ರಂ: **ಅಭಿಧಾವ,** ೧. ೧೧. ೮೭); ನಿಯಮ (ನಿರುಪಮತರ ಸೂತ್ರಾರ್ಥತತ್ವಪ್ರವೀಣಂ: **ಸುಕುಮಾಚ,** ೨. ೫೧); ಸಂಕ್ಷಿಪ್ತ ಹೇಳಿಕೆ (ವೃತ್ತಿವ್ಯಾಸಂ ತದ್ವ್ಯಾಲಕಮೆಂದಾ ಸೂತ್ರಕ್ಕರ್ತವೃತ್ತಿ ವರ್ತಿಸೆ ಪೇಟ್ವೆಂ: **ಶಬ್ದಮದ,** ೬)

**ಸೂತ್ರಧಾರ –** ಮಾರ್ಗದರ್ಶಕ ಶಿಲ್ಪಿ (ಸುರಪತಿ ಸೂತ್ರಧಾರಂ ಅಮರಾವಳಿ ಶಿಲ್ಪಿಗಣಂ: **ಶಾಂತಿಪು,** ೯. ೧೫೮); (ಅಂಗಜನೆ ಸೂತ್ರಧಾರಂ ಶೃಂಗಾರಮೆ ನಾಟಕಂ ತದಂಕಂಗಳ್ ನಾಲ್ಕಂಗಂಗಳಾಗೆ ಕಾಮಿಜನಂಗಳ್ ವರ್ಗಿಗರ ತೆಱದ ನಟಿಯಿಸುತಿರ್ದರ್: **ಚಂದ್ರಪ್ರಪು,** ೮. ೯೨); ನಿಯಾಮಕಶಕ್ತಿ (ಸಲ್ವುದೆ ಸಮರಮಿಂತೆನಗೆ .. .. ಜಗದ ಜೀವರನಾಡಿಪ ಸೂತ್ರಧಾರನೊಳ್: **ಶಬಶಂವಿ,** ೪. ೧೨೩)

**ಸೂತ್ರಧಾರವಿಧಿ –** ನರ್ತನ ನಿರ್ದೇಶಕನ ಮಾರ್ಗದರ್ಶನ (ಯುವತೀವ್ರಾತಮನೇಕಭೇದರಸಭಾವಂಗಳ್ ಪೊದಳ್ದುಣ್ಮಿ ಪೊಣ್ಮುವಿನಂ ನರ್ತಿಸೆ ಸೂತ್ರಧಾರವಿಧಿಯಿಂ: **ಆದಿಪು,** ೭. ೧೨೬)

**ಸೂತ್ರಧಾರಿ –** ಸೂತ್ರಧಾರ (ಸಂಸಾರನಾಟಕಸೂತ್ರಧಾರಿ ಮುರಾರಿ ಕೈಪಱಿಗಾಡಿದಂ: **ಜಗನ್ನಾವಿ,** ೩. ೫೩)

**ಸೂತ್ರಪ್ರಾಯ –** ನಿಯಮಗಳ ಸಾಕಾರರೂಪಿ (ಸದಸದ್ಭೇದಂಗಳಂ ಪೇಟ್ವಸೂರ್ತ್ರಪ್ರಾಯರಜೇಯರೀಗೆಮಗೆ ಉಪಾಧ್ಯಾಯರ್ ಸೂಖೋಪಾಯಮಂ: **ಪಂಪರಾ,** ೧. ೪)

**ಸೂತ್ರರತ್ನ –** ದಾರಕ್ಕೆ ಪೋಣಿಸಿದ ರತ್ನ (ವನಿತಾನಾಯಕರತ್ನಂ ತನೂದರಿಕನಕಸೂತ್ರರತ್ನಂ .. .. ಎನಿಸಿದಂ ಕವಿರತ್ನಂ: **ಗದಾಯು,** ೧. ೪೬)

**ಸೂತ್ರಾವೇಷ್ಟಿತ –** ದಾರದಿಂದ ಕಟ್ಟಲ್ಪಟ್ಟ (ಕರ್ಪೂರಗಂಧ ಶಾಲ್ಯಕ್ಷತಂಗಳಂ ತೀವಿ ಪೊಯ್ದು ಸೂತ್ರಾವೇಷ್ಟಿತ ಮಾತ್ರಂಗಳಾಗಿ ಮಾಡಿ .. .. ಕಂಪಿಸಲ್ ಪೊಂಪುಱಿವೋಗುತ್ತಿರ್ದ ತಂಡುಲಂಗಳಂ ಕಳೆದುಕೊಂಡು ಬಾಗಿದೋಗರಮನಾರೋಗಿಸುವಂ: **ಸುಕುಮಾಚ,** ೧೧. ೩೫ ವ)

**ಸೂತ್ರಿಸು –** ಅಳೆಯುವ ನೂಲನ್ನಿಡು (ಸೂತ್ರಿಸು– ಮಾನಸೂತ್ರಸ್ಥಾಪನೇ: **ಶಬ್ದಮದ,** ಧಾ ೭೫೫);

ಸೂತ್ರರೂಪದಲ್ಲಿ ನಿರೂಪಿಸು (ಸೂತ್ರಮಮನೆ ಮುನ್ನೆ ಪಾಣಿನಿ ಸೂತ್ರಿಸೆ ಜೈನೇಂದ್ರಬುದ್ಧಿ ಮಾಡಿದಂ ಅಂತಾ ಸೂತ್ರಕ್ಕೆ ವೃತ್ತಿಯಂ: **ಸಮಯಪ,** ೨. ೭೮); ಮಾರ್ಗದರ್ಶನಮಾಡು (ಕೃಷ್ಣ ನೃತ್ಯಮಂ ಸೂತ್ರಿಸುವುದುಂ ಒಲವಿಂ ಪಾಡುತುಂ ಗೋಪಿಯರ್ ನರ್ತಿಸಿದರ್ ಚೈತ್ರಾನಿಳಂ ಸೂತ್ರೀವನಲತೆಗಳ್ ನರ್ತಿಪೊಂದಂದದಿಂದಂ: **ಜಗನ್ನಾವಿ,** ೫. ೭); ನಿಶ್ಚಯಮಾಡು (ಪುತ್ರ ಕಳತ್ರ ಪರಿಗ್ರಹ ಗಾತ್ರ ಧನ ಐಶ್ವರ್ಯಮೆಂದಿವಾರ್ಗಮನಿತ್ಯಂ ಧಾತ್ರಿಯೊಳ್ತೆಂಬುದಂ ಈಗಳ್ ಸೂತ್ರಿಸಿತೆನ್ನೆರ್ದೆಯೊಳುಳ್ಕೆ ಬೀೞ್ಕೆಯಳ್ಕುಂ: **ಪುಷ್ಪದಂಪು,** ೧೩. ೨೭)

**ಸೂದ** – ಕಟುಕ (ಪಾಪಿ ಸೂದನುಂ ಆದಂ ಜಿನನುತ್ತಮಮತಮಂ ಕೇಳ್ವನಿತಱೊಳಂ ಕೊಲ್ವ ಕೊಲೆಗೆ ಒಡಂಬಡಲಱೆಯಂ: **ಸಮಯಪ,** ೩. ೫೦); ಅಡುಗೆಯವನು (ಆರುಳಿಕಂ ವಲ್ಲವ ಸೂದ ಸೂಪಕರಾಹ್ವಯಂ ಬಾಣಸಿಗಂ: **ಅಭಿಧಾವ,** ೧. ೧೧. ೫೨)

**ಸೂದಕರ್ಮಿ** – ಅಡುಗೆಯವನು, ಬಾಣಸಿಗ (ಮತ್ಸ್ಯಕನಲ್ಲಿ ವಲಲನಯ್ ಸೂದಕರ್ಮಿ ನಿನಗಿಂತು ಗಂಡಗೌನುಮಾಯ್ತೇ: **ಗದಾಯು,** ೭. ೩೬)

**ಸೂದನ** – ನಾಶಮಾಡುವುದು, ಕೊಲೆ (ವಿಶಸನ ಮಾರಣ ವಿಶರಣ ನಿಶುಂಭನ ಕ್ವಣನ ಸೂದನ ಪ್ರತಿಘಾತಂ ಪ್ರಶಮನ ವರ್ಜನ ಬರ್ಹಣ ವಿಶರಣ ಹಿಂಸಾರ್ಥಕಂ ವಧಂ ತಾನಕ್ಕುಂ: **ಅಭಿಧಾವ,** ೧. ೧೪. ೪); ವೈರಿ ಬಳಸೂದನ ಸದನನಪ್ಪೆನಗೆ ನಂದನನಂದನನೊಳ್ ಸಂಧಾನಂ ನೀತಿನಿಂದಿತಮುಂ: **ಜಗನ್ನಾವಿ,** ೫. ೬೧ ವ)

**ಸೂನಗೆ** – ಬಾಣ (ಆವರಿಸಿದ ಸೂನಗೆ ನಟ್ಟು ಓವದೆ ಬಿಟ್ಟವರ ಮೇಲೆ ಪರಿಯೆ ರಥಂ: **ಪಾರ್ಶ್ವನಾಪು,** ೩. ೧೨೨)

**ಸೂನಿಗೆ** – ಕತ್ತಿ (ಕಡುಮುಳಿದೋಡಿ ನಿಂದ ತುಟಿಲಾಳ್ಗಳಂ ಆಂ ತಱಿದು ಒಕ್ಕಲಿಕ್ಕದಿರ್ದೊಡೆ ಬಿಡದಾಂತ ಸೂನಿಗೆಯ ಭಂಡಿಗಳಂ: **ಕಬ್ಬಿಗಕಾ,** ೧೯೭)

**ಸೂನು** – ಮಗ (ಎಲೆ ವಿದ್ಯಾಧರನಾಥ ದೇವಿ ಪಡೆದಳ್ ಭೂಭಾನುವಂ ಸೂನುವಂ ಲಲಿತಾಗಣ್ಯವರೇಣ್ಯಲಕ್ಷಣ ಮಣಿವ್ರಾತೋಕನಂ ತೋಕನಂ: **ಶಾಂತೀಶ್ವಪು,** ೪. ೪೪)

**ಸೂನೃತ** – ಸತ್ಯ [ಜೈನ] ಸಮ್ಯಕ್‌ಚಾರಿತ್ರದ ಒಂದು ಬಗೆ, ಹಿತಕರವಾಗಿ ಸತ್ಯ ನುಡಿಯುವುದು (ಪೊಚ್ಚಱಿತನದೆ ನುಡಿವನೆನಿಸಿಪ್ಪ ಅಱಿಗುಲಿಗಂ ಮೊಗ್ಗೆ ಸೂನೃತವ್ರತಮೆಂತುಂ: **ಸಮಯಪ,** ೫. ೩೧)

**ಸೂನೃತವಚನ** – ಪ್ರಿಯಕರ ಸತ್ಯನುಡಿ (ಎಮಗಂ ಸಮ್ಮೋಹನಮಾದಿದಕ್ಕುಮಂದಣ್ಣನ ಸೂನೃತವಚನಂಮೆಂಬ ಮಂತ್ರಾಕ್ಷರದಿಂ: **ಗದಾಯು,** ೧. ೬೨)

**ಸೂನೃತವಾಕ್ಯಂ** – ಸತ್ಯ ಹೇಳುವವನು (ಕುಡುವುದು ಅಪಾಯಹೇತು ಕುಡದಿರ್ದೊಡೆ ಸೂನೃತವಾಕ್ಯನಲ್ಲೆಂ: **ಕರ್ಣನೇಮಿ,** ೫. ೯೫)

**ಸೂನೆಗಾಱ** – ಕಟುಕ, ವಧೆಗೈಯುವವನು (ಸಗ್ಗಕ್ಕೆ ಪಾಪಿ ಸಲ್ವೊಡೆ .. .. ಸೂನೆಗಾಱನುಂ ಜಾಲಗಾಱನುಂ ಮಾಣ್ಬಪರೇ: **ಸಮಯಪ,** ೧೪. ೮೭)

**ಸೂನ್ಯಾಸ** – ಒಳ್ಳೆಯ ವಿನ್ಯಾಸ (ಅಪೂರ್ವಮಪ್ಪ ಶ್ಲೋಕ ಸೂನ್ಯಾಸ ಸಮಾಸ ಸಂಸಾರವಚನರಚನೆಗಳಂ ಅತಿಬಳನುಮಂ ತತ್ಸಭಾಜನಮುಮಂ ಮನಂಗೊಳಿಸಿ: **ಸುಕುಮಾಚ,** ೨. ೧೪ ವ)

**ಸೂಪಕಾರ** – ಅಡುಗೆಯವನು (ಆ ಖಳಚಿತ್ತದ ಸೂಪಕಾರಂ ಈ ಕ್ಷೀಣತೆಯಾದುದು ಆ ಸವಣನಿಂದ ಎನಗೆಂದು ಅತಿದುಷ್ಟಭಾವಮಂ ತಳೆದು: **ಕರ್ಣನೇಮಿ,** ೬. ೫೪ ಮತ್ತು ೬೪ ವ)

**ಸೂಪಶಾಸ್ತ್ರ** – ಅಡುಗೆಯ ವಿದ್ಯೆ (ಹಯಶಾಸ್ತ್ರಂ ಸೂಪಶಾಸ್ತ್ರಂ .. .. ಎಂಬಿನಿತಱೊಳಂ ಪಡೆದಂ ಅತಿಕೌಶಲಮಂ: **ಪುಷ್ಪದಂಪು,** ೪. ೫೯)

**ಸೂಯಾಣ** - ಸೂಜಿಯಲ್ಲಿ ಪೋಣಿಸಿದಂತೆ ಸಾಲಾಗಿ ಸಾಗುವ ಸೈನ್ಯ (ಪೂರ್ವಪದಾಂತ್ಯಲೋಪಕ್ಕೆ: ದೇವಕುಲಂ–ದೇಗುಲಂ ಸೂಚಿಯಾನಂ–ಸೂಯಾಣಂ: **ಶಬ್ದಮದ,** ೩೦೯ ಪ್ರ)

**ಸೂಯಿಯಾಣ** – [ಸೂಚೀಯಾನ] ಸುಯ್ಯಾಣ, ಕಸೂತಿ ಕೆಲಸ (ಓಳಿದೋರಣಮಾಯ್ತು ಹಾರದ ಪಚ್ಚೆಸಾರದ ಮಾಲೆ ಸೌಧಾಳಿಯ ಒಳ್ಗುಡಿಯಾಯ್ತು ಚೀನದ ಸೂಯಿಯಾಣದ ಬಟ್ಟೆ: **ಪಂಪಭಾ,** ೧೪. ೧೫)

**ಸೂರ್** – ಮನೆಯ ಛಾವಣಿ (ಪೊಱಮಡದ ಸಡಗರದಿಂ ಸೂರ್ ತಾಗೆ ಸುಲಿದ ನೊಸಲೊಳ್ ನೆಲಸೆಕಮನಿಕ್ಕಿ ಪೆಂಡಿರ್ ಪಿಡಿಯೆ ಪಿಡಿಯೆ ಪರಿಪೊಱಂಟರುಂ: **ಲೀಲಾವತಿ,** ೫. ೧೧೪ ವ)

**ಸೂರ** – ಸೂರ್ಯ (ಸುರಾಸುರರುಂ ಸೂರನುಂ ಕುಮಾರನ ಸಾವಿಂಗಾಸುರನಾಗಿ ನರಂ ಬರೆ ಲೇಸಲ್ತು ಎಂಬಂತೆ ನಭದಿನಾಗಳೆ ತಳರ್ದರ್: **ಕರ್ಣನೇಮಿ,** ೧೨. ೫೨)

**ಸೂರಿ** – ವಿದ್ವಾಂಸ (ಸುಪ್ರತಿಷ್ಠರೆಂಬ ಸೂರಿ ಸುಧಾಕರನ ಸಮೀಪದೊಳ್ .. .. ನಿರ್ಮಲ ಧರ್ಮಾಮೃತಮನೀಂಟಿ: **ನೇಮಿನಾಪು,** ೪. ೧೦೭ ವ)

**ಸೂರುಳ್** – ಪ್ರತಿಜ್ಞೆ (ಚಟುಲತೆಯಿಂ ನಿನ್ನನೆಯ್ತರ್ಪ್ಪೆನೆಂದು ಏನಾನುಂ ಸೂರುಳ್ಗಳಿಂ ನಂಬಿಸಿದೊಡೆ ಅನುಚರಮ ಕೇಳ್ದು ಇದಂ ತನ್ನೊಳೆಂದಂ: **ಸುಕುಮಾಚ,** ೭. ೨೧); ಪ್ರತಿಜ್ಞೆ ಮಾಡು (ಸೂರುಳ್–ಶಪಥೇ: **ಶಬ್ದಮದ,** ಧಾ ೯೮೪)

**ಸೂರುಳಿಡು** – ಶಪಥ ಮಾಡು (ಪರವೆಯ ಪೊರೆಗಂ ನಿರುತಂ ಪೋಗದ ಮಾಳ್ಕೆಯೊಳಿರದೆ ಅವರ್ಗಂ ಸೂರುಳಿಡುವುದೆಂದನದಾಗಳ್: **ತ್ರಿಷಷ್ಟಿಪು,** ೩. ೬೯)

**ಸೂರುಳಿಸು** – ಆಣೆಯಿಡಿಸು, ಪ್ರತಿಜ್ಞೆಮಾಡು (ಉಳ್ಳುದಂ ಉಳ್ಳಂತೆ ಪೇೞೆಯಪ್ಪೊಡೆ ನಿನಗೆನ್ನಾಣೆ ಎಂದು ತನ್ನ ಮೇಗೆ ಸೂರುಳಿಸಿ ಬೆಸಗೊಂಡೊಡೆ: **ವಡ್ಡಾರಾ,** ಪು ೪೬, ಸಾ ೨೫)

**ಸೂರ್ಮಿ** – ದೇವರುಗಳ ಲೋಹದ ಪ್ರತಿಮೆ, ದೇವರ ಚಿನ್ನದ ವಿಗ್ರಹ (ದೈವಪ್ರತಿಕೃತಿಗಳ್ಗೆ ಅರ್ಚವಚನಾಭಿಖ್ಯೆ ಸೂರ್ಮಿಯನೆ ನೆಗೞ್ಗುಂ ನಾನಾವಿಧಲೋಹಮಯಪ್ರತಿಮಾವಳಗಳ್ ಹರಿಣಿ ಹೇಮಮಯಿ ತಾನಕ್ಕುಂ: **ಅಭಿಧಾವ,** ೧. ೩. ೧೬)

**ಸೂರ್ಯಕಾಂತವೈಮಾನ** – ಸೂರ್ಯಕಾಂತಶಿಲೆಯಿಂದ ನಿರ್ಮಿತವಾದ ದೇವನಿವಾಸ (ದೀಪ್ತಿಯೊಳೊಂದಿದ ಸೂರ್ಯಕಾಂತವೈಮಾನದ ರಶ್ಮಿಗಳ್ ಬೆಳಗುತ್ತಿಪ್ಪವು: **ಸಮಯಪ,** ೧೧. ೫೩)

**ಸೂರ್ಯಕಾಂತ** – ಬಿಸಿಲಿಗೆ ಕಿಡಿಕಾರುವ ಕಲ್ಲು, (ಖರಕಿರಣಸ್ಫುರಿತಕ್ಕಿದಿರುರಿವಂತಿರೆ ಸೂರ್ಯಕಾಂತಂ ಎನ್ನೀ ತೇಜಸ್ಸ್ಫುರಿತಕ್ಕೆ ಸೆಣಸಿನೊಳ್ ಮಾಱುರಿಗುಂ ಸೈರಿಸದು ತೇಜಮಾ ಭುಜಬಲಿಯಾ: **ಆದಿಪು,** ೧೪. ೪೨)

**ಸೂರ್ಯಜ** – ಸೂರ್ಯನ ಮಗ, ರೇವಂತ (ಸೂರ್ಯಜ ಅನುಕಾರಿಗಳ್ ಅಸಿಘಾತವಾರಿತವಿರೋಧಿ ಮತಂಗಜ

ಪೀನದಾನವಾರಿಗಳಧಿರಾಜಸನ್ನಿಧಿಯೊಳ್: **ಪಾರ್ಶ್ವನಾಪು,** ೩. ೩೮)

**ಸೂರ್ಯತನಯ** – ಸೂರ್ಯನ ಮಗ, ಕರ್ಣ (ಸೂರ್ಯತನಯಂ ತೇಜೋಗ್ನಿಯಿಂದಂ ದ್ವಿಷದ್ಬಲಮಂ ಸುಟ್ಟಂ ಉದಾತ್ತಪುಣ್ಯನವಂ ಚೈತಾಗ್ನಿಯಿಂ ಸುಟ್ಟೆನಿಲ್ಲ ಒಲವಿಂದ ಇಂದಿಂತು ಎರ್ದೆಮುಟ್ಟಿ ಕೂರ್ತನೊಳನೇ ಕರ್ಣಂಗೆ ದುರ್ಯೋಧನಂ: **ಪಂಪಭಾ,** ೧೩. ೬೦)

**ಸೂರ್ಯದಿನ** – ಭಾನುವಾರ (ನೀಮುಂ ನಿಮ್ಮ ಚೊಚ್ಚಿಲ ಮಗನಪ್ಪ ಸೂರ್ಯಸೂನುವಂ ಸೂರ್ಯದಿನದಂದು ಕಂಡು ಕಾರ್ಯಸಿದ್ಧಿಯಂ ಮಾಡಿಬನ್ನಿಂ: **ಪಂಪಭಾ,** ೯. ೬೩ ವ)

**ಸೂರ್ಯಪ್ರತಿಮಾಯೋಗ** – ಆತಪಯೋಗ, ಗ್ರೀಷ್ಮ ಋತುವಿನಲ್ಲಿ ಬಿಸಿಲಿನಲ್ಲಿ ನಿಂತು ತಪಸ್ಸು ಮಾಡುವುದು (ಸೂರ್ಯಪ್ರತಿಮಾಯೋಗದೊಳೆ ಪೂಣ್ದು ವಿಶ್ರುತಜೈನವ್ರತಿ ನಿಲ್ವಂ: **ಸಮಯಪ,** ೭. ೬)

**ಸೂರ್ಯವಿಮಾನ** – [ಜೈನ] ಒಂದು ಸ್ವರ್ಗ (ಅಲ್ಲಿಂ ಮೇಲೆ ದಶಯೋಜನಾಂತರದೊಳ್ ಕಿಂಚಿನ್ನ್ಯೂನಯೋಜನವಳಯದಿಂ ಸೂರ್ಯಕಾಂತಮಣಿಮಯಮಾಗಿ ಸೂರ್ಯವಿಮಾನಮುಂ .. .. ಇರ್ಕುಂ: **ಸುಕುಮಾಚ,** ೧೧. ೫೯ ವ)

**ಸೂರ್ಯವೀಥಿ** – ಪೂರ್ವ–ಪಶ್ಚಿಮವಾಗಿರುವ ಪಟ್ಟಣಬೀದಿ (ಸೂರ್ಯವೀಥಿಯೊಳವಂ ತಳ್ವದ್ಯೆತರುತ್ತಮಿರೆಯಿರ: **ರಾಜಶೇವಿ,** ೧೪. ೬೧)

**ಸೂರ್ಯಸೂನು** – ಸೂರ್ಯನ ಮಗ, ಕರ್ಣ (ನೀಮುಂ ನಿಮ್ಮ ಚೊಚ್ಚಿಲ ಮಗನಪ್ಪ ಸೂರ್ಯಸೂನುವಂ ಸೂರ್ಯದಿನದಂದು ಕಂಡು ಕಾರ್ಯಸಿದ್ಧಿಯಂ ಮಾಡಿಬನ್ನಿಂ: **ಪಂಪಭಾ,** ೯. ೬೩ ವ)

**ಸೂರ್ಯಾಶ್ವ** – ಸೂರ್ಯನ ಕುದುರೆ (ಪವಮಾನಾತ್ಮಜನಂ ಜವಪ್ರಸರದಿಂ ಸೂರ್ಯಾಶ್ವಮಂ ಶಕ್ರವಾಹನಕ್ಷೂಣ ಗುಣಂಗಳಿಂ ಮಿಗುವ ಜಾತ್ಯಶ್ವಂಗಳಂ: **ಪುಷ್ಪದಂಪು,** ೨. ೫೮)

**ಸೂರ್ಯೋಪಲ** – ಸೂರ್ಯಕಾಂತ[ಮಣಿ] (ವಿಭವಶರಧಿ ಚಂದ್ರೋದ್ಗಮಮಂ ಶೌರ್ಯಸೂರ್ಯೋಪಲ ಭಾಸ್ವತ್ಸಂಪದಂ ತನ್ನೃಪತನಯನೊಳೊಂದಿ ಚಿತ್ತಕ್ಕೆ ಮಾಡಿತ್ತೊಲವಂ: **ಚಂದ್ರಪ್ರಪು,** ೪. ೬)

**ಸೂಲ** – [ಶೂಲ] ದಸಿ (ಕಾದಲನ ತಸ್ಕರನೋಟಮೆಲ್ಲಿ ಬಿರ್ದೊಡಂ ನಡುವಿನಂ ಅಂಗಜಂ ಬಸಿದ ಸೂಲಮನಿಕ್ಕನೆ ಮೆಯ್ಯೊಳ್: **ಲೀಲಾವತಿ,** ೧೨. ೩೭)

**ಸೂಲಿಗೆ** – ಒಂದು ಆಯುಧ, ಭರ್ಜಿ (ಸಬಳ ಸಲ್ಲೇಹ ಸೂಲಿಗೆ ಚಕ್ರಚಾಪ ಬಲ್ಲೆಹ ಕತ್ತಿಗೆ ಕಠಾರಿಯಾದ .. .. ಕೈದುಗಳಿಂದ: **ಧರ್ಮಪ,** ೧. ೮೬ ವ)

**ಸೂಲೆ** – ನೋವು (ಪಸಿವು ನೀರಟ್ಟೆ ದಾಹ ವಾತಂ ಸೂಲೆ ಮೊದಲಾಗೊಡೆಯ ವೇದನೆಗಳಂ ಸೈರಿಸಿ: **ವಡ್ಡಾರಾ,** ಪು. ೫೨, ಸಾ. ೯)

**ಸೂಲೆಯೇಟಿಟ್** – ನೋವು ಉಂಟಾಗು (ಅಲ್ಲಿಯ ಜಿನಾಲಯದ ಪರಸ್ಥಿಭದ್ರದೊಳ್ ಭೋಂಕಲ್ ಸೂಲೆಯೆತ್ತಿದಂತೆ ಪಟ್ಟಿರ್ದು: **ಕರ್ಣನೇಮಿ,** ೪. ೭೭ ವ)

**ಸೂಲವೇಱು** – ನೋವನ್ನು ಹೊಂದು (ಸೂಲೆವೆತ್ತಂತೆ ಪೊರಳುತ್ತುಂ ಕಳ್ಗುಡಿದರಂತೆ ಮತಿಗಿಡುತ್ತುಂ ವೃದ್ಧನಂತೆ ತಡವರಿಸುತ್ತುಂ: **ಧರ್ಮಾಮೃ,** ೧. ೧೨೪ ವ)

**ಸೂಲಿಸು** – ಹೆರಿಗೆ ಮಾಡು (ತಾಯ್ಪಿಡಿ ನೀಡೆ ಹಸ್ತದಿಂ ತಾನವಳಂಬಿಸಿರ್ದು ತಟಭೂಜದೊಳೊಂದುಂ ಕರೇಣು ಸೂಲಿಸುತ್ತೇಣವಲ್ಲಿ ಮಾಡಿದುದೊ ಬೇಡರೊಳಂ ಕರುಣಾನುಭಾವಮಂ: **ಪುಷ್ಪದಂಪು,** ೫, ೮೨)

**ಸೂಸಕ** – ಗೆಜ್ಜೆಯ ಗೊಂಚಲು (ದೇವಾಂಗವಸ್ತ್ರದುಳ್ಳುಡೆಯೊಳ್ ಉಲಿವ ಸೂಸಕದ ತೊಂಗಲ್ವೆರಸು ಎಟಿಲ್ವ ಮುಂದಣ ಸೋಗೆ ಕಾರ್ಗಾಲದ ಸೋಗೆಯಂತೆ ಸೊಗಯಿಸೆ: **ಪಂಪಭಾ,** ೨. ೪೧ ವ)

**ಸೂಸು** – ಎಸೆ (ಅಂತು ನೋಡಿ ಕಡೆಗಣ್ಣ ಚೆಲ್ಲಂಬೆರಸು ಸೂಸುವ ವಾಸವಸ್ತ್ರೀಯರ ಮುಖಾಬ್ಜಾಸವ ಸಂಬಂಧಿಗಳಪ್ಪ ಶೇಷಾಕ್ಷತಂಗಳಂ ಈಶ್ವರನಂ ಗೆಲ್ದ ಗೆಲ್ಲಕ್ಕೆ ಸೇಸೆಗೊಳ್ವಂತೆ ಸೇಸೆಗೊಳ್ಳುತ್ತುಂ: **ಪಂಪಭಾ,** ೮. ೨೭ ವ); ಹೊಮ್ಮು (ಭೂತಾಂಗನಾನಿಕರಂ ಶೋಣಿತವಾರಿಯಂ ಕುಡಿದು ಅಗುರ್ವಪ್ಪನ್ನೆಗಂ ಸೂಸೆ ನೋಡ ಕವಿಲ್ತಿರ್ದುದು ಕೂಡೆ ಸಂಜೆಗವಿದಂತಾ ದ್ರೋಣನಿಂ ಕೊಳ್ಗುಳಂ; **ಪಂಪಭಾ,** ೧೨. ೨೫)

**ಸೂಸುಕ** – ಬೈತಲೆಮಣಿ (ಕಟ್ಟಾಣಿಯ ಮುತ್ತು ತೆತ್ತಿಸಿದ ಸೂಸುಕದಿಂ ಮಿಗೆ ವಿಶ್ವಕರ್ಮನಿರ್ಮಾಣಮಿದು ಎಂಬಿನಂ: **ಉದ್ಭಟಕಾ,** ೮. ೪)

**ಸೂಸುಗೂಳ್** – ಬಲೆ (ಗಿಱುಗಟ್ಟಿಗೆ ಅರೆಮಡ್ಡಿ ಸೂಸುಗೂಳ್ಗಳೆಂಬಿವಂ ಕೊಂಡು .. .. ಪರಿವ ಪೆರ್ದೊರೆಗೆ ಸಾರ್ದು: **ರಾಜಶೇವಿ,** ೫. ೧೧೪ ವ)

**ಸೂಸುನೀರ್** – ಸಿಂಪಡಿಸುವ ನೀರು (ವಿಯೋಗಮಂ ಮಾಡಿದ ವಾಮಲೋಚನೆಯರಂಗದೊಳಾಲಿಯ ಸೂಸುನೀರ್ಗಳಟ್ಟಾಡದೆ ತಂದು: **ಚಂದ್ರಪ್ರಪು,** ೨. ೨೫)

**ಸೂಸುವೆಳ್ಪು** – [ಸೂಸು+ಬೆಳ್ಪು] ಹೊಮ್ಮುವ ಕಾಂತಿ (ಸುಲಿಪಲ್ಗಳ ಸೂಸುವೆಳ್ಪಿನಿಂದೆಸೆವ ದುಕೂಲದೊಂದುಡೆಯಿನಂದು ಅಮೃತಾಂಶುಮರೀಚಿಯಿಂದೆ ನಿರ್ಮಿಸಿದವೊಲೊಪ್ಪಿದಳ್ ಧವಳಲೋಚನೆ ವಾಸವದತ್ತೆ ದೇಸೆಯಿಂ: **ಲೀಲಾವತಿ,** ೧೦. ೩೬)

**ಸೂಳಪಾಣಿ** – ಶಿವ (ಉತ್ತರಪದನಪಭ್ರಂಶಕ್ಕೆ ಬಾರದೆ ಪೂರ್ವಪದಂ ತದ್ಭವಮಾದುದರ್ಕೆ: ಗ್ರಾಮರಸಂ–ಗಾವರಸಂ ಪಶುಪತಿ–ಪಸುಪತಿ ದಿಶಾಬಲಿ–ದೆಸೆಬಲಿ ಶೂಲಪಾಣಿ–ಸೂಳಪಾಣಿ: **ಶಬ್ದಮದ,** ೩೦೪ ಪ್ರ)

**ಸೂಳಿ** – ಬಾಳೆಯ ಗಿಡದ ಸುತ್ತಿಕೊಂಡಿರುವ ಚಿಗುರೆಲೆ (ಬಾಳಮೃಣಾಳಹಾರಲತೆ ಬಾಟಿಯ ಸೂಳಿ ತಾಲವೃಂತಂ: **ಅನಂತಪು,** ೭. ೨೩)

**ಸೂಳುಗಾಳೆ** – ಕಾಲ ಸೂಚಿಸುವ ಕಹಳೆ (ನಿಶಾವಸಾನ ಸಮಯದೊಳ್ ಪಯಣದ ಸೂಳುಗಾಳೆಗಳಂ ಪಿಡಿದು: **ಪಂಚತಂತ್ರ,** ೧೯೭ ವ)

**ಸೂಳೆಗೆಯ್** – ಸೂಳೆಯ ಸಹವಾಸ ಮಾಡು (ಪಣವುಂಡೆಂ ಬಂದಿಯೊಳ್ಬಾಲಕನೆ ಪಲಗೆಜೂದಾಡಿದೆಮ ಸೂಳೆಗೆಯ್ದೆಂ: **ನೇಮಿನಾಪು,** ೫. ೩೬)

**ಸೂಳೆಗೇರಿ** – ಸೂಳೆಯರು ವಾಸಿಸುವ ಕೇರಿ (ಪಿರಿದೊಂದು ಪೊಟಲುಂ ಧವಳಾರಂಗಳುಂ ನೆಲೆಯ ಮಾಡಂಗಳುಂ ಸೂಳೆಗೇರಿಗಳುಂ .. .. ಮಾನಸರ ಬರುವುಮಂ ಪೋಗುಮಂ ಕಂಡು: **ವಡ್ಡಾರಾ,** ಪು. ೮೯, ಸಾ. ೨೧)

**ಸೂಳೆಗೊಟ್ಟಿ** – ಸೂಳೆಯರ ಗುಂಪು (ಮತ್ತಮೊರ್ವಳ್ ಸೂಳೆಗೊಟ್ಟಿಯೊಳ್ ಬೊಜಂಗವಾತಾಗಿ ತನ್ನ ಕೆಳದಿಗಿಂತೆಂದಳ್: **ಲೀಲಾವತಿ,** ೨. ೯೮ ವ)

**ಸೂಳೆಮಾತು** – ಒಯ್ಯಾರದ ನುಡಿ (ಪಂಜರದೊಳ್ ಗಿಳಿಯನಿರಿಸಿ ನಾನಾ ಪ್ರಕಾರದ ಸೂಳೆಮಾತುಗಳಂ ಶೃಂಗಾರವೃತ್ತಂಗಳುಮಂ ಕಲಿಸುತ್ತುಂ ಪೊನ್ನ ಪರಮಸ್ನೇಹದಿಂ: **ಧರ್ಮಾಮೃ,** ೧೨. ೯೧ ವ)

**ಸೂಳೆಯ** – ಜಾರ (ಸೆಟ್ಟಿಯ ತಮ್ಮ ರುದ್ರದತ್ತನೆಂಬೊಂ ಕರಂ ವ್ಯಾಳನುಂ ಸೂಳೆಯನುಂ ಆಗಿಪ್ಪೊಂ: **ಹರಿವಂಶ,** ೩. ೨೯ ವ)

**ಸೂಳೆವಂಟ** – ಸೂಳೆಯ ಸಹಚರ (ಬಿರುದರ ಬಿಂಕಮಂ ಪೊಗೞ್ವ ಕೂಂಟಣಿತೋಳ್ಗೆಳಸಿರ್ಪ ಸೂಳೆವಂಟರ ಸೊಬಗಿಂಗೆ ಮೈಮಱೆದು ಮೆಚ್ಚುವ ಬಿಂಕದ ಬರ್ದೆಗೆಯ್ತದೊಳ್: **ಲೀಲಾವತಿ,** ೨. ೭೨)

**ಸೂಳೆವನೆ** – ಸೂಳೆಯ ಮನೆ (ಲತಾಗೃಹಮಿಲ್ಲದ ಗೊಟ್ಟಿಗಾಣರಿಲ್ಲದ ಕಡೆಟ್ಟಿ ಸೂಳೆವನೆಯಿಲ್ಲದವಿಲ್ಲವು ಸೂಳೆಗೇರಿಯೊಳ್: ಮಲ್ಲಿನಾಪು, ೨. ೪೫)

**ಸೂಳೆವೆಂಡತಿ** – ಸೂಳೆ (ಸೂಳೆವೆಂಡತಿಯಂತೊಲ್ದೊಲಿಸದೆ ಗ್ರಹದಂತೆ ಬೇಡಿಕೊಂಡುಣ್ಣದೆ ಮಕ್ಕಳಮತೆ ಕಾಡಿಯುಣ್ಣದೆ: **ಧರ್ಮಾಮೃ,** ೫. ೬೪ ವ)

**ಸೂಳೈಸು** – ಶಬ್ದಮಾಡು (ಕಣ್ಣ ಕೆಂಪು ಕಿಸುಸಂಜೆಯಂ ಪಸರಿಸೆ ದೆಸೆದೆಸೆಗೆ ಮಸಗೆ ನಿಸ್ಸಾಳಮಂ ಸೂಳೈಸಲ್ ಪೇೞ್ದಾಗಳ್: **ಕಬ್ಬಿಗಕಾ,** ೧೫೧ ವ)

**ಸೂಱುಳು** – (ಇನಿಯಳ ಮೆಯ್ಯನಂಟಿ ನೆಱೆ ಸೂಱುಳಲಾಟಿಸೆ ತನ್ನ ಕೂಗಳಂ ಮನಮೊಸೆದಿಕ್ಕುತಿರ್ದಂ: **ಕುಸುಮಾಕಾ,** ೧೧. ೧೬೮)

**ಸೂಱೆ** – ಲೂಟಿ (ಧನಮಂ ಬೀಱದೆ ಬರ್ಕುಮೆ ನಿಂಬಿಯ ಸೂಱೆಯೆ ವಿಧುವಿಶದಕೀರ್ತಿ ಭುವನತ್ರಯದೊಳ್: **ಲೀಲಾವತಿ,** ೧. ೪೨)

**ಸೂಱೆಗಾಱ** – ಸುಲಿಗೆಕೋರ (ಸೂಱೆಗಾಱನಂತೆ ಪೆಱರಂ ಕ್ಲೇಶಂಗೊಳಿಸದೆ: **ಧರ್ಮಾಮೃ,** ೫. ೬೪ ವ)

**ಸೂಱೆಗೊಡು** – ಧಾರಾಳವಾಗಿ ಕೊಡು (ಸಮಸ್ತವಸ್ತುಗಳಮ ದೀನಾನಾಥಜನಕ್ಕೆ ಸೂಱೆಗೊಟ್ಟು: **ಪಂಪಭಾ,** ೧. ೧೧೪ ವ)

**ಸೂಱೆಗೊಳ್** – ಕೊಳ್ಳೆ ಹೊಡೆ (ಚಂದ್ರಮತಿ ಮಹಾದೇವಿಯ ಕೀಲಾರದ ಧೆನುಗಳಮ ಸೂಱೆಗೊಳ್ವಂತೆ ಕೊಂಡುಪೋದೊಡೆ: **ಸುಕುಮಾಚ,** ೭. ೩೫ ವ)

**ಸೂೞ್** – ಬಾರಿ, ಆವೃತ್ತಿ (ಬೋಧಾವಾಸಪ್ರಿಯಂ ಉದಯಮನಱಿದು ಆಸನದಿಂದೆರ್ದು ಮೂಱು ಸೂೞ್ ಪೊಡೆವಟ್ಟಂ: **ಆದಿಪು,** ೭. ೪೨); ಸಮಯ, ಸರದಿ (ಅಂತು ಮುಳಿಸಿನ ಮೋಪಿನ ಗಂಡಮಚ್ಚರದ ಮೆಚ್ಚವಣಿಗೆಯ ಅಂಕಕಾಱರ್ ಎಕ್ಕತುಳಕ್ಕೆ ಎಕ್ಕೆಯಿಂ ಸೂೞೀಱಿದೆವಂತೆ ಒರ್ವರ್ ಒರ್ವರೊಳ್ ಕಾದೆ: **ಪಂಪಭಾ,** ೧೨. ೭೬ ವ); ಸಹವಾಸ (ಪಗಲಿನ ಸೂೞ್ ಸಿರಿಗಾಗಲೆವೇೞ್ಪುದು ತಡದಿರದುಪ್ಪವಡಿಸು ವಿಯಚ್ಚರಾಂಬರಭಾನೂ: **ಶಾಂತಿಪು,** ೫. ೮೬); ಸಂವತ್ಸರ

**ಸೂೞ್ಸೂೞೊಳ್** – ಕ್ರಮವಾಗಿ, ಸರದಿಯಂತೆ (ಮುರರಿಪಗೆ ಸೂೞ್ಸೂೞೊಳೆ ಬರೆ ಕರದೊಳ್ ಶಂಖಚಕ್ರಮುದ್ಗರಪದ್ಮಂ: **ಸಮಯಪ,** ೮. ೧೩೮)

**ಸೂೞಿಂ ಮಾಡು** – ಯುದ್ಧಮಾಡುವುದಾಗಿ ಒಪ್ಪು (ತೇಜಂ ಇಲ್ಲಾದೊಡಂ ಸೂೞಿಂ ಮಾಡಿದನೊಳ್ ಕಾದಲೆವೇೞ್ಕುಂ ಎಂದು ದಮಿತಾರಿ ಕೈವೀಸೆ: **ಶಾಂತಿಪು,** ೪. ೭ ವ)

**ಸೂೞನೆ** – ಆಗಲೇ (ಅಶೋಕವಲ್ಲರಿಯ ಪಲ್ಲವಮೊಂದನೆ ಕೊಯ್ದು ರಾಗದಿಂ ಸೋರ್ಮುಡಿಯೊಳ್ ತಗುಳ್ಚಿದೊಡೆ ಸೂೞನೆ ಬಾರಿಸಿದಂ; **ಪಂಪಭಾ,** ೫. ೮೨)

**ಸೂೞರಸಿ** – ರಾಜನ [ಶಯ್ಯೆಯ] ಸರದಿಯ ರಾಣಿ (ದವಳಧಾಮಶಯನದೊಳಮರ್ದಿರೆ ಸೂೞರಸಿವೆರಸು: **ಪುಷ್ಪದಂಪು,** ೮. ೧೬)

**ಸೂೞಱಿ** – ಸರಿಯಾದ ಸಮಯ ತಿಳಿ (ಪ್ರಮದೆಯರಂ ಮನೋಭವನೆ ಸೂೞಱಿದೆಚ್ಚಪಂ ಅಗ್ನಿಬಾಣದಿಂ ಹಿಮಕರಬಾಣದಿಂ ತಿಮಿರಬಾಣದಿಂದೆಂಬಿನಂ: **ಚಂದ್ರಪ್ರಪು,** ೭. ೧೩೩); ಸರದಿಯನ್ನು ತಿಳಿ (ನಱುಸುಯ್ಗಂ ಮಲೆಗಂ ಸೂೞಱಿದೆಱಗುವಿನಂ ತುಂಬಿಗಳ್: **ಪಂಪರಾ,** ೧. ೧೨೦)

**ಸೂೞಾಯ್ತ** – ಸರದಿಯ ಪ್ರಕಾರ ಸಾರುವವನು (ಇರದೊಗೆದುದಲ್ಲಿ ಸೂೞಾಯ್ತರ ಕಳಕಳವು ಅಚ್ಚುಳಾಯ್ತರ ಉಲಿಪುಂ ನಾಗಾಯ್ತರ ಗಳಗರ್ಜನೆ: **ಜಗನ್ನಾವಿ,** ೧೧. ೭೩); ಯುದ್ಧಘೋಷಿಸಿ ಆಹ್ವಾನಿಸುವವನು (ಒಂದರ್ಥಕ್ಕೆ: ಸೂೞಾಯ್ತನೆಂದು ಸೂಟ್ಗಿರೆವಂ: **ಶಬ್ದಮದ,** ವೃತ್ತಿ ೧೨೧); ಸರದಿಯ ಸೇವಕ (ಪರಿವ ಕರೆವ ಎರೆವ ಸೂೞಾಯ್ತರ ಸೂಳುಗಳ್ ತುಱುಂಗಿದಚ್ಚುೞಾಯ್ತರ ಕಳಕಳರವದಿಂ ಭೋರ್ಗರೆದು ಉಲಿವ ಅಂಬುಧಿಯನಂತದೇಂ ಮಸುಲಿಸಿತೋ: **ಸುಕುಮಾಚ,** ೧೧. ೨೫)

**ಸೂೞಾಯ್ತೆ** – ಸೇವಕಿ (ವರವಂ ಬೇಡೆಂದಂಬಿಕೆಗೆ ಪೇೞ್ದೊಡಾಕೆಯುಂ ವ್ಯಾಸಭಟ್ಟಾರಕನಲ್ಲಿಗೆ ಪೋಗಲಲಸಿ ತನ್ನ ಸೂೞಾಯ್ತೆಯಂ ತನ್ನವೊಲೆ ಕೆಯ್ಗೆಯ್ದು ಬರವಂ ಝುಟ್ಟಿಮಲ್ಲರಂತಿರೆ .. .. ಪೊರ್ದುವಾನೆಗಳ್: **ಆಚವರ್ಧ,** ೮. ೫೩)

**ಸೂೞುಗಾಳೆ** – ಸಮಯಸೂಚಕ ಕಹಳೆಯ ಧ್ವನಿ (ನಿಶಾವಸಾನಸಮಯದೊಳ್ ಪಯಣದ ಸೂೞುಗಾಳೆಗಳಂ ಪಿಡಿದು ಬೀಡೆತ್ತಲುದ್ಯೋಗಂ ಗೆಯ್ವುದುಂ ಕಂಡು ಧವಲಪಕ್ಷಂ ಕನಕಾಕ್ಷಂಗಿತೆಂದಂ: **ಪಂಚತಂತ್ರ,** ೧೯೭ ವ)

**ಸೂೞುಲಿಗೆಲೆ** – ಹರಟುತ್ತ ಸಂತೋಷಿಸು (ಸೂೞುಲಿಗೆಲೆಯುತ್ತುಮಿರ್ಪ ತರುಣೀಜನಮಂ ನೃಪನೊಲ್ದು ನೋಡಿದಂ: **ಲೀಲಾವತಿ,** ೫. ೧೦೧)

**ಸೂೞ ಸೂೞದೆ** – ಬಾರಿ ಬಾರಿಗೂ (ಪರಿಮಳದ ಪೊದಳ್ಕೆಗೆ ಸೋಲ್ತು ಸೂೞಸೂೞದೆ ಮೊಗಸಿದುವೆರಡೆಡೆಗಮಲಸದ ಅಳಿಗಳ ಬಳಗಂ: **ಆದಿಪು,** ೭. ೩೧)

**ಸೂೞೀಸು** – ಮತ್ತೆ ಮತ್ತೆ ಬಾಣ ಬಿಡು (ಪಾಯ್ವರಾತಿಯ ಮೆಯ್ಯ ನೆತ್ತರಂ ಕಂಡು ಸೂೞೀಸಿನೊಳಿವನ ನೆತ್ತರೊಕ್ಕೊಡಂ ತನಗೆ ಬಸಿಱಾಱೆ ಕುಡಿಯಲುಂ ದ್ರೌಪದಿಯ ಕೇಶಪಾಸಮಂ ತೊಯ್ದು ಮುಡಿಯಲುಂ ನೆಱೆಯದೆಂದು: **ಪಂಪಭಾ,** ೧೨. ೧೪೮ ವ)

**ಸೂೞ್ಕೈಸು** – ಕ್ರಮವಾಗಿ ನಡೆ, ಸರದಿಯಂತೆ ಸಾಗು (ತೆಱವುಗುಡದೆ ಸೂೞ್ಕೈಸುವ ನಿಸ್ಸಾಳದ ಬಲ್ಸರಕೆ ದೆಸೆವೆಟ್ಟುಗಳ್ ನಿಬ್ಬರಂಬಿರಿಯೆಯುಂ ಬೇಗದಿಂ ನಡೆದೆತ್ತಿ ಬಂದು ಮಂಜುವೆಟ್ಟಮಂ ಮೂವಳಸಾಗಿ ಮುತ್ತಿದಾಗಳ್: **ಕಬ್ಬಿಗಕಾ,** ೨೨೪ ವ); ಸಮಾಧಾನ ಮಾಡು, ಸಂತೈಸು

(ಸೂಟ್ಟೈಪ ಸಣ್ಣ ಗಾಳೆಯಲೆಯೆನಿಸಿ ಗೂಡಿಂಗೆ ಸಾರ್ದುಲಿವ ಪಕ್ಕಿಗಳ ಕಳಕಳಂ ಬಳೆಯೆಯುಂ: **ಆಚವರ್ಧ**, ೬. ೨೩ ವ)

**ಸೂಟ್ಗಿರೆ** – ಯುದ್ಧ ಘೋಷಿಸು (ಒಂದರ್ಥಕ್ಕೆ: ಸೂಟಾಯ್ತೆಂದು ಸೂಟ್ಗಿರೆವಂ: **ಶಬ್ದಮದ**, ವೃತ್ತಿ ೧೨೧)

**ಸೂಟ್ಗಿಡು** – ಸರದಿ ತಪ್ಪು (ಆತ್ಮತತ್ತ್ವದೊಳ್ ಬಗೆ ಗಡಮೆಯ್ದೆ ಸೂಟ್ಗಿಡದೆ ಪಂಚಪದಂಗಳನೋದುತಿರ್ಪ ನಾಲಗೆ ಗಡಮೆಯ್ದೆ ಸಮಾಧಿವಿಧಿಯಂ ನೆಱೆ ತಾಳ್ದಿದನೋ ಮಹಾಬಳಂ: **ಆದಿಪು**, ೨. ೬೦)

**ಸೂಟ್ಗಿವರ್** – ಪತಿಯೊಡನೆ ಸಂಭೋಗದ ಸರದಿಗೆ ಬರು (ಮರುದೇವಿಹಾದೇವಿ .. .. ವಾಗ್ವನಿತೆಯೆಂಬ ಅಭಿಶಂಕೆಯನುಂಟುಮಾಡಿ .. .. ಸೂಟ್ಗಿವಂದು: **ಆದಿಪು**, ೭. ೨೬ ವ, ೨೭ ಮತ್ತು ೨೭ ವ)

**ಸೂಟ್ನುಡಿ** – ಸರದಿಯ ಮಾತು, ಸಂಭಾಷಣೆ (ಚಾರರಂ ಸೆಱೆಯಿಡುವಾನನಂ ಪದಿರನಾಡುವಸೂಟ್ನುಡಿ ದುಷ್ಟಚೇಷ್ಟೆಯಂ ಮೆಱೆಯಿಪತಮ್ಮ ಭಂಗಿ .. .. ರಜನಿರಂಜನಮಾದುದು ಬಂಧಕೀಜನಂ: **ಸೂಕ್ತಿಸುಧಾ**, ೮. ೮೫)

**ಸೂಟ್ಪಡು** – ಸರದಿಯನ್ನು ಪಡೆ (ಒಡವಂದಂಕದ ಕೌರವರ್ ದ್ರುಪದನ ಅಂಬ ಏಱೆಂಗೆ ಮೆಯ್ಯೊಡ್ಡದೆ ಒಡ್ಡುತಿರೆ ಸೂಸೆ ಬೀಟ್ವ ತಲೆಗಳ್ ಸೂಟ್ಪಟ್ಟಂ: **ಪಂಪಭಾ**, ೨. ೬೨)

**ಸೂಟ್ಪಡೆ** – ಸರದಿಯನ್ನು ಹೊಂದು (ಸೂಟ್ಪಡೆಯಲಪ್ಪುದು ಕಾಣ ಮಹಾಜಿರಂಗದೊಳ್: **ಪಂಪಭಾ**, ೧೦. ೨೩)

**ಸೂಟಿಕ್ಕೊಯ್** – ಸರದಿಯ ಪ್ರಕಾರ ಹೊಡೆ[ತ] (ಯುದ್ಧಕೇಳಿಧುರೀಣರ್ ದನುಜಾರಿಯುಂ ದನುಜನುಂ ಸೂಳ್ವೊಯ್ಯಳಿಂ .. .. ಪೊಯ್ದರ್ ಗದಾದಂಡದಿಂ: **ಜಗನ್ನಾವಿ**, ೯. ೭೫)

**ಸೂಟ್ಮಾತು** – ಸೂಟ್ನುಡಿ (ಇರ್ವರ್ ಪದಿರಿನಿಂ ನುಡಿವ ಸೂಟ್ಮಾತುಗಳಂ ಕಾಪಿನವರುಂ ಪೊಱಲ ಜನಮುಂ ಕೇಳ್ದು: **ವಡ್ಡಾರಾ**, ಪು ೧೨೫ ಸಾ ೧೦)

**ಸೂಟ್ಮೆಟ್ಟು** – ಸರದಿಯ ತುಳಿತ (ಮೆಟ್ಟಿದ ಸೂಟ್ಮೆಟ್ಟುಗಳಂತೆ ಬೆಟ್ಟು ಕಱಲಲ್ಕಾಡೆ ಭೂಭಾಗಮಾದುದು ದುರ್ಯೋಧನ ಭೀಮಸೇನರ ಗದಾಯುದ್ಧಂ ಮಹಾಭೈರವಂ: **ಪಂಪಭಾ**, ೧೩. ೯೪)

**ಸೂಟ್ವಗೆ** – ಸರದಿಯ ಹಗೆ (ಆತಂ ಮನದೊಳ್ ಮಚ್ಚರಿಪನೆಂಬ ಸೂಳ್ವ[ಟ್ವ]ಗೆ ಬಗೆಯೊಳ್ ನನೆಕೊನೆವೋದಂತಿರೆ ನಿಡುನನೆಗಳಂ ಆಯ್ದುಕೊಂಡು ಮನಸಿಜನೆಚ್ಚಂ: **ಲೀಲಾವತಿ**, ೩. ೫೧)

**ಸೂಟ್ವಡೆ** – ಸೂಟ್ಪಡೆ (ಸೂಟ್ವಡೆದ ಕೂಟಂ ಪಲ್ಲಟಂಬಾಯ್ತ್ವ ಮಾಯ್ಮಱುಕಂ ತಾಂಗಿಗಟಲ್ವ ನಾಣಿಲಿತನಂ ಬೆಂಡೇಟ್ವ ಕಣ್ .. .. ಕೂಟದೊಳ್ ನಲ್ಲರಾ: **ಚಂದ್ರಪ್ರಪು**, ೮. ೬೮)

**ಸೂಟ್ವರಿ** – ಸರದಿಯ ಪ್ರಕಾರ ಹೋಗು (ಕೆನ್ನೆತ್ತರೊಳ್ ಒರ್ವರೊರ್ವರಂ ತಳ್ಕಿಱಿದುಂ ಬೊಬ್ಬಿಱಿದುಂ ತ್ರಿಮುಂಡ್ರಮಿಟ್ಟುಂ ಕೂಕಿಱಿದುಂ ತೇಗಿಯುಂ ಸಸಿನೆವರಿದುಂ [ಡಿಎಲ್‌ಎನ್ ಒಪ್ಪಿದ ಪಾಠ] ಬವಳಿವರಿದುಂ ಬಾನಂಗುಳಿಗೆವರಿದುಂ ಸೂಟ್ವರಿದುಂ ಆಡುವಾಗಳ್ ಉಭಯಬಲಂಗಳ್: **ಪಂಪಭಾ**, ೧೨. ೧೫೮ ವ)

**ಸೂಟ್ವರು** – ಪುನಃ ಪುನಃ ಬಾ (ಪೂಗೆ ಸೂಱಿರುತಿರೆ ತುಂಬಿಕಣ್ ಮನಸಿಜಾತನ ಶಾತಶರಾಧಿದೇವತಾಪರಿಕರದಂತಿರ್ದ ಅರಲರೋಳಿಯನೆತ್ತಿದ ಮಾಲೆಗಾರ್ತಿಯರ್: **ಕುಸುಮಾಕಾ**, ೨. ೧೧೯)

**ಸೂಟ್ವಳ** – ಸಮಯವನ್ನು ಸಾರುವವನು ಮಧೂದೂತಿ ನಾಗಲತೆ ಮಲ್ಲಿಗೆ ಮಾಲತಿ ಬನ್ನಿಮೆಂದು ಸೂಟ್ವಳನವೋಲೆತ್ತಲುಂ ಕರೆಗುಮಾ ಬನದೊಳ್ ಕುಸುಗಣ್ಣಿಕೋಕಿಲಂ: **ಅನಂತಪು**, ೩. ೧೧)

**ಸೃಕ್ವ** – ಕಟವಾಯಿ (ಪೊಸ ಕಾರೊಳ್ ತಾಱಲೊಳ್ ಕಣ್ಣರೆ ಮುಗಿದಿರೆ ಸೃಕ್ವಂಗಳಿಂ ಸೂಸೆ ಫೇನಪ್ರಸರಂ ಮೆಲ್ಲೊಕ್ಕುತ್ತುಂ ನಿಂದುದು ವನಮಹಿಷೀವೃಂದಂ ಆನಂದದಿಂದಂ: **ಪಂಪರಾ**, ೭. ೧೫೭)

**ಸೃಗಾಲ** – ನರಿ (ಪರಿಗಳಿತ ಪೂತಿಗಂಧರ್ ಖರ ಕಾಕ ಸೃಗಾಲ ಕರಭ ಕೌಶಿಕ ವೃಕ ವಾನರ ವಿಷದಂಷ್ಟ್ರೋತ್ಕರ ಕುರ್ಕುರ ಕೀಟಕ ಭಲ್ಲನಿಕರ ನಿಷ್ಠುರನಿನದರ್: **ಶಾಂತೀಶ್ವಪು**, ೯. ೧೦೬)

**ಸೃಗಾಳ** – ಸೃಗಾಲ (ವೃಕ ಭಲ್ಲೂಕ ಸುಗಂಡ ಚಂಡಹರಿಣಶ್ರೇಣೀ ರುರು ಉರು ಉಗ್ರ ಶಲ್ಯಕ ಸಾರಂಗ ಶಶಾವಳೀ ಶರಭ ಗೋಲಾಂಗೂಲಮಾಲಾ ಹರಿಪ್ರಕರ ಆಭೀಳ ಸೃಗಾಳಜಾಳಂ ಮದವತ್ ಶುಂಡಾಲ ಶಾರ್ದೂಲ ಕಾಕಕುಳ ವ್ಯಾಳ ಕರಾಳ ವಿಸ್ಫುರತ್ ಅರಣ್ಯಾನೀ ಮಹೀದೇಶದೊಳ್: **ಪಂಚತಂತ್ರ**, ೧೪೨)

**ಸೃಣಿ** – ಅಂಕುಶ (ಸೃಣಿಯಿಂ ಪೊಯ್ದೊತ್ತಿ ಭೈಭೈಯೆನುತುಂ ಅಣೆದು ನೂಂಕಲ್ಕೆ.. ..ಕೋಪತಾಪಂ ನೆಗೞೆ ಮರಿದುದು ಆಭೀಳ ಮತ್ತೇಭಜಾಳಂ: **ಶಾಂತೀಶ್ವಪು**, ೮. ೮೩)

**ಸೃಷ್ಟಿಕ್ಷಮ** – ಸೃಷ್ಟಿ ಮಾಡುವುದರಲ್ಲಿ ನಿಪುಣ (ಜಗತ್ತ್ರಯ ಸೃಷ್ಟಿಕ್ಷಮನಾದ ಕೃಷ್ಣನ ಮಹತ್ತ್ವವಕ್ಕೆನದಾಶ್ಚರ್ಯಮೇ: **ಜಗನ್ನಾವಿ**, ೩. ೬೮)

**ಸೆಂಡಾಡು** – ಚೆಂಡಾಟವಾಡು (ಅರಿನೃಪರುತ್ಸವಮಂ ಕೇಳ್ದಿರೆಯುಂ ಸೆಂಡಾಡುತ್ತಿರೆಯುಂ ಆನೆಯಂ ಏಱುತ್ತಿರೆಯುಂ ಮಂತಣದೊಳ್ ಕುಳ್ಳಿರೆಯುಂ ಬಿನ್ನವಿಸಲಾಗದು ಎಂತುಂ ಭೃತ್ಯಂ: **ಪಂಚತಂತ್ರ**, ೮೪)

**ಸೆಂಡು** – ಚೆಂಡು (ಗಳೆಯೆಂಟು ಸೆಂಡು ಕಾಲ್ ಸಗ್ಗಳೆ ಗುಗ್ಗುರಿ ಮರ್ದು: **ತ್ರಿಷಷ್ಟಿಪು**, ೨೭. ೪೬)

**ಸೆಂಡುಗೋಲ್** – ಒಂದು ಬಗೆಯ ಬಾಣ (ಸೆಂಡುಗೋಲನುಡಿಗಟ್ಟುವ ಪೀಲಿಗಳಿಂ ತರಂಗಮಂ ಪೊಸೆಯಿಪ .. .. ಪುಳಿಂದಸಂಕುಳದ ಪೆರ್ಕಣದಿಂದೆಸೆದತ್ತು ಪಕ್ಕಣಂ: **ಚಂದ್ರಪ್ರಪು**, ೫. ೫೪)

**ಸೆಂದುರ** – ಸಿಂದೂರ, ಕೆಂಪು ಬಣ್ಣದ ಪುಡಿ (ಗಟ್ಟಿಸಿ ಸೆಂದುರದೊಳ್ ನೆಲಗಟ್ಟಿಸಿ ಚೆಂಬೊನ್ನ ನೆಲೆಯ ಚೌಪಳಿಗೆಗಳೊಳ್ ಕಟ್ಟಿಸಿ ಪಟಯಿಗೆಗಳಂ ಅಳವಟ್ಟಿರೆ ಬಿಯಂ ಅಲ್ಲಿ ಮೊಱಗೆ ಪಲವುಂ ಪಱೆಗಳ್: **ಪಂಪಭಾ**, ೨. ೬೬); ಗೈರಿಕ ಶಿಲೆ

**ಸೆಕಳಿ** – ಝಳ, ಬಿಸಿಪು (ಕೆಳರ್ದು ಮಿಳಿರ್ದು ಉರಿದು ಗಗನಮನಳುರ್ದು ತಪೋಧನನ ತಪದ ಸೆಕಳಿ ಕನಲ್ದವ್ವಳಿಸೆ: **ನೇಮಿನಾಪು**, ೭. ೪)

**ಸೆಕ್ಕು** – ಇಟ್ಟುಕೊ, ಸಿಕ್ಕಿಸಿಕೊ (ತಾಳ್ದ ಕಾರ್ಮುಕಂ ಕಟ್ಟಿದ ದಟ್ಟಿ ಸೆಕ್ಕಿದ ಅಲಗು: **ತ್ರಿಷಷ್ಟಿಪು**, ೨೭. ೧೧೦)

**ಸೆಗಳಿಗೆ** – ಬಿಸಿ, ಉಷ್ಣತೆ (ಸೆಗಳಿಗೆ ಪೆಂಡಿರ ಮೊಲೆ ಕಿಚ್ಚು ಅಗರುವ ಪೊಗೆ ಕುಂಕುಮಾಂಕಂ ಓವರಿ ನೆಲವಾಳಿಗೆ ದಡ್ಡಿಯೆಂಬಿವು ಅಮರ್ದರಂ ಅಗಲ್ವುದು ಪೊಲೆಯಾಳ ತೆಱದೆ ಮುಟ್ಟೆ ಶಿಶಿರಂ: **ಪುಷ್ಪದಂಪು**, ೬. ೫೩)

**ಸೆಜ್ಜರ** – [ಶಯ್ಯಾಗಾರ] ಮಲಗುವ ಕೋಣೆ (ಧವಳಾರದೊಳ್ ಅಭ್ರಮುವೆರಸು ಅಭ್ರಗಜಂ ವಿಭ್ರಮದಿಂದಂ ಸೆಜ್ಜರಕ್ಕೆ ಬಂದವೊಲೆಸೆಗುಂ: **ಯಶೋಧಚ,** ೨. ೨೧)

**ಸೆಜ್ಜೆ** – [ಶಯ್ಯಾ] ಹಾಸಿಗೆ (ಗುಣಾರ್ಣವನಂ ಸೆಜ್ಜೆಗೆ ಬಿಜಯಂಗೆಯ್ಯಿಮೆನೆ ಕಾಮಂ ಕಳನೇಱುವಂತೆ ಸೆಜ್ಜೆಯನೇಱೆ ಸೆಡೆದಿರ್ದ ನಲ್ಲಳಂ ನೋಡಿ: **ಪಂಪಭಾ,** ೩. ೮೧ ವ); ಸನ್ಯಾಸಿಯ ಕೌದಿ

**ಸೆಜ್ಜೆಯೋವರಿ** – ಮಲಗುವ ಕೋಣೆ (ಎಮ್ಮ ಸೆಜ್ಜೆಯೋವರಿಯಲಿ ಕಳ್ಳ ಪೊಕ್ಕು ಪುಡಿಕೆಯಂ ತೆಗೆದು: **ವಡ್ಡಾರಾ,** ಪು. ೧೨೩, ಸಾ. ೧೯)

**ಸೆಜ್ಜೆವನೆ** – ಸೆಜ್ಜೆಯೋವರಿ (ಸೆಜ್ಜೆವನೆಯೊಳ್ ಮೆಯ್ಯನೀಡಾಡಿ .. .. ಏನಾನುಂ ವ್ಯಾಧಿ ಕಯ್ಕೊಡಂತೆ: **ಕಾದಂಸಂ,** ೫. ೮೫ ವ)

**ಸೆಜ್ಜೆವಳ** – ಶಯ್ಯಾಗೃಹದ ಮೇಲ್ವಿಚಾರಕ (ಧೂಪಗುಂಡಿಗೆಯೋಳ್ ಅಳವಡಿಯದೆ ಸೆಜ್ಜೆವಳನಿಕ್ಕಿದ ಕೇಶಸಂಸ್ಕಾರಕಾಳಾಗರುಧೂಪಂ: **ಆದಿಪು,** ೫. ೨೨ ವ)

**ಸೆಜ್ಜವಳ್ಳ** – ಸೆಜ್ಜೆವಳ (ಮಹಾಪ್ರಧಾನ ಸೆಜ್ಜೆವಳ್ಳ ಪದ್ಮನಾಭದೇವಕಾರಿತಮುಮಪ್ಪ ನೇಮಿನಾಥಪುರಾಣದೊಳ್: **ನೇಮಿನಾಪು,** ೧. ಆಶ್ವಾಸಾಂತ್ಯ ಗದ್ಯ)

**ಸೆಜ್ಜೆವಾಡ** – ಮಲಗುವ ಕೋಣೆ (ದೀಪಕಾಂತಿಗೆ ತನುಕಾಂತೆ ಮಾರ್ಮಲೆಯೆ ಪೊಕ್ಕಳಿಳಾನುತೆ ಸೆಜ್ಜೆವಾಡಮಂ: **ಜಗನ್ನಾವಿ,** ೨. ೭೩)

**ಸೆಟ್ಟಿ** – [ಶ್ರೇಷ್ಠಿ] ವರ್ತಕ (ಸೆಟ್ಟಿಯ ಬಳ್ಳ ಕಿಱಿದು: **ಪಂಪಭಾ,** ೧೨. ೧೭೫)

**ಸೆಟ್ಟಿತಿ** – ಸೆಟ್ಟರ ಹೆಂಗಸು (ಆತಂ ಸ್ವಾಮಿಭಕ್ತನಾಗಿ ತಂದು ತನ್ನ ಸೆಟ್ಟಿತಿಗೆ ಕೊಟ್ಟೊಡೆ: **ಚಾವುಂಪು,** ಪು. ೪೫೩. ಸಾ. ೭)

**ಸೆಟ್ಟಿವಟ್ಟದಂ** – ರಾಜಶ್ರೇಷ್ಠಿಯ ಪಟ್ಟ ಹೊಂದಿದವನು (ಕಿಱುಬರೆಲ್ಲಂ ಪಂಡಿತರ್ ಸೆಟ್ಟಿವಟ್ಟದರೆಲ್ಲರ್ ಕಡುಚಾಗಿಗಳ್ ಪಡವರೆಲ್ಲರ್ ಭೋಗಿಗಳ್: **ಅನಂತಪು,** ೧೧. ೧೨)

**ಸೆಟ್ಟಿವಟ್ಟಂಗಟ್ಟು** – ರಾಜಶ್ರೇಷ್ಠಿಯ ಪಟ್ಟ ಕಟ್ಟು (ಸಮಸ್ತಭಾರಮೆಲ್ಲಮಂ ಕೂಸಿಂಗೆ ಸಮರ್ಪಿಸಿ ಸೋಂಕಿನೊಳಿರ್ದ ಕೂಸಿಂಗೆ ಸೆಟ್ಟವಟ್ಟಂಗಟ್ಟಿ ಪರರಸಿ ಸೇಸೆಯನಿಕ್ಕಿ: **ವಡ್ಡಾರಾ,** ಪು. ೪೪, ಸಾ. ೨೫)

**ಸೆಡು** – ಬಟ್ಟೆಯನ್ನು ಹೊಲಿ (ಸೆಡು–ವಸ್ತ್ರಸ್ಯೂತೇ: **ಶಬ್ದಮದ,** ಧಾ ೩೫೮)

**ಸೆಡೆ** – ಸಂಕೋಚಪಡು (ಗುಣಾರ್ಣವನಂ ಸೆಜ್ಜೆಗೆ ಬಿಜಯಂಗೆಯ್ಯಿಮೆನೆ ಕಾಮಂ ಕಳನೇಱುವಂತೆ ಸೆಜ್ಜೆಯನೇಱೆ ಸೆಡೆದಿರ್ದ ನಲ್ಲಳಂ ನೋಡಿ: **ಪಂಪಭಾ,** ೩. ೮೧ ವ); ಭಯಪಡು (ತನಗೆಯ್ದಿದ ಸಾವಂ ಕಂಡೆನಸುಂ ಸೆಡೆದಿರ್ಪುದಲ್ತು ಧೀರತೆ: **ಕರ್ಣನೇಮಿ,** ೪. ೭೪); ಅಹಂಕರಿಸು (ಕಿಸುಸಂಜೆ ತನ್ನ ದೋಷಾಭಿಸಂಧಿವರ್ತನೆಗೆ ಸೆಡೆದು ಕಾಲ್ವಿಡಿದನಂ ರಂಜಿಸಿದಪುದು ಎನಿಸಿ: **ಆಚವರ್ಧ,** ೪. ೩೨)

**ಸೆಣಸು** – ಸ್ಪರ್ಧೆ (ಖರಕಿರಣಸ್ಫುರಿತಕ್ಕಿದಿರುರಿವಂತಿರೆ ಸೂರ್ಯಕಾಂತಂ ಎನ್ನೀ ತೇಜಸ್ಸ್ಫುರಿತಕ್ಕೆ ಸೆಣಸಿನೊಳ್ ಮಾಱುರಿಗುಂ ಸೈರಿಸದು ತೇಜಮಾ ಭುಜಬಲಿಯಾ: **ಆದಿಪು,** ೧೪. ೪೨); ಹೊಟ್ಟೆಕಿಚ್ಚು (ಗಳಪರ್ ಪವಣಱಿಯದೆ ಬೆಸಗೊಳೆ ಸೆಣಸಿಂ: **ಚಂದ್ರಪ್ರಪು,** ೧. ೫೭)

**ಸೆಣೆ** – ಕೋಪಗೊಳ್ಳು (ಸೆಣೆ–ಕ್ರೋಧೇ: ಶಬ್ದಮದ, ಧಾ ೩೮೦)

**ಸೆದಗೆ** – ಚಿತೆ (ಮತ್ತೊಂದು ಅರೆವೆಂದ ಪೆಣನಂ ತೆಗೆದು ತಂದು ಆ ಸೆದಗೆಯೊಳವರಂ ಕಾಣದಂತಿಕ್ಕೆ: **ಹರಿವಂಶ,** ೨. ೧೮ ವ)

**ಸೆಯ್ವೆಱಗು** – ಅತ್ಯಾಶ್ಚರ್ಯ (ಸಕ್ತಿಯಿಂ ಸೆಯ್ವೆಱಗಾದ ಮೆಯ್ಸವಿರ್ಗಳೆಂಬವೊಲ್ ಅಂಗನೆ ಕೂರ್ತು ಕೂಡಿದಳ್: **ನೇಮಿನಾಪು,** ೬. ೭)

**ಸೆರಗು** – ಭಯ (ಖರದೂಷಣರಂ ಕೊಂದರ್ ವಿರಾದಿತಂಗವನ ಪೂರ್ವ ವೃತ್ತಿಯನಿತ್ತರ್ ಸೆರಗಿಲ್ಲದವರ್ ಕಾರಣಪುರುಷರ್ ಪಾತಾಳಲಂಕೆಯೊಳ್ ಬಂದಿರ್ದರ್: **ಪಂಪರಾ,** ೯. ೧೯೯)

**ಸೆರಗಂ ಪಾರು** – ಆಪತ್ತನ್ನು ನಿರೀಕ್ಷಿಸು, ಸಹಾಯಕ್ಕಾಗಿ ನೋಡು (ತನ್ನೊಳಿಱಿಯಲ್ ಗೋವಿಂದರಂ ಬರ್ಪುದುಂ ಸೆರಗಂ ಪಾರದೆ ತಾಗಿ .. .. ಸುರಲೋಕಾತಿಥಿಯಾದ ಪೊನ್ನನೆ ವಲಂ ಗಂಡಂ ಪೆಱರ್ ಗಂಡರೇ: **ಅಜಿತಪು,** ೧. ೩೬)

**ಸೆರಗಂ ಬೆರಗಂ ಬಗೆ** – ಅಪಾಯ–ಉಪಾಯಗಳನ್ನು ಕುರಿತು ಆಲೋಚಿಸು (ಇಲ್ಲಿ ಸೆರಗಂ ಬೆರಗಮ ಬಗೆಯೆಂ ದ್ವಿಜೋತ್ತಮಾ: **ಪಂಪಭಾ,** ೩. ೬)

**ಸೆರಗಿಲ್ಲದ ಗಂಡ** – ಅಸಹಾಯಶೂರ (ಪರಪತಾಕಿನೀಪತಾಕೆಯಂ ಕಂಡು ಸೆರಗಿಲ್ಲದ ಗಂಡನಂತಿನಿಸಪ್ಪೊಡಂ ಮಾಣದೆ ಅದುವೆ ಸಂಸಾರನಿಱ್ಬೆಗ ಕಾರಣಮಾಗೆ: **ಆದಿಪು,** ೧. ೭೯ ವ)

**ಸೆರಗುವಾರು** – ಸೆರಗಂ ಪಾರು (ವಿವಾಹಲಗ್ನಮಂ ಪಾರುತುಮಿರ್ದಂ ಇಂ ಸೆರಗುವಾರದೆ ಚಿಂತಿಸಿರ್ಕೆ ಉಪಾಯಮಂ: **ಜಗನ್ನಾವಿ,** ೧೦. ೫೦)

**ಸೆರವಟ್ಟಣೆ** – ಕುಸ್ತಿಯ ಒಂದು ಪಟ್ಟು (ಆಂ ಪಿಡಿದುದೆ ಕತ್ತರಂ ಕರವಳಂ ಸೆರವಟ್ಟಣೆ ಹತ್ತೆ ಡೊಂಕರಂ ಚಡಿಕೆ ತುಳಾಡಿ ಪೊಟ್ಟಮುಡುಹಂ ಮುಹಡಂ ದಣುವಟ್ಟಿ ಪಟ್ಟಿಸಂ: **ಅನಂತಪು,** ೨. ೨೭)

**ಸೆರೆ** – [ಸಿರಾ] ನರ (ಅಂಬರಕ್ಕೆ ಸಿಡಿದು ಆ ಹರಿವಂಶಕೇತು ಕಣ್ಕೆಸು ಸೆರೆವರಿಯೆ ಕೃತಾಂತನಂತೆ ಮುಳಿದು: **ಪಂಪರಾ,** ೪. ೩೯) ರಕ್ತನಾಳ (ಬರಿಯ ಬಳಸಿಂಗಂ ಬಂದು ಕಾಡುವ ಬಳ್ಳುಗಳುಮಂ ನರವನುಗಿವ ನರಿಗಳುಮಂ ಸೆರೆಯಂ ತೆಗೆವ ಸೀಳ್ನಾಯ್ಗಳುಮಂ: **ಗದಾಯು,** ೫. ೩ ವ)

**ಸೆರೆಯಂ ಬಿಡಿಸು** – ರಕ್ತನಾಳವನ್ನು ಸೀಳು (ನಡೆ ನಾರಾಚದ ನೋವಿನ ನಡುಕಂ ಪಿರಿದಾಯ್ತು ಸರ್ಪರೋಗಿಯ ಸೆರೆಯಂ ಬಿಡಿಸಿದವೊಲೆಚ್ಚುಪಾಯ್ದತ್ತೊಡನೆ ಕದುಷ್ಣಕೃಷ್ಣರುಧಿರಜಲೌಘಂ: **ಪಂಪಭಾ,** ೧೨. ೭೧)

**ಸೆರೆದುರುಗಲ್** – ನರಗಳ ಜಾಲ (ಸೆರೆದುಱುಗಲ್ ಮೆಯ್ಯೆಲ್ಲಮಂ ಇರದಡರೆ ಜರಲ್ಲತಾವಿತಾನದಿನೆತ್ತಂ ಪರಿವೇಷ್ಟಿಸಿರ್ದ ಪರಿಣತ ಸುರತರುವಂ ಪೋಲ್ತು ಸೊಗಯಿಸಿರ್ದಂ ಮುನಿಪಂ: **ಕಾದಂಬ,** ೧. ೨೦೧)

**ಸೆರೆವಿಡು** – ಸೆರೆಯಂ ಬಿಡಿಸು (ಉರಗಂ ಕೊಂಡಲ್ಲಿ ನಾಲ್ವೆರಲಿನಿತುಂ ಕಳೆದು ಕಟ್ಟಿ ಮೇಗಂ ಬೇಗಂ ಸೆರೆವಿಡುಗೆ ಸುಡುಗೆ: **ಕಾವ್ಯಾವಲೋ,** ೨೬೮)

**ಸೆರ್ಕು** – ತುರುಕು, ಸಿಕ್ಕಿಸು (ನಿಱಿಯಂ ತತ್ಕಾಂಚಿಯೊಳ್ ಸೆರ್ಕಿ .. .. ನಿಂದೊಪ್ಪಿದರ್: **ಶಾಂತೀಶ್ವಪು,** ೪. ೨೨೧)

**ಸೆಲಂದಿ** – ಜೇಡ (ಸೆಲಂದಿ ಪೊಸನೂಲಿಂ ನೆಯ್ದು ಪೊಂಬಟ್ಟೆಯಂ ವಿಲಸತ್ ಭೂರುಹರಾಜಿ ವಲ್ಕಲಮಂ ಈಗುಂ: **ಶಬರಶಂ,** ೨. ೭೩)

**ಸೆಲದಿ** – ಜೇಡರ ಹುಳು (ಪೂರ್ವಜನ್ಮದ ಶೈವನೊರ್ವಂ ದುಷ್ಕರ್ಮಫಲದಿಂ ಪುಟ್ಟಿ ಸೆಲದಿಯಾಗಿ: **ತ್ರಿಷಷ್ಟಿಪು,** ೨೬. ೨ ವ)

**ಸೆಲವೀ** – [ಸೆಲವು+ಈ] ಒಳಬರಲು ಅಪ್ಪಣೆಕೊಡು (ಕಮ್ಮಂಗಣೆಯನ ನುಡಿಯನಾಲಿಸಿ ಹಸಾದವನಿಟ್ಟು ಸುಗ್ಗಿಯುಂ ಆ ತೆಂಗಾಳಿಯುಂ ಇರ್ವರುಂ ಸಜ್ಜುವಂ ಪಡೆದು ಚೌವಂದದ ದಟಿಕಂ ಸೆಲವಿತ್ತೊಡಗೊಂಡು ಬರೆ: **ಕಾವ್ಯಾವಲೋ,** ೧೫೩ ವ)

**ಸೆಲವು** – ಅಪ್ಪಣೆ, ಅನುಮತಿ (ಸುಗ್ಗಿಯುಂ ಆ ತೆಂಗಾಳಿಯುಂ ಇರ್ವರುಂ ಸಜ್ಜುವಂ ಪಡೆದು ಚೌವಂದದ ದಟಿಕಂ ಸೆಲವಿತ್ತು ಒಡಗೊಂಡು ಬರೆ: **ಕಬ್ಬಿಗಕಾ,** ೧೫೩ ವ)

**ಸೆಲೆ** – ಒರತೆ, ಜಿನುಗುವಿಕೆ (ಪೊತ್ತ ನೆಲಂ ನೆಲದೊಡನಡೆಯೊತ್ತಿದಪುದು ಸೆಲೆಯ ಮೇಲೆ ಸೂರ್ಯಾಂಶುಗಳಟ್ಟುತ್ತುಮಿರೆ ನಿಯಮನಿಶ್ಚಲಚಿತ್ತಂ ಬೇಸಗೆಯೊಳಂದು ಕಲ್‌ನೆಲೆ ನಿಂದಂ: **ಅಜಿತಪು,** ೧೨. ೪); ಬಂಡೆ (ಎನ್ನೊಡವುಟ್ಟಿದರಂ ಇವಂ ಮುನ್ನ ಈ ಸೆಲೆಯಲ್ಲಿ ಪೊಯ್ದು ಕೊಂದಂ ಗಡಾ: **ಹರಿವಂಶ,** ೬. ೫೫)

**ಸೆಲ್ಲ** – ಶಲ್ಯ, ಈಟಿ (ಅವುಂಕಿದ ಸೆಲ್ಲದ ಮುಷ್ಟಿ ವಜ್ರಮುಷ್ಟಿಯೊಳಗೂಡಿದರ್ಚಿಸಿದ ಕೂರಸಿ: **ಆಚವರ್ಧ,** ೮. ೫೧)

**ಸೆಲ್ಲಿಸು** – ತಿವಿ (ಮುರಿದಿಸುವಂತೆ ಮೊಲ್ಲೆಯೆಸಳಿಂ ಮಿಗೆ ಸೆಲ್ಲಿಸುವಂತೆ ಕಾಂತೆ .. .. ಕಡೆಗಣ್ಣ ಕಕ್ಕಡೆಯಿನೇಂ ಮುನಿದಿಟ್ಟಳೊ ಮಾನವೇಂದ್ರನಂ: **ನೇಮಿನಾಪು,** ೩. ೨೫)

**ಸೆಲ್ಲೆವನೆ** – ಮಂಟಪ (ಸೇವಂತಿಗೆಯ ಸೆಲ್ಲೆವನೆಗಳಿಂ ವಾಸಂತಿಯ ವೇದಿಕೆಗಳಿಂ: **ಕುಸುಮಾಕಾ,** ೧೨. ೧೫೭ ವ)

**ಸೆಲ್ಲೆಹ** – ಈಟಿ (ಸಬಳ ಸೆಲ್ಲೆಹ ಸೂಲಿಗೆ ಚಕ್ರಚಾಪ ಬಲ್ಲೆಹ ಕತ್ತಿಗೆ ಕಠಾರಿಯಾದ .. .. ಕೈದುಗಳಿಂದ: **ಧರ್ಮಪ,** ೧. ೮೬ ವ)

**ಸೆಳೆ** – ಎಳೆ ಬೆನ್ನನೇಱೆ ಮಂಡೆಯ ಚಂಡಿಕೆಯಂ ಕರ್ಚಿ ಸೆಳೆವ ಸೋಗೆಯ ಮಱೆಯ ಮುದ್ದುತನವಂ: **ನೇಮಿನಾಪು,** ೧. ೯೨ ವ); ಆಕರ್ಷಿಸು ಹಾಗೂ ಶಾಲೆಯಲ್ಲಿ ಮಕ್ಕಳನ್ನು ಶಿಕ್ಷಿಸ;ಲು ಬಳಸುವ ಬೆತ್ತ (ಸೆಳೆ–ಆಕರ್ಷಣೇ ಬಾಲಶಿಕ್ಷಾದಂಡೇ ಚ: **ಶಬ್ದಮದ,** ಧಾ ೯೮೫); ನಡುಗು (ಅಳುಕುವ ನಡು ಘನಕುಚಯುಗನೊಳು ನಸುಸೆಳೆಯುತ್ತುಮಿರ್ಪಿನಂ .. .. ನೋಡಿದಳೊಲ್ದು ರೂಪವಿದ್ಯಾಧರನಂ: **ಸುಕುಮಾಚ,** ೧೧. ೧೩); ಬೆತ್ತ (ಮಿಳಿರ್ವಸಿಯ ಪಸಿಯ ಪೊಸಬಾಸುಳ ಕರರುಹರೇಖೆ ತುಱುಗಿ ರತನಾಟ್ಯಪರಿಸ್ಖಳಿತಕ್ಕೆ ಮುಳಿದು ದಂಪತಿಗಳನಂಗಜನಟನ ಸೆಳೆಯ ಬಾಸುಟೆವೆನಿಕುಂ: **ಆದಿಪು,** ೧೨. ೧೫); ರೆಂಬೆ (ವಕುಳದ ಪೂತ ಸೆಳೆಯ ಸೆಳೆವಿಲ್ಲಂ ಗೊಲೆಗೊತ್ತಿ ಪೊಸನನೆಯ ಪುಳುಂಬಂ ಪೊಸೆದು ಸಲಿಸಿ: **ನೇಮಿನಾಪು,** ೫. ೫೫ ವ)

**ಸೆಳೆಗೊಂಬು** – ತೆಳು ರೆಂಬೆ (ಮೈಯ ಬಣ್ಣದೊಳ್ ಕೊಸಗನೆ ತನ್ನ ಬಳ್ವಳಿಕೆಯೊಳ್ ಸೆಳೆಗೊಂಬನೆ ಪೋಲ್ತು .. .. ಮರವಾನಸೆಯಾಗಿಯುಂ: **ಆದಿಪು,** ೧೨. ೩೮)

**ಸೆಳೆನಡು** – ಬಡನಡು (ಲಲಿತಗತಿ ಘನನಿತಂಬಂ ಸೆಳೆನಡು ವೃತ್ತತೆಯನಾಂತ ಪೆರ್ಮೊಲೆ ನಳಿತೋಳ್: **ತ್ರಿಷಷ್ಟಿಪು,** ೩. ೭೪)

**ಸೆಳೆಮಂಚ** – ತೂಗುಮಂಚ (ರಂಜಿಪ ರನ್ನದ ಸೆಳೆಮಂಚದ ಮೇಲೆ ಲೀಲೆಯಿಂ ಕುಳ್ಳಿರ್ದಳ್: **ಪಂಪರಾ,** ೩. ೭೫)

**ಸೆಳೆಮಿಂಚು** – ಬಳ್ಳಿಮಿಂಚು (ಪಳಚ್ಚನೆ ಸೆಳೆಮಿಂಚು ಕಣ್ಬೊಣರೊಳುಳ್ಕೆ: **ಶಬಶಂವಿ,** ೧. ೪೬)

**ಸೆಳೆವಿಡಿ** – ಬೆತ್ತ ಹಿಡಿ (ಕಣ್ಗೊಳಿಸಿದಳ್ ಇಂದುಕಾಂತೆ ಮಣಿಮಂಗಳರಂಗದೊಳ್ ಅಬ್ಜನಾಳಮಂ ಸೆಳೆವಿಡಿದ ಅಂಗಜನ್ಮಜಯಲಕ್ಷ್ಮಿಯ ಲಾಸಿಕೆಯೀಕೆಯೆಂಬಿನಂ: **ಮಲ್ಲಿನಾಪು,** ೪. ೩೯)

**ಸೆಳ್ಳುಗುರ್** – ಕೋಮಲವಾದ ಉಗುರು (ಬಳೆದೆಸೆದಿರ್ದ ಸೆಳ್ಳುಗುರ ಮೆಯ್ವೊಳೆಪಿಂ ಮಿಗೆ ಪೆರ್ಮೆವೆತ್ತು ಕಣ್ಗೊಳಿಸಿದಳಾಕೆ .. .. ಸಿರಿ ನಿಂದಳೆಂಬಿನಂ: **ಕಬ್ಬಿಗಕಾ,** ೬೪)

**ಸೆಳ್ಳೆಗೊಂಬು** – ತೆಳು ರೆಂಬೆ (ಮಲೆವ ಮಲೆಯ ಪವನನಿಂದಮಲುಪ ಸೆಳ್ಳೆಗೊಂಬಿನಿಂದ; **ಅಜಿತಪು,** ೨. ೮)

**ಸೆಱಂಗು** – ಚೇಲಾಂಚಲ, ಬಟ್ಟೆಯ ಅಂಚು (ಮಾಡದ ಮುಂದಣ ಚೌಕಿಗೆಯ ರಂಗದೊಳ್ ವಿಸ್ತರಿಗೆಗಳ ಸೆಱಗಿಕ್ಕಿ ಕುಳ್ಳಿರ್ದರ್: **ಹರಿವಂಶ,** ೩. ೬೯ ವ)

**ಸೆಱಗಂ ಗಂಟಿಕ್ಕಿಕೊಳ್** – ನೆನಪಿನಲ್ಲಿಟ್ಟುಕೊ (ತನ್ನ ಬಗೆ ತೀರ್ದುದೆಂದು ರಾಗಿಸಿ ಶಕುನಮೆಂದು ಸೆಱಗಂ ಗಂಟಿಕ್ಕಿಕೊಂಡುಮಾಳವೃಶ್ವರಂಗಿಂತೆಂದಳ್: **ಧರ್ಮಾಮೃ,** ೪.೧೨೩ ವ)

**ಸೆಱಗೊಡ್ಡಿ ಬೇಡು** – ಅಂಗಲಾಚಿ ಬೇಡಿಕೋ (ಎನ್ನ ಕೆಳೆಯನಸುವಂ ಪಿಡಿವುದು ಸೆಱಗೊಡ್ಡಿ ಬೇಡಿದೆಂ ಮೃಗನಯನೇ: **ಕಾದಂಸಂ,** ೪. ೭೩)

**ಸೆಱಪು** – ಆತಿಥ್ಯ (ವಿಖ್ಯಾತಂಗೆ ನರಂಗೆ ಸೆಱಪುಗೆಯ್ದನನಂತಂ: **ಪಂಪಭಾ,** ೪. ೪೪)

**ಸೆಱೆ** – ಬಂಧನ (ರಾವಣನೊಳ್ ನುಡಿದು ನಿಮ್ಮ ಸೆಱೆಯಂ ಬಿಡಿಸಲ್ ಬಂದೆಂ: **ಪಂಪರಾ,** ೧೧. ೧೦೧ ವ); ಕಾರಾಗೃಹ (ಸೆಱೆಯಪ್ಪುದಱೆಗೆ ಕಾರಾಗಾರಂ: **ಅಭಿಧಾವ,** ೧. ೧೦. ೯); ಬಂಧಿತವ್ಯಕ್ತಿ (ತಾನೆತ್ತುವೆನೆಂದು ಪೇೞ್ದೊಡರಸಂ ಕೇಳ್ದು ಪರಿತಂದು ಶಿವಭೂತಿಯಂ ಸೆಱೆಯಂ ಬಿಟ್ಟೊಡಗೊಂಡು ಪೋಪುದುಂ: **ಪಂಚತಂತ್ರ,** ೧೮೫ ವ)

**ಸೆಱೆಕೋಲ್** – ಸೈನ್ಯದ ಪಕ್ಕ, ತುದಿ (ಅಂತುಭಯಬಲದ ಸೆಱೆಕೋಲ್ಗಳೊಂದೊಂದಂ ಮುಟ್ಟುವಿನಮತ್ತ ರಾಜಾಧಿರಾಜನುಮಿತ್ತ ಯುವರಾಜನುಂ ನಿಂದಾಗಳ್: **ಆದಿಪು,** ೧೪. ೯೪ ವ)

**ಸೆಱೆಗೆಯ್** – ಸೆಱೆಗಟ್ಟು (ದುರ್ಯೋಧನಂ ಬಂದಿಕಾಱನಂತೆ ಸೆಱೆಗೆಯ್ದುಂ ವ್ರಣವೈದ್ಯನಂತೆ ಕೊಡಸಾರಿಯಂ ಪಿಡಿದುಂ ಸೂಳೆಯಂತೆ ಕಟಿವು ಉಟಿವನಱೆದುಂ ರಸವಾದಿಯಂತೆ ಕಟ್ಟಿಯುಂ ಪೆರ್ಜೊಡೆಯಂತೆ ನುಣ್ಣಿತಂ ವೇೞ್ದು: **ಪಂಪಭಾ,** ೬. ೭೨ ವ)

**ಸೇಂದು** – ನೀರನ್ನು ಮೇಲೆತ್ತು (ರಶ್ಮಿಗಳೆಂಬ ನೆಗಳ್ದ ಜಾಲಮಮಂ ನಭಕ್ಕೆ ಸೇಂದಿ ತೆಗೆದಲ್ಲಿ ಬಿದಿರ್ಚಿ ನಿರೀಕ್ಷಿಸಲ್ಕೆ: ೨೭. ೯)

**ಸೇಕ** – ಚಿಮುಕಿಸುವುದು (ವಾಸವವನಿತಾ ವದನಾಬ್ಜ ಆಸವ ಸೇಕ ಪ್ರಭಿನ್ನಮುಕುಳಂ ವಕುಳಂ: **ಆದಿಪು,** ೬. ೯೭)

**ಸೇಕಂಗೊಳ್** – ಬಿಸಿಯಾಗು (ಈ ವೇದನೆ ಮಾನಸರ ಬರಿಯನರಿದು ಸೇಕಂಗೊಳೆ ಪೋಕುಂ: **ಕರ್ಣನೇಮಿ,** ೪. ೭೯ ವ)

**ಸೇಕಂಮಾಡು** – ಬಿಸಿಮಾಡು, ಶಾಖ ಕೊಡು (ಮನುಷ್ಯರ ತೊಡೆಯ ಮಾಂಸದಿಂ ಸೇಕಂ ಮಾಡೆ ಮಾಣ್ದುದು: **ಪುಣ್ಯಾಸ್ರ,** ೪. ೨೪ ವ)

**ಸೇಗು** – ಕೆಚ್ಚು, ಚೇಗು (ಮಾರುತಿ ರೌದ್ರಾಕಾರದಿಂ ಆ ರುಧಿರೋದ್ಗಾರಿಯೆಂಬ ಗದೆಯಂ ತೂಗುತ್ತಿರೇಟುಮ ಭುವನಂಗಳನಾರಯ್ಯದೆ ತರ್ಗ್ಗೆವೊಯ್ವ ಸೇಗಿಂದಿರ್ದಂ: **ಕರ್ಣನೇಮಿ,** ೧೦. ೯೫)

**ಸೇಚನ** – ಚಿಮುಕಿಸು (ಸಲೀಲಸೇಚನದಿಂ .. .. ವಲ್ಲರಿ ಫಲಿತಮಾದುದು: **ಜಗನ್ನಾವಿ,** ೨. ೫೨ ವ)

**ಸೇಡು** – ಮುದುಡುವಿಕೆ (ತಳಿರ ಜೊಂಪಂ ಕೂಡೆ ಸೇಡಾಗಿರಲ್ ಕೆಯ್ ಕೊಳೆ ಕುಳಿರ್ವುವು: **ಶಾಂತಿಪು,** ೮. ೧೪); ಸಡೆತು ಹೋಗುವುದು (ಓಡಲೊಡರಿಸುವೊಡಂ ತೊಡೆ ಸೇಡೊಡರಿಸಿದಪ್ಪುದು ಎಂದು ಭಯರಸದಿಂದ ಅಲ್ಲಾಡೆ ಮನಂ ಕೈದುವಂ ಈಡಾಡಿದಂ: **ಪಂಪರಾ,** ೪. ೬೯)

**ಸೇಡುಗೊಳ್** – ಸೆಡೆತುಹೋಗು (ತನ್ನ ಸಖಿವೆರಸು ಕ್ರೀಡಿಸಲ್ ಪೋಗಿ ಅಕಾಲವೃಷ್ಟಿಯಾಗೆ ಸೇಡುಗೊಂಡು ಸಿಂಹದ ಬಿಲನಂ ಪುಗೆ: **ಪುಣ್ಯಾಸ್ರ,** ೧೨. ೫ ವ)

**ಸೇಡುವಡು** – ಸೇಡುಗೊಳ್ (ಕೋಡಿಸುವ ಚಂದ್ರಕಾಂತದ ಕೋಡುಂಗಲ್ಗಳಿನೊಸರ್ವ ರಸದ ಪೊನಲ್ಗಳ್ ಸೇಡುವಡೆ ಕವಿಯೆ .. .. ನೆನೆದು ಹಿಮಕರನಾದಂ: **ಸೂಕ್ತಿಸುಧಾ,** ೩. ೧೫)

**ಸೇತ** – [ಶ್ವೇತ] ಬಿಳಿಪು (ವತ್ವಲೋಪಕ್ಕೆ: ಶ್ವಾನಂ–ಸಾನಂ ಶ್ವೇತಂ–ಸೇತಂ ಸ್ವರ್ಗಂ–ಸಗ್ಗಂ: **ಶಬ್ದಮದ,** ೨೯೬ ಪ್ರ)

**ಸೇತಮಾಲೆ** – ಬಿಳಿಯ [ಮುತ್ತಿನ] ಹಾರ (ಕಟ್ಟಿದೈಸರಂದೊಂದು ಬೆಡಂಗಿನ ಸೇತಮಾಲೆ ಪಟ್ಟಿಗೆ ಕಟಿಸೂತ್ರಮೆಂಬಿವು ಮನಂಗೊಳೆ: **ಆದಿಪು,** ೧೨. ೧೨)

**ಸೇತು** – ಸೇತುವೆ (ಅಧಿಕಬಳನಳಕರತಳಗಳಿತ ಕುಳಶೈಲ ಸಹಸ್ರಸಂತಾನ ಕಳಿತ ಸೇತುಬಂಧುರಮಪ್ಪ ದಕ್ಷಿಣಸಮುದ್ರದ ತಡಿವಿಡಿದುಬಂದು: **ಪಂಪಭಾ,** ೪. ೧೮ ವ)

**ಸೇತುಗಟ್ಟು** – ಸೇತುವೆ ನಿರ್ಮಿಸು (ತನುವೆರಸೊಯ್ಯಲ್ ಮುನಿಗಳಂ ಅನಲಂ ಸ್ವರ್ಗಕ್ಕೆ ಸೇತುಗಟ್ಟಿದನೆನೆ ಪಾವನಹೋಮಧೂಮಮೊಗೆಯಲ್: **ಕಾದಂಬ,** ೧. ೧೭೯)

**ಸೇತುಬಂಧ** – ಅಣೆಕಟ್ಟು, (ಅನಂಗರಾಗ ರಸಪೂರ ಸುನಿರ್ಭರ ಸೇತುಬಂಧನಂ ಮಾಸರಪೊಪ್ಪಿ ತೋಱುವುದು ಸಿಂಹಕಟೀತಟಮಾ ನೃಸಿಂಹನಾ:: **ವರ್ಧಮಾಪು,** ೩. ೧೩); ಅಡ್ಡಗಟ್ಟೆ (ನಿಜ ಸ್ಥಪತಿರತ್ನ ಪ್ರಯತ್ನ ವಿನಿರ್ಮಿತಮಪ್ಪ ಸೇತುಬಂಧದಿಂದಂ ಉನ್ನಗ್ನಜಳೆಯುಂ ನಿಮಗ್ನಜಳೆಯುಂ ಎಂಬ ಎರಡು ಅಱೆಕೆಯ ತೊಱೆಗಳಂ ಪಾಯ್ದು: **ಅಜಿತಪು,** ೯. ೩೪ ವ)

**ಸೇದು** – ನೀರನ್ನು ಮೇಲಕ್ಕೆತ್ತು (ಮಡಕೆಯ ಕೊರಲೊಳ್ ಬಳ್ಳಿಯಂ ಕಟ್ಟಿ ನೀರಂ ಸೇದಲೆಂದು ಬಾವಿಯೊಳಿಕ್ಕುವುದುಂ: **ಧರ್ಮಾಮೃ,** ೧೨. ೧೧೦ ವ)

**ಸೇದೆ** – [ಸ್ವೇದ] ಆಯಾಸ (ನುಡಿವೊಡೆ ಲಲ್ಲೆಯೆಂಗುಂ ಎರ್ದೆವೇಟಿಪ್ಪೊಡೆ ಕೈತವಮೆಂಗುಂ ಆಸೆಯಿಂ ಪಿಡಿದೊಡೆ ಸೇದೆಯೆಂಗುಂ: **ಆದಿಪು,** ೧೨. ೩೨); ಸೇದುವ ಹಗ್ಗ (ಬಾವಿಯೊಳ್ ಸೇದೆಯನಂತೋರಂತೆ ಪಾವು ಪಿಡಿದಿರೆ: **ಧರ್ಮಾಮೃ,** ೧೨. ೧೧೨)

**ಸೇದೆಗಳೆ** – ದಣಿವನ್ನು ಪರಿಹರಿಸು (ತೆಳ್ಳೆಗಂಪುಗಡಲೊಳ್ ತೇಂಕಾಡಿ ತೇಂಕಾಡಿ ಪದ್ಮಿನಿಯೊಳ್ ತುಂಬಿ ಮಲಂಗಿ ಸೇದೆಗಳೆಗುಂ ಕಾಸಾರತೀರಂಗಳೊಳ್; **ಅನಂತಪು,** ೩. ೧೦)

**ಸೇದೆಗಿಡು** – ದಣಿವಿನಿಂದ ಬಳಲು (ಪರಲೋಕಸುಖಾರ್ಥಂ ಆತ್ಮಾಸ್ತಿತ್ವಾಭಿನಿವೇಶದಿಂ ತನುಧನನಿಧನಂ ಮಾಡಿ ಸೇದೆಗಿಡಲ್ವೇಡ: **ಆದಿಪು,** ೨. ೯ ವ)

**ಸೇದೆಗೆಡು** – ಸೇದೆಗಿಡು (ಎಯ್ದುವುದುಂ ದುರ್ಗತಿಗಳಂ ಎಯ್ದಿ ಕರಂ ಸೇದೆಗೆಟ್ಟು ಘಾತಿಸಿ ಬಿದಿಯಂ ಬಯ್ದುಂ: **ಸಮಯಪ,** ೩. ೫೭)

**ಸೇದೆದಳೆ** – ಆಯಾಸಹೊಂದು (ಸುಸಿಲೆಸೆಗುತ್ತೆ ಸೇದೆದಳೆದು ಆಗಳೆ ಭಿಲ್ಲಿಯುಂ ಭಿಲ್ಲನುಂ: **ರಾಜಶೇವಿ,** ೫. ೧೦೧)

**ಸೇದೆವಡು** – ಸೇದೆಗಿಡು (ನಿನ್ನೀ ಸೇದೆವಟ್ಟಂಗಮಂ ಕರದಿಂದೊತ್ತುವ ಶಕ್ತಿಯಂ ಕುಡುವ ತಳೆವುದರ್ಕೆ ಆಂ ನೋಂತೆನಿಲ್ಲ: **ಕಾದಂಬ,** ೧೦. ೨೦)

**ಸೇನಾಗ್ರಗಣ್ಯ** – ಸೇನಾಧಿಪತಿ (ಸಂಭ್ರಮಾಕುಳನುಮಂ ಅವನತೋತ್ತಮಾಂಗನುಮಾಗಿ ಬಂದು ಮುಂದೆ ನಿಂದು ಸೇನಾಗ್ರಗಣ್ಯಂ ಬೆಸನಂ ಪಾರುತ್ತುಮಿರೆ: **ಶಾಂತಿಪು,** ೫. ೪೫ ವ)

**ಸೇನಾನಿ** – ಸೇನಾಗ್ರಗಣ್ಯ (ಸೇನಾನಿ ವಾಹಿನೀಪತಿ ತಾನಕ್ಕುಂ; **ಅಭಿಧಾವ,** ೧. ೧೧. ೫೪); ಕಾರ್ತಿಕೇಯ (ಗೌರೀಸುತಂ ವಿಶಾಖಂ ತಾರಕರಿಪು ಷಣ್ಮುಖಂ ಮಹಾಸೇನಂ ಕ್ರೌಂಚಾರಿ ಗುಹಂ ಸೇನಾನಿ ಮಯೂರರಥಂ ಕಾರ್ತಿಕೇಯಂ ಸ್ಕಂದಂ: **ಅಭಿಧಾವ,** ೧. ೧. ೧೮)

**ಸೇನಾನಿರತ್ನ** – [ಜೈನ] ಜೀವರತ್ನಗಳಲ್ಲಿ ಒಂದು, ಚಕ್ರವರ್ತಿಯ ಸೇನಾಧಿಪತಿ (ಷಡ್ವಿಧಸೇನಾನಾಯಕಪರಾಯಣನುಮಪ್ಪ ಅಯೋಧ್ಯನೆಂಬ ಸೇನಆನಿರತ್ನಮುಂ: **ಆದಿಪು,** ೧೧. ೩ ವ), ನೋಡಿ, 'ಜೀವರತ್ನ'

**ಸೇನಾಪರಿಕರಣ** – ಸೇನಾ ಸಾಮಗ್ರಿಯ ಉಸ್ತುವಾರಿ ಹೊತ್ತವನು (ವಿಷಯ ಗೃಹಾಮಾತ್ಯ ದಂಡಾಧಿನಾಥಾವಳಿ ಧರ್ಮಾದ್ಯಕ್ಷ ಕೋಶಾಧಿಪ ತಳವರ ಹಾಸ್ಯಾದಿ ತಂತ್ರಾಳಿಪಾಳಾವಳಿ ರಾಜಶ್ರೇಷ್ಠಿ ಸೇನಾಪರಿಕರಣ ಪುರೋಧೋಧಿಕಾರ ಅಂಗರಕ್ಷಾವಳಿ ಮುಖ್ಯಂಬೆತ್ತ ಬಾಹತ್ತರದೆಸಕದ ನಾನಾ ನಿಯೋಗಿಪ್ರತಾನಂ: **ಶಾಂತೀಶ್ವಪು,** ೧೫. ೯೦)

**ಸೇನಾಭಂಗ** – ಸೈನ್ಯದ ಸೋಲು (ಮುನ್ನೆ ಬಂದೀತನೆನಗೆ ಸೇನಾಭಂಗಮುಂ ಮನೋಭಂಗಮುಂ ಅಪ್ಪಂತು ಪುಸಿವಾರ್ತೆಯಂ ಪೇೞ್ದಂ: **ಸುಕುಮಾಚ,** ೭. ೫ ವ)

**ಸೇನಾಮುಖ** – ಸೈನ್ಯದ ಎದುರು (ಸೇನಾಮುಖದೊಳ್ ಭಂಗಮನಾನೆಯ್ದಿದನೆಂದು ವಿಶ್ರುತಂ ವೈಶ್ರವಣಂ .. .. ಜೈನದೀಕ್ಷೆಯಂ ಕೈಕೊಂಡಂ: **ಪಂಪರಾ,** ೧೦. ೧೫೫); ಒಂದು ಆನೆ ಒಂದು ರಥ ಮೂರು ಕುದುರೆಗು ಮತ್ತು ಐವರು ಕಾಲುಗಳ ಘಟಕವಾದ ಪತ್ತಿಗಳು ಮೂರು ಸೇರಿ ಒಂದು ಸೈನ್ಯ ಘಟಕ (ಒಂದು ಸಾಮಜಮೊಂದು ತೇರ್ ಮೂಱಶ್ವಮೆಯ್ದು ಕಾಲಾಲ್ಗಳ್ ಪತ್ತಿಯಕ್ಕು ಸಂದ ಪತ್ತಿ ಮೂಱಾಗೆ ಸೇನಾಮುಖಂ: **ಅಭಿಧಾವ,** ೧. ೧೪. ೮)

**ಸೇನೆ** – ಸೈನ್ಯ (ನರಪತಿ ತೈಲಪಂ ಬೆಸಸೆ ಘೂರ್ಜರಸೇನೆಗೆ ಸೂಚಿಯಾನೆಯಂ ಪರಿಯಿಸಿ ಗೆಲ್ದಂ: **ಗದಾಯು,** ೨. ೪೭)

**ಸೇಬ್ಯ** – [ಸೇವ್ಯ] ಸೇವೆಗೆ ಯೋಗ್ಯವಾದುದು (ಅದು ಪರಮಾಸ್ಪದಮದು ಪುಣ್ಯಸಂಪದಮದು ಮಹಾಭ್ಯುದಯ ವಿಲಸಾವಾಸಂ ಅದು ದಿಬ್ಯಮದು ಸೇಬ್ಯಮದು ಸೌಮ್ಯಮದು

ರಮ್ಯಮದು ಸುಖಾಧಾರ ಸಂಸಾರಸಾರಂ: **ಸುಕುಮಾಚ,** ೧೨. ೫೧)

**ಸೇರ್** – ಒಂದುಗೂಡು (ಅತಿಲೋಭಿಗಳ್ಗೆ ವಸ್ತು ಸೇರುವುದು; ಇಂದ್ರಂ ಗಿರಿಸಮುದ್ರಂಗಳಲ್ಲಿಯೆ ಮಟೆಯಂ ಕಟೆವಂ: **ಪಂಚತಂತ್ರ,** ೨೦೬ ಶ್ಲೋಕ ೯೦ ಟೀಕೆ); ಸಮ್ಮತಿಸು (ಸೇರ್–ಸಾನುಮತೇ: **ಶಬ್ದಮದ,** ೬೦೫)

**ಸೇರಮೀಸೆ** – ದಟ್ಟವಾದ ಮೀಸೆ (ಕೆಂಪಡರ್ದ ದಿಟ್ಟಿ ಕುರುಳ್ದಲೆ ಸೇರಮೀಸೆಗಳ್ ನಿಟ್ಟಿಸಲೊಪ್ಪೆ ವೀರರಸಮೂರ್ತಿ .. .. ಕಣ್ಣಪಂ: **ತ್ರಿಷಷ್ಟಿಪು,** ೨೭. ೧೧೦)

**ಸೇರ್ಪಡು** – ಕೂಡು (ಬೀಟಿಲ್ದುಱುಗಲೊಳಗೆ ಪೊಕ್ಕು ಪಥಪರಿಶ್ರಮದಿಂ ಸೇರ್ಪಟ್ಟು ವಿಶ್ರಮಿಸಿರ್ಪುದುಂ: **ಕರ್ಣನೇಮಿ,** ೧೪. ೮೯ ವ)

**ಸೇಲೆ** – ವಸ್ತ್ರ (ಸತ್ತರ್ .. .. ಸೇಲೆಯಂ ಕಂಚುಮಂ ಒಲ್ದಿತ್ತೊಡೆ ನಭಕ್ಕೆ ಪೋಪರ್: **ಸಮಯಪ,** ೧೧. ೧೧೭)

**ಸೇವ** – ಕ್ಷೇಮ (ಮನದೊಳ್ ತೊಟಲುತ್ತಂ ತಾಂ ಮನವೊಲ್ಲದೆ ತನಗೆ ಸೇವಂ ಎಂದೆನುತೆಂದರ್: **ಕಾದಂಬ,** ೬. ೭೫)

**ಸೇವಂತಿಗೆ** – [ಸೇವಂತಿಕಾ] ಒಂದು ಹೂಪ್ರಭೇದ (ನವಸೌರಭಮಂ ಕುಡುತಿರ್ದುವು ಸೇವಂತಿಗೆ: **ಜಗನ್ನಾವಿ,** ೧೪. ೩೬)

**ಸೇವಕ** – ಆಳು (ಸೇವಕಂ ಅನುಚರಂ ಅವಂ ಉಪಜೀವಿನರಂ ಕಿಂಕರಂ ಭುಜಿಷ್ಯಂ ದಾಸಂ: **ಅಭಿಧಾವ,** ೧. ೧೧. ೫೭)

**ಸೇವನೆ** – ಪೂಜೆ, ಉಪಚಾರ (ಉಪಚಾರಂ ಸೇವನೆ ಪರ್ಯುಪಾಸ್ಯೆ ಪರಿವಸ್ಯೆ ಭಕ್ತಿ ಶುಶ್ರೂಷಾರ್ಥಂ: **ಅಭಿಧಾವ,** ೧. ೩ ೧೪)); ತಿನ್ನುವಿಕೆ ಕುಡಿಯುವಿಕೆ (ಜನನೀಸ್ತನ್ಯಾಮೃತಸೇವನೆ ಮಾಣ್ದ ಬಟಿಕ್ಕಂ ಅಖಿಳ ವಿದ್ಯಾಮೃತಸೇವನೆಯೊಳೆ ಯೋಜಿಪುದುಚಿತಂ ತನಯನಂ: **ಚಂದ್ರಪ್ರಪು,** ೪. ೩)

**ಸೇವನೆಗೆಯ್** – ತಿನ್ನು (ಆಯಶ್ಚೂರ್ಣ ಸೇವನೆಗೆಯ್ದಾಫಲದಿಂದೆ ಪೆತ್ತ ತನಯಂಗಸ್ತ್ರೌಘಮೇನಾರ್ಕುಮೇ: **ಜಗನ್ನಾವಿ,** ೯. ೩೮)

**ಸೇವಾರತಿ** – ಸೇವೆ ಮಾಡುವ ಆಸಕ್ತಿ (ಸಮುಚಿತ ಸೇವಾರತಿಯೊಳ್ ನೆಱೆದು ನೆಗೞೆ ನಿರವಿಸಿ: **ಪುಷ್ಪದಂಪು,** ೧೨. ೫೫)

**ಸೇವಾವಿಚಕ್ಷಣ** – ಸೇವೆ ಮಾಡುವುದರಲ್ಲಿ ನಿಪುಣ (ಲೋಕಜ್ಞರುಂ ಸೇವಾವಿಚಕ್ಷಣರುಂ ಅಪ್ಪುದಱಿಂದಮೀ ಕುಕ್ಕುಟಯುದ್ಧನಿರೀಕ್ಷಣರಸಕ್ಕೆ ಭಂಗಂ ಮಾಡದೆ: **ಶಾಂತಿಪು,** ೯. ೫೫ ವ)

**ಸೇವಾಳಂಬೊರೆ** – [ಶೈವಾಲ] ಪಾಚಿಗಟ್ಟು (ಗಂಡಮಂಡಲಂ ಸೇವಾಳಂಬೊರೆದ ಧವಳಾಬ್ಜ ದಳದಂತಿರೆ ಕಣ್ಗೆಸೆದಂ ನರೇಂದ್ರ ಚೂಡಾರತ್ನಂ: **ಪಂಪರಾ,** ೧೨. ೧೩)

**ಸೇವಿತ್ವ** – ಸೇವೆಗೈಯುವುದು (ಸಕಲಮಹೀಚರಖೇಚರ ನಿಕಾಯಸೇವ್ಯತೆಗೆ ವೃದ್ಧಸೇವಿತ್ವಮೆ ಯೋಜಕಮಾದುದು: **ಶಾಂತಿಪು,** ೨. ೩೯)

**ಸೇವೆ** – ಊಳಿಗ ಸೊಗಯಿಪ ದ್ರುಕ್ಕಟ್ಕೋರಚಯ ಸೇವೆಗೆ ಮೆಚ್ಚಿ ಮುಖೇಂದುಮಂಡಲಂ ಮಿಗೆ ಮುದದಿಂದೆ .. .. ಪೊದಳ್ದುದು: **ಕುಸುಮಾಕಾ,** ೬. ೧೨೩); ಶುಶ್ರೂಷೆ (ಸೇವೆಯುಪಾಸನೆ: **ಅಭಿಧಾವ,** ೧. ೧೧. ೫೮)

**ಸೇವೆಗಾಯ್** – ಸೇವೆಯ ಸಂದರ್ಭಕ್ಕಾಗಿ ಕಾಯಿ (ಪೊಂಬಡೆದ ಸೂಳೆಯಂತೆ ಸೇವೆಗಾದು ಪೊಕ್ಕ ಬಂದಿಕಾಱನಂತೆ ಬಲ್ಲಿದಂ ಕೈಕೊಂಡ ಸತಿಯಂತೆ: **ಧರ್ಮಾಮೃ,** ೯. ೨ ವ)

**ಸೇವ್ಯ** – ಸೇವಾಯೋಗ್ಯವಾದ, ಪೂಜ್ಯ (ಸೇವ್ಯರಸೇವ್ಯಮೆನೆ .. .. ಕೈಕೊಳ್ಳದೆ .. .. ಪಾಸಱೆಯೊಳ್ ಕೂಸನಪ್ಪಳಿಸಿ: **ಜಗನ್ನಾವಿ,** ೨. ೫೩ ವ) ; ತಿನ್ನಲು [ಅನುಭವಿಸಲು] ಯೋಗ್ಯವಾದ (ಬೆಳೆದೋರಂತೆಱಗಿರ್ದ ಶಾಳೀವನದಿಂ ಸೇವ್ಯಂ ನಗೋಪತ್ಯಕಂ: **ಆದಿಪು,** ೧. ೬೪)

**ಸೇವ್ಯತೆ** – ಸೇವೆ (ಸಕಲಮಹೀಚರಖೇಚರನಿಕಾಯಸೇವ್ಯತೆಗೆ ವೃದ್ಧಸೇವಿತ್ವಮೆ ಯೋಜಕಮಾದುದು: **ಶಾಂತಿಪು,** ೨. ೩೯)

**ಸೇವ್ಯತ್ವ** – ಅನುಭವಿಸುವಿಕೆ (ಶರದಿಂದು ಪ್ರಭೆಯೊಳ್ ಪ್ರಕಾಶನುಂ ಸೇವ್ಯತ್ವಮುಂ .. .. ತೋರ್ಪೊಂದಂದದಿಂ ನಾಡೆ ಬಂಧುರಮಾಯ್ತು ನೃಪಕಾಂತೆಯೊಳ್ ಬಹುಕಲಾ ನೈಪುಣ್ಯಮುಂ ಪುಣ್ಯಮುಂ: **ಚಂದ್ರಪ್ರಪು,** ೩. ೨೭)

**ಸೇಸಕ್ಕಿ** – ಶೇಷಾಕ್ಷತೆ (ಕಿವಿಯೊಳ್ ಕೆಂದಾವರೆ ಬೈತಲೆಯೊಳ್ ಕುಂದದೆ ಸೇಸಕ್ಕಿ ಸೊಗಯಿಕುಂ ಜೋಗಿಣಿಯಾ: **ಲೀಲಾವತಿ,** ೪. ೭೮)

**ಸೇಸಿಕ್ಕು** – ಸೇಸೆಗೊಡು (ನೆರೆದಂತಃಪುರಕಾತೆಯರ್ ಪಲಬರುಂ ಸೇಸಿಕ್ಕೆಯುಂ ವಾರಸೌಂದರಿಯರ್ ಚಾಮರಮಿಕ್ಕೆಯುಂ .. .. ರಾಜಂದಿರಮಂ ಪೊಕ್ಕಂ ಉದಾರಸಾರವಿಭವಂ ಸಂಸಾರಸಾರೋದಯಂ: **ಆದಿಪು,** ೧೨. ೧೨೯)

**ಸೇಸೆ** – ಶೇಷಾಕ್ಷತೆ (ಅಂತು ನೋಡಿ ಕಡೆಗಣ್ಣ ಚೆಲ್ಲಂಬೆರಸು ಸೂಸುವ ವಾಸವಸ್ತ್ರೀಯರ ಮುಖಾಬ್ಜಾಸವ ಸಂಬಂಧಿಗಳಪ್ಪ ಶೇಷಾಕ್ಷತಂಗಳಂ ಈಶ್ವರನಂ ಗೆಲ್ದ ಗೆಲ್ಲಕ್ಕೆ ಸೇಸೆಗೊಳ್ವಂತೆ ಸೇಸೆಗೊಳ್ಳುತ್ತುಂ: **ಪಂಪಭಾ,** ೮. ೨೭ ವ)

**ಸೇಸೆಗೊಳ್** – ಹಾಕಿದ ಅಕ್ಷತೆಯನ್ನು [ಮಾಡಿದ ಆಶೀರ್ವಾದವನ್ನು] ಸ್ವೀಕರಿಸು (ಅರ್ಹತ್ತ್ವದಮಂ ನೆನೆಯುತ್ತುಂ ಅನುಪ್ರೇಕ್ಷೆಯೆ ಮನದೊಳ್ ತೊಡರ್ದೊಡೆ ತಣ್ಮಲೆಯೆ ಸೇಸೆಗೊಳ್ ಖಚರಪತೀ: **ಆದಿಪು,** ೨. ೫೭)

**ಸೇಟ್ಪಿಡು** – ಸೆಡೆದುಕೊ (ಡಕಾರಕ್ಕಾದೇಶಮಾದ ಱಟಕ್ಕಂ ಪ್ರಯೋಗಂ: ಕಾಟ್ಗಿಚ್ಚು ಕೋಟ್ಬುಟ್ಟು ನೀಟ್ಕರಿಸಿದಂ .. .. ಸೇಟ್ಪಟ್ಟಂ ನೀರಟ್ಕೆ: **ಶಬ್ದಮದ,** ೨೯ ಪ್ರ)

**ಸೈಂಧವ** – ಸಿಂಧುರಾಜ (ಗಾಂಡೀವಿ ತರ್ಪಾಗಳ್ ಈ ಕೃಪಂ ಈ ಸೈಂಧವಂ ಈ ಸರಿತ್ತನಯಂ ಈ ರಾಧೇಯಂ ಈ ಮದ್ರಭೂಮಿಪಂ ಈ ಕುಂಭಜಂ ಈ ಕುರುಪ್ರವರಂದೇಂ ಹಮ್ಮದಂಬೋದರೇ: **ಗದಾಯು,** ೨. ೩೪); ಒಂದು ಬಗೆಯ ಉಪ್ಪು (ಸೈಂಧವಂ .. .. ಲವಣಂ: **ಅಭಿಧಾವ,** ೩. ೧. ೯೯)

**ಸೈಂಹಿಕೇಯ** – ಸಿಂಹಿಕೆಯ ಮಗ, ರಾಹು (ದಶಮುಖಂ .. .. ಶಶಿಮುಖಿಯಂ .. .. ಶಶಿಕಲೆಯಂ ಸೈಂಹಿಕೇಯಂ ಉಯ್ವಂತುಯ್ದಂ: **ಪಂಪರಾ,** ೯. ೧೦೨)

**ಸೈಕತಸ್ಥಳ** – ಮರಳಿನ ಜಾಗ (ತೊಱೆಯ ಸೈಕತಸ್ಥಳದೊಳ್ ರತ್ನಮಂಟಪಮನೆತ್ತಿಸಿ: **ಪಂಪರಾ,** ೧೦. ೧೭೭ ವ)

**ಸೈಕತೆ** – ಸೈಕತಸ್ಥಳ (ಪುಳಿನಸ್ಥಳಿ ಸೈಕತೆ: **ಅಭಿಧಾವ,** ೧. ೩. ೧೪)

**ಸೈಕಾಗ್ರಮನಸ್ಕ** – [ಸ+ಏಕಾಗ್ರಮನಸ್ಕ] ಏಕಾಗ್ರವಾದ ಮನಸ್ಸನ್ನು ಪಡೆದವನು (ಕೈಕಾಲ್ ಸುರುಳ್ದು ನಡುಗದೆ ಸೈಕಾಗ್ರಮನಸ್ಕನಾಗಿ ಭರವಸದಿಂ ಬಪ್ಪ ಅಯ್ಯಿಲ್ಗೆ ಅಳ್ಕದೆ ಪಲ್ಯಂಕಾಸನದಿರ್ಪ್ಪ ಸಾಹಸಂ ಪೆಱರ್ಗುಂಟೇ: **ಸುಕುಮಾಚ,** ೪. ೧೨)

**ಸೈಗಱೆ** – ನೇರವಾಗಿ ಸುರಿ (ಸೋನೆ ಸುತ್ತಲುಂ ಭೋರೆನುತೊರ್ಮೆ ಸೈಗಱೆಯೆ ತೊಟ್ಟನೆ ಪರ್ವಿದ ಮರ್ವಿನಿಂದ: **ಕಬ್ಬಿಗಕಾ,** ೨೧೪)

**ಸೈಗೆಡೆ** – ಬೀಳು, ನಮಸ್ಕರಿಸು (ಮೃಡನ ಮೆಲ್ಲಡಿಗಳೊಳ್ ಸೈಗೆಡೆದಿರ್ದು: **ತ್ರಿಷಷ್ಟಿಪು,** ೧೬. ೩೮ ವ)

**ಸೈಗೋಲ** – ಬಿಲ್ವಿದ್ಯಾ ನಿಪುಣ (ನೆಱೆ ತೆಗೆದಿಸೆ ಸೈಗೋಲರ್ ನೆಱೆಗೋಲಂ ಪೆಣನುಂ ಒಡನೆ ಕೆಡೆದುವು: **ಪಾರ್ಶ್ವನಾಪು,** ೩. ೧೧೭)

**ಸೈತಿಕ್ಕು** – ಕ್ರಮಗೊಳಿಸು, ಸರಿಯಾಗಿಡು (ಷಟ್ಚರಣ ವ್ಯಾಲೋಲ ಕರ್ಣೋತ್ಪಲಮಮ ಅಮರೆ ಸೈತಿಕ್ಕುತುಂ: **ಕಾದಂಬ,** ೬. ೭೪)

**ಸೈತಿಡು** – ಸಂತೈಸು (ಅನುಜನಂ ಲೀಲಾಕಟಾಕ್ಷಾವಲೋಕದೆ ಸೈತಿಟ್ಟು: **ಶಾಂತೀಶ್ವಪು,** ೫. ೫೦)

**ಸೈತಿರ್** – ನೆಮ್ಮದಿಗೊಳ್ಳು (ವಿಲಸತ್ ಭೂಸತಿ ಸೈತಿರಲ್ ಸಮೆದ ಸದ್ಮಂ ತಾನಿವು ಎಂದಾನೃಪಂ ನಲಿವಂ ನೋಡಿ ನಿಜಾತ್ಮಜಾತರ ಸಮುತ್ತುಂಗ ಉಗರಬಾಹಾಗ್ರಮಂ: **ಶಾಂತೀಶ್ವಪು,** ೭. ೭೬)

**ಸೈತೀಂಟು** – ತೃಪ್ತಿಯಾಗುವಂತೆ ಸೇವಿಸು (ಉಣ್ಬುವ ಕಾರ ಮುಂಬನಿಗಳಂ ಸೈತೀಂಟಿ ಸಂತೃಪ್ತಿಯಿಂ: **ತ್ರಿಷಷ್ಟಿಪು,** ೮. ೩೪)

**ಸೈತು** – ನೇರವಾಗಿ, ಚೆನ್ನಾಗಿ (ಅದಿರದಿದಿರ್ಚಿ ತಳ್ತಿಱಿಯಲ್ ಈ ಮಲೆದೊಡ್ಡಿದ ಚಾತುರಂಗಬಲಮೆಂಬುದು ನಿನಗೊಡ್ಡಿ ನಿಂದುದು ಇದಂ ಓವದೆ ಕೊಲ್ವೊಡೆ ನೀನುಂ ಎನ್ನ ಕಜ್ಜದೊಳೆಸೆಗು ಎಂದು ಸೈತು ಅಜಿತಂ ಆದಿಯ ವೇದರಹಸ್ಯದೊಳ್ .. .. ನೆಱೆಯೆ: **ಪಂಪಭಾ,** ೧೦. ೬೪); ಸಮಾಧಾನ (ಪಥಿಕರ್ .. .. ಸೈತು ಬಟ್ಟೆ ನಡೆಯಲ್ವಡೆಯರ್ ವಿಷಯಾಂತರಾಳದೊಳ್: **ಮಲ್ಲಿನಾಪು,** ೨. ೨೧)

**ಸೈದ್ಧಾಂತಿಕಚಕ್ರವರ್ತಿ** – [ಜೈನ] ಷಟ್ಖಂಡಾಗಮವನ್ನು ಅಭ್ಯಸಿಸಿ ಜೈನಸಿದ್ಧಾಂತವನ್ನು ಕರಗತಮಾಡಿಕೊಂಡವನು (ಸೈದ್ಧಾಂತಿಕಚಕ್ರವರ್ತಿ ಮುನಿಚಂದ್ರಮುನೀಂದ್ರನ್ ವಂದ್ಯನುರ್ವಿಯೊಳ್: **ಚಂದ್ರಪ್ರಪು,** ೧. ೨೭)

**ಸೈನ್ಯಜ** – ಸೈನ್ಯದಲ್ಲಿ ಕಾಣಿಸಿಕೊಳ್ಳುವ ಒಂದು ಅಪಶಕುನ (ಅಂತು ವೈಹಾಯಸ ಭೌಮ ದಿಗ್ಭವ ಸೈನ್ಯಜ ಗೃಹೋದ್ಭೂತಂಗಳಯ್ದು ತೆಱದುತ್ಪಾತಂಗಳೊಡನೊಡನೆ ನೆಗೆದುವಾಗಳ್: **ಶಾಂತಿಪು,** ೩. ೧೦೬ ವ) ನೋಡಿ 'ಉತ್ಪಾತ'

**ಸೈಪು** – ಪುಣ್ಯ (ಓಪರೋಪರೊಳ್ ಒಡಸಾಯಲ್ ಪಡೆದರ್ ಇನ್ನವೇಂ ಸೈಪು ಒಳವೇ: **ಆದಿಪು,** ೫. ೨೪); ಹಿತ (ಓರಂದದಿಂದ ಅಕ್ಕಱುಗಂಪಂ ನಾಸಿಕಕ್ಕೆ ಒಂದಿಸುತೆನಸುಂ ಮೆಯ್ಗೆ ಸೈಪಂ ಸಮಂತೆಳ್ಚಱಿಸುತ್ತುಂ ತೀಡುತಿರ್ದತ್ತವರ್ಗೆ ಅನುಚರನಂತೆ ಆ ವನಾಂತಸ್ಸಮೀರಂ: **ಶಾಂತೀಶ್ವಪು,** ೫. ೧೩೮)

**ಸೈಪುಗಾಱ** – ಪುಣ್ಯವಂತ (ಧರೆ ಲೇಸೆಂಬಾಸೆಗಾಱಂ ಪರಪುರುಷಗುಣಾನ್ವೇಷದೊಳ್ ಸೈಪುಗಾಱಂ ಸಿರಿಯೊಳ್ ಕಟ್ಟಣ್ಮುಕಾಱಂ ವಿತತ ವಿತರಣೋತ್ಸಾಹದೊಳ್ ಗೆಲ್ಲಕಾಱಂ: **ನೇಮಿನಾಪು,** ೧. ೩೭)

**ಸೈರ** – ನೇರ (ಪಗೆವರಣ ಆರೆ ಸೈರಂ ಎರೆಗೊಂಡು ತದೀಯ ಕೃಪಾಣ ಕೃಷ್ಣ ಪನ್ನಗವೆಳಸಿತ್ತು: **ಆಚವರ್ಧ,** ೮. ೨೪)

**ಸೈರಂಧ್ರಿ** – ಅಂತಃಪುರದ ದಾಸಿ (ಸೈರಂಧ್ರಿ ಅಂತಃಪುರಾಚರಿಯೆಂಬಳ್: **ಅಭಿಧಾವ,** ೧. ೧೧. ೯); ಅಜ್ಞಾತವಾಸ ಕಾಲದಲ್ಲಿ ದ್ರೌಪದಿ ಹಾಕಿಕೊಂಡಿದ್ದ ವೇಷ (ಸೈರಂಧ್ರಿಯಂ ನೋಡಿ ಸೈರಿಸಲಾಱದೆ ಸಿಂಹಬಲಂ .. .. ತಮ್ಮಕ್ಕನಂ ಈಕೆ ಆರ್ಗೆ ಎಂದು ಬೆಸಗೊಂಡೊಡೆ: **ಪಂಪಭಾ,** ೮. ೫೫ ವ); ಸುಗಂಧವನ್ನು ತಯಾರಿಸುವವಳು (ಎನಿತಾನುಂ ತೆಱದ ಸುಗಂಧವಸ್ತುಸಂದೋಹಮಂ ಪಿಡದು .. .. ಕುಬ್ಜೆಯೆಂಬ ಸೈರಂಧ್ರಿ ನಡೆತರೆ: **ಜಗನ್ನಾವಿ,** ೬. ೧೮ ವ)

**ಸೈರಣೆ** – ತಾಳ್ಮೆ (ರತಿಯ ಸೌಭಾಗ್ಯಮುಮಂ ಸೀತೆಯ ಸೈರಣೆಯುಮಂ .. .. ಒಂದು ಮಾಡಿ ಲೋಕಮೆಲ್ಲಮಂ ಮರುಳ್ಮಾಡಲೆಂದು ಪೆಣ್ಮಾಡಿದನಕ್ಕುಂ: **ಪಂಪಭಾ,** ೪. ೭೫ ವ)

**ಸೈರಣೆಗೆಡು** – ತಾಳ್ಮೆ ಕಳೆದುಕೊ (ತಳಮಳಗಾಗಿ ಸೈರಣೆಗೆಟ್ಟು ಬಾಯಟಿದಟುತುಂ: **ಶಾಂತಿಪು,** ೧. ೯೪ ವ)

**ಸೈರಿಭ** – ಕಾಡು ಕೋಣ (ಇದೆ ತೋಱಿತ್ತು ಮದಾಂಧ ಸೈರಿಭಖುರಪ್ರೋದ್ಧೂತರೇಣುವ್ರಜಂ: **ಕಾದಂಬ,** ೧. ೧೩೦)

**ಸೈರಿಸು** – ಸಹಿಸಿಕೊ (ಇದಿರೊಳ್ ನಿಂದೊಡೆ ವಜ್ರಿ ಸೈರಿಸಂ ಇರಲ್ವೇಡ ಎಮ್ಮ ಒಳ್ವೊಕ್ಕು ನಿಲ್ ನೀನೆಂದು ಕಡಂಗಿ ಕಾಳ್ಪಿಡಿವವೊಲ್: **ಪಂಪಭಾ,** ೪. ೨೪)

**ಸೈವಾಳ** – [ಶೈವಾಲ] ಪಾಚಿ (ಜಳವಂಗರುಚಿತರಂಗಾವಳಿತತಿ ಸೈವಾಳಮಾಳೆ ಸಮುದಿತ ರೋಮಾವಳಿ ನಾಭಿ ಸುೞಿಯೆನೆ ಸರಿತ್ ವಿಳಾಸದಂತೆಸೆದುದು ಅಂಗನೆಯ ತನುಮಧ್ಯಂ: **ಶಾಂತೀಶ್ವಪು,** ೧೩. ೧೯೦)

**ಸೊಂದಿ** – ಸಿತಗ, ಲಂಪಟ (ಸೊಂದಿಯೆಂದು ಸಿತಗಂ: **ಶಬ್ದಮದ,** ಪ್ರಸಾ ೨೨೭); ತುಂಟ (ಸೊಂದಿಯವನೆನ್ನ ಮಗನಲ್ಲಂ ದೇವರ ಪಾದದಾಣೆ ಬಿನ್ನಪಂ ಆ ಕಾಳಿಂದಿಯೊಳಿರ್ದ ಕಂಚಿನ ಮಂದಸಿನೊಳ್ ಪುಟ್ಟಿ ಕಂಸವೆಸರಂ ಪಡೆದಂ: **ನೇಮಿನಾಪು,** ೬. ೭೦)

**ಸೊಂದಿಗಿಳಿ** – ತುಂಟ ಗಿಳಿ ಪರಿವಿಡಿಗೆಯ್ಯೆ ಸೊಂದಿಗಿಳಿ ತಂದೆಯ ತಾಯ ಸಮೀಪದೊಳ್ ತನೂದರಿಯ ರತೋಪಯುಕ್ತರುತರುಮಂ: **ಶಾಂತಿಪು,** ೮. ೮೫)

**ಸೊಂದಿಗೋಗಿಲೆ** – ತುಂಟ ಕೋಗಿಲೆ (ಸೊಂದಿಗೋಗಿಲೆ ಬಗೆ ನಿನ್ನ ದರ್ಪಮನೆಂಗಿಪೆಂ ಈಗಳೆ ನೋಡಿ ತಂದು .. .. ಚಪಲಾಯತಾಕ್ಷಿಯಂ: **ಲೀಲಾವತಿ,** ೧೪. ೭೫)

**ಸೊಂದಿತನ** – ಹಾದರ (ವಂದಿಜನಖ್ಯಾತಿಯೆ ಜಸವೆಂದುಂ ಕುಲಟಾಭಿಸರಣಮಂ ಸೊಬಗೆಂದುಂ ಸೊಂದಿತನಮಂ ಪ್ರಗಲ್ಭತೆಯೆಂದುಂ ಮುಯ್ವಾಂತು ದೆಸೆಗೆ ಬಿಲ್ವೆಸೆವೆಸುವೊಂ: **ವರ್ಧಮಾಪು,** ೨. ೨೭)

**ಸೊಂದಿಯವಂ** – ಸೊಂದಿ (ಸೊಂದಿಯವಂ ಎನ್ನ ಮಗನಲ್ಲಂ ದೇವರ ಪಾದದಾಣೆ ಬಿನ್ನಪಂ: **ನೇಮಿನಾಪು,** ೬. ೭೧)

**ಸೊಂಪಾಗು** – ಹುಲುಸಾಗು ಸೊಂಪಾಗುತ್ತಂಕುರಿಸುತ್ತುಂ .. .. ನೆಱೆದಿಂಪಿಮ ನಳನಳಿಸಿ ಶಾಲಿವನಮೆಸೆದಿರ್ಕುಂ: **ಗಿರಿಜಾಕ,** ೨. ೧೩)

**ಸೊಂಬ** – ಸೋಮಾರಿ (ಬಡವರ್ ದುಃಖಿತರ್ ಎಳಿದರ್ ಕಿತವರ್ ಅತ್ಯಂತಂ ಶಠರ್ ನಾಡೆ ನಾಣ್ಗೆಡಿಗಳ್ ಸೊಂಬರ್ ಅಭವ್ಯರ್ ಅನ್ಯವನಿತಾಸಕ್ತರ್ .. .. ಇಲ್ಲ:: **ವರ್ಧಮಾಪು,** ೧. ೪೭)

**ಸೊಕ** – ಸುಖ (ಸೊಕಮಿರ್ಕೆ ಅಕ್ಕಟ ದರ್ಭಪಾಣಿ ಯಮಜಂ ದರ್ವೀಕರಂ ವಾಯುಪುತ್ರಕನುಂ ಜರ್ಜರಹಸ್ತಂ ಇಂದ್ರತನಯಂ ದಸ್ರಾತ್ಮಜರ್ ದಂಡಮುಷ್ಟಿಕರರ್ ಶಸ್ತ್ರವಿಡಂಬಂ ಏವುದವರ್ಗಂ ಪಾಂಚಾಲಿಯುಂ ಗಂಧದಾಯಕಿಯಾಗಿರ್ಪಿನಂ ಅಂದು ಮತ್ಸ್ಯಗೃಹದಿಂದ ಈ ನಿಗ್ರಹಂ ಪೊಲ್ಲದೇ: **ಗದಾಯು,** ೩. ೩೪)

**ಸೊಕ್ಕಾಹಾರ** – ಮತ್ತು ಬರಿಸುವ ಆಹಾರ (ಒಂದು ದಿವಸಂ ವಸಂತಮಾಲೆಯವರ್ಿರ್ವರ್ಿರ್ವರ್ಗರ್ಗಂ ಪಿರಿದಪ್ಪ ನಿದ್ರೆಯಪ್ಪ ಸೊಕ್ಕಾಹಾರಮನಿಕ್ಕಿ ಮೈಯಱಿಯದವಸರದೊಳು: **ಪುಣ್ಯಾಸ್ರ,** ೪. ೨೦ ವ)

**ಸೊಗ** – [ಸುಖ] ಸಂತೋಷ (ಸಾಲದೆ ಸೋಲದೆ ಪೊಡೆಮಟ್ಟೋಲೈಸದೆ ನಿಚ್ಚವಯಣಮಿಲ್ಲದೆ ತನ್ನಿರ್ದಾಲಯದೊಳಿರ್ದು ಬಾೞ್ವುದೆ ಭೂಲೋಕಮನಾಳ್ವ ಸೊಗದಿನಗ್ಗಳಮಲ್ತೇ: **ಪಂಚತಂತ್ರ,** ೧೦೭)

**ಸೊಗಯಿಸು** – ಸುಂದರವಾಗಿ ಕಾಣು (ದೇವಾಂಗವಸ್ತ್ರದುಳ್ಳುಡೆಯೊಳ್ ಉಲಿವ ಸೂಸಕದ ತೊಂಗಲ್ವೆರಸು ಎಟಿಲ್ವ ಮುಂದಣ ಸೋಗೆ ಕಾರ್ಗಾಲದ ಸೋಗೆಯಂತೆ ಸೊಗಯಿಸೆ: **ಪಂಪಭಾ,** ೨. ೪೧ ವ)

**ಸೊಗಸಿಕೆ** – ಚೆಲುವು (ದೆಯ್ವಬಲಂ ಸೊಗಸಿಕೆ ಮುಂಗೆಯ್ವ ಬಲಂ ಬಾಳಕಾಲದೊಳ್ ತೊಡರ್ದ ಪೊಡರ್ದಯ್ವರ ಬಾಲಕ್ರಿಯೆಯುಂ ಮುಯ್ವುಂ ನೋಡಿಸಿತು ತಾಯುಮಂ ತಂದೆಯುಮಂ: **ಪಂಪಭಾ,** ೨. ೧೧)

**ಸೊಡಬಲಿ** – ಸುಡುಗಾಡು, ಶ್ಮಶಾನ (ಸೊಡಬಲಿಯೆಂದು ಮಸಣವಟ್ಟಿಗೆ: **ಶಬ್ದಮದ,** ಪ್ರಸಾ ೨೨೬)

**ಸೊಡರ್** – ದೀಪ (ಸೊಡರೊಳ್ ಬತ್ತಿಯುಂ ಎಣ್ಣೆಯುಂ ಒಡನಟಿದವೊಲ್ ಆಯುವುಂ ಶರೀರಮುಂ ಅಮಳಂ: **ಶಾಂತಿಪು,** ೯. ೧೧೮)

**ಸೊಡರಕ್ಕೆಯಿಡು** – ದೃಷ್ಟಿಪರಿಹಾರಕ್ಕೆ ದೀಪದ ಕಾಡಿಗೆಯಿಡು (ಪುಟ್ಟಿದುದೀ ಶುಕಶಾಬಂ .. .. ನಿವಳಿಸಾದರದಿಂ ಸೊಡರಕ್ಕೆಯಿಟ್ಟು ತೂಪಿಱೆ: **ಲೀಲಾವತಿ,** ೧೪. ೧೨೦)

**ಸೊಡರಿಡು** – ದೀಪ ಹಚ್ಚು (ಆದಿತ್ಯಂಗೆ ಸೊಡರಿಡಲುಂ ಇಂದ್ರಂಗೆ ದೇವಲೋಕಮಂ ಬಣ್ಣಿಸುವಂತೆಯುಮ ನಿನಗೇನೆಂದು ಕಜ್ಜಂಬೇೞ್ವುದು: **ಪಂಪಭಾ,** ೯. ೧೮ ವ)

**ಸೊಡರೆತ್ತು** – ಆರತಿಯೆತ್ತು (ಸಂಗತಜಿನಧರ್ಮಮತಿಗೆ ನಾಂಗಳ್ ನಿಱಿಯ ತೆಱಿಯ ಬಣ್ಣಿಸಿಮಾದಿತ್ಯಂಗೆ ಸೊಡರೆತ್ತುವೀ ಗಾಂಪಿಂಗೆ ಆಗರಮಾಗಿ ತೊಱೆಗೆ ನೀರಡುಕುವವೋಲ್: **ಅಜಿತಪು,** ೬. ೭೯)

**ಸೊಡರ್ಗುಡಿ** – [ಸೊಡರ್+ಕುಡಿ] ದೀಪದ ಉರಿಯುವ ಕುಡಿ (ಬೆಳಗುವ ಸೊಡರ್ಗುಡಿ ಕಿಡೆ ಮನೆಯೊಳಗೆ ತಮಂ ಪರ್ಬುವಂತೆ ಜೀವಂ ತನುವಿಂ ತಳರಲೊಡಂ ವಿಚ್ಛಾಯತೆಗೊಳಗಾದುವು ತೊಳಗುವವರ ಸೌಂದರತನುಗಳ್: **ಆದಿಪು,** ೫. ೨೭); ನಿಧಿಯಿದ್ದ ಕಡೆ ಸೊಡರ ಕುಡಿ ಬಾಗುತ್ತದೆ ಎಂಬ ನಂಬಿಕೆ (ಪೊನ್ನೆಂದೊಡೆ ಸುವ್ರತಸಂಪನ್ನರ ಮನಮುಂ ಮರಂಗಳುಂ ಸೊಡರ್ಗುಡಿಯುಂ ತಾಂ ನಿರುತಂ ಎಱಗುಗುಂ: **ಪಂಚತಂತ್ರ,** ೨೨೪)

**ಸೊಡರ್ವಕ್ಕು** – ದೀಪದ ಕಾಡಿಗೆ (ಸೊಡರ್ವಕ್ಕುಗಳಿಂದೆ ಬೊಟ್ಟನಿಟ್ಟಳ್ ಮೊಗದೊಳ್ ಕತ್ತುರಿಯ ತಿಲಕದಂತೆರೆ ಹರಿಯಾ: **ನೇಮಿನಾಪು,** ೭. ೫೬); ದೃಷ್ಟಿ ಬೊಟ್ಟು (ಸೊಡರ್ವಕ್ಕು ನೊಸಲೊಳೆಸೆದಿರೆ ಪದದಿಂ ಮಂಜೀರಕರವಮೊಗೆಯೆ: **ಪುಷ್ಪದಂಪು,** ೩. ೯೧)

**ಸೊಣರ್** – ಸೊಂಟ (ಸೊಣರಿಂದಂ ಮುಡುಪಿಂದಂ ಪಿಂತಣ ಮುಂತಣ ಕಾಲ್ಗಳಲ್ಲಿ ಬೆಟ್ಟಿಸಿ ದಸಿಯಂ ನೆಣಮುರ್ಚಿ ಬೆಂಕಿಯಿಂ ಕೆಳಗಣ ಮೆಯ್ಯಿಂದುರುಪಿ ಬರಿಯ ಬಾಡಂ ತೆಗೆದಂ: **ಯಶೋಧಚ,** ೩. ೬೯)

**ಸೊಣೆ** – ಮುಷ್ಟಿಯಿಂದ ಹೊಡೆ (ಸೊಣೆ–ಅಂಗುಲಿಪ್ರಹರಣೇ: **ಶಬ್ದಮದ,** ಧಾ ೩೮೧)

**ಸೊದೆ** – [ಸುಧಾ] ಸುಣ್ಣ (ಕುದಿರೊಳ್ ಕಳ್ಳನನಿಕ್ಕಿಸಿ ಸೊದೆಯಿಟ್ಟು ಅರೆ ಬಟಿದು ಬಟಿಕೆ ತೆಱೆದು ಒಳಗಂ ನೋಡಿದೆಂ ಆತ್ಮನಿಲ್ಲ: **ಯಶೋಧಚ,** ೪. ೨೦) ಬಿಳುಪು (ಕಪ್ಪುರದ ಸೊದೆಯೊಳಂ ಸೊಂಪುವಡೆದ ಕಂಪಿನ ಪೊಟಲೆಂಬವ ಬೀಡು ಬಗೆಗೊಳಿಸುತಿರ್ಪುದು: **ಕಬ್ಬಿಗಕಾ,** ೯೩ ವ); ಅಮೃತ (ಸೊದೆಯಮೃತಂ ಸೊದೆ ಲೇಪಂ: **ಅಭಿಧಾವ,** ೩. ೧. ೧೪)

**ಸೊದೆಗಡಲು** – ಹಾಲ್ಗಡಲು, ಕ್ಷೀರಸಮುದ್ರ ಸುರರ್ ಸೊದೆಗಡಲಂ ಕರಂ ಕಡೆಯೆ ಪೇಟ್ ವಿಷಮೇಟಿದೆ: **ನೇಮಿನಾಪು,** ೭. ೧೭)

**ಸೊದೆವನೆ** – ಸುಣ್ಣ ಬಳಿದು ಬೆಳ್ಳಗಿರುವ ಮನೆ (ಅಸುರನ ಗದೆ ಭೂತಪಿಶಾಚಸಮಿತಿಗೆ .. .. ತೆತ್ತಿಸಿದೆಲ್ವಿನ ಸೊದೆವನೆ: **ಜಗನ್ನಾವಿ,** ೯. ೬೦)

**ಸೊದೆವಟಿ** – ಅಮೃತದ ಮಳೆ (ತೃಪಾನಳತಪ್ತನಾಗಿರ್ದ ಚಂದ್ರೋದಯನ ಮೇಲೆ ಸೊದೆವಟೆಯಂ ಸೂಸುವಂತೆಯುಂ ... .. ನೋಡಿ: **ಲೀಲಾವತಿ,** ೬. ೫೪ ವ)

**ಸೊದೆವೆಳಗು** – ಸುಣ್ಣ ಬಳಿದು ಆದ ಹೊಳಪು (ಪಗಲುಂ ಬೆಳ್ದಿಂಗಳಂ ಬೀಱುವ ಸೊದೆವೆಳಗಂ ತಾಳ್ದು ನೀಳ್ಪಿಂದಮೆತ್ತಂ ಮುಗಿಲಂ ಪೊತ್ತಿರ್ಪ ಕೂಟಪ್ರಕಾರದಿಂ: **ಚಂದ್ರಪ್ರಪು,** ೩. ೮೧)

**ಸೊನೆ** – ಹೂಬಿಟ್ಟ ಮಾವಿನ ಮರದಿಂದ ಸೋರುವ ದ್ರವ (ಪುಳಕಾಂಕುರಮೊಗೆದಂತೆ ಸೊನೆ ಬಿಡುತರೆ ಕಳಿಕೆಗಳೊದವೆ ಬಾಳಚೂತಮಿದೆಸೆಗುಂ: **ಪಾರ್ಶ್ವನಾಪು,** ೯. ೪೮)

**ಸೊನೆವಿಡು** – ಸೊನೆ ಹೊಮ್ಮು (ಎಳಗೊಂಬನುಳ್ಳುಗುರ್ ಸೊನೆವಿಡೆ ತಾಗಿ ಸೂಗುರಿಸೆ ಕಂಠದ ತುಪ್ಪುಟಿಪಾಂಗಕಾಂತಿ ಕೆಂಪಿನ ಪಸರಕ್ಕೆ ಪಕ್ಕುಗುಡೆ: **ಲೀಲಾವತಿ.** ೬. ೯೯)

**ಸೊನ್ನಲಿಗೆ** – ಕಲಶ (ತ್ರಿದಶಶರಾಸನಂ ತಳಿತ ತೋರಣಮಾಗಿರೆ ಕುಕ್ಕಿನೋಳಿ ಚೆಲ್ವಿದಿರ್ಗೋಳೆ ಬರ್ಪ ಸೊನ್ನಲಿಗೆಯಾಗೆ ನಿಜಧ್ವನಿ ತೂರ್ಯಮಾಗೆ: **ಆದಿಪು,** ೬. ೭೧)

**ಸೊನ್ನೆ** – [ಸ್ವರ್ಣ] ಚಿನ್ನ (ಅಕಾರಕ್ಕೆ ಹ್ರಸ್ವೋತ್ವಂ: ಸ್ವರ್ಣಂ–ಸೊನ್ನೆ: **ಶಬ್ದಮದ,** ೨೮೪ ಪ್ರ); ಅನುಸ್ವಾರದ ಚಿಹ್ನೆ (ಬಿಂದುವನುಸ್ವಾರಮ ತಾನೆಂದಕ್ಕುಂ ಸೊನ್ನೆ ಮುತ್ತುವವೋಲ್ ವೃತ್ತತೆಯಿಂ ಸಂದಿರ್ಪುದು: **ಶಬ್ದಮದ,** ೨೧)

**ಸೊನ್ನೆಸಾರ** – ಚಿನ್ನದ ಎಳೆ (ಪೀತಾಂಬರನೆಂಬ ತನ್ನ ಪೆಸರಂ ನನ್ನಿಮಾಡುವಂತೆ ಚೆನ್ನನಪ್ಪ ಸೊನ್ನೆಸಾರದಂಗಿಗೆಯಂ ತೊಟ್ಟು: **ಪಾರ್ಶ್ವನಾಪು,** ೧೨. ೬ ವ)

**ಸೊಪ್ಪಡಗು** – ಶಕ್ತಿಗುಂದು (ಸೊಪ್ಪಡಗಿರ್ದ ಕಾದಲನ ತಳ್ಪಿನ ಕಾಳಸೆಗಾಟಿ ಪೊಕ್ಕ ಮೆಯ್ಯೊಪ್ಪಿರೆ: **ಲೀಲಾವತಿ,** ೧೩. ೧೭)

**ಸೊಪ್ಪಾಗು** – ಶಕ್ತಿಗುಂದು, ಕಾಂತಿಗುಂದು (ನಸು ಸೊಪ್ಪಾದ ಅಧರಂ ಸಡಿಲ್ದ ವಸನಂ ಕಂಪಂ ಪೊದಲ್ದ ಊರುಗಳ್ .. .. ರತ್ಯಂತದೊಳ್ ಮಸುಳ್ದುಂ ಲಜ್ಜಿಪ ಕಾಂತೆಯಂ ಮುದದಿಂ ಆಲಿಂಗಿಪ್ಪನೇಂ ಧನ್ಯನೋ: **ಅನುಭವ,** ೬೯); ಅಸ್ತವ್ಯಸ್ತವಾಗು (ಕಿಱಿದಾನುಂ ಬೇಗದೊಳಾ ನರಿ ಬಂದು ಬಾಗಿಲೊಳ್ ನಿಂದು ಪುಲಿಯ ಪಜ್ಜೆಯುಮಂ ಸೊಪ್ಪಾದ ಬಿಲನುಮಂ ಕಂಡು: **ಪಂಚತಂತ್ರ,** ೯೨ ವ); ಸುಕ್ಕಾಗು (ಗಂಧಮುಡೆಯಂ ಸೊಪ್ಪಾಗದಂತುಟ್ಟು: **ಸಮಯಪ,** ೬. ೩೬); ಹೊಳಪು ಕಳೆದುಕೊ (ಸೊಪ್ಪಾದ ಪೊನ್ನುಮಂ ಕಪ್ಪಾದ ರತ್ನಮುಮಂ .. .. ಲೋಕಂ ಕೈಕೊಳ್ಳರ್: **ಧರ್ಮಾಮೃ,** ೯. ೭೩ ವ)

**ಸೊಪ್ಪು** – ನಿವಾರಣೆಮಾಡು (ಸೊಪ್ಪು-ನಿವಾರಣೇ: **ಶಬ್ದಮದ,** ಧಾ ೪೭೨); ಎಲೆಗಳ ತೊಪ್ಪಲು (ದಿವಸಕರಾಪಸಾರಣದೊಳ್ಸೈದಿಸಿ ಬೆನ್ನನೆ ಬರ್ಪ ಪೆರ್ವಲಕ್ಕವತಮಸ ಪ್ರಚಂಡಚರರಿಕ್ಕಿದ ಸೊಪ್ಪೆನೆ ಬೆಂದಿಱುಂಬಿನೊಳ್ ಕವಿಲಬಿಸಿಲ್ಗಳೇಂ ಮಱಸಲಾರ್ತುವೊ ತೀವ್ರಕರಾಭೀಘಾಥದಿಂದವನಿಯ ಬೆಂದ ಪುಣ್ಗಲೆಗಳೊಯ್ಯನೆ ಕೆಂಗಲೆಗಟ್ಟಿದಂದಮಂ: **ಅನಂತಪು,** ೭. ೬೦)

**ಸೊಪ್ಪುಗುಟ್ಟು** – ಸೊಪ್ಪು ತದೆವಂತೆ, ನಜ್ಜುಗುಜ್ಜಾಗುವಂತೆ ಅಪ್ಪಳಿಸು (ಅಂದುಗೆಯಂತೆ ಮೇಗಾಲಂ ಪತ್ತಿ ಸೊಪ್ಪುಗುಟ್ಟುವರ್: **ಧರ್ಮಾಮೃ,** ૩. ೪૩ ವ)

**ಸೊಪ್ಪುಗುಟ್ಟುಹ** – ಬೇಟೆಯಲ್ಲಿ ಪ್ರಾಣಿಗಳನ್ನು ಚೋದಿಸಲು ಪೊದೆಗಳನ್ನು ಬಡಿಯುವುದು (ಪೊಪ್ಪುಕಮೆಂದು ಸೊಪ್ಪುಗುಟ್ಟುಯಹಂ: **ಶಬ್ದಮದ,** ಪ್ರಸಾ ೧೬೩)

**ಸೊಪ್ಪುನಾರಾಗಿ ಬಡೆ** – ಸೊಪ್ಪೂ ನಾರೂ ಆಗುವಂತೆ ಹೊಡೆ (ಎಲೆಗೆ ಕೂಟಂ ತಂದೆಯಿಲ್ಲೆಂದು ಪೆಂಡತಿಯಂ ಸೊಪ್ಪುನಾರಾಗಿ ಬಡಿಯೆ ಆಕೆಯಿಂತೆಂದಳ್: **ವಡ್ಡಾರಾ,** ಪು ೧೫೩, ಸಾ ೨)

**ಸೊಪ್ಪುಸೊಪ್ಪಾಗು** – ಸವೆದುಹೋಗು (ಪುರುದೇವಂ ಮೊದಲೊಳ್ ನೀನೆರಡನೆಯೊಳ್ ನಡೆಯೆ ಸೊಪ್ಪುಸೊಪ್ಪಾದ ಪದಾಮತರದೊಳ್ ನಡೆದಿಪ್ಪತ್ತಿರ್ವರುಂಇನ್ನಾ ಶುಭವಾದಿಗಳ್ ತೀರ್ಥಕರರ್: **ಅಜಿತಪು,** ೬. ೮೩)

**ಸೊಪ್ಪುಸೊವಡು** – ನಜ್ಜುಗುಜ್ಜು, ಜರ್ಜರಿತ (ಪಿಡಿದೊಗೆವ ಅಸಗನ ತೆಱದಿಂ ಪೊಡೆದಂ ವಿಷಧಾರಿ ಸೊಪ್ಪುಸೊವಡಪ್ಪಿನೆಗಂ: **ಹರಿವಂಶ,** ೬. ೪೨)

**ಸೊಪ್ಪುಳ್** – ಸಪ್ಪುಳ್, ದನಿ, ಶಬ್ದ (ಎನ್ನ ಪಾಪಕರ್ಮವ ಕತದಿಂದಮೀ ನಿಮಗಮೀಯಿರವಾದುದೆ ಸಿಂಧುನಂದನಾ ಎಂದು ಪಶ್ಚಾತ್ತಾಪಂಗೆಯ್ಯುತುಂ ಮುಂಬರ್ಪ ತನ್ನ ಮೊಮ್ಮನ ಸೊಪ್ಪುಳಂ ಕೇಳ್ದು: **ಗದಾಯು,** ೫. ೪೦ ವ)

**ಸೊಬಗು** – ಚೆಲುವು (ಎಲ್ಲಿದಂ ವಿನೋದದ ಮೆದಲೆಲ್ಲಿದಂ ಸೊಬಗಿನಾಗರಂ: **ಆದಿಪು,** ૩. ೧೫)

**ಸೊಬಗುವಡೆ** – ಶೋಭೆಗೊಳ್ಳು (ಸತ್ಕೃತಿ ಸಂಸ್ಕೃತದಿಂದೆ ಜಗತ್ಕೌತುಕಮಾಗಿ ಮತ್ತೆ ಕರ್ಣಾಟದೊಳಂ ಸತ್ಕೃತಿ ನಿವಹಂ ಪೊಗಟೆ ಚಮತ್ಕೃತಿಯಂ ಪಡೆದು ಸೊಬಗುವಡೆದತ್ತಿಗಳ್: **ಕಾದಂಬ,** ೧. ೫)

**ಸೊಬಗುವೆಱು** – ಸೊಬಗುವಡೆ (ಸಿಂಗರದೊಳ್ ಸೊಬಗುವೆತ್ತು ವಿಳಾಸದೊಳ್ ವಿವೇಕಂಬಡೆದು ನಡೆದು ಬಂದು: **ಗಿರಿಜಾಕ,** ೨. ೧೦೫ ವ)

**ಸೊಬಗೆ** – ಚೆಲುವೆ (ತದುರ್ವೀಪಾಲಕಂಗೆ ಇಷ್ಟಸುಂದರಿಯರ್ ಸುಂದರರರೂಪೆಯರ್ ಸೊಬಗೆಯರ್ ಕೂರ್ತಿರ್ಪರ್: **ಶಾಂತಿಪು,** ೫. ೨೨)

**ಸೊಯಂಬರ** – [ಸ್ವಯಂವರ] ವಧು ತನ್ನ ಗಂಡನನ್ನು ಆಯ್ದುಕೊಳ್ಳುವುದು (ಸುರಕುಸುಮದ ಪೊಸವಾಸಿಗಮೆರಡುಂ ಕರತಳದೊಳೆಸೆದು ತಮ್ಮಯ ತೋಳೊಳ್ ದೊರೆಯೆನೆ ಬಂದತ್ತು ಸೊಯಂಬರಕ್ಕೆ ಬರ್ಪಂತು ದೇವಗಣಿಕಾನಿಕರಂ: **ಆದಿಪು,** ೧೦. ೨೦)

**ಸೊಯಂಬರಸಾಲೆ** – ಸ್ವಯಂವರಮಂಟಪ (ಭೂಲಲನಾಧೀಶನಂದು ಕಂಡಂ ಮಣಿಮಾಳಾಲಲಿತಮಂ ಸೊಯಂಬರಸಾಲೆಯಂ: **ಕರ್ಣನೇಮಿ,** ೪. ೧೬)

**ಸೊಯಂಬರಸೇಸೆ** – ಸ್ವಯಂವರದಲ್ಲಿ ಮದುಮಕ್ಕಳಿಗೆ ಹಾಕುವ ಅಕ್ಷತೆ (ಜಯಪತಾಕೆ ನಭಮನಳ್ಳಿಱಿಯೆ ಬೀರಸೇನೆಯೊಡನೆ ಸೊಯಂಬರಸೇಸೆಯನಾಂತು ಪೌರಜನದ ಮನದೊಡನೆ ಕೌತುಕಮಂಗಳ ಪುರಮಂ ಪುಗುವಾಗಳ್: **ಪಂಪರಾ,** ૩. ೬೦ ವ)

**ಸೊರೆ** – ಒಣ ಸೋರೆಬುರುಡೆ (ತಮ್ಮಂ ನಂಬಿದರಂ ಸೊರೆಯ ಕಾಯ್ ಮುಂತಾಗಿ ನದಿಯ ತಡಿಯಂ ಸಾರ್ಚುವುದೆಂದೊಡೆ ನೀಂ ತಪೋವೃದ್ಧರುಂ ತ್ರಿಕಾಲದರ್ಶಿಗಳುಂ ಸಕಳಭೂತಂಗಳಂಸವನಾಗಿ ಕಾಣ್ಬ ಕರುಣಾರಸಾರ್ದ್ರ ಹೃದಯರಪ್ಪುದಱಿಂ ನಿಮ್ಮಂ ನಂಬಿಬಂದಪೆವೆಂಬುದುಂ: **ಪಂಚತಂತ್ರ,** ೧૩೭ ವ); ವೀಣೆಯ ಸೋರೆಬುರುಡೆ (ಊಱೆ ಕುಚಾಗ್ರದೊಳ್ ಸೊರೆಯನೆತ್ತಿದ ಕೆಂದಳದಿಂದಮೌಂಕಿ ಪೊಯ್ದೆಱೆ ವೆರಲ್ಗಳಿಂದಿಟೆಯ ತಂತಿಗಳಂ: **ಲೀಲಾವತಿ,** ೨. ૩೧)

**ಸೊರೆಗುಂಡಿ** – ಸೋರೆಕಾಯಿ ಆಕಾರದ ಪಾತ್ರೆ (ಈ ನೇಣಂ ಪಿಡಿದೆಳೆದು ಬಟಿಕೀ ಸೊರೆಯಗುಂಡಿಯೊಳ್ ರಸಮಂ ಮುಟ್ಟದೋಸರಿಸಿ ನೀಡುವುದು: **ಕರ್ಣನೇಮಿ,** ೪. ೮೭ ವ)

**ಸೊರೆಗಾಯ್** – ಸೋರೆಕಾಯಿ (ಸೊರೆಗಾಯ ಬಂಬಲಲ್ಲದೆ ತಲೆ ಪತ್ತೆನುತ್ತೆ ದಶಕಂಠನನಂಡಲೆವಂ ನಿಶಾಚರಂ: **ಜಗನ್ನಾವಿ,** ೧೮. ೮૩)

**ಸೊರೆಮೊಗಂ** – ಸೋರೆಕಾಯಂತೆ ಸೊಟ್ಟ ಮುಖವುಳ್ಳವನು (ಯಮನೆಂಬ ಸೊರೆಮೊಗಂ ಬಂದು ಮುಟುಗಿಸಲ್ ಜನ್ಮಜಳಧಿಯೊಳ್ .. .. ಜೈನಮೆಂಬಾ ಪ್ರಮಾದವಲಗೆಯನೆ ಪಿಡಿಯದವನಡಿಗಡಿಗಿಟೆಗುಂ: **ಸಮಯಪ,** ೧૩. ೬૩)

**ಸೊರ್ಕಾನೆ** – ಮದಗಜ (ಗಿಱ್ಱನೆಯ್ದುವ ಸೊರ್ಕಾನೆಗಲ ಕಾಲ ಸಂಕಲೆಯ ಗೋಸದೊಳಂ ಇಂದಿರನಪೊಟಿಲ ಸಿರಿಯ ಸಡಗರಮಂ ಪಿಡಿಯುತಿರ್ಪುದುಂ: **ಕಬ್ಬಿಗಕಾ,** ૩೭ ವ)

**ಸೊರ್ಕಿಸು** – ಮತ್ತುಬರಿಸು (ಕುಡಿದೊಡೆ ಸೊರ್ಕಿಸದವು ನಾಣ್ಗೆಡಿಸದವು ಮನಕ್ಕಲಂಪನೀವುವು: **ಆದಿಪು,** ೫. ૩೨)

**ಸೊರ್ಕು** – ಅಮಲೇರು (ಅಗರುವ ಧೂಪಧೂಮದೊಳ್ ಸೊರ್ಕಿದ ಸೊರ್ಕುಗಳಾಗಳಲ್ಲಿ ತೊಟ್ಟಗೆ ತಿಳಿದಂತೆ: **ಆದಿಪು,** ೫. ೪೨); ಆನೆಯ ಮದಜಲ (ನೆಗೆದು ಕವ್ವರೆ ಕವಿದ ಸೊರ್ಕಿನ ಸೊವಡಿಂಗಂ: **ಅನಂತಪು,** ೨. ೨೯ ವ); ಅಮಲು (ಎಳದೆಂಗಂ ತೀವಿ ಸೊರ್ಕಂ ಬಳಯಿಪ ಜಳಮಂ ಚಾರುದತ್ತಂಗಂ ಆ ಕೋಮಳೆಗಂ ಕೊಟ್ಟು ಅಟ್ಟಲ್: **ಕರ್ಣನೇಮಿ,** ೪. ೬೨); ಗರ್ವಪಡು (ಪಿರಿಯರಿವರ್ ಸರ್ವಜ್ಞರ ದೊರೆಯೆನ್ನದೆ ಸೊರ್ಕಿ ಮೂರ್ಖತನದಿಂ ಕೋಣಂ ಹೊರಸೇಱಿದಂತೆ ನುಡಿವೈ: **ಧರ್ಮಾಮೃ,** ೯. ೯೨); ಗರ್ವ (ಕೌಂತೇಯರಂ ಮಚ್ಚರದಿಂ ಕಾಂತಾರದೊಳ್ತಿಱ್ಱನೆ ತಿರಿಪಿದ ಸೊರ್ಕೀಗಳೇನಾದುದು: **ಗದಾಯು,** ೭. ೧೪)

**ಸೊರ್ಕುಮದ್ದು** – ಪ್ರಜ್ಞೆ ತಪ್ಪಿಸುವ ಔಷಧ (ಬಿಡುವಲೆ ಸೊರ್ಕುಮದ್ದು ಪದವಿಲ್ ಮಿಡಿವಿಲ್ ಎಲೆಯಂಬು .. .. ಪಿಡಿದು ಬೇಂಟೆಗೆ ಸಂದ ಪುಳಿಂದರೆಯ್ದಿದರ್: **ರಾಜಶೇವಿ,** ೫. ೫೨)

**ಸೊಲಗೆ** – ಒಂದು ಅಳತೆ (ಉತ್ಸಾಹದಿಂದೊಂದು ಸೊಲಗೆ ಬೀಜವರಿಯಂ ಮಿಗಿಸಿಕೊಂಡು: **ತ್ರಿಷಷ್ಟಿಪು,** ೮. ೧೪ ವ)

**ಸೊಲ್ಲಿಸು –** ಸೊಲ್ಲಿಡು (ವಿಶಮಶರನದಟಲೆದ ಗೆಲ್ಲಂ ನಿಮ್ಮೊಳಲ್ಲದೆ ಸಲ್ಲದಂದು ಸೊಲ್ಲಿಸಲ್ ಪೋಪಂತೆ .. .. ಜಿನಾಲಯಕ್ಕೆ ಪೋ: **ಲೀಲಾವತಿ,** ೩. ೭೮ ಬ)

**ಸೊವಡು –** ಸೊಗಡು, ಕಂಪು (ಕತ್ತುರಿಯ ತಗುಳ್ದು ಪೊಯ್ವ ಸೊವಡು ಆ ಸೊವಡಿನೊಳ್ ಕಡುಸೊರ್ಕುಸೊರ್ಕಿ ಗಾವರಿಸುವ ತುಂಬಿ ಚೆಲ್ವೆಸೆಯೆ ಕಣ್ಗೆಸೆದತ್ತು ಖಗೇಂದ್ರನೋಲಗಂ: **ಆದಿಪು,** ೨. ೫); ಸೊಕ್ಕು (ಮನಮಿಕ್ಕದಿರ್ ಸೊವಡನೆಂದುಂ ಮಾಡದಿರ್ .. .. ಸರ್ವತ್ರಾತಿಶಯಂ ತ್ಯಜೇತ್ ಎನಿಪುದಂ ನೀಂ ಮೀಱದಿರ್ ಮಾನಿನೀ: **ರಾಜಶೇವಿ,** ೧೧. ೧೦೯)

**ಸೊಸೆ –** [ಸ್ನುಷಾ] ಮಗನ ಹೆಂಡತಿ (ರತ್ನಕಂಬಳಂಗಳುಂ .. .. ಮೂವತ್ತೆರಡು ಖಂಡಂಗಳಂ ಮಾಡಿ ಮೂವತ್ತಿರ್ವರ್ ಸೊಸೆವಿರ್ಕಳ್ಗೆ ಪಚ್ಚುಗೊಟ್ಟೊಡೆ: **ವಡ್ಡಾರಾ,** ಪು. ೨೫, ಸಾ. ೨೮)

**ಸೋ –** ಓಡಿಸು (ಇದು ದಲ್ ಪಕ್ಕಿಗಳೆಲ್ಲಮಂ ನೆರಪುವಂದಂ ಪಕ್ಕಿಸೋವಂದಮಲ್ಲಂ ಇದು ಎನಲ್.. ..ಸಂಮದದಿಂ ಪಾಮರಿಯರ್ ಜಿತಾಮರಿಯರ್ ಇರ್ಪರ್ ಕಾದು ಕೇದಾರಮಂ; **ಮಲ್ಲಿನಾಪು,** ೨. ೧೫)

**ಸೋಂಕಿಲ್ –** ಮಡಿಲು, ಸೋಗೆ (ಆಲದ ಪಣ್ಗಳಂ ತಾನೆಯಾಯ್ದು ಸೋಂಕಿಲಂ ತೀವಿಕೊಂಡಾಗಳ್ ಬಯಕೆ ನೆಱೆದೊಡೆ: **ವಡ್ಡಾರಾ,** ಪು ೧೪೯, ೯)

**ಸೋಂಕು –** ಮುಟ್ಟು (ಆಂ ಸಂಧ್ಯಾರಾಗದೊಳಱಿಯದೆ ಮದವಾರಣಮಂ ಸೋಂಕಿ ಕೆಲದೊಳೊಯ್ಯನೆ ಪೋದೆಂ: **ಕವಿರಾಮಾ,** ೩. ೯೨); ಸ್ಪರ್ಶ (ಶೋಂಕಿನೊಳ್ ನಲಿವ ನಲ್ಲಳಲಂಪಮೊಡರ್ಚೆ: **ಆದಿಪು,** ೨. ೪೧); ಮೆಟ್ಟಿಕೊ (ತೆಱುವುವಡೆದಡಸಿ ರುಜೆ ಮೆಯ್ಮುಱುಗುವಿನಂ ಅವುಂಕಿ ಸೋಂಕಿ ನೀಕರುಣತೆಯಿಂ: **ಸುಕುಮಾಚ,** ೨. ೧೧)

**ಸೋಂದು –** ಓಡಿಸು (ಮತ್ತಮಧುಕರನಿಕರಮಂ ಲೀಲಾಕಮಳದಿಂ ಸೋಂದು ಸೇದೆವಡುವ ಸುನಂದಾದೇವಿಯ ಮುದ್ದುಮೊಗಮಂ: **ನೇಮಿನಾಪು,** ೪. ೫೦ ವ)

**ಸೋಂಬ –** ಸೋಮಾರಿ (ಸೋಂಬರ್ ಅಭವ್ಯರ್ ವನಿತಾಸಕ್ತರ್ .. .. ನೋಟ್ಟಿಡಮಿಲ್ಲ: **ವರ್ಧಮಾಪು,** ೧. ೪೭)

**ಸೋಂಬತನ –** ಸೋಮಾರಿತನ (ನಿಮಿತ್ತಂ ಬೇಱುಂಟೆ ಫಲಕೆ ಮೈವರಲಾಱದ ಕಡುಸೋಂಬತನಕೆ ಪೊಂಬಾಟೆಗಳೊಳ್: **ಲೀಲಾವತಿ,** ೬. ೧೨೧)

**ಸೋಂಬು –** ಸೋಂಬತನ, ವಿರಾಮ (ಅ ಕಾಂತೆಯ ತಾಯಿ ಸೋಂಬಿನೊಳಿರ್ದಪಂ ಇಂತೀತಂ ಎಂದು ಬಗೆ ಪುಗೆ ಮನದೊಳ್: **ಹರಿವಂಶ,** ೪. ೧)

**ಸೋಕ –** ಸ್ಪರ್ಶ (ಸೋಗೆಯ ಸೋಕಕ್ಕೆಂದದುಂ ಪೋಗದೆ ಬಹುರತ್ನ ರುಚಿರಕರ ಸುರಚಾಪಶ್ರೀಗಂ ಬಯಸಿರ್ಪಂತೆವೊಲಾವಗಳುಂ ಅಗಲವು ಮುಗಿಲ್ಗಳಾ ನಗತಟಮಂ: **ಲೀಲಾವತಿ,** ೯. ೩೨)

**ಸೋಗಿಲು –** ಮಡಿಲು (ಕರತಳದಲ್ಲಿ ತಾಳ್ದ ತಲೆ ಸೋಗಿಲೊಳಿಟ್ಟ ಕಬಂಧಂ ಎತ್ತಲುಂ ಪರೆದ ಅಳಕಾಳಿ .. .. ಉಚ್ಚಳಿತಹಾರಮೊಪ್ಪಿರೆ ಬಂದಳಾರ್ತದಿಂ: **ರಾಜಶೇವಿ,** ೧೩. ೧೩೮)

**ಸೋಗೆ –** ನವಿಲಿನ ಪುಚ್ಛ (ಪೊಳೆವಿನಕಿರಣಮೆಯ್ಗಳನಳುರೆ ಕನಲ್ದಗಿದು ಸೋಗೆಯಂ ಪರಪಿ ನೆಟಿಲ್ಗಳನಾಸೆವಡೆ ಶಿಖಾವಳಿಕುಳ ತಾಂಡವಮೆಸೆದುದು ಆ ಶರತ್ಸಮಯದೊಳಂ: **ಆದಿಪು,** ೧೧. ೪೯); ನವಿಲುಗರಿ (ಮೊಗಮಂ ತಾವರೆ ಕಣ್ಣಂ ಉತ್ಪಳದಳಂ ಧಮ್ಮಿಲ್ಲಮಂ ಸೋಗೆಸೆಳ್ಪುಗುರಂ ಕೇದಗೆ .. .. ಪೋಲ್ತುವೆನ್ನದೆ: **ಆದಿಪು,** ೬. ೮೫); ಗಂಡು ನವಿಲು (ದೇವಾಂಗವಸ್ತ್ರದುಳ್ಪುಡೆಯೊಳ್ ಉಲಿವ ಸೂಸಕದ ತೊಂಗಲ್ವೆರಸು ಎಟಿಲ್ವ ಮುಂದಣ ಸೋಗೆ ಕಾರ್ಗಾಲದ ಸೋಗೆಯಂತೆ ಸೊಗಯಿಸೆ: **ಪಂಪಭಾ,** ೨. ೪೧ ವ); ಜೊಂಪೆ, ಉರ್ಚೆ ಸೀಟ್ದಿ ಬಸುಱೆ ನಿಸದಂ ಬಿಸುನೆತ್ತರ ಪೊನಲುಂ ಕರುಳ ಸೋಗೆಯುಂ ಕವಿದವವನಿಗಾ ಯತಿಪತಿಯಾ: **ಆಚವರ್ಧ,** ೩. ೭); ಮಡಿಲು (ತಾಯ ಸೋಂಕಿಲೊಳ್ ಸಿತಕಾಯಂ ಶುಕ್ತಿಕೆಯ ಸೋಗೆಯೊಳ್ ನವಮುಕ್ತಾಫಲದಂತೆ ತೊಳಗುತಿರ್ದಂ ತನಯಂ: **ಅನಂತಪು,** ೧೨. ೮೦)

**ಸೋಗೆನವಿಲ್ –** ಗಂಡು ನವಿಲು (ಜವಮುಟಿದೊಂದು ಸೋಗೆನವಿಲ್ ಒಯ್ಯನೆ ಕರ್ಕಡೆಗಾಸಿಯಾಗಿ ಪಾಱುವುದುಂ: **ಪಂಪಭಾ,** ೫. ೫೧)

**ಸೋಗೆನಿಱೆ –** ಸೀರೆಯ ನೀಳವಾದ ಸೆರಗು (ಸೆಳೆದು ಮರಳ್ಚಿ ಸೋಗೆನಿಱೆಯಂ ಮೃದುಜಂಘೆಯನೊಯ್ಯನಂಟಿ .. .. ಮಳಯಸಮೀರಣಂ ಸರಸವಾಡಿದನಗ್ಗದ ಪೆಂಡವಾಸಮಂ: **ಅನಂತಪು,** ೭. ೩೩)

**ಸೋಗೆವೆಣ್ –** ಹೆಣ್ಣು ನವಿಲು (ವಿರಿಂಚನಂಚೆಯಂ ಪಳಂಚಲೆಯದಂಚೆಯಿಲ್ಲ ಕುಮಾರರ ಮಯೂರಮಂ ಕೂರಿಸದ ಸೋಗೆವೆಣ್ಣಿಲ್ಲ: **ಪುಷ್ಪದಂಪು,** ೯. ೨೧ ವ)

**ಸೋಡಂಬಾಡಂ –** ಅತಿಶಯವಾಗಿ (ನೋಡಿದೊಡನೆ ಅನಿಮಿಷಪದಮಂ ಮಾಡುತ್ತುಂ ವಿಟಜನಕ್ಕೆ ಮುದದಿಂ ಸೋಡಂಬಾಡಂ .. .. ಎಸೆದುದು ಅಂದು ಗಣಿಕಾನಿವಹಂ: **ಉದ್ಭಟಕಾ,** ೧೦. ೪೪)

**ಸೋಡಂಬಾಡನೆ –** ರಭಸವಾಗಿ (ಪೆಱನೊರ್ವನೊಲ್ದುಂ ಒಲಿಸಿಯುಂ ಒಂದೆಡೆಯೊಳ್ನಿಲ್ಲದ ಪಲ್ಲವಗ್ರಾಹಿ ಸೋಡಂಬಾಡನೆ ಬಂದು ಕಾಲ್ವಿಡಿವುದುಂ: **ಮಲ್ಲಿನಾಪು,** ೭. ೫೫ ವ ಮತ್ತು ೫೬)

**ಸೋದನ ದೀವಿಗೆ –** [ಶೋಧನ ದೀಪಿಕಾ] ಹುಡುಕಲು ಬಳಸುವ ದೀಪ (ಮದನನ ಸೋದನದೀವಿಗೆಯೆನೆ ತೊಳಗಿ ಬೆಳಗಿದಂ ತುಹಿನಕರಂ: **ಪಂಪಭಾ,** ೪. ೫೨)

**ಸೋದರತಂಗೆ –** ಸ್ವಂತ ತಂಗಿ (ಸಮುದ್ರವಿಜಯನೆಂಬೊಂ ರಾಜಶ್ರೇಷ್ಠಿ ಆತಂಗೆ ಸಾಗರಸೆಟ್ಟಿಯ ಸೋದರತಂಗೆ ಸುಮತಿಯೆಂಬೊಳಂ ಕೊಟ್ಟರ್: **ವಡ್ಡಾರಾ,** ಪು. ೪೨, ಸಾ. ೨೭)

**ಸೋದರತಮ್ಮ –** ಸ್ವಂತ ತಮ್ಮ (ವಿದ್ಯುಲ್ಲತೆಯಂ ಸೋದರತಮ್ಮಂ ಮೇಘಕೂಟಾಧಿಪತಿ ಮೇಘಮಾಳಿಯೆಂಬೊಂ ವಿದ್ಯಾಧರಂ: **ವಡ್ಡಾರಾ,** ಪು. ೪೧, ಸಾ. ೨೨)

**ಸೋದರಮಯ್ದುನ –** ಸೋದರ ಸಂಬಂಧದಿಂದಾದ ಮೈದುನ (ಬರಿಸಿದೊಂ ಸೋದರಮಯ್ದುನನಮಿತತೇಜನಂ ಶ್ರೀವಿಜಯಂ: **ಶಾಂತಿಪು,** ೫. ೭೬)

**ಸೋದರಮಾವ –** ತಾಯಿಯ ಒಡಹುಟ್ಟಿದವನು (ಮೇಘಮಾಳಿಯೆಂಬೊಂ ವಿದ್ಯಾಧರಂ ನಿಮ್ಮ ಸೋದರಮಾವಂ: **ವಡ್ಡಾರಾ,** ಪು. ೪೨, ಸಾ. ೪)

**ಸೋದರಿಕೆ –** ಒಡಹುಟ್ಟಿದವರ ನಂಟು ಎನಿತಱಿಯದಿರ್ದೊಡಂ ಸೋದರಿಕೆಯೆ ಮಿಕ್ಕು ಬರ್ಕುಂ: **ಪಂಪಭಾ,** ೧೨. ೨೦೭ ವ)

**ಸೋದರ್ಯ** – ಒಡಹುಟ್ಟಿಗೆ ಸಂಬಂಧಿಸಿದ )ಸೋದರ್ಯಂ ಭ್ರಾತೃಸಮಾನೋದರ್ಯಂ: **ಅಭಿಧಾವ,** ೧. ೧೧. ೧೮)

**ಸೋದಿಗೆ** – ಗೋಧಿ ರವೆಯಿಂದ ಮಾಡುವ ಒಂದು ತಿಂಡಿ (ಪೂರಿಗೆ ಇಡ್ಡಲಿಗೆ ಸೋದಿಗೆ ಲಾವಣಿಗೆ ಘೃತಪೂರಂ ಲಡ್ಡುಗೆ ಮಂಡಗೆ ಮೊದಲಾಗೊಡೆಯ ಪದಿನೆಂಟುಂ ತೆಱದ ಭಕ್ಷ್ಯರೂಪಂಗಳುಮಂ: **ವಡ್ಡಾರಾ,** ಪು ೭೮ ಸಾ ೧೬)

**ಸೋದಿಸು** – [ಶೋಧಿಸು] ಹುಡುಕು (ಚೈರಂತನಕ್ರಮದಿಂದೆ ಆ ಮಣಲೆಲ್ಲಮಂ ಮಗುಳೆ ಪಾರಾವಾರದೊಳ್ ಪೊಯ್ದು ಮತ್ತಮದಂ ಸೋದಿಸಿ ಕಾಣ್ಬವೊಲ್ ನೃಗತಿ ನೋಡಲ್ ನಾಡೆಯುಂ ದುರ್ಲಭಂ: **ಸುಕುಮಾಚ,** ೫. ೩೩); ಬೆದಕು, ಪರೀಕ್ಷಿಸು (ತನ್ನ ನಿಷ್ಠುರಚರಣಸಂಘಟ್ಟದೊಳ್ ಪಡಲ್ವಟ್ಟ ವೀರಭಟನ ಮಕುಟಂಗಳೊಳ್ತಲೆಗರೆದಿರ್ದನೆಗೆತ್ತು ಸೋದಿಸಿ ನೋಡಿಯುಂ: **ಗದಾಯು,** ೬. ೨೮ ವ); ದ್ರವದ ಕಸವನ್ನು ಹೋಗಲಾಡಿಸು (ನಿರ್ಮಳವಸ್ತ್ರದೆ ಸೋದಿಸಿರ್ದುದಂ ನಿಚ್ಚಮವಂ ಬಳಸುವರ್ .. .. ಪುಣ್ಯವಂತರ್: **ಸಮಯಪ,** ೬. ೯೮)

**ಸೋಂದು** – ಓಡಿಸು (ಶೃಗಾಲಂಗಳನೆಬ್ಬಟ್ಟಿ ಉಲಿವ ಶಕುನಿಗಳಂ ಕೈಚಪ್ಪಳೆಯಿಂ ಸೋಂದಿ: **ತ್ರಿಷಷ್ಟಿಪು,** ೨೭. ೧೨೭ ವ)

**ಸೋದು** – ಸೋ, ಓಡಿಸು (ನೆತ್ತರಂ ಪಡೆಯದೆ ಆಕಾಶಕ್ಕೆ ಬಾಯಂ ತೆಱೆದು ಊಳ್ವ ಬಳ್ಳುಗಳುಮಂ ನರವುಮಂ ಬರಿಯುಮಂ ಪತ್ತಿ ತೆಗೆದು ಪೆಡಸಾರ್ವ ನರಿಗಳುಮಂ ತಾನೆ ಸೋದು: **ಪಂಪಭಾ,** ೧೩. ೫೬ ವ)

**ಸೋನೆ** – ಮಳೆ (ಸೋನೆಯಿಂ ಸರಿಗಳಿಂ ತಂದಲ್ಗಳಿಂದ ಅಂದು ಭೂತಳಂ ಏಕಾರ್ಣವಮಾಗೆ ಚಕ್ರಿಯ ಬಲಕ್ಕಾತಂಕಮಂ ಮಾಡಿದರ್: **ಆದಿಪು,** ೧೩. ೫೯)

**ಸೋಪಾನ** – ಮೆಟ್ಟಿಲು (ಸೋಪಾನಂ ಆರೋಹಣಮೆಂಬುದಕ್ಕುಂ: **ಅಭಿಧಾವ,** ೧. ೧೦. ೧೪)

**ಸೋಪಾನಂಗಟ್ಟು** – ಮೆಟ್ಟಿಲನ್ನು ಹಾಕು (ದಿವಕ್ಕೆ ಪೋಪ ಬಟ್ಟೆಗೆ ಸೋಪಾನಂ ಗಟ್ಟಿದಂತೆ ತೆಱತೆಱದಿಂ ನೆಗೆದೊಗೆವ ಪೊಗೆಯಂ ಕಂಡು: **ಪಂಚತಂತ್ರ,** ೧೮೯ ವ)

**ಸೋಪಾಲಂಭ** – ನಿಂದೆಯಿಂದ ಕೂಡಿರುವ (ಎಂದಿವು ಮೊದಲಾಗಿ ಸೋನ್ಮಾದ ಸಪ್ರಸಾದ ಸನಿರ್ವೇದ ಸೋಪಾಲಂಭ .. .. ಎನಿಸಿ: **ಕಾದಂಬ,** ೮. ೫೧ ವ)

**ಸೋಮ** – ಚಂದ್ರ, ಶಿವ (ಶಿವಕಥೆವೇಳ್ವ ಶಂಕರಪುರಾಣಮಂ ಆಲಿಪ .. .. ಮಹೇಶನನರ್ಚಿಪ ಸೋಮನಾಮಮಂ ಸವಿನುಡಿಯಿಂದೆ ಬಣ್ಣಿಸುವ ಬರ್ದಿನ ತಾಪಸವರ್ಯರೊಪ್ಪಿದರ್: **ರಾಜಶೇವಿ,** ೧. ೧೩೦)

**ಸೋಮಮಣಿ** – ಚಂದ್ರಕಾಂತಶಿಲೆ (ದಾಮೋದರನಂಗ ಸಂಗದೊಳಾ ಸತಿಯರ್ ಕಾಮಾಮೃತಮಂ ತಳೆದರ್ ಸೋಮಮಣಿಸ್ಥಳಿಗಳೊಸರ್ವವೋಲ್ ಶಶಿರುಚಿಯಿಂ: **ಜಗನ್ನಾವಿ,** ೩. ೭೪)

**ಸೋರ್** – ಜಿನುಗು (ಸೋರ್–ಗಲನೇ: **ಶಬ್ದಮದ,** ಧಾ ೬೦೬); ಸುರಿದು ಹೋಗು (ಸೋರ್ದುದು ಕೊಳಗೊಂಡ ಗರ್ವರಸಂ ಆ ಭರತೇಶ್ವರಚಕ್ರವರ್ತಿಯಾ: **ಆದಿಪು,** ೧೩. ೭೧); ಜೋತಾಡುವ (ಬೇರ್ವಿಡಿದು ಕಾಯ್ತ ಪಲಸು ಎಳನೀರ್ವೊನಲಂ ಕಱೆವ ತೆಂಗು ಪೊಂಬಾಳೆಗಳಿಂ ಸೋರ್ವ ಅಡಕೆಯ ಸಸಿ ಬೆಳಗಂ ಪೆರ್ವಲೆವಳ್ಳಿಗಳೆ ಸೊಗಯಿಕುಂ ಪುರವನದೊಳ್: **ಪಂಪರಾ,** ೧. ೧೧೨)

**ಸೋರೆ** – ಸೋರೆ ಬುರುಡೆ (ಪೊನ್ನ ಲೋಭದಿಂ ಬಾವಿಯಂ ಪೊಕ್ಕು ರಸಮಂ ಸೋರೆಯಿಂ ತೀವಿ ಬೇಟ್ಟನಿತುಮಂ ಮೊಗೆದು ಕೊಟ್ಟೊಡೆ: **ವಡ್ಡಾರಾ,** ಪು ೧೮೭, ಸಾ ೧೩); ಬೆಳವನ ಹಕ್ಕಿ (ಶಕುನಿ ತೊಂಡಿಗಂ ಸೋರೆ ತಿತ್ತಿರೆ ಕೋಕಂ .. .. ರತ್ನಖಗಮಿರ್ಕುಂ ತದ್ವಾಗೌಘದೊಳ್: **ರಾಜಶೇವಿ,** ೫. ೫೯)

**ಸೋರ್ಚು** – ನೂಕು (ಗಜೆಯಿಂ ಸೋರ್ಚಿದರೆನೆ ಕೆಂಗಜೆಯಂಬೆಟ್ಟಟ್ಟೆ ರಾಜಸುತ ಸಂದೋಹಂ ಗಜೆ ಸೋಮಕದೆ ಬೆಳ್ಗೆರಲೆಗೆ ಗಜೆ ಮೂಡಿದ ತೆಱದಿನೋಡಿ ಪೋದತ್ತಾಗಳ್: **ಪಂಪರಾ,** ೩. ೫೬)

**ಸೋರ್ಮುಡಿ** – ಸಡಿಲವಾದ ತಲೆಗೂದಲು (ಬಾಡಿದ ಪೂಮಾಲೆಯೊಡನೆ ಬಬಿಲ್ದ ಸೋರ್ಮುಡಿಯಿಂ ಅಡಿಗಡಿಗೆ ತಡತಡವಪ್ಪ ನಡೆಗಳುಂ ಬೆರಸು ವನದೇವತೆಗಳ್: **ಆದಿಪು,** ೧೧. ೭೦ ವ, ೭೧)

**ಸೋರ್ಮೊಲೆ** – ಜೋತುಬಿದ್ದ ಮೊಲೆ (ಅತಿಭೀತಿಯಾದಪುದು ಸೂಳೆಯ ಸೋರ್ಮೊಲೆಗಂಡು ಭೂಪತೀ: **ಲೀಲಾವತಿ,** ೨. ೧೦೮)

**ಸೋಲ್** – ಪರಾಜಯ ಹೊಂದು (ಸೋಲ್–ಪರಾಜಯೇ: **ಶಬ್ದಮದ,** ಧಾ ೬೫೯); ಮೋಹಗೊಳ್ಳು (ಮನದಳಿಪಿಂ ತಮಾಳಲತಿಕಾಂಗಿಯರಾಟಿಸೆ ಬರ್ದುಗೆಟ್ಟು ಕಾಂಚನ ಲತಿಕಾಂಗಿಯರ್ ಬಯಸೆ ಸೋಲ್ತು .. .. ಸಂದ ನಿನ್ನ ಮುನ್ನಿನ ಚರಿತಂಗಳಂ ನೆನಯದಿರ್: **ಆದಿಪು,** ೨. ೪೬)

**ಸೋಲ** – ಆಸಕ್ತಿ, ಮೋಹ (ಬಳ್ಳಿಯೊಂದಗಣಿತಲೀಲೆ ನೋಟ್ಟಿ ಜನಮಾಳೆಗೆ ಸೋಲಮನುಂಟುಮಾಡುಗುಂ: **ಸುಕುಮಾಚ,** ೧. ೭೨); ಸೋಲುವಿಕೆ (ಕಾಳೆಗದ ಗೆಲ್ಲದ ಸೋಲದ ಮಾತು ನಿನ್ನೊಳಂ ನರನೊಳಮಿರ್ದುದು: **ಪಂಪಭಾ,** ೧೨. ೧೧೮); ಸೋತಾಗ ಕೊಡಬೇಕಾದ ಪಣ (ನೆತ್ತಮನಾಡಿ ಭಾನುಮತಿ ಸೋಲ್ತೊಡೆ ಸೋಲಮನೀವುದೆಂದು ಕಾಡುತ್ತಿರೆ ಲಂಬಣಂ ಪಱಿಯೆ ಮುತ್ತಿನ ಕೇಡನೆ ನೋಡಿ ನೋಡಿ ಬಳ್ಕುತ್ತಿರೆ ಏವಮಿಲ್ಲದೆ ಇವಂ ಆಯ್ದುದೊ ತಪ್ಪದೆ ಪೇಳಿಂ ಎಂಬ ಭೂಪೋತ್ತಮನಂ ಬಿಸುಟ್ಟು ಇರದೆ ನಿಮ್ಮೊಳೆ ಪೊಕ್ಕೊಡೆ ಬೇಡನಲ್ಲನೇ: **ಪಂಪಭಾ,** ೯. ೬೯)

**ಸೋಲಂಬಡೆ** – ಮೋಹಗೊಳಿಸು (ಚುಂಬನಮೊರ್ಮೆಗೊರ್ಮೆ ತನಿವೆರ್ಚುವುದು .. .. ನಾಣ್ನುಡಿಯುಂ ಕಿವಿಗೊರ್ಮೆಗೊರ್ಮೆ ಸೋಲಂಬಡೆಯುತ್ತುಮಿರ್ಪುದು ಅವರ್ಗಳ್ಗವಕಾಶಮದುಂಟೆ ಬೇಟದೊಳ್: **ಚಂದ್ರಪ್ರಪು,** ೬. ೮೪)

**ಸೋಲಕಾರ್ತಿ** – ಮೋಹವನ್ನುಂಟು ಮಾಡುವವಳು (ಸೋಲಕಾರ್ತಿಯರ್ ಕಣ್ಸೋಲಮಂ ಕಾಣ್ಕೆಗೊಟ್ಟು ಮನಮಂ ಮೆಚ್ಚುಗೆಗುಡೆಯುಂ: **ನೇಮಿನಾಪು,** ೫. ೨ ವ)

**ಸೋಲಿಸು** – ಪರಾಜಯಗೊಳಿಸು (ಸೋಲಿಸು–ಅಪಜಯೇ: **ಶಬ್ದಮದ,** ಧಾ ೮೦೭), ಮೋಹಗೊಳಿಸು (ಸೋಗೆಯ ಸುತ್ತಿನೊಳಾಡುವ ಕೇಕಿಯ ಭಂಗಿ ಲೋಕಮಂ ಸೋಲಿಸುಗುಂ: **ಯಶೋಧಚ,** ೩. ೪೧)

**ಸೋಲ್ತುಯಿಸು** – ಪರಾಜಯಗೊಳಿಸು (ಜನರಂಜನಂಗೆ ಚಳಲೋಚನಯುಗಳಂ ಕಾಣಲೊಡನೆ ಸೋಲ್ತುಯಿಸಿದ ಶಾಸನಮಂ ಬರೆದಂತೆ ಕದಂಪಿನ ಮೃಗಮದ ಪತ್ರಭಂಗಮೊಪ್ಪಿದುದವಳಾ: **ಲೀಲಾವತಿ,** ೧೨. ೭೪)

**ಸೋಲ್ವಾಯಿನ** – ಪ್ರೀತಿಯ ಬಾಗಿನ (ಅದಂ ನೋಡಿ ಸಖೀಜನಕೆ ಸಂತಸದ ಸೋಲ್ವಾಯಿನಮುಮಂ .. .. ಬೀಱುತ್ತುಂ: **ಲೀಲಾವತಿ,** ೧೧. ೫೭ ವ)

**ಸೋವಡಿ** – ಮುಗ್ಧ (ರುಕ್ಮಿಣಿಯ ಮುಂದೆನ್ನೊಂದು ಸೌಭಾಗ್ಯಮಂ ಪರಿಹಾಸಂಗೆಯ್ಯುತಿರ್ಪ ನಾರದನ ಮಾತಂ ಪ್ರೀತಿಯಿಂ ಕೇಳ್ದಿಳಾವರ ನೀಂ ಸೋವಡಿಯಂತಿರೆ ನುಡಿವಯ್: **ಜಗನ್ನಾಥವಿ,** ೧೨. ೧೦೩)

**ಸೋವಡಿಕೆ** – ನಿವೇದನೆ (ವಸುಷೇಣನೆ ಪತಿಯೆನಗೆಂದು ಸುನಂದೆ ಸಿಡಿಲ್ವೆ ಮಾಡ ಸೋವಡಿಕೆಯನೀ ಬಸಿವ ತಲೆಗೆನುತುಂ ಈಡಾಡಿಸಿದಂ ಮಾಯಾವಿ ಪತಿಯ ಮಾಯದ ಶಿರಮಂ; **ಅನಂತಪು,** ೧೨. ೩)

**ಸೋವತ** – ಆಹಾರ, ಬಲಿ (ಲವಣಾರ್ಣವಮಂ ದಿವಮಂ ನೆಲಕ್ಕೆ ತಂದು .. .. ಜವನ ಬಾರಿಗೆ ಸೋವತಮಾಗಿರೆ ಮಾಟ್ಪೆಂ: **ಪಂಪರಾ,** ೯. ೧೩೩)

**ಸೋವತಂ ಮಾಡು** – ಬಲಿಗೊಡು (ಪಿಂಗಳಕಂ ಅನೇಕ ಕರಿಣೀಕಳಭವ್ರಾತಮಂ ಅಸಂಖ್ಯಾತಮಂ ಕೊಂದು ಕಾಕಾನೀಕ ಜಂಬುಕನಿಕುರುಂಬಕ್ಕೆ ಸೋವತಂ ಮಾಡುವುದುಂ: **ಪಂಚತಂತ್ರ,** ೧೧೪ ವ)

**ಸೋವಳಿ** – ಅಟ್ಟುವಿಕೆ (ನೆಲನಂ ನಿಱೆಗೆಯಂ ನಡೆವೊಂದು ಪದಮುಮಂ ಸೋವಳಿ ಮೇವಳಿ ಬಿಸವಳಿಯಂ ಬಲಮಂ .. .. ಶಕುನಮಂ ನಿಱೆಪಂತೆ ನಿಱೆಸುವೆಂ ಪಂದಿಯಂ: **ಪಂಪಭಾ,** ೫. ೩೬)

**ಸೋವು** – ಅಟ್ಟು (ವದನಾಬ್ಜದ ಕಂಪಂ ಆಳ್ದು ಉಣಲ್ ಬಳಸುವ ತುಂಬಿಯಂ ಪಿಡಿದ ನೆಯ್ದಿಲೊಳ್ ಒಯ್ಯನೆ ಸೋವುತುಂ: **ಪಂಪಭಾ,** ೨. ೧೭)

**ಸೌಂದರ್ಯಯೋನಿ** – ಚೆಲುವಿನ ಹುಟ್ಟು ತಾಣ (ಸಕಳಸಂದರ್ಯಯೋನಿಯುಂ ರಾಜಧಾನಿಯುಮೆನಿಸಿ .. .. ಒಉರಮೆಸೆದಿರ್ಪುದು: **ಪುಷ್ಪದಂಪು,** ೨. ೬೧ ವ)

**ಸೌಂದರ್ಯವೃತ್ತಿ** – ಚೆಲುವಿನ ಗುಣ (ಇಂತನೇಕ ಜನಮನೋಹಾರಿ ಸೌಂದರ್ಯವೃತ್ತಿಗವಕಾಶಮದ ವಿವಿಧ[ರದೇಸದಿಂದೊಳಗೆ: **ಪುಷ್ಪದಂಪು,** ೨. ೬೧ ವ)

**ಸೌದರ್ಯ** – ಸೋದರಭಾವ (ಸೌದರ್ಯಮಂ ಕಾದ ಪೆಂಪೀ ವನಧಿದ್ವೀಪಾಂತರಾಳಕ್ಷಿತಿಯೊಳೆಸೆಗುಂ ಆಕ್ಷೇಪಮಂ ಮಾಣ: **ಆದಿಪು,** ೧೪. ೮೪)

**ಸೌದಾಮಿನಿ** – ಮಿಂಚು (ಸೌದಾಮಿನಿವೊಲ್ ಭೋಂಕೆನೆ ಸುರಕಾಮಿನಿ ರಂಗದೊಳ್ ಅದೃಶ್ಯೆಯಪ್ಪುದುಮಾಗಳ್: **ಆದಿಪು,** ೯. ೪೧)

**ಸೌಧ** – ಉಪ್ಪರಿಗೆ ಮನೆ (ಗಗನಾಂಗಣ ಸೌಧಾಗ್ರದೊಳ್ ಒಗುಮಿಗೆಯುಂ ರಾಜಿಸಿರ್ಪ ಮಣಿಕಲಶಂಬೋಲ್: **ಕಾದಂಸಂ,** ೮. ೨೫)

**ಸೌಧರ್ಮ** – [ಜೈನ] ಹದಿನಾರು ಸ್ವರ್ಗಗಳಲ್ಲಿ ಒಂದು (ಸೌಧರ್ಮ ಈಶಾನ ಸನತ್ಕುಮಾರ ಮಾಹೇಂದ್ರ ಬ್ರಹ್ಮ ಬ್ರಹ್ಮೋತ್ತರ ಲಾಂತವ ಕಾಪಿಷ್ಠ ಶುಕ್ರ ಮಹಾಶುಕ್ರ ಶತಾರ ಸಹಸ್ರಾರ ಆನತ ಪ್ರಾಣತ ಅರಣ್ಯ ಅಚ್ಯುತಮೆಂಬ ಪದಿನಾಱುಂ ಕಲ್ಪಂಗಳೊಳಂ: **ವಡ್ಡಾರಾ,** ಪು ೯೭, ಸಾ ೨೬)

**ಸೌಧರ್ಮಕಲ್ಪ** – ಸೌಧರ್ಮ (ದಿವ್ಯಕಾಂತಾ ಕಟಾಕ್ಷ ಧವಲದೀಧಿತಿ ಸುಧಾಸೌಧಮಪ್ಪ ಸೌಧರ್ಮಕಲ್ಪದ ಶ್ರೀನಿಳಯವಿಮಾನದೊಳ್: **ನೇಮಿನಾಪು,** ೪. ೮)

**ಸೌಧರ್ಮಿಕೆ** – ಸಜ್ಜನಿಕೆ (ಕೂರ್ಮೆಯನೊಕ್ಕು .. .. ಸೌಧರ್ಮಿಕೆಗೆಟ್ಟು ದೂಱೆ ಪೆಱರೆಂದುದುಗೇಳ್ವುದುಂ ಅಗ್ರಜಂಗಿದೇಂ ಧರ್ಮಮೆ: **ನೇಮಿನಾಪು,** ೫. ೧೧)

**ಸೌಧರ್ಮೇಂದ್ರ** – [ಜೈನ] ಹದಿನಾರು ಮಂದಿ ಇಂದ್ರರಲ್ಲಿ ಒಬ್ಬ (ಹರಿ ಶಿಖಿ ಯಮ ನಿರುತಿ ಜಳಾಕರಪತಿ ಮರುತ್ ಐಳಬಿಳ ಹರಾಹಿಪ ಶಶಿ ಭಾಸ್ಕರರರಂ ಸೌಧರ್ಮೇಂದ್ರಂ ನಿರವಿಸಿದಂ ದಶದಿಶಾಳಿಯೊಳ್ ಬಲಸಹಿತಂ: **ಶಾಂತೀಶ್ವಪು,** ೧೪. ೧೯೯;

**ಸೌಧಾಳಿ** – ಉಪ್ಪರಿಗೆ ಮನೆಗಳ ಸಾಲು (ಓಳಿದೋರಣಮಾಯ್ತು ಹಾರದ ಪಚ್ಚೆಸಾರದ ಮಾಲೆ ಸೌಧಾಳಿಯ ಒಳ್ಗುಡಿಯಾಯ್ತು ಚೀನದ ಸೂಯಿಯಾಣದ ಬಟ್ಟೆ: **ಪಂಪಭಾ,** ೧೪. ೧೫)

**ಸೌನಂದಕ** – [ಜೈನ] ಚಕ್ರವರ್ತಿಯ ಹದಿನಾಲ್ಕು ಅಜೀವರತ್ನಗಳಲ್ಲಿ ಒಂದಾದ ಖಡ್ಗದ ಹೆಸರು (ಸುದರ್ಶನಮೆಂಬ ಚಕ್ರರತ್ನಮಂ ಪೂಜಿಸಿಂಬಟೆಯಂ .. .. ಸೌನಂದಕನೆಂಬ ಖಡ್ಗರತ್ನಮುಂ ವಿಜಯಾರ್ಧಾಚಳ ಮಹಾಗುಹಾಗಹ್ವರಮುಖ ವಜ್ರಕವಾಟಪುಟ ವಿಘಟನಪಟುವಪ್ಪ ಚಂಡವೇಗಮೆಂಬ ದಂಡರತ್ನಮುಂ: **ಆದಿಪು,** ೧೧. ೩. ವ)

**ಸೌಪರ್ಣ** – ಗರುಡ (ಅದಿರದೆ ಇದಿರೇಱುವ ಎಕ್ಕಲವಂದಿಯಂ ಕಂಡು ಕಿಟಿಕಾದ್ರವೇಯ ಸೌಪರ್ಣಂ: **ಲೀಲಾವತಿ,** ೬. ೧೪ ವ)

**ಸೌಪರ್ಣವಾಹ** – ಗರುಡವಾಹನ, ವಿಷ್ಣು (ಪಾಪದ್ವಿಪಾಳಿದಳನ ಉಗ್ರಮೃಗಾಧಿಪಾಯ ಸೌಪರ್ಣವಾಹವಿನುತಾಯ ನಮಃಶಿವಾಯ: **ಉದ್ಭಟಕಾ,** ೧೨. ೧೦೭)

**ಸೌಭ್ರಾತ್ರ** – ಸೋದರತ್ವ (ಎಂದು ಸೌಭ್ರಾತ್ರ ಸುಭಗ ಸಹಜ ಸ್ನೇಹದಿಂ ನಿಜಹೃದಯಮುಮಂ ಮಱಸಿ ತಮ್ಮನ ಮನಮನಱೆದೊಡೆ ನೋಗುಂ ಎಂದು: **ನೇಮಿನಾಪು,** ೫. ೫ ವ)

**ಸೌಮನಸ** – ದೇವತೆ (ಅನುಪಮ ಮಣಿಕನಕಮಯಂ ವಿನಿಹಿತ ಸೌಮನಸ ಭದ್ರಶಾಲಜ್ಯೋತಿರ್ವಿನುತಂ ಕರುಮಾಡಂ ಮೇರುನಗಮಿದೆಂಬ ಪೋಲ್ವೆಯಂ ಪುಟ್ಟಿಸುಗುಂ: **ಸುಕುಮಾಚ,** ೧೦. ೪೬); [ಜೈನ] ಸುಮೇರು ಪರ್ವತದ ಮೇಲಿರುವ ಒಂದು ವನ (ಮಂದರಶೈಲಮಂ ದಿವಿಜನಾಯಕನೆಯ್ತರೆ ಭದ್ರಶಾಲದಿಂ ಸಂಧಿಸಿ ನಿಂದ ನಂದನದಿಂದೊಪ್ಪುವ ಸೌಮನಸಾಖ್ಯದಿಂ ಮನೋನಂದನಮಪ್ಪ ಪಾಂಡುಕದಿನಾ ಗಿರಿರಾಜವಿಲಾಸಂ ಅಟ್ಟಿಯಂ ತಂದುದು ಕಾಣ್ಕೆಯಂ ತನಗೆ ತರ್ಪವೊಲ್ ಅಂತದನಿಂದ್ರನೆಯ್ದಿದಂ: **ಶಾಂತಿಪು,** ೫. ೨)

**ಸೌಮ್ಯ** – ಶಾಂತಸ್ವಭಾವದವನು (ಸಾಂಧ್ಯಕಳಾಳಂಬಾಸಿತ ಮೇಟಕೂಟಮೊ ಕರಂ ಸೌಮ್ಯಂ ದಲ್ ಈ ಭೂಪಂ: **ಕರ್ಣನೇಮಿ,** ೧೧. ೫)

**ಸೌರ** – ಸೂರ್ಯನಿಗೆ ಸಂಬಂಧಿಸಿದುದು (ನಡೆದುದು ಸೌರಂ ರಥಂ ಉತ್ತರಾಯಣಕ್ರಮದಿಂದಂ: **ಚಂದ್ರಪ್ರಪು,** ೭. ೬೬) ಸೂರ್ಯಾರಾಧಕ ಪಂಗಡದವನು (ಸೌರಂ ಸೂರ್ಯನನರ್ಚಿಪೊಡೆ .. .. ಆರಾಧಿಪನೊಂದು ಮಣೆಗೆ ತಂದನಿಬರುಮಂ: **ಸಮಯಪ,** ೮. ೧೬೩)

**ಸೌರಂಭ** – ಉತ್ಸಾಹ (ವಿಪ್ರೋತ್ತಮರಂ ಬರಿಸಿ ಸರ್ವ ಸೌರಂಭವೆಸೆಯಲ್ ನಿಜಾಲಯದಿಂ .. .. ಪೊಱಮಟ್ಟು: **ತ್ರಿಷಷ್ಟಿಪು,** ೧೭. ೯೪ ವ)

**ಸೌರಭ** – ಸುವಾಸನೆ (ನಿಡುಸುಯ್ದು ನಲ್ಲಳ ಮುಖಾಂಬುಜಸೌರಭದೊಳ್ ಪೊದಲ್ದು ಅದೇಂ ಮಗಮಗಿಸಿತ್ತೊ ಕತ್ತುರಿಯ ಕಪ್ಪುರದೊಂದು ಕದಂಬದಂಬುಲಂ: **ಪಂಪಭಾ,** ೪. ೧೦೭)

**ಸೌರಭೇಯ** – ಎತ್ತು (ಶೂರ ಸೌರಭೇಯಂಗಳದೊಂದು ದಿವಸಂ ಒಂದೊಂದಱ ಕೆಲಪಂ ಕೇಳ್ದು ಕೆಲರ್ದು: **ನೇಮಿನಾಪು,** ೪. ೧೨೩ ವ)

**ಸೌರಭ್ಯ** – ಸುವಾಸನೆ (ತನುಲತೆ ಸೌರಭ್ಯಮಂ ಬೀಱೆ: **ಜಗನ್ನಾವಿ,** ೨. ೭೮)

**ಸೌರಸಂಹಿತೆ** – ಸೌರಾರಾಧನೆಯ ವಿಧಿಗಳುಳ್ಳ ಗ್ರಂಥ (ಸೌರಾರಾಧನೆಯಂ ಕ್ರೌಂಚಾರಿಗೆ ತಿಳಿವಂತು ಸೌರಸಂಹಿತೆಯಂ ವಿಸ್ತಾರದೆ ಪೇೞ್ದಂ .. .. ಗೌರಿಪತಿ: **ಸಮಯಪ,** ೮. ೧೧೫)

**ಸೌರಾರಾಧನೆ** – ಸೂರ್ಯನ ಆರಾದನೆ (ಸೌರಾರಾಧನೆಯಂ ಕ್ರೌಂಚಾರಿಗೆ ತಿಳಿವಂತು ಸೌರಸಂಹಿತೆಯಂ ವಿಸ್ತಾರದೆ ಪೇೞ್ದಂ .. .. ಗೌರಿಪತಿ: **ಸಮಯಪ,** ೮. ೧೧೫)

**ಸೌವರ್ಣಸೌಧ** – ಬಂಗಾರದ ಮನೆ (ದ್ವಿತೀಯ ಪ್ರಾಕಾರದೊಳಗೆ ಪಾವಕ ಪುಜ್ಯಜನ ಪವಮಾನ ಪಶುಪತಿಗಳ ವಿನೋದವಿಹಾರಯೋಗ್ಯಂಗಳಪ್ಪ ನಾಲ್ಕುಂ ಕೋಣ್ಗಳ ಸೌವರ್ಣಸೌಧಂಗಳೊಳಂ: **ಶಾಂತೀಶ್ವಪು,** ೧೬. ೩೧ ವ)

**ಸೌವಸ್ತಿಕ** – ಪುರೋಹಿತ (ಒಸೆದಾಶೀರ್ವಾದಮಂ ಸಾದರದೊಳೆ ಕುಡೆ ಸೌವಸ್ತಿಕಂ: **ವರ್ಧಮಾಪು,** ೮. ೧೦೫)

**ಸೌವಿದಲ್ಲ** – ಅಂತಃಪುರದ ಸೇವಕ (ಸೌವಿದಲ್ಲಂ ಬೆರಸು ಅತ್ತಲ್ ಪೋದಳ್: **ಕಾದಂಸಂ,** ೫. ೭)

**ಸೌಷ್ಠವ** – ಸೊಗಸು (ಪೇೞ್ದಂ ಪಂಪನತ್ಯಂತ ಸೌಷ್ಠವದಿಂದಾದಿಪುರಾಣಮಂ: **ಸುಕುಮಾಚ,** ೧. ೩೭); ಸಾಮರ್ಥ್ಯ (ಬೆಡಂಗಿಂಗೆ ಪಾಂಗಾದ ದೇಸಿಗಂ ಮಾಸರಿಕೆಗೆಕ್ಕಲಾವಣಮಾದ ಸೌಷ್ಠವಕ್ಕಂ .. .. ಬೆಕ್ಕಸಂಬಟ್ಟು: **ಶಾಂತಿಪು,** ೬. ೫೩ ವ)

**ಸೌಸವ** – ಪರಿಮಳ (ರಮಣೀಯ ರಮಣೀಜನಂ ಬೆರಸು ಪಂಚರತ್ನಂಗಳಿಂ ಕೆದಱೆಸಿ ಸಾಂದಿನ ಸೌಸವದ ಕುಂಕುಮದ ಕತ್ತುರಿಯ ಕದಡಂ ಕದಡಿ: **ಪಂಪಭಾ,** ೫. ೬೦ ವ)

**ಸೌಸ್ಥಿತ್ಯ** – ಸುಸ್ಥಿತಿಯಲ್ಲಿರುವಿಕೆ (ದಿಕ್ಕರಿಗಳ್ .. .. ನಿಷ್ಕಂಪಕರ್ಣಂಗಳಾಗಿರೆ ಗಂಡಸ್ಥಳದಾನಲೀನಮಧುವಂ ತಾಳ್ದಿತ್ತು ಸೌಸ್ಥಿತ್ಯಮಂ: **ಪುಷ್ಪದಂಪು,** ೪. ೨೪)

**ಸೌಹಾರ್ದ** – ಸೌಜನ್ಯ (ಇದು ಭವದಮಳಿನ ಸೌಹಾರ್ದದ ಉದಯಮಲ್ಲದೆ ಮದೀಯ ಮಹಿಮೋನ್ನತಿಯಲ್ತು: **ಶಾಂತಿಪು,** ೪. ೧೦೧); ಗೆಳೆತನ (ಸ್ನೇಹಂ ಅರ್ಜಯಂ ಸಖ್ಯಂ ಸೌಹಾರ್ದಂ ಪ್ರೀತಿ ಮೈತ್ರಿ: **ಅಭಿಧಾವ,** ೨. ೨. ೪)

**ಸೌಳು** – ಉಪ್ಪುಪ್ಪಾದ (ಸೌಳಪ್ಪಭೂಮಿಯನುತ್ತು .. .. ಪಿರಿದುಂ ಪ್ರಯತ್ನಮುಮಂ ಮಾಡಿದೊಡಂ ಕರಿಯ ಭೂಮಿಯ ಬೆಳಸಿನಂತಕ್ಕುಮೆ: **ಧರ್ಮಾಮೃ,** ೭. ೪೩ ವ)

**ಸೌಳನೆ ಸೀಳು** – ಸಳ್ ಎಂದು ಸೀಳುಕ ಬಿಡು (ಇರ್ಬಗಿಯಾಗಿ ಪೋಟ್ಟು ನೀರೇಱಿದ ನಾಳಿಪುಣ್ಣೊಡೆದು ಸೌಳೆನೆ ಸೀಳ್ದುದು ದೋಣಿವೋಪಿನಂ: **ಸುಕುಮಾಚ,** ೫. ೧೬)

**ಸೌಳುವಣ್ಣು** – ಕ್ಷಾರಯುಕ್ತ ಭೂಮಿ (ಸೌಳುವಣ್ಣಿನಲ್ಲಿ ಮೞೆ ಬರುಹವುಂ, ಕುರುಡಂಗೆ ಕನ್ನಡಿಯಂ ತೋರುಹವುಂ, ಮೂರ್ಖನಂ ಬುದ್ಧಿವಂತನೋಲೈಸುಹವುಂ, ಇವಱೋಪಾದಿ: **ಪಂಚತಂತ್ರ,** ೨೦೬, ಶ್ಲೋಕ ೮೭ ಟೀಕೆ)

**ಸ್ಕಂದ** – ಮರ ಕವಲೊಡೆಯುವ ಜಾಗ (ನರ್ತಿಪ ನಟನ ಭುಜಾದಂಡಮೋ ಪೇೞೆಮೆಂಬಂತಿರೆ ಅಮೇಯಸ್ಕಂಧಮುಂ ಸಂಧಿಸೆ: **ಕಾದಂಸಂ,** ೧. ೩೮)

**ಸ್ಕಂಧ** – ಹೆಗಲು (ಐರಾವತಸ್ಕಂಧಗತಂ .. .. ಸೌಧರ್ಮೇಂದ್ರನಂದಾ ಶಚೀವೆರಸು ಮಹೋತ್ಸಾಹದಿಂ ಬಂದನಾಗಳ್: **ಆದಿಪು,** ೭. ೪೩); ಮರದ ಕಾಂಡ (ನಾನಾ ವಿಧಂ ನರ್ತಿಪ ನಟನ ಭುಜಾದಂಡಮೋ ಪೇೞೆಂಬಂತಿರೆ ಅಮೇಯಸ್ಕಂಧಮುಂ ಸಂದಿಸೆ ಜರಠ ಮಹಾಶಾಲ್ಮಲೀವೃಕ್ಷಮಿರ್ಕುಂ: **ಕಾದಂಬ,** ೧. ೧೦೦)

**ಸ್ಕಂಧಾವಾರ** – ಸೈನ್ಯತುಕಡಿ (ಇಂದ್ರಾಯುಧದ ಪಜ್ಜೆವಿಡಿದು ಬಂದು ಬಿಟ್ಟಿರ್ದ ನಿಜಸ್ಕಂಧಾವಾರಮಂ ಕಂಡು: **ಕಾದಂಸಂ,** ೫. ೭೪ ವ); ಸೇನೆಯ ಪಾಳೆಯ (ಧೀರಂ ಉದಾರಂ ಸೌಜನ್ಯಕಂದಾಂಕುರಂ ಸ್ಕಂಧಾವಾರಮಂ ಪೊಕ್ಕು ಮಱುದೆವಸಂ ಮುಂ ನಡೆದು: **ಶಾಂತಿಪು,** ೧೧. ೭೪ ವ); ರಾಜಧಾನಿ

**ಸ್ಕಂಧೋಪನಯ** – ರಾಜನು ಕೈಗೊಳ್ಳಬಹುದಾದ ಹದಿನಾರು ಬಗೆಯ ಸಂಧಿಗಳು: ಕಾಣಿಕೆ ಕೊಟ್ಟು ಶರಣಾಗುವುದು (ನುಡಿದ ದ್ರವ್ಯಮಂ ಕಂದಾಯದೊಳ್ ಕುಡುವುದು ಸ್ಕಂಧೋಪನಯಸಂಧಿಯೆಂಬುದಕ್ಕುಂ: **ಪಂಚತಂತ್ರ,** ೩೦೭ ವ)

**ಸ್ಖಲನ** – ಮುಗ್ಗರಿಸುವಿಕೆ (ಚಕ್ರೇಶ್ವರಂಗೆ ಚಕ್ರರತ್ನಸ್ಖಲನಮಂ ಪತಾಕಿನೀಚಕ್ರಪ್ರಧಾನಪ್ರಭುಗಳಱೆಯೆ ಬಿನ್ನಪಂಗೈದೊಡೆ: **ಆದಿಪು,** ೧೪. ೬ ವ)

**ಸ್ಖಲಿತಗತಿ** – ತತ್ತರಿಸುವ ನಡಿಗೆಯ ವ್ಯಕ್ತಿ (ಸ್ಖಲಿತಗತಿ ಲಲಿತಕುಂತಲೆ ವಲಿತನಿಜಗ್ರೀವೆ ಮಗುೞ್ದು ನೋಡಿದಳೊರ್ವಳ್: **ಅಜಿತಪು,** ೯. ೩೮)

**ಸ್ಖಲಿತಚಲನ** – ಸ್ಖಲಿತಗತಿ (ಬಾಲಕನ ಪಿಶಂಗತಲಂ ಬಾಲಕನ ಸ್ಖಲಿತಚಲನವಿನ್ಯಾನದ ಲೀಲಾಲಸಮಂ ಕಾಣದ ದುರ್ಲೀಲಮೆನಿಪ್ಪೊಂದು ಜೀವನಂ ಜೀವನಮೇ: **ಮಲ್ಲಿನಾಪು,** ೩. ೯೬)

**ಸ್ತಂಬ** – ಮುಂಜ (ಶೋಣತೆವೆತ್ತು ಉದಯಿಸಿದುದು ಅತನುರಾಗಪ್ರದ ಲಲಿತಸ್ತಂಬಂ ಆ ಸುಧಾಕರಬಿಂಬಂ: **ಶಾಂತೀಶ್ವಪು,** ೧೧. ೩೨)

**ಸ್ತಂಬಕರಿ** – ಬತ್ತ (ಸ್ತಂಬಕರ್ಯಾದಿ ನಾನಾವಿಧ ಧಾನ್ಯಂಗಳಂ ಪದನಱಿದುಡುಗುವ ಕಣಂ ಮಾಡುವ ಒಕ್ಕುವ ಅಡುಕುವ ಬಯ್ತಿಡುವ ಅಕ್ಕಿ ಮಾಡುವ ವಿವಿಧ ಭಾಜನಂಗಳೊಳ್ ಅಡುವ: **ಆದಿಪು,** ೬. ೭೭ ವ)

**ಸ್ತಂಬೇರಮ** – ಆನೆ (ಸೊಗಯಿಸಿರ್ದ ಸೋಪಾನಪಙ್ತಿ ಮಾರ್ಗಂಗಳೊಳ್ ನಿಜಸ್ತಂಬೇರಮಘಟಾಟೋಪಂ ಬೆರಸಿಂಬಾಗಿ ಪೋಗೆವೋಗೆ: **ಆದಿಪು,** ೭. ೫೭ ವ)

**ಸ್ತಂಭ** – ಕಂಬ (ಸಾತ್ವಿಕಭಾವಸಂತತಿಗಳಂತಸ್ತಂಭ ಶೋಭಾನ್ವಿತಂ .. .. ಮೆಱೆದತ್ತು ಉದ್ವಾಹಗೇಹಾಂತರಂ: **ತ್ರಿಷಷ್ಟಿಪು,** ૩૫. ೧೮); ಆಧಾರ (ಸುರಿಯೆ ಚತುಃಕುಂಭಂಗಳ್ ಭೂಭುವನಸ್ತಂಭಂ ಮಜ್ಜನಮನೆಯ್ದೆ ನಿರ್ವರ್ತಿಸಿದಂ; ಆದಿಪು, ೮. ೭೧)

**ಸ್ತಂಭಕ** – ಪ್ರತಿಬಂಧಿಸುವ (ಮನೋವೈಕಲ್ಯ ರೋಮಾಂಚಕ ಸ್ತಂಭಕ ಕಂಪ .. .. ಮೂರ್ಛಾದಿ ನಾನಾವಿಕಾರಂಗಳೊಡನೆ ತೋಱುವುದುಂ: **ಪಂಪಭಾ,** ೪. ೫೯ ವ)

**ಸ್ತಂಭಗಹನ** – ನಾನಾ ಮರಗಿಡಸಸ್ಯಗಳಿಂದ ತುಂಬಿರುವ ಭೂಪ್ರದೇಶ (ಅನೇಕ ತರುನಿಕರಪರಿವೃತಮುಂ ತೃಣಪಟಲ ಪ್ರಾವೃತಮುಂ ಅಪ್ಪುದು ಸ್ತಂಭಗಹನಮೆಂಬುದಕ್ಕುಂ: **ಪಂಚತಂತ್ರ,** ೨೯೭ ವ)

**ಸ್ತಂಭನಾಕ್ಷರ** – ಶತ್ರುವನ್ನು ಪ್ರತಿಬಂಧಿಸುವ ಮಂತ್ರಾಕ್ಷರ (ವಿಪಕ್ಷ ಶರಾಸಾರ ಮೋಕ್ಷ ಹೂಂಕಾರ ಸ್ತಂಭಾಕ್ಷರಸ್ತಂಭಿತ ಹೃದಯರಾಗಿ .. .. ನಿಮ್ಮ ಮಗೆದ ಕಾರ್ಯಮಂ ಬಗೆಯಿಂ: **ಆದಿಪು,** ೧೪. ೮೪ ವ)

**ಸ್ತಂಭೇರಮ** – ಆನೆ (ನಭಮೆಂಬ ಮದಸ್ತಂಭೇರಮಮಂ ಆಗಳ್ ಸಿಬ್ಬಂಬೊಯ್ದವೊಲ್ ಅಡರೆ ತಿಱುಗಿದುವು ತಾರಗೆಗಳ್: **ಪಂಪರಾ,** ೧೧. ೧೮೩)

**ಸ್ತನ** – ಮೊಲೆ (ತನುಜಂ ತಣಿಯುಂಡು ಬಳೆವೊಡೀ ಪೀನಘನಸ್ತನಮೆ ಪಯೋಧರಂ: **ಪುಷ್ಪದಂಪು,** ३. ೯೨)

**ಸ್ತನಂಧಯ** – ಮೊಲೆಕುಡಿಯುವ ಶಿಶು, ಮಗು (ಎನ್ನ ಬಯಕೆಯಪ್ಪುದು ಸಂಧ್ಯಾಸ್ತನಂದಯಸಮಾಗಮಸಮಾನಂ: **ಆದಿಪು,** ३. ४३ ವ)

**ಸ್ತನಯಿತ್ನು** – ಮೋಡ (ಸ್ತನಯಿತ್ನು ವಾರಿವಾಹಂ ಘನಾಘನಂ ಧೂಮಯೋನಿ ಮೇಘಂ ಜಲದಂ ಘನಂ ಅಂಬುಧರಂ ಸೌದಾಮಿನಿ ವಿಷಂ ಅಭ್ರಂ ಬಳಾಹಕಂ ಜೀಮೂತಂ: **ಅಭಿಧಾವ,** ೧. ೧. ೫೮)

**ಸ್ತನಿತ** – ಗುಡುಗು (ಅಂಭೋಧರಸ್ತನಿತ ಬಹುಳಸ್ನಿಗ್ಧಂಗಳಪ್ಪ ಮದಸ್ತಂಭೇರಮಬೃಂಹಿತಗಳಿಂದಂ: **ಆದಿಪು,** ೧३. ೪೨ ವ); [ಜೈನ] ಹತ್ತು ಬಗೆಯ ಭವನಾಮರರಲ್ಲಿ ಒಂದು (ಅಲ್ಲಿಯ ಸುರ ನಾಗ ವಿದ್ಯುತ್ ಸುಪರ್ಣ ಅಗ್ನಿವಾತ ಸ್ತನಿತ ಉದಧಿ ದ್ವೀಪ ದಿಕ್ಕುಮಾರರೆಂದು ಭವನಾಮರರ್ ದಶವಿಕಲ್ಪಮಪ್ಪರ್: **ಸುಕುಮಾಚ,** ೧೧. ೪೧ ವ)

**ಸ್ತನ್ಯ** – ಮೊಲೆ ಹಾಲು (ಜನನೀಸ್ತನ್ಯಮನುಂಡೆನಾಂ ಬಟಿಕೆ ನೀಂ: **ಗದಾಯು,** ೫. ೭)

**ಸ್ತಬಕ** – ಗೊಂಚಲು (ವನಕುಸುಮಸ್ತಬಕದ ನೆಟಿಲ್ ಇನಿಸಚ್ಚಾಂಬುವಿನೊಳೆಸೆಯೆ ಮಧುಕರಮದು ಭೋಂಕೆನೆ ಪಾಯ್ದು ಎಱಂಕೆ ನಾಂದೊಡೆ ಜಿನುಂಗಿ ನೆಲೆಸಿದುದು ವಿಕಚಕನಕಾಬ್ಜಿನಿಯೊಳ್: **ಆದಿಪು,** ೧೧. ೬೨); ಸಮೂಹ (ಸೌಮಿತ್ರಿ .. .. ಬಂದಂ ವಿಮಾನಗಭಸ್ತಿಸ್ತಬಕಂ ಪಳಂಚಲೆವಿನಂ ಜ್ವಾಲಾಸಹಸ್ರಂಗಳಂ: **ಪಂಪರಾ,** ೧೨. ೯೪)

**ಸ್ತಬ್ಧ** – ಚಲನೆಯಿಲ್ಲದ (ಆಕೆ .. .. ವಿಸ್ಮೃತೆಯಾದಂತೆಯುಂ ವಿಸ್ಮಯ ಸ್ತಬ್ಧದೃಷ್ಟಿಯಾಗಿ: **ಕಾದಂಸಂ,** ೬. ೧೮ ವ); ಕಠಿಣ (ತನು ಮೃದು ಕುಚಂ ಸ್ತಬ್ಧಂ ಶೀಲಂ ಕರಂ ರುಜು ಪುಷ್ಪಕೇತನನಿಭಕಚೋದ್ಬಂಧಂ .. .. ಎಂಬ ಪೆಂಪಿನ ತನೂಜೆಯಂ ಕೊಟ್ಟಂ ಶಾಂತೀಶ್ವರಂಗೆ ನಭಶ್ಚರಂ: **ಶಾಂತಿಪು,** ೧೧. ೬೯)

**ಸ್ತವ** – ಸ್ತುತಿ, ಹೊಗಳಿಕೆ (ವರವಂದಿಮಾಗಧ ಸ್ತವರವಂ ಉನ್ಮೆ ಬಂದಣ ಎಸೆವ ಓಲಗಶಾಲೆಗೆ ಇಳಾಧಿನಾಯಕಂ: **ರಾಜಶೇವಿ,** ೧೨. ४೧)

**ಸ್ತವನೀಯ** – ಶ್ಲಾಘ್ಯವಾದ (ಕವಿತಾಪ್ರೌಢಿಯೊಳಬ್ಜಸಂಭವನನೆ ಕರ್ತಾರಂ ಕ್ರಿಯಾಕೌಶಲಂ ಸ್ತವನೀಯಂ .. .. ವಿಚಿತ್ರತರವಿದ್ಯಾವೇಶವಂ ಕೇಶವಂ: **ಶಬ್ದಮದ,** ೨೬४)

**ಸ್ತಿಮಿತ** – ಕೋಮಲವಾದ (ಉಡ್ಡೀನಶ್ರಮದೊಳೊಗೆದ ರೋಮಾಂಚಮಂ ಶೀತವಾತಸ್ತಿಮಿತ ಉಪಸ್ಪರ್ಶ ರೋಮಾಂಚದೊಳೆ ಬೆರಸಿದಳ್: **ನೇಮಿನಾಪು,** ३. ೨೨)

**ಸ್ತಿಮಿತಗಾತ್ರೆ** – ನಿಶ್ಚೇಷ್ಟಿತಳಾದವಳು (ಆಕ್ರಾಂತ ಚಿಂತಾಭರಸ್ತಿಮಿತ ಗಾತ್ರೆಯುಂ .. .. ಆಗಿರ್ಪಿನಂ: **ಚಂದ್ರಪ್ರಪು,** ३. ೫೦ ವ)

**ಸ್ತಿಮಿತತಾರಕ** – ಕಣ್ಣುಗಳನ್ನು ಒಂದೇ ಕಡೆ ನಟ್ಟವನು (ನಿಶ್ಚಳಪಕ್ಷ್ಮಂ ಸ್ತಿಮಿತತಾರಕಂ ಭುಜಬಲಿ ಕಣ್ಣೊಳೆ ತವೆ ಪೀರ್ವವೊಲೇ ನಿಶ್ಚಳತನು ನಡೆ ನೋಡೆ ಭರತರಾಜಂ ಸೋಲ್ತಂ: **ಆದಿಪು,** ೧४. ೧೦೫)

**ಸ್ತಿಮಿತೇಕ್ಷಣ** – ಸ್ತಿಮಿತತಾರಕ (ಸ್ತಿಮಿತೇಕ್ಷಣವಭ್ರೂಭಂಗಂ ಅನಾಪಾಂಗನವಲೋಕನಂ ಸುಶ್ಲಿಷ್ಟೋತ್ತಮದಶನಚ್ಛದ ಮಾನಸಮಮರ್ದುದು ಯೋಗಪ್ರಯೋಗದೊಳ್ ಮುನಿಪತಿಯಾ: **ಆದಿಪು,** ೯. ೮೭)

**ಸ್ತುತಿ** – ಹೊಗಳಿಕೆ (ಸ್ತುತಿನಿಂದೆಗಳಿಂ ಸವಿವಕ್ಷಿತಗುಣದೊಳ್ ಸದೃಶಮಾಗಿ ಪೇೞ್ವುದು ಪೆಱತಂ ನುತ ಸದೃಶಯೋಗಿತಾಲಂಕೃತಿಲಕ್ಷಣಮಕ್ಕುಂ: **ಕವಿರಾಮಾ,** ३. ೯೫)

**ಸ್ತುತಿಪಾಠಕ** – ಹೊಗಳುಭಟ್ಟ (ವೈತಾಳಿಕ ಪ್ರಬೋಧಕ ಸೂತ ಸ್ತುತಿಪಾಠಕಾಖ್ಯೆ ವಂದಿಯೊಳಕ್ಕುಂ: **ಅಭಿಧಾವ,** ೧. ೧೧. ೭೮)

**ಸ್ತುತ್ಯ** – ಹೊಗಳಿಕೆಗರ್ಹವಾದ (ಸ್ತುತ್ಯರೊಳಾರ್ ಶ್ರೋತ್ರಭಾವಮಂ ತಾಳ್ದಿದವರ್: **ಚಂದ್ರಪ್ರಪು,** ೭. ೬)

**ಸ್ತೂಪಿತ** – ರಾಶಿ ಹಾಕಿದ (ಅನ್ಯೋನ್ಯರ್ವೀಶ್ವರ ವ್ರಾತದೂತಕುಳ ಸ್ತೂಪಿತರತ್ನರುಕ್ಪಟಳಿತಂ .. .. ರಾಜಗೇಹಾಜಿರಂ: **ಚಂದ್ರಪ್ರಪು,** ೧. ೧೫೧)

**ಸ್ತೇನ** – ಕಳ್ಳ (ಪರಿಪಂಥಿ ಚೋರಕಂ ತಸ್ಕರಂ ಮಲಿಮ್ಲುಚಂ ಎನಿಪ್ಪನಕ್ಕುಂ ಸ್ತೇನಂ: **ಅಭಿಧಾವ,** ೧. ೧೧. ೮೧)

**ಸ್ತೇನಪ್ರಯೋಗ** – [ಜೈನ] ಅಸ್ತೇಯವ್ರತದ ಅತಿಚಾರ, ಕಳವಿಗೆ ಪ್ರೇರಿಸುವುದು (ಹೀನಾಧಿಕ ವಿನಿಮಾನ ಸ್ತೇನಾಹೃತ ದಾನಸದೃಶ ಮಿಶ್ರವಿಲೋಪ ಸ್ತೇನಪ್ರಯೋಗಮೆಂದಿವು ತಾನಸ್ತೇಯ ವ್ರತಕ್ಕತಿಕ್ರಮಮಕ್ಕುಂ: **ಸುಕುಮಾಚ,** ೬. ೧೫)

**ಸ್ತೇಯ** – ಕಳ್ಳತನ (ವಿಕಲಮತಿಯಾದ ಮೃದುಮತಿ ಸ್ತೇಯಮೆ ತನಗೆ ಜೀವನೋಪಾಯಮಾಗೆ .. .. ನೆಗಟುತ್ತುಂ: **ಪಂಪರಾ,** ೧೫. ४೭ ವ)

**ಸ್ತೇಯಾನಂದ** – [ಜೈನ] ನಾಲ್ಕು ಬಗೆಯ ರೌದ್ರಧ್ಯಾನಗಳಲ್ಲಿ ಒಂದು, ಕಳ್ಳತನ ಮಾಡುವ ಆಲೋಚನೆಯಲ್ಲಿ ಪಡೆಯುವ ಆನಂದ (ದ್ವಿತೀಯ ರೌದ್ರಧ್ಯಾನಂ ಬಲ್ಲಾಳ್ತನದೊಳಕ್ಕೆ ಮೇಣ್ ತೆಱಪಂ ಪಾರ್ದಕ್ಕೆ ಅಪಹರಣದೊಳಪ್ಪ ಸಂಕಲ್ಪಾಧ್ಯವಸಾನಂ ಸ್ತೇಯಾನಂದಮೆಂಬುದಕ್ಕುಂ: **ಅಜಿತಪು,** ೮. ೨೮ ವ), ನೋಡಿ 'ರೌದ್ರ[ಧ್ಯಾನ]'

**ಸ್ತೋಕ** – ಅಲ್ಪ ಕಾಲ ಉಳಿಯುವ (ಮಾನಿಸರೊಳ್ಪುಂ ಬಾೞುಮದೇಂ .. .. ದಿನಮದೇಂ ಸ್ತೋಕಸುಖಂ ಅದೇನಧ್ರುವಮೋ: **ಶಾಂತಿಪು,** ೯. ೧೦೨); [ಜೈನ] ಕಾಲ ಅಳೆಯುವ ಪರಿಮಾಣ, ಏಳು ಉಚ್ಛ್ವಾಸಗಳ ಅವಧಿ (ಅದು ಸಮಯ ಅವಲಿ ಕೋಚ್ಛ್ವಾಸ ಸ್ತೋಕ ನಿಮೇಷ ನಾಡಿಕಾ ಮುಹೂರ್ತ ದಿವಸ ಪಕ್ಷ ಮಾಸ ಋತು ಅಯನ ಸಂವತ್ಸರಾದಿ ಗಣನಾಕ್ರಮದಿಂದಂ ಪೆರ್ಚಿದೆಣಿಕೆಯೊಳ್ ಕೂಡಿದುದು: **ಆದಿಪು,** ೬. ೬೮ ವ)

**ಸ್ತೋಭ** – ತಡೆ, ಸ್ತಬ್ಧಗೊಳ್ಳುವಿಕೆ (ಆಗಳ್ ಆಲೋಕನ ಕುತೂಹಳದಿಂ ಮನೋಜರಾಜಾವೇಶಮಂತ್ರದಿಂ ಸ್ತೋಭಗೊಂಡಂತೆ ಪುರಕ್ಷೋಭಮಾಗೆ: **ಸುಕುಮಾಚ,** ೧೧. ೭ ವ)

**ಸ್ತೋಭಂಗೊಳ್** – ಮೈಮರೆ (ಮನಸಿಜನಾವೇಶಮಂತ್ರದಿಂ ಸ್ತೋಭಂಗೊಂಡಂತೆ ಪುರಪುರಂಧ್ರೀಕ್ಷೋಭಮಾಗೆ: **ಆದಿಪು,** ೧೧. ೨೩ ವ)

**ಸ್ತೋಭನಾಕ್ಷರ** – ಎದುರಿಗಿರುವುದನ್ನು ಪ್ರತಿಬಂಧಿಸುವ ಮಂತ್ರ (ವಿಪಕ್ಷವಿಶಿಖಿಮೋಕ್ಷಟಂಕಾರಮನೆ ಜಗದುದಗ್ರ ನಿಜವೀರಗ್ರಹ ಸ್ತೋಬನಾಕ್ಷರಮೆಂದುಂ ಬಗೆದು: **ಆದಿಪು,** ೧೪. ೯೮ ವ)

**ಸ್ತೋಮ** – ಸಮೂಹ (ಮಣಿಕುಟ್ಟಿಮದಿಂ ಮಣಿತೋರಣದಿಂ ಮಣಿಕಳಶದಿಂ ತಮಸ್ತೋಮನಿವಾರಣದೆಡೆಗಳಿಂ ಗೃಹಗ್ರಾಮಣಿಯನಪೇಕ್ಷಿಸವು ನೃಪಕುಮಾರಗೃಹಂಗಳ್: **ಮಲ್ಲಿನಾಪು,** ೨. ೫೭)

**ಸ್ತ್ಯಾನಗೃದ್ಧಿ** – [ಜೈನ] ದರ್ಶನಾವರಣೀಯ ಕರ್ಮದ ಒಂದು ಪ್ರಕಾರ (ಅಂತರ್ಮುಹೂರ್ತದಿಂ ನಿದ್ರಾನಿದ್ರಾಪ್ರಚಲಾಪ್ರಚಲಾ ಸ್ತ್ಯಾನಗೃದ್ಧಿ .. .. ಎಂಬ ಪದಿನಾಱು ಕರ್ಮಪ್ರಕೃತಿಗಳಂ ನಿರವಶೇಷಂ ಕಿಡಿಸಿ: **ಆದಿಪು,** ೧೦. ೧೪ ವ)

**ಸ್ತ್ರೀತ್ವ** – ಹೆಣ್ತನ (ಈ ದುಷ್ಕೃತಮಂ ಸ್ತ್ರೀತ್ವದ ಜಡತ್ವದಿಂದೊಡರಿಸಿದೆಂ: **ಪಂಪರಾ,** ೭. ೧೪)

**ಸ್ತ್ರೀಪ್ರತಿಬದ್ಧ** – ಹೆಣ್ಣಿಗೆ ಸಂಬಂಧಿಸಿದ್ದು (ತಿರ್ಯಗ್ಜಾತಿಗೆಲ್ಲಂ ಇನಿವಿರಿದು ಸ್ತ್ರೀಪ್ರತಿಬದ್ಧಂ ಮುಳಿಸೆಂದೊಡೆ ಮಾನಿಸರ್ ಸಾಮರ್ಥ್ಯಮುಳ್ಳೊಡೆ ಕಿಱಿದಱೊಳ್ ಮಾಣರ್: **ಶಾಂತಿಪು,** ೯. ೧೩ ವ)

**ಸ್ತ್ರೀರೂಪ** – ಹೆಣ್ಣಿನ ಚೆಲುವು (ಸ್ತ್ರೀರೂಪಮೆ ರೂಪಂ ಶೃಂಗಾರಮೆ ರಸಂ: **ಲೀಲಾವತಿ,** ೧೨. ೮)

**ಸ್ತ್ರೀವೇದ** – [ಜೈನ] ಒಂದು ಬಗೆಯ ನೋಕಷಾಯ, ಹೆಣ್ಣಿಗೆ ಗಂಡಿನ ಬಗ್ಗೆ ಮೋಹವುಂಟುಮಾಡುವ ಕರ್ಮ (ಕೌಶಂಬೀಪುರದೊಳ್ ಬಹುಕರ್ಮಿಯೆಂಬ ದೊಂಬನ ಮನೆಯೊಳ್ ಸ್ತ್ರೀವೇದದಿಂ ಬೆಳ್ಗತ್ತೆಯಾಗಿ ಪುಟ್ಟಿ: **ಸುಕುಮಾಚ,** ೫. ೧೨ ವ)

**ಸ್ತ್ರೀಸವನ** – ಹೆಣ್ಣಿನ ಮುಟ್ಟಿನ ನಂತರದ ಸ್ನಾನ (ಸುವಿದಿತಮಿನಿತುದಿನಂ ಸ್ತ್ರೀಸವನಂ ನಿನಗಿಂದು ಕಾಂತೆ ಪುಂಸವನಂ ಮಾಡುವುದೊಂದರ್ಥಾಂತರದಿಂದದವನೀಶಂ ಸರಸವಾಡಿ ಕಾಡುಗುಮೆಂದೋ: **ಪುಷ್ಪದಂಪು,** ೩. ೮೮)

**ಸ್ತ್ರೈಣ** – ಹೆಣ್ಣಿನ ಬಗ್ಗೆ ಅತಿಮೋಹ (ಸ್ತ್ರೈಣದಿಂ ಮುನ್ನುಱಿ ಬನ್ನಂಬೆತ್ತನಂ .. .. ಎನ್ನನೀ ವಿದ್ಯೆಯಿಂದಟ್ಟುಱಿ ಕಟ್ಟಿಟ್ಟಿಲ್ಲಿಗೀಡಾಡಿಸಿ ಖಳನವನೆನ್ನೋಪಳಂ ಕೊಂಡುಪೋದಂ: **ಪುಷ್ಪದಂಪು,** ೬. ೩)

**ಸ್ತ್ರೈಣಸುಖ** – ಹೆಣ್ಣಿನ ಸುಖ (ನೃಪಂಗೆ ಮನದೊಳ್ ತೃಣವತ್ ಲಘುವಾದುದು ಆವಗಂ ಸ್ತ್ರೈಣಸುಖಂ: **ಕಾದಂಬ,** ೧. ೧೭)

**ಸ್ಥಗಿತ** – ಮುಚ್ಚಿದ, ಆವರಿಸಿದ (ಇದಱೊಳ್ ಶ್ವೇತಾತಪತ್ರಸ್ಥಗಿತ ದಶದಿಶಾಮಂಡಲಂ ರಾಜಚಕ್ರಂ ಪುದಿದಟ್ಟಾಡಿತ್ತು ಅಡಂಗಿತ್ತಿದಱೊಳೆ ಕುರುರಾಜಾನ್ವಯಂ: **ಪಂಪಭಾ,** ೧೨. ೧೫೬)

**ಸ್ಥಪತಿ** – ಬಡಗಿ (ಸ್ಥಪತಿರ್ಧ್ವನಿ ವರ್ಧಕಿಯೊಳ್: **ಅಭಿಧಾವ,** ೩. ೧. ೧೨೧); ವಾಸ್ತುಶಿಲ್ಪಿ (ಅವರವರ್ಗೆ ತಕ್ಕ ಮಣಿಮಯ ಭವನಮಂ .. .. ಸ್ಥಪತಿ ಮಾಡಿಕೊಟ್ಟಂ ಬೀಡಂ: **ಪಂಪರಾ,** ೧೨. ೯೭); [ಜೈನ] ಚಕ್ರವರ್ತಿಗೆ ದೊರೆಯುವ ಜೀವರತ್ನಗಳಲ್ಲಿ ಒಂದು, ಶ್ರೇಷ್ಠ ವಾಸ್ತುಶಿಲ್ಪಿ (ನಿಜ ಸ್ಥಪತಿರತ್ನ ಪ್ರಯತ್ನ ವಿನಿರ್ಮಿತಮಪ್ಪ ಸೇತುಬಂಧದಿಂದಂ ಉನ್ನಗ್ನಜಳೆಯುಂ ನಿಮಗ್ನಜಳೆಯುಂ ಎಂಬ ಎರಡು ಅಱೆಕೆಯ ತೊಱೆಗಳಂ ಪಾಯ್ದು: **ಅಜಿತಪು,** ೯. ೩೪ ವ)

**ಸ್ಥಪತಿರತ್ನ** – ಶ್ರೇಷ್ಠ ವಾಸ್ತುಶಿಲ್ಪಿ (ನಿಜರಾಜಧಾನಿಯೊಳೊಸಗೆಯಂ ಮಾಡಿ ವಿವಾಹಮಂಟಪಮಂ ಸ್ಥಪತಿರತ್ನಕ್ಕೆ ವಿರಚಿಸೆಂದು ಬೆಸಸಿದಾಗಳ್: **ಆದಿಪು,** ೪. ೩೦ ವ): [ಜೈನ] ಚಕ್ರವರ್ತಿಗೆ ದೊರೆಯುವ ಜೀವರತ್ನಗಳಲ್ಲಿ ಒಂದು (ಅನೇಕ ಚೈತ್ಯಾಲಯಂಗಳಂ ಸ್ಥಪತಿರತ್ನಂಗಳಿಂ ಮಾಡಿಸಿ: **ಅಜಿತಪು,** ೯. ೩೫ ವ)

**ಸ್ಥಪುಟಿತ** – ಏರುತಗ್ಗುಗಳಿಂದ ಕೂಡಿದ (ವಾಜಿಖುರಾಹತಿ ಸ್ಥಪುಟಿತಗ್ರಾವಸ್ಥಳಂ .. .. ದಾಂಟಲಳುಂಬಮಪ್ಪ ವಿಜಯಾರ್ಧಾದ್ರೀಂದ್ರಮಂ ದಾಂಟಿದಂ: **ಆದಿಪು,** ೧೩. ೫೫)

**ಸ್ಥಲೀಕ** – ನೆಲಗಟ್ಟು (ನೀಲಬದ್ಧಸ್ಥಲೀಕಂ ಮರಕತಜಗತೀ ಮಂಡಲಂ ಸ್ಫಾಟಿಕಸ್ತಂಭಾಲಂಬಂ .. .. ದ್ವಾರಾಲಂಕಾರಂಗಳಿಂ ಕಣ್ಗೆಸೆದುದನುಮಂ ತತ್ ಕೃತೋದ್ವಾಹಗೇಹಂ: **ಚಂದ್ರಪ್ರಪು,** ೬. ೪೪)

**ಸ್ಥವಿರ** – ಮುದುಕ (ಪುರುಷ ಸ್ತ್ರೀ ಬಾಲ ವೃದ್ಧ ಸ್ಥವಿರ ಯುವ ಜನಾತಂಕ ಶಂಕಾತಿರೇಕಂ ಪುರದೊಳ್ ಪೊಣ್ಮಿತ್ತು ವಿದ್ಯಾಧರ ಕೃತಕ ಹಯಾಟೋಪ ಘೋರ ಪ್ರಲಾಪಂ: **ಪಂಪರಾ,** ೪. ೧೧೧)

**ಸ್ಥವಿರಕಲ್ಪ** – [ಜೈನ] ಏಕಾಂಗವಿಹಾರಿಯಾಗಿರಲಾರದೆ ಋಷಿಸಂಘದಲ್ಲಿದ್ದು ಉಪದೇಶ ನೀಡುವ ಸಾಧು ಪರಂಪರೆ (ಸ್ಥೂಲಭದ್ರಾಚಾರ್ಯರ್ ಮೊದಲಾಗಿ ಕೆಲಂಬರ್ ಕೊಳಲೊಲ್ಲದರ್ ಜಿನಕಲ್ಪಂ ಸ್ಥವಿರಕಲ್ಪಮೆಂದೆರಡು ಭೇದಂ ಮಾಡಿ ಅರ್ಧಗಪ್ಪಡದ ತೀರ್ಥಮಂ ನೆಗಟ್ಚಿದರ್: **ವಡ್ಡಾರಾ,** ಪು ೯೨, ಸಾ ೧)

**ಸ್ಥಳನಳಿನಿ** – ನೆಲದಾವರೆ (ಕಳಮಕ್ಷೇತ್ರಂಗಳ ಫಳಮಿಳಿತವನಂಗಳ ಅಸಿತಸ್ಮಿತಾಂಬುಜಷಂಡಂಗಳ ತಟ್ಟೆಡೆಯಿಪನಿತುಂ ಸ್ಥಳನಳಿನೀಮಯಮ ಅದು ಆ ವಿಷಯದಿಳೆಯೆಲ್ಲಂ: **ಶಾಂತೀಶ್ವಪು,** ೧೩. ೧೩೭)

**ಸ್ಥಳಯಾತ್ರೆ** – ವ್ಯಾಪಾರಕ್ಕಾಗಿ ಮಾಡುವ ಭೂಮಿಯ ಮೇಲಣ ಪ್ರಯಾಣ (ದತ್ತನುಂ ನಂದಿಷೇಣನುಂ ಎಂಬರ್ .. .. ಸೋದರಮಾವಂ ಭದ್ರಮಿತ್ರನಲ್ಲಿ ಮೊದಲ್ಗೊಂಡು ಸ್ಥಳಯಾತ್ರೆಗೆ ಪೋಗಿ ಸಂಖ್ಯಾತೀತಸಾರಧನಮಂ ಪಡೆದು ಬರ್ಪೆಡೆಯೊಳ್: **ಶಾಂತಿಪು,** ೯. ೯೦ ವ)

**ಸ್ಥಳಾಂಬುರುಹ** – ನೆಲದಾವರೆ (ಚರಿಯಿಪ ಖೇಚರಾಂಗನೆಯರಾತ್ಮ ಮುಖಪ್ರತಿಬಿಂಬಮಂ ಸ್ಥಳಾಂಬುರುಹಮೆಗೆತ್ತು: **ಶಾಂತೀಶ್ವಪು,** ೧. ೭೫)

**ಸ್ಥಳವಿಪರ್ಯಾಯ** – ಜಾಗದ ಬದಲಾವಣೆ (ನಿತ್ಯಪರೀಕ್ಷಣ ಸ್ಥಳವಿಪರ್ಯಾಯ ಪ್ರತಿಪತ್ತಿದಾನಂಗಳಿಂ ನಿಯೋಗಿಗಳಂ ಕಾಮದುಘರ್ ಮಾಡಿಯುಂ; **ಚಂದ್ರಪ್ರಪು,** ೨. ೬೧)

**ಸ್ಥಾಣು** – ಶಿವ (ಜನಕಂ ತಾಂ ಸ್ಥಾಣು ಗಡಂ ಜನನಿಯೆ ಸುಪರ್ಣೆ ಗಡ: **ಸಮಯಪ,** ೮. ೧೮೮)

**ಸ್ಥಾಣುನಿವಸನ** – ಶಿವನ ನಿವಾಸ ಹಾಗೂ ಮರದ ಕಾಂಡಕ್ಕೆ ಆಶ್ರಯವಾದುದು (ಆ ಮಹಾವನಂ .. .. ಸ್ಥಾಣುನಿವಸನಮಾಗಿಯುಂ ಅಪರ್ಣಾನ್ವಿತಮಲ್ತು: **ಚಂದ್ರಪ್ರಪು,** ೫. ೫೨ ವ)

**ಸ್ಥಾಣೂತ್ಕರ** – ಗೂಟ ಅಥವಾ ಒಣಕೊರಡುಗಳ ಸಮೂಹ (ನವಚೂತಂ ತಳಿರ್ವಂದದಿಂ ತಲಿರ್ಗುಮೇ ಸ್ಥಾಣೂತ್ಕರಂ ಚೈತ್ರದೊಳ್: **ಜಗನ್ನಾವಿ,** ೧. ೧೩)

**ಸ್ಥಾನಕ** – ಆಯಕಟ್ಟಿನ ಜಾಗ (ಅಭಿಮನ್ಯು ಇದಿರಾಂತರಂ ಗೆಲೆ ಕಾದಿ ಮತ್ತಮೊಳಗಣಂತೆ ರಥಮನೆಸಗಲ್ ಪೇಟ್ಬಾಗಳ್ ಸ್ಥಾನಕದೊಳ್ ನಿಂದು: **ಹರಿವಂಶ,** ೧೨. ೧೧ ವ)

**ಸ್ಥಾನದೀಪಿಕೆ** – ತಾಣದೀವಿಗೆ, ಒಂದೆಡೆ ನಟ್ಟಿರುವ ದೀವಿಗೆ (ಚಂಚತ್ಕಾಂಚನ ಸ್ಥಾನದೀಪಿಕಾಗ್ರ ನಿರ್ವ್ಯಗ್ರ ದೇದೀಪ್ಯಮಾನ ದೀಪಪ್ರಭಾಭಿಭೂತ ತಮಸ್ತೋಮಮುಮಪ್ಪ ಗರ್ಭಗೃಹಮಂ .. .. ಮೊಕ್ಕು: **ಚಂದ್ರಪ್ರಭ,** ೩. ೯೭ ವ)

**ಸ್ಥಾನಭ್ರಷ್ಟತೆ** – ಸ್ಥಾನವನ್ನು ಕಳೆದುಕೊಳ್ಳುವುದು (ನೀನಾತಂಗೆಜಗದೆ ಅಭಿಮಾನತೆಯಿಂದಿದೇಯಾದಡಂ ನಿನಗಕ್ಕುಂ ಸ್ಥಾನಭ್ರಷ್ಟಪ್ಪತೆ ರಾಜ್ಯವಿಹೀನತೆ: **ಪುಣ್ಯಾಸ್ರ,** ೫. ೫೫)

**ಸ್ಥಾನಲಾಭ** – [ಜೈನ] ದೀಕ್ಷಾನ್ವಯಗಳಲ್ಲಿ ಒಂದು (ಅವತಾರ ವೃತ್ತಿಲಾಭ ಸ್ಥಾನಲಾಭ .. .. ಉಪಯೋಗತ್ವಮೆಂಬ ಎಂಟುಂ ಬೆರಸು ಪೂರ್ವೋಕ್ತೋಪನಯನಾದಿ ಚತ್ವಾರಿಂಶತ್ ಕ್ರಿಯೆಗಳೊಡನೆ ನಾಲ್ವತ್ತೆಂಟು ದೀಕ್ಷಾನ್ವಯಕ್ರಿಯೆಗಳುಮಂ: **ಆದಿಪು,** ೧೫. ೧೬ ವ)

**ಸ್ಥಾಯಿಭಾವ** – ಮನುಷ್ಯನ ಮೂಲ ಚಿತ್ತವೃತ್ತಿ (ರತಿ ಪರಿಹಾಸಂ ಶೋಕ ಉದ್ಗತಂ ಉತ್ಸಾಹಂ ಭಯಂ ಪ್ರಕೋಪಂ ವಿಜಿಗುಪ್ಸತೆ ವಿಸ್ಮಯಾಶಯತ್ವಂ ಪ್ರತಿನಿಯತ ಸ್ಥಾಯಿಭಾವಮಿವು ತಾಮಕ್ಕುಂ: **ಕಾವ್ಯಾವಲೋ,** ೭೯೪)

**ಸ್ಥಾಲಿ** – ಬಟ್ಟಲು (ರಕ್ತಾಂಬುವಂ ಭರದಿಂ ಸ್ಥಾಲಿಯೊಳಾಂತು ತೋಳ್ತೊಡೆಗಳೊಳ್ ಖಂಡಂಗಳಂ ಕೊಂಡು: **ತ್ರಿಷಷ್ಟಿಪು,** ೧೦. ೬೩)

**ಸ್ಥಾಸಕ** – ಸುಗಂಧಲೇಪನ (ವಿದಗ್ಧವಿಟಂಬೊಲಲೆವ ತೆರೆಗಳ್ ಮೆಲ್ಲಂ ಬವರಿಸಿ ಸೋಂಕುತ್ತುಂ ಕಳೆದುವು ಘನಕುಚಕಳಶಕುಂಕುಮಸ್ಥಾಸಕಮಂ: **ಆದಿಪು,** ೧೧. ೧೪೫)

**ಸ್ಥಿತಿಸಾರ** – ಕೊಟ್ಟ ಮಾತಿಗೆ ತಪ್ಪದವನು, ದೃಢಚಿತ್ತ (ಸ್ಥಿತಿಸಾರರಲ್ಲದವಂ ಈ ಪತಿಗಳಂ ಓಲೈಸಿ ಪಡೆವ ಧನಲಾಭದಿಂ ಉನ್ನತಗಿರಿಗುಹಾಂತರಾಳಸ್ಥಿತಿಲಾಭಂ ಪೂಜ್ಯಮೆಂಬರ್ ಅಜೀವರೆಲ್ಲರ್: **ಪಂಚತಂತ್ರ,** ೨೦೩)

**ಸ್ಥಿರ** – [ಜೈನ] ನಾಮಕರ್ಮಪ್ರಕಾರಗಳಲ್ಲಿ ಒಂದು, ಇದರಿಂದ ರಸಾದಿ ಧಾತುಗಳು ಶರೀರದಲ್ಲಿ ನೆಲೆ ನಿಲ್ಲುತ್ತವೆ (ಸ್ಥಿರ ಅಸ್ಥಿರ ಶುಭ ಅಶುಭ ಸುಸ್ವರ ದುಸ್ವರ .. .. ನೀಚೈರ್ಗೋತ್ರಂಗಳೆಂಬ ದ್ವಿಸಪ್ತತಿಪ್ರಕೃತಿಗಳಂ ನಿರವಶೇಷಂ ಕಿಡಿಸಿ: **ಆದಿಪು,** ೧೬. ೪೯ ವ)

**ಸ್ಥಿರಂ** – ದೃಢವಾಗಿ (ಸ್ಥಿರಮಿರ್ದು ಪ್ರಭು ನುಡಿಯೆ ಪ್ರರೂಢಮುದನಾದನಾತಂ: **ಕವಿರಾಮಾ,** ೨. ೭)

**ಸ್ಥಿರತೆ** – ಶಾಶ್ವತತೆ (ಪೆರ್ಮೆಗಂ ಸ್ಥಿರತೆಗಂ ಆಶ್ರಯಮಾದ ಗಗನಲಕ್ಷ್ಮಿಯ ಮಧ್ಯಾಧಿಗತವಳಿತ್ರಯಮೆನೆ ಸಲೆ ಸೊಗಯಿಪುದು ಜಗತ್ತ್ರಯಮಂ: **ಚಂದ್ರಪ್ರಭ,** ೧. ೬೯)

**ಸ್ಥಿರತ್ವ** – ಸ್ಥೈರ್ಯ (ನಿಶ್ಶಂಕನುಂ ನಿಸ್ಸಹನುಮಂ ಆಗಿ ನುಡಿದಮೋಘಜಿಹ್ವನ ಸ್ಥಿರತ್ವಕ್ಕೆ ಮೆಚ್ಚಿ: **ಶಾಂತಿಪು,** ೬. ೨೫ ವ) ; ಸಾಮರ್ಥ್ಯ (ಸುರಪತಿ ಕೆಯ್ನಿಚಿದು .. .. ಆಯಿರ್ವರ್ ಮುನ್ನೆರಪಿರ್ದಗಣ್ಯಪುಣ್ಯಸ್ಥಿರತ್ವಮಂ ನೆಗಟಿ ಪೊಗಟಲಲಚಿಯಂ ಸಭೆಯೊಳ್: **ಶಾಂತಿಪು,** ೧೦. ೭೬)

**ಸ್ಥಿರಬೋಧ** – ಕೇವಲಜ್ಞಾನಿ (ಸ್ಥಿರಬೋಧಂ ಚಂಪೆಯೊಳ್ ಪೆಂಪೆಸೆದಿರೆ ವಸುಪೂಜ್ಯಾತ್ಮಜಂ .. .. ನೆರ್ಮಿದರ್: **ಶಾಂತಿಪು,** ೧೨. ೩೦)

**ಸ್ಥಿರೆ** – ದೃಢಚಿತ್ತೆ (ಧರೆಯಂ ಸ್ಥಿರೆಯೆನಿಸಿಂದಿರೆಯಂ ಪದ್ಮಾಲಯಾಖ್ಯೆಯೆಂದೆನಿಸಿದಂ .. .. ಅದೇಂ ಸಮರ್ಥನೊ ಪದ್ಮಂ: **ಪುಷ್ಪದಂಪು,** ೩. ೨); ಭೂಮಿ (ಸ್ಥಿರೆ ಧರಣಿ ಧಾತ್ರಿ ಮೇದಿನಿ ಧರಿತ್ರಿ ಧರೆ ಯವನಿ ಪೃಥ್ವಿ ರಸೆ ವಸುಧೆ ವಸುಂಧರೆ ಕು ಮಹಿ ಜಗತಿ ವಿಶ್ವಂಭರೆ ಗೋ ಕ್ಷ್ಮಾ ಕ್ಷೋಣಿ ಭೂಮಿ ಭೂ ಗೋತ್ರೆ ನೆಲಂ: **ಅಭಿಧಾವ,** ೧. ೫. ೧)

**ಸ್ಥೂರಿ** – ಭಾರ ಹೊರುವ ಕುದುರೆ (ಕುಮುದದಳಧವಳ ಮನೋಜವಕಾಮಚಾರಿ ಸ್ಥೂರೀಪೃಷ್ಠಯೋಜಿತಮುಂ ಅನುಕೂಲ ಶೂರ ರಥಕಲ್ಪಪರಿಣತ ರಥಚೋದಕ ಪರಿಭ್ರಾಜಿತಮುಂ ಆಗಿ: **ಆದಿಪು,** ೧೧. ೧೨ ವ)

**ಸ್ಥೂಲಲಕ್ಷ** – ದೃಢವಾದ ಗುರಿಯುಳ್ಳವನು (ಕುಲಜಂ ಸೋತ್ಸಾಹಂ ಸ್ಥೂಲಲಕ್ಷಂ ಅಭಿಮಾನಿ ಬುದ್ಧಿಮಂತಂ: **ಪಂಚತಂತ್ರ,** ೩೦೨)

**ಸ್ನಪನ** – ಅಭಿಷೇಕ, ಸ್ನಾನ (ದಿವಿಜೇಂದ್ರವನಿತೆ ದೇವಾಂಗವಸ್ತ್ರದಿಂ ತೊಡೆದಳ್ ಆ ಜಿನಾರ್ಭಕದೇಹಪ್ರವಿಲಿಪ್ತ ಸ್ನಪನ ಪಯೋಲವಮಂ ನೀರಂಜಿಪಂತೆ ರತ್ನಮನಾಗಳ್: **ಮಲ್ಲಿನಾಪು,** ೧೩. ೨)

**ಸ್ನಾತಕ** – ತಾಪಸ ವಿದ್ಯಾರ್ಥಿ (ಸ್ನಾತಕವ್ರಾತಕ್ಕೆ ಶೌಚಕಾರ್ಯನಿಮಿತ್ತಂ ದರಿಯ ಮಣ್ಣಂ ಕೋಡೊಳೆತ್ತಿ ತಂದವರ ಮುಂದಿಕ್ಕುವ ಭದ್ರಗಜವ್ರಜಮುಮಂ: **ಪಂಚತಂತ್ರ,** ೧೯೦ ವ)

**ಸ್ನಾನಸದ್ಮ** – ಸ್ನಾನದ ಮನೆ (ಒಪ್ಪುವುವಲ್ಲಿ ಶಸ್ತ್ರಕುಟಿ ಕೋಶಾಗಾರಂ ಏಕಾಂತಮಂದಿರಂ ಅಭ್ಯಾಸನಿಕೇತನಂ ಪಚನಧಾಮಂ ಸ್ನಾನಸದ್ಮಂ ಮನೋಹರ ಶಯ್ಯಾವಸಥಂ ವಿಭೂಷಣಗೃಹಂ ದೇವಾರ್ಚನಾವಾಸಂ ಅಂಬರವೇಶ್ಮಂ ವರ ಭೋಜನೌಕಂ ಅವರೋಧಸ್ತ್ರೀನಿವಾಸಾಸ್ಪದಂ: **ಶಾಂತೀಶ್ವಪು,** ೧. ೧೩೭)

**ಸ್ನಾನಾರ್ಥ** – ಸ್ನಾನದ ಉದ್ದೇಶ (ಸ್ನಾನಾರ್ಥಂ ಒಂದು ಕಳಶಮಂ ನಿಯಮನಿಧಾನಂ ಎಟಲೆ ಪಿಡಿದು ಅಮಳಿನ ಗಂಗಾನದಿಗೆ ವಂದು ಸುರತನಿಧಾನಿ ಅಮರೇಂದ್ರಗಣಿಕೆಯಂ ಮುನಿ ಕಂಡಂ: **ಪಂಪಭಾ,** ೨. ೪೧)

**ಸ್ನಾನೀಯ** – ಸ್ನಾನಕ್ಕೆ ಬೇಕಾದ ವಸ್ತುಗಳು (ಪುರೋಡಾಶಕಷಾಯ ಸ್ನಾನೀಯೋದ್ವರ್ತನಸಂಚಾವಳಿ ಸ್ನಾನೋಪಕರಣಂಬೆರಸು ಜಗದೇಕಬಂಧುವಂ ಮಜ್ಜನಂಬುಗಿಸಿದಂ: **ಶಾಂತಿಪು,** ೧೦. ೩೭ ವ)

**ಸ್ನಾಪಕ** – ಸ್ನಾನ ಮಾಡಿಸುವವನು (ಸಕಳಾಮರರ್ ಪಯೋವಾಹಕರ್ ಅಮರಿಯರ್ ಅಲ್ಲಿ ಪರಿವೆಸಂಗೆಯ್ವರ್ ಸ್ನಾಪಕನಿಂದ್ರಂ .. .. ಜಿನಮಜ್ಜನದೊಳ್: **ಚಂದ್ರಪ್ರಭ,** ೧೨. ೧೩೪)

**ಸ್ನಾಯು** – ನರ (ಸ್ನಾಯು ಅಲಾಬೂ ದಂಡ ಅಂಗುಷ್ಠ ಅಂಗುಳಿಪ್ರಯತ್ನದಿಂ ಶ್ರವಣರಮಣೀಯ ಕ್ವಣಿತಮೆಂತು ನೆಗಟ್ದಪ್ಪುದು ಅಂತೆ: **ಆದಿಪು,** ೨. ೯ ವ)

**ಸ್ನಿಗ್ಧ** – ಸ್ನೇಹದಿಂದ ಕೂಡಿದ್ದು, ನಯವಾದದ್ದು (ಅತಿಮೃದು ಸ್ನಿಗ್ಧ ಕೇಶಂಗಳುಂ ಕಣ್ಗೆಸೆಯಲ್ .. .. ತೇಂಕಾಡುತುಂ ವಿಪ್ರೋತ್ತಮಂ .. .. ಬಂದಂ: **ಕಾದಂಸಂ,** ೭. ೧೧); ಜಿಡ್ಡು

**ಸ್ನಿಗ್ಧಾಲೋಕ** – ಆಕರ್ಷಕ ನೋಟ (ಸ್ಖಲಿತಗಮನಂ ಮುಗ್ಧಾಲಾಪಂ .. .. ಸ್ನಿಗ್ಧಾಲೋಕಂ ಪ್ರಸಾರಿತಕಜ್ಜಲಂ ತಿಳಕವಿಳಸದ್ಭಾಳಂ ಭೂಷಾಪರಂಪರಲೀಲೆಯಂ ತಳೆಯೆ ತಳೆದಂ ಚೆಲ್ವಂ ಲಂಬಾಳಕಂ ನೃಪಬಾಲಕಂ: **ಮಲ್ಲಿನಾಪು,** ೪. ೮೮)

**ಸ್ನುಹಿ** – ಕಳ್ಳಿ ಗಿಡ (ಮಹಾತರುವಕ್ಕುಂ ಸ್ನುಹಿ: **ಅಭಿಧಾವ,** ೧. ೮. ೨೦)

**ಸ್ನೇಹ** – ಗೆಳೆತನ (ಸ್ನೇಹಂ ಅರ್ಜಯಂ ಸಖ್ಯಂ ಸೌಹಾರ್ದಂ ಪ್ರೀತಿ ಮೈತ್ರಿ: **ಅಭಿಧಾವ,** ೨. ೨. ೪); ಜಿಡ್ಡು (ಉದಕಾಂತಃಪಾತಿವೊಲ್ ಸ್ನೇಹದ ಲವಂ ಎನಸುಂ ಪರ್ವಿ .. .. ತೋಱುತ್ತುಮಿರ್ದಪ್ಪುದು: **ಕಾದಂಸಂ,** ೫. ೩೮)

**ಸ್ಪಂದ** – ಅದುರುವಿಕೆ (ದಕ್ಷಿಣಭುಜಂ ಅಚಿರಪ್ರತಿಪಕ್ಷಮಹೀಪಾಲ ವಿಜಯಲಕ್ಷ್ಮೀಲಲನಾವಕ್ಷೋಜಸ್ಪರ್ಶನಮನನಕ್ಷರಮಱಿಪಿದುದು ಪತಿಗಮಂದಸ್ಪಂದಂ: **ಆದಿಪು,** ೧೧. ೧೧)

**ಸ್ಪರ್ಶನಾನುಮಿತ** – ಮುಟ್ಟಿ ತಿಳಿಯಬಹುದಾದ (ಇದು ಬನಮಿದು ನೃಪಗೃಹಮೆಂಬುದಮೋಘಂ ಸ್ಪರ್ಶಾನುಮಿತಮಪ್ಪುದು ಪಟ್ಟಿದ ಶುಕಪಿಕಾಳಿಗೆ ನೃಪಸದನಂ ಸೊಗಯಿಪುದು ಚಿತ್ರಮಣಿಶಬಲತೆಯಿಂ: **ಜಗನ್ನಾವಿ,** ೨. ೩೬)

**ಸ್ಪರ್ಶಪ್ರವೀಚಾರ** – [ಜೈನ] ಸ್ಪರ್ಶದ ಮೂಲಕ ರತಿಸುಖವನ್ನು ಪಡೆಯುವುದು (ಸಪ್ತಸಾಗರ ಆಯುಷ್ಯರುಂ ಸ್ಪರ್ಶಪ್ರವೀಚಾರರುಂ .. .. ಅಪ್ಪ ಸಾಮಾನಿಕದೇವರಾಗಿ: **ಕರ್ಣನೇಮಿ,** ೧. ೧೨೬ ವ)

**ಸ್ಪೃಶ್ಯ** – ಮುಟ್ಟಲು ಯೋಗ್ಯವಾದ (ಮತ್ತಂ ಸ್ಪೃಶ್ಯಾಸ್ಪೃಶ್ಯಕಾರುಗಳುಮೆಂದಿರ್ತೆಱದ ಶೂದ್ರಸಂತತಿಗೆ ಶುಶ್ರೂಷಾನಿಯೋಗಂಗಳುಮಂ .. .. ಉಪದೇಶಂಗೆಯ್ದು: **ಆದಿಪು,** ೮. ೬೪ ವ)

**ಸ್ಪೃಹಣೀಯ** – ಅಪೇಕ್ಷಣೀಯ (ಗೃಹದೀರ್ಘಿಕೆಯಂ ಧಾರಾಗೃಹಮಂ .. .. ಆರ್ಗಂ ಸ್ಪೃಹಣೀಯಮಾಗೆ ಪಲವುಂ ಬಹುವಿದ್ಯಾಗೃಹಮಹತ್ತರರ್ ಸಮೆದಿತ್ತರ್: **ಪಂಪರಾ,** ೧೨. ೯೮)

**ಸ್ಫಟಿಕಾಶ್ಮ** – ಸ್ಫಟಿಕ ಶಿಲೆ (ಪದಂ ಚಾರುಕಾಂಚನವರ್ಣಂ ಸ್ಫಟಿಕಾಶ್ಮವರ್ಣಂ ಉದರಂ ಮಾಣಿಕ್ಯವರ್ಣಂ ಕೊರಲ್: **ಜಗನ್ನಾವಿ,** ೧. ೫೧)

**ಸ್ಫಟೆ** – ಹೆಡೆ (ಭೋಗಿಂದ್ರನ ಅಗ್ಗದ ದೀರ್ಘಸ್ಫಟೆ ಕಂಠದೊಳ್ ನೆಲಸೆ .. .. ಯುದ್ಧಂಗೆಯ್ದರ್ ಈಶ ಅರ್ಜುನರ್: **ಶಬರಶಂ,** ೪. ೭೮)

**ಸ್ಫಾಟಿಕಗ್ರಾವ** – ಸ್ಫಟಿಕಾಶ್ಮ (ನಿರ್ಮಳಜಳರುಚಿಯಂ ಸ್ಫಾಟಿಕಗ್ರಾವಬದ್ಧವನಿಯೊಳ್ .. .. ತಾಳುತ್ತುಮೆತ್ತಂ ಸುಟಿವುದು ಮಹುಭೃದ್ಗೇಹದೇಣೀಸಮೂಹಂ: ಚಂದ್ರಪ್ರಪು, ೧. ೧೪೭)

**ಸ್ಫಾಟಿಕ್ಯಭೂಮೀಧರ** – ಕೈಲಾಸ ಪರ್ವತ (ನಿಚ್ಚಂ ತೊಳಪ್ಪ ಸ್ಫಾರ ಸ್ಫಾಟಿಕ್ಯಭೂಮೀಧರ ವರವಿಲುಠತ್ ಸಾನುವೆಂಬಂತೆ: **ಉದ್ಘಟಕಾ,** ೧. ೭೨)

**ಸ್ಫಾರ** – ಅಗಲವಾದ (ಪೊಕ್ಕಂ ನೃಪಾವಾಸಮಂ .. .. ವಿಶಾಲೋರಸ್ಥಲೀನಿಸ್ತುರ ಚಕಚಕಿತಸ್ಫಾರಹಾರಂ ಕುಮಾರಂ: **ಪಂಪರಾ.,** ೨. ೩); ಅತಿಶಯವಾದ (ನವನಿರ್ಮೋಕಗ್ರಹ ವ್ಯಾಕುಳ ನಕುಳಕುಳಂ ಫೇರವಸ್ಫಾರ ಥಕ್ಕಾರವವಲ್ಗತ್ ವಾನರಂ: **ನೇಮಿನಾಪು,** ೩. ೩೬)

**ಸ್ಫಾಲನ** – ನಡುಕ (ಕಾಲದ ಮರ್ವು ಪರ್ವಿದವೊಲಿರ್ದ ತಮಾಲವನಂಗಳಿಂದೆ ಭೃಂಗಾಳಿಯ ಗಾವರಂ ಪುದಿದ ಪುಷ್ಪಲತಾಗೃಹದಿಂದೆ ಚಂದ್ರಿಕಾಜಾಲದವೊಲ್ ಕೆಲಂಬಿಡಿದು ಭೋರ್ಗರೆಯಲ್ ಸುರಿತರ್ಪ ನೀರ್ಝರಾಸ್ಫಾಲನ ಶೀಕರಪ್ರಕರದಿಂದೆಸೆದತ್ತು ಬೃಹದ್ಗುಹಾಂಗಣಂ: **ಕಾದಂಬ,** ೪. ೬೪)

**ಸ್ಫೀತ** – ವಿಶಾಲವಾದ (ಅತಿಸಾರವಿಸ್ಫುಲಿಂಗ ಸ್ಫೀತಾವರೋಹಣದೊಳಂ ದಂಡನ ಖಂಡನ ತಾಡನ ಪೀಡನ ಗರ್ಜನ ತರ್ಜನಾದಿಗಳನೆಯ್ದಿ: **ಅಜಿತಪು,** ೧೧. ೧೦ ವ)

**ಸ್ಫುಟಿಕೆ** – ದೊನ್ನೆ (ಚೆಂದಳಿರ ಕರಂಡಕಮಂ ಅರವಿಂದದಳ ಸ್ಫುಟಿಕೆ ಕದಳಿಯೆಲೆವಡಲಿಗೆ .. .. ಪೂಗೊಯ್ವೆಡೆಯೊಳ್: **ರಾಜಶೇವಿ,** ೧೦. ೩೪)

**ಸ್ಫುಟಿತ** – ಬಿರಿದ, ಸೀಳಕಬಿಟ್ಟ (ಮತ್ ವಿಪತ್ತಿ ಶ್ರವಣಮಾತ್ರದಿಂ ಸ್ಫುಟಿತಹೃದಯನಾದ ಚಂದ್ರಾಪೀಡಂ ಎಲ್ಲಿ ಪುಟ್ಟಿದಂ: **ಕಾದಂಸಂ,** ೮. ೪ ವ)

**ಸ್ಫುರತ್** – ಹೊಳೆಯುವ (ಸ್ಫುರತ್ ಅರುಣಮಣಿದ್ಯೋತಿ ಸಂಧ್ಯಾನಿಬದ್ಧಃಪ್ರೇಮಂ: **ಕಾದಂಬ,** ೧. ೧)

**ಸ್ಫುರಿತ** – ನಡುಗುವ (ಸ್ಫುರಿತ ಸ್ಫೀತಾಧರಂ ಭ್ರೂಲಟಹಲಲಿತ ಭಾಳಸ್ಥಳಂ .. .. ಲಸತ್ ವಕ್ತ್ರಚಂದ್ರಂ: **ಲೀಲಾವತಿ,** ೧೧. ೭೮); ಪ್ರಕಾಶಮಾನವಾದ (ಸ್ಫುರಿತತಪೋಮಯಾನಳಂ ಈಯೊಡಲಂ ನೆಗಟ್ಟೇ ಗಿರೀಂದ್ರಕಂದರದೊಳಗಿಂತೆ ದಲ್ ಕರಗಿಪೆಂ: **ಪಂಪಭಾ,** ೮. ೬)

**ಸ್ಫುಲಿಂಗ** – ಬೆಂಕಿಯ ಕಿಡಿ (ಕಣ್ಣಿಂ ಸ್ಫುಲಿಂಗಂ ಸುರಿದಪುವೆನೆ ನೋಡುತ್ತೆ ತೀಡುತ್ತೆ ಕಲ್ಲಿಂದುರದಂಷ್ಟ್ರಾಗ್ರಂಗಳಂ: **ಗಿರಿಜಾಕ,** ೧. ೧೦೧)

**ಸ್ಮಯ** – ಅಹಂಕಾರ (ಕ್ಷಯವೃಜಿನಂ ಜಿನಸಮಯಂ ಸ್ಮಯರಹಿತಂ ಹಿತವಚಃಪ್ರಿಯಂ ಪ್ರಿಯಧರ್ಮಂ ಪ್ರಯತಯುತಂ ಸದ್ವಿನಯಂ ನಯವಾಕ್ಪ್ರಸರಂ ಸರಸ್ವತೀಮುಖಮುಕುರಂ: **ಸುಕುಮಾಚ,** ೧. ೫೧)

**ಸ್ಮರ** – ಮನ್ಮಥ (ಅಲರ್ಗಣ್ಣೊಳ್ ಸ್ಮರನಿರ್ದಪನಕ್ಕುಂ ಎಡೆವೋಪಾ ಜೋಡೆ ಕಾಮಂಗೆ ಕಾದಲೆಯಕ್ಕುಂ: **ಪಂಪಭಾ,** ೪. ೮೪)

**ಸ್ಮರಘಸ್ಮರ** – ಕಾಮಮರ್ದನ, ಶಿವ (ದ್ರೋಣಂಗೆ ಕಾರ್ಯಾರ್ಥದಿಂ ಮಗನಾದಂ ಸ್ಮರಘಸ್ಮರಂ: **ಗದಾಯು,** ೨. ೨೫)

**ಸ್ಮರಚಾಪ** – ಕಬ್ಬು, ಕಾಮನ ಬಿಲ್ಲು (ಕೊಂಕಿದೊಡೇಂ ಸ್ಮರಚಾಪಮಂ ಇಳಿಕೆಯ್ವರೆ ಮರುಳೆ: **ಯಶೋಧಚ,** ೨. ೪೨)

**ಸ್ಮರಶಾಸನ** – ಮನ್ಮಥನ ಆಜ್ಞೆ (ಸ್ಮರಶಾಸನಕ್ಷಪಿತಕಾಳಂ ದೇವದೇವಂ ಗುಣಾಧಾರಂ ರಕ್ಷಿಸುತಿರ್ಕೆ ಭವ್ಯಜನಮಂ ಶ್ರೀವೀರಭಟ್ಟಾರಕಂ: **ಸಮಯಪ,** ೭. ೭೨)

**ಸ್ಮರಾಮರ್ಶಿತೆ** – ಪ್ರಣಯಕುಪಿತೆ (ಸ್ಮರಾಮರ್ಶಿಕೆಯಿಂದ ಆ ಮುಗ್ಧೆಯಿಂದ ಏನವದರಿಪವರ್ಗ ಕೋಪಂ ಆಪತ್ತನೀಗುಂ: **ಲೀಲಾವತಿ,** ೧೪. ೪೮)

**ಸ್ಮರಿಯಿಸು** – ನೆನೆಪಿಸಿಕೊ ಸ್ಮರಿಯಿಪನಿರ್ಪನಿರ್ಭಾಸಿರ ಬರಿಸಕ್ಕೊರ್ಮೆ ಮನದೊಳುಣಿಸಂ: **ಆದಿಪು,** ೬. ೧೬); ಧ್ಯಾನಿಸು (ಮಱದನಿಲ್ಲ ಮುಕುಂದನನೇಕಚಿತ್ತದಿಂ ಸ್ಮರಿಯಿಸುತಿರ್ದಂ: **ಗದಾಯು,** ೫. ೩೮)

**ಸ್ಮರೋನ್ಮಾದ** – ಪ್ರಣಯೋದ್ರೇಕ (ಪೋದುದು ಜೌವನಂ ಶ್ರಮದಿನಾದುದು ಮುಪ್ಪು ಇನಿಸಾದೊಡಂ ಸ್ಮರೋನ್ಮಾದದೊಳಿದೇಕೆ ಗಡಂ ಬಗೆಯಂ ತಗುಳ್ಚಿ ಬೇಳಾದಪಂ: **ಆದಿಪು,** ೨. ೩೫)

**ಸ್ಮಿತ** – ಅರಳಿದ (ಸ್ಮಿತಧವಳಕಮಳವನದೊಳ್ ರತಿರಾಗದೆ ಹಂಸಿ ಹಂಸನಂ ಸೋಂಕುವವೊಲ್ ಅತಿಶಯಶಯನ ಸ್ಥಳದೊಳ್ ಪತಿಯೊಡನಾ ಕಾಂತೆ ಸುರತಸುಖದಿಂದಿರ್ಪಳ್: **ಜಗನ್ನಾವಿ,**

೨. ೭೫); ಮಂದಹಾಸ (ಸ್ಮಿತಕುಸುಮಂ ಅಧರಪಲ್ಲವಂ ಅತಿಶಯನಯನಾಳಿ ಬಾಹಾಶಾಖಂ ಕಾಂತಾಲತೆ: **ಕವಿರಾಮಾ,** ೩. ೧೪)

**ಸ್ಮೃತಿ** – ನೀತಿಸಂಹಿತೆ (ಇವಂ ಕಪಿಲನೆಂಬೊಂ ಏಕಸಂಧಿಯಪ್ಪುದಱಿಂ ನಾನುಂ ಮತ್ತಿನ ಮತ್ತನಯರ್ಕಳಂ ಓದಿಸೆ ಮತ್ತಿವಂ ಅಕ್ಲೇಶದಿಂ ಶ್ರುತಿ ಸ್ಮೃತಿ ಶಾಸ್ತ್ರೋಪಾತ್ರಮುಖನಾಗೆ: **ಶಾಂತಿಪು,** ೬. ೬೨ ವ ಮತ್ತು ೬೩)

**ಸ್ಮೇರಕಟಾಕ್ಷ** – ಮುಗುಳ್ನಗೆಯ ನೋಟ (ವನಿತಾ ಸ್ಮೇರಕಟಾಕ್ಷ ನಿರೀಕ್ಷಣಕ್ಕೆರೆವ ಶೀತಾಂಶು ದೇವನಾದಂ ದಿವದೊಳ್: **ಯಶೋಧಚ,** ೪. ೫೫)

**ಸ್ಮೇರಮುಖ** – ನಗುಮುಖ (ಅತ್ಯಂತವಿಸ್ಮಯ ಸ್ಮೇರಮುಖನುಂ ಅತಿರುಚಿರನ್ಯಸ್ತಹಸ್ತಪಲ್ಲವನುಂ .. .. ಆಗಿ ನೋಡುತ್ತುಂ.. ..ಮೂಱುಸೂಟ್ ಬಲಗೊಂಡು: **ಆದಿಪು,** ೧೦. ೫೨ ವ)

**ಸ್ಯಂದನ** – ರಥ (ಭರತೇಶ್ವರಂ .. .. ಸ್ಯಂದನದಿಂ ಜನಿತಾನದದೆ ಬನಮಂ ವಿಳಾಸದಿಂ ಕುಗುತಂದಂ: **ಆದಿಪು,** ೧೧. ೭೦)

**ಸ್ಯಂದಿ** – ಜಿನುಗುವ (ಕರಿಗಂಡಸ್ಯಂದಿ ದಾನದ್ರವಮನೊದೆದು .. .. ಸುರಭಿರಸರಜಕಾತರಂ ಮಾತರಿಶ್ವಂ: **ಲೀಲಾವತಿ,** ೭. ೧೦೪)

**ಸ್ಯಮಂತಪಂಚಕ** – ಪರಶುರಾಮ ನಿರ್ಮಿತವೆಂದು ನಂಬಲಾದ ಐದು ಮಡುಗಳು (ಮುನ್ನಂ ಪರಶುರಾಮನೀ ನೆಲದೊಳುಳ್ಳರಸುಮಕ್ಕಳೆಲ್ಲರುಮನಿರ್ಪತ್ತೊಂದು ಅಱೂಬ್ಬೆರೆಗಂ ಪಿಳ್ಳೆಪೆಸರಿಲ್ಲದಂತು ಕೊಂದು ಅವಂದಿರ ನೊರೆನೆತ್ತರೊಳ್ ತೀವಿ ತನ್ನ ತಾಯ್ಗೆ ನೀರಿಟೆಯಲೆಉಂ ತಂದೆಗೆ ನೀರ್ಗುಡಲುಮೆಂದು ಮಾಡಿದ ಸ್ಯಮಂತಪಂಚಕಂಗಳೆಂಬ ಪೆಸರ ಪೆರ್ಮಡುಗಳೊಳಗೆ ಮೂಡಿ ಮುಟ್ಕಾಡಿ ನೋಡಿಯುಂ: **ಗದಾಯು,** ೬. ೨೮ ವ)

**ಸ್ಯಾದ್ವಾದ** – [ಜೈನ] [ಸ್ಯಾತ್+ವಾದ] ಸ್ವಲ್ಪಸ್ವಲ್ಪವಾಗಿ ತಿಳಿಯುವ ಕ್ರಮ (ಸ್ಯಾದ್ವಾದ ಪೂರ್ವಾಚಲಸಮುದಿತಂ .. .. ಹೇಮಾಂಗಂ ವರ್ಧಮಾನಾಹಿಕರಂ .. .. ಅತಿನಿರ್ದೋಷಮಂ ಮಾಟ್ಕೆ ನಮ್ಮೊಳ್: **ಧರ್ಮಪ,** ೧. ೧)

**ಸ್ಯಾಮಕ** – ಬರಗು ಎಂಬ ಧಾನ್ಯ (ಸ್ಯಾಮಕಾಹ್ವ ಬರಗುವದಕ್ಕುಂ: **ಅಭಿಧಾವ,** ೧. ೧೬. ೧೭)

**ಸ್ರಕ್** – ಹೂವಿನ ಹಾರ (ನಾನಾ ಭೂಷಣ ವಸ್ತ್ರ ಅನೂನ ಸ್ರಕ್ ರುಚಿ ಸನಾಥನಿಂ ಕಳೆಯಲೊಡಂ ತಾನೆಸೆದುದು: **ಆದಿಪು,** ೯. ೭೮)

**ಸ್ರಗ್ವಿಳಾಸ** – ಹೂವಿನ ಹಾರಗಳ ಚೆಲುವು (ರತ್ನಾಂಗುಲೀಯಮಂ ಅಂಗುಳಿಯಿಂದುರ್ಚಿ ಬಿರ್ದುದನಱಿಯದೆ ಗಂಧಾಕ್ಷತ ಕುಸಮತಾಂಬೂಲ ಸ್ರಗ್ವಿಳಾಸಾಲಂಕೃತನಾಗಿ: **ಸುಕುಮಾಚ,** ೩. ೪ ವ)

**ಸ್ರಜ** – ಸ್ರಕ್ (ಪ್ರಜೆಯೆಲ್ಲಂ ಜಲ ಗಂಧ ಸ್ರಜ ತಂಡುಲ ಧೂಪ ದೀಪ ತಾಂಬೂಲವ್ರಜದಿಂ ಪೂಜಿಸುವುದು: **ಯಶೋಧಚ,** ೪. ೭೩)

**ಸ್ರವಂತಿ** – ನದಿ (ಅಂತು ಅವರಂ ಶಾಸನೋಪಹತರ್ಮಾಡಿ ಕಾವೇರಿಸ್ರವಂತಿಸಮುತ್ತರಂ ಅನಂತರಂ ಬರೆವರೆ: **ಶಾಂತಿಪು,** ೧೧. ೩ ವ)

**ಸ್ರುಕ್** – ಯಜ್ಞದಲ್ಲಿ ಬಳಸುವ ಮರದ ಸೌಟು (ಅಜಸ್ರ ಸ್ರುಕ್ ಸಂದರ್ಭಪವಿತ್ರಸಂವಾಹನ ಪವಿತ್ರಿತಪಾಣಿಪಲ್ಲವನುಂ ಪುರೋಡಾಶಭೋಜನ ಪವಿತ್ರೀಕೃತಗಾತ್ರನುಂ: **ಪಂಚತಂತ್ರ,** ೨೫೨ ವ)

**ಸ್ರೋತ** – ಪ್ರವಾಹ, ನದಿ, ಧಾರೆ (ಇಭಶೈಲಂಗಳನೇಱಿಯೇಱಿ ರುಧಿರ ಸ್ರೋತಂಗಳಂ ದಾಂಟಿ ದಾಂಟಿ .. .. ಭರಂಗೆಯ್ದುಱಿದೆಯ್ದಿ: **ಗದಾಯು,** ೪. ೪೮)

**ಸ್ರೋತಃಪತಿ** – ನದಿಗಳ ಒಡೆಯ, ಸಮುದ್ರ (ಖ್ಯಾತಂ ಮಹೇಂದ್ರಗಿರಿಸಾರಾತಿಶಯಂಪತಿ ಮಹೇಂದ್ರಗಿರಿಗಂ ಪ್ರಾಚೀಸ್ರೋತಃಪತಿ ಪ್ರಯಾಣದೊಳಿತಂ ಜಂಗಮಮಹೇಂದ್ರಂ ಎನಿಕುಂ ಘಟಯಿಂ: **ಶಾಂತಿಪು,** ೫. ೧೩೩)

**ಸ್ರೋತಸ್ವಿನಿ** – ನದಿ (ಸ್ರೋತಸ್ವಿನೀ ಕೈರವಬಂಧು ಪಾವಕಂ ವಾತಾಶನಂ ಭಸ್ಮಂ .. .. ಭೂತೇಶನೊಪ್ಪಿರ್ದಂ: **ತ್ರಿಷಷ್ಟಿಪು,** ೪೬. ೯)

**ಸ್ವಕೀಯ** – ತನ್ನ (ಆಗಳ್ ಸ್ವಕೀಯ ಮಣಿಮಯ ಮೃಗೇಂದ್ರಮಣಿವಿಷ್ಟಿತ್ರಮನಿತ್ತು ಕೆಲಸಾರ್ದು ನಿಂದು: **ಕುಸುಮಾಕಾ,** ೪. ೫ ವ)

**ಸ್ವಕೀಯಪ್ರಭುತೆ** – ಸ್ವಪ್ರಭುತ್ವ, ತನಗೆ ತಾನೇ ಪ್ರಭುವಾಗುವುದು (ಅಮೂರ್ತರ್ ಚರಮತನು ಸಮಾಕಾರರ್ ಉದ್ಧೂತಲೇಪರ್ ಪ್ರಣುತರ್ .. .. ಸ್ವಕೀಯಪ್ರಭುತೆಯನೆಮಗಂ ಮಾಟ್ಕೆತ್ರೀತಿಯಿಂದಂ: **ಆದಿಪು,** ೧. ೨)

**ಸ್ವಗತ** – ಸ್ವಂತ (ಸ್ವಗತಾನಲಸನ್ಮಣಿ ರಶ್ಮಿ ಗಾಢಮಗಣಿತ ಜಲದ್ವಿಪಾವಳಿ ಕಡಲಂ ಮಿಗೆವಂದಮರಗಜೇಂದ್ರಂ ಸೊಗಯಿಸುವುದು ದಾನವಾರಿ ಲೇಖಾನುಗತಂ: **ಕಾವ್ಯಾವಲೋ,** ೭೬೯)

**ಸ್ವಗುರುಸ್ಥಾನಸಂಕ್ರಾಂತಿ** – [ಜೈನ] ಒಂದು ಗರ್ಭಾನ್ವಯಕ್ರಿಯೆ, ತನ್ನ ಗುರುವಿನ ಸ್ಥಾನವನ್ನು ಹೊಂದುವುದು (ವಿವಾಹ ವರ್ಣಲಾಭ ಕುಲಚರ್ಯಾ ಗೃಹೀಶಿತ್ವ ಪ್ರಶಾಂತಿ ಗೃಹತ್ಯಾಗ .. .. ಸ್ವಗುರುಸ್ಥಾನಸಂಕ್ರಾಂತಿ .. .. ಎಂಬ ಅಯ್ವತ್ತಮೂಱು ಗರ್ಭಾದಿ ನಿರ್ವಾಣಪರ್ಯಂತಂಗಳಪ್ಪ ಗರ್ಭಾನ್ವಯಕ್ರಿಯೆಗಳಂ: **ಆದಿಪು,** ೧೫. ೧೫ ವ)

**ಸ್ವಚ್ಛಂದ** – ಸ್ವತಂತ್ರವಾದ (ಸ್ವವಶಂ ಸ್ವಚ್ಛಂದಂ: **ಅಭಿಧಾವ,** ೨. ೧. ೧೯)

**ಸ್ವಚ್ಛಂದಗಾಮಿ** – ಮನಸ್ಸು ಬಂದಂತೆ ತಿರುಗುವವನು (ಕಮಳಾಕ್ಷಂ ಸ್ವಚ್ಛಂದಗಾಮಿ ಯಮುನಾಕಚ್ಛಂ ಬಿಡಿದೇಟ್ಟಿರುತ್ತುಮೊಂದವಸರದೊಳ್: **ಜಗನ್ನಾವಿ,** ೩. ೭೯)

**ಸ್ವಚ್ಛಂದಮಿಟ್ಟು** – ಇಚ್ಛಾಮರಣ, ಬೇಕೆಂದಾಗ ಸಾಯುವುದು (ಅಂತು ಶರಪಂಜರದೊಳ್ ಒಱಗಿಯುಂ ಒಡಲಿಂ ಪತ್ತುವಿಟ್ಟು ಪೋಪ ಜೀವಮಂ ಪೋಗಲೀಯದೆ ಸ್ವಚ್ಛಂದಮಿಟ್ಟು ಅಪ್ಪುದಱಿಂ ಉತ್ತರಾಯಣಂ ಬರ್ಪನ್ನಂ ಇರಿಸಿದಂ: **ಪಂಪಭಾ,** ೧೧. ೪೭ ವ)

**ಸ್ವದಾರಸಂತೋಷ** – ತನ್ನ ಹೆಂಡತಿಗೆ ಕೊಡುವ ಸಂತೋಷ, ತನ್ನ ಹೆಂಡತಿಯಿಂದ ಪಡೆಯುವ ಸಂತೋಷ (ಕೊಲ್ಲದ ಪುಸಿಯದ ಕಳ್ಳದ ಸ್ವದಾರ ಸಂತೋಷಂ ಪರಿಮಿತ ಪರಿಗ್ರಹಂ ಇಂತು ಅಯ್ದು ಅಣುವ್ರತಂಗಳಂ: **ವಡ್ಡಾರಾ,** ಪು ೨೨, ಸಾ ೧೭)

**ಸ್ವಧಾಕಾರ** – ಹವಿಸ್ಸಿನ ಅರ್ಪಣೆಯ ಕಾಲದಲ್ಲಿ ಹೇಳುವ ಮಂತ್ರ (ಚಾರುತರಯಜ್ಞವಿದ್ಯಾಪಾರಗರ ರವಂಗಳಿಂ ಸ್ವಧಾಕಾರ ವಷಟ್ಕಾರ ಸ್ವಾಹಾಕಾರೋಂಕಾರಧ್ವನಿ ನೆಗೞೆ ನೆಗಟ್ಟುದಾಹುತಿಧೂಮಂ: **ಪಂಪಭಾ,** ೬. ೩೪)

**ಸ್ವನ** – ಶಬ್ದ, ನಾದ (ಕೋಪದಿಂ ಪುದಿದು ಪಲ್ಮೊಱೆವಂದಮಾಯ್ತು ಕುಟ್ಮಳಿತ ಸರೋರುಹೋದರಗತ ಉನ್ಮದ ಭೃಂಗಝುಣತ್ಕೃತಸ್ವನಂ: **ಶಾಂತೀಶ್ವಪು,** ೧೧. ೧೦)

**ಸ್ವಪಕ್ಷ** – ತನ್ನ ಗುಂಪು (ಪರಪಕ್ಷದೂಷಣಪುರಸ್ಸರಂ ಅನೇಕೋಪಪತ್ತಿಗಳಿಂ ಸ್ವಪಕ್ಷಸ್ಥಾಪನಂಗೆಯ್ದು: **ಆದಿಪು,** ೨. ೨೨ ವ)

**ಸ್ವಪನ** – ನಿದ್ದೆ (ಸ್ವಪನಂ ಸ್ವಾಪಂ: **ಅಭಿಧಾವ,** ೨. ೨. ೨೦)

**ಸ್ವಪರಾಂತಸ್ಥವಿದ** – ತನ್ನ ಮತ್ತು ಇತರರ ಒಳಗನ್ನು ತಿಳಿದವನು (ಅವಿನೀತನುಂ ಅಪ್ರತಿಷ್ಠನುಂ ಸ್ವಪರಾಂತಸ್ಥವಿದನುಂ ಅಲ್ಲದ ಅರಸನಂ ಅಱೆದಿಂಬಟಿಕ್ಕೆ ಸಮೀಪಕ್ಕೆ ಪೋಗಿ ದುರಭಿಮಾನದಿಂ ನುಡಿವುದು ತಕ್ಕುದಲ್ಲಂ: **ಪಂಚತಂತ್ರ,** ೮೫ ವ)

**ಸ್ವಪ್ನ** – ನಿದ್ದೆ (ಸುಖದುಃಖಗಳೆಂಬುದು ಸ್ವಪ್ನೇಂದ್ರಜಾಲ ಸನ್ನಿಭಂಗಳುಂ .. .. ಅಕ್ಕುಂ: **ಶಾಂತಿಪು,** ೮. ೧೩೨ ವ)

**ಸ್ವಪ್ನದರ್ಶನ** – ಕನಸು ಕಾಣುವಿಕೆ (ಮಹಾಶ್ಚರ್ಯ ಸ್ವಪ್ನದರ್ಶನೋತ್ಸವಾನಂತರಂ ಸಹಸ್ರಕಿರಣೋದಯ ಸಮಯದೊಳ್ .. .. ಒಪ್ಪುತ್ತಿರೆ: **ಜಗನ್ನಾವಿ,** ೨. ೭೭ ವ)

**ಸ್ವಭವ** – ದೇವರು (ಸ್ವಭವಮ ತ್ರಿವಿಕ್ರಮನವಂ ದಾಮೋದರಂ ಕೃಷ್ಣಂ ಅಬ್ಜವಾಸಾಪತಿ ವಿಷ್ಟರಶ್ರವ ಹೃಷೀಕೇಶಂ ಸುಪರ್ಣಧ್ವಜಂ: **ಅಭಿಧಾವ,** ೧. ೧. ೨೨)

**ಸ್ವಭಾವ** – ಹುಟ್ಟುಗುಣ; ಸ್ವಭಾವ ಪ್ರದೋಷ ಪ್ರಸಂಗಗುಣ ಪ್ರತಿಲೋಮ ಪೀಡಣ ಎಂಬ ಅರಸನ ವ್ಯಸನಗಳಲ್ಲಿ ಮೊದಲನೆಯದು (ಸ್ವಾಮಿ ಅಮಾತ್ಯ ಜನಪದ ಸುಹೃತ್ ಕೋಶ ದಂಡಮೆಂಬ ಏಟಂಗದೊಳೇಕಾಂಗಂ ವಿಕಳಮಾದೊಡಂ ಸ್ವಭಾವಮೆಂಬುದಕ್ಕುಂ: **ಪಂಚತಂತ್ರ,** ೧೩೭ ವ)

**ಸ್ವಭಾವವೈರಾಗ್ಯ** – ಹುಟ್ಟಿನಿಂದಲೇ ಬಂದ ವೈರಾಗ್ಯ (ಸ್ವಭಾವವೈರಾಗ್ಯಭಾವಮಂ ಸರ್ವಭವಾನುಭವವಿರಕ್ತತೆಯುಂ ದುರ್ಲಭಂ: **ಸುಕುಮಾಚ,** ೧೨. ೩೭)

**ಸ್ವಯಂಕೃತ** – ತಾನೇಮಾಡಿದ (ಅದಱೆಂದೀತನನುಯ್ದು ಸ್ವಯಂಕೃತ ಅನರ್ಥಮಂ ಮಾಡಿಕೊಳ್ವುದಿದಾವಕಾರಣ ಎಂದಾತ್ಮಗತಂ ಬಗೆದು: **ಪಂಚತಂತ್ರ,** ೧೦೭ ವ)

**ಸ್ವಯಂ ಚತುಷ್ಪದಾದಿ ಸೇವ್ಯಃ** – ತಾನು ನಾಲ್ಕು ಕಾಲಿನ ಪ್ರಾಣಿಗಳನ್ನು ತಿನ್ನುವವ (ಸ್ವಯಂ ಚತುಷ್ಪದಾದಿ ಸೇವ್ಯಃ ಎಂಬ ಭಿಧಾವಮಾತ್ರಮಲ್ಲದೆ ನೀನೆಂದಂತೆ ನೆಗಟ್ದು ಪುಲ್ಲ ಮೇಯಲಾಱೆಂ: **ಪಂಚತಂತ್ರ,** ೧೧೯, ವ)

**ಸ್ವಯಂಪ್ರಭು** – ತನಗೆ ತಾನೇ ಒಡೆಯನಾದವನು (ಲೀಲಾಯಿತಂ ಸ್ವಯಂಪ್ರಭುಗುಚಿತಂ: **ಜಗನ್ನಾವಿ,** ೩. ೭೦)

**ಸ್ವಯಂಬುದ್ಧ** – ತನಗೆ ತಾನೇ ಜ್ಞಾನಿಯಾದವನು (ನೀಂ ಸ್ವಯಂಬುದ್ಧನೆ ಆರ್ ಪ್ರತಿರೋಧಿಸುವರ್ ನಿನ್ನಂ: **ಶಾಂತಿಪು,** ೯. ೭೧)

**ಸ್ವಯಂಭು** – ತಾನಾಗಿ ಉದ್ಭವಿಸಿದವನು (ಧರೆಯೊಳಗೆ ಬಗೆದು ಪೊಣ್ಮಿದ ಕಲ್ಲಂ ಮಂದಮತಿಗಳ್ ಸ್ವಯಂಭು ಅದೆಂದು ಊಳ್ವರ್: **ಸಮಯಪ,** ೮. ೨೭)

**ಸ್ವಯಂಭೂರಮಣ** – [ಜೈನ] ಮಧ್ಯಲೋಕದ ಒಂದು ಸಾಗರ (ಮುಕ್ತಿಸ್ಥಿರ ಸೌಖ್ಯಾಂಭಸ್ವಯಂಭೂರಮಣ ಜಲಧಿ ರಕ್ಷಿಕ್ಕೆ ಶಾಂತೀಶನೆಮ್ಮಂ: **ಶಾಂತಿಪು,** ೧. ೧)

**ಸ್ವಯರಹಿತಂ** – ಸ್ವಾರ್ಥವಿಲ್ಲದವನು (ಕ್ಷಯವೃಜಿನಂ ಜಿನಸಮಯಂ ಸ್ಮಯರಹಿತಂ ಹಿತವಚಃಪ್ರಿಯಂ ಪ್ರಿಯಧರ್ಮಂ ಪ್ರಯತಯುತಂ ಸದ್ವಿನಯಂ ನಯವಾಕ್ಪ್ರಸರಂ ಸರಸ್ವತೀಮುಖಮುಕುರಂ: **ಸುಕುಮಾಚ,** ೧. ೫೧)

**ಸ್ವಯೋನಿಂ ಮೂಷಿಕಾಪ್ರಾಪ್ತಾ** – ಹೆಣ್ಣು ಇಲ್ಲಿಯೂ ತನ್ನ ಮುಂಚಿನ ರೂಪವನ್ನೇ ಪಡೆಯಿತು (ಸ್ವಯೋನಿಂ ಮೂಷಿಕಾಪ್ರಾಪ್ತಾ ಎಂಬ ಕಥೆಯಂ ಕೇಳ್ದು ಅಱೆವುದು: **ಪಂಚತಂತ್ರ,** ೩೫೫ ಶ್ಲೋಕ ಮತ್ತು ವ)

**ಸ್ವರಗತ** – ಸಂಗೀತದ ಹನ್ನೆರಡು ಬಗೆಯ ಸ್ವರ ಹೊರಡಿಸುವ ಬಗೆಗಳು (ವೀಣೆಯಂ ಕೊಂಡು ಮುನ್ನಂ ಸರಸ್ವತಿ ಗ್ರಾಮ ಶ್ರುತಿ ಮೂರ್ಛನೆ ಆನನಂ ಸ್ಥಾನ ವೃತ್ತಿ ಶುಷ್ಕ ಸಾಧಾರಣ ಜಾತಿ ವರ್ಣ ಅಳಂಕಾರಮೆಂಬೀ ದ್ವಾದಶವಿಧಮಪ್ಪ ಸ್ವರಗತದೊಳಂ: **ಹರಿವಂಶ,** ೨. ೩೧ ವ)

**ಸ್ವರಾಜ್ಯ** – [ಜೈನ] ಒಂದು ಗರ್ಭಾನ್ವಯಕ್ರಿಯೆ, ಜಿನನಾಗುವವನಿಗೆ ಮಾಡುವ ಪಟ್ಟಾಭಿಷೇಕ (ಯೌವರಾಜ್ಯ ಸ್ವರಾಜ್ಯ ಚಕ್ರಲಾಬ ದಿಗ್ವಿಜಯ ಚಕ್ರಾಭಿಷೇಕ .. .. ಎಂಬ ಅಯ್ವತ್ತಮೂಱು ಗರ್ಭಾದಿ ನಿರ್ವಾಣಪರ್ಯಂತಂಗಳಪ್ಪ ಗರ್ಭಾನ್ವಯಕ್ರಿಯೆಗಳಂ: **ಆದಿಪು,** ೧೫. ೧೫ ವ)

**ಸ್ವರವೇಧಿವಿದ್ಯೆ** – ಶಬ್ದವೇಧಿ, ಧ್ವನಿ ಕೇಳಿ ಬಾಣ ಬಿಡುವ ಕೌಶಲ (ಸ್ವರವೇಧೀವಿದ್ಯೆಯಂ ತನ್ನರಸಿಗೆ ಮೆಱೆಯಲ್ಕೆ ದೇವಿ ನೋಡೆನುತೆಚ್ಚಂ: **ಯಶೋಧಚ,** ೪. ೩೮)

**ಸ್ವರು** – ಸಿಡಿಲು, ವಜ್ರಾಯುಧ (ಪವಿ ಶತಧಾರಾ ದಂಭೋಳಿ ವಜ್ರಂ ಇಂದ್ರಾಸ್ತ್ರಂ ಅಶನಿ ಕುಲಿಶಂ ಸ್ವರು ಶಂಭ ಇನಿತ್ತುಂ ತದೇಕಾರ್ಥವಾಚಿ: **ಅಭಿಧಾವ,** ೧. ೧. ೩೮)

**ಸ್ವರ್ಗ** – ದೇವಲೋಕ (ತ್ರಿದಿವಂ ಸ್ವ ಸ್ವರ್ಗಂ ಸುರಸದನಂ ನಾಕಂ ತ್ರಿವಿಷ್ಟಪಂ ದಿವಂಎಂದಿಂತಿದು ತಾಣಮರ್ತ್ಯಭವನಂ: **ಅಭಿಧಾವ,** ೧. ೧. ೩೦); [ಜೈನ] ಸೌಧರ್ಮ, ಈಶಾನ, ಸನತ್ಕುಮಾರ, ಮಾಹೇಂದ್ರ, ಬ್ರಹ್ಮ, ಬ್ರಹ್ಮೋತ್ತರ, ಲಾಂತವ, ಕಾಪಿಷ್ಠ, ಶುಕ್ರ, ಮಹಾಶುಕ್ರ, ಶತಾರ, ಸಹಸ್ರಾರ, ಅನತ, ಪ್ರಾಣತ, ಆರಣ, ಅಚ್ಯುತ ಎಂಬ ಹದಿನಾರು ಸ್ವರ್ಗಗಳು, (ಸ್ವರ್ಗಲೋಕದ ವ್ಯಾವರ್ಣನೆಯಂ ಮಾಡುವಲ್ಲಿ ಪನ್ನೆರಡನೆಯ ಸಹಸ್ರಾರಕಲ್ಪಮಂ ನೋಡುತ್ತುಮಿರ್ಪುದುಂ: **ಧರ್ಮಾಮೃ,** ೮. ೨೦ ವ), ನೋಡಿ **'ಷೋಡಶಕಲ್ಪ'**

**ಸ್ವರ್ಣದಿ** – [ಸ್ವರ್+ನದಿ] ದೇವಗಂಗೆ (ಇಂದುಖಂಡಂ ಅಹಿಕುಂಡಳಂ ಉದ್ವತ್ ಸ್ವರ್ಣದಿ ಭಾಳವಿಲೋಚನಂ .. .. ನಿಜರೂಪಂ ತೋಱೆದಂ: **ರಾಜಶೇವಿ,** ೧೪. ೮೬)

**ಸ್ವರ್ಣಪಾಷಾಣ** – ಚಿನ್ನದ ಅದಿರು (ಎಂತು ಸ್ವರ್ಣಪಾಷಾಣದೊಳ್ ಸುವರ್ಣಮುಂಟಾಗಿಯುಮ ದಹನತಪನ ಪಿಂಡಿಬದ್ಧನಾದಿ ಕ್ರಿಯೆವೆಱೆದನ್ನೆಗಂ ಪೊನ್ನಾಗದು: **ವಡ್ಡಾರಾ,** ಪು. ೧೦೦. ಸಾ. ೨೭)

**ಸ್ವರ್ಣಸ್ತೇಯಿ** – ಚಿನ್ನ ಕದಿಯುವವನು (ಪ್ರಾಯಶ್ಚಿತ್ತಂ ಸ್ವರ್ಣಸ್ತೇಯಿಗೆ .. .. ಗುರುತಳ್ಪಗತಂಗೆ ಆಯುಧದಿಂದಕಟ ಲಿಂಗವಿಚ್ಛಿತ್ತಿ ಗಡ: **ಸಮಯಪ,** ೧೧. ೭೩)

**ಸ್ವರ್ಧುನಿ** – ಸ್ವರ್ಣದಿ (ಶಶಿಕಲಾ ಸ್ವರ್ಧುನೀಕಜೂಟಂ ಅಂಗೋದ್ಭವಸ್ಮಾಲಿಪ್ತಂ ಅಕ್ಷಿತ್ರಯಕಲಿತಂ ಅನಂತಾಹಿಭೂಷಂ: **ಶಬರಶಂ,** ೫. ೨)

**ಸ್ವರ್ಧೌರೇಯ** – ಇಂದ್ರ, ಸ್ವರ್ಗದ ನಾಯಕ (ಸ್ವರ್ಧೌರೇಯರಿಂದ್ರಾದಿಗಳೆ ದೊರೆಯೆ ತಾಮೆಂದು ಬಾಣಂ ಕರಂ .. .. ಮದಮೊದವಿಂ ನಿಚ್ಚಲುಂ ಪೆರ್ಚಿ ನಿಲ್ವಂ: **ಜಗನ್ನಾವಿ,** ೧೭. ೮೪)

**ಸ್ವರ್ಭವ** – ದೇವತೆ (ಸ್ವರ್ಭವಪೂಜಿತ ನಿರುಪಮ ನಿರ್ಭಯ ಪೊನ್ನಾಂಬಲೇಶ ಜಯ ಭವನಾಶಾ: **ತ್ರಿಷಷ್ಟಿಪು,** ೭. ೬೦)

**ಸ್ವಸ್ತಿಕ** – ಒಂದು ಮಂಗಳಕರ ಚಿಹ್ನೆ (ವೃಷಭಜಿನಾವತರಣ ಮಂಗಳನಿಹಿತ ಕಳಶದರ್ಪಣದಂತೆ ಪ್ರಶಸ್ತ ಸ್ವಸ್ತಿಕಾಯಮಾನಸ್ವಸ್ತಿಕಾದಿ ನಾನಾ ಮಣಿಮಯ ಪ್ರಾಸಾದಂಗಳೊಳಂ: **ಆದಿಪು,** ೬. ೧೦೬ ವ); ಒಂದು ವಾಸ್ತುಶಿಲ್ಪ ರಚನೆ, ಹೆಂಗಸರು ತಮ್ಮ ಕೈಗಳನ್ನು ಕತ್ತರಿಯಾಕಾರದಲ್ಲಿ ಮಡಿಸಿ ತೆರೆದ ಮೊಲೆಗಳನ್ನು ಮುಚ್ಚಿಕೊಳ್ಳುವ ಭಂಗಿ (ಮನಸಿಜನೃಪಲೀಲಾಲಾಂಛನಂ ಸ್ವಸ್ತಿಕಂ ಸ್ತ್ರೀಜನದೊಳೆಸೆದು ನಿಂದತ್ತು: **ಆದಿಪು,** ೧೧. ೧೫೨)

**ಸ್ವಸ್ಥಾನ** – [ಜೈನ] ಜೀವಿಯ ಮೂರು ಅವಸ್ಥೆಗಳಲ್ಲಿ ಒಂದು (ನಿರವಶೇಷ ಮೋಹೋಪಶತಮೋದ್ಭೂತ ಯಥಾಖ್ಯಾತ ಚಾರಿತ್ರಸಂಪನ್ನಂ ಅಂತರ್ಮುಹೂರ್ತದಿಂ ಸ್ವಸ್ಥಾನಸ್ಥಿತನಾಗಿ: **ಆದಿಪು,** ೬. ೩೩ ವ)

**ಸ್ವಾಂಗಸ್ಪೃಷ್ಟಕಸಹಿತಂ** – ತಾನು ತೊಟ್ಟ ಆಭರಣಗಳೊಡನೆ (ಅಜಿತಂಗಿತ್ತಂ ಮಹಿಪಂ ಸ್ವಾಂಗಸ್ಪೃಷ್ಟಕ ಸಹಿತಂ ಮಣಿಕನಕವಸ್ತುವಾಹನಚಯಮಂ: **ಪಂಚತಂತ್ರ,** ೨೬೭)

**ಸ್ವಾಂತ** – ಮನಸ್ಸು, ಹೃದಯ (ಜನಪತಿ ಕುಂಕುಮವಾರಿಯಂ ಅನುನಯದಿಂ ಪೊಯ್ಯೆ ರಯ್ಯಮಾಗಿರ್ದಳ್ ದೇವಿ ನಿಜ ಸ್ವಾಂತದೊಳ್ ಉಳ್ಳಿದ ಅನುರಾಗಂ ತನುವಿನಲ್ಲಿ ತಲೆದೋಜಿದವೊಲ್: **ಶಾಂತೀಶ್ವಪು,** ೧೦. ೧೭೪)

**ಸ್ವಾಗತವಚನ** – ಅತಿಥಿಯನ್ನು ಬರಮಾಡಿಕೊಳ್ಳುವ ಕುಶಲ ವಚನ (ಭದ್ರಾಸನದೊಳ್ ಕುಳ್ಳಿರ್ದು ಸ್ವಾಗತವಚನಪುರಸ್ಸರಂ ಸಂಭಾಷಣಪ್ರಸ್ತಾವದೊಳ್ ವಸ್ತುವಿಚಾರಂ ಪುಟ್ಟೆ: **ಶಾಂತಿಪು,** ೮. ೧೨೬ ವ)

**ಸ್ವಾತಿ** – ಸ್ವಾತಿ ಮಳೆ (ಯತಿತಪಃ ಸ್ವಾತಿ ಬೆದಱಿಟ್ಟೆ ಬಳೆದುದು ಭೂತಳಪತಿಚಿತ್ತದಲ್ಲಿ ತತ್ತ್ವವಿವೇಕಂ: **ಪಾರ್ಶ್ವನಾಪು,** ೧೨. ೩೫)

**ಸ್ವಾದನೀಯ** – ರುಚಿಕರವಾದ [ತಿನಿಸು] (ದಳತ್ಪುಷ್ಪತತಿ ಘ್ರಾಣಿಯಂ ಉದ್ಯತ್ ಫಲರಸವಿಸರ ಸ್ವಾದನೀಯಂ .. .. ಸತತಂ ಪೌರಗೆ ಪಂಚೇಂದ್ರಿಯಸುಖದೊದವಂ ನಂದನಂ ಮಾಟ್ಪುದೆಂದುಂ: **ಚಂದ್ರಪ್ರಪು,** ೧. ೧೧೨)

**ಸ್ವಾದು** – ಮನೋಹರವಾದುದು (ಸ್ವಾದು ಮನೋಹಾರಿ: ಅಭಿಧಾವ, ೧. ೧೩. ೩೦); ರುಚಿಯಾದ (ಸ್ವಾದು ಮನೋಜ್ಞಂ ಇನಿದುಂ: **ಅಭಿಧಾವ,** ೩. ೧. ೨೨)

**ಸ್ವಾಧ್ಯಾಯ** – [ಜೈನ] ಶ್ರಾವಕನ ಷಟ್ಕರ್ಮಗಳಲ್ಲಿ ಒಂದು, ಧರ್ಮಶಾಸ್ತ್ರಗಳ ಅಭ್ಯಾಸ, ಇದರಲ್ಲಿ ವಾಚನ, ಪೃಚ್ಛನೆ, ಅನುಪ್ರೇಕ್ಷೆ, ಆಮ್ನಾಯ, ಧರ್ಮೋಪದೇಶ ಎಂಬ ಐದು ಬಗೆಗಳು (ನಿಮ್ಮಡಿ ನೀಮೀ ಚಾತುರ್ಮಾಸಂ ಇಲ್ಲಿರ್ಪನ್ನೆಗಂ ಸ್ವಾಧ್ಯಾಯ ಅನುಷ್ಠಾನ ನಿಯಮದಿಂ ಮೋನಗೊಂಡಿರ್ಪುದು ಇದಂ ನಿಮ್ಮನಾಂ ಕಯ್ಯನೊಡ್ಡಿ ಬೇಡಿದೆನೆಂಬುದುಂ ಮುನೀಶ್ವರರ್ ಏಗೊಂಬುದುಂ: **ಸುಕುಮಾಚ,** ೧೧. ೩೮ ವ), ನೋಡಿ **'ಷಟ್ಕರ್ಮ'**

**ಸ್ವಾಪತೇಯಪತಿ** – ಸಂಪತ್ತಿನ ಒಡೆಯ, ಕುಬೇರ (ಸುರಪತಿ ಬೆಸಸೆ ಸಮಗ್ರಾದರದಿಂದಂ ಸ್ವಾಪತೇಯಪತಿ ಸಕಲ ಜಗದ್ಗುರುಗೆ ಜಗನ್ಮಂಡನಮಂ ವಿರಚಿಸಿದಂ ಸಮವಸರಣ ಭೂಮಂಡಲಮಂ: **ಅಜಿತಪು,** ೭. ೧೬)

**ಸ್ವಾಭಾವಿಕ** – [ಜೈನ] ತೀರ್ಥಂಕರನಿಗೆ ಒದಗುವ ಮೂವತ್ತನಾಲ್ಕು ಅತಿಶಯಗಳಲ್ಲಿ ಒಂದು (ಸ್ವಾಭಾವಿಕ ಕರ್ಮಕ್ಷಯಂ ದೇವಕೃತಂಗಳೆಂಬ ಮೂವತ್ತುನಾಲ್ಕುಂ ಅತಿಶಯಂಗಳೊಳ್ ಒಂದುಗುಂದದಿರೆಯುಂ: **ಶಾಂತಿಪು,** ೧೨. ೧೪ ವ)

**ಸ್ವಾಮಿ** – ಒಡೆಯ (ಪ್ರಭು ಪರಿವೃಢಂ ಈಶಂ ಸ್ವಾಮಿ ಭರ್ತೃ ಪತಿ ನಾಥಂ ಅಧಿಪಂ ಈಶ್ವರಂ ಇಂದ್ರಂ: **ಅಭಿಧಾವ,** ೨. ೧. ೯); ಷಣ್ಮುಖ (ಷಣ್ಮುಖಂ ಮಹಾಸೇನಂ ಕ್ರೌಂಚಾರಿ ಗುಹಂ ಸೇನಾನಿ ಮಯೂರರಥಂ ಸ್ವಾಮಿ ಕಾರ್ತಿಕೆಯಂ ಸ್ಕಂದಂ: **ಅಭಿಧಾವ,** ೧. ೧. ೧೮)

**ಸ್ವಾಮಿವಿರೋಧ** – ಒಡೆಯನಿಗೆ ಮಾಡುವ ದ್ರೋಹ (ವಿಶ್ವಾಸಘಾತಂ ವನದ್ರುಮನೀಡದೊಳ್ ಸ್ವಾಮಿವಿರೋಧಂ ತಾರಕಚಿತ್ರಕಥೆಯೊಳ್ .. .. ಅಕ್ಕುಮಲ್ಲದೆ ಜನಪದಜನಂಗಳೊಳಿಲ್ಲ: **ಜಗನ್ನಾವಿ,** ೨. ೧ ವ)

**ಸ್ವಾಯತ್ತ** – ಸ್ವಾಧೀನಮಾಡಿಕೊಂಡಿರುವ (ಶಕ್ತಿಯಂ ಸಿಂಹಪೀಠಂ ಸ್ವಾಯತ್ತಂ ಮಾಟ್ಪಿನಂ .. .. ತ್ರಿಭುವನ ವಿನುತಂ ನೇಮಿ ರಕ್ಷಿಕ್ಕೆ ನಮ್ಮಂ: **ನೇಮಿನಾಪು,** ೧. ೧)

**ಸ್ವಾರ್ಥ** – ತನ್ನ ಪದಾರ್ಥಗಳು (ಅದಂ ಕಂಡು ವರ್ಧಮಾನಂ ಸ್ವಾರ್ಥಸಮೇತಂ ದಯಾಪರಿಚೇತಂ ಮೂಱುದಿವಸಮಲ್ಲಿ ಉಪ್ಪಯಣಂಗೆಯ್ದು: **ಪಂಚತಂತ್ರ,** ೭೬ ವ)

**ಸ್ವಾರ್ಥಸಿದ್ಧಿ** – ತನ್ನ ಇಷ್ಟಪೂರೈಕೆ (ಆ ಧೂರ್ತಂ ಸ್ವಾರ್ಥಸಿದ್ಧಿಯಪ್ಪನ್ನೆವರಂ ಇಂತಿರ್ದಪನಲ್ಲದೆ ತನ್ನ ದುರ್ಜನತ್ವಮನೆಂತುಂ ಬಿಡಂ: **ಪಂಚತಂತ್ರ,** ೧೭೩ ವ)

**ಸ್ವಾಹಾಕಾರ** – ಯಜ್ಞದ ವೇಳೆ ಹವಿಸ್ಸಿನ ಅರ್ಪಣೆಯ ಕಾಲದಲ್ಲಿ ಮಾಡುವ 'ಸ್ವಾಹಾ' ಎಂಬ ಪದೋಚ್ಚಾರ ಮಂತ್ರ (ಚಾರುತರಯಜ್ಞವಿದ್ಯಾಪಾರಗರ ರವಂಗಳಿಂ ಸ್ವಧಾಕಾರ ವಷಟ್ಕಾರ ಸ್ವಾಹಾಕಾರೋಂಕಾರಧ್ವನಿ ನೆಗೞೆ ನೆಗಟ್ಟುದಾಹುತಿಧೂಮಂ: **ಪಂಪಭಾ,** ೬. ೩೪)

**ಸ್ವಾಹಾಪತಿ** – ಅಗ್ನಿ (ಸುರಪತಿಯುಂ ಸ್ವಾಹಾಪತಿಯುಂ .. .. ಧನಪತಿಯುಂ ಪಶುಪತಿಯುಂ ಎನಿಸಿದಾಶಾಪತಿಗಳ್: **ಪುಷ್ಪದಂಪು,** ೧೦. ೮೦)

**ಸ್ವಾಹಾಪ್ರಿಯ** – ಅಗ್ನಿ (ವಸು ವೈಶ್ವಾನಂ ಆಶುಶುಕ್ಷಣಿ ಕುತಾಶಂ ಕೃಷ್ಣವರ್ತ್ಮಂ ವಿಭಾವಸು ಸಪ್ತಾರ್ಚಿ ಕೃಶಾನು ಅಗ್ನಿ ವಹನಂ ಹವ್ಯಾಶನಂ ವಹ್ನಿ ವಾಯುಸಖಂ ಜ್ವಾಲಿ ಕಪಿಟಯೋನಿ ಅನಲಂ ಸ್ವಾಹಾಪ್ರಿಯಂ ಜಾತವೇದಸನಪ್ಪಿತ್ತಮುಷರ್ಬುಧಂ ಹುತವಹಂ ಧೂಮಧ್ವಜಂ ಪಾವಕಂ: **ಅಭಿಧಾವ,** ೧. ೧. ೩೯)

**ಸ್ವಿನ್ನಾಂಗ** – ಬೆವರುವ ದೇಹ (ಸುಕುಮಾರ ಕುಮಾರನಕಂಟಕಿತಾಂಗಪ್ರಕೃತಿಗಂ ವಧೂಸ್ವಿನ್ನಾಂಗಪ್ರಕೃತಿಗಂ ಅನಂಗನೇಂ ಪಚ್ಚಿ ಕೊಟ್ಟನೋ ಬೇಱೆವೇಱೆ ರಸಮಂ ರಸೆಯೊಳ್: **ಶಾಂತಿಪು,** ೬. ೧೪)

**ಸ್ವೀಕರಿಸು** – ತನ್ನದಾಗಿಸಿಕೊ (ಅರಸುಗಳ್ ತಮ್ಮ ಪೊರೆಯೊಳಿರ್ದು ಓಲೈಸುವ ಮನುಜಂ ವಿದ್ಯೆಯಿಲ್ಲದವನಾದೊಡಂ ಅಕುಲೀನನಾದೊಡಂ, ಅಯೋಗ್ಯನಾದೊಡಂ ಸ್ವೀಕರಿಸುವರ್: **ಪಂಚತಂತ್ರ,** ೮೫, ಶ್ಲೋಕ ೧೧ ಟೀಕೆ); ಅರ್ಥೈಸಿಕೊ (ಒಂದೆರಡು ಮೂಱೆಂದು ಪದಾರ್ಥಮನೆಣಿಸುವೆಡೆಯೊಳ್ ಏಕವಚನ ದ್ವಿವಚನ ಬಹುವಚನಂಗಳಂ ಸ್ವೀಕರಿಸುವರ್: **ಶಬ್ದಮದ,** ೧೦೪ ವೃತ್ತಿ); ಪಡೆ (ಶ್ರೀಕೇಳೀನಿಳಯಂ ರಮ್ಯಾಕೃತಿ ದಿವಸಾನುಸಾರದಿಂ ಪುದಿದೊಡವಂ ಸ್ವೀಕರಿಸಿದಂ

ಅಮಳಿನ ಕಮಳಾಕರಮೆನೆ ಜೈನಮನೋಹರಚರಿತಂ: **ಚಂದ್ರಪ್ರಪು,** ೪. ೧)

**ಸ್ವೇಚ್ಛಾಮೃತ್ಯು –** ಬಯಸಿದಾಗ ಸಾಯುವುದು (ದೇವವೃತ್ತಿಯುಂ ಸ್ವೇಚ್ಛಾಮೃತ್ಯುವುಂ ಕುರುಕುಲಪಿತಾಮಹನುಂ ಆಹವಭೀಷ್ಮನುಂ ಎನಿಸಿದ ಭೀಷ್ಮನ ಶರಶಯನದೊಳು ಸುಯೋಧನಂ ಚಿಂತಾಕ್ರಾಂತನಾಗಿ: **ಗದಾಯು,** ೨. ೧೦ ವ)

**ಸ್ವೇದ –** ಬೆವರು (ವಿಗಳತ್ ಸ್ವೇದ ಆರ್ದ್ರಂಗಳಪ್ಪ ಕರಕಮಲಂಗಳಿಂ ಪ್ರಿಯತಮನ ತೊಡೆಯ ಮೇಗಣ್ಗೆ ತೆಗೆದು: **ಕಾದಂಸಂ,** ೭. ೩೬ ವ)

**ಸ್ವೇದಜಳ –** ಬೆವರು (ನಿಷ್ಪ್ರಯೋಜನ ಸ್ವೇದಜಳೋದ್ಗಮಮುಂ ನಿಷ್ಪಂದನಾಸಾಸ್ಫುರಿತಮುಂ ನಿಷ್ಕಾರುಣಕಾಯಕಂಪನಮುಂ: **ಆದಿಪು,** ೧೪. ೮೧ ವ)

**ಸ್ವೈರ –** ಸ್ವೇಚ್ಛೆ (ಸ್ವೈರದಿನಾಂ ಪೋಗುತ್ತಿರೆ ತಾರಾಪಥದೊಳ್ ಪಳಂಚಿದುದು ಕಿವಿಯಂ ಹಾಹಾರವಂ: **ಪಂಪರಾ,** ೧೦. ೫೭)

**ಸ್ವೈರಚಾರ –** ಮಂದವಾಗಿ ಚಲಿಸುವವನು (ಚೇತಃಪ್ರೀತಿಯಂ ಪೆರ್ಚಿಸುದುವುದುಪವನ ಸ್ವೈರಚಾರಂ ಸಮೀರಂ: **ಮಲ್ಲಿನಾಪು,** ೨. ೩೧)

**ಸ್ವೈರಮಾರ್ಗ –** ತನ್ನದೇ ಆಯ್ಕೆಯ ದಾರಿ (ಜಿನಮಾರ್ಗಂ ಸವ್ವೈರಮಾರ್ಗಂ ಜಿನಮತಮೆ ಮತಂ ಜೈನಧರ್ಮಂ ಸ್ವಧರ್ಮಂ: **ಸುಕುಮಾಚ,** ೧. ೪೯)

**ಸ್ವೈರಾಚಾರ್ಯ –** ಮನಬಂದಂತೆ ನಡೆಯುವ ಯತಿ (ಸ್ವೈರಾಚಾರ್ಯರ ಶಾಸ್ತ್ರದೊಳ್ ಆರಿಂದಂ ಪಿರಿಯರೆನಿಸದ ಗೊರವರ್: **ಸಮಯಪ,** ೮. ೪೨)

**ಸ್ವೈರಾಲಾಪ –** ಮನಸ್ಸಿಗೆ ಬಂದಂತೆ ಮಾತಾಡುವುದು (ಒಂದು ರಮಣೀಯಸ್ಥಾನದೊಳ್ ಪರಸ್ಪರ ಸ್ವೈರಾಲಾಪದಿಂದಿರ್ದ ವಿಟಜನದೊಳೊರ್ವಂ: **ಜಗನ್ನಾವಿ,** ೧೬. ೧೨೯ ವ)

**ಸ್ವೈರಿಣಿ –** ವ್ಯಭಿಚಾರಿಣಿ (ಸ್ವೈರಿಣಿ ಬಗೆ ಬಂದಾಗಳೆ ಮಾರಕ್ರೀಡೆಯನೊಡರ್ಚಲೆಂದು ಉಪಪತಿಯಂ ದಾರಕನಂ ಕೊಲವೇಟ್ಟಳ್: **ಪಂಪರಾ,** ೮. ೫೨)

**ಸ್ವೋದರಪೂರಣ –** [ಸ್ವ+ಉದರಪೂರಣ] ತನ್ನ ಹೊಟ್ಟೆ ಹೊರೆದುಕೊಳ್ಳುವುದು (ಶುದ್ಧಚಿತ್ತನಾಗಿ ಸ್ವೋದರಪೂರಣ ಮಾತ್ರಕ್ಕೆ ತಕ್ಕನಿತನೇ ಸ್ವೀಕರಿಸಿ ನಿಶ್ಚಿತಮಿರ್ಪುದುಂ: **ಪಂಚತಂತ್ರ,** ೧೧೯ ವ)

# ಹ

**ಹಂಗ –** ಶಕುನದ ಹಕ್ಕಿ (ಗಂಡಾದ ಅಕಾರಾಂತ ನಪುಂಸಕಕ್ಕೆ: ಕೋಣಂ ಹಂಗಂ ಹಸುಬಂ ಸರ್ಪಂ ಗರುಡಂ: **ಶಬ್ದಮದ,** ೧೩೨ ಪ್ರ)

**ಹಂತಿ –** [ಪಙ್ತಿ] ಸಾಲು (ಆನೆಗಳ್ ಕೆದಱದೆ ಹಂತಿಗೊಂಡ ನೆಗೞಿಂ ಪೊಸತೇರ್ ಪಡಗಂ ನೆಗೞ್ಚಿ ಪೆರ್ಚಿದ ಕಡಲು ಎಂಬಿನಂ: **ಕಬ್ಬಿಗಕಾ,** ೧೬೨)

**ಹಂತಿದಪ್ಪು –** ಸಾಲು ತಪ್ಪು (ಪೊರ್ಕುಟಿಯಂದಮೆ ಹಂತಿದಪ್ಪಿ ತಾಱುಂಬಟೆಯುಮ ತೆರಳ್ದ ಕುರುಳುಣ್ಮೆ ಬೆಮರ್ .. .. ಕೂಟದೊಂದು ಸವಿಯಂ ಪಿಸುಣಾಡುವೀ ಲತಾಂಗಿಯಾ: **ಚಂದ್ರಪ್ರಪು,** ೮. ೭೨)

**ಹಂತುಕಾಮ –** ಕೊಲ್ಲಬಯಸುವವನು (ಎಂದು ಹಂತುಕಾಮಂ ಧೂಮಕೇತು ಅಂತರಿಕ್ಷದಿಂ ಬರುತ್ತ ಈ ಕ್ಷಿತಿಯಂ ನಿರೀಕ್ಷಿಸುವುದುಂ: **ಕರ್ಣನೇಮಿ,** ೭. ೧೧೪ ವ)

**ಹಂಸ –** ಒಂದು ಪಕ್ಷಿ, ಮರಾಲ (ಅಂತೆಚ್ಚ ಕೋಲಿಂ ಮುನ್ನಮೆ ಸುರುಳ್ದುರುಳ್ದು ಹಂಸಂ ವಿಧ್ವಂಸನಮನೆಯ್ದಿತ್ತು: **ಪಂಚತಂತ್ರ,** ೧೯೮ ವ); ಕಾಂತಿ, ಕಿರಣ (ಸುಮನಸ್ತೋಮ ಅಂಬುಜಾತ ಸಮುದಯಹಂಸಂ ನಮಗನುಪಮ ಸುಖಮನೀಗೆ: **ತ್ರಿಷಷ್ಟಿಪು,** ೧. ೩); ಸೂರ್ಯ (ಗ್ರಹಪತಿ ಹರಿದಶ್ವಂ ತಮೋವೈರಿ ಹಂಸಂ ಸವಿತಾರಂ ಸೂರಂ ಅರ್ಕಂ ದ್ಯುಮಣಿ ತರಣಿ ಸಪ್ತಾಶ್ವಂ ಆದಿತ್ಯಂ: **ಅಭಿಧಾವ,** ೧. ೧. ೬೪)

**ಹಂಸಗ್ರೀವ –** ಹಂಸದ ಕೊರಳು (ಹಂಸಗ್ರೀವನಿಹಿತ ಏಕಪಾದಂ ಇಳಾವಂದ್ಯಂ ಅನಿಂದ್ಯಂ ಅಬ್ಜಗರ್ಭಂ ಬಂದಂ: **ಪಂಪಭಾ,** ೧೨. ೧೩೮)

**ಹಂಸಗ್ರೀವನಿಹಿತ ಏಕಪಾದಂ –** ಹಂಸಪಕ್ಷಿಯಲ್ಲಿ ಇಟ್ಟ ಒಂದು ಪಾದವುಳ್ಳವನು (ಹಂಸಗ್ರೀವನಿಹಿತ ಏಕಪಾದಂ ಇಳಾವಂದ್ಯಂ ಅನಿಂದ್ಯಂ ಅಬ್ಜಗರ್ಭಂ ಬಂದಂ: **ಪಂಪಭಾ,** ೧೨. ೧೩೮)

**ಹಂಸಚ್ಛದ –** ಹಂಸದ ತುಪ್ಪುಳು (ಕರಿದಂತಂ ಚಮರೀರುಹಂ ಪುಲಿದೊವಲ್ ಹಂಸಚ್ಛದಂ .. .. ಚೂಡಾರತ್ನ ಮೆಂಬಿವನಾಂತರವನಾಂತರಸಂಜಾತಮಂ ಆತನೋಲಗಿಸಿದಂ ಸದ್ವಸ್ತುಸಂಘಾತಮಂ: **ಪುಷ್ಪದಂಪು,** ೫. ೧೦೨)

**ಹಂಸತೂಲತಳ್ಪ –** ಹಂಸದ ತುಪ್ಪುಳಿಂದ ಮಾಡಿದ ಹಾಸಿಗೆ (ಸೆಜ್ಜೆವನೆಯೊಳುಪಾಧಾನ ವಿರಾಜಮಾನ ಹಂಸತೂಲತಳ್ಪದೊಳ್ ವಿಶ್ರಮಿಸಿ: **ಪಂಪರಾ,** ೫. ೩೦ ವ)

**ಹಂಸಿ –** ಹೆಣ್ಣು ಹಂಸ (ಶ್ರೀಕಾಂತೆ ತನ್ನುರಃಪದ್ಮಾಕರದೊಳ್ ಹಂಸಿಯಂತೆ ನೆಲಸಿರೆ: **ಪುಷ್ಪದಂಪು,** ೩. ೧)

**ಹಂಸೀಭಾವ –** ಹಂಸದ ರೀತಿ (ಶ್ರೀವಿಶದವರ್ಣೆ ಮಧುರಾರಾವೋಚಿತೆ ಚತುರರುಚಿರ ಪದರಚನೆ ಚಿರಂದೇವಿ ಸ್ರಸ್ವತಿ ಹಂಸೀಭಾವದೆ ನೆಲೆಗೊಳ್ಗೆ ಕೂರ್ತು ಮನ್ಮಾನಸದೊಳ್; **ಕವಿರಾಮಾ,** ೧. ೩೦

**ಹಂಸೆ –** ಹಂಸಿ (ಚಕೋರಂ ಹಂಸೆ ಕರ್ಬುಗಿಳಿ .. .. ಮೊದಲಾಗೊಡೆಯ ಗಗನಚರಂ: **ವಡ್ಡಾರಾ,** ಪು. ೯೭, ಸಾ. ೯)

**ಹಕ್ಕರಿಕ್ಕೆ –** ಪಕ್ಷರಕ್ಷೆ (ಉರು ಬಾಹುರಕ್ಷೆ ಘನಸೋಳಹಖಂಡದ ಹಕ್ಕರಿಕ್ಕೆ .. .. ಒಪ್ಪುವ ಗಂಧಸಿಂಧುರೋತ್ಕರಮನಡರ್ದು: **ತ್ರಿಷಷ್ಟಿಪು,** ೨೪. ೨೯೩)

**ಹಗರಣ –** ನಾಟಕ ಪ್ರಕಾರ (ನಮ್ಮರಸಂ ಪಾಱುವ ಬಹುರೂಪವಿಕೃತಮಂ ಪಲತೆಱದಿಂ ತೋಱುವ ಹಗರಣಂ ಇವರೊಳ್ ಮಾಱಾಂತೊಡನೊಡನಾಡೆ ನಗೆಗೆಡೆಯಕ್ಕುಂ: **ಅಚವರ್ಧ,** ೭. ೫೭)

**ಹಟತ್ಕಾರ –** ಗರ್ವ (ಕಲಿಯುಂ ಬಲ್ಲಾಳುಂ ಎನ್ನಿಂದೊಳರೆ ಪೆಱರುಂ ಎಮಬೀ ಹಟತ್ಕಾರದಿಂದಂ: **ಹರಿವಂಶ,** ೧೨. ೪)

**ಹಟದ್ರತ್ನ –** [ಹಟತ್+ರತ್ನ] ಹೊಳೆಯುವ ಮಣಿ (ವೈದೇಹಿಗೆ ಮಕುಟಹಟದ್ರತ್ನ ದಿಂದರ್ಘ್ಯಮಿತ್ತಂ: **ಪಂಪರಾ,** ೯. ೮೪)

**ಹಟನ್ನೀರೇಜ –** ಕಾಂತಿಮಯವಾದ ತಾವರೆ (ಇರ್ದತ್ತು ಹಟನ್ನೀರೇಜನಾಳಂ ನಿಮಿರ್ದುದನಿದಿರೊಳ್ ಪೊತ್ತು ತೋರ್ಪಂದದಿಂದಂ: **ಸುಕುಮಾಚ,** ೩. ೧೫)

**ಹಟ್ಟಿಕಾಳಗ –** ಮನೆ ಜಗಳ (ನಾರಕರಂ ಅನ್ಯಜನ್ಮದ ವೈರಮ ಎಟ್ಟಿಚೆಸಿದ ಹಟ್ಟಿಕಾಳಗಮಂ ಕಣ್ಣಾರೆ ನಿರೀಕ್ಷಿಪ ತೆಱದಿಂ: **ಪಾರ್ಶ್ವನಾಪು,** ೧೩. ೭೩)

**ಹಡಣ –** ಪಡಣ, ಪತನ, ನಾಶ (ವಿದೂಷಕಂ ಈಕೆ ಹುಟ್ಟುಗೆಟ್ಟ ಹುಟ್ಟಗೆಯಂತೆ ಹಡಣಮೊಣಗಿದ ಹಱೆಯ ಸಿದ್ದಿಗೆಯಂತೊಣಕುಟ್ಟದೆ ಪತ್ತಿದ ಹಾೞೂರ ನಾಯಂತೆ ಒಡಲಂ ಪತ್ತಿದ .. .. ನೆವಮಿಕಿದಪಳೆಂದು ನಗಿಸಿದಂ: **ಲೀಲಾವತಿ,** ೨. ೧೧೬ ವ)

**ಹಡಣಿಗಿತ್ತಿ –** ಹಾದರಗಿತ್ತಿ, ಸೂಳೆ (ಮತ್ತೊರ್ವಳ್ ನೆರಮನೆಯ ಮಱೆಸೂಳೇಯ ಸೊಬಂಗಿಂಗಟಿಲ್ದು ತನ್ನಂತೆ ಪಡವುಡುಗಿ ಗಡಣಕ್ಕೆ ಬಂದ ಹಡಣಗಿತ್ತಿ ಸೂಳೆಗಿಂತೆಂದಳ್: **ಅನಂತಪು,** ೮. ೧೮ ವ)

**ಹಡಪವಳ –** ಸೇವಕ (ಹಡಪವಳನ ಹಡಪದೊಳಿರ್ದಡಕೆಗಳಂ ಮಾಡಿಯಾಡೆ ಪಿಕ್ಕೆಗಳಂ ಮತ್ತೆಡೆಯುಗದೆಲೆಗಳಂ ಮೆಳ್ವಡಲೆಕ್ಕೆಯ ನೀರ್ಳವನೆಲೆಗಳಾಗಳ್: **ಪುಣ್ಯಾಸ್ರ,** ೮. ೩೬)

**ಹಡಲಂ –** (ಹಾಗಲ ಹಡಲಂ ಗುಳ್ಳಂ ಕೂಗುರಿ ಕೂಷ್ಮಾಂಡ ಅವರೆ ಬದಣೆಗಳಿಂ ಲೇಸಾಗಿರೆ: **ಧರ್ಮಪ,** ೨. ೫೮)

**ಹಡಹಾಳಿ –** ಸಂಪಾದಿಸುವವನು (ಹಡಹಾಳಿ ಸತ್ತ ಮನೆಯಂತೆ: **ಧರ್ಮಾಮೃ,** ೫. ೮೩ ವ)

**ಹಡುಕೆ –** ದುರ್ಗಂಧ, ಅಮೇಧ್ಯ (ಹಡುಕೆಯ ಕೆಲದೊಳ್ ಗೋಹಳಿಯೆಡೆಯೊಳ್ .. .. ವಿಪ್ರಜನಂಗಳ್ ಓದುವರೆಂತೋ: **ಸಮಯಪ,** ೧೧. ೧೪)

**ಹಣಾಹಣಿ –** ಹಣೆಯಿಂದ ಹಣೆಗೆ ಹೊಡೆದು ಮಾಡುವ ಹೋರಾಟ (ದಂಡಾದಂಡಿ ಕಚಾಕಚಿ ಧಾಟಾಧಾಟಿ ದೆಖ್ಖಾದೆಖ್ಖಿ ಹಣಾಹಣಿ: **ಶಬ್ದಮದ,** ೧೯೬ ಪ್ರ)

**ಹಣ್ಣು –** ಮಾಡು (ಕಿಱೆಯ ವನಿತೆ .. .. ಬಱೆಯ ಕಲಹವನೆ ಹಣ್ಣಿ ಕಡುರೋಷದಿದೆ ಬಗ್ಗಿಸಿ ನುಡಿದಳ್: **ಧರ್ಮಪ,** ೨. ೪೯)

**ಹತ –** ಭಂಗಗೊಂಡ (ಹತಭುಜಗರ್ವಮಾಗೆ ದೆಸೆಗೆಟ್ಟನಿರುದ್ಧತಳಪ್ರಹಾರದಿಂ: **ಜಗನ್ನಾವಿ,** ೭. ೧೨೯)

**ಹತದೈವ –** ದುರದೃಷ್ಟವಂತ (ಹತದೈವಂ ಪ್ರಾರಂಭಂ ಪ್ರತಿಕಾರಂ ದೀರ್ಘಸೂತ್ರ ತತ್ಪ್ರತಿಕಾರಂ ಶತಮಾದೊಡೆ ಅಂತು ಮೋಕ್ಷಂ ಹತೋರುಗೆನಗಾವುದು ಇಂ ಗಡ ಪ್ರತಿಕಾರಂ: **ಗದಾಯು,** ೯. ೨೫)

**ಹತವಿತತಕೋಳಾಹಳಂ –** ಏಟುಗಳಿಂದ ಕ್ಷೋಭೆಗೊಳಿಸಿ [ದವನು] (ಕಟ್ಟುಗಳೆಲ್ಲಮಂ ಪಱೆದು ಹತವಿತತಕೋಳಾಹಳಂ ಎಱೆದು ಪೊಟಿಲೆಲ್ಲಮಂ ಕೊಲ್ವುದಂ ಅರಸ ಕೇಳ್ದು: **ವಡ್ಡಾರಾ,** ಪು ೬೩, ಸಾ ೧೦)

**ಹತಿ –** ಹೊಡೆತ (ವಿನತಾಪುತ್ರನ ವಜ್ರ ತುಂಡ ಹತಿಗಂ ಮೆಯ್ಯಾಂತು ಕಂಡಂಗಳುಳ್ಳಿನಂ ಅಂಗಂಗಳಂ ಒಡ್ಡಿ ಒಡ್ಡಿ ತನುವಂ ಕೊಟ್ಟಂತು: **ಪಂಪಭಾ,** ೪. ೨೬)

**ಹತೋರು –** ತೊಡೆ ಮುರಿದವನು (ಹತದೈವಂ ಪ್ರಾರಂಭಂ ಪ್ರತಿಕಾರಂ ದೀರ್ಘಸೂತ್ರ ತತ್ಪ್ರತಿಕಾರಂ ಶತಮಾದೊಡೆ ಅಂತು ಮೋಕ್ಷಂ ಹತೋರುಗೆನಗಾವುದು ಇಂ ಗಡ ಪ್ರತಿಕಾರಂ: **ಗದಾಯು,** ೯. ೨೫)

**ಹತ್ತ –** [ಹಸ್ತ] ಕೈ (ಬಡಿಗೆ ಕೊಂಡವೊಲೆತ್ತಿದ ತೋರ ಹತ್ತದಿಂಜಲ್ಲನೆ ತುಂಬಿಗಳ್ ಕೆದಱೆ: **ಕಬ್ಬಿಗಕಾ,** ೧೫೮)

**ಹತ್ತುಗೆ –** ಸಂಬಂಧ (ಹತ್ತುಗೆಯಿಂದ ಎಣಗಲ್ಕೆಯದೆ ಬೇಱುಂಟೇ: **ಅನುಭವ,** ೧೦೫)

**ಹದಿಟೆ –** [ಪ್ರತಿಷ್ಠಾ] ನೆಲೆಗೊಳಿಸುವಿಕೆ (ದ್ವಿಸ್ವರಹಿತಮಪ್ಪ ಟಕಾರಕ್ಕೆ: ಪ್ರತಿಷ್ಠಾ_ಹದಿಟೆ: **ಶಬ್ದಮದ,** ೨೯೮, ಪ್ರ)

**ಹನನ –** ಕೊಲ್ಲುವಿಕೆ (ಬ್ರಾಹ್ಮಣ ಹನನ ಮಹಾಪಾಪಮಂ ಗೆಯ್ದ ನಿಸ್ತ್ರಿಂಶೆಯಂ .. .. ನೀಂ ಬೆಸಗೊಳೆ ಫಲಮೇಂ: **ಕಾದಂಸಂ,** ೪. ೧೧೬)

**ಹನಿ –** ತೊಟ್ಟುತೊಟ್ಟಾಗಿ ಬೀಳು (ಹನಿ–ಬಿಂದುಪತನೇ: **ಶಬ್ದಮದ,** ಧಾ ೪೪೭)

**ಹನು –** ಕೆನ್ನೆ (ಎಡದ ಕೆಂದಳಮಂ ಹನುವಿಂಗೆ ಸಾರ್ಚಿ ಸೆಳ್ಳುಗುರ್ಗಳಿಂ ಗಲ್ಲಮಂ ಸಾರ್ಚಿ: **ಲೀಲಾವತಿ,** ೧೪. ೧೦೫ ವ)

**ಹಪ್ಪಳಿಗೆ –** ಚಪ್ಪಟೆ (ಸ್ಫಟಿಕೋಪಲಂಗಳಿಂ ಧಾರಿಣಿ ಕೂಡೆ ಹಪ್ಪಳಿಗೆಯೊತ್ತಿದುದೋ ಸಲಿಲಾಶಯಂ ಪಯಃಪೂರಮನಾಂತುದೋ ದಿಟಕೆ ತಾನೆನಿಸಿತ್ತು ಅಮೃತಾಂಶುರಶ್ಮಿಯಂ: **ಚಂದ್ರಪ್ರಪು,** ೮. ೩೯)

**ಹಪ್ಪಳಿಕೆಮೂಗು –** ಚಪ್ಪಟೆ ಮೂಗು (ಪಱೆದಲೆ ಕುಟಿನೊಸಲ್ ಅಟಿಗಣ್ಗಳ್ ಒಱೆವಾಯ್ ಹಪ್ಪಳಿಕೆ ಮೂಗು ಮುರುಟಿದ ಕಿವಿ: **ಯಶೋಧಚ,** ೨. ೩೮)

**ಹಮ್ಮದ –** ಮೂರ್ಛೆ (ಗಾಂಡೀವಿ ತರ್ಪಾಗಳ್ ಈ ಕೃಪಂ ಈ ಸೈಂಧವಂ ಈ ಸರಿತ್ತನಯಂ ಈ ರಾಧೇಯಂ ಈ ಮದ್ರಭೂಮಿಪಂ ಈ ಕುಂಭಜಂ ಈ ಕುರುಪ್ರವರಂದೇಂ ಹಮ್ಮದಂಬೋದರೇ: **ಗದಾಯು,** ೨. ೩೪)

**ಹಮ್ಮದಂಬೋಗು –** ಮೂರ್ಛೆಗೊಳ್ಳು (ಪಂದೆಯಂ ಪಾವಡರ್ದಂತೆ ಮೇಗುಸಿರ್ವಿಟ್ಟು ಹಮ್ಮದಂಬೋಗಿ: **ಪಂಚತಂತ್ರ,** ೯೮ ವ); ಮೈಮರೆ (ಮದನವಿಕಾರದ ಜಮ್ಮು ಜಕ್ಕಲಿಸಿ ಹಮ್ಮದಂಬೋಗಿ: **ಗಿರಿಜಾಕ,** ೭. ೧೧ ವ)

**ಹಮ್ಮಯಿಸು –** ಹಮ್ಮದಂಬೋಗು (ತನು ಕಡುಗೋಡುಗೋಡಿದಪುದು ಎಳ್ಳನಿತುಂ ಮಿಡುಕಂತದಿಲ್ಲ .. .. ನಿಜವಲ್ಲಭನಂದದಿನಂದಮಿಂದೆನಿತೆಱನಲ್ತು ಹಮ್ಮಯಿಸಿದಂದಮೊ ಮೇಣ್ ಮಱಲುಂದಿದಂದಮೋ: **ವರ್ಧಮಾಪು,** ೫. ೫೦)

**ಹಮ್ಮಯ್ಸು –** ಹಮ್ಮದಂಬೋಗು (ಹಮ್ಮಯ್ಸಿ ಕಿಱೆದು ಬೇಟಕ್ಕೊಮ್ಮೆಯೆ ಪೋಪಂದು ಪುಗುವುದಸು ಬೇಗಂ: **ಧರ್ಮಾಮೃ,** ೯. ೭೬)

**ಹಮ್ಮು –** ಹಗ್ಗವನ್ನು ಹೊಸೆ ಮತ್ತು ಜಂಬ (ಹಮ್ಮು– ರಜ್ಜುಕ್ರಿಯಾಯಾಂ ಗರ್ವೇಚ : **ಶಬ್ದಮದ,** ಧಾ ೫೧೨)

**ಹಮ್ಮೈಸು –** ಮೂರ್ಛೆಹೋಗು (ಸರಳ್ಗಳ ಗಾಯದಿನುರ್ಚಿದ ಕರುಳ್ಗಳ್ ತೊಡರ್ದು ಎಡಪಿ ಬಿರ್ದು ಹಮ್ಮೈಸುತ್ತಂ: **ತ್ರಿಷಷ್ಟಿಪು,** ೨೪. ೩೬೦)

**ಹಯ –** ಕುದುರೆ[ಸೈನ್ಯ] (ಸರಳ ಪೊದಳ್ದ ಬಲ್ಸರಿಯ ಕೋಳ್ಗಿರಲಾಱದೆ ತೆರಳ್ದು ದುರ್ಧರ ಹಯಂ ಅಟ್ಟಿ ಸಂದಣಿಸಿ ಸಂದಣಿ ಕೋಳ್ಗುದಿಗೊಂಡು: **ಪಂಪಭಾ** ಪರಿಷತ್ತು, ೩. ೭೦)

**ಹಯಖುರ –** ಕುದುರೆಯ ಗೊರಸು (ಹಯಖುರಮುಂ ಚಕ್ರದ ನೇಮಿಯುಂ ಐರ್ಜಿತವಜ್ರಮಕ್ಕುಮೆನೆ ವಾಹಿನಿಯೊಳ್ ನಿಯತಮದಾಟದೆ ಸಮಭೂಮಿಯೊಳದಿರದೆ ಪರಿವ ತೇಜದೆ ಪರಿದತ್ತು ರಥಂ: **ಪಾರ್ಶ್ವನಾಪು,** ೧೦. ೧೦೩)

**ಹಯಗ್ರೀವ –** ಈ ಹೆಸರಿನ ಒಬ್ಬ ರಾಕ್ಷಸ (ಮುರ ಹಯಗ್ರೀವ ಪಂಚಜನ ನಿಕುಂಬರೆಂಬ ನಾಲ್ವರ್ ದನುಜನಾಯಕರಿರ್ಪರ್: **ಜಗನ್ನಾವಿ,** ೧೧. ೮೫ ವ)

**ಹಯದಟ –** ಕುದುರೆಯ ಪಡೆ (ಹಯದಟಮಂ ಬೆಸಸಲ್ ವಾರ್ಧಿಯ ವೀಚಿಯ ತೆಱದಿನುಱದೆ ಕವಿಯಲ್

ಶತ್ರುಂಜಯನ ಕರಿಯುಗ್ರ ಹರಿಬಳಚಯಮದನಿದಿರಾಂತು ಬೆದಱೆ ಬೆಂಕೊಳೆ ಭೋಂಕಲ್; **ಕರ್ಣನೇಮಿ,** ೯. ೭೦)

**ಹಯನು** – ಕರಾವು, ಹಾಲು ಕೊಡುವ ಹಸು (ರತಿಕಾಮಧೇನು ಹಯನಾಯ್ತು ಎನಿಪ ಉತ್ಸವದಿಂ ಸುಖಪ್ರಕಾಂಡದ ಕಡೆಯೆಯ್ದಿದಳ್: **ಆಚವರ್ಧ,** ೫. ೬೪)

**ಹಯಪರಿಕರ** – ಕುದುರೆಗೆ ಹಾಕುವ ಲಗಾಮು (ಬಿಗಿ– .. .. ಹಯಪರಿಕರೇ ಚ : **ಶಬ್ದಮದ,** ಧಾ ೧೩೭)

**ಹಯಪಲ್ಯಾಣ** – ಕುದುರೆಯ ಜೀನು (ಹಯಪಲ್ಯಾಣಪ್ರಭಾಮಂಜರಿ ಗಜಭಿದುಸಿಂಧೂರರಾಗಂ ಭಟಶ್ರೇಣಿಯ ಚೆಂಬೊಂಗಟ್ಟು .. .. ಕೊಲ್ಲಣಿಗೆ ಮೆಚಿುಯೆ: **ಅನಂತಪು,** ೧೩. ೭೫)

**ಹಯವಲ್ಲನ** – ಕುದುರೆಯ ಒಂದು ಬಗೆಯ ನಡಿಗೆ )ಅದಂ ಗುಣಾರ್ಣವನಿಡಲೊಲ್ದನಿಲ್ಲ ಹಯವಲ್ಲನಸಚಳರತ್ನಕುಂಡಳಂ: **ಪಂಪಭಾ,** ೫. ೫೧)

**ಹಯವೈಹಾಳಿ** – ಕುದುರೆ ಸವಾರಿ (ದ್ವಿರದಾರೋಹಣ ಯೋಗ್ಯವೀಧಿ ಹಯವೈಹಾಳಿಕಪ್ರದೇಶಂ ಶಸ್ತ್ರಶ್ರಮಭೂಮಿ .. .. ಸುತ್ತಿರ್ಪಿನೆಗಂ: **ಪುಷ್ಪದಂಪು,** ೪. ೫೪)

**ಹಯವ್ರಾತ** – ಕುದುರೆಗಳ ಗುಂಪು (ಶಾತಶತರಪ್ರಹಾರದ ರಥಾಂಗವಿದಾರಣಮಕ್ಷಖಂಡನಂ ಸೂತಸೂದನಂ ಯುಗಸಮುದ್ದಳನಂ ಧ್ವಜಭಂಜನಂ ಹಯವ್ರಾತನಿಶುಂಭನಂ ಸಮನಿಸುತ್ತಿರೆ: **ಚಂದ್ರಪ್ರಪು,** ೧೦. ೭೫)

**ಹಯಶಾಸ್ತ್ರ** – ಕುದುರೆಗಳ ಬಗೆಗಿನ ವಿಜ್ಞಾನ (ಇಭೇಂದ್ರಶಿಕ್ಷೆ ಹಯಶಾಸ್ತ್ರಂ .. .. ಅಖಿಲವ್ಯೂಹೋತ್ಕರಮೆಂಬಿನಿತಱೊಳಂ ಬಲ್ಲರೆಲ್ಲರುಂ ಮೆಚ್ಚೆ ಪಡೆದನತಿಕೌಶಲಮಮಂ: **ಪುಷ್ಪದಂಪು,** ೪. ೫೯)

**ಹಯಶಿಕ್ಷಾ[ಕ್ಷೆ]** – ಕುದುರೆಯನ್ನು ಪಳಗಿಸುವಿಕೆ (ಹಯಶಿಕ್ಷಾಕ್ರೀಡೆಯಂ ತೋಱುವ ಹರಿಸುತನೊ ತಾನೆಪ್ಪಂದದಿಂ .. .. ನಾಡೆಯುಮಾ ಕಂದರ್ಪದೇವಂ ಸುರಚಿರತುರಗಾರೂಢಿಯೊಳ್ ಪ್ರೌಢನಾದಂ: **ಕುಸುಮಾಕಾ,** ೭. ೭೫)

**ಹಯಹೇಷಿತ** – ಕುದುರೆಯ ಕೆನೆತ (ಮದಸ್ತಂಭೇರಮ ಬೃಂಹಿತಂಗಳಿಂದಂ ಯುಗಪದಾಸ್ಫಾಲಿತ ಅನೇಕ ದುಂದುಭಿಧ್ವನಿ ಮಧುರಗೀತಂಗಳಪ್ಪ ಹಯಹೇಷಿತಂಗಳಿಂದಂ: **ಆದಿಪು,** ೧೪. ೯೬ ವ)

**ಹಯ್ಯಂಗವೀನ** – ಹೊಸದಾಗಿ ತೆಗೆದ ಬೆಣ್ಣೆ (ಸುಗಂಧಿ ಪರಿಮಲಾನೂನವಪ್ಪ ಹಯ್ಯಂಗವೀನಮುಮಂ ಅರಸಂಗಂ ಪಂಕ್ತಿಯೊಳುಣ್ಬ ಪರಿಜನಕ್ಕೆಲ್ಲಂ ಬಡ್ಡಿಸಿದಾಗಳ್: **ಸುಕುಮಾಚ,** ೧೧. ೫೯ ವ)

**ಹರ** – ಈಶ್ವರ (ಹರಿ ಶಿಖಿ ಯಮ ನಿರುತಿ ಜಳಾಕರಪತಿ ಮರುತ್ ಐಳಬಿಳ ಹರ ಅಹಿಪ ಶಶಿ ಭಾಸ್ಕರರರಂ ಸೌಧರ್ಮೇಂದ್ರಂ ನಿರವಿಸಿದಂ ದಶದಿಶಾಳಿಯೊಳ್ ಬಲಸಹಿತಂ: **ಶಾಂತೀಶ್ವಪು,** ೧೪. ೧೦೯

**ಹರಕಲಿಸು** – ವ್ಯಾಪಿಸು (ಹರಕಲಿಸಿತು ಅಂಗಲತೆಯೊಳ್ ಹರಣಂ ಸುಯ್ ನಿಮಿರ್ದು ನಡೆದುದು ಅಱಿಯಮೆ ಕಿಱಿದೋಸರಿಸಿದುದು: **ಲೀಲಾವತಿ,** ೧೦. ೭೮)

**ಹರಗಳ** – ಶಿವನ ಕೊರಳು (ಪಿರಿದುಂ ಬನ್ನದ ಕರ್ಪೆಸೆದುದು ತೊಱೆಗಿನ್ನುಂ ಹರಗಳ ತಮಾಳನೀಳಚ್ಛವಿಯಿಂ: **ಪಂಪಭಾ,** ೫. ೫೪)

**ಹರಗು** – ಕಳೆ ಕೀಳು (ಹರಗು–ಸಸ್ಯಕ್ರಿಯಾಯಾಂ: **ಶಬ್ದಮದ,** ಧಾ ೧೫೭)

**ಹರಡೆ** – ಪರಡೆ, ಕಂಕಪಕ್ಷಿ, ಒಂದು ಬಗೆಯ ನೀರು ಹಕ್ಕಿ (ಹರಡೆಯ ಬಲದಂತಿರದೆ ಅದವಟಲಂ ಒದವಿಪುವು ಅಂತುಮಲ್ಲದೆಯುಂ: **ಅನಂತಪು,** ೧೪. ೭ ವ)

**ಹರಣಂಗೆಯ್** – ಕೊಲ್ಲು (ಪಾಱುವ ಪಾಱುಂಬಳೆ ಕೊಳೆ ಜೀಱೆಟ್ಟಿಂಬರಕೆ ತಲೆ ಸಿಡಿಲ್ದೊಡಂ ಆ ಕಾಯ್ಪಾಱದೆ ಹರಣಂಗೆಯ್ದುವು ಜಾಱಲ್ದದೆ ಜೋದರ ಅಟ್ಟೆಗಳ್ ಕೆಲವಾಗಳ್: **ಪಂಪಭಾ,** ೧೦. ೯೫)

**ಹರಣಭರಣ** – ತೆಗೆದುಕೊಳ್ಳುವುದು ಮತ್ತು ತುಂಬಿಸುವುದು (ಬಿಸಿಲಂ ನಾನಾತಪತ್ರಂ ಮಸುಳಿಸೆ ಸಿತಖಡ್ಗಪ್ರಭಾಮಂಡಲಂ ಕೊರ್ವಿಸೆ .. .. ಮಾರ್ಗಾನೇಕತೋಯಶಯಾಮಮರುರಜಂ ಪೀಱಿ ದಾನಪ್ಲವಂ ಪೂರಿಸೆ ತೋಱಿತ್ತೆತ್ತಮಾದಂ ಹರಣಭರಣಚಾತುರ್ಯಮಂ ಚಾತುರಂಗಂ: **ಚಂದ್ರಪ್ರಪು,** ೧೦. ೩೦)

**ಹರನೇತ್ರ** – ಶಿವನ [ಮೂರನೆಯ] ಕಣ್ಣು (ಹರನೇತ್ರಜ್ವಾಲೆಯಿಂ ಬೇವತನುವನಮೆ ಕಾಣುತ್ತೆ ತನಬೌಳಿಯೊಳ್: **ಲೀಲಾವತಿ,** ೭. ೭೯)

**ಹರಪ್ರಿಯ** – ಶಿವನ ಆಪ್ತ, ಕುಬೇರ (ನಯನೌಘಚ್ಛಲದಿಂದೆ ನೈದಿಲೆಸಳಂ ಶಕ್ರಂ ಮುಸುಂಕಿಟ್ಟಂ .. .. ತುಹಿಭೂಮೀಧ್ರಕ್ಕೆ ಸಾರ್ದಂ ಹರಪ್ರಿಯಂ ಆವರ್ತಿಸೆ ತಳ್ದು ನಾಲ್ದೆಸೆಯುಮಂ ಗ್ರೀಷ್ಮಪ್ರತಾಪೋದಯಂ: **ಚಂದ್ರಪ್ರಪು,** ೯. ೬೭)

**ಹರವರಿ** – ಕ್ಷೇತ್ರ (ಸಿರಿಯ ಮೊಗರಸದ ಪೊಸ ಮೈಸಿರಿಯೆನಿಕುಂ ಪೂಗೊಳಂಗಳಾ ನೆಲನನಿತುಂ ಸುರಚಾಪದ ಬೆಳಸಿನ ಹರವರಿಯೆನಿಕುಂ ಪಂಚರತ್ನರುಚಿ ವಲ್ಲರಿಯಿಂ: **ಪಂಪರಾ,** ೧. ೬೪); ಸ್ಪಷ್ಟ, ನಿಚ್ಚಳ (ಅವಳೊಳ್ ಹರವರಿಯ ನೇಹಂ: **ತ್ರಿಷಷ್ಟಿಪು,** ೩. ೬೩)

**ಹರವಸ** – [ಪರವಶ] ಮೂರ್ಛೆ (ಪಕಾರಕ್ಕೆ ಹಕಾರಂ: ಗೋಪುರಂ–ಗೋಹುರಂ ಪರವಶ–ಹರವಸಂ: **ಶಬ್ದಮದ,** ೨೭೨ ಪ್ರ)

**ಹರಹಸ** – ಶಿವನ ಅಟ್ಟಹಾಸ (ಸ್ಫುರಿತೋದ್ಯತ್ತಾರಾಚಳ ಹರಹಸ ನಾದಭ್ರಶುಭ್ರಾಭ್ರ .. .. ಗೌರದ್ಯುತೀ ವಿಶದಯಶಃಕಾಂತನೀ ಶಾಂತಿವರ್ಮಂ: **ಪುಷ್ಪದಂಪು,** ೧. ೮೧)

**ಹರಹಾಸದ್ಯುತಿ** – ಶಿವ ನಗೆಯ ಕಾಂತಿ (ಹರಹಶದ್ಯುತಿಯಂ ನಿರಾಕರಿಸಿ ಗಂಗಾಸಿಂಧುಕಲ್ಲೋಲಶೀಕರಮಂ ನಿಂದಿಸಿ .. .. ಬೆಳಪ್ಪುದುಜ್ವಳಯಶಂಶ್ರೀಗಂಡಮಾರ್ತಂಡನಾ: **ಕಾವ್ಯಾವಲೋ,** ೮೬೩)

**ಹರಳಿಗ** – ಜಾರ (ಮನೆಯೊಳ್ ಕಾಲ್ ನೆಲೆಗೊಂಡು ನಿಂದಱಿಯನೀ ಜೋಕಾಱಿಯಂತಿರ್ಕೆ ಸೊಂಬನೊಲೊಲ್ದಾಡುವಲೊಲ್ಲಳ ಆ ಹರಳಿಗಂ ಕದ್ದೊಯ್ವನೇನಿರ್ದೊಡಂ .. .. ಆವಾವ ಮುಹೂರ್ತದೊಳ್ ಪಡೆದನೀ ಪಾಟಾದ ಮೂಳಂಗಳಂ: **ಸೂಕ್ತಿಸುಧಾ,** ೮. ೪೫೭)

**ಹರಳ್ಚು** – ದೃಷ್ಟಿಗೆ ಅಡ್ಡಿಯುಂಟುಮಾಡು (ಹರಳ್ಚು–ನೇತ್ರನಿರೋಧಂಕರಣೇ: **ಶಬ್ದಮದ,** ಧಾ ೨೨೩)

**ಹರಾದ್ರಿ** – ಶಿವನ ಬೆಟ್ಟ, ಹಿಮಾಲಯ (ಇದು ಮನುಜರ್ಗೆ ಅಗೋಚರಮೆನಿಪ್ಪ ಹರಾದ್ರಿಯ ತಟ್ಟಿಲ್ ಇಲ್ಲಿ ಗೇಯದ ದನಿ ನುಣ್ಪುವೆತ್ತು ಎಸೆಯುತ್ತಿರ್ದಪುದು: **ಕಾದಂಸಂ,** ೩. ೨೦)

**ಹರಿ** – ಕುದುರೆ (ಸಾರಥಿ ರಥಮ ಲೀಲೆಯೆ ಚೋದಿಸೆ ತೆರೆಗಳ ಮಾಲೆಯನವಯವದೆ ದಾಂಟಿ ಪರಿದುವು ಹರಿಗಳ್: **ಆದಿಪು,** ೧೨. ೮೧); ಸಿಂಹ (ಉದಯಗಿರಿ ಕಟಕ ಕುಹರ ಪರಿಕರ ನಿಶಾಕರಂ ಹರಿದಳಿತ ನಿಜಹರಿಣ ರುಧಿರನಿಚಯ ನಿಚಿತಮಾದಂತೆ ಲೋಹಿತಾಂಗನಾಗೆ: **ಪಂಪಭಾ,** ೪. ೪೯ ವ); ಕೃಷ್ಣ (ಮಸಿಯೆನೆ ರಥಮಂ ಹರಿ ಚೋದಿಸುವಂತೆವೊಲಿರ್ದು ಅದೆಂತು ನರನಂ ಗೆಲಿಪಂ ವಿಸಸನದೊಳ್ ಅಂತೆ ನೀಮುಂ ಪೆಸರಂ ಕರ್ಣಂಗೆ ಮಾಡಿ ಗೆಲ್ಲಂಗೊಳ್ಳಿಂ: **ಪಂಪಭಾ,** ೧೨. ೯೧); ಇಂದ್ರ (ಹರಿ ಶಿಖಿ ಯಮ ನಿರುತಿ ಜಳಾಕರಪತಿ ಮರುತ್ ಐಳಬಿಳ ಹರಾಹಿಪ ಶಶಿ ಭಾಸ್ಕರರರಂ ಸೌಧರ್ಮೇಂದ್ರಂ ನಿರವಿಸಿದಂ ದಶದಿಶಾಳಿಯೊಳ್ ಬಲಸಹಿತಂ: **ಶಾಂತೀಶ್ವಪು,** ೧೪. ೧೦೯; ವಾಸುದೇವ, ಬಲದೇವ (ಹರಿಗಿರಿದೆಯ್ದಿದ ವಿಸ್ಮೃತಿ ಮರಣಮನಾಹರಿವಿಯೋಗದಿಂ ಹರಿಗಾಗಳ್ ಪಿರಿದಾಗಿ ಪುದಿದ ಭೇದದ ಪರಿಯಂ ಕೇಳ್ದರ್ಕಕೀರ್ತಿ ನೆಱೆ ಬೆಱಗಾದಂ; **ಶಾಂತೀಶ್ವಪು,** ೫. ೩೮); ದೂತ (ಮೊಟ್ಟೆಯೊಡೆದು ಅಲ್ಲಿಂ ತೊಲಗದು .. .. ಎಂಬ ಪದಕೆ ಕೃತಾಂತನ ಹರಿಯಂತೆ ಬೇಂಟೆಯೊಳ್ ಒರ್ವಂ ಬೇಡಂ: **ಯಶೋಧಚ,** ೩. ೩೫ ಮತ್ತು ೩೬); ಸೂರ್ಯ (ಧಾತ್ರಿಗೆ ಹರಿ ಮುನ್ನುದಾಹರಿಸಿ ತೋರ್ಪವೊಲ್ ಎಯ್ದಿದಂ ಅಸ್ತಶೈಲಮಂ: **ಪುಷ್ಪದಂಪು,** ೮. ೬)

**ಹರಿಕೆ** – [ಪರಿಕೆ] ಪರೀಕ್ಷೆ, ಪರಿಶೀಲನೆ (ಪರಿಕಿಸುತುಂ ತತ್ತ್ವದ ಹರಿಕೆಯುಳ್ಳವಂ ತಿಳಿವುದು ಮಚ್ಚರಮಂ ಬಿಸುಟ್ಟು ಜೈನರ ಕೆಲದೊಳ್: **ಸಮಯಪ,** ೩, ೯೪)

**ಹರಿಗ** – **'**ಪಂಪಭಾರತ**'** ದಲ್ಲಿನ ಅರ್ಜುನ (ಭಾರತಂ ಕಲಹಂ ಇದಿರ್ಚುವಂ ಹರಿಗಂ ಅಪ್ಪೊಡೆ ಮೊಕ್ಕಳಮೇಕೆ ನೀಂ ಪಳಂಚಲೆದಪೆಯಣ್ಣ: **ಪಂಪಭಾ,** ೧೦. ೨೩)

**ಹರಿಗಟ್ಟಿಲೆ** – ಹಬ್ಬಿರುವ ಕತ್ತಲೆ (ಬಟೆವಿಡಿದೊತ್ತುಗೊಂಡ ಹರಿಗಟ್ಟಿಲೆಯ ತವೆ ನುಂಗುತುಂ .. .. ಬಂದುದಯಾದ್ರಿಯನರ್ಕನೇಱಿದಂ: **ಶಾಂತೀಶ್ವಪು,** ೧೧. ೧೦೯)

**ಹರಿಗೆ** – ಗುರಾಣಿ (ಸೆಡೆದು ನರಪತಿ ಮಱೆಯೊಡ್ಡಿದ ಹರಿಗೆಗಳೆನಿಸಿ ತದಂಗದ ಸಂಗದೆ ಕೊರಗಿ ಕೆಡೆದ ತಾವರೆಯೆಲೆಗಳ್: **ಆಚವರ್ಧ,** ೫. ೬೩)

**ಹರಿಚಂದನ** – ಶ್ರೀಗಂಧ (ಕೇಸಡಿಗಳಂ ಹರಿಚಂದನದಿಂದಮೂಡಿ .. .. ತೊಡವಂ ತುಡಿಸಲ್ಕೆ ಒಡರ್ಚಿದಳ್: **ಕಾದಂಸಂ,** ೮. ೫೨)

**ಹರಿಜ** – ಕಾಮ (ಹರಿಜನ ರೂಪು ಕೌಶಿಕನ ಸತ್ವಗುಣಂ .. .. ಇರ್ಪ ನೆಚ್ಚಿನ ಭುಜಂಗನಗಲ್ಕೆಯೊಳ್: **ತ್ರಿಷಷ್ಟಿಪು,** ೨೪. ೧೭೮)

**ಹರಿಣ** – ಜಿಂಕೆ (ಉದಯಗಿರಿ ಕಟಕ ಕುಹರ ಪರಿಕರ ನಿಶಾಕರಂ ಹರಿದಳಿತ ನಿಜ ಹರಿಣ ರುಧಿರನಿಚಯ ನಿಚಿತಮಾದಂತೆ ಲೋಹಿತಾಂಗನಾಗೆ: **ಪಂಪಭಾ,** ೪. ೪೯ ವ)

**ಹರಿಣಕ್ರೀಡನ** – ಜಿಂಕೆಯಂತೆ ನೆಗೆದಾಡುವ ಒಂದು ಆಟ (ಹರಿಣಕ್ರೀಡನಮೆಂಬುದನರೆವಚ್ಚಾಡೆ ವಸುದೇವನಂದನರ್ ಬಗೆದಂದರ್: **ಜಗನ್ನಾವಿ,** ೪. ೫೧)

**ಹರಿಣಧರ** – ಜಿಂಕೆಯ ಗುರುತನ್ನುಳ್ಳವನು, ಚಂದ್ರ (ಹರಿಣಧರ ವಿವಸ್ವತ್ ಮನಕುಂಭದ್ವಯಬ್ಜಾಕರ ಜಲಧಿಗಜದ್ವಿಟ್ಪೀಠ ಚಕ್ರಾಹಿಗೇಹಸ್ಫುರಿತ ಮಣಿಸಮೂಹಜ್ವಾಳೆಯಂ ಕಾಂತೆ ಕಂಡಳ್: **ಅಜಿತಪು,** ೩. ೧೨)

**ಹರಿಣಧರಹರಿಣ** – ಚಂದ್ರನಲ್ಲಿರುವ ಜಿಂಕೆ (ಹ್ಯಣಧರಹರಿಣಂ ಪೂಮರದಡಿಯೊಳ್ ಪೊಯ್ದು ಪಟ್ಟ ಪುಲಿಗಳಿವೆನಿತುಂ ಪರೆದರುಣಸಿತಾಸಿತಮಪ್ಪ ರಾಗದಿಂ ಬೀಡೆವಟ್ಟ ಬೆಟ್ಟದ ಸಱಿಗಳ್: **ಅಜಿತಪು,** ೯. ೨೪)

**ಹರಿಣರಿಪು** – ಜಿಂಕೆಯ ವೈರಿ, ಸಿಂಹ (ಹರಿಣರಿಪುಗೆ ಬಿಕ್ಕ ಪೋತ ಕಳಕುಳಮಾರಣಕೋಳಾಹಳ ಮಾನದಿಂ ಬಂಗಾವೇಡೇವಳಿಗೆಯೆಂಬಂತಕ್ಕುಂ: **ಶಾಂತಿಪು,** ೩. ೬೬ ವ)

**ಹರಿಣಾಂಕ** – ಹರಿಣಧರ, ಚಂದ್ರ (ಹರಿಣಾಂಕಾದಿ ಪ್ರಯೋಗಿಂದ ಶಶಿನಾಮಂ: **ಅಭಿಧಾವ,** ೧. ೧. ೬೯)

**ಹರಿಣಾಂಕಮಂಡಲ** – ಚಂದ್ರಮಂಡಲ (ಹರಿಣಾಂಕಮಂಡಲವಿಟಿಸಿದುದಳಿಪಾಯ್ದ ಬಿಳಿಯ ತಾವರೆಯರಲಂ: **ಅಜಿತಪು,** ೬. ೪೪)

**ಹರಿಣಾಕ್ಷಿ** – ಜಿಂಕೆಯಂತೆ [ಚಂಚಲವಾದ] ಕಣ್ಣುಳ್ಳವಳು (ಕಾತರನೀಟ್ಟುಕೊಳ್ವನೆಂದಾ ಹರಿಣಾಕ್ಷಿಯನಿರದೆ ಕಾಳೆಗಕ್ಕೊಡರಿಸಿದಂ: **ಪಂಪರಾ,** ೧೦. ೧೨೫)

**ಹರಿಣಾಜಿನ** – ಜಿಂಕೆಯ ಚರ್ಮ (ಹರಿಣಾಜಿನವಾಸಃಪರಿಕರನಾಗಿ ವಿಚಿತ್ರ ಮೌಂಜಿಮೇಖಳೆಯಂ ಧರಿಯಿಸಿ ತೊಡರ್ದಂ ಭವವಾಗುರೆಯ ಮೃಗದವೊಲ್ ಮೃಗಶೃಂಗಂ: **ಶಾಂತಿಪು,** ೭. ೪೪)

**ಹರಿಣಿ** – ಹೆಣ್ಣು ಜಿಂಕೆ ಹಾಗೂ ಒಂದು ಅಕ್ಷರವೃತ್ತದ ಹೆಸರು (ಹರಿಣೀ ಮತ್ತೇಭವಿಕ್ರೀಡಿತ ಲಲಿತ ಮಯೂರಾನ್ವಿತಂಛಂದಮಂ: **ರಾಜಶೇವಿ,** ೫. ೭೫); ಚಿನ್ನದ ದೇವರ ವಿಗ್ರಹ (ದೈವಪ್ರತಿಕೃತಿಗಳ್ಗೆ ಅರ್ಚಾವಚನಾಭಿಖ್ಯೆ ಸೂರ್ಮಿಯನೆ ನೆಗಟ್ಟುಂ ನಾನಾವಿಧಲೋಹಮಯ ಪ್ರತಿಮಾವಳಗಳ್ ಹರಿಣಿ ಹೇಮಮಯಿ ತಾನಕ್ಕುಂ: **ಅಭಿಧಾವ,** ೧. ೩. ೧೬)

**ಹರಿಣೀಯೂಥ** – ಜಿಂಕೆಗಳ ಗುಂಪು (ಹರಿಣದೂರ್ವಾಂಕುರಮಂ ಕೊಂಡುಯ್ದುದಂದು ಹರಿಣೀಯೂಥಂ: **ಮಲ್ಲಿನಾಪು,** ೮. ೭೬)

**ಹರಿತ್** – ದಿಕ್ಕು (ಇಳೆಯೊಳ್ ಅದು ಅಂಕುರಿಸಿ ಹರಿತ್ ಕುಳದೊಳ್ ವರ್ಧಿಸಿಯೆ .. .. ಬೆಳೆಯಿಸಿದುದು ಕೀರ್ತಿಲತೆಯಂ ಸತ್ತಿಗನಾ: **ಗದಾಯು,** ೧೦. ೮)

**ಹರಿತ** – ಹಸಿರು ಬಣ್ಣ[ದ] (ಹರಿತ ಪಲ್ಲವಭರಾವನಮಾದ ಒಂದು ಜಂಬೂವೃಕ್ಷಮನಡರ್ದು: **ಕಾದಂಸಂ,** ೮. ೨೬ ವ)

**ಹರಿತನಯಾರಿ** – ವಿಷ್ಣುವಿನ ಮಗನಾದ ಮನ್ಮಥನನ್ನು ಕೊಂದವನು, ಶಿವ (ಹರಿತನಯಾರಿಯೆಂದೆನಿಸಿಯುಂ ಧವಳಾಂಶುಕಧಾರಿ .. .. ಅಪ್ರಮೋಹ ಭಾಸುರವೆನಿಸಿರ್ದುಂ ಅನ್ವಿತಯಸ್ಥಿತಿಯೊಪ್ಪಿದನದ್ರಿಜಾವಧವಂ: **ಶಬಶಂವಿ,** ೧. ೭೯)

**ಹರಿತಪರಿವೇಷ** – ಹೊಂಬಣ್ಣದ ಪ್ರಭಾವಲಯ (ತಿಳಿಗೊಳದ ಸುತ್ತಲುಂ ಕಣ್ಗೊಳಿಸಿತು ತಳತಳಿಸುವೆಳಗಱುಂಕೆಯ ಗಜೆತಟ್ಟಿಳವಸಲೆ ಪೂರ್ಣಶಶಿಮಂಡಳಮಂಡನಮಾದ ಹರಿತಪರಿವೇಷದವೊಲ್: **ಮಲ್ಲಿನಾಪು,** ೮. ೫೬)

**ಹರಿತಮಣಿ** – ಮರಕತ ಮಣಿ (ಈಕೆಯರ ಪಾದಪಾತದಿಂದೇಕೇಂದ್ರಿಯಮಸುಕೆ ತಳಿರ್ವುದರಿದೆ ತಳಿರ್ದಥ್ವಲ್ಲಿ ಕಲ್ಲೆರ್ದೆಯನೆ ಸೊಗಯಿಸಿತಾ ಕಳಿತಪದಾಂಶು ಹರಿತಮಣಿಸೋಪಾನಂ: **ಚಂದ್ರಪ್ರಪು,** ೭. ೧೨೪)

**ಹರಿತಶಿಲೆ** – ಪಚ್ಚೆಯ ಬಂಡೆ (ಸಾಲ್ದಿರ್ದ ಹಾರೀತಕ ಹರಿತಶಿಲಾಪಟ್ಟದೊಳ್ ಭೂಪನಿರ್ದಂ: **ಕಾದಂಸಂ,** ೫. ೪೧)

**ಹರಿತಾಂಕುರ** – ಎಳೆಯ ಗರಿಕೆ, ಹಸಿರು ಮೊಳಕೆ (ಹರಿತಾಂಕುರ ಫಳಪುಷ್ಪೋತ್ಕರಂಗಳಂ ಪೊಸತೆ ಮೊಳೆತ ಧನ್ಯಂಗಳಂ ಧಾನ್ಯಂಗಳಂ ಆ ಧರಣೀಶಂ ಕೆದಱೆಸಿದಂ ರಾಜಗೇಹದೊಳಗಂ ಪೊಱಗಂ: **ಆದಿಪು,** ೧೫. ೭)

**ಹರಿತಾಳ** – ಅರಿದಳ (ಹರಿತಾಳಪಂಕಪಿಂಗಳವಿಲಂಘಿತ ಶಿಲಾಸ್ತಂಭ ವಿಭ್ರಮಭ್ರಮರಮಾನಿತಂಬಶಿಖರಿತ: **ಆದಿಪು,** ೧೩. ೪೫ ವ)

**ಹರಿತ್ಪ್ರದೇಶ** – ಹುಲ್ಲುಗಾವಲು (ಹರಿತಾಯತಮಾನಮಪ್ಪ ಹರಿತ್ಪ್ರದೇಶಮನಿಂತು ಮಹಾಪ್ರಾಸಾದದುಪರಿಮತಳದೊಳಿರ್ದು ನೋಡುತಿರ್ಪನ್ನೆಗಂ: **ಚಂದ್ರಪ್ರಭು,** ೪. ೪೯ ವ)

**ಹರಿತ್ವ** – ಅಶ್ವತ್ಥ (ಆ ಹರಿತ್ವಮಂ ತ್ವರಿತದಿ ಬಿಟ್ಟು ಮುತ್ತಿದುದು ಕತ್ತಲೆ ತಳ್ತು ಸಮಸ್ತ ಧಾತ್ರಿಯಂ: **ತ್ರಿಷಷ್ಟಿಪು,** ೭. ೮೨)

**ಹರಿದಂತ** – [ಹರಿತ್+ಅಂತ] ದಿಗಂತ (ಹರಿದಂತಗಳನೆಯ್ದೆ ಮಂಗಳಮಹಾವಾದ್ಯಸ್ವನಂ .. .. ಊರಂ ಪೊಕ್ಕನುತ್ಸಾಹದೊಳ್: **ತ್ರಿಷಷ್ಟಿಪು,** ೬೧. ೪೭)

**ಹರಿದಶ್ವ** – ಹಸಿರು ಬಣ್ಣದ ಕುದುರೆಯವನು, ಸೂರ್ಯ (ಹರಿದಶ್ವಂ ಬಂದಪಂ ವಾಹಳಿಗೆ ಎನುತರುಣಂ .. .. ಘನರಸಮಂ ಸಿಂಪಿಸುತಿರ್ದಂ: **ಕಾದಂಬ,** ೧. ೧೧೬)

**ಹರಿದಿಕ್** – ಪೂರ್ವದಿಕ್ಕು (ದಿನಪಂ ತನ್ನನಗಲ್ದು ಪೋಗೆ ಹರಿದಿಕ್ ಕಾಂತಾ ಆನನಂ ಕಂದಿದತ್ತೆನೆ ಮರ್ವುರ್ವಿದುದು: **ಪಂಪರಾ,** ೭. ೫)

**ಹರಿದಿಗ್ವದನ** – ಹರಿದಿಕ್ (ಹರಿದಿಗ್ವದನಂ ಸಂಧ್ಯಾಸ್ಫುರಿತ ಅಧರಮಧುರತಾರಕಾವಸಾನಂ ಭಾಸುರ ಚಂದ್ರಿಕಾತಿಲಕಂ ಉಡುವರಕಾಂತಿಯುತಂ ಬೆಡಂಗುವೆತ್ತತ್ತಾಗಳ್: **ಅಜಿತಪು,** ೬. ೩೯)

**ಹರಿದ್ರ** – ಅರಿಸಿನ (ಸರ್ವಾಂಗೀಣ ಸಾಂದ್ರ ಹರಿದ್ರಲಿಪೇನವಿಲಿಪ್ತ ಹರಿತಾಳಪಂಕವಿಲಂಘಿತ: **ಆದಿಪು,** ೧೩. ೪೫ ವ)

**ಹರಿದ್ರತ್ನ** – ಹರಿತಮಣಿ (ಭಾಸ್ವದ್ಭಿತ್ತಿಯಂ ಸುತ್ತಿರೆ ಸುರುಚಿರಚಿತ್ರಂ ಹರಿದ್ರತ್ನ ಮಧ್ಯಾಜಿರಮಂ ಮುಕ್ತಾವಲೀರಂಗವಲಿ ಬಳಸೆ: **ಪಂಪರಾ,** ೫. ೧೧೨)

**ಹರಿದ್ರವನ** – ಅರಿಸಿನ ಗಿಡಗಳ ತೋಟ (ವನಲಕ್ಷ್ಮಿಯ ನೇತ್ರಾಂಶುಕವೆನೆ ನೇತ್ರಕ್ಕೆಸೆದು ಮಿಸುಗಿ ಪಸುರ್ವಡೆದುವು ನಂದನದ ಕೆಲಂಬಿಡಿದಾರ್ದ್ರಕವನದ ಜೀತಕವನ ಹರಿದ್ರವನ ಸಂತತಿಗಳ್: **ಪುಷ್ಪದಂಪು,** ೨. ೪೭)

**ಹರಿದ್ವಸು** – ಹರಿತಮಣಿ (ಆ ವೇದೀಸ್ಥಳದೊಳ್ ಹರಿದ್ರಸುವ ಪಾತ್ರಂಗಳ್ ಲಸದ್ದೂರ್ವೆಯಿಂ ತೀವಿರ್ದುಂ .. .. ಬಱೆದಿರ್ದವೊಲೆಸೆದುವುವಾದಂ ವರ್ಣಸಾಮಾನ್ಯದಿಂ: ಚಂದ್ರಪ್ರಭು, ೬. ೫೪)

**ಹರಿದ್ವ್ಯೂಹ** – ಎಲ್ಲ ದಿಕ್ಕುಗಳು (ಪೂರ್ಣ ದುಗ್ಧಾರ್ಣವ ದೊರೆಗೆಣೆವಂದತ್ತು .. .. ಉದ್ದಾಮಸೌಧದ್ಯುತಿಭರಿತ ಹರಿದ್ವ್ಯೂಹಮಾಸ್ಥಾನಗೇಹಂ: **ಚಂದ್ರಪ್ರಭು,** ೫. ೩)

**ಹರಿನೀಳ** – ಇಂದ್ರನೀಲ ಮಣಿ (ಸುರವಧು ಒರ್ಬಳ್ ದೇವಿಯ ಚರಣಕ್ಕೆ ಓಲಗಿಸೆ ಪೊಳೆವ ಹರಿನೀಳದ ನೂಪುರಂ ಅದು ನೆನೆಯಿಸಿದುದು ಷಟ್ಚರಣಾವಳಿ ಬಳಸಿದ ಅರುಣಸರಸಿಜದ ಇರವಂ: **ಶಾಂತೀಶ್ವಪು,** ೧೩. ೨೧೪)

**ಹರಿನೀಲರತ್ನ** – ಇಂದ್ರನೀಲ ಮಣಿ (ಹರಿನೀಲರತ್ನಮಂ ಕಂಡರಿಸಿದ ಕಣ್ಣೆಱೆವಿಗೆಯ್ದೆ ಜೀವಂಬೊಯ್ದಂತಿರೆ ತೋರ್ಪ ಗಂಡಗಾಡಿಗೆ ಪುರುಷೋತ್ತಮನೆಂದು ಕೊಂಡು ಕೊನೆದುದು ಲೋಕಂ: **ಪಂಪರಾ,** ೩. ೧೫೬)

**ಹರಿನ್ಮಣಿ** – ಪಚ್ಚೆ (ಹರಿನ್ಮಣಿವರ್ಣನಂ ನೆರೆದುದಿದು ಮೇಣ್ ಕ್ಷಾತ್ರಂ ತೇಜಂ ಧರಾಧಿಪರೂಪದಿಂ ಧರೆಗೆ: **ಆದಿಪು,** ೧೪. ೪೪)

**ಹರಿನ್ಮುಖ** – ದಿಗಂತ (ಹರಿಮುಖಹೇಷಾಘೋಷಂ ಹರಿನ್ಮುಖಾಂತರಮನೆಯ್ದಿ ತೀವುತ್ತಿರೆಯುಂ ಹರಿಪದದಿಂದೊಗೆದ ರಜಂ ಹರಿಪದಮಂತಡರೆ ನಡೆವುದು ನೃಪಸೈನ್ಯಂ: **ಶಾಂತೀಶ್ವಪು,** ೧೨. ೮)

**ಹರಿಪದ** – ವಿಷ್ಣುವಿನ ಪಾದ (ಹರಿಪದದಿಂದೊಗೆದ ರಜಂ ಹರಿಪದಮಂ ತೊಡರೆ ನಡೆದುದಾ ನೃಪಸೈನ್ಯಂ: ಕುಸುಮಾಕಾ, ೧೫. ೮೫); ಕುದುರೆಯ ಗೊರಸು (ಹರಿಮುಖಹೇಷಾಘೋಷಂ ಹರಿನ್ಮುಖಾಂತರಮನೆಯ್ದಿ ತೀವುತ್ತಿರೆಯುಂ ಹರಿಪದದಿಂದೊಗೆದ ರಜಂ ಹರಿಪದಮಂತಡರೆ ನಡೆವುದು ನೃಪಸೈನ್ಯಂ: **ಶಾಂತೀಶ್ವಪು,** ೧೨. ೮); ವಾಯುಮಂಡಲ (ಹರಿಮುಖಹೇಷಾಘೋಷಂ ಹರಿನ್ಮುಖಾಂತರಮನೆಯ್ದಿ ತೀವುತ್ತಿರೆಯುಂ ಹರಿಪದದಿಂದೊಗೆದ ರಜಂ ಹರಿಪದಮಂತಡರೆ ನಡೆವುದು ನೃಪಸೈನ್ಯಂ: **ಶಾಂತೀಶ್ವಪು,** ೧೨. ೮)

**ಹರಿಪೀಠ** – ಸಿಂಹಾಸನ (ಇರೆ ಹರಿಪೀಠದೊಳ್ ಭರತಂ ಆದರದಿಂ ಬೆಸಗೊಂಡುದಂ ಜಿನೇಶ್ವರಮತದಿಂದಂ ಆ ವೃಷಭಸೇನಗಣಾಗ್ರಣಿ ಪೇಳ್ದುದಂ: **ಆದಿಪು,** ೧. ೪೧)

**ಹರಿಪೋತ** – ಸಿಂಹದ ಮರಿ (ಹರಿಪೋತಮಂ ಬೆದಱುತುಂ ಕರಿಪೋತಂ ಅವುಂಡುಗರ್ಚೆ ಕೇಸರಿಣಿಯಂ ಕೆಚ್ಚಲಂ ತುಡುಕುತಂ ಪರಿದತ್ತು: **ಪಂಪಭಾ,** ೭. ೮೦)

**ಹರಿಪೌರುಷ** – ಸಿಂಹಪರಾಕ್ರಮ (ಮಳಯಜಗಂಧಮಂತು ಹರಿಪೌರುಷಮೆಂತು .. .. ನಿಜಂ ತನಗಂತು ಸದ್ಗುಣಾವಳಿ ಸಹಜಾತಂ: **ಶಾಂತಿಪು,** ೭. ೧೧೯)

**ಹರಿಬ** – ಕೆಲಸ (ಚರನಂ ಕಿಡೆ ನುಡಿವ ಹರಿಬವೆತ್ತುವ ಕಡಂಗಿ ಮೂದಲಿಪ ರಭಸಮೇನುಣ್ಮಿದುದೋ: **ಆಚವರ್ಧ,** ೭. ೪೨)

**ಹರಿಮೇಖಲೆ** – ಯಕ್ಷಿಣಿ (ಹರಿಮೇಖಲೆಯೆಂದು ಇಂದ್ರಜಾಲಂ: **ಶಬ್ದಮದ,** ಪ್ರಸಾ ೨೩೧)

**ಹರಿವಂಶ** – ಸೂರ್ಯವಂಶ (ಹರಿವಂಶನಿಯಮದಿಂ ಹಿತಪುರೋಹಿತಂ ಶುಭಮುಹೂರ್ತದೊಳ್ ಕನ್ನಿಕೆಯಂ ತರವೇಟಿೞ: **ಪಂಪರಾ,** ೫. ೪೬); ಸರ್ಪಸಂಕುಲ (ಹರಿವಂಶಂ ಹರಿವಂಶದಂತತುಳಭೋಗಖ್ಯಾತಮಾಯ್ತು: **ನೇಮಿನಾಪು,** ೬. ೭೮)

**ಹರಿವಧು** – ಶಚೀದೇವಿ (ಹರಿವಧು ನೂಪುರಮಂ ಜಿನಚರಣದೊಳಳವಡಿಸಿ ತಳೆಯೆ ಶಿರದೊಳ್ ಮಣೀಶೇಖರಮೆನಿಸಿತು: **ಪಾರ್ಶ್ವನಾಪು,** ೧೪. ೧೦೬)

**ಹರಿವರ್ಷ** – [ಜೈನ] ಜಂಬೂದ್ವೀಪದ ಏಳು ಭಾಗಗಳಲ್ಲಿ ಒಂದು, ಮಧ್ಯಮ ಭೋಗಭೂಮಿ ಹರಿವರ್ಷಮೆಂಬ ವಿಷಯದೊಳ್ ಉರುಶೋಭಾಧಾನಮಾಗಿ ಸೊಗಯಿಪುದು .. .. ಭೋಗಪುರಮೇಂಬುದು: **ಕರ್ಣನೇಮಿ,** ೨. ೮೧), ನೋಡಿ 'ಜಂಬೂದ್ವೀಪ'

**ಹರಿವಿಷ್ಟರ** – ಸಿಂಹಾಸನ (ಹರಿವಿಷ್ಟರದಿಕ್ಕೆಲದೊಳ್ ಸುರುಚಿರ ಜನ್ಮಾಭಿಷೇಕ ಮಂಗಳವಿಧಿಯಿಂ ವಿರಚಿಸಿದ

ಭದ್ರಾಸನಮೆರಡುಂ ಕರಮೆಸೆದುವಲ್ತೆ ಮಣಿಗಣಘೃಣಿಯಿಂ: **ಶಾಂತೀಶ್ವಪು,** ೧೪. ೧೦೪)

**ಹರಿವ್ರಜ** – ಕುದುರೆಗಳ ಸಮೂಹ (ನೆರೆದಾಡುವಟ್ಟೆ ಬೆರ್ಚಿಸೆ ಹರಿವ್ರಜಂ ತೊಲಗಿ ತೊಲಗಿ ಬರೆ ಗೋಮೂತ್ರಂಬರಿಯೆ ರಥಂ ಮೆಯ್ಯಟಿವಂತಿರೆ ರಥಮಂ ಪುದಿದು ಕುದಿದು ಬರೆ ಕೆಲರೆ ಭಲರ್: **ಶಾಂತಿನಾಪು,** ೪. ೩೮)

**ಹರೆಯಂಬಡೆ** – ಯೌವನವನ್ನು ಹೊಂದು (ಹರನ ಮೆಚ್ಚಯ ಹರೆಯಂಬಡೆದಂತೆ ಶಂಕರನ ಬಿಂಕಂ ಬಿನ್ನಣಮಾದಂತೆ .. .. ನೆಱೆ ಮೆಱೆದು ನಡೆತಂದು ನಗತನೂಜೆ ಚಂದ್ರಧರನ ಮುಂದೆ ನಿಂದು: **ಗಿರಿಜಾಕ,** ೫. ೭೬ ವ)

**ಹರ್ಮ್ಯ** – ಉಪ್ಪರಿಗೆ (ಘನದುರ್ಗದ್ವಾರದೊಳ್ ನಿರ್ಮಿಸಿದ ಕನಕ ಹರ್ಮ್ಯಾಗ್ರಂ ಆಕಾಶದೊಳ್ ತೆಕ್ಕನೆ ತೀವಿರ್ಪಂದಮಾಗಲ್ಕೆ: **ತ್ರಿಷಷ್ಟಿಪು,** ೭. ೧೯)

**ಹರ್ಮ್ಯಾಂಗಣ** – ಉಪ್ಪರಿಗೆ, [ಅರಮನೆ]ಯ ಹಜಾರ (ಜಾನುಚಂಕ್ರಮಣಂ ಹರ್ಮ್ಯಾಂಗಣದೊಳೆಂದು ಸುಟಿಗುಂ ಸಿಂಗದ ಮಱೆಯಂತೆ: **ಕಾದಂಬ,** ೨. ೫೮)

**ಹರ್ಮ್ಯಾಗ್ರ** – ಉಪ್ಪರಿಗೆಯ ಮಚ್ಚು (ಅಶನಿವೇಗಂ .. .. ಒರ್ಮೆ ಹರ್ಮ್ಯಾಗ್ರಭೂಮಿಯೊಳಿರ್ದು ಎಗೆದ ಮುಗಿಲಂ ನೋಡುತ್ತುಮಿರ್ಪುದುಂ: **ಪಂಪರಾ,** ೧೦. ೧೨೬ ವ)

**ಹರ್ಮ್ಯೋರ್ಧ್ವ** – ಹರ್ಮ್ಯಾಗ್ರ (ಹರ್ಮ್ಯೋರ್ಧ್ವದೊಳ್ .. .. ವಿಮಾನನಿಚಯ ನಿಂತ್ತದತ್ತೆತ್ತಲುಂ: **ಚಂದ್ರಪ್ರಪು,** ೬. ೧೮)

**ಹರ್ಯಕ್ಷ** – ಸಿಂಹ (ಹರಿ ಹರ್ಯಕ್ಷನ ಬಾಯಂತಿರೆ ಕಟ್ಟೆಯ ತೆಱೆದ ಬಾಯಂ .. .. ಎರಡುಂ ಕೆಯ್ಯಿಂ ಪಿಡಿದು .. .. ಸೀಳ್ದು ಬಿಸುಟಂ: **ನೇಮಿನಾಪು,** ೭. ೯೨)

**ಹರ್ಷ** – ಆನಂದ (ಮದ ಮಾನ ಮಾಯ ಭಯ ಲೋಭ ವಿಷಾದಹರ್ಷಾಭ್ಯುದಿತ ಅಂತರಂಗ ರಿಪಿಪುವರ್ಗ ಜಯಾವತಾರಂ:: **ಕವಿರಾಮಾ,** ೩. ೨೨೭)

**ಹರ್ಷಗರ್ಭ** – ಆನಂದ ತುಂಬಿದುದು (ಉದರದೊಳಂ ರಮಣಿಗೆ ನೆಲಸಿತ್ತು ಹರ್ಷಗರ್ಭಂ ಗರ್ಭಂ: **ಚಂದ್ರಪ್ರಪು,** ೩. ೮೪)

**ಹರ್ಷಪ್ರಕರ್ಷ** – ಸಂತಸದ ಆಧಿಕ್ಯ (ಜನಪತಿ ನಿಮ್ಮಿಂದಲ್ಲದೆ ಜನಕ್ಕೆ ಹರ್ಷಪ್ರಕರ್ಷಮಕ್ಕುಮೆ ಪೆಱರಿಂ: **ಮಲ್ಲಿನಾಪು,** ೯. ೬೯)

**ಹರ್ಷಾಶ್ರು** – ಆನಂದದ ಕಣ್ಣೀರು (ನೆಱೆದ ಮುನಿಪದಾಂಭೋಜಮಂ ಕಂಡು ಹರ್ಷಾಶ್ರು ಪಯಃಪೂರಂಗಳಿಂ ಪಾದ್ಯಮನೊಡರಿಸಿದಂ ಸೂಕ್ತಿಮುಕ್ತಾವತಂಸಂ: **ಮಲ್ಲಿನಾಪು,** ೧೩. ೧೫೦)

**ಹರ್ಷೋತ್ಕರ್ಷಚಿತ್ತ** – ಆನಂದ ತುಂಬಿದ ಮನಸ್ಸು[ಳ್ಳವನು] (ಬೇಗಂ ಬಂದೆನ್ನ ಬೆನ್ನನೇಱೆನಲೊಡಂ; ತಜ್ಜರದ್ವಾನರಂ ಹರ್ಷೋತ್ಕರ್ಷಚಿತ್ತನಾಗಿ: **ಪಂಚತಂತ್ರ,** ೪೦೨ ವ)

**ಹರ್ಷೋತ್ಕರ್ಷಿತ** – ಅತಿಶಯ ಸಂತೋಷದಿಂದ ಕೂಡಿದ (ಹರ್ಷೋತ್ಕರ್ಷಿತಾಂತರಂಗನಾಗಿ ನಮಸ್ಕಾರಂಗೆಯ್ದು: **ಸುಕುಮಾಚ,** ೩. ೧೪ ವ)

**ಹಲ** – ನೇಗಿಲು (ಸುರುಚಿರ ಕನಕದ ಹಲದಿಂ ಧರೆಯಂ ಶೋಧಿಸಿಯೆ ಮಖದ ವೇದಿಕೆಯಂ ಬಿತ್ತರಿಸಿ: **ತ್ರಿಷಷ್ಟಿಪು,** ೪. ೬); ಭೂಮಿಯ ಒಂದು ಅಳತೆ (ಕುಕ್ಷಿನಿವಾಸಂಗಳುಂ ದಶಸಹಸ್ರಕೋಟಿ ಹಲಂಗಳುಂ ಮೂಱುಕೋಟಿ ಗೋಮಂಡಲಮುಂ: **ವರ್ಧಮಾಪು,** ೧೦. ೩ ವ)

**ಹಲಧರ** – [ಜೈನ] ವಾಸುದೇವಸಹೋದರ, ಬಲರಾಮ (ಪದೆದೆಱಗಿ ಹಲಧರಂ ತ್ರಿಃಪ್ರದಕ್ಷಿಣಂಗೆಯ್ದು ಸೇಸೆಗೊಂಡು: **ಶಾಂತಿಪು,** ೧. ೮೨)

**ಹಲಸಿಗ** – ವೈದ್ಯ (ಲಕಾರಕ್ಕೆ: ಹಾಲಿಗೆ ಹಲಸಿಗಂ ಹಲಗೆ: **ಶಬ್ದಮದ,** ೨೬ ಪ್ರ)

**ಹಲಾಯುಧ** – ಹಲ[ವ]ಧರ (ಹಲಾಯುಧ ಕೃಪ ಆಶ್ವತ್ಥಾಮರುಂ ನಾಗಕೇತನನೊಳ್ ನಾಳೆಯೆ ಕೂಡಿ ಬರ್ಪರ್ ಅವರಿನ್ನುಂ ಬಾರದನ್ನಂ ಸುಯೋಧನನಂ ಮುನ್ನಮೆ ಕಯ್ಗೆಮಾಱ್ಪುದು ಬಟಿಕ್ಕಾರ್ಗಂ ಬರ್ಕುಮೇ: **ಗದಾಯು,** ೬. ೩೯)

**ಹಲಿ** – ಬಲರಾಮ (ವೈಶ್ರವಣಾದಿ ದಿಗೀಶರಳ್ಕೆ ಹಲಿ ಗರ್ಜಿಸಿದಂ: **ಜಗನ್ನಾವಿ,** ೧೫. ೪೯)

**ಹಲುಕು** – ಮರ ಹತ್ತು, ದೇಹದ ಒಂದು ಭಾಗ (ಹಲುಕು– ವೃಕ್ಷಾರೋಹಣೇ ಶರೀರಾಂಗಭೇದೇ ಚ: **ಶಬ್ದಮದ,** ಧಾ ೭೯)

**ಹಲ್ಲಕ** – ಕೆಂದಾವರೆ (ಹಲ್ಲಕಂಗಳೆನೆ ಬಗೆಗೊಳ್ವ ಮಣಿಕರ್ಣಿಕಾವತಂಸದ ಕಮನೀಯನುಂ: **ಉದ್ಭಟಕಾ,** ೮. ೫೧ ವ)

**ಹಲ್ಲಣ** – ಪಲ್ಲಣ, ಜೀನು (ಪೂಗೊಳದ ತಡಿಯ ಮಾಮರದಡಿಯೊಳ್ ಹಲ್ಲಣಮಂ ಬಿಟ್ಟು ಕುದುರೆಯಂ ನೀರಂ ಕುಡಿಸಿ ತಾನುಂ ಸ್ನಾನಾದಿ ನಿತ್ಯನಿಯಮಂಗಳಂ ತೀರ್ಚಿ: **ಪಂಚತಂತ್ರ,** ೧೯೦ ವ)

**ಹಲ್ಲಣಿಸು** – ಸಿದ್ಧಗೊಳಿಸು (ಪೆಣ್ಣಾನೆಯನಾರ್ದು ಹಲ್ಲಣಿಸು ವಾಹವ್ಯೋಹಮಂ ಕೂಡೆ ಪೂಡು: **ಗಿರಿಜಾಕ,** ೬. ೫೫)

**ಹಲ್ಲಣೆ** – ಗವಸಣಿಕೆ, ಮುಚ್ಚಳ (ಹಲಗೆಯ ಹಲ್ಲಣೆಯಂ ತೆಱೆದು ನಾಲ್ಕು ತೆಱದ ಧಾರೆಯಂ ಮೂಱು ತೆರದ ನಿವಾರಣೆಯಂ: **ತ್ರಿಷಷ್ಟಿಪು,** ೧೩. ೧೪ ವ)

**ಹವ್ಯ** – ಹವಿಸ್ಸು (ಸುಹುತಂ ಕೌರವ್ಯ ಕ್ರವ್ಯ ಹವ್ಯದಿಂದೆನ್ನ ಕೋಪಹವ್ಯವಹಂ ದುರ್ವಹ ದುರ್ಯೋಧನದೇಹ ಪ್ರಹರಣಲೋಹಿತದಿಂ ಆದುದು ಅವಭೃಥಸವನಂ: **ಗದಾಯು,** ೮. ೪೭)

**ಹವ್ಯವಹ** – ಅಗ್ನಿ (ಸುಹುತಂ ಕೌರವ್ಯಕ್ರವ್ಯಹವ್ಯದಿಂದೆನ್ನ ಕೋಪಹವ್ಯವಹಂ ದುರ್ವಹ 'ದುರ್ಯೋಧನದೇಹ ಪ್ರಹರಣ ಲೋಹಿತದಿಂ ಆದುದು ಅವಭೃಥಸವನಂ: **ಗದಾಯು,** ೮. ೪೭)

**ಹವ್ಯಾಮೃತ** – ಹವಿಸ್ಸು (ಗಣನಾತೀತ ಆಜ್ಯಾಹುತಿಗಣದಿಂದಂ ತಣಿಯೆ ಜಾತವೇದನುಂ ಆ ಬ್ರಾಹ್ಮಣಸಮಿತಿ ಬೇಳೆ ದೇವರ್ ತಣಿಯುಂಡರ್ ನೆರೆದು ದಿವ್ಯ ಹವ್ಯಾಮೃತಮಂ: **ಪಂಪಭಾ,** ೬. ೩೭)

**ಹವ್ಯಾಶನ** – ಅಗ್ನಿ (ಅಮೃತಾಂಭೋಜನಾಭ ಅರ್ಕ ಹವ್ಯಾಶನರ್ಗಂದುಂ ರಾಗದಿಂ ತಾನೆಱಗಿಸುವಂ ಇಳಾಲೋಕದಿಂ ಮೋಹರಾಜಂ: **ಸಮಯಪ,** ೧೩. ೪)

**ಹಸನ** – ನಗೆ (ಅಲರ ಬಿಜ್ಜಣಿಗೆಯಿಂ ಬೀಸೆ ಬೀಸರಂಬೋದಂತೆ ಹಸನಂ ಹಸಂಗೆಡೆ: **ರಾಜಶೇವಿ,** ೭. ೯೨ ವ)

**ಹಸಾದ** – ಪ್ರಸಾದ, ಕೃಪೆ (ಮಾನವಂಗೆನಗೆ ದೇವಿ ಹಸಾದಮನೇಕೆ ಮಾಡಿದಳ್: **ಕಾದಂಬ,** ೭. ೫೩)

**ಹಸಿ** – ಕ್ಷುಧೆಗೊಳ್ಳು (ಹಸಿ–ಕ್ಷುಧಾಯಂ: **ಶಬ್ದಮದ,** ಧಾ ೭೧೭)

**ಹಸ್ತ** – ಕೈ (ಸಪ್ರಕೋಷ್ಠಂ ಕರಾಗ್ರವಂತದು ಹಸ್ತಂ: **ಅಭಿಧಾವ,** ೧. ೧೨. ೧೨); ಸಮೂಹ (ಸುರಿಯೆ ಕಚಭರಹಸ್ತದಿಂ ಅರಲ್ಗಳ್

ಆತ್ಮೋತ್ತಮಾಂಗದಿಂ ಅರ್ಚಿಸಿದಳ್ .. .. ಕಾದಂಬರಿ: **ಕಾದಂಸಂ,** ೭. ೩೬); ಆನೆಯ ಸೊಂಡಿಲು (ಸ್ಮರವಶದಿಂದಿರ್ದುದು ಕರೇಣು ಪೇಚಕ ನಿರೂಪಿತ ಆಯತ ಹಸ್ತಂ: **ಕವಿರಾಮಾ,** ೩. ೮); ಒಬ್ಬ ರಾಕ್ಷಸನ ಹೆಸರು (ಆರಂ ಮುನ್ನಂ ಸೆರಗಂ ಪಾರದೆ ಹಸ್ತಪ್ರಹಸ್ತರುಱದೊಡ್ಡಿರ್ದರ್: **ಪಂಪರಾ,** ೧೩. ೧೨)

**ಹಸ್ತಕಟಕ** – ಕೈಕಡಗ (ನಿಜಾನ್ವವಾಯಭೂಭರಮನದೊಂದು ಹಸ್ತಕಟಕೋಪಮಂ ಎಂಬಿನಿತಾಗೆ ತಾಳ್ದಿಕೊಂಡಿರೆ: **ಆದಿಪು,** ೩. ೭೮)

**ಹಸ್ತಚ್ಛಟಾ** – ಚಪ್ಪಾಳೆ (ರಾಜಾಲಯಂ ಶೋಕರಸಾಂಭೋರಾಸಿಯೊಳ್ ಭೋಂಕನೆ ಮುಳುಗಿದುದು ಎಂಬಂತು ಹಸ್ತಚ್ಛಟಾ ಜರ್ಝರ ಮಧ್ಯಂ ಪೆಂಡವಾಸಂ .. .. ರೋದೋನ್ನಾದದಿಂದಂ ಮಾಟ್ಪಂತು ವೈಕುರ್ವಣ ಪರಿಣತಿಯಂ ಬೀಱಿದಂ: **ಪಂಪರಾ,** ೧೬. ೪೮)

**ಹಸ್ತನ್ಯಸ್ತ** – ಕೈಗೊಪ್ಪಿಸಿದ (ಅನೇಕ ಕ್ಷತ್ರಿಯ ಪುತ್ರರ ಕುಲಭವಂಗಳಂ ಕೈಕೊಂಡು ಕೋಶಾಧ್ಯಕ್ಷ ಹಸ್ತನ್ಯಸ್ತಂಗಳ್ಮಾಡಿ: **ಆದಿಪು,** ೧೩. ೮೦ ವ)

**ಹಸ್ತಯುದ್ಧ** – ಕುಸ್ತಿ (ಪಿಡಿಪೀವ ಮರುಳ್ಚುವ ನುಣ್ಚುವಾಸೆಯೊಳ್ ಸೆಳೆವೆಡೆ ಸಾರ್ವ ಪೋರ್ವಳವಿಯೊಪ್ಪಿದುದು ಇರ್ವರ ಹಸ್ತಯುದ್ಧದೊಳ್: **ನೇಮಿನಾಪು,** ೮. ೯೩)

**ಹಸ್ತಸ್ವಸ್ತಿಕ** – ಅಡ್ಡಡ್ಡಲಾಗಿ ಕೈಗಳನ್ನಿಡುವುದು (ಉತ್ತರಯಾಂತರೀಯಂ ಕೊನೆಯೆ ತೊಲಗಿ ನಿಂದಿರ್ದಲ್ಲಿ ತಂದಿತ್ತುದುಚ್ಚಸ್ತನದೊಳಮರ್ದ ಹಸ್ತಸ್ವಸ್ತಿಕಂಗಳ್ ಬೆಡಂಗಂ: **ಆದಿಪು,** ೧೧. ೧೪೮)

**ಹಸ್ತಾಂಗುಳಿ** – ವೀಣೆ ನುಡಿಸುವ ಹನ್ನೆರಡು ಬಗೆಗಳು (ಸಮ ಪ್ರಹರಣ ವಿಶದ ಶಮ ಮಧುರ ಜಸ ರಸ ದವ ವೃಷ್ಟಿ ಜಿತ ಶ್ರಮ ಸ್ವೇದ ದುಸ್ಥಿರ ನಖಗಳೆಂಬ ಹಸ್ತಾಂಗುಳಿಗಳೊಳ್ ಕೂಡಿ: **ಹರಿವಂಶ,** ೧೫. ೨)

**ಹಸ್ತಾಗ್ರ** – ಕೈಬೆರಳು (ರಾಜತನಯರ್ ಪೂಣ್ದೆತ್ತಲ್ ಈ ಪ್ರಸರಕ್ಕೆ ತಗುಳ್ವಂಬುದುಮೆತ್ತಿಕೊಂಡು ಗಗನಕ್ಕೀಡಾಡಿ ವಾಮೇತರಾಯತ ಹಸ್ತಾಗ್ರದೊಳಾಂತು ತಾಳ್ದುದಜೆಂ: **ಶಾಂತಿಪು,** ೫. ೨೬); ಸೊಂಡಿಲು (ಹಸ್ತಾಗ್ರದಿಂ ತಿಳಿನೀರಂ ತೆಗೆದೊಯ್ಯನೂಡಿಸಿ .. .. ಬಾಳಕರೇಣುವಂ ಬಯಕೆಯೊಳ್ ಕೊಂಡಾಡುತಿರ್ದತ್ತಿಭಂ: **ಲೀಲಾವತಿ,** ೮. ೪)

**ಹಸ್ತಾಮಳಕ** – ಅಂಗೈ ನೆಲ್ಲಿಕಾಯಿ, ತುಂಬ ಸ್ಪಷ್ಟ (ಭವಸಂಬಂಧದೊಳ್ ತೊಟ್ಟ ಸಂಭಾವನೆ ಚಿತ್ತಂಬೊಕ್ಕು ಹಸ್ತಾಮಳಕದ ತೆಱದಿಂ ತೋಱೆ: **ಶಾಂತಿಪು,** ೯. ೧೦೩)

**ಹಸ್ತಾರ್ಕ** – ಹಸ್ತಾನಕ್ಷತ್ರದಲ್ಲಿರುವ ಸೂರ್ಯ (ಕೀತಿಶೇಖರ ಧರಾರಮಣಂಗೆ ಹಸ್ತಾರ್ಕನಂತೆ ಕನ್ಯಾಸಮನ್ವಿತಂ ಬರ್ಪಂತು ಬಟೆಯಟ್ಟೆ: **ಅನಂತಪು,** ೬. ೩೧ ವ)

**ಹಸ್ತಾವಲಂಬ** – ಕೈ ಆಸರೆ (ಮಂಗಳಾಳಮಕರಣಾಲಂಕೃತಂ ಸೌಧರ್ಮೇಂದ್ರದತ್ತ ಹಸ್ತಾವಲಂಬನಾರೂಢ ಶುಭಪರಿಣಾಮಂ .. .. ಶಿಬಿಕೆಯನೇಱಿದಾಗಳ್: **ಆದಿಪು,** ೯. ೭೨)

**ಹಸ್ತಿ** – ಸೊಂಡಿಲಿರುವ, ಆನೆ (ಹಸ್ತಿಯ ಬೆಂಗೆ ವಂದು ಸುತ್ತಿಱಿದು ಪಗಲಂ ತಡವಿಕ್ಕಿದಂತೆ ಬೆಳಗುವ ಕೆಯ್ದೀವಿಗೆಗಳ ಬೆಳಗೆ ಬೆಳಗಾಗೆ: **ಪಂಪಭಾ,** ೧೨. ೫೨ ವ)

**ಹಸ್ತಿನಾಪದಾತಿಯುದ್ಧಮಿವ ಬಲವದ್ವಿಗ್ರಹಃ** – ಆನೆ ಕಾಲಾಳುಗಳ ಯುದ್ಧದ ಹಾಗೆ ಬಲಿಷ್ಠನ ಯುದ್ಧವಾಗುತ್ತದೆ (ಅಧಿಕಬಲನಾದೊಡೆ ಹಸ್ತಿನಾಪದಾತಿಯುದ್ಧಮಿವ ಬಲವದ್ವಿಗ್ರಹಃ ಎಂಬ ನೀತಿಯಕ್ಕುಂ: **ಪಂಚತಂತ್ರ,** ೯೧ ವ)

**ಹಸ್ತಿನಿ** – ಹೆಣ್ಣು ಆನೆ (ದಂತಿನಿ ಮೊಲೆಯೂಡೆ ನಿಂದು ನಿಜಪೋತಮನಾಗಳೆ ಸಿಂಹಮೆಯ್ದೆ ಹಸ್ತಿನಿಯನವಜ್ಞೆಗೆಯ್ದು ಕರಿಯೂಡಮನಟ್ಟುವುದಿಲ್ಲಿ: **ಶಾಂತಿಪು,** ೨. ೧೦೫)

**ಹಸ್ತಿಪಕ** – ಮಾವುತ (ಮರಲ್ವಿನಂ ಪಿಡಿದು ಹಸ್ತಿಪಕಂ ಬಿಗಿದೊಣಂದಿದಂದು .. .. ಮುಗುದಂದುವು ಮತ್ತಹಸ್ತಿಗಳ್: **ವರ್ಧಮಾಪು,** ೮. ೪೯)

**ಹಸ್ತಿಮಶಕಾಂತರ** – ಆನೆ–ಸೊಳ್ಳೆಗಳ ನಡುವಣ ವ್ಯತ್ಯಾಸ, ತುಂಬ ಅಂತರ (ರಾಜ್ಯಕ್ಕಂ ತ್ರಿಭುವನಸಾಮ್ರಾಜ್ಯಕ್ಕಂ ಹಸ್ತಿಮಶಕಾಂತರಂ: ಶಾಂತಿಪು, ೫. ೭೨)

**ಹಸ್ತಿಮೂರ್ಖ** – ಮಹಾ ಮೂರ್ಖ (ಹಸ್ತಿಮೂರ್ಖನಾದೊಡವಂ ತಾಂ ನುಡಿವಂ ಸಿರಿವಂತರೊಳ್: **ಸಮಯಪ,** ೪. ೫೮)

**ಹಸ್ತಿಯೂಥ** – ಆನೆಗಳ ಹಿಂಡು (ಮಲಯಸುಂದರನೆಂಬ ಆನೆಯುಂಟು ಹಸಿಯೂಥಕ್ಕೆಱೆಯನಪ್ಪುದು: **ವಡ್ಡಾರಾ,** ಪು. ೩೪, ಸಾ. ೨೦)

**ಹಸ್ತಿರದ**– ಆನೆಯ ದಂತ (ಹಸ್ತಿರದ ಹಸ್ತಿಮಸ್ತಕೋದ್ಭವ ಮುಕ್ತಾವಿಸ್ತಾರಮೆಂದು ತಂದು ಸಮಸ್ತವನಾಧೀಶರ್ ಅವನಿಪತಿಯಂ ಕಂಡರ್: **ಆದಿಪು,** ೧೨. ೬೭)

**ಹಸ್ತಿಶಾಲೆ** – ಆನೆಯ ಲಾಯ (ನಿರುತಂ ಶುದ್ಧಾಂತಕಾಂತಾಗೃಹ ಪರಿವೃತಿಯಿಂ ಹಸ್ತಿಶಾಲಾದಿ ನಾನಾ ಪರಿವಾರಾವಾಸ ವಿನ್ಯಾಸದಿಂ .. .. ರಂಜಿಸಿರ್ಕುಂ ಕರುಮಾಡಂ: **ಪುಷ್ಪದಂಪು,** ೯. ೨೯)

**ಹಳಚಿಕೆ** – ಶುಭ್ರತೆ, ಹೊಳಪು (ಹಳಚಿಕೆವೆತ್ತ ವಸ್ತ್ರದ ವಿಳಾಸದ ಚೆನ್ನಿಗರಲ್ಲಿ ಮೇಳವಂ ಬಳಸದಿರು ಇಚ್ಚೆಯಂ ತಳೆದು ನೀಂ ಮರುಳಾಗದಿರು ಅಬ್ಜಲೋಚನೇ: **ಶಾಂತೀಶ್ವಪು,** ೧೧. ೭೫)

**ಹಳಪದ್ಧತಿ** – ಉತ್ತ ಭೂಮಿ (ಹಳಪದ್ಧತಿ ಸೀತಾಖ್ಯಂ: **ಅಭಿಧಾವ,** ೧. ೧೧. ೬೮)

**ಹಳದಿಯಂಬರ** – ಹಳದಿಯ ಬಟ್ಟೆ (ಒಪ್ಪುವ ನಾಗಪಂಚಕಪ್ರಸರದ ಚೊಲ್ಲೆಹಂ ಹಳದಿಯಂಬರಂ: **ಸೂಕ್ತಿಸುಧಾ,** ೮. ೪೧೦)

**ಹಳಧರ** – ಬಲರಾಮ (ಕೃಷ್ಣಂ ಅಬ್ಬ ಮಣ್ಣಂ ತಿಂದಂ ನೋಡೆಂದು ಪಿಸುಣಾಡಲ್: **ಜಗನ್ನಾವಿ,** ೩. ೬೨); [ಜೈನ] ವಾಸುದೇವ ಸಹೋದರ (ಹಳಧರನೆಂಬ ಕಾಂಬುರುಹಮಂ ವಸುದೇವನ ನೇತ್ರನೀರಜಾವಳಿ ಮುದಿದಾ ಜನಾರ್ದನನ ದೇಹದೊಳೊಂದಿರೆ: **ಕರ್ಣನೇಮಿ,** ೬. ೧೦೮)

**ಹಳಹಳ** – ಮಂಕು (ಪೊಳಪಱಿದು ತಾರೆಗಳ್ ಹಳಹಳನಾದುವು ಕುವಳಯಂಗಳೆಸಟೆಸಕಂಗೆಟ್ಟು ಅಳವಟೆದುವು ಆ ಚಕೋರಂಗಳ ಬಳಗಂ ಪೆಳಱಿದುವು ಕರಂ ದಿನಮುಖದೊಳ್: **ಶಾಂತೀಶ್ವಪು,** ೧೧. ೯೧)

**ಹಳಹಳಿಕೆ** – ತೇಜಸ್ಸು (ಪೊಳೆವಂಗಭಂಗಿಯೊಳೆ ಹಳಹಳಿಕೆ ಮೊಱಿಮಟ್ಟು ಪೇರುರದ ಮೊಳೆಪು ಮಣಿಹಾರರುಚಿಯಿಂ ಪೆರ್ಚಿ: **ಕುಸುಮಾಕಾ,** ೭. ೧೩೩ ರಗಳೆ)

**ಹಳಿ** – ಬಲರಾಮ (ಇಂದೆ ಹಳಿಯುಂ ಗಡ ಕೂಡುವಂ ಆತನಂ ಗೆಲಲ್ ಬಂದಪುದೇ ಬಟೆಕ್ಕ ಅದುವೆ ಕಾರಣಮಾಗಿ ಉಳಿದಿರ್ದಂ ಅಂಧರಾಣ್ಣಂದನಂ: **ಪಂಪಭಾ,** ೧೩. ೭೫)

**ಹಱೆಗವಿ** – ಕೀಳು ಕವಿ (ಹಱೆಗವಿಗಳ ಕಬ್ಬಂಗಳ ಹೊಱಗಳಿಯಕ್ಕರದ ಹೊಲಿಗೆ ಬಿರ್ಚಿದೊಡೆಲ್ಲಂ ಬಱಿ ತಾಱೆಗೆಬೀಱೆಗೆ: **ಗಿರಿಜಾಕ,** ೧. ೨೩)

**ಹಜೆಗಟ್ಟಿಲೆ** – ದಟ್ಟ ಕತ್ತಲೆ (ಹಳಹಳನಿರ್ದ ತಾರೆಗಳನಾಯ್ದು ಕುಱುಂಕುತುಂ ಅಂತೆ ಪೂಣ್ದು ಬೆಂಬಳಿವಿಡಿದೊತ್ತಿಕೊಂಡು ಹಜೆಗಟ್ಟಿಲೆಯಂ ತವೆ ಪೀಱುತುಂ: **ಕುಸುಮಾಕಾ,** ೧೪. ೨೧)

**ಹಜೆಮಣ್ಣು** – (ಅಜೆಯದ ಬಾಲಂ ಬೀದಿಯ ಹಜೆಮಣ್ಣಿಂ ಮಾಡಿದೊಂದು ಹಾಹೆಯ ತೆಱದಿಂ ತಱಬಱಕಂ ವಿಕಟಾಕೃತಿ ನೆಱೆ ನಿಷ್ಠುರನಿವೃತಹುಂಡಸಂಸ್ಥಾನಂಗಳ್: **ಶಾಂತೀಶ್ವಪು,** ೯. ೧೦೭)

**ಹಟಿವಿಗೆ** – ಪಟಿವಿಗೆ, ಬಾವುಟ (ಗರುಡನಂತೆ ಹಾವಿನ ಹಟಿವಿಗೆಯಂ ಆರಯ್ದು ನೋಡಿಯುಂ: **ಗದಾಯು,** ೬. ೨೯ ವ)

**ಹಟ್ಗಿ** – ಹೊಗೆಯಲ್ಲಿ ದೋರೆಗಾಯನ್ನು ಹಾಕಿಡುವುದು (ಒಂದರ್ಥಕ್ಕೆ: ಹಟ್ಗಿಯೆಂದು ದೂವೆಯೊಳ್ ತಟಿಲಂ ಪೂಟ್ದಿಕ್ರಿಯೆ: **ಶಬ್ದಮದ,** ೩೩ ವೃತ್ತಿ ೧೨೩)

**ಹಾಗ** – ಗದ್ಯಾಣದ ನಾಲ್ಕನೆಯ ಒಂದು ಭಾಗ, ಒಂದು ನಾಣ್ಯ (ಹಾಗದ ಭಾಗಂ ಕೆಟ್ಟಂದು ಆಗಳುಂ ಒಡಲುರಿಗುಂ ಎಂತು ತನಗದಱಿಂದಂ ಲೋಗರ ಕಸವರಮಂ ಕೊಳಲಾಗದು: **ಸಮಯಪ,** ೫. ೪೦)

**ಹಾಟಕ** – ಚಿನ್ನ (ಗಿರಿಜೋತ್ತಮ ಕಾಂಚನ ಜಾತರೂಪ ತಪನೀಯ ಭರ್ಮ ಹಾಟಕ ಚಾಮೀಕರ ಶಾತಕುಂಭ ಕಾರ್ತಸ್ವರ ಕನಕ ಸುವರ್ಣ ರುಕ್ಮನಾಮಂ ಹೇಮಂ: **ಅಭಿಧಾವ,** ೧. ೬. ೬)

**ಹಾಟಕಪೀಠ** – ಚಿನ್ನದ ಪೀಠ (ವಿವಾಹಮಂಟಪದ ನಡುವಣ ಮಣಿಮಯವೇದಿಕೆಯ ಹಾಟಕಪೀಠದ ಮೇಲೆ ಪಾಸಿದ ದುಗುಲದ ದಳಿಂಬದೊಳ್ ಇರಿಸಿದಾಗಳ್: **ಆದಿಪು,** ೪. ೪೭ ವ)

**ಹಾಡಂಗಿ** – ಒಂದು ಮರ (ಇರ್ಬಿಡ ಅರನೇಱೆಲ್ ಇಪ್ಪೆ ಸಿರಿಸಂ ಹಾಡಂಗಿ ಭಾರಂಗಿ ನೇಳಲ್ ಎರಂ ಪಾದರಿ ತಾಱೆ ತಂಡಸು ಬಿಳಿಲ್ ಬಲ್ಮತ್ತಿ ಬೇವತ್ತಿ ಸೆಳ್ಳೆಲವಂ **ಪಾರ್ಶ್ವನಾಪು,** ೧೨. ೫೮)

**ಹಾದಂಡ** – ವಾಗ್ದಂಡ (ಕ್ರಮದಯ್ವರಿಂದೆ ಹಾದಂಡಮಯ್ವರುಂ ಮನುಗಳಿಂದೆ ಕಾಮಾದಂಡಂ ಸಮನಿಸೆ: **ಪಂಪರಾ,** ೧. ೮೯)

**ಹಾದಿಗೆಡು** – ದಾರಿ ತಪ್ಪು (ಮಿಂಚಿನ ಗೊಂಚಲೊ ಹಾದಿಗೆಟ್ಟು ತೊಟ್ಟಗೆ ನೆಗೆತರ್ಪ ನುಣ್ಗದಿರೊ ಪೇೞೆನೆ .. .. ಕವಿತಂದುವು ಭೋಂಕನೆ ಪೂವಿನಂಬುಗಳ್: **ಕಬ್ಬಿಕಾ,** ೨೪೦)

**ಹಾನ** – ತ್ಯಾಗ, ತ್ಯಜಿಸುವಿಕೆ (ಧನಸೇವೆಯಿಂದೆ ನೆರೆವಪ್ಪ್ ನಂಟರೆಂದಂದು ತಾಂ ಮರುಳಕ್ಕುಂ ಪುರುಳಕ್ಕುಮೇ ಮೞೆದು ಹಾನಾದಾನ ವಿಜ್ಞಾನಮಂ: **ಪಂಪರಾ,** ೬. ೬೭)

**ಹಾಮಾದಂಡ** – [ಜೈನ] ವಾಗ್ದಂಡ: ಹಾ, ಮಾ ಎಂಬ ಶಬ್ದಗಳನ್ನು ಹೇಳುವುದರ ಮೂಲಕ ಕೊಡುತ್ತಿದ್ದ ಶಿಕ್ಷೆ (ಕ್ರಮದಯ್ವರಿಂದೆ ಹಾದಂಡಮಯ್ವರುಂ ಮನುಗಳಿಂದೆ ಕಾಮಾದಂಡಂ ಸಮನಿಸೆ: **ಪಂಪರಾ,** ೧. ೮೯)

**ಹಾಮಾಧಿಕ್ಕಾರದಂಡ** – ಹಾಮಾದಂಡ (ಮತ್ತಮಯ್ವರ್ ಹಾಮಾಧಿಕ್ಕಾರದಂಡಮಂ ಮಾಡಿದರ್: **ಚಾವುಂಪು,** ಪು. ೧೬೭. ಸಾ. ೩–೪)

**ಹಾಯನ** – ವರ್ಷ (ಸಂವತ್ಸರ ಹಾಯನ ವತ್ಸರಂಗಳವು ವರ್ಷಂಗಳ್: **ಅಭಿಧಾವ,** ೧. ೨. ೧೪)

**ಹಾರ** – ನೂರೆಂಟು ಎಳೆಗಳ ಮಾಲೆ (ವಿಜಯಚ್ಛಂದ ಹಾರ ದೇವಚ್ಛಂದ ಅರ್ಧಹಾರ ರಶ್ಮಿಕಲಾಫಗುಚ್ಛ ನಕ್ಷತ್ರಮಾಳಾ ಅರ್ಧಗುಚ್ಛ: **ಆದಿಪು,** ೮. ೫೪ ವ); ಮನೋಹರವಾದ (ಸಮಸ್ತವಸ್ತುವಿಸ್ತಾರಹಾರಮಾಗಿರ್ದ ಹಸ್ತಿನಪುರವೆ ನಿಜವಂಶಾವಳಂಬಮಾಗೆ: **ಪಂಪಪಭಾ,** ೧. ೫೮ ವ)

**ಹಾರವ** – 'ಹಾ' ಎಂಬ ಶಬ್ದ (ದ್ವಿಗುಣಿಸಿದುದು ಹಾರವಂ ಪ್ರತಿಧ್ವಾನದಿಂ ಜಿನೇಂದ್ರಾಲಯದೊಳ್; **ಪಂಪರಾ,** ೧೪. ೧೦೧)

**ಹಾರಿ** – ಮನೋಹರವಾದ (ತಾರಾಳಿಯ ಹಾರಿಯ ಬಟ್ಟೆಗೆ ಶೈಳಂ ಬರ ತೊಲಗಿದಂತೆ ಕೆಲದೊಳ್ ತೋರ್ಕುಂ: **ಲೀಲಾವತಿ,** ೯. ೩೪); ಹಿಂಡು (ಕಾಡೆಮ್ಮೆವೋರಿಯ ಹಾರಿಯಂತೆಯುಂ ಪಂದಿಯ ಗೊಂದಳದಂತೆಯುಂ ಅಮ್ಮಾವಿನ ತೋಮೆಯಂತೆಯುಂ ತೋಳದ ಗೂಳೆಯಂತೆಯುಂ: **ಪುಷ್ಪದಂಪು,** ೩. ೧೨೭ ವ)

**ಹಾರಿಗೊಳ್** – ಆಕರ್ಷಕವಾಗು (ಅಮೃತಾರ್ಣವಮನೆ ಮೇರುವಿನ ಮೇಖಳಾವನಕೆ ತಿರ್ದಿ ಪರಿಯಿಸಲಿಂದ್ರಂ ಸಮೆದೇಱೆದವೊಲೆರಡೋಳಿಯೆ ನಿಮಿರ್ದೆಸೆದುದು ಹಾರಿಗೊಂಡು ಕೇರ್ಗಟ್ಟಿದವೋಲ್: **ಪುಷ್ಪದಂಪು,** ೧೧. ೯)

**ಹಾರಿದ್ರಕ** – ಅರಿಸಿನ (ಭೂರಮಣಿಯ ಶೃಂಗಾರಾಗರಮಿದೆನೆ ವಿರಹಿಜನಕೆ ಮದನನ ಕಾರಾಗಾರಮಿದೆನೆ ಬಗೆಗೊಳ್ವುವು ಹಾರಿದ್ರಕ ಜೀರಕಾಧಕೇಕ್ಷುವನಂಗಳ್: **ಪುಷ್ಪದಂಪು,** ೯. ೨೨)

**ಹಾರೀತ** – ಪಾರಿವಾಳ (ಸಾರಸ ಮರಾಳ ಪಾರಾವತ ಹರೀತ ಕಾರಂಡೆ ಕುರವಕ ಸಂಕುಳಚರಣಸಂಚರಣದಿಂ ಪಳಚ್ಚನೆಸೆವ ಪಜ್ಜೆಗಳುಂ: **ಪುಷ್ಪದಂಪು,** ೨. ೩೯ ವ)

**ಹಾರೀತಕ** – ಪಾರಿವಾಳ, ಹಸುಬನ ಹಕ್ಕಿ (ಸಾಲ್ದಿರ್ದ ಹಾರೀತಕ ಹರಿತಶಿಲಾಪಟ್ಟದೊಳ್ ಭೂಪನಿರ್ದಂ: **ಕಾದಂಸಂ,** ೫. ೪೧)

**ಹಾಲಂ** – ಕಳ್ಳು, ಹೆಂಡ (ಮೈರೇಯಮಾಸವಂ ಮಧು ವಾರಂ ಮದ್ಯಂ ಪ್ರಸನ್ನೆ ಹಾಲಂ ಕಲ್ಯಂ ।ವಾರುಣಿ ಕಾದಂಬರಿಯದು ಸೀರಿಪ್ರಿಯೆ ಸೀಧು ಮದಿರೆ ಸುರೆ ಜಗಳಂ ಕಳ್: **ಅಭಿಧಾವ,** ೧. ೧೬. ೫)

**ಹಾಲಾಹಲ** – ವಿಷ (ಕಾಲಾಹಲಂಗೊಟ್ಟೊಡಂ ಮೃಡನೊರ್ವಂ ಮುಳಿಯಂ ಎಂದು ಉಲಿವವೋಲ್ ಉದ್ಘೋಷಿಕುಂ ಸಾಗರಂ: **ಶಬರಶಂ,** ೧. ೩೧)

**ಹಾಲಿಗೆ** – ಕರಡಿಗೆ, ಭರಣಿ (ಲಕಾರಕ್ಕೆ: ಹಾಲಿಗೆ ಹಲಸಿಗಂ ಹಲಗೆ: **ಶಬ್ದಮದ,** ೨೬ ಪ್ರ)

**ಹಾವ** – ಶೃಂಗಾರ ಚೇಷ್ಟೆ (ಸ್ತ್ರೀಸದ್ಮದೊಳ್ .. .. ಈಗಳುಳ್ಳವರೊಳೀ ಹಾವವೀ ಭಾವಮೀ ಪರಿಜೀ ವಿಭ್ರಮಮೀ ವಿಲಾಸಂ: **ಸುಕುಮಾಚ,** ೫. ೫೮)

**ಹಾವಭಾವ** – ವಿಲಾಸ (ಹಾವಭಾವ ವಿಲಾಸ ವಿಭ್ರಮಂಗಳನೊಡೆಯೊಳಂ .. .. ಪೋಗವೇಟ್ದಿ ಧನದತ್ತನೊಳ್ಪಿದನೆಂದು: **ವಡ್ಡಾರಾ,** ಪು. ೧೭, ಸಾ. ೧೩)

**ಹಾಸ** – ನಗೆ (ಹರಿ ಹಾಸ ಅವಯವಂಗಳಂತಿರಲ್ .. .. ನಿರ್ಮಲದಿವ್ಯ ಮೌಕ್ತಿಕ ಶಿಲಾಲಿಂಗಂ: **ಕಾದಂಸಂ,** ೩, ೨೨); ಪಾಶ (ಥಳಥಳಿಪ ಬೊಮ್ಮಹಾಸಮಂ ಇಳೆ ಬೆದಱಲ್ ಕೊರಲೊಳಿಕ್ಕಿಕೊಂಡಂ ಭಕ್ತಂ: **ತ್ರಿಷಷ್ಟಿಪು,** ೨೦. ೧೮)

**ಹಾಸ್ತಿಕ** – ಮಾವುತ (ಆಗಳದಱ ಸಿರಿಯರಸನಂ ಭೀಮರಥಧೊಳ್ ನುಡಿಯುತ್ತುಂ ಹಾಸ್ತಿಕಪ್ರಾಯಬಲಂ ಬರುತುಮಿರೆ: **ಚಂದ್ರಪ್ರಪು,** ೧೦. ೪೭ ವ); ಆನೆಗಳ ಹಿಂಡು

(ಮಹಾಮಾಣಿಕ್ಯ ಗಾಣಿಕ್ಯ ಹಾಸ್ತಿಕ ರತ್ನೋರ್ಜಿತ ಚಕ್ರವರ್ತಿ ವಿಭವಂ: **ಆದಿಪು,** ೧೬. ೮)

**ಹಾಸ್ತಿಕಸಾಧನ** – ಗಜಸೈನ್ಯ (ಧನುರ್ಧರಪ್ರಾಯರುಂ ಅಶ್ವೀಯಬಹಳಮುಂ ಹಾಸ್ತಿಕಸಾಧನಮುಮಪ್ಪ ತಮ್ಮ ಬಲಮನೊಂದು ಮಾಡಿ: **ಆದಿಪು,** ೧೩. ೫೬ ವ)

**ಹಾಸ್ಯ** – ರಸಗಳ್ಲಿ ಒಂದು (ಕಾರುಣ್ಯಂ ಹಾಸ್ಯಂ ಶೃಂಗಾರಂ ಇನಿತಱೊಳಮಕ್ಕೆ ವೈದರ್ಭಿ .. .. ವೀರಂರಸಂಗಳ್ಗೆ ಪೇೞ್ಗೆ ಪಾಂಚಾಳಿಕೆಯಂ: **ಕಾವ್ಯಾವಲೋ,** ೭೮೮)

**ಹಾಸ್ಯಂಗೆಯ್** – ತಮಾಷೆ ಮಾಡು (ಆ ನರಿ ದೂರಭೀರುವಾದುದರ್ಕೆ ಹಾಸ್ಯಂಗೆಯ್ದುದು ಅದು ಕಾರಣದಿಂ ನೀಂ ಶಬ್ದಮಾತ್ರಕ್ಕೆ ಬೆರ್ಚಿದೊಡಿಂತಪ್ಪ ನಗೆಗೆಡೆಯಪ್ಪಿರ್: **ಪಂಚತಂತ್ರ,** ೯೩ ವ)

**ಹಾಸ್ಯಭಾರ** – ಅತಿರೇಕವಾದ ಗೇಲಿ (ಕಣ್ಬರಿ ಪುತ್ರಮಿತ್ರ ವನಿತಾಜನದೊಳ್ ಸಮಸಂದು ರಾಜ್ಯಮಂ ಜಾಣ್ಬಿಡೆ ದುಃಖಹೇತುವನಿದಂ ನೆಱೆ ತಾಳ್ದಿ .. .. ಅಟ್ಟುಣ್ಬ ನರಂಗೆ ಸಂಗಡಿಗನಪ್ಪೆನೆ ತಪ್ಪೆನೆ ಹಾಸ್ಯಭಾರಮಂ: **ಚಂದ್ರಪ್ರಭು,** ೨. ೩೫)

**ಹಾಹಾಕ್ರಂದ** – ಹಾಹಾಕಾರ, ಗಾಬರಿ (ಭೋಂಕೆನೆ ಹಾಹಾಕ್ರಂದಮೊಗೆದುದು ಅಂತಃಪುರದೊಳ್: **ಅಜಿತಪು,** ೧೦. ೩೩)

**ಹಾಹಾಕ್ರಂದನಂಗೆಯ್** – ಪ್ರಲಾಪಿಸು (ಗುಲ್ಮಲತಾಳಿಗಳ್ ತೊಡರಲ್ ಒರ್ವಂ ನೂಂಕಿಕೊಂಡುಒಯ್ವ ಮಾರ್ಗದೆ ಪೋದೆಂ ಬಳಿಕಾತನಿರ್ದೆಡೆಗೆ ಹಾಹಾಕ್ರಂನಂಗೆಯ್ವುತಂ: **ಕಾದಂಬ,** ೫. ೧೫೫)

**ಹಾಹಾರವ** – ಹಾಹಾಕ್ರಂದ (ಅವನೀವ್ಯೋಮಮನೆಯ್ದೆ ಪರ್ವಿ ಬಳೆದುಂ ಶೋಕಾನುಬಂಧಾಂಧಬಾಂಧವ ಹಾಹಾರವಂ ಎಂತುಮೆಯ್ದುದು ವಲಂ ಲೋಕಾಂತರಪ್ರಾಪ್ತನಪ್ಪನ್ನವನಂ: **ಆದಿಪು,** ३. ೫೪೦

**ಹಾಹೆ** – ಬೊಂಬೆ (ಅಱಿಯದ ಬಾಲಂ ಬೀದಿಯ ಹಱೆಮಣ್ಣಿಂ ಮಾಡಿದೊಂದು ಹಾಹೆಯ ತೆಱದಿಂ ತಱಬಱಿಕಂ ವಿಕಟಾಕೃತಿ ನೆಱೆ ನಿಷ್ಠುರನಿವೃತಹುಂಡಸಂಸ್ಥಾನಂಗಳ್: **ಶಾಂತೀಶ್ವಪು,** ೯. ೧೦೭)

**ಹಾಟೂರ್** – ನಾಶಗೊಂಡ ಊರು (ವಿದೂಷಕಂ ಈಕೆ ಹುಟ್ಟುಗೆಟ್ಟ ಹುಟ್ಟಗೆಯಂತೆ ಹಡಣಮೊಣಗಿದ ಹಟೞಿಯ ಸಿದ್ದಿಗೆಯಂತೊಣಕುಟ್ಟದೆ ಪತ್ತಿದ ಹಾಟೂರ ನಾಯಂತೆ ಒಡಲಂ ಪತ್ತಿದ .. .. ಎಂದು ಅರಸನಂ ನಗಿಸಿದಂ:: **ಲೀಲಾವತಿ,** ೨. ೧೧೬ ವ)

**ಹಾಟ್ಮನೆಹಾಟ** – ತುಡುಗುಣಿ ನಾಯಿ (ಒಂದರ್ಥಕ್ಕೆ: ಹಾಟ್ಮನೆಹಾಟನೆಂದು ತುಡುಗುಣಿ ನಾಯ್: **ಶಬ್ದಮದ,** ३३ ವೃತ್ತಿ ೧೨೪)

**ಹಿಂಡು** – ಮುಷ್ಟಿಯಿಂದ ಹಿಸುಕು (ಹಿಂಡು–ಮುಷ್ಟಿನಿಷ್ಪೀಡನೆ: **ಶಬ್ದಮದ,** ಧಾ ३೬೧)

**ಹಿಂತಾಳ**– ಒಂದು ಬಗೆಯ ತಾಳೆಯ ಮರ, ಖರ್ಜೂರದ ಮರ (ವಿನಮಿತ ಚೂತ ಕುಜಾತ ಸಮಾಜಂ ಶಾಳ ತಾಳ ಹಿಂತಾಳ ಶಿರೀಷಂ: **ಸುಕುಮಾಚ,** ೧೦. ೫೬)

**ಹಿಂದೋಳ** – ಉಯ್ಯಾಲೆ (ಮುಂದೊಂದು ಮಾಕಂದಮಹೀಜದ ತುಱುಂಗಿದ ಶಾಖಾಗ್ರದೆ ಮೆಱೆವ ಹಿಂದೋಳದೊಳ್: **ಶಾಂತೀಶ್ವಪು,** ೫. ೧೧೪ ವ); ಒಂದು ರಾಗ (ಹಿಂದೋಳರವಕ್ಕೆ ಮಲ್ಲಿಗೆಗೆ ಬೆಳ್ದಿಂಗಳ್ಗೆ ತಣ್ಗಾಳಿಗೆ ಇನ್ನೆನಸುಂ ಕ್ರೂರತೆಯಂ ನೆಗಟ್ದಿಪನೋ ಅಕ್ರೂರಂ: **ಜಗನ್ನಾವಿ,** ೫. ೯೦)

**ಹಿಂಸಾರುಚಿ** – ಪರರಿಗೆ ತೊಂದರೆ ಕೊಟ್ಟು ಆನಂದಿಸುವ ಸ್ವಭಾವ (೦ಆಂಸ ಮಧು ಮದ್ಯಸೇವನೆ ಹಿಂಸಾರುಚಿ .. .. ಎಂಬಿವಲ್ಲದೆ ಸಂಸಾರಭ್ರಮಣಕಾರಣಂ ಪೆಱವೊಳವೇ: **ಆದಿಪು,** ೫. ೮೦)

**ಹಿಂಸಾವಿರಹಿತ** – ಹಿಂಸೆಯನ್ನು ತ್ಯಜಿಸಿದವನು (ಹಿಂಸಾವಿರಹಿತನೈ ನೀನಿಂ ಸಲೆ ಬಾಟ್ ಪಾಪಕರ್ಮನೆಂ ಪೆಱರಟಿವಂ ಹಿಂಸೆಯನೆ ಬಯಸಿ ಮಱುಗುವ ನಾಂ ಸತ್ತಪೆಂ ಎಂದು ಪೂಣ್ದು ಬರ್ಪನ ತೆಱದಿಂ: **ಧರ್ಮಾಮೃ,** ೧೦. ೧೩೩)

**ಹಿಂಸೆ** – ನೋವು (ಹಿಂಸೆ ಪುಸಿ ಕಳವು ರತಿ ರಾಗಂ ಸಕಳಪರಿಗ್ರಹಂಗಳೆಂಬುದನಱಿದು ಅರ್ಥಂ ಸಕಳಮೆಂದು ತೋಱುವುದು: **ಶಾಂತಿಪು,** ೬. ೪೯)

**ಹಿಟಕವಾಡು** – ಚೇಷ್ಟೆಮಾಡು, ತಮಾಷೆ ಮಾಡು (ಅಂತಃಪುರಕ್ಕೆವೋಪ ವಾಚಾಳಿಯನೊರ್ವಳಂ ಚಟುಳ ಸೇಟಿಕೆಯಂ ವಸುದೇವವಲ್ಲಭಂ ಹಿಡಿದು ಹಿಟಕವಾಡೆ: **ನೇಮಿನಾಪು,** ५. ೭ ವ)

**ಹಿಡಿಂಬಾತಕ** – ಹಿಡಿಂಬನನ್ನು ಕೊಂದವನು, ಭೀಮ (ಕುರುಕ್ಷೇತ್ರದೊಳ್ ಪ್ರಳಯೋಗ್ರಾಂತಕನಂತೆ ಅಗುರ್ವಂ ಒಳಕೊಂಡಿರ್ದಂ ಹಿಡಿಂಬಾಂತಕಂ: **ಗದಾಯು,** ೧. ೫೫)

**ಹಿತ** – ಸಂತೋಷದಾಯಕವಾದುದು (ಹಿತಮಂ ಹಿತಕರಱಿಪಿದೊಡಂ ಮತಿಗೆಟ್ಟಿಟೆಕೆಯ್ದುಂ: **ಪಂಪರಾ,** ೧೪. ೧೨೫)

**ಹಿತಮಿತ** – ಸಂತಸದಾಯಕವಾಗಿಯೂ ಹೆಚ್ಚಲ್ಲದೆಯೂ ಇರುವ (ಮೃದುಮಧ್ಯಮತನು ಹಿತಮಿತಮೃದುವಚನಂ ಲಲಿತಮಧುರ ಸುಂದರವೇಷಂ: **ಆದಿಪು,** ೧. ೨೯)

**ಹಿತವ** – ಒಳ್ಳೆಯದನ್ನು ಬಯಸುವವನು (ಅರಸನ ಮನದೊಳೊದವಿದ ಭಯಮಂ ಕಳೆಯಲ್ ವೇಟ್ಕುಮಂತೆ ನಾವಾಪ್ತರುಂ ಹಿತವರುಮಪ್ಪೆವೆನೆ: **ಪಂಚತಂತ್ರ,** ೮೨ ವ)

**ಹಿತವಚಃಪ್ರಿಯ** – ಒಳ್ಳೆಯ ಮಾತುಗಳನ್ನು ಇಷ್ಟಪಡುವವನು (ಕ್ಷಯವೃಜಿನಂ ಜಿನಸಮಯಂ ಸ್ಮಯರಹಿತಂ ಹಿತವಚಃಪ್ರಿಯಂ: **ಸುಕುಮಾಚ,** ೧. ೫೧)

**ಹಿತಾರ್ಥಂ** – ಒಳ್ಳೆಯದಕ್ಕಾಗಿ (ಹಿತಾರ್ಥಮೀ ಭೂವಳಯಕ್ಕೆ ಶಕ್ರಂ ಅದು ಕಾರಣಂ ಅರ್ಚಿಪುದಿಂದ್ರನಂ ಜನಂ: **ಜಗನ್ನಾವಿ,** ४. ೭೭)

**ಹಿಪ್ಪದಿಕೆ** – ಬೆಳಗಿನ ಜಾವ (ಕೆಲವು ಪದಂಗಳ್ ನಿಯತದಿಂ ದ್ವಿತ್ವಂಗಳಪ್ಪುವವರ್ಕೆ ಪ್ರಯೋಗಂ: ಹಿಪ್ಪದಿಕೆ=[ಬೆಳಗುಜಾವ]: **ಶಬ್ದಮದ,** ४೬, ಪ್ರ ವೃತ್ತಿ ೫೭)

**ಹಿಮ** – ಇಬ್ಬನಿ (ಮಹಿತಾವಶ್ಯಾಯ ತುಷಾರ ಹಿಮ ತುಹಿನ ನೀಹಾರಕರಂ: **ಅಭಿಧಾವ,** ೧. ೧. ೬೮); ಚಳಿಗಾಲ (ಜಳದಗ್ರೀಷ್ಮ ಹಿಮಂಗಳಿಲ್ಲ ಮೊಳೆವುಲ್ ನಾಲ್ಕಂಗಳುಳಂಗಳ್ವರಂ ಬಳಗಂ ಬಳಗಂ ತಣ್ಪಿನ ಬಿಣ್ಪಿನಂತೆಸಗುಗುಂ: **ಶಾಂತಿಪು,** ೬. ೧೦೨); ಹಿಮಾಲಯಪರ್ವತ (ಶ್ರೀದಯಿತಂ ಮನುಕುಲಗಗನಾದಿತ್ಯಂ .. .. ಜಿತದಿಙ್ಮಂಡಲನಾದ ಮಹಾತ್ಮಂ ಸರಸ್ವತೀಮಣಿಹಾರಂ: **ಆದಿಪು,** ೧೫. ೧); ಪಚ್ಚಕರ್ಪೂರ (ಹಿಮಮಿಶ್ರಾಂಬುವಂ ಒಯ್ಯನೆ ಓಪನಿದಿರೊಳ್ ನಿಂದು ಅಂಗನಾಚಂದನಾಂಕ ಮನೋಜ್ಞಾಂಗದೊಳೊತ್ತೆ: **ರಾಜಶೇವಿ,** ೧೦. ೮೧)

**ಹಿಮಕರ** – ಚಂದ್ರ (ಹಿಮಕರಂ ಆತ್ಮ ಶೀತರುಚಿಯಂ ದಿನನಾಯಕಂ ಉಷ್ಣದೀಧಿತಿಯಕ್ರಮಮಂ ಅಗಾಧವಾರಿಧಿಯೆ ಗುಣ್ಪಂ ಇಳಾವಧು ತನ್ನ ತಿಣ್ಪಂ ಬಿಸುಟಿಪ್ಪೊಡಂ; **ಪಂಪಭಾ,** ೧. ೮೩); ಕರ್ಪೂರ(ಕರಿದಂತಂ .. .. ಚಂದನಂ ಹಿಮಕರಂ ಜಾತೀಫಳಂ ಪೂತಿ ಸೂಕರಮುಕ್ತಾಮಣಿ ಚೂಡಾರತ್ನಮೆಂಬೀ ವನಾಂತರಸಂಜಾತಮಂ ಆತನೋಲಗಿಸಿದಂ ಸದ್ವಸ್ತು ಸಂಘಾತಮಂ: **ಪುಷ್ಪದಂಪು,** ೫. ೧೦೨)

**ಹಿಮಕರಕಾಂತ** – ಚಂದ್ರಕಾಂತಶಿಲೆ (ಸೊಗಸಿತ್ತು ಎಯ್ದೆ ಕುಡ್ಯೀಕೃತ ಹಿಮಕರಕಾಂತಂ ಸುಶಯ್ಯಾನಿಶಾಂತಂ: **ಉದ್ಭಟಕಾ,** ೮. ೯೦)

**ಹಿಮಕೃತ್** – ಚಂದ್ರ (ಹಿಮಕೃದ್ವಂಶಜರಪ್ಪ ಪಾಂಡುಸುತರಂ ಕೆಯ್ಕೊಂಡು ನಿನ್ನಯ್ದು ಬಾಡಮನಿತ್ತುಂ ನಡೆಪೆಂದು ಸಾಮಮನೆ ಮುಂ ಮುಂತಿಟ್ಟೊಡೆ: **ಪಂಪಭಾ,** ೯. ೮೮)

**ಹಿಮಕೃನ್ಮಂಡಲ** – ಚಂದ್ರಮಂಡಲ (ಶರದದ ಹಿಮಕೃನ್ಮಂಡಲದ ಮೇಲೆ ಚೆಲ್ವಂ ಕೊಂಡೆಸೆವ ಕಳಂಕದಂತಿರೆಸೆದಂ ಕೃಷ್ಣಂ: **ನೇಮಿನಾಪು,** ೮. ೩೬)

**ಹಿಮಗಿರಿ** – ಹಿಮಾಲಯ ಪರ್ವತ (ಹಿಮಗಿರಿಯ ಮಧ್ಯಕೂಟದಹಿಮವದ್ದಿವಿಜಮನೊತ್ತಿ ಕಪ್ಪಂಗೊಂಡು: **ಆದಿಪು,** ೧೪. ೫೯)

**ಹಿಮಗೌರ** – ಹಿಮದಂತೆ ಬೆಳ್ಳಗಿರುವ (ಏಂ ಹಿಮಗೌರಹಾರಮೆಸೆದುದೊ ಹಿಮಶೈಲಶಿಲಾವಿಶಾಲ ವಕ್ಷಸ್ಸ್ಥಳದೊಳ್: **ಆದಿಪು,** ೪. ೩೮)

**ಹಿಮತಾಂಬೂಲ** – ಕರ್ಪೂರಮಿಶ್ರಿತ ತಾಂಬೂಲ (ಹಿಮತಾಂಬೂಲೋರುರಾಗಾಧರಮದೃಢನಿತಂಬಾಂಬರಂ .. .. ಚಂದನಪಾಂಡಿಮಗಾತ್ರಂ ಗ್ರೀಷ್ಮ ಸಾಯಂಸಮಯದೊಳ್ ಎಸೆದತ್ತಂದು ಬಾಲಾಕಲಾಪಂ: **ಚಂದ್ರಪ್ರಪು,** ೯. ೮೪)

**ಹಿಮರುಗ್ಬಿಂಬ** – ಚಂದ್ರಬಿಂಬ (ಹಿಮರುಗ್ಬಿಂಬಕಳಂಕ ಪಂಕಮನದಂ ಪ್ರಕ್ಷಾಳಿಸಲೆಂದು .. .. ವಿಳಸತ್ತೀಯೂಷಮಂ ತಂದು ತನ್ನ ಮನಃಪ್ರೇಮದಿನಿಲ್ಲಿ ಪಂಕಜಭವಂ ತೀವಿಟ್ಟನೋ ತಾನೆನಲ್ ಕಮನೀಯಂಬಿಡಿದಿರ್ದುದಾ ಕೊಳಂ: **ಕುಸುಮಾಕಾ,** ೧೧. ೧೮೨)

**ಹಿಮರುಚಿ** – ಹಿಮರಶ್ಮಿ (ಹಿಮರುಚಿ ಕುಂದೆ ಕುಂದೆ ನೆಱೆದೊಪ್ಪುವ ಚಂದ್ರಿಕೆ ಕುಂದುವಂತೆ ಬಂಹಿಮವತ್ ಅಪಾರ ಸಾಗರ: **ಶಾಂತಿಪು,** ೭. ೭೮)

**ಹಿಮರುಚಿಗ್ರಾವ** – ಚಂದ್ರಕಾಂತಶಿಲೆ (ಸೂಸುತ್ತೆ .. .. ಹಿಮರುಚಿಗ್ರಾವ ಸ್ಫುರತ್ ಪುತ್ರಿಕಾಂಗಮೆ ತಾನೊಲ್ದೊಸೆದಿಕ್ಕುವಂತೆ ವಿಳಸತ್ ಮುಕ್ತಾಚ್ಛವಾರ್ಬಿಂದುವಂ: **ರಾಜಶೇವಿ,** ೧೦. ೮೧)

**ಹಿಮರೋಚಿ** – ಹಿಮರಶ್ಮಿ (ಹಿಮರೋಚಿಃಕುಂದಚಂದ್ರಾತಪ ವಿಪುಳವಿಳಾಸೋಪಹಾಸಿ ಪ್ರಭಾಸೌಧಮಯಂ: **ಅನಂತಪು,** ೧. ೧೦೪)

**ಹಿಮವರ್ಷ** – ಇಬ್ಬನಿಯ ಮಳೆ (ಹಿಮವರ್ಷಬಿಂದುಗಳ್ ಸಂಕ್ರಮಿಸಿರೆ ವನತರುನಿಕಾಯದೊಳ್ ನವಮುಕುಳೌಘಮನಾಂತ ಸುರಭಿವಾತಂ ಭ್ರಮರಾಳಿಗೆ ಪರಿಮಳಾನುಮಿತಮಾಯ್ತೆತ್ತಂ: **ಜಗನ್ನಾವಿ,** ೧೪. ೮)

**ಹಿಮವಾರವಾಣ** – ಹಿಮಕವಚವುಳ್ಳುದು, ಹಿಮಾಲಯಪರ್ವತ (ಪ್ರಕಟ ಶ್ರೀಹಿಮವಾರವಾಣವಿಶದಂ ಗಂಗಾಂಶುಕನ್ಯಸ್ತ ಮಸ್ತಕನಗ್ರಸ್ಥನಮೇರುಶೇಖರಂ: **ಶಾಂತಿಪು,** ೧೧. ೬೦)

**ಹಿಮವಿಭವ** – ಅಧಿಕ ಚಳಿ (ಹಿಮವಿಭವಂ ಪ್ರತೀತಶಿರಂ ಸಮಯಂ ಸಮಯಜ್ಞನಂದದಿಂದಮೆ ಪೆಱಪಿಂಗಿದತ್ತು: **ಪಾರ್ಶ್ವನಾಪು,** ೮. ೧೧೭)

**ಹಿಮಶಿಖರಿ** – ಹಿಮವದ್ಗಿರಿ (ಅವಱೊಳುತ್ತರಶ್ರೇಣಿಯೊಳ್ ಉದಗ್ರಹಿಮಶಿಖರಿಶೇಖರ ಶಾರದನೀರದಾಕಾರ ಸುಧಾಧವಲಿತ ಉತ್ತುಂಗ ಪ್ರಾಸಾದಕೂಟಕೋಟಿ ಸಂಕೀರ್ಣಮುಂ .. .. ಆಗಿ: **ಆದಿಪು,** ೧. ೭೦ ವ)

**ಹಿಮಶಿಶಿರ** – ತುಂಬ ತಣ್ಣಗಿರುವ (ಅನ್ನೆಗಂ ಅತ್ತ ದುರ್ಯೋಧನಂ ಅತಿಸಂಭ್ರಮಾಕುಳಿತಪರೀತಜನ ಉಪನೀತ ಚಂದನಕರ್ಪೂರಮಿಶ್ರಿತ ಹಿಮಶಿಶಿರ ಧಾರಾಪರಿಷೇಕದಿಂದ ಎಂತಾನುಂ ಮೂರ್ಛೆಯಿಂದೆಚ್ಚತ್ತು: **ಪಂಪಭಾ,** ೧೩. ೨ ವ)

**ಹಿಮಸಮಯ** – ಚಳಿಗಾಲ (ವನದೇವತೆ ಹಿಮಸಮಯಕ್ಕನುನಯದಿಂ ಸೇನೆದಳಿದ ಕಳಮಾಕ್ಷತಮಂ ನೆನೆಯಿಸಿದುವು ನೀಳ್ದಿನ ಬೆಳ್ದಿನ ಜಾದಿಯ ನನೆಗಳಳಿಕುಲೋಚ್ಚಲಿತಂಗಳ್: **ಪುಷ್ಪದಂಪು,** ೬. ೪೩)

**ಹಿಮಸಮಯಪತಿ** – ಚಳಿಗಾಲದ ಒಡೆಯ, ಚಂದ್ರ (ಹಿಮಸಮಯಪತಿಯ ರೂಪಂ ಕುಮುದಿನಿ ನೋಡಲ್ಕೆ ಪಲವು ಕಣ್ಬಡೆದಂತೇಂ ರಮಣೀಯಮಾಯ್ತೊ ವಿದಳಿತ ಕುಮುದಂಗಳ ಮಿಸುಗುವೆಸಟಿ ಮಸಕಂ ಕೊಳದೊಳ್: **ಪುಷ್ಪದಂಪು,** ೬. ೪೪)

**ಹಿಮಾಂಶು** – ಹಿಮರಶ್ಮಿ, ತಂಪಾದ ಕಿರಣ (ರಾಜಹಂಸಂ .. .. ತೀರಹಿಮಾಂಶೂಪಲದೊಂದು ಪಟ್ಟಶಿಲೆಯೊಳ್ ನಿಂದಿರ್ದಂ ಆನಂದದಿಂದಂ: **ಶಾಂತೀಶ್ವಪು,** ೧೦. ೧೦೩); ಚಂದ್ರ (ಹಿಮಾಂಶುಮಂಡಲಮಂ ಆ ಕಲೆಯಂ ಜನಮೆಯ್ದೆ ಕಲ್ಪಿಕುಂ: **ಧರ್ಮಪ,** ೧. ೪೨)

**ಹಿಮಾಂಶು ನಯನಾಗ್ನಿ ಕಷಾಯ ಹೃಷಿಕ ಷಣ್ಮುನಿ ಕ್ರಮನರಕಂಗಳ್** – ಅಸಜ್ಞಿಜೀವ, ಸರೀಸೃಪ, ಪಕ್ಷಿ, ಹಾವು, ಸಿಂಹ, ಲಲನಾಜನ ಹಾಗೂ ಮನುಷ್ಯರು ಕ್ರಮವಾಗಿ ಜೀವಿಸುವ ಒಂದರಿಂದ ಏಳರವರೆಗಿನ ನರಕಗಳ ಕ್ರಮ [ಚಂದ್ರ–೧ ನಯನ–೨ ಅಗ್ನಿ–೩ ಕಷಾಯ–೪ ಇಂದ್ರಿಯ–೫ ಷಟ್–೬ ಮತ್ತು ಮುನಿ–೭] (ಹಿಮಾಂಶು ನಯನಾಗ್ನಿ ಕಷಾಯ ಹೃಷೀಕ ಷಣ್ಮುನಿ ಕ್ರಮನರಕಂಗಳೊಳ್ ನೆಲಸುಗುಂ: **ಆದಿಪು,** ೫. ೯೪)

**ಹಿಮಾನಿ** – ಮಂಜಿನ ಒಟ್ಟಿಲು (ಹಿಮಾನಿಯಿಂ ನಡುಗುತಿರ್ಪಾ ಪುಲ್ಲೆಯಂ ಕಂಡಿಸಲ್ ಪದನೆಂದೇಟಿಲೊಡರ್ಚಿಯುಂ .. .. ಪಟ್ಟಿರ್ದುದು ಬೇಡವಡೆ ದೇಹಸ್ತಂಭವಾದಂದದಿಂ: **ಜಗನ್ನಾವಿ,** ೧೪. ೧೪)

**ಹಿಮಾನಿಳ** – ತಂಗಾಳಿ (ಏನೆಸೆದುದೊ ರೈವೃಷ್ಟಿ ಹಿಮಾನಿಳನಳಿನಮಾ ತಳತಕುಸುಮವರ್ಷಂ ಸುರಭೇರಿನಿನಾದಂ .. .. ನೆಗಟೆ ನೆಗಟ್ವ ಪಂಚಾಶ್ಚರ್ಯಂ: **ಪಂಪರಾ,** ೯. ೨)

**ಹಿಮೋಪಳ** – ಚಂದ್ರಕಾಂತಶಿಲೆ (ಹಿಮೋಪಳಮೊಸರ್ವವೊಲ್ ಇಂದುಕರಾಳಿಗೆ ತೃಣಗ್ರಾಹಿ ನೀಳಮಣಿಯೊಸರ್ದಪುದೇ: **ಚಂದ್ರಪ್ರಪು,** ೧. ೩೯)

**ಹಿರಣ್ಯ** – ಚಿನ್ನ (ಹಿರಣ್ಯಧನಧಾನ್ಯ ಕೃಷ್ಣ ಫಲವೃಷ್ಟಿ ಸಂಪೂರ್ಣಮಂ ಧರಾವಳಯಮಂ ಪ್ರಚಂಡಭುಜದಂಡದೊಳ್ ತಾಳ್ದಿದಂ: **ಮಲ್ಲಿನಾಪು,** ೩. ೧೨)

**ಹಿರಣ್ಯಗರ್ಭ** – ಬ್ರಹ್ಮ (ಜಳರುಹನಾಭನ ನಾಭಿಯ ಜಳಬುದ್ಬುದದೊಳಗೆ ಸುರಭಿಪರಿಮಳಮಿಳಿತ ಉಲ್ಲುಳಿತ ಅಳಿ

ಜಲಜಮಾಯ್ತು ಆ ಜಳಜದೊಳಗೆ ಒಗೆದಂ ಹಿರಣ್ಯಗರ್ಭಂ: **ಪಂಪಭಾ,** ೧. ೫೯); [ಜೈನ] ಆದಿ ತೀರ್ಥಂಕರ (ಧರೆ ರತ್ನಗರ್ಭಮಾದುದು ಸುರೆಲ್ಲಂ ಹರ್ಷಗರ್ಭರಾದರ್ ಪೊಗಳರ್ಪಿರಿದನೆ ಹಿರಣ್ಯಗರ್ಭನ ನಿರುಪಮ ಗರ್ಭಾವತರಣ ಮಂಗಳವಿಧಿಯೊಳ್: **ಆದಿಪು,** ೭. ೨೬)

**ಹಿರಣ್ಯರೇತ** – ಅಗ್ನಿ (ನೆರೆದ ಊರ್ಧ್ವರೇತನೊಳ್ ಪುರು ಹಿರಣ್ಯರೇತ ಅತಿತೀವ್ರನೊಳ್ ಮುನಿವರನೊಳ್ ಪರಮಭಗಸಹಿತೆ ಮುದದಿರೆ ಪರಿಶ್ರಮಕ್ಕೆನ್ನ ನಿರ್ವಿಶೇಷನೊಳಾಗಳ್: **ಕವಿರಾಮಾ,** ೧. ೬೪)

**ಹಿರಣ್ಯಾಕ್ಷ** – ಒಬ್ಬ ರಾಕ್ಷಸ (ಹಿರಣ್ಯಾಕ್ಷನಂ .. .. ತವೆ ಕೊಂದಾದಿ ವರಾಹರೂಪದೊಳೆ ನೀನಂದೆತ್ತಿದೈ ಗೋಮಿನೀದ್ವದಂಷ್ಟ್ರಾಗ್ರದ ನೀಲಜಾಲಮಣಿಯೆಂಬಂತಾಗೆ ಭೂಗೋಳಮಂ: **ಜಗನ್ನಾವಿ,** ೧. ೫೭)

**ಹಿರಣ್ಯೋತ್ಕೃಷ್ಟಜನ್ಮ** – [ಜೈನ] ಒಂದು ಗರ್ಭಾನ್ವಯಕ್ರಿಯೆ, ಜಿನಜನನಿಯ ಗರ್ಭದಲ್ಲಿ ಅವತರಿಸುವುದು (ದಾನಸುಖೋದಯ ಇಂದ್ರತ್ಯಾಗ ಅವತಾರ ಹಿರಣ್ಯಗರ್ಭೋತ್ಕೃಷ್ಟಜನ್ಮ .. .. ಎಂಬ ಅಯ್ವತ್ತಮೂಱು ಗರ್ಭಾದಿ ನಿರ್ವಾಣಪರ್ಯಂತಂಗಳಪ್ಪ ಗರ್ಭಾನ್ವಯಕ್ರಿಯೆಗಳಂ: **ಆದಿಪು,** ೧೫. ೧೫ ವ)

**ಹಿವ** – [ಹಿಮ] ಮಂಜು (ಮಕಾರಕ್ಕೆ ವತ್ವಂ: ಕಾಮಂ–ಕಾವಂ ಭೀಮಂ–ಬೀವಂ ಯಮಲಂ–ಜವಳಂ .. .. ಹಿಮಂ–ಹಿವಂ: **ಶಬ್ದಮದ,** ೨೭೭ ಪ್ರ)

**ಹಿವಗದಿರ** – ಹಿಮಗದಿರ, ಚಂದ್ರ (ಅವಳ ಮೆಯ್ಸಿರಿ ಸವನಿಸದೆನೆಗೆ ಎಂದು ಕಂದನೆರ್ದೆಯೊಳ್ ತಾಳ್ದಂ ಹಿವಗದಿರನೆಂದೊಡೆ ಇನ್ನುಲ್ಲಇದರೇನಂ ಪೊಗಟಲಾರ್ಪರ್ ಆಕೆಯ ಮೊಗಮಂ: **ಕಬ್ಬಿಗಕಾ,** ೯೭)

**ಹಿಟಿ** – ಹಿಂಡು (ತಮಾಲಪಾದಪದ ಪಲ್ಲವಮಂ ಹಿಟಿದು ಒಂದು ನಿರ್ಮಲೋಪಲತಳದಲ್ಲಿ ತದ್ರಸದಿಂ .. .. ಬರೆದಂ: **ಕಾದಂಬ,** ೫. ೭೪)

**ಹೀನ** – ಕ್ಷುದ್ರವ್ಯಕ್ತಿ (ವನನಾಗಾರಿಯನಾಂತ ದಂತಿಶಿಶುವೋಲ್ ದಿಗ್ದಂತಿಯೋಲ್ ಪೋರ್ದ ಹೀನನವೋಲ್ .. .. ನೀಡಿಲ್ಲದಳ್ಕಾಡುಗುಂ: **ಶಾಂತಿಪು,** ೧. ೨೭)

**ಹೀನಾಂಗುಳಿ** – ಕಿರುಬೆರಳು (ಎಮ್ಮ ವಾಮಕರದ ಈ ಹೀನಾಂಗುಳೀ ಪರ್ವಮಂ ಭರದಿಂದಂ ಮಡಿಯೊತ್ತಿಂ: **ಕರ್ಣನೇಮಿ,** ೧೩. ೮)

**ಹೀನಾಧಿಕ** – ಕಡಿಮೆ ಮತ್ತು ಹೆಚ್ಚು (ಹೀನಾಧಿಕ ಗುಣದೋಷವಿಕಾರಮುಮಂ ಲಿಂಗವಚನಭೇದಂಗಳುಮಂ ಮಾನಧನರಜಿದು ಪೇೞ್ಗೆ: **ಕವಿರಾಮಾ,** ೩. ೮೬)

**ಹೀನಾಧಿಕವಿನಿಮಾನ** – [ಜೈನ] ಅಸ್ತೇಯದ ಅತಿಚಾರಗಳಲ್ಲಿ ಒಂದು, ವ್ಯಾಪಾರದಲ್ಲಿ ತೂಕ–ಅಳತೆಗಳಲ್ಲಿ ಕಡಿಮೆ ಮಾಡುವುದು (ಹೀನಾಧಿಕವಿನಿಮಾನ ಸೇನಾಹೃತ ದಾನಸದೃಶ ಮಿಶ್ರರ ವಿಲೋಪಸ್ತೇನಪ್ರಯೋಗಮೆಂದಿವು ತಾನಸ್ತೇಯಕ್ಕೆ ಅತಿಕ್ರಮಮಕ್ಕುಂ: **ಸುಕುಮಾಚ,** ೬. ೧೫)

**ಹೀರ** – ವಜ್ರ (ಮುತ್ತಿನ ನೀಲದ ಹೀರದ ಮಾಣಿಕದ ಪೊಳೆವ ಜೀರ್ಕೊಟಿವೆಗಳಂ: **ಚಂದ್ರಪ್ರಪು,** ೭. ೧೨೯)

**ಹೀಲಿ** – ನವಿಲುಗರಿ (ಸೋಗೆಯ ಹೀಲಿಯ ಬೇರನೆತ್ತಿ ಹಂಸಾಳಿಯ ತುಪ್ಪುಳಂ ತುಟಿದು .. .. ತೀಡಿದುದು ಮೂಡಣ ಗಾಳಿ: **ನೇಮಿನಾಪು,** ೪. ೬೨)

**ಹುಂಕೃತಿ** – ಹುಂ ಎಂದು ಕೂಗುವುದು (ಹುಂಕೊಳ್ಳದೆ ಉತ್ಕೋಪಹುಂಕೃತಿಯಂ ಮಾಡುತುಮೌಡುಗರ್ಚಿ ಕಿಸುಗಣ್ಣೆಟ್ಟಚ್ಯುತಂ ರಂಜಿಕುಂ: **ಜಗನ್ನಾವಿ,** ೩. ೬೧)

**ಹುಂಕೊಳ್** – ಹೂಗುಟ್ಟು (ಹುಂಕೊಳ್ಳದೆ ಉತ್ಕೋಪ ಹುಂಕೃತಿಯಂ ಮಾಡುತುಮೌಡುಗರ್ಚಿ ಕಿಸುಗಣ್ಣೆಟ್ಟಚ್ಯುತಂ ರಂಜಿಕುಂ: **ಜಗನ್ನಾವಿ,** ೩. ೬೧)

**ಹುಂಡ** – ಹೆಡ್ಡ (ಏನಿದು ಹುಸಿ ಹುಂಡನೆಂದಾಡಿದ ಮಾತೆ: **ಧರ್ಮಾಮಧು,** ೧. ೩೩)

**ಹುಂಡಸಂಸ್ಥಾನ** – [ಜೈನ] ಶರೀರದ ಅವಯವಗಳನ್ನು ಕುರೂಪಗೊಳಿಸುವ ಕರ್ಮಗಳ ಉದಯ (ಅಜಿಯದ ಬಾಲಂ ಬೀದಿಯ ಹಜಿಮಣ್ಣಿಂ ಮಾಡಿದೊಂದು ಹಾಹೆಯ ತೆಱದಿಂ ತಱಬಱಕಂ ವಿಕಟಾಕೃತಿ ನೆಱೆ ನಿಷ್ಠುರನಿವೃತ ಹುಂಡಸಂಸ್ಥಾನಂಗಳ್: **ಶಾಂತೀಶ್ವಪು,** ೯. ೧೦೭)

**ಹುಂಡಾವಸರ್ಪಿಣಿ** – [ಜೈನ] ಅನೇಕ ಅವಸರ್ಪಿಣಿಗಳ ನಂತರ ಬರುವ ಕಾಲಾವಧಿ, ಶರೀರದ ಅಂಗೋಪಾಂಗಳನ್ನು ಕುರೂಪಗೊಳಿಸುವ ಕರ್ಮಗಳ ಉದಯ (ಅತಿಭಂಗಂ ದೊರೆಕೊಂಡುದಿಂದು ಭರತೇಶ್ವರಂಗೆ ಹುಂಡಾವಸರ್ಪಿಣೀ ವಿಳಸನದಿಂ: **ಆದಿಪು,** ೧೪. ೧೧೪)

**ಹುಟ್ಟಿಗೆ** – ಉಡುವ ಬಟ್ಟೆ (ಈಕೆ ಹುಟುಗೆಟ್ಟ ಹುಟ್ಟಿಗೆಯಂತೆ ಹಡಣಮೊಣಗಿದ ಹಟೆಯ ಸಿದ್ದಿಗೆಯಂತೆ: **ಲೀಲಾವತಿ,** ೨. ೧೧೬ ವ)

**ಹುತ** – ಹೋಮ ಮಾಡಲ್ಪಟ್ಟ, ಹವಿಸ್ಸು (ಹಿತ ಪುರೋಹಿತ ಪ್ರಾಜ್ಯಾಹುತಿ ಹುತವಹಸಮಕ್ಷದೊಳ್ ಕೆಯ್ನೀರೆಱೆದು ಪಾಣಿಗ್ರಹಣಂಗೆಯ್ಯೆ: **ಪಂಪಭಾ,** ೩. ೭೪ ವ)

**ಹುತಭುಕ್** – ಅಗ್ನಿ (ಇಂತಿದು ವಿಸ್ತಾರಿತ ಕಾಮಹೋಮ ಹುತಭುಕ್ ಪ್ರಜ್ವಾಲೆಯೋ ಎಂಬ ಸಂಪದಮಂ ಬೀಱಿದುದು ಇಂದ್ರ ದಿಗ್ವರದೊಳ್ ಚಂದ್ರದ್ಯುತಿ ಪ್ರಾಭವಂ: **ಗಿರಿಜಾಕ,** ೪. ೯೪)

**ಹುತವಹ** – ಅಗ್ನಿ (ಹುತವಹತತಿಯಿಂ ವೇಷ್ಟಿಸಿರ್ದ ಅಧ್ವರಂ .. .. ಎಂಬಂದದಿಂ .. .. ಯೋಗಿವೃಂದಾರಕರ ನಡುವೆ ಜಾಬಾಲಿಯೋಗೀಂದ್ರನಿರ್ದಂ: **ಕಾದಂಸಂ,** ೧. ೭೪)

**ಹುತವಹಬಾಣ** – ಆಗ್ನೇಯಾಸ್ತ್ರ (ಹುತವಹಬಾಣದಿಂದಮಿಸೆ ತೂಳ್ದುದು ವಾನರಸೇನೆ: **ಗದಾಯು,** ೧. ೨೪)

**ಹುತವಹಸಖ** – ಬೆಂಕಿಯ ಗೆಳೆಯ, ವಾಯು (ಆ ದಿವ್ಯಮುನಿ ಹುತವಹಸಖನಂ ಬರಿಸಿ ನೀನೀ ಕನ್ನೆಯಂ ವಿವಾಹಮಾಗಲೆವೇೞ್ಕುಂ ಎನೆ: **ಪಂಚತಂತ್ರ,** ೩೬೩ ವ)

**ಹುತಾಗ್ನಿ** – ಯಜ್ಞದೀಕ್ಷಿತ (ಕುಮಾರನಂ ಮುನ್ನಂ ಹುತಾಗ್ನಿಯಾಗಿರ್ದ ಪುರೋಹಿತನನಿದಿರ್ಗೊಂಡು: **ಶಾಂತಿಪು,** ೬. ೧೨ ವ)

**ಹುತಾಶನ** – ಹವಿಸ್ಸನ್ನು ಸೇವಿಸುವವನು, ಅಗ್ನಿ (ಧಾತ್ರಿಯುಮಂ ಈ ಹುತಾಶನಪುತ್ರಿಯುಮಂ ಬಱಿದೆ ಸೋಲ್ತನಲ್ಲಂ ಜೂದಿಂ ಕ್ಷತ್ರಿಯತೇಜಮುಮಂ ಯಮಪುತ್ರಂ ರಿಪುಗಂದೆ ಸೋಲ್ತನಾಗಲೆವೇಡಾ: **ಗದಾಯು,** ೧. ೬೦)

**ಹುತಾಶನಕುಂಡ** – ಹೋಮಕುಂಡ (ಅಪರದಿಗ್ಭಾಗದೊಳ್ ಅನಗಾರಕೇವಲಿ ಕುತಾಶನಕುಂಡಮಂ ಸ್ಥಾಪನಂಗೆಯ್ದು: **ಆದಿಪು,** ೧೬. ೫೨ ವ)

**ಹುತಾಶನಪುತ್ರಿ** – ಬೆಂಕಿಯ ಮಗಳು, ದ್ರೌಪದಿ (ಧಾತ್ರಿಯುಮಂ ಈ ಹುತಾಶನಪುತ್ರಿಯುಮಂ ಬಱಿದೆ ಸೋಲ್ತನಲ್ಲಂ ಜೂದಿಂ

ಕ್ಷತ್ರಿಯತೇಜಮುಮಂ ಯಮಪುತ್ರಂ ರಿಪುಗಂದೆ ಸೋಲ್ತನಾಗಲೆವೇಡಾ: **ಗದಾಯು,** ೧. ೬೦)

**ಹುತಾಶನಮಿತ್ರ** – ಬೆಂಕಿಯ ಮಿತ್ರ, ಗಾಳಿ (ವನಜಾತಪ್ರಿಯಬಂಧುಗೆ ಅಂಗಪತಿಯಂ ಧರ್ಮಂಗೆ ನಿನ್ನಂ ಹುತಾಶನಮಿತ್ರಂಗೆ ಬಕಾರಿಯಂ ಕುಲಿಶಿಗಂ ಗಾಂಡೀವಿಯಂ ಪೆತ್ತೆಂ: **ಗದಾಯು,** ೧೦. ೨೧)

**ಹುದುಗು** – ಅಡಗಿಕೊ (ಹುದುಗು–ಗೋಪನೇ: **ಶಬ್ದಮದ,** ಧಾ ೧೫೮)

**ಹುರಿ** – ಒಣಗಿಸು (ಚರಾಚರಂಗಳಂ ಕರಿಮುರಿಯಪ್ಪಿನಂ ಹುರಿವ ಹಂಚುವೊಲಿರ್ದೆಳಯೊಳ್ ಕೃತಾಂತನೆಚ್ಚುರಿಗಣೆಯಂತೆ ಬಂದುದು ಲಯಾನಿಳಕಲ್ಪನಿದಾಘಜಾನಿಳಂ: **ನೇಮಿನಾಪು,** ೪. ೬೪); ಹಗ್ಗ (ಹುರಿ– .. .. ರಜ್ಜುಭ್ರಮಣಕ್ರಿಯಾಯಾಂ: **ಶಬ್ದಮದ,** ಧಾ ೬೦೯); ಬಿಗುವು (ಆರ್ತ ಕದಂಪು ಬತ್ತಿದ ಕಾಲುಂ ಹುರಿಯಬಿದಲ್ದಿಇಮಿಳಿಯೆಸಕದ ಸೆರೆಯುಂ: **ಶಬ್ದಮದ,** ೨೫೧ ಪ್ರ ೩)

**ಹುಸಿ** – ಸುಳ್ಳು ಹೇಳು (ಹುಸಿ–ಅನೃತೇ: **ಶಬ್ದಮದ,** ಧಾ ೭೧೮)

**ಹೂಂಕರಿಸು** – ರೋಷದಿಂದ ಹೂಂಕಾರ ಮಾಡು (ಆ ರಾಜಸುತಂ ಪಸಿದೆಂ ನೀರಡಸಿದೆಂ ಎನಗಿವಲ್ಲದಲ್ತೆನ್ನಂ .. .. ಹೂಮಕರಿಸಂ ನಿರ್ವಿನಿಸಂ ಜೀಂಕರಿಸಂ: **ಅಜಿತಪು,** ೫. ೮೭)

**ಹೂಂಕಾರ** – ರೋಷದಿಂದ ಹೂಂ ಎಂದು ಕೂಗುವ ಶಬ್ದ (ಹೂಂಕಾರಪೂರ್ವಕಂ ಕಣ್ಣಿಂ ಕೆಚ್ಚನೆಗೆಯ್ದು ದೆಸೆಗಳಂ ನೋಟ್ಟಿಳ್: **ಪಂಪರಾ,** ೧೦. ೧೪೨)

**ಹೂಂಕಾರಂಗೆಯ್** – ಹೂಂಕರಿಸು (ಇನ್ನಾನಾದೊಡಂ ಸರಂದೋಜಿ ನರಿಯಂ ಬರಿಸಿ ತಿಂಬೆನೆಂಬಟಿವಗೆಯಂ ಬೇಡರಂತೆ ಬಗೆದು ಹೂಂಕಾರಂಗೆಯ್ವುದು: **ಪಂಚತಂತ್ರ,** ೯೨ ವ)

**ಹೂಜೆಗ** – ಅಸೂಯಾಪರ (ಗಾಳಿಸು ಗೆಲ್ವನಂ ಹರಹು ಹೂಜೆಗನಂ ಸುಲಿ ಸುತ್ತುಗಾಜಿನಂ: **ಲೀಲಾವತಿ,** ೨. ೧೦೭)

**ಹೂಜೆಗತನ** – ಹೊಟ್ಟೆಕಿಚ್ಚುಪಡುವುದು (ಹೂಜೆಗತನಕ್ಕೆ ನಾಡೊಳಗೋಜಂ ಪುಸಿಯುತ್ತುಮಿರ್ಪುದರೆ ತಮಗೆಂದುಂ ಸಾಜವೆನೆ ಸಲೆ ಸಂದ ಖಳ: **ಸಮಯಪ,** ೭. ೩೫)

**ಹೂಡು** – ಯೋಜಿಸು (ಹೂಡು–ಯೋಜನೇ: **ಶಬ್ದಮದ,** ಧಾ ೩೬೨)

**ಹೂನ್ಯ** – ಪುಣ್ಯ (ಪೊಸಹೂನ್ಯದ ಪಸರಮೆನಿಸಲಿದು ಮದನನ ಮಂಗಳಭವನಮೆನಿಸಲಿದು: **ಆದಿಪು,** ೩೦ ರಗಳೆ)

**ಹೂಹೆ** – ಬಾಣ (ತನಗೆ ಹೂಹೆಯಂ ಎಚ್ಚಪಂ ಎನ್ನಂ ಎಂದವಳ್ ಕುಟ್ಟಿನಿ ಕೆಯ್ಗಳ ಮುಜಿದು ಬಯ್ದಳ್: **ನೇಮಿನಾಪು,** ೪. ೧೫೦)

**ಹೂಸಕ** – ಸುಳ್ಳು (ಅಬಲಾವಳಿ .. .. ಜಡತ್ವಂ ಎರಡುಂ ಗೆಲ್ವೊಡೆ ಹೂಸಕಮಿಲ್ಲದೆ ಭಜಿಪುದು ಮೆಯ್ಸಿರಿಯುಳ್ಳವಳಂ: **ಅನುಭವ,** ೧೫)

**ಹೃತ್ಕಮಲ** – ಹೃದಯವೆಂಬ ಕಮಲ (ಕಮಲೋದ್ಭವನ ಅಮಳಿನ ಹೃತ್ಕಮಲದೊಳ್ ಒಗೆದರ್ ಸುರೇಂದ್ರಧಾರಕರ್ ಆ ವಾಗಮಳರ್ ನೆಗೆಟ್ದಿರ್ದರ್ ಪುಲಹ ಮರೀಚಿ ಅತ್ರಿ ಅಂಗಿರಸ್ ಪುಳಸ್ತ್ಯ ಕ್ರತುಗಳ್: **ಪಂಪಭಾ,** ೧. ೬೦)

**ಹೃಚ್ಛಲ್ಯ** – ಎದೆಗೆ ನಾಟಿದ ಬಾಣ (ಕೆಲರುರದೊಳ್ ನಟ್ಟಂಬನಾಳ್ದೊಂ ಮುನ್ನಂ ಮೂದಲಿಸಿದೊಡಾ ಹೃಚ್ಛಲ್ಯಮಂ ಕಳೆದಂತೆ ಕಿಟ್ಟು ಕಳೆದು ಸತ್ತರ್: **ಶಾಂತಿಪು,** ೪. ೩೦ ವ)

**ಹೃಜ್ಜಾತ** – ಮನಸ್ಸಿನಲ್ಲಿ ಹುಟ್ಟಿದವನು, ಮನ್ಮಥ (ಎಂತುಟಪ್ಪ ರಸಮುಂ ತನಗೆಂತುಮಸಹ್ಯಮಾಗೆ ಹೃಜ್ಜಾತನ ಮಾಯೆ ಮೋಹಿಸುವುದುಂ .. .. ದಶಮುಖಂ ಮರವಾನಸನಂತೆ ತೋಜಿದಂ: **ಪಂಪರಾ,** ೯. ೧೫೫)

**ಹೃತ್ತಾಪ** – ಮನಸ್ಸಿನ ತಾಪ (ಸಖಿಯ ಸುಭಾಷಿತರವದಿಂ ಅಡಂಗಿದುದು ದೇವಕೀಹೃತ್ತಾಪಂ: ಜಗನ್ನಾವಿ, ೨. ೭೦)

**ಹೃತ್ತಿಮಿರ** – ಮನಸ್ಸಿನ ಕತ್ತಲೆ (ತರಣಿಪ್ರಭನರ್ಭಕನಿಂ ತರುಣಿಯ ಹೃತ್ತಿಮಿರಮಂ ನಿರಾಕರಿಸಿ ಬಹಿಷ್ಕರಿಸಿದಂ ಎನಲೆಸೆಗುಂ ಕುಚಭರಚೂಚುಕಯುಗಳಕಾ:ಳಿಮಂ ದೇವಕಿಯಾ: **ಜಗನ್ನಾವಿ,** ೨. ೯೨)

**ಹೃತ್ಸಂಗ** – ಹೃದಯಸಂಬಂಧ (ಅವನಿಪತಿಯ ಹೃತ್ಸಂಗದಿಂದಂ ತಟಿಚ್ಚಂಚಳೆ ಲಕ್ಷ್ಮೀಕಾಂತೆ ಪೂರ್ವಸ್ಥಿತಿಯನುಟಿದು ಅತಿಸ್ಥೈರ್ಯಮಂ ತಾಳ್ದಿದಳ್: **ಮಲ್ಲಿನಾಪು,** ೩. ೧೯)

**ಹೃತ್ಸಮುದ್ಭೂತ** – ಮನಸ್ಸಿನಲ್ಲಿ ಹುಟ್ಟಿದವನು, ಮನ್ಮಥ (ಆತನಿನಾದ ಬೇಟದಭಿಜಾತತೆಯಿಂ ನೆಗಟ್ಟೊಂದು ಧೈರ್ಯವಂತಾನತನಿನಾದ ಭೀತಿ ನಿಜಬಾಲ್ಯದೊಳುಣ್ಮಿದ ಲಜ್ಜೆ ಹೃತ್ಸಮುದ್ಭೂತನಿನಾದ ಸೊರ್ಕು ಸುಚರಿತ್ರತೆಯಿಂ ಸಮಸಂದ ಸೌಷ್ಠವಂ ಚೇತನದೊಳುಣ್ಮೆ ಕನ್ನೆ ತಳೆದಳ್ ಕಿಲಿಕಿಂಚಿತಭಾವಚೇಷ್ಟೆಯಂ: **ಚಂದ್ರಪ್ರಪು,** ೫. ೧೨೨)

**ಹೃದಯ** – ಎದೆ (ಹೃದಯಂ ಎದೆ: **ಅಭಿಧಾವ,** ೧. ೧೨. ೭); ಮನಸ್ಸು (ಹೃದಯದೊಳದವಿದ ಕತ್ತಲೆ ಚೆದುರುವಿನಂ ಮಂಗಳಪ್ರದೀಪದವೋಲ್ ಅಭ್ಯುದಯಕರನೆನಿಪ ನಂದನನದೆಂದು ತೊಳಗುವನೊ ಕಾಮತೆಯರ ಕರತಳದೊಳ್: **ಕಾದಂಬ,** ೨. ೫೭)

**ಹೃದಯಂಗಮ** – ಮನಮುಟ್ಟುವ (ಹೃದಯಂಗಮಮಪ್ಪಿನೆಗಂ ತದೀಯವಚನಾಮೃತಂಗಳ್ ಅಮೃತಂಗಳ್ ಅಮೃತವಧುಗಾಸ್ಪದಮಂ ಪೊರ್ದುವ ಬಗೆಯಿಂ ತದಸ್ತುವೆಂದಂ ಜಿನೇಂದ್ರಚಂದ್ರನತಂದ್ರಂ; **ಅಜಿತಪು,** ೬. ೮೫)

**ಹೃದಯಂಗುಡು** – ಮನಸ್ಸು ಕೊಡು, ಆಕರ್ಷಣೆಗೊಳ್ಳು (ಹೃದಯಂಗುಡದುದನಜೆಯದೆ ಪದುಮಿನಿಗಿರಿದುಳಿಪಿ ಕೈಯನಿಕ್ಕುವ ಶಶಿಯಂ ಪದೆದೀಕ್ಷಿಸಿ ಮಿಗೆ ನಗುವಂದದಿನಲರ್ದುದು ನೋಡೆ ನಾಡೆ ಕುವಲಯನಿವಹಂ: **ಕುಸುಮಾಕಾ,** ೪. ೪೪)

**ಹೃದಯಪ್ರಮೋದ** – ಮನಸ್ಸಿನ ಸಂತೋಷ (ಹೃದಯಪ್ರಮೋದ ಮದಿರಾಮದದಿಂ ಮೆಯ್ಮಜೆದು ಮೇಲುದಂ ಮಜೆದಿರ್ದಾಡಿದುದು ಪಜೆ ಮಾಣ್ದೊಡಂ ಮಾಣದೆ ಮಚ್ಚಿದ ತೆಜದಿನಾಪ್ತವೃದ್ಧಕದಂಬಂ: **ಪುಷ್ಪದಂಪು,** ೪. ೩೬)

**ಹೃದಯಬಂಧ** – ಎದೆಯ ಗಟ್ಟಿತನ (ಅಂತು ದೃಢಕಠಿನ ಹೃದಯಬಂಧನಂ ಜರಾಸಂಧನಂ ಕೊಂದುಮಾತನ ಮಗಂ ಕ್ಷೇಮಧೂರ್ತಿಯಂ ರಾಜ್ಯದೊಳ್ ನಿಜಿಸಿ: **ಪಂಪಭಾ,** ೬. ೨೭ ವ)

**ಹೃದಯಭವ** – ಹೃತ್ಸಮುದ್ಭೂತ (ಹೃದಯಭವ ಪ್ರಯಾಣಪಟಹಧ್ವನಿ ಎಂಬಿನಂ .. .. ಒದವಿದ ರನ್ನನೂಪುರ ಕಲಾಪಕಲಧ್ವನಿ: **ಕಾದಂಸಂ,** ೫. ೮೪)

**ಹೃದಯಸ್ಥಿತ** – ಮನಸ್ಸಿನಲ್ಲಿ ನೆಲೆನಿಂತ (ಹೃದಯಸ್ಥಿತ ನೃಪರುಮನುರುಪಿದುದೆನಲ್ ಪತಿವಿಯೋಗಖಿದ್ಯದ್ವನಿತಾ ಹೃದಯಂಗಳೊಳ್ ಆವಗಂ ಉರಿವುದು ಕಡುಪಿನೊಳಾ ನೃಪಪ್ರತಾಪಜ್ವಲನಂ: **ಕಾದಂಬ,** ೧. ೧೪)

**ಹೃದಯಾಗ್ನಿ** – ಮನಸ್ಸಿನಲ್ಲಿನ ಬೆಂಕಿ (ಹೃದಯಾಗ್ನಿ ಪೆರ್ಚಿ ವನತತಿಗೆ ದವಾಗ್ನಿವೊಲಾಯ್ತದೆಂತು ಹರಿಯಿರ್ದಪನೀ ಹೃದಯಾಗ್ನಿಯೊಳಗ್ನಿಸ್ತಂಭನ ವಿದ್ಯೆಯನೀಗಳಿಂತು ಕಲ್ತನೊ ಸಖಿಯೆ: **ಜಗನ್ನಾವಿ,** ೧೧. ೪೮)

**ಹೃದಯಾಧೀಶ** – ಮನಸ್ಸಿನ ಒಡೆಯ, ಪ್ರಿಯಕರ (ಹೃದಯಾಧೀಶಂ ಕರುಳ್ಗವ್ವಳಿಸೆ ನುಡಿಸೆ ಮೇಲ್ವಾಯೆ ಲಲ್ಲೈಸೆ ಮೆಲ್ಪಿಂ ಮೊದಲೊಳ್: **ನೇಮಿನಾಪು,** ೩. ೧೦೫)

**ಹೃದಯೇಶ್ವರಿ** – ಮನಃಪ್ರಿಯೆ (ಮತ್ತೊಂದೆಡೆಯೊಳ್ ಒರ್ವಂ ಗರ್ಭೇಶ್ವರಂ ತನ್ನ ಹೃದಯೇಶ್ವರಿಯಂ ಅಗಲ್ದು ಬಂದು ಪೆಱರಾರುಮಂ ಮೆಚ್ಚದೆ ಆಕೆಯಂ ನೆನೆದು: **ಪಂಪಭಾ,** ೪. ೧೦೪ ವ)

**ಹೃದಯೋದ್ಭವ** – ಮನ್ಮಥ (ಪಲ್ಲವಿಕರ ಹೃದಯೋದ್ಭವ ರಾಗಮಂ ಪಲ್ಲವಿಪ ಕಂಕೆಲ್ಲೀಪಲ್ಲವಂಗಳುಮಂ .. .. ನೀಡಿ: **ಶಾಂತೀಶ್ವಪು,** ೧೦. ೧೬ ವ)

**ಹೃದ್ಗತ** – ಮನವರಿಕೆಯಾದ (ಊರ್ಧ್ವಾಧೋಮಧ್ಯತಾ ಸಮವಸ್ಥಿತಿಸ್ಮರಣ ಪರಿಣತಸಂಸ್ಥಾನವಿಚಯಮುಮಂ ಬೇಱವೇಱ ಹೃದ್ಗತಂ ಮಾಡಿ ಧರ್ಮಧ್ಯಾನಮಯನಾದಂ: **ಶಾಂತಿಪು,** ೯. ೧೧೮ ವ)

**ಹೃದ್ಗದ** – ಎದೆಬೇನೆ (ಹೃದ್ಗದಮಂ ದುರ್ಮತಕೌಶಿಕಕ್ಕೆ ಪಡೆಯುತ್ತಿಕ್ಷ್ವಾಕುವಂಶೇಂದ್ರಶೈಲದಿಂ ಅತ್ಯೂರ್ಜಿತತೇಜಂ ಉದ್ಧರಿಸಿದಂ ತ್ರೈಲೋಕ್ಯನಾಥಂ ಜಿನಂ: **ಪುಷ್ಪದಂಪು,** ೧೦. ೨)

**ಹೃದ್ಗೋಚರ** – ಮನಸ್ಸಿಗೆ ಕಾಣುವ (ಯತಿಪತಿ ಮುಖಾರವಿಂದೋದ್ಗತ ಋತವಚನಂ ಸ್ವಕೀಯ ಹೃದ್ಗೋಚರಮಾಗೆ ತನೂದರಿಗೆ: **ಸುಕುಮಾಚ,** ೯. ೧೧೨)

**ಹೃದ್ಭವ** – ಮನಸ್ಸಿನಲ್ಲಿ ಹುಟ್ಟಿದವನು, ಮನ್ಮಥ (ಹೃದ್ಭವಬಾಣಾಭಿಘಾತಕ್ಕೆ ಚಿತ್ತಮೆನಸುಂ ಪಕ್ಕಾಗೆಯುಂ ತತ್ಕುಮಾರಿ .. .. ಅನಂತವೀರ್ಯನ ಸುರೂಪಂ ಸ್ವಾಂತದೊಳ್ ತಾಳ್ದಿದಳ್: **ಶಾಂತೀಶ್ವಪು,** ೮. ೨೦)

**ಹೃದ್ಭೂ** – ಮನಸ್ಸಿನಲ್ಲಿ ಹುಟ್ಟಿದವನು, ಮನ್ಮಥ (ಕಡೆಗಣ್ಣೋ ಕುಸುಮಾಸ್ತ್ರಂ ಉರ್ಚಿದಲಗೋ ಹೃದ್ಭೂ ಧನುರ್ಮಧ್ಯಮೋ ನಡುವೋ: **ಶಾಂತೀಶ್ವಪು,** ೧೧. ೬೧)

**ಹೃದ್ಯವಿದ್ಯಾ[ದ್ಯೆ]** – ಆಕರ್ಷಣೆಯ ವಿದ್ಯೆ (ಗುಣರತ್ನವಾಧಿ ನಾನಾವಿಧಸೌಖ್ಯಭಾಜನಂ ಉಪಾರ್ಜಿತಖೇಚರರಾಜ ಹೃದ್ಯವಿದ್ಯಾವಿಭವಂ ಮಗಂ ಜಿನವಿರೋಧಿನರೇಂದ್ರಬಳಂ ಮಹಾಬಳಂ: **ಆದಿಪು,** ೧. ೭೩)

**ಹೃದ್ಯೋಗ** – ಮನಸ್ಸಿನ ಬಯಕೆ (ಆತಂ ಬಾಲಿದೇವಮ ಮತ್ತೋರ್ವಂಗೆಱಗೆನೆಂಬ ಪ್ರತಿಜ್ಞೆಯಂ ಪಲಂಬರಿಂ ಕೇಳ್ದು ಮನದೊಳು ಹೃದ್ಯೋಗಮಂ ತಾಳ್ದು: **ಪುಣ್ಯಾಸ್ರ,** ೫. ೫೩ ವ)

**ಹೃದ್ರೋಗ** – ದುಃಖ (ಸ್ನಾನಾನ್ನಪಾನಾದಿಗಳಿಂ ತಣಿಪಿ ತತ್ಪ್ರಪಂಚಮೆಲ್ಲಮಂ ಬೆಸಗೊಂಡು ಹೃದ್ರೋಗಂಬಟ್ಟು: **ಹರಿವಂಶ,** ೪. ೧೨ ವ)

**ಹೃಷೀಕ** – ಇಂದ್ರಿಯ (ಷಡ್ರಿಪುವರ್ಗಮನೊತ್ತಿ ಮೆಟ್ಟಿ ಬಾಧಿಸುವ ಹೃಷೀಕಸಂಚಯಮಂ ಅಳ್ಕಿಸಿ ದುರ್ಮದಮೆಂಟಂ: **ಶಬರಶಂ,** ೨. ೯೦); [ಜೈನ] ಏಳು ಬಗೆಯ ನರಕಗಳಲ್ಲಿ ಒಂದು (ಕ್ರಮದೊಳಸಂಜ್ಞೆಯಂ ಸರಿಸೃಪಾವಳಿಯುಂ .. .. ಮನುಷ್ಯದುಸ್ತಿಮಿಕುಳಮುಂ ಹಿಮಾಂಶುನಯನಾಗ್ನಿ ಕಷಾಯಹೃಷೀಕ ಷಣ್ಮುನಿಕ್ರಮ ನರಕಂಗಳೊಳ್ ನೆಲಸುಗುಂ: **ಆದಿಪು,** ೫. ೯೪)

**ಹೃಷ್ಟ** – ಆನಂದ ಹೊಂದಿದ (ಅತ್ಯಂತ ಹೃಷ್ಟಸಂತುಷ್ಟ ಅಂತರಂಗನವರ ನವಯಾವನಕ್ಕೆ ನೆಱಮಾದ ರೂಪಾತಿಶಯಕ್ಕಂ .. .. ಬೆಕ್ಕಸಂಬಟ್ಟು: **ಶಾಂತಿಪು,** ೩. ೫೩ ವ)

**ಹೃಷ್ಟತೆ** – ಸಂತೋಷ (ಹೃಷ್ಟತೆಯಿಂ ಆ ಕುಮಾರಂ ಅರಿಷ್ಟಪುರಾಂತರದೊಳಿರ್ದು: **ಕರ್ಣನೇಮಿ,** ೫. ೬೯)

**ಹೆಕ್ಕಳ** – ಸಂಭ್ರಮ (ಮಿಕ್ಕನುರಾಗದೊಳಂ ಪೊಣರ್ವಕ್ಕಿಗಳ್ ಉತ್ಸುಕದೆ ತಮ್ಮ ಕೆಲದೊಳ್ ನೆರೆವಾ ಹೆಕ್ಕಳಮಂ ನೋಡಿಯೆ ನಗೆಮಿಕ್ಕವೊಲ್ ಅಲರ್ದೆಸೆದುವು ಅಸದಳಂ ಬಿಸಜಂಗಳ್: **ಶಾಂತೀಶ್ವಪು,** ೧೧. ೧೦೩)

**ಹೆಟ್ಟೆ** – ಹೆಂಟೆ (ತೊಟ್ಟನೆ ಪಲ್ಲವಲಾಂಬು ತವೆ ಪತ್ತಿರದಾಕ್ಷಣವೆಟ್ಟಿ ಹೆಟ್ಟೆ ಕಾಯ್ದಿದ್ದಿಟ್ಟಿಗೆಯಂದಮಾಯ್ತು; **ಶಾಂತೀಶ್ವಪು,** ೧೨. ೨೨)

**ಹೆಡಗೆಗೋಂಟೆ** – ಬುಟ್ಟಿಯ ಆಕಾರದಲ್ಲಿರುವ ಕೋಟೆ (ಕೋಂಟೆಗೆ: ಧೂಳಗೋಂಟೆ ಹೆಗೆಗೋಂಟೆ ತಟಿಗೋಂಟೆ ಹತ್ತುಗೋಂಟೆ: **ಶಬ್ದಮದ,** ೩೧೩, ಪ್ರ)

**ಹೆಡವಿಸು** – ಹಿಮ್ಮೆಟ್ಟು (ಕುಟ್ಮಳಿತಚಂಪಕಪ್ರಚಯಮುಂ ಕಾಮನಿಸುವ ಕಾದ ಪುಳುಂಬಿನಂಬುಗಳ ಪೊದೆಯೆಂದು ಹೆಡವಿಸುತ್ತುಂ: **ಶಾಂತೀಶ್ವಪು,** ೧೧. ೭೫)

**ಹೆಪ್ಪಿಡು** – ಹಾಲಿಗೆ ಮೊಸರು ಬೆರಸು (ಹೆಪ್ಪಿಟ್ಟೊಡೆ ಪಾಲ್ ಮೊಸರಾಗಿಪ್ಪಂತಿರೆ ನೀರ್ಗಳಾಗಲಱಗುಮೆ ಭವ್ಯರ್ ಬಪ್ಪಂತಿರೆ ಭವ್ಯರ್ಕಳ್ ಬಪ್ಪರೆ ಸದ್ದರ್ಶನಕ್ಕೆ ಬಾರದೆ ಪೋಪರ್: **ಧರ್ಮಾಮೃ,** ೧೧ ೧೨೮)

**ಹೆಪ್ಪಿನಳೆ** – ಹೆಪ್ಪು ಹಾಕುವ ಮಜ್ಜಿಗೆ (ಕಿಱದೆ ಹೆಪ್ಪಿನಳೆಯೊಳ್ ಎಂತು ಪಿರಿದಪ್ಪ ಪಾಲ್ಗಿಡುವಂತೆ: **ಚಾವುಂಪು,** ಪು. ೩೪೩. ಸಾ. ೨೪)

**ಹೆರೆ** – ಪೊರೆ (ಸುದತಿಯ .. .. ಅಂಗಜಾಹಿಯಿಕ್ಕಿದ ಹೆರೆಯಂತಿರೆ ಉಟ್ಟ ದುಗುಲಂ: **ನೇಮಿನಾಪು,** ೨. ೧೬)

**ಹೆಱಸಾರ್** – ಹಿಂದೆ ಸರಿ (ಅಗಜೆಗೆಱಗಿ ಹೆಱಸಾರ್ದು ಒಲವಿಂದಂ ತಾಯೆ ದೇವಿ ಶಾಂತೆ ಅನಂತಗುಣಭರಿತೆ ಕರುಣೆ ಶರಣೆನುತಿರ್ದಂ: **ಗಿರಿಜಾಕ,** ೫. ೨೭)

**ಹೆಱಸೂಡಿದ** – ಚಂದ್ರಶೇಖರ, ಶಿವ (ಅಜೆವಿನ ಕಣಿ ಮುಕ್ತಿಯ ಮಣಿ ಹೆಱಸೂಡಿದಚ್ಚ ಸೊಗದ ಮೊಳೆ: **ಗಿರಿಜಾಕ,** ೩. ೩೬)

**ಹೇತಿ** – ಆಯುಧ (ನಾನಾ ಹೇತಿಹಸ್ತೋದ್ಭಟಭಟ ಪೃತನಾಭೀಳಮಂ ಚಿತ್ತದೊಳ್ ವೀರರಸಂ ಕೈಗಣ್ಮಿ ಪೊಣ್ಮುತ್ತಿರೆ ನಿಜಬಲಮಂ ನೋಡಿದಂ ಸಾರ್ವಭೌಮಂ: **ಆದಿಪು,** ೧೧. ೨೪)

**ಹೇತಿಹಸ್ತ** – ಆಯುಧ ಹಿಡಿದ ಕೈ (ನಾನಾ ಹೇತಿಹಸ್ತೋದ್ಭಟಭಟ ಪೃತನಾಭೀಳಮಂ ಚಿತ್ತದೊಳ್ ವೀರರಸಂ ಕೈಗಣ್ಮಿ ಪೊಣ್ಮುತ್ತಿರೆ ನಿಜಬಲಮಂ ನೋಡಿದಂ ಸಾರ್ವಭೌಮಂ: **ಆದಿಪು,** ೧೧. ೨೪)

**ಹೇತು** – ಕಾರಣ (ಜಾತಿಸ್ಮರತೆ ವಿರಕ್ತಿಗೆ ಹೇತು ಎನುತ್ತಿರ್ಪರ್: **ಕಾದಂಸಂ,** ೮. ೪)

**ಹೇತುತ್ವ** – ಕಾರಣದಿಂದ ಕೂಡಿರುವುದು (ಅದು ಶರೀರಬಳಾಯುರ್ದೇಹಪ್ರಮಾಣ ಉಪಚಯ ಅಪಚಯ ಹೇತುತ್ವದಿಂದಂ ಉತ್ಸರ್ಪಿಣಿ ಅವಸರ್ಪಿಣಿನಾಮಮಂ ಪಡೆದುದು: **ಆದಿಪು,** ೬. ೪೮ ವ)

**ಹೇತುಪದ** – ಕಾರಣಸ್ಥಾನ (ಸಮರಕ್ಕಿದೆ ಹೇತುಪದಂ ಸುಕೃತಮಹೀರುಹ ವಿಪಕ್ವಫಲ ಭುಕ್ತಿಗೀಷು ನೋಂತರುಮೊಳರೇ: **ಶಾಂತಿಪು,** ೪. ೭೫)

**ಹೇತುಭೂತ** – ಕಾರಣಕರ್ತ (ಷೋಡಶ ತೀರ್ಥಕರ ಭಾವನೋಪಚಿತ ತೀರ್ಥಕರ ಜನ್ಮೋತ್ಪತ್ತಿ ಹೇತುಭೂತನುಮಾಗಿ ಸುಖದಿನಿರಲ್; **ಅಜಿತಪು,** ೪೯ ವ)

**ಹೇದೆ** – ಭೂತ (ಹೇದೆಯೆಂದು ಭೂತಂ: **ಶಬ್ದಮದ,** ಪ್ರಸಾ ೨೩೨)

**ಹೇಮ** – ಚಿನ್ನ (ಗೈರಿಕ ನಿಷ್ಕ ಹಿರಣ್ಯ ಮಹಾರಜತ ಸ್ವರ್ಣ ಕರ್ಬುರ ಅಷ್ಟಾಪದಂ ಇನ್ನೋರಂತಚೆ ಜಾಂಬೂನದಂ: **ಅಭಿಧಾವ,** ೧. ೫. ೭)

**ಹೇಮಂತ** – ಷಡೃತುಗಳಲ್ಲಿ ಒಂದು, ಚಳಿಗಾಲ (ಹೇಮಂತಂ ಬರಲಿರ್ದನೆಂಬ ಭಯದಿಂದೇಟ್ಟಾ ಶರನ್ನೀರದಸ್ತೋಮಂ: **ಕುಸುಮಾಕಾ,** ೬. ४೮)

**ಹೇಮಕುತ್ಕೀಳ** – ಚಿನ್ನದ ಬೆಟ್ಟ, ಮೇರುಪರ್ವತ (ಮಹಿಮೆವಡೆದಿಂತು ಸೊಗಯಿಸುವ ಹೇಮಕುತ್ಕೀಳದಿಂದೆ ತೆಂಕಣದೆಸೆಯೊಳ್: **ಸುಕುಮಾಚ,** ೧. ೬೮)

**ಹೇಮಕೂಟ** – ಹಿಮಾಲಯದ ಉತ್ತರ ಪರ್ವತಪಂಕ್ತಿ (ಒಲವಿಂದಂ ಆ ಮಹಾಶ್ವೇತೆಯೆ ಬೇಗಮುಯ್ಯೆ ಪುದಿರ್ಪವೆ ನಚ್ಚಿನ ಹೇಮಕೂಟಮಮಂ: **ಕಾದಂಸಂ,** ೭. ೨)

**ಹೇಮರಶನ** – ಚಿನ್ನದ ಉಡಿದಾರ (ಪೋಲ್ಕುಂ ಆ ಪುರಾಗನೆಯ ಪೊದಳ್ದ ಹೇಮರಶನಾತ್ರಯಮಂ ಪರಿಖಾತಾತ್ರಯಾಂತರಂ: **ಆದಿಪು,** ೬. ೧೦೨)

**ಹೇಮರೇಣು** – ಚಿನ್ನದ [ಬಣ್ಣದ] ದೂಳು (ತತ್ ಗಿರೀಂದ್ರ ಕಂದರ ಕನಕಾಚಳಂಗಳಂ ಇಂತುಟನಿತಂ ತವೆ ಹೇಮರೇಣುಗಳ್ವೆರಸು ಕಡಂಗಿ ಮೊತ್ತು ನಡೆದತ್ತು ಘಟೋತ್ಕಚರೌದ್ರಸಾಧನಂ: **ಪಂಪಭಾ,** ೬. ३२)

**ಹೇಮಸರೋಜ** – ಹೇಮಪದ್ಮ (ಹೇಮಾಂಬುಜಮಂ ತರಲುದ್ದಾಮಭುಜಂ ವಿಜಯನಿರದೆ ಪೋದಂ: **ಕರ್ಣನೇಮಿ,** ೧೦. ೮೩)

**ಹೇಮಾಂಬುಜ** – ಹೇಮಪದ್ಮ (ನಿಷ್ಠುರವಜ್ರತುಂಡಹತಿಯಿಂ ಕೀಟಂ ಭರಂಗೆಯ್ದು ಖಂಡಿಸುಗುಂ ತುಂಬಿವೊಲೀಂಟಿ ರಾಗಿಸುಗುಮೇ ಹೇಮಾಂಬುಜಾಮೋದಮಂ: **ಮಲ್ಲಿನಾಪು,** ೧. ೨೬)

**ಹೇಮಾಂಬುರುಹಾಸ್ಯೆ** – ಹೊಂದಾವರೆಯಂತಹ ಮುಖವುಳ್ಳವಳು (ಅಂಗರಾಜನೊಳಿದಿರ್ಚಿದ ಭಾವನೆ ಪೊಚ್ಚಮಾಗೆ ಹೇಮಾಂಬುರುಹಾಸ್ಯೆ ಸೋಲ್ವುದೆನೆ ಕನ್ನಿಕೆ ಜನ್ಯೆಯನೊತ್ತೆ ಪೋಯ್ತು ಯಾನಂ: **ಶಾಂತಿಪು,** ೫. ೧೧೬)

**ಹೇಮಾಚಲ**[ಳ] – ಹೇಮನಗ (ಹೇಮಾಚಳೇಂದ್ರಕ್ಕೆ ಕಲ್ಪಜರಂ ಪೋಗಲ್ಕೆ ಸನ್ನೆಗೆಯ್ಯೆ: **ಆದಿಪು,** ೭. ೪೯)

**ಹೇಮಾಸನ** – ಚಿನ್ನದ ಪೀಠ (ಕಂಡೆರ್ದೆ ಪವ್ವನೆ ಪಾಜಿದತ್ತು ನಿಜನಂದನನಿಲ್ಲದ ಬಲದ ಕೆಲದ ಹೇಮಾಸನಮಂ: **ಚಂದ್ರಪ್ರಪು,** ೫. ೭)

**ಹೇಯ** – ಕ್ಷುಲ್ಲಕ (ಹೇಯಮನಚೆದುಂ ರಾಜ್ಯಮನೀಯಲ್ ಅಪೇಕ್ಷಿಸುವಿರೆನೆ ನೀವೊಲ್ಲದುದಂ ಶ್ರೇಯಸ್ಕರಮಲ್ಲದುದಂ ಹೇಯಂ ಉಪಾದೇಯಂ ಎನಗದೆಂತಾದಪುದೋ: **ಪಂಪರಾ,** ೬. ೧೨೭)

**ಹೇರಂಬ** – ಗಣಪತಿ (ಪರಶುಧರಂ ಗಣಪತಿ ವಿಘ್ನರಾಜಂ .. .. ವಿನಾಯಕಂ ಹೇರಂಬಂ: **ಅಭಿಧಾವ,** ೧. ೧. ೧೭)

**ಹೇರಂಬಾಂಬಾ**[ಬೆ] – ಗಣಪತಿಯ ತಾಯಿ, ಪಾರ್ವತಿ (ಆತಂಗೆ ಹೇರಂಬಾಂಬಾಸಮೆ ದೇವಸೇನೆ ಗೃಹಿಣೀಪ್ರಖ್ಯಾತೆ: **ಕರ್ಣನೇಮಿ,** ೧४. ೨೨)

**ಹೇರಿಗ** – [ಹೇರಕ] ಗೂಢಚಾರ (ಚರರಿಂ ಹೇರಿಗರಿಂ ಸ್ವಕೀಯ ಪರಕೀಯ ಪ್ರಾಜ್ಯಮಂ ರಾಜ್ಯಮಂ ಪರಿಕಿಪ್ಪಂತುಟೆ: **ಅನಂತಪು,** ೬. ೬೭)

**ಹೇರಿಟ್ಟಿ** – ದೊಡ್ಡ ಭರ್ಜಿ (ಬಡಿಕೋಲ್ ಕಿಗ್ಗಟ್ಟು ಹಾಸಂ ಶುನಕವಿತತಿ ಹೇರಿಟ್ಟಿ .. .. ಒಪ್ಪೆ .. . ನಡೆದುದು ಉದ್ಯತ್ ಕಿರಾತಪ್ರಜಾತಂ: **ಗಿರಿಜಾಕ,** ೧, ೭೯)

**ಹೇಲ** – ಆಟ, ಆಟದಂತೆ ಸುಲಭ (ಹೇಲೋಲ್ಲಂಘಿತ ಮಹಾವಾಹಿನೀಭೂರಿಭೈರವಾಜಿಗಳಪ್ಪ ವಾಜಿಗಳಿಂದಂ: **ಆದಿಪು,** ೧४. ४३ ವ)

**ಹೇಲಾಗತಿ** – ಲೀಲೆಯ ನಡಿಗೆ (ದ್ಯೋತಾಲಂಕೃತಕೌಸ್ತುಭನಂ ಹೇಲಾಗತಿ ರುಚಿರಪೀತಪಟನಂ ಕಂಡಳ್: ಜಗನ್ನಾವಿ, ೧೧. ३೦)

**ಹೇವ** – ಅಸಹ್ಯ (ಶ್ರಾವಕರಾದೊಡೆ ಸಾಲ್ಗುಂ ಹೇವಂ ತನಗಿಲ್ಲ: **ಸಮಯಪ,** ೧३. ೨೬)

**ಹೇಷಾಘೋಷ** – ಕುದುರೆಯ ಕೆನೆತ (ಬಂದಿರ್ದುವು ಹೇಷಾಘೋಷವಿದ್ರಾವಿತರಿಪು ಮಹಿಭೃಚ್ಚಾತುರಂಗಂ ತುರಂಗಂ: **ಪುಷ್ಪದಂಪು,** ೫. ೧೦)

**ಹೇಷಾರವ** – ಹೇಷಾಘೋಷ ದಿಗಂತರಂಗಳೆಲ್ಲಂ ಅನಂತ ಹಯಹೇಷಾರವಂಗಳಿಂ ತೆಕ್ಕನೆ ತೀವೆ: **ಕಾದಂಸಂ,** ೭. ೦. ವ)

**ಹೇಷಿತ** – ಕುದುರೆಯ ಕೆನೆತ (ಮದಗಜ ಬೃಂಹಿತಧ್ವನಿ ತುರಂಗಮ ಹೇಷಿತ ಘೋಷಂ ಆದಂ ಒರ್ಮೊದಲೆ ಪಯೋಧಿಮಂಥನ ಮಹಾರವಮಂ ಗೆಲೆ: **ಪಂಪಭಾ,** ३. ३೮)

**ಹೇಷಾ**[ಷೆ] – ಹೇಷಿತ (ಹೇಷಾಬೃಂಹಿತಂಗಳ್ ವಿಲಯಜಲನಿಧಿಧ್ವಾನಮೆಂಬನ್ನೆಗಂ ಭೋಂಕನೆ ಕರ್ಣಾಭ್ಯರ್ಣಮಂ ಸಾರ್ತರೆ: **ಪಂಪರಾ,** ೧३. ೨)

**ಹೇಸು** – ಅಸಹ್ಯಪಡು (ಹೇಸು–ಜಿಗುಪ್ಸಾಯಾಂ: **ಶಬ್ದಮದ,** ಧಾ ೭೨೦)

**ಹೇಳಾ** – ವಿಲಾಸ (ಹೇಳಾ ವಿಳಾಸ ವಿಭ್ರಮ ಳೀಳಾ ಬಿಬ್ಬೋಕ ಲಲಿತಹಾವಾಖ್ಯಂಗಳ್:: **ಅಭಿಧಾವ,** ೧. ೧३. ೨೨)

**ಹೇಳಾಂಚಿತ** – ಹೇಳಾಸಾಧ್ಯ (ಈ ಮಹಿಯೊಳ್ ಮಾನಕೀಟಕೋಟಿಯುಮಿದೇಂ ಕಾಳಂಗೆ ಹೇಳಾಂಚಿತಂ: **ಪುಷ್ಪದಂಪು,** ೧३. ४२)

**ಹೇಳಾವಲೋಕನ** – ವಿಲಾಸದ ನೋಟ (ಹೇಳಾವಲೋಕನಾಮೃತ ನಿಷಿಚ್ಯಮಾನ ತರುಲತಾಪ್ರತಾನದಿಂ ವನಮಹತ್ತರ ಪುರಸ್ಸರನುಮಾಗಿ ಬರ್ಪಾಗಳ್: **ಚಂದ್ರಪ್ರಪು,** ೭. ೮३ ವ)

**ಹೇಳಾಸಾಧ್ಯ** – ಆಟದಷ್ಟು ಸುಲಭವಾಗಿ ಗೆಲ್ಲಬಹುದಾದವನು (ಜೀವನಿಲ್ಲೆಂಬ ನಿನ್ನ ಪ್ರತಿಷೇಧೋಕ್ತಿಯಿಂದಮೆ ಜೀವಸಿದ್ಧಿ ಹೇಳಾಸಾಧ್ಯಂ ಎಂತೆನೆ ಉಳ್ಳುದಂ ಅಲ್ಲದೆ ಆರ್ಗಂ ಇಲ್ಲೆನಲ್ ಬಾರದು: **ಶಾಂತಿಪು,** ೮. ೧३೮)

**ಹೇಳುಹ** – ಹೇಳುವಿಕೆ (ನೆಲದಲ್ಲಿ ತಾವರೆಯಂ ಬಿತ್ತುಹವುಂ, ಕಿವುಂಡಗೇಕಾಂತವಂ ಹೇಳುಹವುಂ, ನಾಯಬಾಲಮಂ ಕಾಸಿತಿರ್ದುಹವುಂ, ಸೌಳುವಣ್ಣಿನಲ್ಲಿ ಮಟಿ ಬರುಹವುಂ, ಕುರುಡಂಗೆ ಕನ್ನಡಿಯಂ ತೋರುಹವುಂ, ಮೂರ್ಖನಂ

ಬುದ್ಧಿವಂತನೋಲ್ಸೆಸುಹವುಂ, ಇವಱೋಪಾದಿ: **ಪಂಚತಂತ್ರ,** ೨೦೬ ಶ್ಲೋಕ ೮೬ ಟೀಕೆ)

**ಹೈತಿಗ** – [ಪೈತೃಕ] ಪಿತೃಶ್ರಾದ್ಧ (ಕಕಾರಕ್ಕೆ ಗಕಾರಂ: ಪೈತೃಕಂ–ಹೈತಿಗಂ: **ಶಬ್ದಮದ,** ೨೪೯ ಪ್ರ)

**ಹೈಮ** – ಚಿನ್ನ (ವಿನತ ನಾಗೇಂದ್ರ ಹಸ್ತಾರುಣಾಬ್ಜಂ ಹೈಮಂ ಕರ್ಣಾವತಂಸಂ ತನಗೆನೆ: **ಅಜಿತಪು,** ೧. ೧); ತಂಪಾದ (ತಳೆದುದ್ಯಾನಭವಾನಿಳಂ ಸರಸಿಜಂ ಕೈಮಂ ವನಂ: **ಶಾಂತಿಪು,** ೬. ೧೦೨)

**ಹೈಮಕ್ಷ್ಮಾಚಳ** – ಹಿಮಾಲಯಪರ್ವತ (ಹೈಮಕ್ಷ್ಮಾಚಳೇಂದ್ರಂಬರೆಗಂ ಬರೆಗಂ ಅಖಿಳಷಟ್ಖಂಡ ಭೂಭಾಗಮಂ .. .. ದಿಗ್ವಿಜಯದೊಳಗೆದಾನಂದಭೇರೀರವಂ ಘೂರ್ಣಿಸೆ: **ಆದಿಪು,** ೧೪. ೧೪೮)

**ಹೈಮನ** – ಚಳಿಗಾಲ (ಪರೆದು ಅಂಗೋಪಾಂಗದೊಳ್ ಪತ್ತಿರೆ ಹಿಮಪಟಳಂ ಹೈಮನಂ ಗಾಳಿ ಬೀಸುತ್ತಿರೆ .. .. ನಿಲ್ವರ್ ಬೆಳ್ಳವಾಸಬ್ರತದ ನಿಯಮದಿಂದಂ ಜಿನೇಂದ್ರವ್ರತೀಂದ್ರರ್: **ಸಮಯಪ,** ೭. ೫)

**ಹೈಮನಗ** – ಚಿನ್ನದ ಬೆಟ್ಟ, ಹಿಮಾಲಯಪರ್ವತ (ಏಗೆಯ್ವಂ ಈ ಲೋಕಮಂ ಹೈಮನಗಂ ಕೈಕೊಂಡುದು ಎಂಬನ್ನೆಗಂ ಒದವಿದ ಅವಶ್ಯಾಯದೊಳ್: **ಸುಕುಮಾಚ,** ೪. ೧೧)

**ಹೈಮವತಿ** – ಪಾರ್ವತಿ (ರೂಪಿನೇಟ್ಗೆಯಿಂ ರತಿ ಸೊಬಗಿಂದೆ ಹೈಮವತಿ ದರ್ಶನಶುದ್ಧತೆಯಿಂದ ಸಂದ ರೇವತಿ: **ಕರ್ಣನೇಮಿ,** ೧. ೨೭)

**ಹೈಮಾದ್ರಿ** – ಹೈಮಕ್ಷ್ಮಾಚಲ[ಳ] (ಪ್ರಕಟಶ್ರೀ ಹಿಮವಾರವಾಣವಿಶದಂ ಗಂಗಾಂಶುಕನ್ಯಸ್ತಮಸ್ತಕಂ.. .. ಭರತಾವನೀಪತಿ.. . .ಹೈಮಾದ್ರಿಯಂ ನೋಡಿದಂ: **ಶಾಂತಿಪು,** ೧೧. ೬೦)

**ಹೈಯಂಗವೀನ** – ಹಸುವಿನ ಬೆಣ್ಣೆಯಿಂದಾದ ಆಗ ತಾನೆ ಕಾಯಿಸಿದ ತುಪ್ಪ (ನಾಸಾಂಜಲಿಪುಟಪೀಯಮಾನ ದುಗ್ಧ ಹೈಯಂಗವೀನಮುಮಂ: **ಆದಿಪು,** ೧೧. ೨೬ ವ]

**ಹೈರಣ್ಯವತ** – [ಜೈನ] ಏಳು ಜನಪದಗಳಲ್ಲಿ ಒಂದು, ಒಂದು ಜಘನ್ಯಭೋಗಭೂಮಿ (ಹೈಮವತ ಹೈರಣ್ಯವತಂಗಳೆಲ್ಲಂ ಜಘನ್ಯಭೋಗಭೂಮಿಗಳಕ್ಕುಂ: **ಚಂದ್ರಪ್ರಪು,** ೩. ೩೨ ವ)

**ಹೊಂಚು** – ಸಮಯಕ್ಕಾಗಿ ಗೊತ್ತಾಗದಂತೆ ಕಾಯು (ಹೊಂಚು–ಸಂಕೇತೋದ್ಯೋಗೇ: **ಶಬ್ದಮದ,** ಧಾ ೨೨೪)

**ಹೊಂತ** – ಪ್ರತಿಜ್ಞೆ (ತಲೆ ಬೋಳಿಸಿ ಹೊಂತಂ ಸಿಡಿದಲೆಗುಡುವರ್: **ಸಮಯಪ,** ೯. ೧೨೦)

**ಹೊಂದು** – ಸಾಯು (ಹೊಂದು–ಮರಣೇ: **ಶಬ್ದಮದ,** ಧಾ ೪೨೮)

**ಹೊಗರು** – ಕಾಂತಿ (ಪರಾಗದ ಸಾರಣೆಯೊಳ್ ಪರಿಮಳದ ಹೊಗರೆತ್ತುವ ಅಳಿಕುಂತಳೆಯರಿಂ: **ಗಿರಿಜಾಕ,** ೭. ೧೧ ವ)

**ಹೊಗರಿಡು** – ಕಾಂತಿ ಬೀರು (ಆ ಮನುಜಲಲಾಮನ ತೋಳ್ ಕಾಮನ ಬಾಳೆನಿಸಿ ಹೊಗರಿಡಲ್: **ಆಚವರ್ಧ,** ೪. ೨೫)

**ಹೊಗೆ** – ಹೊಗೆಯುಂಟುಮಾಡು, ಧೂಮ (ಹೊಗೆ– .. .. ಧೂಮೇಚ: **ಶಬ್ದಮದ,** ಧಾ ೧೫೯)

**ಹೊಣೆಗುಂಡು** – ಒಂದು ಬಗೆಯ ಆಟ (ಹರಿವರಿ ಪಾಱುಂಬಳೆ ಮರಗೆರಸಿ ಕುಳಿಲ್ಲೆಂಡು ಬಟ್ಟು ತಿಱೆಕಲ್ಲು ಅಟ್ಟುಂಗರೆ ಹೊಣೆಗುಂಡು ಎಂಬಿವಂ: **ಜಗನ್ನಾವಿ,** ೪. ೪೪)

**ಹೊದೆ** – ಮುಚ್ಚು ಹಾಗೂ ಶಸ್ತ್ರಹವಚ (ಹೊದೆ–ಆಚ್ಛಾದನೇ ಶರಕೋಶೇ ಚ: **ಶಬ್ದಮದ,** ಧಾ ೪೨೭)

**ಹೊಪ್ಪಳಿಸು** – ಬೊಕ್ಕೆ ಬರು (ಬೆನ್ನೊಣಗಿ ಚರ್ಮಂ ಹೊಪ್ಪಳಿಸಿ ಸೀಲ್ದು ಬೀಡೆ ನಾಡೆ ನೋಯಿಸಿ: **ಗಿರಿಜಾಕ,** ೯. ೨೭ ವ)

**ಹೊಮ್ಮಚ್ಚು** – ಕುದುರೆಯ ಒಂದು ಬಗೆಯ ನಡಿಗೆ (ದಾಟು ದೀಟು ಹೊಳಹು ಹೊಮ್ಮಚ್ಚುವೆಡೆಮೋಡಿ ಭವರಿ ಭಂಜನೆ ಅಳಿಲುಳಿತ ವರತರಹಮೆಂಬ ನವ ಗತಿಗಳೊಳು ತನ್ನ ಮನಮೆ ಹಯದ ಗತಿಗಳಾದಂತೆ ವಾಹಕವಿನ್ನಾಣಂಗಳಂ ತೋಱುತ: **ಪುಣ್ಯಾಸ್ರ,** ೭. ೫೧ ವ)

**ಹೊರಜೆ** – ಹಗ್ಗ (ಪಱಿದುದು ಹೊರಜೆಯ ಮಿಳಿಯಂ ಮುಱಿದುದು ಮದಸೊಕ್ಕಿ ಕಟ್ಟಿದಾ ಕಂಭಮಂ: **ಧರ್ಮಪ,** ೫. ೧೩)

**ಹೊರಡು** – ಹೊರಳು (ಹೊರಡು–ಪರಿಲುಠನೇ: **ಶಬ್ದಮದ,** ಧಾ ೩೬೩)

**ಹೊರಳೆ** – ಸುತ್ತಾಟ (ಆವೆಡೆಯೊಳುಮಿಲ್ಲ ಸುಖಂ ಕೈವಲ್ಯದೋಳಲ್ಲದೆ ಅನ್ನೆಗಂ ದೇಹಿಗಳಂ ತೀವುವ ಕೆಡಹುವ ಯಂತ್ರ ಘಟಾವಳಿಗಳ ಹೊರಳೆಯಂತೆ ವಿಧಿ ತಿರುಗಿಸುಗುಂ: **ಅನಂತಪು,** ೯. ೩೪)

**ಹೊರೆ** – ಸಮೀಪ (ದರಿಯ ಹೊರೆಯಣ ಗುಡ್ಡೆಯಂ .. .. ಓರಂತೆ ಭಕ್ತಿಯಿಂ ಅರ್ಚಿಸುತುಮಿರ್ಪರ್ ಮೂಢರ್: **ಸಮಯಪ,** ೯. ೮೨)

**ಹೊಲಗಿಡು** – ದಿಕ್ಕುತೋಚದಂತಾಗು (ಹೊಲಗಿಡು–ದಿಗ್ಭ್ರಮಣೇ: **ಶಬ್ದಮದ,** ಧಾ ೩೬೪)

**ಹೊಲೆಯ** – ಚಂಡಾಲ (ಚಂಡಾಳಂ ತಾಂ ಹೊಲೆಯಂ: **ಅಭಿಧಾವ,** ೧. ೧೧. ೮೭)

**ಹೊಲ್ಲೆಹ** – ಕೇಡು, ಕೆಟ್ಟು (ಅವನಾವನೊರ್ವಂಗೆ ಹೊಲ್ಲೆಹಮಂ ಬಯಸುವಾತನಾತಂಗನುಕೂಲಮಾಗಿಯೆ ಪೇಟ್ಟುದು: **ಪಂಚತಂತ್ರ,** ೧೫೩, ಶ್ಲೋಕ ೫೦ ಟೀಕೆ)

**ಹೊಲ್ಲಹಂಗೆಯ್** – ಕೇಡು ಮಾಡು (ಇಂತಪ್ಪ ಸೇವಾಧರ್ಮಮನಾಂ ಮುನ್ನಱಿವಾತನಾಗಿಯುಂ ಏನಾನುಮೊಂದು ತೆಱದಿಂ ಹೊಲ್ಲೆಹಂಗೆಯ್ದೆನಕ್ಕುಂ: **ಪಂಚತಂತ್ರ,** ೨೦೬ ವ)

**ಹೊಱಕತ್ತರ** – ವಾದ್ಯ ನುಡಿಸುವ ಒಂದು ವಿಶಿಷ್ಟ ಕ್ರಮ (ಪೊಯ್ದಳಗ ಸುಳಿಯಳಗ ಬೊಟ್ಟಾಳಂ ಒಳಕತ್ತರ ಹೊಱಕತ್ತರ ವಿಷಮಕತ್ತರಮೆಂಬ ವಿಚಿತ್ರವಾದನದ ಬಹುಲಿಕೆಯೊಳ್ ವಿಹಿಲನೆನಿಸಿ: **ಶಾಂತೀಶ್ವಪು,** ೧೬. ೬೭ ವ)

**ಹೊಱಸು** – ಪೊಱಸು, ಪಾರಿವಾಳ (ಹೊಱಸಂ .. .. ನಿಱೆಸಿದಂ ಇರದಂದು ಮಂದಭಾಗ್ಯದ ಹೊಱೆಯಂ: **ಆಚವರ್ಧ,** ೨. ೬೮)

**ಹೋಗಾಡು** – ಬಿಸಾಡು (ಹೋಗಾಡು–ಪ್ರಮಾದ ತ್ಯಜನೇ: **ಶಬ್ದಮದ,** ಧಾ ೩೬೫)

**ಹೋತಾರ** – ಋತ್ವಿಕ್ಕು, ಹೋಮ ಮಂತ್ರವನ್ನು ಹೇಳುವವನು (ಅರಾದೇಶಕ್ಕೆ: ಸವಿತಾರ ನೇತಾರ ಹೋತಾರ ಕರ್ತಾರ ಭರ್ತಾರ: **ಶಬ್ದಮದ,** ೯೪, ಪ್ರ)

**ಹೋತೃ** – ಹೋತಾರ (ಅಗ್ನೀಧ್ರ ಮೈತ್ರಾವರುಣ ಅಗ್ನಿಪರಿಚಾರಕ ಉದ್ಗಾತೃ ನೇತೃ ಹೋತೃ ಜಮದಗ್ನಿ ಆದಿಗಳಪ್ಪ ಷೋಡಶರ್ ಋತ್ವಿಜರ್ಕಳಿಂ: **ಪಂಪಭಾ,** ೬. ೩೩ ವ)

**ಹೋಮಕುಂಡ** – ಯಜ್ಞದ ಬೆಂಕಿಯಿರುವ ಗುಂಡಿ (ಹೋಮಕುಂಡದಲ್ಲಿ ಧಗಧಗಿಸುವ ಜ್ವಾಲಾಮಾಲೆಗಳೊಳ್ .. .. ದೃಷ್ಟದ್ಯುಮ್ನ ಮಗನುಮಂ .. .. ಪಡೆದಂ: **ಪಂಪಭಾ,** ೩. ೩೨ ವ)

**ಹೋಮಾಗ್ನಿ** – ಯಜ್ಞದ ಬೆಂಕಿ (ಹೋಮಾಗ್ನಿಯೊಳ್ ಪುಟ್ಟಿದೊಂದು ದಿವ್ಯಚಾಪಮುಂ: **ಪಂಪಭಾ,** ೩. ೩೨ ವ)

**ಹೋಸವ್ರತ** – ರಾತ್ರಿ ಊಟಮಾಡದಿರುವುದು (ಪನ್ನೆರಡು ತೆಱದ ವ್ರತಂಗಳಂ ಹೋಸವ್ರತಂಬೆರಸು ನಡೆಯಿಪುದು: **ಧರ್ಮಪ,** ೧೦. ೬೨ ವ)

**ಹ್ರದ** – ಮಡು (ಹ್ರದಮೆಂಬುದು ಅಗಾಧತರ ಜಲಾಶಯಮಕ್ಕುಂ: **ಅಭಿಧಾವ,** ೧. ೪. ೧೧)

**ಹ್ರದಿನಿ** – ನದಿ (ಆ ಮಂಜೂಷೆಯುಮಂ ಮಹಾಹ್ರದಿನಿಯೊಳ್ ಪೋಪಲ್ಲಿ: **ಕರ್ಣನೇಮಿ,** ೩. ೪೧)

**ಹ್ರಾದಿನಿ** – ಮಿಂಚು, ಸಿಡಿಲು (ಹ್ರಾದಿನಿ ಮಿಂಚುಂ ಸಿಡಿಲುಂ: **ಅಭಿಧಾವ,** ೩. ೧. ೨೨)

**ಹ್ರೀ** – ಲಜ್ಜೆ (ಹ್ರೀ ತ್ರಪಾಹ್ವಯಂ ವ್ರೀಡೆ ಲಜ್ಜೆಯೆನೆ ಮಂದಾಕ್ಷಂ: **ಅಭಿಧಾವ,** ೨. ೨. ೧೯); [ಜೈನ] ಒಬ್ಬ ದೇವತೆ (ಶ್ರೀ ಹ್ರೀ ಧೃತಿ ಕೀರ್ತಿ ಬುದ್ಧಿ ಲಕ್ಷ್ಮಿಗಳೆಂಬ ಅಱುವರುಮಂ ಆತ್ಮೀಯ ಗುಣಗಣಮಣಿವಿಭೂಷಣಂಗಳಿಂ ಜಿನಜನನಿಯಂ ಅಲಂಕರಿಸಲುಂ .. .. ಸೌಧರ್ಮೇಂದ್ರಂ ಬೆಸಸುವುದುಂ: **ಆದಿಪು,** ೭. ೩ ವ)

**ಹ್ರೀಣ** – ಲಜ್ಜೆಗೊಂಡ (ಹ್ರೀಣಂ ಹ್ರೀತಂ ವಿಲಜ್ಜಿತಂ ತಾನಕ್ಕುಂ: **ಅಭಿಧಾವ,** ೨. ೧. ೪೩)

## ಳ

**ಳತಾಂಗಿ** – ಕೋಮಲೆ (ಕಳಮಕ್ಷೇತ್ರದುಪಾಂತನಂದನದೊಳ್ ಅನಂದದಿಂ ಪಕ್ಕಿಸೋವ ಳತಾಂಗೀಜನದೊಂದು ಮೆಲ್ಲುಪುದುಂ ಕೇಳ್ದಂತದಿಂ ತದ್ವನಾಂತ ಳತಾನೀಕದಿಂ ಉಣ್ಮುತಿರ್ಪ ಕಳಕಂಠಧ್ವಾನಸಂತನಾಂ: **ಜಗನ್ನಾವಿ,** ೨. ೬)

**ಳತಾನೀಕ** – ಲತಾನೀಕ, ಬಳ್ಳಿಗಳ ಗುಂಪು (ಕಳಮಕ್ಷೇತ್ರದುಪಾಂತನಂದನದೊಳ್ ಅನಂದದಿಂ ಪಕ್ಕಿಸೋವ ಳತಾಂಗೀಜನದೊಂದು ಮೆಲ್ಲುಪುದುಂ ಕೇಳ್ದಂತದಿಂ ತದ್ವನಾಂತ ಳತಾನೀಕದಿಂ ಉಣ್ಮುತಿರ್ಪ ಕಳಕಂಠಧ್ವಾನಸಂತನಾಂ: **ಜಗನ್ನಾವಿ,** ೨. ೬)

**ಳೀಳಾ** – ವಿಲಾಸ (ಹೇಳಾ ವಿಳಾಸ ವಿಭ್ರಮ ಳೀಳಾ ಬಿಬ್ಬೋಕ ಲಲಿತಹಾವಾಖ್ಯಂಗಳ್:: **ಅಭಿಧಾವ,** ೧. ೧೩. ೨೨)

## ಱ

**ಱಂಡೆ** – ವಿಧವೆ (ವ್ಯಾಸಮುನೀಶಂ ಪೇಸದೆ ಱಂಡೆಗೆ ಗರ್ಭಮನೆ ಮಾಡೆ: **ಸಮಯಪ,** ೧೦. ೧೫೪)

**ಱಚ್ಚೆ** – ಕೆಸರು (ತಿರಿದುಂಡು ಕಚ್ಚುಟಮನುಟ್ಟು ಱಚ್ಚೆಯೊಳ್ಪಟ್ಟು ಮುಟ್ಟುಗೆಟು ಉಬ್ಬೆಗಂ ಉಬ್ಬರಿಸಿ ನಮೆದುದದನದಂ ಮಱೆದಿರೆ: **ಸುಕುಮಾಚ,** ೪. ೩೦)

**ಱೞ** – 'ೞ' ಎಂಬ ಅಕ್ಷರ (ಅತಿಪೀಡನದಿಂ ರೇಫಾಶ್ರಿತಮಾದ ಱಕಾರಮುಂ ಸಮಂತು ಡಕಾರಾಶ್ರಿತಮಾದ ೞನುಂ ಅಂಗೀಕೃತಪದಲತ್ವಕ್ಕೆ ಸಮನೆ ಸಲ್ಲದ ಕುಳನುಂ: **ಶಬ್ದಮದ,** ೨೮)

**ಱಾಟಣ** – ಬಾವಿಯಿಂದ ನೀರೆತ್ತುವ ಗಾಲಿ (ಅತತ್ವದೊಳ್ ನಿಲಿಸದ ಭಾವಂ ಅಱಿಸದ ಪುದ್ಗಳಂ ಇಲ್ಲೆನೆ ಕರ್ಮಬಂಧದಿಂ ಬಲವರುತಿರ್ಪ ಱಾಟಣದ ಗುಂಡಿಗೆಯಂತಿರೆ: **ಸುಕುಮಾಚ,** ೫. ೩೨)

**ಱಾಟಳ** – ಱಾಟಣ (ಮಲಜಯವಾರಿಯಿಂ ಕುಳಿರ್ವ ಬಾವಿಗಳಲ್ಲಿ ಮೃಣಾಳದಂಡಮಂಡಲಿಗಳ ದಂಡತೋರಣಕದಿಂ .. .. ಸಮೆದಾಡುವ ಱಾಟಳಂಗಳಂ: **ಕಾದಂಬ,** ೭. ೨೧)

**ಱಿಕ್ಕಟ** – ವ್ಯರ್ಥವಾದ (ಪೊಸಮಲ್ಲಿಗೆಗಳ ತಿಳಕಪ್ರಸರದ ಕಂಪಿಂಗೆ ಬಸನಿಗಂ ನೀನೆಂದಾ ದೆಸೆಯನಣಂ ನೋಡಲ್ಸಂಕಿಸುವೆನಗೆ ಮದಾಳಿ ಱಿಕ್ಕಟಂ ಪಲ್ಮೊರೆವಾ: **ಮಲ್ಲಿನಾಪು,** ೩. ೩೩)

**ಱಿಕ್ಕಟಂ** – ವ್ಯರ್ಥವಾಗಿ (ಮರುಳಾಗಿ ಕೆಮ್ಮನೀತನ ನರಿಯಂ ಕಾಣ್ಬಂತೆ ಕಂಡು ಱಿಕ್ಕಟ ಮುನಿಸಿಂ ಹರಿಯಿಸುವೆನೆಂದು ಪಾಪದ ಭರದಿಂ ನರಕಕ್ಕೆ ಜಗಟ್ಟಿನೆನ್ನಾತ್ಮೇಶಂ: **ಧರ್ಮಾಮೃ,** ೧೦. ೧೪೫)

**ಱುಂಜೆ** – ಒಂದು ಚರ್ಮವಾದ್ಯ (ಪೊಯ್ವ ಎಕ್ಕವದ್ದಳೆಯ ದನಿಯುಂ ಉದ್ದುವ ಱುಂಜೆಯ ರವಮುಂ .. .. ನೆರಪೆ .. .. ನರಕಮಥನಂ ಬರ್ಪಂ: **ನೇಮಿನಾಪು,** ೮. ೭೫ ವ)

**ಱುಂಜೆವಾರಿಸು** – ಱುಂಜೆಯನ್ನು ಬಾರಿಸಿದಂತೆ ಹೊಡೆ (ಅವಂದಿರ್ .. .. ಆ ಮುನಿಯ ತಲೆಯನಂಜದೆ ಱೆಂಚೆವಾರಿಸಿ ಪೋಪುದುಂ: **ಕರ್ಣನೇಮಿ,** ೧೪. ೭೦ ವ)

**ಱೆಂಚೆ** – ಅಂಬಾರಿ (ಸಿಂಧುರದೊಳ್ ಱೆಂಚೆಯುಮಂ ಮಲಂಗಿ ಜಿನನಾಥಂಗಿಕ್ಕಿದರ್ ಚಾರುಚಾಮರಮಂ ನಿಂದು ಸತನ್ಕುಮಾರನುಂ ಅತರ್ಕ್ಯೋತ್ಸಾಹಿ ಮಾಹೇಂದ್ರನುಂ: **ಅನಂತಪು,** ೫. ೩೫)

**ಱೆಂಚೆಯ** – ಆನೆಕುದುರೆಗಳ ಪಕ್ಕರಕ್ಕೆ (ಹಮ್ಮಿದ ಗುಳದ ಹೂಡಿದ ಱೆಂಚೆಯದ .. .. ನಿಂದ ಗಜಘಟಾಪಟಲದೊಳಂ: **ಗಿರಿಜಾಕ,** ೬. ೫೫ ವ)

**ಱೆಪ್ಪು** – ಏಟುಕೊಡು (ಱೆಪ್ಪು–ಪ್ರಹರಣೇ: **ಶಬ್ದಮದ,** ಧಾ ೪೭೦)

**ಱೊಂಕಿಡು** – ಗುಟುರು ಹಾಕು (ಅದಿರದಿದಿರಾಂತು ಱೊಂಕಿಟ್ಟೊದರುತ್ತುಂ ಬರ್ಪ ಕಾಡ ಕೋಣನ ಗೋಣಂ ಮದಯುತನೊರ್ವಂ ತಱಿದಿಕ್ಕಿದಂ: **ಶಬಶಂವಿ,** ೩. ೫೬)

**ಱೊಪ್ಪ** – ಪ್ರಾಣಿಗಳನ್ನು ಕೂಡಿಹಾಕುವ ಜಾಗ (ಪೆಬುಳಿ ಱೊಪ್ಪವನೊತ್ತುಗೊಂಡವಲ್ಲಲ್ಲಿ ಮೃಗಂಗಳುಂ ಮಿಡುಕುಗೆಟ್ಟಿರುತಿರ್ದುದು ಕೂಡೆ ಬೇಂಟೆಯೊಳ್: **ಸೂಕ್ತಿಸುಧಾ,** ೩. ೧೧೭); ಗಲಭೆ (ಕೆಲವು ಪದಂಗಳ್ ನಿತ್ಯದಿಂ ದ್ವಿತ್ವಂಗಳಪ್ಪುವವರ್ಕೆ ಪ್ರಯೋಗಂ: ಱೊಪ್ಪಂ {=ಗಲಭೆ]: **ಶಬ್ದಮದ,** ೪೬ ವೃತ್ತಿ ೪೫)

**ಱೊಪ್ಪಂಗೊಳ್** – ನೆಲೆ ಬೇಡು (ಬಸಿಱು ಕುತ್ತದಂತೆ ನಮೆಯಿಸುವುದು ಪಂದಿಯಂತೆ ಱೊಪ್ಪಂಗೊಳಿಸುವುದು

ಕೃಷ್ಣಪಕ್ಷದಂತೆ ಶುಭಮನೊಲ್ಲದು: **ಧರ್ಮಾಮೃ,** ೪. ೧೦೬ ವ)

**ಱೊಪ್ಪು** – ಗರ್ಜಿಸು (ಮಲೆವ ಮರಲ್ವ ಱೊಪ್ಪುವ ಮಲಂಗುವ ಪೊಂಗುವ ತಳ್ತು ಪಾಯ್ವ .. .. ಸೂಕರನಾಟಮದು ಏನಳುಂಬಮೋ: **ಶಬರಶಂ,** ೪. ೧೨)

**ಱೊಬ್ಬು** – ಚೂರು, ಹಳುಕು (ಯಕ್ಷಕರ್ದಮದ ಸಾರವಣೆಯಿಂ ಬಿಡುಮುತ್ತಿನ ರಂಗವಲಿಯಿಂ ಸುರತರುಕುಸುಮದ ಪೂವಲಿಯಿಂ ಱೊಬ್ಬಿನ ಸೊಡರ್ಗುಡಿಯಿಂ: **ಅಜಿತಪು,** ೩. ೧೧ ವ)

**ಱೋಡಗ** – ವಿದೂಷಕ, ನಕಲಿ (ಪಟಗಬ್ಬಿಗರ್ನುಡಿದ ಮಾತನೆ ಪಲ್ಲಟವಿಟ್ಟು ಕಟ್ಟುವಂ ಕವಿಗಳ ವೇಷದಿಂದೆ ಕುಣಿದೇಡಿಪ ಱೋಡಗನೆಂದು ನಕ್ಕವೆಂ: **ಅನಂತಪು,** ೧. ೪೬); ಮೂರ್ಖ (ಕೋಡಗದರ್ದ ಮರ್ದಂದೆಲೆ ಱೋಡಗ ನೀನೆನಗೆ ಪೇೞ್ದೆಯಾಗಳೆ ದೆಸೆಗೆಟ್ಟೋಡಿತ್ತೆನ್ನೆರ್ದೆಯುಂ ನೀಂ ಮಾಡ್ಮೆ ನಿನ್ನೆರ್ದೆಯನೆನ್ನ ತಂಗಿಗೆ ಮರ್ದಂ: **ಪಂಚತಂತ್ರ,** ೪೦೫)

**ಱೋಡಗತನಂಗೆಯ್** – ಗೇಲಿ ಮಾಡು (ಅದಂ ಕ್ರಕಚಂ ಕಂಡು ಏಂ ಗಡ ಭಾವಾ! ನೀನಿದೇಂ ನಿಂದಲ್ಲಿ ಱೋಡಗತನಂಗೆಯ್ದಾಡುತಿರ್ಪೆ: **ಪಂಚತಂತ್ರ,** ೪೦೪ ವ)

**ಱೋಡಾಡಿಸು** – ಗೇಲಿಮಾಡು (ಸಿಂಹಮಂ ನಾಯ್ ಕೆಣಕಿತೆಂಬ ಶರಭನನೆರಲೆ ಱೋಡಾಡಿಸಿತೆಂಬ ಮಾತಿನಂತೆ: **ಧರ್ಮಾಮೃ,** ೧೩. ೭೬ ವ)

**ಱೋಡಾಡು** – ಹೀಯಾಳಿಸು, ಗೇಲಿ ಮಾಡು (ನಿಮ್ಮಡಿಯಂ ಏಕಪ್ರಕಾರದಿಂ ಱೋಡಾಡಿ ಬಯ್ಯುತ ಎನ್ನಂ ಬರಲೀಯದೆ ಕಾಡುತ್ತಿರ್ದ ಕಾರಣದಿಂ ಇನ್ನೆಗಂ ತಡೆದೆಂ: **ಪಂಚತಂತ್ರ,** ೧೪೬ ವ)

**ಱೋಡಿಸು** – ಱೋಡಾಡು (ಱೋಡಿಸುಗುಂ ತಪ್ಪ ದಿವಸಂ ಎಂತಪ್ಪರುಮಂ: **ಮಲ್ಲಿನಾಪು,** ೭. ೬೬)

XXXXX